ಮೈಸೂರು ವಿಶ್ವವಿದ್ಯಾನಿಲಯ

# ಕನ್ನಡ ವಿಷಯ ವಿಶ್ವಕೋಶ

# ಕರ್ನಾಟಕ

## ಅ

**ಅಂಕೋಲ :** ಉತ್ತರ ಕನ್ನಡ ಜಿಲ್ಲೆಯ ಕರಾವಳಿ ಭಾಗದ ಒಂದು ತಾಲ್ಲೂಕು ಮತ್ತು ಅದರ ಆಡಳಿತ ಕೇಂದ್ರ. ಪಶ್ಚಿಮದಲ್ಲಿ ಅರಬ್ಬಿ ಸಮುದ್ರ, ಪೂರ್ವದಲ್ಲಿ ಶಿರಸಿ, ದಕ್ಷಿಣದಲ್ಲಿ ಕುಮಟ, ಉತ್ತರದಲ್ಲಿ ಕಾರವಾರ ಮತ್ತು ಯಲ್ಲಾಪುರ ತಾಲ್ಲೂಕುಗಳು ಈ ತಾಲ್ಲೂಕನ್ನು ಸುತ್ತುವರೆದಿವೆ. ಬೇಲೆಕೇರಿ, ಬಾಳಲೆ ಮತ್ತು ಭಾಸಗೋಡ ಇದರ ಹೋಬಳಿಗಳು. ತಾಲ್ಲೂಕಿನಲ್ಲಿ 86 ಗ್ರಾಮಗಳಿವೆ. ವಿಸ್ತೀರ್ಣ 971 ಚ.ಕಿಮೀ. ಜನಸಂಖ್ಯೆ 1,01,540.

ತಾಲ್ಲೂಕಿನ ತೀರಪ್ರದೇಶ ಮರಳು ಭೂಮಿ. ಉಳಿದ ಭೂಭಾಗ ಕೆಂಪು ಜಂಬುಮಣ್ಣಿನಿಂದ ಕೂಡಿದೆ. ಮಳೆ ಹೆಚ್ಚು. ವಾರ್ಷಿಕ ಸರಾಸರಿ 3,405ಮಿಮೀ. ಬೇಡ್ತಿ ಅಥ‌ವಾ ಗಂಗಾವಳಿ ನದಿ ಈ ತಾಲ್ಲೂಕಿನ ಮಧ್ಯದಲ್ಲಿ ಈಶಾನ್ಯದಿಂದ ನೈಋತ್ಯಕ್ಕೆ ಹರಿದು ಅಂಕೋಲದ ದಕ್ಷಿಣದಲ್ಲಿ ಅರಬ್ಬಿ ಸಮುದ್ರಕ್ಕೆ ಸೇರುವುದು. ಅಂಕೋಲದ ಬಳಿ ಅಂಕೋಲ ನದಿ ಇದೆ. ಇದರ ಪೂರ್ವ ಭಾಗವನ್ನು ಶಂಕದ ಹೊಳೆ ಎಂದು ಕರೆಯುತ್ತಾರೆ. ಇದರ ಉತ್ತರದಲ್ಲಿ ಬೇಲೆಕೇರಿ ನದಿ ಹರಿಯುವುದು. ಈ ನದಿಗಳು ತಾಲ್ಲೂಕಿನ ಬಹುತೇಕ ಬೆಟ್ಟಗುಡ್ಡ ಪ್ರದೇಶಗಳಲ್ಲಿ ಹರಿಯುವುದರಿಂದ ನೀರಾವರಿಗೆ ಹೆಚ್ಚು ಉಪಯುಕ್ತವಾಗಿಲ್ಲ. ಮಳೆನೀರಿನಿಂದ ಆಬಾದಾಗುವ ಅನೇಕ ತೋಟ ಗದ್ದೆಗಳಿವೆ. ಇಲ್ಲಿರುವ ಕೆಲವು ಬಾವಿಗಳಿಂದಲೂ ವ್ಯವಸಾಯಕ್ಕೆ ನೀರು ಒದಗುತ್ತದೆ. ಬತ್ತ, ಅಡಕೆ ಇಲ್ಲಿಯ ಮುಖ್ಯ ಬೆಳೆಗಳು. ತಾಲ್ಲೂಕಿನ ತೀರ ಪ್ರದೇಶ ಬಿಟ್ಟು ಅದರ ಪಕ್ಕದಲ್ಲೆ ಸಾಗುವ ಸುಮಾರು 5ರಿಂದ 8ಕಿಮೀ ಅಗಲದ ಒಳನಾಡ ಪ್ರದೇಶ ಬತ್ತದ ಗದ್ದೆಗಳಿಂದ, ಮಾವಿನ ತೋಪುಗಳಿಂದ ಗೇರು ಹಲಸು ಮತ್ತು ಇತರ ಫಲವೃಕ್ಷಗಳಿಂದ ಕೂಡಿದೆ. ಇದರ ಪಕ್ಕದ ಸಣ್ಣ ಗುಡ್ಡಪ್ರದೇಶದಲ್ಲಿ ಹುಲ್ಲು ಬೆಳೆಯುತ್ತದೆ. ಇವುಗಳ ಪೂರ್ವಕ್ಕೆ ಎತ್ತರವಾದ ದಟ್ಟ ಕಾಡುಗಳಿಂದ ಕೂಡಿದ ಬೆಟ್ಟ ಪ್ರದೇಶವಿದೆ. ಒಟ್ಟು 75,374 ಹೆಕ್ಟೇರ್ ಅರಣ್ಯ ಪ್ರದೇಶವಿದೆ. ಇಲ್ಲಿನ ಕಾಡುಗಳಲ್ಲಿ ಬೆಲೆಬಾಳುವ ಮತ್ತಿ, ಹೊನ್ನೆ, ನಂದಿ ಮುಂತಾದ ಮರಗಳು ಬೆಳೆಯುತ್ತವೆ. ತೀರಪ್ರದೇಶದಲ್ಲಿ ತೆಂಗಿನ ಮರಗಳಿವೆ. ಇಲ್ಲಿನ ಕೆಲವು ಗ್ರಾಮಗಳು ಆರೋಗ್ಯದಾಯಕವೆಂದು ಪರಿಗಣಿತವಾಗಿವೆ. ಗಂಗಾವಳಿ ನದಿಯಲ್ಲಿ ಕೆಲವು ಕಿಮೀ ದೂರ ಸಣ್ಣ ದೋಣಿಗಳ ಸಂಚಾರ ಉಂಟು.



ಮಹಾಮಾಯ ದೇವಾಲಯ

ಕಾರವಾರ, ಹೊನ್ನಾವರ, ಮಂಗಳೂರುಗಳೊಡನೆ ಈ ತಾಲ್ಲೂಕು ಸಂಪರ್ಕ ಹೊಂದಿದೆ. ಅಂಕೋಲ ಪಟ್ಟಣದ ಉತ್ತರಕ್ಕೆ 8ಕಿಮೀ ದೂರದಲ್ಲಿರುವ ಅವರ್ಸೆ ಗ್ರಾಮದಲ್ಲಿ ಕಾತ್ಯಾಯಿನಿ ದೇವಾಲಯವಿದೆ. ಇಲ್ಲಿಯ ವಿಗ್ರಹ ಸಮುದ್ರದಲ್ಲಿ ದೊರೆತದ್ದೆಂದು ಪ್ರತೀತಿಯುಂಟು. ನವರಾತ್ರಿಯ ಒಂಬತ್ತು ದಿನಗಳೂ ಇಲ್ಲಿ ಜಾತ್ರೆ ನಡೆಯುವುದು. ಅಂಕೋಲದ ಉತ್ತರಕ್ಕೆ ಸುಮಾರು 6ಕಿಮೀ ದೂರದಲ್ಲಿ ಬೇಲೆಕೇರಿ ನದಿಯ ದಡದಲ್ಲಿರುವ ಬಂದರು, ಬೇಲೆಕೇರಿ ಗ್ರಾಮ. ಇದೊಂದು ಆರೋಗ್ಯಧಾಮವೆಂದು ಪ್ರಸಿದ್ಧವಾಗಿದೆ. ಅಂಕೋಲದ ದಕ್ಷಿಣಕ್ಕೆ 8ಕಿಮೀ

ದೂರದಲ್ಲಿರುವ ಗಂಗಾವಳಿಗ್ರಾಮ ಗಂಗಾವಳಿ ನದಿಯ ದಡದಲ್ಲಿದೆ. ಇಲ್ಲಿರುವ ಗಂಗೆ ದೇವಾಲಯ ಪ್ರಸಿದ್ಧ. ಗಂಗಾಷ್ಟಮಿಯಂದು ಇಲ್ಲಿ ಜಾತ್ರೆ ನಡೆಯುವುದು. ಗಂಗಾವಳಿ ಗ್ರಾಮಕ್ಕೆದುರಾಗಿ ನದಿಯ ಉತ್ತರ ದಂಡೆಯ ಮೇಲೆ ಪ್ರಕೃತಿ ಸೌಂದರ್ಯದಿಂದ ಕೂಡಿದ ಮಂಜುಗುಣಿ ಗ್ರಾಮವಿದೆ.

ಈ ತಾಲ್ಲೂಕಿನ ಆಡಳಿತ ಕೇಂದ್ರ ಅಂಕೋಲ. ಜನಸಂಖ್ಯೆ 14,306. ಕಾರವಾರಕ್ಕೆ ಆಗ್ನೇಯದಲ್ಲಿ 24ಕಿಮೀ. ದೂರದಲ್ಲಿ ಸಮುದ್ರತೀರದಿಂದ ಸುಮಾರು 3ಕಿಮೀ ಅಂತರದಲ್ಲಿದೆ. ಇಲ್ಲಿಯ ಜನರ ಮುಖ್ಯ ಉದ್ಯೋಗ ವ್ಯವಸಾಯ, ವ್ಯಾಪಾರ ಮತ್ತು ಕೂಲಿಯ ದುಡಿಮೆ. ಅಂಕೋಲಪಟ್ಟಣ ಮುಂಬಯಿ ಮತ್ತು ಹುಬ್ಬಳ್ಳಿಯಿಂದ ಬರುವ ವಸ್ತುಗಳ ಮಾರುಕಟ್ಟೆ. ಅಕ್ಕಿ, ತೆಂಗು, ಅಡಕೆ, ಹೊಗೆಸೊಪ್ಪು ಮುಂತಾದವುಗಳ ವ್ಯಾಪಾರವೂ ನಡೆಯುವುದು.

ಅಂಕೋಲ ಒಂದು ಐತಿಹಾಸಿಕ ಸ್ಥಳ. ಪಟ್ಟಣದ ಪೂರ್ವಕ್ಕೆ ಸ್ವಲ್ಪ ಎತ್ತರದಲ್ಲಿ ವೃತ್ತಾಕಾರವಾದ ಶಿಥಿಲ ಕೋಟೆಯಿದೆ. ಸುಮಾರು 548ಮೀ ಸುತ್ತಳತೆಯುಳ್ಳ ಈ ಕೋಟೆಯ ಸುತ್ತ 4ಮೀ ಅಗಲ 4ಮೀ ಆಳದ ಕಂದಕವಿದೆ. ಇದನ್ನು ಬಳಸಿ ಮಾವು, ಗೋಡಂಬಿ, ಹಲಸು ಮುಂತಾದ ಫಲವೃಕ್ಷಗಳನ್ನು ಬೆಳೆಸಲಾಗಿದೆ. ಈ ಕೋಟೆಯನ್ನು ಸೋದೆಯ ದೊರೆ ಅಂಕೋಲದಲ್ಲಿ ವಾಸವಾಗಿದ್ದ ತನ್ನ ಪ್ರೇಯಸಿಗಾಗಿ ಕಟ್ಟಿಸಿದನೆಂದು ಪ್ರತೀತಿ. ಇಲ್ಲಿ ಮಹಾಮಾಯ, ಆರ್ಯದುರ್ಗಾ, ಕುಂಡೋದರಿ, ಶಾಂತಾದುರ್ಗಾ, ಕಾಳಮ್ಮ, ದತ್ತಾತ್ರೇಯ ಮೊದಲಾದ ದೇವಾಲಯಗಳಿವೆ. ಮಹಾಮಾಯ ಮತ್ತು ಕುಂಡೋದರಿ ದೇವಾಲಯಗಳು 16ನೆಯ ಶತಮಾನದಲ್ಲಿ ನಿರ್ಮಾಣಗೊಂಡವು. ಇಲ್ಲಿಯ ಕೋಟೇಶ್ವರ ಅಥವಾ ರುದ್ರೇಶ್ವರ ದೇವಾಲಯದ ಹತ್ತಿರ ಒಂದು ಕೊಳವೂ ಒಂದು ರೋಮನ್ ಕ್ಯಾತೊಲಿಕ್ ಇಗರ್ಜಿಯೂ ಇವೆ. 1540ರ ಸುಮಾರಿನಲ್ಲಿ ಈ ಊರು ಪೋರ್ಚುಗೀಸರ ವಶದಲ್ಲಿತ್ತು. ಆ ಕಾಲದಲ್ಲಿ ಅಂಕೋಲದ ಮೂಲಕ ಖನಿಜ ಮತ್ತು ಬಟ್ಟೆಗಳ ವ್ಯಾಪಾರ ನಡೆಯುತ್ತಿತ್ತು. 1567ರಲ್ಲಿ ವೆನಿಸ್ಸಿನ ಪ್ರಸಿದ್ಧ ವ್ಯಾಪಾರಿಯಾದ ಸೀಸರ್ ಫ್ರೆಡರಿಕ್ ಅಂಕೋಲಕ್ಕೆ ಭೇಟಿಕೊಟ್ಟಿದ್ದ.ಬಿಜಾಪುರದ ರಾಜಪ್ರತಿನಿಧಿಯಾಗಿದ್ದ ಷರೀಫ್-ಉಚಲ್-ಮುಲ್ಕ್ 16ನೆಯ ಶತಮಾನದ ಕೊನೆಯಲ್ಲಿ ಅಂಕೋಲವನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡಿದ್ದ. 1676ರಲ್ಲಿ ಶಿವಾಜಿಯ ಸೇನೆ ಅಂಕೋಲದ ಅರ್ಧಭಾಗವನ್ನು ನಾಶಗೊಳಿಸಿತು. 1730ರಲ್ಲಿ ಅಂಕೋಲ ಸೋದೆ ರಾಜ್ಯದ ಬಂದರಾಗಿತ್ತೆಂದು ಹ್ಯಾಮಿಲ್ಟನ್ನನ ಬರೆವಣಿಗೆಯಲ್ಲಿ ಉಲ್ಲೇಖವಿದೆ. ಅಂಕೋಲ ಮೊದಲು ಕುಮಟ ತಾಲ್ಲೂಕಿನ ಭಾಗವಾಗಿತ್ತು. 1880ರಲ್ಲಿ ಇದನ್ನು ಪ್ರತ್ಯೇಕ ತಾಲ್ಲೂಕನ್ನಾಗಿ ಮಾಡಲಾಯಿತು. *

**ಅಂಗಡಿ :** ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಒಂದು ಹಳ್ಳಿ. ಘಟ್ಟದಿಂದ ಕರಾವಳಿಗೆ ಹೋಗುವ ಮಾರ್ಗದ ಮಧ್ಯದಲ್ಲಿರುವ ಈ ಸ್ಥಳದಲ್ಲಿದ್ದ ಅಂಗಡಿಗಳಿಂದಾಗಿ ಇದಕ್ಕೆ ಈ ಹೆಸರು ಬಂದಿದೆಯೆಂದು ಊಹಿಸಲಾಗಿದೆ. 11-12ನೆಯ ಶತಮಾನದ ಶಾಸನಗಳಲ್ಲಿ ಇದನ್ನು ಸೊಸವೂರು ಎಂದು ಕರೆದಿದೆ. ಬುಕ್ಕರಾಯನ ಕಾಲದಲ್ಲೂ (1359) ಇದೇ ಹೆಸರಿತ್ತು. ಆದರೆ ಅಚ್ಯುತರಾಯನ ಕಾಲದ ಹೊತ್ತಿಗೆ (1539) ಅಂಗಡಿ ಎಂಬ ಹೆಸರು ಪ್ರಚಾರಕ್ಕೆ ಬಂದಿತ್ತು. ವಿಷ್ಣುವರ್ಧನನ ಕಾಲದ ಶಶಪುರ, ಶಶಕಪುರ ಎಂಬ ಹೆಸರುಗಳೂ ಈ ಊರನ್ನೇ ನಿರ್ದೇಶಿಸುತ್ತವೆ.

ಈ ಸೊಸವೂರು ಹೊಯ್ಸಳರ ಮೂಲಸ್ಥಾನವಾಗಿತ್ತು. ಸಳ ಇಲ್ಲಿ ಹುಲಿಯನ್ನು ಕೊಂದು ಹೊಯ್ಸಳ ವಂಶದ ಹೆಸರಿಗೆ ಕಾರಣನಾದ ಎಂದು ಅನೇಕ ಶಾಸನಗಳು ತಿಳಿಸುತ್ತವೆ (ನೋಡಿ:ಸಳ). ನೃಪಕಾಮ ಸೊಸವೂರಿನಿಂದ ಆಳುತ್ತಿದ್ದ. ಇವನ ಮಗ ವಿನಯಾದಿತ್ಯ ತನ್ನ ರಾಜಧಾನಿಯನ್ನು ದೋರಸಮುದ್ರಕ್ಕೆ ಬದಲಾಯಿಸಿದಂತೆ ತೋರುತ್ತದೆ. ಮುಂದೆ ಬಂದ ಹಲವು ಹೊಯ್ಸಳ ಅರಸರು ತಮ್ಮ ಪೂರ್ವಜರ ಹುಟ್ಟೂರಾದ ಅಂಗಡಿಗೆ ಹೋಗಿ ಬರುತ್ತಿದ್ದರೆಂದು ಅವರ ಶಾಸನಗಳಿಂದ ತಿಳಿದುಬರುತ್ತದೆ. ಹೊಯ್ಸಳರ ಕುಲದೇವತೆಯಾದ ವಾಸಂತಿಕಾ ದೇವಿಯೇ ಇಲ್ಲಿನ ಮುಖ್ಯ ದೇವತೆಯಾದ ವಸಂತಮ್ಮ ಎಂದು ಹೇಳಲಾಗಿದೆ. ಅನೇಕ ಜೈನಯತಿಗಳು ಇಲ್ಲಿದ್ದು ಬಸದಿಗಳನ್ನು ಕಟ್ಟಿಸಿದ್ದರೆಂಬುದಕ್ಕೂ ಶಾಸನಾಧಾರಗಳಿವೆ. ಅಂಗಡಿಯ ಪಕ್ಕದಲ್ಲಿರುವ ಉಗ್ಗೇಹಳ್ಳಿಯಲ್ಲಿ ಕೋಟೆಹರವೆಂಬ ಪ್ರದೇಶವಿದೆ. ಇಲ್ಲಿರುವ ಒಂದು ಶಾಸನ ರಾಚಮಲ್ಲಪೆರ್ಮಾನಡಿಕಾಮ ಹೊಯ್ಸಳನ ಕಾಲದ್ದು.

ಇಲ್ಲಿರುವ ವಾಸಂತಿಕಾ ಗುಡಿ ಹೆಂಚು ಹೊದಿಸಿರುವ ಈಚಿನ ಕಟ್ಟಡ. ಒಳಗೆ ಐದು ದೇವಿಯರ ಮೃಣ್ಮೂರ್ತಿಗಳಿವೆ. ಅವಕ್ಕೆ ಪಂಚಮುಖ ಅಥವಾ ತ್ರಿಮುಖಗಳಿವೆ. ಅವು ಶಕ್ತಿದೇವತೆಗಳಿಗೆ ವಿಶಿಷ್ಟವಾದ ಆಯುಧಗಳನ್ನು ಹಿಡಿದಿವೆ. ಇಲ್ಲಿ ಸು.10-11ನೆಯ ಶತಮಾನದ ಎರಡು



ಪಾಳು ದೇವಾಲಯಗಳು

ಜೈನಬಸದಿಗಳ ಅವಶೇಷಗಳುಂಟು. ಇಲ್ಲಿರುವ ಕೇಶವ, ವೀರಭದ್ರ ಮತ್ತು ಶಿವ ದೇವಾಲಯಗಳೂ ಶಿಥಿಲವಾಗಿವೆ. ಕೇಶವ ದೇವಾಲಯದ ಮೂರ್ತಿ ಒಂದು ಉತ್ತಮ ಹೊಯ್ಸಳ ಶಿಲ್ಪ. (ಎಂ.ಎಚ್.)

**ಅಂಚನ್, ಎಲ್.ಪಿ :** 1927-97. ಸುಪ್ರಸಿದ್ಧ ಲೋಹಶಿಲ್ಪಿ. ಲಿಂಗಪ್ಪ ಅಂಚನ್ ಇವರ ಪೂರ್ಣ ಹೆಸರು. ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರಿನಲ್ಲಿ ಬಡ ಕುಟುಂಬವೊಂದರಲ್ಲಿ ಜನಿಸಿದರು. ಮಂಗಳೂರಿನ ಸರ್ಕಾರಿ ಪ್ರೌಢಶಾಲೆಯಲ್ಲಿ ಅಭ್ಯಾಸ ಮಾಡುತ್ತಿರುವಾಗಲೇ ಚಿತ್ರಕಲೆಯಲ್ಲಿ ಆಸಕ್ತಿ ಬೆಳೆಸಿಕೊಂಡರು. ಎಸ್.ಎಸ್.ಎಲ್.ಸಿ. ಓದುತ್ತಿರುವಾಗ ತಾವೊಬ್ಬ ಕಲಾವಿದನಾಗಬೇಕೆಂದು ಬಯಸಿದರು. ಇದಕ್ಕೆ ಮನೆಯವರ ವಿರೋಧ ವ್ಯಕ್ತವಾದಾಗ ಓದನ್ನು ಬಿಟ್ಟು ಮುಂಬಯಿಗೆ ಹೋದರು.

ಮುಂಬಯಿಯಲ್ಲಿ ಹೆಸರಾಂತ ಕಲಾವಿದ ಜೆ.ಎಸ್. ದಂಡಾವತಿ ಅವರ ನೂತನ ಕಲಾಮಂದಿರ ಸೇರಿದರು (1945). ಅನಂತರ ಜೆ.ಜೆ. ಕಲಾ ಶಾಲೆಯಲ್ಲಿ ಅಭ್ಯಾಸ ಮಾಡಿ ಡಿಪ್ಲೊಮಾ ಪಡೆದರು (1957). ಕೆಲಕಾಲ ಮುಂಬಯಿಯಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿದರು. ಅನಂತರ



ಮುಂಬಯಿಯಿಂದ ಬೆಂಗಳೂರಿಗೆ ಬಂದರು. ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿ ಲೇಔಟ್ ಕಲಾವಿದರಾಗಿ ಕೆಲಸಕ್ಕೆ ಸೇರಿದರು. ಈ ವೃತ್ತಿ ಜೀವನ ಇವರಿಗೆ ತೃಪ್ತಿ ನೀಡಲಿಲ್ಲ. ಅನಂತರ ವಿಶ್ವೇಶ್ವರಯ್ಯ ತಾಂತ್ರಿಕ ವಸ್ತು ಸಂಗ್ರಹಾಲಯದಲ್ಲಿ ನೇಮಕಗೊಂಡರು. ಅಲ್ಲಿ ವಸ್ತು ವಿನ್ಯಾಸ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. 1985ರಲ್ಲಿ ಈ ಹುದ್ದೆಯಿಂದ ನಿವೃತ್ತರಾದರು. ಲೋಹದ ತಗಡುಗಳಿಂದ ಶಿಲ್ಪರಚನೆ ಇವರ ಕಲಾವೈಶಿಷ್ಟ್ಯ. ಇವರು ರಚಿಸಿದ ಕಲಾಕೃತಿಗಳಲ್ಲಿ ಬಹುಪಾಲು ಮೂರ್ತಿಶಿಲ್ಪಗಳಾಗಿವೆ. ಇವರ ಕಲಾಕೃತಿಗಳು

ಕ್ಯೂಬಿಸಂನಿಂದ ಹೆಚ್ಚು ಪ್ರಭಾವಿತವಾಗಿವೆ. ಮುಖವಾಡದ ಕಲಾಕೃತಿಗಳನ್ನೂ ಇವರು ರಚಿಸಿದ್ದಾರೆ. ಕರ್ನಾಟಕ ಲಲಿತಕಲಾ ಅಕಾಡೆಮಿಯ ಕಲಾ ಪ್ರದರ್ಶನಗಳಲ್ಲಿ ಇವರ ಶಿಲ್ಪಗಳು ಪ್ರದರ್ಶನಗೊಂಡಿವೆ.

ಇವರಿಗೆ ಅನೇಕ ಪ್ರಶಸ್ತಿ - ಗೌರವಗಳು ಲಭಿಸಿವೆ. ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿಯ ಪ್ರಶಸ್ತಿಯನ್ನು ಎರಡು ಬಾರಿ ಪಡೆದ ಹೆಗ್ಗಳಿಕೆ ಇವರದು (1969 ಮತ್ತು 1981). ಮೈಸೂರು ದಸರ ಕಲಾ ಪ್ರದರ್ಶನ ಬಹುಮಾನ (1981), ಕೇಂದ್ರ ಲಲಿತಕಲಾ ಅಕಾಡೆಮಿ ಪ್ರಶಸ್ತಿ (1984) - ಇವು ಇವರಿಗೆ ದೊರೆತ ಪ್ರಶಸ್ತಿಗಳಲ್ಲಿ ಮುಖ್ಯವಾದವು. ಇವರ ಕಲಾಕೃತಿಗಳು ದೇಶ ವಿದೇಶಗಳ ಕಲಾ ಗ್ಯಾಲರಿಗಳಲ್ಲಿ ಪ್ರದರ್ಶಿಸಲ್ಪಟ್ಟಿವೆ. ಇವರು 1997ರಲ್ಲಿ ನಿಧನರಾದರು. *

**ಅಂಟಿಕೆ ಪಂಟಿಕೆ :** ಶಿವಮೊಗ್ಗ ಮತ್ತು ಉತ್ತರ ಕನ್ನಡ ಜಿಲ್ಲೆಯ ಕೆಲವು ಭಾಗಗಳಲ್ಲಿ ಪ್ರಚಾರದಲ್ಲಿರುವ ಒಂದು ಜನಪದ ಸಂಪ್ರದಾಯ. ಇದಕ್ಕೆ ಹಬ್ಬ ಹಾಡುವುದು, ದೀಪ ನೀಡುವುದು ಎಂಬ ಹೆಸರುಗಳೂ ಇವೆ.



ದೀಪದಕುಡಿ ವಿನಿಮಯ

ತೀರ್ಥಹಳ್ಳಿಯ ಸುತ್ತಮುತ್ತ ಮಾತ್ರ ಇದಕ್ಕೆ ಅಂಟಿಕೆಪಂಟಿಕೆ ಎನ್ನುತ್ತಾರೆ. ದೀಪಾವಳಿಯ ಬಲಿಪಾಡ್ಯಮಿ ದಿನದಿಂದ ಹಿಡಿದು ಮೂರು ದಿನಗಳವರೆಗೆ ಹಳ್ಳಿಯ ರೈತರು (ಒಕ್ಕಲಿಗರು, ದೀವರು, ಹಸಲರು ಮುಂತಾದ ವರ್ಗಗಳವರು) ಮನೆಮನೆಗೂ ದೀಪಾವಳಿಯ ಬೆಳಕಿನ ದಿವ್ಯ ಸಂದೇಶವನ್ನು ಒಯ್ಯುತ್ತ ಜ್ಯೋತಿ ಹಚ್ಚಿ ಹೀಗೆ ಹಾಡುತ್ತಾರೆ: 'ಮಣ್ಣಿಲಿ ಹುಟ್ಟಿದೆ, ಮಣ್ಣಿಲಿ ಬೆಳೆದೆ, ಎಣ್ಣೇಲಿ ಕಣ್ಣಬಿಟ್ಟೆSದೆ- ಎಣ್ಣೇಲಿ ಕಣ್ಣಬಿಟ್ಟೆSದೆ ಜಗಜ್ಯೋತಿ ನಾ ಸತ್ಯದಿಂದುರಿಯೆ ಜಗಜ್ಯೋತಿ.' ಒಂದೊಂದು ಸೀಮೆಯಲ್ಲೂ (3-4 ಹಳ್ಳಿಗಳ ಗುಂಪು) 4ರಿಂದ 6 ಜನರಿರುವ ಹಲವು ತಂಡಗಳು ಹಬ್ಬಹಾಡಲು ಹೋಗುವುದುಂಟು. ಆ ದಿನ ರಾತ್ರಿ ಆ ಸೀಮೆಯ ದೇವಸ್ಥಾನಕ್ಕೆ ಹೋಗಿ ಅಲ್ಲಿ ತಮ್ಮ ಹಣತೆ ಹಚ್ಚಿಕೊಂಡು ಹಾದಿಯುದ್ದಕ್ಕೂ ಹಾಡುತ್ತಲೇ ಮನೆಮನೆಗೂ ಹೋಗುತ್ತಾರೆ. ಒಂದೊಂದು ಮನೆಯ ಮುಂದೂ 'ಬಾಗಿಲತೆಗಿರವ್ಮಾ ಭಾಗ್ಯದ ಲಕ್ಷ್ಮಮ್ಮ ಜ್ಯೋತ್ಯಮ್ಮನೊಳಗೆ ಕರಕೊಳ್ಳಿ' ಎಂದೂ 'ಮುಳ್ಳಾಗೆ ಕಲ್ಲಾಗೆ ಬಂದೇವಯ್ಯಾ, ತಂದೀವಿ ದೀಪಾನ ಕೊಳ್ಳೀರಯ್ಯಾ' ಮುಂತಾಗಿ ಹಾಡಿ ಬಾಗಿಲ ತೆಗೆಸಿ 'ಜ್ಯೋತಿಗೆಣ್ಣೆಯನೆರೆಯ ಬನ್ನಿ' ಎಂಬಂಥ ಹಾಡು ಹೇಳಿ ತಮ್ಮ ಹಣತೆಯಿಂದ ಅವರಿಗೆ ದೀಪದ ಕುಡಿ ಕೊಡುತ್ತಾರೆ. ಅನಂತರ ಮನೆಯ ಜಗಲಿಯನ್ನೇರಿ ಅರ್ಜುನಜೋಗಿ ಹಾಡು, ಉತ್ತರದೇವಿ ಹಾಡು, ತೆರೆಅಳೆಯುವ ಹಾಡು, ಕರು ಅಗಚುವ ಹಾಡು ಇತ್ಯಾದಿ ದೀರ್ಘ ಗೀತೆಗಳನ್ನು ಒಕ್ಕೊರಲಿನಿಂದ ಹಾಡುತ್ತಾರೆ. ಕೊನೆಯಲ್ಲಿ ಮಂಗಳಗೀತೆ ಹೇಳುತ್ತಾರೆ. ಹಾಡುಗಳಲ್ಲಿ ಹೆಚ್ಚಿನವು ತ್ರಿಪದಿ, ಉಳಿದವು ದ್ವಿಪದಿ, ಚೌಪದಿ ಮುಂತಾದ ಸರಳ ರಚನೆಗಳು. ಅಪರೂಪವಾಗಿ ಲಾವಣಿ ಅಥವಾ ಕೋಲಾಟದ ಮಟ್ಟುಗಳೂ ಇರುತ್ತವೆ. ಹಾಡುವಾಗ ಜೊತೆಗೆ ಯಾವುದೇ ವಾದ್ಯ ಇರುವುದಿಲ್ಲ. ಕಥನಗೀತೆಗಳಲ್ಲಿ ಸಾಮಾನ್ಯವಾಗಿ ಶಿವನ, ಶಿವಭಕ್ತರ, ಅಪರೂಪವಾಗಿ ಐತಿಹಾಸಿಕ, ಕೌಟುಂಬಿಕ ಕಥೆಗಳೂ ಸೇರಿರುತ್ತವೆ. ಹಾಡುವವರಿಗೆ ಮನೆಮನೆಯಲ್ಲೂ ದೀಪಕ್ಕೆ ಎಣ್ಣೆ, ಬಟ್ಟೆ, ಅಕ್ಕಿ, ಹಣ್ಣು, ತೆಂಗಿನಕಾಯಿ, ಹಬ್ಬದತಿಂಡಿ, ಚಿಲ್ಲರೆ ಹಣ ಕೊಡುತ್ತಾರೆ. ಹೀಗೆ ಮೂರು ರಾತ್ರಿಯ ಪರ್ಯಂತ ದೀಪ ನೀಡುವುದು ನಡೆಯುತ್ತದೆ. ಮೂರು ದಿನವಾದಮೇಲೆ ಬತ್ತಿಯನ್ನು ಹಣತೆಯಿಂದ ತೆಗೆದು ಹಲಸಿನ ಮರದ ಕೊಂಬೆಯ ಮೇಲಿಟ್ಟು ಅದಕ್ಕೆ ಕೈ ಮುಗಿಯುತ್ತಾರೆ. ವಸೂಲಿಯಿಂದ ಬಂದ ಹಣದಿಂದ ಊರಿನವರನ್ನೂ ಆಹ್ವಾನಿಸಿ ಅಂಟಿಕೆ ಪಂಟಿಕೆ ಔತಣ ಮಾಡಿಕೊಂಡು ವನಭೋಜನ ಮಾಡುತ್ತಾರೆ. (ಕೆ.ವಿ.ಎಸ್.)

**ಅಂದಾನಪ್ಪ ದೊಡ್ಡಮೇಟಿ :** 1908-72. ಕರ್ನಾಟಕ ಏಕೀಕರಣಕ್ಕಾಗಿ ದುಡಿದ ರಾಜಕಾರಣಿ. ಇಂದಿನ ಗದಗ ಜಿಲ್ಲೆಯ ಗದಗ ತಾಲ್ಲೂಕಿನ ಜಕ್ಕಲಿ ಗ್ರಾಮದಲ್ಲಿ 1908 ಮಾರ್ಚ್ 8ರಂದು ಜನಿಸಿದರು. ಚಿಕ್ಕಂದಿನಲ್ಲಿ ದೇಶದ ಸ್ವಾತಂತ್ರ್ಯ ಚಳವಳಿಯಲ್ಲಿ ಧುಮುಕಿದರು. 22ನೆಯ ವಯಸ್ಸಿನಲ್ಲಿ ಅಸಹಕಾರ ಆಂದೋಲನ ಮತ್ತು ಸತ್ಯಾಗ್ರಹಗಳಲ್ಲಿ ಭಾಗವಹಿಸಿದರು. 1933ರ ಕಾಯಿದೆ ಭಂಗ ಚಳವಳಿಯಲ್ಲಿ ಪಾಲ್ಗೊಂಡು ಸರ್ಕಾರದ ಆಗ್ರಹಕ್ಕೆ ಒಳಗಾಗಿ ಬಂಧಿಸಲ್ಪಟ್ಟರು. ಇವರು ಅನೇಕ ಬಾರಿ ಕಾರಾಗೃಹ ವಾಸ ಅನುಭವಿಸಿದರು. ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಸದಸ್ಯರಾಗಿ ದುಡಿದರು.

ಶ್ರೀಮಂತ ಜಮೀನುದಾರರಾಗಿದ್ದ ಅಂದಾನಪ್ಪನವರು ಒಮ್ಮೆ ಊರಿಗೆ ಬರ ಬಂದಾಗ ತಮ್ಮಲ್ಲಿದ್ದ ಧಾನ್ಯವನ್ನು ಜನರಿಗೆ ಹಂಚಿದರಲ್ಲದೆ ನಿರುದ್ಯೋಗ ನಿವಾರಣೆಗಾಗಿ ಜನರಿಗೆ ಕೆಲಸ ಒದಗಿಸಿದರು. ಹಾವು ಸಾಕುವುದು ಇವರ ಒಂದು ಹವ್ಯಾಸವಾಗಿತ್ತು. ತಮ್ಮ ಪ್ರೀತಿ ಪಾತ್ರ ಹಾವೊಂದು ಸತ್ತಾಗ ಇವರು ಉಪವಾಸ ಮಾಡಿದರಂತೆ.

ಅಂದಾನಪ್ಪನವರು ಕನ್ನಡ ಸಾಹಿತ್ಯವನ್ನು ಆಳವಾಗಿ ಅಭ್ಯಸಿಸಿದ್ದರು. ಕನ್ನಡ ಭುವನೇಶ್ವರಿಯನ್ನು ಸ್ತುತಿಸುವ ಕರ್ನಾಟಕ ಮಹಿಮಾಸ್ತೋತ್ರ ಎಂಬುದು ಇವರ ಕವನಸಂಗ್ರಹ. ಇವರು ಪತ್ರಿಕೋದ್ಯಮಿ ಯಾಗಿದ್ದರು. ಕಲ್ಕಿ ಎಂಬ ಮಾಸಪತ್ರಿಕೆಯನ್ನು ಇವರು ಕೆಲವುಕಾಲ ಗದಗಿನಿಂದ ಪ್ರಕಟಿಸುತ್ತಿದ್ದರು. ಮುಂಬಯಿಯ ವಿಧಾನಸಭೆಯಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿಯೇ ಕನ್ನಡದಲ್ಲಿ ಮಾತನಾಡಿದರು. ಕರ್ನಾಟಕ ಏಕೀಕರಣ ಪ್ರಯತ್ನವನ್ನು ಬಲಪಡಿಸಿ,ಹೆಚ್ಚು ಕಾಲವನ್ನು ಅದಕ್ಕಾಗಿ ಮೀಸಲಿಟ್ಟು ಮುಂಬಯಿ ವಿಧಾನಸಭಾ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದರು. ಏಕೀಕರಣಗೊಂಡ ವಿಶಾಲ ಮೈಸೂರು ರಾಜ್ಯದ ಹೆಸರನ್ನು ಕರ್ನಾಟಕ ಎಂದು ಬದಲಾಯಿಸಲು ವಿಧಾನ ಸಭೆಯಲ್ಲಿ ಪದೇಪದೇ ವಾದಿಸುತ್ತಿದ್ದರು. 1970-71ರಲ್ಲಿ ದೊಡ್ಡಮೇಟಿ ಯವರು ರಾಜ್ಯದ ನೀರಾವರಿ ಖಾತೆಯ ಸಹಾಯಕ ಮಂತ್ರಿಗಳಾಗಿದ್ದರು. 1972 ಫೆಬ್ರವರಿ 21ರಂದು, ನಿಧನರಾದರು. *



**ಅಂದಾನಿ, ವಿ.ಜಿ. :** 1947- ಹೆಸರಾಂತ ಚಿತ್ರಕಲಾವಿದ. ಗುಲ್ಬರ್ಗ ಜಿಲ್ಲೆ ಕೀರಣಗಿ ಗ್ರಾಮದಲ್ಲಿ ಜನಿಸಿದರು (1947). ಗುಲ್ಬರ್ಗದ ಆದರ್ಶ ಕಲಾಮಂದಿರದಿಂದ ಚಿತ್ರಕಲೆಯಲ್ಲಿ ಡಿಪ್ಲೊಮಾ ಶಿಕ್ಷಣ ಪಡೆದರು (1969). ಬನಸ್ಥಲಿ ವಿದ್ಯಾಪೀಠದಲ್ಲಿ ಭಿತ್ತಿಚಿತ್ರರಚನೆಯನ್ನು ಕುರಿತು ಅಧ್ಯಯನ ನಡೆಸಿದರು (1970). ಗುಲ್ಬರ್ಗದ ಐಡಿಯಲ್ ಕಾಲೇಜ್ ಆಫ್ ವಿಷುಯಲ್ ಆರ್ಟ್ಸ್‌ನ ಸ್ನಾತಕೋತ್ತರ ಕೇಂದ್ರದ ಪ್ರಾಚಾರ್ಯರಾಗಿ ಈಗ ಸೇವೆಸಲ್ಲಿಸುತ್ತಿದ್ದಾರೆ.

ಭಾರತದ ಪ್ರಮುಖ ನಗರಗಳಲ್ಲಿ ಹಾಗೂ ವಿದೇಶಗಳಲ್ಲಿ ಇವರು ಕಲಾಪ್ರದರ್ಶನ ನಡೆಸಿದ್ದಾರೆ. ರಾಷ್ಟ್ರಮಟ್ಟದ ಹಾಗೂ ರಾಜ್ಯಮಟ್ಟದ ಅನೇಕ ಕಲಾಶಿಬಿರಗಳಲ್ಲಿ ಪಾಲ್ಗೊಂಡಿದ್ದಾರೆ.

ಇವರಿಗೆ ಅನೇಕ ಪ್ರಶಸ್ತಿ, ಗೌರವಗಳು ಸಂದಿವೆ. ಅವುಗಳಲ್ಲಿ ಮುಖ್ಯವಾದವು: ಇಲಸ್ಟ್ರೇಟೆಡ್ ವೀಕ್ಲಿ ಪ್ರದರ್ಶನ ಪ್ರಶಸ್ತಿ (1963), ಕರ್ನಾಟಕ ಚಿತ್ರಕಲಾ ಪರಿಷತ್ತಿನ ಅಖಿಲ ಭಾರತ ಪ್ರದರ್ಶನ ಬಹುಮಾನ (1969), ಕರ್ನಾಟಕ ವಿಶ್ವ ವಿದ್ಯಾನಿಲಯದ ಪ್ರದರ್ಶನ ಪ್ರಶಸ್ತಿ (1971), ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರದರ್ಶನ ಬಹುಮಾನ (1992), ಹೈದರಾಬಾದ್ ಆರ್ಟ್ ಸೊಸೈಟಿ ಪ್ರಶಸ್ತಿ (1985), ಕೇಂದ್ರ ಸರ್ಕಾರದ ಫೆಲೋಶಿಪ್ (1989), ರಾಷ್ಟ್ರೀಯ ಪ್ರಶಸ್ತಿ (1991), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1992), ಲಲಿತ ಕಲಾ ಅಕಾಡೆಮಿ ಪ್ರಶಸ್ತಿ (1993).



ಕಲೆಗೆ ಸಂಬಂಧಿಸಿದ ಅನೇಕ ಸಮಿತಿಗಳಲ್ಲಿ ಸದಸ್ಯರಾಗಿಯೂ ಇವರು ಸೇವೆಸಲ್ಲಿಸಿದ್ದಾರೆ.ಕರ್ನಾಟಕ ಲಲಿತಕಲಾ ಅಕಾಡೆಮಿಯ ಸದಸ್ಯರಾಗಿ,ಅನಂತರ ಅದರ ಅಧ್ಯಕ್ಷರಾಗಿ (1998-2001). ಕೇಂದ್ರ ಲಲಿತ ಕಲಾ ಅಕಾಡಮಿಯ ಸದಸ್ಯರೂ ತೀರ್ಪುಗಾರರೂ ಆಗಿದ್ದರು (1988-92). ಸರ್ಕಾರದ ಹಾಗೂ ವಿಶ್ವವಿದ್ಯಾನಿಲಯಗಳ ಅನೇಕ ಕಲಾ ಶೈಕ್ಷಣಿಕ ಮಂಡಲಿಗಳಲ್ಲಿಯೂ ಸದಸ್ಯರಾಗಿ, ಕಾರ್ಯದರ್ಶಿಗಳಾಗಿ ಹಾಗೂ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

ಇವರ ಕಲಾಕೃತಿಗಳು ಭಾರತದ ಅನೇಕ ಪ್ರದರ್ಶನ ಭವನಗಳಲ್ಲಿ, ಸರ್ಕಾರಿ ಹಾಗೂ ಅರೆ ಸರ್ಕಾರಿ ಕಚೇರಿಗಳಲ್ಲಿ, ಕಲಾ ಪ್ರೇಮಿಗಳ ಮನೆಗಳಲ್ಲಿ ಮತ್ತು ವಿದೇಶಗಳಲ್ಲಿ ಸಂಗ್ರಹಗೊಂಡಿವೆ. **(ಡಿ.ಎ.ಯು.)**

**ಅಂಬರೀಶ್ :** 1952-. ರೆಬಲ್ ಸ್ಟಾರ್, ಎಂದೇ ಖ್ಯಾತರಾದ ಕನ್ನಡ ಚಲನಚಿತ್ರ ನಟ, ಲೋಕಸಭಾ ಸದಸ್ಯ. ಮಂಡ್ಯ ಜಿಲ್ಲೆ ದೊಡ್ಡರಸನ ಕೆರೆ ಗ್ರಾಮದಲ್ಲಿ 1952 ಮೇ 29ರಂದು ಜನಿಸಿದರು. ತಂದೆ ಹುಚ್ಚೇಗೌಡ, ತಾಯಿ ಪದ್ಮಮ್ಮ. ನಾಗರಹಾವು ಚಲನಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು. ಇವರನ್ನು ಚಿತ್ರರಂಗಕ್ಕೆ ಪರಿಚಯಿಸಿದವರು ಹೆಸರಾಂತ ನಿರ್ದೇಕರ ಕಣಗಾಲ್‌ಪುಟ್ಟಣ್ಣ (ನೋಡಿ). ನಾಗರಹಾವು ಚಿತ್ರದಲ್ಲಿ ಜಲೀಲ್‌ಎಂಬ ಸಣ್ಣ ಪಾತ್ರದಲ್ಲಿ ಕಾಣಿಸಿಕೊಂಡರು. ಎಸ್.ವಿ.ರಾಜೇಂದ್ರಸಿಂಗ್ ಬಾಬು ನಿರ್ದೇಶಿಸಿದ ಎಚ್.ಕೆ.ಅನಂತರಾವ್ ಅವರ ಕಾದಂಬರಿ ಆಧಾರಿತ 'ಅಂತ'ಚಿತ್ರದ ನಾಯಕನಾಗಿ ಅಭಿನಯಿಸಿದ್ದು ಇವರ ವೃತ್ತಿ ಜೀವನಕ್ಕೆ ಒಂದು ಹೊಸ ಆಯಾಮ ನೀಡಿತು. ಈ ಚಿತ್ರದಲ್ಲಿ ಅನ್ಯಾಯದ ವಿರುದ್ಧ ಸಿಡಿದೇಳುವ ಕನ್ವರ್‌ಲಾಲ್‌ನ ಪಾತ್ರ ಇವರಿಗೆ ರೆಬಲ್‌ಸ್ಟಾರ್ ಎಂಬ ಇಮೇಜು ನೀಡಿತು. ಅನಂತರ ಇವರು ನಾಯಕ, ಖಳನಾಯಕ ಪಾತ್ರಗಳಲ್ಲಿ ನಟಿಸಿದರು. ರಂಗನಾಯಕಿ, ಪಡುವಾರಹಳ್ಳಿ ಪಾಂಡವರು, ಮಸಣದ ಹೂವು, ಚಕ್ರವ್ಯೂಹ, ಏಳುಸುತ್ತಿನ ಕೋಟೆ, ಹೃದಯಹಾಡಿತು, ಸ್ನೇಹಸಂಬಂಧ, ಬ್ರಹ್ಮಾಸ್ತ್ರ, ಅಮರಜ್ಯೋತಿ ಮೊದಲಾದ ಅನೇಕ ಚಿತ್ರಗಳಲ್ಲಿ ಇವರು ನಟಿಸಿದ್ದಾರೆ. ಮಸಣದಹೂವು ಚಿತ್ರದಲ್ಲಿನ ಇವರ ಪಾತ್ರದ ಅಭಿನಯ ಅವಿಸ್ಮರಣೀಯವಾದದ್ದು. ಹೃದಯ ಹಾಡಿತು ಚಿತ್ರ ಇವರ ಚಿತ್ರರಂಗದ ಇಮೇಜನ್ನು ಬದಲಾಯಿಸಿತು. ಚಕ್ರವ್ಯೂಹ ಹಾಗೂ ಮೌನರಾಗ ಚಿತ್ರಗಳು ಇವರಿಗೆ ಜನಪ್ರಿಯತೆ ತಂದುಕೊಟ್ಟವು.



ಇವರು ರಾಜಕೀಯ ಕ್ಷೇತ್ರವನ್ನು ಪ್ರವೇಶಿಸಿದ ಸಂದರ್ಭದಲ್ಲಿ ಮೊದಲಿಗೆ ಜನತಾದಳದಲ್ಲಿದ್ದರು. ಅನಂತರ ಕಾಂಗ್ರೆಸ್‌ಪಕ್ಷ ಸೇರಿದರು. ಮಂಡ್ಯ ಕ್ಷೇತ್ರದಿಂದ ಸ್ಪರ್ಧಿಸಿ ಲೋಕಸಭೆಗೆ ಆಯ್ಕೆಯಾದರು. ಅನಂತರ ಕಾವೇರಿ ಚಳವಳಿಯ ಹಿನ್ನೆಲೆಯಲ್ಲಿ ಜನತೆಯ ಅಭಿಪ್ರಾಯಕ್ಕೆ ಮನ್ನಣೆ ನೀಡಿ ತಮ್ಮ ಲೋಕಸಭಾ ಸ್ಥಾನಕ್ಕೆ ರಾಜೀನಾಮೆ ನೀಡುವುದಾಗಿ ಪ್ರಕಟಿಸಿದ್ದರು (2002).

ಅಂಬರೀಶ್ ತಮ್ಮ ಉದಾರ ಸ್ವಭಾವದಿಂದಾಗಿ ದಾನಶೂರ ಕರ್ಣ ಎಂದೇ ಹೆಸರಾಗಿದ್ದಾರೆ. ಸಮಾಜದ ದುರ್ಬಲ ವರ್ಗದವರ ಬಗ್ಗೆ ಇವರಿಗೆ ವಿಶೇಷ ಕಳಕಳಿ. ಖ್ಯಾತ ಪಿಟೀಲು ವಿದ್ವಾನ್ ಟಿ.ಚೌಡಯ್ಯ ಇವರ ಅಜ್ಜ. ನಟಿ ಸುಮಲತಾ ಇವರ ಪತ್ನಿ. *

**ಅಂಬಲಿ ಚನ್ನಬಸಪ್ಪ :** 1895-1962. ಸ್ವಾತಂತ್ರ್ಯಯೋಧರು ಮತ್ತು ಕರ್ನಾಟಕ ಏಕೀಕರಣದ ನೇತಾರರು. ಬಿಜಾಪುರ ತಾಲ್ಲೂಕಿನ ಅರ್ಜುಣಗಿ ಗ್ರಾಮದಲ್ಲಿ ಒಕ್ಕಲುತನದ ಮನೆತನದಲ್ಲಿ ಜನಿಸಿದರು. ತಂದೆ ಜಗದೇವಪ್ಪ. ಶಿಕ್ಷಣ ಕನ್ನಡ ನಾಲ್ಕನೆಯ ತರಗತಿಯವರೆಗೆ. 1914ರಲ್ಲಿ ಒಂದನೆಯ ಮಹಾಯುದ್ಧ ನಿಧಿಗಾಗಿ ಗ್ರಾಮಕ್ಕೆ ಬಂದ ಮಾಮಲೇದಾರರನ್ನು ವಿರೋಧಿಸಿ ಮೂರುದಿನ ಉಪವಾಸಮಾಡಿ ಬಂಧನದ ಶಿಕ್ಷೆ ಅನುಭವಿಸುವುದರೊಂದಿಗೆ ಇವರ ಸ್ವಾತಂತ್ರ್ಯಹೋರಾಟ ಪ್ರಾರಂಭವಾಯಿತೆನ್ನಬಹುದು. ಗಾಂಧಿಯವರ ಅನುಯಾಯಿಯಾಗಿ ಬಿಜಾಪುರದಲ್ಲಿ ಒಂದು ಸಂಘಟಿಸಿ ಭೂಕಂದಾಯ ವಸೂಲಿಯನ್ನು ವಿರೋಧಿಸಿದರು. 1919ರ ಜಲಿಯನ್‌ವಾಲಾಬಾಗ್ ಹತ್ಯಾಕಾಂಡ ಇವರನ್ನು ಸಂಪೂರ್ಣವಾಗಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಎಳೆದು ತಂದಿತು. ಚಳವಳಿಯಲ್ಲಿ ಭಾಗವಹಿಸಿ ಮೊದಲು 1919ರಲ್ಲಿ ಕಾರಾಗೃಹ ಶಿಕ್ಷೆ ಅನುಭವಿಸಿದರು. ಅನಂತರ ಕಾಯದೆಭಂಗ ಚಳವಳಿಯಲ್ಲಿ ಜೈಲು (1931) ಸೇರಿ ಬಿಜಾಪುರ ಹಾಗೂ ವಿಸಾಪುರಗಳಲ್ಲಿ ಬಂಧನದಲ್ಲಿದ್ದರು.

ಸರ್ಕಾರದ ಕಿರುಕುಳ ಹೆಚ್ಚಾದಾಗ ಇವರು ಬಿಜಾಪುರ ಬಿಟ್ಟು ಸಂಸಾರಸಮೇತ ಸೊಲ್ಲಾಪುರಕ್ಕೆ ಹೋಗಬೇಕಾಯಿತು. ಅಲ್ಲಿ ಜೀವನವನ್ನು ಸಾಗಿಸಲು ನೌಕರಿ ಹಿಡಿದರೂ ಕಾಯದೆಭಂಗ ಚಳವಳಿಯಲ್ಲಿ ಮತ್ತೆ ಸೇರಿ ಲಷ್ಕರಿ ಕಾನೂನಿನ ಕಾಲದಲ್ಲಿ ಸರ್ಕಾರದ ಕಣ್ಣುತಪ್ಪಿಸಿ ಸೊಲ್ಲಾಪುರದಿಂದ ಮತ್ತೆ ಬಿಜಾಪುರಕ್ಕೆ ಬಂದರು. 1930-33ರ ಸಾರ್ವತ್ರಿಕ ಕಾಯದೆಭಂಗ ಚಳವಳಿಯಲ್ಲಿ ಮುಖ್ಯಪಾತ್ರ ವಹಿಸಿದ್ದಕ್ಕಾಗಿ ಸರ್ಕಾರ ಇವರಿಗೆ ಕಠಿಣಶಿಕ್ಷೆ ವಿಧಿಸಿತು. ಜೈಲುವಾಸದ ಕಾಲದಲ್ಲಿ ಇವರು ಕನ್ನಡ, ಹಿಂದಿ ಮತ್ತು ಮರಾಠಿ ಭಾಷೆಗಳನ್ನು ಕಲಿತರು.

1940ರಲ್ಲಿ ಇವರು ಕೆ.ಪಿ.ಸಿ.ಸಿ. ಕಾರ್ಯದರ್ಶಿಯಾಗಿ ಹುಬ್ಬಳ್ಳಿ ಧಾರವಾಡಗಳಲ್ಲಿ ವಾಸಮಾಡತೊಡಗಿದರು. 1942ರಲ್ಲಿ ಕಾರ್ಯಕರ್ತರಾಗಿ, ಚಲೇಜಾವ್ ಸಮಿತಿಯ ಅಧ್ಯಕ್ಷರಾಗಿ ದುಡಿದರು. ಟಪಾಲು ಲೂಟಿ ಮಾಡುವುದು, ಸರ್ಕಾರಿ ಮಹತ್ತ್ವದ ಕಾಗದಪತ್ರಗಳನ್ನು ಸುಡುವುದು ಮುಂತಾದ ವಿಧ್ವಂಸಕ ಕೃತ್ಯಗಳನ್ನು ಕೈಗೊಂಡರು. ಇವರ ನೇತೃತ್ವದಲ್ಲಿ ಮಿಂಚನಾಳ ಮತ್ತು ಜುಮನಾಳ ಸ್ಟೇಷನ್‌ಗಳು ಅಗ್ನಿಗೆ ಆಹುತಿಯಾದವು. ಮುಂಬಯಿಯಿಂದ ಇಂಗ್ಲೆಂಡಿಗೆ ಬಂಗಾರ, ಸಾಮಾನುಸರಂಜಾಮು ತುಂಬಿಕೊಂಡು ಹೊರಟ ಹಡಗೊಂದರ ಜಲಸಮಾಧಿ ಮಾಡಿದ ಕೀರ್ತಿ ಇವರದು. ಆ ಕಾಲದಲ್ಲಿ ಇವರನ್ನು ಹಿಡಿದುಕೊಟ್ಟರೆ ರೂ.5,000 ಬಹುಮಾನ ಕೊಡುವುದಾಗಿ ಸರ್ಕಾರ ಸಾರಿತು. 1955ರಲ್ಲಿ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ, 1952 ಮತ್ತು 1957ರಲ್ಲಿ ಶಾಸನಸಭಾ ಸದಸ್ಯರಾಗಿ ಇವರು ಆಯ್ಕೆಹೊಂದಿದರು. ಕರ್ನಾಟಕ ಏಕೀಕರಣಕ್ಕಾಗಿ ಮತ್ತು ಅಸ್ಪೃಶ್ಯತಾ ನಿವಾರಣೆಗಾಗಿ ದುಡಿದರು. ರಾಜ್ಯಕ್ಕೆ ಕರ್ನಾಟಕ ಎಂದು ನಾಮಕರಣವಾಗಬೇಕೆಂಬುದು ಇವರ ಹಟವಾಗಿತ್ತು. ಪಾರ್ಶ್ವವಾಯುಪೀಡಿತರಾಗಿ 1962 ಮಾರ್ಚ್ 1ರಂದು ನಿಧನರಾದರು. ಅರ್ಜುಣಗಿಯಲ್ಲಿ ಇವರ ಸಮಾಧಿ ಇದೆ. *

**ಅಂಬಳೆ :** ಚಿಕ್ಕಮಗಳೂರು ಜಿಲ್ಲೆಯ ಅದೇ ತಾಲ್ಲೂಕಿನ ಒಂದು ಗ್ರಾಮ ಮತ್ತು ಹೋಬಳಿ ಕೇಂದ್ರ. ಚಿಕ್ಕಮಗಳೂರು - ಬೇಳವಾಡಿ ಮಾರ್ಗದಲ್ಲಿ ಚಿಕ್ಕಮಗಳೂರಿನಿಂದ 8ಕಿಮೀ ದೂರದಲ್ಲಿದೆ. ಪುರಾತನ ಕಾಲದಲ್ಲಿ ಯಮುಳಾಪುರಿ ಎಂಬ ಅಭಿಧಾನವನ್ನು ಹೊಂದಿದ್ದು ಸೋಮರಾಜನೆಂಬಾತ ಈ ಗ್ರಾಮವನ್ನು ನಿರ್ಮಿಸಿದನೆಂದು ಪ್ರತೀತಿ. 959ರ ಶಾಸನದಲ್ಲಿ ಅಮ್ಮಲೆ ಎಂಬ ಉಲ್ಲೇಖವಿದೆ. ಕಾಲಕ್ರಮೇಣ ಅಮ್ಮಲೆಯೇ ಅಂಬಳೆ ಎಂದಾಗಿದೆ. 12 ಮತ್ತು 13ನೆಯ ಶತಮಾನದಲ್ಲಿ ಹೊಯ್ಸಳರ ಕಾಲದಲ್ಲಿ ಪ್ರಸಿದ್ಧ ಅಗ್ರಹಾರವಾಗಿ ಈ ಊರು ಧಾರ್ಮಿಕಮಹತ್ವ ಪಡೆದಿತ್ತು.

ಇಲ್ಲಿರುವ ಚನ್ನಿಗರಾಯ, ವೀರಭದ್ರ, ಲೋಕೇಶ್ವರ ಹಾಗೂ ಗೋಪಾಲಕೃಷ್ಣ ದೇವಾಲಯಗಳು ಪ್ರಸಿದ್ಧವಾಗಿವೆ. ವಾಸ್ತುಶಿಲ್ಪದ ದೃಷ್ಟಿಯಿಂದ ವಿಶೇಷ ಮಹತ್ತ್ವವನ್ನು ಈ ದೇಗುಲಗಳು ಹೊಂದಿಲ್ಲವಾದರೂ ಐತಿಹಾಸಿಕ ಕುರುಹುಗಳಾಗಿವೆ. ಚನ್ನಿಗರಾಯ ದೇವಾಲಯವನ್ನು ಹೊಯ್ಸಳ ದೊರೆ ಎರಡನೆಯ ಬಲ್ಲಾಳ (1178) ನಿರ್ಮಿಸಿದ್ದು ಇದನ್ನು ವೀರಬಲ್ಲಾಳ ಕೇಶವ ದೇವರೆಂದು ಕರೆಯಲಾಗಿದೆ. ಗುಡಿಯು ಚೌಕಾಕಾರದ ಗರ್ಭಗೃಹ, ನವರಂಗ ಹಾಗೂ ಸುಕನಾಸಿಯನ್ನು ಒಳಗೊಂಡಿದೆ. ಮಂಟಪದಂತಿರುವ ನಾಲ್ಕುಕಂಬಗಳು ಚಕ್ರಾಕಾರದ ಕೋಳವೆಯ ಹಿಡಿಕೆಗಳಿಂದ ಕೂಡಿವೆ. ಗರ್ಭಗೃಹದಲ್ಲಿರುವ ಗರುಡವಾಹನ ಚನ್ನಿಗರಾಯಮೂರ್ತಿ ಪೀಠದಿಂದ 1.5 ಮೀ ಎತ್ತರವಾಗಿದೆ. ಶಂಖ, ಚಕ್ರ, ಗದಾಧಾರಿಯಾದ ಚನ್ನಿಗರಾಯನ ಇಕ್ಕೆಲಗಳಲ್ಲಿ ಶ್ರೀದೇವಿ, ಭೂದೇವಿಯರಿದ್ದಾರೆ. ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರದ ಸುಂದರ ಚಿತ್ರಣವಿದೆ. ಮೂರ್ತಿಯು ನಾಲ್ಕನೆಯ ಹಸ್ತ ಭಿನ್ನವಾಗಿರುವುದರಿಂದ ಪೂಜೆ ನಡೆಯುತ್ತಿಲ್ಲ. ಲೋಕೇಶ್ವರ ದೇವಾಲಯವೂ ಹೊಯ್ಸಳ ಶಿಲ್ಪ ಮಾದರಿಯದು. ಗುಡಿಯ ನವರಂಗದಲ್ಲಿ ಗಣಪತಿ, ನಂದಿವಾಹನಾರೂಢ ಶಿವಪಾರ್ವತಿ, ಷಣ್ಮುಖ, ಸೂರ್ಯನ ವಿಗ್ರಹಗಳನ್ನು ಕೆತ್ತಲಾಗಿದೆ. ಗೋಪಾಲಕೃಷ್ಣದೇವಾಲಯ ಸುಂದರವಾಗಿ ನಿರ್ಮಿತವಾಗಿದೆ. ವೀರಭದ್ರ ದೇವಾಲಯ ಈಗ ಆಧುನಿಕ ರೂಪವನ್ನು ಪಡೆದಿದೆ. ಇಲ್ಲಿ ಶಂಕರಲಿಂಗೇಶ್ವರ, ವೀರಭದ್ರೇಶ್ವರ, ಚಂದ್ರಮೌಳೇಶ್ವರ, ಗಂಗಾವಿಶ್ವೇಶ್ವರ ಓಂಕಾರೇಶ್ವರ ಎಂಬ ಪಂಚಶಿವಾಲಯಗಳಿವೆ. ದೇವೀರಮ್ಮ ದೇವಾಲಯವಿದೆ. ಚೈತ್ರಮಾಸದಲ್ಲಿ ಇಲ್ಲಿನ ಬೀರಲಿಂಗೇಶ್ವರ ದೇವರ ಜಾತ್ರೆ ವಿಜೃಂಭಣೆಯಿಂದ ನಡೆಯುತ್ತದೆ.

ಕನ್ನಡದ ಉತ್ತಮ ಗದ್ಯ ಲೇಖಕರೆಂದೂ ಕನ್ನಡ ಅಶ್ವಿನಿ ದೇವತೆಗಳಲ್ಲಿ ಒಬ್ಬರೆಂದು ಪ್ರಸಿದ್ಧರಾದ ಎ.ಆರ್.ಕೃಷ್ಣಶಾಸ್ತ್ರೀ (ನೋಡಿ) ಈ ಊರಿನವರು. ಇವರ ಹೆಸರಿನಲ್ಲಿ ಇಲ್ಲಿ ಒಂದು ಸಾರ್ವಜನಿಕ ಗ್ರಂಥಾಲಯವನ್ನು ಸ್ಥಾಪಿಸಲಾಗಿದೆ. **(ಬಿ.ಎಂಎ.)**

**ಅಂಬಾಜಿದುರ್ಗ :** ಕೋಲಾರ ಜಿಲ್ಲೆ ಚಿಂತಾಮಣಿ ತಾಲ್ಲೂಕಿನ ಒಂದು ಊರು ಹಾಗೂ ಬೆಟ್ಟ. ಚಿಂತಾಮಣಿಯಿಂದ 5ಕಿಮೀ ದೂರದಲ್ಲಿದೆ. 1873ರ ವರೆಗೆ ಈ ಊರು ತಾಲ್ಲೂಕಿನಲ್ಲೇ ಅತಿ ಮುಖ್ಯ ಸ್ಥಳವಾಗಿತ್ತು. ಈಗ ಹೋಬಳಿ ಕೇಂದ್ರವಾಗಿದೆ.

ಆಂಧ್ರಪ್ರದೇಶದ ಕಡೆಯಿಂದ ಹಬ್ಬಿ ಬಂದಿರುವ ಬೆಟ್ಟಸಾಲಿನಲ್ಲಿ ಒಂಟಿ ಬೆಟ್ಟವಾಗಿ ಎದ್ದು ನಿಂತಿರುವ ಈ ದುರ್ಗದ ಮೇಲೆ ಟಿಪ್ಪುಸುಲ್ತಾನ ಕಟ್ಟಿಸಿದ ಒಂದು ಕೋಟೆ ಇದೆ. ಸಮುದ್ರ ಮಟ್ಟದಿಂದ ನಾಲ್ಕುಸಾವಿರ ಅಡಿಗಳ ಎತ್ತರದಲ್ಲಿರುವ ಈ ಬೆಟ್ಟದ ಮೇಲಿನಿಂದ ನಯನಮನೋಹರ ದೃಶ್ಯಗಳನ್ನು ಕಾಣಬಹುದಾಗಿದೆ. ಶಿಲಾ ತೋರಣದಂತೆ ಕಾಣುವ ಇಲ್ಲಿನ ಶಿಖರಗಳು, ಬೇಸಿಗೆಯಲ್ಲಿ ತಂಪೆರೆಯುವ ನೀರಿನ ದೋಣೆಗಳು ಪ್ರವಾಸಿಗರ ಆಯಾಸವನ್ನು ತಣಿಸುತ್ತವೆ. ಕೋಟೆಯೊಳಗೆ ಐತಿಹಾಸಿಕ ಅವಶೇಷಗಳಿವೆ. ಇಲ್ಲಿರುವ ಕಾಳಿನಕಣಜವನ್ನು ಎಣ್ಣೆಕಣಜ ಎಂದು ಕರೆಯಲಾಗುತ್ತದೆ. ಕಮಾನಿನಾಕಾರದ ಪ್ರವೇಶವಿರುವ ಬಾವಿಗೆ ಖಜಾನೆ ಎನ್ನುವರು. ಗವಿಗಂಗಾಧರೇಶ್ವರನ ದೇವಾಲಯ ಕೂಡ ಇಲ್ಲಿದೆ. ಇಲ್ಲಿನ ಕೋಟೆ 1791ರಲ್ಲಿ ಬ್ರಿಟಿಷರ ವಶವಾಯಿತು. ಬೆಟ್ಟದ ಬುಡದಲ್ಲಿ ಉಪ್ಪರಪೇಟೆ ಎಂಬ ಸಣ್ಣ ಊರಿದೆ. ಒಂದು ಉತ್ತಮ ಗಿರಿಧಾಮವಾಗುವ ಎಲ್ಲ ಸಾಧ್ಯತೆಗಳನ್ನು ಅಂಬಾಜಿದುರ್ಗ ಪಡೆದುಕೊಂಡಿದೆ. **(ಆರ್.ಆರ್‌ಇ.)**

**ಅಂಬಿಕಾನಗರ :** ಉತ್ತರ ಕನ್ನಡ ಜಿಲ್ಲೆ ಹಳಿಯಾಳ ತಾಲ್ಲೂಕಿನಲ್ಲಿ ನಿರ್ಮಿತವಾದ ಒಂದು ಪಟ್ಟಣ. ಕರ್ನಾಟಕ ವಿದ್ಯುತ್ ನಿಗಮದಿಂದಲೇ ಮೊದಲಿಗೆ ಅಮಗಾ ಜಮಗಾ ಹಳ್ಳಿಗಳ ವ್ಯಾಪ್ತಿಯಲ್ಲಿ ನಿರ್ಮಿಸಲಾದ ಈ ಸ್ಥಳ ಇಂದು ಬೆಳೆಯುತ್ತಿರುವ ಒಂದು ಪಟ್ಟಣವಾಗಿದೆ. ಇಲ್ಲಿನ ಕಾಳಿನದಿ ಜಲವಿದ್ಯುತ್ ಯೋಜನೆಯು ರಾಜ್ಯದಲ್ಲಿಯೇ ಅತಿ ದೊಡ್ಡದಾದ ವಿದ್ಯುತ್ ಉತ್ಪಾದನಾ



ಸೈಕ್ಸ್ ಪಾಯಿಂಟ್

ಸ್ಥಾವರ. ಕವಳೆಗುಹೆ, ಸೈಕ್ಸ್‌ಪಾಯಿಂಟ್ ಮತ್ತು ದಾಂಡೇಲಿ ಮೃಗಧಾಮಗಳಿಗೆ ಹೋಗುವ ಪ್ರವಾಸಿಗಳಿಗೆ ಇದು ಕೇಂದ್ರವಾಗಿದೆ. ಇಲ್ಲಿ ಕರ್ನಾಟಕ ವಿದ್ಯುತ್ ನಿಗಮದ ಸುಂದರ ಪ್ರವಾಸಿಮಂದಿರವಿದೆ. **(ಬಿ.ಎಸ್.ಎಂ.)**

**ಅಂಬಿಗರ ಚೌಡಯ್ಯ :** 12ನೆಯ ಶತಮಾನದ ವಚನಕಾರರಲ್ಲಿ ಅತ್ಯಂತ ವಿಶಿಷ್ಟನಾದವ. ವೃತ್ತಿಯಿಂದ ಅಂಬಿಗ; ಪ್ರವೃತ್ತಿಯಲ್ಲಿ ಅನುಭವಿ. ಬಸವಣ್ಣನವರ ಅನುಭವ ಮಂಟಪದಲ್ಲಿ ಸಮಾನಭೂಮಿಕೆಯ ಸಮ್ಮೇಳನದಲ್ಲಿ ಸೇರಿಕೊಂಡವ. ತನ್ನ ಕಾಯಕ ಅಥವಾ ವ್ಯಕ್ತಿನಾಮವಾದ ಅಂಬಿಗರ ಚೌಡಯ್ಯ ಎಂಬುದೇ ಈತನ ವಚನಗಳ ಅಂಕಿತವಾಗಿದೆ. ತಾನು ಕೇವಲ ತುಂಬಿದ ಹೊಳೆಯಲ್ಲಿ ದೋಣಿಗೆ ಹುಟ್ಟುಹಾಕುವ ಅಂಬಿಗ ಮಾತ್ರವಲ್ಲ, ಭವಸಾಗರದಲ್ಲೂ ಹುಟ್ಟುಹಾಕುವ ಕೌಶಲವುಳ್ಳವ ಎಂದು ಹೇಳಿಕೊಳ್ಳುವುದರಲ್ಲಿ ತನ್ನ ಅನುಭಾವ ದೃಷ್ಟಿಯನ್ನು ಪ್ರಕಟಿಸಿದ್ದಾನೆ.

ಉಳಿದ ವಚನಕಾರರ ವಚನಗಳಲ್ಲಿರುವಂತೆ ಇವನಲ್ಲಿಯೂ ಶಿವಾನುಭವಪರವಾದ ವಚನಗಳಿದ್ದರೂ ಇವುಗಳಲ್ಲಿ ಕಂಡುಬರುವ ಸಮಕಾಲೀನ ಸಮಾಜ ವಿಡಂಬನೆಯ ವ್ಯಗ್ರದೃಷ್ಟಿ ಬೇರೆಯವರಲ್ಲಿ ವಿರಳವೆಂದೇ ಹೇಳಬೇಕು. ಇವನ ವಚನಗಳ ವಸ್ತು, ಭಾಷೆ, ಶೈಲಿಗಳನ್ನು ಗಮನಿಸಿದರೆ ಇವನೊಬ್ಬ ಕೆಚ್ಚೆದೆಯ, ನಿಷ್ಠುರ ಪ್ರಕೃತಿಯ, ಗ್ರಾಮ್ಯ ಮನೋಧರ್ಮದ ಒರಟು ವಚನಕಾರ ಎಂಬುದು ಸ್ಪಷ್ಟವಾಗುತ್ತದೆ. ಈತ ನ್ಯಾಯನಿಷ್ಠುರ, ದಯಾದಾಕ್ಷಿಣ್ಯಪರನಲ್ಲ. ಯಾರನ್ನೇ ಆಗಲಿ ಯಾವುದನ್ನೇ ಆಗಲಿ ಈತ ಟೀಕಿಸದೆ ಬಿಡುತ್ತಿರಲಿಲ್ಲ. ಮೃದುವಾಗಿ ಮಾತನಾಡುವುದು ಅಪೂರ್ವ, ಮಾತಿನ ಬಹುಭಾಗ ಹರಿತವಾದದ್ದು. 'ಕೇಳಿರಯ್ಯಾ ಮಾನವರೇ, ಶೀಲದಲ್ಲಿ ಸಂಪನ್ನರಾದವರು ನೀವು ಕೇಳಿರೋ, ನನಗೊಬ್ಬರೆಂಜಲು ಸೇರದೆಂದು ಶುಚಿತನದಲ್ಲಿ ಬದುಕುವ ಬರಿಯ ಮಾತಿನ ಭಂಜಕರು ನೀವು ಕೇಳಿರೋ', 'ಪರಪುರುಷಾರ್ಥವನ್ನರಿಯದೆ ಕೆಟ್ಟ ನರ ಕುರಿಗಳು ನೀವು ಕೇಳಿರೋ' ಎಂದು ಆರಂಭವಾಗಿ 'ಮೆಟ್ಟಿದ ದೊಡ್ಡಪಾದರಕ್ಷೆಯ ತಕ್ಕೊಂಡು ಲಟಲಟನೆ ಹೊಡೆಯೆಂದ, ಪಡಿಹಾರ ಉತ್ತಣ್ಣನ ಎಡಪಾದರಕ್ಷೆಯಿಂದ ಪಟಪಟನೆ ಹೊಡೆಯೆಂದ'. 'ಮೂಗ ಕೊಯ್ದು ಇಟ್ಟಂಗಿಯ ಕಲ್ಲಿಲೆ ಸಾಸಿವೆಯ ತಿಕ್ಕಿ ಹಿಟ್ಟಿನ ತಳಿದ ಮೇಲೆ ನಿಂಬೆಯ ಹುಳಿಯನೆ ಹಿಂಡಿ ಪಡುವಲ ಗಾಳಿಗೆ ಹಿಡಿ'- ಹೀಗೆ ಮುಕ್ತಾಯವಾಗುತ್ತದೆ ಇವನ ವಚನಗಳ ಶೈಲಿ. ಹಳೆಯ ಮತ್ತು ಹೊಸ ನಂಬಿಕೆಗಳ ಅವಸ್ಥಾಂತರದ ಅವ್ಯವಸ್ಥೆಯಲ್ಲಿದ್ದ ಅಂದಿನ ವೀರಶೈವ ಸಮಾಜದ ಲೋಪದೋಷಗಳನ್ನು ನಿರ್ದಾಕ್ಷಿಣ್ಯವಾಗಿ ಎತ್ತಿ ತೋರಿಸುವ ಈ ವಚನಗಳು ಬಹುಶಃ ಅಂದಿನ ಸಾಮಾಜಿಕ ಆವಶ್ಯಕತೆಯ ಪರಿಣಾಮಗಳೆಂದು ಭಾವಿಸಬಹುದು. ಈತನ ವಚನಗಳಿಂದ ನಮಗೆ ಕಂಡುಬರುವ ಸಮಾಜದ

ಅವ್ಯವಸ್ಥೆಯ ಚಿತ್ರ, ಬೇರೆಯವರಲ್ಲಿ ನಮಗೆ ಇಷ್ಟುರಮಟ್ಟಿಗೆ ಕಾಣದು. ಇವನ ವಚನಗಳಲ್ಲಿ ನಿಜಶರಣನ ಮೊರೆತದ ಜೊತೆಗೆ ಸುಧಾರಕನ ಕಟುಟೀಕೆಯೂ ಕೇಳಿಬರುತ್ತದೆ. ಈತನ ವಚನಗಳು ಅನರ್ಥಸಾಧಕವಾದ ಕೋಪದಿಂದ ಹೊಮ್ಮಿದುವಲ್ಲ; ಸದರ್ಥಸಾಧಕವಾದ ಸತ್ಕೋಪದಿಂದ ಹೊಮ್ಮಿದುವು. ಕನ್ನಡ ಸಾಹಿತ್ಯದಲ್ಲಿ ಈ ಬಗೆಯ ದಿಟ್ಟತನ, ವ್ಯಗ್ರತೆ ಕಂಡುಬರುವುದು ಬಹುಶಃ ಇಬ್ಬರಲ್ಲೇ ಎಂದು ತೋರುತ್ತದೆ. ಒಬ್ಬ ಸಿಡಿಲು ನುಡಿಯ ಸರ್ವಜ್ಞ; ಇನ್ನೊಬ್ಬ ಕೆಚ್ಚೆದೆಯ ವಚನಕಾರ ಅಂಬಿಗರ ಚೌಡಯ್ಯ. **(ಜಿ.ಎಸ್.ಎಸ್.)**

**ಅಂಬುಲಿಗೆ ಚೆನ್ನಮಲ್ಲೇಶ :** ಸು.1700. ವೀರಶೈವ ಕವಿ. ದೀಪದ ಕಲಿಯರ ಕಾವ್ಯದ ಕರ್ತೃ, ಗುಲ್ಬರ್ಗ ಜಿಲ್ಲೆ ಅಂಬುಲಿಗೆ ಈತನ ಜನ್ಮಸ್ಥಳ. ಗುರು ಚೆನ್ನಮಲ್ಲಿಕಾರ್ಜುನ ಕೊಟ್ಟ ಮತಿಯಿಂದ ಕಾವ್ಯವನ್ನು ರಚಿಸಿದಂತೆ ಹೇಳಿಕೊಂಡಿದ್ದಾನೆ. ಶಿಬಿರಾಯನ ಸ್ತುತಿ, ವೀರಸಂಗಯ್ಯನ ಚೌಪದ, ಗಂಗೆಗೌರಿ ಚೌಪದ, ಶ್ವೇತನ ವಾರ್ಧಕ, ಸಿರಿಯಾಳಸೆಟ್ಟಿ ವಾರ್ಧಕ, ನೀಲಕಂಠಯ್ಯನ ಭಾಮಿನೀ- ಇವು ಈತನ ಇತರ ಕೃತಿಗಳು. ವೀರಸಂಗಯ್ಯನ ಚೌಪದದ ಕೊನೆಯಲ್ಲಿ 'ಕಲಬರಿಗೆ ದೇಶವೆಂಬಲ್ಲಿ ಓದಿಸುವ ಸಲೆ ಭಕ್ತ ಚೆನ್ನಮಲ್ಲಯ್ಯ' ಎಂದು ಹೇಳಿರುವುದರಿಂದ ಈತ ಉಪಾಧ್ಯಾಯನಾಗಿದ್ದಿರಬಹುದು. ಪೂರ್ವ ಕವಿಗಳಲ್ಲಿ ಕೆರೆಯಪದ್ಮರಸ, ಹರೀಶ್ವರ, ರಾಘವಾಂಕ, ಭೀಮಕವಿ, ಚಾಮರಸ, ಪಾಲ್ಕುರಿಕೆ ಸೋಮನಾಥ ಮೊದಲಾದವರನ್ನು ಸ್ಮರಿಸಿದ್ದಾನೆ.

ದೀಪದ ಕಲಿಯರ ಕಾವ್ಯ ಸಾಂಗತ್ಯದಲ್ಲಿ ರಚಿತವಾಗಿದೆ. ಇದರಲ್ಲಿ 9 ಸಂಧಿಗಳೂ 1046 ಪದ್ಯಗಳೂ ಇವೆ. ಭೀಮಕವಿಯ ಬಸವ ಪುರಾಣದಲ್ಲಿ ಬರುವ ದೀಪದ ಕಲಿಯರನ ಕಥೆ ಈ ಗ್ರಂಥಕ್ಕೆ ಆಕರ. ದೀಪವನ್ನು ದೇವರಿಗೆ ಬೆಳಗಿಸುವುದರಲ್ಲಿ ಅಸಾಧಾರಣ ಪರಾಕ್ರಮವನ್ನು ಪ್ರದರ್ಶಿಸಿದ ಒಬ್ಬ ವೀರಭಕ್ತನ ಕಥೆ ಕಾವ್ಯದ ವಸ್ತು. ದೀಪದ ಕಲಿ (ಕಣಂಬುಲ್ಲ ನಾಯನಾರ) ತಮಿಳುನಾಡಿನ ಅರವತ್ಮೂರು ಪುರಾತನರಲ್ಲೊಬ್ಬ. ಈತ ಕೈದೀವಿಗೆಗಳಿಗೆ ಎಣ್ಣೆ ಇಲ್ಲದಂತಾದಾಗ ತನ್ನ ಜಡೆಗೂದಲಿಗೆ ಬೆಂಕಿ ಹತ್ತಿಸಿ ದೀಪವನ್ನಾಗಿ ಮಾಡಿ ದೇವರಿಗೆ ಪೂಜೆ ಸಲ್ಲಿಸಿದ ವ್ಯಕ್ತಿ-ಎಂಬ ಪ್ರತೀತಿ ಇದೆ.

ಕವಿ ತನ್ನ ಕೃತಿಯನ್ನು ಅಂಗನೆಯರಿಗೆ ಇರುವ ಒಡವೆಗಳಲ್ಲಿ ಮಾಂಗಲ್ಯ ಹೇಗೊ ಹಾಗೆ ಶ್ರೇಷ್ಠವಾದುದು, ಅಮೂಲ್ಯವಾದುದು ಎಂದು ಹೊಗಳಿಕೊಂಡಿದ್ದಾನೆ. ಕಥಾವಸ್ತು ಚಿಕ್ಕದಾಗಿರುವುದರಿಂದ ಅದನ್ನು ಬೆಳೆಸಲು ಸುಮಾರು 25 ಉಪಕಥೆಗಳನ್ನು ತಂದು ಸೇರಿಸಿದ್ದಾನೆ. ಕೆಲವೊಮ್ಮೆ ಈ ಕಥೆಗಳು ಔಚಿತ್ಯವರಿಯದೆ ಸೇರಿರುವುದರಿಂದ ಕಥಾಬಂಧ ಶಿಥಿಲವಾಗಿದೆ. ವರ್ಣನಾಂಶಗಳು ಕಡಿಮೆ. ಶೃಂಗಾರವರ್ಣನೆಗಳು ಮನೋಹರವಾಗಿವೆ. ಕಥೆಗಾರಿಕೆಯ ಶೈಲಿ ಚೆನ್ನಾಗಿದೆ. ಆಡುಭಾಷೆಯನ್ನು ಹೆಚ್ಚು ಬಳಸುವುದರಿಂದ ಶೈಲಿ ಸತ್ವಯುತವಾಗಿದೆ, ಸಹಜವಾಗಿದೆ. ಈ ದೃಷ್ಟಿಯಿಂದ ಇದು ಜನಪದಕಾವ್ಯ ಎನ್ನುವಂತಿದೆ.

'ಶಿಬಿರಾಯನ ಸ್ತುತಿ' ಸಾಂಗತ್ಯದಲ್ಲಿದ್ದು ಇದರಲ್ಲಿ 9 ಸಂಧಿಗಳೂ 955 ಪದ್ಯಗಳೂ ಇವೆ. 'ವೀರಸಂಗಯ್ಯನ ಚೌಪದ' 192 ಚೌಪದಗಳನ್ನುಳ್ಳ ಕೃತಿ. ಗಂಗೆಗೌರಿ ಚೌಪದದಲ್ಲಿ 98 ಚೌಪದಗಳಿವೆ. ಶ್ವೇತನವಾರ್ಧಕದಲ್ಲಿ 97 ವಾರ್ಧಕಷಟ್ಪದಿಗಳಿವೆ. ನೀಲಕಂಠಯ್ಯನ ಭಾಮಿನಿಯಲ್ಲಿ 43 ಭಾಮಿನಿ ಷಟ್ಪದಿಗಳಿವೆ. ಸಿರಿಯಾಳಸೆಟ್ಟಿವಾರ್ಧಕದಲ್ಲಿ 33 ವಾರ್ಧಕಷಟ್ಪದಿಗಳಿವೆ. ಈ ಕೃತಿಗಳ ಭಾಷೆ, ವರ್ಣನೆ ಸರಳವೂ ಮನೋಹರವೂ ಆಗಿದೆ. *

**ಅಕದಾಸ ಗಣಪತಿ ಭಟ್ಟ :** 1891-1944. ಸಮಾಜ ಸುಧಾರಕರು. ತಮ್ಮ ಇಡೀ ಜೀವನವನ್ನೇ ಬಾಲವಿಧವಾವಿವಾಹ ಮಾಡಿಸುವುದಕ್ಕೆ ಮುಡುಪಾಗಿಟ್ಟಿದ್ದವರು.

ಅಡಕೆ ವ್ಯಾಪಾರಸ್ಥರಾಗಿದ್ದ ನಾರಾಯಣ ಭಟ್ಟ ಅಕದಾಸರ ಪ್ರಥಮ ಪುತ್ರನಾಗಿ ಉತ್ತರ ಕನ್ನಡ ಜಿಲ್ಲೆ ಶಿರಸಿಯಲ್ಲಿ 1891 ಡಿಸೆಂಬರ್ 31ರಂದು ಜನಿಸಿದರು. ಇವರು ಸಿರಿವಂತಿಕೆಯಲ್ಲೇ ಬೆಳೆದರು, ಮಾಧ್ಯಮಿಕ ಶಿಕ್ಷಣ ಮುಗಿಸಿದರು. ಅನಂತರ ಸ್ವಾತಂತ್ರ್ಯ ಸಂಗ್ರಾಮದ ಕರೆಗೆ ಓಗೊಟ್ಟರು. ವಿಶಾಲ ಕೋಟೆಯಂತೆ ಇದ್ದ ಇವರ ಮನೆಯೇ ಸ್ವಾತಂತ್ರ್ಯ ಚಳವಳಿಯ ಗುಪ್ತಸಭೆಗಳಿಗೆ ಮತ್ತು ಸ್ವಾತಂತ್ರ್ಯ ಚಳವಳಿಯ ಮುಂದಾಳುಗಳಿಗೆ ಆಶ್ರಯವಾಯಿತು. ಕರಪತ್ರಗಳ ತಯಾರಿಕೆಗೆ ಗುಪ್ತಕೇಂದ್ರವಾಯಿತು. ಬಿಟ್ಟಿಸೇವೆಗಾಗಿ ಎತ್ತಿನಗಾಡಿಗಳನ್ನು ಒತ್ತಾಯಿಸುತ್ತಿದ್ದ ಸರ್ಕಾರದ ರೀತಿಯನ್ನು ಪ್ರತಿಭಟಿಸಿದರು. ಗುಂಡು ಹಾರಿಸಲು ಬಂದ ಆಂಗ್ಲ ಅಧಿಕಾರಿಯ ಮುಂದೆ ಎದೆಸೆಟೆದು ನಿಂತರು.

ಬಾಲವಿಧವೆಯರ ಚಿಂತಾಜನಕ ಪರಿಸ್ಥಿತಿಯನ್ನು ಕಂಡು ಕ್ರಮೇಣ ಗಣಪತಿ ಭಟ್ಟರ ಮನಸ್ಸು ಅವರ ಉದ್ಧಾರಕಾರ್ಯದ ಕಡೆ ಹರಿಯಿತು. ವಿಧವಾವಿವಾಹ ಪ್ರಚಾರಕಾರ್ಯ ಪ್ರಾರಂಭಿಸಿದರು. ಈ ಕಾರ್ಯವನ್ನು ಅನೇಕ ಸಂಪ್ರದಾಯವಾದಿಗಳೂ ಸ್ವತಃ ಬಾಲವಿಧವೆಯರೂ ಪ್ರತಿಭಟಿಸಿದರು, ಸಾಮಾಜಿಕ ಬಹಿಷ್ಕಾರ ಹಾಕಿದರು. ಗಣಪತಿ ಭಟ್ಟರು ವಿರೋಧವನ್ನು ಲೆಕ್ಕಿಸದೆ ತೊಂದರೆಗಳನ್ನು ಎದುರಿಸಿ, ಧೈರ್ಯದಿಂದ ತಮ್ಮ ಕಾರ್ಯವನ್ನು ಮುಂದುವರಿಸಿದರು. ಸಮಾಜ ಬಹಿಷ್ಕರಿಸಿದಾಗ ಇವರ ಮನೆಯೇ ವಿಧವಾವಿವಾಹದ ಕಲ್ಯಾಣ ಮಂದಿರವಾಯಿತು. ತಮ್ಮ ನೇತೃತ್ವದಲ್ಲಿ ನೂರಾಮೂರು ಬಾಲವಿಧವೆಯರ ಲಗ್ನಮಾಡಿಸಿ ಅವರ ಜೀವನವನ್ನು ಸುಗಮಗೊಳಿಸಿದರು.

ಗಣಪತಿ ಭಟ್ಟರು ತರುಣರಿದ್ದಾಗಲೇ 1929ರಲ್ಲಿ, ಇವರ ಪತ್ನಿ ತೀರಿಕೊಂಡರು. ಬಾಲವಿಧವೆಯಾದ ಸಾಗರದ ಮಂಕಾಳಮ್ಮ ಎಂಬುವರನ್ನು 1932ರಲ್ಲಿ ವಿವಾಹ ಮಾಡಿಕೊಂಡು ತಾವು ಪ್ರತಿಪಾದಿಸುತ್ತಿದ್ದ ತತ್ವಕ್ಕೆ ಮಾದರಿಯಾದರು. ಮುಂದೆ ಇಬ್ಬರೂ ಕೂಡಿ ಬಾಲವಿಧವೆಯರ ಕಲ್ಯಾಣಕಾರ್ಯದಲ್ಲಿ ಮಗ್ನರಾದರು.

ಬಾಲವಿಧವಾವಿವಾಹದ ಬಗ್ಗೆ ಇವರು ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದರು. ಅನೇಕ ಕಡೆ ಉಪನ್ಯಾಸ ಮಾಡಿದರು. ವಿಧವಾ



ವಿವಾಹದ ಬಗ್ಗೆ ಅನೇಕ ಇಂಗ್ಲಿಷ್ ಪತ್ರಿಕೆಗಳಲ್ಲಿ ಬಂದ ಲೇಖನಗಳನ್ನು ಕನ್ನಡದಲ್ಲಿ ಭಾಷಾಂತರಿಸಿ ಪ್ರಕಟಿಸಿ ಹಂಚಿದರು. ಕುಬೇರರಾವು ಗೌರೀಶರ "ಹಿಂದು ದೇಶದ ವಿಧವೆಯರು" ಎಂಬ ಗ್ರಂಥ'ವನ್ನು ಕನ್ನಡಿಸಿ ಪ್ರಕಟಿಸಿದರು. ಬೆಂಗಳೂರಿನ ಸಿವಿಕ್ ಮತ್ತು ಸೋಷಿಯಲ್ ಪ್ರೋಗ್ರೆಸ್ ಅಸೋಸಿಯೇಷನ್ನಿನವರು 1936ರಲ್ಲಿ ಇವರ ಉಪನ್ಯಾಸಗಳನ್ನೆಲ್ಲ ಪುಸ್ತಕ ರೂಪದಲ್ಲಿ ಪ್ರಕಟಿಸಿದರು. ಕಾವ್ಯಕಂಠವಾಸಿಷ್ಠ ಗಣಪತಿಮುನಿಗಳ ಸಮ್ಮುಖದಲ್ಲಿ ಶಿರಸಿ ತಾಲ್ಲೂಕಿನ ಮುಂಡಗೇಸರದಲ್ಲಿ 1933ರಲ್ಲಿ ಸೇರಿದ ಹವ್ಯಕಮಹಾಸಭೆಯಲ್ಲಿ ವಿಧವಾವಿವಾಹದ ಚರ್ಚೆ ನಡೆಯಿತು. ಆ ಸಭೆ ಗಣಪತಿಭಟ್ಟರ ಕಾರ್ಯವನ್ನು ಪ್ರಶಂಸಿಸಿತು.

ಇವರದು ಆಕರ್ಷಕ ವ್ಯಕ್ತಿತ್ವ, ಎತ್ತರದ ಸದೃಢ ನಿಲವು. ಶುದ್ಧಖಾದೀಧಾರಿಗಳೂ ಸಂಘಟನಾಚತುರರೂ ಆಗಿದ್ದ ಇವರು ಹಳ್ಳಿ ಹಳ್ಳಿ ತಿರುಗುತ್ತ, ಕೊನೆಯುಸಿರಿರುವ ತನಕ ಮಹಿಳೋದ್ಧಾರಕ ಕಾರ್ಯಕರ್ತರಾಗಿ ನಿಷ್ಠೆಯಿಂದ ದುಡಿದರು. 1944 ಜೂನ್ 26ರಂದು ನಿಧನ ಹೊಂದಿದರು. **(ಆರ್.ಜಿ.ಆರ್.)**

**ಅಕಾಡೆಮಿಗಳು :** ಕನ್ನಡಸಾಹಿತ್ಯ, ಸಂಗೀತ, ನೃತ್ಯ, ಲಲಿತಕಲೆ, ಜಾನಪದ, ನಾಟಕ ಮೊದಲಾದ ಕ್ಷೇತ್ರಗಳ ಬೆಳವಣಿಗೆ ಮತ್ತು ಕಲಾವಿದರಿಗೆ ಪ್ರೋತ್ಸಾಹ ಈ ಉದ್ದೇಶಗಳಿಂದ ಕರ್ನಾಟಕ ಸರ್ಕಾರ ವಿವಿಧ ಅಕಾಡೆಮಿಗಳನ್ನು ಕಾಲಕಾಲಕ್ಕೆ ರಚಿಸಿದೆ. ಈ ಅಕಾಡೆಮಿಗಳು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಡಳಿತ ನಿಯಂತ್ರಣಕ್ಕೆ ಒಳಪಟ್ಟಿದ್ದರೂ

ಸ್ವತಂತ್ರವಾಗಿ ಕಾರ್ಯನಿರ್ವಹಿಸುತ್ತಿವೆ. ಕರ್ನಾಟಕದಲ್ಲಿ ಒಟ್ಟು 10 ಅಕಾಡೆಮಿಗಳನ್ನು ರಚಿಸಲಾಗಿದೆ. ಕನ್ನಡಸಾಹಿತ್ಯ ಸಂಸ್ಕೃತಿಗಳ ಅಭಿವೃದ್ಧಿಗಾಗಿ ರಚಿಸಲಾಗಿರುವ ಅಕಾಡೆಮಿಗಳಲ್ಲದೆ ಕನ್ನಡದ ಉಪಭಾಷೆಗಳಾದ ತುಳು, ಕೊಡವಭಾಷೆ ಸಾಹಿತ್ಯ ಇವುಗಳಿಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ಕೊಡವ ಮತ್ತು ತುಳು ಸಾಹಿತ್ಯ ಅಕಾಡೆಮಿಗಳನ್ನು ರಚಿಸಲಾಗಿದೆ. ಇದಲ್ಲದೆ ಉರ್ದು ಮತ್ತು ಕೊಂಕಣಿ ಅಕಾಡೆಮಿಗಳು ಕೂಡ ಅಸ್ತಿತ್ವದಲ್ಲಿವೆ. ಆಯಾ ಭಾಷೆಗಳ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ಹಲವಾರು ಯೋಜನೆಗಳನ್ನು ಈ ಅಕಾಡೆಮಿಗಳು ಹಮ್ಮಿಕೊಂಡಿವೆ. ಕರ್ನಾಟಕ ನಾಟಕ ಅಕಾಡಮಿ, ತುಳು, ಕೊಂಕಣಿ ಮತ್ತು ಪತ್ರಿಕ ಅಕಾಡೆಮಿಗಳನ್ನುಳಗೊಂಡ ಅಕಾಡೆಮಿಗಳು ಬೆಂಗಳೂರಿನ ಕನ್ನಡ ಭವನದಲ್ಲಿ ತಮ್ಮ ಕಚೇರಿಗಳನ್ನು ಹೊಂದಿದೆ. ಪ್ರಸ್ತುತ ಲೇಖನದಲ್ಲಿ ಕರ್ನಾಟಕದ ವಿವಿಧ ಅಕಾಡೆಮಿಗಳ ಕಾರ್ಯಯೋಜನೆಯನ್ನು ಕುರಿತು ಸ್ಥೂಲವಾದ ಮಾಹಿತಿ ನೀಡಲಾಗಿದೆ.

**ಕರ್ನಾಟಕ ಸಾಹಿತ್ಯ ಅಕಾಡೆಮಿ :** ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿಗಳ ಅಭಿವೃದ್ಧಿಗಾಗಿ ಸರ್ಕಾರ ಈ ಅಕಾಡೆಮಿಯನ್ನು ಸ್ಥಾಪಿಸಿತು (1961). ಇದರ ಕೇಂದ್ರ ಕಚೇರಿ ಬೆಂಗಳೂರು. ಸಾಹಿತ್ಯ ಕ್ಷೇತ್ರದಲ್ಲಿ ಅಧ್ಯಯನ ಹಾಗೂ ಸಂಶೋಧನೆಗೆ ಪ್ರೋತ್ಸಾಹ, ಶ್ರೇಷ್ಠ ಸಾಹಿತ್ಯ ಕೃತಿಗಳಿಗೆ ಬಹುಮಾನ ಮತ್ತು ಸಾಹಿತಿಗಳಿಗೆ ಪ್ರಶಸ್ತಿ ಪ್ರದಾನ, ಸಾಹಿತ್ಯಸಂಕಿರಣ, ಅಶಕ್ತ ಹಿರಿಯ ಲೇಖಕರ ಆರ್ಥಿಕ ಸಹಾಯಕ್ಕೆ ಸರ್ಕಾರಕ್ಕೆ ಶಿಫಾರಸ್ಸು ಮಾಡುವುದು ಮುಂತಾದವು ಈ ಅಕಾಡೆಮಿಯ ಉದ್ದೇಶ. ಆರಂಭದಲ್ಲಿ ರಾಜ್ಯ ಸರ್ಕಾರದ ಶಿಕ್ಷಣ ಸಚಿವರು ಅಕಾಡೆಮಿಯ ಅಧ್ಯಕ್ಷರಾಗಿ



ಕನ್ನಡ ಭವನ, ಬೆಂಗಳೂರು

ಕಾರ್ಯನಿರ್ವಹಿಸುತ್ತಿದ್ದರು. 1978ರ ಅನಂತರ ಸಾಹಿತ್ಯ ಕ್ಷೇತ್ರದಲ್ಲಿ ಗಣನೀಯ ಸಾಧನೆ ಮಾಡಿದವರನ್ನು ಅಕಾಡೆಮಿಯ ಅಧ್ಯಕ್ಷರನ್ನಾಗಿ ನೇಮಿಸುವ ವ್ಯವಸ್ಥೆ ಜಾರಿಗೆ ಬಂತು. ಅಕಾಡೆಮಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಒಂದು ಭಾಗವಾಗಿದ್ದರೂ ತನ್ನ ಕಾರ್ಯಚಟುವಟಿಕೆಗಳಿಗೆ ಆಂತರಿಕ ಸ್ವಾಯತ್ತತೆ ಪಡೆದಿದೆ.

ಅಕಾಡೆಮಿಯ ಅಧ್ಯಕ್ಷರ ಕಾಲಾವಧಿ ಮೂರು ವರ್ಷಗಳು. ಇವರೊಡನೆ 19ಮಂದಿ ಸರ್ಕಾರದಿಂದ ನಾಮಕರಣಗೊಂಡ ಸದಸ್ಯರಿರುತ್ತಾರೆ. ಹೀಗೆ ನಾಮಕರಣಗೊಂಡ ಸದಸ್ಯರು 5ಜನ ಸಹ ಸದಸ್ಯರನ್ನು ಆಯ್ದುಕೊಳ್ಳಲು ಅವಕಾಶವಿದೆ. ಅಕಾಡೆಮಿಯ ಕಾರ್ಯ ನಿರ್ವಹಣೆಗೆ ಒಂದು ಕಾರ್ಯನಿರ್ವಾಹಕ ಸಮಿತಿ ಮತ್ತು ಇತರ ಕಾರ್ಯ ಚಟುವಟಿಕೆಗಳಿಗೆ ಅಗತ್ಯಕ್ಕೆ ತಕ್ಕಂತೆ ಉಪಸಮಿತಿಗಳನ್ನು ರಚಿಸಿಕೊಳ್ಳುವ ಅಧಿಕಾರ ಅಕಾಡೆಮಿಗೆ ಇದೆ. ಇದಲ್ಲದೆ ಒಬ್ಬರು ರಿಜಿಸ್ಟ್ರಾರ್ ಹಾಗೂ ಅರ್ಥ ಸದಸ್ಯರನ್ನು ಸರ್ಕಾರ ನಿಯೋಜಿಸುತ್ತದೆ. ರಿಜಿಸ್ಟ್ರಾರರು ಅಕಾಡೆಮಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿರುತ್ತಾರೆ. ಇದುವರೆಗೆ ಅಕಾಡೆಮಿಯ ಅಧ್ಯಕ್ಷರಾಗಿ 15 ಗಣ್ಯರು ಕಾರ್ಯನಿರ್ವಹಿಸಿದ್ದಾರೆ: ಎಸ್.ಆರ್. ಕಂಠಿ (1961-66), ಕೆ.ವಿ. ಶಂಕರೇಗೌಡ (1968-70), ಅ.ನ.ಕೃಷ್ಣರಾಯ (1971), ಆದ್ಯರಂಗಾಚಾರ್ಯ (1971-72), ಎ.ಆರ್.ಬದ್ರಿನಾರಾಯಣ್ (1973-74), ಎಂ.ಮಲ್ಲಿಕಾರ್ಜುನಸ್ವಾಮಿ (1974-76), ಆರ್.ಗುಂಡೂರಾವ್ (1976), ಕೆ.ಎಚ್.ಶ್ರೀನಿವಾಸ್ (1976), ಎಂ.ಶಿವರಾಂ (1978-80), ಹಾ.ಮಾ.ನಾಯಕ (1980-84), ಕೆ.ಎಸ್.ನಿಸಾರ್ ಅಹಮದ್ (1984-87), ಜಿ.ಎಸ್.ಶಿವರುದ್ರಪ್ಪ (1987-90), ಬರಗೂರು ರಾಮಚಂದ್ರಪ್ಪ (1991-95), ಶಾಂತರಸ(1995-98), ಗಿರಡ್ಡಿಗೋವಿಂದರಾಜ (1998-2001). ಹಾಗೂ ಗುರುಲಿಂಗ ಕಾಪಸೆ (2001-2004).

ಸಾಹಿತ್ಯಅಕಾಡೆಮಿ ಇಲ್ಲಿಯವರೆಗೆ ನೂರಾರು ವಿಚಾರ ಸಂಕಿರಣಗಳು, ಸಾಹಿತ್ಯಸಂವಾದಗಳು, ಕವಿಗೋಷ್ಠಿಗಳು ಮತ್ತು ಕವಿಸಮ್ಮೇಳನಗಳನ್ನು ನಡೆಸಿದೆ. ಯುವ ಲೇಖಕರಿಗಾಗಿ ಕಾವ್ಯರಚನಾ ಕಮ್ಮಟ, ಮಕ್ಕಳಸಾಹಿತ್ಯ ರಚನಾ ಕಮ್ಮಟ, ಹಿರಿಯಸಾಹಿತಿಗಳ ಜನ್ಮಶತಮಾನೋತ್ಸವ ನಿಮಿತ್ತ ಸಾಹಿತ್ಯಗೋಷ್ಠಿಗಳನ್ನೂ ನಡೆಸಲಾಗಿದೆ. ರಾಜ್ಯಾದ್ಯಂತ ವಿವಿಧ ಸಂಘ ಸಂಸ್ಥೆಗಳು ಹಮ್ಮಿಕೊಳ್ಳುವ ಸಾಹಿತ್ಯಕ ಚಟುವಟಿಕೆಗಳಿಗೆ ಸಹಯೋಗದ ಆರ್ಥಿಕನೆರವು ಒದಗಿಸಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕೇಂದ್ರ ಸಾಹಿತ್ಯ ಅಕಾಡೆಮಿ ಮೊದಲಾದ ಸಂಸ್ಥೆಗಳೊಂದಿಗೆ ಸಾಹಿತ್ಯಕ್ಕೆ ಸಂಬಂಧಿಸಿದ ಅನೇಕ ಕಾರ್ಯಕ್ರಮಗಳನ್ನು ನಡೆಸಿದೆ.

ಅಕಾಡೆಮಿ ಇದುವರೆಗೆ 475ಕ್ಕೂ ಹೆಚ್ಚು ವೈವಿಧ್ಯಮಯ ಸಾಹಿತ್ಯ ಕೃತಿಗಳನ್ನು ಪ್ರಕಟಿಸಿದೆ. ಅವುಗಳಲ್ಲಿ ಮುಖ್ಯವಾದವು: ವಾರ್ಷಿಕ ಸಂಕಲನಗಳು, ವಿಚಾರ ಸಂಕಿರಣಮಾಲೆ, ಸಾಮಾಜಿಕ ಚಿಂತನಮಾಲೆ, ಜ್ಞಾನಪೀಠ ಪ್ರಶಸ್ತಿ ವಿಜೇತ ಲೇಖಕರಮಾಲೆ, ಉಪಸಂಸ್ಕೃತಿ ಅಧ್ಯಯನ, ಕನ್ನಡ ಸಾಹಿತ್ಯ: ಕಾಲುಶತಮಾನ, ಮುತ್ತಿನಹಾರಮಾಲಿಕೆ, ಮರೆಯಲಾಗದ ಬರೆಹಗಾರರು, ಕನ್ನಡಸಾಹಿತ್ಯ ಪುನರ್ಮೌಲ್ಯೀಕರಣಮಾಲೆ, ದಶವಾರ್ಷಿಕ ಸಂಕಲನಗಳು, ಶತಮಾನದ ಸಂಪುಟಗಳು, ಕವಿ ಕೃತಿ, ಆಧುನಿಕ ಚಿಂತನಮಾಲೆ ಇದಲ್ಲದೆ ಕಾಲಕಾಲಕ್ಕೆ ಕನ್ನಡದಲ್ಲಿ ಬರುವ ಮಹತ್ವದ ಕತೆ, ಕವನ, ಪ್ರಬಂಧ, ವಿಮರ್ಶೆ, ವಿಚಾರ ಸಾಹಿತ್ಯಗಳನ್ನು ಜನತೆಗೆ ತಲಪಿಸುವ ದೃಷ್ಟಿಯಿಂದ ಅನಿಕೇತನ ತ್ರೈಮಾಸಿಕವನ್ನು ಪ್ರಕಟಿಸುತ್ತಿದೆ. ಕನ್ನಡದಿಂದ ಕಾಲಕಾಲಕ್ಕೆ ಬೇರೆ ಭಾಷೆಗೆ ಅನುವಾದಗೊಳ್ಳುವ ಬರೆವಣಿಗೆ ಕುರಿತು ಇಂಗ್ಲಿಷ್ ತ್ರೈಮಾಸಿಕವನ್ನೂ ಪ್ರಕಟಿಸಲಾಗುತ್ತಿದೆ. ಪ್ರತಿ ಎರಡು ತಿಂಗಳಿಗೊಮ್ಮೆ ಅಕಾಡೆಮಿಯ ಕಾರ್ಯಚಟುವಟಿಕೆಗಳ ಬಗ್ಗೆ ಮಾಹಿತಿ ನೀಡುವ ವಾರ್ತಾಪತ್ರ ಪ್ರಕಟವಾಗುತ್ತದೆ.

ಪ್ರತಿವರ್ಷ ಕನ್ನಡದಲ್ಲಿ ಪ್ರಕಟವಾಗುವ ಎಲ್ಲ ಕೃತಿಗಳನ್ನು ಪರಿಶೀಲಿಸಿ ಕತೆ, ಕಾವ್ಯ, ಕಾದಂಬರಿ, ನಾಟಕ, ಪ್ರವಾಸ ಸಾಹಿತ್ಯ, ಲಲಿತ ಪ್ರಬಂಧ, ಮಕ್ಕಳಸಾಹಿತ್ಯ, ವಿಜ್ಞಾನಸಾಹಿತ್ಯ ಮೊದಲಾದ 18 ಪ್ರಕಾರ ಗಳಲ್ಲಿನ ಒಂದೊಂದು ಮಹತ್ವದ ಕೃತಿಗೆ ಐದು ಸಾವಿರ ರೂಪಾಯಿ ನಗದು ಬಹುಮಾನ ಹಾಗೂ ಪ್ರಶಸ್ತಿಪತ್ರ ನೀಡಲಾಗುತ್ತದೆ. ಇಲ್ಲಿಯವರೆಗೆ ಸು.448 ಕೃತಿಗಳಿಗೆ ಬಹುಮಾನ ನೀಡಲಾಗಿದೆ.

ಕನ್ನಡ ಸಾಹಿತ್ಯಕ್ಕೆ ಅನುಪಮ ಸೇವೆ ಸಲ್ಲಿಸಿದ ಸಾಹಿತಿಗಳ ಸಾಧನೆಯನ್ನು ಪರಿಗಣಿಸಿ ಪ್ರತಿವರ್ಷ ಐದು ಜನರಿಗೆ ಅಕಾಡೆಮಿಯ ಗೌರವ ಪ್ರಶಸ್ತಿ ನೀಡಿ ಸನ್ಮಾನಿಸಲಾಗುತ್ತಿದೆ. ಈ ಪ್ರಶಸ್ತಿಯ ಮೌಲ್ಯ 10 ಸಾವಿರ ರೂಪಾಯಿಗಳು. ಇದರೊಂದಿಗೆ ಪ್ರಶಸ್ತಿಪತ್ರ ಹಾಗೂ ಸ್ಮರಣ ಫಲಕವನ್ನು ನೀಡಲಾಗುತ್ತಿದೆ.

**ಜಾನಪದ ಮತ್ತು ಯಕ್ಷಗಾನ ಅಕಾಡೆಮಿ:** ಕರ್ನಾಟಕದ ಸಮೃದ್ಧ ಜಾನಪದವನ್ನೂ ಕರಾವಳಿಯ ಯಕ್ಷಗಾನ ಕಲೆಯನ್ನೂ ಪ್ರೋತ್ಸಾಹಿಸುವ ಮತ್ತು ಅವುಗಳನ್ನು ಕಾಪಾಡಿಕೊಂಡು ಬರುವ ದೃಷ್ಟಿಯಿಂದ ಈ ಅಕಾಡೆಮಿ ಅಸ್ತಿತ್ವಕ್ಕೆ ಬಂತು (1980). ಇದರ ಕೇಂದ್ರಕಚೇರಿ ಬೆಂಗಳೂರು. ಜಾನಪದ ಮತ್ತು ಯಕ್ಷಗಾನ ಕಲೆಗಳಿಗೆ ಸಂಬಂಧಿಸಿದಂತೆ ವಿವಿಧ ಪ್ರದೇಶಗಳ ನಡುವೆ ವಿಚಾರವಿನಿಮಯ, ಜನಪದಸಾಹಿತ್ಯ ಸಂಗ್ರಹಣೆ, ಪ್ರಕಟಣೆ, ಗ್ರಂಥಭಂಡಾರದ ಸ್ಥಾಪನೆ, ಕಲೆ ಕಲಾವಿದರನ್ನು ಗುರುತಿಸಿ ಗೌರವಿಸುವುದು, ಜಾನಪದಕ್ಕೆ ಅಗತ್ಯ ಪ್ರಚಾರ ಹಾಗೂ ಸೌಲಭ್ಯ ನೀಡುವುದು ಮುಂತಾದವು ಈ ಅಕಾಡೆಮಿಯ ಉದ್ದೇಶಗಳು.

ಅಧ್ಯಕ್ಷರು ಅಕಾಡೆಮಿಯ ಮುಖ್ಯಸ್ಥರು. ಇವರ ಕಾಲಾವಧಿ ಮೂರು ವರ್ಷಗಳು. ಇವರೊಡನೆ 20 ನಾಮಕರಣಗೊಂಡ ಸದಸ್ಯರಿರುತ್ತಾರೆ. ಇವರ ಕಾಲಾವಧಿ ಮೂರು ವರ್ಷಗಳು. ಸದಸ್ಯರನ್ನು

ಸರ್ಕಾರ ನಾಮಕರಣ ಮಾಡುತ್ತದೆ. ಹೀಗೆ ನಾಮಕರಣಗೊಂಡ ಸದಸ್ಯರು ಮತ್ತೆ ನಾಲ್ಕುಜನ ಸಹ ಸದಸ್ಯರನ್ನು ಆಯ್ದುಕೊಳ್ಳಲು (ಕೋಆಪ್ಟ್) ಅವಕಾಶವಿದೆ. ಆಡಳಿತದಲ್ಲಿ ನೆರವು ನೀಡಲು ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಒಬ್ಬರು ರಿಜಿಸ್ಟ್ರಾರ್ ಮತ್ತು ಲೆಕ್ಕಪತ್ರಗಳನ್ನು ನೋಡಿಕೊಳ್ಳಲು ಒಬ್ಬರು ವಿತ್ತಾಧಿಕಾರಿಗಳನ್ನೂ ಸರ್ಕಾರ ನಿಯೋಜಿಸುವುದು. ಕಾರ್ಯಕ್ರಮಗಳನ್ನು ರೂಪಿಸಲು, ಯೋಜನೆಗಳನ್ನು ತಯಾರಿಸಲು ಅಧ್ಯಕ್ಷರು, ಅಧಿಕಾರಿಗಳ ಜೊತೆ ಸ್ಥಾಯೀಸಮಿತಿಗಳೂ ಉಪಸಮಿತಿಗಳೂ ಇರುತ್ತವೆ. ಯೋಜನೇತರ ಕಾರ್ಯಕ್ರಮಗಳನ್ನು ಪ್ರಜಾಪ್ರಭುತ್ವದ ನೆಲೆಯಲ್ಲಿ ಜಾರಿಗೊಳಿಸಲಾಗುತ್ತದೆ.

ಇದುವರೆಗೆ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಅಧ್ಯಕ್ಷರಾಗಿ ಆರು ಜನರು ಕಾರ್ಯನಿರ್ವಹಿಸಿದ್ದಾರೆ. ಎಚ್.ಎಲ್.ನಾಗೇಗೌಡ ಮೊದಲನೆಯ ಅಧ್ಯಕ್ಷರಾಗಿ ಎರಡು ಅವಧಿಗೆ ಕೆಲಸ ನಿರ್ವಹಿಸಿದ್ದಾರೆ (1980-1987). ಅನಂತರ ಎಸ್.ಕೆ.ಕರೀಂಖಾನ್ (1987-90), ಜೀ.ಶಂ.ಪರಮಶಿವಯ್ಯ (1991-95), ಎಚ್.ಜೆ.ಲಕ್ಕಪ್ಪಗೌಡ (1995-98) ಕಾಳೇಗೌಡ ನಾಗವಾರ (1998-2001). ಹಿ.ಶಿ.ರಾಮಚಂದ್ರೇಗೌಡ (2001-2004) ಅಧ್ಯಕ್ಷರಾಗಿದ್ದರು.

ಅಕಾಡೆಮಿ ಜಾನಪದ ಕೃತಿಗಳ ಪ್ರಕಟಣೆ, ಸಂಗ್ರಹಣೆ, ಸಂಪಾದನೆಗೆ ವಿಶೇಷ ಮಹತ್ವ ನೀಡಿದೆ. ಜಾನಪದ ಗಂಗೋತ್ರಿ ಎಂಬ ತ್ರೈಮಾಸಿಕ ಪತ್ರಿಕೆ ಪ್ರಕಟಿಸುತ್ತಿದೆ. ಕರ್ನಾಟಕದ ವಿವಿಧೆಡೆ ನಡೆವ ಜಾತ್ರೆಗಳ ಬಗ್ಗೆ ವಿವರ ನೀಡುವ ಜಾತ್ರೆಯ ಮಾಲಿಕೆ ಪ್ರಕಟಿಸಿದೆ. ಶಿಷ್ಟಸಾಹಿತ್ಯಕ್ಕೂ ಜಾನಪದ ಸಾಹಿತ್ಯಕ್ಕೂ ಇರುವ ನಿಕಟ ಸಂಬಂಧ ಹಾಗೂ ಸಂವೇದನೆಗಳನ್ನು ತೆರೆದು ತೋರಿಸುವ ಮಾಲಿಕೆಯನ್ನು ಹೊರತಂದಿದೆ. ಇವಲ್ಲದೆ ಜಾನಪದಕ್ಕಾಗಿ ದುಡಿದ ಮಹನೀಯರ ಬಗ್ಗೆ, ರಾಷ್ಟ್ರೀಯ ಅಂತಾರಾಷ್ಟ್ರೀಯ ಜಾನಪದದ ಬಗ್ಗೆ ಮಾಹಿತಿಗಳನ್ನು ನೀಡುವ ಹತ್ತು ಹಲವು ಕೃತಿಗಳನ್ನು ಕೂಡ ಪ್ರಕಟಿಸಿದೆ. ಜಾನಪದ ಸಂಬಂಧವಾದ ವಸ್ತುವಿಷಯ, ಸಂಕಿರಣ, ಕಮ್ಮಟ, ಕಾರ್ಯಾಗಾರ ಇತ್ಯಾದಿಗಳ ವಿವರ ನೀಡುವ ಜಾನಪದ ಸಮಾಚಾರ ಎಂಬ ಪತ್ರಿಕೆಯನ್ನು 1995ರಿಂದ ಅನಿಯತಕಾಲಿಕವಾಗಿ ಪ್ರಕಟಿಸುತ್ತಿದೆ.

ಪುಸ್ತಕ ಪ್ರಕಟಣೆಯ ಜೊತೆಗೆ ಜನಪದ ಸಂಸ್ಕೃತಿಯ ವಿಡಿಯೋ ಚಿತ್ರೀಕರಣ, ಧ್ವನಿಮುದ್ರಣ ಕೆಲಸಗಳನ್ನೂ ಅಕಾಡೆಮಿ ನಡೆಸಿಕೊಂಡು ಬರುತ್ತಿದೆ. ಇವುಗಳಲ್ಲಿ ಕರ್ನಾಟಕದ ಬುಡಕಟ್ಟುಗಳು, ದೊಡ್ಡಾಟ, ಯಕ್ಷಗಾನ, ಜಾತ್ರೆ - ಆಚರಣೆಗಳು ಇವುಗಳಿಗೆ ಸಂಬಂಧಿಸಿದಂತೆ ವಿಡಿಯೋ ದಾಖಲಾತಿಗಳ ಬೃಹತ್ ಭಂಡಾರವೇ ಇದೆ.

ಕಾಲಕಾಲಕ್ಕೆ ಜಾನಪದಕ್ಕೆ ಸಂಬಂಧಿಸಿದಂತೆ ವಿಚಾರ ಸಂಕಿರಣ, ಕಮ್ಮಟ, ಕಾರ್ಯಾಗಾರಗಳನ್ನೂ ಅಕಾಡೆಮಿ ನಡೆಸುತ್ತಿದೆ. ಇವುಗಳಲ್ಲಿ ಸಮೂಹ ಮಾಧ್ಯಮಗಳು ಮತ್ತು ಜಾನಪದ, ಜನಪದ ಆಟಗಳು, ಜಾನಪದ ವೈಜ್ಞಾನಿಕ ನೆಲೆಗಳು, ವೃತ್ತಿಗಾಯಕರಮೇಳ, ವಾದ್ಯಸಮ್ಮೇಳನ, ಸ್ವಾತಂತ್ರ್ಯ ಸಂಗ್ರಾಮದ ಲಾವಣಿ ಸಮ್ಮೇಳನ, ನವರಾತ್ರಿ ಜಾನಪದ ರಂಗೋತ್ಸವ, ಆದಿವಾಸಿ ಜಾನಪದ ಕಲಾಮಹೋತ್ಸವ, ರೈತಜಾನಪದೀಯ ಅಧ್ಯಯನ, ಜಾನಪದ ಮತ್ತು ಜಾಗತೀಕರಣ, ಜನಪದ ಮಹಾಕಾವ್ಯಗಳು, ಗೀಗೀಸಂಭ್ರಮ, ಮೂಡಲವೈಭವ, ಹೊಯ್ಸಳವೈಭವ, ಸ್ವಾತಂತ್ರ್ಯಸಂಗ್ರಾಮ ಹಾಗೂ ಜಾನಪದ, ವೀರ ಜಾನಪದ, ಮಹಿಳಾ ಜಾನಪದ, ಪರಿಸರ ಜಾನಪದ - ಇವು ವಿಶಿಷ್ಟ ಕಾರ್ಯಕ್ರಮಗಳೆನಿಸಿವೆ.

ಕರ್ನಾಟಕವನ್ನು ಮುಖ್ಯ ಲಕ್ಷ್ಯವನ್ನಾಗಿಟ್ಟುಕೊಂಡ ಅಕಾಡೆಮಿ ಕೇಂದ್ರ ಮಾನವಸಂಪನ್ಮೂಲ ಇಲಾಖೆ, ದಕ್ಷಿಣ ಮಧ್ಯವಲಯ ಸಾಂಸ್ಕೃತಿಕ ಕೇಂದ್ರಗಳಿಂದ (ತಂಜಾವೂರು, ನಾಗಪುರ) ನೆರವು ಪಡೆದು ಅನೇಕ ಕಾರ್ಯಕ್ರಮಗಳನ್ನು ನಡೆಸಿದೆ. ಅಕಾಡೆಮಿ ಜಾನಪದಕ್ಕಾಗಿ ದುಡಿಯುತ್ತಿರುವವರನ್ನು ಗುರುತಿಸಿ, ಗೌರವಿಸಿದೆ. ಜಾನಪದ ಸಂಬಂಧಿಯಾದ ಕೃತಿಗಳಿಗೆ ಪ್ರಶಸ್ತಿ ನೀಡುವುದು, ವಿದ್ವಾಂಸರಿಗೆ ಜಾನಪದತಜ್ಞ ಎಂಬ ಪ್ರಶಸ್ತಿ ನೀಡುವುದು. ಇಂಥ ರಚನಾತ್ಮಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಿದೆ.

ಇಪ್ಪತ್ತೊಂದನೆಯ ಶತಮಾನ ಆಗಮಿಸಿದ ಸಂಕ್ರಮಣ ಕಾಲದಲ್ಲಿ ಸಹಸ್ರಮಾನ ಜಾನಪದ ಸಂಪುಟಗಳ ಮಾಲಿಕೆಯಲ್ಲಿ ವೃತ್ತಿಗಾಯಕರು, ಯಕ್ಷಗಾನ, ಬುಡಕಟ್ಟು, ಗಿರಿಜನಕಾವ್ಯ, ಸಂಸ್ಕೃತಿ, ಜನಪದತತ್ತ್ವ ಪದಗಳು, ತಜ್ಞರ ಅಧ್ಯಯನ ಟಿಪ್ಪಣಿಗಳು, ಕಲಾವಿದರ ಒಡನಾಟದ ಟಿಪ್ಪಣಿಗಳು, ಎಳೆಯರಿಗಾಗಿ ಜಾನಪದ ಸಂಪುಟಗಳನ್ನು ಕೂಡ ಅಕಾಡೆಮಿ ಹೊರತಂದಿದೆ. ಅಕಾಡೆಮಿ ಇದುವರೆಗೆ 83 ಪುಸ್ತಕಗಳನ್ನು ಪ್ರಕಟಿಸಿದೆ (2003).

**ನಾಟಕ ಅಕಾಡೆಮಿ :** ಕನ್ನಡ ರಂಗಭೂಮಿಯ ಬೆಳವಣಿಗೆ, ಅಧ್ಯಯನ, ಸಂಶೋಧನಗಳಿಗೆ ಉತ್ತೇಜನ ನೀಡುವ ಉದ್ದೇಶದಿಂದ ಸರ್ಕಾರ 1978 ರಲ್ಲಿ ಸ್ಥಾಪಿಸಿದ ಅಕಾಡೆಮಿ. ಮೂರು ವರ್ಷದ ಅವಧಿಗೆ ಒಬ್ಬ ಅಧ್ಯಕ್ಷರು ಹಾಗೂ 19ಜನ ಸದಸ್ಯರನ್ನು ಸರ್ಕಾರ ನಾಮಕರಣ ಮಾಡುತ್ತದೆ. ಅನಂತರ ಇನ್ನೂ ಐದುಜನ ಸಹಸದಸ್ಯರನ್ನು ಆಯ್ಕೆ (ಕೋಆಪ್ಟ್) ಮಾಡಿಕೊಳ್ಳಲಾಗುತ್ತದೆ. ಕರ್ನಾಟಕದಲ್ಲಿ ನಾಟಕ ಕ್ಷೇತ್ರದಲ್ಲಿನ ಅರ್ಹ ಸಂಸ್ಥೆಗಳಿಗೆ ಮನ್ನಣೆ ನೀಡುವುದಲ್ಲದೆ ಇತರ ರೀತಿಯಲ್ಲಿ ಸಹಾಯ ನೀಡುತ್ತಿದೆ. ರಂಗಭೂಮಿಗೆ ಸಂಬಂಧಿಸಿದಂತೆ ವಿವಿಧ ಪ್ರದೇಶಗಳ ವಿಚಾರ ಹಾಗೂ ತಂತ್ರಗಳ ವಿನಿಮಯ ಮಾಡಿಕೊಳ್ಳುವ ಮೂಲಕ ಈ ಕಲೆಗೆ ಉತ್ತೇಜನ ನೀಡುತ್ತದೆ.

ರಾಜ್ಯದ ವಿವಿಧ ಪ್ರದೇಶಗಳಲ್ಲಿರುವ ನಾಟಕದ ವಿವಿಧ ಪ್ರಕಾರಗಳನ್ನು ಪುನರವಲೋಕಿಸುವುದು ಮತ್ತು ಅವುಗಳನ್ನು ಉಳಿಸಿಕೊಂಡು ಬರುವುದು ಮತ್ತು ಸಮುದಾಯ ನಾಟಕ ಮತ್ತು ವಸ್ತುನಿಷ್ಠ ನಾಟಕ ಮತ್ತು ಅದೇ ಬಗೆಯ ನಾಟಕಕ್ಕೆ ಉತ್ತೇಜನ ನೀಡುವುದು ಮತ್ತು ಅಭಿವೃದ್ಧಿಗೊಳಿಸುವುದು ಅಕಾಡೆಮಿಯ ಉದ್ದೇಶವಾಗಿದೆ.

ರಂಗಭೂಮಿಯ ಸರ್ವಾಂಗೀಣ ಅಭಿವೃದ್ಧಿಗೆ ದುಡಿದ ಮಹನೀಯರನ್ನು ಗೌರವಿಸುವ ಸಾಂಸ್ಕೃತಿಕ ಜವಾಬ್ದಾರಿಯನ್ನು ಈ ಅಕಾಡೆಮಿ ಮೊದಲಿನಿಂದಲೂ ನಿರ್ವಹಿಸುತ್ತ ಬಂದಿದೆ. ಇದುವರೆಗೆ ಈ ಅಕಾಡೆಮಿ 42 ಜನರಿಗೆ ಗೌರವ ಫೆಲೋಷಿಪ್, 385 ಜನರಿಗೆ ಗೌರವ ಪ್ರಶಸ್ತಿ, 51 ಜನರಿಗೆ ಪುರಸ್ಕಾರ ಪ್ರಶಸ್ತಿ, ಪದ್ದಣ್ಣ ಹೆಸರಿನಲ್ಲಿ 31 ಜನರಿಗೆ ಪದ್ದಣ್ಣಶ್ರಮಪ್ರಶಸ್ತಿ, ವರ್ಷದ ಕಂಪನಿ ಪ್ರಶಸ್ತಿ ಹಾಗೂ ಕಲಾಕೌಸ್ತುಭ ಬಿರುದು ಪ್ರಶಸ್ತಿ ನೀಡಿ ಒಟ್ಟು 511 ಮಹನೀಯರನ್ನು ಗೌರವಿಸಲಾಗಿದೆ. 2001ರಿಂದ ಕರ್ನಾಟಕ ಅಕಾಡೆಮಿ ಗೌರವ ಪ್ರಶಸ್ತಿ ಎನ್ನುವ ಒಂದೇ ಹೆಸರಿನಲ್ಲಿ ಪ್ರಶಸ್ತಿಯನ್ನು ನೀಡುತ್ತಿದೆ.

ಅಕಾಡೆಮಿಗೆ ಇಲ್ಲಿಯವರೆಗೆ ಗಿರೀಶ್‌ಕಾರ್ನಾಡ್ (1977-80), ಬಿ.ವಿ.ಕಾರಂತ (1980-82), ಚಂದ್ರಶೇಖರ ಕಂಬಾರ (1982-87), ಬಿ.ವಿ. ವೈಕುಂಠರಾಜು (1987-89), ಪರ್ವತವಾಣಿ (1989-90), ಚಿಂದೋಡಿ ಲೀಲಾ (1991-95), ಕೆ.ಮರುಳಸಿದ್ದಪ್ಪ (1995-98), ಸಿ.ಜಿ.ಕೃಷ್ಣಸ್ವಾಮಿ (1998-2001) ಆರ್.ನಾಗೇಶ್ (2001-2004) ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

ತನ್ನ ಕಾರ್ಯವ್ಯಾಪ್ತಿಗೆ ಒಳಪಡುವ ಕಲಾಕ್ಷೇತ್ರಕ್ಕೆ ಸಂಬಂಧಿಸಿದಂತೆ ರಾಜ್ಯಮಟ್ಟದಲ್ಲಿ (ಹೊರ ರಾಜ್ಯವೂ ಸೇರಿದಂತೆ) ಜಿಲ್ಲಾಮಟ್ಟ, ವಿಭಾಗ ಮಟ್ಟ, ತಾಲ್ಲೂಕುಮಟ್ಟ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಆದ್ಯತೆಯ ಮೇಲೆ ವೃತ್ತಿ, ಹವ್ಯಾಸಿ, ಜಾನಪದ, ಮಕ್ಕಳ, ಕಾಲೇಜು ವಿದ್ಯಾರ್ಥಿಗಳ, ಕಾರ್ಮಿಕರ, ಗಿರಿಜನರ, ಪರಿಶಿಷ್ಟ ಜಾತಿ ವರ್ಗದವರ ನಾಟಕೋತ್ಸವಗಳನ್ನು ಏರ್ಪಡಿಸುತ್ತದೆ. ರಂಗಭೂಮಿಗೆ ಸಂಬಂಧಿಸಿದಂತೆ ವಿವಿಧ ಗಣ್ಯವ್ಯಕ್ತಿಗಳನ್ನು ಕುರಿತು ವಿಚಾರಸಂಕಿರಣಗಳನ್ನು ಏರ್ಪಡಿಸಲಾಗುತ್ತದೆ. ರಾಜ್ಯದ ಹಿರಿಯ, ಕಿರಿಯ, ಯುವ ಹಾಗೂ ಉದಯೋನ್ಮುಖ ರಂಗಾಸಕ್ತರಿಗಾಗಿ ರಂಗ ಸಂವಾದ, ರಂಗಸಮಾಗಮ, ನಾಟಕರಚನಾಕಮ್ಮಟ, ಕಾರ್ಯಾಗಾರ, ರಂಗ ಸಂಗೀತಕಮ್ಮಟ, ವಿವಿಧ ರಂಗಸಂಸ್ಕೃತಿಯ ಮುಖಾಮುಖಿ, ರಂಗ ತಂತ್ರಗಳ ವಿನಿಮಯ ಕಾರ್ಯಕ್ರಮಗಳನ್ನು ನಡೆಸಿದೆ.

ರಾಷ್ಟ್ರೀಯ ನಾಟಕಗಳ ಉತ್ಸವ, ರಂಗಯುಗಾದಿ, ಸಂಕ್ರಾಂತಿ, ಗ್ರಾಮೀಣ ಮಟ್ಟದಲ್ಲಿ ನಾಟಕಸ್ಪರ್ಧೆ, ಹೊರರಾಜ್ಯಗಳಲ್ಲಿ ನಾಟಕೋತ್ಸವ, ಅನುವಾದ ಕಮ್ಮಟ, ವಿವಿಧ ಭಾಷಾ ನಾಟಕೋತ್ಸವ, ಸಂವಾದ- ಹೀಗೆ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ. ಕಲಾವಿದರ ಪರಿಚಯ ಪುಸ್ತಕ, ವಿಚಾರಸಂಕಿರಣ ಪುಸ್ತಕಗಳು, ನಾಟಕ ಪ್ರಕಟಣೆ, ವ್ಯಕ್ತಿ ಪರಿಚಯ, ರಂಗಭೂಮಿ ಸಮೀಕ್ಷೆ, ಅಕಾಡೆಮಿಯ ವಾರ್ತಾಪತ್ರ ಇವು ಅಕಾಡೆಮಿಯ ಪ್ರಕಟಣೆಗಳಲ್ಲಿ ಸೇರಿವೆ.

**ಸಂಗೀತ ನೃತ್ಯ ಅಕಾಡೆಮಿ :** ಲಲಿತಕಲೆಗಳ ಪುನರುಜ್ಜೀವನದ ಉದ್ದೇಶದಿಂದ ಕರ್ನಾಟಕ ಸರ್ಕಾರ ಸ್ಥಾಪಿಸಿದ (1964)

ಅಕಾಡೆಮಿಗಳಲ್ಲೊಂದು. ಪ್ರಾರಂಭದಲ್ಲಿ ಶಿಕ್ಷಣಸಚಿವರು ಇದರ ಅಧ್ಯಕ್ಷರಾಗಿದ್ದರು. 1978ರ ಬಳಿಕ ಅಕಾಡೆಮಿ ಸ್ವಾಯತ್ತತೆ ಪಡೆದುಕೊಂಡಿತು. ಸಂಗೀತ ನೃತ್ಯ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದವರನ್ನು. ಸರ್ಕಾರ ಅಧ್ಯಕ್ಷರನ್ನಾಗಿ ನೇಮಕಮಾಡುತ್ತಿದೆ. ಪ್ರತಿ ಮೂರು ವರ್ಷಗಳಿಗೊಮ್ಮೆ ಅಕಾಡೆಮಿಯನ್ನು ಪುನಾ ರಚಿಸಲಾಗುತ್ತಿದ್ದು ಅಧ್ಯಕ್ಷರು ಹಾಗೂ 17 ಜನ ಸದಸ್ಯರನ್ನು ಸರ್ಕಾರ ನಾಮನಿರ್ದೇಶನ ಮಾಡುತ್ತದೆ. 5 ಜನ ಸದಸ್ಯರನ್ನು ಅಕಾಡೆಮಿ ಸಹ ಸದಸ್ಯರಾಗಿ ಆಯ್ಕೆ (ಕೋಆಪ್ಟ್) ಮಾಡಿಕೊಳ್ಳುತ್ತದೆ. ರಿಜಿಸ್ಟ್ರಾರ್ ಮತ್ತು ಅರ್ಥ ಸದಸ್ಯರನ್ನೊಳಗೊಂಡಂತೆ ಅಕಾಡೆಮಿಯ ಸದಸ್ಯರ ಸಂಖ್ಯೆ 27.

ಕರ್ನಾಟಕಸಂಗೀತ, ಹಿಂದುಸ್ತಾನಿಸಂಗೀತ, ಸುಗಮಸಂಗೀತ, ನೃತ್ಯ, ಗಮಕ, ಕಥಾಕೀರ್ತನ - ಈ ಆರು ಪ್ರಕಾರಗಳ ವಿಕಾಸಕ್ಕಾಗಿ ಹಲವಾರು ಯೋಜನೆಗಳನ್ನು ಹಮ್ಮಿಕೊಂಡು ಕಲೆ ಹಾಗೂ ಕಲಾವಿದರ ಏಳ್ಗೆಗಾಗಿ ಅಕಾಡೆಮಿ ಶ್ರಮಿಸುತ್ತಿದೆ. ಸಂಗೀತ, ನೃತ್ಯ ವಿದ್ಯಾರ್ಥಿಗಳಿಗೆ ಶಿಷ್ಯವೇತನ, ವಿಚಾರಸಂಕಿರಣ, ಕಲಾಶಿಬಿರ ವ್ಯವಸ್ಥೆ ಮಾಡುವುದು, ವಿಶಿಷ್ಟ ಕಲಾಪ್ರಕಾರಗಳನ್ನು ದಾಖಲಿಸುವುದು, ಕಲಾಸಾಹಿತ್ಯಕ್ಕೆ ಸಂಬಂಧಿಸಿದ ಪುಸ್ತಕಗಳ ಪ್ರಕಟಣೆ, ರಾಜ್ಯ ಮತ್ತು ಹೊರರಾಜ್ಯಗಳಲ್ಲಿ ಸಂಗೀತ ನೃತ್ಯ ಕಾರ್ಯಕ್ರಮಗಳನ್ನು ಏರ್ಪಡಿಸುವುದರ ಮೂಲಕ ಕಲಾವಿದರಿಗೆ ವೇದಿಕೆಯನ್ನು ಏರ್ಪಡಿಸಿ ಪ್ರೋತ್ಸಾಹಿಸುವುದು, ಸಂಗೀತ ನೃತ್ಯ ಕ್ಷೇತ್ರದಲ್ಲಿ ಗಣನೀಯ ಸೇವೆಸಲ್ಲಿಸಿದ ಹಿರಿಯ ಕಲಾವಿದರನ್ನು ಗುರುತಿಸಿ ಪ್ರಶಸ್ತಿ ನೀಡಿ ಗೌರವಿಸುವುದು ಮೊದಲಾದವು ಅಕಾಡೆಮಿಯ ಪ್ರಮುಖ ಕಾರ್ಯಚಟುವಟಿಕೆಗಳಾಗಿವೆ.

ಇಲ್ಲಿಯವರೆಗೆ ಅಕಾಡೆಮಿಗೆ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದವರು: ಕೋಮಲಾ ವರದನ್ (1978-81), ಗಂಗೂಬಾಯಿ ಹಾನಗಲ್ (1981-84), ವಿ.ದೊರೆಸ್ವಾಮಿ ಅಯ್ಯಂಗಾರ್ (1984-87), ಮಾಯಾರಾವ್ (1987-90), ಆರ್.ವಿ.ಶೇಷಾದ್ರಿಗವಾಯಿ (1992-95), ಚಂದ್ರಭಾಗಾದೇವಿ (1995-97), ಶ್ಯಾಮಲಾ ಜಿ ಭಾವೆ (1998-2001). ಎಚ್.ಆರ್.ಲೀಲಾವತಿ (2002-2004).

ಅಕಾಡೆಮಿಯ ಕಾರ್ಯಕ್ರಮಗಳಲ್ಲಿ ಪ್ರಧಾನವಾದದ್ದು ಪ್ರಶಸ್ತಿ ಪ್ರದಾನ. ಸಂಗೀತ ನೃತ್ಯ ಕ್ಷೇತ್ರಗಳಲ್ಲಿ ಸ್ಮರಣೀಯ ಸೇವೆ ಸಲ್ಲಿಸಿದವರಿಗೆ ಪ್ರತಿವರ್ಷ ಪ್ರಶಸ್ತಿನೀಡಿ ಗೌರವಿಸಲಾಗುತ್ತಿದೆ. ಇಲ್ಲಿಯವರೆಗೆ 449 ಕಲಾವಿದರಿಗೆ ಗೌರವಪ್ರಶಸ್ತಿ ನೀಡಲಾಗಿದೆ (1959-2002). ಮೈಸೂರು ಟಿ.ಚೌಡಯ್ಯ, ಮೈಸೂರು ವಾಸುದೇವಾಚಾರ್ಯ, ಚಿಂತನಪಲ್ಲಿ ವೆಂಕಟರಾಯ, ಮಲ್ಲಿಕಾರ್ಜುನ ಮನ್ಸೂರ, ಕಾಟ್ಟರಾಜಗವಾಯಿ, ಕೆ.ವೆಂಕಟಲಕ್ಷ್ಮಮ್ಮ, ಗಂಗೂಬಾಯಿ ಹಾನಗಲ್, ಬಿ.ದೇವೇಂದ್ರಪ್ಪ, ಮೈಸೂರು ಎಸ್. ಸುಂದರಮ್ಮ, ಮೈಸೂರು ಎಂ. ಜೇಜಮ್ಮ, ತಿಟ್ಟೆಕೃಷ್ಣ, ಅಯ್ಯಂಗಾರ್, ಮಾಯಾರಾವ್, ಪಿ.ಕಾಳಿಂಗರಾವ್, ರಾಳ್ಳಪಲ್ಲಿ ಅನಂತಕೃಷ್ಣಶರ್ಮ, ಬಾಳಪ್ಪ ಹುಕ್ಕೇರಿ, ವಿ. ದೊರೆಸ್ವಾಮಿ ಅಯ್ಯಂಗಾರ್, ಬಸವರಾಜ ರಾಜಗುರು, ಭೀಮಸೇನ ಜೋಶಿ, ಸಿ.ಹೊನ್ನಪ್ಪಭಾಗವತರ್, ಮೈಸೂರು ಅನಂತಸ್ವಾಮಿ, ಸಿದ್ದರಾಮ ಜಂಬಲದಿನ್ನಿ, ಆರ್.ವಿ. ಶೇಷಾದ್ರಿ ಗವಾಯಿ, ಭದ್ರಗಿರಿ ಅಚ್ಯುತದಾಸ ಮುಂತಾದವರು ಗೌರವ ಪ್ರಶಸ್ತಿ ಪಡೆದವರಲ್ಲಿ ಪ್ರಮುಖರು.

ಹಿರಿಯ ಹಾಗೂ ಹೆಸರಾಂತ ಕಲಾವಿದರ ಜೀವನ ಮತ್ತು ಸಾಧನೆಗಳನ್ನು ಕುರಿತಂತೆ ವಿಡಿಯೋ ಚಿತ್ರೀಕರಣವನ್ನು ಅಕಾಡೆಮಿ ಮಾಡುತ್ತಿದೆ. ಇಲ್ಲಿಯವರೆಗೆ 66 ಕಲಾವಿದರ ವಿಡಿಯೋ ಚಿತ್ರೀಕರಣ ಮಾಡಲಾಗಿದೆ. ಸಂಗೀತ, ನೃತ್ಯ, ಕಲೆಗಳು ಹಾಗೂ ಕಲಾವಿದರನ್ನು ಕುರಿತಂತೆ 62 ಪುಸ್ತಕಗಳನ್ನು ಅಕಾಡೆಮಿ ಪ್ರಕಟಿಸಿದೆ. ಇದಲ್ಲದೆ ನೃತ್ಯನಾದ ಎಂಬ ತ್ರೈಮಾಸಿಕ ಪತ್ರಿಕೆಯನ್ನು ಹೊರತರುತ್ತಿದ್ದು, ಇದರಲ್ಲಿ ಅಕಾಡೆಮಿಯ ಕಾರ್ಯಚಟುವಟಿಕೆಗಳು ಮತ್ತು ಸಂಗೀತ ನೃತ್ಯಕ್ಕೆ ಸಂಬಂಧಿಸಿದ ಲೇಖನಗಳನ್ನು ಪ್ರಕಟಿಸಲಾಗುತ್ತಿದೆ.

**ಲಲಿತಕಲಾ ಅಕಾಡೆಮಿ :** ಕನ್ನಡ ನಾಡಿನ ಕಲಾವಿದರಿಗೆ ಪ್ರೋತ್ಸಾಹ, ಕಲಾಕೃತಿಗಳ ಪ್ರದರ್ಶನಗಳಿಗಾಗಿ ಸ್ಥಾಪನೆಗೊಂಡ ಅಕಾಡೆಮಿ (1964). ಅಂದಿನ ಶಿಕ್ಷಣಸಚಿವರು ಇದರ ಅಧ್ಯಕ್ಷರಾಗಿದ್ದರು. 1978ರಿಂದ ಲಲಿತಕಲಾ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದವರನ್ನು ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗುತ್ತಿದೆ. ಅಕಾಡೆಮಿಯು ಅಧ್ಯಕ್ಷರು ಹಾಗೂ 24 ಜನ ಸದಸ್ಯರನ್ನು ಒಳಗೊಂಡಿದೆ. ಪ್ರತಿ ಮೂರು ವರ್ಷಗಳಿಗೊಮ್ಮೆ ಅಕಾಡೆಮಿಯನ್ನು ಪುನಾರಚಿಸಲಾಗುತ್ತದೆ. ಚಿತ್ರಕಲೆಗೆ ಪೂರಕವಾದ ಹಾಗೂ ಪ್ರೇರಕವಾದ ಅನೇಕ ಯೋಜನೆಗಳನ್ನು ಹಮ್ಮಿಕೊಂಡು ಅಕಾಡೆಮಿ ಅವುಗಳನ್ನು ಕಾರ್ಯಗತಗೊಳಿಸುತ್ತಿದೆ.

ಪ್ರತಿವರ್ಷ ಚಿತ್ರಕಲಾ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ ಐವರು ಕಲಾವಿದರಿಗೆ ನಗದು ಪ್ರಶಸ್ತಿ ಕಾಣಿಕೆ ಮತ್ತು ಸನ್ಮಾನ ಪತ್ರ ನೀಡಿ ಗೌರವಿಸಲಾಗುತ್ತಿದೆ.

ಪ್ರತಿವರ್ಷ ಚಿತ್ರ ಕಲಾವಿದರಿಂದ ಅರ್ಜಿಯ ಮೂಲಕ ಕಲಾಕೃತಿಗಳನ್ನು ತರಿಸಿಕೊಂಡು, ತೀರ್ಪುಗಾರರ ಮೂಲಕ ಐದು ಉತ್ತಮ ಕಲಾಕೃತಿಗಳನ್ನು ಆಯ್ಕೆ ಮಾಡಿ ಆಯ್ಕೆಯಾದ ಕಲಾಕೃತಿಗಳನ್ನು ಒಂದು ವಾರಕಾಲ ಪ್ರದರ್ಶಿಸಲಾಗುವುದು. ಇವುಗಳಲ್ಲಿ ಅತ್ಯುತ್ತಮವಾದ ಐದು ಕಲಾಕೃತಿಗಳಿಗೆ ರೂ.5,000 ಬಹುಮಾನ ನೀಡಿ ಕಲಾವಿದರನ್ನು ಗೌರವಿಸಲಾಗುತ್ತದೆ. ಈಗ ಆರು ಜನ ಕಲಾವಿದರಿಗೆ ರೂ.10,000 ಬಹುಮಾನ ನೀಡಲಾಗುತ್ತಿದೆ.

ಚಿತ್ರಕಲೆಯ ವ್ಯಾಸಂಗಕ್ಕೆ ಉತ್ತೇಜನ ಮತ್ತು ನೆರವು ನೀಡುವ ದೃಷ್ಟಿಯಿಂದ ಕಲಾ ವಿದ್ಯಾರ್ಥಿಗಳಿಗೆ ಶಿಷ್ಯವೇತನವನ್ನು ಪ್ರತಿವರ್ಷ ನೀಡಲಾಗುತ್ತಿದೆ. ರಾಜ್ಯದ ಕಲಾಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಆಯ್ದ 4 ಮತ್ತು 5ನೆಯ ವರ್ಷದ ಡಿಪ್ಲೊಮಾ ಹಾಗೂ ಬಿ.ಎಫ್.ಎ. ವಿದ್ಯಾರ್ಥಿಗಳಿಗೆ, ರಾಜ್ಯದ ಎಂ.ಎಫ್.ಎ. ವಿದ್ಯಾರ್ಥಿಗಳಿಗೆ, ಹೊರ ರಾಜ್ಯದ ಎಂ.ಎಫ್.ಎ. ಪೋಸ್ಟ್ ಡಿಪ್ಲೊಮಾ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ನೀಡಲಾಗುತ್ತಿದೆ.

ಕಲಾಪ್ರದರ್ಶನವನ್ನು ಏರ್ಪಡಿಸುವ ಮೂಲಕ ಕಲಾವಿದರ ಕಲಾ ನೈಪುಣ್ಯತೆಯನ್ನು ಕಲಾಸಕ್ತರಿಗೆ ಪರಿಚಯಿಸುವುದರೊಂದಿಗೆ ಕಲಾವಿದರಿಗೆ ಉತ್ತೇಜನ ನೀಡುವುದು ಅಕಾಡೆಮಿಯ ಉದ್ದೇಶಗಳಲ್ಲೊಂದು. ರಾಜ್ಯ ಹಾಗೂ ಹೊರರಾಜ್ಯಗಳಲ್ಲಿ ಏಕವ್ಯಕ್ತಿ ಮತ್ತು ಸಮೂಹ ಕಲಾ ಪ್ರದರ್ಶನ ಏರ್ಪಡಿಸಲು ಆರ್ಥಿಕ ನೆರವು ನೀಡಲಾಗುತ್ತಿದೆ.

ಹಿರಿಯ ಕಲಾವಿದರು ಹಾಗೂ ಯುವ ಕಲಾವಿದರಿಗೆ ಪ್ರತಿವರ್ಷ ಕಲಾಶಿಬಿರಗಳನ್ನು ಏರ್ಪಡಿಸಲಾಗುತ್ತಿದೆ. ಈ ಶಿಬಿರದಲ್ಲಿ ಭಾಗವಹಿಸಿದ ಕಲಾವಿದರಿಗೆ ಚಿತ್ರರಚನೆಯ ಸಾಮಗ್ರಿಗಳು ಹಾಗೂ ಗೌರವ ಸಂಭಾವನೆಯನ್ನು ನೀಡಲಾಗುತ್ತಿದೆ.

ಅಕಾಡೆಮಿಯ ಸಂಗ್ರಹದಲ್ಲಿರುವ ಆಯ್ದ ಕಲಾಕೃತಿಗಳನ್ನು ಮತ್ತು ತೀರ್ಪುಗಾರರು ಆಯ್ಕೆ ಮಾಡಿದ ಕಲಾವಿದರ ಕಲಾಕೃತಿಗಳನ್ನು ಆಗಿಂದಾಗ್ಗೆ ವಿವಿಧ ಸ್ಥಳಗಳಲ್ಲಿ ಪ್ರದರ್ಶನ ಮಾಡಲಾಗುವುದು. ಇದಲ್ಲದೆ ಅಕಾಡೆಮಿ ಒಂದು ಸಂಚಾರಿ ವಾಹನವನ್ನು ಹೊಂದಿದ್ದು, ಅದರ ಮೂಲಕ ಕಲಾಕೃತಿಗಳ ಸಂಚಾರಿ ಪ್ರದರ್ಶನವನ್ನು ರಾಜ್ಯ ಮತ್ತು ಹೊರ ರಾಜ್ಯಗಳಲ್ಲಿ ಮಾಡುತ್ತಿದೆ.

ಅಕಾಡೆಮಿ ದತ್ತಿ ನಿಧಿಯೊಂದನ್ನು ಸಂಗ್ರಹಿಸಿದ್ದು, ಈ ನಿಧಿಯಿಂದ ಕಲೆ ಮತ್ತು ಕಲಾವಿದರ ಕುರಿತು ವಿಚಾರಸಂಕಿರಣಗಳನ್ನು ಏರ್ಪಡಿಸುತ್ತಿದೆ. ಹಿರಿಯ ಕಲಾವಿದರನ್ನು ಗೌರವಿಸುವ ದೃಷ್ಟಿಯಿಂದ ರಾಜ್ಯದ ಹಿರಿಯ ಕಲಾವಿದರೊಬ್ಬರಿಗೆ ಎರಡು ವರ್ಷಗಳಿಗೊಮ್ಮೆ ಉತ್ತಮ ಕಲಾಕೃತಿಗಳನ್ನು ರಚಿಸಲು ಸೀನಿಯರ್ ಫೆಲೋಷಿಪ್ ನೀಡಲಾಗುತ್ತಿದೆ. ಗ್ರಾಫಿಕ್ ಕಲೆಯನ್ನು ಅಭಿವೃದ್ಧಿಪಡಿಸುವ ಸಲುವಾಗಿ ಪ್ರತಿವರ್ಷ ಒಬ್ಬರಿಗೆ ಜ್ಯೂನಿಯರ್ ಫೆಲೋಷಿಪ್ ನೀಡಲಾಗುತ್ತಿದೆ. ಈ ಅವಧಿಯಲ್ಲಿ ಚಿತ್ರಕಲೆ ಮತ್ತು ಕಲಾವಿದರ ಬಗ್ಗೆ ಅಕಾಡೆಮಿ ಇದುವರೆಗೆ 107 ಪುಸ್ತಕಗಳನ್ನು ಪ್ರಕಟಿಸಿದೆ.

ಉತ್ತಮ ಕಲಾಪುಸ್ತಕಗಳನ್ನು ರಚಿಸಿದ ಲೇಖಕರಿಗೆ ವರ್ಷದಲ್ಲಿ ಒಂದು ಪುಸ್ತಕಕ್ಕೆ ಬಹುಮಾನವನ್ನೂ ನೀಡಲಾಗುತ್ತಿದೆ. ಇದಲ್ಲದೆ ಅಕಾಡೆಮಿಯ ಕಾರ್ಯಚಟುವಟಿಕೆ ಕುರಿತಂತೆ ಕರ್ನಾಟಕ ಕಲಾವಾರ್ತೆ ಎಂಬ ತ್ರೈಮಾಸಿಕ ಪತ್ರಿಕೆಯನ್ನು ಪ್ರಕಟಿಸಲಾಗುತ್ತಿದೆ. ಈ ಪತ್ರಿಕೆ ಕಲಾಸಂಘ ಸಂಸ್ಥೆಗಳ ಚಟುವಟಿಕೆಗಳು, ಕಲಾಲೇಖನಗಳು, ಅಕಾಡೆಮಿಯ ಪುಸ್ತಕ ಪ್ರಕಟಣೆಯ ಮಾಹಿತಿಗಳನ್ನೊಳಗೊಂಡಿದೆ.

ಇದುವರೆಗೆ ಅಕಾಡೆಮಿಯ ಅಧ್ಯಕ್ಷರಾಗಿ ಎಸ್.ಆರ್.ಕಂಠಿ (1964-67), ಕೆ.ವಿ.ಶಂಕರಗೌಡ (1967-70), ಸುಧಾ ವಿ.ರೆಡ್ಡಿ (1970-74), ಕೆ.ಕೆ.ಹೆಬ್ಬಾರ್ (1978-81), ಟಿ.ಪಿ.ಅಕ್ಕಿ (1981-84), ಸೋಮಶೇಖರ ಎಂ.ಸಾಲಿ (1984-87), ಆರ್.ಎಂ.ಹಡಪದ (1987-90), ಪಿ.ಆರ್.ತಿಪ್ಪೇಸ್ವಾಮಿ (1990-95), ಸಿ.ಚಂದ್ರಶೇಖರ (1995-98), ವಿ.ಜಿ.ಅಂದಾನಿ (1998-01) ಪೀಟರ್ ಎ.ಲೂಯಿಸ್ (2001-2004) ಇವರು ಸೇವೆ ಸಲ್ಲಿಸಿದ್ದಾರೆ.

**ಶಿಲ್ಪಕಲಾ ಅಕಾಡೆಮಿ :** ಶಿಲ್ಪಕಲಾ ಅಧ್ಯಯನ ಮತ್ತು ಸಂಶೋಧನೆಗೆ ಉತ್ತೇಜನ ನೀಡುವ ಉದ್ದೇಶದಿಂದ ಸ್ಥಾಪಿಸಲಾಗಿರುವ ಅಕಾಡೆಮಿ (1994). ಶಿಲ್ಪಕಲಾ ಅಭಿವೃದ್ಧಿಗಾಗಿ ಬೇರೆ ಕಡೆಗಳಲ್ಲಿರುವ ಇದೇ ಮಾದರಿಯ ಅಕಾಡೆಮಿಗಳೊಂದಿಗೆ ಮತ್ತು ಕರ್ನಾಟಕದಲ್ಲಿರುವ ಇತರ ಸಂಸ್ಥೆಗಳ ಮತ್ತು ಸಂಘಟನೆಗಳೊಡನೆ ಇದು ಸಹಕರಿಸುತ್ತದೆ. ಶಿಲ್ಪಕಲೆಗೆ ಸಂಬಂಧಿಸಿದಂತೆ ಸಿಬ್ಬಂದಿ ಮತ್ತು ಉದ್ದೇಶಗಳನ್ನು ಹಾಗೂ ಅದೇ ರೀತಿಯ ವಿಷಯಗಳನ್ನು ವಿನಿಮಯ ಮಾಡಿಕೊಳ್ಳುವ ಮೂಲಕ ವಿವಿಧ ಪ್ರದೇಶಗಳ ನಡುವಣ ವಿಚಾರಗಳ ಮತ್ತು ತಂತ್ರಗಳ ವಿನಿಮಯಕ್ಕೆ ಉತ್ತೇಜನ ನೀಡುತ್ತದೆ. ಶಿಲ್ಪಕಲಾ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ಕರ್ನಾಟಕದಲ್ಲಿನ ಅರ್ಹ ಸಂಸ್ಥೆಗಳಿಗೆ ಮನ್ನಣೆ ನೀಡುವುದರೊಂದಿಗೆ ಆರ್ಥಿಕ ನೆರವನ್ನೂ ನೀಡುತ್ತದೆ. ನಾಡಿನ ಶಿಲ್ಪಕಲೆಗಳನ್ನು ಸಂರಕ್ಷಿಸಿಕೊಂಡು ಬರುವುದು ಕೂಡ ಇದರ ಉದ್ದೇಶಗಳಲ್ಲಿ ಒಂದಾಗಿದೆ. ಇದು ಶಿಲ್ಪಕಲಾ ಉತ್ಸವಗಳನ್ನು ಏರ್ಪಡಿಸುವುದರೊಂದಿಗೆ ಶಿಲ್ಪಕಲೆಯಲ್ಲಿ ಮಹತ್ ಸಾಧನೆಗಳನ್ನು ಮಾಡಿದ ಸಾಂಪ್ರದಾಯಿಕ ಶಿಲ್ಪಿಗಳಿಗೆ ಪ್ರಶಸ್ತಿಪತ್ರ ರೂ.ಹತ್ತುಸಾವಿರ ನಗದು ನೀಡಿ ಸನ್ಮಾನಿಸುತ್ತದೆ. ಶಿಲ್ಪಕಲೆಯ ಉನ್ನತ ವ್ಯಾಸಂಗಕ್ಕಾಗಿ ಅರ್ಹ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ನೀಡಲು ಕೂಡ ಶಿಫಾರಸ್ಸು ಮಾಡುತ್ತದೆ. ಶಿಲ್ಪಕಲಾ ಕ್ಷೇತ್ರದಲ್ಲಿ ಸ್ತುತ್ಯಸೇವೆ ಸಲ್ಲಿಸಿ ಕರ್ನಾಟಕದಲ್ಲಿ ವಾಸಿಸುವ ವಯೋವೃದ್ಧ ಹಾಗೂ ಬಡಕಲಾವಿದರಿಗೆ ಧನ ಸಹಾಯಕ್ಕೆ ಶಿಫಾರಸ್ಸು ಮಾಡುವ ಮೂಲಕ ಅವರಿಗೆ ನೆರವು ಒದಗಿಸುತ್ತದೆ.

ರಾಜ್ಯಸರ್ಕಾರ ಅಧ್ಯಕ್ಷರನ್ನು ನಾಮ ನಿರ್ದೇಶಿಸುತ್ತದೆ. ಇವರ ಅಧಿಕಾರಾವಧಿ ಮೂರುವರ್ಷ. ಇವರು ಅಕಾಡೆಮಿಯ ಮುಖ್ಯಸ್ಥರು. ಇದಲ್ಲದೆ ಆಡಳಿತ ನೋಡಿಕೊಳ್ಳಲು ಒಬ್ಬ ರಿಜಿಸ್ಟ್ರಾರ್ ಇರುತ್ತಾರೆ. 12 ಸದಸ್ಯರನ್ನು ಹೊಂದಿದೆ. ಇವರ ಅವಧಿ ಮೂರುವರ್ಷ. ಅಕಾಡೆಮಿ ಶಿಲ್ಪಕಲೆಗೆ ಅಪಾರ ಸೇವೆ ಸಲ್ಲಿಸಿದವರನ್ನು ಕುರಿತು ಹಾಗೂ ಶಿಲ್ಪಕಲೆಯನ್ನು ಕುರಿತಂತೆ ಹಲವು ಪುಸ್ತಕಗಳನ್ನೂ ಪ್ರಕಟಿಸಿದೆ. ಇದಲ್ಲದೆ ಹೊಯ್ಸಳಶೈಲಿ, ಶಿಲ್ಪ ಶಿಬಿರ, ಮರಕೆತ್ತನೆ ಶಿಬಿರ, ಸಿಮೆಂಟ್ ಶಿಲ್ಪ ಕಾರ್ಯಾಗಾರಗಳನ್ನು ನಡೆಸಿದೆ. ಇದುವರೆಗೆ ಅಕಾಡೆಮಿಯ ಅಧ್ಯಕ್ಷರಾಗಿ ಕೆ. ಶಾಮರಾಯ ಆಚಾರ್ಯ (1995-98). ಸಿ.ಪರಮೇಶ್ವರಾಚಾರ್ (1998-2001) ಎನ್.ಜಿ.ನೀಲಕಂಠಾಚಾರ್ (2002-2004) ಸೇವೆ ಸಲ್ಲಿಸಿದ್ದಾರೆ.

**ಪತ್ರಿಕಾ ಅಕಾಡೆಮಿ :** ಕನ್ನಡ ಪತ್ರಿಕೋದ್ಯಮ 150 ವರ್ಷಗಳಿಗೂ ದೀರ್ಘವಾದ ವಿಶಿಷ್ಟ ಇತಿಹಾಸ ಹೊಂದಿದೆ. ಸ್ವಾತಂತ್ರ್ಯೋತ್ತರ ಕಾಲದಿಂದಲೂ ಅದು ತನ್ನ ಜನಪರ ಒಲವಿನಿಂದ, ಸಾಮಾಜಿಕ ಬದ್ಧತೆಯಿಂದ ಗಳಿಸಿದ ನಿಲುವು, ಬೆಳೆದ ಬಗೆ ಕುತೂಹಲಕಾರಿ. ಕನ್ನಡ ಪತ್ರಿಕೋದ್ಯಮದ ಬೆಳೆವಣಿಗೆಯ ಈ ಹರವು ವಿಸ್ತಾರವಾಗಿದ್ದರೂ ಅದಕ್ಕೊಂದು ನಿರ್ದಿಷ್ಟ ವೃತ್ತಿಪರ ಆಯಾಮವನ್ನೊದಗಿಸುವ, ಅದರ ಬೆಳೆವಣಿಗೆಗೆ ಉತ್ಕೃಷ್ಟತೆಯನ್ನು ಇತರ ಭಾಷಾ ಪತ್ರಿಕೋದ್ಯಮಗಳ ಸಮಸಮಕ್ಕೆ ಸಾಗಬಲ್ಲ ಛಾತಿಯನ್ನು ತಂದುಕೊಡಲೆತ್ನಿಸುವ ಪ್ರಯತ್ನದ ಆವಶ್ಯಕತೆ ಇದ್ದೇಇತ್ತು. ಈ ಅಗತ್ಯತೆಯ ಹಿನ್ನೆಲೆಯಲ್ಲಿ ಪತ್ರಿಕಾ ಅಕಾಡೆಮಿ ಜನ್ಮತಳೆಯಿತು. ಕೇರಳದ ಪತ್ರಿಕಾ ಅಕಾಡೆಮಿ ಈ ಅಕಾಡೆಮಿಗೆ ಮಾದರಿ.

ಪತ್ರಿಕಾ ಅಕಾಡೆಮಿ 1982ರಲ್ಲಿ ಅಸ್ತಿತ್ವಕ್ಕೆ ಬಂತು. ಆಗ ಆರ್.ಗುಂಡೂರಾವ್ ಅವರು ಕರ್ನಾಟಕದ ಮುಖ್ಯಮಂತ್ರಿಯಾಗಿದ್ದರು. ಕೇರಳವನ್ನು ಬಿಟ್ಟರೆ ಇಡೀ ಭಾರತದಲ್ಲಿ ಪತ್ರಿಕಾ ಅಕಾಡೆಮಿಯನ್ನು ಸ್ಥಾಪಿಸಿದ ಎರಡನೆಯ ರಾಜ್ಯವೆಂದರೆ ಕರ್ನಾಟಕ. ನಾಡಿಗ ಕೃಷ್ಣಮೂರ್ತಿಯವರು ಈ ಅಕಾಡೆಮಿಯ ಮೊದಲ ಅಧ್ಯಕ್ಷರಾಗಿದ್ದರು (1982-83). ಅನಂತರ ಖಾದ್ರಿ ಶಾಮಣ್ಣ (1983-86), ಜಿ.ನಾರಾಯಣ (1987-90), ಕೆ.ಎನ್.ಹರಿಕುಮಾರ್ (1990-92), ಎಸ್.ಜಿ.ಮೈಸೂರ್‌ಮಠ (1993-95), ಕೆ.ಶ್ರೀಧರ್‌ಆಚಾರ್ (1995-98), ಗರುಡನಗಿರಿ ನಾಗರಾಜ (1998-2001). ಎನ್.ಅರ್ಜುನದೇವ (2001-2004) ಅಧ್ಯಕ್ಷರಾಗಿದ್ದರು.

ಪತ್ರಕರ್ತರಲ್ಲಿ ವೃತ್ತಿನೈಪುಣ್ಯ ಹೆಚ್ಚಿಸುವುದು ಮತ್ತು ಪತ್ರಿಕೋದ್ಯಮದ ಗುಣಮಟ್ಟವನ್ನು ಸುಧಾರಿಸಲು ಯತ್ನಿಸುವುದು ಪತ್ರಿಕಾ ಅಕಾಡೆಮಿ ಸ್ಥಾಪನೆಯ ಮೂಲ ಉದ್ದೇಶ. ಪತ್ರಕರ್ತರಿಗೆ ತರಬೇತಿ ಶಿಬಿರಗಳನ್ನು ಏರ್ಪಡಿಸುವುದು, ಕಾರ್ಯಸುಧಾರಣಾ ಶಿಬಿರಗಳ ಸಂಘಟನೆ, ಸಲಹಾ ಸೇವೆಯನ್ನೊದಗಿಸುವುದರ ಜೊತೆಗೆ ಪುಸ್ತಕಗಳನ್ನೂ ನಿಯತಕಾಲಿಕಗಳನ್ನೂ ಸಂಶೋಧನ ಪ್ರಬಂಧಗಳನ್ನೂ ಪ್ರಕಟಿಸಲಾಗುತ್ತದೆ. ಶಿಕ್ಷಣ ಸಂಸ್ಥೆಗಳ ಸಹಯೋಗದೊಂದಿಗೆ ಬಳಕೆಯಲ್ಲಿರುವ ಶಿಕ್ಷಣ ವ್ಯವಸ್ಥೆಯಲ್ಲಿ ಪತ್ರಿಕೋದ್ಯಮ ಕಲಿಕೆಗೆ ಸೂಕ್ತವಾದ ಪಠ್ಯಕ್ರಮವನ್ನು ರೂಪಿಸುವಲ್ಲಿ ಸಕ್ರಿಯ ಪಾತ್ರವಹಿಸುತ್ತದೆ. ಪತ್ರಿಕೋದ್ಯಮ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿ ಈ ಕ್ಷೇತ್ರಕ್ಕೆ ಘನತೆಯನ್ನು ತಂದುಕೊಟ್ಟಂತಹ ವ್ಯಕ್ತಿಗಳನ್ನು, ಸಂಸ್ಥೆಗಳನ್ನು ಗುರುತಿಸಿ ಅವರಿಗೆ ಪ್ರಶಸ್ತಿಗಳನ್ನು ನೀಡುವ ಮೂಲಕ ಅವರ ಸೇವೆಯನ್ನು ಗೌರವಿಸಲಾಗುತ್ತದೆ ಮತ್ತು ಈ ಕ್ಷೇತ್ರದಲ್ಲಿನ ಪ್ರೌಢ ಅಭ್ಯಾಸ ಮತ್ತು ಸಂಶೋಧನೆಗೆ ಫೆಲೋಶಿಪ್‌ಗಳ ಮೂಲಕ ಅವಕಾಶ ಒದಗಿಸಲಾಗುತ್ತದೆ. ಓದುಗರ ಅಭಿರುಚಿಯನ್ನು ಮೇಲ್ಮಟ್ಟಕ್ಕೇರಿಸಿ, ಪತ್ರಿಕೋದ್ಯಮದ ಅಭಿವೃದ್ಧಿಪರವಾದ ಒಂದು ಆರೋಗ್ಯಕರ ವಾತಾವರಣ ನಿರ್ಮಾಣಕ್ಕಾಗಿ ಶ್ರಮಿಸುವುದು ಇದರ ಉದ್ದೇಶಗಳಲ್ಲೊಂದು.

ಸಂವಹನ ಕ್ಷೇತ್ರದಲ್ಲಿ ಆಗಿರುವ ಕ್ರಾಂತಿಕಾರಿ ವೈಜ್ಞಾನಿಕ ಬೆಳೆವಣಿಗೆಗಳನ್ನೂ ಈಗಿನ ಎಲೆಕ್ಟ್ರಾನಿಕ್ ಯುಗ ಸಂವಹನ ಕ್ಷೇತ್ರಕ್ಕೆ ತಂದುಕೊಟ್ಟಿರುವ ಅಗಾಧ ಸಾಧ್ಯತೆಗಳನ್ನೂ ಸಾಧ್ಯವಾದ ಮಟ್ಟಿಗೂ ಕನ್ನಡ ಪತ್ರಿಕೋದ್ಯಮದ ಬಾಗಿಲಿಗೆ ತಂದು, ಅದು ಇನ್ನಾವುದೇ ಭಾಷಾ ಪತ್ರಿಕೋದ್ಯಮಕ್ಕೆ ಸಾಟಿಯಾಗಿ ನಿಲ್ಲಬಲ್ಲಂತಹ ಸಾಮರ್ಥ್ಯ ಗಳಿಸುವಂತೆ ಮಾಡುವುದು, ಸಮಕಾಲೀನ ಸಂಶೋಧನೆಗಳ ಪ್ರಯೋಜನ ಕನ್ನಡ ಪತ್ರಿಕೋದ್ಯಮಕ್ಕೂ ಲಭಿಸುವಂತಾಗಿ, ಅದು ಹೆಚ್ಚು ಪ್ರಸ್ತುತವಾಗುವಂತೆ ಯತ್ನಿಸಲಾಗುತ್ತಿದೆ.

ಅಧ್ಯಕ್ಷರು ಅಕಾಡೆಮಿಯ ಮುಖ್ಯಸ್ಥರು. ಇವರೊಡನೆ ಕರ್ನಾಟಕ ಕಾರ್ಯನಿರತ ಪತ್ರಕರ್ತರ ಸಂಘ ಸೂಚಿಸಿದ ಪಟ್ಟಿಯಿಂದ ಸರ್ಕಾರ ನಾಮನಿರ್ದೇಶನ ಮಾಡಿದ ಐವರು ಸದಸ್ಯರು, ಅಖಿಲಭಾರತ ವೃತ್ತಪತ್ರಿಕಾ ಸಂಪಾದಕರ ಸಮ್ಮೇಳನ ಸೂಚಿಸಿದ ಪಟ್ಟಿಯಿಂದ ಸರ್ಕಾರ ನಾಮನಿರ್ದೇಶನ ಮಾಡಿದ ಐವರುಸದಸ್ಯರು, ಭಾರತೀಯ ವೃತ್ತಪತ್ರಿಕಾ ಸಂಸ್ಥೆ ಸೂಚಿಸಿದ ಪಟ್ಟಿಯಿಂದ ಸರ್ಕಾರ ನಾಮನಿರ್ದೇಶನ ಮಾಡಿದ ಇಬ್ಬರು ಸದಸ್ಯರು, ಪತ್ರಿಕೋದ್ಯಮ ಕ್ಷೇತ್ರದಿಂದ ಸರ್ಕಾರ ನಾಮಕರಣ ಮಾಡಿದ ಐವರು ಸದಸ್ಯರು, ಮೈಸೂರು, ಬೆಂಗಳೂರು ಹಾಗೂ ಕರ್ನಾಟಕ ವಿಶ್ವವಿದ್ಯಾಲಯಗಳ ಪತ್ರಿಕೋದ್ಯಮ ವಿಭಾಗದ ಮುಖ್ಯಸ್ಥರು (ಮೂವರು), ಬೆಂಗಳೂರು ಆಕಾಶವಾಣಿ ಕೇಂದ್ರದ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರು ಹೀಗೆ ಒಟ್ಟು 23 ಸದಸ್ಯರಿರುತ್ತಾರೆ. ವಾರ್ತಾ ಮತ್ತು ಪ್ರಚಾರ ಇಲಾಖೆ ಅಧಿಕಾರಿಯೊಬ್ಬರನ್ನು ಸರ್ಕಾರ ಅಕಾಡೆಮಿಯ ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಕ ಮಾಡುತ್ತದೆ.

ಪತ್ರಿಕೋದ್ಯಮ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿ ಈ ಕ್ಷೇತ್ರಕ್ಕೆ ಘನತೆ ತಂದುಕೊಟ್ಟ 123 ಜನರನ್ನು, ಇದುವರೆಗೆ (1987-98) ಪುರಸ್ಕರಿಸಿ ಗೌರವಿಸಿದೆ. ಇದರೊಡನೆ ನಾಲ್ಕು ಪತ್ರಿಕಾ ಸಂಸ್ಥೆಗಳು ಗ್ರಾಮಾಂತರ ಪತ್ರಿಕೆಯೂ ಸೇರಿರುವುದೊಂದು ವೈಶಿಷ್ಟ್ಯ. ಅಕಾಡೆಮಿ ಇದುವರೆಗೆ ಅನೇಕ ಕಾರ್ಯಕ್ರಮಗಳನ್ನು ನಡೆಸಿದೆ. ಜಿಲ್ಲಾಮಟ್ಟ ಮತ್ತು ವಿಭಾಗಮಟ್ಟದಲ್ಲಿ ಪತ್ರಕರ್ತರಿಗಾಗಿ ಅನೇಕ ತರಬೇತಿ ಶಿಬಿರಗಳನ್ನು ಏರ್ಪಡಿಸಿದೆ. ಕನ್ನಡ ಪತ್ರಿಕೋದ್ಯಮದ ವಿವಿಧ ಮಜಲುಗಳನ್ನು ಗುರುತಿಸುವ 20 ಪುಸ್ತಕಗಳನ್ನು ಪ್ರಕಟಿಸಿದೆ. ಪತ್ರಿಕೆಯಲ್ಲಿ ಬಳಸಬಹುದಾದ 50 ಸಾವಿರ ಪದಗಳುಳ್ಳ ಪತ್ರಿಕಾ ಪದಕೋಶ ಪ್ರಕಟಿಸಿರುವುದು ಅಕಾಡೆಮಿಯ ಹೆಗ್ಗಳಿಕೆ. ಕಂಪ್ಯೂಟರ್‌ನಿಂದ ಹಿಡಿದು ಸುದ್ದಿ ಛಾಯಾಗ್ರಹಣದವರೆಗೆ ಅನೇಕ ವಿಷಯಗಳಲ್ಲಿ ಪತ್ರಕರ್ತರಿಗೆ ತರಬೇತಿ ನೀಡಲಾಗುತ್ತಿದೆ. ಅನೇಕ ರಾಜ್ಯ-ರಾಷ್ಟ್ರ ಮಟ್ಟದ ವಿಚಾರ ಸಂಕಿರಣ ಮತ್ತು

ಸಂವಾದಗಳನ್ನು ಏರ್ಪಡಿಸಿದೆ. ಸ್ವಾತಂತ್ರ್ಯಪೂರ್ವದಿಂದ ಲಭ್ಯವಿರುವ ಎಲ್ಲಾ ಕನ್ನಡ ಪತ್ರಿಕೆಗಳನ್ನು ಮೈಕ್ರೋಫಿಲಂನಲ್ಲಿ ರಕ್ಷಿಸಿಡುವ ಕಾರ್ಯವನ್ನು ಮಾಡಿದೆ. ಕನ್ನಡ ಪತ್ರಿಕೋದ್ಯಮ ಬೆಳೆದುಬಂದ ದಾರಿ ಕುರಿತು ಸಾಕ್ಷ್ಯಚಿತ್ರವನ್ನು ನಿರ್ಮಿಸಿದೆ. ರಾಜ್ಯದ ಹಿರಿಯ ಅನುಭವಿ ಪತ್ರಕರ್ತರ ಧ್ವನಿಗಳನ್ನೂ ಅವರ ಅನಿಸಿಕೆಗಳನ್ನೂ ದಾಖಲಿಸಿದೆ.

ಕನ್ನಡ ಮೊದಲ ಪತ್ರಿಕೆ ಮಂಗಳೂರ ಸಮಾಚಾರ ಪ್ರಕಟವಾದ (1843 ಜುಲೈ 1) ಸವಿ ನೆನಪಿಗಾಗಿ ಪ್ರತಿ ವರ್ಷ ಜುಲೈ 1ನ್ನು ಪತ್ರಿಕಾ ದಿನವೆಂದು ಆಚರಿಸಲಾಗುತ್ತಿದೆ.

ಜಿಲ್ಲಾವಾರು ಪತ್ರಿಕೋದ್ಯಮ ಇತಿಹಾಸದ ಪ್ರಕಟಣೆ ಅಕಾಡೆಮಿ ಕೈಗೆತ್ತಿಕೊಂಡಿರುವ ಮಹತ್ವದ ಯೋಜನೆಗಳಲ್ಲೊಂದು. ಸಂವಾದ, ರಸಗ್ರಹಣ, ಕರ್ನಾಟಕದರ್ಶನ, ದತ್ತಿ ಉಪನ್ಯಾಸ, ಕನ್ನಡ ಪತ್ರಕರ್ತರಿಗೆ ವಿದೇಶದಲ್ಲಿ ತರಬೇತಿ, ಕಾನೂನುಶಿಬಿರ, ಪತ್ರಿಕೆ-ಕನ್ನಡ ಇತ್ಯಾದಿ ಯೋಜನೆಗಳನ್ನು ರೂಪಿಸಲಾಗಿದೆ.

ಮೈಸೂರಿನ ಆಂದೋಲನ ದಿನಪತ್ರಿಕೆ ಪ್ರತಿವರ್ಷ ಕನ್ನಡದ ಅತ್ಯುತ್ತಮ ಗ್ರಾಮೀಣ ದಿನಪತ್ರಿಕೆಗೆ ಬಹುಮಾನ ನೀಡಲೆಂದು ಒಂದು ಲಕ್ಷ ರೂ.ಗಳ ಇಡುಗಂಟನ್ನು ಅಕಾಡೆಮಿಗೆ ನೀಡಿದೆ (1997). ಈ ಇಡುಗಂಟಿನ ಬಡ್ಡಿಯಲ್ಲಿ 10 ಸಾವಿರ ರೂ. ನಗದು ಬಹುಮಾನವನ್ನು ಪ್ರತಿವರ್ಷ ನೀಡಲಾಗುತ್ತಿದೆ. ಈ ಪ್ರಶಸ್ತಿಯ ಗೌರವಕ್ಕೆ ಪಾತ್ರವಾದ ಮೊದಲಪತ್ರಿಕೆ ಕೋಲಾರದ 'ಕೋಲಾರಪತ್ರಿಕೆ'. ಅಕಾಡೆಮಿಯಲ್ಲಿ ಅನೇಕ ದತ್ತಿನಿಧಿ ಸ್ಥಾಪಿಸಲಾಗಿದೆ. ಹಿರಿಯ ಪತ್ರಕರ್ತರಾದ ಸಿದ್ದವನಹಳ್ಳಿಕೃಷ್ಣ ಶರ್ಮ, ಸಿ.ಜಿ.ಕೆ.ರೆಡ್ಡಿ, ವಿ.ಬಿ.ನಾಯಕ, ಫ.ಗು.ಹಳಕಟ್ಟಿ ಇವರ ಹೆಸರಿನಲ್ಲಿ ಪ್ರತಿವರ್ಷ ಪತ್ರಿಕೋದ್ಯಮದಲ್ಲಿ ಕಾರ್ಯಕ್ರಮ ಏರ್ಪಡಿಸಲಾಗುತ್ತಿದೆ. ಈಗ ಪತ್ರಿಕಾ ಅಕಾಡೆಮಿಯನ್ನು ಮಾಧ್ಯಮ ಅಕಾಡೆಮಿ ಎಂಬ ಹೆಸರಿನಿಂದ ಕರೆಯಲಾಗುತ್ತದೆ (2003).

**ತುಳು ಸಾಹಿತ್ಯ ಅಕಾಡೆಮಿ:** ತುಳುಭಾಷೆ, ಸಾಹಿತ್ಯ, ಸಂಸ್ಕೃತಿ, ಕಲೆ, ಜಾನಪದ ಅಭಿವೃದ್ಧಿಗಾಗಿ ಕರ್ನಾಟಕ ಸರ್ಕಾರ ಈ ಅಕಾಡೆಮಿಯನ್ನು ಸ್ಥಾಪಿಸಿತು (1994). ಈ ಅಕಾಡೆಮಿಯ ಕಾರ್ಯಾಲಯ ಮಂಗಳೂರಿನಲ್ಲಿದೆ. ಅಕಾಡೆಮಿಗೆ ಅಧ್ಯಕ್ಷರನ್ನೊಳಗೊಂಡಂತೆ 12 ಸದಸ್ಯರನ್ನು ಸರ್ಕಾರ ನಾಮನಿರ್ದೇಶನ ಮಾಡುತ್ತದೆ. ಆಡಳಿತದಲ್ಲಿ ನೆರವು ನೀಡಲು ಮತ್ತು ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಒಬ್ಬ ರಿಜಿಸ್ಟ್ರಾರ್‌ರಿರುತ್ತಾರೆ. ಜಾನಪದತಜ್ಞ ಬಿ.ಎ.ವಿವೇಕ ರೈ ಈ ಅಕಾಡೆಮಿಯ ಪ್ರಥಮ ಅಧ್ಯಕ್ಷರು (1994-95). ಎರಡನೆಯ ಅವಧಿಗೂ ಇವರೇ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ (1995-98). ಅನಂತರ ಅ.ಬಾಲಕೃಷ್ಣಶೆಟ್ಟಿ(1998-2001) ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ವಾಮನ ನಂದಾವರ (2001-) ಈಗಿನ ಅಧ್ಯಕ್ಷರು.

ತುಳು ಸಾಹಿತ್ಯ ಕ್ಷೇತ್ರದಲ್ಲಿ ಅಧ್ಯಯನ, ಸಂಶೋಧನೆಗೆ ಉತ್ತೇಜನ ನೀಡುವುದು ಮತ್ತು ಈ ಉದ್ದೇಶಕ್ಕಾಗಿ ಮಾಹಿತಿ ಕೇಂದ್ರ, ಗ್ರಂಥಾಲಯವನ್ನು ಸ್ಥಾಪಿಸುವುದು ಅಕಾಡೆಮಿಯ ಉದ್ದೇಶ. ಅಕಾಡೆಮಿ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಇವುಗಳಲ್ಲಿ ಗ್ರಂಥ ಪ್ರಕಟಣೆ ಮುಖ್ಯವಾದುದು. ಅಕಾಡೆಮಿ ಇಲ್ಲಿಯವರೆಗೆ 86 ಪುಸ್ತಕಗಳನ್ನು ಪ್ರಕಟಿಸಿದೆ (2003). ಮರೆಯಬಾರದ ತುಳುವರು ಮಾಲಿಕೆಯಲ್ಲಿ ತುಳುಸಾಹಿತ್ಯ ಸಂಸ್ಕೃತಿಯ ಏಳ್ಗೆಗಾಗಿ ದುಡಿದ ಮಹನೀಯರ ಬಗ್ಗೆ 22 ಪುಸ್ತಕಗಳನ್ನು ಪ್ರಕಟಿಸಲಾಗಿದೆ. 'ಚಾವಡಿ' ಈ ಅಕಾಡೆಮಿಯ ವಿಶಿಷ್ಟ ಕಾರ್ಯಕ್ರಮ. ಜನಸಾಮಾನ್ಯರೊಂದಿಗೆ ಸಂಪರ್ಕ ಏರ್ಪಡಿಸುವುದು ಈ ಕಾರ್ಯಕ್ರಮದ ಉದ್ದೇಶ. ಅನ್ಯಭಾಷಿಕರಿಗೆ ತುಳು ಕಲಿಸುವ ಕಾರ್ಯಕ್ರಮವನ್ನು ಅಕಾಡೆಮಿ ಹಮ್ಮಿಕೊಂಡಿದೆ.

ತುಳು ಸಾಹಿತ್ಯ ಮತ್ತು ಸಂಸ್ಕೃತಿಗೆ ಅನುಪಮ ಸೇವೆ ಸಲ್ಲಿಸಿದ ಗಣ್ಯರಿಗೆ ಅಕಾಡೆಮಿ ಗೌರವ ಪ್ರಶಸ್ತಿ ನೀಡುತ್ತಿದೆ. ಅಮೃತ ಸೋಮೇಶ್ವರ ಯು.ಪಿ.ಉಪಾಧ್ಯಾಯ, ಕೆದಂಬಾಡಿ ಜತ್ತಪ್ಪ ರೈ, ಕು.ಶಿ.ಹರಿದಾಸಭಟ್ಟ, ಸೂರ್ಯನಾಥ ಕಾಮತ್, ಬಿ.ಎ. ವಿವೇಕ ರೈ ಮೊದಲಾದವರು ಪ್ರಶಸ್ತಿ ಗಳಿಸಿದ್ದಾರೆ. ತುಳುವಿನಲ್ಲಿ ರಚಿಸಿದ ಗ್ರಂಥಗಳಿಗೆ ಬಹುಮಾನವನ್ನು ನೀಡಲಾಗುತ್ತಿದೆ. ತುಳು ವರ್ತಮಾನವೆಂಬ ತ್ರೈಮಾಸಿಕ ಪತ್ರಿಕೆಯನ್ನು ಅಕಾಡೆಮಿಯ ವತಿಯಿಂದ ಪ್ರಕಟಿಸಲಾಗುತ್ತಿದೆ. ಕಾಲಕಾಲಕ್ಕೆ ಕಮ್ಮಟ, ವಿಚಾರಗೋಷ್ಠಿ, ಕವಿಗೋಷ್ಠಿ, ತುಳು ಉತ್ಸವ ಮೊದಲಾದ ವಿಶಿಷ್ಟ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಿದೆ.

**ಕೊಡವ ಸಾಹಿತ್ಯ ಅಕಾಡೆಮಿ :** ಕೊಡವ ಸಾಹಿತ್ಯ ಮತ್ತು ಸಂಸ್ಕೃತಿಯ ಅಭಿವೃದ್ಧಿಗಾಗಿ ಮಡಿಕೇರಿಯಲ್ಲಿ ಈ ಅಕಾಡೆಮಿಯನ್ನು ಪ್ರಾರಂಭಿಸಲಾಯಿತು (1994). ಇದು ಕೊಡವ ಸಾಹಿತ್ಯ, ಜಾನಪದ, ಸಂಸ್ಕೃತಿಗಳ ಅಭಿವೃದ್ಧಿಗಾಗಿ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಕೊಡಗಿನ ಮೂಲ ನಿವಾಸಿಗಳ ಅಧ್ಯಯನ ಮತ್ತು ಕೊಡವ ವಿಶ್ವಕೋಶ ಪ್ರಕಟಣೆ ಇಂತಹ ಕಾರ್ಯಕ್ರಮಗಳಲ್ಲಿ ಪ್ರಮುಖವಾದುವು. ಇತರ ಭಾಷೆಗಳೊಂದಿಗೆ ಕೊಡವ ಭಾಷೆಯ ಸಾಮರಸ್ಯ ಕಾರ್ಯಕ್ರಮಗಳನ್ನೂ ನಡೆಸಲಾಗಿದೆ. ಕೊಡವ ಭಾಷೆಯನ್ನು ಭಾರತ ಸಂವಿಧಾನದ 8ನೆಯ ಪರಿಚ್ಛೇದದಲ್ಲಿ ಸೇರಿಸುವ ಪ್ರಯತ್ನಗಳೂ ಅಕಾಡೆಮಿಯ ಮೂಲಕ ನಡೆದಿವೆ. ಪಟ್ಟೋಲೆ ಪಳಮೆ ಎನ್ನುವದು ಸೈನಿಕರಾಗಿದ್ದು ಹೋರಾಡಿದವರ ಯುದ್ಧಭೂಮಿಯ ಅನುಭವಗಳ ಸಂಗ್ರಹವಾಗಿದೆ. ಕೊಡವ ಸಾಹಿತ್ಯಅಕಾಡೆಮಿ ಇಲ್ಲಿಯವರೆಗೆ 72 ಪುಸ್ತಕಗಳನ್ನು ಪ್ರಕಟಿಸಿದೆ. ಇತರ ಅಕಾಡೆಮಿಗಳಂತೆ ಕೊಡವಭಾಷೆ, ಸಾಹಿತ್ಯ, ಸಂಸ್ಕೃತಿಗಳ ಅಭಿವೃದ್ಧಿಗಾಗಿ ಅನುಪಮ ಸೇವೆ ಸಲ್ಲಿಸಿದ ಗಣ್ಯರಿಗೆ ಪ್ರತಿವರ್ಷ ಪ್ರಶಸ್ತಿ ನೀಡಿ ಗೌರವಿಸಲಾಗುತ್ತಿದೆ. ಇಲ್ಲಿಯವರೆಗೆ ಈ ಪ್ರಶಸ್ತಿಯನ್ನು 53 ಗಣ್ಯರು ಪಡೆದಿದ್ದಾರೆ.

ಅಕಾಡೆಮಿಯ ಮೊದಲ ಅಧ್ಯಕ್ಷರಾಗಿದ್ದ ಉಳ್ಳಿಯಡ ಎಂ. ಪೂವಯ್ಯ ಅವರು ಎರಡು ಅವಧಿಗೆ ಕೆಲಸ ನಿರ್ವಹಿಸಿದ್ದಾರೆ (1994 -98). ಅನಂತರ ಮೇಕೇರಿರ ಕೆ. ಕಾರ್ಯಪ್ಪ (1998-2001). ಬಾಚರಣಿಯಂಡ ಪಿ. ಅಪ್ಪಣ್ಣ (2001-02) ಅಧ್ಯಕ್ಷರಾಗಿದ್ದರು. ಅಕಾಡೆಮಿಯ ಈಗಿನ ಅಧ್ಯಕ್ಷರು ಚೆರಿಯಪಂಡ ಎಂ. ರಾಜಾನಂಜಪ್ಪ (2002ರಿಂದ).

**ಕೊಂಕಣಿ ಸಾಹಿತ್ಯ ಅಕಾಡೆಮಿ :** ಕರ್ನಾಟಕದಲ್ಲಿ ನೆಲೆಸಿರುವ ಕೊಂಕಣಿಗರ ಭಾಷೆ, ಸಾಹಿತ್ಯ, ಸಂಸ್ಕೃತಿ ಮತ್ತು ಜನಪದ ಕಲೆಗಳ ಅಭಿವೃದ್ಧಿಗಾಗಿ ಸರ್ಕಾರ ಈ ಅಕಾಡೆಮಿಯನ್ನು ಸ್ಥಾಪಿಸಿತು (1994). ಅಕಾಡೆಮಿ ಅಧಿಕೃತವಾಗಿ ತನ್ನ ಕಾರ್ಯವನ್ನು ಮಂಗಳೂರಿನಲ್ಲಿ 1996ರಲ್ಲಿ ಪ್ರಾರಂಭಿಸಿತು. ಪ್ರತಿವರ್ಷ ಕೊಂಕಣಿಯಲ್ಲಿ ಪ್ರಕಟವಾದ ಉತ್ತಮ ಪುಸ್ತಕಗಳಿಗೆ ಬಹುಮಾನ ನೀಡುತ್ತಿದೆ. ಕನ್ನಡ, ಇಂಗ್ಲಿಷ್ ಮತ್ತು ಹಿಂದಿಯೊಂದಿಗೆ ಕೂಡಿದ ಕೊಂಕಣಿ ಸಮಾಂತರ ಶಬ್ದಕೋಶವನ್ನು ಪ್ರಕಟಿಸಲಾಗಿದೆ. ಇದೊಂದು ಆಕರ ಗ್ರಂಥವಾಗಿದೆ. ಸಾಹಿತ್ಯ, ನಾಟಕ ಕಾರ್ಯಾಗಾರ, ಕವಿಗೋಷ್ಠಿ, ಜಾನಪದ ಕಲಾ ಉತ್ಸವಗಳನ್ನು ನಡೆಸಿದೆ. ಇದುವರೆಗೆ 94 ಗ್ರಂಥಗಳನ್ನು ಪ್ರಕಟಿಸಿದೆ. ಅಕಾಡೆಮಿ ಪ್ರತಿ ವರ್ಷ ಕೊಂಕಣಿ ಸಾಹಿತ್ಯ, ಸಂಗೀತ, ನಾಟಕ, ಜಾನಪದ ಮತ್ತು ಪತ್ರಿಕೋದ್ಯಮ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ಗಣ್ಯರಿಗೆ ಪ್ರಶಸ್ತಿ ನೀಡಿ ಗೌರವಿಸುತ್ತಿದೆ. ಇಲ್ಲಿಯವರೆಗೆ 50 ಗಣ್ಯರು ಈ ಪ್ರಶಸ್ತಿ ಪಡೆದಿದ್ದಾರೆ. ಪ್ರಥಮ ಬಾರಿಗೆ ಗೌರವ ಫೆಲೋಶಿಪ್ ಪ್ರಶಸ್ತಿಯನ್ನು ಪ್ರಾರಂಭಿಸಲಾಗಿದೆ (2003). ಈ ಪ್ರಶಸ್ತಿಯನ್ನು ಮಣಿಪಾಲದ ಕೆ.ಕೆ.ಪೈ ಪಡೆದಿದ್ದಾರೆ. ಅಕಾಡೆಮಿಯ ಪ್ರಶಸ್ತಿ ಗಳಿಸಿದವರಲ್ಲಿ ಭದ್ರಗಿರಿ ಅಚ್ಯುತದಾಸ, ಫಾದರ್ ಸಿ.ಸಿ.ಎ.ಪೈ, ಅನುರಾಧ ಧಾರೇಶ್ವರ, ವಿ.ಜೆ.ಪಿ.ಸಾಲ್ಡಾನಾ, ಹೊಸಾಡ ಬಾಬು ಬಿ. ನಾಯಕ್ ಮೊದಲಾದವರು ಪ್ರಮುಖರು. ಕರ್ನಾಟಕದಲ್ಲಿರುವ ಕೊಂಕಣಿ ಸಾಹಿತಿಗಳು ಮತ್ತು ಕಲಾವಿದರ ಮಾಹಿತಿಕೋಶ ತಯಾರಿಸುವ ಯೋಜನೆಯನ್ನು ಅಕಾಡೆಮಿ ಹಮ್ಮಿಕೊಂಡಿದೆ. ಅಕಾಡೆಮಿಗೆ ಇಲ್ಲಿಯವರೆಗೆ ಸೇವೆ ಸಲ್ಲಿಸಿದ ಅಧ್ಯಕ್ಷರು ವಿ.ಜೆ.ಪಿ.ಸಾಲ್ಡಾನಾ (1994-95), ಬಿ.ವಿ.ಬಾಳಿಗಾ (1995-97), ಬಸ್ತಿ ವಾಮನ ಶೆಣೈ (1997-2001). ಅಲೆಗ್ಸಾಂಡರ್ ಎಫ್.ಡಿಸೋಜ ಅಕಾಡೆಮಿಯ ಇಂದಿನ ಅಧ್ಯಕ್ಷರು.

**ಉರ್ದು ಅಕಾಡೆಮಿ :** ಕರ್ನಾಟಕ ಸರ್ಕಾರ 1977ರಲ್ಲಿ ಈ ಅಕಾಡೆಮಿಯನ್ನು ಸ್ಥಾಪಿಸಿತು. ಉರ್ದು ಸಾಹಿತ್ಯ, ಸಂಸ್ಕೃತಿಗೆ ಸಂಬಂಧಿಸಿದಂತೆ ಈ ಅಕಾಡೆಮಿ ಹಲವು ಯೋಜನೆಗಳನ್ನು ರೂಪಿಸಿದೆ. ದೆಹಲಿಯ ಪ್ರಸಿದ್ಧ ಲೇಖಕ, ನಾಟಕಕಾರ ಹಬೀಬ್‌ತನ್ವೀರ್ ಇದರ ಪ್ರಥಮ ಅಧ್ಯಕ್ಷರಾಗಿದ್ದರು (1977).

ಉರ್ದುಭಾಷೆ ಮತ್ತು ಸಾಹಿತ್ಯವನ್ನು ಕರ್ನಾಟಕದಲ್ಲಿ ಅಭಿವೃದ್ಧಿಪಡಿಸುವುದು ಮತ್ತು ಪ್ರೋತ್ಸಾಹಿಸುವುದು, ಕನ್ನಡದ ಹೆಸರಾಂತ

ಸಾಹಿತ್ಯ ಕೃತಿಗಳನ್ನು ಉರ್ದುವಿಗೆ ಭಾಷಾಂತರಿಸುವದು, ಪತ್ರಿಕೆ ಮತ್ತು ಪುಸ್ತಕಗಳನ್ನು ಪ್ರಕಟಿಸುವುದು ಇದರ ಗುರಿ. ಅಕಾಡೆಮಿ ಪ್ರತಿವರ್ಷ ಸಾಹಿತ್ಯಕ್ಷೇತ್ರದಲ್ಲಿ ಅಸಾಧಾರಣ ಸೇವೆ ಸಲ್ಲಿಸಿದ ಮೂವರು ವಿದ್ವಾಂಸರಿಗೆ ಪ್ರಶಸ್ತಿ ನೀಡುತ್ತದೆ. ಉರ್ದು ಭಾಷೆಯಲ್ಲಿ ಪಿ.ಯು.ಸಿ.ಯಿಂದ ಸ್ನಾತಕೋತ್ತರ ಪದವಿವರೆಗೂ ಸೇಕಡ 80ಕ್ಕಿಂತ ಹೆಚ್ಚು ಅಂಕಗಳಿಸಿದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ನೀಡುತ್ತದೆ. ಅಕಾಡೆಮಿ ಹಮ್ಮಿಕೊಂಡ ಮಹತ್ತರ ಯೋಜನೆಗಳಲ್ಲಿ ಕನ್ನಡ-ಉರ್ದು ಮತ್ತು ಉರ್ದು-ಕನ್ನಡ ನಿಘಂಟು ಪ್ರಮುಖವಾದದ್ದು. ಇದಲ್ಲದೆ ಇಂಗ್ಲಿಷ್-ಕನ್ನಡ-ಉರ್ದು ತ್ರಿಭಾಷಾ ನಿಘಂಟನ್ನೂ ಪ್ರಕಟಿಸಿದೆ. ಜ್ಞಾನಪೀಠ ಪ್ರಶಸ್ತಿ ವಿಜೇತ ಕನ್ನಡಿಗರನ್ನು ಕುರಿತ ಪುಸ್ತಕ, ಟಿಪ್ಪುಸುಲ್ತಾನ್ ಕುರಿತ ನಾಟಕ-ಇವು ಅಕಾಡೆಮಿಯ ಕೆಲವು ಪುಸ್ತಕಗಳು. ಶಾಲಾ ಕಾಲೇಜು ವಿದ್ಯಾರ್ಥಿಗಳಿಗಾಗಿ ರಸಪ್ರಶ್ನೆ, ಚರ್ಚೆ ಮತ್ತು ಪ್ರಬಂಧ ಸ್ಪರ್ಧೆಯನ್ನೂ ಪ್ರತಿವರ್ಷ ಏರ್ಪಡಿಸಲಾಗುತ್ತಿದೆ. ಕನ್ನಡ ಮತ್ತು ಉರ್ದು ಕವಿಗಳ ಗೋಷ್ಠಿ, ಕಾರ್ಯಾಗಾರ, ಚರ್ಚಾಗೋಷ್ಠಿ ಇವು ಇತರ ಚಟುವಟಿಕೆಗಳು.

ಅಕಾಡೆಮಿಗೆ ಇಲ್ಲಿಯವರೆಗೆ ಹೆಸರಾಂತ ಲೇಖಕರು, ವಿದ್ವಾಂಸರು ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಹಬೀಬ್‌ತನ್ವೀರ್ (1977), ಮಹಮ್ಮದ್ ಅಯಾಜ್ (1979-80), ಇವರು ಈ ಹುದ್ದೆಯನ್ನು ಮೂರು ಬಾರಿ ಅಲಂಕರಿಸಿದ್ದಾರೆ. ಅನಂತರ ಫಮೀದಾಬೇಗಂ (1987-90), ಅಬ್ದುಲ್ ಗಫಾರ್‌ಶಕೀಲ್ (1995-2001) ಎಂ.ಎ.ವಹಾಬ್ (2001-2004) ಅಧ್ಯಕ್ಷರಾಗಿದ್ದರು.

*

**ಅಕ್ಕನಾಗಮ್ಮ :** 12ನೆಯ ಶತಮಾನದ ಕನ್ನಡ ನಾಡಿನ ಶಿವಶರಣೆಯರಲ್ಲಿ ಅಗ್ರಗಣ್ಯಳು. ಬಾಗೇವಾಡಿ ಈಕೆಯ ಜನ್ಮಸ್ಥಳ. ತಂದೆ ಮಾದರಸ, ತಾಯಿ ಮಾದಲಾಂಬಿಕೆ. ಮಗ ಚನ್ನಬಸವೇಶ್ವರ, ಸಹೋದರ ಬಸವೇಶ್ವರ, ಗುರು ಕಪ್ಪಡಿ ಸಂಗಮದ ಜಾತವೇದಸ್ವಾಮಿ. ಮಹಾಯೋಗಿನಿಯಾದ ಈಕೆಯ ಸ್ಮಾರಕಗಳು ಬಿಜಾಪುರ ಜಿಲ್ಲೆಯ ಇಂಗಳೇಶ್ವರ, ಬೀದರ್ ಜಿಲ್ಲೆಯ ಕಲ್ಯಾಣ, ಉತ್ತರಕನ್ನಡ ಜಿಲ್ಲೆಯ ಉಳವಿಯಲ್ಲಿವೆ. ಬಸವೇಶ್ವರರು ಕೈಗೊಂಡ ಎಲ್ಲ ಚಟುವಟಿಕೆಗಳಲ್ಲೂ ಈಕೆ ಬೆಂಬಲಿಗಳಾಗಿದ್ದಳು. ಕರ್ನಾಟಕದ ಶಿವಶಣರು ಈಕೆಯ ಬಗ್ಗೆ ಹೆಚ್ಚಿನ ಭಕ್ತಿಗೌರವಗಳನ್ನು ತಾಳಿದ್ದಾರೆ. ಚೆನ್ನಬಸವಪುರಾಣ, ಪುರಾತನ ದೇವಿಯರ ತ್ರಿಪದಿ, ಬಸವಪುರಾಣ ಈ ಗ್ರಂಥಗಳಲ್ಲಿ ಈಕೆಯ ಹೆಸರು ನಿರೂಪಿತವಾಗಿದೆ. **(ಬಿ.ಎಸ್.)**

**ಅಕ್ಕಮಹಾದೇವಿ :** 12ನೆಯ ಶತಮಾನದ ಪ್ರಸಿದ್ಧ ಶಿವಶರಣೆ. ಕನ್ನಡದ ಮೊದಲ ಕವಯಿತ್ರಿ ಎಂಬ ಬಿರುದಿಗೆ ಪಾತ್ರಳಾಗಿದ್ದಾಳೆ. ಇವಳು ಉಡುತಡಿಯವಳು ಎಂದು ಹರಿಹರ ಮುಂತಾದವರು ಹೇಳಿದ್ದಾರೆ. ಉಡುತಡಿ ಈಗಿನ ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕಿನ ಉಡುಗಣಿ ಮತ್ತು ತಡುಗಣಿಗಳೇ ಆಗಿವೆ ಎಂದು ಸಾಮಾನ್ಯವಾಗಿ ಭಾವಿಸಲಾಗಿದೆ. ಇವಳ ತಂದೆತಾಯಿಗಳ ಹೆಸರುಗಳನ್ನು ಬೇರೆ ಬೇರೆ ಕವಿಗಳು ಬೇರೆ ಬೇರೆ ರೀತಿಗಳಲ್ಲಿ ಹೇಳಿದ್ದಾರೆ. ಹರಿಹರ ಅವರನ್ನು ಶಿವಭಕ್ತರೆಂದು ಸಾಮಾನ್ಯ ರೂಪದಲ್ಲಿ ಹೆಸರಿಸಿದ್ದರೆ, ಚಾಮರಸ ಅವರ ಹೆಸರನ್ನು ನಿರ್ಮಲ, ಸುಮತಿ ಎಂಬುದಾಗಿ ಹೇಳುತ್ತಾನೆ. ರಾಚಕವಿ ಓಂಕಾರಶೆಟ್ಟಿ, ಲಿಂಗಮ್ಮ ಎಂದು ಹೇಳುತ್ತಾನೆ. ಚಾಮರಸನ ಹೆಸರುಗಳು ಅವನ ಕಾವ್ಯದಲ್ಲಿ ಬರುವ ಇತರ ಹೆಸರುಗಳಂತೆ ಸಾಂಕೇತಿಕ ಎಂದು ಭಾವಿಸಬಹುದು. ರಾಚಕವಿ ಬಹಳ ಈಚಿನವನು. ಆದ್ದರಿಂದ ಆ ಬಗ್ಗೆ ಏನನ್ನೂ ಖಚಿತವಾಗಿ ಹೇಳಲು ಸಾಧ್ಯವಿಲ್ಲ.

ಈಕೆ ಶಿವನಲ್ಲಿ ಅಪಾರವಾದ ಭಕ್ತಿಯನ್ನಿಟ್ಟಿದ್ದಲ್ಲದೆ, ಅವನನ್ನೇ ತನ್ನ ಗಂಡನೆಂದು ಭಾವಿಸಿದ್ದಳು. ಊರಿನ ರಾಜ ಕೌಶಿಕನ ದೃಷ್ಟಿ ಈ ಯುವತಿಯ ಮೇಲೆ ಬಿತ್ತು. ಮದುವೆಯಾಗಬಯಸಿದ. ಇವಳಿಗಾದರೋ ಅವನ ಕೈಹಿಡಿಯಲು ಸ್ವಲ್ಪವೂ ಇಷ್ಟವಿರಲಿಲ್ಲ. ರಾಜನಿಂದ ತನ್ನ ತಂದೆ ತಾಯಿಗಳಿಗೆ ಉಂಟಾಗಬಹುದಾದ ತೊಂದರೆಗಳನ್ನು ನೆನೆದು ಮೂರು ಷರತ್ತುಗಳೊಂದಿಗೆ ಮದುವೆಯಾಗಲು ಒಪ್ಪಿದಳು. ಮದುವೆಗೆ ಇದಕ್ಕಿಂತಲೂ ಇದ್ದ ದೊಡ್ಡ ಅಡ್ಡಿಯೆಂದರೆ ಕೌಶಿಕ ಜೈನ, ಅಷ್ಟೇ ಅಲ್ಲ, ಭವಿ. ಆತ ಸಂಸಾರದಲ್ಲಿ ಆಸಕ್ತ, ರಾಗಿ; ಇವಳು ಸಂಸಾರದಲ್ಲಿ ನಿರಾಸಕ್ತೆ, ವಿರಾಗಿ. ಕೌಶಿಕ ಲೌಕಿಕವ್ಯಕ್ತಿ; ಮಹಾದೇವಿ ಅಲೌಕಿಕವ್ಯಕ್ತಿ. ಅವನ ವ್ಯವಹಾರವೆಲ್ಲ ಪ್ರಾಪಂಚಿಕ, ಇವಳದೋ ಆಧ್ಯಾತ್ಮಿಕ. ಮದುವೆಯಾದರೂ ಆ ದಾಂಪತ್ಯ ಹೆಚ್ಚುಕಾಲ ಉಳಿಯಲಿಲ್ಲ. ಕೌಶಿಕ ತನ್ನ ಮೂರು ಷರತ್ತುಗಳನ್ನೂ ಮುರಿದಾಗ, ಇವಳು ಅವನನ್ನು ತ್ಯಜಿಸಿ ಕೇಶಾಂಬರಿಯಾಗಿ, ಚೆನ್ನಮಲ್ಲಿಕಾರ್ಜುನನನ್ನು ಅರಸುತ್ತ ಹೊರಟು ದಾರಿಯಲ್ಲಿ ಹಲವಾರು ರೀತಿಯ ಕೋಟಲೆಗಳನ್ನು ಅನುಭವಿಸಿದಳು. ಈ ಎಲ್ಲ ಅಸಹನೀಯವಾದ ನೋವನ್ನೂ ನುಂಗಿ ಸಹಿಸಿಕೊಳ್ಳಲು ಧೈರ್ಯ ಕೊಟ್ಟದ್ದು ಇವಳ ಶಿವನಿಷ್ಠೆ. ತಾನು ಶಿವನ ವಧುವಾದ್ದರಿಂದ ಯಾರಿಗೂ ಅಳುಕಬೇಕಾಗಿಲ್ಲವೆಂಬ ಕೆಚ್ಚು ಇವಳದು. ಶ್ರೀಶೈಲಕ್ಕೆ ಹೋಗುವ ಮಾರ್ಗದಲ್ಲಿ ಈಕೆ ಕಲ್ಯಾಣಕ್ಕೂ ಬಂದಳು. ಕಲ್ಯಾಣ ಆಗ ವೀರಶೈವ ಧಾರ್ಮಿಕ ಚಟುವಟಿಕೆಗಳಿಂದ ತುಂಬಿ ತುಳುಕುತ್ತಿದ್ದಿತು. ಬಸವ, ಅಲ್ಲಮ ಮುಂತಾದವರ ನೇತೃತ್ವದಲ್ಲಿ ಸಾಮಾಜಿಕ ಕ್ರಾಂತಿಯೊಂದು ರೂಪುಗೊಳ್ಳುತ್ತಿದ್ದಿತು. ಆ ಶರಣರ ಕಿವಿಗಾಗಲೇ ಅಕ್ಕನ ನಿಷ್ಠೆ ಭಕ್ತಿಗಳು ಕೇಳಿ ಬಂದಿದ್ದವು. ಕಲ್ಯಾಣದಲ್ಲಿ ಕೆಲವು ಕಾಲ ನಿಂತು ಅನುಭಾವಿಗಳ ಸಂಗದಲ್ಲಿ ಸುಖ ಶಾಂತಿಗಳನ್ನು ಕಂಡಳು. ಬಸವಣ್ಣ, ಅಲ್ಲಮಪ್ರಭು-ಮುಂತಾದ ಅನುಭಾವಿಗಳಿಂದ ಮಹಾಶಿವಶರಣೆ ಎಂಬ ಹೊಗಳಿಕೆಗೆ ಪಾತ್ರಳಾದಳು. ಅಲ್ಲಿಂದ ಈಕೆ ಎಲ್ಲರ ಹರಕೆಯನ್ನೂ ಹೊತ್ತು, ತನ್ನ ಗಂಡ ಶ್ರೀಚೆನ್ನಮಲ್ಲಿಕಾರ್ಜುನನನ್ನು ಅರಸುತ್ತ ಶ್ರೀ ಶೈಲಕ್ಕೆ ಬಂದು, ಕದಳಿವನ ಪ್ರವೇಶಿಸಿ, ತನ್ನ ಆರಾಧ್ಯದೈವದ ಸಾನ್ನಿಧ್ಯದಲ್ಲಿ ಕೊನೆಯುಸಿರೆಳೆದಳು. ಹೀಗೆ ಸಾಂಪ್ರದಾಯಿಕ ಸಮಾಜದ ಸಂಕೋಲೆಗಳನ್ನು ಮುರಿದೊಗೆದು ಇವಳು ಮಾಡಿದ ಉಗ್ರಸಾಧನೆ, ಪಡೆದ ಸಿದ್ಧಿ ಅಪೂರ್ವವಾದುದು.

ಅಕ್ಕಮಹಾದೇವಿ ಶ್ರೇಷ್ಠ ಅನುಭಾವಿಯಾಗಿರುವಂತೆ ಶ್ರೇಷ್ಠ ವಚನ ಕಾರ್ತಿಯೂ ಆಗಿದ್ದಾಳೆ. ಚೆನ್ನಮಲ್ಲಿಕಾರ್ಜುನ ಎಂಬುದು ಇವಳ ವಚನಗಳ ಅಂಕಿತ. ಇವಳ ವಚನಗಳಲ್ಲಿ ಇವಳ ಅಂತರಂಗದ ಎಲ್ಲ ತುಮುಲಗಳೂ ಆಸೆ-ನಿರಾಸೆಗಳೂ ಸಂದೇಹ-ನಂಬಿಕೆಗಳೂ ವ್ಯಕ್ತವಾಗಿವೆ. ಅವು ಇವಳ ತೀವ್ರ ಅನುಭವದ ಅಗಳಾಗಿ ಹೊಮ್ಮುವುದರಿಂದ ಅನೇಕ ಕಡೆ ಶುದ್ಧ ಭಾವ ಗೀತೆಯ ಲಕ್ಷಣಗಳನ್ನು ಪಡೆದಿವೆ. ಸೃಷ್ಟಿಯಲ್ಲಿ ಒಂದಾಗಿಯೂ ಸೃಷ್ಟಿಯಿಂದ ಬೇರೆಯಾಗಿಯೂ ಇರುವ ಭಗವಂತನ ನಿಲುವನ್ನು ಬಹು ಪರಿಣಾಮ ಕಾರಿಯಾದ ರೀತಿಯಲ್ಲಿ ಚಿತ್ರಿಸುವ ಅಕ್ಕನ ವಚನವೊಂದು ಹೀಗಿದೆ:

> ಈಳೆ ನಿಂಬೆ ಮಾವು ಮಾದಲಕ್ಕೆ ಹುಳಿನೀರನೆರೆದವರಾರಯ್ಯ?
> ಕಬ್ಬು ಬಾಳೆ ಹಲಸು ನಾರಿವಾಳಕ್ಕೆ ಸಿಹಿನೀರನೆರೆದವರಾರಯ್ಯ?
> ಕಳವೆ ರಾಜಾನ್ನ ಶಾಲ್ಯನ್ನಕ್ಕೆ ಓಗರದ ಉದಕವನೆರೆದವರಾರಯ್ಯ?
> ಮರುಗ ಮಲ್ಲಿಗೆ ಪಚ್ಚೆ ಮುಡಿವಾಳಕ್ಕೆ ಪರಿಮಳದುದಕವನೆರೆದವರಾರಯ್ಯ?
> ಇಂತೀ ಜಲವು ಒಂದೆ ನೆಲನು ಒಂದೆ ಆಕಾಶವು ಒಂದೆ
> ಜಲವು ಹಲವು ದ್ರವ್ಯಂಗಳ ಕೂಡಿ ತನ್ನ ಪರಿ ಬೇರಾಗಿಹ ಹಾಗೆ
> ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯನು
> ಹಲವು ಜಗಂಗಳ ಕೂಡಿಕೊಂಡಿರ್ದಡೇನ? ತನ್ನ ಪರಿ ಬೇರೆ

ಚೆನ್ನಮಲ್ಲಿಕಾರ್ಜುನನಿಗಾಗಿ ಕಾತರಿಸಿ ಕಳವಳಪಟ್ಟ ಇವಳ ಅಂತರಂಗದ ವೇದನೆಯನ್ನು ಕೆಳಗಿನ ವಚನ ಚೆನ್ನಾಗಿ ಚಿತ್ರಿಸುತ್ತದೆ:

> ಎರೆಯಂತೆ ಕರಕರಗಿ ಮಳಲಂತೆ ಜರಿಜರಿದು,
> ಕನಸಿನಲ್ಲಿ ಕಳವಳಿಸಿ ಆನು ಬೆರಗಾದೆ,
> ಆವಿಗೆಯ ಕಿಚ್ಚಿನಂತೆ ಸುಳಿಸುಳಿದು ಬೆಂದೆ,
> ಆಪತ್ತಿಗೆ ಸಖಿಯರನಾರನೂ ಕಾಣೆ,
> ಅರಸಿ ಕಾಣದ ತನುವ, ಬೆರಸಿ ಕೂಡದ ಸುಖವ,
> ಎನಗೆ ನೀ ಕರುಣಿಸಾ, ಚೆನ್ನಮಲ್ಲಿಕಾರ್ಜುನಾ

ತೆರಣಿಯ ಹುಳು ತನ್ನ ಸ್ನೇಹಕ್ಕೆ ಮನೆಯ ಮಾಡಿ ತನ್ನ ನೂಲ ತಾನು ಸುತ್ತಿ ಸಾವ ತೆರನಂತೆ; ಚಂದನವ ಕಡಿದು ಕೊರೆದು ತೇದೊಡೆ ನೊಂದೆನೆಂದು ಕಂಪಬಿಟ್ಟಿತ್ತೆ; ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದೊಡೆಂತಯ್ಯ, ಸಮುದ್ರದ ತಡಿಯಲೊಂದು ಮನೆಯ ಮಾಡಿ ನೊರೆತೆರೆಗಳಿಗಂಜಿದೊಡೆಂತಯ್ಯ; ಚಿಲಿಪಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೆ ನೀವು ಕಾಣಿರೆ-ಈ ಮುಂತಾದ ವಚನಗಳಲ್ಲಿ ಸಹಜ ಅನುಭವದ ತೀವ್ರತೆಯುಳ್ಳ ಭಾವಗೀತೆಯ ಲಕ್ಷಣಗಳನ್ನು ಕಾಣಬಹುದಾಗಿದೆ. ಸಾಹಿತ್ಯಗುಣ ಇಂಥ ಹಲವಾರು ವಚನಗಳಲ್ಲಿ ಘನೀಭೂತವಾಗಿದೆ. ಸಮಾಜ ವಿಮರ್ಶೆಯ, ಬೋಧನೆಯ ವಚನಗಳು ಅಕ್ಕನಲ್ಲಿ ಬಹಳ ಕಡಿಮೆ. ಈಕೆ ವಚನಗಳನ್ನಲ್ಲದೆ ಯೋಗಾಂಗ ತ್ರಿವಿಧಿ ಎಂಬ 67 ತ್ರಿಪದಿಗಳನ್ನೊಳಗೊಂಡ ತಾತ್ತ್ವಿಕ ವಿಷಯನಿರೂಪಣೆಯುಳ್ಳ ಒಂದು ಗ್ರಂಥವನ್ನು ಬರೆದಿದ್ದಾಳೆ. ಇದರಲ್ಲಿ ತಾತ್ತ್ವಿಕ

ವಿಷಯಗಳು ಕೆಲವು ಸಲ ಸರಳವಾಗಿಯೂ ಹಲವು ಸಲ ಬೆಡಗಿನ ವಚನಗಳ ಮಾದರಿಯಲ್ಲಿಯೂ ನಿರೂಪಿತವಾಗಿವೆ. ಈ ಕೃತಿ ಚಿಕ್ಕದಾದರೂ ಅಕ್ಕನ ಅನುಭಾವಸಂಪತ್ತಿಗೆ ಸಾಕ್ಷಿಯಾಗಿದೆ. ಇಡೀ ವಚನಸಾಹಿತ್ಯದಲ್ಲಿ ಗುಣದ ದೃಷ್ಟಿಯಿಂದ ನಾಲ್ಕಾರು ಕೃತಿಕಾರರ ಹೆಸರುಗಳನ್ನು ಹೇಳಬೇಕಾದಾಗ ಅದರಲ್ಲಿ ಅಕ್ಕಮಹಾದೇವಿಯ ಹೆಸರು ಖಂಡಿತ ಸೇರುತ್ತದೆ. **(ಎಂ.ಸಿ.)**

**ಅಕ್ಕಿ, ಟಿ.ಪಿ. :** 1908 -. ಹೆಸರಾಂತ ಕಲಾವಿದರು. ಇಂದಿನ ಗದಗ ಜಿಲ್ಲೆಯ ಲಕ್ಷ್ಮೇಶ್ವರದಲ್ಲಿ 1908 ಡಿಸೆಂಬರ್ 31ರಂದು ಜನಿಸಿದರು. ಉತ್ತಮ ಕಲಾಸಂಸ್ಕಾರದ ಪರಿಸರದಲ್ಲಿ ಬೆಳೆದ ಇವರು ವಿದ್ಯಾರ್ಥಿದೆಸೆಯಿಂದಲೇ ಚಿತ್ರಕಲೆಯಲ್ಲಿ ಆಸಕ್ತಿ ತಳೆದರು. ಮುಂಬಯಿಯ ಜೆ.ಜೆ.ಸ್ಕೂಲ್ ಆಫ್ ಆರ್ಟ್ಸ್ ಕಾಲೇಜಿನಲ್ಲಿ ಮಾಸ್ಟರ್ ಪದವಿ ಗಳಿಸಿದರು. ಮುಂಬಯಿ, ನವಸಾರಿ, ಘಟಿಯಾಳ, ಬೆಂಗಳೂರು ಮೊದಲಾದ ನಗರಗಳಲ್ಲಿ ನಡೆದ ಚಿತ್ರಕಲಾ ಪ್ರದರ್ಶನಗಳಲ್ಲಿ ಪಾಲ್ಗೊಂಡು ಜನಮೆಚ್ಚುಗೆ ಗಳಿಸಿದರು. ವಿಜಯನಾಟ್ಯ ಸಂಸ್ಥೆ ಮತ್ತು ವಿಜಯ ಕಲಾ ಮಂದಿರವನ್ನೂ ಸ್ಥಾಪಿಸಿ (1947) ಪ್ರತಿವರ್ಷ ನೂರಾರು ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದ್ದಾರೆ. ಹಲವಾರು ಕಲಾಸಂಸ್ಥೆಗಳಲ್ಲಿ ಸಲಹಾ ಸಮಿತಿ ಸದಸ್ಯರಾಗಿ, ಅಧ್ಯಕ್ಷರಾಗಿ, ಉಚ್ಚಕಲಾಪರೀಕ್ಷೆಗಳ ಪರೀಕ್ಷಕರಾಗಿ, ನಿಯಂತ್ರಕರಾಗಿ, ಸಲಹೆಗಾರರಾಗಿ, ರಾಜ್ಯ ಮತ್ತು ಕೇಂದ್ರ ಲಲಿತಕಲಾ ಅಕಾಡೆಮಿಗಳ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ (1967). ನವದೆಹಲಿಯಲ್ಲಿ ನಡೆದ ಅಂತಾರಾಷ್ಟ್ರೀಯ ಮಕ್ಕಳ ಕಲಾ ಪ್ರದರ್ಶನದಲ್ಲಿ ಮತ್ತು ಕೋಲ್ಕತದಲ್ಲಿ ನಡೆದ ಅಖಿಲಭಾರತ ಕಲಾವಿದರ ಸಮ್ಮೇಳನದಲ್ಲಿ ಪ್ರತಿನಿಧಿಯಾಗಿ ಭಾಗವಹಿಸಿದ್ದರು (1967). ಕರ್ನಾಟಕ ಲಲಿತಕಲಾ ಅಕಾಡೆಮಿಗೆ ಅಧ್ಯಕ್ಷರಾಗಿಯೂ ಇವರು ಸೇವೆ ಸಲ್ಲಿಸಿದ್ದಾರೆ (1981-84). **(ಜಿ.ಆರ್.ಟಿ.)**

**ಅಖಿಲ ಭಾರತ ವಾಕ್‌ಶ್ರವಣ ಸಂಸ್ಥೆ :** ಕರ್ನಾಟಕ ರಾಜ್ಯದ ಮೈಸೂರು ನಗರದಲ್ಲಿ ನೆಲೆಗೊಂಡಿರುವ ವಾಕ್ ಮತ್ತು ಶ್ರವಣ ದೋಷಗಳ ಅಖಿಲ ಭಾರತ ಮಟ್ಟದ ಚಿಕಿತ್ಸಾ ಕೇಂದ್ರ (ಆಯಿಶ್). ಮಾತಿನ ತೊಂದರೆ, ಕಿವುಡತನ ಇತ್ಯಾದಿ ನ್ಯೂನತೆಗಳನ್ನು ಸರಿಪಡಿಸುವುದು ಹಾಗೂ ಆ ಬಗ್ಗೆ ಶಿಕ್ಷಣ ನೀಡುವುದು, ಸಂಶೋಧನೆ ನಡೆಸುವುದು ಈ ಸಂಸ್ಥೆಯ ಮುಖ್ಯ ಕಾರ್ಯಗಳು. ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯದ ಅಡಿಯಲ್ಲಿ ಕೆಲಸ ಮಾಡುತ್ತಿರುವ ಈ ಸಂಸ್ಥೆ 1966ರ ಅಕ್ಟೋಬರ್ ತಿಂಗಳಿನಲ್ಲಿ ಒಂದು ಸ್ವಾಯತ್ತ ಸಂಸ್ಥೆಯಾಗಿ ರೂಪುಗೊಂಡಿತು. ಮೊದಲಿಗೆ ಮೈಸೂರು ನಗರದ ಝಾನ್ಸಿಲಕ್ಷ್ಮೀಬಾಯಿ ರಸ್ತೆಯಲ್ಲಿರುವ ರಾಮಮಂದಿರ ಹಾಗೂ ಅನಂತರ



ಆಡಳಿತ ಕಚೇರಿ ಆವರಣ

ಮಹಾರಾಜಕಾಲೇಜು ಶತಮಾನೋತ್ಸವ ಭವನದಲ್ಲಿ ಕೆಲಸ ಮಾಡುತ್ತಿದ್ದ ಈ ಸಂಸ್ಥೆ 1970ರಲ್ಲಿ ಮಾನಸಗಂಗೋತ್ರಿ ಆವರಣಕ್ಕೆ ವರ್ಗಾವಣೆಗೊಂಡಿತು. ಚಾಮುಂಡಿಬೆಟ್ಟದ ತಪ್ಪಲಿನಲ್ಲಿ ಅಂದಿನ ಮೈಸೂರಿನ ಮಹಾರಾಜರಾಗಿದ್ದ ಜಯಚಾಮರಾಜೇಂದ್ರ ಒಡೆಯರ್ ಅವರು ಈ ಸಂಸ್ಥೆಗೆ ನೀಡಿದ್ದ 32 ಎಕರೆ ಜಮೀನಿಗೆ ಬದಲಾಗಿ ಮೈಸೂರು ವಿಶ್ವವಿದ್ಯಾನಿಲಯ ಮಾನಸಗಂಗೋತ್ರಿಯಲ್ಲಿ 32 ಎಕರೆ ಜಮೀನು ನೀಡಿದ್ದರ ಫಲವಾಗಿ ಈ ಸಂಸ್ಥೆ ಇಲ್ಲಿ ರೂಪುಗೊಂಡಿತು. ವಾಕ್-ಶ್ರವಣ ದೋಷಗಳ ತಪಾಸಣೆ ಚಿಕಿತ್ಸೆಗಳ ಜೊತೆಗೆ ಈ ಸಂಸ್ಥೆ ಅಧ್ಯಯನ ಹಾಗೂ ಸಂಶೋಧನೆಗೆ ಸಹ ಹೆಚ್ಚಿನ ಒತ್ತು ನೀಡುತ್ತಿದೆ. ಹಾಗಾಗಿ ಈ ಸಂಸ್ಥೆಯಿಂದ ಇದುವರೆಗೆ ಎಂಟುನೂರಕ್ಕೂ ಹೆಚ್ಚು ವಿದ್ಯಾರ್ಥಿಗಳು ವಾಕ್-ಶ್ರವಣ ವಿಜ್ಞಾನದಲ್ಲಿ ಪದವಿ ಪಡೆದಿದ್ದಾರಲ್ಲದೆ ದೇಶ ವಿದೇಶಗಳಲ್ಲಿ ಸೇವೆಸಲ್ಲಿಸುತ್ತಿದ್ದಾರೆ (2003).

ಭಾರತದಲ್ಲಿ ಬಹಳಷ್ಟು ಮಂದಿಯನ್ನು ಕಾಡುತ್ತಿರುವ ವಾಕ್-ಶ್ರವಣ ಸಮಸ್ಯೆಯ ಅಧ್ಯಯನ ಹಾಗೂ ಚಿಕಿತ್ಸೆ ನಡೆಸಲು ಅನುಕೂಲಿಸುವಂತಹ ಕೇಂದ್ರವೊಂದನ್ನು ಸ್ಥಾಪಿಸಲು 1963ರಲ್ಲಿ ಭಾರತ ಸರ್ಕಾರ ನಿರ್ಧರಿಸಿತು. ಸರ್ಕಾರದ ಕೋರಿಕೆಯ ಮೇರೆಗೆ ಅಮೆರಿಕದ ಪ್ರಖ್ಯಾತ ವಾಕ್ ಶ್ರವಣ ತಜ್ಞ ಡಾ.ಮಾರ್ಟಿನ್ ಎಫ್.ಪಾಮರ್ ಅವರು ಭಾರತಾದ್ಯಂತ ಪ್ರವಾಸ ಮಾಡಿ ವಾಕ್-ಶ್ರವಣ ಸಂಸ್ಥೆಯ ಸ್ಥಾಪನೆಗೆ ಮೈಸೂರು ನಗರ ಸೂಕ್ತವಾದ ಸ್ಥಳವೆಂದು ವರದಿ ಮಾಡಿದರು. ಹಾಗಾಗಿ ಈ ಸಂಸ್ಥೆ ಮೈಸೂರು ನಗರದಲ್ಲಿ ಸ್ಥಾಪನೆಯಾಗಲು ಕಾರಣವಾಯಿತು.

**ಕಾರ್ಯ ವ್ಯಾಪ್ತಿ :** ಈ ಸಂಸ್ಥೆ ಈಗ ವಾಕ್-ಶ್ರವಣ ವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿಯ ವರೆಗಿನ ಶಿಕ್ಷಣವನ್ನು ನೀಡುತ್ತಿದ್ದು ಇಲ್ಲಿ ಒಟ್ಟು ಆರು ವಿಭಾಗಗಳಿವೆ: ಶ್ರವಣ ವಿಜ್ಞಾನ ವಿಭಾಗ (ಡಿಪಾರ್ಟ್‌ಮೆಂಟ್ ಆಫ್ ಆಡಿಯಾಲಜಿ), ಮನೋವಿಜ್ಞಾನ ವಿಭಾಗ (ಡಿಪಾರ್ಟ್‌ಮೆಂಟ್ ಆಫ್ ಸೈಕಾಲಜಿ), ವಿದ್ಯುನ್ಮಾನ ವಿಭಾಗ (ಡಿಪಾರ್ಟ್‌ಮೆಂಟ್ ಆಫ್ ಎಲೆಕ್ಟ್ರಾನಿಕ್ಸ್), ಕಿವಿ-ಮೂಗು-ಗಂಟಲು ವಿಭಾಗ (ಡಿಪಾರ್ಟ್‌ಮೆಂಟ್ ಆಫ್ ಇಎನ್‌ಟಿ), ವಾಕ್-ಭಾಷಾ ವಿಜ್ಞಾನವಿಭಾಗ (ಡಿಪಾರ್ಟ್‌ಮೆಂಟ್ ಆಫ್ ಸ್ಪೀಚ್ ಲಾಂಗ್ವೇಜ್ ಸೈನ್ಸ್), ವಾಕ್-ದೋಷನಿದಾನ ವಿಭಾಗ (ಡಿಪಾರ್ಟ್‌ಮೆಂಟ್ ಆಫ್ ಸ್ಪೀಚ್ ಪೆಥಾಲಜಿ) ಹಾಗೂ ಚಿಕಿತ್ಸಾ ಕೇಂದ್ರ (ಥೆರಪಿ ಕ್ಲಿನಿಕ್). ಸದ್ಯದಲ್ಲಿಯೇ ಸಲಕರಣೆ ಅಭಿವೃದ್ಧಿ ವಿಭಾಗವನ್ನು (ಡಿಪಾರ್ಟ್‌ಮೆಂಟ್ ಆಫ್ ಮೆಟೀರಿಯಲ್ ಡೆವಲಪ್‌ಮೆಂಟ್) ತೆರೆಯಲಾಗುವುದು.

**ಶ್ರವಣ ವಿಜ್ಞಾನ ವಿಭಾಗ :** ಈ ವಿಭಾಗದಲ್ಲಿ ವ್ಯಕ್ತಿಯೊಬ್ಬನ ಶ್ರವಣ ಶಕ್ತಿಯನ್ನೂ ಸಂಬಂಧಿಸಿದ ನ್ಯೂನತೆಯನ್ನೂ ಶಬ್ದರಹಿತ ಪರಿಸರದಲ್ಲಿ ಶ್ರವಣಶಕ್ತಿ ಮಾಪಕ ಯಂತ್ರದ ಸಹಾಯದಿಂದ ಅಳೆದು ಪತ್ತೆ ಹಚ್ಚಲಾಗುತ್ತದೆ. ಅನಂತರ ಸೂಕ್ತ ಚಿಕಿತ್ಸೆಯನ್ನು ಸೂಚಿಸಲಾಗುತ್ತದೆ.

ಇತ್ತೀಚೆಗೆ 70ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಲಾಗಿರುವ ಈ ವಿಭಾಗ ಸಂಪೂರ್ಣ ಹವಾನಿಯಂತ್ರಿತ ಸೌಲಭ್ಯವುಳ್ಳ 16 ಕೊಠಡಿಗಳನ್ನೊಳಗೊಂಡಿದೆ. ಮಕ್ಕಳ ಪರೀಕ್ಷೆಗಾಗಿ ಪ್ರತ್ಯೇಕ ಕೊಠಡಿಗಳನ್ನು ಮೀಸಲಿಡಲಾಗಿದೆ.

**ಕಿವಿಯಚ್ಚು ವಿಭಾಗ :** ಈ ವಿಭಾಗ ಶ್ರವಣವಿಜ್ಞಾನ ವಿಭಾಗದ ಒಂದು ಅಂಗ. ಶ್ರವಣೋಪಕರಣವನ್ನು ಪಡೆದ ವ್ಯಕ್ತಿ ಆ ಯಂತ್ರವನ್ನು ಬಳಸಬೇಕಾದರೆ, ಆ ವ್ಯಕ್ತಿಯ ಕಿವಿಗೆ ಸರಿಹೊಂದುವಂತಹ ಕಿವಿಯಚ್ಚು ಬೇಕೇಬೇಕು. ಎಲ್ಲರೂ ಬಳಸಬಹುದಾದ ಸಾಮಾನ್ಯ ಸಿದ್ಧ ಅಚ್ಚನ್ನು ತಯಾರಿಸಲು ಸಾಧ್ಯವಿಲ್ಲ. ಹಾಗಾಗಿ ಪ್ರತಿ ವ್ಯಕ್ತಿಯ ಕಿವಿಯ ಅಳತೆಯನ್ನು ತೆಗೆದುಕೊಂಡು ಆ ಅಳತೆಗೆ ತಕ್ಕಂತಹ ಅಚ್ಚನ್ನು ಈ ವಿಭಾಗದಲ್ಲಿ ತಯಾರಿಸಿಕೊಡಲಾಗುತ್ತದೆ.

ಈಜುಗಾರರ ಕಿವಿಯೊಳಗೆ ನೀರು ಹೋಗದಂತೆ ತಡೆಯಲು ಕಿವಿಯ ಪ್ಲಗ್‌ಗಳನ್ನು ಇಲ್ಲಿ ತಯಾರಿಸಿಕೊಡಲಾಗುತ್ತದೆ. ಈ ಸಂಬಂಧವಾಗಿ ಕಿವಿಯಚ್ಚು ತಂತ್ರಜ್ಞಾನ (ಡಿಪ್ಲೊಮಾ ಇನ್ ಹಿಯರಿಂಗ್ ಏಡ್ ಅಂಡ್ ಇಯರ್‌ಮೋಲ್ಡ್ ಟೆಕ್ನಾಲಜಿ) ಎಂಬ ಒಂದು ವರ್ಷದ ಅವಧಿಯ ನೂತನ ಡಿಪ್ಲೊಮಾ ಶಿಕ್ಷಣವನ್ನು ಸಂಸ್ಥೆ ಪ್ರಾರಂಭಿಸಿದೆ (2002).

**ವಿದ್ಯುನ್ಮಾನ ವಿಭಾಗ :** ಈ ವಿಭಾಗ ವಿದ್ಯುತ್ ಹಾಗೂ ಎಲೆಕ್ಟ್ರಾನಿಕ್ಸ್‌ಗೆ ಸಂಬಂಧಿಸಿದ ವೈದ್ಯಕೀಯ ಚಿಕಿತ್ಸೋಪಕರಣಗಳ ದುರಸ್ತಿ ಹಾಗೂ ನಿರ್ವಹಣೆಯ ಕೆಲಸಗಳನ್ನು ನಿರ್ವಹಿಸುತ್ತವೆ. ಶ್ರವಣ ವಿಜ್ಞಾನ ವಿಭಾಗವು ನೀಡುವ ಮಾಹಿತಿಯನ್ನು ಅನುಸರಿಸಿ ಶ್ರವಣ ದೋಷವುಳ್ಳವರಿಗೆ ಶ್ರವಣೋಪಕರಣಗಳನ್ನು ಸಹ ಈ ವಿಭಾಗ ನೀಡುತ್ತದೆ. ಅಷ್ಟೇ ಅಲ್ಲ, ಅತ್ಯಂತ ಕಡಿಮೆ ವೆಚ್ಚದಲ್ಲಿ ಶ್ರವಣೋಪಕರಣಗಳ ದುರಸ್ತಿಯನ್ನೂ ಇಲ್ಲಿ ಮಾಡಲಾಗುತ್ತದೆ. ರೋಟರಿ, ಲಯನ್ಸ್ ಇತ್ಯಾದಿ ಸ್ವಯಂ ಸೇವಾ

ಸಂಸ್ಥೆಗಳ ನೆರವಿನೊಂದಿಗೆ ಶ್ರವಣೋಪಕರಣಗಳ ದುರಸ್ತಿಯ ಉಚಿತ ಶಿಬಿರ ಮತ್ತು ಶ್ರವಣೋಪಕರಣಗಳನ್ನು ಬಳಸುವವರಿಗಾಗಿ ಅದನ್ನು ಸಮರ್ಥವಾಗಿ ಬಳಸುವ ಹಾಗೂ ಸುಸ್ಥಿತಿಯಲ್ಲಿಟ್ಟುಕೊಳ್ಳಲು ಅನುಸರಿಸಬೇಕಾದ ಕ್ರಮಗಳ



ಗ್ರಂಥಾಲಯ

ಬಗೆಗೂ ಆಗಾಗ್ಗೆ ಶಿಬಿರಗಳನ್ನು ಏರ್ಪಡಿಸಲಾಗುತ್ತದೆ. ಸಂಸ್ಥೆಯ ಈ ವಿಭಾಗ ಕೆಳಕಂಡ ಉಪಕರಣಗಳನ್ನು ಸಂಪೂರ್ಣ ಸ್ವದೇಶಿ ವಸ್ತುಗಳನ್ನು ಬಳಸಿ ಅಭಿವೃದ್ಧಿಪಡಿಸಿದೆ. (1) ಕಮ್ಯುನಿಕೇಟರ್ - ಮಾತೂ ಬಾರದ, ಕಿವಿಯೂ ಕೇಳದ ಹಾಗೂ ನಡೆದಾಡಲೂ ಆಗದಂತಹವರಿಗಾಗಿ ಈ ಉಪಕರಣಗಳನ್ನು ಸಿದ್ಧಪಡಿಸಲಾಗಿದೆ. ವ್ಯಕ್ತಿಯು ಈ ಯಂತ್ರದ ಸೂಚಿಗುಂಡಿಗಳನ್ನು ಒತ್ತುವುದರ ಮೂಲಕ ತನಗೆ ಏನು ಬೇಕು ಎಂಬುದನ್ನು ಇನ್ನೊಬ್ಬರಿಗೆ ತಿಳಿಸಬಹುದು. (2) ಕಂಪನ ತರಂಗೋಪಕರಣ - ಕಿವಿ ಕೇಳಿಸದವರಿಗಾಗಿ ರೂಪಿಸಿರುವ ಒಂದು ಅಲಾರಾಂ ವ್ಯವಸ್ಥೆ. ಮಲಗುವಾಗ ದಿಂಬಿನ ಅಡಿಯಲ್ಲಿ ಈ ಉಪಕರಣವನ್ನಿಟ್ಟುಕೊಳ್ಳಬೇಕು. ಇದರ ಕಂಪನದ ಮೂಲಕ ವ್ಯಕ್ತಿಯು ನಿಗದಿತ ಸಮಯಕ್ಕೆ ಸರಿಯಾಗಿ ನಿದ್ದೆಯಿಂದ ಎದ್ದೇಳಲು ಸಾಧ್ಯವಾಗುತ್ತದೆ. (3) ಧ್ವನಿಸೂಚನಾ ದೀಪ -ಉಗ್ಗುವಿಕೆಯುಳ್ಳವರಿಗೆ ಚಿಕಿತ್ಸೆ ನೀಡುವ ಸಲುವಾಗಿ ಇದನ್ನು ಬಳಸಲಾಗುತ್ತದೆ. (4) ಅನುನಾಸಿಕ ಸೂಚಕ - ಒಬ್ಬ ವ್ಯಕ್ತಿ ಮೂಗಿನ ಸಹಾಯದಿಂದ ಉಚ್ಚರಿಸುವ ಅಕ್ಷರಗಳ ಪ್ರಮಾಣ ಎಷ್ಟು ಎಂಬುದನ್ನು ತೋರುವ ಉಪಕರಣವಿದು. (5) ಲೂಪ್ ಸಿಸ್ಟಂ - ಕಿವುಡು ದೋಷವುಳ್ಳ ಹಲವಾರು ಮಕ್ಕಳಿಗೆ ಒಮ್ಮೆಗೆ ಚಿಕಿತ್ಸಾತರಬೇತಿ ನೀಡಲು ಹಾಗೂ ಮಕ್ಕಳಿಗೆ ಶಾಲಾಪೂರ್ವ ತರಬೇತಿ ನೀಡಲು ಈ ಉಪಕರಣವನ್ನು ಬಳಸಲಾಗುತ್ತದೆ. (6) ಎಫ್.ಎಂ.ವ್ಯವಸ್ಥೆ - ಇದೊಂದು ಬಗೆಯ ಶ್ರವಣೋಪಕರಣ. ಶ್ರವಣ ದೋಷವಿರುವ ಮಕ್ಕಳ ತರಗತಿಗಳಲ್ಲಿ ಈ ಉಪಕರಣ ಬಹಳ ಉಪಯುಕ್ತ. ಈ ಶ್ರವಣೋಪಕರಣದ ವೈಶಿಷ್ಟ್ಯವೇನೆಂದರೆ ಹೊರಗಿನ ಅನಗತ್ಯ ಶಬ್ದಗಳು ಇದರಲ್ಲಿ ಕೇಳಿಸುವುದಿಲ್ಲ.

**ವಾಕ್-ಭಾಷಾ ವಿಜ್ಞಾನ ವಿಭಾಗ :** ಈ ವಿಭಾಗದಲ್ಲಿ ನಿರರ್ಗಳ ಮಾತುಗಾರಿಕೆ, ಉಚ್ಚಾರಣೆ, ಧ್ವನಿಯ ಪ್ರಮಾಣ ಇತ್ಯಾದಿಗಳನ್ನು ಅಭ್ಯಸಿಸಲಾಗುತ್ತದೆ. ಭಾಷೆಯನ್ನು ಮಕ್ಕಳು ಹೇಗೆ ಕಲಿಯುತ್ತಾರೆ, ಸಾಮಾನ್ಯ ಮಕ್ಕಳು ಮಾತನಾಡಲು ಕಲಿಯುವ ರೀತಿ ನೀತಿಗಳೇನು ಎಂಬಿತ್ಯಾದಿಗಳಲ್ಲದೆ ಇತರ ಯಾವುದೇ ರೀತಿಯ ವಾಕ್-ಶ್ರವಣ ದೋಷಕ್ಕೆ ಒಳಗಾದ ಮಕ್ಕಳು ಮಾತು ಕಲಿಯುವ ಬಗೆಗೆ ಅಭ್ಯಸಿಸಿ ಅದಕ್ಕೆ ಪೂರಕ ಚಿಕಿತ್ಸೆ ನೀಡುವ ಮೂಲಕ ತೊಂದರೆಗಳನ್ನು ನಿವಾರಿಸಲಾಗುತ್ತದೆ. ಬಾಲ್ಯದಿಂದ ವೃದ್ಧಾಪ್ಯದವರೆಗೂ ಮನುಷ್ಯನೊಬ್ಬನಲ್ಲಿ ಉಂಟಾಗುವ ಧ್ವನಿಯ ಬದಲಾವಣೆಗಳ ಬಗೆಗೆ ಈ ವಿಭಾಗದಲ್ಲಿ ಸಂಶೋಧನೆ ನಡೆಸಲಾಗುತ್ತಿದೆ. ಸಂಗೀತಗಾರರು, ಭಾಷಣಕಾರರು, ನಟರು, ಪತ್ರಕರ್ತರು, ಉಪನ್ಯಾಸಕರು ಮೊದಲಾದವರು ಧ್ವನಿಯನ್ನು ಹೆಚ್ಚಾಗಿ ಬಳಸುವ ಜನ. ಇಂಥವರ ಧ್ವನಿಪೆಟ್ಟಿಗೆ ಹಾನಿಗೊಳಗಾಗುವ ಸಂಭವವಿರುತ್ತದೆ. ಇಂತಹ ದೋಷಗಳಿಗೂ ಈ ವಿಭಾಗದಲ್ಲಿ ಚಿಕಿತ್ಸೆ ಲಭ್ಯ. ವ್ಯಕ್ತಿಯೊಬ್ಬನ ಧ್ವನಿಯನ್ನು ವಿಶ್ಲೇಷಿಸಿ ಪತ್ತೆಹಚ್ಚುವ ಅಪರಾಧಪತ್ತೆ ಕೆಲಸದಲ್ಲಿಯೂ ಈ ವಿಭಾಗ ಪೊಲೀಸರಿಗೆ ನೆರವಾಗುತ್ತದೆ.

**ವಾಕ್ ದೋಷ ನಿದಾನ ವಿಭಾಗ :** ಇದು ಸಂಸ್ಥೆಯ ಮೊದಲ ಹಾಗೂ ಅತಿ ಮುಖ್ಯವಾದ ವಿಭಾಗವಾಗಿದೆ. ಶಿಕ್ಷಣ (ಪದವಿ ಹಾಗೂ ಸ್ನಾತಕೋತ್ತರ ಪದವಿ) ರೋಗತಪಾಸಣೆ ಹಾಗೂ ಚಿಕಿತ್ಸೆ, ವಾಕ್ ದೋಷಕ್ಕೆ ಸಂಬಂಧಿಸಿದ ಸಂಶೋಧನ ಕಾರ್ಯಗಳು, ಪೋಷಕರಿಗೆ ಸಲಹೆ ಸೂಚನೆಗಳು, ಸಾರ್ವಜನಿಕರಲ್ಲಿ ಅರಿವುಂಟುಮಾಡುವ ಕಾರ್ಯಕ್ರಮಗಳು ಇತ್ಯಾದಿಗಳನ್ನು ಈ ವಿಭಾಗ ಹಮ್ಮಿಕೊಂಡಿದೆ. ಜೊತೆಗೆ, ಮಕ್ಕಳಲ್ಲಿ ಮತ್ತು ವಯಸ್ಕರಲ್ಲಿ ಬರುವ ಅನೇಕ ವಿಧದ ಮಾತಿನ ತೊಂದರೆಗಳನ್ನು ಪರೀಕ್ಷಿಸಿ ಚಿಕಿತ್ಸೆ ನೀಡುತ್ತದೆ.

ಸಾಮಾನ್ಯವಾಗಿ ಮಕ್ಕಳಲ್ಲಿ ಕಂಡುಬರುವ ಕುಂಠಿತಗೊಂಡ ಮಾತಿನ ಬೆಳವಣಿಗೆ, ಬುದ್ಧಿಮಾಂದ್ಯತೆ, ಮೆದುಳಿನ ತೊಂದರೆಗಳು, ಹಗಲುಕನಸು ಕಾಣುವಿಕೆ (ಆಟಿಸಂ), ಶ್ರವಣ ದೋಷ, ಮಾತಿನ ಅಂಗಗಳಾದ ಅಂಗುಳು, ನಾಲಗೆ, ಹಲ್ಲು ಇತ್ಯಾದಿಗಳಲ್ಲಿನ ನ್ಯೂನತೆಯಿಂದ ಧ್ವನಿತೊಂದರೆಗಳುಂಟಾಗ ಬಹುದು. ಉಗ್ಗುವಿಕೆ, ಅರ್ಥಮಾಡಿಕೊಳ್ಳುವುದರಲ್ಲಿ ತೊಂದರೆ, ಶಾಲಾಮಕ್ಕಳಲ್ಲಿ ಕಲಿಕೆಯ ತೊಂದರೆ ಇತ್ಯಾದಿಗಳಿಗೆ ಈ ವಿಭಾಗದಲ್ಲಿ ಚಿಕಿತ್ಸೆ ದೊರೆಯುತ್ತದೆ. ವಯಸ್ಕರಲ್ಲಿ ಪಾರ್ಶ್ವವಾಯುವಿನಿಂದ ಉಂಟಾಗುವ ವಾಕ್ ಸ್ತಂಭನ (ಮಾತು ನಿಲ್ಲುವಿಕೆ), ನರರೋಗ ಸಂಬಂಧದಿಂದುಂಟಾಗುವ ಧ್ವನಿ ಹಾಗೂ ಉಚ್ಚಾರಣಾ ದೋಷಗಳು, ಧ್ವನಿಯ ತೊಂದರೆ, ಉಗ್ಗು, (ತೊದಲು) ಇತ್ಯಾದಿಗಳಿಗೂ ಇಲ್ಲಿ ಚಿಕಿತ್ಸೆಯುಂಟು.

**ಮನೋವಿಜ್ಞಾನ ವಿಭಾಗ :** ವಾಕ್-ಶ್ರವಣ ದೋಷಗಳಲ್ಲಿ ಮಾನಸಿಕ ತೊಂದರೆಯೂ ತಳುಕು ಹಾಕಿಕೊಂಡಿರುವ ಸಾಧ್ಯತೆ ಉಂಟು. ಉದಾ: ತೀವ್ರ ಮಾನಸಿಕ ಆಘಾತದಿಂದ ಮಾತು ನಿಲ್ಲುವುದು. ಇಂತಹ ಸಂದರ್ಭಗಳಲ್ಲಿ ವಾಕ್ ಶ್ರವಣ ದೋಷಗಳುಳ್ಳ ವ್ಯಕ್ತಿಗಳಲ್ಲಿರಬಹುದಾದ ಮಾನಸಿಕ ತೊದರೆಗಳನ್ನು ಪತ್ತೆ ಹಚ್ಚಿ ತಕ್ಕ ಚಿಕಿತ್ಸೆಯನ್ನು ಈ ವಿಭಾಗದಲ್ಲಿ ನೀಡಲಾಗುತ್ತದೆ. ತರಗತಿಯಲ್ಲಿ ಹಿಂದೆ ಬಿದ್ದಿರುವ ವಿದ್ಯಾರ್ಥಿ, ವಯಸ್ಸಿಗೆ ಮೀರಿದ ಬುದ್ಧಿಯಿಂದಾಗುವ ತೊಂದರೆ, ಒಂದು ವಯಸ್ಸಿನಲ್ಲಿರಬೇಕಾದ ಬುದ್ಧಿಮಟ್ಟ ಇಲ್ಲದಿರುವಿಕೆ, ಬುದ್ಧಿಮಾಂದ್ಯತೆ ಇಂತಹ ತೊಂದರೆಗಳನ್ನು ಪರೀಕ್ಷಿಸಿ ಇಲ್ಲಿ ಪರಿಹಾರವನ್ನು ಸೂಚಿಸಲಾಗುವುದು.



ಶ್ರವಣೋಪಕರಣ ಜೋಡಣೆ

**ಕಿವಿ ಮೂಗು ಗಂಟಲು ವಿಭಾಗ :** ಈ ವಿಭಾಗದಲ್ಲಿ ಕಿವಿ-ಮೂಗು ಹಾಗೂ ಗಂಟಲುಗಳಿಗೆ ಸಂಬಂಧಿಸಿದ ರೋಗಗಳನ್ನು ಪರೀಕ್ಷಿಸಿ ಚಿಕಿತ್ಸೆ ನೀಡಲಾಗುತ್ತದೆ. ಕಿವಿಯೊಳಗೆ ಗುಯ್ ಎಂದು ಸದ್ದಾಗುವುದು, ಕಿವಿನೋವು, ಗುಗ್ಗೆಕಟ್ಟುವುದು ಇತ್ಯಾದಿ ತೊಂದರೆಗಳನ್ನು ಇಲ್ಲಿ ನಿವಾರಿಸಲಾಗುವುದು. ಸಂಸ್ಥೆಯ ಈ ವಿಭಾಗ ನಗರದ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ತನ್ನದೇ ಆದ ಹೊರರೋಗಿಗಳ ವಿಭಾಗವನ್ನು ಹೊಂದಿದ್ದು ಅಲ್ಲಿಯೂ ರೋಗಿಗಳನ್ನು ಪರೀಕ್ಷಿಸಲಾಗುತ್ತದೆ. ಕಿವಿಗೆ ಸಂಬಂಧಿಸಿದಂತೆ ಶಸ್ತ್ರ ಚಿಕಿತ್ಸೆಯ ಅಗತ್ಯ ಕಂಡುಬಂದಲ್ಲಿ ಅದನ್ನೂ ನೆರವೇರಿಸಲಾಗುತ್ತದೆ.

**ಚಿಕಿತ್ಸಾ ಕೇಂದ್ರ :** ಸಂಸ್ಥೆಯ ಆವರಣದಲ್ಲಿ ವಿವಿಧೋದ್ದೇಶ ಚಿಕಿತ್ಸಾ ಕೇಂದ್ರವನ್ನು ಸ್ಥಾಪಿಸಲಾಗಿದೆ. ಇಲ್ಲಿ ಒಂದೇ ಸೂರಿನಡಿಯಲ್ಲಿ ರೋಗ ನಿರ್ಣಯ ಘಟಕ ಹಾಗೂ ಪುನರ್ವಸತಿ ಘಟಕಗಳ ಸೌಲಭ್ಯ ಲಭ್ಯವಿದೆ. ದಿನವೊಂದಕ್ಕೆ 600ಕ್ಕೂ ಹೆಚ್ಚು ರೋಗಿಗಳು ಬರುವ ಸಾಧ್ಯತೆಯಿದ್ದು ನರ

ಸಂಬಂಧ ನ್ಯೂನತೆಗಳನ್ನು ಸರಿಪಡಿಸುವ ಘಟಕವನ್ನೂ ಇಲ್ಲಿ ಸ್ಥಾಪಿಸಿಲಾಗಿದೆ. ಇದುವರೆಗೆ ಸು.2 ಲಕ್ಷ ಜನರಿಗೆ ಚಿಕಿತ್ಸೆ ನೀಡಲಾಗಿದೆ. ಈ ಕಟ್ಟಡದಲ್ಲಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಅತ್ಯಾಧುನಿಕ ಸೌಲಭ್ಯಗಳನ್ನು ಹೊಂದಿರುವ 189 ಕೊಠಡಿಗಳಿವೆ. ವಾಕ್ ಧ್ವನಿ ಮತ್ತು ಭಾಷಾ ನ್ಯೂನತೆಗಳಿಗೆ ವಿವಿಧ ರೀತಿಯ ಪರೀಕ್ಷೆಗಳನ್ನು ನಡೆಸಿ ಸೂಕ್ತ ಸಲಹೆ ಹಾಗೂ ಮಾರ್ಗದರ್ಶನ ನೀಡಲಾಗುತ್ತದೆ. ಅಗತ್ಯವಿದ್ದಾಗಲೆಲ್ಲ ಹೊರಗಿನ ತಜ್ಞವೈದ್ಯರ ನೆರವನ್ನು ಸಹ ಪಡೆಯಲಾಗುತ್ತದೆ. ಪಿಡಿಯಾಟ್ರಿಷಿಯನ್, ಪ್ಲಾಸ್ಟಿಕ್‌ಸರ್ಜನ್, ಪ್ರೋಸ್ಥೋಡೆಂಟಿಸ್ಟ್, ನ್ಯೂರಾಲಜಿಸ್ಟ್, ಫೋನೋಸರ್ಜನ್, ಆಕ್ಯುಪೆಷನಲ್ ಥೆರಪಿಸ್ಟ್, ಫಿಜಿಯೋಥೆರಪಿಸ್ಟ್ ಇತ್ಯಾದಿ ತಜ್ಞರು ನಿಯಮಿತ ದಿನಗಳ ನಿಗದಿತ ವೇಳೆಗಳಲ್ಲಿ ಸಂಸ್ಥೆಗೆ ಭೇಟಿ ನೀಡುತ್ತಾರೆ.

**ಪಿಓಡಿ ಮತ್ತು ಸಿಡಿ :** ಶ್ರವಣ ದೋಷ ಹಾಗೂ ವಾಕ್ ಭಾಷಾ ದೋಷಗಳನ್ನು ತಡೆಗಟ್ಟುವ ಯೋಜನೆಯೊಂದು ಸಂಸ್ಥೆಯಲ್ಲಿದೆ. ಇದಕ್ಕೆ ಪ್ರಿವೆನ್ಷನ್ ಆಫ್ ಡೆಫ್‌ನೆಸ್ ಅಂಡ್ ಕಮ್ಯುನಿಕೇಷನ್ ಡಿಸಾರ್ಡರ್ಸ್ ಎಂದು ಹೆಸರು. ಇದರಲ್ಲಿ ಮೂರು ಹಂತಗಳಿವೆ (1) ಹೆಚ್ಚು ಅಪಾಯಕರವಾದ ಆರೋಗ್ಯದ ತೊಂದರೆಯೊದಗುವ ಶ್ರವಣ ಹಾಗೂ ವಾಕ್ ಭಾಷಾ ದೋಷಗಳನ್ನು ತಡೆಗಟ್ಟುವುದು (2)ಆರಂಭದಲ್ಲಿಯೇ ದೋಷಗಳನ್ನು ಗುರುತಿಸಿ ಸಲಹೆ ಸೂಚನೆಗಳನ್ನು ಕೊಡುವುದು, (3) ಪುನರ್ವಸತಿ ಕಲ್ಪಿಸುವುದು. ಈ ಯೋಜನೆಯನ್ನು ಜಿಲ್ಲಾ ಹಾಗೂ ರಾಜ್ಯ ಮಟ್ಟದಲ್ಲಿ ಕೂಡ ಹಮ್ಮಿಕೊಳ್ಳಲಾಗಿದೆ.

**ಆಲ್ಟರ್ನೇಟ್ ಅಂಡ್ ಆಗ್ಮಂಟೇಟಿವ್ ಕಮ್ಯೂನಿಕೇಷನ್ ಡಿವೈಸಸ್ (ಎ.ಎ.ಸಿ):** ಕೆಲವೊಮ್ಮೆ ಕೆಲವರಿಗೆ ಕಾರಣಾಂತರಗಳಿಂದ ಮಾತು ಕಲಿಯಲು ಸಾಧ್ಯವಾಗುವುದಿಲ್ಲ. ಅಂತಹವರು ತಮ್ಮ ಅಭಿಪ್ರಾಯವನ್ನು ಇತರರಿಗೆ ತಿಳಿಸುವುದು ಹೇಗೆ? ಅದಕ್ಕೆ ಹಲವಾರು ಬಗೆಯ ಉಪಕರಣಗಳಿವೆ. ಇವಕ್ಕೆ ಆಲ್ಟರ್ನೇಟ್ ಅಂಡ್ ಆಗ್ಮಂಟೇಟಿವ್ ಕಮ್ಯೂನಿಕೇಷನ್ ಡಿವೈಸಸ್ (ಸಂಕ್ಷಿಪ್ತವಾಗಿ ಎ.ಎ.ಸಿ) ಎಂದು ಕರೆಯಲಾಗುತ್ತದೆ. ಈ ಉಪಕರಣಗಳಲ್ಲಿ ಗುಂಡಿಯನ್ನೊತ್ತಿಯೋ ಅಥವಾ ಇನ್ನಾವುದೇ ವಿಧಾನದಿಂದಲೋ ವ್ಯಕ್ತಿಯೊಬ್ಬ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಲು ಸಾಧ್ಯ.

**ಡಿಜಿಟಲ್ ಗ್ರಂಥಾಲಯ :** 12 ಸಾವಿರ ಗ್ರಂಥಗಳು, ಅಸಂಖ್ಯಾತ ಪತ್ರಿಕೆಗಳು, 78 ಸಾವಿರಕ್ಕೂ ಹೆಚ್ಚು ಪಠ್ಯಪುಸ್ತಕಗಳು, ಸಂಶೋಧನ ಪತ್ರಿಕೆಗಳು, ಸಿಡಿ ಮತ್ತು ವೀಡಿಯೋ ಕೆಸೆಟ್‌ಗಳನ್ನೂಳಗೊಂಡ ಪೂರ್ಣ ಪ್ರಮಾಣದಲ್ಲಿ ಗಣಕೀಕೃತಗೊಂಡಿರುವ ಅತ್ಯಮೂಲ್ಯ ಗ್ರಂಥಭಂಡಾರ ಸಂಸ್ಥೆಯ ಆವರಣದ ಸುಂದರ ಕಟ್ಟಡದಲ್ಲಿದೆ. ಕೇಂಬ್ರಿಜ್ ವಿಶ್ವ ವಿದ್ಯಾಲಯದ ಗ್ರಂಥಾಲಯದ ಮಾದರಿಯಲ್ಲಿ ನಿರ್ಮಿಸಲಾಗಿರುವ ಈ ಗ್ರಂಥಾಲಯದಲ್ಲಿ ಸೂಕ್ಷ್ಮತರಂಗ ಅಂತರ್ಜಾಲ ವ್ಯವಸ್ಥೆಯಿಂದಾಗಿ ವಿದ್ಯಾರ್ಥಿಗಳು ವಿದ್ಯಾರ್ಥಿನಿಲಯದಲ್ಲಿ ಕುಳಿತೇ ಗ್ರಂಥಾಲಯದಿಂದ ಮಾಹಿತಿ ಪಡೆದುಕೊಳ್ಳುವ ವ್ಯವಸ್ಥೆಯಿದೆ.

**ಮೌನವನ್ನು ಮಾತಾಗಿಸುವ ತರಬೇತಿ:** ಶಬ್ದ ಮಾಲಿನ್ಯದ ಹೆಚ್ಚಳದಿಂದಾಗಿ ನಗರ ಪ್ರದೇಶಗಳಲ್ಲಿ ಶ್ರವಣದೋಷವುಳ್ಳವರ ಸಂಖ್ಯೆ ಹೆಚ್ಚುತ್ತಿದೆ. ಅನಕ್ಷರತೆಯಿಂದಾಗಿ ಹಳ್ಳಿಗಳಲ್ಲಿ ವಾಕ್-ಶ್ರವಣ ದೋಷಗಳ ಬಗೆಗೆ ಅರಿವು ಕಡಿಮೆ. ಈ ಹಿನ್ನೆಲೆಯಲ್ಲಿ ಸಂಸ್ಥೆಯು ಹಲವು ಸಂಸ್ಥೆಗಳ ಸಹಯೋಗದೊಡನೆ ಗ್ರಾಮೀಣ ಪ್ರದೇಶಗಳಲ್ಲಿ ಶಿಬಿರಗಳನ್ನೇರ್ಪಡಿಸಿ ಈ ವಿಚಾರದಲ್ಲಿ ಅರಿವು ಹಾಗೂ ಚಿಕಿತ್ಸೆ ನೀಡುತ್ತಿದೆ. ಭಾರತೀಯ ಪುನರ್ವಸತಿ ಮಂಡಲಿಯ ಸಹಕಾರದೊಂದಿಗೆ ಅರಿವು ಹಾಗೂ ತರಬೇತಿಯ ಹಲವಾರು ಕಾರ್ಯಕ್ರಮಗಳನ್ನು ನಡೆಸುತ್ತ ಬಂದಿದೆ. ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಕರಿಗೆ ಮತ್ತು ಮುಖ್ಯೋಪಾಧ್ಯಾಯರುಗಳಿಗೆ, ಅಲ್ಲದೆ ಪ್ರಾಥಮಿಕ ಆರೋಗ್ಯಕೇಂದ್ರಗಳ ವೈದ್ಯಾಧಿಕಾರಿಗಳಿಗೆ ಆಗಾಗ ಕಾರ್ಯಕ್ರಮಗಳನ್ನು ನಡೆಸಿ, ವಾಕ್ ದೋಷ, ಬುದ್ಧಿಮಾಂದ್ಯತೆಗಳನ್ನು ಪ್ರಾಥಮಿಕ ಹಂತದಲ್ಲೇ ಗುರುತಿಸುವಿಕೆ, ರಕ್ತಸಂಬಂಧದಲ್ಲಿ ಮದುವೆಯಾದಾಗ ಹುಟ್ಟುವ ಮಕ್ಕಳಲ್ಲಿ ಉಂಟಾಗುವ ಅಂಗವೈಕಲ್ಯ ಇತ್ಯಾದಿ ವಿಚಾರಗಳಲ್ಲಿ ಅರಿವು ಮೂಡಿಸಲಾಗುತ್ತಿದೆ. ವಾಕ್ ಶ್ರವಣಕ್ಕೆ ಸಂಬಂಧಿಸಿದಂತೆ ಯಾರು ಯಾವ ವಿಚಾರದಲ್ಲಿ ತಿಳಿಯಬೇಕೆಂದು ಅಪೇಕ್ಷಿಸುತ್ತಾರೋ ಆ ವಿಷಯದಲ್ಲಿ ಅವರಿಗೆ ತರಬೇತಿ ಕೊಡುವ ಕಾರ್ಯಕ್ರಮವನ್ನೂ ಸಂಸ್ಥೆ ಹಮ್ಮಿಕೊಂಡಿದೆ. ಈ ತರಬೇತಿ ಕಾರ್ಯಕ್ರಮಗಳಲ್ಲಿ ಕನಿಷ್ಠ 5 ಜನ, ಗರಿಷ್ಠ 15 ಜನ ಭಾಗವಹಿಸಬಹುದು. ಸಂಸ್ಥೆಯು ಆಗಿಂದಾಗ್ಗೆ ಅನೇಕ ಬಗೆಯ ಕಾರ್ಯಾಗಾರಗಳನ್ನು ನಡೆಸುತ್ತಿದೆ.

**ಶೈಕ್ಷಣಿಕ ವಿಭಾಗ :** ಪದವಿ ಪರೀಕ್ಷೆಗಳನ್ನು ಮೈಸೂರು ವಿಶ್ವವಿದ್ಯಾನಿಲಯದ ಮಾನ್ಯತೆಯೊಂದಿಗೆ ನಡೆಸಲಾಗುತ್ತಿದೆ. ಉಳಿದಂತೆ ಈ ಸಂಸ್ಥೆ ಸ್ವಾಯತ್ತತೆ ಪಡೆದಿದೆ. ವಾಕ್-ಶ್ರವಣ ವಿಜ್ಞಾನದ ಅಧ್ಯಯನಕ್ಕಾಗಿ ಬಿ.ಎಸ್ಸಿ., ಪದವಿ ಹಾಗೂ ಎಂ.ಎಸ್ಸಿ. ಸ್ನಾತಕೋತ್ತರ ಪದವಿ ಶಿಕ್ಷಣಗಳು ನಡೆಯುತ್ತಿದೆ. ಈ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಪಡೆಯುವ ಅವಕಾಶವಿದೆ. ಪಿಎಚ್.ಡಿ. ಪದವಿಗೆ ಸಂಶೋಧನೆ ನಡೆಸುವವರಿಗೂ ವಿದ್ಯಾರ್ಥಿ ವೇತನ ಸೌಲಭ್ಯ ಕಲ್ಪಿಸಿದೆ. 2003ನೆಯ ವರ್ಷದಿಂದ ಶ್ರವಣದೋಷ ವಿಷಯದ ಬಗ್ಗೆ ಬಿ.ಎಸ್ಸಿ.ಇಡಿ. ಎಂಬ ಪದವಿ ಶಿಕ್ಷಣವನ್ನು ಸಂಸ್ಥೆ ಆರಂಭಿಸಲಿದೆ. ಈಗ ಈ ಸಂಸ್ಥೆಯಲ್ಲಿ ದೇಶೀಯ ವಿದ್ಯಾರ್ಥಿಗಳ ಜೊತೆಗೆ ಮಲೇಷಿಯ, ಮಾರಿಷಸ್, ನೇಪಾಳ, ಮಯನ್ಮಾರ್, ಕುವೈತ್, ಯು.ಎ.ಇ. ಆಫ್‌ಘಾನಿಸ್ತಾನ ಮೊದಲಾದ ದೇಶಗಳ ವಿದೇಶೀಯ ವಿದ್ಯಾರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ ಕಲಿಯುತ್ತಿದ್ದಾರೆ.

**ಸಂಶೋಧನೆ :** ಇತ್ತೀಚಿನ ದಿನಗಳಲ್ಲಿ ಈ ಸಂಸ್ಥೆ ಸಂಶೋಧನೆಗೆ ಹೆಚ್ಚಿನ ಪ್ರಾಮುಖ್ಯ ನೀಡುತ್ತಿದೆ. ದಿನ ಕಳೆದಂತೆ ವಾಕ್-ಶ್ರವಣ ಚಿಕಿತ್ಸೆಯಲ್ಲಿ ಹೊಸ ಹೊಸ ವಿಧಾನಗಳನ್ನು ಅಳವಡಿಸಿಕೊಳ್ಳಬೇಕೆಂಬ ಹೆಬ್ಬಯಕೆಯಿಂದ ಇತರ ಸಂಸ್ಥೆಗಳು ಮತ್ತು ಸರ್ಕಾರದ ನೆರವಿನಿಂದ ಸಂಶೋಧನೆಗೆ ಹೆಚ್ಚಿನ ಆದ್ಯತೆ ನೀಡುತ್ತಿದೆ. ಶಬ್ದಮಾಲಿನ್ಯದಿಂದ ಹೆಚ್ಚುತ್ತಿರುವ ಶ್ರವಣ ದೋಷಗಳ ನಿವಾರಣೆಯೇ ಈ ಸಂಶೋಧನೆಗಳ ಗುರಿಯಾಗಿದೆ. ಸಂಶೋಧನೆಗಳಿಗಾಗಿಯೇ ಸಂಸ್ಥೆಯಲ್ಲಿ ಒಂದು ಸಂಶೋಧನ ಸಹಾಯ ನಿಧಿಯನ್ನು (ಆಯಿಷ್ ರಿಸರ್ಚ್ ಫಂಡ್) ಸ್ಥಾಪಿಸಿದೆ. ಸಂಸ್ಥೆಯು ಜರ್ನಲ್ ಆಫ್ ದಿ ಆಲ್ ಇಂಡಿಯಾ ಇನ್‌ಸ್ಟಿಟ್ಯೂಟ್ ಆಫ್ ಸ್ಪೀಚ್ ಅಂಡ್ ಹಿಯರಿಂಗ್ ಎಂಬ ವಾರ್ಷಿಕವನ್ನು ಪ್ರಕಟಿಸುತ್ತಿದೆ. ಇದರಲ್ಲಿ ಮಾತು, ಭಾಷೆ ಹಾಗೂ ಶ್ರವಣ ವಿಚಾರಗಳಿಗೆ ಸಂಬಂಧಿಸಿದ ಸಂಶೋಧನಾತ್ಮಕ ಲೇಖನಗಳಿಗೆ ಆದ್ಯತೆ ನೀಡಲಾಗುತ್ತದೆ. ಜನ ಸಾಮಾನ್ಯರಿಗೆ ಈ ಸಂಸ್ಥೆಯ ಚಟುವಟಿಕೆಗಳ ಬಗ್ಗೆ ತಿಳಿವಳಿಕೆ ನೀಡುವ ಸಲುವಾಗಿ ಅನೇಕ ಭಾರತೀಯ ಭಾಷೆಗಳಲ್ಲಿ ಹಲವಾರು ಕರಪತ್ರ, ಮಾಹಿತಿ ಪುಸ್ತಕಗಳನ್ನೂ ಪ್ರಕಟಿಸಲಾಗುತ್ತಿದೆ.

**ಶಾಲಾಪೂರ್ವ ತರಬೇತಿ :** ಮಗುವೊಂದರ ಬೌದ್ಧಿಕ ಬೆಳವಣಿಗೆ 2ರಿಂದ 6 ವರ್ಷಗಳೊಳಗೆ ಆರಂಭವಾಗುವುದೆಂದು ಸಂಶೋಧನ ವರದಿ ಹೇಳುತ್ತದೆ. ಈ ಕಾರಣದಿಂದ ಸಂವಹನ ಸಮಸ್ಯೆಯಿಂದ ಮಕ್ಕಳಿಗೆ ಪುನರ್ವಸತಿ ಕಲ್ಪಿಸುವ ಸಲುವಾಗಿ ಶಾಲಾ ಪೂರ್ವ ತರಬೇತಿ ಯೋಜನೆಯನ್ನು ಈ ಸಂಸ್ಥೆ ಆರಂಭಿಸಿದೆ. ಇಂಗ್ಲಿಷ್, ಮಲೆಯಾಳಂ, ಹಿಂದಿಯೂ ಸೇರಿ ಒಟ್ಟು ಆರು ಭಾಷೆಗಳಲ್ಲಿ ಇಲ್ಲಿ ತರಬೇತಿ ನೀಡಲಾಗುತ್ತದೆ.

ಭಾರತದಲ್ಲಿ ಪ್ರತಿಶತ ಮೂವರಿಗೆ ಮಾತಿನ ಅಥವಾ ಶ್ರವಣ ದೋಷವಿದೆ. ಇವರಲ್ಲಿ ಹೆಚ್ಚಿನ ಜನರು ಹಳ್ಳಿಗಳಲ್ಲಿ ವಾಸಮಾಡುತ್ತಾರೆ. ಅವರಿಗೆ ಹೊಸ ಜೀವನವನ್ನು ಕಲ್ಪಿಸಲು ಪಣತೊಟ್ಟಿರುವ ಈ ಸಂಸ್ಥೆ ರಾಜ್ಯದ ಹೊರಗೂ ಶಿಬಿರಗಳನ್ನು ಏರ್ಪಡಿಸಿ, ಗ್ರಾಮೀಣ ಜನರಿಗೂ ಈ ಸೌಲಭ್ಯ ಒದಗುವಂತೆ ಮಾಡಿದೆ. ಅಗತ್ಯವಿದ್ದವರಿಗೆ ಶಿಬಿರಗಳಲ್ಲಿ ಶ್ರವಣೋಪಕರಣಗಳನ್ನು ಉಚಿತವಾಗಿ ಸ್ಥಳದಲ್ಲೇ ವಿತರಿಸಲಾಗುತ್ತಿದೆ.

**ವಸತಿ ಸೌಕರ್ಯ :** ಹೊರ ಊರು, ಹೊರ ರಾಜ್ಯಗಳಿಂದ ಚಿಕಿತ್ಸೆಗಾಗಿ ಬರುವ ರೋಗಿಗಳು ಉಳಿದುಕೊಳ್ಳಲು ಸೂಕ್ತ ವಸತಿ ಸೌಕರ್ಯವೂ ಸಂಸ್ಥೆಯಲ್ಲಿದೆ. ಇತ್ತೀಚೆಗೆ ದೇಶದ ಬೇರೆ ಬೇರೆ ಸ್ಥಳಗಳಲ್ಲಿ ಪ್ರಾದೇಶಿಕ ಕೇಂದ್ರಗಳನ್ನು ತೆರೆಯುವ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. ಸಂಸ್ಥೆಯ ಆಡಳಿತವು ನಿರ್ದೇಶಕರ ನೇರ ಉಸ್ತುವಾರಿಯಲ್ಲಿ ನಡೆಯುತ್ತಿದ್ದು ಅಧ್ಯಯನ ಮಂಡಳಿ ಹಾಗೂ ವಿವಿಧ ಸಮಿತಿಗಳು ಈ ಆಡಳಿತಕ್ಕೆ ಸಹಕಾರಿಯಾಗಿ ಸ್ಥಾಪಿತವಾಗಿವೆ. **(ಎಂ.ಜಿಎ.)**

**ಅಗರ :** ಚಾಮರಾಜನಗರ ಜಿಲ್ಲೆ ಯಳಂದೂರು ತಾಲ್ಲೂಕಿನಲ್ಲಿ ಕಸಬೆಯಿಂದ ಈಶಾನ್ಯಕ್ಕೆ ಕೊಳ್ಳೇಗಾಲ ರಸ್ತೆಯಲ್ಲಿ ಸು.12ಕಿಮೀ. ದೂರದಲ್ಲಿರುವ ಗ್ರಾಮ. ಇಲ್ಲಿಚೋಳರ ಮತ್ತು ಅನಂತರದ ಕಾಲದ ನೂರಕ್ಕೂ ಹೆಚ್ಚು ಶಾಸನಗಳು ದೊರಕಿವೆ. ಅವುಗಳಲ್ಲಿ ಈ ಊರಿನ ಹೆಸರು ದುರ್ಗೆಯಾರ್-ಅಗರಂ ಅಥವಾ ದುರ್ಗಾಗ್ರಹಾರ ಎಂದು ಇದೆ.

ವಿಷ್ಣುಶರ್ಮ ದೊರೆ ಈ ಊರಿಗೆ ಬಂದಿದ್ದಾಗ ಅವನಿಗೆ ಹಾವು ಕಡಿಯಿತೆಂದೂ ಇಲ್ಲಿಯ ರಾಮೇಶ್ವರ ಮತ್ತು ನರಸಿಂಹ ದೇವರ ಅನುಗ್ರಹದಿಂದ ವಿಷಾಪಹಾರವಾಯಿತೆಂದೂ ಅದರಿಂದಾಗಿ ಈ ಸ್ಥಳಕ್ಕೆ ಅಗರ ಎಂದು ಹೆಸರಾಯಿತೆಂದೂ ಐತಿಹ್ಯವಿದೆ. ಆದರೆ ಅಗರ ಎಂಬ ಹೆಸರು ಅಗ್ರಹಾರ ಎಂಬ ಪದದ ಸಂಕ್ಷಿಪ್ತ ರೂಪವಾಗಿರಬಹುದು.



ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ, ಅಗರ

ಇಲ್ಲಿಯ ದುರ್ಗಾ ದೇವಾಲಯ ಚೋಳ ದೊರೆ ಒಂದನೆಯ ರಾಜರಾಜನ ಕಾಲದ್ದು. ಚೋಳ ಶೈಲಿಯಲ್ಲಿರುವ ಈ ಗುಡಿಯಲ್ಲಿ ಸಮಭಂಗಿಯಲ್ಲಿ ನಿಂತಿರುವ ವೈಷ್ಣವೀರೂಪದ ಸುಂದರ ದುರ್ಗಾ ವಿಗ್ರಹವಿದೆ. ನರಸಿಂಹ ದೇವಾಲಯ ಊರಿನ ಪ್ರಮುಖ ಗುಡಿ. ಇದೂ ಚೋಳರ ಕಾಲದ್ದು. ಈ ದೇವಾಲಯದಲ್ಲಿ ವೃತ್ತಾಕಾರದ ಗರ್ಭಗೃಹವಿದೆ. ಅದರ ಮುಂದೆ ಆಯಾಕಾರದ ಅಂತರಾಳ ಮತ್ತು ಮುಂದೆ ಚೌಕವಾದ ನವರಂಗ ಇವೆ. ದೇವಾಲಯ ಪಶ್ಚಿಮಾಭಿಮುಖವಾಗಿದೆ. ಉತ್ತರ ಮತ್ತು ಪಶ್ಚಿಮದ ಕಡೆಗಳಲ್ಲಿ ದ್ವಾರಗಳಿವೆ. ಇಲ್ಲಿಯ ನರಸಿಂಹ ವಿಗ್ರಹ ಉತ್ತಮ ಶಿಲ್ಪ ಇದು ವಿಚಿತ್ರವಾಗಿಯೂ ಇದೆ. ಇದು ಯೋಗ, ಲಕ್ಷ್ಮೀ, ಉಗ್ರ, ಜ್ವಾಲಾ ಮತ್ತು ಪ್ರಹ್ಲಾದ ನರಸಿಂಹರ ಸಂಯುಕ್ತರೂಪ ಎನ್ನಲಾಗಿದೆ. ರಾಮೇಶ್ವರ ದೇವಾಲಯವೂ ಮೂಲತಃ ಚೋಳ ಕಾಲದ್ದಾದರೂ ಇದರಲ್ಲಿ ಹೊಯ್ಸಳರ ಕಾಲದ ಸೇರ್ಪಡೆಗಳಿವೆ. ಅಗರದಲ್ಲಿರುವ ಇನ್ನೊಂದು ದೇವಾಲಯ ವರದರಾಜನದು. *

**ಅಗ'ರ'ಖೇ'ಡ' :** ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನಲ್ಲಿ ಕಸಬೆಯಿಂದ ಈಶಾನ್ಯಕ್ಕೆ 22ಕಿಮೀ ದೂರದಲ್ಲಿರುವ ಒಂದು ಗ್ರಾಮ. ಭೀಮಾನದಿಯ ಬಲದಂಡೆಯ ಮೇಲಿದೆ. ಹುಬ್ಬಳ್ಳಿ-ಸೊಲ್ಲಾಪುರ ರೈಲುಮಾರ್ಗದಲ್ಲಿ ಲಚ್ಯಾಣ ರೈಲುನಿಲ್ದಾಣಕ್ಕೆ 11ಕಿಮೀ ಅಂತರದಲ್ಲಿದೆ. ಮೊದಲು ಈ ಗ್ರಾಮ ಅಗ್ರಖೇಟ ಎಂದು ಪ್ರಸಿದ್ಧವಾಗಿತ್ತು. ಇದು ಸಂಸ್ಕೃತ ಪಂಡಿತರ ಮತ್ತು ವಿದ್ಯಾರ್ಥಿಗಳ ಬೀಡಾಗಿತ್ತು. ಪೇಶ್ವೆಯೊಬ್ಬ ಈ ಗ್ರಾಮವನ್ನು ಕೃಷ್ಣದ್ವೈಪಾಯನರಿಗೆ ದಾನಕೊಟ್ಟಿದ್ದ. ಗ್ರಾಮದ ದಕ್ಷಿಣಕ್ಕೆ ಪುರಾತನ ಶಂಕರಲಿಂಗ ದೇವಾಲಯವಿದೆ. ಈ ದೇವಾಲಯದಲ್ಲಿ 1880ರಲ್ಲಿ ನಿರ್ಮಿಸಿದ ಬಿಳಿಯ ಅಮೃತಶಿಲೆಯ ಲಿಂಗವಿದೆ. ಗ್ರಾಮದಲ್ಲಿ ಸುಮಾರು 1109-1351ರ ಕಾಲದ 5 ಶಾಸನಗಳು ಸಿಕ್ಕಿವೆ. ಇಲ್ಲಿ ಭೈರಪ್ಪ ಮತ್ತು ಹನುಮಂತ ದೇವರ ಗುಡಿಗಳಿವೆ. ಭೀಮಾನದಿ ಇಲ್ಲಿ ದಕ್ಷಿಣವಾಹಿನಿಯಾಗಿದ್ದು 108 ಲಿಂಗಗಳೂ ಇಲ್ಲಿರುವುದರಿಂದ ಇದೊಂದು ಪುಣ್ಯಕ್ಷೇತ್ರವೆನಿಸಿಕೊಂಡಿದೆ. ಸಾಹಿತಿ ಶ್ರೀರಂಗರು ಈ ಗ್ರಾಮದವರು. *

**ಅಗ್ಗಳ :** 12ನೆಯ ಶತಮಾನದ ಜೈನಕವಿ. ಚಂದ್ರಪ್ರಭಪುರಾಣ ಎಂಬ ಕಾವ್ಯದ ಕರ್ತೃ. ಬಿಜಾಪುರ ಜಿಲ್ಲೆಯ ಇಂಗಳೇಶ್ವರ ಇವನ ಜನ್ಮಸ್ಥಳ. ತಂದೆ ಶಾಂತೀಶ, ತಾಯಿ ಪೋಚಾಂಬಿಕೆ, ತ್ರೈವಿದ್ಯಶ್ರುತಕೀರ್ತಿದೇವ ಗುರು. ಕವಿಗೆ ಭಾರತೀಭಾಳನೇತ್ರ, ಸಾಹಿತ್ಯವಿದ್ಯಾವಿನೋದ ಎಂಬ ಬಿರುದುಗಳು ಇವೆ. ಪೂರ್ವಕವಿಗಳಲ್ಲಿ ಪಂಪ, ಪೊನ್ನ, ರನ್ನ-ಇವರುಗಳನ್ನು ಸ್ತುತಿಸಿದ್ದಾನೆ. ಕಳೆಗಳೆನಿತನಿತಜೊಳಮಗ್ಗಳಗಣ್ಣಂ ತೋರ್ಪನಗ್ಗಳಂ ನೃಪಸಭೆಯೊಳ್-ಎಂದು ಹೇಳಿಕೊಂಡಿರುವುದರಿಂದ ಪ್ರಸಿದ್ಧ ಕವಿಯಾಗಿದ್ದಂತೆ ತೋರುತ್ತದೆ. ನಾನಾರಸ ಮೊಪ್ಪೆ ವಸ್ತುಕೃತಿಯಂ ಪೇಳ್ದಗ್ಗಳಂ ಎಂದು ತನ್ನ ಕಾವ್ಯ ನವರಸಭರಿತವಾಗಿದೆ ಎಂದೂ ಹೇಳಿಕೊಂಡಿದ್ದಾನೆ. ಈತ ರೂಪ ಸ್ತವನಮಣಿಪ್ರವಾಳ, ಜಿನಸ್ನಾನಸ್ತವನ ಎಂಬ ಗ್ರಂಥಗಳನ್ನು ರಚಿಸಿರುವನೆಂದು ಪಾರ್ಶ್ವಕವಿಯ (ಸು.1205) ಹೇಳಿಕೆ. ಆದರೆ ಈ ಕೃತಿಗಳು ಉಪಲಬ್ಧವಿಲ್ಲ. ಇವು ಸಂಸ್ಕೃತ ರಚನೆಗಳಾಗಿದ್ದಿರಬಹುದು.

ಚಂದ್ರಪ್ರಭಪುರಾಣ ಹದಿನಾರು ಆಶ್ವಾಸಗಳುಳ್ಳ ಚಂಪೂ ಗ್ರಂಥ. ಎಂಟನೆಯ ತೀರ್ಥಂಕರನಾದ ಚಂದ್ರಪ್ರಭನ ಚರಿತ್ರೆ ಕಾವ್ಯದ ವಸ್ತು. ಈ ಗ್ರಂಥ' ಹನ್ನೆರಡನೆಯ ಶತಮಾನದ ಇತರ ಚಂಪೂ ಗ್ರಂಥ'ಗಳಂತೆ ಸಂಸ್ಕೃತಭೂಯಿಷ್ಠವಾಗಿ, ಬಿಗಿಯಾದ ಬಂಧದಿಂದ ಕೂಡಿ ಪ್ರೌಢವಾಗಿದೆ. ಗ್ರಂಥಾವತಾರದಲ್ಲಿ ಚಂದ್ರಪ್ರಭನನ್ನು ಸುತ್ತಿಸಿದ್ದಾನೆ. ಬಳಿಕ ಸಿದ್ಧಾದಿಗಳನ್ನು, ಪಂಚಗುರುಗಳನ್ನು, ಜಿನಧರ್ಮವನ್ನು, ಯಕ್ಷಯಕ್ಷಿಯರನ್ನು, ಸರಸ್ವತಿಯನ್ನು ಸ್ತುತಿಸಿ ಅನಂತರ ಅನುಬದ್ಧಕೇವಲಿಗಳಿಂದ ಶ್ರುತಕೀರ್ತಿಯ ತನಕ ತನ್ನ ಗುರುಪರಂಪರೆಯನ್ನು ಹೇಳಿಕೊಂಡಿದ್ದಾನೆ. ಗ್ರಂಥಾಂತ್ಯದಲ್ಲಿ ಸಂಸ್ಕೃತದಲ್ಲಿ ರಚಿತವಾದ 24 ತೀರ್ಥಂಕರರ ಸ್ತುತಿಸಂಗ್ರಹವಿದೆ. ಈ ಕೃತಿಯ ರಚನೆಯಲ್ಲಿ ಕವಿ ವೀರನಂದಿಯ ಸಂಸ್ಕೃತ ಚಂದ್ರಪ್ರಭ ಚರಿತ್ರೆಗೆ ಬಹಳಷ್ಟು ಋಣಿಯಾಗಿಯಾಗಿರುವಂತೆಯೂ ಅನೇಕ ಸುಂದರ ಸನ್ನಿವೇಶಗಳ ನಿರ್ಮಾಣದಲ್ಲಿ ಹಾಗೂ ಮನೋಜ್ಞವಾದ ವರ್ಣನಾಪದ್ಯಗಳಿಗೆ ಪಂಪನ ಆದಿಪುರಾಣ ಪ್ರೇರಣೆ ಒದಗಿಸಿರುವಂತೆಯೂ ತಿಳಿಯುತ್ತದೆ. ಚಂದ್ರಪ್ರಭನ ಚರಿತ್ರೆ ಸಾಂಪ್ರದಾಯಿಕ ಕಥೆಯಾದುದರಿಂದ ಕವಿಯ ಸಹಜ ಶಕ್ತಿಯ ಪ್ರಕಟಣೆಗೆ ಇಲ್ಲಿ ಅವಕಾಶವಿಲ್ಲ. ವರ್ಣನೆಗಳಲ್ಲಿ ಕಲ್ಪನಾವಿಲಾಸವಿದೆ. ಅಗ್ಗಳ ಪಂಡಿತಕವಿ ಆದರೂ ಕವಿಹೃದಯವಿದೆ. ಸಂಸ್ಕೃತ-ಕನ್ನಡ ಎರಡರಲ್ಲೂ ಈತನಿಗೆ ಉದ್ದಾಮ ಪಾಂಡಿತ್ಯವಿದೆ. ಈ ಕವಿಯ ಕಾವ್ಯಶಕ್ತಿಯನ್ನು ಕುರಿತು ದೇವಕವಿ, ಆಂಡಯ್ಯ, ಕಮಲಭವ, ಬಾಹುಬಲಿ, ಪಾರ್ಶ್ವ ಮೊದಲಾದ ಕವಿಗಳು ಹೊಗಳಿದ್ದಾರೆ. ಚಂದ್ರಪ್ರಭ ಸಾಂಗತ್ಯವನ್ನು ಬರೆದ ದೊಡ್ಡಯ್ಯ, ಚಂದ್ರಪ್ರಭ ಷಟ್ಪದಿಯನ್ನು ಬರೆದ ದೊಡ್ಡಣಾಂಕ ಇವನ ಗ್ರಂಥದಿಂದ ಉಪಕೃತರಾದಂತೆ ಕಂಡುಬರುತ್ತದೆ. ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವ ಮತ್ತು ಅಭಿನವವಾದಿವಿದ್ಯಾನಂದನ ಕಾವ್ಯಸಾರಗಳಲ್ಲಿ ಇವನ ಕಾವ್ಯದ ಪದ್ಯಗಳು ಸಂಕಲನಗೊಂಡಿವೆ. ಸಾಳ್ವ ಮತ್ತು ಭಟ್ಟಾಕಳಂಕ ಇವರು ತಮ್ಮ ಗ್ರಂಥಗಳಲ್ಲಿ ಇವನ ರಚನೆಗಳನ್ನು ಲಕ್ಷ್ಯಗಳಾಗಿ ಉದಾಹರಿಸಿದ್ದಾರೆ. ಈತನ ಪ್ರಭಾವ ಮುಂದಿನ ಕನ್ನಡ ಸಾಹಿತ್ಯದ ಮೇಲೆ ಸ್ಪಷ್ಟವಾಗಿ ಆಗಿರುವುದು ಕಂಡುಬರುತ್ತದೆ. ಜೈನಪುರಾಣ ಗ್ರಂಥ'ಗಳ ಸಾಲಿನಲ್ಲಿ ಈ ಕವಿಯ ಚಂದ್ರಪ್ರಭಪುರಾಣ ಒಂದು ಮಧ್ಯಮ ಗುಣದ ಕಾವ್ಯ ಎಂದು ಹೇಳಬಹುದು. **(ಪಿ.ವಿ.ಸಿ.;ಎಂ.ವಿ.ಎಸ್.)**

**ಅಗ್ರಹಾರ :** ವಿಶೇಷವಾಗಿ ಬ್ರಾಹ್ಮಣರಿಗೆ ಜೀವನಾಧಾರವಾಗಿ ಬಿಟ್ಟು ಕೊಟ್ಟ ಗ್ರಾಮ. ಇದನ್ನು ಚತುರ್ವೇದಿ ಮಂಗಲ, ಶ್ರೋತ್ರೀಯ ಗ್ರಾಮ ಎಂದೂ ಶಾಸನಗಳಲ್ಲಿ ಕರೆಯಲಾಗಿದೆ.

ವೇದವೇದಾಂಗಪಾರಂಗತರಾದ, ಷಟ್ಕರ್ಮನಿರತರಾದ ಬ್ರಾಹ್ಮಣೋತ್ತಮರಿಗೆ ಆಳರಸರು ನೆಲಹೊಲಗಳನ್ನು ಬ್ರಹ್ಮದೇಯ ಅಥವಾ ಬ್ರಹ್ಮದಾಯವಾಗಿ ದಾನಕೊಡುವ ಪದ್ಧತಿ ಕರ್ನಾಟಕವೂ ಸೇರಿದಂತೆ ಭಾರತದ ಎಲ್ಲೆಡೆಗಳಲ್ಲಿಯೂ ಹಿಂದಿನಿಂದಲೂ ವಾಡಿಕೆಯಲ್ಲಿತ್ತು. ನಾನಾ ಗೋತ್ರಗಳಿಗೆ, ಪ್ರವರಗಳಿಗೆ, ಶಾಖೆಗಳಿಗೆ ಸೇರಿದ ನಿರ್ದಿಷ್ಟ ಸಂಖ್ಯೆಯ ಬ್ರಾಹ್ಮಣರಿಗೆ, ಅವರು ಗೃಹಸ್ಥಾಶ್ರಮ ನೀತಿನಿಯಮಗಳನ್ನೂ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ ಎಂಬ ಈ ಸ್ಮೃತಿಸಿದ್ಧವಾದ ಕಾರ್ಯಗಳನ್ನೂ ನೆರವೇರಿಸಿಕೊಂಡು ಹೋಗಲೆಂದು ಒಂದು ಗ್ರಾಮದ ನೆಲಹೊಲಗಳನ್ನೂ ಮನೆಯ ನಿವೇಶನಗಳನ್ನೂ ವೃತ್ತಿಗಳಾಗಿ ವಿಂಗಡಿಸಿ ಸಾಮೂಹಿಕವಾಗಿ ದಾನ ಕೊಟ್ಟಲ್ಲಿ ಅಗ್ರಹಾರವೊಂದರ ಸೃಷ್ಟಿಯಾಯಿತಂತೆ. ಕೆಲವು ಶಾಸನಗಳಲ್ಲಿ ಈ ಪಾರಿಭಾಷಿಕ ಪದವನ್ನು 'ಅಗ್ರಾಹಾರ' ಎಂದೂ ಬರೆಯಲಾಗಿದೆ. ಅಗ್ರಹಾರದ ಮೂಲರೂಪ 'ಅಗ್ರಾಹಾರ' (ಅಗ್ರ+ಆಹಾರ) ಎಂದೇ ಇದ್ದಿರಬೇಕೆಂಬುದು ಕೆಲವು ವಿದ್ವಾಂಸರ ಅಭಿಪ್ರಾಯ.

ಕರ್ನಾಟಕದಲ್ಲಿ ಗೌತಮಸಗೋತ್ರದ ಶುಕ್ಲಯಜುರ್ವೇದದಲ್ಲಿ ಪಾರಂಗತನಾದ ಬದಿರಕುಲದ ಬ್ರಾಹ್ಮಣನೊಬ್ಬನಿಗೆ ಮಹಿಷ ವಿಷಯದ

ಪೆರ್ಬ್ಬಟ ಗ್ರಾಮವನ್ನು 'ಬ್ರಹ್ಮದೇಯನ್ಯಾಯ'ದ ರೀತ್ಯ ಅಗ್ರಹಾರವಾಗಿ ಕೊಡಲಾಯಿತೆಂದು ಕ್ರಿ.ಶ.5ನೆಯ ಶತಮಾನದ ಉತ್ತರಾರ್ಧದ್ದೆನ್ನಬಹುದಾದ ಕದಂಬ ಕೃಷ್ಣವರ್ಮನ ಹೆಬ್ಬಟ ತಾಮ್ರಶಾಸನದಲ್ಲಿ ಹೇಳಲಾಗಿದೆ. 10-11ನೆಯ ಶತಮಾನಗಳ ಶಾಸನಗಳಿಂದ ತಿಳಿದುಬರುವಂತೆ ಸ್ಥಾನಕುಂದೂರ (ಇಂದಿನ ತಾಳಗುಂದ) ನಿಷ್ಠಾವಂತ ವೈದಿಕ ಬ್ರಾಹ್ಮಣರ ವಾಸಸ್ಥಾನವಾಗಿತ್ತು. ವಾತಾಪಿ (ಇಂದಿನ ಬಾದಾಮಿ) ಎರಡುನೂರು ಸದಸ್ಯರನ್ನೊಳಗೊಂಡ ಮಹಾಚಾತುರ್ವಿದ್ಯ ಸಮುದಾಯದ (ವೈದಿಕ ಬ್ರಾಹ್ಮಣರ ಸಂಘ) ನೇರ ಆಡಳಿತಕ್ಕೊಳಗಾಗಿದ್ದು, 'ಚತುರ್ದಶ ವಿದ್ಯಾಸ್ಥಾನ' ಎಂದು ಅದು ಹೆಸರುವಾಸಿಯಾಗಿತ್ತು. ಅದರಂತೆಯೇ ಆರ್ಯಪುರ (ಇಂದಿನ ಐಹೊಳೆ) ಐದುನೂರು ಸದಸ್ಯರನ್ನೊಳಗೊಂಡ 'ಮಹಾಚಾತುರ್ವಿದ್ಯ ಸಮುದಾಯ'ದ ಆಡಳಿತಕ್ಕೊಳಗಾಗಿತ್ತು. ಇವು ಅಗ್ರಹಾರಗಳೆಂದು ಶಾಸನಗಳಲ್ಲಿ ಸ್ಪಷ್ಟವಾಗಿ ಹೇಳಿಲ್ಲವಾದರೂ ಈ ಮೂರೂ ಪ್ರಸಿದ್ಧ ಕೇಂದ್ರಗಳೂ ಅಗ್ರಹಾರಗಳೇ ಆಗಿರಬೇಕು. ಕಾಲ ಕಳೆದಂತೆ ಇಂಥ ಪ್ರಾಚೀನ ಅಗ್ರಹಾರಗಳ ನಿಜವಾದ ಇತಿಹಾಸ ಮಾಸಿಹೋಗಿ, ಮಧ್ಯಯುಗದ ಶಾಸನಗಳಲ್ಲಿ ಇವನ್ನು 'ಅನಾದಿ ಅಗ್ರಹಾರ', 'ಜನಮೇಜಯ ದತ್ತಿಯ ಮಹಾಗ್ರಹಾರ', 'ಶ್ರೀ ರಾಮದತ್ತಿ ಮಹಾಗ್ರಹಾರ' ಎಂದು ಮುಂತಾಗಿ ಕರೆಯಲಾಗಿದೆ.

ಕರ್ನಾಟಕದ ಇತಿಹಾಸದ ಮಧ್ಯಯುಗದಲ್ಲಿ ಅನೇಕಾನೇಕ ಅಗ್ರಹಾರಗಳು ಅಸ್ತಿತ್ವಕ್ಕೆ ಬಂದವು. ಆ ಕಾಲದ ಹಲವು ಶಾಸನಗಳು ಅಗ್ರಹಾರಗಳ ದೀರ್ಘ ವರ್ಣನೆಗಳನ್ನು ನೀಡಿವೆ. ಶಿವಮೊಗ್ಗ ಜಿಲ್ಲೆಯ 'ಸರ್ವನಮಸ್ಯದನಾದಿ ಅಗ್ರಹಾರ' ಕುಪ್ಪಟೂರನ್ನು ಶಾಸನವೊಂದರಲ್ಲಿ 'ವಿಪ್ರಸುರ ಚಿತ್ರನೀಕೇತನ ಮಾಳೆಯಿಂದೆ ಕಣ್ಗೊಳಿಪುದು ಕುಪ್ಪಟೂರ್ ಸಕಳವಿದ್ಯೆಗೆ ತಾನೆನೆ ಜನ್ಮ ಭೂತಳಂ' ಎಂದು ಪ್ರಶಂಸಿಸಲಾಗಿದೆ.

ಕಲ್ಯಾಣದ ಚಾಳುಕ್ಯ ಚಕ್ರವರ್ತಿ 6ನೆಯ ವಿಕ್ರಮಾದಿತ್ಯ ನಾನಾ ಗೋತ್ರಗಳಿಗೆ ಸೇರಿದ ಸಕಲಶಾಸ್ತ್ರವೇತ್ತರಾದ ಹಲವು ಬ್ರಾಹ್ಮಣರನ್ನು ದ್ರಾವಿಡ ದೇಶದಿಂದ ಬರಮಾಡಿಕೊಂಡು, ಕೋಗಳಿ-500ರ ನೀರಗುಂದ ಗ್ರಾಮವನ್ನು ಅಗ್ರಹಾರವೆಂದು ಘೋಷಿಸಿ (ಅಗ್ರಹಾರೀಕೃತ್ಯ) ಅವರಿಗೆ ದಾನ ಮಾಡಿದನೆಂಬ ವಿಷಯ ಅವನ 1087ರ ನೀಲಗುಂದ ತಾಮ್ರಶಾಸನದಿಂದ ತಿಳಿದುಬರುತ್ತದೆ. ಅಗ್ರಹಾರಗಳನ್ನು ನಿರ್ಮಿಸುವ ಪದ್ಧತಿ ಇತ್ತೀಚಿನವರೆಗೂ ರೂಢಿಯಲ್ಲಿತ್ತು.

ರಾಜಕೀಯ ರಂಗದಲ್ಲಿ ಅಸ್ತವ್ಯಸ್ತತೆ ಉಂಟಾದಾಗಲೆಲ್ಲ ಹಿಂದೆ ಸೃಷ್ಟಿಸಲಾದ ಅಗ್ರಹಾರಗಳು ದುರ್ಜನರ ಕೈಗೆ ಸಿಕ್ಕಿ ದುರುಪಯೋಗಕ್ಕೆ ತುತ್ತಾಗುತ್ತಿದ್ದವು ಎಂಬುದಕ್ಕೆ ಶಾಸನಗಳಲ್ಲಿ ಸೂಚನೆಗಳಿವೆ. 2ನೆಯ ಪುಲಕೇಶಿಯ ಆಳ್ವಿಕೆ ಕೊನೆಗೊಂಡು, ಕರ್ನಾಟಕ ಪಲ್ಲವರ ಆಕ್ರಮಣಕ್ಕೆ ಒಳಗಾದಾಗ ವಿನಷ್ಟವಾದ ಬ್ರಹ್ಮಾದೇಯಗಳನ್ನು ಪುಲಕೇಶಿಯ ಮಗನಾದ 1ನೆಯ ವಿಕ್ರಮಾದಿತ್ಯ ತಾನು ಪುನಃ ಅಗ್ರಹಾರಗಳನ್ನಾಗಿ ಸೃಷ್ಟಿಸಿದನಂತೆ. ವಿಜಯನಗರದ ಸಾಮ್ರಾಟರು ಸ್ವತಃ ಅನೇಕ ಹೊಸ ಅಗ್ರಹಾರಗಳನ್ನು ಸೃಷ್ಟಿಸಿದರಲ್ಲದೆ, ಪ್ರಾಯಶಃ ಮುಸಲ್ಮಾನರ ದಾಳಿಗಳಿಂದಾಗಿ ವಿನಷ್ಟವಾಗುತ್ತಿದ್ದ ಹಲವು ಅಗ್ರಹಾರಗಳನ್ನು ಪುನಃ ಸ್ಥಾಪಿಸಿದರೆಂದು ಅಂದಿನ ಶಾಸನಗಳಿಂದ ತಿಳಿದುಬರುತ್ತದೆ.

'ಅಗ್ರಹಾರ' ಎಂಬುದು ಬ್ರಾಹ್ಮಣರ ವಾಸಕ್ಕಾಗಿ ಮೀಸಲಿರಿಸಿದ್ದ ಗ್ರಾಮವನ್ನು ಸೂಚಿಸುತ್ತವೆಯಾದರೆ, ಬ್ರಹ್ಮಪುರಿ ಎಂಬುದು ನಗರ ಪಟ್ಟಣಗಳಲ್ಲಿ ಬ್ರಾಹ್ಮಣರ ವಾಸಕ್ಕಾಗಿ ಮೀಸಲಿರಿಸಿದ್ದ ಕೇರಿಗಳನ್ನು ಸೂಚಿಸುತ್ತದೆ. ಅಲ್ಲದೆ ಶೈವಧರ್ಮಾವಲಂಬಿಗಳ, ಅದರಲ್ಲೂ ಮುಖ್ಯವಾಗಿ ವೀರಶೈವರ ವಾಸಕ್ಕೆಂದು ಸೃಷ್ಟಿಸಲಾದ ಅಗ್ರಹಾರಗಳನ್ನು 'ಶಿವಪುರ' ಗಳೆಂದು ಶಾಸನಗಳಲ್ಲಿ ಹೆಸರಿಸಲಾಗಿದೆ.

ಅಗ್ರಹಾರಗಳಲ್ಲಿ ಬ್ರಾಹ್ಮಣೇತರರೂ ಮುಖ್ಯವಾಗಿ ಪಾರಂಪರ್ಯ ಕಸಬುದಾರರೂ ತಮ್ಮ ತಮ್ಮ ಕೇರಿಗಳಲ್ಲಿ ವಾಸಿಸುತ್ತಿದ್ದರಾದರೂ ಅಲ್ಲಿಯ ನೆಲಹೊಲಗಳ ಮೇಲಿನ ಸರ್ವಸ್ವಾಮ್ಯವೂ ಬ್ರಾಹ್ಮಣರದೇ ಆಗಿತ್ತು. ಅಗ್ರಹಾರದ ಆಡಳಿತಸೂತ್ರ ಅಲ್ಲಿಯ ಬ್ರಾಹ್ಮಣ ಗೃಹಪತಿಗಳನ್ನೊಳಗೊಂಡ 'ಮಹಾಜನ'ರ ಕೈಯಲ್ಲಿತ್ತು. ಕರ್ನಾಟಕದ ಅಗ್ರಹಾರಗಳ ಮಹಾಜನರ ಗುಣಗಾನಗಳು ಅನೇಕ ಶಾಸನಗಳಲ್ಲಿ ಕಾಣಸಿಗುತ್ತವೆ. ಉದಾಹರಣೆಗೆ ಸವಸಿಯ (ಧಾರವಾಡ ಜಿಲ್ಲೆಯ ಸಂಶಿ) 400 ಮಹಾಜನರನ್ನು 1148ರ ಒಂದು ಶಾಸನದಲ್ಲಿ ಇದನ್ನು ಯಮನಿಯಮಸ್ವಾಧ್ಯಾಯ ಧ್ಯಾನಧಾರಣ ಮೋನಾನುಷ್ಠಾನ ಪರಾಯಣರು ಋಗ್ಯಜುಸ್ಸಾಮಾಥರ್ವವೇದಪಾರಗರು ಅಶೇಷವೈಶೇಷಿಕ ನೈಯಾಯಿಕ ಲೋಕಾಯತ ಸಾಂಖ್ಯ ಬೌದ್ಧ ಮೀಮಾಂಸಾದ್ಯನೇಕ ತರ್ಕಶಾಸ್ತ್ರಪರಿಣತರು ಮನ್ವಾದ್ಯಷ್ಟಾದಶ ಧರ್ಮಕುಶಳರು ಅಗ್ನಿಷ್ಟೋಮಾದಿ ಸಪ್ತಸೋಮ ಸಂಸ್ಥಾವಭೃಥಾವಗಾಹನ ಪವಿತ್ರೀಕೃತಗಾತ್ರರು ಸರ್ವಾತಿಥ್ಯಾಭ್ಯಾಗತವಿಶೇಷಾಷ್ಟ ವಿದ್ವಜ್ಜನಪೂಜಿತರು ಸ್ವಧರ್ಮ ಪ್ರತಿಪಾಲಕರು ವಿಚಾರಸಂಪನ್ನರು ಶಾಪಾನುಗ್ರಹ ಸಮರ್ಥರು ಶ್ರೀಮನ್ಮಹಾವಡ್ಡಗ್ರಾಮ ಅಗ್ರಹಾರಂ ಸವಸಿಯ ಅಶೇಷ ಮಹಾಜನಂ ನಾಲ್ನೂರ್ವರು ಎಂದು ವರ್ಣಿಸಲಾಗಿದೆ. ಕುಪ್ಪಟೂರಿನ ಮಹಾಜನರು ಋಗ್ಯಜುಸ್ಸಾಮಾಥರ್ವಣ ವೇದಾರ್ಥ ತತ್ತ್ವಜ್ಞರೂ ನಾಟಕ ಇತಿಹಾಸ ಮೀಮಾಂಸಾ ವಾತ್ಸ್ಯಾಯನ ಭರತ ಗಣಿತ ಇತ್ಯಾದಿ ಶಾಸ್ತ್ರಗಳಲ್ಲಿ ಪ್ರವೀಣರೂ ಆಗಿದ್ದರು.

ಮಹಾಜನರು ಮಾಡಬೇಕಾಗಿದ್ದ ಷಟ್ಕರ್ಮಗಳಲ್ಲಿ ಅಧ್ಯಯನ ಮತ್ತು ಅಧ್ಯಾಪನಗಳೂ ಮುಖ್ಯವಾಗಿದ್ದುದರಿಂದ ಅಗ್ರಹಾರಗಳನ್ನು ಸ್ಥಾಪಿಸುವುದರ ಮೂಲಕ ವಿದ್ಯಾಕೇಂದ್ರಗಳನ್ನೇ ಸ್ಥಾಪಿಸಿದಂತಾಗಿ, ವಿದ್ಯಾಪ್ರಸಾರಕಾರ್ಯ ಸತತ ಹಾಗೂ ಸುಗಮವಾಗಿ ನಡೆಯುತ್ತಿತ್ತು.

ಮಹಾಜನರ ಸಂಸ್ಥೆ ಸಾಕಷ್ಟು ಸ್ಥಿರವಾಗಿ ಸ್ಥಾಪಿತವಾಗಿತ್ತು. ಆದರೆ 10ನೆಯ ಶತಮಾನದ ಉತ್ತರ ಮೇರೂರಿನ ಶಾಸನ ಇತ್ಯಾದಿಗಳಿಂದ ತಿಳಿದುಬರುವ ರೀತಿಯ ಚುನಾವಣೆಗಳು ಮತ್ತು ಸಮಿತಿಗಳನ್ನೊಳಗೊಂಡಿದ್ದ ತಮಿಳುನಾಡಿನ ಸಭಾ ರೀತಿಯ ಆಡಳಿತ ವ್ಯವಸ್ಥೆಯನ್ನು ಕರ್ನಾಟಕದ ಮಹಾಜನರೂ ರಚಿಸಿಕೊಳ್ಳುತ್ತಿದ್ದುದು ಬೆಳಕಿಗೆ ಬಂದಿಲ್ಲ. ಅವರೇ ಸಾಮೂಹಿಕವಾಗಿ ಗ್ರಾಮಾಡಳಿತವನ್ನು ನಿರ್ವಹಿಸುತ್ತಿದ್ದರೆಂದು ಕಾಣುತ್ತದೆ. ಇನ್ನೂರು, ಐನೂರು ಎಂದು ಮುಂತಾದ ಈ ಮಹಾಜನರ ಸಂಖ್ಯೆಗಳೂ ಇದನ್ನೇ ಸೂಚಿಸುತ್ತವೆ. ಇಷ್ಟು ಸಂಖ್ಯೆಯಲ್ಲಿ ಸದಸ್ಯರನ್ನು ಆರಿಸುವುದಾಗಲಿ ಚುನಾಯಿಸುವುದಾಗಲೀ ವ್ಯಾವಹಾರ್ಯವೆನಿಸಿರಲಾರದು. ಇವು ಬಹುಶಃವಯಸ್ಕ ಬ್ರಾಹ್ಮಣರ, ಇಲ್ಲವೇ ಬ್ರಾಹ್ಮಣ ಗೃಹಸ್ಥರ ಸಂಖ್ಯೆಯನ್ನು ಸೂಚಿಸುವಂತಿವೆ. ಈ ಮಹಾಜನರು ಒಂದು ದೇವಸ್ಥಾನದಲ್ಲೋ ಮಂಟಪದಲ್ಲೋ ಸಭೆ ಸೇರಿ, ಗ್ರಾಮಾಡಳಿತಕ್ಕೆ ಸಂಬಂಧಿಸಿದ ವಿಷಯಗಳನ್ನು ಚರ್ಚಿಸುತ್ತಿದ್ದರು. ಸಾಮಾನ್ಯವಾಗಿ, ಎಲ್ಲ ಮುಖ್ಯಗ್ರಾಮಕಾರ್ಯಗಳೂ ನಡೆಯುತ್ತಿದ್ದುದು ಅವರ ಸನ್ನಿಧಿಯಲ್ಲೇ. ಕೆರೆ ಕಾಲುವೆಗಳನ್ನು ನಿರ್ಮಾಣ ಮಾಡುವುದರ ಮೂಲಕ ವ್ಯವಸಾಯವನ್ನು ಅಭಿವೃದ್ಧಿಗೊಳಿಸುವುದು, ಮಠ ದೇವಸ್ಥಾನಗಳ ಆಡಳಿತವನ್ನು ನಿರ್ವಹಿಸುವುದು, ದಾನಿಗಳು ಭೂಮಿಯನ್ನೋ ಹಣವನ್ನೋ ದಾನ ಮಾಡಿದರೆ ಅದನ್ನು ರಕ್ಷಿಸಿ ಧರ್ಮಕಾರ್ಯಗಳಿಗಾಗಿ ವಿನಿಯೋಗಿಸುವುದು - ಇವು ಈ ಅಗ್ರಹಾರದ ಮಹಾಜನಗಳ ಕರ್ತವ್ಯಗಳಾಗಿದ್ದುವು.

ಊರಿನಲ್ಲಿ ಯಾವುದಾದರೂ ವಿವಾದ ತಲೆದೋರಿದಾಗ ಅದು ಮಹಾಜನರ ಸಮಕ್ಷಮದಲ್ಲಿ ಇತ್ಯರ್ಥವಾಗುತ್ತಿತ್ತು. ಕೆಲವು ಅಗ್ರಹಾರಗಳಲ್ಲಿ ಸುಶಿಕ್ಷಿತ ರಕ್ಷಣಾಪಡೆಗಳಿದ್ದುದೂ ಕೋಟೆಕಂದಕಗಳಿದ್ದುದೂ ಹಲವು ಬಾರಿ ಮಹಾಜನರು ಶಾಸ್ತ್ರಗಳಲ್ಲಿ ಮಾತ್ರವಲ್ಲದೆ ಶಸ್ತ್ರಗಳಲ್ಲಿಯೂ ಪರಿಣತರಾಗಿದ್ದರೆಂಬುದೂ ಶಾಸನಗಳಿಂದ ತಿಳಿಯುತ್ತದೆ. ಕೆಲವು ಸಂದರ್ಭಗಳಲ್ಲಿ ಮಹಾಜನರೇ ಶೌರ್ಯಪ್ರದರ್ಶನ ಮಾಡಿದ ಉದಾಹರಣೆಗಳೂ ಇವೆ. ಅಗ್ರಹಾರಗಳು ಉನ್ನತ ವಿದ್ಯಾಕೇಂದ್ರಗಳಾಗಿದ್ದುವಷ್ಟೇ ಅಲ್ಲದೆ, ಸ್ವಯಂ ಆಡಳಿತ ಪದ್ಧತಿಯ ಮಾದರಿಗಳೂ ಆಗಿದ್ದುವು. ಪ್ರಾಚೀನ ಸಂಪ್ರದಾಯ ಮತ್ತು ವಿದ್ವತ್‌ಧಾರೆ ಅವಿಚ್ಛಿನ್ನವಾಗಿ ಹರಿದು ಬರಲು ಈ ಅಗ್ರಹಾರಗಳು ಬಹು ಸಹಾಯಕವಾಗಿದ್ದುವು. **(ಕೆ.ವಿ.ಆರ್.;ಎಸ್.ಜಿ.)**

**ಅಗ್ರಹಾರ ಬಾಚಹಳ್ಳಿ :** ಮಂಡ್ಯಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕಿನಲ್ಲಿ ಕಸಬೆಯಿಂದ ಈಶಾನ್ಯಕ್ಕೆ ಸು.5ಕಿಮೀ ದೂರದಲ್ಲಿರುವ ಗ್ರಾಮ.

13ನೆಯ ಶತಮಾನದಲ್ಲಿ ಹೊಯ್ಸಳ ಸೋಮೇಶ್ವರ ವಿಜಯಮಹೋತ್ಸವವನ್ನು ಆಚರಿಸುವಾಗ ಈ ಗ್ರಾಮ ಸ್ಥಾಪಿತವಾದಂತೆ ತೋರುತ್ತದೆ. ಇಲ್ಲಿ ಹುಣಸೇಶ್ವರ ದೇವಾಲಯವಿದೆ. ದೇವಾಲಯದ ಆಗ್ನೇಯಕ್ಕೆ ಇರುವ ಮೂರು ಗರುಡಗಂಬಗಳು ಕುತೂಹಲಕಾರಿಯಾದವು. ಅವುಗಳ ಎತ್ತರ 12'. ಪತ್ರಿಯೊಂದು ಕಂಬದ ಮೇಲೂ ಮಟ್ಟಸ ಚಪ್ಪಡಿಗಳಿವೆ. ಅವುಗಳ ಮೇಲೆ ಸು.2' ಎತ್ತರದ ಆನೆಯ ಶಿಲ್ಪಗಳಿವೆ.

ಮಧ್ಯದ ಕಂಬದ ಆನೆಯ ಮೇಲೆ ಒಬ್ಬ ಪುರುಷ ಮತ್ತು ಅವನ ಹಿಂದೆ ಒಬ್ಬ ಸ್ತ್ರೀ, ಉಳಿದೆರಡು ಕಂಬಗಳ ಮೇಲೆ ಒಬ್ಬರ ಹಿಂದೆ ಒಬ್ಬರಂತೆ ಮೂವರು ಪುರುಷರು ಕುಳಿತಿರುವಂತೆ, ಅಲ್ಲದೆ ಪ್ರತಿಯೊಂದರಲ್ಲೂ ಮುಂದುಗಡೆ ಇರುವ ಗಂಡಾನೆಯ ಗಂಡಸ್ಥಳದ ಮೇಲೆ ಕುಳಿತಿರುವ ಗರುಡನೊಡನೆ ಹೋರಾಡುತ್ತಿರುವಂತೆ ತೋರಿಸಲಾಗಿದೆ. ಈ ಕಂಬಗಳ ಕೆಳಭಾಗದಲ್ಲಿ ಕಂಡರಿಸಲಾಗಿರುವ ಶಾಸನಗಳು ಮೇಲಿನ ಶಿಲ್ಪಗಳಿಗೆ ಮತ್ತು ಹೊಯ್ಸಳರ ಕಾಲದಲ್ಲಿ ಪ್ರಚಲಿತವಾಗಿದ್ದ ಗರುಡ ಸಂಪ್ರದಾಯದ ಬಗ್ಗೆ ವಿವರಗಳನ್ನು ಒದಗಿಸುತ್ತವೆ. ಗರುಡರು ತಮ್ಮ ಅರಸ ಮೃತರಾದರೆ ತಾವು ಸಾಯುವೆವು ಎಂದು ಪ್ರತಿಜ್ಞೆ ಕೈಗೊಳ್ಳುತ್ತಿದ್ದರು. 2ನೆಯ ಬಲ್ಲಾಳನೊಡನೆ ಸಿವನೆಯ ನಾಯಕ ಎಂಬುವನು ತನ್ನ ಐವರು ಲೆಂಕರೊಂದಿಗೆ ಭಾಷೆಯನ್ನು ಪೂರೈಸಿದ, 2ನೆಯ ನರಸಿಂಹನೊಡನೆ ಲಖ್ಖೆಯ ನಾಯಕ ಎಂಬುವನು ತನ್ನ ಹೆಂಡತಿ ಗಂಗಾದೇವಿ ಮತ್ತು ಮೂವರು ಲೆಂಕರೊಂದಿಗೆಯೂ ಸೋಮೇಶ್ವರನೊಡನೆ (1253) ಕಂನೆಯ ನಾಯಕ ಎಂಬುವನು ತನ್ನ ಮೂವರು ಹೆಂಡಿರು, ಹತ್ತು ಜನ ಲೆಂಕಿತಿಯರು ಮತ್ತು 21ಜನ ಲೆಂಕರ ಜೊತೆಯಲ್ಲಿ ಗರುಡನನ್ನು ಅಪ್ಪಿ ಭಾಷೆಯನ್ನು ಪೂರೈಸಿದರು; 3ನೆಯ ನರಸಿಂಹನೊಡನೆ (1292) ಸಿಂಗಯನಾಯಕ ತನ್ನ ಮೂವರು ಹೆಂಡಿರು, ಅಷ್ಟು ಜನ ಲೆಂಕಿತಿಯರು ಮತ್ತು ಇಪ್ಪತ್ತು ಲೆಂಕರೊಡನೆ ಭಾಷೆಯನ್ನು ಪೂರೈಸಿದ ಎಂದು ಈ ಶಾಸನಗಳು ತಿಳಿಸುತ್ತವೆ. ಈ ವ್ಯಕ್ತಿಗಳು ವಂಶಪಾರಂಪರ್ಯವಾಗಿ ಅರಸರ ಸೇವೆಯಲ್ಲಿರುತ್ತಿದ್ದಂತೆ ತೋರುತ್ತದೆ. ಸ್ವಾಮಿನಿಷ್ಠೆಯಲ್ಲಿ ಗರುಡರು ವಿಷ್ಣುವಿನ ಗರುಡನಿಗಿಂತ ಯಾವ ರೀತಿಯಲ್ಲೂ ಕಡಿಮೆಯಿಲ್ಲ ಎಂಬ ಮನೋಭಾವವನ್ನು ಗರುಡನೊಂದಿಗೆ ಹೋರಾಡುತ್ತಿರುವ ಹುಣಸೇಶ್ವರ ದೇವಾಲಯದ ಗರುಡಗಂಬದ ಶಿಲ್ಪರಚನೆಗಳು ಸೂಚಿಸುತ್ತವೆ. **(ಕೆ.)**

**ಅಗ್ರಹಾರ ಬೆಳಗುಲಿ :** ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಚನ್ನರಾಯಪಟ್ಟಣದಿಂದ ಈಶಾನ್ಯಕ್ಕೆ 27ಕಿಮೀ ದೂರದಲ್ಲಿದೆ.



ಬೆಟ್ಟೇಶ್ವರ ದೇವಾಲಯ

ಈ ಗ್ರಾಮದ ಪ್ರಾಚೀನ ಹೆಸರು ಬೆಳ್ಗುಲಿ ಅಥವಾ ಪನಜಾಡಿಯ ಬೆಳ್ಗುಲಿ. 1210ರಲ್ಲಿ 2ನೆಯ ಬಲ್ಲಾಳನ ಅಧಿಕಾರಿ ಕೇಶಿರಾಜ ಈ ಗ್ರಾಮವನ್ನು ಅಗ್ರಹಾರವನ್ನಾಗಿ ಮಾಡಿ ಕೇಶವಪುರ ಎಂಬ ಹೆಸರಿಟ್ಟು ಅಲ್ಲಿ ಕೇಶವಸಮುದ್ರ ಮತ್ತು ಲಕ್ಷ್ಮೀಸಮುದ್ರವೆಂಬ ಕೆರೆಗಳನ್ನು ಕಟ್ಟಿಸಿ ಕೇಶವ ಮತ್ತು ಈಶ್ವರ ದೇವರನ್ನು ಪ್ರತಿಷ್ಠಾಪಿಸಿದ. ಗ್ರಾಮದ ಈಶಾನ್ಯ ದಿಕ್ಕಿನಲ್ಲಿ ಕೇಶವಸಮುದ್ರವಿದೆ. ಈ ಕೆರೆಯ ಬಳಿ ಬೆಟ್ಟೇಶ್ವರ ಅಥವಾ ಕೇಶವೇಶ್ವರ ದೇವಾಲಯ ಇದೆ. ಈ ದೇವಾಲಯದ ದ್ವಾರ ದಕ್ಷಿಣ ಮುಖವಾಗಿದೆ. ದೇವಾಲಯ ಪೂರ್ವದಿಂದ ಪಶ್ಚಿಮಕ್ಕೆ ವಿಶಾಲ ಜಗತಿಯ ಮೇಲೆ ಹರಡಿಕೊಂಡಿದೆ. ಇದರಲ್ಲಿ ಒಂದು ನವರಂಗ, ದಕ್ಷಿಣದ ಮುಖಮಂಟಪಯುತ ಪ್ರವೇಶದ್ವಾರ, ಪಶ್ಚಿಮದ ಕಡೆ ಶಿವಲಿಂಗವಿರುವ ಅಂತರಾಳಯುತ ಗರ್ಭಗೃಹ ಮತ್ತು ಉತ್ತರದ ಕಡೆ ಕೇಶವ ವಿಗ್ರಹವಿರುವ ಗರ್ಭಗುಡಿ ಇವೆ. ಪೂರ್ವದಲ್ಲಿ ಹಲವು ಕಂಬಗಳ ಮೇಲೆ ಎತ್ತಿದ, ಸುತ್ತಲೂ ಕಕ್ಷಾಸನವಿರುವ, ತೆರೆದ ಮಹಾಮಂಟಪವಿದೆ. ಹೊರಮೈ ಕೇವಲ ಅರೆಗಂಬಗಳಿಂದ ಅಲಂಕೃತವಾಗಿದೆ. ಈಗಿರುವ ಗೋಪುರಗಳು ಇತ್ತೀಚಿನವು. ಒಳಗಿನ ಕಂಬಗಳನ್ನು ತಿರುಗಣೆಯಿಂದ ಮಾಡಲಾಗಿದೆ. ಒಳಗಿರುವ ಬೃಹತ್ ನಂದಿ, ಷಣ್ಮುಖ, ಭೈರವ, ದುರ್ಗ, ಸರಸ್ವತಿ, ವಿನಾಯಕ ವಿಗ್ರಹಗಳು ಉತ್ತಮ ಶಿಲ್ಪಗಳು.

ಈಗ ಶಿಥಿಲವಾಗಿರುವ ಸೋಮೇಶ್ವರ (1154) ಮತ್ತು ಅಮೃತೇಶ್ವರ (1134) ದೇವಾಲಯಗಳೂ ಇಲ್ಲಿವೆ. **(ಕೆ.)**

**ಅಘನಾಶಿನಿ:** ಉತ್ತರ ಕನ್ನಡ ಜಿಲ್ಲೆಯ ಒಂದು ನದಿ. ಶಿರಸಿ, ಸಿದ್ದಾಪುರ ಮತ್ತು ಕುಮಟ ತಾಲ್ಲೂಕುಗಳಲ್ಲಿ ಹರಿಯುತ್ತದೆ. ಈ ನದಿಗೆ ತದಡಿ ಮತ್ತು ದೋಣಿಹಳ್ಳ ಎಂಬ ಹೆಸರುಗಳೂ ಉಂಟು. ಶಿರಸಿಯ ಹತ್ತಿರದ ಶಂಕರಹೊಂಡದಿಂದ ಉಗಮಿಸಿ ಪಶ್ಚಿಮಾಭಿಮುಖವಾಗಿ ಸುಮಾರು 72ಕಿಮೀ. ದೂರ ಹರಿದು ಗಂಗಾವಳಿ ನದಿಯಿಂದ 10ಕಿಮೀ. ದಕ್ಷಿಣದಲ್ಲಿ ಅರಬ್ಬೀ ಸಮುದ್ರವನ್ನು ಸೇರುತ್ತದೆ. ಶಿರಸಿಯ ಪಶ್ಚಿಮದಲ್ಲಿ ಸುಮಾರು 24ಕಿಮೀ. ದೂರದಲ್ಲಿರುವ ಮಂಜಗುಣಿ ಬಳಿಯ ಹೊಂಡದಿಂದ ಹುಟ್ಟುವ ಬಾಕುರ್ ಹೊಳೆ ಮತ್ತು ಶಿರಸಿ ಹತ್ತಿರ ಉದ್ಭವಿಸುವ ದೋಣಿಹಳ್ಳ ಇವು ಅಘನಾಶಿನಿ ನದಿಯ ಮೂಲಗಳು. ಈ ಎರಡೂ ತೊರೆಗಳು ಶಿರಸಿಯ ದಕ್ಷಿಣಕ್ಕೆ 16ಕಿಮೀ ದೂರದಲ್ಲಿ ಮುಟ್ಟಳ್ಳಿ ಎಂಬಲ್ಲಿ ಸೇರುತ್ತವೆ. ಮುಂದೆ ದೋಣಿಹಳ್ಳ ಎಂಬ ಹೆಸರಿನಿಂದ ಪಶ್ಚಿಮಕ್ಕೆ ಸುಮಾರು 24ಕಿಮೀ ಹರಿದು ಬಿಳಗಿಯ ಉತ್ತರಕ್ಕೆ ಸು.13ಕಿಮೀ ದೂರದಲ್ಲಿ ನದಿ ಕೆಳಗೆ ಧುಮುಕಿ ಉಂಚಳ್ಳಿ ಜಲಪಾತವನ್ನು (ನೋಡಿ: ಲುಷಿಂಗ್‌ಟನ್, ಕೆಪ್ಪಜೋಗ) ನಿರ್ಮಿಸಿದೆ. ಜಲಪಾತದ ಪಶ್ಚಿಮಕ್ಕೆ 16ಕಿಮೀ ದೂರದಲ್ಲಿ ಉಪ್ಪಿನ ಪಟ್ಟಣ ಎಂಬಲ್ಲಿ ಇದು ಸಮುದ್ರಭರತವನ್ನು ಮುಟ್ಟುವುದು. ನದಿಯ ದಂಡೆಯ ಮೇಲಿರುವ ತದಡಿ ಮತ್ತು ಅಘನಾಶಿನಿ ಗ್ರಾಮಗಳ ಹೆಸರಿನಿಂದ ಈ ಭಾಗದಲ್ಲಿ ನದಿ ಪ್ರಸಿದ್ಧವಾಗಿದೆ. ಉಪ್ಪಿನಪಟ್ಟಣದಿಂದ ಮುಂದೆ, ಈ ನದಿ ಹಿಂದೆ ವ್ಯಾಪಾರಕ್ಕೆ ಪ್ರಸಿದ್ಧವಾಗಿದ್ದ ಮಿರ್ಜಾನ್‌ಗೆ 13ಕಿಮೀ ದೂರದಲ್ಲಿ ನೈಋತ್ಯಕ್ಕೆ, ಅನಂತರ ವಾಯುವ್ಯಕ್ಕೆ ಹರಿದು ತದಡಿ ಖಾರಿ ಮುಟ್ಟುವುದು. ಖಾರಿ ಸುಮಾರು 5ಕಿಮೀ ಗಳಷ್ಟು ಉದ್ದವಿದ್ದು ಉತ್ತರ ದಕ್ಷಿಣ ದಡಗಳಲ್ಲಿ 100-140ಮೀ ಎತ್ತರದ ಬೆಟ್ಟಗಳ ನಡುವೆ ಇದೆ. ಅಘನಾಶಿನಿಯ ಕೊನೆಯ 24ಕಿಮೀ ಗಳಷ್ಟು ಭಾಗ 4 ರಿಂದ 9 ಟನ್ ತೂಕದ ದೋಣಿಗಳ ಪ್ರಯಾಣಕ್ಕೆ ಅನುಕೂಲವಾಗಿದೆ. ಆದರೆ ಸುಮುದ್ರದ ಬಳಿ ಇದರ ಮುಖದಲ್ಲಿ ಸುಮಾರು ಒಂದೂವರೆ ಕಿಮೀ ಉದ್ದದ ಭೂಮಿಯ ಅಡ್ಡ ಚಾಚಣಿಕೆ ಇರುವುದರಿಂದ ಮಳೆಗಾಲದಲ್ಲಿ ಈ ಭಾಗದ ಪ್ರಯಾಣ ಅಪಾಯಕಾರಿ ಎನ್ನಲಾಗಿದೆ.

ಅಘನಾಶಿನಿ ಊರಿನ ಹತ್ತಿರ ಸಾಣೆಕಟ್ಟೆ ಎಂಬಲ್ಲಿ ಈ ನದಿಯ ಕೋಡಿಗೆ ಒಡ್ಡುಕಟ್ಟಿ ದೊಡ್ಡ ಪ್ರಮಾಣದಲ್ಲಿ ಉಪ್ಪನ್ನು ತಯಾರಿಸುತ್ತಾರೆ. ಈ ನದಿಯ ಎರಡೂ ಕಡೆಯ ಪ್ರದೇಶದಲ್ಲಿ ಬತ್ತ ತೆಂಗು ಬಾಳೆ ಅಡಕೆ ಮುಂತಾದವನ್ನು ಬೆಳೆಯುತ್ತಾರೆ. ಕುಮಟ ತಾಲ್ಲೂಕಿನಲ್ಲಿ ಈ ನದಿಯಿಂದ ಮೀನು ಹಿಡಿಯುವುದು ಒಂದು ಉದ್ಯಮವಾಗಿದೆ. ಅಘನಾಶಿನಿ ನದಿಯಿಂದ ವಿದ್ಯುತ್ ಉತ್ಪಾದನೆಯನ್ನು ಕೈಗೊಳ್ಳುವ ಸಾಧ್ಯತೆಯಿದೆ.

ಅಘನಾಶಿನಿ ಎಂದರೆ ಪಾಪವನ್ನು ನಾಶಮಾಡತಕ್ಕ ಪವಿತ್ರ ನದಿಯೆಂದು ಅರ್ಥ. ಈ ನದಿಯ ಸಂಗಮದ ಉತ್ತರಕ್ಕೆ ಗೋಕರ್ಣ ಕ್ಷೇತ್ರವಿದೆ. **(ಟಿ.ಪಿ.ಎಸ್.ಆರ್.)**

**ಅಘಲಯ :** ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕಿನ ಒಂದು ಹಳ್ಳಿ. ಶ್ರವಣಬೆಳಗೊಳದ ಆಗ್ನೇಯಕ್ಕೆ 8ಕಿಮೀ ದೂರದಲ್ಲಿದೆ.

ಇಲ್ಲಿರುವ ಮಲ್ಲೇಶ್ವರ ದೇವಾಲಯ ಹೊಯ್ಸಳ ಶೈಲಿಯದು. ಸು.1260ರ ರಚನೆ. ಇದು ತ್ರಿಕೂಟಾಚಲ. 30 ಕಂಬಗಳುಳ್ಳ ನವರಂಗ 100' ಉದ್ದ 75' ಅಗಲವಿದೆ. ಇಲ್ಲಿರುವ ಒಂದೇ ರೀತಿಯ ಮೂರು ಗರ್ಭಗುಡಿಗಳ ಬಾಗಿಲುವಾಡಗಳಲ್ಲೂ ದ್ವಾರಪಾಲಕರ ಶಿಲ್ಪಗಳಿವೆ. ನವರಂಗದಲ್ಲಿ ಏಳು ಗೂಡುಗಳಿದ್ದು ಅವುಗಳಲ್ಲಿ ನಾಗ, ಸೂರ್ಯ, ಸಪ್ತಮಾತೃಕೆಯರು, ವೀರಭದ್ರ, ಮಹಿಷಾಸುರಮರ್ದಿನಿ, ಷಣ್ಮುಖ ಮುಂತಾದ ದೇವರುಗಳಿವೆ. ನವರಂಗದ ಮುಂದೆ ಮಂಟಪವಿದ್ದು. ಪೂರ್ವದಲ್ಲಿ ಮಾತ್ರ ಒಂದು ದ್ವಾರವಿದೆ. ದೇವಾಲಯದ ಗೋಡೆಯ ಹೊರಮೈಯಲ್ಲಿ ಮತ್ಸ್ಯ, ಕೂರ್ಮ, ವರಾಹ, ಬುದ್ಧ, ಬಲರಾಮ, ಶ್ರೀರಾಮ, ಕೃಷ್ಣ, ವಿಷ್ಣು, ಪಾರ್ವತಿ, ಭೈರವ

ಮುಂತಾದ ಶಿಲ್ಪಗಳಿವೆ. ವಿನ್ಯಾಸ, ಅಲಂಕರಣ ಇತ್ಯಾದಿಗಳಲ್ಲಿ ಈ ದೇವಾಲಯ ಇದೇ ತಾಲ್ಲೂಕಿನ ಗೋವಿಂದನಹಳ್ಳಿಯ ದೇವಾಲಯವನ್ನು ಹೋಲುತ್ತದೆ. ಇಲ್ಲಿಯ ಲಕ್ಷ್ಮೀನಾರಾಯಣ ದೇವಸ್ಥಾನ ಸು.17ನೆಯ ಶತಮಾನದಲ್ಲಿ ನಿರ್ಮಿತವಾದ ಸಾಮಾನ್ಯ ಕಟ್ಟಡ. **(ಎ.ವಿ.ಎನ್.)**

**ಅಚಲಾನಂದದಾಸ :** ಸು.15ನೆಯ ಶತಮಾನದಲ್ಲಿದ್ದ ಹರಿದಾಸರು. ದಾಸಸಾಹಿತ್ಯದ ಮೊದಲಿಗರೆಂದೂ ಕಾಲ 9ನೆಯ ಶತಮಾನವೆಂದೂ ಪ್ರತೀತಿ ಇತ್ತು. ಇವರ ಒಂದು ಉಗಾಭೋಗದ 'ಕೇಳೂ ಜೀವವೆ ನೀ ಮಧ್ವಮತವನನುಸರಿಸಿ, ಶ್ರೀಲೋಲನಂಘ್ರಿಗಳ ನೆನೆದು ಸುಖಿಸೋ' ಎಂಬ ಒಂದು ಪಾದದಲ್ಲಿ ಮಧ್ವಮತದ ಉಲ್ಲೇಖವಿದೆ. 13ನೆಯ ಶತಮಾನದಲ್ಲಿ ಪ್ರಚಾರಕ್ಕೆ ಬಂದ ಮಧ್ವಮತವನ್ನು 9ನೆಯ ಶತಮಾನದಲ್ಲಿ ಉಗಾಭೋಗಗಳಿದ್ದ ಕುರುಹುಗಳಿಲ್ಲವಾದ್ದರಿಂದಲೂ ಇವರ ಕಾಲ 15ನೆಯ ಶತಮಾನಕ್ಕಿಂತ ಹಿಂದೆ ಹೋಗುವುದಿಲ್ಲವೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇವರು ಅಚಲಾನಂದವಿಠಲ ಎಂಬ ಅಂಕಿತವನ್ನಿಟ್ಟುಕೊಂಡು ಪದಗಳನ್ನು ರಚಿಸಿದ್ದಾರೆ. 'ಪಾತಕರೊಳಗೆಲ್ಲ ನಾನೆವೆಗ್ಗಳನಯ್ಯ, ಪ್ರಾಯಶ್ಚಿತಕ್ಕೆ ನಿನ್ನ ನಾಮವೇ ಘನವಯ್ಯ, ಪಾತಕವನು ಮಾಡಿದ್ದು ನಾನು, ಪಾತಕ ಪಾವನ ಎರಡೂ ನಿನ್ನಾಧೀನ, ಪಾತಕವೆನಗಿಲ್ಲ ಪ್ರಾಯಶ್ಚಿತ್ತವೆನಗಿಲ್ಲ, ಕೇಳಯ್ಯ ದೇವ ಅಚಲಾನಂದವಿಠಲ' ಎಂಬ ಒಂದು ಉಗಾಭೋಗ, ವಚನಗಳ ಶೈಲಿಯನ್ನು ನೆನಪಿಗೆ ತರುತ್ತದೆ. **(ಎಚ್.ಆರ್.ಡಿ.)**

**ಅಚ್ಯುತರಾಯ :** ವಿಜಯನಗರದ ತುಳುವ ವಂಶದ ರಾಜ (1520-42) ತುಳುವ ನರಸನಾಯಕನ ಮಗ. ಕೃಷ್ಣದೇವರಾಯನ ಬಲತಮ್ಮ. ನಾಗಲಾದೇವಿ ಈತನ ತಾಯಿ.

ಅರಮನೆಯಲ್ಲಿ ಪಿತೂರಿಗಳನ್ನು ತಪ್ಪಿಸಲು ಕೃಷ್ಣದೇವರಾಯ ಇವನನ್ನು ಚಂದ್ರಗಿರಿಯಲ್ಲಿ ಸ್ವಲ್ಪಕಾಲ ಬಂಧನದಲ್ಲಿಟ್ಟಿದ್ದ. ಆದರೆ ಕೊನೆಗೆ ಇವನನ್ನೇ ಸಿಂಹಾಸನಕ್ಕೆ ಉತ್ತರಾಧಿಕಾರಿಯೆಂದು ನೇಮಿಸಿದ್ದರಿಂದ ಅವನ ಆಳ್ವಿಕೆಯ ಕೊನೆಯಲ್ಲಿ ಇವನೂ ಆಡಳಿತದಲ್ಲಿ ಸಹಕರಿಸುತ್ತಿದ್ದನೆಂದು ಕಾಣುತ್ತದೆ. 1528ರ ಒಂದು ಶಾಸನದಿಂದ ಇವನು ಚಕ್ರವರ್ತಿ ಬಿರುದನ್ನು ಹೊಂದಿ ರಾಜ್ಯವನ್ನಾಳುತ್ತಿದ್ದನೆಂದು ತಿಳಿದುಬರುತ್ತದೆ.

ಕೃಷ್ಣದೇವರಾಯ ಮೃತನಾದಾಗ ಅಚ್ಯುತರಾಯ ಚಂದ್ರಗಿರಿಯಲ್ಲಿದ್ದ. ಈ ಸಂದರ್ಭವನ್ನು ಉಪಯೋಗಿಸಿಕೊಂಡು ಅಳಿಯ ರಾಮರಾಯ ತನ್ನ ಮೈದುನನನ್ನು (ಕೃಷ್ಣದೇವರಾಯನ ಕಿರಿಯ ಮಗ) ರಾಜನನ್ನಾಗಿ ಮಾಡಲು ಪ್ರಯತ್ನಿಸಿದ. ಅವನನ್ನು ರಾಜನೆಂದು ಘೋಷಿಸಿ ರಾಜ್ಯವನ್ನು ಕಸಿದುಕೊಳ್ಳಲು ಪ್ರಯತ್ನಿಸಿದ. ಇದರಲ್ಲಿ ರಾಮರಾಯನಿಗೆ ಹಲವು ಅಧಿಕಾರಿಗಳ ಬೆಂಬಲವೂ ಇತ್ತು. ಆದರೆ ಮೂವತ್ತು ಸಾವಿರ ಕಾಲಾಳುಗಳು, ಮೂರು ಸಾವಿರ ಆನೆಗಳ ಅಶ್ವ ಸೈನಿಕರು ಮತ್ತು ಮೂವತ್ತು ಸಾವಿರ ಪ್ರಬಲ ಸೈನ್ಯವಿದ್ದ ಚೋಳ ಪ್ರಾಂತ್ಯಾಧಿಕಾರಿ ನರಸಿಂಗರಾಯ ದಂಡನಾಯಕ ಇವನ ಬೆಂಬಲಿಗನಾಗಿದ್ದ. ಅಚ್ಯುತರಾಯ ಚಂದ್ರಗಿರಿಯಿಂದ ಬರುವವರೆಗೆ ಇವನ ಪರವಾಗಿ ರಾಜ್ಯವನ್ನು ನರಸಿಂಗರಾಯನೇ ವಹಿಸಿಕೊಂಡ. ಕೃಷ್ಣದೇವರಾಯನ ಮರಣದ ಸುದ್ದಿ ತಿಳಿದ ಕೂಡಲೆ ರಾಮರಾಯನ ಪಿತೂರಿಯನ್ನು ತಿಳಿದಿದ್ದ ಅಚ್ಯುತರಾಯ ಚಂದ್ರಗಿರಿಯಿಂದ ಮೊದಲು ತಿರುಪತಿಗೆ ಹೋಗಿ ಅಲ್ಲಿ ರಾಜ್ಯಪಟ್ಟಾಭಿಷೇಕ ಮಾಡಿಕೊಂಡ. ಅಲ್ಲಿಂದ ಕಾಳಹಸ್ತಿಗೆ ಹೋಗಿ ಅಲ್ಲಿ ಎರಡನೆಯ ಸಲ ರಾಜ್ಯಾಭಿಷೇಕ ಮಾಡಿಕೊಂಡ. ಅನಂತರ ತನ್ನ ಬೆಂಬಲಿಗರು ರಾಮರಾಯನ ಬಲವನ್ನು ಮುರಿದಿದ್ದನ್ನು ತಿಳಿದು 1530ರ ಪೂರ್ವಾರ್ಧದಲ್ಲಿ ವಿಜಯನಗರಕ್ಕೆ ಬಂದ. ರಾಮರಾಯನೊಡನೆ ಒಪ್ಪಂದ ಮಾಡಿಕೊಂಡು, ಕೃಷ್ಣದೇವರಾಯನ ಮಗನ ಪರವಾಗಿ ತಾವಿಬ್ಬರೂ ಆಳ್ವಿಕೆಯಲ್ಲಿ ಸಹಭಾಗಿಗಳಾಗಿರುವಂತೆ ಒಪ್ಪಿದ. ಇದಾದ ಅನಂತರ ಮೂರನೆಯ ಸಲ ಇವನ ಪಟ್ಟಾಭಿಷೇಕ ವಿಜಯನಗರದಲ್ಲಿ ನಡೆಯಿತು. ಈ ಏರ್ಪಾಡು 1535ವರೆಗೆ ಸಮರ್ಪಕವಾಗಿ ಮುಂದುವರಿಯಿತು. ಆ ಹೊತ್ತಿಗೆ ಕೃಷ್ಣದೇವರಾಯನ ಕಿರಿಯ ಮಗ ಮೃತನಾದ್ದರಿಂದ ರಾಮರಾಯನ ಬಲಕುಗ್ಗಿತು. ಇದರಿಂದ ಅಚ್ಯುತರಾಯನ ಧೋರಣೆ ಬದಲಾಯಿತು, ಅಂತರ್ಯುದ್ಧ ಪ್ರಾರಂಭವಾಯಿತು. ಕೊನೆಗೆ ರಾಮರಾಯ ಅಚ್ಯುತರಾಯನನ್ನೇ ಸೆರೆಹಿಡಿದು ತಾನೇ ರಾಜನೆಂದು ಘೋಷಿಸಿಕೊಂಡ. ಆದರೆ ಇದಕ್ಕೆ ಶ್ರೀಮಂತರ ವಿರೋಧವಿದ್ದುದರಿಂದ ಅಚ್ಯುತರಾಯನ ತಮ್ಮನ ಮಗನಾದ ಸದಾಶಿವರಾಯನ ಹೆಸರಿನಲ್ಲಿ ಆಡಳಿತವನ್ನು ನಡೆಸಲಾರಂಭಿಸಿದ. ಅದೇ ವೇಳೆಗೆ ರಾಜ್ಯದ ದಕ್ಷಿಣ ಭಾಗದಲ್ಲಿ ಉದ್ಭವವಾದ ದಂಗೆಗಳನ್ನು ಅಡಗಿಸಲು ರಾಮರಾಯ ರಾಜಧಾನಿಯನ್ನು ಬಿಡಬೇಕಾಯಿತು. ಆ ಸಂದರ್ಭದಲ್ಲಿ ಅಚ್ಯುತರಾಯ ಬಿಡುಗಡೆ ಹೊಂದಿದ. ಕೂಡಲೇ ರಾಮರಾಯ ಹಿಂದಿರುಗಿ ಅಚ್ಯುತರಾಯನೊಡನೆ ಒಪ್ಪಂದ ಮಾಡಿಕೊಂಡ. ಈ ಒಪ್ಪಂದದ ಪ್ರಕಾರ ಅಚ್ಯುತರಾಯನ ರಾಜತ್ವ ಭದ್ರವಾಯಿತು.

ಈ ಅಂತಃಕಲಹಗಳ ಜೊತೆಗೆ ಕೃಷ್ಣದೇವರಾಯನ ಮರಣದ ತರುಣದಲ್ಲೇ 1530-31ರಲ್ಲಿ ಬಿಜಾಪುರದ ಸುಲ್ತಾನನಾಗಿದ್ದ ಆದಿಲ್‌ಷಾ ವಿಜಯನಗರದ ಮೇಲೆ ದಂಡೆತ್ತಿ ಬಂದು, ರಾಯಚೂರು ಮತ್ತು ಮುದ್ಗಲ್ ಪ್ರದೇಶವನ್ನು ಆಕ್ರಮಿಸಿಕೊಂಡ. ಮತ್ತೆ ಎರಡನೆಯ ಬಾರಿ ನಾಗಲಾಪುರದವರೆಗೆ ದಂಡೆತ್ತಿ ಬಂದು ಅದನ್ನು ಹಾಳುಮಾಡಿದ. ಆದರೆ ಅಚ್ಯುತರಾಯ ಅವನ್ನು ಪುನಃ ಸ್ವಾಧೀನಪಡಿಸಿಕೊಂಡ. 1531-32ರಲ್ಲಿ ತಿರುವಡಿ (ಈಗಿನ ತಿರುವನಂತಪುರ ಮತ್ತು ತಿನ್ನವೆಲ್ಲಿ ಜಿಲ್ಲೆಯ ಭಾಗಗಳು) ರಾಜನ ಮೇಲೆ ದಂಡೆತ್ತಿ ಹೋದ. ಇದರ ಫಲವಾಗಿ ತಿರುವಡಿ ರಾಜ ಅಧೀನನಾಗಿ ಕಪ್ಪ ಕೊಡಲು ಒಪ್ಪಿದ. ಆಗ ದಂಗೆ ಎದ್ದಿದ್ದ ಉಮ್ಮತ್ತೂರು ಪಾಳೆಯಗಾರರನ್ನೂ ಅಡಗಿಸಿದ. ಸ್ವಲ್ಪ ಕಾಲಾನಂತರ ತಿರುವಡಿ ರಾಜ ಪಾಂಡ್ಯ ರಾಜ್ಯದ ದೊರೆ ಜಟಾವರ್ಮನ್ ತ್ರಿಭುವನ ಚಕ್ರವರ್ತಿ ವಲ್ಲಭ ದೇವನನ್ನು ಸೋಲಿಸಿ ಅವನನ್ನು ಪದಚ್ಯುತಗೊಳಿಸಿದ. ಅಚ್ಯುತರಾಯ ಪಾಂಡ್ಯ ರಾಜನಿಗೆ ಅವನ ರಾಜ್ಯವನ್ನು ಪುನಃ ಕೊಟ್ಟು ಅವನ ಮಗಳಾದ ವರದಾಂಬಳನ್ನು ವಿವಾಹವಾದ. 1531ರಲ್ಲಿ ಒರಿಸ್ಸಾ ರಾಜನಾಗಿದ್ದ ಪ್ರತಾಪರುದ್ರ ಹಿಂದೆ ಕೃಷ್ಣದೇವರಾಯನಿಗೆ ಒಪ್ಪಿಸಿದ್ದ ಕೃಷ್ಣಾನದಿಯ ದಕ್ಷಿಣಭಾಗದ ಪ್ರದೇಶಗಳನ್ನು ಸುಲ್ತಾನ ಕುತ್ಬ್‌ಷಾನ ಬೆಂಬಲದೊಡನೆ ಆಕ್ರಮಿಸಿದ. ಅಚ್ಯುತರಾಯ ಅವನನ್ನು ಸೋಲಿಸಿ, ಒರಿಸ್ಸಾದವರೆಗೆ ಹೋಗಿ ಅಲ್ಲಿ ತನ್ನ ವಿಜಯಸ್ತಂಭವನ್ನು ನೆಟ್ಟ. ಶಾಸನದ ಹೇಳಿಕೆಗಳ ಪ್ರಕಾರ ಸಿಂಹಳ ಅಚ್ಯುತರಾಯನ ಅಧೀನರಾಜ್ಯವಾಗಿತ್ತು. 1534ರಲ್ಲಿ ಇಸ್ಮಾಯಿಲ್ ಆದಿಲ್ ಷಾನ ಮರಣಾನಂತರ ಅಚ್ಯುತರಾಯ ರಾಯಚೂರು ಪ್ರದೇಶವನ್ನು ಆಕ್ರಮಿಸಿಕೊಂಡ. ಕೃಷ್ಣದೇವರಾಯನ ಕಾಲದಲ್ಲಿ ಸ್ನೇಹಿತರಾಗಿದ್ದ ಪೋರ್ಚುಗೀಸರು ಇವನ ಕಾಲದಲ್ಲಿ ವಿರೋಧಿಗಳಾದರು, ತೀರಪ್ರದೇಶದಲ್ಲಿ ವಸಾಹತುಗಳನ್ನು ಸ್ಥಾಪಿಸಿದರು, ದೇವಸ್ಥಾನಗಳನ್ನು ಕೊಳ್ಳೆ ಹೊಡೆದರು, ಜನರ ಕಗ್ಗೊಲೆ ಮಾಡಿದರು. ಇವನು ಅವರೊಡನೆ ಸ್ನೇಹಕ್ಕೆ ಪ್ರಯತ್ನಿಸಿದ. 1536-37ರಲ್ಲಿ ಗುತ್ತಿಯ ದಂಗೆಯನ್ನು ಅಡಗಿಸಿದ.

ತನ್ನ ಆಳ್ವಿಕೆಯ ಉದ್ದಕ್ಕೂ ಇವನು ರಾಜಕೀಯ ಪ್ರಕ್ಷುಬ್ಧತೆಯ ಮಧ್ಯೆ ತೊಳಲಾಡಬೇಕಾಗಿ ಬಂದರೂ ಈ ರಾಜ್ಯದ ಒಟ್ಟು ಕ್ಷೇಮಕ್ಕೆ ಭಂಗಬರದಂತೆ ಧೈರ್ಯ ಹಾಗೂ ಉಪಾಯದಿಂದ ಆಡಳಿತ ನಿರ್ವಹಿಸಿದನೆಂದೇ ಹೇಳಬಹುದು.

ಅಚ್ಯುತರಾಯ ದೇವಸ್ಥಾನಗಳಿಗೆ ಮತ್ತು ಬ್ರಾಹ್ಮಣರಿಗೆ ಅನೇಕ ದಾನವನ್ನು ಮಾಡಿದ್ದಾನೆ. ವೈಷ್ಣವಮತಾವಲಂಬಿಯಾಗಿದ್ದ ಈತ ಕಂಚಿಯ ವರದರಾಜ ದೇವಸ್ಥಾನಕ್ಕೆ ಅನೇಕ ಕೊಡುಗೆಗಳನ್ನು ಕೊಟ್ಟ. ಅಲ್ಲಿ ಲಕ್ಷ ಹೋಮವನ್ನು ಮಾಡಿದ ಅನೇಕ ತೆರಿಗೆಗಳಿಗೆ ವಿನಾಯತಿ ನೀಡಿದ. ವಿಜಯನಗರದ ವಿಠಲ ಸ್ವಾಮಿ ದೇವಸ್ಥಾನದಲ್ಲಿ ಹನ್ನೆರಡು ಶ್ರೀವೈಷ್ಣವ ಆಳ್ವಾರರ ಪ್ರತಿಮೆಗಳನ್ನು ಸ್ಥಾಪಿಸಿದ. ಆನಂದನಿಧಿ ಎಂಬ ಪುದುವಟ್ಟನ್ನು ಸ್ಥಾಪಿಸಿದ. ಕಂಚಿಯಲ್ಲಿ ತುಲಾಭಾರವನ್ನು ಮಾಡಿಕೊಂಡು ಒಂದು ಸಾವಿರ ಗೋವುಗಳನ್ನು ದಾನಮಾಡಿದ.

ಅಚ್ಯುತರಾಯಾಭ್ಯುದಯಮ್ ಮತ್ತು ಭಾಗವತ ಚಂಪೂಗಳನ್ನು ಬರೆದ ರಾಜನಾಥ ಡಿಂಡಿಮ, ವರದಾಂಬಿಕಾಪರಿಣಯದ ಕರ್ತೃ ತಿರುಮಲಾಂಬಾ ಇವನ ಪೋಷಣೆಯಲ್ಲಿದ್ದ ಮುಖ್ಯ ಕವಿಗಳು.

ಅಚ್ಯುತರಾಯನಿಗೆ ವರದಾಂಬಿಕಾ ಅಲ್ಲದೆ ಇನ್ನಿಬ್ಬರು ಪತ್ನಿಯರೂ ಇದ್ದರು. ಈತನಿಗೆ ವೆಂಕಟಾದ್ರಿ ಎಂಬ ಮಗನಿದ್ದ. ಅವನಿಗೆ 1530ರಲ್ಲಿ ಯುವರಾಜಪಟ್ಟವೂ ಆಗಿತ್ತು. ಅಚ್ಯುತರಾಯ 1542ರಲ್ಲಿ ಮೃತನಾದ. **(ಎ.ವಿ.)**

**ಅಜಿತಸೇನಾಚಾರ್ಯ :** 10ನೆಯ ಶತಮಾನದಲ್ಲಿದ್ದ ಕನ್ನಡ ನಾಡಿನಲ್ಲಿ ಅತ್ಯಂತ ಪ್ರತಿಷ್ಠೆಪಡೆದ ಜೈನಗುರು. ಇವರಿಗೆ ಭುವನಗುರುವೆಂಬ ಬಿರುದೂ ಇತ್ತು. ಇವರ ವಿದ್ಯಾಮಂಡಲ ಅನೇಕ ಕವಿಗಳಿಂದ ಮತ್ತು ಹಿರಿಯರಿಂದ ಕೂಡಿತ್ತಲ್ಲದೆ ಇವರ ಶಿಷ್ಯಪರಿವಾರ ಬಹು ದೊಡ್ಡದಾಗಿತ್ತು. ಶ್ರವಣಬೆಳಗೊಳದ ಗೊಮ್ಮಟೇಶ್ವರ ವಿಗ್ರಹವನ್ನು ಕೆತ್ತಿಸಿದ ಮಹಾಮಾತ್ಯ ಚಾವುಂಡರಾಯ ಮತ್ತು ಗಂಗವಂಶದ ಮಾರಸಿಂಹ ಇವರ ಶಿಷ್ಯರಾಗಿದ್ದರು. ಕನಕಸೇನ ಮತ್ತು ಮಲ್ಲಿಷೇಣರೂ ಇವರ ಶಿಷ್ಯವರ್ಗಕ್ಕೆ ಸೇರಿದವರು. ಅಜಿತಸೇನಾಚಾರ್ಯರು ತನಗೆ ಗುರುವಾಗಿದ್ದ ವಿಷಯವನ್ನು ಕನ್ನಡ ಕವಿ ರನ್ನ ತನ್ನ ಅಜಿತಪುರಾಣದಲ್ಲಿ ಹೇಳಿಕೊಂಡಿದ್ದಾನೆ. (ಎ.ಎನ್.ಯು.)

**ಅಜಿಲರು :** ವಿಜಯನಗರ ಸಾಮ್ರಾಜ್ಯದೊಂದಿಗೆ ತುಳುನಾಡು ವಿಲೀನಗೊಂಡ ಅನಂತರ ಅಲ್ಲಿ ತಲೆಯೆತ್ತಿದ ಹಲವು ಸ್ಥಳೀಕ ಮನೆತನಗಳಲ್ಲಿ ಒಂದು. ಮೊದಲು ವೇಣೂರಿನಿಂದ ಮತ್ತು ಅನಂತರ ಆಲದಂಗಡಿಯಿಂದ ಇವರು ಆಳಿದ ಸಂಸ್ಥಾನಕ್ಕೆ ಪೂಂಜಳಿ ಅಥವಾ ಪುಂಜಳಿಕೆಯ ರಾಜ್ಯ ಮತ್ತು ಅಜುವ ರಾಜ್ಯ ಎಂಬ ಹೆಸರುಗಳಿದ್ದುವು. ಇವರು ತಮ್ಮನ್ನು ಸಾಳುವ ವಂಶದವರೆಂದು ಕರೆದುಕೊಳ್ಳುತ್ತಿದ್ದರು. ವೇಣೂರಿನ ಮಹಾಲಿಂಗೇಶ್ವರ ಇವರ ಕುಲದೇವತೆಯಾದರೂ ಇವರು ಜೈನಧರ್ಮಾವಲಂಬಿಗಳಾಗಿದ್ದರು.

1408ರ ವಿಜಯನಗರದ ಶಾಸನವೊಂದರಲ್ಲಿ ಅಜಿಲರು ಬಂಗ ಮತ್ತು ಚೌಟ ಮನೆತನಗಳ ಅರಸುಗಳೊಂದಿಗೆ ಆಡಳಿತ ಕ್ಷೇತ್ರದಲ್ಲಿ ವಿಜಯನಗರ ರಾಜ್ಯಪಾಲನ ಸಹಾಯಕರಾಗಿ 1405ರಲ್ಲಿ ಕಾಣಿಸಿಕೊಳ್ಳುತ್ತಾರೆ. ಅಜಿಲ ಅರಸುಗಳ ಪೈಕಿ ಮುಖ್ಯನಾದವನು 4ನೆಯ ವೀರತಿಮ್ಮರಾಜ ಒಡೆಯ. ರಾಜಕುಮಾರನ ಅಳಿಯನೂ ಪಾಂಡ್ಯಕದೇವಿಯ ಮಗನೂ ಜೈನಗುರು ಚಾರುಕೀರ್ತಿದೇವರ ಪ್ರಿಯಾಗ್ರಶಿಷ್ಯನೂ ಆಗಿದ್ದ ಈ ತಿಮ್ಮರಾಜನೇ ವೇಣೂರಿನ ಗೊಮ್ಮಟಶಿಲಾ ಮೂರ್ತಿಯನ್ನು ಪ್ರತಿಷ್ಠಾಪಿಸಿದ. ಇವನ ರಾಣಿ ಪಾಂಡ್ಯಕದೇವಿ ಅಥವಾ ವರ್ಧಮಾನಕ್ಕ ಗೊಮ್ಮಟನ ಎಡಭಾಗದಲ್ಲಿ ಚಂದ್ರನಾಥ ಚೈತ್ಯಾಲಯವನ್ನೂ ಇವನ ಮತ್ತೊಬ್ಬ ರಾಣಿ ಪಾರ್ಶ್ವದೇವಿ ಅಥವಾ ಬಿನ್ನಾಣಿ ಗೊಮ್ಮಟನ ಬಲ ಭಾಗದಲ್ಲಿ ಶಾಂತೀಶ್ವರ ಚೈತ್ಯಾಲಯವನ್ನೂ ಕಟ್ಟಿಸಿದರು. ಅಜಿಲರ ರಾಣಿ ಮದುರಕದೇವಿಯನ್ನು 1622ರ ಒಂದು ಶಾಸನದಲ್ಲಿ ಜೈನಗುರು ಲಲಿತಕೀರ್ತಿ ಭಟ್ಟಾರಕದೇವರ ಪ್ರಿಯಾಗ್ರಶಿಷ್ಯೆಯೆಂದು ವರ್ಣಿಸಲಾಗಿದೆ. ಇವಳು ತನ್ನ ರಾಜಧಾನಿ ಆಲದಂಗಡಿಯಲ್ಲಿ ಒಂದು ಅರಮನೆಯನ್ನೂ ಒಂದು ಜೈನಬಸದಿಯನ್ನೂ ಅರ್ಧನಾರೀಶ್ವರ ಮತ್ತು ಸೋಮನಾಥ ದೇವಾಲಯಗಳನ್ನೂ ಕಟ್ಟಿಸಿದಳು.

ವೇಣೂರಿನಲ್ಲಿ ಅಜಿಲರು ಕಟ್ಟಿಸಿಕೊಂಡಿದ್ದ ಅರಮನೆಗೆ ಏಳುಪ್ಪರಿಗೆಗಳಿದ್ದವೆಂಬ ಪ್ರತೀತಿಯಿದ್ದು, ಇಂದು ಆ ಅರಮನೆಯ ನಿವೇಶನದಲ್ಲಿ ತಳಪಾಯದ ಕುರುಹುಗಳೂ ಕಲ್ಲಿನ ಎರಡು ಆನೆಗಳೂ ಕಾಣಸಿಗುತ್ತವೆ. ಅಜಿಲಮೊಗರು ಎಂಬ ಸಣ್ಣ ಗ್ರಾಮದಲ್ಲಿರುವ ಮಸೀದಿಯ ನಿರ್ಮಾಪಕ ಒಬ್ಬ ಅಜಿಲ ಅರಸು ಎಂಬ ಐತಿಹ್ಯವಿದೆ. ಆ ಅರಸ ಯಾವುದೋ ರೋಗದಿಂದ ಬಳಲುತ್ತಿದ್ದಾಗ ಸೈಯದ್ ಬಾಬಾ ಫಕ್ರುದ್ದಿನ್ ಎಂಬ ಪರ್ಷಿಯಾ ದೇಶದ ಗುರು ಆ ರೋಗವನ್ನು ಗುಣಪಡಿಸಿದ ಕಾರಣ ಅಜಿಲ ಆ ಮಸೀದಿಯನ್ನು ಕಟ್ಟಿಸಿದನಂತೆ.

ಹೈದರನ ಕಾಲದಲ್ಲಿ ಅಜಿಲರ ಆಳ್ವಿಕೆ ಕೊನೆಗಂಡಿತು. ಆಲದಂಗಡಿ ಮತ್ತು ಬಂಗಾಡಿ ಎಂಬೀ ಸ್ಥಳಗಳಲ್ಲಿ ಅಜಿಲ ವಂಶದವರು ಇಂದಿಗೂ ವಾಸಿಸುತ್ತಿದ್ದಾರೆ. (ಕೆ.ವಿ.ಆರ್.)

**ಅಜ್ಜಂಪುರ :** ಚಿಕ್ಕಮಗಳೂರು ಜಿಲ್ಲೆ ತರೀಕೆರೆ ತಾಲ್ಲೂಕಿನ ಒಂದು ದೊಡ್ಡ ಊರು. ಬೆಂಗಳೂರು ಪುಣೆ ರೈಲುಮಾರ್ಗದಲ್ಲಿನ ಒಂದು ನಿಲ್ದಾಣ. ತರೀಕೆರೆ ಹೊಸದುರ್ಗ ರಸ್ತೆಯಲ್ಲಿ ತರೀಕೆರೆಗೆ 22ಕಿಮೀ ದೂರದಲ್ಲಿರುವ ಈ ಊರು ಹೋಬಳಿಯ ಕೇಂದ್ರಸ್ಥಳವಾಗಿದ್ದು, ಪುರಸಭೆಯನ್ನು ಹೊಂದಿದೆ.

ಹಿಂದೆ ಈ ಊರಿನ ಸ್ಥಳದಲ್ಲಿ ಕೆರಾಲವೆಂಬ ಹಳ್ಳಿಯಿತ್ತು. 17ನೆಯ ಶತಮಾನದಲ್ಲಿ ಶಿರಾ ರಾಜ್ಯದ ಮುಗಲ್ ಪ್ರತಿನಿಧಿಯ ಅಧಿಕಾರಿಯಾದ ಅಜೀಂಖಾನ್ ಎಂಬುವನು ಇಲ್ಲಿಗೆ ಬೇಟೆಗಾಗಿ ಬಂದಾಗ ಅವನ ಬೇಟೆನಾಯಿಗಳನ್ನು ಇಲ್ಲಿನ ಮೊಲವೊಂದು ಪ್ರತಿಭಟಿಸಿ ಅಟ್ಟಿಸಿಕೊಂಡು ಬಂದಿತಂತೆ. ಅದನ್ನು ಕಂಡು ಚಕಿತನಾದ ಖಾನ್ ಅದೊಂದು ಗಂಡು ಮೆಟ್ಟಿನ ಭೂಮಿಯೆಂದು ಬಗೆದು ಅಲ್ಲಿ ಕೋಟೆ ಕಟ್ಟಿಸಿ, ಆ ಊರಿಗೆ ಅಜೀಂಪುರವೆಂದು ಹೆಸರಿಟ್ಟ. ಕಾಲಕ್ರಮದಲ್ಲಿ ಅದು ಅಜ್ಜಂಪುರವೆಂದು ಪ್ರಚಾರಕ್ಕೆ ಬಂತು ಎಂದು ಸ್ಥಳ ಪ್ರತೀತಿ. ಮುಂದೆ ತರೀಕೆರೆಯ ಪಾಳೆಯಗಾರ ಹನುಮಪ್ಪ ನಾಯಕ ಇಲ್ಲಿ ಶಿಥಿಲವಾಗಿದ್ದ ಅಜೀಂಖಾನನ ಕೋಟೆಯನ್ನು ದುರಸ್ತು ಮಾಡಿಸಿ ವಿಜಯನಗರದ ಬುಕ್ಕರಾಯ ಕಟ್ಟಿಸಿದ್ದ ದೇವಾಲಯವನ್ನೂ ಜೀರ್ಣೋದ್ಧಾರ ಮಾಡಿಸಿದ. 1766ರಲ್ಲಿ ಹೈದರ್ ಈ ನಗರವನ್ನು ವಶಪಡಿಸಿಕೊಂಡ. ಅಂದಿನಿಂದ ಇದು ಮೈಸೂರು ರಾಜ್ಯದ ಆಡಳಿತಕ್ಕೆ ಸೇರಿತು.

ಅಜ್ಜಂಪುರದಲ್ಲಿ ನೇಯ್ಗೆ ಚೆನ್ನಾಗಿಬೆಳೆದಿದೆ. ಸುತ್ತಿನ ಪ್ರದೇಶಕ್ಕೆ ಈ ಊರು ಮುಖ್ಯ ವ್ಯಾಪಾರಸ್ಥಳ. ಪ್ರತಿ ಮಂಗಳವಾರ ಇಲ್ಲಿ ದೊಡ್ಡ ಸಂತೆ ನಡೆಯುತ್ತದೆ. ಊರಿನ ಸುತ್ತಲೂ ಫಲವತ್ತಾದ ಎರೆಮಣ್ಣಿನ ಜಮೀನಿನಲ್ಲಿ ಹತ್ತಿ ಬೆಳೆಯುತ್ತದೆ. ಹಿಂದೆ ಈ ಊರಿನ ಹತ್ತಿರ ಚಿನ್ನ ತೆಗೆಯುತ್ತಿದ್ದ ಕ್ಷೇತ್ರಗಳಿದ್ದುವು. 1897ರಲ್ಲಿ ಯೂರೋಪಿನ ಸಂಸ್ಥೆಯೊಂದು ಚಿನ್ನದ ಗಣಿ ಉದ್ಯಮವನ್ನು ಇಲ್ಲಿ ಆರಂಭಿಸಿತು. ಆದರೆ ಕೆಲವು ವರ್ಷಗಳ ಅನಂತರ ಆರ್ಥಿಕ ತೊಂದರೆಯಿಂದಾಗಿ ಅದು ಕೆಲಸವನ್ನು ನಿಲ್ಲಿಸಿಬಿಟ್ಟಿತು. (ಎಸ್.ವಿ.ಎಸ್.)

**ಅಡಕೆ :** ಕರ್ನಾಟಕದ ಅತಿ ಮುಖ್ಯ ತೋಟದ ಬೆಳೆ. ಅಡಕೆಗೆ ಜನರ ಆರ್ಥಿಕ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಅಮೂಲ್ಯ ಸ್ಥಾನ ಉಂಟು. ಅಡಕೆಮರದ ಪ್ರತಿಯೊಂದು ಭಾಗವೂ ಹಲವು ರೀತಿಯಲ್ಲಿ ಉಪಯೋಗಕ್ಕೆ ಬರುತ್ತದೆ. ಕಾಯಿ ಎಳೆಯದಾಗಿದ್ದಾಗ, ಬಲಿತ ಮೇಲೆ ಅಥವಾ ಹದಗೊಳಿಸಿದ ಅನಂತರ ವೀಳೆಯದೆಲೆಯೊಡನೆ ತಿನ್ನುವುದಕ್ಕೂ ಕೆಲವು ಔಷಧೋಪಚಾರಗಳಿಗೂ ಉಪಯುಕ್ತವೆನಿಸಿದೆ. ಅಡಕೆಯ ಮರ, ಮನೆ ಕಟ್ಟುವುದಕ್ಕೂ ನೀರು ಹಾಯಿಸುವ ಕೊಳವೆಗೂ ಉಪಯೋಗಕ್ಕೆ ಬರುತ್ತದೆ. ಒಣಗಿದ ಸೋಗೆಯನ್ನು ಮನೆ ಛಾವಣಿಗೆ ಹೊದಿಸಲು ಬಳಸುವುದುಂಟು. ಇದರ ಹಾಳೆಯಿಂದ ಟೋಪಿ, ಬೀಸಣಿಗೆ, ಬುಟ್ಟಿ ಇತ್ಯಾದಿ ವ್ಯವಸಾಯದ ಸಲಕರಣೆಗಳನ್ನು ಮಾಡುತ್ತಾರೆ. ಅಡಕೆ ಹೂವನ್ನು ದೇವರ ಪೂಜೆಗೂ ಮುಡಿಯುವುದಕ್ಕೂ ಉಪಯೋಗಿಸುತ್ತಾರೆ. ಅಡಕೆ ತೆಂಗಿನಮರದಂತೆ ಅನೇಕ ಬಗೆಯಾಗಿ ಉಪಯುಕ್ತವೆನಿಸಿದೆ. ಕರ್ನಾಟಕದಲ್ಲಿ ಅಡಕೆಯ ಬೇಸಾಯ, ಕೊಯ್ಲು, ಹದಗೊಳಿಸುವುದು, ವರ್ಗೀಕರಣ, ವ್ಯಾಪಾರ ಮತ್ತು ಕೈಗಾರಿಕೆಯಿಂದ ಲಕ್ಷಾಂತರ ಜನರು ಜೀವಿಸುತ್ತಿದ್ದಾರೆ.

ಕರ್ನಾಟಕ ರಾಜ್ಯದಲ್ಲಿ ಹೆಚ್ಚು ಮಳೆಬೀಳುವ ಕರಾವಳಿ ಜಿಲ್ಲೆಗಳಾದ ದಕ್ಷಿಣ ಕನ್ನಡ, ಉತ್ತರ ಕನ್ನಡಗಳಲ್ಲೂ ಮಲೆನಾಡು ಜಿಲ್ಲೆಗಳಾದ ಶಿವಮೊಗ್ಗ, ಚಿಕ್ಕಮಗಳೂರು ಪ್ರದೇಶಗಳಲ್ಲೂ ಒಟ್ಟು ಅಡಕೆಯ ಸೇಕಡ 75 ಭಾಗದಷ್ಟನ್ನು ಬೆಳೆಯಲಾಗುವುದು. ಮೈದಾನ ಪ್ರದೇಶದ ತುಮಕೂರು, ಚಿತ್ರದುರ್ಗ ಮತ್ತು ಹಾಸನ ಜಿಲ್ಲೆಗಳಲ್ಲಿ ನೀರಾವರಿ ಅನುಕೂಲವಿರುವ ಕಡೆಗಳಲ್ಲಿಯೂ ಇದರ ಬೇಸಾಯ ಉಂಟು. ಮೈಸೂರು, ಮಂಡ್ಯ, ಬೆಂಗಳೂರು ಮತ್ತು ಕೊಡಗು ಜಿಲ್ಲೆಗಳಲ್ಲಿ ಬಹಳ ಸ್ವಲ್ಪ ಭಾಗದಲ್ಲಿ ಅಡಕೆಯನ್ನು ಬೆಳೆಯಲಾಗುತ್ತಿದೆ. ಮಲೆನಾಡಿನ ತೋಟಗಳಲ್ಲಿ ಹೆಚ್ಚಾಗಿ ಅಡಕೆಯನ್ನು ಶುದ್ಧಬೆಳೆಯಾಗಿ ಮಾತ್ರ ಬೆಳೆದರೆ ಮೈದಾನ ಸೀಮೆಗಳಲ್ಲಿ ತೆಂಗು, ಹಣ್ಣಿನಗಿಡ ಮೊದಲಾದುವುಗಳೊಂದಿಗೆ ಇದನ್ನು ಮಿಶ್ರಬೆಳೆಯಾಗಿ ಬೆಳೆಯುವರು.

ಭಾರತದ ರಾಜ್ಯಗಳಲ್ಲಿ ಕರ್ನಾಟಕ ಅಡಕೆ ತೋಟಗಳ ವಿಸ್ತೀರ್ಣದಲ್ಲಿ ಎರಡನೆಯ ಸ್ಥಾನವನ್ನೂ ಮತ್ತು ಉತ್ಪತ್ತಿಯಲ್ಲಿ ಮೊದಲನೆಯ ಸ್ಥಾನವನ್ನೂ ಪಡೆದಿದೆ.

ರಾಜ್ಯದಲ್ಲಿ ದಕ್ಷಿಣ ಕನ್ನಡ, ಉಡುಪಿ, ಶಿವಮೊಗ್ಗ, ಉತ್ತರ ಕನ್ನಡ, ಚಿಕ್ಕಮಗಳೂರು, ಜಿಲ್ಲೆಗಳಲ್ಲಿ ಸಾಂದ್ರವಾಗಿಯೂ ತುಮಕೂರು, ಚಿತ್ರದುರ್ಗ, ಹಾಸನ, ಮೈಸೂರು, ಮಂಡ್ಯ, ಕೊಡಗು, ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಅಲ್ಲಲ್ಲಿ ಅಡಕೆ ಬೆಳೆಯನ್ನು ಬೆಳೆಯಲಾಗುತ್ತಿದೆ. ರಾಜ್ಯದಲ್ಲಿ ಅಡಕೆಯನ್ನು ಒಟ್ಟು 1,28,042 ಹೆಕ್ಟೇರ್‌ಗಳಲ್ಲಿ ಬೆಳೆಯಲಾಗುತ್ತಿದ್ದು ವಾರ್ಷಿಕ ಉತ್ಪನ್ನ 1,93,562 ಟನ್ನುಗಳು (1999-2000).

**ಬಿತ್ತನೆ :** ಅಡಕೆ ಬಹುವಾರ್ಷಿಕ ಪೈರಾದುದರಿಂದ ಉತ್ತಮ ತಳಿಯ ಬೀಜ ಆರಿಸುವುದು ಬಹಳ ಮುಖ್ಯ. ಜಾಗ್ರತೆ ಫಸಲು ಕೊಡುವ,

ಪ್ರತಿವರ್ಷವೂ ಒಳ್ಳೆಯ ಫಸಲನ್ನು ನೀಡುವ, ಆರೋಗ್ಯವಾದ ತಾಯಿಮರಗಳಿಂದ ಒಳ್ಳೆಯ ಆಕಾರ ಗಾತ್ರ ಹಾಗೂ ತೆಳುಸಿಪ್ಪೆಯಿದ್ದು ಹೆಚ್ಚಿನ ಸಂಖ್ಯೆ ಕಾಯಿಗಳಿಂದ ಕೂಡಿದ ಗೊನೆಗಳನ್ನು ಆರಿಸಲಾಗುವುದು. ಕಾಯಿಗಳು ಚೆನ್ನಾಗಿ ಬಲಿತು ಹಣ್ಣಾಗಿ ಉದುರಲು ಪ್ರಾರಂಭವಾದ ಅನಂತರ ಗೊನೆಗಳನ್ನು ಕೊಯ್ಲುಮಾಡಿ ಎಚ್ಚರಿಕೆಯಿಂದ ಇಳಿಸಿ ಕಾಯಿಗಳನ್ನು ಬಿಡಿಸಿ ಅವುಗಳಲ್ಲಿ ಹೆಚ್ಚು ತೂಕ, ಒಳ್ಳೆಯ ಆಕಾರ ಹಾಗೂ ಗಾತ್ರವುಳ್ಳ ಕಾಯಿಗಳನ್ನು ಆರಿಸಿ ಮರಳು ಮಣ್ಣು ಮಿಶ್ರಮಾಡಿದ ಪಾತಿಗಳಲ್ಲಿ ಪ್ರತಿಕಾಯಿಗೂ 6ಸೆಂಮೀ ಅಂತರವಿರುವಂತೆ ಹಾಗೂ ತೊಟ್ಟು ಮೇಲಕ್ಕೆ ಬರುವಂತೆ ಸ್ವಲ್ಪ ಓರೆಯಾಗಿ 2.5ಸೆಂಮೀ ಆಳದಲ್ಲಿ ನೆಟ್ಟು ಮರಳಿನಿಂದ ಮುಚ್ಚಲಾಗುತ್ತದೆ. ಪಾತಿಗಳಿಗೆ ಸ್ವಲ್ಪ ನೆರಳು ಬೀಳುವಂತೆ ಮಾಡಿ ಕ್ರಮವಾಗಿ ನೀರು ಕೊಡಲಾಗುತ್ತದೆ. ಅಡಕೆ ಬೀಜಗಳು 40 ದಿನಗಳಲ್ಲಿ ಮೊಳೆಯಲು ಆರಂಭಿಸುವುವು. 3 ತಿಂಗಳಲ್ಲಿ 2 ರಿಂದ 3 ಎಲೆ ಹೊರಡುತ್ತವೆ. ಸಸಿಗಳನ್ನು 150ಸೆಂಮೀ ಅಗಲ ಮತ್ತು ಉದ್ದದ ಪಾತಿಗಳಲ್ಲಿ 30ಸೆಂಮೀ ಅಂತರವಿರುವಂತೆ ನಾಟಿ ಮಾಡಲಾಗುತ್ತದೆ. ಬಾಳೆ ಅಥವಾ ಹಸಿರೆಲೆಗೊಬ್ಬರದ ಗಿಡಗಳನ್ನು ಬೆಳೆಸಿ ಸಸಿಗಳಿಗೆ ನೆರಳು ಕೊಡುವುದುಂಟು. ಚಪ್ಪರ ಹಾಕಿ ಅದರ ಮೇಲೆ ತೊಂಡೆ ಅಥವಾ ಸೀಮೆಬದನೆಬಳ್ಳಿ ಹಬ್ಬಿಸುವುದೂ ಉಂಟು. ಸಸಿಪಾತಿಗಳಲ್ಲಿ ನೀರು ನಿಲ್ಲದಂತೆ ನೋಡಿಕೊಳ್ಳಲಾಗುತ್ತದೆ.

ಅಡಕೆ ತೋಟ ಮಾಡಲು ಕೆಂಪು ಮಣ್ಣು, ಮರಳುಮಿಶ್ರಿತ ಗೋಡು, ಜಂಬಿಟ್ಟಿಗೆ, ಕೆಂಪುಗೋಡು ಮೊದಲಾದ ಮಣ್ಣುಗಳುಳ್ಳ ಭೂಮಿ ಯೋಗ್ಯ. ಭೂಮಿಯಲ್ಲಿ ಜೌಗು ನಿಲ್ಲಬಾರದು. ಅಡಕೆಯನ್ನು ಸಮುದ್ರಮಟ್ಟದಿಂದ ಹಿಡಿದು ಒಂದು ಸಾವಿರ ಮೀಟರ್ ಎತ್ತರವರೆಗಿನ ಪ್ರದೇಶಗಳಲ್ಲಿ ಚೆನ್ನಾಗಿ ಬೆಳೆಯಬಹುದು. ಅಡಕೆ ತೋಟ ಮಾಡುವ ಸ್ಥಳದಲ್ಲಿ ನೀರಾವರಿ ಅನುಕೂಲ ಇರುವುದು ಅಪೇಕ್ಷಣೀಯ. ನೈಋತ್ಯ ದಿಕ್ಕಿನಿಂದ ಮಧ್ಯಾಹ್ನದ ಬಿಸಿಲು ಬೀಳದಂತೆ ನೆರಳು ಕೊಡುವ ಮರಗಳನ್ನು ಬೆಳೆಸುವರು. ಭೂಮಿಯನ್ನು ಹದಗೊಳಿಸಿ ಬಸಿಕಾಲುವೆಗಳನ್ನು ತೋಡಿದ ಅನಂತರ 2.7ಮೀ ಅಂತರದಲ್ಲಿ ಭೂಗುಣಕ್ಕನುಸಾರವಾಗಿ 60ಸೆಂಮೀ x 60ಸೆಂಮೀ x 60ಸೆಂಮೀ ಅಥವಾ 90ಸೆಂಮೀ x 90ಸೆಂಮೀ x 90ಸೆಂಮೀ ಅಳತೆಯ ಗುಣಿಗಳಲ್ಲಿ ಆರಿಸಿದ ಸಸಿಗಳನ್ನು ನೆಡಲಾಗುತ್ತದೆ. ಮಳೆ ಹೆಚ್ಚಾಗಿ ಬೀಳುವ ಪ್ರದೇಶಗಳಲ್ಲಿ ಸೆಪ್ಟೆಂಬರ್-ಅಕ್ಟೋಬರ್‌ಗಳಲ್ಲೂ ಉಳಿದ ಪ್ರದೇಶಗಳಲ್ಲಿ ಮೇ-ಜೂನ್ ತಿಂಗಳಲ್ಲೂ ಅಡಕೆ ಗಿಡಗಳನ್ನು ನೆಡುವುದು ರೂಢಿಯಲ್ಲಿದೆ.

**ಅಡಕೆ ತೋಟದ ಕೃಷಿ :** ಅಡಕೆ ಸಮಾರು 80-100 ವರ್ಷಗಳವರೆಗೂ ಬದುಕಿದ್ದು ನೆಟ್ಟ 5-6 ವರ್ಷಗಳಿಂದ ಜೀವನಪರ್ಯಂತ ಫಸಲು ಕೊಡುತ್ತದೆ. ಆದ್ದರಿಂದ ಮರ ಆರೋಗ್ಯವಾಗಿ ಚೆನ್ನಾಗಿ ಬೆಳೆದು ಉತ್ತಮ ಫಲ ಕೊಡುವಂತೆ ಮಾಡಲು ಪ್ರತಿವರ್ಷವೂ ನಿರ್ದಿಷ್ಟ ಪ್ರಮಾಣದಲ್ಲಿ ಕಾಲಕ್ಕೆ ಸರಿಯಾಗಿ ರಸಗೊಬ್ಬರ, ಹಸಿರೆಲೆಗೊಬ್ಬರ, ಕೊಟ್ಟಿಗೆಗೊಬ್ಬರ ಕೊಡುವುದುಂಟು.

ಮರ ಒಂದಕ್ಕೆ 100ಗ್ರಾಂ ನೈಟ್ರೊಜನ್, 40ಗ್ರಾಂ ಫಾಸ್ಫರಸ್ ಮತ್ತು 140ಗ್ರಾಂ ಪೊಟ್ಯಾಷನ್ನು ಎರಡು ಪಾಲು ಮಾಡಿ ವರ್ಷದಲ್ಲಿ ಎರಡು ಸಲ ಕೊಡುವರು. ಇದರೊಂದಿಗೆ ಪ್ರತಿವರ್ಷವೂ 12ಕಿಗ್ರಾಂ ಹಸಿರೆಲೆಗೊಬ್ಬರ ಮತ್ತು 12ಕಿಗ್ರಾಂ ಕೊಟ್ಟಿಗೆಗೊಬ್ಬರವನ್ನು ಎಲ್ಲ ವಯಸ್ಸಿನ ಮರಗಳಿಗೂ ಕೊಡುವುದುಂಟು. ಮೊದಲನೆಯ ವರ್ಷ ದೊಡ್ಡಮರಗಳಿಗೆ ಕೊಡುವ ಮೊತ್ತದ 1/3 ಭಾಗ ರಸಗೊಬ್ಬರವನ್ನೂ ಎರಡನೆಯ ವರ್ಷ 2/3 ಭಾಗವನ್ನೂ ಮೂರನೆಯ ವರ್ಷದಿಂದ ಪೂರ್ತಿ ಪ್ರಮಾಣದಲ್ಲೂ ಕೊಡುವರು. ಗೊಬ್ಬರವನ್ನು ಮಲೆನಾಡಿನಲ್ಲಿ ಸೆಪ್ಟೆಂಬರ್-ಅಕ್ಟೋಬರಿನಲ್ಲೂ ಉಳಿದ ಕಡೆ ಮೇ-ಜೂನ್ ತಿಂಗಳಲ್ಲೂ ಕೊಡುವುದುಂಟು. ಗೊಬ್ಬರವನ್ನು ಅಡಕೆ ಮರದ ಸುತ್ತ 50ಸೆಂಮೀ ಅಂತರದಲ್ಲಿ ಮಾಡಲಾಗುವ 1ಮೀ ಅಗಲ 15-20ಸೆಂಮೀ ಆಳದ ತೋಡುಗಳಲ್ಲಿ ಸೇರಿಸಲಾಗುತ್ತದೆ. ಎರಡನೆಯ ಸಲ ಕೊಡುವಾಗ ಮರದ ಸುತ್ತ ಕಳೆ ಕಿತ್ತು ಬುಡ ಕೆದಕಿ ಗೊಬ್ಬರ ಸೇರಿಸುವುದುಂಟು. ಪ್ರತಿಯೊಂದು ತೋಟದ ಮಣ್ಣನ್ನು ಪರೀಕ್ಷಿಸಿ ಗೊಬ್ಬರದ ಪ್ರಮಾಣವನ್ನು ನಿಗದಿ ಮಾಡಲಾಗುತ್ತದೆ. ಅಡಕೆಗೆ ಕೊಳೆರೋಗ, ಸುಳಿಕೊರೆವರೋಗ, ಹಿಡಿಮುಂಡಿಗೆರೋಗ, ಅಣಬೆರೋಗ ಮೊದಲಾದ ರೋಗಗಳೂ ಬೇರುಹುಳು, ತಿಗಣೆ, ಹೇನು, ಹೂವಿಗೆ ತಗಲುವ ಕಂಬಳಿಹುಳು ಮೊದಲಾದ ಕೀಟಗಳ ಬಾಧೆಯೂ ತಲೆದೋರುವುದುಂಟು.

ಕರ್ನಾಟಕದಲ್ಲಿ ಅಡಕೆಯನ್ನು ಆಗಸ್ಟ್‌ನಿಂದ ಜನವರಿವರೆಗಿನ ಅವಧಿಯಲ್ಲಿ ಕೊಯ್ಯುತ್ತಾರೆ. ಪ್ರತಿಯೊಂದು ಮರವೂ ವರ್ಷಕ್ಕೆ 2 ಅಥವಾ 3 ಗೊನೆ ಬಿಡುತ್ತದೆ. ಪ್ರತಿ ಗೊನೆಯಲ್ಲೂ 200-250 ಕಾಯಿಗಳಿರುತ್ತವೆ. ಅಡಕೆ ಕೊಯ್ಲನ್ನು ವಿವಿಧ ಪ್ರದೇಶಗಳ ಅಭಿರುಚಿಗೆ ಅನುಕೂಲಗಳಿಗೆ ತಕ್ಕಂತೆ ವಿವಿಧ ಹಂತಗಳಲ್ಲಿ ಬೇರೆ ಬೇರೆ ರೀತಿ ಹದಗೊಳಿಸುತ್ತಾರೆ. ಕಾಯಿ ಎಳೆಯದಾಗಿದ್ದಾಗಲೇ ಕೊಯ್ಲು ಮಾಡಿ ಸಿಪ್ಪೆ ತೆಗೆದು ತಿರುಳನ್ನು ಇಡಿ ಇಡಿಯಾಗಿ ಅಥವಾ ಎರಡು ಇಲ್ಲವೆ ಅನೇಕ ಚೂರುಗಳಾಗಿ ಮಾಡಿ ಬಣ್ಣದಲ್ಲಿ ಬೇಯಿಸಿ ಒಣಗಿಸಿ ಹದ ಮಾಡಿ ವಿಂಗಡಿಸಿ ಪೇಟೆಗೆ ಸಿದ್ಧಗೊಳಿಸುತ್ತಾರೆ. ಕೆಲವು ಕಡೆಗಳಲ್ಲಿ ಕಾಯಿಗಳನ್ನು ಪೂರ್ತಿ ಹಣ್ಣಾಗುವವರೆಗೂ ಮರದಲ್ಲಿಯೇ ಬಿಟ್ಟು ಅನಂತರ ಕೊಯ್ಲು ಮಾಡಿ ಸುಮಾರು 40ದಿನ ಬಿಸಿಲಿನಲ್ಲಿ ಒಣಗಿಸಿ ಸಿಪ್ಪೆ ಬಿಡಿಸಿ ಬಣ್ಣ ಕಟ್ಟುವುದುಂಟು.

**ಇಳುವರಿ :** ಒಂದು ಎಕರೆಗೆ ಸುಮಾರು 400 ಮರಗಳಿದ್ದು 1½ ಲಕ್ಷದಿಂದ 3½ ಲಕ್ಷದವರೆಗೂ ಕಾಯಿ ಬಿಡುತ್ತವೆ. ಸಂಸ್ಕರಿಸಿದ ಮೇಲೆ ಇವುಗಳ ಒಟ್ಟು ತೂಕ 300-500 ಕೆಜಿ. ಒಂದು ಎಕರೆಗೆ ಒಂದು ವರ್ಷಕ್ಕೆ ಸರಾಸರಿ 350 ಕೆಜಿ. ಸಂಸ್ಕರಿಸಿದ ಅಡಕೆ ಉತ್ಪತ್ತಿಯಾಗುತ್ತದೆ.

ಅಡಕೆಯನ್ನು ಚಾಲಿ, ಕೋಕ, ಸರಕು, ಹಸ, ಬೆಟ್ಟೆ, ಗೊರಬಲು, ಬಿಳಿಗೋಟು, ರಾಶಿ, ತಟ್ಟೆಬೆಟ್ಟೆ, ಕೆಂಪುಗೋಟು, ಚೂರು ಮೊದಲಾದ ಹಲವು ವಿಧಗಳಾಗಿ ಮಾರುಕಟ್ಟೆಗೆ ಸಿದ್ಧಗೊಳಿಸಲಾಗುವುದು. ಕರ್ನಾಟಕದ ಅಡಕೆ ಭಾರತದ ಇತರ ಪ್ರದೇಶಗಳಲ್ಲಿ ಬೆಳೆಯುವ ಅಡಕೆಗಿಂತ ಗುಣದಲ್ಲಿ ಮೇಲಾದುದು.

ಅಡಕೆಯೊಂದಿಗೆ ವೀಳೆಯದೆಲೆ, ಮೆಣಸು, ಬಾಳೆ, ಸಿಹಿಗೆಣಸು, ಮರಗೆಣಸು, ಕೋಕೋ, ಶುಂಠಿ ಮುಂತಾದ ಉಪಬೆಳೆಗಳನ್ನು ಸಹ ಲಾಭದಾಯಕವಾಗಿ ಬೆಳೆಯಬಹುದು. ಇತ್ತೀಚೆಗೆ ಮಂಗಳ ಎಂಬ ಸುಧಾರಿಸಿದ ಅಡಕೆ ತಳಿಯನ್ನು ಬಿಡುಗಡೆ ಮಾಡಲಾಗಿದೆ. **(ಕೆ.ಟಿ.ಕೆ.)**

**ಅಡಕೆ ಬೆಳೆಯ ಆರ್ಥಿಕ ಪರಿಸ್ಥಿತಿ ಮತ್ತು ತಾಂತ್ರಿಕತೆ :** ಆರ್ಥಿಕ ಉದಾರೀಕರಣದ ಬಳಿಕ ಅಡಕೆ ಕೃಷಿಕರಿಗೆ ಕೆಲವು ಸಮಸ್ಯೆಗಳು ತಲೆದೋರಿದವು. ಇದಕ್ಕೆ ಕಾರಣ ಬೆಲೆಗಳ ಕುಸಿತ ಮತ್ತು ಅಡಕೆಯ ಮೇಲೆ ವಿಧಿಸಲಾಗಿರುವ ವ್ಯವಸಾಯ ತೆರಿಗೆ.

ಅಡಕೆ ಬೆಲೆ ಇಳಿಮುಖವಾದಾಗ, ಕರ್ನಾಟಕ ರಾಜ್ಯಸರ್ಕಾರ ಕೃಷಿಕರ ಕುಂದುಕೊರತೆಗಳನ್ನು ನಿವಾರಿಸಲು ಮತ್ತು ಅವರ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಪಡಿಸಲು ಒಂದು ಸಮಿತಿಯನ್ನು ರಚಿಸಿತು (1971). ಈ ಸಮಿತಿ ಬೆಳೆಯ ಇಳಿತಕ್ಕೆ ಅಧಿಕ ಉತ್ಪಾದನೆ, ಅಡಕೆಯ ಆಮದು, ರಫ್ತಿಗೆ ಸಾಕಷ್ಟು ಅವಕಾಶವಿಲ್ಲದೆ ಇರುವುದು, ಅಡಕೆಯ ಬಳಕೆ ಕಡಿಮೆಯಾಗಿರುವುದು, ಮಾರುಕಟ್ಟೆಯ ವೈಪರೀತ್ಯಗಳು, ರೈತರ ಸಣ್ಣ ಹಿಡುವಳಿ, ಮಾರುಕಟ್ಟೆಯಲ್ಲಿ ದಳ್ಳಾಳಿಗಳ ಕಾಟ ಮುಂತಾದ ಕಾರಣಗಳನ್ನು ನೀಡಿತು. ಈ ಸಮಿತಿಯ ನಿರ್ಧಾರದ ಮೇರೆಗೆ ಸಂಘಟಿತ ಸಂಸ್ಥೆಯೊಂದು ಮಂಗಳೂರಿನಲ್ಲಿ ಸ್ಥಾಪಿತವಾಯಿತು (ದಿ ಸೆಂಟ್ರಲ್ ಅರೆಕನಟ್ ಮಾರ್ಕೆಟಿಂಗ್ ಅಂಡ್ ಪ್ರೋಸೆಸಿಂಗ್ ಕೋ-ಆಪರೇಟಿವ್ ಸೊಸೈಟಿ). ಇದರ ಮೂಲ ಧನ 1 ಕೋಟಿ ರೂ. ಇದರಲ್ಲಿ ತಲಾ 37.5 ಲಕ್ಷವನ್ನು ಕರ್ನಾಟಕ ಮತ್ತು ಕೇರಳ ಸರ್ಕಾರ ನೀಡಿವೆ. ಉಳಿದ 30 ಲಕ್ಷವನ್ನು ಕೆಲವರು ವೈಯಕ್ತಿಕವಾಗಿಯೂ ಮತ್ತು ಇತರ ಸಹಕಾರ ಸಂಘಗಳೂ ನೀಡಿವೆ. ಇದರ ಮುಖ್ಯ ಉದ್ದೇಶ ಅಡಕೆ ಕೃಷಿಕರಿಗೆ ನ್ಯಾಯಬೆಲೆ ದೊರಕಿಸುವುದು. ಕಳೆದ ಅಡಕೆ ಬೆಲೆಗಳ ಏರುವಿಕೆಯನ್ನು ನೋಡಿದರೆ, ಈ ಸಂಘದ ಉದ್ದೇಶ ಸಫಲವಾಯಿತೆನ್ನಬಹುದು. ಆದರೆ ಗುಟ್ಕ ನಿಷೇಧ ವಿದೇಶಗಳಲ್ಲಿ ಅಡಕೆಗೆ ಕುಸಿದ ಬೇಡಿಕೆಯಿಂದಾಗಿ ಸದ್ಯ ಅದರ ಬೆಲೆ ಕುಸಿದಿದೆ. ಕೆಲವು ವರ್ಗದ ಅಡಕೆ ಬೆಲೆಗಳು ಕುಸಿಯುವುದನ್ನು ತಡೆಯಲು ರಾಜ್ಯ ಸರ್ಕಾರ ಮಾರುಕಟ್ಟೆ ಪ್ರವೇಶಿಸುವುದೂ ಉಂಟು. ಇದಲ್ಲದೆ ಶಿವಮೊಗ್ಗದಲ್ಲಿ ಅಡಕೆ ಮಾರಾಟ ಸಹಕಾರಸಂಘ ಕಳೆದ 20-25 ವರ್ಷಗಳಿಂದ ಕೆಲಸಮಾಡುತ್ತ ಇದೆ. ಬೆಳೆಗಾರರೇ ಇದರ ಸದಸ್ಯರು.

**ಅಡಕೆಯ ತಾಂತ್ರಿಕತೆ :** ಅಡಕೆ ಮರದಲ್ಲಿ ಅಡಕೆಯ ಜೊತೆಗೆ, ಅಡಕೆ ಮೇಲಿರುವ ಸಿಪ್ಪೆ ಸಿಗುತ್ತದೆ. ಸಿಪ್ಪೆಯಲ್ಲಿ ಸೆಲ್ಯುಲೋಸ್,

ಹೆಮಿಸೆಲ್ಯುಲೋಸ್ ಅಂಶ ಜಾಸ್ತಿ ಇರುವುದರಿಂದ ಇವುಗಳ ವಿಸರ್ಜನೆ ಒಂದು ಸಮಸ್ಯೆ. ಇವು ಭೂಮಿಯಲ್ಲಿ ಸಹ ಬೇಗನೆ ಕೊಳೆಯುವುದಿಲ್ಲ. ಆದುದರಿಂದ ಇವುಗಳ ಉಪಯೋಗ ಕಡಿಮೆ.

ಕೇಂದ್ರ ಸರ್ಕಾರದ ಅಡಕೆ ಸಂಸ್ಥೆ 1959ರಲ್ಲಿ ಮೈಸೂರಿನ ಕೇಂದ್ರ ಆಹಾರ ಸಂಶೋಧನಾಲಯದಲ್ಲಿ ಅಡಕೆಯ ತಾಂತ್ರಿಕತೆಯ ಬಗ್ಗೆ ಕೆಲವು ಪರಿಶೋಧನೆಗಳನ್ನು ಕೈಗೊಂಡಿತ್ತು ಮತ್ತು ಮದರಾಸಿನ ಅರಣ್ಯ ಸಂಶೋಧನೆಯ ಕೇಂದ್ರದ ಕೆಲವು ಪರಿಶೋಧನೆಗಳಿಗೆ ಧನಸಹಾಯ ಮಾಡಿತು. ಈ ಸಂಸ್ಥೆಗಳ ಮುಖ್ಯ ಉದ್ದೇಶ (1) ಅಡಕೆಯ ಇತರೆ ಉಪಯೋಗ (2) ಬೇರೆ ಬೇರೆ ಅಡಕೆ ತಳಿಗಳಲ್ಲಿರುವ ಪದಾರ್ಥಗಳು (3) ಅವು ಕಟಾವಿಗೆ ಬರಬೇಕಾದ ಕಾಲಾವಧಿ-ಇವುಗಳನ್ನು ಕಂಡುಹಿಡಿಯುವುದು.

ಡೆಹರಾಡೂನಿನಲ್ಲಿರುವ ಅರಣ್ಯವಿಜ್ಞಾನ ಕೇಂದ್ರದಲ್ಲಿ ಅಡಕೆ ಸಿಪ್ಪೆಯನ್ನು ಕಾಗದದ ತಯಾರಿಕೆಯಲ್ಲಿ ಉಪಯೋಗಿಸುವ ಬಗ್ಗೆ ಪರಿಶೀಲಿಸುತ್ತಿದ್ದಾರೆ. ಅಡಕೆ ಸಿಪ್ಪೆಯನ್ನು ಬಾಳೆಯ ದಿಂಡಿನೊಂದಿಗೆ ಸರಿಯಾದ ಪ್ರಮಾಣದಲ್ಲಿ ಮಿಶ್ರಮಾಡಿದರೆ ಕ್ರಾಫ್ಟ್ ಮಾದರಿಯ ಕಾಗದವನ್ನು ತಯಾರಿಸಬಹುದೆಂದು ತಿಳಿದುಬಂದಿದೆ.

ಅಡಕೆ ಎಲೆಗಳನ್ನು ಸಣ್ಣ ತುಂಡುಗಳಾಗಿ ಮಾಡಿ ದನಗಳ ಮೇವಾಗಿ ಉಪಯೋಗಿಸಬಹುದು. ಅಡಕೆ ಹಾಳೆಯನ್ನು ವಿವಿಧ ಮಾದರಿಯ ಹಲಗೆಗಳಾಗಿಯೂ ಚಪ್ಪಲಿಗಳಿಗೆ ಹಾಕುವ ಅಟ್ಟೆಯನ್ನಾಗಿಯೂ ಸಾಮಾನು ಸುತ್ತುವ ಕಾಗದವನ್ನಾಗಿಯೂ ಉಪಯೋಗಿಸುವ ಬಗ್ಗೆ ಪರಿಶೀಲನೆ ನಡೆಯುತ್ತಿದೆ.

ಅಡಕೆ ಬೆಲೆ ಇಳಿಮುಖವಾದಾಗಿನಿಂದ ಅಡಕೆಯನ್ನು ಎಣ್ಣೆ, ಪ್ರೋಟೀನ್, ರೆಸಿನ್, ಆಲ್‌ಕಾಲಾಯ್ಡ್‌ಗಳ ಉತ್ಪಾದನೆಗೆ ಉಪಯೋಗಿಸುವ ಬಗ್ಗೆ ಪರಿಶೋಧನೆ ನಡೆಸಲಾಗುತ್ತಿದೆ. ಅಡಕೆ ತೋಟಗಳಲ್ಲಿ ವಾಣಿಜ್ಯ ಬೆಳೆ ವೆನಿಲಾವನ್ನೂ ಇತ್ತೀಚೆಗೆ ಬೆಳೆಯಲಾಗುತ್ತಿದೆ. **(ಬಿ.ಎ.ಎ.)**

**ಅಡಹಳ್ಳಿ :** ಬೆಳಗಾಂವಿ ಜಿಲ್ಲೆ ಅಥಣಿ ತಾಲ್ಲೂಕಿನ ಒಂದು ಗ್ರಾಮ. ಅಥಣಿಯಿಂದ 18ಕಿಮೀ ದೂರದಲ್ಲಿದೆ. ಇಲ್ಲಿ ಹನುಮಂತ ಮತ್ತು ಶಂಕರಲಿಂಗ ದೇವಾಲಯಗಳಿವೆ. ಹನುಮಂತ ದೇವಾಲಯವನ್ನು ಇತ್ತೀಚೆಗೆ ಕಲ್ಲಿನಲ್ಲಿ ನಿರ್ಮಿಸಲಾಗಿದೆ. ಈ ದೇವಾಲಯದ ಹೊರಗೋಡೆಯ ಮೇಲೆ ಸಪ್ತ ಮಾತೃಕೆಯರ ಸಾಲನ್ನು ಕೆತ್ತಲಾಗಿದೆ. ದೇವಾಲಯದ ಎಡಭಾಗದಲ್ಲಿ ಕೊನೆಯ ಚಾಳುಕ್ಯ ಶೈಲಿಯ ಶಕವರ್ಷ 1119ರ ಶಿಲಾಶಾಸನ ಹಾಸುಗಲ್ಲು ಗೋಡೆಯಲ್ಲಿದೆ. ಮುಖ್ಯ ಪ್ರವೇಶ ದ್ವಾರದ ಎಡಮೂಲೆಯಲ್ಲಿ ಒಂದು ವೀರಗಲ್ಲಿದೆ. ಇದರಿಂದ ಈ ದೇವಾಲಯ ಪ್ರಾಚೀನವಾದುದೆಂದು ತಿಳಿದುಬರುತ್ತದೆ. ಶಂಕರಲಿಂಗ ದೇವಾಲಯ ಹೆಂಚು ಹೊದಿಕೆಯ ದೇವಾಲಯ. ಇದರ ಸುತ್ತ ಭಗ್ನ ಪ್ರಾಚೀನ ಅವಶೇಷಗಳಿವೆ. ಅಲ್ಲಿರುವ ಹಳ್ಳಿಯ ಸಮೀಪ ಆಗ್ನೇಯ ದಿಕ್ಕಿನ ಕಡೆಯಲ್ಲಿ ಒಂದು ಸಣ್ಣ ಗುಡ್ಡದ ಮೇಲೆ, ಮಣ್ಣಿನಲ್ಲಿ ಹೂತುಹೋಗಿರುವ ಶಿವದೇವಾಲಯವಿದೆ. ಈ ದೇವಾಲಯಕ್ಕೆ ಸ್ವಲ್ಪ ದೂರದಲ್ಲಿ ಒಂದು ದರ್ಗಾ ಇದೆ. ಈ ಗ್ರಾಮಕ್ಕೆ ಸಮೀಪದ ಕೋಹಳ್ಳಿಯಲ್ಲಿ ಸ್ಥಳೀಯವಾಗಿ ಸಂಗಮೇಶ್ವರ ಎಂದು ಕರೆಯಲಾಗುವ ಕೂಡಲ ಸಂಗಮವೆಂದು ಹೇಳುವ ಹಿರೇಹಳ್ಳ ಮತ್ತು ಸಿಂಧೂರಹಳ್ಳಗಳ ಸಂಗಮದ ತಟದಲ್ಲಿ ಒಂದು ಪ್ರಾಚೀನ ದೇವಾಲಯವಿದೆ. ತ್ರಿಕೂಟಾಚಲವಿರುವ ಈ ದೇವಾಲಯ ಸಂಪೂರ್ಣವಾಗಿ ಜೀರ್ಣೋದ್ಧಾರವಾಗಿದೆ. ಬೀರಪ್ಪ, ದುರ್ಗಪ್ಪ ಮತ್ತು ಬಸವಣ್ಣ ಇಲ್ಲಿರುವ ಇತರ ದೇವಾಲಾಯಗಳು. ಇಲ್ಲೊಂದು ಮಠವಿದ್ದು ಇದನ್ನು ಅಪ್ಪಯ್ಯಸ್ವಾಮಿ ಎಂದು ಕರೆಯುವರು. ಸಂಗಮೇಶ್ವರ ಜಾತ್ರೆ ಮತ್ತು ಉತ್ಸವ ಪ್ರತಿವರ್ಷ ದೀಪಾವಳಿಯಲ್ಲಿ ನಡೆಯುವುದು. **(ಆರ್.ಐ.)**

**ಅಣ್ಣಾಜಿ :** ಸು.17ನೆಯ ಶತಮಾನದ ಅಂತ್ಯಭಾಗದಲ್ಲಿದ್ದ ವೀರಶೈವ ಕವಿ. ಸೌಂದರವಿಳಾಸಂ ಎಂಬ ಕಾವ್ಯದ ಕರ್ತೃ. ಈತನ ಅಜ್ಜ ವೀರೇಂದ್ರ, ತಂದೆ ಅಯ್ಯಣ್ಣಭೂಪ. ಪೂರ್ವಕವಿಗಳಲ್ಲಿ ಕೆರೆಯ ಪದ್ಮರಸ, ಹಂಪೆಯ ಹರೀಶ್ವರ, ಪಾಲ್ಕುರಿಕೆ ಸೋಮನಾಥ, ಮಲುಹಣ, ರುದ್ರಭಟ್ಟ, ಆಗ್ಗಳ, ನೇಮಿಚಂದ್ರ, ಕವಯಿತ್ರಿ ಕಂತಿ ಮೊದಲಾದ ಕನ್ನಡ ಕವಿಗಳನ್ನೂ ಬಾಣ, ಮಯೂರ, ಭವಭೂತಿ, ಶ್ರೀಹರ್ಷ, ಧನಂಜಯ, ದಂಡಿ, ಕಾಳಿದಾಸ ಮೊದಲಾದ ಸಂಸ್ಕೃತ ಕವಿಗಳನ್ನೂ ಸ್ಮರಿಸಿದ್ದಾನೆ. ಇದಲ್ಲದೆ ಶಿವನ ಆಸ್ಥಾನ ವರ್ಣನೆಯ ಸಂದರ್ಭದಲ್ಲಿ ಬಸವ, ಮಡಿವಾಳಯ್ಯ, ಮರುಳಶಂಕರ, ಓಹಿಲಯ್ಯ, ಮಾದಾರಚನ್ನ, ಕಿನ್ನರಬ್ರಹ್ಮ, ಹಡಪದ ಅಪ್ಪಣ್ಣ, ಚೆನ್ನಬಸವಣ್ಣ, ಸಿದ್ಧರಾಮ ಘಟ್ಟಿವಾಳಯ್ಯ, ಅಲ್ಲಮಪ್ರಭು ಅನಿಮಿಷಯ್ಯ ಮೊದಲಾದ ವಚನಕಾರರನ್ನೂ ಸ್ಮರಿಸಿರುವುದು ಕಂಡುಬರುತ್ತದೆ. ಕವಿ ತನ್ನನ್ನು ಅಯ್ಯಣಭೂಪನ ಸುಕುಮಾರ, ಅಣ್ಣಾಜಿ ರಾಜೇಂದ್ರ, ರಸಿಕ ರಾಜೇಂದ್ರನಣ್ಣಾಜಿ ಎಂದು ವಿಶ್ಲೇಷಿಸಿಕೊಂಡಿರುವುದರಿಂದ ಈತ ರಾಜವಂಶಕ್ಕೆ ಸೇರಿದವನಾಗಿರಬಹುದು. ಯಾವ ಊರಿನವನು ಎನ್ನುವುದು ತಿಳಿಯದು. ಶಂಕರನ ಆದೇಶದಂತೆ ಅಲಂಕಾರಭಾವ ರಸಪೂರಿತವಾದ ಸೌಂದರವಿಳಾಸ ಕಾವ್ಯವನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ.

ಸೌಂದರವಿಳಾಸಂ ವಾರ್ಧಕ ಷಟ್ಪದಿಯಲ್ಲಿದೆ. ಅಲ್ಲಲ್ಲಿ ಕೆಲವು ಭಾಮಿನೀಷಟ್ಪದಿಗಳೂ ಕಂಡುಬರುತ್ತವೆ. ಸುಮಾರು 600 ಪದ್ಯಗಳಿವೆ. ಅರವತ್ತುಮೂರು ಪುರಾತನರಲ್ಲಿ ಒಬ್ಬನಾದ ಸೌಂದರೇಶ ಅಥವಾ ನಂಬಿಯಣ್ಣ ಎಂಬ ಶಿವಭಕ್ತನ ಚರಿತ್ರೆ ಕಾವ್ಯದ ವಸ್ತು. ಇದೊಂದು ಶೃಂಗಾರಕಾವ್ಯ. ಶೃಂಗಾರ ಮೊದಲಾದ ನವರಸಗಳನ್ನು ಸಾರತರವಾದ ಮಧುರೋಕ್ತಿ ಮೃದುಪದದ ಗಂಭೀರವಚನಾರಚನೆಯಿಂದ ಕಾವ್ಯವನ್ನು ರಚಿಸಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. ವರ್ಣನೆಗಳು ಮನೋಹರವಾಗಿವೆ. ಆದರೆ ಒಮ್ಮೊಮ್ಮೆ ಈ ವರ್ಣನೆಗಳು ಕೇವಲ ಪಾಂಡಿತ್ಯ ಪ್ರದರ್ಶನ ಕ್ಕಾಗಿಯೂ ಬರುವುದುಂಟು. ಕಾವ್ಯಬಂಧ ಸಾಮಾನ್ಯವಾಗಿದೆ. *

**ಅಣ್ಣಿಗೇರಿ :** ಧಾರವಾಡ ಜಿಲ್ಲೆ ನವಲಗುಂದ ತಾಲ್ಲೂಕಿನ ಮುಖ್ಯ ಊರು. ಹುಬ್ಬಳ್ಳಿ-ಗುಂತಕಲ್ಲು ರೈಲುಮಾರ್ಗದ ಮೇಲೆ ಹುಬ್ಬಳ್ಳಿಯಿಂದ 35ಕಿಮೀ ದೂರದಲ್ಲಿದೆ. ಗದಗ-ಹುಬ್ಬಳ್ಳಿ ಹೆದ್ದಾರಿ ಈ ಊರ ಮೇಲಿಂದ ಹಾದುಹೋಗುತ್ತದೆ. ಕೃತಪುರಮಹಾತ್ಮ್ಯ ಎಂಬ ಸ್ಥಳಪುರಾಣದ ಪ್ರಕಾರ ಈ ಊರಿಗೆ ಅನ್ನಗಿರಿ, ಅನ್ಯತಟಾಕ ಎಂಬ ಹೆಸರುಗಳಿದ್ದುವು. ಪಾಂಡವರು ಅಣ್ಣಿಗೇರಿಗೆ ಬಂದಿದ್ದರೆಂಬ ನಂಬಿಕೆಯಿದೆ. 2ನೆಯ ಪುಲಕೇಶಿಯಿಂದ ಹಿಡಿದು ಬಿಜಾಪುರದ ಮಹಮ್ಮದ್‌ಷಾನ ಕಾಲದ ವರೆಗೆ ಆಳಿದ ರಾಜಮನೆತನಗಳವರ 28 ಶಾಸನಗಳು ಇಲ್ಲಿ ದೊರಕಿವೆ. ಅಣ್ಣಿಗೇರಿ ಪ್ರಾಚೀನ ಕಾಲದಲ್ಲಿ ಸಾಂಸ್ಕೃತಿಕ ಮತ್ತು ಧಾರ್ಮಿಕ ಮಹತ್ತ್ವ ಪಡೆದಿತ್ತೆಂದು ಆ ಶಾಸನಗಳಿಂದ ತಿಳಿದುಬರುತ್ತದೆ. ಇದು ಬೆಳ್ವೊಲ 300ರ ನಾಡಿನ ರಾಜಧಾನಿಯಾಗಿತ್ತು. ದಕ್ಷಿಣ ವಾರಾಣಸಿ ತೀರ್ಥವೆಂದೂ ಕರೆಯುತ್ತಿದ್ದ ಈ ಊರಲ್ಲಿ ಐದು ಬ್ರಹ್ಮಪುರಿಗಳೂ ತ್ರಿವರ್ಗದವರೂ ಸಾವಿರ ದೇವಪುತ್ರರೂ ಇದ್ದರು. ಪಂಪನ ಮಾತಾಮಹಜೋಯಿಸ ಸಿಂಗ ಇಲ್ಲಿಯವನು.

ಚಾಳುಕ್ಯ 4ನೆಯ ಸೋಮೇಶ್ವರನಿಗೆ ಪುನಃ ರಾಜ್ಯವನ್ನು ಸಂಪಾದಿಸಲು ಸಹಾಯ ಮಾಡಿದ ದಂಡನಾಯಕ ಬಮ್ಮಿದೇವ ಮತ್ತು ಕಳಚುರಿ ರಾಯಮುರಾರಿ ಸೋವಿದೇವನ ದಂಡನಾಯಕ ಧನ್ನುಗಿ ಅಣ್ಣಿಗೇರಿಯಲ್ಲಿದ್ದವರು. ಕಳಚುರಿ ಬಿಜ್ಜಳನಿಗೆ ಹೆದರಿ ಚಾಳುಕ್ಯ 3ನೆಯ ತೈಲ ಅಣ್ಣಿಗೇರಿಗೆ ಓಡಿಬಂದಿದ್ದ. ಬ್ರಿಟಿಷರ ಆಳ್ವಿಕೆಯ ಪ್ರಾರಂಭದಲ್ಲಿ ಇದು ನಿಪ್ಪಾಣಿ ಜಹಗೀರಿಯಲ್ಲಿತ್ತು. 1839ರಲ್ಲಿ ಇದು ಕಂಪನಿಯ ನೇರ ಆಳ್ವಿಕೆಗೆ ಸೇರಿತು.



ಅಮೃತೇಶ್ವರ ದೇವಾಲಯ

ಅಣ್ಣಿಗೇರಿಯಲ್ಲಿ ಬನಶಂಕರಿ, ಬಸಪ್ಪ, ಗಚ್ಚಿನಬಸಪ್ಪ, ಕೋಳಿವಾಡ ಹನುಮಪ್ಪ, ಮೈಲಾರ, ಪುರದ ವೀರಪ್ಪ ಮೊದಲಾದ ಗುಡಿಗಳಿವೆ. ಇಲ್ಲಿರುವ ಅಮೃತೇಶ್ವರ ಗುಡಿ ಎಲ್ಲಕ್ಕೂ ದೊಡ್ಡದು ಮತ್ತು ಊರಿನ ಮುಖ್ಯ ದೇವಾಲಯ. ಹಸುರು ಮೋಡಿಯ ಕರಿಯ ಕಲ್ಲಿನಲ್ಲಿ

ಕಲ್ಯಾಣ ಚಾಳುಕ್ಯರ ಕಾಲದ ಶಿಲ್ಪಶೈಲಿಯಲ್ಲಿ ಇದನ್ನು ಕಟ್ಟಿದೆ. ಈ ಗುಡಿಯಲ್ಲಿ ಸ್ವಯಂಭು ಅಮೃತೇಶ್ವರ ಲಿಂಗವುಳ್ಳ ಗರ್ಭಗುಡಿ, ಅದರ ಮುಂದೆ ಸುಕನಾಸಿ, ಅದರ ಮುಂದೆ ನಾಲ್ಕು ದಪ್ಪ ಮತ್ತು ದುಂಡಾದ ಕಂಬಗಳುಳ್ಳ ಒಳಮಂಟಪ, ಮುಖಮಂಟಪ ಮತ್ತು ಮಹಾಮಂಟಪಗಳಿವೆ. ಮುಖಮಂಟಪದ ಛತ್ತನ್ನು ಎತ್ತಿಹಿಡಿದ ಕಂಬಗಳು ಬೇರೆ ಬೇರೆ ಆಕಾರವಾಗಿವೆ. ಅವು ಇಟ್ಟಗಿಯ ಪ್ರಾಚೀನ ಗುಡಿಯಲ್ಲಿಯ ಕಂಬಗಳನ್ನೂ ಸ್ವಲ್ಪಮಟ್ಟಿಗೆ ಡಂಬಳದ ದೊಡ್ಡ ಬಸಪ್ಪನ ಗುಡಿಯ ಮುಖಮಂಟಪದ ಕಂಬಗಳನ್ನೂ ಹೋಲುವವು. ಮಹಾಮಂಟಪದೊಳಗಿಂದ ಒಳಮಂಟಪದೊಳಗೆ ಪ್ರವೇಶಿಸುವಲ್ಲಿ ಇರುವ ಶಿಲಾದ್ವಾರ ನಾಗ-ನಾಗಿಣಿ ಮುಂತಾದ ಕೆತ್ತನೆಗಳಿಂದ ಸುಂದರವಾಗಿ ಅಲಂಕೃತವಾಗಿದೆ. ಇಲ್ಲಿ ಚಿತ್ರಗಳನ್ನು ಪೊಳ್ಳುಮಾಡಿ ಅವು ಪ್ರತ್ಯೇಕವಾಗಿ ನಿಂತಂತೆ ಭಾಸವಾಗುವ ಹಾಗೆ ಕೆತ್ತಿದೆ. ಇಲ್ಲಿಯ ಕಲಾಕುಸುರಿನ ಕೆಲಸ ಅತ್ಯಂತ ಪ್ರೇಕ್ಷಣೀಯ. ವಿಮಾನ ಮತ್ತು ಒಳಮಂಟಪದ ಹೊರಗೋಡೆಗಳ ಮೇಲೆ ಕಲಶ, ದೇವತೆಗಳು, ಮಂಗಗಳು, ನೃತ್ಯಗಣಪತಿ, ಮಕರದ ಹರನಾಳಿಗೆ ಮೊದಲಾದವೂ ಶಿವನ ಹಲವು ರೂಪುಗಳೂ ಇವೆ.

ಕೆಲವು ಕಂಬಗಳ ಮೇಲೆ ಮಹಾಮಂಟಪ ನಿಂತಿದೆ. ಅಲ್ಲಿ ನಂದಿಯ ಮೂರ್ತಿ ಇದೆ. ದೇವಾಲಯದ ಸುತ್ತ ಪ್ರಾಕಾರವೂ ಸಣ್ಣ ಗುಡಿಗಳೂ ಇವೆ.

ಈ ಊರ ಜೈನ ಬಸ್ತಿಯೂ ದೊಡ್ಡದು. ಅದರ ಮುಂದೆ ಕಲ್ಲಿನ ಮಹಾದ್ವಾರವಿದೆ. ಊರ ಹೊರಗೆ ಪೂರ್ವಭಾಗದಲ್ಲಿದ್ದ ಪ್ರಾಚೀನ ಗುಡಿಯ ಹೊರಗೋಡೆಗಳ ಮೇಲೆ ವಿಜಯನಗರ ಕಾಲದ ಶಿಲ್ಪವನ್ನು ನೋಡಬಹುದು. (ಎ.ಎಂ.ಎ.)

**ಅತ್ತಿಮಬ್ಬೆ :** 10ನೆಯ ಶತಮಾನದ ಉತ್ತರಾರ್ಧ ಮತ್ತು 11ನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಜೈನ ಶ್ರಾವಕಿ. ಪ್ರಾಚೀನ ಕರ್ನಾಟಕದ ಸ್ತ್ರೀಯರಲ್ಲಿ ಅಗ್ರಗಣ್ಯಳು. ಇವಳ ಬಗ್ಗೆ ಅನೇಕ ಸಂಗತಿಗಳು ರನ್ನನ ಅಜಿತಪುರಾಣದಿಂದಲೂ ಅವನೇ ಬರೆದಿರಬಹುದಾದ ಲಕ್ಕುಂಡಿಯ ಶಾಸನದಿಂದಲೂ ಇವಳ ತೌರುಮನೆಯ ಹಲವು ಸಂಗತಿಗಳು ಪೊನ್ನನ ಶಾಂತಿಪುರಾಣದಿಂದಲೂ ತಿಳಿದುಬರುತ್ತವೆ.

ಅತ್ತಿಮಬ್ಬೆಯ ಅಜ್ಜ ನಾಗಮಯ್ಯ, ಈಗ ಆಂಧ್ರ ಪ್ರದೇಶಕ್ಕೆ ಸೇರಿರುವ ವೆಂಗಿಮಂಡಲದ ಕಮ್ಮೆನಾಡಿನ ಪುಂಗನೂರಿನ ಜೈನಬ್ರಾಹ್ಮಣ. ಇವನ ಮಕ್ಕಳು ಮಲ್ಲಪಯ್ಯ ಮತ್ತು ಪೊನ್ನಮಯ್ಯ. ಇವರಲ್ಲಿ ಮಲ್ಲಪಯ್ಯ ಮತ್ತು ಅಪ್ಪಕಬ್ಬೆಯರ ಮಗಳೇ ಅತ್ತಿಮಬ್ಬೆ. ಮಲ್ಲಪಯ್ಯ ಪಂಡಿತ ಮಂಡಳಿಗಂ ಕವಿಮಂಡಳಿಗಂ ತನ್ನ ಮನೆ ತವರ್ಮನೆಯೆನೆ ಬಾಳಿದವನು. ಈ ಸೋದರರಿಬ್ಬರ ಆಶ್ರಯದಲ್ಲಿ ಪೊನ್ನ ಶಾಂತಿಪುರಾಣವನ್ನು ಬರೆದ. ಪೊನ್ನಮಯ್ಯ ತನ್ನ ದೊರೆ ತೈಲಪನಿಗಾಗಿ ಕಾವೇರೀತೀರದ ಯುದ್ಧದಲ್ಲಿ ಪ್ರಾಣವನ್ನು ಒಪ್ಪಿಸಿದ.

ಅತ್ತಿಮಬ್ಬೆಯನ್ನು ಇವಳ ತಂಗಿ ಗುಂಡಮಬ್ಬೆಯ ಜೊತೆಯಲ್ಲಿ ಚಾಳುಕ್ಯ ಚಕ್ರವರ್ತಿ ಅಹವಮಲ್ಲನ ಭುಜಾದಂಡದಂತಿದ್ದ ನಾಗದೇವನಿಗೆ ಕೊಟ್ಟಿದ್ದರು (ಈ ನಾಗದೇವ, ಚಾಳುಕ್ಯ ಚಕ್ರವರ್ತಿಯ ಮಹಾಮಂತ್ರಿ ಧಲ್ಲಪನ ಹಿರಿಯ ಮಗ). ಅತ್ತಿಮಬ್ಬೆಗೆ ಅಣ್ಣಿಗದೇವನೆಂಬ ಕಿರಿವಯಸ್ಸಿನ ಮಗನೂ ಇದ್ದ. ಇವಳು ಇನ್ನೂ ಯೌವನದಲ್ಲಿರುವಾಗಲೇ ಗಂಡ ನಾಗದೇವ ಸ್ವರ್ಗಸ್ಥನಾದ. ಆಗ ಇವಳ ತಂಗಿ ಗುಂಡಮಬ್ಬೆ ಅಕ್ಕನನ್ನು ಕಷ್ಟದಿಂದ ಒಪ್ಪಿಸಿ, ತಾನು ಗಂಡನೊಡನೆ ಸಹಗಮನ ಮಾಡಿದಳು. ಪತಿಯ ಅಗಲಿಕೆಯಿಂದನೊಂದ ಅತ್ತಿಮಬ್ಬೆ ಮಗನ ಲಾಲನೆಪಾಲನೆಗಾಗಿ ಕಷ್ಟದಿಂದ ಉಳಿದು ಉಗ್ರ ವ್ರತನೇಮಾದಿಗಳಲ್ಲಿ ಜೀವನ ಸಾಗಿಸಿದಳು. ತನ್ನ ಬಳಿಯಿದ್ದ ಐಶ್ವರ್ಯವನ್ನು ಉದಾರವಾಗಿ ಜೈನಧರ್ಮಕ್ಕಾಗಿ ವ್ಯಯಿಸಿದಳು. ಇವಳು ಮಾಡಿದ ಧಾರ್ಮಿಕ ಕಾರ್ಯಗಳಲ್ಲಿ ಕೆಲವು ಇಂತಿವೆ. ಮಣಿಖಚಿತವಾದ 1500 ಜಿನಪ್ರತಿಮೆಗಳನ್ನು ಮಾಡಿಸಿ ದಾನ ಮಾಡಿದಳು. ಲಕ್ಕುಂಡಿಯಲ್ಲಿ ದೊಡ್ಡ ಬಸದಿಯನ್ನು ಕಟ್ಟಿಸಿ (1007) ಅದಕ್ಕೆ ದತ್ತಿಗಳನ್ನು ಬಿಡಿಸಿದಳು. ರನ್ನನಿಂದ ಅಜಿತಪುರಾಣವನ್ನು ಹೇಳಿಸಿದ್ದಲ್ಲದೆ. ತನ್ನ ತಂದೆ ಪೊನ್ನನಿಂದ ಹೇಳಿಸಿದ್ದ ಶಾಂತಿಪುರಾಣದ ಸಾವಿರ ಪ್ರತಿಗಳನ್ನು ಮಾಡಿಸಿ ಹಂಚಿಸಿದಳು. ತನ್ನ ತಪಸ್ಸು ನಿಷ್ಠೆ ಔದಾರ್ಯ ತ್ಯಾಗ ಧರ್ಮಾನುರಾಗ ಕಾವ್ಯಪ್ರೇಮ ಇತ್ಯಾದಿಗಳಿಂದ ತನ್ನ ಕಾಲದ ಜನರ ಕಣ್ಣಲ್ಲಿ ಮಹಾವ್ಯಕ್ತಿಯಾದಳು. ಇವಳು ಮೆರೆದ ಪವಾಡಗಳನ್ನು ಇವಳ ಆಶ್ರಯದಲ್ಲಿದ್ದ ರನ್ನನೂ ಇವಳ ಶಾಸನವೂ ಕೊಂಡಾಡಿವೆ.

ಇವಳಾದ ಮೇಲೆ ಹುಟ್ಟಿದ ಅನೇಕ ಶಾಸನಗಳಲ್ಲಿಯೂ ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿಯೂ ಇವಳನ್ನು ಮನಸಾರೆ ಹೊಗಳಲಾಗಿದೆ. ಕನ್ನಡ ನಾಡಿನಲ್ಲಿ ಶೀಲ ಅನುಪಮಗುಣ ಔದಾರ್ಯ ಅಭಿಮಾನಗಳಿಗೆ ಸಂಕೇತವಾಗಿ ಬಾಳಿದ ಮಹಾವ್ಯಕ್ತಿ ಅತ್ತಿಮಬ್ಬೆ ಮುಂದಿನ ಜನಾಂಗದ ಮೇಲೆಯೂ ತನ್ನ ಪ್ರಭಾವವನ್ನು ಬೀರಿದಳು. (ಎಂ.ಸಿ)

**ಅಥಣಿ :** ಬೆಳಗಾಂವಿ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಪಟ್ಟಣ. ತಾಲ್ಲೂಕಿನ ಉತ್ತರ ಮತ್ತು ಪಶ್ಚಿಮಕ್ಕೆ ಮಹಾರಾಷ್ಟ್ರ ರಾಜ್ಯ, ದಕ್ಷಿಣದಲ್ಲಿ ರಾಯಬಾಗ ತಾಲ್ಲೂಕು, ಪೂರ್ವ ಮತ್ತು ಆಗ್ನೇಯಕ್ಕೆ ಬಿಜಾಪುರ ಮತ್ತು ಜಮಖಂಡಿ ತಾಲ್ಲೂಕುಗಳಿವೆ. ತಾಲ್ಲೂಕಿನಲ್ಲಿ ಅಥಣಿ ಪಟ್ಟಣ ಮತ್ತು 89 ಗ್ರಾಮಗಳಿವೆ. ಜನಸಂಖ್ಯೆ 4,61,362.

ತಾಲ್ಲೂಕಿನ ಬಹುಭಾಗ ಒರಟಾದ, ಸಮತಟ್ಟಿಲ್ಲದ ಭೂಮಿಯಿಂದ ಕೂಡಿದೆ. ದೂರದೂರದಲ್ಲಿ ಹಂತಹಂತವಾಗಿ ಏರುವ, ಮರಗಿಡಗಳಿಲ್ಲದ ಸಣ್ಣ ಬೆಟ್ಟಗುಡ್ಡಗಳು ಹರಡಿವೆ. ಇಲ್ಲಿನ ಮೈದಾನ ಪ್ರದೇಶದ ಸಣ್ಣ ಕೊರಕಲುಗಳಲ್ಲಿ ಮಳೆಗಾಲದಲ್ಲಿ ತೊರೆಗಳು ಕಾಣಿಸಿಕೊಳ್ಳುವುದುಂಟು. ದಿಣ್ಣೆ ಮತ್ತು ಇಳಿಜಾರು ಪ್ರದೇಶಗಳು ಕಲ್ಲುಗಳಿರುವ ಒರಟು ಮೇಲ್ಮೈಯಿಂದ ಕೂಡಿದೆ. ಮಣ್ಣಿನ ಪದರ ಒಂದು ಅಥವಾ ಎರಡು ಅಂಗುಲಕ್ಕಿಂತ ಹೆಚ್ಚು ದಪ್ಪವಿರುವುದಿಲ್ಲ. ಕೃಷ್ಣಾ ನದಿಗೆ ಹತ್ತಿರದ ಪ್ರದೇಶಗಳಲ್ಲಿರುವ ಕಪ್ಪು ಮಣ್ಣಿನ ಭೂಮಿ ಫಲವತ್ತಾಗಿದೆ. ಮಹಾರಾಷ್ಟ್ರದೆಡೆಯಿಂದ ಬರುವ ಕೃಷ್ಣಾನಾಲೆಯೊಂದು ಇಲ್ಲಿ ಹರಿಯುವುದರಿಂದ ನೀರಾವರಿ ಸೌಕರ್ಯ ಸಹ ಇದೆ. ಕೃಷ್ಣಾನದಿ ಹೆಚ್ಚು ಮಟ್ಟಿಗೆ ಅಥಣಿಯ ದಕ್ಷಿಣದ ಗಡಿಯಾಗಿದ್ದು ಸ್ವಲ್ಪದೂರ ಮಾತ್ರ ತಾಲ್ಲೂಕಿನ ಒಳಗೆ ಹರಿಯುತ್ತದೆ. ಅಗರಣಿ ನದಿ ತಾಲ್ಲೂಕಿನ ಮಧ್ಯದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಹರಿದು ಕೃಷ್ಣಾನದಿಯನ್ನು ಸೇರುತ್ತದೆ. ಡೋಣಿ ನದಿ ತಾಲ್ಲೂಕಿನ ಈಶಾನ್ಯದಲ್ಲಿ ಸ್ವಲ್ಪ ದೂರ ಹರಿದು ಮುಂದೆ ಬಿಜಾಪುರ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಮಳೆ ಸಾಮಾನ್ಯವಾಗಿ 600-700ಮಿಮೀ. ಬೇಸಗೆಯಲ್ಲಿ 310ಸೆಲ್ಸಿಯಸ್‌ವರೆಗೂ ಉಷ್ಣತೆ ಇರುತ್ತದೆ. ಕೃಷ್ಣಾ ನದಿ ದಂಡೆಯ ಮೆಕ್ಕಲು ಮಣ್ಣಿನ ಪ್ರದೇಶದಲ್ಲಿ ಹೊಗೆಸೊಪ್ಪಿನ ಬೆಳೆ ವಿಶೇಷ. ಹತ್ತಿ, ಸೇಂಗ, ಜೋಳ, ಗೋದಿ, ದ್ವಿದಳಧಾನ್ಯಗಳು, ಸಜ್ಜೆ, ಕಬ್ಬು ಮತ್ತು ಮೆಣಸಿನಕಾಯಿ ಇವುಗಳನ್ನೂ ಬೆಳೆಯುತ್ತಾರೆ.



ಅಮೃತಲಿಂಗೇಶ್ವರ ದೇವಾಲಯ

ಈ ತಾಲ್ಲೂಕಿನಲ್ಲಿ ಅಥಣಿಯಿಂದ ಸು.10ಕಿಮೀ ವಾಯವ್ಯಕ್ಕಿರುವ ಬೆಳವಂಕಿ ಅಥವಾ ಹಳೆಯ ಪಣ್ಹಾಳದ ಬೆಟ್ಟದ ಮೇಲೆ ಸಿದ್ಧೇಶ್ವರ ಗುಹೆ ಇದೆ. ಮಿರಜ-ಚಿಕ್ಕೋಡಿ ಹಾದಿಯಲ್ಲಿರುವ ಕಾಗವಾಡ ಗ್ರಾಮದಲ್ಲಿರುವ ಬ್ರಹ್ಮನಾಥ (ಕಗ್ಗದ ರಾಯ) ಮತ್ತು ಸತವಾಯಿ ಗುಡಿಗಳು ಬಹುಜನರನ್ನು ಆಕರ್ಷಿಸುತ್ತವೆ. ಇಲ್ಲಿಂದ 14ಕಿಮೀ ಪೂರ್ವಕ್ಕೆ ಅಥಣಿಯ ಹಾದಿಯಲ್ಲಿರುವ ಮಂಗಸುಳಿಯಲ್ಲಿ ಮೇ ತಿಂಗಳಲ್ಲಿ ಮಲ್ಲೇಶ್ವರ ದೇವರ

ಜಾತ್ರೆ ನಡೆಯುತ್ತದೆ. ಅಥಣಿಯಿಂದ 16ಕಿಮೀ ಆಗ್ನೇಯಕ್ಕಿರುವ ಕೊಕಟನೂರು ಐತಿಹಾಸಿಕ ಸ್ಥಳ. ಇಲ್ಲಿನ ಎಲ್ಲಮ್ಮನ ಜಾತ್ರೆ ಬಹು ಜನರನ್ನು ಆಕರ್ಷಿಸುತ್ತದೆ. ಕೃಷ್ಣಾನದಿಯ ಬಲದಂಡೆಯಲ್ಲಿ ಸಪ್ತಸಾಗರ ತೀರ್ಥಕ್ಷೇತ್ರವಿದೆ. ಸಪ್ತಋಷಿಗಳು ಏಳು ಸಮುದ್ರಗಳ ನೀರನ್ನು ಇಲ್ಲಿಗೆ ತಂದು ಬೆರೆಸಿದರೆಂಬುದು ಒಂದು ಐತಿಹ್ಯ. ಅಥಣಿಯಿಂದ ಸು.24ಕಿಮೀ ಈಶಾನ್ಯಕ್ಕಿರುವ ರಾಮತೀರ್ಥದಲ್ಲಿ ಆನಂದಪರ್ವತವೆಂಬ ಬೆಟ್ಟವಿದೆ. ಅದರಲ್ಲಿ ಆನಂದನಾಯಕಿ ದೇವಿಯ ಗುಹಾದೇವಾಲಯವೂ ಸಮೀಪದಲ್ಲಿ ಒಂದು ಸುಂದರ ರಾಮೇಶ್ವರ ದೇವಾಲಯವೂ ಇವೆ. ಇಲ್ಲಿ ಫೆಬ್ರವರಿ-ಮಾರ್ಚ್ ತಿಂಗಳಲ್ಲಿ ರಾಮೇಶ್ವರ ದೇವರ ವಾರ್ಷಿಕ ಜಾತ್ರೆ ನಡೆಯುತ್ತದೆ. ತಾಲ್ಲೂಕಿನ ಪಶ್ಚಿಮದಂಚಿನಲ್ಲಿ ಕೃಷ್ಣಾನದಿಯ ಎಡದಂಡೆಯ ಮೇಲಿರುವ ಜುಗಲ ಗ್ರಾಮದಲ್ಲಿ ಮಸಬತಿ ಎಂಬ ಮುಸ್ಲಿಂ ಸಂತರ ಸಮಾಧಿ ಇದ್ದು ಇಲ್ಲಿ ಪ್ರತಿ ರಜ್ಜಬ್ ತಿಂಗಳಲ್ಲಿ ಉರುಸ್ ನಡೆಯುತ್ತದೆ. ಅಥಣಿಯಿಂದ ಸು.20ಕಿಮೀ ನೈಋತ್ಯದಲ್ಲಿರುವ ಐನಾಪುರದಲ್ಲಿ ಪೀರ್‍ಕಾಜಿಯವರ ಸಮಾಧಿ ಇದೆ. ಅಥಣಿಯಿಂದ ಆಗ್ನೇಯಕ್ಕೆ ಕೃಷ್ಣಾನದಿಯ ಎಡದಂಡೆಯ ಮೇಲಿರುವ ಸವದಿ ಗ್ರಾಮದಲ್ಲಿ ಪ್ರಸಿದ್ಧ ಮುಸಲ್ಮಾನ ಸಂತರೊಬ್ಬರ ಸಮಾಧಿ ಇದೆ. ಶೇಡಬಾಳ (ನೋಡಿ) ತಾಲ್ಲೂಕಿನ ಮುಖ್ಯಸ್ಥಳಗಳಲ್ಲೊಂದು.

ತಾಲ್ಲೂಕಿನ ಮುಖ್ಯ ಪಟ್ಟಣ ಅಥಣಿ. ಸಮುದ್ರಮಟ್ಟದಿಂದ 650ಮೀ ಎತ್ತರದಲ್ಲಿದೆ. ಬೆಳಗಾಂವಿಯಿಂದ ಸು.148ಕಿಮೀ ಈಶಾನ್ಯಕ್ಕಿದೆ. ಜನಸಂಖ್ಯೆ 39,200.

ಅಥಣಿ ಈ ಸುತ್ತಿನ ಮುಖ್ಯ ವ್ಯಾಪಾರ ಕೇಂದ್ರ. ಇಲ್ಲಿಂದ ಬಿಜಾಪುರ, ಗೋಕಾಕ, ಚಿಕ್ಕೋಡಿ ಮೊದಲಾದ ಊರುಗಳಿಗೆ ಉತ್ತಮ ರಸ್ತೆ ಸಂಪರ್ಕವಿದೆ. ಪ್ರತಿ ಭಾನುವಾರ ಸಂತೆ ಸೇರುತ್ತದೆ. ಸಿದ್ಧೇಶ್ವರ ಮತ್ತು ಅಮೃತೇಶ್ವರ ದೇವಾಲಯಗಳಿವೆ. ಪ್ರಸಿದ್ಧ ಮುರುಘೇಂದ್ರ ಸ್ವಾಮಿಗಳ ಮಠವಿದೆ. ಅಥಣಿಯನ್ನು 1679ರಲ್ಲಿ ಶಿವಾಜಿಯ ಮಗ ಸಾಂಬಾಜಿಯಿಂದ ಮುಗಲರು ಕಿತ್ತುಕೊಂಡರು. 1720ರಲ್ಲಿ ನಿಜಾಮ್-ಉಲ್-ಮುಲ್ಕ್ ಅಥಣಿಯನ್ನು ಗೆದ್ದು ಕೊಲ್ಲಾಪುರದ ಅರಸನಿಗೆ ಕೊಟ್ಟ. ಬಳಿಕ ಅಥಣಿ ಸಾತಾರಾದ ಶಾಹೂ ರಾಜನಿಗೆ ಸೇರಿತು. ರಾಜನಿಗೆ ಮಕ್ಕಳಿಲ್ಲದ್ದರಿಂದ ಆತ ಸತ್ತ ಮೇಲೆ 1839ರಲ್ಲಿ ಆಂಗ್ಲರ ವಶವಾಯಿತು. **(ಡಿ.ಕೆ.;ಎಸ್.ಜಿ.ಕೆ.)**

**ಅಥಣಿ ಶಿವಯೋಗಿ :** 1836-1921. ಪ್ರಸಿದ್ಧ ಸಂತರು. ಜನ್ಮಸ್ಥಳ ಕೃಷ್ಣಾನದಿಯ ತೀರದಲ್ಲಿರುವ ಇಂಗಳಗಾವಿಯೆಂಬ ಗ್ರಾಮ. ತಂದೆ ಮಠದ ರಾಚಯ್ಯ, ತಾಯಿ ನೀಲಮ್ಮ. ಇವರ ಹುಟ್ಟು ಹೆಸರು ಗುರುಲಿಂಗಯ್ಯ. ಐದನೆಯ ವಯಸ್ಸಿನಲ್ಲೆ ಅಥಣಿಯ ಗಚ್ಚಿನಮಠದ ಮರುಳಶಂಕರ ಸ್ವಾಮಿಗಳ ಶಿಷ್ಯರಾದರು. ಬಾಲ್ಯದಿಂದಲೂ ಧ್ಯಾನಾಸಕ್ತರಾಗಿ ತುಂಬ ವಿರಕ್ತಮನೋವೃತ್ತಿಯಿಂದ ಗುರುಸೇವೆಯಲ್ಲಿ ನಿರತರಾಗಿದ್ದ ಇವರು ಇಪ್ಪತ್ತನೆಯ ವಯಸ್ಸಿನಲ್ಲಿ ತೀರ್ಥಯಾತ್ರೆ ಹೊರಟು ಅನೇಕ ಶಿವ ಕ್ಷೇತ್ರಗಳನ್ನು ಸಂದರ್ಶಿಸಿ ಧರ್ಮೋಪದೇಶ ಮಾಡಿದರು. ಅನಂತರ ಅಥಣಿಯ ಗಚ್ಚಿನಮಠದಲ್ಲಿ ಶಿವಯೋಗನಿಷ್ಠರಾಗಿ ವೈರಾಗ್ಯಸಂಪನ್ನರಾದರು. ಬೇಕು ಎಂಬುದು ಭೋಗ, ಬೇಡ ಎಂಬುದು ವೈರಾಗ್ಯ ಎಂಬ ತತ್ತ್ವವನ್ನು ಅರಿತು ಆಚರಿಸುತ್ತಿದ್ದ ಇವರು ಅಥಣಿಯ ಮಠದಲ್ಲಿ 63 ಪುರಾತನರ ಪೂಜೆಯನ್ನು ವೈಭವದಿಂದ ನಡೆಸಿದರು. ತಮ್ಮ ಭಕ್ತಿಜ್ಞಾನ ವೈರಾಗ್ಯಗಳಿಂದ ಲೋಕದ ಗೌರವಕ್ಕೆ ಪಾತ್ರರಾದರು. **(ಓ.ಎಸ್.ಎಲ್.)**

**ಅದೃಶ್ಯ ಕವಿ :** ಸು.1580. ವೀರಶೈವ ಕವಿ. ಪ್ರೌಢರಾಯಕಾವ್ಯ ಎಂಬ ಗ್ರಂಥದ ಕರ್ತೃ. ಈತನಿಗೆ ಅದ್ರೀಶ ಎಂಬ ಹೆಸರೂ ಇದ್ದಂತೆ ತಿಳಿದುಬರುತ್ತದೆ. ಕವಿ ತನ್ನ ಪರಂಪರೆಯನ್ನು ಹೀಗೆ ಹೇಳಿಕೊಂಡಿದ್ದಾನೆ. ಮಳೆಯ ಮಲ್ಲೇಶ್ವರನ ಶಿಷ್ಯ ಶಂಕರ. ಇವನ ಮಗ ಅಣ್ಣೇಂದ್ರ. ಈ ಅಣ್ಣೇಂದ್ರನ ಮಗನೇ ಅದೃಶ್ಯ ಕವಿ. ವಿಜಯನಗರದ ಪ್ರೌಢರಾಯನಿಗೆ (1424-46) ಆತನ ಮಂತ್ರಿ ಜಕ್ಕಣಾಚಾರ್ಯ (ಜಕ್ಕಣಾರ್ಯ) ಹೇಳಿದ ಅನೇಕ ಶಿವಶರಣರ ಕಥೆಗಳ ಸಾರವನ್ನು ಕವಿ ಕಾವ್ಯರೂಪವಾಗಿ ತನ್ನ ಪ್ರೌಢರಾಯ ಕಾವ್ಯದಲ್ಲಿ ಹೇಳಿದ್ದಾನೆ. ವಾರ್ಧಕಷಟ್ಪದಿಯಲ್ಲಿರುವ ಈ ಕಾವ್ಯದಲ್ಲಿ 21 ಸಂಧಿಗಳೂ 1113 ಪದ್ಯಗಳೂ ಇವೆ. ಗ್ರಂಥಾವತಾರದಲ್ಲಿ ಅಲ್ಲಮಪ್ರಭುವಿನಿಂದ ಸತ್ಯಣ್ಣನವರೆಗೆ ಪುರಾತನ ವಚನಕಾರರನ್ನು ಸ್ಮರಿಸಿದ್ದಾನೆ. ಈ ಕಾವ್ಯ ತೋರಿಕೆಗೆ ಐತಿಹಾಸಿಕ ಕಾವ್ಯದಂತೆ ಕಂಡುಬಂದರೂ ನಿಜವಾಗಿ ಧಾರ್ಮಿಕವಾಗಿದೆ. ಇಲ್ಲಿ ಶಿವಶರಣರ ಕಥೆ ಬಹು ಮುಖ್ಯ. ಈ ಕಾವ್ಯಕ್ಕೆ ಪ್ರಾಧಾನ್ಯ ಬಂದಿರುವುದು ಕಾವ್ಯಗುಣದಿಂದಲ್ಲ, ಕಾವ್ಯದಲ್ಲಿರುವ ವೀರಶೈವ ಶರಣರ ಕಥೆಗಳ ಆಕರದಿಂದ. ಪ್ರೌಢರಾಯನ ಕಾಲದ ಸಾಹಿತ್ಯೇತಿಹಾಸದ ಮೇಲೂ ಈ ಕಾವ್ಯ ಸ್ವಲ್ಪ ಬೆಳಕು ಚೆಲ್ಲುತ್ತದೆ. **(ಪಿ.ವಿ.ಸಿ.)**

**ಅನಂತಕವಿ:** ಸು.1780. ಜೈನಕವಿ. ಗೊಮ್ಮಟೇಶ್ವರಚರಿತ್ರೆ ಎಂಬ ಸಾಂಗತ್ಯಗ್ರಂಥದ ಕರ್ತೃ. ಇದರಲ್ಲಿ ಶ್ರವಣಬೆಳಗೊಳಕ್ಕೆ ಸಂಬಂಧಿಸಿದಂತೆ ಅನೇಕ ಐತಿಹಾಸಿಕ ಅಂಶಗಳನ್ನು ವಿವರಿಸಿದ್ದಾನೆ. 1673ರಲ್ಲಿ ಕಟ್ಟಿದ ಚೆನ್ನಣ್ಣನ ಬಸದಿ, 1677ರಲ್ಲಿ ಚಿಕ್ಕದೇವರಾಜನ ಮಂತ್ರಿ ವಿಶಾಲಾಕ್ಷಪಂಡಿತ ಗೊಮ್ಮಟೇಶ್ವರನಿಗೆ ಮಾಡಿಸಿದ ಮಸ್ತಕಾಭಿಷೇಕ, ಬೆಳಗೊಳದ ಕಲ್ಯಾಣಿ ನಿರ್ಮಾಣ, ಚಂದ್ರಗಿರಿಯ ಪ್ರಾಕಾರ, ಮಾನಸ್ತಂಭ-ಇವುಗಳ ಇತಿಹಾಸ ಹೇಳಿರುವುದಲ್ಲದೆ ಅನೇಕ ಜೈನಯತಿಗಳಿಗೂ ಶ್ರವಣಬೆಳಗೊಳಕ್ಕೂ ಇರುವ ಸಂಬಂಧವನ್ನು ಗುರುತಿಸಿದ್ದಾನೆ. ಚಾವುಂಡರಾಯನಿಗಿಂತ ಪೂರ್ವದಲ್ಲಿಯೇ ಗೊಮ್ಮಟಮೂರ್ತಿಯಿದ್ದು ಅದನ್ನು ಚಾವುಂಡರಾಯ ಪ್ರತಿಷ್ಠಿಸಿದನೆಂದು ಹೇಳಿ ಸಂಶೋಧಕರ ದೃಷ್ಟಿ ಅತ್ತ ಹರಿವಂತೆ ಮಾಡಿದ್ದಾನೆ. ನ್ಯಾಯಕುಮುದ ಚಂದ್ರೋದಯ ಮುಂತಾದ ಗ್ರಂಥಗಳನ್ನು ಬರೆದ ಪ್ರಭಾಚಂದ್ರ ಶ್ರವಣಬೆಳಗೊಳದಲ್ಲಿ ಯತಿಯಾಗಿದ್ದಂತೆಯೂ ಅಭಯ ಚಂದ್ರ ಶಶಕಪುರದಲ್ಲಿ ಸಳನಿಗೆ ಗುರುವಾಗಿದ್ದಂತೆಯೂ ಕವಿ ತನ್ನ ಕಾವ್ಯದಲ್ಲಿ ಹೇಳಿರುವುದು ಕಂಡುಬರುತ್ತದೆ.

ಗೊಮ್ಮಟಚರಿತ್ರೆ ಅಸಮಗ್ರವಾಗಿದೆ. ಶೈಲಿ ಸರಳ ಸುಂದರವಾಗಿದೆ. ಅನೇಕ ಐತಿಹಾಸಿಕ ಅಂಶಗಳನ್ನು ಹೇಳಿರುವುದರಿಂದ ಈ ಗ್ರಂಥಕ್ಕೆ ಪ್ರಾಮುಖ್ಯ ಸಂದಿದೆ. *

**ಅನಂತ ಕೃಷ್ಣಶರ್ಮ, ರಾಳ್ಳಪಲ್ಲಿ :** 1893-1979. ಕನ್ನಡ, ತೆಲುಗು ಮತ್ತು ಸಂಸ್ಕೃತ ಭಾಷೆಗಳ ಪಂಡಿತರು. ಪ್ರಸಿದ್ಧ ವಿದ್ವಾಂಸರು, ಸಂಗೀತಜ್ಞರು ಮತ್ತು ಶಾಸ್ತ್ರಕಾರರು. ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ರಾಳ್ಳಪಲ್ಲಿಯಲ್ಲಿ 1893 ಜನವರಿ 23ರಂದು ಜನಿಸಿದರು. ತಂದೆ ಕೃಷ್ಣಾಮಾಚಾರ್ಯರು ಸಂಸ್ಕೃತ ಪಂಡಿತರು, ಜೊತೆಗೆ ಸಂಗೀತಪ್ರೇಮಿಗಳು. ಶರ್ಮರ ಪ್ರಾರಂಭದ ವಿದ್ಯಾಭ್ಯಾಸ ತಂದೆಯವರ ಬಳಿಯಲ್ಲಿಯೇ ನಡೆಯಿತು. ಅನಂತರ ಮೈಸೂರು ಚಾಮರಾಜ ಸಂಸ್ಕೃತ ಪಾಠಶಾಲೆಯಲ್ಲಿ ಹಾಗೂ ಪರಕಾಲ ಮಠದ ಶ್ರೀಕೃಷ್ಣ ಬ್ರಹ್ಮತಂತ್ರಯತೀಂದ್ರರಲ್ಲಿ ವ್ಯಾಕರಣ ಮತ್ತು ...ಭ್ಯಾಸಂಗಮಾಡಿದರು. ಸಂಗೀತವನ್ನು ...ರು, ಚಿಕ್ಕರಾಮರಾಯರು ಮತ್ತು ...ತ ಗುರುಗಳು.



...ಕಾಲೇಜಿನ ತೆಲುಗು ಅಧ್ಯಾಪಕರಾಗಿ ತಮ್ಮ ವೃತ್ತಿಜೀವನವನ್ನು ಆರಂಭಿಸಿದ (1912) ಶರ್ಮರು ಸು.38 ವರ್ಷಗಳ ಕಾಲ ಆ ಹುದ್ದೆಯಲ್ಲಿದ್ದು 1949ರಲ್ಲಿ ನಿವೃತ್ತರಾದರು. ಅನಂತರ ತಿರುಪತಿಯ ಪ್ರಾಚ್ಯ ಸಂಶೋಧನಾಲಯದಲ್ಲಿ ರೀಡರ್ ಹುದ್ದೆಯನ್ನು ವಹಿಸಿಕೊಂಡು, ತಾಳ್ಳಪಾಕ ಕವಿಗಳ ಗೇಯ ರಚನೆಗಳನ್ನು ಕುರಿತು ಸಂಶೋಧನೆ ನಡೆಸಿ, ತಾಳ್ಳಪಾಕಪಾಟಲು ಗ್ರಂಥವನ್ನು ಪ್ರಕಟಿಸಿದರು (1952). ಕವಿ ವೇಮನ ಮತ್ತು ಅವನ ಪದ್ಯಗಳನ್ನು ಕುರಿತು ಮಾಡಿರುವ ಸಂಶೋಧನೆ, ಆಂಧ್ರ ವಿಶ್ವಕಲಾ ಪರಿಷತ್ತಿನ ಆಶ್ರಯದಲ್ಲಿ ಮಾಡಿದ ಉಪನ್ಯಾಸಗಳು, ಶ್ರೀಕೃಷ್ಣದೇವರಾಯವರ್ಧಂತಿ ಸಮಾರಂಭದ ಭಾಷಣಗಳು, ಪ್ರಸಿದ್ಧ ವಾಗ್ಗೇಯಕಾರರು ಹಾಗೂ ಗಾನಕಲೆಯನ್ನು ಕುರಿತಾದ ಬರೆಹ-

ಭಾಷಣಗಳು ಇವರ ಪಾಂಡಿತ್ಯ ಪ್ರತಿಭೆಗಳಿಗೆ ಸಾಕ್ಷಿಯಾಗಿವೆ. ಇವರ ಕೆಲವು ಬರೆಹ-ಭಾಷಣಗಳು ಪುಸ್ತಕ ರೂಪದಲ್ಲೂ ಪ್ರಕಟವಾಗಿವೆ. ಅವುಗಳಲ್ಲಿ ಗಾನಕಲೆ (1952), ಸಾಹಿತ್ಯ ಮತ್ತು ಜೀವನ ಕಲೆ (1954) ಎಂಬ ಕನ್ನಡ ಗ್ರಂಥಗಳು ಮತ್ತು ವೇಮನಸಾರಸ್ವತೋಪನ್ಯಾಸಮುಲು (1935) ಎಂಬ ತೆಲುಗು ಗ್ರಂಥ ಮುಖ್ಯವಾದವು. ಆಂಧ್ರ ಪ್ರದೇಶ ಸಾಹಿತ್ಯ ಅಕಾಡೆಮಿ ಮತ್ತು ಸಂಗೀತ ಅಕಾಡೆಮಿಗಳ ಕೆಲಸಕಾರ್ಯಗಳಲ್ಲೂ ಇವರು ಸಹಕರಿಸಿದ್ದಾರೆ. ಶಂಕರಾಭರಣ ಮತ್ತು ಕಾನಡಾ ರಾಗಗಳಲ್ಲಿ ಸ್ವರಜತಿಗಳನ್ನೂ ಹಮೀರ ಕಲ್ಯಾಣಿ ರಾಗದಲ್ಲಿ ವರ್ಣವನ್ನೂ ಬೇಗಡೆಯಲ್ಲಿ ತಿಲ್ಲಾನವನ್ನೂ ಹಾಗೂ ಸುಮಾರು ಇಪ್ಪತ್ತೈದು ಕೀರ್ತನೆಗಳನ್ನೂ ರಚಿಸಿರುವ ಅನಂತ ಕೃಷ್ಣಶರ್ಮರು ಹಾಡಿಕೆ ಮತ್ತು ಪಿಟೀಲುವಾದನ-ಎರಡರಲ್ಲೂ ಅತಿಶಯವಾದ ಸಿದ್ಧಿಪಡೆದವರು. ಕ್ಷೇತ್ರಯ್ಯನ ಪದಗಳ ಗಾಯನದಲ್ಲಿ ಇವರು ಪಡೆದ ಯಶಸ್ಸು ಮೇಲ್ಮಟ್ಟದ್ದು.

ನೆಲ್ಲೂರಿನ ಆಂಧ್ರಕಲಾ ನಾಟಕ ಪರಿಷತ್ತು (1938), ಕಾಕಿನಾಡದ ಸರಸ್ವತೀ ಗಾನಸಭೆ (1954), ಮೈಸೂರು ಬಿಡಾರಂಕೃಷ್ಣಪ್ಪನವರ ಸೀತಾರಾಮಮಂದಿರದ ಚತುರ್ಥ ಸಂಗೀತ ಸಮ್ಮೇಳನ (1961), ಬೆಂಗಳೂರು ಗಾಯನ ಸಮಾಜದ ದ್ವಿತೀಯ ಸಂಗೀತ ಸಮ್ಮೇಳನ (1970), ಮದರಾಸು ಸಂಗೀತ ಅಕಾಡೆಮಿಯ 48ನೆಯ ವಾರ್ಷಿಕ ಅಧಿವೇಶನ (1974) ಮುಂತಾದ ಹತ್ತಾರು ಪಂಡಿತ ಪರಿಷತ್ತುಗಳು ರಾಳ್ಳಪಲ್ಲಿಯವರನ್ನು ಅಧ್ಯಕ್ಷರನ್ನಾಗಿ ಆಯ್ಕೆಮಾಡಿ ಗೌರವಿಸಿವೆ.

ಇವರಿಗೆ ಕರ್ನಾಟಕ ರಾಜ್ಯ ಸಂಗೀತ ನಾಟಕ ಅಕಾಡೆಮಿ ವಿಶೇಷ ಪ್ರಶಸ್ತಿ ನೀಡಿದೆ (1969). ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಗೌರವ ಸದಸ್ಯತ್ವ (ಫೆಲೋಷಿಪ್-1973), ತಿರುಪತಿಯ ವೆಂಕಟೇಶ್ವರ ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್ (ಡಿ.ಲಿಟ್-1974) ಪ್ರಶಸ್ತಿಗಳೂ ಇವರಿಗೆ ಲಭಿಸಿವೆ. ಗಾನಕಲಾಪ್ರಪೂರ್ಣ, ಗಾನಕಲಾಸಿಂಧು ಮುಂತಾದ ಗೌರವ ಬಿರುದುಗಳೂ ಬಂದಿವೆ. 'ನಮ್ಮ ದೇಶ ಬಲಿಷ್ಠವಾಗಬೇಕಾದರೆ, ಪ್ರತಿಷ್ಠಾರ್ಹವಾಗ ಬೇಕಾದರೆ, ನೀತಿವಂತವಾಗಬೇಕಾದರೆ ನಿಷ್ಕಲ್ಮತೆ ತೊಲಗಬೇಕು. ನಡೆಯುವ ನಡೆ, ಆಡುವ ಆಟ, ನುಡಿಯವ ಮಾತು, ನೆನೆಯುವ ಭಾವ-ಇವುಗಳೆಲ್ಲಾ ಕಲಾದೃಷ್ಟಿಯ ಅಧಿಕಾರಕ್ಕೆ ಒಳಪಡಬೇಕು. ಜೀವನವೇ ಲಯಬದ್ಧವಾಗಿ ಒಟ್ಟಂದದಿಂದ ಶೋಭಿಸಬೇಕು. ಅದೇ ಸಂಸ್ಕೃತಿಯ ಕುರುಹು. ಸರಸ್ವತಿ ದೇವಿಯ ಆರಾಧನೆ'- ಎಂಬ ಶರ್ಮರ ಮಾತುಗಳು ಅರ್ಥಸಂಪನ್ನವಾಗಿದ್ದು, ಇವರ ಜೀವಿತ ಸಾಧನೆಯ ಮೇಲಣ ವ್ಯಾಖ್ಯೆಯಂತಿವೆ. 1979ರಲ್ಲಿ ರಾಳ್ಳಪಲ್ಲಿಯವರು ಬೆಂಗಳೂರಿನಲ್ಲಿ ನಿಧನರಾದರು. ತಿರುಪತಿ-ತಿರುಮಲ ದೇವಸ್ಥಾನದ ಆಡಳಿತ ಮಂಡಳಿ ಇವರು ತೀರಿಕೊಳ್ಳುವ ಕೆಲದಿನಗಳ ಮೊದಲು ಆಸ್ಥಾನ ವಿದ್ವಾಂಸರೆಂಬ ಪ್ರಶಸ್ತಿ ನೀಡಿ ಗೌರವಿಸಿತ್ತು. **(ಎಸ್.ಆರ್.ಆರ್.)**

**ಅನಂತನಾಗ್ :** ಪ್ರಸಿದ್ಧ ಚಲನಚಿತ್ರ ನಟ, ನಿರ್ಮಾಪಕ, ಕರ್ನಾಟಕ ರಾಜ್ಯದ ಮಾಜಿ ಸಚಿವ. ತಂದೆ ಸದಾನಂದ ನಾಗರಕಟ್ಟೆ, ತಾಯಿ ಆನಂದಿ. ತಂದೆ ಉತ್ತರ ಕನ್ನಡ ಜಿಲ್ಲೆಯ ಶಿರಾಲಿಯವರು. ಇವರು ಕಾಸರಗೋಡಿನ ಆನಂದಾಶ್ರಮದಲ್ಲಿ ಪ್ರಬಂಧಕರಾಗಿದ್ದರು. ಅನಂತನಾಗ್ ಅವರು ಚಿತ್ರಾಪುರ ಮತ್ತು ಶಿರಾಲಿಗಳಲ್ಲಿ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಪಡೆದರು. ಅನಂತರ ಮುಂಬಯಿಯ ಸೇಂಟ್ ಜೇವಿಯರ್ ಶಾಲೆ ಸೇರಿ (1961) ಎಸ್.ಎಸ್.ಎಲ್.ಸಿ. ಪಾಸು ಮಾಡಿದರು (1964-65). ಸಂಕಲ್ಪ ಚಿತ್ರದ ಮೂಲಕ ಇವರು ಕನ್ನಡ ಚಿತ್ರರಂಗ ಪ್ರವೇಶಿಸಿದರು. ಇದಕ್ಕೂ ಮುನ್ನ ಐವತ್ತಕ್ಕೂ ಹೆಚ್ಚು ನಾಟಕಗಳಲ್ಲಿ ಭಾಗವಹಿಸಿದ್ದರು. ಇವರ ತಂದೆ-ತಾಯಿ ಬೆಂಗಳೂರಿಗೆ ಬಂದಾಗ (1969) ಇವರೂ ಬೆಂಗಳೂರಿನಲ್ಲೇ ನೆಲೆ ನಿಂತರು. ಸಹೋದರ ಶಂಕರನಾಗ್ (ನೋಡಿ) ಅವರೊಂದಿಗೆ ಸಂಕೇತ್ ಲಾಂಛನದಡಿ ಮಿಂಚಿನ ಓಟ ಚಿತ್ರ ನಿರ್ಮಿಸಿದರು (1980). ಅನಂತರ ಜನ್ಮ ಜನ್ಮದ ಅನುಬಂಧ (1981), ನೋಡಿ ಸ್ವಾಮಿ ನಾವಿರೋದೇ ಹೀಗೆ (1983), ಆಕ್ಸಿಡೆಂಟ್ (1984) ಮೊದಲಾದ ಯಶಸ್ವಿ ಚಿತ್ರಗಳ ನಿರ್ಮಾಪಕರಾದರು. ಕರ್ನಾಟಕದಲ್ಲಿ ಜನತಾಪಕ್ಷದ ಪರವಾಗಿ ಚುನಾವಣೆಯ ಪ್ರಚಾರ ಕೈಗೊಂಡರು. 'ಬರ' ಚಿತ್ರದ ಹಿಂದಿ ಡಬ್ಬಿಂಗಿಗೆ ಮುಂಬಯಿಗೆ ತೆರಳಿದಾಗ ಅಲ್ಲಿಯ ರೆಕಾರ್ಡಿಂಗ್ ವ್ಯವಸ್ಥೆಗಳಿಗೆ ಮಾರುಹೋಗಿ ಸಹೋದರ ಶಂಕರನಾಗ್‌ರವರೊಂದಿಗೆ ಬೆಂಗಳೂರಿನಲ್ಲಿ ಸಂಕೇತ್ ಎಲೆಕ್ಟ್ರಾನಿಕ್ಸ್ ಸ್ಟುಡಿಯೋ ಸ್ಥಾಪಿಸಿದರು (1985). ಎಂ.ಎಸ್.ಸತ್ಯು ನಿರ್ದೇಶಿದ, ಸ್ವತಃ ಅಭಿನಯಿಸಿದ 'ಬರ' ಚಿತ್ರವನ್ನು ವಿತರಿಸಿದರು.

ಹಾಸ್ಯ ಲೇಪನವಿರುವ ನಾಯಕ ನಟನಾಗಿ ಅನಂತನಾಗ್ ಜನಪ್ರಿಯತೆ ಗಳಿಸಿದ್ದಾರೆ. ಇಬ್ಬನಿ ಕರಗಿತು, ಮುದುಡಿದ ತಾವರೆ ಅರಳಿತು, ಹಂಸಗೀತೆ, ನಾರದವಿಜಯ, ಬೆಳದಿಂಗಳಬಾಲೆ, ತೆನಾಲಿರಾಮಕೃಷ್ಣ, ಬಯಲುದಾರಿ, ಕಾಮನಬಿಲ್ಲು, ನಾ ನಿನ್ನ ಬಿಡಲಾರೆ, ಹೆಂಡ್ತಿಗೆ ಹೇಳ್ಬೇಡಿ, ಸುಖ ಸಂಸಾರಕ್ಕೆ ಹನ್ನೆರಡು ಸೂತ್ರಗಳು, ಉಂಡೂ ಹೋದ ಕೊಂಡೂ ಹೋದ, ಗೋಲ್‌ಮಾಲ್ ರಾಧಾಕೃಷ್ಣ, ಗೌರಿಗಣೇಶ, ಗಣೇಶನ ಮದುವೆ, ಕನ್ನೇಶ್ವರ ರಾಮ, ಮತದಾನ ಮುಂತಾದವು ಇವರು ಅಭಿನಯಿಸಿದ ಕೆಲವು ಮುಖ್ಯ ಚಿತ್ರಗಳು. ಮಿಂಚಿನಓಟ ಇವರಿಗೆ ಶ್ರೇಷ್ಠ ನಟ ರಾಜ್ಯಪ್ರಶಸ್ತಿ ತಂದುಕೊಟ್ಟಿದೆ. ಹಿಂದಿಯ ಹೊಸ ಅಲೆಯ ಚಲನ ಚಿತ್ರಗಳಲ್ಲಿಯೂ ಇವರು ಅಭಿನಯಿಸಿದ್ದಾರೆ. ಅಂಕುರ್, ನಿಶಾಂತ್ ಇವರು ಅಭಿನಯಿಸಿರುವ ಚಿತ್ರಗಳು. ಇವರು ಅನೇಕ ಯಶಸ್ವಿ ನಾಟಕಗಳಲ್ಲಿಯೂ ಅಭಿನಯಿಸಿದ್ದಾರೆ.



ಬ್ಯಾರಿಸ್ಟರ್ ನಾಟಕದ ಇವರ ಅಭಿನಯ ಸ್ಮರಣೀಯ. ಇವರು ಅಭಿನಯಿಸಿದ 'ನೋಡಿಸ್ವಾಮಿ ನಾವಿರೋದೇ ಹೀಗೆ' ನೂರಕ್ಕೂ ಹೆಚ್ಚು ಪ್ರಯೋಗಗಳನ್ನು ಕಂಡ ಜನಪ್ರಿಯ ನಾಟಕ. ಶಂಕರನಾಗ್ ನಿರ್ದೇಶಿಸಿದ, ಆರ್.ಕೆ. ನಾರಾಯಣರ ಕಾದಂಬರಿ ಆಧಾರಿತ ಮಾಲ್ಗುಡಿಡೇಸ್ ಕಿರುತೆರೆಯ ಹಿಂದಿ ಧಾರಾವಾಹಿಯಲ್ಲೂ ಇವರು ಅಭಿನಯಿಸಿದ್ದಾರೆ. 1988ರಲ್ಲಿ ಚುನಾವಣೆಗೆ ನಿಂತು ಸ್ಪರ್ಧಿಸಿ ಶಾಸಕರಾಗಿ ಆಯ್ಕೆಯಾಗಿ ರಾಜ್ಯ ಸಚಿವರಾಗಿಯೂ ಸೇವೆ ಸಲ್ಲಿಸಿದ್ದಾರೆ. ಮಾಜಿ ಮುಖ್ಯಮಂತ್ರಿ ಜೆ.ಎಚ್.ಪಟೇಲರ ಆಪ್ತವಲಯದಲ್ಲಿ ಇವರೂ ಒಬ್ಬರಾಗಿದ್ದರು. ರಾಜಕೀಯ ಹಿನ್ನೆಲೆಯ ಚಿತ್ರಗಳಲ್ಲಿ ಇವರಿಗೆ ವಿಶೇಷ ಆಸಕ್ತಿ. ಓದುವ ಹವ್ಯಾಸ ಬೆಳೆಸಿಕೊಂಡಿರುವ ಇವರೊಬ್ಬ ವಿಚಾರವಂತ ನಟ. ಕೆಲವು ವರ್ಷಗಳ ರಾಜಕೀಯ ಜೀವನದ ಬಳಿಕ ಇವರು ಪುನಃ ಚಿತ್ರಗಳಲ್ಲಿ ಹಾಗೂ ಕಿರುತೆರೆಯಲ್ಲಿ ನಟಿಸಲಾರಂಭಿಸಿದ್ದಾರೆ. ಲಂಕೇಶ್‌ಪತ್ರಿಕೆ, ಪ್ರೀತಿ ಪ್ರೇಮ ಪ್ರಣಯ - ಇವರ ಇತ್ತೀಚಿನ ಚಿತ್ರಗಳು (2003). ಈ ಚಿತ್ರಗಳು ಇವರ ಅಭಿನಯ ವೃತ್ತಿಗೆ ಹೊಸ ಆಯಾಮ ನೀಡಿವೆ. ಇವರು ತಮ್ಮ ಸಹೋದರ ಶಂಕರನಾಗ್‌ರವರ ಜೀವನ ಕಥನವನ್ನು ಬರೆದಿದ್ದು 'ನನ್ನ ತಮ್ಮ ಶಂಕರ' ಎಂಬ ಹೆಸರಿನಲ್ಲಿ ಇದು ಪ್ರಕಟವಾಗಿದೆ (2001). ಈ ಪುಸ್ತಕಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ಹೆಸರಾಂತ ನಟಿ ಗಾಯತ್ರಿ ಇವರ ಪತ್ನಿ. *

**ಅನಂತಮೂರ್ತಿ, ಯು.ಆರ್. :** 1932-. ಜ್ಞಾನಪೀಠ ಪ್ರಶಸ್ತಿ ಪಡೆದ ಪ್ರಸಿದ್ಧ ಲೇಖಕ, ವಿಮರ್ಶಕ, ಸಮಾಜವಾದಿ ಚಿಂತಕರು. ಉಡುಪಿ ರಾಜಗೋಪಾಲಾಚಾರ್ಯ ಅನಂತಮೂರ್ತಿ ಇವರ ಪೂರ್ಣ ಹೆಸರು. ಶಿವಮೊಗ್ಗ ಜಿಲ್ಲೆಯ ಮೇಳಿಗೆಯಲ್ಲಿ 1932 ಡಿಸೆಂಬರ್ 21ರಂದು ಜನಿಸಿದರು. ಇವರ ಪೂರ್ವಿಕರು ಉಡುಪಿಯ ಶಿವಳ್ಳಿಯವರು. ತಂದೆ ರಾಜಗೋಪಾಲಾಚಾರ್ಯ, ತಾಯಿ ಸತ್ಯಭಾಮಾ. ಈ ದಂಪತಿಗಳ ಐವರು ಮಕ್ಕಳಲ್ಲಿ ಅನಂತಮೂರ್ತಿ ಹಿರಿಯ ಮಗ. ಇವರ ಬಾಲ್ಯದ ಜೀವನ ಕಡುಬಡತನದಲ್ಲಿ ಕಳೆಯಿತು. ಪ್ರಾಥಮಿಕ ವಿದ್ಯಾಭ್ಯಾಸ ಮೇಳಿಗೆ, ಬೇಗವಳ್ಳಿ, ಕೋಣಂದೂರು ತೀರ್ಥಹಳ್ಳಿಗಳಲ್ಲಿ ನಡೆಯಿತು. ಆಗ ಯೋಗಾನರಸಿಂಹ ಎಂಬ ಮುಖ್ಯೋಪಾಧ್ಯಯರೂ ವಿದ್ವಾಂಸರಾದ ಕಮುಕೋಡು ನರಸಿಂಹಶಾಸ್ತ್ರಿಯವರೂ ಇವರಿಗೆ ತುಂಬ ಪ್ರೋತ್ಸಾಹ ನೀಡಿದರು. ಸಂಸ್ಕೃತ ಕಲಿಸಿದ ಸದಾಶಿವ ಭಟ್ಟರು ಇವರ ಬಾಲ್ಯ ಜೀವನದ ಮೇಲೆ ದಟ್ಟ ಪ್ರಭಾವ ಬೀರಿದ ವ್ಯಕ್ತಿಗಳಲ್ಲೊಬ್ಬರು. ಅನಂತರದಲ್ಲಿ ರಾಮಮನೋಹರ ಲೋಹಿಯಾ, ಶಾಂತವೇರಿ

ಗೋಪಾಲಗೌಡ, ಗೋಪಾಲಕೃಷ್ಣ ಅಡಿಗ ಅತ್ಯಂತ ಪ್ರಭಾವ ಬೀರಿದ ವ್ಯಕ್ತಿಗಳು. ಲೋಯರ್ ಸೆಕೆಂಡರಿ ಹಾಗೂ ಎಸ್.ಎಸ್.ಎಲ್.ಸಿ. ಪರೀಕ್ಷೆಗಳಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದ ಅನಂತರ ಶಿವಮೊಗ್ಗದ ಸರ್ಕಾರಿ ಕಾಲೇಜಿನಲ್ಲಿ ಇಂಟರ್ ಮೀಡಿಯಟ್ ಓದಿದರು. ಆಗ ಕೆ.ವಿ.ಸುಬ್ಬಣ್ಣ ಇವರ ಸೀನಿಯರ್, ಹಾ.ಮಾ.ನಾಯಕರು ಇವರ ಜೂನಿಯರ್ ಆಗಿದ್ದರು. ಅನಂತರ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಬಿ.ಎ. ಆನರ್ಸ್‌ಗೆ ಸೇರಿ (1950) ಪ್ರಥಮ ಸ್ಥಾನ ಪಡೆದು ಶಿವಮೊಗ್ಗದಲ್ಲಿ ಇಂಗ್ಲಿಷ್ ಉಪನ್ಯಾಸಕರಾದರು (1954-55). ಮೈಸೂರಿನಲ್ಲಿ ಮತ್ತೆ ಓದನ್ನು ಮುಂದುವರಿಸಿ ಚಿನ್ನದ ಪದಕದೊಂದಿಗೆ ಇಂಗ್ಲಿಷ್ ಎಂ.ಎ. ಪದವಿ ಪಡೆದರು. ಇವರು ವಿದ್ಯಾರ್ಥಿ ದೆಸೆಯಲ್ಲಿಯೇ ಸಮಾಜವಾದಿ ಚಟುವಟಿಕೆಗಳಲ್ಲಿ ಆಸಕ್ತಿ ವಹಿಸಿದ್ದರು. ಶಿವಮೊಗ್ಗದಲ್ಲಿ ಓದುವಾಗ ಸಮಾಜವಾದಿ ರಾಜಕೀಯ ಚಟುವಟಿಕೆಗಳು ಮೈಸೂರಿನಲ್ಲಿಯೂ ಮುಂದುವರಿದಿದ್ದವು. ಹಾಸನದ ಸರ್ಕಾರಿ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿದ್ದ ಸಂದರ್ಭದಲ್ಲಿ ಇವರು ತಮ್ಮ ವಿದ್ಯಾರ್ಥಿನಿ ಎಸ್ತರ್ ಎಂಬುವರನ್ನು ಪ್ರೇಮಿಸಿ ವಿವಾಹವಾದರು. ಮತ್ತೆ ಮೈಸೂರಿನ ಮಹಾರಾಜ ಕಾಲೇಜಿಗೆ ಅಧ್ಯಾಪಕರಾಗಿ ಬಂದರು (1957-63). ಅನಂತರ ಕಾಮನ್‌ವೆಲ್ತ್ ಫೆಲೋಶಿಪ್ ಪಡೆದು ಇಂಗ್ಲೆಂಡಿನ ಬರ್ಮಿಂಗ್‌ಹೆಮ್ ವಿಶ್ವವಿದ್ಯಾಲಯದಿಂದ ಪಿಎಚ್.ಡಿ ಪಡೆದರು (1963-66). 1930ರ 'ದಶಕದ ರಾಜಕೀಯ ಮತ್ತು ಕಾದಂಬರಿ' ಇವರ ಸಂಪ್ರಬಂಧದ ವಿಷಯ.



ಇಂಗ್ಲೆಂಡ್‌ನಿಂದ ಬಂದ ಮೇಲೆ ಮೈಸೂರಿನ ರೀಜನಲ್ ಕಾಲೇಜ್ ಆಫ್ ಎಜುಕೇಶನ್‌ನಲ್ಲಿ ರೀಡರ್ ಆಗಿ ಕೆಲಸ ಮಾಡಿದರು (1967-70). ಅನಂತರ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್ ವಿಭಾಗವನ್ನು ಸೇರಿ, ರೀಡರ್ ಆಗಿ (1970-80), ಪ್ರಾಧ್ಯಾಪಕರಾಗಿ (1980-87) ಸೇವೆ ಸಲ್ಲಿಸಿದರು. ಸಂದರ್ಶಕ ಪ್ರಾಧ್ಯಾಪಕರಾಗಿ ಅಮೆರಿಕದ ಅಯೋವ ವಿಶ್ವವಿದ್ಯಾಲಯ (1975 ಮತ್ತು 1985), ಕೊಲ್ಹಾಪುರದ ಶಿವಾಜಿ ವಿಶ್ವವಿದ್ಯಾಲಯ (1982) ಗಳಲ್ಲಿ ಕೆಲಸ ಮಾಡಿದರು. ಅಯೋವ ವಿಶ್ವವಿದ್ಯಾನಿಲಯದ ಏಷ್ಯನ್ ಭಾಷೆಗಳ ವಿಭಾಗದಲ್ಲಿ ಫುಲ್‌ಬ್ರೈಟ್ ಪ್ರೊಫೆಸರ್ ಆಗಿದ್ದರು (1986-87). ಅನಂತರ ಕೇರಳದ ಕೊಟ್ಟಾಯಂನ ಮಹಾತ್ಮಗಾಂಧಿ ವಿಶ್ವವಿದ್ಯಾಲಯದ ಕುಲಪತಿಯಾದರು (1987-91). ಆಗ ಅನೇಕ ಶೈಕ್ಷಣಿಕ ಸುಧಾರಣೆಗಳನ್ನು ವಿಶ್ವವಿದ್ಯಾಲಯದಲ್ಲಿ ಅಳವಡಿಸಿದರು.

ಇವರು ಅನಂತರದ ತಮ್ಮ ಜೀವನದಲ್ಲಿ ಅನೇಕ ಸಂಸ್ಥೆಗಳಲ್ಲಿ ವಿವಿಧ ಉನ್ನತ ಹುದ್ದೆಗಳನ್ನು ಅಲಂಕರಿಸಿದರು. ನ್ಯಾಷನಲ್ ಬುಕ್ ಟ್ರಸ್ಟ್‌ನ ಅಧ್ಯಕ್ಷರಾಗಿ (1992-93), ದೆಹಲಿಯ ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯದ ಸಂದರ್ಶಕ ಪ್ರಾಧ್ಯಾಪಕರಾಗಿ (1993) ದುಡಿದರು. ನವದೆಹಲಿಯ ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದರು (1993-98). ವಿ.ಕೃ.ಗೋಕಾಕರ ಅನಂತರ ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಎರಡನೆಯ ಕನ್ನಡದ ವ್ಯಕ್ತಿ ಇವರು. ಆಗ ಸಾಕಷ್ಟು ಹೊಸತನವನ್ನು ಅಕಾಡೆಮಿಯ ಚಟುವಟಿಕೆಗಳಲ್ಲಿ ತುಂಬಿದರು. ಕೆಲಕಾಲ ಇವರು ಮಣಿಪಾಲದ ಮಾಹೆ ವಿಶ್ವವಿದ್ಯಾನಿಲಯದ ಮಾನವಿಕ ವಿಭಾಗದ ಗೌರವ ನಿರ್ದೇಶಕರೂ ಆಗಿದ್ದರು (1995-98).

ಕನ್ನಡದ ಸೃಜನಶೀಲ ಬರೆಹಗಾರರಾಗಿ ಅನಂತಮೂರ್ತಿಯವರ ಸಾಧನೆ ಅನನ್ಯವಾದದ್ದು. ಕವಿಯಾಗಿ, ಕಾದಂಬರಿಕಾರರಾಗಿ, ಸಣ್ಣಕತೆಗಾರರಾಗಿ, ವಿಮರ್ಶಕರಾಗಿ, ಚಿಂತಕರಾಗಿ, ಉತ್ತಮ ವಾಗ್ಮಿಯಾಗಿ ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅರ್ಥಪೂರ್ಣ ಚರ್ಚೆ, ಸಂವಾದ, ವಾಗ್ವಾದ ಹಾಗೂ ಕೆಲವೊಮ್ಮೆ ವಿವಾದಗಳಿಗೂ ಕಾರಣರಾದರು. ವೈಚಾರಿಕತೆ ಹಾಗೂ ಸಾಮಾಜಿಕ ಚಿಂತನೆ ಇವರ ಒಟ್ಟು ಸೃಜನ ಹಾಗೂ ಸೃಜನೇತರ ಸಾಹಿತ್ಯದ ಪ್ರಧಾನ ಎಳೆಗಳಾಗಿವೆ. ಸಮಾಜವಾದ, ಗಾಂಧೀವಾದ, ಮಾರ್ಕ್ಸ್‌ವಾದಗಳ ಒಳಿತಿನ ಆಯ್ಕೆ ಅನಂತಮೂರ್ತಿಯವರ ವಿಚಾರಗಳಲ್ಲಿ ಪ್ರಮುಖವಾಗಿ ಕಂಡುಬರುತ್ತದೆ. ಶಿವರಾಮ ಕಾರಂತ, ಗೋಪಾಕೃಷ್ಣಅಡಿಗ, ಬೇಂದ್ರೆ, ಕುವೆಂಪು ಇವರ ಸಾಹಿತ್ಯದ ಮೇಲೆ ಹೆಚ್ಚಿನ ಪ್ರಭಾವ ಬೀರಿದವರು. ಸಾಹಿತ್ಯದಲ್ಲಿ ಬ್ರಾಹ್ಮಣ ಮತ್ತು ಶೂದ್ರ (1967) ಎಂಬ ಪರಿಕಲ್ಪನೆ ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಹೊಸ ಚರ್ಚೆಯನ್ನು ಹುಟ್ಟುಹಾಕಿತು. ಇಂಗ್ಲಿಷ್ ಬ್ರಾಹ್ಮಣ, ಕನ್ನಡ ಶೂದ್ರ, ದಲಿತರಲ್ಲಿ ಅರಿವಿನ ಸ್ಫೋಟ, ಬೂಸಾ ಪ್ರಕರಣ (1974), ಕುವೆಂಪು ಅವರ ಪುರೋಹಿತಶಾಹಿ ಟೀಕೆಗೆ ಪ್ರತಿಕ್ರಿಯೆ (1986), ಪೇಜಾವರ ಶ್ರೀಗಳ ಹರಿಜನ ಕಾಲೋನಿ ಪಾದಯಾತ್ರೆ (1970), ತುರ್ತು ಪರಿಸ್ಥಿತಿ (1975-77) ಮೊದಲಾದ ಸಂದರ್ಭಗಳಲ್ಲಿ ಇವರ ವಿಚಾರಗಳು ವೈಚಾರಿಕ ವಿವಾದಗಳನ್ನು ಸೃಷ್ಟಿಸಿದ್ದೂ ಉಂಟು.

1955-95ರ ವರೆಗೆ ನಾಲ್ಕು ದಶಕಗಳಲ್ಲಿ ಇಪ್ಪತ್ತಾರು ಕಥೆಗಳನ್ನು ಇವರು ಬರೆದಿದ್ದಾರೆ. ಎಂದೆಂದೂ ಮುಗಿಯದ ಕತೆ (1955), ಪ್ರಶ್ನೆ (1962), ಮೌನಿ (1967), ಆಕಾಶ ಮತ್ತು ಬೆಕ್ಕು (1983), ಸೂರ್ಯನ ಕುದುರೆ (1995) - ಇವು ಕಥಾಸಂಕಲನಗಳು. ಸಂಸ್ಕಾರ (1965), ಭಾರತೀಪುರ (1974), ಅವಸ್ಥೆ (1978), ಭವ (1994), ದಿವ್ಯ (2000) - ಇವು ಕಾದಂಬರಿಗಳು. ಹದಿನೈದು ಪದ್ಯಗಳು (1967), ಅಜ್ಜನ ಹೆಗಲ ಸುಕ್ಕುಗಳು (1989), ಮಿಥುನ (1992) - ಇವು ಕವನ ಸಂಕಲನಗಳು. ಪ್ರಜ್ಞೆ ಮತ್ತು ಪರಿಸರ (1974), ಸಮಕ್ಷಮ (1982),ಪೂರ್ವಾಪರ (1990), ಸಂಸ್ಕೃತಿ ಮತ್ತು ಅಡಿಗ (1996), ಬೆತ್ತಲೆ ಪೂಜೆ ಯಾಕೆ ಕೂಡದು (1996), ನವ್ಯಾಲೋಕ (ಮುನ್ನುಡಿಗಳು, 1997) - ಇವು ವಿಮರ್ಶಾ ಕೃತಿಗಳು. ಆವಾಹನೆ (1968) ಇವರ ಒಂದು ನಾಟಕ. ದಾವ್‌ದ ಜಿಂಗ್ (1994) ಲಾವೊತ್ಸೆಯ ಕವನಗಳ ಭಾಷಾಂತರ. ಮೂರು ದಶಕದ ಕತೆಗಳು (1989) ಇವರ ಸಮಗ್ರ ಕತೆಗಳ ಸಂಕಲನ.

ಅನಂತಮೂರ್ತಿಯವರು ವಿದ್ಯಾರ್ಥಿ ದೆಸೆಯಲ್ಲಿಯೇ ಸಾಹಿತ್ಯ ರಚನೆಗೆ ತೊಡಗಿದರು. ಇಂಟರ್ ವಿದ್ಯಾರ್ಥಿಯಾಗಿದ್ದಾಗ ಶಿವಮೊಗ್ಗದ 'ಮಿತ್ರ' ಎಂಬ ಪತ್ರಿಕೆಯಲ್ಲಿ ಇವರ ಕೆಲವು ಕವನಗಳು, ಕತೆಗಳು ಪ್ರಕಟವಾಗಿದ್ದವು. ಅನಂತರ ಮೈಸೂರಿಗೆ ಬಂದಮೇಲೆ ಚಿತ್ರಗುಪ್ತ, ಜನಪ್ರಗತಿ ಪತ್ರಿಕೆಗಳಲ್ಲಿ ಕೆಲವು ಕತೆಗಳನ್ನು ಪ್ರಕಟಿಸಿದರು. ಇವರಿಗೆ ಸಣ್ಣ ಕತೆಗಾರರೆಂಬ ಹೆಸರು ತಂದುಕೊಟ್ಟ ಕತೆ 'ಎಂದೆಂದೂ ಮುಗಿಯದ ಕತೆ'. ಇದು ಮೊದಲಿಗೆ ಮೈಸೂರಿನ 'ವಾರ್ಸಿಟಿ ಟೈಮ್ಸ್' ಪತ್ರಿಕೆಯಲ್ಲಿ ಪ್ರಕಟವಾಯಿತು. 'ಎಂದೆಂದೂ ಮುಗಿಯದ ಕತೆ' ಇವರ ಮೊದಲ ಕಥಾಸಂಕಲನ. ಅನಂತಮೂರ್ತಿ ಪ್ರಮುಖವಾಗಿ ಕತೆಗಾರರಾಗಿ ಓದುಗರಿಗೆ ಹೆಚ್ಚು ಅರ್ಥಪೂರ್ಣವಾಗುತ್ತಾರೆ. ಇವರ ಕಾದಂಬರಿಗಳಿಗಿಂತ ಕತೆಗಳಲ್ಲಿ ವೈಚಾರಿಕತೆ ಹಾಗೂ ಕಲಾತ್ಮಕತೆಗಳು ಒಂದಕ್ಕೊಂದು ಪೂರಕವಾಗಿವೆ. ಘಟಶ್ರಾದ್ಧ, ಕಾರ್ತೀಕ, ಪ್ರಶ್ನೆ, ಮೌನಿ, ನವಿಲುಗಳು, ಕ್ಲಿಪ್‌ಜಾಯಿಂಟ್, ಸೂರ್ಯನ ಕುದುರೆ ಇವು ಇವರ ಕೆಲವು ಪ್ರಾತಿನಿಧಿಕ ಕತೆಗಳು. ಕಾದಂಬರಿಗಳಲ್ಲಿ ಸಂಸ್ಕಾರ ಅಂತಾರಾಷ್ಟ್ರೀಯ ಖ್ಯಾತಿ ಗಳಿಸಿದ, ಹೆಚ್ಚು ಚರ್ಚೆಗೆ, ವಿವಾದಕ್ಕೆ ಗುರಿಯಾಗಿರುವ ಕೃತಿ. ಸ್ವೀಡಿಷ್ ಚಿತ್ರ ನಿರ್ದೇಶಕ ಇಂಗ್‌ಮರ್ ಬರ್ಗಮನ್‌ನ ಸೆವೆಂತ್ ಸೀಲ್ (1956) ಚಲನಚಿತ್ರ ಈ ಕಾದಂಬರಿಯ ರಚನೆಗೆ ಪ್ರೇರಣೆ ನೀಡಿದ ಸಂಗತಿಯನ್ನು ಲೇಖಕರೇ ಹೇಳಿಕೊಂಡಿದ್ದಾರೆ. ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ವಿವಾದ, ವಾಗ್ವಾದದ ಅಲೆಯನ್ನು ಸೃಷ್ಟಿಸಿದ ಕೃತಿಯಿದು. ಇವರ ಅತ್ಯುತ್ತಮ ಕತೆಗಳಲ್ಲಿ ಒಂದಾದ ಮೌನಿ ಕತೆಗೆ ಪ್ರೇರಣೆ, ಅಮೆರಿಕನ್ ಲೇಖಕ ಬರ್ನಾರ್ಡ್ ಮಲಮೂಡನ ಮೌರ್ನರ್ಸ್ ಎಂಬ ಕತೆ. ಆದರೆ ಕನ್ನಡ ಸತ್ವವನ್ನು ಮೈಗೂಡಿಸಿಕೊಂಡು ಇದು ಸ್ವತಂತ್ರ ಕಥೆಯಾಗಿದೆ. ಸಾಮಾನ್ಯವಾಗಿ ಅನಂತಮೂರ್ತಿಯವರನ್ನು

ನವ್ಯ ಸಾಹಿತ್ಯದ ಮುಂಚೂಣಿಯ ಲೇಖಕರಾಗಿ ಗುರುತಿಸುವುದು ವಾಡಿಕೆ. ಆದರೆ ಪರಂಪರೆಯ ಎಲ್ಲ ಪ್ರಭಾವಗಳನ್ನೂ ಪಾಶ್ಚಾತ್ಯ ಚಿಂತನಧಾರೆಯನ್ನೂ ಅರಗಿಸಿಕೊಂಡಿರುವ ಇವರು ಆಧುನಿಕ ಕನ್ನಡ ಸಾಹಿತ್ಯದ ಶ್ರೇಷ್ಠ ಲೇಖಕರಾಗಿ ಕಂಡುಬರುತ್ತಾರೆ. ಮಾಸ್ತಿ ಅವರ ಅನಂತರ ಸಣ್ಣ ಕಥಾ ಕ್ಷೇತ್ರದ ಕ್ಷಿತಿಜವನ್ನು ವಿಸ್ತರಿಸಿದವರು ಎಂಬ ಪ್ರಶಂಸೆಗೂ ಇವರು ಪಾತ್ರರಾಗಿದ್ದಾರೆ. ಇವರ ಸಾಹಿತ್ಯ ಕುರಿತು ಕನ್ನಡದಲ್ಲಿ ವಿಪುಲವಾಗಿ ಚರ್ಚೆ, ಸಂವಾದಗಳು ನಡೆದಿವೆ.

ಸಾಹಿತ್ಯ ಹಾಗೂ ಸಾಂಸ್ಕೃತಿಕ ಸಂವಾದಗಳಿಗೆ ಮೀಸಲಾಗಿದ್ದ ತ್ರೈಮಾಸಿಕ ಪತ್ರಿಕೆ ರುಜುವಾತು (1981) ಇವರ ಸಂಪಾದಕತ್ವದಲ್ಲಿ ಮೈಸೂರಿನಿಂದ ಪ್ರಕಟವಾಗುತ್ತಿತ್ತು. ಅನಂತರ ಹೆಗ್ಗೋಡಿನ ಕವಿ-ಕಾವ್ಯ ಟ್ರಸ್ಟ್ ಮೂಲಕ ಕೆಲಕಾಲ ಪ್ರಕಟವಾಯಿತು.

ಇವರ 'ಸಂಸ್ಕಾರ' ವನ್ನು ಎ.ಕೆ. ರಾಮಾನುಜನ್ (1976), 'ಅವಸ್ಥೆ'ಯನ್ನು ಶಾಂತಿನಾಥ ದೇಸಾಯಿ (1986), 'ಭಾರತೀಪುರ'ವನ್ನು ಪಿ.ಶ್ರೀನಿವಾಸರಾವ್ (1996), 'ಭವ'ವನ್ನು ಜುಡಿತ್‌ಕ್ರೋಲ್ ಮತ್ತು ಅನಂತಮೂರ್ತಿ (1998) ಇಂಗ್ಲಿಷಿಗೆ ಭಾಷಾಂತರಿಸಿದ್ದಾರೆ. ಸಂಸ್ಕಾರ ಕಾದಂಬರಿ ರಷ್ಯನ್, ಫ್ರೆಂಚ್, ಹಂಗೇರಿಯನ್, ಜರ್ಮನ್, ಹಿಂದಿ, ಬಂಗಾಲಿ, ಮಲಯಾಳಂ, ಮರಾಠಿ, ಉರ್ದು, ಗುಜರಾತಿ ಭಾಷೆಗಳಿಗೆ ಅನುವಾದಗೊಂಡಿದೆ. 'ಅವಸ್ಥೆ' ತಮಿಳಿಗೆ ಭಾಷಾಂತರವಾಗಿದೆ (ಕಾರ್ಲೋಸ್, 1997). ಸಾಹಿತ್ಯ ಕಾರಣಕ್ಕಾಗಿ ಅನಂತಮೂರ್ತಿಯವರಷ್ಟು ವಿಶ್ವಸಂಚಾರ ಮಾಡಿದವರು ಕನ್ನಡದಲ್ಲಿ ಬಹಳ ವಿರಳ. ಕರ್ನಾಟಕ, ಭಾರತ ಹಾಗೂ ಹೊರ ದೇಶಗಳಲ್ಲಿ ಸಾಹಿತ್ಯ ಹಾಗೂ ಸಂಸ್ಕೃತಿ ವಿಚಾರವಾಗಿ ಅನೇಕ ಉಪನ್ಯಾಸಗಳನ್ನು ಇವರು ನೀಡಿದ್ದಾರೆ.

ಇವರ ಸಂಸ್ಕಾರ (ನಿರ್ದೇಶನ: ಪಟ್ಟಾಭಿರಾಮರೆಡ್ಡಿ,1970), ಅವಸ್ಥೆ (ನಿರ್ದೇಶನ: ಕೃಷ್ಣಮಾಸಡಿ,1987) ಕಾದಂಬರಿಗಳೂ ಘಟಶ್ರಾದ್ಧ (ನಿರ್ದೇಶನ: ಗಿರೀಶ್‌ಕಾಸರವಳ್ಳಿ,1978), ಬರ (ನಿರ್ದೇಶನ: ಎಂ.ಎಸ್.ಸತ್ಯು, 1982), ಮೌನಿ (ನಿರ್ದೇಶನ: ಲಿಂಗದೇವರು,2002) ಸಣ್ಣಕತೆಗಳೂ ಚಲನಚಿತ್ರಗಳಾಗಿವೆ. ಸಂಸ್ಕಾರ ಹಾಗೂ ಘಟಶ್ರಾದ್ಧ ಚಿತ್ರಗಳು ರಾಷ್ಟ್ರಪತಿಯವರ ಚಿನ್ನದ ಪದಕ ಪ್ರಶಸ್ತಿ ಪಡೆದಿವೆ.

ಇವರಿಗೆ ಅನೇಕ ಗೌರವ, ಪ್ರಶಸ್ತಿಗಳು ದೊರಕಿವೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1983), ಕರ್ನಾಟಕ ಸರ್ಕಾರದ ಪ್ರಶಸ್ತಿ (1984), ಮಾಸ್ತಿ ಪ್ರಶಸ್ತಿ (1994), ಹಿಮಾಚಲಪ್ರದೇಶ ಸರ್ಕಾರದ ಶಿಖರ್‌ಸಮ್ಮಾನ್ (1995), ಪದ್ಮಭೂಷಣ (1998) - ಇವು ಕೆಲವು ಮುಖ್ಯ ಪ್ರಶಸ್ತಿಗಳು. ಇವರ ಅದ್ವಿತೀಯ ಸಾಹಿತ್ಯಕ ಸಾಧನೆಗಾಗಿ 1994ರಲ್ಲಿ ಇವರಿಗೆ ಜ್ಞಾನಪೀಠ ಪ್ರಶಸ್ತಿ ಲಭಿಸಿತು. ಇದು ಕನ್ನಡಕ್ಕೆ ದೊರೆತ ಆರನೆಯ ಜ್ಞಾನಪೀಠ ಪ್ರಶಸ್ತಿ. ಕೋಲ್ಕತದ ರವೀಂದ್ರಭಾರತಿ ವಿಶ್ವವಿದ್ಯಾಲಯ ಇವರಿಗೆ ಗೌರವ ಡಿ.ಲಿಟ್. ಪ್ರಶಸ್ತಿ ನೀಡಿದೆ (1995). ಇವರು ತುಮಕೂರಿನಲ್ಲಿ ಜರುಗಿದ 69ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು (2002). ನೊಬೆಲ್ ಪ್ರಶಸ್ತಿಗೂ ಇವರ ಹೆಸರು ಶಿಫಾರಸ್ಸಾಗಿತ್ತು. *

**ಅನಂತಾಚಾರಿ, ಅತ್ತಾವರದ :** ಕನ್ನಡದ ಅಚ್ಚುಮೊಳೆಗಳನ್ನು ಎರಕ ಹಾಕುವ ಕ್ರಮವನ್ನು ಮೊದಲು ಕಂಡುಹಿಡಿದ ಕೀರ್ತಿಶಾಲಿ. ಹುಟ್ಟೂರಾದ ಮಂಗಳೂರಿನಲ್ಲಿ ಅಚ್ಚಿನ ಕೆಲಸದ ಮೊದಲ ಅನುಭವ ಪಡೆದು ಆಮೇಲೆ ಮುಂಬಯಿಯ ಹೆಸರಾಂತ ನಿರ್ಣಯಸಾಗರ ಮುದ್ರಣಾಲಯದಲ್ಲಿ ಶಿಕ್ಷಣ ಗಳಿಸಿದರಲ್ಲದೆ ಅಲ್ಲಿಯೆ ಗುಜರಾತಿ ಮೊಳೆಗಳನ್ನು ಸಿದ್ಧಮಾಡುವ ಕಾರ್ಖಾನೆಯಲ್ಲಿ ಸೇರಿ ದೇವನಾಗರಿ ಲಿಪಿಯನ್ನು ಕೆತ್ತಿ ಎರಕ ಹಾಕುವ ಕೆಲಸದಲ್ಲಿ ಸಹಾಯಕರಾದರು. ಅನಂತರ ಧಾರವಾಡಕ್ಕೆ ಬಂದು ಕರ್ನಾಟಕ ಮುದ್ರಣಾಲಯದಲ್ಲಿ ಕೆಲಸಕ್ಕೆ ಸೇರಿ ಅಲ್ಲಿ ಕನ್ನಡ ಅಚ್ಚುಮೊಳೆ ತಯಾರಿಸಿದರು. ಕೆಲವು ಕಾಲದ ಮೇಲೆ ಧಾರವಾಡದಿಂದ ಮಂಗಳೂರಿಗೆ ಬಂದರು. ಇವರು ಸಿದ್ಧಪಡಿಸಿದ ಕನ್ನಡ ಅಚ್ಚುಮೊಳೆಗಳನ್ನು ಅಂದಿನ ದೊಡ್ಡ ಮುದ್ರಣಾಲಯಗಳಾದ ಕೆನರಾ ಪ್ರೆಸ್, ಶಾರದಾ ಪ್ರೆಸ್, ಬಾಸೆಲ್ ಮಿಶನ್ ಪ್ರೆಸ್, ಧರ್ಮಪ್ರಕಾಶ ಪ್ರೆಸ್‌ಗಳಲ್ಲಿ ಬಳಸಲಾಯಿತು. ಪ್ರಾರಂಭದಲ್ಲಿ ಇವರಿಂದ ಕೆತ್ತಲ್ಪಟ್ಟ ದೇವನಾಗರಿ ಲಿಪಿಯ ವರ್ಣಮಾಲೆ ಅನಂತಷೇಡ್ ಎಂದೇ ಪ್ರಸಿದ್ಧವಾಗಿದೆ. **(ಎಚ್.ಪಿ.ಎನ್.)**

**ಅನಿಲ್ ಕುಂಬ್ಳೆ :** 1970-. ಪ್ರಸಿದ್ಧ ಕ್ರಿಕೆಟ್ ಆಟಗಾರ. 1970 ಅಕ್ಟೋಬರ್ 17ರಂದು ಬೆಂಗಳೂರಿನಲ್ಲಿ ಜನಿಸಿದರು. ಬೆಂಗಳೂರಿನ ಆರ್.ವಿ.ಶಿಕ್ಷಣ ಸಂಸ್ಥೆಯಲ್ಲಿ ಓದಿ ಬಿ.ಇ. ಪದವಿ ಪಡೆದರು. ಎತ್ತರದ ನಿಲುವುಳ್ಳ ಇವರು ಸಾಂಪ್ರದಾಯಿಕ ಶೈಲಿಯಲ್ಲಿ ಸ್ಪಿನ್, ಗೂಗ್ಲಿ, ಮಧ್ಯಮ



ವೇಗದ ಬೌಲರ್ ಆಗಿ ಪರಿಣಿತರು. ಬ್ಯಾಟಿಂಗ್‌ನಲ್ಲಿ ಪರಿಶ್ರಮವುಳ್ಳವರು. ಆರಂಭದಲ್ಲಿ ಇವರು ಬ್ಯಾಟ್ಸ್‌ಮನ್ ಆಗಿಯೇ ಭರವಸೆ ಮೂಡಿಸಿದ್ದರು. 19 ವರ್ಷದ ಒಳಗಿನ ಆಟಗಾರರಾಗಿ ಭಾರತವನ್ನು ಪ್ರತಿನಿಧಿಸಿ ಪಾಕಿಸ್ತಾನದ ವಿರುದ್ಧ 1990ರಲ್ಲಿ ನಡೆದ ಪಂದ್ಯವೊಂದರಲ್ಲಿ 113 ರನ್ ಬಾರಿಸಿದ್ದರು. ಇದೇ ವರ್ಷ ಆಸ್ಟ್ರೇಲಿಯ ಕಪ್‌ಗಾಗಿ ಷಾರ್ಜದಲ್ಲಿ ನಡೆದ ಶ್ರೀಲಂಕ ವಿರುದ್ಧದ ಪಂದ್ಯದಲ್ಲಿ ಭಾರತದ ಪರ ಆಡಿದರು. ಇದು ಇವರು ಆಡಿದ ಮೊದಲ ಒಂದು ದಿನದ ಅಂತಾರಾಷ್ಟ್ರೀಯ ಪಂದ್ಯ. ಇವರು ಭಾರತ ತಂಡದ ಉಪನಾಯಕರಾಗಿಯೂ ಕಾರ್ಯನಿರ್ವಹಿಸಿದ್ದಾರೆ.

1999 ಫೆಬ್ರವರಿ 4ರಂದು ಪಾಕಿಸ್ತಾನದ ವಿರುದ್ಧ ದೆಹಲಿಯ ಫಿರೋಜ್ ಷಾ ಕೋಟ್ಲಾ ಮೈದಾನದಲ್ಲಿ ನಡೆದ ಟೆಸ್ಟ್ ಮ್ಯಾಚ್‌ನ 2ನೆಯ ಇನ್ನಿಂಗ್ಸ್‌ನಲ್ಲಿ 23.3 ಓವರ್‌ಗಳಲ್ಲಿ 74 ರನ್‌ಗಳನ್ನಿತ್ತು 10 ವಿಕೆಟ್‌ಗಳನ್ನು ಪಡೆದು ಐತಿಹಾಸಿಕ ದಾಖಲೆಯನ್ನು ನಿರ್ಮಿಸಿದರು. ವಿಶ್ವ ಕ್ರಿಕೆಟ್ ರಂಗದಲ್ಲಿ ಇಂಥ ಸಾಧನೆಮಾಡಿದ ಎರಡನೆಯ ವ್ಯಕ್ತಿಯಾಗಿ ವಿಶ್ವಕ್ಕೆ ಪರಿಚಯಗೊಂಡರು. ಈ ಹಿಂದೆ ಇಂಗ್ಲೆಂಡ್ ತಂಡದ ಆಫ್ ಸ್ಪಿನ್ನರ್ ಜಿಮ್‌ಲೇಕರ್ ಇಂಥ ಸಾಧನೆಮಾಡಿದ ಮೊದಲ ವ್ಯಕ್ತಿಯಾಗಿದ್ದರು (1956). ಕುಂಬ್ಳೆಯವರು ಈ ದಾಖಲೆಯನ್ನು ಸರಿಗಟ್ಟಿದ ಏಕೈಕ ಭಾರತೀಯ. ಭಾರತದಲ್ಲಿ 200 ವಿಕೆಟ್ ಪಡೆದವರಲ್ಲಿ ಕುಂಬ್ಳೆ ಎರಡನೆಯವರು. ಕ್ರಿಕೆಟ್ ಇತಿಹಾಸದಲ್ಲಿ ಟೆಸ್ಟ್ ಹಾಗೂ ಒಂದು ದಿನದ ಅಂತಾರಾಷ್ಟ್ರೀಯ ಪಂದ್ಯಗಳು ಸೇರಿದಂತೆ 300 ವಿಕೆಟ್ ಪಡೆದ ಶ್ರೇಷ್ಠರಲ್ಲಿ ಕುಂಬ್ಳೆಯೂ ಒಬ್ಬರು. ಉಳಿದ ಇಬ್ಬರು ಪಾಕಿಸ್ತಾನದ ವಾಕರ್‌ಯೂನಿಸ್ ಹಾಗೂ ವಾಸಿಂ ಅಕ್ರಮ್. ಕೋಲ್ಕತ್ತದಲಿ 1993-94ರಲ್ಲಿ ಒಂದು ದಿನದ ಅಂತಾರಾಷ್ಟ್ರೀಯ ಪಂದ್ಯದಲ್ಲಿ 12 ರನ್ ನೀಡಿ 6 ವಿಕೆಟ್ ಪಡೆದಿದ್ದು ಇವರ ಇನ್ನೊಂದು ಸಾಧನೆ.

ಇವರು ಹಲವಾರು ಅಂತಾರಾಷ್ಟ್ರೀಯ ಟೆಸ್ಟ್ ಹಾಗೂ ಒಂದು ದಿನ ಪಂದ್ಯಗಳಲ್ಲಿ ಆಡಿದ್ದಾರೆ. ತಮ್ಮ ಮಾಂತ್ರಿಕ ಬೌಲಿಂಗ್ ಮೂಲಕ ಭಾರತಕ್ಕೆ ಅನೇಕ ಸಂದರ್ಭಗಳಲ್ಲಿ ಗೆಲುವು ತಂದಿತ್ತಿದ್ದಾರೆ. ಅತ್ಯಂತ ಕಡಿಮೆ ಅವಧಿಯಲ್ಲಿ (21 ಟೆಸ್ಟ್) 100 ವಿಕೆಟ್‌ಗಳನ್ನು ಪಡೆದ ಭಾರತದ ಕೆಲವೇ ಬೌಲರ್‌ಗಳಲ್ಲಿ ಇವರೂ ಒಬ್ಬರು. ಅನೇಕ ಸಂದರ್ಭಗಳಲ್ಲಿ ಬೌಲಿಂಗ್‌ನಲ್ಲಿ ತಮ್ಮ ಅಮೋಘ ಕೈಚಳಕವನ್ನು ಪ್ರದರ್ಶಿಸಿದ್ದಾರೆ. 1994ರ ಹೀರೋ ಕಪ್ ಅಂತಾರಾಷ್ಟ್ರೀಯ ಪಂದ್ಯವೊಂದರಲ್ಲಿ ಅದ್ವಿತೀಯ ಸಾಧನೆಗೈದದ್ದು ಇಂದಿಗೂ ದಾಖಲೆಯೇ. ಆಗ ನ್ಯೂಜಿಲೆಂಡ್ ತಂಡಕ್ಕೆ 10 ಓವರ್‌ಗಳಲ್ಲಿ 33 ರನ್ ನೀಡಿ 5 ವಿಕೆಟ್ ಪಡೆದರು. ವಿಲ್ಸ್‌ವರ್ಲ್ಡ್ ಕಪ್‌ನಲ್ಲಿನ ಇವರ ಸಾಧನೆ ಇಂದಿಗೂ ಕ್ರಿಕೆಟ್ ರಂಗದಲ್ಲಿ ಅಚ್ಚಳಿಯದೆ ಉಳಿದಿದೆ.

ಇವರಿಗೆ ಸಂದ ಗೌರವ, ಪ್ರಶಸ್ತಿಗಳು ಅನೇಕ. ಇವರ ಸಾಧನೆಯನ್ನು ಗಮನಿಸಿ ಕರ್ನಾಟಕ ಸರ್ಕಾರ ರಾಜ್ಯ ಪ್ರಶಸ್ತಿಯನ್ನಿತ್ತು ಗೌರವಿಸಿದೆ. 1995ರಲ್ಲಿ ಭಾರತ ಸರ್ಕಾರ ಪ್ರತಿಷ್ಠಿತ ಅರ್ಜುನ ಪ್ರಶಸ್ತಿಯನ್ನಿತ್ತು ಇವರನ್ನು ಗೌರವಿಸಿದೆ. **(ಎಸ್.ಆರ್.ಯು.)**

**ಅನುಪಮಾ, ನಿರಂಜನ :** 1934-91. ಕನ್ನಡದ ಪ್ರಸಿದ್ಧ ಲೇಖಕಿ, ವೈದ್ಯೆ. ಇವರ ಹುಟ್ಟು ಹೆಸರು ವೆಂಕಟಲಕ್ಷ್ಮಿ. ಅನಂತರ ಪತಿ ನಿರಂಜನರು ಇಟ್ಟ ಹೆಸರು ಅನುಪಮಾ. ಹಾಗಾಗಿ ಅನುಪಮಾ ನಿರಂಜನ ಎಂಬ ಹೆಸರಿನಲ್ಲಿಯೇ ಸಾಹಿತ್ಯ ಲೋಕದಲ್ಲಿ ಜನಪ್ರಿಯರಾದರು. ಇವರು ಜನಿಸಿದ್ದು 1934 ಮೇ 17ರಂದು, ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿಯಲ್ಲಿ, ತಂದೆ ಶಿವರಾಮಯ್ಯ, ತಾಯಿ ಲಕ್ಷ್ಮೀದೇವಮ್ಮ. ತಂದೆ ವಿದ್ಯಾಇಲಾಖೆಯಲ್ಲಿದ್ದುದರಿಂದ ಊರೂರಿಗೆ ವರ್ಗವಾಗುತ್ತಿತ್ತು. ಇದರಿಂದಾಗಿ ಇವರ ಬಾಲ್ಯದ



ವಿದ್ಯಾಭ್ಯಾಸ ಬೇರೆ ಬೇರೆ ಊರುಗಳಲ್ಲಿ ನಡೆಯಿತು. ಬೆಂಗಳೂರಿನ ಮಹಾರಾಣಿ ಕಾಲೇಜಿನಲ್ಲಿ ವಿಜ್ಞಾನದ ವಿದ್ಯಾರ್ಥಿಯಾಗಿ ಇಂಟರ್ ಮಿಡಿಯಟ್‌ನಲ್ಲಿ ಮೊದಲ ದರ್ಜೆಯಲ್ಲಿ ತೇರ್ಗಡೆ ಹೊಂದಿದರು (1951). ಅನಂತರ ಮೈಸೂರಿನ ಮೆಡಿಕಲ್ ಕಾಲೇಜು ಸೇರಿ ವೈದ್ಯಕೀಯ ಪದವಿ ಪಡೆದರು (1956). ಆ ದಿನಗಳಲ್ಲಿಯೇ ಪ್ರಗತಿಶೀಲ ಲೇಖಕರೂ ಪತ್ರಕರ್ತರೂ ಎಂಬ ಪ್ರಸಿದ್ಧಿ ಹೊಂದಿದ್ದ ನಿರಂಜನರನ್ನು (ನೋಡಿ) ವಿವಾಹವಾದರು. ಇವರದು ಅಂತರ್ಜಾತೀಯ ವಿವಾಹ.

ಇವರು ವೈದ್ಯಕೀಯ ಪದವಿ ಪಡೆದ ಅನಂತರ ಧಾರವಾಡದಲ್ಲಿ ಅನುಪಮಾ ಚಿಕಿತ್ಸಾಲಯವನ್ನು ಆರಂಭಿಸಿ (1958) ಮುಂದೆ ಬೆಂಗಳೂರಿಗೆ ಸ್ಥಳಾಂತರಿಸಿದರು (1961). ಇವರಿಗೆ ತೇಜಸ್ವಿನಿ (1958), ಸೀಮಂತಿನಿ (1963) ಎಂಬ ಇಬ್ಬರು ಹೆಣ್ಣುಮಕ್ಕಳು. ತೇಜಸ್ವಿನಿ ಸಾಹಿತ್ಯ ಕ್ಷೇತ್ರದಲ್ಲಿ ಹೆಸರು ಮಾಡಿದ್ದಾರೆ.

ಅನುಪಮಾರ ಸಾಹಿತ್ಯ ರಚನೆ ವಿದ್ಯಾರ್ಥಿದೆಸೆಯಲ್ಲಿಯೇ ಆರಂಭವಾಯಿತು. ಆಗ ಅನೇಕ ಕಥೆಗಳನ್ನು ಬರೆದರು. ಇವರ ಕಣ್ಮಣಿ ಎಂಬ ಕಥಾಸಂಕಲನ 1952ರಲ್ಲಿ ಪ್ರಕಟವಾಯಿತು. ಅನಂತರ ಅನಂತ ಗೀತ, ಸಂಕೋಲೆಯೊಳಗಿಂದ ಎಂಬ ಕಾದಂಬರಿಗಳು ಪ್ರಕಟವಾದವು (1954). ಇವರು ಬರೆದ ಸ್ನೇಹಪಲ್ಲವಿ ಎಂಬ ಕಾದಂಬರಿ ಸುಧಾ ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡು ಓದುಗರ ಮೆಚ್ಚುಗೆಯೊಡನೆ ಜನಪ್ರಿಯತೆಯನ್ನೂ ತಂದುಕೊಟ್ಟಿತು (1967). ಇವರು ಇಪ್ಪತ್ತನಾಲ್ಕಕ್ಕೂ ಹೆಚ್ಚು ಕಾದಂಬರಿಗಳನ್ನೂ ಒಂಬತ್ತು ಕಥಾಸಂಕಲನಗಳನ್ನೂ ಪ್ರಕಟಿಸಿದ್ದಾರೆ. ರೂವಾರಿಯ ಲಕ್ಷ್ಮಿ (1960), ನೀರಿಗೆ ನೈದಿಲೆ ಶೃಂಗಾರ (1960), ಏಳು ಸುತ್ತಿನ ಮಲ್ಲಿಗೆ (1966), ಒಂದು ಗಿಣಿಯ ಕಥೆ (1983) - ಇವು ಕಥಾಸಂಕಲನಗಳು. ಇವರ ಬಹುತೇಕ ಕಥೆಗಳು ವಾಸ್ತವತೆಯ ಕ್ರೂರ ಮುಖಕ್ಕೆ ಎದುರಾಗಿ ನಿಲ್ಲುವ, ಭವಿಷ್ಯವನ್ನು ಒಳಿತಾಗಿಸಿಕೊಳ್ಳುವ ಹಂಬಲದವಾಗಿದ್ದು ವರ್ಗಮೂಲವಾದ ಸಂಘರ್ಷ, ಲಿಂಗಭೇದನೀತಿ ಮತ್ತು ಮಾನಸಿಕ ತೊಳಲಾಟಗಳ ಸುತ್ತ ಬೆಳೆದು ನಿಲ್ಲುತ್ತವೆ.

ಸ್ನೇಹಪಲ್ಲವಿ, ಆಕಾಶಗಂಗೆ, ಋಣ, ಮಾಧವಿ, ಶ್ವೇತಾಂಬರಿ, ಹೃದಯವಲ್ಲಭ, ಎಳೆ, ಮೂಡಣ ಪಡುವಣ - ಇವು ಇವರ ಕೆಲವು ಮುಖ್ಯ ಕಾದಂಬರಿಗಳು. ಮಧ್ಯಮವರ್ಗದ ಜನರ ಬದುಕಿನ ಸಂಕೀರ್ಣತೆಯನ್ನು ಎಳೆಎಳೆಯಾಗಿ ಬಿಡಿಸಿ ನೋಡುವುದು ಇವರ ಬಹುಪಾಲು ಕಾದಂಬರಿಗಳ ಆಶಯ. ಶ್ವೇತಾಂಬರಿಯಲ್ಲಿ ವೃತ್ತಿವಲಯದಲ್ಲಿ ಬೆಳೆಯುತ್ತಿರುವ ಪ್ರೇಮ ವಿವಾಹದ ಬಹುಮುಖಗಳು ಚರ್ಚಿತವಾಗಿದ್ದರೆ, ಹೃದಯವಲ್ಲಭದಲ್ಲಿ ಸಾಂಪ್ರದಾಯಿಕ ವಿವಾಹದಲ್ಲಿ ಕಂಡುಬರುವ ಅರೆಕೊರೆಗಳು ಹಾಗೂ ಪ್ರೇಮ ವಿವಾಹದಲ್ಲಿ ಕಂಡುಬರುವ ಪ್ರೀತಿಯ ನೆಲೆ ಚಿತ್ರಿತವಾಗಿದೆ. ಎಳೆ ಕಾದಂಬರಿಯಲ್ಲಿ ವಿಧವಾ ವಿವಾಹದ ಬಗೆಗಿನ ವಿಚಾರಗಳಿವೆ. ಮೂಡಣ ಪಡುವಣ ಕಾದಂಬರಿಯಲ್ಲಿ ಭಿನ್ನದೇಶಗಳ ಸಂಸ್ಕೃತಿ, ದಾಂಪತ್ಯ ಜೀವನದ ಏರುಪೇರುಗಳೊಂದಿಗೆ ಹೋರಾಟದ ಬದುಕು ಬಿಚ್ಚಿಕೊಳ್ಳುತ್ತದೆ. 'ಮಾಧವಿ' ವಿಶೇಷವಾಗಿ ಗಮನ ಸೆಳೆಯುವ ಕಾದಂಬರಿ. ಪುರಾಣದ ವ್ಯಕ್ತಿಗಳನ್ನೂ ಆಗಿನ ಸಮಾಜವನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವ ಪ್ರಯತ್ನವನ್ನು ಈ ಕಾದಂಬರಿಯಲ್ಲಿ ಮಾಡಲಾಗಿದೆ. ಇರಾವತಿ ಕರ್ವೆಯವರ ಮರಾಠಿ ಕೃತಿ 'ಯುಗಾಂತ'ದಿಂದ ಪ್ರೇರಣೆಗೊಂಡು ರಚಿತವಾದ ಕಾದಂಬರಿಯಿದು. ಮಹಾಭಾರತದಲ್ಲಿ ಬರುವ ಉಪ ಕಥೆಯೊಂದನ್ನು ಇಲ್ಲಿ ಮರುಚಿಂತನೆಗೊಡ್ಡಲಾಗಿದೆ. ಇವರ ಅನೇಕ ಕೃತಿಗಳು ತೆಲುಗು, ಮಲಯಾಳಂ ಮೊದಲಾದ ಭಾರತೀಯ ಭಾಷೆಗಳಿಗೆ ಅನುವಾದಗೊಂಡಿವೆ. ಕಲ್ಲೋಲ ಎಂಬುದು ಇವರ ಒಂದು ನಾಟಕ. 'ನೆನಪು: ಸಿಹಿ-ಕಹಿ' ಇವರ ಆತ್ಮಕಥೆ (1985).

ಸ್ನೇಹಯಾತ್ರೆ ಮತ್ತು ಅಂಗೈಯಲ್ಲಿ ಯುರೋ-ಅಮೆರಿಕ ಇವರ ಪ್ರವಾಸ ಕಥನಗಳು. 1975ರಲ್ಲಿ ಬರ್ಲಿನ್‌ನಲ್ಲಿ ನಡೆದ ಅಂತಾರಾಷ್ಟ್ರೀಯ ಮಹಿಳಾ ಕಾಂಗ್ರೆಸ್‌ಗೆ ಬೆಂಗಳೂರಿನ ಪ್ರತಿನಿಧಿಯಾಗಿ ಹೋಗಿ ಪೂರ್ವಜರ್ಮನಿ, ರಷ್ಯ, ಪೋಲೆಂಡ್‌ಗಳಲ್ಲಿ ಪ್ರವಾಸ ಮಾಡಿದಾಗಿನ ಅನುಭವಗಳು ಸ್ನೇಹಯಾತ್ರೆಯಲ್ಲಿವೆ. ಇವರ ಯುರೋಪ್-ಅಮೆರಿಕ ಪ್ರವಾಸಾನುಭವಗಳು ಅಂಗೈಯಲ್ಲಿ ಯುರೋ-ಅಮೆರಿಕ (1981) ಎಂಬ ಕೃತಿಯಲ್ಲಿ ಸೊಗಸಾಗಿ ಮೂಡಿಬಂದಿವೆ.

ಮಕ್ಕಳ ಸಾಹಿತ್ಯ ಕ್ಷೇತ್ರಕ್ಕೆ ಇವರು ನೀಡಿದ ಕೊಡುಗೆ ಅಪಾರವಾದುದು. ಇವರು ಮಕ್ಕಳಿಗಾಗಿ ದಿನಕ್ಕೊಂದು ಕಥೆ ಎಂಬ ಹೆಸರಿನಲ್ಲಿ ಚೈತ್ರದಿಂದ ಫಾಲ್ಗುಣದವರೆಗೆ 12 ಸಂಪುಟಗಳಲ್ಲಿ 365 ಕಥೆಗಳನ್ನು ಕೊಟ್ಟಿದ್ದಾರೆ. ಇತಿಹಾಸ, ಪುರಾಣ, ವಿಜ್ಞಾನ, ಸಾಹಸ, ಹಾಸ್ಯ, ಅತಿಮಾನುಷ ಮೊದಲಾದ ವಿಷಯಕ್ಕೆ ಸಂಬಂಧಿಸಿದ ಕಥೆಗಳು ಈ ಸಂಪುಟಗಳಲ್ಲಿದ್ದು, ಮಕ್ಕಳ ಮನಸ್ಸನ್ನು ಸೂರೆಗೊಂಡು ತಿಳಿವಳಿಕೆ ಮೂಡಿಸುವಲ್ಲಿ ನೆರವಾಗುತ್ತವೆ.

ವೈದ್ಯಕೀಯ ವಿಜ್ಞಾನಕ್ಕೆ ಸಂಬಂಧಿಸಿದಂತೆ ಇವರು ಅನೇಕ ಉಪಯುಕ್ತ ಹಾಗೂ ಜನಪ್ರಿಯ ಕೃತಿಗಳನ್ನು ರಚಿಸಿದ್ದಾರೆ. ವಧುವಿಗೆ ಕಿವಿಮಾತು, ದಾಂಪತ್ಯ ದೀಪಿಕೆ -ಇವು ವಿವಾಹದಲ್ಲಿ, ದಾಂಪತ್ಯದಲ್ಲಿ ಲೈಂಗಿಕತೆಯ ಅರಿವನ್ನು ಮೂಡಿಸುವ ಕೃತಿಗಳು. 'ಕೇಳುಕಿಶೋರಿ' ಹದಿಹರೆಯದ ಹೆಣ್ಣು ಮಕ್ಕಳ ದೈಹಿಕಾರೋಗ್ಯದ ಬಗ್ಗೆ ತಿಳಿವಳಿಕೆ ನೀಡುವ ಕೃತಿ. ಆರೋಗ್ಯ ದರ್ಶನ, ಶಿಶುವೈದ್ಯದೀಪಿಕೆ, ಆಹಾರದಿಂದ ಆರೋಗ್ಯ, ಸ್ತ್ರೀ ಸ್ವಾಸ್ಥ್ಯಸಂಹಿತೆ ಕ್ಯಾನ್ಸರ್ ಜಗತ್ತು - ಇವು ಇವರ ಉಪಯುಕ್ತ ವೈದ್ಯಕೀಯ ಕೃತಿಗಳು.

ವಯಸ್ಕರ ಶಿಕ್ಷಣ ಪಡೆದವರಿಗಾಗಿ ಇವರು ರಚಿಸಿದ ಕೆಂಪಮ್ಮನ ಮಗು (1964) ಎಂಬ ಕೃತಿಯಲ್ಲಿ ಹಳ್ಳಿಗರಲ್ಲಿ ಗರ್ಭಿಣಿಯರ ಆರೈಕೆ ಮತ್ತು ಮಗುವಿನ ಯೋಗಕ್ಷೇಮದ ಬಗ್ಗೆ ಮಾಹಿತಿಗಳಿವೆ. ಈ ಕೃತಿಗೆ ವಯಸ್ಕರ ಶಿಕ್ಷಣದ ರಾಷ್ಟ್ರೀಯ ಪುರಸ್ಕಾರ ದೊರೆತಿದೆ (1965). ತಾಯಿ-ಮಗು ಮಹಿಳೆಯರಿಗಾಗಿಯೇ ಬರೆದ ಮಾತೃವಾತ್ಸಲ್ಯದ ಅರಿವು ಮೂಡಿಸುವ ಕೃತಿ.

ಅನುಪಮಾ ಅವರಿಗೆ ಅನೇಕ ಗೌರವ ಪುರಸ್ಕಾರಗಳು ದೊರಕಿವೆ. ಕಾಸರಗೋಡು ಮಹಿಳಾ ಸಮ್ಮೇಳನದ ಅಧ್ಯಕ್ಷತೆ (1977), ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ (1978),ಬೆಂಗಳೂರು ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ (1981), ಕನ್ನಡ ರಾಜ್ಯೋತ್ಸವ ಬೆಳ್ಳಿ ಹಬ್ಬದ ಪ್ರಶಸ್ತಿ (1983), ನಂಜನಗೂಡು ತಿರುಮಲಾಂಬ ಪ್ರಶಸ್ತಿ (1987) -ಇವು ಇವರಿಗೆ ಸಂದ ಕೆಲವು ಗೌರವಗಳು. ಅನುಪಮಾ ಅಭಿನಂದನ (1988) ಇವರಿಗೆ ಸಲ್ಲಿಸಿದ ಅಭಿನಂದನ ಗ್ರಂಥ. ಇವರು 1991 ಫೆಬ್ರವರಿ 14ರಂದು ನಿಧನರಾದರು. **(ಎಂ.ಎಲ್.ಎಸ್.)**

**ಅನುಭವ ಮಂಟಪ :** ಬೀದರ್ ಜಿಲ್ಲೆಯ ಕಲ್ಯಾಣಪಟ್ಟಣದಲ್ಲಿ ಕಳಚುರಿ ಅರಸ ಬಿಜ್ಜಳನ ಆಳ್ವಿಕೆಯಲ್ಲಿ ಮುಖ್ಯಮಂತ್ರಿಯಾಗಿದ್ದ ಬಸವೇಶ್ವರರು ಸ್ಥಾಪಿಸಿದ ಒಂದು ತತ್ತ್ವಜಿಜ್ಞಾಸಾ ಸಂಸ್ಥೆ. ಪ್ರಾಯಶಃ ಇದು 1160ರಲ್ಲಿ ಕಲ್ಯಾಣ ಪಟ್ಟಣದ ತ್ರಿಪುರಾಂತಕ ಕೆರೆಯ ಮೇಲಿನ ತ್ರಿಪುರಾಂತಕಗುಡ್ಡದಲ್ಲಿ ಸ್ಥಾಪಿಸಲ್ಪಟ್ಟಿತೆಂದು ಹೇಳುತ್ತಾರೆ. ಇದರ ಅಧ್ಯಕ್ಷ ಪ್ರಭುದೇವ. ಕಾರ್ಯದರ್ಶಿ ಚನ್ನಬಸವಣ್ಣ. ಸದಸ್ಯರು ಅಖಿಲಭಾರತದ ಶಿವಶರಣರು. ಇದು ನಾಲ್ಕು ಮಹಾದ್ವಾರ, 36 ಕಂಬಗಳಿಂದ ಕೂಡಿತ್ತೆಂದು ತಿಳಿದುಬಂದಿದೆ. ಇದರ ಅಧ್ಯಕ್ಷಪೀಠವೇ ಶೂನ್ಯಸಿಂಹಾಸನ, ಅನುಭವ ಮಂಟಪದ ಹೆಸರು ವಿಶೇಷವಾಗಿ ಕಾಲಜ್ಞಾನವಚನಗಳಲ್ಲಿ ಕಂಡುಬಂದಿದೆ. ಇದನ್ನು ವೀರಶೈವರ ಹೃದಯವೆಂದು ಹಲವು ವಿದ್ವಾಂಸರು ಕರೆದಿದ್ದಾರೆ. ಈ ಮಂಟಪ ಕನ್ನಡ ಸಾಹಿತ್ಯಾಭಿವೃದ್ಧಿಗೆ ಬಹಳವಾಗಿ ಸಹಾಯ ಮಾಡಿತೆಂದು ಹೇಳಬಹುದು.

*

**ಅನುರಾಧಾ, ಧಾರೇಶ್ವರ :** 1938-. ಕನ್ನಡ ಸುಗಮ ಸಂಗೀತ ಕಲಾವಿದೆ. ಇವರ ಮೊದಲ ಹೆಸರು ಶಾಂತಮತಿ. 1938 ನವೆಂಬರ್ 24ರಂದು ಜನಿಸಿದರು. ತಂದೆ ನಾಗೇಶರಾವ್, ತಾಯಿ ಉಮಾಬಾಯಿ. ರಾಮಚಂದ್ರಜಂತ್ಲಿ ಅವರಿಂದ ಸಂಗೀತಪಾಠ ಕಲಿತ ಇವರು ಹದಿನಾಲ್ಕನೆಯ ವಯಸ್ಸಿನಲ್ಲಿ ಆಕಾಶವಾಣಿಯ ಕಾರ್ಯಕ್ರಮದಲ್ಲಿ ಪಾಲ್ಗೊಂಡರು. ಸಂಗೀತ ಶಾಸ್ತ್ರದಲ್ಲಿ ಪದವಿ ಪಡೆದು ಧಾರವಾಡದ ಬಾಸೆಲ್ ಮಿಶನ್ ಹೆಣ್ಣು ಮಕ್ಕಳ ಪ್ರೌಢಶಾಲೆಯಲ್ಲಿ ಸಂಗೀತ ಶಿಕ್ಷಕಿಯಾಗಿ ನೇಮಕಗೊಂಡರು. ಅನಂತರ ಧಾರವಾಡ ಆಕಾಶವಾಣಿ ಕೇಂದ್ರದಲ್ಲಿ ಮೂರು ದಶಕಗಳ ಕಾಲ ಉದ್ಘೋಷಕಿಯಾಗಿ ಕಾರ್ಯನಿರ್ವಹಿಸಿದರು. ಭಾರತ ಪಾಕಿಸ್ತಾನ ಯುದ್ಧದ ಸಂದರ್ಭದಲ್ಲಿ (1965) "ಏ ಮೇರೆ ವತನಕೆ ಲೋಗೋ" ಹಿಂದಿ ಗೀತೆಯನ್ನು ರಾಘುವೇಂದ್ರ ಇಟಗಿಯವರು "ಓ ನನ್ನ ದೇಶ ಬಾಂಧವರೆ!ಕಂಬನಿಗಳೆರಡಾ ಚಿಮ್ಮಿ! ಪ್ರಾಣಾಹುತಿ ನೀಡಿದ ಅವರ! ಸಂಸ್ಮರಿಸಿರಿ ಬಲಿದಾನ" ಎಂದು ಕನ್ನಡದಲ್ಲಿ ಅನುವಾದಿಸಿದ್ದನ್ನು ಮಧುರ ಕಂಠದಿಂದ ಹಾಡಿ ಜನಪ್ರಿಯರಾದರು. ಕನ್ನಡದ ಪ್ರಮುಖ ಭಾವಗೀತಕಾರರಾದ ಕುವೆಂಪು, ಬೇಂದ್ರೆ, ಆನಂದಕಂದ, ಚನ್ನವೀರಕಣವಿ, ಡಿ.ಎಸ್.ಕರ್ಕಿ ಮೊದಲಾದವರ ಭಾವಗೀತೆಗಳನ್ನು ಮನದುಂಬಿ ಹಾಡಿದರು. ಸುಗಮಸಂಗೀತ ಕಲಾವಿದೆಯಾಗಿ ಜನಪ್ರಿಯತೆ ಗಳಿಸಿದರು.

ರಂಗಭೂಮಿ, ನಾಟಕಗಳಲ್ಲೂ ಅಭಿನಯಿಸಿದ ಅನುಭವ ಇವರಿಗಿದೆ. ಶರಣರ ವಚನಗಳು, ದಾಸರ ಕೀರ್ತನೆಗಳು, ಉತ್ತರ ಕರ್ನಾಟಕದ ರಂಗಗೀತೆಗಳು, ಜನಪದ ಗೀತೆಗಳು ಇವರ ಮಧುರ ಕಂಠದಿಂದ ಕೇಳುಗರನ್ನು ಆಕರ್ಷಿಸಿವೆ. ಪ್ರಸಾರ ಕಾರ್ಯಕ್ರಮ, ಪುಸ್ತಕ ಬಿಡುಗಡೆ, ಸುಗಮ ಸಂಗೀತೋತ್ಸವ, ವಿಶ್ವಕೊಂಕಣಿ ಸಮ್ಮೇಳನ, ಬೇಲೂರು, ಸೋಮನಾಥಪುರಗಳ ಭಾವಗೀತೋತ್ಸವಗಳಲ್ಲಿ ಹಾಡಿದ್ದಾರೆ. ಮರಾಠಿ, ಕೊಂಕಣಿ, ಹಿಂದಿ, ಬಂಗಾಲಿ, ತೆಲುಗು ಗೀತೆಗಳನ್ನೂ ಇವರು ಹಾಡಿದ್ದಾರೆ. ನಾಡಿನಾದ್ಯಂತ ಅಸಂಖ್ಯ ಕಾರ್ಯಕ್ರಮ ನೀಡಿದ್ದಾರೆ. ಆಕಾಶವಾಣಿಯ ಹಿರಿಯ ಕಲಾವಿದೆಯಾಗಿ ಇವರು ಈಗಲೂ ಕಾರ್ಯಕ್ರಮ ನೀಡುತ್ತಿದ್ದಾರೆ.

ಇವರಿಗೆ ಅನೇಕ ಗೌರವ ಪ್ರಶಸ್ತಿಗಳು ದೊರಕಿವೆ. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಪ್ರಶಸ್ತಿ (1988), ಗೌಡಸಾರಸ್ವತ ಸಮಾಜದ ಪ್ರಶಸ್ತಿ (1991), ಬೆಂಗಳೂರಿನ ಸುಗಮಸಂಗೀತ ಅಕಾಡೆಮಿ ಹಾಗೂ ಸಾಧನಾ ಸಂಗೀತಶಾಲೆಯ ಸನ್ಮಾನ (1995), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1995), ಕೊಂಕಣಿ ಸುಗಮಸಂಗೀತ ಪ್ರಶಸ್ತಿ (1997) ಹಾಗೂ ಕರ್ನಾಟಕ ಸರ್ಕಾರ ನೀಡುವ ಪ್ರತಿಷ್ಠಿತ ಸಂತ ಶಿಶುನಾಳ ಷರೀಫ್ ಪ್ರಶಸ್ತಿ (1998) ಲಭಿಸಿವೆ. **(ಜಿ.ಎಂ.ಎಚ್.)**

**ಅಪರಂಪರಸ್ವಾಮಿ :** ಬ್ರಿಟಿಷರ ವಿರುದ್ಧ ಹೋರಾಡಿದ ವೀರ. 1834ರಲ್ಲಿ ಇಂಗ್ಲಿಷರು ಚಿಕ್ಕವೀರರಾಜೇಂದ್ರನನ್ನು ರಾಜ್ಯಭ್ರಷ್ಟನನ್ನಾಗಿಸಿ ಕೊಡಗನ್ನು ತಮ್ಮ ವಶಪಡಿಸಿಕೊಂಡಾಗ, ಕೊಡಗಿನ ದಾಸ್ಯವಿಮೋಚನೆಗಾಗಿ ಒಂದು ಬಂಡಾಯ ಮೊದಲಾಯಿತು. ಅದನ್ನು ಈತ ಆರಂಭಿಸಿದ.

ಇವನು ತುಮಕೂರು ಜಿಲ್ಲೆಯ ಮಾಯಸಂದ್ರ ಬಳಿಯ ಕಡಗನೂರು ಗ್ರಾಮದ ಹನುಮಂತರಾಯ ಮತ್ತು ಗೋಪಮ್ಮ ಎಂಬ ದಂಪತಿಗಳ ಮಗ. 1807ರಲ್ಲಿಯೇ ಸನ್ಯಾಸಿಯಾಗಿ ಊರು ಬಿಟ್ಟು ಹೋದವನು ಇಪ್ಪತ್ತು ವರ್ಷಗಳ ಅನಂತರ ದೊಡ್ಡ ಜಂಗಮನಂತೆ ಊರಿಗೆ ಹಿಂದಿರುಗಿದ. ಕೂಡಲೇ ಇವನಿಗೆ ಅನೇಕ ಮಂದಿ ಶಿಷ್ಯರಾದರು. 1833ರಲ್ಲಿ ಅಪರಂಪರಸ್ವಾಮಿ ಮಂಜರಾಬಾದು ತಾಲ್ಲೂಕಿನಲ್ಲಿ ಸಂಚರಿಸುತ್ತಿದ್ದ. ಇವನು ಅನೇಕ ಅದ್ಭುತ ಪವಾಡಗಳನ್ನು ನಡೆಸಬಲ್ಲನೆಂಬುದು ಜನರ ತಿಳಿವಳಿಕೆಯಾಗಿತ್ತು. ಅನೇಕ ರೋಗಗಳನ್ನು ವಾಸಿಮಾಡಲು ಔಷಧವನ್ನು ಸಹ ಕೊಡುತ್ತಿದ್ದ. ಇವನ ಖ್ಯಾತಿಯನ್ನು ಕೇಳಿದ ಚಿಕ್ಕವೀರರಾಜ ಇವನನ್ನು ಮಡಿಕೇರಿಯ ಅರಮನೆಗೆ ಒಮ್ಮೆ ಕರೆಯಿಸಿದ್ದ. 1837ರ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ದಂಗೆಯ ಬಗೆಗೆ ದೀರ್ಘ ವಿಚಾರಣೆ ನಡೆಸಿದ ಕಮಿಷನರ್ ಕಾಟನ್‌ರವರ ಪ್ರಕಾರ ಅಪರಂಪರ ಬ್ರಿಟಿಷರ ವಿರುದ್ಧ ಚಿಕ್ಕವೀರರಾಜೇಂದ್ರ ಮತ್ತು ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು ಸೇರಿ ನಡೆಸುತ್ತಿದ್ದ ರಹಸ್ಯಾಲೋಚನೆಗಳಲ್ಲಿ ಭಾಗಿಯಾಗಿದ್ದ.

1834ರ ಕೊಡಗಿನ ಯುದ್ಧ ನಡೆಯುವ ಮೊದಲೇ ಅಪರಂಪರ ಕೊಡಗನ್ನು ತ್ಯಜಿಸಿ ದಕ್ಷಿಣ ಕನ್ನಡ ಜಿಲ್ಲೆಯ ಕಾಜಗೋಡಿನ ಮಲ್ಲಪ್ಪಗೌಡನಲ್ಲಿ ಆಶ್ರಯ ಪಡೆದ. ಈ ಮಲ್ಲಪ್ಪಗೌಡ ಆ ಪ್ರದೇಶದ ಮುಖಂಡನಾಗಿದ್ದ. 1835 ಮೇ ತಿಂಗಳಲ್ಲಿ ಕೆಲವು ಜನ ಅಪರಂಪರನನ್ನು ಕೊಡಗಿನ ಅಪ್ಪಾಜಿ ಅರಸನ ಮಗ ವೀರಪ್ಪ (ವೀರರಾಜ ಅರಸು) ಎಂದೂ ಕೊಡಗಿನ ಸಿಂಹಾಸನಕ್ಕೆ ನ್ಯಾಯವಾದ ಹಕ್ಕುದಾರನೆಂದೂ ಪ್ರಕಟಣೆ ಹೊರಡಿಸಿದರು. ಇಲ್ಲಿಂದಲೇ ಕೊಡಗಿನ ದಂಗೆ ಆರಂಭವಾಯಿತೆಂದು ಭಾವಿಸಬಹುದು. ಅನಂತರ ಅಪರಂಪರ ಸೂರ್ಲಬ್ಬಿನಾಡು ಏಳುಸಾವಿರ ಸೀಮೆ, ಎಡೆನಾಡು ಮುಂತಾದ ಕಡೆ ಸಂಚರಿಸಿದ. ದಿನೇದಿನೇ ಅವನ ಹಿಂಬಾಲಕರ ಸಂಖ್ಯೆ ಬೆಳೆಯತೊಡಗಿತು. ಚತುರನಾದ ಅಪರಂಪರ ಸಾಮಾನ್ಯಜನರ ಮೂಢನಂಬಿಕೆ, ಧಾರ್ಮಿಕ ಭಾವನೆ ಮತ್ತು ರಾಜನಿಷ್ಠೆಗಳ ಪ್ರಯೋಜನ ಪಡೆದು ಅವರನ್ನು ಇಂಗ್ಲಿಷರ ವಿರುದ್ಧ ಹೋರಾಡಲು ಪ್ರೇರೇಪಿಸಿದ. ಚಿಕ್ಕವೀರರಾಜೇಂದ್ರ ಪಟ್ಟಕ್ಕೆ ಬಂದ ಕೂಡಲೇ ತನ್ನ ಸಂಬಂಧಿಗಳಲ್ಲಿ ಬಹಳ ಜನರನ್ನು ಕೊಲ್ಲಿಸಿದನೆಂದೂ ಅವರಲ್ಲಿ ಅಪ್ಪಾಜಿ ಅರಸನ ಮಕ್ಕಳೂ ಸೇರಿದ್ದರೆಂದೂ ಕೊಡಗಿನ ಜನರು ದೃಢವಾಗಿ ನಂಬಿದ್ದರಿಂದ ಕೊಡಗಿನ ಮುಖ್ಯರು ಅವನನ್ನು ರಾಜನೆಂದು ಒಪ್ಪಿಕೊಳ್ಳುವುದಾಗಲಿ ಬ್ರಿಟಿಷರ ವಿರುದ್ಧ ಹೋರಾಡುವುದಾಗಲಿ ತಮಗೆ ಸಾಧ್ಯವಾಗದೆಂದು ಅವನಿಗೆ ಮನವರಿಕೆ ಮಾಡಿಕೊಟ್ಟರು. ಏನು ಮಾಡಲೂ ತೋರದೆ ಅಪರಂಪರ ದಕ್ಷಿಣ ಕನ್ನಡದ ಕಡಬಕ್ಕೆ ಹೊರಟುಹೋದ. ಇಷ್ಟರಲ್ಲಿ ಕೊಡಗಿನ ಸೂಪರಿಂಟೆಂಡೆಂಟ್ ಆಗಿದ್ದ ಕ್ಯಾಪ್ಟನ್ ಲೀ ಹಾರ್ಡಿ ಅಪರಂಪರನ ಚಟುವಟಿಕೆಗಳನ್ನು ಹತ್ತಿಕ್ಕಲು ಕೆಲವು ಸೈನಿಕರನ್ನು ಕಳುಹಿಸಿದ. ಗಾಬರಿಗೊಂಡ ದಂಗೆಕೋರರಲ್ಲಿ ಅನೇಕರು ವೇಷ ಮರೆಸಿಕೊಂಡು ತಮ್ಮ ತಮ್ಮ ಊರುಗಳಿಗೆ ಓಡಿಹೋದರು. ದುರದೃಷ್ಟವಶಾತ್ ಅಪರಂಪರಸ್ವಾಮಿ ಶಿವಮೊಗ್ಗದ ನಗರಸೀಮೆಗೆ ತಪ್ಪಿಸಿಕೊಳ್ಳುವ ಪ್ರಯತ್ನದಲ್ಲಿ ಸಿಕ್ಕುಬಿದ್ದ. ಇವನನ್ನು ಇಂಗ್ಲಿಷರು ತಿರುಚಿನಾಪಳ್ಳಿಯಲ್ಲಿ ರಾಜಕೀಯ ಕೈದಿಯೆಂದು ಬಂಧಿಸಿಟ್ಟರು. 1869ರಲ್ಲಿ ಬಿಡುಗಡೆ ಮಾಡಲ್ಪಟ್ಟ ಅಪರಂಪರ ಮರುವರ್ಷ ಶ್ರೀರಂಗಪಟ್ಟಣದಲ್ಲಿ ಕಾಲವಶನಾದ.

ಕೊಡಗಿನ ಸ್ವಾತಂತ್ರ್ಯಕ್ಕಾಗಿ ಅಪರಂಪರಸ್ವಾಮಿ ನಡೆಸಿದ ಪ್ರಯತ್ನ ಈ ರೀತಿಯಾಗಿ ಆರಂಭದಲ್ಲೇ ವಿಫಲವಾಯಿತು. ಆದರೆ ಇವನ ಕೆಲವು ನಿಷ್ಠಾವಂತ ಹಿಂಬಾಲಕರು ಹೋರಾಟವನ್ನು ಮುಂದುವರಿಸಿದರು. ಆ ಪೈಕಿ ಕಲ್ಯಾಣಸ್ವಾಮಿ (ನೋಡಿ) ಎಂಬಾತ ಖ್ಯಾತನಾದವ. 1835ರ 'ವಿದ್ರೋಹಿ'ಗಳ ಉದ್ದೇಶ ಮತ್ತು ಆಶೋತ್ತರಗಳು ಅಂಥಾ ವಿಶೇಷ ಮಹತ್ತ್ವವನ್ನೇನೂ ಪಡೆದಿರಲಿಲ್ಲ. ಆದರೆ 1831ರಲ್ಲಿ ಸ್ಥಾನಭ್ರಷ್ಟರಾದ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಮೈಸೂರನ್ನೂ 1834ರಲ್ಲಿ ರಾಜ್ಯಭ್ರಷ್ಟನಾದ ಚಿಕ್ಕವೀರ ರಾಜೇಂದ್ರನಿಗೆ ಕೊಡಗಿನ ಸಿಂಹಾಸನವನ್ನೂ ಮರಳಿ ದೊರಕಿಸಿಕೊಳ್ಳುವುದೇ ಅವನ ಮುಖ್ಯ ಉದ್ದೇಶವಾಗಿತ್ತೆಂದು ಅನೇಕ ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. **(ಎಚ್.ಪಿ.ಎಸ್.)**

**ಅಪರಾಜಿತ :** 10-11ನೆಯ ಶತಮಾನದಲ್ಲಿ ಉತ್ತರ ಕೊಂಕಣದಲ್ಲಿ ಆಳಿದ ಶಿಲಾಹಾರ ಮನೆತನಕ್ಕೆ ಸೇರಿದ ಮಾಂಡಲಿಕ. ಮೃಗಾಂಕ ಎಂಬುದು ಈತನ ಬಿರುದು. ತಂದೆಯ ಹೆಸರು ವಜ್ಜಡ. ಇವನ ಪೂರ್ವಜರು ರಾಷ್ಟ್ರಕೂಟರ ಸಾಮಂತರಾಗಿದ್ದರು. ರಾಷ್ಟ್ರಕೂಟರು ರಾಜ್ಯಭ್ರಷ್ಟರಾದಾಗ ಏರ್ಪಟ್ಟ ಅರಾಜಕ ಪರಿಸ್ಥಿತಿಯನ್ನುಪಯೋಗಿಸಿಕೊಂಡು ಈತ ಸ್ವತಂತ್ರವಾಗಿ ಆಳಲು ಹವಣಿಸಿದ. ಅದಕ್ಕಾಗಿ ಪರಮಾರರೊಡನೆ ಸೌಹಾರ್ದಸಂಬಂಧವನ್ನು ಏರ್ಪಡಿಸಿಕೊಂಡು ಕೊಂಕಣವನ್ನೆಲ್ಲಾ ಆಕ್ರಮಿಸಿದ. ಈತನನ್ನು ಕಲ್ಯಾಣದ ಇಮ್ಮಡಿ ತೈಲಪ ಸೋಲಿಸಿದನೆಂದು ಅಭಿಪ್ರಾಯಪಟ್ಟಿದ್ದಾರೆ. ಡಾ.ಫ್ಲೀಟ್ 997ನೆಯ ವರ್ಷದ ಭದಾನ ತಾಮ್ರಶಾಸನದಲ್ಲಿ ಈತನನ್ನು ಮಹಾಮಂಡಲೇಶ್ವರನೆಂದು ಕರೆದಿರುವುದು ಇದಕ್ಕೊಂದು ಕಾರಣ. ರನ್ನನ ಗದಾಯುದ್ಧದಲ್ಲಿನ ಪದ್ಯವೊಂದನ್ನು ಆಧರಿಸಿ ಈತನನ್ನು ತಂದೆಯ ಅಪೇಕ್ಷೆಯಂತೆ ಇಜಿವಬೆಡಂಗ ಸು.980ರಲ್ಲಿ ಸೋಲಿಸಿದನೆನ್ನಲಾಗಿದೆ. ಆದರೆ ಭದಾನ ಶಾಸನದಿಂದಾಗಲಿ 993-94ರ ಬರೋಡದ ಇನ್ನೆರಡು ತಾಮ್ರಶಾಸನ ಗಳಿಂದಾಗಲಿ ಈ ವಾದಕ್ಕೆ ಪುಷ್ಟಿ ದೊರಕುವುದಿಲ್ಲ. ಭದಾನ ತಾಮ್ರಶಾಸನದಲ್ಲಿ ರಾಷ್ಟ್ರಕೂಟ ಕಕ್ಕಲನನ್ನು ತೈಲಪ ಸೋಲಿಸಿದ ಪ್ರಸ್ತಾಪವಿದೆ. ಪ್ರಚಂಡ ಬಿರುಗಾಳಿಯ ಹೊಡೆತಕ್ಕೆ ನಂದಿಹೋದ

ದೀಪದಂತೆ ರಾಷ್ಟ್ರಕೂಟ ಮನೆತನ ನಂದಿತೆಂದೂ ಉಳಿದಿರುವುದೆಲ್ಲ ಕೇವಲ ಅದರ ನೆನಪೆಂದೂ ಹೇಳಿರುವ ಕಳಕಳಿಯ ಮಾತುಗಳು ಈತ ತೈಲನ ಮಾಂಡಲಿಕನಾಗಿದ್ದನೆಂಬುದನ್ನು ಸೂಚಿಸುವುದಿಲ್ಲ.

ರನ್ನನ ಗದಾಯುದ್ಧದಲ್ಲಿ ಒಂದು ಕಡೆ ಸಮುದ್ರ, ಮತ್ತೊಂದು ಕಡೆ ಇಱಿವಬೆಡಂಗನ ಸೇನಾಸಾಗರಗಳ ನಡುವೆ ಸಿಲುಕಿದ ಅಪರಾಜಿತ ಎರಡೂ ಕಡೆ ಬೆಂಕಿ ಹೊತ್ತಿರುವ ಕಡ್ಡಿಯ ಮೇಲಿನ ಹುಳುವಿನಂತೆ ಕಂಪಿಸಿದ ಎಂದಿದ್ದಾನೆ. ಅಪರಾಜಿತನನ್ನು ಸೋಲಿಸಿ ಅಂಶುನಗರವನ್ನು ಸುಟ್ಟು ಆತನಿಂದ 21 ಆನೆಗಳನ್ನು ಕಪ್ಪವಾಗಿ ಸತ್ಯಾಶ್ರಯ ಪಡೆದನೆಂದಿದ್ದಾನೆ. ಲಭ್ಯವಿರುವ ಆಧಾರಗಳಿಂದ ಅಪರಾಜಿತ ತೈಲನ ಮಾಂಡಲಿಕನಾಗಿರದೆ, ಸೇವುಣ ವಂಶದ 2ನೆಯ ಭಿಲ್ಲಮ ಸಹ ತೈಲನ ಅಧೀನತೆಯನ್ನು ನಿರಾಕರಿಸಲು ಅವನಿಗೆ ಸಹಾಯ ಮಾಡಿದ. ಆದರೆ ಭಿಲ್ಲಮ ಸೋತುದಲ್ಲದೆ ಪರಮಾರ ಮುಂಜನನ್ನು ಸೋಲಿಸಲು ತೈಲನಿಗೆ ನೆರವು ನೀಡಿದ. ಚಾಳುಕ್ಯರು ಒಂದು ಕಡೆ ಚೋಳರೊಂದಿಗೆ, ಇನ್ನೊಂದು ಕಡೆ ಪರಮಾರರೊಂದಿಗೆ ನಡೆಸುತ್ತಿದ್ದ ಕದನಗಳಿಂದಾಗಿ ತೀರಪ್ರದೇಶದಲ್ಲಿದ್ದ ಅಪರಾಜಿತ ಸುಮಾರು ಮೂರು ದಶಕಗಳ ಕಾಲ ಸ್ವತಂತ್ರವಾಗಿರಲು ಸಾಧ್ಯವಾಯಿತು. ಆದರೆ ಆ ಬಳಿಕ ಅಪರಾಜಿತನ ವಿರುದ್ಧ ಸತ್ಯಾಶ್ರಯ ದಂಡೆತ್ತಿ ಆತನನ್ನು ಸೋಲಿಸಿದ. ರನ್ನ ಈ ಘಟನೆಯನ್ನು ವಿಸ್ತರಿಸಿದ್ದಾನೆ. ಇದು ಸು.1005ರಲ್ಲಿ ನಡೆದ ಘಟನೆ. **(ಬಿ.ಆರ್.ಜಿ.)**

**ಅಪರಾಳ ತಮ್ಮಣ್ಣ :** ಸು.1800. ಶ್ರೀಕೃಷ್ಣಪಾರಿಜಾತ ಎಂಬ ಯಕ್ಷಗಾನ ಕೃತಿಯ ಕರ್ತೃ. ರಾಯಚೂರಿನಿಂದ 20-25ಕಿಮೀ ದೂರದಲ್ಲಿರುವ ಅಪರಾಳವೆಂಬ ಗ್ರಾಮದ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ಈತ ಕನ್ನಡ ಸಂಸ್ಕೃತಗಳೆರಡರಲ್ಲಿಯೂ ವಿದ್ವಾಂಸನಾಗಿದ್ದ ಎನ್ನಲಾಗಿದೆ. ಭಾಗವತ ಕವಿಗಳ, ದಾಸಸಾಹಿತ್ಯದ ಅಭ್ಯಾಸ ಮಾಡಿದ್ದ ಇವನು ಸಂಗೀತ ನೃತ್ಯ ಕಲೆಗಳಲ್ಲಿಯೂ ಪ್ರಾವೀಣ್ಯ ಪಡೆದವನಾಗಿದ್ದ. ತನ್ನ ನಾಟಕದಲ್ಲಿ ಜನಪದ ಹಾಗೂ ಸಾಹಿತ್ಯಿಕ ಶೈಲಿಗಳನ್ನು ಅಳವಡಿಸಿಕೊಂಡಿದ್ದಾನೆ. ಅಂದು ನಡೆಯುತ್ತಿದ್ದ ನಾಟಕ ಮತ್ತು ನೃತ್ಯಕಲೆಗಳ ಮಾಸ್ತರನಾಗಿದ್ದಿರಬಹುದೆಂದೂ ಸಂದರ್ಭ ಒದಗಿಬಂದಾಗ ಈತ ಅಭಿನಯಿಸಿರಬಹುದೆಂದೂ ಕೆಲ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. **(ಬಿ.ಎಸ್.ಎಸ್.)**

**ಅಪ್ಪಾಚಿವಾಡಿ :** ಬೆಳಗಾಂವಿ ಜಿಲ್ಲೆ ಚಿಕ್ಕೋಡಿ ತಾಲೂಕಿನಲ್ಲಿರುವ ಒಂದು ಗ್ರಾಮ. ನಿಪ್ಪಾಣಿಯಿಂದ 16ಕಿಮೀ ದೂರದಲ್ಲಿದೆ. ಇದು ನಾಥಪಂಥೀಯರ ಪ್ರಸಿದ್ಧ ಯಾತ್ರಾಸ್ಥಳ. ನಾಥಪಂಥದ ಹಾಲಸಿದ್ಧನಾಥ 1812ರಲ್ಲಿ ಇಲ್ಲಿ ಸಮಾಧಿ ಸ್ವೀಕರಿಸಿದ. ಈತನ ನೆನಪಿನಲ್ಲಿ ನಿರ್ಮಿಸಿರುವ ಸಮಾಧಿ ಕಟ್ಟಡ ಇಂಡೋ ಇಸ್ಲಾಮಿಕ್ ಶೈಲಿಯಲ್ಲಿದೆ. ಹಾಲಸಿದ್ಧನಾಥನ ಆರಾಧಕಿ ಭೀಮಾಬಾಯಿ ಶಿಂತ್ರೆಯ ಸಮಾಧಿ ಕೂಡ ಇಲ್ಲಿದೆ. ಪ್ರತಿವರ್ಷ ದಸರ ಹಬ್ಬ ಕಳೆದ ಐದು ದಿವಸಗಳ ಮೇಲೆ ಸೀಗೆಹುಣ್ಣಿಮೆಯಂದು ಜಾತ್ರೆ ನಡೆಯುತ್ತದೆ. ಈ ಸಂದರ್ಭದಲ್ಲಿ ಲಕ್ಷಾಂತರ ಭಕ್ತರು ಇಲ್ಲಿ ಸೇರುವರು. ಈ ಜಾತ್ರೆ ಐದು ದಿನಗಳವರೆಗೆ ಜರುಗುವುದು. ಜಾತ್ರೆಯಲ್ಲಿ ವರ್ಷ ಭವಿಷ್ಯದ ನುಡಿಗಳಾಗುತ್ತವೆ. ಈ ಪ್ರದೇಶದ ಜನರಿಗೆ ಹಾಲಸಿದ್ಧನಾಥನ ನುಡಿಗಳ ಮೇಲೆ ಅಪಾರ ನಂಬಿಕೆ. ಮಹಾವೀರ ಜಿನಾಲಯವೊಂದು ಈ ಊರಿನಲ್ಲಿದೆ. ಇದಲ್ಲದೆ ಮಹಾದೇವ, ಲಕ್ಷ್ಮಿ, ನರಸೋಬ, ಮಾಸೋಬ, ಮಾರುತಿ, ದತ್ತ, ಎಲ್ಲಮ್ಮ ದೇವರ ಗುಡಿಗಳಿವೆ. **(ವಿ.ಎಸ್.ಎಂ.)**

**ಅಪ್ಸರಕೊಂಡ :** ಉತ್ತರ ಕನ್ನಡ ಜಿಲ್ಲೆ ಹೊನ್ನಾವರ ತಾಲ್ಲೂಕಿನ ಒಂದು ಪ್ರೇಕ್ಷಣೀಯ ಸ್ಥಳ. ಹೊನ್ನಾವರದಿಂದ 6ಕಿಮೀ ದೂರದಲ್ಲಿದೆ. ಇದೊಂದು ಪ್ರಕೃತಿ ಸುಂದರ ತಾಣವಾಗಿದ್ದು ಬೆಟ್ಟಗುಡ್ಡಗಳಿಂದ ಆವೃತವಾಗಿದೆ. ಇಲ್ಲಿ ಸು.10ಮೀ ಎತ್ತರದಿಂದ ಧುಮುಕುವ ತೊರೆಯೊಂದರಿಂದ ಒಂದು ನೀರಿನ ಕೊಂಡ ಸೃಷ್ಟಿಯಾಗಿದೆ. ಇದರ ಪರಿಸರದಲ್ಲೇ ರಾಮಚಂದ್ರಪುರ ಮಠದ ಒಂದು ಶಾಖೆ ಇದೆ. ಸ್ಥಳೀಯರು ಈ ಮಠವನ್ನು ಅಪ್ಸರಕೊಂಡ ಮಠ ಎಂದೂ ಕರೆಯುತ್ತಾರೆ.

ಇಲ್ಲಿ ನರಸಿಂಹ ಮತ್ತು ದುರ್ಗಾದೇವಿಯ ಎರಡು ದೇವಸ್ಥಾನಗಳಿವೆ. ದುರ್ಗಾದೇವಿಯ ಮಂದಿರ ಕಲ್ಲಿನದು. ಮಠದ ಸಮೀಪವೇ ಏಳು ಸಾಧುಗಳ ಸಮಾಧಿಗಳಿವೆ. ಸಮಾಧಿಯ ಹತ್ತಿರ ಕದಂಬರ ಕಾಲದ ಒಂದು ಮಹಿಷಮರ್ದಿನಿ ಮೂರ್ತಿ ಇದೆ. ಮಠದ ಬಳಿ ನಿಂತು ಸಮುದ್ರದ ಸುಂದರ ದೃಶ್ಯವನ್ನು ವೀಕ್ಷಿಸಬಹುದು. ಇದರ ಹತ್ತಿರವಿರುವ ಬೆಟ್ಟದ ತುದಿಯಲ್ಲಿ ಒಂದು ದೊಡ್ಡ ನೈಸರ್ಗಿಕ ಗುಹೆ ಇದೆ. ಇಲ್ಲಿನ ಪ್ರಕೃತಿ ಪರಿಸರ ಚಿತ್ತಾಕರ್ಷಕವಾಗಿದೆ. **(ಎಸ್.ಎಚ್.ಇ.)**

**ಅಫ್‌ಜಲಪುರ :** ಗುಲ್ಬರ್ಗ ಜಿಲ್ಲೆಯ ಪಶ್ಚಿಮ ಭಾಗದಲ್ಲಿರುವ ಒಂದು ತಾಲ್ಲೂಕು ಹಾಗೂ ಆಡಳಿತ ಕೇಂದ್ರ. ಉತ್ತರ ದಿಕ್ಕಿಗೆ ಆಳಂದ್ ತಾಲ್ಲೂಕು ಮತ್ತು ಸೊಲ್ಲಾಪುರ ಜಿಲ್ಲೆ. ಪೂರ್ವದಲ್ಲಿ ಗುಲ್ಬರ್ಗ ತಾಲ್ಲೂಕು ಮತ್ತು ದಕ್ಷಿಣದಲ್ಲಿ ಜೇವರಗಿ ತಾಲ್ಲೂಕು ಮತ್ತು ಬಿಜಾಪುರ ಜಿಲ್ಲೆ. ಇವು ಈ ತಾಲ್ಲೂಕನ್ನು ಸುತ್ತುವರಿದಿವೆ. ನಿಜಾಮರ ಆಳ್ವಿಕೆಯ ಕಾಲದಲ್ಲಿ ಅಫಜಲಪುರ ಪೈಗಾ ತಾಲ್ಲೂಕು ಆಗಿತ್ತು. ಈಗ ಇದು ಗುಲ್ಬರ್ಗ ಉಪವಿಭಾಗದಲ್ಲಿದೆ. ತಾಲ್ಲೂಕಿನಲ್ಲಿರುವ ಗ್ರಾಮಗಳು 90. ಸರ್ಕಲ್ (ಹೋಬಳಿ)ಗಳು ಮೂರು-ಅಫಜಲಪುರ, ಅತ್ನೂರು ಮತ್ತು ಕರಜಗಿ. ತಾಲ್ಲೂಕಿನ ವಿಸ್ತೀರ್ಣ 1305ಚ.ಕಿಮೀ. ಜನಸಂಖ್ಯೆ 1,79,816.

ತಾಲ್ಲೂಕಿನ ಪಶ್ಚಿಮ ಮತ್ತು ದಕ್ಷಿಣ ಗಡಿಗುಂಟ ಭೀಮಾನದಿ ಹರಿಯುತ್ತದೆ. ಉತ್ತರದಿಂದ ದಕ್ಷಿಣಕ್ಕೆ ಹರಿಯುವ ಅಮರಜ ನದಿ ತಾಲ್ಲೂಕಿನ ಮಧ್ಯದಲ್ಲಿ ಹಾದು ಗಾಣಗಾಪುರದ ಬಳಿ ಭೀಮಾ ನದಿಯನ್ನು ಕೂಡುತ್ತದೆ. ಬೋರಿ ಎಂಬ ಚಿಕ್ಕ ನದಿ ಸಹ ಉತ್ತರ-ದಕ್ಷಿಣವಾಗಿ ಹರಿದು ಅಫಜಲಪುರಕ್ಕೆ ಸ್ವಲ್ಪ ಪಶ್ಚಿಮದಲ್ಲಿ ಭೀಮಾನದಿಯನ್ನು ಸೇರುತ್ತದೆ. ಭೀಮಾನದಿಗೆ ಅಫಜಲಪುರದ ಬಳಿ ಒಂದು ಅಣೆಕಟ್ಟನ್ನು ಕಟ್ಟಲಾಗಿದೆ. ದಖನ್ ಟ್ರ್ಯಾಪ್ ಹರಡಿರುವ ಈ ತಾಲ್ಲೂಕಿನ ಕರಿಎರೆ ಮತ್ತು ಮರಳುಮಿಶ್ರಿತ ಕೆಂಪುಮಣ್ಣಿನ ಭೂಮಿ ಇದೆ. ಬಾವಿಗಳ ನೀರಾವರಿ ಸೌಕರ್ಯದಲ್ಲಿ ಅಫಜಲಪುರ ತಾಲ್ಲೂಕು ಗುಲ್ಬರ್ಗ ಜಿಲ್ಲೆಯಲ್ಲಿ 3ನೆಯ ಸ್ಥಾನ ಪಡೆದಿದೆ. ಭತ್ತ, ಜೋಳ, ಹತ್ತಿ, ಕಡಲೆ, ತೊಗರಿ, ಕಡಲೆಕಾಯಿ ಇಲ್ಲಿನ ಮುಖ್ಯ ಬೆಳೆಗಳು. ಗೋಧಿ, ಜವೆ (ಬಾರ್ಲಿ) ಬಾಳೆಹಣ್ಣು, ಕಾಯಿಪಲ್ಯೆ ಮತ್ತು ಮೆಣಸಿನಕಾಯಿ ಸಹ ಬೆಳೆಯಲಾಗುತ್ತದೆ.

ಖಿಲ್ಲರ್ ಜಾತಿಯ ದನದ ಸಾಕಣೆ ಇಲ್ಲಿ ವಿಶೇಷ. ಭೀಮಾನದಿಯ ದಂಡೆಯುದ್ದಕ್ಕೂ ಮೀನುಗಾರಿಕೆ ಒಂದು ಮುಖ್ಯ ಉದ್ಯೋಗ. ಗಾಣಗಾಪುರದಲ್ಲಿ ಭೀಮಾನದಿಯ ದಂಡೆಯ ಮೇಲೆ ಮೀನುಗಳ ಬೆಳೆವಣಿಗೆ ಮತ್ತು ಸಂಗ್ರಹಕ್ಕಾಗಿ ಕಾರ್ಯಕ್ರಮವೊಂದಿದೆ.

ಈ ತಾಲ್ಲೂಕಿನಲ್ಲಿರುವ ಗಾಣಗಾಪುರ (ನೋಡಿ) ಪವಿತ್ರ ಯಾತ್ರಾಸ್ಥಳವೆಂದು ಪರಿಗಣಿತವಾಗಿದೆ. ಭಗವತಿ ದೇವಾಲಯವಿರುವ ಘಟ್ಟರ್ಗ, ಸಿದ್ಧರಾಮೇಶ್ವರ ದೇವಾಲಯವಿರುವ ಹವಲ್ಗ, ಬಸವೇಶ್ವರ ದೇವಾಲಯವಿರುವ ಅತ್ನೂರು, ಮಹಂತೇಶ್ವರ ಗುಡ್ಡ ಮಠ ಇರುವ ಚಿನಮಗೇರ, ಶಹಾಬುದ್ದೀನ್ ಎಂಬ ಸಂತರ ದರ್ಗಾ ಇರುವ ಕರಜಗಿ ಈ ಗ್ರಾಮಗಳು ಈ ಸುತ್ತಿನ ಜನರಿಗೆ ಪವಿತ್ರವೆನಿಸಿವೆ.

ತಾಲ್ಲೂಕಿನ ಮುಖ್ಯಸ್ಥಳ ಅಫಜಲಪುರ. ಜನಸಂಖ್ಯೆ 19,114. ಈ ಊರಿನಿಂದ ಚೌಡಾಪುರಕ್ಕೆ ಮತ್ತು ಮಣ್ಣೂರಿನ ಮೂಲಕ ಗುಲ್ಬರ್ಗಕ್ಕೆ ಒಳ್ಳೆಯ ರಸ್ತೆ ಸಂಪರ್ಕ ಇದೆ. ಬಿಜಾಪುರದ 2ನೆಯ ಆದಿಲ್‌ಷಾನ ಸರದಾರನಾಗಿದ್ದು ಶಿವಾಜಿಯಿಂದ ಪ್ರತಾಪಗಡದಲ್ಲಿ ಹತನಾದ ಅಫ್ಜಲಖಾನನಿಂದ ಊರಿಗೆ ಈ ಹೆಸರು ಬಂದಿದೆ. **(ಬಿ.)**

**ಅಬ್ದುಲ್ ರಜಾಕ್ :** ಇಮ್ಮಡಿ ದೇವರಾಯನ ಆಳ್ವಿಕೆಯಲ್ಲಿ ಈತ ಪರ್ಷಿಯ ದೇಶದಿಂದ ರಾಯಭಾರಿಯಾಗಿ ವಿಜಯನಗರಕ್ಕೆ ಬಂದು (1443) ಅಲ್ಲಿ ಏಳು ತಿಂಗಳು ಇದ್ದು ವೈಭವಪೂರ್ಣವಾಗಿದ್ದ ವಿಜಯನಗರ ಸಾಮ್ರಾಜ್ಯದ ಬಗ್ಗೆ ಕಣ್ಣಾರೆ ಕಂಡು ಕಿವಿಯಾರೆ ಕೇಳಿದ ಸಂಗತಿಗಳನ್ನು ಬರೆದಿಟ್ಟಿದ್ದಾನೆ. ಚಾರಿತ್ರಿಕ ದೃಷ್ಟಿಯಿಂದ ಅವನ ಬರೆವಣಿಗೆ ಬಹು ಉಪಯುಕ್ತವಾಗಿದೆ. ವಿಜಯನಗರ ಪಟ್ಟಣ ಅತಿ ವಿಸ್ತಾರವೂ ಸುಭದ್ರವೂ ಸೇನಾಬಲದಿಂದ ಸುಸಜ್ಜಿತವೂ ಸುಖಸೌಲಭ್ಯಗಳಿಂದ ಕೂಡಿದುದೂ ಆಗಿದ್ದು, ಅಲ್ಲಿಯ ವಿಶಾಲವಾದ ಅಂಗಡಿಬೀದಿಗಳಲ್ಲಿ ಮುತ್ತು ರತ್ನಗಳ ಮುಕ್ತವ್ಯಾಪಾರ ನಡೆಯುತ್ತಿತ್ತೆಂದು ಆತ ವರ್ಣಿಸಿದ್ದಾನೆ. *

**ಅಬ್ಬಕ್ಕ :** 16ನೆಯ ಶತಮಾನದ ಮಧ್ಯಭಾಗದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಳುತ್ತಿದ್ದ ವೀರರಾಣಿ. ಪುತ್ತಿಗೆಯ ಚೌಟ ಮನೆತನದವಳಾದ, ಉಲ್ಲಾಳದಿಂದ ಆಳುತ್ತಿದ್ದ ಈಕೆಗೆ 'ಬುಕಾದೇವಿ' (ಬುಕ್ಕಾದೇವಿ) ಎಂದೂ ಹೆಸರಿದ್ದಂತೆ ಪೋರ್ಚುಗೀಸರ ದಾಖಲೆಗಳಿಂದ ತಿಳಿಯುತ್ತದೆ. ಚಿಕ್ಕರಾಜ್ಯವೊಂದರ ಅಧಿಪತಿಯಾಗಿದ್ದರೂ ಪೋರ್ಚುಗೀಸರ ಬೃಹದ್ಬಲದೆದುರು ನಿಂತು ಹೋರಾಡಿದ ಸಾಹಸಿ ಎಂದು ಈಕೆ ಪ್ರಸಿದ್ಧಳಾಗಿದ್ದಾಳೆ.

ಅಬ್ಬಕ್ಕ ಬಂಗರಾಜನೊಬ್ಬನನ್ನು ಮದುವೆಯಾಗಿದ್ದಳು. ಆತ ಪೋರ್ಚುಗೀಸರ ಪಕ್ಷ ವಹಿಸಿದ್ದ ಕಾರಣ ಈಕೆ ಮಲಬಾರಿನ ಹಲವು ಅರಸುಗಳೊಡನೆ ಸ್ನೇಹ ಬೆಳೆಸಿ ಪೋರ್ಚುಗೀಸರ ವಿರುದ್ಧ ನಿಂತಳು. ಪೋರ್ಚುಗೀಸರು ಇವಳ ಸಹಾಯಕನಾಗಿದ್ದ ಕಣ್ಣಾನೂರಿನ ಅರಸನ ವಿರುದ್ಧ ಸೆಣಸಿದಾಗ ಈಕೆ ಪೋರ್ಚುಗೀಸರಿಗೆ ಕೊಡಬೇಕಾಗಿದ್ದ ಕಪ್ಪವನ್ನು ತಡೆಹಿಡಿದಳು. 1555ರಲ್ಲಿ ಪೋರ್ಚುಗೀಸ ನೌಕಾಧಿಕಾರಿ ದೋಮ್ ಆಳ್ವಾರೆಸ್ ದ ಸಿಲ್ವೀರಾ ಮಂಗಳೂರನ್ನು ಆಕ್ರಮಿಸಿಕೊಳ್ಳಲು 21 ಹಡಗುಗಳ ಭಾರಿ ಪಡೆಯೊಡನೆ ಬಂದಾಗ ರಾಣಿ ವೀರಾವೇಶದಿಂದ ಹೋರಾಡಿದಳು. ಕೊನೆಗೆ ಕಲ್ಲಿಕೋಟೆಯ ಜಾಮೋರಿನ್ ಪ್ರವೇಶಿಸಿ, ಅವರ ನಡುವೆ ರಾಜಿ ಮಾಡಿಸಿದ. 3 ವರ್ಷಗಳ ಅನಂತರ ಅವಳು ಮತ್ತೊಮ್ಮೆ ಕಣ್ಣಾನೂರಿನ ರಾಜನ ಪಕ್ಷ ವಹಿಸಿ ಪೋರ್ಚುಗೀಸರೊಡನೆ ನೌಕಾಯುದ್ಧ ಹೂಡಿದಳು. ಆಗ ರಾಣಿ ನಷ್ಟವನ್ನನುಭವಿಸಿದರೂ (1555) ಮತ್ತೊಮ್ಮೆ 1566ರಲ್ಲಿ ನಡೆದ ಯುದ್ಧದಲ್ಲಿ ರಾಣಿಯದೇ ಮೇಲ್ಗೈಯಾಯಿತು. ಪೋರ್ಚುಗೀಸ್ ಗವರ್ನರನಾಗಿದ್ದ ಪೀಕ್ಸೋಟ್ ಈ ಯುದ್ಧದಲ್ಲಿ ಜೀವತೆತ್ತ. ಪುನಃ 1567ರಲ್ಲಿ ಪೋರ್ಚುಗಿಸರು ಅಗಾಧ ಸೈನ್ಯದೊಡನೆ ಬಂದರು. ಮೊದಲು ಅರಬ್ಬರ ಅನಿರೀಕ್ಷಿತ ದಾಳಿಗಳಿಂದ ಪೋರ್ಚುಗೀಸರು ಅಲುಗಿದರೂ ಕೊನೆಗೆ ಮಂಗಳೂರು, ಉಲ್ಲಾಳ ಅವರ ಕೈವಶವಾದವು. ಅತಿಭಯಂಕರಳಾಗಿದ್ದ ರಾಣಿ ತಲೆಮರೆಸಿಕೊಂಡಳು ಎಂಬುದು ಪೋರ್ಚುಗೀಸ ನೊಬ್ಬನ ಹೇಳಿಕೆ.

ಪ್ರಾಯಶಃ ಈಕೆಯ ಮಗಳಾದ, ಇನ್ನೊಬ್ಬ ಅಬ್ಬಕ್ಕದೇವಿ ಸಹ ಸಾಹಸಿಯಾಗಿದ್ದಳು. ಈಕೆ ಬಂಗದೊರೆ ವೀರನರಸಿಂಹಲಕ್ಷ್ಮಪ್ಪರಸನ ಹೆಂಡತಿಯಾಗಿದ್ದಳು. ಇವಳೂ ಬಂಗರ ವಿರುದ್ಧ ನಿಂತುದಲ್ಲದೆ, ಬಿದನೂರಿನ ವೆಂಕಟಪ್ಪನಾಯಕನ ಸಹಾಯ ಪಡೆದು ಪೋರ್ಚುಗೀಸರನ್ನು ಸೋಲಿಸಿದ್ದಂತೆ ತಿಳಿಯುತ್ತದೆ. ಈ ಘಟನೆ ನಡೆದದ್ದು 1618ರಲ್ಲಿ. 1623ರಲ್ಲಿ ಮಂಗಳೂರಿಗೆ ಬಂದಿದ್ದ ಇಟಲಿಯ ಪ್ರವಾಸಿ ಪೆತ್ರೊ ದ ಲ ವಲ್ಲೆ ಈಕೆಯ ಅಸಾಧಾರಣ ಧೈರ್ಯವನ್ನು ಮನಃಪೂರ್ವಕವಾಗಿ ಹೊಗಳಿದ್ದಾನೆ. (ವಿ.ಜಿ.ಕೆ.)

**ಅಬ್ಬಲೂರು :** (ಅಬಲೂರು) ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನಲ್ಲಿ ಹಿರೇಕೆರೂರಿಗೆ 10ಕಿಮೀ ಉತ್ತರದಲ್ಲಿರುವ ಒಂದು ಹಳ್ಳಿ.

ಇದು ಒಂದು ಕಾಲಕ್ಕೆ ದೊಡ್ಡ ನಗರವಾಗಿತ್ತೆಂಬ ಪ್ರತೀತಿ ಇದೆ. ಆಗ ಸುತ್ತ ಮುತ್ತಲ ಬೋಗಾವಿ, ಸುತ್ಕೋಟಿ, ನೂಲ್ಗೇರಿ, ದೂಪದಹಳ್ಳಿ ಮತ್ತು ಯತ್ತಿನ ಹಳ್ಳಿಗಳನ್ನೂ ಒಳಗೊಂಡಿದ್ದಿರಬಹುದು. ಇಲ್ಲಿರುವ ಅನೇಕ ಅವಶೇಷಗಳಲ್ಲಿ ಈಗ ದೊರೆತಿರುವ 20 ಶಾಸನಗಳು ಚಾರಿತ್ರಿಕವಾಗಿ ಮುಖ್ಯವಾದುವು. ಇವುಗಳಿಂದ 12ನೆಯ ಶತಮಾನದಲ್ಲಿ ಈ ಊರಿನಲ್ಲಿ ಜೈನರ ವಸತಿ ಹೆಚ್ಚಾಗಿತ್ತೆಂದೂ ಜೈನರ ಬಸದಿಯೊಂದಿತ್ತೆಂದೂ ತಿಳಿಯುತ್ತದೆ. ಶಾಸನಗಳಲ್ಲಿ ಏಕಾಂತದ ರಾಮಯ್ಯನ (ನೋಡಿ) ಕಾರ್ಯಚಟುವಟಿಕೆಗಳಿಗೆ ಸಂಬಂಧಿಸಿದವು ಮುಖ್ಯವಾದವು.

ಇಲ್ಲಿರುವ ಬ್ರಹ್ಮೇಶ್ವರ ಮತ್ತು ಸೋಮೇಶ್ವರ ದೇವಾಲಯಗಳು ವಾಸ್ತು ಮತ್ತು ಶಿಲ್ಪದೃಷ್ಟಿಯಿಂದ ಅಷ್ಟೇನೂ ಮಹತ್ವದವಲ್ಲವಾದರೂ ಏಕಾಂತದ ರಾಮಯ್ಯ ಇಲ್ಲಿ ನಡೆಸಿದನೆನ್ನಲಾದ ಪವಾಡಗಳಿಂದ ಅವು ಪ್ರಸಿದ್ಧವಾಗಿವೆ.

ಬ್ರಹ್ಮೇಶ್ವರ ದೇವಾಲಯ ಚಾಳುಕ್ಯ ರೀತಿಯಲ್ಲಿ ಕಟ್ಟಿದ ಒಂದು ಸರಳವಾದ ಕಟ್ಟಡ. ಚೌಕನಾದ ಇದರ ಗರ್ಭಗೃಹದ ಗೋಡೆಗಳು ಸರಳವಾಗಿದ್ದು ಮೇಲೆ ಮೂರಂತಸ್ತಿನ ವಿಮಾನವಿದೆ. ಸೋಮೇಶ್ವರ ದೇವಾಲಯ ತ್ರಿಕೂಟಾಚಲವಾಗಿದ್ದು ಇದರ ಮುಂದೆ ದೊಡ್ಡದಾದ ತೆರೆದ ಮುಖಮಂಟಪವಿದೆ. ಇದನ್ನು ಏಕಾಂತದ ರಾಮಯ್ಯ ಕಟ್ಟಿಸಿದನೆಂದು ಶಾಸನದಲ್ಲಿ ಹೇಳಿದ್ದರೂ ಬಹುಶಃ ಮೂಲ ದೇವಾಲಯ ಮಾತ್ರ ಆತನ ಕಾಲದಲ್ಲಿ ನಿರ್ಮಿತವಾಗಿದ್ದು, ಉಳಿದೆರಡು ಗರ್ಭಗುಡಿಗಳನ್ನೂ ಮುಂದಿನ ವಿಸ್ತರಣೆಯನ್ನೂ ಅನಂತರ ಕಟ್ಟಿರಬೇಕು. ಏಕೆಂದರೆ ಆ ಗರ್ಭಗುಡಿಗಳಲ್ಲಿ ಏಕಾಂತದ ರಾಮಯ್ಯ ಮತ್ತು ಅಗ್ಗಹೊನ್ನಯ್ಯರ ಹೆಸರಿನಲ್ಲಿ ಲಿಂಗಗಳನ್ನು ಸ್ಥಾಪಿಸಿದೆ.



ಸೋಮೇಶ್ವರ ದೇವಾಲಯ

ಸೋಮೇಶ್ವರ ದೇವಾಲಯದ ಗೋಡೆಗಳ ಮೇಲೆ ಈತನ ಹಲವು ಪವಾಡಗಳನ್ನು ಶಿಲ್ಪಿಸಿರುವುದಲ್ಲದೆ ಅವುಗಳ ಕೆಳಗೆ ವಿವರಗಳನ್ನೂ ಕೊಡುವ ಶಾಸನಗಳಿವೆ. ಏಕಾಂತದ ರಾಮಯ್ಯ ಜೈನರನ್ನು ಸೋಲಿಸಿದ ವಿವರಗಳನ್ನು ದೊಡ್ಡದೊಂದು ಶಾಸನ ತಿಳಿಸುತ್ತದೆ. ಏಕಾಂತದ ರಾಮಯ್ಯ ಬ್ರಹ್ಮೇಶ್ವರ ದೇವಾಸ್ಥಾನದ ಬಳಿ ಜಿನಬಿಂಬಕ್ಕೆ ಪ್ರತಿಯಾಗಿ ತನ್ನ ತಲೆಯನ್ನು ಪಣವಾಗಿಟ್ಟು ತಲೆಯನ್ನು ಕತ್ತರಿಸಿಕೊಂಡು ಮತ್ತೆ ಪಡೆದಾಗ ಸಂಕಗಾವುಂಡ ಬಸದಿಯನ್ನು ಒಡೆಯಲು ಬಿಡದೆ ಸೈನ್ಯವನ್ನೊಡ್ಡಿದಾಗ ಕಾದಿ ಗೆದ್ದು ಲಿಂಗ ಪ್ರತಿಷ್ಠೆ ಮಾಡಿದುದನ್ನು ವಿವರವಾಗಿ ತೋರಿಸುವ ಶಿಲ್ಪ ಪ್ರಮುಖ ವಾದುದು. ಇದಲ್ಲದೆ ಸಂಕಗಾವುಂಡ ಏಕಾಂತದ ರಾಮಯ್ಯನಿಗೆ ಓಲೆಯನ್ನು ಕೊಡುತ್ತಿರುವ ಶಿಲ್ಪ ಸೋಮೇಶ್ವರ ದೇವಾಲಯದ ಬಾಗಿಲಿನ ಎಡಕ್ಕೂ ಏಕಾಂತದ ರಾಮಯ್ಯ ಜಿನಬಿಂಬವನ್ನೊದೆದು ಲಿಂಗಪ್ರತಿಷ್ಠೆ ಮಾಡುತ್ತಿರುವ ಶಿಲ್ಪ ಬಲಕ್ಕೂ ಇವೆ. ಇವುಗಳೊಂದಿಗೆ ಶಿವನಿಗೆ ಜೇಡರ ದಾಸಿಮಯ್ಯ ವಸ್ತ್ರವನ್ನು ಕೊಡುತ್ತಿರುವ ಶಿಲ್ಪವು, ಶಿವ ಕುಂಬಾರ ಗುಂಡಯ್ಯನ ಮುಂದೆ ನಾಟ್ಯವಾಡಿದ ಶಿಲ್ಪವೂ ಇವೆ. ಇವು ಶಿವಶರಣರ ವಿಷಯವಾಗಿ ದೊರೆತ ಅತ್ಯಂತ ಪ್ರಾಚೀನ ಶಿಲ್ಪ ಮತ್ತು ಶಾಸನಾಧಾರಗಳಾಗಿವೆ. (ಎಂ.ಎಚ್.)

**ಅಭಯಾರಣ್ಯಗಳು :** ಸ್ವಾಭಾವಿಕ ಸಸ್ಯ ಮತ್ತು ಪ್ರಾಣಿಸಂಪತ್ತನ್ನು ಉಳಿಸಿಕೊಂಡು ದೇಶದ ಸೌಂದರ್ಯವನ್ನು ಕಾಪಾಡಿಕೊಳ್ಳುವುದೇ ಅಲ್ಲದೆ, ನಿಸರ್ಗದ ಸಮತೋಲ ಕದಡದಂತೆ ಇರಿಸುವ ಸಲುವಾಗಿ ಕರ್ನಾಟಕದಲ್ಲಿ ಅಭಯಾರಣ್ಯಗಳನ್ನು, ರಾಷ್ಟ್ರೀಯ ಉದ್ಯಾನಗಳನ್ನು ಸ್ಥಾಪಿಸಲಾಗಿದೆ. ಇವು ಬಹುವಾಗಿ ಅಂತಾರಾಷ್ಟ್ರೀಯ ನಿಯಮಗಳನ್ನೇ ಅನುಸರಿಸುತ್ತವೆ. ಆದರೆ ಸ್ಥಳೀಯ ಪರಿಸ್ಥಿತಿಗೆ ಹೊಂದಿಕೊಳ್ಳುವಂತೆ ಅಲ್ಪಸ್ವಲ್ಪ ಮಾರ್ಪಾಟುಗಳನ್ನು ಇವುಗಳಲ್ಲಿ ಕಾಣಬಹುದು. ಇವೆಲ್ಲವೂ ಅರಣ್ಯ ಇಲಾಖೆಯ ಅಧೀನಕ್ಕೆ ಒಳಪಟ್ಟಿವೆ. ಕೆಲವು ಅಭಯಾರಣ್ಯಗಳಲ್ಲಿ ಸಸ್ಯ ಹಾಗೂ ಪ್ರಾಣಿಗಳೆರಡಕ್ಕೂ ಸಂರಕ್ಷಣೆ ಒದಗಿದೆಯಾದರೆ ಇನ್ನು ಕೆಲವಲ್ಲಿ ಬರಿಯ ಪ್ರಾಣಿಗಳನ್ನು ಮಾತ್ರ ರಕ್ಷಿತಜೀವಿಗಳಾಗಿ ನೋಡಿಕೊಳ್ಳಲಾಗುತ್ತಿದೆ.

ಅಭಯಾರಣ್ಯಗಳ ಕಲ್ಪನೆ ಇತ್ತೀಚಿನದಲ್ಲ. ಪ್ರಾಚೀನ ಕಾಲದ ಋಷ್ಯಾಶ್ರಮಗಳು ವನ್ಯಜೀವಿಗಳಿಗೆ ಅಭಯಾರಣ್ಯಗಳಾಗಿದ್ದುವು. ಇಂಥ ಅರಣ್ಯಗಳಲ್ಲಿ ಮೃಗಪಕ್ಷಿಗಳನ್ನು ಕೊಲ್ಲುವುದು ಅಪರಾಧವೆಂದು ಪರಿಗಣಿಸಲ್ಪಡುತ್ತಿತ್ತು. ಅಭಯಾರಣ್ಯದಲ್ಲಿ ವನ್ಯಮೃಗಗಳು ಭಯವಿಲ್ಲದೆ ತಿರುಗಾಡುವುದನ್ನು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಉಲ್ಲೇಖಿಸಲಾಗಿದೆ. ನಮ್ಮ ಹಿರಿಯರು ಪ್ರಾಣಿಗಳ ಜೀವನವನ್ನು ಅಧ್ಯಯನ ಮಾಡಿ ಅದನ್ನು

ಮಾನವನ ಬುದ್ಧಿವಿಕಾಸಕ್ಕಾಗಿ ಅಳವಡಿಸಿ ಕತೆಯು ರೂಪದಲ್ಲಿ ನಿರೂಪಿಸಿದ್ದಾರೆ ಎನ್ನುವುದಕ್ಕೆ ಪಂಚತಂತ್ರ ಮತ್ತು ಹಿತೋಪದೇಶದ ಕತೆಗಳು ಸಾಕ್ಷಿಯಾಗಿವೆ. ವೇದಕಾಲದ ಅನಂತರ ವನ್ಯಪ್ರಾಣಿಗಳ ಬಾಳು ಹದಗೆಡುತ್ತ ಬಂತು. ಅರಣ್ಯ ಪ್ರದೇಶವನ್ನು ವ್ಯವಸಾಯಕ್ಕೆ ತೆರವು ಮಾಡತೊಡಗಿದುದರ ಪರಿಣಾಮವಾಗಿ ವನ್ಯಮೃಗಗಳ ಸಂಖ್ಯೆ ಕಡಿಮೆಯಾಯಿತು. ಕ್ರಿ.ಪೂ. 3ನೆಯ ಶತಮಾನದಲ್ಲಿ ಈ ನಾಶವನ್ನು ತಡೆಯಲು ಅಶೋಕ ಚಕ್ರವರ್ತಿ ಹೊರಡಿಸಿದ ಒಂದು ಕಾಯಿದೆ ನಶಿಸುತ್ತಿದ್ದ ಅನೇಕ ಮೃಗಪಕ್ಷಿಗಳಿಗೆ ರಕ್ಷಣೆಯನ್ನು ಕೊಟ್ಟಿರಬೇಕು. ಅಶೋಕ ಚಕ್ರವರ್ತಿಯ ಈ ಕಾಯಿದೆ ಜಗತ್ತಿನಲ್ಲೇ ವನ್ಯಜೀವಿಗಳ ಸಂರಕ್ಷಣೆಗಾಗಿ ಮಾಡಿದ ಪ್ರಪ್ರಥಮ ಕಾಯಿದೆಯಾಗಿದೆ. ಜನಸಂಖ್ಯೆ ಬೆಳೆದಂತೆ ಉಳುವುದಕ್ಕಾಗಿ ಭೂಮಿ, ನೆಲೆಸುವುದಕ್ಕಾಗಿ ಹಳ್ಳಿಪಟ್ಟಣಗಳು, ವಾಹನಗಳ ಸಂಚಾರಕ್ಕಾಗಿ ಹೆದ್ದಾರಿ, ನೀರಾವರಿ-ವಿದ್ಯುಚ್ಛಕ್ತಿಗಾಗಿ ವಿಶಾಲವಾದ ಜಲಾಶಯಗಳು, ಅರಣ್ಯ ಕೈಗಾರಿಕೆಗಳಿಗೆ ನೆಲ ಇತ್ಯಾದಿಗಳ ಪೂರೈಕೆಗಾಗಿ ಮಿತಿಮೀರಿದ ಪ್ರಮಾಣದಲ್ಲಿ ಅರಣ್ಯ ನಾಶವಾಗಿ ಅವುಗಳಲ್ಲಿ ನೆಲೆಸಿದ್ದ ವನ್ಯಜೀವಿಗಳು ದಿನೇ ದಿನೇ ನಶಿಸುತ್ತಿವೆ. ಅಳಿಯುತ್ತಿರುವ ಈ ನಿಸರ್ಗ ಸಂಪತ್ತನ್ನು ಉಳಿಸಲು ಅನೇಕ ಪ್ರಯತ್ನಗಳು ನಡೆಯುತ್ತಿವೆ. 1948ರಲ್ಲಿ ಯುನೆಸ್ಕೊ ಆಶ್ರಯದಲ್ಲಿ ಫಾಂಟನ್ ಬ್ಲೊ ಎಂಬಲ್ಲಿ ಪ್ರಕೃತಿಸಂಪತ್ತನ್ನು ರಕ್ಷಿಸುವ ಅಂತಾರಾಷ್ಟ್ರೀಯ ಸಂಘ ಸ್ಥಾಪನೆಯಾಯಿತು. ಈ ಸಂಘದ ಪ್ರೇರಣೆಯಂತೆ ಭಾರತ ಸರ್ಕಾರ ಒಂದು ಪೂರ್ವಾಧಿಕಾರಿಯುಕ್ತ (ಅಡ್‍ಹಾಕ್) ಸಮಿತಿಯನ್ನು ನೇಮಿಸಿ, ಭಾರತದಲ್ಲಿ ವನ್ಯಜೀವಿಗಳ ರಕ್ಷಣೆಯ ಬಗ್ಗೆ ಯೋಜನೆಗಳನ್ನು ರೂಪಿಸಲು ಆದೇಶ ನೀಡಿತು. ಈ ಸಮಿತಿಯ ಶಿಫಾರಸುಗಳ ಮೇಲೆ 1952ರಲ್ಲಿ ಭಾರತೀಯ ವನ್ಯಪ್ರಾಣಿ ಸಂರಕ್ಷಣಾ ಸಂಸ್ಥೆ ರಚಿಸಲ್ಪಟ್ಟಿತು. ವನ್ಯಪ್ರಾಣಿ ರಕ್ಷಣೆಗೆ ತಕ್ಕ ವ್ಯವಸ್ಥೆ, ಕಾನೂನು ತಿದ್ದುಪಡಿ, ಮೃಗಬೇಟೆಗೆ ಹಲವಾರು ಆವಶ್ಯಕ ನಿಬಂಧನೆಗಳು, ಮೃಗಪಕ್ಷಿಗಳ ಚರ್ಮಕೊಂಬು ತುಪ್ಪಟ ಗರಿ ಇವುಗಳ ರಫ್ತಿಗೆ ನಿಬಂಧನೆಗಳು, ಅಭಯಾರಣ್ಯ ಹಾಗೂ ರಾಷ್ಟ್ರೀಯ ವನ್ಯಪ್ರಾಣಿ ಕ್ಷೇತ್ರ ನಿರ್ಮಾಣ ಇತ್ಯಾದಿ ವಿಷಯಗಳನ್ನು ಕೂಲಂಕಷವಾಗಿ ಪರಿಶೀಲಿಸಿ ರಾಜ್ಯ ಸರ್ಕಾರಗಳಿಗೆ ರಾಜ್ಯ ವನ್ಯಪ್ರಾಣಿ ಸಂಸ್ಥೆಗಳ ಮೂಲಕ ಸಲಹೆಗಳನ್ನು ನೀಡುವ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು.

ಅಭಯಾರಣ್ಯಗಳ ಮತ್ತು ರಾಷ್ಟ್ರೀಯ ವನ್ಯಪ್ರಾಣಿ ಕ್ಷೇತ್ರಗಳ ಉಪಯುಕ್ತತೆ ಪಂಚಮುಖದ್ದಾಗಿರುತ್ತದೆ.

1. ವನ್ಯಪ್ರಾಣಿಗಳಿಗೆ ಮುಡಿಪಾಗಿಟ್ಟ ಪ್ರದೇಶಗಳ ನೈಸರ್ಗಿಕ ಸಂಪತ್ತನ್ನು ಕಾಪಾಡುವುದು.

2. ಅಲ್ಲಿನ ಸಸ್ಯ ಹಾಗೂ ಪ್ರಾಣಿವರ್ಗದ ರಕ್ಷಣೆ ಹಾಗೂ ಅಭಿವೃದ್ಧಿ.

3. ಅತ್ಯಮೂಲ್ಯವಾದ ಮೃಗಪಕ್ಷಿಗಳು ನಿರ್ನಾಮವಾಗುವುದನ್ನು ತಡೆಗಟ್ಟುವುದು.

4. ಪ್ರಕೃತಿ ವಿಜ್ಞಾನ ಹಾಗೂ ಮೃಗಪಕ್ಷಿಗಳ ಜೀವನ ಇತ್ಯಾದಿಗಳ ಸಂಶೋಧನೆಗೆ ಈ ಕ್ಷೇತ್ರಗಳು ಕಾರ್ಯರಂಗವಾಗುವುದು.

5. ವನ್ಯಪ್ರಾಣಿ ಕ್ಷೇತ್ರಗಳು ವಿದೇಶಿ ಹಾಗೂ ಒಳನಾಡಿನ ಪ್ರವಾಸಿಗರನ್ನು ಆಕರ್ಷಿಸಿ ನಾಡಿನ ಆರ್ಥಿಕ ಸ್ಥಿತಿ ಸುಧಾರಿಸಲು ವಿಶೇಷ ರೀತಿಯಲ್ಲಿ ಸಹಾಯವಾಗುವುದು.

ಕರ್ನಾಟಕದಲ್ಲಿ ಅನೇಕ ಅಭಯಾರಣ್ಯಗಳನ್ನೂ ರಾಷ್ಟ್ರೀಯ ವನ್ಯಪ್ರಾಣಿ ಕ್ಷೇತ್ರ ಮತ್ತು ಪಕ್ಷಿಧಾಮಗಳನ್ನೂ ಸ್ಥಾಪಿಸಲಾಗಿದೆ. ಇತ್ತೀಚಿನ ಮಾಹಿತಿಯ ಪ್ರಕಾರ (2000) ಕರ್ನಾಟಕದಲ್ಲಿ ಒಟ್ಟು 5 ರಾಷ್ಟ್ರೀಯ ಉದ್ಯಾನಗಳೂ 21 ವನ್ಯಧಾಮಗಳೂ ಇವೆ. ಇವುಗಳಲ್ಲಿ 5 ಪಕ್ಷಿಧಾಮಗಳೂ ಸೇರಿವೆ. ಅಣಶಿ, ಬಂಡೀಪುರ, ಬನ್ನೇರುಘಟ್ಟ ಕುದುರೆಮುಖ ಮತ್ತು ನಾಗರಹೊಳೆ (ರಾಜೀವ್‍ಗಾಂಧಿ) - ಇವು ರಾಷ್ಟ್ರೀಯ ಉದ್ಯಾನಗಳು. ಅಭಯಾರಣ್ಯಗಳು (ವನ್ಯಧಾಮಗಳು) ಇಂತಿವೆ. ಆದಿಚುಂಚನಗಿರಿ, ಅತ್ತಿವೇರಿ, ಅರಬಿತಿಟ್ಟು, ಭದ್ರಾ, ಬಿಳಿಗಿರಿರಂಗನಬೆಟ್ಟ, ಬ್ರಹ್ಮಗಿರಿ, ಕಾವೇರಿ, ದಾಂಡೇಲಿ, ದರೋಜಿ, ಘಟಪ್ರಭಾ, ಗುಡವಿ, ಮೂಕಾಂಬಿಕ, ಮೇಲುಕೋಟೆ, ಪುಷ್ಪಗಿರಿ, ರಾಣೆಬೆನ್ನೂರು, ಶರಾವತಿ, ಶೆಟ್ಟಿಹಳ್ಳಿ, ಸೋಮೇಶ್ವರ ಮತ್ತು ತಲಕಾವೇರಿ.

## ರಾಷ್ಟ್ರೀಯ ಉದ್ಯಾನಗಳು

**1. ಅಣಶಿ :** ಉತ್ತರಕನ್ನಡ ಜಿಲ್ಲೆ ದಾಂಡೇಲಿಯಿಂದ 38ಕಿಮೀ ಮತ್ತು ಕಾರವಾರದಿಂದ 55ಕಿಮೀ ದೂರದಲ್ಲಿದೆ. ವಿಸ್ತೀರ್ಣ 250ಚ.ಕಿಮೀ. ದಾಂಡೇಲಿ ಅಭಯಾರಣ್ಯದ ಭಾಗವಾಗಿದ್ದ ಇದನ್ನು ರಾಷ್ಟ್ರೀಯ ಉದ್ಯಾನವನ್ನಾಗಿ ಮಾಡಬೇಕೆಂಬ ಪ್ರಸ್ತಾಪ 1987ರಲ್ಲಿ ಆಗಿದೆ. ಪ್ರವಾಸಿಗರ ಸೌಲಭ್ಯ ಇನ್ನೂ ಇಲ್ಲ. ಉಳವಿ ತೀರ್ಥಕ್ಷೇತ್ರ ಇದಕ್ಕೆ ಅಂಟಿಕೊಂಡಂತಿದೆ. ಅರೆನಿತ್ಯ ಹಸುರಿನ ಮತ್ತು ನಿತ್ಯಹಸುರಿನ ಅರಣ್ಯದಿಂದ ಕೂಡಿರುವ ಈ ಉದ್ಯಾನದಲ್ಲಿ ಆನೆ, ಕಾಟಿ, ಕೆಮ್ಮ, ಜಿಂಕೆ, ಕಡವೆ, ಮುಸುವ, ಕಾಡುಪಾಪ, ಹುಲಿ, ಕಪ್ಪುಚಿರತೆ, ಪುನುಗುಬೆಕ್ಕು, ಕಾಡುನಾಯಿ, ಕೇಶಳಿಲು-ಇವು ವಿಶಿಷ್ಟ ವನ್ಯಪ್ರಾಣಿಗಳು. ಮಂತಳಿ, ವಾಟೆಹುಳಿ, ಗುಳುಮಾವು, ಹೆಬ್ಬಲಸು, ಚಕ್ಕೆ ಮುಂತಾದವು ಇಲ್ಲಿನ ಕೆಲವು ವೃಕ್ಷಗಳು.

**2. ಬಂಡೀಪುರ :** (ಚಾಮರಾಜನಗರ ಜಿಲ್ಲೆ) ಗುಂಡ್ಲುಪೇಟೆಯಿಂದ 15 ಕಿಮೀ ಮೈಸೂರಿನಿಂದ 80 ಕಿಮೀ ದೂರದಲ್ಲಿದೆ. ಕೇರಳದ ವೈನಾಡು, ತಮಿಳುನಾಡಿನ ಮುದುಮಲೈ ಅಭಯಾರಣ್ಯಗಳೂ ರಾಜೀವಗಾಂಧಿ (ನಾಗರಹೊಳೆ) ರಾಷ್ಟ್ರೀಯ ಉದ್ಯಾನವನಗಳೊಂದಿಗೆ ಹೊಂದಿಕೊಂಡಂತಿದೆ. ಭಾರತದ ಪ್ರಸಿದ್ಧ ಉದ್ಯಾನಗಳ ಪೈಕಿ ಇದೂ ಒಂದು. ಹುಲಿ ಯೋಜನೆಯ ಪ್ರಮುಖ ತಾಣವೂ ಹೌದು. ವಿಸ್ತೀರ್ಣ 874 ಚಕಿಮೀ.



ಬಂಡೀಪುರದ ಹುಲಿ

1898ರಲ್ಲಿ ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಮೀಸಲು ಅರಣ್ಯವಾಗಿದ್ದ ಇದು 1941ರಲ್ಲಿ ವನ್ಯಪ್ರಾಣಿ ಮೀಸಲು ಕ್ಷೇತ್ರವಾಯಿತು. 1974ರಲ್ಲಿ ರಾಷ್ಟ್ರೀಯ ಉದ್ಯಾನವಾಗಿ ಪರಿವರ್ತಿತವಾಯಿತು. ಇಲ್ಲಿನ ಅರಣ್ಯ ಮುಖ್ಯವಾಗಿ ಶುಷ್ಕಪರ್ಣಪಾತಿ ಬಗೆಯದು. ತೇಗ, ಮತ್ತಿ, ಹೊನ್ನೆ, ದಿಂಡಿಲು, ತಾರೆ, ಅಳಲೆ, ಬೆಟ್ಟದನೆಲ್ಲಿ, ಮುತ್ತಗ, ಕಾಡುಬೆಂಡೆ ಮುಂತಾದವು ಶುಷ್ಕ ಪ್ರದೇಶದಲ್ಲಿ ಬೆಳೆದರೆ, ತೇವಾಂಶ ಹೆಚ್ಚಿರುವ ಕಡೆ ಬೀಟೆ, ಅರಿಶಿಣತೇಗ, ಮಗ್ಗಾರೆ, ಕೋಣನಕೊಂಬು, ನವಿಲಾದಿ, ಗಂಟೆ ಮುಂತಾದವು ಕಾಣಸಿಗುತ್ತವೆ. ಬಿದಿರು, ನೇರಳೆ, ಬೂರುಗ ಇನ್ನಿತರೆ ಸಸ್ಯಗಳು. ಹುಲಿ, ಚಿರತೆ, ಕಾಡುನಾಯಿ, ಕಾಡುಬೆಕ್ಕು, ಚಿರತೆಬೆಕ್ಕು, ಮೂರು ಬಗೆಯ ಮುಂಗುಸಿ, ಕಿರುಬ ಇಲ್ಲಿನ ಮುಖ್ಯ ಮಾಂಸಾಹಾರಿ ಪ್ರಾಣಿಗಳು. ಆನೆ, ಜಿಂಕೆ, ಕಡವೆ, ಕೊಂಡಕುರಿ, ಕೆಮ್ಮ ಸಸ್ಯಾಹಾರಿ ಮೃಗಗಳು ಕರಡಿ, ಮುಸುವ, ಮಂಗ ಮೊಲ, ಕಾಡುಹಂದಿ, ಮುಳ್ಳು ಹಂದಿ, ಕೇಶಳಿಲು, ನೀರುನಾಯಿಗಳು ಹೇರಳವಾಗಿವೆ. 230ಕ್ಕೂ ಹೆಚ್ಚು ಬಗೆಯ ಪಕ್ಷಿಗಳು ಇಲ್ಲಿವೆ. ನವಿಲು, ಕಾಡುಕೋಳಿ, ಹಸುರುಪಾರಿವಾಳ, ಮರಕುಟಿಗ ಬಲುಸಾಮಾನ್ಯ. ಪ್ರವಾಸಿಗರಿಗೆ ವಸತಿಸೌಕರ್ಯ, ಪ್ರಾಣಿವೀಕ್ಷಣೆಗೆ ವಾಹನ ಸೌಲಭ್ಯ ಚೆನ್ನಾಗಿದೆ (ನೋಡಿ: ಬಂಡೀಪುರ).

**3. ಬನ್ನೇರುಘಟ್ಟ :** (ಬೆಂಗಳೂರು ಜಿಲ್ಲೆ) ಕರ್ನಾಟಕದ ರಾಜಧಾನಿ ಬೆಂಗಳೂರಿನಿಂದ 22ಕಿಮೀ ದೂರದಲ್ಲಿದೆ. 1974ರಲ್ಲೇ ರಾಷ್ಟ್ರೀಯ ಉದ್ಯಾನವನವಾಗಿ ಮಾರ್ಪಡಿಸಲಾಗಿದೆ. ವಿಸ್ತೀರ್ಣ 104ಚಕಿಮೀ. ಇಲ್ಲಿನ ಅರಣ್ಯ ಕುರುಚಲು ಮತ್ತು ಶುಷ್ಕಪರ್ಣಪಾತಿ ಬಗೆಯದು. ಇಲ್ಲಿನ ಪ್ರಾಣಿಗಳ ಪೈಕಿ ಮುಖ್ಯವಾದವು ಆನೆ, ಕಾಟಿ, ಚಿರತೆ, ಕಾಡುಹಂದಿ, ಕರಡಿ, ಕಡವೆ, ಜಿಂಕೆ, ಮುಸುವ, ಮೊಲ, ಮಂಗ ಮತ್ತು ಕಣೆಹಂದಿ.

ಇಲ್ಲಿ ಉತ್ತಮವಾದ ಸಿಂಹ ಮತ್ತು ಹುಲಿ ಸಫಾರಿ ಸೌಲಭ್ಯ, ಸಣ್ಣದೊಂದು ಮೃಗಾಲಯ, ಉರಗೋದ್ಯಾನ, ಪ್ರಾಣಿ ಸಂಗ್ರಹಾಲಯಗಳೂ ಇವೆ (ನೋಡಿ: ಬನ್ನೇರುಘಟ್ಟ).

**4. ಕುದುರೆಮುಖ :** (ದಕ್ಷಿಣಕನ್ನಡ, ಉಡುಪಿ ಮತ್ತು ಚಿಕ್ಕಮಗಳೂರು ಜಿಲ್ಲೆಗಳು) ಕರ್ನಾಟಕದ ಇತ್ತೀಚಿನ ರಾಷ್ಟ್ರೀಯ ಉದ್ಯಾನ. ಇದನ್ನು ಉದ್ಯಾನವನ್ನಾಗಿ ರೂಪಿಸಬೇಕೆಂಬ ನಿರ್ಧಾರವನ್ನು 1987ರಲ್ಲಿ ಕೈಗೊಳ್ಳಲಾಯಿತು. ಇದರ ವಿಸ್ತೀರ್ಣ 600ಚಕಿಮೀ. ಪಶ್ಚಿಮ ಘಟ್ಟಗಳಲ್ಲಿ ಸ್ಥಿತವಾಗಿರುವ ಈ ಪ್ರದೇಶದಲ್ಲಿ ನಿತ್ಯಹಸುರಿನ, ಅರೆನಿತ್ಯಹಸುರಿನ ಹಾಗೂ ಶೋಲಾ ಅರಣ್ಯವಿದೆ. ಸುತ್ತ ಕಾಫಿ, ಟೀ ತೋಟಗಳಿವೆಯಾದರೂ ನಿಸರ್ಗ ಸೌಂದರ್ಯಕ್ಕೆ ಹೆಸರಾಗಿದೆ. ಹತ್ತಿರದ ಗಂಗಾಮೂಲದಲ್ಲಿ ನೇತ್ರಾವತಿ, ತುಂಗಾ, ಭದ್ರಾ ನದಿಗಳು ಉಗಮಿಸುತ್ತವೆ.



ಆನೆಗಳ ಹಿಂಡು

ಹಲಸು, ಸುರಹೊನ್ನೆ, ಸಪ್ತಪರ್ಣಿ, ನೇರಳೆ, ನಾಗಸಂಪಿಗೆ, ಹೊಲಿಗೇರು, ಬಲಗಿ, ಕಿರಿಬೋಗಿ, ಹಾಲುಮಡ್ಡಿ ಮುಂತಾದವು ಇಲ್ಲಿನ ಮುಖ್ಯ ವೃಕ್ಷಜಾತಿಗಳು. ಇಲ್ಲಿನ ಪ್ರಾಣಿಸಂಪತ್ತು ಹುಲಿ, ಚಿರತೆ, ಕಾಡುನಾಯಿ, ನರಿ, ಸಿಂಗಳೀಕ, ಮುಸುವ, ಕರಡಿ, ಕಾಟಿ, ಕಡವೆ, ಜಿಂಕೆ, ಕೆಮ್ಮ, ಕೊಂಡಕುರಿ, ಕೇಶಳಿಲು, ಹಾರುವ ಓತಿ, ಹಾರುವ ಅಳಿಲು, ಕಣೆಹಂದಿ ಮುಂತಾದವನ್ನೂ ಹಲವಾರು ಬಗೆಯ ಹಾವುಗಳನ್ನೂ ಒಳಗೊಂಡಿದೆ. ಹಕ್ಕಿಗಳ ಪೈಕಿ ಮಲಬಾರ್ ಟ್ರೋಗನ್, ಓಂಗಿಲೆ, ಕಗ್ಗಿಲು, ಮಲಬಾರ್ ಸಿಳ್ಳೆತ್ರಷ್ ಮುಖ್ಯವೆನಿಸಿವೆ.

ಈ ಉದ್ಯಾನವನ ಹಾಸನದಿಂದ 108ಕಿಮೀ ದೂರದಲ್ಲೂ ಮಂಗಳೂರಿನಿಂದ 78ಕಿಮೀ ದೂರದಲ್ಲೂ ಇದೆ. ಶೃಂಗೇರಿ, ಆಗುಂಬೆ ಗಳಿಂದಲೂ ಇಲ್ಲಿಗೆ ರಸ್ತೆ ಸೌಕರ್ಯ ಇದೆ (ನೋಡಿ: ಕುದುರೆಮುಖ).

**5. ರಾಜೀವಗಾಂಧಿ ರಾಷ್ಟ್ರೀಯ ಉದ್ಯಾನವನ :** (ನಾಗರಹೊಳೆ) ಕೊಡಗು ಜಿಲ್ಲೆಯ ಕೆಲವು ಅರಣ್ಯಗಳು, ಮೈಸೂರು ಜಿಲ್ಲೆಯ ಕೆಲವು ಪ್ರದೇಶಗಳನ್ನು ಒಳಗೊಂಡ ಈ ಉದ್ಯಾನ 1955ರಲ್ಲಿ ವನ್ಯಪ್ರಾಣಿ ಮೀಸಲು ಅರಣ್ಯವಾಗಿ ಪ್ರಾರಂಭವಾಯಿತು. 1975, 1983 ಮತ್ತು 1988ರಲ್ಲಿ ಹೆಚ್ಚುವರಿ ಪ್ರದೇಶ ಸೇರ್ಪಡೆಯಾಗಿ 1992ರಲ್ಲಿ ಈಗಿನ ಹೆಸರು ಪಡೆಯಿತು. ಇದರ ಈಗಿನ ವಿಸ್ತೀರ್ಣ 644ಚಕಿಮೀ.

ಇಲ್ಲಿನ ಕಾಡು ಆರ್ದ್ರ ಹಾಗೂ ಶುಷ್ಕಪರ್ಣಪಾತಿ ಬಗೆಯದು. ಕೆಲವೆಡೆ ನಿತ್ಯ ಹಸುರಿನ ಅರಣ್ಯವೂ ಇದೆ. ಆನೆ, ಕಾಟಿ, ಜಿಂಕೆ, ಕೊಂಡಕುರಿ, ಕಡವೆ, ಕೆಮ್ಮ ಇಲ್ಲಿನ ಮುಖ್ಯ ಸಸ್ಯಾಹಾರಿ ಪ್ರಾಣಿಗಳು. ಹುಲಿ, ಚಿರತೆ, ಕರಡಿ, ಕಾಡುನಾಯಿ, ಕಿರುಬ, ಚಿರತೆಬೆಕ್ಕು, ಕಾಡುಬೆಕ್ಕು, ಮುಂಗುಸಿ, ಮಾಂಸಾಹಾರಿಗಳು. ನೀರುನಾಯಿ, ಕಾಡುಪಾಪ, ಕಣೆಹಂದಿ, ಚಿಪ್ಪುಹಂದಿ, ಪುನುಗುಬೆಕ್ಕು ಸಾಕಷ್ಟಿವೆ. 250ಕ್ಕೂ ಹೆಚ್ಚು ಬಗೆಯ ಪಕ್ಷಿ ಜಾತಿಗಳಿವೆ. ಈ ಉದ್ಯಾನವನ ಮೈಸೂರಿನಿಂದ 90ಕಿಮೀ ದೂರದಲ್ಲಿದೆ. ಪ್ರಾಣಿವೀಕ್ಷಣೆಗೆ ವಾಹನ ಸೌಲಭ್ಯ ಇದೆ. ವಸತಿ ಸೌಕರ್ಯ ಸು.10ಕಿಮೀ ದೂರದ ಮೂರ್ಕಲ್ಲಿನಲ್ಲಿದೆ (ನೋಡಿ: ನಾಗರಹೊಳೆ).

**ಅಭಯಾರಣ್ಯಗಳು (ವನ್ಯಧಾಮಗಳು ಹಾಗೂ ಪಕ್ಷಿಧಾಮಗಳು)**

**1. ಆದಿಚುಂಚನಗಿರಿ ಮಯೂರ ಅಭಯಾರಣ್ಯ :** (ಮಂಡ್ಯ ಜಿಲ್ಲೆ) ನವಿಲು ಸಂರಕ್ಷಣೆಗೆಂದು ಮೀಸಲಾಗಿರುವ ಪಕ್ಷಿಧಾಮ. 1981 ಅಕ್ಟೋಬರಿನಲ್ಲಿ ಅಸ್ತಿತ್ವಕ್ಕೆ ಬಂತು. ವಿಸ್ತೀರ್ಣ 0.88ಚಕಿಮೀ. ಇಲ್ಲಿನದು ಪ್ರಧಾನವಾಗಿ ಕುರುಚಲು ಕಾಡು. ಗೊಬ್ಬಳಿ, ಕಳ್ಳಿ, ಎಕ್ಕ, ಬೇವು ಇಲ್ಲಿನ ಮುಖ್ಯ ಸಸ್ಯಜಾತಿಗಳು.

ನವಿಲು ಮಾತ್ರವಲ್ಲದೆ ಹಳದಿಕೊರಳಿನ ಪಿಕಳಾರವೂ ಇಲ್ಲಿ ಕಾಣದೊರೆಯುತ್ತದೆ. ಮಂಗ, ಬಾವಲಿ, ಕಾಡುಬೆಕ್ಕು, ಮುಂಗುಸಿ ಮತ್ತು ಮೊಲ ಇಲ್ಲಿ ಸಿಗುವ ಸಸ್ತನಿಗಳು (ನೋಡಿ: ಆದಿಚುಂಚನಗಿರಿ).

**2. ಅತ್ತಿವೇರಿ ಪಕ್ಷಿಧಾಮ :** (ಉತ್ತರಕನ್ನಡ ಜಿಲ್ಲೆ) ಮುಂಡಗೋಡಿನಿಂದ 17ಕಿಮೀ ದೂರದಲ್ಲೂ ಹುಬ್ಬಳ್ಳಿಯಿಂದ 43ಕಿಮೀ ದೂರದಲ್ಲೂ ಇದೆ. ವಿಸ್ತೀರ್ಣ 2.23ಚಕಿಮೀ. 1994ರ ಅಕ್ಟೋಬರಿನಲ್ಲಿ ಅಸ್ತಿತ್ವಕ್ಕೆ ಬಂತು. ಅತ್ತಿವೇರಿ ಗ್ರಾಮದ ಬಳಿ ಹರಿಯುವ ತಾಯವ್ವನ ಹಳ್ಳಕ್ಕೆ ಅಡ್ಡಲಾಗಿ ನಿರ್ಮಿಸಲಾದ ಅಣೆಕಟ್ಟಿನಿಂದಾಗಿ ಅತ್ತಿವೇರಿ ಜಲಾಶಯ ರೂಪುಗೊಂಡು ಪಕ್ಷಿಗಳ ಮೆಚ್ಚಿನ ತಾಣವಾಯಿತು. ಸುತ್ತ ಪರ್ಣಪಾತಿ ಕಾಡಿದೆ. ಬಾಗೆ, ಬೂರುಗ, ತಾಟಿನುಂಗು, ಹಲಸು, ಬಿಳಿಜಾಲಿ, ನೇರಳೆ, ತೇಗ, ಬೀಟೆ, ಜಾಲಿ, ಬಿದಿರು ಇಲ್ಲಿನ ಮುಖ್ಯ ಸಸ್ಯಜಾತಿಗಳು.

ಇಲ್ಲಿನ ಪಕ್ಷಿಗಳಲ್ಲಿ ಮುಖ್ಯವಾಗಿ ಬಿಳಿಬೂಸ, ನೀರುಕಾಗೆ, ಚಮಚಕೊಕ್ಕು, ಬೆಳ್ಳಕ್ಕಿ, ಮೀಂಚುಳ್ಳಿ, ಓಂಗಿಲೆ ಮತ್ತು ಕವಲುತೋಕೆಗಳನ್ನು ಹೆಸರಿಸಬಹುದು.

**3. ಅರಬಿತಿಟ್ಟು ವನ್ಯಧಾಮ :** (ಮೈಸೂರು ಜಿಲ್ಲೆ) ಮೈಸೂರಿನಿಂದ ಪಶ್ಚಿಮಕ್ಕೆ 30ಕಿಮೀ ದೂರದಲ್ಲಿ ಮೈಸೂರು ಮಂಗಳೂರು ಹೆದ್ದಾರಿಯಲ್ಲಿದೆ. ವಿಸ್ತೀರ್ಣ 13.5ಚಕಿಮೀ. 1985 ಏಪ್ರಿಲ್‌ನಲ್ಲಿ ಅಸ್ತಿತ್ವಕ್ಕೆ ಬಂತು. ಇಲ್ಲಿನ ಪ್ರಧಾನ ಸಸ್ಯವರ್ಗ ಕುರುಚಲು ಬಗೆಯದಾಗಿದ್ದು ದಿಂಡಲು, ಬೆಟ್ಟದನೆಲ್ಲಿ, ಮುಗುಳಿ, ಶ್ರೀಗಂಧವನ್ನು ಒಳಗೊಂಡಿದೆ. ಚಿರತೆ, ನರಿ, ಜಿಂಕೆ, ಕಾಡುಹಂದಿ, ಕಣೆಹಂದಿ, ಮೊಲ ಮತ್ತು ಮುಂಗುಸಿ ಇಲ್ಲಿನ ಮುಖ್ಯ ಪ್ರಾಣಿಜಾತಿಗಳು. ಪ್ರವಾಸಿಗರಿಗೆ ಇನ್ನೂ ಪ್ರವೇಶ ಕಲ್ಪಿಸಲಾಗಿಲ್ಲ.

**4. ಭದ್ರಾ ವನ್ಯಧಾಮ :** (ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆ) ಚಿಕ್ಕಮಗಳೂರಿನಿಂದ 30ಕಿಮೀ ದೂರದಲ್ಲಿ ಇದರ ದಕ್ಷಿಣ ಭಾಗವಾದ ಮುತ್ತೋಡಿಯೂ ತರೀಕೆರೆಯಿಂದ 22ಕಿಮೀ ದೂರದಲ್ಲಿ ಇದರ ಉತ್ತರ ಭಾಗವಾದ ಲಕ್ಕವಳ್ಳಿಯೂ ಇವೆ. 1974ರ ಸೆಪ್ಟೆಂಬರಿನಲ್ಲಿ ಅಭಯಾರಣ್ಯವಾಗಿ ಅಸ್ತಿತ್ವಕ್ಕೆ ಬಂತು. 1998ರ ನವೆಂಬರ್‌ನಲ್ಲಿ ಹುಲಿ ಮೀಸಲು ಅರಣ್ಯವಾಗಿ ಮೇಲ್ದರ್ಜೆಗೆ ಏರಿತು. ಇದರ ವಿಸ್ತೀರ್ಣ 493ಚಕಿಮೀ. ಇದರಲ್ಲಿ ಲಕ್ಕವಳ್ಳಿ, ಮುತ್ತೋಡಿ ಮತ್ತಿತರ ರಾಜ್ಯ ಅರಣ್ಯಗಳನ್ನು ಒಳಗೊಂಡ ಒಂದು ಕ್ಷೇತ್ರವೂ ಬಾಬಾಬುಡನ್‌ಗಿರಿ ಅರಣ್ಯವನ್ನು ಒಳಗೊಂಡ ಎರಡನೆಯ ಕ್ಷೇತ್ರವೂ ಇದೆ. ಉತ್ತರದಲ್ಲಿ ಭದ್ರಾ ಜಲಾಶಯ ಇದೆ. ಈ ಅಭಯಾರಣ್ಯದ ದಕ್ಷಿಣಭಾಗದಲ್ಲಿ ಆರ್ದ್ರಪರ್ಣಪಾತಿ ಬಗೆಯ ಅರಣ್ಯವೂ ಉತ್ತರಭಾಗದಲ್ಲಿ ಶುಷ್ಕಪರ್ಣಪಾತಿ ಬಗೆಯ ಅರಣ್ಯವೂ ಬಾಬಾಬುಡನ್‌ಗಿರಿ ವಲಯದಲ್ಲಿ ಶೋಲಾ ಬಗೆಯ ಅರಣ್ಯವೂ ಇವೆ.

ಇಲ್ಲಿನ ಮುಖ್ಯ ಸಸ್ಯಜಾತಿಗಳೆಂದರೆ ಹೊಳೆದಾಸವಾಳ, ಅರಿಶಿಣತೇಗ, ತಡಸಲು, ಕಲ್ತೇಗ, ತೇಗ, ಹುನಗಲು, ತಾರೆ, ಮತ್ತಿ, ಬೀಟೆ, ಹೊನ್ನೆ, ಕೂಲಿ, ಅತ್ತಿ, ನಾಯಿಬೆಂಡೆ, ಚಿಪ್ಪಾಲೆ, ಜಾಲಾರಿ, ಸಗಡೆ, ದಿಂಡಲು, ದೊಳ್ಳಿ, ಜಂಬೆ, ಬಗನಿ ಮತ್ತು ಗಂಡುಬಿದಿರು ಹಾಗೂ ಹೆಬ್ಬಿದಿರು.

ಹುಲಿ, ಚಿರತೆ, ಕಾಡುಬೆಕ್ಕು, ಕಾಡುನಾಯಿ, ನರಿ, ಬೆಕ್ಕು, ಕರಡಿ, ಆನೆ, ಕಾಟಿ, ಕಡವೆ, ಜಿಂಕೆ, ಕೆಮ್ಮ, ಕೊಂಡಕುರಿ, ಕಾಡುಹಂದಿ, ಮುಸುವ, ಮಂಗ, ಕಾಡುಪಾಪ, ಪುನುಗುಬೆಕ್ಕು, ತಾಳೆಬೆಕ್ಕು, ಮುಂಗುಸಿ, ಚಿಪ್ಪುಹಂದಿ, ಕೇಶಳಿಲು, ಕಣೆಹಂದಿ, ನೀರುನಾಯಿ, ಹಾರುವ ಓತಿ - ಇವು ಪ್ರಧಾನ ಪ್ರಾಣಿಜಾತಿಗಳು.



ಕಾಡುನಾಯಿಗಳು

250ಕ್ಕೂ ಹೆಚ್ಚು ಬಗೆಯ ಹಕ್ಕಿಗಳಿವೆ. ಬ್ಲ್ಯಾಕ್‌ಡ್ರ್, ಶಾಮ, ಕೆಂಪೆದೆ ಪಿಕಳಾರ, ಕಾಜಾಣ, ಕಗ್ಗಿಲು, ಓಂಗಿಲೆಗಳು ಇಲ್ಲಿ ಕಾಣಸಿಗುವ ಪಕ್ಷಿ ಪ್ರಭೇದಗಳು. ಪ್ರವಾಸಿಗರಿಗೆ ವಸತಿ ಹಾಗೂ ವೀಕ್ಷಣೆಗೆ ವಾಹನ ಸೌಕರ್ಯ ಇವೆ.

**5. ಬಿಳಿಗಿರಿರಂಗಸ್ವಾಮಿ ದೇವಸ್ಥಾನದ ಅಭಯಾರಣ್ಯ :** (ಚಾಮರಾಜನಗರ ಜಿಲ್ಲೆ) ಚಾಮರಾಜನಗರದಿಂದ 48ಕಿಮೀ ದೂರದಲ್ಲಿ ಪಶ್ಚಿಮ ಮತ್ತು ಪೂರ್ವ ಘಟ್ಟಗಳು ಸಂಧಿಸುವ ಪ್ರದೇಶದಲ್ಲಿ ಇದೆ. 1974 ಜೂನ್‌ನಲ್ಲಿ ಸ್ಥಾಪನೆಯಾದ ಇದು 1987 ಜನವರಿಯಲ್ಲಿ ವಿಸ್ತಾರಗೊಂಡಿತು. ಇದರ ವಿಸ್ತೀರ್ಣ 540ಚಕಿಮೀ ದಕ್ಷಿಣದಲ್ಲಿ ತಮಿಳುನಾಡಿಗೆ ಸೇರಿಕೊಂಡಿದೆ. ಬಿಳಿಗಿರಿರಂಗನ ಬೆಟ್ಟವನ್ನೆಲ್ಲ ಹೆಚ್ಚುಕಡಿಮೆ ಆಕ್ರಮಿಸಿರುವ ಈ ಅಭಯಾರಣ್ಯ ತಪ್ಪಲಿನಲ್ಲಿ ಕುರುಚಲು ಕಾಡನ್ನೂ ಎತ್ತರದ ಪ್ರದೇಶಗಳಲ್ಲಿ ಆರ್ದ್ರಪರ್ಣಪಾತಿ, ನಿತ್ಯಹಸುರಿನ ಅರಣ್ಯಗಳನ್ನೂ ಇನ್ನೂ ಉನ್ನತ ಪ್ರದೇಶಗಳಲ್ಲಿ ಶೋಲಾ ಅರಣ್ಯವನ್ನೂ ಪಡೆದಿದೆ.

ಪರ್ಣಪಾತಿ ಅರಣ್ಯ ಪ್ರದೇಶದಲ್ಲಿ ಬೀಟೆ, ತಡಸಲು, ತಾರೆ, ಹುನಗಲು, ಪಾದರಿ, ಆನೆಬ್ಯಾಲ, ಕೊಂಡಮಾವು, ಹೊನ್ನೆ, ದಿಂಡಲು, ಕೆಂಪುದಾಳೆ, ಕೊಲಮಾವು, ನಾಯಿಬೆಂಡೆ, ಕಕ್ಕೆ, ಬೆಟ್ಟದನೆಲ್ಲಿ, ದೊಳ್ಳಿ, ಎಣ್ಣೆಮರ, ಸಗಡೆ, ಕೈತಾಳೆ, ಉಡಿ ಮುಂತಾದ ವೃಕ್ಷಗಳೂ ನಿತ್ಯಹಸುರಿನ ಪ್ರದೇಶಗಳಲ್ಲಿ ಸಟಗ, ನೀರಂಜಿ, ನೇರಳೆ ಜಾತಿಯವು, ಎಲೆಸಾಂಡೆ ಮುಂತಾದವೂ ಇವೆ. ಶೋಲಾ ಪ್ರದೇಶಗಳಲ್ಲಿ ಮಸ್ಸಿವಾರ, ಮರುಳಿ, ಲೊಡ್ಡಿ, ಕಂಪಾಲೆ ಮರಗಳೂ ಹುಲ್ಲುಪಸಲೆಗಳಲ್ಲಿ ನಿಂಬೆಹುಲ್ಲು, ಕಾಮಾಜಿಹುಲ್ಲು, ಶುಂಠಿಹುಲ್ಲು, ಗುಂಡುನಾಲೆಹುಲ್ಲು, ಕಾಚಿಹುಲ್ಲು ಮುಂತಾದವು ಹೇರಳ.

ಪ್ರಾಣಿಗಳಲ್ಲಿ ಆನೆ, ಕಾಟಿ, ಕಡವೆ, ಜಿಂಕೆ, ಕೆಮ್ಮ, ನಾಲ್ಕುಕೊಂಬಿನ ಜಿಂಕೆಗಳೂ ಹುಲಿ, ಚಿರತೆ, ಕರಡಿ, ಕಾಡುನಾಯಿ, ಪುನುಗು ಬೆಕ್ಕುಗಳೂ ಮುಂಗುಸಿ, ಕಾಡುಬೆಕ್ಕು, ಕೇಶಳಿಲು, ಮುಸುವ, ಮಂಗ, ಕಾಡುಹಂದಿ, ಕಣೆಹಂದಿ, ನೀರುನಾಯಿ ಮುಂತಾದವೂ ಸಾಕಷ್ಟಿವೆ. 215ಕ್ಕೂ ಹೆಚ್ಚು ಬಗೆಯ ಪಕ್ಷಿಗಳೂ ಇಲ್ಲಿ ಕಾಣದೊರೆಯುತ್ತವೆ. ಇತ್ತಲೆ ಮಂಡಲ ಇಲ್ಲಿನ ಉಭಯಚರಿ ಪ್ರಾಣಿಗಳ ಪೈಕಿ ವಿಶೇಷವಾದ್ದು.

ಇಲ್ಲಿನ ಸುಪ್ರಸಿದ್ಧ ದೊಡ್ಡಸಂಪಿಗೆ ಮರ ಸೋಲಿಗರಿಗೆ ಪೂಜ್ಯವೆನಿಸಿದ್ದು, ಪ್ರೇಕ್ಷಣೀಯ ತಾಣವೂ ಆಗಿದೆ. ಪ್ರವಾಸಿಗರಿಗೆ ವಸತಿ ಸೌಕರ್ಯ ಇದೆ (ನೋಡಿ : ಬಿಳಿಗಿರಿರಂಗನ ಬೆಟ್ಟ).

**6. ಬ್ರಹ್ಮಗಿರಿ ಅಭಯಾರಣ್ಯ :** (ಕೊಡಗು ಜಿಲ್ಲೆ) ಹುಣಸೂರಿನಿಂದ 58ಕಿಮೀ ದೂರದಲ್ಲೂ ಮಡಿಕೇರಿಯಿಂದ ವಿರಾಜಪೇಟೆ ಮಾರ್ಗವಾಗಿ 37ಕಿಮೀ ದೂರದಲ್ಲೂ ಇದೆ. ವಿಸ್ತೀರ್ಣ 181ಚಕಿಮೀ. ಪಶ್ಚಿಮಘಟ್ಟಗಳಲ್ಲಿ ಸ್ಥಿತವಾಗಿರುವ ಈ ವನ್ಯಧಾಮ ನಿತ್ಯಹಸುರಿನ ಹಾಗೂ ಅರೆನಿತ್ಯ ಹಸುರಿನ ಕಾಡಿನಿಂದ ಕೂಡಿದೆ. ಶೋಲ್ ಹುಲ್ಲುಗಾವಲು ಪ್ರದೇಶವೂ ಇದೆ.

ಹಲಸು, ಹೆಬ್ಬಲಸು, ಚಕ್ಕೆ, ಗಂಧಗರಿಗೆ, ಕಲ್ಲುಹೊನ್ನೆ, ಸಪ್ತಪರ್ಣಿ, ಲಿಡಗ, ತೊರತಿ, ಮೈಲಾಡಿ, ಜಿಮ್ಮಿ ಮುಂತಾದವು ನಿತ್ಯ ಹಸುರಿನ ಪ್ರದೇಶದಲ್ಲಿ ಕಾಣದೊರೆತರೆ ಕೊರೆಮತ್ತಿ, ಮತ್ತಿ, ನಂದಿ, ತಾರೆ, ತೂಪ್ರ, ಆಲ, ಅತ್ತಿ, ಕಡವಳ, ಕುಂಕುಮ, ಮಗ್ಗಾರೆ, ಹೊಲೆಗಾರ, ದೂಳ್ಳಿ, ಹನಿಚೆ ಮುಂತಾದವು ಅರೆನಿತ್ಯ ಹಸುರಿನ ಪ್ರದೇಶದಲ್ಲೂ ಬೆಳೆಯುತ್ತವೆ. ಹೆಬ್ಬಿದಿರು, ಬೆತ್ತ, ಗಣಪೆಬಳ್ಳಿ, ಮರಸುತ್ತುಬಳ್ಳಿ, ಸೀಗೆ, ಕುರಿಯಾಡಿಬಳ್ಳಿ ಇತ್ಯಾದಿ ಸಸ್ಯ ಜಾತಿಗಳೂ ಇಲ್ಲಿವೆ.

ಇಲ್ಲಿನ ವನ್ಯಪ್ರಾಣಿಗಳಲ್ಲಿ ಆನೆ, ಕಾಟಿ, ಕಡವೆ, ಜಿಂಕೆ, ಕೆಮ್ಮ, ಕೊಂಡಕುರಿ, ಹುಲಿ, ಚಿರತೆ, ಕಾಡುಬೆಕ್ಕು, ಪುನುಗುಬೆಕ್ಕು, ತಾಳೆಬೆಕ್ಕು, ಕರಡಿ, ಕಾಡುಹಂದಿ, ಸಿಂಗಳೀಕ, ಮುಸುವ, ಕಾಡುಪಾಪ, ಕೇಶಳಿಲು, ನೀರುನಾಯಿ, ಮಾರ್ಟಿನ್ ಮುಂಗುಸಿ, ಚಿಪ್ಪುಹಂದಿ ಮತ್ತು ಕಣೆಹಂದಿ ಮುಖ್ಯವಾದವು.

ಹಾವುಗಳ ಪೈಕಿ ಕಾಳಿಂಗಸರ್ಪವೂ ಹೆಬ್ಬಾವು ಮತ್ತು ನಾಗರ ಹಾವುಗಳೂ ಇಲ್ಲಿ ವಾಸಿಸುತ್ತವೆ. ಪ್ರಕೃತಿ ಅಧ್ಯಯನಕ್ಕೆ ಸೂಕ್ತ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ (ನೋಡಿ: ಬ್ರಹ್ಮಗಿರಿ).

**7. ಕಾವೇರಿ ಅಭಯಾರಣ್ಯ :** (ಮೈಸೂರು, ಮಂಡ್ಯ ಮತ್ತು ಬೆಂಗಳೂರು ಜಿಲ್ಲೆ) ಬೆಂಗಳೂರಿನಿಂದ ಕನಕಪುರ- ಹಲಗೂರು ಮಾರ್ಗವಾಗಿ 100ಕಿಮೀ ದೂರದಲ್ಲಿದೆ. ವಿಸ್ತೀರ್ಣ 527ಚಕಿಮೀ. 1987 ಜನವರಿಯಲ್ಲಿ ಸ್ಥಾಪಿತವಾಯಿತು. ಇದರ ಬಹುಭಾಗ ಕಾವೇರಿ ನದಿಯಿಂದ ಆವೃತವಾಗಿದೆ. ಈಶಾನ್ಯಕ್ಕೆ ತಮಿಳುನಾಡು ಗಡಿಯಿದೆ.

ಇಲ್ಲಿನ ಅರಣ್ಯ ಶುಷ್ಕಪರ್ಣಪಾತಿ ಮತ್ತು ಕುರುಚಲು ಬಗೆಯದು. ನದಿಯ ದಂಡೆಗುಂಟ ಹೊಳೆಮತ್ತಿ ಮತ್ತು ನೇರಳೆ ಮರಗಳಿದ್ದರೆ, ಉಳಿದೆಡೆ ಹುಣಿಸೆ, ಆಸಿನಮರ, ಚುಜ್ಜಲು, ಬೇಲ, ಗೊಬ್ಬಳಿ, ಬಾಗೆ ಮುಂತಾದವು ಬೆಳೆಯುತ್ತವೆ.



ಚುಕ್ಕಿ ಜಿಂಕೆಗಳು

ಆನೆ, ಚಿರತೆ, ಕಾಡುಹಂದಿ, ಕಡವೆ, ಜಿಂಕೆ, ಕೆಮ್ಮ, ನಾಲ್ಕುಕೊಂಬಿನ ಜಿಂಕೆ, ಕೇಶಳಿಲು, ನೀರುನಾಯಿ, ಮೊಲ ಮುಂತಾದವು ಇಲ್ಲಿನ ವನ್ಯಪ್ರಾಣಿಗಳ ಪೈಕಿ ಕೆಲವು. ಪಕ್ಷಿಗಳಲ್ಲಿ ಸಿರ್‌ಕೀರ್ ಕುಕೂ, ಮಾಲ್‌ಕೋಹ, ಬಿಳಿಹುಬ್ಬಿನ ಪಿಕಳಾರ, ಕುಬ್ಜ, ಮರಕುಟಿಗ ಮುಖ್ಯವೆನಿಸಿವೆ. ಕಾವೇರಿ ನದಿಯಲ್ಲಿ ಸಿಕ್ಕುವ ಬಿಳಿಮೀನು (ಮಹಸೀರ್) ಈ ಅಭಯಾರಣ್ಯದ ಪ್ರಮುಖ ಆಕರ್ಷಣೆ. ಅಭಯಾರಣ್ಯಕ್ಕೆ ಬಲುಸಮೀಪದಲ್ಲಿ ಪ್ರೇಕ್ಷಣೀಯ ಸ್ಥಳಗಳಾದ ಹೊಗೇನಕಲ್ ಜಲಪಾತ, ಮೇಕೆದಾಟು ಮತ್ತು ಸಂಗಮಗಳಿವೆ. ಜಂಗಲ್ ಲಾಡ್ಜುಗಳು ಮತ್ತು ರಿಸಾರ್ಟ್ಸ್‌ನವರ ವಸತಿ ಸೌಕರ್ಯ ಉಂಟು.

**8. ದಾಂಡೇಲಿ ಅಭಯಾರಣ್ಯ :** (ಉತ್ತರ ಕನ್ನಡ ಜಿಲ್ಲೆ). 1956 ಮೇ ತಿಂಗಳಿನಲ್ಲಿ ಸ್ಥಾಪನೆಗೊಂಡಿತು. ಧಾರವಾಡದಿಂದ ದಾಂಡೇಲಿ ಪಟ್ಟಣ

ಮಾರ್ಗವಾಗಿ 68ಕಿಮೀ ದೂರದಲ್ಲಿದೆ. ವಿಸ್ತೀರ್ಣ 204ಚಕಿಮೀ. ಈ ವನ್ಯಧಾಮ 1994ರ ಏಪ್ರಿಲ್‌ನಲ್ಲಿ ವಿಸ್ತಾರಗೊಂಡು ಪ್ರಸಕ್ತ 475ಚಕಿಮೀ ಅರಣ್ಯವನ್ನು ಒಳಗೊಂಡಿದೆ.

ಆರ್ದ್ರಪರ್ಣಪಾತಿ ಮತ್ತು ಅರೆನಿತ್ಯಹಸುರಿನ ಅರಣ್ಯದಿಂದ ಕೂಡಿದೆ. ಬೀಟೆ, ಮತ್ತಿ, ತಾರೆ, ನಂದಿ, ಹೊನ್ನೆ, ಅರಿಷಿಣತೇಗ, ತಡಸಲು, ನಾಯಿಬೆಂಡೆ, ನವಿಲಾದಿ ಇಲ್ಲಿನ ಮುಖ್ಯ ವೃಕ್ಷಜಾತಿಗಳು. ಬಿದಿರು ಕೂಡ ಹೇರಳವಾಗಿದೆ. ಉಳಿದ ಪ್ರಮುಖ ವನ್ಯಧಾಮಗಳಲ್ಲಿ ಕಾಣಸಿಕ್ಕುವ ಪ್ರಾಣಿಗಳೇ ಇಲ್ಲೂ ಉಂಟು. 200 ಬಗೆಯ ಹಕ್ಕಿಗಳಿವೆ. ಪ್ರವಾಸಿಗರಿಗೆ ವಾಹನ, ವಸತಿ ಸೌಕರ್ಯಗಳಿವೆ. 10ಕಿಮೀ ದೂರದಲ್ಲಿ ಹರಿಯುವ ಕಾಳಿನದಿಯಲ್ಲಿ ದೋಣಿವಿಹಾರ ಮತ್ತು ಕೆಲವು ಸಾಹಸಮಯ ಕ್ರೀಡೆಗಳಿಗೆ ಅವಕಾಶವಿದೆ. ಸನಿಹದಲ್ಲೇ ಉಳವಿ ಕ್ಷೇತ್ರ, ಕವಲ ಗುಹೆಗಳು, ಸೈಕ್ಸ್ ಪಾಯಿಂಟ್, ನಾಗಝುರಿ ಕಣಿವೆ ವೀಕ್ಷಣ ತಾಣ ಇವೆ (ನೋಡಿ: ದಾಂಡೇಲಿ).

**9. ದರೋಜಿ ವನ್ಯಧಾಮ :** (ಬಳ್ಳಾರಿ ಜಿಲ್ಲೆ) ಪ್ರಧಾನವಾಗಿ ಕರಡಿಗಳನ್ನು ಸಂರಕ್ಷಿಸಲೆಂದು ಸ್ಥಾಪಿಸಲಾದ ಅಭಯಾರಣ್ಯ. 1994 ಅಕ್ಟೋಬರ್ ತಿಂಗಳಿನಲ್ಲಿ ಅಸ್ತಿತ್ವಕ್ಕೆ ಬಂತು. ಇದೊಂದು ಚಿಕ್ಕ ಅಭಯಾರಣ್ಯ. ವಿಸ್ತೀರ್ಣ 56ಚಕಿಮೀ. ಹೊಸಪೇಟೆಯಿಂದ ಕಮಲಾಪುರ ಮಾರ್ಗವಾಗಿ 30ಕಿಮೀ ದೂರದಲ್ಲಿದೆ. ಹರಿಹರದಿಂದ 132ಕಿಮೀ ದೂರದಲ್ಲಿದೆ.

ಇಲ್ಲಿನ ಅರಣ್ಯ ಕುರುಚಲು ಬಗೆಯದು, ಜೊತೆಗೆ ಕಲ್ಲುಬಂಡೆಗಳಿಂದ ಕೂಡಿದ ಗುಡ್ಡಬೆಟ್ಟ, ಗುಹೆಗಳು ಇರುವುದರಿಂದ ಕರಡಿಗಳಿಗೆ ಅನುಕೂಲವಾಗಿದೆ. ಮುಳ್ಳು ಕಂಟಿಗಳಾದ ಕಬಳಿ, ಎಲಚಿ, ಪರಗಿ, ಚುಜ್ಜಲು, ಕರೀಜಾಲ್ ಮುಂತಾದವೂ ಅಲ್ಲಲ್ಲಿ ತಡಸಲು, ಆಲ, ಕುಳ್ಳುಗಾತ್ರದ ನೇರಳೆ ಇತ್ಯಾದಿ ಮರಗಳು ಬೆಳೆಯುತ್ತವೆ. ಕರಡಿ ಮಾತ್ರವಲ್ಲದೆ, ಚಿರತೆ, ತೋಳ, ನರಿ, ಕತ್ತೆಕಿರುಬ, ಮುಂಗುಸಿ, ಮಂಗ, ನವಿಲು, ಮುಂತಾದವೂ ಕಾಣದೊರೆಯುತ್ತವೆ. ಕಮಲಾಪುರದಲ್ಲಿ ಅರಣ್ಯ ವಸತಿ ಸೌಕರ್ಯ ಉಂಟು.

**10. ಘಟಪ್ರಭಾ ಪಕ್ಷಿಧಾಮ :** (ಬೆಳಗಾಂವಿ ಜಿಲ್ಲೆ) ಘಟಪ್ರಭಾ ನದಿಗೆ ಧೂಪಧಾಳದ ಬಳಿ ಕಟ್ಟಲಾಗಿರುವ ಜಲಾಶಯವನ್ನೂ ಒಳಗೊಂಡಂತೆ ಸು.20 ದ್ವೀಪಗಳಿಂದ ಕೂಡಿದ ಪಕ್ಷಿಧಾಮ. 1974 ಜೂನಿನಲ್ಲಿ ಅಸ್ತಿತ್ವಕ್ಕೆ ಬಂತು. ಧಾರವಾಡದಿಂದ 95ಕಿಮೀ ದೂರದಲ್ಲಿದೆ. ವಿಸ್ತೀರ್ಣ 30ಚಕಿಮೀ. ಬೆಳಗಾಂವಿ ಜಿಲ್ಲೆಯ ಗೋಕಾಕದಿಂದ ನಾಲ್ಕು ಫರ್ಲಾಂಗ್ ದೂರದಲ್ಲಿದೆ.

ದೊಡ್ಡಗಾತ್ರದ ದ್ವೀಪಗಳಲ್ಲಿ ಮಾತ್ರ ಕೊಂಚ ವನರಾಶಿ ಇದೆ. ಗೊಬ್ಬಳಿ, ಬಾಗೆ, ಹಲಸು, ಕಾರಾಚ, ಎಲಚಿ, ಬಿದಿರು, ಆನೆಹುಲ್ಲು ಇಂಪರೇಟ ಮುಂತಾದವು ಇಲ್ಲಿನ ಮುಖ್ಯ ಸಸ್ಯಗಳು. ಹಕ್ಕಿಗಳಿಗೆ ಆಶ್ರಯ ಒದಗಿಸುತ್ತವೆ. ಡೆಮಾಯ್‌ಸೆಲ್ ಕೊಕ್ಕರೆ, ಬಿಳಿಬಕ, ನೀರುಕಾಗೆ, ಗೋವಕ್ಕಿ, ಬೆಳ್ಳಕ್ಕಿ ಪ್ರಭೇದಗಳು, ಚಮಚಕೊಕ್ಕು, ಬಿಳಿಬೂಸ, ನೀರುನವಿಲು, ನಾರಾಯಣೆ, ಮೀಂಚುಳ್ಳಿ ಮತ್ತು ಟಿಟ್ಟಿಭಗಳು ಇಲ್ಲಿ ಕಾಣಸಿಗುತ್ತವೆ.

ಗೋಕಾಕ ಧಬಧಬೆ (ನೋಡಿ) ಇಲ್ಲಿನ ಇನ್ನೊಂದು ಆಕರ್ಷಣೆ.

**11. ಗುಡವಿ ಪಕ್ಷಿಧಾಮ :** (ಶಿವಮೊಗ್ಗ ಜಿಲ್ಲೆ) ಶಿವಮೊಗ್ಗದಿಂದ ಸಾಗರ ಸೊರಬ ಮಾರ್ಗವಾಗಿ 112ಕಿಮೀ ದೂರದಲ್ಲಿದೆ. 1989 ಜುಲೈನಲ್ಲಿ ಸ್ಥಾಪಿತವಾಯಿತು. 30 ಹೆಕ್ಟೇರ್ ವಿಸ್ತೀರ್ಣವುಳ್ಳ ಜಲಾಶಯ ಮತ್ತು ಅದಕ್ಕೆ ಸೇರಿಕೊಂಡಂತಿರುವ ದಟ್ಟ ಆರ್ದ್ರಪರ್ಣಪಾತಿ ಅರಣ್ಯವನ್ನು ಒಳಗೊಂಡ ತಾಣ. ವಿಸ್ತೀರ್ಣ 0.74ಚಕಿಮೀ. ತೊರೆಮತ್ತಿ, ತಾರೆ, ಅಳಲೆ, ನಂದಿ, ಬೀಟೆ, ಅರಿಷಿಣತೇಗ, ಜಂಬೆ, ಬಗನಿ, ಆಲ, ಅರಳಿ, ಮುತ್ತುಗ, ಶ್ರೀಗಂಧ, ಇಪ್ಪೆ ಮರಗಳು ಇಲ್ಲಿನ ಮುಖ್ಯ ಸಸ್ಯ ಜಾತಿಗಳು. 191 ಬಗೆಯ ಹಕ್ಕಿಗಳು ಇಲ್ಲಿ ಕಾಣದೊರೆಯುತ್ತವೆ. ಇವುಗಳ ಪೈಕಿ 63 ನೀರಹಕ್ಕಿಗಳು. ಹಲವು ಬಗೆಯ ಬೆಳ್ಳಕ್ಕಿ, ನೀರುಕಾಗೆ ಜಾತಿಗಳು, ಬಕಗಳು, ಕೊಕ್ಕರೆಗಳು, ಬಿಳಿಬೂಸಾ, ಕಪ್ಪುಬೂಸಾ, ನಾಮದಕೋಳಿ, ಮೀಂಚುಳ್ಳಿ ಬಗೆಗಳು, ಮದಗದ ಕೋಳಿ, ಬಾತುಗಳು ಹೇರಳವಾಗಿವೆ.

**12. ಮೂಕಾಂಬಿಕಾ ವನ್ಯಧಾಮ :** (ಉಡುಪಿ ಜಿಲ್ಲೆ) ಪಶ್ಚಿಮ ಘಟ್ಟಗಳಲ್ಲಿ ಸ್ಥಾಪಿತವಾಗಿರುವ ಇನ್ನೊಂದು ಉತ್ತಮ ಅಭಯಾರಣ್ಯ; ಶರಾವತಿ ಕಣಿವೆ ವನ್ಯಧಾಮಕ್ಕೆ ಸೇರಿಕೊಂಡಂತಿದೆ. ಈಶಾನ್ಯದಲ್ಲಿ ಕೊಡಚಾದ್ರಿ, ಮಧ್ಯದಲ್ಲಿ ಕೊಲ್ಲೂರು ಇವೆ. ಸಾಗರದಿಂದ 75ಕಿಮೀ ದೂರದಲ್ಲೂ ಮಂಗಳೂರಿನಿಂದ 132ಕಿಮೀ ದೂರದಲ್ಲೂ ಇದೆ. 1974ರ ಜೂನ್ ತಿಂಗಳಲ್ಲಿ ಅಸ್ತಿತ್ವಕ್ಕೆ ಬಂದಿತು. ಇದರ ಒಟ್ಟು ವಿಸ್ತೀರ್ಣ 247ಚಕಿಮೀ. ಕೊಲ್ಲೂರಿನ ಮೂಕಾಂಬಿಕೆಯ ಹೆಸರನ್ನೇ ಈ ವನ್ಯಧಾಮಕ್ಕೆ ಕೊಡಲಾಗಿದೆ.



ನಿತ್ಯಹಸಿರು, ಅರೆ ನಿತ್ಯಹಸಿರು ಹಾಗೂ ಆರ್ದ್ರಪರ್ಣಪಾತಿ ಅರಣ್ಯದಿಂದ ಕೂಡಿರುವ ಈ ವನ್ಯಧಾಮದಲ್ಲಿ ಪ್ರಧಾನವಾಗಿ ಎಣ್ಣೆಮರ, ಗುಳುಮಾವು, ಕಿರಿಭೂಗಿ, ಬಲಗಿ, ಸುರಹೊನ್ನೆ, ರುದ್ರಾಕ್ಷಿ, ಸತಗ, ಗುಡ್ಡರೆಂಜೆ ಮರಗಳೂ ಹಂಡಿಬೆತ್ತ, ಹಾಲುಬೆತ್ತದ ಮೆಳೆಗಳೂ ಹಲಸು, ಬರಣಿಗೆ, ನೇರಳೆ, ದಾಲ್ಚಿನ್ನಿ ಜಾಕಾಯಿ, ಮರಗಳೂ ಕೆಳಸ್ತರದಲ್ಲಿ ಬೂರುಗ, ಮಾವು, ಬೀಟೆ, ಬೆಟ್ಟಗಣಗಿಲೆ, ಅರಿಷಿಣ, ತೇಗ ಮುಂತಾದ ಮರಗಳೂ ಇವೆ.

ಅರಿಷಿಣ ಬಳ್ಳಿ ಅಥವಾ ಮರದ ಅರಿಷಿಣ ಎಂಬ ತುಂಬ ಅಪರೂಪದ ಬಳ್ಳಿ ಇಲ್ಲಿ ಕಾಣದೊರೆಯುತ್ತದೆ. ಔಷಧೀಯ ಮಹತ್ವವುಳ್ಳ ಈ ಸಸ್ಯ ಅಳಿವಿನ ಅಪಾಯದ ಅಂಚಿನಲ್ಲಿದೆ.

ಬೇರೆ ದೊಡ್ಡ ವನ್ಯಧಾಮಗಳಲ್ಲಿ ಕಂಡುಬರುವ ಎಲ್ಲ ಮಾಂಸಾಹಾರಿ, ಸಸ್ಯಾಹಾರಿ ಪ್ರಾಣಿಗಳು ಇಲ್ಲಿಯೂ ಇವೆ. ಅಪರೂಪದ ಸಿಂಗಳೀಕ ಇಲ್ಲಿ ವಾಸಿಸುತ್ತದೆ.



ಅಂಗೈಗಾತ್ರದ ಅಪರೂಪದ ಜೇಡ

**13. ಮೇಲುಕೋಟೆ ವನ್ಯಧಾಮ :** (ಮಂಡ್ಯ ಜಿಲ್ಲೆ) ಮುಖ್ಯವಾಗಿ ತೋಳದ ಸಂರಕ್ಷಣೆಗೆಂದು ಸ್ಥಾಪಿತವಾದ ವನ್ಯಧಾಮ. ಮೈಸೂರಿನಿಂದ ಶ್ರೀರಂಗಪಟ್ಟಣ - ಪಾಂಡವಪುರ ಮಾರ್ಗವಾಗಿ 50ಕಿಮೀ ದೂರದಲ್ಲಿದೆ. 1974 ಜೂನಿನಲ್ಲಿ ಅಸ್ತಿತ್ವಕ್ಕೆ ಬಂತು. ವಿಸ್ತೀರ್ಣ 50ಚಕಿಮೀ. ಇಲ್ಲಿ ಅರಣ್ಯ ಪ್ರಧಾನವಾಗಿ ಒಣಪರ್ಣಪಾತಿ ಮತ್ತು ಕುರುಚಲು ಬಗೆಯದು.

ಜಾಲಾರಿ ಮತ್ತು ಮುಂಡೀಚಲು (ಒಂದು ಬಗೆಯ ಅನಾವೃತ ಬೀಜ ಸಸ್ಯ, ವಿನಾಶದ ಅಂಚಿನಲ್ಲಿದೆ) ಇಲ್ಲಿನ ಮುಖ್ಯ ಬಗೆಯ ಮರಗಳು. ಕಾಡುಬೆಕ್ಕು, ತೋಳ, ಚಿರತೆ, ನರಿ ಇಲ್ಲಿನ ಮಾಂಸಾಹಾರಿಗಳಾದರೆ; ಜಿಂಕೆ, ಕೃಷ್ಣಮೃಗ, ಹಂದಿ, ಕೋತಿ ಇಲ್ಲಿನ ಸಸ್ಯಾಹಾರಿಗಳು.

**14. ನುಗು ವನ್ಯಧಾಮ :** (ಮೈಸೂರು ಜಿಲ್ಲೆ) ನುಗು ಹೊಳೆಗೆ ಅಡ್ಡಲಾಗಿ ಕಟ್ಟಿದ ಜಲಾಶಯವನ್ನು ಒಳಗೊಂಡ ಒಂದು ಚಿಕ್ಕ ಅಭಯಾರಣ್ಯ. ಮೈಸೂರಿನಿಂದ ಸರಗೂರು ಮಾರ್ಗವಾಗಿ 76ಕಿಮೀ ದೂರದಲ್ಲಿದೆ. 1974 ಜೂನಿನಲ್ಲಿ ಸ್ಥಾಪಿತವಾಯಿತು. ವಿಸ್ತೀರ್ಣ 30ಚ.ಕಿಮೀ.

ಇಲ್ಲಿನ ಬಹುಪಾಲು ಅರಣ್ಯ ಕುರುಚಲು ಕಂಟಿಗಳಿಂದ ಕೂಡಿದೆ. ದಿಂಡಿಲು, ಬೆಟ್ಟದನೆಲ್ಲಿ, ಶ್ರೀಗಂಧ, ಬಾಗೆ, ಚುಜ್ಜಲು, ಗಂಡುಬಿದಿರು ಇಲ್ಲಿನ ಮುಖ್ಯ ಸಸ್ಯವರ್ಗ. ಆನೆ, ಚಿರತೆ, ಕಾಡುಬೆಕ್ಕು, ಜಿಂಕೆ, ಕೆಮ್ಮ, ಕಾಡುಹಂದಿ, ಮುಂಗುಸಿ, ಕಡವೆ, ಪುನುಗುಬೆಕ್ಕು, ಮರಬೆಕ್ಕು ಮತ್ತಿತರ ಪ್ರಾಣಿಗಳಿವೆ.

**15. ಪುಷ್ಪಗಿರಿ ವನ್ಯಧಾಮ :** (ಕೊಡಗು ಜಿಲ್ಲೆ) ಪಶ್ಚಿಮ ಘಟ್ಟಗಳಲ್ಲಿರುವ ಇನ್ನೊಂದು ಅಭಯಾರಣ್ಯ. 1987 ಸೆಪ್ಟೆಂಬರಿನಲ್ಲಿ ಸ್ಥಾಪಿತವಾಯಿತು. ವಿಸ್ತೀರ್ಣ 103ಚಕಿಮೀ. ಅನೇಕ ಝರಿಗಳಿಂದ ಕಿರುಅಬ್ಬಿಗಳಿಂದ ಕೂಡಿರುವ ಈ ವನ್ಯಧಾಮದಲ್ಲಿ ನಿತ್ಯ ಹಸುರಿನ, ಅರೆನಿತ್ಯಹಸುರಿನ ಮತ್ತು ಶೋಲಾ ಬಗೆಯ ಅರಣ್ಯವನ್ನು ಕಾಣಬಹುದು.

ಎಣ್ಣೆಮರ, ಅಗಿಲು, ಕಿರಿಭೋಗಿ, ನಾಗಸಂಪಿಗೆ, ಧೂಪ, ತತ್ತಲೆಮರ, ಹೆಬ್ಬಲಸು, ಹಲಸು, ತೊರಟ್ಟಿ, ಹಾಲುಸಳ್ಳಿ ಮತ್ತಿತರ ನಿತ್ಯಹಸುರಿನ ಮರಗಳಲ್ಲದೆ, ವಂಟೇಮರ, ಸತಗ, ದಾಲ್ಚಿನ್ನಿ, ಗೌರಿ, ಬಾಗೆ, ಹುನಗಲು, ಮತ್ತಿ, ಅಂಡಿಪುನಾರ ಇತ್ಯಾದಿ ಅರೆನಿತ್ಯಹಸುರಿನ ಮರಗಳೂ ಬೆತ್ತ, ಬಿದಿರು, ವಾಟೆಬಿದಿರು, ಕುರಿಂಜಿ ಗಿಡಗಳೂ ಇಲ್ಲಿ ಕಾಣದೊರೆಯುತ್ತವೆ. ಪಶ್ಚಿಮ ಘಟ್ಟಗಳಲ್ಲಿ ವಾಸಿಸುವ ಎಲ್ಲ ಬಗೆಯ ಪ್ರಾಣಿಗಳೂ ಇಲ್ಲುಂಟು.

ಕುಕ್ಕೆ ಸುಬ್ರಹ್ಮಣ್ಯ ಕ್ಷೇತ್ರ ಮತ್ತು ಹಾರಂಗಿ ಅಣೆಕಟ್ಟು ಇಲ್ಲಿಗೆ ಸಮೀಪ.

**16. ರಾಣೆಬೆನ್ನೂರು ಕೃಷ್ಣಮೃಗ ಅಭಯಾರಣ್ಯ :** (ಧಾರವಾಡ ಜಿಲ್ಲೆ) ರಾಣೆಬೆನ್ನೂರಿಗೆ 8ಕಿಮೀ ದೂರದಲ್ಲಿದೆ. ಈ ವನ್ಯಧಾಮ ಮುಖ್ಯವಾಗಿ ಕೃಷ್ಣಮೃಗ ಮತ್ತು ಬಸ್ಟರ್ಡ್ ಹಕ್ಕಿಗಳ ಸಂರಕ್ಷಣೆಗೆಂದು 1974 ಜೂನ್‌ನಲ್ಲಿ ಸ್ಥಾಪಿತವಾಯಿತು. ವಿಸ್ತೀರ್ಣ 119ಚಕಿಮೀ. ಕುರುಚಲು ಕಾಡು - ಇಲ್ಲಿನ ಮುಖ್ಯ ಸಸ್ಯವರ್ಗ, ಬಳ್ಳಾರಿಜಾಲಿ, ಕಗ್ಗಲ್ಲಿ, ಹಂಗರಿಕೆ, ಕವಳಿ ಮುಂತಾದವು ಸಹಜವಾಗಿ ಬೆಳೆದರೆ, ಈಚೆಗೆ ನೀಲಗಿರಿ ಮರಗಳನ್ನೂ ವಿಪುಲವಾಗಿ ಬೆಳೆಸಲಾಗಿದೆ. ಜೊತೆಗೆ ಎಲಚಿ, ತಂಗಡಿ, ಕಕ್ಕೆ, ಬೇವು, ತಪಸಿ, ಇಪ್ಪೆ ಮರಗಳನ್ನೂ ಕಾಣಬಹುದು.

ಕೃಷ್ಣಮೃಗ, ತೋಳಗಳಲ್ಲದೆ, ಕಾಡುಹಂದಿ, ನರಿ, ಮುಳ್ಳುಹಂದಿ, ಮುಂಗುಸಿ, ಮೊಲ, ಚಿಪ್ಪುಹಂದಿ ಹಾಗೂ ಕತ್ತೆಕಿರುಬಗಳೂ ಇಲ್ಲಿ ಕಾಣದೊರೆಯುತ್ತವೆ.

**17. ರಂಗನತಿಟ್ಟು ಪಕ್ಷಿಧಾಮ :** (ಮಂಡ್ಯ ಜಿಲ್ಲೆ) ಕರ್ನಾಟಕದ ಸುಪ್ರಸಿದ್ಧ ಪಕ್ಷಿಧಾಮ. 1940 ಜುಲೈ ತಿಂಗಳಿನಲ್ಲಿ ಅಸ್ತಿತ್ವಕ್ಕೆ ಬಂತು. ಮೈಸೂರಿನಿಂದ 20ಕಿಮೀ ದೂರದಲ್ಲಿ, ಶ್ರೀರಂಗಪಟ್ಟಣಕ್ಕೆ 3ಕಿಮೀ ದೂರದಲ್ಲಿ ಕಾವೇರಿ ನದಿಯ ದಂಡೆಯಲ್ಲಿದೆ. ಈ ಪಕ್ಷಿಧಾಮ 6 ದೊಡ್ಡ ದ್ವೀಪಗಳನ್ನೂ 2-3 ಸಣ್ಣ ದ್ವೀಪಗಳನ್ನೂ ಹೊಂದಿದೆ. ವಿಸ್ತೀರ್ಣ 0.67ಚಮೀ. ಈ ದ್ವೀಪಗಳಲ್ಲಿ ಸ್ವಾಭಾವಿಕ ಕುರುಚಲು ಸಸ್ಯವರ್ಗ ಹಾಗೂ ಮರಗಳಿವೆ. ನದೀತೀರದ ಆಚೀಚೆ ಕೃಷಿ ಭೂಮಿಯಿದ್ದು ಸಾಕಷ್ಟು ಆಹಾರ, ಹುಳು ಹುಪ್ಪಟೆಗಳು ಸಿಗುವುದರಿಂದ ಹಕ್ಕಿಗಳಿಗೆ ಮೆಚ್ಚಿನ ತಾಣವಾಗಿದೆ. ಇಲ್ಲಿ ಸುಮಾರು 16 ಬಗೆಯ ನೀರಹಕ್ಕಿಗಳೂ ನೂರಾರು ಬಗೆಯ ವೃಕ್ಷವಾಸಿ ಹಾಗೂ ಭೂವಾಸಿ ಹಕ್ಕಿಗಳೂ ಇವೆ. ವೀಕ್ಷಕರಿಗೆ ದೋಣಿ ಸೌಲಭ್ಯವನ್ನು ಕಲ್ಪಿಸಲಾಗಿದೆ (ನೋಡಿ : ರಂಗನತಿಟ್ಟು).



ರಂಗನತಿಟ್ಟು ಪಕ್ಷಿಧಾಮ

**18. ಶರಾವತಿ ಕಣಿವೆ ವನ್ಯಧಾಮ :** (ಶಿವಮೊಗ್ಗ ಜಿಲ್ಲೆ) ಪಶ್ಚಿಮ ಘಟ್ಟಗಳಲ್ಲಿ ಸ್ಥಿತವಾಗಿರುವ ಇನ್ನೊಂದು ಅಭಯಾರಣ್ಯ. 1972 ಏಪ್ರಿಲ್ ತಿಂಗಳಿನಲ್ಲಿ ಸ್ಥಾಪನೆಗೊಂಡಿತು. ಸಾಗರದಿಂದ 7ಕಿಮೀ ದೂರದಲ್ಲಿದೆ. ಪೂರ್ವಭಾಗದಲ್ಲಿ ಲಿಂಗನಮಕ್ಕಿ ಜಲಾಶಯವೂ ನೈಋತ್ಯದಲ್ಲಿ ಮೂಕಾಂಬಿಕಾ ವನ್ಯಧಾಮವೂ ಇವೆ. ಜಲಾಶಯವೂ ಸಣ್ಣಪುಟ್ಟ ದ್ವೀಪಗಳೂ ಸೇರಿ ಒಟ್ಟು ವಿಸ್ತೀರ್ಣ 431ಚಕಿಮೀ. ಇಲ್ಲಿನ ಅರಣ್ಯ ನಿತ್ಯಹಸುರಿನ ಹಾಗೂ ಅರೆನಿತ್ಯಹಸುರಿನ ಸಸ್ಯ ಸಂಕುಲದಿಂದ ಕೂಡಿದೆ.

ಸುರಹೊನ್ನೆ, ಗುಳಮಾವು, ಬಗನಿ, ಸಳ್ಳೆ, ಎಣ್ಣೆಮರ, ಮಗ್ಗಾರೆ ಮುಂತಾದ ಮರಗಳೂ ಸೀಗೆ, ನೀಟಮ, ಗಣಪೆಬಳ್ಳಿ ಮುಂತಾದ ಬಳ್ಳಿಗಳೂ ನಂದಿ, ಬೀಟೆ, ದೊಳ್ಳಿ, ಬೆಟ್ಟದನೆಲ್ಲಿ, ಮತ್ತಿ, ನವಿಲಾದಿ ಇತ್ಯಾದಿ ಆರ್ಥಿಕ ಮಹತ್ತ್ವವುಳ್ಳ ಮರಗಳೂ ಇವೆ. ಹುಲಿ, ಚಿರತೆಗಳಲ್ಲದೆ, ಹಾರುವ ಅಳಿಲು, ಸಿಂಗಳೀಕ, ಕಾಳಿಂಗಸರ್ಪ ಮುಂತಾದ ಅಪರೂಪದ ಪ್ರಾಣಿಗಳೂ ಇಲ್ಲಿ ಕಾಣದೊರೆಯುತ್ತವೆ.

ಜೋಗ ಜಲಪಾತ ಇಲ್ಲಿಗೆ ತುಂಬ ಸಮೀಪದಲ್ಲಿದೆ. ಜೋಗದಲ್ಲಿ ಹಾಗೂ ನಾಗವಳ್ಳಿಯಲ್ಲಿ ವಸತಿ ಸೌಲಭ್ಯ ಇದೆ.

**19. ಶೆಟ್ಟಿಹಳ್ಳಿ ಅಭಯಾರಣ್ಯ :** (ಶಿವಮೊಗ್ಗ ಜಿಲ್ಲೆ) ಶಿವಮೊಗ್ಗ ನಗರಕ್ಕೆ ಹೊಂದಿಕೊಂಡಂತಿರುವ ಈ ವನ್ಯಧಾಮ 1974 ನವೆಂಬರ್‌ನಲ್ಲಿ ಅಸ್ತಿತ್ವಕ್ಕೆ ಬಂತು. ವಿಸ್ತೀರ್ಣ 396ಚಕಿಮೀ.

ಅರೆನಿತ್ಯಹಸುರು ಬಗೆಯ ಮತ್ತು ಶುಷ್ಕಪರ್ಣಪಾತಿ ಅರಣ್ಯದಿಂದ ಕೂಡಿದೆ. ಮತ್ತಿ, ತಾರೆ, ತೇಗ, ದಿಂಡಿಲು, ನಂದಿ, ಬೆಪ್ಪಾಲೆ, ಕಕ್ಕೆ ಮತ್ತು ಬೆಟ್ಟದನೆಲ್ಲಿ ಮರಗಳೂ ಹೆಬ್ಬಿದಿರು, ಗಂಡು ಬಿದಿರು, ತಡಸಲು, ಅರಿಷಿಣತೇಗ, ಕಾಡುಬೆಂಡೆ, ಸಂಪಿಗೆ, ಗಂಟೆ ಮುಂತಾದ ವೃಕ್ಷಗಳೂ ಇಲ್ಲಿ ಹೇರಳ. ಇತರ ಅಭಯಾರಣ್ಯಗಳಲ್ಲಿ ಕಾಣಸಿಕ್ಕುವ ಎಲ್ಲ ರೀತಿಯ ಮಾಂಸಾಹಾರಿ ಸಸ್ಯಾಹಾರಿ ಪ್ರಾಣಿಗಳೂ ಉರಗಗಳೂ ಹಕ್ಕಿಗಳೂ ಇಲ್ಲಿವೆ.

ಶಿವಮೊಗ್ಗ ನಗರಕ್ಕೆ 10ಕಿಮೀ ದೂರದಲ್ಲಿ ತ್ಯಾವರೆಕೊಪ್ಪ ಎಂಬಲ್ಲಿ ಸಿಂಹಧಾಮವೂ ಸಕ್ರೆಬೈಲು ಬಳಿ ಸಾಕಿದ ಆನೆಗಳ ಶಿಬಿರವೂ ಮಂಡಗದ್ದೆಯ ಪಕ್ಷಿಧಾಮವೂ ಇಲ್ಲಿನ ಪ್ರಮುಖ ಆಕರ್ಷಣೆಗಳು.

**20. ಸೋಮೇಶ್ವರ ಅಭಯಾರಣ್ಯ :** (ಉಡುಪಿ ಜಿಲ್ಲೆ) ಪಶ್ಚಿಮ ಘಟ್ಟಗಳಲ್ಲಿ ನಿತ್ಯಹಸುರಿನ ಮತ್ತು ಅರೆನಿತ್ಯಹಸುರಿನ ಅರಣ್ಯದಿಂದ ಕೂಡಿದ ಮತ್ತೊಂದು ಪಕ್ಷಿಧಾಮ. 1974 ಜೂನ್ ತಿಂಗಳಿನಲ್ಲಿ ಸ್ಥಾಪನೆಗೊಂಡ ಈ ವನ್ಯಧಾಮದ ವಿಸ್ತೀರ್ಣ 88ಚಕಿಮೀ. ಇದರ ಪಕ್ಕದಲ್ಲಿ ಕುದುರೆಮುಖ ರಾಷ್ಟ್ರೀಯ ಉದ್ಯಾನ ಇದೆ.

ಹುನಗಲು, ಗುಳುಮಾವು, ಮಾವು, ಹೆಬ್ಬಲಸು, ದಾಲ್ಚಿನ್ನಿ, ಸಟಗ, ಬೀಟೆ, ಮತ್ತಿ, ನಂದಿ, ಬೆಟ್ಟಗಣಗಿಲೆ, ದೂಳ್ಪಿ ಇತ್ಯಾದಿ ವೃಕ್ಷಗಳಿವೆ. ಪ್ರಾಣಿಗಳಲ್ಲಿ ಹುಲಿ, ಚಿರತೆ, ಕಾಡುನಾಯಿ, ಜಿಂಕೆ, ಕಡವೆ, ಸಿಂಗಳೀಕ, ಮುಸುವ, ಕೋತಿ, ಕಾಟಿ ಮುಖ್ಯವೆನಿಸಿವೆ.

ಶಿವಮೊಗ್ಗದಿಂದ ತೀರ್ಥಹಳ್ಳಿ - ಆಗುಂಬೆ ಮಾರ್ಗವಾಗಿ ಇಲ್ಲಿಗೆ 95ಕಿಮೀ. ಮಂಗಳೂರಿನಿಂದ ಮೂಡಬಿದ್ರಿ - ಕಾರ್ಕಳ - ಹೆಬ್ರಿ ಮಾರ್ಗವಾಗಿ ಇಲ್ಲಿಗೆ 86ಕಿಮೀ. ಆಗುಂಬೆಯ ಸೂರ್ಯಾಸ್ತ ವೀಕ್ಷಣೆ, ಒನಕೆಅಬ್ಬಿ, ಜಂಬುತೀರ್ಥ ಇಲ್ಲಿನ ಇನ್ನಿತರ ಮುಖ್ಯ ಆಕರ್ಷಣೆಗಳು.

**21. ತಲಕಾವೇರಿ ಅಭಯಾರಣ್ಯ :** (ಕೊಡಗು ಜಿಲ್ಲೆ) ಇದು ಕೂಡ ಪಶ್ಚಿಮಘಟ್ಟಗಳಲ್ಲಿರುವ ವನ್ಯಧಾಮ. ಕಾವೇರಿ ನದಿಯ ಉಗಮಸ್ಥಾನವಾದ ತಲಕಾವೇರಿಯನ್ನು ಇದು ಒಳಗೊಂಡಿರುವುದರಿಂದ ಇದಕ್ಕೆ ಈ ಹೆಸರು. 1987 ಸೆಪ್ಟೆಂಬರಿನಲ್ಲಿ ಸ್ಥಾಪಿತವಾಯಿತು. ವಿಸ್ತೀರ್ಣ 105ಚಕಿಮೀ. ಮಡಿಕೇರಿಯಿಂದ 45ಕಿಮೀ ದೂರದಲ್ಲಿದೆ. ಇಲ್ಲಿನ ಅರಣ್ಯ ನಿತ್ಯಹಸುರಿನ ಬಗೆಯದು. (ಬಿ.ಬಿ.)

**ಅಭಿಜಿತ್ :** 1979-. ಅರ್ಜುನ ಪ್ರಶಸ್ತಿ ವಿಜೇತ, ಈಜುಗಾರ. 1979 ಏಪ್ರಿಲ್ 14ರಂದು ಬೆಂಗಳೂರಿನಲ್ಲಿ ಜನಿಸಿದರು. ತಂದೆ ಜಯತೀರ್ಥರಾವ್. ಚಿಕ್ಕಂದಿನಿಂದಲೂ ತಂದೆಯವರ ಪ್ರೋತ್ಸಾಹದೊಂದಿಗೆ ಈಜಿಗೆ ಆಕರ್ಷಿತರಾಗಿ ಏಳನೆಯ ವರ್ಷದಲ್ಲೇ ಈಜಿಗೆ ಇಳಿದರು. ಬೆಂಗಳೂರಿನ ಜೈನ್ ವಿದ್ಯಾಲಯದಲ್ಲಿ ಪ್ರಾಥಮಿಕ ಶಿಕ್ಷಣವನ್ನು, ಅನಂತರ ಬೆಂಗಳೂರು ವಿಶ್ವವಿದ್ಯಾಲಯದ ಅಂಚೆ ತೆರಪಿನ ಶಿಕ್ಷಣದ ಅಡಿಯಲ್ಲಿ ಸಮಾಜಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದರು. ಪ್ರಾರಂಭದ ದಿನಗಳಲ್ಲಿ ವಾಟರ್ ಪೋಲೋ ತಂಡದ ಸದಸ್ಯರಾಗಿ ನೀರಿಗಿಳಿದ ಇವರು ಅನಂತರ ಈಜನ್ನೇ ಕ್ರೀಡೆಯನ್ನಾಗಿಸಿಕೊಂಡರು. 1993-94ರ ಅಂತರಶಾಲಾ ಪಂದ್ಯಾವಳಿಯಲ್ಲಿ 5 ಪದಕಗಳನ್ನು ಪಡೆದರು. ತರಬೇತುದಾರರ ಸಹಾಯದೊಂದಿಗೆ ಅದೇವರ್ಷ ರಾಷ್ಟ್ರೀಯ ಕ್ರೀಡಾ ಕೂಟದಲ್ಲಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದರು. ಇವರು ಒಟ್ಟು 12 ಬಾರಿ ಅಂತಾರಾಷ್ಟ್ರೀಯ ಕ್ರೀಡಾ ಕೂಟಗಳಲ್ಲಿ ಭಾಗವಹಿಸಿ 12 ನೂತನ ದಾಖಲೆಗಳೊಂದಿಗೆ 27 ಚಿನ್ನ, 10 ಬೆಳ್ಳಿ, 7 ಕಂಚಿನ ಪದಕಗಳನ್ನು ಪಡೆದಿದ್ದಾರೆ. ಶಾಲಾ ರಾಷ್ಟ್ರೀಯ ಪಂದ್ಯಾವಳಿ, ಕಿರಿಯ ರಾಷ್ಟ್ರೀಯ ಪಂದ್ಯಾವಳಿ, ರಾಷ್ಟ್ರೀಯ ಪಂದ್ಯಾವಳಿಗಳು ಮುಂತಾದ 50ಕ್ಕೂ ಹೆಚ್ಚು ಪಂದ್ಯಾವಳಿಗಳಲ್ಲಿ ಭಾಗವಹಿಸಿ 260 ಚಿನ್ನದ ಪದಕಗಳನ್ನೂ 80ಕ್ಕೂ ಹೆಚ್ಚು ಬೆಳ್ಳಿಯ ಪದಕಗಳನ್ನೂ 70ಕ್ಕೂ ಹೆಚ್ಚು ಕಂಚಿನ ಪದಕಗಳನ್ನೂ ಗಳಿಸಿದ್ದಾರೆ.

ಇವರು ಭಾಗವಹಿಸಿ ವಿಜೇತರಾಗಿ ಪದಕ ಪಡೆದ ಅಂತಾರಾಷ್ಟ್ರೀಯ ಕ್ರೀಡಾಕೂಟಗಳೆಂದರೆ ನವದೆಹಲಿಯಲ್ಲಿ 1994ರಲ್ಲಿ ನಡೆದ ಏಷ್ಯ ಪೆಸಿಫಿಕ್ ಏಜ್ ಗ್ರೂಪ್ ಈಜುಗಾರರ ಚಾಂಪಿಯನ್‌ಷಿಪ್ (3 ಬೆಳ್ಳಿ ಪದಕಗಳು) 1995ರಲ್ಲಿ ಢಾಕಾದಲ್ಲಿ ನಡೆದ 11ನೆಯ ದಕ್ಷಿಣ ಏಷ್ಯನ್ ಫೆಡರೇಷನ್ ಈಜುಗಾರಿಕೆ ಚಾಂಪಿಯನ್‌ಷಿಪ್ (4 ಚಿನ್ನ, 2 ಬೆಳ್ಳಿ ಪದಕಗಳು), 1995ರಲ್ಲಿ ಶ್ರೀಲಂಕಾದಲ್ಲಿ ನಡೆದ ಏಷ್ಯಾ ಪೆಸಿಫಿಕ್ ಈಜುಗಾರಿಕೆ ಚಾಂಪಿಯನ್‌ಷಿಪ್ (1 ಚಿನ್ನ ಹಾಗೂ 1 ಬೆಳ್ಳಿ ಪದಕ), 1995ರಲ್ಲಿ ಚೆನ್ನೈನಲ್ಲಿ ನಡೆದ 7ನೆಯ ಸೌತ್ ಏಷ್ಯನ್ ಫೆಡರೇಷನ್ ಕ್ರೀಡೆಗಳಲ್ಲಿ 7 ಚಿನ್ನದ ಪದಕಗಳೊಂದಿಗೆ 6 ನೂತನ ದಾಖಲೆಗಳನ್ನು ಮಾಡಿದ್ದು ಇವರ ಅತ್ಯುತ್ತಮ ಸಾಧನೆ. 1990ರಲ್ಲಿ ಟೆಹರಾನ್‌ನಲ್ಲಿ ನಡೆದ 13ನೆಯ ಅಂತಾರಾಷ್ಟ್ರೀಯ ಪಂದ್ಯಾವಳಿಗಳಲ್ಲಿ 10 ಚಿನ್ನ ಹಾಗೂ 7 ಬೆಳ್ಳಿ ಪದಕಗಳನ್ನೂ 1999ರಲ್ಲಿ ಸ್ವೀಡನ್‌ನಲ್ಲಿ ನಡೆದ ವಿಶ್ವಪೊಲೀಸ್ ಪಂದ್ಯವೊಂದರಲ್ಲಿ 2 ಚಿನ್ನ ಹಾಗೂ 3 ಕಂಚಿನ ಪದಕಗಳನ್ನೂ ಸಂಪಾದಿಸಿದರು.

1994ರಲ್ಲಿ ಗಡಿಭದ್ರತಾ ಪಡೆಯ ನಿರೀಕ್ಷಕರಾಗಿ (ಇನ್ಸ್‌ಪೆಕ್ಟರ್) ನೇಮಕಗೊಂಡ ಇವರು 2002ರಿಂದ ಬೆಂಗಳೂರಿನ ಇನ್‌ಫೋಸಿಸ್ ಸಂಸ್ಥೆಯಲ್ಲಿ ಈಜು ತರಬೇತುದಾರರಾಗಿ ಅನೇಕ ಯುವ ಪ್ರತಿಭೆಗಳನ್ನು ರಾಷ್ಟ್ರಕ್ಕೆ ಪರಿಚಯಿಸಿದ್ದಾರೆ.

ಇವರಿಗೆ ಕರ್ನಾಟಕ ರಾಜ್ಯದ ಏಕಲವ್ಯ ಪ್ರಶಸ್ತಿ (1994), ಕರ್ನಾಟಕ ರಾಜ್ಯ ಪ್ರಶಸ್ತಿ (2000), ಬೆಂಗಳೂರು ಮಹಾನಗರ ಪಾಲಿಕೆಯ ವತಿಯಿಂದ ಕೆಂಪೇಗೌಡ ಪ್ರಶಸ್ತಿ ದೊರೆತಿವೆ. ಭಾರತ ಸರ್ಕಾರ ಇವರಿಗೆ ಅರ್ಜುನ ಪ್ರಶಸ್ತಿ (2000) ನೀಡಿ ಗೌರವಿಸಿದೆ. (ಎಸ್.ಆರ್.ಯು.)

**ಅಭಿನವಚಂದ್ರ :** ಸು.1400. ಬ್ರಾಹ್ಮಣ ಕವಿ. ಅಶ್ವಶಾಸ್ತ್ರ ಎಂಬ ಗ್ರಂಥವನ್ನು ಬರೆದಿದ್ದಾನೆ. ಈತನ ತಂದೆ ಕಾಳಪಯ್ಯ, ತಾಯಿ ಅತ್ತಿಮಬ್ಬೆ, ಅಣ್ಣ ಸೋಮದೇವ. ಬಾಗೇವಾಡಿ ಕವಿಯ ಸ್ಥಳ. ಇವನಿಗೆ ಸುಕರವಿಳಾಸ, ಬುಧಬಂಧು, ಗುಣರತ್ನ ಮುಂತಾದ ಬಿರುದುಗಳಿದ್ದಂತೆ ತಿಳಿದುಬರುತ್ತದೆ.

ಅಶ್ವಶಾಸ್ತ್ರಕ್ಕೆ ತುರಗಾಗಮ, ಅಶ್ವಾಗಮ ಎಂಬ ಹೆಸರುಗಳೂ ಇವೆ. 'ಚಂದ್ರಕವೀಂದ್ರ ವಾಗ್ವಿಲಾಸಂ ನೆಗಳಲ್ ವಾಜಿಶಾಸ್ತ್ರಮಂ ವಿರಚಿಸುವೆಂ' ಎಂಬುದರಿಂದ ಹಿಂದೆ ವಾಜಿಶಾಸ್ತ್ರವನ್ನು ಬರೆದ ಚಂದ್ರಕವಿಯನ್ನು ಅನುಸರಿಸಿ ಈ ಗ್ರಂಥ ರಚಿಸಿದಂತೆ ತೋರುತ್ತದೆ. ಸಿಂಹದತ್ತ, ರೇವಂತ ಮೊದಲಾದವರ ಸಂಸ್ಕೃತ ಹಯಶಾಸ್ತ್ರವನ್ನನುಸರಿಸಿ ತಾನು ಹೊಸಗನ್ನಡದಲ್ಲಿ ಈ ಗ್ರಂಥವನ್ನು ಬರೆದಂತೆ ಈತ ಹೇಳಿಕೊಂಡಿದ್ದಾನೆ.

ಅಶ್ವಶಾಸ್ತ್ರದಲ್ಲಿ 16 ಅಧ್ಯಾಯಗಳೂ 888 ಪದ್ಯಗಳೂ ಇವೆ. ಹೆಚ್ಚಿನವು ಕಂದ ಪದ್ಯಗಳು. ಈ ಗ್ರಂಥದಲ್ಲಿ ಅಶ್ವಗಳ ಸರ್ವಾಂಗಪರೀಕ್ಷೆ, ವರ್ಣ, ಸುಳಿ, ಹಲ್ಲಿನಿಂದ ವಯಸ್ಸನ್ನು ನಿರ್ಣಯಿಸುವುದು, ಪೋಷಣ ವಿಧಾನ, ರೋಗಗಳು. ಅವುಗಳಿಗೆ ಚಿಕಿತ್ಸೆ, ಅಶ್ವಗಳ ಉಪಯೋಗ ಮೊದಲಾದ ವಿಷಯಗಳ ನಿರೂಪಣೆಯಿದೆ. ತೆರೆಯಿಲ್ಲದೆ ಸೆರೆಯಿಲ್ಲದೆ ಕಿರಿಯವಾಗಿ ತೆಳ್ಪನೆ ಮೊನೆಯಾಗಿರೆ ಕಿವಿಗಳೊಳಗೆ ನುಣ್ಪಾಗಿರೆ ಕಟಮುಂ ವಿಕಟಮಾಗದಿರೆ ಹರಿ ಶುಭದಂ-ಎಂದು ಕುದುರೆಯ ಶುಭಲಕ್ಷಣವನ್ನು ಹೇಳಿ, ಅನಂತರ ವಾಜಿಯೆ ಮೊದಲಾವಿಜಯಕ್ಕಾಜಿಯೊಳರಸಂಗೆ ಬುದ್ಧಿವಂತಂಗದರಿಂ ವಾಜಿಗಳನೆಯ್ದೆ ಪೊರೆವುದು ಪೂಜಿಸುವುದು ವಿಜಯ ಲಕ್ಷ್ಮಿಯುಂ ಬಯಸುವವಂ ಎಂದು ಕುದುರೆಯ ಪ್ರಾಮುಖ್ಯತೆಯನ್ನು ವಿವರಿಸಿರುವನು. ಕ್ಲಿಷ್ಟವಾದ ಶಾಸ್ತ್ರಗ್ರಂಥಗಳನ್ನೂ ಅಚ್ಚಕನ್ನಡದಲ್ಲಿ ಸರಳವಾಗಿ ಬರೆಯಬಹುದು ಎಂಬುದಕ್ಕೆ ಈ ಗ್ರಂಥ ನಿದರ್ಶನವಾಗಿದೆ. (ಜಿ.ಬಿ.)

**ಅಭಿನವವಾದಿ ವಿದ್ಯಾನಂದ :** ಸು.1533. ಜೈನಕವಿ. ಕಾವ್ಯಸಾರ ಎಂಬ ಗ್ರಂಥದ ಸಂಕಲನಕಾರ. ಕಾವ್ಯಸಾರದ ಅಂತ್ಯದಲ್ಲಿ ವಿಜಯ ಸಂವತ್ಸರದ ಭಾದ್ರಪದ ಬಹುಳ 3ರಲ್ಲೂ ಶ್ರೀಮದಭಿನವವಾದಿ ವಿದ್ಯಾನಂದಸ್ವಾಮಿಗಳು ಭಲ್ಲಾತಕೀಪುರವರಾಧೀಶ್ವರ ಬೈರಾಗಿಗೆ ಬರೆಸಿಕೊಟ್ಟ ಕಾವ್ಯಸಾರಕ್ಕೆ ಮಂಗಳಂ ಮಹಾಶ್ರೀ- ಎಂದಿರುವುದರಿಂದ ಈತ ಭಲ್ಲಾತಕೀಪುರದವನೆಂದು (ಗೇರುಸೊಪ್ಪೆ) ಊಹಿಸಬಹುದು. ಕಾವ್ಯಸಾರದಲ್ಲಿ ಚಂದ್ರಶೇಖರನ (ಸು.1430) ಗುರುಮೂರ್ತಿ ಶಂಕರ ಶತಕದಿಂದ ಪದ್ಯಗಳನ್ನು ಉದ್ಧರಿಸಿರುವುದರಿಂದ ಈತ 1430ಕ್ಕಿಂತ ಈಚಿನವನಾಗಿರಬೇಕು. ಆದ್ದರಿಂದ ಬಹುಶಃ 1533ರಲ್ಲಿ ಬಂದ ವಿಜಯ ಸಂವತ್ಸರ ಈ ಗ್ರಂಥದ ಕಾಲ ಇರಬಹುದು. ನಗರ ತಾಲ್ಲೂಕಿನ 46ನೆಯ ಶಾಸನದಲ್ಲಿ ಉಲ್ಲೇಖವಾಗಿರುವ ವಾದಿವಿದ್ಯಾನಂದ ಈ ಕವಿಯೇ ಆಗಿದ್ದರೆ ವಿಜಯನಗರದ ಕೃಷ್ಣದೇವರಾಯ ಇವರ ಆಶ್ರಯದಾತನಾಗಿದ್ದಿರಬಹುದು ಎಂದು ಊಹಿಸಬಹುದಾಗಿದೆ.

ಕಾವ್ಯಸಾರ ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದ ಮಾದರಿಯ ಗ್ರಂಥ. ಈ ಸಂಕಲನದಲ್ಲಿ 45 ಅಧ್ಯಾಯಗಳೂ 1143 ಪದ್ಯಗಳೂ ಇವೆ. ಮಲ್ಲಿಕಾರ್ಜುನ ತನ್ನ ಗ್ರಂಥದಲ್ಲಿ ಹೇಳದ ಕವಿಗಳ ಮತ್ತು ಅವರ ಕಾವ್ಯಗಳ ಹೆಸರುಗಳನ್ನು ಈತ ಕಾವ್ಯಸಾರದಲ್ಲಿ ಹೇಳಿರುವುದರಿಂದ ಸಾಹಿತ್ಯ ಚರಿತ್ರೆಯ ರಚನೆಗೆ ಅಪರಿಮಿತ ಪ್ರಯೋಜನವಾಗುತ್ತದೆ. ಈತನ ಕಾಲಕ್ಕೆ ಬಳಕೆ ತಪ್ಪಿ ಹೋಗಿದ್ದ ಚಂಪೂ ಮಾರ್ಗದ ಕೃತಿಗಳ ಆದರ್ಶವನ್ನು ಎತ್ತಿತೋರಿಸುವುದಕ್ಕಾಗಿ ಎಂಬಂತೆ ಚಂಪೂ ಕಾವ್ಯಗಳ ವರ್ಣನೆಗಳಿಗೆ ಇಲ್ಲಿ ವಿಶೇಷ ಪ್ರಾಶಸ್ತ್ಯ ಕೊಡಲಾಗಿದೆ. ಆದಿಕಾಲದಿಂದ ಮಧುರನ ಕಾಲದವರೆಗಿನ ಗ್ರಂಥಗಳಿಂದ, ಗುರು ಮೂರ್ತಿಶಂಕರ ಶತಕದಿಂದ ಪದ್ಯಗಳು ಸಂಕಲಿತವಾಗಿವೆ. ಕೆಲವು ಮುಕ್ತಕಗಳೂ ಚಾಟುಪದ್ಯಗಳೂ ಸೇರಿವೆ. ಕೆಲವು ಆಕರ ಸಿಕ್ಕದ ಪದ್ಯಗಳೂ ಇವೆ. ಒಂದನೆಯ ಗುಣವರ್ಮನಿಂದ ರಚಿತವಾದ ಹರಿವಂಶ ಮತ್ತು ಶೂದ್ರಕ ಎಂಬ ಚಂಪೂಕಾವ್ಯಗಳ ವಿವರಗಳನ್ನು ಕಾವ್ಯಸಾರದಿಂದ ಮಾತ್ರ ತಿಳಿಯಬಹುದಾಗಿದೆ. ಕಾವ್ಯ ಸಾರದಲ್ಲಿರುವ ಹದಿನೆಂಟು ವರ್ಣನೆಗಳಲ್ಲಿ ಒಂದೊಂದಕ್ಕೂ ಬೇರೆಬೇರೆಯ

ಕಾವ್ಯಗಳಿಂದ ನಿದರ್ಶನ ಪದ್ಯಗಳನ್ನು ಉದ್ಧರಿಸಿದ್ದಾನೆ. ಇಂಥ ಪದ್ಯಗಳನ್ನು ಆಯುವಲ್ಲಿ ವಿದ್ಯಾನಂದನ ಪಾಂಡಿತ್ಯ, ಉತ್ತಮ ಅಭಿರುಚಿ, ರಸಿಕತೆ ವ್ಯಕ್ತವಾಗುತ್ತದೆ. ಕನ್ನಡ ಸಾಹಿತ್ಯದ ಶ್ರೀಮಂತಿಕೆಯನ್ನು ಈ ಸಂಕಲನ ನಿರ್ದೇಶಿಸುತ್ತದೆ. (ಪಿ.ಬಿ.;ಎನ್.ಎಆರ್.)

**ಅಮರಜ :** ಭೀಮಾ ನದಿಯ ಉಪನದಿಗಳಲ್ಲೊಂದು. ಮಹಾರಾಷ್ಟ್ರ ರಾಜ್ಯದ ಉಸ್ಮಾನಾಬಾದ್ ಜಿಲ್ಲೆಯ ಉಮರ್ಗಾ ತಾಲ್ಲೂಕಿನಲ್ಲಿ ಆಲೂರ ಗ್ರಾಮದ ಹತ್ತಿರ ಹುಟ್ಟಿ, ಗುಲ್ಬರ್ಗ ಜಿಲ್ಲೆಯ ಆಳಂದ ತಾಲ್ಲೂಕನ್ನು ನೀರ್ಗುಡಿ ಗ್ರಾಮದ ಹತ್ತಿರ ಪ್ರವೇಶಿಸುತ್ತದೆ. ಆ ತಾಲ್ಲೂಕಿನ ಮಧ್ಯದಲ್ಲಿ ದಕ್ಷಿಣಕ್ಕೆ ಹರಿದು ಅಫಜಲಪುರ ತಾಲ್ಲೂಕಿನ ಗಾಣಗಾಪುರದ ಬಳಿ ಭೀಮಾನದಿಗೆ ಕೂಡುತ್ತದೆ. ನದಿಯ ಉದ್ದ ಸು.100ಕಿಮೀ. ಉಮರ್ಗಾ ತಾಲ್ಲೂಕಿನಲ್ಲಿನ 8-10ಕಿಮೀ ಬಿಟ್ಟರೆ ಮಿಕ್ಕ ಹರಿವು ಗುಲ್ಬರ್ಗ ಜಿಲ್ಲೆಯಲ್ಲಿ. ಅಮರಜ ನದಿಯ ಒಟ್ಟು ಜಲಾನಯನ ಕ್ಷೇತ್ರ ಸು.1528ಚಕಿಮೀ.

ಆಳಂದ ಮತ್ತು ಅಫಜಲಪುರ ತಾಲ್ಲೂಕುಗಳಲ್ಲಿ ಈ ನದಿಯ ಬಯಲು ವ್ಯವಸಾಯಕ್ಕೆ ಅನುಕೂಲವಾಗಿದೆ. ಆಳಂದ ತಾಲ್ಲೂಕಿನಲ್ಲಿ ಶಾಖಾಪುರ ಗ್ರಾಮದ ಹತ್ತಿರ ಆಳಂದ ಹಿರೋಳಿ ರಸ್ತೆಗಾಗಿ ಈ ನದಿಗೆ ಸೇತುವೆ ಕಟ್ಟಲಾಗಿದೆ. ಮುಂಬಯಿ-ಚೆನ್ನೈ ರೈಲುಮಾರ್ಗ ಮಡಿಹಾಳ ಬಳಿ ಈ ನದಿಯನ್ನು ದಾಟುತ್ತದೆ.

ಅಮರಜ ನದಿಯ ದಂಡೆಗುಂಟ ನೀರ್ಗುಡಿ, ಕೊಲ್ಲಾರಿ, ಭೂಸನೂರ, ಜವಳಿ ಮೊದಲಾದ ಗ್ರಾಮಗಳಿವೆ. ಈ ನದಿ ಭೀಮಾನದಿಯನ್ನು ಸಂಗಮಿಸುವ ಮುಖದ ಹತ್ತಿರ ಗಾಣಗಾಪುರ (ನೋಡಿ) ಪುಣ್ಯಕ್ಷೇತ್ರವಿದೆ. (ಎಸ್.ಎಸ್.ಎನ್.)

**ಅಮುಗಿದೇವ :** 12ನೆಯ ಶತಮಾನದ ವಚನಕಾರ. ಮೊದಲು ಸಿದ್ಧರಾಮನ ಸೊನ್ನಲಿಗೆಯಲ್ಲಿದ್ದು, ಅನಂತರ ಕಲ್ಯಾಣಕ್ಕೆ ಬಂದು ಬಸವಣ್ಣನವರ ಮಹಾಮಣಿಹದಲ್ಲಿ ಭಾಗವಹಿಸಿದ ಇತಿಹಾಸಪ್ರಸಿದ್ಧ ವ್ಯಕ್ತಿ. ಪಂಡರಾಪುರಕ್ಕೆ ಸಮೀಪದಲ್ಲಿರುವ ಪುಳುಜ ಗ್ರಾಮದ ಸೋಮನಾಥ ಈತನ ಇಷ್ಟದೈವ. ಇವನ ಸತಿ ರಾಯಮ್ಮ. ನೇಯ್ಗೆ ಈತನ ಕಾಯಕ. ಪುಳುಜ ಅಥವಾ ಪುಳುಂಜ (ಈಗ ಪುಳುಜ, ಹೊಳಜ) ಎಂಬ ಗ್ರಾಮದಲ್ಲಿ ದೊರೆತಿರುವ ಒಂದು ಶಾಸನ (1200) ಅಮುಗಿದೇವನ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ. ಯಾದವರಾಜ ಸಿಂಘಣ ಈತನಿಗೆ ಭಕ್ತಿಯಿಂದ ದಾನಕೊಟ್ಟ ವಿಷಯ, ಸಿಂಘಣನ ಕಾಲದವರೆಗೂ ಅಂದರೆ ಕಲ್ಯಾಣದ ಕ್ರಾಂತಿಯಾದ ಮೇಲೆ ಮೂವತ್ತು ವರ್ಷಗಳಿಗಿಂತಲೂ ಹೆಚ್ಚು ಕಾಲ ಈತ ಜೀವಿಸಿದ್ದ ವಿಷಯ ಹಾಗೂ ಈತ ತನ್ನ ವ್ಯಕ್ತಿತ್ವದ ಪ್ರಭಾವವನ್ನು ಸುತ್ತಲೂ ಬೀರಿ ರಾಜಗೌರವವನ್ನು ಪಡೆದ ವಿಷಯ ಇವುಗಳನ್ನು ಈ ಶಾಸನ ತಿಳಿಸುತ್ತದೆ.

ರಾಘವಾಂಕಚಾರಿತ್ರವನ್ನು ಬರೆದ ಸಿದ್ಧನಂಜೇಶ, ರಾಘವಾಂಕನ ಸಿದ್ಧರಾಮ ಚಾರಿತ್ರದ ಕಥೆಯನ್ನು ಸಂಗ್ರಹಿಸಿ ಕೊಡುವಾಗ ಅಮುಗಿದೇವನ ಒಂದು ಕಥೆಯನ್ನೂ ಹೇಳುತ್ತಾನೆ. ಆದರೆ ಈಗ ಸಿಕ್ಕ ಸಿದ್ಧರಾಮ ಚಾರಿತ್ರದಲ್ಲಿ ಈ ಕಥೆ ಇಲ್ಲ. ಹಲಗೆದೇವರ ಶೂನ್ಯ ಸಂಪಾದನೆಯಲ್ಲಿಯೂ ಅಮುಗಿದೇವನನ್ನು ಕುರಿತ ಈ ಬಗೆಯ ಕಥೆ ಬರುತ್ತದೆ. ಈತನ ಕಥೆಯನ್ನೇ ಪ್ರಮುಖ ಆಧಾರವಾಗಿಟ್ಟುಕೊಂಡು ಸು.17ನೆಯ ಶತಮಾನದ ಶಿವಲಿಂಗಕವಿ ಅಮುಗಿದೇವಯ್ಯಗಳ ಸಾಂಗತ್ಯ ಎಂಬ ಒಂದು ಸ್ವತಂತ್ರ ಕೃತಿಯನ್ನೇ ರಚಿಸಿದ್ದಾನೆ. ಶಂಕರಲಿಂಗಕವಿ ಅಮುಗಿದೇವನ ಮೇಲೆ ಒಂದು ರಗಳೆಯನ್ನು ಬರೆದಿದ್ದಾನೆ.

ಅಮುಗಿದೇವ ಸಿದ್ಧಸೋಮನಾಥ ಎಂಬ ಅಂಕಿತವನ್ನಿಟ್ಟುಕೊಂಡು ವಚನಗಳನ್ನು ರಚಿಸಿದ್ದಾನೆ. ಇದುವರೆಗೆ ಸಿಕ್ಕಿರುವ ಈತನ ಕೆಲವೇ ವಚನಗಳು ಈತ ಒಳ್ಳೆಯ ವಚನಕಾರ ಎಂಬುದಕ್ಕೆ ಸಾಕ್ಷಿಯಾಗಿವೆ. ಈತನ ಪತ್ನಿ ರಾಯಮ್ಮ ಕೂಡ ಅಮುಗೇಶ್ವರಲಿಂಗ ಎಂಬ ಅಂಕಿತದಿಂದ ವಚನಗಳನ್ನು ಬರೆದಿರುವಂತೆ ಕಂಡುಬರುತ್ತದೆ.

ಸ್ವಲ್ಪ ಹೆಚ್ಚುಕಡಿಮೆ ಇದೇ ಕಾಲದಲ್ಲಿ ಅಮುಗಿದೇವ ಎಂಬ ಇನ್ನೊಬ್ಬ ವಚನಕಾರ ಕಮಲೇಶ್ವರಲಿಂಗ ಎಂಬ ಅಂಕಿತದಿಂದ ವಚನಗಳನ್ನು ಬರೆದಿರುವುದಾಗಿ ತಿಳಿದುಬರುತ್ತದೆ. (ಎಚ್.ಟಿ.ಎಸ್.)

**ಅಮೃತನಂದಿ :** ಕರ್ನಾಟಕದಲ್ಲಿ ಅಮೃತನಂದಿ ಎಂಬ ಹೆಸರಿನ ಇಬ್ಬರು ವ್ಯಕ್ತಿಗಳು ಕಂಡುಬರುತ್ತಾರೆ. ಒಬ್ಬ ಜೈನಕವಿ. ಅಕಾರಾದಿ ವೈದ್ಯ ನಿಘಂಟುವಿನ ಕರ್ತೃ. ಇವನ ಕಾಲ ಸು.1300. ಇವನ ನಿಘಂಟುವಿನಲ್ಲಿ ಸಂಸ್ಕೃತ ಪದಗಳಿಗೆ ಕನ್ನಡದ ಪರ್ಯಾಯ ಶಬ್ದಗಳನ್ನು ಹೇಳಿದೆ.

ಇನ್ನೊಬ್ಬನು ಅಮೃತಾನಂದಿ, ಅಮೃತಾನಂದ, ಅಮೃತಾನಂದಯೋಗಿ ಎಂಬ ಹೆಸರುಗಳಿಂದ ಸಾಳ್ವನ ರಸರತ್ನಾಕರದಲ್ಲಿ ಕೀರ್ತಿತನಾಗಿರುವ ಸಂಸ್ಕೃತ ಲಾಕ್ಷಣಿಕ. ಕಾಲ ಸು.1440. ಇವನ ಗ್ರಂಥ ಅಲಂಕಾರ ಸಂಗ್ರಹ. ಇವನು ವೆಂಗಿಯ ಭಕ್ತಿ ಭೂಪಾಲನ ಮಗ. ಮನ್ವರಾಜನ ಆಸ್ಥಾನ ಪಂಡಿತನಾಗಿದ್ದ. ವರದರಾಜನ ತಾರ್ಕಿಕರಕ್ಷಾ ಗ್ರಂಥವನ್ನಲ್ಲದೆ 13ನೆಯ ಶತಮಾನಕ್ಕೆ ಹಿಂದಿನ ಅನೇಕ ಕಾವ್ಯ ನಾಟಕಗಳನ್ನು ಉಲ್ಲೇಖಿಸಿದ್ದಾನೆ. ಅಲಂಕಾರ ಸಂಗ್ರಹದಲ್ಲಿ ಅಲಂಕಾರಶಾಸ್ತ್ರದ ಎಲ್ಲ ಪ್ರಕ್ರಿಯೆಗಳೂ ಚರ್ಚಿತವಾಗಿವೆ. ಗ್ರಂಥದ ಹೆಸರು ಸಂಗ್ರಹವಾದರೂ ಪ್ರತಿಪಾದನೆ ವಿವರವಾಗಿದೆ. ಕಾವ್ಯತತ್ತ್ವವನ್ನು ದಂಡಿ ಮಮ್ಮಟರ ಮಾದರಿಯಲ್ಲಿಯೂ ನಾಟಕ ತತ್ತ್ವವನ್ನು ಭರತನಾಟ್ಯಶಾಸ್ತ್ರ, ಭಾವಪ್ರಕಾಶಗಳ ಆಧಾರದಿಂದಲೂ ನಿರೂಪಿಸಿದ್ದಾನೆ. ಉದಾಹರಣೆಗಳಲ್ಲಿ ಸ್ವಕೃತ ಹಾಗೂ ಪರಕೃತ ರಚನೆಗಳಿವೆ. (ಕೆ.ಕೆ.)

**ಅಮೃತಾಪುರ :** ಚಿಕ್ಕಮಗಳೂರು ಜಿಲ್ಲೆ ತರೀಕೆರೆ ತಾಲ್ಲೂಕಿನಲ್ಲಿ ಕಸಬೆಯಿಂದ ಈಶಾನ್ಯಕ್ಕೆ ಸು.10ಕಿಮೀ ದೂರದಲ್ಲಿರುವ ಒಂದು ಹಳ್ಳಿ.

ಇಮ್ಮಡಿ ವೀರಬಲ್ಲಾಳನ ದಂಡನಾಯಕ ಅಮಿತಯ್ಯನ (ಅಮೃತಯ್ಯ) ಹೆಸರಿನ ಮೇಲೆ ಊರಿಗೆ ಈ ಹೆಸರು ಬಂತೆಂದು 1210ರ ಒಂದು ಶಾಸನದಿಂದ ಗೊತ್ತಾಗುತ್ತದೆ. ಅಮಿತಯ್ಯ ದಂಡನಾಯಕ ಇಲ್ಲಿನ ಅಮೃತೇಶ್ವರ ದೇವಾಲಯವನ್ನು ಕಟ್ಟಿಸಿದನೆಂದೂ ಸು.1547ರ ವರೆಗೆ ಅನೇಕ ಧರ್ಮದತ್ತಿಗಳು ಈ ದೇವಾಲಯಕ್ಕೆ ಒದಗಿಬಂದುವೆಂದು ಇತರ ಶಾಸನಗಳಿಂದ ತಿಳಿಯುತ್ತದೆ. ಇಲ್ಲಿಯ ಸುಮಾರು 20 ಶಾಸನಗಳಲ್ಲಿ 1196ರ ಒಂದು ಶಾಸನ ಕನ್ನಡದ ಪ್ರಸಿದ್ಧ ಕವಿ ಜನ್ನನಿಂದ ರಚಿತವಾದುದು. (ಎಚ್.ವಿ.ಎಸ್.)

ಅಮೃತೇಶ್ವರ ದೇವಾಲಯ ಉತ್ತಮ ಹೊಯ್ಸಳ ವಾಸ್ತುಕೃತಿಗಳಲ್ಲೊಂದು. ಇದರಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮತ್ತು ಮಹಾಮಂಟಪ ಇವೆ. ನವರಂಗದಿಂದ ದಕ್ಷಿಣದ ಕಡೆಗೆ ತೆರೆದಂತಿರುವ ಮುಖಮಂಟಪವೂ ಇದೆ.



ಅಮೃತೇಶ್ವರ ದೇವಾಲಯದ ಅಲಂಕೃತ ಗೋಪುರಗಳು

ಸುತ್ತಲೂ ಎತ್ತರದ ಪ್ರಾಕಾರವಿದೆ. ಮಹಾಮಂಟಪದ ತಳವಿನ್ಯಾಸ ಚೌಕ ಶಿಲುಬೆ. ಉಳಿದ ಭಾಗಗಳೂ ಚೌಕಗಳೇ ಆದರೂ ಪರಿಘುದ ಹಿನ್‌ಸರಿತ ಮತ್ತು ಮುನ್‌ಸರಿತಗಳಿಂದ ಗರ್ಭಗುಡಿಯ ಭಾಗ ಸ್ವಲ್ಪಮಟ್ಟಿಗೆ ನಕ್ಷತ್ರಾಕಾರ ಅಥವಾ ಕುಂಡಾಕಾರವಾಗಿದೆ. ಈ ಭಾಗ 1196ರ ರಚನೆಯಾದರೆ, ಮುಂದಿನ ಮಹಾಮಂಟಪವನ್ನು ಸು.1206ರಲ್ಲಿ ಕಟ್ಟಿದಂತೆ ತೋರುತ್ತದೆ. ಗರ್ಭಗೃಹದಲ್ಲಿ ಅಮೃತೇಶ್ವರ ಲಿಂಗವಿದೆ. ಗರ್ಭಗುಡಿಯ ದ್ವಾರಬಂಧ ಉತ್ತಮ ಕೆತ್ತನೆಯಿಂದ ಕೂಡಿದೆ. ಸುಕನಾಸಿಯ ದ್ವಾರವೂ ಅಷ್ಟೇ ಚೆನ್ನಾಗಿದೆ. ಇದರಲ್ಲಿ ರತಿಮನ್ಮಥರ ವಿಗ್ರಹಗಳಿರುವುದು ವಿಶೇಷ. ಈ

ದ್ವಾರದ ಪಕ್ಕಗಳಲ್ಲಿ ಕುಸುರಿ ಕೆಲಸದ ಜಾಲಂಧ್ರಗಳಿವೆ. ನಾಲ್ಕು ಕಂಬಗಳಿರುವ ನವರಂಗದ ಭುವನೇಶ್ವರಿಗಳು ಸುಮಾರು 2 ಅಡಿಗಳಿಗಿಂತ ಹೆಚ್ಚು ಆಳವಾಗಿದ್ದು ಇಳಿಬಿದ್ದ ಪದ್ಮ, ಮೋತೆ ಇತ್ಯಾದಿಗಳಿಂದ ಸೂಕ್ಷ್ಮ ಕೆತ್ತನೆಗಳೊಡನೆ ಭವ್ಯವಾಗಿ ಅಲಂಕೃತವಾಗಿವೆ. ನವರಂಗದ ಒಳಗೆ ಗಣಪತಿ, ಸಪ್ತಮಾತೃಕೆಯರು, ಸರಸ್ವತಿ, ನಾಗದಂಪತಿಗಳು ಇತ್ಯಾದಿ ವಿಗ್ರಹಗಳಿವೆ. ಮಹಾಮಂಟಪ ಹೊಯ್ಸಳ ಮಾದರಿಯ ಹೊಳಪುಳ್ಳ 36 ಕಂಬಗಳಿಂದ ಕೂಡಿದೆ. ನಾಲ್ಕು ಕಡೆಯು ಚಾಚುಗಳಲ್ಲೂ ಇನ್ನೂ ಎರಡೆರಡು ಕಂಬಗಳಿವೆ. ಇಲ್ಲಿಯ ಎಲ್ಲಾ ಭುವನೇಶ್ವರಿಗಳೂ ಸುಂದರ ನಿರೂಪಣೆಗಳು. ಹಲವುಗಳ ಮೇಲೆ ಅವನ್ನು ರೂಪಿಸಿದ ಮಲ್ಲಿತಮ್ಮ, ಪದುಮಣ್ಣ, ಬಲುಗ, ಮಲಯ ಮೊದಲಾದ ಶಿಲ್ಪಿಗಳ ಹೆಸರುಗಳಿವೆ. ಮಹಾಮಂಟಪದ ಸುತ್ತಲಿನ ತಳಗೋಡೆಯ ಹೊರಮೈ ಅನೇಕ ಪುರಾಣಕಥೆಗಳು ಮತ್ತು ಇತರ ಶಿಲ್ಪಗಳಿಂದ ಅಲಂಕೃತವಾಗಿದೆ. ಅವುಗಳ ಮೇಲೆ ಜಾಲಂಧ್ರಗಳಿವೆ. ಗರ್ಭಗೃಹ ಹಾಗೂ ನವರಂಗದ ಹೊರಮೈಯಲ್ಲಿ ಅರೆಕಂಬಗಳು ಹಾಗೂ ದ್ರಾವಿಡ ಮತ್ತು ನಾಗರ ರೀತಿಯ ಶಿಖರಾಲಂಕಾರಗಳಿವೆ. ದೇವಾಲಯದ ಸುತ್ತಲೂ ಹಬ್ಬಿರುವ ಇಳಿ ಕಪೋತಗಳ ಮೇಲೆ ಅನೇಕ ಸೂಕ್ಷ್ಮ ಕೆತ್ತನೆಗಳಿರುವ ಹಾರಪಂಕ್ತಿ ಇದೆ. ಗರ್ಭ ಗೃಹದ ಮೇಲಿನ ಶಿಖರ ಸಹ ವೈಶಿಷ್ಟ್ಯಪೂರ್ಣವಾಗಿದೆ. ಸುಮಾರು ನಕ್ಷತ್ರಾಕಾರದ ವಿನ್ಯಾಸವಿದ್ದು ಅನೇಕ ಶಿಲ್ಪಗಳಿಂದ ಅಲಂಕೃತವಾಗಿದೆ. ಮುಂಭಾಗ ಬಿಟ್ಟು ಇತರ ಮೂರೆಡೆಗಳಲ್ಲಿ ಮೇಲೆದ್ದು ನಿಂತಂತಿರುವ ಶಿಲ್ಪಗಳು ಒಂದರ ಮೇಲೊಂದರಂತೆ ಹಲವು ಸಾಲುಗಳಲ್ಲಿವೆ. ಸುಕನಾಸಿಯ ಮೇಲೆ ಶಿಖರದ ಚಾಚಣಿಕೆ ಇದ್ದು ಅದರ ಮೇಲೆ ಹೊಯ್ಸಳ ಲಾಂಛನದ ಶಿಲ್ಪವಿದೆ.



ಅಮೃತೇಶ್ವರ ದೇವಾಲಯದ ಹೊರನೋಟ

ಮಹಾಮಂಟಪದ ಉತ್ತರದ ದ್ವಾರಮಂಟಪದ ಎದುರು ಸುಮಾರು ಇದೇ ಕಾಲದ ಒಂದು ಮಂಟಪ (ಸೂಳೆಮಂಟಪ) ಇದೆ. ದೇವಾಲಯದ ಆಗ್ನೇಯಕ್ಕೆ ಇನ್ನೊಂದು ಗುಡಿ ಇದ್ದು ಅದೀಗ ಶಿಥಿಲವಾಗಿದೆ. ಗರ್ಭಗೃಹ, ನವರಂಗ ಮತ್ತು ಮುಖಮಂಟಪವಿದ್ದ ಈ ಗುಡಿ ಸರಸ್ವತಿಯದೆಂದು ಊಹೆ.

ಇವೆಲ್ಲವನ್ನೂ ಒಳಗೊಂಡಿರುವ ಸುತ್ತಲ ಪ್ರಾಕಾರ ಈಗ ಶಿಥಿಲವಾಗಿದ್ದರೂ ಒಮ್ಮೆ ಅದರ ತಲೆಯಂಚಿನಲ್ಲಿ ಸುತ್ತಲೂ ಅನೇಕ ವೃತ್ತಾಕಾರದ ಶಿಲ್ಪಾಲಂಕೃತ ಹೆನ್ನಾಲಗೆಗಳು ಸಾಲಾಗಿದ್ದು ದೇವಾಲಯದ ಭವ್ಯತೆಯನ್ನು ಹೆಚ್ಚಿಸಿದ್ದುವು. ವಿನ್ಯಾಸದಲ್ಲಿ ಹಾಗೂ ಶಿಲ್ಪಕೆತ್ತನೆಯಲ್ಲಿ ಅಮೃತೇಶ್ವರ ದೇವಾಲಯ ಹೊಯ್ಸಳ ಕಾಲದ ಒಂದು ವಿಶಿಷ್ಟ ಸಾಧನೆ. *

**ಅಮೃತೂರು** : ತುಮಕೂರು ಜಿಲ್ಲೆಯ ಕುಣಿಗಲು ತಾಲ್ಲೂಕಿನಲ್ಲಿ ಕುಣಿಗಲಿನ ನೈಋತ್ಯಕ್ಕೆ ಸು.22ಕಿಮೀ ದೂರದಲ್ಲಿರುವ ಗ್ರಾಮ; ಇದೇ ಹೆಸರಿನ ಹೋಬಳಿಯ ಕೇಂದ್ರ. ಮೊದಲು ಇದಕ್ಕೆ ಆತಕೂರು, ವೀರನರಸಿಂಹಪುರ ಎಂಬ ಹೆಸರುಗಳಿದ್ದು ಒಂದು ಅಗ್ರಹಾರವಾಗಿತ್ತೆಂದು ಕಾಣುತ್ತದೆ. 16ನೆಯ ಶತಮಾನದಲ್ಲಿ, ದ್ರಾವಿಡ ಶೈಲಿಯಲ್ಲಿ ನಿರ್ಮಿತವಾದ ಇಲ್ಲಿನ ಚನ್ನಕೇಶವ ದೇವಾಲಯ ಶಿಲ್ಪಗಳಿರುವ ಕಂಬಗಳನ್ನೊಳಗೊಂಡು ಸುಂದರವಾಗಿದೆ. ಕೆರೆಯ ಹತ್ತಿರವಿರುವ ಸೋಮೇಶ್ವರ ಅಥ'ವಾ ಚಂದ್ರಮೌಳೇಶ್ವರ ದೇವಾಲಯದಲ್ಲಿ (16ನೆಯ ಶತಮಾನ) ಉದ್ಭವಲಿಂಗ ಇದೆ. ದೇವಾಲಯದ ಹತ್ತಿರ 45' ಎತ್ತರವಿರುವ ಸಣ್ಣ ದೀಪ ಸ್ತಂಭವೊಂದಿದೆ. ದೇವಾಲಯದ ಹಿಂಭಾಗದಲ್ಲಿ 20' ಎತ್ತರವಿರುವ ಉಯ್ಯಾಲೆ ಕಂಬವಿದೆ.

ಅಮೃತೂರಿನ ಹತ್ತಿರದ ಮಾರ್ಕೋನಹಳ್ಳಿಯಲ್ಲಿ ಶಿಂಷಾಕ್ಕೆ ಅಡ್ಡಲಾಗಿ ಕಟ್ಟಿರುವ (1939) ಅಣೆಕಟ್ಟು ತುಮಕೂರು ಜಿಲ್ಲೆಯಲ್ಲೇ ಅತಿ ದೊಡ್ಡದು. ನೀರು ಹಿಡಿಯುವ ಪ್ರಮಾಣ 8,890 ಯೂನಿಟ್‍ಗಳು; ಅಚ್ಚುಕಟ್ಟು 11,000 ಎಕರೆಗಳು. 8' ವ್ಯಾಸದ 2,000 ಕ್ಯುಸೆಕ್ಸಿನಷ್ಟು ನೀರನ್ನು ಹೊರಹಾಕುವ ಇಳಿಗೊಳವೆಗಳನ್ನೊಳವಡಿಸಿರುವ ಈ ಕಟ್ಟೆ ವಿಶಿಷ್ಟ ತಾಂತ್ರಿಕ ರಚನೆ. (ಎಸ್.ಜಿ.)

**ಅಮೋಘವರ್ಷ I** (ನೃಪತುಂಗ) : ರಾಷ್ಟ್ರಕೂಟ ವಂಶದ ರಾಜ (ಸು.814-78). 3ನೆಯ ಗೋವಿಂದನ ಮಗ. ಇವನ ಮೊದಲ ಹೆಸರು ಶರ್ವ. ಅಮೋಘವರ್ಷ ಎಂಬುದು ಇವನು ಪಟ್ಟಾಭಿಷಿಕ್ತನಾದ ಮೇಲೆ ಇಟ್ಟುಕೊಂಡ ಹೆಸರು. ಈತನಿಗೆ ನೃಪತುಂಗ, ರಟ್ಟಮಾರ್ತಂಡ, ವೀರನಾರಾಯಣ, ಅತಿಶಯ ಧವಳ ಎಂಬ ಬಿರುದುಗಳು ಇದ್ದವು.

ಗೋವಿಂದ ವಿಂಧ್ಯಪರ್ವತದ ತಪ್ಪಲಲ್ಲಿದ್ದ ಶ್ರೀಭವನದಲ್ಲಿ ಬೀಡು ಬಿಟ್ಟಿದ್ದಾಗ ಶರ್ವ- ಅಮೋಘವರ್ಷ ಹುಟ್ಟಿದನೆಂದು ಸಂಜಾನ ಶಾಸನದಲ್ಲಿ ಹೇಳಿದೆ. 803ರ ಮಣ್ಣೆಯ ಶಾಸನದಲ್ಲಿ ಗೋವಿಂದ ಶ್ರೀಭವನದಲ್ಲಿದ್ದ ಸಂಗತಿ ಉಕ್ತವಾಗಿದೆಯಾದ ಕಾರಣ ಅಮೋಘವರ್ಷ ಸು.800ರಲ್ಲಿ ಹುಟ್ಟಿರಬಹುದು. 814ರಲ್ಲಿ ಗೋವಿಂದ ಮೃತನಾದ. ಆಗ ಪಟ್ಟಕ್ಕೆ ಬಂದ ಅಮೋಘವರ್ಷ 14 ವರ್ಷದ ಬಾಲಕ. ಆದರೆ ಗೋವಿಂದ ತೀರಿಕೊಳ್ಳುವ ಮೊದಲು ಗುಜರಾತಿನಲ್ಲಿದ್ದ ತನ್ನ ತಮ್ಮನ ಮಗ ಕರ್ಕನನ್ನು ರಾಜಧಾನಿಗೆ ಕರೆಸಿ, ಅಮೋಘವರ್ಷ ವಯಸ್ಸಿಗೆ ಬರುವವರೆಗೂ ರಾಜ್ಯಸೂತ್ರಗಳನ್ನು ನಿರ್ವಹಿಸುವಂತೆ ವ್ಯವಸ್ಥೆ ಮಾಡಿದ್ದ.

ಅಮೋಘವರ್ಷನ ಆಳ್ವಿಕೆಯ ಮೊದಲ ಮೂರು ವರ್ಷಗಳಲ್ಲಿ ಯಾವ ಘಟನೆಗಳೂ ಆಗಲಿಲ್ಲ. ಅನಂತರ ಈತ ಅನೇಕ ಕಷ್ಟಗಳನ್ನು ಅನುಭವಿಸಬೇಕಾಯಿತು. ಸಾಮ್ರಾಟ ಇನ್ನೂ ಹದಿವಯಸ್ಸಿನವನಾದ್ದರಿಂದ, ರಾಷ್ಟ್ರಕೂಟ ಮತ್ತು ಚಾಳುಕ್ಯ ಕುಲದ ಹಲವರು ಬಂಡೆದ್ದು ರಾಜ್ಯಾಕ್ರಮಣ ಮಾಡುವ ಸನ್ನಾಹದಲ್ಲಿದ್ದರು (ಸು.817). ಇವರಲ್ಲಿ ಪ್ರಾಯಶಃ ಸ್ತಂಭನ ಮಗ ಶಂಕರಗಣ ಮತ್ತು ಹಿಂದೆ ಗೋವಿಂದನಿಂದ ಪರಾಜಿತನಾಗಿದ್ದ ಪೂರ್ವಚಾಳುಕ್ಯ ರಾಜ ಇಮ್ಮಡಿ ವಿಜಯಾದಿತ್ಯ ಮುಖ್ಯ ಪಾತ್ರ ವಹಿಸಿರಬೇಕು. ಇವರ ಕಾರ್ಯಾಚರಣೆಗಳಿಂದ ಅಮೋಘವರ್ಷ ಕೆಲಕಾಲ ರಾಜ್ಯವನ್ನು ತ್ಯಜಿಸಿಹೋಗಬೇಕಾದ ಪರಿಸ್ಥಿತಿಯೂ ಒದಗಿದಂತೆ ತೋರುತ್ತದೆ. ಆದರೆ, ಬಡೋದ ತಾಮ್ರಶಾಸನದಲ್ಲಿ ಹೇಳಿರುವಂತೆ, ಗುಜರಾತಿನ ರಾಜ ಕರ್ಕ ಬಂಡುಗಾರರನ್ನು ಗೆದ್ದು ಅಮೋಘವರ್ಷನನ್ನು ಸಿಂಹಾಸನದ ಮೇಲೆ ಸ್ಥಿರಪಡಿಸಿದ (ಸು.821). ಈ ಕಾಲದಲ್ಲಿ ಪಾತಾಲಮಲ್ಲ (ಈತನೇ ಕರ್ಕನಿರಬಹುದು) ಶತ್ರುಗಳನ್ನು ನಿಗ್ರಹಿಸಿ, ರಾಜ್ಯದಲ್ಲಿ ಶಾಂತಿಯನ್ನು ನೆಲೆಗೊಳಿಸಿ ಅಮೋಘವರ್ಷನನ್ನು ಅವನ ವಂಶಾನುಗತ ಸಿಂಹಾಸನದ ಮೇಲೆ ಸ್ಥಿರವಾಗಿ ಕೂಡಿಸಿದನೆಂದು ಸಂಜಾನ ತಾಮ್ರಶಾಸನ ತಿಳಿಸುತ್ತದೆ.

ಅಮೋಘವರ್ಷನ ಆಳ್ವಿಕೆಯ ಮೊದಲ ವರ್ಷಗಳಲ್ಲಿ ರಾಜ್ಯದೊಳಗಲ್ಲದೆ ಹೊರಗೂ ಶತ್ರುವರ್ಧನೆಯಾಗುತ್ತಿತ್ತು. ಗಂಗ ಶಿವಮಾರ ಸಾಮ್ರಾಟನ ಮೇಲೆ ದಂಗೆಯೆದ್ದ (ಸು.816). ಪೂರ್ವಚಾಳುಕ್ಯವಂಶದ ಇಮ್ಮಡಿ ವಿಜಯಾದಿತ್ಯ ಸಹ ಸ್ವತಂತ್ರನಾಗಿದ್ದ. ಆದರೆ ಅಮೋಘವರ್ಷ ಕರ್ಕ ಮತ್ತು ದಂಡನಾಯಕರ ಸಹಾಯದಿಂದ ಶಿವಮಾರನನ್ನು ಸೋಲಿಸಿದ ಈತ ಕಾಗಿಮೊಗೆಯೂರು ಎಂಬಲ್ಲಿ ನಡೆದ ಯುದ್ಧದಲ್ಲಿ ಮಡಿದನೆಂದೂ ತೋರುತ್ತದೆ. ಇವನ ಮಗ ರಾಚಮಲ್ಲ ಪುನಃ ತನ್ನ ರಾಜ್ಯದ ದಕ್ಷಿಣ ಭಾಗಗಳನ್ನು ರಾಷ್ಟ್ರಕೂಟರಿಂದ ಗಳಿಸಿಕೊಂಡ. ಅತ್ತ ವಿಜಯಾದಿತ್ಯನಾದರೂ ಸುಮಾರು 15 ವರ್ಷಗಳ ಕಾಲ ನಿರ್ಬಾಧಿತನಾಗಿಯೇ ಉಳಿದ. ಸು.830ರಲ್ಲಿ ಅಮೋಘವರ್ಷ ವೆಂಗಿಯ ಮೇಲೆ ನಡೆದ ವಿಂಗವಲ್ಲೀ ಕದನದಲ್ಲಿ ಚಾಳುಕ್ಯರನ್ನು ಸದೆಬಡಿದು ರಾಜ್ಯಾಕ್ರಮಣ ಮಾಡಿದ. ಅಮೋಘವರ್ಷನ ದಂಡನಾಯಕ ಬಂಕೆಯ ಅವನನ್ನು ಕಾವೇರಿಯಿಂದ ದಕ್ಷಿಣಕ್ಕೆ ಓಡಿಸಿದ (ಸು.830). ಇತ್ತ ಗಂಗ-ಚಾಳುಕ್ಯರ ತೊಂದರೆಗಳನ್ನು ನಿವಾರಿಸಿಕೊಳ್ಳುತ್ತಿದ್ದಂತೆಯೇ ಗುಜರಾತಿನ ರಾಷ್ಟ್ರಕೂಟ ಮನೆತನದ ಅರಸ 1ನೆಯ ಧ್ರುವ ಇವನ ಮೇಲೆ ಯುದ್ಧ ಸಾರಿದ. ಹಿಂದೆ ಈ ಮನೆತನದವರು ನಿಷ್ಠಾವಂತ ಸಾಮಂತರಾಗಿದ್ದರೂ ಈ ಕಲಹವೇಕೆ ಉಂಟಾಯಿತೆಂದು ತಿಳಿಯುವುದಿಲ್ಲ. ಅಮೋಘವರ್ಷ ಧ್ರುವನನ್ನು ಸೋಲಿಸಿದರೂ ಅವನ ಮಗ ಅಕಾಲವರ್ಷ ಪುನಃ ಪ್ರಬಲನಾದ. ಆಗ ಅಮೋಘವರ್ಷ ದಕ್ಷಿಣದಲ್ಲಿ ಕಾರ್ಯನಿರತನಾಗಿದ್ದ ತನ್ನ ನೆಚ್ಚಿನ ದಂಡ

ನಾಯಕ ಬಂಕೆಯನನ್ನು ಗುಜರಾತಿಗೆ ಕಳುಹಿಸಿದ. ಈ ಹೊತ್ತಿಗೆ ಗುಜರಾತದ ರಾಷ್ಟ್ರಕೂಟ ಸಿಂಹಾಸನವನ್ನೇರಿದ್ದ 2ನೆಯ ಧ್ರುವನನ್ನು ಬಂಕೆಯ ಸೋಲಿಸಿದ. ಆದರೆ ದಕ್ಷಿಣದಲ್ಲಿ ಬಂಕೇಶನಂಥ' ನಾಯಕರಿಲ್ಲದ ಸಂದರ್ಭದಲ್ಲಿ ಗಂಗ ರಾಚಮಲ್ಲ ಮತ್ತೆ ಗಂಗವಾಡಿಯ ಬಹುಭಾಗವನ್ನು ಆಕ್ರಮಿಸಿದ. ಪೂರ್ವದಲ್ಲಿ ವೆಂಗಿಯ 3ನೆಯ ವಿಜಯಾದ್ಯಿತನ ಸೇನಾನಿ ಪಾಂಡುರಂಗ ರಾಷ್ಟ್ರಕೂಟರನ್ನು ಹಿಮ್ಮೆಟ್ಟಿಸಿ ವಿಜಯಾದಿತ್ಯನಿಗೆ ವೆಂಗಿ ರಾಜ್ಯವನ್ನು ಸಾಧಿಸಿಕೊಟ್ಟ. ಪೂರ್ವ ಚಾಳುಕ್ಯರು ರಾಷ್ಟ್ರಕೂಟ ರಾಜ್ಯಕ್ಕೆ ಮತ್ತೆ ಮುನ್ನುಗ್ಗಲಿಲ್ಲವಾಗಿ, ಅಮೋಘವರ್ಷನೂ ತೆಪ್ಪಗಾದ.

ಹಲವು ಕಡೆಗಳಿಂದ ತೊಂದರೆಗಳನ್ನು ಸತತವಾಗಿ ಎದುರಿಸಬೇಕಾಗಿ ಬಂದ ಅಮೋಘವರ್ಷ ಯುದ್ಧಕ್ಕಿಂತಲೂ ಸಂಧಾನ ಹೆಚ್ಚು ಅಪೇಕ್ಷಿತವೆಂದು ಅರಿತಿರಬೇಕು. ಸು.860ರಲ್ಲಿ ತನ್ನ ಮಗಳು ಚಂದೊಬ್ಬಲಬ್ಬಾಳನ್ನು ಗಂಗ ರಾಜಕುಮಾರ ಬೂತುಗನಿಗೆ ಮದುವೆ ಮಾಡಿಕೊಟ್ಟು ಗಂಗರೊಡನೆ ಶಾಂತಿ ಸಾಧಿಸಿಕೊಂಡ. ಹಾಗೆಯೇ ಚೇದಿ ರಾಜಕುಮಾರಿಯನ್ನು ತನ್ನ ಮಗನಿಗೆ ತಂದುಕೊಂಡು ಅತ್ತಲೂ ಸುಸಂಬಂಧವನ್ನು ಬೆಳೆಸಿದ. ಮಾನ್ಯಖೇಟದ ಹಾಗೂ ಗುಜರಾತಿನ ರಾಷ್ಟ್ರಕೂಟ ವಂಶದವರಿಗೆ, ಉತ್ತರದಲ್ಲಿ ಸಾಮಾನ್ಯ ವೈರಿಗಳಾಗಿದ್ದ ಗೂರ್ಜರ ಪ್ರತೀಹಾರರು ಇವರ ಮೇಲೆ ಬೀಳುವ ಸನ್ನಾಹವನ್ನು ನಡೆಸುತ್ತಿದ್ದ ಸಂದರ್ಭ ಅಮೋಘವರ್ಷ ಮತ್ತು ಗುಜರಾತಿನ ರಾಷ್ಟ್ರಕೂಟ 2ನೆಯ ಧ್ರುವ ಒಂದುಗೂಡಿದರು ಜ್ಞಾತಿಕಲಹ ಕೊನೆಗೊಂಡಿತು (ಸು.860).

ಕ್ಷಾತ್ರಸಾಧನೆಗಳ ದೃಷ್ಟಿಯಿಂದ ಅಮೋಘವರ್ಷನ ಆಳ್ವಿಕೆ ಇವನ ಪಿತೃ ಪಿತಾಮಹರ ಹಿರಿಮೆಯನ್ನು ಮುಟ್ಟಲಾರದಾದರೂ ಇತರ ರಂಗಗಳಲ್ಲಿ ಈತನ ಕಾಣಿಕೆ ಗಮನಾರ್ಹವಾದುವು. ತನ್ನ 64 ವರ್ಷದ ದೀರ್ಘ ಆಳ್ವಿಕೆಯ ಕಾಲದಲ್ಲಿ ಸತತವಾಗಿ ಶತ್ರುಬಾಧೆಯನ್ನು ಈತ ಅನುಭವಿಸಿದರೂ ಪ್ರಜಾಕ್ಷೇಮಕ್ಕಾಗಿ, ಧರ್ಮೋದ್ಧಾರಕ್ಕಾಗಿ ಬಹಳ ಆಸಕ್ತಿಯನ್ನು ವಹಿಸಿದ್ದಂತೆ ತೋರುತ್ತದೆ. ಲೋಕೋಪದ್ರವ ಶಾಂತಿಗೆಂದು ತನ್ನ ಎಡಗೈ ಬೆರಳನ್ನೇ ಮಹಾಲಕ್ಷ್ಮಿಗೆ ಬಲಿಯಾಗಿ ಕೊಟ್ಟನೆಂದು ಇವನ ಸಂಜಾನ ತಾಮ್ರ ಶಾಸನದಲ್ಲಿ ಹೇಳಿದೆ. ಇವನ ತ್ಯಾಗದ ವಿಷಯ ಹಲವು ಕಾಲದವರೆಗೆ ಜನರ ನೆನಪಿನಲ್ಲಿದ್ದು, 17ನೆಯ ಶತಮಾನದ ಭಟ್ಟಾಕಳಂಕ ಈತನನ್ನು ಶಿಬಿ ದಧೀಚಿಯರಿಗೆ ಹೋಲಿಸಿದ್ದಾನೆ. ಈತನ ಧರ್ಮನಿಷ್ಠೆ ಘನತರವಾಗಿದ್ದು, ಹಲವು ಬಾರಿ ಈತ ಲೋಕವ್ಯವಹಾರದಲ್ಲಿ ಆಸಕ್ತಿಯನ್ನು ಕಳೆದುಕೊಂಡು ರಾಜ್ಯತ್ಯಾಗ ಮಾಡಿದಂತೆ ಕಾಣುತ್ತದೆ. ಅಮೋಘವರ್ಷ ಜೈನಮತಾವಲಂಬಿ. ಜಿನಸೇನಾಚಾರ್ಯ ಈತನ ಗುರು ಎಂಬ ವಿಷಯ ಗುಣಭದ್ರಾಚಾರ್ಯರ ಉತ್ತರ ಪುರಾಣದಿಂದ ತಿಳಿಯುತ್ತದೆ. ಇವನ ಮಗನಿಗೆ ಗುರುವಾಗಿದ್ದ ಗುಣಭದ್ರಾಚಾರ್ಯರೂ ಇವನ ಭಕ್ತಿಗೌರವಗಳಿಗೆ ಪಾತ್ರರಾಗಿದ್ದರು.

ಅಮೋಘವರ್ಷ ಸಾಹಿತ್ಯಪೋಷಕನೂ ಆಗಿದ್ದ. ಪ್ರಶ್ನೋತ್ತರ ಮಾಲಿಕಾ ಎಂಬ ಸಂಸ್ಕತ ಗ್ರಂಥವನ್ನೂ ಪ್ರಸಿದ್ಧ ಕವಿರಾಜಮಾರ್ಗವನ್ನೂ ಈತನೇ ಬರೆದನೆಂಬ ಹೇಳಿಕೆಗಳಿದ್ದರೂ ಇವು ವಿವಾದಾಸ್ಪದ. ಈತನ ಆಶ್ರಯದಲ್ಲಿ ಶ್ರೀವಿಜಯ ಮೊದಲಾದ ಕವಿಗಳು ಕೃತಿರಚನೆ ಮಾಡಿದರು (ನೋಡಿ: ಕವಿರಾಜಮಾರ್ಗ). ಶಾಕಟಾಯನನೆಂಬ ಜೈನ ವೈಯಾಕರಣಿ ಅಮೋಘವೃತ್ತಿಯನ್ನೂ ಮಹಾವೀರಾಚಾರ್ಯ ಗಣಿತಸಾರ ಸಂಗ್ರಹವನ್ನೂ ಇವನ ಕಾಲದಲ್ಲಿ ರಚಿಸಿದರು. ಇವನ ಗುರುಗಳಾದ ಜಿನಸೇನಾಚಾರ್ಯರು ಸಂಸ್ಕೃತದಲ್ಲಿ ಪೂರ್ವಪುರಾಣ ಮತ್ತು ಪಾರ್ಶ್ವಾಭ್ಯುದಯ ಗ್ರಂಥಗಳನ್ನೂ ಜಯಧವಲಾ ಟೀಕೆಯನ್ನೂ ರಚಿಸಿದ್ದಾರೆ. ಇವರ ಶಿಷ್ಯ ಗುಣಭದ್ರಾಚಾರ್ಯರು ಪೂರ್ವಪುರಾಣವನ್ನು ಪೂರ್ಣಗೊಳಿಸಿದರಲ್ಲದೆ ಉತ್ತರ ಪುರಾಣವನ್ನೂ ರಚಿಸಿದ್ದಾರೆ.

ಅಮೋಘವರ್ಷನ ಮಗ ಕೃಷ್ಣ. ಚಂದೊಬ್ಬಲಬ್ಬಾ ಮತ್ತು ರೇವಕನಿಮ್ಮಡಿ ಹೆಣ್ಣು ಮಕ್ಕಳು. ಇವರಲ್ಲಿ ಪ್ರಾಯಶಃ ಹಿರಿಯವಳಾದ ರೇವಕನಿಮ್ಮಡಿ ಗಂಗರಾಜಕುಮಾರನೊಬ್ಬನನ್ನು ಮದುವೆಯಾಗಿ ರಾಯಚೂರು ಪ್ರದೇಶದಲ್ಲಿ ಆಳುತ್ತಿದ್ದಳು (ಸು.837). *

**ಅಮೋಘವರ್ಷ II:** ರಾಷ್ಟ್ರಕೂಟ ವಂಶದ ಅರಸ (ಸು.929-30). 3ನೆಯ ಇಂದ್ರನ ಹಿರಿಯ ಮಗ. ಇವನ ತಮ್ಮ 4ನೆಯ ಗೋವಿಂದನ ಕುತಂತ್ರ ಮತ್ತು ಅನೀತಿಯುತ ವರ್ತನೆಯಿಂದ ಈತ ಪಟ್ಟಕ್ಕೆ ಬಂದ ಅನತಿಕಾಲದಲ್ಲಿಯೇ ಸತ್ತನೆಂದು ತೋರುತ್ತದೆ. ಪ್ರಾಯಶಃ ಕೊಲೆಗೀಡಾಗಿರಬಹುದು. ಶಿಲಾಹಾರರ ಶಾಸನವೊಂದು ಇವನು ಒಂದು ವರ್ಷ ರಾಜ್ಯವಾಳಿದನೆಂದು ತಿಳಿಸುತ್ತದೆ. *

**ಅಮೋಘವರ್ಷ III :** ರಾಷ್ಟ್ರಕೂಟ ವಂಶದ ದೊರೆ ಸು.(935-39). ಬದ್ದೆಗ ಇವನ ಅಭಿಷೇಕಪೂರ್ವನಾಮ. ಇವನು 3ನೆಯ ಇಂದ್ರನ ತಮ್ಮ. 3ನೆಯ ಇಂದ್ರನ ಹಿರಿಯ ಮಗನಾದ 2ನೆಯ ಅಮೋಘವರ್ಷನನ್ನು ಅವನ ತಮ್ಮ 4ನೆಯ ಗೋವಿಂದ ಬಹುಶಃ ಕೊಂದು ರಾಜ್ಯಾಕ್ರಮಣ ಮಾಡಿ, ತನ್ನ ದುರಾಡಳಿತದಿಂದಾಗಿ ಸಾಮಂತರಾದ ಗಂಗ ಬೂತುಗ ಮತ್ತು ವೇಮುಲವಾಡ ಚಾಳುಕ್ಯ ವಂಶದ ಅರಿಕೇಸರಿ (ನೋಡಿ: ಅರಿಕೇಸರಿ II) ಮುಂತಾದವರಿಂದ ನಿಗ್ರಹಿಸಲ್ಪಟ್ಟ ಮೇಲೆ, ಈ ಸಾಮಂತರು ತ್ರಿಪುರಿಯಲ್ಲಿ ನೆಲೆಸಿದ್ದ 3ನೆಯ ಅಮೋಘವರ್ಷನಿಗೆ ರಾಷ್ಟ್ರಕೂಟ ಸಿಂಹಾಸನವನ್ನು ಒಪ್ಪಿಸಿದರು. ಈತ ಸಾತ್ವಿಕನೂ ಧರ್ಮನಿಷ್ಠನೂ ಆಗಿದ್ದು ರಾಜ್ಯಾಡಳಿತಕ್ಕಿಂತ ಹೆಚ್ಚಾಗಿ, ದಾನಧರ್ಮ ಇತ್ಯಾದಿಗಳಲ್ಲೇ ತನ್ನ ಕಾಲವನ್ನು ಕಳೆದ. ಪಟ್ಟಕ್ಕೆ ಬರುವ ಹೊತ್ತಿಗೆ ಇವನಿಗೆ ಸಾಕಷ್ಟು ವಯಸ್ಸಾಗಿದ್ದು, ಹಲವು ವಯಸ್ಕ ಮಕ್ಕಳೂ ಇದ್ದರು. ರಾಜ್ಯದ ಭಾರವನ್ನು ಅವರುಗಳೆ ವಹಿಸಿದ್ದರು. ಅದರಲ್ಲೂ ಹಿರಿಯ ಮಗ ಕೃಷ್ಣIII ಪ್ರತಾಪಶಾಲಿಯಾಗಿದ್ದು, ಅನೇಕ ವಿಜಯಗಳನ್ನು ಸಾಧಿಸಿದ (ನೋಡಿ: ಕೃಷ್ಣ III).

ಅಮೋಘವರ್ಷನಿಗೆ ಕಡೆಯ ಪಕ್ಷ ಇಬ್ಬರು ಹೆಂಡತಿಯರಿದ್ದರು. ಅವರಲ್ಲಿ ಚೇದಿಯ 1ನೆಯ ಯುವರಾಜನ ಮಗಳಾದ ಕುಂಡಕದೇವಿ ಒಬ್ಬಳು. ಕೃಷ್ಣನಲ್ಲದೆ, ಜಗತ್ತುಂಗ, ನಿರುಪಮ, ಖೊಟ್ಟಿಗ ಈತನ ಇತರ ಮಕ್ಕಳು. ಇವನ ಮಗಳು ರೇವಕನಿಮ್ಮಡಿ ತಲಕಾಡಿನ ಗಂಗಬೂತುಗನನ್ನು ಮದುವೆಯಾಗಿದ್ದಳು. ಅಮೋಘವರ್ಷ 939ರಲ್ಲಿ ಮೃತನಾದ. *

**ಅಮ್ಮಣಗಿ :** ಬೆಳಗಾಂವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಒಂದು ಗ್ರಾಮ. ಹುಕ್ಕೇರಿಯ ಉತ್ತರಕ್ಕೆ 10ಕಿಮೀ ದೂರದಲ್ಲಿದೆ. ಕದಂಬ ಶಾಂತಿವರ್ಮನ ಭೋಜ ತಾಮ್ರ ಫಲಕದಲ್ಲಿ ಈ ಊರಿನ ಹೆಸರನ್ನು ಅಮ್ಮಣಿಕಾ ಎಂದು ಉಲ್ಲೇಖಿಸಲಾಗಿದೆ. ಈ ಊರಿನ ಮಧ್ಯದಲ್ಲಿರುವ ಪಾರ್ಶ್ವನಾಥ ಬಸದಿ ಒಂದು



ಮಲ್ಲಿಕಾರ್ಜುನ ದೇವಸ್ಥಾನ

ಸುಂದರ ಸ್ಮಾರಕ. ಗರ್ಭಗೃಹ ಮತ್ತು ತೆರೆದ ಮಂಟಪವನ್ನೊಳಗೊಂಡಿದೆ. ಗರ್ಭಗೃಹದಲ್ಲಿ ಪಾರ್ಶ್ವನಾಥ'ನ ಮೂರ್ತಿಯಿದೆ. ಆದರೆ, ಇದರ

ಪಾದಪೀಠದಲ್ಲಿರುವ ಸಿಂಹ ಮೂಲತಃ ಇದು ಆದಿನಾಥನ ಮೂರ್ತಿ ಇದ್ದಿರಬೇಕೆಂಬುದನ್ನು ಸೂಚಿಸುತ್ತದೆ. ಗರ್ಭಗೃಹದ ಮೇಲಿರುವ ಶಿಖರ ಕದಂಬ ನಾಗರ ಶೈಲಿಯಲ್ಲಿದೆ. ಈ ಬಸದಿಯ ಒಳಗಿರುವ ಶಾಸನ ಕಾಲ ಸು.1257. ಗ್ರಾಮದೇವತೆಯಾದ ಪದ್ಮಾವತಿಗೆ ಈಗಿನ ಅಂಬಾಬಾಯಿಗೆ ಭೂಮಿಯನ್ನು ದಾನವಾಗಿ ಕೊಟ್ಟದ್ದನ್ನು ದಾಖಲಿಸುತ್ತದೆ. ಇಲ್ಲಿಯ ಮಾದರ ಓಣಿಯಲ್ಲಿ ಈಶ್ವರ ದೇವಾಲಯವಿದ್ದು ಸ್ಥಳೀಯರು ಇದನ್ನು ಜೋನಿಂಗಪ್ಪ ದೇವಾಲಯವೆಂದು ಕರೆಯುವರು. ಈ ದೇವಾಲಯ ಸಂಪೂರ್ಣ ಶಿಥಿಲವಾಗಿದೆ. ಊರ ಹೊರಗೆ ಮಲ್ಲಿಕಾರ್ಜುನನ ದೇವಾಲಯವಿದೆ. ಈ ದೇವಾಲಯದ ಆವರಣದಲ್ಲಿ ವೀರಭದ್ರ ಮತ್ತು ಭ್ರಮರಾಂಬ ದೇವರ ಗುಡಿಗಳಿವೆ. ಇಲ್ಲಿ ಮಕರ ಸಂಕ್ರಾಂತಿಯಂದು ಐದು ದಿನಗಳ ಕಾಲ ಜಾತ್ರೆ ನಡೆಯುತ್ತದೆ. ಈ ಊರಲ್ಲಿ ಒಂದು ಮಸೀದಿ ಮತ್ತು ಮುಸ್ಲಿಂ ಸಂತ ಬಾವಸಾಬರಿಗೆ ಸಂಬಂಧಿಸಿದ ಒಂದು ಮದರಸಾ ಇದೆ. ಇವರ ನೆನಪಿನಲ್ಲಿ ಪ್ರತಿ ವರ್ಷ ಉರುಸ್ ನಡೆಯುತ್ತದೆ. (ಆರ್.ಐ.)

**ಅಮ್ಮಸಂದ್ರ :** ತುಮಕೂರು ಜಿಲ್ಲೆ ತುರುವೇಕೆರೆ ತಾಲ್ಲೂಕಿನಲ್ಲಿ ತುಮಕೂರಿಗೆ ಸು.50ಕಿಮೀ ದೂರದಲ್ಲಿರುವ ಸ್ಥಳ. ಬೆಂಗಳೂರು ಅರಸೀಕೆರೆ ರೈಲುಮಾರ್ಗ ಮತ್ತು ಬೆಂಗಳೂರು ಪುಣೆ ಹೆದ್ದಾರಿ ಇದರ ಬಳಿಯೇ ಹಾದುಹೋಗುತ್ತವೆ. ಗ್ರಾಮದ ಹತ್ತಿರದಲ್ಲಿರುವ ನರಸಿಂಹಸ್ವಾಮಿ ಬೆಟ್ಟದ ಉದ್ದಕ್ಕೂ ಮ್ಯಾಂಗನೀಸ್, ಸುಣ್ಣಕಲ್ಲು ಹೇರಳವಾಗಿ ದೊರೆಯುತ್ತವೆ. ಕಚ್ಚಾ ವಸ್ತುಗಳು ಸುಲಭವಾಗಿ ದೊರೆಯುವುದರಿಂದಲೂ ಸಂಚಾರಸೌಲಭ್ಯ ಚೆನ್ನಾಗಿರುವುದರಿಂದಲೂ ಬಿರ್ಲಾ ಸಂಸ್ಥೆ ಇಲ್ಲೊಂದು ಸಿಮೆಂಟ್ ಕಾರ್ಖಾನೆಯನ್ನು ನಡೆಸುತ್ತಿದೆ. *

**ಅಯ್ಯಂಗಾರ್ ಎಚ್.ವಿ.ಆರ್. :** 1902- ನಿವೃತ್ತ ಐ.ಸಿ.ಎಸ್. ಅಧಿಕಾರಿ, ರಿಸರ್ವ್‌ಬ್ಯಾಂಕ್ ಆಫ್ ಇಂಡಿಯಾದ ಮಾಜಿ ಗವರ್ನರ್, ಬ್ರಿಟಿಷ್ ಭಾರತದಲ್ಲೂ ಸ್ವತಂತ್ರ ಭಾರತದಲ್ಲೂ ಉನ್ನತ ಅಧಿಕಾರಗಳಲ್ಲಿದ್ದು ಸೇವೆ ಸಲ್ಲಿಸಿದ ಕನ್ನಡಿಗ. ಹರವು ವರದರಾಜ ಅಯ್ಯಂಗಾರ್ ಇವರ ಪೂರ್ತಿಹೆಸರು. ಇವರು 1902ರಲ್ಲಿ ಮೈಸೂರಿನಲ್ಲಿ ಜನಿಸಿದರು. ಇವರ ಮೊದಲ ವಿದ್ಯಾಭ್ಯಾಸ ಮೈಸೂರಿನಲ್ಲೆ ನಡೆಯಿತು. ಇವರು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಓದಿ ವಿಜ್ಞಾನ ಪದವಿ ಗಳಿಸಿದರು. ಅನಂತರ ಇಂಗ್ಲೆಂಡಿನ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಉನ್ನತ ಶಿಕ್ಷಣ ಪಡೆದು, ಭಾರತೀಯ ಪ್ರಶಾಸನ ಸೇವಾ (ಸಿವಿಲ್ ಸರ್ವಿಸ್) ಪರೀಕ್ಷೆಯಲ್ಲಿ ಉತ್ತೀರ್ಣರಾಗಿ (1924) ಭಾರತ ಸರ್ಕಾರದ ಸೇವೆಯನ್ನು ಪ್ರವೇಶಿಸಿದರು. ಇವರ ಉದ್ಯೋಗದ ಮೊದಮೊದಲ ವರ್ಷಗಳಲ್ಲಿ ಇವರು ಅನೇಕ ಜಿಲ್ಲೆಗಳಲ್ಲಿ ಕೆಲಸ ಮಾಡಿದ್ದರಿಂದ ಭಾರತದ ಜನಜೀವನದ ಪರಿಚಯ ಇವರಿಗೆ ಆಯಿತು. ಅಯ್ಯಂಗಾರರು ಮುಂಬಯಿಯ ಸಚಿವಾಲಯವನ್ನು (ಸೆಕ್ರೆಟೇರಿಯಟ್) 1931ರಲ್ಲಿ ಪ್ರವೇಶಿಸಿ, ಹಣಕಾಸು ಇಲಾಖೆಯ ಉಪಕಾರ್ಯದರ್ಶಿಯಾದರು. ಅನಂತರ ಇವರಿಗೆ ಕಾರ್ಯದರ್ಶಿಯ ಹುದ್ದೆಗೆ ಬಡ್ತಿ ಸಿಕ್ಕಿತು. 1942ರ ಭಾರತ ಬಿಟ್ಟು ತೊಲಗಿ ಚಳವಳಿಯ ಸಮಯದಲ್ಲಿ ಇವರು ಮುಂಬಯಿ ಪ್ರಾಂತ್ಯದ ಗೃಹ ಕಾರ್ಯದರ್ಶಿಯಾಗಿ ಆಗಿನ ಸೂಕ್ಷ್ಮಪರಿಸ್ಥಿತಿಯನ್ನು ಕೌಶಲದಿಂದ ನಿರ್ವಹಿಸಿದರು. ಇವರು ನವದೆಹಲಿಗೆ ವರ್ಗವಾದದ್ದು 1944ರಲ್ಲಿ. ಯೋಜನೆ ಮತ್ತು ಅಭಿವೃದ್ಧಿ ಸಚಿವಾಲಯದಲ್ಲಿ ಕಾರ್ಯದರ್ಶಿಯಾಗಿ ನೇಮಕಗೊಂಡ ಇವರು ದೇಶದ ಅಭಿವೃದ್ಧಿ ಯೋಜನಾ ಕಾರ್ಯಕ್ಕೆ ಭದ್ರವಾದ ಅಸ್ತಿಭಾರ ನಿರ್ಮಿಸಲು ನೆರವಾದರು. ಅನಂತರ ಇವರು ಭಾರತ ಸಂವಿಧಾನ ಸಭೆಯ ಕಾರ್ಯದರ್ಶಿಯಾಗಿಯೂ ಪ್ರಧಾನಿಯ ಪ್ರಮುಖ ಆಪ್ತಕಾರ್ಯದರ್ಶಿಯಾಗಿಯೂ ಗೃಹ ಕಾರ್ಯದರ್ಶಿಯಾಗಿಯೂ (1948) ಕೆಲಸ ಮಾಡಿ ಭಾರತದ ಆಡಳಿತ ಹಾಗೂ ಆರ್ಥಿಕ ವಿಚಾರಗಳಲ್ಲಿ ಬಹುಮುಖವಾದ ಅನುಭವ ಗಳಿಸಿದರಲ್ಲದೆ, ಸ್ವತಂತ್ರ ಭಾರತದ ಆರಂಭದ ವರ್ಷಗಳಲ್ಲಿ ದೇಶದ ಭವಿಷ್ಯವನ್ನು ರೂಪಿಸುವುದರಲ್ಲಿ ಮುಖ್ಯ ಪಾತ್ರ ವಹಿಸಿದರು. 1952ರಲ್ಲಿ ಇವರು ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯದ ಕಾರ್ಯದರ್ಶಿಯಾದರು.

1956ರಲ್ಲಿ ಭಾರತದ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಒಂದು ಮಹತ್ತ್ವದ ಬದಲಾವಣೆಯಾಯಿತು. ಭಾರತದ ಅತ್ಯಂತ ದೊಡ್ಡ ವಾಣಿಜ್ಯ ಬ್ಯಾಂಕ್ ಆಗಿದ್ದ ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯವನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯವಾಗಿ (ಭಾರತೀಯ ಸ್ಟೇಟ್ ಬ್ಯಾಂಕ್) ಪರಿವರ್ತಿಸಲಾಯಿತು. ಸರ್ಕಾರಿ ವಲಯದ ದೊಡ್ಡ ವಾಣಿಜ್ಯ ಬ್ಯಾಂಕ್ ಆಗಿ, ಹಲವು ರಾಜ್ಯ ಬ್ಯಾಂಕುಗಳನ್ನು ಅಂಗ ಸಂಸ್ಥೆಗಳಾಗಿ ಒಳಗೊಂಡು ಭಾರತದ ಆರ್ಥಿಕತೆಯಲ್ಲಿ ಮಹತ್ತ್ವದ ಪಾತ್ರ ವಹಿಸುವ ಕರ್ತವ್ಯವನ್ನು ನಿರ್ವಹಿಸಲು ರೂಪಿತವಾದ ಈ ಬ್ಯಾಂಕಿನ ಆರಂಭದ ವರ್ಷದಲ್ಲಿ ಅಯ್ಯಂಗಾರರು ಇದರ ಅಧ್ಯಕ್ಷರಾಗಿ ಬ್ಯಾಂಕಿಗೆ ಒಂದು ಒಳ್ಳೆಯ ಪರಂಪರೆಯನ್ನು ನಿರ್ಮಿಸಿದರು. ಮರುವರ್ಷ (1957) ಇವರು ರಾಷ್ಟ್ರದ ಕೇಂದ್ರೀಯ ಬ್ಯಾಂಕೂ ಬ್ಯಾಂಕುಗಳ ಬ್ಯಾಂಕೂ ಆದ ರಿಸರ್ವ್ ಬ್ಯಾಂಕ್ ಆಫ್ ಇಂಡಿಯದ (ಭಾರತೀಯ ರಿಸರ್ವ್ ಬ್ಯಾಂಕ್) ಗವರ್ನರ್ ಆಗಿ, ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದುವವರೆಗೂ (1962) ಆ ಹುದ್ದೆಯಲ್ಲಿದ್ದು, ದೇಶದ ಎರಡನೆಯ ಪಂಚವಾರ್ಷಿಕ ಯೋಜನೆಯ ಕಷ್ಟದ ದಿನಗಳಲ್ಲಿ ದೇಶದ ಆರ್ಥಿಕ ಹಾಗೂ ಹಣ ನೀತಿ ರೂಪಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದರು. ಇವರ ಬಹುಮುಖ ಸೇವೆಯನ್ನು ಗಮನಿಸಿ ಭಾರತ ಸರ್ಕಾರ ಇವರಿಗೆ 'ಪದ್ಮವಿಭೂಷಣ' ಪ್ರಶಸ್ತಿಯನ್ನು ನೀಡಿ ಗೌರವಿಸಿತು (1962).

ನಿವೃತ್ತಿಯ ಅನಂತರವೂ ಇವರು ತಮ್ಮ ಕಾರ್ಯಶೀಲ ಜೀವನವನ್ನು ಮುಂದುವರಿಸಿದರು. ಇವರು ಅನೇಕ ಕಂಪನಿಗಳ ಮತ್ತು ಚನ್ನೈನ ಭಾರತೀಯ ತಂತ್ರ ಶಾಸ್ತ್ರ ಸಂಸ್ಥೆಯ ಉಸ್ತುವಾರಿ ಮಂಡಳಿಯ (ಗವರ್ನಿಂಗ್ ಬೋರ್ಡ್) ಅಧ್ಯಕ್ಷರಾಗಿಯೂ ಅನ್ವಯ ಅರ್ಥಶಾಸ್ತ್ರ ಸಂಶೋಧನೆಯ ರಾಷ್ಟ್ರೀಯ ಪರಿಷತ್ತಿನ ಸದಸ್ಯರಾಗಿಯೂ ಸೇವೆ ಸಲ್ಲಿಸಿದರು. ಮದರಾಸಿನ ಪ್ರಮುಖ ಉದ್ಯಮ ಸಂಸ್ಥೆಯೊಂದರಲ್ಲಿ ಹುದ್ದೆ ಪಡೆದ ಅಯ್ಯಂಗಾರರು ಮದರಾಸಿನಲ್ಲಿ ನೆಲಸಿದರು. (ಎಚ್.ಎಸ್.ಕೆ.)

**ಅಯ್ಯನಕೆರೆ :** ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕಿನ ಒಂದು ಕೆರೆ. ಚಿಕ್ಕಮಗಳೂರು- ಕಡೂರು ಮುಖ್ಯ ರಸ್ತೆಯಲ್ಲಿ ಸಖರಾಯ ಪಟ್ಟಣದಿಂದ 6ಕಿಮೀ ದೂರದಲ್ಲಿದೆ. ಇದು ಜಿಲ್ಲೆಯ 2ನೆಯ ದೊಡ್ಡ ಕೆರೆ. ಎತ್ತರವಾದ ಬಾಬಾಬುಡನಗಿರಿ ಶ್ರೇಣಿ ಹಾಗೂ ಶಕುನಗಿರಿಗೆ ಹೊಂದಿಕೊಂಡು ಗೌರಿ ಹೊಳೆಗೆ ಅಡ್ಡಲಾಗಿ ಈ ಕೆರೆಯನ್ನು ಕಟ್ಟಲಾಗಿದೆ. ನಿಸರ್ಗದತ್ತವಾದ ಪರಿಸರ ಈ ಕೆರೆಯನ್ನು ನಿರ್ಮಿಸುವಲ್ಲಿ ಬಹುಮುಖ್ಯ ಪಾತ್ರ ವಹಿಸಿದೆ. ಈ ಕೆರೆಯ ನೀರಿನ ಚದರಳತೆ 118.54 ಹೆಕ್ಟೇರುಗಳು. ಈ ಕೆರೆಯ ಏರಿಯ ಉದ್ದ 46ಮೀ, ಕೋಡಿಯ ಎತ್ತರ 6.3ಮೀ, ಕೆರೆಯ ಏರಿಯ ಎತ್ತರ 14ಮೀ. ಸು.420 ಎಂ.ಸಿ.ಎಫ್.ಟಿ. ನೀರು ಸಂಗ್ರಹಿಸುವ ಸಾಮರ್ಥ್ಯವುಳ್ಳ ಈ ಕೆರೆಯಿಂದ ಐದು ಮುಖ್ಯ ಕಾಲುವೆಗಳ ಮೂಲಕ ಕಡೂರು ತಾಲ್ಲೂಕಿನ 1574 ಹೆಕ್ಟೇರು ಜಮೀನಿಗೆ ನೀರಾವರಿ ಸೌಲಭ್ಯ ದೊರೆತಿದೆ. ಈ ಕೆರೆಯ ಕೋಡಿಯಿಂದ ಹೊರಬೀಳುವ ಹೆಚ್ಚುವರಿ ನೀರು ವೇದಾಹೊಳೆಯಾಗಿ ಮುಂದೆ ಅವತಿ ಹೊಳೆಯೊಂದಿಗೆ ಸೇರಿ ವೇದಾವತಿ ನದಿಯಾಗಿದೆ. ಈ ಕೆರೆಯ ಅಚ್ಚುಕಟ್ಟು ಪ್ರದೇಶದಲ್ಲಿ ಮುಖ್ಯವಾಗಿ ಅಡಕೆ, ತೆಂಗು, ಬತ್ತ, ಕಬ್ಬು ಬೆಳೆಗಳನ್ನೂ ತರಕಾರಿಗಳನ್ನು ಬೆಳೆಯುತ್ತಾರೆ.



ಈ ಕೆರೆಗೆ ರಕ್ಷಣೆಯಾಗಿ ಪರಿಣಮಿಸಿರುವ ಶಕುನಗಿರಿಯಿಂದ ಆಂಜನೇಯನು ಲಂಕೆಗೆ ಸಂಜೀವಿನಿಯನ್ನು ತೆಗೆದುಕೊಂಡು ಹೋಗಿದ್ದನೆಂದು ಪ್ರತೀತಿ. ಪೌರಾಣಿಕವಾಗಿ ಈ ಕೆರೆಯನ್ನು ಸಖರಾಯಪಟ್ಟಣವನ್ನು

ಆಳುತ್ತಿದ್ದ ರುಕ್ಮಾಂಗದರಾಯ ಕಟ್ಟಿಸಿದನಂತೆ. ಚಾರಿತ್ರಿಕವಾಗಿ ಈ ಕೆರೆಯನ್ನು 1156ರಲ್ಲಿ ಹೊಯ್ಸಳ ವಿಷ್ಣುವರ್ಧನನ ಮಗ ಒಂದನೆಯ ನರಸಿಂಹ ಸ್ಥಳೀಯ ಮುಖ್ಯಸ್ಥರ ಸಹಕಾರದಿಂದ ದುರಸ್ತಿಗೊಳಿಸಿದನೆಂದು ತಿಳಿದುಬರುತ್ತದೆ. ಇದಕ್ಕೆ ಪೂರಕವಾಗಿ ಕೆರೆಯ ಸಮೀಪದ ಗುಡ್ಡದ ಮೇಲಿರುವ ಪ್ರಸನ್ನ ಬಲ್ಲಾಳೇಶ್ವರ ದೇವಾಲಯ ಅಲ್ಲಿಯ ಶಿವಲಿಂಗ, ಕೇಶವ, ಗಣಪತಿ ಮೊದಲಾದ ಹೊಯ್ಸಳ ಶಿಲ್ಪಗಳನ್ನು ಇಂದಿಗೂ ನೋಡಬಹುದು. ಜೊತೆಗೆ ಬಲ್ಲಾಳೇಶ್ವರ ಗುಡಿಯ ಮುಂದಿರುವ 1159ರ ಶಾಸನ ಹೊಯ್ಸಳ ನರಸಿಂಹನ ಸಾಹಸವನ್ನು ವರ್ಣಿಸುತ್ತದೆ. ಕೆರೆಯ ಏರಿ ಪದೇ ಪದೇ ಒಡೆದು ಹೋಗುತ್ತಿದ್ದು ಸಖರಾಯಪಟ್ಟಣದ ಮುಖ್ಯಸ್ಥರು ಅಲ್ಲಿಗೆ ಆಗಮಿಸಿದ ಸನ್ಯಾಸಿ ನಿರ್ವಾಣಸ್ವಾಮಿಗಳಿಗೆ ತನ್ನ ಕಷ್ಟವನ್ನು ಹೇಳಿಕೊಂಡರೆಂದೂ ಸ್ವಾಮಿಗಳು ಸ್ಥಳೀಯ ಜನರ ಕಷ್ಟವನ್ನು ದೂರಮಾಡುವ ಮಾರ್ಗೋಪಾಯ ಸೂಚಿಸಿದ್ದರಿಂದ ಈ ಕೆರೆಗೆ ಅಯ್ಯನ ಕೆರೆ ಎಂದು ಹೆಸರು ಬಂದಿತೆಂದೂ ಪ್ರತೀತಿ.

ಹುಣ್ಣಿಮೆಯ ರಾತ್ರಿಯಲ್ಲಿ ಸುರಿದ ಧಾರಾಕಾರ ಮಳೆಯಿಂದ ತುಂಬಿದ ಕೆರೆಗೆ ಅಪಾಯ ಎದುರಾಯಿತು. ಆಗ ಅಶರೀರ ವಾಣಿಯೊಂದು ಕೆರೆಯ ಹತ್ತಿರ ದನ ಮೇಯಿಸುತ್ತಿದ್ದ ಹೊನ್ನಬಿಲ್ಲ- ಚೆನ್ನಬಿಲ್ಲರಿಗೆ ನಾನು ಒಡೆದುಹೊಗುತ್ತಿದ್ದೇನೆ, ಈ ವಿಷಯವನ್ನು ಊರ ಮುಖ್ಯಸ್ಥರಿಗೆ ತಕ್ಷಣವೇ ತಿಳಿಸಿರಿ. ನೀವು ಬರುವವರೆಗೂ ನಾನು ಕಾಯುತ್ತಿರುತ್ತೇನೆ ಎಂದಿತಂತೆ. ಆ ಹುಡುಗರು ಊರ ಮುಖ್ಯಸ್ಥರಿಗೆ ವಿಷಯ ತಿಳಿಸಿ ಊರ ಸಂರಕ್ಷಣೆಗಾಗಿ ಸಖರಾಯಪಟ್ಟಣದ ಹೆಬ್ಬಾಗಿಲಿನಲ್ಲಿ ಆತ್ಮಾರ್ಪಣೆ ಮಾಡಿಕೊಂಡರಂತೆ. ಆಗ ಊರ ಮುಖ್ಯಸ್ಥರು ಗ್ರಾಮವನ್ನು ಅಪಾಯದಿಂದ ತಪ್ಪಿಸಿದ ಆ ಹುಡುಗರ ಪ್ರತಿಮೆಗಳನ್ನು ಮಾಡಿಸಿ ಗಣೇಶನ ಗುಡಿಯ ಹತ್ತಿರ ಮಂಟಪದಲ್ಲಿ ಸ್ಥಾಪಿಸಿದರೆಂದು ಜನಪದ ನಂಬಿಕೆಯೊಂದು ಹೇಳಿದರೆ, ನೀರಗಂಟಿಯಾದ ಹೊನ್ನಬಿಲ್ಲನನ್ನು ಊರ ದೇವಿಗೆ ವಚನ ಕೊಟ್ಟಂತೆ ಬಲಿ ಕೊಡುವುದರ ಮೂಲಕ ಗ್ರಾಮವನ್ನು ರಕ್ಷಿಸಿದನೆಂದು ಮತ್ತೊಂದು ನಂಬಿಕೆ ಹೇಳುತ್ತದೆ. ಇಂದು ಕೂಡ ಕೆರೆ ತುಂಬಿದಾಗ ಹೊನ್ನಬಿಲ್ಲೋ ಚೆನ್ನಬಿಲ್ಲೋ ಎಂದು ಕೂಗಿಕೊಳ್ಳುತ್ತದೆಂದು ಜನರ ನಂಬಿಕೆ.

ಇತ್ತೀಚೆಗೆ ಅಯ್ಯನಕೆರೆ ದುರಸ್ತಿಗೊಂಡಿದ್ದು ಮೀನು ಸಾಕಾಣೆ ಕೇಂದ್ರವಾಗಿದೆ. ಈ ಕೆರೆಯನ್ನು ಪ್ರವಾಸಿ ತಾಣವಾಗಿ ಅಭಿವೃದ್ಧಿಗೊಳಿಸಲು ಹೆಚ್ಚಿನ ಅವಕಾಶಗಳಿವೆ. (ಕೆ.ಓ.)

**ಅಯ್ಯರ್, ಕೆ.ವಿ. :** 1898-1980. ಪ್ರಸಿದ್ಧ ಕಾದಂಬರಿಕಾರ, ವ್ಯಾಯಾಮ ಪಟು, ವ್ಯಾಯಾಮ ಶಿಕ್ಷಕ, ಲೇಖಕ. ಪೂರ್ತಿ ಹೆಸರು ಕೋಲಾರ ವೆಂಕಟೇಶ ಅಯ್ಯರ್. ಕೋಲಾರ ಜಿಲ್ಲೆಯ ದೇವರಾಯನ



ಸಮುದ್ರದಲ್ಲಿ 1898ರಲ್ಲಿ ಜನಿಸಿದರು. ತಂದೆ ರಾಮಸ್ವಾಮಯ್ಯ. ಬಡತನದಿಂದಾಗಿ ಅಯ್ಯರ್ ಎಸ್.ಎಸ್.ಎಲ್.ಸಿ.ಯಿಂದ ಮುಂದೆ ವಿದ್ಯಾಭ್ಯಾಸ ಮುಂದುವರಿಸಲು ಸಾಧ್ಯವಾಗಲಿಲ್ಲ. ಅಂಗ ಸಾಧನೆಯಲ್ಲಿ ಆಸಕ್ತಿವಹಿಸಿ, ವಿಶ್ವಖ್ಯಾತಿ ಗಳಿಸಿ, ಸ್ವಂತ ವ್ಯಾಯಾಮ ಶಾಲೆಯನ್ನು ಬೆಂಗಳೂರಿನಲ್ಲಿ ತೆರೆದು ಅನೇಕ ಅಂಗಸಾಧಕರನ್ನು ತಯಾರಿಸಿದರು. ವಿಶ್ವದ ಮಹಾನ್ ಅಂಗಸಾಧಕ ಸ್ಯಾಂಡೋಬಿನಂತೆ ತಾವೂ ಆಗಬೇಕೆಂಬುದು ಇವರ ಬಯಕೆಯಾಗಿತ್ತು. ಇವರಿಗೆ ನಾಟಕದಲ್ಲಿ ವಿಶೇಷ ಅಭಿರುಚಿಯಿತ್ತು. ಇದರಿಂದಾಗಿ ಟಿ.ಪಿ. ಕೈಲಾಸಂ ಅವರು ಪರಿಚಿತರಾದರು. ಕೈಲಾಸಂ ಕೆಲಕಾಲ ಅಯ್ಯರ್ ಮನೆಯಲ್ಲೇ ಇರುತ್ತಿದ್ದರು. ಇವರ ಸ್ನೇಹ ಗಾಢವಾಯಿತು. ಅಂಗಸಾಧನೆಯಲ್ಲಿ ಅಯ್ಯರ್ ಅವರಿಗಿದ್ದ ಆಸಕ್ತಿಯನ್ನು ಗಮನಿಸಿದ ಕೈಲಾಸಂ ಬರೀ ದೇಹವನ್ನು ಮಾಂಸಖಂಡವನ್ನು ಗಟ್ಟಿಗೊಳಿಸುವುದರಿಂದ ಪ್ರಯೋಜನವಿಲ್ಲ 'ಬುದ್ಧಿಯನ್ನು, ಮಿದುಳನ್ನು ಗಟ್ಟಿಗೊಳಿಸಬೇಕು' ಎಂದು ಹೇಳಿದ ಮಾತನ್ನು ಇವರು ಸವಾಲಾಗಿ ಸ್ವೀಕರಿಸಿ ಓದು ಬರೆಹಗಳಲ್ಲಿ ಹೆಚ್ಚು ಆಸಕ್ತಿವಹಿಸತೊಡಗಿದರು. ದಯ್ಯದ ಮನೆ ಅಥವಾ ಆಷಾಢ ಬಹುಳ ಅಮಾವಾಸ್ಯೆ (1949) ಎಂಬ ಕಥಾರೂಪವನ್ನು ಬರೆದರು. ಇದರಿಂದ ತೃಪ್ತರಾಗದೆ ಜಿ.ಪಿ.ರಾಜರತ್ನಂ ಅವರಿಂದ ಸಲಹೆ, ಸೂಚನೆ, ಮಾರ್ಗದರ್ಶನಗಳನ್ನು ಪಡೆಯುತೊಡಗಿದರು. ರೀಡರ್ಸ್ ಡೈಜೆಸ್ಟ್ ಮಾಸಿಕದಲ್ಲಿ ಪ್ರಕಟವಾದ ಪ್ರಖ್ಯಾತ ಕಲಾವಿದ ಮೈಖೇಲ್ ಏಂಜಲೋವಿನ ಕುರಿತಾದ ಕಲ್ಪಿತ ಕಥೆಯೊಂದನ್ನು ಆಧರಿಸಿ ಕಾದಂಬರಿಯೊಂದನ್ನು ಬರೆಯುವ ಯೋಚನೆಯನ್ನು ರಾಜರತ್ನಂ ಅವರ ಮುಂದೆ ಇಟ್ಟರು. ರಾಜರತ್ನಂ ಅವರು ಅಯ್ಯರ್ ಅವರ ಅಸ್ಪಷ್ಟ ಯೋಚನೆಗಳಿಗೆ ಖಚಿತ ರೂಪ ನೀಡಿದರು. ರೂಪದರ್ಶಿ (1952) ಕಾದಂಬರಿ ಅಯ್ಯರ್ ಅವರಿಗೆ ಖ್ಯಾತಿಯನ್ನು ತಂದುಕೊಟ್ಟಿತು.

ಕ್ರಮೇಣ ಅಯ್ಯರ್ ಅವರ ಬರೆಹಕ್ಕೆ ಒಂದು ಸ್ಪಷ್ಟರೂಪ ದೊರಕಿತು. ಅನಂತರ ಹೊಯ್ಸಳ ರಾಜವಂಶದ ಮಹಾರಾಣಿ ನಾಟ್ಯರಾಣಿ ಶಾಂತಲೆಯನ್ನು ಕುರಿತ ಚಾರಿತ್ರಿಕ ವಸ್ತುವುಳ್ಳ ಶಾಂತಲಾ ಎಂಬ ಹೃದಯಸ್ಪರ್ಶಿ ಕಾದಂಬರಿಯನ್ನು ಬರೆದರು (1954). ಪತಿ-ಪತ್ನಿ, ತಂದೆ-ಮಗಳು, ಅಣ್ಣ-ತಂಗಿ, ರಾಜ-ರಾಣಿ ಹಾಗೂ ಪ್ರಜೆಗಳ ಸಂಬಂಧವನ್ನು ಮನಮುಟ್ಟುವಂತೆ ಚಿತ್ರಿಸುವ ಈ ಕಾದಂಬರಿ ಅಯ್ಯರ್ ಅವರಿಗೆ ಅಪಾರ ಖ್ಯಾತಿಯನ್ನೂ ಯಶಸ್ಸನ್ನೂ ತಂದುಕೊಟ್ಟಿತು. ಈ ಎರಡೂ ಕಾದಂಬರಿಗಳು ಅನೇಕ ಮುದ್ರಣಗಳನ್ನು ಕಂಡಿವೆಯಲ್ಲದೆ ವಿಶ್ವವಿದ್ಯಾಲಯಗಳಲ್ಲಿ ಪಠ್ಯಗಳೂ ಆಗಿದ್ದವು.

ಬಾನುಲಿಗಾಗಿ ಅನೇಕ ಪ್ರಸಾರ ನಾಟಕಗಳನ್ನು ಬರೆದ ಅಯ್ಯರ್ ಅವರು ಸ್ನೇಹಿತ ಕೈಲಾಸಂ ಕುರಿತು ಕೈಲಾಸಂರವರ ಸ್ಮರಣೆ ಎಂಬ ಆತ್ಮೀಯ ಒಡನಾಟದ ಚಿತ್ರಣವನ್ನು ನೀಡಿದ್ದಾರೆ (1973). ಲೀನಾ ಎಂಬುದು ರೂಪದರ್ಶಿ ಕಾದಂಬರಿಯ ಎರಡನೆಯ (ಮುಂದುವರಿದ) ಭಾಗ (1971). ಸಮುದತಾ (1968) ಇವರ ಮತ್ತೊಂದು ಕೃತಿ. ಇತರ ಸ್ನೇಹಿತರೊಂದಿಗೆ ಸೇರಿ ಹೊಸಕ್ಷಿತಿಜ (1965) ಎಂಬ ಸಂದರ್ಶನ ಪ್ರಬಂಧಗಳ ಸ್ವರೂಪವುಳ್ಳ ಕೃತಿಯನ್ನು ಇವರು ಹೊರತಂದಿದ್ದಾರೆ. ತಮ್ಮ ಆಸಕ್ತಿಯ ಕ್ಷೇತ್ರವಾದ ಅಂಗಸಾಧನೆ ಕುರಿತು ಇಂಗ್ಲಿಷಿನಲ್ಲಿ ನಾಲ್ಕು ಪುಸ್ತಕಗಳನ್ನು ಪ್ರಕಟಿಸಿದ್ದಾರೆ.

ನಾಟಕ ಕ್ಷೇತ್ರವೂ ಇವರಿಗೆ ಪ್ರಿಯವಾಗಿತ್ತು. ರವಿ ಕಲಾವಿದರು ಎಂಬ ನಾಟಕ ಸಂಘವೊಂದನ್ನು ಕಟ್ಟಿ ಇವರು ಅದರ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ಅಯ್ಯರ್ ಅವರ ಸಾಹಿತ್ಯ ಸೃಷ್ಟಿ ಸಂಖ್ಯೆಯ ದೃಷ್ಟಿಯಿಂದ ದೊಡ್ಡದಲ್ಲ. ಆದರೆ ಗುಣದಲ್ಲಿ ಹಿರಿಮೆ ಉಳ್ಳದ್ದು. ಇವರ ಸಾಹಿತ್ಯಕ ಕೊಡುಗೆಯನ್ನು ಗಮನಿಸಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿಯನ್ನು ನೀಡಿದೆ (1979). ಇವರು 1980ರಲ್ಲಿ ನಿಧನಹೊಂದಿದರು. *

**ಅಯ್ಯರ್, ಜಿ.ವಿ. :** 1917-2003 ಕನ್ನಡ ಚಲನಚಿತ್ರ ನಟ, ನಿರ್ದೇಶಕ ಹಾಗೂ ಸಾಹಿತಿ. ಗಣಪತಿ ವೆಂಕಟರಮಣ ಅಯ್ಯರ್ ಇವರ ಪೂರ್ತಿ ಹೆಸರು. ಇವರು ಮೂಲತಃ ಮೈಸೂರು ಜಿಲ್ಲೆ ನಂಜನಗೂಡಿನವರು. ಕಡುಬಡತನದಲ್ಲೇ ಬಾಲ್ಯ ಕಳೆದ ಇವರು ಮೂಕಿ ಚಿತ್ರಗಳಿಂದ ಆಕರ್ಷಿತರಾದರು. ತಮ್ಮ 10ನೆಯ ವಯಸ್ಸಿನಲ್ಲಿ ಗುಬ್ಬಿ ಕಂಪನಿ ಸೇರಿದರು. ಚಲನಚಿತ್ರ ನಟನಾಗಬೇಕೆಂಬ ಹಂಬಲದಿಂದ ಪುಣೆಗೆ ತೆರಳಿ ಪ್ರಭಾತ್ ಸ್ಟುಡಿಯೋ ಬಾಗಿಲು ತಟ್ಟಿದರು. ಆದರೆ ನಿರಾಶರಾಗಿ ಹಿಂದಿರುಗಿದರು. 15ನೆಯ ವಯಸ್ಸಿನಲ್ಲಿ ಪುನಃ ಬಾಲಕೃಷ್ಣರ ಜೊತೆ ಗುಬ್ಬಿ ಕಂಪನಿ ಸೇರಿದರು. ಈ ಅವಧಿಯಲ್ಲಿ ಹೆಸರಾಂತ ನಾಟಕಕಾರ ಟಿ.ಪಿ.ಕೈಲಾಸಂ ಅವರಿಂದ ಸ್ಫೂರ್ತಿ ಪಡೆದರು. ಅನಂತರ ರಂಗಭೂಮಿಯ ಗಂಭೀರ ಅಧ್ಯಯನದಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ಇವರು ರಾಧಾರಮಣ ಚಿತ್ರದ ಮೂಲಕ ತಮ್ಮ ನಟನಾ ವೃತ್ತಿಯನ್ನು ಆರಂಭಿಸಿದರು (1943). ಮೊದಲ ಹಂತದಲ್ಲಿ ಹಾಸ್ಯ ನಟರಾಗಿ ಕಾಣಿಸಿಕೊಂಡರು. ಬೇಡರಕಣ್ಣಪ್ಪ(1954) ಚಿತ್ರ ಇವರ ಜನಪ್ರಿಯತೆಯನ್ನು ಹೆಚ್ಚಿಸಿತು. ವಿಕ್ರಮ್ ಪ್ರೊಡಕ್ಷನ್‌ರವರ ದಶಾವತಾರ ಚಿತ್ರವನ್ನು ನಿರ್ದೇಶಿಸಿದರು. 1960ರ ದಶಕದಲ್ಲಿ ಕನ್ನಡ ಚಲನಚಿತ್ರಗಳ ತಯಾರಿಕೆ ಇಳಿಮುಖವಾಗಲಾರಂಭಿಸಿದಾಗ ರಾಜ್‌ಕುಮಾರ್, ನರಸಿಂಹರಾಜು

ಮತ್ತು ಟಿ.ಎನ್. ಬಾಲಕೃಷ್ಣರವರ ಜೊತೆಗೂಡಿ ಕನ್ನಡ ಕಲಾವಿದರ ವೇದಿಕೆ ರಚಿಸಿಕೊಂಡರು. ಕನ್ನಡಿಗರನ್ನು ಸಂಘಟಿಸುವುದು ಹಾಗೂ ಚಲನಚಿತ್ರದ ಬಗ್ಗೆ ಆಸಕ್ತಿ ಮೂಡಿಸುವುದು ಈ ವೇದಿಕೆಯ ಉದ್ದೇಶವಾಗಿತ್ತು. ಈ ಕಲಾವಿದರೆಲ್ಲಾ ಸೇರಿಕೊಂಡು ಕನ್ನಡದ 100ನೆಯ ವಾಕ್ ಚಿತ್ರವಾಗಿ ರಣಧೀರ ಕಂಠೀರವ ಎಂಬ ಐತಿಹಾಸಿಕ ಚಿತ್ರ ನಿರ್ಮಿಸಿದರು (1960). ಈ ಚಿತ್ರ ಜಯಭೇರಿ ಬಾರಿಸಿತು. ಅನಂತರ ಅಯ್ಯರ್ ಅವರು ಚಿತ್ರಕಥೆ, ಸಂಭಾಷಣೆ ಮತ್ತು ಗೀತೆಗಳನ್ನು ರಚಿಸುವ ಮೂಲಕ ತಮ್ಮ ಪ್ರತಿಭೆಯನ್ನು ಮೆರೆದರು. ಕಿತ್ತೂರು ಚನ್ನಮ್ಮ ಇವರು ಸಂಭಾಷಣೆ ರಚಿಸಿದ ಹೆಸರಾಂತ ಚಿತ್ರಗಳಲ್ಲೊಂದು. ಬಿ.ವಿ.ಕಾರಂತ ಮತ್ತು ಗಿರೀಶ್ ಕಾರ್ನಾಡ್ ಅವರ ನಿರ್ದೇಶನದಲ್ಲಿ ವಂಶವೃಕ್ಷ ಚಿತ್ರ ತಯಾರಿಸಿದರು (1972). ಇದು ಅಯ್ಯರ್ ಅವರ ವೃತ್ತಿ ಜೀವನಕ್ಕೊಂದು ತಿರುವು ನೀಡಿತು. ಇವರು ನಿರ್ದೇಶಿಸಿದ ಹಂಸಗೀತೆ (1975) ಇವರ ನಿರ್ದೇಶನ ಪ್ರಬುದ್ಧತೆಗೆ ಸಾಕ್ಷಿಯಾಗಿದೆ. ಅಯ್ಯರ್ ಅವರದು ಸದಾ ಪ್ರಯೋಗಶೀಲ ಮನಸ್ಸು. ಚಿತ್ರರಂಗದಲ್ಲಿ ಹಲವು ಸಾಹಸಕಾರ್ಯಗಳನ್ನು ಇವರು ಕೈಗೊಂಡರು. ಸಂಸ್ಕೃತ ಭಾಷೆಯಲ್ಲೂ ಚಿತ್ರ ನಿರ್ಮಾಣಕ್ಕೆ ತೊಡಗಿದ ಇವರು ಆದಿ ಶಂಕರಾಚಾರ್ಯ ಎಂಬ ಪ್ರಥಮ ಸಂಸ್ಕೃತ ಚಿತ್ರವನ್ನು ನಿರ್ದೇಶಿಸಿದರು. ಈ ಚಿತ್ರ ಅತ್ಯುತ್ತಮ ಚಿತ್ರವೆಂದು ಸ್ವರ್ಣ ಕಮಲ ಪ್ರಶಸ್ತಿ ಗಳಿಸಿತು (1983). ಅನಂತರ ಮಧ್ವಾಚಾರ್ಯ, ಭಗವದ್ಗೀತೆ, ಸ್ವಾಮಿ ವಿವೇಕಾನಂದ ಮೊದಲಾದ ಚಿತ್ರಗಳನ್ನು ನಿರ್ಮಿಸಿ ಪ್ರಯೋಗಶೀಲ ನಿರ್ದೇಶಕರೆನಿಸಿಕೊಂಡರು. ಸಾಹಿತ್ಯ, ಮತ್ತು ತತ್ತ್ವಜ್ಞಾನ ಇವರ ಇತರ ಪ್ರಿಯ ಆಸಕ್ತಿಯ ವಿಷಯಗಳು. ಇವರು ಉತ್ತಮ ವಾಗ್ಮಿಗಳೂ ಚಿಂತಕರೂ ಆಗಿದ್ದರು. ಕನ್ನಡ ಚಿತ್ರರಂಗದ ಆಚಾರ್ಯರೆಂದೇ ಹೆಸರಾದ ಅಯ್ಯರ್ 2003 ಡಿಸೆಂಬರ್ 21ರಂದು ಮುಂಬಯಿಯಲ್ಲಿ ನಿಧನರಾದರು. (ಜಿ.ಎಂ.ಯು.)



**ಅಯ್ಯಾವೊಳೆ ಐನೂರ್ವರು :** ಮಧ್ಯಕಾಲೀನ ಕರ್ನಾಟಕದಲ್ಲಿ ಅತ್ಯಂತ ಪ್ರಭಾವಿಯಾಗಿದ್ದ ವಾಣಿಜ್ಯಸಂಘ. ಇದು ಮೊದಲು ಅಯ್ಯಾವೊಳೆಯಲ್ಲಿ (ಈಗಿನ ಐಹೊಳೆ) ಬಾದಾಮಿ ಚಾಳುಕ್ಯರ ಆಡಳಿತ ಕಾಲದಲ್ಲಿ ಸ್ಥಾಪನೆಯಾಗಿರಬೇಕೆಂದು ಊಹಿಸಲಾಗಿದೆ. ಕಲ್ಯಾಣ, ಚಾಳುಕ್ಯ, ಹೊಯ್ಸಳ ಮತ್ತು ವಿಜಯನಗರ ಸಾಮ್ರಾಜ್ಯಗಳ ಕಾಲದ ಅನೇಕ ಶಾಸನಗಳಲ್ಲಿ ಅಯ್ಯಾವೊಳೆ ಐನೂರ್ವರ ಸಂಘಕ್ಕೆ ಸಂಬಂಧಿಸಿದ ಮಾಹಿತಿ ದೊರೆಯುತ್ತದೆ. ಈ ಸಂಘವನ್ನು ನಾನಾದೇಶಿ ಎಂದೂ ಸಂಬೋಧಿಸಲಾಗಿದೆ. ಕನ್ನಡನಾಡಿನ ಪ್ರಸಿದ್ಧ ವಣಿಕರ ಜೊತೆಗೆ ತಮಿಳುನಾಡು ಮತ್ತು ಕೇರಳದ ವರ್ತಕರೂ ಈ ಸಂಘದ ಸದಸ್ಯತ್ವ ಹೊಂದಿದ್ದರು. ಎಂಟನಾಡ ಪದಿನರ್ವರು, ಗವರೆಗಳು, ಗಾತ್ರಿಗಳು, ಸೆಟ್ಟಿಯರು ಸೆಟ್ಟಿ ಗುತ್ತರು, ಅಂಕಕಾರರು, ಬೀರರು, ಬೀರವಣಿಗರು, ಗಂದಿಗರು, ಗಾವುಂಡರು ಇವರೆಲ್ಲಾ ಈ ಸಂಘದ ಸದಸ್ಯರಾಗಿದ್ದರು. 1150ರ ಬಳ್ಳಿಗಾಮೆಯ ಶಾಸನವೊಂದರಲ್ಲಿ ಅಯ್ಯಾವೊಳೆ ಐನೂರ್ವರು ಸಂಘದ ಸದಸ್ಯರು ವೀರಬಣಂಜು ಧರ್ಮ ಪ್ರತಿಪಾಳರು ಭಗವತೀಲಬ್ಧವರಪ್ರಸಾದರು, ಬ್ರಹ್ಮ ವಿಷ್ಣು ಮಹೇಶ್ವರಪಾದಾರಾಧಕರು ಎಂಬುದಾಗಿ ಕರೆದುಕೊಂಡಿದ್ದಾರೆ. ಇವರು ಹಸುಂಬೆಯಲ್ಲಿ ಅಮೂಲ್ಯ ವಸ್ತುಗಳನ್ನು ತುಂಬಿಕೊಂಡು ಚೇರ ಚೋಳ ಮಲಯ ಮಗಧ ಕೌಶಲ ಸೌರಾಷ್ಟ್ರ ಕಾಂಭೋಜ ಗೌಳ ಲಾಳ ಪಾರಸ ನೇಪಾಳ ಎಂಬ ನಾನಾದೇಶಗಳಲ್ಲಿ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖ ಸಂವಾಹನವೆಂಬ ದಿಗುದಂತಿ ಪಟ್ಟಣಗಳನ್ನು ಸಂಚರಿಸಿ ಸರಕುಗಳನ್ನು ಕೊಳ್ಳುವ ಮತ್ತು ಮಾರುವ ಕಾರ್ಯದಲ್ಲಿ ತೊಡಗಿದ್ದರು. ಪಾದಮಾರ್ಗ ಜಲಮಾರ್ಗವಾಗಿ ಷಟ್ಖಂಡ ಮಂಡಲಗಳಿಗೆ ಹೋಗಿಬರುತ್ತಿದ್ದರು. ಅಂತರ್ದೇಶೀಯ ಸಾಗಾಣಿಕೆಗೆ ಕುದುರೆ, ಎತ್ತು, ಕತ್ತೆ, ಕೋಣ, ಒಂಟೆ, ಆನೆಗಳನ್ನು ಉಪಯೋಗಿಸುತ್ತಿದ್ದರು. ದ್ವೀಪಾಂತರಗಳಿಗೆ ಹಡಗುಗಳ ಮುಖಾಂತರ ಹೋಗಿಬರುತ್ತಿದ್ದರು. ಈ ವರ್ತಕರು ಬಟ್ಟೆ, ಬತ್ತ, ಹತ್ತಿ, ಸಕ್ಕರೆ, ಗೋದಿ, ಅಡಕೆ, ಸಾಸುವೆ, ಜೀರಿಗೆ, ಮೆಣಸು, ಅರಿಶಿನ, ಇಂದ್ರನೀಲ, ಚಂದ್ರಕಾಂತ ಮತ್ತು ಮಾಣಿಕ್ಯ ವಜ್ರ ವೈಡೂರ್ಯ ಗೋಮೇದಿಕ ಪುಷ್ಯರಾಗ ಪದ್ಮರಾಳ ಪವಳ ಮರಕತ ಕರ್ಕೇತನ ಚಂದನ ಕಸ್ತೂರಿ ಕುಂಕುಮ ಮೊದಲಾದ ವಸ್ತುಗಳನ್ನು ಅವು ದೊರೆಯುವ ಪ್ರದೇಶಗಳಲ್ಲಿ ಕೊಂಡು ಬೇಡಿಕೆಯಿದ್ದ ಪ್ರದೇಶಗಳಿಗೆ ಸಾಗಿಸಿ ಮಾರುತ್ತಿದ್ದರು. ಕನ್ನಡನಾಡಿನ ಅನೇಕ ಪಟ್ಟಣಗಳಲ್ಲಿ ಈ ಸಂಘದ ವರ್ತಕರು ದೇವಾಲಯಗಳು, ಅನ್ನಸತ್ರಗಳು ಮತ್ತು ಕೆರೆಗಳನ್ನು ಕಟ್ಟಿಸಿರುವರಲ್ಲದೆ, ದೇವಾಲಯಗಳಿಗೂ ಮಠಗಳಿಗೂ ಉದಾರವಾಗಿ ದಾನದತ್ತಿಗಳನ್ನು ನೀಡಿರುವರು. ಮುಖ್ಯ ಧಾರ್ಮಿಕ ಕ್ಷೇತ್ರಗಳಲ್ಲಿ ಬಡಬಗ್ಗರಿಗೂ ಯಾತ್ರಾರ್ಥಿಗಳಿಗೂ ಉಚಿತ ಅನ್ನಸತ್ರಗಳು ಹಾಗೂ ರೋಗಿಗಳ ಶುಶ್ರೂಷೆಗೆ ಔಷಧಾಲಯಗಳನ್ನು ತೆರೆಯಲು ಉದಾರ ಕಾಣಿಕೆ ನೀಡಿರುವರು. ಅಯ್ಯಾವೊಳೆ ಐನೂರ್ವರ ಸದಸ್ಯರು ಪ್ರಾಮಾಣಿಕತೆ ಉದಾರನೀತಿ ಕಾರ್ಯತತ್ಪರತೆಗೆ ಪ್ರಸಿದ್ಧರಾಗಿದ್ದರು. ಈ ಸಂಘದ ಹಲವು ದೊಡ್ಡ ವ್ಯವಹಾರಿಗಳು ಆಗಿನ ಕಾಲದ ಪ್ರಭುಗಳ ಮನ್ನಣೆಗೂ ಪಾತ್ರರಾಗಿದ್ದರು. ಈ ಸಂಘವು ಸಾಕಷ್ಟುಕಾಲ ಅಸ್ತಿತ್ವದಲ್ಲಿದ್ದು ಯಲಹಂಕ ಪ್ರಭುಗಳ ಕಾಲಕ್ಕೆ ಸೇರಿದ ಬೆಂಗಳೂರಿನ ಶಾಸನವೊಂದರಲ್ಲಿ ಅದರ ಉಲ್ಲೇಖವಿದೆ. (ಜಿ.ಆರ್.ಆರ್.)

**ಅಯ್ಯಾಶಾಸ್ತ್ರಿ, ಸೋಸಲೆ :** 1854-1934 ಕನ್ನಡ ಸಾಹಿತ್ಯ ಆಧುನಿಕ ಯುಗವನ್ನು ಪ್ರವೇಶಮಾಡುತ್ತಿದ್ದ ಸಂಧಿಕಾಲದಲ್ಲಿ ಸಾಂಪ್ರದಾಯಿಕ ಕಾವ್ಯರಚನೆ ಮಾಡಿದ ಹೆಸರಾಂತ ಕವಿಗಳಲ್ಲೊಬ್ಬರು. ಬಸವಪ್ಪಶಾಸ್ತ್ರೀ, ಅಳಿಯ ಲಿಂಗರಾಜ, ಮುದ್ದಣ ಇವರ ಸಮಕಾಲೀನರು. ಆಗತಾನೆ ರೂಪುಗೊಳ್ಳುತ್ತಿದ್ದ ರಂಗಭೂಮಿಗೂ ನಾಟಕ ಸಾಹಿತ್ಯಕ್ಕೂ ಸೇವೆಸಲ್ಲಿಸಿದವರಲ್ಲಿ ಮೊದಲಿಗರು.

ಮೈಸೂರು ಜಿಲ್ಲೆ ಸೋಸಲೆಯಲ್ಲಿ 1854 ಮಾರ್ಚ್ 20ರಂದು ಇವರು ಜನಿಸಿದರು. ತಂದೆ ಗರಳಪುರಿ ಶಾಸ್ತ್ರಿಗಳು ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ಮಹಾ ವಿದ್ವಾಂಸರಾಗಿದ್ದರಲ್ಲದೆ ಸಂಸ್ಕೃತದಲ್ಲಿ ಗ್ರಂಥರಚನೆಯನ್ನು ಮಾಡಿದ್ದರು. ಇಂಥ ಪರಿಸರದಲ್ಲಿ ಬೆಳೆದ ಶಾಸ್ತ್ರಿಗಳು ಸಂಸ್ಕೃತದ ಜೊತೆಗೆ, ಪೆರಿಯಸ್ವಾಮಿ ತಿರುಮಲಾಚಾರ್ಯರ ಬಳಿ ಕಾವ್ಯ, ತರ್ಕ, ವ್ಯಾಕರಣ ಮತ್ತು ಅಲಂಕಾರಶಾಸ್ತ್ರಗಳನ್ನು ವ್ಯಾಸಂಗ ಮಾಡಿದರು. ಸ್ವಂತ ವ್ಯಾಸಂಗದಿಂದ ಕನ್ನಡದಲ್ಲೂ ಪಾಂಡಿತ್ಯ ಗಳಿಸಿಕೊಂಡರು. ಚಿಕ್ಕಂದಿನಿಂದಲೂ ಸಂಸ್ಕೃತದಲ್ಲಿ ಕವನಗಳನ್ನು ಬರೆಯುವುದರಲ್ಲಿ ಆಸಕ್ತಿ ವಹಿಸಿದ್ದ ಇವರು ಬಸವಪ್ಪ ಶಾಸ್ತ್ರೀ, ಅಳಿಯ ಲಿಂಗರಾಜ - ಇವರುಗಳ ಪ್ರೋತ್ಸಾಹದಿಂದ ಕನ್ನಡದಲ್ಲೂ ಕಾವ್ಯರಚನೆಯನ್ನು ಮಾಡಿದರು.



ಶಾಸ್ತ್ರಿಗಳು ಮೈಸೂರು ಸದ್ವಿದ್ಯಾ ಪಾಠಶಾಲೆ, ಭಾಷೋಜ್ಜೀವಿನೀ ಪಾಠಶಾಲೆಗಳಲ್ಲಿ ಸಂಸ್ಕೃತ ಮತ್ತು ಕನ್ನಡ ಭಾಷಾ ಬೋಧಕರಾಗಿ ಹಲವಾರು ವರ್ಷಗಳ ಕಾಲ ಕೆಲಸ ಮಾಡಿದರಲ್ಲದೆ ಜಗನ್ಮೋಹನ ಮುದ್ರಾಕ್ಷರ ಶಾಲೆಯಲ್ಲಿ ಸಂಸ್ಕೃತ-ಕನ್ನಡ ಗ್ರಂಥಗಳ ಪರಿಶೋಧಕ ಪಂಡಿತರಾಗಿಯೂ ಕೆಲಸಮಾಡಿದರು. ಇವರು ಪರಿಶೋಧಿಸಿದ ಗ್ರಂಥಗಳಿವು: ಕರ್ನಾಟಕ ಶಬ್ದಾನುಶಾಸನಂ ಕರ್ನಾಟಕ ಕಾದಂಬರಿ, ಕರ್ನಾಟಕ ವಚನಭಾರತ, ಕರ್ನಾಟಕ ಭಗವದ್ಗೀತೆ.

ಚಾಮರಾಜ ಒಡೆಯರ ಕಾಲದಲ್ಲಿ ಅರಮನೆಯಲ್ಲಿ ನಾಟಕ ಸಂಘವೊಂದಿದ್ದು, ವಿದ್ವಾಂಸರಿಂದ ನಾಟಕಗಳನ್ನು ಬರೆಸಿ ಆಡಿಸುವ ವ್ಯವಸ್ಥೆ ಇತ್ತು. ಶಾಸ್ತ್ರಿಗಳು ಹಲವು ನಾಟಕಗಳನ್ನು ಬರೆದರು. ಕಾಳಿದಾಸನ ವಿಕ್ರಮೋರ್ವಶೀಯವನ್ನು ಓದುವವರಿಗೂ ನಾಟಕ ಆಡುವವರಿಗೂ ಅನುಕೂಲವಾಗುವಂತೆ ಅನುವಾದ ಮಾಡಿದರು (1891). ಹಿಂದೂಸ್ತಾನಿ ಭಾಷೆಯಲ್ಲಿದ್ದ ಪ್ರತಾಪಸಿಂಹ ಚರಿತ್ರೆ ನಾಟಕವನ್ನು ಕನ್ನಡಕ್ಕೆತಂದರು. ಶ್ರೀರಾಮಾಯಣ ನಾಟಕಂ (1904) ಇವರ ಸ್ವಂತ ರಚನೆ. ಇದರಲ್ಲಿ ರಾಮಾಯಣದ ಸಂಪೂರ್ಣ ಕಥೆಯನ್ನು ನಾಟಕ ರೂಪದಲ್ಲಿ ಹೇಳಿದ್ದಾರೆ.

ಶಾಸ್ತ್ರಿಗಳ ಕೆಲವು ಪ್ರಮುಖ ಕಾವ್ಯಗಳಿವು: ಶೇಷರಾಮಾಯಣಂ (1901), ಮೈಸೂರು ಮಹಾರಾಜ ಚರಿತ್ರಂ (1916), ದಮಯಂತೀ ಚರಿತ್ರೆ (1927). ಶೇಷರಾಮಾಯಣಂ ಒಂದು ಒಳ್ಳೆಯ ಕೃತಿ. ಉತ್ತರ ರಾಮಾಯಣದ ರಾಮಾಶ್ವಮೇಧದ ಕಥಾಭಾಗವನ್ನು ಪದ್ಮಪುರಾಣೋಕ್ತ ರೀತಿಯಿಂದ ಕನ್ನಡಿಗರಿಗೆ ಸುಲಭವಾಗಿ ತಿಳಿಯುವಂತೆ ಹೇಳುವುದೇ ಕಾವ್ಯದ ಉದ್ದೇಶ. ಕಥೆಯ ವಿವರಗಳಲ್ಲಿ ಇದು ಮುದ್ದಣನ ರಾಮಾಶ್ವಮೇಧವನ್ನು ಹೋಲುತ್ತದೆ. ಶೈಲಿಯಲ್ಲಿ ಲಕ್ಷ್ಮೀಶನ ಜೈಮಿನಿ ಭಾರತದ ಪ್ರಭಾವ ಕಾಣಸಿಗುತ್ತದೆ.

ಅಯ್ಯಾಶಾಸ್ತ್ರಿಗಳು ಮೈಸೂರು ಬಾಲಬೋಧಿನಿ ಪಾಠಶಾಲೆಯ ಸಂಸ್ಥಾಪಕರಾಗಿ (1894), ಸಂಸ್ಕೃತ ಮಹಾಪಾಠಶಾಲಾ ಸಮಿತಿ ಮತ್ತು ಸಂಸ್ಕೃತ ವಿದ್ಯಾಭಿವೃದ್ಧಿ ಸಮಿತಿಯ ಸದಸ್ಯರಾಗಿ (1913-16) ಮೈಸೂರು ವಿಶ್ವವಿದ್ಯಾನಿಲಯದ ಪಠ್ಯಪುಸ್ತಕ ಸಮಿತಿಯ ಸದಸ್ಯರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿಸಮಿತಿಯ ಸದಸ್ಯರಾಗಿ ಸೇವೆಸಲ್ಲಿಸಿದರು. ಇವರಿಗೆ ಅರಮನೆಯಿಂದ ಮಹಾವಿದ್ವಾನ್ (1905), ಕವಿತಿಲಕ (1912) ಎಂಬ ಪ್ರಶಸ್ತಿಗಳು ಲಭ್ಯವಾಗಿದ್ದವು. 1934ರಲ್ಲಿ ನಿಧನರಾದರು. (ಎಂ.ವಿ.ಎಸ್.)

**ಅರಕಲಗೂಡು** : ಹಾಸನ ಜಿಲ್ಲೆಯ ಒಂದು ತಾಲ್ಲೂಕು ಹಾಗೂ ತಾಲ್ಲೂಕಿನ ಕೇಂದ್ರ. ಹಾಸನ, ಆಲೂರು, ಕೊಡಗು ಜಿಲ್ಲೆಯ ಸೋಮವಾರಪೇಟೆ, ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ, ಹಾಸನ ಜಿಲ್ಲೆಯ ಹೊಳೆನರಸೀಪುರ ತಾಲ್ಲೂಕುಗಳು ಇದನ್ನು ಸುತ್ತುವರಿದಿವೆ. ವಿಸ್ತೀರ್ಣ 674ಚಕಿಮೀ. ಜನಸಂಖ್ಯೆ 1,99,243. ಈ ತಾಲ್ಲೂಕಿನಲ್ಲಿ ಅರಕಲಗೂಡು, ಕೊಣನೂರು ಪಟ್ಟಣಗಳೂ 300 ಗ್ರಾಮಗಳೂ ಇವೆ. ಹೋಬಳಿಗಳು ಐದು- ಅರಕಲಗೂಡು, ಮಗ್ಗೆ, ಮಲ್ಲಿಪಟ್ಟಣ, ರಾಮನಾಥಪುರ ಮತ್ತು ಕೊಣನೂರು.

ತಾಲ್ಲೂಕಿನ ಉತ್ತರ ಗಡಿಯಲ್ಲಿ ಹೇಮಾವತಿ ಮತ್ತು ದಕ್ಷಿಣ ಭಾಗದಲ್ಲಿ ಸ್ವಲ್ಪ ದೂರ ಕಾವೇರಿ ಹರಿಯುತ್ತವೆ. ಪಶ್ಚಿಮದಲ್ಲಿ ಕಾಡುಗಳಿಂದ ಕೂಡಿದ ಅನೇಕ ಬೆಟ್ಟಗಳಿವೆ. ಅಲ್ಲಲ್ಲಿ ವಿಶಾಲವಾದ ಕುರುಚಲು, ಹುಲ್ಲು ಮತ್ತು ಮರಗಳುಳ್ಳ ಕಾವಲುಗಳಿವೆ. ವರ್ಷಕ್ಕೆ ಸು.824ಮಿಮೀ ಮಳೆಯಾಗುತ್ತದೆ. ರಾಗಿ ಮುಖ್ಯ ಬೆಳೆ. ಜೋಳ, ದ್ವಿದಳ ಧಾನ್ಯಗಳು, ಈರುಳ್ಳಿ, ಕಡಲೆಕಾಯಿ, ಹೊಗೆಸೊಪ್ಪು, ಮೆಣಸಿನಕಾಯಿ ಇವನ್ನು ಹೆಚ್ಚಾಗಿ ಬೆಳೆಯುತ್ತಾರೆ. ತಾಲ್ಲೂಕಿನಲ್ಲಿ ಅನೇಕ ಕೆರೆಗಳು ಇವೆ. ತಾಲ್ಲೂಕಿನಲ್ಲಿ ಕಾಲುವೆಗಳಿಂದ 8996, ಕೆರೆಗಳಿಂದ 4032, ಬಾವಿಗಳು ಮತ್ತು ಕೊಳವೆಬಾವಿಗಳಿಂದ 505 ಹೆ.ಗಳ ಜಮೀನು ನೀರಾವರಿಗೆ ಒಳಪಟ್ಟಿದೆ. ಕಾವೇರಿ ನದಿಗೆ ಕೃಷ್ಣರಾಜಕಟ್ಟೆ ಎಂಬ ಚಿಕ್ಕ ಅಣೆಕಟ್ಟನ್ನು ಕಟ್ಟಲಾಗಿದೆ. ಇದರಿಂದ ರಾಮನಾಥಪುರ ಮತ್ತು ಕಟ್ಟೆಪುರ ಎಂಬ ಕಾಲುವೆಗಳನ್ನು ನಿರ್ಮಿಸಲಾಗಿದೆ. ಇದರಿಂದ ಬತ್ತ, ಕಬ್ಬು, ತೋಟದ ಬೆಳೆಗಳು, ಅಡಕೆ, ತೆಂಗು ಮುಂತಾದವನ್ನು ಬೆಳೆಯುತ್ತಾರೆ. ಪಶ್ಚಿಮದ ಬೆಟ್ಟಗಳ ಮೇಲೆ ಅಲ್ಲಲ್ಲಿ ಚಿಕ್ಕ ಕಾಫಿ ತೋಟಗಳೂ ಇವೆ.

ಈ ತಾಲ್ಲೂಕಿನಲ್ಲಿರುವ ರಾಮನಾಥಪುರ (ನೋಡಿ) ಪುಣ್ಯಕ್ಷೇತ್ರ. ಕೊಣನೂರು (ನೋಡಿ) ಸಹ ಮುಖ್ಯಸ್ಥಳ. ಸೋಮಪುರ ಗ್ರಾಮದ ಬಳಿ ಬೃಹತ್ ಶಿಲಾಸಮಾಧಿಗಳಿವೆ. ಶಂಭುನಾಥಪುರದಲ್ಲಿ 13ನೆಯ ಶತಮಾನದಲ್ಲಿ ಕಟ್ಟಿದ ಮತ್ತು ಪಾಳೆಯಗಾರ ಕಾಲದ ಗೋಪುರ ಇತ್ಯಾದಿಗಳನ್ನೊಳಗೊಂಡ ದೇವಾಲಯವಿದೆ. ಕಾಶೀಪುರ ವಿಜಯನಗರ ಕಾಲದಲ್ಲಿ ಪ್ರಸಿದ್ಧವಾಗಿದ್ದ ಸ್ಥಳ. ಬಸವಾಪಟ್ಟಣದಲ್ಲಿ ಹೊಯ್ಸಳ ದೇವಾಲಯಗಳು ಮತ್ತು ಕೋಟೆಯ ಅವಶೇಷಗಳಿವೆ. ಹಿಂದೆ ಇದೊಂದು ಅಗ್ರಹಾರವಾಗಿತ್ತು.

ಅರಕಲಗೂಡು ಈ ತಾಲ್ಲೂಕಿನ ಆಡಳಿತ ಕೇಂದ್ರ, ದೊಡ್ಡ ಊರು. ಜಿಲ್ಲಾ ಕೇಂದ್ರ ಹಾಸನದಿಂದ 32ಕಿಮೀ ದಕ್ಷಿಣಕ್ಕಿದೆ. ಹಾಸನ ಪಿರಿಯಾಪಟ್ಟಣ ಮತ್ತು ಹೊಳೆನರಸೀಪುರ ಕೊಡ್ಲಿಪೇಟೆ ರಸ್ತೆಗಳು ಈ ಊರಿನ ಮೂಲಕ ಹಾದು ಹೋಗುತ್ತವೆ. ಜನಸಂಖ್ಯೆ 15,184. ಊರು ನಗರಸಭೆಯ ಆಡಳಿತಕ್ಕೆ ಒಳಪಟ್ಟಿದೆ.

ಗೌತಮ ಋಷಿ ಸೂರ್ಯನನ್ನು ಕುರಿತು ಇಲ್ಲಿ ತಪಸ್ಸು ಮಾಡಿದ್ದರಿಂದ ಈ ಊರಿಗೆ ಅರ್ಕಪುರಿ ಎಂಬ ಹೆಸರಿತ್ತು ಎಂದು ಐತಿಹ್ಯ. ಐಗೂರು ಪಾಳೆಯಗಾರ ಕೃಷ್ಣಪ್ಪನಾಯಕ ಈ ಊರನ್ನು ಸ್ಥಾಪಿಸಿದ (1560). ಕಂಠೀರವ ನರಸರಾಜ 1647ರಲ್ಲಿ ಇದನ್ನು ಆಕ್ರಮಿಸಿಕೊಂಡ. ಅನಂತರ ಇದು ಕೆಳದಿಯ ಶಿವಪ್ಪ ನಾಯಕನ ವಶವಾಯಿತು. ಮುಂದೆ ಚಿಕ್ಕದೇವರಾಜನಿಂದ ಮೈಸೂರು ಸಂಸ್ಥಾನಕ್ಕೆ ಸೇರಿತು.

ಊರಿನಲ್ಲಿ ಶಿಥಿಲವಾದ ಕೋಟೆ ಇದೆ. ಕೋಟೆಯ ಒಳಗೆ ಲಕ್ಷ್ಮೀನರಸಿಂಹ, ಅಮೃತೇಶ್ವರ ಮತ್ತು ವೀರಭದ್ರ ದೇವಾಲಯಗಳಿವೆ. ಮೊದಲೆರಡು ದೇವಾಲಯಗಳು ಪ್ರಾಯಶಃ ಹೊಯ್ಸಳ ಕಾಲದವು. ಆದರೆ ಇವುಗಳಲ್ಲಿ ಹೆಚ್ಚಿನ ಕಲೆಗಾರಿಕೆಯೇನೂ ಕಂಡುಬರುವುದಿಲ್ಲ. *

**ಅರಣ್ಯಸಂಪತ್ತು** : ಕರ್ನಾಟಕದ ಅರಣ್ಯ ಸಂಪತ್ತು ಹೇರಳವಾದುದು. ಪುರಾತನ ಕಾಲದಲ್ಲಿ ಕರ್ನಾಟಕ ರಾಜ್ಯ ದಂಡಕಾರಣ್ಯದ ಒಂದು ಮುಖ್ಯ ಪ್ರದೇಶವಾಗಿದ್ದು ಮೃಗಗಳ ಬೇಟೆಯಲ್ಲಿ ಆಸಕ್ತಿಯಿದ್ದ ಅಂದಿನ ಅರಸರಿಂದ ಅನೇಕ ರೀತಿಯಲ್ಲಿ ಪೋಷಿತವಾಗಿದ್ದಿತು. ಪ್ರಸಿದ್ಧ ವೆನಿಶಿಯನ್ ಪ್ರವಾಸಿ ಮಾರ್ಕೊಪೋಲೋ ಕರ್ನಾಟಕದ ಅರಣ್ಯ ಸಂಪತ್ತನ್ನು ಸಾಕಷ್ಟು ಪ್ರಶಂಸಿಸಿದ್ದಾನೆ. ವಿಜಯನಗರಕ್ಕೆ ಭೇಟಿ ನೀಡಿದ ಅನೇಕ ವಿದೇಶಿ ಪ್ರವಾಸಿಗಳೂ ಇಲ್ಲಿನ ಕಾಡಿನ ದಟ್ಟತೆ ಮತ್ತು ಸಮೃದ್ಧತೆಯ ಬಗ್ಗೆ ವರ್ಣಿಸಿದ್ದಾರೆ. ವಿಜಯನಗರ ಸಾಮ್ರಾಜ್ಯದಲ್ಲಿ ಅರಣ್ಯಗಳಿಗೆ ತುಂಬಾ ಪ್ರಾಮುಖ್ಯ ನೀಡಲಾಗಿತ್ತು. ಅಂದು ವಿಜಯನಗರವನ್ನು ಸಂದರ್ಶಿಸಿದ ಅರೇಬಿಯದ ವ್ಯಾಪಾರಿ ಅಬ್ದುಲ್ ರಜಾಕ್ ಎಂಬಾತ ಕರ್ನಾಟಕದ ಅರಣ್ಯ ಸಂಪತ್ತು ಹಾಗೂ ಅದರ ವಾಣಿಜ್ಯ ಪ್ರಾಮುಖ್ಯತೆಯ ಬಗ್ಗೆ ಬಹುವಾಗಿ ಪ್ರಶಂಸಿಸಿದ್ದಾನೆ. ವಿಜಯನಗರ ಸಾಮ್ರಾಜ್ಯ ಇರುವವರೆಗೂ ದಕ್ಷರೀತಿಯಿಂದ ನಡೆಯುತ್ತಿದ್ದ ಅರಣ್ಯಗಳ ಆಡಳಿತ 1565ರ ತಾಳೀಕೋಟೆಯ ಕದನದ ಅನಂತರ ಕುಸಿಯಿತು. ಸಾಗುವಳಿಗೆ ಸಾಕಷ್ಟು ಜಮೀನಿಲ್ಲದೆ ಜನ ಅರಣ್ಯ ಒತ್ತುವರಿ ಮಾಡಿ ವ್ಯವಸಾಯ ಮಾಡಲು ಪ್ರಾರಂಭಿಸಿದರು. ತರುವಾಯ ಹೈದರ್ ಹಾಗೂ ಟಿಪ್ಪುಸುಲ್ತಾನರ ಕಾಲದಲ್ಲಿ ಶ್ರೀಗಂಧದ ಮರವನ್ನು ರಾಜವೃಕ್ಷ ಎಂದು ಪರಿಗಣಿಸಲಾಯಿತು. ಜೊತೆಗೆ ಬಹುಮುಖ್ಯ ಪ್ರಯೋಜನಕಾರಿ ಸಾಗುವಾನಿ ತೇಗದ ಮರಕ್ಕೂ ಸರ್ಕಾರದ ರಕ್ಷಣೆ ದೊರೆಯಿತು.

ಕಾಡುಗಳ ಆಡಳಿತ ಹಾಗೂ ಸಂರಕ್ಷಣೆಯಲ್ಲಿ ಬ್ರಿಟಿಷರ ಕೊಡುಗೆ ಅಪಾರ. ವೈಜ್ಞಾನಿಕ ವಿಧಾನದಲ್ಲಿ ಕಾಡುಗಳ ವಿಂಗಡನೆ ಹಾಗೂ ಸಂರಕ್ಷಣೆಯನ್ನು ಇಡೀ ಭಾರತದಲ್ಲಿ ಪ್ರಾರಂಭಿಸಿದವರೂ ಬ್ರಿಟಿಷರೇ. ಕರ್ನಾಟಕದ ಸ್ಥಿತಿಯೂ ಬೇರೆಯಲ್ಲ. 1799ರ ಅನಂತರ ಬ್ರಿಟಿಷರ ಅಧೀನಕ್ಕೊಳಪಟ್ಟ ಕರ್ನಾಟಕದ ಭಾಗದಲ್ಲಿ ಮೊದಲು ಶ್ರೀಗಂಧ ಹಾಗೂ ತೇಗದ ಮರಗಳಿಗೆ ಮಾತ್ರ ಪ್ರಾಮುಖ್ಯವಿತ್ತು. ಗವರ್ನರ್ ಜನರಲ್ ಡಾಲ್ ಹೌಸಿಯ 1850ರ ಆದೇಶ, ಕರ್ನಾಟಕದ ಅರಣ್ಯ ರಕ್ಷಣೆ, ಅಭಿವೃದ್ಧಿ, ಮಾರ್ಪಾಡು ಎಲ್ಲವೂ ಕಾನೂನು ಕಟ್ಟಳೆಗಳಿಗೆ ಒಳಪಟ್ಟು ವೈಜ್ಞಾನಿಕ ರೀತಿಯಲ್ಲಿ ಬೆಳೆದುಬರುವಂತೆ ಮಾಡಿತು.

ಹಿಂದೆ ಅರಬ್ಬರು, ಆಫ್ರಿಕನ್ನರು ಅನಂತರ ಭಾರತಕ್ಕೆ ಬಂದ ಬ್ರಿಟಿಷರು ಹಡಗುಗಳ ನಿರ್ಮಾಣಕ್ಕೆ ಸಾಗುವಾನಿ ಮತ್ತು ಸುರಹೊನ್ನೆ ಮರಗಳನ್ನು ಕಡಿದು ಉಪಯೋಗಿಸುತ್ತಿದ್ದರು. ಇಂಗ್ಲೆಂಡಿನ ಓಕ್ ಮರ ನಶಿಸುತ್ತ ಬಂದಂತೆಲ್ಲ ಕರ್ನಾಟಕದ ಸಾಗುವಾನಿ ಮರಗಳಿಗೆ ಬೇಡಿಕೆ ಹೆಚ್ಚುತ್ತ ಬಂದಿತು. ಎರಡನೆಯ ಮಹಾಯುದ್ಧದ ಕಾಲದಲ್ಲಿ ಇಡೀ ಭಾರತದಲ್ಲಿ ಸಾಕಷ್ಟು ಪ್ರಮಾಣದ ಮರ - ಮುಂಡಿಗೆ, ದಿಮ್ಮಿ, ಕಂಬಗಳಿಗಾಗಿ ಅರಣ್ಯ ನಾಶ ಮುಂದುವರಿಯಿತು. ಜೊತೆ ಜೊತೆಯಲ್ಲೇ ಅರಣ್ಯದ ಮರಮುಟ್ಟುಗಳ ವಿಚಾರವಾಗಿ ವೈಜ್ಞಾನಿಕ ಸಂಶೋಧನೆ ಪ್ರಾರಂಭವಾಯಿತು. ನೆಡುತೋಪುಗಳು, ಸಾಲುಮರಗಳು, ಗುಂಡು ತೋಪುಗಳನ್ನು ಅಲ್ಲಲ್ಲಿ ಬೆಳೆಸಿದರು. ಆದರೂ ಜನಸಂಖ್ಯೆಯ

ಹೆಚ್ಚಳದಿಂದಾಗಿಯೂ ಹೆಚ್ಚು ಬೆಳೆ ಬೆಳೆಯುವ ಆಂದೋಲನದಿಂದಾಗಿಯೂ ಯೋಗ್ಯವಾದ ಕಾಡುಗಳು ನಾಶವಾಗುತ್ತ ಬಂದವು. ಕೈಗಾರಿಕೆಗಳಿಗೆ ಬೇಕಾದ ಮರಮುಟ್ಟು, ಸೌದೆ, ಇದ್ದಿಲುಗಳಿಗಾಗಿ ಪ್ರತಿವರ್ಷ ಸು.1,00,000 ಹೆಕ್ಟೇರು ಅರಣ್ಯ ಪ್ರದೇಶ ಕಡಿಮೆಯಾಗುತ್ತಿದೆ ಎಂದು 1970ರ ದಶಕದ ಅಂಕಿ ಸಂಖ್ಯೆಗಳು ತಿಳಿಸುತ್ತವೆ. ಆದರೆ ಇತ್ತೀಚೆಗೆ ನೆಡುತೋಪುಗಳನ್ನು ಹೆಚ್ಚಿಸುವ, ಸಸ್ಯಗಳನ್ನು ನೆಟ್ಟು ಅರಣ್ಯಗಳನ್ನು ಅಭಿವೃದ್ಧಿಪಡಿಸುವ ಹಾಗೂ ಸಾಮಾಜಿಕ ಅರಣ್ಯ ಕಾರ್ಯಕ್ರಮಗಳಿಂದಾಗಿ ಕರ್ನಾಟಕದ ಅರಣ್ಯ ಕ್ಷೇತ್ರ ಗಣನೀಯವಾಗಿಯಲ್ಲದಿದ್ದರೂ ನಿಧಾನವಾಗಿ ವೃದ್ಧಿಯಾಗುತ್ತಿದೆ.

1960ರ ದಶಕದಲ್ಲಿ ಕರ್ನಾಟಕದಲ್ಲಿ 35,21,000 ಹೆಕ್ಟೇರು ಅರಣ್ಯವಿದ್ದು, ಇದು ಕರ್ನಾಟಕದ ಭೂಭಾಗದ ಸೇ. 23 ಭಾಗ ದಷ್ಟಾಗುತ್ತಿತ್ತೆಂದು ದಾಖಲೆಗಳು ತಿಳಿಸುತ್ತವೆ. 1985ರ ವೇಳೆಗೆ ಕರ್ನಾಟಕದ ಅರಣ್ಯ ಪ್ರದೇಶದ ವಿಸ್ತೀರ್ಣ ಸುಮಾರು ಸೇ.19.5ಕ್ಕೆ ಕುಸಿಯಿತು. ಅಂಕಿ ಅಂಶಗಳ ಪ್ರಕಾರ 1985ರಲ್ಲಿ ಕರ್ನಾಟಕದ ಅರಣ್ಯ ಪ್ರದೇಶದ ವಿಸ್ತೀರ್ಣ 30,16,000 ಹೆಕ್ಟೇರು. ವಿವಿಧ ಸಂರಕ್ಷಣಾ ತಂತ್ರಗಳಿಂದಾಗಿ ಈಗ ಕರ್ನಾಟಕದ ಭೂಭಾಗ ಸೇಕಡ 20.19 ಭಾಗ ಅರಣ್ಯದಿಂದ ಆವೃತವಾಗಿದೆ.

ಕರ್ನಾಟಕದಲ್ಲಿ ಇಷ್ಟು ಅರಣ್ಯ ಪ್ರದೇಶವಿದ್ದರೂ ಇದಷ್ಟೂ ಮಾನವನ ಪ್ರಯೋಜನಕ್ಕೆ ಅರ್ಹವಾದುದೆಂದು ಹೇಳಲು ಸಾಧ್ಯವಿಲ್ಲ. ಕಾರಣಾಂತರಗಳಿಂದ ಒಟ್ಟು ಅರಣ್ಯದ ಸೇ.25ರಷ್ಟು ಭಾಗ ಕ್ಷೀಣದೆಶೆಯಲ್ಲಿದೆ. ಇಂಥ ಅಪ್ರಯೋಜಕ ಪ್ರದೇಶವನ್ನು ವೈಜ್ಞಾನಿಕ ಪ್ರಯೋಗಗಳ ಮೂಲಕ ಮೇಲುದರ್ಜೆಗೆ ಏರಿಸುವುದು ಸರ್ಕಾರದ ಉದ್ದೇಶ. ಈ ದಿಶೆಯಲ್ಲಿ ಅರಣ್ಯ ಇಲಾಖೆಯ ಅನೇಕ ವರ್ಷಗಳ ಫಲವಾಗಿ ಇಂದು ಮಾನವ ನಿರ್ಮಿತ ನೆಡುತೋಪುಗಳ ವಿಸ್ತೀರ್ಣ ಸು.1,500ಚ.ಕಿಮೀ. ಈ ನೆಡುತೋಪುಗಳಲ್ಲಿ ಆಧುನಿಕ ಕೈಗಾರಿಕೆಗೆ ಬೇಕಾಗುವ ಯೂಕಲಿಪ್ಟಸ್, ನೀಲಗಿರಿ, ತೇಗ, ರಬ್ಬರ್, ಕೋಕೋ, ಸಂಬಾರ, ಶ್ರೀಗಂಧ, ಗೇರು, ಎಣ್ಣೆ ಗಿಡಗಳು ಮುಂತಾದವು ಹೇರಳವಾಗಿವೆ. ಇತ್ತೀಚೆಗೆ ಜಾರಿಗೆ ಬಂದಿರುವ ಅರಣ್ಯವಿಭಾಗ ಬಿಡುಗಡೆ ಕಾನೂನು ಕಾಡಿನ ನಾಶವನ್ನು ಸಾಕಷ್ಟು ಪ್ರಮಾಣದಲ್ಲಿ ತಡೆಗಟ್ಟಿದೆ. ಜನತೆಗೆ ಬೇಕಾದ ಮರಮುಟ್ಟು, ಸೌದೆ, ಹಸಿಗೊಬ್ಬರ, ವ್ಯವಸಾಯದ ಉಪಕರಣಗಳು ಮುಂತಾದವುಗಳನ್ನು ಅರಣ್ಯ ಕೃಷಿಯ ಮೂಲಕ ಸರಿತೂಗಿಸಿಕೊಳ್ಳ ಬೇಕಾದುದು ಅನಿವಾರ್ಯ.



ಬಂಡಿಪುರದ ಕಾಡುಹಾದಿ

**ಅರಣ್ಯದ ಪ್ರಾಮುಖ್ಯ :** ಅತಿವೇಗದಿಂದ ಬೀಸುವ ಗಾಳಿ ಮತ್ತು ಬಿರುಸಾಗಿ ಬೀಳುವ ಮಳೆ ವ್ಯವಸಾಯ ಪ್ರದೇಶದ ಮೇಲ್ಮಣ್ಣನ್ನು ಕೊಚ್ಚುತ್ತದೆ. ಇದರ ಕೊಚ್ಚುವಿಕೆಯಿಂದ ಭೂಮಿ ವ್ಯವಸಾಯಕ್ಕೆ ಅನುಪಯುಕ್ತವಾಗುತ್ತದೆ. 2.5ಸೆಂಮೀ. ದಪ್ಪದ ಮಣ್ಣು ಭೂಮಿಯ ಮೇಲೆ ರೂಪುಗೊಳ್ಳಲು ಸು.600 ವರ್ಷ ಬೇಕು. ಆದರೆ ಅದನ್ನು ಗಾಳಿ ಹಾಗೂ ಮಳೆಗಳು ಕೇವಲ ಒಂದು ವರ್ಷದಲ್ಲಿ ಕೊಚ್ಚಿಹಾಕಬಲ್ಲವು. ಅರಣ್ಯ ಅತಿವೇಗದ ಗಾಳಿಯ ಒತ್ತಡವನ್ನು ತಡೆದು ಅದರ ಹಾವಳಿಯನ್ನು ಕುಗ್ಗಿಸುತ್ತದೆ. ಅಂತೆಯೇ ಬಿರುಸಾಗಿ ಬೀಳುವ ಮಳೆಯ ಹನಿ ನೇರವಾಗಿ ನೆಲಕ್ಕೆ ಬೀಳದಂತೆ ಮರಗಳ ನೆತ್ತಿ, ಎಲೆ, ಕೊಂಬೆಗಳು ತಡೆದು ಮಳೆಯ ರಭಸವನ್ನು ಕುಗ್ಗಿಸುತ್ತದೆ. ಜೊತೆಗೆ ನೆಲದ ಮೇಲೆ ಬೀಳುವ ಎಲೆಗಳು ಮೆಕ್ಕಲು ಮಣ್ಣು ಮಳೆಯ ನೀರನ್ನು ಹಿಡಿದಿಟ್ಟುಕೊಂಡು ಅದನ್ನು ಭೂಮಿ ನಿಧಾನವಾಗಿ ಹೀರಲು ಸಹಕಾರಿಯಾಗುತ್ತವೆ. ಇದರಿಂದ ಭೂಮಿಯ ಒಳಗೆ ನೀರಿನ ಮಟ್ಟ ಏರಲು ಅನುಕೂಲವಾಗುತ್ತದೆ. ಇದಲ್ಲದೆ ಅರಣ್ಯಕ್ಕೆ ಮಳೆಯನ್ನು ಆಕರ್ಷಿಸುವ ಶಕ್ತಿಯೂ ಉಂಟು. ಜೊತೆಗೆ ದಟ್ಟವಾದ ಅರಣ್ಯ, ಅತಿವೃಷ್ಟಿ ಅನಾವೃಷ್ಟಿಗಳನ್ನು ಸಮತೋಲನಗೊಳಿಸಿ ಅತಿವೃಷ್ಟಿ ಹಾಗೂ ಅನಾವೃಷ್ಟಿಯ ಹಾವಳಿಯನ್ನು ತಡೆಗಟ್ಟುತ್ತದೆ.

ಮನೆಕಟ್ಟಲು, ಮರ, ಬಟ್ಟೆ, ಸೌದೆ, ಬೆರಣಿ, ಇದ್ದಿಲು, ಕಾಗದ, ಪೆನ್ಸಿಲ್, ರೈಲು, ಬಸ್ಸು, ಲಾರಿ, ಹಡಗು, ವಿಮಾನಗಳ ಬಿಡಿಭಾಗಗಳು, ಕೃಷಿ ಉಪಕರಣ, ಹಸುರೆಲೆ ಗೊಬ್ಬರ ಮೊದಲಾದವುಗಳಿಗೆ ಅರಣ್ಯ ಸಂಪತ್ತು ಉಪಯುಕ್ತವಾಗುತ್ತದೆ.

ಕರ್ನಾಟಕದಲ್ಲಿ ವರ್ಷಂಪ್ರತಿ ಸು.7,00,000 ಟನ್ ಹಸುರೆಲೆ ಗೊಬ್ಬರವನ್ನು 1,80,000 ಹೆಕ್ಟೇರು ಭೂಮಿಗೆ ಉಪಯೋಗಿಸಲಾಗುತ್ತದೆ. ಪ್ಲೈವುಡ್, ವಿನೀರ್, ರೆಯಾನ್, ಗಂಧ, ನೀಲಗಿರಿ ಎಣ್ಣೆ, ಪೀಠೋಪಕರಣ ಮುಂತಾದ ಹಲವಾರು ಕೈಗಾರಿಕೆಗಳಿಗೆ ಅರಣ್ಯದ ಆಸರೆ ಅನಿವಾರ್ಯ. ಮಿಗಿಲಾಗಿ ಅರಣ್ಯ ಕೈಗಾರಿಕೆಗಳು ಲಕ್ಷಾಂತರ ಜನರಿಗೆ ಉದ್ಯೋಗ ಅವಕಾಶ ಕಲ್ಪಿಸಿದೆ. ಜೊತೆಗೆ ಅರಣ್ಯ ಸಂಪತ್ತಿನ ಹಲವಾರು ಬಾಬುಗಳು ವಿದೇಶಿ ವಿನಿಮಯವನ್ನು ಗಳಿಸಲು ಸಹಾಯಕವಾಗಿವೆ. ಬೀಟೆಮರ, ಸಾಗುವಾನಿ, ಬಲ್ಲಿ, ಗಂಧದಮರ, ಏಲಕ್ಕಿ, ಸಂಬಾರ, ರಬ್ಬರ್ ಮುಂತಾದ ಹಲವಾರು ಅರಣ್ಯ ಉತ್ಪನ್ನಗಳಿಗೆ ವಿದೇಶಗಳಿಂದ ವಿಶೇಷ ಬೇಡಿಕೆ ಇದೆ.

ಅರಣ್ಯದಲ್ಲಿ ವಾಸಿಸುವ ವನ್ಯಮೃಗಗಳಿಂದಲೂ ನಮಗೆ ಅನೇಕ ರೀತಿಯ ಉಪಯೋಗಗಳಿವೆ. ಅನೇಕ ವನ್ಯಪ್ರಾಣಿಗಳ ಮಾಂಸವನ್ನು ಆಹಾರಕ್ಕಾಗಿ ಬಳಸಲಾಗುತ್ತದೆ. ಸಂರಕ್ಷಣೆ ದೃಷ್ಟಿಯಿಂದ ಪ್ರಾಣಿಗಳನ್ನು ಕೊಲ್ಲುವುದನ್ನು ನಿಷೇಧಿಸಲಾಗಿದೆ. ಆದರೆ ಕೆಲವು ಮೂಲನಿವಾಸಿಗಳಿಗೆ ವನ್ಯಪ್ರಾಣಿಗಳ ಮಾಂಸವಲ್ಲದೆ ಬೇರೆ ಆಹಾರವಿಲ್ಲ. ಜೇನಂತೂ ಆಹಾರ ಹಾಗೂ ಔಷಧಿಗುಣವುಳ್ಳ ಪ್ರಾಣಿಜನ್ಯ ವಸ್ತು. ವನ್ಯಪ್ರಾಣಿಗಳ ಚರ್ಮ ಪಾದರಕ್ಷೆ ಹಾಗೂ ಇನ್ನಿತರ ಚರ್ಮದ ಪರಿಕರಗಳಿಗೆ ಉಪಯೋಗ ವಾಗುತ್ತವೆ. ಕೊಂಬು, ದಂತಗಳನ್ನು ಅಲಂಕರಣ ವಸ್ತುಗಳ ತಯಾರಿಕೆಯಲ್ಲಿ ಬಳಸಲಾಗುತ್ತದೆ. ಅರಗು, ಅಂಟು ಹಾಗೂ ಕೆಲವು ಸುವಾಸನಾಯುಕ್ತ ವಸ್ತುಗಳು ವನ್ಯ ಪ್ರಾಣಿಗಳಿಂದ ದೊರೆಯುತ್ತವೆ.

ಅರಣ್ಯದಲ್ಲಿರುವ ನಮ್ಮ ವನ್ಯಮೃಗ ಪಕ್ಷಿಗಳನ್ನು ನೋಡಲು ವರ್ಷಂಪ್ರತಿ ಸಾವಿರಾರು ವಿದೇಶೀಯರು ಬರುವುದರಿಂದ ಪ್ರವಾಸೋದ್ಯಮ ಬೆಳೆದು ವಿದೇಶಿ ವಿನಿಮಯ ಗಳಿಸಲು ಸಹಾಯಕವಾಗುತ್ತದೆ. ಅರಣ್ಯವಸ್ತುಗಳ ಮಾರಾಟದಿಂದ ಕೂಡ ಸರ್ಕಾರಕ್ಕೆ ಹೇರಳವಾದ ಆದಾಯವಿದೆ.

**ಪ್ರಕೃತಿ ಸಂಪತ್ತು :** ಕರ್ನಾಟಕ ರಾಜ್ಯದ ವಿಸ್ತೀರ್ಣ 1,91,773 ಚ.ಕಿಮೀ. ಇದರಲ್ಲಿ 38,723.56ಚಕಿಮೀ ಸರ್ಕಾರದ ನೇರ ಆಡಳಿತಕ್ಕೆ ಒಳಪಟ್ಟ ಅರಣ್ಯ ಪ್ರದೇಶವಾಗಿದೆ. ಖಾಸಗಿ ಆಡಳಿತಕ್ಕೆ ಒಳಪಟ್ಟ ಕಾಡು ಪ್ರದೇಶವಿದ್ದರೂ ಅದು ಅತ್ಯಲ್ಪ ಪ್ರಮಾಣದ್ದು. ಒಟ್ಟು ಭೂವಿಸ್ತೀರ್ಣದಲ್ಲಿ ಸೇ. 20.19 ಭಾಗ ಮಾತ್ರ ಅರಣ್ಯ ಪ್ರದೇಶವಾಗಿದೆ. ಪ್ರಪಂಚದ ಅನೇಕ ದೇಶಗಳ ಅರಣ್ಯ ಸಂಪತ್ತಿನೊಡನೆ ಹೋಲಿಸಿದಲ್ಲಿ ಕರ್ನಾಟಕದ್ದು ಬಹಳ ಕಡಿಮೆ. ಉದಾಹರಣೆಗೆ ಪ್ರಪಂಚದ ವಿವಿಧ ದೇಶಗಳ ಭೂಭಾಗದ ಸೇಕಡಾವಾರು ಅರಣ್ಯ ಪ್ರದೇಶ ಈ ರೀತಿ ಇದೆ. ರಷ್ಯ 40.6, ಕೆನಡ 44.5, ಅಮೆರಿಕ 31.6, ಬರ್ಮಾ (ಮ್ಯಾನ್ಮರ್) 66.8, ಭಾರತದ ಒಟ್ಟು ವಿಸ್ತೀರ್ಣದ ಶೇಕಡವಾರು ಅರಣ್ಯ ಪ್ರದೇಶ 22.9.



ನೆಡುತೋಪು

ಒಂದು ದೇಶದ ಸಮಗ್ರ ಅಭಿವೃದ್ಧಿಗೆ ಆ ದೇಶದ ಒಟ್ಟು ಭೂ ವಿಸ್ತೀರ್ಣದ ಮೂರನೆಯ ಒಂದು ಭಾಗವಾದರೂ ಅರಣ್ಯ ಪ್ರದೇಶವಾಗಿರಬೇಕೆಂಬುದು ತಜ್ಞರ ಅಭಿಪ್ರಾಯ, ಕರ್ನಾಟಕದ ಅರಣ್ಯ ಪ್ರಮಾಣ ಕೇವಲ ಸೇ.20.19 ಇದ್ದು, ಅದು ರಾಷ್ಟ್ರದ ಅರಣ್ಯ ಪ್ರದೇಶದ ಪ್ರಮಾಣಕ್ಕಿಂತ ಕಡಿಮೆ ಇದೆ ಎಂಬುದು ಗಮನಿಸಬೇಕಾದ ಅಂಶ.

**ಅರಣ್ಯಗಳ ವರ್ಗೀಕರಣ :** ಹವಾಗುಣ, ಮಣ್ಣು, ಉಷ್ಣತೆ, ಗಾಳಿ, ಮಳೆ, ಸಮುದ್ರಮಟ್ಟದಿಂದ ಇರುವ ದೂರ ಮತ್ತು ಎತ್ತರ ಮತ್ತು ಆ ಪ್ರದೇಶದ ಸಸ್ಯ ಸಮುದಾಯಕ್ಕೆ ಹಿಂದೆ ಸಿಕ್ಕಿರುವ ಉಪಚಾರ ಇವೇ ಮೊದಲಾದ ಅಂಶಗಳ ಆಧಾರದ ಮೇಲೆ ಕರ್ನಾಟಕದ ಅರಣ್ಯಗಳನ್ನು ವಿವಿಧ ಬಗೆಗಳಾಗಿ ವಿಂಗಡಿಸಲಾಗಿದೆ.

ಕರ್ನಾಟಕದ ವಿವಿಧ ಭಾಗಗಳಲ್ಲಿ ವಿವಿಧ ಜಾತಿಯ ಮಣ್ಣಿದೆ. ವರ್ಷಕ್ಕೆ 250-800ಮೀಮೀ ಮಳೆ ಬಿದ್ದು ಉಷ್ಣತೆ 15-40 ಸೆಲ್ಸಿಯಸ್ ವರೆಗೆ ವ್ಯತ್ಯಾಸವಾಗುತ್ತದೆ. ನೆಲದ ಎತ್ತರ ಸಮುದ್ರ ಮಟ್ಟದಿಂದ 1700ಮೀ ವರೆಗೆ ವಿವಿಧ ಜಾತಿಯ ಸಸ್ಯಗಳನ್ನೊಳಗೊಂಡ ವಿವಿಧ ನೈಜ ಅರಣ್ಯಗಳಿಗೆ ಎಡೆ ಮಾಡಿ ಕೊಟ್ಟಿದೆ.

ವಿವಿಧ ಗಿಡಜಾತಿ ಸಮೂಹ ಮತ್ತು ವಿಸ್ತರಣೆಗಳ ಆಧಾರದ ಮೇಲೆ ಕರ್ನಾಟಕದ ಅರಣ್ಯ ಪ್ರದೇಶವನ್ನು ಈ ಕೆಳಕಂಡಂತೆ ವಿಂಗಡಿಸಬಹುದು (ಚಾಂಪಿಯನ್ ಮತ್ತು ಸೇತ್ ಎಂಬ ತಜ್ಞರ ವರ್ಗೀಕರಣದ ಪ್ರಕಾರ)

1. ದಕ್ಷಿಣಾರ್ಧದ ಉಷ್ಣವಲಯದ ತೇವಪೂರಿತ ನಿತ್ಯ ಹರಿದ್ವರ್ಣದ ಅರಣ್ಯ
2. ದಕ್ಷಿಣಾರ್ಧದ ಉಷ್ಣವಲಯದ ಆಂಶಿಕ ನಿತ್ಯ ಹರಿದ್ವರ್ಣದ ಅರಣ್ಯ
3. ದಕ್ಷಿಣ ಭಾರತದ ತೇವ ಮಿಶ್ರಿತ ಪರ್ಣಪಾತಿ ಅರಣ್ಯ
4. ದಕ್ಷಿಣಾರ್ಧದ ಉಷ್ಣವಲಯದ ಒಣ ಪರ್ಣಪಾತಿ ಅರಣ್ಯ
5. ದಕ್ಷಿಣಾರ್ಧದ ಉಷ್ಣವಲಯದ ಕುರುಚಲು ಅರಣ್ಯ

ಇದರ ಜೊತೆಗೆ ಆಯಾ ಸ್ಥಳದ ಸೂಕ್ಷ್ಮ ಹವಾಗುಣವನ್ನು ಅವಲಂಬಿಸಿ ಮಾರ್ಪಾಡಾಗಿರುವ ಸಣ್ಣ ಪುಟ್ಟ ಬಗೆಗಳು ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ. ಇನ್ನೊಂದು ಮುಖ್ಯವಾದ ಅಂಶವೆಂದರೆ ಮೇಲೆ ನಮೂದಿಸಿರುವ ವರ್ಗಗಳು ಒಂದರೊಡನೊಂದು ಸೇರಿಕೊಳ್ಳುವುದು ಅಥವಾ ಒಂದು ಜಾತಿಯ ಗಿಡಮರಗಳ ಗುಂಪಿನಲ್ಲಿ ಮತ್ತೊಂದು ಬಗೆಯವು ಅಡಕವಾಗಿರುವುದು. ಜೊತೆಗೆ ದಟ್ಟ ಅರಣ್ಯದ ನಡುವೆ ಗಿಡಮರಗಳಿಲ್ಲದೆ ಕೇವಲ ಹುಲ್ಲು ಮಾತ್ರ ಬೆಳೆದಿದ್ದು ಕೆಲವು ಸಸ್ಯಾಹಾರಿ ಪ್ರಾಣಿಗಳಿಗೆ ಮೇವು ನೀಡುವ ಹುಲ್ಲುಗಾವಲುಗಳೂ ಕಂಡುಬರುತ್ತವೆ.

ಜೌಗಿನಿಂದ ಕೂಡಿದ ಪ್ರದೇಶಗಳನ್ನು 'ಹಡ್ಲು' ಎಂದು ಕರೆಯುತ್ತಾರೆ. ಇಳಿಜಾರಿನ ಪ್ರದೇಶಗಳಲ್ಲಿ ಗಾಳಿಯ ಒತ್ತಡದಿಂದ ಗಿಡಮರಗಳು ಬೆಳೆಯದೆ ಕೇವಲ ಕಲ್ಲುಮಣ್ಣುಗಳಿಂದಾವೃತವಾದ ನಿರುಪಯುಕ್ತ ಸ್ಥಳಗಳೂ ಅರಣ್ಯದ ಮಧ್ಯದಲ್ಲಿವೆ. ಈ ಸ್ಥಳಗಳನ್ನು ಶೋಲಾಗಳೆನ್ನುತ್ತಾರೆ.

**1. ದಕ್ಷಿಣಾರ್ಧದ ಉಷ್ಣವಲಯದ ತೇವಪೂರಿತ ನಿತ್ಯಹರಿದ್ವರ್ಣ ಅರಣ್ಯ :** ಪಶ್ಚಿಮ ಕರಾವಳಿಯ ಉದ್ದಕ್ಕೂ ಬೆಳಗಾಂವಿಯಿಂದ ಕೊಡಗಿನವರೆಗೂ ಈ ಬಗೆಯ ಅರಣ್ಯವನ್ನು ಕಾಣಬಹುದು. ಇಲ್ಲಿ ವಾರ್ಷಿಕವಾಗಿ ಸು.2500-8000 ಮಿಮೀ ಮಳೆಯಾಗುತ್ತದೆ. ಸಮುದ್ರ ಮಟ್ಟದಿಂದ 500-1000ಮೀ ಎತ್ತರದವರೆಗೂ ಈ ಅರಣ್ಯ ವಿಸ್ತರಿಸಿದೆ.

ದಟ್ಟವಾಗಿ ಬೆಳೆಯುವ ಇವುಗಳಲ್ಲಿ ವಿವಿಧ ಜಾತಿಯ ಮರಗಳನ್ನು ಕಾಣಬಹುದು. ಈ ಗುಂಪಿನ ಅರಣ್ಯಗಳ ಅತಿಮುಖ್ಯ ಲಕ್ಷಣವೆಂದರೆ ಮೇಲ್ಛಾವಣಿಯಲ್ಲಿರುವ ಮರಗಳು ನೀಳವಾಗಿ ಬೆಳೆದಿರುತ್ತವೆ. ಮೊದಲನೆಯ ಕೊಂಬೆಗೂ ನೆಲಕ್ಕೂ ಸು.30ಮೀ ಅಂತರವಿರುತ್ತದೆ. ಮರಗಳ ಸುತ್ತಳತೆ ಸು.5ಮೀ ಇರುತ್ತದೆ.

ನಿತ್ಯ ಹರಿದ್ವರ್ಣದ ಅರಣ್ಯ ಸಾಮಾನ್ಯವಾಗಿ ಮೂರು ಶ್ರೇಣಿಯ ಸಸ್ಯಜಾತಿಗಳನ್ನೊಳಗೊಂಡಿವೆ. ಈ ಗುಂಪಿನ ಕಾಡುಗಳಲ್ಲಿ ಧೂಮ, ಸುರಹೊನ್ನೆ, ಕಿರಾಳಭೋಗಿ, ಮಾವು, ಗುಳಮಾವು, ಬೆನ್ನಾಟೆ, ಹೊಳೆಗಾರ, ಹೊಳೆಹೊನ್ನೆ, ಬಿಲ್ಲಿ, ನಾಗಸಂಪಿಗೆ, ಬಿಳಿದೇವದಾರು, ಪಾಲಿ, ಸಂಪಿಗೆ, ಸಾಲುಧೂಪ, ಹೆಬ್ಬಲಸು, ನೊಗ, ಬಲಂಜೆ, ಸಟ್ಟಗ, ದಾಲ್ಚಿನ್ನಿ, ಹೈಗ, ಕಾಯಿಧೂಪ, ನೀಲಿ, ಬಗನಿ, ನೇರಳೆ, ಸಾಗಡೆ, ರಂಚ, ಅರಿಶಿನಗುರಿಗೆ, ತೊರತ್ತಿ, ರಾಮನಡಿಕೆ, ಬೊಂಬು, ವಾಟೆ, ಗುರಿಗೆ, ಕೇದಗೆ, ಬೆತ್ತ ಮೊದಲಾದ ಗಿಡ ಮರಬಳ್ಳಿಗಳು ಕಂಡುಬರುತ್ತವೆ.



ಕೊಡಗಿನ ದೇವರಕಾಡು

ಈ ಅರಣ್ಯಗಳ ಪಾತ್ರ ದೇಶದ ಹಿತದೃಷ್ಟಿಯಿಂದ ಬಹುಮುಖ್ಯವಾದುದು. ನೇರವಾಗಿ ಬೆಳೆಯುವ ಮರಗಳಿಂದ ವಿದ್ಯುಚ್ಛಕ್ತಿ ಕಂಬಗಳು, ರೈಲುಕಂಬಿಗಳ ಆಸರೆಯ ದಿಮ್ಮಿಗಳು, ಕಾಗದದ ಉತ್ಪತ್ತಿಗೆ ಬೇಕಾದ ನಾರು ತಿರುಳು, ತೆಳುಹೊದಿಕೆ ಮರದ ಹಾಳೆಗಳು ಮುಂತಾದವು ದೊರಕುವವು.

**2. ದಕ್ಷಿಣಾರ್ಧದ ಉಷ್ಣವಲಯದ ಆಂಶಿಕ ನಿತ್ಯಹರಿದ್ವರ್ಣದ ಅರಣ್ಯ :** ಈ ಗುಂಪಿನ ಕಾಡುಗಳು ಪಶ್ಚಿಮ ಕರಾವಳಿಯಲ್ಲಿ ನಿತ್ಯಹರಿದ್ವರ್ಣ ಅರಣ್ಯ ಮತ್ತು ತಾತ್ಕಾಲಿಕ ಪರ್ಣಪಾತಿ ಅರಣ್ಯಗಳ ಮಧ್ಯ ಹರಡಿವೆ. ಇಲ್ಲಿ

ನಿತ್ಯಹರಿದ್ವರ್ಣ ವೃಕ್ಷ ಮತ್ತು ಬೇಸಗೆಯಲ್ಲಿ ಎಲೆಯುದುರುವ ವೃಕ್ಷಗಳ ಸಮ್ಮಿಶ್ರಣವನ್ನು ಕಾಣಬಹುದು. ಜಂಬೆಮರಗಳು ಅತಿಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಆಸರೆಯ ಕಾಂಡಗಳುಳ್ಳ ಮರಗಳೂ ಇಲ್ಲಿ ಇವೆ. ಸಟ್ಟಗ, ಬೂರುಗ ಮುಂತಾದವು ಈ ಗುಂಪಿಗೆ ಸೇರುತ್ತವೆ. ಸಾಮಾನ್ಯವಾಗಿ ಮರಗಳ ತೊಗಟೆ ಸ್ವಲ್ಪ ದಪ್ಪವಾಗಿಯೂ ಗಡುಸಾಗಿಯೂ ಇರುವುದು. ಈ ಬಗೆಯ ಅರಣ್ಯವಿರುವ ಪ್ರದೇಶಗಳಲ್ಲಿ 2000-2500ಮಿಮೀ ಮಳೆಯಾಗುತ್ತದೆ. ಸಾಮಾನ್ಯವಾಗಿ ಈ ಕಾಡಿನಲ್ಲಿ ಹನಾಲು, ಕರಿಮರ, ನಂದಿ, ಹೊಳೆಗಾರ ಹೈಗ, ಬೆನ್ನಾಟೆ, ಸಂಪಿಗೆ, ದಾಲ್ಚಿನ್ನಿ, ಕಿರಾಳಭೋಗಿ, ಹೆಬ್ಬಲಸು, ಸಟ್ಟಗ, ರಂಗುಮಾಲೆ, ಗರಿಗೆ, ಹೆಬ್ಬಿದಿರು ಮೊದಲಾದವು ವಿಶೇಷವಾಗಿ ಬೆಳೆಯುವುವು.

**3. ದಕ್ಷಿಣ ಭಾರತದ ತೇವ ಮಿಶ್ರಿತ ಪರ್ಣಪಾತಿ ಅರಣ್ಯ :** ಪಶ್ಚಿಮ ಕರಾವಳಿಯ ಪೂರ್ವಪಾರ್ಶ್ವದ ಉದ್ದಕ್ಕೂ ಈ ಬಗೆಯ ಅರಣ್ಯವನ್ನು ಕಾಣಬಹುದು. ಇಲ್ಲಿನ ಮಳೆಯ ಪರಿಮಾಣ 1500-2000 ಮಿಮೀ. ತೇಗ ಮತ್ತಿ, ನಂದಿ, ಹೊನ್ನೆ, ಹೇತ್ತೇಗ, ಬೀಟೆ, ಬಿಳಿಮತ್ತಿ, ತಾರೆ, ಜಂಬೆ, ಸಾಗಡೆ, ಕೌಲು, ತಡಸಲು, ಬೂರುಗ, ನೆಲ್ಲಿ ಮುಂತಾದವು ಇಲ್ಲಿನ ಮುಖ್ಯ ಸಸ್ಯಜಾತಿಗಳು. ಜೊತೆಗೆ ನೀರಿನ ಆಸರೆಯಿರುವ ಕಡೆಗಳಲ್ಲೆಲ್ಲ ಹೆಬ್ಬಿದಿರು ಬಲು ಸಾಮಾನ್ಯವಾಗಿ ಕಂಡುಬರುತ್ತದೆ. ಕಿರಿಬಿದಿರಾದರೂ ಶುಷ್ಕ ಹವೆ ಪ್ರದೇಶಗಳಲ್ಲೆಲ್ಲಾ ಕಂಡುಬರುತ್ತದೆ. ಇಲ್ಲಿನ ಮರಗಳಿಗೆ ಒಣಹವೆಯನ್ನು ತಡೆದುಕೊಳ್ಳುವ ಶಕ್ತಿ ಇದೆ. ಈ ಕಾಡುಗಳ ಕೆಳಗಿನ ಶ್ರೇಣಿಯಲ್ಲಿ ಕೆಲವು ಸಣ್ಣ ನಿತ್ಯಹರಿದ್ವರ್ಣ ವೃಕ್ಷಗಳು ಕೂಡಾ ಕಂಡುಬರುತ್ತವೆ.



ಚಿರತೆ ಜೋಡಿ

**4. ದಕ್ಷಿಣಾರ್ಧದ ಉಷ್ಣವಲಯದ ಒಣ ಪರ್ಣಪಾತಿ ಅರಣ್ಯ :** 850 ರಿಂದ 1500ಮಿಮೀ ಮಳೆ ಬೀಳುವ ಪ್ರದೇಶದಲ್ಲಿ ಈ ಬಗೆಯ ಅರಣ್ಯ ಕಂಡುಬರುತ್ತದೆ. ಕೆಲವು ಸಲ ಶೀಘ್ರವಾಗಿ ಆರುವ ಒಣಮಣ್ಣು ಇರುವ ಹಾಗೂ 1900ಮಿಮೀ ಮಳೆ ಬೀಳುವ ಪ್ರದೇಶದಲ್ಲೂ ಕಾಣಬಹುದು. ಯಾವ ಪ್ರದೇಶದಲ್ಲಿ ಮಳೆ 750ಮಿಮೀಗಿಂತ ಕಡಿಮೆ ಬೀಳುತ್ತದೊ ಅಲ್ಲಿ ಕುರುಚಲು ಅರಣ್ಯಕ್ಕೆ ಎಡೆಮಾಡಿಕೊಡುತ್ತದೆ. ಈ ಅರಣ್ಯಗಳು 450-600ಮೀ ಎತ್ತರದಲ್ಲಿದ್ದು ಸಣ್ಣಪುಟ್ಟ ಗುಡ್ಡಗಳನ್ನು ಆಕ್ರಮಿಸಿಕೊಂಡಿವೆ. ಬಹುಶಃ ಮೈದಾನ ಪ್ರದೇಶವನ್ನೆಲ್ಲಾ ವ್ಯವಸಾಯಕ್ಕೆ ಉಪಯೋಗಿಸಿರುವುದು ಇದಕ್ಕೆ ಕಾರಣವಿರಬೇಕು.

ಪರಾಕಾಷ್ಠೆಯನ್ನು ತಲಪಿರುವ ಈ ಅರಣ್ಯಗಳಲ್ಲಿ ಮೇಲಿನ ಮರಶ್ರೇಣಿ ಇಕ್ಕಟ್ಟಾಗಿರುತ್ತದೆಯಾದರೂ ದಟ್ಟವಾಗಿರುವುದಿಲ್ಲ. ಇಲ್ಲಿ ಕಂಡುಬರುವ ಬಹುಪಾಲು ವೃಕ್ಷಗಳೆಲ್ಲವೂ ಬೇಸಿಗೆಯಲ್ಲಿ ಎಲೆಯುದುರುವಂಥವು. ಇವುಗಳ ಎತ್ತರ 12-20ಮೀ. ಮರಗಳ ಕೆಳಗೆ ಕಿರುಬಿದಿರುಗಳು, ಅನೇಕ ಜಾತಿಯ ಹುಲ್ಲುಗಳು, ಅದರು ಬಳ್ಳಿಗಳು ಬೆಳೆದಿರುತ್ತವೆ. ಬೆತ್ತ ಮತ್ತು ತಾಳವೃಕ್ಷಗಳು ಈ ಅರಣ್ಯಗಳಲ್ಲಿ ಕಂಡುಬುರುವುದಿಲ್ಲ.

ಈ ಅರಣ್ಯಗಳಲ್ಲಿ ಕೆಲವೆಡೆ ಸಾಗುವಾನಿ ಜಾತಿಯ ಮರಗಳು ಹಾಗೂ ದಿಂಡಿಲು ಮತ್ತು ಮತ್ತಿ ಜಾತಿಯ ಮರಗಳು ಬೆಳೆಯುತ್ತವೆ. ಸಾಗುವಾನಿ ಜಾತಿಯ ಮರಗಳು ಕಂಡುಬರದ ಪ್ರದೇಶಗಳಲ್ಲಿ ದಿಂಡಿಗ, ಮತ್ತಿ, ಬೆಂಡೆ, ನಂದಿ, ಹೆತ್ತೇಗ, ಕಣಗಲು, ಹಿಪ್ಪೆ, ಬೂರುಗ, ತಡಸಲು, ಹೊನ್ನೆ, ಗಂಧ, ಹುರುಗಲು, ತಾರೆ, ಕಮರ, ಕಗ್ಗಲು, ನೂನಲು, ಬಿಲ್ವಪತ್ರೆ, ಬೇಲ, ನೆಲ್ಲಿ, ಎಲಚಿ, ಬಿಕ್ಕೆ, ಬಾಗೆ, ಬಂದರಿಕೆ, ಲಂಟಾನ, ಎಡಮುರಿ, ಮುತ್ತುಗ, ಜಗಳಗಂಟಿ, ಸಾಗಡೆ, ಕೂಳಿ, ದೊಡ್ಡ ತೊಪ್ಪೆ ಹಾಗೂ ಅನೇಕ ಜಾತಿಯ ಮುಳ್ಳಿನ ಗಿಡಗಳು ಕಂಡುಬರುತ್ತವೆ.

ತೇವಮಿಶ್ರಿತ ಪರ್ಣಪಾತಿ ಅರಣ್ಯ ಹಾಗೂ ಉಷ್ಣವಲಯದ ಒಣ ಪರ್ಣಪಾತಿ ಅರಣ್ಯಗಳು ತಾತ್ಕಾಲಿಕವಾಗಿ ಎಲೆ ಉದುರುವ ಅರಣ್ಯಗಳು. ಈ ಅರಣ್ಯಗಳಲ್ಲಿ ವನ್ಯಮೃಗದ ಸಂಪತ್ತು ಹೇರಳವಾಗಿದೆ. ಇವುಗಳಲ್ಲಿ ಪ್ರಮುಖವಾದ ಪ್ರಾಣಿಗಳು ಆನೆ, ಹುಲಿ, ಕಾಡುಕೋಣ, ಚಿರತೆ, ಕಡವೆ, ಚುಕ್ಕಿ ಚಿಗರೆ, ಕಾಡುಹಂದಿ, ಕರಡಿ, ಸೀಳುನಾಯಿ ಮುಂತಾದವು. ವರ್ಣರಂಜಿತ ಪಕ್ಷಿಗಳಾದ ನವಿಲು, ಕಾಡುಕೋಳಿ, ಕೆಂಬೂತ ಇವು ಮುಖ್ಯವಾದ ಪಕ್ಷಿಗಳು.

**5. ದಕ್ಷಿಣಾರ್ಧದ ಉಷ್ಣವಲಯದ ಕುರುಚಲು ಕಾಡುಗಳು :** ಇವುಗಳಲ್ಲಿ ಮರಗಿಡಗಳ ಎಲೆಗಳು ಸಾಮಾನ್ಯವಾಗಿ ಬೇಸಗೆಯಲ್ಲಿ ಉದುರುತ್ತವೆ. ಇಲ್ಲಿನ ಮಳೆಯ ಪ್ರಮಾಣ ಸು.250-1000ಮಿಮೀ. ಈ ಅರಣ್ಯಗಳಲ್ಲಿ ಮುಳ್ಳಿನ ಗಿಡಗಳ ಪ್ರಮಾಣ ಹೆಚ್ಚು. ಈ ಗುಂಪಿನ ಕಾಡುಗಳು ದೇಶದ ಆದಾಯದ ದೃಷ್ಟಿಯಿಂದ ಹೆಚ್ಚು ಉಪಯುಕ್ತವಲ್ಲ. ಪ್ರಕೃತಿಯ ವಿಕೋಪಕ್ಕಿಂತ ಹೆಚ್ಚಾಗಿ ಮಾನವ ಚಟುವಟಿಕೆಯಿಂದಾಗಿ ಈ ಬಗೆಯ ಕಾಡು ನಶಿಸಿ ಹೋಗುತ್ತಿದೆ.

ಈ ಅರಣ್ಯಗಳಲ್ಲಿ ದಿಂಡಿಗ, ಗೊಬ್ಬಳಿ, ಬಿಳಿಜಾಲಿ, ಕತ್ತಾಳೆ, ಬನ್ನಿ, ಬಬ್ಬಲಿ, ಬಿಲ್ವಾರ, ಬಾಗೆ, ಮತ್ತಿ, ತಾರೆ, ಅಳಲೆ, ಬಿಲ್ವಪತ್ರ, ಬೇಲ, ಸಾಂಬ್ರಾಣಿ, ನವಿಲಾಡಿ, ಗಂಧ, ಹುರುಗಲು, ಬೇವು, ಕಗ್ಗಲಿ, ದೇವದಾರು, ಹಂಗರು ಮುಂತಾದ ಗಿಡಮರಗಳನ್ನು ಕಾಣಬಹುದು. ಜೊತೆಗೆ ಎಲಚಿ, ಸೀತಾಫಲ, ಈಚಲು, ಎಕ್ಕ, ಕಾರೆಗಿಡ, ಪಾಪಾಸುಕಳ್ಳಿ, ಚಂಡರಿಕೆ, ಲಂಟಾನ ಮುಂತಾದವುಗಳೂ ಕಂಡುಬರುತ್ತವೆ.

ಕರ್ನಾಟಕದಲ್ಲಿ ಈ ಎಲ್ಲ ಐದು ಬಗೆಯ ಅರಣ್ಯಗಳಿದ್ದರೂ ರಾಜ್ಯದ ಹಾಗೂ ದೇಶದ ಅಭಿವೃದ್ಧಿಗೆ ಮೊದಲ ಮೂರು ವಿಧದ ಅರಣ್ಯಗಳ ಕೊಡುಗೆ ಮಹತ್ವದ್ದು. ಈ ಬಗೆಯ ಅರಣ್ಯಗಳಲ್ಲಿ ಬೆಲೆಬಾಳುವ ಮರಗಳು ಹೆಚ್ಚು. ಅವು ಸಮೃದ್ಧವಾಗಿಯೂ ಬೆಳೆಯುತ್ತವೆ. ಆದರೆ ಈ ಬಗೆಯ ಅರಣ್ಯಗಳ ಪ್ರಮಾಣ ಕುರುಚಲು ಅರಣ್ಯಗಳಿಗಿಂತ ಕಡಿಮೆ ಇದೆ ಎಂಬುದು ಗಮನಿಸಬೇಕಾದ ಅಂಶ. ಕರ್ನಾಟಕದಲ್ಲಿರುವ ವಿವಿಧ ಬಗೆಯ ಅರಣ್ಯಗಳು, ಅವುಗಳ ಸೇಕಡಾವಾರು ಪ್ರಮಾಣ, ವಿಸ್ತೀರ್ಣ ಮುಂತಾದ ಅಂಕಿ ಸಂಖ್ಯೆಗಳನ್ನು ಈ ಕೆಳಗೆ ಪಟ್ಟಿ ಮಾಡಲಾಗಿದೆ.

| ಅ ಸಂ. | ಅರಣ್ಯ ವಿಧ | ವಿಸ್ತೀರ್ಣ (1000 ಹೆಕ್ಟೇರುಗಳಲ್ಲಿ) | ಒಟ್ಟುಅರಣ್ಯದ ಸೇಕಡಾವಾರು |
|---|---|---|---|
| 1. | ದಕ್ಷಿಣಾರ್ಧದ ಉಷ್ಣವಲಯದ ತೇವಪೂರಿತ ನಿತ್ಯಹರಿದ್ವರ್ಣದ ಅರಣ್ಯ | 580 | 15.11 |
| 2. | ದಕ್ಷಿಣಾರ್ಧದ ಉಷ್ಣವಲಯದ ಆಂಶಿಕ ನಿತ್ಯಹರಿದ್ವರ್ಣದ ಅರಣ್ಯ | 578 | 14.96 |
| 3. | ದಕ್ಷಿಣ ಭಾರತದ ತೇವಮಿಶ್ರಿತ ಪರ್ಣಪಾತಿ ಅರಣ್ಯ | 727 | 18.64 |
| 4. | ದಕ್ಷಿಣಾರ್ಧದ ಉಷ್ಣವಲಯದ ಒಣ ಪರ್ಣಪಾತಿ ಅರಣ್ಯ | 818 | 21.11 |
| 5. | ದಕ್ಷಿಣಾರ್ಧದ ಉಷ್ಣವಲಯದ ಕುರುಚಲು ಅರಣ್ಯ | 1161 | 30.18 |
| | **ಒಟ್ಟು** | **3864** | **100.00** |

**ಅರಣ್ಯ ಇಲಾಖೆಯ ಆಡಳಿತ :** ಭಾರತದ ಸಂವಿಧಾನದ ವಿಧಿಗನುಗುಣವಾಗಿ ಅರಣ್ಯ ಇಲಾಖೆಯ ಆಡಳಿತ ಕರ್ನಾಟಕ ಸರ್ಕಾರದ ಅಧೀನಕ್ಕೆ ಒಳಪಟ್ಟಿದೆ. ಅರಣ್ಯ ಇಲಾಖೆಯ ಆಡಳಿತದ ಉನ್ನತ ಹುದ್ದೆಗಳಿಗೆ ಆಯ್ಕೆ, ಅರಣ್ಯ ವಿದ್ಯಾಭ್ಯಾಸ ಹಾಗೂ ವೈಜ್ಞಾನಿಕ ಸಂಶೋಧನೆಗಳ ಮೇಲ್ವಿಚಾರಣೆ ಭಾರತ ಸರ್ಕಾರಕ್ಕೆ ಸೇರಿದೆ. ಅರಣ್ಯ ಹುಟ್ಟುವಳಿಗಳ ರಫ್ತು ಆಮದುಗಳು ಕೂಡಾ ಕೇಂದ್ರ ಮೇಲ್ವಿಚಾರಣೆಯಲ್ಲಿಯೇ ನಡೆಯುತ್ತವೆ.

ಕರ್ನಾಟಕದ ಅರಣ್ಯ ಇಲಾಖೆಯ ಎಲ್ಲಾ ಕಾರ್ಯ ಚಟುವಟಿಕೆಗಳೂ ಅರಣ್ಯಖಾತೆ ಮಂತ್ರಿಗಳ ನೇತೃತ್ವದಲ್ಲಿ ಅರಣ್ಯ ಕಾರ್ಯದರ್ಶಿಗಳ ಮುಖಾಂತರ ಸಾಗುತ್ತವೆ. ಅರಣ್ಯ ಇಲಾಖೆಗೆ ಸಂಬಂಧಿಸಿದ ಎಲ್ಲ ನಿಯಮಾವಳಿಗಳು ಅವುಗಳನ್ನು ಅನುಷ್ಠಾನಕ್ಕೆ ತರುವ ಅಧಿಕಾರ ಪ್ರಧಾನ ಮುಖ್ಯ ಸಂರಕ್ಷಣಾಧಿಕಾರಿಗಳಿಗೆ ಸೇರಿದೆ. ಇವರ ಅಧೀನದಲ್ಲಿ ಅರಣ್ಯವಿಭಾಗ, ವನ್ಯಜೀವಿವಿಭಾಗ ಹಾಗೂ ಅರಣ್ಯ ಕಾರ್ಪೋರೇಶನ್ ಎಂಬ ಮೂರು ಮುಖ್ಯ ಘಟಕಗಳಿವೆ. ಮುಖ್ಯ ಸಂರಕ್ಷಣಾಧಿಕಾರಿಗಳು ಈ ಘಟಕಗಳ ಮುಖ್ಯಸ್ಥರು. ಇವರ ಅಧೀನದಲ್ಲಿ ವೃತ್ತ ಸಂರಕ್ಷಣಾಧಿಕಾರಿಗಳು, ವಿಭಾಗ ಸಂರಕ್ಷಣಾಧಿಕಾರಿಗಳು, ವಲಯ ಅರಣ್ಯಾಧಿಕಾರಿಗಳು, ವನಾಧಿಕಾರಿಗಳು, ಅರಣ್ಯ ರಕ್ಷಕರು ಮುಂತಾದವರಿರುತ್ತಾರೆ. ಕರ್ನಾಟಕದಲ್ಲಿ ಒಟ್ಟು 14 ವೃತ್ತಗಳು, 58 ವಿಭಾಗಗಳು, 198 ವಲಯಗಳೂ ಇವೆ. ಇದರೊಂದಿಗೆ ಅಭಿವೃದ್ಧಿ ಮುಖ್ಯ ಸಂರಕ್ಷಣಾಧಿಕಾರಿ, ಅರಣ್ಯ ಕೈಗಾರಿಕೆಗಳ ಮುಖ್ಯ ಅಧಿಕಾರಿ, ಮುಖ್ಯ ವನ್ಯಪ್ರಾಣಿ ಸಂರಕ್ಷಣಾಧಿಕಾರಿ ಮುಂತಾದ ಹುದ್ದೆಗಳಿವೆ. ಬೆಂಗಳೂರಿನಲ್ಲಿ ಒಂದು ಅರಣ್ಯ ವೈಜ್ಞಾನಿಕ ಸಂಶೋಧನ ಕೇಂದ್ರವೂ ಇದೆ. ಅರಣ್ಯ ಉಸ್ತುವಾರಿಗಾಗಿ ಗ್ರಾಮ ಅರಣ್ಯ ಸಮಿತಿಗಳನ್ನು ಅನೇಕ ಕಡೆ ಅಸ್ತಿತ್ವಕ್ಕೆ ತರಲಾಗಿದೆ.

ಅರಣ್ಯ ರಕ್ಷಕರಿಗೆ ತರಬೇತಿ ನೀಡಲು ಕುಶಾಲನಗರ, ಯಲ್ಲಾಪುರ, ಹನುಮನಹಟ್ಟಿ ಮತ್ತು ಬೀದರಗಳಲ್ಲಿ ತರಬೇತಿ ಶಾಲೆಗಳಿವೆ. ವನಾಧಿಕಾರಿಗಳು ಮತ್ತು ಮೋಜಣಿದಾರರ (ಸರ್ವೇಯರ್) ತರಬೇತಿಗೆಂದು ಅಂಬಿಕಾನಗರದ ಸಮೀಪ ತರಬೇತಿಶಾಲೆ ಇದೆ. ವಲಯಾಧಿಕಾರಿಗಳಿಗೆ ತರಬೇತಿ ನೀಡಲು ಕೊಯಮತ್ತೂರಿನಲ್ಲಿಯೂ ಭಾರತೀಯ ಅರಣ್ಯ ಸೇವಾ ಅಧಿಕಾರಿಗಳಿಗೆ ತರಬೇತಿ ನೀಡಲು ಡೆಹರಾಡೂನಿನಲ್ಲಿಯೂ ಅರಣ್ಯ ಕಾಲೇಜುಗಳಿವೆ. ಅರಣ್ಯಗಳ ಬಗ್ಗೆ ಹೆಚ್ಚಿನ ವ್ಯಾಸಂಗ, ಮಾಹಿತಿ ಪಡೆಯಲು, ಮೇಲ್ದರ್ಜೆಯ ಅಧಿಕಾರಿಗಳಿಗೆ ವಿದೇಶಗಳಿಗೆ ಭೇಟಿ ನೀಡುವ ಅವಕಾಶಗಳೂ ಇವೆ.



ಸಾಮಾಜಿಕ ಅರಣ್ಯ

ಕರ್ನಾಟಕದಲ್ಲಿ ಅತ್ಯಂತ ಸಂಪದ್ಭರಿತ ಅರಣ್ಯಗಳಿದ್ದರೂ ಅನೇಕ ಕಾರಣಗಳಿಂದಾಗಿ ಅರಣ್ಯಪ್ರದೇಶ ದಿನೇ ದಿನೇ ಕ್ಷೀಣಿಸುತ್ತಿದೆ. ಅರಣ್ಯವನ್ನು ವ್ಯವಸಾಯೋದ್ದೇಶಕ್ಕಾಗಿ ಬಳಸುತ್ತಿರುವುದು, ನೀರಾವರಿ ಮತ್ತು ವಿದ್ಯುಚ್ಛಕ್ತಿ ಉದ್ದೇಶಗಳಿಗಾಗಿ ಜಲಾಶಯಗಳನ್ನು ನಿರ್ಮಿಸುತ್ತಿರುವುದು, ನಿರ್ವಸಿತರಿಗೆ ಮರುವಸತಿ ಕಲ್ಪಿಸಲು ಕಾಡುಗಳನ್ನು ಕಡಿಯುವುದು- ಇವು ಅರಣ್ಯನಾಶಕ್ಕೆ ಮುಖ್ಯ ಕಾರಣಗಳು. ಕಳೆದ ಕೆಲವು ವರ್ಷಗಳಿಂದ ಅರಣ್ಯಾಭಿವೃದ್ಧಿಗೆ, ವನ್ಯಪ್ರಾಣಿ ಸಂರಕ್ಷಣೆಗೆ ಸಾಕಷ್ಟು ಗಮನ ಹರಿಸಲಾಗಿದೆ. ಅರಣ್ಯದ ಇಳುವರಿಯನ್ನು ಹೆಚ್ಚಿಸುವುದು, ಭೂ ಸವಕಳಿಯನ್ನು ತಪ್ಪಿಸುವುದು, ಶಿಥಿಲಗೊಂಡ ಅರಣ್ಯಗಳಲ್ಲಿ ಪುನಃ ಮರಗಳನ್ನು ಬೆಳೆಸುವುದು, ಸಣ್ಣ ಪ್ರಮಾಣದ ಅರಣ್ಯೋತ್ಪನ್ನಗಳ ಅಭಿವೃದ್ಧಿ, ಅರಣ್ಯ ಸಂಪರ್ಕ ಮಾರ್ಗಗಳ ಅಭಿವೃದ್ಧಿ, ಮೃದು ಮರಗಳನ್ನು, ಬೆಂಕಿಕಡ್ಡಿ ಮರಗಳನ್ನು ಬೆಳೆಸುವುದು, ಪರರಾಷ್ಟ್ರಗಳಿಂದ ಬಂದ ಭಾರತೀಯ ನಿರಾಶ್ರಿತರ ಪುನರ್ ವಸತಿಗಾಗಿ ರಬ್ಬರ್ ತೋಟ ಬೆಳೆಸುವುದು, ಸೌದೆಗಾಗಿ ಮರಗಳನ್ನು ವೃದ್ಧಿಸುವುದು, ಕೋಕೋ ಗಿಡಗಳನ್ನು ಬೆಳೆಸುವುದು ಮುಂತಾದ ಅನೇಕ ಕಾರ್ಯಕ್ರಮಗಳನ್ನು ಯೋಜಿಸಲಾಗಿದೆ. ಈಗ ಪ್ರತ್ಯೇಕವಾದ ಸಾಮಾಜಿಕ ಅರಣ್ಯ ವಿಭಾಗವನ್ನೇ ಪ್ರಾರಂಭಿಸಲಾಗಿದೆ. ಕರ್ನಾಟಕ ಅರಣ್ಯ ಕೈಗಾರಿಕಾ ಮಂಡಳಿಯನ್ನು ಕೂಡಾ ಸ್ಥಾಪಿಸಲಾಗಿದೆ. ಅರಣ್ಯ ರಕ್ಷಣೆಗಾಗಿ ಬಂದೋಬಸ್ತ್ ನೋಡಿಕೊಳ್ಳಲು ಮತ್ತು ಅರಣ್ಯ ಉತ್ಪನ್ನಗಳನ್ನು ಸಾಗಿಸಲು ಅರಣ್ಯ ಇಲಾಖೆ ಅರಣ್ಯ ಪ್ರದೇಶದಲ್ಲಿ 2938ಕಿಮೀ ರಸ್ತೆ ನಿರ್ಮಾಣ ಮಾಡಿದೆ (1995).

**ಅರಣ್ಯ ಉದ್ಯಮಗಳು :** ಕರ್ನಾಟಕದ ಅರಣ್ಯ ಪ್ರದೇಶ ವಿವಿಧ ಸಸ್ಯವರ್ಗಗಳ ತವರೂರು. ಶ್ರೀಗಂಧ, ಹೊನ್ನೆ, ನಂದಿ, ಮತ್ತಿ, ಹನಾಲು, ಕರಡಿ, ಸಾಗುವಾನಿ, ಬೀಟೆ, ಹೆತ್ತೇಗ, ತಡಸಲು, ಭೋಗಿ, ನೊಗ, ಬೂರುಗ, ಮಾಕಾಳಿ, ದೊಡ್ಡತೊಪ್ಪೆ, ಸಟ್ಟುಗ, ಬಿಲ್ವಾರ, ಗೊದ್ದ, ತಾರೆ, ದಿಂಡಿಗ, ಬೆಂಡೆ, ಜಂಬೆ, ನೇರಳೆ, ಬಲ್ಲಿ, ಹೆಬ್ಬಲಸು, ಗುಳಮಾವು, ನಾಗ ಸಂಪಿಗೆ, ಕಿರಾಳ ಭೋಗಿ, ಬಿಳಿದೇವದಾರು, ಬೆನ್ನಾಟೆ, ಬಲಂಜಿ, ಹೊಳೆಗಾರ, ನೀಲಿ ಸಂಪಿಗೆ, ಹಾಲುಮಡ್ಡಿ, ಮದ್ದಾಲೆ, ಚುಂಗ, ಧೂಮ, ಸಾಲ್‌ಧೂಪ, ಕಾಯಿಧೂಪ, ಸುರಹೊನ್ನೆ, ಪಾಲಿ, ಕೊಟ್ಟೆ, ಮಾವು ಮುಂತಾದ ಪ್ರಮುಖ ವೃಕ್ಷಗಳು ಬೆಳೆಯುತ್ತವೆ. ಜೊತೆಗೆ ಬಿದಿರು, ವಾಟೆ ಮತ್ತು ಬೆತ್ತ ಅರಣ್ಯದಲ್ಲಿ ವಿಪುಲವಾಗಿವೆ. ಅರಣ್ಯ ವೈವಿಧ್ಯಮಯ ವಾಗಿರುವಂತೆ ಕರ್ನಾಟಕದ ಅರಣ್ಯ ಉದ್ಯಮಗಳೂ ವೈವಿಧ್ಯಪೂರ್ಣವಾಗಿವೆ.

ಅನಾದಿಕಾಲದಿಂದಲೂ ಮಾನವನ ಜೀವನ ಅರಣ್ಯದೊಡನೆ ಬೆರೆತುಹೋಗಿದೆ. ಆದಿಮಾನವ ದಿನಬಳಕೆಯ ಆಹಾರವಸ್ತುಗಳಾದ ಗಿಡಮೂಲಿಕೆ, ಹಣ್ಣು ಹಂಪಲು, ಮೊಟ್ಟೆ, ಮಾಂಸಗಳನ್ನು, ಮನೆಕಟ್ಟಲು ಬಳಸುವ ಸಾಮಗ್ರಿಯನ್ನೂ ಮೈ ಮುಚ್ಚುವ ಉಡುಪನ್ನೂ ಬೆಂಕಿಯನ್ನೂ ಆಯುಧ ಉಪಕರಣಗಳನ್ನೂ ಅರಣ್ಯದಿಂದಲೇ ಪಡೆಯುತ್ತಿದ್ದ. ಒಂದು ದೇಶದಲ್ಲಿ ಸೌದೆ ಮತ್ತು ಕೈಗಾರಿಕೆಗೆ ಉಪಯೋಗಿಸುತ್ತಿರುವ ಅರಣ್ಯ ಉತ್ಪನ್ನಗಳ ಬಳಕೆಯ ಮೇಲೆ ಅಲ್ಲಿನ ಕೈಗಾರಿಕಾ ಪ್ರಗತಿಯನ್ನು ನಿರ್ಧರಿಸಲಾಗುತ್ತದೆ. ಕೈಗಾರಿಕಾ ಪ್ರಗತಿಯುಳ್ಳ ದೇಶದಲ್ಲಿ ಅರಣ್ಯದ ಕಚ್ಚಾವಸ್ತುಗಳು ಕೈಗಾರಿಕೆಗಳಿಗೆ ಬಳಕೆಯಾಗುತ್ತವೆ. ಅಲ್ಪಭಾಗ ಮಾತ್ರ ಸೌದೆಗೆ ಉಪಯೋಗವಾಗುತ್ತದೆ. ಈ ಮುಂದೆ ತಿಳಿಸಿರುವಂತೆ ಸಸ್ಯಗಳನ್ನು ವಿಶ್ವವ್ಯಾಪ್ತಿಯುಳ್ಳ ಕಚ್ಚಾವಸ್ತುಗಳನ್ನಾಗಿ ಪರಿಗಣಿಸಬಹುದು. ಏಕೆಂದರೆ ಅವನ್ನು ಮಣ್ಣು, ಲೋಹ, ಗಾಜು, ನೇಯ್ದ ವಸ್ತುಗಳ ಬದಲಾಗಿ ಬಳಸಬಹುದು.

ಕರ್ನಾಟಕದಲ್ಲಿ ವ್ಯವಸಾಯವೇ ಪ್ರಧಾನವಾದ ಕಸಬು. ವ್ಯವಸಾಯಕ್ಕೆ ಅರಣ್ಯದ ಅಗತ್ಯ ಬಹಳ ಇದೆ. ಹೆಚ್ಚು ಯಾಂತ್ರಿಕತೆ ಇಲ್ಲದ ಬೇಸಾಯಕ್ಕೆ ಅಗತ್ಯವಾದ ನೇಗಿಲು, ಕೊರಡು, ಕುಂಟೆ, ರೆಂಟೆ ಮುಂತಾದ ಉಪಕರಣಗಳನ್ನು ತಯಾರಿಸಲು ಮರದ ಅಗತ್ಯವಿದೆ. ಎಲೆಗೊಬ್ಬರವಂತೂ ವ್ಯವಸಾಯಕ್ಕೆ ಪೌಷ್ಟಿಕವೆಂದು ಪರಿಗಣಿಸಲಾಗುತ್ತದೆ. ಹಸುರೆಲೆಗಳನ್ನು ಬಳಸಿ ಕಾಂಪೋಸ್ಟ್ ಗೊಬ್ಬರವನ್ನೂ ತಯಾರಿಸಲಾಗುತ್ತದೆ. ದನದ ಮೇವು, ಮರದ ಸಕ್ಕರೆ, ಮಾದಕ ಪಾನೀಯ, ಶ್ರೀಗಂಧ, ನೀಲಗಿರಿ, ನಿಂಬೆಹುಲ್ಲಿನ ಎಣ್ಣೆ, ರೆಯಾನ್, ಪಾಲಿಫೈಬರ್, ಸೌದೆ, ಇದ್ದಿಲು, ಬೆಂಕಿಕಡ್ಡಿ, ವಿದ್ಯುಚ್ಛಕ್ತಿ, ಮನೆಗೆ ಮರಮುಟ್ಟು, ಪೀಠೋಪಕರಣ, ಪ್ಲೈವುಡ್ ಮತ್ತು ವಿನೀರ್, ಸ್ಲೀಪರ್‌ಗಳು, ರೈಲ್ವೆಬೋಗಿ, ರೈಲು ಹಾಗೂ ಬಸ್ಸಿನ ಚೌಕಟ್ಟು, ದೋಣಿ, ಹಡಗು ಮಾಡಲು, ಟೀ ಪೆಟ್ಟಿಗೆಗಳು, ಸಾಮಾನು ಸಾಗಣೆ ಪೆಟ್ಟಿಗೆಗಳು, ಕಾಗದ, ಪೆನ್ಸಿಲ್, ಚಿತ್ರೋದ್ಯಮದ ಕಾಗದ, ಪಾರದರ್ಶಕ ಅಂಟು ಮುಂತಾದವುಗಳಿಗೆಲ್ಲ ಅರಣ್ಯಗಳ ಕೊಡುಗೆ ಅಪಾರವಾದುದು. ಕಳೆದ ಎರಡು ಶತಮಾನಗಳಿಂದ ಕರ್ನಾಟಕದಲ್ಲಿ ಅರಣ್ಯ ಆಧಾರಿತವಾದ ಹಲವಾರು ಉದ್ಯಮಗಳು ಸ್ಥಾಪಿತವಾಗಿವೆ.

**ಶ್ರೀಗಂಧದ ಉದ್ಯಮ :** ಶ್ರೀಗಂಧದ ಮರ ಕರ್ನಾಟಕಕ್ಕೆ ಪ್ರಕೃತಿದತ್ತ ವರ. ರಾಷ್ಟ್ರದ ಒಟ್ಟು ಉತ್ಪತ್ತಿಯ ಸೇಕಡಾ 80 ಭಾಗ ಕರ್ನಾಟಕದಲ್ಲಿಯೇ ದೊರೆಯುತ್ತದೆ. ಶ್ರೀಗಂಧದ ತೈಲ ಅತಿ ಪರಿಮಳಯುಕ್ತ ಸುಗಂಧ ದ್ರವ್ಯಗಳಲ್ಲಿ ಒಂದು. ಇದು ಪ್ರಾಚೀನ ಕಾಲದಿಂದ ಇಂದಿನವರೆಗೂ ಪ್ರಪಂಚದಾದ್ಯಂತ ಜನಪ್ರಿಯವಾಗಿದೆ. ಮಧ್ಯಯುಗದಲ್ಲಿ ವರ್ತಕರು ಈ ಸುಗಂಧವನ್ನು ಪರ್ಷಿಯ, ಅರೇಬಿಯ, ಏಷ್ಯಮೈನರ್, ಈಜಿಪ್ಟ್, ಗ್ರೀಸ್ ಮತ್ತು ರೋಮ್‌ಗಳಿಗೆ ಸಾಗಿಸುತ್ತಿದ್ದುದರ ಬಗ್ಗೆ ಉಲ್ಲೇಖವಿದೆ.



ಹಾರುವ ಓತಿ

ಕರ್ನಾಟಕದ ಶ್ರೀಗಂಧ ಸ್ಯಾಂಟಲಮ್ ಆಲ್ಬಮ್ (Santalum Album) ಪ್ರಭೇದಕ್ಕೆ ಸೇರುತ್ತದೆ. ಇದರಿಂದ ಗಂಧದೆಣ್ಣೆಯನ್ನು ತೆಗೆಯುತ್ತಾರೆ. ಆಸ್ಟ್ರೇಲಿಯದಲ್ಲಿ ಬೆಳೆಯುವ ಗಂಧದಮರ ಸ್ಯಾಂಟಲಮ್ ಸ್ಪೈಕೇಟಮ್‌ದಿಂದ ತೆಗೆಯುವ ತೈಲದೊಡನೆ ತೀವ್ರ ಪೈಪೋಟಿ ಇದೆಯಾದರೂ ಅದು ಕರ್ನಾಟಕದ ಎಣ್ಣೆಯಷ್ಟು ಉತ್ತಮ ದರ್ಜೆಯದಲ್ಲ. ಆದರೂ ಸುಧಾರಿತ ಭಟ್ಟಿ ಇಳಿಸುವ ವಿಧಾನ, ಸಂಯೋಜಿಸುವ ಮತ್ತು ಮಿಶ್ರಣಮಾಡುವ ವಿಧಾನ, ಉತ್ತಮ ದರ್ಜೆಯ ನಿರ್ವಹಣೆ ಮುಂತಾದವುಗಳಿಂದಾಗಿ ಆಸ್ಟ್ರೇಲಿಯದ ಗಂಧದೆಣ್ಣೆ ಕರ್ನಾಟಕದ ತೈಲದೊಡನೆ ಪೈಪೋಟಿ ನಡೆಸಲು ಸಾಧ್ಯವಾಗಿದೆ. ಇಂಡೋನೇಷ್ಯದಲ್ಲಿ ತಯಾರಿಸುವ ಗಂಧದೆಣ್ಣೆಯೂ ಸ್ವಲ್ಪಮಟ್ಟಿಗೆ ನಮ್ಮ ಎಣ್ಣೆಯೊಂದಿಗೆ ಸ್ಪರ್ಧಿಸುತ್ತಿದೆ.

1912ರ ವರೆಗೂ ಕರ್ನಾಟಕದಿಂದ ಶ್ರೀಗಂಧದ ಚಕ್ಕೆ ಬೇರೆ ದೇಶಗಳಿಗೆ, ಅದರಲ್ಲೂ ಮುಖ್ಯವಾಗಿ ಜರ್ಮನಿಗೆ ರಫ್ತಾಗುತ್ತಿತ್ತು. ಅಲ್ಲಿ ಚಕ್ಕೆಯಿಂದ ತೈಲವನ್ನು ತೆಗೆದು ವಿವಿಧ ದೇಶಗಳಿಗೆ ಮಾರುತ್ತಿದ್ದರು. ಒಂದನೆಯ ಮಹಾಯುದ್ಧದ ಪ್ರಯುಕ್ತ ಇದರ ಮಾರಾಟ ನಿಂತುಹೋಯಿತು. ಆಗ ಮೈಸೂರಿನ ದಿವಾನರಾಗಿದ್ದ ಎಂ. ವಿಶ್ವೇಶ್ವರಯ್ಯನವರು ಮರದಿಂದ ಗಂಧದ ಎಣ್ಣೆಯನ್ನು ಹೊರತೆಗೆಯುವ ಯೋಜನೆಯನ್ನು ರೂಪಿಸಿ 1916ರಲ್ಲಿ ಬೆಂಗಳೂರಿನಲ್ಲಿ ಗಂಧದ ಎಣ್ಣೆಯ ಕಾರ್ಖಾನೆಯನ್ನು ಸ್ಥಾಪಿಸಿದರು. 1917ರಲ್ಲಿ ಈ ಕಾರ್ಖಾನೆಯನ್ನು ಮೈಸೂರಿಗೆ ಸ್ಥಳಾಂತರಿಸಲಾಯಿತು. ಮಲೆನಾಡು ಪ್ರದೇಶದಲ್ಲಿ ಮರದಿಂದ ಗಂಧವನ್ನು ಕೆತ್ತಿ ಸಾಗಿಸಿದ ಮೇಲೆ ಉಳಿದ ಚಿಲ್ಟಾ ಗಂಧದ ಚಕ್ಕೆಯನ್ನು ವಿಕ್ರಯಿಸುವುದು ಸಮಸ್ಯೆಯಾಯಿತಾದ್ದರಿಂದ ಅದನ್ನು ಉಪಯೋಗಿಸಲು ಶಿವಮೊಗ್ಗದಲ್ಲಿ ಒಂದು ಪರಿವರ್ತನ ಕಾರ್ಖಾನೆಯನ್ನು ಪ್ರಾರಂಭಿಸಲಾಯಿತು. ಇದು 1963ರಲ್ಲಿ ಪೂರ್ಣ ಗಂಧದ ಎಣ್ಣೆ ಕಾರ್ಖಾನೆಯಾಗಿ ಪರಿವರ್ತಿತವಾಯಿತು. ವರ್ಷಂಪ್ರತಿ 2000 ಟನ್ ಶ್ರೀಗಂಧದ ಮರವನ್ನು ಇವೆರಡು ಕಾರ್ಖಾನೆಗಳು ಉಪಯೋಗಿಸುತ್ತಿವೆ. 1916ರಿಂದ ಇಲ್ಲಿಯವರೆಗೂ ಮೈಸೂರಿನ ಗಂಧದ ಎಣ್ಣೆ ಕಾರ್ಖಾನೆ ಉತ್ತಮ ಪ್ರಗತಿಯನ್ನು ಸಾಧಿಸಿದೆ.

ಗಂಧದ ಎಣ್ಣೆಗೆ ಯುರೋಪ್, ಅಮೆರಿಕ ಮತ್ತು ಅರಬ್ ದೇಶಗಳಿಂದ ಹೆಚ್ಚು ಬೇಡಿಕೆ ಉಂಟು. ಗಂಧದ ಎಣ್ಣೆಯನ್ನು ಸುಗಂಧ ದ್ರವ್ಯಗಳ ಹಾಗೂ ಮೈ ಸಾಬೂನು ತಯಾರಿಕೆಯಲ್ಲಿ ಬಳಸಲಾಗುತ್ತದೆ. ಗಂಧದ ಪರಿಮಳ ಮನಮೆಚ್ಚುವಂಥದು. ಜೊತೆಗೆ ಗಂಧದಿಂದ ಎಣ್ಣೆಯನ್ನು ತೆಗೆದ ಮೇಲೆ ಬರುವ ಗಂಧದ ಪುಡಿಯಿಂದ ಊದಿನ ಕಡ್ಡಿಯನ್ನು ತಯಾರುಮಾಡುತ್ತಾರೆ. ಈಗ 80 ದೇಶಗಳಿಗೆ ಊದಿನಕಡ್ಡಿ ನಿರ್ಯಾತವಾಗುತ್ತಿದ್ದು ಇದರಿಂದ ಪ್ರತಿವರ್ಷ ಸು.10 ಕೋಟಿ ವಿದೇಶಿ ವಿನಿಮಯ ಬರುತ್ತಿದೆ. ಗಂಧದ ಮರವನ್ನು ಕೆತ್ತನೆ ಕೆಲಸಕ್ಕೂ ಉಪಯೋಗಿಸುತ್ತಾರೆ. ಮೈಸೂರು, ಬೆಂಗಳೂರು, ಸಾಗರ, ಸೊರಬ, ಕುಮಟ, ಕಾರವಾರಗಳಲ್ಲಿ ಗಂಧದ ಮರದಿಂದ ಕೆತ್ತನೆ ಕೆಲಸ ಮಾಡುವ ಗುಡಿಗಾರಿಕೆಯ ಕುಶಲ ಕೆಲಸಗಾರರಿದ್ದಾರೆ.

**ಕಾಗದದ ಕಾರ್ಖಾನೆಗಳು :** ಬೊಂಬಿನಿಂದ ಕಾಗದವನ್ನು ತಯಾರುಮಾಡುವ ಕಾರ್ಖಾನೆಗಳಾದ ಭದ್ರಾವತಿಯ ಮೈಸೂರು ಕಾಗದದ ಕಾರ್ಖಾನೆ, ದಾಂಡೇಲಿಯ ಪಶ್ಚಿಮ ಕರಾವಳಿಯ ಕಾಗದದ ಕಾರ್ಖಾನೆ (ವೆಸ್ಟ್‌ಕೋಸ್ಟ್ ಪೇಪರ್ ಮಿಲ್) ಇವು ಮುಖ್ಯವಾದವು. ಮೈಸೂರು ಕಾಗದದ ಕಾರ್ಖಾನೆ ವರ್ಷಂಪ್ರತಿ ಸು.30,000 ಟನ್ ಕಾಗದವನ್ನು ತಯಾರಿಸುತ್ತದೆ. ದಾಂಡೇಲಿಯಲ್ಲಿರುವ ಪಶ್ಚಿಮ ಕರಾವಳಿಯ ಕಾಗದ ಕಾರ್ಖಾನೆ 1958ರಲ್ಲಿ ಕಾರ್ಯಾರಂಭ ಮಾಡಿತು. ಈ ಕಾರ್ಖಾನೆ ಪ್ರತಿವರ್ಷ ಸು.45,000 ಟನ್ ಕಾಗದವನ್ನು ತಯಾರಿಸುತ್ತದೆ. ಇವುಗಳ ಜೊತೆಗೆ ಬೆಳಗೊಳದ ಮಂಡ್ಯ ನ್ಯಾಷನಲ್ ಕಾಗದ ಕಾರ್ಖಾನೆ ಮತ್ತು ಮುನಿರಾಬಾದ್‌ನ ತುಂಗಭದ್ರಾ ಕಾಗದ ಹಾಗೂ ಸ್ಟ್ರಾಬೋರ್ಡ್ ಕಾರ್ಖಾನೆಗಳು ಕಬ್ಬಿನ ಸಿಪ್ಪೆ ಹಾಗೂ ಹುಲ್ಲನ್ನು ಕಚ್ಚಾವಸ್ತುವನ್ನಾಗಿ ಉಪಯೋಗಿಸಿ ಕಾಗದ ತಯಾರಿಸುತ್ತಿದ್ದ ಕಾರ್ಖಾನೆಗಳು. ಈ ಪೈಕಿ ಮೈಸೂರಿನ ಬಳಿ ಬೆಳಗೊಳದ ಕಾರ್ಖಾನೆಯಲ್ಲಿ ಬೊಂಬನ್ನು ಕಚ್ಚಾವಸ್ತುವನ್ನಾಗಿ ಉಪಯೋಗಿಸಿ ಕಾಗದ ತಯಾರಿಕೆಯನ್ನು ಹೆಚ್ಚಿಸುವ ಪ್ರಯತ್ನ ನಡೆಯಿತಾದರು ಈ ಯೋಜನೆ ಕಾರ್ಯಗತವಾಗುವ ಮೊದಲೇ ಅನಿವಾರ್ಯವಾಗಿ ಈ ಕಾರ್ಖಾನೆಯನ್ನು ಮುಚ್ಚಲಾಯಿತು. ಇವುಗಳೊಂದಿಗೆ ಕಾರವಾರ ಹಾಗೂ ನಂಜನಗೂಡಿನಲ್ಲಿ ಖಾಸಗಿ ಸ್ವಾಮ್ಯದಲ್ಲಿರುವ ಕಾಗದದ ಕಾರ್ಖಾನೆಗಳೂ ಇವೆ.

**ರಬ್ಬರ್ ಉದ್ಯಮ :** ರಬ್ಬರ್ ಉದ್ಯಮಕ್ಕೆ ಕೇರಳ ಹೆಚ್ಚು ಪ್ರಸಿದ್ಧಿಯಾಗಿದೆ. ಆದರೆ 1961ರಿಂದ ಈಚೆಗೆ ಕರ್ನಾಟಕದಲ್ಲಿ ಸು.8,500 ಹೆಕ್ಟೇರ್ ಅರಣ್ಯ ಪ್ರದೇಶದಲ್ಲಿ ರಬ್ಬರ್ ನೆಡುತೋಪುಗಳನ್ನು ಬೆಳೆಸಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು, ಸುಳ್ಯ, ಬೆಳ್ತಂಗಡಿ, ಮೂಡುಬಿದರೆ ತಾಲ್ಲೂಕುಗಳಲ್ಲಿ ಹಾಗೂ ಕೊಡಗು ಜಿಲ್ಲೆಯ ಪಶ್ಚಿಮ ಇಳಿಜಾರು ಪ್ರದೇಶಗಳಲ್ಲಿ ಇಂಥ ನೆಡುತೋಪುಗಳಿವೆ. ಈಗ ವರ್ಷಕ್ಕೆ ಸು.2000 ಟನ್ ರಬ್ಬರ್ ಉತ್ಪಾದನೆಯಾಗುತ್ತಿದೆ. ರಬ್ಬರ್ ನೆಡುತೋಪುಗಳ ಕಾರ್ಯಕ್ರಮದೊಂದಿಗೆ ಶ್ರೀಲಂಕಾದಿಂದ ಬಂದ ನಿರಾಶ್ರಿತರಿಗೆ ಪುನರ್ವಸತಿಕಲ್ಪಿಸುವ ಕಾರ್ಯಕ್ರಮವನ್ನು ಜೋಡಿಸಲಾಗಿದ್ದು, ಈ

ಕಾರ್ಯಕ್ರಮದ ಅಡಿಯಲ್ಲಿ ಸು.10,000 ಮಂದಿಗೆ ಪುನರ್ವಸತಿ ದೊರೆತಿದೆ. ರಬ್ಬರ್ ತಯಾರಿಕೆಯನ್ನು ಆಧರಿಸಿದ, ವಾಹನಗಳ ಚಕ್ರದ ಟ್ಯೂಬು ಹಾಗೂ ಟೈರುಗಳನ್ನೂ ತಯಾರಿಸುವ ಕಾರ್ಖಾನೆಗಳೂ ಈಗ ಕರ್ನಾಟಕದಲ್ಲಿ ಸ್ಥಾಪಿತವಾಗಿವೆ. ಈಗ ಪ್ರತ್ಯೇಕವಾದ ರಬ್ಬರ್ ಉದ್ಯಮ ನಿಗಮವನ್ನೂ ಕೂಡಾ ಪ್ರಾರಂಭಿಸಲಾಗಿದೆ.

**ಸ್ಲೇಟು ಮತ್ತು ಫೋಟೋ ಚೌಕಟ್ಟಿನ ಉದ್ಯಮಗಳು :** ಚಿಕ್ಕಮಗಳೂರು, ಸಾಗರ, ಕುಶಾಲನಗರ, ಹುಬ್ಬಳ್ಳಿ ಮುಂತಾದ ಕಡೆಗಳಲ್ಲಿ ಸ್ಲೇಟು ಹಾಗೂ ಫೋಟೋ ಚೌಕಟ್ಟಿನ ಅನೇಕ ಉದ್ಯಮಗಳಿವೆ. ಈ ಉದ್ಯಮಗಳು ಸಿಲ್ವರ್ ಓಕ್ ಮತ್ತು ಬೆನ್ನಾಟೆ ಮರಗಳನ್ನು ಉಪಯೋಗಿಸಿಕೊಳ್ಳುತ್ತವೆ. ಜೊತೆಗೆ ಆಂಧ್ರಪ್ರದೇಶದಲ್ಲಿರುವ ಕೆಲವು ಕಾರ್ಖಾನೆಗಳು ಆವಶ್ಯಕತೆಯ ಅರ್ಧಕ್ಕಿಂತ ಹೆಚ್ಚಿನ ಭಾಗವನ್ನು ಕರ್ನಾಟಕದ ಅರಣ್ಯಗಳು ಪೂರೈಸುತ್ತಿವೆ.

**ಮರ ಕುಯ್ಯುವ ಕಾರ್ಖಾನೆಗಳು :** ಕರ್ನಾಟಕದಲ್ಲಿ ಸರ್ಕಾರದ ಮತ್ತು ಖಾಸಗಿ ಆಡಳಿತಕ್ಕೊಳಪಟ್ಟಿರುವ 500ಕ್ಕೂ ಹೆಚ್ಚು ಮರ ಕೊಯ್ಯುವ ಕಾರ್ಖಾನೆಗಳು ಕರ್ನಾಟಕದ ಪ್ರಮುಖ ಉದ್ಯಮವರ್ಗಗಳಲ್ಲಿ ಒಂದು ಎನಿಸಿಕೊಂಡಿದೆ.



ಮಿಂಚುಳ್ಳಿ

**ಕುಶಲ ಕಲೆಗಳು :** ಕರ್ನಾಟಕ ಅನಾದಿ ಕಾಲದಿಂದಲೂ ತನ್ನ ಕರಕುಶಲ ಕಲೆಗಳಿಗೆ ಪ್ರಸಿದ್ಧಿಯಾಗಿದೆ. ಕರ್ನಾಟಕದಾದ್ಯಂತ ಕುಶಲ ಕಲೆಗಾರರಿದ್ದಾರೆ. ಮೈಸೂರು, ಚನ್ನಪಟ್ಟಣ, ಬೆಂಗಳೂರು, ಶಿವಮೊಗ್ಗ, ಸಾಗರ, ಸೊರಬ, ಶಿರಸಿ, ಹೊನ್ನಾವರ, ಕುಮಟದ ಕುಶಲಕಲೆಗಾರರು ವಿಶೇಷ ಮನ್ನಣೆಯನ್ನು ಪಡೆದಿದ್ದಾರೆ. ಕೆತ್ತನೆಯ ಕೆಲಸಕ್ಕೆ ಶ್ರೀಗಂಧ, ಆನೆಯ ದಂತ, ಬೀಟೆ, ಹೆತ್ತೇಗ, ಕೂಳ, ಹಲಸು, ಕರಿಮರ ಮುಂತಾದ ಹಲವಾರು ವಸ್ತುಗಳು ಬಳಕೆಯಾಗುತ್ತವೆ.

**ಪ್ರಾಣಿ ಪಕ್ಷಿಗಳ ಚರ್ಮ ಪ್ರಸಾಧನ ಉದ್ಯಮಗಳು :** ಕರ್ನಾಟಕದ ಅರಣ್ಯಗಳು ವನ್ಯಪ್ರಾಣಿಗಳ ತವರುಗಳಾಗಿವೆ. ಇತ್ತೀಚಿನವರೆಗೂ ಬೇಟೆಗಾರರಿಗೆ ಅವಕಾಶವಿದ್ದುದರಿಂದ ಬೇಟೆಯಾದ ಪ್ರಾಣಿಪಕ್ಷಿಗಳ ಚರ್ಮವನ್ನು ಹದಗೊಳಿಸುವ ಹಾಗೂ ಆ ಪ್ರಾಣಿಗಳ ಸ್ಥಿರ ಆಕಾರ ನೀಡುವ ಉದ್ಯಮ ಬಹಳ ಹೆಸರುವಾಸಿಯಾಗಿತ್ತು. ಜೊತೆಗೆ ಪಾದರಕ್ಷೆಗಳು ಹಾಗೂ ಇನ್ನಿತರ ಚರ್ಮದ ವಸ್ತುಗಳನ್ನು ತಯಾರಿಸುವ ಉದ್ಯಮವೂ ಸಾಗುತ್ತಿತ್ತು. ಈಗ ಬೇಟೆಯಾಡುವುದು ನಿಷಿದ್ಧವಾದ್ದರಿಂದ ಇಂಥ ಉದ್ಯಮಗಳು ಕಡಿಮೆಯಾಗಿವೆ. ಚರ್ಮದ ಬದಲು ಪ್ಲಾಸ್ಟಿಕ್ ಅಥವಾ ಕೃತಕವಾಗಿ ತಯಾರಿಸಿದ ವಸ್ತುಗಳನ್ನು ಈ ಉದ್ಯಮಗಳಿಗೆ ಬಳಸಲಾಗುತ್ತಿದೆ.

**ಪೆಟ್ಟಿಗೆ ಉದ್ಯಮಗಳು :** ಬೆಂಗಳೂರು, ಮೈಸೂರು, ಹಾಸನ, ಮಂಡ್ಯ, ಬೆಳಗಾಂವಿ, ಸುಳ್ಯ, ಚಾಮರಾಜನಗರ ಮುಂತಾದೆಡೆಗಳಲ್ಲಿ ಮರದ ಪೆಟ್ಟಿಗೆ ತಯಾರಿಕೆಯಲ್ಲಿ ನಿರತವಾದ ಅನೇಕ ಕಾರ್ಖಾನೆಗಳಿವೆ.

**ಪ್ಲೈವುಡ್ ಮತ್ತು ವಿನೀರ್ ಉದ್ಯಮಗಳು :** ಧಾರವಾಡ, ದಾಂಡೇಲಿ, ತಾಳಗುಪ್ಪ, ಸಿದ್ದಾಪುರ, ಸುಬ್ರಹ್ಮಣ್ಯ, ಮೈಸೂರು, ಬೆಂಗಳೂರು, ಬಂಟ್ವಾಳ ಮತ್ತು ಹುಬ್ಬಳ್ಳಿಗಳಲ್ಲಿ ಪ್ಲೈವುಡ್ ಮತ್ತು ವಿನೀರ್ ಕಾರ್ಖಾನೆಗಳಿವೆ. ಬಲಂಜಿ, ಅರಶಿನ, ತೇಗ, ಬಿಲ್ವಾರ, ಮದ್ದಾಲೆ, ಕದಂಬ, ಹೆಬ್ಬಲಸು, ಹಲಸು, ಸುರಹೊನ್ನೆ, ಕಾಯಿಧೂಪ, ಗಂಧಗರಿಗೆ, ಬೀಟೆ, ಧೂಮ, ಬಿಳಿದೇವದಾರು, ಪಟ್ಟಗ, ನೇರಳೆ, ಕೂರಿ, ಗೊದ್ದ, ಸಿಲ್ವರ್ ಓಕ್, ದೊಡ್ಡತೊಪ್ಪಾ, ಬೆಂಡೆ, ನಂದಿ, ಬೆನ್ನಾಟೆ, ಗುಳಮಾವು, ಸಂಪಿಗೆ, ಪಾಲಿ ಬೂರುಗ, ಸಾಗುವಾನಿ, ಮತ್ತಿ ಜಾತಿಯ ಮರಗಳು, ಸಾಲುಧೂಪ ಮುಂತಾದ ವೃಕ್ಷಗಳು ಪ್ಲೈವುಡ್ ಮಾಡಲು ಬಳಕೆಯಾಗುತ್ತವೆ.

ಕರ್ನಾಟಕದ ಪ್ಲೈವುಡ್ಡಿಗೆ ಇರಾನ್, ಇರಾಕ್, ಕುವೈತ್, ಅರೇಬಿಯ, ಶ್ರೀಲಂಕಾ, ಸಿಂಗಪುರ, ಇಂಗ್ಲೆಂಡ್, ಕೆನಡ, ಅಮೆರಿಕ, ಜಪಾನ್, ಜರ್ಮನಿ ಮುಂತಾದ ದೇಶಗಳಿಂದ ಅಧಿಕ ಬೇಡಿಕೆಯಿದೆ. ಈ ಕಾರ್ಖಾನೆ ಅತ್ಯಂತ ಹೆಚ್ಚಿನ ಜನರಿಗೆ ಉದ್ಯೋಗವನ್ನು ಕಲ್ಪಿಸುವ ಮತ್ತು ವಿದೇಶಿ ವಿನಿಮಯವನ್ನು ಒದಗಿಸುವ ಒಂದು ಉದ್ಯಮವಾಗಿದೆ.

**ಬೆಂಕಿಕಡ್ಡಿ ಕಾರ್ಖಾನೆಗಳು :** ಇವು ಮುಖ್ಯವಾಗಿ ಮೈಸೂರು ಮತ್ತು ಹಾಸನ ಜಿಲ್ಲೆಗಳಲ್ಲಿ ಕೇಂದ್ರೀಕೃತವಾಗಿವೆ. ಈ ಎರಡು ಜಿಲ್ಲೆಗಳಲ್ಲಿ 20 ಕಾರ್ಖಾನೆಗಳಿವೆ. ಅಲ್ಲದೆ ಧಾರವಾಡ, ಚಾಮರಾಜನಗರ, ಸಾಗರ, ಪುತ್ತೂರುಗಳಲ್ಲಿಯೂ ಸಣ್ಣ ಸಣ್ಣ ಕಾರ್ಖಾನೆಗಳಿವೆ. ಆದರೆ ಇವು ಯಾವುವೂ ಪೂರ್ಣ ಪ್ರಮಾಣದ ಕಾರ್ಖಾನೆಗಳಲ್ಲ. ಆದ್ದರಿಂದ ಈ ಕಾರ್ಖಾನೆಗಳು ಕಡ್ಡಿಗಳನ್ನು ಶಿವಕಾಶಿಯಲ್ಲಿರುವ ಕಾರ್ಖಾನೆಗಳಿಗೂ ವಿಮ್‌ಕೋ ಕಂಪನಿಗೂ ಮಾರುತ್ತವೆ. ವಿಮ್‌ಕೋ ಕಂಪನಿ ಚೆನ್ನೈ, ಅಂಬರನಾಥ, ಚೂಟರ್ ಬುಕ್‌ಗಂಜ್, ಕಲ್ಲಿಕೋಟೆ ಹಾಗೂ ಪೋರ್ಟ್‌ಬ್ಲೇರ್‌ಗಳಲ್ಲಿರುವ ತನ್ನ ಕಾರ್ಖಾನೆಗಳಿಗೆ ಬೆಂಕಿಕಡ್ಡಿಗಳನ್ನು ಕಳುಹಿಸಿ ಪೊಟ್ಟಣಗಳನ್ನು ತಯಾರಿಸುತ್ತದೆ. ಶಿವಮೊಗ್ಗದಲ್ಲಿ ಬೆಂಕಿ ಪೊಟ್ಟಣಗಳನ್ನು ತಯಾರಿಸುವ ಕಾರ್ಖಾನೆ ಇದೆ. ಇತ್ತೀಚೆಗೆ ಕೆಲವು ಅದ್ದುವ ಕಾರ್ಖಾನೆಗಳು ಪ್ರಾರಂಭವಾಗಿವೆ. ಮರದ ಕಡ್ಡಿಯ ಬದಲು ಎಣ್ಣೆ ಕಾಗದದ ಕಡ್ಡಿಗಳನ್ನು ತಯಾರಿಸಲಾಗುತ್ತದೆ.

**ಹರಿಹರ ಪಾಲಿಫೈಬರ್ ಕಾರ್ಖಾನೆ :** ಇದು 1970ರಲ್ಲಿ ಕಾರ್ಯಾರಂಭ ಮಾಡಿತು. ಈ ಕಾರ್ಖಾನೆಗೆ ದಿನವಹಿ 1200 ಟನ್ನು ನೀಲಗಿರಿ ಮರ ಕಚ್ಚಾವಸ್ತುವಾಗಿ ಬೇಕಾಗುತ್ತದೆ. ಈ ಕಾರ್ಖಾನೆ ಸಾವಿರಾರು ಮಂದಿಗೆ ಉದ್ಯೋಗಾವಕಾಶವನ್ನು ಕಲ್ಪಿಸಿಕೊಟ್ಟಿದೆಯಲ್ಲದೆ ಪರೋಕ್ಷವಾಗಿ 10,000 ಮಂದಿಗೆ ಉದ್ಯೋಗ ದೊರಕುವಂತೆ ಮಾಡಿದೆ. ಇದರೊಂದಿಗೆ ಕೇರಳದ ಮಾವೂರಿನಲ್ಲಿರುವ ಗ್ವಾಲಿಯರ್ ರೇಯಾನ್ ಕಾರ್ಖಾನೆಗೆ ಇತ್ತೀಚಿನವರೆಗೂ ಕರ್ನಾಟಕದ ಅರಣ್ಯಗಳಿಂದ ಬೊಂಬು ಮತ್ತು ಸೌದೆ ಸರಬರಾಜಾಗುತ್ತಿದ್ದವು.

**ಮರ ಸಂರಕ್ಷಣ ಕಾರ್ಯಾಗಾರ :** ಎರಡನೆಯ ಮಹಾಯುದ್ಧದ ಅನಂತರ ಸಾಗುವಾನಿ ಮರ ನಶಿಸುತ್ತ ಬಂದಿದ್ದರಿಂದ ಕೆಳದರ್ಜೆಯ ಜಾತಿಯ ಮರಗಳನ್ನು ಸಾಗುವಾನಿ ಮರದ ಬದಲು ಉಪಯೋಗಿಸುವ ಸಾಧ್ಯತೆಯನ್ನು ಕುರಿತು ಅಧ್ಯಯನ ನಡೆಸಲಾಗಿದೆ. ರಕ್ಷಕ ರಾಸಾಯನಿಕ ಪದಾರ್ಥವನ್ನು

ಉಪಯೋಗಿಸಿ ಮರಗಳನ್ನು ಅಧಿಕ ಕಾಲಾವಧಿಯವರೆಗೂ ಉಪಯೋಗಕ್ಕೆ ಬರುವಂತೆ ಮಾಡುವ ತಂತ್ರವನ್ನು ಕಂಡುಹಿಡಿಯಲಾಗಿದೆ. ಈಗ ಸರ್ಕಾರದ ಅಧೀನದಲ್ಲಿ ಮಂಗಳೂರು ಮತ್ತು ಶಿವಮೊಗ್ಗದಲ್ಲಿ ಮರ ಸಂರಕ್ಷಕ ಕಾರ್ಯಾಗಾರಗಳಿವೆ. ಮುಖ್ಯವಾಗಿ ವಿದ್ಯುಚ್ಛಕ್ತಿ ಕಂಬಗಳಿಗೆ ಹಾಗೂ ರೈಲ್ವೆ ಹಳಿಗಳ ಕೆಳಗೆ ಉಪಯೋಗಿಸುವ ಅಡಿಮರಗಳನ್ನು ಇಲ್ಲಿ ಸಂಸ್ಕರಿಸಲಾಗುವುದು. ಖಾಸಗಿ ಆಡಳಿತಕ್ಕೊಳಪಟ್ಟ ಇನ್ನೊಂದು ಕಾರ್ಯಾಗಾರ ಹುಬ್ಬಳ್ಳಿಯಲ್ಲಿದೆ. ಇತ್ತೀಚೆಗೆ ವಿದ್ಯುತ್ ಕಂಬಗಳಿಗೆ ಹಾಗೂ ರೈಲ್ವೆ ಹಳಿಗಳ ಅಡಿಪಟ್ಟಿಗಳಿಗೆ ಮರದ ಬದಲು ಕಾಂಕ್ರೀಟ್ ಕಂಬಗಳನ್ನು ಬಳಸುವುದರ ಮೂಲಕ ಮರಗಳನ್ನು ಕಡಿದು ಉಪಯೋಗಿಸುವುದನ್ನು ಕಡಿಮೆ ಮಾಡಲಾಗುತ್ತಿದೆ.

**ಪೀಠೋಪಕರಣಗಳ ಉದ್ಯಮ :** ಈ ಉದ್ಯಮಕ್ಕೆ ಬೆತ್ತ, ಮರ ಮತ್ತು ಪ್ಲೈವುಡ್‌ಗಳನ್ನು ಉಪಯೋಗಿಸುತ್ತಾರೆ. ಕೊಡಗಿನ ಮೂರ್‌ಕಲ್ ಮತ್ತು ಶಿವಮೊಗ್ಗದಲ್ಲಿ ಸರ್ಕಾರದ ಅಧೀನಕ್ಕೊಳಪಟ್ಟ ಪೀಠೋಪಕರಣ ತಯಾರಿಕೆಯ ಎರಡು ಘಟಕಗಳಿವೆ. ಇವುಗಳ ಜೊತೆಗೆ ಖಾಸಗಿ ಕ್ಷೇತ್ರದಲ್ಲಿ ಸಾವಿರಾರು ಘಟಕಗಳು ಕೆಲಸಮಾಡುತ್ತಿವೆ. ಇದಲ್ಲದೆ ವಿವಿಧ ಜಿಲ್ಲೆಗಳಲ್ಲಿರುವ ಬಂದೀಖಾನೆಗಳಲ್ಲಿ ಕೂಡಾ ಪೀಠೋಪಕರಣಗಳ ತಯಾರಿಕೆಯ ಕೆಲಸ ನಡೆಯುತ್ತದೆ.

**ಚಿಪ್ ಬೋರ್ಡ್ ಉದ್ಯಮ :** ಯಾವ ಕೈಗಾರಿಕೆಗಳಿಗೂ ಬಾರದ ವಿವಿಧ ಜಾತಿಯ ಸಣ್ಣಮರದ ತುಂಡುಗಳಿಂದ ಚಿಪ್ ಬೋರ್ಡ್‌ನ್ನು ತಯಾರಿಸಬಹುದು. ಅರಣ್ಯ ಉದ್ಯಮದಲ್ಲಿ ಇದೊಂದು ಬಹುಮುಖ್ಯ ಪ್ರಗತಿಪರ ಹೆಜ್ಜೆ. ಚಿಪ್ ಬೋರ್ಡ್‌ಗಳನ್ನು ಶಕ್ತಿ ಪ್ರಾಧನ್ಯವಿಲ್ಲದ ಭಾಗಗಳಲ್ಲಿ ಹಲಗೆಗಳ ಬದಲಾಗಿ ಉಪಯೋಗಿಸಬಹುದು.



ಹಾರುವ ಕಪ್ಪೆ

1973ರಲ್ಲಿ ಕರ್ನಾಟಕ ಸರ್ಕಾರ ಅರಣ್ಯ ಕೈಗಾರಿಕಾ ನಿಗಮವನ್ನು ರಚಿಸಿತು. ನಿರ್ದೇಶಕರೊಬ್ಬರ ನೇತೃತ್ವದಲ್ಲಿ ಈ ನಿಗಮ ಅರಣ್ಯೋತ್ಪನ್ನಗಳನ್ನು ಅವಲಂಬಿಸಿದ ಉದ್ಯಮಗಳ ಉಸ್ತುವಾರಿ ನಡೆಸುತ್ತದೆ. ಈ ನಿಗಮ ಉತ್ತರ ಕನ್ನಡದಲ್ಲಿ ಕಾಗದದ ಕಾರ್ಖಾನೆ, ಧಾರವಾಡ ಮತ್ತು ದಕ್ಷಿಣ ಕನ್ನಡದಲ್ಲಿ ವಿನೀರ್ ಉದ್ಯಮ, ಅನೇಕ ಜಿಲ್ಲೆಗಳಲ್ಲಿ ಹುಲ್ಲಿನ ಪೆಲ್ಲೆಟೈಸೇಶನ್ ಉದ್ಯಮ, ಶಿವಮೊಗ್ಗದಲ್ಲಿ ಬೆಂಕಿಕಡ್ಡಿ ಕಾರ್ಖಾನೆಗಳನ್ನು ಸ್ಥಾಪಿಸಿದೆ. ಮೈಸೂರಿನಲ್ಲಿರುವ ಖಾಸಗಿ ಸ್ವಾಮ್ಯದ ರಬ್ಬರ್ ಚಕ್ರದ ಉದ್ಯಮಗಳ ಮೇಲುಸ್ತುವಾರಿಯನ್ನೂ ಮಾಡುತ್ತಿದೆ. 1971ರಲ್ಲಿ ಸರ್ಕಾರದಿಂದ ಸ್ಥಾಪಿಸಲ್ಪಟ್ಟ ಕರ್ನಾಟಕದ ಅರಣ್ಯ ಅಭಿವೃದ್ಧಿ ನಿಗಮ ರಾಜ್ಯದಲ್ಲಿ ವಿವಿಧ ಪ್ರಕಾರದ ನೆಡುತೋಪುಗಳನ್ನು ಬೆಳೆಸಿ ಅರಣ್ಯಪ್ರದೇಶವನ್ನು ಅಭಿವೃದ್ಧಿಪಡಿಸುವ ಗುರಿ ಹೊಂದಿದೆ. ಗೇರು ನೆಡುತೋಪುಗಳನ್ನು ಬೆಳೆಸಲು 1978ರಲ್ಲಿ ಗೇರು ಅಭಿವೃದ್ಧಿ ನಿಗಮ ರಚಿತವಾಗಿದೆ. ಇದಲ್ಲದೆ ಅರಣ್ಯ ಪ್ರವಾಸಿ ವಸತಿ ಗೃಹಗಳು ಮತ್ತು ಪ್ರವಾಸಿ ತಾಣಗಳ ನಿಗಮವೂ ಇದೆ. ಇದಕ್ಕೆ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳೇ ವ್ಯವಸ್ಥಾಪಕ ನಿರ್ದೇಶಕರು. ಇಷ್ಟೆಲ್ಲ ಬೃಹತ್ ವ್ಯವಸ್ಥೆಯೊಂದಿಗೆ ಅರಣ್ಯವನ್ನು ಉಳಿಸಿ, ಬೆಳೆಸಿ, ಬಳಸಿಕೊಳ್ಳುವ ಏರ್ಪಾಡು ನಡೆದಿದೆ. (ಬಿ.ಬಿ.)

**ಅರದೇಶಹಳ್ಳಿ :** ಬೆಂಗಳೂರು ಗ್ರಾಮಾಂತರ ಜಿಲ್ಲೆ ದೇವನಹಳ್ಳಿ ತಾಲ್ಲೂಕಿನಲ್ಲಿರುವ ಒಂದು ಗ್ರಾಮ. ದೇವನಹಳ್ಳಿಗೆ 16ಕಿಮೀ ದೂರದಲ್ಲಿದೆ.

ಇಲ್ಲಿ ಆಂಜನೇಯ, ಗೋಪಾಲಸ್ವಾಮಿ, ಮುನೇಶ್ವರ, ಮಹೇಶ್ವರ ಮತ್ತು ಈಶ್ವರ ದೇವಾಲಯಗಳಿವೆ. ಇವೆಲ್ಲವನ್ನೂ ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದೆ. ಇಲ್ಲಿಯ ಈಶ್ವರ ದೇವಾಲಯದ ಮುಂಭಾಗದಲ್ಲಿ ವಿಸ್ತಾರವಾದ ಬೂದಿ ದಿಣ್ಣೆಯಿದ್ದು ಇದನ್ನು ಪ್ರಾಗೈತಿಹಾಸಿಕ ಸ್ಥಳವೆಂದು ಗುರುತಿಸಲಾಗಿದೆ. ಗೋಪಾಲಸ್ವಾಮಿ ದೇವಾಲಯಕ್ಕೆ ಸಮೀಪದಲ್ಲಿ ಸುರಕ್ಷಿತವಾಗಿಟ್ಟಿರುವ, ರಾಷ್ಟ್ರಕೂಟರ ಕಾಲದ ಮೂರು ಸುಂದರ ವೀರಗಲ್ಲುಗಳಿವೆ. ಒಂದು ವೀರಗಲ್ಲಿನಲ್ಲಿ ರಾಷ್ಟ್ರಕೂಟ ಅಕಾಲವರ್ಷ ಶ್ರೀಪೃಥಿವೀವಲ್ಲಭನ ಆಳ್ವಿಕೆಯ ಕಾಲದಲ್ಲಿ ಗಂಗವಾಸನ ಮಗ ಗೋವಿಂದ ಸಳ್ಳೆ ಮುನ್ನೂರು ಮತ್ತು ಕುಣುಂಗಿ ಅಯ್ನೂರನ್ನು ಆಳುತ್ತಿದ್ದ ಕಾಲದಲ್ಲಿ ನಂದಿಗುಂದದ ಗಣಿಗಾವುಂಡನೊಂದಿಗೆ ನಂದಿಯ ಸ್ವಾನದ ಮುಮೆನ್ನಯನು ತುರುಗಾಳಗದಲ್ಲಿ ಕಾದಾಡಿ ಹಸುಗಳನ್ನು ರಕ್ಷಿಸಿ ಸತ್ತನೆಂದು ಹೇಳಿದೆ. ಇನ್ನೊಂದು ಶಾಸನ ಹೊಯ್ಸಳ ದೊರೆ ಎರಡನೆಯ ಬಲ್ಲಾಳನ ಕಾಲಕ್ಕೆ ಸೇರಿದ್ದು ಇದರಲ್ಲಿ ಯಲಹಂಕನಾಡ ಪ್ರಭು ಬೆಟ್ಟರಸ ದಣ್ಣಾಯಕನು ಹಿರಿಯಕೆರೆ ಎಂದು ಕರೆಯುವ ಸ್ಥಳೀಯ ಕೆರೆಯೊಂದನ್ನು ಜೀರ್ಣೋದ್ಧಾರ ಮಾಡಲು ದತ್ತಿಯನ್ನು ಕೊಟ್ಟನೆಂದು ಹೇಳಿದೆ. (ಕೆ.ಎಂ.ಎಸ್.)

**ಅರಭಾವಿ :** ಬೆಳಗಾಂವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಒಂದು ಹಳ್ಳಿ. ಇಲ್ಲಿ 1910ರಲ್ಲಿ ಪ್ರಾರಂಭವಾದ ಸರ್ಕಾರಿ ಒಕ್ಕಲುತನದ ಫಾರ್ಮ್ ಇದೆ. ಇದು ಕೃಷಿ ಸಂಶೋಧನ ಕೇಂದ್ರವಾಗಿದೆ. ವಿಶ್ವವಿದ್ಯಾಲಯ ಪ್ರಾರಂಭಿಸಿದ ಒಕ್ಕಲುತನ ತರಬೇತಿ ಶಾಲೆಯೂ ಇದೆ. ಗ್ರಾಮೀಣ ಜನರ ಸಲುವಾಗಿ ಆಗಾಗ್ಗೆ ಚಿಕ್ಕ ಚಿಕ್ಕ ತರಬೇತಿ ಶಿಬಿರಗಳನ್ನೂ ಏರ್ಪಡಿಸಲಾಗುತ್ತಿದೆ. ರೈತರಿಗೆ ಎಲ್ಲ ವಿಧದ ಕೃಷಿ ಶಿಕ್ಷಣದ ಮಾಹಿತಿಯನ್ನೂ ಮಹಿಳೆಯರಿಗೆ ಪಾಕಶಾಸ್ತ್ರ ತರಬೇತಿಯನ್ನು ನೀಡುತ್ತಿದೆ.

ಅರಭಾವಿಗೆ ಸಮೀಪದಲ್ಲಿ ಇರುವ ದುರದುಂಡಿ ಹಳ್ಳಿಯಲ್ಲಿ ಒಂದು ಪ್ರಾಚೀನ ಮಠವಿದೆ. ಇದಕ್ಕೆ ಅರಭಾವಿ ಮಠ, ದುರದುಂಡೀಶ್ವರ ಮಠ ಎಂಬ ಹೆಸರುಗಳು ಇವೆ. ಇದರ ಸ್ಥಾಪಕರಾದ ಶ್ರೀ ಶಿವಲಿಂಗೇಶ್ವರ ಸ್ವಾಮಿಗಳು ಹಿಮಾಲಯದ ಕಡೆಯಿಂದ ಆಗಮಿಸಿದವರು, ಅನೇಕ ದೇಶಗಳಲ್ಲಿ ಸಂಚರಿಸುತ್ತ ಜನೋದ್ಧಾರ ಮಾಡುತ್ತ ಕರ್ನಾಟಕವನ್ನು ಪ್ರವೇಶಿಸಿ ಅರಭಾವಿಗೆ ಬಂದರು. ತಮ್ಮ ಪವಾಡಗಳಿಂದ ಈ ಭಾಗದ ಜನರನ್ನು ಉದ್ಧರಿಸಿದರೆನ್ನಲಾಗಿದೆ. ಅನಂತರ ಇವರು ದುರದುಂಡಿಯಲ್ಲಿ ನೆಲಸಿದ್ದರಿಂದ ದುರದುಂಡೀಶ್ವರರೆಂದು ಹೆಸರಾದರು ಎಂದು ಪ್ರತೀತಿ. ಈ ಮಠ ಕಲ್ಲಿನ ಭವ್ಯಮಠವೆಂದು ಪ್ರಸಿದ್ಧಿಪಡೆದಿದೆ. ಮಠದಲ್ಲಿ ಕೋರಿ ಕಾಗದದ ಮತ್ತು ತಾಡವಲಿ ಗ್ರಂಥಗಳ ಸಂಗ್ರಹವಿದೆ. ಹಿಂದೂ ಸಂದೇಶ, ಪುಣ್ಯಾರಣ್ಯ ಪತ್ರಿಕೆಗಳನ್ನು ಮಠದ ವತಿಯಿಂದ ಹೊರಡಿಸುತ್ತಿದ್ದರು. ಗೋಕಾಕದಲ್ಲಿ ಶ್ರೀ ದುರದುಂಡೀಶ್ವರ ಉಚಿತ ಪ್ರಸಾದ ನಿಲಯವಿದೆ. (ಎಂ.ಎ.)

**ಅರವಿಂದ್, ಜಿ. ಸವುರ್ :** 1941-. ಬಿಲಿಯರ್ಡ್ಸ್ ಮತ್ತು ಸ್ನೂಕರ್ ಆಟಗಾರ. 1941 ಡಿಸೆಂಬರ್ 17ರಂದು ಮುಂಬಯಿಯಲ್ಲಿ ಜನಿಸಿದರು. ಬೆಂಗಳೂರಿನ ಸೇಂಟ್‌ಜೋಸೆಫ್ ಪ್ರೌಢಶಾಲೆ ಮತ್ತು ಕಾಲೇಜಿನಲ್ಲಿ ಶಿಕ್ಷಣ ಪಡೆದರು. ಕ್ರೀಡೆಯಲ್ಲಿ ಆಸಕ್ತಿ ತಳೆದು 1957ರಲ್ಲಿ

ಟೇಬಲ್ ಟೆನ್ನಿಸ್ ಆಟದಲ್ಲಿ ಕಿರಿಯರ ರಾಷ್ಟ್ರೀಯ ಟೇಬಲ್ ಚಾಂಪಿಯನ್‌ಷಿಪ್ ಸ್ಪರ್ಧೆಯಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದರು. ಅನಂತರ ಇವರು ಬಿಲಿಯರ್ಡ್ಸ್‌ಗೆ ಒಲಿದರು. ಆ ಕ್ರೀಡೆಯ ಚಾಂಪಿಯನ್‌ಷಿಪ್ ಸ್ಪರ್ಧೆಯಲ್ಲಿ ಸೆಣಸಿದರು. ರಾಷ್ಟ್ರೀಯ ಪಂದ್ಯಾವಳಿಯಲ್ಲಿ ಕರ್ನಾಟಕ ರಾಜ್ಯವನ್ನು 1960ರಲ್ಲಿ ಪ್ರತಿನಿಧಿಸಿದರು. ಅನಂತರ ನಿರಂತರವಾಗಿ 1966ರ ತನಕ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಪಂದ್ಯಾವಳಿಗಳಲ್ಲಿ ರಾಜ್ಯದ ಪ್ರತಿನಿಧಿಯಾಗಿದ್ದರು. 1975-87ರ ತನಕ ಕರ್ನಾಟಕ ರಾಜ್ಯ ತಂಡದ ನಾಯಕರಾಗಿದ್ದರು.

ಸವುರ್ ಅವರ ದೇಹದ ತೂಕ ಹಾಗೂ ನಿಲವು ಬಿಲಿಯರ್ಡ್ಸ್ ಆಟಗಾರರಿಗೆ ಆಶ್ಚರ್ಯವನ್ನುಂಟು ಮಾಡಿತು. ಏಕೆಂದರೆ ಬಿಲಿಯರ್ಡ್ಸ್ ಆಟಕ್ಕೆ ಸರಿ ತೂಗದ ಆಕೃತಿ ಇವರದು. ಇವರನ್ನು 1967ರಲ್ಲಿ ರಾಷ್ಟ್ರೀಯ ಚಾಂಪಿಯನ್ ಎಂದು ಘೋಷಿಸಿದಾಗ ಎಲ್ಲರಿಗೂ ಆಶ್ಚರ್ಯವಾಯಿತು. 1976ರ ತನಕ ಇವರು ಸ್ನೂಕರ್ ಆಟದಲ್ಲಿ ಪ್ರಮುಖ ಸ್ಥಾನ ಗಳಿಸಿದ್ದೊಂದು ವೈಶಿಷ್ಟ್ಯ. 1976ರಲ್ಲಿ ಇವರು ರಾಷ್ಟ್ರೀಯ ಸ್ನೂಕರ್ ಚಾಂಪಿಯನ್ ಎನಿಸಿಕೊಂಡರು. 1972ರಲ್ಲಿ ಇಂಗ್ಲೆಂಡಿನ ವೇಲ್ಸ್‌ನಲ್ಲಿ ನಡೆದ ಪ್ರಥಮ ವಿಶ್ವಚಾಂಪಿಯನ್‌ಷಿಪ್‌ನಲ್ಲಿ ಭಾಗವಹಿಸಿದರು. 1980ರ ವಿಶ್ವ ಚಾಂಪಿಯನ್‌ಷಿಪ್‌ನಲ್ಲಿ ಕ್ವಾರ್ಟರ್ ಫೈನಲ್ ಹಂತವನ್ನು ತಲಪಿದರು. ಇದಲ್ಲದೆ 1974 ಹಾಗೂ 78ರಲ್ಲಿ ಐರ್ಲೆಂಡ್ ಹಾಗೂ ಮಾಲ್ಟದಲ್ಲಿ ನಡೆದ ವಿಶ್ವ ಚಾಂಪಿಯನ್‌ಷಿಪ್ ಪಂದ್ಯಗಳಲ್ಲೂ ಇವರು ಕ್ವಾರ್ಟರ್ ಫೈನಲ್ ಹಂತ ಪ್ರವೇಶಿಸಿದರು.

ಇವರು ಭಾರತೀಯ ರೈಲ್ವೆ ವಿಭಾಗದ ಕ್ರೀಡಾಪಟುವಾಗಿ 1968ರಲ್ಲಿ ಅತ್ಯುತ್ತಮ ರೈಲ್ವೆ ಕ್ರೀಡಾಪಟು ಎನಿಸಿಕೊಂಡರು. ಇವರು ಆಟಗಾರರಷ್ಟೇ ಅಲ್ಲದೆ ಭಾರತದ ಮುಖ್ಯ ತರಬೇತುದಾರರಾಗಿ ಮಾಧ್ಯಮದ ನಿರ್ವಾಹಕರಾಗಿ ವಿಶ್ವ ಬಿಲಿಯರ್ಡ್ಸ್ ಚಾಂಪಿಯನ್‌ಷಿಪ್ ಪಂದ್ಯಗಳಲ್ಲಿ ಕಾರ್ಯನಿರ್ವಹಿಸಿದ್ದಾರೆ. ಅಖಿಲ ಭಾರತ ವೃತ್ತಿನಿರತ ಬಿಲಿಯರ್ಡ್ಸ್ ಹಾಗೂ ಸ್ನೂಕರ್ ಸಂಘದ ಕಾರ್ಯದರ್ಶಿಯಾಗಿಯೂ ಕರ್ನಾಟಕ ರಾಜ್ಯ ಸಂಘದ ಅಧ್ಯಕ್ಷರಾಗಿಯೂ ಇದ್ದರು. 1998ರ ಬ್ಯಾಂಕಾಕ್ ಏಷ್ಯನ್ ಕ್ರೀಡೆಗಳಲ್ಲಿ ಭಾಗವಹಿಸಿದ ಬಿಲಿಯರ್ಡ್ಸ್ ಮತ್ತು ಸ್ನೂಕರ್ ತಂಡದ ಮುಖ್ಯ ತರಬೇತುದಾರರಾಗಿ 1 ಚಿನ್ನ, 1 ಬೆಳ್ಳಿ ಹಾಗೂ 4 ಕಂಚಿನ ಪದಕವನ್ನು ಭಾರತ ತಂಡ ಪಡೆಯಲು ನೆರವಾಗಿದ್ದಾರೆ. ವಿಶ್ವ ಬಿಲಿಯರ್ಡ್ಸ್ ಕ್ರೀಡಾಗಾರರ ಬೆಳೆವಣಿಗೆಗೆ ಸ್ಫೂರ್ತಿ ದೊರಕಿಸಿಕೊಟ್ಟಿದ್ದಾರೆ. ಇವರು ಉತ್ತಮ ಬರೆಹಗಾರರೂ ಕ್ರೀಡಾ ವಿಮರ್ಶಕರೂ ಆಗಿದ್ದಾರೆ. ಇವರಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1982) ಏಕಲವ್ಯ ಪ್ರಶಸ್ತಿ (1993) ಲಭಿಸಿವೆ. ಭಾರತ ಸರ್ಕಾರ ಇವರಿಗೆ ಅರ್ಜುನ್ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ (1978-79). (ಎಸ್.ಆರ್.ಯು.)

**ಅರಸೀಕೆರೆ** : ಹಾಸನ ಜಿಲ್ಲೆಯ ಒಂದು ತಾಲ್ಲೂಕು, ಆ ತಾಲ್ಲೂಕಿನ ಮುಖ್ಯ ಸ್ಥಳ. ತಾಲ್ಲೂಕನ್ನು ಕಡೂರು, ಚಿಕ್ಕನಾಯಕನಹಳ್ಳಿ, ತಿಪಟೂರು, ಚನ್ನರಾಯಪಟ್ಟಣ, ಹಾಸನ, ಬೇಲೂರು ಮತ್ತು ಚಿಕ್ಕಮಗಳೂರು ತಾಲ್ಲೂಕುಗಳು ಸುತ್ತವರಿದಿವೆ. ಕಸಬ, ಕಣಕಟ್ಟೆ, ಬಾಣಾವರ, ಜಾವಗಲ್ಲು, ಗಂಡಸಿ ಹೋಬಳಿಗಳಿವೆ. ಒಟ್ಟು 370 ಗ್ರಾಮಗಳೂ ಅರಸೀಕೆರೆ ಮತ್ತು ಬಾಣಾವರ ಪಟ್ಟಣಗಳೂ ಇವೆ. ತಾಲ್ಲೂಕಿನ ವಿಸ್ತೀರ್ಣ 1278ಚ.ಕಿಮೀ. ಜನಸಂಖ್ಯೆ 3,03,000. ಮೊದಲು ಹಾರ್‍ನಹಳ್ಳಿ ತಾಲ್ಲೂಕ್ಕಾಗಿದ್ದು 1882ರಲ್ಲಿ ಅರಸೀಕೆರೆ ತಾಲ್ಲೂಕಾಯಿತು.

ಇದು ಬೆಟ್ಟಗುಡ್ಡಗಳ ಪ್ರದೇಶ. ಹಿರೇಕಲ್ಲುಬೆಟ್ಟ ಎಂಬುದು ಎತ್ತರವಾದ ಬೆಟ್ಟಗಳಲ್ಲೊಂದು. ಈ ತಾಲ್ಲೂಕಿನ ದಕ್ಷಿಣಭಾಗದಲ್ಲಿ ಸಾಧಾರಣವಾದ ಅನೇಕ ಕುರುಚಲು ಕಾಡುಗಳೂ ಹುಲ್ಲು ಬೆಳೆಯುವ ಪ್ರದೇಶಗಳೂ ಇವೆ. ಇಲ್ಲೆಲ್ಲ ಸಾಧಾರಣ ಫಲವತ್ತಾದ, ಗಡುಸಾದ ಕೆಂಪು ಮತ್ತು ಬೂದುಬಣ್ಣದ ಮಣ್ಣಿದೆ. ಭೂಮಿ ದಕ್ಷಿಣದಿಂದ ಉತ್ತರದ ಕಡೆಗೆ ಇಳಿಜಾರಾಗಿದೆ. ಮಳೆ ಕಡಿಮೆ, ವಾರ್ಷಿಕ ಸರಾಸರಿ 671ಮಿಮೀ. ರಾಗಿ, ತೆಂಗು, ಮೆಣಸಿನಕಾಯಿ, ಎಣ್ಣೆಕಾಳುಗಳು, ಜೋಳ ಮುಖ್ಯ ಬೆಳೆಗಳು. ಕೆರೆಗಳಿಂದ 1770, ಬಾವಿಗಳಿಂದ 820 ಮತ್ತು ಕೊಳವೆ ಬಾವಿಗಳಿಂದ 2800ಹೆ.ಗಳ ಜಮೀನು ನೀರಾವರಿಗೆ ಒಳಪಟ್ಟಿದೆ. ದಕ್ಷಿಣಕ್ಕೆ ಅಮೃತಮಹಲ್ ಕಾವಲುಗಳು ಅನೇಕವಿದ್ದು ಇಲ್ಲಿ ಒಳ್ಳೆಯ ದನಕರುಗಳನ್ನು ಸಾಕುತ್ತಾರೆ. ಕುರಿ ಸಾಕಣೆಯೂ ಹೆಚ್ಚು.

ಬಾಣಾವರ, ಗರುಡನಗಿರಿ, ಹಾರನಹಳ್ಳಿ, ಹುಲ್ಲೆಕೆರೆ ಮತ್ತು ಜಾವಗಲ್ಲು ಈ ತಾಲ್ಲೂಕಿನ ಪ್ರಸಿದ್ಧ ಸ್ಥಳಗಳು (ಆಯಾ ಲೇಖನಗಳನ್ನು ನೋಡಿ). ಅರಕೆರೆ ಎಂಬ ಗ್ರಾಮದಲ್ಲಿ ಚನ್ನಕೇಶವ ಮತ್ತು ರಾಮೇಶ್ವರ ದೇವಾಲಯಗಳಿವೆ. ಇಲ್ಲಿ ಗಂಗದೊರೆ ಎಱೆಯಪ್ಪನ ಕಾಲಕ್ಕೆ ಸಂಬಂಧಿಸಿದ ಶಾಸನವಿರುವ ಒಂದು ದೊಡ್ಡ ವೀರಗಲ್ಲಿದೆ. ಕಂಚಿನಕೋವಿ ಮರತಿ ಎಂಬುದು ಅರಸೀಕೆರೆ ಪಟ್ಟಣಕ್ಕೆ 4ಕಿಮೀ ದೂರದಲ್ಲಿರುವ ಒಂದು ಸಣ್ಣ ಬೆಟ್ಟ. ಇಲ್ಲಿ ದೇವಾಲಯಗಳ ಅವಶೇಷಗಳಿವೆ. ಹಿಂದೆ ಇಲ್ಲೊಂದು ಊರಿದ್ದಿರಬಹುದೆಂದು ಹೇಳುತ್ತಾರೆ. ಮಾಲೆಕಲ್ಲುತಿರುಪತಿ ಅರಸೀಕೆರೆಗೆ 3ಕಿಮೀ ದೂರದಲ್ಲಿರುವ ಒಂದು ಯಾತ್ರಾಸ್ಥಳ. ಇಲ್ಲಿನ ಹಿರೇಕಲ್ಲು ಬೆಟ್ಟದ ಮೇಲಿರುವ ವೆಂಕಟರಮಣಸ್ವಾಮಿ ಮತ್ತು ಬೆಟ್ಟದ ಬುಡದಲ್ಲಿರುವ ಗೋವಿಂದರಾಜಸ್ವಾಮಿ ದೇವಾಲಯಗಳು ಪ್ರಸಿದ್ಧವಾದವು. ಮಾವತ್ತನ ಹಳ್ಳಿಯಲ್ಲಿ ಹೊಯ್ಸಳ ಶೈಲಿಯ ಮಹಾಲಿಂಗೇಶ್ವರ ದೇವಾಲಯವಿದೆ. ಅಗ್ಗುಂದದಲ್ಲಿ ಶಿಥಿಲವಾದ ಎರಡು ಹೊಯ್ಸಳ ದೇವಾಲಯಗಳಿವೆ. ಅರಸೀಕೆರೆಗೆ ಉತ್ತರದಲ್ಲಿ 11ಕಿಮೀ ದೂರದಲ್ಲಿರುವ ನಾಗಪುರಿ ಕೋಟೆಯಲ್ಲಿ ಹೈದರ್ ಅಲಿ ಕಟ್ಟಿದ ಕೋಟೆಯ ಅವಶೇಷವಿದೆ. ಅರಸೀಕೆರೆಗೆ 28ಕಿಮೀ ದೂರದಲ್ಲಿ ತಿಮ್ಮನಹಳ್ಳಿಯ ಹತ್ತಿರ ವೇದಾವತಿ ನದಿಗೆ ಹಿರೆಕಟ್ಟೆವಡ್ಡು ಎನ್ನುವ ಕಟ್ಟೆ ಕಟ್ಟಲಾಗಿದೆ.



ಈಶ್ವರ ದೇವಸ್ಥಾನ

ತಾಲ್ಲೂಕಿನ ಕೇಂದ್ರ ಅರಸೀಕೆರೆಯ ಜನಸಂಖ್ಯೆ 45,160. ಮೈಸೂರು ಮತ್ತು ಬೆಂಗಳೂರು ಕಡೆಗಳಿಂದ ಅರಸೀಕೆರೆಗೂ ಮುಂದಕ್ಕೂ ರೈಲು ಮಾರ್ಗಗಳಿವೆ. ಇದೊಂದು ವ್ಯಾಪಾರ ಕೇಂದ್ರ. ಪ್ರತಿ ಶುಕ್ರವಾರ ಇಲ್ಲಿ ನಡೆಯುವ ದೊಡ್ಡ ಸಂತೆ ತೆಂಗಿನಕಾಯಿ ಮತ್ತು ಕೊಬ್ಬರಿ ವ್ಯಾಪಾರಕ್ಕೆ ಪ್ರಸಿದ್ಧವಾಗಿದೆ. 1882ರಷ್ಟು ಹಿಂದೆಯೇ ಅಸ್ತಿತ್ವಕ್ಕೆ ಬಂದ ಇಲ್ಲಿನ ಪುರಸಭೆ ಹಳೆಯ ಪುರಸಭೆಗಳಲ್ಲೊಂದು. ಈ ಊರಿಗೆ ಸಮೀಪವಾಗಿ ಕಸ್ತೂರಬಾ ಗ್ರಾಮವೆಂಬ ಒಂದು ಮಾದರಿ ಗ್ರಾಮ ಸ್ಥಾಪಿತವಾಗಿದೆ. ಇದನ್ನು ಶ್ರೀಮತಿ ಯಶೋಧರಾ ದಾಸಪ್ಪ ಅವರು ಸ್ಥಾಪಿಸಿದರು.

ಈ ಊರು ಹೊಯ್ಸಳರ ಆರಂಭಕಾಲದಲ್ಲಿಯೆ ಹುಟ್ಟಿಕೊಂಡಿತು. ಹನ್ನೊಂದನೆಯ ಶತಮಾನದ ಕಡೆಯಲ್ಲಿ ಎರೆಯಂಗನ ಪಟ್ಟದರಸಿ ಮಹಾದೇವಿ ಕೆರೆಯನ್ನು ಕಟ್ಟಿಸಿದಂತೆ ಒಂದು ಶಾಸನದಿಂದ ತಿಳಿದುಬರುವುದರಿಂದ ಈ ಅರಸಿಯ ಹೆಸರಿನಿಂದಲೇ ಅರಸೀಕೆರೆ ಎಂಬ ಹೆಸರು ಈ ಊರಿಗೆ ಬಂದಿರಬಹುದು. ಮುಂದೆ ಇಮ್ಮಡಿ ಬಲ್ಲಾಳನ ಕಾಲದಲ್ಲಿ ಈ ಊರು ಅಭ್ಯುದಯದ ಪರಾಕಾಷ್ಠೆಯನ್ನು ಕಂಡಿತು. ಬಲ್ಲಾಳನ ಪಿರಿಯರಸಿ ಉಮಾದೇವಿಯ ತವರಾಗಿದ್ದ ಈ ಊರು ಅವನ ಕಾಲದಲ್ಲಿ ಹೊಯ್ಸಳ ರಾಜ್ಯದ 'ಭಂಡಾರವಾಡ' ವಾಯಿತು. ಇದಕ್ಕೆ ಜಯಗೊಂಡ ಬಲ್ಲಾಳಪುರ, ವೀರವಿಜಯ ಬಲ್ಲಾಳಪುರ ಎಂಬ ಹೆಸರುಗಳೂ ಇದ್ದು ಶಾಸನಗಳಲ್ಲಿ ರಾಜಧಾನಿ ಅರಸಿಯಕೆರೆ ಎನ್ನಿಸಿಕೊಂಡಿದೆ.

ವೇದವಿದರಾದ ವಿಪ್ರರು, ವೀರರಾದ ಕಾಯ್ವಾಳುಗಳು, ಆಢ್ಯರಾದ ಪರದರು, ಅಲಕಾಧೀಶ ಕುಬೇರನನ್ನೂ ಧಿಕ್ಕರಿಸುವ ವಾಣಿಜ್ಯರು,

ಅಚಲವಾಕ್ಯರಾದ ಜನ, ವಿನೂತಾಕಾರರಾದ ಕಾಂತಾಜನ, ಇಳೆಗೆ ಮಂಡನಪ್ರಾಯವಾದ ದೇವಾಗಾರ ಸಂದೋಹ, ಸಾಗರತೀರದಂತೆ ಶೋಭಿಸುವ ತುಂಬುಕೆರೆಗಳು, ಫಲಭರಿತ ವನಗಳು, ಪುಷ್ಪಭರಿತ ತೋಟಗಳು, ಸುರವೃಕ್ಷದಂತಿರುವ ಮಾವು, ಸುರಲತೆಯಂತಿರುವ ತಾಂಬೂಲ, ತೆಂಗು, ಕೌಂಗುಗಳು, ಗಂಧಶಾಲೀಪರಿಮಳಗಳಿಂದ ಕೂಡಿ ಉದ್ಯತ್ ಪ್ರಜಾಪೂರಿತವಾದ ಈ ನಗರಿಯು ಸುತ್ತಲೂ ಬಳಸಿದ್ದ ಕೋಟೆಯಿಂದ ಉರ್ವೀಮಂಡನ ವಾಯಿತೆಂದು ಇಲ್ಲಿನ ಹಲವಾರು ಶಾಸನಗಳನ್ನು ರಚಿಸಿರುವ ದೇವಪಾರ್ಯ, ತ್ರಿವಿಕ್ರಮಪಂಡಿತ, ಶಾಂತಿನಾಥ ಮೊದಲಾದ ಕವಿಗಳು ಹಾಡಿ ಹೊಗಳಿದ್ದಾರೆ.

ಪ್ರಸನ್ನ ಚೆನ್ನಕೇಶವ, ನಖರ ಜಿನಾಲಯ, ಸಹಸ್ರಕೂಟ ಚೈತ್ಯಾಲಯ, ಕೊಯ್ಲಾಳೇಶ್ವರ, ಜಗತೇಶ್ವರ, ಮೇಳೇಶ್ವರ, ಬ್ರಹ್ಮ, ಕತ್ತಮೇಶ್ವರ, ಬಲ್ಲೇಶ್ವರ, ಅರೆಯಶಂಕರದೇವ ಮುಂತಾದ ಹಲವು ಗುಡಿಗೋಪುರಗಳನ್ನು ಅನೇಕ ರಾಜ್ಯಾಧಿಕಾರಿಗಳು ಹಾಗೂ ವಣಿಕ್ ಮತ್ತು ವೃತ್ತಿಶ್ರೇಣಿಗಳು, ಸರಸ್ವತಿ ಗಣದಾಸಿ ಕೇತೋಜ, ಪುಲಿಗೆಯ ವಿಟೋಜ, ಸಿಂಗೋಜ ಮುಂತಾದ ಬಿರುದ ರೂವಾರಿಗಳನ್ನು ನಿಯೋಜಿಸಿ ಕಟ್ಟಿಸಿದರೆಂದು ಹೊಯ್ಸಳ ಶಾಸನಗಳಿಂದ ತಿಳಿಯುತ್ತದೆ. ವಿದ್ಯೆಗೆ, ಕಲೆಗೆ, ಐಶ್ವರ್ಯಕ್ಕೆ ಹೆಸರಾಗಿದ್ದ ಈ ಊರು ತೆಂಕಣ ಅಯ್ಯಾವೊಳೆಯಾಯಿತು. ಅಭಿನವ ದ್ವಾರಾವತಿಯಾಯಿತು. ಇಲ್ಲಿನ ಧರ್ಮಪ್ರತಿಪಾಲಕ ಶಕ್ತಿಯನ್ನು ಕೇಳಿದ ಕಳಚೂರ್ಯರ ಸಚಿವ ರೇಚರಸ ಬಲ್ಲಾಳನನ್ನಾಶ್ರಯಿಸಿ ಸಹಸ್ರಕೂಟ ಚೈತ್ಯಾಲಯಕ್ಕೆ ಸಹಸ್ರಕೂಟ ಜಿನಬಿಂಬವನ್ನು ಮಾಡಿಸಿಕೊಟ್ಟ.

ಆದರೆ ಇಷ್ಟು ಉನ್ನತಿಗೇರಿದ ಈ ಊರು ಹೊಯ್ಸಳ ರಾಜ್ಯದ ಅವನತಿಯೊಂದಿಗೆ ಇಳಿಮುಖವಾಯಿತು. ಮುಂದೆ ಕ್ರಮವಾಗಿ ಚನ್ನಪಟ್ಟಣದ ಜಗದೇವರಾಯ, ತರೀಕೆರೆಯ ತಿಮ್ಮಪ್ಪನಾಯಕ, ಇಕ್ಕೇರಿಯ ಶಿವಪ್ಪನಾಯಕ ಇವರ ಅಧೀನದಲ್ಲಿ ಒಂದು ಸಾಮಾನ್ಯ ಊರಾಗಿದ್ದು ಕಡೆಯಲ್ಲಿ ಮೈಸೂರರಸರಿಗೆ ಸೇರಿತು. ಆದರೆ ಮರಾಠಿಗರ ದಾಳಿಗೆ ಬೆದರಿ ಕಪ್ಪ ತೆತ್ತು ಸಾಕಾಗಿದ್ದ ಮೈಸೂರು ಕಪ್ಪದ ಹೊರೆ ತೀರುವವರೆಗೆ ಒತ್ತೆ ಇಟ್ಟ ಮೈಸೂರು ರಾಜ್ಯದ ಭಾಗಗಳಲ್ಲಿ ಈ ಊರು ಸೇರಿತು. ಆಗ ಇದು ಸುಲಿಗೆಗೊಳಗಾಗಿ ಹಾಳುಹಳ್ಳಿಯಾಗಿ ದಾರಿಹೋಕರನ್ನು ಸುಲಿಯುವ ದರೋಡೆಕೋರರಿಗೆ ಆಶ್ರಯಸ್ಥಾನವಾಯಿತು. 19ನೆಯ ಶತಮಾನದ ಕೊನೆಯಲ್ಲಿ ಬೆಂಗಳೂರು-ಪುಣೆ ರೈಲುಮಾರ್ಗ ಹಾಕಿದಮೇಲೆ ಈ ಊರು ಪುನಃ ಬೆಳೆಯಲಾರಂಭಿಸಿತು.

ಹೊಯ್ಸಳರ ಕಾಲದಲ್ಲಿ ನಿರ್ಮಿತವಾದ ದೇವಾಲಯಗಳು ಈಗ ಬಹುಮಟ್ಟಿಗೆ ನಾಶವಾಗಿವೆ. ಆದರೆ ಬಹುಶಃ 2ನೆಯ ಬಲ್ಲಾಳ ಕಟ್ಟಿಸಿರಬಹುದಾದ ಈಶ್ವರದೇವಾಲಯ ಉಳಿದಿದೆ. ಪುಟ್ಟಪುಟ್ಟ ಗರ್ಭಗೃಹ ಸುಕನಾಸಿ, ನವರಂಗ, ಮುಖಮಂಟಪಗಳು, ನಕ್ಷತ್ರಾಕಾರದಲ್ಲಿ ವೈವಿಧ್ಯಮಯವಾಗಿ ಸುಂದರವಾಗಿರುವ ಹೊರವಿನ್ಯಾಸ, ಅದೇ ವಿನ್ಯಾಸದಲ್ಲಿಯೇ ನೀಳವಾಗಿ ಗರ್ಭಗೃಹದ ಮೇಲೆದ್ದಿರುವ ಲಾವಣ್ಯಮಯವಾದ ಗೋಪುರ, ಹೊರಗೂ ಒಳಗೂ ಯಾವ ಭಾಗವನ್ನೂ ಬಿಡದಂತೆ ಚಾತುರ್ಯದಿಂದ ಕಡೆದು ತುಂಬಿಸಿದ್ದರೂ ಅತಿಯಾಯಿತು ಎನ್ನಿಸದ ಶಿಲ್ಪಜಾಣ್ಮೆಯಿಂದ ಕೂಡಿರುವ ಈ ದೇವಾಲಯದ ಹೊರಗೋಡೆಯ ಮೇಲೆ ಒಂದು ಸಾಲು ಮಾತ್ರ ಮೂರ್ತಿಶಿಲ್ಪವಿದೆ. ಹಲವಾರು ಮೂಲೆಗಳುಳ್ಳ ನಕ್ಷತ್ರಾಕಾರದ ಮುಖಮಂಟಪಕ್ಕೆ ದೊಡ್ಡದಾದ ಒಂದೇ ಭುವನೇಶ್ವರಿಯಿದ್ದು ಅಪರೂಪವಾದ ರೀತಿಯಲ್ಲಿದೆ. ನವರಂಗದ ಒಳಗೋಡೆಯ ಕಲಾತ್ಮಕವಾದ ಗೂಡುಗಳು, ಸುಂದರವಾಗಿ ಲಲಿತವಾಗಿ ಕಡೆದಿರುವ ಕಂಬಗಳು, ಕುಸುರಿ ಕೆಲಸದ ಪರಾಕಾಷ್ಠೆಯನ್ನು ಮುಟ್ಟಿರುವ ಗರ್ಭಗೃಹದ ಬಾಗಿಲು ಎಲ್ಲವೂ ಆಕರ್ಷಕವಾಗಿವೆ. ಈ ದೇವಾಲಯದ ಪಕ್ಕದಲ್ಲಿಯೇ ಇರುವ ಜೋಡಿ ಗರ್ಭಗೃಹಗಳುಳ್ಳ ಸಾಮಾನ್ಯ ಶಿವಾಲಯವೊಂದು, ಸಹಸ್ರಕೂಟ ಬಸದಿಯೊಂದು ಈಗ ಉಳಿದು ಬಂದಿರುವ ಆ ಕಾಲದ ಕಟ್ಟಡಗಳು. (ಎಂ.ಎಚ್.)

**ಅರಳಗುಪ್ಪೆ :** ತುಮಕೂರು ಜಿಲ್ಲೆ ತಿಪಟೂರು ತಾಲ್ಲೂಕಿನಲ್ಲಿ ಬಾಣಸಂದ್ರ ರೈಲ್ವೆ ನಿಲ್ದಾಣದಿಂದ ಪಶ್ಚಿಮಕ್ಕೆ ಸು.7ಕಿಮೀ ದೂರದಲ್ಲಿರುವ ಪ್ರಾಚೀನ ವಾಸ್ತುಶಿಲ್ಪಕ್ಕೆ ಪ್ರಸಿದ್ಧವಾದ ಒಂದು ಹಳ್ಳಿ.

ಇಲ್ಲಿ ಚೆನ್ನಕೇಶವ, ಕಲ್ಲೇಶ್ವರ ಎಂಬ ಎರಡು ಸುಂದರ ದೇವಾಲಯಗಳಿವೆ. ಚೆನ್ನಕೇಶವ ದೇವಾಲಯ ಹೊಯ್ಸಳ ವಾಸ್ತುಶೈಲಿಯಲ್ಲಿ ಬಳಪದ ಕಲ್ಲಿನಿಂದ ಕಟ್ಟಲಾದ ಗರ್ಭಗೃಹ, ಸುಕನಾಸಿ, ನವರಂಗಗಳಿಂದ ಕೂಡಿದ ಸುಂದರ ದೇವಾಲಯ. ಚೆನ್ನಕೇಶವ ದೇವಾಲಯ ಪೂರ್ವಾಭಿಮುಖವಾಗಿದ್ದು ಪ್ರವೇಶದ್ವಾರದ ಒಳಗೆ ಆಚೀಚೆ ಸುಂದರ ಸ್ತಂಭಗಳಿಂದ ಕೂಡಿದ ಜಗಲಿಗಳಿವೆ. ಇದನ್ನು ಹೋನೋಜನೆಂಬ ಶಿಲ್ಪಿ 13ನೆಯ ಶತಮಾನದ ಮಧ್ಯಭಾಗದಲ್ಲಿ ಕಟ್ಟಿರಬೇಕು. ಹೊರಪ್ರಾಕಾರದಲ್ಲಿ



ಚೆನ್ನಕೇಶವ ದೇವಾಲಯ

ಆನೆ, ಕುದುರೆ, ಹಂಸ, ವ್ಯಾಳಿ, ಲತೆ, ಮೂರ್ತಿಗಳ ಮೆರವಣಿಗೆಯ ಶಿಲ್ಪಪಂಕ್ತಿಗಳಿವೆ. ನವರಂಗದ ಕಂಬಗಳು ಬೇಲೂರು ಹಳೇಬೀಡುಗಳಲ್ಲಿಯ ಕಂಬಗಳಿಗಿಂತ ವಿಶಿಷ್ಟಶಿಲ್ಪಕಲಾ ವಿನ್ಯಾಸದಿಂದ ಕೂಡಿವೆ. ಒಟ್ಟಿಗೆ ಹತ್ತು ಭುವನೇಶ್ವರಿಗಳಿವೆ. ಒಂದೊಂದರಲ್ಲೂ ಸ್ವಸ್ತಿಕ, ಬಾಳೆಯ ಮೋತೆಯಂಥ ರಚನೆಗಳು ಚೇತೋಹಾರಿಯಾಗಿವೆ. ಗರ್ಭಗೃಹದ ಪ್ರವೇಶದ್ವಾರದ ಬಲಕ್ಕೆ ಇರುವ ಗಣಪತಿವಿಗ್ರಹ ಮತ್ತು ಎಡಭಾಗದಲ್ಲಿರುವ ಮಹಿಷಾಸುರಮರ್ದಿನಿ ತುಂಬ ಮೋಹಕಭಂಗಿಯಲ್ಲಿ ನಿಂತಿದೆ. ದೇವಾಲಯದ ದಕ್ಷಿಣದ ಗೋಡೆಗೆ ತಾಗಿದಂತೆ ಸ್ವಲ್ಪ ಇತ್ತೀಚಿನ ಉಗ್ರನರಸಿಂಹನ ವಿಗ್ರಹವಿದೆ.



ಕಲ್ಲೇಶ್ವರ ದೇವಾಲಯದ ನವರಂಗದ ಚಾವಣಿಯಲ್ಲಿರುವ ನಟರಾಜ

ಊರಿನ ಈಶಾನ್ಯಭಾಗದಲ್ಲಿ ಸು.10ನೆಯ ಶತಮಾನದ ಕಲ್ಲೇಶ್ವರ ದೇವಾಲಯವಿದೆ. ಸುತ್ತಮುತ್ತಲೂ ಪಂಚಲಿಂಗ ಗುಡಿಗಳಿವೆ. ನವರಂಗದ ಮೇಲ್ಚಾವಣಿಯಲ್ಲಿರುವ ಭುವನೇಶ್ವರಿ ಒಂದು ಅದ್ಭುತರಮ್ಯ ಶಿಲ್ಪಕಲಾಸೃಷ್ಟಿ.

ಕೇವಲ 6' ಚಚ್ಚೌಕದ ಕಪ್ಪುಕಲ್ಲಿನಲ್ಲಿ ಅಷ್ಟದಿಕ್ಪಾಲಕರು ತಮ್ಮ ತಮ್ಮ ವಾಹನಾರೂಢರಾಗಿದ್ದು ಮಧ್ಯದಲ್ಲಿ ತಾಂಡವೇಶ್ವರ ಮೆರೆಯುತ್ತಿದ್ದಾನೆ. ಅಷ್ಟದಿಕ್ಪಾಲಕರ ಮೂರ್ತಿಯಲ್ಲಿ ಮೂಡಿದ ಬಗೆಬಗೆಯ ಭಾವಗಳನ್ನೂ ತಾಂಡವೇಶ್ವರನ ಪ್ರಳಯ ಕಾಲದ ರುದ್ರನೃತ್ಯಭಂಗಿಯನ್ನೂ ಆ ಶಿಲಾಫಲಕದಲ್ಲಿ ಶಿಲ್ಪಿ ಸೆರೆಹಿಡಿದಿಟ್ಟಿದ್ದಾನೆ. ಎಂಟು ದಿಕ್ಕುಗಳಲ್ಲಿ ಅಷ್ಟದಿಕ್ಪಾಲಕರು ತಮ್ಮ ಅಂಗನೆಯರನ್ನು ಅಪ್ಪಿ, ವಾಹನಗಳನ್ನೇರಿದ್ದಾರೆ. ತಾಂಡವೇಶ್ವರ ತಾಂಡವ ನೃತ್ಯದಲ್ಲಿ ಮಗ್ನನಾಗಿದ್ದಾನೆ. ಶಿವನ ನಡುವೆ ಸುತ್ತಲೂ ನಾಲ್ಕು ಮೂಲೆಗಳಲ್ಲಿ ಹಗ್ಗದಲ್ಲಿ ಜೋಲಾಡುತ್ತಿರುವ ಭಂಗಿಯಲ್ಲಿರುವ ನಾಲ್ಕು ಗಣಗಳ ಮೂರ್ತಿಗಳಿವೆ. ಇದೊಂದು ಭುವನಮೋಹಕ ಶಿಲ್ಪಸೃಷ್ಟಿ. ಕಲ್ಲೇಶ್ವರನಿಗೆ ಅಭಿಮುಖವಾಗಿ ಸುಮಾರು 10' ಉದ್ದ 6' ಎತ್ತರದ ಕರಿಯ ಕಲ್ಲಿನ ಬಸವವಿಗ್ರಹ ಮುದ್ದಾಗಿದೆ. ಅರಳಗುಪ್ಪೆಯಲ್ಲಿ ಪಾಳೆಯಗಾರರ ಚಾವಡಿ ಎಂಬ ಒಂದು ಮಂಟಪವಿದೆ. (ಜಿ.ಸಿ.ಎ.)

**ಅರಿಕೇಸರಿII :** 10ನೆಯ ಶತಮಾನದ ಪೂರ್ವಭಾಗದಲ್ಲಿ ಆಳುತ್ತಿದ್ದ ವೇಮುಲವಾಡದ ಚಾಳುಕ್ಯ ಶಾಖೆಯ ಪರಾಕ್ರಮಿ ಅರಸು. ಮಹಾಕವಿ ಪಂಪನ ಆಶ್ರಯದಾತ.

ವೇಮುಲವಾಡ ಶಾಖೆಯ ಅರಸರು 7-8ನೆಯ ಶತಮಾನದಿಂದ 10ನೆಯ ಶತಮಾನದವರೆಗೆ ಇಂದಿನ ಆಂಧ್ರಪ್ರದೇಶದ ನಿಜಾಮಾಬಾದ್, ಕರೀಂನಗರ, ನಲ್ಗೊಂಡ ಮತ್ತು ಕರ್ನಾಟಕದ ರಾಯಚೂರು ಜಿಲ್ಲೆಗಳ ಭಾಗಗಳನ್ನು ಒಳಗೊಂಡ ಪ್ರದೇಶದಲ್ಲಿ ರಾಷ್ಟ್ರಕೂಟರ ಅಧೀನತೆಯಲ್ಲಿ ರಾಜ್ಯವಾಳುತ್ತಿದ್ದರು. ಕರೀಂನಗರ ಜಿಲ್ಲೆಯ ವೇಮುಲವಾಡ (ಲೇಮುಲವಾಡ, ಲೆಂಬುಳವಾಟಕ, ಪೆಂಬುಳವಾಟಕಪತ್ತನ, ವೆಂಬುಳವಾಟ) ಅವರ ರಾಜಧಾನಿಯಾಗಿತ್ತು. ಅವರ ವಂಶಾನುಕ್ರಮಣಿಕೆ ಹೀಗಿದೆ: ಯುದ್ಧಮಲ್ಲ ವಿನಯಾದಿತ್ಯ-I, ಅರಿಕೇಸರಿ-II, ನರಸಿಂಹ-I ಮತ್ತು ಭದ್ರದೇವ-I (ನರಸಿಂಹನ ಜ್ಯೇಷ್ಠಪುತ್ರ) ಯುದ್ಧಮಲ್ಲ-II, ಭದ್ರದೇವ-II (ಬದ್ದೆಗ), ಯುದ್ಧಮಲ್ಲ-III, ನರಸಿಂಹ-II, ಅರಿಕೇಸರಿ-I, ಭದ್ರದೇವ-III, ಅರಿಕೇಸರಿ-III.

ಈ ಪರಂಪರೆಯಲ್ಲಿನ ಇಮ್ಮಡಿ ಅರಿಕೇಸರಿಯ ವಿಚಾರಗಳು ವೇಮುಲವಾಡ ಮತ್ತು ಪರಭಣಿ ಶಾಸನಗಳಲ್ಲಿ ಮತ್ತು ಪಂಪನ ವಿಕ್ರಮಾರ್ಜುನವಿಜಯದಲ್ಲಿ ದೊರಕುತ್ತವೆ. ಅರಿಕೇಸರಿ ಇಮ್ಮಡಿ ನರಸಿಂಹನಿಗೆ ಜಾಕವ್ವೆಯಲ್ಲಿ ಮಗನಾಗಿ ಜನಿಸಿದ. ಜಾಕವ್ವೆ ರಾಷ್ಟ್ರಕೂಟ ಚಕ್ರವರ್ತಿ 3ನೆಯ ಇಂದ್ರನ ಸೋದರಿಯಿರಬಹುದೆಂದು ಕೆಲವರ ಊಹೆ. 'ಇಂದ್ರೇಂದ್ರನ ತೋಳೆತೊಟ್ಟಿಲಾಗಿರೆ ಬಳೆದಂ' ಎಂಬುದಾಗಿ ಅರಿಕೇಸರಿಯ ಬಾಲ್ಯವನ್ನು ವರ್ಣಿಸಿರುವುದರಿಂದ, ಅರಿಕೇಸರಿ ಮುಮ್ಮಡಿ ಇಂದ್ರನ ಪ್ರೀತ್ಯಾದರಗಳಿಗೆ ಪಾತ್ರನಾಗಿದ್ದನೆಂದು ತಿಳಿದುಬರುತ್ತದೆ. ಆತ ಇಂದ್ರನ ಪುತ್ರಿ ರೇವಕನಿಮ್ಮಡಿಯನ್ನು ವರಿಸಿದ್ದನೆಂಬುದಾಗಿ ವೇಮುಲವಾಡದ ಶಾಸನದಲ್ಲಿ ಹೇಳಿದೆ. ಆದರೆ ರಾಷ್ಟ್ರಕೂಟ ಕುಲದ ಲೋಕಾಂಬಿಕೆ ಎಂಬುವಳು ಪತ್ನಿ ಎಂಬುದಾಗಿ ಪರಭಮಿ ತಾಮ್ರಪಟಗಳಲ್ಲಿದೆ. ಲೋಕಾಂಬಿಕೆ ಎಂಬುದು ರೇವಕನಿಮ್ಮಡಿಯ ಬಿರುದೇ, ಪ್ರತಿನಾಮವೇ ಅಥವಾ ಇನ್ನೊಬ್ಬ ಹೆಂಡತಿಯ ಹೆಸರೇ ಎಂಬುದು ಸ್ಪಷ್ಟವಿಲ್ಲ. ಅರಿಕೇಸರಿಗೆ ಸಾಮಂತಚೂಡಾಮಣಿ, ಉದಾತ್ತನಾರಾಯಣ, ಆರೂಢಸರ್ವಜ್ಞ, ಕದನತ್ರಿಣೇತ್ರ, ಸಹಜಮನೋಜ, ಶರಣಾಗತಜಳನಿಧಿ, ಗುಣಾರ್ಣವ, ಪ್ರಿಯಗಳ್ಳ ಮೊದಲಾದ ಹಲವು ಬಿರುದುಗಳಿದ್ದುವೆಂಬುದಾಗಿ ವೇಮುಲವಾಡದ ಶಾಸನದಿಂದಲೂ ಪಂಪನ ವಿಕ್ರಮಾರ್ಜುನ ವಿಜಯದಿಂದಲೂ ತಿಳಿದುಬರುತ್ತದೆ.

ರಾಷ್ಟ್ರಕೂಟ ಚಕ್ರವರ್ತಿ 4ನೆಯ ಗೋವಿಂದ (ಗೊಜ್ಜಿಗ 930-35) ಚಾಳುಕ್ಯ ವಂಶದ ವಿಜಯಾದಿತ್ಯನ (ಬಿಜ್ಜ) ಮೇಲೆ ಮುಳಿಯಲು ಈ ಚಾಳುಕ್ಯರಾಜ ಅರಿಕೇಸರಿಗೆ ಶರಣುಹೋದನೆಂದೂ ಅರಿಕೇಸರಿ ಆತನಿಗೆ ರಕ್ಷಣೆ ನೀಡಿದನೆಂದೂ ವೇಮುಲವಾಡದ ಶಾಸನದಿಂದಲೂ ವಿಕ್ರಮಾರ್ಜುನವಿಜಯದಿಂದಲೂ ತಿಳಿದುಬರುತ್ತದೆ. ವೆಂಗಿಯ ಚಾಳುಕ್ಯರಲ್ಲಿ ಅರಸೊತ್ತಿಗೆಯ ಕಲಹಗಳು ತಲೆದೋರತೊಡಗಿದ್ದಾಗ ಅರಿಕೇಸರಿ ಬಿಜ್ಜನಿಗೆ (ವಿಜಯಾದಿತ್ಯ) ಸಹಾಯ ಮಾಡಿ ಅವನ ವಿರುದ್ಧ ಪಕ್ಷವನ್ನು ವಹಿಸಿದ್ದ ರಾಷ್ಟ್ರಕೂಟ 4ನೆಯ ಗೋವಿಂದನ ಸೈನ್ಯವನ್ನು ಸೋಲಿಸಿ ಓಡಿಸಿ, ಶರಣಾಗತಜಳನಿಧಿ, ಸಾಮಂತಚೂಡಾಮಣಿ ಎಂಬ ಬಿರುದನ್ನು ಗಳಿಸಿದಂತೆ ತೋರುತ್ತದೆ.

ಮಿತಿಮೀರಿ ನಡೆಯುತ್ತಿದ್ದ ಚಕ್ರವರ್ತಿ ಗೋವಿಂದನನ್ನು ಕೆಡಿಸಿ ತನ್ನನ್ನು ನಂಬಿಬಂದ ಬದ್ದೆಗದೇವನಿಗೆ ಸಾಮ್ರಾಜ್ಯಪದವನ್ನು ಅರಿಕೇಸರಿ ಕೈಗೂಡಿಸಿದನೆಂದು ಪಂಪಭಾರತದಲ್ಲಿ ಹೇಳಿದೆ. ಇದರ ಬಗೆಗೆ ಚರಿತ್ರಕಾರರ ವಿವರಣೆಯಿದು: ರಾಷ್ಟ್ರಕೂಟ ಚಕ್ರವರ್ತಿ 4ನೆಯ ಗೋವಿಂದ ತನ್ನ ಅಣ್ಣ ಇಮ್ಮಡಿ ಅಮೋಘವರ್ಷನನ್ನು ಪದಚ್ಯುತಗೊಳಿಸಿ, ಸಿಂಹಾಸನವನ್ನು ಹಿಡಿದಿದ್ದನಲ್ಲದೆ ಪ್ರಜಾನುರಾಗಗಳಿಸದೆ ಆತ ವ್ಯಸನಾಸಕ್ತನಾಗಿದ್ದ. ಅರಿಕೇಸರಿ ಪ್ರಜಾಭಿಪ್ರಾಯವನ್ನು ಲಕ್ಷಿಸಿ ಪ್ರಜೆಗಳ ಗೌರವಾದರಗಳನ್ನು ಗಳಿಸಿದ ಬದ್ದೆಗನ ಪಕ್ಷವಹಿಸಿದ. ಬಿಜ್ಜನ ವ್ಯವಹಾರದಲ್ಲಿ ಗೋವಿಂದನ ಸೈನ್ಯ ಅರಿಕೇಸರಿಯಿಂದ ಸೋಲನ್ನು ಅನುಭವಿಸಿತು. ಆಗ ತ್ರಿಪುರಿಗೆ ಓಡಿಹೋಗಿದ್ದ ಬದ್ದೆಗ ಮುಮ್ಮಡಿ ಅಮೋಘವರ್ಷನನ್ನು ಕರೆಸಿ ವೇಮುಲವಾಡದಲ್ಲಿಯೆ ಆತನನ್ನು ರಾಷ್ಟ್ರಕೂಟ ಚಕ್ರವರ್ತಿಯೆಂದು ಘೋಷಿಸಿ ಗೋವಿಂದನನ್ನು ಪದಚ್ಯುತಿಗೊಳಿಸಿ ಆತನ ಸ್ಥಾನದಲ್ಲಿ ನಿಲ್ಲಿಸಿದ. ಇದು ಪ್ರಾಯಶಃ ನಡೆದದ್ದು 934-35ರಲ್ಲಿ.

ಅರಿಕೇಸರಿ, ಮದ್ದಾನೆಯ ಸೈನ್ಯದೊಡನೆ ಆಟೋಪದಿಂದ ಬಂದು ತನ್ನನ್ನಿದಿರಿಸಿದ ಕಕ್ಕನಲ ತಮ್ಮ ಶೂರನಾದ ಬಪ್ಪುವನೆಂಬುವನನ್ನು, ತಾನು ಒಂದೇ ಆನೆಯ ಮೇಲಿದ್ದುಕೊಂಡು ಓಡಿಸಿದನೆಂಬುದಾಗಿ ಪಂಪಭಾರತದಲ್ಲಿ ಹೇಳಿದೆ. ಈ ಪ್ರಕರಣವನ್ನು ಹೆಚ್ಚು ಸಮರ್ಪಕವಾಗಿ ವಿವರಿಸುವುದು ಅಶಕ್ಯವೆಂದು ಚರಿತ್ರಕಾರರ ಅಭಿಪ್ರಾಯ. ಕಕ್ಕಲನೆಂಬುವನು ಅಚಳಪುರದ ಅರಸ, ಆತ ಬದ್ದೆಗನ ಮರಣಾನಂತರ ಗಂಗ ಬೂತುಗನಿಂದ ಹತನಾದ ಮುಂತಾಗಿ ಕೊಡಲೂರಿನ ಒಂದು ಶಾಸನದಲ್ಲಿದೆ. ಬದ್ದೆಗ ಆಳುತ್ತಿದ್ದಾಗಲೆ ದಂತಿಗ ಮತ್ತು ಬಪ್ಪುಗ ಎಂಬ ದುಷ್ಟರಿಬ್ಬರು ಆತನಿಗೆ ಎದುರುಬಿದ್ದು 3ನೆಯ ಕೃಷ್ಣನಿಂದ ನಾಶವಾದರೆಂದು ದೇವೋಲಿಯ ಒಂದು ಶಾಸನದಲ್ಲಿ (940) ಹೇಳಿದೆ. ಈ ಬಪ್ಪುಗನೇ ಕಕ್ಕಲನ ತಮ್ಮನಾದ ಬಪ್ಪುವನಿರಬೇಕೆಂದು ಕೆಲವರು ಹೇಳುತ್ತಾರೆ. ಅಂತೂ ಈತ 940ರ ಮೊದಲಲ್ಲಿ ಎಂದೋ ಒಮ್ಮೆ ಅರಿಕೇಸರಿಗೆ ಎದುರಬಿದ್ದು ಆತನಿಂದ ಪರಾಜಿತನಾಗಿ ಓಡಿಹೋಗಿರಬೇಕು ಎಂದು ತಿಳಿಯುತ್ತದೆ.

ರಾಜಧಾನಿಯಾದ ವೇಮುಲವಾಡದಲ್ಲಿ ಸೂರ್ಯದೇವಾಲಯವೊಂದನ್ನು ಕಟ್ಟಿಸಿದ. ಪೂಜೆಗಾಗಿ ಬರುವವರ ಅಶನಾರ್ಥವಾಗಿ ಛತ್ರವೊಂದನ್ನು ಕಟ್ಟಿಸಲು ಪೆದ್ದಣಾರ್ಯನೆಂಬುವನ ಕೋರಿಕೆಯಂತೆ 100 ನಿವರ್ತನಗಳ ಭೂಮಿಯನ್ನು ದತ್ತಿಯಾಗಿ ಕೊಟ್ಟ, ಕೊಳವೊಂದನ್ನು ಕಟ್ಟಿಸಲು ನಿವರ್ತನಗಳ ಭೂಮಿಯನ್ನು ದತ್ತಿಬಿಟ್ಟ ಎಂದು ವೇಮುಲವಾಡದ ಶಾಸನದಲ್ಲಿ ಹೇಳಿದೆ. ಅರಿಕೇಸರಿಯ ಆಸ್ಥಾನ ಕವಿಯೂ ಆತ್ಮೀಯ ಸ್ನೇಹಿತನೂ ಆಗಿದ್ದ ಪಂಪ ವಿಕ್ರಮಾರ್ಜುನ ವಿಜಯ ಮತ್ತು ಆದಿಪುರಾಣ ಎಂಬ ಎರಡು ಮಹಾಕಾವ್ಯಗಳನ್ನು ರಚಿಸಿದ್ದಾನೆ (ನೋಡಿ: ಪಂಪ). (ಟಿ.ವಿ.ವಿ.)

**ಅರಿವಿನ ಮಾರಿತಂದೆ :** 12ನೆಯ ಶತಮಾನದಲ್ಲಿದ್ದ ಹಿರಿಯ ಶರಣ ಹಾಗೂ ವಚನಕಾರ. ಬಸವೇಶ್ವರರಿಗಿಂತಲೂ ಈಚಿನವನಿರಬೇಕೆಂದು ಹಲವು ವಿದ್ವಾಂಸರ ಅಭಿಪ್ರಾಯ. ಕಿಕ್ಕೇರಿಯಾರಾಧ್ಯ ನಂಜುಂಡನ ಭೈರವೇಶ್ವರಕಾವ್ಯದ ಕಥಾಮಣಿಸೂತ್ರ ರತ್ನಾಕರದಲ್ಲಿಯಾಗಲಿ, ಉತ್ತರದೇಶದ ಬಸವಲಿಂಗದೇವ ಮತ್ತು ಶಾಂತಲಿಂಗದೇಶಿಕರು ಶಿವಶರಣ ಶರಣೆಯರ ಚರಿತೆಯನ್ನು ಹೇಳುವ ಗ್ರಂಥಗಳಲ್ಲಿಯಾಗಲಿ ಈತನ ಹೆಸರನ್ನು ಕಾಣಲಾಗುವುದಿಲ್ಲ. ಗುಬ್ಬಿಯ ಮಲ್ಲಣ್ಣನ (ಸು. 1415) ಗಣಭಾಷಿತ ರತ್ನಮಾಲೆಯಲ್ಲಿ ಈತನ ಮೂರು ವಚನಗಳನ್ನು ಉದ್ಧರಿಸಲಾಗಿದೆ. ಪುರಾತನ ವಚನಕಾರರ ಜೊತೆಯಲ್ಲಿ ಈತನ ಹೆಸರು ಸೇರಿರುವುದರಿಂದ ಈತ ಮಹತ್ತ್ವದ ವಚನಕಾರರಲ್ಲಿ ಒಬ್ಬನೆಂದು ಭಾವಿಸಲಾಗಿದೆ.

ಇದುವರೆಗೆ ಮಾರಿತಂದೆಯ ಮುನ್ನೂರ ಎರಡು ವಚನಗಳು ದೊರೆತಿವೆ. ಇವುಗಳಲ್ಲಿ ಬೆಡಗಿನ ವಚನಗಳೂ ಸೇರಿವೆ. ಸದಾಶಿವಮೂರ್ತಿ, ಸದಾಶಿವಮೂರ್ತಿಲಿಂಗ, ಸದಾಶಿವಲಿಂಗಮೂರ್ತಿ, ಸದಾಶಿವಮೂರ್ತಿ ನಿಃಕಲಲಿಂಗ ಮುಂತಾದವು ಈತನ ವಚನಗಳ ಅಂಕಿತ. ಮಾರಿತಂದೆ ತನ್ನ ತತ್ತ್ವನಿರೂಪಣೆಗೆ ಲೌಕಿಕ ದೃಷ್ಟಾಂತಗಳನ್ನು ಬಳಸಿಕೊಂಡಿದ್ದಾನೆ. (ಬಿ.ಎಸ್.ಎಸ್.)

**ಅರುಂಧತಿ ನಾಗ್ :** ಕನ್ನಡ ರಂಗಭೂಮಿ ಹಾಗೂ ಚಲನಚಿತ್ರ ಕಲಾವಿದೆ. ಪ್ರಸಿದ್ಧ ನಟ ಹಾಗೂ ನಿರ್ದೇಶಕ ಶಂಕರ್‌ನಾಗ್ (ನೋಡಿ) ಅವರ ಪತ್ನಿ. ಇವರ ಆರಂಭದ ಜೀವನ ಮುಂಬಯಿಯಲ್ಲಿ ಕಳೆಯಿತು.



ಅಲ್ಲಿರುವಾಗ ಮುಂಬಯಿನ ಹವ್ಯಾಸಿ ರಂಗಭೂಮಿಯ ಸಕ್ರಿಯ ವ್ಯಕ್ತಿಯಾಗಿದ್ದರು. ಮರಾಠಿ, ಗುಜರಾತಿ, ಹಿಂದಿ, ಇಂಗ್ಲಿಷ್ ಮೊದಲಾದ ಭಾಷೆಗಳಲ್ಲೂ ಅಭಿನಯಿಸುತ್ತಿದ್ದರು. ಇವರು ಕೆಲವೊಮ್ಮೆ ತಿಂಗಳಲ್ಲಿ 42 ಪ್ರದರ್ಶನಗಳನ್ನು ಕೊಟ್ಟದ್ದೂ ಇದೆ. ಈ ದಿನಗಳಲ್ಲೇ ಸಹ ರಂಗನಟ ಶಂಕರನಾಗ್ ಅವರ ಪರಿಚಯವಾಯಿತು. ಪರಿಚಯ ಪ್ರೇಮವಾಗಿ ವಿವಾಹವಾದರು. ಅನಂತರ ಇಬ್ಬರೂ ಬೆಂಗಳೂರಿನಲ್ಲಿ ನೆಲೆಸಿ ರಂಗಭೂಮಿ ಹಾಗೂ ಚಲನಚಿತ್ರ - ಈ ಎರಡೂ ಕ್ಷೇತ್ರಗಳಲ್ಲಿ ಇಬ್ಬರೂ ಕೆಲಸ ಮಾಡತೊಡಗಿದರು. ಈ ಎಲ್ಲ ಸಂದರ್ಭಗಳಲ್ಲಿ ಪತಿ ಶಂಕರನಾಗ್‌ಗೆ ನೆರವಾದರು. ಕೆಲವು ಸಂದರ್ಭಗಳಲ್ಲಿ ಶಂಕರನಾಗ್ ಅವರಿಗೆ ಸಹಾಯಕ ನಿರ್ದೇಶಕರಾಗಿಯೂ ಕೆಲಸ ಮಾಡಿದರು. ಶಂಕರನಾಗ್ ಹಿಂದಿಯ ಕಿರುತೆರೆಗಾಗಿ ಸಿದ್ಧಪಡಿಸಿದ ಆರ್.ಕೆ.ನಾರಾಯಣ್ ಅವರ 'ಮಾಲ್ಗುಡಿ ಡೇಸ್' ಇವರಿಬ್ಬರಿಗೂ ಅಪಾರ ಖ್ಯಾತಿಯನ್ನು ತಂದುಕೊಟ್ಟಿತು. ಅರುಂಧತಿಯವರು ಅನೇಕ ನಾಟಕ ಹಾಗೂ ಚಲನಚಿತ್ರಗಳಲ್ಲಿ ಅಭಿನಯಿಸಿದ್ದಾರೆ. 'ನೋಡಿ ಸ್ವಾಮಿ ನಾವಿರೋದು ಹೀಗೆ' ಎಂಬ ನಾಟಕ ಇವರ ಅಭಿನಯದ ಅತ್ಯಂತ ಜನಪ್ರಿಯ ನಾಟಕ. ಇದು ಚಲನಚಿತ್ರವಾಗಿಯೂ ಅಪಾರ ಯಶಸ್ವಿಯಾಯಿತು. ಆಕ್ಸಿಡೆಂಟ್, ಗೋಲಿಬಾರ್, ಪರಮೇಶಿಯ ಪ್ರೇಮ ಪ್ರಸಂಗ ಇವರ ಅಭಿನಯದ ಇತರ ಚಿತ್ರಗಳು. ಮಣಿರತ್ನಂ ಅವರ 'ದಿಲ್‌ಸೆ' ಎಂಬ ಹಿಂದಿ ಚಿತ್ರದಲ್ಲಿ ಒಂದು ಚಿಕ್ಕ ಪಾತ್ರದಲ್ಲಿ ಅಭಿನಯಿಸಿದ್ದಾರೆ. ಶಂಕರ್‌ನಾಗ್ ನಿರ್ದೇಶನದ 'ಒಂದು ಮುತ್ತಿನ ಕಥೆ' ಚಿತ್ರಕ್ಕೆ ವಸ್ತ್ರ ವಿನ್ಯಾಸಕಿಯಾಗಿ ದುಡಿದಿದ್ದಾರೆ. ಕಾರು ಅಪಘಾತವೊಂದರಲ್ಲಿ ಶಂಕರನಾಗ್ ನಿಧನರಾದಾಗ ಅದೇ ಕಾರಿನಲ್ಲಿದ್ದ ಅರುಂಧತಿ ಪ್ರಾಣಾಪಾಯದಿಂದ ಪಾರಾದರು. ಪತಿಯನ್ನು ಕಳೆದುಕೊಂಡು ಕೆಲಕಾಲ ಎಲ್ಲ ಚಟುವಟಿಕೆಗಳಿಂದ ದೂರವಿದ್ದ ಇವರು ಅನಂತರ ಶಂಕರನಾಗ್ ಅವರ ಕನಸಿನ ಕಲ್ಪನೆಯ ರಂಗಶಂಕರ ಎಂಬ ಸಮಗ್ರ ನಾಟಕ ಚಟುವಟಿಕೆಯ ಕೇಂದ್ರವೊಂದರ ನಿರ್ಮಾಣದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು. ಸುಮಾರು ಮೂರು ಕೋಟಿ ರೂಪಾಯಿ ವೆಚ್ಚದ ಈ ರಂಗಭೂಮಿ ಸಂಕೀರ್ಣ ಯೋಜನೆ ಈಗ ಪೂರ್ಣಗೊಂಡಿದ್ದು ಕಾರ್ಯ ಚಟುವಟಿಕೆಯನ್ನು ಆರಂಭಿಸಿದೆ (2004). ಸಂಕೇತ್ ಟ್ರಸ್ಟ್ 'ರಂಗಶಂಕರ'ದ ಚಟುವಟಿಕೆಗಳನ್ನು ನೋಡಿಕೊಳ್ಳುತ್ತದೆ. ಗಿರೀಶ್ ಕಾರ್ನಾಡ್ ರಂಗಶಂಕರದ ಅಧ್ಯಕ್ಷರು. ಅರುಂಧತಿ ಅದರ ಕಾರ್ಯನಿರ್ವಾಹಕ ಸದಸ್ಯರು. *

**ಅರುಣಾಚಲಪ್ಪ :** 1899-1966. ಪ್ರಸಿದ್ಧ ಹಾರ್ಮೋನಿಯಂ ವಿದ್ವಾಂಸರು. ಬೆಂಗಳೂರಿನಲ್ಲಿ ಜನನ. ತಂದೆ ವೀರಭದ್ರಪ್ಪ, ತಾಯಿ ಗೌರಮ್ಮ. ಬೆಂಗಳೂರು ಅರಳೇಪೇಟೆಯಲ್ಲಿನ ಭಜನೆ ಮಂದಿರಗಳ ಸಂಪರ್ಕದಿಂದ ಬಾಲ್ಯದಲ್ಲೇ ಸಂಗೀತಕ್ಕೆ ಮನಸೋತ ಇವರು ನಾರಾಯಣಸ್ವಾಮಿ ಮತ್ತು ಪಿಟೀಲು ಪುಟ್ಟಪ್ಪನವರಲ್ಲಿ ಸಂಗೀತಾಭ್ಯಾಸ ಮಾಡಿದರು. ಹರಿಕಥೆ, ನಾಟಕ ಮತ್ತು ಭಜನೆ ಮಂಡಳಿಗಳಿಗೆ ಮಾತ್ರ ಮೀಸಲಾಗಿದ್ದ ಹಾರ್ಮೋನಿಯಂ ವಾದ್ಯವನ್ನು ಕರ್ಣಾಟಕ ಸಂಗೀತಕ್ಕೆ ಪಕ್ಕವಾದ್ಯವಾಗಿಯೂ ತನಿಯಾಗಿಯೂ ನುಡಿಸುವ ಸಾಮರ್ಥ್ಯವನ್ನು ಸಂಪಾದಿಸಿಕೊಂಡು ವೇದಿಕೆಗಳ ಮೇಲೆ ಯಶಸ್ಸು ಗಳಿಸಿ ಹಾರ್ಮೋನಿಯಂ ಅರುಣಾಚಲಪ್ಪ ಎಂದು ಪ್ರಸಿದ್ಧರಾದರು. ಗಮಕವನ್ನು ನುಡಿಸಲು ಸಾಧ್ಯವಲ್ಲದ ಈ ವಾದ್ಯದಲ್ಲಿ ಅನುಸ್ವರಗಳ ಜೋಡಣೆ ಮತ್ತು ನಾದ ತುಂಬುವ ಚತುರತೆಯಿಂದ ಗಮಕದ ಛಾಯೆಗಳನ್ನೂ ತರುತ್ತಿದ್ದರು. ಇವರು ಪಿಟೀಲು ವಾದ್ಯವನ್ನು ಸಹ ನುಡಿಸುತ್ತಿದ್ದರು. ಇವರು ನುಡಿಸಿದ ಕೆಲವು ಹಾಡುಗಳು ಗ್ರಾಮಫೋನ್ ರಿಕಾರ್ಡ್ ಆಗಿವೆ. ವಿದ್ವಾನ್ ಬಿ.ಎಸ್.ರಾಜಯ್ಯಂಗಾರ್ಯರ ಜೊತೆಯಲ್ಲಿ ಭಾರತದ ಪ್ರವಾಸ ಮಾಡಿದರು. ಪಿಟೀಲು ವಿದ್ವಾನ್ ಟಿ.ಚೌಡಯ್ಯನವರೊಡನೆ ಅನೇಕ ಕಛೇರಿಗಳಲ್ಲಿ ಹಾರ್ಮೋನಿಯಂ ನುಡಿಸಿದ್ದಾರೆ. ಬೆಂಗಳೂರು ಬಳೇಪೇಟೆಯಲ್ಲಿ ಇವರು ಸ್ಥಾಪಿಸಿದ ಅರುಣಾ ಮ್ಯೂಸಿಕಲ್ಸ್ ಎಂಬ ಸಂಗೀತ ವಾದ್ಯಗಳ ಅಂಗಡಿ ಇಂದೂ ನಡೆದುಕೊಂಡು ಬರುತ್ತಿದೆ. ಅರುಣಾಚಲಪ್ಪನವರು ಹೃದಯಾಘಾತದಿಂದ 1966 ಫೆಬ್ರವರಿ 4ರಂದು ನಿಧನರಾದರು. (ಟಿ.ಎಸ್.ಟಿ.)

**ಅರುಳಾಳು :** ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರ ತಾಲ್ಲೂಕಿನ ಒಂದು ಗ್ರಾಮ. ಕನಕಪುರಕ್ಕೆ 3ಕಿಮೀ ದೂರದಲ್ಲಿ ಅರ್ಕಾವತಿ ನದಿಯ ದಡದಲ್ಲಿದೆ. ಇದು ಐತಿಹಾಸಿಕ ಮಹತ್ವವುಳ್ಳ ಪುರಾತನ ಸ್ಥಳ. ಇಲ್ಲಿರುವ ಬಹಳಷ್ಟು ವೀರಗಲ್ಲುಗಳಿಂದ ಇದು ವಿಜಯನಗರ ಅರಸರ ಪ್ರಾರಂಭದ ಕಾಲದಲ್ಲಿ ರಾಜಕೀಯವಾಗಿ ಬಹಳಷ್ಟು ಮಹತ್ತ್ವವಾದ ಸ್ಥಾನವನ್ನು ಪಡೆದ ಊರಾಗಿತ್ತೆಂದು ತಿಳಿದುಬರುತ್ತದೆ. ಶಾಸನಗಳಲ್ಲಿ ಈ ಊರನ್ನು ಅರುಳಹಳ್ಳಿ, ಅರುಳಹಾಳು ಎಂದು ಕರೆದಿದೆ. ಇದು ಸಿಗಲನಾಡ ಪ್ರಭುಗಳ ಮುಖ್ಯ ಠಾಣ್ಯವಾಗಿತ್ತು. ಹೊಯ್ಸಳದೊರೆ ಮೂರನೆಯ ಬಲ್ಲಾಳನ ಆಳ್ವಿಕೆಗೆ ಸೇರಿದ 1295ರ ನಾಯಕನಹಳ್ಳಿಯ ಶಾಸನದಲ್ಲಿ ಅರುಳಹಳ್ಳಿಯ ಮಾರದೇವನನ್ನು (ಮೂರಪ್ಪನನ್ನು) ಸಿಗಲನಾಡಿನ ಮಹಾಪ್ರಭು ಎಂದು ಕರೆದಿದೆ. ಇನ್ನೊಂದು ಶಾಸನದಲ್ಲಿ ಅರುಳಹಾಳು ರಾಜ್ಯ ಎಂಬ ಉಲ್ಲೇಖವಿದೆ.

ಇಲ್ಲಿನ ನಾರಾಯಣಸ್ವಾಮಿಯ ದೇವಾಲಯ ದೊಡ್ಡದಾಗಿದ್ದು, ಇದರ ವಿಜಯನಗರ ಶೈಲಿಯ ಹೊರಮಂಟಪವು ಕೆತ್ತನೆಯ ಕೆಲಸವಿರುವ ಸುಂದರವಾದ ಕಂಬಗಳಿಂದ ಕೂಡಿದೆ. ನಾರಾಯಣಸ್ವಾಮಿಯ ಕೊಡುಗೆ ಜಮೀನು ಎನ್ನುವ ಮೈದಾನದಲ್ಲಿರುವ 1393ರ ಶಾಸನದಲ್ಲಿ ಶಂಗ ಅಪ್ಪನ ಅಧಿಕಾರದಲ್ಲಿ ಸಿಗಲನಾಡ ಮಹಾಪ್ರಭು ಅರುಳಹಾಳ ಮಾರಗುಡನ ಮಗ ಚಿಕ್ಕ ಅಯಿವಣ್ಣನು ಶ್ರೀನಾರಾಯಣ ದೇವರ ಅಮೃತಪಡಿಗೆ ಗದ್ದೆಯನ್ನು ಕೊಟ್ಟನೆಂದು ಹೇಳಿದೆ. ಇಲ್ಲಿ ಫಾಲ್ಗುಣಮಾಸದಲ್ಲಿ ಜಾತ್ರೆ ನಡೆಯುತ್ತದೆ. ಇಲ್ಲಿರುವ ವೆಂಕಟಸ್ವಾಮಿ ದೇವಸ್ಥಾನ ದೊಡ್ಡದಾಗಿದ್ದು ಬಹಳ ಪುರಾತನವಾಗಿದೆ. ಇಲ್ಲೂ ಜಾತ್ರೆ ನಡೆಯುತ್ತದೆ. ಬಸವೇಶ್ವರ, ಮಾರಮ್ಮ, ಕೊಲ್ಲಾಪುರಮ್ಮ ಇವು ಇಲ್ಲಿನ ಇತರ ಗುಡಿಗಳು. ಇಲ್ಲಿಯ 1390ರ ಶಾಸನದಲ್ಲಿ ಕುಮಾರ ನಾರಸಿವೊಡೆಯರ ಪ್ರಧಾನ ಸಿದ್ದಯ ಹಾಗೂ ಸಿಗಲನಾಡಿನ ಅರುಳಹಾಳುವಿನ ಉಲ್ಲೇಖಗಳಿವೆ. ಅರುಳಹಾಳಿನ ಸಿದ್ದಯನ ಮಗ ಮಾರಪ್ಪನು ಹೆಗಬೆಬೆಟ್ಟದಲ್ಲಿ ನಡೆದ ಹೊಡೆದಾಟದಲ್ಲಿ ಗಾಯಗೊಂಡ ವಿಷಯವೂ ಇದರಲ್ಲಿದೆ. ಗ್ರಾಮದ ಈಶಾನ್ಯಕ್ಕೆ ಅಗ್ರಹಾರದ ಬಯಲಿನಲ್ಲಿರುವ 1400ರ ಶಾಸನ ವಿಜಯನಗರದ ಎರಡನೆಯ ಹರಿಹರನ ಕಾಲದ್ದಾಗಿದ್ದು ಅದರಲ್ಲಿ ಮಲ್ಲರಾಯನ ಮಗ ನಾರಾಯಣದೇವನು ಅರುಳಹಾಳನ್ನು ಆಳುತ್ತಿದ್ದುದಾಗಿಯೂ ಚೆನ್ನ ವೊಡೆಯರ್ ಎಂಬ ಮಂತ್ರಿಯು ಮಾರಸಮುದ್ರ ಕೆರೆಯ ತೂಬನ್ನು ಬಲಪಡಿಸಿದುದಾಗಿಯೂ ತೂಬನ್ನು ರಿಪೇರಿಮಾಡಿದ ಗೂಳಿಯೋಜನಿಗೆ ದತ್ತಿಯನ್ನು ಕೊಟ್ಟುದುದಾಗಿಯೂ ಹೇಳಿದೆ. ನಾರಾಯಣ ದೇವಾಲಯದ ಉತ್ತರಕ್ಕೆ ದೊರೆತಿರುವ ತ್ರುಟಿತ ಶಾಸನದಲ್ಲಿ ಸುಂಕದ ಸೋಮೆಯನು ನಾರಾಯಣದೇವರ ನಂದಾದೀಪಕ್ಕೆ ಕೊಟ್ಟ ದತ್ತಿಯ ಪ್ರಸ್ತಾಪವಿದೆ. ಈ ಊರಿನಲ್ಲಿ ಮಂಟೇಸ್ವಾಮಿಯ ಗದ್ದುಗೆಯೂ ಇದೆ. (ಕೆ.ಎಂ.ಎಸ್.)

**ಅರೇಅಂಗಡಿ :** ಉತ್ತರಕನ್ನಡ ಜಿಲ್ಲೆ ಹೊನ್ನಾವರ ತಾಲ್ಲೂಕಿನಲ್ಲಿರುವ ಒಂದು ಪ್ರವಾಸಿ ತಾಣ. ಹೊನ್ನಾವರದಿಂದ 15ಕಿಮೀ ದೂರದಲ್ಲಿದೆ. ಸಹ್ಯಾದ್ರಿ ಶ್ರೇಣಿಯಲ್ಲಿರುವ ಈ ಸ್ಥಳ ರಮಣೀಯ ಪ್ರಕೃತಿ ದೃಶ್ಯಗಳಿಂದ ಕೂಡಿದೆ. ಇಲ್ಲಿ ಕರಿಕಾನಮ್ಮನ ಗುಡ್ಡವಿದ್ದು ಅದರ ಮೇಲೆ ಪ್ರಾಚೀನ ದುರ್ಗಾಪರಮೇಶ್ವರಿ ದೇವಾಲಯವಿದೆ.

ಕರಿಕಾನ ಪರಮೇಶ್ವರಿ ಇಲ್ಲಿನ ಪರ್ವತದ ತಪ್ಪಲಲ್ಲಿದ್ದ ಮಲ್ಲಾಸುರ ಮತ್ತು ಬಂಡಾಸುರರೆಂಬ ರಾಕ್ಷಸರನ್ನು ಕೊಂದು ನೆಲೆಸಿದಳೆಂಬ

ಪೌರಾಣಿಕ ಕಥೆ ಇದೆ. ಇಲ್ಲಿ ನವರಾತ್ರಿ ಕಾಲದಲ್ಲಿ ನಾಲ್ಕು ದಿವಸಗಳ ಕಾಲ ಉತ್ಸವ ನಡೆಯುತ್ತದೆ. ಬೆಟ್ಟದ ಇನ್ನೊಂದು ಮಗ್ಗುಲಲ್ಲಿ ಒಂದಡಿಕೆ ಶಂಭುಲಿಂಗ ದೇವಾಲಯವಿದೆ. ಇಲ್ಲಿನ ಶಿವಲಿಂಗದ ಸಮೀಪವಿರುವ ಅಡಿಕೆ ಮರದಲ್ಲಿ ಒಂದೇ ಒಂದು ಅಡಿಕೆ ಬಿಡುವುದರಿಂದ ಈ ಹೆಸರು ಬಂದಿದೆ



ಕರಿಕಾನ ಪರಮೇಶ್ವರಿ

ಎಂದು ಪ್ರತೀತಿ. ಇಲ್ಲಿಗೆ ಸಮೀಪದ ಬಿಲ್ವಪತ್ರ ಕಾನು ಎಂಬ ಸ್ಥಳದಲ್ಲಿ ಮಾಧವಾಚಾರ್ಯರು ನೆಲೆಸಿದ್ದರೆಂದು ತಿಳಿದುಬರುತ್ತದೆ. (ಎಸ್.ಎಚ್‌ಇ.)

**ಅರ್ಕಾವತಿ :** ಕೋಲಾರ ಜಿಲ್ಲೆ ಚಿಕ್ಕಬಳ್ಳಾಪುರ ತಾಲ್ಲೂಕಿನ ನಂದಿದುರ್ಗದಲ್ಲಿ ಹುಟ್ಟಿ ಬೆಂಗಳೂರು ಜಿಲ್ಲೆಯಲ್ಲಿ ಉತ್ತರದಿಂದ ದಕ್ಷಿಣಕ್ಕೆ ಹರಿದು ಕಾವೇರಿಯನ್ನು ಸೇರುವ ನದಿ. ಉದ್ದ ಸು.195ಕಿಮೀ. ನೆಲಮಂಗಲದ ದಕ್ಷಿಣದ ಕಡೆಯಿಂದ ಬರುವ ಕುಮುದ್ವತಿ, ಬೆಂಗಳೂರಿನ ಕಡೆಯಿಂದ ಬರುವ ವೃಷಭಾವತಿ ಇದರ ಉಪನದಿಗಳು. ಸಾವನದುರ್ಗ, ರಾಮಗಿರಿ, ಶಿವಗಿರಿ ಮೊದಲಾದ ಬೆಟ್ಟಗುಡ್ಡ ಪ್ರದೇಶ ಮತ್ತು ಸಾಧಾರಣ ಕಾಡು ಪ್ರದೇಶಗಳ ಮೂಲಕ ದಕ್ಷಿಣಕ್ಕೆ ಹರಿಯುವುದರಿಂದ ನೀರಾವರಿಗೆ ಹೆಚ್ಚು ಪ್ರಯೋಜನಕಾರಿಯಾಗಿಲ್ಲ. ಆದರೂ ಮೇಲ್ಕಣಿವೆಯಲ್ಲಿ ಹೆಸರುಘಟ್ಟ ಮೊದಲಾದ ದೊಡ್ಡ ಕೆರೆಗಳಿಗೂ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ದೊಡ್ಡಬಳ್ಳಾಪುರ, ಕಾಕೋಳು ಮುಂತಾದೆಡೆಯ ಕೆರೆಗಳಿಗೂ ನೀರನ್ನೊದಗಿಸುತ್ತದೆ. ಮುಂದುವರಿದು ನೆಲಮಂಗಲ, ಮಾಗಡಿ, ರಾಮನಗರ ಮತ್ತು ಕನಕಪುರ ತಾಲ್ಲೂಕುಗಳ ಮೂಲಕ ಹರಿದು ಆ ತಾಲ್ಲೂಕಿನ ಅಂಚಿನಲ್ಲಿ ಸಂಗಮದ ಬಳಿ ಕಾವೇರಿಯನ್ನು ಸೇರುತ್ತದೆ. ಮಳೆ ಕಡಿಮೆ ಬೀಳುವ ಪ್ರದೇಶದಲ್ಲಿರುವುದರಿಂದ ಬೇಸಗೆಯಲ್ಲಿ ಬಹುಮಟ್ಟಿಗೆ ಇದರ ಪಾತ್ರ ಒಣಮರಳಿನಿಂದ ತುಂಬಿರುತ್ತದೆಯಾದರೂ ಸಂಪೂರ್ಣವಾಗಿ ಬತ್ತಿಹೋಗದೆ ಮರಳು ಬಗೆದಾಗ ನೀರು ದೊರಕುತ್ತದೆ. ಮಳೆಗಾಲದಲ್ಲಿ ಅನೇಕ ಉಪನದಿಗಳ ನೀರು ಒದಗುವುದರಿಂದ ತುಂಬಿ ಹರಿಯುತ್ತದೆ. ಒಮ್ಮೊಮ್ಮೆ ಜಲಾನಯನ ಪ್ರದೇಶದಲ್ಲಿ ಭಾರಿ ಮಳೆ ಆದಾಗ ದಿಢೀರನೆ ಪ್ರವಾಹ ಬರುವುದುಂಟು. ಪ್ರವಾಹದ ಚಲನೆ 3,500ರಿಂದ 50,000 ಕ್ಯೂಸೆಕ್ಸ್‌ವರೆಗಿರುವುದು. ನೆಲಮಂಗಲ, ಮಾಗಡಿ ಮತ್ತು ರಾಮನಗರಗಳಿಂದ ಬೆಂಗಳೂರಿಗೆ ಹೋಗುವ ಮಾರ್ಗಗಳಲ್ಲಿ ನದಿಗೆ ಅಡ್ಡವಾಗಿ ದೊಡ್ಡ ಸೇತುವೆಗಳನ್ನು ನಿರ್ಮಿಸಲಾಗಿದೆ. *

**ಅರ್ಚಕ ಬಿ. ರಂಗಸ್ವಾಮಿ :** 1895-1991. ಜಾನಪದ ಕ್ಷೇತ್ರದಲ್ಲಿ ಕೆಲಸ ಮಾಡಿದ ಆದ್ಯ ವಿದ್ವಾಂಸರು. ಇವರ ಪೂರ್ಣ ಹೆಸರು ಬಿ. ರಂಗಸ್ವಾಮಿ ಭಟ್ಟ. ಕೃಷ್ಣರಾಜಪೇಟೆ ತಾಲ್ಲೂಕಿನ ಬಂಡಿಹೊಳೆ ಇವರ ಹುಟ್ಟೂರು. ತಂದೆ ನಾರಾಯಣ ಭಟ್ಟ, ತಾಯಿ ಶೇಷಮ್ಮ. ನಾಲ್ಕನೆಯ ತರಗತಿಯವರೆಗೆ ಬಂಡಿಹೊಳೆಯಲ್ಲಿ ವಿದ್ಯಾಭ್ಯಾಸಮಾಡಿ ಹೆಚ್ಚಿನ ವಿದ್ಯಾಭ್ಯಾಸಕ್ಕೂ ಸಂಸ್ಕೃತ ವಿದ್ಯಾಭ್ಯಾಸಕ್ಕೂ ಮೈಸೂರನ್ನು ಆಶ್ರಯಿಸಿದ ಇವರು ರಾಮಾನುಜ ಕೂಟ ಎಂಬ ಉಚಿತ ವಿದ್ಯಾರ್ಥಿನಿಲಯದಲ್ಲಿ ಹನ್ನೆರಡು ವರ್ಷ ವಾರಾನ್ನ ಉಂಡು, ನಾಲ್ಕು ವರ್ಷ ಸ್ವಯಂಪಾಕ - ಹೀಗೆ ಇಪ್ಪತ್ತು ವರ್ಷಗಳ ಕಾಲ ವಿದ್ಯಾಭ್ಯಾಸ ಮಾಡಿದರು. ಆ ಅವಧಿಯಲ್ಲಿ ಯಜುರ್ವೇದದ ಪೂರ್ಣ ಅಧ್ಯಯನ, ಆಗಮದಲ್ಲಿ ವಿದ್ವತ್ತು ಸಾಧಿಸಿದರು. 1930ರಲ್ಲಿ ಇವರ ಸಂಸ್ಕೃತ ಆಗಮ ಗ್ರಂಥಶ್ರೀ ವೈಖಾನಸ ಆಲಯಾರಾಧನಾ ಪದ್ಧತಿ : ಪ್ರಕಟವಾಯಿತು. ಇವರು ಬರೆದ ಸನಾತನ ಧರ್ಮ ಎಂಬ ಕೃತಿ ಇನ್ನೂ ಹಸ್ತಪ್ರತಿಯ ಹಂತದಲ್ಲೇ ಇದೆ.

ಬಂಡಿಹೊಳೆಯ ದೊಡ್ಡಮ್ಮನ ಹಬ್ಬದ ಸಂದರ್ಭದಲ್ಲಿ ಕೋಲಾಟದ ಪದಗಳು, ರಂಗದ ಕುಣಿತದ ಹಾಡುಗಳು, ಸುಗ್ಗಿಯ ಕಾಲದಲ್ಲಿ ಊರಿಗೆ ಬಂದು ಮನೆಮನೆಯ ಮುಂದೆ ನಿಂತು ಹಾಡುತ್ತಿದ್ದ ದೊಂಬಿದಾಸರು, ತೊಗಲು ಗೊಂಬೆಯಾಟದವರು, ಊರಿನೊಳಗೆ ಸದಾ ಕೇಳಿಸುತ್ತಿದ್ದ ಬೀಸುವ ಪದಗಳು, ಕುಟ್ಟುವ ಪದಗಳು, ಸೋಬಾನೆ, ಪದಗಳು, ದೇವರ ಪದಗಳು ಮುಂತಾದುವೆಲ್ಲ ರಂಗಸ್ವಾಮಿಯವರಿಗೆ ಬಾಲ್ಯದಿಂದಲೇ ಪ್ರಭಾವ ಬೀರಿದ್ದುವು. ಜೊತೆಗೆ ಆಲೂರು ವೆಂಕಟರಾಯ, ಪ್ರೊಫೆಸರ್ ಹಿರಿಯಣ್ಣ, ವೆಂಕಟಕೃಷ್ಣಯ್ಯ (ತಾತಯ್ಯ), ಮುದವೀಡು ಕೃಷ್ಣರಾಯ ಮುಂತಾದ ವಿದ್ವಾಂಸರು ಮಾಡುತ್ತಿದ್ದ ಭಾಷಣಗಳು ಇವರ ಮೇಲೆ ಜನಪದ ಸಂಸ್ಕೃತಿಯ ಗಾಢ ಪ್ರಭಾವ ಬೀರಿದುವು. ಪರಿಣಾಮವಾಗಿ ಬಂಡಿಹೊಳೆಯಲ್ಲಿ ಅರ್ಚಕರು ಒಂದು ಆಶ್ರಮ ಸ್ಥಾಪಿಸಿ ಹಲವಾರು ವರ್ಷ ನಡೆಸಿದರು. ಸ್ವಯಂ ಉದ್ಯೋಗವನ್ನು ಉದ್ದೇಶವಾಗಿರಿಸಿಕೊಂಡು ಆ ಆಶ್ರಮದಲ್ಲಿ ಅರ್ಚಕರು ನೂಲುವುದು, ಬಟ್ಟೆ ಹೊಲಿಯುವುದು, ಚಾಪೆ ಹೆಣೆಯುವುದು, ಬೆತ್ತದ ಕೆಲಸ ಕಲಿಸಿಕೊಟ್ಟು ಹಳ್ಳಿಗರ ಸ್ವಾವಲಂಬನೆಯಲ್ಲಿ ಪ್ರಮುಖ ಸಾಧನೆ ಮಾಡಿದರು. ಜೊತೆಗೆ ರಾಮಾಯಣ, ಮಹಾಭಾರತಗಳ ನಿತ್ಯ ಪಾರಾಯಣದಿಂದ ಜನಪದರನ್ನು ಸನ್ಮಾರ್ಗದಲ್ಲಿ ನಡೆಯಲು ಪ್ರಚೋದಿಸಿದರು. ಇವರ ಜನಪರ ಕಾರ್ಯವನ್ನು ನೋಡಲು ಮೈಸೂರಿನ ದಿವಾನರಾಗಿದ್ದ ಸರ್ ಮಿರ್ಜಾಇಸ್ಮಾಯಿಲ್ ಎರಡು ಬಾರಿ ಈ ಆಶ್ರಮಕ್ಕೆ



ಭೇಟಿ ನೀಡಿದ್ದರು. ಮೈಸೂರಿನಲ್ಲಿದ್ದಾಗ ಒಮ್ಮೆ ಓದಿದ್ದ 'ಪಾಮರರ ಸಾಹಿತ್ಯವನ್ನು ಉದಾಸೀನ ಮಾಡಬೇಡಿ' ಎಂಬ ಲೇಖನವೂ ಪ್ರಭಾವ ಬೀರಿತು. ಪರಿಣಾಮವಾಗಿ ಅಂಥ' ಸಾಹಿತ್ಯವನ್ನು ಸಂಗ್ರಹಿಸಬೇಕೆಂಬ ಆಸಕ್ತಿ ಮೂಡಿತು. ಹಲವಾರು ಅಡಚಣೆಗಳ ನಡುವೆಯೂ ಸಂಗ್ರಹಕಾರ್ಯ ಕೈಗೊಂಡು 1933ರಲ್ಲಿ ಹುಟ್ಟಿದ ಹಳ್ಳಿ-ಹಳ್ಳಿಯ ಹಾಡು ಎಂಬ ಗ್ರಂಥವನ್ನು ಪ್ರಕಟಿಸಿದರು. ಈ ಕೃತಿ ಹುಟ್ಟಿದ ಹಳ್ಳಿ ಎಂಬ ಹೆಸರಿನಲ್ಲಿ ಪುನರ್ಮುದ್ರಣಗೊಂಡಿದೆ (1971). ಬಂಡಿಹೊಳೆಯನ್ನು ಕೇಂದ್ರವಾಗಿಟ್ಟು ಕೊಂಡು ಈ ಗ್ರಂಥವನ್ನು ರಚಿಸಿದ್ದರೂ ಸಮಗ್ರ ಬಯಲುಸೀಮೆಯ ಹಳ್ಳಿಗಳ ಜೀವನಾಡಿಯನ್ನು ಇದರಲ್ಲಿ ಕಾಣಬಹುದು. ಬಯಲುಸೀಮೆಯ ಗ್ರಾಮಾಂತರ ಸಂಸ್ಕೃತಿಯನ್ನು ಇಲ್ಲಿ ಕ್ರೋಡೀಕರಿಸಲಾಗಿದೆ. ಜನಪದ ಸಾಹಿತ್ಯದ ದೃಷ್ಟಿಯಿಂದಲೂ ವೈಜ್ಞಾನಿಕ

ಸಂಗ್ರಹ ದೃಷ್ಟಿಯಿಂದಲೂ ಈ ಕೃತಿಗೆ ಅಗ್ರಸ್ಥಾನ ಅಭ್ಯವಾಗುತ್ತದೆ. ಹಾಡಿನ ಸಂಪ್ರದಾಯಗಳು, ಆ ಸಂಪ್ರದಾಯಗಳ ವಿವರಗಳು, ಹಾಡುಗಳು, ಹಾಡಿದವರ ವಿವರಗಳು ಇಲ್ಲಿವೆ. ಕೋಲಾಟ, ಮದುವೆ ಹಾಗೂ ದೇವರ ಪದಗಳು ಹೀಗೆ ಸಾಕಷ್ಟು ಹಾಡುಗಳ ವೈವಿಧ್ಯವಿದೆ. ಹಲವು ಪ್ರಸಿದ್ಧ ಲಾವಣಿಗಳು ಇಲ್ಲಿ ಮೊದಲ ಸಲ ಕಾಣಿಸಿಕೊಂಡಿವೆ. 500ಕ್ಕೂ ಹೆಚ್ಚು ಗಾದೆಗಳಿವೆ. ನೇರವಾದ ಸಂಭಾಷಣೆಗಳನ್ನು ಹಿಡಿದಿಡುವ ಮೂಲಕ ಜನಪದ ಭಾಷೆಯ ಸೊಗಸನ್ನು ಪರಿಚಯಿಸಲಾಗಿದೆ. ಮಕ್ಕಳ ಪದಗಳು ಹಾಗೂ ಮಕ್ಕಳ ಆಟಗಳ ಹಿನ್ನೆಲೆಯನ್ನುಳ್ಳ ಚರ್ಚೆಯಿದೆ. ಹಳ್ಳಿಯ ನ್ಯಾಯ ತೀರ್ಮಾನದ ವೈಖರಿ, ಅಲ್ಲಿನ ಮೇಳಗಳ ಸೊಗಸು, ಉತ್ಸವಗಳ, ಹಬ್ಬಗಳ ವೈಭವ, ವರ್ಷದ ಪ್ರತಿಯೊಂದು ತಿಂಗಳಿನಲ್ಲಿಯೂ ನಿಸರ್ಗದ ಬದಲಾವಣೆಯೊಡನೆ ಕಾಣಬರುವ ಬದುಕಿನ ರೀತಿನೀತಿಗಳು ಮುಂತಾದ ಹಳ್ಳಿಯ ಬದುಕಿನ ಸಮಸ್ತ ಮುಖಗಳನ್ನೂ ಏಕಸೂತ್ರದಲ್ಲಿ ಕೊಂಡೊಯ್ಯಲಾಗಿದೆ. ಕಲಾತ್ಮಕ ನಿರೂಪಣೆಯಿದೆ. ಕಲಾದೃಷ್ಟಿ ಹಾಗೂ ಶಾಸ್ತ್ರದೃಷ್ಟಿಗಳಿಂದ ಇದೊಂದು ಸಮಗ್ರ ಜಾನಪದ ದೃಷ್ಟಿಯುಳ್ಳ ಪ್ರಮುಖ ಗ್ರಂಥವೆನಿಸಿದೆ. ಇವರು 1991 ಸೆಪ್ಟೆಂಬರ್ 29ರಂದು ನಿಧನಹೊಂದಿದರು (ಕೆ.ಆರ್.)

**ಅರ್ಜುನಜೋಗಿ ಹಾಡು** : ಜೋಗಿಗಳು ಎಂಬ ವೃತ್ತಿಗಾಯಕರು ಕಿನ್ನರಿ ವಾದ್ಯದೊಂದಿಗೆ ಹಾಡುವ ಪ್ರಧಾನ ಕಥೆ (ಹಾಡು). ಈ ಕಥೆಯಲ್ಲಿ ಪಂಚವರ್ಣದ ಎರಡು ಗಿಣಿಗಳು ಸಂಭಾಷಣೆಯಲ್ಲಿ ಪ್ರಮುಖ ಪಾತ್ರ ವಹಿಸುವುದರಿಂದ ಇದನ್ನು ಗಿಳಿಹಾಡು ಎಂದೂ ಕರೆಯುತ್ತಾರೆ. ಈ ಹಾಡಿನ ಕಥೆಯನ್ನು ಸಂಕ್ಷೇಪವಾಗಿ ಹೀಗೆ ಹೇಳಬಹುದು.

ಒಂದು ದಿನ ಅರ್ಜುನ ಬೇಟೆಯಾಡಬೇಕೆಂದು ಶಸ್ತ್ರಗಳನ್ನು ತರಲು ಮಲಗುವ ಮನೆಗೆ ಹೋದಾಗ ಅಲ್ಲಿ ಧರ್ಮರಾಯನೂ ದ್ರೌಪದಿಯೂ ಮಲಗಿರುವ ದೃಶ್ಯವನ್ನು ನೋಡಿ ಅದರ ದೋಷವನ್ನು ಪರಿಹರಿಸಿಕೊಳ್ಳಲು ತೀರ್ಥಯಾತ್ರೆಯನ್ನು ಕೈಗೊಂಡ. ಹೀಗೆ ಭೂಪ್ರದಕ್ಷಿಣೆ ಮಾಡುವಾಗ ಆದಿಶೇಷನ ಮಕ್ಕಳಾದ ಉಲೂಪಿ, ಚಿತ್ರಾಂಗದೆಯರನ್ನು ಮದುವೆಯಾಗಿ ಕೆಲವು ದಿನ ಅವರೊಡನೆ ಸುಖಾನುಭವ ಪಡೆದು ಹಸ್ತಿನಾವತಿಗೆ ಹಿಂತಿರುಗಿದ. ಹಸ್ತಿನಾವತಿಗೆ ಬಂದವನು ದ್ರೌಪದಿಯಲ್ಲಿ ಆಸಕ್ತನಾಗಿ ಅವರಿಬ್ಬರನ್ನೂ ಮರೆತ. ಹೀಗೆ ಹನ್ನೆರಡು ವರ್ಷ ಕಳೆದವು.

ಹೀಗಿರಲು ಒಮ್ಮೆ ನಾರದ ಕೈಲಾಸಕ್ಕೆ ಬಂದು ಶಿವಪಾರ್ವತಿಯರ ಸಮ್ಮುಖದಲ್ಲಿ ಶಿವಭಕ್ತೆಯರಾದ ಉಲೂಪಿ, ಚಿತ್ರಾಂಗದೆಯರ ವಿರಹದ ಪರಿಸ್ಥಿತಿಯನ್ನು ವಿವರಿಸಿದ. ಆಗ ಶಿವಪಾರ್ವತಿಯರು ಎರಡು ಗಿಳಿಗಳನ್ನು ಸೃಷ್ಟಿಸಿ ಆ ಗಿಳಿಗಳಿಗೆ ಭೂಲೋಕಕ್ಕೆ ಹೋಗಿ ಉಲೂಪಿ, ಚಿತ್ರಾಂಗದೆಯರ ದುಃಸ್ಥಿತಿಯನ್ನು ದ್ರೌಪದಿಗೆ ತಿಳಿಸಿಬರಲು ಆಜ್ಞಾಪಿಸಿದರು. ದ್ರೌಪದಿಯೊಂದಿಗೆ ಪಗಡೆಯಾಟದಲ್ಲಿ ಸೋತ ಅರ್ಜುನ ಅವಳ ಅಪೇಕ್ಷೆಯಂತೆ ಜೋಗಿಯ ವೇಷ ಧರಿಸಿ ಉಲೂಪಿ, ಚಿತ್ರಾಂಗದೆಯರಲ್ಲಿಗೆ ಬಂದು ಕೆಲವು ಕಾಲ ಅವರೊಡನೆ ಸುಖವಾಗಿದ್ದು ಅವರಿಬ್ಬರನ್ನೂ ಹಸ್ತಿನಾವತಿಗೆ ಕರೆತಂದ. ಕಡೆಗೆ ದ್ರೌಪದಿ, ಸುಭದ್ರೆ, ಉಲೂಪಿ, ಚಿತ್ರಾಂಗದೆಯರೊಡನೆ ಅರ್ಜುನ ಸುಖವಾಗಿ ಬಾಳಿದ.

ಈ ಹಾಡಿನ ಒಂದೊಂದು ಪರ್ವವೂ ಒಂದೊಂದು ರಾತ್ರಿ ಹಾಡುವಷ್ಟು ವಿಸ್ತಾರವಾಗಿರುತ್ತದೆ. ಕಥೆಯಲ್ಲಿ ಅರ್ಜುನ ಜೋಗಿಯಾದರೂ ಅವನ ವೇಷ ಭೂಷಣಗಳು ಶ್ರೀಮಂತವಾಗಿವೆ. ತಲೆಗೆ ವಜ್ರದ ಕಿರೀಟ,ಕೈಯಲ್ಲಿ ಚಿನ್ನದ ಭಿಕ್ಷಾಪಾತ್ರೆ, ಕಿವಿಗೆ ಮುತ್ತಿನಾಭರಣ, ಮೈಗೆ ಕಾವಿಬಟ್ಟೆಯ ಮೇಲೆ ಜರತಾರಿ ಶಾಲುಗಳು, ಹಾಡಲು ಸ್ವರ್ಣಖಚಿತವಾದ ಕಿನ್ನರಿ, ಯೌವನದ ಹೆಣ್ಣುಗಳೆಲ್ಲ ಮಾರು ಹೋಗುವಷ್ಟು ಪರಿಣಾಮ ಬೀರುವ ಮನ್ಮಥನಂತೆ ಜೋಗಿ ವೇಷ. ಇವೆಲ್ಲ ತೀರ ಅವಾಸ್ತವಗಳೆನ್ನಿಸಿದರೂ ಹಾಡುಗಾರರ ಭಕ್ತಿಭಾವದ ಉತ್ಕಟತೆ ಇಲ್ಲಿ ನಾವು ಗಮನಿಸಬೇಕಾದ ಮುಖ್ಯ ಅಂಶ. ಜೋಗಿಯಾದರೂ ತೇಜಸ್ವಿಯಾಗಿದ್ದ, ಭೋಗಿಯಾಗಿದ್ದ ಎಂದು ಹೇಳುವಲ್ಲಿ ತಾವು ಕುರಿತು ಹಾಡುವ ದೈವದ ಔನ್ನತ್ಯವನ್ನು ಸಾರುವದೇ ಇವರ ಉದ್ದೇಶವೆಂಬುದು ಸ್ಪಷ್ಟವಾಗಿದೆ. ಇದೊಂದು ಬಗೆಯ ನಿಂದಾಸ್ತುತಿ ಗೀತೆ ಎನ್ನಬಹುದು. (ನೋಡಿ: ಕಿನ್ನರಜೋಗಿ). (ಕೆ.ಆರ್.)

**ಅವರಾದಿ[1]** : ಬೆಳಗಾಂವಿ ಜಿಲ್ಲೆ ರಾಮದುರ್ಗ ತಾಲ್ಲೂಕಿನ ಒಂದು ಗ್ರಾಮ. ರಾಮದುರ್ಗದಿಂದ ಪೂರ್ವಕ್ಕೆ 12ಕಿಮೀ ದೂರದಲ್ಲಿ ಮಲಪ್ರಭಾ ನದಿಯ ದಡದಲ್ಲಿದೆ. ಫಲಾಹಾರೇಶ್ವರ ಶ್ರೀಗಳ (1780-1835) ಪುಣ್ಯಕ್ಷೇತ್ರವಿದು. ಫಲಾಹಾರೇಶ್ವರ ಮಠಕ್ಕೆ ಇನ್ನೂರು ವರ್ಷಗಳ ಇತಿಹಾಸವಿದೆ. ಧಾರವಾಡ ಜಿಲ್ಲೆ ಶ್ರೀಗಳು ರೋಣ ತಾಲ್ಲೂಕಿನ ಅಸೂಟಿಯವರು. ಇವರ ಪೂರ್ವಾಶ್ರಮದ ಹೆಸರು ಶಿವಮೂರ್ತಿ ಸ್ವಾಮಿ. ನರಗುಂದದ ದೊರೆ ಅಪ್ಪಾಸಾಹೇಬ ಹಾಗೂ ರಾಮದುರ್ಗ ಸಂಸ್ಥಾನಿಕರು ಇವರಿಗೆ ಅವರಾದಿಯಲ್ಲಿ ಮಠ ಕಟ್ಟಿಸಿಕೊಟ್ಟರು. ಅರಳಿಕಟ್ಟೆಯಲ್ಲಿರುವ ಮಠಕ್ಕೆ ನರಗುಂದದ ಅರಸು ಅಪ್ಪಾಸಾಹೇಬ 32 ಎಕರೆ ಜಮೀನು ದಾನ ನೀಡಿದ ಸನ್ನದನ್ನು 25-1-1892ರಂದು ವಿಕ್ಟೋರಿಯಾ ರಾಣಿಯ ಪರವಾಗಿ ಸರ್ ಜಾರ್ಜ್ ರಸೆಲ್ ಕ್ಲಾರ್ಕ್ ಎಂಬಾತ ಸ್ಥಿರಪಡಿಸಿದ್ದಕ್ಕೆ ದಾಖಲೆಯಿದೆ. ತೋರಗಲ್ಲದ ಅರಸು ಲಕ್ಷ್ಮಣರಾವ್ ಶಿಂಧೆ, ಉದಪುದಿಯ ಮಹಾರಾಣಿ ಅಹಲ್ಯಾಬಾಯಿ ಶಿಂಧೆ ಹಾಗೂ ರಾಮದುರ್ಗದ ಅರಸರು ಈ ಮಠಕ್ಕೆ ಜಮೀನು ಇನಾಂ ನೀಡಿರುವ ಬಗ್ಗೆ ದಾನಪತ್ರಗಳು ಮಠದಲ್ಲಿವೆ.

ಫಲಾಹಾರೇಶ್ವರರ ಸಮಾಧಿ ಇಲ್ಲಿದೆ. ಇವರ ಅನಂತರ ಶಿವಮೂರ್ತಿ, ಅಡವಿಸ್ವಾಮಿ, ಶಿವಸ್ವಾಮಿ, ಸಂಗಮೇಶ್ವರ ಮತ್ತು ಶಿವಮೂರ್ತಿ ಸ್ವಾಮಿ ಈ ಪೀಠ ಪರಂಪರೆಯನ್ನು ಮುಂದುವರೆಸಿದರು. ಈಗ ಮೃತ್ಯುಂಜಯ ಸ್ವಾಮಿಯವರು ಪೀಠದ ಹೊಣೆ ಹೊತ್ತಿರುವರು. ಈ ಮಠ ಹಲವು ಶಾಲಾ - ಕಾಲೇಜು ಹಾಗೂ ಉಚಿತ ಪ್ರಸಾದ ನಿಲಯಗಳನ್ನು ನಡೆಸುತ್ತಿದೆ.

ಹಿಂದೆ ಈ ಊರು ರಾಮದುರ್ಗ ಸಂಸ್ಥಾನಕ್ಕೆ ಸೇರಿತ್ತು. ಇದನ್ನು ಅವರವಾದಿ ಎಂದು ಕರೆಯುತ್ತಿದ್ದರು. ಊರ ಹೊರಗೆ ಕಲ್ಯಾಣದ ಚಾಳುಕ್ಯರ ಕಾಲದ ರಾಮಲಿಂಗೇಶ್ವರ ದೇವಾಲಯವಿದೆ. ಊರಿನೊಳಗೆ ಕಲ್ಮೇಶ್ವರ ಮತ್ತು ಬಸವಣ್ಣ ದೇವಾಲಯಗಳಿವೆ. ಇಲ್ಲಿಂದ ಸು. 6 ಕಿಮೀ ಅಂತರದಲ್ಲಿ ಶಬರಿಕೊಳ್ಳ ಎಂಬ ಸ್ಥಳವಿದೆ. ರಾಮನಿಗೆ ಶಬರಿ ಬೋರೆಹಣ್ಣು ನೀಡಿ, ಸ್ವರ್ಗ ಪಡೆದ ಸ್ಥಳವಿದೆಂದು ಐತಿಹ್ಯ. ಸಮೀಪದ ಕಲ್ಲೂರು ಬೆಟ್ಟದ ಮೇಲೆ ಸಿದ್ದೇಶ್ವರ ಪುಣ್ಯಕ್ಷೇತ್ರವಿದೆ. (ವಿ.ಎಸ್.ಎಂ.)

**ಅವರಾದಿ[2]** : ಬೆಳಗಾಂವಿ ಜಿಲ್ಲೆ ಸಂಪಗಾಂವ ತಾಲ್ಲೂಕಿನ ಒಂದು ಗ್ರಾಮ; ಐತಿಹಾಸಿಕ ಸ್ಥಳ. ಇದು ಚಾಳುಕ್ಯ 6ನೆಯ ವಿಕ್ರಮಾದಿತ್ಯನ ಮಹಾಮಂಡಲೇಶ್ವರ ಗೋವೆಯ ಕದಂಬದೊರೆ ಜಯಕೇಶಿದೇವನ ಅರಸಿ ಮೈಳಲದೇವಿಯ ಒಡೆತನಕ್ಕೆ ಒಳಪಟ್ಟಿತ್ತು. ಇಲ್ಲಿಯ 1123ರ ಶಾಸನದಲ್ಲಿ ಗ್ರಾಮದ ಹೆಸರು ಅವರವಾದಿ ಎಂದು ಉಲ್ಲೇಖಿತವಾಗಿದೆ. ಇದು ಕಾಳಾಮುಖ ಲಕುಲೇಶಪಾಶುಪತ ಮತದ ಪ್ರಮುಖ ಕೇಂದ್ರವಾಗಿತ್ತು.

ಊರ ಹೊರಗಿನ ಕೆರೆಯ ದಂಡೆಯ ಮೇಲೆ ಕಲ್ಯಾಣ ಚಾಳುಕ್ಯ ಶೈಲಿಯ ಪ್ರಾಚೀನ ದೇವಾಲಯವಿದೆ. ಸ್ಥಳೀಯರು ಇದನ್ನು ಕಲ್ಮೇಶ್ವರ ದೇವಾಲಯವೆಂದು ಕರೆಯುವರು. ಆದರೆ ಮೂಲತಃ ಇದು ಚಟ್ಟೇಶ್ವರ ದೇವಾಲಯವಾಗಿತ್ತು. ಇದರಲ್ಲಿ ಗರ್ಭಗೃಹ, ಅರ್ಧಮಂಟಪ, ನವರಂಗ ಹಾಗೂ ನಂದಿ ಮಂಟಪಗಳಿವೆ. ಈ ದೇವಾಲಯ ವಾಸ್ತುಶಿಲ್ಪ ದೃಷ್ಟಿಯಿಂದ ಗಮನಾರ್ಹವಾಗಿದೆ. ಕದಂಬರಾಣಿ ಮೈಳಲದೇವಿಯ ದಂಡನಾಯಕ ಸಿಂಗರಸನ ಆಜ್ಞೆಯ ಮೇರೆಗೆ 1123ರಲ್ಲಿ ದೇವಾಲಯಕ್ಕೆ ಹಲವರು ನೀಡಿದ ದಾನವನ್ನು 1150ರಲ್ಲಿ ಅವದಿಯ ಅರಸಿ, ಎರಡನೆಯ ಜಗದೇಕಮಲ್ಲ ಚಾಳುಕ್ಯನ ಪಟ್ಟಮಹಾದೇವಿ ಮಾಚಲದೇವಿ ಮತ್ತೆ ಊರ್ಜಿತಗೊಳಿಸಿದ ವಿಷಯವನ್ನು ವಿವರಿಸುವ ಶಾಸನವಿದೆ. ಈಗ ಇದು ಕಿತ್ತೂರು ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿದೆ. ಚಾಲುಕ್ಯ ಎರಡನೆಯ ಜಗದೇಕಮಲ್ಲನ ರಾಣಿ ಮಾಚಲದೇವಿಯನ್ನು ಉಲ್ಲೇಖಿಸಿರುವ ಮೊದಲ ಶಾಸನವಿದು. ಈ ದೇವಾಲಯದ ಅರ್ಧ ಮಂಟಪದೊಳಗೆ ಎರಡು ಪ್ರತ್ಯೇಕ ಗೂಡುಗಳಲ್ಲಿ ಸರಸ್ವತಿ ಮತ್ತು ದುರ್ಗೆಯ ವಿಗ್ರಹಗಳಿವೆ. ನವರಂಗದ ಒಳಗೆ ದಕ್ಷಬ್ರಹ್ಮ, ಭೈರವ, ಸರಸ್ವತಿ ಮತ್ತು ಸಪ್ತಮಾತೃಕೆಯರ ಬಿಡಿ ವಿಗ್ರಹಗಳನ್ನು ಇಡಲಾಗಿದೆ. ಇವು ನಾಶವಾದ ಪ್ರಾಚೀನ ದೇವಾಲಯದ ಅವಶೇಷಗಳಿರಬಹುದು. ಗರ್ಭಗೃಹಕ್ಕೆ ಮುಖ ಮಾಡಿರುವ ನಂದಿ ವಿಗ್ರಹವು 1.3ಮೀ ಎತ್ತರವಿದೆ.

ಕಿತ್ತೂರು ಚೆನ್ನಮ್ಮನ ವೀರ ಬಂಟನಾಗಿದ್ದ ಅವರಾದಿ ವೀರಪ್ಪ ಇಲ್ಲಿಯವನು. ಅವರಾದಿ ಗ್ರಾಮದೇವತೆ ದ್ಯಾಮವ್ವನಿಗೆ ಹರಕೆ ಹೊತ್ತು, ಕಿತ್ತೂರನ್ನು ಮುತ್ತಿದ ಆಂಗ್ಲ ಸೈನ್ಯವನ್ನು ಯುದ್ಧದಲ್ಲಿ ಹಿಮ್ಮೆಟ್ಟಿಸಿದನಂತೆ. ಯುದ್ಧದಲ್ಲಿ ಥ್ಯಾಕರೆ ಸತ್ತಾಗ ವೀರಪ್ಪ ಗ್ರಾಮದೇವತೆಗೆ ಪೀತಾಂಬರವನ್ನು ಕಾಣಿಕೆಯಾಗಿ ನೀಡಿದ. (ವಿ.ಎಸ್.ಎಂ.)

**ಅರ್ಹದ್ದಾಸ** : ಸು.1300 ಜೈನಕವಿ. ರಟ್ಟಮತ ಎಂಬ ಕೃತಿಯ ಕರ್ತೃ. ಈತನಿಗೆ ರಟ್ಟಕವಿ, ನಯಬಂಧು, ರಟ್ಟವೆಡಂಗ, ಜಿನದಾಸ, ಸಮ್ಯಕ್ತ್ವ ರತ್ನಾಕರ, ರಟ್ಟಕಂದರ್ಪ, ಕವಿಗಳಾಭರಣ, ಕವಿಕಂಜಸಂಭವ, ಸಹಜಕವೀಶ್ವರ, ಜಿನಧರ್ಮವತ್ಸಲ ಎಂಬ ಅನೇಕ ಹೆಸರು ಬಿರುದುಗಳು ಇದ್ದಂತೆ ತೋರುತ್ತದೆ. ಗಂಗರಸ 7ನೆಯ ಮಾರಸಿಂಹನ ಚಮೂಪತಿ ಕಾಡಮರಸ, ಕಾಡಮರಸನ ವಂಶದ ಹದಿನಾಲ್ಕನೆಯ ತಲೆ ನಾಗಕುಮಾರ. ಇವನನ್ನು ಬೂತುಗ ಎಂದೂ ಕರೆಯುತ್ತಿದ್ದರು. ಈ ನಾಗಕುಮಾರನ ಮಗನೇ ಅರ್ಹದ್ದಾಸ. ಕಾಡಮರಸ ವಂಶದ ಜನರು ಒಕ್ಕಲು ಕುಲಕ್ಕೆಲ್ಲ ತಿಲಕಪ್ರಾಯರಾಗಿದ್ದುದು ಅರ್ಹದ್ದಾಸನ ವಂಶಪರಂಪರೆಯ ನಿರೂಪಣೆಯಲ್ಲಿ ಉಕ್ತವಾಗಿದೆ.

ರಟ್ಟಮತ ಶಾಸ್ತ್ರೀಯ ವಿಷಯ ವಿವೇಚನೆಯನ್ನು ಒಳಗೊಂಡ ಗ್ರಂಥ. ಈ ಗ್ರಂಥದಲ್ಲಿ 12 ಅಧ್ಯಾಯಗಳಿವೆ. ಸಾವಿರಕ್ಕೂ ಮೇಲ್ಪಟ್ಟು ಪದ್ಯಗಳಿವೆ. ಕೃತಿವೃತ್ತ, ಕಂದ, ರಗಳೆ, ಅಕ್ಕರ, ತ್ರಿಪದಿ ಮೊದಲಾದ ವಿವಿಧ ಛಂದೋಬಂಧಗಳಲ್ಲಿ ರಚಿತವಾಗಿದೆ. ಕಾವ್ಯಾಂಶ ಕಡಿಮೆ. ಮಳೆ, ಮಿಂಚು, ಇಂದ್ರಧನು, ವಾಯುಚಕ್ರ, ರಾಹುಚಕ್ರ, ಭೂಕಂಪ, ಉತ್ಪಾತ, ಮೇಘ, ಮಾಸ, ನಕ್ಷತ್ರ, ಸಂಕ್ರಾಂತಿ, ಬಿತ್ತುವುದು ಮೊದಲಾದ ವಿವಿಧ ವಿಷಯ ವಸ್ತುಗಳನ್ನು ಕುರಿತ ಜ್ಯೋತಿಷ್ಯಲಕ್ಷಣಗಳನ್ನು ಈ ಗ್ರಂಥದಲ್ಲಿ ನಿರೂಪಿಸಿದೆ.

ರಟ್ಟಮತಕ್ಕೆ ರಟ್ಟಸೂತ್ರ, ಮೇಘಾಡಂಬರ ಎಂಬ ಹೆಸರುಗಳೂ ಇದ್ದಂತೆ ತಿಳಿದು ಬರುತ್ತದೆ. ಇದರಲ್ಲಿ ತನಗಿಂತ ಪೂರ್ವದಲ್ಲಿದ್ದ ಚಂದಿರಭಟ್ಟ, ಗರ್ಗಾಚಾರ್ಯ, ಕೀರ್ತಿನಾರಾಯಣ, ನಂದಾಚಾರ್ಯ ಮೊದಲಾದ ಶಾಸ್ತ್ರಗ್ರಂಥಕರ್ತೃಗಳನ್ನು ಉಲ್ಲೇಖಿಸಿದ್ದಾನೆ. ವರಾಹಮಿಹಿರ ಮತ್ತು ಗರ್ಗಾಚಾರ್ಯರ ಸಂಹಿತೆಗಳು, ಧನಕೀರ್ತಿ ಸಂಹಿತೆ ರತ್ನೋಜ್ವಲಸಂಹಿತೆ-ರಟ್ಟಮತಕ್ಕೆ ಆಧಾರಗ್ರಂಥಗಳು ಎಂಬುದನ್ನೂ ಹೇಳುತ್ತಾನೆ.

14ನೆಯ ಶತಮಾನದಲ್ಲಿ ಆಂಧ್ರಕವಿ ಭಾಸ್ಕರ ಈ ರಟ್ಟಮತವನ್ನು ತೆಲುಗಿಗೆ ಭಾಷಾಂತರಿಸಿದ್ದಾನೆ. (ಡಿ.ಎಸ್.ಎಚ್.)

**ಅಲಾಉದ್ದೀನ್ I** : ಬಹಮನೀ ರಾಜ್ಯದ ಸ್ಥಾಪಕ (1347-58). ಮೊದಲ ಹೆಸರು ಜಾಫರ್‌ಖಾನ್ ಅಥವಾ ಹಸನ್. ಇವನು ಆಫ್ಘನ್ ಅಥವಾ ತುರ್ಕಿ ಮೂಲದವನಾಗಿದ್ದು ದೆಹಲಿಯ ಸುಲ್ತಾನ ಮಹಮ್ಮದ್ ಬಿನ್ ತುಗಲಕನ ಸೇವೆಯಲ್ಲಿ ದಖನ್ನಿನಲ್ಲಿ ಅಧಿಕಾರಿಯಾಗಿದ್ದ. ಇವನು ಗಂಗು ಎಂಬ ಬ್ರಾಹ್ಮಣ ಜ್ಯೋತಿಷಿಯ ಆಶ್ರಯದಲ್ಲಿದ್ದು ರಾಜನಾದ ಮೇಲೆ ಅವನ ಗೌರವದ ಮೇಲೆ ತನ್ನ ಹೆಸರನ್ನು ಹಸನ್‌ಗಂಗು ಎಂದೂ ವಂಶವನ್ನು ಬಹಮನೀ ಎಂದೂ ಕರೆದುಕೊಂಡನೆಂಬ ಒಂದು ಕಥೆ ಇದೆ. ಇದಕ್ಕೆ ಆಧಾರವಿಲ್ಲ. ಇವನು ಇರಾನಿನ ಬಹಮನ್ ಷಾನ ವಂಶಸ್ಥನಿರಬೇಕು ಎಂದು ಚರಿತ್ರಕಾರರ ಅಭಿಪ್ರಾಯ. ಮಹಮದ್ ಬಿನ್ ತುಗಲಕನ ದುರಾಡಳಿತವನ್ನು ಸಹಿಸದ ದಖನ್ನಿನ ಅಮೀರರು ದಂಗೆ ಎದ್ದು ದೌಲತಾಬಾದನ್ನು ತಮ್ಮ ಕೇಂದ್ರ ಕಾರ್ಯಸ್ಥಾನವನ್ನಾಗಿ ಮಾಡಿಕೊಂಡು ಇಸ್ಮಾಯಿಲ್ ಮುಖ್‌ನನ್ನು ತಮ್ಮ ಸುಲ್ತಾನನೆಂದು ಘೋಷಿಸಿದರು. ಆದರೆ ಇಸ್ಮಾಯಿಲ್ ಅನೇಕ ಕಾರಣಗಳಿಂದಾಗಿ ಒಂದು ವರ್ಷದೊಳಗೆ ರಾಜೀನಾಮೆ ನೀಡಿದ. ಅನಂತರ ಅಮೀರರು ಹಸನನನ್ನು (ಜಾಫರ್ ಖಾನ್) 1347ರಲ್ಲಿ ಸುಲ್ತಾನನೆಂದು ಘೋಷಿಸಿದರು. ಹಸನ್ ರಾಜನಾದ ಮೇಲೆ ಅಲಾಉದ್ದೀನ್ ಹಸನ್ ಷಾ ಅಲ್‌ವಲಿ ಅಲ್ ಬಹಮನೀ ಎಂಬ ಬಿರುದು ಸಹಿತವಾದ ಹೆಸರನ್ನು ಧರಿಸಿ ಗುಲ್ಬರ್ಗದಲ್ಲಿ ತನ್ನ ವಂಶದ ಆಳ್ವಿಕೆಯನ್ನು ಪ್ರಾರಂಭಿಸಿದ. ಅನಂತರ ಸುಭದ್ರ ಸರ್ಕಾರವನ್ನು ರಚಿಸುವುದರ ಕಡೆ ಗಮನ ಹರಿಸಿ ರಾಜ್ಯವನ್ನು ಗುಲ್ಬರ್ಗ, ದೌಲತಾಬಾದ್, ಬೆರಾರ್, ಬಿದರೆ ವಿಭಾಗಗಳನ್ನಾಗಿ ವಿಂಗಡಿಸಿ ಅವುಗಳ ಆಡಳಿತವನ್ನು ಆಶ್ರಿತ ಅಮೀರರಿಗೆ ವಹಿಸಿದ. ರಾಜ್ಯದಲ್ಲಿ ಶಾಂತಿಯನ್ನು ಸ್ಥಾಪಿಸಿದಮೇಲೆ ಸುತ್ತಲ ಪ್ರದೇಶಗಳ ಮೇಲೆ ದಾಳಿ ಮಾಡಿ ಅವನ್ನು ಗೆದ್ದುಕೊಂಡ. ಖಂದಹಾರ್ ಕೋಟೆಯಿಂದ ಮಹಮ್ಮದ್ ಬಿನ್ ತುಗಲಕನ ಸೈನ್ಯವನ್ನು ಹೊಡೆದೋಡಿಸಿ ಅದನ್ನು ಗೆದ್ದುಕೊಂಡ. ಇವನ ದಂಡನಾಯಕ ಸಿಕಂದರ್ ಖಾನ್ ತೆಲಂಗಾಣದ ಮೇಲೆ ದಂಡೆತ್ತಿಹೋಗಿ ಅದರ ರಾಜನಾದ. ಕಾಪಯ ನಾಯಕನನ್ನು ಸೋಲಿಸಿ ಕಪ್ಪಕಾಣಿಕೆಗಳನ್ನು ವಸೂಲು ಮಾಡಿದ. ಮಳಖೇಡ ಮತ್ತು ಅದರ ಸುತ್ತಮುತ್ತಣ ಪ್ರದೇಶಗಳ ಮೇಲೆ ದಾಳಿಮಾಡಿ ಅವು ಮಹಮ್ಮದೀಯರ ಅಧಿಕಾರವನ್ನು ಒಪ್ಪಿಕೊಳ್ಳುವಂತೆ ಮಾಡಿದ. ಬುರ್ಹಾನ್ -ಇ-ಮಾಸಿರ್ ಎಂಬ ಚಾರಿತ್ರಿಕ ಗ್ರಂಥ ಈತ ನ್ಯಾಯನಿಷ್ಠ ದೊರೆಯೆಂದೂ ಇಸ್ಲಾಮ್ ಧರ್ಮಪ್ರಸಾರಕ್ಕೆ ಶ್ರಮಿಸಿದನೆಂದೂ ತಿಳಿಸುತ್ತದೆ. ಗೋವ, ದಾಬೋಲ್, ಕೊಲ್ಹಾಪುರ ಮುಂತಾದ ಪ್ರದೇಶಗಳನ್ನೂ ಗೆದ್ದುಕೊಂಡ. 1358ರಲ್ಲಿ ಮೃತನಾದ. ಸಾಯುವ ವೇಳೆಗೆ ಬಹಮನೀ ರಾಜ್ಯ ಉತ್ತರದಲ್ಲಿ ವೈನಗಂಗಾದಿಂದ ದಕ್ಷಿಣದಲ್ಲಿ ಕೃಷ್ಣಾನದಿಯವರೆಗೆ ವಿಸ್ತರಿಸಿತ್ತು. ಇವನ ಹಿರಿಯ ಮಗ 1ನೆಯ ಮಹಮ್ಮದ್ ರಾಜ್ಯದ ಉತ್ತರಾಧಿಕಾರಿಯಾದ. (ಎಸ್.)

**ಅಲಾಉದ್ದೀನ್ ಅಹ್ಮದ್ II** : ಬಹಮನೀ ರಾಜ್ಯದ ಹತ್ತನೆಯ ಸುಲ್ತಾನ 1436-58. ಪಟ್ಟಕ್ಕೆ ಬಂದ ಅನಂತರ ವಿಜಯನಗರ ಮತ್ತು ಖಾನ್‌ದೇಶಗಳ ವಿರುದ್ಧ ಅನೇಕ ಯುದ್ಧಗಳನ್ನು ಕೈಗೊಂಡ. ವಿಜಯನಗರದಿಂದ ಸಲ್ಲಬೇಕಾಗಿದ್ದ ಪೊಗದಿಯ ವಸೂಲಿಗೋಸ್ಕರ ತನ್ನ ಸೋದರ ಮಹಮ್ಮದನನ್ನು ಕಳುಹಿಸಿಕೊಟ್ಟ. ಪೊಗದಿಯನ್ನು ವಸೂಲಿ ಮಾಡುವುದರಲ್ಲಿ ಯಶಸ್ವಿಯಾದರೂ ಮಹಮ್ಮದ್ ತನ್ನ ಹಿಂಬಾಲಕರಿಂದ ಮತ್ತು ವಿಜಯನಗರದ ಇಮ್ಮಡಿ ದೇವರಾಯನಿಂದ ಪ್ರೇರಿತನಾಗಿ ರಾಜ್ಯದಲ್ಲಿ ಅರ್ಧಭಾಗವನ್ನು ತನಗೆ ಕೊಡಬೇಕೆಂದು ಅಲಾಉದ್ದೀನನ ವಿರುದ್ಧ ದಂಗೆ ಎದ್ದ. ರಾಯಚೂರು, ಮುದ್ಗಲ್, ನಲ್ದುರ್ಗಗಳನ್ನು ಆಕ್ರಮಿಸಿದ. ಸುಲ್ತಾನ ಮಹಮ್ಮದನನ್ನು ಯುದ್ಧದಲ್ಲಿ ಸೋಲಿಸಿದ. ಅಲಾಉದ್ದೀನ್ ಅನಂತರ ಅವನನ್ನು ಕ್ಷಮಿಸಿ ರಾಯಚೂರಿನ ಜಹಗೀರುದಾರನನ್ನಾಗಿ ನೇಮಿಸಿದ. ಸುಲ್ತಾನನ ಪ್ರಧಾನಮಂತ್ರಿಯಾಗಿದ್ದ ದಿಲಾವರ್ ಖಾನ್ ಕೊಂಕಣದಮೇಲೆ ದಂಡೆತ್ತಿ ಹೋಗಿ ಸಂಗಮೇಶ್ವರದ ರಾಜನನ್ನು ಸೋಲಿಸಿದ. ಸಂಗಮೇಶ್ವರದ ರಾಜ ತನ್ನ ಮಗಳನ್ನು ಅಲಾಉದ್ದೀನನಿಗೆ ಕೊಟ್ಟು ವಿವಾಹಮಾಡಿದ. ಈ ವಿವಾಹದಿಂದಾಗಿ ಸುಲ್ತಾನನ ಹಿರಿಯ ರಾಣಿಯ ತಂದೆ ಖಾನ್ ದೇಶದ ಸುಲ್ತಾನ ನಾಸಿರ್ ಖಾನ್ ಕುಪಿತನಾಗಿ ಗುಜರಾತಿನ ಸುಲ್ತಾನನ ಸಹಾಯ ಪಡೆದು ಅಲಾಉದ್ದೀನನ ರಾಜ್ಯವನ್ನು ಮುತ್ತಿ ಕೆಲವು ಪ್ರಾಂತ್ಯಗಳನ್ನು ಗೆದ್ದುಕೊಂಡನಾದರೂ ಸುಲ್ತಾನನ ಸೈನ್ಯ ಅವನನ್ನು ಸೋಲಿಸಿ ಹಿಮ್ಮೆಟ್ಟಿಸಿತು. ಇತ್ತ ಇಮ್ಮಡಿ ದೇವರಾಯ ಅನೇಕ ಮಹಮ್ಮದೀಯರನ್ನು ತನ್ನ ಸೈನ್ಯದಲ್ಲಿ ಸೇರಿಸಿಕೊಂಡು ಬಲಯುತನಾಗಿ ಬಹಮನೀ ರಾಜ್ಯವನ್ನು ಮುತ್ತಿ ಮುದ್ಗಲನ್ನು ಗೆದ್ದು ಬಿಜಾಪುರ ಮತ್ತು ಅದರ ಸುತ್ತ ಮುತ್ತಣ ಪ್ರದೇಶಗಳನ್ನು ಕೊಳ್ಳೆಹೊಡೆದ. ಇಬ್ಬರಲ್ಲಿ ಭೀಕರ ಹೋರಾಟವಾಗಿ ದೇವರಾಯ ಸೋತ. ಅವನು ಬಾಕಿ ಇದ್ದ ಕಪ್ಪಕಾಣಿಕೆಗಳನ್ನೆಲ್ಲಾ ಸಲ್ಲಿಸಿ ತುಂಗಭದ್ರಾನದಿಯನ್ನು ತನ್ನ ರಾಜ್ಯದ ಗಡಿಯಾಗಿ ಒಪ್ಪಿಕೊಂಡ.

ಅಲಾಉದ್ದೀನನ ಕಾಲದಲ್ಲಿ ಸುನ್ನಿ ಪಂಗಡದ ದಖನ್ನಿನ ಅಮೀರರಿಗೂ ಷಿಯಾಪಂಥದ ಅರಬ್, ತುರ್ಕಿ, ಪರ್ಷಿಯ ಮತ್ತು ಮುಗಲ್ - ಈ ವಿದೇಶಿ ಅಮೀರರಿಗೂ ಒಳಜಗಳಗಳು ಸರ್ವೇ ಸಾಮಾನ್ಯವಾಗಿದ್ದುವು. ದಖನ್ನಿನ ಅಮೀರರು ಒಳಸಂಚು ನಡೆಸಿ ಚಾಕಣದಲ್ಲಿ ಸು.2,000 ವಿದೇಶಿ ಅಮೀರರನ್ನು ಕೊಲೆಮಾಡಿದರು. ಬಹಮನೀ ರಾಜ್ಯದ ಇತಿಹಾಸದಲ್ಲಿ ಈ ಘಟನೆ ಚಾಕಣ ಘಟನೆ ಎಂದು ಪ್ರಸಿದ್ಧಿಯಾಗಿದೆ. ಅಲಾಉದ್ದೀನನ ಆಳ್ವಿಕೆಯ ಕೊನೆಗಾಲದಲ್ಲಿ ಸುಲ್ತಾನನ ಸಂಬಂಧಿ ಜಲಾಲ್ ಖಾನ್ ದಂಗೆ ಎದ್ದು ನಲಗೊಂಡಾದಲ್ಲಿ ಸುಲ್ತಾನನೆಂದು ಘೋಷಿಸಿಕೊಂಡಾಗ ಸುಲ್ತಾನನ ಮಂತ್ರಿ ಮಹ್ಮೂದ್ ಗಾವಾನನು ಜಲಾಲ್ ಮತ್ತು ಅವನ ಮಗ ಸಿಕಂದರ್ ಇವರನ್ನು ಬಂಧಿಸಿದ. ಆದರೆ ಗವಾನನ ಮಾತಿನಂತೆ ಸುಲ್ತಾನ್ ಅವರನ್ನು ಕ್ಷಮಿಸಿ ಪುನಃ ನಲಗೊಂಡಾದ ಜಹಗೀರನ್ನು ವಹಿಸಿಕೊಟ್ಟ. ಅಲಾಉದ್ದೀನ್ ಅನೇಕ ಮಸೀದಿ, ಶಾಲೆ ಮತ್ತು ಆಸ್ಪತ್ರೆಗಳನ್ನು ಸ್ಥಾಪಿಸಿದ. ಬಿದರೆಯಲ್ಲಿ ಒಂದು ಆಸ್ಪತ್ರೆಯನ್ನು ಕಟ್ಟಿಸಿ ನುರಿತ ವೈದ್ಯರನ್ನು ನೇಮಿಸಿದ. ದರೋಡೆಕೋರರನ್ನೂ ಕಳ್ಳಕಾಕರನ್ನೂ ಕ್ರೂರವಾಗಿ ಶಿಕ್ಷಿಸಿ ಶಾಂತಿ ನೆಲಸುವಂತೆ ಮಾಡಿದ. ಈತ 1458ರಲ್ಲಿ ಮೃತನಾದ. ಅನಂತರ ಇವನ ಮಗ ಹುಮಾಯೂನ್ ಪಟ್ಟಕ್ಕೆ ಬಂದ. (ಎಸ್.)

**ಅಲಿ ಆದಿಲ್ ಷಾ I** : ಬಿಜಾಪುರದ 5ನೆಯ ಸುಲ್ತಾನ (1558-80). ಇಬ್ರಾಹೀಮನ ಮಗ ಮತ್ತು ಉತ್ತರಾಧಿಕಾರಿ. ಷಿಯಾ ಪಂಥದ ಅನುಯಾಯಿ. ಈತ ಆ ಪಂಥಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದ್ದರಿಂದ ಸುನ್ನಿ ಪಂಗಡದವರಿಗೆ ಅಸಮಾಧಾನವುಂಟಾಯಿತಾಗಿ ಇವನು ತನ್ನ ಆಳ್ವಿಕೆಯ ಮೊದಲಲ್ಲಿಯೇ ಅನೇಕ ಎಡರುಗಳನ್ನು ಎದುರಿಸಬೇಕಾಯಿತು. ಪಟ್ಟಕ್ಕೆ ಬರುತ್ತಿದ್ದಂತೆಯೇ 1558ರಲ್ಲಿ ವಿಜಯನಗರದ ರಾಜನೊಡನೆ ಒಪ್ಪಂದವನ್ನು ಮಾಡಿಕೊಂಡು ಅಹಮದ್‌ನಗರದ ಮೇಲೆ ದಾಳಿ ಮಾಡಿದ. ಆದರೆ ಈ

ಸಂದರ್ಭದಲ್ಲಿ ರಾಮರಾಯ ಮಹಮ್ಮದೀಯರ ಮೇಲೆ ಎಸಗಿದ ಕೃತ್ಯಗಳು ಬೇರೆ ರಾಜ್ಯಗಳ ಮಹಮ್ಮದೀಯರ ಮನನೋಯಿಸಿ ರೊಚ್ಚಿಗೇಳುವಂತೆ ಮಾಡಿದ್ದರಿಂದ ಅಲಿ ಮತ್ತು ರಾಮರಾಯನ ಮೈತ್ರಿ ಕಡಿಯಿತು. ಅನಂತರ ಮಹಮ್ಮದೀಯ ರಾಜ್ಯಗಳಾದ ಬಿಜಾಪುರ, ಅಹಮದ್‌ನಗರ, ಬಿದರೆ ಮತ್ತು ಗೋಲ್ಕೊಂಡದ ಸುಲ್ತಾನರು ಒಂದು ಒಕ್ಕೂಟವನ್ನು ಮಾಡಿಕೊಂಡು ವಿಜಯನಗರದ ಮೇಲೆ ಯುದ್ಧ ಸಾರಿದರು. ತಾಳೀಕೋಟೆಯಲ್ಲಿ 1565ರಲ್ಲಿ ನಡೆದ ಯುದ್ಧದಲ್ಲಿ ರಾಮರಾಯ ಸೋತು ಕೊಲೆಗೀಡಾದ. ಈ ಯುದ್ಧದಲ್ಲಿ ಹಾಗೂ ಅನಂತರ ವಿಜಯನಗರವನ್ನು ಸೂರೆಗೊಳ್ಳುವಲ್ಲಿ ಅಲಿ ಪ್ರಮುಖ ಪಾತ್ರ ವಹಿಸಿದ್ದ. ತಾಳೀಕೋಟೆಯ ಯುದ್ಧಾನಂತರ ಅಹಮದ್‌ನಗರದ ಸುಲ್ತಾನನೊಡನೆ ಒಪ್ಪಂದ ಮಾಡಿಕೊಂಡು ಪಶ್ಚಿಮ ಕರಾವಳಿಯಲ್ಲಿದ್ದ ಪೋರ್ಚುಗೀಸರ ವಿರುದ್ಧ ದಂಡೆತ್ತಿಹೋಗಿ ಗೋವೆಯನ್ನು ಮುತ್ತಿದ. ಆದರೆ ಪೋರ್ಚುಗೀಸರು ಇವನನ್ನು ಹಿಮ್ಮೆಟ್ಟಿಸಿದರು. ರಾಜ್ಯಕ್ಕೆ ಹಿಂದಿರುಗುವ ಮೊದಲು ಇವನು ಅದವಾನಿ ಕೋಟೆಯನ್ನು ಗೆದ್ದುಕೊಂಡ. 1573ರಲ್ಲಿ ತುರ್ಕಲನ್ನು ಗೆದ್ದ. ತರುವಾಯ, ವಿಜಯನಗರದ ಅಧೀನದಲ್ಲಿದ್ದು, ತಾಳೀಕೋಟೆಯ ಯುದ್ಧದ ಅನಂತರ ಸ್ವತಂತ್ರನಾಗಿ ಬಂಕಾಪುರದಲ್ಲಿ ಆಳುತ್ತಿದ್ದ ವೇಲಪರಾಯನ ಮೇಲೆ ದಂಡೆತ್ತಿಹೋದ. 15 ತಿಂಗಳ ಸತತ ಹೋರಾಟದಿಂದ ಬಂಕಾಪುರವನ್ನು ವಶಪಡಿಸಿಕೊಂಡ. ಅನಂತರ ಇವನ ದಂಡನಾಯಕ ಮುಸ್ತಫ಼ ಖಾನ್ ಚಂದ್ರಗುತ್ತಿಯನ್ನು ಸಾಧಿಸಿಕೊಂಡನಲ್ಲದೆ ಕರ್ನಾಟಕದ ಕೆಲವು ಸಣ್ಣಪುಟ್ಟ ನಾಯಕರುಗಳಿಂದ ಕಪ್ಪಕಾಣಿಕೆಗಳನ್ನು ವಸೂಲು ಮಾಡುವುದರಲ್ಲೂ ಯಶಸ್ವಿಯಾದ. ಅಲಿ ಆದಿಲ್ ಷಾ ಅನೇಕ ಬಾರಿ ಪೆನುಕೊಂಡವನ್ನು ಗಳಿಸಲು ಪ್ರಯತ್ನ ಪಟ್ಟು ವಿಫಲನಾದ. 1580ರಲ್ಲಿ ತನ್ನ ಅರಮನೆಯಲ್ಲಿಯೇ ಕೊಲೆಯಾದ. ಅನಂತರ ಇವನ ಸೋದರನ ಮಗ ಇಬ್ರಾಹೀಂ ಪಟ್ಟಕ್ಕೆ ಬಂದ. ಪ್ರಸಿದ್ಧ ಚಾಂದಬೀಬಿ (ನೋಡಿ) ಅಲಿಯ ಹೆಂಡತಿ. (ಎಸ್.)

**ಅಲಿ ಆದಿಲ್ ಷಾ II :** ಬಿಜಾಪುರದ 8ನೆಯ ಸುಲ್ತಾನ (1656-72). ಮಹಮ್ಮದನ ಮಗ. ತಂದೆಯ ಮರಣಾನಂತರ ಈತ ಕೇವಲ 18 ವರ್ಷದವನಾಗಿದ್ದಾಗ ಪಟ್ಟಕ್ಕೆ ಬಂದ. ಈ ಸಂದರ್ಭದ ಲಾಭ ಪಡೆಯಲು ದಖನ್ನಿನಲ್ಲಿ ವೈಸ್‌ರಾಯಿಯಾಗಿದ್ದ ಔರಂಗ್‌ಜೇಬ್ ಬಿಜಾಪುರ ರಾಜ್ಯದ ಮೇಲೆ ದಂಡೆತ್ತಿ ಬಂದ. ಪೆರೆಂಡ ಕೋಟೆ ಮತ್ತು ಆದರ ಸುತ್ತಮುತ್ತಣ ಪ್ರದೇಶಗಳನ್ನೂ ಅನಂತರ ಕಲ್ಯಾಣಿ ಮತ್ತು ಬಿದರೆಯನ್ನೂ ಮುತ್ತಿ ಗೆದ್ದುಕೊಂಡ. ಬಿಜಾಪುರಕ್ಕೆ ನುಗ್ಗಿ ಅಲಿಯನ್ನು ಸೋಲಿಸಿದ. ಅಲಿ ಒಪ್ಪಂದಕ್ಕೆ ಒಡಂಬಟ್ಟು ಔರಂಗ್‌ಜೇಬ್ ಗೆದ್ದುಕೊಂಡಿದ್ದ ಬಿದರೆ, ಕಲ್ಯಾಣಿ ಮತ್ತು ಪೆರೆಂಡವನ್ನು ಮುಗಲರಿಗೆ ಬಿಟ್ಟುಕೊಟ್ಟ (1657).

ಈ ಮಧ್ಯದಲ್ಲಿ ಶಿವಾಜಿ ಬಿಜಾಪುರಕ್ಕೆ ಸೇರಿದ ಕೆಲವು ಪ್ರದೇಶಗಳನ್ನು ಹಿಡಿದಿದ್ದರಿಂದ ಅಲಿ ಶಿವಾಜಿಯ ವಿರುದ್ಧ ಅಫಜಲಖಾನನನ್ನು ಕಳುಹಿಸಿದ. ಆದರೆ ಅಫಜಲಖಾನ್ ಹತನಾದ. ಶಿವಾಜಿ ಪನ್ಹಾಳವನ್ನೂ ಗೆದ್ದುಕೊಂಡ. ಆಗ ಅಲಿಯಿಂದ ನಿಯೋಜಿತನಾದ ಸಿದ್ದಿ ಜೌಹಾರ್ ಶಿವಾಜಿಯ ಮೇಲೆ ಜಯ ಗಳಿಸುವ ಹಂತ ತಲುಪಿದ್ದಾಗ ಶಿವಾಜಿ ಪನ್ಹಾಳದಿಂದ ತಪ್ಪಿಸಿಕೊಂಡು ಪಾರಾದ. ಅಲಿ ಆದಿಲ್ ಷಾ ಪನ್ಹಾಳವನ್ನು ವಶಪಡಿಸಿಕೊಂಡ. ಶಿವಾಜಿ ದಾಳಿಗಳನ್ನು ಮುಂದುವರಿಸಿ ಕೊಂಕಣದ ಹಲವು ಪ್ರದೇಶಗಳನ್ನು ಅಲಿಯಿಂದ ಗೆದ್ದುಕೊಂಡ. ಅಲ್ಲಿಂದಲೂ ಶಿವಾಜಿ ಹಿಮ್ಮೆಟ್ಟುವಂತೆ ಅಲಿ ಆದಿಲ್ ಷಾ ಕ್ರಮ ಕೈಗೊಂಡ. ಔರಂಗಜೇಬ್ ದೆಹಲಿಯ ಸುಲ್ತಾನನಾದಮೇಲೆ ಬಿಜಾಪುರದ ವಿರುದ್ಧ ಯುದ್ಧವನ್ನು ಮುಂದುವರಿಸಲು ದಂಡನಾಯಕ ಜಯಸಿಂಗನನ್ನು ಕಳುಹಿಸಿ ಕೊಟ್ಟ (1665). ಜಯಸಿಂಗ್ ಶಿವಾಜಿಯ ಮೇಲೆ ಯುದ್ಧ ಮಾಡಿ ಪುರಂದರ ಒಪ್ಪಂದವನ್ನು ಮಾಡಿಕೊಂಡ. ಅನಂತರ ಜಯಸಿಂಗ್ ಶಿವಾಜಿಯ ಸಹಾಯ ಪಡೆದು ಬಿಜಾಪುರದ ಮೇಲೆ ದಂಡೆತ್ತಿಬಂದ. ಆದರೆ ಬಿಜಾಪುರವನ್ನು ಅಲಿ ಆದಿಲ್ ಷಾನಿಂದ ಗೆದ್ದುಕೊಳ್ಳಲು ಸಾಧ್ಯವಾಗಲಿಲ್ಲ. ಒಟ್ಟಿನಲ್ಲಿ ಅಲಿ ಆದಿಲ್ ಷಾ ಮುಗಲರ ಮತ್ತು ಮರಾಠರ ವಿರುದ್ಧ ಹೋರಾಡಿ ಬಿಜಾಪುರ ರಾಜ್ಯವನ್ನು ರಕ್ಷಿಸಿದ. ಆದರೆ ತನ್ನ ಆಳ್ವಿಕೆಯ ಕೊನೆಯ ಆರು ವರ್ಷಗಳನ್ನು ಸುಖಲೋಲುಪನಾಗಿ ಕಳೆದು 1672ರಲ್ಲಿ ಮೃತನಾದ.

(ಎಸ್.)

**ಅಲ್ಲಮಪ್ರಭು :** 12ನೆಯ ಶತಮಾನದ ಧಾರ್ಮಿಕ ಕ್ರಾಂತಿಯ ಮಹತ್ಸಾಧನೆಯ ಇತಿಹಾಸದಲ್ಲಿ ಬಹಳ ಪ್ರಮುಖನಾದ ವ್ಯಕ್ತಿ. ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆ ಈತನ ಜನ್ಮಸ್ಥಳ. ತಂದೆ ನಿರಹಂಕಾರ, ತಾಯಿ ಸುಜ್ಞಾನಿ. ಅನಿಮಿಷಯೋಗಿ ಈತನ ಗುರು. ಇವನ ಬಾಲ್ಯಜೀವನದ ಪರಿಸರಗಳಾಗಲಿ ಮನೋವಿಕಾಸದ ಚಿತ್ರವಾಗಲಿ ದೊರೆಯದು. ಆದರೆ ಈತನ ಜೀವನದಲ್ಲೊಂದು ಪರಿವರ್ತನೆಯು ಘಟಿಸಿ, ತಾರುಣ್ಯದಲ್ಲಿ ಪ್ರಾಪ್ತವಾದಂತೆ ತೋರುತ್ತದೆ. ಅದು ಚಾಮರಸ ಹೇಳುವಂತೆ ಬನವಾಸಿಯ ಮಾಯಾದೇವಿಯಿಂದ ಆಗಿರಲಿ ಅಥವಾ ಹರಿಹರ ಹೇಳುವಂತೆ ಬಳ್ಳಿಗಾವೆಯ ಕಾಮಲತೆಯಿಂದ ಆಗಿರಲಿ ಅಂತೂ ಸಂಸಾರವನ್ನು ಮೆಟ್ಟಿ ಮೇಲೆರುವ ಸಾಧನೆಗೆ ಪ್ರಭುವನ್ನು ಪ್ರಚೋದಿಸಿದ ಒಂದು ಘಟನೆ ನಡೆದಿರಬೇಕು. ಅದರಿಂದ ಪ್ರಭುವಿಗೆ ತನ್ನ ಅಂತರಂಗದಲ್ಲಿ ಅಡಗಿದ್ದ ಅತೀವವಾದ ಆಕಾಂಕ್ಷೆಯ ಅರಿವು ಆದಂತೆ ತೋರುತ್ತದೆ. ಮೊದಲಿನಿಂದಲೂ ಜ್ಞಾನ ವೈರಾಗ್ಯಗಳು ಈತನಲ್ಲಿ ಜೀವದ ಉಸಿರಾಟದಂತೆ ಸಹಜವಾಗಿದ್ದುವು. ಮನದ ಮುಂದಣ ಆಸೆಯನ್ನು ಕಿತ್ತು ಬಿಸಾಟು ಬಾಲ್ಯದಲ್ಲಿಯೇ ಮಾಯೆಯನ್ನು ಗೆದ್ದ. ಮಹಾಶಿವಯೋಗಿಯಾಗಿ ಭಾರತದಾದ್ಯಂತ ಸಂಚರಿಸಿ, ನೂರಾರು ಸಾಧಕರನ್ನು ಸಂಧಿಸಿ ಅನೇಕ ಬಗೆಯ ಅನುಭವಗಳ ಗಣಿಯಾದ. ಮುಕ್ತಾಯಕ್ಕ, ಗೊಗ್ಗಯ್ಯ, ಸಿದ್ಧರಾಮ, ಗೋರಕ್ಷ, ಬಸವ, ಚೆನ್ನಬಸವ, ಅಕ್ಕಮಹಾದೇವಿ ಮುಂತಾದ ನೂರಾರು ಶಿವಶರಣಶರಣೆಯರಿಗೆ ಜ್ಞಾನ, ವೈರಾಗ್ಯ, ಭಕ್ತಿಗಳ ನೆಲೆಯನ್ನು ತೋರಿಸಿದ. ವೀರಶೈವ ಸಿದ್ಧಾಂತದ ಸಾರವನ್ನೇ ತನ್ನ ಇರವಿನಲ್ಲಿ ನಿರಿಸಿ ಶರಣಮಾರ್ಗಕ್ಕೆ ಗುರುವಾದ. ಅನುಭವ ಮಂಟಪದ ಅಧ್ಯಕ್ಷನಾದ. ಶೂನ್ಯಸಿಂಹಾಸನದ ದೊರೆಯಾದ. ಈತ ಡಾಂಭಿಕತೆ, ಅಂಧಶ್ರದ್ಧೆ, ಅಹಂಮನ್ಯತೆ, ಬಾಹ್ಯಾಡಂಬರ, ಅಜ್ಞಾನ, ಅಲ್ಪಜ್ಞಾನ, ಅಸತ್ಯ, ಅಸಹನೆ, ವಿಷಮತೆ, ವಿಕಾರತೆಗಳ ಪರಮ ವೈರಿ. ನಿಷ್ಠುರವಾದಿ, ಸತ್ಯವಾದಿ. ಮಹಾಪ್ರವಾದಿ. ಬಸವಣ್ಣನವರ ವಿಚಾರಕ್ರಾಂತಿಗೆ ತನ್ನ ಜ್ಞಾನ ವೈರಾಗ್ಯಗಳ ಕಾಂತಿಯನ್ನಿತ್ತು ಅದನ್ನು ಮುನ್ನಡೆಸಿದ. ಕಲ್ಯಾಣದ ಧಾರ್ಮಿಕ ಕ್ರಾಂತಿಗೆ ಬೆನ್ನೆಲುಬಾದ. ಕಲ್ಯಾಣದಲ್ಲಿ ಕೆಲವು ಕಾಲ ಇದ್ದು ಎಲ್ಲ ಶಿವಶರಣರಿಗೂ ಕೇಂದ್ರ ವ್ಯಕ್ತಿಯಾಗಿ ಬಾಳಿ, ಅನಂತರ ತನ್ನ ಕರ್ತವ್ಯ ಮುಗಿಯುತ್ತ ಬಂದದ್ದನ್ನು ತಿಳಿದು ಶ್ರೀಶೈಲದತ್ತ ಹೊರಟು ಲಿಂಗಾಂಗಸಾಮರಸ್ಯದ ಕೊನೆಯ ನಿಲುವಿನಲ್ಲಿ ಕದಳಿಯಲ್ಲಿ ಲೀನವಾದ.

ಈತನ ಜೀವನಚರಿತ್ರೆ ಅನೇಕ ಕಡೆ ಅಸ್ಪಷ್ಟವಾಗಿದ್ದರೂ ಈತನ ವಚನಗಳಲ್ಲಿ ಮೂಡಿ ನಿಂತಿರುವ ಅನುಭವದ ಚಿತ್ರ ಅತ್ಯುಜ್ವಲವಾಗಿದೆ. ಗುಹೇಶ್ವರ ಎಂಬ ಅಂಕಿತವನ್ನಿಟ್ಟುಕೊಂಡು ನೂರಾರು ವಚನಗಳನ್ನು ರಚಿಸಿದ್ದಾನೆ. ಇವನ ಮಾತುಗಳು ನೇರ, ನಿಷ್ಠುರ ಭಾಷೆಯ ಅನಂತ ಸಾಧ್ಯತೆಗಳನ್ನು ಇವನ ವಚನಗಳಲ್ಲಿ ಕಾಣಬಹುದಾಗಿದೆ. ಕನ್ನಡ ಭಾಷೆ ಒಂದು ವಿಶೇಷ ಶಕ್ತಿಯನ್ನು ಈತನಿಂದ ಪಡೆಯಿತು. ಈತನ ಬೆಡಗಿನ ವಚನಗಳು ಕ್ಲಿಷ್ಟವಾಗಿದ್ದರೂ ಅನುಭವದ ಸಂಪತ್ತಿಯಿಂದಲೂ ಅಲಂಕಾರ, ಉಪಮಾನ, ಹೋಲಿಕೆ, ಗಾದೆಯಂಥ ಸೂತ್ರರೂಪದ ಮಾತಗಳಿಂದಲೂ ಉಜ್ವಲವಾಗಿದ್ದು ಪರಿಣಾಮಕಾರಿಯಾಗಿವೆ.

'ಹೊನ್ನು ಮಾಯೆಯೆಂಬರು ಹೆಣ್ಣು ಮಾಯೆಯೆಂಬರು ಮಣ್ಣು ಮಾಯೆಯೆಂಬರು ಹೊನ್ನು ಮಣ್ಣು ಹೆಣ್ಣು ಮಾಯೆಯಲ್ಲ ಮನದ ಮುಂದಣ ಆಶೆಯೇ ಮಾಯೆ ಕಾಣ ಗುಹೇಶ್ವರ; ಪ್ರಾಣಲಿಂಗಕ್ಕೆ ಕಾಯವೇ ಸೆಜ್ಜೆ, ಆಕಾಶಗಂಗೆಯಲ್ಲಿ ಮಜ್ಜನ; ಬೆಟ್ಟಕ್ಕೆ ಚಳಿಯಾದೊಡೆ ಏನ ಹೊದಿಸುವರಯ್ಯ; ಕೆಂಡದ ಗಿರಿಯ ಮೇಲೊಂದು ಅರಗಿನ ಕಂಭವಿದ್ದುದ ಕಂಡೆ ಅರಗಿನ ಕಂಭದ ಮೇಲೆ ಒಂದು ಹಂಸವಿದ್ದುದ ಕಂಡೆ ಕಂಭ ಬೆಂದು ಹಂಸೆ ಹಾರಿತ್ತು; ಊರದ ಚೇಳಿನ ಏರದ ಬೇನೆಯಲ್ಲಿ ಮೂರುಲೋಕವೆಲ್ಲಾ ನರಳಿತ್ತು'-ಮುಂತಾದ ವಚನಗಳು ಅನುಭವದ ತೀವ್ರತೆಯನ್ನು ಮಾತಿನಲ್ಲಿ ಸಾಧಿಸುವ ಶಕ್ತಿಗೆ ಉಜ್ವಲ ಸಾಕ್ಷಿಗಳಾಗಿವೆ. ಸಾಧಕನಾಗಿ ಸಿದ್ಧನಾಗಿ ಅನುಭಾವಿಯಾಗಿ ಕವಿಯಾಗಿ ಕಾವ್ಯದ ಮಟ್ಟವನ್ನು ಮೀರಿನಿಂತ ಪ್ರವಾದಿಯಾಗಿ ಸಮಾಜಸುಧಾರಕನಾಗಿ ಸಮಾಜವನ್ನು ವ್ಯಾಪಿಸಿ ಆಚೆನಿಂತ ಜಂಗಮನಾಗಿ-ಸಂಕೀರ್ಣ ವ್ಯಕ್ತಿತ್ವವನ್ನು ಪಡೆದು ಬಾಳಿದ ಮಹಾಯೋಗಿಯಾಗಿ ಅಲ್ಲಮ ಕಂಡುಬರುತ್ತಾನೆ. ಈತನ ವಚನರಚನೆ ಕನ್ನಡ ವಾಙ್ಮಯಕ್ಕೆ ಅಸಾಧಾರಣ ತೇಜಸ್ಸುಳ್ಳ ಕಾಣಿಕೆಗಳಾಗಿವೆ. ಈತನನ್ನು ಕುರಿತಾದ ಗ್ರಂಥಗಳು ಕನ್ನಡ, ತೆಲುಗು, ತಮಿಳು, ಸಂಸ್ಕೃತ ಮತ್ತು ಮರಾಠಿ ಭಾಷೆಗಳಲ್ಲಿ ರಚಿತವಾಗಿರುವುದು ಈತನ ಮಹಾವ್ಯಕ್ತಿತ್ವಕ್ಕೆ

ನಿದರ್ಶನಗಳಾಗಿವೆ. (ಜೆ.ಎಸ್.ಪಿ.ಎವ್.)

**ಅವಿನೀತ :** ತಲಕಾಡಿನ ಗಂಗ ಅರಸ (ಸು.469-529). 3ನೆಯ ಮಾಧವ ಇವನ ತಂದೆ, ತಾಯಿ ಕದಂಬಕುಲದ 1ನೆಯ ಕೃಷ್ಣವರ್ಮನ ಸೋದರಿ. ಇನ್ನೂ ಹಸುಳೆಯಾಗಿ ತಾಯಿಯ ತೊಡೆಯಲ್ಲಿದ್ದಾಗಲೇ ಇವನಿಗೆ ರಾಜ್ಯಾಭಿಷೇಕವಾಯಿತು ಎಂದು (ಜನನೀದೇವತಾಂಗಪರ್ಯ್ಯಂಕತಲ ಸಮಧಿಗತರಾಜ್ಯವಿಭವವಿಲಾಸ) ಈತನ ನೊಣಮಂಗಲ ಶಾಸನದಲ್ಲಿ ಹೇಳಿದೆ. ಈ ಶಾಸನದ ಕಾಲ ಈತನ ಆಳ್ವಿಕೆಯ ಒಂದನೆಯ ವರ್ಷವೆಂದು ಹೇಳಿದೆ. ಶಾಸನದಲ್ಲಿ ಈತನನ್ನು ಲಲನೆಯರನ್ನು ಆಕರ್ಷಿಸುತ್ತಿದ್ದ. ಶೌರ್ಯಸಾಹಸಗಳಲ್ಲಿ ಇಂದ್ರಸಮಾನ. ಹಯ ಗಜಗಳನ್ನು ನಿರ್ದೇಶಿಸುವಲ್ಲಿ, ಬಿಲ್ಲನ್ನುಪಯೋಗಿಸುವುದರಲ್ಲಿ ಅದ್ವಿತೀಯ ಎಂದೆಲ್ಲಾ ವರ್ಣಿಸಿದೆ. ಬಾಲ್ಯದಲ್ಲಿಯೇ ಪಟ್ಟಾಭಿಷಿಕ್ತನಾದರೂ ವರ್ಷಗಳನಂತರವೇ ಈತನ ಆಳ್ವಿಕಯೆ ಕಾಲವನ್ನು ಗಣನೆಗೆ ತಂದುಕೊಳ್ಳಬೇಕಾಗಬಹುದು. ಆದ್ದರಿಂದ ಇವನ ರಾಜ್ಯಾಭೀಷೆಕ 495ರಲ್ಲಿ ಆಯಿತೆಂದು ಒಂದು ಅಭಿಪ್ರಾಯ. ಇದು 469ರಲ್ಲಿ ಆಗಿರಬಹುದೆಂದು, ಈತನ ಆಳ್ವಿಕೆಯ ಕಾಲ 469-529 ಎಂದು ಪರಿಗಣಿಸಬಹುದು. ಆದರೆ ಇವನು ರಾಜ್ಯದ ಆಡಳಿತ ಸೂತ್ರಗಳನ್ನು ಹಿಡಿದುದು ಬಹುಶಃ ಈತನ 20ನೆಯ ವಯಸ್ಸಿನಲ್ಲಿ (489) ಎನ್ನಬಹುದು.

ರಾಜ್ಯಾಭಿಷೇಕ ಸಮಯದಲ್ಲಿ ಇನ್ನೂ ಈತ ಶೈಶವಾವಸ್ಥೆಯಲ್ಲಿದ್ದದ್ದನ್ನು ಗಮನಿಸಿ ಗಂಗರ ಸಾಮಂತರು ಕೆಲವರು ಸ್ವತಂತ್ರರಾಗಲು ಹವಣಿಸಿದಂತೆ ತೋರುತ್ತದೆ. ಆದರೆ ಈತನ ಸಹಾಯಕರು ಅವರನ್ನು ಯಶಸ್ವಿಯಾಗಿ ಸೋಲಿಸಿದರು. ತಾನು ಪ್ರೌಢಾವಸ್ಥೆಗೆ ಬಂದ ಮೇಲೆ ಶಕ್ತಿ ಸಾಮರ್ಥ್ಯಗಳಿಂದ ರಾಜ್ಯಾಭಿವೃದ್ಧಿಗೆ ಕಾರಣನಾಗಿ ಪ್ರಜಾನುರಾಗವನ್ನು ಗಳಿಸಿ ದುಷ್ಟಶಿಕ್ಷಕ ಶಿಷ್ಟರಕ್ಷಕನಾಗಿ ಅಪರಾಧಿಗಳನ್ನು ಯಥಾರ್ಹವಾಗಿ ದಂಡಿಸಿ ಕಲಿಯುಗ ಯುಧಿಷ್ಠಿರನೆಂದು ಹೆಸರು ಗಳಿಸಿದ. ಶಾಸನವೊಂದರಲ್ಲಿ ಈತನ ಬೃಹದ್ದೇವಿಯ ಪ್ರಸ್ತಾಪವಿದೆ. ಬಹುಶಃ ಈಕೆ ಅಗ್ರಮಹಿಷಿಯಾಗಿದ್ದು, ಇನ್ನೂ ಇತರ ಪತ್ನಿಯರು ಈತನಿಗಿದ್ದಿರಬೇಕು. ಈತನ ಮಗ ದುರ್ವಿನೀತ ಪುನ್ನಾಟ ರಾಜಪುತ್ರಿ ಜೇಷ್ಠಾದೇವಿಯ ಮಗ. ಈಕೆಯೇ ಅವಿನೀತನ ಅಗ್ರಮಹಿಷಿ ಎಂದು ಊಹಿಸಲಾಗಿದೆ. ಆದರೆ ಅವಿನೀತ ಇನ್ನೊಬ್ಬ ಮಗನಿಗೆ ಪಟ್ಟಕಟ್ಟಲು ಯತ್ನಿಸಿದಾಗ ರಾಜ್ಯಲಕ್ಷ್ಮಿ ಸ್ವತಃ ದುರ್ವಿನೀತನನ್ನು ವರಿಸಿದಳೆಂಬ ಮತ್ತು ವೈಮಾತ್ರೇಯಾನುಜ (ಮಲಸೋದರ)ನಿಗೆ ಹೋಗಿದ್ದ ರಾಜ್ಯವನ್ನು ದುರ್ವಿನೀತ ಕಸಿದುಕೊಂಡನೆಂಬ ಶಾಸನೋಕ್ತ ಹೇಳಿಕೆಗಳನ್ನಾಧರಿಸಿ ಅವಿನೀತ ದುರ್ವಿನೀತನನ್ನು ಕಾರಣಾಂತರಗಳಿಂದ ತನ್ನ ಉತ್ತರಾಧಿಕಾರಿಯಾಗಿ ನೇಮಿಸಲು ಒಪ್ಪಿರಲ್ಲಿಲ್ಲವೆಂದು ಹೇಳಬಹುದು. (ಬಿ.ಆರ್.ಜಿ.)

**ಅಶೋಕ :** ಪಾಟಲಿಪುತ್ರದ ಮೌರ್ಯ ರಾಜವಂಶದಲ್ಲಿ ಮೂರನೆಯವನಾದ ಈತ ಕರ್ನಾಟಕದ ಇತಿಹಾಸದಲ್ಲಿ ಖಚಿತವಾಗಿ ಕಾಣಿಸಿಕೊಳ್ಳುವ ಮೊದಲ ದೊರೆ (ಕ್ರಿ.ಪೂ.272-32). ರಾಯಚೂರು ಜಿಲ್ಲೆಯ ಮಸ್ಕಿ ಮತ್ತು ಕೊಪ್ಪಳ, ಗುಲ್ಬರ್ಗ ಜಿಲ್ಲೆಯ ಸನ್ನತಿ, ಬಳ್ಳಾರಿ



ಮಸ್ಕಿ ಶಾಸನ

ಜಿಲ್ಲೆಯ ನಿಟ್ಟೂರು ಮತ್ತು ಉದೆಗೊಳಂ, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ದಾಪುರ ಮತ್ತು ಜಟಿಂಗ ರಾಮೇಶ್ವರ - ಈ ಸ್ಥಳಗಳಲ್ಲಿ ಇವನ ಶಾಸನಗಳು ದೊರಕಿರುವುದರಿಂದ ಕರ್ನಾಟಕದ ಉತ್ತರದ ಭಾಗ ಇವನ ರಾಜ್ಯಕ್ಕೆ ಸೇರಿತ್ತೆಂಬುದು ಸ್ಪಷ್ಟ. ಕರ್ನಾಟಕದ ಇತರ ಭಾಗಗಳೂ ಇವನ ರಾಜ್ಯದಲ್ಲಿದ್ದುವೇ ಎಂಬುದು ಸರಿಯಾಗಿ ತಿಳಿದಿಲ್ಲ. ಚೋಳ, ಪಾಂಡ್ಯ, ಕೇರಳಪುತ, ಸತಿಯಪುತ - ಇವರ ರಾಜ್ಯಗಳು, ಇವನ ರಾಜ್ಯದ ಹೊರಗಿದ್ದುವೆಂದು ಇವನ 13ನೆಯ ಪ್ರಸ್ತರ ಶಾಸನದಿಂದ ತಿಳಿಯುವುದರಿಂದ ಹಾಗೂ ಆ ರಾಜ್ಯಗಳು ಅನೂಚಾನವಾಗಿ ತಮಿಳುನಾಡು, ಕೇರಳದ ಭಾಗಗಳಿಗೆ ಸೀಮಿತವಾಗಿದ್ದರಿಂದ, ದಕ್ಷಿಣಕರ್ನಾಟಕ ಸಹ ಅಶೋಕನ ಸಾಮ್ರಾಜ್ಯದಲ್ಲಿಯೇ ಇತ್ತೆಂದು ಊಹಿಸಲು ಅವಕಾಶವಿದೆ. ಸತಿಯಪುತರು ದಕ್ಷಿಣ ಕನ್ನಡ ಜಿಲ್ಲೆಯ ಭಾಗದಲ್ಲಿದ್ದವರು ಎಂದೂ ಕೇರಳಪುತರ ರಾಜ್ಯ ಕೊಡಗು ಮೈಸೂರು ಜಿಲ್ಲೆಗಳ ಪ್ರದೇಶಗಳನ್ನು ಒಳಗೊಂಡಿತ್ತು ಎಂದೂ ಕೆಲವು ವಿದ್ವಾಂಸರು ಊಹಿಸಿರುವುದರಿಂದ ವಿಷಯ ಸ್ವಲ್ಪ ಕ್ಲಿಷ್ಟವಾಗಿದೆ. ಸಂಘಂ ಸಾಹಿತ್ಯದಲ್ಲಿ ಒಂದೆಡೆ ಮೌರ್ಯರ ಸೈನ್ಯ ಬೇರೊಬ್ಬ ರಾಜನ ಆಕ್ರಮಣಕ್ಕಾಗಿ ಘಟ್ಟವನ್ನು ಇಳಿದುಹೋಗುತ್ತಿದ್ದ ಸಂದರ್ಭವೊಂದರ ಉಲ್ಲೇಖವಿರುವುದರಿಂದ ಪ್ರಾಯಶಃ ಕರ್ನಾಟಕದ ಪಶ್ಚಿಮ ಮತ್ತು ದಕ್ಷಿಣ ಬೆಟ್ಟ ಶ್ರೇಣಿಗಳವರೆಗೆ ಅಂದರೆ ಕರ್ನಾಟಕದ ಬಹುಭಾಗದಲ್ಲಿ ಅಶೋಕನ ಆಳ್ವಿಕೆ ಹಬ್ಬಿತ್ತೆಂದು ತರ್ಕಿಸಬಹುದು. ಈ ಭಾಗವನ್ನು ಅಶೋಕ ಸ್ವಶ್ರಮದಿಂದ ಸಾಧಿಸದೆ ತನ್ನ ಹಿರಿಯರಿಂದ ಪಡೆದಿರಬೇಕು.

**ಶಾಸನಗಳು :** ಕರ್ನಾಟಕದಲ್ಲಿ ದೊರೆತಿರುವ ಅಶೋಕನ ಎಲ್ಲ ಶಾಸನಗಳೂ ಲಘುಪ್ರಸ್ತರ ಲೇಖಗಳು. ಈ ಶಾಸನಗಳನ್ನು ಅಶೋಕ ತನ್ನ ಆಳ್ವಿಕೆಯ 11-12ನೆಯ ವರ್ಷದಲ್ಲಿ ಹೊರಡಿಸಿದನೆಂದು ಕೆಲವು ಆಧಾರಗಳಿಂದ ತಿಳಿದು ಬರುತ್ತದೆ. ಆದ್ದರಿಂದ ಇವುಗಳ ಕಾಲ ಕ್ರಿ.ಪೂ. 261-60. ಇವುಗಳಲ್ಲಿ ಉಪಯೋಗಿಸಿರುವ ಭಾಷೆ ಪ್ರಾಕೃತ, ಪ್ರಾಯಶಃ ಅಂದು ಮಗಧ ದೇಶದಲ್ಲಿ ರೂಢಿತವಾಗಿದ್ದ ರೀತಿಯದು. ಲಿಪಿ ಬ್ರಾಹ್ಮೀ. ಬ್ರಹ್ಮಗಿರಿ ಶಾಸನದ ಕೊನೆಯ ಸಾಲು ಮಾತ್ರ ಖರೋಷ್ಠೀ ಲಿಪಿಯಲ್ಲಿದೆ. ಕರ್ನಾಟಕದಲ್ಲಿ ದೊರೆತಿರುವ ಎಲ್ಲ ಶಾಸನಗಳ ವಸ್ತು ಒಂದೇ ಆದರೂ ಪಾಠದಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳು ಕಂಡುಬರುತ್ತವೆ.

ಕೊಪ್ಪಳದ ಬಳಿಯ ಗವಿಮಠದ ಶಾಸನ ಚೆನ್ನಾಗಿ ಉಳಿದಿರುವ ಶಾಸನಗಳಲ್ಲೊಂದು. ಇದು 'ದೇವಾನಾಂಪ್ರಿಯ ಹೇಳುತ್ತಾನೆ' ಎಂದು ಆರಂಭವಾಗುತ್ತದೆ.

ಮುಂದಿನ ಭಾಗ ಹೀಗಿದೆ: "ಎರಡೂವರೆ ವರ್ಷಗಳಿಂದ ನಾನು ಉಪಾಸಕನಾಗಿದ್ದೆ, ಆದರೆ ನಾನು (ಧರ್ಮಕ್ಕಾಗಿ) ಅಷ್ಟಾಗಿ ಶ್ರಮಿಸಲಿಲ್ಲ. (ಆದರೆ ಈಗ) ಒಂದು ವರ್ಷಕ್ಕಿಂತ ಹೆಚ್ಚು ಕಾಲದಿಂದ ನಾನು ಸಂಘದ ಜೊತೆ ಸೇರಿದ ಮೇಲೆ ಹೆಚ್ಚು ಶ್ರಮಿಸಿದ್ದೇನೆ. ಆದ್ದರಿಂದ ಇದುವರೆಗೆ ಯಾವ ಜಂಬುದ್ವೀಪದ ಜನರು ದೇವರೊಡನೆ ಬೆರೆಯುತ್ತಿಲ್ಲವೋ ಈಗ ಅವರು ಬೆರೆಯುವಂತೆ ಮಾಡಿದ್ದೇನೆ. ಇದು ಶ್ರಮದ ಫಲ. ಈ ಫಲವನ್ನು ಕೇವಲ ಉತ್ತಮ ಸ್ಥಿತಿಯಲ್ಲಿರುವವರಷ್ಟೆ (ಮಹತೇನ) ಗಳಿಸಬಲ್ಲರೆಂಬುದಿಲ್ಲ. ಕೆಳಸ್ಥಿತಿಯಲ್ಲಿರುವವರೂ (ಖುದಕೇನ) ಸಹ (ಧರ್ಮಶ್ರದ್ಧೆಯಿಂದ) ಶ್ರಮಿಸಿದರೆ ಸ್ವರ್ಗವನ್ನು ಗಳಿಸಬಹುದು. ಇದಕ್ಕಾಗಿ ಈ (ಹೇಳಿಕೆ); ಕೆಳಗಿನವರು ಮೇಲಿನವರು ಎಲ್ಲಾ ಉತ್ಸಾಹದಿಂದ ಶ್ರಮಿಸಲಿ. ಶ್ರಮಿಸುವುದು ಬಹುಕಾಲ ಉಳಿಯುವಂಥದೆಂದು ಅಂತರು (ರಾಜ್ಯದ ಹೊರಗಿನವರು) ಸಹ ತಿಳಿಯಲಿ, ಈ ವಿಷಯ (ಧರ್ಮಶ್ರದ್ಧೆ) ಬೆಳೆಯಲಿ, ವಿಸ್ತಾರವಾಗಲಿ (ಈಗಿಗಿಂತ) ಒಂದೂವರೆಯಷ್ಟಾಗಲಿ". ಕೊಪ್ಪಳದ ಪಾಲ್ಕಿಗುಂಡು ಬಂಡೆಯ ಮೇಲಿದ್ದ ಇನ್ನೊಂದು ಶಾಸನದಲ್ಲೂ ಇದೇ ಪಾಠವಿದ್ದಂತೆ ತೋರುತ್ತದೆ. ಆದರೆ ಇದು ಬಹು ಸವೆದಿದೆ.

ಮಸ್ಕಿಯ ಶಾಸನದಲ್ಲಿ ಇದೇ ವಿಷಯವನ್ನು ಮತ್ತಷ್ಟು ಸಂಗ್ರಹವಾಗಿ ಹೇಳಲಾಗಿದೆ. ಇದರ ಆರಂಭದಲ್ಲಿ ದೇವಾನಾಂಪ್ರಿಯ ಅಶೋಕ ಹೀಗೆ ಹೇಳುತ್ತಾನೆ ಎಂದು ಇದೆ. ಅಶೋಕನ ಶಾಸನಗಳಲ್ಲೆಲ್ಲ ಅವನನ್ನು ದೇವಾನಾಂಪ್ರಿಯ ಎಂದೇ ಹೆಸರಿಸುವುದು ಸಾಮಾನ್ಯವಾದರೆ, ಅವನ ಸ್ವಂತ ಹೆಸರನ್ನೂ ಜೊತೆಗೆ ಉಲ್ಲೇಖಿಸಿರುವ ಕೆಲವೇ ಶಾಸನಗಳಲ್ಲಿ ಇದೂ ಒಂದು. ಬೌದ್ಧನೆಲೆಯಾಗಿದ್ದ ಸನ್ನತಿಯಲ್ಲಿ ಅನ್ವೇಷಿತವಾದ ಪ್ರಧಾನ ಪ್ರಸ್ತರಶಾಸನಗಳು (12 ಮತ್ತು 14) ಹಾಗೂ ವಿಶೇಷ ಪ್ರಸ್ತರಶಾಸನಗಳು (1 ಮತ್ತು 2) ಗ್ರಾನೈಟ್ ಶಿಲೆಯ ಫಲಕದ ಮೇಲೆ ಕಂಡರಿಸಲ್ಪಟ್ಟಿರುವುದು ಇತಿಹಾಸ ವಿದ್ವಾಂಸರಲ್ಲಿ ಕುತೂಹಲ ಕೆರಳಿಸಿದೆ. ಈ

ಶಾಸನಗಳು ಇದುವರೆಗೆ ಸುಪರಿಚಿತವಾದ ಅಶೋಕನ ಶಾಸನಗಳ ವರ್ಗೀಕರಣಕ್ಕೆ ಹೊಂದುವುದಿಲ್ಲ. ತಮ್ಮದೇ ವರ್ಗವೊಂದನ್ನು ಸೃಜಿಸಿವೆ.

ಬ್ರಹ್ಮಗಿರಿ, ಸಿದ್ದಾಪುರ ಮತ್ತು ಜಟಿಂಗ ರಾಮೇಶ್ವರದ ಶಾಸನಗಳು ಕೇವಲ ಮೂರು ಕಿಮೀ ಫಾಸಲೆಯೊಳಗೇ ಇವೆ. ಬ್ರಹ್ಮಗಿರಿಯ ಶಾಸನ ಚೆನ್ನಾಗಿದೆ. ಜಟಿಂಗರಾಮೇಶ್ವರದ್ದು ಸವೆದಿದೆ. ನಿಟ್ಟೂರು, ಉದೇಗೊಳಂ ಹಾಗೂ ಸಿದ್ದಾಪುರದವು ಸುಮಾರಾಗಿವೆ. ಸನ್ನತಿಯ ಶಾಸನಗಳ ಹೆಚ್ಚಿನ ಭಾಗ ನಾಶವಾಗಿವೆ. ಇವೆಲ್ಲವುಗಳಲ್ಲೂ ಕಾಣುವ ಪಾಠ ಸುಮಾರು ಒಂದೇ ರೀತಿಯದು. ಬ್ರಹ್ಮಗಿರಿಯ ಶಾಸನ ಸುವರ್ಣಗಿರಿಯ ಆಯಪುತ ಮತ್ತು ಮಹಾಮಾತರು ಇಸಿಲದ ಮಹಾಮಾತರ ಕುಶಲವನ್ನು ವಿಚಾರಿಸುತ್ತಾರೆ ಎಂದು ಆರಂಭವಾಗುತ್ತದೆ. ಮುಂದಿನ ಭಾಗದಲ್ಲಿರುವುದು ಗವಿಮಠ ಶಾಸನದಲ್ಲಿರುವುದೇ. ಆದರೆ ಬ್ರಹ್ಮಗಿರಿ ಗುಂಪಿನ ಶಾಸನಗಳಲ್ಲಿ ಒಂದೆರಡೆಡೆ ಸ್ವಲ್ಪ ವಿವರಗಳಿವೆ. ಉದಾಹರಣೆಗೆ, ಎರಡೂವರೆ ವರ್ಷಗಳಿಂದ ಉಪಾಸಕನಾಗಿದ್ದೆ ಎಂದು ಹೇಳುವ ಮೊದಲ ಭಾಗದ ಜೊತೆಯಲ್ಲಿ 'ಆದರೆ ಒಂದು ವರ್ಷ (ಧರ್ಮಕ್ಕಾಗಿ) ಅಷ್ಟು ಶ್ರಮಿಸಲಿಲ್ಲ' ಎಂದಿದೆ. ನನ್ನ ರಾಜ್ಯದ ಹೊರಗಿನವರೂ ಶ್ರಮಿಸಲಿ ಎಂದು ಹೇಳಿದಮೇಲೆ "ಇದು (ಶಾಸನ) ನಾನು 256 ರಾತ್ರಿಗಳನ್ನು ಪ್ರವಾಸದಲ್ಲಿ ಕಳೆದಿದ್ದಾಗ ಹೊರಡಿಸಲಾಯಿತು" ಎಂಬ ವಿಷಯವಿದೆ. ಅಲ್ಲದೆ ಇದೇ ವಿಷಯದ ಮುಂದುವರಿಕೆಯಾಗಿ ಮತ್ತಷ್ಟು ವಿಷಯ ಸಹ ಶಾಸನದಲ್ಲಿ ಕಂಡುಬರುತ್ತದೆ. ಆ ಭಾಗ ಹೀಗಿದೆ" ಈ ಬಗ್ಗೆ (ಮೇಲೆ ಹೇಳಿದ ವಿಷಯದಲ್ಲಿ) ದೇವನಾಂಪ್ರಿಯನು ಹೀಗೆ ಹೇಳುತ್ತಾನೆ. ಪ್ರತಿಯೊಬ್ಬನೂ ತನ್ನ ತಂದೆತಾಯಿಗಳನ್ನೂ ಹಿರಿಯರನ್ನೂ ಗೌರವಿಸಬೇಕು. ಇತರ ಜೀವಿಗಳ ಬಗ್ಗೆ ನಿಷ್ಠೆಯಿಂದ ಕರುಣೆ ತೋರಬೇಕು. ಸತ್ಯವನ್ನು ನುಡಿಯಬೇಕು. ಈ ರೀತಿಯಲ್ಲಿ ಧರ್ಮದ ಗುಣವನ್ನು ಪ್ರತಿಪಾದಿಸಬೇಕು. ಇದೇ ರೀತಿಯಲ್ಲಿ ಶಿಷ್ಯರು ಗುರುಗಳನ್ನು ಗೌರವಿಸಬೇಕು. ಬಂಧುಗಳೊಡನೆ ಸಹ ಇದೇ ನಡೆವಳಿಕೆ ಸರಿಯಾದ ರೀತಿಯಲ್ಲಿ ಇರಬೇಕು. ಇದು ಪ್ರಾಚೀನ ಕಾಲದಿಂದ ಇದ್ದ ಸೂಕ್ತಿ. ಈ ನೀತಿ ಬಹುಕಾಲ ಉಳಿಯುವಂಥದು. ಪ್ರತಿಯೊಬ್ಬನೂ ಈ ರೀತಿಯೇ ವರ್ತಿಸಬೇಕು. ಶಾಸನದ ಕೊನೆಯಲ್ಲಿ 'ಚಪಡನೆಂಬ ಲೇಖಕ ಇದನ್ನು ಬರೆದ' ಎಂದು ಹೇಳಿದೆ.

ಗವಿಮಠ, ಪಾಲ್ಕಿಗುಂಡು, ಮಸ್ಕಿಯ ಶಾಸನಗಳು ಮತ್ತು ಅದೇ ವಿಷಯವಿರುವ ಬ್ರಹ್ಮಗಿರಿ, ಸಿದ್ದಾಪುರ, ಜಟಿಂಗರಾಮೇಶ್ವರ ಶಾಸನಗಳ ಮೊದಲ ಭಾಗವನ್ನು ಒಂದನೆಯ ಲಘುಪ್ರಸ್ತರ ಶಾಸನ ಎಂದೂ ಬ್ರಹ್ಮಗಿರಿ ಗುಂಪಿನ ಶಾಸನಗಳಲ್ಲಿ ಮುಂದೆ ಇರುವ ಹೆಚ್ಚಿನ ಭಾಗವನ್ನು ಎರಡನೆಯ ಲಘುಪ್ರಸ್ತರ ಶಾಸನ ಎಂದು ನಿರ್ದೇಶಿಸುವ ರೂಢಿ ಇದೆ. ನಿಟ್ಟೂರು ಮತ್ತು ಉದೆಗೊಳಂಗಳಲ್ಲಿ ದೊರೆತಿರುವುದು ಲಘುಪ್ರಸ್ತರ ಶಾಸನಗಳೇ.

**ಆಡಳಿತ :** ಅಶೋಕನ ಶಾಸನಗಳಲ್ಲಿ ಹೇಳಿರುವ ವಿಷಯಗಳು ಭಾರತದ ಇತರೆಡೆಗಳಲ್ಲೂ ಕಂಡುಬರುವಂಥ'ವಾಗಿದ್ದು ಅವುಗಳಿಂದ ಇಲ್ಲಿದ್ದ ಸಮಕಾಲೀನ ಸ್ಥಿತಿಗತಿಗಳ ಬಗ್ಗೆ ಹೆಚ್ಚಿನ ವಿಷಯಗಳೇನೂ ದೊರಕುವುದಿಲ್ಲ.



ಬ್ರಹ್ಮಗಿರಿ ಶಾಸನ

ಸುವರ್ಣಗಿರಿ ಬಹುಶಃ ಕರ್ನೂಲು ಜಿಲ್ಲೆಯ ಎರ್ರಗುಡಿ ಮಗಧ ಸಾಮ್ರಾಜ್ಯದ ದಕ್ಷಿಣದ ಆಡಳಿತ ಕೇಂದ್ರವಾಗಿದ್ದು ಅಲ್ಲಿ ಆರ್ಯಪುತ್ರ ಬಹುಶಃ ರಾಜವಂಶದ ಒಬ್ಬ ವ್ಯಕ್ತಿ ಮತ್ತು ಮಹಾಮಾತ್ರರು ಅಧಿಕಾರ ನಡೆಸಿತ್ತಿದ್ದರು, ಇಸಿಲವೆಂದು ಹೆಸರಿದ್ದ ಬ್ರಹ್ಮಗಿರಿ ಪರಿಸರದಲ್ಲಿದ್ದ ಊರು ಆ ಕಾಲದ ಮುಖ್ಯಪಟ್ಟಣಗಳಲ್ಲೊಂದಾಗಿತ್ತು. ಅಲ್ಲಿಯೂ ಮಹಾಮಾತ್ರರೆಂಬ ಅಧಿಕಾರಿಗಳು ಇರುತ್ತಿದ್ದರೆಂದು ಊಹಿಸಬಹುದಾಗಿದೆ.

**ಧರ್ಮ :** ಬೌದ್ಧಧರ್ಮ ಕರ್ನಾಟಕದಲ್ಲಿ ಹರಡಲು ಅಶೋಕ ಮುಖ್ಯ ಕಾರಣನಾಗಿರಬೇಕು. ಇವನ ಕಾಲದಲ್ಲಿ ಇವನು ವ್ಯವಸ್ಥೆ ಮಾಡಿದ್ದ ಬೌದ್ಧ ಮಹಾಸಭೆಯ ಅಧ್ಯಕ್ಷನಾಗಿದ್ದ ಮೊಗ್ಗಲಿಪುತ್ತ ತಿಸ್ಸ ಎಂಬುವನನ್ನು ಬೌದ್ಧಧರ್ಮ ಪ್ರಸಾರಕ್ಕಾಗಿ ಥೇರರಖ್ಖಿತ ಎಂಬುವನನ್ನು ವನವಾಸಿಗೆ



ಸನ್ನತಿ ಶಾಸನ

(ಇಂದಿನ ಬನವಾಸಿ) ಮತ್ತು ಥೇರ ಮಹದೇವ ಎಂಬುವನನ್ನು ಮಹಿಷಮಂಡಲಕ್ಕೆ (ದಕ್ಷಿಣ ಕರ್ನಾಟಕದ ಭಾಗ) ಕಳುಹಿಸಿದನೆಂದು ಮಹಾವಂಶ ಮತ್ತು ದೀಪವಂಶ ಎಂಬ ಸಿಂಹಳದ ಪ್ರಾಚೀನ ಬೌದ್ಧ ಗ್ರಂಥ'ಗಳು ಹೇಳಿವೆ. ಇದೇ ವಿಷಯ ಮಿಳಿಂದಪಣ್ಹ, ಧೂಪವಂಶ, ಸದ್ಧರ್ಮಸಂಗ್ರಹ ಮತ್ತು ಸಮಂತಪಾಸಾದಿಕಾ ಮುಂತಾದ ಗ್ರಂಥಗಳಿಂದಲೂ ತಿಳಿಯುತ್ತದೆ. 7ನೆಯ ಶತಮಾನದಲ್ಲಿ ಕರ್ನಾಟಕಕ್ಕೆ ಬಂದಿದ್ದ ಹ್ಯೂಯೆನ್ ತ್ಸಾಂಗ್ ಕೊಂಕಣಪುರದಲ್ಲಿ (ಈಗಿನ ಬನವಾಸಿ ಎಂದು ಊಹೆ) ಅಶೋಕ ಕಟ್ಟಿದ ಸ್ತೂಪಗಳು ಇವೆ ಎಂದು ಹೇಳಿದ್ದಾನೆ. *

**ಅಶೋಕ ಪೈ, ಕೆ.ಎ. :** 1946-. ಪ್ರಸಿದ್ಧ ಚಿಕಿತ್ಸಕ ಮನೋವಿಜ್ಞಾನಿ, ಲೇಖಕ, ಸಮಾಜಸೇವಕ ಹಾಗೂ ಚಲನಚಿತ್ರ ಸಾಹಿತಿ, ನಿರ್ಮಾಪಕ. 1946 ಡಿಸೆಂಬರ್ 30ರಂದು ಶಿವಮೊಗ್ಗದಲ್ಲಿ ಜನಿಸಿದರು. ತಂದೆ ಕಟೀಲು ಅಪ್ಪುಪೈ, ತಾಯಿ ವಿನೋದಾಬಾಯಿ. ಅಶೋಕ ಪೈ ಅವರ ಆರಂಭಿಕ ಶಿಕ್ಷಣ ಶಿವಮೊಗ್ಗದ ಮೇರಿ ಇಮ್ಯಾಕ್ಯುಲೇಟ್ ಕಾನ್ವೆಂಟ್, ದೇಶೀಯ ವಿದ್ಯಾಶಾಲೆ ಮತ್ತು ಸಹ್ಯಾದ್ರಿ ಕಾಲೇಜುಗಳಲ್ಲಿ ನಡೆಯಿತು. ವೈದ್ಯಕೀಯ ಶಿಕ್ಷಣವನ್ನು ಬೆಳಗಾಂವಿಯ ಜವಾಹರಲಾಲ ನೆಹರು ವೈದ್ಯಕೀಯ ವಿದ್ಯಾಲಯದಲ್ಲಿ ಮುಗಿಸಿದರು. ಚಿಕಿತ್ಸಕ ಮನೋವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿಯನ್ನು ನಿಮ್ಹಾನ್ಸ್‌ನಿಂದ ಪಡೆದರು. ಅನಂತರ ವರ್ತನಾ ವೈದ್ಯಕೀಯ ಸಲಹೆ ಮತ್ತು ಮಾನಸಿಕ ಚಿಕಿತ್ಸೆಯಲ್ಲಿ ಫೆಲೋಶಿಪ್ ಮತ್ತು ಡಿಪ್ಲೊಮೊಗಳನ್ನು ಅಮೆರಿಕದ ಪ್ರತಿಷ್ಠಿತ ಅಂತಾರಾಷ್ಟ್ರೀಯ ಅಕಾಡೆಮಿ ಆಫ್ ಬಿಹೇವಿಯರಲ್ ಮೆಡಿಸನ್ (ಡಲ್ಲಾಸ್) ಸಂಸ್ಥೆಯಿಂದ ಪಡೆದರು. ಜವಾಹರಲಾಲ ನೆಹರು ವೈದ್ಯಕೀಯ ಕಾಲೇಜಿನಲ್ಲಿ ಸೈಕೋ ಫಾರ್ಮಾಕಾಲಜಿ ಅಧ್ಯಾಪಕರಾಗಿ ಕೆಲಕಾಲ ಸೇವೆಸಲ್ಲಿಸಿದರು. ಮಣಿಪಾಲಿನ ಕಸ್ತೂರ ಬಾ ವೈದ್ಯಕೀಯ ವಿದ್ಯಾಲಯದ ಮನೋವೈದ್ಯಕೀಯ ವಿಭಾಗದಲ್ಲಿ ಸಹಪ್ರಾಧ್ಯಾಪಕರಾಗಿ ನೇಮಕಗೊಂಡರು (1974-75). ಶಿವಮೊಗ್ಗದ ಮೆಗ್ಗಾನ್ ಆಸ್ಪತ್ರೆಯಲ್ಲಿ ಮನೋವೈದ್ಯರಾಗಿ ದುಡಿದರು (1975-79). ಅನಂತರ

ಸರ್ಕಾರಿ ಕೆಲಸವನ್ನು ತ್ಯಜಿಸಿ ತಮ್ಮದೇ ಆದ ಮಾನಸ ನರ್ಸಿಂಗ್ ಹೋಂ ಶಿವಮೊಗ್ಗದಲ್ಲಿಯೇ ಪ್ರಾರಂಭಿಸಿದರು. ಇಂದು ಈ ನರ್ಸಿಂಗ್ ಹೋಂ ದಕ್ಷಿಣ ಭಾರತದ ಅತಿ ದೊಡ್ಡ ಮನೋರೋಗ ಚಿಕಿತ್ಸಾ ಕೇಂದ್ರವೆನಿಸಿದ್ದು ಅಂತಾರಾಷ್ಟ್ರೀಯ ಸಲಹಾ ಕೇಂದ್ರವಾಗಿಯೂ ಆಯ್ಕೆಗೊಂಡಿದೆ. ಪೈ ಅವರು ಅಮೆರಿಕದ ಕೊಲರಾಡೋ ವಿಶ್ವವಿದ್ಯಾಲಯದ ಅಂಗಸಂಸ್ಥೆ ಇಂಟರ್ ನ್ಯಾಷನಲ್ ಅಕಾಡೆಮಿ ಆಫ್ ಬಿಹೆವಿಯರಲ್ ಮೆಡಿಸಿನ್ ಕೌನ್ಸಿಲಿಂಗ್ ಅಂಡ್ ಸೈಕೋ ಥೆರಪಿ ಸಂಸ್ಥೆಯ ಅಂತಾರಾಷ್ಟ್ರೀಯ ಪ್ರಾಂತೀಯ ಉಪಾಧ್ಯಕ್ಷರಾಗಿ ನೇಮಕಗೊಂಡಿದ್ದಾರೆ.

ಇವರು ಕನ್ನಡದಲ್ಲಿ ಮನೋವಿಜ್ಞಾನಕ್ಕೆ ಸಂಬಂಧಿಸಿದಂತೆ ಹಲವು ವೈಚಾರಿಕ ಹಾಗೂ ಸೃಜನಶೀಲ ಕೃತಿಗಳನ್ನು ರಚಿಸಿದ್ದಾರೆ. ಮಾನಸ, ನಿಮ್ಮದು ಸಮಸ್ಯೆಯ ಮಗುವೇ, ಉಷಾಕಿರಣ, ಹಾಸ್ಯರಶ್ಮಿ, ಚಿತ್ತ ವಿಚಿತ್ರ, ಮನೋವೈಜ್ಞಾನಿಕ ಸತ್ಯ ಕಥೆಗಳು, ಆಶಾಕಿರಣ, ಮನೋಲೋಕ, ಮಕ್ಕಳ ಮನಸ್ಸು, ಆಘಾತ, ಚಿತ್ತಚೇತನ - ಇವು ಕೆಲವು ಮುಖ್ಯ ಕೃತಿಗಳು.

ಮಾನಸ ಚಿತ್ರ ನಿರ್ಮಾಣ ಸಂಸ್ಥೆಯ ಹೆಸರಿನಲ್ಲಿ ಇವರು ಕನ್ನಡ ಚಲನಚಿತ್ರಗಳನ್ನೂ ನಿರ್ಮಿಸಿದ್ದಾರೆ. ಮಾನಸಿಕ ಸಮಸ್ಯೆ ಕುರಿತಂತೆ ವೈಜ್ಞಾನಿಕವಾದ ಬೆಳಕು ಚೆಲ್ಲಿ ಸಮಾಜಕ್ಕೆ ಸಕಾರಾತ್ಮ ಸಂದೇಶ ನೀಡುವುದು ಇವರ ಉದ್ದೇಶ. ಇವರು ನಿರ್ಮಿಸಿದ ಕಾಡಿನ ಬೆಂಕಿ ಮನೋ ಲೈಂಗಿಕ ಸಮಸ್ಯೆಯನ್ನು ಕುರಿತದ್ದು. ಈ ಚಿತ್ರಕ್ಕೆ ರಾಜ್ಯ ಮತ್ತು ರಾಷ್ಟ್ರ ಪ್ರಶಸ್ತಿ ಲಭಿಸಿದೆ (1988-89). ಮಕ್ಕಳ ಮಾನಸಿಕ ಸಮಸ್ಯೆ ಕುರಿತಂತೆ ನಿರ್ಮಿಸಲಾದ ಉಷಾಕಿರಣ ರಾಜ್ಯ ಪ್ರಶಸ್ತಿಯನ್ನೂ ಪ್ರತಿಷ್ಠಿತ ಫಿಲ್ಮ್‌ಫೇರ್ ಪ್ರಶಸ್ತಿಯನ್ನೂ ಗಳಿಸಿದೆ. ಈ ಚಿತ್ರ ಲಂಡನ್ ಮತ್ತು ಅಮೆರಿಕದಲ್ಲಿ ಜರುಗಿದ ಅಂತಾರಾಷ್ಟ್ರೀಯ ಮಕ್ಕಳ ಚಲನಚಿತ್ರೋತ್ಸವದಲ್ಲೂ ಪ್ರದರ್ಶನಗೊಂಡಿತು (1995). ಆಘಾತ ಇವರ ಇನ್ನೊಂದು ಚಿತ್ರ. ಇದಕ್ಕೆ ವಿಶೇಷ ರಾಜ್ಯ ಪ್ರಶಸ್ತಿ ಲಭಿಸಿದೆ. ಇವರು ದೂರದರ್ಶನಕ್ಕಾಗಿ ಹಿಂದಿಯಲ್ಲಿ ಅಂತರಾಳ ಎಂಬ ಧಾರಾವಾಹಿಯನ್ನು ನಿರ್ಮಿಸಿದ್ದಾರೆ.



ವೈದ್ಯಕೀಯ ರಂಗದಲ್ಲಿನ ಇವರ ಸಾಧನೆಗಾಗಿ ಇವರಿಗೆ ಅನೇಕ ಗೌರವ, ಪ್ರಶಸ್ತಿಗಳು ದೊರಕಿವೆ. ಇವುಗಳಲ್ಲಿ ಮುಖ್ಯವಾದವು: ಬೀಚೀ ಪ್ರಶಸ್ತಿ (1988), ಎಸ್.ಜಯರಾಂ ಪ್ರಶಸ್ತಿ (1989-90), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1991), ವಿಶ್ವೇಶ್ವರಯ್ಯ ನವರತ್ನ ಪ್ರಶಸ್ತಿ ಹಾಗೂ ಸಂದೇಶ ಮಾಧ್ಯಮ ಪ್ರಶಸ್ತಿ (1994), ಆರ್ಯಭಟ ಪ್ರಶಸ್ತಿ (1995-97-98), ಅತಿ ವಿಶಿಷ್ಟ ಚಿಕಿತ್ಸಾ ರಾಷ್ಟ್ರೀಯ ಪದಕ (1995), ಡಾ. ಎಚ್. ನರಸಿಂಹಯ್ಯ ಪ್ರಶಸ್ತಿ (1996), ದುಬೈ ಕರ್ನಾಟಕ ಸಂಘದ ಹೊರನಾಡು ಕನ್ನಡಿಗ ಪ್ರಶಸ್ತಿ (1998), ಭಾರತ ಗೌರವ ಸನ್ಮಾನ (1998-99), ವಿದ್ಯಾರತ್ನ ಪ್ರಶಸ್ತಿ (1999), ಪ್ರಕೃತಿ ಪ್ರಶಸ್ತಿ (1999), ಲಂಡನ್ನಿನ ಅಂತಾರಾಷ್ಟ್ರೀಯ ಗೋಲ್ಡ್ ಸ್ಟಾರ್ ಪ್ರಶಸ್ತಿ (1999), ಮುಂಬೈ ಕನ್ನಡ ಪತ್ರಕರ್ತರ ಸಂಘದ ಹೃದಯವಂತ ಪ್ರಶಸ್ತಿ (2002), ಭಾರತೀಯ ಮನೋವೈದ್ಯಕೀಯ ಸಂಘದ ಸುವರ್ಣಮಹೋತ್ಸವ ಪದಕ, 1999ರಲ್ಲಿ ಡಾ.ಬಿ.ಸಿ.ರಾಯ್ ಪ್ರಶಸ್ತಿ ಲಭ್ಯವಾಯಿತು (2002).

ಅಶೋಕ ಪೈ ಅವರು ಹಲವಾರು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಸಂಘ ಸಂಸ್ಥೆಗಳ ಸದಸ್ಯರೂ ಆಗಿದ್ದಾರೆ. ರಜನಿ ಪೈ ಇವರ ಪತ್ನಿ. ಇವರಿಗೆ ಪ್ರೀತಿ ಎಂಬ ಓರ್ವ ಪುತ್ರಿ ಇದ್ದು ಅವರೂ ವೈದ್ಯರಾಗಿದ್ದಾರೆ. *

**ಅಶ್ವತ್ಥ :** 1912-94. ಪ್ರಸಿದ್ಧ ಕಥೆಗಾರರು. ಕೂಡೂಳು ಅಶ್ವತ್ಥ ನಾರಾಯಣರಾಯ ಇವರ ನಿಜನಾಮ. ಅಶ್ವತ್ಥ ಎಂಬ ಕಾವ್ಯನಾಮದಿಂದ ಸಾಹಿತ್ಯಲೋಕದಲ್ಲಿ ಜನಪ್ರಿಯರಾಗಿದ್ದಾರೆ. ಶಿವಮೊಗ್ಗ ಜಿಲ್ಲೆ ಕೂಡೂಳಿನಲ್ಲಿ 1912 ಜೂನ್ 16ರಂದು ಜನಿಸಿದರು. ತಂದೆ ಸೋಮಶೇಖರರಾವ್, ತಾಯಿ ಲಕ್ಷ್ಮೀದೇವಿ. ಈ ದಂಪತಿಗಳಿಗೆ ಅಶ್ವತ್ಥ ಮೂರನೆಯ ಮಗು. ಚಿಕ್ಕಂದಿನಲ್ಲಿಯೆ ತಾಯಿಯನ್ನು ಕಳೆದುಕೊಂಡು ಅಜ್ಜಿಯ ಆರೈಕೆಯಲ್ಲಿ ಬೆಳೆದರು. ಇವರ ಪ್ರಾಥಮಿಕ ವಿದ್ಯಾಭ್ಯಾಸ ತಾಯಿಯ ತವರೂರಾದ ಚಿಕ್ಕಮಗಳೂರು ಜಿಲ್ಲೆಯ ಕೆರೆಗೋಡಿನಲ್ಲಿ ನಡೆಯಿತು. ಪ್ರೌಢಶಾಲಾ ವಿದ್ಯಾಭ್ಯಾಸ ಮೈಸೂರಿನ ಶಾರದಾ ವಿಲಾಸ ಪ್ರೌಢಶಾಲೆಯಲ್ಲಿ ನಡೆಯಿತು. ಶಾಲೆಯಲ್ಲಿ ಅತ್ಯಂತ ಬುದ್ಧಿವಂತ ಮತ್ತು ಚುರುಕಿನ ವಿದ್ಯಾರ್ಥಿಯಾಗಿದ್ದ ಇವರು ಮೆಟ್ರಿಕ್ಯುಲೇಷನ್ ಪರೀಕ್ಷೆಯನ್ನು ಪ್ರಥಮದರ್ಜೆಯಲ್ಲಿ ಪಾಸುಮಾಡಿದರು (1928). ಅನಂತರ ಆರ್ಥಿಕ ಸಂಕಷ್ಟದ ಕಾರಣದಿಂದ ಒಂದು ವರ್ಷ ಓದು ಮುಂದುವರಿಸಲಾಗಲಿಲ್ಲ. ಅನಂತರ ಪರಿಚಯದವರೊಬ್ಬರ ನೆರವಿನಿಂದ ಕಾಲೇಜು ಸೇರಿ ಎಂಜಿನಿಯರಿಂಗ್ ಪದವಿಯನ್ನು ಪ್ರಥಮ ರ್‍ಯಾಂಕಿನೊಂದಿಗೆ ಪಡೆದರು (1933). ಲಲಿತಮ್ಮ ಎಂಬುವರನ್ನು ವಿವಾಹವಾದರು (1935). ಮೊದಲಿಗೆ ಚಿಕ್ಕಮಗಳೂರಿನಲ್ಲಿ ಸರ್ವೇಯರ್ ಆಗಿ ಉದ್ಯೋಗಕ್ಕೆ ಸೇರಿದರು. ಆಗ ಇವರ ಸಂಬಳ ಕೇವಲ ಐವತ್ತು ರೂಪಾಯಿ. ಅನಂತರ ಎಂಜಿನಿಯರ್ ಹುದ್ದೆ ದೊರೆತು ಸಿಮ್ಲಾಕ್ಕೆ ಹೋದರು (1936). ಕೆಲಸದ ಪರಿಸರ ಇಷ್ಟವಾಗದೆ ಕೆಲವು ಸಮಯದ ಅನಂತರ ಆ ಹುದ್ದೆಗೆ ರಾಜೀನಾಮೆ ನೀಡಿದರು. ಮುಂದೆ ಬನಾರಸ್‌ನಲ್ಲಿ ಮಿಲಿಟರಿ ಎಕ್ಸ್‌ಟೆನ್‌ಷನ್ ಆಫೀಸರ್ ಆಗಿ ನೇಮಕಗೊಂಡರು. ಇದೇ ಸಂದರ್ಭದಲ್ಲಿ ಕೋಲ್ಕೊತ್ತದ ಮದನಮೋಹನ ಮಾಳವೀಯರ ವಿದ್ಯಾಸಂಸ್ಥೆ ಇವರ ಕರ್ತವ್ಯನಿಷ್ಠೆಯನ್ನು ಕಂಡು ಇವರನ್ನು ಆಹ್ವಾನಿಸಿತು. ಅಲ್ಲಿ ಎಂಜಿನಿಯರಿಂಗ್ ಅಧ್ಯಾಪಕರಾಗಿ ಹೆಸರು ಗಳಿಸಿದರು. ಇವರ ಶಿಸ್ತುಬದ್ಧ ನಡೆವಳಿಕೆ ಹಾಗೂ ಕರ್ತವ್ಯನಿಷ್ಠೆಗಳನ್ನು ಮದನಮೋಹನ ಮಾಳವೀಯರೂ ಮೆಚ್ಚಿಕೊಂಡಿದ್ದರು. ಸ್ವಯಂ ನಿವೃತ್ತಿಯ ಅನಂತರ ಮೈಸೂರಿನಲ್ಲಿ ನೆಲಸಿ ಸಾಹಿತ್ಯ ಕೃಷಿಯಲ್ಲಿ ತೊಡಗಿದರು. ಒಮ್ಮೆ ವಾಯುಸೇವನೆಗೆ ಹೋಗುವ ಸಂದರ್ಭದಲ್ಲಿ ವಾಹನ ಅಪಘಾತಕ್ಕೊಳಗಾಗಿ ಕಾಲುಮುರಿದುಕೊಂಡು ಗುಣಮುಖವಾಗದೆ 1994 ಜೂನ್ 12ರಂದು ನಿಧನಹೊಂದಿದರು. ಇವರಿಗಿದ್ದ ಒಬ್ಬ ಮಗ ಮುಂಬಯಿಯಲ್ಲಿ ಜಿಯಾಲಜಿಕಲ್ ಸರ್ವೆ ಆಫ್ ಇಂಡಿಯಾದಲ್ಲಿ ಉನ್ನತಾಧಿಕಾರಿಯಾಗಿದ್ದು, ಈಗ ನಿವೃತ್ತಿ ಹೊಂದಿದ್ದಾರೆ.

ಅಶ್ವತ್ಥರದು ಒಂದು ವಿಶಿಷ್ಟ ವ್ಯಕ್ತಿತ್ವ. ಅದರಲ್ಲಿ ನಿರೀಶ್ವರ ವಾದಿತನದ, ವಾಸ್ತವತೆಯಲ್ಲಿ ಮಾತ್ರ ನಂಬಿಕೆಯುಳ್ಳ ಛಲದಭಾವ ಕಂಡು ಬರುತ್ತಿತ್ತು. ಪ್ರಚಾರ, ಸಭೆ-ಸಮಾರಂಭ, ಸನ್ಮಾನ ಮೊದಲಾದ ಸಂಗತಿಗಳನ್ನು ಅವರು ನಿರಾಕರಿಸುತ್ತಿದ್ದರು.

ಅಶ್ವತ್ಥರು ತಾವು ಸತ್ತ ಅನಂತರ ತಮ್ಮ ಮನೆಯನ್ನು ರಾಮಕೃಷ್ಣ ಆಶ್ರಮ ವಹಿಸಿಕೊಳ್ಳಬೇಕು ಮಗನಿಗೇನಾದರು ಮನೆ ಬೇಕಾದರೆ ಅದರ ಬೆಲೆಯನ್ನು ಕೊಟ್ಟು ಬಿಡಿಸಿಕೊಳ್ಳತಕ್ಕದ್ದು ಎಂದು ಉಯಿಲು ಬರೆದು ತೀರಿಕೊಂಡಿದ್ದರು. ಅದರಂತೆ ಇವರ ಮಗ ಅನಂತರ ಆ ಮನೆಯನ್ನು ಬೆಲೆಕೊಟ್ಟು ಬಿಡಿಸಿಕೊಂಡರು.

ಅಶ್ವತ್ಥರ ಸಾಹಿತ್ಯ ಸೃಷ್ಟಿ ಅಪಾರವಾದುದು. ಇವರು ಸುಮಾರು 180 ಕಥೆಗಳನ್ನು ಬರೆದಿದ್ದಾರೆ. ಈ ಎಲ್ಲ ಕಥೆಗಳು ಹದಿಮೂರು ಕಥಾ ಸಂಕಲನಗಳಲ್ಲಿ ಪ್ರಕಟಗೊಂಡಿವೆ. ದೂರದ ಕಾಳಿಯಲ್ಲಿ (1968), ಅಭಿನಯ ಜಗತ್ತು (1969), ದೀಪಾವಳಿಗೆ (1972), ಅಗ್ನಿಸಾಕ್ಷಿ (1973), ಮಹಾವಿಜಯ (1989), ಯದಾಯದಾಹಿ ಧರ್ಮಸ್ಯ: (1990) - ಇವು ಕೆಲವು ಕಥಾಸಂಕಲನಗಳು. ಸಣ್ಣಕಥೆಗಳನ್ನಲ್ಲದೆ ಆರು ಕಾದಂಬರಿ, ಹದಿನೆಂಟು ನಾಟಕ, ಒಂದು ಪ್ರಬಂಧ ಸಂಕಲನ, ಒಂದು ಖಂಡ ಕಾವ್ಯವನ್ನೂ ಇವರು ರಚಿಸಿದ್ದಾರೆ. ಮುನಿಯನ ಮಾದರಿ (1949), ಮರ್ಯಾದೆ ಮಹಲು (1951), ಬರದ ಸಿರಿ (1965), ಹಂಬಲ (1968), ಅಜ್ಞಾತನ ನಂಜುಂಡಾಯಣ (1983), ರಂಗನಾಯಕಿ (1988) - ಇವು ಕೆಲವು ಕಾದಂಬರಿಗಳು. ಬಲಿ (1955), ನ್ಯಾಯಾಧೀಶ (1965), ಕ್ರಾಂತಿಕಾರಿ (1989), ಹುಚ್ಚ (1989), ಹೆಣ್ಣು (1989) - ಇವು ಇವರ

ಕೆಲವು ನಾಟಕಗಳು. ಮಹಾಯುದ್ಧ (1962) ಒಂದು ಖಂಡಕಾವ್ಯ. ಇವರ ಈ ಎಲ್ಲ ಕೃತಿಗಳ ಹಿನ್ನೆಲೆಯಲ್ಲಿ ಬದುಕಿನ ಮೌಲ್ಯಗಳ ಹುಡುಕಾಟವಿದೆ.

ಅಶ್ವತ್ಥರು ಸಮಾಜದಲ್ಲಿ ಕಂಡುಬರುತ್ತಿದ್ದ ಕ್ರೌರ್ಯ, ಅನ್ಯಾಯ, ಅಧರ್ಮ, ದೌರ್ಜನ್ಯಗಳನ್ನು ಖಂಡಿಸುವ ಸಲುವಾಗಿ ತಮ್ಮ ಕಥಾ ಮಾಧ್ಯಮವನ್ನು ಬಳಸಿಕೊಂಡರು. ಸಮಾಜದ ದೀನ ದಲಿತರ, ಶೋಷಣೆಗೊಳಗಾದ ಸ್ತ್ರೀಯರ ಬಗೆಗೆ ಇವರಿಗಿದ್ದ ಪ್ರೀತಿ, ಅನುಕಂಪ ಈ ಕತೆಗಳ ಮೂಲಕ ಅಭಿವ್ಯಕ್ತಗೊಂಡಿದೆ. ಸಮಾಜಮುಖಿಯಾದ ಚಿಂತನೆ ಇವರ ಸಾಹಿತ್ಯದ ಕೇಂದ್ರ ಆಶಯವಾಗಿ ಅರಳಿರುವುದನ್ನು ಕಾದಂಬರಿಗಳಲ್ಲಿ ನಾವು ಗುರುತಿಸಬಹುದು. ಹಂಬಲ ಇವರ ಮಹತ್ತ್ವಕಾಂಕ್ಷೆಯ ಕಾದಂಬರಿ. ಗಾಂಧೀಜಿಯವರ ಗ್ರಾಮ ಸಂಸ್ಕೃತಿಯ ನೆಲೆಯಿಂದ ಬರೆದಂಥದು. ವಾಸ್ತವ ಆದರ್ಶಗಳ ಸಂಘರ್ಷವನ್ನು ಇಲ್ಲಿ ಅತ್ಯಂತ ಆಪ್ತವಾಗಿ ಚಿತ್ರಿಸಲಾಗಿದೆ. (ಜಿ. ಎಸ್.)

**ಅಶ್ವತ್ಥ, ಕೆ.ಎಸ್. :** 1925-. ಚಲನಚಿತ್ರ ನಟ. ಪೂರ್ಣ ಹೆಸರು ಕರಗನಹಳ್ಳಿ ಸುಬ್ಬರಾಯ ಅಶ್ವತ್ಥನಾರಾಯಣ. ತಂದೆ ಸುಬ್ಬರಾಯರು ಹೊಳೆನರಸೀಪುರ ತಾಲ್ಲೂಕಿನ ಕರಗನಹಳ್ಳಿಯಲ್ಲಿ ಪುರೋಹಿತರಾಗಿದ್ದರು. ತಾಯಿ ಸಾಕಮ್ಮ. ಅಶ್ವತ್ಥರು ಹುಟ್ಟಿದ್ದು ಮೈಸೂರಿನಲ್ಲಿ. ಇವರನ್ನು



ಸಾಕಿದವರು ಸೋದರತ್ತೆ ತಿಪ್ಪಮ್ಮನವರು. ಶಿಕ್ಷಣ ಇಂಟರ್‌ಮೀಡಿಯೆಟ್ ವರೆಗೆ. ಇವರು 1942ರ ಚಳವಳಿಯಲ್ಲಿ ಭಾಗವಹಿಸಿದ್ದರಿಂದ ಹಾಗೂ ಅದೇಕಾಲಕ್ಕೆ ಸೋದರತ್ತೆ ತಿಪ್ಪಮ್ಮ ತೀರಿ ಕೊಂಡಿದ್ದರಿಂದ ಇವರ ವಿದ್ಯಾಭ್ಯಾಸ ಅಷ್ಟಕ್ಕೇ ನಿಂತಿತು. ಆರ್ಥಿಕ ಅಡಚಣೆಗಳಿಂದಾಗಿ ಪುನಃ ಕಾಲೇಜು ಸೇರಲಾಗಲಿಲ್ಲ. ಪಡಿತರ ಕಾರ್ಯಾಲಯದಲ್ಲಿ ಗುಮಾಸ್ತರೆಂದು ಸೇರಿ (1944) ಅನಂತರ ಫುಡ್ ಇನ್ಸ್‌ಪೆಕ್ಟರ್ ಕೆಲಸಕ್ಕೆ ಸೇರಿದರು (1947). ಜಿಲ್ಲಾಧಿಕಾರಿಗಳ ಕಚೇರಿ ಯಲ್ಲಿ ಶೀಘ್ರಲಿಪಿಕಾರ ರಾಗಿಯೂ ಇದ್ದರು. ಸರ್ಕಾರಿ ನೌಕರಿಯಲ್ಲಿ ಇವರು ಇದ್ದುದು ಹತ್ತು ವರ್ಷ. ಇವರು ಬಣ್ಣದ ಜಗತ್ತನ್ನು ಪ್ರವೇಶಿಸಿದ್ದು ಆಕಸ್ಮಿಕ. ಮೈಸೂರು ಆಕಾಶವಾಣಿಯ ಕಲಾವಿದ ಎನ್.ಎಸ್.ವಾಮನರ ಪ್ರೋತ್ಸಾಹದಿಂದ ರೇಡಿಯೋ ಮತ್ತು ರಂಗಭೂಮಿ ನಾಟಕಗಳಲ್ಲಿ ಭಾಗವಹಿಸುತ್ತಿದ್ದರು. ಅದೇ ಸಮಯದಲ್ಲಿ ನಾಟಕದಲ್ಲಿ ಆಸಕ್ತಿ ಇರುವ ಸ್ನೇಹಿತರ ಬಳಗ ದೊರಕಿತು. ಹೀಗಾಗಿ ಹವ್ಯಾಸಿ ಕಲಾವಿದರಾದರು. ಇವರು ಅಭಿನಯಿಸಿದ ಮೊದಲ ನಾಟಕ ಆಷಾಢಭೂತಿ. ಮೈಸೂರಿನ ಶಾರದಾವಿಲಾಸ ಕಾಲೇಜಿನ ಡ್ರಿಲ್ ಉಪಾಧ್ಯಾಯರೊಬ್ಬರು ನಿಧನರಾದಾಗ ಅವರ ಕುಟುಂಬದ ಸಹಾಯಾರ್ಥ ಅಭಿನಯಿಸಲಾದ ಪರ್ವತವಾಣಿಯವರ ವಾರ್ಷಿಕೋತ್ಸವ ಎಂಬ ನಾಟಕದಲ್ಲಿ (1954) ಅಶ್ವತ್ಥರ ರಂಗಣ್ಣನ ಪಾತ್ರದ ಅಭಿನಯ ತುಂಬ ಮೆಚ್ಚುಗೆ ಗಳಿಸಿತು. ಈ ನಾಟಕ ವೀಕ್ಷಿಸಿದ ಚಲನಚಿತ್ರ ನಿರ್ದೇಶಕ ಕೆ.ಸುಬ್ರಹ್ಮಣ್ಯ ಅವರು ತಮ್ಮ ಸ್ತ್ರೀರತ್ನ ಚಿತ್ರಕ್ಕೆ ಇವರನ್ನು ಆಯ್ಕೆಮಾಡಿದರು. ಇವರು ಚಿತ್ರರಂಗ ಪ್ರವೇಶಿಸಿದ್ದಕ್ಕೆ ಮನೆಯವರಿಂದ ಪ್ರಬಲ ವಿರೋಧ ಬಂತು. ಆಗ ಕನ್ನಡ ಚಿತ್ರರಂಗ ಆರ್ಥಿಕ ಮುಗ್ಗಟ್ಟನ್ನೆದುರಿಸುತ್ತಿತ್ತು. ಇದರಿಂದ ಇವರನ್ನು ನಂಬಿದ ಸಂಸಾರ ಪ್ರಾರಂಭದ 5-6 ವರ್ಷ ಕಷ್ಟದ ದಾರಿ ತುಳಿಯಬೇಕಾಯಿತು. ಆದ್ದರಿಂದ ಇವರು ಚಲನಚಿತ್ರರಂಗವನ್ನೇ ನಂಬಿಕೊಳ್ಳದೆ ಸಹಕಲಾವಿದರಾದ ರಾಜಕುಮಾರ್, ಜಿ.ವಿ. ಅಯ್ಯರ್, ನರಸಿಂಹರಾಜು ಅವರೊಂದಿಗೆ ಸೇರಿಕೊಂಡು ಕರ್ನಾಟಕದ ಹಲವು ಊರುಗಳಲ್ಲಿ ನಾಟಕಗಳನ್ನಾಡಿದರು.

ಅಶ್ವತ್ಥರು ಇದುವರೆಗೆ ಸುಮಾರು 360ಕ್ಕೂ ಹೆಚ್ಚಿನ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದವು ಕಿತ್ತೂರುಚೆನ್ನಮ್ಮ, ಗಾಳಿಗೋಪುರ, ನಂದಾದೀಪ, ಮಿಸ್‌ಲೀಲಾವತಿ, ರಾಮಾಂಜನೇಯಯುದ್ಧ, ಬೆಳ್ಳಿಮೋಡ, ಗೃಹಲಕ್ಷ್ಮಿ, ಜೇನುಗೂಡು, ಗೆಜ್ಜೆಪೂಜೆ, ಶರಪಂಜರ, ಒಂದೇ ಬಳ್ಳಿಯ ಹೂಗಳು, ನಾಗರಹಾವು, ಬಂಗಾರದಪಂಜರ, ಉಪಾಸನೆ, ಮಗ ಮೊಮ್ಮಗ, ದೇವರಗುಡಿ, ಒಡಹುಟ್ಟಿದವರು, ದಳವಾಯಿ, ನಕ್ಸಲೈಟ್, ಲಾ ಅಂಡ್ ಆರ್ಡರ್, ಶಬ್ದವೇಧಿ, ಕಿಚ್ಚ. ರಾಜಕುಮಾರ್ ಅವರೊಂದಿಗೆ 90 ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ನವಜೀವನ ಚಿತ್ರದಲ್ಲಿ ಪಾದ್ರಿ, ಮಿಸ್ ಲೀಲಾವತಿಯಲ್ಲಿ ತಂದೆ, ನಾಗರಹಾವಿನಲ್ಲಿ ಚಾಮಯ್ಯ ಮೇಸ್ಟ್ರು, ಮಂಗಳ ಮುಹೂರ್ತದಲ್ಲಿ ಸೋದರಮಾವ - ಈ ಪಾತ್ರಗಳಲ್ಲಿ ಇವರ ಅಭಿನಯ ಬಹಳ ಮೆಚ್ಚುಗೆ ಗಳಿಸಿದೆ. ಇವರು ದೂರದರ್ಶನದ ಸ್ವೀಕಾರ, ಸಾಕ್ಷಾತ್ಕಾರ, ಸ್ವಾತಿ ಮುತ್ತು ಮತ್ತು ದುರ್ಗಾ ಧಾರಾವಾಹಿಗಳಲ್ಲಿ ನಟಿಸಿದ್ದಾರೆ.

ಮಂಗಳ ಮುಹೂರ್ತ, ನವಜೀವನ, ಮಿಸ್ ಲೀಲಾವತಿ - ಈ ಚಿತ್ರಗಳಲ್ಲಿನ ಇವರ ಅಭಿನಯಕ್ಕಾಗಿ ರಾಷ್ಟ್ರಪತಿಗಳಿಂದ ಬಹುಮಾನವೂ ನಮ್ಮಮಕ್ಕಳು, ಬೆಳ್ಳಿಮೋಡ, ಗೆಜ್ಜೆಪೂಜೆ, ಶರಪಂಜರ, ನಾಗರಹಾವು, ಸಿಪಾಯಿರಾಮು, ಮುತ್ತಿನಹಾರ -ಇವುಗಳಲ್ಲಿನ ಅಭಿನಯಕ್ಕಾಗಿ ರಾಜ್ಯಪ್ರಶಸ್ತಿಯೂ ಲಭಿಸಿದೆ. ಕರುಣೆಯೇ ಕುಟುಂಬದ ಕಣ್ಣು, ಮಾವನ ಮಗಳು, ನಂದಾದೀಪ, ಮನೆಅಳಿಯ, ಒಂದೇ ಬಳ್ಳಿಯ ಹೂಗಳು, ಮನಶ್ಶಾಂತಿ ಮುಂತಾದ ಚಿತ್ರಗಳಲ್ಲಿ ಇವರು ನೀಡಿದ ಅಭಿನಯವನ್ನು ಮೆಚ್ಚಿ ಮದರಾಸಿನ ಚಿತ್ರಪ್ರೇಮಿಗಳ ಸಂಘ ಇವರನ್ನು ಆರು ಬಾರಿ ಗೌರವಿಸಿದೆ. ಕರುಣೆಯೇ ಕುಟುಂಬದ ಕಣ್ಣು ಮತ್ತು ಮಿಸ್ ಲೀಲಾವತಿ ಚಿತ್ರಗಳಲ್ಲಿ ಅಶ್ವತ್ಥರು ನಿರ್ವಹಿಸಿದ ಪಾತ್ರಕ್ಕಾಗಿ ಬೆಂಗಳೂರಿನ ಚಿತ್ರ ಪ್ರೇಮಿಗಳ ಸಂಘ ಇವರನ್ನು ಸನ್ಮಾನಿಸಿದೆ. ಇವರಿಗೆ ರಾಜಕುಮಾರ್ ಪ್ರಶಸ್ತಿ (1995), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗಳು ಲಭಿಸಿವೆ.

ಚಿತ್ರರಂಗ ಪ್ರವೇಶಿಸಿದಂದಿನಿಂದಲೂ ಇಂದಿನವರೆಗೂ ಕನ್ನಡ ಚಿತ್ರಗಳಲ್ಲಿಯೇ ಇವರು ಅಭಿನಯಿಸಿದ್ದಾರೆ. ಶಾಂತಾ ಇವರ ಪತ್ನಿ. ಇವರಿಗೆ ಇಬ್ಬರು ಗಂಡು ಮತ್ತು ಇಬ್ಬರು ಹೆಣ್ಣು ಮಕ್ಕಳು. ಮಗ ಶಂಕರ ಅಶ್ವತ್ಥ ಚಲನಚಿತ್ರ ಮತ್ತು ದೂರದರ್ಶನ ಧಾರವಾಹಿಗಳಲ್ಲಿ ನಟಿಸುತ್ತಿದ್ದಾರೆ. *

**ಅಶ್ವತ್ಥನಾರಾಯಣರಾವ್, ಸಿ. :** ಮಕ್ಕಳ ಪುಸ್ತಕವೆಂಬ ಸಚಿತ್ರ ಮಾಸಪತ್ರಿಕೆಯನ್ನು ಮಕ್ಕಳಿಗಾಗಿಯೆ ಪ್ರಕಟಿಸಿದ ಪ್ರಥಮರು. ಸುಮಾರು 40 ವರ್ಷಗಳವರೆಗೆ ನಡೆದ ಈ ಪತ್ರಿಕೆಯಲ್ಲಿ ನಗೆಬರೆಹಗಳು, ಸಣ್ಣ ಕಥೆಗಳು, ಸುದ್ದಿ ಸಂಗ್ರಹಗಳನ್ನು ದಪ್ಪ ಅಕ್ಷರಗಳಲ್ಲಿ ಮುದ್ರಿಸಿರುತ್ತಿತ್ತು. ಮಕ್ಕಳಿಗಾಗಿ ಶಿಶುವಿಹಾರವೊಂದನ್ನು ತೆರೆದು, ತಮ್ಮ ಪ್ರಯೋಗಗಳ ಫಲವಾಗಿ ಅನುಭವಿಸಿದ ರಸಾನುಭವಗಳನ್ನೂ ಮಕ್ಕಳ ಪುಸ್ತಕದಲ್ಲಿ ಪ್ರಕಟಿಸುತ್ತಿದ್ದರು. ಅಶ್ವತ್ಥನಾರಾಯಣರಾಯರು ನವಜೀವನ ಎಂಬ ಕನ್ನಡ ದಿನಪತ್ರಿಕೆಯ ಸಂಪಾದಕರೂ ಆಗಿದ್ದರು. *

**ಅಶ್ವಥ್, ಸಿ. :** 1939-. ಸುಗಮ ಸಂಗೀತ ಗಾಯಕ, ಚಲನಚಿತ್ರ ಹಿನ್ನೆಲೆಗಾಯಕ. 1939 ಡಿಸೆಂಬರ್ 29ರಂದು ಬೆಂಗಳೂರಿನಲ್ಲಿ ಜನಿಸಿದರು. ತಂದೆ ಶ್ರೀಧರರಾಮರಾಯ, ತಾಯಿ ಶಾರದಮ್ಮ. ತಂದೆ ತಾಯಿಗಳಿಗೆ ಇವರು ಮೂರನೆಯ ಮಗ. ಇವರ ಸೋದರತ್ತೆಗೆ ವೀಣೆ ನುಡಿಸುವುದರಲ್ಲಿ ಪರಿಶ್ರಮವಿತ್ತು. ಅಣ್ಣಂದಿರಾದ ವಿಶ್ವನಾಥರಾವ್ ಹಾಗೂ ನಾಗರಾಜರಾವ್ ಇವರಿಬ್ಬರಿಗೂ ನಾಟಕ ಹಾಗೂ ಸಂಗೀತದಲ್ಲಿ ಪ್ರವೇಶವಿತ್ತು. ಮನೆಯ ಇಂಥ ವಾತಾವರಣವೇ ಆಶ್ವಥ್ ಅವರು ಕಲಾದೇಗುಲವನ್ನು ಪ್ರವೇಶಿಸಲು ಪ್ರೇರಕಶಕ್ತಿಯಾಗಿ ಕೆಲಸ ಮಾಡಿತು.

ಬಾಲಕನಾಗಿದ್ದಾಗ ಪಿ.ಕಾಳಿಂಗರಾವ್, ಕೆ.ಎಲ್.ಸೈಗಲ್ ಹಾಗೂ ಮಹಮ್ಮದ್ ರಫಿಯವರ ಗಾಯನದಿಂದ ಪ್ರಭಾವಿತರಾದರು. ಮಾಧ್ಯಮಿಕ ಶಾಲೆ, ಪ್ರೌಢಶಾಲೆ ದಿನಗಳಲ್ಲಿ ರಾಮಕೃಷ್ಣಾಶ್ರಮದ ಭಜನೆಗಳಲ್ಲಿ ಭಾಗವಹಿಸುತ್ತಿದ್ದರು. ಕಾಲೇಜು ದಿನಗಳಲ್ಲೇ ಇವರಿಗೆ ಕನ್ನಡ ಕವನಗಳಿಗೆ ಸ್ವರಸಂಯೋಜಿಸುವ ಆಸಕ್ತಿ ಬೆಳೆದಿತ್ತು. ಬೆಂಗಳೂರು ವಿಶ್ವವಿದ್ಯಾಲಯದಿಂದ ಬಿ.ಎಸ್ಸಿ. ಪದವಿ ಪಡೆದ ಅನಂತರ ಇವರು ಬೆಂಗಳೂರಿನ ಐ.ಟಿ.ಐ.

ನಲ್ಲಿ 27 ವರ್ಷಗಳ ಕಾಲ ಕೆಲಸಮಾಡಿ ಎಕ್ಸಿಕ್ಯೂಟಿವ್ ಎಂಜಿನಿಯರ್ ಆಗಿ ನಿವೃತ್ತಿ ಪಡೆದರು. ಇವರಿಗೆ ಸಂಗೀತದಲ್ಲಿ ವಿಶೇಷ ಆಸಕ್ತಿ ಇದ್ದುದರಿಂದ ಏಳು ವರ್ಷಗಳ ಕಾಲ ದೇವಗಿರಿ ಶಂಕರರಾವ್ ಜೋಶಿಯವರ ಬಳಿ ಹಿಂದುಸ್ಥಾನಿ ಸಂಗೀತವನ್ನು ಅಭ್ಯಾಸ ಮಾಡಿದರು.

ಸಂಗೀತ ಸಂಯೋಜಕರಾಗಿ ನಾಟಕ, ಚಲನಚಿತ್ರ, ಸುಗಮಸಂಗೀತ ಈ ಮೂರೂ ಕ್ಷೇತ್ರಗಳಿಗೆ ಅಶ್ವತ್ಥ್ ಅವರು ಮಹತ್ತರ ಕೊಡುಗೆ ನೀಡಿದ್ದಾರೆ. ಇವರು ಸಂಯೋಜಕರಾಗಿ ಮೊದಲು ಪರಿಚಯವಾದದ್ದು ನಾಟಕ ಕ್ಷೇತ್ರದ ಮೂಲಕ. ನಟರಂಗ ಹವ್ಯಾಸಿ ನಾಟಕ ಸಂಸ್ಥೆಯ ಸ್ಥಾಪಕ ಸದಸ್ಯರಾಗಿ, ಅಲ್ಲಿನ ಎಲ್ಲ ನಾಟಕಗಳಿಗೂ ಇವರು ಸಂಗೀತ ನೀಡಿದರು. ಕುವೆಂಪು ವಿರಚಿತ ಶ್ಮಶಾನಕುರುಕ್ಷೇತ್ರ ನಾಟಕದ ಸಂಗೀತ ಸಂಯೋಜನೆಯ ನಾಂದಿಯೊಂದಿಗೆ ಅಶ್ವತ್ಥ್ ಅವರ ಸಂಗೀತ



ಸಂಯೋಜನೆಯ ಕೈಂಕರ್ಯ ಆರಂಭವಾಯಿತು. ಲಂಕೇಶರ ಬಿರುಕು ಹಾಗೂ ಗಿರೀಶ್ ಕಾರ್ನಾಡರ ಹಯವದನ ನಾಟಕಗಳ ಸಂಗೀತವೂ ಇವರಿಗೆ ಯಶಸ್ಸನ್ನು ತಂದುಕೊಟ್ಟಿತು. ಮಾಸ್ತಿಯವರ ಕಾಕನಕೋಟೆ ನಾಟಕದ ಹಾಡುಗಳಂತೂ ಅಶ್ವತ್ಥ್ ಅವರ ಹೆಸರನ್ನು ಕನ್ನಡಿಗರ ಮನೆಮನೆಗೂ ಮುಟ್ಟಿಸಿತು. ಈ ಚಿತ್ರದ ಹಾಡಿನ ಧಾಟಿಯನ್ನು ಎಲ್ಲರೂ ಮೆಲಕು ಹಾಕುವಂತೆ ಮಾಡಿತು. ತುಘಲಕ್, ತಲೆದಂಡ, ನಾಗಮಂಡಲ, ರಕ್ತಾಕ್ಷಿ, ಬಿರುಗಾಳಿ, ಒಥೆಲೋ, ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್, ಊರುಭಂಗ, ಭೈರವಿ, ಮೃಚ್ಛಕಟಿಕ, ಕಕೇಶಿಯನ್ ಚಾಕ್ ಸರ್ಕಲ್ - ಇವು ಅವರು ಸಂಗೀತ ನೀಡಿದ ಕೆಲವು ಪ್ರಮುಖ ನಾಟಕಗಳು.

ಚಲನಚಿತ್ರಕ್ಷೇತ್ರದಲ್ಲೂ ಇವರ ಕೊಡುಗೆ ಅನುಪಮವಾದುದು. ಕಾಕನಕೋಟೆ ಚಲನಚಿತ್ರಕ್ಕೆ ಇವರು ಸಂಗೀತ ನೀಡಿದರು. ಶಿಶುನಾಳ ಶರೀಫ್, ಮೈಸೂರುಮಲ್ಲಿಗೆ, ಚಿನ್ನಾರಿಮುತ್ತ, ಕೊಟ್ರೇಶೀಕನಸು, ನಾಗಮಂಡಲ ಚಿತ್ರಗಳ ಚಿತ್ರಕಥೆಯಲ್ಲೂ ಪಾಲ್ಗೊಂಡಿದ್ದೊಂದು ವಿಶೇಷ. ಮೊದಮೊದಲು ಎಲ್. ವೈದ್ಯನಾಥನ್ ಹಾಗೂ ಗುಣಸಿಂಗ್ ಅವರ ಜೊತೆ ಸೇರಿ ಸಂಗೀತ ನೀಡುತ್ತಿದ್ದವರು 1986ರ ಅನಂತರ ಸಂಗೀತದ ಸಂಪೂರ್ಣ ಜವಾಬ್ದಾರಿಯನ್ನು ತಾವೇ ಹೊತ್ತುಕೊಂಡು ಅನೇಕ ಕಲಾವಿದರಿಗೆ ಪ್ರೋತ್ಸಾಹ ನೀಡಿದರು.

ಅಶ್ವತ್ಥ್ ಇಲ್ಲಿಯವರೆಗೂ 65ಕ್ಕೂ ಹೆಚ್ಚು ಧ್ವನಿಸುರುಳಿಗಳಿಗೆ ಸ್ವರಸಂಯೋಜಿಸಿ ಹಾಡಿದ್ದಾರೆ ಹಾಗೂ ಹಾಡಿಸಿದ್ದಾರೆ. ದೂರದರ್ಶನಗಳಲ್ಲೂ ಪಾಲ್ಗೊಂಡಿದ್ದಾರೆ. ಕಿರುತೆರೆಯಲ್ಲೂ ಇವರು ಸಂಗೀತದ ಛಾಪನ್ನು ಒತ್ತಿದ್ದಾರೆ. ಮಾಯಾಮೃಗ, ಮನ್ವಂತರ, ಗೃಹಭಂಗ, ಮುಕ್ತ ಇತ್ಯಾದಿ. ಕಿರುತೆರೆಯ ಧಾರಾವಾಹಿಗಳ ಶೀರ್ಷಿಕೆಗೆ ಇವರು ಹಾಡಿದ್ದು ಮನೆಮಾತಾಗಿದೆ. ಸುಗಮ ಸಂಗೀತ ಮತ್ತು ಸ್ವರ ಮಾಧುರಿ ಕುರಿತು ಇವರು ಎರಡು ಗ್ರಂಥಗಳನ್ನು ರಚಿಸಿದ್ದಾರೆ.

ಇವರಿಗೆ ಅನೇಕ ಗೌರವಗಳೂ ಪ್ರಶಸ್ತಿಗಳೂ ದೊರಕಿವೆ. ಮ್ಯಾಂಚೆಸ್ಟರ್‌ನಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನದಲ್ಲಿ ಇವರು ಕರ್ನಾಟಕದ ಪ್ರತಿನಿಧಿಯಾಗಿ ಭಾಗವಹಿಸಿದ್ದರು (1998). 1995 ಹಾಗೂ 2000ರದಲ್ಲಿ ಅಮೆರಿಕ ಪ್ರವಾಸ ಮಾಡಿ ಸುಗಮ ಸಂಗೀತ ಪ್ರಚಾರ ಕೈಗೊಂಡರು. ಸ್ಪಂದನ ಹಾಗೂ ಚಿನ್ನಾರಿಮುತ್ತ ಚಿತ್ರಸಂಗೀತಕ್ಕಾಗಿ, ವರ್ಷಋತು ಚಿತ್ರದ ಹಿನ್ನೆಲೆಗಾಯನಕ್ಕಾಗಿ ಇವರಿಗೆ ರಾಜ್ಯಪ್ರಶಸ್ತಿ ದೊರೆಕಿದೆ. ಮೈಸೂರುಮಲ್ಲಿಗೆ ಚಿತ್ರಕ್ಕೆ ಇವರಿಗೆ ಫಿಲ್ಮ್‌ಫೇರ್ ಪ್ರಶಸ್ತಿ ದೊರೆಕಿದೆ.

ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಪ್ರಶಸ್ತಿ (1985), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1986), ಸಂತ ಶಿಶುನಾಳ ಷರೀಫ್ ಪ್ರಶಸ್ತಿ (1998) - ಇವು ಇವರಿಗೆ ದೊರಕಿದ ಕೆಲವು ಮುಖ್ಯ ಪ್ರಶಸ್ತಿಗಳು.

(ಎಚ್.ಆರ್.ಎಲ್.)

**ಅಶ್ವಿನಿ ನಾಚಪ್ಪ :** 1967-. ಪ್ರಸಿದ್ಧ ಓಟಗಾರ್ತಿ. 1967 ಅಕ್ಟೋಬರ್ 21ರಂದು ಕೊಡಗು ಜಿಲ್ಲೆ ಮಡಿಕೇರಿಯಲ್ಲಿ ಜನಿಸಿದರು. ತಂದೆ-ತಾಯಿ ಮೊದಲು ಮೈಸೂರು ಮತ್ತು ಕೋಲ್ಕತ್ತದಲ್ಲಿದ್ದು ಅನಂತರ ಬೆಂಗಳೂರಿನಲ್ಲಿ ನೆಲಸಿದರು. ಅಶ್ವಿನಿ ಮತ್ತು ಈಕೆಯ ಸಹೋದರಿ ಪುಷ್ಪ



ಬಾಲ್ಯದಿಂದಲೂ ಬೆಂಗಳೂರಿನ ಕಂಠೀರವ ಕ್ರೀಡಾಂಗಣದಲ್ಲಿ ಸಾಧನೆಯಲ್ಲಿ ತೊಡಗಿದರು. ಓಟಗಾರ್ತಿಯರಾದರು. ಕಠ್ಮಂಡುವಿನ ದಕ್ಷಿಣ ಏಷ್ಯ ಫೆಡರೇಷನ್ (ಎಸ್‌ಎಎಫ್) ಆಟೋಟಗಳ ಸ್ಪರ್ಧೆಯಲ್ಲಿ ಭಾಗವಹಿಸಿದರು. ಇದು ಇವರು ಭಾಗವಹಿಸಿದ ಮೊದಲನೆಯ ಅಂತಾರಾಷ್ಟ್ರೀಯ ಕ್ರೀಡಾಕೂಟ. ಇದರಲ್ಲಿ ಪುಷ್ಪ 4x400 ಮೀ ರಿಲೇ ಓಟದಲ್ಲಿ ಚಿನ್ನದ ಪದಕವನ್ನೂ ಅಶ್ವಿನಿ 4x100ಮೀ ರಿಲೆಯಲ್ಲಿ ಕಂಚಿನ ಪದಕವನ್ನೂ ಪಡೆದರು. ಅಶ್ವಿನಿ ಅವರ ಭವಿಷ್ಯದ ಬಗ್ಗೆ ಕ್ರೀಡಾಭಿಮಾನಿಗಳಲ್ಲಿ ಅಪಾರ ಭರವಸೆ ಮೂಡಿತು. ಇವರ ಓಟದ ತೀವ್ರತೆ ಹಾಗೂ ಶೈಲಿ ಅಪೂರ್ವವೆನಿಸಿತ್ತು. ಇದಕ್ಕೆ ಮುನ್ನ 1985ರ ಏಷ್ಯನ್ ಟ್ರ್ಯಾಕ್ ಅಂಡ್ ಫೀಲ್ಡ್ ಮೀಟ್‌ನಲ್ಲಿ 400ಮೀ ಕಂಚಿನ ಪದಕ ಪಡೆದರು. 1986ರ ಅಖಿಲ ಭಾರತ ಚಾಂಪಿಯನ್‌ಷಿಪ್ ಸ್ಪರ್ಧೆಯಲ್ಲಿ ಇವರು ಪಾಲ್ಗೊಂಡು, 200ಮೀ ಹಾಗೂ 1987ರ ರಾಷ್ಟ್ರೀಯ ಕ್ರೀಡಾಕೂಟದಲ್ಲಿ 100ಮೀ ಓಟಗಳಲ್ಲಿ ಚಿನ್ನದ ಪದಕಗಳನ್ನು ಗಳಿಸಿದರು.

1987ರಲ್ಲಿ ಸಿಂಗಪುರದಲ್ಲಿ ನಡೆದ ಏಷ್ಯನ್ ಟ್ರ್ಯಾಕ್ ಅಂಡ್ ಫೀಲ್ಡ್ ಮೀಟ್‌ನಲ್ಲಿ 100ಮೀ ಓಟದಲ್ಲಿ ಚಿನ್ನದ ಪದಕವನ್ನೂ 200ಮೀ ಓಟದಲ್ಲಿ ಬೆಳ್ಳಿಯ ಪದಕವನ್ನೂ ಗಳಿಸಿ ಭಾರತದ ವೇಗದ ಓಟಗಾರ್ತಿಯರ ಗುಂಪಿಗೆ ಸೇರ್ಪಡೆಗೊಂಡರು. 1989ರ ಎಸ್.ಎ.ಟಿ. ಗೇಮ್ಸ್‌ನಲ್ಲಿ ಇವರು ಇಸ್ಲಾಮಾಬಾದಿನಲ್ಲಿ 2 ಚಿನ್ನದ ಪದಕಗಳನ್ನು ತಮ್ಮದಾಗಿಸಿಕೊಂಡು ಪಿ.ಟಿ.ಉಷಾರವರಿಗೆ ಸರಿಸಾಟಿಯಾದ ಓಟಗಾರ್ತಿ ಎನಿಸಿಕೊಂಡರು.

1991ರಲ್ಲಿ ಕೋಲ್ಕತ್ತದ ಸಾಲ್ಟ್‌ಲೇಕ್ ಸ್ಟೇಡಿಯಮ್‌ನಲ್ಲಿ ಇವರ ಸಾಧನೆ ಅಮೋಘವಾದದ್ದು. ಇವರು ಭಾಗವಹಿಸಿದ ಎಲ್ಲ ಓಟಗಳಲ್ಲಿಯೂ ಚಿನ್ನದ ಪದಕ ಗಳಿಸಿ ತಮ್ಮ ಸಾಧನೆಯನ್ನು ಗಟ್ಟಿಗೊಳಿಸಿಕೊಂಡರು. 100ಮೀ (11.8ಸೆ), 200ಮೀ (24ಸೆ.), 400ಮೀ (53.4ಸೆ.) ಮತ್ತು 4x400ಮೀ ರಿಲೇ ಇದು ಭಾರತದಲ್ಲಿ ಇವರ ದಾಖಲೆ.

ಅಶ್ವಿನಿ ಅವರು ಚಿತ್ರರಂಗವನ್ನೂ ಪ್ರವೇಶಿಸಿದರು. ಓಟಗಾರ್ತಿಯ ಬದುಕನ್ನಾಧರಿಸಿದ ಅಶ್ವಿನಿ ಎಂಬ ತೆಲುಗು ಚಿತ್ರದಲ್ಲಿ ಇವರು ನಾಯಕಿಯ ಪಾತ್ರದಲ್ಲೂ ಅಭಿನಯಿಸಿದರು. ಪ್ರಸ್ತುತ ಇವರು ವಿಜಯಾ ಬ್ಯಾಂಕ್‌ನಲ್ಲಿ ಅಧಿಕಾರಿಯಾಗಿ ಬೆಂಗಳೂರಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಭಾರತ ಸರ್ಕಾರ ಇವರಿಗೆ ಅರ್ಜುನ ಪ್ರಶಸ್ತಿ ನೀಡಿ ಗೌರವಿಸಿದೆ (1988). (ಎಸ್.ಆರ್.ಯು.)

**ಅಸಗ :** ಸು.853. ಕನ್ನಡ ಮತ್ತು ಸಂಸ್ಕೃತಗಳಲ್ಲಿ ಅನೇಕ ಕಾವ್ಯಗಳನ್ನು ರಚಿಸಿರುವ ಜೈನ ಕವಿ. ಈವರೆಗೆ ಇವನ ವರ್ಧಮಾನಚರಿತ, ಶಾಂತಿಪುರಾಣ ಮಾತ್ರ ದೊರಕಿವೆ. ಇವೆರಡೂ ಸಂಸ್ಕೃತದಲ್ಲಿವೆ. ತನ್ನ ಸಂಸ್ಕೃತ ಕೃತಿಗಳಲ್ಲಿ ಕವಿ ಕೆಲವು ಸ್ವಂತ ಸಂಗತಿಗಳನ್ನು ಹೇಳಿಕೊಂಡಿದ್ದಾನೆ. ತಂದೆ ಪಟುಮತಿ, ತಾಯಿ ವೈರೇತಿ, ಬಹುದೊಡ್ಡ ವಿದ್ವಾಂಸ ನಾಗಣಂದ್ಯಾಚಾರ್ಯ ಇವನ ಗುರು. ಭಾವಕೀರ್ತಿ ಮುನಿಯ ಸಾನ್ನಿಧ್ಯದಲ್ಲಿ ವರ್ಧಮಾನಚರಿತವನ್ನು ಕವಿ ಬರೆದು ಮುಗಿಸಿದ. ಈ ಕೃತಿಯನ್ನು ಬರೆಯಲು ಮೌದ್ಗಲ್ಯ ಪರ್ವತದ ತುದಿಯಲ್ಲಿ ವಾಸವಾಗಿದ್ದ ಸಂಪತ್ ಎಂಬ ಶ್ರಾವಕಿ ಕಾರಣಳಂತೆ. ಇವನ ವರ್ಧಮಾನಚರಿತವನ್ನು ಧವಲನೆಂಬ

ಅಪಭ್ರಂಶ ಕವಿ ತನ್ನ ಹರಿವಂಶ ಪುರಾಣದಲ್ಲಿ ಪ್ರಶಂಸಿದ್ದಾನೆ. ವರ್ಧಮಾನಚರಿತಕ್ಕೆ ಹದಿನೇಳನೆಯ ಶತಮಾನಕ್ಕೆ ಸೇರಿದ ಒಂದು ಕನ್ನಡ ಟೀಕೆಯಿದೆ. ಜಿನಾಪ ಎಂಬ ಮಿತ್ರನ ಪ್ರೋತ್ಸಾಹದಿಂದ ಇವನು ಶಾಂತಿಪುರಾಣವನ್ನು ರಚಿಸಿದನಂತೆ.

ಮೇಲೆ ಹೇಳಿದ ಎರಡು ಸಂಸ್ಕೃತ ಕೃತಿಗಳಲ್ಲದೆ. ಇನ್ನೂ ಎಂಟು ಕೃತಿಗಳನ್ನು ರಚಿಸಿದ್ದಾನೆ. ಅವುಗಳ ವಿಷಯ ಸರಿಯಾಗಿ ತಿಳಿಯದು.

ವರ್ಧಮಾನಚರಿತವನ್ನು ತಾನು ಸಂವತ್ಸರ 910ರಲ್ಲಿ ಬರೆದಂತೆ ಹೇಳಿಕೊಂಡಿದ್ದಾನೆ. ಸು.950ರಲ್ಲಿದ್ದ ಬಿಪೊನ್ನ ಇವನ ಹೆಸರನ್ನು ಹೇಳುವುದರಿಂದ ಅಸಗ ಅವನಿಗಿಂತ ಹಿಂದಿನವನೆಂಬುದು ಸ್ಪಷ್ಟ. ಆದುದರಿಂದ ಸಂವತ್ಸರ ಎಂಬುದು ಶಾಲಿವಾಹನಶಕ ಅಲ್ಲವೆಂದೂ ವಿಕ್ರಮಶಕವೆಂದೂ ಆ.ನೇ.ಉಪಾಧ್ಯೆಯವರು ಸೂಚಿಸಿದ್ದಾರೆ. ಆದ್ದರಿಂದ ಇದು ಕ್ರಿ.ಶ.853 ಎಂದಾಗುತ್ತದೆ. ಎಂದರೆ ಅಸಗ ಒಂಬತ್ತನೆಯ ಶತಮಾನದ ಮಧ್ಯಕಾಲದ, ಕವಿರಾಜಮಾರ್ಗಕಾರನಿಗೆ ಸಮಕಾಲೀನನಾದ ಕವಿಯಾಗುತ್ತಾನೆ. ಆದರೆ ದಕ್ಷಿಣ ಭಾರತದ, ಕರ್ನಾಟಕದ ಒಬ್ಬ ಕವಿ ವಿಕ್ರಮ ಸಂವತ್ಸರದಲ್ಲಿ ಕಾಲವನ್ನು ಹೇಳಿಕೊಂಡಿರುವುದು ಬಹಳ ವಿಲಕ್ಷಣವಾಗಿದೆ. ಆದ್ದರಿಂದ ಕಾಲದ ಬಗ್ಗೆ ಇನ್ನೂ ಸ್ವಲ್ಪ ಸಂದೇಹವಿದ್ದೇ ಇದೆ.

ಇವರ ಕವಿತೆಯನ್ನು ಪೊನ್ನನಿಂದ ಆರಂಭಿಸಿ ಮುಂದಿನ ಹಲವಾರು ಕವಿಗಳು ಮುಕ್ತಕಂಠದಿಂದ ಹೊಗಳಿದ್ದಾರೆ. ಪೊನ್ನ ತನ್ನ ಶಾಂತಿಪುರಾಣದಲ್ಲಿ ತಾನು ಕನ್ನಡ ಕವಿತೆಯಲ್ಲಿ ಅಸಗನಿಗಿಂತ ನೂರ್ಮಡಿ ಎಂದು ಹೇಳಿಕೊಂಡಿದ್ದಾನೆ. ಕೇಶಿರಾಜ ತನ್ನ ಶಬ್ದಮಣಿದರ್ಪಣಕ್ಕೆ ಲಕ್ಷ್ಯಗಳನ್ನು ಅಸಗನಿಂದಲೂ ತೆಗೆದುಕೊಂಡಿರುವುದಾಗಿ ಹೇಳಿಕೊಂಡಿದ್ದಾನೆ. ದುರ್ಗಸಿಂಹ ಮತ್ತು ನಯಸೇನರು ಅಸಗನ ದೇಸಿ ಮುಂತಾದ ಗುಣಗಳನ್ನು ಕೊಂಡಾಡಿದ್ದಾರೆ. ವರ್ಧಮಾನಪುರಾಣದ ಕರ್ತೃ ಆಚಣ್ಣ ಇವನನ್ನು ಸ್ಮರಿಸಿದ್ದಾನೆ. ಸಮಯ ಪರೀಕ್ಷೆಯ ಕರ್ತೃ ಬ್ರಹ್ಮಶಿವನಿಂದ ಪೊನ್ನ ಪಂಪರ ಸಾಲಿನಲ್ಲಿ ಉಲ್ಲೇಖಿತವಾಗಿರುವ ರಜಕನು ಅಸಗನೇ ಇರಬೇಕು. ಇಷ್ಟಾದರೂ ಅಸಗ ಕನ್ನಡದಲ್ಲಿ ಬರದದ್ದೇನು ಎಂಬುದು ಮಾತ್ರ ಸ್ಪಷ್ಟವಿಲ್ಲ. ಜಯಕೀರ್ತಿ ತನ್ನ ಛಂದೋನುಶಾಸನದ ಏಳನೆಯ ಅಧಿಕಾರದಲ್ಲಿ ಕನ್ನಡದ ಬೇರೆ ಬೇರೆ ದೇಸೀ ವೃತ್ತಗಳನ್ನು ವಿವರಿಸುತ್ತ, ಸಮಾನಾಕ್ಷರ (ದೊರೆಯಕ್ಕರ) ಎಂಬುದು ಅಸಗನ ಕರ್ಣಾಟಕುಮಾರಸಂಭವ ಕಾವ್ಯದಲ್ಲಿ ಪ್ರಯೋಗವಾಗಿದೆ ಎಂದಿದ್ದಾನೆ (ಅಸಗಾಖ್ಯ ಕವಿನಾ ಪ್ರತಿಪಾದಿತಂ ನನು ಕರ್ಣಾಟಕುಮಾರಸಂಭವ ಕಾವ್ಯೇ). ಛಂದೋವತಂಸ ಎಂಬ ಇನ್ನೊಂದು ಅಚ್ಚಗನ್ನಡ ವೃತ್ತ ಕುಮಾರಸಂಭವಾದಿ ಕಾವ್ಯಗಳಲ್ಲಿ ಬಳಕೆಯಾಗಿದೆ ಎನ್ನುತ್ತಾನೆ. ಇದರಿಂದ ಕರ್ಣಾಟಕುಮಾರಸಂಭವ ಕಾವ್ಯ ಕೆಲವು ಅಪೂರ್ವ ಅಚ್ಚಗನ್ನಡ ವೃತ್ತಗಳುಳ್ಳ ಕೃತಿ ಎಂದಾಯಿತು (ಛಂದೋವತಂಸಕ್ಕೆ ಇಲ್ಲಿಯವರೆಗೆ ಲಕ್ಷ್ಯಪದ್ಯವೊಂದೂ ದೊರೆತಿಲ್ಲ). ಅಸಗನ ಕನ್ನಡ ಕೃತಿ ದೊರೆಕಿರದಿದ್ದರೂ ಕೃತಿಯ ಹೆಸರು ಮಾತ್ರ ನಮಗೆ ಜಯಕೀರ್ತಿಯಿಂದ ಲಭ್ಯವಾಗಿದೆ.

ಕರ್ಣಾಟಕುಮಾರಸಂಭವ ಹೆಸರೇ ಹೇಳುವಂತೆ ಶಿವಪಾರ್ವತಿಯರ ವಿವಾಹಕ್ಕೆ ಸಂಬಂಧಿಸಿದ ಕಥೆಯಾಗಿರಬಹುದು. ಬಹುಶಃ ಅದು ಕಾಳಿದಾಸನ ಕೃತಿಯ ಅನುವಾದವಾಗಿರದೆ ಅದರ ರೂಪಾಂತರವಾಗಿರಬಹುದು. ಏಕೆಂದರೆ ಇದುವರೆಗೆ ತಿಳಿದಮಟ್ಟಿಗೆ ಯಾವ ಕನ್ನಡ ಕವಿಯೂ ಸಂಸ್ಕೃತ ಕೃತಿಯೊಂದನ್ನು ಅದು ಇರುವಂತೆಯೇ ಅನುವಾದಿಸಿಲ್ಲ.

ಕನ್ನಡದ ಅನೇಕ ಸಂಗ್ರಹ ಗ್ರಂಥಗಳಲ್ಲಿ ಹಾಗೂ ವ್ಯಾಕರಣಗಳಲ್ಲಿ ಶಿವ, ಶಿವೆಯರ ವಿವಾಹಕ್ಕೆ ಸಂಬಂಧಿಸಿದ ಪದಗಳು, ಪದ್ಯಭಾಗಗಳು ದೊರೆಯುತ್ತವೆ (ಉದಾ: ಸೂಕ್ತಿ ಸುಧಾರ್ಣವ, ಕಾವ್ಯಾವಲೋಕನ, ಶಬ್ದಮಣಿದರ್ಪಣ). ಇವುಗಳಲ್ಲಿ ಎಲ್ಲವೂ ಅಲ್ಲದಿದ್ದರೂ ಕೆಲವಾದರೂ ಅಸಗನ ಕುಮಾರಸಂಭವಕ್ಕೆ ಸಂಬಂಧಿಸಿದ ಪದ್ಯಗಳಿರಬೇಕೆಂದು ಊಹಿಸಬಹುದಾಗಿದೆ. ಅವೆಲ್ಲವೂ ಶಿವನಲ್ಲಿ ಭಕ್ತಿಯಿದ್ದ ವ್ಯಕ್ತಿಯೊಬ್ಬ ಬರೆದ ಪದ್ಯಗಳಂತೆ ತೋರುತ್ತವೆ. ಜೈನನಾದ ಅಸಗ ಈ ಪದ್ಯಗಳನ್ನು ಬರೆದನೇ ಎಂಬ ಸಂದೇಹವೂ ಮೂಡದಿರದು. ಇಷ್ಟಾದರೂ ಕುಮಾರ ಸಂಭವಕ್ಕೆ ಸಂಬಂಧಿಸಿದ ಯಾವುದೇ ಪದ್ಯ ಹಾಗೂ ಪದ್ಯಭಾಗಗಳಲ್ಲಿ ಜೈನಧರ್ಮದ ಛಾಯೆಯಾಗಲಿ, ಶೈವಧರ್ಮದ ವಿಡಂಬನೆಯಾಗಲಿ ಕಂಡುಬರುವುದಿಲ್ಲ. ಅಸಗ ಜೈನನಾಗಿದ್ದರೂ ಹಿಂದುಗಳಿಗೆ ಬಹುಪ್ರಿಯವಾದ ಕಥೆಯೊಂದನ್ನು ಅಷ್ಟೇ ಭಕ್ತಿಯಿಂದ ರಚಿಸಿ ತನ್ನ ಸರ್ವಧರ್ಮಸಮನ್ವಯ ದೃಷ್ಟಿಯನ್ನು ತೋರಿಸಿದ್ದಾನೆ ಎಂದು ಹೇಳಬಹುದು. ಒಟ್ಟಿನಲ್ಲಿ ಈತನ ಕನ್ನಡಕೃತಿಗಳು ದೊರೆಯುವವರೆವಿಗೂ ಇವನ ವಿಷಯವಾಗಿ ಹೆಚ್ಚೇನನ್ನೂ ಹೇಳಲು ಅವಕಾಶವಿಲ್ಲ. **(ಎಂ.ಸಿ.)**

**ಅಹ್ಮದ್ III :** ಬಹಮನೀ ರಾಜ್ಯದ 12ನೆಯ ಸುಲ್ತಾನ (1461-63). ಹುಮಾಯೂನನ ಮಗ. ತಂದೆಯ ಮರಣಾನಂತರ ಇವನು ನಿಜಾಮುದ್ದೀನ್ ಆಹ್ಮದ್ ಎಂಬ ಬಿರುದನ್ನು ಧರಿಸಿ ಸುಲ್ತಾನನಾದ. ಆಗ ಈತ ಕೇವಲ ಎಂಟು ವರ್ಷದ ಬಾಲಕ. ಹುಮಾಯೂನ್ ಬದುಕಿರುವಾಗಲೆ ಆಡಳಿತ ನಿರ್ವಹಣೆಗಾಗಿ ಖ್ವಾಜಾ-ಎ-ಜಹಾನ್ ತುರ್ಕ್, ಮಹ್ಮೂದ್ ಗಾವಾನ್ ಮತ್ತು ರಾಣಿ ನರ್ಗಿಸ್ ಬೇಗಂ ಇವರಿಂದ ಕೂಡಿದ ರಾಜಪ್ರತಿನಿಧಿಮಂಡಳಿಯನ್ನು ನೇಮಿಸಿದ್ದ. ನರ್ಗಿಸ್ ಬೇಗಂ ಮಂಡಳಿಯ ಮುಖ್ಯಳಾಗಿದ್ದಳು. ಅಹ್ಮದನ ಕಾಲದಲ್ಲಿ ಬಹಮನೀ ರಾಜ್ಯದ ಆಡಳಿತವನ್ನು ಸಂಪೂರ್ಣವಾಗಿ ನರ್ಗಿಸ್ ಬೇಗಂ ತನ್ನ ಹಿಡಿತದಲ್ಲಿಟ್ಟುಕೊಂಡಿದ್ದಳು. ಅಹ್ಮದನ ಆಳ್ವಿಕೆ ಹಿಂದಿನ ರಾಜಕೀಯ ಅಪರಾಧಿಗಳಿಗೆ ಕ್ಷಮಾದಾನ ನೀಡುವುದರ ಮೂಲಕ ಪ್ರಾರಂಭವಾಯಿತು. ಬಹಮನೀ ರಾಜ್ಯದಲ್ಲಿ ಒಬ್ಬ ಬಾಲಕ ಸುಲ್ತಾನನಾಗಿರುವ ಸಮಯವನ್ನು ಉಪಯೋಗಿಸಿಕೊಂಡು ಒರಿಸ್ಸಾದ ಕಪಿಲೇಶ್ವರ ಆ ರಾಜ್ಯವನ್ನು ಮುತ್ತಿ ಕೆಲವು ಪ್ರದೇಶಗಳನ್ನು ಗೆದ್ದುಕೊಂಡ. ಆಗ ರಾಣಿ ಕಳುಹಿಸಿದ ಮುಹಿಬುಲ್ಲಾನ ನಾಯಕತ್ವದ ಬಹಮನೀ ಸೈನ್ಯ ಕಪಿಲೇಶ್ವರನ ಸೈನ್ಯವನ್ನು ಹಿಮ್ಮೆಟ್ಟಿಸಿತು. ಅನಂತರ ಮಾಳವದ ಮಹಮ್ಮದ್ ಖಿಲ್ಜಿ ಬಹಮನೀ ರಾಜ್ಯವನ್ನು ಮುತ್ತಿದ. ರಾಜಧಾನಿಯಿಂದ ಸು. 32 ಮೈಲಿ ದೂರದಲ್ಲಿ ತನ್ನ ಬಿಡಾರವನ್ನು ಹೂಡಿದ. ಆಗ ಅಹ್ಮದ್ ಶತ್ರುವಿನ ವಿರುದ್ಧ ದಂಡೆತ್ತಿಹೋದ. ಆದರೆ ಸೋತು ಬಿದರೆಗೆ ಓಡಿಬಂದ. ಮಹಮದ್ ಖಿಲ್ಜಿ ಹಲವು ಪ್ರದೇಶಗಳನ್ನು ಗೆದ್ದುಕೊಂಡು ಬಿದರೆಯನ್ನೂ ಮುತ್ತಿದ. ಆ ವೇಳೆಗೆ ಬಿದರೆಯಿಂದ ರಾಜಧಾನಿಯನ್ನು ತಾತ್ಕಾಲಿಕವಾಗಿ ಗುಲ್ಬರ್ಗದ ಹತ್ತಿರವಿದ್ದ ಫಿರೋಜಾಬಾದ್‌ಗೆ ಬದಲಾಯಿಸಲಾಗಿತ್ತು. ರಾಣಿ ಮತ್ತು ಮಹ್ಮೂದ್ ಗಾವಾನ್ ಗುಜರಾತಿನ ಸುಲ್ತಾನ ಮಹಮ್ಮದನ ಸಹಾಯವನ್ನು ಕೋರಿದರು. ಗುಜರಾತಿನ ಸುಲ್ತಾನ ದೊಡ್ಡ ಸೈನ್ಯದೊಡನೆ ಧಾವಿಸಿ ಬಂದ. ಈ ಸುದ್ದಿಯನ್ನು ತಿಳಿದ ತಕ್ಷಣವೇ ಮಹಮ್ಮದ್ ಖಿಲ್ಜಿ ತನ್ನ ರಾಜ್ಯಕ್ಕೆ ಹಿಂದಿರುಗಿದ. ಪುನಃ 1463ರಲ್ಲಿ ಮಹಮ್ಮದ್ ಖಿಲ್ಜಿ ದಂಡೆತ್ತಿ ಬಂದರೂ ಹಿಂದಿರುಗ ಬೇಕಾಯಿತು. ಅನತಿಕಾಲದಲ್ಲಿ 1463ರಲ್ಲೇ ಮೂರನೆಯ ಅಹ್ಮದ್ ತನ್ನ ವಿವಾಹದ ರಾತ್ರಿಯೇ ವಿಚಿತ್ರ ಸನ್ನಿವೇಶದಲ್ಲಿ ಮೃತನಾದ. **(ಎಸ್.)**

**ಅಳಂದ :** ಗುಲ್ಬರ್ಗ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಊರು. ಈ ತಾಲ್ಲೂಕನ್ನು ಪೂರ್ವದಲ್ಲಿ ಗುಲ್ಬರ್ಗ, ದಕ್ಷಿಣದಲ್ಲಿ ಅಫಜಲಪುರ ತಾಲ್ಲೂಕುಗಳೂ ಉತ್ತರ ಮತ್ತು ಪಶ್ಚಿಮದಲ್ಲಿ ಮಹಾರಾಷ್ಟ್ರ ರಾಜ್ಯವೂ ಸುತ್ತುವರೆದಿವೆ. ವಿಸ್ತೀರ್ಣ 1733ಚ.ಕಿಮೀ. ಜನಸಂಖ್ಯೆ 2,94,838. ಗುಲ್ಬರ್ಗ ಸಬ್ ಡಿವಿಜನ್‌ಗೆ ಅಳಂದ ಸೇರಿದೆ. ತಾಲ್ಲೂಕಿನಲ್ಲಿ ಒಂದು ಪಟ್ಟಣ ಮತ್ತು 129 ಗ್ರಾಮಗಳಿವೆ. ಸರ್ಕಲ್‌ಗಳು 3 ಕಸಬೆ, ನಿಂಬರ್ಗ ಮತ್ತು ನರೋಣ.

ಈ ತಾಲ್ಲೂಕಿನ ಭೂಮಿ ಸಮತಟ್ಟಿಲ್ಲದೆ ತಗ್ಗುದಿಣ್ಣೆಗಳಿಂದ ಕೂಡಿದೆ. ತಳಶಿಲೆಯೆಲ್ಲ ಹೆಚ್ಚುಮಟ್ಟಿಗೆ ಟ್ರಾಪ್ ಕರಿಕಲ್ಲು. ಮಣ್ಣು ಕಪ್ಪು ಮತ್ತು ಕಂದುಗೆಂಪು. ನೈಋತ್ಯದ ಮಾರುತಗಳಿಂದ ಸ್ವಲ್ಪ ಮಳೆಯಾಗುತ್ತದೆ. ವಾರ್ಷಿಕ ಸರಾಸರಿ ಮಳೆ 807ಮಿಮೀ. ತಾಲ್ಲೂಕಿನ ಮಧ್ಯದಲ್ಲಿ ಅಮರಜ ನದಿ (ನೋಡಿ) ಉತ್ತರ-ದಕ್ಷಿಣವಾಗಿ ಹರಿಯುತ್ತದೆ. ಅಳಂದ ತಾಲ್ಲೂಕಿನಲ್ಲಿ 4326 (1964-65) ಎಕರೆ ಕುರುಚಲು ಮಿಶ್ರಿತ ಸಣ್ಣ ಮರಗಳ ಕಾಡು ಇದೆ.

ಸಜ್ಜೆ, ಗೋದಿ, ನೆಲಗಡಲೆ, ತೊಗರಿ, ಕಡಲೆ, ಮೆಣಸಿನಕಾಯಿ, ಹತ್ತಿ ಪ್ರಧಾನ ಬೆಳೆಗಳು. ಇದರ ಜೊತೆಗೆ ಜೋಳ, ಇತರ ದ್ವಿದಳಧಾನ್ಯಗಳು ಮತ್ತು ಹಣ್ಣುಗಳ ಬೆಳೆಗಳೂ ಇವೆ. ಕೆರೆ ಹಾಗೂ ಬಾವಿಯ ನೀರಾವರಿಯಿದೆ.

ಈ ತಾಲ್ಲೂಕಿನ ಕೆಲವು ಮುಖ್ಯ ಸ್ಥಳಗಳಲ್ಲಿ ಪಡಸಾವಳಿ, ಹೊನ್ನಹಳ್ಳಿ, ಕುಣಿಸಂಗವಿ, ಖಜೂರಿ, ಮಟಕಿ ಖಂಡಾಲ, ರುದ್ರವಾಡಿ, ನರೋಣಗಳನ್ನು ಹೆಸರಿಸಬಹುದು. ಅಳಂದದಿಂದ ಸು.19ಕಿಮೀ ವಾಯವ್ಯದಲ್ಲಿರುವ ಪಡಸಾವಳಿ ಗ್ರಾಮದಲ್ಲಿ 12ನೆಯ ಶತಮಾನದ ಕೆಲವು ದೇವಾಲಯಗಳಿವೆ. ಇಲ್ಲಿ ಭೂಮಟ್ಟದ ಕೆಳಗಿರುವ ಒಂದು ದೇವಾಲಯ ದಲ್ಲಿರುವ ಚೆನ್ನಕೇಶವ ವಿಗ್ರಹ ಬಹುಸುಂದರವಾಗಿದೆ. ಅಳಂದದಿಂದ ಸು.16ಕಿಮೀ ಈಶಾನ್ಯದಲ್ಲಿರುವ ರುದ್ರವಾಡಿ ಗ್ರಾಮದಲ್ಲಿ ಕಲ್ಯಾಣ ಚಾಳುಕ್ಯರ ಕಾಲದ ಒಂದು ಶಿವದೇವಾಲಯ ಮತ್ತು ಕೆಲವು ಶಾಸನಗಳಿವೆ. ಅಳಂದದಿಂದ ಸು.18ಕಿಮೀ ಪೂರ್ವಕ್ಕಿರುವ ನರೋಣ ಪ್ರಸಿದ್ಧವಾದ ತೀರ್ಥಕ್ಷೇತ್ರ. ರಾವಣನ ವಧೆಯ ಬಳಿಕ ಅಯೋಧ್ಯೆಗೆ ತೆರಳುವ ಮುನ್ನ ಶ್ರೀರಾಮ ತನ್ನ ಪಾಪ ಪರಿಹಾರಾರ್ಥ ಕೆಲಕಾಲ ಇಲ್ಲಿ ತಂಗಿದ್ದನಂತೆ. ಮಹಾಋಷಿ ಅಗಸ್ತ್ಯ ಇಲ್ಲಿ ವಾಸಿಸುತ್ತಿದ್ದನೆಂದೂ ಹೇಳಲಾಗಿದೆ. ಇಲ್ಲಿ ಕಾರ್ತಿಕೇಯ ಸ್ವಾಮಿ ದೇವಾಲಯವೂ 8 ತೀರ್ಥಗಳೂ ಇವೆ. ಹಾಗೆಯೇ ಹೊನ್ನಹಳ್ಳಿಯ ಎಲ್ಲಮ್ಮ ದೇವಾಲಯ, ಕುಣಿ ಸಂಗವಿಯ ಬಸವೇಶ್ವರ ದೇವಾಲಯ, ಖಜೂರಿಯ ವೆಂಕಟೇಶ್ವರ ದೇವಾಲಯ, ಮಟಕಿಯ ಜಲಂಧರನಾಥ ಮತ್ತು ಹನುಮಾನ್ ದೇವಾಲಯಗಳು ಈ ಸುತ್ತಿನಲ್ಲಿ ಪ್ರಸಿದ್ಧವಾಗಿವೆ.

ಅಳಂದ ಪಟ್ಟಣ ಗುಲ್ಬರ್ಗಕ್ಕೆ ಸು.46ಕಿಮೀ ವಾಯವ್ಯದಲ್ಲಿದೆ. ಅಳಂದ ನಗರಸಭಾಡಳಿತಕ್ಕೆ ಸೇರಿದೆ. ಜನಸಂಖ್ಯೆ 35,308. ಇಲ್ಲಿಗೆ ಗುಲ್ಬರ್ಗ, ಉಮರ್ಗ, ವಾಗ್ದರಿಗಳಿಂದ ಉತ್ತಮ ರಸ್ತೆಗಳಿವೆ. ಇಲ್ಲಿನ ಕೈಮಗ್ಗದ ಸೀರೆಗಳನ್ನು ಅಕ್ಕಪಕ್ಕದ ಜಿಲ್ಲೆಗಳಿಗೂ ರಾಜ್ಯಗಳಿಗೂ ಕಳಿಸುವುದುಂಟು.



ಲಾಡ್ಲೆ ಮುಷಾಯಿಕ್ ದರ್ಗಾ

ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಈ ಊರು ಅಳಂದೆ ಸಾಸಿರ ಎಂಬ ಪ್ರಾಂತ್ಯವೊಂದರ ಮುಖ್ಯಪಟ್ಟಣವಾಗಿತ್ತೆಂದು ಅನೇಕ ಶಾಸನಗಳಿಂದ ತಿಳಿಯುತ್ತದೆ. ಇಲ್ಲಿ 6ನೆಯ ವಿಕ್ರಮಾದಿತ್ಯನ ಕಾಲದ ಒಂದು ಶಾಸನವೂ ದೊರಕಿದೆ. ಆ ಕಾಲದ ಹಲವು ಭಗ್ನಾವಶೇಷಗಳಲ್ಲದೆ ಸು.15ನೆಯ ಶತಮಾನದ ಲಾಡ್ಲೆ ಮುಷಾಯಿಕ್ ದರ್ಗಾ ಇದೆ. ದರ್ಗಾದ ಸಮೀಪದಲ್ಲೇ ರಾಘುವಚೈತನ್ಯರ ಸಮಾಧಿ ಇದೆ. ಈ ಊರಿನಲ್ಲಿ ಶಂಕರಾಚಾರ್ಯರ ಸಚ್ಛಿಷ್ಯರಾದ ಹಸ್ತಾಮಲಕರು ನೆಲೆಸಿದ್ದರೆಂದು ಪ್ರತೀತಿ. ಸಮೀಪದಲ್ಲಿ ಇವರ ಹೆಸರಿನ ಕ್ಷೇತ್ರವೊಂದಿದೆ. 15ನೆಯ ಶತಮಾನದಲ್ಲಿ ರಷ್ಯ ಪ್ರವಾಸಿಯೊಬ್ಬ ಈ ಊರನ್ನು ಸಂದರ್ಶಿಸಿದ್ದ. ಈ ಊರನ್ನು ಅಳಂದ ಸಾಸಿರ ಎಂದು ಕರೆಯಲ್ಪಡುತ್ತಿದ್ದುದನ್ನು ಆತ ಉಲ್ಲೇಖಿಸಿದ್ದಾನೆ. (ಎ.ಎಂ.ಎ.)

**ಅಳ್ಣಾವರ :** ಧಾರವಾಡ ಜಿಲ್ಲೆ ಧಾರವಾಡ ತಾಲ್ಲೂಕಿನ ಒಂದು ಪಟ್ಟಣ. ಜನಸಂಖ್ಯೆ 16,286. ಧಾರವಾಡ, ಬೆಳಗಾಂವಿ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಗಡಿಯಲ್ಲಿದ್ದು ಧಾರವಾಡ ನಗರಕ್ಕೆ ಪಶ್ಚಿಮದಲ್ಲಿ 34 ಕಿಮೀ ದೂರದಲ್ಲಿದೆ. ಸಮುದ್ರಮಟ್ಟಕ್ಕೆ 569ಮೀ ಎತ್ತರದಲ್ಲಿದೆ. ಪುಣೆ ಬೆಂಗಳೂರು ರೈಲುಮಾರ್ಗದಲ್ಲಿ ಧಾರವಾಡ ಮತ್ತು ಲೋಂಡಾಗಳ ಮಧ್ಯೆ ಇರುವ ಒಂದು ರೈಲು ಜಂಕ್ಷನ್ ಸ್ಥಳವಾಗಿದೆ. ಇಲ್ಲಿಂದ ದಾಂಡೇಲಿಗೆ ರೈಲುಮಾರ್ಗವಿದೆ. ಗೋವಾ, ಬೆಳಗಾಂವಿ ಮುಂತಾದೆಡೆಗೆ ರೈಲುಮಾರ್ಗದ ಜೊತೆಗೆ ರಸ್ತೆಗಳೂ ಇದ್ದು ಉತ್ತಮ ಸಾರಿಗೆ ಸಂಪರ್ಕ ಉಂಟು. ಅಳ್ಣಾವರ 1973ರಿಂದ ನಗರಸಭಾಡಳಿತಕ್ಕೆ ಒಳಪಟ್ಟಿದೆ. ಇಲ್ಲಿ ಮರಕೊಯ್ಯುವ ಕಾರ್ಖಾನೆಗಳೂ ಬತ್ತದ ಗಿರಣಿಗಳೂ ಇವೆ. ಸುತ್ತಲ ಗ್ರಾಮಗಳಿಗೆ ಅಳ್ಣಾವರ ಒಂದು ವ್ಯಾಪಾರಕೇಂದ್ರ. ಪ್ರತಿ ಮಂಗಳವಾರ ಸಂತೆ ಸೇರುತ್ತದೆ. ಸುತ್ತಲೂ ಕಾಡುಗಳಿರುವುದರಿಂದ ಮರ ಕೊಯ್ದು ಸಾಗಿಸುವ ಉದ್ಯಮವಿದೆ.

ಅಳ್ಣಾವರದ ಮೂಲ ಹೆಸರು ಅನಿಲಪುರ. ಇಲ್ಲಿ ನಾಲ್ಕು ಶಾಸನಗಳು ದೊರೆತಿವೆ. ಅವುಗಳಲ್ಲಿ 1081ರ ಶಾಸನ ಗೋವ - ಕದಂಬ ವಂಶದ ಗೂವಲ್ಲ ದೇವನದು. ಅಳ್ಣಾವರ ಚಾಳುಕ್ಯ, ರಾಷ್ಟ್ರಕೂಟ, ವಿಜಯನಗರ, ಆದಿಲ್‌ಶಾಹಿ ಮತ್ತು ಕಿತ್ತೂರು ಇವುಗಳ ಆಡಳಿತಕ್ಕೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ. ಇದು 1010ರಲ್ಲಿ ಕದಂಬ ರಾಜ್ಯಪಾಲ ಜಯಕೇಶಿಯ ರಾಜಧಾನಿಯಾಗಿತ್ತು. (ಎಸ್.ಎಸ್.ಎನ್.)

**ಅಳಸಿಂಗರಾಚಾರ್ಯ ದೇವಶಿಖಾಮಣಿ :** 1877-1940. ಕಳೆದ ತಲೆಮಾರಿನ ಪ್ರಸಿದ್ಧ ಲೇಖಕರು. ಮೇಲುಕೋಟೆಯಲ್ಲಿ ಜನನ. ತಂದೆ ತಿರುಮಲೈ ಅಯ್ಯಂಗಾರ್ಯರು ಅಲ್ಲಿಯ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಾಪಕರಾಗಿದ್ದರು. ಹುಟ್ಟೂರಿನಲ್ಲಿದ್ದ ವೇದಾಂತಬೋಧಿನೀ ಪಾಠಶಾಲೆಯಲ್ಲಿ ಅಳಸಿಂಗರಾಚಾರ್ಯರು ವ್ಯಾಸಂಗ ಮಾಡಿ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಪಾಂಡಿತ್ಯವನ್ನು ಗಳಿಸಿದರು. ಮೈಸೂರು ಮರಿಮಲ್ಲಪ್ಪ ಪ್ರೌಢಶಾಲೆಯಲ್ಲಿ ಅಧ್ಯಾಪಕರಾಗಿ ತಮ್ಮ ವೃತ್ತಿಜೀವನವನ್ನು ಆರಂಭಿಸಿದ ಇವರು ಮುಂದೆ ಮದರಾಸಿನ ಕ್ರಿಶ್ಚಿಯನ್ ಕಾಲೇಜು ಮತ್ತು ಪ್ರೆಸಿಡೆನ್ಸಿ ಕಾಲೇಜುಗಳಲ್ಲೂ ಶಿಕ್ಷಕರಾಗಿದ್ದರು. ಮದರಾಸು ವಿಶ್ವವಿದ್ಯಾಲಯದ ಕನ್ನಡವ್ಯಾಸಂಗ ಸಮಿತಿಯ ಸದಸ್ಯರಾಗಿಯೂ ಕೆಲವು ವರ್ಷಗಳ ಕಾಲ ಸೇವೆ ಸಲ್ಲಿಸಿದರು (1932).

ಅಳಸಿಂಗರಾಚಾರ್ಯರು ಚಿಕ್ಕ ವಯಸ್ಸಿನಲ್ಲಿಯೇ ಕಾವ್ಯರಚನೆಯನ್ನು ಪ್ರಾರಂಭಿಸಿದ್ದರು. ಇವರ ಪ್ರಥಮ ಕೃತಿ ಚೆಲ್ವನಾರಾಯಣ ಶತಕಂ ಒಂದು ಪದ್ಯಗ್ರಂಥ. ಇದರ ಶೈಲಿ ವಿಶಿಷ್ಟವಾದುದು. ಶ್ರೀಮದ್ರಾಮಾಯಣ, ಶ್ರೀಮನ್ಮಹಾಭಾರತ, ಶ್ರೀಮದ್ಭಾಗವತ - ಈ ಗ್ರಂಥಗಳನ್ನು ಸಂಸ್ಕೃತದಿಂದ ಕನ್ನಡಕ್ಕೆ ಗದ್ಯರೂಪವಾಗಿ ಭಾಷಾಂತರಿಸಿದ್ದಾರೆ. ಸ್ವಪ್ನವಾಸವದತ್ತ, ಪಂಚರಾತ್ರಗಳು ಇವರು ಮಾಡಿರುವ ಇತರ ಅನುವಾದಗಳು. ಘೋರ ಯೂರೋಪು ಯುದ್ಧದ ಚರಿತ್ರೆ, ಪೌರನೀತಿ, ಪಂಚಭಾಷಾ ಪ್ರಹಸನ, ಯುದ್ಧದ ಅನುಭವಗಳು - ಇವರ ಇತರ ಕೃತಿಗಳು. ಇವರ ಗದ್ಯಶೈಲಿ ಸರಳವಾಗಿದ್ದು ಆಕರ್ಷಕವಾಗಿದೆ.

ಸರಳಜೀವಿಗಳೂ ವಿನಯಶೀಲರೂ ಆಗಿದ್ದು, ತಮ್ಮ ಪಾಂಡಿತ್ಯ ಮತ್ತು ಪ್ರತಿಭೆಗಳಿಂದ ಸಮಕಾಲೀನರ ಗೌರವಕ್ಕೆ ಪಾತ್ರರಾಗಿದ್ದ ಇವರು 1940 ಡಿಸೆಂಬರ್ 12ರಂದು ನಿಧನರಾದರು. (ಎನ್.ಎ.ಆರ್.)

**ಅಳಿಯ ಲಿಂಗರಾಜ :** 1823-74. ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಚಂಪೂ, ಸಾಂಗತ್ಯ, ಷಟ್ಪದಿ, ಯಕ್ಷಗಾನ, ಶತಕ, ಹಾಡು, ಲಾವಣಿ ಮೊದಲಾಗಿ ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ಗ್ರಂಥಗಳನ್ನು ರಚಿಸಿದ ಕವಿ. ಮೈಸೂರು ರಾಜರಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರ ಪೋಷಣೆಯಲ್ಲಿ ವಿದ್ಯಾವಂತನಾದವ. ರಾಜರು ದೊಡ್ಡಪುಟ್ಟತಾಯಮ್ಮಣ್ಣಿ, ಚಿಕ್ಕಪುಟ್ಟತಾಯಮ್ಮಣ್ಣಿ ಎಂಬಿಬ್ಬರನ್ನು ಇವನಿಗೆ ಕೊಟ್ಟು ಮದುವೆ ಮಾಡಿದ್ದುದರಿಂದ ಅಳಿಯ ಲಿಂಗರಾಜ ಎಂಬ ಹೆಸರು ಬಂತು. ಈತನ ತಂದೆ ಲಿಂಗರಾಜ, ತಾಯಿ ಕೆಂಪದೇವಾಂಬಿಕೆ. ಉಭಯಕವಿತಾವಿಶಾರದ ಎಂಬುದು ಈತನ ಬಿರುದು. ಈತ ಹರಿಹರ, ರಾಘುವಾಂಕ, ದೇವೇಶ್ವರ ನಾಗವರ್ಮ ಮೊದಲಾದ ಪೂರ್ವಕವಿಗಳನ್ನು ಸ್ತುತಿಸಿದ್ದಾನೆ.

ಅಂಗದಸಂಧಾನ, ಇಂದ್ರಕೀಲ, ಕುಶಲವರ ಕಥೆ, ಕೃಷ್ಣಬಾಲಲೀಲೆ, ಕೃಷ್ಣಾರ್ಜುನರ ಕಾಳಗ, ಗಯಚರಿತ್ರ, ಗಿರಿಜಾಕಲ್ಯಾಣ, ಚಂದ್ರಾವಳಿ ಕಥೆ, ಚಂದ್ರಾವಳಿಯ ಜೋಗಿ ಹಾಡು, ಚಿಕ್ಕ ಪಟ್ಟಾಭಿಷೇಕ, ಚೂಡಾಮಣಿ, ಜಲಂಧರ ಕಾಳಗ, ತಾರಕವಧೆ, ದ್ರೌಪದೀ ಸ್ವಯಂವರ, ನರಪತಿಚರಿತೆ, ನಳಕೂಬರವಿಲಾಸ, ನಳಚರಿತ್ರೆ, ಪಂಚವಿಂಶತಿಲೀಲೆ,

ಪಾರಿಜಾತಾಪಹರಣ, ಪುತ್ರಕಾಮೇಷ್ಟಿ, ಪ್ರಭಾವತೀ ಪರಿಣಯ, ಬಭ್ರುವಾಹನ ಕಾಳಗ, ಬಾಲಲೀಲೆ, ಮಕರಾಂಕಸೇನಕಥೆ, ಮದಾಲಸಾಪರಿಣಯ, ಮಹಾಲಿಂಗಶತಕ, ಮೈರಾವಣ ಕಥೆ, ಮೋಡಿನಾಟಕ, ರಾಮೋದಯಕಥೆ, ರುಕ್ಮಾಂಗದಚರಿತ್ರೆ, ಲಾವಣಿಗಳು, ವನವಾಸರಾಮಾಯಣ, ವಾಲಿ ಸುಗ್ರೀವರ ಕಾಳಗ, ವಿರಾಟಪರ್ವ, ವೀರಭದ್ರಶತಕ, ಶೃಂಗಾರಸೂತ್ರೋದಾಹರಣಪದ, ಸೀತಾಕಲ್ಯಾಣ, ಸೀತಾಪಹಾರ, ಸೀತಾಸ್ವಯಂವರ, ಸುಧನ್ವನ ಕಾಳಗ, ಸೇತುಬಂಧ, ಸ್ಯಮಂತಕೋಪಾಖ್ಯಾನ - ಇವು ಈತನ ಕೃತಿಗಳು. ಇವಲ್ಲದೆ ಶಿವಭಕ್ತಿರತ್ನಾಕರ, ಮಹಾಲಿಂಗನಕ್ಷತ್ರಮಾಲಿಕೆ, ಶ್ರೀಕಂಠನಕ್ಷತ್ರಮಾಲಿಕೆ, ವೀರೇಶ ತಾರಾವಳಿ, ಲಂಕಾದಹನ ಎಂಬ ಗ್ರಂಥಗಳನ್ನು ರಚಿಸಿರುವನೆಂದು ಕೆಲವು ವಿದ್ವಾಂಸರ ಅಭಿಪ್ರಾಯ.

ಗಯಚರಿತೆ ಮತ್ತು ನಳಕೂಬರ ವಿಳಾಸಗಳು ಚಂಪೂ ಹಾಗೂ ಯಕ್ಷಗಾನ ರೂಪಗಳಲ್ಲಿ ರಚಿತವಾಗಿವೆ. ನರಪತಿಚರಿತವೆಂಬ ಚಂಪೂ ಒಂದು ಅಲಂಕಾರ ಗ್ರಂಥ. ಪ್ರಭಾವತೀಪರಿಣಯ ವಾರ್ಧಕ ಷಟ್ಪದಿಯಲ್ಲೂ ವೀರಭದ್ರಶತಕ ವೃತ್ತರೂಪದಲ್ಲೂ ಮಹಾಲಿಂಗಶತಕ ಕಂದರೂಪದಲ್ಲೂ ಇವೆ. ಉಳಿದವುಗಳಲ್ಲಿ ಹಾಡುಗಳನ್ನೂ ಲಾವಣಿಗಳನ್ನೂ ಬಿಟ್ಟರೆ ಮಿಕ್ಕೆಲ್ಲವೂ ಯಕ್ಷಗಾನ ರೂಪವಾಗಿವೆ. ಈತನ ಕಾವ್ಯರಚನೆ ಬಹುಮುಖವಾಗಿದ್ದರೂ ಅವುಗಳಲ್ಲಿನ ಕಾವ್ಯಮೌಲ್ಯ ಅಷ್ಟೇನೂ ಹಿರಿದಲ್ಲ. **(ಬಿ.ಎಸ್.ಎಸ್.)**

**ಅಳಿಯಸಂತಾನ :** ಸ್ತ್ರೀಗೆ ಪ್ರಾಧಾನ್ಯತೆ ನೀಡುವ ಒಂದು ಕಟ್ಟುಪಾಡು; ಸಾಮಾಜಿಕ ವ್ಯವಸ್ಥೆ. ಇದರ ಪ್ರಕಾರ ಆಸ್ತಿಪಾಸ್ತಿಗಳು ಹೆಣ್ಣುಸಂತಾನದ ಮೂಲಕ ಅನುಭವಿಸುವುದು, ಎಂದರೆ ತಂದೆಯ ಸಂಪತ್ತಿನ ಮೇಲೆ ಹಕ್ಕನ್ನು ಮಕ್ಕಳು ಹೊಂದದೆ ಸೋದರ ಅಳಿಯಂದಿರು (ಸೋದರಿಯರ ಮಕ್ಕಳು) ಅನುಭವಿಸುವುದು ರೂಢಿ. ಈ ಪದ್ಧತಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಅಗಸ, ಅಂಡೆಕೊರಗ, ಕರಿನ್ಯಾರಕ, ಕುಂಬಾರ, ಕ್ಷೌರಿಕ, ದೇವಡಿಗ, ಹಳೆಪೈಕ, ಹರಿಚೆಟ್ಟಿ,ಹೊಲೆಯ, ಪರಯಾ, ಜೈನ, ಮಲೆಕುಡಿಯ, ಮಲವ, ಮಾಸಾಟಕ, ಬಂಟ, ಮುಂಡಾಲ, ನಾಯರ, ಪೆಂಜಾಲ, ಸಾಲಿಯ, ತುಳುವ ಈ ಜಾತಿಗಳಲ್ಲಿ ಪ್ರಚಲಿತವಾಗಿದೆ.

ಅಳಿಯಸಂತಾನ ಪದ್ಧತಿಗೆ ಸಂಬಂಧಿಸಿದ ಸಾಹಿತ್ಯ ಮೊದಲ ಬಾರಿಗೆ 1843ರಲ್ಲಿ ಮದರಾಸು ಹೈಕೋರ್ಟಿನಲ್ಲಿ ದಾಖಲಾದ ಒಂದು ವ್ಯವಹರಣೆಯಲ್ಲಿ ಪ್ರಕಾಶಕ್ಕೆ ಬಂತು. ಇದರಲ್ಲಿ ಅಳಿಯಸಂತಾನ ಪದ್ಧತಿಗೆ ಸೇರಿದ ಜಾತಿಗಳು ಅವಲಂಬಿಸಬೇಕಾದ 14 ಕಟ್ಟುಗಳೂ 16 ಕಟ್ಟಳೆಗಳೂ ಅಡಕವಾಗಿವೆ. ಈ ಪದ್ಧತಿಯ ಮೂಲ ಅಸ್ಪಷ್ಟ. ಬಾರಕೂರಿನಲ್ಲಿ ಆಳುತ್ತಿದ್ದ ದೇವಪಾಂಡ್ಯನೆಂಬ ಅರಸ ತಾನು ನಿರ್ಮಿಸಿದ ಹಡಗಿಗೆ ತುಂಡೋದರನೆಂಬ ದೈವದ ಕೇಳಿಕೆಯಂತೆ ತನ್ನ ಮಗನನ್ನು ನರಬಲಿ ಕೊಡಲು ಹೆಂಡತಿಯನ್ನು ಕೇಳಲಾಗಿ ಅವಳು ಒಪ್ಪದ ಕಾರಣ, ಅವನ ತಂಗಿ ತನ್ನ ಮಗ ಜಯಪಾಂಡ್ಯನನ್ನು ಬಲಿಕೊಡಲು ಒಪ್ಪಿದಳು. ಆದರೆ ತುಂಡೋದರ ಇದಕ್ಕೆ ಒಪ್ಪದೆ ತನಗೆ ಬಲಿಯ ಅಗತ್ಯವಿಲ್ಲವೆಂದ. ಇನ್ನೊಂದು ಸಂದರ್ಭದಲ್ಲೂ ಹೀಗಾಗಲು ದೇವಪಾಂಡ್ಯ ಜಯಪಾಂಡ್ಯನಿಗೆ, ಎಂದರೆ ಅಳಿಯನಾದ ಭೂತಾಳ ಪಾಂಡ್ಯನಿಗೆ ರಾಜ್ಯವನ್ನೆಲ್ಲ ಬಿಟ್ಟುಕೊಟ್ಟು ತನ್ನ ರಾಜ್ಯದಲ್ಲಿ ಮುಂದಕ್ಕೆ ಅಳಿಯ ಸಂತಾನಕ್ರಮವೇ ಅನುಷ್ಠಾನದಲ್ಲಿರಬೇಕೆಂದು ಆಜ್ಞಾಪಿಸಿದ. ಈ ಪದ್ಧತಿ ಶಾಲಿವಾಹನ ಶಕ ಪ್ರಥಮ ವರ್ಷ ಈಶ್ವರ ಸಂವತ್ಸರದ ಮಾಘ ಶುದ್ಧ 3ರಲ್ಲಿ (ಸು. ಕ್ರಿ.ಶ. 77) ಜಾರಿಗೆ ಬಂತೆಂದು ಐತಿಹ್ಯದಿಂದ ತಿಳಿದುಬರುವ ಸಂಗತಿ. ಭೂತಾಳಪಾಂಡ್ಯನೆಂಬ ಅರಸ ತುಳುನಾಡಿನಲ್ಲಿ ಆಳಿಕೊಂಡಿದ್ದನೆಂಬುದಕ್ಕೆ ಯಾವ ಐತಿಹಾಸಿಕ ಆಧಾರವೂ ದೊರಕಿಲ್ಲ (ಭೂತಪ್ಪಾಂಡ್ಯನೆಂಬ ಹೆಸರು 15ನೆಯ ಶತಮಾನದ ಒಂದೆರಡು ಶಾಸನಗಳಲ್ಲಿವೆ). ದಂತಕಥೆ ಏನೇ ಇದ್ದರೂ 13ನೆಯ ಶತಮಾನದ ಮಧ್ಯಭಾಗದ ವರೆಗೆ ಹೆಣ್ಣುಮೂಲಪದ್ಧತಿ ಈ ನಾಡಿನಲ್ಲಿ ಅನುಷ್ಠಾನದಲ್ಲಿದ್ದ ಬಗ್ಗೆ ಆಧಾರಗಳಿಲ್ಲ. ಅನಂತರ ಇಲ್ಲಿ ಆಳಿದ ಅನೇಕ ಜೈನ ರಾಜಮನೆತನಗಳವರು ಇವನ್ನು ಅನುಸರಿಸುತ್ತಿದ್ದರಾಗಿ, ಇತರ ಸಾಮಾನ್ಯ ಜನರಲ್ಲೂ ಬಳಕೆಗೆ ಬಂದಿರಬಹುದು. 15ನೆಯ ಶತಮಾನದಲ್ಲಿ 16 ಕಟ್ಟಳೆಗಳು ಪ್ರಚಾರದಲ್ಲಿದ್ದುವೆಂಬುದಕ್ಕೆ ಕಾರ್ಕಳ ತಾಲ್ಲೂಕಿನ ಕಾಂತಾವರದಲ್ಲಿ ಶಾಸನಸಾಕ್ಷ್ಯವಿದೆ. **(ಪಿ.ಜಿ.ಬಿ.)**

ಅಳಿಯಸಂತಾನ ಪದ್ಧತಿ ಕೇರಳದ ಮರುಮಕ್ಕತ್ತಾಯವ್ ಪದ್ಧತಿಯನ್ನು ಹೋಲುತ್ತದೆ. ಆದರೆ ವ್ಯತ್ಯಾಸಗಳೂ ಇವೆ. ಮರುಮಕ್ಕತ್ತಾಯವ್ ಪದ್ಧತಿಯಲ್ಲಿ ಕುಟುಂಬದಲ್ಲಿ ಸ್ತ್ರೀಯೇ ಒಡತಿ. ಅಳಿಯಸಂತಾನದಲ್ಲಿ ಸ್ತ್ರೀಯ ಹಿರಿಯ ಅಣ್ಣನೇ ಕುಟುಂಬದ ಯಜಮಾನ. ಆಸ್ತಿ ಇವನ ಸೋದರಿಯ ಮಕ್ಕಳಿಗೆ ಸೇರುತ್ತದೆ. ಸಾಂಪ್ರದಾಯಿಕವಾಗಿ ಈ ಅಳಿಯಸಂತಾನ ಪದ್ಧತಿ ಅವಿಭಾಜ್ಯ ಕುಟುಂಬ ಪದ್ಧತಿಯಾಗಿತ್ತು. ವಂಶದಲ್ಲಿ ವಯಸ್ಸಿಗೆ ಬಂದ ಎಲ್ಲಾ ವ್ಯಕ್ತಿಗಳ ಒಪ್ಪಿಗೆಯಿಂದ ಮಾತ್ರ ಆಸ್ತಿವಿಭಜನೆ ಸಾಧ್ಯವಿತ್ತು. ಆದರೆ 1949ರ ಮದರಾಸು ಅಳಿಯ ಸಂತಾನ ಕಾನೂನು, 1961ರಲ್ಲಿ ಜಾರಿಗೆ ಬಂದ ಮೈಸೂರು ಕಾನೂನು, ಜೊತೆಗೆ ಹಿಂದು ಉತ್ತರಾಧಿಕಾರತ್ವ ಕಾನೂನು, ಇವುಗಳಿಂದ ಈ ಪದ್ಧತಿಯಲ್ಲಿ ಹಲವು ಬದಲಾವಣೆಗಳಾಗಿವೆ. ಪ್ರಸಕ್ತ ಸ್ಥಿತಿಯಲ್ಲಿ ಒಂದು ಕುಟುಂಬದ ಆಸ್ತಿಗೆ ಆ ಕುಟುಂಬ ಯಾ ತವರಿನ ಗಂಡು ಹಾಗೂ ಹೆಣ್ಣುಮಕ್ಕಳಿಗೂ ಸಮಾನ ಹಕ್ಕು ಲಭಿಸಿದ್ದು ಗಂಡು ಮಕ್ಕಳೂ ತಮ್ಮ ಹೆಂಡತಿ ಮಕ್ಕಳಿಗೆ ಅವರ ಪಾಲಿನ ಆಸ್ತಿಹಂಚುವ ಹಕ್ಕು ಬಂದಿದ್ದು ಆಸ್ತಿಯ ಉತ್ತರಾಧಿಕಾರತ್ವ ಇತರೆಡೆಗಳಲ್ಲಿರುವಂತೆಯೇ ಪಾಲಿತವಾಗುತ್ತಿದೆ. *

# ಆ

**ಆಂಡಯ್ಯ :** ಜೈನಕವಿ. ಕಬ್ಬಿಗರ ಕಾವಂ ಎಂಬ ಕಾವ್ಯದ ಕರ್ತೃ, ಬನವಾಸಿ ಪ್ರಾಂತ್ಯದಲ್ಲಿ ಸು.1180-1217ರ ಅವಧಿಯಲ್ಲಿ ಆಳಿದ ಹಾನುಗಲ್ಲು ಕದಂಬ ಶಾಖೆಯ ಕಾಮದೇವನ ಆಶ್ರಯದಲ್ಲಿ ಇವನು ಇದ್ದನೆಂಬ ಊಹೆ ಇದೆ. ಲೆಕ್ಕಿಗರ ಪಿರಿಯನೂ ಪರಮಜಿನಭಕ್ತನೂ ಆದ ಆಂಡಯ್ಯ ಇವನ ಅಜ್ಜ. ತಂದೆ ಸಾಂತ, ತಾಯಿ ಬಲ್ಲವ್ವೆ. ಧರ್ಮಶ್ರದ್ಧೆ, ನೀತಿನಿಷ್ಠೆ, ದೈವಭಕ್ತಿ, ಕಾವ್ಯಶಾಸ್ತ್ರವಿನೋದಾದಿ ಗುಣಗಳಿಗೆ ಕವಿಯ ಮನೆತನ ಹೆಸರಾದದ್ದು. ಇವನಲ್ಲಿ ಈ ಸದ್ಗುಣಗಳೆಲ್ಲವೂ ರಕ್ತಗತವಾಗಿ ಬೆಳೆದು ಬಂದಿದ್ದುವು. ತವರುನೆಲ, ತಾಯ್ನುಡಿ, ಬಳಿಯದೈವ ಈ ಮೂರನ್ನೂ ಕುರಿತು ಕವಿಯ ಒಲವು ಅಭಿಮಾನ ಅಪಾರ. ಪೂರ್ವಕವಿಗಳಲ್ಲಿ ಕರ್ಣಪಾರ್ಯ, ರನ್ನ, ಗಜಗ, ಅಗ್ಗಳ, ಜನ್ನ ಮುಂತಾದವರನ್ನು ಸ್ತುತಿಸಿದ್ದಾನೆ.

ಕಬ್ಬಿಗರ ಕಾವಂ ಕನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಕೃತಿ. ಚಂಪೂ ಶೈಲಿಯಲ್ಲಿದ್ದು ಇದರಲ್ಲಿ ಗದ್ಯಖಂಡಗಳೂ ವೃತ್ತಕಂದಗಳೂ ಕೂಡಿ ಒಟ್ಟು 272 ಪದ್ಯಗಳಿವೆ. ಸಂಸ್ಕೃತವನ್ನು ತೊರೆದು ಕನ್ನಡ ಬದುಕಲಾರದೆಂಬ ವಿದ್ವಾಂಸರ ಮತವನ್ನು ಖಂಡಿಸಿ ಅಚ್ಚಕನ್ನಡದಲ್ಲಿ ಕೇವಲ ತದ್ಭವ ಪದಗಳನ್ನೂ ದೇಸೀ ನುಡಿಗಳನ್ನೂ ಬಳಸಿ ಕವಿ ಈ ಕೃತಿಯನ್ನು ರಚಿಸಿದ್ದಾನೆ. ಸೊಗವಿಪ ಸಕ್ಕದಂ ಬೆರೆಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ ಬಗೆಗೊಳೆ ಪೇಳಲಾರರನಿತುಂ ಸಲೆ ಮುನ್ನಿನ ಪೆಂಪನಾಳ್ದ ಕಬ್ಬಿಗರದು ಮಾತನಾಡಿದವೊಲಂದವನಾಳ್ದಿರೆ ಬಲ್ಪು ನೆಟ್ಟಗೆ ದೊರೆಕೊಂಡು ದಿಂತಿವನೊಳಲ್ಲದೆ ಕೇಳ್ ದೊರೆಕೊಳ್ಳದಾರೊಳಂ ಎಂದು ತಮತಮಗೆ ಬಲ್ಲವರೆಂದೊಡೆ ನಾನವರ ಬಯಕೆಯುಂ ಸಲಿಸುವೆನಿನ್ನೆಂದಚ್ಚ ಕನ್ನಡಂ ಬಿಗಿವೊಂದಿರೆ ಕಬ್ಬಿಗರ ಕಾವ ನೊಲವಿಂದೊರೆದಂ - ಎಂದು ಹೇಳಿ ತನ್ನ ಕಾವ್ಯಕ್ಕೆ ಪ್ರೇರಣೆ ಹೇಗೆ ಬಂತೆಂಬುದನ್ನು ತಿಳಿಸಿದ್ದಾನೆ. ಪುರುಳು, ಕೊಂಕು, ಮೆಯ್ಸಿರಿ, ಬದುರ್ಕನುಡಿ - ಇವುಗಳಿಂದ ಕೂಡಿದ ಕಾವ್ಯವನ್ನು ಬರೆವುದಾಗಿ ಹೇಳಿದ್ದಾನೆ. ಆಂಡಯ್ಯ ತನ್ನ ಕೃತಿಗೆ ಕಾವನಗೆಲ್ಲಂ ಎಂದು ನಾಮಕರಣ ಮಾಡಿದ್ದಾನೆ. ವಿದ್ವಾಂಸರು ಸೊಬಗಿನ ಸುಗ್ಗಿ ಎಂದೂ ಸಂಸ್ಕೃತ ಪಂಡಿತರು ಮದನವಿಜಯ ಎಂದೂ ಇದನ್ನು ಕರೆದಿದ್ದಾರೆ. ಕಬ್ಬಿಗರ ಕಾವಂ ಎಂಬ

ಹೆಸರು (ಸಂಸ್ಕೃತದ ಸಹಾಯವಿಲ್ಲದೆ ಅಚ್ಚಗನ್ನಡದಲ್ಲಿ ಬರೆದು ಕವಿಗಳನ್ನು ಕಾಪಾಡಿದವನು ಎಂಬ ಅರ್ಥದಲ್ಲಿ) ಕಾರಣಾಂತರಗಳಿಂದ ಜನಪ್ರಿಯವಾಯಿತು.

ಕರ್ವುರವಿಲ್ಲ ಕಂಪಿನ ಪೊಳಲನ್ನು ಆಳುತ್ತಿದ್ದ. ಇವನ ಮಡದಿ ಇಚ್ಚೆಗಾರ್ತಿ. ಇವನ ಪರಿವಾರಕ್ಕೆ ಸೇರಿದ ಚಂದ್ರನನ್ನು ಶಿವ ಅಪಹರಿಸಿದ. ಇದನ್ನು ಕೇಳಿ ಕುಪಿತನಾದ ಕರ್ವುರವಿಲ್ಲ ಶಿವನ ಮೇಲೆ ಯುದ್ಧಕ್ಕೆ ಹೊರಟು ಮಾರ್ಗಮಧ್ಯದಲ್ಲಿ ಸಿಕ್ಕಿದ ಜಿನಮುನಿಗೆ ಭಕ್ತಿಯಿಂದ ನಮಸ್ಕರಿಸಿ ಮುಂದೆ ಸಾಗಿ ಪುಷ್ಪಬಾಣಗಳಿಂದ ಶಿವನನ್ನು ಮುತ್ತಿ ಸೋಲಿಸಿದ. ಆಗ ಅರೆವೆಣ್ಣಾದ ಶಿವ ಕರ್ವುರವಿಲ್ಲನನ್ನು ಶಪಿಸಿದ. ಅನಂತರ ಕರ್ವುರವಿಲ್ಲ ಸ್ಮರಣೆಯನ್ನು ಕಳೆದುಕೊಂಡು ಇಚ್ಚೆಗಾರ್ತಿಯನ್ನು ಅಗಲಿ ಬಹುಕಾಲ ಪೂವಿನ ಪೊಳಲಲ್ಲಿ ನನೆಯಂಬನಾಗಿ ಆಳುತ್ತಿರುವಾಗ ಒಮ್ಮೆ ಅಪ್ಸರೆಯಿಂದ ತನ್ನ ಪೂರ್ವ ವೃತ್ತಾಂತವನ್ನು ಕೇಳಿದಮೇಲೆ ಶಾಪ ವಿಮೋಚನೆ ಹೊಂದಿ ಇಚ್ಚೆಗಾರ್ತಿಯೊಡನೆ ಮತ್ತೆ ಸಮಾಗಮಗೊಂಡ. ಇದು ಕಥೆಯ ಚೌಕಟ್ಟು.

ಈ ಕಾವ್ಯದಲ್ಲಿ ಬರುವ ಶಿವ ಮನ್ಮಥರ ಕಥೆಯ ಎಳೆ ನಮ್ಮ ಪುರಾಣದಲ್ಲಿ ದೊರೆಯುವಂಥದ್ದೆ. ಆದರೆ ಕವಿ ಮಾಡಿಕೊಂಡ ಮಾರ್ಪಾಟು ಬೇರ್ಪಾಟುಗಳಿಂದ ಒಂದು ರೀತಿಯ ನವ್ಯತೆ ಇದಕ್ಕೆ ಒದಗಿದೆ. ಕೃತಿಯನ್ನು ಸೂಕ್ಷ್ಮವಾಗಿ ಒಳ ಹೊಕ್ಕು ನೋಡಿದರೆ ಕದಂಬ ಕಾಮದೇವನನ್ನು ಪುರಾಣ ಕಥೆಯ ಕಾಮದೇವನೊಡನೆ ಏಕೀಭವಿಸಿ ಸಮಕಾಲೀನ ಚರಿತ್ರೆಯ ಘಟನೆಗಳನ್ನು ಸೂಚಿಸಿರುವುದು ತಿಳಿಯುತ್ತದೆ. ಸ್ಮರತತ್ತ್ವ, ಶಿವತತ್ತ್ವ, ಜಿನತತ್ತ್ವಗಳು ಒಂದಕ್ಕಿಂತ ಒಂದು ಮಿಗಿಲು ಎಂಬ ದರ್ಶನಧ್ವನಿ ಈ ಕಾವ್ಯದ ಅಂತರಂಗದಲ್ಲಿ ಇದೆ ಎಂದೂ ಅಭಿಪ್ರಾಯವಿದೆ.

ಕಬ್ಬಿಗರ ಕಾವ ಒಂದು ಶೃಂಗಾರಮಯ ಖಂಡಕಾವ್ಯ. ಕವಿ ಹೇಳಿಕೊಳ್ಳುವಂಥ ಪ್ರತಿಭಾವನಂತನೇನೂ ಅಲ್ಲ. ವರ್ಣನೆಗಳನ್ನು ಮಿತವಾಗಿ ಬಳಸಿದ್ದಾನೆ. ಅಷ್ಟಾದಶವರ್ಣನೆಗಳನ್ನು ಕವಿ ತಂದಿದ್ದರೂ ಕಥೆಗೆ ಯಾವ ಭಂಗ ಬಂದಿಲ್ಲ. ಒಮ್ಮೊಮ್ಮೆ ವರ್ಣನೆಗಳು ಅತಿಯಾಯಿತೇನೋ ಅನಿಸುತ್ತದೆಯಾದರೂ ಅವು ಕಾವ್ಯದ ಪರಿಧಿಯಲ್ಲಿಯೇ ಬರುವುದರಿಂದ ಅರ್ಥಪೂರ್ಣವಾಗಿವೆ. ಶೈಲಿ ಸರಳ, ಸಹಜಸುಂದರ, ಸುಲಲಿತ. ಇದಕ್ಕೆ ಕವಿ ಆರಿಸಿಕೊಂಡ ಕಾವ್ಯವಸ್ತುವೂ ಕಾರಣ. ಶೃಂಗಾರವರ್ಣನೆಗಳಲ್ಲಿ ಕವಿಯ ಕಲ್ಪನೆ ಸೊಗಸಾಗಿದೆ. ಎಲ್ಲಿಯೂ ಅಶ್ಲೀಲಕ್ಕೆ ಎಡೆಗೊಡುವುದಿಲ್ಲ. ಲಲಿತಭಾವಗಳನ್ನು ಸಹಜವಾಗಿ ವ್ಯಕ್ತಪಡಿಸುವಂತೆಯೆ ಉಗ್ರಭಾವಗಳನ್ನೂ ಕೆಲವೊಮ್ಮೆ ಸಮರ್ಥವಾಗಿ ವ್ಯಕ್ತಪಡಿಸುತ್ತಾನೆಂಬುದಕ್ಕೆ 'ತಡಿಮೀರಿ ಬಂದ ತೆಂಕಣ ಬಡಗಣ ಕಡಲೊಂದನೊಂದು ತಾಗುವ ತೆರದಿಂ ಬಿಡೆಗಜಿರಿಮಿಕ್ಕುತಕ್ಕಿಂ ಪಡೆಯೆರಡುಂ ದೆಸೆಗೆ ಮಸಗಿ ತಾಗಿದುದೆತ್ತಂ' ಎಂಬ ಪದ್ಯ ಸಾಕ್ಷಿಯಾಗುತ್ತದೆ. ಮನ್ಮಥ ಶಿವನ ಮೇಲೆ ಪುಷ್ಪಬಾಣಗಳನ್ನು ಪ್ರಯೋಗಿಸಿದಾಗ ತೊರೆಗಳುಂ ಬೆಟ್ಟಗಳುಂ ಪೊಲನುಂ ಬಾನುಂ ದೆಸೆಯುಂ ಜಲಕ್ಕನಲರಿಂದೆ ಸಮೆದ ಮೋಲಾಯ್ತೆತ್ತಂ ಎಂಬಲ್ಲಿ ವರ್ಣನೆ ನವೀನವಾಗಿದೆ. ಸಂಸ್ಕೃತದ ಹೆಸರುಗಳನ್ನು ಕನ್ನಡಕ್ಕೆ ಭಾಷಾಂತರಿಸಿಕೊಡುವಾಗ ಧ್ವನಿ, ಮಾರ್ಮಿಕತೆ, ಶಬ್ದಶಿಲ್ಪಸಾಮರ್ಥ್ಯ ಕಂಡುಬರುತ್ತದೆ. ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಾಲ್ಕಾರನ್ ಆ ನೆಲನಂ ಮತ್ತಿನ ಮಾನಿಸರ್ ಪೊಗಳಲ್ ಏನಂ ಬಲ್ಲರ್ ........... ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು ಮೆಲ್ಲೆಲರಿಂ ಪೂತಕೊಳಂಗಳಿಂ ಕಾಲೂರ್ಗಳಿಂ ಕೆಯ್ಗಳಿಂ ಎಂದು ಕನ್ನಡನಾಡನ್ನು ಬಾಯ್ತುಂಬ ಹೊಗಳಿ ತನ್ನ ಕನ್ನಡಾಭಿಮಾನವನ್ನು ಕೆಚ್ಚಿನಿಂದ ಹಿಡಿದು ಮುನ್ನುಗ್ಗಿದ ಆಂಡಯ್ಯ ಮಹಾಕವಿಯಲ್ಲದಿದ್ದರೂ ಸತ್ಕವಿ. **(ಜಿ.ಬಿ.)**

**ಆಂದೋಲ :** ಗುಲ್ಬರ್ಗ ಜಿಲ್ಲೆ ಜೇವರ್ಗಿ ತಾಲ್ಲೂಕಿನ ಒಂದು ಪ್ರಮುಖ ಗ್ರಾಮ. ಗುಲ್ಬರ್ಗ-ಬಳ್ಳಾರಿ ರಾಷ್ಟ್ರೀಯ ಹೆದ್ದಾರಿಯಲ್ಲಿ ಶಾಹಪುರ ಜೇವರ್ಗಿಗಳ ಮಧ್ಯದಲ್ಲಿ ಇದೆ. ನಿಜಾಮರ ಆಳ್ವಿಕೆಯ ಕಾಲದಲ್ಲಿ ಇದೇ ತಾಲ್ಲೂಕಿನ ಕೇಂದ್ರವಾಗಿತ್ತು. ಈಗ ಗ್ರಾಮಪಂಚಾಯಿತಿ ಇದೆ.

ಆಂದೋಲ ಗ್ರಾಮಕ್ಕೆ ಆಂದೇಲಿ, ಅಂದೇಲಿ ಎಂಬ ಹೆಸರುಗಳು ರೂಢಿಯಲ್ಲಿವೆ. ಸು.18ನೆಯ ಶತಮಾನದ ಶಿವಯೋಗೀಶ್ವರ ಪುರಾಣದಲ್ಲಿ ಆಂದೋಲನವನ್ನು ಆಂದೆಲಿ (ಆನೆಯ ತೆಲಿ) ಎಂದು ಗಜದ ತಲೆ ಎಂಬ ಅರ್ಥದಲ್ಲಿ ಪ್ರಯೋಗಿಸಲಾಗಿದೆ. ಆ ಪುರಾಣದ ಉಲ್ಲೇಖದ ಪ್ರಕಾರ ಆ ಊರಿನಲ್ಲಿ ಬಹು ಹಿಂದೆ ಆನೆಯ ತಲೆ ಎಂಬ ರಾಕ್ಷಸ ಊರ ಹೊರಗಿನ ಹಾಳುಮಠದಲ್ಲಿ ವಾಸವಾಗಿದ್ದು ಅಲ್ಲಿಗೆ ಬಂದವರನ್ನೆಲ್ಲ ತಿನ್ನುತ್ತಿದ್ದ. ಕೆಲವು ಕಾಲದನಂತರ ಈ ಶಿವಯೋಗೀಶ್ವರ ಅಲ್ಲಿಗೆ ಬಂದು ಅವನನ್ನು ಕೊಂದ. ಆಗ ಒಬ್ಬ ಸುಂದರ ಗಂಧರ್ವ ಒಡಮೂಡಿದ. ಆಂದಿನಿಂದ ಈ ಊರಿಗೆ ಆನೆದಲೆ, ಅಂದಲೆ ಎಂಬ ಹೆಸರು ಬಂತು ಎಂದು ಹೇಳಿದೆ.

ಸು.300 ವರ್ಷಗಳ ಹಿಂದೆ ಇಲ್ಲಿದ್ದ ಶ್ರೀ ಕರಣೇಶ್ವರ ಸ್ವಾಮಿಗಳು (2ನೆಯ ಕರಣಪ್ಪಯ್ಯ) ತಮ್ಮ ಸದಾಚಾರದ ಮಹಿಮೆಗಳಿಂದ ಪ್ರಸಿದ್ಧರಾಗಿದ್ದರು. ಲೋಕಕಲ್ಯಾಣಕ್ಕಾಗಿ ಶ್ರಮಿಸಿದ ಈ ಮಹಾಪುರುಷರ ರಥೋತ್ಸವ ಪ್ರತಿವರ್ಷ ಕಾರ್ತೀಕ ಬಹುಳ ಪಂಚಮಿಯ ದಿವಸ ಇಲ್ಲಿ ನಡೆಯುತ್ತದೆ.

ಈ ಊರಿನಲ್ಲಿ ಎಂಟು ಶಿವಾಲಯಗಳಿವೆ. ಅವುಗಳಲ್ಲಿ ಸಂಗಮೇಶ್ವರ, ಶಾಂತಲಿಂಗೇಶ್ವರ, ಅಟಕೇಶ್ವರ ಪ್ರಮುಖವಾದವು. ಇವುಗಳಲ್ಲದೆ ಕೆಲವು ಮಸೀದಿ, ಗುಮ್ಮಟಗಳೂ ಆದಿಲ್‌ಶಾಹೀ ಕಾಲದ ಅವಶೇಷಗಳೂ ಇವೆ. ಎರಡು ಶಾಸನಗಳು ಸಹ ಇವೆ. ಒಂದು ಶಾಸನದಲ್ಲಿ ಸನ್ನತಿಯ ಚಂತಲಾಂಬೆಯ ಉಲ್ಲೇಖವಿದೆ. ಸುರಪುರದ ರಾಜಾ ವೆಂಕಟಪ್ಪ ಇಲ್ಲಿಯ ಗೌಡರಿಗೆ ಹಗಲುದೀವಟಿಗಿ, ಮಾಯಿಮರ್ತಪ, ಆಪ್ತಗಿರಿ, ಅಡ್ಡಪಲ್ಲಕ್ಕಿ ಮೊದಲಾದ ಮರ್ಯಾದೆಗಳನ್ನು ನೀಡಿದ್ದ. **(ವಿ.ಕೆ.)**

**ಆಗುಂಬೆ :** ಶಿವಮೊಗ್ಗದಿಂದ ಸು.80ಕಿಮೀ ಪಶ್ಚಿಮಕ್ಕೂ ಅರಬ್ಬೀ ಸಮುದ್ರದ ದಕ್ಷಿಣ ಕನ್ನಡ ಜಿಲ್ಲೆಯ ದಡದಿಂದ ಸು.48 ಕಿಮೀ ಪೂರ್ವಕ್ಕೂ ಇರುವ ಸಹ್ಯಾದ್ರಿಯ ಅತ್ಯುನ್ನತ ಶ್ರೇಣಿಗಳಲ್ಲೊಂದು. ಸಮುದ್ರ ಮಟ್ಟದಿಂದ 605ಮೀ ಎತ್ತರವಿದೆ. ಪಶ್ಚಿಮದ ತಳದಲ್ಲಿ ಸೋಮೇಶ್ವರ ಎಂಬ ಊರಿದೆ. ಪೂರ್ವದಲ್ಲಿ ಆಗುಂಬೆಯ ಪೇಟೆ ಇದೆ. ಸುತ್ತಮುತ್ತ ದಟ್ಟವಾದ ಅರಣ್ಯವಿದೆ. ಅರಣ್ಯದಲ್ಲಿ ಕಡವೆ, ಕಾಡುಕೋಣ ಇತರ ಜಾತಿಯ ಪ್ರಾಣಿಗಳು ಹೇರಳವಾಗಿವೆ. ಸರಾಸರಿ ವಾರ್ಷಿಕ ಮಳೆ 7600 ಮಿಮೀಗೂ ಹೆಚ್ಚು. ಭಾರತದಲ್ಲಿ ಅಧಿಕ ಮಳೆಬೀಳುವ ಪ್ರದೇಶಗಳಲ್ಲಿ ಇದೂ ಒಂದು. ಮಳೆಗಾಲದ ಮೂರು ತಿಂಗಳು ಇಲ್ಲಿ ಬಿಸಿಲು ಬೀಳುವದು ತುಂಬ ಅಪರೂಪ; ಅಷ್ಟೊಂದು ದಟ್ಟಮೋಡಗಳು ಆಕಾಶವನ್ನು ಸದಾ ವ್ಯಾಪಿಸಿರುತ್ತವೆ. ಸಹ್ಯಾದ್ರಿ ಶ್ರೇಣಿಗಳಿಂದ ಮೇಲಿಂದ ಕೆಳಕ್ಕೆ ದುಮುಕುವ ಚಿಕ್ಕ ಪ್ರಪಾತಗಳಿಗೆ ಇಲ್ಲಿ ಲೆಕ್ಕವಿಲ್ಲ. ದಕ್ಷಿಣ ಕನ್ನಡ ಜಿಲ್ಲೆಗೂ ಘಟ್ಟದ ಮೇಗಣ ಜಿಲ್ಲೆಗಳಿಗೂ ಸಂಪರ್ಕ ಕಲ್ಪಿಸುವ ಆಗುಂಬೆ ಬೆಟ್ಟವನ್ನು (ಘಾಟಿ) ಏರುವ ರಸ್ತೆ ಹತ್ತಾರು ಇಕ್ಕಟ್ಟಾದ ತಿರುವುಗಳಿಂದ (ಹೇರ್‌ಪಿನ್ ಕರ್ವ್ಸ್) ಕೂಡಿದೆ. ದಟ್ಟವಾದ ಕಾಡುಗಳಲ್ಲಿ ಸು.35 ರಿಂದ 70ಮೀ ಎತ್ತರದ ಬಗೆಬಗೆಯ ದೈತ್ಯವೃಕ್ಷಗಳು ಬೆಳೆಯುತ್ತವೆ. ಉಪಯುಕ್ತ ಗಿಡಮರಗಳಲ್ಲದೆ ಬಿದಿರು ಹೆಚ್ಚಾಗಿದೆ. ಈ ಪ್ರದೇಶದ ಸುತ್ತಮುತ್ತ ಸ್ವಲ್ಪ ಏಲಕ್ಕಿ ಬೆಳೆಯೂ ಇದೆ.



ಸೂರ್ಯಾಸ್ತಮಾನದ ಸುಂದರ ನೋಟ

ಆಗುಂಬೆ ಪೇಟೆಯಿಂದ ಸುಮಾರು ಒಂದೂವರೆ ಕಿಮೀ ಪಶ್ಚಿಮದಲ್ಲಿ ಆಗುಂಬೆಯ ಜಗತ್ಪ್ರಸಿದ್ಧ ಸೂರ್ಯಾಸ್ತಮಾನ ದೃಶ್ಯವನ್ನು ಕಾಣಲು ಬೆಟ್ಟದ ನೆತ್ತಿಯಲ್ಲಿ ಒಂದು ರಂಗಸ್ಥಳವನ್ನು ಮಾಡಿದ್ದಾರೆ. ಪ್ರಕೃತಿಯ ಸುಂದರ ದೃಶ್ಯಗಳಲ್ಲಿ ಒಂದಾದ ಈ ಸೂರ್ಯಾಸ್ತಮಾನ ಭಾರತದಲ್ಲಿ ಮತ್ತೆಲ್ಲಿಯೂ ಇಷ್ಟು ಚೆಲುವಾಗಿ

ಕಾಣಿಸುವುದಿಲ್ಲ ಎಂದು ಹೇಳುವವರಿದ್ದಾರೆ. ವರ್ಷವಿಡೀ ಮಳೆಗಾಲ ಹೊರತು ಈ ಅಪೂರ್ವ ದೃಶ್ಯವನ್ನು ನೋಡಲು ದೇಶೀಯ, ವಿದೇಶೀಯ ಪ್ರವಾಸಿಗಳು ಇಲ್ಲಿಗೆ ಸಾವಿರಾರು ಸಂಖ್ಯೆಯಲ್ಲಿ ಬರುತ್ತಾರೆ. ಈ ರಂಗಸ್ಥಳದಿಂದ ಇದ್ದಕ್ಕಿದ್ದಂತೆ ಇಳಿದಿರುವ ಸುಮಾರು 1000ಮೀ ಕೆಳಗಿನ ಭೂಪ್ರದೇಶದ ದರ್ಶನ ಮೈನವಿರೇಳಿಸುವಂಥದು. ಅಲ್ಲಿ ನಿಂತು ನೋಡಿದರೆ ಪಡುಗಡಲ ತಡಿಯವರೆಗಿನ, ಅಲ್ಲಿಂದ ದಿಗಂತದ ಅಂಚಿನವರೆಗಿನ ಸು.50ಕಿಮೀ ವಿಸ್ತಾರದ ಮನೋಹರ ದೃಶ್ಯ ಕಣ್ಣಿಗೆ ಕಟ್ಟಿ, ಮನಸ್ಸಿಗೆ ಆಪ್ಯಾಯಮಾನವಾಗುತ್ತದೆ. ಆ ಕ್ಷಣದಲ್ಲಿ ಆಗುವ ಅನುಭವ ಮಾತಿಗೆ ಮೀರಿದುದು.

ಸೂರ್ಯಾಸ್ತಮಾನದ ಸುಂದರ ದೃಶ್ಯವನ್ನು ನೋಡುವ ರಂಗಸ್ಥಳದಲ್ಲಿ ಸಂಜೆಯ ಹೊತ್ತು ಕುಳಿತು ಪ್ರಕೃತಿ ತೊಡುವ ವಿವಿಧ ವೇಷಗಳನ್ನು ಕಾಣಬೇಕು. ಆ ಹೊತ್ತು ಸೌಂದರ್ಯವಾರಿಧಿಯೇ ನಮ್ಮೆದುರು ಬಂದು ನಿಂತಂತೆನಿಸುತ್ತದೆ. ಸೂರ್ಯ ಮುಳುಗುವ ಕೊನೆಯ ಒಂದು ಕ್ಷಣ, ಅದೊಂದು ಅಪೂರ್ವ ರಸಗಳಿಗೆ, ಮೈಮನಸ್ಸು ಆ ಸುಂದರ ಸಂಜೆಯ ರಮಣೀಯ ದೃಶ್ಯದಲ್ಲಿ ಲೀನವಾಗಿರುತ್ತದೆ. ಸಂಜೆಯ ರಂಗಿನ ಹೊಂಬಣ್ಣದ ವೈವಿಧ್ಯ, ಪ್ರಕೃತಿಯ ಪ್ರಶಾಂತ ಹಿನ್ನೆಲೆ, ವೈಭವದ ದೃಶ್ಯ ಇವು ಎಂಥವರ ಮನಸ್ಸನ್ನೂ ಸೆಳೆಯುತ್ತದೆ. ಪ್ರಕೃತಿದತ್ತ ಸುಂದರ ಸ್ಥಳಗಳಲ್ಲಿ ಆಗುಂಬೆಯೂ ಒಂದು.

ಆಗುಂಬೆ, ಜಮದಗ್ನಿ - ರೇಣುಕಾದೇವಿಯರ ಮಗನಾದ ಪರುಶುರಾಮನ ಊರು. ಕ್ಷತ್ರಿಯ ಹತ್ಯೆಯ ಪಾಪವನ್ನು ಕಳೆದುಕೊಳ್ಳಲು ಅಶ್ವಮೇಧಯಾಗವನ್ನು ಮಾಡಿ ಸಮಸ್ತ ಭೂಮಿಯನ್ನು ಕಶ್ಯಪ ಋಷಿಗೆ ಧಾರೆಯೆರೆದು ದಾನಕೊಟ್ಟಾಗ ತನಗೆ ಇರಲು ಸ್ಥಳವಿಲ್ಲದೆ ಆಗುಂಬೆಯ ಸಹ್ಯಾದ್ರಿ ಶಿಖರದಲ್ಲಿ ನಿಂತು ಎದುರುಗಡೆಯ ಸಮುದ್ರಕ್ಕೆ ಪರಶು ಹೋದಷ್ಟು ದೂರ ತನಗೆ ಸ್ಥಳ ಕೊಡು ಎಂದು ಪ್ರಾರ್ಥಿಸಿ ತನ್ನ ಕೊಡಲಿಯನ್ನು ಎಸೆದ. ಸಮುದ್ರ ಸಹ್ಯಾದ್ರಿಯಿಂದ ಹಿಂದಕ್ಕೆ ಉರುಳಿತು. ಅಂದಿನಿಂದ ಆ ಭಾಗದ ಪಶ್ಚಿಮ ಕರಾವಳಿಯೆಲ್ಲ ಪರಶುರಾಮ ಕ್ಷೇತ್ರವೆಂದು ಹೆಸರಾಯಿತು ಎಂದು ಸ್ಥಳಪುರಾಣದ ಹೇಳಿಕೆ.

ಆಗುಂಬೆಯಲ್ಲಿ ಸು.14ನೆಯ ಶತಮಾನದ ಒಂದು ಗೋಪಾಲಕೃಷ್ಣ ದೇವಾಲಯವಿದೆ. ಇಲ್ಲಿರುವ ಮೂಲವಿಗ್ರಹ ಹೊಯ್ಸಳ ಶೈಲಿಯ ಅನುಕರಣೆ. ದೇವಾಲಯ ರಚನೆಯಲ್ಲಿ ವಿಜಯನಗರದ ವಾಸ್ತುಶೈಲಿಯನ್ನು ಕಾಣಬಹುದು. *

**ಆಚಣ್ಣ :** ಜೈನಕವಿ. ವರ್ಧಮಾನ ಪುರಾಣದ ಕರ್ತೃ. ಹನ್ನೆರಡನೆಯ ಶತಮಾನದ ಕೊನೆಯಲ್ಲಿ ಹಾಗೂ ಹದಿಮೂರನೆಯ ಶತಮಾನದ ಪ್ರಾರಂಭದಲ್ಲಿ ಪುಲಿಗೆರೆಯಲ್ಲಿ ಇದ್ದನೆಂದು ವಿದ್ವಾಂಸರ ಅಭಿಮತ. ಈತ ಭಾರದ್ವಾಜ ಗೋತ್ರೋದ್ಭವ. ಇವನ ತಂದೆ ಕೇಶಿರಾಜ, ತಾಯಿ ಮಲ್ಲಾಂಬಿಕೆ. ಗುರು ನಂದಿಯೋಗೀಶ್ವರ. ಕವಿ ಶಿಕಾರಿಪುರ ಮತ್ತು ಅರಸೀಕೆರೆ ಶಾಸನಗಳಲ್ಲಿ ಉಕ್ತನಾಗಿರುವ ವಸುಧೈಕಬಾಂಧವ ಎಂಬ ಬಿರುದುಳ್ಳ ರೇಚರಸ ದಂಡನಾಥನ ಆಶ್ರಯದಲ್ಲಿದ್ದ.

ವರ್ಧಮಾನಪುರಾಣ 24ನೆಯ ತೀರ್ಥಂಕರ ವರ್ಧಮಾನ ಮಹಾವೀರನ ಚರಿತ್ರೆಯುಳ್ಳ ಚಂಪೂಕಾವ್ಯ. ಇದರಲ್ಲಿ 16 ಆಶ್ವಾಸಗಳಿವೆ. ಗ್ರಂಥಾರಂಭದಲ್ಲಿ ವರ್ಧಮಾನ, ಸಿದ್ಧಾದಿಗಳು, ಸರಸ್ವತಿ, ಯಕ್ಷ ಯಕ್ಷಿಯರು ಮುಂತಾದವರ ಸ್ತುತಿಯಿದೆ. ಬಂಧ ಪ್ರೌಢವಾಗಿಯೂ ಸಂಸ್ಕೃತಭೂಯಿಷ್ಠವಾಗಿಯೂ ಇದೆ. ಪ್ರಾಸಯಮಕಾದಿ ಶಬ್ದಾಲಂಕಾರಗಳನ್ನು ಯಥೇಚ್ಛವಾಗಿ ಬಳಸಿದ್ದಾನೆ. ಶೈಲಿ ಪಾಂಡಿತ್ಯಪೂರ್ಣವಾಗಿದೆ. ತನ್ನ ಕಾವ್ಯ ಸದಲಂಕಾರದಾಗರಮುದ್ಭರಸಭಾವಾನೀಕದೋಕಂ ಸದರ್ಥದ ಸಾರ್ಥಂ ವರಶಬ್ದವೃಂದದ ವಿರಾಜನ್ಮಂದಿರಂ ನಾಡೆಯುಂ ಮೃದುಸಂದರ್ಭದ ಗರ್ಭಂ - ಈ ಗುಣಗಳಿಂದ ಕೂಡಿದೆ ಎಂದು ಹೇಳಿಕೊಳ್ಳುತ್ತಾನೆ. ರಸಭಾವಗಳನ್ನು ಮನಮುಟ್ಟುವಂತೆ ವರ್ಣಿಸುವ ಕವಿತಾಸಾಮರ್ಥ್ಯ, ಅದಕ್ಕನುಕೂಲವಾದ ಶಬ್ದ ಸಂಪತ್ತಿ, ಸುಂದರ ನುಡಿಗಟ್ಟುಗಳು, ಸಂದರ್ಭೋಚಿತ ಗಾದೆಗಳು ಈತನ ಶೈಲಿಗೆ ಮೆರಗುಕೊಟ್ಟಿವೆ. ಈ ಪುರಾಣದಲ್ಲಿ ಬರುವ ಭವಾವಳಿಯ ಕಥೆಗಳು ಬಹಳ ತೊಡಕಿನವಾದ್ದರಿಂದ ಕಾವ್ಯರಸಾಸ್ವಾದನೆಗೆ ಸ್ವಲ್ಪ ಕಷ್ಟವುಂಟಾಗುತ್ತದೆ. ವರ್ಣನೆ ಹಾಗೂ ಪಾತ್ರರಚನೆಯಲ್ಲಿ ಕವಿ ಅಷ್ಟೊಂದು ಯಶಸ್ವಿಯಾಗಿಲ್ಲ ಎಂದೇ ಹೇಳಬಹುದು. ಈ ಕಾವ್ಯ ಶಾಂತ ರಸಪ್ರಧಾನವಾಗಿದೆ. ವರ್ಧಮಾನ ಜಿನನನ್ನು ಕುರಿತು ಕನ್ನಡದ ಮೊಟ್ಟಮೊದಲ ಗ್ರಂಥ ಎಂಬ ದೃಷ್ಟಿಯಿಂದ ಈ ಕೃತಿಗೆ ಪ್ರಾಶಸ್ತ್ಯವಿದೆ.

ಈತ ವರ್ಧಮಾನಪುರಾಣವನ್ನಲ್ಲದೆ ಶ್ರೀಪದಾಶೀತಿ ಎಂಬ ಸು.94 ಕಂದಗಳಿರುವ ಮತ್ತೊಂದು ಪುಟ್ಟಗ್ರಂಥವನ್ನೂ ರಚಿಸಿದ್ದಾನೆ. ಇದು ಜೈನ ಮತದೊಳಗಣ ಪಂಚಪದಗಳ ಮಹಿಮೆಯನ್ನು ತಿಳಿಸುವ ಕೃತಿ. ಇದರಲ್ಲಿ ಅರ್ಹಂತ, ಸಿದ್ಧ, ಸಾಧು, ಉಪಾಧ್ಯಾಯ, ಆಚಾರ್ಯ ಇವರ ಮಹಿಮೆಯನ್ನು ಹೊಗಳಿದ್ದಾನೆ. ಜಿನಮುನಿಯಾಚಣ್ಣ, ವಾಣೀವಲ್ಲಭ ಎಂದು ತನ್ನನ್ನು ಕರೆದುಕೊಂಡು ತನ್ನ ಜಿನನಿಷ್ಠೆಯನ್ನು ಪ್ರಕಟಿಸಿದ್ದಾನೆ. ಪಾರ್ಶ್ವಕವಿ ಇವನನ್ನು ಜೈನಾಗಮ ಗರ್ಭ, ಪ್ರಸನ್ನಗುಣ ಎಂದು ಹೊಗಳಿರುವುದರಿಂದ ಈತ ಜಿನಮತದಲ್ಲಿ ಬಹುಶ್ರದ್ಧೆಯುಳ್ಳವನೆಂದೂ ಪರಿಶುದ್ಧವಾದ ಆಚಾರವಂತನೆಂದೂ ಗೊತ್ತಾಗುತ್ತದೆ. (ಬಿ.ಬಿ.ಎಚ್.)

**ಆಚಾರ್ಯ, ಎಂ.ಟಿ.ವಿ. :** 1920-92. ಜಲವರ್ಣ ಚಿತ್ರಕಲಾವಿದ. ಚಂದಮಾಮದ ಆಚಾರ್ಯ ಎಂದೇ ಪ್ರಸಿದ್ಧರಾಗಿದ್ದವರು. 1920 ಜುಲೈ 28ರಂದು ಮೈಸೂರಿನಲ್ಲಿ ಜನಿಸಿದರು. ತಂದೆ ಎಂ.ಟಿ. ನಾರಾಯಣಯ್ಯಂಗಾರ್, ತಾಯಿ ಸಿಂಗಮ್ಮಾಳ್. ತಂದೆ ಶಿರಸ್ತೇದಾರರಾಗಿದ್ದರು. ಇದರಿಂದಾಗಿ ಆಚಾರ್ಯರು ಬಾಲ್ಯದಲ್ಲೇ ಹಲವಾರು ಊರು, ಅಲ್ಲಿಯ ಸುಂದರ ಪರಿಸರಗಳನ್ನು ನೋಡಲು ಸಾಧ್ಯವಾಯಿತು. ಇವರ ಕಲಾಕೃತಿಗಳಿಗೆ ಮೂಲ ಚೇತನ ಪ್ರಕೃತಿ. ಪ್ರಕೃತಿ ಪರಿಸರಗಳೇ ಇವರಲ್ಲಿ ಸುಪ್ತವಾಗಿದ್ದ ಕಲೆಗೆ ಪ್ರೇರಣೆ ನೀಡಿದವು. ಎಸ್.ಎಸ್.ಎಲ್.ಸಿ. ಪಾಸಾಗಿ ಮೈಸೂರಿನ ಶ್ರೀ ಚಾಮರಾಜೇಂದ್ರ ಕಲಾ ಶಾಲೆಯಲ್ಲಿ ಡಿಪ್ಲೊಮಾದಲ್ಲಿ ತೇರ್ಗಡೆಯಾದರು (1940). ಅನಂತರ ಸ್ವತಂತ್ರ ಕಲಾವಿದರಾಗಿ ಜೀವನ ನಿರ್ವಹಣೆ ಪ್ರಾರಂಭಿಸಿದರು. ಜಯಚಾಮರಾಜ ಒಡೆಯರ್ ಆಪ್ತ ಕಾರ್ಯದರ್ಶಿ ಸರ್ ಚಾರಲ್ಸ್ ಟಾಡ್ ಹಂಟ್‌ರವರು ಇವರನ್ನು ಕರೆಯಿಸಿ ಮಹಾರಾಜರ ಗ್ರೀಟಿಂಗ್ ಕಾರ್ಡ್ ರಚಿಸಲು ನೇಮಿಸಿದ್ದು ಇವರ ಪ್ರತಿಭೆಗೆ ನಿದರ್ಶನ.

ಇವರು ಬೆಂಗಳೂರಿನ ಹಿಂದೂಸ್ತಾನ ವಿಮಾನ ಕಾರ್ಖಾನೆಯಲ್ಲಿ ಟ್ರೇಸರ್ ಆಗಿ ನೇಮಕಗೊಂಡಿದ್ದು 1942ರಲ್ಲಿ. ಆಗ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಅಮೆರಿಕನ್ ಅಧಿಕಾರಿಗಳು ಇವರ ಕಲಾಕೃತಿಗಳಿಗೆ ಮಾರು ಹೋಗಿ ಹಲವು ಚಿತ್ರಗಳನ್ನು ಖರೀದಿಸಿದರು. ದಕ್ಷಿಣ ಭಾರತದ ಪ್ರಕೃತಿ ರಮ್ಯ ದೃಶ್ಯಗಳನ್ನು ತಮ್ಮ ಕುಂಚದಿಂದ ಸೆರೆಹಿಡಿದುಕೊಡುವಂತೆ ಆಚಾರ್ಯರನ್ನು ಕೇಳಿಕೊಂಡರು. ಸ್ವತಂತ್ರಜೀವನ ನಡೆಸಬೇಕೆಂಬುದು ಇವರ ಆಸೆಯಾಗಿತ್ತು. ಕೆಲಸಕ್ಕೆ ರಾಜೀನಾಮೆ ನೀಡಿ ಕಲಾಕೃತಿಗಳನ್ನು ರಚಿಸುವುದರಲ್ಲಿ ತಮ್ಮನ್ನು ತೊಡಗಿಸಿಕೊಂಡರು. 1945ರಲ್ಲಿ ಖ್ಯಾತ ವಕೀಲ ಹಾಗೂ ನಿವೃತ್ತ



ನ್ಯಾಯಾಧೀಶರಾಗಿದ್ದ ಶ್ರೀನಿವಾಸ ಅಯ್ಯಂಗಾರರ ಆಹ್ವಾನದ ಮೇರೆಗೆ ಮದರಾಸು ಸೇರಿದ ಇವರು ಅಲ್ಲಿ ಸ್ವಪ್ರಯತ್ನದಿಂದ ಪ್ರಬುದ್ಧ ಕಲಾವಿದರಾಗಿ ರೂಪುಗೊಂಡರು. ಮದರಾಸಿನಲ್ಲಿದ್ದಾಗ ಚಿತ್ರರಂಗದ ಸಂಪರ್ಕವೂ ಬಂತು. ಕಾರ್ಟೂನ್ ಚಿತ್ರಗಳ ತಯಾರಿಕೆಯಲ್ಲಿ ಸಹಾಯಕರಾಗಿಯೂ ಕೆಲಸ ಮಾಡಿದರು. ಆರು ಭಾಷೆಗಳಲ್ಲಿ ಪ್ರಕಟ ಗೊಳ್ಳುತ್ತಿದ್ದ ಚಂದಮಾಮ ಪತ್ರಿಕೆಯ ಕಲಾ ಸಂಪಾದಕರಾಗಿ ಅದಕ್ಕೊಂದು ರೂಪಕೊಟ್ಟರು (1947). ಚಂದಮಾಮ ಪತ್ರಿಕೆಯ ಮುಖಪುಟಗಳನ್ನು, ಮಹಾಭಾರತಮಾಲೆಯ ಚಿತ್ರಗಳು ಅಲಂಕರಿಸಿದುವು (1947-53). ಆಚಾರ್ಯರು ರಚಿಸಿದ ಈ ಚಿತ್ರಗಳು ಜನಮನವನ್ನು ಸೂರೆಗೊಂಡವು. ಕೆಲ ಕಾಲದ ಬಳಿಕ ಇವರು ಚಂದಮಾಮ ತ್ಯಜಿಸಿ ಬೆಂಗಳೂರಿಗೆ ಮರಳಿ ಸ್ವತಂತ್ರ ಸ್ಟುಡಿಯೋ ಪ್ರಾರಂಭಿಸಿದರು. ಅನಂತರ ಮದನಪಲ್ಲಿ ಸಮೀಪ ಋಷಿವ್ಯಾಲಿ ಪಬ್ಲಿಕ್ ಸ್ಕೂಲ್‌ನಲ್ಲಿ ಕಲಾಶಿಕ್ಷಕರಾಗಿ ನೇಮಕಗೊಂಡರು.

ಚಂದಮಾಮ ಮಾಲೀಕರಿಂದ ಪುನಃ ಕರೆ ಬಂದಾಗ (1957) ಮದರಾಸಿಗೆ ತೆರಳಿದರು. ಅಲ್ಲಿ 1963ರವರೆಗೂ ಕಾರ್ಯನಿರ್ವಹಿಸಿ ಮಹಾಭಾರತ ಸರಣಿಯ 80 ಕಲಾಕೃತಿಗಳನ್ನು ಪೂರೈಸಿದರು. ಅನಂತರ ತಾಯಿನಾಡು ಪತ್ರಿಕೆ ಬಳಗದ ಪ್ರಧಾನ ಕಲಾವಿದರಾದರು. ಈ ಪತ್ರಿಕಾ ಬಳಗ ಪ್ರಕಟಿಸುತ್ತಿದ್ದ ಗೋಕುಲ, ಕೈಲಾಸ ಪತ್ರಿಕೆಗಳಲ್ಲಿ ಇವರ ಬಹುತೇಕ ಚಿತ್ರಗಳು ಪ್ರಕಟವಾದವು. ವೃತ್ತಿಯಿಂದ ನಿವೃತ್ತರಾದ ಬಳಿಕ (1965) ಬೆಂಗಳೂರಿನಲ್ಲಿ ವಾಣಿಜ್ಯ ಕಲೆಯ ಸ್ಟುಡಿಯೋ ಆರಂಭಿಸಿದರು. ತಾವು ರಚಿಸಿದ ಮಹಾಭಾರತ ಸರಣಿ ಚಿತ್ರಗಳನ್ನು ಪ್ರದರ್ಶಿಸಿದರು. ಆಚಾರ್ಯ ಚಿತ್ರಕಲಾಭವನ ಮತ್ತು ಅಂಚೆ ಶಿಕ್ಷಣ ಆರಂಭಿಸಿದರು. ಭಾರತೀಯ ಕಲೆಯ ಏಕೈಕ ಅಂಚೆ ಶಿಕ್ಷಣ ಪದ್ಧತಿ ಪ್ರಾರಂಭಿಸಿ ಇತಿಹಾಸ ನಿರ್ಮಿಸಿದರು. ಇವರು ರಚಿಸಿದ ಪ್ರಮುಖ ಕಲಾಕೃತಿಗಳಿವು; ಹಳ್ಳಿಯ ಬಡ ಉಪಾಧ್ಯಾಯ, ಸಮುದ್ರ ಗುಪ್ತನ ಆಸ್ಥಾನ, ವಸಂತ ಋತು, ಗದಾಯುದ್ಧ, ಗೃಹಲಕ್ಷ್ಮೀ, ದೀಪಾವಳಿಯ ಅಳಿಯ, ಗೀತೋಪದೇಶ, ಅಂದಿನ ಕೂಳು, ದುಶ್ಯಾಸನ ವಧೆ, ಅಶ್ವತ್ಥಾಮ ಶಿವನಿಂದ ಅಜೇಯ ಖಡ್ಗ ಪಡೆದುದು, ಮುಗ್ಧ ಪ್ರೇಮಿಗಳು, ಬಾಳಿನ ಸಂಜೆ, ಮರಕುಟುಕ, ಭಿಕ್ಷುಕಿ. ಇವರು ಜಲವರ್ಣದಲ್ಲಿಯಷ್ಟೇ ಅಲ್ಲ ನವ್ಯಶೈಲಿಯ ಕಲಾಕೃತಿಗಳನ್ನೂ ರಚಿಸಿದರು. ಅವುಗಳಲ್ಲಿ ಮುಖ್ಯವಾದವು ಮಿಂಚುಗಳು, ಸಂಕೇತಗಳು, ಪ್ರಕೃತಿ ಮತ್ತು ಸೃಷ್ಟಿ.



ಭೀಮ - ದುರ್ಯೋಧನರ ಗದಾಯುದ್ಧ

ಆಚಾರ್ಯರ ಕಲಾಕೃತಿಗಳು ಮೈಸೂರು ಸಂಪ್ರದಾಯಕ್ಕೆ ಅಸ್ತಿತ್ವವನ್ನು ಕಲ್ಪಿಸಿಕೊಟ್ಟವು. ಸಂಯೋಗ ಚಿತ್ರರಚನೆಯಲ್ಲಿ ಒಂದು ಪ್ರಮುಖವಾದ ಸ್ಥಾನವನ್ನು ಇವರು ಗಳಿಸಿಕೊಂಡಿದ್ದರು. ದೇಶ ವಿದೇಶಗಳಲ್ಲಿ ಇವರ ಕಲಾ ಕೃತಿಗಳು ಅನೇಕ ಕಲಾರಸಿಕರ ಕೈಸೇರಿದವು. ಇವರ ಏಕವ್ಯಕ್ತಿ ಚಿತ್ರ ಪ್ರದರ್ಶನ ಕರ್ನಾಟಕದ ಪ್ರಮುಖ ನಗರಗಳಲ್ಲಿ ನಡೆದು ಜನತೆಯ ಪ್ರಶಂಸೆ ಗಳಿಸಿತು. ಕರ್ನಾಟಕದ ಸಾಂಸ್ಕೃತಿಕ ನಿಯೋಗದ ಪ್ರಮುಖರಾಗಿ ಇವರು ರಷ್ಯಕ್ಕೆ ಭೇಟಿ ನೀಡಿದರು (1974). ಇವರ ಕಲಾಸಾಧನೆಗೆ ಹಲವು ಗೌರವ ಪ್ರಶಸ್ತಿಗಳು ದೊರಕಿವೆ. ಇವುಗಳಲ್ಲಿ ಮುಖ್ಯವಾದವು ಮೈಸೂರು ದಸರಾ ಪ್ರದರ್ಶನದ ಸುವರ್ಣ ಪದಕ (1954), ಕರ್ನಾಟಕ ಲಲಿತ ಕಲಾ ಅಕಾಡೆಮಿ ಪ್ರಶಸ್ತಿ (1980) ಮತ್ತು ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1989). ಕಲೆ ಮತ್ತು ನಾನು (1985) ಎಂಬ ಪುಸ್ತಕ ಆಚಾರ್ಯರ ಆತ್ಮಕಥಾ ರೂಪದ ಬರೆವಣಿಗೆ. ಇವರು 1992ರಲ್ಲಿ ನಿಧನರಾದರು. **(ಆರ್.ಜಿ.ಆರ್.)**

**ಆಚಾರ್ಯ, ಪಾ.ವೆಂ. :** (1915-92). ಗೋಯೆಂಕಾ ಪ್ರಶಸ್ತಿ ಪಡೆದ ಕನ್ನಡದ ಪ್ರಸಿದ್ಧ ಪತ್ರಿಕೋದ್ಯಮಿ, ಸಾಹಿತಿ. ಪಾಡಿಗಾರು ವೆಂಕಟರಮಣ ಆಚಾರ್ಯ ಇವರ ಪೂರ್ಣ ಹೆಸರು. ಇವರು ಉಡುಪಿಯ ಬಡ ಕುಟುಂಬವೊಂದರಲ್ಲಿ 1915 ಫೆಬ್ರವರಿ 6ರಂದು ಜನಿಸಿದರು. ಆಗಿನ ಮೆಟ್ರಿಕ್‌ವರೆಗೆ ಕಲಿತರು. ಆದರೆ ಸಂಸ್ಕೃತವೂ ಸೇರಿದಂತೆ ಅನೇಕ ವಿಷಯಗಳಲ್ಲಿ ಆಸಕ್ತಿ ತಾಳಿ ಓದುವ ಅಭಿರುಚಿ ಬೆಳೆಸಿಕೊಂಡರು. ಪತ್ರಿಕೋದ್ಯಮ ರಂಗ ಇವರನ್ನು ತರುಣ ವಯಸ್ಸಿನಲ್ಲಿಯೆ ಆಕರ್ಷಿಸಿತು. ಉಡುಪಿಯ ಅಂತರಂಗ ಪತ್ರಿಕೆಯಲ್ಲಿ ಧಾರವಾಡದ ಜಯಕರ್ನಾಟಕದಲ್ಲಿ ಕತೆ ಕವಿತೆಗಳನ್ನು ಬರೆಯತೊಡಗಿದರು. ಆರಂಭದ ಈ ಪತ್ರಿಕಾ ವ್ಯವಸಾಯಕ್ಕೆ ತುಳು ಸಾಹಿತ್ಯದ ಅಧ್ವರ್ಯು ಪಣಿಯಾಡಿಯವರ ಮಾರ್ಗದರ್ಶನ ದೊರಕಿತು.

ನೌಕರಿಯನ್ನು ಅರಸಿಕೊಂಡು ಇವರು 1942ರಲ್ಲಿ ಹುಬ್ಬಳ್ಳಿಗೆ ಬಂದರು. ಲೋಕಶಿಕ್ಷಣ ಟ್ರಸ್ಟಿನವರ ಕರ್ಮವೀರ ಸಾಪ್ತಾಹಿಕದಲ್ಲಿ ಸಹಸಂಪಾದಕರಾಗಿ ವೃತ್ತಿಜೀವನ ಆರಂಭಿಸಿದರು. ಲಾಂಗೂಲಾಚಾರ್ಯ ಎಂಬ



ಹೆಸರಿನಿಂದ ಪ್ರತಿವಾರವೂ ಓದುಗರೊಡನೆ ಹರಟೆ ಕಾಯಂಕಾಲಂ ಬರೆಯ ತೊಡಗಿದರು. ಈ ಕಾವ್ಯನಾಮ ಕರ್ನಾಟಕದಲ್ಲಿ ಮನೆಮಾತಾಯಿತು. ಇದೇ ಲೋಕಶಿಕ್ಷಣ ಟ್ರಸ್ಟ್‌ನವರು ರೀಡರ್ಸ್ ಡೈಜೆಸ್ಟ್ ಮಾದರಿಯ ಕಸ್ತೂರಿ ಮಾಸಪತ್ರಿಕೆಯನ್ನು ಆರಂಭಿಸಿದಾಗ (1965) ಇವರು ಅದರ ಸಂಪಾದಕರಾದರು. ಸುಮಾರು 18 ವರ್ಷಗಳ ಕಾಲ ಆ ಪತ್ರಿಕೆಯನ್ನು ವಿಶಿಷ್ಟ ರೀತಿಯಿಂದ ನಡೆಸಿಕೊಂಡು ಬಂದರು. ನೂರಾರು ಲೇಖನಗಳನ್ನು ಬರೆದರು. ಸಂಪಾದಕರಾಗಿ ನಿವೃತ್ತರಾದ (1972) ಮೇಲೆ ವೈಚಾರಿಕ ಲೇಖನಗಳನ್ನು ಬರೆಯುವತ್ತ ಮನಗೊಟ್ಟರು. ರಾಜಕೀಯ ವಿಶ್ಲೇಷಣೆಯಲ್ಲಿಯೂ ಇವರು ಪಳಗಿದ್ದರೆನ್ನುವುದಕ್ಕೆ ಸ್ವತಂತ್ರ ಭಾರತ ಎಂಬ ಇವರ ಗ್ರಂಥ ಸಾಕ್ಷಿಯಾಗಿದೆ.

ಇವರು ಪ್ರಥಮತಃ ಖ್ಯಾತನಾಮ ಹರಟೆಗಾರರೆಂದೆ ಪ್ರಸಿದ್ಧರು. ಇವರಷ್ಟು ಹರಟೆಗಳನ್ನು ಬರೆದವರು ಕನ್ನಡದಲ್ಲಿ ಕಡಿಮೆ. ಸುಮಾರು 600 ಹರಟೆಗಳನ್ನು, ವಿಡಂಬನೆಗಳನ್ನು ಇವರು ಬರೆದಿದ್ದಾರೆ. ಯಾರದೆ ಮನನೋಯಿಸದಂಥ ವಿಡಂಬನೆಯ ಮೊನಚುಳ್ಳ, ಜೊತೆಗೆ ಇವರ ವಿಸ್ತಾರಿತವಾದ ವಾಚನದ ಹಿನ್ನೆಲೆಯುಳ್ಳ ಹರಟೆಗಳು ಕನ್ನಡ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಯೆನಿಸಿದೆ.

ಆಚಾರ್ಯರು 1992 ಏಪ್ರಿಲ್ 8ರಂದು ನಿಧನರಾದರು. ಇವರ ನಿಧನಾನಂತರ ವಿಶ್ವಸ್ಥ ಸಮಿತಿ ಇವರ ಸಮಗ್ರ ಬರೆವಣಿಗೆಯನ್ನು ಪ್ರಕಟಿಸುವ ಯೋಜನೆಯನ್ನೆತ್ತಿಕೊಂಡು ಶ್ರೀನಿವಾಸ ಹಾವನೂರರ ಸಂಪಾದಕತ್ವದಲ್ಲಿ ಉಡುಪಿಯ ಪರಿಸರದಲ್ಲಿ ಆಯ್ದ ಲಲಿತ ಪ್ರಬಂಧಗಳು, ಇವರೇ ಲಾಂಗೂಲಾಚಾರ್ಯರು, ಬ್ರಾಹ್ಮಣರೇನು ಮಾಡಬೇಕು, ಮತ್ತಿತರ ಚಿಂತನ ಪ್ರಬಂಧಗಳು ಚಿತ್ರ-ವಿಚಿತ್ರ ಈ ಜಗತ್ತು, ಹಿಂದೂ-ಮುಸ್ಲಿಮ್ ಹಾಗೂ ಇತರ ಕತೆಗಳು, ಪಾವೆಂ ಸಮಗ್ರ ಕವನಗಳು, ಲೋಕವಿಖ್ಯಾತರು ತುಳು ಬಯ್ಯ ಮಲ್ಲಿಗೆ -ಈ ಮೊದಲಾದ ಕೃತಿಗಳನ್ನು ಹೊರತರಲಾಗಿದೆ (1999-2002). **(ಎಸ್.ಎಚ್.)**

**ಆಟಿಕಡೆಂಜ :** ತುಳುನಾಡಿನ ಒಂದು ಜನಪದ ಕಲೆ. ತುಳು ಆಟಿ ತಿಂಗಳಲ್ಲಿ (ಕರ್ಕಾಟಕ ಮಾಸ) ಹರಿಜನ ವರ್ಗಕ್ಕೆ ಸೇರಿದ ನಲ್ಕೆ ಎಂಬ ಪಂಗಡದವರು ಸಣ್ಣ ಹುಡುಗನೊಬ್ಬನ ತಲೆಗೆ ಕಂಗಿನ ಹಾಳೆಯ ಟೊಪ್ಪಿಗೆ ಇಟ್ಟು, ಮುಖಕ್ಕೆ ಬಿಳಿಯ ಬಣ್ಣ ಬಳಿದು, ದಡ್ಡಿಯ (ಒಂದು ತರದ ಕಳ್ಳಿ) ನಾರಿನ ಗಡ್ಡ ಮೀಸೆ ಬಿಗಿದು, ಮೈಗೆ ಕೆಂಪು ಅರಿವೆಯ ಅಂಗಿ, ಮೊಣಕಾಲವರೆಗೆ ಕೆಂಪುಬಣ್ಣದ ಚಲ್ಲಣ ತೊಡಿಸಿ, ಕಾಲಿಗೆ ಗೆಜ್ಜೆ ಕಟ್ಟಿ, ಕೈಯಲ್ಲಿ ಓಲೆಗರಿಯ ತತ್ರ (ಛತ್ರ) ಕೊಟ್ಟು ಆಟಿಕಡೆಂಜನ ವೇಷ ಹಾಕಿಸುತ್ತಾರೆ. ಈ ವೇಷಧಾರಿಯ ಜೊತೆಗಿರುವ ಮತ್ತೊಬ್ಬ ತೆಂಬರೆ ಎಂಬ ಚರ್ಮವಾದ್ಯವನ್ನು ಬಾರಿಸಿ ಆಟಿಕಡೆಂಜನಿಗೆ ಸಂಬಂಧಪಟ್ಟ ಪಾಡ್ದನವನ್ನು ಹಾಡುತ್ತಿರುವಂತೆಯೇ ವೇಷಧಾರಿ ಮೆಲ್ಲನೆ ಕಾಲನ್ನಾಡಿಸುತ್ತ, ಕೈಯಲ್ಲಿ ಹಿಡಿದಿರುವ ತತ್ರವನ್ನು ತಿರುಗಿಸುತ್ತ, ವೃತ್ತಾಕಾರದಲ್ಲಿ ಹಿಂದುಮುಂದು ಹೋಗುತ್ತಿರುತ್ತಾನೆ.

ತುಳುವರ ಸಂಪ್ರದಾಯದಂತೆ ಆಟಿ ತಿಂಗಳು ಶುಭಶೋಭನಾದಿಗಳು ನಡೆಯದ ಅಶುಭತಿಂಗಳು. ಆಗ ಮನೆಯ ಅಂಗಳಕ್ಕೆ ಬಂದು ಕುಣಿದ ಆಟಿಕಡೆಂಜನಿಗೆ ತಡ್ಪೆಯಲ್ಲಿ 'ಬತ್ತಗೇರುವ ಅಗಲವಾದ ಒಂದು ಸಾಧನ' ಸ್ವಲ್ಪ ಬತ್ತ, ಅಕ್ಕಿ, ಹುಳಿ, ಮೆಣಸು, ಉಪ್ಪು, ಒಂದು ತುಂಡು ಇದ್ದಲು, ಅಡಿಗೆ ಅಟ್ಟಿದ ಮಸಿ ಇಷ್ಟನ್ನೂ ಇಟ್ಟು ಕೊಡುತ್ತಾರೆ. ಅಲ್ಲದೆ ಆತ



ಆಟಿಕಡೆಂಜ ವೇಷಧಾರಿ ಹಾಗೂ ತೆಂಬೆರೆ ವಾದ್ಯ ನುಡಿಸುವಾತ

ಅಂಗಳ ಇಳಿದು ಹೋಗುವಾಗ ಕುರಿನೀರನ್ನು (ಅರಿಸಿನ ಹಾಕಿದ ಬಣ್ಣದ ನೀರು) ಅವನ ಮೇಲೆ ಸಿಂಪಡಿಸುತ್ತಾರೆ. ಹೀಗೆ ಮಾಡಿದರೆ ಮನೆಯ ಅಮಂಗಳ ಪರಿಹಾರವಾಗುತ್ತದೆ ಎಂಬುದು ಅವರ ನಂಬಿಕೆ. **(ಎ.ಎಲ್.ಎ.)**

**ಆಡಳಿತ ವ್ಯವಸ್ಥೆ:** ಭಾರತ ಒಕ್ಕೂಟದಲ್ಲಿರುವ ಕರ್ನಾಟಕ ರಾಜ್ಯದ ಆಡಳಿತ ವ್ಯವಸ್ಥೆ ಭಾರತದ ಇತರ ರಾಜ್ಯಗಳ ಮಾದರಿಯಲ್ಲೇ ಇದೆ. ಭಾರತ ಒಕ್ಕೂಟದಲ್ಲಿ ಕೇಂದ್ರ ಮತ್ತು ರಾಜ್ಯಗಳ ವ್ಯವಸ್ಥೆಗಳನ್ನು ನಿರ್ದೇಶಿಸಲು ಒಂದೇ ಸಂವಿಧಾನವಿದೆ. ಇದರಲ್ಲಿ ನಿರ್ದೇಶಿಸಿರುವ ವ್ಯವಸ್ಥೆಯ ಪ್ರಕಾರ ಕೇಂದ್ರ ಪ್ರಬಲ. ಅಧಿಕಾರ ವಿತರಣೆಯಲ್ಲಿ ಕೇಂದ್ರಕ್ಕೆ ಪ್ರಾಧಾನ್ಯ. ಸಂವಿಧಾನದಲ್ಲಿ ಆಡಳಿತದ ವಿವಿಧ ವಿಷಯಗಳನ್ನು ಮೂರು ಬಗೆಯಾಗಿ ವಿಂಗಡಿಸಿದೆ. ಅದರಂತೆ (1) 97 ವಿಷಯಗಳ ಕೇಂದ್ರ ಪಟ್ಟಿ (2) 66 ವಿಷಯಗಳ ರಾಜ್ಯಪಟ್ಟಿ (3) ಕೇಂದ್ರ ಮತ್ತು ರಾಜ್ಯ ಎರಡಕ್ಕೂ ಅನ್ವಯಿಸುವ 47 ವಿಷಯಗಳ ಸಾಮಾನ್ಯ ಪಟ್ಟಿ. ಈ ಅಧಿಕಾರ ವ್ಯಾಪ್ತಿಯ ವಿಷಯಗಳ ವಿಭಜನೆ ಇದ್ದರೂ ಈ ಮೂರು ಪಟ್ಟಿಗಳಿಗೆ ಸಂಬಂಧಿಸಿದಂತೆಯೂ ಕೇಂದ್ರದ ಅಧಿಕಾರ ಹೆಚ್ಚು. ಈ ಚೌಕಟ್ಟನ್ನು ಅನುಸರಿಸಿದಂತೆ ಕರ್ನಾಟಕ ರಾಜ್ಯದಲ್ಲಿ ನಿಯಮಿತವಾದ ಒಂದು ಸ್ವಯಂ ಆಡಳಿತ ವ್ಯವಸ್ಥೆ ಇದೆ.

ಸಂಸದೀಯ ಮಾದರಿಯ ಪ್ರಜಾಸತ್ತಾತ್ಮಕ ಗಣರಾಜ್ಯ ತತ್ತ್ವ ಮತ್ತು ಪದ್ಧತಿಗಳ ಆಧಾರದ ಮೇಲೆ ರಚಿತವಾಗಿರುವ ಭಾರತ ಸಂವಿಧಾನ ಕೇಂದ್ರ ಮತ್ತು ರಾಜ್ಯಗಳೆರಡಕ್ಕೂ ಒಂದೇ ಮಾದರಿಯ ಆಡಳಿತ ವ್ಯವಸ್ಥೆಯನ್ನು ರೂಪಿಸಿದೆ. ಅದರಂತೆ ಕೇಂದ್ರದಲ್ಲಿ ಅಧ್ಯಕ್ಷರಿದ್ದ ಹಾಗೆ ರಾಜ್ಯದಲ್ಲಿ ರಾಜ್ಯಪಾಲರಿರುತ್ತಾರೆ. ಕೇಂದ್ರದಲ್ಲಿ ಪ್ರಧಾನಮಂತ್ರಿ ಇರುವಂತೆ ರಾಜ್ಯಗಳಲ್ಲಿ ಮುಖ್ಯಮಂತ್ರಿಗಳು ಇರುತ್ತಾರೆ. ಕೇಂದ್ರದ ಸಂಸತ್ತಿಗೆ ಸಮನಾಗಿ ರಾಜ್ಯದಲ್ಲಿ ವಿಧಾನಮಂಡಲ, ಕೇಂದ್ರದ ಉಚ್ಚತಮ ನ್ಯಾಯಾಲಯದ ರೀತಿಯಲ್ಲೇ ರಾಜ್ಯಮಟ್ಟದ ಉಚ್ಚನ್ಯಾಯಾಲಯ ಇದ್ದು, ಆಡಳಿತ ಅನುಭವಗಳ ವಿನಿಮಯ, ಆಡಳಿತೋಪಾಯ ಮತ್ತು ಪದ್ಧತಿಗಳ ಅನುಕರಣೆ ಇವು ಸಾಧ್ಯವಾಗಿ, ಎರಡು ಹಂತಗಳಲ್ಲೂ ಸುಮಾರು ಒಂದೇ ರೀತಿಯ ಆಡಳಿತವ್ಯವಸ್ಥೆ ಸಾಗುವುದು. ಅಲ್ಲದೆ ಕೇಂದ್ರ ಮತ್ತು ರಾಜ್ಯಗಳ ನಡುವೆ ಆಡಳಿತ ಸೌಹಾರ್ದತೆಯನ್ನು ಏರ್ಪಡಿಸಲು ಯೋಜನಾ ಆಯೋಗ, ರಾಷ್ಟ್ರೀಯ ಅಭಿವೃದ್ಧಿ ಮಂಡಳಿ, ಅಂತರರಾಜ್ಯ ಸಮಿತಿಗಳು, ಪ್ರಾದೇಶಿಕ ಸಮಿತಿಗಳು, ಅಖಿಲ ಭಾರತ ರಾಜ್ಯಪಾಲರ ಸಮ್ಮೇಳನ, ಅಖಿಲ ಭಾರತ ಮುಖ್ಯಮಂತ್ರಿಗಳ ಸಮ್ಮೇಳನ ಮತ್ತು ಅಖಿಲಭಾರತ ಆಡಳಿತ ಸೇವೆ ಮುಂತಾದ ವ್ಯವಸ್ಥೆಗಳು ಸಹಾಯಕವಾಗಿವೆ.

ಕರ್ನಾಟಕ ರಾಜ್ಯವ್ಯವಸ್ಥೆಯೂ ಸಂಸದೀಯ ಪ್ರಜಾಪ್ರಭುತ್ವ ನೀತಿಯನ್ನು ಆಧರಿಸಿದೆ. ಇಲ್ಲಿ ಪ್ರಮುಖ ಶಾಸಕಾಂಗ, ಕಾರ್ಯಾಂಗ ಮತ್ತು ಸ್ವತಂತ್ರವಾದ ನ್ಯಾಯಾಂಗ ಕೆಲಸ ಮಾಡುತ್ತವೆ. ಅವುಗಳ ಸೂಕ್ಷ್ಮವಿವರಣೆ ಕೆಳಕಂಡಂತೆ ಇದೆ.

**ಶಾಸಕಾಂಗ**: ಕರ್ನಾಟಕ ಶಾಸಕಾಂಗ ಒಂದು ದ್ವಿಸದನ ಮಂಡಲ. ವಿಧಾನ ಸಭೆ ಮತ್ತು ವಿಧಾನ ಪರಿಷತ್ತುಗಳೇ ಈ ಸದನಗಳು. ಮೇಲ್ಮನೆಯಾದ ವಿಧಾನ ಪರಿಷತ್ತಿನಲ್ಲಿ 63 ಜನ ಸದಸ್ಯರಿದ್ದಾರೆ. ಇವರೆಲ್ಲರೂ ಅಪರೋಕ್ಷವಾಗಿ ಚುನಾಯಿಸಲ್ಪಟ್ಟ ಅಥವಾ ನೇಮಿಸಲ್ಪಟ್ಟ ಸದಸ್ಯರು. ಇವರಲ್ಲಿ $^{1}/_{3}$ ಭಾಗದಷ್ಟು ಜನ ಸದಸ್ಯರು ರಾಜ್ಯದ ವಿಧಾನಸಭೆಯಿಂದ ಚುನಾಯಿಸಲ್ಪಟ್ಟಿರುತ್ತಾರೆ. ಇನ್ನೊಂದು $^{1}/_{3}$ ಭಾಗದಷ್ಟು ಸದಸ್ಯರು ನಗರಸಭೆ, ತಾಲ್ಲೂಕು ಮಂಡಳಿ ಮತ್ತು ಸ್ಥಳೀಯ ಸಂಸ್ಥೆಗಳ ಸದಸ್ಯರನ್ನೊಳಗೊಂಡ ಸ್ಥಳೀಯ ಸಂಸ್ಥಾ ಕ್ಷೇತ್ರಗಳಿಂದ ಆರಿಸಲ್ಪಟ್ಟಿದ್ದಾರೆ. ಮಿಕ್ಕವರಲ್ಲಿ $^{1}/_{12}$ ಭಾಗದಷ್ಟು ಸದಸ್ಯರು ಸೆಕೆಂಡರಿ ಮತ್ತು ಮೇಲ್ಪಟ್ಟ ವಿದ್ಯಾಸಂಸ್ಥೆಗಳ ನೋಂದಾಯಿತ ಅಧ್ಯಾಪಕರಗಳ ಕ್ಷೇತ್ರದಿಂದಲೂ ಇನ್ನೊಂದು $^{1}/_{12}$ ಭಾಗದಷ್ಟು ಸದಸ್ಯರು ನೋಂದಾಯಿತ ಪದವೀಧರರ ಕ್ಷೇತ್ರದಿಂದಲೂ ಆಯ್ಕೆಯಾಗಿ ಬಂದಿರುತ್ತಾರೆ. ಮಿಕ್ಕವರು ರಾಜ್ಯಪಾಲರಿಂದ ನೇಮಕಗೊಂಡವರು. ಸಾಹಿತ್ಯ, ವಿಜ್ಞಾನ, ಕಲೆ, ಸಹಕಾರ ಚಳವಳಿ ಅಥವಾ ಸಮಾಜಸೇವಾ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದವರನ್ನು ವಿಧಾನ ಪರಿಷತ್ತಿಗೆ ನೇಮಿಸುವ ಹಕ್ಕು ರಾಜ್ಯಪಾಲರಿಗಿದೆ. ವಿಧಾನ ಪರಿಷತ್ತಿಗೆ ಕಾಲದ ಅವಧಿಯಿಲ್ಲ. ಇದು ನಿರಂತರವಾದ ಸಂಸ್ಥೆ, ವಿಧಾನ ಪರಿಷತ್ತಿನ $^{1}/_{3}$ ಭಾಗದಷ್ಟು ಸದಸ್ಯರು ಪ್ರತಿ ಎರಡು ವರ್ಷಕ್ಕೊಂದು ಸಾರಿ ನಿವೃತ್ತಿಗೊಳ್ಳುವರು. ಆ ಸ್ಥಾನಗಳನ್ನು ಮತ್ತೆ ಮೇಲೆ ಹೇಳಿದಂತೆ ತುಂಬಲಾಗುವುದು.

ವಿಧಾನ ಸಭೆಯಲ್ಲಿ ಆಂಗ್ಲೋ-ಇಂಡಿಯನ್ನರನ್ನು ಪ್ರತಿನಿಧಿಸಲು ರಾಜ್ಯಪಾಲರಿಂದ ನೇಮಕಗೊಂಡ ಒಬ್ಬರನ್ನು ಬಿಟ್ಟರೆ ಉಳಿದವರೆಲ್ಲರೂ ನೇರವಾಗಿ ಜನರಿಂದ ಚುನಾಯಿಸಲ್ಪಟ್ಟ ಸದಸ್ಯರು. ವಿಧಾನ ಸಭೆಯ ಸದಸ್ಯರ ಸಂಖ್ಯೆ ರಾಜ್ಯದ ಜನಸಂಖ್ಯೆಯನ್ನು ಅವಲಂಬಿಸುತ್ತದೆ. ರಾಜ್ಯ ಹಲವು ಪ್ರಾದೇಶಿಕ ನಿರ್ವಾಚನ ಕ್ಷೇತ್ರಗಳಾಗಿ ವಿಂಗಡಿತವಾಗಿದ್ದು ಪ್ರತಿ ಕ್ಷೇತ್ರವೂ ವಿಧಾನ ಸಭೆಯಲ್ಲಿ ಪ್ರತಿನಿಧಿತವಾಗುವಂತೆ ವ್ಯವಸ್ಥೆ ಇದೆ. ಈ ಪ್ರಾದೇಶಿಕ ನಿರ್ವಾಚನ ಕ್ಷೇತ್ರಗಳ ವಿಂಗಡನೆಯನ್ನು ಮಾಡುವಲ್ಲಿ ಹಿಂದಿನ ಜನಗಣತಿಯನ್ನು ಆಧಾರವಾಗಿಟ್ಟುಕೊಂಡು ಒಂದೊಂದು ನಿರ್ವಾಚನ

ಕ್ಷೇತ್ರವೂ ಸುಮಾರು 75,000 ಜನಸಂಖ್ಯೆಯಿರುವ ರೀತಿಯಲ್ಲಿ ವ್ಯವಸ್ಥಿತವಾಗಿರುತ್ತದೆ. ಪ್ರಸ್ತುತ ವಿಧಾನಸಭೆಯಲ್ಲಿ 224 ಸದಸ್ಯರಿದ್ದಾರೆ. ವಿಧಾನಸಭಾ ಕ್ಷೇತ್ರಗಳ ಪುನರ್ವಿಂಗಡನೆ ಮತ್ತು ವಿಧಾನ ಸಭಾ ಸದಸ್ಯರ ಸಂಖ್ಯೆಯ ಪರಿಷ್ಕರಣ 10 ವರ್ಷಕ್ಕೊಮ್ಮೆ ಜನಗಣತಿಯ ಆಧಾರದ ಮೇಲೆ ಮಾಡಲಾಗುತ್ತದೆ. ಈ ಸಭೆಯ ಕಾಲಾವಧಿ 5 ವರ್ಷ.

ವಿಧಾನ ಪರಿಷತ್ತು ಮತ್ತು ವಿಧಾನ ಸಭೆಗಳು ಸಭಾಧ್ಯಕ್ಷ ಮತ್ತು ಉಪಾಧ್ಯಕ್ಷರನ್ನು ತಾವೇ ಚುನಾಯಿಸಿಕೊಳ್ಳುತ್ತವೆ. ಸಭಾಕಲಾಪಗಳಲ್ಲಿ ನೆರವು ನೀಡಲು ಸಾರ್ವಜನಿಕ ಹಣಕಾಸು ಸಮಿತಿ, ಸಾರ್ವಜನಿಕ ಅಂದಾಜು ಸಮಿತಿ ಮುಂತಾದ ಜಂಟಿ ಸಮಿತಿಗಳೂ ಮತ್ತು ಇತರ ಸಮಿತಿಗಳೂ ಇರುತ್ತವೆ. ಅಲ್ಲದೆ ಶಾಸಕಾಂಗದ ಕಾರ್ಯದರ್ಶಿ ಮತ್ತು ಕಾರ್ಯಾಲಯಗಳು ಇವುಗಳಿಗೆ ನೆರವು ನೀಡುತ್ತವೆ. ಶಾಸನಗಳನ್ನು ಮಾಡುವುದು, ಸರ್ಕಾರದ ಆಯ-ವ್ಯಯಗಳನ್ನು ಮತ್ತು ಆಡಳಿತದ ರೀತಿಗಳನ್ನು ಹತೋಟಿಯಲ್ಲಿಡುವುದು ಶಾಸಕಾಂಗದ ಪ್ರಮುಖ ಕೆಲಸ. ಯಾವುದೇ ಮಸೂದೆ ಶಾಸನವಾಗಲು ಎರಡೂ ಸದನಗಳ ಒಪ್ಪಿಗೆ ಬೇಕು. ಎರಡೂ ಸದನಗಳ ಮಧ್ಯೆ ಒಡಂಬಡಿಕೆ ಇಲ್ಲದಿದ್ದರೆ ಎರಡನೆಯ ಸಾರಿ ವ್ಯಕ್ತಪಡಿಸಿದ ವಿಧಾನಸಭೆಯ ಅಭಿಪ್ರಾಯವೇ ಕೊನೆಗೆ ನಿರ್ಣಾಯಕವಾಗಿರುತ್ತದೆ. ಸಂಸತ್ತಿನ ಸದನಗಳ ನಡುವೆ ಜಂಟಿಸಮಾವೇಶಕ್ಕೆ ಅವಕಾಶವಿರುವಂತೆ ಇಲ್ಲಿ ಇಲ್ಲ. ರಾಜ್ಯದ ಆಡಳಿತ ರೀತಿನೀತಿಗಳನ್ನು ಈ ಸಭೆಗಳು ನಿರ್ಧರಿಸುತ್ತವೆ. ಎರಡು ಸಭೆಗಳಲ್ಲೂ ಸಾಮಾನ್ಯವಾಗಿ ಬಹುಮತ ಪಡೆದ ಆಡಳಿತ ಪಕ್ಷದ್ದೇ ಮೇಲುಗೈಯಾಗಿರುತ್ತದೆ. ಆ ಪಕ್ಷ ಮಂತ್ರಿಮಂಡಲವನ್ನು ರಚಿಸಿಕೊಂಡು ಸಂವಿಧಾನಬದ್ಧವಾಗಿ ರಾಜ್ಯದ ಆಡಳಿತವನ್ನು ನಿರ್ವಹಿಸುತ್ತದೆ. ಉಳಿದ ವಿರೋಧಪಕ್ಷದ ಸದಸ್ಯರೂ ಸಭೆಗಳ ಕಾರ್ಯಕಲಾಪಗಳಲ್ಲಿ ಗಮನಾರ್ಹವಾಗಿ ಮತ್ತು ಪರಿಣಾಮಕಾರಿಯಾಗಿ ಭಾಗವಹಿಸುತ್ತಾರೆ.

**ಕಾರ್ಯಾಂಗ:** ರಾಷ್ಟ್ರಾಧ್ಯಕ್ಷರು ಸಾಮಾನ್ಯವಾಗಿ ರಾಜ್ಯದ ಮಂತ್ರಿ ಮಂಡಳಿಯೊಡನೆ ಸಮಾಲೋಚಿಸಿ 5 ವರ್ಷಗಳ ಅವಧಿಗೆ ರಾಜ್ಯಪಾಲರನ್ನು ನೇಮಿಸುತ್ತಾರೆ. ರಾಜ್ಯಪಾಲರೇ ಕಾರ್ಯಾಂಗದ ಪ್ರಮುಖರು. ರಾಜ್ಯಪಾಲರ ಸ್ಥಾನದಲ್ಲಿ ಶಾಸನಾಧಿಕಾರ, ಕಾರ್ಯಾಧಿಕಾರ ಮತ್ತು ಕೆಲವು ನ್ಯಾಯಾಂಗಾಧಿಕಾರಗಳು ಕೇಂದ್ರೀಕೃತವಾಗಿದ್ದರೂ ಇದು ಒಂದು ಅಲಂಕಾರಸ್ಥಾನ ಮಾತ್ರ. ಇವರ ಹೆಸರಿನಲ್ಲೇ ಎಲ್ಲ ಕೆಲಸಗಳು ನಡೆದರೂ ತೀರ್ಮಾನ ಮಾಡುವ ಹಕ್ಕೆಲ್ಲ ಸಚಿವಸಂಪುಟಕ್ಕೆ ಸೇರಿದ್ದು. ಸಚಿವಸಂಪುಟ ಭದ್ರವಾಗಿದ್ದಲ್ಲಿ ಮತ್ತು ವಿಧಾನಸಭೆಯಲ್ಲಿ ಪಕ್ಷವ್ಯವಸ್ಥೆ ಸ್ಪಷ್ಟವಾಗಿದ್ದಲ್ಲಿ ರಾಜ್ಯಪಾಲರ ಕೆಲಸ ಕೇವಲ ವಿಷಯ ತಿಳಿದುಕೊಳ್ಳುವ, ಬುದ್ಧಿವಾದ ಹೇಳುವ ಮತ್ತು ಮಾರ್ಗದರ್ಶನ ನೀಡುವ ಹಿರಿಯ ರಾಜನೀತಿಜ್ಞನ ಹಾಗೆ. ವಿಧಾನಸಭೆಯಲ್ಲಿ ಯಾವ ಪಕ್ಷಕ್ಕೂ ಬಹುಮತವಿಲ್ಲದೆ ಅಥವಾ ಇತರ ಕಾರಣಗಳಿಂದ ರಾಜ್ಯದ ರಾಜಕೀಯ ಪರಿಸ್ಥಿತಿ ಉಲ್ಬಣಗೊಂಡಾಗ ರಾಜ್ಯಪಾಲರು ರಾಷ್ಟ್ರಾಧ್ಯಕ್ಷರಿಗೆ ರಾಜಕೀಯ ಪರಿಸ್ಥಿತಿ ಬಗ್ಗೆ ವರದಿ ಸಲ್ಲಿಸಿ ರಾಷ್ಟ್ರಾಧ್ಯಕ್ಷರ ಆಡಳಿತ ಜಾರಿಗೆ ಬರುವ ಸಲಹೆ ಮಾಡಬಹುದು. ಹಾಗೆ ರಾಷ್ಟ್ರಾಧ್ಯಕ್ಷರ ಆಡಳಿತ ಜಾರಿಗೆ ಬಂದ ಸಂದರ್ಭದಲ್ಲಿ ಶಾಸನಾಧಿಕಾರವೆಲ್ಲವೂ ಕೇಂದ್ರದ ಸಂಸತ್ತಿಗೂ ಮತ್ತು ಕಾರ್ಯಾಂಗಾಧಿಕಾರವೆಲ್ಲ ನಾಮಮಾತ್ರಕ್ಕೆ ರಾಷ್ಟ್ರಾಧ್ಯಕ್ಷರಿಗೂ ಮತ್ತು ವಾಸ್ತವಿಕವಾಗಿ ರಾಜ್ಯಪಾಲರಿಗೂ ಸೇರಿ, ರಾಜ್ಯಪಾಲರೇ ಆಡಳಿತ ಸಲಹೆಗಾರರ ಸಹಾಯದಿಂದ ರಾಜ್ಯಾಡಳಿತ ನಡೆಸುತ್ತಾರೆ.

ಸಂವಿಧಾನದ 163ನೆಯ ಅನುಚ್ಛೇಧದ ಪ್ರಕಾರ ರಾಜ್ಯದಲ್ಲಿ ಒಂದು ಮಂತ್ರಿ ಮಂಡಲವಿರುತ್ತದೆ. ಸಂವಿಧಾನದ ಪ್ರಕಾರ ಇದು ರಾಜ್ಯಪಾಲರಿಗೆ ಆಡಳಿತದಲ್ಲಿ ಸಲಹೆ ಮತ್ತು ಸಹಾಯ ನೀಡುವುದು. ಆದರೆ ವಾಸ್ತವವಾಗಿ ಸಂಸದೀಯ ಸಂಪ್ರದಾಯದ ಪ್ರಕಾರದಲ್ಲಿ ರಾಜ್ಯದ ಕಾರ್ಯ ನಿರ್ವಹಣಾಧಿಕಾರವೆಲ್ಲ ಈ ಮಂತ್ರಿಮಂಡಲಕ್ಕೆ ಸೇರಿದ್ದಾಗಿರುತ್ತದೆ. ಸಂಸದೀಯ ಪದ್ಧತಿಗೆ ಅನುಗುಣವಾಗಿ ರಾಜ್ಯಪಾಲರು ವಿಧಾನಸಭೆಯ ಬಹುಮತಪಕ್ಷದ ನಾಯಕನನ್ನು ಮುಖ್ಯಮಂತ್ರಿಯಾಗಿ ನೇಮಿಸಿ ಆತನ ಸಲಹೆಯ ಮೇಲೆ ಮಂತ್ರಿಮಂಡಲದ ಇತರ ಸದಸ್ಯರನ್ನು ನೇಮಿಸುತ್ತಾರೆ. ಮಂತ್ರಿ ಮಂಡಲದಲ್ಲಿ ಮುಖ್ಯಮಂತ್ರಿಯಲ್ಲದೆ ಸಂಪುಟ ಸಚಿವರು, ರಾಜ್ಯ ಸಚಿವರು ಮತ್ತು ಉಪಸಚಿವರು ಸಾಮಾನ್ಯವಾಗಿ ಇರುತ್ತಾರೆ. ಸಂಪುಟ ಸಚಿವರು, ವಿವಿಧ ಖಾತೆಗಳ ಮುಖ್ಯಸ್ಥರಾಗಿರುವುದೇ ಅಲ್ಲದೆ ಸಚಿವರ ಸಂಪುಟದ ಸದಸ್ಯರಾಗಿರುತ್ತಾರೆ. ರಾಜ್ಯಸಚಿವರು ಸ್ವತಂತ್ರವಾಗಿ ಅಥವಾ ಸಂಪುಟ ಸಚಿವ ಸಹಾಯಕರಾಗಿ ಇಲಾಖೆಗಳ ಮುಖ್ಯಸ್ಥರಾಗಿರುತ್ತಾರೆ. ಉಪಸಚಿವರು ಯಾವಾಗಲೂ ಸಚಿವರ ಅಥವಾ ರಾಜ್ಯಸಚಿವರ ಅಧೀನದಲ್ಲಿ ಸಹಾಯಕ ಸಚಿವರಾಗಿ ಕೆಲಸ ಮಾಡುತ್ತಾರೆ. ರಾಜ್ಯಸಚಿವರು ಮತ್ತು ಉಪಸಚಿವರು ಮಂತ್ರಿಮಂಡಲದ ಸದಸ್ಯರಾದರೂ ಸಂಪುಟದ ಸದಸ್ಯರಲ್ಲ.

ಸರ್ಕಾರದ ನೀತಿನಿಲವುಗಳೆಲ್ಲ ತೀರ್ಮಾನವಾಗುವುದು ಈ ಮಂತ್ರಿಮಂಡಲದಲ್ಲಿ, ಮುಖ್ಯವಾಗಿ ಸಚಿವ ಸಂಪುಟದಲ್ಲಿ. ಆದ್ದರಿಂದ ಅಗತ್ಯ ಬಿದ್ದಾಗಲೆಲ್ಲ ಸಚಿವಸಂಪುಟ ಸಭೆಸೇರಿ ಕಾರ್ಯನಿರ್ವಹಿಸುತ್ತದೆ. ಪ್ರತಿ ಸಚಿವರು ಬೇರೆ ಬೇರೆಯಾದ ಖಾತೆಗಳ ಜವಾಬ್ದಾರಿಯನ್ನು ಹೊಂದಿದ್ದರೂ ಸರ್ಕಾರದ ಎಲ್ಲ ಕೆಲಸಗಳಿಗೂ ಅವರ ವೈಯಕ್ತಿಕ ಮತ್ತು ಜಂಟಿ ಜವಾಬ್ದಾರಿ ಇರುತ್ತದೆ. ತನ್ನ ಕೆಲಸದಲ್ಲಿ ಸಹಾಯಕವಾಗಲು ಸಚಿವ ಸಂಪುಟ ಸಚಿವರ ಸಮಿತಿಗಳನ್ನು ಹೊಂದಿರುತ್ತದೆ. ಅತ್ಯಂತ ಹಿರಿಯ ಆಡಳಿತಗಾರರಾದ ಸರ್ಕಾರದ ಮುಖ್ಯ ಕಾರ್ಯದರ್ಶಿಯವರು ರಾಜ್ಯದ ಸಂಪುಟದ ಕಾರ್ಯದರ್ಶಿಯಾಗಿಯೂ ಮತ್ತು ಮುಖ್ಯ ಸಲಹೆಗಾರರಾಗಿಯೂ ಸಂಪುಟಕ್ಕೆ ಮತ್ತು ಅದರ ಸಮಿತಿಗಳಿಗೆ ಸಹಾಯ ಮಾಡುತ್ತಾರೆ. ಮುಖ್ಯ ಮಂತ್ರಿ ಸಚಿವಸಂಪುಟದ ಅಧ್ಯಕ್ಷರಾಗಿ ಮಂತ್ರಿಮಂಡಲದ ಮುಖ್ಯಸ್ಥರಾಗಿ ಶಾಸನಸಭೆಯ ನಾಯಕರಾಗಿ ಮತ್ತು ಇಡೀ ಸರ್ಕಾರದ ಆಡಳಿತ ವ್ಯವಸ್ಥೆಯ ಮುಖ್ಯಸ್ತಂಭವಾಗಿ ಮತ್ತು ರಾಜಕೀಯ ನೇತಾರರಾಗಿ ಇರುತ್ತಾರೆ.

ಆಡಳಿತ ಶೃಂಗದಲ್ಲಿ ಮತ್ತು ಕೇಂದ್ರದಲ್ಲಿ ಕರ್ನಾಟಕ ಸರ್ಕಾರದ ಕಾರ್ಯಾಲಯವಿದೆ. ಬೆಂಗಳೂರಿನಲ್ಲಿರುವ ವಿಧಾನಸೌಧದಲ್ಲಿ ಕೆಲಸ ಮಾಡುತ್ತಿರುವ ಈ ಕಾರ್ಯಾಲಯ ಸರ್ಕಾರದ ಸರ್ವಕಾರ್ಯಗಳ ಕೇಂದ್ರವಾಗಿದೆ. ಮಂತ್ರಿಮಂಡಲ ತೀರ್ಮಾನ ಕೈಗೊಳ್ಳಲು ಅಗತ್ಯವಾದ ಎಲ್ಲಾ ವಿಚಾರ ಸಾಮಗ್ರಿಗಳನ್ನು ಒದಗಿಸಿ ಸಲಹೆ ನೀಡಿ ಮಾರ್ಗದರ್ಶನ ಮಾಡುವುದು ಇದರ ಒಂದು ಕೆಲಸವಾದರೆ ಮಂತ್ರಿಮಂಡಲದ ತೀರ್ಮಾನವನ್ನು ನಿರ್ವಾಹಕ ಸಂಸ್ಥೆಗಳಿಗೆ ತಿಳಿಯಹೇಳಿ ಹೊಂದಾಣಿಕೆಯನ್ನುಂಟು ಮಾಡಿ ಮಾರ್ಗದರ್ಶನ ನೀಡಿ, ನಿರ್ವಹಣೆಯನ್ನು ಹತೋಟಿಯಲ್ಲಿಡುವುದು ಇನ್ನೊಂದು ಕೆಲಸ. ಹೀಗೆ ಈ ಕಾರ್ಯಾಲಯ ಮಂತ್ರಿಮಂಡಲ ಮತ್ತು ನಿರ್ವಾಹಕ ಸಿಬ್ಬಂದಿಗಳ ನಡುವೆ ಸೇತುವೆಯಾಗಿ ಮಾರ್ಗದರ್ಶಿಯಾಗಿ ಮತ್ತು ಮುಖ್ಯ ಕಡತಗಳ ಉಗ್ರಾಣವಾಗಿ ಇರುತ್ತದೆ. ಕಾರ್ಯಾಲಯದಲ್ಲಿ ಸಚಿವಖಾತೆಗಳು ಮತ್ತು ಇಲಾಖೆಗಳು ಎಂಬ ಎರಡು ಮುಖ್ಯ ವಿಭಾಗಗಳನ್ನು ಕಾಣಬಹುದು. ಪ್ರತಿಯೊಂದು ಸಚಿವ ಖಾತೆಗೂ ಒಂದಕ್ಕಿಂತ ಹೆಚ್ಚಾಗಿ ಕಾರ್ಯಾಲಯ ಇಲಾಖೆಗಳಿರುತ್ತವೆ. ಹಾಗಾಯೇ ಪ್ರತಿಯೊಂದು ಕಾರ್ಯಾಲಯ ಇಲಾಖೆಯಲ್ಲೂ ಅನೇಕ ಕಾರ್ಯನಿರ್ವಾಹಕ ಇಲಾಖೆಗಳೂ ಮತ್ತು ಇತರ ಸಂಸ್ಥೆಗಳೂ ಸೇರಿರುತ್ತವೆ.

ಪ್ರತಿಯೊಂದು ಸಚಿವಖಾತೆಯಲ್ಲೂ ಒಬ್ಬ ಕಾರ್ಯದರ್ಶಿ (ಅವಶ್ಯವಿದ್ದಲ್ಲಿ ವಿಶೇಷ ಕಾರ್ಯದರ್ಶಿಗಳು ಮತ್ತು ಹೆಚ್ಚಿನ ಕಾರ್ಯದರ್ಶಿಗಳು), ಸಹಾಯಕ ಕಾರ್ಯದರ್ಶಿಗಳು, ಉಪಕಾರ್ಯದರ್ಶಿಗಳು ಮತ್ತು ಶಾಖಾಧಿಕಾರಿಗಳು ಇರುತ್ತಾರೆ. ಇವರಲ್ಲಿ ಕಾರ್ಯದರ್ಶಿ ಖಾತೆಯ ಮುಖ್ಯಾಧಿಕಾರಿ, ಕಾರ್ಯದರ್ಶಿ ಸಚಿವರ ಕಾರ್ಯದರ್ಶಿಯಾಗಿರದೆ ಇಡೀ ಸರ್ಕಾರಕ್ಕೆ ತಮ್ಮ ಖಾತೆಗಳ ವಿಷಯದಲ್ಲಿ ಕಾರ್ಯದರ್ಶಿಯಾಗಿದ್ದು ಸಚಿವರು ಮತ್ತು ಸರ್ಕಾರಗಳೆರಡಕ್ಕೂ ಸಲಹೆ ಮತ್ತು ಸಹಾಯ ನೀಡುತ್ತಾರೆ. ಆದ್ದರಿಂದ ಒಬ್ಬ ಮಂತ್ರಿಯೇ ಅನೇಕ ಖಾತೆಗಳನ್ನು ಹೊಂದಿರುವಂತೆ ಅನೇಕ ಕಾರ್ಯದರ್ಶಿಗಳು ಒಂದಕ್ಕಿಂತ ಹೆಚ್ಚಿನ ಸಚಿವಖಾತೆಗಳಲ್ಲಿ ಒಂದೇ ಸಮಯದಲ್ಲಿ ಕಾರ್ಯದರ್ಶಿಗಳಾಗಿರುವುದು ಉಂಟು. ಕಾರ್ಯದರ್ಶಿಗಳು ವೈಯಕ್ತಿಕವಾಗಿಯೂ ಅಲ್ಲದೆ ವಿಧಾನ ಸೌಧದಲ್ಲಿರುವ ಕಾರ್ಯದರ್ಶಿಗಳ ಸಮಿತಿಯ ಮೂಲಕವೂ ಸರ್ಕಾರಕ್ಕೆ ಸಲಹೆ ಮತ್ತು ಸಹಾಯಗಳನ್ನು ನೀಡುವರು.

ಇಡೀ ಕಾರ್ಯಾಲಯದ ಮತ್ತು ಕಾರ್ಯದರ್ಶಿಗಳ ಮುಖ್ಯಸ್ಥರಾಗಿ ಸಚಿವ ಸಂಪುಟದ ಕಾರ್ಯದರ್ಶಿಯಾಗಿ ಹಾಗೂ ಸರ್ಕಾರದ ಮುಖ್ಯ ಸಲಹೆಗಾರರಾಗಿ ಮುಖ್ಯ ಕಾರ್ಯದರ್ಶಿಯವರು ಕಾರ್ಯನಿರ್ವಹಿಸುತ್ತಾರೆ. ಕಾರ್ಯದರ್ಶಿ ಮತ್ತು ಮುಖ್ಯ ಕಾರ್ಯದರ್ಶಿಗಳ ಸ್ಥಾನಗಳೆಲ್ಲ ಸಾಮಾನ್ಯವಾಗಿ ಐ.ಎ.ಎಸ್. ಅಧಿಕಾರಿಗಳಿಗೆ ಮೀಸಲು. ಅದರಲ್ಲೂ ಮುಖ್ಯ ಕಾರ್ಯದರ್ಶಿಯ ಸ್ಥಾನ ರಾಜ್ಯದ ಹುದ್ದೆಗಳಲ್ಲಿ ದೀರ್ಘಕಾಲ ಸೇವೆ ಸಲ್ಲಿಸಿರುವ ಅತ್ಯಂತ ದಕ್ಷ ಐ.ಎ.ಎಸ್. ಅಧಿಕಾರಿಗಳಿಗೆ

ಸಾಮಾನ್ಯವಾಗಿ ಸೇವೆಯ ಅಂತ್ಯದಲ್ಲಿ ದೊರೆಯುವುದು. ಮುಖ್ಯ ಕಾರ್ಯದರ್ಶಿಯವರು ಸಾಮಾನ್ಯವಾಗಿ ಆಡಳಿತ ಇಲಾಖೆಯ ಕಾರ್ಯದರ್ಶಿಯಾಗಿ ರಾಜ್ಯದ ಡೆಪ್ಯುಟಿ ಕಾರ್ಯದರ್ಶಿಗಳಿಗೆ ಮೇಲ್ಪಟ್ಟ ಎಲ್ಲಾ ಅಧಿಕಾರಿಗಳ ನೇಮಕ, ವರ್ಗಾವಣೆ, ದಕ್ಷತೆ ಮಾಪನ, ಬಡ್ತಿ, ವ್ಯವಸ್ಥೆ ಮತ್ತು ನಿರ್ವಹಣೆ ಮುಂತಾದ ಎಲ್ಲಾ ಸಿಬ್ಬಂದಿ ನಿರ್ವಹಣಾ ವಿಚಾರದಲ್ಲಿ ವಿಶೇಷ ಅಧಿಕಾರ ಹೊಂದಿರುತ್ತಾರೆ.

ಆಡಳಿತದಲ್ಲಿ ಸಲಹೆ ಮತ್ತು ಸಹಾಯ ನೀಡಲು ಕಾರ್ಯಾಲಯವಲ್ಲದೆ ಕೆಲವು ಉನ್ನತ ಮತ್ತು ತಜ್ಞ ಸಂಸ್ಥೆಗಳು ಇವೆ. ಇವುಗಳಲ್ಲಿ ಪ್ರಮುಖವಾದುವೆಂದರೆ ರಾಜ್ಯದ ಲೋಕಸೇವಾ ಆಯೋಗ. ರಾಜ್ಯಕ್ಕೆ ಬೇಕಾದ ಸಿಬ್ಬಂದಿಗಳ ನೇಮಕ ಮಾಡುವುದರಲ್ಲಿ ಮತ್ತು ಸಿಬ್ಬಂದಿಗಳ ನಿರ್ವಹಣೆಯಲ್ಲಿ ಸರ್ಕಾರಕ್ಕೆ ಇದು ಸಲಹೆ ನೀಡುತ್ತದೆ. ರಾಜ್ಯಾಂಗದ 315-165ನೆಯ ಅನುಚ್ಛೇದಗಳ ಪ್ರಕಾರ ಅಸ್ತಿತ್ವಕ್ಕೆ ಬಂದಿರುವ ಈ ಆಯೋಗ ಕರ್ನಾಟಕದಲ್ಲಿ ಒಬ್ಬ ಅಧ್ಯಕ್ಷರನ್ನೂ ಐದು ಜನ ಸದಸ್ಯರನ್ನೂ ಹೊಂದಿರುತ್ತದೆ. ಸ್ವತಂತ್ರವಾಗಿ ಕೆಲಸ ಮಾಡಲು ಅಧಿಕಾರ ಹೊಂದಿರುವ ಈ ಸಂಸ್ಥೆ ವಾರ್ಷಿಕವಾಗಿ ಶಾಸನಸಭೆಗೆ ತನ್ನ ವರದಿಯನ್ನು ರಾಜ್ಯಪಾಲರ ಮೂಲಕ ಒಪ್ಪಿಸುತ್ತದೆ.

ಕಾನೂನು ವಿಚಾರದಲ್ಲಿ ಸರ್ಕಾರಕ್ಕೆ ಸಲಹೆ ನೀಡಲು ಮತ್ತು ರಾಜ್ಯಪಾಲರ ಇಚ್ಛೆಯಂತೆ ಇತರ ಕಾನೂನಿಗೆ ಸಂಬಂಧಪಟ್ಟ ಸಹಾಯವನ್ನು ಸರ್ಕಾರಕ್ಕೆ ನೀಡಲು ರಾಜ್ಯದ ಅಡ್ವೋಕೇಟ್ ಜನರಲ್‌ರವರನ್ನೂ ರಾಜ್ಯಪಾಲರು ಸಂವಿಧಾನದ 165ನೆಯ ಅನುಚ್ಛೇದದ ಪ್ರಕಾರ ನೇಮಿಸಿದ್ದಾರೆ. ಇವರು ಉಚ್ಚತಮ ನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯಗಳಲ್ಲಿ ರಾಜ್ಯದ ಪರ ವಕಾಲತ್ತು ವಹಿಸುತ್ತಾರೆ.

ರಾಜ್ಯದ ಅಭಿವೃದ್ಧಿಯನ್ನು ಯೋಜಿಸಲು ತಜ್ಞ ಯೋಜನಾ ಸಂಸ್ಥೆಯೊಂದನ್ನು ರಚಿಸಲಾಗಿದೆ. ಅಲ್ಲದೆ ಅಭಿವೃದ್ಧಿ ಕಾರ್ಯಗಳಿಗೆ ಉನ್ನತಮಟ್ಟದ ರಾಜಕೀಯ ಮತ್ತು ಆಡಳಿತ ಮಾರ್ಗದರ್ಶನ ನೀಡಲು ಕರ್ನಾಟಕ ರಾಜ್ಯ ಅಭಿವೃದ್ಧಿ ಪರಿಷತ್ ಎಂಬ ಸಂಸ್ಥೆಯನ್ನೂ ರಚಿಸಲಾಗಿದೆ. ಇದಕ್ಕೆ ರಾಜ್ಯದ ಮುಖ್ಯಮಂತ್ರಿಗಳು ಅಧ್ಯಕ್ಷರಾಗಿದ್ದು ಅಭಿವೃದ್ಧಿಗೆ ಸಂಬಂಧಪಟ್ಟ ಖಾತೆಗಳ ಸಚಿವರು ಸದಸ್ಯರಾಗಿ ಮತ್ತು ರಾಜ್ಯದ ಅಭಿವೃದ್ಧಿ ಕಮಿಶನರ್ ಕಾರ್ಯದರ್ಶಿಯಾಗಿದ್ದಾರೆ.

ರಾಜ್ಯದ ಆಡಳಿತದ ಲೆಕ್ಕಾಚಾರಗಳನ್ನು ಹತೋಟಿಯಲ್ಲಿಡಲು ಮತ್ತು ಪರಿಶೀಲಿಸಲು ರಾಷ್ಟ್ರಾಧ್ಯಕ್ಷರಿಂದ ಇಡೀ ರಾಷ್ಟ್ರದ ಲೆಕ್ಕಾಚಾರ ಹತೋಟಿ ಮತ್ತು ಪರಿಷ್ಕರಣ ಮಾಡಲು ನೇಮಕಗೊಂಡಿರುವ ಭಾರತದ ನಿಯಂತ್ರಕ ಮಹಾಲೇಖಾಪರೀಕ್ಷಕರು ರಾಜ್ಯದಲ್ಲಿ ತಮ್ಮ ಸಹಾಯಾಧಿಕಾರಿಯಾದ ಅಕೌಂಟೆಂಟ್ ಜನರಲ್ ಅವರ ಸಹಾಯದಿಂದ ಕೆಲಸ ಮಾಡುತ್ತಾರೆ.

ರಾಜ್ಯದಲ್ಲಿ ಭ್ರಷ್ಟಾಚಾರವನ್ನು ತಡೆಗಟ್ಟಲು ಕೇಂದ್ರ ಸರ್ಕಾರದ ಶಾಸನದ ಮೇರೆಗೆ ಲೋಕಾಯುಕ್ತವನ್ನು ರಚಿಸಲಾಗಿದೆ. ಉಚ್ಚನ್ಯಾಯಾಲಯದ ನ್ಯಾಯಾಧೀಶರೊಬ್ಬರನ್ನು ಲೋಕಾಯುಕ್ತರನ್ನಾಗಿ ನೇಮಕ ಮಾಡುತ್ತಾರೆ. ಈ ಆಯೋಗ ಪ್ರತಿವರ್ಷ ಸಾವಿರಾರು ದೂರುಗಳನ್ನು ಪರಿಶೀಲಿಸುತ್ತದೆ.

**ಕಾರ್ಯನಿರ್ವಾಹಕ ಸಂಸ್ಥೆಗಳು**: ಈ ಮೇಲ್ಕಂಡ ಸಲಹೆ ಮತ್ತು ಸಹಾಯ ಸಂಸ್ಥೆಗಳ ಸಹಾಯದಿಂದ ಮಂತ್ರಿಮಂಡಲ ಮತ್ತು ಸರ್ಕಾರದ ಕಾರ್ಯಾಲಯಗಳು ಕೈಗೊಂಡ ತೀರ್ಮಾನಗಳನ್ನು, ನೀತಿಗಳನ್ನು ಮತ್ತು ಯೋಜನೆಗಳನ್ನು ಕಾರ್ಯಗತಗೊಳಿಸಲು ಅನೇಕ ವಿಧವಾದ ಕಾರ್ಯನಿರ್ವಾಹಕ ಸಂಸ್ಥೆಗಳು ಇವೆ. ಈ ಸಂಸ್ಥೆಗಳಲ್ಲಿ ಇಲಾಖೆಗಳು, ಮಂಡಲಿಗಳು ಮತ್ತು ಕಾನೂನಾಧಾರಿತ ನಿಗಮಗಳು ಮತ್ತು ಕಂಪನಿಗಳು ಸೇರಿವೆ.

ಸರ್ಕಾರಿ ಇಲಾಖೆಗಳು ಯಾರಾದರೊಬ್ಬ ಮಂತ್ರಿಯ ಹತೋಟಿಯಲ್ಲಿರುತ್ತವೆ. ಆದರೆ ಇಲಾಖೆಯ ಮುಖ್ಯಾಧಿಕಾರಿಯಾಗಿ ಆಡಳಿತಗಾರರು ಇರುತ್ತಾರೆ. ಕೆಲವು ಇಲಾಖೆಗಳಲ್ಲಿ ಆ ಇಲಾಖೆಗಳ ಸಂಬಂಧಪಟ್ಟ ಸಚಿವಾಲಯದ ಕಾರ್ಯದರ್ಶಿಗಳೇ ಇಲಾಖೆಯ ಮುಖ್ಯಸ್ಥರೂ ಆಗಿ ಕಾರ್ಯನಿರ್ವಹಿಸುತ್ತಾರೆ. ಆದರೆ ಕಾರ್ಯದರ್ಶಿಗಿಂತ ಬೇರೆ ಅಧಿಕಾರಿಗಳೆ ಮುಖ್ಯಸ್ಥರಾಗಿರುವುದು ವಾಡಿಕೆ. ಮೊದಲನೆಯದಕ್ಕೆ ಉದಾಹರಣೆಯಾಗಿ ವಿದ್ಯಾಖಾತೆಯ ವ್ಯವಸ್ಥೆಯನ್ನು ಮತ್ತು ಕಂದಾಯ ಇಲಾಖೆಯನ್ನು ಸೂಚಿಸಬಹುದು. ವಿದ್ಯಾಖಾತೆಯಲ್ಲಿ ವಿದ್ಯಾಕಾರ್ಯದರ್ಶಿಗಳೇ ವಿದ್ಯಾಕಮಿಷನರ್ ಆಗಿ ವಿದ್ಯಾಇಲಾಖೆಗಳ ಆಡಳಿತದ ಮುಖ್ಯಾಧಿಕಾರಿಗಳಾಗಿಯೂ ಕೆಲಸ ಮಾಡುತ್ತಾರೆ. ಹಾಗೆಯೇ ಕಂದಾಯ ಕಾರ್ಯದರ್ಶಿಗಳೂ ಕಂದಾಯ ಕಮಿಷನರ್ ಆಗಿಯೂ ಕಾರ್ಯ ನಿರ್ವಹಿಸುತ್ತಾರೆ. ಎರಡನೆಯ ಪದ್ಧತಿಗೆ ಉದಾಹರಣೆಯಾಗಿ ಪೊಲೀಸ್ ಮತ್ತು ಸಹಕಾರ ಇಲಾಖೆಗಳನ್ನು ಸೂಚಿಸಬಹುದು. ಪೊಲೀಸ್ ಇಲಾಖೆಯ ಮುಖ್ಯಾಧಿಕಾರಿ ಇನ್ಸ್‌ಪೆಕ್ಟರ್ ಜನರಲ್ ಅವರಾದರೆ ಗೃಹಖಾತೆಯ ಕಾರ್ಯದರ್ಶಿ ಬೇರೆಯವರಾಗಿರುತ್ತಾರೆ. ಹಾಗೆಯೇ ಸಹಕಾರ ಖಾತೆಯ ಮುಖ್ಯಸ್ಥರು ಕಾರ್ಯದರ್ಶಿಯಾದರೆ ಸಹಕಾರ ಇಲಾಖೆಯ ಮುಖ್ಯಸ್ಥರಾಗಿ ಸಹಕಾರ ರಿಜಿಸ್ಟ್ರಾರ್‌ರವರು ಇರುತ್ತಾರೆ. ಕೆಲವು ಇಲಾಖೆಗಳ ಮುಖ್ಯಸ್ಥರನ್ನು ನಿರ್ದೇಶಕರೆಂದೂ ಕರೆಯುತ್ತಾರೆ. ಉದಾಹರಣೆಗೆ ವ್ಯವಸಾಯ ಇಲಾಖೆ ನಿರ್ದೇಶಕರು, ಕೈಗಾರಿಕೆ ಇಲಾಖೆ ನಿರ್ದೇಶಕರು.

ಇಲಾಖೆಗಳು ಕೇಂದ್ರ ಕಚೇರಿಗಳಲ್ಲದೆ ಅನೇಕ ಕ್ಷೇತ್ರ ಕಚೇರಿಗಳನ್ನು ರಾಜ್ಯದ ವಿವಿಧ ಮಟ್ಟದಲ್ಲಿ ಹೊಂದಿದ್ದು ತಮ್ಮದೇ ಆದ ಕೇಂದ್ರ ಮತ್ತು ಕ್ಷೇತ್ರ ವ್ಯವಸ್ಥೆಯನ್ನು ಹೊಂದಿರುತ್ತದೆ. ಈ ನಿಯಮಕ್ಕೆ ಕಾನೂನು ಇಲಾಖೆ, ಭಾಷಾಂತರ ಇಲಾಖೆ ಮುಂತಾದ ಕೆಲವೇ ಇಲಾಖೆಗಳು ಹೊರತಾಗಿವೆ. ಇತರ ಇಲಾಖೆಗಳು ವಿಸ್ತಾರವಾದ ವ್ಯವಸ್ಥೆಯನ್ನು ಹೊಂದಿವೆ. ಉದಾಹರಣೆಗೆ ಪ್ರಮುಖವಾದ ಕಂದಾಯ ಇಲಾಖೆಯ ವ್ಯವಸ್ಥೆಯನ್ನು ಗಮನಿಸಬಹುದು. ಇಲಾಖೆಯ ಆಡಳಿತದ ಉದ್ದೇಶಕ್ಕಾಗಿ ರಾಜ್ಯವನ್ನು 4 ವಿಭಾಗಗಳನ್ನಾಗಿಯೂ 27 ಜಿಲ್ಲೆಗಳಾಗಿಯೂ ಜಿಲ್ಲೆಗಳನ್ನು 4 ಉಪವಿಭಾಗಗಳಾಗಿಯೂ ಮತ್ತು 175 ತಾಲ್ಲೂಕುಗಳಾಗಿಯೂ, 7 ಹೋಬಳಿಗಳಾಗಿಯೂ ಪ್ರತಿ ಹೋಬಳಿಯಲ್ಲಿರುವ ಹಳ್ಳಿಗಳನ್ನೂ ಅನೇಕ ಕಂದಾಯ ಗ್ರಾಮಗಳನ್ನಾಗಿಯೂ ವಿಂಗಡಿಸಲಾಗಿದೆ. ರಾಜ್ಯದಲ್ಲಿ ಒಟ್ಟು 27,066 ವಾಸಿತ ಹಳ್ಳಿಗಳಿವೆ. ವಿಭಾಗದ ಮಟ್ಟದಲ್ಲಿ ವಿಭಾಗಾಧಿಕಾರಿಗಳು, ಜಿಲ್ಲಾಮಟ್ಟದಲ್ಲಿ ಜಿಲ್ಲಾಧಿಕಾರಿಗಳು, ಉಪ ವಿಭಾಗ ಮಟ್ಟದಲ್ಲಿ ಅಸಿಸ್ಟೆಂಟ್ ಕಮಿಷನರ್, ತಾಲ್ಲೂಕು ಮಟ್ಟದಲ್ಲಿ ತಹಸೀಲ್ದಾರ್, ಹೋಬಳಿಗಳ ಮಟ್ಟದಲ್ಲಿ ಶೇಖ್‌ದಾರ್ ಅಥವಾ ರೆವಿನ್ಯೂ ಇನ್ಸ್‌ಪೆಕ್ಟರ್, ಗ್ರಾಮಗಳ ಮಟ್ಟದಲ್ಲಿ ಗ್ರಾಮಲೆಕ್ಕಿಗರು ಮುಂತಾದ ಗ್ರಾಮಾಧಿಕಾರಿಗಳು ಕಾರ್ಯ ನಿರ್ವಹಿಸುತ್ತಾರೆ. ಈ ವ್ಯವಸ್ಥೆಯಲ್ಲಿ ಜಿಲ್ಲಾಮಟ್ಟದ ಆಡಳಿತವೇ ಪ್ರಮುಖವಾದುದು. ಇಡೀ ದೇಶದ ಎಲ್ಲಾ ರಾಜ್ಯಗಳಲ್ಲಿಯೂ ಜಿಲ್ಲೆ ಆಡಳಿತದ ಒಂದು ಪ್ರಮುಖ ಘಟಕವಾಗಿರುವಂತೆ ಇಲ್ಲೂ ಇದೆ. ಜಿಲ್ಲಾಧಿಕಾರಿಗಳು ಕಂದಾಯ ವಸೂಲಿ ಮತ್ತು ಭೂಮಿ ಆಡಳಿತಗಳನ್ನು, ಜಿಲ್ಲಾ ಮ್ಯಾಜಿಸ್ಟ್ರೇಟರಾಗಿ ಕಾನೂನು ಶಿಸ್ತುಪಾಲನೆಗಳನ್ನು, ಅಲ್ಲದೆ ಈಚೆಗೆ ಜಿಲ್ಲಾಭಿವೃದ್ಧಿ, ಜಿಲ್ಲೆಯ ಯೋಜನೆ ಮತ್ತು ಅನೇಕ ಕಾರ್ಯಗಳನ್ನೂ ನಿರ್ವಹಿಸುತ್ತಾರೆ. ಅವರಿಗೆ ಸಹಾಯ ಮಾಡಲು ಅಸಿಸ್ಟೆಂಟ್ ಕಮಿಷನರುಗಳು, ಜಿಲ್ಲಾ ಅಭಿವೃದ್ಧಿ ಸಹಾಯಕ, ಯುವ ಕಲ್ಯಾಣ ಅಧಿಕಾರಿ, ಜಿಲ್ಲಾ ಆಹಾರ ಸಹಾಯಾಧಿಕಾರಿ ಮುಂತಾದವರು ಇದ್ದಾರೆ. ಕಾನೂನು ಶಿಸ್ತುಪಾಲನೆಯಲ್ಲಿ ಜಿಲ್ಲಾ ಪೊಲೀಸ್ ನಿರ್ವಹಣಾಧಿಕಾರಿಗಳು ಜಿಲ್ಲಾಧಿಕಾರಿಗಳಿಗೆ ಸಹಾಯಕರಾಗಿ ಕೆಲಸ ಮಾಡುತ್ತಾರೆ. ಜಿಲ್ಲಾ ಆಡಳಿತದ ಸಮನ್ವಯವೂ ಇವರ ಮುಖ್ಯ ಜವಾಬ್ದಾರಿ. ಇತ್ತೀಚಿನ ದಿನಗಳಲ್ಲಿ ಇವರ ಕಾರ್ಯಭಾರ ಹೆಚ್ಚಾಗಿ ಕೆಲವು ಜಿಲ್ಲೆಗಳಲ್ಲಿ ವಿಶೇಷ ಜಿಲ್ಲಾಧಿಕಾರಿಗಳನ್ನು ನೇಮಿಸಲಾಗುತ್ತಿದೆ. 1985ರಿಂದ ಜಿಲ್ಲಾಪರಿಷತ್ ಮತ್ತು ಮಂಡಳ ಪಂಚಾಯಿತಿ ಅಧಿನಿಯಮ ಜಾರಿಗೆ ಬಂದ ಮೇಲೆ ಆಯಾ ಜಿಲ್ಲೆಯ ಅಭಿವೃದ್ಧಿ ಕಾರ್ಯದಲ್ಲಿ ಜನಪ್ರತಿನಿಧಿಗಳುಳ್ಳ ಜಿಲ್ಲಾಪರಿಷತ್ ಕಾರ್ಯ ಚಟುವಟಿಕೆಗಳು ಮಹತ್ವ ಪಡೆದವು. ಇದರ ಆಡಳಿತಾತ್ಮಕ ಮುಖ್ಯರಾಗಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿರುತ್ತಾರೆ. ಚುನಾಯಿತ ಪ್ರತಿನಿಧಿಗಳಲ್ಲೊಬ್ಬರು ಅಧ್ಯಕ್ಷರಾಗಿರುತ್ತಾರೆ. ಈಗ ಜಿಲ್ಲಾ ಪರಿಷತ್ತನ್ನು ಜಿಲ್ಲಾ ಪಂಚಾಯಿತಿ ಎಂದು ಕರೆಯಲಾಗುತ್ತಿದೆ. ತಾಲ್ಲೂಕು ಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿಗಳು ಇದರ ಅಧೀನದಲ್ಲಿ ಕೆಲಸ ಮಾಡುತ್ತಿವೆ.

ಹಾಗೆಯೆ ಇತರ ಇಲಾಖೆಗಳೂ ತಮ್ಮದೇ ಆದ ಕ್ಷೇತ್ರಕಚೇರಿಗಳನ್ನು ಆಡಳಿತ ಘಟಕಗಳನ್ನು ಹೊಂದಿವೆ. ಕ್ಷೇತ್ರಕಚೇರಿಗಳನ್ನೊಳಗೊಂಡ ಎಲ್ಲ ಇಲಾಖೆಗಳು ಜಿಲ್ಲಾ ಮಟ್ಟದಲ್ಲಿ ತಮ್ಮ ಆಡಳಿತ ಘಟಕಗಳನ್ನು ಹೊಂದಿವೆ. ಇತರ ಮಟ್ಟಗಳಲ್ಲಿ ಇವುಗಳ ಆಡಳಿತ ಘಟಕಗಳು ಕಂದಾಯ ಆಡಳಿತ ಘಟಕಗಳಿಗೆ ಹೊಂದಿಕೊಂಡು ಅಥವಾ ಬೇರೆ ಬೇರೆಯಾಗಿ ಇರುತ್ತವೆ.

ನಾನಾಮಟ್ಟದಲ್ಲಿ ಪ್ರತ್ಯೇಕ ಕಚೇರಿಗಳನ್ನು ಹೊಂದಿರುವ ಕರ್ನಾಟಕ ಸರ್ಕಾರದ ಕೆಲವು ಇಲಾಖೆಗಳು ಇಂತಿವೆ: ವ್ಯವಸಾಯ, ಪ್ರಾಣಿ ಮತ್ತು ಪಶುವೈದ್ಯ, ಅರ್ಥ ಮತ್ತು ಅಂಕಿ ಅಂಶ, ವಾಣಿಜ್ಯ ತೆರಿಗೆ,

ಸಹಕಾರ, ಪಶುಸಂಗೋಪನೆ, ಔಷಧ ನಿಯಂತ್ರಣ, ವಿದ್ಯಾಭ್ಯಾಸ, ಕನ್ನಡ ಮತ್ತು ಸಂಸ್ಕೃತಿ, ಗ್ರಂಥಾಲಯ, ಕಾಲೇಜು ಶಿಕ್ಷಣ, ತಾಂತ್ರಿಕ ಶಿಕ್ಷಣ, ಉದ್ಯೋಗ ಮತ್ತು ತರಬೇತಿ, ಅಬ್ಕಾರಿ, ಅಗ್ನಿಶಾಮಕ, ಮತ್ಸ್ಯೋದ್ಯಮ, ಆಹಾರ ಮತ್ತು ನಾಗರಿಕ ಸರಬರಾಜು, ಅರಣ್ಯ, ಆರೋಗ್ಯ ಮತ್ತು ಕುಟುಂಬಯೋಜನೆ, ಗೃಹರಕ್ಷಕದಳ ಮತ್ತು ನಾಗರಿಕ ರಕ್ಷಣೆ, ತೋಟಗಾರಿಕೆ, ಕೈಗಾರಿಕೆ ಮತ್ತು ವಾಣಿಜ್ಯ, ವಾರ್ತಾ ಮತ್ತು ಪ್ರವಾಸೋದ್ಯಮ, ಜೀವವಿಮೆ, ನ್ಯಾಯಾಂಗ, ಕಾರ್ಮಿಕ, ಮಾರುಕಟ್ಟೆ, ಗಣಿ ಮತ್ತು ಭೂ ವಿಜ್ಞಾನ, ಸಾರಿಗೆ, ಪೊಲೀಸ್, ಜೈಲು, ಲೋಕೋಪಯೋಗಿ, ಧಾರ್ಮಿಕದತ್ತಿದಾನ, ಕಂದಾಯ, ಸಮಾಜಕಲ್ಯಾಣ, ರೇಷ್ಮೆ, ಸ್ಟ್ಯಾಂಪ್, ನೋಂದಾಣಿಕೆ, ನಗರಯೋಜನೆ, ಭಂಡಾರ, ಅಳತೆ ಮತ್ತು ತೂಕ, ಪ್ರಾಚ್ಯವಸ್ತು ಮತ್ತು ವಸ್ತುಸಂಗ್ರಹಾಲಯ, ದಾಸ್ತಾನು- ಇವುಗಳ ಜೊತೆಗೆ ಏಕ ಕಚೇರಿಗಳಿರುವ ಜನಗಣತಿ, ಚುನಾವಣೆ, ಭಾಷಾಂತರ ಮತ್ತು ಮಾಹಿತಿ ತಂತ್ರಜ್ಞಾನ ಇತ್ಯಾದಿ ಇಲಾಖೆಗಳೂ ಇವೆ.

ರಾಜ್ಯ ಆಡಳಿತ ಕೇಂದ್ರದಲ್ಲಿ ಅಂದರೆ, ಸಚಿವಾಲಯದಲ್ಲಿ (ಸೆಕ್ರೆಟೇರಿಯಟ್) ಆಡಳಿತದ ಅನುಕೂಲಕ್ಕಾಗಿ ಈ ವಿಭಾಗಗಳನ್ನು ಮಾಡಿಕೊಳ್ಳಲಾಗಿದೆ. ಸಾಮಾನ್ಯ ಆಡಳಿತ ವಿಭಾಗ, ವ್ಯವಸಾಯ ಮತ್ತು ಅರಣ್ಯ, ವಾಣಿಜ್ಯ ಮತ್ತು ಕೈಗಾರಿಕೆಗಳು, ಪಂಚಾಯಿತಿ ರಾಜ್ಯ ಮತ್ತು ಸಹಕಾರಾಭಿವೃದ್ಧಿ, ವಿದ್ಯಾಭ್ಯಾಸ ಮತ್ತು ಯುವಜನ ಸೇವಾ ವಿಭಾಗ, ಹಣಕಾಸು, ಆಹಾರ ಮತ್ತು ನಾಗರಿಕ ಸರಬರಾಜು, ಗೃಹ, ಆರೋಗ್ಯ ಮತ್ತು ನಗರಾಡಳಿತ ವಿಭಾಗ, ಕಾನೂನು ಮತ್ತು ಶಾಸನಸಭಾ ಕಾರ್ಯಾಡಳಿತ ವಿಭಾಗ, ಯೋಜನೆ, ಲೋಕೋಪಯೋಗಿ ಮತ್ತು ವಿದ್ಯುಚ್ಛಕ್ತಿ, ಕಂದಾಯ ಮತ್ತು ಸಮಾಜ ಕಲ್ಯಾಣ ವಿಭಾಗ ಇತ್ಯಾದಿ.

ಮೇಲ್ಕಂಡ ರಾಜ್ಯ ಇಲಾಖೆ ಮತ್ತು ಆಡಳಿತ ವಿಭಾಗಗಳ ಜೊತೆಗೆ ಈ ಕೆಳಕಂಡ ಕೇಂದ್ರ ಸರ್ಕಾರದ ನೇರ ಆಡಳಿತಕ್ಕೆ ಒಳಪಟ್ಟ ಇಲಾಖೆಗಳೂ ರಾಜ್ಯದಲ್ಲಿ ಕಾರ್ಯನಿರತವಾಗಿವೆ. ಜನಗಣತಿ ಇಲಾಖೆ, ಪುರಾತತ್ತ್ವ ಇಲಾಖೆ, ತನಿಖಾ ಇಲಾಖೆ, ಅಬ್ಕಾರಿ ಇಲಾಖೆ, ನಾಗರಿಕ ವಿಮಾನ ಸಾರಿಗೆ ಇಲಾಖೆ, ವರಮಾನ ತೆರಿಗೆ ಇಲಾಖೆ, ವಾರ್ತಾ ಮತ್ತು ಪ್ರಸಾರ ಇಲಾಖೆ, ರೈಲ್ವೆ, ಅಂಚೆ ಮತ್ತು ತಂತಿ ಇಲಾಖೆ. ಇವುಗಳಲ್ಲದೆ ವಿಜ್ಞಾನ, ಕೈಗಾರಿಕೆ ಮತ್ತು ರಕ್ಷಣಾ ಇಲಾಖೆಯ ಕೆಲವು ಕಚೇರಿಗಳು ಕರ್ನಾಟಕ ರಾಜ್ಯದಲ್ಲಿವೆ.

ವಿವಿಧ ಮಟ್ಟಗಳಲ್ಲಿ ಆಡಳಿತ ನಿರ್ವಹಿಸಲು ಸರ್ಕಾರ ನಿಯಮಿಸಿಕೊಂಡಿರುವ ಸಿಬ್ಬಂದಿ ವರ್ಗದಲ್ಲಿ 1967ರಲ್ಲಿ ನಡೆದ ಸರ್ಕಾರಿ ಗಣತಿ ಪ್ರಕಾರ, ಆ ವರ್ಷದ ಮಾರ್ಚ್ 31ರಂದು ಕರ್ನಾಟಕ ಸರ್ಕಾರದಲ್ಲಿ 59 ಇಲಾಖೆಗಳು 7690 ಕಚೇರಿಗಳಿದ್ದು ಗಣತಿಯ ವ್ಯಾಪ್ತಿಯೊಳಗೆ ಬಂದ 6715 ಕಚೇರಿಗಳಲ್ಲಿ, 2,11,839 ಹುದ್ದೆಗಳು ಇದ್ದವು. ಈಗ ಸರ್ಕಾರಿ ನೌಕರರ ಸಂಖ್ಯೆ 6,00,000 ದಾಟಿದೆ. ಈ ಸಿಬ್ಬಂದಿ ವರ್ಗವನ್ನು ಆಡಳಿತಾನುಕೂಲಕ್ಕಾಗಿ ಹುದ್ದೆ ಮತ್ತು ಸಂಬಳದ ಆಧಾರದ ಮೇಲೆ ಒಂದು, ಎರಡು, ಮೂರು ಮತ್ತು ನಾಲ್ಕನೆಯ ವರ್ಗಗಳಾಗಿ ವಿಂಗಡಿಸಲಾಗಿದೆ. ಒಂದನೆಯ ಮತ್ತು ಎರಡನೆಯ ವರ್ಗಗಳನ್ನು ಗೆಜೆಟೆಡ್ ಅಧಿಕಾರಿಗಳೆಂದೂ ವಿಂಗಡಿಸಲಾಗಿದೆ. ಗೆಜೆಟೆಡ್ ಅಧಿಕಾರಿಗಳನ್ನು ರಾಜ್ಯಮಟ್ಟದಲ್ಲಿ ರಾಷ್ಟ್ರದ ಐ.ಎ.ಎಸ್.ಗೆ ಸಮನಾದ ಕರ್ನಾಟಕ ಆಡಳಿತ ಸೇವೆ, ಐಪಿಎಸ್‌ಗೆ ಸಮಾನಾದ ಕರ್ನಾಟಕ ರಾಜ್ಯ ಪೊಲೀಸು ಸೇವೆ, ಕರ್ನಾಟಕ ರಾಜ್ಯ ವಾಣಿಜ್ಯತೆರಿಗೆ ಸೇವೆ, ಕರ್ನಾಟಕ ರಾಜ್ಯ ವಿವಿಧ ಸೇವೆ ಮತ್ತು ಕರ್ನಾಟಕ ರಾಜ್ಯ ಸ್ಥಳೀಯ ಸಂಸ್ಥೆಗಳ ಸೇವೆ ವರ್ಗಗಳಾಗಿ ವಿಂಗಡಿಸಿದೆ. ಕರ್ನಾಟಕ ರಾಜ್ಯದ ಆಡಳಿತದಲ್ಲಿ ಮೇಲೆ ಹೇಳಿದ ರಾಜ್ಯಸೇವೆಗಳೇ ಅಲ್ಲದೆ ಅಖಿಲಭಾರತ ಸೇವೆಗಳಾದ ಐ.ಎ.ಎಸ್ ಮತ್ತು ಐ.ಪಿ.ಎಸ್ ಗಳ ಅಧಿಕಾರಿಗಳೂ ಸೇವೆ ಸಲ್ಲಿಸುತ್ತಿದ್ದಾರೆ. ಕೇಂದ್ರದ ಆಡಳಿತದಲ್ಲಿರುವ ಈ ಎರಡು ಸೇವೆಗಳ ಅಧಿಕಾರಿಗಳನ್ನು ರಾಜ್ಯಕ್ಕೆ ಎರವು ನೀಡಲಾಗಿದೆ. ಈ ಸೇವೆಗಳ ಅಧಿಕಾರಿಗಳನ್ನು ರಾಜ್ಯದ ಆಡಳಿತದ ಉನ್ನತ ಸ್ಥಾನಗಳಲ್ಲಿ ನೇಮಿಸಲಾಗುವುದು. ಕರ್ನಾಟಕದಲ್ಲಿ ಅನೇಕ ಐ.ಎ.ಎಸ್ ಅಧಿಕಾರಿಗಳು ರಾಜ್ಯದ ಮುಖ್ಯ ಕಾರ್ಯದರ್ಶಿ ಸ್ಥಾನದಿಂದ, ಕಾರ್ಯದರ್ಶಿಗಳು, ವಿಭಾಗಾಧಿಕಾರಿಗಳು ಮತ್ತು ಜಿಲ್ಲಾಧಿಕಾರಿಗಳು ಮುಂತಾದ ಮತ್ತು ಅವಕ್ಕೆ ಸಮನಾದ ಎಲ್ಲಾ ಸ್ಥಾನಗಳಲ್ಲೂ ಕಂಡುಬರುತ್ತಾರೆ.

ಮೇಲ್ಕಂಡ ಇಲಾಖಾ ವ್ಯವಸ್ಥೆ ಅಲ್ಲದೆ ಕೆಲವು ಕಾರ್ಯನಿರ್ವಾಹಕ ಸಂಸ್ಥೆಗಳನ್ನು ಮಂಡಳಿಗಳೆಂದು ರಚಿಸಲಾಗಿದೆ. ಈ ವ್ಯವಸ್ಥೆಯಲ್ಲಿ ಮಂಡಳಿಯ ಶೃಂಗದಲ್ಲಿ ಒಬ್ಬ ಅಧಿಕಾರಿಯ ಬದಲು ಹಲವು ಸದಸ್ಯರು ಇರುವ ಆಡಳಿತ ಮಂಡಳಿ ಇರುತ್ತದೆ. ತಾಂತ್ರಿಕ ಇಲಾಖೆಗಳ ಅಥವಾ ಭಾಗಶಃ ನ್ಯಾಯತೀರ್ಮಾನ ಜವಾಬ್ದಾರಿಯುಳ್ಳ ಸಂಸ್ಥೆಗಳಲ್ಲಿ 'ಇಂಥ' ಮಂಡಳಿ ವ್ಯವಸ್ಥೆಯನ್ನು ಅನುಸರಿಸಲಾಗಿದೆ. ಉದಾಹರಣೆಗೆ ಗೃಹನಿರ್ಮಾಣ ಮಂಡಳಿ, ಕರಕುಶಲ ಕೈಗಾರಿಕಾ ಮಂಡಳಿ, ರಾಜ್ಯ ವಿದ್ಯುಚ್ಛಕ್ತಿ ಮಂಡಳಿ ಮುಂತಾದವು.

ಸಮಾಜವಾದದ ನೀತಿ ವಿಧಾನವನ್ನು ಆಧರಿಸಿ ರಾಜ್ಯದ ಆರ್ಥಿಕ ಮತ್ತು ವಾಣಿಜ್ಯ ರಂಗದಲ್ಲಿ ಗಮನಾರ್ಹವಾಗಿ ಪ್ರವೇಶಿಸಿರುವ ಸರ್ಕಾರದ ಉದ್ದೇಶವನ್ನು ಕಾರ್ಯಗತಗೊಳಿಸಲು ಸರ್ಕಾರಿ ಉದ್ಯಮ ರಂಗದಲ್ಲಿ ಇಲಾಖಾ ಆಡಳಿತ ವ್ಯವಸ್ಥೆ ಅಲ್ಲದೆ ಕಾನೂನು ಆಧಾರಿತ ನಿಗಮಗಳು ಮತ್ತು ಕಂಪನಿ ವ್ಯವಸ್ಥೆಗಳುಂಟು. ನಿಗಮಗಳಿಗೆ ಉದಾಹರಣೆಯಾಗಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯನ್ನು ಸೂಚಿಸಬಹುದು. ಶಾಸನಬದ್ಧವಾಗಿ ರಚಿಸಲ್ಪಟ್ಟಿರುವ ಇಂಥ ಸಂಸ್ಥೆಗಳು ಇಲಾಖಾ ವ್ಯವಸ್ಥೆಗಿಂತ ಹೆಚ್ಚಿನ ಆಡಳಿತ, ಹಣಕಾಸು ಮತ್ತು ಸಿಬ್ಬಂದಿ ನಿರ್ವಹಣೆಯ ಸ್ವಾತಂತ್ರ್ಯ ಹೊಂದಿದ್ದು ಕೈಗಾರಿಕಾ ವಾಣಿಜ್ಯ ಮತ್ತು ಸಾರಿಗೆ ಮುಂತಾದ ಸರ್ಕಾರಿ ಉದ್ಯಮಗಳಿಗೆ ಸೂಕ್ತವಾದ ವ್ಯವಸ್ಥೆಯಾಗಿದೆ. ಆದರೆ ಪ್ರತಿಸಾರಿಯೂ ವಿಧಾನಮಂಡಲದ ಕಾಲಾವಕಾಶಗಳ ಮೇಲೆ ಸಂಸ್ಥೆಗಳ ಸ್ಥಾಪನೆ ಅವಲಂಬಿಸಿರಬೇಕಾಗಿರುವುದನ್ನು ತಪ್ಪಿಸಲು ಮತ್ತು ಉದ್ಯಮಗಳನ್ನು ಸುಲಭ ಮತ್ತು ಶೀಘ್ರರೀತಿಯಿಂದ ಸ್ಥಾಪಿಸಲು ಕಂಪೆನಿ ವ್ಯವಸ್ಥೆಯನ್ನು ಅನುಸರಿಸಲಾಗಿದೆ. ಉದಾಹರಣೆಗೆ ಆಗ್ರೊ ಇಂಡಸ್ಟ್ರೀಸ್ ಕಾರ್ಪೊರೇಷನ್ ಲಿಮಿಟೆಡ್, ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್, ಮೈಸೂರು ಮಿನರಲ್ಸ್ ಲಿಮಿಟೆಡ್ ಮುಂತಾದವು.

ಮೇಲೆ ಹೇಳಿದ ವಿವಿಧ ಸಂಸ್ಥೆಗಳ ಮತ್ತು ಲಕ್ಷಾಂತರ ಸಿಬ್ಬಂದಿ ವರ್ಗದ ಕಾರ್ಯಾಚರಣೆಯನ್ನು ನಿರ್ದೇಶಿಸಿ ಹತೋಟಿಯಲ್ಲಿಡಲು ವಾರ್ಷಿಕ ಆಯ-ವ್ಯಯ ಅಂದಾಜುಪಟ್ಟಿ ಬಹಳ ಅನುಕೂಲಕಾರಿಯಾಗಿದೆ. ರಾಜ್ಯದ ಆರ್ಥಿಕ ಸಂಪತ್ತನ್ನು ಯೋಜಿಸಿ ಉಪಯೋಗಿಸುವ ಮೂಲ ಉದ್ದೇಶದಿಂದ ವಾರ್ಷಿಕ ಆಯ-ವ್ಯಯ ಪಟ್ಟಿಯನ್ನು ತಯಾರಿಸಿದರೂ ಅದು ಆಡಳಿತದ ಕಾರ್ಯ ಪಥವನ್ನು ನಿಯಂತ್ರಿಸಲೂ ಸಹಾಯಕವಾಗಿದೆ. ರಾಜ್ಯದಲ್ಲಿ ಆರ್ಥಿಕ ವರ್ಷ ಪ್ರತಿವರ್ಷದ ಏಪ್ರಿಲ್ 1ರಂದು ಪ್ರಾರಂಭವಾಗಿ ಮರುವರ್ಷದ ಮಾರ್ಚ್ 31ರಂದು ಅಂತ್ಯಗೊಳ್ಳುತ್ತದೆ. ಈ ಅವಧಿಗಾಗಿ ಆಯ-ವ್ಯಯ ಪಟ್ಟಿಯನ್ನು ತಯಾರಿಸುವ ಕೆಲಸ ಪ್ರತಿ ಇಲಾಖೆಯ ವಿವಿಧ ಮಟ್ಟಗಳಲ್ಲಿ ತಿಂಗಳುಗಳ ಹಿಂದೆಯೇ ಪ್ರಾರಂಭವಾಗುತ್ತದೆ. ಅನಂತರ ಫೆಬ್ರವರಿ ತಿಂಗಳ ಕೊನೆಯ ಒಳಗೆ ರಾಜ್ಯದ ಅರ್ಥಸಚಿವಾಲಯದಲ್ಲಿ ಸಮಗ್ರ ಆಯ-ವ್ಯಯ ಅಂದಾಜುಪಟ್ಟಿಯನ್ನು ಸಿದ್ಧಪಡಿಸಲಾಗುತ್ತದೆ. ಅನಂತರ ಫೆಬ್ರವರಿ ಅಥವಾ ಮಾರ್ಚ್ ತಿಂಗಳಲ್ಲಿ ವಿಧಾನ ಮಂಡಲದ ಸಭೆಗಳನ್ನು ಕರೆದು ಅವುಗಳ ಮುಂದೆ ಈ ಅಂದಾಜುಪಟ್ಟಿಯನ್ನು ಸಿದ್ಧಪಡಿಸಲಾಗುತ್ತದೆ. ಸಂಸದೀಯ ಸರ್ಕಾರಿಪದ್ಧತಿಯಲ್ಲಿ ಹಣಕಾಸು ಆಯವ್ಯಯದ ಪೂರ್ಣ ನಿಯಂತ್ರಣದ ಹಕ್ಕು ಪ್ರಜಾಪ್ರತಿನಿಧಿಗಳಿಂದ ಕೂಡಿರುವ ವಿಧಾನಮಂಡಲಕ್ಕೆ ಇರುವುದರಿಂದ ವಿಧಾನ ಮಂಡಲದ ಒಪ್ಪಿಗೆ ಪಡೆಯದೆ ಸರ್ಕಾರ ಯಾವ ಆಯವ್ಯಯವನ್ನೂ ಮಾಡುವಂತಿಲ್ಲ. ಆದ್ದರಿಂದ ಅಂದಾಜುಪಟ್ಟಿಯನ್ನು ಸರ್ಕಾರ ವಿಧಾನಮಂಡಲದ ಮುಂದೆ ಮಂಡಿಸಿ ಅದರ ಒಪ್ಪಿಗೆಯನ್ನು ಬೇಡುತ್ತದೆ. ವಿಧಾನಮಂಡಲದಲ್ಲಿ ಈ ಅಂದಾಜು ಪಟ್ಟಿಯನ್ನು ಸಾಮಾನ್ಯ ಚರ್ಚೆ, ಇಲಾಖಾವಾರು ಬೇಡಿಕೆಗಳ ಚರ್ಚೆ ಮತ್ತು ಹಣಕಾಸು ಮಸೂದೆಗಳ ಮೇಲಿನ ಚರ್ಚೆ ಮುಂತಾದ ಅವಕಾಶಗಳ ಮೂಲಕ ಸಮಗ್ರವಾಗಿ ಚರ್ಚಿಸಲಾಗುತ್ತದೆ. ಈ ಸಂದರ್ಭದಲ್ಲಿ ಇಡೀ ಆಡಳಿತದ ಹಿಂದಿನ ಮತ್ತು ಮುಂದಿನ ವರ್ಷಗಳ ಗತ ಮತ್ತು ನಿಯೋಜಿತ ತತ್ತ್ವ, ರೀತಿ, ನೀತಿ, ಸೋಲು ಮತ್ತು ಸಾಧನೆಗಳೆಲ್ಲವನ್ನೂ ವಿಶ್ಲೇಷಿಸಲಾಗುತ್ತದೆ. ಅನಂತರದಲ್ಲಿ ಹಣಕಾಸು ವಿತರಣಾ ಮಸೂದೆ ಮತ್ತು ಹಣಕಾಸು ಮಸೂದೆ ಎಂಬ ಎರಡು ಮಸೂದೆಗಳನ್ನು ಮಂಡಿಸಿ, ಪರಿಶೀಲಿಸಿ ಅನುಮೋದಿಸಿದ ಮೇಲೆ ಹಣಕಾಸು ಆಡಳಿತ ವಿಧಾನ ಮಂಡಲದ ನಿರ್ವಹಣಾ ಹಂತಕ್ಕೆ ಬರುತ್ತದೆ.

ಆಯವ್ಯಯದ ನಿರ್ವಹಣೆಯ ಮತ್ತು ನಿಯಂತ್ರಣದ ಕಾರ್ಯದಲ್ಲಿ ಅರ್ಥ ಸಚಿವಾಲಯ, ಕಂದಾಯ ಇಲಾಖೆಗಳು, ರಾಜ್ಯ ಕೋಶ ಇಲಾಖೆ, ರಾಜ್ಯ ಲೆಕ್ಕಾಚಾರ ಮತ್ತು ತನಿಖಾ ಇಲಾಖೆ, ಅಕೌಂಟೆಂಟ್ ಜನರಲ್‌ರವರ ಕಚೇರಿ, ರಾಜ್ಯ ವಿಧಾನಮಂಡಲದ

ಸಾರ್ವಜನಿಕ ಹಣಕಾಸು ಸಮಿತಿಗಳು ಭಾಗವಹಿಸುತ್ತವೆ. ಅರ್ಥಸಚಿವಾಲಯ ಆಯ-ವ್ಯಯದ ನಿರ್ವಹಣೆ ಮತ್ತು ನಿಯಂತ್ರಣದ ಮೇಲೆ ಸಮಗ್ರವಾದ ಹತೋಟಿಯನ್ನು ಹೊಂದಿರುತ್ತದೆ. ಕಂದಾಯ ಇಲಾಖೆಗಳು ಕಂದಾಯವನ್ನು ವಸೂಲಿ ಮಾಡುತ್ತವೆ. ಸರ್ಕಾರಕ್ಕೆ ಸಲ್ಲಬೇಕಾದ ಮತ್ತು ಸರ್ಕಾರದಿಂದ ಸಲ್ಲಬೇಕಾದ ಎಲ್ಲ ಹಣದ ವ್ಯವಹಾರ ರಾಜ್ಯ ಭಂಡಾರಗಳ ಮೂಲಕವೇ ನಡೆಯುತ್ತದೆ. ಲೆಕ್ಕಾಚಾರ ಮತ್ತು ತನಿಖಾ ಇಲಾಖೆ ರಾಜ್ಯದ ಆಯವ್ಯಯದ ಲೆಕ್ಕಾಚಾರವನ್ನು ಇಡಲು ಮತ್ತು ತನಿಖೆ ನಡೆಸಲು ಸಹಾಯ ಮಾಡುತ್ತದೆ. ಅಕೌಂಟೆಂಟ್ ಜನರಲ್ ಅವರ ಕಚೇರಿಯ ಲೆಕ್ಕಾಚಾರವಿಡುವ ಸೂತ್ರಗಳನ್ನು ಮತ್ತು ಆಯ-ವ್ಯಯ ಲೆಕ್ಕಗಳನ್ನು ರಾಜ್ಯ ಸರ್ಕಾರಕ್ಕೆ ನೀಡಿ ಲೆಕ್ಕಾಚಾರ ವ್ಯವಸ್ಥೆಯನ್ನು ನಿರ್ದೇಶಿಸುವುದೇ ಅಲ್ಲದೆ ವರ್ಷಕ್ಕೊಂದು ಸಾರಿ ರಾಜ್ಯದ ಎಲ್ಲ ಇಲಾಖೆಗಳು ಮತ್ತು ಕಚೇರಿಗಳ ತನಿಖೆ ನಡೆಸಿ ರಾಜ್ಯಪಾಲರಿಗೆ ವರದಿಯನ್ನು ಸಲ್ಲಿಸುತ್ತದೆ. ರಾಜ್ಯವಿಧಾನ ಮಂಡಲದ ಸಾರ್ವಜನಿಕ ಲೆಕ್ಕಾಚಾರ ಸಮಿತಿ ಅಕೌಂಟೆಂಟ್ ಜನರಲ್‌ರವರ ತನಿಖಾ ವರದಿಯನ್ನು ವಿಧಾನಮಂಡಲದ ಪರವಾಗಿ ಪರಿಶೀಲಿಸುವುದರ ಜೊತೆಗೆ ಅನುಮಾನಕ್ಕೆ ಆಸ್ಪದವಾಗಿರುವ ಇಲಾಖೆಗಳ ವ್ಯವಹಾರಗಳನ್ನು ವಿಶದವಾಗಿ ತನಿಖೆ ನಡೆಸಿ ವಿಧಾನಮಂಡಲಕ್ಕೆ ವರದಿ ಮಾಡುತ್ತದೆ.

ರಾಜ್ಯದ ಸ್ಥಳೀಯ ಆಡಳಿತ ವಿಶಾಲ ಮತ್ತು ಸಂಮಿಶ್ರಿತ ವ್ಯವಸ್ಥೆ ಹೊಂದಿದೆ. ಸ್ಥಳೀಯ ಸಮುದಾಯಗಳ ಆಡಳಿತವನ್ನು ಗ್ರಾಮಾಂತರ ಸಮುದಾಯಗಳ ಆಡಳಿತ ವ್ಯವಸ್ಥೆ ಮತ್ತು ನಗರ ಸಮುದಾಯಗಳ ಆಡಳಿತ ವ್ಯವಸ್ಥೆ ಎಂದು ಎರಡು ವಿಧವಾಗಿ ವಿಂಗಡಿಸಬಹುದು. ಇವೆಲ್ಲ ಸರ್ಕಾರದ ಕೆಲವೊಂದು ನಿಬಂಧನಗಳಿಗೆ ಅನುಸಾರವಾಗಿ ರಚಿತವಾಗಿದ್ದು, ಕೆಲವು ಕಾರ್ಯರಂಗಗಳಲ್ಲಿ ಸ್ವತಂತ್ರವಾಗಿರುತ್ತವೆ. ಸ್ಥಳೀಯ ಚುನಾಯಿತ ಪ್ರತಿನಿಧಿಗಳು ಇದರ ಆಡಳಿತವನ್ನು ನಿರ್ವಹಿಸುತ್ತಾರೆ (ನೋಡಿ: ಸ್ಥಳೀಯ ಸಂಸ್ಥೆಗಳು).

**ನ್ಯಾಯಾಂಗ:** ಸಂಸದೀಯ ಪ್ರಜಾಸತ್ತೆಗೆ ಅನುಗುಣವಾಗಿ ಸಂವಿಧಾನದ 214ನೆಯ ಅನುಚ್ಛೇದದ ಪ್ರಕಾರ ರಾಜ್ಯದಲ್ಲಿ ಒಂದು ಉಚ್ಚ ನ್ಯಾಯಾಲಯವಿದೆ. ಇಡೀ ರಾಜ್ಯ ವ್ಯಾಪ್ತಿಯುಳ್ಳ ಈ ನ್ಯಾಯಾಲಯ ಬೆಂಗಳೂರಿನಲ್ಲಿದೆ. ಭಾರತ ಒಕ್ಕೂಟದಲ್ಲಿ ಏಕಾತ್ಮಕ ನ್ಯಾಯಾಂಗ ವ್ಯವಸ್ಥೆ ಇರುವುದರಿಂದ ಈ ನ್ಯಾಯಾಲಯ ಭಾರತದ ಅಧ್ಯಕ್ಷರ ಮತ್ತು ಉಚ್ಚತಮ ನ್ಯಾಯಾಲಯದ ಹತೋಟಿಯಲ್ಲಿ ಕೆಲಸ ಮಾಡುತ್ತದೆ. ಜಿಲ್ಲೆಯ ಮಟ್ಟದಲ್ಲಿ ಜಿಲ್ಲಾ ನ್ಯಾಯಾಲಯಗಳ ಜೊತೆಗೆ ಸಿವಿಲ್ ಮತ್ತು ಕ್ರಿಮಿನಲ್ ಕೋರ್ಟುಗಳಿರುತ್ತವೆ. ಸಿವಿಲ್ ವಿಭಾಗದಲ್ಲಿ ಜಿಲ್ಲಾ ಮಟ್ಟದಲ್ಲಿ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ ಮತ್ತು ತಾಲ್ಲೂಕು ಮಟ್ಟದಲ್ಲಿ ಮುನ್ಸೀಫರ ನ್ಯಾಯಾಲಯವೂ ಇವೆ. ಈ ನ್ಯಾಯಾಲಯಗಳ ಕಾರ್ಯವ್ಯಾಪ್ತಿಯನ್ನು ರಾಜ್ಯದ ಉಚ್ಚ ನ್ಯಾಯಾಲಯ ನಿರ್ಧರಿಸುತ್ತದೆ (ನೋಡಿ: ನ್ಯಾಯಾಲಯಗಳು). **(ಎಂ.ಯು.)**

**ಆಡಳಿತ ವ್ಯವಸ್ಥೆಯ ಇತಿಹಾಸ:** ಕರ್ನಾಟಕದಲ್ಲಿ ಆಡಳಿತ ಪರಂಪರೆಯ ಇತಿಹಾಸ ಕ್ರಿ.ಪೂ.ಸು.4-3ನೆಯ ಶತಮಾನಗಳ ಹೊತ್ತಿಗೆ ಪ್ರಾರಂಭವಾಯಿತೆಂದು ಹೇಳಬಹುದು. ಭಾರತದ ಪ್ರಾಚೀನ ಶಾಸ್ತ್ರಜ್ಞರು ಅರ್ಥಶಾಸ್ತ್ರ, ಮಹಾಭಾರತ, ಮನುಸ್ಮೃತಿಯಂಥ ಗ್ರಂಥಗಳಲ್ಲಿ ನಿರೂಪಿಸಿದ ತತ್ತ್ವ ಹಾಗೂ ಸಿದ್ಧಾಂತಗಳೇ ಕರ್ನಾಟಕದಲ್ಲಿ ರೂಪುಗೊಂಡಿದ್ದ ರಾಜಕೀಯ ಸಂಸ್ಥೆಗಳಿಗೆ ಮತ್ತು ಸರ್ಕಾರಗಳಿಗೆ ಆಧಾರವಾಗಿದ್ದುವು.

ಇತ್ತೀಚೆಗೆ ಪ್ರಜಾಪ್ರಭುತ್ವ ಸಿದ್ಧಾಂತ ಪಸರಿಸುವವರೆಗೂ ಸರ್ಕಾರಕ್ಕೆ ಸಂಬಂಧಿಸಿದಂತೆ ಈ ದೇಶದಲ್ಲಿದ್ದುದು ಏಕರಾಜಪ್ರಭುತ್ವ. ರಾಜನೇ ದೇಶದ ಸಾರ್ವಭೌಮ. ಆದರೆ ಭಾರತೀಯ ಪರಂಪರೆಯಲ್ಲಿ ರಾಜರು ನಿರಂಕುಶ ಪ್ರಭುಗಳಾಗಲು ಸಾಧ್ಯವಾಗುತ್ತಿರಲಿಲ್ಲ. ರಾಜರಾಗಲಿ ಇತರ ಯಾರೇ ವ್ಯಕ್ತಿಗಳಾಗಲಿ ಧರ್ಮದ ಚೌಕಟ್ಟಿನಲ್ಲಷ್ಟೇ ತಮ್ಮ ಅಧಿಕಾರವನ್ನು ಚಲಾಯಿಸುವ ಹಕ್ಕಿರುತ್ತಿತ್ತು. ಶ್ರುತಿ, ಸ್ಮೃತಿಗಳಲ್ಲಿ ಉಕ್ತವಾದ ಧರ್ಮ ರೀತಿಗಳು ಮತ್ತು ಅನೂಚಾನವಾಗಿ ನಡೆದು ಬರುತ್ತಿದ್ದ ಪದ್ಧತಿಗಳು ರಾಜನೂ ಒಳಗೊಂಡಂತೆ ಎಲ್ಲರ ವ್ಯವಹಾರಗಳ ನಿರ್ದೇಶಕ ಸೂತ್ರಗಳಾಗಿದ್ದುವು. ರಾಜ ದೇವನಿಗೆ ಸಮಾನ ಅಥವಾ ದೇವಾಂಶ ಅವನಲ್ಲಿದೆ ಎಂಬ ಭಾವನೆಗಳು ಅಲ್ಲಲ್ಲಿ ವ್ಯಕ್ತಗಿದ್ದರೂ ಅವನು ಧರ್ಮಭ್ರಷ್ಟ ಅಥವಾ ನೀತಿಭ್ರಷ್ಟನಾದಾಗ ಅವನ ಪಾವಿತ್ರ್ಯಕ್ಕೆ ಕುಂದು ಬರುತ್ತಿತ್ತು. ಅವನನ್ನು ಅಧಿಕಾರಚ್ಯುತನಾಗಿ ಮಾಡಬಹುದೆಂಬುದಕ್ಕೆ ಕಾರಣವಾಗುತ್ತಿತ್ತು. ರಾಜತ್ವ ಸಾಮಾನ್ಯವಾಗಿ ವಂಶಪಾರಂಪರ್ಯವಾಗಿ ಹಿರಿಯಮಗನ ಮೂಲಕ ಮುಂದುವರಿಯುತ್ತಿತ್ತು. ಆದರೆ ಮೇಲಿನ ಧಾರ್ಮಿಕನೀತಿಯ ಕಾರಣದಿಂದ ಅಥವಾ ಅಬಲತೆಯಿಂದ ಹಿರಿಯಮಗ ರಾಜ್ಯವನ್ನು ಕಳೆದುಕೊಂಡು ವಂಶದ ಬೇರೆಯವರು ಅಧಿಕಾರ ವಹಿಸಿಕೊಂಡಿರುವ ಹಲವು ಉದಾಹರಣೆಗಳು ಇತಿಹಾಸದಲ್ಲಿ ದೊರಕುತ್ತವೆ. ರಾಜರು ತಮ್ಮ ಹಿಡಿತದಲ್ಲಿದ್ದ ಪ್ರದೇಶಕ್ಕಷ್ಟೇ ಒಡೆಯರಾಗಿರುತ್ತಿದ್ದರು. ಈ ರಾಜರಲ್ಲಿದ್ದ ಸ್ವಸಾಧನಾಕಾಂಕ್ಷೆ, ಅವರ ಬಲಸಂವೃದ್ಧಿ ಮುಂತಾದ ಕಾರಣಗಳಿಂದ ರಾಜರಲ್ಲೆ ಆಗಾಗ್ಗೆ ಪರಸ್ಪರ ಸಂಘರ್ಷಗಳೂ ನಡೆಯುತ್ತಿದ್ದು ಅವರ ಆಡಳಿತಕ್ಕೆ ಒಳಪಡುವ ಪ್ರದೇಶಗಳ ಹಿಗ್ಗಾಣಿಕೆ ಕುಗ್ಗಾಣಿಕೆಗಳು ರಾಜ್ಯದ ಹಸ್ತಾಂತರಗಳೂ ಆಗಾಗ್ಗೆ ಸಂಭವಿಸುತ್ತಿದ್ದುವು.

ರಾಜ ರಾಜ್ಯದ ಮುಖ್ಯ ಸೂತ್ರಧಾರಿ. ಧರ್ಮಶಾಸ್ತ್ರಗಳು ನಿರೂಪಿಸುವಂತೆ ಅವನ ಕರ್ತವ್ಯಗಳು ನಾಲ್ಕು. ದುಷ್ಟನಿಗ್ರಹ, ಶಿಷ್ಟಪಾಲನ, ಆತ್ಮರಕ್ಷಣ ಮತ್ತು ಧರ್ಮಯತ್ನ. ಒಟ್ಟಿನಲ್ಲಿ ಸಮ್ಯಕ್ಪ್ರಜಾಪರಿಪಾಲನ. ಈ ಕರ್ತವ್ಯ ಸಾಧನೆಗಾಗಿ ರಾಜ್ಯದ ಆಡಳಿತ ವ್ಯವಸ್ಥಿತವಾಗಿರುತ್ತಿತ್ತು. ರಾಜ ಆತ್ಮರಕ್ಷಣೆಗೆ ಹಾಗೂ ದೇಶರಕ್ಷಣೆಗಾಗಿ ಸೈನ್ಯವನ್ನು ಮೊದಲಾಗಿ ರೂಢಿಸಿಕೊಳ್ಳಬೇಕಾಗಿತ್ತು. ಸೈನ್ಯಕ್ಕೆ ಸಂಬಂಧಿಸಿದಂತೆ ವಿವಿಧಮಟ್ಟಗಳ ಅಧಿಕಾರಿಗಳಿರುತ್ತಿದ್ದರು. ದುಷ್ಟನಿಗ್ರಹ, ಶಿಷ್ಟಪಾಲನವನ್ನು ನಿರ್ವಹಿಸಲು ದೇಶದ ವಿವಿಧ ಭಾಗಗಳಲ್ಲಿ ವಿವಿಧ ಅಂತಸ್ತುಗಳಲ್ಲಿ ರಾಜನ ಪ್ರತಿನಿಧಿಗಳು ಅಥ‌ವಾ ಅಧಿಕಾರಿಗಳು ಇರುತ್ತಿದ್ದರು. ಸಮ್ಯಕ್ ಪ್ರಜಾಪಾಲನೆಯಲ್ಲಿ ರಾಜ್ಯದ ಆರ್ಥಿಕ ಅಭಿವೃದ್ಧಿ ಹಾಗೂ ನ್ಯಾಯನಿಷ್ಠ ಜೀವನಕ್ರಮಗಳನ್ನು ನಿರೂಪಿಸುವುದು, ಪಾಲಿಸುವುದು, ಧರ್ಮರಕ್ಷಣೆಯಲ್ಲಿ ವಿವಿಧ ಜನವರ್ಗಗಳು ತಮ್ಮ ತಮ್ಮ ಧರ್ಮಮಾರ್ಗಗಳನ್ನು ಆಚರಿಸಿಕೊಂಡು ಬರುವಂತೆ ನೋಡಿಕೊಳ್ಳುವುದು, ಅದನ್ನು ಪ್ರೋತ್ಸಾಹಿಸುವುದು ಮೊದಲಾದ ಕಾರ್ಯಕ್ರಮಗಳಿಗಾಗಿಯೂ ಅನೇಕ ಅಧಿಕಾರಿಗಳು ನಿಯಮಿತರಾಗಿರುತ್ತಿದ್ದರು. ಸೈನ್ಯ ಮತ್ತು ಆಡಳಿತಸಿಬ್ಬಂದಿಯ ಖರ್ಚಿಗಾಗಿ ರಾಜರು ಹಲವು ಆದಾಯ ಮೂಲಗಳನ್ನು ಅವಲಂಬಿಸುತ್ತಿದ್ದರು. ರಾಜ್ಯವೆಲ್ಲ ರಾಜನಿಗೆ ಸೇರಿದ್ದೆಂಬ ಭಾವನೆಯಿದ್ದರೂ ಪ್ರಜೆಗಳಿಗೂ ಸ್ವಂತ ಆಸ್ತಿ, ಹಕ್ಕುಗಳು ಇರುತ್ತಿದ್ದುವು. ಇದನ್ನು ರಕ್ಷಿಸುವುದೂ ರಾಜನ ಮುಖ್ಯಕರ್ತವ್ಯಗಳಲ್ಲೊಂದಾಗಿತ್ತು. ತನ್ನ ಸ್ವಂತ ಭೂಮಿ, ಅರಣ್ಯ, ಖನಿಜ ಉತ್ಪನ್ನಗಳಿಂದ ಬರುವ ಆದಾಯ, ಜನರ ಭೂಮಿ ಮತ್ತು ಉತ್ಪನ್ನಗಳ ಮೇಲೆ ಮತ್ತು ವ್ಯಾಪಾರ ವಹಿವಾಟಿನ ಮೇಲೆ ಹೇರುವ ತೆರಿಗೆ ಮತ್ತು ಸ್ವಲ್ಪಮಟ್ಟಿಗೆ ದಂಡಯಾತ್ರೆ ಇತ್ಯಾದಿಗಳಿಂದ ಸಂಗ್ರಹಿಸಿದ ಧನ ಇವುಗಳು ಮಾತ್ರ ರಾಜನ ಆದಾಯ ಮೂಲಗಳಾಗಿದ್ದವು. ಈ ಮಾರ್ಗಗಳಿಂದ ಆದಾಯವನ್ನು ರೂಢಿಸಿಕೊಳ್ಳುವಾಗ ಸಹ ರಾಜನಿಗೆ ಕೆಲವು ಮಿತಿಗಳಿರುತ್ತಿದ್ದವು. ಉದಾಹರಣೆಗೆ ದೇವಸ್ವ, ಬ್ರಹ್ಮಸ್ವಗಳು ತೆರಿಗೆಗಳಿಂದ ಹೊರತಾಗಿರುತ್ತಿದ್ದುವು. ಪ್ರಜೆಗಳಿಂದ ಕರವನ್ನು ವಸೂಲಿ ಮಾಡುವಾಗಲೂ ಆತ 'ಮಾಲಾಕಾರನಂತಿರಬೇಕು, ಇಂಧನ ಕಾರನಂತಿರಬಾರದು' ಎಂದು ಶಾಸ್ತ್ರಗಳು ವಿಧಿಸುತ್ತವೆ. ಅಂದರೆ ಹೂವಾಡಿಗನಂತೆ ಗಿಡಗಳಿಗೆ ತೊಂದರೆಯಾಗದ ರೀತಿಯಲ್ಲಿ ಹೂಗಳನ್ನು ಸಂಗ್ರಹಿಸಿ ಸಂಪಾದಿಸಬೇಕೇ ಹೊರತು ಮರಗಳನ್ನು ತಂದು ಸುಟ್ಟು ಇದ್ದಲು ಮಾಡಿ ಸಂಪಾದಿಸಬಾರದು ಎಂಬುದು ದೃಷ್ಟಿ. ಬಹು ಕಾಲದವರೆಗೆ ಈ ರೀತಿಯ ನೀತಿಗಳು ಪರಿಪಾಲಿತವಾಗುತ್ತಿದ್ದವು. ಹೀಗೆ ಸಂಗ್ರಹಿತವಾದ ರಾಜ್ಯಕೋಶವನ್ನು ಮೇಲೆ ಹೇಳಿದ ಚತುರ್ವಿಧ ರಾಜಕರ್ತವ್ಯಗಳಿಗಲ್ಲದೆ, ದೀನಾನಾಥರ ಉದ್ಧಾರ, ವಿದ್ಯೆ, ಸಾಹಿತ್ಯ ಕಲೆಗಳಿಗೆ ಪ್ರೋತ್ಸಾಹ, ದೇವಾಲಯ ಕೆರೆ ಹಾದಿಗಳ ನಿರ್ಮಾಣ ಮೊದಲಾದ ಲೋಕೋಪಕಾರ ಉದ್ದಿಶ್ಯಗಳಿಗಾಗಿ ವಿನಿಯೋಗಿಸಬೇಕೆಂಬ ಭಾವನೆ ಇತ್ತು.

ಹೀಗೆ ಬಹುಮುಖ ಕಾರ್ಯಗಳನ್ನು ನೆರವೇರಿಸಲು ರಾಜ್ಯಕ್ಕೆ ಉತ್ತಮ ಆಡಳಿತವ್ಯವಸ್ಥೆಯ ಆವಶ್ಯಕತೆ ಇದ್ದು, ಅಂಥ ವ್ಯವಸ್ಥೆ ದೇಶ-ಕಾಲಕ್ಕೆ ಅನುಗುಣವಾಗಿ ರೂಪಿತವಾಗಿರುತ್ತಿದ್ದಿತು. ಆಡಳಿತಾಂಗದ ಗಾತ್ರ ರಾಜ್ಯವಿಸ್ತಾರವನ್ನು ಅವಲಂಬಿಸುತ್ತಿದ್ದಿತು. ಆಡಳಿತ ಸಾಮಾನ್ಯವಾಗಿ ಕೇಂದ್ರ, ಪ್ರಾದೇಶಿಕ ಮತ್ತು ಸ್ಥಳೀಯ- ಈ ಮೂರು ಘಟ್ಟಗಳಲ್ಲಿ ವ್ಯವಸ್ಥಿತವಾಗಿದ್ದಿತು. ಕೇಂದ್ರದಲ್ಲಿ ರಾಜನ ಜೊತೆಗೆ ಸಾಮಾನ್ಯವಾಗಿ ರಾಜ ಕುಟುಂಬದ ಇತರರೂ ಆಡಳಿತದಲ್ಲಿ ಭಾಗವಹಿಸುತ್ತಿದ್ದರು. ಬುದ್ಧಿವಂತರೂ ಪ್ರಾಮಾಣಿಕರೂ ಆದ ಮಂತ್ರಿಗಳು ಮತ್ತು ಇತರರು ರಾಜನಿಗೆ ಸಲಹೆ

ನೀಡುತ್ತಿದ್ದರು. ಸೈನ್ಯ, ಕಂದಾಯ, ಧರ್ಮ, ನ್ಯಾಯಪಾಲನೆ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಅನೇಕ ಅಧಿಕಾರಿಗಳು ಇರುತ್ತಿದ್ದರು. ರಾಜ್ಯದ ಕೋಶ, ದಾಖಲೆಗಳು, ನಾಣ್ಯಮುದ್ರಣ ಅರಮನೆಯ ವ್ಯವಹಾರ ಇವಕ್ಕೂ ಬೇರೆ ಬೇರೆ ಅಧಿಕಾರಿಗಳು ಇರುತ್ತಿದ್ದರು.

ಪ್ರಾಂತ್ಯವಿಭಾಗಗಳಲ್ಲಿ ಸಾಮಾನ್ಯವಾಗಿ ರಾಜಪ್ರತಿನಿಧಿಗಳು ಇದ್ದು ಅವರು ಸಹ ಕೇಂದ್ರಾಡಳಿತ ವ್ಯವಸ್ಥೆಯಂತೆಯೇ ತಮ್ಮ ಆಡಳಿತವ್ಯವಸ್ಥೆಯನ್ನೂ ರೂಪಿಸಿಕೊಂಡಿರುತ್ತಿದ್ದರು. ಈ ಪ್ರಾಂತ್ಯಾಧಿಕಾರಿಗಳು ಸ್ವಂತ ಸೈನ್ಯವನ್ನು ಇಟ್ಟುಕೊಂಡಿರುತ್ತಿದ್ದರು. ಇವರಲ್ಲೂ ಮಂತ್ರಿ ಮತ್ತು ಇತರ ಅಧಿಕಾರಿಗಳ ಸಿಬ್ಬಂದಿ ಇರುತ್ತಿತ್ತು. ರಾಣಿಯರು, ರಾಜಕುಮಾರರು ಮತ್ತು ಇತರ ರಾಜ ಬಂಧುಗಳೂ ರಾಜನಿಗೆ ನಿಷ್ಠಾವಂತರಾಗಿದ್ದ ಸಮರ್ಥ ದಂಡನಾಯಕರೂ ಪ್ರಾಂತ್ಯದ ಅಧಿಕಾರಗಳನ್ನು ವಹಿಸಿಕೊಂಡಿರುತ್ತಿದ್ದರು. ಕೆಲವೆಡೆಗಳಲ್ಲಿ ಕೆಲವು ಮನೆತನಗಳವರು ವಂಶಪಾರಂಪರ್ಯವಾಗಿ ಅಧಿಕಾರವನ್ನು ಹೊಂದಿದ್ದು ಸಾರ್ವಭೌಮನ ಮಾಂಡಲೀಕರಾಗಿ ಆಡಳಿತ ನಿರ್ವಹಿಸುತ್ತಿದ್ದರು. ಇನ್ನೂ ಕೆಳದರ್ಜೆಯಲ್ಲಿ ಗ್ರಾಮ ಕೂಟಗಳಿದ್ದು ಅವುಗಳಿಗೂ ಪ್ರಾಂತ್ಯಾಧಿಕಾರಿಗಳ ಅಧೀನದಲ್ಲಿ ಇತರ ಅಧಿಕಾಗಳಿರುತ್ತಿದ್ದರು. ಈ ಅಧಿಕಾರಿಗಳು ಸ್ಥಳೀಯ ಜನರ ಯೋಗಕ್ಷೇಮವನ್ನೂ ಪ್ರಾಂತ್ಯ ವ್ಯವಹಾರಗಳನ್ನೂ ನೋಡಿಕೊಳ್ಳಬೇಕಾಗಿತ್ತಲ್ಲದೆ, ಕಾಲಕಾಲಕ್ಕೆ ತಮ್ಮ ಮೇಲಣ ಪ್ರಾಂತ್ಯಾಧಿಕಾರಿಗೆ ವಸೂಲಿ ಮಾಡಿದ ತೆರಿಗೆ ಒಪ್ಪಿಸಬೇಕಾಗಿತ್ತು. ಪ್ರಾಂತ್ಯಾಧಿಕಾರಿಗಳೂ ರಾಜನಿಗೆ ಕಪ್ಪ ಸಲ್ಲಿಸುತ್ತಿದ್ದರು. ಗ್ರಾಮ ನಗರಗಳಲ್ಲಿ ಪಟ್ಟಣಸ್ವಾಮಿ, ಗೌಡ ಇವರು ಮುಖ್ಯಾಧಿಕಾರಿಗಳಾಗಿರುತ್ತಿದ್ದರು. ಅಗ್ರಹಾರ ಗ್ರಾಮಗಳಲ್ಲಿ ಮಾತ್ರ ಸ್ವಲ್ಪಮಟ್ಟಿಗೆ ಪ್ರಜಾಪ್ರತಿನಿಧಿ ವ್ಯವಸ್ಥೆ ಮತ್ತು ಆಡಳಿತ ಇರುತ್ತಿತ್ತು (ನೋಡಿ: ಅಗ್ರಹಾರ).

ಮೇಲಿನವು ಆಡಳಿತ ವ್ಯವಸ್ಥೆಯ ಮೂಲಭೂತ ಅಂಶಗಳು ಮಾತ್ರ. ವಸ್ತುತಃ ಈ ವ್ಯವಸ್ಥೆಯೇ ಮುಂದುವರೆದುಕೊಂಡುಬಂದಿದ್ದರೂ ಪ್ರಾಂತ್ಯ ವಿಭಾಗಗಳ ರಚನೆ, ಅಧಿಕಾರಿಗಳ ನೇಮಕ, ಅವರ ಹಕ್ಕು, ಕರ್ತವ್ಯ ಇತ್ಯಾದಿಗಳು, ಹುದ್ದೆಗಳ ಸ್ಥಳಾಂತರಗಳು, ಆದಾಯ ಮೂಲಗಳು, ಕರಗಳ ರೀತಿಗಳು, ಸೈನ್ಯದ ವ್ಯವಸ್ಥೆ ಮೊದಲಾದ ಹಲವಾರು ವಿಷಯಗಳಲ್ಲಿ ಕಾಲಕಾಲಕ್ಕೆ ವ್ಯತ್ಯಾಸಗಳು ಆಗಿರುವುದು ಕಂಡುಬರುತ್ತದೆ. *

ಸ್ಥೂಲವಾಗಿ ಹೇಳುವುದಾದರೆ ಮೌರ್ಯರ ಕಾಲದಲ್ಲಿ ಪಾಟಲಿಪುತ್ರದಿಂದ ಆಳುತ್ತಿದ್ದ ರಾಜನ ಅಧೀನದಲ್ಲಿದ್ದ ಕರ್ನಾಟಕದ ಭಾಗವನ್ನು ಮೌರ್ಯರಾಜ್ಯದ ದಕ್ಷಿಣವಿಭಾಗದಲ್ಲಿದ್ದ ಒಬ್ಬ ರಾಜಪ್ರತಿನಿಧಿ ನೋಡಿಕೊಳ್ಳುತ್ತಿದ್ದನೆಂದು ತೋರುತ್ತದೆ. ಪ್ರಾಯಶಃ ಮಹಾಮಾತ್ರರೆಂಬ ಅಧಿಕಾರಿಗಳು, ಇಲ್ಲಿಯ ಅನೇಕ ಸ್ಥಳಗಳಲ್ಲಿದ್ದರು. ಸಾತವಾಹನರ ಕಾಲದಲ್ಲಿ ರಾಜ್ಯ ಆರ್ಥಿಕವಾಗಿ ಅಭಿವೃದ್ಧಿ ಸಾಧಿಸುತ್ತಿದ್ದುದರಿಂದ, ಆಡಳಿತಕ್ಕೆ ಆಹರಗಳೆಂಬ ಪ್ರಾಂತ್ಯಗಳಲ್ಲಿ ಮಹಾರಠಿ, ಮಹಾಭೋಜ ಮೊದಲಾದ ಪ್ರಾಂತ್ಯಾಧಿಕಾರಿಗಳು ಇರುತ್ತಿದ್ದರು. ಅಲ್ಲದೆ, ಮಹಾತಳವಾರ, ಭಾಂಡಾಗಾರಿಕ ಮೊದಲಾದ ಇತರ ಅಧಿಕಾರಿಗಳೂ ಇದ್ದರು. ಕದಂಬರ ಕಾಲದಲ್ಲಿ ಕರ್ನಾಟಕದಲ್ಲೇ ನೆಲೆಯುಳ್ಳ ರಾಜ್ಯ ಸ್ಥಾಪನೆಯಾಯಿತು. ನಾಡಿನಲ್ಲಿ ಅಂದು ಆಗುತ್ತಿದ್ದ ಆರ್ಥಿಕ ಪ್ರಗತಿಯಿಂದ ಹಾಗೂ ರಾಜ್ಯವಿಸ್ತಾರದಿಂದ ಆಡಳಿತ ಭಾರವೂ ಹೆಚ್ಚಾಗಿ ಹಲವಾರು ಪ್ರಾಂತ್ಯವಿಭಾಗಗಳು ರೂಪಿತವಾದುವು. ಇವು ರಾಷ್ಟ್ರ, ವಿಷಯ, ನಾಡುಗಳೆಂದು ವಿವಿಧರೀತಿಯವಾಗಿದ್ದವು. ಪ್ರತಿ ವಿಭಾಗಕ್ಕೂ ಪ್ರತ್ಯೇಕ ಅಧಿಕಾರಿಗಳು ವಿವಿಧ ದರ್ಜೆಗಳಲ್ಲಿರುತ್ತಿದ್ದರು. ಬಾದಾಮಿಯ ಚಳುಕ್ಯ, ಗಂಗ ಮತ್ತು ರಾಷ್ಟ್ರಕೂಟ ಅರಸರ ಕಾಲದಲ್ಲಿ ಈ ರೀತಿಯ ಪ್ರಾಂತ್ಯ ವಿಭಾಗಗಳ ಹಾಗೂ ಅಲ್ಲಿದ್ದ ಅಧಿಕಾರಿಗಳ ಸಂಖ್ಯೆ ಇಮ್ಮಡಿ ಮೂರ್ಮಡಿಯಾದುವು. ದೊಡ್ಡಪ್ರಾಂತ್ಯವಿಭಾಗಗಳಿಗೆ ರಾಜಬಂಧುಗಳನ್ನು ಮುಖ್ಯಾಧಿಕಾರಿಗಳಾಗಿ ನೇಮಿಸುವ ಪರಿಪಾಠ ವಿಶೇಷವಾಗಿ ಬೆಳೆಯಿತು. ಸಣ್ಣ ವಿಭಾಗಗಳಲ್ಲಿ ಪ್ರಾಂತ್ಯಾಧಿಕಾರಿಗಳ ಅಧೀನದಲ್ಲಿ ಇತರರಿರುತ್ತಿದ್ದರು. ಈ ಕಾಲದಲ್ಲಿ ರಾಜ್ಯವಿಸ್ತರಣಾಕಾರ್ಯವೂ ಬಹುವಾಗಿ ನಡೆಯುತ್ತಿದ್ದುದರಿಂದ ಸೈನ್ಯದ ಗಾತ್ರವೂ ಬೆಳೆಯಬೇಕಾದುದರಿಂದ ಸಕಾಲದಲ್ಲಿ ಸೈನ್ಯ ಸಹಾಯವನ್ನು ಒದಗಿಸಬಲ್ಲ ಹಾಗೂ ಯುದ್ಧಗಳಲ್ಲಿ ಪಾಲ್ಗೊಳ್ಳಬಲ್ಲ ದಂಡನಾಯಕರ ಆವಶ್ಯಕತೆಯೂ ಬೆಳೆಯಿತು. ಹಿಂದಿನಿಂದ ಕೆಲವು ಸಣ್ಣ ವಿಭಾಗಗಳನ್ನು ವಂಶಪಾರಂಪರ್ಯವಾಗಿ ಆಳಿಕೊಂಡು ಬರುತ್ತಿದ್ದ ಸಾಮಂತ ವಂಶದವರಲ್ಲದೆ, ಇತರ ಸಮರ್ಥ ವ್ಯಕ್ತಿಗಳಿಗೂ ಅವಕಾಶ ಒದಗುತ್ತಿದ್ದಿತು. ಇಂಥವರು ಸಹ ವಿವಿಧ ಪ್ರಾಂತ್ಯಗಳ ಮೇಲೆ ಅಧಿಕಾರವನ್ನು ಹೊಂದುವ ಪರಿಪಾಠ ಬೆಳೆಯಿತು. ಅವರವರ ಪ್ರಾಂತ್ಯಾದಾಯವೇ ಸಾಮಂತರ, ದಂಡನಾಯಕರ ಜೀವನಾದಾಯವಾಗುವ ವ್ಯವಸ್ಥೆ ಬೆಳೆದು ಬಂದಿತು. ಕಲ್ಯಾಣದ ಚಾಳುಕ್ಯ ಮತ್ತು ಹೊಯ್ಸಳರ ಕಾಲದಲ್ಲಿ ಸಹ ಇದೇ ವ್ಯವಸ್ಥೆ ಮುಂದುವರಿದರೂ ಈ ಕಾಲದಲ್ಲಿ ಇಂಥ ಸಾಮಂತರ ಮತ್ತು ಅಧಿಕಾರಿಗಳ ಸಂಖ್ಯೆ ಮತ್ತಷ್ಟು ಹೆಚ್ಚಿತು. ಪ್ರಾಂತ್ಯವಿಭಾಗಗಳಲ್ಲದೆ ಕೆಲವು ದೊಡ್ಡ ಊರುಗಳಲ್ಲೂ ಇಂಥ ಅಧಿಕಾರಿಗಳನ್ನು ನಿಯಮಿಸುವುದೂ ರೂಢಿಯಲ್ಲಿತ್ತು.

14ನೆಯ ಶತಮಾನದ ಆದಿಭಾಗದಲ್ಲಿ ಕರ್ನಾಟಕದ ಆಡಳಿತ ವ್ಯವಸ್ಥೆಯಲ್ಲಿ ಮಹತ್ತರ ಬದಲಾವಣೆಗಳು ಕಾಣಿಸಿಕೊಂಡವು. ಆ ಕಾಲದಲ್ಲಿ ಮುಸಲ್ಮಾನರ ದಾಳಿಗಳಿಂದ ದೇಶ ಅನುಭವಿಸುತ್ತಿದ್ದ ತೊಂದರೆಯನ್ನು ನಿವಾರಿಸಿಕೊಳ್ಳುವ ಮತ್ತು ಅವರ ಅಗಾಧ ಬಲಕ್ಕೆ ಸರಿಸಮವಾಗಿ ಈ ರಾಜ್ಯದ ಕೋಶ ಮತ್ತು ಸೈನ್ಯವನ್ನು ಬಲಪಡಿಸುವ ಆವಶ್ಯಕತೆ ಒದಗಿದ್ದು ಇದಕ್ಕೆ ಮುಖ್ಯ ಕಾರಣ. ಆ ಸಂದರ್ಭದಲ್ಲಿ ವಂಶಪಾರಂಪರ್ಯವಾಗಿ ಆಳಿಕೊಂಡುಬರುತ್ತಿದ್ದ ಹಲವು ಸಾಮಂತ ಮನೆತನಗಳವರ ಸ್ವಾತಂತ್ರ್ಯ ಹಾಗೂ ರಾಜಕೀಯ ಶಕ್ತಿ ಹೆಚ್ಚಿದ್ದು ಸಾರ್ವಭೌಮನ ಅಧಿಕಾರವನ್ನೇ ಕುಂಠಿತಗೊಳಿಸುವ ಪರಿಸ್ಥಿತಿಯೂ ಆಗಾಗ್ಗೆ ಸಂಭವಿಸುತ್ತಿತ್ತು. ಹೊರಗಿನಿಂದ ಹೆಚ್ಚಿನ ತೊಂದರೆಗಳಿಲ್ಲದಿದ್ದ ಹಿಂದಿನ ಕಾಲದಲ್ಲಿ ಅಂಥವರನ್ನು ಬಗ್ಗುಬಡಿಯುವ ಕಾರ್ಯವನ್ನು ಸಾರ್ವಭೌಮರು ಸಾಧಿಸಿಕೊಳ್ಳಬಹುದಾಗಿತ್ತು. ಆದರೆ ಈ ಹೊಸ ಪರಿಸ್ಥಿತಿಯಲ್ಲಿ ಸಾರ್ವಭೌಮನ ಶಕ್ತಿಯನ್ನು ಇದಕ್ಕೆ ವ್ಯಯಮಾಡುವುದು ಆತ್ಮಘಾತಕ ವಾಗುತ್ತಿದ್ದುದರಿಂದಲೋ ಏನೋ ಹೊಯ್ಸಳ 3ನೆಯ ಬಲ್ಲಾಳನ ಕಾಲದಲ್ಲಿ ಹಿಂದಿನ ಸಾಮಂತರಾಜವಂಶಗಳ ಅಧಿಕಾರ ಕ್ರಮೇಣ ಕುಂಠಿತವಾಯಿತು. ಹೆಚ್ಚಿನ ಹಳೆಯ ಸಾಮಂತ ಕುಲಗಳು ಪದಚ್ಯುತವಾದವು. ಅದರ ಬದಲು ರಾಜನೇ ಅನೇಕ ವಿಭಾಗಗಳಿಗೆ ಸಮರ್ಥ ದಂಡನಾಯಕರನ್ನು ತನ್ನ ಪ್ರತಿನಿಧಿಯಾಗಿ ನೇಮಿಸುವುದೂ ಅಧಿಕಾರಿಗಳನ್ನು ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ವರ್ಗಾಯಿಸುವುದೂ ಸಾಮಾನ್ಯವಾಯಿತು. ವಿಜಯನಗರದ ಅರಸರು ಸುಮಾರು ಇದೇ ಪದ್ಧತಿಯನ್ನೇ ಮುಂದುವರಿಸಿದರು. ಈ ಕಾಲದಲ್ಲಿ ರಾಜ್ಯವೂ ಬಹುವಿಸ್ತಾರವಾದ್ದರಿಂದ ಪ್ರಾಂತ್ಯಗಳು ಬಹುಮಟ್ಟಿಗೆ ಪುನರ್ವಿಂಗಡಿತವಾದುವು. ಆಡಳಿತ ವಿಭಾಗಗಳಲ್ಲಿ ರಾಜ್ಯ, ಮಂಡಳ, ಸೀಮೆ- ಈ ರೀತಿಯ ಹೊಸ ಹೊಸ ಹೆಸರುಗಳು ಕಾಣಿಸಿಕೊಂಡವು. ವಿಜಯನಗರದ ಅರಸರು ತಮ್ಮ ಆಳ್ವಿಕೆಯ ಒಂದು ಘಟ್ಟದಲ್ಲಿ ಕೆಲವು ವಿಭಾಗಗಳಲ್ಲಿ ಒಂದೊಂದು ವಂಶದವರನ್ನೇ ಪ್ರತಿಷ್ಠಾಪಿಸುವ ಕ್ರಮವನ್ನು ಕೈಗೊಂಡರು. ಹೀಗೆ ಸ್ಥಾಪಿಸಿದವರೇ ಮುಂದೆ ಅನೇಕ ಪಾಳೆಯಗಾರ ಮನೆತನಗಳಾಗಿ ಚಿಕ್ಕಚಿಕ್ಕ ರಾಜ್ಯಘಟಕಗಳ ನಾಯಕರಾಗಿ ರೂಪುಗೊಂಡರು.

ಅತ್ತ ಉತ್ತರ ಕರ್ನಾಟಕದ ಭಾಗದಲ್ಲಿ ಬಹಮನೀ ಆಳ್ವಿಕೆ ಪ್ರಾರಂಭವಾದಾರಭ್ಯ ಅಲ್ಲಿನ ಆಡಳಿತ ವ್ಯವಸ್ಥೆಯೂ ಮಾರ್ಪಾಡಾಯಿತು. ಹಿಂದಿನ ಯಾವ ಆನುವಂಶಿಕ ಸಾಮಂತರೂ ಮುಂದುವರೆಯಲಿಲ್ಲ. ಅಷ್ಟೇ ಅಲ್ಲದೆ ಪರಗಣೆ, ಸಮ್ಮತ್, ತರಫ್, ಮೌಜೆ, ಮಜರೆ ಇತ್ಯಾದಿ ಹೊಸ ಪ್ರಾಂತ್ಯ ವಿಭಾಗಗಳು ರಚಿತವಾಗಿ ಅವುಗಳಿಗೆ ಮುಖ್ಯಾಧಿಕಾರಿಗಳಾಗಿ ಹೆಚ್ಚಿನಮಟ್ಟಿಗೆ ರಾಜಬಂಧುಗಳನ್ನೋ ಇತರ ಮುಸಲ್ಮಾನ ಪ್ರಮುಖರನ್ನೋ ನಿಯಮಿಸುವುದು ರೂಢಿಯಾಯಿತು. ಅವರ ಆಡಳಿತ ಚೌಕಟ್ಟು ದೆಹಲಿಯ ಸುಲ್ತಾನರ ಮಾದರಿಯಲ್ಲಿ ರೂಪಿತವಾಗಿತ್ತು. ಮುಂದೆ ಆಳಿದ ಆದಿಲ್ ಶಾಹೀ ಅರಸರೂ ಬಹಮನೀ ವ್ಯವಸ್ಥೆಯನ್ನೇ ಅಳವಡಿಸಿಕೊಂಡಿದ್ದರು.

ಈ ರೀತಿಯ ಹಲವು ಬದಲಾವಣೆಗಳ ಪರಿಣಾಮ ಹೆಚ್ಚಿನ ಮಟ್ಟಿಗೆ ಪ್ರಾಂತ್ಯಾಡಳಿತ ವ್ಯವಸ್ಥೆಗಷ್ಟೇ ಸೀಮಿತವಾಗಿದ್ದಂತೆ ತೋರುತ್ತದೆ. ಏಕರಾಜಪ್ರಭುತ್ವದ ರೂಪರೇಷೆಗಳು ಮತ್ತು ಅದಕ್ಕೆ ಸಂಬಂಧಿಸಿದ ಕೇಂದ್ರ ಆಡಳಿತ ರೀತಿಗಳು ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿದ್ದುವು. ಸ್ಥಳೀಯ ಆಡಳಿತ ಸಹ ಹೆಚ್ಚಿನ ಬದಲಾವಣೆಗೆ ಒಳಗಾಗಲಿಲ್ಲ. ಆದರೆ ಹಳೆಯ ಅಗ್ರಹಾರಗಳಲ್ಲಿದ್ದ ಪ್ರಜಾಪ್ರತಿನಿಧಿ ರೀತಿಯ ಆಡಳಿತವೂ ಸು.14ನೆಯ ಶತಮಾನದ ಅನಂತರ ಮರೆಯಾಗಿ ಅಂಥ ಊರುಗಳಲ್ಲೂ ಒಬ್ಬ ಆಡಳಿತಾಧಿಕಾರಿಯೇ ಮುಖ್ಯಸ್ಥನಾಗಿ ನೇಮಕವಾಗುತ್ತಿದ್ದಂತೆ ತೋರುತ್ತದೆ.

17ನೆಯ ಶತಮಾನದವರೆಗಿನ ಆಡಳಿತ ವ್ಯವಸ್ಥೆಯಲ್ಲಿ ಇದ್ದ ವಿವಿಧ ಸಿಬ್ಬಂದಿಯವರ ಅಧಿಕಾರ ವ್ಯಾಪ್ತಿ ಮತ್ತು ಕರ್ತವ್ಯಗಳು ಏನು

ಎಂಬುದು ಖಚಿತವಾಗಿ ತಿಳಿಯುವುದು ಕಷ್ಟ. ಹೆಸರುಗಳ ಆಧಾರದಿಂದ ಮಾತ್ರ ಸ್ವಲ್ಪಮಟ್ಟಿಗೆ ಊಹಿಸಬಹುದು. ಕದಂಬರ ಕಾಲದಲ್ಲಿ ಸೇನಾಪತಿ, ದೇಶ ಮತ್ತು ಗ್ರಾಮಗಳ ಭೋಜ, ಭೋಜಕ, ಆಯುಕ್ತಕ ಈ ಅಧಿಕಾರಿಗಳಿದ್ದ ಬಗ್ಗೆ ಶಾಸನೋಲ್ಲೇಖಗಳಿವೆ. ಬಾದಾಮಿಯ ಚಳುಕ್ಯರ ಕಾಲದಲ್ಲಿ ವಿಷಯಪತಿ, ವಿಷಯಾಧಿಪತಿ, ಸಾಮಂತ, ಗ್ರಾಮಭೋಗಿಕ, ಮಹತ್ತರ, ದೇಶಾಧಿಪತಿ, ನಗರ ಮಹಲ್ಲಕ, ರಾಜಪುರುಷ, ಮಹಾಸಂಧಿವಿಗ್ರಹಿ, ಮಹಾಕ್ಷಪಟಲಾಧಿಕೃತ, ಗಾಮುಂಡ, ಕರಣ ಮೊದಲಾದವರಿದ್ದರು. ವಿಷಯಪತಿ, ಭೋಗಪತಿ, ರಾಷ್ಟ್ರಪತಿ, ದಂಡನಾಯಕ, ಮಹಾಸಂಧಿ ವಿಗ್ರಹಿಕ, ನಾಳ್ಗಾವುಂಡ, ಗಾವುಂಡ ಮೊದಲಾದವರು ರಾಷ್ಟ್ರಕೂಟರ ಕಾಲದಲ್ಲಿದ್ದರು. ಚಾಳುಕ್ಯ, ಹೊಯ್ಸಳರ ಕಾಲದಲ್ಲಿ ಪ್ರಧಾನ, ಮನೆವೆರ್ಗ್ಗಡೆ, ತಂತ್ರಪಾಲ, ತಂತ್ರಸೇನಬೋವ, ಹಡಪದ, ತಂತ್ರಪಾಳದಧಿಷ್ಠಾಯಕ, ಹೇರಿಲಾಳ, ಕನ್ನಡ ಸಂಧಿವಿಗ್ರಹಿ, ಸಂಧಿವಿಗ್ರಹಿ, ವಡ್ಡರಾವುಳದಧಿಕಾರಿ, ಭಂಡಾರಿ, ಅಧ್ಯಕ್ಷ, ಸರ್ವಾಧ್ಯಕ್ಷ, ಅಂತಃಪುರವೆರ್ಗ್ಗಡೆ, ಬಾಹತ್ತರ ನಿಯೋಗಾಧಿಪತಿ, ಪಟ್ಟಸಾಹಣಿ, ಪಟ್ಟಸಾಹಣಾದಿಷ್ಠಾಯಕ, ಅಚ್ಚುಪನ್ನಾಯದಧಿಷ್ಠಾಯಕ, ಪಡಿಹಾರ, ಚೂಳಾಯ್ತ, ಶ್ರೀಕರಣಾಧಿಕಾರಿ, ಹೆಗ್ಗಡೆ, ಗಾವುಂಡ, ಮಹಾಪಸಾಯಿತ, ಸೇನಬೋವ, ಸಾಹಣಿ, ಮಾವಂತ ಮೊದಲಾದವರಿದ್ದರು. ದಂಡನಾಯಕ, ದಳವಾಯಿ, ಮಾಗಣೆಗಾರ, ಮಹಾನಾಯಕಾಚಾರ್ಯ, ಪ್ರಧಾನಿ, ಗ್ರಾಮಹೆಬ್ಬಾರುವ, ಪ್ರಭು, ಒಡೆಯ, ಮೂಲಿಗ ಮೊದಲಾದ ಅಧಿಕಾರಿಗಳು ವಿಜಯನಗರ ರಾಜ್ಯದಲ್ಲಿದ್ದರು. ಬಹಮನೀ ಆದಿಲ್‍ಶಾಹೀ ಅರಸರ ಕಾಲದಲ್ಲಿ ಮಜ್ಲಿಸ್-ಇ-ಖಲ್ವಾತ್ ಎಂಬ ಕೇಂದ್ರ ಸಲಹೆಗಾರಮಂಡಳಿ, ವಕೀಲ್-ಇ-ಸುಲ್ತಾನ್, ಅಮೀರ್-ಇ-ಜುಮ್ಲಾ, ಮಸ್ತಾಫಿ-ಅಲ್-ಮುಲ್ಕ್, ಪೇಶ್ವ, ತರಫ್‍ದಾರ್, ಜಾಗೀರ್‍ದಾರ್, ಸುಬೇದಾರ್, ಸರ್‍ಹವಾಲ್ದಾರ್, ಹವಾಲ್ದಾರ್, ಖಾಜಿ, ಕೊತ್ವಾಲ, ದೇಶಮುಖ್, ದೇಸಾಯಿ, ಪಾಟೀಲ, ಕುಲಕರ್ಣಿ ಮುಂತಾದ ವಿವಿಧ ದರ್ಜೆಯ ಅಧಿಕಾರಿಗಳಿದ್ದರು. ಕೆಳದಿಯ ಅರಸರು ವಿಜಯನಗರದ ಆಡಳಿತ ವ್ಯವಸ್ಥೆಯನ್ನು ರೂಢಿಸಿಕೊಂಡಿದ್ದರು. ಆದರೆ ಈ ವಂಶದ ಶಿವಪ್ಪ ನಾಯಕ ರಾಜ್ಯದಲ್ಲಿದ್ದ ಭೂಮಿಯನ್ನೆಲ್ಲಾ ಹೊಸದಾಗಿ ಅಳತೆಮಾಡಿಸಿ, ಭೂಮಿಯ ವೈವಿಧ್ಯವನ್ನು ಶಾಸ್ತ್ರೀಯವಾಗಿ ಗುರುತಿಸಿ ಅವುಗಳಿಂದ ಬರುವ ಉತ್ಪನ್ನಗಳ ಮೌಲ್ಯವನ್ನು ನಿರ್ಧರಿಸಿ ಅವಕ್ಕೆ ಸೂಕ್ತವಾದ ಕಂದಾಯ ನಿಷ್ಕರ್ಷೆ ಮಾಡಿದ. ಶಿವಪ್ಪನಾಯಕನ ಶಿಸ್ತು ಎಂದು ಪ್ರಸಿದ್ಧವಾದ ವ್ಯವಸ್ಥೆ ಬ್ರಿಟಿಷರ ಕಾಲದವರೆಗೂ ಮುಂದುವರಿಯಿತು. **(ಜೆ.ಆರ್.ಪಿ.)**

17ನೆಯ ಶತಮಾನದಲ್ಲಿ ಕರ್ನಾಟಕಕ್ಕೆ ಮೊಗಲರ ಸಂಪರ್ಕ ಒದಗಿ ಬಂದಾಗಿನಿಂದ ಈ ನಾಡಿನ ಅರಸರು ಮೊಗಲ್ ರಾಜ್ಯಭಾರಕ್ರಮವನ್ನು ಅನುಸರಿಸುವ ಪ್ರವೃತ್ತಿಯನ್ನು ತೋರಿದರು. ಉತ್ತರ ಕರ್ನಾಟಕದ ಭಾಗದಲ್ಲಿ ಆಳ್ವಿಕೆ ನಡೆಸಿದ ಆಸಫ್‍ಜ್ಹಾಹೀಗಳು ಸಾದತ್-ಉಲ್-ಮಹಾಂ ಎಂಬ ನಾಲ್ಕು ಇಲಾಖೆಗಳುಳ್ಳ ಆಡಳಿತ ವ್ಯವಸ್ಥೆಯನ್ನು ರೂಪಿಸಿದರು. ಅವು ಕಂದಾಯ, ಪೊಲೀಸು, ನ್ಯಾಯ ಮತ್ತು ಸಂಕೀರ್ಣ ಇಲಾಖೆಗಳು. ಒಬ್ಬೊಬ್ಬ ವಜೀರ ಇವಕ್ಕೆ ಮುಖ್ಯಸ್ಥ. ದೇಶ ಸುಬಾಗಳಾಗಿ ವಿಭಾಗಿತವಾಗಿ ಸುಬೇದಾರರ ಅಧೀನದಲ್ಲಿದ್ದುವು. ಅದರ ಉಪವಿಭಾಗಗಳಾದ ತಾಲ್ಲೂಕುಗಳಲ್ಲಿ (ತಹಸೀಲ್) ತಾಲ್ಲೂಕುದಾರರು (ತಹಸೀಲ್ದಾರ್) ಇರುತ್ತಿದ್ದರು. ಪೇಷ್ಕಾರ್, ಗಿರ್ದಾವಾರ್, ಪಾಟೀಲ, ಪಟವಾರಿ, ಕುಲಕರ್ಣಿ ಎಂಬುವರು ಇತರ ದರ್ಜೆಯ ಅಧಿಕಾರಿಗಳು. ನಾಜಿಂ-ಇ-ದಿವಾನಿ, ನಾಜಿಂ-ಇ-ಸುಬಾ ಮೊದಲಾದವರು ನ್ಯಾಯಾಧಿಕಾರಿಗಳು. ಹಿಂದೆ ಅಧಿಕಾರಿಗಳಿಗೆ ಇನಾಂಗಳನ್ನು ನೀಡುತ್ತಿದ್ದ ಪದ್ಧತಿಯನ್ನು ತಪ್ಪಿಸಿ ಅದರ ಬದಲು ಸಂಬಳವನ್ನು ನಿಷ್ಕರ್ಷೆ ಮಾಡಿದ್ದು ಈ ಕಾಲದಲ್ಲಾದ ಮುಖ್ಯ ಬದಲಾವಣೆ. ಹೈದರಾಬಾದು ಕರ್ನಾಟಕ ಪ್ರದೇಶದಲ್ಲಿ ಈ ವ್ಯವಸ್ಥೆ ಆ ರಾಜ್ಯ ಭಾರತ ಒಕ್ಕೂಟದಲ್ಲಿ ವಿಲೀನವಾಗುವವರೆಗೂ ಮುಂದುವರೆದುಕೊಂಡು ಬಂತು. ಈ ವ್ಯವಸ್ಥೆಯ ತುಣುಕುಗಳು ಇಂದಿಗೂ ಈ ಪ್ರದೇಶದಲ್ಲಿ ಸ್ವಲ್ಪಮಟ್ಟಿಗೆ ಕಾಣಿಸಿಕೊಳ್ಳುತ್ತವೆ.

ಮೈಸೂರು ಒಡೆಯರ ಕಾಲದ ಪ್ರಾರಂಭದಲ್ಲಿ ವಿಜಯನಗರದ ವ್ಯವಸ್ಥೆಯೇ ಮುಂದುವರಿದಿತ್ತು. ಆದರೆ ಚಿಕ್ಕದೇವರಾಜನ ಆಳ್ವಿಕೆಯಲ್ಲಿ ಸ್ಥಳೀಯ ಆವಶ್ಯಕತೆಗಳಿಗೆ ಅನುಗುಣವಾಗಿ ಸ್ವಲ್ಪಮಟ್ಟಿನ ವ್ಯತ್ಯಾಸಗಳೊಡನೆ ಮೊಗಲ ರೀತಿಯ ವ್ಯವಸ್ಥೆ ರೂಢಿಗೆ ಬಂತು. ಕೇಂದ್ರಾಡಳಿತದಲ್ಲಿ ನಿರೂಪಚಾವಡಿ, ಆಯಕಟ್ಟುಚಾವಡಿ, ಸುಂಕದಚಾವಡಿ ಮುಂತಾದ ಹದಿನೆಂಟು ಇಲಾಖೆಗಳು ಸ್ಥಾಪಿತವಾದುವು. ಪ್ರತಿಯೊಂದು ಚಾವಡಿಗೂ ಭಕ್ಷಿ, ದರೋಗ, ದಫ್ತರಗಳಿರುತ್ತಿದ್ದರು. ರಾಜ್ಯ ಹೋಬಳಿಗಳಾಗಿ ವಿಭಾಗಿತವಾಗಿತ್ತು. ಅವುಗಳಿಗೆ ದಿವಾನ ಮತ್ತು ದಫ್ತರಗಳು ಇರುತ್ತಿದ್ದರು. ಸೈನ್ಯದಲ್ಲಿ ದಳವಾಯಿಗಳಿರುತ್ತಿದ್ದರು. ಮುಂದೆ ಈ ದಳವಾಯಿಗಳೇ ಸರ್ವಾಧಿಕಾರಿಗಳಾಗಿ ರಾಜ್ಯವ್ಯವಹಾರಗಳ ಮುಖ್ಯಾಧಿಕಾರಿಗಳಾಗಿ ರೂಪುಗೊಂಡರು. ಹೈದರ್‍ಅಲಿ ಹಿಂದೆ ಜಾರಿಯಲ್ಲಿದ್ದ ರೀತಿಗಳನ್ನೇ ಮುಂದುವರಿಸಿದ. ಟಿಪ್ಪುಸುಲ್ತಾನನ ಕಾಲದಲ್ಲಿ ಹಲವು ಬದಲಾವಣೆಗಳಾಗಿ ಕೇಂದ್ರದಲ್ಲಿದ್ದ ಇಲಾಖೆಗಳ ಸಂಖ್ಯೆ 7ಕ್ಕೆ ಇಳಿಯಿತು. ಅವನ ಕಾಲದಲ್ಲಿ ಅಸೀಫ್‍ಗಳೆಂಬ ಪ್ರಾಂತ್ಯಾಧಿಕಾರಿಗಳಿದ್ದರು. ರಾಜ್ಯ ನಾಲ್ಕು ಸುಬಾಗಳಾಗಿ, ಪ್ರತಿ ಸುಬಾಕ್ಕೂ ಸುಬೇದಾರರು ಮುಖ್ಯಸ್ಥರಾಗಿ ನೇಮಿತರಾದರು. ತಾಲ್ಲೂಕುಗಳು ಉಪವಿಭಾಗಗಳಾಗಿದ್ದವು. ಅಮಲ್ದಾರರು ಅವುಗಳ ಮುಖ್ಯಾಧಿಕಾರಿಗಳು. ಹಿಂದಿನ ವ್ಯವಸ್ಥೆಯಲ್ಲಿದ್ದ ಹಲವಾರು ಹುದ್ದೆಗಳಿಗೆ ಪಾರಸೀ ಹೆಸರುಗಳು ಬಂದವು.

1799ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ರಾಜ್ಯ ಬಂದ ಸಂದರ್ಭದಲ್ಲಿ ಬ್ರಿಟಿಷ್ ಮುತ್ಸದ್ದಿಗಳ ನೆರವಿನಿಂದ ಹೊಸರೀತಿಯ ವ್ಯವಸ್ಥೆಗಳು ಬಂದುವು. ರಾಜ್ಯದ ಆಂತರಿಕ ಆಡಳಿತವನ್ನು ನೋಡಿಕೊಳ್ಳಲು ವ್ಯವಸ್ಥೆಯ ಮುಖ್ಯಸ್ಥನಾಗಿ ದಿವಾನಹುದ್ದೆ ರಚಿತವಾಯಿತು. ಬಾಹ್ಯವ್ಯವಹಾರಗಳು ಹೆಚ್ಚುಮಟ್ಟಿಗೆ ಬ್ರಿಟಿಷ್ ರೆಸಿಡೆಂಟನ ವಶದಲ್ಲಿದ್ದುವು. ಪ್ರಾಂತ್ಯಾಡಳಿತ ಇತ್ಯಾದಿಗಳಲ್ಲಿ ಹಿಂದಿದ್ದ ರೀತಿಯೇ ಅನುಷ್ಠಾನದಲ್ಲಿತ್ತು. ಆದರೆ 1831ರಲ್ಲಿ ಬ್ರಿಟಿಷರು ಮೈಸೂರು ಸಂಸ್ಥಾನದ ಆಳ್ವಿಕೆಯನ್ನು ನೇರವಾಗಿ ವಹಿಸಿಕೊಂಡಾಗ ಆಡಳಿತದಲ್ಲಿ ಮಹತ್ತರ ಬದಲಾವಣೆಗಳಾದುವು. ದಿವಾನರ ಅಧಿಕಾರವೂ ಕುಂಠಿತವಾಗಿ ಬ್ರಿಟಿಷ್ ಕಮಿಷನರ್ ವಸ್ತುತಃ ಸರ್ವಾಧಿಕಾರಿಯಾದ. ಆಡಳಿತದಲ್ಲಿ ಬ್ರಿಟಿಷ್ ಪದ್ಧತಿಯನ್ನು ಕ್ರಮೇಣರೂಢಿಗೆ ತರಲಾಯಿತು. 1832 ಜೂನ್ 1ರಿಂದ ಸರ್ಕಾರದ ಎಲ್ಲಾ ಲೆಕ್ಕಾಚಾರಗಳೂ ವ್ಯವಹಾರಗಳೂ ಈಗಿರುವ ಇಂಗ್ಲಿಷ್ ಪಂಚಾಂಗದ (ಗ್ರೆಗೋರಿಯನ್) ರೀತ್ಯಾ ನಡೆಯುವ ಏರ್ಪಾಡಾಯಿತು. 1833ರಲ್ಲಿ ಮೈಸೂರು ಸಂಸ್ಥಾನ 5 ವಿಭಾಗಗಳಾಗಿ ವಿಂಗಡವಾಗಿ ಪ್ರತಿವಿಭಾಗವೂ ಒಬ್ಬ ಯೂರೋಪಿಯನ್ ಸೂಪರಿಂಟೆಂಡೆಂಟನ ಆಡಳಿತಕ್ಕೊಳಪಟ್ಟಿತು. ಸಿವಿಲ್, ಕ್ರಿಮಿನಲ್ ಎಂದು ಕಾರ್ಯ ವ್ಯಾಪ್ತಿಯನ್ನು ನಿಷ್ಕರ್ಷಿಸಲಾಯಿತು. 1843ರಲ್ಲಿ ಹಲವಾರು ಇಲಾಖೆಗಳು ಸ್ಥಾಪಿತವಾದುವು. ತಾಲ್ಲೂಕುಗಳು ಪುನರ್ವಿಭಾಗಿತವಾದುವು. 1862-70ರಲ್ಲಿ ಕಮಿಷನರ್ ಆಗಿದ್ದ ಬೌರಿಂಗ್‍ನ ಕಾಲದಲ್ಲಿ ಆದ ಸುಧಾರಣೆಗಳು ಸರ್ಕಾರಕ್ಕೆ ಆಧುನಿಕ ಬಣ್ಣವನ್ನು ಕೊಟ್ಟವು. 8 ಜಿಲ್ಲೆಗಳ ಸೃಷ್ಟಿಯಾಯಿತು. ಡೆಪ್ಯುಟಿ ಕಮಿಷನರ್‍ಗಳು ಮುಖ್ಯಾಧಿಕಾರಿಗಳಾದರು. ಪೊಲೀಸ್, ಕಂದಾಯ, ದಾಖಲಾತಿ (ರಿಜಿಸ್ಟ್ರೇಷನ್), ಮೋಜಣಿ (ಸರ್ವೆ ಸೆಟ್ಲಮೆಂಟ್) ಮೊದಲಾದ ಇಲಾಖೆಗಳು ಸ್ಥಾಪಿತವಾಗಿ ಪ್ರತಿ ಇಲಾಖೆಯೂ ಒಬ್ಬ ಕಮಿಷನರ್‍ನ ಅಧೀನಕ್ಕೆ ಬಂತು. ಪ್ರಪ್ರಥಮವಾಗಿ 1862ರಲ್ಲಿ ಪ್ರಜಾಪ್ರತಿನಿಧಿಗಳನ್ನೊಳಗೊಂಡ ಬೆಂಗಳೂರು ಮತ್ತು ಮೈಸೂರು ಪೌರಸಮಿತಿಗಳ ರಚನೆಯಾಯಿತು. 1871ರಲ್ಲಿ ಹಲವು ತಾಲ್ಲೂಕುಗಳನ್ನೊಳಗೊಂಡ ಸಬ್‍ಡಿವಿಷನ್‍ಗಳು ರೂಪಿತವಾಗಿ ಅವಕ್ಕೆ ಅಸಿಸ್ಟೆಂಟ್ ಕಮಿಷನರ್‍ಗಳು ನೇಮಕವಾದರು. ಸುಮಾರು ಅಂದಿನಿಂದ ಇಂದಿನವರೆಗೂ ಇದೇ ವ್ಯವಸ್ಥೆ ಮುಂದುವರಿದುಕೊಂಡು ಬಂದಿದೆ.

ಬಹುಮಟ್ಟಿಗೆ ಬ್ರಿಟಿಷರಿಂದ ರೂಪಿತವಾದ ಈ ಆಡಳಿತ ವ್ಯವಸ್ಥೆ ಅವರು ನೇರವಾಗಿ ಆಡಳಿತ ನಡೆಸುತ್ತಿದ್ದ ಮದರಾಸು ಮತ್ತು ಮುಂಬಯಿ ಪ್ರಾಂತ್ಯಗಳಲ್ಲೂ 19ನೆಯ ಶತಮಾನದಲ್ಲಿ ಜಾರಿಗೆ ತರಲ್ಪಟ್ಟಿದ್ದು ಆ ಪ್ರಾಂತ್ಯಗಳಿಗೆ ಸೇರಿದ್ದ ಕರ್ನಾಟಕದ ಭಾಗಗಳಲ್ಲೂ ಪ್ರಚಲಿತವಾಗಿದ್ದವು. **(ಎ.ವಿ.ವಿ.)**

1881ರಲ್ಲಿ ಮೈಸೂರು ಸಂಸ್ಥಾನದ ಆಡಳಿತ ಪುನಃ ಇಲ್ಲಿನ ರಾಜವಂಶದವರ ಕೈಗೆ ಬಂದಮೇಲೆ ಮತ್ತೆ ಪ್ರಬಲವಾದ ದಿವಾನರ ಹುದ್ದೆ ರಚಿತವಾಯಿತು. ದಿವಾನರು ಆಡಳಿತದ ಮುಖ್ಯ ಸೂತ್ರಧಾರರಾಗಿದ್ದ ಈ ಕಾಲದಲ್ಲಿ ಕೆಲವು ಸಣ್ಣ ಪುಟ್ಟ ಬದಲಾವಣೆಗಳು ಆಡಳಿತ ವ್ಯವಸ್ಥೆಯಲ್ಲಿ ಆಗಾಗ್ಗೆ ಕಾಣಿಸಿಕೊಂಡವು. ಆದರೆ ಈ ಕಾಲದಲ್ಲಾದ ಒಂದು ಬಹುಮುಖ್ಯ ಚಟುವಟಿಕೆಯೆಂದರೆ ಆಡಳಿತದ ಹಲವು ಹಂತಗಳಲ್ಲಿ ಪ್ರಜಾಪ್ರಭುತ್ವ ತತ್ತ್ವಗಳ ಅಳವಡಿಕೆ. ಇಡೀ ಭಾರತದಲ್ಲಿಯೇ ಪ್ರಥಮವಾದ, ಪ್ರಜಾಪ್ರತಿನಿಧಿ ಸಭೆ 1881ರಲ್ಲಿ ಮೈಸೂರಿನಲ್ಲಿ ಅಸ್ತಿತ್ವಕ್ಕೆ ಬಂತು. ಈ ಸಭೆಗೆ ಶಾಸನಗಳನ್ನು ಮಾಡುವ ಮತ್ತು ನಿರ್ಣಾಯಕ ತೀರ್ಮಾನಗಳನ್ನು ಕೈಕೊಳ್ಳುವ ಅಧಿಕಾರವಿಲ್ಲದಿದ್ದರೂ ಆಡಳಿತವನ್ನು ವಿಮರ್ಶಿಸುವ ಮತ್ತು ಸಲಹೆಗಳನ್ನು

ನೀಡುವ ಕರ್ತವ್ಯವಿತ್ತು. ಪ್ರಜೆಗಳ ಧ್ವನಿಗೆ ಒಂದು ರಂಗ ರೂಪಿತವಾದುದು ಅಂದಿನ ಸ್ಥಿತಿಯಲ್ಲಿ ಮಹತ್ತರ ವಿಷಯ. 1907ರಲ್ಲಿ ಮೈಸೂರು ನ್ಯಾಯ ವಿಧಾಯಕ ಸಭೆ ರೂಪಿತವಾಯಿತು. ವಿಶ್ವೇಶ್ವರಯ್ಯನವರು ದಿವಾನರಾಗಿದ್ದ ಕಾಲದಲ್ಲಿ ಪ್ರತಿನಿಧಿಸಭೆ ವ್ಯವಸ್ಥೆಯ ರೂಢಿಯ ನಾಂದಿಯಾಗಿ ಪುರಸಭೆ, ತಾಲ್ಲೂಕುಮಂಡಳಿ, ಜಿಲ್ಲಾಮಂಡಳಿ ಇವುಗಳಲ್ಲಿ ಚುನಾಯಿತ ಸದಸ್ಯರುಗಳೇ ಹೆಚ್ಚು ಸಂಖ್ಯೆಯಲ್ಲಿರುವಂತೆ ಮಾಡಲಾಯಿತು. 1921ರ ಹೊತ್ತಿಗೆ ಜವಾಬ್ದಾರಿ ಸರ್ಕಾರದ ರಚನೆಯ ವಿಚಾರಗಳು ಕಾಣಿಸಿಕೊಂಡವು. 1923ರಲ್ಲಿ ಪ್ರಜಾಪ್ರತಿನಿಧಿ ಸಭೆ ಶಾಸನಬದ್ಧ ಸಂಸ್ಥೆಯಾಯಿತು. ಸಾರ್ವಜನಿಕ ಆಡಳಿತ, ಆಯ-ವ್ಯಯ ಈ ವಿಷಯಗಳಲ್ಲಿ ತೀರ್ಮಾನ ತೆಗೆದುಕೊಳ್ಳುವ ಹಕ್ಕನ್ನು ಇವಕ್ಕೆ ನೀಡಲಾಯಿತು. ನ್ಯಾಯವಿಧಾಯಕ ಸಭೆ ಸಹಿತ ಸುಧಾರಣೆ ಹೊಂದಿತು. ದಿವಾನರ ಮತ್ತು ಮಹಾರಾಜರ ಆಡಳಿತದೊಳಗೆ ಈ ವ್ಯವಸ್ಥೆಗಳು ಕೆಲಸ ಮಾಡಬೇಕಾಗಿತ್ತು.

1947 ಆಗಸ್ಟ್ 9ರಂದು ಮೈಸೂರು ಸಂಸ್ಥಾನ ಭಾರತ ಒಕ್ಕೂಟದಲ್ಲಿ ವಿಲೀನವಾಯಿತು. ಅದೇ ವರ್ಷ ಅಕ್ಟೋಬರ್ 24ರಂದು ಮೈಸೂರಿನಲ್ಲಿ ಮೊದಲನೆಯ ಪ್ರಜಾಸರ್ಕಾರ ಸ್ಥಾಪಿತವಾಯಿತು. 1948 ಮಾರ್ಚ್‌ನಲ್ಲಿ ಮೊದಲ ಚುನಾವಣೆ ನಡೆಯಿತು. ಕೆಲವು ದಿನಗಳ ಕಾಲ ಈ ಪ್ರಜಾಸರ್ಕಾರ ಮತ್ತು ದಿವಾನರ ಜಂಟಿ ಆಡಳಿತವಿದ್ದರೂ 1949ರಲ್ಲಿ ದಿವಾನರ ಹುದ್ದೆ ರದ್ದಾಯಿತು. ಮೈಸೂರು ಸಂಸ್ಥಾನ 'ಬಿ' ಗುಂಪಿನ ರಾಜ್ಯಗಳಲ್ಲಿ ಸೇರ್ಪಡೆಯಾಗಿ, ಮಹಾರಾಜರ ಪದವಿಗೆ ರಾಜಪ್ರಮುಖ ಎಂಬ ಹೊಸ ಹೆಸರು ಜಾರಿಗೆ ಬಂತು. 1950 ಜನವರಿ 26ರಂದು ಭಾರತ ಸಂವಿಧಾನ ರೂಪುಗೊಂಡು ಕರ್ನಾಟಕದ ಎಲ್ಲ ಭಾಗಗಳಲ್ಲೂ ಭಾರತದಲ್ಲಿ ಈಗ ಇರುವ ರೀತಿಯ ಆಡಳಿತ ವ್ಯವಸ್ಥೆ ಜಾರಿಗೆ ಬಂತು. ವಿವಿಧ ಕಾಲಘಟ್ಟಗಳಲ್ಲಿದ್ದ ಆಡಳಿತ ವ್ಯವಸ್ಥೆಯನ್ನು ಆಯಾ ರಾಜವಂಶಗಳ ಶೀರ್ಷಿಕೆಗಳಲ್ಲೂ ಕೊಡಲಾಗಿದೆ. ಮತ್ತಷ್ಟು ವಿವರಗಳಿಗೆ ನೋಡಿ: ಅಗ್ರಹಾರ ಗ್ರಾಮಗಳು, ನಗರಗಳು, ಸ್ಥಳೀಯಸಂಸ್ಥೆಗಳು **(ಎ.ವಿ.ವಿ;ಎಸ್.ಜೆ.)**

**ಆಡುಗೋಡಿ ಕ್ಷೀರೋದ್ಯಮ ಸಂಶೋಧನ ಕೇಂದ್ರ :** ಬೆಂಗಳೂರು ನಗರದ ಆಗ್ನೇಯ ಬಡಾವಣೆಯ ಆಡುಗೋಡಿಯಲ್ಲಿ ಭಾರತೀಯ ಕೃಷಿ ಸಂಶೋಧನ ಮಂಡಳಿ ಇಂಡಿಯನ್ ಕೌನ್ಸಿಲ್ ಆಫ್ ಅಗ್ರಿಕಲ್ಚರಲ್ ರಿಸರ್ಚ್ (ಐ.ಸಿ.ಎ.ಆರ್.)- ಕ್ಷೀರೋದ್ಯಮದ ಪ್ರಗತಿಗಾಗಿ ಏರ್ಪಡಿಸಿರುವ ಅಧ್ಯಯನ ಮತ್ತು ಸಂಶೋಧನ ಕೇಂದ್ರ. ಈ ಮಂಡಳಿ ಭಾರತದಲ್ಲಿ ಈ ರೀತಿಯಲ್ಲಿ ಏರ್ಪಡಿಸಿರುವ ಮೂರು ಪ್ರಾದೇಶಿಕ ಕೇಂದ್ರಗಳಲ್ಲೊಂದು (ಇನ್ನೆರಡು ಕೇಂದ್ರಗಳು ಪಶ್ಚಿಮ ಬಂಗಾಳದ ಕಲ್ಯಾಣಿಯಲ್ಲೂ ಮುಂಬಯಿ ನಗರದ ಆರೆ ಹಾಲಿನ ಕೇಂದ್ರದಲ್ಲೂ ಇವೆ). ಭಾರತದ ದಕ್ಷಿಣ ಪ್ರಾದೇಶಿಕ ಕೇಂದ್ರವಾದ ಆಡುಗೋಡಿಯಲ್ಲಿ ಕ್ಷೀರೋದ್ಯಮಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಕುರಿತು ಸಂಶೋಧನೆ ನಡೆಸಲು ಅವಕಾಶ ಕಲ್ಪಿಸಿದೆ. ಜೊತೆಗೆ ಕ್ಷೀರೋದ್ಯಮದಲ್ಲಿ ಬಿ.ಎಸ್‌ಸಿ., ಎಂ.ಎಸ್‌ಸಿ., ಮುಂತಾದ ಪದವಿ ತರಗತಿಗಳಿಗೆ ಪಿಎಚ್.ಡಿ. ಗೆ ಪ್ರಾದೇಶಿಕ ಆಧಾರದ ಮೇಲೆ ನಿಯತ ಸಂಖ್ಯೆಯ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿಕೊಂಡು ಶಿಕ್ಷಣ ನೀಡಲಾಗುವುದು. ಈ ಕೇಂದ್ರದಲ್ಲಿಯೇ ಪರೀಕ್ಷೆಗಳು ನಡೆಯುವುವು. ಪರಿಗಣಿತ ವಿಶ್ವವಿದ್ಯಾಲಯದ ಅಂತಸ್ತನ್ನು ಹೊಂದಿರುವ ಐ.ಸಿ.ಎ.ಆರ್. ತನ್ನದೇ ಆದ ಪದವಿಗಳನ್ನು ನೀಡುವುದು.

ಕ್ಷೀರೋದ್ಯಮ ಪ್ರಗತಿಗಾಗಿ ಹರಿಯಾಣದ ಕರ್ನಾಲ್‌ನಲ್ಲಿ ಸ್ಥಾಪನೆಯಾಗಿರುವ ಕ್ಷೀರೋದ್ಯಮ ಸಂಶೋಧನೆ ಸಂಸ್ಥೆಯ ಅಂಗ ಸಂಸ್ಥೆಯಾಗಿ ಇರುವ ಬೆಂಗಳೂರಿನ ಈ ಪ್ರಾದೇಶಿಕ ಕೇಂದ್ರ ವಿದ್ಯಾರ್ಥಿಗಳನ್ನು ಅಧಿಕ ಸಂಖ್ಯೆಯಲ್ಲಿ ಆಕರ್ಷಿಸುತ್ತಿದೆ. ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಒಂದು ವಿದ್ಯಾರ್ಥಿನಿಲಯವನ್ನು ಸ್ಥಾಪಿಸಿದೆ. ಕ್ಷೀರೋದ್ಯಮದ ವಿವಿಧ ಮುಖಗಳಿಗೆ ಸಂಬಂಧಿಸಿದಂತೆ ಫಲದಾಯಕವಾದ ಸಂಶೋಧನೆಗಳನ್ನು ತಜ್ಞರಿಂದ ಇಲ್ಲಿ ನಡೆಸಲಾಗುತ್ತಿದೆ. **(ಎಸ್.ಎ.ಎಸ್.)**

**ಆತಕೂರು :** ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ಒಂದು ಗ್ರಾಮ ಮತ್ತು ಹೋಬಳಿ ಕೇಂದ್ರ. ದಂತಕಥೆಗಳ ಪ್ರಕಾರ ಇದು ಪ್ರಾಚೀನ ತ್ರಿಪುರಾಪುರಿ. ಇಲ್ಲಿರುವ 949-50ರ ಶಾಸನ ಪ್ರಸಿದ್ಧವಾದುದು. ಚೋಳರ ವಿರುದ್ಧ ರಾಷ್ಟ್ರಕೂಟ ದೊರೆ ಮೂರನೆಯ ಕೃಷ್ಣ ತಕ್ಕೋಲಂ ಎಂಬಲ್ಲಿ ಯುದ್ಧ ನಡೆಸುತ್ತಿದ್ದಾಗ ಅವನ ಜೊತೆಗೆ ಗಂಗ ಬೂತುಗ ಪಾಲ್ಗೊಂಡಿದ್ದ. ಸಗರವಂಶದ ಮಣಲೇರ ಗಂಗ ದೊರೆಯ ಅನುಯಾಯಿ. ಅವನ ಪರಾಕ್ರಮಕ್ಕಾಗಿ ಗಂಗ ಬೂತುಗ ಬಾಳ್ಗಳ್ಚಾಗಿ ಆತಕೂರು ಪ್ರದೇಶವನ್ನು ದಾನವಿತ್ತ. ರಾಷ್ಟ್ರಕೂಟ ದೊರೆಯೂ ಸುಪ್ರೀತನಾಗಿ, ಮಣಲೇರ ಬಯಸಿದ ಕಾಳಿ ಎಂಬ ಹೆಸರಿನ ಬೇಟೆ ನಾಯೊಂದನ್ನು ಕೊಟ್ಟ. ಮುಂದೊಮ್ಮೆ ಬೇಟೆಯ ಸಮಯದಲ್ಲಿ ಈ ನಾಯಿ ದೊಡ್ಡ ಹಂದಿಯೊಡನೆ ಹೋರಾಡಿ ಸತ್ತಿತ್ತು. ಆ ನಾಯಿಗೆ ಸಮಾಧಿಕಟ್ಟಿ, ಶಾಸನ ಹಾಕಿಸಿ ಪ್ರತಿದಿನ ಸಮಾಧಿಯ ಪೂಜೆಗೆ ಗೊರವನೊಬ್ಬನನ್ನು ನೇಮಿಸಲಾಯಿತು. ಒಡೆಯ ಮತ್ತು ನಾಯಿಯ ಗಾಢ ಸಂಬಂಧವನ್ನು ಈ ವೀರಗಲ್ಲಿನ ಶಾಸನ ತಿಳಿಸುತ್ತದೆ. ಈಗ ಈ ವೀರಗಲ್ಲು ಬೆಂಗಳೂರಿನ ಸರ್ಕಾರಿ ವಸ್ತುಸಂಗ್ರಹಾಲಯದಲ್ಲಿದೆ.

ಈ ಊರಿನಲ್ಲಿ ಚೆಲ್ಲೇಶ್ವರ, ವೀರಭದ್ರ ದೇಗುಲಗಳು ಉಳಿದಿವೆ. ಹತ್ತಾರು ಗುಡಿಗಳು ನಾಶದ ಅಂಚಿನಲ್ಲಿವೆ. ಗ್ರಾಮದ ಎಲ್ಲೆಯಲ್ಲಿ ತಿರುಮಲ, ಅಟ್ಟಮ್ಮ, ಹಾಲಮ್ಮ, ಪಟ್ಟಲದಮ್ಮ, ಮಾರಮ್ಮ, ಯಲ್ಲಮ್ಮ, ಮಂಟೇಸ್ವಾಮಿ ಮತ್ತು ಬೋರೆದೇವರ ಗುಡಿಗಳಿವೆ. ಚಲ್ಲೇಜನಮ್ಮನ ಸಮಾಧಿ, ಹಲವು ಮಾಸ್ತಿಕಲ್ಲುಗಳೂ ಇಲ್ಲಿವೆ. **(ಎಚ್.ಎಂ.ಎನ್.ಆರ್.)**

**ಆದಯ್ಯ :** ಬಸವಣ್ಣನವರ ಕಾಲದ ವಚನಕಾರ. ಗುಜರಾತಿನ ದ್ವಾರಕಾನಗರ ಈತನ ಜನ್ಮಸ್ಥಳ. ಇವನ ತಂದೆ ಘೋರದತ್ತ, ತಾಯಿ ಪುಣ್ಯವತಿ. ವಂಶವೃತ್ತಿ ವ್ಯಾಪಾರ. ಬಾಲ್ಯದಲ್ಲೇ ವ್ಯವಹಾರಕುಶಲನಾಗಿ ಬಹುಭಾಷಾ ವಿಶಾರದನಾದ ಯುವಕನಾದ ಮೇಲೆ ದೇಶದ ನಾನಾ ಭಾಗಗಳಲ್ಲಿ ಸಂಚರಿಸಿ ಕರ್ನಾಟಕದ ಪ್ರಸಿದ್ಧ ಜೈನರ ನಗರಿಯಾದ ಪುಲಿಗೆರೆಗೆ (ಈಗಿನ ಲಕ್ಷ್ಮೇಶ್ವರ) ಬಂದು ಅಲ್ಲಿನ ಜೈನ ಧರ್ಮಾವಲಂಬಿಯಾದ ಪಾರಿಶೆಟ್ಟಿಯ ಏಕೈಕ ಪುತ್ರಿ ಪದ್ಮಾವತಿಯನ್ನು ಮದುವೆಯಾಗಿ ಸೌರಾಷ್ಟ್ರದ ಸೋಮನಾಥನನ್ನು ತಂದು ಪುಲಿಗೆರೆಯಲ್ಲಿ ಪ್ರತಿಷ್ಠಾಪಿಸಿ ವೀರಶೈವಧರ್ಮವನ್ನು ಮೆರೆದ.

ಈತ ಸೌರಾಷ್ಟ್ರ ಸೋಮೇಶ್ವರ ಎಂಬ ಅಂಕಿತವನ್ನಿಟ್ಟುಕೊಂಡು ವಚನಗಳನ್ನು ಬರೆದಿದ್ದಾನೆ. ದೊರೆತಿರುವ ಈತನ 307 ವಚನಗಳಲ್ಲಿ ಹೆಚ್ಚಿನವು ತತ್ತ್ವ ನಿರೂಪಣೆಗೆ ಸಂಬಂಧಿಸಿವೆ. ಬೆಡಗಿನ ವಚನಗಳನ್ನು ಬಿಟ್ಟರೆ ಉಳಿದ ವಚನಗಳ ಶೈಲಿ ನೇರವಾಗಿದೆ, ಸರಳವಾಗಿದೆ. ಹೊರನಾಡಿನಿಂದ ಬಂದು ಕನ್ನಡವನ್ನು ಕಲಿತು ಕನ್ನಡದಲ್ಲಿ ಹಾಡಿದ ಆದಯ್ಯನ ಹೆಸರು ಕನ್ನಡನಾಡಿನ ಜನಮನದಲ್ಲಿ, ವೀರಶೈವ ಇತಿಹಾಸ, ತತ್ತ್ವನಿರೂಪಣೆ ಮತ್ತು ಶಿವಾನುಭವ ಮಾರ್ಗಗಳಲ್ಲಿ ಚಿರಂತನವಾಗಿರುತ್ತದೆ. ಆದಯ್ಯನನ್ನು ಕುರಿತು ರಚಿತವಾದ ಕಾವ್ಯಗಳಲ್ಲಿ ಈತ ಪರ ವಸ್ತುವಿನ ಅಸ್ತಿತ್ವವನ್ನು ಪ್ರಸ್ತಾಪಿಸುವ ಕಟುತರ ನಿಷ್ಠೆಯುಳ್ಳ ಕಲಿಯಾಗಿ ಕಾಣುತ್ತಿದ್ದರೆ ವಚನಗಳಲ್ಲಿ ಶ್ರೇಷ್ಠ ಪಂಡಿತನಾಗಿ ಮಹಾನುಭಾವಿಯಾಗಿ ಕಂಡುಬರುತ್ತಾನೆ. **(ಬಿ.ಎನ್.ಸಿ.)**

**ಆದಿಚುಂಚನಗಿರಿ :** ಮಂಡ್ಯಜಿಲ್ಲೆಯ ಪ್ರಸಿದ್ಧ ಯಾತ್ರಾಸ್ಥಳ. ನಾಗಮಂಗಲ ತಾಲ್ಲೂಕಿನಲ್ಲಿ ಬೆಳ್ಳೂರಿನ ಉತ್ತರಕ್ಕೆ ಮಾಯಸಂದ್ರ ಹಾದಿಯಲ್ಲಿ 10ಕಿಮೀ ದೂರದಲ್ಲಿದೆ. ತ್ರೇತಾಯುಗದಲ್ಲಿ ಸೀತಾನ್ವೇಷಿಗಳಾಗಿ ಬಂದ ರಾಮಲಕ್ಷ್ಮಣರಿಗೆ ಗಜಾರಣ್ಯದ ಕಾವೇರೀತೀರದ ಚುಂಚನಕಟ್ಟೆ ಕ್ಷೇತ್ರವನ್ನು ಬಿಟ್ಟುಕೊಟ್ಟು ಪರಮೇಶ್ವರ ಇಲ್ಲಿ ಬಂದು ನೆಲೆಸಿ ಚುಂಚ ಎಂಬ ರಾಕ್ಷಸನನ್ನು ಕೊಂದನಂತೆ. ಅಲ್ಲಿಂದ ಮುಂದೆ ಈ ಸ್ಥಳಕ್ಕೆ ಚುಂಚನಗಿರಿ ಎಂಬ ಹೆಸರು ಬಂತೆಂದು ಪ್ರತೀತಿ. ಪರಮೇಶ್ವರನಿಂದ ಸ್ಥಾಪಿತವಾದ ಗುರುಪೀಠಗಳಲ್ಲಿ ಆದಿಪೀಠ ಈ ಕ್ಷೇತ್ರದಲ್ಲಿರುವುದರಿಂದ ಇದು ಆದಿಚುಂಚನಗಿರಿಯಾಗಿದೆ.

ಇಲ್ಲಿನ ಐತಿಹ್ಯ ಹೀಗಿದೆ: ನಿಸರ್ಗಸೌಂದರ್ಯಕ್ಕೆ ಹೆಸರಾಗಿರುವ ಚುಂಚನಗಿರಿಯಲ್ಲಿ ಮೊದಲಿಗೆ ದಟ್ಟವಾಗಿ ಬಿದಿರು ಬೆಳೆದಿತ್ತು. ಬೆಳ್ಳೂರಿನ ಪಾಳೆಯಗಾರನ ಮಗುವಿಗೆ ಗಿಣ್ಣಿಲ್ಲದ ಬಿದಿರಿನ ತೊಟ್ಟಿಲು ಬೇಕಾಯಿತು. ಬಿದಿರನ್ನು ಅರಸಿಕೊಂಡು ಮೂವರು ಮೇದರು ಈ ಗಿರಿಗೆ ಬಂದರು. ನಡುಬೆಟ್ಟಕ್ಕೆ ಬಂದು ಗಿಣ್ಣಿಲ್ಲದ ಬಿದಿರೊಂದನ್ನು ಹುಡುಕಿ ಅದನ್ನು ಕಡಿಯಲು ಮಚ್ಚನ್ನು ಬೀಸಿದಾಗ ಚಿಲ್ಲನೆ ರಕ್ತ ಚಿಮ್ಮಿತು. ಹಿಂದಿರುಗಿ ನೋಡದೆ ಹೊರಟು ಹೋಗುವಂತೆ ಅಶರೀರವಾಣಿಯಾಯಿತು. ಭಯಗೊಂಡ

ಮೇದರು ತುಸು ದೂರ ಹೋಗಿ ಕೌತುಕವನ್ನು ತಾಳಲಾರದೆ ಹಿಂದಿರುಗಿ ನೋಡಿ ರಕ್ತಕಾರಿ ಅಲ್ಲಿಯೇ ಸತ್ತುಬಿದ್ದರು. ಅವರು ಸತ್ತುಬಿದ್ದ ಮೇದರ ಗುಡ್ಡ ಬೆಳ್ಳೂರಿನ ಸಮೀಪದ ಅಂಬಲಜೀರ ಹಳ್ಳಿಯ ಪಕ್ಕದಲ್ಲಿದೆ. ಮೇದರ ತಲೆಗಳೆನ್ನಲಾದ ಮೂರು ಕಲ್ಲಿನ ಮುಂಡಗಳು ಚುಂಚನಗಿರಿಯಲ್ಲಿ ಈಗಲೂ ನೋಡಸಿಗುತ್ತವೆ. ಗಿಣ್ಣಿಲ್ಲದ ಬಿದಿರು, ಮೇದರ ಹೊಡೆತದಿಂದ ಕಚ್ಚಾದ ಶಿವಲಿಂಗವನ್ನು ಪ್ರವಾಸಿಗಳು ಈಗಲೂ ಕಾಣಬಹುದು.

ಈ ಐತಿಹ್ಯಗಳ ಜೊತೆಗೆ ಸ್ಥಳಪುರಾಣವೂ ಈ ಕ್ಷೇತ್ರಕ್ಕಿದೆ. ಈಶ್ವರ ಕಪಾಲದಿಂದ ಅವತರಿಸಿದ ಸಿದ್ಧಯೋಗಿಯೊಬ್ಬ ತೀರ್ಥಯಾತ್ರೆ ಮಾಡುತ್ತ ಪಾರ್ವತಿ ಪರಮೇಶ್ವರರು ತಪಸ್ಸು ಮಾಡುತ್ತಿದ್ದ ಚುಂಚನಗಿರಿಗೆ ಬಂದು, ಅಲ್ಲಿ ಶಿವ ಆ ಯೋಗಿಗೆ ದರ್ಶನವನ್ನು ನೀಡಿ ತನ್ನ ಅಂಶಯುಕ್ತವಾದ ಪೀಠವೊಂದನ್ನು ಸ್ಥಾಪಿಸಿ ತನ್ನ ಪ್ರತಿನಿಧಿಯಾಗಿ ಆ ಸಿದ್ಧಯೋಗಿಯನ್ನು ಅಲ್ಲಿಬಿಟ್ಟ. ತಾನು ಪಂಚಪ್ರಾಣಗಳಿಂದ ಆದಿ ಗಂಗಾಧರೇಶ್ವರ, ಈಶ್ವರ, ಸೋಮೇಶ್ವರ, ಮಲ್ಲೇಶ್ವರ, ಗವಿ ಸಿದ್ಧೇಶ್ವರ ಹೀಗೆ ಪಂಚಲಿಂಗಾಕೃತಿಯಾಗಿ ಸ್ವಯಂ ಉದ್ಭವಿಸಿದ.

ಕ್ಷೇತ್ರರಕ್ಷಣೆಗಾಗಿ ಆದಿಶಕ್ತಿರೂಪಳಾದ ಸ್ತಂಭದೇವತೆಯನ್ನೂ ಪರಶಿವನೇ ಸ್ಥಾಪಿಸಿದನೆಂದು ಸ್ಥಳಪುರಾಣ ನಿರೂಪಿಸುತ್ತದೆ. ವಿಸ್ತಾರವಾದ ಓಲಗದ ಅರೆಯ ಮೇಲೆ ನಿಂತಿರುವ ಕಂಬದಮ್ಮ ಭಕ್ತರ ಅಚ್ಚುಮೆಚ್ಚಿನ ದೇವತೆ. ಬಿಂದು ಸರೋವರದ ಪ್ರಸ್ತಾಪವೂ ಸ್ಥಳಪುರಾಣದಲ್ಲಿಯೇ ಬಂದಿದೆ. ನಡುಬೆಟ್ಟದಲ್ಲಿರುವ ಈ ಆಳವಾದ ಸರೋವರ ಶಿವಜಟೆಯಿಂದ ಚಿಮ್ಮಿದ ಬಿಂದುವೊಂದರಿಂದ ಉಂಟಾದುದು. ಇಲ್ಲಿಂದ ಎಷ್ಟೋ ಅಡಿಗಳ ಎತ್ತರದಲ್ಲಿರುವ ಶ್ರೀಗಂಗಾಧರೇಶ್ವರ ದೇವಾಲಯದ ಗರ್ಭಗುಡಿಯ ಲಿಂಗದ ಬಟ್ಟಲಿನಿಂದ ಅಭಿಷೇಕ ಜಲ ಯಾವುದೋ ಗುಪ್ತಮಾರ್ಗವಾಗಿ ಈ ಸರೋವರಕ್ಕೆ ಇಳಿದು ಬರುವುದೆಂಬ ನಂಬಿಕೆಯೂ ಇದೆ. ಸಮುದ್ರಮಟ್ಟದಿಂದ 1060ಮೀ ಎತ್ತರದಲ್ಲಿರುವ ಗಿರಿ ಪ್ರಕೃತಿಸೌಂದರ್ಯಕ್ಕೆ ಹೆಸರಾಗಿದೆ. ದಟ್ಟವಾಗಿ ಹಬ್ಬಿ ನಿಂತಿರುವ ಕಾನನವನ್ನು ಹಾದು ಬೆಟ್ಟವನ್ನು ಏರಿದರೆ ಅನ್ನದಾನಿ ಮಠ ಸಿಕ್ಕುತ್ತದೆ. ಕರ್ನಾಟಕದ ಪ್ರಾಚೀನ ಮಠಗಳಲ್ಲೊಂದಾದ ಅಯ್ಯನಮಠ ಅನ್ನದಾನಕ್ಕೆ ಹೆಸರಾದುದು. ಅರುವತ್ತೊಂಬತ್ತಕ್ಕೂ ಹೆಚ್ಚು ಸಂಖ್ಯೆಯ ಗುರುಪರಂಪರೆಯನ್ನು ಪಡೆದ ಈ ಪ್ರಸಿದ್ಧ ಮಠಕ್ಕೆ ನಾಡಿನ ನಾನಾ ಕಡೆಯ ಭಕ್ತರು ನಡೆದುಕೊಳ್ಳುತ್ತಾರೆ. ಈ ಕ್ಷೇತ್ರವನ್ನು ಕುರಿತ ಜನಪದ ಸಾಹಿತ್ಯವೂ ವಿಪುಲವಾಗಿದೆ.



ಬೆಟ್ಟ ಹಾಗೂ ದೇವಾಲಯ

ಚುಂಚನಗಿರಿ ಒಂದು ಉತ್ತಮ ಪ್ರವಾಸಿ ಕ್ಷೇತ್ರ.ಗಿರಿಯ ಒಂದೊಂದು ಮೂಲೆಯಲ್ಲೂ ಅನೇಕ ಅದ್ಭುತಗಳು ನಮಗೆ ಎದುರಾಗುತ್ತವೆ. ಇಲ್ಲಿನ ಗವಿ ಸಿದ್ಧೇಶ್ವರ ದೇವಾಲಯಕ್ಕೆ ಬಂಡೆಗಳನ್ನೇರಿ ಹೋಗುವುದೊಂದು ಸಾಹಸ. ಇದಕ್ಕಿಂತ ಕಷ್ಟಸಾಧ್ಯವಾದ ಗಿರಿಯ ಎರಡು ಶಿಖರಗಳನ್ನು ಚೋಳೂರ ಕಂಬಗಳಿಗೆ ಗಲ್ಲು ಎಂದು ಕರೆಯಲಾಗಿದೆ. ಚೋಳರು ಕಟ್ಟಿದ ಗಂಗಾಧರನ ಗುಡಿಯಿಂದ ಕಡಿದಾದ ಬಂಡೆಗಳನ್ನೇರಿ ಬೆಟ್ಟದ ದಕ್ಷಿಣ ತುದಿಯನ್ನು ಮುಟ್ಟಿದರೆ ಚೋಳೂರ ಕಂಬ ಸಿಕ್ಕುತ್ತದೆ. ಜಾತ್ರೆಯ ಸಂದರ್ಭದಲ್ಲಿ ಇಲ್ಲಿ ಹಚ್ಚಿದ ದೀಪ ಸು.64ಕಿಮೀ ದೂರದ ಚೋಳೂರಿನ ಕೊಳದಲ್ಲಿ ಕಾಣುವುದಾಗಿ ಹೇಳುತ್ತಾರೆ. ಇನ್ನೊಂದು ಶಿಖರ ಗಳಿಗೆಗಲ್ಲು. ಭೀಕರವಾದ ಕಂದಕಗಳಿಂದ ಸುತ್ತುವರಿದ ಕಡಿದಾದ ಕೋಡುಗಲ್ಲಿಗೆ ಸರಪಣಿಯನ್ನು ಹಿಡಿದು ಹತ್ತುವ ಸಾಹಸ ರೋಮಾಂಚನವನ್ನು ತರುತ್ತದೆ. ಮಕ್ಕಳಾಗದ ಹೆಂಗಸರು ಹರಕೆ ಹೊತ್ತು ಮುಂದೆ ಮಕ್ಕಳಾದರೆ ಬೆನ್ನಿಗೆ ಶಿಶುವನ್ನು ಕಟ್ಟಿಕೊಂಡು ಈ ಶಿಖರವನ್ನು ಹತ್ತುತ್ತಾರೆ.



ಶ್ರೀ ಕಾಲಭೈರವ

ಗಿರಿಯ ಮಧ್ಯಶಿಖರದ ಕತ್ತಲು ಕವಿದಿರುವ ಗವಿಯಲ್ಲಿ ಸೋಮೇಶ್ವರ ಲಿಂಗವಿದೆ. ಬೆಟ್ಟದ ದಕ್ಷಿಣಕ್ಕಿರುವ ನಾಗರಕಲ್ಲು, ಹೆಡೆಬಿಚ್ಚಿದ ಘೋರಸರ್ಪದಂತೆ ಮರದ ಎತ್ತರಕ್ಕೆ ಬೆಳೆದು ನಿಂತಿದೆ. ಅಲ್ಲಿಗೆ ಸಮೀಪದ ಕೂಡುಬಂಡೆ ಕೂಗಿದರೆ ಮೂರುಬಾರಿ ಓಗೊಡುತ್ತದೆ. ಮೇದರಗುಡ್ಡದ ಬಳಿಯಲ್ಲಿ ಹಾಕಿದ ಕೂಗು ಸ್ವಚ್ಛವಾಗಿ ಬೆಟ್ಟದ ನೆತ್ತಿಯಿಂದಲೆಲ್ಲೋ ಕೇಳಿಬರುತ್ತದೆ. ಉತ್ತರ ಭಾಗದ ಹನುಮಾನ ಕಣಿವೆಯು ಗಿರಿಯ ಮತ್ತೊಂದು ಪಾರ್ಶ್ವದ ರಮ್ಯನೋಟವನ್ನು ಒದಗಿಸುತ್ತದೆ. ಚುಂಚನಗಿರಿ ಪವಿತ್ರ ಕ್ಷೇತ್ರವಾಗಿರುವಂತೆ ಮಠ, ದೇವಾಲಯ, ನಾಗಚಾವಡಿ, ಭೈರವನ ಗುಡಿ ಮತ್ತು ನಾನಾರೀತಿಯ ನಿಸರ್ಗದ ಅದ್ಭುತಗಳಿಂದ ಕೂಡಿ ಪ್ರೇಕ್ಷಣೀಯ ಸ್ಥಳವೂ ಆಗಿದೆ. ಹೊಸದಾಗಿ ಬೃಹತ್ ಕಾಲಭೈರವ ದೇವಾಲಯ ನಿರ್ಮಿತವಾಗುತ್ತಿದ್ದು, ಈ ಕ್ಷೇತ್ರಕ್ಕೆಬರುವ ಯಾತ್ರಾರ್ಥಿಗಳಿಗೆ ಹತ್ತುಹಲವು ಸೌಲಭ್ಯಗಳನ್ನು ಒದಗಿಸಲಾಗಿದೆ.

ಇಲ್ಲಿಯ ಮಠದ ಪೀಠಾಧಿಪತಿಗಳಾದ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ನೇತೃತ್ವದಲ್ಲಿ ಮತ್ತು ಬಹುಸಂಖ್ಯಾತ ಅನುಯಾಯಿಗಳ ಉತ್ಸಾಹದಿಂದ ಈ ಕ್ಷೇತ್ರ ದಿನೇದಿನೇ ಅಭಿವೃದ್ಧಿಯಾಗುತ್ತಿದೆ. ಇಲ್ಲಿ ಒಂದು ಪ್ರಥಮ ದರ್ಜೆ ಕಾಲೇಜು ಇದೆ. *

**ಆದಿಯಪ್ಪ :** ಸು.1650 ಜೈನಕವಿ. ಧನ್ಯಕುಮಾರಚರಿತ್ರೆ ಎಂಬ ಕಾವ್ಯದ ಕರ್ತೃ. ಶ್ರುತಿಯತಿಯ ಶಿಷ್ಯನಾದ ಮುನಿಯಣ್ಣ ಇವನ ತಂದೆ, ತಾಯಿ ದೇವರಸಿ. ಸರಸಿಜಸಂಭವ (ಬ್ರಹ್ಮ), ಸರಸಿಜರಿಪು (ಚಂದ್ರ), ವಿಜಯಪ್ಪ ಈ ಮೂವರೂ ಈತನ ಅಣ್ಣಂದಿರು. ಚಂದ್ರಕೀರ್ತಿಯ

ಮಗನಾದ ಪ್ರಭೇಂದುಮುನಿ ಕವಿಯ ಗುರುವಾಗಿದ್ದಂತೆ ತೋರುತ್ತದೆ. ಗೇರುಸೊಪ್ಪೆಯ ರಾಜ ಭೈರವರಾಯನ ಗುರುವಾದ ವೀರಸೇನ ಮುನಿಶ್ರೇಷ್ಠನ ಆದೇಶದಂತೆ ಕವಿ ಕೃತಿರಚನೆ ಮಾಡಿದ್ದಾನೆ.

ಧನ್ಯಕುಮಾರಚರಿತ್ರೆ ಸಾಂಗತ್ಯದಲ್ಲಿ ರಚಿತವಾಗಿದೆ. ಇದರಲ್ಲಿ ಸು.410 ಪದ್ಯಗಳಿವೆ, ಮಧ್ಯದಲ್ಲಿ ಕೆಲವು ಕಂದಪದ್ಯಗಳೂ ವೃತ್ತಗಳೂ ಇವೆ. ರಾಜನ ಮಗನಾಗಿ ಹುಟ್ಟಿದ ಅಕೃತಪುಣ್ಯ ಎಂಬ ವ್ಯಕ್ತಿ, ಬಲಭದ್ರನೆಂಬ ವೈಶ್ಯನ ಮನೆಯಲ್ಲಿ ಸೇವಕನಾಗಿದ್ದು, ಅವನ ಮಕ್ಕಳ ಕಿರುಕುಳ ತಡೆಯಲಾರದೆ ಋಷ್ಯಾಶ್ರಮದಲ್ಲಿ ಮುನಿಸೇವಾನಿರತನಾಗಿ, ಸತ್ತಬಳಿಕ ಧನಪಾಲನೆಂಬ ವೈಶ್ಯನಿಗೆ ಮಗನಾಗಿ ಹುಟ್ಟಿ ಅಸಾಧಾರಣ ಐಶ್ವರ್ಯವನ್ನೂ ಖ್ಯಾತಿಯನ್ನೂ ಪಡೆದು ತನ್ನ ವಂಶೋದ್ಧಾರ ಮಾಡಿದುದರ ವಿಷಯ ಈ ಕಾವ್ಯದಲ್ಲಿ ವರ್ಣಿತವಾಗಿದೆ. ವರ್ಣನೆಗಿಂತ ಕಥೆಯ ನಿರೂಪಣೆಯಲ್ಲೇ ಕವಿಯ ಒಲವು ಅಧಿಕವಾಗಿ ಕಂಡುಬರುತ್ತದೆ.

ಆದಿಯಪ್ಪ ಎಂಬ ಹೆಸರಿನ ಇನ್ನೊಬ್ಬ ಬ್ರಾಹ್ಮಣಕವಿ (ಸು.1700) ಪಟ ಹಸ್ತನ ಚರಿತ್ರೆ ಎಂಬ ಸಾಂಗತ್ಯಗ್ರಥವನ್ನು ಬರೆದಿರುವಂತೆ ತಿಳಿದುಬರುತ್ತದೆ.

*

**ಆದಿಲ್‌ಶಾಹೀ ವಂಶ :** 1490-1686ರ ಅವಧಿಯಲ್ಲಿ ಉತ್ತರ ಕರ್ನಾಟಕದ ಬಹುಭಾಗ ಹಾಗೂ ದಖನ್ನಿನ ಇತರ ಪ್ರದೇಶಗಳ ಮೇಲೆ ಒಡೆತನ ನಡೆಸಿದ ರಾಜವಂಶ. ಆದಿಲ್‌ಶಾಹೀಗಳ ರಾಜಧಾನಿ ಬಿಜಾಪುರ. ಬಹಮನೀ ರಾಜ್ಯ ಒಡೆದುಹೋದಮೇಲೆ ಹುಟ್ಟಿಕೊಂಡ ಐದು ಶಾಹೀ ರಾಜ್ಯಗಳಲ್ಲಿ ಇವರದು ಅತ್ಯಂತ ಪ್ರಸಿದ್ಧವಾದುದು. ಆದಿಲ್‌ಶಾಹೀ ಹೆಸರು ಈ ವಂಶದ ಆಳ್ವಿಕೆಯ ಸ್ಥಾಪಕನಾದ ಯೂಸುಫ್ ಆದಿಲ್‌ಖಾನ್‌ನ ಹೆಸರಿನಮೇಲೆ ರೂಢಿತವಾಗಿದೆ. ಈತ ತಾನು ಆಟೊಮನ್ ಸಾಮ್ರಾಜ್ಯದ ಸುಲ್ತಾನ 2ನೆಯ ಮುರಾದ್‌ನ ವಂಶಸ್ಥನೆಂದು ಹೇಳಿಕೊಂಡಿದ್ದಾನೆ. ಆದರೆ ಇದು ಸ್ವಕಲ್ಪಿತ. ಈತ ಷೇಕ್ ಸಫಿಯ ಯುವಕ ಗುಲಾಮರಲ್ಲಿ ಒಬ್ಬನಾಗಿ ನೇಮಕವಾಗಿದ್ದ. ಈತನ ವಂಶಸ್ಥರಲ್ಲಿ ಮುಂದಿನವರು ಸಫವಿದ್ ಮನೆತನಕ್ಕೆ ನಿಷ್ಠೆ ತೋರಿಸುತ್ತಿದ್ದರು. ಈ ಮಾಹಿತಿಗಳು ಇವನು ಅಜರ್‌ಬೈಜಾನ್ ಪ್ರದೇಶದ ಮೂಲ ಪಂಗಡಗಳಿಗೆ ಸೇರಿದವನು ಎಂದು ತೋರಿಸುತ್ತವೆ.

**ರಾಜಕೀಯ ಇತಿಹಾಸ:** ದಖನ್ ಹಾಗೂ ದಕ್ಷಿಣ ಭಾರತದ ರಾಜಕೀಯದಲ್ಲಿ ಬಹು ಪರಿಣಾಮಕಾರಿ ಪಾತ್ರವಹಿಸಿದ್ದ ಈ ವಂಶದಲ್ಲಿ ಒಂಬತ್ತು ಸುಲ್ತಾನರು ಆಳಿದರು. ಅವರಲ್ಲಿ ಯೂಸುಫ್, ಅಲಿ, 2ನೆಯ ಇಬ್ರಾಹೀಂ ಮತ್ತು ಮಹಮ್ಮದ್ ಪ್ರಮುಖರು. ಇತರರು ಇವರಷ್ಟು ಬಲಶಾಲಿಗಳಲ್ಲದಿದ್ದರೂ ತಮ್ಮ ವಂಶದ ದಕ್ಷ ಪರಂಪರೆಯಲ್ಲೇ ಕರ್ತವ್ಯ ನಿರ್ವಹಿಸಿ ರಾಜ್ಯದ ಪ್ರಾದೇಶಿಕ ಸಮಗ್ರತೆಯನ್ನು ಉಳಿಸಿಕೊಂಡು ಬಂದರು. ಅಲ್ಲದೆ ಕಲೆ, ವಾಸ್ತುಶಿಲ್ಪ ಹಾಗೂ ಸಾಹಿತ್ಯ ರಂಗಗಳಲ್ಲಿನ ಹಲವು ಸಾಧನೆಗಳಿಗೂ ಕಾರಣರಾದರು.

ಮೊದಲ ದೊರೆ ಯೂಸುಫ್ ಆದಿಲ್ ಷಾ (1490-1510). ಮೊದಲು ಬಹಮನೀ ಅರಸರ ಅಧೀನದಲ್ಲಿ ಬಿಜಾಪುರದ ಪ್ರಾಂತ್ಯಾಧಿಕಾರಿಯಾಗಿದ್ದ. ಬಹಮನೀ ಸಾರ್ವಭೌಮ ಮಹಮ್ಮದ್ ನಿರ್ಬಲನಾಗಿ ರಾಜ್ಯದ ವ್ಯವಹಾರ ಖಾಸಿಮ್ ಬರೀದ್‌ನ ಕೈಸೇರಿದಾಗ, ಈತ ಬಿಜಾಪುರದಲ್ಲಿ ಸ್ವತಂತ್ರನಾಗಿ ಆಳಲಾರಂಭಿಸಿದ. ಅಸೀಮ ವೀರನೂ ರಾಜಕೀಯಪಟುವೂ ಆಗಿದ್ದ ಈತನ ಆಳ್ವಿಕೆಯಲ್ಲಿ ರಾಜ್ಯ ವ್ಯವಸ್ಥಿತವಾಯಿತು. ಆದರೆ ಇವನ ಮರಣದ ವೇಳೆಗೆ ಪಕ್ಕದ ರಾಜ್ಯಗಳಿಂದ ಬಿಜಾಪುರಕ್ಕೆ ಅಪಾಯ ತಲೆದೋರಲಾರಂಭಿಸಿತು. ಇವನ ಮಗ ಇಸ್ಮಾಯಿಲ್ (1510-34) ಸಿಂಹಾಸನವೇರುವಾಗ ಕೇವಲ 13 ವರ್ಷದ ಬಾಲಕ. ಆ ಕಾಲದಲ್ಲಿ ರಾಜ ಪ್ರತಿನಿಧಿಯಾಗಿದ್ದ ಕಮಾಲ್ ಖಾನ್ ರಾಜ್ಯಾಧಿಕಾರವನ್ನು ತಾನೇ ವಶಮಾಡಿಕೊಳ್ಳಲು ಪ್ರಯತ್ನಿಸಿದ. ಆದರೆ ಇಸ್ಮಾಯಿಲನ ತಾಯಿ ಈ ಪ್ರಯತ್ನವನ್ನು ವಿಫಲಗೊಳಿಸಿದಳು. ಪರ್ಷಿಯ ಮೊದಲಾದೆಡೆಗಳಿಂದ ಬಂದು ದಖನ್ನಿನಲ್ಲಿ ನೆಲಸಿದ್ದ ಹೆಚ್ಚಿನ ಮಟ್ಟಿಗೆ ಷಿಯಾ ಪಂಥೀಯರಾಗಿದ್ದವರು ಮತ್ತು ಬಹುಮಟ್ಟಿಗೆ ಸ್ಥಳೀಯರೇ ಆಗಿದ್ದ ಸುನ್ನಿ ಪಂಥದವರು ಈ ಎರಡು ಪ್ರಭಾವೀ ಗುಂಪುಗಳೂ ಅಂದಿನ ರಾಜಕೀಯದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದವು. ಆಗಾಗ್ಗೆ ತಲೆ ದೋರುತ್ತಿದ್ದ ಇವರ ವೈಮನಸ್ಯಗಳು ರಾಜ್ಯಗಳ ಮೇಲೆ ಅನೇಕ ರೀತಿಯ ಪರಿಣಾಮವನ್ನು ಬೀರುತ್ತಿದ್ದುವು. ಇಸ್ಮಾಯಿಲ್ ಪ್ರಬುದ್ಧನಾದ ಮೇಲೆ ದಖನೀ ಪಕ್ಷವನ್ನು ಸದೆಬಡಿದ. ಅಹಮದ್‌ನಗರ, ಬೀರಾರ್ ಮತ್ತು ಬಿದರೆಯ ಸುಲ್ತಾನರ ಸಂಯುಕ್ತ ವಿರೋಧವನ್ನು ಯಶಸ್ವಿಯಾಗಿ ಎದುರಿಸಿದ. 1534ರಲ್ಲಿ ಇವನು ಮೃತನಾದಾಗ ರಾಜ್ಯದ ಸ್ಥಿತಿ ಪುನಃ ಅಸ್ತವ್ಯಸ್ತವಾಯಿತು.

ಇಸ್ಮಾಯಿಲ್‌ನ ಉತ್ತರಾಧಿಕಾರಿಗಳಾದ ಮಲ್ಲು ಮತ್ತು ಅಲೂಘ್‌ಖಾನರು ಅಸಮರ್ಥರಾಗಿದ್ದರು. ಆಗ ರಾಜಮಾತೆ ಬೀಬೀಜಿ ಖಾನಂ ಬಲಿಷ್ಠ ಮಂತ್ರಿ ಅಸದ್ ಖಾನನ ಸಹಕಾರದಿಂದ ಇಸ್ಮಾಯಿಲ್‌ನ ಮೂರನೆಯ ಮಗ ಇಬ್ರಾಹೀಂನನ್ನು ಸುಲ್ತಾನನೆಂದು ಘೋಷಿಸಿದಳು. ಇವನ 24 ವರ್ಷಗಳ (1535-58) ಆಡಳಿತದಲ್ಲಿ ರಾಜ್ಯದಲ್ಲಿ ಹಲವು ಮುಖ್ಯ ಬದಲಾವಣೆಗಳಾದವು. ಇವನು ಅಫಕ್ವೀಗಳನ್ನು (ವಿದೇಶೀಯರು) ಹಿಂದಿಟ್ಟು ದಖನೀಯರಿಗೆ ಪ್ರೋತ್ಸಾಹವಿತ್ತ. ಪಾರಸೀ ಬದಲು ಮರಾಠಿಯನ್ನು ಅಧಿಕೃತ ಭಾಷೆಯಾಗಿ ಹೆಚ್ಚು ಬಳಕೆಗೆ ತಂದ. ಇವನ ರಾಜನೀತಿಯಿಂದಾಗಿ ಸ್ವಂತ ಸಹೋದರ ಅಬ್ದುಲ್ಲನೂ ಸೇರಿದಂತೆ ಹಲವರು ದಂಗೆ ಎದ್ದರು. ಈ ದಂಗೆಯನ್ನು ಅಡಗಿಸಿದರೂ ರಾಜ್ಯದ ಏಳ್ಗೆ ಕುಂಠಿತವಾಯಿತು. ಇಬ್ರಾಹೀಂ 1558ರಲ್ಲಿ ನಿಧನನಾದ. ಉತ್ತರಾಧಿಕಾರಿಯಾದ ಇವನ ಮಗ ಅಲಿಆದಿಲ್ ಷಾ (1558-80) ಶಾಹೀ ವಂಶದ ಅತ್ಯಂತ ಬಲಿಷ್ಠ ಹಾಗೂ ದಕ್ಷ ಸುಲ್ತಾನರಲ್ಲಿ ಒಬ್ಬ. ತನ್ನ ತಂದೆಯ ಕಾಲದಲ್ಲಿ ಹೆಚ್ಚು ತೊಂದರೆಗೊಳಗಾಗಿದ್ದ ಈತ ಕೆಲವು ಶ್ರೀಮಂತರ ನೆರವಿನಿಂದ ಸಿಂಹಾಸನವನ್ನೇರಿದ. ತನ್ನ ತಂದೆಯ ನೀತಿಯನ್ನು ಅನುಸರಿಸದೆ ಅಫಕ್ವೀಗಳನ್ನು ಪ್ರೋತ್ಸಾಹಿಸಿದ. ವಿಜಯನಗರದ ವಿರುದ್ಧ ಉಳಿದ ಶಾಹೀ ರಾಜರುಗಳ ಒಕ್ಕೂಟವನ್ನು ರಚಿಸಲು ಈತನೇ ಕಾರಣ. ಇವನ ಈ ಸಾಧನೆಯಿಂದಾಗಿ 1565ರಲ್ಲಿ ವಿಜಯನಗರ ಸಾಮ್ರಾಜ್ಯದ ಪತನವಾಯಿತು. ಅಹಮದ್‌ನಗರದ ರಾಜವಂಶದೊಂದಿಗೆ ಪರಸ್ಪರ ರಕ್ತಸಂಬಂಧ ಬೆಳೆಸಿದ. ಶಿಥಿಲಗೊಂಡ ವಿಜಯನಗರ ಸಾಮ್ರಾಜ್ಯದತ್ತ ನಡೆದು ದಕ್ಷಿಣದ ಅನೇಕ ಪ್ರದೇಶಗಳನ್ನು ವಶಪಡಿಸಿಕೊಂಡು ರಾಜ್ಯ ವಿಸ್ತರಿಸಿದ. ಅಪಾರ ಐಶ್ವರ್ಯವನ್ನು ಸಂಪಾದಿಸಿದ. ಇವನ 23 ವರ್ಷಗಳ ಆಡಳಿತಕಾಲ ತೀವ್ರ ಚಟುವಟಿಕೆಗಳಿಂದ ಕೂಡಿತ್ತು. 1580ರಲ್ಲಿ ತನ್ನ ಸೇವಕನೊಬ್ಬನಿಂದ ಕೊಲೆಗೀಡಾದ.

ಅಲಿ ಆದಿಲ್ ಷಾನಿಗೆ ಸಂತಾನವಿಲ್ಲದಿದ್ದುದರಿಂದ ಇವನ ಸೋದರನ ಮಗ ಎರಡನೆಯ ಇಬ್ರಾಹೀಂ ಆದಿಲ್ ಷಾ (1580-1627) ಇನ್ನೂ ಒಂಬತ್ತು ವರ್ಷದ ಬಾಲಕನಾಗಿದ್ದಾಗಲೇ ಪಟ್ಟಕ್ಕೆ ಬಂದ. ಆದ್ದರಿಂದ ಮುಂದೆ 11 ವರ್ಷಗಳ ಕಾಲ ರಾಜ್ಯವನ್ನು ನಾಲ್ವರು ರಾಜಪ್ರತಿನಿಧಿಗಳು ಒಬ್ಬರ ಅನಂತರ ಒಬ್ಬರು ಆಳಿ ಪರಸ್ಪರ ಕುಟಿಲನೀತಿಗಳಿಂದ ಆಡಳಿತವನ್ನು ಸಾಕಷ್ಟು ಹದಗೆಡಿಸಿದರು. ಈ ಅವ್ಯವಸ್ಥೆಯ ಲಾಭ ಪಡೆದು ನೆರೆ ರಾಷ್ಟ್ರಗಳವರು ಬಿಜಾಪುರದ ಆಂತರಿಕ ವಿಷಯಗಳಲ್ಲಿ ಕೈಹಾಕಲಾರಂಭಿಸಿದರು. ಇದೇ ಕಾಲದಲ್ಲಿ ದಖನ್ನಿನ ರಾಜಕೀಯದಲ್ಲಿ ಮುಗಲರು ಪ್ರವೇಶಿಸಿದ್ದರಿಂದ ಪರಿಸ್ಥಿತಿ ಮತ್ತಷ್ಟು ಕೆಟ್ಟಿತು. ಇಬ್ರಾಹೀಂ ವಯಸ್ಸಿಗೆ ಬರುತ್ತಿದ್ದಂತೆ ಈ ಎಲ್ಲ ಸಮಸ್ಯೆಗಳನ್ನೂ ಎದುರಿಸಬೇಕಾಯಿತು. ಈ ಕಾರ್ಯಕ್ಕೆ ಇವನಿಗೆ ಸಹಾಯಕರೂ ಇರಲಿಲ್ಲ. ರಾಜಪ್ರತಿನಿಧಿ ದಿಲಾವರ್ ಖಾನನನ್ನು ಕಿತ್ತೊಗೆದು ತನ್ನ ಸಹೋದರ ಇಸ್ಮಾಯಿಲ್‌ನ ದಂಗೆಯನ್ನು ಅಡಗಿಸಿದ್ದು ಇಬ್ರಾಹೀಂನ ಮೊದಲ ಸಾಧನೆ. ಅಹಮದ್‌ನಗರದವರು ಬಿಜಾಪುರದ ತೊಂದರೆಗಳಿಗೆ ಮುಖ್ಯಕಾರಣರಾದ್ದರಿಂದ ಈತ ಮುಗಲರ ಜೊತೆ ಸ್ನೇಹ ಬೆಳೆಸಿ ಅಹಮದ್ ನಗರವನ್ನು ತುಳಿದ. ಬಿದರೆಯನ್ನು ವಶಪಡಿಸಿಕೊಂಡು ಅದನ್ನು ತನ್ನ ರಾಜ್ಯದೊಳಗೆ ಸೇರಿಸಿಕೊಂಡ (1619). ಇಬ್ರಾಹೀಂ ಸಾಕಷ್ಟು ದೀರ್ಘಕಾಲ ಆಳಿ ತನ್ನ ಕಲ್ಯಾಣ ಕಾರ್ಯಗಳಿಂದ ಜಗತ್‌ಗುರು ಎಂದು ಪ್ರಸಿದ್ಧನಾಗಿದ್ದ.

ಅನಂತರ ಪಟ್ಟಕ್ಕೆ ಬಂದ ಇವನ ಎರಡನೆಯ ಮಗ ಮಹಮ್ಮದ್ ಆದಿಲ್ ಷಾ (1627-56) ತನ್ನ ವಿರೋಧಿ ಸೋದರರನ್ನು ಹತ್ತಿಕ್ಕಿ, ಉತ್ತಮ ರಾಜಕೀಯ ಪಟುವಾಗಿ ಬೆಳೆದ. ಮುಗಲ್ ಸಾಮ್ರಾಜ್ಯ ಶಾಹಿಯ ವಿಸ್ತರಣೆಯನ್ನು 1636ರ ವರೆಗೂ ಯಶಸ್ವಿಯಾಗಿ ತಡೆದ. ಆದರೆ ಅದೇ ವರ್ಷ ಅನಿವಾರ್ಯವಾಗಿ ಮುಗಲರೊಂದಿಗೆ ಅಧೀನತ್ವದ ಒಪ್ಪಂದ ಮಾಡಿಕೊಳ್ಳಬೇಕಾಯಿತು. ಉತ್ತರದಲ್ಲಿ ತನಗಾದ ನಷ್ಟವನ್ನು ಭರಿಸಲು ದಕ್ಷಿಣದ ಕಡೆ ತಿರುಗಿ ಕರ್ನಾಟಕದ ಬಹುಭಾಗದ ಮೇಲೆ ಪ್ರಭುತ್ವ

ಸ್ಥಾಪಿಸಿದ. ಇವನ ದಂಡನಾಯಕರುಗಳಾದ ರಣದುಲ್ಲಾಖಾನ್ ಮತ್ತು ಶಹಾಜೀ ಬೋನ್‌ಸ್ಲೆ ಅಪಾರ ಐಶ್ವರ್ಯವನ್ನೂ ಹೆಚ್ಚು ಪ್ರದೇಶಗಳನ್ನೂ ಗೆದ್ದುಕೊಟ್ಟರು. ಇವನ ಕಾಲದಲ್ಲಿ ಬಿಜಾಪುರ ವೈಭವದ ಉತ್ತುಂಗವನ್ನು ಕಂಡಿತು. ಇವನ ಕೊನೆಯ ಕಾಲದ ವೇಳೆಗೆ ಮರಾಠರು ಪ್ರಬಲಿಸಿದರು. ಇವನು ನಿಧನನಾಗುತ್ತಿದ್ದಂತೆಯೇ (1656) ಬಿಜಾಪುರ ಅವನತಿಯ ಹಾದಿ ಹಿಡಿಯಿತು. ಇವನ ಮಗ ಎರಡನೆಯ ಅಲಿ ಆದಿಲ್ ಷಾ (1656 - 72) ಅಧಿಕಾರಕ್ಕೆ ಬರುವಾಗ ಕೇವಲ 15 ವರ್ಷಗಳ ಬಾಲಕ. ಒಂದು ಕಡೆಯಿಂದ ಮುಗಲರೂ ಇನ್ನೊಂದು ಕಡೆಯಿಂದ ಮರಾಠರೂ ರಾಜ್ಯವನ್ನು ಒತ್ತುತ್ತಿದ್ದರು. ಅಲಿ ಸುಮಾರು ಒಂದು ದಶಕದ ಕಾಲ ಸ್ಥೈರ್ಯದಿಂದ ವರ್ತಿಸಿದರೂ ಒಂದೇ ಸಮನೆ ಅನುಭವಿಸಿದ ಹೊರಗಿನ ಸೋಲುಗಳು ಮತ್ತು ಒಳಗಿನ ಸಂಚುಗಳಿಂದ ಶಕ್ತಿಗುಂದಿ ಅನತಿಕಾಲದಲ್ಲಿ ಮೃತನಾದ (1672). ಅನಂತರ ಇವನ ಮಗ ಕೇವಲ ನಾಲ್ಕು ವರ್ಷದ ಬಾಲಕ ಸಿಕಂದರ ಅಧಿಕಾರಕ್ಕೆ ಬಂದ. ಮುಗಲರ ರಾಜ್ಯವಿಸ್ತರಣಾ ಪ್ರವಾಹ ಬಹು ರಭಸದಿಂದ ಹರಡುತ್ತಿದ್ದು 1686ರಲ್ಲಿ ಬಿಜಾಪುರವನ್ನೂ ಮುಳುಗಿಸಿತು. ಆ ಹೊತ್ತಿಗೆ ವಯಸ್ಸಿಗೆ ಬಂದಿದ್ದ ಸಿಕಂದರ್ ಶೌರ್ಯದಿಂದ ಹೋರಾಡಿದರೂ ಮುಗಲರ ಯುದ್ಧ ಯಂತ್ರಕ್ಕೆ ಇವನು ಸಾಟಿಯಾಗಿ ನಿಲ್ಲಲು ಸಾಧ್ಯವಾಗಲಿಲ್ಲ. ಆದಿಲ್ ಶಾಹೀ ಸಾಮ್ರಾಜ್ಯ ಕಣ್ಮರೆಯಾಯಿತು. ಸಿಕಂದರ್ ಔರಂಗಜೇಬನ ಬಂದಿಯಾಗಿ 1700ರಲ್ಲಿ ನಿಧನನಾದ. (ಬಿ.ಎಸ್.ಎ.)

**ಆಡಳಿತ ವ್ಯವಸ್ಥೆ :** ಆದಿಲ್ ಶಾಹೀಗಳು ತಮ್ಮ ಆಳ್ವಿಕೆಯ ಉತ್ತುಂಗ ಕಾಲದಲ್ಲಿ ಭಾರತ ಪರ್ಯಾಯ ದ್ವೀಪದ ಬಹುಭಾಗದ ಮೇಲೆ ಹತೋಟಿ ಹೊಂದಿದ್ದರು. ಅರಬ್ಬೀ ಸಮುದ್ರದಿಂದ ಹಿಡಿದು ಬಂಗಾಳ ಕೊಲ್ಲಿಯ ವರೆಗೂ ಇವರ ನಿಯಂತ್ರಣ ವ್ಯಾಪಿಸಿತ್ತು. ಇವರು ತಮ್ಮ ಆಡಳಿತ ಪದ್ಧತಿಯಲ್ಲಿ ಬಹಮನೀ ಆಡಳಿತ ಸಂಪ್ರದಾಯಗಳನ್ನೂ ವ್ಯವಸ್ಥೆಯನ್ನೂ ಅಳವಡಿಸಿಕೊಂಡರು. ಇವರ ಸರ್ಕಾರ ವ್ಯವಸ್ಥೆ, ಧಾರ್ಮಿಕ ಅಥವಾ ಸೈನಿಕ ಪ್ರಧಾನವಾಗದೆ ಪ್ರಬಲ ಪ್ರಭುತ್ವ ವರ್ಗ ಮತ್ತು ಪ್ರಭಾವೀ ಅಧಿಕಾರಿವರ್ಗಗಳಿಂದ ಬೆಂಬಲಿತವಾದ ರಾಜತ್ವವಾಗಿತ್ತು. ಸುಲ್ತಾನ ನಿರಂಕುಶ ಅಧಿಕಾರ ಪಡೆದಿದ್ದರೂ ಮಜ್ಲಿಸ್-ಇ-ಖಲ್ವಾತ್ ಎಂಬ ಸಲಹೆಗಾರರ ಮಂಡಲಿಯನ್ನು ಇಟ್ಟುಕೊಂಡಿರುತ್ತಿದ್ದ. ವಕೀಲ್-ಇ-ಸುಲ್ತನತ್ (ಪ್ರಧಾನಮಂತ್ರಿ), ಅಮೀರ್-ಇ-ಜುಮ್ಲಾ (ಅರ್ಥಮಂತ್ರಿ), ಮಸ್ತಾಫಿ-ಅಲ್-ಮುಲ್ಕ್ (ಉಪ ಅರ್ಥಮಂತ್ರಿ), ಪೇಶ್ವ, ಅರಮನೆ ಮೇಲ್ವಿಚಾರಕ, ಗೂಢಚರ್ಯೆಯ ಅಧಿಕಾರಿಗಳು ಮೊದಲಾದವರಿಂದ ಕೂಡಿದ ಮಂತ್ರಿಮಂಡಲ ಸಹ ಇರುತ್ತಿತ್ತು. ಕೆಲವೊಂದು ವ್ಯತ್ಯಾಸಗಳನ್ನು ಬಿಟ್ಟರೆ ಮತ್ತೆಲ್ಲ ರೀತಿಯಿಂದಲೂ ಆದಿಲ್ ಶಾಹೀಗಳ ಆಡಳಿತ ಪದ್ಧತಿ ಬಹಮನೀ ಪದ್ಧತಿಯನ್ನೇ ಹೋಲುತ್ತಿತ್ತು. ಬಹಮನೀ ರಾಜ್ಯಾಡಳಿತದಲ್ಲಿ ಬಿಜಾಪುರ ಒಂದು ತರಫ್ (ಪ್ರಾಂತ್ಯ) ಮಾತ್ರ ಆಗಿತ್ತು. ಅದು ಸ್ವತಂತ್ರ ರಾಜ್ಯವಾದ ಮೇಲೆ ಅದರೊಳಗೆ ಮತ್ತಷ್ಟು ತರಫ್ ವಿಭಾಗಗಳನ್ನು ಮಾಡಲಾಗದಷ್ಟು ಚಿಕ್ಕದಾಗಿತ್ತು. ಆದ್ದರಿಂದ ತರಫ್ ಮತ್ತು ತರಫ್‌ದಾರ್ ಎಂಬ ಪದಗಳ ಬದಲಾಗಿ ಜಾಗೀರ್ ಮತ್ತು ಜಾಗೀರ್‌ದಾರ್ ಎಂಬ ಪದಗಳನ್ನು ಬಳಸಲಾಯಿತು. ಹೊಸದಾಗಿ ಸಾಧಿಸಿಕೊಂಡ ವಿಜಯನಗರ ಸಾಮ್ರಾಜ್ಯದ ಭಾಗಗಳನ್ನು ತಮ್ಮ ರಾಜ್ಯದ ವ್ಯವಸ್ಥೆಯ ಚೌಕಟ್ಟಿನಲ್ಲಿಯೇ ತರಲು ಅನೇಕ ಕಾರಣಗಳಿಂದ ಸಾಧ್ಯವಾಗಲಿಲ್ಲವಾದ್ದರಿಂದ ಆ ಭಾಗದಲ್ಲಿ ಅಧಿಕಾರ ಹೊಂದಿದ್ದ ಸ್ಥಳೀಯ ಪಾಳೆಯಗಾರರಿಗೆ ಆಡಳಿತವನ್ನು ಬಿಟ್ಟುಕೊಟ್ಟು, ಅವರು ನಿಗದಿಯಾದ ಕಪ್ಪವನ್ನು ಒಪ್ಪಿಸುವಂತೆ ವ್ಯವಸ್ಥೆ ಮಾಡಲಾಗಿತ್ತು. ಕೆಲವು ಸಂದರ್ಭಗಳಲ್ಲಿ ಆ ಭಾಗಗಳನ್ನೂ ವಶಪಡಿಸಿಕೊಂಡು ರಾಜ್ಯದ ಅಧಿಕಾರಿಗಳಿಗೆ ಜಹಗೀರಾಗಿ ನೀಡಲಾಗುತ್ತಿತ್ತು. ಪ್ರಭುತ್ವದ ನಾಡುಗಳನ್ನು ಸರ್ಕಾರ್, ಪರಗಣ ಮತ್ತು ಮಂಡಾಗಳೆಂದು ವಿಭಾಗಿಸಲಾಗಿತ್ತು. ಪ್ರತಿಯೊಂದು ಸರ್ಕಾರದಲ್ಲಿಯೂ ನಾಲ್ವರು ಅಧಿಕಾರಿಗಳಿರುತ್ತಿದ್ದರು. ಅದರಲ್ಲಿ ಇಬ್ಬರು ಹಿಂದುಗಳು, ಒಬ್ಬ ಕಂದಾಯ ವಸೂಲಿ ಮಾಡುವವನು, ಇನ್ನೊಬ್ಬ ಲೆಕ್ಕಪತ್ರಗಳನ್ನಿಡುವವನು, ಸರ್ಕಾರದ ಮುಖ್ಯನಿಗೆ ಸುಬೇದಾರ ಅಥವಾ ಸರ್ ಹವಾಲ್ದಾರ್ ಎಂದು ಕರೆಯಲಾಗುತ್ತಿತ್ತು. ನಾಲ್ಕನೆಯ ಅಧಿಕಾರಿ ಖಾಜಿ. ಪರಗಣದಲ್ಲಿ ಕೊತ್ವಾಲ ದೇಶಮುಖ್ ಮತ್ತು ದೇಸಾಯಿಗಳೆಂಬ ಮೂವರು ಅಧಿಕಾರಿಗಳಿರುತ್ತಿದ್ದರು. ಇವರು ಪೊಲೀಸ್ ಮತ್ತು ಕಂದಾಯದ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಸಾಮಾನ್ಯವಾಗಿ ಕಂದಾಯದ ಅಧಿಕಾರಿಗಳು ಹಿಂದುಗಳಾಗಿರುತ್ತಿದ್ದರು. ಕಂದಾಯಕ್ಕೆ ಸಂಬಂಧಿಸಿದ ಪರಗಣದ ಆಡಳಿತವ್ಯವಸ್ಥೆಯೆಲ್ಲಾ ಇವರ ಜವಾಬ್ದಾರಿಯಲ್ಲಿರುತ್ತಿತ್ತು. ಹಳ್ಳಿಗಳು ಆಡಳಿತದ ಅತ್ಯಂತ ಚಿಕ್ಕ ಘಟಕಗಳಾಗಿದ್ದು ಅವುಗಳ ಆಡಳಿತಕ್ಕೆ ಪಂಚಾಯಿತಿಗಳು ಇರುತ್ತಿದ್ದುವು. ಇವುಗಳ ಆಡಳಿತದಲ್ಲಿ ಅಧಿಕಾರಿಗಳು ಸಾಮಾನ್ಯವಾಗಿ ತಲೆಹಾಕುತ್ತಿರಲಿಲ್ಲ. ಗ್ರಾಮದ ಮುಖ್ಯಸ್ಥ ಪಾಟೀಲ. ಅವನು ಪೊಲೀಸ್, ನ್ಯಾಯ ಮತ್ತು ಕಂದಾಯ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದ. ಅವನಿಗೆ ಕುಲಕರ್ಣಿ (ಲೆಕ್ಕಾಧಿಕಾರಿ) ಎಂಬ ಸಹಾಯಕನಿರುತ್ತಿದ್ದ. ಜೊತೆಗೆ ಚೌಕಿದಾರ ಅಥವಾ ಕಾವಲುಗಾರನಿರುತ್ತಿದ್ದ. ಇವರ ಸೇವೆಗಾಗಿ ಇವರಿಗೆ ಸ್ವಲ್ಪ ಭೂಮಿಗಳನ್ನು ದತ್ತಿಯಾಗಿ (ಇನಾಂ) ನೀಡಲಾಗುತ್ತಿತ್ತು. ಪ್ರಭುತ್ವದ ಜಮೀನುಗಳಲ್ಲಿ ರೈತವಾರಿ ಪದ್ಧತಿ ಜಾರಿಯಲ್ಲಿತ್ತು. ಸರ್ಕಾರ ತನಾಬ್ ಅಥವಾ ಸರಪಳಿಯಿಂದ ಜಮೀನನ್ನು ಅಳೆದು ಕಂದಾಯ ನಿಗದಿಪಡಿಸುತ್ತಿತ್ತು. ಈ ಕಂದಾಯ ಆಯಾ ಪ್ರದೇಶ ಅಥವಾ ಫಲವತಿಗನುಗುಣವಾಗಿ ಒಟ್ಟು ಉತ್ಪನ್ನದ $^1/_{10}$ ರಿಂದ $^1/_2$ ಭಾಗದ ವರೆಗೂ ಇರುತ್ತಿತ್ತು. ಇದಲ್ಲದೆ ಜಹಗೀರಿ, ಇನಾಂ, ಅಗ್ರಹಾರ ಮತ್ತು ವಕ್ಫ್‌ಗಳಂಥ ಪದ್ಧತಿಗಳೂ ಇದ್ದವು.

ಸರ್ಕಾರಕ್ಕೆ ಯುದ್ಧದಲ್ಲಿ ಗೆದ್ದುತಂದ ಐಶ್ವರ್ಯ, ವಾರ್ಷಿಕ ಕಪ್ಪ, ವಸ್ತುಗಳ ಮೇಲಿನ ತೆರಿಗೆ, ವಾಣಿಜ್ಯ ಸುಂಕ, ವಿಶೇಷ ಸಂದರ್ಭಗಳಲ್ಲಿ ರಾಜನಿಗೆ ಬರುವ ಕಾಣಿಕೆಗಳು -ಇವು ಆದಾಯ ಮೂಲಗಳು. ರಾಯಚೂರು ಪ್ರದೇಶದ ವಜ್ರದ ಗಣಿಗಳಿಂದಲೂ ಉತ್ತಮ ಆದಾಯ ಬರುತ್ತಿತ್ತು.

**ಆರ್ಥಿಕ ಸಾಮಾಜಿಕ ಸ್ಥಿತಿ :** ಆದಿಲ್‌ಶಾಹೀ ರಾಜರು ಹೊರಗಿನಿಂದ ಬಂದವರಾದರೂ ಬಹುಬೇಗನೆ ಸ್ಥಳೀಯ ಜನರೊಂದಿಗೆ ಬೆರೆತು ಆ ಜನರ ಸ್ಥಿತಿಗತಿಗಳನ್ನು ಅಭಿವೃದ್ಧಿಪಡಿಸಲು ಪ್ರಯತ್ನಿಸಿದರು. ವ್ಯವಸಾಯ ಜನರ ಮುಖ್ಯ ಕಸಬಾಗಿತ್ತು. ಬತ್ತ, ಮುಸುಕಿನ ಜೋಳ, ಜೋಳ, ಸಜ್ಜೆ ಮತ್ತು ಕೆಲವೆಡೆ ಗೋದಿ ಮುಖ್ಯ ಆಹಾರಬೆಳೆಗಳಾಗಿದ್ದುವು. ತೊಗರಿ ಮುಖ್ಯವಾದ ದ್ವಿದಳಧಾನ್ಯ. ಕಾರವಾರ, ಕೊಂಕಣ ಭಾಗದಲ್ಲಿ ಬೆಳೆಯುತ್ತಿದ್ದ ಮೆಣಸು, ಏಲಕ್ಕಿ, ತೆಂಗು, ಗೇರುಬೀಜ ಮತ್ತು ವೀಳ್ಯದ ಎಲೆ ಇವು ಮುಖ್ಯ ವಾಣಿಜ್ಯ ಬೆಳೆಗಳಾಗಿದ್ದವು. ಪೂರ್ವಭಾಗದಲ್ಲಿರುವ ಕಪ್ಪುಮಣ್ಣಿನಲ್ಲಿ ಹತ್ತಿ ಸಾಗುವಳಿ ವ್ಯಾಪಕವಾಗಿತ್ತು. ಕಬ್ಬನ್ನು ಹೆಚ್ಚಾಗಿ ಬೆಳೆಯಲಾಗುತ್ತಿತ್ತು. ಹೊಗೆಸೊಪ್ಪನ್ನು ಪೋರ್ಚುಗೀಸರು ಭಾರತಕ್ಕೆ ತಂದರು. 17ನೆಯ ಶತಮಾನದ ಹೊತ್ತಿಗೆ ಅದರ ಸಾಗುವಳಿ ದಖನ್ ಪ್ರದೇಶದಲ್ಲಿ ದೃಢವಾಗಿ ಬೇರೂರಿತು. ಆರ್ಥಿಕ ದೃಷ್ಟಿಯಿಂದ ಈ ಬೆಳೆಗೆ ಹೆಚ್ಚು ಮಹತ್ತ್ವವಿತ್ತು. ವಿವಿಧ ಬಗೆಯ ಹಣ್ಣುಗಳು ಮತ್ತು ಹೂವುಗಳನ್ನು ಬೆಳೆಯುತ್ತಿದ್ದರು. ಅವುಗಳಲ್ಲಿ ಮಾವು, ಬಾಳೆಹಣ್ಣು, ಕಿತ್ತಳೆ, ನಿಂಬೆ, ಕಲ್ಲಂಗಡಿ ಮುಖ್ಯವಾದವು. ದ್ರಾಕ್ಷಿ ಸಹ ದಖನ್ನಿನ ಎತ್ತರ ಪ್ರದೇಶದಲ್ಲಿ ಬೆಳೆಯುತ್ತಿತ್ತು. ಕೊಂಕಣ ಪ್ರದೇಶದಲ್ಲಿ ಹಲಸು, ಅನಾನಸು ಮತ್ತು ಪರಂಗಿ ಹಣ್ಣುಗಳು ಬೆಳೆಯುತ್ತಿದ್ದವು. ಹುಣಿಸೆಮರಗಳು ಇದ್ದವು. ಶುಂಠಿಯನ್ನೂ ಬೆಳೆಯಲಾಗುತ್ತಿತ್ತು. ಸ್ವಲ್ಪಮಟ್ಟಿಗೆ ಗಸಗಸೆ ಸಹ ಬೆಳೆಯುತ್ತಿದ್ದು, ಅದರಿಂದ ತಯಾರಿಸಿದ ಅಫೀಮು ಔಷಧವಾಗಿಯೂ ಬಂಗಿ ಸೇದಲೂ ಉಪಯೋಗವಾಗುತ್ತಿತ್ತು.

ಸಕ್ಕರೆಯನ್ನು ಕರ್ನಾಟಕ ಭಾಗದಲ್ಲಿ ಉತ್ಪಾದಿಸಿ ಪರ್ಷಿಯ ಮತ್ತು ಅರೇಬಿಯ ದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು. ಬಿಜಾಪುರದಲ್ಲಿ ಹತ್ತಿ ಮತ್ತು ರೇಷ್ಮೆ ಕೈಗಾರಿಕೆಗಳು ಸುಸ್ಥಿತವಾಗಿದ್ದುವು. ಈ ಹಲವಾರು ಕೈಗಾರಿಕೆಗಳು ಕೊಂಕಣದ ಬಂದರುಗಳ ಸುತ್ತಮುತ್ತಲ ಪ್ರದೇಶಗಳಲ್ಲಿ ಸ್ಥಾಪಿತವಾಗಿದ್ದವು. ಬಿಜಾಪುರದ ಹತ್ತಿ ವಸ್ತುಗಳಿಗೆ ಪರ್ಷಿಯ, ಅರೇಬಿಯ ಮತ್ತು ಪೂರ್ವ ಆಫ್ರಿಕ ಭಾಗಗಳಲ್ಲಿ ಹೆಚ್ಚು ಬೇಡಿಕೆ ಇತ್ತು. ನೇಯ್ಗೆಯವರಿಗೆ ಹಲವು ತೆರಿಗೆಗಳ ರಿಯಾಯಿತಿ ನೀಡಿ ನೇಯ್ಗೆ ಕೈಗಾರಿಕೆಗೆ ಉತ್ತೇಜನ ನೀಡಲಾಗುತ್ತಿತ್ತು. ಹುಬ್ಬಳ್ಳಿ, ಲಕ್ಷ್ಮೇಶ್ವರ ಮತ್ತು ಕಾರವಾರಗಳಲ್ಲಿ ಹತ್ತಿ ಕೈಗಾರಿಕೆ ಸಮೃದ್ಧವಾಗಿದ್ದುದನ್ನು ಇಂಗ್ಲಿಷರು ಕಂಡಿದ್ದಾರೆ. ದಖನ್ನಿನಲ್ಲಿ ತಯಾರಾಗುತ್ತಿದ್ದ ಹತ್ತಿಬಟ್ಟೆಗಳಲ್ಲಿ ಕ್ಯಾಲಿಕೋ ಮತ್ತು ಮಸ್ಲಿನ್ ಮುಖ್ಯ ಬಗೆಗಳು. ಬಿಜಾಪುರ ರಾಜ್ಯದ ದಕ್ಷಿಣ ಜಿಲ್ಲೆಗಳಲ್ಲಿ ರತ್ನಗಂಬಳಿಯನ್ನು ನೇಯುವುದು ವಿಶೇಷವಾಗಿತ್ತು. ಧಾರವಾಡ ಸೀರೆಗಳಿಗೆ ಪ್ರಸಿದ್ಧವಾಗಿತ್ತು. ರಾಜ್ಯದ ವಿವಿಧ ಭಾಗಗಳಲ್ಲಿ ಕಲ್ಲುಪ್ಪನ್ನು ತಯಾರಿಸಲಾಗುತ್ತಿತ್ತು. ಸ್ವಲ್ಪಮಟ್ಟಿಗೆ ಕಬ್ಬಿಣದ ಅದುರನ್ನು

### ಆದಿಲ್ ಶಾಹೀ ವಂಶಾವಳಿ

(1) ಯೂಸುಫ್ ಆದಿಲ್ (1490-1510)
(ಹೆಂ. ಮರಾಠ ಮುಕುಂದರಾವ್‌ನ ಮಗಳು)

- (2) ಇಸ್ಮಾಯಿಲ್ ಆದಿಲ್ ಖಾನ್ (1510-34)
  - (3) ಮಲ್ಲು ಆದಿಲ್ ಖಾನ್ (1534-35)
  - ಆಲಿಂಖಾನ್
  - (4) ಇಬ್ರಾಹಿಂ ಆದಿಲ್ ಷಾ 1 (1535-58) (ಹೆಂ. ಬೆಳಗಾಂವಿಯ ಅಸದ್‌ಖಾನ್‌ನ ಮಗಳು)
    - ಇಸ್ಮಾಯಿಲ್
    - (5) ಅಲಿ ಆದಿಲ್ ಷಾ 1 (1558-80) (ಹೆಂ. ಅಹಮದ್‌ನಗರದ ಚಾಂದ್‌ಬೀಬೀ)
    - ತಹ್‌ಮಾಸಪ್
      - ಇಸ್ಮಾಯಿಲ್
      - (6) ಇಬ್ರಾಹಿಂ ಆದಿಲ್ ಷಾ (1580-1627) (ಹೆಂ. ಗೋಲ್ಕೊಂಡದ ಚಾಂದ್‌ಸುಲ್ತಾನಾ, ಮಲಿಕಾ ಎ ಜಹಾನ್, ತಾಜ್ ಸುಲ್ತಾನಾ, ಕಮಾಲ್ ಖಾತೂನ್, ಸುಂದರ್ ಮಹಲ್)
        - ದರ್ವೇಶ್
        - ಸುಲೈಮಾನ್
        - (7) ಮುಹಮ್ಮದ್ ಆದಿಲ್ ಷಾ (1627-56) (ಹೆಂ. ತಾಜ್ ಜಹಾನ್ ಬೇಗಂ, ಗೋಲ್ಕೊಂಡದ ಖದೀಜಾ ಸುಲ್ತಾನಾ, ಉರೂಸ್ ಬೇಗಂ)
          - (8) ಅಲಿ ಆದಿಲ್ ಷಾ II (1656-72) (ಹೆಂ. ಖುರ್ಷಿದ್ ಖಾನಂ)
            - ಪಾದ್ ಷಾ ಬೀಬೀ ಶಹರ್ ಬಾನು ಬೇಗಂ (ಗಂ. ಮಹಮ್ಮದ್ ಆಜಂ)
            - ಹುಸೇನ್
            - (9) ಸಿಕಂದರ್ ಆದಿಲ್ ಷಾ (1672-86)
        - ಖಿಜರ್ ಷಾ
        - ಜೊಹ್ರಾ ಸುಲ್ತಾನ್
        - ಬುರ್ಹಾನ್
        - ಸುಲ್ತಾನಾ ಬೇಗಂ (ಗಂ. ಮುಗಲ್ ರಾಜಕುಮಾರ್ ದನಿಯಾಲ್)
        - ಫಾತಿಮಾ ಸುಲ್ತಾನಾ (ಗಂ. ಹಬೀಬುಲ್ಲಾ ಹುಸೇನ್)
    - ಅಹ್ಮದ್
    - ತಾನೀಬೀಬೀ (ಗಂ. ಅಲಿ ಬರೀದ್)
    - ಹದಿಯಾ ಸುಲ್ತಾನಾ (ಗಂ. ಮುರ್ತುಜಾ ನಿಜಾಮ್ ಉಲ್-ಮುಲ್ಕ್)
  - ಅಬ್ದುಲ್ಲಾ
- ಮರ್ಯಂ ಸುಲ್ತಾನಾ (ಗಂ. ಬುರ್ಹಾನ್ ನಿಜಾಮ್ ಷಾ 1)
- ಬೀಬೀ ಸಿತ್ತೀ (ಗಂ. ಅಹ್ಮದ್ ಷಾ ಬಹಮನೀ ಅಮೀರ್ ಬರೀದ್)
- ಖದೀಜಾ ಸುಲ್ತಾನಾ (ಗಂ. ಅಲಾಉದ್ದೀನ್ ಇಮಾದ್ ಉಲ್-ಮುಲ್ಕ್)

ತೆಗೆಯಲಾಗುತ್ತಿತ್ತು. ಇವುಗಳ ಜೊತೆಗೆ ಈ ರಾಜ್ಯದಲ್ಲಿ ನೀಲಮಣಿ, ಪದ್ಮರಾಗ, ಪಚ್ಚೆ ಮೊದಲಾದ ಅಮೂಲ್ಯ ಕಲ್ಲುಗಳು ದೊರೆಯುತ್ತಿದ್ದವು. ಇವುಗಳಲ್ಲಿ ವಜ್ರ ಬಹು ಮುಖ್ಯವಾದುದು. 16 ಮತ್ತು 17ನೆಯ ಶತಮಾನಗಳಲ್ಲಿ ಬಿಜಾಪುರಕ್ಕೆ ಭೇಟಿನೀಡಿದ ಬಹುತೇಕ ಪ್ರವಾಸಿಗಳೆಲ್ಲ ಈ ರಾಜ್ಯದಲ್ಲಿದ್ದ ವಜ್ರದ ಗಣಿಗಳ ಬಗ್ಗೆ ಹೇಳಿದ್ದಾರೆ. ಇಲ್ಲಿ ಸು.15 ವಜ್ರದ ಗಣಿಗಳಿದ್ದವು. ಇಲ್ಲಿನ ವಜ್ರಗಳು ಉತ್ತಮ ದರ್ಜೆಯವಾಗಿದ್ದುವು. ಆದರೆ ಗಾತ್ರದಲ್ಲಿ ಗೋಲ್ಕೊಂಡದ್ದಕ್ಕಿಂತ ಚಿಕ್ಕದಾಗಿರುತ್ತಿದ್ದವು. ವಜ್ರವನ್ನು ಕತ್ತರಿಸುವ ಮತ್ತು ಸಾಣೆಹಿಡಿಯುವ ಅನೇಕ ಕೆಲಸಗಾರರು ಈ ಗಣಿಗಳ ಬಳಿ ಇರುತ್ತಿದ್ದರು. ಈ ಉದ್ಯಮ ಗುಜರಾತಿ ವ್ಯಾಪಾರಿಗಳ ಕೈಯಲ್ಲಿತ್ತು. ಗಣಿಗಳು ರಾಜನ ಆಸ್ತಿಯಾಗಿದ್ದುವು. ಉತ್ಪಾದಕರಿಗೆ ಗೇಣಿಯ ಮೇಲೆ ಕೊಡಲಾಗುತ್ತಿತ್ತು. ಇಲ್ಲಿಂದ ವಜ್ರಗಳು ಸೂರತ್, ಗೋವ, ಆಗ್ರಾ, ದೆಹಲಿ ಮತ್ತಿತರ ಸ್ಥಳಗಳಿಗೆ ಹೋಗುತ್ತಿದ್ದವು.

ಆದಿಲ್‌ಶಾಹೀ ರಾಜ್ಯದಲ್ಲಿ ಹಿಂದುಗಳೇ ಅಧಿಕಸಂಖ್ಯೆಯಲ್ಲಿದ್ದರು. ಅವರಲ್ಲಿ ಈಗಿನಂತೆಯೇ ಜಾತಿಪದ್ಧತಿ ಇತ್ತು. ಬ್ರಾಹ್ಮಣರು ಸಮಾಜದಲ್ಲಿ ಉತ್ತಮ ವರ್ಗಕ್ಕೆ ಸೇರಿದ್ದು ಹೆಚ್ಚಿನ ಅಧಿಕಾರ ಪಡೆದಿದ್ದರು. ಹಿಂದುಗಳ ಎಲ್ಲ ಧಾರ್ಮಿಕ ವಿಧಿಗಳಿಗೂ ಅವರ ಆವಶ್ಯಕತೆಯಿತ್ತು. ಅವರಲ್ಲಿ ಕೆಲವರು ವೈದ್ಯಕೀಯ ವೃತ್ತಿಯನ್ನು ಕೈಗೊಂಡಿದ್ದರು. ಪ್ರತಿಯೊಂದು ಕುಟುಂಬವೂ ಸಾಮಾನ್ಯ ಕಾಯಿಲೆಗೆ ಬೇಕಾಗುವ ಗಿಡಮೂಲಿಕೆಗಳನ್ನು ಇಟ್ಟುಕೊಂಡಿರುತ್ತಿತ್ತು,.

ಜನರ ಮನರಂಜನೆಗಳು ಸುಲಭರೀತಿಯವಾಗಿರುತ್ತಿದ್ದವು. ಹಳ್ಳಿಯಿಂದ ಹಳ್ಳಿಗೆ ಹೋಗಿ ತಮ್ಮ ಕಲೆಯನ್ನು ಪ್ರದರ್ಶಿಸಿ ಮನರಂಜನೆ ನೀಡುವ ವಿವಿಧ ಬಗೆಯ ವಲಸೆಗಾರರ ಗುಂಪುಗಳಿದ್ದವು. ಅವರಲ್ಲಿ ಹಾವಾಡಿಗರು, ದೊಂಬರು, ಹರಿಕಥೆ ಮಾಡುವವರು ಇದ್ದರು.

ವಿನೋದಕ್ಕಾಗಿ ಕೋಳಿ ಜೂಜು ಸಾಮಾನ್ಯವಾಗಿತ್ತು. ರಾಜಮನೆತನದವರು ಮತ್ತು ಶ್ರೀಮಂತರು ಬೇಟೆಯಾಡುತ್ತಿದ್ದರು. ವಾರ್ಷಿಕ ಜಾತ್ರೆಗಳು ಮತ್ತು ಉತ್ಸವಗಳು ಅಲ್ಲಲ್ಲಿ ಜರುಗುತ್ತಿದ್ದು ಬಡಜನರಿಗೆ ನಿತ್ಯದುಡಿತದಿಂದ ಬಿಡುವನ್ನು ಒದಗಿಸುತ್ತಿದ್ದವು. ಬೇರೆ ಬೇರೆಡೆಗಳಲ್ಲಿದ್ದ ಸ್ನೇಹಿತರು ಅಲ್ಲಿ ಒಂದುಗೂಡಲು ಅವಕಾಶವಾಗುತ್ತಿತ್ತು. ಮುಸ್ಲಿಮರು ಉರುಸ್ ಸಂದರ್ಭದಲ್ಲಿ ಒಟ್ಟಿಗೆ ಸೇರುತ್ತಿದ್ದರು. ಹರಿದಾಸರು ಗ್ರಾಮದಿಂದ ಗ್ರಾಮಕ್ಕೆ ತೆರಳಿ ಧರ್ಮ ಬೋಧೆಯನ್ನೂ ಮನರಂಜನೆಯನ್ನೂ ನೀಡುತ್ತಿದ್ದರು. ಬಡವರು ದಟ್ಟಿಯಷ್ಟನ್ನೇ ಕಟ್ಟುತ್ತಿದ್ದರು. ಹೆಂಗಸರೂ ಹೆಚ್ಚು ಬಟ್ಟೆ ಧರಿಸುತ್ತಿರಲಿಲ್ಲ. ಬ್ರಾಹ್ಮಣರು ಆಂಗ್ರಕ ಎಂಬ ಮಸ್ಲಿನ್‌ನ ನಿಲುವಂಗಿ ಹಾಕಿಕೊಂಡು ಪೇಟ ಇಟ್ಟುಕೊಳ್ಳುತ್ತಿದ್ದರು. ಮುಸ್ಲಿಮರು ಬಿಗಿಯಾದ ಪೈಜಾಮ, ಅಂಗಿ, ಉದ್ದನೆಯ ಕೋಟು ಮತ್ತು ಪೇಟವನ್ನು ಧರಿಸುತ್ತಿದ್ದರು. ಶ್ರೀಮಂತ ಹಿಂದೂ ಮಹಿಳೆಯರು ಆಭರಣವನ್ನು ಹೆಚ್ಚಾಗಿ ಧರಿಸುತ್ತಿದ್ದರು. ಮೂಗುತಿ, ಕಾಲ್ಗಡಗ, ಕೈಕಡಗ ಮತ್ತು ಕಂಠಾಭರಣಗಳು ಮುಖ್ಯವಾಗಿದ್ದವು. ಬಡವರು ಗಾಜಿನ ಬಳೆಗಳನ್ನು ತೊಡುತ್ತಿದ್ದರು. ಶ್ರೀಮಂತರ ಮನೆಗಳು ಸುಸಜ್ಜಿತವಾಗಿರುತ್ತಿದ್ದವು. ಕೆಲವು ರೋಗಗಳು ಹಾಗೂ ಹುಳಹುಪ್ಪಟೆಗಳನ್ನು ದೂರವಿಡಲು ನೆಲಕ್ಕೆ ಸಗಣಿ ಸಾರಿಸುತ್ತಿದ್ದರು. (ಪೆಟ್ರೊ-ಡ-ಲವೆಲ್ಲೆ ಇದನ್ನು ಇಟಲಿಯಲ್ಲೂ ರೂಢಿಗೆ ತರಲು ಬಯಸಿದ್ದನಂತೆ). ಬ್ರಾಹ್ಮಣರು, ಬನಿಯಾಗಳು ಸಸ್ಯಾಹಾರಿಗಳಾಗಿದ್ದರು. ಅಕ್ಕಿ, ಜೋಳ, ಗೋದಿ ಮತ್ತು ದ್ವಿದಳಧಾನ್ಯಗಳು ತುಪ್ಪ, ತರಕಾರಿ ಅವರ ಮುಖ್ಯ ಆಹಾರವಾಗಿತ್ತು. ಉಳಿದ ಜಾತಿಯವರು ಮಾಂಸ, ಮೀನು ಮೊದಲಾದವುಗಳನ್ನೂ ಉಪಯೋಗಿಸುತ್ತಿದ್ದರು. ಕೊಂಕಣ ಕರಾವಳಿಯಲ್ಲಿ ಮೀನು ವಿಶೇಷವಾಗಿ ದೊರಕುತ್ತಿತ್ತು. ಸಾಮಾನ್ಯ ಜನರು ಅನ್ನ ಮತ್ತು ಧಾನ್ಯಗಳನ್ನು ಆಹಾರವಾಗಿ ಬಳಸುತ್ತಿದ್ದರು. ಕೊಂಕಣ ಕರಾವಳಿಯಲ್ಲಿ ಮೀನು ವಿಶೇಷವಾಗಿ ದೊರಕುತ್ತಿತ್ತು. ಸಾಮಾನ್ಯ ಜನರು ಅನ್ನ ಮತ್ತು ಧಾನ್ಯಗಳನ್ನು ಆಹಾರವಾಗಿ ಬಳಸುತ್ತಿದ್ದರೆಂದು ಫ್ರೈಯರ್ ಹೇಳಿದ್ದಾನೆ. ಮುಸ್ಲಿಮರು ಮಾಂಸ ಮತ್ತು ಗೋದಿಯನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಹಿಂದುಗಳು ಎಲೆಯಲ್ಲಿ ಊಟಮಾಡುತ್ತಿದ್ದರು. ಅರಮನೆಯಲ್ಲಿ ಪಿಂಗಾಣಿ ಪಾತ್ರೆಗಳು ಉಪಯೋಗದಲ್ಲಿದ್ದವು. ವೀಳ್ಯದ ಎಲೆಯನ್ನು ಎಲ್ಲವರ್ಗದ ಜನರೂ ಉಪಯೋಗಿಸುತ್ತಿದ್ದರು. ಪೋರ್ಚುಗೀಸ ಹೆಂಗಸರು, ಗಂಡಸರು ಸಹಾ ಈ ಅಭ್ಯಾಸ ಬೆಳೆಸಿಕೊಂಡಿದ್ದರು.

**ಲಲಿತಕಲೆ ಮತ್ತು ಸಾಹಿತ್ಯ :** ಆದಿಲ್‌ಶಾಹೀಗಳು ಬೌದ್ಧಿಕ ಚಟುವಟಿಕೆಗಳಿಗೆ ಪ್ರೋತ್ಸಾಹವಿತ್ತರು. ವಿದ್ವತ್ ಜನರಿಗೆ ಹಾಗೂ ಕಲಾವಿದರಿಗೆ ಪೋಷಕರಾಗಿದ್ದರು. ಕೆಲವು ರಾಜರು ಸ್ವತಃ ಗಣನೀಯ ಸಾಂಸ್ಕೃತಿಕ ಸಾಧನೆಗಳನ್ನು ಮಾಡಿದ್ದರು. ಯೂಸುಫ್ ಆದಿಲ್ ಷಾ ಪಾರಸೀ ಭಾಷೆಯಲ್ಲಿ ಕವಿಯೂ ಸಮರ್ಥ ಬರೆಹಗಾರನೂ ಆಗಿದ್ದ. ತನ್ನ ಆಸ್ಥಾನಕ್ಕೆ ಇರಾನ್, ಟುರಾನ್, ಅರೇಬಿಯ ಮತ್ತು ತುರ್ಕಿಗಳಿಂದ ವಿದ್ವಾಂಸರನ್ನು ಕರೆತಂದಿದ್ದ. ಇವನ ಉತ್ತರಾಧಿಕಾರಿ ಇಸ್ಮಾಯಿಲ್ ಆದಿಲ್ ಷಾ ಸ್ವತಃ ಕವಿಯಾಗಿದ್ದುದ್ದಲ್ಲದೇ ವಿದ್ವಾಂಸರಿಗಾಗಿ ಅಪಾರ ಹಣವನ್ನು ವಿನಿಯೋಗಿಸುತ್ತಿದ್ದ. ಇವನು ಪಾರಸಿ ಮತ್ತು ತುರ್ಕಿಭಾಷೆಗಳೆರಡರಲ್ಲೂ ಕೃತಿಗಳನ್ನು ರಚಿಸಿದ್ದಾನೆ. ಆದಿಲ್‌ಶಾಹೀ ರಾಜರು ಇತರ ಸಾಂಸ್ಕೃತಿಕ ಚಟುವಟಿಕೆಗಳಲ್ಲಿಯೂ ಆಸಕ್ತರಾಗಿದ್ದು ಲಲಿತಕಲೆಗಳನ್ನೂ ಪ್ರೋತ್ಸಾಹಿಸಿದ್ದಾರೆ. ಇಸ್ಮಾಯಿಲ್ ಆದಿಲ್‌ಷಾ ಚಿತ್ರಕಲೆ, ಆಭರಣಗಳ ತಯಾರಿ, ಬಿಲ್ಲು ಬಾಣಗಳ ರಚನೆ ಇವುಗಳಲ್ಲಿ ನಿಷ್ಣಾತನಾಗಿದ್ದ. ಒಳ್ಳೆಯ ಉಡುಪು, ಆಹಾರಗಳಲ್ಲಿ ಆಸಕ್ತಿ ತೋರಿಸುತ್ತಿದ್ದ. ಎರಡನೆಯ ಇಬ್ರಾಹೀಂ ಆದಿಲ್ ಷಾ ಸಂಗೀತಪ್ರೇಮಿ. ಇವನ ಆಸ್ಥಾನದಲ್ಲಿ ಸಂಗೀತ ಚೆನ್ನಾಗಿ ಬೆಳೆಯಿತು. ಇವನೇ ಸ್ವತಃ ಆ ಕಾಲದ ಪ್ರಸಿದ್ಧ ಸಂಗೀತಗಾರನಾಗಿದ್ದುದ್ದಲ್ಲದೇ ಕಿತಾಬೆನವರಸ್ ಎಂಬ ಉತ್ತರಾದಿ ಸಂಗೀತ ಪದ್ಧತಿಯ ವಿವಿಧ ರಾಗಗಳಲ್ಲಿರುವ ಹಾಡುಗಳ ಗ್ರಂಥವನ್ನು ರಚಿಸಿದ್ದಾನೆ. ನಿಷ್ಠಾವಂತ ಸಂಗೀತಗಾರನಾಗಿ ಸಂಗೀತದ ಅಧಿದೇವತೆ ಸರಸ್ವತಿ ಹಾಗೂ ಜ್ಞಾನದೇವತೆ ಗಣಪತಿಗೆ ಯಾವ ಸಂಕೋಚವೂ ಇಲ್ಲದೆ ಭಕ್ತಿಯನ್ನು ತೋರಿಸಿದ್ದಾನೆ. ಹಿಂದುದೇವತೆಗಳ ಬಗ್ಗೆ ಗೌರವ ವ್ಯಕ್ತಪಡಿಸಿದ್ದರೂ ಇಬ್ರಾಹೀಂ ನಿಷ್ಠಾವಂತ ಮುಸ್ಲಿಂ ಧರ್ಮಗಳು ಬೇರೆ ಬೇರೆಯಾಗಿರಬಹುದು, ಆದರೆ ಹಿಂದುವಾಗಲಿ ಇಸ್ಲಾಮೀಯನಾಗಲಿ ರಸೋಲ್ಲಾಸದಲ್ಲಿ ವ್ಯತ್ಯಾಸಕಾಣುವ ಸಾಧ್ಯತೆಯಿಲ್ಲ ಎಂಬುದನ್ನು ಎತ್ತಿ ತೋರಿಸಿದ್ದಾನೆ.

ಪ್ರಾರಂಭದಲ್ಲಿ ಪಾರಸೀ ಹಾಗೂ ತುರ್ಕಿಗಳು ಆದಿಲ್‌ಶಾಹೀಗಳ ಆಸ್ಥಾನಭಾಷೆಗಳಾಗಿದ್ದವು. ಆದರೆ ತರುವಾಯ ಪಾರಸೀಯೊಂದನ್ನು ಮಾತ್ರ ಅಧಿಕೃತ ಭಾಷೆಯಾಗಿ ಅಂಗೀಕರಿಸಲಾಯಿತು. ಪಾರಸೀ ಅಧಿಕೃತ ಭಾಷೆಯಾಗಿದ್ದರೂ ಕನ್ನಡ ಹಾಗೂ ಮರಾಠಿಗಳೆರಡನ್ನೂ ಆಡಳಿತ ಉದ್ದೇಶಗಳಿಗಾಗಿ ಬಳಸಲಾಗುತ್ತಿತ್ತು. ಇಲ್ಲಿನ ಮೊದಲ ಸುಲ್ತಾನರುಗಳ ಕಾಲದಲ್ಲಿ ದಖನಿ ಭಾಷೆ ರೂಪುಗೊಂಡಿತು. ಮುಂದೆ ಉರ್ದು ರೂಪುಗೊಂಡದ್ದು ಈ ದಖನಿಯಿಂದಲೇ. ಷಾ ಮಿರಂಜಿ ಮತ್ತು ಅವನ ಶಿಷ್ಯ ಬುರ್ಹಾನುದ್ದೀನ್ ಜಾನಮ್, ಈ ಬಿಜಾಪುರದ ಸೂಫಿಸಂತರು ದಖನೀ ಪದ್ಯಗಳನ್ನು ರಚಿಸಿರುವರಲ್ಲದೆ ಅದೇ ಭಾಷೆಯಲ್ಲಿ ತಮ್ಮ ಧರ್ಮಬೋಧೆ ಸಹ ಮಾಡುತ್ತಿದ್ದರು. ಇಬ್ರಾಹೀಂ ಆದಿಲ್ ಷಾನ ಕಾಲದಲ್ಲಿ ದಖನೀ ಭಾಷೆ ರಾಜಪ್ರೋತ್ಸಾಹವನ್ನೂ ಪಡೆಯಿತು. ಇವನ ಕಾಲದಲ್ಲಿ ರಾಜ್ಯದ ಪತ್ರಗಳು ಪಾರಸೀ, ಕನ್ನಡ ಮತ್ತು ಮರಾಠಿ ಭಾಷೆಯಲ್ಲಿರುತ್ತಿದ್ದುವು. ಬಿಜಾಪುರದಲ್ಲಿ ರಾಜಗ್ರಂಥಾಲಯ ಆರಂಭವಾದದ್ದೂ ಸುಮಾರು ಇದೇ ಕಾಲದಲ್ಲೇ. ಒಂದನೆಯ ಇಬ್ರಾಹೀಂ ಆದಿಲ್ ಷಾನ ಕಾಲದಲ್ಲಿ ಸಸ್ಯವರ್ಗ ಮತ್ತು ಪ್ರಾಣಿವರ್ಗದ ಮೇಲಿನ ಖ್ವಾಜ್‌ವಿನ್ ಎಂಬ ಅರಬ್ಬೀ ಕೃತಿಯನ್ನು ಪಾರಸಿಗೆ ಭಾಷಾಂತರಿಸಲಾಯಿತು. ಒಂದನೆಯ ಅಲಿ ಆದಿಲ್ ಷಾ ವಿದ್ವಜ್ಜನರ ಸಂಗವನ್ನು ಬಯಸುತ್ತಿದ್ದ. ಹಿಂದು ಹಾಗೂ ಮುಸ್ಲಿಂ ಸಾಧುಸಂತರ ಜೊತೆ ತತ್ತ್ವಶಾಸ್ತ್ರ ವಿಷಯಗಳನ್ನು ಚರ್ಚಿಸುತ್ತಿದ್ದ. ಅಲ್ಲದೆ ಇವನು ತನ್ನ ಆಸ್ಥಾನಕ್ಕೆ ಕ್ಯಾತೊಲಿಕ್ ಧರ್ಮ ನಿಯೋಗಗಳನ್ನೂ ಆಹ್ವಾನಿಸಿದ. ತನ್ನನ್ನು ಆದಿಲ್ ಷಾ ಸೂಫಿ ಎಂದು ಕರೆದುಕೊಂಡ. ಜಾತಿಮತಗಳ ವ್ಯತ್ಯಾಸವಿಲ್ಲದೆ ಪವಿತ್ರ ಸ್ಥಳಗಳಿಗೆ ಹಾಗೂ ವಿದ್ವಾಂಸರಿಗೆ ಭೂಮಿಗಳನ್ನು ದತ್ತಿ ಬಿಡುತ್ತಿದ್ದ. ಇವನು ಪುಸ್ತಕಪ್ರೇಮಿ. ಇವನ ಗ್ರಂಥಾಲಯದಲ್ಲಿ ಒಳ್ಳೆಯ ಪುಸ್ತಕ ಸಂಗ್ರಹವಿತ್ತು. ಅನಂತ ಪಂಡಿತನ ಮಗ ವಾಮನ ಪಂಡಿತ ಎಂಬ ಸಂಸ್ಕೃತ ವಿದ್ವಾಂಸನನ್ನು ವರ್ಷಕ್ಕೆ ಸಾವಿರ ವರಹದ ವೇತನದೊಂದಿಗೆ ಅರಮನೆಯ ಗ್ರಂಥಾಲಯದ ಗ್ರಂಥಪಾಲಕನನ್ನಾಗಿ ನೇಮಿಸಿಕೊಂಡಿದ್ದ. ಇಂದಿನ ಬೆಲೆಯಲ್ಲಿ ಅದು 90,000ರೂ.ಗಳನ್ನೂ ಮೀರುತ್ತದೆ. ಈ ಗ್ರಂಥಾಲಯಕ್ಕೆ ಸೇರಿದಂತೆ ವಿರಳ ಗ್ರಂಥಗಳ ಸಂಯೋಜನೆ ಮತ್ತು ಪ್ರತಿ ಮಾಡುವುದಕ್ಕಾಗಿ ಒಂದು ಪ್ರತ್ಯೇಕ ವಿಭಾಗವಿತ್ತು. ಇಲ್ಲಿ ಸುಮಾರು ಅರವತ್ತು ಜನ ಕುಶಲ ಬರಹಗಾರರೂ ಪುಸ್ತಕಗಳಿಗೆ ಮೆರಗು ಕಟ್ಟುವವರೂ ಇದ್ದರು. ಎರಡನೆಯ ಇಬ್ರಾಹೀಂ ಆದಿಲ್ ಷಾ ಬಹುದೊಡ್ಡ ವ್ಯಕ್ತಿ. ಪ್ರಜೆಗಳು ಪ್ರೀತಿಗೌರವಗಳಿಂದ ಜಗತ್‌ಗುರು ಎಂಬ ಬಿರುದನ್ನು ಅವನಿಗೆ ನೀಡಿದ್ದರು. ಇದನ್ನು ಹಣ್-ಎ-ನೌರಸ್ ಎಂಬ ತನ್ನ ದೊಡ್ಡ ಚಿನ್ನದ ನಾಣ್ಯಗಳ ಮೇಲೆ ಸಹ ಕೆತ್ತಿಸಿಕೊಂಡಿದ್ದಾನೆ. ಫೆರಿಸ್ತ ಎಂದು ಪ್ರಸಿದ್ಧನಾಗಿರುವ ಮಹಮ್ಮದ್ ಕಾಸಿಂ ಹಿಂದು ಷಾ ಎಂಬ ಖ್ಯಾತ ಇತಿಹಾಸಕಾರ ತಾರಿಖ್-ಇ-ಫೆರಿಸ್ತಾ ಎಂಬ ಗ್ರಂಥವನ್ನು ರಚಿಸಿದ್ದು ಈ ಕಾಲದಲ್ಲೇ. ಒಟ್ಟಿನಲ್ಲಿ ಆದಿಲ್‌ಶಾಹೀ ರಾಜರು ಕಲೆ ಹಾಗೂ ಸಾಹಿತ್ಯದಲ್ಲಿ ಹೆಚ್ಚು ಆಸಕ್ತಿ ಹೊಂದಿದ್ದರು. ಅವರು ಬಿಜಾಪುರವನ್ನು ಜ್ಞಾನಕೇಂದ್ರವನ್ನಾಗಿ ಮಾಡಿದುದಲ್ಲದೆ ಅವರ ಕಾಲದ ಭಾರತದ ಅತಿ ಸುಂದರ ನಗರಗಳಲ್ಲೊಂದಾಗುವಂತೆಯೂ ಮಾಡಿದರು.

**ವಾಸ್ತು-ಶಿಲ್ಪ :** ಭಾರತೀಯ ವಾಸ್ತುಶಿಲ್ಪ ವೈಭವಕ್ಕೆ ಬಿಜಾಪುರದ ಆದಿಲ್‌ಶಾಹೀಗಳು ಸಲ್ಲಿಸಿರುವ ಕಾಣಿಕೆ ಬಹು ಗಣನೀಯವಾದುದು. ಬಿಜಾಪುರಕ್ಕಿಂತ ಹೆಚ್ಚು ಭವ್ಯ ಕಟ್ಟಡಗಳನ್ನು ಕಲಾವೈಭವವನ್ನು ಹೊಂದಿರುವ ನಗರಗಳು ಭಾರತದಲ್ಲಿ ಬಹಳವಿಲ್ಲ. ಹೊಯ್ಸಳರ ಕಾಲದ ಅನಂತರ ಬಿಜಾಪುರದ ಆದಿಲ್‌ಶಾಹೀ ವಂಶವೇ ಸೌಂದರ್ಯೋಪಾಸನೆಯಲ್ಲೂ ರಚನಾಸಾಮರ್ಥ್ಯದಲ್ಲೂ ಅದ್ಭುತ ವಾಸ್ತುಶಿಲ್ಪವನ್ನು ಬೆಳೆಸಿದೆ ಎಂದು ಹೇಳಬಹುದು. ಇವರು ಗಾತ್ರ, ಸಂಖ್ಯೆ, ಅಲಂಕಾರ ವೈಭವದಲ್ಲಿ ಹಿಂದಿನವರ ಸಾಧನೆಯನ್ನು ಮೀರಿಸುವುದಕ್ಕೋಸ್ಕರ ವಾಸ್ತುಶಿಲ್ಪದ ಕಡೆಗೆ ತಮ್ಮ ಶಕ್ತಿ ಸಂಪನ್ಮೂಲಗಳನ್ನೆಲ್ಲ ವಿನಿಯೋಗಿಸಿದರು. ಇದರ ಫಲವಾಗಿ ಒಂದೇ ನಗರದಲ್ಲಿ ಐವತ್ತು ಮಸೀದಿಗಳು, ಇಪ್ಪತ್ತು ದರ್ಗಾಗಳು ಮತ್ತು ಸುಮಾರು ಅಷ್ಟೇ ಸಂಖ್ಯೆಯ ಅರಮನೆಗಳು ನಿರ್ಮಾಣವಾದವು. ಈ ಕಾಲದ ಭವ್ಯ ಮಂದಿರಗಳು ಕುಶಲತೆಯಲ್ಲಿ ಪರಿಪೂರ್ಣತೆ ಸಾಧಿಸಿವೆ. ಇಡೀ ಪ್ರಪಂಚದಲ್ಲಿ ಅತಿ ದೊಡ್ಡದಾದ ಗುಮ್ಮಟ ಚಾವಣಿ ಇರುವ ಗೋಳಗುಮ್ಮಟ ಈ ಕಾಲದ ಮಹಾಮೇಧಾವಿಯೊಬ್ಬನ ಅದ್ಭುತ ಸಾಧನೆ.

ಬಿಜಾಪುರದಲ್ಲಿ ಕಟ್ಟಡಗಳ ರಚನಾ ಕಾರ್ಯ 16ನೆಯ ಶತಮಾನದ ಪೂರ್ವಾರ್ಧದಿಂದ ಪ್ರಾರಂಭವಾಯಿತು. ಆಗ ಒಂದು ಕೋಟೆ ಆಡಳಿತ ಕಛೇರಿ ಮತ್ತು ಎರಡು ಚಿಕ್ಕ ಮಸೀದಿಗಳು ನಿರ್ಮಾಣಗೊಂಡವು. 17ನೆಯ ಶತಮಾನದಲ್ಲಿ ಬಿಜಾಪುರದ ಶಕ್ತಿ ತುಟ್ಟತುದಿಯಲ್ಲಿದ್ದಾಗ ಈ ನಗರ ವಿಸ್ತಾರಗೊಂಡಿತು. ಎರಡನೆಯ ಇಬ್ರಾಹೀಂ ಆದಿಲ್ ಷಾ (1580-1627)ನವರಸಪುರ ಎಂಬ ಎರಡನೆಯ ನಗರವನ್ನು ಸ್ಥಾಪಿಸಿದ. ಆದರೆ ಎಲ್ಲ ಮುಖ್ಯ ಕಟ್ಟಡಗಳು ಹಳೆಯ ನಗರದ ಕೋಟೆಗೋಡೆಗಳ ಒಳಗಡೆಯೇ ಇವೆ. 17ನೆಯ ಶತಮಾನದ ಪ್ರಥಮಾರ್ಧಭಾಗ ಬಿಜಾಪುರದ ಕಲೆಯ ಸುವರ್ಣಯುಗ. ಇದು ಇಂಗ್ಲೆಂಡಿನ ಎಲಿಜಬತ್ ಯುಗದೊಡನೆ ಮತ್ತು ಪರ್ಷಿಯದ ಷಾ ಅಬ್ಬಾಸನ ಕಾಲದೊಂದಿಗೆ ಹೊಂದಿಕೊಂಡಿದೆ. ಇಲ್ಲಿಯ ಆಸಾರ್ ಮಹಲ್, ಗಗನ್ ಮಹಲ್, ಮೆಹತರ್ ಮಹಲ್, ಚೀನಿ ಮಹಲ್, ಗೋಳಗುಮ್ಮಟ, ಇಬ್ರಾಹೀಂ ರೋಜ, ಜಾಮೀಮಸೀದಿ ಮುಂತಾದವು ಆದಿಲ್‌ಷಾಹೀ ಸುಲ್ತಾನರ ಕಲಾಭಿಮಾನದ ಪ್ರತೀಕಗಳಾಗಿವೆ. ಬಿಜಾಪುರದ ಕಲಾ ಮತ್ತು ವಾಸ್ತುಶಿಲ್ಪ ಲಕ್ಷಣಗಳನ್ನು ಗಮನಿಸಿದಾಗ ಅದು ಹಳೆಯ ಪರ್ಷಿಯನ್ ಮತ್ತು ಆಟ್ಟೋಮನ್ ಕಲಾಪಂಥಗಳೊಂದಿಗೆ ಸಂಪರ್ಕವಿಟ್ಟುಕೊಂಡಿತ್ತೆಂದು ಕಂಡುಬರುತ್ತದೆ.

ಬಿಜಾಪುರದ ವಾಸ್ತುಶಿಲ್ಪದ ಕೆಲವು ಮುಖ್ಯ ಲಕ್ಷಣಗಳು ಹೀಗಿವೆ. ಮೊದಲನೆಯದಾಗಿ ಇಲ್ಲಿನ ಗುಮ್ಮಟ ಬಹುತೇಕವಾಗಿ ಆಕಾರದಲ್ಲಿ ವರ್ತುಲವಾಗಿದ್ದು ಅದರ ನೆಲಗಟ್ಟಿನಲ್ಲಿ ಹೂವಿನ ದಳದೋಪಾದಿಯ ಸಮೂಹವನ್ನು ನಿರ್ಮಿಸಿ ಮೇಲೇಳಿಸಲಾಗಿದೆ. ಕಟ್ಟಡದ ಮೇಲ್ಭಾಗದಲ್ಲಿ ಮಿನಾರುಗಳು ಸ್ತಂಭಗೋಪುರಗಳು ಚಿಕ್ಕಗುಮ್ಮಟಗಳಿಂದ ಅಲಂಕೃತವಾಗಿವೆ. ಗುಲ್‌ದಸ್ತಾಗಳು (ಚಿಕ್ಕ ಸ್ತಂಭಗೋಪುರಗಳು) ಇರುತ್ತವೆ. ಎರಡನೆಯದಾಗಿ, ಬಿಜಾಪುರದ ಕಮಾನಿನ ಆಕಾರ ಬಹಳ ವಿಶಿಷ್ಟವಾದುದು. ಅದರ ಗೆರೆಗಳ ಮಾಟ ಹಿಂದಿನ ಕೋನ ಸಂಧಿಗಳನ್ನು ಕಳೆದುಕೊಂಡು ನಯವಾಗಿ ಬಾಗಿ ಸಾಗುತ್ತದೆ. ಬಿಜಾಪುರದ ಕಮಾನು ಚತುಷ್ಕೇಂದ್ರ ಮಾದರಿಯದು. ಮೂರನೆಯದಾಗಿ, ಬಿಜಾಪುರದ ವಾಸ್ತುಶಿಲ್ಪಗಳಲ್ಲಿ ಕಂಬಗಳು ಇರುವುದಿಲ್ಲ. ಅವುಗಳ ಸ್ಥಳಗಳಲ್ಲಿ ಆಯಾಕಾರ ಛೇದ ವಿನ್ಯಾಸದ ದಪ್ಪ ಗೋಡೆಗಳೇ ಇರುತ್ತವೆ. ನಾಲ್ಕನೆಯದಾಗಿ, ಗೋಡೆಯ ಮೇಲಿನ ಚಾಚುಭಾಗ ಅಥವಾ ಚಜ್ಜವು ಬಹುತೇಕ ಕಟ್ಟಡಗಳಲ್ಲಿ ಆಲಂಕಾರಿಕವಾಗಿ ಎಲ್ಲೆಡೆಯೂ ಕಂಡುಬರುತ್ತದೆ. ಅಂತಿಮವಾಗಿ, ಇವುಗಳಲ್ಲಿನ ಅಲಂಕರಣ ಉಬ್ಬುಶಿಲ್ಪ ವಿನ್ಯಾಸಗಳು ಸ್ವಂತಿಕೆ ಮತ್ತು ವಿಶಿಷ್ಟರೂಪಲಕ್ಷಣಗಳನ್ನು ಹೊಂದಿರುತ್ತದೆ. ವಿನ್ಯಾಸಗಳು ಹಿಂದೆ ಕಾಣದ ಹೊಸರೀತಿಗಳಲ್ಲಿ ಇರುತ್ತವೆ. ಗುಲಾಬಿ ಹೂವಿನಾಕಾರ, ಸಾಂಪ್ರದಾಯಿಕ ತೂಗುದೀಪ, ನಿರಂತರವಾಗಿ ಹಬ್ಬುವ ಅಂಚು, ಒಂದಕ್ಕೊಂದು ಒಳತೂರಿ ಹೆಣೆದುಕೊಳ್ಳುವ ವಿನ್ಯಾಸಗಳು- ಇವು ಮುಖ್ಯವಾಗಿ ಕಾಣುತ್ತವೆ. ಇವನ್ನು ಉಬ್ಬುಶಿಲ್ಪವಾಗಿ ಕಲ್ಲಿನಿಂದ ಕೆತ್ತಲಾಗಿರಬಹುದು, ಇಲ್ಲವೆ ಗಾರೆಯವಾಗಿರಬಹುದು.

ಬಿಜಾಪುರದ ವಾಸ್ತುಶಿಲ್ಪವನ್ನು ನಾಲ್ಕು ವಿಶಿಷ್ಟ ಉದಾಹರಣೆಗಳೊಂದಿಗೆ ವಿವರಿಸಬಹುದು. ಅವುಗಳೆಂದರೆ ಜಾಮೀ ಮಸೀದಿ (ಅಭಿಜಾತ ರೀತಿ), ಇಬ್ರಾಹೀಂ ರೋಜ (ಬಹು ಅಲಂಕರಣದ ರಚನೆ), ಗೋಳಗುಮ್ಮಟ (ಬಹು ಭವ್ಯ ಶೈಲಿ), ಮೆಹತರ್ ಮಹಲ್ (ನಾಜೂಕಾದ ಚಿಕ್ಕ ರಚನೆ).

ಜಾಮೀ ಮಸೀದಿಯನ್ನು ಒಂದನೆಯ ಆದಿಲ್ ಷಾ (1558-80) ನಿರ್ಮಿಸಿದ. ಇದನ್ನು ಬಿಜಾಪುರದ ವಾಸ್ತುಕಲೆಯ ಅಭಿಜಾತ ರೀತಿಗೆ ಒಳ್ಳೆಯ ಉದಾಹರಣೆಯಾಗಿ ಪರಿಗಣಿಸಬಹುದು. ಅದರ ಎರಡು ಮಿನಾರ್‌ಗಳು ಪೂರ್ಣವಾಗಿಲ್ಲದೆ ಕಟ್ಟಡ ಅಪೂರ್ಣ ನಿರ್ಮಾಣವಾಗಿಯೇ ಉಳಿದಿದೆ. ಹಾಗಿದ್ದರೂ ಇದೊಂದು ಭವ್ಯ ರಚನೆಯಾಗಿದ್ದು ಕಟ್ಟುವಾಣಗಾರರ ಕಲೆಯ ಉಚ್ಚತಮ ಕೃತಿಯಾಗಿದೆ. ಇದು 450' X 228' ಪ್ರಮಾಣವಿರುವ ಆಯಾತಾಕಾರದ ಬೃಹತ್ ಕಟ್ಟಡ.ಇದರಲ್ಲಿ ಒಂದರ ಮೇಲೊಂದರಂತೆ ಎರಡು ಕಮಾನು ಸಾಲುಗಳು ಇವೆ. ಕೆಳಗಿನ ಕಮಾನುಗಳು ಆಲಂಕಾರಿಕ. ಮೇಲಿನವು ತೆರೆದಿದ್ದು ಸಾಲು ಕಮಾನಿನ ಮುಮ್ಮುಖವನ್ನು ಒದಗಿಸಿವೆ. ತೆರೆದ ಅಂಗಳ 150' ಚೌಕ, ಮೂರು ಬದಿಗಳು ಏಳು ಬೃಹತ್ ಕಮಾನುಗಳು ಸಾಲುಗಳಿಂದ ಆವೃತವಾಗಿವೆ. ಈ ಕಮಾನುಗಳ ಮೇಲುಗಡೆ ಗಂಧವಾರಣಗಳ ಮೇಲೆ ನಿಂತ ಚಾಚು ಚಜ್ಜ ಹಬ್ಬಿದೆ. ಹಜಾರದ ಮಧ್ಯಭಾಗದಲ್ಲಿರುವ ಅಂಕಣದ ಸುತ್ತ ನಾಲ್ಕುಕಡೆ ಎತ್ತರವಾದ ಕಮಾನುಗಳಿದ್ದು ಅದರ ಮೇಲೆ ಮಾಡಿಗಿಂತ ಉನ್ನತವಾಗಿ ಎದ್ದಿರುವ ದೊಡ್ಡ ಗುಮ್ಮಟವಿದೆ. ಮಾಡಿನ ಮೇಲೆ ಗುಮ್ಮಟದ ಸುತ್ತ ಕಮಾನು ಅಲಂಕರಣವೂ ಸುತ್ತಲ ಕೈಪಿಡಿಯಲ್ಲಿ ಎದ್ದು ಕಾಣುವ ಹೆನ್ನಾಲಗೆಗಳ ಸಾಲೂ ಇವೆ. ಈ ಮಸೀದಿಯಲ್ಲಿರುವ 208' ಉದ್ದ ಮತ್ತು 107' ಅಗಲದ ಪ್ರಾರ್ಥನಾ ಹಜಾರ ಅದರ ಭವ್ಯತೆ ಮತ್ತು ವಿಸ್ತಾರದಿಂದಾಗಿ ಬಹು ಗಮನೀಯವಾದುದು.ಈ ಹಜಾರವನ್ನು ದೊಡ್ಡ ಗೋಡೆ ರೀತಿಯ ದಪ್ಪ ಕಂಬಗಳ ಮೇಲೆ ನಿಂತ ಕಮಾನುಗಳ ಸಹಾಯದಿಂದ ಐದು ಉದ್ದ ಭಾಗಗಳಾಗಿ ವಿಂಗಡಿಸಲಾಗಿದೆ. ಇದರ ಮಧ್ಯಾಂಕಣ 76' ಚೌಕ. ಸುತ್ತ 12 ದೊಡ್ಡ ಕಮಾನುಗಳಿದ್ದು ಮೇಲೆ ಹೋದಂತೆ ಅವು ಕೂಡಿಕೊಳ್ಳುತ್ತ, ಮೇಲಿನ ಗುಮ್ಮಟಕ್ಕೆ ಅಷ್ಟಕೋನಾಕಾರದ ತಳವನ್ನು ಒದಗಿಸಿವೆ. ಹಿಂಬದಿಯ ಮಧ್ಯದ ಕಮಾನಿನಲ್ಲಿ ಮಿಹ್ರಾಬ್ ಪವಿತ್ರ ಕೋಷ್ಠ ಇದೆ. ಇದಾದರೋ ಗಾರೆಯಲ್ಲಿ ರಚಿಸಿದ ವಿವರವಾದ ಉಬ್ಬುಶಿಲ್ಪ ವಿನ್ಯಾಸಗಳಿಂದಲೂ ಥಳಥಳಿಸುವ ಬಣ್ಣಗಳಿಂದಲೂ ಅಲಂಕೃತವಾಗಿದೆ. ಈ ಮಸೀದಿಯ ಶ್ರೇಷ್ಠತೆಯಿರುವುದು ಇದರ ಸರಳತೆ ಮತ್ತು ಗಾಂಭೀರ್ಯದಲ್ಲಿ, ಹೆಚ್ಚಿನ ಶಿಲ್ಪಾದಿ ಅಲಂಕರಣವಿಲ್ಲದಿದ್ದರೂ ಇದು ಪ್ರದರ್ಶಿಸುವ ಪರಿಪೂರ್ಣ ಕೋಮಲತೆಯಲ್ಲಿ.

ಇಬ್ರಾಹೀಂ ರೋಜ ಬಿಜಾಪುರದ ಕೋಟೆಯ ಹೊರಭಾಗದಲ್ಲಿದೆ. ಎರಡನೆಯ ಇಬ್ರಾಹೀಂ ಆದಿಲ್ ಷಾ (1580-1627) ತನ್ನ ಸಮಾಧಿಮಂದಿರವಾಗಿ ಇದನ್ನು ಕಟ್ಟಿಸಿಕೊಂಡ. ಇದರಲ್ಲಿ ಎರಡು ಮುಖ್ಯ ಕಟ್ಟಡಗಳಿವೆ, ಒಂದು ಸಮಾಧಿ; ಇನ್ನೊಂದು ಮಸೀದಿ. ರೋಜ ಸುಂದರಾಲಂಕೃತ ಕಟ್ಟಡ. ಅಷ್ಟೇ ಅಲ್ಲ ಇದರ ರಚನಾ ವಿನ್ಯಾಸದಲ್ಲಿ ಪರಿಪೂರ್ಣತೆಯನ್ನು ಸಾಧಿಸಿ; ತನ್ನ ಸರಿಸಮಾನವಿಲ್ಲದ ಕಟ್ಟಡವಾಗಿದೆ. ಕಟ್ಟಡ ಕಪಿಲವರ್ಣದ ಕಲ್ಲಿನದು. ಇದನ್ನು ಅಮೃತಶಿಲೆಯಲ್ಲೇನಾದರೂ ಕಟ್ಟಿದ್ದರೆ ತಾಜಮಹಲನ್ನು ಮೀರಿಸುತ್ತಿತ್ತು ಎಂದು ಒಬ್ಬವಾಸ್ತುಕಲಾ ವಿಮರ್ಶಕ ಹೇಳಿದ್ದಾನೆ. ಕಟ್ಟಡ ದೊಡ್ಡದೇನೂ ಅಲ್ಲ, ಆದರೆ ಅದರ ಸೌಂದರ್ಯವಿರುವುದು ಅದರ ವಿವರಗಳಲ್ಲಿ. ರಚನೆ, ತಂತ್ರ, ಅಲಂಕಾರ ಮತ್ತು ಉಪಯುಕ್ತತೆಯ ದೃಷ್ಟಿಯಿಂದ ಇದು ಪರಿಪೂರ್ಣವಾಗಿದೆ. ಎರಡು ಕಟ್ಟಡಗಳೂ 360' ಉದ್ದ ಮತ್ತು 150' ಅಗಲವಿರುವ ಜಗತಿಯ ಮೇಲೆ ಇವೆ. ರೋಜದಲ್ಲಿ ಮಧ್ಯದ ಹಜಾರ, ಸುತ್ತಲೂ ಕಮಾನು ಸಾಲುಗಳಿಂದ ಸುತ್ತುವರಿದ ಮೊಗಸಾಲೆ ಮತ್ತು ಮೇಲೆ ಗುಮ್ಮಟ ಇವೆ. ಅದರ ಪ್ರತಿಯೊಂದು ಭಾಗವೂ ಒಂದಕ್ಕೊಂದು ಪೂರಕವಾದ ಸಹಜ ಪರಿಮಾಣಗಳಲ್ಲಿದೆ. ಸುತ್ತಲಿನ ಕಮಾನು ಸಾಲುಗಳು ಹಾಗೂ ಅಲಂಕರಣ ಕಮಾನುಗಳು ವೈವಿಧ್ಯತೆಯನ್ನೂ ವಾಸ್ತು ನೈಪುಣ್ಯವನ್ನೂ ಪ್ರತಿಬಿಂಬಿಸುತ್ತವೆ. ಈ ವ್ಯತ್ಯಸ್ತ ರೀತಿಯ ಕಮಾನುಗಳು ಕಟ್ಟಡದ ಚೆಲುವಿನ ಪೂರಕವಾಗಿದೆ. ಇದೇ ಸೌಂದರ್ಯ ದೃಷ್ಟಿ ಇತರ ಅಂಗಗಳಲ್ಲೂ ಕಂಡುಬರುತ್ತವೆ. ತೆಳುವಾಗಿಯೂ ಉದ್ದವಾಗಿಯೂ ಇರುವ ಮಿನಾರುಗಳು ಕಟ್ಟಡದ ಮೇಲೆ ಎಲ್ಲ ಕೋನಗಳಲ್ಲೂ ನವಿರಾಗಿ ಮೇಲೆದ್ದು ನಿಂತಿವೆ. ಸಾಲು ಸಾಲು ತೆಳು ಗಂಧವಾರಣಗಳ ಮೇಲೆ ನಿಂತ ಮೇಲು ಭಾಗ, ಅದರ ಮೇಲೆ ಇರುವ ಗುಮ್ಮಟದ ವಿನ್ಯಾಸ ಕಟ್ಟಡದ ವೈಭವಕ್ಕೆ ಕಾರಣವಾಗಿವೆ. ಸಮಾಧಿಯಿರುವ ಅಂಕಣದ ಹೊರ ಅಂಚಿನಲ್ಲಿ ಕಮಾನು ಸಾಲಿದೆ. ಕಟ್ಟಡದ ಎಲ್ಲಾ ಭಾಗಗಳೂ ತೆಳು ಉಬ್ಬು ಶಿಲ್ಪಗಳಿಂದ ಅಲಂಕೃತವಾಗಿವೆಯಾದರೂ ಮಧ್ಯಾಂಕಣದ ಉತ್ತರ ಗೋಡೆಯ ಹೊರಭಾಗ ಬಹುವಾಗಿ ಹೆಣೆದುಕೊಂಡು ವಿನ್ಯಾಸಗಳಿಂದ ಕೂಡಿದೆ. ವಿನ್ಯಾಸ ಸೌಂದರ್ಯದಲ್ಲಿ ಇದು ವೈಶಿಷ್ಟಪೂರ್ಣವಾಗಿದೆ, ಅನುಪಮವಾಗಿದೆ. ಪ್ರತಿಯೊಂದು ಗೋಡೆಯೂ ಮೂರು ಮೂರು ಕಮಾನು ವಿನ್ಯಾಸಗಳಿಂದಲೂ ಅಂಚುಪಟ್ಟಿ ಮತ್ತು ಮಧ್ಯಪಟ್ಟಿಕೆಗಳಿಂದಲೂ ಅಲಂಕೃತವಾಗಿದೆ. ನಡು ಹಜಾರ 18' ಚೌಕದ ಕೋಣೆ, ಮೇಲೆ ಪುನಃ ತೆಳು ಉಬ್ಬು ಶಿಲ್ಪಗಳಿಂದ ಕೂಡಿದ ಮಟ್ಟಸ ಚಾವಣಿ ಇದೆ. ಇಬ್ರಾಹೀಂ ರೋಜ ಬಿಜಾಪುರದ ಕಟ್ಟಡ ರಚನಾಚಾತುರ್ಯದ ಉತ್ತಮ ಸಾಧನೆ.

ಬಿಜಾಪುರದ ಗೋಳಗುಮ್ಮಟ (ನೋಡಿ) ಜಗತ್ಪ್ರಸಿದ್ಧ. ಆದಿಲ್‌ಶಾಹೀ ದೊರೆಗಳ ಆಳ್ವಿಕೆಯನ್ನು ಅಮರಗೊಳಿಸಿರುವ ಕೃತಿ. ಮಹಮ್ಮದ್ ಆದಿಲ್‌ಷಾನ (1627-57) ಈ ಗೋರಿ ಭಾರತದ

ಅದ್ಭುತವಾದ ಕಟ್ಟಡಗಳಲ್ಲೊಂದು. ಪ್ರಪಂಚದಲ್ಲೇ ಅತಿ ದೊಡ್ಡ ಗುಮ್ಮಟಾಚ್ಛಾದಿತ ಹಜಾರವಿರುವುದು ಇಲ್ಲಿಯೇ. ಇಲ್ಲಿಯ ಭಾರಿ ಗುಮ್ಮಟ ಪ್ರಮಾಣದಲ್ಲಿ ವಿಶ್ವದಲ್ಲೇ ಎರಡನೆಯದು. 205' ತಳ ಚೌಕ ಇದ್ದು 198½' ಅಡಿ ಎತ್ತರಕ್ಕೆ ಏರುವ ಗೋಳಗುಮ್ಮಟ ಬೃಹತ್ ಕಟ್ಟಡವಷ್ಟೇ ಅಲ್ಲ, ಬೃಹತ್ತಿಗೆ ತಕ್ಕಂಥ ಗಡಸುತನ, ಆದರೂ ವಿವಿಧ ಭಾಗಗಳ ಪ್ರಮಾಣ ಅಲಂಕರಣಗಳಿಂದ ವರ್ಧಿಸಿದ ಸೌಂದರ್ಯ ಇವುಗಳಿಂದ ಬಿಜಾಪುರದ ವಾಸ್ತುಶಿಲ್ಪಗಳ ಸಾಹಸೀ ಪ್ರವೃತ್ತಿಯನ್ನೂ ತಂತ್ರಜ್ಞಾನವನ್ನೂ ಸೌಂದರ್ಯದೃಷ್ಟಿಯನ್ನೂ ಈ ಕಟ್ಟಡ ಮೇಳೈಸಿಕೊಂಡಿದೆ.

ಮೆಹತರ್ ಮಹಲನ್ನು ಎರಡನೆಯ ಇಬ್ರಾಹೀಂ ಆದಿಲ್ ಷಾ 1620ರಲ್ಲಿ ಕಟ್ಟಿಸಿದ. ಇದೊಂದು ಚಿಕ್ಕ ಕಟ್ಟಡ, ಆದರೆ ಉಚ್ಚಮಟ್ಟದ ಕಲಾಕೃತಿ. ಇದರಲ್ಲಿ ಒಂದು ಸಣ್ಣ ಸಭಾಂಗಣವಿದೆ. ಮೇಲೆ ತೆರೆದ ಮಾಳಿಗೆಯಿದ್ದು ಅದರ ಸುತ್ತಲ ಗೋಡೆಯನ್ನು ಕಮಾನು ಕಿಟಕಿಗಳಿಂದ ಅಲಂಕರಿಸಲಾಗಿದೆ. ಅದರ ಮೇಲೆ ಜಾಲಂದ್ರದ ಕೈಪಿಡಿಯಿದೆ. ಕಟ್ಟಡದ ಮುಖಭಾಗ ಪ್ರಶಂಸಾರ್ಹ ಕಲ್ಪನೆ. ಇಕ್ಕೆಲದಲ್ಲೂ ಒಂದೊಂದು ಒತ್ತುಗಂಬಗಳಿದ್ದು ಮೇಲೇರುತ್ತ ಚಿಕ್ಕ ಮಿನಾರುಗಳಂತಾಗಿವೆ. ಮೇಲಿನ ಕಿಟಕಿ ವೈಶಿಷ್ಟ್ಯಪೂರ್ಣವಾಗಿದೆ. ಇದು ಗಂಧವಾರಣಗಳೆತ್ತಿದ ಚಾಚಣಿಕೆಯ ಮೇಲೆ ನಿಂತಿದೆ. ಇದರ ಮೇಲೆ ಅಗಲದ ಆಚ್ಛಾದನೆಯಿದೆ. ಬಾಗಿಲುವಾಡ ದಂತಪಂಕ್ತಿಯ ಕಮಾನಿನ ಆಕೃತಿಯಲ್ಲಿದೆ. ಇಲ್ಲಿಯ ಒಂದೊಂದು ವಿವರವೂ ಶಿಲ್ಪಭರಿತ. ಶಿಲ್ಪಕೆಲಸ ಉತ್ತಮ ಗುಣಮಟ್ಟದ್ದಾಗಿದ್ದು, ಶಿಲ್ಪಗಳು ಕಪಿಲ ಶಿಲೆಯಲ್ಲಿ ಮಾಡಿದ್ದರೂ ಜೇಡಿಯ ರೂಪಣೆಗಳಿದ್ದಂತೆ ಚೆನ್ನಾಗಿವೆ. ಉನ್ನತಕಲೆ ಇಲ್ಲಿ ಪ್ರತಿಬಿಂಬಿತವಾಗಿದೆ.

ಬಿಜಾಪುರದಲ್ಲಿರುವ ಷಾ ಕರೀಂದರ್ಗಾ, ಷಾ ನವಾಜ್‌ನ ಸಮಾಧಿ, ಶಾಹಪುರ ಬಡಾವಣೆಯಲ್ಲಿರುವ ಮಸೀದಿಗಳು, ಅಂದ ಮಸೀದಿ, ಮಲ್ಲಿಕಾ ಜಹಾನ್ ಬೇಗಂ ಮಸೀದಿ, ಅಲಿ ಷಹೀದ್ ಪೀರ್ ಮಸೀದಿ ಇತ್ಯಾದಿ ಕಟ್ಟಡಗಳು ಆದಿಲ್‌ಶಾಹೀ ರಾಜರ ಕಾಲದ ಇತರ ಕೆಲವು ಗಮನಾರ್ಹ ನಿರ್ಮಾಣಗಳು. ಬಿಜಾಪುರದಲ್ಲಿ ಅರಮನೆಗಳು, ಆಡಳಿತ ಕಟ್ಟಡಗಳು ಇತ್ಯಾದಿಗಳೂ ಇವೆ. ಆದರೆ ಇವುಗಳಲ್ಲಿ ಹೆಚ್ಚಿನ ವೈಶಿಷ್ಟ್ಯ ಕಾಣುವುದಿಲ್ಲ. ಆದರೂ ಅವುಗಳಲ್ಲಿ ಗಗನ ಮಹಲ್ (ರಚನೆ 1560) ಉಲ್ಲೇಖಾರ್ಹ. 120'x82' ವಿಸ್ತಾರದ ಈ ಕಟ್ಟಡ ಅರಮನೆಯಾಗಿ ಮತ್ತು ಸಮಾಲೋಚನಾಗೃಹವಾಗಿ ಉಪಯೋಗವಾಗುತ್ತಿತ್ತು. ಇದರ ಮೇಲಂತಸ್ತು ಜನಾನಾದವರಿಗೆ ಮೀಸಲಾಗಿತ್ತು. ಇದರ ಮುಂಭಾಗ ಪರಿಣಾಮಕಾರಿ ವಿನ್ಯಾಸವನ್ನು ಹೊಂದಿದೆ. ಇದರಲ್ಲಿ ಮೂರು ದೊಡ್ಡ ಕಮಾನುಗಳಿದ್ದು ಮಧ್ಯದ್ದು ಮಿಕ್ಕೆರಡಕ್ಕಿಂತ ದೊಡ್ಡದಾಗಿ 60' ಅಗಲ ಮತ್ತು 50' ಎತ್ತರವಿದೆ.

ಈ ಆದಿಲ್‌ಶಾಹೀ ವಾಸ್ತುರೀತಿಯ ಕಟ್ಟಡಗಳು ಬಿಜಾಪುರದ ಹೊರಗೂ ಅನೇಕ ಕಡೆಗಳಲ್ಲಿವೆ. ಆದರೆ ಇವೆಲ್ಲಾ ಚಿಕ್ಕವು. ಗುಲ್ಬರ್ಗದಲ್ಲಿರುವ ಚಾಂದ್‌ಬೀಬಿ ಕಟ್ಟಿಸಿದ (1585) ಹೀರಾಪುರ ಮಸೀದಿ, ಅದೇ ಜಿಲ್ಲೆಯ ಶಾಹಪುರ ತಾಲ್ಲೂಕಿನಲ್ಲಿರುವ ಕಡೇಚೂರ್, ಯಾದಗಿರಿ ತಾಲ್ಲೂಕಿನ ದೋರನಹಳ್ಳಿ ಇಲ್ಲಿಯ ಮಸೀದಿಗಳನ್ನು ಉದಾಹರಣೆಯಾಗಿ ಹೆಸರಿಸಬಹುದು.

ಬಿಜಾಪುರದ ವಾಸ್ತುಕೃತಿಗಳು ಬಹಳ ಉತ್ತಮ ದರ್ಜೆಯವು. ಬಿಜಾಪುರದ ವಾಸ್ತುತಜ್ಞರು ಗೋಳಗುಮ್ಮಟದಂಥ ಅಸೀಮ ಸಾಹಸೀ ಪ್ರಯತ್ನಗಳನ್ನೂ ಮೆಹತರ್ ಮಹಲ್‌ನಂಥ ಸಣ್ಣ ಕಟ್ಟಡಗಳನ್ನೂ ಬಹು ಆಸ್ಥೆಯಿಂದ ಕಟ್ಟಬಲ್ಲವರಾಗಿದ್ದರು. ಗೋಳಗುಮ್ಮಟದಂಥ ಕಟ್ಟಡದಲ್ಲಿ ಶ್ರೀಮದ್ಗಾಂಭೀರ್ಯ, ಸ್ವಲ್ಪ ಮಟ್ಟಿನ ಗಡಸುತನವಿದ್ದರೆ, ಇಬ್ರಾಹೀಂ ರೋಜದಂಥ ಕಟ್ಟಡಗಳಲ್ಲಿ ತದ್ವಿರುದ್ಧವಾಗಿ ಲಲನಾ ಲಾಲಿತ್ಯವೇ ಮೈವೆತ್ತಿದೆ. ಹೀಗೆ ವೈವಿಧ್ಯಪೂರ್ಣ ಕೃತಿಗಳನ್ನು ನಿರ್ಮಿಸಬಲ್ಲವರಾಗಿದ್ದ ಬಿಜಾಪುರದ ವಾಸ್ತುತಜ್ಞರ ಕೌಶಲ್ಯ ಪ್ರಶಂಸಾರ್ಹ. ಬಿಜಾಪುರದ ಕಟ್ಟಡಗಳಲ್ಲಿ ಕಮಾನುಗಳ ಅಂತರ್‌ಭೇದನ, ಗುಮ್ಮಟಗಳ ಅಳವಡಿಕೆ ಮುಂತಾದ ತಂತ್ರಗಳನ್ನು ನೋಡಿದರೆ ಕಟ್ಟಡಕಲೆ ಬಹು ಹಿಂದಿನಿಂದ ರೂಢಿತವಾಗಿದ್ದ ರೀತಿಯನ್ನು ತೋರಿಸುತ್ತದೆ. ಪ್ರಾಚೀನ ವಿಧಾನಗಳನ್ನು ಬಿಜಾಪುರದವರೂ ಅಳವಡಿಸಿಕೊಂಡಿರಬೇಕು. ಆ ವಂಶ ಕೊನೆಗೊಳ್ಳುವ ವರೆಗೂ ಅವರ ಈ ಕಟ್ಟಡ ರಚನಾಸಾಮರ್ಥ್ಯ ಯಾವ ಕ್ಷೀಣತೆಯ ಲಕ್ಷಣವೂ ಕಾಣಿಸಿಕೊಳ್ಳದೆ ಮುಂದುವರಿದಿತ್ತು.

ಶಾಸನಗಳು: ಆದಿಲ್‌ಶಾಹೀ ವಂಶಕ್ಕೆ ಸೇರಿದ ಶಾಸನಗಳು ಅಧಿಕ ಸಂಖ್ಯೆಯಲ್ಲಿವೆ. ಕರ್ನಾಟಕದಲ್ಲೆಲ್ಲಾ ಕಂಡುಬರುವ ಈ ಶಾಸನಗಳು ಸಾಮಾನ್ಯವಾಗಿ ಮಸೀದಿಗಳು, ದರ್ಗಾಗಳು, ಕೋಟೆಗಳು, ಪ್ರವೇಶದ್ವಾರಗಳು ಅಥವಾ ಜನೋಪಯೋಗಿ ನಿರ್ಮಾಣಗಳ ಸಮೀಪ ಇವೆ. ಇವುಗಳಲ್ಲಿ ಬಳಸಿರುವ ಭಾಷೆ ಅರಬ್ಬೀ, ಪಾರಸೀ ಮತ್ತು ಕೆಲವು ಸಂದರ್ಭಗಳಲ್ಲಿ ಕನ್ನಡ. ಮಸೀದಿಗಳು ಮತ್ತು ದರ್ಗಾಗಳಲ್ಲಿರುವ ಶಾಸನಗಳಲ್ಲಿ ಇಸ್ಲಾಮಿನ ಪ್ರಥಮ ಗ್ರಂಥ ಕೊರಾನ್ ಮತ್ತು ಕಲೀಮಗಳ ಪದ್ಯಗಳನ್ನು ಸಾಮಾನ್ಯವಾಗಿ ಉಲ್ಲೇಖಿಸಲಾಗಿರುತ್ತದೆ. ಇವು ಸಾಂಪ್ರದಾಯಿಕವಾದ ಬಿಸ್ಮಿಲ್ಲಾ ಪ್ರಾರ್ಥನೆಯಿಂದ ಶುರುವಾಗುತ್ತವೆ. ಇವು ಆಳುವ ರಾಜನ ಹೆಸರು, ಅವನ ಬಿರುದುಗಳು, ಕಟ್ಟಿದವನ ಹೆಸರು, ಕಾಲ ಇತ್ಯಾದಿ ವಿವರಗಳನ್ನೂ ಸಾಮಾನ್ಯವಾಗಿ ಒಳಗೊಂಡಿರುತ್ತವೆ. ಲಿಪಿಕಲೆಯ ದೃಷ್ಟಿಯಿಂದ ಕೆಲವು ಶಾಸನಗಳು ಉತ್ತಮ ಮಾದರಿಗಳಾಗಿವೆ. ಇವುಗಳಲ್ಲಿ ಅತಿ ಮೊದಲಿನದೆಂದರೆ ಹಿಜರಿ 920ರ (ಕ್ರಿ.ಶ.1514) ತೇದಿಯುಳ್ಳ ಬಿಜಾಪುರದ ಕೋಟೆಯೊಳಗಿರುವ ಇಸ್ಮಾಯಿಲ್ ಆದಿಲ್ ಷಾನ ಕಾಲಕ್ಕೆ ಸೇರಿದ್ದು. ಗಾಲಿಬ್ ಮಸೀದಿಯಲ್ಲಿರುವ ಶಾಸನ ಮತ್ತು ಅಥರ್ ಮಹಲ್‌ನಲ್ಲಿರುವ ಶಾಸನಗಳು ಕೋಟೆಯನ್ನು ರಚಿಸಿದ್ದರ ಬಗ್ಗೆ ತಿಳಿಸುತ್ತವೆ. ಒಂದನೆಯ ಇಬ್ರಾಹೀಂನ ಕಾಲಕ್ಕೆ ಸೇರಿದ ಹಿಜರಿ 945 (1538) ಮತ್ತು 951 (1544) ತೇದಿಯುಳ್ಳ ಎರಡು ಶಾಸನಗಳು ಕೋಟೆಯದ್ವಾರದ ಮೇಲಿವೆ. ಇದರಲ್ಲಿ ಒಂದನ್ನು ಬಹು ಸುಂದರವಾದ ಅಕ್ಷರಗಳಲ್ಲಿ ಬರೆದಿದೆ. ಇದು ಸಾಮಾನ್ಯ ಪ್ರಾರ್ಥನಾ ಪದ್ಯದಿಂದ ಪ್ರಾರಂಭವಾಗಿದೆ. ಮುಂದೆ ಷಿಯಾಪಂಥೀಯವಾದ "ಅಲಿ ಅಲ್ಲಾನ ಪ್ರತಿನಿಧಿ" ಎಂದು ಬರೆಯಲಾಗಿದೆ. ಈ ವಾಕ್ಯ ಬಿಜಾಪುರದ ಶಾಸನಗಳಲ್ಲಿ ಬಹು ಅಪರೂಪ. ಸುಲ್ತಾನನ ಫಿರಂಗಿಗಳ ಮೇಲೆ ಸಹ ಶಾಸನಗಳಿರುತ್ತಿದ್ದವು. ಇಂಥ ಮೂರು ಫಿರಂಗಿಗಳು ದೊರೆತಿವೆ. ಒಂದರಲ್ಲಿ ಅದನ್ನು ಮಾಡಿದವನ ಹೆಸರು (ತುರ್ಕಿದೇಶದ) ಹೆಸನ್ ರುಮಿಯ ಮಗ ಮಹಮ್ಮದ್ ಎಂದಿದೆ. ಇನ್ನೊಂದರಲ್ಲಿ ಅದನ್ನು ಎರಕ ಹೊಯ್ದ ದಿನಾಂಕವಿದೆ.

ವಿವಿಧ ಮಸೀದಿಗಳಲ್ಲಿ ಅನೇಕ ಶಾಸನಗಳು ಕಂಡುಬರುತ್ತವೆ. ಆದರೆ ಅವುಗಳಲ್ಲಿ ಕೊರಾನಿನ ಭಾಗಗಳ ಉದ್ಧರಣೆಗಳು ಹೆಚ್ಚಾಗಿರುವುದರಿಂದ ಅವು ಅಷ್ಟು ಐತಿಹಾಸಿಕ ಮಹತ್ವ ಹೊಂದಿಲ್ಲ. ಆದಾಗ್ಯೂ ಈ ಶಾಸನಗಳಲ್ಲಿ ಆಲಂಕಾರಿಕವಾಗಿ ಅಕ್ಷರಗಳು ಹೆಣೆದುಕೊಂಡಿರುವ ರೀತಿಯ ಬರೆವಣಿಗೆಯ ನಮೂನೆ ಆಕರ್ಷಣೀಯವಾಗಿದೆ. ಬಿಜಾಪುರದಲ್ಲಲ್ಲದೆ ಕರ್ನಾಟಕದ ಇತರ ಕಡೆಗಳಲ್ಲಿ ಅದರಲ್ಲೂ ಹಳೆಯ ಮೈಸೂರು ಭಾಗದಲ್ಲಿ ಆದಿಲ್‌ಶಾಹೀ ವಂಶದ ಅನೇಕ ಶಾಸನಗಳಿವೆ. ಶಿಕಾರಿಪುರ ತಾಲ್ಲೂಕಿನ ಮಾಸೂರಿನಲ್ಲಿ ರಾಜಾ ಫರೀದನ ಮಗ ಮಹಮ್ಮದ್ ಖಾನ್ ಎಂಬುವನು ಕಟ್ಟಿಸಿದನೆಂದು ತಿಳಿಸುವ 1632ರ ಒಂದು ಶಾಸನವನ್ನು ಸುಂದರ ನಮೂನೆಯ ಅರಬ್ಬೀ ಹಾಗೂ ಪಾರಸೀ ಲಿಪಿಯಲ್ಲಿ ಬರೆಯಲಾಗಿದೆ. ಚನ್ನಗಿರಿ ತಾಲ್ಲೂಕಿನಲ್ಲಿರುವ ಒಂದು ಶಾಸನ ಮಹಮ್ಮದ್ ಷಾನ ಆಳ್ವಿಕೆಯ ಕಾಲದ್ದು. ಅದರಲ್ಲಿ ಬಾರಿ ಮಲಿಕ್ ಇಬ್ನೆ ಅರ್ಬನ್ ಎಂಬ ಅಮೀಲನು ಕೆರೆಯೊಂದನ್ನು ಕಟ್ಟಿಸಿದ ವಿಷಯವಿದೆ. ಈ ಕೆರೆಯನ್ನು ಕಟ್ಟಿಸುವ ಕಾರಣವನ್ನು ಕನ್ನಡದಲ್ಲಿ ದೀರ್ಘವಾಗಿ ವಿವರಿಸಲಾಗಿದೆ. ಸುಲ್ತಾನ ಮಹಮ್ಮದನು ಕಾಯಿಲೆ ಬಿದ್ದಿದ್ದ, ಅವನಿಗೆ ಗುಣವಾದರೆ ತಾನು ಕೆರೆಕಟ್ಟಿಸುವುದಾಗಿ ಅಮೀಲ ಹರಕೆ ಹೊತ್ತಿದ್ದ. ಸುಲ್ತಾನ ಗುಣಮುಖವಾಗಲು ಅಮೀಲ ಕಾಡನ್ನು ಕಡಿಸಿ, ಕೆರೆ ಕಟ್ಟಿಸಿ, ಕೆರೆ ಕೆಳಗಿನ ಭೂಮಿಯನ್ನು ರೈತರಿಗೆ ಉಚಿತವಾಗಿ ನೀಡುವ ವ್ಯವಸ್ಥೆ ಮಾಡಿದ ಎಂದು ಆ ಶಾಸನ ತಿಳಿಸುತ್ತದೆ. ಶಿರಾ ಇತ್ಯಾದೆಡೆಗಳಲ್ಲೂ ಆದಿಲ್‌ಶಾಹೀ ಶಾಸನಗಳು ದೊರೆಕಿವೆ.

**ನಾಣ್ಯಗಳು :** ಆದಿಲ್‌ಶಾಹೀ ವಂಶದ ಐದನೆಯ ಸುಲ್ತಾನ ಒಂದನೆಯ ಅಲಿಯೇ (1558-80) ನಾಣ್ಯಗಳನ್ನು ಹೊರಡಿಸಿದ ಬಿಜಾಪುರದ ಸುಲ್ತಾನರಲ್ಲಿ ಮೊದಲಿಗ. ಅವನ ನಾಣ್ಯಗಳು 1910ರಲ್ಲಿ ಮೊದಲಿಗೆ ದೊರೆತವು. ಜೆ.ಪಿ. ಟೇಲರ್ ಎಂಬುವರು ಬಿಜಾಪುರದಲ್ಲಿ ಕೆಲವು ತಾಮ್ರ ನಾಣ್ಯಗಳನ್ನೂ ಮತ್ತು ಬೆಳ್ಳಿ ಲಾರಿನ್‌ಗಳನ್ನೂ ಪತ್ತೆ ಹಚ್ಚಿದರು. 1912ರಲ್ಲಿ ಇವರು ಮಹಮ್ಮದ್ ಆದಿಲ್ ಷಾನ ಮೂರು ಚಿನ್ನದ ನಾಣ್ಯಗಳನ್ನು ಮತ್ತು ತರುವಾಯ ಇಸ್ಮಾಯಿಲ್‌ನ ನಾಲ್ಕು ಚಿನ್ನದ ನಾಣ್ಯಗಳನ್ನು 1922ರಲ್ಲಿ ಪತ್ತೆಹಚ್ಚಿದರು. ಆದಿಲ್‌ಶಾಹೀ ರಾಜರ ಕೆಲವು ನಾಣ್ಯಗಳು ವೃತ್ತಾಕಾರವಾಗಿಯೂ ಕೆಲವು

ಚಚ್ಚೌಕವಾಗಿಯೂ ಇವೆ. ಇವರ ಚಿನ್ನದ ನಾಣ್ಯಗಳ ತೂಕ 52 ಗ್ರೈನ್. ತಾಮ್ರದ ನಾಣ್ಯಗಳು ನಾಲ್ಕುಮೌಲ್ಯಗಳವು. 267, 180, 120, ಮತ್ತು 60 ಗ್ರೈನ್‌ಗಳಷ್ಟು ತೂಗುತ್ತವೆ. ಬೆಳ್ಳಿಯ ಲಾರಿನ್‌ಗಳ ತೂಕ ಸು.70 ಗ್ರೈನ್. ಇತರ ಮುಸ್ಲಿಂ ನಾಣ್ಯಗಳಂತೆ ಇವುಗಳಲ್ಲೂ ಸಾಮಾನ್ಯವಾಗಿ ಬಿರುದುಗಳು ಮತ್ತು ಪಾರಸೀ ದ್ವಿಪದಿಗಳು ಇರುವುದು ರೂಢಿ. ಹೆಚ್ಚಿನವುಗಳಲ್ಲಿ ದಿನಾಂಕ ಕಾಣುವುದಿಲ್ಲ. ಆದರೆ ರಾಜರ ಹೆಸರುಗಳು ಇರುತ್ತವೆ. ಅಲಿ ಆದಿಲ್ ಷಾನ ತಾಮ್ರ ನಾಣ್ಯಗಳಲ್ಲಿ ಅಲಿ-ಇಬ್ನ್-ಅಬಿ-ತಾಲಿಬ್ ಎಂದು ಮುಮ್ಮುಖದಲ್ಲೂ ಅಸದಲ್ಲಾ-ಅಲ್-ಗಾಲಿಬ್ ಎಂದು ಹಿಮ್ಮುಖದಲ್ಲೂ ಲೇಖಗಳಿವೆ. ಈ ರೀತಿಯ ನಾಣ್ಯಗಳು ಮೂರು ತೂಕಗಳಲ್ಲಿವೆ. ಅವುಗಳ ಗಾತ್ರ 0.65" ನಿಂದ 0.8"ರ ವರೆಗೂ ವ್ಯತ್ಯಾಸ ಹೊಂದಿವೆ. ಅವನ ಚೌಕನಾಣ್ಯಗಳು 0.5" ಅಗಲವಿರುತ್ತವೆ. ಎರಡನೆಯ ಇಬ್ರಾಹೀಂ ಆದಿಲ್ ಷಾನ ನಾಣ್ಯಗಳು ವೃತ್ತ ಮತ್ತು ಚೌಕ ಈ ಎರಡು ಬಗೆಯಲ್ಲೂ ಇವೆ. ವೃತ್ತಾಕಾರದ ನಾಣ್ಯಗಳು 0.55" ನಿಂದ 0.75" ವರೆಗೂ ಇವೆ. ಚಚ್ಚೌಕಾಕಾರದ ನಾಣ್ಯಗಳು 0.65" ಅಗಲದವು. ಇವುಗಳಲ್ಲಿ ಇಬ್ರಾಹೀಂ-ಅಬ್ಲಾ-ಬಾಲಿ ಎಂಬ ವಾಕ್ಯ ಹಿಂಭಾಗದಲ್ಲೂ ಗುಲಾಮ್ ಮುರ್ತುಜ ಅಲಿ ಎಂಬ ವಾಕ್ಯ ಮುಂಭಾಗದಲ್ಲೂ ಕಂಡುಬರುತ್ತದೆ. ಮಹಮ್ಮದ್ ಆದಿಲ್ ಷಾ (1627-56) ಚಿನ್ನ ಮತ್ತು ತಾಮ್ರದ ನಾಣ್ಯಗಳೆರಡನ್ನೂ ಹೊರಡಿಸಿದ್ದಾನೆ. ಇವನ ಚಿನ್ನದ ನಾಣ್ಯಗಳು ವರ್ತುಲಾಕಾರವಾಗಿದ್ದು ಇವುಗಳ ವ್ಯಾಸ 0.35" ನಿಂದ 0.4" ನ ವರೆಗೂ ವ್ಯತ್ಯಾಸ ಹೊಂದಿದ್ದು 51.8 ಗ್ರೈನ್ ತೂಕವಿರುತ್ತವೆ. ನಾಣ್ಯದ ಮೇಲೆ ಎರಡು ಸಾಲುಗಳುಳ್ಳ ಪಾರಸೀ ದ್ವಿಪದಿಯನ್ನು ಎರಡು ಮುಖಗಳಲ್ಲಿಯೂ ಕೆತ್ತಲಾಗಿರುತ್ತದೆ. "ಪ್ರಪಂಚವು ಸೌಂದರ್ಯ ಮತ್ತು ಗಾಂಭೀರ್ಯವನ್ನು ಇಬ್ಬರು ಮಹಮ್ಮದರಿಂದ ಪಡೆಯಿತು. ಒಬ್ಬರು ಪ್ರವಾದೀ ಮಹಮ್ಮದ್, ಇನ್ನೊಬ್ಬರು ಸುಲ್ತಾನ್ ಮಹಮ್ಮದ್" ಎಂಬುದು ಈ ದ್ವಿಪದಿಯ ಅರ್ಥ. ಈ ದ್ವಿಪದಿಯಲ್ಲಿ ತಾಜ್ ಜಹಾನ್ ಎಂಬ ಪದವಿದ್ದು, ಸುಲ್ತಾನ ಮಹಮ್ಮದನಿಗೆ ತಾಜ್ ಜಹಾನ್ ಎಂಬ ಹೆಂಡತಿಯೂ ಇದ್ದುದರಿಂದ ಈ ಪದ್ಯವನ್ನು ಇನ್ನೊಂದು ರೀತಿಯಲ್ಲಿ ಹೀಗೆ ಅರ್ಥೈಸಬಹುದು: ಸೌಂದರ್ಯ ಮತ್ತು ಗಾಂಭೀರ್ಯವನ್ನು ಪ್ರವಾದೀ ಮಹಮ್ಮದರಿಂದ ಈ ಲೋಕ ಪಡೆಯಿತು, ಜಹಾನಳು (ರಾಣಿ) ಸುಲ್ತಾನ ಮಹಮ್ಮದನಿಂದ ಪಡೆದಳು ಎಂದು. ಈ ಸರಣಿಯಲ್ಲಿ ಬೆಳ್ಳಿ ನಾಣ್ಯಗಳು ದೊರೆತಿಲ್ಲ. ತಾಮ್ರದ ನಾಣ್ಯಗಳು 267, 179, 117, 66 ಮತ್ತು 56 ಗ್ರೈನ್ ಗಳಷ್ಟು ತೂಕವಿರುತ್ತವೆ. ಇವು ವೃತ್ತಾಕಾರವಾಗಿದ್ದು, ಇವುಗಳ ವ್ಯಾಸ 0.5" ರಿಂದ 0.85" ನವರೆಗೂ ವ್ಯತ್ಯಾಸ ಹೊಂದಿದೆ. ಎರಡನೆಯ ಅಲಿ ಆದಿಲ್ ಷಾ (1656-72) ಲಾರಿನ್ ಎಂಬ ನಾಣ್ಯವನ್ನು ಹೊರಡಿಸಿದ. ಇದು ಮೂಲತಃ ಪರ್ಷಿಯ ಕೊಲ್ಲಿಯ ಲಾರ್ ಜಿಲ್ಲೆಯಲ್ಲಿ ಪ್ರಚಲಿತವಾಗಿದ್ದು, ಅರೇಬಿಯದ ಸಮುದ್ರ ವ್ಯಾಪಾರಿಗಳಲ್ಲಿ ತುಂಬಾ ಜನಪ್ರಿಯವಾಗಿತ್ತು. ಲಾರಿನ್ ವಿಚಿತ್ರ ರೂಪದ ನಾಣ್ಯ. ಇದು ಮಧ್ಯದ ಭಾಗದಲ್ಲಿ ಎರಡು ಪಟ್ಟೆ ಇರುವ ಬೆಳ್ಳಿಯ ತಂತಿ ಅಥವಾ ಬೆಳ್ಳಿಯ ಸರಳು. ತೂಕ ಮಾತ್ರ ನಿರ್ದಿಷ್ಟವಾಗಿರುತ್ತದೆ. ಸ್ಥಳಾವಕಾಶದ ಅಭಾವದಿಂದ ಇದರ ಮೇಲಿನ ಬರಹಗಳು ಅಸಂಪೂರ್ಣವಾಗಿರುತ್ತವೆ. ಸುಲ್ತಾನ್ ಅಲಿ ಆದಿಲ್ ಷಾ ಜರ್ಬ್ ಲಾರಿ -ದಾಂಗೆ ಎಂಬ ವಾಕ್ಯ ಸಾಮಾನ್ಯವಾಗಿ ಇರುತ್ತದೆ. ಇವುಗಳ ಮೇಲಿರುವ ದಿನಾಂಕ ಸ್ಪಷ್ಟವಿರುವುದಿಲ್ಲ. ಈ ಬಗೆಯ ನಾಣ್ಯಗಳು ರಾಜ್ಯಾದ್ಯಂತ ಚಲಾವಣೆಯಲ್ಲಿದ್ದುವೇ ಎಂಬುದು ಸಂಶಯಾಸ್ಪದ. ಬಹುಶಃ ಈ ನಾಣ್ಯಗಳು ಬಿಜಾಪುರದ ತೀರಪ್ರದೇಶದಲ್ಲಿ ಸ್ಥಳೀಯ ಬೇಡಿಕೆಯನ್ನು ಪೂರೈಸಲು ಚಲಾವಣೆಯಲ್ಲಿದ್ದಿರಬೇಕು. ಲಾರಿನ್‌ಗಳಲ್ಲಿ ಎರಡು ವಿಧಗಳಿವೆ. ಒಂದು 3.75" ಉದ್ದವಾಗಿಯೂ 74 ಗ್ರೈನ್ ತೂಕವಾಗಿಯೂ ಇದ್ದರೆ ಮತ್ತೊಂದು 1.75" ಉದ್ದವಾಗಿಯೂ 70 ಗ್ರೈನ್ ತೂಕವಾಗಿಯೂ ಇರುತ್ತದೆ. ಅವುಗಳಲ್ಲಿ ಹಿಜರಿ ಶಕದ 1077 ಎಂಬ ಕಾಲ ಇರುವುದರಿಂದ ಇವು ಎರಡನೆಯ ಅಲಿ ಆದಿಲ್ ಷಾನ ಕಾಲಕ್ಕೆ ಸಂಬಂಧಿಸಿದ್ದೆಂದು ಹೇಳಬಹುದು. ಕೊನೆಯ ರಾಜ ಸಿಕಂದರ್ ಆದಿಲ್ ಷಾನ ತಾಮ್ರದ ನಾಣ್ಯಗಳು ಹಿಜರಿಯ 1086 ದಿನಾಂಕ ಹೊಂದಿದ್ದು, ಮೂರು ಬಗೆಯ ತೂಕಗಳಲ್ಲಿ ಕಂಡುಬಂದಿವೆ. ಅವುಗಳ ಮುಮ್ಮುಖದಲ್ಲಿ ಸುಲ್ತಾನ್ ಸಿಕಂದರ್ ಖದಿರಿ ಎಂದೂ ಹಿಮ್ಮುಖದಲ್ಲಿ ಖುಸರವೆ ಗಿತಿಸ್ತಾನ್ ಎಂದೂ ಬರಹವಿರುತ್ತದೆ. (ಬಿ.ಎಸ್.ಎ.)

**ಆದ್ಯ ರಂಗಾಚಾರ್ಯ :** 1904-84. ಶ್ರೀರಂಗ ಎಂಬ ಕಾವ್ಯನಾಮದಿಂದ ಪ್ರಸಿದ್ಧರಾಗಿರುವ ಆಧುನಿಕ ಕನ್ನಡದ ಪ್ರಸಿದ್ಧ ನಾಟಕಕಾರರು. ಸಮಕಾಲೀನ ಕನ್ನಡ ರಂಗಭೂಮಿಗೆ ಆಳ ಅಗಲಗಳನ್ನು ವೈವಿಧ್ಯವನ್ನು ತಂದುಕೊಟ್ಟ ಪ್ರಯೋಗಶೀಲರು. ಕನ್ನಡ ಸಂಸ್ಕೃತ ಇಂಗ್ಲಿಷ್ ಮತ್ತು ಮರಾಠಿ ಭಾಷೆಗಳಲ್ಲಿ ಪರಿಣತರಾದ ಇವರು ರಾಷ್ಟ್ರೀಯ ಖ್ಯಾತಿ ಗಳಿಸಿರುವ ಲೇಖಕರು. ಆರ್.ವಿ.ಜಾಗಿರ್‌ದಾರ್ ಎಂಬುದು ಇವರ



ನಿಜನಾಮ. ಬಿಜಾಪುರ ಜಿಲ್ಲೆಯ ಅಗರಖೇಡದಲ್ಲಿ 1904 ಸೆಪ್ಟೆಂಬರ್ 26ರಂದು ಜನಿಸಿದರು. ಸಂಸ್ಕೃತವನ್ನು ವಿಶೇಷ ವ್ಯಾಸಂಗ ಮಾಡಿ ಪುಣೆಯ ಡೆಕ್ಕನ್ ಕಾಲೇಜಿನಿಂದ ಬಿ.ಎ.ಪದವಿ ಪಡೆದ (1925) ಅನಂತರ ಐ.ಸಿ.ಎಸ್. ಪರೀಕ್ಷೆಗೆ ಇಂಗ್ಲೆಂಡಿಗೆ ತೆರಳಿ ಅಲ್ಲಿ ಭಾಷಾ ಶಾಸ್ತ್ರದಲ್ಲಿ ಎಂ.ಎ. ಪದವಿ ಪಡೆದು ಹಿಂದಿರುಗಿದರು. ಕೆಲ ಕಾಲ ನಿರುದ್ಯೋಗಿಯಾಗಿದ್ದು, ಕರ್ನಾಟಕ ಕಾಲೇಜಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿ 18 ವರ್ಷಗಳ ಕಾಲ ಕೆಲಸಮಾಡಿದರು (1930-48). ಬೆಂಗಳೂರು ಆಕಾಶವಾಣಿಯಲ್ಲಿ ನಾಟಕ ವಿಭಾಗದ ನಿರ್ದೇಶಕರಾಗಿಯೂ ಸ್ವಲ್ಪಕಾಲ ಕೆಲಸಮಾಡಿದರು.

ಚಿಕ್ಕಂದಿನಿಂದ ಸಾಹಿತ್ಯಕ್ಕೆ ಒಲಿದಿದ್ದ ಶ್ರೀರಂಗರು ವಿದ್ಯಾರ್ಥಿ ಯಾಗಿದ್ದಾಗಲೇ ಸಂಸ್ಕೃತದಲ್ಲಿ ಪದ್ಯ ಬರೆದಿದ್ದುಂಟು. ತಮ್ಮ 15ನೆಯ ವಯಸ್ಸಿನಲ್ಲಿ ತಾಯಿಯನ್ನು ಕಳೆದುಕೊಂಡರಲ್ಲದೆ ಆರ್ಥಿಕ ಅಡಚಣೆಗಳಿಗೂ ಒಳಗಾದರು. ಸುತ್ತಣ ಪರಿಸರದ ಕೃತಕತೆ ಮತ್ತು ಅರ್ಥಹೀನತೆಗಳನ್ನು ತಿರಸ್ಕರಿಸಿ, ಹೊಸದನ್ನು ಕಟ್ಟುವ, ಅದಕ್ಕಾಗಿ ದುಡಿಯುವ ಹೋರಾಟದ ಮನೋಭಾವವನ್ನು ರೂಢಿಸಿಕೊಂಡರು. ಇದರ ಫಲವೇ 'ಉದರವೈರಾಗ್ಯ' (1929) ನಾಟಕ. ಇವರಿಗೆ ಅಖಿಲ ಕರ್ನಾಟಕ ಖ್ಯಾತಿಯನ್ನು ತಂದುಕೊಟ್ಟಿದ್ದು ಹ-ರಿ-ಜ-ನ್ವಾ-ರ (1933). ನಾಟಕ ರಚನೆಯನ್ನು ಆರಂಭಿಸಿದ ಮೊದಲ ಹಂತದಲ್ಲಿ ಇವರು ಬರೆದ ಕೆಲವು ಮುಖ್ಯ ನಾಟಕಗಳಿವು - ಸಂಸಾರಿಗ ಕಂಸ, ನರಕದಲ್ಲಿ ನರಸಿಂಹ, ಪ್ರಪಂಚ ಪಾಣಿಪತ್ತು, ಸಂಧ್ಯಾಕಾಲ, ಜರಾಸಂಧಿ, ದರಿದ್ರನಾರಾಯಣ. ಇವರು 100ಕ್ಕೂ ಹೆಚ್ಚು ನಾಟಕಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಸುಮಾರು 70 ಏಕಾಂಕ ನಾಟಕಗಳು. ಶ್ರೀರಂಗ-ನಾಟ್ಯ-ತರಂಗ (1967) ಇವರ 27 ಏಕಾಂಕಗಳ ಸಂಗ್ರಹ. ಸಂಪ್ರದಾಯದ ವಿರುದ್ಧ ಬಂಡಾಯ ಇವರ ನಾಟಕದ ಮುಖ್ಯ ಲಕ್ಷಣ. ಜೊತೆಗೆ ಹರಿತವಾದ ಬುದ್ಧಿಶಕ್ತಿ, ವ್ಯಂಗ್ಯ ಹಾಸ್ಯ, ಕಟುವಿಡಂಬನೆ, ಮಾರ್ಮಿಕವಾದ ಮಾತುಗಾರಿಕೆ, ಉದ್ದಕ್ಕೂ ಸ್ವತಂತ್ರ ವಿಚಾರಸರಣಿ ಎದ್ದು ಕಾಣುತ್ತವೆ.

ಪ್ರಯೋಗಶೀಲರಾದ ಶ್ರೀರಂಗರು ತಮ್ಮ ನಾಟಕಗಳಲ್ಲಿ ವಸ್ತುವಿನ ಆಯ್ಕೆ ಮತ್ತು ತಂತ್ರಗಳಲ್ಲಿ ಹೊಸತನವನ್ನು ಮೆರೆದಿದ್ದಾರೆ. ಈ ದೃಷ್ಟಿಯಿಂದ ಕೇಳು ಜನಮೇಜಯ, ರಂಗಭಾರತ, ಶತಾಯು ಗತಾಯು, ಸ್ವರ್ಗಕ್ಕೆ ಮೂರೇ ಬಾಗಿಲು, ಗೆಳೆಯ ನೀನು ಹಳೆಯ ನಾನು, ನೀ ಕೊಡೆ ನಾ ಬಿಡೆ ಮುಂತಾದ ನಾಟಕಗಳನ್ನು ಹೆಸರಿಸಬಹುದು.

ಸಾಹಿತ್ಯದ ಇನ್ನಿತರ ಪ್ರಕಾರಗಳಲ್ಲೂ ಶ್ರೀರಂಗರ ಸಾಧನೆ ಗಮನಾರ್ಹ ಇವರ ಹಲವು ಕಾದಂಬರಿಗಳಲ್ಲಿ 'ವಿಶ್ವಾಮಿತ್ರನ ಸೃಷ್ಟಿ' ಮುಖ್ಯವಾದುದು. ಭಾಷಾಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕ 'ಶಾರದೆಯ ಸಂಸಾರ'. ನಗುವಿನ ಸ್ವರೂಪವನ್ನು ಕುರಿತ ಪುಸ್ತಕ 'ನಗೆ' (1944). 'ಗೀತಾಗಾಂಭೀರ್ಯ'ದಲ್ಲಿ ಗೀತೆಯನ್ನು ಕುರಿತ ವಿಚಾರಾತ್ಮಕ ಅಧ್ಯಯನ ಇದೆ. 'ಆಹ್ವಾನ' ಇವರ ಒಂದು ಕವನ ಸಂಕಲನ. 'ನನ್ನ ನಾಟ್ಯ ನೆನಪುಗಳು' (1960) ಮತ್ತು ಸಾಹಿತಿಯ ಆತ್ಮಜಿಜ್ಞಾಸೆ (1973) ಆತ್ಮಕಥನ ರೂಪದ ಕೃತಿಗಳು. ಸಮತೂಕದ ಸಾಹಿತ್ಯ ವಿಮರ್ಶೆ ಇರುವ ಕಾಳಿದಾಸ ಗ್ರಂಥ' ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಗಳಿಸಿದೆ (1970).

ಭಾರತೀಯ ರಂಗಭೂಮಿಯನ್ನು ಕುರಿತ 'ದಿ ಇಂಡಿಯನ್ ಥಿಯೇಟರ್' ಇವರ ಇಂಗ್ಲಿಷ್ ಪುಸ್ತಕ; ರಂಗಭೂಮಿಗೆ ಸಂಬಂಧಿಸಿದಂತೆ 'ಪ್ರೇಕ್ಷಕ ವರ್ಗ ನಮ್ಮ ರಂಗಭೂಮಿಯ ಸಮಸ್ಯೆ' (1969), 'ರಂಗನಾಟಕ ಶಾಸ್ತ್ರ' (1971), ಭರತನಾಟ್ಯ (1973), ನಾಟ್ಯಶಾಸ್ತ್ರದಲ್ಲಿ ನಟ (1982), ನಾಟ್ಯಶಾಸ್ತ್ರದ ಅಧ್ಯಾಯ ಸಂಗ್ರಹ (1983), ನಾಟ್ಯಶಾಸ್ತ್ರ (1984), ಭಾರತೀಯ ರಂಗಭೂಮಿಯ ಪರಂಪರೆ, ಕನ್ನಡ ರಂಗಭೂಮಿಯ ಮೇಲೆ ಅದರ ಛಾಯೆ; ನಾಟ್ಯಶಾಸ್ತ್ರದಲ್ಲಿ ನಾಟ್ಯ ಮಂಟಪ (1982), (1986) ಮುಂತಾದ ಗ್ರಂಥಗಳನ್ನು ರಚಿಸಿದ್ದಾರೆ.

ಶ್ರೀರಂಗರ ಸಾಹಿತ್ಯ ಸೇವೆಗಾಗಿ ಸಂದಿರುವ ಪ್ರಶಸ್ತಿಗಳು ಹಲವು. ರಾಯಚೂರಿನಲ್ಲಿ 1955ರಲ್ಲಿ ನಡೆದ 38ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಇವರು ಅಧ್ಯಕ್ಷರಾಗಿದ್ದರು. 1968ರಲ್ಲಿ ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಫೆಲೋಶಿಪ್ ಗೌರವ ದೊರೆಯಿತು. 1972ರಲ್ಲಿ ಭಾರತ ಸರ್ಕಾರ ಪದ್ಮಭೂಷಣ ಪ್ರಶಸ್ತಿ ನೀಡಿತು. ರಾಜ್ಯಸಾಹಿತ್ಯ ಅಕಾಡೆಮಿಗೆ ಇವರು ಅಧ್ಯಕ್ಷರಾಗಿದ್ದರು (1971-74). 1984 ಅಕ್ಟೋಬರ್ 17ರಂದು ಇವರು ನಿಧನರಾದರು. (ಎಲ್.ಎಸ್.ಎಸ್.)

**ಆನಂದ :** 1920-63. ಕನ್ನಡದ ಪ್ರಸಿದ್ಧ ಸಣ್ಣಕಥೆಗಾರರು ಹಾಗೂ ಪ್ರಬಂಧಕಾರರು. ಆನಂದ ಎಂಬುದು ಇವರ ಕಾವ್ಯನಾಮ. ನಿಜನಾಮ ಅಜ್ಜಂಪುರ ಸೀತಾರಾಂ. ಇವರು ಹುಟ್ಟಿದ್ದು ಶಿವಮೊಗ್ಗ ಜಿಲ್ಲೆಯ ಆನವಟ್ಟಿಯಲ್ಲಿ. ಆರಂಭದ ಶಿಕ್ಷಣ ಶಿವಮೊಗ್ಗದಲ್ಲಿ ನಡೆಯಿತು. ಅನಂತರದ ವ್ಯಾಸಂಗ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ. ಅಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಟಿ.ಎಸ್. ವೆಂಕಣ್ಣಯ್ಯನವರ ಪ್ರಭಾವಕ್ಕೆ ಒಳಗಾಗಿ ವಿಜ್ಞಾನದ ವಿದ್ಯಾರ್ಥಿಯಾಗಿದ್ದ ಇವರು ಸಾಹಿತ್ಯದಲ್ಲಿ ಆಸಕ್ತಿ ವಹಿಸಿದರು. ಬಿ.ಎಸ್‌ಸಿ. ಪದವಿ ಪಡೆದು, ಸರ್ಕಾರದ ರೇಷ್ಮೆ ಇಲಾಖೆಯಲ್ಲಿ ಕೆಲವು ವರ್ಷಗಳ ಕಾಲ ಕೆಲಸ ಮಾಡಿದ ಅನಂತರ (1946) ಸ್ವತಂತ್ರ ಉದ್ಯೋಗವೊಂದನ್ನು ಮಾಡಿ ಅದನ್ನು ಬಿಟ್ಟು ಬರೆವಣಿಗೆಯಲ್ಲಿಯೇ ಆಸಕ್ತಿ ವಹಿಸಿದರು. ಇವರು ಒಳ್ಳೆಯ ಚಿತ್ರಕಾರರೂ ಮತ್ತು ಕ್ರಿಕೆಟ್ ಆಟಗಾರರೂ ಆಗಿದ್ದರು.

ಶ್ರೀನಿವಾಸರ ಸಣ್ಣ ಕಥೆಗಳನ್ನು ಆದರ್ಶವಾಗಿಟ್ಟುಕೊಂಡು ಕಥಾಪ್ರಪಂಚವನ್ನು ಪ್ರವೇಶಿಸಿದ ಆನಂದರು ಬರೆದ ಮೊದಲ ಕಥೆ ಭವತಿ ಭಿಕ್ಷಾಂ ದೇಹಿ. ಭಿಕ್ಷಾನ್ನದ ಹುಡುಗನೊಬ್ಬನ ದುಃಖಜೀವನದ ನೈಜಚಿತ್ರಣ ಇದರಲ್ಲಿದೆ. ಇದು ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟವಾಯಿತಲ್ಲದೆ (1922) ಹಲವು ಹಿರಿಯರ ಮೆಚ್ಚುಗೆಯನ್ನು ಗಳಿಸಿತು. ಇದೇ ಮಾದರಿಯಲ್ಲಿ ಇವರು ಬರೆದ ಕಥೆಗಳಿವು: ಬೇವು-ಬೆಲ್ಲ ಮತ್ತು ಕೊನೇ ಎಂಟಾಣೆ. ಬೇವು-ಬೆಲ್ಲದಲ್ಲಿ ನಿರ್ಮಲ ಸ್ನೇಹದ ಹಿನ್ನೆಲೆಯಿದ್ದು ಕೊನೇ ಎಂಟಾಣೆಯಲ್ಲಿ ನಿರುದ್ಯೋಗಿಯ ದಾರುಣ ಚಿತ್ರವಿದೆ.



ಆನಂದರ ಕಥನ ಕಲೆ ಪ್ರಕಟವಾಗಿದ್ದು ಅವರು ಬರೆದ ಪ್ರಣಯ ಕಥೆಗಳಲ್ಲಿ. ಹೆಂಡತಿಯ ಕಾಗದ, ನಾವೂಹಾಗೆಯೇ, ಪದ್ಮಪಾಕ, ರಾಧೆಯಕ್ಷಮೆ ಇವು ಇವರ ಯಶಸ್ವಿ ಕಥೆಗಳು. ಇವರ ಕಥನಶೈಲಿ, ವಸ್ತು ಮತ್ತು ತಂತ್ರಗಳನ್ನು ಈ ಕಥೆಗಳಲ್ಲಿ ಗುರುತಿಸಬಹುದು. ನಾನು ಕೊಂದ ಹುಡುಗಿ ಕಥೆಯಿಂದ ಆನಂದರು ಹೆಚ್ಚಿನ ಪ್ರಸಿದ್ಧಿಯನ್ನು ಗಳಿಸಿದರು. ಬಸವಿ ಪದ್ಧತಿಯ ಹಿನ್ನೆಲೆಯಲ್ಲಿರುವ ಈ ಕಥೆ ಹೃದಯಸ್ಪರ್ಶಿಯಾದುದು. ಜೋಯಿಸರ ಚೌಡಿ ಕಥೆಯಲ್ಲಿ ಹಾಸ್ಯದ ಮಿನುಗು ಮಿಂಚಿದೆ. 'ಕೆಲವುಕಥೆಗಳು' ಆನಂದರ ಪ್ರಥಮ ಕಥಾಸಂಕಲನ. ಸಂಸಾರಶಿಲ್ಪ (1953), ಸ್ವಪ್ನಜೀವಿ ಮತ್ತು ಇತರ ಕಥೆಗಳು (1953), ಮಾಟಗಾತಿ ಮುಂತಾದವು ಇವರ ಇತರ ಸಂಕಲನಗಳು. ಈಸೋಪನ ಲೋಕನೀತಿ ಕಥೆಗಳು (1952) ಇವರ ಒಂದು ಅನುವಾದ. ಪಕ್ಷಿಗಾನದಲ್ಲಿ (1947) 22 ವಚನ ಚಿತ್ರಗಳಿದ್ದು, ಗದ್ಯದ ಸೌಲಭ್ಯವನ್ನೂ ಪದ್ಯದ ಮಾಧುರ್ಯವನ್ನೂ ಒಟ್ಟುಗೂಡಿಸುವ ಪ್ರಯತ್ನವಿದೆ. ಆನಂದಲಹರಿ ಇವರ ಹರಟೆಗಳ ಸಂಕಲನ. ವೀರಯೋಧ (1956), ದಹನಚಿತ್ರ ಇವರ ಅನುವಾದಿತ ನಾಟಕಗಳು. ಆನಂದರು 1963 ನವೆಂಬರ್ 17ರಂದು ನಿಧನರಾದರು. (ಜೆ.ಜ.)

**ಆನಂದದಾಸ, ಸುರಪುರದ :** ಸು.19ನೆಯ ಶತಮಾನದ ದಾಸಶ್ರೇಷ್ಠರಲ್ಲೊಬ್ಬರು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಇವರು ಮೈಸೂರಿಗೆ ಬಂದು ರಾಜಸನ್ಮಾನವನ್ನು ಪಡೆದರೆಂದು ತಿಳಿದುಬರುತ್ತದೆ.

ಇವರು ಹುಟ್ಟಿದ್ದು ರಾಯಚೂರು ಜಿಲ್ಲೆ ಮಾನ್ವಿ ಬಳಿಯ ಚೀಕಲಪರವಿಯಲ್ಲಿ. ಬಾಲ್ಯದಲ್ಲೇ ಇವರು ಮಾತಾ-ಪಿತೃಗಳನ್ನು ಕಳೆದುಕೊಂಡು ನಿಜಾಮ್ ರಾಜ್ಯದ ಸುರಪುರ ಸಂಸ್ಥಾನವನ್ನು ಸೇರಿ ಅಲ್ಲಿ ರಾಜಾಚಾರ್ಯರೆಂಬ ಗುರುಗಳಲ್ಲಿ ವಿದ್ಯಾಭ್ಯಾಸ ಪಡೆದರು. ಸುರಪುರದ ರಾಜನಿಂದ ಸನ್ಮಾನಿತರಾದರು. ಇವರಲ್ಲಿ ಗಾಯನ ಪ್ರಾವೀಣ್ಯ, ನ್ಯಾಯವೇದಾಂತ ಶಾಸ್ತ್ರಪಾಂಡಿತ್ಯ, ಸಾಹಿತ್ಯ ಪರಿಣತಿ, ಕವಿತಾಶಕ್ತಿ, ಅನುಕರಣ ಶಕ್ತಿಗಳು ಅಗಾಧವಾಗಿದ್ದುವು. ಪಂಡಿತರಾಗಿ ಪಾಠಹೇಳಿ, ಗಾಯನಪಟುವಾಗಿ ಸಂಗೀತ ಕಲಿಸಿ, ನರ್ತನ ಪ್ರವೀಣರಾಗಿ ನೃತ್ಯಶಿಕ್ಷಣವನ್ನು ಕೊಟ್ಟು, ಶ್ರೇಷ್ಠಗುರುವಾಗಿ ಪ್ರಖ್ಯಾತಿ ಪಡೆದರು.

ಕೀರ್ತನಕಾರರೆಂದರೆ ಅಸಡ್ಡೆ ಮಾಡುತ್ತಿದ್ದ ಇವರು ಒಮ್ಮೆ ಜಗನ್ನಾಥ ದಾಸರ ಶಿಷ್ಯ ಶ್ರೀಶವಿಠಲರು (ಹುಂಡೇಕಾರ ದಾಸರು) ಸುರಪುರಕ್ಕೆ ಬಂದು ಕೀರ್ತನೆ ಮಾಡಿದಾಗ ಅವರ ಜ್ಞಾನ, ಗಾಯನಗಳಿಗೆ ಬೆರಗಾಗಿ ಮನಸೋತು, ಅವರಿಂದ ಕಮಲೇಶ ವಿಠಲ ಎಂಬ ಅಂಕಿತೋಪದೇಶ ಪಡೆದು ಹರಿದಾಸ ದೀಕ್ಷೆಯನ್ನು ಹೊಂದಿ ರಸಭರಿತವಾಗಿ ಕೀರ್ತನೆಗಳನ್ನು ಹಾಡಿ ಸಾಹಿತ್ಯ ರಚಿಸಿ ಸುರಪುರದ ಆನಂದದಾಸರೆಂದೇ ಪ್ರಸಿದ್ಧರಾದರು.

ದಶಮಸ್ಕಂದ ಭಾಗವತ, ಪ್ರಶ್ನೋತ್ತರ ಹಾಡುಗಳು, ಜಾವಳಿಗಳು, ಕೀರ್ತನ ಗೀತೆ ಮೊದಲಾದ ನಲವತ್ತು ಕೀರ್ತನೆಗಳು- ಹೀಗೆ ಆನಂದದಾಸರು ಅನೇಕ ವಿಧವಾಗಿ ಸಾಹಿತ್ಯರಚನೆ ಮಾಡಿದ್ದಾರೆ. ಅಶ್ಲೀಲವಲ್ಲದ ಶೃಂಗಾರ, ಕಟ್ಟಳೆಗಳಿಲ್ಲದ ಭಕ್ತಿ, ಜಿಜ್ಞಾಸೆಗವಕಾಶವಿಲ್ಲದ ತತ್ತ್ವ ಇವರ ರಚನೆಯ ವೈಶಿಷ್ಟ್ಯಗಳು. ಕೀರ್ತನ ಗೀತೆ ಎಂಬ ಇವರ ಗ್ರಂಥ ಪದ, ಆರ್ಯ, ದಂಡಕ, ಷಟ್ಪದಿ ಮೊದಲಾದ ವಿವಿಧ ಛಂದಸ್ಸುಗಳಿಂದ ಕೂಡಿ ಪಾಂಡಿತ್ಯಪೂರ್ಣವಾಗಿರುವ ಭಗವದ್ಗೀತೆಯ ಕೈಪಿಡಿ ಎಂದು ಹೆಸರು ಗಳಿಸಿದೆ. ಇದನ್ನು ಕೀರ್ತನರೂಪದಲ್ಲಿ ಕೇಳಿ ಆನಂದಪಟ್ಟ ಸುರಪುರದ ಅರಸು ಇವರಿಗೆ ಕನಕಾಭಿಷೇಕ ಮಾಡಿಸಿದನಂತೆ. ಕೊಲ್ಹಾಪುರ, ಗದ್ವಾಲ, ವನಪರ್ತಿ, ದೋಮಲಕೋಟ ಮತ್ತು ಮೈಸೂರು ಅರಸರಿಂದಲೂ ಇವರು ಸನ್ಮಾನಿತರಾದರು.

ರಮಾಸಮುದ್ರದ ಕುಮಾರಿ ನಿನ್ನಯ ಸಮಾನರಾರಮ್ಮ ಎಂಬ ಲಕ್ಷ್ಮೀಸ್ತುತಿ, ಕರೆದರೆ ಬರಬಾರದೆ ಎಂಬ ಶ್ರೀರಾಘವೇಂದ್ರದ ಸ್ತುತಿ ಮುಂತಾದ ಇವರ ಹಲವು ರಚನೆಗಳು ತುಂಬ ಪ್ರಸಿದ್ಧವಾಗಿವೆ. (ಕೆ.ಎಂ.ಕೆ.)

**ಆನಂದರಾವ್, ಟಿ. :** 1852-1919. ಮೈಸೂರು ಸಂಸ್ಥಾನದ ದಿವಾನರು (ಮಾರ್ಚ್ 1909 ನವೆಂಬರ್ 1912). ದಕ್ಷಿಣ ಭಾರತದ ಖ್ಯಾತ ರಾಜತಂತ್ರಜ್ಞ ದಿವಾನ್ ಸರ್ ತಂಜಾವೂರು ಮಾಧವರಾವ್ ಅವರ ಪುತ್ರ. ತಿರುವನಂತಪುರದಲ್ಲಿ ತಮ್ಮ ತಂದೆ ದಿವಾನರಾಗಿದ್ದ ಕಾಲದಲ್ಲಿ 15-05-1852ರಲ್ಲಿ ಹುಟ್ಟಿದ ಆನಂದರಾಯರು 1871ರಲ್ಲಿ ಪದವೀಧರರಾಗಿ ತಿರುವಾಂಕೂರಿನ ರಾಜ ಕುಮಾರನಿಗೂ ಮುಂದೆ ಇಂದೂರಿನ ರಾಜ ಕುಮಾರನಿಗೂ ಶಿಕ್ಷಕರಾಗಿ ಕೆಲಸ ಮಾಡಿದರು. ನವೆಂಬರ್ 1873ರಲ್ಲಿ ಮೈಸೂರು ಸಂಸ್ಥಾನದ ಸೇವೆಗೆ ಸೇರಿದ ಇವರು ದಿವಾನ್ ರಂಗಾಚಾರ್ಲು ಅವರ ಸಹಾಯಕರಾಗಿದ್ದು ಅವರಿಂದ ಪ್ರೋತ್ಸಾಹಿತರಾದರು. ಅನೇಕ ಜಿಲ್ಲೆಗಳಲ್ಲಿ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರಾಗಿ, ಮೈಸೂರಿನಲ್ಲಿ ಡೆಪ್ಯುಟಿ ಕಮಿಷನರ್ ಆಗಿ, ಮೈಸೂರು ಸಂಸ್ಥಾನದ ಸ್ಟ್ಯಾಟಿಸ್ಟಿಕ್ಸ್ ವಿಭಾಗದ ನಿರ್ದೇಶಕರಾಗಿ ಹಾಗೂ ಸಂಸ್ಥಾನದ ಚೀಫ್ ಸೆಕ್ರೆಟರಿ ಆಗಿ ಸೇವೆ ಸಲ್ಲಿಸಿದರು. 1904ರಲ್ಲಿ ಇವರನ್ನು ರೆವಿನ್ಯೂ ಕಮಿಷನರ್ ಆಗಿ ಆಯ್ಕೆ ಮಾಡಲಾಗಿತ್ತು. ಸಂಸ್ಥಾನದ ಕಾರ್ಯಕಾರಿ ಸಮಿತಿಗೆ (ಎಕ್ಸಿಕ್ಯುಟಿವ್ ಕಮಿಟಿ)

ಕೆ.ಪಿ.ಪುಟ್ಟಣ್ಣಚೆಟ್ಟಿಯವರ ಜೊತೆ ಆಯ್ಕೆಗೊಂಡರು (1906). ದಿವಾನ್ ವಿ.ಪಿ.ಮಾಧವರಾಯರ ಅನಂತರ ದಿವಾನ್ ಪದವಿಗೆ ಇವರನ್ನು ನೇಮಿಸಲಾಯಿತು. ಜೂನ್ 1911ರಲ್ಲಿ ಮೈಸೂರು ಸಂಸ್ಥಾನದ ಮೊದಲ ಎಕನಾಮಿಕ್ ಕಾನ್ಫರೆನ್ಸ್ ನಡೆಸಿದುದು, ಕನ್ನಂಬಾಡಿ ಅಣೆಕಟ್ಟು ರಚನೆಗೆ ನಿರ್ಣಯ ಕೈ ಕೊಂಡುದು (1911) ಹಾಗೂ ಮೈಸೂರಿನ ಹೊಸ ಅರಮನೆ ಪೂರ್ತಿಯಾದುದು (1910) ಇವರ ದಿವಾನ ಗಿರಿಯ ಕಾಲದ ಕೆಲವು ಮುಖ್ಯ ಸಾಧನೆಗಳು. ಅಲ್ಲದೆ ಮದರಾಸು ಪ್ರಾಂತ್ಯದ ಜನರಿಗೆ ಮೈಸೂರು ಸಂಸ್ಥಾನದ ಉನ್ನತ ಹುದ್ದೆಗಳು ದೊರೆಯುತ್ತಿರುವುದರ ವಿರುದ್ಧ ನಡೆದ ಚಳವಳಿಗೆ ಮಣಿದು ಮೈಸೂರಿಗರಿಗೆ ಸಂಸ್ಥಾನದ ಸಿವಿಲ್ ಸರ್ವಿಸ್ ಹುದ್ದೆಗಳು ಮೀಸಲಾಗಿರಬೇಕೆಂದು ಇವರು ನಿರ್ಣಯ ಮಾಡಿದರು. 1912ರಲ್ಲಿ ಸೇವೆಯಿಂದ ನಿವೃತ್ತರಾದರು. ಇವರಿಗೆ ಪ್ರಧಾನಶಿರೋಮಣಿ ಎಂಬ ಬಿರುದು ಮತ್ತು ಸಿ.ಐ.ಇ. ಪ್ರಶಸ್ತಿ ದೊರಕಿತ್ತು. ಮುಂದೆ 20-07-1919ರಂದು ಬೆಂಗಳೂರಲ್ಲಿ ನಿಧನರಾದರು.



(ಎಸ್.ಕೆ.)

**ಆನೆಗೊಂದಿ :** ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಒಂದು ಊರು. ಹೊಸಪೇಟೆಗೆ 10ಕಿಮೀ. ದೂರದಲ್ಲಿ ಹಂಪೆಯ ಎದುರಿಗೆ ತುಂಗಭದ್ರಾ ನದಿಯ ಎಡದಂಡೆಯ ಮೇಲಿದೆ. ಆನೆಗೊಂದಿ ವಿಜಯನಗರ ಇತಿಹಾಸದ ಮೂಲಕ ಪ್ರಸಿದ್ಧಿ ಪಡೆದಿದೆ. ವಿಜಯನಗರದ ಅರಸರು ತಮ್ಮ ಸೈನ್ಯದ ಆನೆಗಳಿಗೆ ಇಲ್ಲಿ ಜಾಗ ಮಾಡಿದ್ದರು, ಆದ್ದರಿಂದ ಈ ಹೆಸರು ಬಂತೆಂದು ಪ್ರತೀತಿ. ಆನೆಗೊಂದಿ ಈ ಪ್ರದೇಶದ ಪರ್ವತಾವಳಿಯ



ನವ ಬೃಂದಾವನ

ಸ್ವಾಭಾವಿಕ ದುರ್ಗವಾಗಿದ್ದು ಸುರಕ್ಷಿತ ಸ್ಥಳವಾದುದರಿಂದ ಹಿಂದಿನ ಕೆಲವು ರಾಜರು ಇದನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಆನೆಗೊಂದಿಯನ್ನು ಆಳುತ್ತಿದ್ದ ಕಂಪಿಲರಾಯ ಮತ್ತು ಅವನ ಮಗ ಕುಮಾರರಾಮ ಇವರು ಅಲಾಉದ್ದೀನ್ ಖಿಲ್ಜಿಯ ದಂಡನಾಯಕ ಮಲ್ಲಿಕಾಫರನನ್ನು ಎದುರಿಸಿ ಯುದ್ಧ ಮಾಡಿದರೆಂದು ತಿಳಿದುಬಂದಿದೆ. ಕಂಪಿಲರಾಯನ ಬಳಿ ಇದ್ದ ಹರಿಹರ ಮತ್ತು ಬುಕ್ಕ ಸಹೋದರರು ವಿಜಯನಗರದ ಸ್ಥಾಪನೆಗಾಗಿ ಶ್ರಮಿಸಿದವರು. ಆದುದರಿಂದಲೇ ನ್ಯೂನಿಜ್ ಎಂಬ ವಿದೇಶೀ ಯಾತ್ರಿಕ ಆನೆಗೊಂದಿಯನ್ನು ವಿಜಯನಗರದ ಮಾತೃಸ್ಥಾನವೆಂದು ಕರೆದಿದ್ದಾನೆ. ಅರಬ್ ಇತಿಹಾಸಕಾರರು ಆನೆಗೊಂದಿಯನ್ನು ನಾಗುಂಡಿಮ್ ಎಂದು ಕರೆದಿದ್ದಾರೆ. ವಿಜಯನಗರದ ಪತನಾನಂತರ ಆರವೀಡು ಸಂತತಿಯ ಅರಸರ ಶಾಖೆಯೊಂದು ಆನೆಗೊಂದಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಲಾರಂಭಿಸಿತು. 15ನೆಯ ಶತಮಾನದಲ್ಲಿ ಆನೆಗೊಂದಿಯ ಶ್ರೀರಂಗರಾಯ ಶ್ರೀರಂಗಪಟ್ಟಣದ ಕೋಟೆಯನ್ನೂ ಶ್ರೀರಂಗನಾಥ ಮಂದಿರವನ್ನೂ ಕಟ್ಟಿಸಿ ಈ ಪ್ರಾಂತವನ್ನು ಆಳಿದನೆಂದು ಶ್ರೀರಂಗಪಟ್ಟಣದ ಸ್ಥಳಪುರಾಣ ತಿಳಿಸುತ್ತದೆ. 16-17ನೆಯ ಶತಮಾನದಲ್ಲಿ ಆನೆಗೊಂದಿ ಸಂಸ್ಥಾನ ಮುಸ್ಲಿಮರ ಅಧೀನವಾಯಿತು. 1749ರಲ್ಲಿ ಮರಾಠರು ಇದನ್ನು ಸ್ವಾಧೀನಪಡಿಸಿಕೊಂಡರು. 1776ರಲ್ಲಿ ಟಿಪ್ಪುಸುಲ್ತಾನ ಈ ಊರಿನ ಮೇಲೆ ದಂಡೆತ್ತಿ ಹಾಳುಗೆಡವಿದ. ನಾಲ್ಕನೆಯ ಮೈಸೂರು ಯುದ್ಧದಲ್ಲಿ ಟಿಪ್ಪುವಿನ ಪತನವಾದಮೇಲೆ ಬ್ರಿಟಿಷರು ಆನೆಗೊಂದಿಯ ಕೆಲವು ಭಾಗಗಳನ್ನು ತಮ್ಮ ವಶದಲ್ಲಿಟ್ಟುಕೊಂಡು ಉಳಿದ ಪ್ರದೇಶವನ್ನು ಹಿಂದಿನ ಅರಸರ ಸಂತತಿಗೆ ಒಪ್ಪಿಸಿಕೊಟ್ಟರು. 1949ರ ವರೆಗೆ ಇದು ಆ ಅರಸರ ಸಂಸ್ಥಾನವಾಗಿತ್ತು.

ಆನೆಗೊಂದಿಯಲ್ಲಿನ ಪ್ರಾಚೀನ ಕೋಟೆಕೊತ್ತಲಗಳು, ಶೇಷಶಾಯಿ ದೇವಾಲಯ, ಪಂಪಾಸರೋವರ, ವಾಲಿಭಂಡಾರ ಇಲ್ಲಿನ ಹಳೆಯ ಅರಮನೆ ಇವೆಲ್ಲಾ ಪ್ರೇಕ್ಷಣೀಯವಾಗಿವೆ. ಇಲ್ಲಿನ ಒಂಚ ಅಪ್ಪ ಮಠದಲ್ಲಿ ಹಳೆಯ ಭಿತ್ತಿಚಿತ್ರಗಳಿವೆ. ಇವಲ್ಲದೆ ಮಾಧ್ವಗುರುಗಳ ಒಂಬತ್ತು ವೃಂದಾವನಗಳು ಆನೆಗೊಂದಿಯಲ್ಲಿವೆ.

(ಎಸ್.ಎಂ.ಎ.)

**ಆನೇಕಲ್ಲು :** ಬೆಂಗಳೂರು ಜಿಲ್ಲೆಯ ಒಂದು ತಾಲ್ಲೂಕು ಮತ್ತು ಅದರ ಮುಖ್ಯ ಪಟ್ಟಣ. ಈ ತಾಲ್ಲೂಕು ಪೂರ್ವಕ್ಕೆ ತಮಿಳುನಾಡು, ಉತ್ತರ ಮತ್ತು ವಾಯವ್ಯಕ್ಕೆ ಹೊಸಕೋಟೆ ಮತ್ತು ಬೆಂಗಳೂರು, ದಕ್ಷಿಣ ಮತ್ತು ನೈಋತ್ಯಕ್ಕೆ ಕನಕಪುರ ತಾಲ್ಲೂಕುಗಳಿಂದ ಸುತ್ತುವರಿದಿದೆ. ಆನೇಕಲ್ಲು, ಜಿಗಣಿ, ಸರ್ಜಾಪುರ, ಅತ್ತಿಬೆಲೆ ಹೋಬಳಿಗಳಿದ್ದು ಒಟ್ಟು 223 ಗ್ರಾಮಗಳನ್ನೊಳಗೊಂಡಿದೆ. ತಾಲ್ಲೂಕಿನ ವಿಸ್ತೀರ್ಣ 534ಚಕಿಮೀ. ಜನಸಂಖ್ಯೆ 2,98,961.

ತಾಲ್ಲೂಕಿನ ಪಶ್ಚಿಮ ಭಾಗ ಅರ್ಕಾವತಿ ಜಲಾನಯನದ ಕಣಿವೆ, ಕಾಡು ಮತ್ತು ಬೆಟ್ಟಗುಡ್ಡಗಳಿಂದ ಕೂಡಿದೆ. ಪೂರ್ವದ ಕಣಿವೆ ಪೊನ್ನೆಯಾರ್ ನದಿಯ ಜಲಾನಯನ ಭೂಮಿಗೆ ಸೇರಿದೆ. ಭೂಮಿ ಪಶ್ಚಿಮದಿಂದ ಪೂರ್ವಕ್ಕೆ ಇಳಿಜಾರಾಗಿದೆ. ತಾಲ್ಲೂಕಿನ ಹೆಚ್ಚುಭಾಗ ಮರಳುಮಿಶ್ರಿತ ಕೆಂಪು ಮಣ್ಣಿನಿಂದ ಕೂಡಿದೆ. ಸಾಮಾನ್ಯವಾಗಿ ಈ ಪ್ರದೇಶದಲ್ಲಿ ರಾಗಿ, ಬತ್ತ, ದ್ವಿದಳ ಧಾನ್ಯಗಳು ಮತ್ತು ಎಣ್ಣೆ ಬೀಜಗಳನ್ನು ಬೆಳೆಯುತ್ತಾರೆ. ಸಾಕಷ್ಟು ಮಳೆಯಾಗುತ್ತದೆ. ಉತ್ತಮ ಹವಾಗುಣ ಉಂಟು. ಬೆಳೆಗಳು ಕುಯ್ಲಿಗೆ ಬರುವ ಕಾಲದಲ್ಲಿ ಕೆಲವೊಮ್ಮೆ ಅಕ್ಕಪಕ್ಕದ ಕಾಡುಗಳಿಂದ ಆನೆಗಳು ನುಗ್ಗಿಬರುವುದುಂಟು.

ಚಂಪಕಧಾಮಸ್ವಾಮಿ ದೇವಾಲಯವಿರುವ ಬನ್ನೇರುಘಟ್ಟ (ನೋಡಿ) ಈ ತಾಲ್ಲೂಕಿನ ಒಂದು ಸುಪ್ರಸಿದ್ಧ ಕ್ಷೇತ್ರ. ದೊಮ್ಮಸಂದ್ರ ಕೈಮಗ್ಗದ ಸೀರೆಗಳಿಗೆ ಹೆಸರಾಗಿದೆ. ಹಿಂದೆ ಪಾರಂಗಲನಿ, ಖಗಪುರ ಎಂದು ಹೆಸರಿದ್ದ ಇಂದಿನ ಹಾರಗದ್ದೆಯಲ್ಲಿರುವ ಚನ್ನಕೇಶವ ದೇವಾಲಯ ದೊಡ್ಡದು. ಭಾರತ, ರುಕ್ಮಾಂಗದ ಚರಿತೆಗಳನ್ನು ಬರೆದ ಲಕ್ಷ್ಮಕವಿ (18ನೆಯ ಶತಮಾನ) ಇಲ್ಲಿಯವನು. ಪಾಳೆಯಪಟ್ಟುಗಳಿದ್ದ ಜಿಗಣಿ ಮತ್ತು ಸರ್ಜಾಪುರ (ನೋಡಿ) ಐತಿಹಾಸಿಕ ಸ್ಥಳಗಳು. ಆನೇಕಲ್ಲಿನಿಂದ 3-4ಕಿಮೀ ದೂರದಲ್ಲಿರುವ ಮುತ್ಯಾಲಮಡು (ಮುತ್ತಿನಂತೆ ನೀರು ತೊಟ್ಟಿಡುತ್ತಿರುವ) ಸಣ್ಣ ಜಲಪಾತವಿರುವ ಸ್ಥಳ, ಸುಂದರ ತಾಣ, ಇತ್ತೀಚೆಗೆ ಇದು ಪ್ರವಾಸಿ ತಾಣವಾಗಿ ರೂಪುಗೊಳ್ಳುತ್ತಿದೆ.

ತಾಲ್ಲೂಕಿನ ಕಸಬೆ ಆನೇಕಲ್ಲು ಬೆಂಗಳೂರಿನಿಂದ ಆಗ್ನೇಯಕ್ಕೆ 35ಕಿಮೀ ದೂರದಲ್ಲಿದೆ. ಬೆಂಗಳೂರು ಮತ್ತು ಹೊಸೂರುಗಳಿಗೆ ಇಲ್ಲಿಂದ ಉತ್ತಮ ರಸ್ತೆ ಇದೆ. ಜನಸಂಖ್ಯೆ 33,160. ಆನೇಕಲ್ಲಿನಲ್ಲಿ ನಗರಸಭೆ ಇದೆ. ಈ ಊರು ನೇಯ್ಗೆ ಸೀರೆಗಳಿಗೆ ಪ್ರಸಿದ್ಧ. ಪ್ರತಿ ಶುಕ್ರವಾರ ಸಂತೆ ನಡೆಯುತ್ತದೆ.

ಆನೇಕಲ್ಲನ್ನು 1603ರಲ್ಲಿ ಸುಗಟೂರು ಮನೆತನಕ್ಕೆ ಸೇರಿದ ಚಿಕ್ಕತಿಮ್ಮೇಗೌಡ ಸ್ಥಾಪಿಸಿದ. ಬಿಜಾಪುರದ ರಾಜ ಸುಗಟೂರನ್ನು ವಶಪಡಿಸಿಕೊಂಡಾಗ ಚಿಕ್ಕ ತಿಮ್ಮೇಗೌಡನಿಗೆ ಆನೇಕಲ್ಲು ಮಾತ್ರ

ಉಳಿಯಿತು. ಈತ ಇಲ್ಲಿ ಕೋಟೆಯನ್ನು ಕಟ್ಟಿ ಊರನ್ನು ಭದ್ರಪಡಿಸಿದ. ದೇವಾಲಯ ಮತ್ತು ಒಂದು ದೊಡ್ಡ ಕೆರೆಯನ್ನು ಕಟ್ಟಿಸಿದ. ಇವರ ಮೊಮ್ಮಗ ದೊಡ್ಡ ತಿಮ್ಮೇಗೌಡ ಮೈಸೂರು ರಾಜರಿಗೆ ವರ್ಷಕ್ಕೆ 2,000 ರೂಪಾಯಿಗಳ ಕಾಣಿಕೆ ಕೊಡಲೊಪ್ಪಿ ರಾಜ್ಯವನ್ನು ಉಳಿಸಿಕೊಂಡ. ದೊಡ್ಡ ತಿಮ್ಮೇಗೌಡನ ಮೊಮ್ಮಗ ಚಾಮುಗೌಡನ ಕಾಲದಲ್ಲಿ ಹೈದರ್ ಈ ಊರನ್ನು ಮೈಸೂರು ರಾಜ್ಯಕ್ಕೆ ಸೇರಿಸಿಕೊಂಡ.



ಮುತ್ಯಾಲಮಡು ಜಲಪಾತ

ಇಲ್ಲಿ ಚನ್ನಕೇಶವ, ಮಲ್ಲಿಕಾರ್ಜುನ, ವೇಣುಗೋಪಾಲ ದೇವಾಲಯಗಳಿವೆ. ಇವುಗಳಲ್ಲಿ ಚನ್ನಕೇಶವ ದೇವಾಲಯ ಪ್ರಾಚೀನವಾದುದು. ಹದಿನಾಲ್ಕು ಹಸ್ತಗಳುಳ್ಳ ವಿಷ್ಣುವಿನ ಪ್ರತಿಮೆ ಇದೆ. ಇಲ್ಲಿರುವ ಮಲ್ಲಿಕಾರ್ಜುನ ದೇವಾಲಯದ ಮುಂದೆ 20' ಎತ್ತರದ ದೀಪಸ್ತಂಭವಿದೆ. ತ್ರಿಕೂಟವರ್ಗಕ್ಕೆ ಸೇರಿದ ಈ ದೇವಾಲಯದ ಉತ್ತರ ದಕ್ಷಿಣದಲ್ಲಿ ಪಾರ್ವತಿ ಮತ್ತು ನಂಜುಂಡೇಶ್ವರ ವಿಗ್ರಹಗಳಿವೆ.ಸಾಧನಪುರವಾಸ ಎಂಬ ಅಂಕಿತದಿಂದ ಆನಂದ ರಾಮಾಯಣವನ್ನು ಬರೆದ ತಿರುಮಲಾರ್ಯ ಇಲ್ಲಿಯವನೆಂದು ಹೇಳಲಾಗಿದೆ. ಇಲ್ಲಿ ಒಂದು ಶಂಕರಮಠವಿದೆ. ಇಲ್ಲಿನ ಕರಗ ಬೆಂಗಳೂರಿನ ಕರಗದಷ್ಟೇ ಪ್ರಸಿದ್ಧ.

ಆನೇಕಲ್ಲಿನ ದಕ್ಷಿಣಕ್ಕೆ ಶಾಸನಬಸದಿಯೂ ಬೂದಿಹಳ್ಳ ಎಂದು ಕರೆಯುವ ಕ್ರಿಸ್ತಶಕಾರಂಭ' ಕಾಲದ ಒಂದು ಪ್ರಾಚೀನ ನಿವೇಶನವೂ ಇವೆ. (ಎಚ್.ವಿ.ಎಸ್.;ಎನ್.ವಿ.)

**ಆನೇಕೆರೆ :** ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಚನ್ನರಾಯಪಟ್ಟಣದಿಂದ 6ಕಿಮೀ ಪಶ್ಚಿಮಕ್ಕಿರುವ ಗ್ರಾಮ. ಹೊಯ್ಸಳ ದೇವಾಲಯಗಳಿಂದ ಪ್ರಸಿದ್ಧವಾಗಿದೆ. ಶಾಸನಗಳಲ್ಲಿ ಆನೆಗಳ ಕೆರೆ, ಕೇಶವಪುರ ಎಂದು ಕರೆಯಲಾಗಿದೆ. ಊರಿನ ಮಧ್ಯದಲ್ಲಿರುವ ಚನ್ನಕೇಶವ (ಜನಾರ್ದನ) ಗುಡಿ ಸು.1191ರಲ್ಲಿ ರಚಿವಾಯಿತು. ಇದು ಏಕಕೂಟ ದೇವಾಲಯ, ಗರ್ಭಗೃಹ, ನವರಂಗ ಮತ್ತು ಅರ್ಧಮಂಟಪವಿರುವ ಈ ದೇವಾಲಯ ಜಗತಿಯ ಮೇಲೆ ನಿಂತಿದೆ. ಹೊಯ್ಸಳ ಕಾಲದ ಒಂದು ಸುತ್ತು ಪ್ರಾಕಾರ, ಅದಕ್ಕೆ ಸೇರಿದಂತೆ ಒಳ ಕೈಸಾಲೆ ಸಹ ಹಿಂದೆ ಇತ್ತು. ಈಗ ಈ ಭಾಗ ನವೀಕೃತವಾಗಿದೆ. ಭೈರಪ್ಪನಾಯಕ ಎಂಬುವನು 17ನೆಯ ಶತಮಾನದಲ್ಲಿ ಈ ಪ್ರಾಕಾರದ ಜೀರ್ಣೋದ್ಧಾರ ಮಾಡಿದ. ಶಂಖವೊಂದು ಇಳಿಬಿದ್ದಂತಿರುವ ನವರಂಗದ ಮಧ್ಯದಲ್ಲಿರುವ ಭುವನೇಶ್ವರಿ ಸುಂದರವಾಗಿದೆ. ಈಗ ಗರ್ಭಗುಡಿಯಲ್ಲಿರುವ ಮೂಲ ವಿಗ್ರಹ ಈಚಿನ ಸ್ಥಾಪನೆ. ದೇವಾಲಯದ ಹೊರಮೈ ಕೆತ್ತನೆ ಹಲವು ಭಾಗಗಳಲ್ಲಿ ಅಪೂರ್ಣವಾಗಿಯೇ ಉಳಿದಿದೆ. ಆದರೆ ಕೆಳಗೆ ಶಿಲ್ಪ ಪಟ್ಟಿಕೆಗಳು, ಭಿತ್ತಿಯ ಮೇಲೆ ಅರೆಗಂಬಗಳು, ಹಾರ ಇವೆ. ಶಿಖರದ ಕೆತ್ತನೆಯೂ ಪೂರ್ಣವಾಗಿಲ್ಲ.

ಸಮೀಪದಲ್ಲಿರುವ ವೀರಭದ್ರ ದೇವಾಲಯ, ಕೆರೆದಂಡೆಯಲ್ಲಿರುವ ಎರಡು ಚಿಕ್ಕ ದೇವಾಲಯಗಳು ಮತ್ತು ಶಂಭುಲಿಂಗೇಶ್ವರ ದೇವಾಲಯ ಸಹ ಹೊಯ್ಸಳ ಕೃತಿಗಳು.



ಜನಾರ್ದನ ದೇವಾಲಯ

ಈ ಊರಿನಲ್ಲಿ ದೊರಕಿರುವ 1191ರ ತಾಮ್ರ ಶಾಸನದಲ್ಲಿ ಹೊಯ್ಸಳ ವೀರ ಬಲ್ಲಾಳನ ಮಂತ್ರಿ ಶ್ರೀಕರಣ ಹೆಗ್ಗಡೆ ಮಾಚಯ್ಯ ಆನೇಕೆರೆಯನ್ನು ಅಗ್ರಹಾರವಾಗಿ ಮಾಡಿದ ವಿಷಯವಿದೆ. ಈ ಶಾಸನದ ಅಂತ್ಯದಲ್ಲಿ ಜನ್ನಯ್ಯನ ಕವಿತೆ ಎಂಬ ಬರೆಹವಿದ್ದು ಪ್ರಸಿದ್ಧ ಕನ್ನಡಕವಿ ಜನ್ನ ಇದರ ಕರ್ತೃ ಎಂದು ತಿಳಿಯಲಾಗಿದೆ. (ಎಚ್.ಎಂ.ಎನ್.)

**ಆನೇಕೊಂಡ :** ದಾವಣಗೆರೆ ಜಿಲ್ಲೆಯಲ್ಲಿ ದಾವಣಗೆರೆಗೆ ಹೊಂದಿಕೊಂಡಂತೆ ಅಲ್ಲಿಂದ 2ಕಿಮೀ ದೂರದಲ್ಲಿರುವ ಒಂದು ಸಣ್ಣ ಹಳ್ಳಿ. 11-12ನೆಯ ಶತಮಾನಗಳಲ್ಲಿ ಪ್ರಸಿದ್ಧ ಪಟ್ಟಣವಾಗಿತ್ತು. ಆನೇಕೊಂಡ ಎಂಬ ಹೆಸರು ಈ ಊರಿಗೆ ಯಾವಾಗ ಹೇಗೆ ಬಂದಿತೆಂಬುದು ತಿಳಿಯದು. ಶಾಸನಗಳು ಬೆಳ್ಳುಟ್ಟಿ ಎಂಬ ಒಂದು ಊರನ್ನು ಹೆಸರಿಸುತ್ತವೆ. ಇದು ಈಗಿನ ಆನೇಕೊಂಡ, ಬೇತೂರು ಮತ್ತು ದಾವಣಗೆರೆಗಳನ್ನೊಳಗೊಂಡಿದ್ದಿರಬೇಕೆಂದು ಇವುಗಳ ನಡುವೆ ಇರುವ ಪುರಾತನ ನಿವೇಶನದಿಂದ ತಿಳಿಯಬಹುದು. ಈ ಹಳೆಯ ನಿವೇಶನದಲ್ಲಿ ಕೆಲವು ಗಜಪತಿ ನಾಣ್ಯಗಳು ದೊರಕಿವೆ. ಇದು ಉಚ್ಚಂಗಿ ಪಾಂಡ್ಯರ

ಮೊದಲ ರಾಜಧಾನಿಯಾಗಿದ್ದು ಬೆಳ್ತುಱು 12ರ ಮುಖ್ಯ ಬೀಡಾಗಿತ್ತು. ಹೊಯ್ಸಳರು ಪಾಂಡ್ಯರನ್ನು ಸೋಲಿಸಿದ ಮೇಲೆ ಊರು ಅವನತಿಯನ್ನು ಹೊಂದಿರಬೇಕು. ಮೂಲಸ್ಥಾನ, ಸರ್ಪೇಶ್ವರ, ತ್ರಿಭುವನಮಲ್ಲ ವೀರಪಾಂಡ್ಯ ಕಟ್ಟಿಸಿದ ತ್ರಿಭುವನಮಲ್ಲ ಪಾಂಡ್ಯೇಶ್ವರ, ಬೆಳ್ತುಱುವಿನ ಜಗತಿಗಳು ಮತ್ತು ಕೊತ್ತಳಗಳು ಜಗತೇಶ್ವರ, ರಾಯಪಾಂಡ್ಯನ ರಾಣಿ ಸೋವಲದೇವಿ ಕಟ್ಟಿಸಿದ ಸೋಮನಾಥ, ಧರ್ಮೇಶ್ವರ, ಅವಿಮುಕ್ತೇಶ್ವರ ಮತ್ತು ವಾಸುದೇವರ ದೇವಾಲಯಗಳು ಇಲ್ಲಿದ್ದುವೆಂದು ಶಾಸನಗಳು ತಿಳಿಸುತ್ತವೆ. ಇವುಗಳಲ್ಲಿ ಅನೇಕವು ಉಳಿದಿಲ್ಲ.



ಈಶ್ವರ ದೇವಾಲಯ

ಈಗಿನ ಆನೇಕೊಂಡದಲ್ಲಿ ಒಂದು ಈಶ್ವರ ದೇವಾಲಯ ಇದೆ. ಸು.1120ರಲ್ಲಿ ಕಟ್ಟಿರಬಹುದಾದ ತ್ರಿಭುವನಮಲ್ಲ ಪಾಂಡ್ಯೇಶ್ವರ ದೇವಾಲಯವಾಗಿರಬಹುದು. ಈ ಗುಡಿಗೆ 6ನೆಯ ವಿಕ್ರಮಾದಿತ್ಯ 1123ರಲ್ಲಿ ದತ್ತಿ ಬಿಟ್ಟಿದ್ದಾನೆ. ಇದು ಕಲ್ಯಾಣದ ಚಾಳುಕ್ಯರ ದೇವಾಲಯಗಳ ಮಾದರಿಯಲ್ಲಿ ಉಚ್ಚಂಗಿ ಪಾಂಡ್ಯರು ಕಟ್ಟಿಸಿದ ಬಳಪದ ಕಲ್ಲಿನ ಸುಂದರ ದೇವಾಲಯಗಳ ಒಂದು ಉತ್ತಮ ಉದಾಹರಣೆ. ಪೂರ್ವಾಭಿಮುಖವಾಗಿರುವ ಒಂದು ಗರ್ಭಗೃಹ, ಅದರ ಮುಂದೆ ಸುಕನಾಸಿ, ನವರಂಗಗಳು, ನವರಂಗಕ್ಕೆ ಸೇರಿದಂತೆ ಉತ್ತರಕ್ಕೆ ಇನ್ನೊಂದು ಗರ್ಭಗೃಹ, ಪೂರ್ವ ದಕ್ಷಿಣಗಳಲ್ಲಿ ಎರಡಂಕಣದ ಮುಖಭದ್ರಗಳಿರುವ ಅಪರೂಪ ವಿನ್ಯಾಸದ ಈ ದೇವಾಲಯದ ಹೊರಗೋಡೆಗಳು ಸರಳವಾಗಿದ್ದು ಅಲ್ಲಲ್ಲಿ ಅರೆಗಂಬಗಳಿವೆ. ತೆರೆದ ಮುಖಮಂಟಪಗಳ ಹೊರಮೈಯಲ್ಲಿ ಕಟಾಂಜನದ ಕೆಳಗೆ ಹಲವು ಸಾಲು ಅಡ್ಡಪಟ್ಟಿಕೆಗಳು, ಮೇಲೆ ಜೋಡಿ ಅರೆಗಂಬಗಳ ನಡುವೆ ನೃತ್ಯಗಣಪತಿ, ಋಷಿಗಳು, ನರ್ತನದ, ವಿವಿಧ ಭಂಗಿಗಳಲ್ಲಿರುವ ಸ್ತ್ರೀಮೂರ್ತಿಗಳು, ವ್ಯಾಧರು ಮುಂತಾದ ಕಿರುಮೂರ್ತಿಗಳ ಸಾಲಿನಿಂದ ತುಂಬಿದ್ದು ಒಳಭಾಗದಲ್ಲಿ ಎರಡು ಕಡೆಯೂ ಜಗತಿಗಳಿವೆ. ಈ ದೇವಾಲಯದ ಕಂಬಗಳು ಬಗೆಬಗೆಯಾಗಿವೆ. ಮುಖಮಂಟಪ ಮತ್ತು ನವರಂಗದ ಭುವನೇಶ್ವರಿಗಳು ಸುಂದರವಾಗಿದ್ದು ನವರಂಗದ ಸುತ್ತಲ ಅಂಕಣಗಳಲ್ಲಿ ಪದ್ಮಗಳ ನಡುವಣ ಗೊಂಡೆಗಳಲ್ಲಿ ಅಷ್ಟದಿಕ್ಪಾಲಕರು, ಮಧ್ಯದ ಅಂಕಣದಲ್ಲಿ ನಡುವೆ ಗಜಾರಿ ಮತ್ತು ಇಕ್ಕೆಲಗಳಲ್ಲಿ ವಿಷ್ಣು, ಬ್ರಹ್ಮ, ಮೇಲೆ ಕೆಳಗೆ ದ್ವಾದಶಾದಿತ್ಯರು, ಏಕಾದಶರುದ್ರರು, ಶಿವನ ಪರಿವಾರ ದೇವತೆಗಳು, ಯೋಗಾನರಸಿಂಹ, ಮೋಹಿನಿ, ಕೋದಂಡರಾಮ ಮುಂತಾದ ಮೂರ್ತಿಗಳಿಂದ ತುಂಬಿದ್ದು ಭವ್ಯವಾಗಿದೆ. ಬರಿದಾಗಿರುವ ಉತ್ತರದಿಕ್ಕಿನ ಗರ್ಭಗೃಹದ ಬಾಗಿಲುವಾಡ ಸುಂದರವಾಗಿದೆ. ಬಹುಶಃ ಈ ಗರ್ಭಗೃಹದಲ್ಲಿದ್ದ ಕೇಶವನ ಭಿನ್ನವಾದ ಮೂರ್ತಿ ದೇವಾಲಯದ ಎದುರಿಗೆ ಈಚೆಗೆ ಕಟ್ಟಿರುವ ಒಂದು ಚಿಕ್ಕಗುಡಿಯಲ್ಲಿದೆ. ಜಾಲಂಧ್ರದಿಂದ ಕೂಡಿದ ಸುಕನಾಸಿಯ ಬಾಗಿಲುವಾಡದ ಎರಡು ಕಡೆಯೂ ಅರೆಮಂಟಪಗಳಿವೆ. ಅಭಿನವಹಸ್ತವೆಡಂಗ ಸರಸ್ವತೀ ಗಣದಾಸಿ ಬಾಚೋಜನ ಮಗ ಬಾಮೋಜ ಈ ದೇವಾಲಯದ ಶಿಲ್ಪಿ. (ಎಂ.ಎಚ್.)

**ಆಭರಣಗಳು** : ಸೌಂದರ್ಯವರ್ಧಕ, ಸೌಂದರ್ಯರಕ್ಷಕ, ಔಪಯೋಗಿಕ, ಅನ್ಯಾಕರ್ಷಕ, ರೋಗನಿವಾರಕ, ಕ್ಷೇಮಚಿಂತಕ, ಮಾಂತ್ರಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ಅಂತಸ್ತು ಸಿರಿತನದ ಪ್ರದರ್ಶನ ಇವೇ ಮೊದಲಾದ ಕಾರಣಗಳಿಗಾಗಿ ಆಭರಣಗಳನ್ನು ಉಪಯೋಗಿಸುವ ವಿಶ್ವಸಾಮಾನ್ಯ ಪ್ರವೃತ್ತಿಗೆ ಕನ್ನಡಿಗರು ಹೊರತಲ್ಲ. ವಿಶ್ವದ ಇತರೆಡೆಗಳಂತೆ ಕರ್ನಾಟಕದಲ್ಲಿ ಸಹ ಅತಿಪ್ರಾಚೀನ ಕಾಲದಲ್ಲಿ ನೈಸರ್ಗಿಕವಾಗಿ ದೊರೆಯುವ ಹೂವು, ಬಳ್ಳಿ, ಎಲೆ ಬಣ್ಣ ಮೊದಲಾದುವುಗಳನ್ನು ಅಲಂಕಾರಕ್ಕಾಗಿ ಬಳಸುವ ರೂಢಿ ಇದ್ದು ಕ್ರಮೇಣ ನಾಗರಿಕತೆ ಹಲವು ಮಜಲುಗಳಲ್ಲಿ ಬೆಳೆದಂತೆಲ್ಲಾ ವೈವಿಧ್ಯಮಯವಾದ ಹೆಚ್ಚು ಕಾಲ ಬಾಳಬಹುದಾದ, ಹೆಚ್ಚು ಆಕರ್ಷಕವಾದ, ಬೆಲೆಯುಳ್ಳ ಆಭರಣಗಳನ್ನು ಬಳಸುತ್ತಿದ್ದುದನ್ನು ಐತಿಹಾಸಿಕ ಮತ್ತು ಪುರಾವಸ್ತು ಆಧಾರಗಳಿಂದ ಗುರುತಿಸಬಹುದಾಗಿದೆ.

ಪ್ರಾಗೈತಿಹಾಸಿಕ ಕಾಲದಲ್ಲಿ ಪ್ರಾರಂಭಾವಸ್ಥೆಯಲ್ಲಿ ಪ್ರಕೃತಿದತ್ತ ವಸ್ತುಗಳ ಉಪಯೋಗವಿದ್ದಿತೆಂಬುದಕ್ಕೆ ಈಗಲೂ ಆದಿವಾಸಿ ಜನಾಂಗದಲ್ಲಿ ಕಂಡುಬರುವ ಬಿಚ್ಚೋಲೆ (ಓಲೆಗರಿಯನ್ನು ಸುರುಳಿ ಸುತ್ತಿ ಕಿವಿಗೆ ಇಟ್ಟುಕೊಳ್ಳುವಂಥದ್ದು), ಬೆಂಡೋಲೆ (ಜೊಂಡು, ಜೋಳದ ಕಡ್ಡಿ ಇತ್ಯಾದಿಗಳ ಸಿಪ್ಪೆ ಸುಲಿದು ಒಳಗಿನ ಬೆಂಡನ್ನು ಕಿವಿಗೆ ಇಟ್ಟು ಕೊಳ್ಳುವಂಥದ್ದು) ಸೂಚಕವಾಗಿವೆ. ಲೋಹ ಮತ್ತು ಹರಳುಗಳ ಮೂಗುತಿ ಬರುವುದಕ್ಕಿಂತ ಮುಂಚೆ ಬಿದಿರುಕಡ್ಡಿಯನ್ನೇ ಮೂಗುತಿಯನ್ನಾಗಿ ಬಳಸುತ್ತಿದ್ದರು ಎಂಬುದಕ್ಕೆ ಗಂಧಕಾರನ ಗೌಡನ ಸೊಸೆಗೆ ಬಿದಿರುಕಡ್ಡಿ ಮೂಗುತಿ ಎಂಬ ಗಾದೆ ಸಾಕ್ಷ್ಯಾಧಾರವಾಗಿ ನಿಂತಿದೆ. ಇಂದಿಗೂ ನಿರ್ಗತಿಕರು, ಲೋಹದ ಮೂಗುತಿಗೆ ಬದುಕದವರು, ಬಿದಿರುಗಡ್ಡಿಯನ್ನೋ ಯಾವುದಾದರೂ ಕಡ್ಡಿಯನ್ನೋ ಮೂಗುತಿಯಂತೆ ಇಟ್ಟುಕೊಳ್ಳುವುದನ್ನು ಕಾಣಬಹುದು. ಹೀಗೆಯೇ ಎಡಗೈಗೆ ಇಟ್ಟಂಗಿ ಮಣಿ, ಬಲಗೈಗೆ ಬಟ್ಟೆ ತಿರಿ, ಹಿಂದೆ ನಮ್ಮಪ್ಪನೋರು ಬಲು ಬದುಕಿದ್ದರು ಅಂದ್ಹಂಗೆ ಎಂಬ ಗಾದೆ ಲೋಹದ ಒಡವೆಗಿಂತ ಮೊದಲು ಮಣಿಯನ್ನು, ಬಟ್ಟೆಬಳ್ಳನ್ನು ಕೈಮುರಿಯಂತೆ (ಆಭರಣ) ಬಳಸುತ್ತಿದ್ದರು ಎಂಬುದನ್ನೂ ಮತ್ತು ಲೋಹದ ಒಡವೆ ಬಂದ ಮೇಲೂ ಕಡು ಬಡವರು ಅವುಗಳನ್ನು ಆಭರಣಗಳನ್ನಾಗಿ ಬಳಸುತ್ತಿದ್ದರು, ಬಳಸುತ್ತಿದ್ದಾರೆ ಎಂಬುದನ್ನೂ ಸೂಚಿಸುತ್ತದೆ. ಪ್ರಾರಂಭದಲ್ಲಿ ಕಲ್ಲು, ಮೂಳೆ, ಸುಟ್ಟ ಮಣ್ಣಿನ ಒಡವೆಗಳು, ಬಿದಿರು ಮತ್ತು ಓಲೆಗರಿಯ ಒಡವೆಗಳು, ಮಣಿ, ಚಿಪ್ಪು, ಕವಡೆ ಹಾಗೂ ಬಗೆ ಬಗೆಯ ಬೀಜದ ಒಡವೆಗಳು ಬಳಕೆಯಲ್ಲಿದ್ದುವು ಎಂಬುದಕ್ಕೆ ಇಂದಿಗೂ ಹಾಲಕ್ಕಿ ಒಕ್ಕಲಿಗರ ಹೆಣ್ಣುಮಕ್ಕಳು ಹೆಚ್ಚಾಗಿ ಮಣಿಗಳ ಆಭರಣಗಳನ್ನೇ ಧರಿಸುವುದು ಮತ್ತು ಲಂಬಾಣಿ ಹೆಂಗಸರು ಮಣಿ, ಚಿಪ್ಪು, ಕವಡೆ ಇತ್ಯಾದಿ ಒಡವೆಗಳನ್ನು ಧರಿಸುವುದು ಸಾಕ್ಷ್ಯಾಧಾರಗಳಾಗಿ ನಿಲ್ಲುತ್ತವೆ.

ನವಶಿಲಾಯುಗ ಮತ್ತು ತಾಮ್ರ ಶಿಲಾಯುಗಗಳ ಕಾಲದಲ್ಲಿ ಕ್ರಿ.ಪೂ.ಸು. 2500-1000 ಸುಟ್ಟ ಮಣ್ಣಿನ ಮಣಿಗಳು, ಕವಡೆ ಮಣಿಗಳು, ಬಳಪದಕಲ್ಲಿನ ಮಣಿಗಳು, ತಾಮ್ರದ ಬಳೆ, ತಂತಿಯ ಸುರುಳಿ, ಚಿನ್ನದ ಕಿವಿಯ ಆಭರಣ ಮೊದಲಾದವು ಬಳಕೆಯಲ್ಲಿದ್ದುವು. ಕಬ್ಬಿಣದ ಯುಗದಲ್ಲಿ ಇದೇ ರೀತಿಯ ಸುಟ್ಟಮಣ್ಣು ಮತ್ತು ಕಾರ್ನೀಲಿಯನ್ ಮಣಿಗಳು ಮೊದಲಾದುವಿದ್ದುವು. ಆದಿಚಾರಿತ್ರಿಕ ಕಾಲದಲ್ಲಿ ಈ ಮೇಲಿನ ವಸ್ತುಗಳಲ್ಲದೆ, ಶಂಖುವಿನಿಂದ ಮಾಡಿದ ಬಳೆಗಳು ಹಾಗೂ ಬೆಳ್ಳಿ, ವಜ್ರ ವೈಡೂರ್ಯ ಮೊದಲಾದ ಬೆಲೆಬಾಳುವ ವಸ್ತುಗಳೂ ಆಭರಣಗಳೂ ಬಂದುದೂ ಮೊದಲು ಈ ಕಾಲದಲ್ಲಿಯೇ.

ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದ ಪ್ರಚಲಿತವಿದ್ದ ಆಭರಣಗಳ ಬಗೆಗೆ ವರ್ಣ ಚಿತ್ರಗಳಿಂದ ಶಿಲ್ಪಕಲೆಯಿಂದ ಹಾಗೂ ಸಾಹಿತ್ಯಕೃತಿಗಳಿಂದ ಸಾಕಷ್ಟು ಮಾಹಿತಿ ದೊರಕುತ್ತದೆ. ಅವುಗಳನ್ನು ಶಿಷ್ಟ ಆಭರಣಗಳೆಂದು ಕರೆಯುವುದು ಸೂಕ್ತವೆನ್ನಿಸುತ್ತದೆ. ಏಕೆಂದರೆ ಆ ಎಲ್ಲ ಕಲೆಗಳು ಸುಸಂಸ್ಕೃತ ಶಿಷ್ಟಸಮಾಜಗಳಲ್ಲಿ ಮಾತ್ರ ಅರಳುವಂಥವು. ಸಾತವಾಹನ, ಬಾದಾಮಿಯ ಚಳುಕ್ಯರು, ರಾಷ್ಟ್ರಕೂಟ, ಕಲ್ಯಾಣದ ಚಾಳುಕ್ಯ, ಹೊಯ್ಸಳ, ವಿಜಯನಗರ ಮೊದಲಾದ ರಾಜವಂಶಗಳ ಕಾಲದ ಶಿಲ್ಪ ಹಾಗೂ ಸಾಹಿತ್ಯ ಕೃತಿಗಳಲ್ಲಿ ಕಂಡುಬರುವ ಆಭರಣಗಳು ತಲೆ, ಕಿವಿ, ಮೂಗು, ಕೊರಳು, ಸೊಂಟ, ತೋಳು, ಕೈಕಾಲು, ಬೆರಳುಗಳಿಗೆ ಸಂಬಂಧಪಟ್ಟಂಥವು. ಆದರೆ ಸುಮಾರು ಹನ್ನೊಂದು ಹನ್ನೆರಡನೆಯ ಶತಮಾನಕ್ಕಿಂತ ಹಿಂದಿನ ಶಿಲ್ಪಕಲೆಯಲ್ಲಾಗಲೀ

ಸಾಹಿತ್ಯಕೃತಿಗಳಲ್ಲಾಗಲೀ ಮೂಗಿಗೆ ಸಂಬಂಧಪಟ್ಟ ಆಭರಣ ಮೂಗುತಿ ಕಂಡುಬರುವುದಿಲ್ಲ. ಆ ತರುವಾಯದ ಶಿಲ್ಪಕಲೆ ಹಾಗೂ ಸಾಹಿತ್ಯ ಕೃತಿಗಳಲ್ಲಿ ಮೂಗುತಿಯ ಪ್ರಸ್ತಾಪ ಬರುತ್ತದೆ. ಉದಾಹರಣೆಗೆ ಹದಿಮೂರನೆಯ ಶತಮಾನದಲ್ಲಿದ್ದ ಹರಿಹರ ಚಂದ್ರೋದಯವನ್ನು ವರ್ಣಿಸುವಾಗ ಬಳಸುವ ಅಂಬರದ ಪುಳಿಂದಿ ತಾಳ್ವಿಸವ ಮೂಗಿನ ನತ್ತು ಎಂಬ ಮಾತಿನಲ್ಲಿ ಮೂಗುತಿಯ ಪ್ರಸ್ತಾಪವನ್ನು ಕಾಣಬಹುದು. ಮೊದಲು ಎಲ್ಲೂ ಕಾಣದ ಈ ಆಭರಣ ಇದ್ದಕ್ಕಿದ್ದಂತೆ ಇಣುಕಿದ್ದು ಮುಸಲ್ಮಾನರ ಪ್ರಭಾವದಿಂದ ಎಂಬ ಅಭಿಪ್ರಾಯವಿದೆ. ಸಾಮಾನ್ಯವಾಗಿ ಹಳ್ಳಿಗಾಡಿನಲ್ಲಿ ಅವಿದ್ಯಾವಂತ ಹೆಣ್ಣುಗಂಡು ತಮ್ಮ ತಾಯಿ ತಮಗೂ ಅಷ್ಟಿಷ್ಟು ಬುದ್ಧಿ ಕಲಿಸಿದ್ದಾಳೆ, ವ್ಯವಹಾರಜ್ಞಾನ ಕಲಿಸಿದ್ದಾಳೆ ಎಂಬ ಅರ್ಥದಲ್ಲಿ ನಮಗೂ ನಮ್ಮವ್ವ ಕಿವಿ ಚುಚ್ಚಿದ್ದಾಳೆ ಎಂಬ ನುಡಿಗಟ್ಟನ್ನು ಬಳಸುತ್ತಾರೆ. ಮೂಗು ಚುಚ್ಚಿದ್ದಾಳೆ ಎಂಬ ನುಡಿಗಟ್ಟನ್ನು ಬಳಸುವುದಿಲ್ಲ. ಅಂದರೆ ಕಿವಿ ಚುಚ್ಚುವುದು ಮತ್ತು ಕಿವಿಯೊಡವೆಯನ್ನು ಧರಿಸುವುದು ಹಿಂದು ಸಂಸ್ಕೃತಿಗೆ ಹೊಂದಿಕೊಂಡ ಸಂಪ್ರದಾಯವೆಂಬುದನ್ನೂ ಮೂಗು ಚುಚ್ಚುವುದು ಮತ್ತು ಮೂಗಿನ ಒಡವೆಯನ್ನು ಧರಿಸುವುದು ಹಿಂದು ಸಂಸ್ಕೃತಿಗೆ ಹೊರತಾದ ಅಥವಾ ಆಮದಾದ ಸಂಪ್ರದಾಯವೆಂಬುದನ್ನೂ ಪರೋಕ್ಷವಾಗಿ ಸೂಚಿಸುವ ಪಳೆಯುಳಿಕೆ ಎನ್ನಿಸುತ್ತದೆ ಆ ನುಡಿಗುಟ್ಟು.

ಸಾಮಾನ್ಯವಾಗಿ ಕರ್ನಾಟಕದ ಶಿಲ್ಪಕಲೆಯಲ್ಲಿ ಕಂಡುಬರುವ ಹಾಗೂ ಪ್ರಾಚೀನ ಸಾಹಿತ್ಯಕೃತಿಗಳಲ್ಲಿ ಉಕ್ತವಾಗಿರುವ ಶಿಷ್ಟ ಆಭರಣಗಳನ್ನು ಹೀಗೆ ಪಟ್ಟಿಮಾಡಬಹುದು (1) ತಲೆ: ಮುತ್ತಿನ ಬಲೆ, ಸೀಮಂತ ಮಣಿ, (2) ಕಿವಿ: ಕರ್ಣಕುಂಡಲ, ಕರ್ಣಿಕೆ, ಕರ್ಣಪೂರ ಇತ್ಯಾದಿ. (3) ಕೊರಳು: ತಾರಾಹಾರ, ಚಂದ್ರಹಾರ, ಮಣಿಹಾರ, ಮುತ್ತಿನಹಾರ, ಮುತ್ತಿನೇಕಾವಳಿ ಇತ್ಯಾದಿ. (4) ತೋಳು: ಬಾಹುಪೂರ, ತೋಳಬಂದಿ (5) ಕೈ: ಕಂಕಣ, ತೋಡ, ಬಳೆ (6) ಸೊಂಟ: ಕಟಿಸೂತ್ರ, ಕಾಂಚೀದಾಮ, ರಶನ, ಒಡ್ಯಾಣ, ಮೇಖಲೆ (7) ಕಾಲು: ಮಂಜೀರಕ, ನೂಪುರ, ನೇವುರ, ಅಂದುಗೆ, ತೋಡ ಇತ್ಯಾದಿ, (8) ಬೆರಳು: ಉಂಗುರ, ಮುದ್ರಿಕೆ. ಶ್ರೀಮಂತ ಸಮಾಜಗಳಲ್ಲಿ ಈ ಮೇಲಿನ ಆಭರಣಗಳು ಹೆಚ್ಚಿನ ಮಟ್ಟಿಗೆ ಚಿನ್ನ, ಬೆಳ್ಳಿ ಮತ್ತು ಹವಳ ಇತ್ಯಾದಿಗಳದಾಗಿರುತ್ತಿದ್ದುವು.

ಜನಪದಗೀತೆಗಳಲ್ಲಿ ಜನಪದ ಆಭರಣಗಳ ಒಂದು ಪಟ್ಟಿಯನ್ನೇ ನೀಡಲಾಗಿದೆ. ಅದು ಹೀಗಿದೆ:

ವಾಲಿ ಕೊಪ್ಪು ಕಿವಿಯಾಗಿಟ್ಟು ಸಿಕ್ಕಿದ ಡಾಬ ನಡಿಸಾಗಿಟ್ಟು ರಾಗುಟಿ ಚೌರಿ ತಲೆಯಾಗಿಟ್ಟು ರಾಗದಿಂದ ಕರಿಯ ಬಂದೆ॥ ಹಿರಿಪಿಲ್ಲಿ ಕಿರಿಪಿಲ್ಲಿ ಉಂಗುರ ಪೈಜಾಣ ಕಾಲಸರಪಳಿ ಕೊಟ್ಟಾರ। ವಡ್ಯಾಣ ಬಡವರಿನ್ನೇನು ಕೊಟ್ಟಾರ॥ ಗೆಜ್ಜೆಯ ಸರ ಟೀಕೆ ವಜ್ಜರ ಮೇಲ್ಬುಗುಡಿ ಹರಳು ಬಂಗಾರ ಮೂಗುತಿಯ ಸರಪದಕ ಬಡವರಿನ್ನೇನು ಕೊಟ್ಟಾರ॥

ಅರಳೆಲೆ ಬೇಕವ್ವ ಬೆರಳಿಂಗುರಬೇಕ ಕೊರಳೀಗಿ ಬೇಕ ಅಸಲೀಯು। ಕಂದನ ಕಾಲೀಗಿ ಬೇಕ ಕಿರಿಗೆಜ್ಜಿ॥ ಚಿಂತಾಕು ಇಡಲಿಲ್ಲ ಚಿಂತೆ ಬಿಟ್ಟಿರಲಿಲ್ಲ ಎಂತಲ್ಲಿ ಕೊಟ್ಟೆ ಹಡೆದವ್ವ। ನಡು ಮನೆಯ ಜಂತೆ ಜರಿದ್ಹಾಂಗ ಜರಿದೇನು॥ ಸೂಳೀಗೆ ಸುತ್ತೋಲೆ ಮಡದೀಗೆ ಮೂಗ್ಬಟ್ಟು ಮೆಚ್ಚಿ ಬಂದೋಳಿಗೆ ಬಿಚ್ಚೋಲೆ। ಅಕ್ಕವ್ವ ಪಟ್ಟದ ರಾಣಿಗೆ ಹರಳೋಲೆ॥

ಕೆಲವು ಜನಪದ ಗಾದೆಗಳೂ ಆಭರಣಗಳ ವೈವಿಧ್ಯಗಳ ಸೂಚಕವಾಗಿವೆ. ಮೂಗುತಿ ಮುಂಭಾರ ಹೆಣೆಗಂಟು ಹಿಂಭಾರ ಸೇರಿನ ವಂಕಿ ಕೈಭಾರ; ಆಚೆ ಮನೇಳು ವಾಲೆ ಇಕ್ಕೊಂಡ್ಲು ಈಚೆ ಮನೇಳು ಆಲೆ ಕಿತ್ಕೊಂಡ್ಲು; ಸಿರಿಮನೆ ಅಮ್ಮ ಸರಿಗೆ ಹಾಕ್ಕೊಂಡ್ಲು ನೆರೆಮನೆ ಅಮ್ಮ ನೇಣು ಹಾಕ್ಕೊಂಡ್ಲು; ಆಳಿಗೆ ಆಳು ಭಾರ ತೋಳಿಗೆ ಬಂದಿಭಾರ; ಬಂದಿ ಇಕ್ಕಿದೋಳ ಬಂಧಾನ ನೋಡು ಕಂಕಣ ಇಕ್ಕಿದೋಳ ಕೈ ನೋಡು; ಚಿತ್ತಾರದ ಗಂಡ ಬಿಚ್ಚೋಲೆ ತಂದು ಇಕ್ಕೋ ಅಂತ ಇಳ್ಳಿಲ್ಲ ತಿವಿದ; ಇವತ್ತಿನ ಬುದ್ಧಿ ಅವತ್ತಿದ್ರೆ ಮುತ್ತಿನಂಥ ಕೊಪ್ಪುತಗೊಂಡು ಹೋಗಿ ಒತ್ತೆ ಇಕ್ಕೋರೆ?; ಕಂಡ ಕೈಗ್ಯಾಕೆ ದುಂಡು ಕಡಗ?; ಚಿಂತಾಕ ಇಲ್ಲದ್ಕೆ ಬಡವಾಗ್ಯವಳೆ ಕುಲ್ಡು ಬೊಮ್ಮಿ ಅಂದ್ಹಂಗೆ; ತಾಲಿ ಕಟ್ಟಿದ್ದಾದ್ಮೇಲೆ ತೋಟಿಯಾದರೂ ಗಂಡನೇ ಇತ್ಯಾದಿ.

ಜನಪದ ಜೀವನದಲ್ಲಿ ಆಭರಣಗಳಿಗೆ ವಿಶೇಷ ಪ್ರಾಶಸ್ತ್ಯವುಂಟು ಎಂಬುದನ್ನು ಮೇಲಿನ ಜನಪದ ಗೀತೆಗಳು ಹಾಗೂ ಗಾದೆಗಳು ಸಾರಿ ಹೇಳುತ್ತಿವೆ. ಆಭರಣಗಳು ಶ್ರೀಮಂತಿಕೆಯ ಪ್ರತಿರೂಪ ಹೇಗೋ ಹಾಗೆ ಜನಪದ ಜೀವನದಲ್ಲಿ ಮಾನ ಮರ್ಯಾದೆಯ ಘನತೆ ಗೌರವದ ಪ್ರತಿರೂಪವೂ ಹೌದು. ಉದಾಹರಣೆಗೆ ಓಲೆ ಬುಗುಡಿ ಅಡ್ಡಿಕೆ ಡಾಬು ಕಾಲಂದುಗೆ ಚೈನು ಇತ್ಯಾದಿ ಕನಿಷ್ಠ ಆಭರಣಗಳು ಮೈಮೇಲೆ ಇಲ್ಲದಿದ್ದ ಪಕ್ಷಕ್ಕೆ ಸರಿ ದಾಯಾದಿಗಳ ಅಥವಾ ನೆಂಟರ ಮನೆಯಲ್ಲಿ ಜರುಗುವ ಹಬ್ಬ ಮದುವೆ ಇತ್ಯಾದಿ ಸಮಾರಂಭಗಳಿಗೆ ಹೋಗುವುದು ಅವಮಾನವೆಂದು ಭಾವಿಸುವ ಹೆಂಗಸರೂ ಗಂಡಸರೂ ಇದ್ದಾರೆ.



ವಿವಿಧ ಆಭರಣಗಳು

ಜನಪದ ಆಭರಣಗಳನ್ನು ಮನುಷ್ಯರ ಆಭರಣಗಳು ಹಾಗೂ ಪ್ರಾಣಿ (ಸಾಕು) ಗಳ ಆಭರಣಗಳು ಎಂದು ಎರಡು ಪ್ರಮುಖ ಗುಂಪುಗಳನ್ನಾಗಿ ವಿಭಜಿಸಿಕೊಂಡು ವಿವೇಚಿಸಬಹುದು. ಮತ್ತೆ ಮನುಷ್ಯರ ಆಭರಣಗಳನ್ನು ಪುರುಷರ ಆಭರಣಗಳು, ಸ್ತ್ರೀಯರ ಆಭರಣಗಳು ಮತ್ತು ಮಕ್ಕಳ ಆಭರಣಗಳು ಎಂದು ಮೂರು ಗುಂಪುಗಳನ್ನಾಗಿ ಮಾಡಿಕೊಂಡು ವಿವೇಚಿಸಬಹುದು.

ಜಾನುವಾರು ಆಭರಣಗಳನ್ನು ಜನಪದ ಸಮಾಜಗಳಲ್ಲಿ ಕಾಣಬಹುದೆ ಹೊರತು ಶಿಷ್ಟ ನಾಗರಿಕ ಸಮಾಜಗಳಲ್ಲಿ ಕಾಣುವುದು ದುರ್ಲಭವೆಂದೆ ಹೇಳಬೇಕು. ಜನಪದರಿಗೆ ತಾವು ಸಾಕಿದ ಅಚ್ಚುಮೆಚ್ಚಿನ ಪ್ರಾಣಿಗಳು ಪ್ರಾಣಕ್ಕಿಂತಲೂ ಮಿಗಿಲು. ಆದ್ದರಿಂದಲೇ ಪ್ರಾಣಿ ಸಂಬಂಧವಾದ ವಿಶಿಷ್ಟ ಒಡವೆಗಳನ್ನ ಕಾಣಲು ಸಾಧ್ಯವಾಯಿತು. ಉದಾಹರಣೆಗೆ ಟಗರಿನ ನುಲಿಕೆಕೊಂಬಿನ ತುದಿಯಲ್ಲಿ ತೂತು ಮಾಡಿ ಕಟ್ಟುವ ಗಲ್‌ಗಲ್ ಶಬ್ದದ ಗೆಜ್ಜೆಗೊಂಚಲು, ಕಪ್ಪು ದಂಡೆ ಹಾಗಿ ಕೊರಳಿಗೆ ಕಟ್ಟುವ ಟಣ್ ಟಣೆ ಟಣೆ ಟಣ್ ಶಬ್ದದ ಕಿರುಗಂಟೆಗಳನ್ನು ಹೆಸರಿಸಬಹುದು. ಹಾಗೆಯೆ ಹೋರಿ ಮತ್ತು ಎತ್ತುಗಳ ಕೊಂಬಿನ ತುದಿಗೆ

ಹಾಕುವ ಸಾದಾ ಕೋಡಣಸುಗಳು, ಕಲಾತ್ಮಕ ಕೆತ್ತನೆಯ ಕೊಂಬಿನ ಕಳಸಗಳು ಹಾಗೂ ಕಪ್ಪುಕೂದಲ ದಂಡೆ ಮತ್ತು ಹಿತ್ತಾಳೆ ಸರಪಳಿಯನ್ನು ಒಟ್ಟಿಗೆ ನುಲಿದು ಕೊರಳಿಗೆ ಕಟ್ಟುವ ಗಳಗಂಟೆ, ಶಂಕು, ಗಗ್ಗರ, ಮಾಗಾಯಿ ಮುಂತಾದ ಆಭರಣಗಳನ್ನು ಹೆಸರಿಸಬಹುದು.

ಮಕ್ಕಳ ಆಭರಣಗಳಲ್ಲಿ ತಲೆಗೆ ಸಂಬಂಧಪಟ್ಟವು ಇರುವುದಿಲ್ಲ. ಏಕೆಂದರೆ ಇನ್ನೂ ಕೂದಲು ಅಲಂಕಾರ ಮಾಡುವಷ್ಟು ಸಮೃದ್ಧವಾಗಿ ಹುಟ್ಟಿರುವುದಿಲ್ಲ; ಹೊರವಾಗಿ ಬೆಳೆದಿರುವುದಿಲ್ಲ. ಆದ್ದರಿಂದ ಮಕ್ಕಳ ಒಡವೆಗಳು ಏನಿದ್ದರೂ ಕಿವಿ, ಕೊರಳು, ಸೊಂಟ, ಕಾಲು, ಕೈ, ಕೈಬೆರಳುಗಳಿಗೆ ಸಂಬಂಧಪಟ್ಟಂಥವು ಎನ್ನಬಹುದು. (1) ಕಿವಿ: ಚುಚ್ಚುಮುರ ಚಿನ್ನದ್ದು. (2) ಕೊರಳು: ಚೈನು, ತಾಯಿತ, ಸಂದುತಾಲಿ, ಕರಿವಿಳಿ ಇತ್ಯಾದಿ. (3) ಸೊಂಟ: ಉಡಿದಾರ (ಬೆಳ್ಳಿ ಉಡಿದಾರ, ಚಿನ್ನದ ಉಡಿದಾರ, ಗೆಜ್ಜೆ ಉಡಿದಾರ), ಅರಳೆಲೆ, ಮಾಗಾಯಿ. (4) ಕೈ: ಬದ್ದು, ಕಪ್ಪಕ, ಕೈಕಟ್ಟು (ಹವಳ, ಬಂಗಾರ), ಕೈಕಡಿ ಹವಳ, (ಬಂಗಾರ ಅಥವಾ ಬೆಳ್ಳಿ). (5) ಕೈಬೆರಳು: ಉಂಗುರ (6) ಕಾಲು: ಗೊಲಸು, ಗೆಜ್ಜೆ, ಕಾಲಂದುಗೆ, ಚೈನು ಇತ್ಯಾದಿ. ಹೆಣ್ಣುಮಕ್ಕಳಿಗೂ ಗಂಡುಮಕ್ಕಳಿಗೂ ಸಮಾನವಾದ ಆಭರಣಗಳು ಕಂಡುಬರುತ್ತವೆ. ಒಂದೇ ಒಂದು ಎದ್ದು ತೋರುವ ವ್ಯತ್ಯಾಸವೆಂದರೆ ಅರಳೆಲೆ (ಅರಳಿ ಎಲೆಯಾಕಾರದ್ದು) ಮಾತ್ರ ಹೆಣ್ಣುಮಗುವಿಗೆ; ಮೀಸಲಾದದ್ದು, ಮಾಗಾಯಿ ಗಂಡುಮಗುವಿಗೆ ಮೀಸಲಾದದ್ದು. ಈ ಎರಡು ಆಭರಣಗಳನ್ನು ಬಿಟ್ಟರೆ ಉಳಿದುವೆಲ್ಲ ಒಂದೇ ರೀತಿಯದಾಗಿರುತ್ತವೆ.

ಪುರುಷರ ಆಭರಣಗಳು ಸ್ತ್ರೀಯರ ಆಭರಣಗಳಿಗಿಂತ ಸಂಖ್ಯೆಯಲ್ಲಿ ಕಡಿಮೆ. ಮೂಗು ಮತ್ತು ತಲೆಗೆ ಸಂಬಂಧಪಟ್ಟಂತೆ ಆಭರಣಗಳು ಇರುವುದಿಲ್ಲ. (1) ಕಿವಿ: ಮುರ, ಮುತ್ತಿನಮುರ, ಮೇಟಿಮುರ, ಬಾವಲಿ, ಹತ್ತೊಂಟಿ ಇತ್ಯಾದಿ. (2) ಕೊರಳು: ತಾಯಿತ, ಹುಲಿತಾಯಿತ, ತಾಬೀಜು, ಕರಿವಿಳೆ ಚೈನು, ಕಡ್ಲಿಸರ ಇತ್ಯಾದಿ. (3) ತೋಳು: ತೋಳ್ಬಳೆ, ತೋಡ, (4) ಕೈ: ಬದ್ದು, ಕಪ್ಪ, ನುಲಿಕೆಕಪ್ಪ (ಬೆಳ್ಳಿ, ಚಿನ್ನ), ಬಿರುದು (ಬೆಳ್ಳಿ, ಚಿನ್ನ). (5) ಸೊಂಟ: ಉಡಿದಾರ (ಬೆಳ್ಳಿ, ಚಿನ್ನ), ನೇವಳ, ಕಾಯದ ಉಡಿದಾರ. (6) ಕೈಬೆರಳು: ಉಂಗುರ. (7) ಕಾಲ್ಬೆರಳು: ಗಂಡುಮಿಂಚು.

ನೆತ್ತಿಸುಳಿಯಿಂದ ಕಾಲ್ಬೆರಳಿನವರೆಗೂ ಹೆಣ್ಣಿಗೆ ಒಡವೆಗಳುಂಟು ಒಂದೊಂದು ಒಡವೆ ದೊಡ್ಡದೊಂದುಕುಕ್ಕೆ ತುಂಬುವಷ್ಟಿರುತ್ತದೆ ಎಂದಾಗ ಆಕೆ ಧರಿಸುವ ಒಡವೆಗಳ ಆಧಿಕ್ಯ ಅರಿವಾಗುತ್ತದೆ ಎನ್ನಿಸುತ್ತದೆ. (1) ತಲೆ: ಹಣಿಸರ, ಹೂವ, ಚಂದ್ರಕಾಳಿಹೂವ, ನಾಗರು, ರಾಗಟೆ, ಜಡೆಬಿಲ್ಲೆ, ಸಾವಂತಿಗೆ ಹೂ, ಚೌಲಿ ತುಂಬು, ಜಡೆಕುಚ್ಚು, ಬೈತಲೆಮಣಿ ಇತ್ಯಾದಿ. (2) ಕಿವಿ: ಅಂಚಿನೋಲೆ (ಸಣ್ಣಂಚಿನೋಲೆ, ದೊಡ್ಡಂಚಿನೋಲೆ, ಗುಬ್ಬಂಚಿನೋಲೆ), ಕುಡಿಕೆ ಓಲೆ, ನಕಾಸದೋಲೆ, ಹರಳೋಲೆ, ಬೆಂಡೋಲೆ, ಕೆನ್ನೆಸರಪಣಿ, ಬುಗಡಿ, ಸಿಂಹದಮುರ, ಲವಂಗದ ಹೂ, ಬುರಿಗೆಬಟ್ಟು, ಕುಂಡಲ್ಲಿ ಮೀನ ಇತ್ಯಾದಿ. (3) ಮೂಗು: ನತ್ತು, ಮೂಗುನತ್ತು, ಮೂಗುಬೊಟ್ಟು, ಟಿಕಳಿ, ಬೇಸರಿ, ಮುತ್ತಿನ ಮುಕುರ, ಬುಲಾಕು ಇತ್ಯಾದಿ. (4) ಕೊರಳು: ತಾಳಿ, ಐತಾಳಿ, ಸರಿಗಿ, ಹಾರ, ಚಪಲಹಾರ, ಮುತ್ತಿನಹಾರ, ಟಿಕ್ಕೆ, ಗುಂಡಟಿಕ್ಕೆ, ಗೆಜ್ಜೆಟಿಕ್ಕೆ, ಪುತಳಿಸರ, ಜೋಮಾಲೆಸರ, ಕಾಸಿನಸರ, ಮಾವಿನಕಾಯಿಸರ, ಅಡ್ಡಿಕೆ, ಕಟ್ಟಾಣಿ, ಚಿಂತಾಕ, ಕಂಠಿ, ಟೀಕು, ಗುಂಡು, ದೊಡ್ಡಗುಂಡು, ಸಣ್ಣಗುಂಡು, ಮೂರೆಳೆಗುಂಡು, ಬಾಸಿಂಗದ ತಾಲಿ, ದೇವರತಾಲಿ, ಐರ್ದಾಲಿ ಇತ್ಯಾದಿ. (5) ತೋಳು: ಬಂದಿ, ನಾಗಮುರಿಗೆ, ನರಿಗೆ, ವಂಕಿ, ಬಾಜೂಬಂದು ಇತ್ಯಾದಿ. (6) ಕೈ: ಬಂದಳಿ, ಬಳೆ, ಕಡಗ, ಮುರಿ, ದುಂಡುಮುರಿ, ಪಟ್ಟೆಮುರಿ ಟೊಳ್ಳುಮುರಿ, ಗಟ್ಟಿಮುರಿ ಇತ್ಯಾದಿ. (7) ಸೊಂಟ: ನಡಿನಪಟ್ಟಿ, ನಡಿನಹಾರ, ವಜ್ರಪಟ್ಟಿ, ಡಾಬು, ಸಾದಾಡಾಬು, ಗೆಜ್ಜೆಡಾಬು, ವಂಕಿಡಾಬು (ಬೆಳ್ಳಿ, ಚಿನ್ನ). (8) ಕಾಲು: ಪೈಜಣ, ತೋಡ, ಸಣ್ಣತೋಡ, ದೊಡ್ಡತೋಡ, ಮುರುಗಿತೋಡ, ಕಾಲ್ಕಡಗ, ಕಾಲ್ಗೆಜ್ಜೆಸರ, ಕಾಲಂದುಗೆ, ರುಳಿ, ಚೈನು. (9) ಕಾಲ್ಬೆರಳು: ಕಾಲುಂಗುರ, ಸುತ್ತುಂಗರ, ಪಿಲ್ಲಿ, ಕಿರಿಪಿಲ್ಲಿ, ಹಿರಿಪಿಲ್ಲಿ ಮಿಂಚು ಇತ್ಯಾದಿ. (10) ಕೈಬೆರಳು: ಉಂಗುರ, ಬೆಳ್ಳಿ ಉಂಗುರ, ಚಿನ್ನದ ಉಂಗುರ.

ಕರ್ನಾಟಕದ ಆಭರಣಗಳ ವೈಶಿಷ್ಟ್ಯ ವೈವಿಧ್ಯ ಬೆರಗುಗೊಳಿಸುವಂಥದು. ಐತಿಹಾಸಿಕ ಯುಗದಲ್ಲಿ ಸಮಾಜದ ಸಂಪತ್ತು, ಶ್ರೀಮಂತವರ್ಗಗಳು ಬೆಳೆದಂತೆಲ್ಲಾ ಆಭರಣಗಳ ಉಪಯೋಗವೂ ಹೆಚ್ಚುತ್ತ ಬಂತು. ಹೊಯ್ಸಳರ ಕಾಲದ ಶಿಲ್ಪಗಳಲ್ಲಿ ಕಂಡುಬರುವ ಸರ, ಒಡ್ಯಾಣ, ತೋಳುಬಂದಿ ಇವುಗಳ ವೈವಿಧ್ಯವನ್ನೇ ಗಮನಿಸಬಹುದು. ಅವುಗಳ ಅಸಂಖ್ಯಾತ ಮಾದರಿಗಳು ಆಭರಣ ತಯಾರಿಯ ಕಲೆ ಎಷ್ಟರ ಮಟ್ಟಿಗೆ ಪ್ರವರ್ಧಮಾನವಾಗಿತ್ತೆಂಬುದನ್ನು ಸೂಚಿಸುತ್ತದೆ. ಸಹಜವಾಗಿ ಆಭರಣಗಳನ್ನು ತಯಾರು ಮಾಡುವುದೇ ಒಂದು ವೃತ್ತಿಯಾಗಿ ಮಾಡಿಕೊಂಡ ಒಂದು ವರ್ಗವೇ ಬೆಳೆದಿತ್ತು. ಈ ಅಕ್ಕಸಾಲಿಗರ ಪ್ರಸ್ತಾಪ ಹಲವಾರು ಶಾಸನಗಳಲ್ಲಿ ಬರುತ್ತವೆ. ಹಾಗೆಯೆ ಆಭರಣಗಳ ತಯಾರಿಕೆಗೆ ಆವಶ್ಯಕವಾದ ಚಿನ್ನ, ಹರಳು ಕಲ್ಲುಗಳು ಮೊದಲಾದ ಸ್ಥಳೀಯ ವಸ್ತುಗಳನ್ನೂ ಬೆಳ್ಳಿ ಮತ್ತು ಗೋಮೇಧಿಕ, ಪುಷ್ಯರಾಗ ಮತ್ತಿತರ ಹೊರನಾಡುಗಳಿಂದ ಬರುವ ವಸ್ತುಗಳನ್ನೂ ತಯಾರಾದ ಆಭರಣಗಳನ್ನೂ ಮಾರುವ ಶ್ರೀಮಂತವರ್ತಕರ ಪ್ರಸ್ತಾಪ ಸಹ ಶಾಸನ, ಕಾವ್ಯಗಳಲ್ಲಿ ಕಂಡುಬರುತ್ತವೆ. ಇಂದೂ ಆಭರಣಗಳ ಉಪಯೋಗ ಕಡಿಮೆಯಾಗಿಲ್ಲ. ಆಭರಣಗಳ ತಯಾರಿ ಒಂದು ವ್ಯಾಪಕವಾದ ಉದ್ಯಮವಾಗಿದೆ. (ಎಸ್‌ಯು.)

**ಆಭೀರರು :** ಮೂಲತಃ ಸಿಂಧು ದೇಶದ ನಿವಾಸಿಗಳಾಗಿದ್ದು ಕ್ರಮೇಣ ಇತರೆಡೆಗಳಿಗೆ ಹರಡಿ 3ನೆಯ ಶತಮಾನದ ಹೊತ್ತಿಗೆ ಉತ್ತರ ದಖನ್ನಿನಲ್ಲಿ ರಾಜ್ಯ ಸ್ಥಾಪನೆ ಮಾಡಿದ್ದ ಒಂದು ಜನಾಂಗ. ಕರ್ನಾಟಕದಲ್ಲಿ ಆಭೀರರು ಕದಂಬ ಮಯೂರಶರ್ಮನ ಸು.350ರ ಚಂದ್ರವಳ್ಳಿಯ ಶಾಸನದಲ್ಲಿ ಮೊದಲಾಗಿ ಕಾಣಿಸಿಕೊಳ್ಳುತ್ತಾರೆ. ಮಯೂರಶರ್ಮ ಅಂದು ಪ್ರಾಯಶಃ ಅವನ ರಾಜ್ಯದ ಉತ್ತರದಲ್ಲಿ ಆಳುತ್ತಿದ್ದ ಆಭೀರರ ಮೇಲೆ ಜಯಗಳಿಸಿದಂತೆ ತೋರುತ್ತದೆ. ಮುಂದಿನ ಏಳು ಶತಮಾನಗಳಲ್ಲಿ ಆಭೀರರ ಪ್ರಸ್ತಾಪ ಇಲ್ಲಿಯ ಐತಿಹಾಸಿಕ ದಾಖಲೆಗಳಲ್ಲಿ ದೊರಕುವುದಿಲ್ಲ. ಪುನಃ ಹನ್ನೊಂದನೆಯ ಶತಮಾನದ ಮಧ್ಯಭಾಗದಲ್ಲಿ ಚಾಳುಕ್ಯ 1ನೆಯ ಸೋಮೇಶ್ವರನ ಸೇನಾನಿ ಆಭೀರರ ಮೇಲೆ ಜಯಗಳಿಸಿದನೆಂದು ನಾಗಾವಿ ಶಾಸನ, ಸೋಮೇಶ್ವರನಿಗೆ ಇವರು ಕಪ್ಪಕಾಣಿಕೆಗಳನ್ನು ಅರ್ಪಿಸಿದರೆಂದು ಕುಲ್ಲು ಮಠದ ಶಾಸನ, ಆರನೆಯ ವಿಕ್ರಮಾದಿತ್ಯನ ಸೇನಾಪತಿ ಶ್ರೀವಲ್ಲಭನಿಂದ (1084) ಮತ್ತು ವಿಕ್ರಮಾದಿತ್ಯನ ತಮ್ಮ ವಿಕ್ರಮಾಂಕನಿಂದ (1114) ಇವರು ಪರಾಭವ ಹೊಂದಿ ಆನೆ ಮತ್ತು ಕುದುರೆಗಳನ್ನು ವಿಕ್ರಮಾದಿತ್ಯನಿಗೆ ಕಾಣಿಕೆಯಾಗಿ ಅರ್ಪಿಸಿದರೆಂದು ಬಳ್ಳಿಗಾವೆ ಶಾಸನ ಇವು ತಿಳಿಸುತ್ತವೆ. 1179ರಲ್ಲಿ ಕಳಚುರಿ ಸಂಕಮನಿಗೆ ಗಜಗಳನ್ನು ಕೊಡುಗೆಯಾಗಿ ಇತ್ತರು. ಆಭೀರ ಒಡೆಯನಾದ ಜೈತುಗಿ 2ನೆಯ ಸಿಂಘಣನ ಸಾಮಂತನಾಗಿದ್ದನೆಂದು 1215ರ ಒಂದು ಶಾಸನ ತಿಳಿಸುತ್ತದೆ. ಕೃಷ್ಣ ದೇವರಾಯನ ಆಮುಕ್ತಮಾಲ್ಯದಾ ಕಾವ್ಯದಲ್ಲಿ ಇವರು ಗಿರಿಜನವರ್ಗದವರೆಂದು ಪರಿಗಣಿತರಾಗಿದ್ದಾರೆ. (ಎ.)

**ಆಮೂರ, ಜಿ.ಎಸ್. :** 1925-. ಕನ್ನಡದ ಪ್ರಸಿದ್ಧ ವಿಮರ್ಶಕರು. ಗುರುರಾಜ ಶಾಮಾಚಾರ್ಯ ಆಮೂರ ಇವರ ಪೂರ್ಣ ಹೆಸರು. ಧಾರವಾಡ ಜಿಲ್ಲೆ ಶಿರಹಟ್ಟಿ ತಾಲ್ಲೂಕಿನ ಹೂರಣಗಿಲ್ಲಿಯಲ್ಲಿ 1925 ಮೇ 8ರಂದು ಜನಿಸಿದರು. ತಂದೆ ಶಾಮಾಚಾರ್ಯ, ತಾಯಿ ಗಂಗಾದೇವಿ. ಇಂಗ್ಲಿಷ್ ಎಂ.ಎ. ಪದವೀಧರರಾದ ಆಮೂರ ಅವರು ಕುಮಟ, ಗದಗ ಹಾಗೂ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯಗಳಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿ ಕೆಲಸ ಮಾಡಿ ಔರಂಗಾಬಾದಿನ ಮರಾಠಾವಾಡ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ವಿಭಾಗದ ಮುಖ್ಯಸ್ಥರಾಗಿ ಅನೇಕ ವರ್ಷಗಳ ಕಾಲ ಸೇವೆ ಸಲ್ಲಿಸಿ ನಿವೃತ್ತರಾಗಿ ಈಗ ಧಾರವಾಡದಲ್ಲಿ ನೆಲಸಿದ್ದಾರೆ.

ಆಮೂರ ಅವರು ಕಳೆದ ಅರ್ಧ ಶತಮಾನದಿಂದ ಕನ್ನಡ ವಿಮರ್ಶೆಯ ಉತ್ಕರ್ಷಕ್ಕಾಗಿ ಶ್ರಮಿಸುತ್ತ ಬಂದಿದ್ದಾರೆ. ಇವರು ವಿದ್ಯಾರ್ಥಿ ದೆಸೆಯಲ್ಲಿಯೇ ಕಾರಂತರ ಕಾದಂಬರಿಗಳ ಬಗ್ಗೆ ವಿಮರ್ಶೆ ಬರೆದು ಬಹುಮಾನ ಪಡೆದಿದ್ದರು (1943). ಕನ್ನಡ ಹಾಗೂ ಇಂಗ್ಲಿಷ್ ಈ ಎರಡೂ ಭಾಷೆಗಳು ಸೇರಿದಂತೆ 40 ವಿಮರ್ಶಾ ಗ್ರಂಥಗಳನ್ನೂ 500ಕ್ಕೂ ಹೆಚ್ಚು ವಿಮರ್ಶಾ ಲೇಖನಗಳನ್ನೂ ಬರೆದಿದ್ದಾರೆ. ಆಳವಾದ ಅಧ್ಯಯನ, ಪ್ರತಿಭೆ, ಪಾಂಡಿತ್ಯ ಕ್ಷೇತ್ರದಲ್ಲಿ ಮಹತ್ವ ಗಳಿಸಿದ್ದು, ವಿದ್ವಾಂಸರ ಆದರಕ್ಕೂ ಪಾತ್ರವಾಗಿದೆ.

ಆಮೂರ ಅವರ ವಿಮರ್ಶೆ ನಾಲ್ಕು ಸ್ತರಗಳಲ್ಲಿ ಪ್ರಕಟಗೊಂಡಿದೆ. ಕನ್ನಡ ಸಾಹಿತ್ಯ ವಿಮರ್ಶೆ, ಇಂಗ್ಲಿಷ್‌ನಲ್ಲಿ ಬಂದ ಭಾರತೀಯ ಸಾಹಿತ್ಯ, ಅಮೆರಿಕನ್ ಸಾಹಿತ್ಯ ಹಾಗೂ ಕನ್ನಡ ಸಾಹಿತ್ಯಕ್ಕೆ

ಸಂಬಂಧಿಸಿದಂತೆ ಇಂಗ್ಲಿಷ್‌ನಲ್ಲಿ ವಿಮರ್ಶೆ. ತಾತ್ವಿಕ ಮತ್ತು ಆನ್ವಯಿಕ ಅಧ್ಯಯನವೇ ಇವರ ವಿಮರ್ಶನ ಕೃತಿಗಳಲ್ಲಿ ಕಾಣುವ ಮುಖ್ಯ ಆಸ್ತಿಯಾಗಿವೆ. ಮಹಾಕವಿ ಮಿಲ್ಟನ್ (1958), ಕೃತಿಪರೀಕ್ಷೆ (1970), ಸಮಕಾಲೀನ ಕಥೆ, ಕಾದಂಬರಿ (1988), ಭುವನದ ಭಾಗ್ಯ (1991), ವ್ಯವಸಾಯ (1992), ಕಾಮಿಡಿ (1993), ಕನ್ನಡ ಕಥನ ಸಾಹಿತ್ಯ ಕಾದಂಬರಿ (1994), ಸಾತ್ವಿಕ ಪಥ (1995), ಆಧುನಿಕ ಕನ್ನಡ ಸಾಹಿತ್ಯ ವಿರಾಟ್ ಪುರುಷ (1998), ಕಾದಂಬರಿಯ ಸ್ವರೂಪ ಹೊಸ ಚಿಂತನೆ (1999), ದತ್ತಾತ್ರೇಯ ರಾಮಚಂದ್ರ ಬೇಂದ್ರೆ (2000), ಬೇಂದ್ರೆ ಕಾವ್ಯದ ಪ್ರತಿಮಾ ಲೋಕ (2000), ಅಮೃತವಾಹಿನಿ (2000), ಸೀಮೋಲ್ಲಂಘನ (2002), ಕನ್ನಡ ಸಣ್ಣಕಥೆ (2003) - ಇವು ಇವರ ಕೆಲವು ಪ್ರಮುಖ ವಿಮರ್ಶನ ಕೃತಿಗಳು. ಇವರ ವಿಮರ್ಶೆಯಲ್ಲಿ ಕನ್ನಡ ಕಥನ ಸಾಹಿತ್ಯ ಸಣ್ಣಕಥೆ ಮತ್ತು ಕಾದಂಬರಿಗಳ ಕುರಿತಾದ ಕೃತಿನಿಷ್ಠ ವಿಮರ್ಶೆ ಪ್ರಮುಖವಾದದ್ದು. ಕನ್ನಡ ಕಥನ ಪರಂಪರೆ ವಾಸ್ತವವಾದಿ ನೆಲೆಯಲ್ಲಿ ಬೆಳೆದಿದೆ ಎಂಬ ಆಲೋಚನೆಯನ್ನು ಆಮೂರರು ವಿಸ್ತಾರವಾಗಿ ಚರ್ಚಿಸಿದ್ದಾರೆ. ತಮ್ಮ ವಿಮರ್ಶೆಗೆ ಸಂಶೋಧನೆಯಂತೆ ಆಧಾರ, ಆಕರ ಸಾಮಗ್ರಿಯನ್ನು ಒದಗಿಸಿ ಕೃತಿ ಪರೀಕ್ಷೆ ನಡೆಸಿ ವಸ್ತುನಿಷ್ಠ ದೃಷ್ಟಿಯಿಂದ ಪರಿಶೀಲಿಸಿ ವಿಮರ್ಶನ ಅಭಿಮತ ರೂಪಿಸುವುದು ಆಮೂರರ ವಿಮರ್ಶೆಯ ರೀತಿಯಾಗಿದೆ. ಹಾಗಾಗಿ ಕನ್ನಡ ಸಣ್ಣಕಥೆ ಮತ್ತು ಕಾದಂಬರಿಗಳ ಬಗ್ಗೆ ಇವರ ವಿಮರ್ಶೆ ಅತ್ಯಂತ ಮಹತ್ವದ ಕೊಡುಗೆಯಾಗಿದೆ.



ಬೇಂದ್ರೆಯವರ ಸಾಹಿತ್ಯವನ್ನು ಅದರ ಚಾರಿತ್ರಿಕ ನೆಲೆಯಲ್ಲಿ ಪರಿಶೀಲಿಸಿ, ಬೇಂದ್ರೆ ದರ್ಶನದ ಅಖಂಡತೆಯನ್ನು ವಸ್ತು ಮತ್ತು ಆಕೃತಿಗಳ ವಿಕಾಸಕ್ರಮವನ್ನು ಅಭಿವ್ಯಕ್ತಿಯ ವೈವಿಧ್ಯವನ್ನು ಗುರುತಿಸುವ ವಿಶಿಷ್ಟ ಕಾರ್ಯವನ್ನು ಆಮೂರರು ಭುವನದ ಭಾಗ್ಯ ಎಂಬ ಕೃತಿಯಲ್ಲಿ ಮಾಡಿದ್ದಾರೆ. ಬೇಂದ್ರೆ ಸಾಹಿತ್ಯವನ್ನು ವಸ್ತು ಮತ್ತು ಆಶಯದ ನೆಲೆಯಲ್ಲಿ ಬೆಳಗು, ಓ ಹಾಡೇ, ಮರಳು ಅರಳು, ಪಂಚಾಂಗ ಎಂದು ವಿಭಜಿಸಿ ವಿಶ್ಲೇಷಿಸಿ ಬೇಂದ್ರೆ ಸಾಹಿತ್ಯ ವಿಮರ್ಶೆಗೆ ನೂತನ ಆಯಾಮ ಒದಗಿಸಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದ ವಿರಾಟ್ ಪುರುಷ ಎಂಬುದು ಆಳವಾದ ವಿಮರ್ಶನ ಒಳನೋಟಗಳಿಂದ ಶ್ರೀರಂಗ ಸಾಹಿತ್ಯ ವಿಮರ್ಶೆಯ ಪ್ರಮಾಣ ಗ್ರಂಥವಾಗಿದೆ.

ಆಧುನಿಕ ಕನ್ನಡ ಸಾಹಿತ್ಯವನ್ನು ಇಂಗ್ಲಿಷ್ ಲೋಕಕ್ಕೆ ಪರಿಚಯಿಸಿ ಅದರ ಶ್ರೇಷ್ಠತೆಯ ಸಮಾಲೋಕನ ಮಾಡಿದ ಶ್ರೇಯಸ್ಸು ಆಮೂರರದು. ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಇಂಗ್ಲಿಷ್‌ನಲ್ಲಿ ಇವರು ಬರೆದ ಗ್ರಂಥವನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿದೆ. ಆಮೂರ ಅವರು ಬರೆದ ಇಂಗ್ಲಿಷ್ ಗ್ರಂಥ ಹಾಗೂ ಲೇಖನಗಳು ವಿಪುಲವಾಗಿವೆ. ದಿ ಕಾನ್ಸೆಪ್ಟ್ ಆಫ್ ಕಾಮೆಡಿ ಇವರ ಪಿಎಚ್.ಡಿ. ಮಹಾಪ್ರಬಂಧ. ಮನೋಹರ ಮಳಗಾಂವಕರ, ಆದ್ಯ ರಂಗಾಚಾರ್ಯ, ಡಿ.ಆರ್. ಬೇಂದ್ರೆ ಎ ಕ್ರಿಟಿಕಲ್ ಸ್ಪೆಕ್ಟ್ರಂ, ಎಸ್ಸೆಸ್ ಆನ್ ಕಂಪ್ಯಾರೆಟಿವ್ ಲಿಟರೇಚರ್ ಅಂಡ್ ಲಿಂಗ್ವಿಸ್ಟಿಕ್ಸ್, ಕಾಲೋನಿಯಲ್ ಕಾನ್ಸಿಯಸ್‌ನೆಸ್ ಇನ್ ಕಾಮನ್‌ವೆಲ್ತ್ ಫ್ರೂಟ್, ಸೆಲೆಕ್ಟೆಡ್ ಕನ್ನಡ ಶಾರ್ಟ್ ಸ್ಟೋರೀಸ್, ಪರ್ಸಪ್ಷನ್ಸ್ ಆಫ್ ಮಾಡರ್ನ್ ಇಂಡಿಯನ್ ಲಿಟರೇಚರ್, ಕ್ರಿಟಿಕ್ ಆನ್ ದಿ ರನ್, ಐಡಿಯಾಸ್ ಅಂಡ್ ಇಮೇಜಸ್ ಇವು ಇವರ ಕೆಲವು ಪ್ರಮುಖ ಇಂಗ್ಲಿಷ್ ಕೃತಿಗಳು. ಇಂಗ್ಲಿಷ್‌ನಲ್ಲಿ ಹಾಗೂ ಕನ್ನಡದಲ್ಲಿ ಅಂಕಣಕಾರರಾಗಿಯೂ ಇವರು ಪುಸ್ತಕಗಳ ಬಗ್ಗೆ ವಿಮರ್ಶೆ ಬರೆದಿದ್ದಾರೆ. ಕೃತಿನಿಷ್ಠ ವಿಮರ್ಶೆಯ ಶ್ರೇಷ್ಠ ಮಾದರಿಯನ್ನು ಒದಗಿಸಿದ್ದಾರೆ.

ಇವರಿಗೆ ಅನೇಕ ಗೌರವ ಪ್ರಶಸ್ತಿಗಳು ದೊರೆತಿವೆ. ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಸ.ಸ. ಮಾಳವಾಡ ಪ್ರಶಸ್ತಿ, ಭಾರತೀಯ ಭಾಷಾ ಪರಿಷತ್ ಪ್ರಶಸ್ತಿ, ಬಿ.ಎಚ್. ಶ್ರೀಧರ ಹಾಗೂ ಭುವನದ ಭಾಗ್ಯ ಎಂಬ ಕೃತಿಗೆ ಬೇಂದ್ರೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭ್ಯವಾಗಿವೆ. (ಜಿ.ಎಂ.ಎಚ್.)

**ಆಯತವರ್ಮ** : ಸು.1400. ಜೈನಕವಿ, ರತ್ನಕರಂಡಕ ಎಂಬ ಕನ್ನಡ ಚಂಪೂಗ್ರಂಥದ ಕರ್ತೃ. ವರ್ಧಮಾನ ಸಿದ್ಧಾಂತದೇವನ ಶಿಷ್ಯ.

ರತ್ನಕರಂಡಕದಲ್ಲಿ ಸಮ್ಯಗ್ದರ್ಶನಸ್ವರೂಪ ನಿರೂಪಣ, ಸಮ್ಯಗ್‌ಜ್ಞಾನಸ್ವರೂಪ ನಿರೂಪಣ, ಸಮ್ಯಗ್‌ಚಾರಿತ್ರಸ್ವರೂಪ ನಿರೂಪಣ ಎಂಬ ಮೂರು ಪರಿಚ್ಛೇದಗಳಿವೆ. ಗ್ರಂಥಾವತಾರದಲ್ಲಿ ಚತುರ್ವಿಂಶತಿ ಜಿನರ ಸ್ತುತಿಯಿದೆ. ಗ್ರಂಥಾಂತ್ಯದಲ್ಲಿ ಇದು ಭಗವದರ್ಹತ್ಪರಮೇಶ್ವರ ಪರಮಭಟ್ಟಾರಕ ವೀತರಾಗ ಸರ್ವಜ್ಞವದನ ವನಜಸಮುದ್ಗತ ಸದಸದಾತ್ಮಕ ಪರಮತತ್ತ್ವ ಭಾವನಾಭಾವಿತಸ್ವಾಂತ ಶ್ರೀವರ್ಧಮಾನಸಿದ್ಧಾಂತದೇವ ಚರಣಸರಸೀರುಹ ಸ್ಮರಣ ಪರಿಣತಾಂತಃಕರಣ ಕುಶೇಶಯ ಶ್ರೀಮದಾಯತ ವರ್ಮ ವಿರಚಿತಮಪ್ಪ ರತ್ನಕರಂಡಕದೊಳ್ ಎಂಬ ಗದ್ಯವಿದೆ. ಈ ಗ್ರಂಥದಲ್ಲಿ ಜಿನತತ್ತ್ವಗಳನ್ನು ನೇರವಾಗಿ ಪ್ರತಿಪಾದಿಸಲಾಗಿದೆ. ಇದು ಸಮಂತಭದ್ರನ ಸಂಸ್ಕೃತ ರತ್ನಕರಂಡಕವನ್ನು ಅನುಸರಿಸಿ ಬರೆದ ಕನ್ನಡದ ಸ್ವತಂತ್ರ ಗ್ರಂಥ. ಶಾಸ್ತ್ರಗ್ರಂಥವಾದರೂ ಭಾಷೆ ಸರಳವಾಗಿದೆ, ನೇರವಾಗಿದೆ. ಚತುರಂಗಬಲಮುಮಾಯುಧತತಿಯುಂ ಬರಮಿತ್ತದೈವಮುಂ ಬಂಧುಗಳುಂ ಕ್ಷಿತಯುಂ ನಿಜಭುಜವೀರ್ಯಮುಮತೀತಮಪ್ಪಂದು ಕಾಯಲಾರವು ನರರಂ; ಸಂಸಾರಕರಣಂಗಳೆ ಹಿಂಸಾರುಚಿ ಕಳವು ಪುಸಿ ಪರಸ್ತ್ರೀಗಮನಂ ಮಾಂಸ ಮಧುಮದ್ಯಸೇವನೆ ಸಂಸಯಮೇಂ ದುಃಖಕಾರಣಂಗಳಿವಿನಿತುಂ ಎಂಬ ಪದ್ಯಗಳು ತತ್ತ್ವನಿರೂಪಣೆಯ ಸರಳ ಶೈಲಿಗೆ ನಿದರ್ಶನಗಳಾಗಿವೆ. (ಎಂ.ಎ.)

**ಆಯುಧಗಳು** : ಮಾನವನ ಜೀವನದಲ್ಲಿ ಬಹುಮುಖ್ಯ ಪಾತ್ರ ವಹಿಸುವ ಆಯುಧಗಳ ಬಳಕೆಯ ಇತಿಹಾಸ ಪ್ರಾಗಿತಿಹಾಸ ಕಾಲದಿಂದ ಆರಂಭವಾಗುತ್ತದೆ. ಮೊದಲಿನ ಆಯುಧಗಳೆಲ್ಲ ಕಲ್ಲಿನಲ್ಲಿ ಮಾಡಿದವುಗಳಾದರೆ ಸು.2ನೆಯ ಸಹಸ್ರಮಾನದ ಉತ್ತರಾರ್ಧದಲ್ಲಿ ತಾಮ್ರ, ಕಂಚಿನ ಆಯುಧಗಳೂ ಸುಮಾರು 1ನೆಯ ಸಹಸ್ರಮಾನದಾರಭ್ಯ ಕಬ್ಬಿಣದ ಆಯುಧಗಳೂ ಬಳಕೆಗೆ ಬಂದವು (ನೋಡಿ: ಪ್ರಾಗಿತಿಹಾಸ).

ಕನ್ನಡ ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ ನೂರಾರು ಆಯುಧಗಳ ಹೆಸರುಗಳು ಕಂಡುಬರುತ್ತವೆ. ಆದರೆ ಅವುಗಳಲ್ಲಿ ಕೆಲವು ಆಯುಧಗಳ ಸ್ವರೂಪ, ಉಪಯೋಗ, ಯಾವ ರೀತಿ ಇತ್ತು ಎಂಬ ವಿಷಯ ಈಗ ಅಜ್ಞಾತವಾಗಿಯೇ ಉಳಿದಿದೆ. ಯುದ್ಧದಲ್ಲಿ ಹೆಚ್ಚಿನ ಪಾತ್ರ ವಹಿಸುತ್ತಿದ್ದ ಆಯುಧಗಳಲ್ಲಿ ಬಿಲ್ಲು ಬಾಣಗಳು ಮುಖ್ಯವಾದವು. ಬಿಲ್ಲನ್ನು ತಾಳವೃಕ್ಷ ಅಥವಾ ಬೊಂಬಿನಿಂದ ಮಾಡುತ್ತಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ತಾಳವೃಕ್ಷದ ಬಿಲ್ಲನ್ನು ಕಾರ್ಮುಕ ಎಂದು ಕರೆಯುತ್ತಿದ್ದರು. ಕನ್ನಡಿಗರು ಬಳಸುತ್ತಿದ್ದ ಬಿಲ್ಲುಗಳು ಮೂರಡಿಯಿಂದ ನಾಲ್ಕು ಅಥವಾ ನಾಲ್ಕುವರೆ ಅಡಿ ಎತ್ತರವಾಗಿರುತ್ತಿದ್ದವು. ಬಾಣಗಳನ್ನು ಕಬ್ಬಿಣದಿಂದ ಮಾಡುತ್ತಿದ್ದರು. ಬಿಳಿಯಂಬು, ಕೋಲಂಬು, ಸುಂಗುಲಂಬು ಮೊದಲಾದ ಬಾಣದ ಹಲವಾರು ಪ್ರಭೇದಗಳ ಹೆಸರುಗಳು ಶಾಸನಗಳಲ್ಲಿ ಕಂಡುಬರುತ್ತವೆ. ಪಂಪ ತನ್ನ ಕಾವ್ಯದಲ್ಲಿ ಪಾರೆಯಂಬು, ಕೆಲ್ಲಂಬು, ಕೆತ್ತಂಬು, ನಲ್ಲಂಬು, ಮಸೆಯಂಬು, ಕೆಂಗರಿವೊನೆಯಂಬು, ಬಟ್ಟೆನಂಬು ಮುಂತಾದವುಗಳನ್ನು ಹೆಸರಿಸಿದ್ದಾನೆ. ರನ್ನ ಕವಲಂಬು ಎಂಬ ಬಾಣವೊಂದನ್ನು ಹೇಳುತ್ತಾನೆ. ಬಹುಶಃ ಇದು ಅರ್ಧಚಂದ್ರಾಕೃತಿಯ ಬಾಣವಿರಬಹುದು. ಜನ್ನ ಅಚ್ಚನಗಂಬು ಎಂಬ ಬಾಣವನ್ನು ಹೇಳಿದ್ದಾನೆ. ಕೇಶಿರಾಜ ಬೋಳೆ ಎಂಬ ಬಾಣದ ಹೆಸರನ್ನು ಹೇಳಿದ್ದಾನೆ. ಹರಿಹರ ತನ್ನ ಬೇಡರಕಣ್ಣಪ್ಪ ರಗಳೆಯಲ್ಲಿ ಬೋಳೆಯಂಬನ್ನು ಹೆಸರಿಸುತ್ತಾನೆ. ಇವುಗಳ ಪೂರ್ಣ ವಿವರ ಸಾಕಷ್ಟು ತಿಳಿಯುವುದಿಲ್ಲ. ಖಡ್ಗ ಅಥವಾ ಕತ್ತಿಗೆ, ಕರವಾಳ್ ಮತ್ತು ತೋಳಬಾಳ್ ಎಂಬ ಹೆಸರುಗಳೂ ಇವೆ. ಅಲಗು (ಕಿರುಗತ್ತಿ), ಸಬಳ, ಕೊಂತ (ಮರದ ದಂಡ, ಸುಮಾರು 5, 6 ಅಥವಾ 7 ಹಸ್ತಗಳಷ್ಟು ಉದ್ದವಿರುತ್ತದೆಯೆಂದು ಅರ್ಥಶಾಸ್ತ್ರದಲ್ಲಿ ಹೇಳಿದೆ), ಶಲ್ಯ, ಭಲ್ಯ (ಒಂದು

ರೀತಿಯ ಬಾಣ), ಶೂಲ (ಅನಿರ್ದಿಷ್ಟ ಉದ್ದವಿರುವ ಮೊನಚಾದ ದಂಡ), ಕಣೆಯ (ತ್ರಿಕೋನಾಕಾರದ ಎರಡು ತುದಿಗಳುಳ್ಳ ಲೋಹದ ದಂಡ),ಕರ್ಕಡ



ಆಯುಧಗಳು
ಪ್ರಾಚೀನ (1-11) ; ಮಧ್ಯಕಾಲೀನ (12-18) ; ಈಚಿನ (19-24)

(ಕೈಯಿಂದ ಎಸೆಯುವ ಶೂಲದಂಥ ಆಯುಧ), ಪರಿಘ (ಕಬ್ಬಿಣದ ದಂಡ), ಸುರಿಗೆ (ಒಂದು ಬಗೆಯ ಕತ್ತಿ), ಮುಸಲ (ಖಾದರದಲ್ಲಿ ಮಾಡಿದ ಮೊನಚಾದ ದಂಡ), ತೀರಿಕೆ, ಜಟ್ಟಿಗೆ, ಭಿಂಡವಾಳ (ದಪ್ಪ ತುದಿಯಿರುವ ಕಬ್ಬಿಣದ ದಂಡ), ಈಟಿ (ಭರ್ಜಿಯಂತೆಯೇ ಇರುವ ಆಯುಧ), ಶಕ್ತಿ (ನಾಲ್ಕು ಹಸ್ತಗಳಷ್ಟು ಉದ್ದದ ಲೋಹಾಯುಧ), ಪಂಚರಾಯುಧ, ಅವುತಿ, ಮಾಳಜಿಗೆ, ಪಿಡಿಕುತ್ತು, ತೋಮರ (4 ಅಥವಾ 5 ಹಸ್ತಗಳಷ್ಟು ಉದ್ದವಿರುವ ಬಾಣದಂಥ ತುದಿಯುಳ್ಳ ಆಯುಧ), ಕರ್ಪಣ (ಕೈಯಿಂದ ಎಸೆಯಬಹುದಾದ ಬಾಣ), ಮುಸುಂಡಿ, ಮುದ್ಗರ, ಬಿಟ್ಟೇರು, ಬಕ್ಕಣ, ಉದ್ದುವಾರೆ, ಅಡಾಯುಧ, ಲೌಡಿ (ಉದ್ದನೆಯ ಬಿದರ ಬಡಿಗೆ, ದೊಣ್ಣೆ) ಇವು ಇತರ ಆಯುಧಗಳು. ರಕ್ಷಣೆಗಾಗಿ ಗುರಾಣಿ (ಕೊರಳಿನಿಂದ ಸೊಂಟದವರೆಗೆ ರಕ್ಷಣೆಕೊಡುವ ಸುಮಾರು ಎರಡಡಿ ಉದ್ದ, ಎರಡಡಿ ಅಗಲವಿರುವ ಹಲಗೆ), ಸೀಸಹ, ಬಾಹುರಕ್ಕೆ, ತನುತ್ರ ಎಂಬ ಹಲವಾರು ಬಗೆಯ ಕವಚಗಳು ಉಪಯೋಗದಲ್ಲಿದ್ದುವು. ಕರ್ನಾಟಕದ ಜನ ಯುದ್ಧಗಳಲ್ಲಿ ಮದ್ದು ಗುಂಡನ್ನೂ ಬಳಸುತ್ತಿದ್ದರು. ಇವುಗಳ ಉಪಯೋಗದ ಚಿತ್ರಣ ಹದಿನಾರನೆಯ ಶತಮಾನದಿಂದ ಈಚಿನ ಕಾವ್ಯಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಫಿರಂಗಿ, ಗುಂಡುಗೋವಿ, ಶರಘು ಮುಂತಾದವು ಸಿಡಿಮದ್ದಿನ ಆಯುಧಗಳು.

ದಿನಬಳಕೆಯಲ್ಲಿಯೂ ಕೆಲವು ಸಾಧನಗಳು ಉಪಕರಣಗಳಾಗಿಯೂ ಆಯುಧಗಳಾಗಿಯೂ ಉಪಯೋಗವಾಗುತ್ತಿರುವುದನ್ನು ಗಮನಿಸಬಹುದು. ದೊಣ್ಣೆಗಳು (ಧಾನ್ಯ) ಬಡಿಯಲೂ ಹೊಡೆಯಲೂ ಉಪಯೋಗವಾಗುತ್ತವೆ. ದೊಣ್ಣೆಗಳ ಹಿನ್ನೆಲೆಯಲ್ಲಿಯೇ ಸಿದ್ಧಗೊಂಡಿರುವ ಸಾಧನವಾದ ಕೊಡಲಿ, ಮರದ ಕಾವು, ಲೋಹದ ಕೊಡಲಿ ಇವನ್ನೊಳಗೊಂಡು ಕತ್ತರಿಸಲು, ಸೀಳಲು, ಬಳಸುವ ಆಯುಧ. ಅರ್ಧಚಂದ್ರಾಕಾರದ ಅಲುಗಿನ ಭಾಗವಿದ್ದರೆ ಈ ಸಾಧನವನ್ನು ಚಂದ್ರಾಯುಧವೆಂದು ಕೆಲವು ಕಡೆ ಕರೆಯುತ್ತಾರೆ. ಕೊಡಲಿಗಳಲ್ಲಿ ಕೈಗೊಡಲಿ, ಎಡೆಗೊಡಲಿ, ಪಿಳುಗೊಡಲಿ ಮುಖ್ಯವಾದವು. ಕಡಿಯುವ, ಇರಿಯುವ, ಚುಚ್ಚುವ, ಬಗೆಯುವ, ಹೆರೆಯುವ, ಹರಿಯುವ ಚಿಕ್ಕ ಚಿಕ್ಕ ಸಾಧನಗಳೂ ಈ ಗುಂಪಿಗೆ ಸೇರುತ್ತವೆ. ಕ್ಷೌರಿಕನ ಕತ್ತಿ ಮರದ ಹಿಡಿಯನ್ನು ಪಡೆದಿರುತ್ತದೆ. ಕುಡುಗೋಲು ಚಾಕು ಚೂರಿಗಳಿಗೂ ಹಿಡಿಗಳಿರುತ್ತವೆ. ಕುಡುಗೋಲಿನಲ್ಲಿ ಹತ್ತಾರು ಬಗೆಗಳಿವೆ. ಸೊಟ್ಟಗ ಕುಡುಲು, ಉಜ್ಜಗರಿ, ಕೈಗುಡುಲು. ಹರಿಗುಡುಲು, ಜವಣೆಕುಡುಲು ಮುಂತಾದವು ಆಯಾ ಉದ್ದೇಶಕ್ಕೆ ತಕ್ಕಂತೆ ಬೇರೆ ಬೇರೆ ಆಕಾರದಲ್ಲಿರುತ್ತವೆ. ಕುಡುಲಿನ ಜಾತಿಗೆ ಸೇರಿದ, ಇನ್ನೂ ದೊಡ್ಡದಾದದು ಮಚ್ಚು. ಹಬ್ಬಗಳಲ್ಲಿ ಕುರಿಯನ್ನೋ ಕೋಣವನ್ನೋ ಬಲಿಗೊಡಲು ಮಾತ್ರ ಬಳಸುವ ಸಾಧನ ಬಲಿಮಚ್ಚು ಅಥವಾ ಕಂದಲು. ಇದು ಹೆಚ್ಚಾಗಿ ಕತ್ತರಿಸಲು ಉಪಯೋಗಿಸುವ ಸಾಧನ. ಚಾಕುಗಳಲ್ಲೂ ಅನೇಕ ಆಕಾರದವಿವೆ. ರೈತರು ಬಳಸುವ ಸಾಧನಗಳಲ್ಲಿ ವ್ಯವಸಾಯ ಹಾಗೂ ಮನೆಬಳಕೆಯ ಆಯುಧಗಳೂ ಇವೆ. ಹಾರೆ, ಗುದ್ದಲಿ, ಪಿಕಾಸಿ, ಬಾಚಿ, ಗುಳ, ಗುಳಕೊಕ್ಕೆ, ಕಳೆಗುಡ್ಲು, ಕೈಬಾಚಿ, ಕುಡ್ಲು, ಕೂಡ್ಲಿ, ಕೋಲುಗತ್ತಿ ಮುಂತಾದವು ಮುಖ್ಯವಾದವು. ಕಳ್ಳರು ಕನ್ನಗತ್ತಿ ಎಂಬ ಆಯುಧವನ್ನು ಮನೆಗಳಿಗೆ ಕನ್ನ ಹಾಕಲು ಬಳಸುತ್ತಿದ್ದರಂತೆ. ವಿವಿಧ ಕಾರ್ಯಗಳಿಗಾಗಿ ಉಪಯೋಗಿಸುವ ಇನ್ನೂ ಹಲವಾರು ಉಪಕರಣಗಳು ಕರ್ನಾಟಕದಲ್ಲಿ ಬಳಕೆಯಲ್ಲಿವೆ.

ಆಯುಧಗಳ ಮಹತ್ತ್ವವನ್ನು ಅರಿತಿದ್ದ ಕರ್ನಾಟಕದ ಜನರಲ್ಲಿ 'ಆಯುಧ ಪೂಜೆ' ಒಂದು ವಿಶಿಷ್ಟ ಆಚರಣೆಯಾಗಿ ಬೆಳೆದುಬಂದಿದೆ. ಕೆಲವೆಡೆ ಹಳ್ಳಿಗಳಲ್ಲಿ ಸಂಕ್ರಾಂತಿ ಹಬ್ಬದ ದಿನ ತಾವು ಉಪಯೋಗಿಸುವ ಎಲ್ಲ ವ್ಯವಸಾಯ ಸಾಧನಗಳನ್ನೂ ಆಯುಧ ವಿಶೇಷಗಳನ್ನೂ ಇಟ್ಟು ಪೂಜಿಸುವ ಸಂಪ್ರದಾಯ ರೂಢಿಯಲ್ಲಿದೆ. (ನೋಡಿ: ಹಬ್ಬಗಳು). *

**ಆಯ್ದಕ್ಕಿ ಮಾರಯ್ಯ :** 12ನೆಯ ಶತಮಾನದಲ್ಲಿದ್ದ ವಚನಕಾರ, ಕರ್ನಾಟಕದಲ್ಲಿ ನಡೆದ ಧಾರ್ಮಿಕ ಮಹಾಕ್ರಾಂತಿ ಮಂಥನದಲ್ಲಿ ಉದ್ಭವಿಸಿದ ಅನೇಕ ಶರಣರಲ್ಲಿ ಒಬ್ಬ. ರಾಯಚೂರು ಜಿಲ್ಲೆಯ ಅಮರೇಶ್ವರ ಈತನ ಜನ್ಮಸ್ಥಳ. ಸತಿ ಲಕ್ಕಮ್ಮ. ಬನವಾಸಿಯ ಮಧುಕೇಶ್ವರ ಮಂದಿರದ ಶಿಲಾಮಂಟಪದ ಗಗ್ಗರಿ ಕಲ್ಲಿನಲ್ಲಿ ಕೆತ್ತಿದ ಶರಣರ ವಿಗ್ರಹಗಳ ಕೆಳಗೆ ಈತನ ಹೆಸರು ಕಂಡುಬರುತ್ತದೆ.

ಶಿವನನ್ನು ಒಲಿಸಿಕೊಳ್ಳಲು ಭಕ್ತಿ, ಕರ್ಮ, ಜ್ಞಾನ, ವೈರಾಗ್ಯಗಳಲ್ಲಿ ಕರ್ಮಮಾರ್ಗವೇ ಶ್ರೇಷ್ಠವೆಂದು ತಿಳಿದಿದ್ದ. ಕಾಯಕ ಸದ್ಭಾವತಿಂದೊಡ ಗೊಂಡ ಲೋಕಜೀವನವೇ ಶಿವನ ಪ್ರಪಂಚವೆಂದು ನಂಬಿ ನಡೆದ ಶಿವಶರಣ. ಈತನ ದೃಷ್ಟಿಯಲ್ಲಿ ಸತ್ಯ ಶುದ್ಧ ಕಾಯಕದ ಫಲ, ಗುರುಲಿಂಗ ಜಂಗಮ ಪೂಜಾಫಲ. ಕಲ್ಯಾಣದಲ್ಲಿ ಅಕ್ಕಿಯಾಯ್ದು, ತನ್ನ ಪತ್ನಿಯೊಂದಿಗೆ ಶರಣಗಣಕ್ಕೆ ಅನ್ನ ಸಂತರ್ಪಣೆ ನೆರವೇರಿಸುತ್ತಿದ್ದ ಈ

ಶರಣನನ್ನು ಬಡವನೆಂದು ಬಗೆದ ಬಸವಣ್ಣ, ಈತನು ಅಕ್ಕಿ ಆರಿಸುವ ಸ್ಥಳದಲ್ಲಿ ಹೇರಳವಾಗಿ ಅಕ್ಕಿಯನ್ನು ಚೆಲ್ಲಿಸಿದಾಗ ಮನೆಗೆ ಎಲ್ಲವನ್ನು ಆಯ್ದುಕೊಂಡು ಬಂದ. ಆಗ ಇವನ ಸತಿ ಇಂಥ ಕಾಯಕ ಸಲ್ಲದು ಎಂದು ಬೋಧಿಸಿ, ತಂದ ಅಕ್ಕಿಯನ್ನು ತಿರುಗಿಸಲು ಹೇಳಿ, ಆಸೆಯೆಂಬುದು ಅರಸಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ? ಈಸಕ್ಕಿಯಾಸೆ ನಿಮಗೇಕೆ? ಎಂದು 1 ಲಕ್ಷ 93ಸಾವಿರ ಜಂಗಮರಿಗೆ ಭೋಜನ ಬಡಿಸಿ, ಬಸವಣ್ಣನಿಗೆ ಶರಣರ ಸಾಮರ್ಥ್ಯವನ್ನು ತೋರಿಸಿದಳು ಎಂಬ ಪ್ರತೀತಿ ಇದೆ.

ಈತ ಅಮರೇಶ್ವರಲಿಂಗ ಎಂಬ ಅಂಕಿತದಲ್ಲಿ ಸು.58 ವಚನಗಳನ್ನು ಬರೆದಿದ್ದಾನೆ. ಚಿತ್ತ ಮುಟ್ಟಿ ಸೇವೆಯ ಮಾಡುವ ಭಕ್ತರಿಗೆ ಮರ್ತ್ಯ ಕೈಲಾಸವೆಂಬುದುಂಟೇ? ಆತನಿದ್ದುದೇ ಸುಕ್ಷೇತ್ರ; ಕಾಯಕದಲ್ಲಿ ನಿರತನಾದರೆ ಗುರು ದರುಶನವಾದರೂ ಮರೆಯಬೇಕು, ಲಿಂಗ ಪೂಜೆಯಾದರೂ ಮರೆಯಬೇಕು, ಜಂಗಮ ಮುಂದಿದ್ದರೂ ಹಂಗು ಹರಿಯಬೇಕು, ಕಾಯಕವೆ ಕೈಲಾಸವಾದ ಕಾರಣ, ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು ಎಂಬ ವಚನಗಳು ಈತನ ಜೀವನದ ದೃಷ್ಟಿಯನ್ನು ನಿರ್ದೇಶಿಸುತ್ತವೆ. ಈತನ ಸತಿ ಲಕ್ಕಮ್ಮನೂ ಮಾರೇಶ್ವರ ಪ್ರಿಯ ಅಮಲೇಶ್ವರ ಲಿಂಗ ಎಂಬ ಅಂಕಿತವನ್ನಿಟ್ಟುಕೊಂಡು ವಚನಗಳನ್ನು ರಚಿಸಿದ್ದಾಳೆ. (ಎಂ.ಎಸ್.ಐ.)

**ಆರಗ :** ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕಿನಲ್ಲಿ ತೀರ್ಥಹಳ್ಳಿಗೆ 10ಕಿಮೀ ವಾಯುವ್ಯದಲ್ಲಿರುವ ಇತಿಹಾಸಪ್ರಸಿದ್ಧ ಗ್ರಾಮ. ಕಲ್ಲಿನಾಥ, ಬನಶಂಕರಿ, ಅಖಂಡೇಶ್ವರ, ಹನುಮಂತ ಮುಂತಾದ ಪ್ರಾಚೀನ ದೇವಾಲಯಗಳು ಇಲ್ಲಿವೆ. ಹದಿನಾಲ್ಕನೆಯ ಶತಮಾನದಲ್ಲಿ ಇದು ವ್ಯಾಪಾರ ಮತ್ತು ರಾಜಕೀಯ ಚಟುವಟಿಕೆಗಳ ಕೇಂದ್ರವಾಗಿತ್ತು. 1382ರಲ್ಲಿ ಇಲ್ಲಿ ಸಂತೆ ನಡೆಯುತ್ತಿತ್ತೆಂದು ತಿಳಿದುಬರುತ್ತದೆ.

ಈ ಊರು ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಹೊಂಬುಚದ ಸಾಂತರ ರಾಜರ ಅಧೀನದಲ್ಲಿತ್ತು. ಹೊಯ್ಸಳರ ಕಾಲಕ್ಕೆ ಇದು ಪ್ರಮುಖ ಸ್ಥಳವಾಗಿದ್ದಂತೆ ಕಂಡುಬರುತ್ತದೆ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ 3 ಪಟ್ಟಣಗಳು ಮತ್ತು 18 ಕಂಪಣಗಳು ಇದ್ದ ಆರಗವೇಂಠೆ ಅಥವಾ ಆರಗ ರಾಜ್ಯದ ಮುಖ್ಯ ಸ್ಥಳವಾಯಿತು. ಆರಗ ರಾಜ್ಯ ಶಿವಮೊಗ್ಗ, ಶಿಕಾರಿಪುರ, ನಗರ, ತೀರ್ಥಹಳ್ಳಿ, ಸೊರಬ ಮತ್ತು ಕೊಪ್ಪ ತಾಲ್ಲೂಕುಗಳ ಭಾಗಗಳನ್ನು ಒಳಗೊಂಡಿತ್ತು. 1377ರಲ್ಲಿ ಇಮ್ಮಡಿ ಹರಿಹರನ ತಮ್ಮ ಮಾರಪ್ಪ, 1378ರಲ್ಲಿ 1ನೆಯ ಬುಕ್ಕನ ಮಗ ವಿರೂಪಣ್ಣ, 1381ರಲ್ಲಿ 2ನೆಯ ಹರಿಹರನ ಮಗ ಚಿಕ್ಕರಾಯ - ಹೀಗೆ ವಿಜಯನಗರದ ರಾಜಪ್ರತಿನಿಧಿಗಳು ಇಲ್ಲಿಂದ ಆಳುತ್ತಿದ್ದರು. 1403ರಲ್ಲಿ ಇಲ್ಲಿದ್ದ ಪ್ರತಿನಿಧಿ ವಿಟ್ಠಲ. ಅವನ ಅಧೀನಕ್ಕೆ ಆರಗ, ಗುತ್ತಿ, ಬಾರಕೂರು, ಮಂಗಳೂರು ರಾಜ್ಯಗಳೂ ಸೇರಿತ್ತೆಂದು ಶಾಸನದಿಂದ ತಿಳಿದುಬರುತ್ತದೆ. ಇದರಿಂದ ಇಲ್ಲಿನ ರಾಜಕೀಯ ಚಟುವಟಿಕೆ ವಿಜಯನಗರ ಕಾಲದಲ್ಲಿ ಮಹತ್ತರವಾಗಿತ್ತೆಂದು ಹೇಳಬಹುದು.

ಆರಗವೇಂಠೆಯಲ್ಲಿ 59 ಅಗ್ರಹಾರಗಳು, 50 ನಾಡುಗಳು ಇದ್ದಂತೆ ತೋರುತ್ತದೆ. ಸ್ಥಳೀಯ ನ್ಯಾಯತೀರ್ಮಾನ ನಡೆಯುತ್ತಿದ ಸ್ಥಳಕ್ಕೆ ಆರಗ ಚಾವಡಿ ಎಂದು ಹೆಸರಿತ್ತು. ಇಲ್ಲಿನ ಕೆಲವು ಶಾಸನಗಳು ಜಮೀನು ವ್ಯಾಜ್ಯ ತೀರ್ಮಾನ, ತೆರಿಗೆ, ದತ್ತಿ, ಪಟ್ಟಣ ಆಡಳಿತ ಮೊದಲಾದ ವಿಷಯಗಳಿಗೆ ಸಂಬಂಧಿಸಿದೆ. (ಡಿ.ಎಸ್.ಜೆ.)

**ಆರ'ಣಿ :** ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನಲ್ಲಿ ಬೆಳ್ಳೂರಿಗೆ ವಾಯುವ್ಯ ದಿಕ್ಕಿನಲ್ಲಿ 5ಕಿಮೀ ದೂರದಲ್ಲಿರುವ ಒಂದು ಸಣ್ಣ ಗ್ರಾಮ. ಇಲ್ಲಿ ಹೊಯ್ಸಳರ ಕಾಲಕ್ಕೆ ಸೇರಿದ ವೀರಭದ್ರ ದೇವರ ಗುಡಿ ಇದೆ. ಗುಡಿಯಲ್ಲಿ ವೀರಭದ್ರನ ವಿಗ್ರಹವಿದೆ. ಗುಡಿಯ ನವರಂಗದಲ್ಲಿ ಅನೇಕ ವಿಷ್ಣುಮೂರ್ತಿಗಳಿವೆ. ಆರಣಿ ಕೆರೆಯ ದಕ್ಷಿಣ ಪಾರ್ಶ್ವದಲ್ಲಿ ಮಹಿಷಾಸುರಮರ್ದಿನಿಯ ವಿಗ್ರಹವಿದೆ. ಅದರ ಅಡಿಯಲ್ಲಿ ಹೊಯ್ಸಳರ ಕಾಲದ ಒಂದು ಶಾಸನವಿದೆ. ಪಕ್ಕದಲ್ಲೇ ಒಂದು ಗರುಡಸ್ತಂಭವಿದೆ, ಮಹಿಷಾಸುರಮರ್ದಿನಿಯ ವಿಗ್ರಹ ಕಲೆಯ ದೃಷ್ಟಿಯಿಂದ ಒಂದು ಒಳ್ಳೆಯ ಕೃತಿ. (ಕೆ.ಎಸ್.ಎಸ್.)

**ಆರತಿ :** ಭಾವಪೂರ್ಣ ಅಭಿನಯಕ್ಕೆ ಹೆಸರಾಗಿದ್ದ ಕನ್ನಡ ಚಲನಚಿತ್ರ ನಟಿ ಮತ್ತು ನಿರ್ಮಾಪಕಿ. ಗೆಜ್ಜೆಪೂಜೆ ಚಿತ್ರದಲ್ಲಿ ಚಿಕ್ಕ ಪಾತ್ರವೊಂದನ್ನು ಅಭಿನಯಿಸುವ ಮೂಲಕ ಚಿತ್ರರಂಗ ಪ್ರವೇಶಿಸಿದರು. ಕನ್ನಡದಲ್ಲಿ ನೂರಕ್ಕೂ ಹೆಚ್ಚು ಚಿತ್ರಗಳಲ್ಲಿ ಪಾತ್ರವಹಿಸಿದ್ದಾರೆ. ಹೆಸರಾಂತ ನಿರ್ದೇಶಕ ಕಣಗಾಲ್ ಪುಟ್ಟಣ (ನೋಡಿ) ಇವರನ್ನು ಚಿತ್ರರಂಗಕ್ಕೆ ಪರಿಚಯಿಸಿದರು. ಉಪಾಸನೆ, ನಾಗರಹಾವು, ಎಡಕಲ್ಲು ಗುಡ್ಡದ ಮೇಲೆ, ಶುಭಮಂಗಳ, ಕಥಾಸಂಗಮ, ರಾಜ ನನ್ನ ರಾಜ, ಹೊಂಬಿಸಿಲು, ರಂಗನಾಯಕಿ, ಚಿತ್ರಗಳಲ್ಲಿ ಅಪೂರ್ವ ಅಭಿನಯ ನೀಡಿದ್ದಾರೆ. ಕಥಾಸಂಗಮ ಕನ್ನಡ ಚಿತ್ರರಂಗದಲ್ಲಿ ಒಂದು ಹೊಸ ಪ್ರಯೋಗ. ಕನ್ನಡದ ಮೂರು ಪ್ರಸಿದ್ಧ ಕತೆಗಳನ್ನು ಒಂದೇ ಚಿತ್ರದಲ್ಲಿ ಅಳವಡಿಸಿರುವ ಈ ಪ್ರಯೋಗಾತ್ಮಕ ಚಿತ್ರದಲ್ಲಿ ಆರತಿ ಮುನಿತಾಯಿಯಾಗಿ ನೀಡಿದ ಅಂಥ ಗೃಹಿಣಿಯ ಅಭಿನಯಕ್ಕಾಗಿ ಅತ್ಯುತ್ತಮ ನಟಿ ರಾಜ್ಯ ಪ್ರಶಸ್ತಿ ಲಭಿಸಿದೆ (1975-76). ಆರತಿಯವರ ಅಭಿನಯ ಕೌಶಲ್ಯಕ್ಕೆ ಸಾಕ್ಷಿಯಾದ ಇನ್ನೊಂದು ಚಿತ್ರ ರಂಗನಾಯಕಿ. ರಂಗಭೂಮಿಯ ಬದುಕು ಹಾಗೂ ವೈಯಕ್ತಿಕ ಬದುಕಿನ ನಡುವಣ ಸಂಘರ್ಷವನ್ನು ಕುರಿತ ಈ ಚಿತ್ರದಲ್ಲಿನ ಆರತಿಯವರ ಅಭಿನಯ ಅವಿಸ್ಮರಣೀಯವಾದದ್ದು. ಈ ಚಿತ್ರದ ಇವರ ಅಭಿನಯಕ್ಕೆ ಕೂಡ ಅತ್ಯುತ್ತಮ ನಟಿ ರಾಜ್ಯ ಪ್ರಶಸ್ತಿ ಲಭ್ಯವಾಗಿದೆ (1980-81). ಇವರು ಧರ್ಮಸೆರೆ ಎಂಬ ಚಲನಚಿತ್ರವನ್ನು ನಿರ್ಮಿಸಿ, ಅದರಲ್ಲಿ ನಟಿಸಿದ್ದಾರೆ. ಈ ಚಿತ್ರದ ಅಭಿನಯಕ್ಕೂ ಇವರಿಗೆ ಅತ್ಯುತ್ತಮ ನಟಿ ಪ್ರಶಸ್ತಿ ಲಭಿಸಿದೆ (1978-79). ಇವರು ವಿಧಾನ ಪರಿಷತ್ತಿನ ನಾಮಕರಣ ಸದಸ್ಯೆಯಾಗಿಯೂ ರಾಜಕೀಯ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ್ದಾರೆ. ಕಣಗಾಲ್ ಪುಟ್ಟಣ್ಣನವರನ್ನು ಇವರು ವಿವಾಹವಾಗಿದ್ದರು. ಅವರಿಂದ ದೂರಸರಿದ ಬಳಿಕ ಮಾಜಿ ಶಿಕ್ಷಣ ಸಚಿವ ಎಂ.ರಘುಪತಿಯವರನ್ನು ವಿವಾಹವಾಗಿದ್ದರು. ಈ ದಾಂಪತ್ಯವೂ ಹೆಚ್ಚು ದಿನ ಉಳಿಯಲಿಲ್ಲ. ಕೆಲಕಾಲಾನಂತರ ಬಣ್ಣದ ಬದುಕಿನಿಂದ ಪೂರ್ಣವಾಗಿ ದೂರ ಸರಿದರು. ಕನ್ನಡದ ಹೆಸರಾಂತ ನಾಯಕ ನಟರಾದ ರಾಜಕುಮಾರ್, ಶ್ರೀನಾಥ್, ವಿಷ್ಣುವರ್ಧನ, ಅನಂತನಾಗ್, ಶಂಕರನಾಗ್ ಮೊದಲಾದವರೊಂದಿಗೆ ಇವರು ಅಭಿನಯಿಸಿದ್ದಾರೆ. *



**ಆಲತಿಗಿರಿ :** ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಒಂದು ಪ್ರೇಕ್ಷಣೀಯ ಸ್ಥಳ, ನಾಗಮಂಗಲದ ಉತ್ತರಕ್ಕೆ 9ಕಿಮೀ ದೂರದಲ್ಲಿ ಸುಂದರ ಸನ್ನಿವೇಶದಲ್ಲಿ ಇದೆ. ಮೈಸೂರು ತುಮಕೂರು ರಸ್ತೆಯ ಪೂರ್ವಕ್ಕೆ ತೋರುವ ಗಿರಿಶ್ರೇಣಿಯಲ್ಲಿ ಪ್ರಕೃತಿ ಸೌಂದರ್ಯಕ್ಕೆ ಹೆಸರಾದ ಆಲತಿಗಿರಿಯ ಉನ್ನತ ಶಿಖರ ಗೋಚರಿಸುತ್ತದೆ. ಇಲ್ಲಿನ ಶ್ರೀಮಲ್ಲೇಶ್ವರ ಗುಹಾಲಯ ಹೆಚ್ಚು ಗಮನಾರ್ಹ.

ಆಲತಿಗಿರಿ ಶ್ರೇಣಿ ದಕ್ಷಿಣೋತ್ತರವಾಗಿ ಹಬ್ಬಿದೆ. ಗಿರಿಯ ನೆತ್ತಿಯ ಗುಹಾಲಯವನ್ನು ತಲುಪಲು ಪೂರ್ವ ಹಾಗೂ ಪಶ್ಚಿಮ ದಿಕ್ಕುಗಳಿಂದ ಸೋಪಾನಗಳನ್ನು ಕಡೆಯಲಾಗಿದೆ. ಈಗ ಇವು ಸವೆದಿವೆ. ಅತ್ಯಂತ ಆಳವಾದ ದೋಣೆಯೊಂದು ಗುಹಾಲಯದ ಸಮೀಪದಲ್ಲೇ ಇದೆ.

ತಾಯಿಯನ್ನು ಕಡಿದು ಬೇಸರಗೊಂಡ ಪರಶುರಾಮ ಲೋಕಸಂಚಾರವನ್ನು ಕೈಗೊಂಡು ಈ ಗಿರಿಯನ್ನೇರಿ ದೊಡ್ಡ ಬಂಡೆಯೊಂದರ

ಬುಡದಲ್ಲಿ ಕುಳಿತು ಆಯಾಸದಿಂದ ಹಾಯ್ ಮಲ್ಲೇಶ ಎಂದು ಉದ್ಗರಿಸಿದನೆಂದೂ ಬಂಡೆಯೊಳಗಿನಲಿಂದ ಓ ಎಂಬ ಧ್ವನಿ ಬಂದಿತೆಂದೂ ಆಗ ಆತ ಆಶ್ಚರ್ಯದಿಂದ ಬಂಡೆಯ ಕಡೆ ನೋಡಿ ಪೂರ್ವ ದಿಕ್ಕಿನಿಂದ ಒಬ್ಬ ಮನುಷ್ಯ ಪ್ರವೇಶಿಸುವಷ್ಟು ಭಾಗವನ್ನು ಬಂಡೆಯಲ್ಲಿ ಕಡಿದು ಅದರ ಗರ್ಭವನ್ನು ಪ್ರವೇಶಿಸಿದನೆಂದೂ ಬಂಡೆಯ ಒಡಲಲ್ಲಿ ಜಲ ಕಾಣಿಸಿಕೊಂಡಿತೆಂದೂ ಅದರ ಮಧ್ಯೆ ಮಲ್ಲೇಶ್ವರಲಿಂಗ ಕಾಣಿಸಿಕೊಂಡಿತೆಂದೂ ಐತಿಹ್ಯ. ಬಂಡೆಯನ್ನು ಕೊಡಲಿಯಿಂದಲೇ ಕಡಿದು ಗುಹೆಯನ್ನು ನಿರ್ಮಿಸಿದಂತೆ ಗುರುತುಗಳು ಇಂದಿಗೂ ಇವೆ. ಇಲ್ಲಿಗೆ ಬಂದವರು ಬಂಡೆಯ ನಡುವಿನ ಗುಹೆಯಲ್ಲಿ ನುಸುಳಿಕೊಂಡು ಹೋಗಬೇಕು. ಮಂಡಿಯುದ್ದ ನೀರಿದ್ದರೂ ಕತ್ತಲೆ ದಟ್ಟವಾಗಿ ಕವಿದಿರುವ ಮಾರ್ಗದಲ್ಲಿ ಹತ್ತಾರು ಗಜ ಸಾಗಿದರೆ ಲಿಂಗದರ್ಶನವಾಗುತ್ತದೆ. ಪಾಂಡವರ ಹೆಸರಿನ ಇನ್ನೊಂದು ಗುಹೆಯಲ್ಲಿ ಹಿಂದೆ ಪಾಂಡವರು ತಂಗಿದ್ದರು ಎಂಬ ಐತಿಹ್ಯವಿದೆ.

ಆಲತಿಗಿರಿಯಲ್ಲಿ ವರ್ಷಕ್ಕೊಮ್ಮೆ ಒಂದು ದೊಡ್ಡ ಜಾತ್ರೆ ನಡೆಯುತ್ತದೆ. ಗಿರಿಯ ತಪ್ಪಲು ಪ್ರಶಾಂತವಾಗಿರುವ ರಮ್ಯ ನಿಸರ್ಗ ಸೌಂದರ್ಯದಿಂದ ಕಂಗೊಳಿಸುತ್ತದೆ. ಇಲ್ಲಿನ ಗುಹಾಂತರ ದೇವಾಲಯ ಹೆಚ್ಚು ಖ್ಯಾತಿ ಗಳಿಸದಿದ್ದರೂ ಕರ್ನಾಟಕದ ಆಶ್ಚರ್ಯಗಳಲ್ಲಿ ಒಂದಾಗಿದೆ. ಆಲತಿಗಿರಿಯ ಬುಡದಲ್ಲಿ ಆದಿಚುಂಚನಗಿರಿ ಮಠದ ಕಿರು ಶಾಖೆಯೊಂದಿದೆ. *

**ಆಲಮಟ್ಟಿ :** ಬಿಜಾಪುರ ಜಿಲ್ಲೆ ಬಸವನಬಾಗೇವಾಡಿ ತಾಲ್ಲೂಕಿನ ಒಂದು ಗ್ರಾಮ. ಕೃಷ್ಣಾ ನದಿಯ ಎಡದಂಡೆಯ ಮೇಲೆ ಹುಬ್ಬಳ್ಳಿ ಸೊಲ್ಲಾಪುರ ರೈಲುಮಾರ್ಗದಲ್ಲಿ ಬಾಗಲಕೋಟೆಯ ಈಶಾನ್ಯಕ್ಕೆ 32ಕಿಮೀ ದೂರದಲ್ಲೂ ಬಿಜಾಪುರದ ದಕ್ಷಿಣಕ್ಕೆ ಸು.65ಕಿಮೀ ದೂರದಲ್ಲೂ ಇದೆ. ಗ್ರಾಮದ ಪೂರ್ವದಲ್ಲಿ ಪರ್ವತಕಟ್ಟಿ ಹಳ್ಳವೂ ರಕ್ಷಿತ ಅರಣ್ಯಪ್ರದೇಶವೂ ಇವೆ. ಆಲಮಟ್ಟಿಯಲ್ಲಿ ಹರ್ಡೇಕರ ಮಂಜಪ್ಪನವರ ಆಶ್ರಮವಿತ್ತು. ಅದು ಸಾಮಾಜಿಕ, ನೈತಿಕ ಮತ್ತು ಸಾಸ್ಕೃತಿಕ ಶಿಕ್ಷಣ ಕೊಡುವ ಒಂದು ಗುರುಕುಲವಾಗಿತ್ತು. ಇಂದು ಅವರ ಹೆಸರಿನ ಒಂದು ಪ್ರೌಢಶಾಲೆ ಇದೆ.

ಕೃಷ್ಣಾನದಿ ಮೇಲ್ದಂಡೆ ಮೊದಲಹಂತದ ಯೋಜನೆಯಲ್ಲಿ ಕೃಷ್ಣಾನದಿಗೆ ಅಡ್ಡಲಾಗಿ ಆಮಲಟ್ಟಿ ಬಳಿ ದೊಡ್ಡ ಕಟ್ಟೆ ಕಟ್ಟಲಾಗಿದೆ. ಇದರಿಂದ ಬಿಜಾಪುರ ಮತ್ತು ಗುಲ್ಬರ್ಗ ಜಿಲ್ಲೆಗಳ ಸುಮಾರು 3.5ಲಕ್ಷ ಎಕರೆಗಳಿಗೆ ನೀರೊದಗಿಸಲಾಗುತ್ತದೆ. ಕಟ್ಟೆಯ ಹಿಂದಿನ ಜಲಾವೃತ ಪ್ರದೇಶದಲ್ಲಿ ಹಿನ್ನೀರಿನಿಂದ ಬಾಗಲಕೋಟೆ ಪಟ್ಟಣ ಮುಳುಗಡೆಯಾಗಿದ್ದು ಕಟ್ಟೆಯ ಉದ್ದ 1,578ಮೀಗಳು ಗರಿಷ್ಠ ಎತ್ತರ ತಳಪಾಯದಿಂದ 47.80ಮೀಗಳು. ಸಮುದ್ರ ಮಟ್ಟದಿಂದ 519.6ಮೀ. ಎತ್ತರವಿದೆ. ಒಟ್ಟು ಜಲ ಸಂಗ್ರಹ ಸಾಮರ್ಥ್ಯ 5,295 ಮಿಲಿಯನ್ ಘನ ಮೀಟರ್‌ಗಳು. ಎರಡನೆಯ ಹಂತದಲ್ಲಿ ಮತ್ತೆ ಸುಮಾರು 2.30 ಲಕ್ಷ ಎಕರೆಗೆ ನೀರು ಒದಗುವುದು. (ಎಚ್.ಎಸ್.ಎಸ್.)

**ಆಲಮೇಲ :** ಸಿಂದಗಿ ತಾಲ್ಲೂಕಿನ ಒಂದು ಗ್ರಾಮ. ಸಿಂದಗಿಯ ಉತ್ತರಕ್ಕೆ 19ಕಿಮೀ ದೂರದಲ್ಲಿದೆ. ಈ ಗ್ರಾಮವನ್ನು ಕಳಚುರಿ ಬಿಜ್ಜಳ (1130-67) ಸ್ಥಾಪಿಸಿದನೆಂಬ ಪ್ರತೀತಿ ಇದೆ. ಇಲ್ಲಿರುವ ದೇವಾಲಯಗಳಲ್ಲಿ ರಾಮಲಿಂಗ, ಹನುಮಂತ ಮತ್ತು ಈಶ್ವರ ದೇವಾಲಯಗಳು ಮುಖ್ಯವಾದವು. 18ನೆಯ ಶತಮಾನದಲ್ಲಿ ಕಟ್ಟಲಾದ ಈ ದೇವಾಲಯಗಳು ಜೀರ್ಣವಾಗಿವೆ. 1876ರ ಬರಗಾಲದಲ್ಲಿ ಸರ್ಕಾರ ದುರಸ್ತಿಪಡಿಸಿದ ಒಂದು ದೊಡ್ಡಕೆರೆ ಊರಿನ ಪಶ್ಚಿಮಕ್ಕಿದೆ. ಕೆರೆಯ ಪೂರ್ವಕ್ಕೆ ಲಕ್ಷ್ಮೀ ದೇವಾಲಯವಿದೆ. ನಾಡಗೌಡರಿಗೆ ಸೇರಿದ್ದ ಪಾಳುಬಿದ್ದ ಕೋಟೆ ಇದೆ. ಇದರ ಸಮೀಪದಲ್ಲಿ ಸಹೋದರಿಯರಿಬ್ಬರ ತ್ಯಾಗದಿಂದಾದ ಅಕ್ಕತಂಗಿಯರ ಬಾವಿ ಇದೆ. ಗ್ರಾಮ ಸೇಂಗ ವ್ಯಾಪಾರಕ್ಕೆ ಪ್ರಸಿದ್ಧ. (ಎನ್.ಪಿ.ವಿ.)

**ಆಲೂರ ವೆಂಕಟರಾವ್ :** 1880-1964. ಕನ್ನಡದ ಮೂಲಕ ಭಾರತದ ಕಲ್ಯಾಣವನ್ನು ಧ್ಯೇಯವಾಗಿರಿಸಿಕೊಂಡು, ನಾಡುನುಡಿ ಸಂಸ್ಕೃತಿಗಳ ಸಂವರ್ಧನೆಗಾಗಿ ಶ್ರಮಿಸಿದ ಹಿರಿಯರು. ಕರ್ನಾಟಕದ ಕುಲಪುರೋಹಿತ ಎಂಬ ಅಭಿಧಾನಕ್ಕೆ ಪಾತ್ರರಾಗಿದ್ದವರು. ಇವರ ಮನೆತನದವರು ಮೊದಲು ಬಳ್ಳಾರಿ ಜಿಲ್ಲೆಯಲ್ಲಿದ್ದು ಅನಂತರ ಧಾರವಾಡ ಜಿಲ್ಲೆಯ ಆಲೂರಿಗೆ ಬಂದು ನೆಲೆಸಿದ್ದರಿಂದ ಇವರ ಮನೆತನಕ್ಕೆ ಆಲೂರ ಮನೆತನ ಎಂಬ ಹೆಸರು ಬಂತು. ವೆಂಕಟರಾಯರು ಬಿಜಾಪುರದಲ್ಲಿ 1880ರ ಜುಲೈ 12ರಂದು ಜನಿಸಿದರು. ತಂದೆ ಭೀಮರಾಯರು ಅಲ್ಲಿ ಶಿರಸ್ತೇದಾರರಾಗಿದ್ದರು. ತಾಯಿ ಭಾಗೀರಥಿಬಾಯಿ. ಬಿಜಾಪುರ ಮತ್ತು ಧಾರವಾಡಗಳಲ್ಲಿ ಆರಂಭದ ಶಿಕ್ಷಣವನ್ನು ಮುಗಿಸಿದ ಇವರು, ಅನಂತರ ಪುಣೆಯ ಫರ್ಗ್ಯೂಸನ್ ಕಾಲೇಜಿನಲ್ಲಿ ಕಲಿತು ಬಿ.ಎ. ಪದವಿ (1903) ಪಡೆದರು. ಪುಣೆಯಲ್ಲಿದ್ದಾಗ ಮರಾಠಿಯರ ಪ್ರಾಬಲ್ಯದಿಂದ ಅಲ್ಲಿಯ ಕನ್ನಡಿಗರು ಎದುರಿಸುತ್ತಿದ್ದ ಸಮಸ್ಯೆಗಳ ಪರಿಚಯವಾಗಿ, ಕನ್ನಡಿಗರ ಹಿತಕ್ಕಾಗಿ ಹೋರಾಡಬೇಕೆಂಬ ಮನೋಭಾವವನ್ನು ಬೆಳೆಸಿಕೊಂಡರು. ಇದೇ ಅವಧಿಯಲ್ಲಿ ಬಾಲಗಂಗಾಧರ ಟಿಳಕರ ಪ್ರಭಾವಕ್ಕೂ ಒಳಗಾದರು. ಮುಂಬಯಿಯಲ್ಲಿ ಕಾನೂನು ವ್ಯಾಸಂಗ ಮಾಡಿ 1905ರಲ್ಲಿ ಎಲ್.ಎಲ್.ಬಿ. ಪದವಿ ಪಡೆದ ಇವರು ಧಾರವಾಡದಲ್ಲಿ ವಕೀಲ ವೃತ್ತಿಯನ್ನು ಆರಂಭಿಸಿದರು.

ಧಾರವಾಡದಲ್ಲಿ ಆ ದಿನಗಳಲ್ಲಿ ಮರಾಠಿ ಪ್ರಾಬಲ್ಯ ಅಧಿಕವಾಗಿದ್ದು ಕನ್ನಡಿಗರಿಗೆ ಬಹಳ ಅನ್ಯಾಯವಾಗುತ್ತಿತ್ತು. ಇದನ್ನು ಗಮನಿಸಿದ ವೆಂಕಟರಾಯರು ಕನ್ನಡಿಗರಲ್ಲಿ ಜಾಗೃತಿಯನ್ನುಂಟುಮಾಡಬೇಕೆಂಬ ಉದ್ದೇಶದಿಂದ 1906ರಲ್ಲಿ ವಾಗ್ಭೂಷಣ ಎಂಬ ಮಾಸಪತ್ರಿಕೆಯನ್ನು ಆರಂಭಿಸಿದರು. ಕನ್ನಡಿಗರಿಗೆ ಆಗುತ್ತಿದ್ದ ಅನ್ಯಾಯವನ್ನು ಕುರಿತು ಅನೇಕ ಲೇಖನಗಳನ್ನು ಆ ಪತ್ರಿಕೆಯಲ್ಲಿ ಪ್ರಕಟಿಸಿ ಕನ್ನಡಿಗರನ್ನು ಎಚ್ಚರಿಸಿದರು. ಕನ್ನಡಿಗರು ಸ್ವದೇಶಿ ಚಳವಳಿಯಲ್ಲಿ ಭಾಗವಹಿಸಲು ಕರೆ ಕೊಟ್ಟ ಇವರು, ಅದಕ್ಕಾಗಿ ತಮ್ಮ ವಕೀಲ ವೃತ್ತಿಯನ್ನು ಬಿಟ್ಟು ದುಡಿದರು. ರಾಷ್ಟ್ರೀಯ ಶಿಕ್ಷಣದಿಂದ ಜನತೆಯಲ್ಲಿ ಸ್ವದೇಶಾಭಿಮಾನ ಮೂಡುತ್ತದೆಂದು ಭಾವಿಸಿದ ಇವರು ಎನ್.ಎಸ್.ಹರ್ಡೀಕರ್, ನಾರಾಯಣ ರಾಜಪುರೋಹಿತ ಮುಂತಾದವರ ಸಹಕಾರದಿಂದ ಧಾರವಾಡದಲ್ಲಿ ಒಂದು ರಾಷ್ಟ್ರೀಯ ಕಾಲೇಜನ್ನು ಆರಂಭಿಸಿ (1909) ಸುಮಾರು ಎರಡು ವರ್ಷಗಳ ಕಾಲ ನಡೆಸಿದರು. ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಿ ರಾಜಕೀಯ ದಿಗ್ಬಂಧನಕ್ಕೂ ಒಳಗಾದರು.

ಚಿಕ್ಕಂದಿನಿಂದಲೂ ವೆಂಕಟರಾಯರಿಗೆ ಕರ್ನಾಟಕ ಇತಿಹಾಸದಲ್ಲಿ ಆಸಕ್ತಿ. ಕರ್ನಾಟಕದ ಭವ್ಯಪರಂಪರೆಯನ್ನು ತಿಳಿಯುವಲ್ಲಿ ಕುತೂಹಲ ಇತ್ತು. ಇವರು ವಕೀಲ ವೃತ್ತಿಯನ್ನು ಪ್ರಾರಂಭಿಸಿದ ಹೊಸತರಲ್ಲಿ ಆನೆಗೊಂದಿ, ಹಂಪೆ ಮೊದಲಾದ ಐತಿಹಾಸಿಕ ಸ್ಥಳಗಳಿಗೆ ಭೇಟಿ ಕೊಟ್ಟರು.



ತಮ್ಮ ಆ ಭೇಟಿಯನ್ನು ಕುರಿತು, ನಮ್ಮ ವಿಜಯನಗರ ಅಲ್ಲಿ ಪ್ರತ್ಯಕ್ಷವಾಗಿಯೂ ವಿಸ್ತಾರವಾಗಿಯೂ ನನ್ನ ಮುಂದೆ ಬಿದ್ದಿದೆ. ಆ ದಿವಸದ ದರ್ಶನದಿಂದ ನನ್ನ ಹೃದಯದಲ್ಲಿ ಕರ್ನಾಟಕ ದೇವಿಯ ಸುಂದರಮೂರ್ತಿ ಮೂಡಿತು. ಅದೊಂದು ಸ್ಮರಣೀಯ ಭೇಟಿ, ಎಂಬುದಾಗಿ ಹೇಳಿಕೊಂಡಿದ್ದಾರೆ. ಅಂದಿನಿಂದ ಇವರು ಕರ್ನಾಟಕ ದೇವಿಯ ತಪಸ್ಸನ್ನೇ ಕೈಗೊಂಡರು. ಕರ್ನಾಟಕ ದೇವಿಯ ತಪಸ್ಸೆಂದರೆ ಹಂಚಿ ಹೋಗಿದ್ದ ಕರ್ನಾಟಕವನ್ನು ಒಗ್ಗೂಡಿಸುವುದು, ಅದಕ್ಕೆ ಕರ್ನಾಟಕ ಎಂದು ಹೆಸರಿಡುವುದು, ಕನ್ನಡ ಭಾಷೆಯ ವಿಚಾರದಲ್ಲಿ ಕನ್ನಡಿಗರಲ್ಲಿ ಅಭಿಮಾನ ಮೂಡಿಸುವುದು, ಕನ್ನಡ ನಾಡಿನ ಚರಿತ್ರೆ, ಸಂಸ್ಕೃತಿಗಳನ್ನು ಬೆಳಕಿಗೆ ತರುವುದು ಇದೇ ಇವರು ಕಂಡ ದರ್ಶನವಾಗಿತ್ತು. ಇದಕ್ಕಾಗಿ ಇವರು ಸು.30 ವರ್ಷಗಳ ಕಾಲ ಸತತವಾಗಿ ಶ್ರಮಿಸಿದರು.

ವೆಂಕಟರಾಯರು ತಮ್ಮ ಅನಿಸಿಕೆಗಳನ್ನು ಅಭಿಪ್ರಾಯಗಳನ್ನು ಪತ್ರಿಕೆಗಳ ಮೂಲಕ ಜನತೆಗೆ ತಲುಪಿಸಲಾರಂಭಿಸಿದರು. ಅದಕ್ಕಾಗಿ ಇವರು

ಹಲವು ಪತ್ರಿಕೆಗಳನ್ನು ಹುಟ್ಟು ಹಾಕಿದರು. ಜಯಕರ್ನಾಟಕ ಪತ್ರಿಕೆಯನ್ನು 1923ರಲ್ಲಿ ಆರಂಭಿಸಿ 6 ವರ್ಷಗಳ ಕಾಲ ನಡೆಸಿದರು. ಕನ್ನಡಿಗ, ಕರ್ಮವೀರ ಮುಂತಾದ ಪತ್ರಿಕೆಗಳ ಸಂಪಾದನ ಕಾರ್ಯವನ್ನು ಇವರು ಕೆಲವು ಕಾಲ ನಿರ್ವಹಿಸಿದರು.

ವೆಂಕಟರಾಯರು ಶ್ರೀವಿದ್ಯಾರಣ್ಯ ಚರಿತ್ರೆ ಎಂಬ ಪುಸ್ತಕವನ್ನು ಪ್ರಕಟಿಸಿದರು (1907). ಕರ್ನಾಟಕದ ಬಗ್ಗೆ ಹೊಸ ಹೊಸ ವಿಚಾರಗಳನ್ನು ತಿಳಿಯಲು ಇವರು 1907-16ರಲ್ಲಿ ನಾಡಿನ ವಿವಿಧ ಭಾಗಗಳಲ್ಲಿ ಸಂಚರಿಸಿದರು. ಅಣ್ಣಿಗೇರಿ, ಲಕ್ಕುಂಡಿ, ಹಳೇಬೀಡು, ಬೇಲೂರು, ಬಂಕಾಪುರ, ಬಾದಾಮಿ ಮುಂತಾದ ಅನೇಕ ಐತಿಹಾಸಿಕ ಸ್ಥಳಗಳನ್ನು ಸಂದರ್ಶಿಸಿದ ಇವರು ಶಾಸನಗಳು ಮತ್ತು ತಾಳೆಗರಿ ಗ್ರಂಥಗಳನ್ನು ಸಂಗ್ರಹಿಸಿ, ಅಭ್ಯಾಸ ಮಾಡಿದರು. ಈ ಎಲ್ಲ ಪ್ರಯತ್ನಗಳಿಂದ ಇವರು ಕರ್ನಾಟಕ ಗತವೈಭವದ ಒಂದು ಸ್ಪಷ್ಟ ಚಿತ್ರವನ್ನು ಕಂಡರು. 1914ರಲ್ಲಿ ಪುಣೆಯ ಡೆಕ್ಕನ್ ಕಾಲೇಜಿನಲ್ಲಿ, ಕರ್ನಾಟಕ ಗತವೈಭವ ವಿಷಯ ಕುರಿತು ಇಂಗ್ಲಿಷಿನಲ್ಲಿ ಹಲವು ಉಪನ್ಯಾಸಗಳನ್ನು ಮಾಡಿದರು. ಆ ಉಪನ್ಯಾಸಗಳನ್ನು ಮೆಚ್ಚಿಕೊಂಡ ಅಲ್ಲಿಯ ಕನ್ನಡ ವಿದ್ಯಾರ್ಥಿಗಳು ತಮ್ಮ ಸಂತೋಷದ ಕುರುಹಾಗಿ ವೆಂಕಟರಾಯರಿಗೆ 100 ರೂಪಾಯಿಗಳ ನಿಧಿಯನ್ನು ಅರ್ಪಿಸಿದರು. ಆ ಉಪನ್ಯಾಸಗಳನ್ನು ಅನಂತರ ವೆಂಕಟರಾಯರು ಕನ್ನಡಕ್ಕೆ ಅನುವಾದಿಸಿ 'ಕರ್ನಾಟಕ ಗತವೈಭವ' ಎಂಬ ಹೆಸರಿನಲ್ಲಿ 1917ರಲ್ಲಿ ಪುಸ್ತಕರೂಪದಲ್ಲಿ ಪ್ರಕಟಿಸಿದರು. ಈ ಗ್ರಂಥದಿಂದ ಕನ್ನಡಿಗರು ಬಹಳಷ್ಟು ಪ್ರಭಾವಿತರಾದರು. ಕಾವ್ಯ, ಸಾಹಿತ್ಯ, ಇತಿಹಾಸ, ರಾಜಕಾರಣ ಉಜ್ವಲ ದೇಶಾಭಿಮಾನದಿಂದ ಕೂಡಿದ ಇದು ಕನ್ನಡಿಗರ ಕೈಪಿಡಿಯಾಯಿತು.

ಕರ್ನಾಟಕ ಇತಿಹಾಸದ ಅಭ್ಯಾಸ, ಪ್ರಚಾರ ಮತ್ತು ಪ್ರಕಟಣೆಗಾಗಿ ವೆಂಕಟರಾಯರು ಕರ್ನಾಟಕ ಇತಿಹಾಸ ಮಂಡಳ ಎಂಬ ಸಂಸ್ಥೆಯನ್ನು 1914ರಲ್ಲಿ ಸ್ಥಾಪಿಸಿ ಅದರ ಮೊದಲ ಅಧ್ಯಕ್ಷರಾದರು. ಆ ಸಂಸ್ಥೆ ಈಗಲೂ ಕೆಲಸಮಾಡುತ್ತಿದೆ.

ವೆಂಕಟರಾಯರ ಸಾಹಿತ್ಯಸೃಷ್ಟಿ ವೈವಿಧ್ಯಮಯವಾದುದು. ಇತಿಹಾಸ, ರಾಜಕಾರಣ, ಸಂಸ್ಕೃತಿ, ಧರ್ಮ, ಕಲೆ ಮುಂತಾದ ಹತ್ತಾರು ವಿಷಯಗಳನ್ನು ಕುರಿತು ಇವರು 25 ಗ್ರಂಥಗಳನ್ನು ರಚಿಸಿದ್ದಾರೆ. ಕನ್ನಡಿಗರ ಭ್ರಮನಿರಸನ ಎಂಬ ಒಂದು ನಾಟಕವನ್ನು 1913ರಲ್ಲಿ ಬರೆದರು. ಕರ್ನಾಟಕ ವೀರ ರತ್ನಗಳು (1930) ಎಂಬ ಗ್ರಂಥದಲ್ಲಿ ಮಯೂರವರ್ಮ, ಪುಲಿಕೇಶಿ, ಕುಮಾರರಾಮ ಮುಂತಾದ 21 ಜನ ವೀರ ಕನ್ನಡಿಗರ ಆಕರ್ಷಕ ವ್ಯಕ್ತಿಚಿತ್ರಗಳಿವೆ. ಕರ್ನಾಟಕತ್ವದ ಸೂತ್ರಗಳು (1950), ಕರ್ನಾಟಕತ್ವದ ವಿಕಾಸ (1957) - ಇವು ನಾಡಿಗೆ ಸಂಬಂಧಿಸಿದ ಕೃತಿಗಳು. ಸುಖವೂ ಶಾಂತಿಯೂ ಎಂಬ ಗ್ರಂಥ ಎರಡು ಭಾಗಗಳಲ್ಲಿ ಪ್ರಕಟವಾಗಿದೆ. 1920ರಲ್ಲಿ ಸ್ವಾತಂತ್ರ್ಯ ಸಂಗ್ರಾಮ ಎಂಬ ಪುಸ್ತಕವನ್ನು ಪ್ರಕಟಿಸಿದರು. ಟಿಳಕರ ಗೀತಾರಹಸ್ಯವನ್ನು ಅದೇ ಹೆಸರಿನಿಂದ ಕನ್ನಡಕ್ಕೆ ಭಾಷಾಂತರಿಸಿದ್ದಾರೆ; ಇದಕ್ಕಾಗಿ ಇವರು ಭಗವದ್ಗೀತೆಯನ್ನು ವಿಸ್ತಾರವಾಗಿ ಅಭ್ಯಾಸ ಮಾಡಿದರು. ಇದರ ಫಲವೇ ಗೀತಾಪ್ರಕಾಶ (1934), ಗೀತಾ ಪರಿಮಳ (1936), ಗೀತಾಸಂದೇಶ (1936). ಮಧ್ವಮತದ ತತ್ತ್ವಗಳನ್ನು ವ್ಯಾಪಕವಾಗಿ ಅಧ್ಯಯನ ಮಾಡಿದ ವೆಂಕಟರಾಯರು ಆ ಮತದ ತತ್ತ್ವಗಳನ್ನು ಶ್ರೀ ಸಾಮಾನ್ಯರಿಗೆ ಸರಳವಾಗಿ ಹೇಳಬೇಕೆಂಬ ಉದ್ದೇಶದಿಂದ ಮಧ್ವ ಸಿದ್ಧಾಂತ ಪ್ರವೇಶಿಕೆ (1951), ಶ್ರೀಮಧ್ವಾಚಾರ್ಯರ ಮೂಲಸಿದ್ಧಾಂತ, ಶ್ರೀಮಧ್ವಾಚಾರ್ಯರ ಪೂರ್ಣಬ್ರಹ್ಮವಾದ ಮುಂತಾದ ಗ್ರಂಥಗಳನ್ನು ಬರೆದರು. ಇವುಗಳಲ್ಲಿ ಕೊನೆಯ ಗ್ರಂಥವನ್ನು ಇಂಗ್ಲಿಷಿಗೂ ಭಾಷಾಂತರಿಸಿದರು. ತಮ್ಮ ಜೀವನದ ಅನುಭವಗಳನ್ನು ನನ್ನ ಜೀವನಸ್ಮೃತಿಗಳು ಎಂಬ ಹೆಸರಿನಲ್ಲಿ ಎರಡು ಭಾಗಗಳಲ್ಲಿ ಪ್ರಕಟಿಸಿದ್ದಾರೆ.

ವೆಂಕಟರಾಯರು ಗ್ರಂಥಗಳನ್ನು ಬರೆದದ್ದು ಮಾತ್ರವಲ್ಲ, ಗ್ರಂಥ ಪ್ರಕಾಶನಕ್ಕಾಗಿ ಹಲವಾರು ಸಂಸ್ಥೆಗಳನ್ನೂ ಕಟ್ಟಿದರು. ಗ್ರಂಥ ಪ್ರಕಾಶಕರೆಲ್ಲ ಒಂದೆಡೆ ಸೇರಿ, ವಿಚಾರ ವಿನಿಮಯ ನಡೆಸಿ, ಒಳ್ಳೆಯ ಗ್ರಂಥಗಳನ್ನು ಪ್ರಕಟಿಸಲಿ ಎಂಬ ಉದ್ದೇಶದಿಂದ 1907ರಲ್ಲಿ ಕನ್ನಡ ಗ್ರಂಥಕರ್ತರ ಸಮ್ಮೇಳನವನ್ನು ವ್ಯವಸ್ಥೆ ಮಾಡಿದ ಇವರು 1908ರಲ್ಲಿ ಕರ್ನಾಟಕ ಗ್ರಂಥ ಪ್ರಕಟಣ ಮಂಡಳಿ ಎಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿದರು.

ಕರ್ನಾಟಕ ಏಕೀಕರಣಕ್ಕಾಗಿ ಬಹುವಾಗಿ ಶ್ರಮಿಸಿದ ವೆಂಕಟರಾಯರು, ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ವಿಶ್ವವಿದ್ಯಾಲಯ ಮುಂತಾದ ಸಂಸ್ಥೆಗಳ ಸ್ಥಾಪನೆಗಾಗಿಯೂ ದುಡಿದರು. ಕನ್ನಡ ಭಾಗಗಳೆಲ್ಲ ಒಂದುಗೂಡಬೇಕು, ನಾಡಿಗೆ ಕರ್ನಾಟಕ ಎಂಬ ಹೆಸರಾಗಬೇಕು ಎಂಬ ಹಂಬಲವನ್ನು ಹೊಂದಿದ್ದ ಇವರು 1956ರಲ್ಲಿ ಆದ ರಾಜ್ಯೋದಯವನ್ನು ಕಂಡು ಹರ್ಷಿಸಿದರು. ಆ ಸಂದರ್ಭದಲ್ಲಿ ಹಂಪೆಯಲ್ಲಿ ನಡೆದ ಭುವನೇಶ್ವರಿ ಪೂಜೆಯ ಪೌರೋಹಿತ್ಯವನ್ನು ಇವರು ವಹಿಸಿದರು.

ಆಲೂರ ವೆಂಕಟರಾಯರನ್ನು ಕನ್ನಡಿಗರು ಹಲವು ರೀತಿಯಲ್ಲಿ ಗೌರವಿಸಿ ಅವರ ಸೇವೆಯನ್ನು ಸ್ಮರಿಸಿದ್ದಾರೆ, ಹೈದರಾಬಾದ್ ಕನ್ನಡಿಗರು 1941ರಲ್ಲಿ ವೆಂಕಟರಾಯರಿಗೆ 'ಕರ್ನಾಟಕದ ಕುಲಪುರೋಹಿತ' ಎಂಬ ಬಿರುದನ್ನು ನೀಡಿ ಸನ್ಮಾನಿಸಿದರು. ಬೆಂಗಳೂರು ನಗರಸಭೆ 1961ರಲ್ಲಿ ಇವರನ್ನು ಗೌರವಿಸಿತು. ಅದೇ ವರ್ಷ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಸನ್ಮಾನಿತರಾದರು. ಹೀಗೆ ಬಗೆಬಗೆಯ ಗೌರವಾದರಗಳಿಗೆ ಪಾತ್ರರಾಗಿದ್ದ ವೆಂಕಟರಾಯರನ್ನು 1930ರಲ್ಲಿ ಮೈಸೂರಿನಲ್ಲಿ ನಡೆದ 16ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿ ಗೌರವಿಸಲಾಯಿತು.

ತಮ್ಮ ಜೀವನದ ಕೊನೆಯವರೆಗೂ ನಾಡುನುಡಿಗಳ ಮೇಲ್ಮೆಯನ್ನೇ ಹಾರೈಸುತ್ತಿದ್ದ ಆಲೂರ ವೆಂಕಟರಾಯರು 1964 ಫೆಬ್ರವರಿ 25ರಂದು ತಮ್ಮ 84ನೆಯ ವಯಸ್ಸಿನಲ್ಲಿ ತೀರಿಕೊಂಡರು. (ಕೆ.ಪಿ.ಬಿ.,ಎಂ.ಎಸ್.ಐ.)

**ಆಲೂರು** : ಹಾಸನ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಅದರ ಆಡಳಿತ ಕೇಂದ್ರ. ತಾಲ್ಲೂಕಿನ ವಿಸ್ತೀರ್ಣ 442.5ಚಕಿಮೀ. ಜನಸಂಖ್ಯೆ 86131. ಪಾಳ್ಯ, ಆಲೂರು, ಕೆಂಚಮ್ಮನ ಹೊಸಕೋಟೆ ಮತ್ತು ಕುಂದೂರು ಈ ತಾಲ್ಲೂಕಿನ ಹೋಬಳಿಗಳು. 260 ಹಳ್ಳಿಗಳಿವೆ. ಈ ತಾಲ್ಲೂಕು ಪೂರ್ವಕ್ಕೆ ಹಾಸನ, ಉತ್ತರದಲ್ಲಿ ಬೇಲೂರು, ಪಶ್ಚಿಮಕ್ಕೆ ಸಕಲೇಶಪುರ, ದಕ್ಷಿಣದಲ್ಲಿ ಅರಕಲಗೂಡು ತಾಲ್ಲೂಕುಗಳಿಂದಲೂ ಮತ್ತು ದಕ್ಷಿಣದ ಸ್ವಲ್ಪಭಾಗ ಕೊಡಗಿನಿಂದಲೂ ಸುತ್ತುವರೆದಿದೆ.

ಈ ತಾಲ್ಲೂಕಿನ ಮಧ್ಯ ಮತ್ತು ಪಶ್ಚಿಮ ಭಾಗ ಹೆಚ್ಚು ಮಳೆ ಬೀಳುವ ಬೆಟ್ಟ ಗುಡ್ಡಗಳ ಮತ್ತು ಕಾಡುಗಳುಳ್ಳ ದಕ್ಷಿಣ ಮಲೆನಾಡು ಪ್ರದೇಶದಲ್ಲೂ ಪೂರ್ವಭಾಗ ಅರೆಮಲೆನಾಡು ಪ್ರದೇಶದಲ್ಲೂ ಇದೆ. ಇಲ್ಲಿನ ಕಾಡುಗಳಲ್ಲಿ ವಿವಿಧ ಜಾತಿಯ ಮರಗಳನ್ನೂ ಸಾಮಾನ್ಯ ಕಾಡುಪ್ರಾಣಿಗಳನ್ನೂ ಕಾಣಬಹುದು. ಮಲೆನಾಡಿನ ಹವಾಗುಣವಿದ್ದು, ವರ್ಷಕ್ಕೆ ಸರಾಸರಿ 1007.5ಮಿಮೀ ಮಳೆಯಾಗುತ್ತದೆ. ಈ ತಾಲ್ಲೂಕಿನ ಭೂಮಿ ಜೇಡುಕಲ್ಲು, ಜಂಬುಮಣ್ಣು ಮತ್ತು ಭಿನ್ನಸ್ತರ ಶಿಲಾಪದರಗಳಿಂದಾದ ಕೆಂಬಣ್ಣ ಮೇಲ್ಮೈಯಿರುವ ಮಣ್ಣಿನಿಂದ ಕೂಡಿದೆ. ವ್ಯವಸಾಯಕ್ಕೆ ಮತ್ತು ಜನೋಪಯೋಗಕ್ಕೆ ಅನುಕೂಲವಿರುವ ಕೆರೆಗಳೂ ಬಾವಿಗಳೂ ಈ ತಾಲ್ಲೂಕಿನಲ್ಲಿವೆ. ಬತ್ತ, ರಾಗಿ, ಕಬ್ಬು, ದ್ವಿದಳ ಧಾನ್ಯಗಳು, ಏಲಕ್ಕಿ ಮತ್ತು ಆಲೂಗೆಡ್ಡೆಯನ್ನು ಬೆಳೆಯುತ್ತಾರೆ. ರಾಜ್ಯ ತೋಟಗಾರಿಕೆ ಇಲಾಖೆಯವರು ಹಣ್ಣಿನ ತೋಟಗಳನ್ನು ಬೆಳೆಸಿ ಅದರ ವಿಸ್ತರಣಾಕಾರ್ಯ ಮುಂದುವರೆಸಿದ್ದಾರೆ. ಈ ತಾಲ್ಲೂಕಿನಿಂದ ಜಿಲ್ಲೆಯ ಎಲ್ಲೆಡೆಗೂ ಉತ್ತಮ ಮಾರ್ಗಗಳಿವೆ.

ಈ ತಾಲ್ಲೂಕಿನ ಬೆಂಡೆಕೆರೆ ಗ್ರಾಮದಲ್ಲಿ ಗೋಪಾಲಕೃಷ್ಣ ಮತ್ತು ರಾಮೇಶ್ವರ ದೇವಾಲಯಗಳಿವೆ. ಕೆಂಚಮ್ಮನ ಹೊಸಕೋಟೆ ಆಲೂರಿಗೆ ನೈಋತ್ಯದಲ್ಲಿ 27ಕಿಮೀ ದೂರದಲ್ಲಿ ಬಲ್ಲೂರು - ಮಡಿಕೇರಿ ಮಾರ್ಗದಲ್ಲಿದೆ. ಇಲ್ಲಿ ಕೆಂಚಾಂಬ ದೇವಾಲಯವಿದೆ. ವರ್ಷದ ವೈಶಾಖ ಮತ್ತು ಕಾರ್ತೀಕ ಪೂರ್ಣಿಮೆಯಂದು ಜಾತ್ರೆಯಾಗುವುದು. ಕಾಫಿ ಮತ್ತು ಏಲಕ್ಕಿ ಬೆಳೆಗೆ ಪ್ರಸಿದ್ಧಿ. 1958ರಲ್ಲಿ ಪ್ರಾರಂಭವಾದ ಒಂದು ಹೆಂಚಿನ ಕಾರ್ಖಾನೆ ಇದೆ. ಮಹಾರಾಜನದುರ್ಗ (ನೋಡಿ) ಪ್ರಸಿದ್ಧ ಕೋಟೆ. ಪಾಳ್ಯ ಆಲೂರಿನ ನೈಋತ್ಯಕ್ಕೆ 8ಕಿಮೀ ದೂರದಲ್ಲಿ ಬೆಂಗಳೂರು-ಮಂಗಳೂರು ಮಾರ್ಗದಲ್ಲಿದೆ. ಈ ಗ್ರಾಮದ ಮುಂಭಾಗದಲ್ಲಿ ಶಂಖತೀರ್ಥ ಮತ್ತು ಚಕ್ರತೀರ್ಥ ಎಂಬ ಎರಡು ತೊರೆಗಳು ಸಂಗಮಿಸಿ ಮುಂದೆ ಇದು ಪದ್ಮಾವತಿ ಎಂಬ ಹೆಸರಿನಿಂದ ಪ್ರವಹಿಸುವುದು. ಸ್ಥಳ ಪುರಾಣದ ಪ್ರಕಾರ ಇಲ್ಲಿ ಮಹರ್ಷಿ ಜಮದಗ್ನಿ ಇದ್ದನಂತೆ. ಇಲ್ಲಿ ಲಕ್ಷ್ಮೀಜನಾರ್ದನ, ತ್ರಿಪುರಾಂತಕೇಶ್ವರ ಮತ್ತು ರಾಮೇಶ್ವರ ದೇವಾಲಯಗಳಿವೆ.

ಆಲೂರು ತಾಲ್ಲೂಕಿನ ಕೇಂದ್ರ. ಜನಸಂಖ್ಯೆ 6133. ಹಾಸನ ಸಕಲೇಶಪುರ ಮಾರ್ಗದಲ್ಲಿ ಹಾಸನದ ಪಶ್ಚಿಮಕ್ಕೆ 13ಕಿಮೀ ದೂರದಲ್ಲಿದೆ. ಇದು ಹಾಸನ ಸಕಲೇಶಪುರ ರೈಲು ಹಾದಿಯ ಒಂದು ನಿಲ್ದಾಣ. ಆಲೂರು ಪುರಸಭಾಡಳಿತಕ್ಕೆ ಸೇರಿದೆ. ಯಗಚಿ ನದಿಯ ನೀರನ್ನು ಕುಡಿಯಲು ಬಳಸಿಕೊಳ್ಳಲಾಗುತ್ತಿದೆ. ಪ್ರೌಢಶಾಲೆ, ಜೂನಿಯರ್ ಕಾಲೇಜು, ಪ್ರಾಥಮಿಕ ಆರೋಗ್ಯ ಕೇಂದ್ರ, ತಾಲ್ಲೂಕು ಅಭಿವೃದ್ಧಿ ಮಂಡಳಿ ಇವೆ. *

**ಆವತಿ :** ಬೆಂಗಳೂರು ಜಿಲ್ಲೆಯ ದೇವನಹಳ್ಳಿ ತಾಲ್ಲೂಕಿನಲ್ಲಿ ಕಸಬಕ್ಕೆ 8ಕಿಮೀ ಉತ್ತರಕ್ಕೆ ಇರುವ ಗ್ರಾಮ. ಆಹುತಿ ಇದರ ಹಳೆಯ ಹೆಸರು. ಇದು ಆವತಿ ಪಾಳೆಯಗಾರರ ರಾಜಧಾನಿಯಾಗಿತ್ತು (ನೋಡಿ: ಆವತಿ ಪಾಳೆಯಗಾರರು). ಇಲ್ಲಿರುವ ಚನ್ನಕೇಶವ ದೇವಾಲಯ ಅವರ ಕಾಲದ್ದು. ಸತಿಯರೊಡಗೂಡಿರುವ ಸುಮಾರು ಎರಡು ಅಡಿ ಎತ್ತರದ ಈ ಚನ್ನಕೇಶವ ವಿಗ್ರಹ ಏಳು ಕೊಪ್ಪರಿಗೆ ನಿಧಿಯೊಂದಿಗೆ ಪ್ರಭುಗಳಿಗೆ ಸಿಕ್ಕಿತೆಂದೂ ಅನಂತರ ಅವರು ದೇವಾಲಯ ಕಟ್ಟಿ ಆ ವಿಗ್ರಹವನ್ನು ಪ್ರತಿಷ್ಠಾಪಿಸಿದರೆಂದೂ ಹೇಳಲಾಗಿದೆ. ಆವತಿ ಬಳಿಯ ಬೆಟ್ಟದಲ್ಲಿ ಪಾಳೆಯಗಾರರ ಕೋಟೆಯ ಅವಶೇಷಗಳಿವೆ. ಈ ಬೆಟ್ಟದ ತುದಿಯಲ್ಲಿ ಕಾಣಬರುವ ಕೆಲವು ದೊಡ್ಡ ಬಂಡೆಗಳ ಮೇಲೆ ಪ್ರಭುಗಳು ಕರಗದ ದೇವರನ್ನು ಕೂರಿಸುತ್ತಿದ್ದರೆಂದು ಪ್ರತೀತಿ. ಮತ್ತೊಂದು ಬಂಡೆಯ ಮೇಲೆ ವೀರ ಕೆಂಪಮ್ಮನ ಒಂದು ಅಡಿ ಎತ್ತರದ ಶಿಲ್ಪವಿದೆ. ಬೆಟ್ಟದ ಕೆಳಗಿನ ಇಳಿಜಾರಾದ ಬಂಡೆಯ ಬಳಿ ಗುಂಡಿಯಲ್ಲಿ ಸದಾ ನೀರಿದ್ದು ಅದನ್ನು ಕನ್ನಿಕಾಳಮ್ಮನ (ಕನಿಕಲಮ್ಮ) ಬಂಡೆಯೆಂದು ಕರೆಯುತ್ತಾರೆ. ಬರಗಾಲ ಮತ್ತು ಇತರ ಅನಾವೃಷ್ಟಿ ಕಾಲಗಳಲ್ಲಿ ಇಲ್ಲಿ ಪೂಜೆ ನಡೆಯುತ್ತದೆ. ಕನ್ನಿಕಾಳಮ್ಮ ಕುಮಾರಿ ದೇವತೆ. ಆದ್ದರಿಂದ ಕುಮಾರಿಯರು ಮತ್ತು ಗಂಡುಹುಡುಗರು ಮಾತ್ರ ಪೂಜಿಸುವ ಸಂಪ್ರದಾಯವಿದೆ.

ಬೆಟ್ಟದ ಪಶ್ಚಿಮಕ್ಕೆ ಕೋಳಿಗುಡ್ಡ ಎಂಬ ಇನ್ನೊಂದು ಗುಡ್ಡವಿದೆ. ಇಲ್ಲಿ ಆವತಿ ಪ್ರಭುಗಳು ಕೋಳಿ ಸಾಕುತ್ತಿದ್ದರಂತೆ. ಈ ಗುಡ್ಡದ ಮೇಲೆ ಭಕ್ತರ ಗವಿ ಇದೆ. ಈ ಎರಡು ಗುಡ್ಡಗಳ ಮಧ್ಯದ ಕಣಿವೆಯಲ್ಲಿ ಬೃಹತ್ ಶಿಲಾಸಮಾಧಿಗಳು ಬೆಳಕಿಗೆ ಬಂದಿವೆ. ಸಮೀಪದಲ್ಲಿ ಗೌತಮಗಿರಿ ಅಥವಾ ಯಂಬರಹಳ್ಳಿ ತಿಮ್ಮರಾಯಸ್ವಾಮಿ ಬೆಟ್ಟವಿದೆ. ಇದರ ಮೇಲೆ ಶ್ರೀನಿವಾಸ ದೇವಾಲಯವಿದೆ. ದೇವಾಲಯದ ಹೊರಗೋಡೆಗಳ ಮೇಲೆ ರಾಮಾಯಣ, ಮಹಾಭಾರತ ಮತ್ತು ಪುರಾಣಗಳ ಶಿಲ್ಪಗಳಿವೆ. ಅಲ್ಲದೆ ಬೆಟ್ಟದ ಮೇಲೆ ಗೌತಮಾಶ್ರಮ, ಶಂಖ, ಚಕ್ರ ಮತ್ತು ಲಕ್ಷ್ಮೀತೀರ್ಥಗಳಿವೆ. ಮೊದಲನೆಯ ತೀರ್ಥದಲ್ಲಿ ತುಳಸಿ ಮತ್ತು ಬಿಲ್ಪತ್ರೆಯನ್ನು ಹಾಕಿದಾಗ ತುಳಸಿ ಮುಳುಗಿ ಬಿಲ್ಪತ್ರೆ ತೇಲಿದರೆ, ಎರಡನೆಯ ತೀರ್ಥದಲ್ಲಿ ಅವು ಅನುಕ್ರಮವಾಗಿ ತೇಲಿ ಮುಳುಗುತ್ತವೆಂದು ಪ್ರತೀತಿ.

ಮುಖ್ಯ ಹೋಬಳಿ ಕೇಂದ್ರವಾಗಿರುವ ಆವತಿ ಒಳ್ಳೆಯ ವ್ಯಾಪಾರ ಸ್ಥಳವೂ ಹೌದು. ಆಲೂಗಡ್ಡೆ, ದ್ರಾಕ್ಷಿ, ಹಿಪ್ಪುನೇರಿಳೆ ಇವು ಇಲ್ಲಿನ ಮುಖ್ಯ ಬೆಳೆಗಳು. (ಎಚ್.ವಿ.ಎಸ್.)

**ಆವತಿ ಪಾಳೆಯಗಾರರು :** 14-18ನೆಯ ಶತಮಾನಗಳ ಅವಧಿಯಲ್ಲಿ ಕೋಲಾರ, ಬೆಂಗಳೂರು, ತುಮಕೂರು ಜಿಲ್ಲೆಗಳಲ್ಲಿ ಈ ವಂಶದ ಶಾಖೆಗಳವರು ಪಾಳೆಯಪಟ್ಟುಗಳನ್ನು ಸ್ಥಾಪಿಸಿ ಆಳಿದರು.

ಸು.14ನೆಯ ಶತಮಾನದಲ್ಲಿ ಏಳು ಜನ ರೈತರು ತಮ್ಮ ಕುಟುಂಬ ಸಮೇತರಾಗಿ ಕಂಚಿಯ ಹತ್ತಿರದ ಯಣಮಂಜಿ ಪುತ್ತೂರು ಎಂಬ ಸ್ಥಳದಿಂದ (ಆತ್ತೂರು ಎಂಬ ಹೇಳಿಕೆಯೂ ಇದೆ). ನಂದಿದುರ್ಗದ ಪೂರ್ವಕ್ಕಿರುವ ರಾಮಸ್ವಾಮಿ ಬೆಟ್ಟದ ಬಳಿ ಬಂದು ತಂಗಿದರು. ಮೂಲತಃ ತೆಲುಗರಾದ ಇವರು 'ಮೊರಸು ಒಕ್ಕಲು' ಎಂದು ಕರೆಯಲ್ಪಡುತ್ತಿದ್ದರು. ಇವರು ಭೈರವ ದೇವರ ಆರಾಧಕರು. ಇವರ ನಾಯಕ ರಣಭೈರೇಗೌಡ. ಇವನು ತನ್ನ ಏಕಮಾತ್ರ ಪುತ್ರಿ ದೊಡ್ಡಮ್ಮನನ್ನು ದುಷ್ಟ ಪಾಳೆಯಗಾರನೊಬ್ಬನಿಂದ ರಕ್ಷಿಸುವ ಸಲುವಾಗಿ ತನ್ನ ಊರನ್ನು ತ್ಯಜಿಸಿ ದೇವನಹಳ್ಳಿಯ ಉತ್ತರದಲ್ಲಿರುವ ಆಹುತಿ (ಈಗಿನ ಆವತಿ)ಯಲ್ಲಿ ನೆಲಸಿದ. ರಣಭೈರೇಗೌಡನ ಜೊತೆಯಲ್ಲಿ ಮಲ್ಲಭೈರೇಗೌಡ, ಸಣ್ಣಭೈರೇಗೌಡ, ವೀರೇಗೌಡ ಎಂಬ ಅವನ ತಮ್ಮಂದಿರೂ ಜಯಗೌಡ, ಸಣ್ಣಭೈರೇಗೌಡ, ಮಲ್ಲಭೈರೇಗೌಡ ಎಂಬ ಮಕ್ಕಳೂ ಇದ್ದರು. ಸ್ವಲ್ಪ ಕಾಲದಲ್ಲಿಯೇ ಇವರೆಲ್ಲ ಬೇರೆ ಬೇರೆ ಭಾಗಗಳಿಗೆ ಹೋಗಬೇಕೆಂದು ತೀರ್ಮಾನಿಸಿಕೊಂಡರು. ರಣಭೈರೇಗೌಡ ಆವತಿಯಲ್ಲಿಯೇ ನೆಲಸಿದ. ಅವನ ಮಕ್ಕಳು ದೇವನಹಳ್ಳಿ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ ಈ ಸ್ಥಳಗಳಲ್ಲಿ ಪಾಳೆಯಪಟ್ಟುಗಳನ್ನು ಸ್ಥಾಪಿಸಿದರು. ಸಣ್ಣಭೈರೇಗೌಡ ಹೊಳವನಹಳ್ಳಿಯಲ್ಲಿ ನೆಲಸಿ ತುಮಕೂರು ಜಿಲ್ಲೆಯ ಕೊರಟಗೆರೆಯನ್ನು ಸ್ಥಾಪಿಸಿದ. ಈ ವಂಶದ ತಿಮ್ಮೇಗೌಡ ಜಂಗಮಕೋಟೆಯ ಹತ್ತಿರದಲ್ಲಿರುವ ಸುಗಟೂರಿಗೆ ಹೋಗಿ ಕೋಲಾರ ಮತ್ತು ಪುಂಗನೂರಿನ ಪಾಳೆಯಗಾರನಾಗಿ ಹೊಸಕೋಟೆಯನ್ನು ಸ್ಥಾಪಿಸಿದ. ಏಳನೆಯವನಾದ ಜಯಗೌಡ ಯಲಹಂಕದಲ್ಲಿ ನೆಲಸಿದ. ಇವನ ವಂಶಸ್ಥರು ಬೆಂಗಳೂರು ಮತ್ತು ಮಾಗಡಿ ಪಾಳೆಯಪಟ್ಟುಗಳನ್ನು ಸ್ಥಾಪಿಸಿದರು, ಅಲ್ಲದೆ ಆವತಿ ಕುಲದ ಇತರ ಶಾಖೆಗಳವರು ಗುಡಿಬಂಡೆ, ಮದ್ದಗಿರಿ, ಮಿಡಿಗೇಶಿ, ಹೆಬ್ಬೂರು, ಕುಣಿಗಲು, ಗುಬ್ಬಿ, ಆನೇಕಲ್ಲು, ನಂದಿ, ಹೊಸಕೋಟೆ, ಮುಳಬಾಗಿಲು, ಸರ್ಜಾಪುರ ಮೊದಲಾದೆಡೆಗಳಲ್ಲೂ ನೆಲಸಿದರು (ಈ ಪಾಳೆಯಪಟ್ಟುಗಳ ವಿಷಯವನ್ನು ಆಯಾ ಶೀರ್ಷಿಕೆಗಳಲ್ಲಿ ಕೊಡಲಾಗಿದೆ). (ಎಚ್.ವಿ.ಎಸ್.)

**ಆವನಿ :** ಕೋಲಾರ ಜಿಲ್ಲೆ ಮುಳಬಾಗಿಲು ತಾಲ್ಲೂಕಿನಲ್ಲಿ ಮುಳಬಾಗಿಲಿನಿಂದ ಸು.11ಕಿಮೀ ನೈಋತ್ಯಕ್ಕಿರುವ ಒಂದು ಪುಣ್ಯಕ್ಷೇತ್ರ. ಇದೇ ಹೆಸರಿನ ಹೋಬಳಿಯ ಮುಖ್ಯಸ್ಥಳ. ಗ್ರಾಮದ ಪರಿಸರದಲ್ಲಿಯೂ ಸಮೀಪದ ಬೆಟ್ಟದ ಮೇಲೆಯೂ ಇರುವ ಅನೇಕ ದೇವಾಲಯಗಳು ಮತ್ತು ಶಿಲಾಶಾಸನಗಳು ಇದರ ಪ್ರಾಚೀನ ಪ್ರಾಮುಖ್ಯವನ್ನು ಸಾರುತ್ತವೆ. ಊರಿನ ಪೂರ್ವದ ಹೆಸರು ಆಹವನೀಯ, ಆವನ್ಯ, ಆವಣಿ ಇತ್ಯಾದಿಯಾಗಿದ್ದಿತೆಂದು ಶಾಸನಗಳಿಂದ ತಿಳಿದುಬರುತ್ತದೆ. ಸ್ಥಳೀಯ ನಂಬಿಕೆಗಳ ಪ್ರಕಾರ ಈ ಗ್ರಾಮ ಮತ್ತು ಸುತ್ತಮುತ್ತಲ ಪ್ರದೇಶ ಪುರಾಣಪ್ರಸಿದ್ಧವಾದ ಆವಂತಿಕಾ ಕ್ಷೇತ್ರ; ವಾಲ್ಮೀಕಿ ಋಷಿಯ ಆಶ್ರಮವಿದ್ದುದು ಇಲ್ಲಿಯ ಬೆಟ್ಟದಲ್ಲಿಯೇ; ರಾಮ ಲಂಕೆಯನ್ನು ಗೆದ್ದು ಅಯೋಧ್ಯೆಗೆ ಹಿಂತಿರುಗುವ ಹಾದಿಯಲ್ಲಿ ಇಲ್ಲಿಗೆ ಬಂದಿದ್ದನಂತೆ; ಸೀತಾದೇವಿ ಗಂಡನಿಂದ ಕಾಡಿಗೆ ಕಳುಹಿಸಲ್ಪಟ್ಟಾಗ ಇಲ್ಲಿ ಬಂದು ತಂಗಿ ಲವಕುಶರಿಗೆ ಜನ್ಮವಿತ್ತಳೆಂದೂ ಲವಕುಶರು ರಾಮನ ಯಜ್ಞಾಶ್ವವನ್ನು ಕಟ್ಟಿ ರಾಮನೊಡನೆ ಇಲ್ಲಿಯೇ ಯುದ್ಧ ಮಾಡಿದರೆಂದೂ ಐತಿಹ್ಯ. ಈ ಘಟನೆಗಳಿಗೆ ಸಂಬಂಧಪಟ್ಟಂತೆ, ಈ ಸುತ್ತಿನ ಅನೇಕ ತಾಣಗಳು ವಾಲ್ಮೀಕಿಯ ಕುಟೀರ, ಲವಕುಶರ ತೊಟ್ಟಿಲು, ಸೀತೆಯ ಅಡುಗೆಪಾತ್ರೆ, ಅವಳು ಬಟ್ಟೆಯೊಗೆಯುತ್ತಿದ್ದ ಕೊಳ, ಲವಕುಶರು ಯಜ್ಞಾಶ್ವವನ್ನು ಕಟ್ಟಿದ ಬಂಡೆ, ರಾಮಲಕ್ಷ್ಮಣರು ಕುಳಿತಿದ್ದ ಬಂಡೆ ಇತ್ಯಾದಿಯಾಗಿ ಪ್ರಸಿದ್ಧವಾಗಿವೆ.



ರಾಮಲಿಂಗೇಶ್ವರ ದೇವಾಲಯ

ಅತ್ಯಂತ ಪ್ರಾಚೀನ ದೇವಾಲಯಗಳು ಬೆಟ್ಟದ ನೈಋತ್ಯದಲ್ಲಿ ಒಂದು ದೊಡ್ಡ ಪ್ರಾಂಗಣದ ಮಧ್ಯೆ ಇವೆ. ಇವೆಲ್ಲವೂ ಶೈವ ದೇವಾಲಯಗಳು. ಮಧ್ಯದಲ್ಲಿ ಪಾರ್ವತಿ ದೇವಾಲಯವೂ ಅದರ ಸುತ್ತಲೂ ರಾಮೇಶ್ವರ, ಲಕ್ಷ್ಮಣೇಶ್ವರ, ಭರತೇಶ್ವರ, ಶತ್ರುಘ್ನೇಶ್ವರ, ಸುಗ್ರೀವೇಶ್ವರ, ಅಂಜನೇಶ್ವರ ಮುಂತಾದ ಗುಡಿಗಳಿವೆ. ಇವುಗಳಲ್ಲಿ ಲಕ್ಷ್ಮಣೇಶ್ವರ ಗುಡಿ ಅತ್ಯಂತ ಸುಂದರ ಕಟ್ಟಡ. ಗರ್ಭಗೃಹ, ಅಂತರಾಳ ಮತ್ತು ನವರಂಗವಿರುವ

ಈ ಗುಡಿಯ ಹೊರಮೈಯಸುತ್ತಲೂ ಬುಡದಲ್ಲಿ ಆನೆ, ಸಿಂಹ, ಯಾಳಿ, ಮಕರ, ಕುದರೆಲಾಳದಾಕೃತಿಯ ಕಮಾನುಗಳು ಇವುಗಳಿಂದ ಅಲಂಕೃತವಾದ ಆರು ಪಟ್ಟಿಕೆಗಳಿವೆ. ಮೇಲೆ ಅಲ್ಲಲ್ಲಿ ಯಕ್ಷ, ಶಿವ, ದುರ್ಗಿ, ಗಣೇಶ, ಭೈರವ, ಭೈರವಿ, ವಿಷ್ಣು ಮುಂತಾದ ಶಿಲ್ಪಗಳಿರುವ, ಸಮಾನಾಂತರಗಳಲ್ಲಿ ಅರ್ಧಕಂಬಗಳಿಂದ (ಪಿಲ್ಯಾಸ್ಟರ್) ಭೇದಿಸಲ್ಪಟ್ಟ ಎತ್ತರವಾದ ಭಿತ್ತಿಯಿದೆ. ಇದರಲ್ಲಿ ಮಧ್ಯೆ ಮಧ್ಯೆ ಮಹಿಷಾಸುರಮರ್ದಿನಿ, ಸೂರ್ಯ, ನಟರಾಜ ಮುಂತಾದ ವಿಗ್ರಹಗಳನ್ನೊಳಗೊಂಡ ಜಾಲಂಧ್ರಗಳೂ ಇದ್ದು ದೇವಾಲಯದ ಸೊಬಗನ್ನು ಹೆಚ್ಚಿಸಿವೆ. ಒಳಭಾಗದ ನವರಂಗದಲ್ಲಿ ಮಧ್ಯೆ ಉಮಾಮಹೇಶ್ವರ ಮತ್ತು ಸುತ್ತಲೂ ಅಷ್ಟ ದಿಕ್ಪಾಲಕರ ಕೆತ್ತನೆಯಿರುವ ಒಂದು ಮೋಹಕ ಭುವನೇಶ್ವರಿಯಿದೆ. ರಚನಾರೀತಿಯಲ್ಲಿ, ಲಕ್ಷ್ಮಣೇಶ್ವರ ದೇವಾಲಯ ಕಂಚಿಯ ದೇವಾಲಯಗಳ ಸಂಪ್ರದಾಯದಿಂದ ಬೆಳೆದು ಬಂದ ನೊಳಂಬವಾಸ್ತುಶಿಲ್ಪ ಶೈಲಿಯ ಒಂದು ಉತ್ತಮ ಪ್ರತೀಕವಾಗಿದೆ. ವಾಸ್ತು ಶೈಲಿಯಿಂದ ಮತ್ತು ಸ್ಥಳೀಯ ಶಾಸನಗಳ ಸಾಂದರ್ಭಿಕ ಮಾಹಿತಿಗಳಿಂದ ಈ ದೇವಾಲಯ ಹತ್ತನೆಯ ಶತಮಾನದಲ್ಲಿ ಕಟ್ಟಲಾಗಿರಬೇಕೆಂದು ಹೇಳಬಹುದು. ಆದರೆ ದೇವಾಲಯದ ಮೇಲುಭಾಗದಲ್ಲಿರುವ ಗೋಪುರ ಮುಂತಾದ ಇಟ್ಟಿಗೆಯ ಸೇರ್ಪಡೆಗಳು ಬಹುಶಃ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಆದವುಗಳು.

ಶತ್ರುಘ್ನೇಶ್ವರ, ಅಂಜನೇಶ್ವರ ಮತ್ತು ಭರತೇಶ್ವರ ದೇವಾಲಯಗಳೂ ಸುಮಾರು ಲಕ್ಷ್ಮಣೇಶ್ವರದ ಮಾದರಿಯವೇ. ಕಾಲದಲ್ಲೂ ಇವುಗಳಲ್ಲಿ ಬಹಳಷ್ಟು ಅಂತರವಿರಲಾರದೆಂಬುದು ಈ ಕೆಲವು ದೇವಾಲಯಗಳಲ್ಲಿ ಕಂಡುಬಂದಿರುವ ನೊಳಂಬ ಮತ್ತು ಗಂಗರ ಶಾಸನಗಳಿಂದ ಸಿದ್ಧವಾಗುತ್ತದೆ. ಇದೇ ಕಾಲದ ರಾಮೇಶ್ವರ ದೇವಾಲಯದ ದ್ರಾವಿಡ ಶೈಲಿಯ ಮೂಲ ಶಿಖರವನ್ನು ಇನ್ನೂ ಉಳಿಸಿಕೊಂಡಿದೆ. ಈ ದೇವಾಲಯದಲ್ಲಿ ಮೂಲಗರ್ಭಗುಡಿ ಮತ್ತು ನವರಂಗದ ಕೆಲವು ಭಾಗಗಳು ರಚನಾರೀತಿಯಲ್ಲಿ ಇತರ ಸಮಕಾಲೀನ ದೇವಾಲಯಗಳಂತೆಯೇ ಇದ್ದರೂ ಮುಂದೆ 12-13ನೆಯ ಶತಮಾನದ ಕೆಲವು ಸೇರ್ಪಡೆಗಳಿಂದಾಗಿ ಕಟ್ಟಡದ ಅಂದಕ್ಕೆ ಸ್ವಲ್ಪ ಕುಂದುಬಂದಿದೆ. ಮಧ್ಯದಲ್ಲಿರುವ ಪಾರ್ವತಿ ದೇವಾಲಯ ಗರ್ಭಗೃಹ, ನವರಂಗ ಮತ್ತು ಮುಖಮಂಟಪಗಳನ್ನೊಗೊಂಡಿರುವ ಸಾಮಾನ್ಯ ಕಟ್ಟಡ. ಇಲ್ಲಿಯ ವಾಸ್ತು ರಚನೆಯಲ್ಲಾಗಲೀ ಶಿಲ್ಪಗಳಲ್ಲಾಗಲೀ ಈ ಹಿಂದಿನ ದೇವಾಲಯಗಳಲ್ಲಿರುವ ಪ್ರಬುದ್ಧತೆ ಕಂಡುಬರುವುದಿಲ್ಲ. 13ನೆಯ ಶತಮಾನದಲ್ಲಿ ಕೋಲಾರ ಪ್ರದೇಶದಲ್ಲಿ ಆಳುತ್ತಿದ್ದ ತಮಿಳು ಗಂಗ ಅರಸು ಇಳವಂಜಿ ವಾಸುದೇವರಾಯ ಇದನ್ನು ಕಟ್ಟಿಸಿರಬಹುದೆಂದು ಊಹಿಸಲು ಆಧಾರಗಳಿವೆ. ದೇವಾಲಯದ ಒಳಗೆ ಇಳವಂಜಿ ವಾಸುದೇವರಾಯ ಮತ್ತು ಅವನ ತಮ್ಮನದೆಂದು ಹೇಳಲಾಗುವ ಎರಡು ಭಕ್ತವಿಗ್ರಹಗಳಿವೆ. ಈ ದೇವಾಲಯಗಳ ಗುಂಪಿನಲ್ಲೇ ಇರುವ ಕಾಮಾಕ್ಷಿ ಮತ್ತು ಇತರ ಗುಡಿಗಳು ಅನಂತರದ ಕಟ್ಟಡಗಳು.

ಬೆಟ್ಟ ಹತ್ತುವಲ್ಲಿ ಸಿಗುವ ಒಂದು ಗುಹೆಯನ್ನು ವಾಲ್ಮೀಕಿ ಗುಹೆ ಎಂದು ಕರೆಯುತ್ತಾರೆ. ಇದರ ಸಮೀಪದಲ್ಲಿ ಚೋಳ ಸಂಪ್ರದಾಯದ ಒಂದು ದೇವಾಲಯವಿದೆ. ಇಲ್ಲಿಂದ ಅನತಿ ದೂರದಲ್ಲಿರುವ ಏಕಾಂತರಾಮಯ್ಯನ ದೇವಾಲಯ ಸಹ ಚೋಳ ಸಂಪ್ರದಾಯದ ಕಟ್ಟಡ. ಆದರೆ ಇದರ ನವರಂಗ ಭಾಗ ಹೊಯ್ಸಳ ಮುಮ್ಮಡಿ ಬಲ್ಲಾಳನ ಕಾಲಕ್ಕೆ ಸೇರಿದುದು. ಬೆಟ್ಟದ ಮೇಲುಗಡೆ ಇರುವ ಸೀತಾಪಾರ್ವತಿ ಗುಡಿ ಹೊರನೋಟಕ್ಕೆ ಈಚಿನ ಬಹುಸಾಮಾನ್ಯ ಕಟ್ಟಡದಂತೆ ಕಂಡರೂ ಒಳಭಾಗ ಪುರಾತನವಾದುದು. ಇದು ನೊಳಂಬ ಅರಸರ ಕಾಲದ (9-10ನೆಯ ಶತಮಾನ) ಗುಹಾ ದೇವಾಲಯವೆಂದು ಕಾಣುತ್ತದೆ. ಆವನಿ ಗ್ರಾಮದಲ್ಲೂ ಬೆಟ್ಟದ ಮೇಲೂ 9-10ನೆಯ ಶತಮಾನದಿಂದ ಹಿಡಿದು ಇತ್ತೀಚಿನ ವರೆಗಿನ ಗಂಗ, ನೊಳಂಬ, ಚೋಳ, ಹೊಯ್ಸಳ, ತಮಿಳುಗಂಗ, ವಿಜಯನಗರ ಮತ್ತು ಪಾಳೆಯಗಾರರ ಆಳ್ವಿಕೆಗೆ ಸಂಬಂಧಿಸಿದ ಐವತ್ತಕ್ಕೂ ಹೆಚ್ಚು ಶಾಸನಗಳು ಬೆಳಕಿಗೆ ಬಂದಿವೆ.

ಆವನಿಯಲ್ಲಿ ಸ್ಮಾರ್ತ ಸಂಪ್ರದಾಯದ ಮಠವೊಂದಿದೆ. ಮಾಘ ಬಹುಳ 14ರಂದು ರಾಮೇಶ್ವರನ ಜಾತ್ರೆ ನಡೆಯುತ್ತದೆ. ಜಾತ್ರೆಯ ಕಾಲದಲ್ಲಿ ದನಗಳ ಪರಿಷೆಯೂ ನಡೆಯುತ್ತದೆ. *

**ಆಸಂದಿ :** ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕಿನ ಒಂದು ಗ್ರಾಮ. ಅಜ್ಜಂಪುರದ ಆಗ್ನೇಯಕ್ಕೆ 11ಕಿಮೀ ದೂರದಲ್ಲಿದೆ. ಗಂಗರ ಮತ್ತು ಹೊಯ್ಸಳರ ಕಾಲದಲ್ಲಿ ಇದು ಆಸಂದಿನಾಡು ಎಂಬ ಆಡಳಿತ ಪ್ರಾಂತ್ಯದ ಮುಖ್ಯ ಸ್ಥಳವಾಗಿದ್ದಿತು. ಎಂಟನೆಯ ಶತಮಾನದಲ್ಲಿ ಇದು ಶ್ರೀಪುರುಷನ ಮಗ ವಿಜಯಾದಿತ್ಯನ ಆಳ್ವಿಕೆಗೂ ಹನ್ನೆರಡು, ಹದಿಮೂರನೆಯ ಶತಮಾನಗಳಲ್ಲಿ ಗಂಗವಂಶದ ಒಂದು ಶಾಖೆಯ ಆಡಳಿತಕ್ಕೂ ಒಳಪಟ್ಟಿತ್ತು. ಇಲ್ಲಿನ ಪಾಳು ಬಿದ್ದಿರುವ ದೇವಾಲಯಗಳೂ ದೊರೆತಿರುವ ಶಾಸನಗಳೂ ಇದು ಹಿಂದೆ ಪ್ರಸಿದ್ಧಿಪಡೆದ ಸ್ಥಳವೆಂಬ ಅಂಶವನ್ನು ಸ್ಪಷ್ಟಪಡಿಸುತ್ತವೆ. (ಎಸ್.ಎ.ಎಸ್)

1206ರ ಒಂದು ಶಾಸನದಿಂದ ಇಲ್ಲಿ 13 ಶೈವದೇವಾಲಯಗಳಿದ್ದುವೆಂದು ತಿಳಿಯುತ್ತದೆ. ಈಗ ಮೂರು ಮಾತ್ರ ಉಳಿದಿವೆ. ಮುಖ್ಯವಾದ್ದು ಗಂಗೇಶ್ವರ, ಬ್ರಹ್ಮೇಶ್ವರ ದೇವಾಲಯಗಳು. ವಸ್ತುತಃ ಇವೆರಡೂ ಎರಡು ಗುಡಿಗಳಿರುವ ಒಂದೇ ದೇವಾಲಯ. ಇದು ಇಲ್ಲಿ ಆಳುತ್ತಿದ್ದ ಸಾಮಂತ ಗಂಗ ಅರಸನಿಂದ 1191ರಲ್ಲಿ ರಚಿತವಾಯಿತು. ಎರಡು ಗುಡಿಗಳೂ, ಹಿನ್‌ಸರಿತ ಮುನ್‌ಸರಿತಗಳಿಂದ ಕೂಡಿದ ಪರಿಘವಿರುವ ಆಯಾಕಾರದ ತಳವಿನ್ಯಾಸದಲ್ಲಿವೆ. ಗರ್ಭಗುಡಿ, ಅಂತರಾಳ ಮತ್ತು ತೆರೆದ ಮಂಟಪಗಳಿವೆ. ಹೊರಮೈಯಲ್ಲಿ ಅಡ್ಡಪಟ್ಟಿಕೆಗಳ ಅಧಿಷ್ಠಾನ, ಶಿಖರಾಕೃತಿಗಳು, ಸಿಂಹ ಲಲಾಟಗಳನ್ನು ಕೆತ್ತಿರುವ ಅರೆಗಂಬಗಳಿಂದ ಕೂಡಿದ ಭಿತ್ತಿ ಇವೆ. ಶಿಖರಗಳು ಉಳಿದಿಲ್ಲ. ಒಳಕಂಬಗಳು ಹೊಯ್ಸಳ ರೀತಿಯವು. ದ್ವಾರಬಂಧಗಳು ಮತ್ತು ಭುವನೇಶ್ವರಿಗಳಲ್ಲಿ ಸುಂದರವಾದ ಕೆತ್ತನೆಗಳಿವೆ.

ಇಲ್ಲಿನ ವೀರಭದ್ರ ದೇವಾಲಯ 1205ರಲ್ಲಿ ಹರಹ ಸಾಹಣಿ ಎಂಬುವನಿಂದ ರಚಿತವಾದ್ದು. ಶಾಸನಗಳಲ್ಲಿ ದೇವರನ್ನು ಬಲ್ಲೇಶ್ವರ ಎಂದು ಹೆಸರಿಸಲಾಗಿದೆ. ಇದೊಂದು ತ್ರಿಕೂಟಾಚಲ. ಮೂರು ಗರ್ಭಗೃಹಗಳು, ಅಂತರಾಳ, ನವರಂಗ ಮತ್ತು ಮುಖಮಂಟಪವಿರುವ ಕಟ್ಟಡ. ಹೊರಮೈಯಲ್ಲಿ ಶಿಲ್ಪಾಲಂಕರಣಗಳು, ಒಳಗೆ ಹೊಯ್ಸಳ ಮಾದರಿಯ ಕಂಬಗಳು, ಕುಸುರಿ ಕೆತ್ತನೆಯ ಬಾಗಿಲುವಾಡ, ಭುವನೇಶ್ವರಿಗಳು ಇದ್ದು ಇದೊಂದು ಉತ್ತಮ ಹೊಯ್ಸಳ ವಾಸ್ತುಕೃತಿಯ ಉದಾಹರಣೆಯಾಗಿದೆ. ಹೊರಭಿತ್ತಿಯ ಶಿಲ್ಪಗಳಲ್ಲಿ ತಾಂಡವೇಶ್ವರ, ತ್ರಿವಿಕ್ರಮ ಮೊದಲಾದವು ಅನುಪಮ ಸುಂದರ ಕೃತಿಗಳು. ಒಳಗಿರುವ ವೀರಭದ್ರಮೂರ್ತಿ ಇತ್ತೀಚಿನದು. ದೇವಾಲಯದಲ್ಲಿ ಕೆಲವು ಕಂಚಿನ ಮೂರ್ತಿಗಳಿವೆ.

ಇಲ್ಲಿನ ಇನ್ನೊಂದು ದೇವಾಲಯ ಚಂಡಿಕೇಶ್ವರನದು. ಇದೂ ಬಹುಶಃ ಹೊಯ್ಸಳ ಕಾಲದ್ದಾದರೂ ಹೆಚ್ಚಿನ ಅಲಂಕರಣಗಳಿಲ್ಲದ ಸಾಮಾನ್ಯ ಕಟ್ಟಡ. *

**ಆಸಫ್‌ಜಾಹೀ ಆಳ್ವಿಕೆ :** 1724-1948. ಹೈದರಾಬಾದನ್ನು ರಾಜಧಾನಿಯಾಗಿ ಮಾಡಿಕೊಂಡು ಆಳುತ್ತಿದ್ದ ಆಸಫ್‌ಜಾಹೀ ರಾಜವಂಶದವರು ಉತ್ತರ ಕರ್ನಾಟಕದ ಪೂರ್ವಾರ್ಧದ ಭಾಗದ ಮೇಲೆ ಎರಡು ಶತಮಾನಗಳಿಗೂ ಹೆಚ್ಚುಕಾಲ ಒಡೆತನ ಹೊಂದಿದ್ದರು. ಈ ವಂಶದ ಸ್ಥಾಪಕನಿಗೆ ಆಸಫ್‌ಜಾ ಎಂದು ಬಿರುದಿದ್ದುದರಿಂದ ಇವನ ಮನೆತನ ಆಸಫ್‌ಜಾಹೀ ಎಂದೇ ಪ್ರಸಿದ್ಧವಾಯಿತು. ಈ ವಂಶದವರು ನಿಜಾಮ್-ಉಲ್-ಮುಲ್ಕ್ ಎಂಬ ಬಿರುದನ್ನೂ ಉಪಯೋಗಿಸುತ್ತಿದ್ದುದರಿಂದ ಇವರಿಗೆ ಹೈದರಾಬಾದಿನ ನಿಜಾಮರು ಎಂಬ ಹೆಸರೂ ಪ್ರಚಲಿತವಾಗಿದೆ. ಕನ್ನಡನಾಡಿನ ಆಸಫ್‌ಜಾಹಿಗಳ ನೇರ ಕಾಣಿಕೆ ಹೆಚ್ಚಿಲ್ಲದಿದ್ದರೂ 18ನೆಯ ಶತಮಾನದ ಕರ್ನಾಟಕದ ರಾಜಕೀಯದಲ್ಲಿ ಇವರು ಗಣನೀಯ ಪಾತ್ರವಹಿಸಿದ್ದರು. ಬಹುಕಾಲ ಇವರ ಆಳ್ವಿಕೆಗೆ ಒಳಪಟ್ಟಿದ್ದ ರಾಯಚೂರು, ಗುಲ್ಬರ್ಗ ಮತ್ತು ಬಿದರೆ ಜಿಲ್ಲೆಗಳಲ್ಲಿ (ಹೈದರಾಬಾದು ಕರ್ನಾಟಕ) ವಿಶಿಷ್ಟರೀತಿಯ ಆಡಳಿತ ವ್ಯವಸ್ಥೆ ಮತ್ತು ಸಾಂಸ್ಕೃತಿಕ ಸ್ಥಿತಿ ಮೂಡಲು ಕಾರಣರಾದರು.

**ರಾಜಕೀಯ ಇತಿಹಾಸ:** 1686ರಲ್ಲಿ ಬಿಜಾಪುರದ ಆದಿಲ್‌ಶಾಹಿಗಳ ಆಳ್ವಿಕೆ ಕೊನೆಗೊಂಡು ಅವರ ವಶದಲ್ಲಿದ್ದ ಕರ್ನಾಟಕದ ಭಾಗವೆಲ್ಲ ಮುಗಲರ ಕೈಸೇರಿತು. ಮುಗಲರು ರೂಢಿಗೆ ತಂದ ರಾಜ್ಯವ್ಯವಸ್ಥೆಯಲ್ಲಿ ರಾಜ್ಯ ಹಲವು ಸುಬಾಗಳಾಗಿ (ಪ್ರಾಂತ್ಯ) ವಿಭಾಗಿತವಾಗಿರುತ್ತಿತ್ತು. ಪ್ರತಿಯೊಂದು ಸುಬಾಕ್ಕೂ ಒಬ್ಬ ಸುಬೇದಾರ (ಪ್ರಾಂತ್ಯಾಧಿಕಾರಿ) ಮುಖ್ಯಸ್ಥನಾಗಿರುತ್ತಿದ್ದ. ಮುಗಲರ ವಶವಾದ ಕರ್ನಾಟಕದ ಭಾಗ ದಖಿನ್

ಸುಬಾಕ್ಕೆ ಸೇರಿತ್ತು. ಔರಂಗಜೇಬನ ಮರಣಾನಂತರ ಮುಗಲ ಸಾಮ್ರಾಜ್ಯದಲ್ಲಿ ಉದಯಿಸಿದ್ದ ಅಸ್ತವ್ಯಸ್ತ ಪರಿಸ್ಥಿತಿಯ ಲಾಭ ಪಡೆದು ದಖನ್‌ನ ಸುಬೇದಾರನಾಗಿ ಹೈದರಾಬಾದಿನಲ್ಲಿದ್ದ ಮೀರ್ ಕಮ್ರುದ್ದೀನ್ ಚಿನ್ ಕುಲಿಕ್ ಖಾನ್ ಆಸಫ್ ಜಾ ಎಂಬುವನು 1724ರಲ್ಲಿ ಸ್ವಾತಂತ್ರ್ಯ ಸಾರಿಕೊಂಡು ಈ ಭಾಗದಲ್ಲಿ ತನ್ನ ಮನೆತನದ ಆಳ್ವಿಕೆಯನ್ನು ಪ್ರಾರಂಭಿಸಿದ.

ಮೊದಲನೆಯ ಆಸಫ್ ಜಾ (1724-48) ಚತುರ ರಾಜಕಾರಣಿ, ಸಮರ್ಥ ಸೇನಾನಾಯಕ. ಇವನ ರಾಜ್ಯ ಒಂದು ಕಾಲದಲ್ಲಿ ಒರಿಸ್ಸಾದಿಂದ ಹಿಡಿದು ತಂಜಾವೂರಿನವರೆಗಿನ ಇಡೀ ಕಡಲತೀರ ಹಾಗೂ ಗುಲ್ಬರ್ಗ, ಬಿದರೆ, ಬಿಜಾಪುರ, ಧಾರವಾಡ, ರಾಯಚೂರು ಜಿಲ್ಲೆಗಳ ಪ್ರದೇಶಗಳನ್ನೂ ಒಳಗೊಂಡಿತ್ತು. ಇವನ ಕಾಲದಲ್ಲಿ ಉತ್ತರ ಕರ್ನಾಟಕದ ಪಶ್ಚಿಮ ಭಾಗದಲ್ಲಿ ಮರಾಠರು ಪ್ರಬಲಿಸಿದ್ದರು. ಆದರೆ ಪೂರ್ವದಲ್ಲಿ ತುಂಗಭದ್ರಾನದಿಯ ಉತ್ತರ ಭಾಗವೆಲ್ಲ ಇವನ ವಶದಲ್ಲಿದ್ದುದಲ್ಲದೆ ಬಿಜಾಪುರ ಜಿಲ್ಲೆಯಲ್ಲಿ ಕೃಷ್ಣಾನದಿಯ ಉತ್ತರಕ್ಕಿದ್ದ ಪ್ರದೇಶವೂ ಇವನಿಗೆ ಸೇರಿತ್ತು. ಆ ಭಾಗಕ್ಕೆ ನಾಸಿರ್‌ಜಂಗ್‌ನನ್ನು ಪ್ರಾಂತ್ಯಾಧಿಕಾರಿಯಾಗಿ ನೇಮಿಸಿದ್ದ. ಅನಂತರ ಈತ ದಂಗೆಯೆದ್ದುದರಿಂದ ಆ ಭಾಗಕ್ಕೆ ಮುಜಫರ್‌ಜಂಗ್ ಅಧಿಕಾರಿಯಾದ. ಕೃಷ್ಣಾನದಿಯ ದಕ್ಷಿಣಕ್ಕಿದ್ದ ಬಿಜಾಪುರ ಜಿಲ್ಲೆಯ ಭಾಗಗಳು ಮತ್ತು ಧಾರವಾಡ ಜಿಲ್ಲೆಯ ಬಹುತೇಕ ಪ್ರದೇಶವನ್ನು ಸವಣೂರು ನವಾಬರು ಆಸಫ್‌ಜಾನ ಅಧೀನರಾಗಿ ಆಳುತ್ತಿದ್ದರು. 1746ರ ಸುಮಾರಿನಲ್ಲಿ ಆದ ಒಪ್ಪಂದದ ಪ್ರಕಾರ ಬಾದಾಮಿ ಮತ್ತು ಬಾಗಲಕೋಟೆಯ ಭಾಗಗಳನ್ನು ನಿಜಾಮ ಮರಾಠರಿಗೆ ಒಪ್ಪಿಸಿದ. ಆದರೆ ಉತ್ತರ ಕರ್ನಾಟಕದ ಬಹುಭಾಗದಲ್ಲಿ ಸ್ಥಳೀಯ ಆಡಳಿತಗಾರರು, ಮರಾಠರು ಹಾಗೂ ನಿಜಾಮ ಎಲ್ಲರೂ ಸಮಯ ಬಂದಂತೆ ತೆರಿಗೆಗಳನ್ನು ವಸೂಲಿಮಾಡುವ ವಿಚಿತ್ರ ಪರಿಸ್ಥಿತಿಯಿತ್ತು.

*

1748ರಲ್ಲಿ ಮೊದಲನೆಯ ಆಸಫ್ ಜಾ ನಿಧನನಾದಾಗ ಇವನ ಎರಡನೆಯ ಮಗ ನಾಸಿರ್‌ಜಂಗ್‌ನಿಗೂ ಮಗಳ ಮಗ ಮುಜಫರ್ ಜಂಗ್‌ನಿಗೂ ಅಧಿಕಾರಕ್ಕಾಗಿ ಕಚ್ಚಾಟ ನಡೆಯಿತು. ಫ್ರೆಂಚರೂ ಬ್ರಿಟಿಷರೂ ಇವರ ಪಕ್ಷಗಳನ್ನು ವಹಿಸಿದರು. ಫ್ರೆಂಚರು ಬೆಂಬಲಿಸಿದ ಮುಜಫರ್‌ಜಂಗ್ ನಿಜಾಮನಾದ. ಆದರೆ 1751ರಲ್ಲಿ ಕೊಲೆಯಾದ. ಅನಂತರ ನಾಸಿರ್‌ಜಂಗ್‌ನ ತಮ್ಮ ಸಲಾಬತ್‌ಖಾನ್ ನಿಜಾಮನಾದ. ಇವನ ಕಾಲದಲ್ಲಿ ರಾಜ್ಯದಲ್ಲಿ ಫ್ರೆಂಚರ ಪ್ರಾಬಲ್ಯ ಹೆಚ್ಚಿತು. ಇದೇ ಕಾರಣದಿಂದ ಇಂಗ್ಲಿಷರೊಡನೆಯೂ ಯುದ್ಧಗಳನ್ನು ಮಾಡಬೇಕಾಯಿತು. ಜನವರಿ 1755ರಲ್ಲಿ ಬುಸ್ಸಿಯ ನೆರವಿನಿಂದ ಈತ ಮೈಸೂರಿಗೆ ದಂಡೆತ್ತಿಬಂದು ನಂಜರಾಜನಿಂದ 52 ಲಕ್ಷ ರೂಪಾಯಿಗಳಷ್ಟು ಅಪಾರ ಹಣವನ್ನು ಪರಿಹಾರವಾಗಿ ಪಡೆದುಕೊಂಡ. ಒಂದೇ ಸಮನೆ ದೂರದ ಯುದ್ಧಗಳಲ್ಲಿ ನಿರತನಾಗಿದ್ದ ಸಂದರ್ಭವನ್ನು ಉಪಯೋಗಿಸಿ ಸವಣೂರು ನವಾಬರು ಸ್ವತಂತ್ರರಾದರು. 1759ರ ಸುಮಾರಿನಲ್ಲಿ ಸಲಾಬತ್‌ನ ಸೈನಿಕರಲ್ಲೇ ಅತೃಪ್ತಿಮೂಡಿತು. ಆಗ ಬಿಜಾಪುರದ ಜಮೀನ್ದಾರರಿಂದ ಹಣ ಸೆಳೆದು ಸೈನಿಕರನ್ನು ನಿಭಾಯಿಸುವ ಪ್ರಯತ್ನ ನಡೆಯಿತು. ಪೇಶ್ವೆ ಬಾಲಾಜಿ ಈ ಸಂದರ್ಭದಲ್ಲಿ ಸಲಾಬತ್ ಜಂಗನನ್ನು ಸೋಲಿಸಿ ಹುನಗುಂದ ಭಾಗವನ್ನು ಬಿಟ್ಟು ಬಿಜಾಪುರ ಜಿಲ್ಲೆಯ ಮಿಕ್ಕೆಲ್ಲಾ ಪ್ರದೇಶವನ್ನೂ ವಶಪಡಿಸಿಕೊಂಡ. ಆ ಹೊತ್ತಿಗೆ ಇಂಗ್ಲಿಷರ ನೆರವು ಪಡೆದಿದ್ದ ಸಲಾಬತನ ತಮ್ಮ ನಿಜಾಮ್ ಅಲಿ ಖಾನ್ ಪ್ರಬಲನಾಗಿದ್ದ. ಆದ್ದರಿಂದ ಸಲಾಬತ್ ಅವನೊಡನೆ ಒಪ್ಪಂದ ಮಾಡಿಕೊಂಡು ಅವನನ್ನು ಪ್ರಧಾನಿಯಾಗಿ ನೇಮಿಸಿದ. ಇವನು 1761ರಲ್ಲಿ ತನ್ನ ಸಹೋದರನನ್ನು ಕೊಲೆಮಾಡಿ ತಾನೇ ನಿಜಾಮನಾದ (1761-1803). ಹೈದರನ ರಾಜಕೀಯ ಪ್ರಾಬಲ್ಯ ಬೆಳೆಯುತ್ತಿದ್ದುದನ್ನು ಸಹಿಸದ ನಿಜಾಮ್ ಅಲಿ ಕರ್ನಾಟಕದತ್ತ ಹೆಚ್ಚು ಗಮನ ಹರಿಸಿದ. ಹೈದರನಿಗೆ ಮೈಸೂರು ರಾಜಕೀಯದಲ್ಲಿ ಸ್ವತಂತ್ರನಾಗಿ ವರ್ತಿಸಲು ಅಧಿಕಾರವಿಲ್ಲವೆಂಬುದು ನಿಜಾಮನ ವಾದ. ತಾನು ದಖ್ಖನಿನ ಮುಗಲ ರಾಜಪ್ರತಿನಿಧಿಯಾದ ಕಾರಣ ಹೈದರ್ ತನ್ನ ಸಾಮಂತನಾಗಿರಬೇಕೆಂಬುದು ಅವನ ನಿರೀಕ್ಷೆಯಾಗಿತ್ತು. ಆದರೆ ಹೈದರನನ್ನು ಅಂಥ ಸ್ಥಾನಕ್ಕೆ ಇಳಿಸುವಷ್ಟು ಶಕ್ತನಾಗಿರಲಿಲ್ಲ, ಆದ್ದರಿಂದ ತಾನು ನಿಜಾಮಪದವಿಗೆ ಬಂದ ಕಾಲದಿಂದ (1761) ಟಿಪ್ಪುಸುಲ್ತಾನನ ಮರಣದವರೆಗೆ (1799) ಮೈಸೂರಿನ ಬಗ್ಗೆ ನಿರಂತರ ಹಗೆತನ ಸಾಧಿಸುವುದು ಅವನ ನೀತಿಯಾಯಿತು. ತನ್ನ ಸೇಡಿನ ಸಾಧನೆಗೆ ಇಂಗ್ಲಿಷರು ಇಲ್ಲವೆ ಮರಾಠರು ಮೈಸೂರಿನ ಮೇಲೆ ಮಾಡಿದ ಯುದ್ಧಗಳಲ್ಲಿ ತಾನೂ ಅವಕಾಶ ಪಡೆದುಕೊಂಡ. ಆದರೆ ಹೈದರ್‌ಅಲಿ ಮತ್ತು ಟಿಪ್ಪು ಅವನ ಬಗ್ಗೆ ಜಾಗರೂಕತೆಯಿಂದ ವರ್ತಿಸಿ, ಅವನೊಂದಿಗೆ ಹೊಂದಿಕೊಳ್ಳುವ ನೀತಿಯನ್ನು ಅನುಸರಿಸಿದರು. ಅವನ ಮೇಲೆ ಯುದ್ಧ ಮಾಡುವ ಬಗ್ಗೆ ಅವರು ಇತರ ಬಲಯುತ ಪಕ್ಷಗಳಿಗೆ ಬೆಂಬಲ ನೀಡಲಿಲ್ಲ. 1761ರಲ್ಲಿ ನಿಜಾಮನ ಸಹೋದರ ಸಲಾಬತ್ ಜಂಗ್ ಮೈಸೂರು ರಾಜ್ಯದ ಮೇಲೆ ದಂಡೆತ್ತಿ ಬಂದು ಶಿರಾ ಪ್ರಾಂತ್ಯವನ್ನು ಆಕ್ರಮಿಸಿಕೊಳುವಲ್ಲಿ ವಿಫಲನಾದಾಗ ಹೈದರ್ ಅವನಿಗೆ ಅಪಮಾನ ಮಾಡದೆ, ಅವನಿಗೆ 3 ಲಕ್ಷ ರೂಪಾಯಿ ಒಪ್ಪಿಸಿ ಅವನಿಂದ ಶಿರಾ ನವಾಬಗಿರಿ ತನ್ನ ಹೆಸರಿಗೆ ಬರುವಂತೆ ಪ್ರಯತ್ನಿಸಿದರೂ ಮೈಸೂರು ರಾಜ್ಯ ಸ್ವತಂತ್ರವಾಗಿರುವುದನ್ನು ನಿಜಾಮ ಸಹಿಸಲಿಲ್ಲ.

1765ರಲ್ಲಿ ಮುಗಲ ಸಾಮ್ರಾಟನ ಫರ್ಮಾನ್ (ಸನ್ನದು) ಮೂಲಕ ಇಂಗ್ಲಿಷರು ಉತ್ತರ ಸರ್ಕಾರ್ ಪ್ರದೇಶಗಳನ್ನು ಗಳಿಸಿದಾಗ ನಿಜಾಮ ಉದ್ರಿಕ್ತನಾಗಿ, ಇಂಗ್ಲಿಷರನ್ನು ಮಟ್ಟಹಾಕಲು ಹೈದರನೊಂದಿಗೆ ಸೇರಿಕೊಳ್ಳಲು ಬಯಸಿದ. ಈ ಉದ್ದೇಶಕ್ಕಾಗಿ ಅವನು ಕರ್ನಾಟಿಕ್‌ನ (ಆರ್ಕಾಟಿನ) ನವಾಬ ಮಹಮ್ಮದಾಲಿಯ ಸಹೋದರ ಮಹಾಫಿಜ್ ಖಾನನನ್ನು ಹೈದರನ ಬಳಿ ಕಳುಹಿಸಿ, ಮದರಾಸು ಸರ್ಕಾರದ ವಿರುದ್ಧ ಹೈದರನ ನೆರವನ್ನು ಬಯಸಿದ ಹಾಗೂ ಹೈದರನಿಗೆ ಕರ್ನಾಟಿಕ್ ಪ್ರದೇಶದ ಬಗ್ಗೆ ಸನ್ನದುಗಳನ್ನು ನೀಡುವುದಾಗಿ ಸಹ ತಿಳಿಸಿದ. ನಿಜಾಮ ಮತ್ತು ಹೈದರ್ ನಡುವಣ ಮೈತ್ರಿಯಿಂದ ಸಂಭವಿಸಬಹುದಾದ ಅಪಾಯವನ್ನು ಗ್ರಹಿಸಿದ ಇಂಗ್ಲಿಷರು ನಿಜಾಮನಿಗೆ ಆಗಿದ್ದ ನಷ್ಟಕ್ಕೆ ಪರಿಹಾರವಾಗಿ ಕರ್ನಾಟಕ ಪ್ರದೇಶದ ಭಾಗಗಳನ್ನು ಗೆದ್ದುಕೊಡುವುದಾಗಿ ಭರವಸೆ ನೀಡಿದರು. ನಿಜಾಮ ಕೂಡಲೆ ಇಂಗ್ಲಿಷರ ಸಲಹೆಗೆ ಒಪ್ಪಿದ. ಅದಕ್ಕೆ ಮತ್ತೊಂದು ಕಾರಣವೂ ಇತ್ತು. ಮರಾಠರ ಪೇಶ್ವೆ ಮಾಧವರಾವ್ ಮೈಸೂರು ರಾಜ್ಯದ ಮೇಲೆ ದಾಳಿ ನಡೆಸಲು ನಿರ್ಧರಿಸಿದ್ದ; ತನ್ನ ರಾಜ್ಯವನ್ನು ವಿಸ್ತರಿಸಿಕೊಳ್ಳಲು ಈ ಅವಕಾಶವನ್ನು ಕಳೆದುಕೊಳ್ಳಲು ನಿಜಾಮನಿಗೆ ಇಷ್ಟವಿರಲಿಲ್ಲ. ಹೈದರ್ ಈ ಮಧ್ಯೆ ಹೈದರಾಬಾದಿನ ಅಂಚಿನ ಕಡಪ ಪ್ರದೇಶದ ಒಂದಿಷ್ಟು ಭಾಗವನ್ನು ಆಕ್ರಮಿಸಿಕೊಂಡಿದ್ದ. ಈ ಕಾರಣಗಳಿಂದ ಹೈದರನ ವಿರುದ್ಧ 1766ರಲ್ಲಿ ನಿಜಾಮ, ಮರಾಠರು ಹಾಗೂ ಇಂಗ್ಲಿಷರ ನಡುವೆ ಬಲಯುತವಾದ ಒಕ್ಕೂಟವೇರ್ಪಟ್ಟಿತು. ಯುದ್ಧ ಪ್ರಾರಂಭವಾದಾಗ ಮೈಸೂರಿನತ್ತ ನಿಜಾಮ ತನ್ನ ಸೈನ್ಯಗಳನ್ನು ತರಲು ತಡವಾಯಿತು. ಅಷ್ಟರಲ್ಲಿ ಹೈದರ್ ನಿಜಾಮನನ್ನು ಒಲಿಸಿಕೊಂಡ. ಕ್ಷಣಮಾತ್ರದಲ್ಲಿ ಆಕ್ರಮಣಕಾರನಾಗಿ ಬಂದ ನಿಜಾಮ ಮಿತ್ರನಾದ. ಆದರೆ ಮುಂದೆ ಒಂದೆರಡು ಯುದ್ಧಗಳಲ್ಲಿ ಅವನು ಇಂಗ್ಲಿಷರಿಗೆ ಸೋತು ಅವರೊಡನೆ ಒಪ್ಪಂದಮಾಡಿಕೊಂಡು ಹೈದರಾಬಾದಿಗೆ ಹಿಂತಿರುಗಿದ. ಇಂಗ್ಲಿಷರ ಮೇಲೆ ಸಾಮೂಹಿಕ ದಾಳಿ ನಡೆಸಬೇಕೆಂದು ಹೈದರ್, ಮರಾಠರು ಮತ್ತು ನಿಜಾಮ ಪ್ರಮಾಣ ವಚನದೊಂದಿಗೆ ಮಾಡಿಕೊಂಡ ಒಪ್ಪಂದವನ್ನೂ ನಿಜಾಮ ಉಲ್ಲಂಘಿಸಿದ.

ಹೈದರನ ಮರಣಾನಂತರ ಟಿಪ್ಪು ಅಧಿಕಾರಕ್ಕೆ ಬಂದಾಗ ಸಹ ಮೈಸೂರಿನೊಂದಿಗೆ ನಿಜಾಮನ ಸಂಬಂಧ ಉತ್ತಮಗೊಳ್ಳಲಿಲ್ಲ. ಹೈದರನ ವಿರುದ್ಧ ನಿಜಾಮ ಒಂದೇ ಯುದ್ಧಮಾಡಿದ್ದ; ಆ ಯುದ್ಧ ಸಹ ಅರ್ಧಮನಸ್ಸಿನಿಂದ ಮಾಡಿದ್ದಾಗಿತ್ತು. ಟಿಪ್ಪುವಿನ ಕಾಲದಲ್ಲಿ ನಿಜಾಮನ ನಿಲವು ಪೂರ್ಣವಾಗಿ ಮಾರ್ಪಟ್ಟಿತ್ತು. 1785ರಿಂದ 1799ರ ವರೆಗೆ ನಿಜಾಮ ಟಿಪ್ಪುವಿನ ವಿರುದ್ಧ ಮೂರು ಬಾರಿ ಯುದ್ಧಮಾಡಿದ. ಟಿಪ್ಪುವಿನ ಪತನವಾದದ್ದು (1799) ವಾಸ್ತವಿಕವಾಗಿ ನಿಜಾಮ ಇಂಗ್ಲಿಷರ ಪಕ್ಷ ಸೇರಿದ ಕಾರಣದಿಂದ. ಮರಾಠರಾಗಲಿ, ಇಂಗ್ಲಿಷರಾಗಲಿ ಕರ್ನಾಟಕದ ಮೇಲೆ ಆಸೆಯ ನೋಟವನ್ನು ಬೀರಿದಾಗ, ತನ್ನ ಹಿತಾಸಕ್ತಿಗಳನ್ನು ಸಾಧಿಸಿಕೊಳ್ಳಲು ನಿಜಾಮ ಅವರಿಗೆ ಸ್ನೇಹ ಹಸ್ತವನ್ನು ನೀಡುತ್ತಿದ್ದ. 1786ರಲ್ಲಿ ನಿಜಾಮ ಮತ್ತು ನಾನಾಸಾಹೇಬ ಒಟ್ಟುಗೂಡಿ ಮೈಸೂರಿನ ಮೇಲೆ ಯುದ್ಧಸಾರಿದರು. ಯುದ್ಧ ಒಂದು ವರ್ಷಕಾಲ (1786-87) ನಡೆದು ಗಜೇಂದ್ರಗಡದ ಕೌಲಿನಿಂದ ಕೊನೆಗೊಂಡಿತು. ಈ ಯುದ್ಧದಲ್ಲಿ ಟಿಪ್ಪು ಜಯ ಹೊಂದಿದರೂ ಇಂಗ್ಲಿಷರ ವಿರುದ್ಧ ಭಾರತದ ಇತರ ರಾಷ್ಟ್ರಗಳ ನೆರವನ್ನು ಪಡೆದುಕೊಳ್ಳುವ ತನ್ನ ನೀತಿಯನ್ನನುಸರಿಸಿ, ಅವನು ತನ್ನ ಗಡಿಯ ಸಮೀಪದ ಕೆಲವು ಸಣ್ಣಪುಟ್ಟ ಕೋಟೆಗಳನ್ನು ಕೊಟ್ಟು ಮರಾಠರನ್ನು ಮತ್ತು ನಿಜಾಮನನ್ನು ಸಮಾಧಾನಗೊಳಿಸಿದ. ಆದರೆ ಹಿಂದೆ ಹೈದರಾಬಾದಿಗೆ ಸೇರಿದ್ದ

ಪ್ರದೇಶಗಳನ್ನು ಗೆದ್ದುಕೊಡುವ ಹೊಣೆಹೊತ್ತು ತಮ್ಮೊಂದಿಗೆ ಕೂಡುವಂತೆ ನಿಜಾಮನಿಗೆ 1787ರಿಂದಲೂ ಇಂಗ್ಲಿಷರು ಆಸೆ ತೋರಿಸುತ್ತಿದ್ದರು. ಟಿಪ್ಪು ಸಹ ನಿಜಾಮನನ್ನು ತನ್ನ ಕಡೆ ಸೆಳೆಯಲು ಪ್ರಯತ್ನಿಸಿದ. ಗುಂಟೂರು ಭಾಗವನ್ನು ಕೊಡಬೇಕೆಂದು ಕಾರ್ನ್‌ವಾಲಿಸ್ ನಿಜಾಮನನ್ನು ಒತ್ತಾಯ ಮಾಡಿದಾಗ ಇಂಗ್ಲಿಷರಿಗೂ ನಿಜಾಮನಿಗೂ ಇದ್ದ ಸಾಮರಸ್ಯ ತಪ್ಪಿತು. ಸ್ವಲ್ಪಕಾಲ ಟಿಪ್ಪುವಿಗೂ ನಿಜಾಮನಿಗೂ ನಡುವೆ ಎಂದೂ ಇಲ್ಲದ ಸಹೃದಯತೆ ಮೂಡಿತು. 1786ರ ಯುದ್ಧದಲ್ಲಿ ಧಾರಾಳ ಷರತ್ತುಗಳ ಮೇಲೆ ಟಿಪ್ಪು ಮಾಡಿಕೊಂಡ ಒಪ್ಪಂದ ನಿಜಾಮ ಟಿಪ್ಪುವಿನೊಡನೆ ಸೇರಿಕೊಳ್ಳಲು ಉತ್ತೇಜಕವಾಯಿತು. ಆಗಸ್ಟ್ 1787ರಲ್ಲಿ ನಿಜಾಮನ ಆಸ್ಥಾನಿಕರಾದ ಇಂತಿಯಾಜ್-ಉದ್-ದೌಲ ಹಾಗೂ ಷಮ್ಸ್-ಉಲ್-ಉಮ್ರ ಟಿಪ್ಪುವಿನೊಡನೆ ಸಂಬಂಧ ಬೆಳೆಸಲು ನಿಜಾಮನಿಗಿದ್ದ ಇಷ್ಟವನ್ನು ಟಿಪ್ಪುವಿಗೆ ತಿಳಿಸಿದರು. ಟಿಪ್ಪು ಒಪ್ಪಿದ ಕಾರಣ ಹಾಫಿಜ್-ಫರೀದ್-ಉದ್-ದೀನ್ ಮತ್ತು ಬಹಾದ್ದೂರ್ ಖಾನ್ ಎಂಬಿಬ್ಬರು ರಾಯಭಾರಿಗಳು ಹೈದರಾಬಾದಿನಿಂದ ಶ್ರೀರಂಗಪಟ್ಟಣಕ್ಕೆ ಬಂದರು (ನವೆಂಬರ್ 1787). ನಿಜಾಮನನ್ನು ತಾನೇ ಕಂಡು ಪರಸ್ಪರ ಮೈತ್ರಿಯ ಎಲ್ಲ ಅಂಶಗಳನ್ನೂ ಕೂಲಂಕಷವಾಗಿ ನಿರ್ಧರಿಸಬೇಕೆಂದು ಟಿಪ್ಪು ಕಾತರನಾಗಿದ್ದ. ತನ್ನ ಮೈತ್ರಿ ಬಲವಾದ ತಳಹದಿಯ ಮೇಲಿರಬೇಕೆಂದು ನಿಜಾಮನ ಮಗಳನ್ನು ತನ್ನ ಮಗನಿಗೆ ತಂದುಕೊಳ್ಳಲು ಸಹ ಅಪೇಕ್ಷಿಸಿದ. ಆದರೆ ನಿಜಾಮ ಈ ವಿವಾಹದ ಬಗ್ಗೆ ಅಷ್ಟು ಆಸಕ್ತನಾಗಿರಲಿಲ್ಲ. ಅಲ್ಲದೆ, ಅವನ ಆಸ್ಥಾನದಲ್ಲಿ ಇಂಗ್ಲಿಷರ ಬೆಂಬಲ ಪಡೆದುಕೊಳ್ಳಬೇಕೆಂಬ ಪಕ್ಷವೇ ಬಲವಾಗಿತ್ತು. ಈ ಸಂದರ್ಭದಲ್ಲಿ ಟಿಪ್ಪುವಿನ ವಿರುದ್ಧ ಭಾರತದ ರಾಜ್ಯಗಳನ್ನು ಸಂಘಟಿಸಲು ಕಾರ್ನ್‌ವಾಲಿಸ್ ತೀವ್ರ ಕಾರ್ಯಾಚರಣೆಗಳನ್ನು ಕೈಗೊಂಡಿದ್ದ. ಆದ್ದರಿಂದ ಟಿಪ್ಪುವಿಗೆ ನಿಜಾಮನ ಉತ್ತರ ಅಸ್ಪಷ್ಟವಾಗಿತ್ತು ಹಾಗೂ ಸಂಬಂಧಕಲ್ಪನೆಯ ಬಗ್ಗೆ ನಡೆಸಿದ ವ್ಯವಹಾರ ಹಠಾತ್ತನೆ ನಿಂತುಹೋಯಿತು.

ಕಾರ್ನ್‌ವಾಲಿಸ್ ಹೈದರಾಬಾದಿನ ಭಾಗವಾದ ಗುಂಟೂರನ್ನು ಆಕ್ರಮಿಸಿಕೊಂಡಾಗ ನಿಜಾಮ ಟಿಪ್ಪುವಿನೊಡನೆ ಮತ್ತೆ ಬಾಂಧವ್ಯ ಬೆಳೆಸುವ ಬಗ್ಗೆ ಮಾತುಕತೆ ಮುಂದುವರಿಸಲು ನವೆಂಬರ್ 1788ರಲ್ಲಿ ಹಾಫಿಜ್ ಫರೀದ್-ಉದ್-ದೀನ್ ಹಾಗೂ ರಾಮಚಂದ್ರ ಇವರಿಬ್ಬರನ್ನು ಟಿಪ್ಪುವಿನ ಬಳಿ ಅಟ್ಟಿದ. ಆಗ ಟಿಪ್ಪು ಕೊಯಮುತ್ತೂರಿನ ಬಳಿ ಬಿಡಾರ ಹಾಕಿದ್ದ. ಟಿಪ್ಪುವಿನ ಉತ್ತರ ಮತ್ತೆ ಆಹ್ವಾನಾರ್ಹವಾಗಿತ್ತು. ಅವನು ಮತ್ತೆ ವಿವಾಹ ಸಂಬಂಧವನ್ನು ಬಯಸಿ ಹೈದರಾಬಾದಿನ ವಕೀಲರೊಂದಿಗೆ ಸಮಾಲೋಚನೆ ನಡೆಸಿದ. ಈ ಸಮಾಲೋಚನೆಯಲ್ಲಿ ಮರಾಠರ ಪ್ರತಿನಿಧಿ ಶಿವಾಜಿರಾವ್ ಸಹ ಹಾಜರಿದ್ದ. ರಾಜಕೀಯ ಮೈತ್ರಿ ಹಾಗೂ ವಿವಾಹ ಸಂಬಂಧವನ್ನು ನಿರ್ಧರಿಸಿಕೊಂಡು ಬರಲು ಟಿಪ್ಪು ತನ್ನ ವಕೀಲನಾದ ಕುತ್ಬುದ್ದೀನ್ ಖಾನ್ ಮತ್ತು ಅಲಿ ರಾಜ ಇವರನ್ನು ಹೈದರಾಬಾದಿಗೆ ಕಳುಹಿಸಿದ. ಈ ಪ್ರಯತ್ನ ಸಹ ವಿಫಲವಾಯಿತು. ಈ ಹೊತ್ತಿಗೆ ಇಂಗ್ಲಿಷರ ಕುತಂತ್ರ ಬಲವಾಗಿ ಬೇರೂರಿತ್ತು. ಮೈಸೂರಿನ ಬಹುಭಾಗವನ್ನು ಗೆದ್ದುಕೊಳ್ಳಲು ಇದ್ದ ಅವಕಾಶಗಳನ್ನು ತಿಳಿಸಿ ಕಾರ್ನ್‌ವಾಲಿಸ್ ನಿಜಾಮನ ಮನಸ್ಸನ್ನು ಸೆಳೆದುಕೊಂಡ. ಟಿಪ್ಪುವಿನ ರಾಯಭಾರಿಗಳು ನಿಜಾಮನ ಸಂಶಯಕ್ಕೊಳಗಾಗಿ ಹೈದರಾಬಾದಿನಲ್ಲಿ ಸೆರೆಯಾದರು. ಟಿಪ್ಪು ಕೇವಲ ಫೌಜಿನ ನಾಯಕ್ ಹುದ್ದೆಯಲ್ಲಿದ್ದವರ ಪೀಳಿಗೆಯವನು ಅವನೊಂದಿಗೆ ವಿವಾಹಸಂಬಂಧ ಬೆಳೆಸುವುದು ನಿಜಾಮನ ಮನೆತನಕ್ಕೆ ಅಪಮಾನ, ಘನತೆಗೆ ಕುಂದು, ಎಂದು ನಿಜಾಮ ವಿವಾಹದ ವಿಷಯವನ್ನು ತಳ್ಳಿಹಾಕಿದ. ನಿಜಾಮ ಮೂರನೆಯ ಮೈಸೂರು ಯುದ್ಧದಲ್ಲಿ ಇಂಗ್ಲಿಷರೊಡನೆ ಸೇರಿಕೊಳ್ಳಲು ನಿರ್ಧರಿಸಿದ. ಟಿಪ್ಪುವಿನ ಮೇಲೆ ದಾಳಿ ನಡೆಸುವ ಬಗ್ಗೆ ನಡೆದ ಒಪ್ಪಂದದಲ್ಲಿ ಇಂಗ್ಲಿಷರು ಹಾಗೂ ಮರಾಠರೊಡನೆ ಸೇರಿಕೊಂಡ. ಈ ಯುದ್ಧದಲ್ಲಿ ಟಿಪ್ಪು ಸೋತು ಅವನ ರಾಜ್ಯದಲ್ಲಿ ಅರ್ಧಭಾಗ ದಾಳಿಕಾರರ ಪಾಲಾಯಿತು. ಅದರಲ್ಲಿ ಕೃಷ್ಣಾನದಿಯಿಂದ ಪೆನ್ನಾರ್ ನದಿಯವರೆಗಿನ ವಿಶಾಲ ಪ್ರದೇಶ ನಿಜಾಮನಿಗೆ ಸೇರಿತು. ಅದರಿಂದ ನಿಜಾಮನ ಆಸೆ ಮುಗಿಲಿಗೇರಿ 1799ರಲ್ಲಿ ನಡೆದ ನಾಲ್ಕನೆಯ ಮೈಸೂರು ಯುದ್ಧದಲ್ಲಿ ಸಹ ಅವನು ಮತ್ತೆ ಇಂಗ್ಲಿಷರ ಪಕ್ಷವನ್ನು ಸೇರಿದ. ಈ ಯುದ್ಧದಲ್ಲಿ ಟಿಪ್ಪು ಮೃತನಾದ (4 ಮೇ 1799). ನಿಜಾಮನಿಗೆ ಯುದ್ಧದ ಫಲವಾಗಿ ಗುತ್ತಿ, ಗುರ್ರಮಕೊಂಡ ಹಾಗೂ ಚಿತ್ರದುರ್ಗ ಕೋಟೆಯ ವಿನಾ ಚಿತ್ರದುರ್ಗ ಜಿಲ್ಲೆಯ ಕೆಲವು ಭಾಗಗಳು ಸೇರಿದವು. ಯುದ್ಧ ದೃಷ್ಟಿಯಿಂದ ಉಪಯುಕ್ತವಾಗಿದ್ದ ಇಂಥ ಸ್ಥಳಗಳನ್ನು ಕಳೆದುಕೊಳ್ಳಲು ಇಂಗ್ಲಿಷರು ಸಿದ್ಧರಾಗಿರಲಿಲ್ಲ. 1792ರಲ್ಲಿ ಹಾಗೂ 1799ರ ಯುದ್ಧಗಳಲ್ಲಿ ಕೊಟ್ಟಿದ್ದ ಈ ಪ್ರದೇಶಗಳನ್ನು ಒಪ್ಪಿಸುವಂತೆ ನಿಜಾಮನನ್ನು ಅವರು ಒತ್ತಾಯ ಪಡಿಸಿದರು (1800). ಈ ಮಧ್ಯದಲ್ಲಿ ಬಿಜಾಪುರದ ಹುನಗುಂದ ಭಾಗವನ್ನು ನಿಜಾಮ ಮರಾಠರಿಗೆ ಒಪ್ಪಿಸಿದ್ದ. ಅಂದರೆ ಕರ್ನಾಟಕದಲ್ಲಿ ಮುಂದೆ ಹೈದರಾಬಾದು ಕರ್ನಾಟಕದ ಜಿಲ್ಲೆಗಳೆಂದು ಪ್ರಸಿದ್ಧವಾದ ಪ್ರದೇಶವಷ್ಟೇ ನಿಜಾಮನ ವಶದಲ್ಲಿ ಉಳಿಯಿತು.

1803ರಲ್ಲಿ ನಿಜಾಮ್ ಅಲಿ ಖಾನ್ ಮೃತನಾಗಿ ಅವನ ಮಗ ಸಿಕಂದರ್ ಜಾ (1803-29) ಹೈದರಾಬಾದಿನ ಗದ್ದುಗೆಯನ್ನೇರಿದ. ಈ ಕಾಲದಲ್ಲಿ ಬ್ರಿಟಿಷರ ಕೈಮೇಲಾಗಿ ಹಲವು ಪ್ರದೇಶಗಳನ್ನು ಅವರಿಗೊಪ್ಪಿಸಬೇಕಾಯಿತು. ವಿಷಯಾಕಾಂಕ್ಷಿಯಾದ ಈತ ಆಡಳಿತಕ್ಕೆ ಹೆಚ್ಚು ಗಮನವೀಯಲಿಲ್ಲ. ರಾಜ ಚಂದುಲಾಲ್ ಈ ಕಾಲದಲ್ಲಿ ದಿವಾನನಾಗಿದ್ದ. ಆಡಳಿತ ಸಾಕಷ್ಟು ಕೆಟ್ಟಿತ್ತು. (ಬಿ.ಎಸ್.ಎ.)

ಅವನ ತರುವಾಯ ನಿಜಾಮ್ ಪದವಿಗೆ ಬಂದ ನಾಸಿರುದ್ದೌಲ (1829-57) ಇಂಗ್ಲಿಷರಿಗೆ ನಿಷ್ಠಾವಂತನಾಗಿದ್ದ. ಅವರು ಒದಗಿಸಿದ್ದ ಸೈನ್ಯಸಹಾಯದ ಖರ್ಚಿಗಾಗಿ ರಾಯಚೂರು ಪ್ರದೇಶವನ್ನು ಅವರಿಗೆ ಒಪ್ಪಿಸಿದ. ಇಂಗ್ಲಿಷರ ಆದೇಶದಂತೆ ಚಂದುಲಾಲನನ್ನು ದಿವಾನಗಿರಿಯಿಂದ ತೆಗೆದ. 1843ರಲ್ಲಿ ಸರ್ ಸಾಲಾರ್ ಜಂಗ್ ದಿವಾನನಾದ. ಬ್ರಿಟಿಷರು ಹಿಂದಿನಿಂದ ನಿಜಾಮರ ಸ್ನೇಹಿತರಾಗಿದ್ದಾರೆ, ಎಂದೆಂದಿಗೂ ಅವರಿಗೆ ಕೃತಜ್ಞತೆಯಿಂದ ನಡೆದುಕೊಳ್ಳಬೇಕು ಎಂದು ನಾಸಿರುದ್ದೌಲ ಸಾಯುವಾಗ ತನ್ನ ಮಗ ಅಫ್ಜಲುದ್ದೌಲನಿಗೆ ಹೇಳಿದ್ದನಂತೆ. ತಂದೆಯ ಮರಣಾನಂತರ ಪಟ್ಟಕ್ಕೆ ಬಂದ ಅಫ್ಜಲುದ್ದೌಲ (1857-69) ಪಿತೃವಾಕ್ಯವನ್ನು ಪೂರ್ಣವಾಗಿ ಪಾಲಿಸಿದ. 1857-58ರಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮದೆದುರು ಬ್ರಿಟಿಷರು ತಲ್ಲಣಿಸುತ್ತಿದ್ದಾಗಲೂ ನಿಜಾಮ ಮತ್ತು ಅವನ ಪ್ರಧಾನಿ ಸಾಲಾರ್ ಜಂಗ್ ಅವರಿಗೆ ಬೆಂಬಲವಾಗಿ ನಿಂತಿದ್ದರು. ಈ ಉಪಕಾರಕ್ಕಾಗಿ ಬ್ರಿಟಿಷ್ ಸರ್ಕಾರ ಇವನೊಡನೆ ಹೊಸ ಒಪ್ಪಂದವೊಂದನ್ನು ಮಾಡಿಕೊಂಡು ನಿಜಾಮರಿಂದ ತೆಗೆದುಕೊಂಡಿದ್ದ ಉಸ್ಮಾನಾಬಾದ್ ಮತ್ತು ರಾಯಚೂರು ಪ್ರದೇಶವನ್ನು ಹಿಂತಿರುಗಿಸಿತು. ಕರ್ನಾಟಕಕ್ಕೆ ಸಂಬಂಧಿಸಿದಂತೆ ಬಿದರೆ, ಗುಲ್ಬರ್ಗ, ರಾಯಚೂರು ಜಿಲ್ಲೆಗಳು ಅಂದಿನಿಂದ ನಿಜಾಮನ ಆಳ್ವಿಕೆಯಲ್ಲೇ ಉಳಿದವು. ಸುರಪುರದ ದಂಗೆ ಈ ಕಾಲದಲ್ಲಿ ನಡೆದ ಮುಖ್ಯ ಘಟನೆ (ನೋಡಿ: ಸ್ವಾತಂತ್ರ್ಯ ಸಂಗ್ರಾಮ, ವೆಂಕಟಪ್ಪನಾಯಕ). ಅಫ್ಜಲುದ್ದೌಲ 1869ರಲ್ಲಿ ಮೃತನಾದ.

ಅನಂತರದ ನಿಜಾಮ ಮೀರ್ ಮಹಬೂಬ್ ಅಲಿ ಖಾನ್ (1869-1911) ಪಟ್ಟಕ್ಕೆ ಬಂದಾಗ ಈತ ಇನ್ನೂ ಮೂರುವರ್ಷದ ಬಾಲಕನಾಗಿದ್ದರಿಂದ ಸರ್ ಸಾಲಾರ್‌ಜಂಗ್ 1 ಮತ್ತು ನವಾಬ್ ಶಮ್ಸುಲಾ ಉಮ್ರಾ ಇವರು ಆಡಳಿತಗಾರರಾಗಿ ನಿಯಮಿತರಾಗಿದ್ದರು. ಆಡಳಿತದಲ್ಲಿ ಬ್ರಿಟಿಷ್ ರೆಸಿಡೆಂಟನ ಸಲಹೆಯನ್ನು ತೆಗೆದುಕೊಳ್ಳಲಾಗುತ್ತಿತ್ತು. ಈ ವ್ಯವಸ್ಥೆ 1884ರ ವರೆಗೂ ಮುಂದುವರಿದು, ಆ ವರ್ಷ ನಿಜಾಮರೇ ಆಡಳಿತ ವಹಿಸಿಕೊಂಡರು. ಇವರ ಕಾಲದಲ್ಲಿ ಆಡಳಿತದಲ್ಲಿ ಹಲವು ಬದಲಾವಣೆಗಳಾದವು. 1893ರಲ್ಲಿ ಒಂದು ಮಂತ್ರಿಮಂಡಲ ಮತ್ತು ನ್ಯಾಯಾಂಗ ಸಭೆ ವ್ಯವಸ್ಥಿತವಾಯಿತು. ಅಧಿಕಾರಿಗಳಲ್ಲದವರೂ ರಾಜ್ಯದ ಆಗು ಹೋಗುಗಳಲ್ಲಿ ಧ್ವನಿಗೂಡಿಸುವ ಅವಕಾಶ ಉಂಟಾಯಿತು.

ಮಹಬೂಬ್ ಅಲಿ ಖಾನ್‌ರ ಮರಣಾನಂತರ (1911) ಅವರ ಮಗ ಮೀರ್ ಉಸ್ಮಾನ್ ಅಲಿ ಖಾನ್ ನಿಜಾಮರಾದರು (1911-48). ಪ್ರಧಾನಿ ಸಾಲಾರ್‌ಜಂಗ್ III 1914ರಲ್ಲಿ ರಾಜೀನಾಮೆಯಿತ್ತಾಗ ಆಡಳಿತವನ್ನು ನಿಜಾಮರೇ ನೇರವಾಗಿ ನಿರ್ವಹಿಸತೊಡಗಿದರು. ಪ್ರಥಮ ಮಹಾಯುದ್ಧದ ಕಾಲದಲ್ಲಿ ಬ್ರಿಟಿಷರಿಗೆ ಧನ-ಸೈನ್ಯ ಸಹಾಯವನ್ನು ನೀಡಿದರು. ಹೈದರಾಬಾದು ಸಂಸ್ಥಾನದ ಸಿಬ್ಬಂದಿಯನ್ನು ಪೂರ್ಣವಾಗಿ ಭಾರತೀಕರಣ ಮಾಡಿದ್ದು ಇವರ ಸಾಧನೆ. ಎಲ್ಲಾ ಹುದ್ದೆಗಳಲ್ಲೂ ಭಾರತೀಯರೇ ಅದರಲ್ಲೂ ಹೆಚ್ಚು ಮಟ್ಟಿಗೆ ಹೈದರಾಬಾದಿನವರೇ ನಿರ್ವಹಿಸುವ ವ್ಯವಸ್ಥೆಮಾಡಿದರು. ಮುಂದಿನ ದಿನಗಳಲ್ಲಿ ಭಾರತ ಸ್ವಾತಂತ್ರ್ಯ ಚಳವಳಿ ಹೈದರಾಬಾದು ಸಂಸ್ಥಾನದಲ್ಲಿ ಹರಡಿತು. ಆದರೆ ಅದನ್ನು ವ್ಯಗ್ರದೃಷ್ಟಿಯಿಂದ ನೋಡುವುದು ಅಂದಿನ ರಾಜನೀತಿಯಾಗಿತ್ತು.

1947ರಲ್ಲಿ ಭಾರತ ಸ್ವತಂತ್ರವಾದಾಗ ಇತರ ರಾಜ್ಯಗಳನ್ನು ಅನುಸರಿಸಿ ಭಾರತ ಒಕ್ಕೂಟಕ್ಕೆ ಸೇರದೆ ನಿಜಾಮರು 27-8-1947ರಂದು ಹೈದರಾಬಾದನ್ನು ಸ್ವತಂತ್ರ ರಾಷ್ಟ್ರವೆಂದು ಸಾರಿದರು. ಸ್ವಾತಂತ್ರ್ಯ ಸಂಗ್ರಾಮದ ಬಿರುಸು ಮತ್ತಷ್ಟು ಏರಿತು. ಈ ಮಧ್ಯದಲ್ಲಿ ರಜಾಕರರ ಸಂಸ್ಥೆಯೂ ತಲೆಯೆತ್ತಿ ಜನರನ್ನು ಕ್ರೂರವಾಗಿ ನಡೆಸಿಕೊಳ್ಳಲಾರಂಭಿಸಿತು. ಕೊಲೆ, ಸುಲಿಗೆಗಳು ಅವರ ಕಾರ್ಯಾಚರಣೆಯ ಭಾಗವಾಗಿದ್ದುವು. ಅದಕ್ಕೆ ವಿರುದ್ಧವಾಗಿ ಜನಗಳೂ ಸಂಘಟಿತರಾಗತೊಡಗಿ ರಾಜ್ಯದಲ್ಲಿ ಕರಾಳ ವಾತಾವರಣ ಒದಗಿಬಂತು. ರಜಾಕರರ ಸಂಸ್ಥೆಯನ್ನು ಬಹಿಷ್ಕರಿಸಬೇಕೆಂದು ಅನೇಕರು ಪ್ರಾರ್ಥಿಸಿದರೂ ನಿಜಾಮರು ಕ್ರಮ ಕೈಗೊಳ್ಳಲಿಲ್ಲ. ಭಾರತ ಸರ್ಕಾರದವರು ನಿಜಾಮರೊಡನೆ ಸಂಧಾನ ನಡೆಸಿದರೂ ಸಫಲವಾಗಲಿಲ್ಲ. ನಿಜಾಮರು ಭಾರತ ಸರ್ಕಾರದ ವಿರುದ್ಧ ಕತ್ತಿ ಮಸೆಯುತ್ತಿದ್ದುದು 1948ರ ಆದಿಭಾಗದ ಹೊತ್ತಿಗೇ ಸ್ಪಷ್ಟವಾಯಿತು. ಕೊನೆಗೆ 13-9-48ರಲ್ಲಿ ಭಾರತ ಸರ್ಕಾರ ನಿಜಾಮರ ದುರಾಡಳಿತದ ವಿರುದ್ಧ ಪೊಲೀಸ್ ಕಾರ್ಯಾಚರಣೆ ಆರಂಭಮಾಡಿತು. ನಿಜಾಮರು ಮೊದಲು ವಿರೋಧಿಸಿದರು. ವಿಶ್ವಸಂಸ್ಥೆಗೆ ಮನವಿ ಸಲ್ಲಿಸಿದರು. ಆದರೆ ಬೆಂಬಲ ಸಿಕ್ಕಲಿಲ್ಲ. ಕೊನೆಗೆ ಭಾರತ ಸರ್ಕಾರದೊಡನೆ ಒಪ್ಪಂದಕ್ಕೆ ಒಡಂಬಟ್ಟರು. ಆಸಫ್‌ಜಾಹೀ ರಾಜತ್ವ ಕೊನೆಗೊಂಡಿತು. 18-9-48ರಂದು ಭಾರತ ಒಕ್ಕೂಟಕ್ಕೆ ಸೇರಿದ ಹೈದರಾಬಾದು ರಾಜ್ಯ ಉದಯವಾಯಿತು. *

**ಆಡಳಿತ ವ್ಯವಸ್ಥೆ :** ಆಸಫ್‌ಜಾಹೀ ಆಡಳಿತ ಮುಗಲ್ ಪದ್ಧತಿಯಲ್ಲಿ ರೂಢಿತವಾದ್ದು, ಹೈದರಾಬಾದನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ದಖನ್ನಿನಲ್ಲಿ ತಮ್ಮ ಆಡಳಿತವನ್ನು ಸ್ಥಾಪಿಸಿದಾಗ ಈ ಸಂತತಿಯವರಿಗೆ ಸರ್ಕಾರ ವ್ಯವಸ್ಥೆ ಹಾಗೂ ಆಡಳಿತ ನಿರ್ವಹಣೆಯಲ್ಲಿ ಒಳ್ಳೆಯ ಶಿಕ್ಷಣವಿತ್ತು. 1ನೆಯ ಆಸಫ್‌ಜಾ ತನ್ನ ಮನೆತನಕ್ಕೆ ಬಿಟ್ಟುಹೋದ ಶಾಸನ ಅವರ ಸರ್ಕಾರ ರಚನೆ ಮತ್ತು ನೀತಿಯನ್ನು ಸೂಚಿಸುತ್ತದೆ. ಅವರ ಆಡಳಿತ ವ್ಯವಸ್ಥೆ ಕಂದಾಯ, ಪೊಲೀಸು, ನ್ಯಾಯ ಮತ್ತು ಇತರ ಸಂಕೀರ್ಣ ಇಲಾಖೆಗಳು ಎಂದು ನಾಲ್ಕು ಸಾದರ್-ಉಲ್ ಮಹಾಮ್‌ಗಳಾಗಿ ವಿಭಾಗಿತವಾಗಿದ್ದುವು. ಒಬ್ಬ ವಜೀರನ (ಮಂತ್ರಿಯ) ನಿರ್ದೇಶನದಲ್ಲಿ ಅವುಗಳು ಕಾರ್ಯನಿರ್ವಹಿಸುತ್ತಿದ್ದುವು. ಇಡೀ ರಾಜ್ಯ ನಾಲ್ಕು ಸುಬಾ (ಪ್ರಾಂತ್ಯ) ಗಳಾಗಿ ವಿಭಜಿತವಾಗಿದ್ದಿತು. ನಿಜಾಮರ ಆಳ್ವಿಕೆಗೆ ಒಳಪಟ್ಟ ಕರ್ನಾಟಕದ ಭಾಗವು ಮರಾಠವಾಡ ಸುಬಾ ಎಂಬ ಎರಡನೆಯ ಸುಬೆಗೆ ಸೇರಿತ್ತು, ನಿಜಾಮರು ಕೆಲವು ಆಡಳಿತ ಸಂಸ್ಥೆಗಳನ್ನು ಸ್ಥಾಪಿಸಿದರಲ್ಲದೆ ಹಳೆಯ ಆಡಳಿತ ರೀತಿಗಳನ್ನೂ ಉಳಿಸಿಕೊಂಡರು. 1892ರಲ್ಲಿ ಕಾನೂನ್ ಚ-ಇ-ಮುಬಾರಕ್ (ಪವಿತ್ರ ಕಾಯಿದೆ) ಜಾರಿಗೆ ಬಂತು. ಅದು ಆಡಳಿತವರ್ಗಕ್ಕೆ ಕೈಪಿಡಿ; ಅದರಿಂದ ವಿವಿಧ ಇಲಾಖೆಗಳ ಕಾರ್ಯಾಚರಣೆಗಳಲ್ಲಿ ಕೆಲವು ಬದಲಾವಣೆಗಳಾದವು. ಮರಾಠವಾಡ ಸುಬೆಯಲ್ಲಿದ ಗುಲ್ಬರ್ಗ ವಿಭಾಗದಲ್ಲಿ ಗುಲ್ಬರ್ಗ, ರಾಯಚೂರು, ಲಿಂಗಸುಗೂರು ಮತ್ತು ಉಸ್ಮಾನಾಬಾದ್- ಈ ನಾಲ್ಕು ಜಿಲ್ಲೆಗಳಿದ್ದುವು. ತರುವಾಯ ಲಿಂಗಸುಗೂರು ಜಿಲ್ಲೆಯನ್ನು ವಿಭಜಿಸಿ ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಗಳಿಗೆ ಸೇರಿಸಲಾಯಿತು. ಬಿದರೆ ಜಿಲ್ಲೆಯನ್ನು ಗುಲ್ಬರ್ಗ ವಿಭಾಗಕ್ಕೆ ಸೇರಿಸಲಾಯಿತು. ಪ್ರತಿ ವಿಭಾಗ ಒಬ್ಬ ಸುಬೇದಾರನ (ಕಮಿಷನರ್) ಅಧೀನದಲ್ಲಿತ್ತು. ಪ್ರತಿ ಜಿಲ್ಲೆ ಒಬ್ಬ ಜೇಷ್ಠ ತಾಲ್ಲೂಕುದಾರನ (ಕಲೆಕ್ಟರನ) ಆಡಳಿತದಲ್ಲಿತ್ತು. ದ್ವಿತೀಯ ಅಥವಾ ತೃತೀಯ ತಾಲ್ಲೂಕುದಾರರೆಂಬ ಹೆಸರಿನ ಇಬ್ಬರು ಅಥವಾ ಹೆಚ್ಚು ಅಧಿಕಾರಿಗಳು ಜೇಷ್ಠ ತಾಲ್ಲೂಕುದಾರನ ಸಹಾಯಕರಾಗಿರುತ್ತಿದ್ದರು. ಪ್ರತಿ ತಾಲ್ಲೂಕಿಗೆ (ತಹಸೀಲ್) ಒಬ್ಬ ತಹಸೀಲ್‌ದಾರ ಮುಖ್ಯಸ್ಥನಾಗಿರುತ್ತಿದ್ದ. ತಾಲ್ಲೂಕಿನ ಕಂದಾಯ ಹಾಗೂ ನ್ಯಾಯಾಡಳಿತ ಅವನಿಗೆ ಸೇರಿತ್ತು. ಒಬ್ಬ ಪೇಷ್ಕಾರ್ (ಸಹಾಯಕ) ಮತ್ತು ಗಿರ್ದಾವಾರ್ (ರೆವೆನ್ಯೂ ಇನ್‌ಸ್ಪೆಕ್ಟರ್) ಈ ಕೆಲಸಗಳಲ್ಲಿ ಅವನಿಗೆ ನೆರವು ನೀಡುತ್ತಿದ್ದರು. ಪಾಟೀಲ ಗ್ರಾಮದ ಪ್ರಮುಖ. ಗ್ರಾಮಲೆಕ್ಕಿಗನ ಹೆಸರು ಪಟವಾರಿ, ಕರ್ಣಂ ಅಥ‌ವಾ ಕುಲಕರ್ಣಿ, ಪಾಟೀಲರಲ್ಲಿ ರೆವಿನ್ಯೂ ಪಾಟೀಲ (ಮಾಲಿ ಪಾಟೀಲ), ಪೊಲೀಸು ಪಾಟೀಲ ಎಂಬ ಎರಡು ವರ್ಗ. 1870ರ ವರೆಗೆ ಪಾಟೀಲರಿಗೂ ಪಟವಾರಿಗಳಿಗೂ ಅವರ ಸೇವೆಗಾಗಿ ಇನಾಂ ಗ್ರಾಮಗಳನ್ನು ಕೊಡಲಾಗಿತ್ತು. ಆ ತರುವಾಯ ಸರ್ಕಾರ ಅವರ ಇನಾಂಗಳನ್ನು ಹಿಂದಕ್ಕೆ ಪಡೆದುಕೊಂಡು ಅದಕ್ಕೆ ಪ್ರತಿಯಾಗಿ ಅವರಿಗೆ ವೇತನ ನೀಡುವ ಪದ್ಧತಿಯನ್ನು ಜಾರಿಗೆ ತಂದಿತು, ತಹಸೀಲ್ದಾರ್, ಮುನ್ಸೀಫ್, ನಾಜಿಮಾ-ಇ-ಸುಬಾ- ಇವರು ವಿವಿಧ ಹಂತಗಳಲ್ಲಿ ನ್ಯಾಯಾಡಳಿತವನ್ನು ನಿರ್ವಹಿಸುತ್ತಿದ್ದರು. ಎಲ್ಲಕ್ಕೂ ಮೇಲೆ ಉಚ್ಚ ನ್ಯಾಯಾಲಯವಿತ್ತು. ತಾಲ್ಲೂಕು ಹಂತದಿಂದ ರಾಜ್ಯದ ಪ್ರಮುಖ ಹಂತದವರೆಗೆ ಪ್ರತಿಯೊಂದು ನ್ಯಾಯಾಲಯವೂ ಸಿವಿಲ್ ಮತ್ತು ಕ್ರಿಮಿನಲ್ ಮೊಕದ್ದಮೆಗಳನ್ನು ವಿಚಾರಣೆ ಮಾಡುತ್ತಿತ್ತು.

**ಆರ್ಥಿಕ ಸಾಮಾಜಿಕ ಸ್ಥಿತಿ :** ನಿಜಾಮರ ಆಳ್ವಿಕೆಗೆ ಗುಲ್ಬರ್ಗ ವಿಭಾಗದ ಆರ್ಥಿಕ ಪರಿಸ್ಥಿತಿ ಅವರ ರಾಜ್ಯದ ಇತರ ಪ್ರದೇಶಗಳಿಗಿಂತ ಭಿನ್ನವಾಗಿರಲಿಲ್ಲ. ನಿಜಾಮರಿಗೆ ಬಿಜಾಪುರ ಭಾಗದ ಬಗ್ಗೆ ಶಂಕಾಮನೋಭಾವವಿತ್ತು. ಫಲವತ್ತಾದ ಅದನ್ನು ಮತ್ತು ಅದರ ಅಕ್ಕಪಕ್ಕದ ಪ್ರದೇಶಗಳನ್ನೂ ಬ್ರಿಟಿಷರಿಗೆ ಖಾಯಂ ಆಗಿ ಬಿಟ್ಟು ಕೊಟ್ಟು ಹೆಚ್ಚು ಫಲವತ್ತಾಗಿಲ್ಲದಿದ್ದ ಗುಲ್ಬರ್ಗ ಹಾಗೂ ಬಿದರೆ ಭಾಗಗಳು ನಿಜಾಮರಿಗೆ ಉಳಿದುವು. ಈ ಪ್ರದೇಶಗಳು ಸಾಮಾನ್ಯವಾಗಿ ಮಳೆಯ ಅಭಾವ ಹಾಗೂ ಕೆಲವು ವೇಳೆ ಕ್ಷಾಮಪರಿಸ್ಥಿತಿಗೆ ಒಳಗಾಗುವಂಥವು. 18 ಮತ್ತು 19ನೆಯ ಶತಮಾನಗಳಲ್ಲಿ ಸುಮಾರು 18 ಸಲ ಈ ಭಾಗಗಳಲ್ಲಿ ದುರ್ಭಿಕ್ಷ ಪರಿಸ್ಥಿತಿ ತಲೆದೋರಿತ್ತು. ಫಲವತ್ತಾದ ರಾಯಚೂರು ಪ್ರದೇಶದಲ್ಲಿ ಸಹ ಕ್ಷಾಮದ ಬೇಗೆ ಉಂಟಾಗುತ್ತಿತ್ತು. ನಿಜಾಮರ ಸರ್ಕಾರ ಅಂಥ ಕ್ಷಾಮ ಮತ್ತು ಅಭಾವ ಕಾಲದಲ್ಲಿ ತೆರಿಗೆ ವಸೂಲಿಯನ್ನು ತಾತ್ಕಾಲಿಕವಾಗಿ ತಡೆಹಿಡಿಯುತ್ತಿತ್ತು. ಅನಾವೃಷ್ಟಿ ತೀವ್ರವಾಗಿದ್ದರೆ ಕಂದಾಯವನ್ನು ಮಾಫಿ ಮಾಡುತ್ತಿತ್ತು. ಮಳೆಯಾಗದ ಪ್ರದೇಶಗಳಲ್ಲಿ ಪರಿಹಾರ ಕ್ರಮಗಳನ್ನೂ ಕೈಗೊಳ್ಳುತ್ತಿತ್ತು.

ಭೂಮಿಗೆ ಸಂಬಂಧಿಸಿದಂತೆ ರಯತ್ವಾರಿ ಪದ್ಧತಿ ಸಾಮಾನ್ಯವಾಗಿತ್ತು. ಗುಲ್ಬರ್ಗ, ಬಿದರೆ, ರಾಯಚೂರು ಜಿಲ್ಲೆಗಳಲ್ಲಿ ಸರ್ವೇಕ್ಷಣೆ ನಡೆಸಿ ಹಿಡುವಳಿಗಳನ್ನು ನಿಗದಿಮಾಡಲಾಗಿತ್ತು. ಸರ್ಕಾರಕ್ಕೆ ಸಲ್ಲಬೇಕಾಗಿದ್ದ ಕಂದಾಯವನ್ನು ಪಾವತಿ ಮಾಡುವವರೆಗೂ ವ್ಯವಸಾಯ ಮಾಡುತ್ತಿದ್ದ ಭೂಮಿಯ ಮೇಲೆ ಸ್ವಾಮ್ಯ ಹೊಂದಿರಬಹುದಾಗಿತ್ತು. ಭೂಮಿಯಲ್ಲಿ ಬಿತ್ತ ಕಾಳಿನ ಪ್ರಮಾಣ ಇಲ್ಲವೆ ಉತ್ಪನ್ನವಾದ ಫಸಲಿನ ಆಧಾರದ ಮೇಲೆ ಕಂದಾಯ ನಿಗದಿಯಾಗುತ್ತಿತ್ತು. ಖುಷ್ಕಿ ಭೂಮಿಯಾದರೆ ರಾಜ್ಯದ ಪಾಲು ಭೂಮಿಯ ಉತ್ಪನ್ನದಲ್ಲಿ 1/4 ಭಾಗ, ತರಿ ಭೂಮಿಯಾದರೆ ಅದು ಉತ್ಪನ್ನದಲ್ಲಿ 2/5 ದಿಂದ 1/2 ಭಾಗದವರೆಗೆ ಇರುತ್ತಿತ್ತು.

18ನೆಯ ಶತಮಾನದಲ್ಲಿ ಈ ಪ್ರದೇಶ ಮರಾಠರ ದಾಳಿಗಳಿಗೆ ತುತ್ತಾಗಿ ಮತ್ತೆ ಶಾಂತಿ ನೆಲೆಸಿದ ಮೇಲೆ ಕಂದಾಯ ವಸೂಲಿಯನ್ನು ಬ್ಯಾಂಕರುಗಳಿಗೆ ಹಾಗೂ ಪಠಾಣ ಸೈನಿಕರಿಗೆ ಗೇಣಿಗೆ ವಹಿಸಿಕೊಡುವ ಪದ್ಧತಿ ರೂಢಿಗೆ ಬಂತು. 19ನೆಯ ಶತಮಾನದಲ್ಲಿ ಈ ಪದ್ಧತಿಯನ್ನು ಸರ್ ಸಾಲಾರ್ ಜಂಗ್ ರದ್ದು ಮಾಡಿದ. ಅದು ಜನರ ಏಳಿಗೆಗೆ ಕಾರಣವಾಗಬಲ್ಲ ಜನಪ್ರಿಯ ಕ್ರಮವಾಗಿತ್ತು.

ಆಸಫ್‌ಜಾಹೀ ಆಳ್ವಿಕೆಯಲ್ಲಿ ಕಲೆ, ಕುಶಲಕಲೆ, ಕಲಾತ್ಮಕ ವಸ್ತುಗಳ ತಯಾರಿಕೆ, ಹತ್ತಿ ಮತ್ತು ರೇಷ್ಮೆ ಉದ್ಯಮ, ಲೋಹ ಮತ್ತು ಬಿದ್ರಿ ವಸ್ತುಗಳ ತಯಾರಿಕೆ ಮೊದಲಾದವು ಸುಸ್ಥಿತಿಯಲ್ಲಿದ್ದುವು. ರಾಯಚೂರು ಹಾಗೂ ಲಿಂಗಸುಗೂರು ರೇಷ್ಮೆಸೀರೆಗಳ ನೇಯ್ಗೆಗೈ, ಗುಲ್ಬರ್ಗ ಟಸಾರ್ ಮತ್ತು ಮಷ್ರೂ ರೇಷ್ಮೆ ಬಟ್ಟೆಗೆ ಮತ್ತು ಶತ್ರಂಗಿ ತಯಾರಿಕೆಗೆ, ಬಿದರೆ ಬಿದ್ರಿ ಕೆಲಸಕ್ಕೆ ಪ್ರಸಿದ್ಧವಾಗಿದ್ದುವು. ಬಿದ್ರಿ ಬಲು ನಾಜೂಕಾದ ಸೂಕ್ಷ್ಮ ಹಾಗೂ ಕಲಾತ್ಮಕವಾದ ಕೆಲಸವಾಗಿತ್ತು.

ನಿಜಾಮರ ಇಡೀ ರಾಜ್ಯದ ಒಟ್ಟು ಪ್ರಜಾಸಂಖ್ಯೆಯಲ್ಲಿ ಕನ್ನಡಿಗರು ಸೇ.14ರಷ್ಟಿದ್ದರು. ಅವರಲ್ಲಿ ಹೆಚ್ಚುಮಂದಿ ಗುಲ್ಬರ್ಗ, ಬಿದರೆ ಹಾಗೂ ರಾಯಚೂರು ಜಿಲ್ಲೆಗಳಲ್ಲಿದ್ದರು. ದೇಶದ ಇತರ ಕಡೆಗಳಲ್ಲಿರುವಂತೆ ಈ ಭಾಗದಲ್ಲೂ ಹಿಂದು ಸಮಾಜ ಸಾಂಪ್ರದಾಯಿಕವಾಗಿ ವಿಭಜಿತವಾಗಿತ್ತು. ಚತುರ್ವರ್ಣಗಳ ಜೊತೆಗೆ, ಈ ವ್ಯವಸ್ಥೆಯ ಹೊರಗಿದ್ದು ಅನೇಕ ಉಪಯುಕ್ತ ಸಾಮಾಜಿಕ ಕಾರ್ಯಗಳಲ್ಲಿ ನಿರತರಾಗಿದ್ದವರೂ ಇದ್ದರು. ಮಾಲ, ಢೇರ, ಬಂಜಾರ ಅಥವ ಲಂಬಾಣಿ, ವಡ್ಡ, ಗಂಡಾಲ (ಈಡಿಗ), ಕೊರವ (ನೇಕಾರ) ಮೊದಲಾದ ಜನ ಇಲ್ಲಿದ್ದು ಗ್ರಾಮದ ಆರ್ಥಿಕ ವ್ಯವಸ್ಥೆಯಲ್ಲಿ ಪ್ರಮುಖಪಾತ್ರ ವಹಿಸಿದ್ದರು. ಕಾಪು ಅಥ‌ವಾ ಕುಣ್ಬಿ (ರೈತವರ್ಗ) ಹಾಗೂ ಗೊಲ್ಲಜನ ಸಹ ಅಧಿಕವಾಗಿದ್ದರು. ದೋತಿ, ಚಿಕ್ಕ

ಅಂಗಿ, ತಲೆಪಾಗು ಇಲ್ಲಿನ ಜನಸಾಮಾನ್ಯರ ಉಡುಪು. ಜಮುಖಾನೆ ಇಲ್ಲವೆ ಕಂಬಳಿಯನ್ನು ಸದಾ ಜೊತೆಯಲ್ಲಿಟ್ಟುಕೊಂಡಿರುತ್ತಿದ್ದರು. ಹಿಂದು ಹಾಗೂ ಮುಸಲ್ಮಾನ ಸ್ತ್ರೀಯರಲ್ಲಿ ಸೀರೆ ಮತ್ತು ಚೋಳಿ ಸಾಮಾನ್ಯ. ಮುಸಲ್ಮಾನ ಹೆಂಗಸರು ಲಂಗ ಹಾಗೂ ಚೋಳಿ ಧರಿಸಿ ಭುಜದ ಮೇಲೆ ದುಪ್ಪಟ ಹೊದೆಯುವುದೂ ರೂಢಿ. ಲಂಬಾಣಿ ಸ್ತ್ರೀಯರ ಉಡುಪು ಸೊಂಟದಿಂದ ಇಳಿಬಿಟ್ಟು ಘಾಗ್ರ (ಲಂಗ) ಮತ್ತು ಮೇಲೆ ಕುಪ್ಪಸ.

ಈ ಭಾಗದ ಕರ್ನಾಟಕದ ಜನ ಇತರ ಭಾಗಗಳಲ್ಲಿರುವಂತೆ ಭಕ್ತಿ ಹಾಗೂ ಮನರಂಜನೆಗಾಗಿ ದೀಪಾವಳಿ, ಕಾಮನ ಹಬ್ಬ, ದಸರ, ನಾಗಪಂಚಮಿ ಮೊದಲಾದ ಹಬ್ಬಗಳನ್ನು ಆಚರಿಸುತ್ತಿದ್ದರು. ಈದ್ ಉಜ್ಜುವ್ಹ, ಈದ್-ಉಲ್-ಫಿತರ್, ಮೊಹರಂ ಹಾಗೂ ಪೈಗಂಬರರ ಜನ್ಮದಿನ ಮುಹಮ್ಮದೀಯರ ಮುಖ್ಯ ಹಬ್ಬಗಳು. ರಾಜಧಾನಿ ಹೈದರಾಬಾದಿನಲ್ಲಿ ಆಚರಿಸುತ್ತಿದ್ದ ನವರೋಜ್ ಪಾರಸಿ ಹಬ್ಬದ ವೈಭವವನ್ನು ನೋಡಲು ಜನ ಹೋಗುತ್ತಿದ್ದರು.

ಜನರ ಮುಖ್ಯ ಆಹಾರ ಜೋಳ ಹಾಗೂ ಶಾವೆ ರೊಟ್ಟಿ. ಅವುಗಳಿಗೆ ನಂಜಿಕೊಳ್ಳುವುದಕ್ಕೆ ಬೇಳೆ ತರಕಾರಿ ಉಳ್ಳಾಗಡ್ಡೆ ಹಾಗೂ ಸಾಂಬಾರ ದಿನಸಿಗಳನ್ನು ಹಾಕಿ ಮಾಡಿದ ಸಾರು ಅಥವಾ ಪಲ್ಯ. ಕೆಲವು ವರ್ಗದ ಹಿಂದುಗಳು ಹಾಗೂ ಮುಸಲ್ಮಾನರು ಮಾಂಸಾಹಾರಿಗಳು. ಹಳ್ಳಿಗಳ ಕಡೆ ಮುಸಲ್ಮಾನರು ತಮ್ಮ ಹಿಂದು ನೆರೆಹೊರೆಯವರಿಗೆ ಅಸಮಾಧಾನವಾಗಬಾರದೆಂದು ಗೋಮಾಂಸವನ್ನು ತಿನ್ನುವುದಿಲ್ಲ. ನಗರವಾಸಿಗಳದು ವಿಶಾಲದೃಷ್ಟಿ, ಸಂಪ್ರದಾಯಗಳಿಗೆ ಕಟ್ಟು ಬಿದ್ದವರಲ್ಲ.

ಹಿಂದು ಹಾಗು ಮುಸಲ್ಮಾನರಲ್ಲಿ ಬಹುಪತ್ನಿತ್ವಕ್ಕೆ ಅವಕಾಶವಿತ್ತು. ಆದಾಗ್ಯೂ ವಿವಾಹಿತ ಸ್ತ್ರೀ-ಪುರುಷರ ಸಂಖ್ಯೆ ಸಮವಾಗಿದ್ದ ಕಾರಣ ಈ ಪದ್ಧತಿ ಹೆಚ್ಚಾಗಿ ಆಚರಣೆಯಲ್ಲಿರಲಿಲ್ಲವೆಂದು ತೋರುತ್ತದೆ. ವಿಧವೆಯರು ಸಾಕಷ್ಟು ಸಂಖ್ಯೆಯಲ್ಲಿದ್ದುದನ್ನು ನೋಡಿದರೆ ವಿಧವಾ ವಿವಾಹ ಸಮಾಜಗ್ರಾಹ್ಯವಾಗಿರಲಿಲ್ಲವೆಂದೆನಿಸುತ್ತದೆ. ಆದರೆ ರೈತವರ್ಗದಲ್ಲಿ ವಿಧವೆಯರ ಪುನರ್ವಿವಾಹಕ್ಕೆ ಅಡ್ಡಿಯಿರಲಿಲ್ಲ. ಅಂಥ ವಿವಾಹವನ್ನು ಮೊಹುತುರತ್ ಅಥವಾ ಮರ್ಮನು ಎಂದು ಕರೆಯುತ್ತಾರೆ.

**ವಾಸ್ತು-ಶಿಲ್ಪ :** ಆಸಫ್‌ಜಾಹೀ ಅರಸರು ಹಾಗೂ ಅವರ ವಜೀರರು (ಮಂತ್ರಿಗಳು) ಕಲೆ ಮತ್ತು ಶಿಲ್ಪಕ್ಕೆ ಉತ್ತೇಜನವಿತ್ತು ಸುಂದರವಾದ ಅರಮನೆ, ಮಸೀದಿ, ಉದ್ಯಾನ ಮೊದಲಾದುವನ್ನು ನಿರ್ಮಿಸಿದ್ದಾರೆ. ಆದರೆ ರಾಜಧಾನಿ ಹೈದರಾಬಾದಿನಿಂದ ಹೊರಗಡೆ ಇವರು ನಿರ್ಮಿಸಿದ ಕಟ್ಟಡಗಳು



ಐವಾನ್-ಎ-ಶಾಹೀ, ಗುಲ್ಬರ್ಗ

ಕಡಿಮೆ. ಗುಲಬರ್ಗದ ಐವಾನ್-ಎ-ಶಾಹೀ ಕಟ್ಟಡದಲ್ಲಿ ಗುಲ್ಬರ್ಗ ವಿಭಾಗದ ಮುಖ್ಯ ಕಚೇರಿಗಳಿದ್ದವು. ಆದರೆ ಹೈದರಾಬಾದಿನ ಬೃಹತ್ ಕಟ್ಟಡಗಳಿಗೆ ಹೋಲಿಸಿದರೆ ಅದೊಂದು ಸಾಮಾನ್ಯ ಕೃತಿ. ಆದರೆ ಕರ್ನಾಟಕ ಭಾಗದ ಐತಿಹಾಸಿಕ ಹಾಗೂ ಪುರಾವಸ್ತು ಸಂಬಂಧವಾದ ಕಟ್ಟಡಗಳನ್ನು ರಕ್ಷಿಸುವುದರಲ್ಲಿ ನಿಜಾಮರ ಸರ್ಕಾರ ಶ್ರಮವಹಿಸುತ್ತಿತ್ತು. ಗುಲ್ಬರ್ಗ, ರಾಯಚೂರು, ಮುದ್ಗಲ್ ಮೊದಲಾದೆಡೆಯ ಕೋಟೆಗಳು, ಹಲವಾರು ಮಸೀದಿಗಳು, ನಾಗಾಯಿ ಮೊದಲಾದೆಡೆಯ ಕೋಟೆಗಳು, ಹಲವಾರು ದೇವಾಲಯಗಳು ನಿಜಾಮ ಸರ್ಕಾರದಿಂದ ರಕ್ಷಿತವಾಗಿದ್ದುವು.

**ನಾಣ್ಯಗಳು :** ನಿಜಾಮರ ರಾಜ್ಯದಲ್ಲಿ ವಿವಿಧ ಮಾದರಿಯ ನಾಣ್ಯಗಳು ಚಲಾವಣೆಯಲ್ಲಿದ್ದವು. 1854ರಲ್ಲಿ ರೂಢಿಗೆ ತಂದ ಹಾಲಿ ಸಿಕ್ಕ ಮತ್ತು 1904ರಲ್ಲಿ ಚಲಾವಣೆಗೆ ಬಂದ ಮಹಬೂಬಿಯ ರೂಪಾಯಿ ನಿಜಾಮರು ಟಂಕಿಸುತ್ತಿದ್ದ ನಾಣ್ಯಗಳು. ಮಹಬೂಬಿಯ ರೂಪಾಯಿಯ ಒಂದು ಮುಖದಲ್ಲಿ ಚಾರ್‌ಮಿನಾರ್ ಕಟ್ಟಡದ ಚಿತ್ರವಿರುತ್ತದೆ. 19ನೆಯ ಶತಮಾನದ ಕೊನೆಯ ಭಾಗದಲ್ಲಿ ಬೆಳ್ಳಿಯ ಅಭಾವದಿಂದ ಹಾಲಿ ಸಿಕ್ಕ ನಾಣ್ಯಗಳ ಟಂಕಣೆಯನ್ನು ನಿಲ್ಲಿಸಲಾಯಿತು. ಮಹಬೂಬ್ ಅಲಿಖಾನ್ ನಿಜಾಮರಾದಾಗ ನಾಣ್ಯಪದ್ಧತಿಯಲ್ಲಿ ಮತ್ತೆ ಸ್ಥಿರತೆ ಬಂತು. ನಿಜಾಮರು ಬೆಳ್ಳಿಯ ನಾಣ್ಯಗಳೊಡನೆ ವಿವಿಧ ಮೌಲ್ಯಗಳ ತಾಮ್ರದ ನಾಣ್ಯಗಳನ್ನು ಸಹ ಚಲಾವಣೆಗೆ ತಂದಿದ್ದರು. (ಬಿ.ಎಸ್.ಎ.)

**ಆಸಾದಿ :** ಧಾರ್ಮಿಕ ವೃತ್ತಿಗಾಯಕ ಪರಂಪರೆಗೆ ಸೇರಿದ ಮಾರಮ್ಮನ ಆರಾಧಕರು. ಮಾರಮ್ಮನಿಗೆ ಸಂಬಂಧಿಸಿದ ಹಾಡುಗಳನ್ನೇ ಹೆಚ್ಚಾಗಿ ಹಾಡುವರು. ಆಕೆ ಮೆರೆದ ಪವಾಡ ಹಾಗೂ ಮಹಿಮೆಗಳನ್ನು ಭಕ್ತ ಸಮೂಹಕ್ಕೆ ತಿಳಿಸುತ್ತ ಅವರಲ್ಲಿ ಭಯ ಭಕ್ತಿ, ಧರ್ಮ ಶ್ರದ್ಧೆಗಳನ್ನು ಮೂಡಿಸುವುದೇ ಇವರ ಕಾಯಕ. ಕರ್ನಾಟಕದಲ್ಲಿ ಚಿತ್ರದುರ್ಗ, ಬೆಂಗಳೂರು



ಆಸಾದಿ ಗಾಯಕ

ಗ್ರಾಮಾಂತರ, ಚಿಕ್ಕಮಗಳೂರು, ಶಿವಮೊಗ್ಗ ಹಾಗೂ ಉತ್ತರ ಕನ್ನಡ ಜಿಲ್ಲೆಯ ಶಿರಸಿ ಭಾಗಗಳಲ್ಲಿ ವಿಶೇಷತಃ ಕಂಡುಬರುತ್ತಾರೆ. ಇವರು ಪರಿಶಿಷ್ಟ ಮಾದಿಗ ಜಾತಿಗೆ ಸೇರಿದವರು. ಮಾರಮ್ಮನ ಎದುರಿನಲ್ಲಿಯೇ ಇವರ ದೀಕ್ಷೆ ನಡೆಯುವುದು. ದೇವಿಯ ಮುದ್ರೆ ಬಿದ್ದಂದಿನಿಂದ ತಮ್ಮ ಕುಲಕಸಬಾದ ಚಮ್ಮಾರಿಕೆಯನ್ನು ಮಾಡುವಂತಿಲ್ಲ. ಅಲ್ಲದೆ ಊರಿನ ಯಾವುದೇ ಕೀಳು ಕೆಲಸಗಳನ್ನು ಕೈಗೆತ್ತಿಕೊಳ್ಳುವಂತಿಲ್ಲ. ದೇವಿ ಪ್ರಾರ್ಥನೆಗೆ ಮಂಗಳವಾರ ಮತ್ತು ಶುಕ್ರವಾರ ಇವರಿಗೆ ಪ್ರಶಸ್ತ ದಿನಗಳು. ಇವರ ಉಡುಗೆ ತೊಡುಗೆಗಳಲ್ಲಿ ವಿಶೇಷತೆ ಕಾಣಬಹುದು. ಕೆಂಪುಸೀರೆಯ ರುಮಾಲು, ಬಿಳಿಯ ಕಾಸೆಪಂಚೆ, ನಿಲುವಂಗಿ, ಅದರ ಮೇಲೆ ಕೋಟು, ಕೊರಳಲ್ಲಿ ಕರಿಮಣಿಸರ, ಹಣೆಗೆ ಕುಂಕುಮ ಧರಿಸುವರು. ದೇವತೆಯನ್ನು ಕೊಂಡಾಡಲು ಕೈಯಲ್ಲಿರುವುದು ರಣಹಲಗೆ ಎಂಬ ವಾದ್ಯ. ಹಬ್ಬ ಹರಿದಿನಗಳಲ್ಲದೆ ಜಾತ್ರೆಯಂತಹ ಸಾಂಸ್ಕೃತಿಕ ಸಂದರ್ಭಗಳಲ್ಲೂ ಆಸಾದಿ ಪಾತ್ರ ಬಹುಮುಖ್ಯ. ಇವನಿಲ್ಲದೆ ಜಾತ್ರೆಯ ಕಾರ್ಯಗಳು ಪೂರ್ಣಗೊಳ್ಳುವುದಿಲ್ಲ. ಮಾರಮ್ಮನ ಮೆರವಣಿಗೆಯ ನಿಗದಿ, ಕೋಣ ಕುರಿಗಳ ಬಲಿ ಇತ್ಯಾದಿ ವಿಚಾರಗಳನ್ನು ತಿಳಿಸುವವನೇ ಈತ. ಇವರು ಮೆರವಣಿಗೆ ಹೊರಡುವ ಸಂದರ್ಭದಲ್ಲಿ ಹಲಗೆ ಹಿಡಿದು ದೇವತೆಯ ಬಗ್ಗೆ ಹೊಗಳಿ ಕೊಂಡಾಡುವುದುಂಟು. ಈ ಕೊಂಡಾಟದಲ್ಲಿ ಬಯ್ಗುಳಗಳೂ ಇರುತ್ತವೆ. ಹೀಗೆ ಬೈಯ್ಯುವುದೂ ಇವರಿಗೆ ಈ ಸಂದರ್ಭದಲ್ಲಿರುವ ವಿಶೇಷ ಹಕ್ಕು; ಇದು ಈ ವೃತ್ತಿ ಗಾಯಕ ಪರಂಪರೆಯವರಿಗೆ ಮಾತ್ರ ಸೀಮಿತವಾದದ್ದು.

ಇವರು ತಮ್ಮ ಜೀವನದ ಬಹುಪಾಲು ಕಾಲವನ್ನು ಮಾರಿಗುಡಿಗಳಿರುವ ಊರುಗಳನ್ನು ಸುತ್ತುತ್ತ, ಹಾಡುಗಳನ್ನು ಹೇಳುತ್ತ ಕಳೆಯುವರು. ಇವರ ಹಾಡುಗಳಲ್ಲಿ ಮುಖ್ಯವಾಗಿ ಮಾರಿದೇವತೆ ಕುರಿತ ಹಾಡುಗಳು ಕೊಣಬಿಗೌಡನ ಹಾಡುಗಳು, ವಿನೋದ ಸಂಬಂಧದ ಹಾಡುಗಳನ್ನು ಕಾಣಬಹುದು. ಮಾರಮ್ಮನ ಜಾತ್ರೆಯ ಸಂದರ್ಭದಲ್ಲಿ ಭಕ್ತ ಸಮೂಹದ ಒತ್ತಾಸೆ, ಒತ್ತಾಯಗಳಿಗೆ ಮಣಿದು ಅಶ್ಲೀಲ ಪದಗಳನ್ನೂ ಹಾಡುವರು. ಒಂದು ರೀತಿಯ ವಿಶಿಷ್ಟ ನಿಂದಾಸ್ತುತಿಯ ಮೂಲಕ ತಮ್ಮ ದೈವಾರಾಧನೆಯನ್ನು ಕೈಗೊಳ್ಳುವರು. ಇಂಥ ರಚನೆಗಳಲ್ಲಿ ಕೆಲವು ಕಡೆ ಮೇಲುವರ್ಗದವರನ್ನು ಕುರಿತು ಅವಾಚ್ಯವಾಗಿ, ತುಚ್ಛವಾಗಿ ಬಯ್ಯುವ ರಚನೆಗಳೂ ಕಂಡುಬರುತ್ತವೆ. ಒಂದು ಆಸಾದಿ ಪದ ಹೀಗಿದೆ.

ಗೌಡ ಗಂಭೀರನಲ್ಲ ತೌಡು ಬುಕ್ಕಿಟ್ಟಲ್ಲ
ಔಡಲ ಕಾಯಿ ಬೆಳಿಸಲ್ಲ ಈ ಊರ
ಗೌಡನ ಹೆಣ್ತಿ ಗರ್ಭ್ಯಲ್ಲ (ಎಂ.ಆರ್‌ಇ.)

**ಆಳಂದಕರ್, ಶಂಕರರಾವ್ :** 1905-71. ಚಿತ್ರಕಲಾವಿದ, ಲೇಖಕ. 1905 ಜುಲೈ 7ರಂದು ಕಲಬುರ್ಗಿಯ ಸರಾಫ್ ಮನೆತನದಲ್ಲಿ ಜನಿಸಿದರು. ತಂದೆ ನಾರಾಯಣರಾವ್, ತಾಯಿ ಚಂದುಬಾಯಿ. ಬಾಲ್ಯದಲ್ಲೇ ಇವರ ಕಲಾಸಕ್ತಿಯನ್ನು ಗುರುತಿಸಿ, ಚಿತ್ರಕಲಾ ಶಿಕ್ಷಕ ಜೋಶಿ ಎಂಬುವವರ ಒತ್ತಾಯದಿಂದ ಮುಂಬಯಿಯ ಜೆ.ಜೆ.ಸ್ಕೂಲ್ ಆಫ್ ಆರ್ಟ್ಸ್ ಶಾಲೆ ಸೇರಿದರು. ಅಲ್ಲಿ ಅತ್ಯಂತ ಪ್ರತಿಭಾವಂತ ವಿದ್ಯಾರ್ಥಿ ಎಂದು ಹೆಸರು ಗಳಿಸಿದರು. ಅನಂತರ ಮುಂಬಯಿಯ ವಿವಿಧ ಕಲಾಶಾಲೆಗಳಲ್ಲಿ ಕಲಾ ಶಿಕ್ಷಕರಾಗಿ ದುಡಿದರು. ಕಲಬುರ್ಗಿಗೆ ಹಿಂದಿರುಗಿ ನೂತನ ವಿದ್ಯಾಲಯದಲ್ಲಿ 150 ರೂಪಾಯಿ ಸಂಬಳದ ಮೇಲೆ ಕಲಾಶಿಕ್ಷಕರಾಗಿ ಸೇರಿದರು (1924). ಚಿತ್ರಕಲೆಯ ಪುನರುಜ್ಜೀವನಕ್ಕಾಗಿ ಪ್ರಯತ್ನಿಸಿದರು. ತಮ್ಮ ಸಮಸ್ತ ಬದುಕನ್ನೇ ಕಲಾಸಾಧನೆಗೆ ಸಮರ್ಪಿಸಿಕೊಂಡರು. ಚಿತ್ರಗಳ ಬ್ಯಾನರ್, ಭಿತ್ತಿ ಚಿತ್ರಗಳನ್ನು ಸಿದ್ಧಪಡಿಸುವುದು, ನಾಟಕ ಪರದೆ, ವೇಷ ಭೂಷಣ ತಯಾರಿಸುವುದರಲ್ಲಿ ನಿರತರಾದರು. ಆರೋಗ್ಯದ ಕಡೆ ಹೆಚ್ಚು ಕಾಳಜಿ ವಹಿಸದೆ 40ನೆಯ ವಯಸ್ಸಿನಲ್ಲಿಯೇ ಕ್ಷಯರೋಗ ಮತ್ತು ಮೂಲವ್ಯಾಧಿಗೆ ತುತ್ತಾದರು. ಆದರೂ ಕಲಾಕೃತಿಗಳ ರಚನೆ, ಕಲಾಚಿಂತನೆ ನಡೆಸಿದರು. ತಮ್ಮ ಶಿಷ್ಯ ಎಸ್.ಎಮ್.ಪಂಡಿತ (ನೋಡಿ)ರನ್ನು ಪ್ರೋತ್ಸಾಹಿಸಿ ಮುಂಬಯಿಗೆ ಕಳುಹಿಸಿ, ಶ್ರೇಷ್ಠ ಕಲಾವಿದರನ್ನಾಗಿ ಮಾಡಿದರು. ಈ ಪಂಡಿತರು ತಮ್ಮ ಗುರುಗಳನ್ನು ಧ್ರುವತಾರೆ ಎಂದು ಕರೆದಿದ್ದಾರೆ.

ಆಳಂದಕರರಿಗೆ ಶಾಸ್ತ್ರೀಯ ಸಂಗೀತದಲ್ಲೂ ಪಿಯಾನೋ ಮತ್ತು ಗಿಟಾರ್ ನುಡಿಸುವುದರಲ್ಲೂ ವಿಶೇಷ ಆಸಕ್ತಿಯಿತ್ತು. ಸಾಹಿತ್ಯದಲ್ಲೂ ಪ್ರೀತಿ. ಕವಿ ರವೀಂದ್ರರ ಅನೇಕ ಶ್ರೇಷ್ಠ ಚಿತ್ರಭಂಗಿಗಳನ್ನು ರಚಿಸಿದ್ದಾರೆ. ನಿಜಾಮರ ಆಳ್ವಿಕೆಯಲ್ಲಿ ಹೈದರಾಬಾದ್ ಸರ್ಕಾರದ ವಾರ್ತಾ ಇಲಾಖೆಯಲ್ಲಿ ಇವರು ಕಲಾವಿದರಾಗಿ ಕೆಲಸ ಮಾಡಿದರು. ಆ ವೇಳೆಯಲ್ಲಿ ಮಹತ್ತ್ವದ ಕಲಾಕೃತಿಗಳನ್ನು ರಚಿಸಿಕೊಟ್ಟರು. ನಿಜಾಮರ ಪೂರ್ವಜ ಅಸಫಜಹಾ ಅವರ ಸಮಗ್ರ ಜೀವನ ಕಲ್ಪನೆಯನ್ನು ಪ್ರತಿಬಿಂಬಿಸುವ ಬೃಹತ್ ಚಿತ್ರಗಳ ಹೊತ್ತಗೆ ತಯಾರಿಸಿ ನಿಜಾಮರ ಕೃಪೆಗೆ ಪಾತ್ರರಾದರು. ಕರ್ನಾಟಕ ವಿಧಾನಸಭಾ ಸಭಾಂಗಣದಲ್ಲಿ ಹಾಕಲು ಜವಾಹರಲಾಲ್ ನೆಹರು ಅವರ ಪೂರ್ಣ ಕೃತಿಯ ತೈಲಚಿತ್ರವನ್ನು ಇವರು ಬರೆದುಕೊಟ್ಟರು. ಈ ಕಲಾಕೃತಿ ಜನರ ಮೆಚ್ಚುಗೆ ಪಡೆಯಿತು. ಇದಲ್ಲದೆ ರಾಷ್ಟ್ರಾಭಿಮಾನವನ್ನು ಪ್ರೇರೇಪಿಸುವ ಲಿವಿಂಗ್ ಕೋಹಿನೂರ್ ಎಂಬ ಮಹತ್ತ್ವಪೂರ್ಣ ಚಿತ್ರಮಾಲಿಕೆಯ ಎರಡು ಸಂಪುಟಗಳನ್ನು ಸಿದ್ಧಪಡಿಸಿದ್ದಾರೆ. ಆಳಂದಕರರು 1956ರಲ್ಲಿ ತಮ್ಮ ಸೇವೆಯನ್ನು ವರ್ಗಾಯಿಸಿಕೊಂಡು ಬೆಂಗಳೂರಿಗೆ ಬಂದರು. ಅನಂತರ ಅನಾರೋಗ್ಯದಿಂದ ಗುಲ್ಬರ್ಗದಲ್ಲೇ ಉಳಿದರು. ಶರಣ ಬಸವೇಶ್ವರ, ಪುರಂದರದಾಸ, ಕನಕದಾಸ, ಕುಮಾರವ್ಯಾಸ, ರಾಘವೇಂದ್ರಸ್ವಾಮಿ ಮೊದಲಾದ ಆಧ್ಯಾತ್ಮಿಕ ಪ್ರಪಂಚದ ಮಹಾಪುರುಷರ ತೈಲಚಿತ್ರಗಳನ್ನು ರಚಿಸಿ ಕನ್ನಡಿಗರ ಗೌರವಕ್ಕೆ ಪಾತ್ರರಾದರು. ಅಖಿಲ ಭಾರತ ಕಲಾ ಸಂಘದ ಸದಸ್ಯರಾಗಿ (1951-57), ರಾಜ್ಯದ ಪ್ರಮುಖ ಕಲಾ ಶೈಕ್ಷಣಿಕ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿದರು. ತಮ್ಮ ಚಿತ್ರಕಲಾ ಬದುಕಿನಲ್ಲಿ ಇವರು ಒಂದು ಸಾವಿರಕ್ಕೂ ಹೆಚ್ಚು ಚಿತ್ರ ರಚಿಸಿದ್ದಾರೆ. ಕರ್ನಾಟಕ ಲಲಿತಕಲಾ ಅಕಾಡೆಮಿ ರಾಜ್ಯ ಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ (1965-66). ಇವರು ತಮ್ಮ ಜೀವಿತದ ಕೊನೆಯನ್ನು ಭಗವದ್ಗೀತೆಯ ಮೇರುಕೃತಿ ನಿರ್ಮಿಸುವಲ್ಲಿ ತೊಡಗಿಸಿಕೊಂಡರು. ಒಬ್ಬ ಆದರ್ಶ ಶಿಕ್ಷಕರೂ ಕಲಾತಪಸ್ವಿಯೂ ಕಲಾಪ್ರಪಂಚಕ್ಕೆ ಅಪೂರ್ವ ಕೊಡುಗೆ ನೀಡಿದ ಶ್ರದ್ಧಾವಂತರೂ ಆಗಿದ್ದ ಇವರು 1971 ಮೇ 31ರಂದು ನಿಧನರಾದರು. (ಆರ್.ಜಿ.ಆರ್.)

**ಆಳುಪ ವಂಶ :** 7ನೆಯ ಶತಮಾನದ ಮಧ್ಯಭಾಗದಿಂದ 14ನೆಯ ಶತಮಾನದ ಕೊನೆಯವರೆಗೆ ಆಳುವಖೇಡವನ್ನು (ದಕ್ಷಿಣ ಕನ್ನಡ ಜಿಲ್ಲೆ ಅಥವಾ ತುಳುನಾಡು) ಆಳಿದ ರಾಜಮನೆತನ. ಕೆಲವು ಪುರಾಣಗಳಲ್ಲಿ ಉಕ್ತವಾಗಿರುವ ಆಲಿಕ, ಆಲಕ ಅಥವಾ ಆಲದ ಎಂಬ ಶಬ್ದ ಆಳುಪರನ್ನು ಸೂಚಿಸುತ್ತದೆ ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯ. ಕ್ರಿ.ಶ.2ನೆಯ ಶತಮಾನದಷ್ಟು ಹಿಂದೆಯೇ ಗ್ರೀಕ್ ಭೂಗೋಳಕಾರ ಟಾಲೆಮಿ ಆಳುವಖೇಡವನ್ನು ಪ್ರಸ್ತಾಪಿಸಿರುವನು. 5ನೆಯ ಶತಮಾನದ ಹಲ್ಮಿಡಿ ಶಾಸನದಲ್ಲಿ ಉಕ್ತನಾಗಿರುವ ಅಳಪಗಣದ ಪಶುಪತಿ ಆಳುಪ ಮನೆತನದವನೇ ಇದ್ದಿರಬಹುದು. ಕದಂಬ ರವಿವರ್ಮನ ಗುಡ್ನಾಪುರ ಶಿಲಾಶಾಸನದಲ್ಲಿ ಆಳುಪರು ಕದಂಬರ ಸಾಮಂತರಾಗಿ ಕಾಣಿಸಿಕೊಳ್ಳುತ್ತಾರೆ. ಚಳುಕ್ಯ ಮಂಗಲೇಶನ (610-42) ಮಹಾಕೂಟ ಸ್ತಂಭ ಶಾಸನದಲ್ಲೂ 2ನೆಯ ಪುಲಕೇಶಿಯ (610-42) ಐಹೊಳೆ ಶಾಸನದಲ್ಲೂ ಆಳುಪರ ಉಲ್ಲೇಖವಿದೆ.

ಖಚಿತವಾಗಿ ತಿಳಿದುಬರುವ ಪ್ರಾಚೀನತಮ ಆಳುಪರಾಜ 1ನೆಯ ಆಳುವರಸ (ಸು.650-63). ಅವನ ಅನಂತರ 10ನೆಯ ಶತಮಾನದ ಮಧ್ಯಭಾಗದವರೆಗೆ ರಾಜ್ಯವಾಳಿದ ಆಳುಪರನ್ನು ಪ್ರಾಚೀನ ಆಳುಪರೆಂದು ಪರಿಗಣಿಸಬಹುದಾಗಿದೆ. ಅವರ ಶಾಸನಗಳು ತಿಳಿಯಗೊಡುವಂತೆ ಆಳುಪರು ಪಾಂಡ್ಯ ಕುಲದವರು, ಮೀನಲಾಂಛನೋಪೇತರು, ಸೋಮಕುಲದವರು, ದೊರೆತಿರುವ ಶಾಸನಗಳ ಆಧಾರದ ಮೇಲೆ ಪ್ರಾಚೀನ ಆಳುಪರ ವಂಶವೃಕ್ಷವನ್ನು ಈ ಕೆಳಗಿನಂತೆ ನೀಡಬಹುದಾಗಿದೆ:

ಆಳುವರಸ 1 (ಆಳುಪ ಮಹಾರಾಜ, ಗುಣಸಾಗರ ಆಳುಪೇಂದ್ರ ಸು.650-63) (ಪತ್ನಿ, ಮಹಾದೇವಿ)
|
ಚಿತ್ರವಾಹನ I ಸು.663-730) (ಪತ್ನಿ, ಕುಂಕುಮದೇವಿ)
|
ಆಳುವರಸ II (ಸು.730-65)

ಚಿತ್ರವಾಹನ II (ಸು.765-800) — ರಣಸಾಗರ (ಸು.765-805)

ಚಿತ್ರವಾಹನ II → ಶ್ವೇತವಾಹನ (ಸು.805-15)

ರಣಸಾಗರ → ಪೃಥ್ವೀಸಾಗರ (ಆಳುವರಸ III) (ಸು.810-40)
|
ಮಾರಮ್ಮ (ಆಳುವರಸ IV, ಸು.840-70)
|
ವಿಮಳಾದಿತ್ಯ (ಸು.870-900)

ಆಳ್ವ ರಣಂಜಯ (ಸು.900-30) — ದತ್ತಾಳುಪ 1 (ಸು.930-50)

ಇವರಲ್ಲಿ 1ನೆಯ ಆಳುವರಸ ಚಳುಕ್ಯ 1ನೆಯ ವಿಕ್ರಮಾದಿತ್ಯನ ಸಾಮಂತನೂ ಪರಮಮಿತ್ರನೂ ಆಗಿದ್ದು, ತುಳುನಾಡಿಗಷ್ಟೇ ಅಲ್ಲದೆ ಕದಂಬ ಮಂಡಲಕ್ಕೂ ಪೊಂಬುಚ್ಚ ಪ್ರಾಂತಕ್ಕೂ ದೊರೆಯಾಗಿದ್ದ. ಚಕ್ರವರ್ತಿಯ ಬೇಡಿಕೆಯ ಮೇರೆಗೆ ದೂರದ (ಆಂಧ್ರಪ್ರದೇಶದ ಗುಂಟೂರು ಜಿಲ್ಲೆಯ) ಕಲ್ಲೂರಿಗೆ ತೆರಳಿದ್ದ ಈತ 663ರಲ್ಲಿ ಅಲ್ಲೇ ಅಸು ನೀಗಿದನೆಂದು ಮಾರುಟೂರು ತಾಮ್ರಶಾಸನದಿಂದ ತಿಳಿಯುತ್ತದೆ. ಅವನ ಮಗ 1ನೆಯ ಚಿತ್ರವಾಹನನ ಸುಮಾರು ಏಳು ದಶಕಗಳ ದೀರ್ಘ ಆಳ್ವಿಕೆಯ ಕಾಲ ಪ್ರಾಚೀನ ಆಳುಪರ ಸುವರ್ಣಯುಗ. ಮಧುರೆಯ ಪಾಂಡ್ಯರ ದಾಳಿಯನ್ನು



ಬೈಂದೂರಿನ ಸೇನೇಶ್ವರ ದೇವಾಲಯ



ಬೈಂದೂರಿನ ಸೇನೇಶ್ವರ ದೇವಾಲಯದಲ್ಲಿರುವ ಸರಸ್ವತಿ



ಬಾರಕೂರಿನ ಪಂಚಲಿಂಗೇಶ್ವರ ದೇವಾಲಯದಲ್ಲಿರುವ ಸ್ಕಂದ



ಕೋಟದ ಹಿರಿಯ ದೇವಾಲಯ

ಮಂಗಲಪುರದಲ್ಲಿ ತಡೆಹಿಡಿದು ಹಿಮ್ಮೆಟ್ಟಿಸಿ 'ಚಾಲುಕ್ಯ ರಾಜ್ಯಾಭಿವೃದ್ಧಿ ಹೇತುಭೂತಃ' ಎಂದು ಚಳುಕ್ಯರಿಂದ ಹೊಗಳಿಸಿಕೊಂಡ ಈ ಚಿತ್ರವಾಹನ ಚಳುಕ್ಯ ವಿಜಯಾದಿತ್ಯನ ತಂಗಿ ಕುಂಕುಮದೇವಿಯನ್ನು ಮದುವೆಯಾಗಿದ್ದ. ಇವನು ಕದಂಬಮಂಡಲ ಮತ್ತು ಪೊಂಬುಚ್ಚ ಪ್ರದೇಶಕ್ಕೆ ಅಧಿಪತಿಯಾಗಿದ್ದ. ಆದರೆ ಇವನ ಮಗ 2ನೆಯ ಆಳುವರಸನ ಆಳಿಕೆಯಲ್ಲಿ ಆಳುಪರು ಚಳುಕ್ಯರೊಡನೆ ವೈಮನಸ್ಯ ಬೆಳೆಸಿ ಕದಂಬಮಂಡಲವನ್ನು ಕಳೆದುಕೊಂಡರಲ್ಲದೆ ಕಾಂಚೀಪುರದ ಪಲ್ಲವರ ಸಾಮಂತರಾದರು. ಅವನು ತೀರಿಕೊಂಡಾಗ ಅವನ ಹಿರಿಯ ಮಗ 2ನೆಯ ಚಿತ್ರವಾಹನ ಪೊಂಬುಚ್ಚ ಪ್ರದೇಶಕ್ಕೂ ಕಿರಿಯ ಮಗ ರಣಸಾಗರ ತುಳುನಾಡಿಗೂ ಅಧಿಪತಿಗಳಾದರು. ರಾಷ್ಟ್ರಕೂಟ 3ನೆಯ ಗೋವಿಂದನ ದಾಳಿಗೆ ತುತ್ತಾಗಿ 2ನೆಯ ಚಿತ್ರವಾಹನ ಪೊಂಬುಚ್ಚ ಪ್ರದೇಶದಿಂದ ಕಾಲ್ತೆಗೆಯಬೇಕಾಗಿ ಬಂದಾಗ ಅವನು ತುಳುನಾಡಿಗೆ ಹಿಂತಿರುಗುವುದು ಅನಿವಾರ್ಯವಾಯಿತು. ಇದರಿಂದ ಉದ್ಭವಿಸಿದ ಯಾದವೀ ಕಲಹಗಳಲ್ಲಿ 2ನೆಯ ಚಿತ್ರವಾಹನ, ಅವನ ಮಗ ಶ್ವೇತವಾಹನ ಮತ್ತು ಸಹೋದರ ರಣಸಾಗರ ಇವರು ಅಸು ನೀಗಿದರು. ಈ ಯಾದವೀ ಕಲಹವನ್ನು ಕೊನೆಗೊಳಿಸಿದವ ರಣಸಾಗರನ ಮಗ ಪೃಥ್ವೀಸಾಗರ. ಅವನ ಮಗ ಮಾರಮ್ಮನು ಪರಮೇಶ್ವರ, ಅಧಿರಾಜರಾಜ ಎಂಬೀ ಪರಮಾಧಿಕಾರ ದ್ಯೋತಕವಾದ ಬಿರುದುಗಳನ್ನು ಧರಿಸಿದ್ದ. ಅವನ ಅನಂತರ ಪಟ್ಟಕ್ಕೆ ಬಂದ ವಿಮಳಾದಿತ್ಯ ಸು.900ರಲ್ಲಿ ರಾಷ್ಟ್ರಕೂಟರ ದಾಳಿಗೆ ತುತ್ತಾದ. ಆಳ್ವ ರಣಂಜಯ ತನ್ನ ಮಗಳು ಎಂಜಲದೇವಿಯನ್ನು ಶಾಂತರ ಮನೆತನದ ಚಾಗಿಶಾಂತರನಿಗೆ ಮದುವೆ ಮಾಡಿಕೊಟ್ಟಿದ್ದ. ಅವನು ತೀರಿಕೊಂಡಾಗ ಅವನ ಮಗ ಪ್ರಾಪ್ತವಯಸ್ಕನಿರದಿದ್ದ ಕಾರಣ, ಅವನ ತಮ್ಮ ದತ್ತಾಳುಪ ಸಿಂಹಾಸನವನ್ನೇರಿದ.

ಈ ಮೇಲಿನ ಆಳುಪ ಅರಸುಗಳು ಹೊರಡಿಸಿದ ಯಾವ ಶಾಸನಗಳಲ್ಲೂ ತೇದಿಯ ವಿವರಗಳಿಲ್ಲವಾದ ಕಾರಣ, ಅವರುಗಳ ಕಾಲನಿರ್ಣಯ ಮಾಡುವಲ್ಲಿ ತೌಲನಿಕ ಲಿಪಿಶಾಸ್ತ್ರವನ್ನು ಮರೆಹೋಗುವುದು ಅನಿವಾರ್ಯ. ಆದರೆ ದತ್ತಾಳುಪನನ್ನು ಪದಚ್ಯುತಗೊಳಿಸಿ ತನ್ನ ತಂದೆಯ ಸಿಂಹಾಸನವನ್ನು ತನ್ನದಾಗಿಸಿಕೊಂಡ ಕುಂದವರ್ಮನ ಕಾಲದಿಂದೀಚೆಗಿನ ಆಳುಪ ಶಾಸನಗಳಲ್ಲಿ ಹೆಚ್ಚಿನವು ತೇದಿಯ ವಿವರಗಳನ್ನೊಳಗೊಂಡಿವೆ. ಈ ಮಧ್ಯಯುಗೀನ ಆಳುಪರ ವಂಶವೃಕ್ಷ ಕೆಳಗಿನಂತಿದೆ

ಕುಂದವರ್ಮ (950-80)
|
ಜಯಸಿಂಹ 1 (980-1010)
|
ಚೋಳರ ಆಕ್ರಮಣ (1010-20)
|
ಬಂಕಿದೇವ 1 (1020-50)
|
ಪಟ್ಟಿಯೊಡೆಯ ಆಳುವರಸ 5 (1050-80)
|
ಪಾಂಡ್ಯಪಟ್ಟಿಯೊಡೆಯ ಜಯಸಿಂಹ II (1080-1110)
|
ಕವಿ ಆಳುಪೇಂದ್ರ (1110-60)
|
ಪತ್ನಿ, ಪಾಂಡ್ಯಮಹಾದೇವಿ
|
ಕುಲಶೇಖರ I (1160-1220)
|
ಪತ್ನಿ, ಜಾಕಲಮಹಾದೇವಿ
|
ಸಾಂತರ ಮನೆತನದ ಕುಂಡಣ (1220-30)
|
ವಲ್ಲಭದೇವ ದತ್ತಾಳುಪ II (1230-50)

ವೀರಪಾಂಡ್ಯ II (1250-75) — ಮಗಳು

ವೀರಪಾಂಡ್ಯ II: ಪತ್ನಿ ಬಲ್ಲಮಹಾದೇವಿ (1275-92)
|
ನಾಗದೇವರಸ (1290-1300)

ಮಗಳು:
|
2ನೆಯ ಬಂಕಿದೇವ (1285-1315)
|
ಸೋಯಿದೇವ (1315-35)
ಕುಲಶೇಖರ II (1335-46)
ಬಂಗಿದೇವ III (1346-55)
ಕುಲಶೇಖರ III (1355-90)
ವೀರಪಾಂಡ್ಯ II (1390-1400)

ಪ್ರಾಚೀನ ಆಳುಪರು ಕದಂಬ ಮಂಡಲವನ್ನು ಕಳೆದುಕೊಂಡ ಮೇಲೂ ಪೊಂಬುಚ್ಚ ಪ್ರದೇಶದ ಮೇಲಿನ ತಮ್ಮ ಆಧಿಪತ್ಯವನ್ನು ಉಳಿಸಿಕೊಂಡಿದ್ದರಾದರೆ, ಮಧ್ಯಯುಗೀನ ಆಳುಪರ ಅಧಿಕಾರ ತುಳುನಾಡಿಗೆ ಮಾತ್ರ ಸೀಮಿತಗೊಂಡಿತ್ತು. ಪ್ರಾಚೀನ ಆಳುಪರ ಕಾಲದಲ್ಲಿ ಉದಯಪುರ (ಇಂದಿನ ಉದ್ಯಾವರ), ಮಂಗಳಪುರ (ಇಂದಿನ ಮಂಗಳೂರು), ಪಟ್ಟಿಪೊಂಬುಚ್ಚ (ಇಂದಿನ ಹುಮಚ) ಮತ್ತು ಬನವಾಸಿ ಆಳುಪರ ರಾಜಧಾನಿಗಳಾಗಿ ಮೆರೆದಿದ್ದವಾದರೆ ಮಧ್ಯಯುಗದಲ್ಲಿ ಮಂಗಳಪುರ ಮತ್ತು ಬಾರಹಕನ್ಯಾಪುರ (ಇಂದಿನ ಬಾರಕೂರು) ಅವರ ರಾಜಧಾನಿಗಳಾಗಿದ್ದವು. ರಾಜ್ಯವಿಸ್ತಾರವು ಕುಂಠಿತಗೊಂಡಿದ್ದರೂ ಮಧ್ಯಯುಗದ ಆಳುಪರು ತಮ್ಮ ರಾಜ್ಯದೊಳಗೆ ಸರ್ವತಂತ್ರಸ್ವತಂತ್ರರಾಗಿಯೇ ಮೆರೆದಿದ್ದರಾಗಿ, ಪ್ರಾಚೀನ ಆಳುಪರಿಗಿಂತಲೂ ಹೆಚ್ಚಿನ ಸಂಖ್ಯೆಯ ಆಡಂಬರದ ಬಿರುದುಗಳನ್ನು ಧರಿಸಿದ್ದರು. ಉದಾಹರಣೆಗೆ ಪಾಂಡ್ಯಚಕ್ರವರ್ತಿ, ಸಮಸ್ತಭುವನಾಶ್ರಯ ಪೃಥ್ವೀವಲ್ಲಭ, ಮಹಾರಾಜಾಧಿರಾಜ ಪರಮೇಶ್ವರ, ಪರಮ ಭಟ್ಟಾರಕ, ಪಂಡಿತ ಪಾಂಡ್ಯ, ಪಾಂಡ್ಯ ಧನಂಜಯ ಇತ್ಯಾದಿ.

ಕುಂದವರ್ಮನ ಉತ್ತರಾಧಿಕಾರಿಯಾದ 1ನೆಯ ಜಯಸಿಂಹನ ಆಳ್ವಿಕೆಯ ಕೊನೆಯಲ್ಲಿ ತುಳುನಾಡು ಚೋಳರ ದಾಳಿಗೆ ತುತ್ತಾಗಿ ಸುಮಾರು ಹತ್ತು ವರ್ಷಗಳ ಕಾಲ ಅವರ ಆಕ್ರಮಣಕ್ಕೊಳಗಾಗಿತ್ತು. ಪುನಃ ಆಳುಪರ ಅಧಿಕಾರವನ್ನು ಸ್ಥಾಪಿಸಿದ ಕೀರ್ತಿ 1ನೆಯ ಬಂಕಿದೇವನದು. ಪಾಂಡ್ಯ ಪಟ್ಟಿಯೊಡೆಯ 2ನೆಯ ಜಯಸಿಂಹ ದ್ವಾರಸಮುದ್ರದ ಹೊಯ್ಸಳರ ದಾಳಿಯನ್ನು ಎದುರಿಸಿ ಸೋಲನ್ನನುಭವಿಸಬೇಕಾಯಿತು. ಆದರೂ ಈ ದಾಳಿಯಿಂದಾಗಿ ಆಳುಪರ ಸ್ವಾತಂತ್ರ್ಯಕ್ಕೆ ಧಕ್ಕೆ ಉಂಟಾಗಲಿಲ್ಲ. ಅದರಂತೆಯೆ ಕವಿ ಆಳುಪೇಂದ್ರನ ಆಳ್ವಿಕೆಯಲ್ಲಿ ಹೊಯ್ಸಳರು ತುಳುನಾಡಿನ ಮೇಲೆ ನಡೆಸಿದ ಎರಡನೆಯ ದಾಳಿಯಿಂದಲೂ ಆಳುಪರಿಗೆ ಸ್ವಾತಂತ್ರ್ಯಚ್ಯುತಿ ಉಂಟಾಗಲಿಲ್ಲ. ಕವಿ ಆಳುಪೇಂದ್ರನ ಮಹಿಷಿ ಪಾಂಡ್ಯಮಹಾದೇವಿ ಆಡಳಿತ ಕ್ಷೇತ್ರದಲ್ಲಿ ಪ್ರಮುಖಪಾತ್ರ ವಹಿಸಿದ್ದಳು. 1ನೆಯ ಕುಲಶೇಖರನ ರಾಣಿ ಜಾಕಲ ಮಹಾದೇವಿ ಸ್ವತಃ ಜೈನಧರ್ಮದವಳಿದ್ದು ಅನೇಕ ಧರ್ಮಕಾರ್ಯಗಳನ್ನು ನೆರವೇರಿಸಿದಳು.

1ನೆಯ ಕುಲಶೇಖರನ ತರುವಾಯ ಪಟ್ಟಕ್ಕೆ ಬಂದವನು ಶಾಂತರ ಮನೆತನದ ಕುಂಡಣ. ಇವನ ಆಳ್ವಿಕೆಗೆ ಸೇರಿದ ವರಾಂಗ ಶಿಲಾಶಾಸನ ಒಳ್ಳೆಯ ಕಾವ್ಯಶೈಲಿಯಲ್ಲಿ ರಚಿತವಾಗಿದ್ದು. ಅಂದಿನ ತುಳುನಾಡಿನ ರಾಜಕೀಯ ಧಾರ್ಮಿಕ ಸ್ಥಿತಿಗತಿಗಳ ಬಗೆ ಹೆಚ್ಚಿನ ಅಂಶಗಳನ್ನು ಹೊರಗೆಡುಹುವಂತಹದಾಗಿದೆ. 2ನೆಯ ದತ್ತಾಳುಪನ ಉತ್ತರಾಧಿಕಾರಿಯಾದ 1ನೆಯ ವೀರಪಾಂಡ್ಯದೇವ ಆಳುಪೇಂದ್ರದೇವ 25 ವರ್ಷಗಳ ಕಾಲ ರಾಜ್ಯವಾಳಿದ. ಅನಂತರ ಅವನ ಅರಸಿ ಬಲ್ಲಮಹಾದೇವಿ 17 ವರ್ಷಗಳ ಕಾಲ ಆಳುಪ ಸಿಂಹಾಸನವನ್ನಲಂಕರಿಸಿದ್ದಳು. ಅನಂತರ ಅವಳ ಮಗ ನಾಗದೇವರಸ ರಾಜ್ಯವಾಳಿದ ಬಗೆಗೆ ಶಾಸನಾಧಾರ ದೊರೆತಿರುವುದಾದರೂ ಅವಳ ಆಳ್ವಿಕೆಯ ಕಾಲದಲ್ಲೇ 1ನೆಯ ವೀರಪಾಂಡ್ಯದೇವನ ಅಳಿಯನಾದ 2ನೆಯ ಬಂಕಿದೇವ ದಂಗೆಯೆದ್ದಿದ್ದನೆಂದೂ ನಾಗದೇವರಸನ ತರುವಾಯ ಅವನೇ ತುಳುನಾಡಿನ ಏಕಾಧಿಪತಿಯಾದನೆಂದೂ ಅಂದಿನ ಶಾಸನಗಳಿಂದ ತಿಳಿದುಬರುತ್ತದೆ. ಅವನ ಆಳ್ವಿಕೆಯಲ್ಲಿ ತುಳುನಾಡಿನಲ್ಲಿ ಅನಾವೃಷ್ಟಿಯ ತೊಂದರೆ ಉಂಟಾಗಿತ್ತೆಂದೂ ಅವನ ಮೊರೆಗೆ ಓಗೊಟ್ಟು ತಿಮಿರೇಶ್ವರದೇವರು ಮಳೆ ತರಿಸಿದ್ದಕ್ಕೆ ಆ ದೇವರಿಗೆ ಬಂಕಿದೇವನು ದಾನಗಳನ್ನು ನೀಡಿದನೆಂದೂ 1305ರ ಸುಜೇರು ಶಾಸನ ತಿಳಿಸುತ್ತದೆ.

2ನೆಯ ಬಂಕಿದೇವನ ಉತ್ತರಾಧಿಕಾರಿ ಸೋಯಿದೇವನ ಆಳಿಕೆಯಲ್ಲಿ (1333ರಲ್ಲಿ), ಹೊಯ್ಸಳ 3ನೆಯ ಬಲ್ಲಾಳ ತುಳುನಾಡನ್ನು

ಆಕ್ರಮಿಸಿಕೊಂಡ. ಹೊಯ್ಸಳರನ್ನು ಹೊಡೆದೋಡಿಸುವ ಶಕ್ತಿ ಸಾಮರ್ಥ್ಯಗಳಿಲ್ಲದ ಆಳುಪರು ತಮ್ಮ ಸಿಂಹಾಸನವನ್ನು ಉಳಿಸಿಕೊಳ್ಳುವ ಸಲುವಾಗಿ ಆಳುಪ ರಾಜಕುಮಾರಿ ಕಿಕ್ಕಾಯಿ ತಾಯಿಯನ್ನು 3ನೆಯ ಬಲ್ಲಾಳನಿಗೆ ಮದುವೆ ಮಾಡಿಕೊಟ್ಟರು. ಅಂದಿನಿಂದ 1345ರ ವರೆಗೂ ಆಳುಪರೂ ಹೊಯ್ಸಳರೂ ತುಳುನಾಡಿನ ಮೇಲೆ ಪರಸ್ಪರ ಸ್ವತಂತ್ರವಾಗಿಯೇ ಅಧಿಕಾರ ಚಲಾಯಿಸುತ್ತಿದ್ದರೆಂಬುದು ಅಂದಿನ ಶಾಸನಗಳಿಂದ ವಿಶದವಾಗುತ್ತದೆ.

2ನೆಯ ಕುಲಶೇಖರನ ಆಳ್ವಿಕೆಯ ಕೊನೆಯ ವರ್ಷ 1345-46ರಲ್ಲಿ ತುಳುನಾಡಿನ ಮೇಲೆ ಆಳುಪರೂ ಹೊಯ್ಸಳರೂ ವಿಜಯನಗರದವರೂ ಪರಸ್ಪರ ಸ್ವತಂತ್ರರಾಗಿಯೇ ಅಧಿಕಾರ ನಡೆಸಿದ ಕುತೂಹಲಕಾರಿಯಾದ ಸನ್ನಿವೇಶ ಒದಗಿಬಂದಿತು. ಅಲ್ಲಿಂದ ಮುಂದೆ ಸುಮಾರು ಐದು ದಶಕಗಳ ಕಾಲ ಆಳುಪ ಮನೆತನದ 3ನೆಯ ಬಂಕಿದೇವ, 3ನೆಯ ಕುಲಶೇಖರ ಮತ್ತು 3ನೆಯ ವೀರಪಾಂಡ್ಯ ಇವರು ಸ್ವತಂತ್ರರಾಗಿಯೇ ರಾಜ್ಯವಾಳಿದರು. 15ನೆಯ ಶತಮಾನ ಪ್ರಾರಂಭವಾಗುವ ವೇಳೆಗೆ ಆಳುಪರ ಆಡಳಿತ ಕೊನೆಗೊಂಡು, ತುಳುನಾಡು ವಿಜಯನಗರ ಸಾಮ್ರಾಟರ ಪರಮಾಧಿಕಾರಕ್ಕೊಳಗಾಯಿತು.

ಶಾಸನಗಳು, ನಾಣ್ಯಗಳು: 7ನೆಯ ಶತಮಾನದ ಮಧ್ಯಭಾಗದಿಂದ 10ನೆಯ ಶತಮಾನದ ಮಧ್ಯಕಾಲದ ವರೆಗಿನ, ತುಳುನಾಡಿನ ಕೆಲವೆಡೆಗಳಲ್ಲಿ ಕಂಡುಬರುವ ಪ್ರಾಚೀನ ಆಳುಪರ ಶಿಲಾಶಾಸನಗಳ ಭಾಷೆ, ಸಂಸ್ಕೃತ ಅಥವಾ ಹಳಗನ್ನಡ ಮತ್ತು ಲಿಪಿ ಹಳಗನ್ನಡ. ಈಚೆಗೆ ದೊರೆತಿರುವ, 8ನೆಯ ಶತಮಾನದ ಪೂರ್ವಾರ್ಧದಲ್ಲಿ ಹೊರಬಿದ್ದ ಬೆಳ್ಮಣ್ಣು ತಾಮ್ರಶಾಸನ



ಆಳುಪ ಎರಡನೆಯ ಚಿತ್ರವಾಹನನ ಉದ್ಯಾವರ ಶಾಸನ (8ನೆಯ ಶತಮಾನ)

ಆಳುಪ ಮನೆತನದ ಏಕೈಕ ತಾಮ್ರ ಶಾಸನವಷ್ಟೇ ಅಲ್ಲದೆ, ಕನ್ನಡ ಭಾಷೆಯ ಪ್ರಾಚೀನತಮ ತಾಮ್ರಶಾಸನವೂ ಆಗಿರುತ್ತದೆ. ಉಡುಪಿ ತಾಲ್ಲೂಕಿನ ವಡ್ಡರ್ಸೆಯ ಹಳಗನ್ನಡ ಶಾಸನ ಆಳುಪರ ಶಾಸನಗಳಲ್ಲಿ ಪ್ರಾಚೀನತಮ ತಾಮ್ರಶಾಸನವೂ ಆಗಿರುತ್ತದೆ. ಉಡುಪಿ ತಾಲ್ಲೂಕಿನ ವಡ್ಡರ್ಸೆಯ ಹಳಗನ್ನಡದ ಶಾಸನ ಆಳುಪರ ಶಾಸನಗಳಲ್ಲಿ ಪ್ರಾಚೀನತಮವಾದದ್ದು. ಇದು 1ನೆಯ ಆಳುವರಸನಾಳ್ವಿಕೆಗೆ (ಸು.650-663) ಸೇರಿದ್ದು. 8-9ನೆಯ ಶತಮಾನದ ಸಂಧಿಕಾಲದಲ್ಲಿ ಆಳುಪರ ನಡುವೆ ನಡೆದು ಹೋದ ಭೀಕರ ಯಾದವೀಕಲಹಕ್ಕೆ ಸಂಬಂಧಿಸಿದ ವೀರಗಲ್ಲು ಶಾಸನಗಳೂ ತುಳುನಾಡಿನ ಕೆಲವೆಡೆಗಳಲ್ಲಿ ದೊರೆತಿವೆ. ಪ್ರಾಚೀನ ಆಳುಪರ ಯಾವ ಶಾಸನಗಳಲ್ಲೂ ತೇದಿಯ ವಿವರಗಳನ್ನು ನೀಡಲಾಗಿಲ್ಲ. ಪ್ರಾಚೀನ ಕಾಲದಲ್ಲಿ ತುಳುನಾಡು ನೆರೆಹೊರೆಯ ಪ್ರಾಂತ್ಯಗಳೊಂದಿಗೆ ಹೆಚ್ಚಾಗಿ ಬೆರೆಯದೆ ಉಳಿದಿತ್ತಾದ ಕಾರಣ ಆ ಕಾಲದ ತುಳುನಾಡಿನ ಶಾಸನಗಳಲ್ಲಿ ಇತರ ಪ್ರಾಂತ್ಯಗಳ ಕನ್ನಡ ಶಾಸನಗಳಲ್ಲಿ ಗುರುತಿಸಬಹುದಾದಷ್ಟು ಬಿರುಸಿನ ಬದಲಾವಣೆಗಳೂ ಬೆಳವಣಿಗೆಗಳೂ ಕಂಡುಬರುವುದಿಲ್ಲ. ಆದಕಾರಣ ಪ್ರಾಚೀನ ಆಳುಪರ ಶಾಸನಗಳ ಕಾಲವನ್ನು ತೌಲನಿಕ ಲಿಪಿಶಾಸ್ತ್ರದ ಸಹಾಯ ಪಡೆದು ನಿರ್ಣಯಿಸುವಲ್ಲಿ ಜಾಗರೂಕತೆ ವಹಿಸಬೇಕಾದುದು ಅತ್ಯಗತ್ಯ. ಪ್ರಾಚೀನ ಆಳುಪರ ಶಾಸನಗಳ ಪಾಠಗಳು ಅತ್ಯಂತ ಸಂಕ್ಷಿಪ್ತವಾಗುವ ಕಾರಣ, ಆ ಕಾಲದ ತುಳುನಾಡಿನ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಇತಿಹಾಸವನ್ನು ಪುನಾರಚಿಸುವಲ್ಲಿ ಅವುಗಳಿಂದ ಹೆಚ್ಚಿನ ಸಹಾಯ ದೊರೆಯುವುದಿಲ್ಲ. 'ವಾರಕೆಯ್', 'ಮುದಿಮೆಗೆಯ್', 'ನಾಟ್ಟು ಮುದಿಮೆ' ಮುಂತಾದ ಕೆಲವು ಪ್ರಾಂತೀಯ ಪಾರಿಭಾಷಿಕ ಪ್ರಯೋಗಗಳು ಅಂದಿನ ಆಳುಪರ ಶಾಸನಗಳಲ್ಲಿ ಕಂಡುಬರುವುದನ್ನು ಇಲ್ಲಿ ಪ್ರಸ್ತಾಪಿಸಬಹುದಾಗಿದೆ.

10 ರಿಂದ 14ನೆಯ ಶತಮಾನಗಳ ವರೆಗಿನ ಮಧ್ಯಯುಗೀನ ಆಳುಪರ ಶಾಸನಗಳೆಲ್ಲ ಶಿಲಾಶಾಸನಗಳು. ಅವುಗಳ ಭಾಷೆ ಸಂಸ್ಕೃತ ಅಥವಾ ಕನ್ನಡ. ಲಿಪಿ ಕನ್ನಡ, ಗ್ರಂಥ ಅಥವಾ ಮಲೆಯಾಳಂ. ಇವುಗಳಲ್ಲಿ ಹೆಚ್ಚಿನವು ತೇದಿಯ ವಿವರಗಳನ್ನೊಳಗೊಂಡಿರುವ ಕಾರಣ ಆ ಕಾಲದ ತುಳುನಾಡಿನ ಇತಿಹಾಸವನ್ನು ಅರಿತುಕೊಳ್ಳುವಲ್ಲಿ ಸಂಶಯುಗಳಿಗೂ ಊಹಾಪೋಹಗಳಿಗೂ ಅವಕಾಶ ತೀರ ಕಡಿಮೆ. ಆಳುಪ ಅರಸು ಕುಂದವರ್ಮನ ಆಳ್ವಿಕೆಯಲ್ಲಿ ಬರೆಯಲಾದ ಕದಿರಿಯ ಲೋಕೇಶ್ವರ ಪ್ರತಿಮಾ ಶಾಸನ 968 ತೇದಿಯ ವಿವರಗಳನ್ನೊಳಗೊಂಡಿರುವ ಆಳುಪ ಶಾಸನಗಳಲ್ಲಿ ಪ್ರಾಚೀನತಮದ್ದು. ಮಧ್ಯಯುಗೀನ ಆಳುಪರ ಶಾಸನಗಳಲ್ಲಿ



ಆಳುಪ ನಾಣ್ಯಗಳು

ತಿಂಗಳು, ತಿಥಿಗಳನ್ನು ನೀಡುವಲ್ಲಿ ಹೆಚ್ಚಾಗಿ ಸೌರಮಾನ ಪದ್ಧತಿಯನ್ನು ಬಳಸಲಾಗಿದೆ. ಹಲವು ಶಾಸನಗಳ ಪಾಠಗಳು ಸುದೀರ್ಘವಿದ್ದು ಆ ಕಾಲದ ತುಳುನಾಡಿನ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಇತಿಹಾಸದ ಮೇಲೆ ಸಾಕಷ್ಟು ಬೆಳಕು ಬೀರುತ್ತವೆ. ಇಲ್ಲಿಯವರೆಗೆ ದೊರೆತಿರುವಂತೆ 1392ರಲ್ಲಿ ಬರೆಯಲಾದ 2ನೆಯ ವೀರಪಾಂಡ್ಯದೇವನ ಮೂಡಬಿದರೆ ಶಾಸನವೇ ಆಳುಪರ ಕೊನೆಯ ಶಾಸನ.

ಈ ಕಾಲದಲ್ಲಿ ಆಳುಪರು ಹೊರಡಿಸಿದ ಕೆಲವು ನಾಣ್ಯಗಳೂ ದೊರಕಿವೆ. ಇವು ವೃತ್ತಾಕಾರದ ತಾಮ್ರನಾಣ್ಯಗಳು. ಮೀನಮಿಥುನದ ಚಿತ್ರ ಮತ್ತು ಶ್ರೀ ಪಾಂಡ್ಯ ಧನಂಜಯ ಎಂಬ ಬರೆಹ ಕನ್ನಡ ಅಥವಾ ನಾಗರಿ ಲಿಪಿಯಲ್ಲಿ ಇರುತ್ತವೆ. ಈ ನಾಣ್ಯಗಳು ದಕ್ಷಿಣ ಕನ್ನಡ ಜಿಲ್ಲೆಯ ಆಸುಪಾಸಿನಲ್ಲಿವೆ ಸಿಂಹಳದಲ್ಲಿ ಸಹ ದೊರಕಿವೆ. (ಕೆ.ವಿ.ಆರ್.)

**ವಾಸ್ತುಶಿಲ್ಪ :** ಆಳುಪರ ಆಳ್ವಿಕೆಯಲ್ಲಿಯೇ ಕಟ್ಟಲಾದುವೆಂದು ಶಾಸನಾಧಾರಗಳ ಸಹಿತವಾಗಿ ಹೇಳಬಹುದಾದ ಕಟ್ಟಡಗಳು ಬೆಳಕಿಗೆ ಬಂದಿಲ್ಲ. ಆದರೆ ಈ ಕಾಲದಲ್ಲಿ ಕಣಶಿಲೆಯ ಮತ್ತು ಜಂಬುಕಲ್ಲಿನ ಹಲವು ದೇವಾಲಯಗಳು ರಚಿತವಾಗಿರಬೇಕೆಂದು ಸಾಂದರ್ಭಿಕ ಸಾಕ್ಷ್ಯಗಳಿಂದ ಊಹಿಸಬಹುದಾಗಿದೆ. ಇವುಗಳ ಬಗ್ಗೆಯೂ ಪ್ರಕಟವಾಗಿರುವ ವಿವರಗಳು ಕಡಿಮೆ. ಬಾರಕೂರಿನ ಪಂಚಲಿಂಗೇಶ್ವರ (ಮಾರ್ಕಂಡೇಶ್ವರ) ದೇವಾಲಯ 8ನೆಯ ಶತಮಾನದ್ದು ಎನ್ನಲಾಗಿದೆ. ಇದು ಗಜಪೃಷ್ಠಾಕಾರದ ತಳವಿನ್ಯಾಸವಿರುವ ಕಟ್ಟಡ. ಬ್ರಹ್ಮಾವರದ ಮಹಾಲಿಂಗೇಶ್ವರ ಸು.9ನೆಯ ಶತಮಾನ, ಕೋಟೇಶ್ವರದ ಕೋಟಿನಾಥ (ಸು.9-10ನೆಯ ಶತಮಾನ), ಕಡಂದಲೆಯ ಸುಬ್ರಹ್ಮಣ್ಯ (ಸು.9ನೆಯ ಶತಮಾನ), ಸುರತ್ಕಲ್ಲಿನ ಸದಾಶಿವ (ಸು.9-10ನೆಯ ಶತಮಾನ) ಈ ದೇವಾಲಯಗಳೂ ಗಜಪೃಷ್ಠಾಕಾರದವೇ. ಈ ಕಾಲದ ದೇವಾಲಯಗಳು ಸಾಮಾನ್ಯವಾಗಿ ಅಡ್ಡಪಟ್ಟಿಕೆಗಳ ಅಧಿಷ್ಠಾನ, ಅದರ ಮೇಲೆ ಅರೆಗಂಬಗಳು ಮತ್ತು ಕೋಷಗಳಿಂದ ಅಲಂಕೃತವಾದ ಭಿತ್ತಿ ಇರುತ್ತವೆ. ಆ ಕಾಲದ ಚಾವಣಿಗಳು ಉಳಿದುಬಂದಂತಿಲ್ಲ. ದೇವಾಲಯಗಳಲ್ಲಿ ಗೋಪುರಗಳಾಗಲೀ ಶಿಖರಗಳಾಗಲೀ ಇದ್ದ ಸೂಚನೆಗಳೂ ದೊರಕುವುದಿಲ್ಲ. ದೇವಾಲಯಗಳ ಭಿತ್ತಿ ಅಲಂಕರಣ, ಚೋಳ ಮತ್ತು ಗಂಗ ರೀತಿಯವುಗಳಿಗೆ ಹೊಂದಿಕೊಳ್ಳುತ್ತದೆ. 11ನೆಯ ಶತಮಾನದ ಸೇನೇಶ್ವರ ಗುಡಿಯಲ್ಲಿ ಮಾತ್ರ ಅಲಂಕರಣ ಸರಳವಾಗಿದ್ದರೂ ಕದಂಬ ನಾಗರ ರೀತಿಯ ಶಿಖರಗಳಿವೆ.

ಆಳುಪರ ಕಾಲದ ಶಿಲ್ಪ ಶೈಲಿಯನ್ನು ಪರಿಶೀಲಿಸಿದರೆ ಹೆಚ್ಚಿನ ಅಂಶಗಳಲ್ಲಿ ಆ ಶೈಲಿಯು ಬಾದಾಮಿ ಚಳುಕ್ಯ ಹಾಗೂ ಕಲ್ಯಾಣ ಚಾಳುಕ್ಯ ಶೈಲಿಯನ್ನೇ ಹೋಲುತ್ತದೆ. ಕೆಲವೊಮ್ಮೆ ಪಲ್ಲವ, ಚೋಳ ಶಿಲ್ಪಶೈಲಿಯೂ ಕಂಡುಬರುತ್ತದೆ. ಇದಕ್ಕೆ ಕಾರಣ ಪಲ್ಲವ, ಚೋಳ ರಾಜ್ಯಗಳೊಡನಿದ್ದ ಸಾಂಸ್ಕೃತಿಕ ಸಂಪರ್ಕ. ಆದುದರಿಂದ ಆಳುಪರ ಶಿಲ್ಪಶೈಲಿಯನ್ನು ಪ್ರತ್ಯೇಕವಾದ ಒಂದು ವರ್ಗಕ್ಕೆ ಅನ್ವಯಿಸುವುದು ಕಷ್ಟ. ಆಳುಪ ಕಾಲದ ಬಾದಾಮಿ, ಕಲ್ಯಾಣಚಾಳುಕ್ಯ ಮತ್ತು ಹೊಯ್ಸಳ ಶೈಲಿಗಳಿಗೆ ಈ ಕೆಳಗಿನ ದೃಷ್ಟಾಂತಗಳನ್ನೀಯಬಹುದು. ಬಾದಾಮಿ ಚಳುಕ್ಯ ಶೈಲಿ: ಶ್ರೀವಳ್ಳಿಯ ಕಡಿಯಾಳಿ ಮಹಿಷಮರ್ದಿನಿ, ನಂದಿಕೂರಿನ ಮಹಿಷಮರ್ದಿನಿ, ಬೆಳ್ಮಣ್ಣಿನ ಮಹಿಷಮರ್ದಿನಿ, ಮುಂಡುಕೂರಿನ ಮಹಿಷಮರ್ದಿನಿ, ಮೂಡಬಿದರೆಯ ಮಹಿಷಮರ್ದಿನಿ. ಕಲ್ಯಾಣಚಾಳುಕ್ಯ ಶೈಲಿ: ಬೈಂದೂರು ಸೇನೇಶ್ವರ ದೇವಾಲಯದ ಅಪ್ರತಿಮ ಮೂರ್ತಿಗಳು, ನೀಲಾವರದ ದುರ್ಗಾಭಗವತಿ, ಬಾರಕೂರಿನ ಕೋಟೆಕೇರಿ ವೇಣುಗೋಪಾಲಕೃಷ್ಣ, ಕುಂಭಾಶಿಯ ಕೇಶವ. ಹೊಯ್ಸಳ ಶೈಲಿ: ಕಾರ್ಕಳದ ಅನಂತಶಯನ, ಮಂಗಳೂರಿನ ಅತ್ತಾವರದ ಚಕ್ರಪಾಣಿ ಗೋಪಾಲಕೃಷ್ಣ, ತೊದ್ದಳ್ಳಿ ವಾಸುದೇವ. ಚೋಳರ ಶೈಲಿ: ಉಡುಪಿ ಚಂದ್ರೇಶ್ವರ ದೇವಾಲಯದ ಪಂಚಲೋಹದ ಸದಾಶಿವ, ಪೇರಂಪಳ್ಳಿಯ ಪಂಚಲೋಹದ ಸದಾಶಿವ, ಉಡುಪಿ ಶ್ರೀಕೃಷ್ಣಮಠದ ನಾರಾಯಣ, ಕದ್ರಿ ಲೋಕೇಶ್ವರ.

ಶಿಲಾಶಿಲ್ಪಗಳಲ್ಲಿ ಹೆಚ್ಚಿನವೆಲ್ಲ ಕಗ್ಗಲ್ಲಿನಿಂದ ಮಾಡಲ್ಪಟ್ಟವು. ಬಳಪದ ಕಲ್ಲನ್ನೂ ಉಪಯೋಗಿಸಿದೆ. ಕೆಲವೊಮ್ಮೆ ನಸು ಕೆಂಪುಶಿಲೆಯನ್ನೂ ಬಳಸಿಕೊಂಡಿದೆ. ಈ ಶಿಲ್ಪಗಳನ್ನು ಕೊರೆಯುವಲ್ಲಿ ಇತರ ಭಾಗಗಳಿಂದ ಸ್ಥಪತಿಗಳನ್ನು ಕರೆಸಿಕೊಂಡಿರಬಹುದು. ಸ್ಥಳೀಯ ಸ್ಥಪತಿಗಳು ಇತರ ಕಡೆ ಹೋಗಿ ತರಬೇತಿಯನ್ನು ಪಡೆದಿರಬಹುದು. (ಪಿ.ಜಿ.ಬಿ.)

# ಇ

**ಇಂಗಳದಾಳು :** ಚಿತ್ರದುರ್ಗ ತಾಲ್ಲೂಕಿನ ಒಂದು ಗ್ರಾಮ. ಚಿತ್ರದುರ್ಗದಿಂದ ಆಗ್ನೇಯಕ್ಕೆ 10ಕಿಮೀ ದೂರದಲ್ಲಿದೆ. ಬಹಳ ಹಿಂದಿನ ಕಾಲದಿಂದ ಅಲ್ಲಿ ಸಿಗುವ ತಾಮ್ರದ ಅದುರನ್ನು ಸಂಸ್ಕರಿಸಿ ಕೆಂಡದಂಥ (ಇಂಗಳ) ವರ್ಣದ ಸ್ವಚ್ಛ ತಾಮ್ರವನ್ನು ಉತ್ಪಾದಿಸುತ್ತಿದ್ದುದರಿಂದ.



ತಾಮ್ರದ ಅದುರು ಸಂಸ್ಕರಣದ ಕಾರ್ಯಾಗಾರ

ಈ ಪ್ರದೇಶಕ್ಕೆ ಇಂಗಳದಾಳು ಎಂಬ ಹೆಸರು ಬಂದಿದೆ. ರಾಜಧಾನಿ ಬೆಂಗಳೂರಿನಿಂದ 190ಕಿಮೀ ದೂರದಲ್ಲಿದ್ದು ಬೆಂಗಳೂರು- ಮುಂಬಯಿ ರಾಷ್ಟ್ರೀಯ ಹೆದ್ದಾರಿ ಈ ಪ್ರದೇಶದ ಮೂಲಕ ಹಾದುಹೋಗುತ್ತದೆ.

ಕರ್ನಾಟಕದಲ್ಲಿ ಅತಿ ಪ್ರಾಚೀನ ತಾಮ್ರದ ಗಣಿ ಇರುವುದು ಇಂಗಳದಾಳಿನಲ್ಲಿ. ಈ ಪ್ರದೇಶ ಕಡಿದಾದ ಬೆಟ್ಟದ ಸಾಲುಗಳಿಂದ ಆವೃತವಾಗಿದೆ.ಹಸಿರುಡದ ಈ ಬೋಳು ಬೆಟ್ಟಗಳು ಕಡಿದಾಗಿದ್ದು ಸಮುದ್ರಮಟ್ಟಕ್ಕಿಂತ 610ಮೀ.ಗಳಷ್ಟು ಎತ್ತರವಿದೆ. ಈ ಬೆಟ್ಟದ ಸಾಲಿನ ಮಧ್ಯೆ 1007ಮೀ.ಗಳ ಎತ್ತರದ ಬೆಳ್ಳಿ ಗುಡ್ಡ ವಿಶಿಷ್ಟವಾಗಿ ಕಾಣುತ್ತದೆ. ಬೆಳ್ಳಿಗುಡ್ಡದ ಸಾಲಿನ ಪಶ್ಚಿಮ ತಪ್ಪಲಿನ ಗರ್ಭದಲ್ಲಿ 30ಕಿಮೀ ದೂರ ಆಂಟಿಮನಿ, ಆರ್ಸೆನಿಕ್, ಸೀಸ ಮತ್ತು ತಾಮ್ರದ ಅದುರುಗಳು ಕಂಡುಬಂದಿವೆ. ಇತ್ತೀಚೆಗೆ ನಡೆದ ಅಂತರ್ಗತ ಶೋಧನೆಯಿಂದ ತಿಳಿದು ಬಂದಂತೆ 1000ಮೀ ಉದ್ದ ಹಾಗೂ 300ಮೀ. ಆಳದ ಶಿಲಾಸ್ತೋಮದಾದ್ಯಂತ ಅದುರುಗರ್ಭಿತ ಬೆಣಚು ಶಿಲೆಗಳು ಹರಡಿವೆ. ಚಾಲ್ಕೊಪೈರೈಟ್, ಪಿರ್ಹೊಟೈಟ್ ಎಂಬ ತಾಮ್ರ ಹಾಗೂ ಗಂಧಕದ ಅದುರುಗಳು ಸ್ಫಾಲರೈಟ್ ಮತ್ತು ಗೆಲಿನಾ ಎಂಬ ಸತು ಮತ್ತು ಸೀಸದ ಅದುರುಗಳು ಈ ಶಿಲಾಗರ್ಭದಲ್ಲಿವೆ.

ಅನೇಕ ತಜ್ಞರ ಪ್ರಯತ್ನದಿಂದ ಇಲ್ಲಿ ತಾಮ್ರದ ಅದುರಿನ ಉತ್ಪಾದನೆ ಆರಂಭವಾಗಿದೆ. 1974ರಲ್ಲಿ ಅದುರಿನ ಸಂಸ್ಕರಣ ಸ್ಥಾವರವನ್ನು ಸ್ಥಾಪಿಸಲಾಯಿತು. ಕೈಗಾರಿಕೆಗಳಿಗೆ ತಾಮ್ರ ಅತಿ ಮುಖ್ಯ ವಸ್ತುವಾಗಿದ್ದು ಅದನ್ನು ನೀಡುವ ಇಂಗಳದಾಳು ಕರ್ನಾಟಕದ ಹೆಮ್ಮೆಯ ಸ್ಥಳವಾಗಿದೆ. (ವೈ.ಎಲ್.)

**ಇಂಗಳೇಶ್ವರ :** ಬಿಜಾಪುರ ಜಿಲ್ಲೆ ಬಾಗೇವಾಡಿಗೆ ಸು.10ಕಿಮೀ ಈಶಾನ್ಯಕ್ಕಿರುವ ಹಳ್ಳಿ. 12ನೆಯ ಶತಮಾನದಲ್ಲಿ ಅಂದರೆ ಬಸವಣ್ಣನವರ ಕಾಲದಲ್ಲಿ ಬಹಳ ಪ್ರಸಿದ್ಧವಾದ ಪಟ್ಟಣವಾಗಿತ್ತು. ಐತಿಹಾಸಿಕ ಮಹತ್ವವನ್ನು ಪಡೆದಿತ್ತು. ಬಾಗೇವಾಡಿಯನ್ನು ನಿರ್ದೇಶಿಸುವಾಗ ಪ್ರಸಿದ್ಧವಾದ ಇದರ ಹೆಸರಿನಿಂದ ಇಂಗಳೇಶ್ವರ ಬಾಗೇವಾಡಿ ಎಂದು ಕರೆಯುತ್ತಿದ್ದುದೂ ಉಂಟು.

ಇದು ಜೈನ ಮತ್ತು ಶೈವಧರ್ಮಗಳ ಕೇಂದ್ರವಾಗಿತ್ತು. ಇಲ್ಲಿಂದ ಬೆಳೆದು ಬಂದ ಜೈನ ಗುರುಗಳ ಒಂದು ಪರಂಪರೆಯನ್ನು ಇಂಗಳೇಶ್ವರ ಬಳಿ ಎಂದು ಕರೆಯಲಾಗಿದೆ. ಇದು ಶೈವಕ್ಷೇತ್ರವೂ ಆಗಿದ್ದಿತೆಂಬುದಕ್ಕೆ ಇಲ್ಲಿರುವ ರೇವಣಸಿದ್ಧರ ಗುಹೆ ಸಾಕ್ಷಿ. ಈ ಊರಿನ ಪೂರ್ವದಿಕ್ಕಿನಲ್ಲಿ ಕೆಂಪು ಗಚ್ಚುಕಲ್ಲಿನ ಗುಡ್ಡದಲ್ಲಿ ಈ ಗುಹೆಯಿದೆ. ಅಲ್ಲಿ ರೇವಣಸಿದ್ಧರ ಸುಂದರವಾದ ಆಸೀನಮೂರ್ತಿಯೊಂದಿದೆ. ಸಮೀಪದಲ್ಲಿ ಸಂಗಮೇಶ್ವರ ಮತ್ತು ಅಕ್ಕನಾಗಮ್ಮನ ಗುಡಿಗಳೂ ಇವೆ. ಬಹುಶಃ ಇದು ರೇವಣಸಿದ್ಧರ ಕಾರ್ಯಕ್ಷೇತ್ರವಾದ್ದಿರಬೇಕು. ಕಲ್ಮೇಶ್ವರ, ಸೋಮೇಶ್ವರ, ಶೋಭನೇಶ್ವರ ಮೊದಲಾದ ಶಿವದೇವಾಲಯಗಳೂ ನಾರಾಯಣ, ಕಾಳಪ್ಪ, ಹನುಮಂತನ ಗುಡಿಗಳೂ ಇಲ್ಲಿವೆ. ಇವುಗಳಲ್ಲಿ ಕೆಲವು 12ನೆಯ ಶತಮಾನದ ಕಲ್ಯಾಣ ಚಾಳುಕ್ಯ ಸಂಪ್ರದಾಯದವು.

ಐನೂರು ಮಹಾಜನಗಳಿಂದ ಕೂಡಿದ ಇಲ್ಲಿನ ಅಗ್ರಹಾರ ತುಂಬ ಪ್ರಸಿದ್ಧವಾಗಿತ್ತು, ವಿದ್ಯಾಕೇಂದ್ರವಾಗಿತ್ತು. ಜನಮೇಜಯನ ಕಾಲದಿಂದಲೂ ಈ ಅಗ್ರಹಾರ ಬೆಳೆದು ಬಂದು, ಕರ್ನಾಟಕದ ಕಾಶಿ, ದಕ್ಷಿಣ ವಾರಣಾಸಿ ಎಂಬ ಕೀರ್ತಿಯನ್ನು ಪಡೆದಿದ್ದಿತೆಂದು ಹೇಳಲಾಗಿದೆ. ಎಲ್ಲಕ್ಕಿಂತ ಮಿಗಿಲಾಗಿ ಬಸವಣ್ಣನವರ ಜನ್ಮಸ್ಥಾನವಾದ ಬಾಗೇವಾಡಿಯೊಡನೆ ಉಲ್ಲೇಖವನ್ನು ಪಡೆದು ಕರ್ನಾಟಕದ ಇತಿಹಾಸದಲ್ಲಿ ಮಹತ್ವಪೂರ್ಣವಾದ ಸ್ಥಾನವನ್ನು ಪಡೆದಿದೆ. ಕವಿ ಅಗ್ಗಳ ಇಂಗಳೇಶ್ವರದವ. (ಎಚ್.ಟಿ.ಎಸ್.)

**ಇಂಚಲ** : ಬೆಳಗಾಂವಿ ಜಿಲ್ಲೆ ಪರಸಗಡ ತಾಲ್ಲೂಕಿನ ಒಂದು ಗ್ರಾಮ. ಬೈಲಹೊಂಗಲದಿಂದ 6ಕಿಮೀ ದೂರದಲ್ಲಿದೆ. ಇದೊಂದು ಪ್ರಾಚೀನ ಸಾಂಸ್ಕೃತಿಕ ಕೇಂದ್ರ. ಇಲ್ಲಿ ರಾಮಲಿಂಗ, ದುರ್ಗವ್ವ, ವೀರಭದ್ರ, ದ್ಯಾಮವ್ವ, ಹಣಮಂತ, ಕಲ್ಮೇಶ್ವರ ಅಥವಾ ಭೈರವೇಶ್ವರ, ನಾಗಲಿಂಗೇಶ್ವರ ಮತ್ತು ಮಲ್ಲಯ್ಯ ದೇವಾಲಯಗಳಿವೆ. ಇವುಗಳಲ್ಲಿ ಕರಿಗುಡಿ ಅಥವಾ ರಾಮಲಿಂಗ ದೇವಾಲಯ ಅತಿ ಪ್ರಾಚೀನವಾದುದು. ಊರ ಹೊರವಲಯದಲ್ಲಿರುವ ಈ ದೇವಾಲಯ ಚಾಳುಕ್ಯರ ಕಾಲದ ತ್ರಿಕೂಟಾಚಲ ಮಾದರಿಯದು. ಇದರಲ್ಲಿ ಮೂರು ಗರ್ಭಗುಡಿಗಳಿವೆ. ನವರಂಗವಿದೆ. ಆದರೆ ಮುಖ ಮಂಟಪವಿಲ್ಲ. ಮಧ್ಯದ ಗರ್ಭಗೃಹ ಅರ್ಧಮಂಟಪ ಹೊಂದಿದೆ. ಇಲ್ಲಿಯೇ ಇರುವ ಬಂಕನಾಥ ದೇವಾಲಯ ಕೊನೆಯ ಚಾಳುಕ್ಯರ ಕಾಲಕ್ಕೆ ಸೇರಿದ್ದಾಗಿದೆ. ಇದರಲ್ಲಿ ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗಗಳಿವೆ. ಇಲ್ಲಿನ ಆವರಣದಲ್ಲಿ ಪ್ರಾಚೀನ ಕಾಲದ ದೇವಾಲಯಗಳ ಅವಶೇಷಗಳು ಅಲ್ಲಲ್ಲಿ ಕಂಡುಬರುತ್ತವೆ.

ಊರೊಳಗಿರುವ ದುರ್ಗವ್ವ ದೇವಾಲಯ ಎರಡು ಗುಡಿಗಳನ್ನು ಹೊಂದಿದೆ. ಒಂದು ಗರ್ಭಗುಡಿಯಲ್ಲಿ ಎರಡು ಮಹಿಷಮರ್ದಿನಿಯ ವಿಗ್ರಹಗಳಿವೆ. ವೀರಭದ್ರನ ಗುಡಿಯ ಸಮೀಪ ಬಕ್ಕವ್ವ, ಗಣಪತಿ, ಉಮಾಮಹೇಶ್ವರ ವಿಗ್ರಹಗಳು ಭಿನ್ನವಾಗಿ ಬಿದ್ದಿವೆ. ಅನೇಕ ವೀರಗಲ್ಲುಗಳೂ ಇವೆ. ದ್ಯಾಮವ್ವನ ದೇವಾಲಯದಲ್ಲಿ ಒಂದು ಜೈನ ಶಾಸನವಿದೆ. ಇಲ್ಲಿ ಕೊನೆಯ ಚಾಳುಕ್ಯರ ಕಾಲದ ಮರದ ಮೂರ್ತಿಗಳಿವೆ. ಹಣಮಂತ ದೇವಾಲಯದಲ್ಲಿ ವಿಷ್ಣು, ಗಣಪತಿ ಮತ್ತು ರಾಷ್ಟ್ರಕೂಟರ ಶೈಲಿಯ ಎರಡು ದ್ವಾರಪಾಲಕರ ವಿಗ್ರಹಗಳಿವೆ.

ಭೈರವೇಶ್ವರ ಅಥವಾ ಕಲ್ಮೇಶ್ವರ ದೇವಾಲಯ ಚಾಳುಕ್ಯ ಶೈಲಿಯಲ್ಲಿರುವ ಒಂದು ಚಿಕ್ಕ ಗುಡಿ. ನಾಗಲಿಂಗೇಶ್ವರ ಎಂಬುದು ಭಗ್ನ ದೇವಾಲಯದ ಅಂಗಳದಲ್ಲಿ ಸ್ಥಾಪಿಸಿರುವ ದೊಡ್ಡ ಶಿವಲಿಂಗ. ಮಲ್ಲಯ್ಯನ ದೇವಾಲಯ ವಿಜಯನಗರ ಕಾಲದ ವಾಸ್ತು ಶೈಲಿಯಲ್ಲಿದೆ.

ಇಲ್ಲಿ ಸು.200 ವರ್ಷಗಳ ಹಿಂದೆ ಸಂತ ಶಿವಪ್ಪ ಎಂಬವರಿಂದ ಸ್ಥಾಪಿತವಾದ ಶಿವಯೋಗಿಶ್ವರ ಸಾಧು ಅದ್ವೈತ ಮಠವಿದೆ. ಯುಗಾದಿ ಹಬ್ಬದ ಸಂದರ್ಭದಲ್ಲಿ ಶಿವಯೋಗಿಗಳ (ಶಿವಾನಂದ ಭಾರತಿ ಸ್ವಾಮಿ) ಹೆಸರಿನಲ್ಲಿ ರಥೋತ್ಸವ ನಡೆಯುತ್ತದೆ. (ಎಂ.ಬಿ.ಎಚ್.)

**ಇಂಡಿ** : ಬಿಜಾಪುರ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಅದರ ಆಡಳಿತ ಕೇಂದ್ರ. ಈ ತಾಲ್ಲೂಕು ಪೂರ್ವಕ್ಕೆ ಗುಲ್ಬರ್ಗಜಿಲ್ಲೆ, ಉತ್ತರ ಮತ್ತು ಪಶ್ಚಿಮಕ್ಕೆ ಮಹಾರಾಷ್ಟ್ರ ರಾಜ್ಯ, ದಕ್ಷಿಣಕ್ಕೆ ಬಿಜಾಪುರ ಮತ್ತು ಸಿಂದಗಿ ತಾಲ್ಲೂಕುಗಳಿಂದ ಸುತ್ತುವರೆದಿದೆ. ವಿಸ್ತೀರ್ಣ 22,245ಚಕಿಮೀ. ಜನಸಂಖ್ಯೆ 3,56,768. ಇದರಲ್ಲಿ ಇಂಡಿ, ಚಡಚಣ ಮತ್ತು ಬಲ್ಲೊಳ್ಳಿ ಮೂರು ಸರ್ಕಲ್‌ಗಳಿದ್ದು 122 ಗ್ರಾಮಗಳಿವೆ.

ಈ ಪ್ರದೇಶ ಟ್ರ್ಯಾಪ್ ಕಲ್ಲಿನದು. ಕರಿಮಣ್ಣಿನ ಭೂಮಿ. ಸರಾಸರಿ ವಾರ್ಷಿಕ ಮಳೆ 637ಮಿಮೀ. ತಾಲ್ಲೂಕು ಉತ್ತರಕ್ಕೆ ಇಳಿಜಾರಾಗಿದೆ. ಭೀಮಾನದಿ ಈ ತಾಲ್ಲೂಕಿನ ಉತ್ತರ ಗಡಿಯಾಗಿ ಹರಿಯುವುದು. ಇಲ್ಲಿಯ ಬೋರಿ, ಸತ್ನಾಳ ಮೊದಲಾದ ತೊರೆಗಳು ಭೀಮಾನದಿಯನ್ನು ಸೇರಿಕೊಳ್ಳುತ್ತವೆ. ನೀರಾವರಿಗೆ ನಾಲೆ, ಕೆರೆ ಮತ್ತು ಬಾವಿಗಳು ಇವೆ. ಇಲ್ಲಿನ ಮುಖ್ಯಬೆಳೆ ಜೋಳ, ಹತ್ತಿ ಮತ್ತು ಸೇಂಗ. ಇವುಗಳ ಜೊತೆಗೆ ಭತ್ತ, ಕಬ್ಬು, ಗೋದಿ, ಸಜ್ಜೆ, ಮೆಣಸಿನಕಾಯಿ ಮತ್ತು ದ್ವಿದಳ ಧಾನ್ಯಗಳನ್ನು ಸ್ವಲ್ಪಮಟ್ಟಿಗೆ ಬೆಳೆಯುತ್ತಾರೆ. ಲಚ್ಯಾಣ ಎಂಬ ಗ್ರಾಮದಲ್ಲಿ ಪ್ರಾಥಮಿಕ ಶಿಕ್ಷಕರ ತರಬೇತಿ ಕೇಂದ್ರವಿದೆ. (ಬಿ.)

ಅಗರಖೇಡ (ನೋಡಿ) ತಾಲ್ಲೂಕಿನ ಮುಖ್ಯ ಸ್ಥಳಗಳಲ್ಲೊಂದು. ಬಂಥನಾಳದಲ್ಲಿ ಸಂಗನಬಸವೇಶ್ವರ ಮಠವಿದ್ದು ಈಗ ಸರ್ಕಾರ ಒಂದು ವಿದ್ಯಾಪೀಠ ತೆರೆದಿದೆ. ಚಡಚಣ ಗ್ರಾಮದಲ್ಲಿ ಒಂದು ಆರ್ಟ್ಸ್ ಕಾಲೇಜು ಮತ್ತು ಪರಮಾನಂದರ ಪುರಾತನ ದೇವಾಲಯವಿದೆ. ಪ್ರತಿವರ್ಷ ಇಲ್ಲಿ ಸಂಗಮೇಶ್ವರ ಜಾತ್ರೆ ನಡೆಯುತ್ತದೆ. ದೇವರನಿಂಬರಗಿಯಲ್ಲಿ ಗುರುಲಿಂಗಪ್ಪ ಮಹಾರಾಜರ ಸಮಾಧಿ ಇದೆ. ಹಲಸಂಗಿ ಊರಲ್ಲಿ ಆದಿಲ್‌ಷಾಹೀ ಕಾಲದ ಒಂದು ಹಳೇ ಕೋಟೆ ಉಂಟು. ಕವಿ ಮಧುರಚೆನ್ನರಿದ್ದ ಈ ಊರಿನಲ್ಲಿ ಅರವಿಂದ ಮಂಡಳಿ ಮತ್ತು ಅರವಿಂದ ಪ್ರೌಢಶಾಲೆ ಇವೆ. ಹೊರ್ತಿ ಗ್ರಾಮದಲ್ಲಿ ಸಿದ್ಧೇಶ್ವರ ಮತ್ತು ಮಲ್ಲಿಕಾರ್ಜುನ ಎಂಬ ಎರಡು ಪುರಾತನ ದೇವಾಲಯಗಳಿವೆ. ಇಂಚಗೇರಿಯಲ್ಲಿ ಗುರುಲಿಂಗ ಮಹಾರಾಜ್, ಭಾವುಸಾಹೇಬ್ ಮಹಾರಾಜ್ ಮತ್ತು ಗಿರಿಮಲ್ಲಪ್ಪ ಮಹಾರಾಜ್ - ಈ ಮೂರು ಮಂದಿ ಸಂತರು ಇದ್ದರು. ಮಿರಗಿಯಲ್ಲಿ ಸಂಗಮೇಶ್ವರ ದೇವಾಲಯವಿದೆ. ಇದು ರಮಾನಂದ ಸ್ವಾಮಿಯವರಿದ್ದ ಪವಿತ್ರ ಸ್ಥಳ. ನಿಂಬಾಳ ಮಹಾಶಿಲ್ಪಿ ಜಕ್ಕಣಾಚಾರ್ಯ ಇದ್ದ ಊರು ಎನ್ನುವರು. ಇಲ್ಲಿ ಆರ್.ಡಿ.ರಾನಡೆಯವರು ಸ್ಥಾಪಿಸಿದ ಆಧ್ಯಾತ್ಮಿಕ ಕೇಂದ್ರವಿದೆ. ಸಾಲೊಟಗಿ ಪ್ರಸಿದ್ಧ ವಿದ್ಯಾಕೇಂದ್ರವಾಗಿತ್ತೆಂದು 945ರ ಒಂದು ಶಾಸನದಲ್ಲಿ ಹೇಳಲಾಗಿದೆ. ಇಲ್ಲಿ ಶಿವಯೋಗೀಶ್ವರ ದೇವಾಲಯವಿದೆ.

ಇಂಡಿ ಈ ತಾಲ್ಲೂಕಿನ ಆಡಳಿತ ಕೇಂದ್ರ. ಗದಗ- ಸೊಲ್ಲಾಪುರ ರೈಲು ಹಾದಿಯಲ್ಲಿರುವ ಇಂಡಿರೋಡ್ ರೈಲು ನಿಲ್ದಾಣದಿಂದ ಆಗ್ನೇಯ ದಿಕ್ಕಿನಲ್ಲಿ 6ಕಿಮೀ ದೂರದಲ್ಲಿದೆ. ಜನಸಂಖ್ಯೆ 31,483. ಇಂಡಿಪಟ್ಟಣ ಪಂಚಾಯಿತಿ ಆಡಳಿತಕ್ಕೆ ಸೇರಿದೆ. ಇಲ್ಲಿ ಅಸಿಸ್ಟೆಂಟ್ ಕಮಿಶನರ ಕಛೇರಿ, ಒಂದು ಪ್ರಾಥಮಿಕ ಆರೋಗ್ಯ ಕೇಂದ್ರ, ಪಶುವೈದ್ಯಾಲಯ, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ ಮತ್ತು ಸಿಂಡಿಕೇಟ್ ಬ್ಯಾಂಕುಗಳ ಶಾಖೆಗಳು ಮತ್ತು ಪ್ರೌಢಶಾಲೆಗಳು ಇವೆ. ಇಲ್ಲಿಯ ಶಾಂತೇಶ್ವರ ದೇವಸ್ಥಾನ ಬಹು ಪ್ರಸಿದ್ಧವಾದುದು. ಗೋಪುರ ಅಷ್ಟಮುಖಗಳಿಂದ ಕೂಡಿದ್ದು ಸುಂದರ ಶಿಲ್ಪಗಳನ್ನು ಒಳಗೊಂಡಿದೆ. *

**ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್** : ಭಾರತದ ಔದ್ಯೋಗಿಕ ಮತ್ತು ವೈಜ್ಞಾನಿಕ ಪ್ರಗತಿಗೆ ನೆರವಾಗುವಂಥ ಸಂಶೋಧನೆಗಳನ್ನು ನಡೆಸಬೇಕೆಂಬ ಉದ್ದೇಶದಿಂದ ಮುಂಬಯಿಯ ಖ್ಯಾತ ಉದ್ಯಮಿ ದಿವಂಗತ ಜೆಮ್‌ಸೇಟ್‌ಜೀ ತಾತಾ ಅವರು ನೀಡಿದ್ದ ಧನಸಹಾಯದಿಂದ 1909ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತವಾದ ಸಂಶೋಧನಾ ಮಂದಿರ. ಆರಂಭದಲ್ಲಿ ತಾತಾ ಇನ್‌ಸ್ಟಿಟ್ಯೂಟ್ ಎಂಬ ಹೆಸರನ್ನು ಹೊಂದಿದ್ದ ಈ ಸಂಸ್ಥೆ ಈಗ ಮೇಲಿನ ಹೆಸರನ್ನು ಧರಿಸಿದೆ. ಕರ್ನಾಟಕ ಮತ್ತು ಭಾರತ ಸರ್ಕಾರಗಳ ಸಹಾಯಧನವನ್ನು ಪಡೆಯುತ್ತಿರುವ ಈ ಸಂಸ್ಥೆಗೆ ಎಂ.ಡಬ್ಲ್ಯೂ.ಟ್ರಾವರ್ಸ್ ಮೊಟ್ಟಮೊದಲ ನಿರ್ದೇಶಕರಾಗಿದ್ದರು (1909-15). ಅನಂತರ ಸರ್ ಎ.ಜಿ.ಬೋರ್ನ್ (1915-21), ಸರ್ ಎಂ.ಒ.ಫಾರೆಸ್ಟರ್ (1922-33), ಸರ್ ಸಿ.ವಿ.ರಾಮನ್ (1933-37), ಜೆ.ಸಿ.ಘೋಷ್ (1937-48), ಪ್ರೊ, ಎಂ.ಎಸ್.ಥ್ಯಾಕರ್ (1949-55), ಡಾ.ಎಸ್.ಭಗವಂತಂ (1957-62), ಡಾ.ಎಸ್.ಧಾವನ್ ಮುಂತಾದ ಖ್ಯಾತವಿಜ್ಞಾನಿಗಳು ಆ ಸ್ಥಾನವನ್ನಲಂಕರಿಸುತ್ತ ಬಂದಿದ್ದಾರೆ. ದ್ವಿತೀಯ ಮಹಾಯುದ್ಧದ ಕಾಲದಲ್ಲಿ ಈ ಸಂಸ್ಥೆ ನಡೆಸಿದ ಸಂಶೋಧನೆಗಳಿಂದ ರಾಷ್ಟ್ರದ ಉದ್ಯೋಗಗಳಿಗೂ ರಕ್ಷಣೆಗೂ ತುಂಬಾ

ಸಹಾಯವಾಯಿತು. ಅದರ ಕಾರ್ಯಕ್ಷೇತ್ರವನ್ನು ವಿಸ್ತರಿಸಿ ಅದು ಹೆಚ್ಚು ಪರಿಣಾಮಕಾರಿಯಾಗಿ ಸಂಶೋಧನೆ ನಡೆಸುವ ಕಾರ್ಯ ಆರಂಭವಾಯಿತು.



ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಮುಖ್ಯಕಟ್ಟಡ

1942ರ ಅನಂತರ ಅನ್ವಯ ಗಣಿತಶಾಸ್ತ್ರ, ಹೈವೋಲ್ಟೇಜ್ ಎಂಜಿನಿಯರಿಂಗ್ ಮುಂತಾದ 19 ವ್ಯಾಸಂಗ ವಿಭಾಗಗಳು ಆರಂಭವಾಗಿವೆ. 1950 ರಿಂದ ಎಂಜಿನಿಯರಿಂಗ್ ವಿದ್ಯೆಯ ಏಳು ವಿವಿಧ ಶಾಖೆಗಳಲ್ಲಿ ಸ್ನಾತಕೋತ್ತರ ಶಿಕ್ಷಣಕ್ಕೆ ವ್ಯವಸ್ಥೆ ಮಾಡಿದೆ. ಸಂಶೋಧನ ವಿದ್ಯಾರ್ಥಿಗಳು ಮತ್ತು ಇತರರ ಉಪಯೋಗಕ್ಕಾಗಿ ಒಂದು ಉತ್ತಮ ಗ್ರಂಥಾಲಯವಿದೆ. ನೂರಾರು ಸಂಶೋಧನ ಪತ್ರಿಕೆಗಳೂ ಪರಾಮರ್ಶನ ಗ್ರಂಥಗಳೂ ಇವೆ. ವಿದ್ಯಾರ್ಥಿಗಳು ಸಂಸ್ಥೆಯ ಆವರಣದಲ್ಲಿ ವಾಸಿಸುತ್ತ ಅಧ್ಯಯನ ಮಾಡಲು ಅನುಕೂಲಿಸಲೆಂದು ಛಾತ್ರಾಲಯ, ಆಸ್ಪತ್ರೆ ಮುಂತಾದ ಸೌಲಭ್ಯಗಳನ್ನೂ ಕಲ್ಪಿಸಿದೆ.

ಉನ್ನತ ಶಿಕ್ಷಣ ಮತ್ತು ಸಂಶೋಧನೆಗಳಿಗಾಗಿ ಸಂಸ್ಥೆ ಕಳೆದ 95 ವರ್ಷಗಳಿಂದೀಚೆಗೆ ಅನೇಕ ವಿಭಾಗಗಳನ್ನು ಆರಂಭಿಸಿದೆ. ಅವುಗಳಲ್ಲಿ ಮುಖ್ಯವಾದವನ್ನು ಇಲ್ಲಿ ಸೂಚಿಸಿದೆ. ಇನಾರ್ಗ್ಯಾನಿಕ್ ಮತ್ತು ಫಿಜಿಕಲ್ ಕೆಮಿಸ್ಟ್ರಿ ವಿಭಾಗ (ಪ್ರಾರಂಭ 1909), ಆರ್ಗ್ಯಾನಿಕ್ ಕೆಮಿಸ್ಟ್ರಿಯ ವಿಭಾಗ (1911), ಬಯೋಕೆಮಿಸ್ಟ್ರಿಯ ವಿಭಾಗ (1921) ಫಿಜಿಕ್ಸ್ ವಿಭಾಗ (1945), ಮೆಟಲರ್ಜಿಕಲ್ ವಿಭಾಗ (1947), ಪವರ್ ಎಂಜಿನಿಯರಿಂಗ್ ವಿಭಾಗ (ವಿದ್ಯುತ್ ಶಕ್ತಿ) (1947), ಏರೋನಾಟಿಕಲ್ ಎಂಜಿನಿಯರಿಂದ್ ವಿಭಾಗ (1942), ಇಂಟರ್ನಲ್ ಕಂಬಸ್ಚನ್ ಎಂಜಿನಿಯರಿಂಗ್ ವಿಭಾಗ (1945), ಪವರ್ ಎಂಜಿನಿಯರಿಂಗ್ ಮೆಕ್ಯಾನಿಕಲ್ ವಿಭಾಗ (1950), ಪವರ್ ಎಂಜಿನಿಯರಿಂಗ್ ಸಿವಿಲ್ ಮತ್ತು ಹೈಡ್ರಾಲಿಕ್ ವಿಭಾಗ (1947), ಪವರ್ ಎಂಜಿನಿಯರಿಂಗ್ ಹೈವೋಲ್ಟೇಜ್ ಎಂಜಿನಿಯರಿಂಗ್ ವಿಭಾಗ (1926), ಎಲೆಕ್ಟ್ರಿಕಲ್ ಕಮ್ಯುನಿಕೇಶನ್ ಎಂಜಿನಿಯರಿಂಗ್ (1910), ಕೆಮಿಕಲ್ ಟೆಕ್ನಾಲಜಿ ಮತ್ತು ಕೆಮಿಕಲ್ ಎಂಜಿನಿಯರಿಂಗ್ ವಿಭಾಗ, ಅಪ್ಲೈಡ್ ಮೆಥಮೆಟಿಕ್ಸ್ ವಿಭಾಗ (1948), ಫಾರ್ಮಕಾಲಜಿ ವಿಭಾಗ (1941), ಫರ್ಮಂಟೇಷನ್ ಕೆಮಿಕಲ್ ಪ್ರಯೋಗಾಲಯ (1942). ಈ ವಿಭಾಗಗಳಲ್ಲಿ ವಿದ್ಯಾರ್ಥಿಗಳನ್ನು ಸ್ನಾತಕ ಮತ್ತು ಸ್ನಾತಕೋತ್ತರ ಶಿಕ್ಷಣಕ್ಕಾಗಿ ಆರಿಸಿಕೊಳ್ಳುವರು, ಭೂಮಿಶಾಸ್ತ್ರ, ರಸಾಯನವಿಜ್ಞಾನ, ಭೌತವಿಜ್ಞಾನ ಮುಂತಾದ ವಿಷಯಗಳಲ್ಲಿ ಪದವಿ ಪಡೆದ ವಿದ್ಯಾರ್ಥಿಗಳು ಸಂಬಂಧಿಸಿದ ವಿಷಯ ವಿಭಾಗಗಳಲ್ಲಿ ಮಾಸ್ಟರ್ ಪದವಿಗೆ ಸೇರಲು ಅರ್ಹತೆ ಪಡೆದಿರುವರು. ಎಂಜಿನಿಯರಿಂಗ್ ವಿಭಾಗಗಳಲ್ಲಿ ಎಂ.ಇ. ಪದವಿಯನ್ನೂ ಉಳಿದ ವಿಭಾಗಗಳಲ್ಲಿ ಎಂ.ಎಸ್‌ಸಿ. ಪದವಿಯನ್ನೂ ನೀಡುವರು. ಸಂಶೋಧನೆಯ ಮೂಲಕ ಎಲ್ಲ ವಿಭಾಗಗಳಲ್ಲೂ ಪಿಎಚ್.ಡಿ. ಅಥವಾ ಡಿ.ಎಸ್‌ಇ. ಪದವಿಗಳನ್ನು ಪಡೆಯುವ ಅವಕಾಶವುಂಟು.

ಮೇಲಿನ ಶುದ್ಧ ಮತ್ತು ಆನ್ವಯಿಕ ವಿಜ್ಞಾನ ವಿಭಾಗಗಳ ಜೊತೆಗೆ ತಂತ್ರಶಾಸ್ತ್ರ, ಎಂಜಿನಿಯರಿಂಗ್, ಫಾರ್ಮಕಾಲಜಿ ಮುಂತಾದ ಕ್ಷೇತ್ರಗಳಲ್ಲೂ ಉತ್ತಮ ಮಟ್ಟದ ಶಿಕ್ಷಣವೀಯುವುದರ ಜೊತೆಗೆ ಫಲದಾಯಕವಾದ ಸಂಶೋಧನೆಗಳನ್ನು ನಡೆಸುತ್ತಿದೆ. ಈಚೆಗೆ ಸಮಾಜವಿಕಾಸದ ಹಲವು ಆನ್ವಯಿಕ ವಿಷಯ ವಿಭಾಗಗಳನ್ನು ಆರಂಭಿಸಿದೆ. ಉದ್ಯೋಗಗಳ ಪ್ರಗತಿಗೆ ಅಲ್ಲಿಯ ಮಾನವೀಯ ಸಂಬಂಧ, ಆಡಳಿತ ನಿರ್ವಹಣೆಯ ದಕ್ಷತೆ, ಮಾರ್ಗದರ್ಶನ ಮತ್ತು ಉತ್ಪನ್ನಗಳ ಗುಣ ನಿಯಂತ್ರಣ ಇವಕ್ಕೆ ಪ್ರಾಧಾನ್ಯತೆ ಬಂದಂತೆ ಆ ಕ್ಷೇತ್ರದಲ್ಲಿ ಶಿಕ್ಷಣಪಡೆದ ಪರಿಣತರನ್ನು ಒದಗಿಸುವುದಕ್ಕೂ ಅಗತ್ಯ ಸಮಸ್ಯೆಗಳನ್ನು ಕುರಿತು ಸಂಶೋಧನೆ ನಡೆಸುವುದಕ್ಕೂ ಅವಕಾಶ ಕಲ್ಪಿಸಿದೆ. ಔದ್ಯೋಗಿಕ ಅರ್ಥಶಾಸ್ತ್ರ, ಔದ್ಯೋಗಿಕ ಮನೋವಿಜ್ಞಾನ, ಔದ್ಯೋಗಿಕ ಎಂಜಿನಿಯರಿಂಗ್, ಔದ್ಯೋಗಿಕ ಆಡಳಿತ -ಈ ವಿಭಾಗಗಳು 1955 ರಿಂದ ಈಚೆಗೆ ಆರಂಭವಾಗಿ ಸಮಾಜ ವಿಭಾಗಗಳಲ್ಲೂ ಸ್ನಾತಕೋತ್ತರ ಶಿಕ್ಷಣ ಮತ್ತು ಸಂಶೋಧನೆಗಳಿಗೆ ಅವಕಾಶ ಕಲ್ಪಿಸಿದೆ.

ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ನೀಡಲು ವಿದ್ಯಾರ್ಥಿವೇತನಗಳನ್ನೂ ಸಂಶೋಧನ ವೇತನಗಳನ್ನೂ ನೀಡುವ ವ್ಯವಸ್ಥೆ ಇದೆ. ಈ ಸಂಸ್ಥೆ ನೀಡುವ ವಿದ್ಯಾರ್ಥಿ ಮತ್ತು ಸಂಶೋಧನ ವೇತನಗಳ ಜೊತೆಗೆ, ಕೇಂದ್ರ ಸಚಿವಾಲಯ, ಔದ್ಯೋಗಿಕ ಮತ್ತು ವೈಜ್ಞಾನಿಕ ಸಂಶೋಧನ ಮಂಡಲಿ (ಸಿ.ಎಸ್.ಐ.ಆರ್) ಭಾರತೀಯ ಕೃಷಿ ಸಂಶೋಧನ ಮಂಡಲಿ (ಐ.ಸಿ.ಎ.ಆರ್) ಮತ್ತು ರಾಜ್ಯಸರ್ಕಾರಗಳು ತಮ್ಮ ತಮ್ಮ ಕ್ಷೇತ್ರಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ವೇತನಗಳನ್ನು ನೀಡುತ್ತಿವೆ.

ಸಂಸ್ಥೆ 1958ರಲ್ಲಿ ತನ್ನ 50 ವರ್ಷಗಳ ಫಲದಾಯಕ ಸೇವೆಯ ಕುರುಹಾಗಿ ಸುವರ್ಣ ಮಹೋತ್ಸವವನ್ನು ಆಚರಿಸಿತು. ಅದು ಈ ತನಕ ನಡೆಸಿರುವ ಸಂಶೋಧನೆಗಳ ಮೂಲಕವೂ ನಾಡಿನ ವಿವಿಧ ಕ್ಷೇತ್ರಗಳಿಗೆ ಅಗತ್ಯವೆನಿಸುವ ನಾಯಕರಿಗೆ ಶಿಕ್ಷಣ ನೀಡುವುದರ ಮೂಲಕವೂ ಭಾರತದ ಔದ್ಯೋಗಿಕ ಮತ್ತು ವೈಜ್ಞಾನಿಕ ಪ್ರಗತಿಗೆ ಅಮೋಘವಾದ ಸೇವೆಸಲ್ಲಿಸಿದೆ. ಭಾರತದಂತೆ ಅನ್ಯದೇಶಗಳಲ್ಲೂ ಉತ್ತಮ ಸಂಶೋಧನ ಸಂಸ್ಥೆಯೆಂದು ಖ್ಯಾತಿಗಳಿಸಿದೆ. 1958ರಿಂದ ಈ ಸಂಶೋಧನ ಸಂಸ್ಥೆ ಪರಿಗಣಿತ ವಿಶ್ವವಿದ್ಯಾಲಯದ ಸ್ಥಾನಮಾನಗಳನ್ನು ಪಡೆದುಕೊಂಡು ತನ್ನದೇ ಆದ ಪದವಿ ಪ್ರಶಸ್ತಿಗಳನ್ನು ನೀಡುತ್ತಿದೆ. (ಎನ್.ಎಸ್.ವಿ.)

**ಇಂದಿರಾ, ಎಂ.ಕೆ. :** 1917-94. ಕನ್ನಡದ ಪ್ರಸಿದ್ಧ ಲೇಖಕಿ, ಕಾದಂಬರಿಗಾರ್ತಿ. ಇವರು 1917 ಜನವರಿ 5ರಂದು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯಲ್ಲಿ ಜನಿಸಿದರು. ತಂದೆ ತರೀಕೆರೆಯ ಸೂರ್ಯ ನಾರಾಯಣರಾವ್, ತಾಯಿ ಬನಶಂಕರಮ್ಮ. ಪ್ರಜಾವಾಣಿ ಪತ್ರಿಕೆಯ ಸಂಪಾದಕರಾಗಿದ್ದ ಟಿ.ಎಸ್.ರಾಮಚಂದ್ರರಾವ್ (ನೋಡಿ) ಇವರ ಸೋದರ. ಹೊಯಿಸಳ (ನೋಡಿ) ಎಂಬ ಕಾವ್ಯನಾಮದಿಂದ ಮಕ್ಕಳ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಯನ್ನಿತ್ತ ಅರಗ ಲಕ್ಷ್ಮಣರಾಯ ಇವರ ತಾತ. ಇಂದಿರಾ ಅವರ ಶಾಲಾಶಿಕ್ಷಣ ಮಾಧ್ಯಮಿಕ ಶಾಲೆಯ ಎರಡನೆಯ ತರಗತಿಯವರೆಗೆ ಮಾತ್ರ ನಡೆಯಿತು. ಆದರೆ ಇವರು ಕಥೆ, ಕಾದಂಬರಿ, ಮಕ್ಕಳ ಸಾಹಿತ್ಯ, ರಾಮಾಯಣ, ಮಹಾಭಾರತಗಳನ್ನು ಓದುವ ಅಭಿರುಚಿ ಮತ್ತು ವಿವಿಧ ಪತ್ರಿಕೆಗಳನ್ನು ಓದುವ ಹವ್ಯಾಸ ಬೆಳೆಸಿಕೊಂಡಿದ್ದರು. ಜೊತೆಗೆ ಮಲೆನಾಡಿನ ಪ್ರಕೃತಿ ಸೌಂದರ್ಯ ಇವರ ಉತ್ಸಾಹ, ಚೈತನ್ಯವನ್ನು ಅರಳಿಸುತ್ತಿತ್ತು.



ಹನ್ನೆರಡನೆಯ ವಯಸ್ಸಿನಲ್ಲಿ ತಾಯಿಯ ಚಿಕ್ಕಪ್ಪನ ಮಗ ಮಂಡಗದ್ದೆ ಕೃಷ್ಣರಾಯರೊಡನೆ ಇಂದಿರಾ ಅವರ ವಿವಾಹ ನಡೆಯಿತು

(1929). ಈ ದಂಪತಿಗಳದು ಸರಳ, ಸರಸ, ಸಜ್ಜನಿಕೆಯ ಜೀವನ. ಇವರಿಗೆ ಎಂಟು ಮಂದಿ ಮಕ್ಕಳು. ಅವರಲ್ಲಿ ನಾಲ್ವರು ಗತಿಸಿ ನಾಲ್ವರು ಉಳಿದರು. 1969ರಲ್ಲಿ ಪತಿ ಕೃಷ್ಣರಾಯರು ಅಸ್ತಮಾ ಕಾಯಿಲೆಯಿಂದ ನಿಧನರಾದರು. ನಿಧನದ ಸಂದರ್ಭದಲ್ಲಿ 'ನನ್ನ ಸಾವಿನ ಅನಂತರ ನೀನು ಯಾವುದೇ ಅಂಧಶ್ರದ್ಧೆಗೆ ಬಲಿಯಾಗಬೇಡ ಮಾಂಗಲ್ಯ ವಿನಾ ಉಳಿದೆಲ್ಲ ಹಾಗೆಯೇ ಇರಲಿ. ಬಳೆ, ಕಾಲುಂಗರ, ಮೂಗುತಿ, ಕುಂಕುಮ ಯಾವುದನ್ನು ತೆಗೆಯಬೇಡ' ಎಂದಿದ್ದರಂತೆ.

ಇಂದಿರಾ ಅವರು ತಮ್ಮ ನಲವತ್ತೈದನೆಯ ವಯಸ್ಸಿನ ಅನಂತರ ಬರೆಯಲು ಪ್ರಾರಂಭಿಸಿದರು. ಸಂಪ್ರದಾಯ, ಅಂಧಶ್ರದ್ಧೆಯ ಪರಿಸರದಲ್ಲಿ ಬೆಳೆದು ಬಂದರೂ ವಿಚಾರವಂತಿಕೆಯನ್ನು ರೂಢಿಸಿಕೊಂಡರು. ಪತಿ ಕೃಷ್ಣರಾಯರ ಒತ್ತಾಸೆ, ಪ್ರೋತ್ಸಾಹಗಳಿಂದ ಲೇಖಕಿಯಾಗಿ ರೂಪುಗೊಂಡರು. ಇವರು 1960ರಲ್ಲಿಯೇ ಬರೆದ ತುಂಗಭದ್ರ ಚೊಚ್ಚಲ ಕಾದಂಬರಿ ಪ್ರಕಾಶಕರೊಬ್ಬರ ಅಜಾಕರೂಕತೆಯಿಂದಾಗಿ ಹಸ್ತಪ್ರತಿಯಲ್ಲಿಯೇ ಕಳೆದುಹೋಯಿತು. ನೆನಪಿನ ಆಧಾರದಿಂದ ಆ ಕಾದಂಬರಿಯನ್ನು 1963ರಲ್ಲಿ ಪುನಃ ಸೃಷ್ಟಿಸಿ ಪ್ರಕಟಿಸುವುದರ ಮೂಲಕ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದರು.

ಇವರು 40 ಕಾದಂಬರಿಗಳನ್ನೂ 12 ಕಥಾಸಂಕಲನಗಳನ್ನೂ ಹರಟೆ, ಪ್ರವಾಸಕಥನ ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಕೃತಿಗಳನ್ನೂ ಪ್ರಕಟಿಸಿದ್ದಾರೆ. ಬಾಲ್ಯವಿವಾಹ, ವೇಶ್ಯಾ ಸಮಸ್ಯೆ, ವರದಕ್ಷಿಣೆ, ಅಂಗವಿಕಲತೆ, ಬಂಜೆತನ, ಕಪಟ ಸಂನ್ಯಾಸಿಗಳ ವಂಚನೆ, ಸ್ತ್ರೀ ಶೋಷಣೆ, ಭಗ್ನಪ್ರಣಯ, ಅಂತರ್ಜಾತಿ ವಿವಾಹ ಮೊದಲಾದ ಸಮಸ್ಯೆಗಳು ಇವರ ಕಾದಂಬರಿಗಳ ವಸ್ತುಗಳಾಗಿವೆ. ಜಾಲ ಕಾದಂಬರಿಯಲ್ಲಿರುವ ಪಾರ್ವತಿಯ ಪಾತ್ರ ಕ್ಷಣಿಕ ಆಸೆಗಾಗಿ, ಮನೋದೌರ್ಬಲ್ಯಕ್ಕೊಳಗಾಗಿ ಹಾಳಾಗುವುದನ್ನು ಕಾಣಬಹುದು. ನಾಗವೀಣಾ ಕಾದಂಬರಿಯಲ್ಲಿ ವಿಲಾಸ ಜೀವನಕ್ಕೆ ಮಾರುಹೋದ ತಾಯಿಯಿಂದ ಮೃದುಸ್ವಭಾವದ ಮಗಳು ನೋವುಂಡು ದುರಂತದಲ್ಲಿ ಸಾವನ್ನಪ್ಪುವ ಚಿತ್ರಣವಿದೆ. ಗೆಜ್ಜೆಪೂಜೆ ಕಾದಂಬರಿಯಲ್ಲಿ ವೇಶ್ಯಾಪದ್ಧತಿಗೆ ಕಾರಣವಾಗಬಹುದಾದ ಧನದಾಹ, ಹೆಣ್ಣಿನ ಅಬಲೆತನ, ಗಂಡಿನ ಸ್ವಾರ್ಥಗಳ ಸೂಕ್ಷ್ಮದುರಂತ ಚಿತ್ರಣವಿದೆ. ಸದಾನಂದ ಕಾದಂಬರಿಯಲ್ಲಿ ಅಂಗವಿಕಲತೆ, ವಿಧವಾ ಸಮಸ್ಯೆಯನ್ನೂ ಅದಕ್ಕೆ ಪರಿಹಾರವನ್ನೂ ವ್ಯಕ್ತಿಗಳ ಹಂತದಲ್ಲಿ ಬದಲಾವಣೆ ತರಲು ಸಾಧ್ಯವೆಂಬ ವಿಚಾರವನ್ನೂ ಮನಮುಟ್ಟುವಂತೆ ಚಿತ್ರಿಸಿದ್ದಾರೆ. ಫಣಿಯಮ್ಮ ಕಾದಂಬರಿಯಲ್ಲಿ ಬಾಲ್ಯದಲ್ಲಿಯೇ ವಿಧವೆಯಾದ ಫಣಿಯಮ್ಮ ಬದುಕಿನುದ್ದಕ್ಕೂ ಶೋಷಿತಳಾಗುವುದು ಕಂಡುಬಂದರೆ, ಅದೇ ಕಾದಂಬರಿಯಲ್ಲಿ ಬರುವ ದಾಕ್ಷಾಯಿಣಿ ವಿಧವೆಯಾದರೂ ಗರ್ಭ ಧರಿಸುವುದರ ಮೂಲಕ ಬಂಡಾಯ ಪ್ರವೃತ್ತಿಯ ಸಂಕೇತವಾಗಿ ನಿಲ್ಲುತ್ತಾಳೆ. ಫಣಿಯಮ್ಮ (ಮಲಯಾಳಂ), ತುಂಗಭದ್ರ (ತೆಲುಗು), ಗೆಜ್ಜೆಪೂಜೆ (ಗುಜರಾತಿ ಹಾಗೂ ತೆಲುಗು)- ಈ ಕಾದಂಬರಿಗಳು ಇತರ ಭಾರತೀಯ ಭಾಷೆಗಳಿಗೆ ಅನುವಾದಗೊಂಡಿವೆ. ಗೆಜ್ಜೆಪೂಜೆ, ಸದಾನಂದ, ಫಣಿಯಮ್ಮ, ಹೂಬಾಣ (ಮುತ್ತು ಒಂದು ಮುತ್ತು) ಕಾದಂಬರಿಗಳು ಚಲನಚಿತ್ರಗಳಾಗಿವೆ.

ಇಂದಿರಾ ಅವರು ಬರೆದಿರುವ ಕಥೆಗಳಲ್ಲಿ ಸಮಾಜದ ವಿವಿಧ ವ್ಯಕ್ತಿಗಳ ಬದುಕನ್ನು ಭಿನ್ನ ನೆಲೆಗಳಿಂದ ನೋಡುವ ಪರಿ ಕಂಡುಬರುತ್ತದೆ. ಮಾನವೀಯತೆ, ಸತ್ಯ, ಪ್ರಾಮಾಣಿಕತೆ, ತ್ಯಾಗ, ಆದರ್ಶ, ಪ್ರೀತಿ, ಪರೋಪಕಾರ, ಕೃತಜ್ಞತೆ, ಮೊದಲಾದವುಗಳನ್ನು ಪ್ರತಿನಿಧಿಸುವ ಪಾತ್ರಗಳು ಬರುತ್ತವೆ. 'ನಗಬೇಕು' ಹರಟೆಗಳ ಸಂಕಲನ 'ಚಿತ್ರಭಾರತ' ಚಲನಚಿತ್ರರಂಗದ ಹಲವಾರು ಮುಖಗಳನ್ನು ವಿವಿಧ ಕೋನಗಳಿಂದ ನೋಡಿರುವ ಕೃತಿ. 'ಚಿತ್ರಶಿಲ್ಪಿ ಪುಟ್ಟಣ್ಣಕಣಗಾಲ' ಚಲನಚಿತ್ರ ನಿರ್ದೇಶಕರನ್ನು ಕುರಿತದ್ದು. 'ಅನುಭವ ಕುಂಜ' ಪ್ರವಾಸ ಕಥನ.

ಇವರ ಸಾಹಿತ್ಯ ಸಾಧನೆಗೆ ಅನೇಕ ಸನ್ಮಾನ, ಪುರಸ್ಕಾರಗಳು ದೊರೆತಿವೆ. ತುಂಗಭದ್ರ ಕಾದಂಬರಿಗೆ ಪ್ರಾದೇಶಿಕ ಉತ್ತಮ ಕತೆ ಪ್ರಶಸ್ತಿ (1965), ಸದಾನಂದ ಕಾದಂಬರಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ (1965), ನವರತ್ನ ಕಥಾಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ (1970), ಫಣಿಯಮ್ಮ ಕಾದಂಬರಿಗೆ ಕರ್ನಾಟಕ ರಾಜ್ಯ ಪ್ರಶಸ್ತಿ (1976) ಲಭಿಸಿವೆ. ಇವರು ಸಲ್ಲಿಸಿದ ಅನುಪಮ ಸಾಹಿತ್ಯ ಸೇವೆಗಾಗಿ ಕನ್ನಡ ಸಾಹಿತ್ಯ ಪರಿಷತ್ತು ಸನ್ಮಾನಿಸಿದೆ (1980). ದಾವಣಗೆರೆಯಲ್ಲಿ ಕರ್ನಾಟಕ ಲೇಖಕಿಯರ ಸಾಹಿತ್ಯ ಸಮ್ಮೇಳನಕ್ಕೆ ಇವರು ಅಧ್ಯಕ್ಷೆಯಾಗಿದ್ದರು (1981). ಇವರಿಗೆ ಸುರಗಿ ಎಂಬ ಅಭಿನಂದನ ಗ್ರಂಥವನ್ನು ಸಮರ್ಪಿಸಲಾಗಿದೆ (1991). ಇವರು 1994 ಮಾರ್ಚ್ 15ರಂದು ನಿಧನರಾದರು. (ಎಂ.ಎಲ್.ಎನ್.)

**ಇಂದ್ರ III :** ರಾಷ್ಟ್ರಕೂಟ ಅರಸ (914-29). 2ನೆಯ ಕೃಷ್ಣನ ಮೊಮ್ಮಗ, ಜಗತ್ತುಂಗನ ಮಗ. ಇವನಿಗೆ ನಿತ್ಯವರ್ಷ, ರಟ್ಟಮಾರ್ತಾಂಡ, ರಟ್ಟಕಂದರ್ಪ ಎಂಬ ಬಿರುದುಗಳಿದ್ದವು. ಲಂಜಗತ್ತುಂಗನು ಕೃಷ್ಣನ ಆಳ್ವಿಕೆಯಲ್ಲೇ ಗತಿಸಿದ್ದರಿಂದ, ಈತ ತನ್ನ ಅಜ್ಜನ ಅನಂತರ ರಾಷ್ಟ್ರಕೂಟ ರಾಜ್ಯವನ್ನು ವಹಿಸಿಕೊಂಡ. ಇವನ ವಿದ್ಯುಕ್ತ ಅಭಿಷೇಕ 915ರಲ್ಲಿ ಕುರುಂದಕ (ಕುರಂದ್ವಾಡ) ಕ್ಷೇತ್ರದಲ್ಲಿ ನಡೆಯಿತು.

ಪಟ್ಟಕ್ಕೆ ಬರುತ್ತಿದ್ದಂತೆಯೇ ಯುವಕ ಇಂದ್ರನಿಗೆ ತನ್ನ ಶೌರ್ಯ ಪ್ರದರ್ಶನವನ್ನು ಮಾಡುವ ಅವಕಾಶ ಒದಗಿ ಬಂದಿತು. ಪರಮಾರ ಕುಲದ ರಾಜಕುಮಾರ ಉಪೇಂದ್ರ ರಾಷ್ಟ್ರಕೂಟ ರಾಜ್ಯದ ಉತ್ತರದ ಭಾಗದ ಮೇಲೆ ಎರಗಿ, ಗೋವರ್ಧನ ಪ್ರಾಂತ್ಯವನ್ನು (ನಾಸಿಕ) ಆಕ್ರಮಿಸಿದ. ಇಂದ್ರ ಅವನನ್ನು ಎದುರಿಸಿ ಓಡಿಸಿದ. ಅನಂತರ ತನ್ನ ದೃಷ್ಟಿಯನ್ನು ಉತ್ತರ ಭಾರತದತ್ತ ಹರಿಸಿದ. 910 ರಲ್ಲಿ ಗೂರ್ಜರ ಪ್ರತೀಹಾರ ಮಹೇಂದ್ರಪಾಲ ಮೃತನಾಗಿದ್ದು, ಅವನ ಮಕ್ಕಳು ಇಮ್ಮಡಿ ಭೋಜ ಮತ್ತು ಮಹೀಪಾಲರಲ್ಲಿ ಸಿಂಹಾಸನಕ್ಕಾಗಿ ಕಲಹ ನಡೆಯುತ್ತಿತ್ತು. ಭೋಜ ತಂದೆಯ ಅನಂತರ ಪಟ್ಟವನ್ನೇರಿದರೂ ಮಹೀಪಾಲ ಚಾಂದೇಲರ ಸಹಾಯದಿಂದ ಭೋಜನನ್ನು ಸೋಲಿಸಿ ರಾಜನಾಗಿದ್ದ. ಅಲ್ಲಿನ ರಾಜಕೀಯ ಪರಿಸ್ಥಿತಿಯಲ್ಲಿ ಅಸ್ತವ್ಯಸ್ತತೆ ಉಂಟಾಗಿದ್ದ ಈ ಸಂದರ್ಭದಲ್ಲಿ ಇಂದ್ರ ಉತ್ತರ ಭಾರತಕ್ಕೆ ನುಗ್ಗಿದ (916). ಕಾಲ್ಪಿ ಎಂಬಲ್ಲಿ ಯಮುನೆಯನ್ನು ದಾಟಿ ಕನೂಜಿಗೆ ಮುತ್ತಿಗೆ ಹಾಕಿದ. ಉತ್ತರ ಭಾರತದ ಚಕ್ರಾಧಿಪತ್ಯಗಳ ರಾಜಧಾನಿಯಾಗಿ 300 ವರ್ಷಕ್ಕೂ ಮೇಲ್ಪಟ್ಟು ಮೆರೆದಿದ್ದ ಕನೂಜನ್ನು ರಾಷ್ಟ್ರಕೂಟ ಸೈನ್ಯ ವಶಪಡಿಸಿಕೊಂಡಿತು. ಮಹೀಪಾಲ ಕನೂಜಿನಿಂದ ತನ್ನ ಸ್ನೇಹಿತ ಚಾಂದೇಲ ಅರಸ ಹರ್ಷನ ರಾಜಧಾನಿ ಮಹೋಬಕ್ಕೆ ಓಡಿಹೋದ. ಇಂದ್ರನ ಸಾಮಂತ ಚಾಳುಕ್ಯ ನರಸಿಂಹ ಮಹೀಪಾಲನ ಬೆನ್ನಟ್ಟಿದ. 'ಸಿಡಿಲಿನಿಂದ ಘಾಸಿಯಾದಂತೆ ಮಹೀಪಾಲ ಆಹಾರ ನಿದ್ರೆಯನ್ನು ತ್ಯಜಿಸಿ ಓಡಿದ, ಬೆನ್ನಟ್ಟುತ್ತಿದ್ದ ನರಸಿಂಹ ತನ್ನ ಕುದುರೆಗಳನ್ನು ಗಂಗಾ ಯಮುನಾ ಸಂಗಮದಲ್ಲಿ ಸ್ನಾನ ಮಾಡಿಸಿ ಕೀರ್ತಿವಂತನಾದ' ಎಂದು ಪಂಪ ಈ ಸನ್ನಿವೇಶವನ್ನು ವರ್ಣಿಸಿದ್ದಾನೆ. ಇಂದ್ರನ ಉತ್ತರ ದೇಶದ ದಂಡಯಾತ್ರೆ ಯಶಸ್ವಿಯಾಗಿತ್ತು. ಆದರೆ ಅಲ್ಲಿ ಬಹು ಕಾಲ ನಿಲ್ಲದೆ ತನ್ನ ದೇಶಕ್ಕೆ ಮರಳಿದ. ಇತ್ತ ವೆಂಗಿ ಸಿಂಹಾಸನಕ್ಕಾಗಿ ಪೂರ್ವ ಚಾಳುಕ್ಯ ವಂಶದ ಹಲವರು ಸೆಣಸುತ್ತಿದ್ದರು. ಇಂದ್ರ ಈ ಮಧ್ಯೆ ಪ್ರವೇಶಿಸಿ ಕೊನೆಗೆ ತನ್ನ ಕಡೆಯವನಾದ ಯುದ್ಧಮಲ್ಲನನ್ನು ಅರಸನನ್ನಾಗಿ ಮಾಡಿದ (ಸು.928). ಯುದ್ಧಮಲ್ಲನಿಗೆ ರಾಷ್ಟ್ರಕೂಟ ಸೇನಾನಿ ಶ್ರೀವಿಜಯ ಬಹು ಸಹಾಯ ಮಾಡಿದ್ದಂತೆ ಅನೇಕ ಶಾಸನಗಳಿಂದ ತಿಳಿಯುತ್ತದೆ.

ಇಂದ್ರ 14 ವರ್ಷ ಆಳಿದ 929ರಲ್ಲಿ ಮೃತನಾದ. ಕಳಚುರಿ ಅಮ್ಮಣದೇವನ ಮಗಳನ್ನು ಇಂದ್ರ ಮದುವೆಯಾಗಿದ್ದ. ಇವನಿಗೆ ಅಮೋಘವರ್ಷ (II) ಮತ್ತು ಗೋವಿಂದ ಎಂಬ ಇಬ್ಬರು ಮಕ್ಕಳಿದ್ದರು. ಅಮೋಘವರ್ಷ ಇಂದ್ರನ ಉತ್ತರಾಧಿಕಾರಿಯಾದ. (ಜಿ.ಎಸ್.ಡಿ.)

**ಇಂದ್ರ IV :** ರಾಷ್ಟ್ರಕೂಟ ವಂಶದ ರಾಜಕುಮಾರ. 3ನೆಯ ಕೃಷ್ಣನ ಮೊಮ್ಮಗ. ಇವನಿಗೆ ರಟ್ಟಕಂದರ್ಪ, ರಾಜಮಾರ್ತಾಂಡ, ಕೀರ್ತಿನಾರಾಯಣ, ಕಲಿಗಳೊಳ್ಗಂಡ, ಬೀರರಬೀರ, ಎಜೆವಬೆಡಂಗ, ಗೆಡೆಗಳಾಭರಣ, ಚಲದಗ್ಗಳಿ, ಚಲದಂಕಕಾರ- ಈ ಬಿರುದುಗಳಿರುವುದನ್ನು ನೋಡಿದರೆ ಯುದ್ಧದಲ್ಲಿಯೂ ಆಟದಲ್ಲಿಯೂ, ಸಮರ್ಥನೆಂದು ತಿಳಿಯುತ್ತದೆ. 973ರ ಕೊನೆಗೆ ಚಾಳುಕ್ಯ ವಂಶದ ಎರಡನೆಯ ತೈಲಪ ರಾಷ್ಟ್ರಕೂಟರ ಎರಡನೆಯ ಕರ್ಕನನ್ನು ಪದಚ್ಯುತಗೊಳಿಸಿ ಕಲ್ಯಾಣದ ಚಾಳುಕ್ಯರ ಆಳ್ವಿಕೆಯನ್ನು ಆರಂಭಿಸಿದ್ದರಿಂದ ಇವನು ರಾಜ್ಯವಾಳಲಿಲ್ಲ. 982ರಲ್ಲಿ ಸಲ್ಲೇಖನವ್ರತದಿಂದ ಶ್ರವಣಬೆಳಗೊಳದಲ್ಲಿ ಅಸು ನೀಗಿದ. (ಜಿ.ಎಸ್.ಡಿ.)

**ಇಕ್ಕೇರಿ** (ಹಳೇ ಇಕ್ಕೇರಿ): ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನಲ್ಲಿ ಸಾಗರಕ್ಕೆ ಸುಮಾರು 5ಕಿಮೀ ದೂರದಲ್ಲಿರುವ ಸಣ್ಣ ಹಳ್ಳಿ. ಸು.80 ವರ್ಷಗಳ ಕಾಲ ಕೆಳದಿ ಸಂಸ್ಥಾನದ ರಾಜಧಾನಿಯಾಗಿ ಮೆರೆದ ಐತಿಹಾಸಿಕ ಸ್ಥಳ. ಕೆಳದಿಯ ನಾಯಕರು 1560ರ ವೇಳೆಗೆ ತಮ್ಮ ರಾಜಧಾನಿಯನ್ನು ಕೆಳದಿಯಿಂದ ಇಕ್ಕೇರಿಗೆ ವರ್ಗಾಯಿಸಿದರು. ಈಗಿರುವ ಹಳ್ಳಿಗೆ ಸು.2ಕಿಮೀ ದೂರದಲ್ಲಿ ಗುಡ್ಡದಮೇಲೆ ಒಂದು ವಿಸ್ತಾರವಾದ ಕಲ್ಲಿನಕೋಟೆ, ಕೋಟೆಯ ಸುತ್ತಲೂ ಅಗಳು ಇವೆ. ನಾಯಕರ ಅರಮನೆ ಮತ್ತು ಇತರ ಕಟ್ಟಡಗಳು ಇಲ್ಲಿದ್ದುವು. ಈಗ ಅವುಗಳ ಅವಶೇಷಗಳು ಮಾತ್ರ ಉಳಿದಿದ್ದು ಆ ಭಾಗವನ್ನು ಹಳೇ ಇಕ್ಕೇರಿ ಎಂದು ಕರೆಯುತ್ತಾರೆ. ಇದು ರಾಜಧಾನಿಯಾಗಿದ್ದಾಗ ವಿಸ್ತಾರವಾದ ನಗರವಾಗಿದ್ದಂತೆ ತೋರುತ್ತದೆ. ಅಲ್ಲಿ ಈಗ ಹರಡಿರುವ ಪ್ರಾಚೀನ ನಿವೇಶನದ ಅವಶೇಷಗಳು ಕೋಟೆಯ ಸುತ್ತಲೂ ಸುಮಾರು 3ಕಿಮೀಗಳಷ್ಟು ಸುತ್ತಳತೆಯ ಪ್ರದೇಶದಲ್ಲಿ ಕಂಡುಬರುತ್ತವೆ. ವಿಜಯನಗರದ ಅರಸರಿಂದ ಸ್ವತಂತ್ರರಾಗಿ ರಾಜ್ಯವನ್ನು ಮತ್ತಷ್ಟು ವಿಸ್ತಾರಗೊಳಿಸಿದ ಮೇಲೆ 1639ರಲ್ಲಿ ಈ ಇಕ್ಕೇರಿ ನಾಯಕರು ತಮ್ಮ ರಾಜಧಾನಿಯನ್ನು ಹೆಚ್ಚು ಆಯಕಟ್ಟಿನ ಸ್ಥಳವಾದ ಬಿದನೂರಿಗೆ ಬದಲಾಯಿಸಿದಾಗ ಇದರ ಪ್ರಾಶಸ್ತ್ಯ ತಗ್ಗಿರಬೇಕು. ಆ ಸಮಯದಲ್ಲಿ ತರೀಕೆರೆ ಮತ್ತು ಬಾಣಾವರದ ಪಾಳೆಗಾರರು, ಬಿಜಾಪುರದ ಸುಲ್ತಾನನ ನೆರವಿನೊಂದಿಗೆ ಈ ರಾಜ್ಯಕ್ಕೆ ನುಗ್ಗಿ ರಾಜಧಾನಿಯಾಗಿದ್ದ ಇಕ್ಕೇರಿಯನ್ನು ಹಿಡಿದು ಲೂಟಿ ಮಾಡಿದಂತೆ ತಿಳಿದುಬರುತ್ತದೆ. ಮುಂದೆ ಹೈದರನು ಬಿದನೂರನ್ನು ಮುತ್ತಿ ಈ ರಾಜವಂಶವನ್ನು ಕೊನೆಗಾಣಿಸಿ ಬಿದನೂರು ಸಂಸ್ಥಾನವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡ ಮೇಲೆ ಇಕ್ಕೇರಿಯ ಪ್ರಾಶಸ್ತ್ಯ ಸಂಪೂರ್ಣವಾಗಿ ಉಡುಗಿಹೋಯಿತು. ಈಗ ಕೋಟೆ ಮತ್ತು ಅದರ ಸುತ್ತಮುತ್ತಲೂ ಇದ್ದ ಸ್ಥಳವೆಲ್ಲ ಸಂಪೂರ್ಣವಾಗಿ ನಿರ್ಜನವಾಗಿದೆ.



ಅಘೋರೇಶ್ವರ ದೇವಾಲಯ

ಅಲ್ಲಿಂದ ಸುಮಾರು ಒಂದೂವರೆ ಕಿಮೀ ದೂರದಲ್ಲಿ ಇಕ್ಕೇರಿ ನಾಯಕರ ಕಾಲದಲ್ಲಿ ಕಟ್ಟಿಸಿದ ಪ್ರಸಿದ್ಧವಾದ ಅಘೋರೇಶ್ವರ ದೇವಾಲಯದ ಬಳಿ ಒಂದು ಸಣ್ಣ ಹಳ್ಳಿ ಉಳಿದುಕೊಂಡು ಬಂದಿದೆ. ಈಗ ಅಲ್ಲಿನ ಮುಖ್ಯ ಆಕರ್ಷಣೆ ಎಂದರೆ ಅಘೋರೇಶ್ವರ ದೇವಾಲಯ. ಇದು ಬಹುಶಃ ಸದಾಶಿವನಾಯಕನ ಕಾಲದ (1530-67) ರಚನೆ. ದೇವಾಲಯದ ಹಾಸುಗಲ್ಲಿನ ಮೇಲಿರುವ ಭಕ್ತ ವಿಗ್ರಹಗಳು ಸದಾಶಿವನಾಯಕ ಮತ್ತು ಭದ್ರಪ್ಪನಾಯಕರದೆಂದು ಅವುಗಳ ಮೇಲಿನ ಶಾಸನಗಳಿಂದ ತಿಳಿದುಬರುತ್ತದೆ. ದೇವಾಲಯದ ಸುಕನಾಸಿಯ ಹೊಸಲಿನ ಮೇಲಿರುವ ಭಕ್ತವಿಗ್ರಹ ಸದಾಶಿವನಾಯಕನದಿರಬಹುದೆಂದು ಹೇಳುತ್ತಾರೆ. ಈ ಸುಂದರವಾದ ದೇವಾಲಯವನ್ನು ಕಟ್ಟಿಸಿದವನು ಹೊಂಬುಚ್ಚದ ಆಚಾರಿ ವೆಂಕಟಯ್ಯ ಎಂದು ಅಲ್ಲಿನ ಒಂದು ಶಾಸನದಿಂದ ತಿಳಿದುಬರುತ್ತದೆ. ಇಕ್ಕೇರಿ ನಾಯಕರ ವಾಸ್ತುಶೈಲಿಯಲ್ಲಿ ಅತ್ಯಂತ ಪ್ರಮುಖವಾದ ಈ ದೇವಾಲಯದಲ್ಲಿ ಹೊಯ್ಸಳ, ದ್ರಾವಿಡ ಮತ್ತು ಇಸ್ಲಾಮೀ ಶೈಲಿಗಳ ಹಿತಮಿತವಾದ ಸಮ್ಮಿಲನವಿದೆ. (ಎಂ.ಎಚ್.)

ಅಘೋರೇಶ್ವರ ದೇವಾಲಯ 5 ದಪ್ಪ ದಿಂಡುಗಳನ್ನೊಳಗೊಂಡ ಆರು ಅಡಿ ಎತ್ತರದ ಜಗತಿಯ ಮೇಲೆ ಇದೆ. ಅಡಿದಿಂಡಿನ ಮೇಲೆ ಒಂದರಲ್ಲಿ ಕೀರ್ತಿಮುಖಗಳ ಮತ್ತು ಇನ್ನೊಂದರ ಮೇಲೆ ಸಿಂಹಸಾಲುಗಳ ಅಲಂಕರಣವಿದೆ. ತಳವಿನ್ಯಾಸದಲ್ಲಿ ಈ ಜಗತಿ ಚತುರಸ್ರಾಕಾರವಾಗಿದ್ದರೂ ಪರಿಘದ ಓಟವನ್ನು ಅಲ್ಲಲ್ಲಿ ಹಿಂದಕ್ಕೆ ಮುಂದಕ್ಕೆ ಜಗ್ಗುವುದರಿಂದ ಅಂಚುಗಳು ದಂತಪಂಕ್ತಿಯಂತೆ ಕಾಣುತ್ತವೆ. ಈ ಅಂಗಗಳೆಲ್ಲಲ್ಲ ಹೊಯ್ಸಳ ಶೈಲಿಯ ಸ್ವರೂಪವನ್ನೇ ಅನುಕರಿಸಿದ್ದರೂ ಜಗತಿಯ ಅಗಲ ಬಹಳ ಕಿರಿದಾಗಿದ್ದು ಅದಕ್ಕೆ ಹತ್ತಲು ಮೆಟ್ಟಿಲುಗಳೂ ಇಲ್ಲದಿರುವುದರಿಂದ ಈ ಜಗತಿ ಹೊಯ್ಸಳ ದೇವಾಲಯಗಳಲ್ಲಿರುವಂತೆ ಪ್ರದಕ್ಷಿಣೆಗೆ ಅನುವಾಗುವಂತೆ ಕಟ್ಟಲಾಗಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಜಗತಿಯ ಮೇಲಿನ ಗುಡಿಭಾಗದಲ್ಲಿ ಒಂದು ಚತುರಸ್ರಾಕಾರದ ಗರ್ಭಗೃಹವೂ ಅದರ ಮುಂದೆ ತೆರೆದ ಸುಕನಾಸಿಯೂ ಇದ್ದು ಅದಕ್ಕೂ ಮುಂದೆ 25 ಅಂಕಣಗಳ ಮಂಟಪವಿದೆ. ಗರ್ಭಗೃಹದ ಹೊರಭಿತ್ತಿಯ ಮೇಲೆ ಪೂರ್ವ ದಕ್ಷಿಣ ಮತ್ತು ಪಶ್ಚಿಮ ಪಾರ್ಶ್ವಗಳಲ್ಲಿ ದೇವಕೋಷ್ಠಗಳಿದ್ದು, ಅವುಗಳ ಮೇಲೆ ಸಿಂಹಪಟ್ಟಿಕೆ ಮತ್ತು ಗೋಪುರಗಳ ಅಲಂಕರಣವಿದೆ. ಸೂರಿನ ಭಾಗದಲ್ಲಿ S ಆಕಾರದ ಕಪೋತವಿದೆ. ಗರ್ಭಗೃಹದ ಮೇಲಿನ ಗೋಪುರ ಎರಡು ತಲಗಳಲ್ಲಿದೆ. ಗೋಪುರದ ಮೇಲಿನ ಅಲಂಕರಣ ಚಿಕ್ಕ ಗೋಪುರಗಳ ಮೇಲೆ ನಿಂತ ಸಿಂಹಗಳಿಂದ ಕೂಡಿದೆ. ಕೆಳತಲದ ಪೂರ್ವಭಾಗದಲ್ಲಿ ಗೋಪುರದ ಒಳಗಿನ ಬರಿ ಕೋಣೆಗೆ ಹೋಗಲು ಒಂದು ದ್ವಾರವೂ ಉತ್ತರದಲ್ಲಿ ಸುಕನಾಸಿಯ ಮೇಲಿನ ಭಾಗದವರೆಗೆ ಗೋಪುರದ ಚಾಚಣಿಕೆಯೂ ಇವೆ.

ಮಂಟಪದ ಹೊರಗೋಡೆಯ ಮೇಲೂ ಅಲ್ಪ ಉಬ್ಬಿನ ಶಿಲ್ಪಗಳ ಅಲಂಕರಣವಿದೆ. ಇಲ್ಲಿ ಆರು ಪಟ್ಟಿಕೆಗಳಿವೆ. ಕೆಳಗಿನದರಲ್ಲಿ ಮಧ್ಯೆ ಮಧ್ಯೆ ಸಿಂಹ, ಕೋತಿ, ಕಾಮಕೇಳಿಯ ಚಿತ್ರಗಳನ್ನೊಳಗೊಂಡಿರುವ ಹಂಸಗಳ ಸಾಲೂ ಎರಡನೆಯದರಲ್ಲಿ ಕಂಬಗಳ ಮೇಲೆ ಕೆತ್ತಿರುವ ಗೋಪುರಗಳ ಸಾಲೂ ಇವೆ. ಇದರ ಮೇಲುಗಡೆ ಜಾಲಂದ್ರಗಳನ್ನುಳ್ಳ ಕಿಟಕಿಗಳ ಅಲಂಕರಣವಿದ್ದು, ಇವುಗಳ ಮಧ್ಯೆ ಕಮಾನಿನ ಆಕೃತಿಯ ಕೋಷ್ಠಗಳಿವೆ. ಕೋಷ್ಠಗಳಲ್ಲಿ ಯಕ್ಷರು, ದಿಕ್ಪಾಲಕರು, ವಿಷ್ಣು, ಭೈರವ ಇತ್ಯಾದಿ ಶಿಲ್ಪಗಳಿವೆ. ಇದರ ಮೇಲೆ ಕಿನ್ನರಿಯರು, ಪುರುಷಾಮೃಗ, ಹುಲಿಯನ್ನೇರಿರುವ ಯೋಗಿ ಇತ್ಯಾದಿ ಶಿಲ್ಪಗಳ ಸಾಲೂ 5ನೆಯ ಪಟ್ಟಿಕೆಯಲ್ಲಿ ಹೂಗಳೂ 6ನೆಯದರಲ್ಲಿ ಎಲೆಯಾಕಾರದ ನಕಾಸೆಯ ಸಾಲೂ ಇವೆ. ಈ ಭಿತ್ತಿಯ ಅಲಂಕರಣ ವಿನ್ಯಾಸ ಹೊಯ್ಸಳ ದೇವಾಲಯಗಳ ನೆನಪನ್ನು ತರುತ್ತವೆ. ಆದರೆ ಹೊಯ್ಸಳ ಶಿಲ್ಪಗಳಲ್ಲಿನ ನಯ ನಾಜೂಕು ಇಲ್ಲಿಲ್ಲ. ಇದೇ ಹೊಯ್ಸಳ ಶೈಲಿಯ ಅಂಶಗಳು ಮುಖ ಮಂಟಪದಲ್ಲೂ ಜಗತಿಯಲ್ಲೂ ದ್ವಾರಾಲಂಕರಣದಲ್ಲೂ ಒಳಗಿನ ಕಂಬಗಳಲ್ಲಿಯೂ ಎದ್ದು ಕಾಣುತ್ತವೆ. ಸುಕನಾಸಿ ತೆರೆದಂತೆ ಇದ್ದು ಅದರ ದ್ವಾರಾಲಂಕರಣವೂ ಸುಂದರವಾಗಿದೆ. ಸುಕನಾಸಿಯಿಂದ ಗರ್ಭಗೃಹವನ್ನು ಸುತ್ತಿ ಬರಲು ಪ್ರದಕ್ಷಿಣಾಪಥವಿದೆ. ಈ ದೇವಾಲಯದಲ್ಲಿ ಆಳವಾಗಿ ಕೆತ್ತಿದ ದಿಂಡುಗಳ ಸರಗಳುಳ್ಳ ಜಗತಿ, ಸುಕನಾಸಿಯ ಮೇಲೆ ಚಾಚಣಿಕೆಯಿರುವ ಕಲ್ಲಿನ ಶಿಖರ, ಗುಂಡಾದ ಮತ್ತು ಷೋಡಶ ಮುಖದ ಕಂಬಗಳು ಮತ್ತು ಹೊರಗೋಡೆಯ ಅಲಂಕರಣ ವಿನ್ಯಾಸಗಳು ಹೊಯ್ಸಳ ಶೈಲಿಯ ಅಂಶಗಳನ್ನೂ ತಲಗಳು ಮತ್ತು ದ್ವಾರವಿರುವ ಗೋಪುರ, ಚತುರಸ್ರಾಕಾರದ ಮಂಟಪ, ಸಿಂಹಚೋದಿಗೆಯನ್ನುಳ್ಳ ಅನೇಕ ಕಂಬಗಳು ಮತ್ತು ಅರೆಕಂಬಗಳು ಮತ್ತು ಸುಕನಾಸಿಯಿಂದಾರಂಭವಾಗುವ ಪ್ರದಕ್ಷಿಣಾ ಪಥ- ಇವು ದ್ರಾವಿಡ ಶೈಲಿಯ ಅಂಶಗಳನ್ನೂ ತೋರಿಸುತ್ತವೆ.

ಅಘೋರೇಶ್ವರದ ಪಶ್ಚಿಮಕ್ಕಿರುವ ಪಾರ್ವತಿ ಗುಡಿಯೂ ಮೇಲಿನದರ ಮಾದರಿಯಲ್ಲಿಯೇ ಇದೆ. ಆದರೆ ನವರಂಗದ ಬಾಗಿಲುವಾಡ ಮತ್ತು ಕಿಟಕಿಗಳಲ್ಲಿ ಚೂಪುತಲೆಯ ಕಮಾನುಗಳನ್ನು ಉಪಯೋಗಿಸಿರುವುದು ಇಲ್ಲಿಯ ವಿಶೇಷ. ಈ ಅಂಶ ಭಾರತೀಯ ಮುಸ್ಲಿಮ್ ವಾಸ್ತುಶೈಲಿಯಿಂದ ಬಂದಿದ್ದಾಗಿದೆ.

ಅಘೋರೇಶ್ವರದ ಮುಂದಿನ ನಂದಿಮಂಟಪ ಎತ್ತರವಾದ ಜಗತಿಯ ಮೇಲಿದ್ದು ಅದರ ಭಿತ್ತಿ ಏಳು ಚೂಪು ತಲೆಯ ಕಮಾನುಗಳನ್ನು ಒಳಗೊಂಡಿದೆ. ಕಮಾನುಗಳ ಮಧ್ಯದಲ್ಲಿ ಶಿಲ್ಪಗಳಿವೆ. ಪಾರ್ವತಿ ಗುಡಿಯೂ ಮುಂದಿನ ನಂದಿ ಮಂಟಪವೂ ಅಘೋರೇಶ್ವರ ಗುಡಿಗಿಂತಲೂ ಕೆಲಕಾಲದ ಅನಂತರ ಕಟ್ಟಿರಬಹುದಾಗಿದೆ.

ಅಘೋರೇಶ್ವರ ದೇವಾಲಯದಿಂದಾಗಿ ಇಕ್ಕೇರಿ ಇಂದೂ ಪ್ರಸಿದ್ಧವಾಗಿದೆ. ಇಲ್ಲಿನ ನಂದಿಮಂಟಪದಲ್ಲಿರುವ ನಂದಿ ಬಹು ನಯವಾಗಿ ಕೆತ್ತಿರುವ ಆಕರ್ಷಕ ಶಿಲ್ಪಗಳಲ್ಲೊಂದು. *

**ಇಗ್ಗಪ್ಪ ಹೆಗಡೇ ವಿವಾಹ ಪ್ರಹಸನ :** ಕನ್ಯಾವಿಕ್ರಯದ ಪರಿಣಾಮವು ಎಂಬ ಇನ್ನೊಂದು ಹೆಸರನ್ನೂ ಉಳ್ಳ ಈ ಪುಟ್ಟ ಪುಸ್ತಕ. ಹೊಸಗನ್ನಡದ ಪ್ರಪ್ರಥಮ ಸಾಮಾಜಿಕ ನಾಟಕ. ಮುಖಪುಟದಲ್ಲಿ ಉಲ್ಲೇಖವಾಗಿರುವಂತೆ ಹವ್ಯಕ ಹಿತೇಚ್ಛುವಾದ ಒಬ್ಬ ವಿದ್ವಾಂಸರಿಂದ ರಚಿತವಾಗಿದ್ದು (1887). ಮುಂಬಯಿಯ ಭಾರತೀ ಛಾಪಖಾನೆಯ ಅಧ್ಯಕ್ಷರು ತಮ್ಮ ಮುದ್ರಣಾಲಯದಲ್ಲಿ ಛಾಪಿಸಿದರು.

ಉತ್ತರ ಕನ್ನಡ ಜಿಲ್ಲೆಯ ಕರ್ಕಿ ವೆಂಕಟರಮಣಶಾಸ್ತ್ರಿ ಸೂರಿ (ನೋಡಿ) ಎಂಬ ಸಾಹಸಿ ವಿದ್ವಾಂಸರು ಮುಂಬಯಿಯಲ್ಲಿ ಭಾರತೀ ಛಾಪಖಾನೆಯನ್ನು ಸ್ಥಾಪಿಸಿದರು. ಅಲ್ಲಿ ಮಂಗಳೂರಿನ ಅಕ್ಕಸಾಲಿಗರಿಂದ ಕನ್ನಡ ಅಕ್ಷರ ಕೆತ್ತಿಸಿ ಕನ್ನಡದ ಹಳೆಯ ಕಾವ್ಯ ಪ್ರಸಂಗಗಳನ್ನು ಮುದ್ರಿಸಿದ್ದರಲ್ಲದೆ ನಿಯತಕಾಲಿಕಗಳನ್ನು ಪ್ರಕಟಿಸುತ್ತಿದ್ದರು. ಅವರೇ ಈ ಪುಸ್ತಕದ ಕರ್ತೃ ಎಂಬುದು ಈ ಪುಸ್ತಕವನ್ನು ಎರಡನೆಯ ಬಾರಿಗೆ ಪರಿಚಯ ಸಮೇತ ಪ್ರಕಟಿಸಿದ (ಕುಮಟ 1953) ಲಿಂಗೇಶ ಶರ್ಮರ ಹೇಳಿಕೆ.

ಸ್ಥೂಲವಾಗಿ ನಾಟಕದ ಕಥೆ ಇದು: ಮದುವೆಯಾಗಿದ್ದು ಆಗಲೇ ಇಬ್ಬರು ಹೆಂಡಿರನ್ನು ಕಳೆದುಕೊಂಡು 60 ವರ್ಷ ಮೀರಿದ್ದ ಮುದುಕ ಇಗ್ಗಪ್ಪ ಹೆಗಡೆ ಸಾಲಮಾಡಿ ತೆರ (ವಧುದಕ್ಷಿಣೆ) ಕೊಟ್ಟು, ಎಳೆಯ ಹುಡುಗಿಯನ್ನು ಮದುವೆಯಾದ. ದಾಂಪತ್ಯ ವಿರಸಗೊಳ್ಳುತ್ತಿರುವಾಗಲೇ ರೋಗದಿಂದ ಸತ್ತ. ಹಣಕ್ಕೆ ಮಗಳನ್ನು ಮಾರಿದ ಶಿವಭಟ್ಟನ ಮನೆಯೂ ಸುಟ್ಟಿತು. ಇದ್ದ ಒಬ್ಬನೇ ಮಗನೂ ಸತ್ತ. ವಿಧವೆಯಾದ ಹುಡುಗಿ ಕೆಟ್ಟಳು. ಗರ್ಭಖೂನಿ ಮಾಡಿ ಅಪರಾಧಿಯಾದಳು. ಈ ಅಪರಾಧದಲ್ಲಿ ಸಾಮಾಜಿಕ ದೋಷವೇ ಹೆಚ್ಚೆಂಬುದನ್ನು ಕಂಡ ನ್ಯಾಯಾಧೀಶರು ಅಲ್ಪ ಶಿಕ್ಷೆ ವಿಧಿಸಿ ಮುಗಿಸಿದರು.

ಇದೊಂದು ಚಿಕ್ಕ ನಾಟಕ. 14ಪುಟ್ಟ ಪುಟ್ಟ ದೃಶ್ಯಗಳುಳ್ಳದ್ದು. ಕ್ರೌನ್ ಅಷ್ಟಪತ್ರದ ಮುದ್ರಣದಲ್ಲಿ 47 ಪುಟ. ಸುಮಾರು ಮುಕ್ಕಾಲು ಗಂಟೆಯ ಅವಧಿಯಲ್ಲಿ ಆಡಬಹುದಾದದ್ದು. ಆಡುಭಾಷೆಯನ್ನೇ ತದ್ವತ್ ಲಿಪಿಗೊಳಿಸಿ ಸಂಭಾಷಣೆ ರಚಿಸಿದ್ದು ಈ ನಾಟಕದ ಮುಖ್ಯ ವೈಶಿಷ್ಟ್ಯ. ಇಲ್ಲಿನ ಮುಖ್ಯಪಾತ್ರಗಳು ಹೆಚ್ಚಾಗಿ ಅಡಕೆ ತೋಟವನ್ನೇ ಅವಲಂಬಿಸಿದ ಬ್ರಾಹ್ಮಣವರ್ಗದವರು, ಹವ್ಯಕರು. ಹವ್ಯಕರು ಇವತ್ತಿಗೂ ಬಳಸುವ ಹಳಗನ್ನಡ ಪ್ರಚುರವಾದ ವಿಶಿಷ್ಟ ದೇಸಿಯನ್ನೇ ಅಪ್ಪಟವಾಗಿ ಇಲ್ಲಿನ ಸಂಭಾಷಣೆಗಳಲ್ಲಿ ಬಳಸಿದೆ. ಹಾಗೇ ನಾಟಕದಲ್ಲಿ ಬರುವ ಕೊಂಕಣಸ್ಥರು ಕೊಂಕಣಿಯಲ್ಲಿ ಅಥವಾ ಕೊಂಕಣಸ್ಥ ಕನ್ನಡದಲ್ಲಿ ಮಾತನಾಡುತ್ತಾರೆ. ಆಳು ತನ್ನ ಸಮಾಜದ ದೇಸಿಯಲ್ಲೇ ಮಾತನಾಡುತ್ತಾನೆ.

ಕನ್ನಡ ಸಾಹಿತ್ಯ ಚರಿತ್ರೆಯ ಒಂದು ತಿರುವಿನಲ್ಲಿ ಅನೇಕ ಹೊಸತನಗಳಿವೆ. ಧೈರ್ಯಮಾಡಿದ ಈ ಚಿಕ್ಕ ಗ್ರಂಥದ ವೈಶಿಷ್ಟ್ಯಗಳು ಇವು: 1. ಕನ್ನಡದಲ್ಲಿ ಮುದ್ರಿತವಾದ ಮೊದಲ ಹತ್ತೆಂಟರಲ್ಲಿ ಇದೂ ಒಂದು. 2. ಕನ್ನಡದ ಮೊತ್ತಮೊದಲ ಸ್ವತಂತ್ರನಾಟಕ ಅಷ್ಟೇ ಅಲ್ಲ, ಹೊಸಗನ್ನಡವನ್ನು ಆರಂಭಿಸಿದ ಮೊದಲ ಸ್ವತಂತ್ರ ಕೃತಿ. 3. ಸಂಸ್ಕೃತದ ರೂಪಾಂತರವಾದ ಮಿತ್ರವಿಂದಾಗೋವಿಂದ ಕನ್ನಡದ ಮೊದಲ ನಾಟಕವಾದರೆ ಇದೇ ಎರಡನೆಯದು. 4. ವಸ್ತು ಯಾವುದೇ ಗ್ರಂಥವನ್ನು ಆಧರಿಸದೆ ಜೀವನದಿಂದ ನೇರ ಎತ್ತಿಕೊಂಡದ್ದು; ವಿಷಯ ಸಾಮಾಜಿಕ. 5. ಆದ್ಯಂತ ಆಡುಮಾತನ್ನೇ ಅಪ್ಪಟವಾಗಿ ಬಳಸಿಕೊಂಡಿದ್ದು.

ಕರ್ತೃವಿಗೆ ಕೃತಿನಿರ್ಮಾಣ ಶ್ರದ್ಧೆಗಿಂತ ಸಮಾಜೋದ್ಧಾರ ಶ್ರದ್ಧೆ ಹೆಚ್ಚಿದ್ದ ಕಾರಣ ಇದು ಶ್ರೇಷ್ಠ ಸಾಹಿತ್ಯ ಕೃತಿಯಾಗದೆ ಉಳಿದಿದೆ. (ಕೆ.ವಿ.ಎಸ್.)

**ಇಗ್ಗುತಪ್ಪ ದೇವರ ಶಿಖರ :** ಕೊಡಗು ಜಿಲ್ಲೆಯ ಪಶ್ಚಿಮ ಘಟ್ಟದ ಬೆಟ್ಟಸಾಲಿನ ಶಿಖರಗಳಲ್ಲಿ ಎರಡನೆಯ ದೊಡ್ಡ ಶಿಖರ (ಮೊದಲನೆಯದು ತಡಿಯಂಡಮೋಳು). ವಿರಾಜಪೇಟೆಯಿಂದ ಸುಮಾರು 18ಕಿಮೀ ಪಶ್ಚಿಮಕ್ಕಿದೆ. ಎತ್ತರ ಸು.1220ಮೀ. ಈ ಶಿಖರಕ್ಕೆ ಮಲ್ಮ ಎಂಬ ಹೆಸರೂ ಇದೆ. ಶಿಖರದ ಬುಡದಲ್ಲಿ ಕುಂಜು (ಅಮ್ಮಂಗೇರಿ) ಎಂಬ ಗ್ರಾಮದಲ್ಲಿ ಇಗ್ಗುತಪ್ಪದೇವರ (ಪಾಡಿಸುಬ್ರಹ್ಮಣ್ಯ) ದೇವಾಲಯವಿದೆ. ಇದು ಕೊಡಗಿನ ಪ್ರಸಿದ್ಧ ಪುಣ್ಯಕ್ಷೇತ್ರ. ಕೊಡಗಿನ ಎಲ್ಲ ಭಾಗಗಳಿಂದಲೂ ಹಿಂದು ಯಾತ್ರಾರ್ಥಿಗಳು ಇಲ್ಲಿಗೆ ಬಂದು ತುಲಾಭಾರ ಇತ್ಯಾದಿ ಹರಕೆಗಳನ್ನೊಪ್ಪಿಸುವರು.



ಇಗ್ಗುತಪ್ಪ ದೇವಾಲಯ

ಮಲ್ಮ ಇಗ್ಗುತಪ್ಪ ದೇವರು ನೆಲೆಸಿದ ಸ್ಥಳ ಎಂದು ಪ್ರತೀತಿ. ಶಿಖರದ ಮೇಲೆ ಸು. ಅರ್ಧ ಎಕರೆ ಸಮಭೂಮಿ ಇದೆ. ಇದರ ಮಧ್ಯೆ ಇಗ್ಗುತಪ್ಪನ ಕಲ್ಲಿನ ವಿಗ್ರಹವಿದೆ. ಹತ್ತಿರದಲ್ಲೇ ವರ್ಷ ಪೂರ್ತಿ ನೀರಿರುವ ಒಂದು ಕೊಳವಿದೆ. ಮಲ್ಮದಲ್ಲಿ ವರ್ಷಕ್ಕೆ ನಾಲ್ಕು ಸಲ ಊರಿನವರು ನಾಡಿನವರು ಸೇರಿ ಹಬ್ಬವನ್ನು ಆಚರಿಸುತ್ತಾರೆ. ದೊಡ್ಡ ಹಬ್ಬಗಳು ಸಾಮಾನ್ಯವಾಗಿ ಡಿಸೆಂಬರ್ ಮತ್ತು ಮಾರ್ಚ್ ತಿಂಗಳಲ್ಲಿ ಬರುತ್ತವೆ. ಈ ಸಮಯದಲ್ಲಿ ದೇವರಿಗೆ ಪೂಜೆ ಒಪ್ಪಿಸುವುದು, ಅನೇಕ ವಿನೋದಗಳಲ್ಲಿ ನಿರತವಾಗುವುದು ವಾಡಿಕೆ. ಕೊಡಗರ ಆಚಾರ ಪದ್ಧತಿ ಹಬ್ಬ ಹುಣ್ಣಿಮೆಗಳೆಲ್ಲ ಈ ದೇವರ ಕಟ್ಟಳೆ ಪ್ರಕಾರ ನಡೆಯಬೇಕು. ಆದ್ದರಿಂದ ಈ ಸ್ಥಳದಲ್ಲಿ ನಾಡಿನವರು ಕೂಡಿದಾಗ ಕೊಡಗರ ಹಬ್ಬಗಳಾದ ಹುತ್ತರಿ, ಕೈಲ್ ಮುಹೂರ್ತ ಮೊದಲಾದವು ನಡೆಯಬೇಕಾದ ದಿನ, ನಕ್ಷತ್ರ ಇತ್ಯಾದಿಗಳನ್ನು ಇಲ್ಲೇ ತೀರ್ಮಾನ ಮಾಡುತ್ತಾರೆ.

ಕೇರಳ ಪ್ರಾಂತ್ಯದ ಕಣ್ಣಾನೂರು ನಗರದ ಪಶ್ಚಿಮಕ್ಕಿರುವ ಪಾಕಡ ಎಂಬ ದ್ವೀಪದಲ್ಲಿ ಹುಟ್ಟಿ ಬೆಳೆದ ಏಳುಜನ ದೇವತೆಗಳು - ಆರು ಜನ ಅಣ್ಣತಮ್ಮಂದಿರು ಒಬ್ಬ ತಂಗಿ - ಇತ್ತ ಕಡೆಗೆ ವಲಸೆ ಬರುತ್ತ ಒಬ್ಬೊಬ್ಬರು ಒಂದೊಂದೆಡೆ ನೆಲೆಸಿದರೆಂದೂ ಅವರಲ್ಲಿ 3 ಜನ ಅಣ್ಣಂದಿರು ಮತ್ತು ತಂಗಿ ಮಲಬಾರು ಕಡೆಯಿಂದ ಕೊಡಗಿನ ಗಡಿ ದಾಟಿ ಬಂದು ಮಲ್ಮದಿಂದ ಹುಟ್ಟಿಬರುವ ಅಂಬುಲಪೊಳೆಯ ದಡದಲ್ಲಿ ಪಾಡಿತ್ತೋರ ಕಂಡಿ ಎಂಬ ಸ್ಥಳದಲ್ಲಿ ತಂಗಿದ್ದರೆಂದೂ ಅನಂತರ ಕಾರಣಾಂತರದಿಂದ ಬೇರೆಯಾಗಿ, ತಂಗಿ ಅಲ್ಲಿಂದ 3ಕಿಮೀ ದೂರದಲ್ಲಿರುವ ಪನ್ನಂಗಾಲವೆಂಬ ಸ್ಥಳದಲ್ಲಿ, ಹಿರಿಯನಾದ ಇಗ್ಗುತಪ್ಪ ಮಲ್ಮದಲ್ಲಿ, ಒಬ್ಬ ತಮ್ಮ (ಪಾಲೂರಪ್ಪ) ನಾಪೋಕ್ಲುವಿನಿಂದ ಐದು ಕಿಮೀ ದೂರದಲ್ಲಿರುವ ಪಾಲೂರಿನಲ್ಲಿ, ಮತ್ತೊಬ್ಬ ತಮ್ಮ (ಕಿರುನೆಲ್ಲಿ ಪೆಮ್ಮಯ್ಯ) ಕೊಡಗು ವೈನಾಡು ಗಡಿಯ ತಿರುನೆಲ್ಲಿ ಎಂಬಲ್ಲಿ ನೆಲಸಿದರೆಂದು ಐತಿಹ್ಯವಿದೆ. (ಟಿ.ಪಿ.ಎಸ್.ಆರ್.;ಕೆ.ಬಿ.ಎಸ್.)

**ಇಟಗಿ[1] :** ಉತ್ತರ ಕನ್ನಡ ಜಿಲ್ಲೆ ಸಿದ್ದಾಪುರ ತಾಲ್ಲೂಕಿನಲ್ಲಿರುವ ಒಂದು ಗ್ರಾಮ. ಸಿದ್ಧಾಪುರದಿಂದ 1ಕಿಮೀ ದೂರದಲ್ಲಿದೆ. ಈ ಗ್ರಾಮದ ಪ್ರಾಚೀನ ಹೆಸರು ಇಷ್ಟಿಕಾಪುರ. ಈ ಊರು ಇಲ್ಲಿರುವ ರಾಮೇಶ್ವರ ದೇವಾಲಯದಿಂದ ಪ್ರಸಿದ್ಧವಾಗಿದೆ. ಬಿಳಗಿ ಅರಸು ಮನೆತನದ ಆಳ್ವಿಕೆಯಲ್ಲಿ ಪ್ರಸಿದ್ಧಿಗೆ ಬಂದ ಈ ದೇವಾಲಯ ವಾಸ್ತುಶಿಲ್ಪ ಹಾಗೂ ಮೂರ್ತಿಶಿಲ್ಪಗಳ ದೃಷ್ಟಿಯಿಂದ ಮಹತ್ವದ್ದಾಗಿದೆ. ಗರ್ಭಗೃಹ, ಸುಖನಾಸಿ ಮತ್ತು ನವರಂಗವನ್ನು ಹೊಂದಿರುವ ಈ ದೇವಾಲಯ ಕದಂಬನಾಗರ ಶೈಲಿಯಲ್ಲಿದೆ. 16ನೆಯ ಶತಮಾನದ ಲಕ್ಷಣಗಳಿರುವ, ಘಂಟೆಪ್ಪ ನಾಯಕರ ತಿಮ್ಮಪ್ಪನ ಸದಾಸೇವೆ ಎಂಬ ಬರೆಹವಿರುವ ಶಾಸನ ದೇವಾಲಯದಲ್ಲಿದೆ.

ದೇವಾಲಯದ ಭಿತ್ತಿಯ ಮೇಲೆ ವಿವಿಧ ಮೂರ್ತಿಗಳನ್ನು ಕೆತ್ತಲಾಗಿದೆ. ರಾಮಲಿಂಗೇಶ್ವರ ದೇವಾಲಯದ ಪಕ್ಕದಲ್ಲಿ ಪಾರ್ವತಿಯ ಆಲಯವಿದೆ. ದೇವಾಲಯದ ಎದುರು, ದೇವರ ಪೂಜಾ ಉತ್ಸವಗಳಿಗೆ ಅನುಕೂಲ ವಾಗಲೆಂದು ಕಟ್ಟಿಸಿದ ವಿಶಾಲವಾದ ಕೆರೆಯಿಂದ ರಾಮೇಶ್ವರ ದೇವರ ರಥೋತ್ಸವ ವರ್ಷಕ್ಕೊಮ್ಮೆ ಫಾಲ್ಗುಣ ಶುಕ್ಲ ದಶಮಿಯಂದು ವೈಭವದಿಂದ ಜರುಗುತ್ತದೆ. ಇತ್ತೀಚೆಗೆ ರಾಮೇಶ್ವರ ದೇವಾಲಯದ ಮುಂಭಾಗವನ್ನು ಆಧುನೀಕರಿಸಲಾಗಿದೆ. ದೇವಿಗುಡಿ, ವಿಠಲ ಮಂದಿರ ಮತ್ತು ಕಲ್ಯಾಣಿಗಳೂ ಈ ಗ್ರಾಮದಲ್ಲಿವೆ. ಇಲ್ಲಿಗೆ ಸಮೀಪದಲ್ಲಿ ಬಿಳಗಿ ಅರಸರ ರಾಜಧಾನಿ ಯಾಗಿದ್ದ ಐಸೂರು ಇದೆ. ಸುತ್ತಲಿನ ಹಳ್ಳಿಗಳಿಗೆ ವ್ಯಾಪಾರೀಕೇಂದ್ರವಾಗಿರುವ ಇಟಗಿಯಲ್ಲಿ ಪ್ರೌಢಶಾಲೆ, ಸಂಸ್ಕೃತ ಪಾಠಶಾಲೆ ಇವೆ. (ಆರ.ಪಿ.ಎಚ್.)

**ಇಟಗಿ²** : ಬೆಳಗಾಂವಿ ಜಿಲ್ಲೆ ಖಾನಾಪುರ ತಾಲ್ಲೂಕಿನ ಒಂದು ಗ್ರಾಮ. ಖಾನಾಪುರದಿಂದ 22ಕಿಮೀ ದೂರದಲ್ಲಿದೆ. ಇಲ್ಲಿ ನಾರಾಯಣ, ಕಲ್ಮೇಶ್ವರ, ರಾಮಲಿಂಗೇಶ್ವರ, ಹನುಮಂತ, ಮಲ್ಲಿಕಾರ್ಜುನ, ದುರದುಂಡೇಶ್ವರ, ಲಕ್ಷ್ಮೀದೇವಿ, ವೀರಭದ್ರ, ಅಕ್ಕಮಹಾದೇವಿ, ಬಸವಣ್ಣದೇವರ ದೇವಾಲಯಗಳಿವೆ. ಒಂದು ವಿರಕ್ತ ಮಠವೂ ಇದೆ. ಕಲ್ಯಾಣ ಚಾಳುಕ್ಯರ ಕಾಲದ ನಾರಾಯಣ ದೇವರ ಗುಡಿಯನ್ನು ಸಂಪೂರ್ಣವಾಗಿ ಜೀರ್ಣೋದ್ಧಾರ ಮಾಡಲಾಗಿದೆ. ಸು.1.5ಮೀ ಎತ್ತರವಿರುವ ನಾರಾಯಣಮೂರ್ತಿ ಕೊನೆಯ ಕಲ್ಯಾಣ ಚಾಳುಕ್ಯರ ವಿಶಿಷ್ಟ ನಿರ್ಮಾಣವಾಗಿದ್ದು, ಪ್ರಭಾವಳಿಯಲ್ಲಿ ಮಕರತೋರಣವಿದೆ. ಮರದ ಕಂಬಗಳಿರುವ ಕಲ್ಮೇಶ್ವರ ದೇವಾಲಯ ಕಿತ್ತೂರ ಮಲಸರ್ಜನಿಂದ ಕಟ್ಟಿಸಲ್ಪಟ್ಟದ್ದೆಂದು ಸ್ಥಳೀಯರ ಹೇಳಿಕೆ. ಸುಳುವು ಕೆತ್ತನೆಯಿಂದ ಕೂಡಿದ ಬಾಗಿಲುಗಳಲ್ಲಿ ದಶಾವತಾರದ ದೃಶ್ಯಗಳಿವೆ. ಸುಂದರವಾದ ತೊಡಿಗೆ ಮತ್ತು ಕೇಶಾಲಂಕಾರ ಹೊಂದಿದ ವಾದ್ಯಮೇಳದ ಚಿತ್ರಣವಿದೆ.

ಊರಿನ ಕೆರೆಯ ದಂಡೆಯಲ್ಲಿ ರಾಮಲಿಂಗೇಶ್ವರ ದೇವಾಲಯವಿದೆ. ಈ ಕೆರೆಯ ದಂಡೆಯನ್ನು ತಲವರಕೊಪ್ಪ ಎಂದು ಕರೆಯಲಾಗುತ್ತದೆ. ಇತ್ತೀಚೆಗೆ ನಿರ್ಮಿತವಾದ ಮಸೀದಿಯೊಂದು ಈ ಸ್ಥಳದಲ್ಲಿದೆ. (ಆರ್.ಐ.)

**ಇಟ್ಟಗಿ** : ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲ್ಲೂಕಿನಲ್ಲಿರುವ ಒಂದು ಗ್ರಾಮ. ಗುಂತಕಲ್ಲು - ಹುಬ್ಬಳ್ಳಿ ರೈಲುಹಾದಿಯಲ್ಲಿರುವ ಬನ್ನಿಕೊಪ್ಪ ನಿಲ್ದಾಣದಿಂದ ಸುಮಾರು 5ಕಿಮೀ ದಕ್ಷಿಣಕ್ಕಿದೆ.



ಮಹಾಲಿಂಗೇಶ್ವರ ದೇವಾಲಯ

ಇಲ್ಲಿರುವ ಮಹಾದೇವ ಅಥವಾ ಮಹಾಲಿಂಗೇಶ್ವರ ದೇವಾಲಯ ಸುಪ್ರಸಿದ್ಧ. 1112ರಲ್ಲಿ 6ನೆಯ ವಿಕ್ರಮಾದಿತ್ಯನ ದಂಡನಾಯಕ ಮಹಾದೇವನಿಂದ ರಚಿತವಾದ ಈ ಗುಡಿ ಕಲ್ಯಾಣ ಚಾಳುಕ್ಯ ಶೈಲಿಯ ಬೃಹತ್ ಹಾಗೂ ಸುಂದರ ಕೃತಿ. ಪ್ರಸಿದ್ಧ ವಾಸ್ತುಶಾಸ್ತ್ರಜ್ಞ ಕಸಿನ್ಸ್‌ರವರ ಪ್ರಕಾರ ಹಳೇಬೀಡಿನ ದೇವಾಲಯಗಳನ್ನು ಬಿಟ್ಟರೆ ಇದು ಕರ್ನಾಟಕದಲ್ಲೇ ಅತ್ಯಂತ ಸುಂದರ ದೇವಾಲಯ. 122' ಉದ್ದ 66' ಅಗಲವಾಗಿದ್ದು ಪೂರ್ವಾಭಿಮುಖವಾಗಿದೆ. ಇದರಲ್ಲಿ ಗರ್ಭಗುಡಿ, ಅಂತರಾಳ ಮುಚ್ಚಿದ ನವರಂಗ ಮತ್ತು ಅದರ ಮುಂದೆ ತೆರೆದ ಮಹಾಮಂಟಪ ಇವೆ. ಗರ್ಭಗುಡಿಯಲ್ಲಿ ಮಹಾಲಿಂಗೇಶ್ವರ ಲಿಂಗವಿದೆ. ನವರಂಗ ಮಂಟಪಕ್ಕೆ ನಾಲ್ಕು ಕಡೆ ದ್ವಾರಗಳಿದ್ದು ಪಶ್ಚಿಮದ್ದು ಅಂತರಾಳ ಮತ್ತು ಗರ್ಭಗುಡಿಗೆ ಪೂರ್ವದ್ದು ಮುಂದಿನ ಮಹಾಮಂಟಪಕ್ಕೆ ಮತ್ತು ಪಕ್ಕದವು ಹೊರಾಂಗಣಕ್ಕೆ ತೆರೆದಂತಿವೆ. ಈ ಎಲ್ಲಾ ದ್ವಾರಗಳು ಹಲವು ಸೂಕ್ಷ್ಮ ಕೆತ್ತನೆಯ ಶಾಖೆಗಳುಳ್ಳ ಬಹುಸುಂದರ ಕೃತಿಗಳು. ಪಕ್ಕದ ದ್ವಾರಗಳ ಮುಂದೆ ಮಂಟಪಗಳಿವೆ. ಇವುಗಳ ಭುವನೇಶ್ವರಿಗಳು ಅಷ್ಟಕೋನಾಕೃತಿಯಲ್ಲಿ ಆಳವಾಗಿದ್ದು, ಪಟ್ಟಿಕೆಗಳು ಮತ್ತು ಕುಸುರಿ ಕೆತ್ತನೆಗಳಿಂದ ಅಲಂಕೃತವಾಗಿವೆ. ಮುಂದಿನ ತೆರೆದ ಮಂಟಪದ ಅಂಚಿನಲ್ಲಿ ಸುತ್ತಲೂ ಕಕ್ಷಾಸನವಿದೆ. ಭಾಗಶಃ ಹಾಳಾಗಿರುವ ಈ ಕಕ್ಷಾಸನದ ಮೇಲಿದ್ದ 42 ಕುಬ್ಜ ಸ್ತಂಭಗಳು ಮತ್ತು ಮಧ್ಯಾಂಗಣದ 26 ದೊಡ್ಡ ಸ್ತಂಭಗಳು ಮಂಟಪದ ಚಾವಣಿಯನ್ನು ಹೊತ್ತಿದ್ದವು. ದೊಡ್ಡ ಕಂಬಗಳು ಹಲವು ನಮೂನೆಯಲ್ಲಿವೆ. ಆದರೂ ವ್ಯವಸ್ಥಿತವಾಗಿ ಅಳವಡಿತವಾಗಿವೆ. ಇವುಗಳಲ್ಲಿ ಮಧ್ಯದ ನಾಲ್ಕು ಕಂಬಗಳಲ್ಲಿ ಬಹು ಕ್ಲಿಷ್ಟ ವಿನ್ಯಾಸದ ಸುಂದರ ಶಿಲ್ಪಾಲಂಕರಣವಿದೆ. ಇವು ಹೊತ್ತಿರುವ ಆಳವಾದ ಭುವನೇಶ್ವರಿಯ ತ್ರಿಕೋಣಾಕೃತಿಯ ಪ್ರತಿಯೊಂದು ಮೂಲೆಕಲ್ಲುಗಳಲ್ಲೂ ಮಕರ, ಕೀರ್ತಿಮುಖ ಮತ್ತು ಬಳುಕಿಸುತ್ತ ಒಳತೂರುವ ಲತಾವಲ್ಲರಿಗಳ ಉಚ್ಚತಮ ಶಿಲ್ಪಬಂಧಗಳಿವೆ.

ಗರ್ಭಗುಡಿ, ಅಂತರಾಳ ಮತ್ತು ನವರಂಗ ಮಂಟಪದ ಹೊರಮೈ ಆಕರ್ಷಕವಾಗಿದೆ. ಸುತ್ತಲೂ ಹಬ್ಬಿರುವ ಅಧಿಷ್ಠಾನ ಪಟ್ಟಿಕೆಗಳ ಮೇಲಿನ ಭಿತ್ತಿ ಹಲವು ಅರೆಗಂಬಗಳು ಮತ್ತು ಕೋಷ್ಠಗಳಿಂದ ಅಲಂಕೃತವಾಗಿವೆ. ಕೋಷ್ಠಗಳು ನಾಗರ ರೀತಿಯ ಶಿಖರಗಳನ್ನೂ ಒಂಟಿ ಅರೆಗಂಬಗಳು ಲತಾಬಂಧಾಂತರ್ಗತ ಕಲಶ ಅಥವಾ ನಾಗರ ರೀತಿಯ ಶಿಖರಗಳನ್ನು ಹೊತ್ತಿರುವಂತೆ ಬಿಡಿಸಲಾಗಿದೆ. ಸ್ವಲ್ಪ ಮುಂದೆ ಸರಿದಂತಿರುವ ಕಟ್ಟಡದ ಸುತ್ತಲೂ ಹರಿಯುವ ಮೂರು ಅಡ್ಡಪಟ್ಟಿಕೆಗಳ ಕಪೋತವಿದೆ. ಮೇಲಿನ ಹಾರದಲ್ಲಿ ಕೂಟ, ಪಂಜರಗಳ ಭಾಗವನ್ನು ಅರೆ ಉಬ್ಬು ಶಿಲ್ಪದಲ್ಲೇ ಸೂಕ್ಷ್ಮ ಕೆತ್ತನೆಗಳೊಡನೆ ಬಿಡಿಸಲಾಗಿದೆ. ದೇವಾಲಯದ ಶಿಖರದ ಮೇಲು ಭಾಗ ಭಗ್ನವಾಗಿದ್ದರೂ ಉಳಿದಷ್ಟರಲ್ಲಿ, ಸಮಾನ ರೀತಿಯ ಅಲಂಕರಣಗಳಿರುವ, ಮೇಲೆ ಹೋದಂತೆ ಗಾತ್ರದಲ್ಲಿ ಸ್ವಲ್ಪ ಕಿರಿದಾಗುವ, ನಾಲ್ಕು ಏರುಗಳಿವೆ. ಆದರೆ ಈ ಏರು ಹಂತಗಳಲ್ಲಿ ಕೂಡಿಸಿರುವ ಶಿಖರಾಕೃತಿಗಳು ಮತ್ತು ಲತಾಕೀರ್ತಿಮುಖಗಳು ಒಂದೇ ನೇರದಲ್ಲಿ ಏರುವಂತೆ ವಿನ್ಯಸ್ತವಾಗಿದ್ದು, ಈ ಶಿಖರ ದ್ರಾವಿಡ ಮತ್ತು ನಾಗರ ಶಿಖರಾಂಶಗಳನ್ನು ಬಹು ಚತುರತೆಯಿಂದ ಒಗ್ಗೂಡಿಸಿರುವ ಉತ್ತಮ ವೇಸರಕೃತಿಯಾಗಿದೆ. ಒಂದೊಂದು ಭಾಗದ ವಿನ್ಯಾಸದಲ್ಲೂ ವಾಸ್ತುಕಾರ ತೋರಿಸಿರುವ ಜಾಣ್ಮೆ, ಅಲಂಕರಣದಲ್ಲಿ ಶಿಲ್ಪಿ ಮೂಡಿಸಿರುವ ನಯಗಾರಿಕೆ ಮತ್ತು ಕುಸುರಿ ಕೆಲಸ ಇವುಗಳಿಂದಾಗಿ ಈ ದೇವಾಲಯ ಅನುಪಮ ಮನೋಹರ ಕಲಾಕೃತಿಯಾಗಿ ರೂಪುಗೊಂಡಿದೆ. ಇಲ್ಲಿ ದೊರಕಿರುವ ಒಂದು ಶಾಸನ ಈ ಮಂದಿರವನ್ನು ದೇವಾಲಯ ಚಕ್ರವರ್ತಿ ಎಂದು ಕರೆದಿದೆ.

ದಂಡನಾಯಕ ಮಹಾದೇವ ತನ್ನ ತಂದೆಯ ಹೆಸರಿನಲ್ಲಿ ಕಟ್ಟಿಸಿದ ನಾರಾಯಣ ಗುಡಿಯೂ ಇಲ್ಲಿದೆ. ಇದು ಬಹು ಸಾಮಾನ್ಯ ರೀತಿಯ ಗ್ರಾನೈಟ್ ಕಲ್ಲಿನ ಕಟ್ಟಡ. (ಎಸ್.ಎನ್.)

**ಇಡಗುಂಜಿ** : ಶರಾವತಿಯ ಮುಖಪ್ರದೇಶದ ಎಡಭಾಗದಲ್ಲಿ ಉತ್ತರ ಕನ್ನಡ ಜಿಲ್ಲೆ ಹೊನ್ನಾವರದಿಂದ 12ಕಿಮೀ ದೂರದಲ್ಲಿರುವ ಯಾತ್ರಾಕ್ಷೇತ್ರ. ದ್ವಿಭುಜ ಗಣಪತಿಯ ವಿಶಿಷ್ಟ ಸುಂದರ ಶಿಲಾವಿಗ್ರಹ ಇಲ್ಲಿದೆ. ಇಡಗುಂಜಿ ಇಡಾಕುಂಜದಿಂದ ಬಂದ ರೂಪ. ಮೊದಲು ಈ ಪ್ರದೇಶಕ್ಕೆ ಗುಂಜಾರಣ್ಯ ಎಂಬ ಹೆಸರೂ ಇತ್ತು.

ಈ ಕ್ಷೇತ್ರದ ಸೌಂದರ್ಯದಿಂದ ಮಾರುಹೋದ ನಾರದ ಇದಕ್ಕೆ ಇಡಾಕುಂಜವೆಂದು ಹೆಸರಿಟ್ಟು, ಲೋಕಕಲ್ಯಾಣಾರ್ಥವಾಗಿ ಗಜಾನನ ನನ್ನು ಕೈಲಾಸದಿಂದ ಕರೆತಂದು ಚಂಡವರ ಶಕಾಬ್ದ 813ನೆಯ ವಿಭವ ಸಂವತ್ಸರದಲ್ಲಿ ಇಲ್ಲಿ ಪ್ರತಿಷ್ಠಾಪಿಸಿದ. ನಾರದ, ಗಜಾನನ ಮತ್ತು ಅವನ ಜೊತೆಯಲ್ಲಿ ಬಂದ ತ್ರಿಮೂರ್ತಿಗಳು ಇಲ್ಲಿ ತೀರ್ಥಗಳನ್ನು ನಿರ್ಮಿಸಿದರು. ಎಂದು ಸ್ಕಾಂದಪುರಾಣದ ಕಥೆ ಇದೆ.

ಇಡಗುಂಜಿ ವಿಶೇಷತಃ ಹವ್ಯಕ ಜನಾಂಗದ ಯಾತ್ರಾಕ್ಷೇತ್ರ. ವಿಘ್ನೇಶ್ವರ ಇವರ ಕುಲದೈವ. ಇಲ್ಲಿ ಅವನಿಗೆ ಕೊಳೆಯಡಿಕೆ ಗಣಪತಿ ಎಂಬ

ಹೆಸರೂ ಇದೆ. ಅಡಕೆ ತೋಟಗಳಿಗೆ ಕೊಳೆರೋಗ ಬಂದಾಗ ಹರಕೆ ಹೊರುವುದು ಸಾಮಾನ್ಯ. ಉತ್ತರ ಕನ್ನಡದ ಯಕ್ಷಗಾನ ಪರಂಪರೆಗೆ ಇಡಗುಂಜಿಯ ಗಣಪತಿ ಮತ್ತು ಅಲ್ಲಿಂದ ಸುಮಾರು 16ಕಿಮೀ ದೂರದಲ್ಲಿರುವ ಗುಂಡಬಾಳದ ಹನುಮಂತ ದೇವರು ಸ್ಫೂರ್ತಿ ಸ್ವರೂಪರು.



ದ್ವಿಭುಜ ಗಣಪತಿ

ಶ್ರೀ ಇಡಗುಂಜಿ ಯಕ್ಷಗಾನ ಮಂಡಳಿ ಬಹು ಪ್ರಸಿದ್ಧವಾಗಿದೆ. ಇಲ್ಲಿ ಗುರುಕುಲ ಪದ್ಧತಿಯ ಸಂಸ್ಕೃತ ಪಾಠಶಾಲೆಯಿದ್ದು ಐದು ವರ್ಷಕಾಲ ವಿದ್ಯಾರ್ಥಿಗಳಿಗೆ ಉಚಿತ ಊಟವಸತಿಗಳ ಸೌಭ್ಯವಿದೆ. ದೇವಸ್ಥಾನದ ಪರಿಸರ 17 ಗುಂಟೆ ಕ್ಷೇತ್ರವನ್ನಾವರಿಸಿದ್ದು ದೇವಾಲಯ ಕಾಂಕ್ರೀಟಿನಿಂದ ನಿರ್ಮಿತವಾಗಿದೆ. ಇಲ್ಲಿ ಪ್ರತಿವರ್ಷವೂ ರಥಸಪ್ತಮಿ ದಿನ ರಥೋತ್ಸವವೂ ಗಣೇಶ ಚತುರ್ಥಿಯ ದಿವಸ ವೈಭವೋಪೇತ ಉತ್ಸವವೂ ನಡೆಯುತ್ತದೆ. *

**ಇಡಗೂರು ರುದ್ರಕವಿ :** 1887-. ವೀರಶೈವಕವಿ. ಈತ ಬರೆದ ಯಕ್ಷಗಾನ ಶಿವನಾಟಕ (ಪೂರ್ವಾರ್ಧ–ಉತ್ತರಾರ್ಧ), ಮಾರ್ಕಂಡೇಯಚರಿತ್ರೆ– ಈ ಕನ್ನಡ ಗ್ರಂಥಗಳು ಮತ್ತು ತೆಲುಗಿನಲ್ಲಿ ರಚಿಸಿದ ಯಕ್ಷಗಾನ ಮಾರ್ಕಂಡೇಯ ಚರಿತಮು, ಮುಮ್ಮಡಿ ಕೃಷ್ಣರಾಜೇಂದ್ರ ಪ್ರಶಂಸಾ, ಅಕ್ಷರಾಂಕನ ಗದ್ಯಟೀಕೆ (ಪಾಲ್ಕುರಿಕೆ ಸೋಮನಾಥ ಕೃತಿಯ ಟೀಕೆ), ಕವಿರುದ್ರಪ್ಪ ಶತಕಮು, ಮುರುಡಪ್ಪ ಶತಕಮು ಮುಂತಾದ ಸುಮಾರು 13 ಗ್ರಂಥಗಳು ಉಪಲಬ್ಧವಾಗಿವೆ. ಗೌರಿಬಿದನೂರು ತಾಲ್ಲೂಕಿನ ಇಡಗೂರು ಈತನ ಜನ್ಮಸ್ಥಳ. ಈತನ ತಂದೆ ಪುಷ್ಪದಾರ್ಯ, ತಾಯಿ ರಾಚಮ್ಮ. ಈತ ಗುಬ್ಬಿಯಲ್ಲಿ ಗುರುಗಳೊಬ್ಬರ ಆಶ್ರಯದಲ್ಲಿ ಕಾವ್ಯ, ನಾಟಕ, ಅಲಂಕಾರ, ವ್ಯಾಕರಣ, ಛಂದಸ್ಸು ಮುಂತಾದ ಶಾಸ್ತ್ರಗಳಲ್ಲಿ ಶಿಕ್ಷಣ ಪಡೆದುದಲ್ಲದೆ ವೀರಶೈವಾಮೃತ ಮಹಾಪುರಾಣವನ್ನು ಗಮಕ ರೀತಿಯಲ್ಲಿ ಓದಿ ವ್ಯಾಖ್ಯಾನ ಮಾಡುವ ಸಾಮರ್ಥ್ಯವನ್ನು ಪಡೆದಿದ್ದಂತೆ ತಿಳಿಯುತ್ತದೆ. ಅನಂತರ ಶ್ರೀಭಟ್ಟುಮೂರ್ತಿ ಎಂಬುವರಲ್ಲಿ ಆಂಧ್ರ ಸಾಹಿತ್ಯವನ್ನು ಅಭ್ಯಾಸಮಾಡಿ, ಕನ್ನಡ ಮತ್ತು ಆಂಧ್ರ ಭಾಷೆಗಳಲ್ಲಿ ಕವಿತಾಸಾಮರ್ಥ್ಯವನ್ನು ಹೊಂದಿದಂತೆ ತೋರುತ್ತದೆ. ಈತ ಒಂದು ಬಯಲಾಟದ ನಾಟಕಮಂಡಲಿಯನ್ನು ಕಟ್ಟಿ ಆಂಧ್ರ, ಕರ್ನಾಟಕ ಪ್ರಾಂತ್ಯಗಳಲ್ಲಿ ಪ್ರದರ್ಶನಗಳನ್ನು ಏರ್ಪಡಿಸುತ್ತಿದ್ದ. ಅಂದು ಇವನು ವಹಿಸುತ್ತಿದ್ದ ಶಿವನ ಪಾತ್ರ, ಅಭಿನಯಿಸುತ್ತಿದ್ದ ಶಿವನಾಟಕ ಪ್ರಖ್ಯಾತಿ ಪಡೆದಿದ್ದವು. 1841ರ ಸುಮಾರಿನಲ್ಲಿ ಆರಂಭವಾದ ಈ ನಾಟಕ ಮಂಡಲಿ 1867ರ ವರೆಗೆ ಅವ್ಯಾಹತವಾಗಿ ನಡೆಯಿತು. 1856ರ ಸುಮಾರಿನಲ್ಲಿ ಮೈಸೂರು ಅರಮನೆಯಲ್ಲಿ ಅಭಿನಯಿಸಿದ ಶಿವನಾಟಕವನ್ನು ನೋಡಿ ಹರ್ಷಿತರಾದ ಮುಮ್ಮಡಿ ಕೃಷ್ಣರಾಜ ಒಡೆಯರು ಇವನಿಗೆ ಕರ್ನಾಟಕಕಾಂಧ್ರೋಭಯ ಭಾಷಾಕವಿತಾವಿಶಾರದ ಎಂಬ ಪ್ರಶಸ್ತಿ ನೀಡಿದಂತೆ ತಿಳಿದುಬರುತ್ತದೆ. (ಎಂ.ಜಿ.ಎನ್.)

**ಇತಿಹಾಸ :** ಬಹುಮುಖ ವ್ಯಾಪ್ತಿಯುಳ್ಳದ್ದೂ ವಿಸ್ತಾರವೂ ಆದ ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದಂತೆ ಎಲ್ಲ ರಾಜವಂಶಗಳು (ಉದಾ: ಕದಂಬವಂಶ, ಚಂಗಾಳ್ವ ವಂಶ, ಆವತಿ ಪಾಳೆಗಾರರು), ಪ್ರಮುಖ ರಾಜರು ಮತ್ತು ಇತರ ವ್ಯಕ್ತಿಗಳು (ಉದಾ: ವಿಷ್ಣುವರ್ಧನ, ಗಂಗರಾಜ) ಇತ್ಯಾದಿಗಳಿಗೆ ಇದೇ ಸಂಪುಟದಲ್ಲಿ ಪ್ರತ್ಯೇಕ ಲೇಖನಗಳಿವೆ. ಪ್ರಮುಖ ರಾಜವಂಶಗಳ ಲೇಖನಗಳಲ್ಲಿ ಅವುಗಳ ರಾಜಕೀಯ ಇತಿಹಾಸವಲ್ಲದೆ ತತ್ಕಾಲೀನ ಆಡಳಿತ ವ್ಯವಸ್ಥೆ, ಆರ್ಥಿಕ ಸಾಮಾಜಿಕ ಸ್ಥಿತಿ, ವಾಸ್ತು ಶಿಲ್ಪ, ನಾಣ್ಯಗಳು, ಶಾಸನಗಳು, ಲಲಿತಕಲೆ, ಸಾಹಿತ್ಯ ಇವುಗಳ ಬಗ್ಗೆ ಉಪವಿಭಾಗಗಳಿವೆ. ಅಲ್ಲದೆ ಕಲೆ, ಕೈಗಾರಿಕೆಗಳು, ಧರ್ಮ, ಸಾಹಿತ್ಯ ಸಂಗೀತ ಮೊದಲಾದ ಹಲವು ವಿಷಯಗಳಿಗೆ ಪ್ರತ್ಯೇಕ ಲೇಖನಗಳಿದ್ದು ಅವುಗಳಲ್ಲಿ ಐತಿಹಾಸಿಕ ವಿವರಗಳಿರುತ್ತವೆ. ಇಂಥ ಎಲ್ಲ ವಿವರಗಳನ್ನು ಹೊರತುಪಡಿಸಿ ಕರ್ನಾಟಕದ ಇತಿಹಾಸದ ಪಕ್ಷಿನೋಟವನ್ನು ಕೊಡುವುದು ಈ ಲೇಖನದ ಉದ್ದೇಶ.

ಕರ್ನಾಟಕದ ಇತಿಹಾಸಕಲ್ಪ ಪ್ರಾರಂಭವಾಗುವುದು ಕ್ರಿ.ಪೂ.3ನೆಯ ಶತಮಾನದಲ್ಲಿ ಮೌರ್ಯ ಸಾಮ್ರಾಟ ಅಶೋಕನ ಶಾಸನಗಳು ಕಾಣಿಸಿಕೊಳ್ಳುವಾಗಿನಿಂದ. ಅಂದಿನಿಂದ ಇಂದಿನ ವರೆಗಿನ ಸುಮಾರು ಇಪ್ಪತ್ತಮೂರು ಶತಮಾನಗಳ ದೀರ್ಘ ಅವಧಿಯ ಇತಿಹಾಸ ಕಲ್ಪದುದ್ದಕ್ಕೂ ಕರ್ನಾಟಕಕ್ಕೆ ಅದರದ್ದೇ ಎನ್ನಬಹುದಾದ ನಿರ್ದಿಷ್ಟ ಕ್ಷೇತ್ರ ವ್ಯಾಪ್ತಿ ಮತ್ತು ವಿಶಿಷ್ಟ ರಾಜಕೀಯ ಅಂತಸ್ತು, ಸಾಮಾಜಿಕ ಸ್ವರೂಪ, ಸಾಂಸ್ಕೃತಿಕ ಮೌಲ್ಯ ಹಾಗೂ ಧಾರ್ಮಿಕ ಪರಂಪರೆಗಳಿದ್ದುವೆ ಅಥವಾ ಕೇವಲ ಭಾಷೆ ಮತ್ತು ಲಿಪಿಗಳ ದೃಷ್ಟಿಯಿಂದ ಮಾತ್ರ ಈ ಪ್ರಾಂತ್ಯ ಭಾರತದ ಇತರ ಪ್ರಾದೇಶಿಕ ವಿಭಾಗಗಳಿಂದ ವ್ಯತ್ಯಸ್ತವಾದುದೇ ಎಂಬುದು ಚರಿತ್ರೆಕಾರರಲ್ಲಿ ಸಹಜವಾಗಿ ಮೂಡುವ ಪ್ರಶ್ನೆ.

ಕ್ರಿ.ಪೂ.3ನೆಯ ಶತಮಾನದಿಂದ ಮುಂದಿನ ಸುಮಾರು ಆರು ಶತಮಾನಗಳ ಕಾಲ ಕರ್ನಾಟಕ ದಕ್ಷಿಣಪಥದ ಒಂದು ಅನಿರ್ದಿಷ್ಟ ವ್ಯಾಪ್ತಿಯ ಅಸ್ಪಷ್ಟ ಸ್ವರೂಪದ ಭೂಪ್ರದೇಶವಾಗಿ ಮಾತ್ರ ಉಳಿದಿದ್ದು ಪ್ರಾದೇಶಿಕ, ರಾಜಕೀಯ, ಆಡಳಿತ, ಮಾನವಿಕ, ಸಾಂಸ್ಕೃತಿಕ ಮತ್ತು ಭಾಷಾಕ್ಷೇತ್ರಗಳಲ್ಲಿ ಅದರದ್ದೇ ಆದ ಐತಿಹಾಸಿಕ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವ ಸಾಧ್ಯತೆಯನ್ನು ಹೊಂದಿರಲಿಲ್ಲ. ಕ್ರಿ.ಶ.4ನೆಯ ಶತಮಾನದ ಮಧ್ಯಭಾಗದಲ್ಲಿ ನಡೆದುಹೋದ ಒಂದೆರಡು ಮಹತ್ವದ ಘಟನೆಗಳಿಂದಾಗಿ ಕರ್ನಾಟಕದ ಈ ಸಂದಿಗ್ಧ ಪರಿಸ್ಥಿತಿ ಕೊನೆಗೊಂಡು ಪರಿಣಾಮಕಾರಿಯಾದ ಬದಲಾವಣೆಗಳುಂಟಾದವು. ಕದಂಬ ಮತ್ತು ಗಂಗ ರಾಜ್ಯಗಳು ಕರ್ನಾಟಕದ ಮೊಟ್ಟಮೊದಲ ಪ್ರಬಲ ದೇಶೀಯ ಸಂಸ್ಥಾನಗಳಾಗಿ ಆಗ ತಾನೆ ಸ್ಥಾಪನೆಗೊಂಡವು. ಇವು ಹಲವು ಸಾಂಸ್ಕೃತಿಕ ಮಾರ್ಪಾಡುಗಳಿಗೂ ಪ್ರೇರಕ ಶಕ್ತಿಗಳಾದವು. ಕರ್ನಾಟಕ ಸಂಸ್ಕೃತಿ ಸ್ವವ್ಯಕ್ತಿತ್ವದೊಡನೆ ರೂಪು ತಳೆಯಲಾರಂಭಿಸಿತು. ಕನ್ನಡ ಭಾಷೆ ಐತಿಹಾಸಿಕ ದಾಖಲೆಗಳಲ್ಲಿ ಕಾಣಿಸಿಕೊಳ್ಳಲಾರಂಭಿಸಿತು. ಹೀಗಾಗಿ ಕರ್ನಾಟಕದ ಇತಿಹಾಸ ಕಲ್ಪವನ್ನು ಕ್ರಿ.ಶ.4ನೆಯ ಶತಮಾನದ ಮಧ್ಯಭಾಗದವರೆಗಿನ ಕನ್ನಡ ಪೂರ್ವಯುಗ ಮತ್ತು ಅಂದಿನಿಂದೀಚೆಗಿನ ಕನ್ನಡ ಯುಗಗಳೆಂದು ಸ್ಥೂಲವಾಗಿ, ಆದರೂ ಸಾಧಾರವಾಗಿ, ವಿಂಗಡಿಸಬಹುದು. 6ನೆಯ ಶತಮಾನದ ಮಧ್ಯಭಾಗದಿಂದ 13ನೆಯ ಶತಮಾನದ ಅಂತ್ಯದವರೆಗೆ ಎಡೆಬಿಡದೆ ಕರ್ನಾಟಕ ದೇಶ ಪ್ರಬಲ ಚಕ್ರವರ್ತಿಕ್ಷೇತ್ರದ ಕೇಂದ್ರ ವಲಯವಾಗಿ ಸಾಮ್ರಾಜ್ಯಶಾಹಿ ಪ್ರಭುತ್ವಗಳ ಉದ್ಭವ ಭೂಮಿಯಾಗಿ ಮೆರೆಯುವಂತಾಯಿತು. ಕನ್ನಡ ಭಾಷೆ ಅಧಿಕೃತ ಮನ್ನಣೆ ಪಡೆದು ಸ್ವಯಂಪೂರ್ಣ ಸ್ವತಂತ್ರ ಭಾಷೆಯಾಗಿ ತನ್ನ ಸ್ವಂತ ಲಿಪಿಯೊಡನೆ ಬೆಳೆದದ್ದಲ್ಲದೆ ಕರ್ನಾಟಕದ ವಿಶಿಷ್ಟ ಸಂಸ್ಕೃತಿ ಜಾಜ್ವಲ್ಯಮಾನವಾಗಿ ಸಮಕಾಲೀನ ಭಾರತ ಹಾಗೂ ಹೊರದೇಶಗಳ ಮೇಲೆ

ಪ್ರಭಾವ ಬೀರುವ ಸ್ಥಿತಿಯನ್ನು ಗಳಿಸಿತು. ಅನಂತರ ಇಸ್ಲಾಮಿಯರ ದಾಳಿಗಳು ಮತ್ತು ಸಾಮ್ರಾಜ್ಯ ಸ್ಥಾಪನೆ, ಇವಕ್ಕೆ ಒದಗಿದ ದೇಶಿಯ ಪ್ರತಿಕ್ರಿಯೆ, ಇವುಗಳಿಂದಾಗಿ ಸು.13 ರಿಂದ 16ನೆಯ ಶತಮಾನಗಳ ಕಾಲದಲ್ಲಿ ರಾಜಕೀಯ ಹಾಗೂ ಸಾಂಸ್ಕೃತಿಕ ಸಂಘರ್ಷಣೆಗಳು ಕಾಣಿಸಿಕೊಂಡವು. 16ನೆಯ ಶತಮಾನದ ಮಧ್ಯಭಾಗದಲ್ಲಿ ವಿಜಯನಗರ ಸಾಮ್ರಾಜ್ಯದ ಪತನವಾಗುತ್ತಿದ್ದಂತೆಯೇ ಕರ್ನಾಟಕ ದೇಶ ಅನೇಕ ಸಣ್ಣ ರಾಜಕೀಯ ಘಟಕಗಳಾಗಿ ಛಿದ್ರವಾಗಿ ಅದರ ಸಾಂಸ್ಕೃತಿಕ ಸ್ವರೂಪದಲ್ಲೂ ಕ್ಷೀಣದೆಸೆ ಕಾಣಿಸಿಕೊಳ್ಳಲಾರಂಭಿಸಿತು. ಆದರೆ ಈ ಕಾಲದಲ್ಲಿದ್ದ ಕೆಳದಿ ಹಾಗೂ ಮೈಸೂರು ಒಡೆಯರ ಆಳ್ವಿಕೆಯಲ್ಲಿ ಸ್ವಲ್ಪಮಟ್ಟಿಗೆ ದೇಶೀ ಸೊಗಡು ಉಳಿದುಕೊಂಡಿದ್ದು ಮುಂದೆ 19ನೆಯ ಶತಮಾನದಲ್ಲಿ ಸ್ವಲ್ಪಮಟ್ಟಿನ ಕರ್ನಾಟಕತ್ವದ ಮನವರಿಕೆಗೆ ಅವಕಾಶವಾಯಿತು. 20ನೆಯ ಶತಮಾನದಲ್ಲಿ ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿ ಈ ಕರ್ನಾಟಕತ್ವದ ಪ್ರಜ್ಞೆ ಮತ್ತಷ್ಟು ಪ್ರಬಲವಾಗುತ್ತ ಬಂದು ಕರ್ನಾಟಕ ರಾಜ್ಯ ರಚನೆಯೊಡನೆ ಹೊಸ ಸ್ವರೂಪ ಮೂಡಲು ಅವಕಾಶವಾಯಿತು.

ಈ ಐತಿಹಾಸಿಕ ಘಟ್ಟಗಳನ್ನು ಕೆಳಕಂಡಂತೆ ನಿರೂಪಿಸಬಹುದು.:

1. ರೂಪಣ ಯುಗ: ಕ್ರಿ.ಪೂ.3 ರಿಂದ ಕ್ರಿ.ಶ.6ನೆಯ ಶತಮಾನದವರೆಗೆ.
2. ಸಾಮ್ರಾಜ್ಯ ಯುಗ: 6ರಿಂದ 13ನೆಯ ಶತಮಾನದ ಅಂತ್ಯದ ವರೆಗೆ.
3. ಸಂಘರ್ಷಣ ಯುಗ: 14ರಿಂದ 16ನೆಯ ಶತಮಾನದ ಮಧ್ಯದ ವರೆಗೆ.
4. ವಿಚ್ಛಿನ್ನ ಯುಗ: 16ನೆಯ ಶತಮಾನದ ಮಧ್ಯಭಾಗದಿಂದ 19ನೆಯ ಶತಮಾನದ ಅಂತ್ಯದ ವರೆಗೆ.
5. ಸ್ವಾತಂತ್ರ್ಯ ಯುಗ: 20ನೆಯ ಶತಮಾನ.

ಇತಿಹಾಸ ಸ್ರೋತಸ್ವರೂಪದ್ದಾದ್ದರಿಂದ ಹಳೆಯ ಘಟ್ಟಗಳಲ್ಲಿ ಹೊಸ ಘಟ್ಟಗಳ ನಡೆ ಸುಳಿವುಗಳು ಕಾಣಿಸಿಕೊಂಡಿರುತ್ತವೆಯಾಗಿ ಈ ಕಾಲಘಟ್ಟಗಳೆಲ್ಲ ಸ್ಥೂಲವಾದವು.

**ರೂಪಣ ಯುಗ :** ಪ್ರಾಗಿತಿಹಾಸ ಯುಗದ ಗ್ರಾಮೀಣ ಸಂಸ್ಕೃತಿಗಳ ಕಾಲ ಕಳೆಯುತ್ತಿದ್ದಂತೆಯೇ ಕರ್ನಾಟಕದ ಬಹುಭಾಗ ಮಗಧ ಸಾಮ್ರಾಜ್ಯದ ಕಕ್ಷೆಯಲ್ಲಿ ಸೇರಿ ಈ ನಾಡಿನಲ್ಲಿ ಹೊಸ ರಾಜಕೀಯ ಆರ್ಥಿಕ ಸಾಂಸ್ಕೃತಿಕ ವ್ಯವಸ್ಥೆ ಕಾಣಿಸಿಕೊಳ್ಳಲಾರಂಭಿಸಿತು. ಅಶೋಕನ ಶಾಸನಗಳೇ ಪ್ರಸಕ್ತ ದೊರೆತಿರುವ ಕರ್ನಾಟಕದ ಅತ್ಯಂತ ಪ್ರಾಚೀನ ಲಿಖಿತ ಐತಿಹಾಸಿಕ ದಾಖಲೆಗಳು. ಈ ದೃಷ್ಟಿಯಿಂದ ಕರ್ನಾಟಕದ ಇತಿಹಾಸ ಪ್ರಾರಂಭ ವಾಗುವುದು ಈ ಕಾಲದಲ್ಲಾದರೂ ಅಶೋಕ ತಾನೇ ಸ್ವತಃ ದಂಡೆತ್ತಿ ಬಂದು ಕರ್ನಾಟಕ ಪ್ರಾಂತ್ಯವನ್ನು ತನ್ನ ವಶಮಾಡಿಕೊಂಡಿರುವುದಕ್ಕೆ ನೇರ ಆಧಾರಗಳು ಇಲ್ಲದಿರುವುದರಿಂದಲೂ ಉತ್ತರ ಭಾರತ ಮತ್ತು ತಮಿಳುನಾಡುಗಳಲ್ಲಿ ದೊರೆಯುವ ಕೆಲವು ಸಾಂದರ್ಭಿಕ ಸಾಕ್ಷ್ಯಗಳ ಆಧಾರಗಳಿಂದಲೂ ಬಹುಶಃ ಕ್ರಿ.ಪೂ.4ನೆಯ ಶತಮಾನದಲ್ಲಿ ನಂದರ ಆಳ್ವಿಕೆಯ ಕಾಲದಲ್ಲಿ ಕರ್ನಾಟಕ ಮಗಧ ಸಾಮ್ರಾಜ್ಯದ ಭಾಗವಾಗಿತ್ತು. ಎಂದು ಊಹಿಸುವ ಸಾಧ್ಯತೆ ಇದೆ. ಅನಂತರ ಉತ್ತರಾಧಿಕಾರತ್ವದಿಂದಾಗಿ ಮೌರ್ಯ ಅರಸರ ಆಳ್ವಿಕೆಗೆ ಸಾಮ್ರಾಜ್ಯದ ಇತರ ಭಾಗಗಳಂತೆ ಕರ್ನಾಟಕವೂ ಒಳಪಟ್ಟಿರಬಹುದು. ಅಶೋಕನ ಕಾಲದಲ್ಲಿ ಕರ್ನಾಟಕದಲ್ಲಿದ್ದ ರಾಜಕೀಯ ಸಾಂಸ್ಕೃತಿಕ ಸ್ಥಿತಿಗತಿಗಳ ವಿವರಗಳು ಸ್ಪಷ್ಟವಾಗಿಲ್ಲ. ಅವನ ಶಾಸನಗಳ ಮುಖ್ಯ ಉದ್ದೇಶ ತನ್ನ ಪ್ರಜೆಗಳೆಲ್ಲರೂ ಅವುಗಳಲ್ಲಿ ಹೇಳಿರುವಂತೆ ಸಜ್ಜೀವನ ನಡೆಸಬೇಕೆನ್ನುವುದು. ಪ್ರಾಕೃತ ಭಾಷೆಯಲ್ಲಿರುವ ಈ ಶಾಸನಗಳನ್ನು ಈ ಪ್ರಾಂತ್ಯದ ಪ್ರಜೆಗಳು ಎಷ್ಟರಮಟ್ಟಿಗೆ ಓದಿ ಅರ್ಥ ಮಾಡಿಕೊಳ್ಳಬಲ್ಲವರಿದ್ದರೆಂಬುದು ತಿಳಿಯದಾಗಿದೆ. ಆದರೂ ಪ್ರಾಕೃತ ತಿಳಿಯದಿದ್ದವರಿಗೂ ಅಶೋಕನ ಧರ್ಮಸಂದೇಶ ಅವನ ಅಧಿಕಾರ ವರ್ಗದವರಿಂದ ದೇಶಭಾಷೆಯ ಮಾಧ್ಯಮದಲ್ಲಿ ಮುಖತಃ ತಲಪುತ್ತಿತ್ತೆಂದು ಊಹಿಸಬಹುದಾಗಿದೆ. ಏನೇ ಆದರೂ ಕರ್ನಾಟಕದ ಮಟ್ಟಿಗೆ ಅಶೋಕ ದೂರದ ವ್ಯಕ್ತಿಯೇ ಆಗಿದ್ದ. ಇಲ್ಲಿಯ ಒಳಾಡಳಿತ ವ್ಯವಹಾರಗಳಲ್ಲಿ ಅವನ ಮತ್ತು ಅವನ ನಿಕಟವರ್ತಿ ಅಧಿಕಾರಿಗಳ ನೇರ ಚಟುವಟಿಕೆ ಹೆಚ್ಚಿದ್ದಿರಲಾರದು. ಆದರೂ ಈ ಕಾಲದಲ್ಲಿ ಒದಗಿ ಬಂದ ಉತ್ತರ ಭಾರತದ ರಾಜಕೀಯ ಸಂಪರ್ಕದಿಂದ ಆ ಪ್ರದೇಶದಲ್ಲಿದ್ದ ರಾಜಕೀಯ ವ್ಯವಸ್ಥೆಯ ಪರಿಚಯ ಹಾಗೂ ಅದರಿಂದ ಹಲವು ಪರಿಣಾಮಗಳು ಮೂಡಿದವು. ದೇಶದಲ್ಲಿ ಭದ್ರವಾದ ಸರ್ಕಾರವಿದ್ದು ಶಾಂತ ಪರಿಸ್ಥಿತಿಗೆ ಅವಕಾಶವಾಗಿ ಉದ್ಯಮಗಳು ಮತ್ತು ವ್ಯಾಪಾರ ಹೆಚ್ಚಾಗುವ ಸಾಧ್ಯತೆ ಬೆಳೆಯಿತು. ಉತ್ತರ ಭಾರತದಲ್ಲಿ ಹುಟ್ಟಿದ ಬೌದ್ಧ, ಹಿಂದು, ಜೈನ ಧರ್ಮಗಳು ಕರ್ನಾಟಕಕ್ಕೆ ಬಂದದ್ದೂ ಬಹುಶಃ ಈ ಕಾಲದಲ್ಲಿ ಈ ಅಂಶಗಳಿಂದಾಗಿ ಇಲ್ಲಿನ ಜನರ ಜೀವನ ವಿಧಾನಗಳಲ್ಲಿ ಹೊಸ ತಿರುವು ಮೂಡಿತು. ಕರ್ನಾಟಕ ದೇಶ ಗ್ರಾಮೀಣ ಸಾಂಸ್ಕೃತಿಕ ಘಟ್ಟದಿಂದ ನಾಗರಿಕ ಘಟ್ಟಕ್ಕೆ ಕಾಲಿಡುವ ಪರಿಸ್ಥಿತಿ ಒದಗಿಬಂದಿತು.

ಮೌರ್ಯ ಸಾಮ್ರಾಜ್ಯದ ಪತನವಾದ ಅನಂತರ ದಕ್ಷಿಣಾಪಥದಲ್ಲಿ ಪ್ರಬಲರಾಗಿ ಮೆರೆದ ಸಾತವಾಹನರು (ಕ್ರಿ.ಪೂ.2 ರಿಂದ ಕ್ರಿ.ಶ.2ನೆಯ ಶತಮಾನ) ಕರ್ನಾಟಕದ ಕೆಲಭಾಗಗಳ ಅಧಿಪತಿಗಳಾಗಿ ಮೆರೆದಿದ್ದರೆಂಬುದು ಅವರ ಮತ್ತು ಅವರ ಸಾಮಂತರಾಗಿದ್ದ ಚುಟುವಂಶದವರ ಪ್ರಾಕೃತ ಶಾಸನಗಳಿಂದ ತಿಳಿದುಬರುತ್ತದೆ. ಈ ಅರಸು ಮನೆತನಗಳವರೂ ಹೊರನಾಡಿನವರೇ ಆಗಿದ್ದೂ ಆ ಕಾಲದಲ್ಲಿ ಕರ್ನಾಟಕದಲ್ಲಿ ಸ್ಥಳೀಯವಾದ ಯಾವ ಸ್ವತಂತ್ರ ರಾಜಕೀಯ ಶಕ್ತಿಯೂ ತಲೆಯೆತ್ತಿದಂತೆ ಕಾಣುವುದಿಲ್ಲ. ಆದರೆ 2ನೆಯ ಶತಮಾನದ ವೇಳೆಗೆ ಕರಾವಳಿಯ ತುಳುನಾಡಿನಲ್ಲಿ ಆಳುಪರು ಸಣ್ಣದೊಂದು ಸಂಸ್ಥಾನವನ್ನು ರೂಪಿಸಿಕೊಂಡಿದ್ದರು. ಸಾತವಾಹನರೂ ಆಳುಪರೂ ಕರ್ನಾಟಕದ ಬಂದರುಗಳ ಮೂಲಕ ವಿದೇಶಗಳೊಡನೆ ಸಂಪರ್ಕ ಬೆಳೆಸಿದ್ದರೆಂದು ಊಹಿಸಲು ಕೆಲವು ಆಧಾರಗಳಿವೆ. ಈ ಕಾಲದಲ್ಲಿ ಆರ್ಥಿಕ ಚಟುವಟಿಕೆಗಳು ಸಾಕಷ್ಟು ಬೆಳೆದಿದ್ದು ಅನೇಕ ಪಟ್ಟಣಗಳು ಬೆಳೆದಿದ್ದವೆಂಬ ಅಂಶ ಪುರಾತತ್ತ್ವ ಆಧಾರಗಳಿಂದ ಸ್ಪಷ್ಟವಾಗುತ್ತದೆ. ಸನ್ನತಿ, ಬನವಾಸಿ ಮೊದಲಾದ ಸ್ಥಳಗಳಲ್ಲಿ ದೊರೆತಿರುವ ಶಾಸನಗಳು ಬೌದ್ಧಧರ್ಮ ಪ್ರಬಲವಾಗಿತ್ತೆಂಬುದನ್ನು ಸೂಚಿಸುತ್ತವೆ. ಹಾಗೆಯೇ ವೈದಿಕ ಮತ್ತು ಜೈನ ಧರ್ಮಗಳೂ ಇಲ್ಲಿದ್ದುವೆಂಬುದಕ್ಕೆ ಸಾಂದರ್ಭಿಕ ಸಾಕ್ಷಿಗಳಿವೆ. ಉತ್ತಮ ನಾಗರಿಕ ಸ್ಥಿತಿಯ ಸೂಚಕಗಳಾದ ಪ್ರಬುದ್ಧ ವಾಸ್ತು ಮತ್ತು ಶಿಲ್ಪ ಕಲೆಗಳು ಈ ನಾಡಿನಲ್ಲಿ ಈ ಕಾಲದಲ್ಲಿ ಬೆಳೆಯಲಾರಂಭಿಸಿದ್ದುವೆಂಬುದನ್ನು ಸನ್ನತಿ, ಬನವಾಸಿಗಳಲ್ಲಿ ದೊರೆತಿರುವ ಶಿಲಾಶಿಲ್ಪಗಳು ಮತ್ತು ಕೋಟೆಯೇ ಮೊದಲಾದ ಕಟ್ಟಡಗಳ ಅವಶೇಷಗಳು ಸೂಚಿಸುತ್ತವೆ. ಕ್ರಿಸ್ತಶಕದ ಪ್ರಾರಂಭ ಶತಮಾನಗಳಲ್ಲಿ ದಕ್ಷಿಣ ಕರ್ನಾಟಕ ಪ್ರಾಂತ್ಯ ನೆರೆಯ ತಮಿಳುನಾಡಿನ ಜೊತೆಗೂ ನಿಕಟ ಸಂಪರ್ಕ ಬೆಳೆಸಿಕೊಂಡಿತ್ತು. ಸಾತವಾಹನರ ಅನಂತರ ಸ್ವಲ್ಪಕಾಲ ಕರ್ನಾಟಕದ ಕೆಲಭಾಗಗಳು ತಮಿಳುನಾಡಿನ ಪಲ್ಲವರ ಅಧೀನದಲ್ಲಿದ್ದವು. ಶಾಸನಗಳಲ್ಲಿ ಬಳಸಲಾಗಿರುವ ಭಾಷೆಯ ದೃಷ್ಟಿಯಿಂದ ಹೇಳುವುದಾದರೆ ಈ ಕಾಲ ಕರ್ನಾಟಕ ಇತಿಹಾಸದಲ್ಲಿ ಪ್ರಾಕೃತ ಭಾಷೆ ಪ್ರಬಲವಾಗಿದ್ದ ಕಾಲ. ಅವುಗಳನ್ನು ಹೊರಡಿಸಿದ ಅರಸುಗಳ ಪರಮಾಧಿಕಾರದ ಮೂಲಸ್ಥಾನಗಳು ಕರ್ನಾಟಕದ ಹೊರಗೇ ಇದ್ದವು.

ಹೀಗೆ ಶತಮಾನಗಳ ಕಾಲ ರಾಜಕೀಯ ಪಾರತಂತ್ರಕ್ಕೆ ಒಳಗಾಗಿದ್ದ ಈ ನಾಡಿನಲ್ಲಿ 4ನೆಯ ಶತಮಾನದ ಮಧ್ಯಭಾಗದಲ್ಲಿ ಇದೇ ಪ್ರದೇಶದ ಬನವಾಸಿಯ ಕದಂಬರು ಮತ್ತು ತಲಕಾಡಿನ ಗಂಗರು ಮೊದಲು ಸ್ವತಂತ್ರ ರಾಜ್ಯಗಳನ್ನು ಸ್ಥಾಪಿಸಿದರು. ಕದಂಬ ರಾಜ್ಯವಾದರೂ ಹುಟ್ಟಿಕೊಂಡದ್ದೇ ಹೊರಗಿನವರ ಆಕ್ರಮಣದ ವಿರುದ್ಧ ತಲೆದೋರಿದ ಪ್ರತಿಭಟನೆಯಿಂದಾಗಿ. ಕಾಂಚೀಪುರದ ಪ್ರಸಿದ್ಧ ಘಟಿಕೆಯಲ್ಲಿ ತನ್ನ ವೈದಿಕ ಅಧ್ಯಯನವನ್ನು ಮುಂದುವರಿಸಲೋಸುಗ ಅಲ್ಲಿಗೆ ಹೋಗಿದ್ದ ಕದಂಬ ಮನೆತನದ ಮಯೂರಶರ್ಮ ಕ್ಷಾತ್ರವೃತ್ತಿಯ ಪಲ್ಲವರ ದುರಹಂಕಾರದಿಂದ ಅಪಮಾನಿತನಾಗಿ, ಸ್ವತಃ ಕ್ಷಾತ್ರವೃತ್ತಿಯನ್ನವಲಂಬಿಸಿ ಸೇನೆಯನ್ನು ಕಟ್ಟಿ ಪಲ್ಲವರೊಡನೆ ಕಾದಾಡಿ ಗೆದ್ದು, ಅದರಿಂದಲೇ ಮಲಪ್ರಭಾ ಮತ್ತು ಪಶ್ಚಿಮ ಸಮುದ್ರದ ನಡುವಣ ತನ್ನ ತಾಯ್ನೆಲದ ಪರಿಪಾಲಕನಾಗಿ ಅಭಿಷಿಕ್ತನಾದಂದು ಕರ್ನಾಟಕದ ಪ್ರಪ್ರಥಮ ಪ್ರಬಲ ಸ್ವತಂತ್ರ ಸ್ಥಳೀಯ ರಾಜ್ಯ ಹುಟ್ಟಿಕೊಂಡಿತು. ಈ ರಾಜ್ಯ ಮುಂದೆ ಚಳುಕ್ಯರಿಂದ ನಾಶವಾಗುವವರೆಗೂ ಅಂದರೆ ಸು.6ನೆಯ ಶತಮಾನದ ಅಂತ್ಯದ ವರೆಗೆ ಉತ್ತರ ಕರ್ನಾಟಕದ ಬಹುಭಾಗವನ್ನು ಒಳಗೊಂಡಿತ್ತು. ಮೂಲತಃ ಕೋಲಾರದಿಂದ ಬಂದವರಾದ ಗಂಗರು ಕ್ರಿ.ಶ. 360ರ ಸುಮಾರಿನಲ್ಲಿ ತಲಕಾಡಿನಲ್ಲಿ ರಾಜ್ಯಸ್ಥಾಪನೆ ಮಾಡಿ ಮುಂದೆ 10ನೆಯ ಶತಮಾನದ ಅಂತ್ಯದವರೆಗೂ ದಕ್ಷಿಣ ಕರ್ನಾಟಕದ ಬಹುಭಾಗದ ಮೇಲೆ ಆಳ್ವಿಕೆ ನಡೆಸಿದರು.

ಈ ಹಿಂದೆ ಹೊರನಾಡಿನವರು ಕರ್ನಾಟಕದ ಮೇಲೆ ಅಧಿಕಾರ ಚಲಾಯಿಸುತ್ತಿದ್ದರಾದರೆ, ಕದಂಬರು ಮತ್ತು ಗಂಗರ ಕಾಲದಲ್ಲಿ ಕನ್ನಡಿಗರು

ಪರದೇಶಗಳ ಮೇಲೆ ತಮ್ಮ ಪ್ರಭಾವವನ್ನು ಬೀರಲಾರಂಭಿಸಿದರು. ಕದಂಬರ ಮೊದಲ ರಾಜನಾದ ಮಯೂರ ಶರ್ಮ (ಸು.325-45) ಪಲ್ಲವರನ್ನು ಸೋಲಿಸಿದ್ದನಷ್ಟೇ ಅಲ್ಲದೆ ದೂರದ ರಾಷ್ಟ್ರಗಳ ಮೇಲೂ ಯಶಸ್ವಿಯಾಗಿ ದಾಳಿ ನಡೆಸಿದ್ದ. ಕಾಕುತ್ಸ್ಥವರ್ಮ (ಸು.405-30)ತನ್ನ ಮಕ್ಕಳ ಮೂಲಕ ಸಾಮ್ರಾಜ್ಯಶಾಹೀ ಗುಪ್ತರೂ ವಾಕಾಟಕರೂ ಸೇರಿದಂತೆ ಹಲವು ಅರಸುಮನೆತನಗಳೊಂದಿಗೆ ವೈವಾಹಿಕ ಸಂಬಂಧ ಬೆಳೆಸಿದ್ದನೆಂಬುದು ಅಧಿಕಾರಕ್ಕೆ ಬಂದ ಸ್ವಲ್ಪ ಕಾಲದಲ್ಲೇ ಕದಂಬರು ರಾಜಕೀಯ ಕ್ಷೇತ್ರದಲ್ಲಿ ಉಚ್ಚಮಟ್ಟಕ್ಕೇರಿದ್ದರೆಂಬುದನ್ನು ಸೂಚಿಸುತ್ತದೆ. ಅದೇ ರೀತಿ ದಕ್ಷಿಣ ಕರ್ನಾಟಕದ ಗಂಗರೂ ತಮಿಳುನಾಡಿನ ಪಲ್ಲವರೊಡನೆ ಸಂಬಂಧ ಬೆಳೆಸಿದ್ದರು.

ಈ ಕಾಲದಲ್ಲಿ ವೈದಿಕ ಧರ್ಮವನ್ನು ಪುನರುಜ್ಜೀವನಗೊಳಿಸುವ ಪ್ರಯತ್ನ ವಿಶೇಷವಾಗಿ ನಡೆಯಿತು. ಜೊತೆಗೆ ಜೈನಧರ್ಮಕ್ಕೂ ಪೋಷಣೆ ದೊರಕಿತು. ಆದರೆ ಬೌದ್ಧ ಧರ್ಮ ಕ್ಷೀಣಿಸಿತು. ಸಾಮಾಜಿಕ ಕ್ಷೇತ್ರದಲ್ಲಿ, ಅಲ್ಪಸಂಖ್ಯೆಯ ಬೌದ್ಧರನ್ನೂ ಸಾಕಷ್ಟು ಸಂಖ್ಯೆಯಲ್ಲಿದ್ದ ಜೈನರನ್ನೂ ಬಿಟ್ಟರೆ, ಕದಂಬ-ಗಂಗಯುಗದ ಕರ್ನಾಟಕದ ಸಮಾಜ ವೈದಿಕಧರ್ಮದ ರೀತ್ಯಾ ಚತುರ್ವರ್ಣಗಳಿಂದ ಕೂಡಿತ್ತು. ಧಾರ್ಮಿಕ ಕ್ಷೇತ್ರದಲ್ಲಿ ಕದಂಬ ರಾಜರೂ ಅವರ ಸಮಕಾಲೀನ ಗಂಗ ಅರಸುಗಳೂ ಸಾಮಂತ ಪ್ರಭುಗಳೂ ಅವರವರ ಸ್ವಂತ ಒಲವು ಯಾವುದೇ ಧರ್ಮಕ್ಕಿದ್ದರೂ ಎಲ್ಲ ಧರ್ಮಗಳನ್ನೂ ಗೌರವಿಸುವ ಪರಧರ್ಮಸಹಿಷ್ಣುತೆಯ ಉದಾತ್ತ ಪರಂಪರೆ ಕರ್ನಾಟಕದಲ್ಲಿ ಸ್ಥಿರವಾಗಿ ಉಳಿಯುವಂತೆ ಮಾಡಿದರು.

ಕದಂಬರು ಮತ್ತು ಗಂಗರು ವೈದಿಕ ಧರ್ಮಕ್ಕೆ ನೀಡಿದ ಪ್ರೋತ್ಸಾಹದಿಂದಾಗಿ ಪ್ರಾಕೃತದ ಬದಲು ಸಂಸ್ಕೃತ ಪ್ರಧಾನ ಶಾಸನಭಾಷೆಯಾಗಿ ಬಳಕೆಗೆ ಬಂತು. ಸಂಸ್ಕೃತ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಯೂ ಆಯಿತು. ಕನ್ನಡತನದ ಪ್ರಜ್ಞೆ ವಿಶೇಷವಾಗಿ ನೆಲೆಗೊಂಡದ್ದೂ ಈ ಸಂಧಿಕಾಲದಲ್ಲಿ. ಇದಕ್ಕೂ ಹಿಂದಿನ ಶತಮಾನಗಳಲ್ಲಿ ಕರ್ನಾಟಕದಲ್ಲಿ ಕನ್ನಡ ಬಳಕೆಯಲ್ಲಿತ್ತೆಂಬುದರ ಸುಳಿವು ಈ ಪ್ರಾಂತ್ಯದ ಪ್ರಾಚೀನ ಪ್ರಾಕೃತ, ಸಂಸ್ಕೃತ ಶಾಸನಗಳಲ್ಲಿ ಉಕ್ತವಾಗಿರುವ ಕೆಲವು ಸ್ಥಳನಾಮಗಳ ವಿಶ್ಲೇಷಣೆಯಿಂದ ದೊರೆಯುತ್ತದೆಯಾದರೂ ಕೇವಲ ಆಡುಮಾತಾಗಿ ಬಳಕೆಯಲ್ಲಿದ್ದು ಕನ್ನಡ ರಾಜಾಶ್ರಯ ಮತ್ತು ಅಧಿಕೃತ ಮನ್ನಣೆ ಪಡೆದು ಬಿರುಸಾಗಿ ಸರ್ವತೋಮುಖವಾಗಿ ಬೆಳೆಯಲಾರಂಭಿಸಿದ್ದು 5ನೆಯ ಶತಮಾನದ ಮಧ್ಯಭಾಗದಿಂದಲೇ. ಹಲ್ಮಿಡಿ ಶಾಸನದಾರಭ್ಯ ಕನ್ನಡ ಶಾಸನಗಳು ದಿನೇ ದಿನೇ ಸಂಖ್ಯೆಯಲ್ಲಿ ಹೆಚ್ಚುತ್ತ ಬಂದುದು ಈ ಹೊಸ ಪ್ರಜ್ಞೆಯ ಸೂಚಕವಾಗಿದೆ.

ಕದಂಬರೂ ಗಂಗರೂ ಅದರಲ್ಲೂ ಮುಖ್ಯವಾಗಿ ಕದಂಬರು ರಾಜಕೀಯ ಕ್ಷೇತ್ರದಲ್ಲಿ ಸಾಮ್ರಾಜ್ಯಶಾಹೀ ಅಂತಸ್ತಿಗೆ ಏರುವ ಸಾಮರ್ಥ್ಯ ಹೊಂದಿದ್ದರಾದರೂ ಅಂದಿನ ಪ್ರಾರಂಭಿಕ ಸ್ಥಿತಿಯಲ್ಲಿ ಅವರಿಬ್ಬರಲ್ಲಿ ಯಾರೂ ಮತ್ತೊಬ್ಬರ ಪ್ರಾಂತ್ಯವನ್ನು ಸ್ವಾಧೀನಪಡಿಸಿಕೊಳ್ಳಲಾರದೇ ಹೋದುದರಿಂದ ಕರ್ನಾಟಕದ ಸಾರ್ವಭೌಮತ್ವವನ್ನು ಗಳಿಸಿಕೊಳ್ಳಲಾರದೇ ಹೋದರು. ಆದರೂ ಕರ್ನಾಟಕ ಸರ್ವತಂತ್ರ ಸ್ವತಂತ್ರವಾದ ಒಂದು ಚಕ್ರವರ್ತಿ ಕ್ಷೇತ್ರವಾಗಬಲ್ಲದು ಎಂಬ ಪ್ರಜ್ಞೆ ಕದಂಬ– ಗಂಗರು ತಮ್ಮ ಮುಂದಿನ ಪೀಳಿಗೆಯವರಿಗೆ ನೀಡಿಹೋದ ಕೊಡುಗೆಗಳಲ್ಲೆಲ್ಲ ಹೆಚ್ಚು ಪರಿಣಾಮಕಾರಿಯಾದುದು.

**ಸಾಮ್ರಾಜ್ಯ ಯುಗ :** ಚಕ್ರವರ್ತಿ ಕ್ಷೇತ್ರದ ಸಾಧ್ಯತೆಯನ್ನು ಮನವರಿಕೆ ಮಾಡಿಕೊಂಡು ಉತ್ತುಂಗ ಸಾಮ್ರಾಜ್ಯಗಳನ್ನು ಕಟ್ಟಿದ ಕೀರ್ತಿ ಮುಂದೆ ಆಳಿದ ಬಾದಾಮಿಯ ಚಳುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು ಮತ್ತು ಹೊಯ್ಸಳರದು. ಕದಂಬಪೂರ್ವ ಕಾಲದಲ್ಲಿ ಕರ್ನಾಟಕ ಹೊರನಾಡಿನ ರಾಜವಂಶಗಳ ಆಳ್ವಿಕೆಗೆ ಒಳಪಟ್ಟಿದ್ದಿತಾದರೆ ಕದಂಬ ಗಂಗ ರಾಜ್ಯೋದಯದೊಡನೆ ಉದ್ಭವಿಸಿದ ದೇಶಿ ಪ್ರಜ್ಞೆ ಮತ್ತು ಸಾಧನ ಸಾಮರ್ಥ್ಯಗಳಿಂದ ಕರ್ನಾಟಕದ ಈ ರಾಜವಂಶಗಳು ಇದೇ ನಾಡಿನ ಬಾದಾಮಿ, ಮಳಖೇಡ, ಕಲ್ಯಾಣ, ದ್ವಾರಸಮುದ್ರಗಳಲ್ಲಿ ರಾಜಧಾನಿಯನ್ನು ಸ್ಥಾಪಿಸಿಕೊಂಡು ದಕ್ಷಿಣಾಪಥದ ಬಹುಭಾಗದ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದ್ದದೂ ಅಲ್ಲದೆ ಕಾಲಕಾಲಕ್ಕೆ ಉತ್ತರ ಭಾರತ ಹಾಗೂ ತಮಿಳುನಾಡುಗಳ ಮೇಲೂ ತಮ್ಮ ಪ್ರಭಾವವನ್ನು ವಿಸ್ತರಿಸಿದ್ದು ಈ ಕಾಲದ ಮಹತ್ವದ ವಿಷಯ. ಮಹಾರಾಷ್ಟ್ರದ ದೇವಗಿರಿಯಿಂದ ಆಳಿದ ಸೇವುಣರು ಒಂದು ದೃಷ್ಟಿಯಿಂದ ಕನ್ನಡ ನಾಡಿನಲ್ಲೇ ಆಳುತ್ತಿದ್ದರು. ಇವರಲ್ಲದೆ ಕರ್ನಾಟಕ ಮೂಲದ ರಾಜಕುಲಗಳು ಮಿಥಿಲಾ ಬಂಗಾಳಗಳಲ್ಲಿ ಆಳುತ್ತಿದ್ದವೆಂಬುದಕ್ಕೆ ಸಾಕ್ಷಿಗಳಿವೆ. ಕನ್ನಡ ಮೂಲದ ಹಲವು ರಾಜಮನೆತನಗಳು ಈ ನಾಡಿನ ಹೊರಗೂ ರಾಜ್ಯ ಸ್ಥಾಪಿಸಬಲ್ಲ ಶಕ್ತಿ ಪಡೆದಿದ್ದವು. ಈ ರಾಜಕೀಯ ಸಾಧನೆಗಳಿಗೆ ಸ್ಥಳೀಯ ಆರ್ಥಿಕ ಬೆಂಬಲವಿದ್ದಿರಬೇಕಾಗಿದ್ದು ದೇಶ ಸಮೃದ್ಧ ಸ್ಥಿತಿಯಲ್ಲಿತ್ತೆಂಬುದಕ್ಕೂ ಇದೇ ಸೂಚಕವಾಗಿದೆ. ಸಹಜವಾಗಿ ನಾಡಿನಲ್ಲಿದ್ದ ರಾಜಕೀಯ ಔನ್ನತ್ಯ, ಆರ್ಥಿಕ ಬಲಗಳ ಹಿನ್ನೆಲೆಯಲ್ಲಿ ಕಲೆ ಸಾಹಿತ್ಯಾದಿ ಇತರ ರಂಗಗಳಲ್ಲೂ ಮಹತ್ಸಾಧನೆಗಳು ಈ ಕಾಲದಲ್ಲಾದವು. ಯಾವ ದೃಷ್ಟಿಯಿಂದ ನೋಡಿದರೂ ಕರ್ನಾಟಕದ ಇತಿಹಾಸದಲ್ಲಿ ಇದು ಪ್ರೌಢಯುಗ, ಹಿರಿಮೆಯ ಕಾಲ.

6ನೆಯ ಶತಮಾನದ ಮಧ್ಯಭಾಗದಲ್ಲಿ ಕದಂಬರು ಬಲಗುಂದಿದಾಗ ಉತ್ತರ ಕರ್ನಾಟಕದ ರಾಜಕೀಯ ಕ್ಷೇತ್ರದಲ್ಲಿ ಉಂಟಾದ ತೆರಪನ್ನು ತುಂಬಿದವರು ಬಾದಾಮಿಯ ಚಳುಕ್ಯರು. ಕದಂಬರು ಹಾಗೂ ಚಳುಕ್ಯರು ಶಾಸನಗಳ ವಂಶಿಕ ಪ್ರಶಸ್ತಿಗಳನ್ನು ಹೋಲಿಸಿ ನೋಡಿದಾಗ ಚಳುಕ್ಯರು ತಮ್ಮ ಪೂರ್ವಜರನ್ನು ಎಷ್ಟರಮಟ್ಟಿಗೆ ಹಿಂಬಾಲಿಸಿದ್ದರು, ಅವರಿಂದ ಎಷ್ಟರಮಟ್ಟಿಗೆ ಪ್ರಭಾವಿತರಾಗಿದ್ದರು ಎಂಬ ಅಂಶ ಸ್ಪಷ್ಟವಾಗುತ್ತದೆ. ಕರ್ನಾಟಕ ಮುಂದಿನ ಆರು ಶತಮಾನಗಳ ಕಾಲ ಏಕಾಧಿಪತ್ಯದ ಸಾಮ್ರಾಜ್ಯವಾಗಿ ಮೆರೆದದ್ದು ಈ ಚಳುಕ್ಯರ ಪರಿಶ್ರಮಗಳ ಫಲವಾಗಿ. ಹಲವು ಶಾಖೆಗಳೊಡನೆ, ಬಹು ವಿಸ್ತಾರವಾದ ಆಲದ ಮರದಂತೆ ಬೆಳೆದು ಚಿರಸ್ಥಾಯಿಯಾಗಿ ನಿಂತ ಈ ಸಾಮ್ರಾಜ್ಯಶಾಹೀ ಪ್ರಭುತ್ವದ ಬೀಜವನ್ನು ಬಿತ್ತಿದವನು ವಾತಾಪಿಯಲ್ಲಿ ನೆಲೆಯೂರಿ ಅಲ್ಲಿ ಅಜೇಯವಾದ ದುರ್ಗವನ್ನು ರಚಿಸಿದ 1ನೆಯ ಪುಲಕೇಶಿ (ಸು.540-66). ಇವನು ನಡೆಸಿದ ಅಶ್ವಮೇಧ ಯಾಗ ಯಶಸ್ವಿಯಾಗಿ ನೆರವೇರಿದುದು ಅವನ ಉತ್ತರಾಧಿಕಾರಿಗಳಲ್ಲಿ ಸಾಮ್ರಾಜ್ಯ ಸ್ಥಾಪನೆಯ ಮಹತ್ವಾಕಾಂಕ್ಷೆಯನ್ನೂ ಅದಕ್ಕೆ ಬೇಕಾದ ಧೈರ್ಯಸ್ಥೈರ್ಯಗಳನ್ನೂ ಹುಟ್ಟಿಸಿರಬೇಕು. ಇವನು ಬಿತ್ತಿದ ಬೀಜ ಮೊಳೆಕೆಯೊಡೆದು, ಚಿಗುರುವಂತೆ ಮಾಡಿದ ಕೀರ್ತಿಗೆ ಪಾತ್ರರು ಅವನ ಅಕ್ಕನ ಮಕ್ಕಳಾದ 1ನೆಯ ಕೀರ್ತಿವರ್ಮ ಮತ್ತು ಮಂಗಲೀಶ (596-610) ನಳ, ಮೌರ್ಯ, ಕದಂಬ ಮನೆತನಗಳನ್ನು ಸದೆಬಡಿದ ಕೀರ್ತಿವರ್ಮ ಕರ್ನಾಟಕದ ಸಾರ್ವಭೌಮತ್ವ ಚಳುಕ್ಯರದ್ದಾಗುವಂತೆ ಮಾಡಿದನಾದರೆ, ಅವನ ತಮ್ಮ ಮಂಗಲೀಶ ಸರ್ವದ್ವೀಪಗಳನ್ನೂ ಆಕ್ರಮಿಸುವಷ್ಟು ಶಕ್ತಿಯುತವಾದ ನೌಕಾಸೇನೆಯನ್ನು ಕಟ್ಟಿ ಚಳುಕ್ಯರ ರಾಜಕೀಯ ಪ್ರಭಾವ ಕಡಲುದಾಟಿ ಮೆರೆಯುವಂತೆ ಮಾಡಿದ. ಈ ದೃಷ್ಟಿಯಿಂದ ನೋಡಿದಾಗ ಕರ್ನಾಟಕದ ಪ್ರಥಮ ಚಕ್ರವರ್ತಿಯಾಗಿ ಮೆರೆದ ಯಶಸ್ಸು 1ನೆಯ ಕೀರ್ತಿವರ್ಮನದ್ದಾದರೆ, ಕರ್ನಾಟಕವೇ ಕೇಂದ್ರವಾಗಿ ಆಗತಾನೆ ಮೊದಲಬಾರಿಗೆ ಸೃಷ್ಟಿಗೊಂಡಿದ್ದ ಕರ್ನಾಟಕ ಚಕ್ರವರ್ತಿ ಕ್ಷೇತ್ರದ ನೇರ ಪ್ರಭಾವ ಅದರ ಕೇಂದ್ರವಲಯವನ್ನೂ ಮೀರಿ ಹೊರಹೊಮ್ಮುವಂತೆ ಮಾಡಿದ ಕೀರ್ತಿ ಮಂಗಲೀಶನದಾಗುತ್ತದೆ. 2ನೆಯ ಪುಲಕೇಶಿ (610-42) ದಕ್ಷಿಣ ಪಥದ ಅತಿಶ್ರೇಷ್ಠ ಚಕ್ರವರ್ತಿಗಳಲ್ಲೊಬ್ಬ. ಚಕ್ರವರ್ತಿ ಕ್ಷೇತ್ರವನ್ನು ವಿಸ್ತರಿಸುವ ಸಲುವಾಗಿ ದಿಗ್ವಿಜಯ ಪ್ರಯಾಣಗಳನ್ನು ಕೈಗೊಂಡು ಗುಜರಾತ್ ಆಂಧ್ರ ಪ್ರದೇಶಗಳಲ್ಲಿ ಚಳುಕ್ಯ ಸಂಸ್ಥಾನಗಳನ್ನು ಸ್ಥಾಪಿಸಿದ ಮಹಾರಾಷ್ಟ್ರದಲ್ಲಿ ತನ್ನ ಆಧಿಪತ್ಯವನ್ನು ನೆಲೆಸಿದ ನರ್ಮದೆಯ ತಡಿಯಲ್ಲಿ ಸಕಲೋತ್ತರಾಪಥೇಶ್ವರ ಹರ್ಷವರ್ಧನನಿಗೆ ಸೋಲಿನ ರುಚಿಯನ್ನು ತೋರಿಸಿದ. ಜೊತೆಗೆ ಪಲ್ಲವರ ಮೇಲೆ ದಾಳಿ ಮಾಡಿ, ಅವರನ್ನು ಸೋಲಿಸುವುದರ ಮೂಲಕ ಕರ್ನಾಟಕದ ಚಕ್ರವರ್ತಿಗಳ ಹಾಗೂ ತಮಿಳುನಾಡಿನ ರಾಜವಂಶಗಳ ನಡುವೆ ವಿರೋಧದ ಅವಿರತ ಪರಂಪರೆಯನ್ನು ಹುಟ್ಟಿಸಿದ. ಆ ವಿಷಮ ಪರಂಪರೆಯ ಮೊದಲ ಬಲಿಯೂ ಅವನೇ. ಹದಿಮೂರು ವರ್ಷಗಳ ಪಲ್ಲವರ ಆಕ್ರಮಣದ ಅನಂತರ 2ನೆಯ ಪುಲಕೇಶಿಯ ಮಗ 1ನೆಯ ವಿಕ್ರಮಾದಿತ್ಯ (655-81) ಅಂಥ ಅನಿಷ್ಟ ಘಟನೆಯೇನೂ ನಡೆದೇ ಇಲ್ಲವೆಂಬಂತೆ ಪುನಃ ಕರ್ನಾಟಕ ಸಾಮ್ರಾಜ್ಯದ ಮೇಲೆ ಚಳುಕ್ಯರ ಹತೋಟಿಯನ್ನು ಸಂಪೂರ್ಣವಾಗಿ ಸ್ಥಾಪಿಸಿದ. ಸಿಂಹಾಸನವನ್ನು ಏರುವ ಸಲುವಾಗಿ ಎಷ್ಟೇ ತೀವ್ರವಾದ ಹೋರಾಟಗಳು ನಡೆದರೂ ಈ ಸಾಮ್ರಾಜ್ಯ ಮಾತ್ರ ಸ್ಥಿರವಾಗಿ ಉಳಿದು ನೆರೆಹೊರೆಯ ರಾಷ್ಟ್ರಗಳ ಮನ್ನಣೆ ಪಡೆದು ಬಂದುದಕ್ಕೆ ಪುಲಕೇಶಿ - ವಿಕ್ರಮಾದಿತ್ಯರು ತಮ್ಮ ಸಾಧನೆಗಳಿಂದ ಸೃಷ್ಟಿಸಿದ್ದ ರಾಜಕೀಯ ಪರಂಪರೆ ಒಂದು ಮುಖ್ಯ ಕಾರಣ. ಚಳುಕ್ಯರು

ಮತ್ತು ಪಲ್ಲವರಲ್ಲಿ ತಾವು ಪ್ರಕೃತ್ಯಮಿತ್ರರು ಎಂಬ ಭಾವನೆಯನ್ನು ಬೆಳೆಸಿಕೊಂಡಿದ್ದರಿಂದ, ಅವರು ಅನೇಕ ಬಾರಿ ಒಬ್ಬರ ಮೇಲೊಬ್ಬರು ವೃಥಾ ದಾಳಿಗಳನ್ನು ನಡೆಸಿ ಕ್ರಮೇಣ ಬಲಹೀನರಾಗುತ್ತ ಬಂದಿದ್ದರು. ಸಾಲದ್ದಕ್ಕೆ ಚಳುಕ್ಯರು ಇತರ ವೈರಿಗಳ ಜೊತೆಗೂ ಮೇಲಿಂದ ಮೇಲೆ ಕಾದಾಡಬೇಕಾಗಿ ಬಂದಿತ್ತು. ಹೀಗಿದ್ದರೂ ಚಳುಕ್ಯ ಸಾಮ್ರಾಜ್ಯ ವಿನಯಾದಿತ್ಯ,ಇಮ್ಮಡಿ ವಿಕ್ರಮಾದಿತ್ಯರಂಥ ದೊರೆಗಳ ಆಳ್ವಿಕೆಯಲ್ಲಿ ಗಟ್ಟಿಯಾಗಿಯೇ ಮುಂದುವರೆಯಿತು. ಕೊನೆಗೆ ಇಮ್ಮಡಿ ಕೀರ್ತಿವರ್ಮನ ಕಾಲದಲ್ಲಿ ಅಸ್ತಂಗತವಾಯಿತು (757).

ರಾಜಕೀಯ ವಾತಾವರಣದ ಮಹತ್ಸಾಧನೆಗಳಂತೆ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಮತ್ತು ಧಾರ್ಮಿಕ ರಂಗಗಳಲ್ಲೂ ಪ್ರಗತಿ ಸಾಧಿತವಾಯಿತು. ಈ ಸರ್ವತೋಮುಖ ಬೆಳೆವಣಿಗೆಗೆ ಚಳುಕ್ಯ ಯುಗಕ್ಕೆ ಸಂಬಂಧಿಸಿದ ವಾಸ್ತು ಶಿಲ್ಪ ಅವಶೇಷಗಳು ತೋರುಗನ್ನಡಿಯಂತಿವೆ. ಶಾಸನಗಳಷ್ಟೇ ಅಲ್ಲದೆ ಈ ವಾಸ್ತುಕೃತಿಗಳು ಅಂದಿನ ಆರ್ಥಿಕ ಸುಸ್ಥಿತಿ ಮತ್ತು ಕಲೆಯ ಅಭಿಮಾನ ಇವುಗಳನ್ನು ಪ್ರದರ್ಶಿಸುತ್ತದೆ. ಬಾದಾಮಿ, ಪಟ್ಟದಕಲ್ಲು, ಐಹೊಳೆ, ಅಜಂತಾಗಳಲ್ಲಿ ಸೃಷ್ಟಿಸಿದ ಕಲಾಕೃತಿಗಳು ಕರ್ನಾಟಕ ವಾಸ್ತುಶಿಲ್ಪ ಪರಂಪರೆಯ ಮೂಲಸ್ವರೂಪಗಳಷ್ಟೇ ಅಲ್ಲ, ಅಂದಿನ ಕನ್ನಡಿಗರ ಪ್ರತಿಭಾಶಕ್ತಿಯ ಅತ್ಯುತ್ತಮ ಫಲಗಳೂ ಹೌದು. ಕದಂಬ ಗಂಗರಂತೆಯೇ ಚಳುಕ್ಯರೂ ಪರಧರ್ಮ ಸಹಿಷ್ಣುತೆಯ ಪರಂಪರೆಯನ್ನು ಉಳಿಸಿಕೊಂಡು ಬಂದಿದ್ದರೆಂಬುದಕ್ಕೆ ಅವರ ಹಿಂದು ಜೈನ ದೇವಾಲಯಗಳು ಒಳ್ಳೆಯ ನಿದರ್ಶನಗಳಾಗಿವೆ. ಕಾಂಚಿಪುರ ತನ್ನ ವಶವಾದಾಗ 2ನೆಯ ವಿಕ್ರಮಾದಿತ್ಯ ಹಿಂದೆ ಪಲ್ಲವರು ವಾತಾಪಿಯನ್ನು ಸುಟ್ಟುಹಾಕಿದ್ದ ದುಷ್ಕೃತ್ಯಕ್ಕೆ ಸೇಡು ತೀರಿಸಿಕೊಳ್ಳದೆ ಆ ನಗರವನ್ನು ಸಂರಕ್ಷಿಸಿ, ರಾಜಸಿಂಹೇಶ್ವರದ, ಧನಸಂಪತ್ತನ್ನು ಕಣ್ಣಾರೆ ನೋಡಿ ಆ ದೇವಾಲಯಕ್ಕೆ ಹಿಂದಿರುಗಿಸಿದನೆಂಬುದೂ ಕಾಂಚಿಯ ಪತನದ ಸ್ಮರಣಾರ್ಥ ಮಹಾಶಿಲ್ಪಿಯೊಬ್ಬನಿಗೆ ಮೂರು ಬಾರಿ ಉತ್ಸವ ನಡೆಸಿ ಗೌರವಿಸಿದ್ದನೆಂಬುದೂ ಚಳುಕ್ಯರ ಉಚ್ಚ ಕಲಾಪ್ರೇಮವನ್ನು ಎತ್ತಿ ತೋರಿಸುತ್ತದೆ. ವೈದಿಕ ಧರ್ಮದ ಪ್ರೋತ್ಸಾಹಕರಾಗಿದ್ದ ಚಳುಕ್ಯರು ಕದಂಬರಂತೆಯೆ ಹಲವು ಯಜ್ಞ ಯಾಗದಿಗಳನ್ನು ಮಾಡಿದರು. ಅವರು ವಿಷ್ಣುಭಕ್ತರೂ ಆಗಿದ್ದರಾಗಿ, ಅವರ ಕಾಲದಲ್ಲಿ ಕರ್ನಾಟಕದಲ್ಲಿ ವೈಷ್ಣವ ಪಂಥ ವಿಶೇಷವಾಗಿ ಬೆಳೆದಿರಬೇಕು. ಅವರ ರಾಜಕೀಯ ರಾಜಧಾನಿ ವಾತಾಪಿ, ಸಾಂಸ್ಕೃತಿಕ ರಾಜಧಾನಿ ಆರ್ಯಪುರ (ಇಂದಿನ ಐಹೊಳೆ) ಪ್ರಸಿದ್ಧ ವಿದ್ಯಾಕೇಂದ್ರಗಳಾಗಿ ಮೆರೆದವು. ಕನ್ನಡ ಭಾಷೆ ಇನ್ನಷ್ಟು ಬೆಳೆದು ಸಾಹಿತ್ಯಿಕ ಮಟ್ಟವನ್ನು ಮುಟ್ಟಿದ್ದು ಚಳುಕ್ಯ ಯುಗದಲ್ಲೇ. ಈ ಬೆಳವಣಿಗೆಗೆ ಮುಖ್ಯ ಕಾರಣ ಶ್ರವಣಬೆಳಗೊಳದ ಜೈನರು. ಕನ್ನಡ ಸಾಹಿತ್ಯ ಕೃಷಿ ಆರಂಭವಾದುದು ಈ ಕಾಲದಲ್ಲಿ.

8ನೆಯ ಶತಮಾನದ ಮಧ್ಯಭಾಗದಲ್ಲಿ 2ನೆಯ ಕೀರ್ತಿವರ್ಮ ಸಿಂಹಾಸನಸ್ಥನಿದ್ದಾಗ ವಾತಾಪಿಯ ಚಳುಕ್ಯರನ್ನು ಪದಚ್ಯುತಿಗೊಳಿಸಿ ಮೊದಲು ಚಳುಕ್ಯರ ಅಧೀನದಲ್ಲಿದ್ದು ಉತ್ತರ ಮಹಾರಾಷ್ಟ್ರ ಮತ್ತು ಗುಜರಾತ್ ಪ್ರದೇಶಗಳಲ್ಲಿ ಪ್ರಭಾವಿತರಾಗಿದ್ದ ರಾಷ್ಟ್ರಕೂಟರು ಕರ್ನಾಟಕ ಚಕ್ರವರ್ತಿಕ್ಷೇತ್ರದ ಒಡೆಯರಾದರು. ಚಳುಕ್ಯ ಯುಗದಂತೆಯೆ ರಾಷ್ಟ್ರಕೂಟ ಯುಗದಲ್ಲಿಯೂ ಕರ್ನಾಟಕ ಚಕ್ರವರ್ತಿ ಕ್ಷೇತ್ರದ ನೇರ ಪ್ರಭಾವ ಗುಜರಾತ್, ಮಹಾರಾಷ್ಟ್ರ, ಆಂಧ್ರ ಪ್ರದೇಶಗಳಿಗೆ ವ್ಯಾಪಿಸಿತ್ತು. 1ನೆಯ ಕೃಷ್ಣ, ಧ್ರುವ, 3ನೆಯ ಗೋವಿಂದ 3ನೆಯ ಕೃಷ್ಣ ಇಂಥ ಸಮರ್ಥರಾಜರಿಂದ ರಾಷ್ಟ್ರಕೂಟರ ಹಾಗೂ ಕರ್ನಾಟಕದ ಕೀರ್ತಿ ಪ್ರಭಾವಗಳು ಭಾರತದ ಬಹುಭಾಗದಲ್ಲಿ ಪಸರಿಸಿದವು. ಧ್ರುವ (780-93) ಮತ್ತು ಗೋವಿಂದರು (793-814) ಉತ್ತರಾಪಥದ ದಿಗ್ವಿಜಯಗಳಿಗೆ ಕಾರಣರಾದರೆ 3ನೆಯ ಕೃಷ್ಣ (939-67) ಕರ್ನಾಟಕದ ಇತಿಹಾಸದಲ್ಲಿ ಮೊದಲ ಬಾರಿಗೆ ರಾಮೇಶ್ವರದವರೆಗೂ ದಂಡೆತ್ತಿ ಹೋಗಿ ದಕ್ಷಿಣ ಭಾರತವನ್ನೂ ಕರ್ನಾಟಕ ಸಾಮ್ರಾಜ್ಯದ ಕಕ್ಷೆಗೆ ಸೇರಿಸಿದ. ಈತ ತಮಿಳುನಾಡಿನ ಪ್ರಮುಖ ಅರಸುಗಳನ್ನು ಸದೆಬಡಿದು ಕಚ್ಚಿಯುಂ ತಂಜೈಯುಂ ಕೊಣ್ಡ (ಅಂದರೆ, ಕಾಂಚೀಪುರ ಮತ್ತು ತಂಜಾವೂರುಗಳನ್ನು ವಶಪಡಿಸಿಕೊಂಡನು) ಎಂಬ ಬಿರುದನ್ನು ಸ್ವೀಕರಿಸಿದ್ದನಷ್ಟೇ ಅಲ್ಲದೆ, ತಮಿಳುನಾಡಿನಲ್ಲಿ ತನ್ನ ಆಳ್ವಿಕೆಯ ಅನೇಕ ಶಾಸನಗಳನ್ನು ಬಿಟ್ಟು ಹೋಗಿದ್ದಾನೆ.

ಸಾಮಾಜಿಕ ಸಾಂಸ್ಕೃತಿಕ ಧಾರ್ಮಿಕ ಕ್ಷೇತ್ರಗಳಲ್ಲಾದ ಬದಲಾವಣೆಗಳ ದೃಷ್ಟಿಯಿಂದ ರಾಷ್ಟ್ರಕೂಟ ಯುಗ ಮಹತ್ವದ್ದಾಗಿದೆ. ಕದಂಬ-ಗಂಗ ಯುಗದಲ್ಲೂ ಚಳುಕ್ಯ ಯುಗದ ಪೂರ್ವಾರ್ಧದಲ್ಲೂ ವೈದಿಕ ಧರ್ಮದ ರೀತ್ಯ ಅಶ್ವಮೇಧವೇ ಮೊದಲಾದ ಕಷ್ಟಸಾಧ್ಯ ವೈದಿಕ ಯಾಗಗಳನ್ನು ಮಾಡಿದ ಅರಸುಗಳಿದ್ದರು. ಚಳುಕ್ಯ ಯುಗದ ಉತ್ತರಾರ್ಧದಲ್ಲಿ ಕ್ರಮೇಣ ಸಡಿಲಗೊಳ್ಳಲಾರಂಭಿಸಿದ್ದ ವೈದಿಕ ಧರ್ಮ ರಾಷ್ಟ್ರಕೂಟ ಯುಗದಲ್ಲಿ ಸ್ಮೃತಿಪುರಾಣಸಿದ್ಧವಾದ ಸುಲಭಸಾಧ್ಯ ಮನರಂಜಕ ಅನುಷ್ಠಾನ ಆಚರಣೆಗಳಿಗೆ ಎಡೆಮಾಡಿಕೊಡುವಂತಾಯಿತು. ರಾಷ್ಟ್ರಕೂಟ ಯುಗದ ಕರ್ನಾಟಕದ ಅರಸುಗಳೂ ಬ್ರಾಹ್ಮಣರೂ ಹೆಚ್ಚಾಗಿ ಸ್ಮೃತಿ ಪುರಾಣೋಕ್ತವಾದ ಕರ್ಮಗಳನ್ನೇ ಆಚರಿಸುತ್ತಿದ್ದರೆಂದು ಅಂದಿನ ಶಾಸನಗಳಿಂದ ಸ್ಪಷ್ಟವಾಗಿಯೆ ತಿಳಿದುಬರುತ್ತದೆ. ಹೀಗೆ ಧಾರ್ಮಿಕ ಅನುಷ್ಠಾನಗಳಲ್ಲಿ ಉಂಟಾದ ಸಡಿಲಿಕೆಯಿಂದಾಗಿ ಧಾರ್ಮಿಕ ಚಿಂತನ ಮಂಥನಗಳು ಸಾಕಷ್ಟು ಸರಳಗೊಂಡು, ಭಕ್ತಿಮಾರ್ಗಕ್ಕೆ ಜನ ಮಾರುಹೋಗತೊಡಗಿದ್ದರು. ಇದರಿಂದಾಗಿ ರಾಷ್ಟ್ರಕೂಟ ಯುಗದ ಉತ್ತರಾರ್ಧದಲ್ಲಿ ಹಿಂದೂಗಳೂ ಜೈನರೂ ವಿಗ್ರಹಾರಾಧನೆ ದೇವಾಲಯ ನಿರ್ಮಾಣಗಳ ಕಡೆಗೆ ಹಿಂದೆಂದಿಗಿಂತಲೂ ಹೆಚ್ಚಿನ ಆಸಕ್ತಿ ತೋರಲಾರಂಭಿಸಿದರು. ರಾಷ್ಟ್ರಕೂಟರು ಸರ್ವಧರ್ಮಗಳನ್ನೂ ಸಮದೃಷ್ಟಿಯಿಂದ ಕಾಣುವಲ್ಲಿ ತಮ್ಮ ಪೂರ್ವಜರನ್ನು ಮೀರಿಸಿದ್ದರು. ಅವರ ಹಲವು ಶಾಸನಗಳಲ್ಲಿ ಶಿವ ಮತ್ತು ವಿಷ್ಣುಸ್ತುತಿಗಳು ಒಟ್ಟೊಟ್ಟಿಗೇ ಬರುತ್ತವೆ. ಪ್ರಖ್ಯಾತ ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷ ಪರಮಜಿನಭಕ್ತ, ಅದೇ ವೇಳೆಗೆ ಮಹಾಲಕ್ಷ್ಮಿಯ ಆರಾಧಕನೂ ಆಗಿದ್ದ. ಮುಸಲ್ಮಾನರೂ ಅವನ ರಾಜ್ಯದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ನೆಲೆಸಿದ್ದು, ಅವರಿಗಾಗಿ ಅವನು ಮಸೀದಿಗಳನ್ನು ನಿರ್ಮಿಸಿದ್ದ.

ರಾಷ್ಟ್ರಕೂಟರ ರಾಜಕೀಯ ಸಾಧನೆಗಳ ಹಿನ್ನೆಲೆಯಲ್ಲಿದ್ದ ಆರ್ಥಿಕಬಲ ದೇಶದ ಸುವ್ಯವಸ್ಥಿತ ಸ್ಥಿತಿಯ ಕುರುಹು. ಕರ್ನಾಟಕ ಸಂಪದ್ಭರಿತ ದೇಶವೆಂದೂ ಬಲಿಷ್ಠ ರಾಷ್ಟ್ರವೆಂದೂ ಇಲ್ಲಿನ ವಲ್ಲಭ ದೊರೆ ಅಂದಿನ ವಿಶ್ವದ ರಾಜರುಗಳಲ್ಲೆಲ್ಲಾ ಶ್ರೇಷ್ಠನೆಂದೂ ಸಮಕಾಲೀನ ವಿದೇಶಿ ಸಂದರ್ಶಕರು ಅಭಿಪ್ರಾಯಪಟ್ಟಿದ್ದಾರೆ. ಸಹಜವಾಗಿ ಈ ನಾಡಿನಲ್ಲಿ ಉತ್ತಮ ಸಾಂಸ್ಕೃತಿಕ ಸಾಧನೆಗಳಿಗೆ ಒಳ್ಳೆಯ ವಾತಾವರಣವಿದ್ದಿತು. ಕನ್ನಡ ಪ್ರಜ್ಞೆಯ ಹೆಚ್ಚಳವಾಗಿ ಪಂಪ, ಪೊನ್ನ, ರನ್ನರಂಥ ಪ್ರಸಿದ್ಧ ಕವಿಗಳು ಇತರ ಹಲವರು ಕನ್ನಡದಲ್ಲಿ ಕೃತಿರಚನೆ ಮಾಡಿದರು. ಎಲ್ಲೋರದ ಕೈಲಾಸ ದೇವಾಲಯದಂಥ ಉತ್ಕೃಷ್ಟ ವಾಸ್ತುಕೃತಿಗಳು ನಿರ್ಮಾಣವಾದವು. ಸುಸ್ಥಿತಿ ಹಾಗೂ ಹಿರಿಮೆಯ ವಾತಾವರಣದಿಂದ ಸ್ವಲ್ಪಮಟ್ಟಿಗೆ ಉದಾಸೀನರಾದ ಅನಂತರದ ರಾಷ್ಟ್ರಕೂಟ ಅರಸರ ನಿರ್ಬಲತೆಯಿಂದ ರಾಷ್ಟ್ರಕೂಟ ವಂಶದ ಆಳ್ವಿಕೆ ಕೊನೆಗೊಂಡು, ಹಿಂದಿನಿಂದಲೂ ಅಧಿಕಾರಕ್ಕೆ ಚಡಪಡಿಸುತ್ತಿದ್ದ ಚಾಳುಕ್ಯ ವಂಶದವರು ಅವರ ಉತ್ತರಾಧಿಕಾರಿಗಳಾದರು (974).

ದಕ್ಷಿಣಾಪಥದ ಸಾಮ್ರಾಜ್ಯಗಳಲ್ಲೆಲ್ಲ ಕರ್ನಾಟಕ ಸಾಮ್ರಾಜ್ಯ ಉತ್ಕೃಷ್ಟತರದ್ದಾಗಿತ್ತು. ತುಲನೆಗಾಗಿ ತಮಿಳುನಾಡನ್ನು ಉದಾಹರಣೆಗೆ ತೆಗೆದುಕೊಂಡರೆ, ಅಲ್ಲಿಯ ರಾಜಕೀಯ ಆದಿಕಾಲದಿಂದಲೂ ಚೋಳ ಚೇರ ಪಾಂಡ್ಯ ಎಂಬ ಮೂರು ಸಣ್ಣ ಆದರೂ ಸ್ವತಂತ್ರ ಪರಂಪರಾಗತ ರಾಜ್ಯ ಕ್ಷೇತ್ರಗಳ ಹಿನ್ನೆಲೆಯಲ್ಲಿ ಬೆಳೆದು ಬಂದಿದ್ದು ಸಾಮ್ರಾಜ್ಯ ಸ್ಥಾಪನೆಯ ಸಾಹಸಕ್ಕಿಳಿದವರು ಆ ಮೂರು ರಾಜ್ಯ ಕ್ಷೇತ್ರಗಳನ್ನು ತಮ್ಮ ಅಧೀನದಲ್ಲಿರಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಈ ತ್ರಿರಾಜ್ಯಗಳ ಸ್ಥಳೀಯ ಪರಂಪರೆ ಬಲಿಷ್ಠವಿದ್ದ ಕಾರಣ, ಸಮಗ್ರ ತಮಿಳುನಾಡಿಗೆ ಒಂದು ಸ್ಥಿರವಾದ ಚಕ್ರವರ್ತಿ ಕ್ಷೇತ್ರದ ಪರಂಪರೆಯನ್ನು ರೂಢಿಸಲು ಅಲ್ಲಿನ ಯಾವ ರಾಜವಂಶದವರೂ ಶಕ್ತರಾಗದೆ ಹೋದರು. ಆದರೆ ಕರ್ನಾಟಕದಲ್ಲಿ ಸರ್ವ ರಾಷ್ಟ್ರಗಳ ಮನ್ನಣೆ ಪಡೆದು, ಪರಂಪರೆಯ ಸ್ವರೂಪ ತಾಳಿದ್ದ ಚಕ್ರವರ್ತಿ ಕ್ಷೇತ್ರದ ಕಲ್ಪನೆ ಸಿದ್ಧವಾಗಿತ್ತು. ಇದರಿಂದ ಇಲ್ಲಿಯ ಚಕ್ರವರ್ತಿಗಳು ಒಳನಾಡಿನ ಯುದ್ಧಗಳಲ್ಲಿ ವೃಥಾ ಬಲಪ್ರಯೋಗಮಾಡಿ ಹೊತ್ತುಕಳೆಯದೆ, ಗುಜರಾತದಿಂದ ರಾಮೇಶ್ವರದವರೆಗೂ ಕರಾವಳಿಯಿಂದ ಕರಾವಳಿಯವರೆಗೂ ಹಲವು ಬಾರಿ ತಮ್ಮ ಸೇನೆಗಳನ್ನು ನಡೆಸಿ ಕರ್ನಾಟಕ ಚಕ್ರವರ್ತಿ ಕ್ಷೇತ್ರದ ಹಿರಿಮೆಯನ್ನು ಸಾರುವಂತಾಗುವ ಅವಕಾಶ ಹೆಚ್ಚಿತ್ತು.

ರಾಷ್ಟ್ರಕೂಟಯುಗ ಕೊನೆಗೊಂಡುದರೊಂದಿಗೆ ಕರ್ನಾಟಕ ಹೊಸ ಐತಿಹಾಸಿಕ ಕಲ್ಪವನ್ನು ಪ್ರವೇಶಿಸಿತು. ರಾಷ್ಟ್ರಕೂಟರು ಪದಚ್ಯುತರಾದಾಗ ಜೊತೆಗೇ ಉದ್ಭವಿಸಿದ ಕೆಲವು ಪರಿಣಾಮಕಾರಿಯಾದ ಬದಲಾವಣೆಗಳೆಂದರೆ, ಮೊದಲನೆಯದಾಗಿ ಮುಂದೆ ಸಹ ಕರ್ನಾಟಕ ಚಕ್ರವರ್ತಿ ಕ್ಷೇತ್ರ ಬಲವತ್ತಾಗಿಯೇ ಉಳಿದು ಅದರ ಕೇಂದ್ರ ವಲಯ ಇಡೀ ಕರ್ನಾಟಕವನ್ನು ವ್ಯಾಪಿಸಿತ್ತಾದರೂ ಅದರ ನೇರ ಪ್ರಭಾವಕ್ಕೆ ಒಳಗಾಗಿದ್ದ ವಿಸ್ತಾರ ಪ್ರದೇಶ

ಸ್ವಲ್ಪಮಟ್ಟಿಗೆ ಸಂಕುಚಿತವಾಯಿತು. ದೂರದ ರಾಷ್ಟ್ರಗಳು ಜಾರಿಹೋಗಿ ನೆರೆಹೊರೆಯ ಪ್ರಾಂತ್ಯಗಳು ಮಾತ್ರ ಉಳಿದುಕೊಂಡವು; ಎರಡನೆಯದಾಗಿ, ಸಾಮ್ರಾಜ್ಯದ ಹಲವು ಪ್ರಾಂತ್ಯಗಳು ಸಾಮಂತ ಅರಸು ಮನೆತನಗಳ ಪ್ರಭಾವ ಹೆಚ್ಚುವುದರ ಜೊತೆಗೆ, ರಾಜಕೀಯ ಕ್ಷೇತ್ರದಲ್ಲಿ ಪ್ರಭಾವಶಾಲೀ ದಂಡನಾಯಕರುಗಳ ಹಸ್ತಕ್ಷೇಪ ಹೆಚ್ಚಿತು; ಮೂರನೆಯದಾಗಿ ಜನಸಾಮಾನ್ಯರ ದೃಷ್ಟಿಯಲ್ಲಿ ಸಾಮ್ರಾಜ್ಯದ ಸಮಗ್ರ ಸ್ವರೂಪ ಸ್ವಲ್ಪಮಟ್ಟಿಗೆ ಮಾಸಿಹೋಗಿ, ಅವರವರ ನಾಡು, ಕಂಪಣ, ಗ್ರಾಮಗಳ ಮೇಲೆ ಸ್ಥಳೀಯ ಪ್ರೇಮ ಸ್ಪಷ್ಟವಾಗಿ ಕಾಣಿಸಿಕೊಳ್ಳಲಾರಂಭಿಸಿತು; ನಾಲ್ಕನೆಯದಾಗಿ ಆರ್ಥಿಕ ಕ್ಷೇತ್ರದಲ್ಲಿ ನಾಣ್ಯಗಳ ಚಲಾವಣೆ ಹೆಚ್ಚಿತಾಗಿ, ಒಳನಾಡು ಹೊರನಾಡು ವಾಣಿಜ್ಯ ಮತ್ತಷ್ಟು ಹೆಚ್ಚಾಗಿ ದೇಶ ಸಂಪದ್ಭರಿತವಾಯಿತು; ಐದನೆಯದಾಗಿ ಧಾರ್ಮಿಕ ಕ್ಷೇತ್ರದಲ್ಲಿ ದೇವಾಲಯಗಳ ನಿರ್ಮಾಣವೂ ಅವುಗಳಿಗೆ ಧನಕನಕಾದಿಗಳನ್ನು ದಾನ ಕೊಡುವುದೂ ಅದೃಷ್ಟಪೂರ್ವಪ್ರಮಾಣದಲ್ಲಿ ಹೆಚ್ಚಿತು; ಆರನೆಯದಾಗಿ, ಸ್ವದೇಶೀ ಮತ್ತು ವಿದೇಶೀ ವಾಣಿಜ್ಯ ಬೆಳೆದಂತೆ ಧನಿಕರಾಗುತ್ತ ಬಂದ ವರ್ತಕರು ಸಾಂಘಿಕವಾಗಿ ಮತ್ತು ವೈಯಕ್ತಿಕವಾಗಿ ಕನ್ನಡಿಗರ ಆರ್ಥಿಕ ಸಾಮಾಜಿಕ ಧಾರ್ಮಿಕ ಜೀವನದ ಮೇಲೆ ವಿಶೇಷ ಪ್ರಭಾವ ಬೀರಿದರು; ಏಳನೆಯದಾಗಿ ಚಾಳುಕ್ಯ ಸಾಮ್ರಾಟರು ವಾಂಶಿಕವಾಗಿ ವೈಷ್ಣವರಿದ್ದರೂ ಹಲವು ಪಂಥ'ಗಳ ಆಚಾರ್ಯರ ಪರಿಶ್ರಮಗಳಿಂದಾಗಿ ಶೈವಧರ್ಮ ವ್ಯಾಪಕವಾಗಿ ಬೃಹದಾಕಾರಕ್ಕೆ ಬೆಳೆಯಿತು; ಎಂಟನೆಯದಾಗಿ, ಭಾಷಾ ಕ್ಷೇತ್ರದಲ್ಲಿ ಸಂಸ್ಕೃತದ ಪ್ರಭಾವ ಕಡಿಮೆಯಾಗಿ ಕನ್ನಡ ಪ್ರಾಮುಖ್ಯತೆಯನ್ನು ಪಡೆಯಿತು. ಹಾಗೂ ಕನ್ನಡ ಲಿಪಿ ಹಂತಹಂತದ ಬೆಳವಣಿಗೆಯ ಅನಂತರ ನಿರ್ದಿಷ್ಟ ರೂಪು ತಾಳಿತು; ಒಂಬತ್ತನೆಯದಾಗಿ, ವಾಸ್ತುಶಿಲ್ಪಕ್ಷೇತ್ರದಲ್ಲಿ ಹಿಂದಿನ ಪ್ರತಿಭೆಯ ಮತ್ತು ಹೊಸ ರೀತಿಗಳ ಪರಂಪರೆ ನೀರಸಗೊಂಡು ಗುಣಕ್ಕಿಂತಲೂ ಸಂಖ್ಯೆಗೇ ಹೆಚ್ಚಿನ ಗಮನ ದೊರೆಯಿತು.

ಚಾಳುಕ್ಯ ಯುಗದಲ್ಲಿ ಕರ್ನಾಟಕ ಸಾಮ್ರಾಜ್ಯ ನೇರ ಪ್ರಭಾವ ಬೀರಿದ ಹೊರವಲಯದ ವ್ಯಾಪ್ತಿ ಕಡಿಮೆಯಾದುದಕ್ಕೆ ಅಂದಿನ ಭಾರತದಲ್ಲಿ ಉಂಟಾಗಿದ್ದ ರಾಜಕೀಯ ಕ್ಷೇತ್ರದ ಸಾಂದರ್ಭಿಕ ಬದಲಾವಣೆಗಳು ಕಾರಣವೇ ಹೊರತು ಕರ್ನಾಟಕದ ಸಾಮ್ರಾಟರ ದೌರ್ಬಲ್ಯವಲ್ಲ. ಹಿಂದಿನ ಯುಗಗಳ ಬೃಹತ್ ಸಾಮ್ರಾಜ್ಯಗಳು ಕಣ್ಮರೆಯಾಗಿ ಬದಲಿಗೆ ಪರಮಾರ, ಪಾಲ, ಗೂರ್ಜರ, ಕಾಕತೀಯ, ಚೋಳ, ಪಾಂಡ್ಯ ಇತ್ಯಾದಿ ಹಲವು ಸ್ವತಂತ್ರ ರಾಜ್ಯಗಳು ಅಸ್ತಿತ್ವಕ್ಕೆ ಬಂದವು. ಈ ಅರಸುಗಳು ಮೇಲಿಂದ ಮೇಲೆ ಒಬ್ಬರ ಮೇಲೊಬ್ಬರು ದಂಡೆತ್ತಿ ಹೋಗಿ ಪರಸ್ಪರ ಬಲಹೀನರಾಗುತ್ತ ಬಂದರಾಗಿ ಅವರಲ್ಲಿ ಯಾರೊಬ್ಬರು ಚಿರಕಾಲ ಬದುಕಬಲ್ಲ ಸಾಮ್ರಾಜ್ಯಶಾಹೀ ಪ್ರಭುತ್ವವನ್ನು ಸ್ಥಾಪಿಸಲಾರದೇ ಹೋದರು, ಈ ಅರಸುಗಳು ಹಲವೆಡೆಗಳಿಂದ ಯಾವಾಗಲೂ ಕರ್ನಾಟಕದ ಮೇಲೂ ಒತ್ತಡ ಹಾಕುತ್ತಿದ್ದರೂ ಚಾಳುಕ್ಯರು ಸಾಮ್ರಾಜ್ಯದ ನಿರ್ದಿಷ್ಟ ಪರಂಪರಾಗತ ಸರಹದ್ದುಗಳನ್ನಾದರೂ ಕಾಪಾಡಿಕೊಂಡು ಬಂದಿದ್ದರೆಂಬುದಷ್ಟೇ ಸಾಧನೆ.

ಇಮ್ಮಡಿ ತೈಲನ ರಾಜ್ಯಾಕ್ರಮಣದೊಂದಿಗೆ ಚಾಳುಕ್ಯರು ಪ್ರಾಬಲ್ಯಕ್ಕೆ ಬರುತ್ತಿದ್ದಂತೆಯೆ ಕರ್ನಾಟಕದ ಅನೇಕ ಸ್ಥಳೀಯ ಅರಸುಮನೆತನಗಳೂ ಸಾಕಷ್ಟು ಪ್ರಬಲವಾದವು. ಇದರಿಂದಾಗಿ ಆಯಾ ಪ್ರಾಂತ್ಯದ ಮಟ್ಟಿಗೆ ಅಲ್ಲಿಯ ಮಹಾಮಂಡಲೇಶ್ವರರೇ ಸ್ವತಂತ್ರ ದೊರೆಗಳಾಗಿ ಮೆರೆಯತೊಡಗಿ, ಸಾಮ್ರಾಟರು ದೂರದ ವ್ಯಕ್ತಿಗಳಾದರು. ಈ ಮಹಾಮಂಡಲೇಶ್ವರರ ಕಿರುಕುಳಗಳಿಂದ ಪಾರಾಗುವ ಸಲುವಾಗಿ ಸಾಮ್ರಾಟರು ಸೇನೆಯ ದಂಡನಾಯಕರುಗಳಿಗೆ ವಿಶೇಷ ಸವಲತ್ತುಗಳನ್ನಿತ್ತು ಅವರ ಸ್ವಾಮಿನಿಷ್ಠೆಯನ್ನು ಸಂಪಾದಿಸಿಕೊಳ್ಳಬೇಕಿತ್ತು. ಅಂಥ ಪ್ರಭಾವಶಾಲೀ ದಂಡನಾಯಕರಲ್ಲಿ ಅನೇಕರು ಬ್ರಾಹ್ಮಣರಿದ್ದರೆಂಬುದು ಅಂದಿನ ಶಾಸನಗಳಿಂದ ತಿಳಿದುಬರುತ್ತದೆ. ಈ ದಂಡನಾಯಕರ, ಮಹಾಮಂಡಲೇಶ್ವರರ ಅಧಿಕಾರವ್ಯಾಪ್ತಿ ಹೆಚ್ಚಿದಂತೆ ಕೇಂದ್ರಪ್ರಭುತ್ವದ ಸಾಮ್ರಾಟನ ಪರಮಾಧಿಕಾರ ಕ್ರಮೇಣ ಕ್ಷೀಣಿಸಿತು. 6ನೆಯ ವಿಕ್ರಮಾದಿತ್ಯನ ಆಳ್ವಿಕೆಯ ಕೊನೆಯ (1127) ತನಕವೂ ತಮ್ಮ ಪರಮಾಧಿಕಾರವನ್ನು ಚಳುಕ್ಯ ಸಾಮ್ರಾಟರು ಪೂರ್ಣವಾಗಿ ಉಳಿಸಿಕೊಂಡು ಬಂದಿದ್ದರು. ಅವನ ಅನಂತರ ರಾಜ್ಯವಾಳಿದ ಚಾಳುಕ್ಯರ ಕಾಲದಲ್ಲಿ ಸಾಮಂತ ದೊರೆಗಳು ಮತ್ತು ದಂಡನಾಯಕರದ್ದೇ ಮೇಲುಗೈ ಆಯಿತು. ಅಂಥ ದುರವಸ್ಥೆಯಲ್ಲಿ ಕರ್ನಾಟಕ ಸಾಮ್ರಾಜ್ಯದ ಸಿಂಹಾಸನವನ್ನು ಅಲುಗಾಡಿಸಬಹುದಷ್ಟೇ ಅಲ್ಲದೆ, ಕರ್ನಾಟಕ ಚಕ್ರವರ್ತಿ ಕ್ಷೇತ್ರದ ಪರಂಪರಾಗತ ನಿರ್ದಿಷ್ಟ ಸ್ವರೂಪವನ್ನೂ ಚದುರಿಸಬಹುದು ಎಂಬುದನ್ನು ನಿರೂಪಿಸಿದ ಮೊದಲ ಮಹಾಮಂಡಲೇಶ್ವರ ಕಳಚುರಿ ಮನೆತನದ ಬಿಜ್ಜಳ (1130-67). ಸಾಮ್ರಾಜ್ಯದ ಸಿಂಹಾಸನವನ್ನು ಅಪಹರಿಸುವಲ್ಲಿ ಅವನಿಗಿದ್ದ ಸಾಮರ್ಥ್ಯ ಅದನ್ನು ಚಿರಕಾಲ ಉಳಿಸಿಕೊಳ್ಳುವಲ್ಲಿ ಅವನ ಉತ್ತರಾಧಿಕಾರಿಗಳಿಗೆ ಇರಲಿಲ್ಲವಾಗಿ, ಸುಮಾರು ಎರಡು ದಶಕಗಳಷ್ಟೇ ಅಲ್ಪಕಾಲ ಸಾಮ್ರಾಟರಾಗಿ ಯದ್ವಾತದ್ವಾ ರಾಜ್ಯವಾಳಿದ ಕಳಚುರಿಗಳು ಕೊನೆಗೂ ಸಿಂಹಾಸನವನ್ನು ಚಾಳುಕ್ಯರಿಗೆ ಬಿಟ್ಟುಕೊಡುವಂತಾಯಿತು.

ಬಸವಣ್ಣನವರ ವೀರಶೈವ ಧಾರ್ಮಿಕ ಕ್ರಾಂತಿ ಈ ಕಾಲದ ಒಂದು ಗಮನಾರ್ಹ ಘಟನೆ. ಅವರ ಅನುಯಾಯಿಗಳು ಶಿವಭಕ್ತಿಯನ್ನು ವೀರನಿಷ್ಠೆಯಿಂದ ಪ್ರತಿಪಾದಿಸಿದರೂ ಆಳರಸರು ಪರಧರ್ಮಸಹಿಷ್ಣುತೆಯ ಪರಂಪರೆಯನ್ನು ಉಳಿಸಿಕೊಂಡು ಬರುವ ಪ್ರಯತ್ನದಲ್ಲಿ ತೊಡಗಿದ್ದರು. ಚಾಳುಕ್ಯ-ಕಳಚುರಿ ಯುಗದ ಕರ್ನಾಟಕದ ಅರಸರುಗಳೂ ಅನೇಕ ತುಂಡರಸರೂ ಅಧಿಕಾರಿವರ್ಗದವರೂ ಸಂಘಸಂಸ್ಥೆಗಳಿಗೂ ಎಷ್ಟರಮಟ್ಟಿಗೆ ಸರ್ವಧರ್ಮಪೋಷಕರಿದ್ದರೆಂದರೆ, ಅವರ ನಿಜಧರ್ಮ ಯಾವುದಿತ್ತೆಂದು ಖಚಿತವಾಗಿ ಹೇಳಬರುವುದಿಲ್ಲ. ಉದಾಹರಣೆಗೆ ಪೊಂಬುಚ್ಚ ಪ್ರದೇಶದ ಸಾಂತರ ಅರಸುಗಳ ವಂಶಿಕ ಪ್ರಶಸ್ತಿಯನ್ನೋದಿದಾಗ ಅವರು ಜೈನರಿದ್ದರೆಂದು ಸ್ಪಷ್ಟವಾಗಿಯೇ ತಿಳಿದುಬರುತ್ತಾದರೂ ಅವರು ಪರಧರ್ಮಗಳ ಬೆಳವಣಿಗೆಗೂ ಸಾಕಷ್ಟು ಪ್ರೋತ್ಸಾಹ ನೀಡಿದವರು.ಬಳ್ಳಾರಿ ಜಿಲ್ಲೆ ಬಾಗಳಿಯ 1115ರ ಶಾಸನವೊಂದರಲ್ಲಿ ಶಿವ ದೇವಾಲಯಕ್ಕೂ ಜೈನಬಸದಿಗೂ ನೀಡಲಾದ ದಾನದ ವಿವರಗಳನ್ನು ಒಟ್ಟಿಗೆ ಕೊಡಲಾಗಿದೆ. ಈ ಯುಗದ ಒಂದು ವೈಶಿಷ್ಟ್ಯವೆಂದರೆ ಬೌದ್ಧಧರ್ಮ ಕರ್ನಾಟಕದಲ್ಲಿ ಸ್ವಲ್ಪಮಟ್ಟಿಗೆ ಚೇತರಿಸಿಕೊಂಡದ್ದು. ಧಾರವಾಡ ಜಿಲ್ಲೆಯ ಡಂಬಳದ ಒಂದು ಶಾಸನದಲ್ಲಿ ಜೈನಮುನೀಂದ್ರರ ಹಾಗೂ ಬೌದ್ಧ ದೇವತೆ ತಾರೆಯ ಸ್ತೋತ್ರಗಳಿದ್ದು, ಅದು ಶೈವ ಧರ್ಮಾವಲಂಬಿಗಳಾದ ವೀರಬಣಂಜು ಸಂಘದವರು ತಾರಾ ಮತ್ತು ಬುದ್ಧನಿಗೆ ನೀಡಿದ ದಾನದ ವಿವರಗಳನ್ನೊಳಗೊಂಡಿದೆ.

ಕರ್ನಾಟಕದಲ್ಲಿ ಚಾಳುಕ್ಯ - ಕಳಚುರಿ ಕಾಲದಲ್ಲಿ, ಎಲ್ಲ ಧರ್ಮಗಳೂ ಅದರಲ್ಲೂ ಮುಖ್ಯವಾಗಿ ಜೈನಧರ್ಮ ವಿಪುಲವಾಗಿ ಹರಡಿ, ಅಳಿಯದೆ ಉಳಿದು ಬೆಳೆಯುವಲ್ಲಿ ಸ್ತ್ರೀಯರು ವಹಿಸಿದ್ದ ಪಾತ್ರ ಮಹತ್ವದ್ದು. ಈ ಕಾಲದಲ್ಲಿ ಗಂಡಹೆಂಡಿರು ಒಂದೇ ಧರ್ಮದವರಿರಬೇಕೆಂಬ ನಿಯಮವೂ ಇದ್ದಂತೆ ಕಂಡುಬರುವುದಿಲ್ಲ. ಉದಾಹರಣೆಗೆ ಹಾಸನ ಜಿಲ್ಲೆಯ ಹಬ್ಬಲಿನ ಒಂದು ಶಾಸನದ (12ನೆಯ ಶತಮಾನ) ಪ್ರಕಾರ ಶಿವಪದಸುತಗಾತ್ರನಾದ ಜವನೆಯ ಗೌಡನ ಹೆಂಡತಿ ಪರಮಜಿನಭಕ್ತೆಯಾಗಿದ್ದಳು. ಇದು ಧರ್ಮ ಸಮದರ್ಶಿತ್ವಕ್ಕೆ ಆದರ್ಶ.

ಇಲ್ಲಿ ಕರ್ನಾಟಕದ ಪ್ರಾದೇಶಿಕ ಆಡಳಿತ ಕ್ಷೇತ್ರದಲ್ಲಿ ರಾಷ್ಟ್ರಕೂಟ ಯುಗದಲ್ಲಿ ಪ್ರಾರಂಭವಾಗಿ ಚಾಳುಕ್ಯ-ಕಳಚುರಿ ಯುಗದಲ್ಲಿ ವ್ಯಾಪಕವಾಗಿ ಜಾರಿಗೆ ಬಂದ ಒಂದು ಪದ್ಧತಿ ಕರ್ನಾಟಕದ ಆಡಳಿತ ಪ್ರಾಂತ್ಯಗಳನ್ನು ಉಲ್ಲೇಖಿಸುವಾಗ ಅವುಗಳ ಹೆಸರುಗಳ ಹಿಂದೆ ನಿರ್ದಿಷ್ಟ ಪ್ರಮಾಣದ ಸಂಖ್ಯಾ ಪ್ರತ್ಯಯಗಳನ್ನು ಹಚ್ಚಿರುವುದು- ಉದಾಹರಣೆಗೆ ಕವಡಿ ದ್ವೀಪ- 1,25,000, ರಟ್ಟಪಾಡಿ-7,50,000, ಗಂಗವಾಡಿ-96,000, ಬನವಾಸಿ-12,000, ಪುರಿಗೆರೆ-300, ತಂಬೂರು-12 ಇತ್ಯಾದಿ. ಈ ಪದ್ಧತಿ ಹೊರನಾಡುಗಳಲ್ಲೂ ಆಚರಣೆಯಲ್ಲಿತ್ತಾದರೂ ಕರ್ನಾಟಕದಲ್ಲಿ ವಿಶೇಷವಾಗಿ ಪ್ರಯೋಗದಲ್ಲಿತ್ತು.

ಕರ್ನಾಟಕದ ಏಕಾಧಿಪತ್ಯ ಸಾಮ್ರಾಜ್ಯ ತನ್ನ ಅವರೋಹಣೆಯ ಮೊದಲ ಹಂತವಾಗಿ 13ನೆಯ ಶತಮಾನದ ಆರಂಭ ಕಾಲದಲ್ಲಿ ಬಹುಶಃ ಕಾಲಾತ್ಖಂಡಿತವಾಗಿ ಎರಡಾಗಿ ಹರಿದು ಸ್ಪಂದಿಸಲಾರಂಭಿಸಿತು. ಯಾದವ ಕುಲದವರೇ ಆದ ಸೇವುಣರೂ ಹೊಯ್ಸಳರೂ ಅನುಕ್ರಮವಾಗಿ ಉತ್ತರ ಮತ್ತು ದಕ್ಷಿಣ ಕರ್ನಾಟಕ ಪ್ರಾಂತ್ಯಗಳನ್ನು ತಂತಮ್ಮ ಹತೋಟಿಗೆ ತೆಗೆದುಕೊಂಡು ತಮ್ಮ ಪ್ರಭಾವವನ್ನು ಹೆಚ್ಚಿಸಿಕೊಳ್ಳುವ ಪರಿಶ್ರಮಕ್ಕಿಳಿದರು. 11ನೆಯ ಶತಮಾನದ ಆದಿಭಾಗಲ್ಲಿ ಚೋಳರು ದಕ್ಷಿಣ ಕರ್ನಾಟಕದ ಹಲವು ಭಾಗಗಳ ಮೇಲೆ ಅಧಿಕಾರ ವಿಸ್ತರಿಸಿದ ಕಾಲದಲ್ಲೇ ಈ ಒಡಕಿನ ಮೂಲ ಪ್ರಾರಂಭವಾಯಿತು. ತದಾರಭ್ಯ ಚೋಳರು ಕರ್ನಾಟಕದ ಭಾಗದ ಮೇಲೆ ಅಧಿಕಾರಸ್ಥರಿದ್ದರೂ ಚಾಳುಕ್ಯರು ಅವರನ್ನು ಓಡಿಸಲು ಸಾಕಷ್ಟು ಶ್ರಮ ವಹಿಸಿದಿದ್ದುದು ಈ ಭಾಗದ ಕನ್ನಡ ಅರಸು ಕುಲಗಳಲ್ಲಿ ಅಸಮಾಧಾನ ತಂದಿರಬೇಕು. ಚೋಳೋಚ್ಚಾಟನೆಯ ಗುರಿಯನ್ನು ಸಾಧಿಸುವಲ್ಲಿ ಶ್ರಮಿಸಿದ ಹೊಯ್ಸಳರು ತಮ್ಮ ಕಾರ್ಯಕ್ರಮದಲ್ಲಿ

ಸಾಮ್ರಾಟ ಚಾಳುಕ್ಯರನ್ನು ಧಿಕ್ಕರಿಸಿ ನಿಲ್ಲುವ ಮಾರ್ಗವನ್ನು ಅನುಸರಿಸಬೇಕಾಯಿತು. ವಿಷ್ಣುವರ್ಧನ ಚೋಳರನ್ನು ಓಡಿಸಿದ ಮೇಲೆ (1116) ಅವನ ವಂಶೀಯರು ದಕ್ಷಿಣ ಕರ್ನಾಟಕದ ಬಹುಭಾಗದ ಮೇಲೆ ಅಂಶತಃ ಚಾಳುಕ್ಯ ಸಾರ್ವಭೌಮತ್ವವನ್ನು ಒಪ್ಪಿದರೂ ಸ್ವತಂತ್ರರಾಗಿಯೇ ಆಳತೊಡಗಿದ್ದರು. ಅತ್ತ ಚಾಳುಕ್ಯ ರಾಜ್ಯ ಕಳಚುರಿಗಳಿಂದ ಹಾಳಾಗಿ ಮತ್ತೆ ತನ್ನ ಹಿಂದಿನ ಮಟ್ಟವನ್ನು ಸಾಧಿಸಿಕೊಳ್ಳಲಾಗದಿದ್ದಾಗ ಹೊಯ್ಸಳರಂತೆ ಸೇವುಣರೂ ಸ್ವತಂತ್ರ ರಾಜ್ಯಸ್ಥಾಪನೆ ಮಾಡಿದರು. ಮುಂದೆ ಹೊಯ್ಸಳರು ಹಾಗೂ ಸೇವುಣರು ಸಮಬಲದವರೇ ಆಗಿದ್ದ ಕಾರಣ ಆದಷ್ಟು ಮಟ್ಟಿಗೆ ಪರಸ್ಪರ ಪರಾಙ್ಮುಖರಾಗಿಯೇ ಉಳಿದು, ಬೇರೆಡೆಗಳಿಗೆ ತಮ್ಮ ಗಮನ ಹರಿಸಿದ್ದರಾಗಿ, ಸೇವುಣರು ಮಹಾರಾಷ್ಟ್ರ ಪ್ರಾಂತ್ಯದ ಮೇಲೂ ಹೊಯ್ಸಳರು ತಮಿಳುನಾಡಿನ ಮೇಲೂ ವಿಶೇಷ ಪ್ರಭಾವ ಬೀರುವಂತಾಯಿತು. ಸೇವುಣರು ಮಹಾರಾಷ್ಟ್ರದ ದೇವಗಿರಿಯನ್ನೇ ತಮ್ಮ ರಾಜಧಾನಿಯಾಗಿರಿಸಿಕೊಂಡರು. ದ್ವಾರಸಮುದ್ರದಿಂದ ಆಳಿದ ಹೊಯ್ಸಳರು ತಮ್ಮ ಆಳ್ವಿಕೆಯ ಉತ್ತರಾರ್ಧದಲ್ಲಿ ತಮಿಳುನಾಡಿನ ಹಲವು ಭಾಗಗಳನ್ನು ಗೆದ್ದುಕೊಂಡು, ತಿರುಚಿರಾಪಳ್ಳಿಯ ಬಳಿಯ ಕಣ್ಣಾನೂರನ್ನು ತಮ್ಮ ಮಗದೊಂದು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರಷ್ಟೇ ಅಲ್ಲದೆ, ಅಂದಿನ ತಮಿಳುನಾಡಿನ ರಾಜಕೀಯ ಕ್ಷೇತ್ರದಲ್ಲಿ ಪರಿಣಾಮಕಾರಿಯಾದ ಪಾತ್ರ ವಹಿಸಿದ್ದರು.

ಹೀಗೆ ಎರಡಾದ ಕರ್ನಾಟಕ ತನ್ನ ರಾಜಕೀಯ ಕ್ಷೇತ್ರದಲ್ಲಷ್ಟೇ ಅಲ್ಲದೆ ಸಾಂಸ್ಕೃತಿಕ ಮತ್ತು ಧಾರ್ಮಿಕ ಕ್ಷೇತ್ರದಲ್ಲೂ ಸ್ವತಂತ್ರವಾಗಿ ಭಿನ್ನವಾಗಿ ಬೆಳೆಯತೊಡಗಿದ್ದು ಈ ಹೊಯ್ಸಳ- ಸೇವುಣರ ಕಾಲದಲ್ಲಿ. ಈ ಎರಡು ಯಾದವ ವಂಶಗಳು ಪರಸ್ಪರ ಕಲಹಗಳಲ್ಲಿ ನಿರತವಾಗಿದ್ದುದರಿಂದ, ಕರ್ನಾಟಕದ ಎಲ್ಲೆಡೆಯಲ್ಲೂ ಇದುವರೆಗೆ ಕಂಡುಬರುತ್ತಿದ್ದ ಏಕರೀತಿಯ ಸಾಂಸ್ಕೃತಿಕ ಬೆಳೆವಣಿಗೆಯ ಪ್ರವೃತ್ತಿ ಕುಂಠಿತವಾಯಿತು. ಉತ್ತರ ಕರ್ನಾಟಕದಲ್ಲಿ ವೀರಶೈವ ಕ್ರಾಂತಿ ಬಿರುಸಾಗಿ ಮುಂದುವರಿಯಿತು. ದಕ್ಷಿಣ ಕರ್ನಾಟಕದಲ್ಲಿ, ಆಗತಾನೆ ಪ್ರಬಲವಾಗುತ್ತಿದ್ದ ಶ್ರೀವೈಷ್ಣವಪಂಥ ಹೊಯ್ಸಳರ ಆಶ್ರಯಪಡೆಯಿತು. ಪ್ರಾಯಶಃ ಈ ಪ್ರವೃತ್ತಿಗಳಿಂದ ಜೈನಧರ್ಮ ಕ್ಷೀಣಿಸಲಾರಂಭಿಸಿತು. ಉತ್ತರ ಕರ್ನಾಟಕ ಸೇವುಣರ ಆಳ್ವಿಕೆಯಲ್ಲಿದ್ದರೂ ಅವರ ರಾಜ್ಯಕೇಂದ್ರ ದೂರದ ದೇವಗಿರಿಯಲ್ಲಿದ್ದಿತ್ತಾಗಿ ರಾಜಕೀಯ ಕ್ಷೇತ್ರ ಹೊರತು ಉಳಿದ ಈ ಭಾಗದ ಆರ್ಥಿಕ ಸಾಮಾಜಿಕ ಪರಿಸ್ಥಿತಿಗಳ ಬಗ್ಗೆ ಅವರ ಗಮನ ಕಡಿಮೆಯಾಗಿ ಈ ಭಾಗದಲ್ಲಿ ಸಾಂಸ್ಕೃತಿಕ ಹಿಂಜರಿತವುಂಟಾಯಿತು. ಕಲೆಗೆ, ಸಂಸ್ಕೃತಿಯ ಅಭಿವೃದ್ಧಿಗೆ ರಾಜರ ಅಥವಾ ಶ್ರೀಮಂತರ ಪ್ರೋತ್ಸಾಹ ಕಡಿದುಹೋಯಿತು. ಜನಸಾಮಾನ್ಯರ ಸ್ವಶಕ್ತಿಯಿಂದ ಹುಟ್ಟಿದ ಕೆಲವೇ ವಾಸ್ತುಕೃತಿಗಳು ಹಾಗೂ ಸಾಹಿತ್ಯ ಈ ಸ್ಥಿತಿಗೆ ಸೂಚಕ. ಈ ಕಾಲದ ಧಾರ್ಮಿಕ ಚಟುವಟಿಕೆಗಳು ಈ ಸ್ಥಿತಿಗೆ ಹಾಗೂ ಸ್ವಲ್ಪ ಉತ್ತಮ ಸಾಧನೆಗಳಿಗೆ ಕಾರಣವಾದವು. ಆದರೆ ದಕ್ಷಿಣ ಕರ್ನಾಟಕದಲ್ಲಿ ಆಳಿದ ಹೊಯ್ಸಳರು ತಮ್ಮ ಹಿಂದಿನ ಚಾಳುಕ್ಯ ಪರಂಪರೆಯನ್ನು ಮುಂದುವರಿಸಿಕೊಂಡು ಬಂದು ತಮ್ಮ ಆಳ್ವಿಕೆಯ ಅವಸಾನ ಕಾಲದವರೆಗೂ ದೇಶದ ಆರ್ಥಿಕ ಸಾಂಸ್ಕೃತಿಕ ಅಭಿವೃದ್ಧಿಯೆಡೆಗೆ ಶ್ರಮಿಸಿದರು. ಕೆರೆಕಟ್ಟೆಗಳ, ಹೊಸಗ್ರಾಮಗಳ, ಹಲವು ದೇವಾಲಯಗಳ ನಿರ್ಮಾಣ ಮುಂತಾದ್ದರಲ್ಲಿ ರಾಜರು ಹಾಗೂ ಅಸಂಖ್ಯಾತ ಸಾಮಂತರೂ ಶ್ರೀಮಂತರೂ ನಿರತರಾಗಿದ್ದು, ಬೇಲೂರು ಹಳೇಬೀಡುಗಳಲ್ಲಿರುವಂಥ ಮಹತ್ ವಾಸ್ತುಕೃತಿಗಳ ನಿರ್ಮಾಣಕ್ಕೆ ಕಾರಣರಾದರು. ಜನ್ನ, ಹರಿಹರ, ರಾಘವಾಂಕರಂಥ ಕವಿಗಳು ಕೃತಿರಚನೆ ಮಾಡುವ ವಾತಾವರಣ ಇಲ್ಲಿತ್ತು. ಈ ಸ್ಥಿತಿ ಸು.13ನೆಯ ಶತಮಾನದ ಅಂತ್ಯದವರೆಗೂ ಮುಂದುವರೆಯಿತು.

**ಸಂಘರ್ಷಣ ಯುಗ** : 14ನೆಯ ಶತಮಾನದಿಂದ ಮುಂದೆ ಕರ್ನಾಟಕದ ರಾಜಕೀಯದಲ್ಲಿ ಹೊಸ ಧಾಟಿ ಪ್ರಾರಂಭವಾಯಿತು. ಇದುವರೆಗಿನ ರಾಜಕೀಯ ಚಟುವಟಿಕೆಗಳಲ್ಲಿ ದೇಶೀ ಶಕ್ತಿಗಳಷ್ಟೇ ಪಾತ್ರ ವಹಿಸುತ್ತಿದ್ದರೆ, ಈ ಕಾಲದಲ್ಲಿ ಉತ್ತರ ಭಾರತದಿಂದ ಬಂದ ಇಸ್ಲಾಮೀ ಅರಸರು ಇಲ್ಲಿನ ಆಗುಹೋಗುಗಳ ಮೇಲೆ ಪರಿಣಾಮಕಾರಿ ಪ್ರಭಾವವನ್ನು ಬೀರಬಲ್ಲಂತಾದದ್ದು ಇದಕ್ಕೆ ಮುಖ್ಯ ಕಾರಣ. ಆ ಹೊತ್ತಿಗೆ ಕರ್ನಾಟಕದಲ್ಲಷ್ಟೇ ಅಲ್ಲದೇ ಇಡೀ ದಕ್ಷಿಣ ಭಾರತದಲ್ಲಿ ಹಿಂದಿದ್ದ ರಾಜಕೀಯ ದೂರದೃಷ್ಟಿ ಹಾಗೂ ಸಾಧನೆಗಳ ಯುಗ ಕಳೆದು ಸೇವುಣರೂ ಹೊಯ್ಸಳರೂ ಒಳಗೊಂಡಂತೆ ಎಲ್ಲ ರಾಜಮನೆತನಗಳು ತಮ್ಮೊಳಗೇ ವೃಥಾ ಕಾದಾಟದಲ್ಲಿ ನಿರತವಾಗಿದ್ದವು. ಉತ್ತರಾಪಥದಲ್ಲೆಲ್ಲ ವಿಜಯ ಪತಾಕೆಗಳನ್ನು ಹಾರಿಸಿ, ದಕ್ಷಿಣದತ್ತ ಗಮನ ಹರಿಸಿದ್ದ ಮುಸಲ್ಮಾನರ ಮಹಾನ್ ಶಕ್ತಿಯನ್ನು ಗುರುತಿಸಲಾಗದಷ್ಟು ಅಂತಃ ಕಲಹಗಳಲ್ಲಿ ಅಂಧರಾಗಿದ್ದರು. ಮಲ್ಲಿಕ್ ಕಾಫೂರನ ದಂಡಯಾತ್ರೆಯ ಮೊದಲ ಹೊಡೆತದಿಂದಲೂ ಇವರು ಎಚ್ಚರಗೊಳ್ಳಲಿಲ್ಲ. 14ನೆಯ ಶತಮಾನದ ಪೂರ್ವಾರ್ಧದಲ್ಲಿ ಮುಸಲ್ಮಾನ ಆಕ್ರಮಣದ ಬಿರುಗಾಳಿ ಬೀಸಿದಾಗ ಅದರೆದುರು ನಿಲ್ಲಲಾರದೆ ಹೋದರು. ಅಲ್ಪಸ್ವಲ್ಪ ಪ್ರತಿಭಟನೆಯ ಪ್ರಯತ್ನಗಳು ನಡೆದರೂ 1312ರಲ್ಲಿ ಸೇವುಣ ರಾಜ್ಯವೂ 1342ರಲ್ಲಿ ಹೊಯ್ಸಳ ರಾಜ್ಯವೂ ನಂದಿಹೋದವು. ಶೀಘ್ರದಲ್ಲಿ ಬಹಮನೀ ಸಾಮ್ರಾಜ್ಯ ಸ್ಥಾಪನೆಯಾಗಿ (1347) ಉತ್ತರ ಕರ್ನಾಟಕದ ಬಹುಭಾಗ ಇದರ ಅಧೀನಕ್ಕೆ ಬಂದಿತು. ಹೊಸಧರ್ಮ, ಸಂಸ್ಕೃತಿಯ ಗಾಳಿ ಕರ್ನಾಟಕದಲ್ಲಿ ಪ್ರಬಲವಾಗಿ ಬೀಸಲಾರಂಭಿಸಿತು. ಉತ್ತರ ಕರ್ನಾಟಕದ ಜನಜೀವನದಲ್ಲಿ ಹೊಸ ಚೈತನ್ಯ ಮೂಡಲಾರಂಭಿಸಿತ್ತು.

ಇದಕ್ಕೆ ಪ್ರಬಲವಾದ ದೇಶೀ ಪ್ರತಿಕ್ರಿಯೆ ಹುಟ್ಟಿದ್ದು ದಕ್ಷಿಣ ಕರ್ನಾಟಕದಲ್ಲಿ. ಕರ್ನಾಟಕದ ಉಳಿದ ಭಾಗಗಳೂ ಸೇರಿದಂತೆ ದಕ್ಷಿಣ ಭಾರತದ ಬಹುಪಾಲನ್ನು ಹೊರಗಿನವರ ಆಕ್ರಮಣದಿಂದ ಪಾರುಮಾಡಿ, ಸ್ಥಳೀಯ ಧರ್ಮಗಳನ್ನು ಅಳಿವಿನಿಂದ ಉಳಿಸುವ ಪ್ರಯತ್ನ ಹೊಯ್ಸಳ 3ನೆಯ ಬಲ್ಲಾಳನಿಂದ ಸ್ವಲ್ಪಮಟ್ಟಿಗೆ ನಡೆದರೂ ಅದನ್ನು ಸಾಧಿಸಿದ ಕೀರ್ತಿಯ ಹೆಚ್ಚಿನಂಶ ಹರಿಹರ, ಬುಕ್ಕ ಮತ್ತು ಅವರ ಸಹೋದರರದ್ದು. ವಿದ್ಯಾರಣ್ಯರು ಈ ಮಹತ್ಸಾಧನೆಯ ಪ್ರೇರಕರು. ಇವರೆಲ್ಲರ ಶ್ರಮದಿಂದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಯಿತು (1336). ಅತಿಪುರಾತನದ ಧಾರ್ಮಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳನ್ನು ಉಳಿಸುವ ಸಲುವಾಗಿಯೇ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿಲಾಯಿತು ಎಂಬುದನ್ನು ಗಮನಿಸಿದಾಗ, ಈ ಸಾಮ್ರಾಜ್ಯ ಭಾರತೀಯ ಇತಿಹಾಸದ ಪ್ರಥಮ ಮತ್ತು ಏಕೈಕ ಪ್ರಯೋಜನಾತ್ಮಕ ಸಾಮ್ರಾಜ್ಯವೆಂದು ಹೇಳಬಹುದಾಗಿದೆ. ಸಣ್ಣ ಪ್ರಮಾಣದ ಜನ್ಮಾವಸ್ಥೆಯಿಂದ ಒಂದರೆಡು ದಶಕಗಳ ಅಲ್ಪಾವಧಿಯಲ್ಲೆ ದಕ್ಷಿಣ ಭಾರತ ಹಿಂದೆಂದೂ ಕಂಡರಿಯದ ಮಹಾನ್ ಸಾಮ್ರಾಜ್ಯವಾಗಿ ಬೆಳೆಯಿತು. ವಿಜಯನಗರದ ಸ್ಥಾಪಕರಾದ ಹರಿಹರ ಬುಕ್ಕರು ಸನಾತನ ಧರ್ಮದ ಅಳಿದುಳಿದ ನೆಲೆಗಳ ಸುತ್ತ ಭದ್ರವಾದ ಕೋಟೆಯನ್ನು ಕಟ್ಟುವ ಕಾರ್ಯದಲ್ಲೇ ನಿರತರಾಗಿದ್ದ ಕಾರಣ, ಅವರು ಆಡಂಬರದ ಕಡೆಗೆ ಗಮನ ನೀಡದೆ, ಕೊನೆಯ ತನಕವೂ ಮಹಾಮಂಡಲೇಶ್ವರರೆಂದೇ ಕರೆದುಕೊಳ್ಳುತ್ತಿದ್ದರು. ಅವರ ಅನಂತರದವರು ಸಾಮ್ರಾಜ್ಯದ ಸುಭದ್ರತೆ ಶತಃಸಿದ್ಧವೆಂಬ ಅರಿವಿನಿಂದ ಪ್ರಚೋದಿತರಾಗಿ, ಸಾಮ್ರಾಜ್ಯದ ಕ್ಷೇತ್ರವ್ಯಾಪ್ತಿಯೂ ಇನ್ನಷ್ಟು ಬೆಳೆದಿದ್ದುದರಿಂದ ಕರ್ನಾಟಕ ಸಿಂಹಾಸನದ ಅಂದರೆ ವಿಜಯನಗರ ಸಾಮ್ರಾಜ್ಯದ ಮಹಾರಾಜಾಧಿರಾಜರಾಗಿ ಮೆರೆಯತೊಡಗಿದರು. ಹಿಂದೆ ಕರ್ನಾಟಕ ಸಾಮ್ರಾಜ್ಯ ನೆರೆಹೊರೆಯ ರಾಷ್ಟ್ರಗಳ ಮನ್ನಣೆ ಪಡೆದು ಒಂದು ಪರಂಪರೆಯಾಗಿ ಆರು ಶತಮಾನಗಳ ಕಾಲ ಉಳಿದಿದ್ದಂತೆ ವಿಜಯನಗರ ಸಾಮ್ರಾಜ್ಯವೂ ಒಂದು ಪರಂಪರೆಯೇ ಆಗಿಹೋಯಿತೆನ್ನಬಹುದಾಗಿದೆ. ವಿಜಯನಗರದ ರಾಜಮನೆತನದಲ್ಲೇ ಅಂತಃಕಲಹಗಳಿದ್ದರೂ ಒಂದು ಮನೆತನ ಮತ್ತೊಂದು ಮನೆತನವನ್ನು ಪದಚ್ಯುತಿಗೊಳಿಸಿ ಸಿಂಹಾಸನವನ್ನು ಆಕ್ರಮಿಸಿ ಕೊಂಡಾಗಲೂ ರಾಜ್ಯದ ಧೋರಣೆಯೇನೂ ಬದಲಾಗುತ್ತಿರಲಿಲ್ಲವಾಗಿ ಅಂಥ ಸಂದಿಗ್ಧ ಸ್ಥಿತಿಯಲ್ಲೂ ಲಾಭ ಪಡೆದು ಸಾಮ್ರಾಜ್ಯವನ್ನು ನಿರ್ನಾಮಗೊಳಿಸುವುದು ವೈರಿಪ್ರಭುತ್ವಗಳಿಗೆ ಸುಲಭಸಾಧ್ಯವಾಗಿರಲಿಲ್ಲ. ಹರಿಹರ, ಬುಕ್ಕ 1, ದೇವರಾಯ ಇಂಥ ದೊರೆಗಳ ಪರಿಶ್ರಮದಿಂದ ಬಲಿಷ್ಠವಾಗಲು ಸದವಕಾಶ ದೊರೆತ ಈ ಸಾಮ್ರಾಜ್ಯ ಕೃಷ್ಣದೇವರಾಯನ (1509-29) ಕಾಲದ ಹೊತ್ತಿಗೆ ಉಚ್ಛ್ರಾಯಸ್ಥಿತಿಗೇರಿತು. ತುಂಗಭದ್ರೆಯ ದಕ್ಷಿಣ ಭಾಗವೆಲ್ಲ ಇವರ ಸ್ಪಷ್ಟ ಸ್ವಾಧೀನದಲ್ಲಿದ್ದು ಉತ್ತರದ ಇಸ್ಲಾಮೀ ಅರಸರುಗಳ ಮೇಲೂ ಖಚಿತ ಮೇಲ್ಮೈ ಪಡೆಯಿತಲ್ಲದೆ, ವಿಜಯನಗರದ ಸೈನ್ಯ ಪೂರ್ವದಲ್ಲಿ ಆಂಧ್ರ ಪ್ರದೇಶದ ಕರಾವಳಿಯಿಂದ ಒರಿಸ್ಸದವರೆಗೂ ತನ್ನ ಜಯ ಸಾಧಿಸಿತು. ಬಹುಶಃ ಈ ಕಾಲದ ಸಾಧನೆಗಳಿಂದ ವಿಜಯನಗರದಲ್ಲೇ ಸಾಮ್ರಾಜ್ಯದ ಸಾಮರ್ಥ್ಯದ ಬಗ್ಗೆ ಅತಿ ನಂಬಿಕೆ ಬೆಳೆದದ್ದು ಹಾಗೂ ವಿಜಯನಗರದ ಮುಂದಿನ ಅರಸರ ರಾಜಕೀಯ ಧೋರಣೆಗೆ ಪ್ರತಿಯಾಗಿ ಇಸ್ಲಾಮೀ ಅರಸರು ಸಂಘಟಿಸಿಕೊಂಡಿದ್ದು ಇವುಗಳಿಂದಾಗಿ ರಕ್ಕಸತಂಗಡಿ ಯುದ್ಧದಲ್ಲಿ ಸಾಮ್ರಾಜ್ಯದ ಅವಸಾನವಾಯಿತು (1565).

ಉತ್ತರ ಕರ್ನಾಟಕದಲ್ಲಿ ನೆಲೆಗೊಂಡ ಬಹಮನೀ ರಾಜ್ಯ ಅಲಾಉದ್ದೀನ್, 1ನೆಯ ಮಹಮ್ಮದ್ ಷಾ ಮುಂತಾದವರ

ಶ್ರಮಸಾಧನೆಗಳಿಂದ ಮಹಾರಾಷ್ಟ್ರ ಆಂಧ್ರಪ್ರದೇಶಗಳ ಬಹುಭಾಗಗಳನ್ನೊಳಗೊಳ್ಳುವಂತಾಯಿತು. ಉತ್ತರ ಕರ್ನಾಟಕದಲ್ಲಿ ಪಾರಸೀ, ತುರ್ಕೀ ರೀತಿಯ ಹೊಸ ಆಡಳಿತ ವ್ಯವಸ್ಥೆಗಳು ರೂಢಿಗೆ ಬಂದುವು. 15ನೆಯ ಶತಮಾನದ ಅಂತ್ಯದಲ್ಲಿ ಬಹಮನೀ ರಾಜ್ಯ ಒಡೆದರೂ ಕರ್ನಾಟಕದ ಭಾಗದಲ್ಲಿ ಬಿಜಾಪುರದಿಂದ ಆಳಿದ ಆದಿಲ್‌ಶಾಹೀಗಳು ಅದರಲ್ಲೂ ಯೂಸುಫ್, ಇಬ್ರಾಹೀಂ I ಮತ್ತು II, ಅಲಿ I, ಮಹಮ್ಮದ್ ಮೊದಲಾದ ಅರಸರು ಸಮರ್ಥವಾಗಿ ಬಹಮನೀ ಧೋರಣೆಗಳನ್ನು ಮುಂದುವರೆಸಿದರು. ರಕ್ಕಸ ತಂಗಡಿ ಯುದ್ಧದಲ್ಲಿ ಸಂಘಟಿತ ಇಸ್ಲಾಮೀ ರಾಜರು ವಿಜಯನಗರವನ್ನು ತುಳಿದರು (1565). ಇತರೆಲ್ಲರಿಗಿಂತ ಇದರಿಂದ ಲಾಭ ಗಳಿಸಿದವರು ಆದಿಲ್‌ಶಾಹೀ ಅರಸರು. ಮುಂದೆ ಮುಗಲರಿಂದ ಇವರ ರಾಜ್ಯ ನಾಶವಾಗುವುವರೆಗೂ (1686) ಉತ್ತರ ಕರ್ನಾಟಕವಷ್ಟೇ ಅಲ್ಲದೆ ದಕ್ಷಿಣ ಕರ್ನಾಟಕದ ಅನೇಕ ಪ್ರದೇಶಗಳ ಮೇಲೆ ಹಾಗೂ ಕೊಂಕಣ ಮಹಾರಾಷ್ಟ್ರಗಳ ಮೇಲೆ ತಮ್ಮ ಅಧಿಕಾರವನ್ನು ವ್ಯಾಪಿಸಿದ್ದರು.

ವಿಜಯನಗರದ ಕೇಂದ್ರ ಪ್ರಭುತ್ವ ಕರ್ನಾಟಕದಲ್ಲೇ ಇದ್ದಿತಾದರೂ ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಕರ್ನಾಟಕ ತನ್ನ ಪ್ರಭಾವವನ್ನು ಇತರ ಪ್ರಾಂತ್ಯಗಳ ಮೇಲೆ ಹೆಚ್ಚಾಗಿ ಬೀರಲಾರದೇ ಹೋಗಿತ್ತಷ್ಟೇ ಅಲ್ಲದೆ ಆಂತರಿಕವಾಗಿ ತಾನೇ ಪರಿಣಾಮಕಾರಿಯಾದ ಬದಲಾವಣೆಗಳನ್ನು ಹೊಂದುವಂತಾಯಿತು. ಈ ಕಾಲದಲ್ಲಿ ಹಿಂದಿನಿಂದ ಅನೂಚಾನವಾಗಿ ಆಳುತ್ತಿದ್ದ ಪ್ರಾದೇಶಿಕ ರಾಜವಂಶಗಳು ಕಣ್ಮರೆಯಾದುವು. ಹಿಂದಿನ ಯುಗದ ಸಂಖ್ಯಾಪ್ರತ್ಯಯಗಳಿಂದ ಕೂಡಿದ ಬನವಾಸಿ- 12,000 ಮೊದಲಾದ ಪ್ರಾದೇಶಿಕ ನಾಮಗಳು ಹೆಸರಿಗೆ ಮಾತ್ರ ಉಳಿದಿದ್ದು, ಸಾಮ್ರಾಜ್ಯವನ್ನು ರಾಜ್ಯಗಳಾಗಿ ವಿಂಗಡಿಸಿ ಅವುಗಳ ಆಡಳಿತಕ್ಕೆಂದು ರಾಜ್ಯಪಾಲರುಗಳನ್ನು ನೇಮಿಸಲಾಗಿತ್ತು. ಸ್ವಲ್ಪ ಅನಂತರದಲ್ಲಿ ಹಲವು ಸ್ಥಳೀಯ ಸಂಸ್ಥಾನಗಳು ಹೊಸ ಸಾಮಂತ ತುಂಡರಸುಗಳ ನೇರ ಆಳ್ವಿಕೆಗೊಳಪಟ್ಟು ಸಾಮ್ರಾಜ್ಯದ ಬಹುಭಾಗಗಳಲ್ಲಿ ಎರಡು ಮಟ್ಟದ ಆಡಳಿತ ಪದ್ಧತಿ ಜಾರಿಯಲ್ಲಿತ್ತು. ಈ ಪ್ರಾದೇಶಿಕ ಆಡಳಿತ ಪದ್ಧತಿಯಲ್ಲಿ, ತಮ್ಮ ಪ್ರಭುತ್ವದ ಪರಮಾಧಿಕಾರದ ರಾಜಕೀಯ ಧ್ಯೇಯ ಧೋರಣೆಗಳ ಮೌಲ್ಯವನ್ನು ನಿರ್ಧರಿಸುವಲ್ಲಿ, ಸೇನೆಯನ್ನು ಕಟ್ಟುವಲ್ಲಿ, ಯುದ್ಧ ತಂತ್ರಗಳನ್ನು ಹೂಡುವಲ್ಲಿ ವಿಜಯನಗರದವರು ಬಹುಮಟ್ಟಿಗೆ ಮುಸಲ್ಮಾನರಿಂದ ಪ್ರಭಾವಿತರಾಗಿದ್ದರು. ಮುಸಲ್ಮಾನ ದೊರೆಗಳು ಸುಲ್ತಾನರಾದರೆ, ವಿಜಯನಗರದ ಸಾಮ್ರಾಟರು ಹಿಂದುರಾಯ ಸುರತ್ರಾಣರಿದ್ದರು. ಸುಲ್ತಾನರಿಗೆ ಸೇನಾಬಲವನ್ನು ಒದಗಿಸಿಕೊಡಲು ಸುಬೇದಾರರೇ ಮೊದಲಾದ ಅಧಿಕಾರೀ ಆಡಳಿತಗಾರರಿದ್ದರೆ, ವಿಜಯನಗರದವರಿಗೆ ಸೇನೆಗಳನ್ನು ಒದಗಿಸಲು ತುಂಡರಸರೂ ರಾಜ್ಯಪಾಲರುಗಳೂ ಪಾಳೆಯಗಾರರೂ ಬದ್ಧರಿದ್ದರು.

ಉತ್ತರದಲ್ಲಿ ಇಸ್ಲಾಮೀ, ದಕ್ಷಿಣದಲ್ಲಿ ವಿಜಯನಗರ ಈ ಎರಡು ಬೃಹತ್ ಶಕ್ತಿಗಳ ಸಂಘರ್ಷಣೆ ರಾಜಕೀಯ ರಂಗಕ್ಕೆಷ್ಟೇ ಸೀಮಿತವಾಗಲಿಲ್ಲ. ದಕ್ಷಿಣದಲ್ಲಿ ವಿಜಯನಗರದ ಅರಸರು ಸನಾತನ ಧರ್ಮ ಪ್ರತಿಪಾಲಕರಾಗಿ, ಸನಾತನ ಸಾಮಾಜಿಕ ವ್ಯವಸ್ಥೆಯನ್ನು ಪುನರುಜ್ಜೀವಿಸುವ ಹುರುಪನ್ನು ತೋರಿಸಿದರು. ಸಾಮ್ರಾಟರು ತಾವು ಸಕಲ ವರ್ಣಾಶ್ರಮ ಧರ್ಮಗಳನ್ನು ಪ್ರತಿಪಾಲಿಸುವವರೆಂದು ಹೇಳಿಕೊಳ್ಳುತ್ತಿದ್ದರು. ಅದರಂತೆಯ ವರ್ತಿಸುತ್ತಿದ್ದರು. ಇದರಿಂದ ಸ್ವಲ್ಪಮಟ್ಟಿಗೆ ಜೈನ, ಮುಸಲ್ಮಾನ, ಕ್ರೈಸ್ತ ಧರ್ಮಗಳೂ ಪ್ರೋತ್ಸಾಹಗಳಿಸಿದುವು. ಆದರೂ ಬಹುಸಂಖ್ಯಾತರ ಶೈವ, ವೈಷ್ಣವ ಧರ್ಮಗಳ ಮುನ್ನಡೆಯ ಬಿರುಸಿಗೆ ಸೋತ ಜೈನಧರ್ಮ 14ನೆಯ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯ ಹುಟ್ಟುವ ವೇಳೆಗಾಗಲೇ ಹಲವೆಡೆಗಳಲ್ಲಿ ಬಲಗುಂದಿ, ಮಲೆನಾಡು ಹಾಗೂ ಕರಾವಳಿ ಪ್ರದೇಶಗಳ ಆಶ್ರಯ ಪಡೆಯುವಂತಾಯಿತು. ಧರ್ಮ ಪುನರುಜ್ಜೀವನ ಕಾರ್ಯದಲ್ಲಿ ದುರುಪಯೋಗಕ್ಕೆ ತುತ್ತಾದ ಹಳೆಯ ದಾನಗಳನ್ನು ಪುನಃ ನೀಡಿ ಹಳೆಯ ಅಗ್ರಹಾರಗಳನ್ನು ಪುನಃ ವ್ಯವಸ್ಥಿತಗೊಳಿಸಿದ್ದಲ್ಲದೆ ಈ ಸಂಬಂಧದಲ್ಲಿ ಹೊಸ ಹೊಸ ದಾನದತ್ತಿಗಳನ್ನು ನೀಡಲಾಯಿತು. ಶ್ರೀವೈಷ್ಣವಧರ್ಮಕ್ಕೆ ವಿಶೇಷ ಪ್ರೋತ್ಸಾಹದೊರಕಿತು. ಉತ್ತರ ಕರ್ನಾಟಕದಲ್ಲಿ ಇಸ್ಲಾಂ ಧರ್ಮ ವ್ಯವಸ್ಥಿತವಾಗಿ ಪ್ರೋತ್ಸಾಹಿತವಾಯಿತು. ಇಸ್ಲಾಮೀಯರ ಆಳ್ವಿಕೆಯಲ್ಲಿ ಅನೇಕ ದೊಡ್ಡ ಮಸೀದಿಗಳು ಗೋರಿ ಇತ್ಯಾದಿಗಳು ಸ್ಥಾಪಿತವಾದರೆ, ಅವಕ್ಕೆ ಸಮಸಮವಾಗಿ ವಿಜಯನಗರದ ರಾಜ್ಯದಲ್ಲಿ ಬೃಹತ್ ಧಾರ್ಮಿಕ ಕಟ್ಟಡಗಳು ಬೆಳೆದುವು. ದಕ್ಷಿಣದಲ್ಲಿ ವಿಜಯನಗರವಿದ್ದಂತೆ ಉತ್ತರದಲ್ಲಿ ಗುಲ್ಬರ್ಗ, ಬಿಜಾಪುರಗಳಂಥ ಮಹಾನ್ ನಗರಗಳು ಬೆಳೆದುವು. ಇಸ್ಲಾಮೀ ಅರಸರು ಪರ್ಷಿಯ, ತುರ್ಕಿ ಮುಂತಾದೆಡೆಗಳಿಂದ ವಿದ್ವಾಂಸರನ್ನು ಕರೆಸಿ ಆ ಭಾಗದಲ್ಲಿ ಪಾರಸೀ ಭಾಷೆ, ಇಸ್ಲಾಮೀ ವಿದ್ಯಾಕ್ರಮ, ಇಸ್ಲಾಮೀ ಕಲೆ ಮುಂತಾದವುಗಳು ಸ್ವಲ್ಪಮಟ್ಟಿನ ದೇಶಿ ಸೊಗಡಿನೊಡನೆ ಬೆಳೆಯುವ ಅವಕಾಶ ಮಾಡಿಕೊಟ್ಟರೆ, ವಿಜಯನಗರ ಸಾಮ್ರಾಜ್ಯದಲ್ಲಿ ಸನಾತನ ವಿದ್ಯಾಕ್ರಮ, ಕಲೆ, ಸಾಹಿತ್ಯ ಮುಂತಾದವು ಬೆಳೆದುವು. ಷಡಕ್ಷರಿ, ಕುಮಾರವ್ಯಾಸರಂಥವರು ಈ ದಿಶೆಯಲ್ಲಿ ಕೃತಿರಚನೆ ಮಾಡಿದರು. ಹೀಗೆ ಹಲವು ವಿಧಗಳಲ್ಲಿ ರಾಜಕೀಯ ಔನ್ನತ್ಯವನ್ನು ಸಾಧಿಸಿಕೊಳ್ಳುವುದರಲ್ಲಿದ್ದಂತೆ ಇತರ ರಂಗಗಳಲ್ಲೂ ಎರಡೂ ಪ್ರದೇಶಗಳಲ್ಲಿ ಒಂದು ರೀತಿಯ ಸ್ಪರ್ಧಾತ್ಮಕ ಬೆಳೆವಣಿಗೆ ಕಂಡುಬಂತು. ಇದರ ಜೊತೆಗೇ ಈ ರಂಗಗಳಲ್ಲಿ ಸ್ವಲ್ಪಮಟ್ಟಿನ ಕೊಡುಕೊಳ್ಳುವಿಕೆಯ ಕಾರ್ಯ ಸಹ ನಡೆಯಿತು. ಈ ಕಾಲದಲ್ಲಿ ಕಂಡುಬರುವ ಒಂದು ಅಂಶವೆಂದರೆ ಈ ಬೃಹತ್ ಸಾಧನೆಗಳು ಬಹುಮಟ್ಟಿಗೆ ರಾಜರ, ಅಧಿಕಾರಸ್ಥರ ಹೆಚ್ಚಳಕ್ಕಾಗಿ ಸಾಧಿಸಿದವೇ ಆಗಿದ್ದು ಸಾಮಾನ್ಯ ಜನ ಇದಕ್ಕಾಗಿ ತೆರ ತೆರಬೇಕಾಗಿತ್ತೆಂಬುದು. ರಾಜಕೀಯ ಶಕ್ತಿಗಳ ಪರಸ್ಪರ ಘರ್ಷಣೆ ಸ್ಪರ್ಧೆಗಳಲ್ಲಿ ದೇಶ ಆರ್ಥಿಕ ಅಭಿವೃದ್ಧಿ ಸಾಧಿಸಲಾರದೆ ಹೋಯಿತು. ಒಂದು ರೀತಿಯ ದ್ವಂದ್ವ ವ್ಯಕ್ತಿತ್ವ ನಾಡಿನ ಸಮಾಜದಲ್ಲಿ ಉದ್ಭವಿಸಿತು.

ಈ ಕಾಲದ ಐತಿಹಾಸಿಕ ಸ್ಮಾರಕಗಳನ್ನು ಶಾಸನಗಳನ್ನು ಪರಿಶೀಲಿಸಿದಾಗಲೂ ಈ ಕಾಲ ಕರ್ನಾಟಕ ಇತಿಹಾಸದ ವೈಪರೀತ್ಯಗಳ ವಿರೋಧಾಭಾಸದ ಕಾಲವೆಂದು ಪರಿಗಣಿಸಬಹುದಾಗಿದೆ. ಈ ಕಾಲದ ಐತಿಹಾಸಿಕ ಸ್ಮಾರಕಗಳು - ಅವು ಮುಸಲ್ಮಾನರದ್ದೇ ಇರಲಿ ಹಿಂದು ಜನಾಂಗದವರದ್ದೇ ಇರಲಿ - ಮಹತ್ವದ ಬೃಹತ್ವದ ಆಡಂಬರದ ರಚನೆಗಳೇನೋ ಹೌದು. ಅವರ ಕಾಲದ ಶಾಸನಗಳ ಸಂಖ್ಯೆಯೂ ಅವುಗಳಿಂದ ತಿಳಿದುಬರುವ ವಿಷಯಗಳೂ ಹೆಚ್ಚಿನವೇನೋ ಹೌದು. ಆದರೂ ಕರ್ನಾಟಕದಲ್ಲಿ ಶತಮಾನಗಳಿಂದ ಹರಿದು ಬಂದ ವೈಶದ್ಯಗಂಗೆ ಈ ಕಾಲಕ್ಕೆ ಬತ್ತಿಹೋದಂತೆ ಭಾಸವಾಗುತ್ತದೆ. ಇಂದು ತಿಳಿದುಬಂದಿರುವ ಅಂದಿನ ನಡೆನುಡಿಗಳಲ್ಲಿ ಬರಹಗಳಲ್ಲಿ ರಚನಾಕ್ರಮಗಳಲ್ಲಿ ಒಂದು ಬಗೆಯ ಅಸ್ತವ್ಯಸ್ತತೆ ಕಂಡುಬರುತ್ತದೆ. ಆ ಸಂಘರ್ಷಣ ಯುಗ ಸಾಂಸ್ಕೃತಿಕ ಕ್ಷೇತ್ರದಲ್ಲಿ ನಮ್ಮ ಇಂದಿನ ದಾರುಣ ಪರಿಸ್ಥಿತಿಯ ಉಪಕ್ರಮ ಕಾಲವಿದ್ದಿರಲೂಬಹುದು. ಈ ಕಾಲದಲ್ಲಿ ಉತ್ತರ ಹಾಗೂ ದಕ್ಷಿಣ ಕರ್ನಾಟಕದಲ್ಲಿ ಜನಸಾಮಾನ್ಯ ನೆಲೆಯಿಂದ ಹುಟ್ಟಿದ ದಾಸಸಾಹಿತ್ಯದಲ್ಲಿ ಬರುವ ಭಕ್ತಿ, ಆರ್ತಭಾವನೆಗಳ ಹೆಚ್ಚಳ ಹಾಗೂ ಅಲ್ಲಿ ಕಂಡು ಬರುವ ಚಿತ್ರಣ - ಈ ಅಂಶಕ್ಕೆ ಒಳ್ಳೆಯ ಮಾಹಿತಿಯನ್ನು ಒದಗಿಸುತ್ತದೆ. (ಕೆ.ವಿ.ಆರ್.)

**ವಿಚ್ಛಿನ್ನ ಯುಗ** : ದಕ್ಷಿಣ ಭಾರತದ ಮಹಾನ್‌ಶಕ್ತಿಯಾಗಿದ್ದ ವಿಜಯನಗರದ ಪತನದೊಡನೆ ಕರ್ನಾಟಕದ ರಾಜಕೀಯ ರಂಗದಲ್ಲಿ ಅಲ್ಲೋಲ ಕಲ್ಲೋಲವಾಯಿತು. ವಿಜಯನಗರದ ಅರಸರ ಆಳ್ವಿಕೆ ಮುಂದೆ ಎರಡು ಶತಮಾನಗಳ ಕಾಲ ಮುಂದುವರೆದರೂ ಅದು ಕರ್ನಾಟಕದ ಭಾಗಕ್ಕೆ ಕೇವಲ ನಾಮಮಾತ್ರ ಪ್ರಭುತ್ವವಾಗಿತ್ತು. ದಕ್ಷಿಣ ಕರ್ನಾಟಕದ ಭಾಗ ಸಣ್ಣ ತುಂಡುಗಳಾಗಿ ಹಲವು ಪಾಳೆಯಗಾರರ ವಶಕ್ಕೆ ಬಂತು. ಇವರು ವಿಜಯನಗರದ ಸಾರ್ವಭೌಮತ್ವನ್ನು ಒಪ್ಪಿದ್ದರೂ ಸ್ವತಂತ್ರರಾಗಿಯೇ ಆಳುತ್ತಿದ್ದರು. ಅನೂಚಾನ ಸಾರ್ವಭೌಮತ್ವವೆಂಬುದು ಮರೆಯಾಗಿ ಸ್ವಶಕ್ತಿಯಷ್ಟೇ ಈ ಪ್ರಭುಗಳ ಶಕ್ತಿಯಾಗಿ ಪರಸ್ಪರ ಸಂಘರ್ಷಣೆಯ ಸ್ಥಿತಿ ಸಾಮಾನ್ಯವಾಯಿತು. ನಡೆವಳಿಕೆಗಳಲ್ಲಿ ಒಂದೊಂದೂ ವಿಜಯನಗರದ ತುಣುಕುಗಳಂತೆ ವರ್ತಿಸಿದರೂ ಆ ಸಾಮ್ರಾಜ್ಯದ ಶಕ್ತಿಯಾಗಲೀ ಸಾಧನೆಯಾಗಲೀ ಇವುಗಳಲ್ಲಿ ಮೂಡುವ ಅವಕಾಶ ಇರಲಿಲ್ಲ. ಆದರೆ ಈ ಸಂದರ್ಭದಲ್ಲಿ ಹುಟ್ಟಿದ ಮೈಸೂರು ಒಡೆಯರ ಮತ್ತು ಕೆಳದಿ ಪ್ರಭುಗಳ ರಾಜಮನೆತನಗಳು ಸ್ವಲ್ಪಮಟ್ಟಿಗೆ ಈ ಕೊರತೆಯನ್ನು ನಿವಾರಿಸಿದ್ದುವು. ವಿಜಯನಗರದ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುವ ಪ್ರವೃತ್ತಿಯನ್ನು ತೋರಿದುವು. ಮೈಸೂರು ಮನೆತನದ ರಾಜ ಒಡೆಯ, ಚಿಕ್ಕದೇವರಾಜ, ಕೆಳದಿ ಮನೆತನದ ವೆಂಕಟಪ್ಪ, ಶಿವಪ್ಪನಂಥ ಸಮರ್ಥ ಪ್ರಭುಗಳು ಈ ಸಾಧನೆಗೆ ಮುಖ್ಯ ಕಾರಣರು. ಇವರಲ್ಲಿ ಹಲವರು ಹೊಸ ವಾತಾವರಣಕ್ಕೆ ತಕ್ಕ ಆಡಳಿತ ನೀತಿಗಳನ್ನು ಅನುಸರಿಸಿದ್ದಲ್ಲದೆ, ಜನೋಪಯೋಗಿ ಕಾರ್ಯಗಳಲ್ಲಿಯೂ ನಿರತರಾಗಿ ತಮ್ಮ ಪ್ರದೇಶದ ಆರ್ಥಿಕ ಸಾಂಸ್ಕೃತಿಕ ರಂಗಗಳಲ್ಲಿ ಕ್ವಚಿತ್ ಅಭಿವೃದ್ಧಿಗೆ ಕಾರಣರಾದರು. ಉತ್ತರ

ಕರ್ನಾಟಕದ ಭಾಗದಲ್ಲಿಯಾದರೋ ಆದಿಲ್‌ಶಾಹೀ ಪ್ರಭುತ್ವ ಸು.17ನೆಯ ಶತಮಾನಾಂತ್ಯದವರೆಗೆ ಗಟ್ಟಿಯಾಗಿಯೇ ಮುಂದುವರೆಯಿತು. ಅನಂತರ ಮುಗಲರ ಆಕ್ರಮಣದಿಂದ ಬಿಜಾಪುರ ರಾಜ್ಯವೂ ನಾಶವಾಗಿ ಉತ್ತರ ಕರ್ನಾಟಕದಲ್ಲಿ ಒಂದು ರೀತಿಯ ರಾಜಕೀಯ ಟೊಳ್ಳಿನ ಪರಿಸ್ಥಿತಿ ಉಂಟಾಯಿತು. ಕ್ರಮೇಣ ಅಲ್ಲಿನ ಹಲವು ಅಧಿಕಾರಿಗಳು ದಕ್ಷಿಣ ಕರ್ನಾಟಕದ ಪಾಳೆಯಗಾರರಂತೆ ಸಣ್ಣ ಪ್ರದೇಶಗಳನ್ನು ರೂಢಿಸಿಕೊಂಡು ಒಡೆತನ ಮಾಡಲಾರಂಭಿಸಿದರು. ಇದೇ ಸಂದರ್ಭದಲ್ಲಿ ವಾಯುವ್ಯ ಕರ್ನಾಟಕದಲ್ಲಿ ಮರಾಠರು, ಈಶಾನ್ಯ ಕರ್ನಾಟಕದಲ್ಲಿ ಆಸಫ್‌ಜಾಹೀಗಳು ತಮ್ಮ ಅಧಿಕಾರವನ್ನು ವಿಸ್ತರಿಸಿದರು. ದಖನ್ನಿನ ಈ ಎರಡು ಶಕ್ತಿಗಳಿಗೆ ಕರ್ನಾಟಕದ ಬಗ್ಗೆ ಒಲವೇನೂ ಇಲ್ಲದೆ ಇದು ಕೇವಲ ಕೊಳ್ಳೆ ಹೊಡೆಯುವ ಪ್ರದೇಶವಾಗಿತ್ತು. ಜನೋಪಕಾರಕ್ಕಿಂತ ಧನಸಂಗ್ರಹವೇ ಅವುಗಳಿಗೆ ಮಹತ್ವದ ವಿಷಯವಾಗಿತ್ತು. ಈ ದಿಶೆಯಲ್ಲಿ ಸ್ಥಳೀಯ ಅಧಿಕಾರಿಗಳೂ ಆ ಪ್ರಭುತ್ವಗಳಿಗೆ ಪ್ರತಿನಿಧಿಗಳಂತಾದರು. ರಾಜಕೀಯ ಆರ್ಥಿಕ ಅನಿರ್ದಿಷ್ಟತೆ ಈ ಕಾಲದ ವೈಶಿಷ್ಟ್ಯವಾಯಿತು. ಸು.18ನೆಯ ಶತಮಾನದ ಮಧ್ಯಭಾಗದವರೆಗಿದ್ದ ಈ ವಿಚಿತ್ರ ವಿಚ್ಛಿನ್ನ ಸ್ಥಿತಿಯಲ್ಲೂ ಸ್ವಲ್ಪಮಟ್ಟಿನ ವ್ಯವಸ್ಥೆ ಬರಲು ಕಾರಣರಾದವರು ಮೈಸೂರಿನ ಸಂಸ್ಥಾನದ ಅಧಿಕಾರವನ್ನು ತಮ್ಮದಾಗಿಸಿಕೊಂಡಿದ್ದ ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರು. ಈ ಮುನ್ನ ಸಂಸ್ಥಾನದ ಪ್ರಮುಖರಾಗಿದ್ದ ದಳವಾಯಿಗಳು ಮೈಸೂರಿನ ಪ್ರಭುತ್ವವನ್ನು ತಮಿಳುನಾಡಿನ ಕೆಲವು ಭಾಗಗಳ ಮೇಲೂ ವಿಸ್ತರಿಸಿ ಗಳಿಸಿದ್ದ ರಾಜಕೀಯ ಶಕ್ತಿಯ ಹಿನ್ನೆಲೆಯೊಡನೆ ಈ ಇಬ್ಬರು ಸುಲ್ತಾನರು ಇಡಿಯ ದಕ್ಷಿಣ ಕರ್ನಾಟಕದ ಸಣ್ಣಪುಟ್ಟ ಪಾಳೆಯಗಾರರನ್ನೆಲ್ಲ ಸವರಿ ಹಾಕಿ, ಕೇರಳ ತಮಿಳುನಾಡುಗಳ ಅನೇಕ ಪ್ರದೇಶಗಳನ್ನು ವಶಪಡಿಸಿಕೊಂಡು, ದೊಡ್ಡ ರಾಜ್ಯವನ್ನೇ ಸ್ಥಾಪಿಸಿದರು. ರಾಜಕೀಯ ಅಸ್ತವ್ಯಸ್ತತೆಯನ್ನು ನಿರ್ಮೂಲಗೊಳಿಸಿದರು. ಇವರ ಏಳ್ಗೆ ಸಾಧನೆಗಳಿಂದ ಎಚ್ಚೆತ್ತ ಆಸಫ್‌ಜಾಹೀಗಳು ಹಾಗೂ ಮರಾಠರು ಇವರ ಪ್ರಬಲ ವಿರೋಧಿಗಳಾಗಿ ನಿಂತರು. ಪುನಃ ಕರ್ನಾಟಕದ ರಾಜಕೀಯದಲ್ಲಿ ದ್ವಿಮುಖ ಸಂಘರ್ಷವುಂಟಾಯಿತು. ಈ ಹೊತ್ತಿಗೆ ದಕ್ಷಿಣ ಭಾರತದ ರಾಜಕೀಯದಲ್ಲಿ ಕೈಹಾಕಲು ತೊಡಗಿದ್ದ ಬ್ರಿಟಿಷರಿಗೂ ಈ ಸುಲ್ತಾನರ ಏಳ್ಗೆ ಮುಳ್ಳಾಗಿದ್ದರಿಂದ ಇವರೆಲ್ಲರ ಒಕ್ಕೂಟ ಸಂಸ್ಥಾನದ ಛೇದನವನ್ನೂ ಸಾಧಿಸಿತು (1799). ಮೈಸೂರು ಸಂಸ್ಥಾನದ ಒಡೆಯರ ವಂಶದವರಿಗೂ ಉತ್ತರ ಕರ್ನಾಟಕದ ಪೂರ್ವಭಾಗ ಆಸಫ್‌ಜಾಹೀಗಳಿಗೂ ಪಶ್ಚಿಮ ಭಾಗ ಮರಾಠರಿಗೂ ಹಂಚಿದ್ದರೂ ಬ್ರಿಟಿಷ್ ಪ್ರಭುತ್ವ ಕರ್ನಾಟಕದ ಎಲ್ಲೆಡೆಯಲ್ಲೂ ತನ್ನ ಅಂಕುಶವನ್ನು ಸ್ಪಷ್ಟವಾಗಿ ಊರಿತು. ಕೆಲವೇ ವರ್ಷಗಳಲ್ಲಿ ಮರಾಠರ ಸೋಲು ಮತ್ತು ಮೈಸೂರು ಅರಸರ ಪದಚ್ಯುತಿಯಿಂದ (1831) ಆಸಫ್‌ಜಾಹೀ ಭಾಗದಲ್ಲಿದ್ದ ಪ್ರದೇಶ ಹೊರತು ಉಳಿದ ಕರ್ನಾಟಕದ ಪ್ರಾಂತ್ಯ ಬ್ರಿಟಿಷ್ ಅರಸರ ನೇರ ಆಳ್ವಿಕೆಗೆ ಒಳಪಟ್ಟಿತು. ಮುಂದೆ ಮೈಸೂರು ಸಂಸ್ಥಾನದಲ್ಲಿ ಒಡೆಯ ವಂಶದವರಿಗೆ ರಾಜ್ಯವನ್ನು ಹಿಂತಿರುಗಿಸಿದರೂ (1881) ಬ್ರಿಟಿಷರ ಪ್ರಭಾವ ಮುಂದುವರೆಯಿತು.

ಒಟ್ಟಿನಲ್ಲಿ ಇದು ವಿಚ್ಛಿನ್ನ ಯುಗ, ರಾಜಕೀಯ ಪ್ರಕ್ಷುಬ್ಧತೆಯ ಕಾಲ. ಕೆಳದಿ, ಮೈಸೂರು ಅರಸರ ಆಳ್ವಿಕೆಯಲ್ಲಿ ಪರಂಪರಾನುಗತ ರೀತಿನೀತಿಗಳ ಮುನ್ನಡೆಗೆ ಸ್ವಲ್ಪಮಟ್ಟಿನ ಪೋಷಣೆ ದೊರಕಿ ಆರ್ಥಿಕ ಸಾಂಸ್ಕೃತಿಕ ರಂಗದಲ್ಲಿ ಕ್ವಚಿತ್ ಸಾಧನೆಗಳಾದರೂ ಹೆಚ್ಚು ಮಟ್ಟಿಗೆ ಇದು ಸಾಂಸ್ಕೃತಿಕ ಸ್ಪಷ್ಟ ಸ್ವರೂಪದ ಕಸಿಗೆ ಅವಕಾಶವೇ ಇಲ್ಲದಿದ್ದಷ್ಟು ತ್ವರಿತವಾಗಿ ರಾಜಕೀಯ ಘಟನೆಗಳು ನಡೆಯುತ್ತಿದ್ದ ಕಾಲ. ಅಧಿಕಾರವನ್ನು ಹಿಡಿಯುವುದು ಪ್ರಭಾವವನ್ನು ಹೆಚ್ಚಿಸಿಕೊಳ್ಳುವುದಷ್ಟೇ ಆಳರಸರ ಧ್ಯೇಯವಾಗಿದ್ದ ಕಾಲದಲ್ಲಿ ದೇಶಾಭಿವೃದ್ಧಿಯೆಡೆಗೆ ಗಮನವಿಡಲು ಅಸಾಧ್ಯವಾಯಿತು.

ಬ್ರಿಟಿಷರ ಆಳ್ವಿಕೆ ಪ್ರಾರಂಭವಾಗುತ್ತಿದ್ದಂತೆಯೇ ದೇಶೀಯ ರೀತಿನೀತಿ ಮೌಲ್ಯಗಳು ಹಿಂದೆ ಬೀಳಲಾರಂಭಿಸಿ, ಆಡಳಿತ ವ್ಯವಸ್ಥೆ, ವಿದ್ಯಾಭ್ಯಾಸ, ಜನಜೀವನಗಳಲ್ಲಿ ಪಾಶ್ಚಿಮಾತ್ಯ ಸಂಪ್ರದಾಯಗಳು ನೆಲೆಯೂರಲು ಪ್ರಾರಂಭವಾಯಿತು. 19ನೆಯ ಶತಮಾನ ಈ ಹೊಸ ಗಾಳಿಯ ಹೊಡೆತದ ಕಾಲ. ದೇಶದ ಆಗುಹೋಗುಗಳಲ್ಲಿ ಪ್ರಮುಖ ಪಾತ್ರ ವಹಿಸಿದ್ದ ಉನ್ನತ ಜನವರ್ಗಗಳಿಗೆ ಇಂಗ್ಲಿಷ್ ಸಂಪ್ರದಾಯಗಳು ಮಾದರಿಯಾಗಲಾರಂಭಿಸಿದುವು. ಕ್ರೈಸ್ತಧರ್ಮ, ಪಾಶ್ಚಿಮಾತ್ಯ ವಾಸ್ತು - ಕಲಾ ಸಂಪ್ರದಾಯಗಳು, ಸ್ವಲ್ಪಮಟ್ಟಿಗೆ ಅಲ್ಲಿನ ಸಾಹಿತ್ಯ, ತತ್ತ್ವ, ನೀತಿ, ಧೋರಣೆಗಳು ಜನಪ್ರಿಯವಾಗಲಾರಂಭಿಸಿದುವು. ಆದರೆ ವಿದ್ಯಾಭ್ಯಾಸದ ಪ್ರಸಾರ ಮತ್ತು ದೇಶದಲ್ಲಿದ್ದ ಶಾಂತಸ್ಥಿತಿಯಿಂದಾಗಿ ದೇಶೀಯ ಪ್ರಜ್ಞೆ ಇಲ್ಲಿನ ಜನಗಳಲ್ಲಿ ಸ್ವಲ್ಪ ಸ್ವಲ್ಪವಾಗಿ ತಲೆಯೆತ್ತಲಾರಂಭಿಸಿದ್ದು ಈ ಕಾಲದ ಒಂದು ವೈಶಿಷ್ಟ್ಯ. ಕಿತ್ತೂರ ರಾಣಿಚೆನ್ನಮ್ಮ (1824), ಸಂಗೊಳ್ಳಿರಾಯಣ್ಣ (1829-30) ಮುಂತಾದ ಕೆಲವು ಧೀರ ವ್ಯಕ್ತಿಗಳ ಆಂಗ್ಲರ ವಿರುದ್ಧದ ಹೋರಾಟ. ಕನ್ನಡ ಅಧ್ಯಯನದ ಹೆಚ್ಚಳ, ಕನ್ನಡ ಸಾಹಿತ್ಯದಲ್ಲಿ ಹೊಸ ರೀತಿ ವಿಧಾನಗಳು ಮುಂತಾದವು ಹುಟ್ಟಿಕೊಂಡಿದ್ದು, ಮೈಸೂರು ಸಂಸ್ಥಾನದಲ್ಲಿ ದೇಶೀ ಕಲೆಗೆ ದೊರಕಿದ ಪ್ರೋತ್ಸಾಹ- ಇವು ಈ ಹೊಸ ದೇಶೀ ಪ್ರಜ್ಞೆಯ ಸೂಚಕಗಳು. ಈ ಕಾಲದಲ್ಲಿ ವಿದೇಶೀ ಆಡಳಿತ ಮತ್ತು ಮೌಲ್ಯಗಳ ವಿರುದ್ಧ ಹುಟ್ಟಿದ ಪ್ರತಿಕ್ರಿಯೆ 20ನೆಯ ಶತಮಾನದಲ್ಲಿ ಪ್ರಬಲವಾಯಿತು.

**ಸ್ವಾತಂತ್ರ್ಯ ಯುಗ :** ಭಾರತ ಸ್ವಾತಂತ್ರ್ಯ ಗಳಿಸಿದ್ದು 1947ರಲ್ಲಾದರೂ ಭಾರತೀಯತೆಯ ಪ್ರಜ್ಞೆಯ ಉತ್ಕರ್ಷವಾದದ್ದು 19ನೆಯ ಶತಮಾನದ ಅಂತ್ಯದಲ್ಲೇ. 20ನೆಯ ಶತಮಾನದಲ್ಲಿ ಇದು ಬೃಹತ್ ಶಕ್ತಿಯಾಯಿತು. ಬ್ರಿಟಿಷರ ಆಳ್ವಿಕೆ ಮುಂದುವರಿದಿದ್ದರೂ ಇದು ಸ್ವಾತಂತ್ರ್ಯ ಯುಗವೇ. ಕರ್ನಾಟಕದ ಈ ಕಾಲದ ಇತಿಹಾಸ ಇಡೀ ಭಾರತ ಚರಿತ್ರೆಯ ಭಾಗವಾಗಿ ಅದೇ ಧಾಟಿಯಲ್ಲೇ ನಡೆಯಿತು. ಮಹಾತ್ಮ ಗಾಂಧೀಜೀಯವರ ನೇತೃತ್ವದಲ್ಲಿ ದೇಶಕ್ಕೆ ದೇಶವೇ ಒಂದಾಗಿ ಎದ್ದುನಿಂತು ಬಹುಮಟ್ಟಿಗೆ ಅಹಿಂಸಾತ್ಮಕವೇ ಆಗಿದ್ದ ರಾಜಕೀಯ ಚಳವಳಿಯನ್ನು ಹೂಡಿತು. ಸಮಸಮವಾಗಿ ಸ್ವದೇಶೀ ಚಳವಳಿ ಎಲ್ಲ ರಂಗಗಳಲ್ಲೂ ವ್ಯಾಪಿಸಿತು. ಕರ್ನಾಟಕವೂ ಒಳಗೊಂಡಂತೆ ಭಾರತದಲ್ಲೆಲ್ಲಾ ವಿದೇಶಿ ಪೊರೆಯನ್ನು ಕಳಚಿ ತನ್ನತನವನ್ನು ಕಂಡುಕೊಳ್ಳುವ ಪ್ರವೃತ್ತಿ ಬೆಳೆಯಿತು. ಸಹಜವಾಗಿ ಕರ್ನಾಟಕದಲ್ಲೂ ಇಡೀ ಕರ್ನಾಟಕ ಒಂದು ಸಾಂಸ್ಕೃತಿಕ ಘಟಕವೆಂಬ ಕಲ್ಪನೆ ಜೊತೆಜೊತೆಗೇ ಹುಟ್ಟಿ ಭಾರತ ಸ್ವಾತಂತ್ರ್ಯ ಸಂಗ್ರಾಮದೊಡನೆ ಕರ್ನಾಟಕ ಏಕೀಕರಣದ ವಿಚಾರಗಳೂ ಪ್ರಯತ್ನಗಳೂ ಪ್ರಬಲಿಸಿದವು. ಕರ್ನಾಟಕ ಸಂಸ್ಕೃತಿಯ ಬಗ್ಗೆ ಹೆಮ್ಮೆ, ಕನ್ನಡ ಭಾಷೆ ಸಾಹಿತ್ಯಗಳತ್ತ ಒಲವು ಹೊಮ್ಮಲಾರಂಭಿಸಿತು. 1956ರಲ್ಲಿ ಕರ್ನಾಟಕ ರಾಜ್ಯಸ್ಥಾಪನೆಯಾಗಿ ಕರ್ನಾಟಕದ ಏಳ್ಗೆಗೆ ಇದು ನಾಂದಿಯಾಯಿತು. ಇದರ ಸಂಘಟನೆ ನಡೆದಿರುವ ಈ ಶತಮಾನದಲ್ಲಿ ವಿಶ್ವದ ಯಾವ ಭಾಗವೂ ಸ್ವಕೋಶದಲ್ಲಿ ಉಳಿದುಕೊಳ್ಳುವುದು ಅಸಾಧ್ಯದ ಮಾತಾಗಿರುವುದರಿಂದ ಆರ್ಥಿಕ ಸಾಮಾಜಿಕ ರಂಗದಲ್ಲಿ ಎಲ್ಲೆಡೆಯೂ ಕಂಡುಬರುವ ಪ್ರವೃತ್ತಿಗಳಿಗೆ ಕರ್ನಾಟಕ ಹೊರತಾಗಿಲ್ಲ. ಆದರೆ ಸಾಂಸ್ಕೃತಿಕ ರಂಗದಲ್ಲಿ ಕನ್ನಡತನ, ಕನ್ನಡ ಪ್ರಜ್ಞೆ ಪ್ರಜ್ವಲಿಸುತ್ತಿದ್ದು ಕರ್ನಾಟಕದ ನವಸಂಸ್ಕೃತಿ ಪುನಾರೂಪಿತಗೊಳ್ಳುವ ಪ್ರವೃತ್ತಿಯನ್ನು ಇತಿಹಾಸಕಾರ ಗುರುತಿಸಬಹುದಾಗಿದೆ. (ಕೆ.ವಿ.ಆರ್.;ಕೆ.ಟಿ.ಆರ್.)

**ಇನಾಂದಾರ್, ವಿ.ಎಂ. :** 1912-86. ಕನ್ನಡದ ಪ್ರಸಿದ್ಧ ಕಾದಂಬರಿಕಾರರು, ಅನುವಾದಕರು, ವಿಮರ್ಶಕರು. ವೆಂಕಟೇಶ ಮಧ್ವರಾವ್ ಇನಾಂದಾರ್ ಇವರ ಪೂರ್ಣ ಹೆಸರು. ಬೆಳಗಾಂವಿ ತಾಲ್ಲೂಕಿನ ಹುದಲಿಯಲ್ಲಿ 1912 ಅಕ್ಟೋಬರ್ 1ರಂದು ಜನಿಸಿದರು. ತಂದೆ ಮಧ್ವರಾಯ, ತಾಯಿ ಕಮಲಾಬಾಯಿ. ಪ್ರಾಥಮಿಕ ಶಿಕ್ಷಣವನ್ನು ಹುದಲಿಯಲ್ಲಿ ಮುಗಿಸಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಚಿನ್ನದ ಪದಕದೊಂದಿಗೆ ಬಿ.ಎ. (ಆನರ್ಸ್) ಪದವಿ ಪಡೆದರು. ಅನಂತರ ಇಂಗ್ಲಿಷ್ ವಿಷಯದಲ್ಲಿ ಮುಂಬಯಿ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವಿ ಪಡೆದರು (1941). ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿ (1943-50), ಉಪಪ್ರಾಧ್ಯಾಪಕರಾಗಿ (1950-60), ಪ್ರಿನ್ಸಿಪಾಲರಾಗಿ (1960-67), ಅನಂತರ ಯು.ಜಿ.ಸಿ.ಪ್ರಾಧ್ಯಾಪಕರಾಗಿ (1967-70) ಹೀಗೆ ಮೂರು ದಶಕಗಳಿಗೂ ಹೆಚ್ಚು ಕಾಲ ಸೇವೆಸಲ್ಲಿಸಿ ನಿವೃತ್ತರಾದರು.

ಮರಾಠಿಯ ಪ್ರಸಿದ್ಧ ಲೇಖಕ ವಿ.ಸ.ಖಾಂಡೇಕರರ ಎರಡು ಧ್ರುವ (1937) ಕಾದಂಬರಿಯ ಅನುವಾದದೊಂದಿಗೆ ಸಾಹಿತ್ಯರಂಗಕ್ಕೆ ಪ್ರವೇಶಿಸಿದ ಇನಾಂದಾರರು ಸ್ವತಂತ್ರ ಕಾದಂಬರಿಗಳನ್ನು ಬರೆದರು, ಅನುವಾದಗಳನ್ನು ಮಾಡಿದರು. ಇವರಿಗೆ ಇಂಗ್ಲಿಷ್, ಸಂಸ್ಕೃತ, ಕನ್ನಡ ಭಾಷೆಗಳಲ್ಲಿ ಆಳವಾದ ಪರಿಶ್ರಮವಿತ್ತು. ಇವರು ಒಟ್ಟು 45ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಮೊದಲಿಗೆ ವಿಮರ್ಶಾ ಗ್ರಂಥಗಳನ್ನು ಬರೆದು ಹೆಸರು ಮಾಡಿದರು. ಮೂರಾಬಟ್ಟೆ ಇವರ ಮೊದಲ ಸ್ವತಂತ್ರ ಕಾದಂಬರಿ (1946). ಕನಸಿನ ಮನೆ (1947), ವಿಜಯ ಯಾತ್ರೆ (1948), ಶಾಪ

(1949), ಸ್ವರ್ಗದ ಬಾಗಿಲು (1950) ಹೀಗೆ ಒಂದೇ ಕಾದಂಬರಿಯನ್ನು ನಾಲ್ಕು ಭಾಗಗಳಲ್ಲಿ ಬರೆದರು. ಈ ಪರಿಯ ಸೊಬಗು, ನವಿಲು ನೌಕೆ,



ಚಿತ್ರಲೇಖ, ಯಾತ್ರಿಕರು, ಮುಕ್ತಿ ಮುಂತಾದ ಹದಿನೆಂಟು ಕಾದಂಬರಿಗಳನ್ನು ಬರೆದಿದ್ದಾರೆ. ಪಾಶ್ಚಾತ್ಯ ಕಾವ್ಯಮೀಮಾಂಸೆ, ಪಾಶ್ಚಾತ್ಯ ವಿಮರ್ಶೆಯ ಪ್ರಾಚೀನ ಪರಂಪರೆ ಇವು ಇವರ ವಿದ್ವತ್ ಕೃತಿಗಳು. ಗೋವಿಂದ ಪೈಗಳ ಕಾವ್ಯ, ಕುವೆಂಪು ಕಾದಂಬರಿಗಳು, ಶ್ರೀನಿವಾಸರ ಕಾದಂಬರಿಗಳು, ಕಾರಂತರ ಕಾದಂಬರಿಗಳು, ಕಾಳಿದಾಸನ ಕೃತಿಗಳು ಮೊದಲಾದವುಗಳ ಬಗ್ಗೆ ವಿಮರ್ಶೆ ಬರೆದಿದ್ದಾರೆ. ವಿ.ಸ.ಖಾಂಡೇಕರರ ಇನ್ನೊಂದು ಪ್ರಸಿದ್ಧ ಕಾದಂಬರಿ ಯಯಾತಿ ಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಅನುವಾದ ಅತ್ಯಂತ ಸೃಜನಶೀಲವಾಗಿದೆ. ಬಿಡುಗಡೆ ಎಂಬುದು ಇವರು ಬರೆದ ಒಂದು ನಾಟಕ. ಅಂಬೇಡ್ಕರ್ ಅವರನ್ನು ಕುರಿತು ಜೀವನ ಚರಿತ್ರೆಯನ್ನು ಬರೆದಿದ್ದಾರೆ. ಉತ್ತರರಾಮ ಚರಿತೆ, ಗೋವಿಂದ ಪೈ, ಶಿವರಾಮಕಾರಂತ - ಇವು ಇಂಗ್ಲಿಷ್‌ನಲ್ಲಿ ಬರೆದ ಗ್ರಂಥಗಳು. ಇವರು ಕೆಲವು ಕಾಲ ಸುಧಾ, ಜಯಂತಿ ಪತ್ರಿಕೆಗಳಲ್ಲಿ ಬರೆದು ಅಂಕಣಕಾರರಾಗಿಯೂ ಪ್ರಸಿದ್ಧಿ ಪಡೆದಿದ್ದರು. ಇವರು ಬರೆದ ಶಾಪ, ಮುಕ್ತಿ ಕಾದಂಬರಿಗಳು ಚಲನಚಿತ್ರವಾಗಿವೆ.

ಇವರ ಸಾಹಿತ್ಯ ಸೇವೆಯನ್ನು ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಕರ್ನಾಟಕ ಸಾಹಿತ್ಯ ಅಕಾಡೆಮಿಗಳು ಗೌರವಿಸಿದೆ. ಯಯಾತಿ ಕಾದಂಬರಿಯ ಅನುವಾದಕ್ಕೆ ಇವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭ್ಯವಾಗಿದೆ. ಸಂಸ್ಕೃತ ನಾಟಕಗಳಲ್ಲಿಯ ನಾಯಿಕೆಯರು ಎಂಬ ಪ್ರಬಂಧಕ್ಕೆ ಮುಂಬಯಿ ವಿಶ್ವವಿದ್ಯಾಲಯದ ಮಾಂಡಲಿಕ ಸುವರ್ಣ ಪದಕ, ಸಂಸ್ಕೃತ ನಾಟಕಗಳಲ್ಲಿಯ ದೀರ್ಘ ಎಂಬ ವಿದೂಷಕ ಪ್ರಬಂಧಕ್ಕೆ ಭಾರತೀಯ ವಿದ್ಯಾಭವನದ ಸುವರ್ಣ ಪದಕ ಇವರಿಗೆ ಲಭಿಸಿದ್ದವು. ಇಂಗ್ಲೆಂಡ್ ಕೆನಡ, ಅಮೆರಿಕ ದೇಶಗಳನ್ನು ಪ್ರವಾಸ ಮಾಡಿದ್ದ ಇವರು 1986ರಲ್ಲಿ ನಿಧನರಾದರು. (ಎಸ್.ಎಂ.ಕೆ.)

**ಇನಾಮತಿ, ಎಚ್.ಎಸ್. :** 1900-86. ಕರ್ನಾಟಕದ ಹಿರಿಯ ಚಿತ್ರಕಲಾವಿದ, ಕಲಾ ಶಿಕ್ಷಕ. ಇವರ ಪೂರ್ತಿ ಹೆಸರು ಹರಿರಾವ್ ಶಾಮರಾವ್ ಇನಾಮತಿ. 1900 ಏಪ್ರಿಲ್ 14ರಂದು ಜಬಲಪುರದಲ್ಲಿ ಜನಿಸಿದರು. ಇಂಟರ್ ಪರೀಕ್ಷೆಯನ್ನು ಪೂರೈಸುವ ಮುನ್ನವೇ ಚಿತ್ರಕಲೆಯಲ್ಲಿ ಆಕರ್ಷಿತರಾಗಿ ಮುಂಬಯಿಯ ಜೆ.ಜೆ.ಸ್ಕೂಲ್ ಆಫ್ ಆರ್ಟ್ಸ್‌ನಲ್ಲಿ ವ್ಯಾಸಂಗ ಮಾಡಿದರು (1926). ಅಲ್ಲಿಯೇ ಡಿಪ್ಲೊಮಾ ಪದವಿ ಪಡೆದರು. (1931). ವಿದ್ಯಾರ್ಥಿ ಜೀವನದಲ್ಲಿಯೇ ಡ್ಯಾಲಿಕರ್ಷಡ್ಜಿ ಎರಡನೆಯ ಬಹುಮಾನ ಪಡೆದರು (1929). ಈ ಬಹುಮಾನದಿಂದಾಗಿ ಇವರಿಗೆ ಮೇಯೋ ವಿದ್ಯಾರ್ಥಿವೇತನ ದೊರೆಯಿತು.

ಕಲಾಶಾಲೆಯ ಪ್ರಾಂಶುಪಾಲರಾದ ಡಬ್ಲ್ಯು.ಜೆ.ಜೆ.ಗ್ಲ್ಯಾಡ್‌ಸ್ಟನ್ ಸಾಲೋಮನ್ ಅವರು 1930ರಲ್ಲಿ ಲಂಡನ್ನಿನಲ್ಲಿ ಏರ್ಪಡಿಸಿದ್ದ ಅಖಿಲ ಭಾರತ ಚಿತ್ರಕಲಾ ಪ್ರದರ್ಶನದಲ್ಲಿ ಇವರು ರಚಿಸಿದ 'ನ್ಯಾಯ' ಚಿತ್ರ ಬಹುಮಾನ ಗಳಿಸಿತು. ಕೆಲ ಕಾಲ ಟೈಮ್ಸ್ ಆಫ್ ಇಂಡಿಯ ಮತ್ತು ಇಲಸ್ಟ್ರೇಟೆಡ್ ವೀಕ್ಲಿಯಂಥ' ಪ್ರಸಿದ್ಧ ಪತ್ರಿಕೆಗಳಲ್ಲಿ ಕಲಾವಿದರಾಗಿ ದುಡಿದರು. ಅನಂತರ ಸ್ವತಂತ್ರವಾಗಿ ಚಿತ್ರಗಳನ್ನು ಬರೆಯತೊಡಗಿದರು. ಜಲವರ್ಣದಲ್ಲಿ ನಿಸರ್ಗದ ಅಪೂರ್ವ ದೃಶ್ಯಗಳನ್ನು ಸೆರೆಹಿಡಿದರು. ಚಿತ್ರ ರಚಿಸುವಲ್ಲಿ ಪ್ರಭುತ್ವ ಪಡೆದರು. ಮೈಸೂರು ದಸರಾ ಕಲಾ ಪ್ರದರ್ಶನದಲ್ಲಿ ಇವರ ಚಿತ್ರಗಳಿಗೆ ಬಹುಮಾನ ದೊರೆಯಿತು. ಜಗನ್ಮೋಹನ ಚಿತ್ರಶಾಲೆಯಲ್ಲಿ ಇವರ ಕಲಾಕೃತಿಗಳನ್ನು ಪ್ರದರ್ಶಿಸಲಾಗಿದೆ. ಎಂ.ಎಸ್.ಎಂ.ರೈಲ್ವೆ ಕಂಪನಿಗೆ ಅನೇಕ ಭಿತ್ತಿ ಪತ್ರಗಳನ್ನು ರಚಿಸಿಕೊಟ್ಟರು. ಅವುಗಳಲ್ಲಿ ಪ್ರಮುಖವಾದುದು ವಿನೆಟ್ ಬಾಂಬೆ, ವಿನೆಟ್ ನಾಗಪುರ, ವಿನೆಟ್ ಮೈಸೂರ್ ದಸರ, ಪ್ರಸಿದ್ಧ ಕನ್ನಡ ಲೇಖಕ ಕೆ.ವಿ.ಅಯ್ಯರ್ ಅವರ ಶಿಷ್ಯರಲ್ಲೊಬ್ಬರಾಗಿದ್ದ ಇವರು ಅಂಗಸಾಧನೆಯಿಂದ ಉತ್ತಮ ದೇಹ ಸಂಪತ್ತನ್ನು ಹೊಂದಿದ್ದರು. ಕಲೆ ಕುರಿತಂತೆ ಇವರು ಅನೇಕ ಲೇಖನಗಳನ್ನು ಇಂಗ್ಲಿಷ್‌ನಲ್ಲಿ ಬರೆದರು. ಕಲಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಕರ್ನಾಟಕ ಚಿತ್ರಕಲಾವಿದರ ಮಹಾಪರಿಷತ್ತಿನ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದರು. ಮೈಸೂರು ಜಗನ್ಮೋಹನ ಶಾಲೆಯ ಕಲಾ ಗ್ಯಾಲರಿಯನ್ನು ಸುವ್ಯವಸ್ಥೆಗೊಳಿಸಿದ ಜೇಮ್ಸ್‌ಕಸಿನ್ಸ್ ಅವರು ಇನಾಮತಿಯವರ ಎಲ್ಲ ಕಲಾಕೃತಿಗಳನ್ನು ಒಂದೇ ಕಡೆ ವೀಕ್ಷಿಸುವ ಅವಕಾಶ ಕಲ್ಪಿಸಿದರು (1948-49). ಇವರು ರಚಿಸಿದ ಅನೇಕ ಕಲಾ ಕೃತಿಗಳು ಹಲವಾರು ಚಿತ್ರ ಸಂಗ್ರಹಾಲಯಗಳಲ್ಲಿವೆ.

1950ರ ಬಳಿಕ ಆಧ್ಯಾತ್ಮದ ಕಡೆ ಇವರ ಗಮನ ಹರಿಯಿತು. ಕೆಲಕಾಲ ಕಾಶ್ಮೀರಕ್ಕೆ ತೆರಳಿ ಆಶ್ರಮದಲ್ಲಿದ್ದರು. ಸಮಕಾಲೀನ ಕಲಾವಿದರಿಂದ ಜೀನಿಯಸ್ ಎಂದು ಕರೆಸಿಕೊಂಡರು. ಬೆಂಗಳೂರಿನ ಜ್ಞಾನಜ್ಯೋತಿ ಕಲಾ ಸಂಘದವರು ಇವರನ್ನು ಸನ್ಮಾನಿಸಿ ಗೌರವಿಸಿದ್ದಾರೆ (1962). ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಶಸ್ತಿಯೂ ಇವರಿಗೆ ದೊರೆತಿದೆ. ಇವರು 1986 ಆಗಸ್ಟ್ 5ರಂದು ನಿಧನರಾದರು. (ಆರ್.ಜಿ.ಆರ್.)

**ಇಬ್ರಾಹೀಂ ಆದಿಲ್ ಷಾ I :** ಆದಿಲ್ ಶಾಹೀ ಮನೆತನದ ನಾಲ್ಕನೆಯ ಸುಲ್ತಾನ (1535-58). ಈ ಮನೆತನದ ಸ್ಥಾಪಕನಾದ ಯೂಸುಫ್ ಆದಿಲ್‌ಷಾನ ಮೊಮ್ಮಗ, ಮಲ್ಲುವಿನ ತಮ್ಮ ಮತ್ತು ಉತ್ತರಾಧಿಕಾರಿ. ಈತನ ತಾತ ಷಿಯಾಪಂಗಡದ ಮುಸ್ಲಿಮನಾಗಿದ್ದರೂ ಇವನು ಸುನ್ನಿ ಮತಸ್ಥ. ದೇಶದ ರಾಜಕೀಯದಲ್ಲಿ ಹೊರಗಿನವರ ಕೈವಾಡ ತಗ್ಗಿಸಬೇಕೆಂಬ ಉದ್ದೇಶದಿಂದ ಇವನು ಹೊರದೇಶಗಳಿಂದ ಬಂದಿದ್ದ ಆಡಳಿತಾಧಿಕಾರಿಗಳನ್ನೂ ಸೈನಿಕರನ್ನೂ ಹಿಂದಕ್ಕೆ ಕಳುಹಿಸಿ ಅವರ ಸ್ಥಾನಗಳಲ್ಲಿ ದಖನೀ ಜನರನ್ನೂ ಆಫ್ರಿಕನರನ್ನೂ ನೇಮಿಸಿದ. ಪಾರಸೀ ಭಾಷೆಯ ಬದಲು ಕನ್ನಡ - ಮರಾಠಿಗಳನ್ನು ಆಡಳಿತ ಭಾಷೆಗಳಾಗಿ ಬಳಸಬೇಕೆಂದು ಆಜ್ಞಾಪಿಸಿದ. ಈ ಕ್ರಮದ ಫಲವಾಗಿ ಸ್ಥಳೀಯ ಮುಸ್ಲಿಮರಿಗೂ ಹಿಂದುಗಳಿಗೂ ಸರ್ಕಾರಿ ಹುದ್ದೆಗಳು ದೊರಕುವುದು ಸಾಧ್ಯವಾಯಿತು.

ಇವನ ಕಾಲದಲ್ಲಿ ದಖನ್ನಿನಲ್ಲಿದ್ದ ಇತರ ಸುಲ್ತಾನರ ಮನೆತನಗಳಾದ ಇಮಾದ್ ಶಾಹೀ (ಬೀರಾರ್), ನಿಜಾಂ ಶಾಹೀ (ಅಹಮದ್‌ನಗರ), ಕುತ್ಬ್ ಶಾಹೀ (ಗೋಲ್ಕೊಂಡ), ಬರೀದ್ ಶಾಹೀ (ಬೀದರ್) ರಾಜ್ಯಗಳಲ್ಲೂ ಕೃಷ್ಣದೇವರಾಯನ ಅನಂತರದಲ್ಲಿ ಇಳಿಮುಖವಾಗಿದ್ದ ವಿಜಯನಗರದಲ್ಲೂ ಅಂತಃಕಲಹಗಳು ಸಾಮಾನ್ಯವಾಗಿದ್ದುವು. ಪಕ್ಷ- ಪ್ರತಿಪಕ್ಷಗಳು ನೆರೆರಾಜ್ಯಗಳ ನೆರವಿನಿಂದ ಇವನ ವಿರುದ್ಧ ಮಸಲತ್ತಿನಲ್ಲಿ ತೊಡಗಿದ್ದುವು. ಈ ಗೊಂದಲದ ಫಲವಾಗಿ ಇಬ್ರಾಹೀಮನಿಗೂ ಶಾಂತಿ ಇಲ್ಲವಾಗಿತ್ತು. ತನ್ನ ಆಳ್ವಿಕೆಯ ಹೆಚ್ಚು ಕಾಲವನ್ನು ಇವನು ಇವರೊಡನೆ ಯುದ್ಧಗಳಲ್ಲಿ ಕಳೆದ. *

**ಇಬ್ರಾಹೀಂ ಆದಿಲ್ ಷಾ II :** ಬಿಜಾಪುರದ ಆದಿಲ್ ಶಾಹೀ ಮನೆತನದ ಆರನೆಯ ಸುಲ್ತಾನ (1580-1627). ಮೊದಲನೆಯ ಇಬ್ರಾಹೀಂ ಆದಿಲ್ ಷಾನ ಸೋದರನ ಮಗ. ಮೊದಲನೆಯ ಇಬ್ರಾಹೀಂ ಆದಿಲ್‌ಷಾನ ಮಗ ಅಲಿ ಆದಿಲ್‌ಷಾ ಸತ್ತಮೇಲೆ ಒಂಬತ್ತನೆಯ ವಯಸ್ಸಿನಲ್ಲಿ ಪಟ್ಟಕ್ಕೆ ಬಂದ. ಇವನ ಚಿಕ್ಕಂದಿನಲ್ಲಿ ಚಾಂದ್‌ಬೀಬಿ (ನೋಡಿ) ರಾಜ್ಯಪಾಲಕಳಾಗಿದ್ದಳು. ಅನಂತರದಲ್ಲಿ ಬಿಜಾಪುರ ಮತ್ತು ಅಹಮದ್‌ನಗರದ ಸುಲ್ತಾನರಲ್ಲಿ ವೈಮನಸ್ಯ ಬೆಳೆದು ಮುಂದುವರೆಯಿತು. ಈ ಸಂದರ್ಭವನ್ನು ಉಪಯೋಗಿಸಿಕೊಂಡು ರಾಜ್ಯವನ್ನು ರಕ್ಷಿಸುವ ನೆಪದಲ್ಲಿ ದಿಲಾವರ್ ಖಾನ್ ಎಂಬವನು ಎಂಟು ವರ್ಷಗಳ ಕಾಲ ಅಧಿಕಾರವನ್ನು ಹಿಡಿದುಕೊಂಡನು. ಕೊನೆಗೆ ಸುಲ್ತಾನನೇ ಅವನನ್ನು ಉಪಾಯದಿಂದ ನಿಗ್ರಹಿಸಬೇಕಾಯಿತು. ಆದಿಲ್ -ಷಾನು ತನ್ನ ತಮ್ಮ ಇಸ್ಮಾಯಿಲ್‌ನ ದಂಗೆಯನ್ನು ಅಡಗಿಸಿ ರಾಜ್ಯವನ್ನು ಮಲಬಾರಿನವರೆಗೂ ವಿಸ್ತರಿಸಿದನು.

1590ರ ದಶಕದಲ್ಲಿ ಮುಗಲರು ದಖನ್ನಿನತ್ತ ವಿಸ್ತರಣಾ ನೀತಿಯನ್ನು ಅನುಸರಿಸತೊಡಗಿದರು. ಆಗ ಅಹಮ್ಮದ್ ನಗರದ

ಚಾಂದ್‌ಬೀಬಿಯು ಮುಗಲರನ್ನು ಎದುರಿಸಿದಾಗ ಆದಿಲ್ ಷಾನು ಅವಳ ನೆರವಿಗೆ ಹೋದನಾದರೂ ಪ್ರಯೋಜನವಾಗಲಿಲ್ಲ. 1601ರಲ್ಲಿ ಅವನು ಸಾಮ್ರಾಟ ಅಕ್ಬರನೊಂದಿಗೆ ಶಾಂತಿ ಒಪ್ಪಂದ ಮಾಡಿಕೊಂಡನು. ತನ್ನ ಮಗಳನ್ನು ಅಕ್ಬರನ ಮಗನಿಗೆ ವಿವಾಹ ಮಾಡಿಕೊಟ್ಟನು.

ಎರಡನೆಯ ಆದಿಲ್ ಷಾನು ಬಿಜಾಪುರದ ಸುಲ್ತಾನರಲ್ಲೇ ಅತ್ಯಂತ ಸಮರ್ಥನೆಂದು ಇತಿಹಾಸಕಾರರು ಪರಿಗಣಿಸಿದ್ದಾರೆ. ಇವನ ಆಸ್ಥಾನದಲ್ಲಿ ಫೆರಿಸ್ತನೆಂಬ ಪ್ರಸಿದ್ಧ ಇತಿಹಾಸಕಾರನಿದ್ದನು. ಆದಿಲ್ ಷಾನ ಸೈನ್ಯದಲ್ಲಿ 80ಸಾವಿರ ಅಶ್ವದಳ ಮತ್ತು 2ಲಕ್ಷ ಪದಾತಿದಳವಿತ್ತೆಂದು ಹೇಳಲಾಗಿದೆ. ಎರಡನೆಯ ಇಬ್ರಾಹೀಂ ಪರಮತಸಹಿಷ್ಣು, ವಿವೇಕಿ, ಕಲೆಗೂ ಶಾಸ್ತ್ರಗಳಿಗೂ ಆಶ್ರಯದಾತ. ಪರ್ಷಿಯದಿಂದಲೂ ಭಾರತದ ಹಲವಾರು ಭಾಗಗಳಿಂದಲೂ ಕವಿಗಳೂ ಲೇಖಕರೂ ಸಂತರೂ ಆಗ ಬಿಜಾಪುರಕ್ಕೆ ಆಗಮಿಸಿದ್ದರು. ಈತನ ಕಾಲದಲ್ಲಿ ವಿಭಿನ್ನ ಕಲಾಶಾಖೆಗಳಲ್ಲಿ ಪ್ರಸಿದ್ಧವಾದ ಗ್ರಂಥಗಳು ರಚಿತವಾದುವು. ಇಬ್ರಾಹೀಮನಿಗೆ ಶಿಲ್ಪಕಲೆಯೆಂದರೆ ಬಹಳ ಇಷ್ಟ. ಲೋಕಪ್ರಸಿದ್ಧವಾದ ಬಿಜಾಪುರದ ಇಬ್ರಾಹೀಂ ರೋಜ ಇವನ ಕಾಲದಲ್ಲಿ ಕಟ್ಟಿದ ಸುಂದರ ಕಟ್ಟಡ. ಈತನ ಆಸ್ಥಾನದಲ್ಲಿದ್ದ ಪಾರಸೀ ಭಾಷೆಯ ಕವಿಗಳಲ್ಲಿ ಜಹೂರಿ ಮತ್ತು ಮಲ್ಲಿಕ್ ಕುಮಿ ಪ್ರಸಿದ್ಧರು. ಅಬುಲ್ ಕಾಸಿಂ ಫೆರಿಸ್ತ ಎಂಬುವನು ಆದಿಲ್ ಷಾನ ಪ್ರೋತ್ಸಾಹದಿಂದ ತಾರೀಖ್ ಪೆರಿಸ್ತ ಎಂಬ ಹೆಸರಿನಲ್ಲಿ ಭಾರತದ ಇತಿಹಾಸ ಬರೆದಿದ್ದಾನೆ. ಭಾರತೀಯ ಭಾಷೆ ಸಂಸ್ಕೃತಿಗಳಿಗೆ ಈ ಸುಲ್ತಾನ ತುಂಬ ಪ್ರೋತ್ಸಾಹ ನೀಡುತ್ತಿದ್ದ. ಪಾರಸೀ ಭಾಷೆಯಲ್ಲೂ ಇವನು ವಿದ್ವಾಂಸನಾಗಿದ್ದ. ದಖನೀ ಭಾಷೆಯಲ್ಲಿ ಪ್ರೇಮವಿತ್ತು. ಈತ ಕಿತಾಬೆ ನವರಸ್ ಎಂಬ ಸಂಗೀತ ಗ್ರಂಥವನ್ನು ಸು.1600ರಲ್ಲಿ ಬರೆದನೆಂದು ಹೇಳಲಾಗಿದೆ. ಇದರಲ್ಲಿ ರಾಗಗಳ ವಿವರಣೆಯೂ ಒಂದೊಂದು ರಾಗದ ಮೇಲೆ ಇವನು ಬರೆದಿರುವ ಗೀತೆಗಳೂ ದೋಹಾಗಳೂ ಇವೆ. ಈ 17 ರಾಗಗಳಲ್ಲಿ 59 ಗೀತೆಗಳು ಮತ್ತು 17 ದೋಹಾಗಳಿವೆ. ನವರಸವೆಂಬುದು ಈತನ ಪ್ರೀತಿಯ ಶಬ್ದ. ಇವನ ಪಟ್ಟದ ಆನೆಯ ಹೆಸರು ನವರಸ್ ಪೈಕರ್. ಧ್ವಜವೇ ಮುಂತಾದ ಒಂಬತ್ತು ಲಾಂಛನಗಳೂ ನವರಸವೇ. ಇವನು ಆಬಾದು ಮಾಡಿದ್ದ ಪಟ್ಟಣ ನವರಸಪುರವೆಂದೂ ನವರಸಮಹಲ್ ಮತ್ತು ನವರಸಬೆಹಿಷ್ತ್ ಎಂಬ ಕಟ್ಟಡಗಳನ್ನು ಇವನು ಕಟ್ಟಿಸಿದನೆಂದೂ ಹೇಳಲಾಗಿದೆ. ಇದರ ಒಂದು ಕೇರಿ ಸಂಗೀತವಿದ್ವಾಂಸರಿಗೆ ಮೀಸಲಾಗಿದ್ದು ಅಲ್ಲಿ ಸಾವಿರಾರು ಮಂದಿ ಕಲಾಕಾರರಿದ್ದರು. ಉತ್ತರ ಭಾರತ ಹಾಗೂ ವಾರಾಣಸಿಯಿಂದ ಅನೇಕ ಸಂಗೀತ ವಿದ್ವಾಂಸರು ಇಲ್ಲಿ ಬಂದು ವಾಸಿಸುತ್ತಿದ್ದರೆಂದೂ ಪ್ರತೀತಿ. ಉತ್ತಮ ದರ್ಜೆಯ ವಿದ್ವಾಂಸರಿಗೆ ಅತಾಯಿ ಎಂದೂ ಅವರಿಗಿಂತ ಕಡಿಮೆ ದರ್ಜೆಯವರಿಗೆ ಗುಣಿಜನರೆಂದೂ ಹೆಸರಿತ್ತಂತೆ. ಈತನ ಸಂಗೀತ ಪ್ರೇಮದಿಂದ ಇವನಿಗೆ ಜಗುದ್ಗುರು ಎಂಬ ಖ್ಯಾತಿ ಬಂತೆಂದು ಪ್ರತೀತಿ. ಮೆಡೋಸ್ ಟೇಲರ್ ಎಂಬ ಇತಿಹಾಸಕಾರ ಈತನನ್ನು ಆದಿಲ್‌ಶಾಹೀ ಮನೆತನದಲ್ಲೇ ಅತ್ಯಂತ ಶ್ರೇಷ್ಠನೆಂದು ಹೊಗಳಿದ್ದಾನೆ. *

**ಇರುಗಪ್ಪ ದಂಡನಾಯಕ :** ವಿಜಯನಗರ ಸಾಮ್ರಾಜ್ಯದ ಸಂಗಮ ವಂಶದ ಅರಸನಾದ ಇಮ್ಮಡಿ ಹರಿಹರನ (1376-1404) ಮಂತ್ರಿ. ಪ್ರಸಿದ್ಧ ದಂಡನಾಯಕ. ಒಂದನೆಯ ಬುಕ್ಕರಾಯನ ಮಗ ಬೈಚೆಯ ದಂಡನಾಯಕನ ಮಗ. ಈತ ಜೈನ. ಪಂಡಿತಾಚಾರ್ಯ ಇವನ ಗುರು. 1385ರ ಶಾಸನವೊಂದರ ಪ್ರಕಾರ ರಾಜಧಾನಿಯಾದ ವಿಜಯನಗರದಲ್ಲಿ ಕುಂತಜಿನಾಲಯ ಎಂಬ ಬಸದಿಯನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ಈಗ ಹಂಪೆಯಲ್ಲಿರುವ ಗಾಣಗಿತ್ತಿ ದೇವಾಲಯವೇ ಈತ ಕಟ್ಟಿಸಿದ ಬಸದಿಯಾಗಿರಬೇಕೆಂದು ವಿದ್ವಾಂಸರ ಊಹೆ. ಶ್ರವಣಬೆಳಗೊಳದಲ್ಲಿ ಒಂದು ಕೆರೆಯನ್ನು ಕಟ್ಟಿಸಿ ಒಂದು ತೋಪನ್ನು ಬೆಳೆಸಿದನೆಂದು ಮತ್ತೊಂದು ಶಾಸನದಿಂದ ತಿಳಿದುಬರುತ್ತದೆ.ಇರುಗಪ್ಪ ದಕ್ಷ ದಂಡನಾಯಕನಾಗಿದ್ದುದಲ್ಲದೆ ಕವಿಯೂ ಆಗಿದ್ದ. ಸಂಸ್ಕೃತದ ನಾನಾರ್ಥ ರತ್ನಮಾಲಾ ಎಂಬ ಗ್ರಂಥ ಈತನಿಂದ ರಚಿತವಾಯಿತು (ಇರುಗಪ್ಪನಿಂದ ಪೋಷಿತನಾದ ಭಾಸ್ಕರ ಕವಿ ಇದರ ಕರ್ತೃ ಎಂದೂ ಕೆಲವರ ಅಭಿಪ್ರಾಯ). ಇಮ್ಮಡಿ ಬೈಚ ಮತ್ತು ಇಮ್ಮಡಿ ಇರುಗಪ್ಪ ಈತನ ಮಕ್ಕಳು. ಇಮ್ಮಡಿ ದೇವರಾಯನ ಆಳ್ವಿಕೆಯ ಪ್ರಾರಂಭದಲ್ಲಿ ಇರುಗಪ್ಪ ದಂಡನಾಯಕ ಮರಣಹೊಂದಿದ. (ಜಿ.ಆರ್.ಆರ್.)

**ಇರುಪು :** ಕೊಡಗು ಜಿಲ್ಲೆ ವಿರಾಜಪೇಟೆ ತಾಲ್ಲೂಕಿನಲ್ಲಿರುವ ಒಂದು ಯಾತ್ರಾಸ್ಥಳ ಹಾಗೂ ಪ್ರೇಕ್ಷಣೀಯ ಸ್ಥಳ. ವಿರಾಜಪೇಟೆಯಿಂದ ಸು.45ಕಿಮೀ ದೂರದಲ್ಲಿದೆ. ಇದನ್ನು ಇರ್ಪು ಎಂದೂ ಕರೆಯಲಾಗುತ್ತದೆ. ಕುರ್ಚಿ ಗ್ರಾಮಕ್ಕೆ ಸೇರಿರುವ ಈ ಯಾತ್ರಾಸ್ಥಳವನ್ನು ತಲುಪಲು ಕುಟ್ಟ ಶ್ರೀಮಂಗಲ ರಸ್ತೆಯಲ್ಲಿ ಹಾದು ಎಡಕ್ಕೆ ತಿರುಗಿ ಕಚ್ಚಾ ರಸ್ತೆಯಲ್ಲಿ 5ಕಿಮೀ ಸಾಗಿದರೆ ಇರ್ಪು ಸಿಗುತ್ತದೆ. ಇದು ಕಣಿವೆ ಭಾಗದಲ್ಲಿರುವ ರಮಣೀಯ ಜಾಗ. ಪೌರಾಣಿಕ ಹಿನ್ನಲೆ ಉಳ್ಳದ್ದು. ಇಲ್ಲಿರುವ ರಾಮೇಶ್ವರ ದೇವಾಲಯ ಹಾಗೂ ಬ್ರಹ್ಮಗಿರಿ ಬೆಟ್ಟದಿಂದ ಹರಿದುಬರುವ ಲಕ್ಷ್ಮಣ ತೀರ್ಥಹೊಳೆ ಇಲ್ಲಿಯ ಮಹತ್ತ್ವವನ್ನು ಹೆಚ್ಚಿಸಿದೆ. ಲಕ್ಷ್ಮಣತೀರ್ಥ ಇಲ್ಲಿ ಧುಮುಕಿ ಹರಿಯುವುದರಿಂದ ಜಲಪಾತ ಸೃಷ್ಟಿಯಾಗಿದೆ. ಇದು ಇರ್ಪು ಜಲಪಾತವೆಂದು ಜನಪ್ರಿಯವಾಗಿದೆ.



ಇರುಪು ಜಲಪಾತ

ಶ್ರೀರಾಮನು ಲಕ್ಷ್ಮಣತೀರ್ಥದ ದಡದಲ್ಲಿ ರಾಮೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಿದನೆಂಬುದು ಸ್ಥಳಪುರಾಣ. ಈಗಿನ ದೇಗುಲದ ವಿಶಾಲ ಆವರಣ ಸುಂದರವಾಗಿದ್ದು ವಿವಿಧ ಕಟ್ಟಡಗಳನ್ನು ಹೊಂದಿದೆ. ಇಲ್ಲಿರುವ ಶಿಲ್ಪ ರಚನೆ ಕೇರಳದ ವಾಸ್ತುಶಿಲ್ಪವನ್ನು ಹೋಲುತ್ತದೆ. ದೇವಾಲಯದ ಸುತ್ತ ಪ್ರದಕ್ಷಿಣಾ ಪಥವಿದೆ. ಮೇಲ್ಭಾಗದಲ್ಲಿ ಶಿಖರವಿದೆ. ಹೊರ ಪ್ರಾಕಾರದಲ್ಲಿ ಗಂಧರ್ವ, ಭೈರವ, ಕುರ್ಚಿ ಮಹಾದೇವ, ಪಾರ್ವತಿ ಹಾಗೂ ಗಣಪತಿಯ ಗುಡಿಗಳಿವೆ. ಒಂದು ಸಣ್ಣ ಜೆಂಬಿಟ್ಟಿಗೆಯ ಗುಡಿಯಲ್ಲಿ ಖಾಲಿ ಇರುವ ಪಾಣಿಪೀಠವಿದೆ. ಎರಡು ಕಂಚಿನ ಮೂರ್ತಿಗಳಿದ್ದು, ಕುದರೆಯ ಮೇಲೆ ಕುಳಿತ ಮತ್ತೊಂದು ಮೂರ್ತಿ ಗಂಡಿನದಾಗಿದ್ದು ಕೈಯಲ್ಲಿ ಖಡ್ಗ ಹಾಗೂ ಫಲಕವಿದೆ. ಶಿವರಾತ್ರಿಯಂದು ಇಲ್ಲಿ ವಾರ್ಷಿಕ ಜಾತ್ರೆ ನಡೆಯುತ್ತದೆ.



ರಾಮೇಶ್ವರ ದೇವಾಲಯ

ರಾಮೇಶ್ವರ ದೇವಾಲಯ ಆಗಿಂದಾಗ್ಗೆ ಜೀರ್ಣೋದ್ಧಾರವಾಗಿದೆ. ಕಿಗ್ಗಟ್ಟು ಹತ್ತುನಾಡು ರೈತರು ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದ ಬಗ್ಗೆ ಶಾಸನ ದಾಖಲೆಯಿದೆ.

ದೇವಾಲಯದ ದಕ್ಷಿಣಕ್ಕಿರುವ ಕುರ್ಚಿ ಗ್ರಾಮದಲ್ಲಿ ಹಿಂದೆ ಅರಮನೆ ಇತ್ತು. ದೊಡ್ಡವೀರರಾಜೇಂದ್ರ ಪಿರಿಯಾಪಟ್ಟಣದಿಂದ ಕಣ್ತಪ್ಪಿಸಿಕೊಂಡು ಬಂದಾಗ ಇಲ್ಲಿಯ ಆಯಕಟ್ಟಿನ ಜಾಗದಲ್ಲಿ ಚಿಕ್ಕ ಅರಮನೆ ಕಟ್ಟಿಸಿದ. ಇದನ್ನು ಕೇರಳದ ಇವನ ಶತ್ರುಗಳು ಸುಟ್ಟುಹಾಕಿದರು ಎಂದು ಹೇಳಲಾಗುತ್ತದೆ. ಪಿರಿಯಾಪಟ್ಟಣ ತಾಲ್ಲೂಕಿನ ಕಂಪಲಾಪುರದ 1174ರ ಶಾಸನದಲ್ಲಿ ಉಲ್ಲೇಖಿತವಾಗಿರುವ ಮಾಂಡಲೀಕ ಉದಯಾದಿತ್ಯನ ರಾಜಧಾನಿ ಕುರುಚಿ ಎಂಬ ಸ್ಥಳ ಇದೇ. ಕುರ್ಚಿ ಎಂದೂ ಹೇಳಲಾಗಿದೆ. ಇಲ್ಲಿ ಅಜಮಾಡ ಕುಟುಂಬಕ್ಕೆ ಸೇರಿದ ದೊಡ್ಡಮನೆ ಇದ್ದು ಎರಡು ಹಳೆಯ ತಾಳವಾರಗಳಿವೆ.

ದೇವಾಲಯದ ವಾಯುವ್ಯಕ್ಕೆ ಸುಮಾರು 1ಕಿ.ಮೀ ಏರುದಾರಿಯನ್ನು ಶ್ರಮಿಸಿದರೆ ಇರ್ಪು ಜಲಪಾತ ಸಿಗುತ್ತದೆ. ಇದಕ್ಕೆ ಸ್ವಲ್ಪ ದೂರದಲ್ಲಿ ಬ್ರಹ್ಮಗಿರಿ ಪರ್ವತ ಶ್ರೇಣಿ ಇದೆ. ಇಲ್ಲಿಂದ ಸುಂದರ ನಿಸರ್ಗವನ್ನು ವೀಕ್ಷಿಸಬಹುದು. ಕಡಿದಾದ ಕೋನಾಕಾರದ ಬೆಟ್ಟಗಳ ನಡುವೆ ಸು.100 ಅಡಿ ಹಾಗೂ 70 ಅಡಿ ಎತ್ತರದಿಂದ ಎರಡು ಹಂತಗಳಲ್ಲಿ ಈ ಹೊಳೆಯು ಭೋರ್ಗರೆಯುವ ಬಂಡೆಗಳಿಂದ ಕೂಡಿರುವ ಪ್ರಪಾತಕ್ಕೆ ಧುಮುಕುವ ದೃಶ್ಯ ನಯನ ಮನೋಹರವಾದುದು. ಲಕ್ಷ್ಮಣತೀರ್ಥ ಹೊಳೆ ಇಲ್ಲಿಂದ ವಾಯುವ್ಯಕ್ಕೆ ಹರಿದು ರಾಯತೀರ್ಥವೆಂಬ ಸಣ್ಣಹೊಳೆಯನ್ನು ಕೂಡಿಕೊಂಡು ಸಾಗಿ ಮೈಸೂರು ಜಿಲ್ಲೆಯಲ್ಲಿ ಕಾವೇರಿಯನ್ನು ಸೇರುತ್ತದೆ. ಇರ್ಪುವಿನಲ್ಲಿ ಶಿವರಾತ್ರಿಯ ಮರುದಿನ ದೊಡ್ಡ ಜಾತ್ರೆ ನಡೆಯುತ್ತದೆ. (ಎಸ್.ಎಚ್.ಇ.)

**ಇಸ್ತೂರು :** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ಒಂದು ಗ್ರಾಮ. ದೊಡ್ಡಬಳ್ಳಾಪುರದಿಂದ ಸು.12ಕಿಮೀ ದೂರದಲ್ಲಿದೆ. ಇದಕ್ಕೆ ಇಟ್ಟೂರು, ಏಸೂರು ಎಂಬ ಹೆಸರುಗಳೂ ಇವೆ. ಗ್ರಾಮದ ಹೊರವಲಯದಲ್ಲಿರುವ ನೀಲಕಂಠೇಶ್ವರ ದೇವಾಲಯ ಗಂಗರ ಕಾಲದ ಶೈಲಿಯಲ್ಲಿದೆ. ದೇವಾಲಯಕ್ಕೆ ಚತುರಸ್ರ ಗರ್ಭಗುಡಿ ಮತ್ತು ಕದಂಬನಾಗರ ಶೈಲಿಯ ಶಿಖರಗಳಿವೆ. ಇಲ್ಲಿ ಸೂರ್ಯ, ವಿಷ್ಣು, ಗಣೇಶ ಹಾಗೂ ಮಹಿಷಮರ್ದಿನಿ ಶಿಲ್ಪಕೃತಿಗಳಿವೆ. ಗರ್ಭಗುಡಿಯ ಮುಂದೆ ಅರ್ಧಮಂಟಪ ಹಾಗೂ ಅದರ ಮುಂದೆ ಹೊರಮಂಟಪ ಇದ್ದು ಇವೆರಡೂ ತರುವಾಯದಲ್ಲಿ ಸೇರಿಸಿದವಾಗಿದ್ದು ಹೊರಮಂಟಪ ಸಂಪೂರ್ಣ ವಿಜಯನಗರ ಶೈಲಿಯಲ್ಲಿದೆ. ಊರಿನ ಒಳಗೆ ಕೋದಂಡರಾಮ, ಆಂಜನೇಯ, ಕಬ್ಬಾಳಮ್ಮ ಮತ್ತು ಬಸವಣ್ಣ ದೇವಾಲಯಗಳಿವೆ. ಕಬ್ಬಾಳಮ್ಮ ದೇವಾಲಯದ ಬಳಿಯಲ್ಲಿ 1306ರ ಹೊಯ್ಸಳರ ಶಾಸನವೊಂದಿದೆ. ಮುಮ್ಮಡಿ ಬಲ್ಲಾಳನು ಬಡಿಗ, ಕಮ್ಮಾರ ಹಾಗೂ ಅಕ್ಕಸಾಲಿಗ ಮತ್ತು ಎಲ್ಲಾ ವೀರಪಾಂಚಾಳರು ಯಾರು ದ್ವಾರಸಮುದ್ರದ ಹಿರಿಯ ಕಲಮಠ ಹಾಗೂ ಅದರ ಶಾಖಾಮಠವಾದ ಜಪೆಗೂಮಠಕ್ಕೆ ಸಂಬಂಧಿಸಿರುವರೊ ಅವರೆಲ್ಲರಿಗೂ ಅನೇಕ ದಾನಗಳನ್ನು ಇತ್ತುದನ್ನು ದಾಖಲಿಸಿದೆ. ಅನೇಕ ಸುಂಕಗಳಿಗೆ ಸಂಬಂಧಿಸಿದಂತೆ ತಾಮ್ರಶಾಸನವನ್ನು ಬರೆಸಿದ ಸಂಗತಿಯನ್ನೂ ಈ ಶಾಸನ ತಿಳಿಸಿದೆ. ಇಲ್ಲಿಗೆ ಸಮೀಪದ ಕಾಡನೂರು ಮತ್ತು ದೊಡ್ಡಹೆಜ್ಜಾಜಿ ಗ್ರಾಮಗಳಲ್ಲಿ ವಿಜಯನಗರ ಕಾಲದ ದೇವಾಲಯಗಳಿವೆ. (ಎಸ್.ಜಿಎ.)

**ಇಸ್ಮಾಯಿಲ್ ಆದಿಲ್ ಷಾ :** ಆದಿಲ್ ಶಾಹೀ ಮನೆತನದ 2ನೆಯ ದೊರೆ (1510-34). ಅದರ ಸ್ಥಾಪಕ ಯೂಸುಫನ ಮಗ. ಇವನು ಸುಲ್ತಾನನಾದಾಗ 12-13 ವರ್ಷಗಳ ಬಾಲಕ. ಯೂಸುಫ್ ತನ್ನ ಕೊನೆಗಾಲದಲ್ಲಿ ಮಂತ್ರಿ ಕಮಾಲ್‌ಖಾನನನ್ನು ರಾಜ್ಯ ಪ್ರತಿನಿಧಿಯನ್ನಾಗಿ ನೇಮಿಸಿದ್ದ. ಕಮಾಲ್‌ಖಾನ್ ಅಧಿಕಾರವನ್ನು ತನ್ನಲ್ಲೇ ಕೇಂದ್ರೀಕರಿಸಿಕೊಂಡು ಇಸ್ಮಾಯಿಲ್‌ನನ್ನು ಪದಚ್ಯುತಿಗೊಳಿಸಿ ಸುಲ್ತಾನನಾಗಲು ಪ್ರಯತ್ನಪಟ್ಟ. ಆದರೆ ಆ ಸಂಚಿನಲ್ಲಿ ಕಮಾಲ್‌ಖಾನನೇ ಕೊಲೆಯಾದ. ಬಹಮನೀ ರಾಜ್ಯದಲ್ಲಿ (ಬಿದರೆ) ಪ್ರಬಲನಾಗಿದ್ದ ಅಮೀರ್ ಬರೀದ್ ಎಂಬ ತುರ್ಕಿ ಶ್ರೀಮಂತನ ಕೈವಾಡದಿಂದ ಬಹಮನೀ ಮತ್ತು ಆದಿಲ್ ಶಾಹೀ ರಾಜ್ಯಗಳ ನಡುವೆ ಅನೇಕ ಯುದ್ಧಗಳು ನಡೆದವು. ಹಿಂದೆ ಇಸ್ಮಾಯಿಲ್‌ನನ್ನು ಪದಚ್ಯುತಿಗೊಳಿಸುವ ಒಳಸಂಚಿನಲ್ಲಿ ಕಮಾಲ್‌ಖಾನನ ಜೊತೆ ಅಮೀರ್ ಬರೀದ್ ಸಹ ಸೇರಿದ್ದ.

ಇಸ್ಮಾಯಿಲ್‌ನ ಕಾಲದಲ್ಲಿ ವಿಜಯನಗರದೊಡನೆಯೂ ಯುದ್ಧಗಳು ನಡೆದುವು. ರಾಯಚೂರು ಮತ್ತು ಮುದ್ಗಲನ್ನು ವಿಜಯನಗರದ ರಾಜನಿಂದ ಗೆಲ್ಲುವ ಉದ್ದೇಶದಿಂದ ದಂಡೆತ್ತಿ ಹೋಗಿ ಕೃಷ್ಣಾನದಿಯ ದಂಡೆಯ ಮೇಲೆ ಬಿಡಾರ ಬಿಟ್ಟಾಗ (1520ರ ಮೇ) ಕೃಷ್ಣದೇವರಾಯನ ಸೈನ್ಯಕ್ಕೂ ಮತ್ತು ಇಸ್ಮಾಯಿಲ್‌ನ ಸೈನ್ಯಕ್ಕೂ ನಡೆದ ಯುದ್ಧದಲ್ಲಿ ಇಸ್ಮಾಯಿಲ್ ಸೋತು ಪಲಾಯನ ಮಾಡಿದ. ಕಾಲಕ್ರಮೇಣ ಕೃಷ್ಣದೇವರಾಯನೇ ಬಿಜಾಪುರದ ಮೇಲೆ ದಂಡೆತ್ತಿಹೋಗಿ ಇಸ್ಮಾಯಿಲ್‌ನನ್ನು ಸೋಲಿಸಿ ತನ್ನ ರಾಜ್ಯಕ್ಕೆ ಹಿಂದಿರುಗಿದ. ಪುನಃ ಇಸ್ಮಾಯಿಲ್ ರಾಯಚೂರನ್ನು ಗೆಲ್ಲಲು ಪ್ರಯತ್ನಿಸಿ ವಿಫಲನಾದ. ಕೃಷ್ಣದೇವರಾಯನ ಮರಣಾನಂತರ ಇಸ್ಮಾಯಿಲ್ ರಾಯಚೂರು ಮತ್ತು ಮುದ್ಗಲಗಳನ್ನು ಗೆದ್ದುಕೊಂಡ.

ಇಸ್ಮಾಯಿಲ್‌ನ ಆಸ್ಥಾನಕ್ಕೆ ಇರಾನಿನ ಷಾ ರಾಯಭಾರಿಗಳನ್ನು ಕಳುಹಿಸಿದ್ದ. ಇದರಿಂದ ಪ್ರೀತನಾದ ಇಸ್ಮಾಯಿಲ್ ಇರಾನಿನ ಷಾ ಅನುಸರಿಸುತ್ತಿದ್ದ ಷಿಯಾ ಪಂಥ'ಕ್ಕೆ ಪ್ರೋತ್ಸಾಹ ನೀಡಿದ. ರಾಜ್ಯ ವ್ಯವಹಾರದಲ್ಲಿ ಪ್ರಬಲರಾಗಿದ್ದ ದಖನೀ ಗುಂಪಿನವರ ಹಮ್ಮನ್ನು ತಗ್ಗಿಸಿದ್ದು ಇವನ ಸಾಧನೆಗಳಲ್ಲೊಂದು. (ಎಸ್.)

**ಇಸ್ಮಾಯಿಲ್, ಮಿರ್ಜಾ ಮಹಮ್ಮದ್ :** 1883-1959. ಪ್ರಸಿದ್ಧ ಆಡಳಿತಗಾರರು, ಮೈಸೂರು ಸಂಸ್ಥಾನದ ದಿವಾನರು (1926-41).

ಪರ್ಷಿಯಾದಿಂದ ಬಂದು ಬೆಂಗಳೂರಿನಲ್ಲಿ ನೆಲೆಸಿದ್ದ ಗಣ್ಯ ಕುಟುಂಬವೊಂದರಲ್ಲಿ 1883 ಅಕ್ಟೋಬರ್ 20ರಂದು ಜನಿಸಿದರು. ಬಾಲ್ಯ



ವಿದ್ಯಾಭ್ಯಾಸ ಬೆಂಗಳೂರಿನ ಸೇಂಟ್ ಪ್ಯಾಟ್ರಿಕ್ ಶಾಲೆ ಮತ್ತು ವೆಸ್ಲಿಯನ್ ಶಾಲೆಗಳಲ್ಲಿ. ಅನಂತರ ಮೈಸೂರಿನಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ ವಿದ್ಯಾಭ್ಯಾಸಕ್ಕೆ ಪ್ರಾರಂಭಿಸಿದ (1901) ವಿಶೇಷ ಶಾಲೆಯಲ್ಲಿ ಅವರ ಸಹಪಾಠಿಗಳಾಗಿದ್ದು, ಮುಂದೆ ಬೆಂಗಳೂರು ಸೆಂಟ್ರಲ್ ಕಾಲೇಜಿನಿಂದ ಪದವೀಧರರಾಗಿ (1905), ಅದೇ ವರ್ಷ ಮೈಸೂರು ಸರ್ಕಾರದ ಪೋಲೀಸ್ ಇಲಾಖೆಯಲ್ಲಿ ಅಸಿಸ್ಟೆಂಟ್ ಸೂಪರಿಟೆಂಡೆಂಟ್ ಆಗಿ ನೇಮಕವಾದರು. ಮಹಾರಾಜರ ಉಪಕಾರ್ಯದರ್ಶಿ (1908), ಹುಜೂರ್ ಕಾರ್ಯದರ್ಶಿ (1914), ಆಪ್ತಕಾರ್ಯದರ್ಶಿ (1923) ಹುದ್ದೆಗಳನ್ನು ವಹಿಸಿಕೊಂಡು 1926ರಲ್ಲಿ ಸಂಸ್ಥಾನದ ದಿವಾನರಾದರು.

ಇವರು ದಿವಾನರಾಗಿದ್ದ ಹದಿನೈದು ವರ್ಷಗಳಲ್ಲಿ (1926-41) ಸರ್ ಎಂ.ವಿಶ್ವೇಶ್ವರಯ್ಯನವರು ಹಾಕಿದ್ದ ತಳಹದಿಯ ಮೇಲೆ ರಾಜ್ಯದ ಸರ್ವತೋಮುಖ ಬೆಳವಣಿಗೆಯನ್ನು ಸಾಧಿಸಲು ಯತ್ನಿಸಿದರು. ಮೈಸೂರು ಸಂಸ್ಥಾನ ಬ್ರಿಟಿಷರಿಗೆ ಕೊಡಬೇಕಾಗಿದ್ದ ಕಪ್ಪವನ್ನು 35 ಲಕ್ಷದಿಂದ 10½ ಲಕ್ಷಕ್ಕೆ ಇಳಿಸಿದರು (1928). ಮಂಡ್ಯ, ಮಳವಳ್ಳಿ ಮತ್ತು ತಿರುಮಕೂಡಲು ನರಸೀಪುರ ತಾಲ್ಲೂಕುಗಳಲ್ಲಿ ನೀರಾವರಿ ಸೌಲಭ್ಯವನ್ನು ಒದಗಿಸುವ ಇರ್ವಿನ್ ನಾಲೆ (ಈಗಿನ ವಿಶ್ವೇಶ್ವರಯ್ಯ ನಾಲೆ) ನಿರ್ಮಾಣ ಮೊದಲಾದ ಕಾರ್ಯಗಳಿಂದ ಇವರ ಆಡಳಿತ ಕಾಲದಲ್ಲಿ 1,20,000 ಎಕರೆ ಭೂಮಿ ನೀರಾವರಿ ವ್ಯವಸಾಯಕ್ಕೆ ಬಂದಿತು. ಜೋಗ್ ಮತ್ತು ಶಿಂಷಾಗಳಲ್ಲಿ ವಿದ್ಯುದುತ್ಪಾದನಾ ಸ್ಥಾವರಗಳನ್ನು ಸ್ಥಾಪಿಸಿದ್ದಲ್ಲದೆ, ಗ್ರಾಮಗಳಿಗೂ ವಿದ್ಯುತ್ ಒದಗಿಸುವ ಯೋಜನೆಯನ್ನು ಇಡೀ ಭಾರತದಲ್ಲೇ ಮೊದಲು ಈ ಸಂಸ್ಥಾನದಲ್ಲಿ ಜಾರಿಗೆ ತಂದರು. ಭದ್ರಾವತಿಯಲ್ಲಿ ಕಾಗದ ಮತ್ತು ಸಿಮೆಂಟ್ ಕಾರ್ಖಾನೆಗಳು, ಬೆಂಗಳೂರಿನಲ್ಲಿ ಪಿಂಗಾಣಿ ಮತ್ತು ವಿಮಾನ ಕಾರ್ಖಾನೆಗಳು, ಮಂಡ್ಯದಲ್ಲಿ ಸಕ್ಕರೆ ಕಾರ್ಖಾನೆ, ಬೆಳಗೊಳದಲ್ಲಿ ರಾಸಾಯನಿಕ ಮತ್ತು ಗೊಬ್ಬರದ ಕಾರ್ಖಾನೆ, ಶಿವಮೊಗ್ಗದಲ್ಲಿ ಬೆಂಕಿಪೆಟ್ಟಿಗೆ ಕಾರ್ಖಾನೆ ಇತ್ಯಾದಿಗಳ ಸ್ಥಾಪನೆಯನ್ನು ಪ್ರೋತ್ಸಾಹಿಸಿ ರಾಜ್ಯದ ಔದ್ಯಮಿಕ ಪ್ರಗತಿಗೆ ಕಾರಣರಾದರು. ಗ್ರಾಮಕೈಗಾರಿಕೆಯನ್ನು ಉತ್ತಮಪಡಿಸಲು ಇವರು ಶ್ರಮಿಸಿದರು. ರೇಷ್ಮೆ

ಕೈಗಾರಿಕೆಗೂ ಗಮನವಿತ್ತರು. ಮೈಸೂರಿನ ಉತ್ಪನ್ನಗಳಿಗೆ ವಿದೇಶಗಳಲ್ಲಿ ಮಾರುಕಟ್ಟೆ ಪಡೆಯುವ ಸಲುವಾಗಿ ಲಂಡನ್ನಿನಲ್ಲಿ ಒಬ್ಬ ಟ್ರೇಡ್ ಕಮಿಷನರನ್ನು ನೇಮಿಸಿದರು. ಬೆಂಗಳೂರು ಮತ್ತು ಮೈಸೂರು ನಗರಗಳನ್ನು ಸುಂದರಗೊಳಿಸಿದ್ದಲ್ಲದೆ, ಕೃಷ್ಣರಾಜಸಾಗರ ಜಲಾಶಯದ ಹಿಂಬದಿಯಲ್ಲಿ ಪ್ರಸಿದ್ಧ ಬೃಂದಾವನವನ್ನು ನಿರ್ಮಿಸಲು ಮಿರ್ಜಾರವರೇ ಕಾರಣ. ಗಾಂಧೀಜೀಯವರಲ್ಲಿ ಗೌರವವಿದ್ದ ಇವರು ಅವರನ್ನು 1927ರಲ್ಲಿ ಮೈಸೂರಿಗೆ ಆಹ್ವಾನಿಸಿ ಕೆಲವು ಕಾಲ ಆರೋಗ್ಯ ಸುಧಾರಣೆಗಾಗಿ ನಂದಿಬೆಟ್ಟದಲ್ಲಿ ತಂಗುವಂತೆ ಮಾಡಿದ್ದರು. ಮಿರ್ಜಾರವರು ಲಂಡನ್ನಿನಲ್ಲಿ ನಡೆದ (1930-32) ಮೂರು ದುಂಡುಮೇಜಿನ ಪರಿಷತ್ತುಗಳಲ್ಲೂ ದಕ್ಷಿಣ ಭಾರತದ ದೇಶಿ ರಾಜ್ಯಗಳ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ಭಾರತದ ಭಾವೀ ರಾಜ್ಯ ಘಟನೆಯಲ್ಲಿ ದೇಶಿ ರಾಜ್ಯಗಳ ಮತ್ತು ಬ್ರಿಟಿಷ್ ಭಾರತದ ಪ್ರಾಂತ್ಯಗಳ ಸಂಯುಕ್ತ ವ್ಯವಸ್ಥೆಯ ಅಭಿಪ್ರಾಯವನ್ನು ಸ್ಪಷ್ಟೀಕರಿಸಿದರು. ಇವರ ಕಾಲದಲ್ಲಿ ಸ್ವಾತಂತ್ರ್ಯ ಸಂಗ್ರಾಮ ಮೈಸೂರು ರಾಜ್ಯದಲ್ಲೂ ಬಿರುಸಾಗಿ ನಡೆದು ಸರ್ಕಾರಕ್ಕೂ ಜನತೆಗೂ ನಡುವೆ ಅನೇಕ ಘರ್ಷಣೆಗಳುಂಟಾದವು. ನಾಲ್ವಡಿ ಕೃಷ್ಣರಾಜ ಒಡೆಯರ್ ಅನಂತರ ಜಯಚಾಮರಾಜ ಒಡೆಯರ್ ಅವರು 1940ರಲ್ಲಿ ಸಿಂಹಾಸನಕ್ಕೆ ಬಂದಮೇಲೂ ಕೆಲಕಾಲ ದಿವಾನರಾಗಿದ್ದು 1941ರ ಮೇ ತಿಂಗಳಲ್ಲಿ ವಿಶ್ರಾಂತಿ ಪಡೆದರು.

ಮೈಸೂರಿನಿಂದ ನಿವೃತ್ತರಾದ ಮೇಲೆ ಜಯಪುರದಲ್ಲಿ ಪ್ರಧಾನಮಂತ್ರಿಯಾಗಿ (1942-46) ಆ ನಗರದ ಸೌಂದರ್ಯವರ್ಧನೆ, ರಾಜಸ್ಥಾನ ವಿಶ್ವವಿದ್ಯಾನಿಲಯದ ಸ್ಥಾಪನೆ ಮತ್ತು ಆ ದೇಶದ ಸಂವಿಧಾನದ ಹಲವು ಬದಲಾವಣೆಗಳಿಗೆ ಕಾರಣರಾದರು. ಅನಂತರ 1946ರ ಆಗಸ್ಟ್‌ನಿಂದ 1947ರ ಮೇ ವರೆಗೆ ಹೈದರಾಬಾದ್ ಸಂಸ್ಥಾನದ ಪ್ರಧಾನ ಮಂತ್ರಿಯಾಗಿದ್ದರು. ನಿಷ್ಠಾವಂತ ಅಧಿಕಾರಿಯೆಂದು ಹೆಸರುಗಳಿಸಿದ್ದ ಇವರಿಗೆ ಬ್ರಿಟಿಷ್ ಸಾರ್ವಭೌಮರಿಂದ 1930ರಲ್ಲಿ ಕೆ.ಸಿ.ಐ.ಇ. ಪ್ರಶಸ್ತಿ ದೊರಕಿತು. ಮಿರ್ಜಾರವರು 1959ರಲ್ಲಿ ಬೆಂಗಳೂರಿನಲ್ಲಿ ನಿಧನರಾದರು. (ಬಿ.ಎಸ್.ಎ.)

**ಇಸ್ಲಾಂ ಧರ್ಮ :** ಏಳನೆಯ ಶತಮಾನದಲ್ಲಿ ಅರಬ್ ದೇಶದಲ್ಲಿ ಉಗಮವಾದ ಇಸ್ಲಾಂ ಧರ್ಮ ಅಲ್ಲಿಂದ ಒಂದೆರಡು ಶತಮಾನಗಳಲ್ಲೇ ಸುತ್ತಮುತ್ತಲ ಪ್ರದೇಶಕ್ಕೆಲ್ಲ ಹರಡಿತು. ಅರಬ್ಬೀ ವರ್ತಕರು ಕರ್ನಾಟಕದ ಪಶ್ಚಿಮ ತೀರದ ಪ್ರದೇಶಗಳೊಡನೆ ವ್ಯಾಪಾರ ನಡೆಸುತ್ತಿದ್ದರೆಂದು ತಿಳಿಯುವುದರಿಂದ ಸುಮಾರು ಈ ಕಾಲದಲ್ಲೇ ಕರ್ನಾಟಕಕ್ಕೆ ಈ ಧರ್ಮ ಮೊದಲು ಬಂದಿರಬೇಕೆಂದು ಹೇಳಬಹುದು. ರಾಷ್ಟ್ರಕೂಟ ಅರಸರ ಕಾಲದಲ್ಲಿ ಅವರ ರಾಜ್ಯದಲ್ಲಿ ಇಸ್ಲಾಮೀಯರು ಇದ್ದಂತೆಯೂ ಅವರು ತಮ್ಮ ನ್ಯಾಯನೀತಿಗಳ ನಿರ್ಧಾರಕ್ಕೆ ತಮ್ಮ ಅಧಿಕಾರಿಗಳು, ಕಾಜಿಗಳನ್ನು ಹೊಂದಿರುವುದಕ್ಕೆ ಅವಕಾಶವಿತ್ತೆಂದೂ ಆ ಕಾಲದ ಕೆಲವು ಅರಬ್ಬೀ ಲೇಖಕರು ತಿಳಿಸಿದ್ದಾರೆ. ಆ ಜನ ಸ್ಥಳೀಯ ವೇಷಭೂಷಣಗಳನ್ನೇ ಧರಿಸುತ್ತಿದ್ದರೆಂಬ ಹೇಳಿಕೆ ಸಹ ಇದೆ. ಇವುಗಳ ಬಗ್ಗೆ ಶಾಸನಾಧಾರಗಳು ಕರ್ನಾಟಕದಲ್ಲಿ ದೊರಕುವುದಿಲ್ಲ. ಠಾಣಾ ಜಿಲ್ಲೆಯಲ್ಲಿ ದೊರೆತ 926ರ ಒಂದು ಶಾಸನದಲ್ಲಿ ತಾಜಿಕನೊಬ್ಬ (ಅರಬ್ಬೀ) ರಾಷ್ಟ್ರಕೂಟರ ಕೈಕೆಳಗೆ ಪ್ರಾಂತ್ಯಾಧಿಕಾರಿಯಾಗಿದ್ದ ಬಗ್ಗೆ ಉಲ್ಲೇಖವಿದೆ. ಆದರೆ 11ನೆಯ ಶತಮಾನದಲ್ಲಿ ಪಶ್ಚಿಮ ಕರಾವಳಿಯಲ್ಲಿ ಇಸ್ಲಾಮೀಯರು ಹರಡಿದ್ದರೆಂಬುದಕ್ಕೆ ಸ್ಪಷ್ಟ ಸೂಚನೆಗಳಿವೆ. ಗೋವ ಕದಂಬ ದೊರೆ 1ನೆಯ ಜಯಕೇಶಿಯ ಅಂಗರಕ್ಷಕದಳದ ಮುಖ್ಯಸ್ಥ ತಾಜಿಕ ಕುಲದ ಅಲಿಯಮನ ಮಗ ಮದುಮುದನೆಂದೂ ಜಯಕೇಶಿ ಅವನಿಗೆ ಒಂದು ಗ್ರಾಮವನ್ನು ದತ್ತಿ ನೀಡಿದ್ದನೆಂದೂ 1054ರ ಒಂದು ಶಾಸನ ತಿಳಿಸುತ್ತದೆ. 12-13 ನೆಯ ಶತಮಾನಗಳಲ್ಲಿ ಸಹ ಅರಬ್ ಮತ್ತು ತುರ್ಕಿ ದೇಶಗಳಿಂದ ಉತ್ತಮತಳಿಯ ಕುದುರೆಗಳನ್ನು ಆ ದೇಶದ ಜನ ಇಲ್ಲಿಗೆ ತಂದು ವ್ಯಾಪಾರ ನಡೆಸುತ್ತಿದ್ದರು ಎಂಬ ಬಗ್ಗೆ ಗ್ರಂಥಾಧಾರಗಳಿವೆ. ಕೆಲವು ಶಾಸನಗಳು ಈ ಜನರನ್ನು ತುರುಷ್ಕರು ಎಂದು ಹೆಸರಿಸುತ್ತವೆ.

ಮಲಿಕ್ ಕಾಫೂರನ ದಂಡೆಯಾತ್ರೆ ಮತ್ತು ಬಹಮನೀ ಸಾಮ್ರಾಜ್ಯದ ಸ್ಥಾಪನೆಯೊಡನೆ ಈ ಧರ್ಮ ದಕ್ಷಿಣದಲ್ಲಿ ತ್ವರಿತವಾಗಿ ಹರಡಲಾರಂಭಿಸಿತು. ಮೊದಮೊದಲು ಇಲ್ಲಿ ನೆಲೆಸಿದ ಇಸ್ಲಾಮೀಯರು ಉತ್ತರ ಭಾರತದಿಂದ ಬಂದವರಾದರೂ ಅವರ ಅಧಿಕಾರ ದಕ್ಷಿಣದಲ್ಲಿ ನೆಲೆಯೂರಿದ ಮೇಲೆ ಉತ್ತರದವರೊಡನೆ ಅವರ ರಾಜಕೀಯ ಸಂಬಂಧಗಳು ಸುಗಮವಾಗಿ ಉಳಿಯಲಿಲ್ಲ. ಈ ನೆಲಸಿಗರಲ್ಲಿ ಹಲವರು ಮೂಲತಃ ಪಶ್ಚಿಮ ಏಷ್ಯದವರಾಗಿದ್ದರಿಂದ, ಅದೇ ಪ್ರದೇಶದ ಮುಸಲ್ಮಾನರೂ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಬಂದು ಕರ್ನಾಟಕ ಪ್ರದೇಶದಲ್ಲಿ ನೆಲಸಲಾರಂಭಿಸಿದರು. ಹೀಗೆ ನೆಲಸಿದವರಲ್ಲಿ ಕವಿಗಳು, ಕಲಾಕಾರರು, ಶಿಲ್ಪತಜ್ಞರು, ಸಂತರು ಸಹ ಇದ್ದು ಕರ್ನಾಟಕದಲ್ಲಿ ಇಸ್ಲಾಮೀ ಸಂಸ್ಕೃತಿ ಚೆನ್ನಾಗಿ ವ್ಯವಸ್ಥಿತವಾಗಲು ಕಾರಣರಾದರು. ಬಹಮನೀ ರಾಜ್ಯ ಒಡೆದ ಮೇಲೆ ಹುಟ್ಟಿದ ಬರೀದ್ ಶಾಹೀ, ಆದಿಲ್‌ಶಾಹೀ ಮತ್ತು ಕುತ್ಬ್‌ಶಾಹೀ ರಾಜ್ಯಗಳ ಒಡೆತನದ ಕಾಲದಲ್ಲಿ ಹಾಗೂ ಔರಂಗಜೇಬನ ಕಾಲದಲ್ಲಿ, ಅಲ್ಲದೆ ಮುಂದೆ ಕರ್ನಾಟಕದ ಅನೇಕ ಪ್ರದೇಶಗಳಲ್ಲಿ ಆಳಿದ ಆಸಫ್‌ಜಾಹೀ ಅರಸರು, ಹಲವರು ಚಿಕ್ಕನವಾಬರು ಮತ್ತು ಹೈದರ್‌ಅಲಿ, ಟಿಪ್ಪುಸುಲ್ತಾನ್ ಇವರುಗಳ ಕಾಲದಲ್ಲಿ ಇಸ್ಲಾಂ ಧರ್ಮ ವಿಶೇಷವಾಗಿ ಪ್ರೋತ್ಸಾಹಗಳಿಸಿ, ಅದರ ಅನುಯಾಯಿಗಳ ಸಂಖ್ಯೆ ದಿನೇ ದಿನೇ ವರ್ಧಿಸಿತು. ಇಸ್ಲಾಂ ಸಂಸ್ಕೃತಿ ಬಹುಮುಖವಾಗಿ ಪಸರಿಸಿತು. ಬಹಮನೀ ಅರಸರ ಕಾಲದಲ್ಲಿ ಆಫ್ರಿಕದಿಂದ ಬಂದ ಇಸ್ಲಾಮೀಯರೂ ಕರ್ನಾಟಕದಲ್ಲಿ ನೆಲೆನಿಂತರು. ಕಾಲಾಂತರದಲ್ಲಿ ಆಫ್ರಿಕದ ಸಿದ್ದಿಗಳೂ ಉತ್ತರ ಭಾರತದಿಂದ ಬಂದವರೂ ಹೊಸತಾಗಿ ಇಲ್ಲಿ ಮತಾಂತರ ಹೊಂದಿದವರೂ ಒಂದು ಪ್ರತ್ಯೇಕ ವರ್ಗವಾಗಿ ದಖ್ಖನಿಗಳೆಂದು ಕರೆಯಲ್ಪಟ್ಟರು. ಮಾಲಿಕ್ ಬಿನ್ ದೀನಾರರ ಮೂಲಕ ಮತಾಂತರ ಹೊಂದಿದ ಕರಾವಳಿ ಕರ್ನಾಟಕದ ಇಸ್ಲಾಮೀಯರು ಮಹಾಪಿಳ್ಳೆ ಎಂದು ಹೆಸರು ಪಡೆದು, ಕಾಲಾಂತರದಲ್ಲಿ ಮಾಪಿಳ್ಳೆಯರೆಂದು ಕರೆಯಲ್ಪಟ್ಟರು.



ಮಾಲಿಕ್ ರೋಹನ್ ದರ್ಗ, ಶಿರಾ

ಇಸ್ಲಾಂ ಧರ್ಮಾನುಯಾಯಿಗಳಲ್ಲಿ ಷಿಯಾ ಮತ್ತು ಸುನ್ನಿ ಎಂಬ ಎರಡು ಮುಖ್ಯ ವರ್ಗಗಳಿವೆ. ಪೈಗಂಬರರ ಅಂತ್ಯ ಪ್ರವಾದಿತ್ವವನ್ನೂ ನಾಯಕತ್ವವನ್ನೂ ಅನುಸರಿಸಿ ಬರುವವರು ಸುನ್ನಿ ಪಂಥದವರು, ಪೈಗಂಬರರ ಅನಂತರ ಇವರ ಸಂತಾನದಲ್ಲೇ ಮತ್ತೊಂದು ನಾಯಕತ್ವವನ್ನು ಆರಿಸಿದ ವರ್ಗ ಷಿಯಾ. ಇವರ ಸಂಖ್ಯೆ ಕರ್ನಾಟಕದಲ್ಲಿ ಕಡಿಮೆ. ಸುನ್ನಿ ಪಂಥದವರಲ್ಲಿ ಹನಫೀ, ಶಾಫೀ, ಹಂಬಲೀ ಮತ್ತು ಮಾಲಿಕೀ ಎಂಬ ನಾಲ್ಕು ವರ್ಗಗಳಿವೆ. ಅವುಗಳು ಆಯಾಯ ಇಮಾಮರ (ದಾರ್ಶನಿಕರ) ಹೆಸರಿನಿಂದಲೇ ಪ್ರಖ್ಯಾತವಾಗಿವೆ. ಅವುಗಳಲ್ಲಿ ಕರ್ನಾಟಕದಲ್ಲಿ ಹನಫೀ ಮತ್ತು ಶಾಫೀ ವರ್ಗಗಳು ಮಾತ್ರ ಪ್ರಬಲವಾಗಿವೆ. ಹನಫೀ ವರ್ಗ ಉತ್ತರ ಭಾರತದ ರಾಜರಿಂದ ಪ್ರಚಾರಗೊಂಡು ದಖ್ಖನದ ಬಹಮನೀ ಸುಲ್ತಾನರು, ಇತರ ದಖನೀ ರಾಜರು ಹಾಗೂ ಮತ ಪ್ರಚಾರಕರಿಂದಲೂ ಹೈದರ್ ಮತ್ತು ಟಿಪ್ಪುಸುಲ್ತಾನರ ಪ್ರಭಾವದಿಂದಲೂ ಕರ್ನಾಟಕದಾದ್ಯಂತ ವಿಸ್ತರಿಸಿಕೊಂಡಿದೆ. ಇವರ ಭಾಷೆ ಉರ್ದು. ಶಾಫೀ ವರ್ಗದವರು ಕರಾವಳಿ ಕರ್ನಾಟಕದ ಮಾಪಿಳ್ಳೆಯವರು. ಇವರ ಭಾಷೆ ಮಲೆಯಾಳಂ. ಕರ್ನಾಟಕದಲ್ಲಿ ಇವರ ಸಂಖ್ಯೆ ಕಡಿಮೆ. ಈ ಎರಡು ವರ್ಗಗಳ ಮಧ್ಯೆ ಹೆಚ್ಚಿನ ಅಂತರವಿಲ್ಲದೆ ಮೂಲಧರ್ಮದಲ್ಲಿ ಒಂದಾಗಿ ಒಟ್ಟಾಗಿ ಬಾಳುವವರು.

ಕರ್ನಾಟಕದಾದ್ಯಂತ ಅನೇಕ ಮಸೀದಿಗಳಿವೆ. ಹಲವು ಸಂತರ ಸಮಾಧಿ (ದರ್ಗಾ) ಹಾಗೂ ಕ್ಷೇತ್ರಗಳಿವೆ. ಗುಲ್ಬರ್ಗದ ಬಂದೇ ನವಾಜರ ದರ್ಗಾ ಬಹು ಜನರನ್ನು ಆಕರ್ಷಿಸುತ್ತದೆ. ಸಂತಪೀರ್ ಅವರ ಕ್ಷೇತ್ರ ಮೈಸೂರಲ್ಲಿದೆ. ಬಾಬಾಬುಡನ್ ಗಿರಿಯ ಸೂಫಿ ಸಂತ ಬಾಬಾಬುಡನ್‌ರವರೂ ಉಲ್ಲಾಳದ ಸೈಯದ್ ಮದನೀ ಅವರು ಕಾಸರಗೋಡಿನ ಮಾಲಿಕ್ ಬಿನ್ ದೀನಾರರೂ ಬೆಂಗಳೂರಿನ ಅಲ್ ಅಮಾನ್ ಹಜ್ರತ್ ಯುಕೀನ್ ಷಾ ವಲೀ ಅವರೂ ಪ್ರಮುಖ ಸಂತರೆಂದು ತಿಳಿಯಲಾಗಿದೆ. ಇವರಲ್ಲದೆ ಇಚ್ಚಲಂಗೋಡಿನ ಮಾಲಿಕ್ ಬಿನ್ ದೀನಾರರೂ ಮಂಗಳೂರಿನ ಸೈದಾನಿ ಬೀಬೀ ಮೊದಲಾದ ಅನೇಕ ಸಂತರ ದರ್ಗಾಗಳು ಕರ್ನಾಟಕದ ಹಲವೆಡೆಗಳಲ್ಲಿವೆ. ದಿವಂಗತರಾದ ಈ ಸಂತ ಮಹಾಪುರುಷರ ಕ್ಷೇತ್ರದಲ್ಲಿ ಹರಕೆ ಉರುಸ್ ಇತ್ಯಾದಿಗಳು ನಡೆಯುತ್ತವೆ. ಮುಸ್ಲಿಮರೇತರರು ಈ ಕ್ಷೇತ್ರಗಳ ಕಾರ್ಯಕ್ರಮಗಳಲ್ಲಿ ಜಾತಿಭೇದವಿಲ್ಲದೆ ಪಾಲುಗೊಳ್ಳುತ್ತಾರೆ. (ಬಿ.ಎಂ.ಇ.)

**ಇಳಕಲ್ಲು :** ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನಲ್ಲಿ ಹುನಗುಂದದ ದಕ್ಷಿಣಕ್ಕೆ 13ಕಿಮೀ ದೂರದಲ್ಲಿರುವ ಊರು. ಜನಸಂಖ್ಯೆ 30,014. ನೇಯ್ಗೆ ಹಾಗೂ ಬಣ್ಣಹಾಕುವ ಕೈಗಾರಿಕೆಗಳಿಗೆ ಅದರಲ್ಲೂ ಸೀರೆಗಳಿಗೆ ಬಹಳ ಪ್ರಸಿದ್ಧಿ. ಇಲ್ಲಿ ಬನಶಂಕರಿ, ಬಸವಣ್ಣ ಮತ್ತು ವೆಂಕೋಬ ದೇವಸ್ಥಾನಗಳಿವೆ. ಮೊದಲೆರಡೂ ಈಚಿನವು. ಕೊನೆಯದು ಸ್ವಲ್ಪ ಪ್ರಾಚೀನಕಾಲದ್ದು. ಇದರಲ್ಲಿ ಬಳಸಲಾಗಿರುವ ಕಲ್ಲಿನ ಕಂಬಗಳನ್ನು ಐಹೊಳೆಯಿಂದ ತಂದಿರಬಹುದೆಂದು ಊಹೆ. ಮಹಂತಸ್ವಾಮಿಗಳೆಂಬ ವಿರಕ್ತರೊಬ್ಬರು ಪೀಠಾಧಿಪರಾಗಿರುವ ಒಂದು ವೀರಶೈವ ಮಠ ಇಲ್ಲಿದೆ. ಇದರ ಸ್ಥಾಪಕರು ಮಹಿಮಾವಂತರೆಂದು ಈ ಸ್ಥಳದ ಎಲ್ಲ ವರ್ಗದ ಜನರೂ ಆದರಿಸುತ್ತಾರೆ. ಇಲ್ಲಿನ ಪೌರಸಭೆ 1867ರಲ್ಲಿ ಸ್ಥಾಪಿತವಾಯಿತು. ಇಲ್ಲಿ ಮೂರು ಪ್ರೌಢ ಶಾಲೆಗಳು, ಒಂದು ಕಾಲೇಜು ಹಾಗೂ ಒಂದು ಸರ್ಕಾರಿ ಶಿಕ್ಷಕರ ತರಬೇತಿ ಕಾಲೇಜು ಇವೆ. *

# ಈ

**ಈಶ್ವರಕವಿ :** ಸು.1500. ಕವಿಜಿಹ್ವಾಬಂಧನಂ ಎಂಬ ಕನ್ನಡ ಛಂದೋಗ್ರಂಥದ ಕರ್ತೃ. ಈತನ ತಂದೆ ಕಚ್ಚುಟೇಶ. ಕವಿ ತನ್ನನ್ನು ಅಭಿನವಕೇಶಿರಾಜ ಎಂದು ಕರೆದುಕೊಂಡಿರುವುದರಿಂದ ಮತ್ತು ಆಂಧ್ರಕವಿಗಳು ತಮ್ಮ ಕಾವ್ಯಗಳಲ್ಲಿ ಯಥೇಚ್ಛವಾಗಿ ಬಳಕೆಮಾಡಿದ ವಡಿಗಳ ವಿಷಯವನ್ನು ವಿವರಿಸುವುದರಿಂದ ಈತ ಕೇಶಿರಾಜ, ಅಪ್ಪಕವಿಗಳಿಗಿಂತ ಈಚಿನವನಿರ ಬೇಕೆಂದು ಅಭಿಪ್ರಾಯವಿದೆ. 'ನವಜನರ ಕುರಿತು ಛಂದೋವರ್ಣದೊಳ್ ಕನ್ನಡದ ಪ್ರಾಸವಡಿಭೇದಗಳಂ ವಿವರವಿಡಿದಷ್ಟಭಾಷಾಕವಿವರ ಬಾಣಾಖ್ಯನೊಲಿದು ಪೇಳ್ದಂ ಮುದದಿಂ'; 'ಶ್ರೀಕಾರಗಳಿಲ್ಲದ ಪದ ಲೋಕದೊಳಂ ಸಲ್ಲದೆಂದ ಕವಿ ಫಣಿವರ್ಮಂ'; 'ಇತಿ ಬಾಣಕವಿ ವಿನಿರ್ಮಿತಮಪ್ಪ ಛಂದೋಂಬುರಾಶಿ ಪ್ರಥಮಪರಿಚ್ಛೇದಸಮಾಪ್ತಃ' - ಎಂಬ ಮಾತುಗಳು ಇವನ ಗ್ರಂಥದಲ್ಲಿ ಕಂಡುಬರುವುದರಿಂದ ಇವನಿಗೆ ಬಾಣ, ಫಣಿವರ್ಮ ಎಂಬ ಹೆಸರುಗಳೂ ಅಷ್ಟಭಾಷಾಕವಿವರ ಎಂಬ ಬಿರುದೂ ಗ್ರಂಥಕ್ಕೆ ಛಂದೋಂಬುಧಿ ಎಂಬ ಹೆಸರೂ ಇದ್ದಂತೆ ತಿಳಿಯುತ್ತದೆ.

ಕವಿಜಿಹ್ವಾಬಂಧನದಲ್ಲಿ ನಾಲ್ಕು ಪರಿಚ್ಛೇದಗಳಿವೆ. ಕಂದ ವೃತ್ತಗಳಲ್ಲಿ ಬರೆದಿದೆ. ಒಂದನೆಯ ಪರಿಚ್ಛೇದದಲ್ಲಿ ಗಣಗಳೂ ಅವುಗಳ ವರ್ಣವಾಹನಮೈತ್ರೀವೈರ ಕುಲದೇವತಾಫಲಾದಿಗಳು ಹೇಳಿವೆ. ಎರಡನೆಯದರಲ್ಲಿ ಪ್ರಾಸ ವಡಿಗಳು ವಿಶದವಾಗಿ ನಿರೂಪಿತವಾಗಿವೆ. ಪ್ರಾಸಗಳಲ್ಲಿ ಸಿಂಹ, ಗಜ, ವೃಷಭ ಮುಂತಾದ 28 ಪ್ರಾಸಗಳನ್ನು ಹೇಳಿದ್ದಾನೆ. ವಡಿಗಳಲ್ಲಿ ಪದ್ಮ, ಗರುಡ, ಸಾರಂಗ ಮುಂತಾದ 6 ಭೇದಗಳನ್ನು ಹೇಳಿದ್ದಾನೆ. ಮೂರನೆಯದರಲ್ಲಿ ಅಕ್ಷರಗಳು ಅವುಗಳ ಕುಲ, ಅಧಿದೇವತೆ ಮೊದಲಾದ ವಿಷಯಗಳಿವೆ. ನಾಲ್ಕನೆಯದರಲ್ಲಿ ರಸ, ಭಾವ. ಅಲಂಕಾರ, ಕಂದ, ಷಟ್ಪದಿಗಳ ಲಕ್ಷಣ ಮುಂತಾದ ಅಂಶಗಳನ್ನು ಹೇಳಿದೆ. ಈತ ತನ್ನ ಗ್ರಂಥವನ್ನು ಕಾವ್ಯವೆಂದೂ ತಾನು ಕವೀಶಂ ಎಂದೂ ಹೇಳಿಕೊಂಡಿದ್ದರೂ ಇದೊಂದು ಲಕ್ಷಣಗ್ರಂಥ ಎಂಬುದು ಕೃತಿಯ ಅಭ್ಯಾಸದಿಂದ ತಿಳಿಯುತ್ತದೆ. (ಪಿ.ವಿ.ಪಿ.)

**ಈಸೂರು :** ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕಿನಲ್ಲಿ ಕಸಬೆಯಿಂದ 10ಕಿಮೀ ದಕ್ಷಿಣಕ್ಕೆ ಕುಮುದ್ವತಿ ನದಿಯ ಬಲದಂಡೆಯ ಮೇಲಿರುವ ಗ್ರಾಮ.

ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಶಿವಮೊಗ್ಗ ಜಿಲ್ಲೆಗೆ ಹೆಸರು ತಂದ ಊರು ಈಸೂರು. ಮಹಾತ್ಮ ಗಾಂಧಿಯವರ ಭಾರತ ಬಿಟ್ಟು ತೊಲಗಿ ಘೋಷಣೆಯೊಂದಿಗೆ ಅಂದಿನ ಬ್ರಿಟಿಷ್ ಸರ್ಕಾರ 1942 ಆಗಸ್ಟ್ 9ರಂದು ಭಾರತದ ಸ್ವಾತಂತ್ರ್ಯ ಚಳವಳಿಯ ನಾಯಕರನ್ನೆಲ್ಲ ಬಂಧಿಸಿತ್ತು. ಈಸೂರಿನ ಜನತೆಯೂ ನಾಯಕನ ಕರೆಗೆ ಓಗೊಟ್ಟು ತಾಳ್ಮೆಯಿಂದಲೇ ಸ್ವಾತಂತ್ರ್ಯ ಚಳವಳಿಯನ್ನು ನಡೆಸುತ್ತಿತ್ತು. 150ರಿಂದ 200 ಮಂದಿ ಗ್ರಾಮದಲ್ಲಿ ಮೆರವಣಿಗೆ ನಡೆಸಿ ಸರ್ಕಾರಕ್ಕೆ ತೆರಿಗೆಯನ್ನು ಕೊಡದಂತೆ, ಪ್ರತಿಭಟಿಸುವ ಅಧಿಕಾರಿಗಳನ್ನು ಗಮನಿಸದಂತೆ, ಸರ್ಕಾರಿ ಅಧಿಕಾರಿಗಳಿಗೆ, ಶಾಲೆಗೆ, ಕಚೇರಿಗಳಿಗೆ ಧಿಕ್ಕಾರ ಘೋಷಿಸಿದರು. 1942 ಸೆಪ್ಟೆಂಬರ್ 25ರಂದು ಸರ್ಕಾರದ ಅಧಿಕಾರವನ್ನು ಧಿಕ್ಕರಿಸಿ ಈಸೂರನ್ನು ಸ್ವತಂತ್ರ ಹಳ್ಳಿ ಎಂಬುದಾಗಿ ಸಾರಿದರು. ತಮ್ಮದೇ ಆದ ಸರ್ಕಾರ ರಚಿಸಿಕೊಂಡು ಗ್ರಾಮದ ಆಡಳಿತ ನಡೆಸತೊಡಗಿದರು. 1942 ಸೆಪ್ಟೆಂಬರ್ 28ರಂದು ಆ ತಾಲ್ಲೂಕಿನ ಅಮಲ್ದಾರರು, ಪೊಲೀಸ್ ಅಧಿಕಾರಿ ಮತ್ತು ಕೆಲವು ಪೊಲೀಸರೊಂದಿಗೆ ಗ್ರಾಮಕ್ಕೆ ಹೋದರು. ಅಲ್ಲಿ ನಡೆದ ಜನರ ಅಲ್ಪ ಪ್ರತಿಭಟನೆಗೆ ಅಧಿಕಾರಿಗಳು ಕೋಪಗೊಂಡು ನಿರಾಯುಧ ಜನತೆಯ ಮೇಲೆ ಮೊದಲು ಲಾಠಿಯಿಂದ ಹೊಡೆದು ಅನಂತರ ಗುಂಡು ಹಾರಿಸಿದರು. ಜನರೂ ಉದ್ರಿಕ್ತರಾದರು. ಗಲಭೆಯಲ್ಲಿ ಅಮಲ್ದಾರ ಚನ್ನಕೃಷ್ಣಪ್ಪ ಮತ್ತು ಪೊಲೀಸ್ ಅಧಿಕಾರಿ ಕೆಂಚೇಗೌಡ ಸತ್ತರು. ಸರ್ಕಾರಕ್ಕೆ ಸುದ್ದಿ ತಿಳಿದು ಸೈನ್ಯ ಮತ್ತು ಪೊಲೀಸ್ ದಳವನ್ನು ಕಳಿಸಿ ಹಳ್ಳಿಯನ್ನು ಲೂಟಿ ಮಾಡಿಸಿತು. ಇದ್ದವರನ್ನೆಲ್ಲ ಹೆಂಗಸರು ಮಕ್ಕಳೆನ್ನದೆ ಚಿತ್ರಹಿಂಸೆಗೆ ಗುರಿ ಮಾಡಿತು. ಸರ್ಕಾರದ ವಿರುದ್ಧ ಬಂಡಾಯವೆದ್ದವರೆಂದು 50 ಮಂದಿಯ ಮೇಲೆ ಆರೋಪ ಹೊರಿಸಿ 41 ಮಂದಿಯನ್ನು ಬಂಧಿಸಿ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿತು. ಮೈಸೂರು ಹೈಕೋರ್ಟಿನ ಮುಖ್ಯ ನ್ಯಾಯಾಧೀಶರು 1943 ಜನವರಿ 9ರಂದು ತೀರ್ಪಿತ್ತು, ಗುರಪ್ಪ, ಮಲ್ಲಪ್ಪ, ಸೂರ್ಯನಾರಾಯಣಾಚಾರಿ, ಬಿ. ಹಾಲಪ್ಪ ಮತ್ತು ಜಿ. ಶಂಕರಪ್ಪ ಇವರಿಗೆ ಮರಣದಂಡನೆಯನ್ನೂ ಹಾಲಮ್ಮ ಮತ್ತು ಪಾರ್ವತಮ್ಮ ಇವರಿಗೆ ಜೀವಾವಧಿ ಗಡೀಪಾರು ಶಿಕ್ಷೆಯನ್ನು ವಿಧಿಸಿದರು. ಉಳಿದವರಿಗೆ ನಾನಾರೀತಿಯ ವಿವಿಧ ಕಾಲದ ಕಾರಾಗೃಹ ಶಿಕ್ಷೆ ವಿಧಿಸಲಾಯಿತು. ಅದರಂತೆ 1943 ಮಾರ್ಚ್ 8ರಂದು ಗುರಪ್ಪ ಮತ್ತು ಮಲ್ಲಪ್ಪ ಇಬ್ಬರನ್ನೂ ಗಲ್ಲಿಗೇರಿಸಲಾಯಿತು. ಮಾರನೆಯ ದಿನ ಸೂರ್ಯನಾರಾಯಣಾಚಾರಿ ಮತ್ತು ಹಾಲಪ್ಪನನ್ನೂ 10ನೆಯ ತಾರೀಖು ಜಿ. ಶಂಕರಪ್ಪನನ್ನೂ ಅಂದಿನ ಸರ್ಕಾರ ಗಲ್ಲಿಗೇರಿಸಿ ತನ್ನ ಸೇಡನ್ನು ತೀರಿಸಿಕೊಂಡಿತು. ಪಾರ್ವತಮ್ಮ, ಹಾಲಮ್ಮ ಮತ್ತು ಸಿದ್ಧಮ್ಮ ಇವರನ್ನು 1946 ಅಕ್ಟೋಬರ್ 21ರಂದು ಬಿಡುಗಡೆ ಮಾಡಲಾಯಿತು. ಇಡೀ ಕರ್ನಾಟಕದಲ್ಲಿ 'ಸ್ವತಂತ್ರ ಹಳ್ಳಿ' ಎಂದು ಘೋಷಿಸಿಕೊಂಡು ಸ್ವಾತಂತ್ರ್ಯಕ್ಕೆ ತಮ್ಮ ಪ್ರಾಣವನ್ನರ್ಪಿಸಿದ ಕಲಿಗಳಿಂದ ಈ ಊರು ಪ್ರತಿಷ್ಠಿತವಾಗಿದೆ. (ವಿ.ಜಿ.ಕೆ.)

# ಉ

**ಉಂಚಳ್ಳಿ ಜಲಪಾತ :** ಉತ್ತರ ಕನ್ನಡ ಜಿಲ್ಲೆ ಸಿದ್ಧಾಪುರದ ವಾಯುವ್ಯಕ್ಕೆ ಸು.19ಕಿಮೀ ದೂರದಲ್ಲಿ ಉಂಚಳ್ಳಿ ಗ್ರಾಮದ ಬಳಿ ಇರುವ ಒಂದು ಸುಂದರ ಜಲಪಾತ. ಅಘನಾಶಿನಿ (ನೋಡಿ) ನದಿ ಇಲ್ಲಿ 379' ಕೆಳಗೆ ದುಮುಕುತ್ತದೆ. ಕರಿಬಂಡೆಗಳ ಮೇಲೆ ಹಾಲುನೊರೆಯಂತೆ ಇಳಿದು ಬರುವ ನೀರಿನ ಧಾರೆಯ ಸೊಬಗು ಚೇತೋಹಾರಿಯಾದುದು. ಜಲಪಾತದ



ಸುತ್ತಲಿನ ಕಂದರ, ಅಡಕೆ ತೋಟಗಳು, ಸಮೃದ್ಧ ಅಡವಿಗಳು, ಇಕ್ಕೆಲಗಳಲ್ಲಿಯೂ ಎದ್ದಿರುವ ಕರಿಕಲ್ಲಿನ ಅಖಂಡ ಗೋಡೆಗಳು, ಈ ಜಲಪಾತಕ್ಕೆ ವಿಶೇಷ ಶೋಭೆಯನ್ನು ಕೊಟ್ಟಿವೆ. ಧೈರ್ಯಶಾಲಿಗಳು ಮಾತ್ರ ಜಲಪಾತದ ಕೆಳಗೆ ಇಳಿಯಬಹುದು. ಜಲಪಾತದ ಶಬ್ದ ಸು.13ಕಿಮೀ ದೂರದಲ್ಲಿರುವ ಬಿಳಗಿಯವರೆಗೂ ಕೇಳುವುದಂತೆ. ಕಿವಿಗಡಚಿಕ್ಕುವ ಅಗಾಧ ಶಬ್ದದಿಂದಾಗಿ ಇದಕ್ಕೆ ಕೆಪ್ಪಜೋಗ ಎಂಬ ಹೆಸರೂ ಸ್ಥಳೀಯರಲ್ಲಿ ಪ್ರಚಲಿತವಾಗಿದೆ. ಈ ಜಿಲ್ಲೆಯ ಕಲೆಕ್ಟರ್ ಆಗಿದ್ದ ಟಿ.ಡಿ.ಲುಸಿಂಗ್‌ಟನ್ ಅವರು 1843ರಲ್ಲಿ ಈ ಜಲಪಾತವನ್ನು ಕಂಡು ಹೊರ ಜಗತ್ತಿಗೆ ಪರಿಚಯ ಮಾಡಿಕೊಟ್ಟಿದ್ದರಿಂದ ಇದಕ್ಕೆ ಲುಸಿಂಗ್‌ಟನ್ ಫಾಲ್ಸ್ ಎಂದೂ ಹೆಸರು ಬಂದಿದೆ. ಈ ಜಲಪಾತದಿಂದ ಸುಮಾರು ಒಂದು ಕಿಮೀ ಮುಂದೆ ಬುರುಡೆಜೋಗ ಇದೆ. ಅಲ್ಲಿ ಇದೇ ನದಿ ಸು.300' ಕೆಳಗುರುಳಿ ಅನಂತರ ಎರಡು ಟಿಸಿಲುಗಳಾಗಿ 150' ಹಾರಿ ಸ್ವಲ್ಪ ದೂರ ಹರಿದು ಇನ್ನೊಂದು ಜಲಪಾತವನ್ನುಂಟು ಮಾಡಿದೆ. ಉಂಚಳ್ಳಿ ಜಲಪಾತಕ್ಕೆ ಸಿದ್ಧಾಪುರದಿಂದ ರಸ್ತೆ ಇದೆ. ಬಸ್ ಸೌಕರ್ಯವೂ ಉಂಟು. (ಆರ್.ಜಿ.ಆರ್.)

**ಉಂಡಿಗ’ನಾಳು:** ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕಿನಲ್ಲಿ ಕಸಬೆಯಿಂದ ಸು.19ಕಿಮೀ ನೈಋತ್ಯಕ್ಕಿರುವ ಗ್ರಾಮ. ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ ಜಟ್ಟಿ ಕುಲದವರು ಗುಜರಾತಿನೆಡೆಯಿಂದ ಬಂದು ಮೊದಲು ಇಲ್ಲಿ ನೆಲೆಸಿದರೆಂದು ಕೆಲವು ಐತಿಹಾಸಿಕ ಆಧಾರಗಳಿಂದ ಊಹಿಸಲಾಗಿದೆ. ಈ ಕುಲದ ಕೆಲವರು ಈ ಗ್ರಾಮ ಮತ್ತು ಸುತ್ತಣ ಪ್ರದೇಶವನ್ನು ಹೊಯ್ಸಳ ಸಾಮಂತರಾಗಿ ಆಳುತ್ತಿದ್ದರೆಂಬುದಕ್ಕೆ ಶಾಸನಾಧಾರಗಳಿವೆ. ಕೆಲವು ಶಾಸನಗಳಲ್ಲಿ ಜಟ್ಟಿಗಳ ಕುಲದೇವರಾದ ನಿಂಬಜಾದೇವಿಯ ಪ್ರಸ್ತಾಪ ಸಹ ಇದೆ.

ಇಲ್ಲಿರುವ ಚಾಮುಂಡೇಶ್ವರಿ ದೇವಾಲಯ ಮೂಲತಃ ಹೊಯ್ಸಳರ ಕಾಲದ್ದು. 1140ರ ರಚನೆ. ಆದರೆ ಈಗ ಅದರಲ್ಲಿ ಅನೇಕ ಅನಂತರಕಾಲದ ಸೇರ್ಪಡೆಗಳಿವೆ. ದೇವಾಲಯ ತ್ರಿಕೂಟಾಚಲ, ಮೂರು ಗರ್ಭಗುಡಿಗಳು, ಒಂದು ಸುಕನಾಸಿ, ಒಂದು ನವರಂಗ ಮತ್ತು ಒಂದು ಮುಖ ಮಂಟಪ ಇವೆ. ಬಾಗಿಲಿನ ನೇರ ಎದುರಿನ ಗರ್ಭಗುಡಿಯಲ್ಲಿ ಲಿಂಗ, ಉತ್ತರದ ಗರ್ಭಗುಡಿಯಲ್ಲಿ ಕೇಶವ ಮತ್ತು ದಕ್ಷಿಣದ ಗರ್ಭಗುಡಿಯಲ್ಲಿ ಮಹಿಷಾಸುರ ಮರ್ದಿನಿ ವಿಗ್ರಹಗಳಿವೆ. ನವರಂಗದಲ್ಲಿರುವ ಕಂಬಗಳು ಹೊಯ್ಸಳ ರೀತಿಯವು. ಇತರ ಭಾಗಗಳು ಬಹುಮಟ್ಟಿಗೆ ಈಚಿನವು. ಒಂದು ಮದನಿಕೆ ವಿಗ್ರಹ ಮುಂತಾದ ಹೊಯ್ಸಳರ ಕಾಲದ ಬಿಡಿ ಶಿಲ್ಪಗಳು ಇಲ್ಲಿವೆ. ದೇವಾಲಯದ ದಕ್ಷಿಣ ಭಾಗಗಳಲ್ಲಿ ಒಂದು ದೊಡ್ಡ ಉಯ್ಯಾಲೆ ಕಂಬವೂ ಅದರ ಎದುರು ಮೂರು ಅಂಕಣಗಳುಳ್ಳ ಒಂದು ಮಂಟಪವೂ ಇವೆ. ಮಂಟಪದಲ್ಲಿ ಹೊಯ್ಸಳ ಶೈಲಿಯ ಕಂಬಗಳಿವೆ. ಈ ಮಂಟಪದ ಹಿಂಭಾಗದಲ್ಲಿರುವ ಚಿಕ್ಕ ಗರ್ಭಗುಡಿಯಲ್ಲಿ ಅಕ್ಷಮಾಲೆ ತ್ರಿಶೂಲ ಚಕ್ರ ಶಂಖ ಡಮರು ಕುಂಭಗಳನ್ನು ಹಿಡಿದ, ನವಿಲಿನ ಮೇಲೆ ನಿಂತಿರುವ ದೇವಿ ಶಿಲ್ಪವಿದೆ. ಈ ಗುಡಿಯ ಎರಡು ಪಕ್ಕಗಳಲ್ಲಿ ಮತ್ತು ಕಂಬಗಳ ಮೇಲೆ ಜಟ್ಟಿಗಳ ಶಿಲ್ಪಗಳಿವೆ. *

**ಉಗಾಭೋಗ’ :** ಕರ್ನಾಟಕ ಸಂಗೀತದಲ್ಲಿ ಕನ್ನಡ ನಾಡಿಗೆ ವಿಶಿಷ್ಟವಾದ ಗಾನಪದ್ಧತಿ. ಕನ್ನಡ ದಾಸಸಾಹಿತ್ಯದ ಒಂದು ಮುಖ್ಯ ಪ್ರಕಾರ; 'ಗೀತತಾಯಿ ಸುಳಾದ್ಯುಗಾಭೋಗಪದ್ಯಪದ'ಗಳೆಂಬ ಪ್ರಕಾರಗಳಿದ್ದುದು ಪ್ರಸನ್ನ ವೆಂಕಟದಾಸರ ಕೃತಿಯೊಂದರಿಂದ ತಿಳಿದುಬರುತ್ತದೆ. ಉಗಾಭೋಗ ಎನ್ನುವ ಮಾತಿಗೆ ಉದ್ಗ್ರಾಹ ಮತ್ತು ಅಭೋಗ ಎಂಬೆರಡು ಪದಗಳು ಮೂಲ ಸಾಮಗ್ರಿಗಳೆಂದು ಹೇಳುತ್ತಾರೆ. ಇವೆರಡೂ ಗಾಯನದ ವಿವರಗಳು. ಮೊದಲು ಮಾಡುವ ಸಾಮಗ್ರಿಗೆ ಉದ್ಗ್ರಾಹವೆಂದೂ ಮುಗಿಸುವ ಸಾಮಗ್ರಿಗೆ ಅಭೋಗವೆಂದೂ ಹೆಸರಿವೆ.

ಸಾಮಾನ್ಯವಾಗಿ ಉಗಾಭೋಗ ಸಣ್ಣ ಕೃತಿ; ಕಡಿಮೆಯೆಂದರೆ ನಾಲ್ಕು ಸಾಲು, ಹೆಚ್ಚೆಂದರೆ ಹನ್ನೆರಡು ಸಾಲು. ಇವುಗಳಲ್ಲಿ ದ್ವಿತೀಯಾಕ್ಷರ ಪ್ರಾಸ ಮೊದಲಾದ ಸ್ಥೂಲವಾದ ಕವಿತಾ ಲಕ್ಷಣಗಳಿದ್ದರೂ ಇಲ್ಲಿ ಸಾಹಿತ್ಯವೇ ಮುಖ್ಯ. ದೇವರನಾಮ, ಸುಳಾದಿಗಳಿಗಿಂತಲೂ ಉಗಾಭೋಗದಲ್ಲಿ ಈ ಗುಣ ಹೆಚ್ಚು. ಹೇಳಬೇಕಾದುದನ್ನು ತಿಳಿಮಾತಿನಲ್ಲಿ ನೇರವಾಗಿ ಆದರೆ ಕಾವ್ಯಧರ್ಮದಿಂದೊಡಗೂಡಿ ಹೇಳಿರುತ್ತಾರೆ. ಇವು ವಚನಗಳ ಧಾಟಿಯಲ್ಲಿರುತ್ತವೆ. ಸ್ತುತಿ ನಿಂದೆ ವಿಮರ್ಶೆ ಹಾಸ್ಯ ಉಪದೇಶಗಳೆಲ್ಲವೂ ಇಲ್ಲಿ ಸಾಮಗ್ರಿಗಳು.

ಉಗಾಭೋಗಗಳಿಗೆ ರಾಗವನ್ನು ನಿರ್ದೇಶಿಸುವ ಪದ್ಧತಿಯಿದೆ. ಆದರೆ ತಾಳವನ್ನು ಸೂಚಿಸಿರುವುದಿಲ್ಲ. ಯಾವೊಂದು ತಾಳಪ್ರಕಾರಕ್ಕೂ ಅಳವಡದೆ ಸ್ವತಂತ್ರವಾಗಿ ನಿಲ್ಲುವುದಾದರೂ ಇದು ಪ್ರಮುಖವಾಗಿ ಕವಿತೆ,

ಪದ್ಯ, ಅದಕ್ಕೆಬೇಕಾದ ಛಂದಸ್ಸು, ಪ್ರಾಸಗಳಿರುತ್ತವೆ. ಇದ್ದರೂ ಕಟ್ಟುಪಾಡು ಅತಿಯಾಗಿಲ್ಲ. ಸಂಗೀತಾಂಶ ಕಡಿಮೆ, ಗೌಣವೇ ಎಂದರೂ ತಪ್ಪಾಗದು. ಇದರಲ್ಲಿ ಧ್ರುವ, ಚರಣಗಳೆಂಬ ಭೇದವಿರದು. ರಾಗದ ನಿರ್ಧಾರವೂ ನಿಶ್ಚಿತವಲ್ಲ. ಹಾಡುವ ಪದ್ಧತಿಯಲ್ಲಿ ವಿಸ್ತಾರ, ಪುನಶ್ಚರಣ, ಸ್ವರವಿನ್ಯಾಸಗಳಿರುವುದಿಲ್ಲ.

ಪುರಂದರದಾಸರಿಂದ ಉಗಾಭೋಗ ಪರಂಪರೆ ಆರಂಭವಾದಂತೆ ತೋರುತ್ತದೆ. ಇವರು ಒಟ್ಟು ಅರವತ್ತು ಸಾವಿರ ಉಗಾಭೋಗಗಳನ್ನು ರಚಿಸಿದರೆಂದು ಪ್ರತೀತಿ.ಆದರೆ ಉಳಿದಿರುವ ಸಂಖ್ಯೆ ತೀರ ಸಣ್ಣದು. ಉಗಾಭೋಗಗಳಿಗೆ ಹೆಸರಾದ ಇನ್ನೊಬ್ಬ ಹರಿದಾಸರೆಂದರೆ ವಿಜಯದಾಸರು. (ಎಸ್.ಕೆ.ಆರ್.)

**ಉಚ್ಚಂಗಿದುರ್ಗ :** ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನ ದಕ್ಷಿಣ ಎಲ್ಲೆಯಲ್ಲಿರುವ ಒಂದು ಗ್ರಾಮ. ಇಲ್ಲಿ ಇತಿಹಾಸ ಪ್ರಸಿದ್ಧವಾದೊಂದು ಬೆಟ್ಟವಿದೆ. ಈ ಬೆಟ್ಟದ ಮೇಲೆ ಉತ್ಸವಾಂಬ (ಉಚ್ಚಂಗಮ್ಮ) ದೇವತೆಯಿರುವುದರಿಂದ ಈ ಸ್ಥಳಕ್ಕೆ ಉಚ್ಚಂಗಿಯೆಂಬ ಹೆಸರು ಬಂತೆಂದು ಹೇಳಲಾಗಿದೆ. ಅಷ್ಟೇನೂ ಎತ್ತರವಾಗಿಲ್ಲದ ಉತ್ತರ-ದಕ್ಷಿಣವಾಗಿ $1^1/_2$ಕಿಮೀ ಗಳಷ್ಟು ದೂರ ಹಬ್ಬಿರುವ ಬೆಟ್ಟ ಬಹಳ ಕಡಿದಾಗಿದೆ. ದುರ್ಗದಲ್ಲಿ ಕಲ್ಲಿನಿಂದ ಕಟ್ಟಿದ ಕೋಟೆ ಕೊತ್ತಲಗಳ, ದೇವಾಲಯಗಳ ಮತ್ತು ಪಾಳುಕೊಳಗಳ ಅನೇಕ ಭಗ್ನಾವಶೇಷಗಳನ್ನು ಕಾಣಬಹುದು. ದುರ್ಗದ ಪ್ರವೇಶದ್ವಾರದಲ್ಲಿ ಪಾದ ದೇವರ ಗುಡಿಯಿದೆ. ಈ ದೇವಾಲಯದ ಎದುರಿನಲ್ಲಿ 50' ಎತ್ತರದ ದೀಪಸ್ತಂಭವಿದೆ. ಶಿಥಿಲ ಕೋಟೆಗೆ ಕೋಟೆಬಾಗಿಲು, ಮಳೆಬಾಗಿಲು, ಅಗಸೆ ಬಾಗಿಲು, ಹರಿಹರೇಶ್ವರ ಬಾಗಿಲು, ಅಣಜಿ ಬಾಗಿಲು ಎಂಬ ನಾಲ್ಕು ಹೆಬ್ಬಾಗಿಲುಗಳಿದ್ದುವು. ದುರ್ಗದಲ್ಲಿ ಅನೇಕ ದೇವಾಲಯಗಳಿವೆ.



ಉಚ್ಚಂಗಿ ದುರ್ಗದ ಕೋಟೆ

ಅವುಗಳಲ್ಲಿ ಹನುಮಂತ, ಬನಶಂಕರಿ, ವೀರಭದ್ರ, ತಪಕೇಶ್ವರ, ಹೊನ್ನೆತ್ತಮ್ಮ- ಈ ಗುಡಿಗಳು ಮುಖ್ಯ. ಪಾಳು ಬಿದ್ದ ಅನೇಕ ಜೈನ ಬಸದಿಗಳೂ ಉಂಟು. ಹಲವಾರು ಚಿಕ್ಕ ಕೊಳಗಳನ್ನೂ ಹೊಂಡಗಳನ್ನೂ ಕಾಣಬಹುದು. ಇವುಗಳಲ್ಲಿ ಹಿರೇಹೊಂಡ, ಚಿಗೆಹೊಂಡ, ಹೊನ್ನೆರಘುರಿ, ಆನೆಹೊಂಡ, ಸಗಣಿಹೊಂಡ, ಅರಿಶಿನ ಹೊಂಡಗಳು ಮುಖ್ಯ. ಅರಿಶಿನ ಹೊಂಡದ ನೀರನ್ನು ಇಂದಿಗೂ ಉಪಯೋಗಿಸುತ್ತಾರೆ. ಬೆಟ್ಟದ ಮೇಲಿರುವ ಬಾವಿಗಳಲ್ಲಿ ತೊಟ್ಟಿಲುಬಾವಿ, ಬಟ್ಟಲುಬಾವಿ ಪ್ರಸಿದ್ಧ. ದುರ್ಗದ ಮೇಲಿರುವ ಉತ್ಸವಾಂಬ ದೇವಾಲಯ ಕಲೆಯ ದೃಷ್ಟಿಯಿಂದ ಮುಖ್ಯವಲ್ಲದಿದ್ದರೂ ಪ್ರಾಚೀನವಾದದ್ದೆಂದು ಹೇಳಲಾಗಿದೆ. ಇಂದಿಗೂ ಈ ದೇವಾಲಯಕ್ಕೆ ಭಕ್ತರು ಹೆಚ್ಚು ಸಂಖ್ಯೆಯಲ್ಲಿ ಬರುತ್ತಾರೆ. ಇಲ್ಲಿಯ ದಸರ ಹಬ್ಬ ಬಹು ಜನರನ್ನು ಆಕರ್ಷಿಸುತ್ತದೆ.

ಹಿಂದೆ ಈ ದುರ್ಗದ ಹೆಸರು ಉಚ್ಚಶೃಂಗಿಯೆಂದಿತ್ತೆಂದೂ 5ನೆಯ ಶತಮಾನದಲ್ಲಿ ಕದಂಬ ಶಾಖೆಯೊಂದರ ರಾಜಧಾನಿಯಾಗಿತ್ತೆಂದೂ ಊಹೆ ಇದೆ. 11-12ನೆಯ ಶತಮಾನದಲ್ಲಿ ಇದು ಉಚ್ಚಂಗಿ ಪಾಂಡ್ಯರ ರಾಜಧಾನಿ. ವಿಷ್ಣುವರ್ಧನ ಇದನ್ನು ಆಕ್ರಮಿಸಿಕೊಂಡಿದ್ದ. ಸ್ವಲ್ಪ ಕಾಲ ಚಿತ್ರದುರ್ಗದ ಪಾಳೆಯಗಾರರ ವಶದಲ್ಲಿದ್ದು, ಅನಂತರ ಹರಪನಹಳ್ಳಿ ಪಾಳೆಯಗಾರರಿಗೆ ಸೇರಿತ್ತು.

ದುರ್ಗದ ನೈರುತ್ಯಕ್ಕೆ 5ಕಿಮೀ ದೂರದಲ್ಲಿ ಕರಡಿ ಬೆಟ್ಟವಿದೆ. ದಕ್ಷಿಣಕ್ಕೆ 8ಕಿಮೀ ದೂರದಲ್ಲಿ ಅಣಜಿ ಕೆರೆ ಇದೆ. ಬೆಟ್ಟಕ್ಕೆ ಹೊಂದಿಕೊಂಡಂತೆ ಪೂರ್ವ ದಿಕ್ಕಿನಲ್ಲಿ ಗ್ರಾಮವಿದೆ. *

**ಉಚ್ಚಂಗಿಯ ಪಾಂಡ್ಯರು :** 11-12ನೆಯ ಶತಮಾನಗಳಲ್ಲಿ ಉಚ್ಚಂಗಿ ಗಿರಿದುರ್ಗದಿಂದ ಆಳಿದ ಒಂದು ಅಧೀನ ರಾಜವಂಶದವರು. ಇವರು ಸೂರ್ಯವಂಶದವರಾಗಿದ್ದು ಮೂಲತಃ ಸಪ್ತಕೊಂಕಣಗಳಲ್ಲಿ ಒಂದಾದ ಹೈವೆಯನ್ನು ಶಿಶುಗಲಿ ರಾಜಧಾನಿಯಿಂದ ಆಳುತ್ತಿದ್ದರು. 1113ರಲ್ಲಿ ಆಳುತ್ತಿದ್ದ ಒಬ್ಬ ಪಾಂಡ್ಯ ದೊರೆ ಗೋಕರ್ಣಪುರದ ಒಡೆಯನೆಂದು ಕರೆದುಕೊಂಡಿದ್ದಾನೆ.

ಚಾಳುಕ್ಯ 2ನೆಯ ಜಯಸಿಂಹ (1015-1042) ಕೊಂಕಣವನ್ನು ಜಯಿಸಿದಾಗ ಹೈವೆಯಲ್ಲಿದ್ದ ಕೆಲ ಪಾಂಡ್ಯರು ಉಚ್ಚಂಗಿಗೆ ತೆರಳಿದರು. ಈ ಪಾಂಡ್ಯಕುಲದ ಮೂಲಪುರುಷ ಮಂಗಯ್ಯ ಅಥವಾ ಆದಿತ್ಯದೇವ. ಚೇದಿರಾಜ, ಪಾಂಡ್ಯ, ಪಲಂತ ಅನುಕ್ರಮವಾಗಿ ಅವನ ಸಂತಾನದವರು. ಮುಂದೆ ಅವರ ವಂಶದ ಇರುಕ್ಕವೇಲ ಇಲ್ಲವೆ ತ್ರಿಭುವನಮಲ್ಲ ಪಾಂಡ್ಯ ದಾವಣಗೆರೆಯ ಸನಿಹದ ಬೆಳ್ಳೂರಿಗೆ ತನ್ನ ರಾಜಧಾನಿಯನ್ನು ವರ್ಗಾಯಿಸಿಕೊಂಡು ನೊಳಂಬವಾಡಿ ಬಿಲ್ಲಕುಂದೆಗಳನ್ನು ಅನುಕ್ರಮವಾಗಿ 1083 ಮತ್ತು 1101ರಲ್ಲಿ ಆಳುತ್ತಿದ್ದ. ಇವನು ತನ್ನ ಭುಜಬಲ ಪರಾಕ್ರಮದಿಂದ ಚಾಳುಕ್ಯ ಚಕ್ರವರ್ತಿಯಾದ 6ನೆಯ ವಿಕ್ರಮಾದಿತ್ಯನ ವಿಶ್ವಾಸಕ್ಕೆ ಪಾತ್ರನಾಗಿ, ತ್ರಿಭುವನಮಲ್ಲ ದಕ್ಷಿಣ ಹಸ್ತದಂಡ ಎಂಬ ಬಿರುದನ್ನು ಸಂಪಾದಿಸಿದ್ದ. 1124ರಲ್ಲಿ ಸಾಂತಳಿಗೆ –1000ವನ್ನು ಕೈವಶಮಾಡಿಕೊಂಡ. ಇವನ ಕಾಲದಲ್ಲಿ ವಿಷ್ಣುವರ್ಧನ ಉಚ್ಚಂಗಿಯ ಮೇಲೆ ದಾಳಿ ಮಾಡಿ ಗೆದ್ದುಕೊಂಡಿದ್ದನೆಂದು ಹೊಯ್ಸಳ ಶಾಸನಗಳಿಂದ ತಿಳಿಯುತ್ತದೆ.

ಆಮೇಲೆ ತ್ರಿಭುವನಮಲ್ಲನ ಮಗ ರಾಯಪಾಂಡ್ಯ ಪಟ್ಟವನ್ನೇರಿದ. ಈತನು ದೊಡ್ಡ ಪರಾಕ್ರಮಿಯಾಗಿದ್ದ. ಪಂಡಿತಪಾಂಡ್ಯ, ವೀರಪಾಂಡ್ಯ, ಮತ್ತು ವಿಜಯಪಾಂಡ್ಯ (ಕಾಮದೇವ) ಇವನ ಮಕ್ಕಳು. ವೀರಪಾಂಡ್ಯ ಪಟ್ಟಕ್ಕೆ ಬಂದು ತನ್ನ ರಾಜಧಾನಿಯನ್ನು ಬೆಳ್ಳೂರಿನಿಂದ ಉಚ್ಚಂಗಿಗೆ ಬದಲಾಯಿಸಿದ; ಮಲೆಯನ್ನು ಜಯಿಸಿ ಚಾಳುಕ್ಯ ಚಕ್ರವರ್ತಿಗೆ ಒಪ್ಪಿಸಿದ. 1148ರಲ್ಲಿ ತುಂಗಭದ್ರಾ ಹರಿದ್ರೆಗಳ ಸಂಗಮದಲ್ಲಿ ಈತ ಭೂದಾನ ಮಾಡಿದ.

ಮುಂದಿನ ದೊರೆ ವಿಜಯಪಾಂಡ್ಯ ಚಾಳುಕ್ಯ ಮತ್ತು ಕಳಚುರಿಗಳ ಕಲಹದ ಲಾಭ ಪಡೆದು ಸ್ವತಂತ್ರವಾಗಿದ್ದ (1184). ಆದರೆ ಹೊಯ್ಸಳ ಇಮ್ಮಡಿ ಬಲ್ಲಾಳ (1173-1220) ಪಾಂಡ್ಯಬಲವನ್ನು ಮುರಿದು ಉಚ್ಚಂಗಿಯನ್ನು ವಶಪಡಿಸಿಕೊಂಡ; ಅಲ್ಲದೆ ವಿಜಯಪಾಂಡ್ಯನನ್ನು ಸೆರೆ ಹಿಡಿದ. ಕೊನೆಗೆ ಉದಾರವಾಗಿ ಅವನ ರಾಜ್ಯವನ್ನು ಅವನಿಗೆ ಬಿಟ್ಟು ಕೊಟ್ಟ. ಅವನ ಕಾಲಾನಂತರ ಕ್ರಮೇಣ ಉಚ್ಚಂಗಿ ರಾಜ್ಯ ಹೊಯ್ಸಳ ಸಾಮ್ರಾಜ್ಯದಲ್ಲಿ ಸೇರಿಹೋಯಿತು. (ಬಿ.ಎಚ್.ಎಸ್.)

**ಉಡುತಡಿ :** ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕಿನಲ್ಲಿ ಶಿಕಾರಿಪುರ ಪಟ್ಟಣದಿಂದ 14ಕಿಮೀ ಗಳ ದೂರದಲ್ಲಿದೆ. ಇದನ್ನು ಉಡುಗಣಿ ಎಂದೂ ಕರೆಯುತ್ತಾರೆ; ಪ್ರಾಚೀನ ಸ್ಥಳ. ಹರಿಹರ ತನ್ನ ಮಹಾದೇವಿಯಕ್ಕನ ರಗಳೆಗಳಲ್ಲಿ ಆಕೆ ಹುಟ್ಟಿ ಬೆಳೆದ ಪಟ್ಟಣ 'ಉಡುತಡಿ' ಎಂದು ಮೊತ್ತಮೊದಲು ಹೇಳಿರುತ್ತಾನೆ. ಆ ತರುವಾಯದ ಮಹಾದೇವಿಯಕ್ಕನ ಚರಿತ್ರೆಗೆ ಸಂಬಂಧಿಸಿದ ಪ್ರತಿಯೊಂದು ಕೃತಿಯಲ್ಲಿಯೂ ಉಡುತಡಿಯ ಹೆಸರು ಕಂಡು ಬಂದಿದೆ. ಹಿಂದಿನ ಕಾಲದ ವೀರಶೈವ ಕೃತಿಕಾರರ ಅಭಿಪ್ರಾಯದಂತೆ ಉಡುತಡಿ ಬಳ್ಳಿಗಾಮೆಗೆ ಹತ್ತಿರದ್ದಾಗಿರಬೇಕು. ಬಳ್ಳಿಗಾಮೆಯ ಸಮೀಪದಲ್ಲಿ ಇರುವ ಉಡುಪಗಣಿ. ತಡಗಣಿ ಎಂಬ ಹೆಸರಿನ ಎರಡು ಚಿಕ್ಕ ಹಳ್ಳಿಗಳ ಪ್ರದೇಶವೇ ಉಡುತಡಿ ಎಂಬ ಅಭಿಪ್ರಾಯ ಇದೆ. ಇಂದು ಉಡುಗಣಿಯಲ್ಲಿ ಅಕ್ಕಮಹಾದೇವಿಯ ದೇವಾಲಯ (1973) ಇತ್ಯಾದಿಗಳನ್ನು ಸ್ಥಾಪಿಸಲಾಗಿದೆಯಲ್ಲದೆ ಬಳಿಯಲ್ಲಿರುವ ಕೋಟೆಯನ್ನು ಕೌಶಿಕ ರಾಜನ ಕೋಟೆ ಎಂದೂ ತೋರಿಸುವುದುಂಟು. ಅಕ್ಕ ಲಿಂಗದೀಕ್ಷೆ ಪಡೆದಳೆಂದು

ಹೇಳಲಾದ ಗುರುಲಿಂಗ ಚನ್ನಮಲ್ಲಿಕಾರ್ಜುನ ಮಠದ ಅವಶೇಷಗಳು ಇಲ್ಲಿವೆ. ಚನ್ನಕೇಶವ ಮತ್ತು ಸೂರ್ಯಗುಡಿಗಳಿವೆ. (ಬ.ಕೆ.)

**ಉಡುಪಿ :** ಕರ್ನಾಟಕ ರಾಜ್ಯದ ಒಂದು ಜಿಲ್ಲೆ, ತಾಲ್ಲೂಕು ಮತ್ತು ಆಡಳಿತಕೇಂದ್ರ.

**ಜಿಲ್ಲೆ:** ಉಡುಪಿ ಜಿಲ್ಲೆ ಕರ್ನಾಟಕದ ನೈಋತ್ಯ ಭಾಗದಲ್ಲಿದೆ. 1997ಕ್ಕೂ ಮುಂಚೆ ಈ ಜಿಲ್ಲೆಯ ಪ್ರದೇಶ ದಕ್ಷಿಣ ಕನ್ನಡ ಜಿಲ್ಲೆಯ ಭಾಗವಾಗಿತ್ತು.ಆ ವರ್ಷ ಜಿಲ್ಲಾ ಪುನರ್ವಿಂಗಡಣೆಯ ಯೋಜನೆಯನ್ನು ಜಾರಿಗೆ ತಂದು ಉಡುಪಿಯನ್ನು ಪ್ರತ್ಯೇಕ ಜಿಲ್ಲೆಯನ್ನಾಗಿ ರಚಿಸಲಾಯಿತು. ಈ ಜಿಲ್ಲೆಯ ಉತ್ತರದಲ್ಲಿ ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಗಳು, ಪೂರ್ವದಲ್ಲಿ ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳು, ದಕ್ಷಿಣಕ್ಕೆ ದಕ್ಷಿಣ ಕನ್ನಡ ಜಿಲ್ಲೆ, ಅರಬ್ಬೀ ಸಮುದ್ರ ಇವೆ. ವಿಸ್ತೀರ್ಣ 3905.4 ಚಕಿಮೀ. ಜನಸಂಖ್ಯೆ 11,09,499. ಈ ಜಿಲ್ಲೆಯಲ್ಲಿರುವ ತಾಲ್ಲೂಕುಗಳ ಸಂಖ್ಯೆ ಮೂರು. ಉಡುಪಿ, ಕುಂದಾಪುರ ಮತ್ತು ಕಾರ್ಕಳ (ಆಯಾ ಸ್ಥಳಗಳನ್ನು ನೋಡಿ). ಜಿಲ್ಲೆಯ ಪಶ್ಚಿಮದಲ್ಲಿ ಉದ್ದಕ್ಕೂ ಅರಬ್ಬೀ ಸಮುದ್ರವಿದೆ. ಪೂರ್ವದಲ್ಲಿ ಎತ್ತರವಾದ ಪಶ್ಚಿಮಘಟ್ಟದ ಶ್ರೇಣಿಗಳಿವೆ. ದಕ್ಷಿಣದಿಂದ ಉತ್ತರಕ್ಕೆ ಹೋದಂತೆಲ್ಲಾ ಜಿಲ್ಲೆಯ ಅಗಲ ಕಿರಿದಾಗುತ್ತದೆ. ಜಿಲ್ಲೆಯ ಭೂ ಶಿಲಾ ರಚನೆಯನ್ನು ಮುಖ್ಯವಾಗಿ ಧಾರವಾಡ ಶಿಲಾವರ್ಗ, ಮಧ್ಯಂತರ ಸೇರ್ಪಡೆಗಳು ಮತ್ತು ಈಚಿನ ರಚನೆಗಳು ಎಂದು ವಿಂಗಡಿಸಬಹುದು. ಧಾರವಾಡ ಶಿಲಾವರ್ಗದಲ್ಲಿ ರೂಪಾಂತರಗೊಂಡ ಅನೇಕ ಪ್ರಾಚೀನ ಶಿಲೆಗಳಿವೆ. ಇವುಗಳಲ್ಲಿ ಮುಖ್ಯವಾಗಿ ಪದರ ಪದರವಾದ ಕಬ್ಬಿಣ ಮಿಶ್ರಿತವಾದ ಕ್ವಾರ್ಟ್‌ಸೈಟ್ ಮತ್ತು ಟಾಲ್ಕ್ ಹಾಗೂ ಹಾರ್ನ್‌ಬ್ಲೆಂಡ್ ಶಿಷ್ಟ್‌ಗಳು ಕಂಡುಬರುತ್ತವೆ. ಹಾರ್ನ್‌ಬ್ಲೆಂಡ್ ಹೊಡೆಪೊರೆಗಳು ಅಲ್ಲಲ್ಲಿ ವಿರಳವಾಗಿ ಕಾಣಸಿಗುತ್ತವೆ. ಜಂಬುಕಲ್ಲು ಕರಾವಳಿ ಪ್ರದೇಶದಲ್ಲಿ ಬಹುಮಟ್ಟಿಗೂ ಒಳಭಾಗದಲ್ಲಿ ಸ್ವಲ್ಪಮಟ್ಟಿಗೂ ಇದೆ. ಕರಾವಳಿಯಲ್ಲಿ ಕಂಡುಬರುವ ಮೆಕ್ಕಲು, ಜೇಡಿ ಮತ್ತು ಸುಣ್ಣಕಲ್ಲು ಪದರಗಳು ಈಚಿನ ರಚನೆಗಳಾಗಿವೆ.

ಪಶ್ಚಿಮ ಘಟ್ಟಗಳ ಶ್ರೇಣಿಯಲ್ಲಿ ಕಬ್ಬಿಣದ ಅದುರು ಹೇರಳವಾಗಿದೆ. ಕೊಡಚಾದ್ರಿಯ ಬಳಿ ಈ ಅದುರನ್ನು ತೆಗೆಯಲಾಗುತ್ತದೆ. ಕುಂದಾಪುರ ತಾಲ್ಲೂಕಿನಲ್ಲಿ ಉತ್ತಮ ದರ್ಜೆಯ ಬಾಕ್ಸೈಟ್ ಇದೆ. ಸುಣ್ಣದ ಚಿಪ್ಪು, ಸಿಲಿಕ ಮರಳು, ಸಿಲಿಮನೈಟ್, ಸೋಪುಕಲ್ಲು, ಹೆಂಚಿನ ತಯಾರಿಕೆಯ ಮಣ್ಣು- ಇವು ಜಿಲ್ಲೆಯ ವಿವಿಧ ಭಾಗಗಳಲ್ಲಿ ದೊರೆಯುತ್ತದೆ. ಕಾಪು, ಪಡುಬಿದರೆ, ಉದ್ಯಾವರ ಮೊದಲಾದೆಡೆಗಳಲ್ಲಿ ಅಭ್ರಕದಿಂದ ಕೂಡಿದ ಬೆಣಚುಕಲ್ಲಿನ ಶಿಲೆಗಳಿವೆ. ಮಲ್ಪೆ ಬಳಿ ಹೆಂಚು ತಯಾರಿಕೆಗೆ ಉಪಯುಕ್ತವಾದ ಮಣ್ಣು ದೊರೆಯುತ್ತದೆ.

**ಮೇಲ್ಮೈಲಕ್ಷಣ :** ಈ ಜಿಲ್ಲೆಯ ಪೂರ್ವ ಗಡಿಯುದ್ದಕ್ಕೂ ಎತ್ತರವಾದ ಮತ್ತು ದಟ್ಟವಾದ ಕಾಡಿನಿಂದ ಕೂಡಿದ ಪಶ್ಚಿಮ ಘಟ್ಟದ ಶ್ರೇಣಿಗಳಿವೆ. ಅಲ್ಲಲ್ಲಿ ಎತ್ತರವಾದ ಗಿರಿಶಿಖರಗಳು ಮತ್ತು ಮಧ್ಯೆ ಮಧ್ಯೆ ಕಂದರಗಳಿಂದ ಕೂಡಿರುವ ಭೂದೃಶ್ಯ ರುದ್ರರಮಣೀಯವಾಗಿವೆ. ಸಹ್ಯಾದ್ರಿ ಘಟ್ಟಗಳ ಶ್ರೇಣಿಗಳ ನಡುವೆ ಇರುವ ಆಗುಂಬೆ ಘಾಟಿ ರಸ್ತೆಯು ಕರ್ನಾಟಕದ ಮೈದಾನ ಪ್ರದೇಶದೊಂದಿಗೆ ಸಂಪರ್ಕಮಾರ್ಗವಾಗಿದೆ. ಕಾರ್ಕಳದ ಮೂಲಕ ದಕ್ಷಿಣ ಕನ್ನಡ ಜಿಲ್ಲೆಯ ಗಡಿಯನ್ನು ಸೇರಿ ಮುಂದೆ ಶೃಂಗೇರಿ ಮತ್ತು ಕುದುರೆಮುಖಗಳತ್ತ ಕವಲಾಗಿ ಹೋಗುವ ಹೆದ್ದಾರಿ ಈ ಪ್ರದೇಶದ ಇನ್ನೊಂದು ಪ್ರಮುಖ ಮಾರ್ಗ. ಆಗುಂಬೆಗೆ ಉತ್ತರದಲ್ಲಿರುವ ಕೊಡಚಾದ್ರಿ ಬೆಟ್ಟ ಈ ಜಿಲ್ಲೆಯ ಅತ್ಯಂತ ಎತ್ತರದ ಶಿಖರ (1341ಮೀ) ಇದು ಪ್ರವಾಸಿಗಳ ಆಕರ್ಷಣೀಯ ತಾಣವೂ ಹೌದು. ನದಿಗಳು ತೊರೆಗಳು ಮತ್ತು ನಿತ್ಯಹಸಿರು ಕಾಡುಗಳಿಂದ ಕೂಡಿರುವ ಈ ಭಾಗದ ಪ್ರಕೃತಿ ತುಂಬಾ ರಮ್ಯವಾಗಿದೆ.

ಘಟ್ಟದಿಂದ ಕೆಳಗೆ ಪಶ್ಚಿಮಾಭಿಮುಖವಾಗಿ ಬಂದಂತೆಲ್ಲಾ ಮೈದಾನ ಪ್ರದೇಶ ತೆರೆದುಕೊಳ್ಳುತ್ತದೆ. ಅಷ್ಟೇನೂ ಕಡಿದಾಗಿರದ ಇಳಿಜಾರಿನ ಪ್ರದೇಶದಲ್ಲಿ ಅಲ್ಲಲ್ಲಿ ಎತ್ತರದ ಗುಡ್ಡಬೆಟ್ಟಗಳುಂಟು. ವ್ಯವಸಾಯದ ಜಮೀನಿನಲ್ಲಿ ಗದ್ದೆಗಳು, ತೆಂಗು, ಅಡಿಕೆ, ಗೋಡಂಬಿ ತೋಟಗಳಿವೆ. ಕೆಲವೆಡೆ ಕೆಮ್ಮಣ್ಣಿನಿಂದ ಕೂಡಿದ ಬರಡು ದಿಣ್ಣೆಗಳಿವೆ. ಈ ಜಿಲ್ಲೆಯಲ್ಲಿ ಸಮತಟ್ಟಾದ ನೆಲ ಕಡಿಮೆಯೇ.



ಉಡುಪಿ ನಗರದ ವಿಹಂಗಮ ನೋಟ



ಉತ್ತರ ಕನ್ನಡ ಜಿಲ್ಲೆ
0 10 20
ಕಿಲೋಮೀಟರುಗಳು
ಉಡುಪಿ ಜಿಲ್ಲೆ
ಶಿ ವ ಮೊ ಗ್ಗ ಜಿ ಲ್ಲೆ
ಕೊಡಚಾದ್ರಿ
ಬೈಂದೂರು
ಕೊಲ್ಲೂರು
ಮರವಂತೆ
ಕೊಲ್ಲೂರು ನದಿ
ಚಕ್ರ ನದಿ
ವಂಡ್ಸೆ
ಹೊಸಂಗಡಿ
ಚಿತ್ರಾ ನದಿ
ಗಂಗೊಳ್ಳಿ
ಮೆಕ್ಕೆಕಟ್ಟೆ
ಕುಂದಾಪುರ
ಶಂಕರನಾರಾಯಣ
ಬಸರೂರು
ಕೋಟ
ಬಾರಕೂರು
ಸಾಲಿಗ್ರಾಮ
ಸೋಮೇಶ್ವರ
ಸೀತಾ ನದಿ
ಬ್ರಹ್ಮಾವರ
ಅರಬ್ಬೀ
ಸಮುದ್ರ
ಕಲ್ಯಾಣಪುರ
ಪೆರಡೂರು
ಮಣಿಪಾಲ
ಮಲ್ಪೆ
ಉಡುಪಿ
ಅಜಕಾರ
ಉದ್ಯಾವರ
ಬೈಲೂರು
ಕಾಪು
ಕಾರ್ಕಳ
ಪಡುಬಿದ್ರಿ
ಮೂಡಬಿದರೆ
ಕಡಿಂಜೆ
ಗುರುಪುರ ಹೊಳೆ
ದ ಕ್ಷಿ ಣ ಕ ನ್ನ ಡ ಜಿ ಲ್ಲೆ
ಜಿ ಲ್ಲೆ

ಜಿಲ್ಲೆಯ ತೀರಪ್ರದೇಶ ಅತ್ಯಂತ ಮುಖ್ಯವಾದ ಭಾಗ. ಇಲ್ಲಿಯ ಜನಸಾಂದ್ರತೆ ಅಧಿಕ. ಇದು ಆರ್ಥಿಕ ಚಟುವಟಿಕೆಗಳಿಂದ ಕೂಡಿದ ಪ್ರದೇಶ. ಇಲ್ಲಿಯ ತೀರ ಪ್ರದೇಶದ ಅಂಚು ಸಾಮಾನ್ಯವಾಗಿ ನೇರವಾಗಿದೆ. ನದಿಗಳು ಸಮುದ್ರ ಸೇರುವ ಎಡೆಗಳಲ್ಲಿ ಕೊಲ್ಲಿಗಳುಂಟಾಗಿವೆ. ಸಮುದ್ರದ ಹಿನ್ನೀರಿನ ಪ್ರದೇಶಗಳು ಮೀನುಗಾರಿಕೆಗೆ ಮತ್ತು ದೋಣಿಗಳ ಸಂಚಾರಕ್ಕೆ ಉಪಯುಕ್ತವಾಗಿವೆ. ಬೈಂದೂರು, ಗಂಗೊಳ್ಳಿ, ಕುಂದಾಪುರ, ಮಲ್ಪೆ, ಪಡುಬಿದರೆ ಮೊದಲಾದ ಪಟ್ಟಣಗಳು ಮೀನುಗಾರಿಕೆಗೆ ಮತ್ತು ವ್ಯಾಪಾರದಿಂದಾಗಿ ಅಭಿವೃದ್ಧಿಗೆ ಬಂದಿವೆ. ಮಲ್ಪೆ ಬಳಿ ಸಂತ ಮೇರಿ ದ್ವೀಪ ಸಮೂಹವಿದೆ. ತೀರದಲ್ಲಿ ವಿರಳವಾಗಿರುವ ದ್ವೀಪಗಳಲ್ಲಿ ಈ ದ್ವೀಪಸಮೂಹ ಪ್ರಮುಖವಾದದ್ದು.



ದೀಪಸ್ತಂಭ, ಕಾಪು

**ಜಲಸಂಪತ್ತು :** ಇಲ್ಲಿಯ ಭೌಗೋಳಿಕ ಸನ್ನಿವೇಶ ಹಾಗೂ ವಾಯುಗುಣದಿಂದಾಗಿ ಇಲ್ಲಿ ಹೆಚ್ಚಿನ ಜಲಸಂಪನ್ಮೂಲವಿದೆ. ನೈಋತ್ಯ ಮಾರುತಗಳು ಇಲ್ಲಿನ ತೀರ ಮತ್ತು ಘಟ್ಟ ಪ್ರದೇಶದಲ್ಲಿ ಹೇರಳವಾಗಿ ಮಳೆ ಸುರಿಸುತ್ತವೆ. ಜೂನ್‌ನಿಂದ ಸೆಪ್ಟೆಂಬರ್‌ವರೆಗಿನ ಮುಂಗಾರಿನ ಕಾಲದಲ್ಲಿ ಬರುವ ಮಳೆಯಿಂದಾಗಿ ಪಶ್ಚಿಮ ಘಟ್ಟಗಳಲ್ಲಿ ಅನೇಕ ನದಿತೊರೆಗಳು ಹುಟ್ಟಿ ಪಶ್ಚಿಮಾಭಿಮುಖವಾಗಿ ಹರಿದುಬರುತ್ತವೆ. ಇವುಗಳ ಉದ್ದ ಕಡಿಮೆಯಾದರೂ ನೀರು ಅಧಿಕವಾಗಿರುತ್ತದೆ. ಗಂಗೊಳ್ಳಿ ನದಿಯು (ಕುಂದಾಪುರದ ಬಳಿ) ಐದು ಉಪ ಹೊಳೆಗಳನ್ನು ಕೂಡಿಕೊಂಡು ಸಮುದ್ರ ಸೇರುವುದರಿಂದ ಈ ಸ್ಥಳವನ್ನು ಪಂಚಗಂಗಾವಳಿ ಎಂದು ಕರೆಯುತ್ತಾರೆ. ಇಲ್ಲಿ ವಿಸ್ತಾರವಾದ ಅಳಿವೆ ಇದೆ. ಇಲ್ಲಿ ಬಂದರು ಇದೆ. ಗುರುಪುರ, ಸ್ವರ್ಣ, ಸೀತಾ, ಹಳದಿ, ಚಕ್ರಾ ಮತ್ತು ಕೊಲ್ಲೂರು ನದಿಗಳು ಮುಖ್ಯವಾದವು. ಸೀತಾನದಿ ಮತ್ತು ಸ್ವರ್ಣನದಿಗಳು ಬಾರಕೂರು ಬಳಿ ಒಟ್ಟುಗೂಡಿ ಸಮುದ್ರ ಸೇರುತ್ತವೆ. ಈ ಎಲ್ಲ ನದಿಗಳು ಸೇರುವ ಹಿನ್ನೀರು ಪ್ರದೇಶ ದೋಣಿಗಳ ಸಂಚಾರಕ್ಕೆ ಅನುಕೂಲಕರವಾಗಿದೆ. ಜಿಲ್ಲೆಯಲ್ಲಿ ಜಲಸಂಪತ್ತು ಹೇರಳವಾಗಿದ್ದರೂ ಅದು ವ್ಯವಸಾಯಕ್ಕೆ ಉಪಯೋಗವಾಗುವುದಕ್ಕಿಂತ ಸಮುದ್ರಕ್ಕೆ ಹರಿದುಹೋಗುವುದೇ ಹೆಚ್ಚು. ಕಾರ್ಕಳ ತಾಲ್ಲೂಕಿನ ಭಂಡಾಜಿ ಜಲಪಾತದಲ್ಲಿ ನೀರು 700ಮೀ ಗಳ ಎತ್ತರದಿಂದ ದುಮುಕುತ್ತದೆ. ಇದರೊಂದಿಗೆ ತಾಲ್ಲೂಕಿನ ರಾಮಸಾಗರ ಸರೋವರ ಮುಖ್ಯ ಆಕರ್ಷಣೆಯಾಗಿವೆ.

**ಅರಣ್ಯಸಂಪತ್ತು :** ಪಶ್ಚಿಮ ಘಟ್ಟದ ಕಾಡುಗಳಲ್ಲಿ ನಿತ್ಯಹರಿದ್ವರ್ಣ ಮತ್ತು ಎಲೆ ಉದುರುವ ಸಸ್ಯವರ್ಗಗಳಿವೆ. ಇಲ್ಲಿನ ಅರಣ್ಯಗಳು ಪ್ರಪಂಚದಲ್ಲಿ ಅತ್ಯಂತ ವೈವಿಧ್ಯಮಯ ಸಸ್ಯಗಳನ್ನು ಹೊಂದಿರುವ ವಿರಳ ಅರಣ್ಯಗಳ ಸಾಲಿಗೆ ಸೇರುತ್ತವೆ. ಒಟ್ಟು 99439 ಹೆಕ್ಟೇರುಗಳ ಅರಣ್ಯ ಪ್ರದೇಶವಿದೆ. ಶ್ರೀಗಂಧ, ತೇಗ, ನಂದಿ, ಮತ್ತಿ, ಬೀಟೆ, ಸಿರಿಹೊನ್ನೆ, ದಬ್ಬೆ, ಕೋಗಿಲೆ, ಹಲಸು ಮೊದಲಾದ ಮೌಲ್ಯಯುತವಾದ ಮರಗಳು ಇಲ್ಲಿಯ ಕಾಡುಗಳಲ್ಲಿವೆ. ಆಲ, ಅತ್ತಿ, ಸಂಪಿಗೆ, ಅರಳೆ, ಮಾವು, ಹೊಂಗೆ ಮರಗಿಡಗಳು ಇವೆ. ಕೆಲವೆಡೆ ಬಿದಿರು, ಬೆತ್ತ, ವಾಟೆ, ಕೇದಿಗೆ. ಈಚಲು. ಬಗನಿ ಮುಂತಾದವು ಇವೆ. ಏಲಕ್ಕಿ, ಕಾಡುಮೆಣಸು, ಸೀಗೆ. ಗೇರು, ಅಂಟುವಾಳ, ಚಕ್ಕೆ ಮೊದಲಾದವು ಇಲ್ಲಿಯ ಅರಣ್ಯೋತ್ಪನ್ನಗಳು. ನಿಂಬೆ, ಕಾಡು, ಕಂಚಿ, ದೊಡ್ಡಳ್ಳಿಕಾಯಿ, ಕಾಡುಕಿತ್ತಳೆ, ಚಕ್ಕೋತ. ನೆಲ್ಲಿಕಾಯಿ ಮುಂತಾದವೂ ಇವೆ.

ದಕ್ಷಿಣ ಭಾರತದ ಎಲ್ಲ ಪ್ರಾಣಿವರ್ಗವಿದೆ. ಹುಲಿ, ಚಿರತೆ, ಆನೆ, ಕಾಟಿ, ಕಡವೆ, ಕಾಡುಹಂದಿಗಳಂತಹ ದೊಡ್ಡ ಪ್ರಾಣಿಗಳಿಂದ ಹಿಡಿದು ಮೊಲ, ಕೆಂಜಳಿಲು, ಮುಸಿಯ ಮಂಗಗಳಂತಹ ಬಗೆಬಗೆಯ ಪ್ರಾಣಿಗಳಿವೆ. ಉರಗ ಮತ್ತು ಪಕ್ಷಿ ಜಾತಿಗಳು ಸಮೃದ್ಧವಾಗಿವೆ.

ಇಲ್ಲಿಯ ಸಮುದ್ರಕ್ಕಿಂತಲೂ ಕೆರೆಗಳೇ ಮೀನು ಅಭಿವೃದ್ಧಿಗೆ ಅನುಕೂಲವಾಗಿವೆ.

**ವಾಯುಗುಣ :** ಈ ಜಿಲ್ಲೆಯು ಪಶ್ಚಿಮ ಕರಾವಳಿ ವಾಯುಗುಣದ ಲಕ್ಷಣಗಳನ್ನು ಪಡೆದಿದೆ. ಸಮುದ್ರ ಮಟ್ಟದಿಂದ ಹೆಚ್ಚು ಎತ್ತರವಲ್ಲದ ಭೂಪ್ರದೇಶವೇ ಇಲ್ಲಿ ಅಧಿಕ ಇರುವುದರಿಂದಾಗಿ ವರ್ಷದ ಬಹುಭಾಗ ಮೈಯಲ್ಲಿ ಬೆವರು ಬರಿಸುವ ಉಷ್ಣಾಂಶ ಮತ್ತು ತೇವಾಂಶದಿಂದ ಕೂಡಿದ ಸೆಕೆ ಇರುತ್ತದೆ. ಹಗಲು ರಾತ್ರಿ ಉಷ್ಣಾಂಶ ಏರಿಕೆಯಲ್ಲೇ ಇರುತ್ತದೆ. ಚಳಿಗಾಲದಲ್ಲಿ ಗರಿಷ್ಠ ಉಷ್ಣಾಂಶ ಅಪರೂಪಕ್ಕೆ 38 ಡಿಗ್ರಿ ಸೆಲಿಸಿಯಸ್‌ಗೆ ಹೋದರೆ ಕನಿಷ್ಠ ಉಷ್ಣಾಂಶ 17 ಡಿಗ್ರಿ ಸೆಲಿಸಿಯಸ್‌ಗೆ ಇಳಿಯುವುದುಂಟು. ಮಾರ್ಚ್‌ನಿಂದ ಮೇ ತಿಂಗಳ ಅಂತ್ಯದವರೆಗೆ ಕಡುಬೇಸಿಗೆಯಿದ್ದು, ವಿರಳವಾಗಿ ಬಿರುಮಳೆಗಳಾಗುತ್ತವೆ. ಪಶ್ಚಿಮ ಘಟ್ಟದತ್ತ ಹೋದಂತೆಲ್ಲಾ ತಂಪು ಹವೆ ಕಂಡುಬರುತ್ತದೆ.

ಜೂನ್‌ನಿಂದ ಆರಂಭವಾಗುವ ನೈಋತ್ಯ ಮಾರುತದ ಮುಂಗಾರು ಮಳೆಯು ಸೆಪ್ಟೆಂಬರ್ ಅಂತ್ಯದವರೆಗೆ ತೀಕ್ಷ್ಣವಾಗಿರುತ್ತದೆ. ಈ ಅವಧಿಯಲ್ಲಿ ಭಾರಿ ಮಳೆಯಾಗುತ್ತದೆ. ರಾಜ್ಯದ ಹೆಚ್ಚು ಮಳೆ ಬೀಳುವ ಜಿಲ್ಲೆಗಳಲ್ಲಿ ಉಡುಪಿ ಜಿಲ್ಲೆಯೂ ಒಂದು. ವಾರ್ಷಿಕವಾಗಿ ಸರಾಸರಿ 3500 ರಿಂದ 4000ಮಿಮೀ ಮಳೆಯಾಗುವ ಸಂಭವವಿದೆ. ಅಕ್ಟೋಬರ್‌ನಿಂದ ಮಳೆ ವಿರಳವಾಗುತ್ತಾ ಬರುತ್ತದೆ. ಡಿಸೆಂಬರ್‌ನಿಂದ ಫೆಬ್ರವರಿಯವರೆಗಿನ ಚಳಿಗಾಲದ ತಿಂಗಳುಗಳಲ್ಲಿ ಉಷ್ಣಾಂಶ ಕಡಿಮೆ ಇರುವುದಲ್ಲದೆ, ಮಳೆಯು ತುಂಬಾ ವಿರಳ. ಕೆಲವು ವರ್ಷಗಳಲ್ಲಿ ಅತ್ಯಧಿಕ ಮಳೆಯಾದ ದಾಖಲೆ ಈ ಜಿಲ್ಲೆಗಿದೆ. 1961ರಲ್ಲಿ ಉಡುಪಿ ಮತ್ತು ಕಾರ್ಕಳ ಪಟ್ಟಣಗಳಲ್ಲಿ ಅನುಕ್ರಮವಾಗಿ 6335 ಮತ್ತು 6464 ಮಿಮೀ ಅಧಿಕ ಮಳೆಯಾದ ದಾಖಲೆ ಇದೆ.

**ವ್ಯವಸಾಯ :** ಕರ್ನಾಟಕದ ಇತರ ಜಿಲ್ಲೆಗಳಂತೆಯೇ ಇಲ್ಲಿಯೂ ವ್ಯವಸಾಯವೇ ಆರ್ಥಿಕತೆಯ ಬೆನ್ನೆಲುಬು. ಇದು ವರ್ಷದಲ್ಲಿ ನಾಲ್ಕು ತಿಂಗಳು ಅಧಿಕ ಮಳೆ ಬೀಳುವ ಪ್ರದೇಶವಾಗಿರುವುದರಿಂದ ಇಲ್ಲಿ ನೀರಾವರಿ ಬೆಳೆಗಳೇ ಹೆಚ್ಚು. ಭತ್ತ ಪ್ರಮುಖ ಆಹಾರ ಬೆಳೆ. ಇಲ್ಲಿ ಭತ್ತದ ಗದ್ದೆಗಳನ್ನು ಅವುಗಳ ಸನ್ನಿವೇಶಕ್ಕನುಗುಣವಾಗಿ ವಿಂಗಡಿಸುತ್ತಾರೆ. ಕೊಳಕ ಗದ್ದೆ, ಬೈಲು ಗದ್ದೆ ಮತ್ತು ಪಟ್ಲ್ ಗದ್ದೆಗಳೆಂದು ಅವನ್ನು ಕರೆಯಲಾಗುತ್ತದೆ. ಕೆಲವೆಡೆ ಬೇಸಗೆ ಬೆಳೆ ಬೆಳೆಯುವುದುಂಟು. ವಾಣಿಜ್ಯ ಬೆಳೆಗಳಲ್ಲಿ ತೆಂಗು ಮುಖ್ಯವಾದುದು. ಸಮುದ್ರತೀರದಲ್ಲಿ ಮತ್ತು ಒಳನಾಡಿನಲ್ಲಿ ವ್ಯಾಪಕವಾಗಿ ತೆಂಗಿನಮರಗಳಿವೆ. ಬೆಟ್ಟದ ತಪ್ಪಲಲ್ಲಿ ಮೆಣಸು ಮತ್ತು ಏಲಕ್ಕಿ ವಾಣಿಜ್ಯ ಬೆಳೆಗಳು. ನೀರಾವರಿ ಅನುಕೂಲವಿರುವ ಹೆಚ್ಚಿನ ಭಾಗಗಳಲ್ಲಿ ಅಡಕೆತೋಟಗಳಿವೆ.

ಹೊಸ ಹೊಸ ಬೇಸಾಯ ವಿಧಾನಗಳಿಂದ ಮತ್ತು ಹೊಸ ತಳಿಗಳ ಹಾಗೂ ಬೆಳೆಗಳ ಪ್ರಯೋಗದಿಂದ ಇಂದು ಇಲ್ಲಿನ ವ್ಯವಸಾಯಕ್ಷೇತ್ರ ವೈವಿಧ್ಯಮಯವಾಗಿದೆ. ಅಲ್ಲಲ್ಲಿ ರಾಗಿ, ಉದ್ದು, ಹೆಸರು, ಹುರುಳಿ, ಅವರೆ, ಗೆಣಸು, ಪಪ್ಪಾಯಿ ಬೆಳೆಯಲಾಗುತ್ತದೆ. ಕಬ್ಬು, ಗೋಡಂಬಿ, ಮೆಣಸಿನಕಾಯಿ, ಸಪೋಟ, ಮಾವು, ಹಲಸು, ಬಾಳೆಗಳ ಸಾಗುವಳಿಯೂ ಉಂಟು. ಈಚಿನ ದಶಕಗಳಲ್ಲಿ ತಾಳೆ ಮರಗಳನ್ನು ಬೆಳೆಯುವುದು ಪ್ರಾರಂಭವಾಗಿದೆ. ಈ ಜಿಲ್ಲೆಯಲ್ಲಿ ಕೆರೆ ನೀರಾವರಿ ಕಡಿಮೆ. ಇಲ್ಲಿ ಅನೇಕ ಸಣ್ಣ ದೊಡ್ಡ ಕೆರೆಗಳಿವೆ. ಕುಂದಾಪುರ ತಾಲ್ಲೂಕಿನ ಚಂತರ ಮಡಗ ಮತ್ತು ಮರನಾಡ ಮಡಗ ಎಂಬ ಕೆರೆಗಳು ನೀರಾವರಿಗೆ ಹೆಚ್ಚು ಉಪಯುಕ್ತವಾಗಿವೆ. ಕಾರ್ಕಳದ ಬಳಿಯ ರಾಮಸಾಗರ ದೊಡ್ಡದು. ಜಿಲ್ಲೆಯಲ್ಲಿ ಒಟ್ಟು 126662 ಜನ ಸಾಗುವಳಿದಾರರಿದ್ದಾರೆ. 96565 ಕೃಷಿಕಾರ್ಮಿಕರಿದ್ದಾರೆ (1991). ಭತ್ತ ಅತಿ ವಿಸ್ತಾರ ಪ್ರದೇಶದಲ್ಲಿ ಬೆಳೆಯುವ ಬೆಳೆ (69892 ಹೆಕ್ಟೇರುಗಳು). ಗೇರು ಪ್ರಮುಖ ವಾಣಿಜ್ಯ

ಬೆಳೆಯಾಗಿದ್ದು, 18421 ಹೆಕ್ಟೇರುಗಳಲ್ಲಿ ಬೆಳೆಯುತ್ತಾರೆ. ತರುವಾಯದ ಸ್ಥಾನವನ್ನು ತೆಂಗು (13472 ಹೆ), ದ್ವಿದಳ ಧಾನ್ಯ (11422 ಹೆ) ಮತ್ತು ಅಡಿಕೆ (3834 ಹೆ) ಬೆಳೆಗಳು ಪಡೆದಿವೆ.



ಶ್ರೀಕೃಷ್ಣ ದೇವಾಲಯ

**ಮೀನುಗಾರಿಕೆ :** ಉಡುಪಿ ಜಿಲ್ಲೆಯ ಆರ್ಥಿಕ ಚಟುವಟಿಕೆಗಳಲ್ಲಿ ಮೀನುಗಾರಿಕೆ ಗಮನಾರ್ಹ ಸ್ಥಾನ ಪಡೆದಿದೆ. ಈ ಜಿಲ್ಲೆ ಪಾರಂಪರಿಕವಾಗಿ ಮೀನುಗಾರಿಕೆಗೆ ಹೆಸರಾದುದು. ಹಿಂದಿನ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಟ್ಟು 141ಕಿಮೀ ತೀರಪ್ರದೇಶವಿತ್ತು. ಈಗ ಉಡುಪಿ ಜಿಲ್ಲೆಯಲ್ಲಿ ಹಿಂದಿನ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸೇ.60ರಷ್ಟು ಉದ್ದದ ಕರಾವಳಿ ಈ ಜಿಲ್ಲೆಗೆ ಸೇರಿದೆ. ದಕ್ಷಿಣದ ಯರಮಾಲುವಿನಿಂದ ಉತ್ತರದ ಬೈಂದೂರಿನವರೆಗೂ ಅನೇಕ ಮೀನುಗಾರಿಕೆ ಕೇಂದ್ರಗಳಿವೆ. ಅವುಗಳಲ್ಲಿ ಉಡುಪಿ ಬಳಿ ಇರುವ ಮಲ್ಪೆಯಲ್ಲಿ ಮತ್ತು ಕುಂದಾಪುರದ ದಡಗಳಲ್ಲಿ ಮತ್ಸ್ಯೋದ್ಯಮ ಹೆಚ್ಚಾಗಿ ಬೆಳೆದಿದೆ.

ಹಿಂದೆ ಸಮುದ್ರದಲ್ಲಿ ಮೀನು ಹಿಡಿಯುವುದು ಒಂದು ಉಪಜೀವನ ವೃತ್ತಿಯಾಗಿತ್ತು. ಮೀನುಗಾರರು ತಮ್ಮ ಸೀಮಿತ ಸಾಮಗ್ರಿ ಸಲಕರಣೆಗಳ ನೆರವಿನಿಂದ ದೋಣಿಗಳಲ್ಲಿ ಹೋಗಿ ಮೀನುಗಳನ್ನು ಸಂಗ್ರಹಿಸುತ್ತಿದ್ದರು. ಈಗ ಆಧುನಿಕ ಯಂತ್ರಚಾಲಿತ ಮೋಟರು ದೋಣಿಗಳು ಮತ್ತು ಸುಧಾರಿತ ಬಲೆಗಳು ಲಭ್ಯವಿವೆ. ಮೀನುಗಾರಿಕೆಯ ವಿಧಾನ ಹೆಚ್ಚು ವೈಜ್ಞಾನಿಕವಾಗಿದೆ. ಆದ್ದರಿಂದ ಸಮುದ್ರದಲ್ಲಿ ದೂರದ ಆಳ ಕಡಲಿನಲ್ಲಿ ಸಾಗಿ ಮೀನನ್ನು ಹಿಡಿದು ತರುತ್ತಾರೆ. ಇಂದು ಮೀನು ಮಾತ್ರವಲ್ಲದೆ ಏಡಿ, ಸೀಗಡಿ ಚಿಪ್ಪು ಹಾಗೂ ಹವಳ ಸಂಗ್ರಹಣೆಯೂ ಮೀನುಗಾರಿಕೆಯ ಅಂಗವಾಗಿ ಬೆಳೆದಿದೆ.

ಇಲ್ಲಿ ಹಿಡಿಯುವ ಮೀನುಗಳಲ್ಲಿ ಬಂಗಡೆ ಅಥವಾ ಬಗ್ಗಡೆ ಪ್ರಸಿದ್ಧವಾದುದು. ಅದು ಈ ತೀರದಲ್ಲಿ ಯಥೇಚ್ಛವಾಗಿ ದೊರಕುತ್ತದೆ. ಮಾಂಸ ಹಾಗೂ ರುಚಿಯ ದೃಷ್ಟಿಯಿಂದ ಇದು ಜನಪ್ರಿಯ. ಇದಲ್ಲದೆ ಭೂತಾಯಿ ಎಂಬ ಚಿಕ್ಕಮೀನು ಇಲ್ಲಿ ಹೆಚ್ಚಾಗಿ ಸಿಗುತ್ತದೆ. ಸಾರ್ಡೀಶ್ ಮೀನುಗಳನ್ನು ಹೆಚ್ಚಾಗಿ ಎಣ್ಣೆ ತೆಗೆಯಲು ಬಳಸುತ್ತಾರೆ.

ನದಿ ಮುಖದ ಹಿನ್ನೀರಿನಲ್ಲೂ ಒಳನಾಡಿನ ನದಿ ಕೆರೆಗಳಲ್ಲೂ ಸಾಕಷ್ಟು ಮೀನು ಲಭ್ಯವಿದೆ. ಈಗ ಮೀನು ಸಾಕಣೆ ಒಂದು ಮುಖ್ಯ ಉದ್ಯಮ. ಮೀನನ್ನು ಸಂಸ್ಕರಿಸುವ, ಒಣಗಿಸುವ, ಡಬ್ಬಕ್ಕೆ ತುಂಬುವ ಮತ್ತು ಕೆಡದಂತೆ ರಕ್ಷಿಸುವ ಉದ್ಯಮಗಳೂ ಇಲ್ಲಿ ಬೆಳೆದಿವೆ. ಇದರಿಂದ ಅನೇಕರಿಗೆ ಉದ್ಯೋಗ ದೊರಕಿದೆ. ಮೀನುಗಾರಿಕೆ ವರ್ಷಪೂರ್ತಿ ನಡೆಯುವ ಉದ್ಯೋಗವಲ್ಲ. ಸೆಪ್ಟೆಂಬರ್ ತಿಂಗಳಿನಿಂದ ಫೆಬ್ರವರಿಯವರೆಗೂ ಚಟುವಟಿಕೆ ಚುರುಕಾಗಿರುತ್ತದೆ. ಮುಂದೆ ಏಪ್ರಿಲ್‌ವರೆಗೂ ಕಡಿಮೆ. ಮೇ - ಆಗಸ್ಟ್‌ವರೆಗೆ ಸಮುದ್ರದಲ್ಲಿ ಮೀನು ಹಿಡಿಯಲಾಗುವುದಿಲ್ಲ. ಮುಂಗಾರಿನ ತೀವ್ರತೆ ಕಾರಣ ಈ ಅವಧಿಯಲ್ಲಿ ಮೀನುಗಾರರು ಬಹುತೇಕ ನಿರುದ್ಯೋಗಿಗಳಾಗಿರುತ್ತಾರೆ. ಈಗ ಸೀಗಡಿಗಳಿಗೆ ವಿಶ್ವ ಮಾರುಕಟ್ಟೆಯಲ್ಲಿ ಬೇಡಿಕೆ ಹೆಚ್ಚಿದೆ. ಸೀಗಡಿಗಳನ್ನು ಹಿಡಿಯುವ, ಸಾಕಿ ಬೆಳೆಸುವ ಕಾಯಕಕ್ಕೆ ಈಗ ಪ್ರಾಮುಖ್ಯತೆ ಬಂದಿದೆ. ವಾರ್ಷಿಕವಾಗಿ ಸಾಗರೋತ್ಪನ್ನವಾಗಿ ಹಿಡಿದ ಮೀನಿನ ಪ್ರಮಾಣ 66914 ಟನ್‌ಗಳು. ಸಿಹಿ ನೀರು ಮೀನು 1713 ಟನ್‌ಗಳು.

**ಕೈಗಾರಿಕೆ :** ಉಡುಪಿ ಜಿಲ್ಲೆ ಕೈಗಾರಿಕಾ ಪ್ರಧಾನ ಜಿಲ್ಲೆಯಲ್ಲ. ಸಣ್ಣ ಕೈಗಾರಿಕೆ, ವ್ಯಾಪಾರ ಮತ್ತು ಇತರ ವ್ಯವಸಾಯೇತರ ಚಟುವಟಿಕೆಗಳಲ್ಲಿ ತೊಡಗಿರುವವರ ಪ್ರಮಾಣ ಜಿಲ್ಲೆಯ ಒಟ್ಟು ಜನಸಂಖ್ಯೆಯ ಸುಮಾರು ಸೇ.40 ರಷ್ಟು. ಮೀನುಗಳ ಸಂಸ್ಕರಣೆ, ವ್ಯಾಪಾರ, ವಿದೇಶಗಳಿಗೆ ರಫ್ತು ಮಾಡುವುದು ಮುಂತಾದ ಕಾರ್ಯಗಳಲ್ಲಿ ಒಂದು ಲಕ್ಷಕ್ಕೂ ಹೆಚ್ಚು ಜನ ತೊಡಗಿದ್ದಾರೆ. ಮಲ್ಪೆ, ಕುಂದಾಪುರ, ಕೋಡಿ ಮೊದಲಾದವು ಈ ಚಟುವಟಿಕೆಗಳ ಕೇಂದ್ರಗಳಾಗಿವೆ. ನಿಸರ್ಗಸಂಪನ್ಮೂಲಗಳನ್ನು ಬಳಸಿಕೊಂಡು ಅನೇಕ ಉದ್ಯಮಗಳು ತಲೆ ಎತ್ತಿವೆ. ಅವುಗಳಲ್ಲಿ ಹೆಂಚಿನ ಕಾರ್ಖಾನೆಗಳು ಮುಖ್ಯವಾದವು. ಕುಂದಾಪುರ ಮತ್ತು ಉಡುಪಿಯಲ್ಲಿ ಈ ಕಾರ್ಖಾನೆಗಳು ಹೆಚ್ಚಾಗಿ ನೆಲೆಸಿವೆ. ವಿಶ್ವ ಪ್ರಸಿದ್ಧವಾದ ಮಂಗಳೂರು ಹೆಂಚುಗಳು ಇಲ್ಲಿಂದ ರಫ್ತಾಗುತ್ತವೆ. ಮನೆಗಳಲ್ಲಿ ಮತ್ತು ಕಟ್ಟಡಗಳಲ್ಲಿ ಬಳಸುವ ಮೊಸಾಯಿಕ್ ಹೆಂಚುಗಳು ಈಗೀಗ ಹೆಚ್ಚಾಗಿ ತಯಾರಾಗುತ್ತವೆ. ಮನೆಗಳ ಗೋಡೆಗಳನ್ನು ಕಟ್ಟಲು ಬಳಸುವ ಜಂಬಿಟ್ಟಿಗೆ ಕಲ್ಲು ಜಿಲ್ಲೆಯಲ್ಲಿ ಹೇರಳವಾಗಿ ಸಿಗುತ್ತವೆ. ಇದನ್ನು ಇಟ್ಟಿಗೆ ಮಾಡಿ ಘಟ್ಟದ ಮೇಲಿನ ಪಟ್ಟಣಗಳಿಗೆ ಮತ್ತು ಗ್ರಾಮುಗಳಿಗೆ ಕಳುಹಿಸಲಾಗುತ್ತದೆ. ಇತ್ತೀಚೆಗೆ ಹೆಚ್ಚಾಗಿ ತೆಂಗಿನ ನಾರಿನಿಂದ ಹಗ್ಗ, ಜಮಖಾನೆ, ಕಾಲೊರೆಸುವ ತಾಟು ಮೊದಲಾದವನ್ನು ತಯಾರಿಸಲಾಗುತ್ತದೆ. ಇದೊಂದು ಮುಖ್ಯ ಗೃಹ ಕೈಗಾರಿಕೆಯಾಗಿ ಬೆಳೆದಿದೆ. ಉದ್ಯಾವರ, ಪಡುಬಿದ್ರಿ, ಕಲ್ಯಾಣಪುರಗಳಲ್ಲಿ ಈ ಚಟುವಟಿಕೆಗಳು ಹೆಚ್ಚಾಗಿ ನೆಲೆಸಿವೆ.

ಇಲ್ಲಿ ಅರಣ್ಯ ಪ್ರದೇಶ ಸಾಕಷ್ಟಿರುವುದರಿಂದ ಮರ, ಬೆತ್ತ, ಬಿದಿರುಗಳನ್ನು ಬಳಸಿ ವಿವಿಧ ಪೀಠೋಪಕರಣಗಳು, ಕುಕ್ಕೆಗಳು, ಚಾಟುಗಳು, ಮಳೆಗಾಲದಲ್ಲಿ ತಲೆಯ ಮೇಲೆ ಹಾಕಿಕೊಳ್ಳುವ ಗೊರಗಗಳು, ಗೋಡೆಗಳ ನಿರ್ಮಾಣಕ್ಕೆ ಬಳಸುವ ಬಿದಿರಿನ ತಡಿಕೆಗಳು ಮೊದಲಾದವನ್ನು ತಯಾರಿಸಲಾಗುತ್ತದೆ. ಕಾಡಿನಲ್ಲಿ ದೊರೆಯುವ ಈಚಲಿನಿಂದ ಮತ್ತು ದೊಡ್ಡ ಹುಲ್ಲಿನಿಂದ ಚಾಪೆ ತಯಾರು ಮಾಡುತ್ತಾರೆ.

ವ್ಯವಸಾಯ ಸಂಬಂಧವಾದ ಇನ್ನೂ ಹಲವಾರು ಉದ್ಯಮಗಳು ಜಿಲ್ಲೆಯಲ್ಲಿವೆ. ಕೊಬ್ಬರಿಯಿಂದ ಎಣ್ಣೆತೆಗೆಯುವ ಗಿರಣಿಗಳು, ಅಕ್ಕಿಗಿರಣಿಗಳು, ಗೋಡಂಬಿ ಸಂಸ್ಕರಣ ಘಟಕಗಳು, ಗೋಡಂಬಿಯ ಓಟೆಯಿಂದ ಎಣ್ಣೆ ತಯಾರಿಸುವ ಗಿರಣಿಗಳು, ಬೆಲ್ಲ ತಯಾರಿಕೆ ಘಟಕಗಳು - ಇವು ಮುಖ್ಯವಾದವು. ಬೀಡಿಕಟ್ಟುವುದು ಒಂದು ಹಳೆಯ ಉದ್ಯಮ. ಇದು ಕರಾವಳಿಯ ಊರುಗಳಲ್ಲಿ ಅಭಿವೃದ್ಧಿ ಹೊಂದಿದೆ. ಕಾರ್ಕಳ ಉಡುಪಿಗಳಲ್ಲಿ ಬೀಡಿ ತಯಾರಿಕೆ ಕಾರ್ಖಾನೆಗಳಿವೆ. ಕೈ ಮಗ್ಗದ ಬಟ್ಟೆಗಳು,ಲುಂಗಿಗಳು ಚೌಕಗಳು ಮೊದಲಾದವನ್ನು ತಯಾರಿಸುವ ಉದ್ಯಮಗಳು ಉಡುಪಿ, ಬ್ರಹ್ಮಾವರ ಮುಂತಾದ ಕಡೆಗಳಲ್ಲಿವೆ.

ಮಣಿಪಾಲ, ಉಡುಪಿ, ಕುಂದಾಪುರ, ಪಟ್ಟಣಗಳು ಆಧುನಿಕ ಕೈಗಾರಿಕೆಗಳಲ್ಲಿ ಮುಂದುವರೆದಿವೆ. ಉಕ್ಕಿನ ಉಪಕರಣಗಳು ಮೋಟಾರುವಾಹನದ ಬಿಡಿಭಾಗಗಳು, ಲೋಹದ ಪಾತ್ರೆಗಳು ಮುಂತಾದವುಗಳ ತಯಾರಿಕೆ, ತಂತಿ ತಯಾರಿಕೆ ಮತ್ತು ವಿದ್ಯುತ್ ಉಪಕರಣಗಳ ತಯಾರಿಕೆಗೆ ಸಂಬಂಧಿಸಿದ ಕಾರ್ಖಾನೆಗಳು ಇಲ್ಲಿವೆ. ಮುದ್ರಣ, ಪತ್ರಿಕೋದ್ಯಮ, ಮರಗೆಲಸ, ಕಬ್ಬಿಣದ ಕೆಲಸ. ಚಿನ್ನದ ಕೆಲಸ, ಚರ್ಮ ಕೈಗಾರಿಕೆ, ರಬ್ಬರ್ ಸಂಸ್ಕರಣ ಮುಂತಾದವುಗಳಲ್ಲಿ ಸಾವಿರಾರು ಜನ ದುಡಿಯುತ್ತಿದ್ದಾರೆ. ಗಂಗೊಳ್ಳಿ, ಬೈಂದೂರು, ಮಲ್ಪೆ, ಹಂಗಾರಕಟ್ಟೆ ಬಂದರುಗಳು ಜನರಿಗೆ ಉದ್ಯೋಗ ಒದಗಿಸಿವೆ. ಜಿಲ್ಲೆಯಲ್ಲಿ ಒಟ್ಟು 5629 ವಿವಿಧ ಬಗೆಯ ಸಣ್ಣ ಪ್ರಮಾಣದ ಉದ್ಯಮಗಳು ಸ್ಥಾಪನೆಗೊಂಡಿದ್ದು ಅವುಗಳಲ್ಲಿ 34123 ಉದ್ಯೋಗಿಗಳು ಕೆಲಸ ಮಾಡುತ್ತಾರೆ. ಮಧ್ಯಮ ಪ್ರಮಾಣದ ಉದ್ಯಮಗಳ ಸಂಖ್ಯೆ 14 (2001).



ಶ್ರೀಕೃಷ್ಣ ರಥೋತ್ಸವ

**ಸಾರಿಗೆ ಸಂಪರ್ಕ :** ಉಡುಪಿ ಜಿಲ್ಲೆಯ ಒಂದು ಬದಿಯಲ್ಲಿ ಸಮುದ್ರವೂ ಇನ್ನೊಂದು ಬದಿಯಲ್ಲಿ ಎತ್ತರದ ಘಟ್ಟಗಳೂ ಇವೆ. ಒಳನಾಡು ಚಿಕ್ಕ ದೊಡ್ಡ ಅಸಂಖ್ಯಾತ ನದಿಕೊಳ್ಳಗಳಿಂದ ಕೂಡಿದ ಭೌಗೋಳಿಕ ಸನ್ನಿವೇಶವು ಭೂಸಾರಿಗೆಗೆ ಅಷ್ಟೇನೂ ಅನುಕೂಲಕರವಾಗಿಲ್ಲ. ಹಿಂದೆ ಗಾಡಿ ರಸ್ತೆಗಳು ಹೆಚ್ಚಾಗಿದ್ದವು. ಆಧುನಿಕವಾದ ರಸ್ತೆಗಳು ಹೆಚ್ಚಾಗಿರಲಿಲ್ಲ. ಅವು ಮಳೆಗಾಲದಲ್ಲಿ ಬಹುತೇಕ ಸಂಚಾರಕ್ಕೆ ನಿರುಪಯುಕ್ತವಾಗಿರುತ್ತಿದ್ದವು. ಜಿಲ್ಲೆಯ ಭೌಗೋಳಿಕ ಮಹತ್ವ ಮತ್ತು ಬಂದರುಗಳಿಂದಾಗಿ ಬ್ರಿಟಿಷ್ ಸರ್ಕಾರ ಕೆಲವು ಘಾಟಿ ಮಾರ್ಗಗಳನ್ನು ಅಭಿವೃದ್ಧಿಪಡಿಸಿತು. ಇದರಿಂದ ಜಿಲ್ಲೆಯೊಂದಿಗೆ ಒಳನಾಡಿನ ಸಂಪರ್ಕ ಬೆಳೆಯಲು ಸಹಾಯವಾಯಿತು.

ಕೊಲ್ಲೂರು ಸಮೀಪದಲ್ಲಿ ಹಾದು ಹೋಗುವ ಉಡುಪಿ-ಸಾಗರ ರಸ್ತೆ ಶಿವಮೊಗ್ಗ ಜಿಲ್ಲೆಯ ಮೂಲಕ ಉತ್ತರ ಕರ್ನಾಟಕ ಭಾಗಕ್ಕೆ ಸಂಪರ್ಕ ಸಾಧಿಸುವ ಘಾಟಿ ರಸ್ತೆ. ಉಡುಪಿ-ಆಗುಂಬೆ-ಶಿವಮೊಗ್ಗ ರಸ್ತೆ ಇತ್ತೀಚಿನವರೆಗೂ ದೊಡ್ಡ ವಾಹನಗಳ ಸಂಚಾರಕ್ಕೆ ಅನುಕೂಲಕರವಾಗಿರಲಿಲ್ಲ. ಉಡುಪಿ-ಕಾರ್ಕಳ-ದಕ್ಷಿಣಕನ್ನಡದ ಎಲ್ಲೆ ಮತ್ತು ಶೃಂಗೇರಿ ರಸ್ತೆ ಉತ್ತಮ ಸ್ಥಿತಿಯಲ್ಲಿರುವ ಘಾಟಿಮಾರ್ಗ; ಇದು ಕುದುರೆಮುಖ ಗಣಿ ಪ್ರದೇಶಕ್ಕೂ ಸಂಪರ್ಕ ಕಲ್ಪಿಸುತ್ತದೆ. ಉಡುಪಿ-ಶಂಕರನಾರಾಯಣ-ಹೊಸಂಗಡಿ-ಹುಲಿಕಲ್ ಮೂಲಕ ಇನ್ನೊಂದು ಘಾಟಿ ಮಾರ್ಗ ಶಿವಮೊಗ್ಗ ಜಿಲ್ಲೆ ತಲುಪುತ್ತದೆ. ಉಡುಪಿ, ಭಟ್ಕಳ ರಸ್ತೆಯು ರಾಷ್ಟ್ರೀಯ ಹೆದ್ದಾರಿ. ಇದು ಉತ್ತರ ಕನ್ನಡ ಜಿಲ್ಲೆ ಮೂಲಕ ಹಾದು ಹೋಗುತ್ತದೆ. ಉಡುಪಿ -ಮಂಗಳೂರು ಮಾರ್ಗವೂ ರಾಷ್ಟ್ರೀಯ ಹೆದ್ದಾರಿಯ ಭಾಗವಾಗಿದೆ. 141ಕಿಮೀ ರಾಷ್ಟ್ರೀಯ ಹೆದ್ದಾರಿ, 289 ಕಿಮೀ ರಾಜ್ಯ ಹೆದ್ದಾರಿ, 623ಕಿಮೀ ಜಿಲ್ಲಾರಸ್ತೆಗಳು. 927ಕಿಮೀಗಳ ಉದ್ದವಿದೆ.

ಈಚಿನ ದಶಕಗಳಲ್ಲಿ ಇಲ್ಲಿನ ನದಿಗಳು ಮತ್ತು ಉಪನದಿಗಳಿಗೆ ಅನೇಕ ಸೇತುವೆಗಳನ್ನು ಕಟ್ಟಿದ್ದರಿಂದ ಒಳನಾಡಿನ ಸಂಪರ್ಕ ವ್ಯವಸ್ಥೆ ಉತ್ತಮಗೊಂಡಿದೆ. ಉಡುಪಿ-ಕಾರ್ಕಳ-ಬೆಳ್ತಂಗಡಿ ರಸ್ತೆ ಚಾರ್ಮಾಡಿ ಘಾಟ್ ರಸ್ತೆಗೆ ಸಂಪರ್ಕ ಕಲ್ಪಿಸುತ್ತವೆ.

ಏಕೈಕ ರೈಲು ಮಾರ್ಗವಾಗಿರುವ ತಿರುವನಂತಪುರ ಮುಂಬೈ-ಕೊಂಕಣ ರೈಲು ಮಾರ್ಗ ಇಲ್ಲಿಯ ಏಕೈಕ ರೈಲ್ವೆ ಸಂಪರ್ಕವ್ಯವಸ್ಥೆ ಇಲ್ಲಿ ಹಾದು ಹೋಗುತ್ತದೆ. ಇದರಿಂದ ಬೈಂದೂರು, ಕುಂದಾಪುರ, ಉಡುಪಿ, ಹಂಗಾರಕಟ್ಟೆ ಮೊದಲಾದ ತೀರದ ಪಟ್ಟಣಗಳಿಂದ ಭಾರತದ ಇತರ ಭಾಗಗಳಿಗೆ ರೈಲ್ವೇ ಸಂಪರ್ಕ ಒದಗಿಬಂದಿದೆ. ಒಟ್ಟು ರೈಲು ಮಾರ್ಗದ ಉದ್ದ 100ಕಿಮೀಗಳು.

ಜಲಸಾರಿಗೆಗೆ ಜಿಲ್ಲೆಯಲ್ಲಿ ಹೆಚ್ಚಿನ ಪ್ರಾಮುಖ್ಯ. ಕರಾವಳಿಯ ಬಂದರುಗಳಿಗೆ ಮತ್ತು ಪಟ್ಟಣಗಳಿಗೆ ದೋಣಿಗಳು ಸ್ಟೀಮರ್‌ಗಳು ಮತ್ತು ಸಣ್ಣ ಹಡಗುಗಳ ಮೂಲಕ ಜನ ಸಂಚಾರ ಮತ್ತು ಸಾಮಗ್ರಿಗಳ ಸಾಗಣೆ ನಡೆಯುತ್ತವೆ. ನದೀ ಮುಖಗಳು ಹಿನ್ನೀರು ದೋಣಿ ಸಂಚಾರಕ್ಕೆ ಅನುಕೂಲವಾಗಿದೆ. ಆಧುನಿಕ ದೂರಸಂಪರ್ಕ ವ್ಯವಸ್ಥೆ ಬಳಕೆಯಲ್ಲಿದೆ.

ಉಡುಪಿ ಜಿಲ್ಲೆ ಆಧುನಿಕ ಬ್ಯಾಂಕಿಂಗ್ ವ್ಯವಸ್ಥೆಯ ತವರು. ಇಲ್ಲಿ ಇಪ್ಪತ್ತನೆಯ ಶತಮಾನದಲ್ಲಿ ಸ್ಥಾಪಿತವಾದ ಬ್ಯಾಂಕಿಂಗ್ ಸಂಸ್ಥೆಗಳು ಹಲವು. 1906ರಷ್ಟು ಹಿಂದೆಯೇ ಕೆನರಾಬ್ಯಾಂಕ್ ಅಸ್ತಿತ್ವಕ್ಕೆ ಬಂದಿತು. ಅನಂತರ ಬಂದ ಹಲವಾರು ಬ್ಯಾಂಕ್‌ಗಳಲ್ಲಿ ಕೆಲವು ಉಳಿದಿವೆ. ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕೆಲವು ಬ್ಯಾಂಕ್‌ಗಳು ಉಡುಪಿ ಮತ್ತು ಮಂಗಳೂರು ಮೂಲದವು. ಅವುಗಳಲ್ಲಿ ಕೆನರಾಬ್ಯಾಂಕಲ್ಲದೆ ಸಿಂಡಿಕೇಟ್‌ಬ್ಯಾಂಕ್, ವಿಜಯಾಬ್ಯಾಂಕ್ (1931), ಕರ್ನಾಟಕ ಬ್ಯಾಂಕ್ (1924), ಕಾರ್ಪೋರೇಷನ್‌ಬ್ಯಾಂಕ್ - ಇವು ಪ್ರಮುಖವಾದವು. ಜಿಲ್ಲೆಯಲ್ಲಿ 192 ವಾಣಿಜ್ಯಬ್ಯಾಂಕುಗಳು, 11 ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, 24 ನಗರ ಸಹಕಾರಿಬ್ಯಾಂಕುಗಳು, 3 ವ್ಯವಸಾಯ ಮತ್ತು ಗ್ರಾಮೀಣಾಭಿವೃದ್ಧಿಬ್ಯಾಂಕುಗಳು ಮತ್ತು 52 ಕೃಷಿ ಸಾಲ ಸಹಕಾರ ಸಂಘಗಳಿವೆ (2001).

**ಶಿಕ್ಷಣ ಮತ್ತು ಸಂಸ್ಕೃತಿ :** ಶಿಕ್ಷಣದ ಅಭಿವೃದ್ಧಿಯಲ್ಲಿ ಉಡುಪಿ ರಾಜ್ಯದ ಪ್ರಥಮ ಪಂಕ್ತಿಯಲ್ಲಿರುವ ಜಿಲ್ಲೆ. ಇಲ್ಲಿನ ಮಠಗಳೂ ಅಗ್ರಹಾರಗಳೂ ಮೊದಲಿನಿಂದಲೂ ವೈದಿಕ ಅಧ್ಯಯನಕ್ಕೆ ಆಶ್ರಯ ನೀಡುತ್ತಾ ಬಂದವು. ಕೆಲವು ಆಂಗ್ಲ ಮಿಷನರಿಗಳು ಈ ಭಾಗದಲ್ಲಿ ಶಾಲೆಗಳನ್ನು ಸ್ಥಾಪಿಸಿ ಪತ್ರಿಕೆಗಳನ್ನು ಪ್ರಕಟಿಸಿ ಸಾಕ್ಷರತೆ ಹೆಚ್ಚುವಂತೆ ಮಾಡಿದರು. ಸ್ವಾತಂತ್ರ್ಯ ಹೋರಾಟ ಕಾಲದಲ್ಲೂ ಉಡುಪಿಯಿಂದ ನಾನಾ ಪತ್ರಿಕೆಗಳು ಪ್ರಕಟವಾಗುತ್ತಿದ್ದವು. ಆಧುನಿಕ ಶಿಕ್ಷಣದ ಸೌಲಭ್ಯಗಳನ್ನು ಈ ಜಿಲ್ಲೆ ಬೇಗ ಬಳಸಿಕೊಂಡಿತು. ಪೈ ಮನೆತನದವರು ಮಣಿಪಾಲದಲ್ಲಿ ವೈದ್ಯಕೀಯ ಮತ್ತು ಎಂಜಿನಿಯರಿಂಗ್ ಕಾಲೇಜುಗಳನ್ನು ಸ್ಥಾಪಿಸಿ ದೇಶಕ್ಕೇ ಮಾದರಿಯಾದರು. ಮುಂದೆ ಹಲವಾರು ಕಾಲೇಜುಗಳು ಜಿಲ್ಲೆಯಲ್ಲಿ

ಅಸ್ತಿತ್ವಕ್ಕೆ ಬಂದುವು. ಅವುಗಳಲ್ಲಿ ಉಡುಪಿಯ ಪೂರ್ಣಪ್ರಜ್ಞ ಕಾಲೇಜು ಅತ್ಯಂತ ಮುಖ್ಯವಾದುದು. ಅಕಾಡೆಮಿ ಆಫ್ ಜನರಲ್ ಎಜುಕೇಷನ್ ಸಂಸ್ಥೆ ಹಲವು ವಿದ್ಯಾ ಸಂಸ್ಥೆಗಳನ್ನು ನಡೆಸುತ್ತಿದೆ. ಮಹಾತ್ಮಗಾಂಧಿ ಸ್ಮಾರಕ ಕಾಲೇಜು, ಕಾನೂನು ಕಾಲೇಜು, ಆಯುರ್ವೇದ ಕಾಲೇಜುಗಳಿವೆ. ಜಿಲ್ಲೆಯಲ್ಲಿ 62 ಪದವಿಪೂರ್ವ ಕಾಲೇಜುಗಳು, 11 ಕಾಲೇಜುಗಳು, 2 ಎಂಜಿನಿಯರಿಂಗ್ ಕಾಲೇಜುಗಳು, 2 ಮೆಡಿಕಲ್ ಕಾಲೇಜುಗಳು, 4 ಪಾಲಿಟೆಕ್ನಿಕ್‌ಗಳು ಇವೆ. ಒಟ್ಟು 46 ಗ್ರಾಮಪಂಚಾಯಿತಿ ಗ್ರಂಥಾಲಯಗಳಿವೆ. ಈ ಜಿಲ್ಲೆಯ ಸಾಕ್ಷರತೆ ಪ್ರಮಾಣ ಸೇ.79.87 ಪುರುಷರು ಸೇ.86.59ರಷ್ಟು ಮತ್ತು ಮಹಿಳೆಯರು ಸೇ.74.02ರಷ್ಟು ಸಾಕ್ಷರರಾಗಿದ್ದಾರೆ. ಪಾರಂಪರಿಕವಾದ ಕಲೆ, ಸಂಸ್ಕೃತಿ ಮತ್ತು ಸಾಹಿತ್ಯವನ್ನು ಪುನರುಜ್ಜೀವನಗೊಳಿಸುವ ಪ್ರಯತ್ನಗಳು ನಡೆದಿವೆ. ಕೆರೋಡಿಸುಬ್ಬರಾವ್, ಮುದ್ದಣ, ಎಂ. ಗೋವಿಂದಪೈ, ಪಂಜೆ ಮಂಗೇಶರಾವ್, ಕಡೇಕಾರು ರಾಜಗೋಪಾಲ, ಕೃಷ್ಣರಾಯ, ಎಂ.ಎನ್. ಕಾಮತ್, ಉಗ್ರಾಣ, ಮಂಗೇಶರಾವ್, ಉಲ್ಲಾಳ ಮಂಗೇಶ್‌ರಾವ್, ಪೇಜಾವರ ಸದಾಶಿವರಾವ್, ಶಿವರಾಮ ಕಾರಂತ, ಸೇಡಿಯಾಪು ಕೃಷ್ಣಭಟ್ಟ, ಎಂ. ಮರಿಯಪ್ಪ ಭಟ್ಟ ಮೊದಲಾದ ಸಾಹಿತ್ಯ ಶ್ರೇಷ್ಠರ ಕಾರ್ಯಕ್ಷೇತ್ರ ಇದು. ಕೆ.ಕೆ. ಹೆಬ್ಬಾರರಂತಹ ಮಹಾಚಿತ್ರಕಲಾವಿದರ ಮೂಲ ಇಲ್ಲಿಯದು. ರಂಜಾಲ ಗೋಪಾಲಶೆಣೈರ ಶಿಷ್ಯರ ವಿಕ್ರಮಶಿಲ್ಪ ಕಾರ್‍ಯಾಗಾರವಿದೆ. ಭರತನಾಟ್ಯ, ಯಕ್ಷಗಾನ ಹಾಗೂ ವಿವಿಧ ನೃತ್ಯಗಳನ್ನು ಕಲಿಸುವ ಮತ್ತು ಕಲಾವಿದರ ಸಂಸ್ಥೆಗಳು ಇಲ್ಲಿ ಬೇರುಬಿಟ್ಟಿವೆ. ಫೋಕಲ್ ಫೋಟೋಕ್ಲಬ್‌ನಂತಹ ಛಾಯಾಗ್ರಹಣ ಕಲೆ ರೂಢಿಸುವ ಸಂಸ್ಥೆಗಳಿವೆ. ಉಡುಪಿ ಜಿಲ್ಲೆ ಮತ್ತು ಪಟ್ಟಣ ಇಂತಹ ಕಲಾಸಂಪತ್ತು ಜೀವಂತವಾಗಿರಲು ಸಾಕಷ್ಟು ಕಾಣಿಕೆ ಸಲ್ಲಿಸಿವೆ. ಕೋಳಿ ಅಂಕ, ಕಂಬಳ ಮೊದಲಾದ ಗ್ರಾಮೀಣ ಪಂದ್ಯಗಳು ನಡೆದುಬಂದಿವೆ.



ವೇಣುಗೋಪಾಲ ದೇವಾಲಯ, ಮಣಿಪಾಲ

**ಇತಿಹಾಸ :** ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಇತಿಹಾಸ ಪರಂಪರೆಯು ಹೆಚ್ಚು ಸಮಾನ ಸ್ವರೂಪದ್ದು. ಇಡೀ ಕರ್ನಾಟಕದ ಕರಾವಳಿ ಪ್ರದೇಶ ಪರಶುರಾಮ ಸೃಷ್ಟಿಯೆಂದು ಪ್ರತೀತಿಯುಂಟು. ಮಾರ್ಕಂಡೇಯ, ವಾಯು ಮತ್ತು ಭವಿಷ್ಯೋತ್ತರ ಪುರಾಣಗಳು ಇಲ್ಲಿನ ಕೆಲವು ನದಿಗಳ ಮತ್ತು ಪರ್ವತಗಳ ಹೆಸರುಗಳನ್ನು ಉಲ್ಲೇಖಿಸುತ್ತವೆ. ತಮಿಳಿನ 'ಸಂಗಂ' ಕಾಲದ ಸಾಹಿತ್ಯದಲ್ಲಿ ತುಳುನಾಡಿನ ಪ್ರಸ್ತಾಪ ಬರುತ್ತದೆ. ಅಶೋಕನ ಶಾಸನಗಳಲ್ಲಿ ಬರುವ ಸಾತಿಯಪುತ ಅಥವಾ ಸತ್ಯಪುತ್ರರೆಂಬ ಸಮುದಾಯದ ಉಲ್ಲೇಖ ಈ ಪ್ರದೇಶದ ಜನರನ್ನು ಕುರಿತದ್ದೆಂದು ಕೆಲವು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. ಉಡುಪಿ ಜಿಲ್ಲೆ ತೀರಪ್ರದೇಶದಲ್ಲಿರುವುದರಿಂದ ಇದು ಹೊರಗಿನ ಪ್ರಪಂಚದ ಸಂಪರ್ಕವನ್ನು ತಪ್ಪಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಕ್ರಿಸ್ತಶಕೆಯ ಆಚೀಚೆಗಿನ ಶತಮಾನಗಳಿಗೆ ಸೇರಿದ ಗ್ರೀಕ್ ಮತ್ತು ರೋಮನ್ನರ ಪ್ರವಾಸಿ ಕಥನಗಳಲ್ಲಿ ಈ ತೀರದ ಅನೇಕ ಸ್ಥಳಗಳ ಉಲ್ಲೇಖಗಳಿವೆ. ಅವುಗಳಲ್ಲಿ ನೇತ್ರಾವತಿ, ಮಂಗಳೂರು, ಬಸರೂರುಗಳು ಸೇರಿವೆ. ಪ್ರಾಚೀನಕಾಲದಿಂದಲೂ ಹೊರದೇಶಗಳೊಂದಿಗೆ ವಾಣಿಜ್ಯ ಸಂಪರ್ಕ ಬೆಳೆದುಬಂದುದ್ದು ನಿಸ್ಸಂದೇಹ. ಗ್ರೀಕ್ ನಾಟಕವೊಂದರಲ್ಲಿ ಬರುವ ಪಾತ್ರಗಳ ಸನ್ನಿವೇಶ ಈ ಕಡಲತೀರದ್ದೆಂದು ಮತ್ತು ಅಲ್ಲಿನ ಸಂಭಾಷಣೆಯಲ್ಲಿ ಬಳಸಿರುವ ಕೆಲವು ಪದಗಳು ತುಳು ಹಾಗೂ ಕನ್ನಡ ಪದಗಳೆಂದು ಗೋವಿಂದ ಪೈಗಳು ಅಭಿಪ್ರಾಯಪಟ್ಟಿದ್ದಾರೆ. ಇವು ಹಳಗನ್ನಡ ಪದಗಳೆಂದು ಪ್ರತಿಪಾದಿಸುವವರೂ ಇದ್ದಾರೆ. ಒಟ್ಟಿನಲ್ಲಿ ಈ ಜಿಲ್ಲೆ ಕ್ರಿಸ್ತಪೂರ್ವ ಕಾಲದಿಂದಲೂ ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ವ್ಯವಸ್ಥೆಗಳನ್ನು ಹೊಂದಿದ್ದ ಪ್ರದೇಶವೆಂಬುದು ದೃಢಪಡುತ್ತದೆ.

ಈ ಜಿಲ್ಲೆಯ ಇತಿಹಾಸ ಕಾಲದ ಸ್ಪಷ್ಟ ಪುರಾವೆಗಳು ದೊರಕುವುದು ಆಳುಪರ ಕಾಲದಲ್ಲಿ. ಆಳುಪರ ಆಳ್ವಿಕೆ ಕ್ರಿಸ್ತಶಕಾರಂಭದ ಕಾಲಕ್ಕೇ ಪ್ರಾರಂಭವಾಗುತ್ತದೆಂದು ತಿಳಿದುಬರುತ್ತದೆ. ಅವರು ನಾಗಾರಾಧಕರಾಗಿದ್ದರು ಮತ್ತು ಶೈವ ಪಂಥೀಯರಾಗಿದ್ದರು. ಕದಂಬರು ನೆರೆಯ ಉತ್ತರ ಕನ್ನಡ ಜಿಲ್ಲೆಯ ಬನವಾಸಿಯಲ್ಲಿ ರಾಜ್ಯ ಸ್ಥಾಪಿಸಿದ ಮೇಲೆ ಈ ಪ್ರದೇಶವೂ ಅವರ ಸಾರ್ವಭೌಮತ್ವಕ್ಕೆ ಒಳಪಟ್ಟಿತ್ತು. ಆಗ ಅವರು ಇಲ್ಲಿ ಅಹಿಚ್ಛತ್ರದಿಂದ ಬ್ರಾಹ್ಮಣರನ್ನು ಕರೆಸಿ ಇಲ್ಲಿನ ಮಠ ಮತ್ತು ಅಗ್ರಹಾರ ಪರಂಪರೆಗೆ ಬುನಾದಿ ಹಾಕಿದರೆಂದು ಹೇಳಲಾಗಿದೆ. ಜಮೀನು ಸಾಗುವಳಿ ಮತ್ತು ನಿರ್ವಹಣೆಯಲ್ಲಿ ಅನೇಕ ಕಟ್ಟುಪಾಡುಗಳನ್ನು ಕದಂಬರು ತಂದರೆಂಬ ನಂಬಿಕೆಯಿದೆ.

ಕದಂಬರ ಪ್ರಾಬಲ್ಯ ಕಡಿಮೆಯಾಗಿ ಬಾದಾಮಿ ಚಲುಕ್ಯರು ಮತ್ತು ತಲಕಾಡಿನ ಗಂಗರು ಈ ಪ್ರದೇಶದ ಮೇಲೆ ನಿಯಂತ್ರಣ ಸಾಧಿಸಿದಾಗ ಆಳುಪರು ಅವರೊಂದಿಗೆ ಉತ್ತಮ ಬಾಂಧವ್ಯ ಇಟ್ಟುಕೊಂಡು ತಮ್ಮ ರಾಜ್ಯವನ್ನು ವಿಸ್ತರಿಸಿದರು. ಆಳುಪರನ್ನು ಸೋಮ ಕುಲದವರೆಂದೂ ಮೀನ ಲಾಂಛನದವರೆಂದೂ ಹೇಳಲಾಗಿದೆ. ಇವರು ಆರನೆಯ ಶತಮಾನದ ಹೊತ್ತಿಗೆ ಉಡುಪಿ ಜಿಲ್ಲೆಯ ಉದಯಪುರ (ಉದ್ಯಾವರ) ಮಂಗಳಪುರ (ಮಂಗಳೂರು)ಗಳಲ್ಲಿ ರಾಜಧಾನಿಗಳನ್ನು ಸ್ಥಾಪಿಸಿ ಆಳಿದ್ದರಲ್ಲದೆ ಘಟ್ಟದ ಮೇಲಿನ ಕೆಲವು ಭಾಗಗಳ ಮೇಲೂ ಆಳ್ವಿಕೆ ಸ್ಥಾಪಿಸಿದರು. ಪಶ್ಚಿಮ ಚಾಳುಕ್ಯರ ಬೆಂಬಲದೊಂದಿಗೆ ಅವರು ಎಂಟನೆಯ ಶತಮಾನದವರೆಗೂ ಆಳ್ವಖೇಡ, ಬನವಾಸಿ ಮಂಡಲ ಮತ್ತು ಹೊಂಬುರ್ಚ್ಚ (ಹೊಸನಗರ ತಾಲ್ಲೂಕು) ಪ್ರಾಂತ್ಯಗಳನ್ನು ಆಳಿದರೆಂದು ಹೇಳಬಹುದು. ಉಡುಪಿ ಜಿಲ್ಲೆಯ ಬಾರಹಕನ್ಯಾಪುರ ಅಥ್ವಾ ಬಾರಕೂರು ಇವರ ರಾಜಧಾನಿಗಳಲ್ಲೊಂದಾಗಿತ್ತು. ರಾಷ್ಟ್ರಕೂಟರ ಕಾಲದಲ್ಲಿ ಇವರ ಪ್ರಭಾವ ತಗ್ಗಿತ್ತು. ಗಂಗರಿಗೆ ಇವರು ನಾಮಮಾತ್ರ ಅಧೀನತೆ ತೋರಿಸಿ ಅವರೊಂದಿಗೆ ರಕ್ತಸಂಬಂಧ ಮಾಡುವ ಮೂಲಕ ಸೌಹಾರ್ದ ಬಾಂಧವ್ಯ ಹೊಂದಿದ್ದರು. ಇವರು ಕೆಲವೆಡೆ ತಮ್ಮನ್ನು ಪಾಂಡ್ಯರೆಂದು ಕರೆದುಕೊಂಡಿದ್ದಾರೆ. ಮೀನು ಇವರ ಲಾಂಛನವಾಗಿತ್ತು. ಹೊಯ್ಸಳರು ಪ್ರಾರಂಭದಲ್ಲಿ ಆಳುಪರ ಮೇಲೆ ಸಾಂಕೇತಿಕ ಆಧಿಪತ್ಯ ಹೊಂದಿದ್ದರೂ ಮೂರನೆಯ ಬಲ್ಲಾಳನ ಕಾಲದಲ್ಲಿ ಈ ಪ್ರದೇಶದ ಆಗುಹೋಗುಗಳಲ್ಲಿ ಅವರು ಹೆಚ್ಚಾಗಿ ಭಾಗವಹಿಸಿದ್ದು ಕಂಡುಬರುತ್ತದೆ.

ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆ ಮುಖ್ಯವಾಗಿ ಶೈವ ಪರಂಪರೆ ಹೊಂದಿದ್ದ ಪ್ರದೇಶಗಳು. ನಾಗಾರಾಧನೆ ಮತ್ತು ಶಿವ ಪೂಜೆ ಇಲ್ಲಿನ ಮೂಲ ಧಾರ್ಮಿಕ ಪರಂಪರೆಯ ಸ್ವರೂಪವಾಗಿತ್ತು. ತರುವಾಯ ವೈಷ್ಣವ ಪಂಥ' ಪ್ರವೇಶಿಸಿತು. ಮಧ್ವಚಾರ್ಯರು ಹದಿಮೂರನೆಯ ಶತಮಾನದಲ್ಲಿ ಉಡುಪಿಯಲ್ಲಿ ಅಷ್ಟಮಠಗಳನ್ನು ಸ್ಥಾಪನೆ ಮಾಡಿದ ಮೇಲೆ ಮಾಧ್ವ ವೈಷ್ಣವಮತ ಪ್ರಬಲವಾಯಿತು. ಜೈನಧರ್ಮ ಪ್ರಾರಂಭದಿಂದಲೂ ರಾಜಾಶ್ರಯ ಪಡೆದಿದ್ದು ಹದಿನೆಂಟನೆಯ ಶತಮಾನದವರೆಗೂ ಕ್ರಿಯಾಶೀಲ ಧರ್ಮವಾಗಿ ಬೆಳೆಯಿತು. ಸ್ಥಳೀಯ ಪಂಜರವಳ್ಳಿ, ಭೂತ ಮೊದಲಾದ ಶಕ್ತಿಗಳ ಆರಾಧನೆ ಪ್ರಾರಂಭದಿಂದಲೂ ನಡೆದುಬಂದಿದೆ. ಪಾರ್ವತಿಯ ಅವತಾರವಾದ ಶಕ್ತಿ ದೇವತೆಗಳ ಆರಾಧನೆ (ಉದಾ: ಕೊಲ್ಲೂರು ಮೂಕಾಂಬಿಕೆ) ಜನಪ್ರಿಯವಾಗಿದೆ. ಈ ಪ್ರಾಂತದ ಜನರಿಗೆ ಧರ್ಮಶ್ರದ್ಧೆ ಹೆಚ್ಚು. ಭೂತಾರಾಧನೆಯಾಗಲೀ ಕೃಷ್ಣಪೂಜೆಯಾಗಲೀ ಹೋಮ ಹವನಗಳಾಗಲೀ ಎಲ್ಲದರಲ್ಲೂ ಇವರಿಗೆ ಹೆಚ್ಚಿನ ನಿಷ್ಠೆ. ವಿಜಯನಗರದ ಆಳ್ವಿಕೆ ಪ್ರಾರಂಭವಾದಾಗ ಹಿಂದಿನ ಪಾಳೆಯಗಾರರ ಅಥವಾ ಸ್ಥಾನಿಕ ರಾಜರ ಆಳ್ವಿಕೆಯ ಪ್ರಭಾವ ತಗ್ಗಿತು. ಆ ಕಾಲದಲ್ಲಿ ವಿಜಯನಗರದ ಸಾಮ್ರಾಟರು ನೇರವಾಗಿ ತಮ್ಮ ಪ್ರಾಂತಾಧಿಕಾರಿಗಳ ಮೂಲಕ ಆಳ್ವಿಕೆ ನಡೆಸಲು ಪ್ರಾರಂಭಿಸಿದರು. ಬಾರಕೂರು ಮತ್ತು ಮಂಗಳೂರು ಈ ಆಡಳಿತ ಕೇಂದ್ರಗಳಾಗಿದ್ದವು. ಮಂಗಳೂರು ರಾಜ್ಯವೆಂದೇ ಈ ಪ್ರಾಂತ್ಯವನ್ನು ಕರೆಯುತ್ತಿದ್ದರು. 1342ರಲ್ಲಿ ಈ ಮಾರ್ಗವಾಗಿ ಹಾದುಹೋದ ಇಬ್ನಬೂತೂತ ರಾಜ್ಯಾಧಿಕಾರಿಗಳು ಆಗಾಗ ಬದಲಾಗುತ್ತಿದ್ದುದರ ಬಗ್ಗೆ

ತಿಳಿಸಿದ್ದಾನೆ. ಪೋರ್ಚುಗೀಸ್ ನಾವಿಕ ವಾಸ್ಕೋಡಿಗಾಮ ಉಡುಪಿಯ ಬಳಿಯ ದ್ವೀಪಗಳಿಗೆ ಭೇಟಿ ಕೊಟ್ಟಿದ್ದನೆಂದು ತಿಳಿದುಬರುತ್ತದೆ. ಈಗ ಆ ದ್ವೀಪಗಳು ಸಂತಮೇರಿ ದ್ವೀಪಗಳೆಂದು ಹೆಸರುಪಡೆದಿವೆ.



ಚತುರ್ಮುಖ ಬಸದಿ, ಕಾರ್ಕಳ

ವಿಜಯನಗರದ ಕೃಷ್ಣದೇವರಾಯ ಪೋರ್ಚುಗೀಸರೊಂದಿಗೆ ಹೆಚ್ಚಿನ ಸ್ನೇಹದಿಂದ ನಡೆದುಕೊಂಡ. ಆಗ ಪೋರ್ಚುಗೀಸರು ಕರಾವಳಿಯ ಬಂದರುಗಳಲ್ಲಿ ವ್ಯಾಪಾರದ ನೆಪದಲ್ಲಿ ಬಲವಾಗಿ ನೆಲೆಗೊಂಡರು. ಉಳ್ಳಾಲದ ರಾಣಿ ಅಬ್ಬಕ್ಕ ದೇವಿ ಮತ್ತು ಬಿದನೂರಿನ ನಾಯಕರು ವಿಜಯನಗರದ ಪತನದ ಅನಂತರ ಪೋರ್ಚುಗೀಸ್‌ರನ್ನು ಹತೋಟಿಯಲ್ಲಿಡಲು ಅನೇಕ ಕಾರ್ಯಾಚರಣೆಗಳನ್ನು ನಡೆಸಿದರು. ಬಿದನೂರ ನಾಯಕರು ಮಲ್ಪೆ ಮತ್ತು ಕುಂದಾಪುರಗಳಲ್ಲಿ ಕೋಟೆಗಳನ್ನು ನಿರ್ಮಿಸಿದರು.

ಅನೇಕ ತಂಡರಸರು ವಿಜಯನಗರ ಕಾಲದಲ್ಲಿ ಮುಂದುವರೆದಿದ್ದು ಅನಂತರ ಪ್ರಬಲರಾಗಿ ಈ ಪ್ರದೇಶದಲ್ಲಿ ಆಳಿದರು. ಅವರಲ್ಲಿ ಕಾರ್ಕಳದ ಭೈರರಸರು ಮತ್ತು ವೇಣೂರಿನ ಅಜಿಲರು ಪ್ರಮುಖರು. ಇವರ ಕಾಲದಲ್ಲಿ ಈ ಊರುಗಳಲ್ಲಿ ಅನೇಕ ಜೈನ ಬಸದಿಗಳು ವಿಶ್ವವಿಖ್ಯಾತ ಗೊಮ್ಮಟವಿಗ್ರಹಗಳು ನಿರ್ಮಾಣವಾದವು. ಉಡುಪಿಯ ಬಳಿ ಸುರಳದಲ್ಲಿ ತೊಳಹಾರರು ಮತ್ತು ಹೊನ್ನಕಂಬಳಿ ಅರಸರು ಆಳುತ್ತಿದ್ದರು. ಉತ್ತರಕನ್ನಡ ಜಿಲ್ಲೆಯ ಹಾಡುವಳ್ಳಿಯಿಂದ ಆಳುತ್ತಿದ್ದ ಅರಸರು ಉಡುಪಿ ಜಿಲ್ಲೆಯ ಉತ್ತರದ ಕೆಲವು ಭಾಗಗಳಲ್ಲಿ ಆಡಳಿತ ನಡೆಸಿದರು. ಮೈಸೂರು ರಾಜ್ಯದ ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನರು ಈ ಇಡೀ ಕರಾವಳಿ ಭಾಗವನ್ನು ಗೆದ್ದುಕೊಂಡರು. ಆದರೆ ಇಂಗ್ಲಿಷರ ಪ್ರಬಲ ಪ್ರತಿರೋಧದಿಂದಾಗಿ 1792ರ ಯುದ್ಧದಲ್ಲಿ ಅನಂತರದ ಒಪ್ಪಂದದ ಮೇರೆಗೆ ಈ ಭಾಗ ಬ್ರಿಟಿಷರ ವಶವಾಯಿತು. ಟಿಪ್ಪುಸುಲ್ತಾನನು ಇಲ್ಲಿನ ಅನೇಕ ಸ್ಥಳೀಯ ರಾಜರನ್ನು ಪದಚ್ಯುತಿಗೊಳಿಸಿದ್ದ. 1837ರಲ್ಲಿ ಕಲ್ಯಾಣಸ್ವಾಮಿ ಮತ್ತು ಲಕ್ಷ್ಮಪ್ಪ ಬಂಗೇಶ ಎಂಬ ಅರಸುಗಳು ಬ್ರಿಟಿಷರ ವಿರುದ್ಧ ದಂಗೆಯೆದ್ದರು. ಬ್ರಿಟಿಷರು ಈ ದಂಗೆಯನ್ನು ಅಡಗಿಸಿದರು. 1860ರಲ್ಲಿ ಕನ್ನಡ ಜನರಿದ್ದ ಕರಾವಳಿ ಪ್ರದೇಶವನ್ನು ಉತ್ತರ ಕನ್ನಡ ಜಿಲ್ಲೆ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳೆಂದು ವಿಭಜಿಸಲಾಯಿತು. 1867ರಲ್ಲಿ ಮೊದಲನೆಯದನ್ನು ಮುಂಬಯಿ ಪ್ರಾಂತ್ಯಕ್ಕೂ ಎರಡನೆಯದನ್ನು ಮದರಾಸು ಪ್ರಾಂತ್ಯಕ್ಕೂ ಸೇರಿಸಲಾಯಿತು.

ಬ್ರಿಟಿಷ್ ಭಾರತದ ಭಾಗವಾಗಿದ್ದ ಈ ಕರಾವಳಿ ಜಿಲ್ಲೆ ಸ್ವಾತಂತ್ರ್ಯ ಹೋರಾಟದಲ್ಲಿ ಮುಂದಿತ್ತು. ಸತ್ಯಾಗ್ರಹಿಗಳು ಸ್ವತಂತ್ರವಾಗಿ ಪತ್ರಿಕೆಗಳನ್ನು ಹೊರಡಿಸಿ ಜನತೆಯನ್ನು ಜಾಗೃತಿಗೊಳಿಸಿದರು. ಸ್ವದೇಶಾಭಿಮಾನಿ, ತಿಲಕ ಸಂದೇಶ (1919), ಸತ್ಯಾಗ್ರಹಿ (1921), ಸ್ವದೇಶಿ ಪ್ರಚಾರಕ (1940) ಮೊದಲಾದ ದೇಶಪ್ರೇಮಿ ಪತ್ರಿಕೆಗಳು ಸ್ವಾತಂತ್ರ್ಯ ಚಳವಳಿಯನ್ನು ಬೆಂಬಲಿಸಿದವು. ಕಾರ್ನಾಡ್ ಸದಾಶಿವರಾವ್, ಯು.ಎಸ್.ಮಲ್ಯ, ಕಮಲಾದೇವಿಚಟ್ಟೋಪಾಧ್ಯಾಯ, ಎಚ್.ವಿ.ಕಾಮತ್ ಮೊದಲಾದವರು ಸ್ವಾತಂತ್ರ್ಯ ಚಳುವಳಿಯ ಮುಂಚೂಣಿಯಲ್ಲಿದ್ದರು. ಎ.ಬಿ.ಶೆಟ್ಟಿ, ಮೋನಪ್ಪ ತಿಂಗಳಾಯ, ಬಿ.ವಿ.ಬಾಳಿಗರಂತಹ ಸಮಾಜ ಸೇವಾಕರ್ತರು ಜನರನ್ನು ಸಂಘಟಿಸಿದರು. 1920ರಲ್ಲಿ ಗಾಂಧೀಜಿ ಮತ್ತು ಶೌಕತ್ ಅಲಿಯವರು ಜಿಲ್ಲೆಗೆ ಭೇಟಿ ನೀಡಿದ್ದರು. 1922ರಲ್ಲಿ ಸರೋಜಿನಿನಾಯ್ಡು ಅವರ ಅಧ್ಯಕ್ಷತೆಯಲ್ಲಿ ಮಂಗಳೂರಿನಲ್ಲಿ ಅಖಿಲ ಕರ್ನಾಟಕ ರಾಜಕೀಯ ಸಮ್ಮೇಳನ ನಡೆಯಿತು. 1934ರಲ್ಲಿ ಮತ್ತೆ ಗಾಂಧೀಜಿಯವರು ಈ ಪ್ರದೇಶಕ್ಕೆ ಭೇಟಿ ನೀಡಿದರು. ಮಾರನೆಯ ವರ್ಷ ರಾಜೇಂದ್ರಪ್ರಸಾದ್ ಅವರ ಅಧ್ಯಕ್ಷತೆಯಲ್ಲಿ ಇನ್ನೊಂದು ರಾಜಕೀಯ ಸಮ್ಮೇಳನ ಇಲ್ಲಿ ಏರ್ಪಟ್ಟಿತು. 1937ರಲ್ಲಿ ಪಂಡಿತ ಜವಾಹರಲಾಲ್ ನೆಹರು ಅವರು ಜಿಲ್ಲೆಯನ್ನು ಸಂದರ್ಶಿಸಿ ಭಾಷಣ ಮಾಡಿದರು. 1942ರ ಚಲೇಜಾವ್ ಚಳುವಳಿಯು ಇಲ್ಲಿ ಬಿರುಸಾಗಿ ನಡೆಯಿತು. ಆಗ ನೇತೃತ್ವ ವಹಿಸಿದ್ದ ಪ್ರಮುಖರಲ್ಲಿ ಕೆ.ಆರ್.ಕಾರಂತ, ವಿಠಲದಾಸಶೆಟ್ಟಿ, ಶ್ರೀನಿವಾಸಮಲ್ಯ, ನಾಗಪ್ಪಆಳ್ವ, ಎಂ.ಡಿ.ಅಧಿಕಾರಿ, ಶಂಕರಆಳ್ವ ಮುಂತಾದವರಿದ್ದರು.

ದೇಶಕ್ಕೆ ಸ್ವಾತಂತ್ರ್ಯ ಬಂದಾಗ ಹಾಲಿ ಉಡುಪಿ ಜಿಲ್ಲೆಯು ಸೇರಿದಂತೆ ದಕ್ಷಿಣ ಕನ್ನಡ ಜಿಲ್ಲೆ ಮದರಾಸು ರಾಜ್ಯದಲ್ಲೇ ಮುಂದುವರಿಯಿತು. 1956ರ ನವೆಂಬರ್ 1ರಂದು ಅಸ್ತಿತ್ವಕ್ಕೆ ಬಂದ ಭಾಷಾವಾರು ಪ್ರಾಂತ್ಯದ ರಚನೆಯಲ್ಲಿ ಇದು ವಿಶಾಲ ಮೈಸೂರು ರಾಜ್ಯದ ಭಾಗವಾಯಿತು. (ಡಿ.ಎಸ್.ಜೆ.)

**ತಾಲ್ಲೂಕು:** ವಿಸ್ತೀರ್ಣ 929ಚಕಿಮೀ. ಜನಸಂಖ್ಯೆ 527,557 ಉತ್ತರದಲ್ಲಿ ಕುಂದಾಪುರ, ದಕ್ಷಿಣದಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಪೂರ್ವದಲ್ಲಿ ಕಾರ್ಕಳ ತಾಲ್ಲೂಕುಗಳಿಂದಲೂ ಪಶ್ಚಿಮದಲ್ಲಿ ಅರಬ್ಬೀ ಸಮುದ್ರದಿಂದಲೂ ಸುತ್ತುವರೆದಿದೆ. ಕಾಪು, ಕೋಟ, ಉಡುಪಿ ಮತ್ತು ಬ್ರಹ್ಮಾವರ ಹೋಬಳಿಗಳು. ಈ ತಾಲ್ಲೂಕಿನಲ್ಲಿ 6 ಪಟ್ಟಣಗಳು ಮತ್ತು 110 ಗ್ರಾಮಗಳು ಇವೆ.



ಶ್ರೀಲಕ್ಷ್ಮೀನಾರಾಯಣ, ಪಾಜಕ

ಪಶ್ಚಿಮ ಕರಾವಳಿಯಲ್ಲಿದ್ದು ಸಸ್ಯಸಮೃದ್ಧವಾಗಿರುವ ಈ ತಾಲ್ಲೂಕಿನಲ್ಲಿ ಸಾಗರಿಕ ವಾಯುಗುಣವಿದೆ. ನೈಋತ್ಯ ಮಾರುತಗಳಿಂದ

ಸಾಕಷ್ಟು ಮಳೆ ಬರುತ್ತದೆ. ವಾರ್ಷಿಕ ಸರಾಸರಿ 4188ಮಿಮೀ. ಪಶ್ಚಿಮ ಘಟ್ಟದಲ್ಲಿ ಹುಟ್ಟುವ ಅನೇಕ ತೊರೆಗಳು ಹಾಗೂ ಸೀತಾ ಮತ್ತು ಸ್ವರ್ಣ ನದಿಗಳು ಪಶ್ಚಿಮಾಭಿಮುಖವಾಗಿ ಹರಿಯುತ್ತವೆ. ಈ ತಾಲ್ಲೂಕಿನಲ್ಲಿ 4686 ಹೆಕ್ಟೇರ್‌ಗಳಷ್ಟು ಕಾಡು ಪ್ರದೇಶವಿದೆ. ಕಾಡಿನಲ್ಲಿ ಕರಿಮರ, ಮಾವು, ಮತ್ತಿ, ಕಿರಲಬೋಗಿ ಮತ್ತು ಬೆನ್ ಟೀಕ್ ಮುಂತಾದ ಮರಗಳು ಬೆಳೆಯುವುದಲ್ಲದೆ ಹುಣಸೆ, ಸೀಗೆಕಾಯಿ, ಬಿದಿರು ಈ ಉಪಯುಕ್ತ ವಸ್ತುಗಳೂ ದೊರೆಯುತ್ತವೆ. ಸ್ವಲ್ಪ ಮೆಣಸಿನ ಬೆಳೆಯೂ ಇದೆ.



ಶಿವಳ್ಳಿ ಕಕ್ಕುಂಜೆಯ ಶ್ರೀಜನಾರ್ದನ

ಉಡುಪಿ ತಾಲ್ಲೂಕಿನಲ್ಲಿ ದೊಡ್ಡ ನೀರಾವರಿ ಯೋಜನೆಗಳಿಲ್ಲ. ಆದರೆ ಸಾಕಷ್ಟು ಮಳೆ ಬೀಳುವುದರಿಂದ ನದಿ - ತೊರೆಗಳು ಇದ್ದು ಜಲಾಭಾವವಿಲ್ಲ. ಈ ತಾಲ್ಲೂಕಿನ ಚಂತರ ಮಡಗ ಮತ್ತು ಮರನಾಡ ಮಡಗ ಕೆರೆಗಳಿಂದ 370 ಎಕರೆಗಳಿಗೆ ನೀರೊದಗುತ್ತದೆ. ತಾಲ್ಲೂಕಿನಲ್ಲಿ ಪರ್ಷಿಯನ್ ಚಕ್ರ ಅಥವಾ ಪಂಪ್‌ಸೆಟ್ ಇರುವ, ಕಪಿಲೆ ಮತ್ತು ಇನ್ನಿತರ ನೀರಾವರಿ ಬಾವಿಗಳಿವೆ.

ತಾಲ್ಲೂಕಿನ ತೀರದ ಉದ್ದಕ್ಕೂ ಮತ್ತು ಸ್ವಲ್ಪ ಒಳಭಾಗದಲ್ಲೂ ಜಂಬು ಮಣ್ಣನ್ನು ಕಾಣಬಹುದು. ಇಲ್ಲಿನ ಕಲ್ಲುಗಳು ಹೆಚ್ಚು ಒತ್ತಾಗಿದ್ದು ಪುಡಿಪುಡಿಯಾಗುವ ಕೆಂಪು ಜೇಡಿ ಮಣ್ಣನ್ನು ಒಳಗೊಂಡಿದೆ. ಚಿಪ್ಪು ಸುಣ್ಣ ಕಲ್ಲಿನ ಮತ್ತು ಜೇಡಿಮಣ್ಣಿನ ಸಂಗ್ರಹವೂ ಇದೆ. ನದಿ ಕಣಿವೆಗಳ ಉದ್ದಕ್ಕೂ ನಾನಾ ಬಣ್ಣದ ಜೇಡಿಮಣ್ಣು ಮೆಕ್ಕಲು ಮಣ್ಣಿನೊಡನೆ ಇರುವುದನ್ನು ಕಾಣಬಹುದು. ಕಟ್ಟಡ ಕಲ್ಲುಗಳು ಇದ್ದು - ಅಲಿಯೂರು, ಶಿರ, ಪಾಡು, ಕಡವೂರು ಮತ್ತು ಹರಡಿಯಲ್ಲಿ ಕಲ್ಲುಚಪ್ಪಡಿ ತೆಗೆಯುತ್ತಾರೆ. ಈ ತಾಲ್ಲೂಕಿನ 59.34 ಹೆಕ್ಟೇರುಗಳಲ್ಲಿ ಚಿಪ್ಪು ಸುಣ್ಣವನ್ನು ಸಂಗ್ರಹಿಸುತ್ತಾರೆ. ಶುದ್ಧ ಬಿಳುಪಿನಿಂದ ಬೂದ ಮಿಶ್ರಿತ ಬಿಳಿ ರೀತಿಗಳ ಸಿಲಿಕ ಮರಳು ಹರಹುಗಳು ತೀರದ ಉದ್ದಕ್ಕೂ ಮುಳೂರು, ಕಾಪು, ಹೆಜ್ಮಾಡಿ, ತೋನ್ಸೆ ಮತ್ತು ಉಲಿಯಾರ್ಗೋಳಿ ಮುಂತಾದೆಡೆಗಳಲ್ಲಿ 30ಸೆ.ಮೀ. ನಿಂದ 1ಮೀ ಮಂದದಲ್ಲಿ ಹರಡಿವೆ. 12,000 ಟನ್ ಸಿಲಿಕ ಮರಳನ್ನು ಪ್ರತಿವರ್ಷ ಈ ಪ್ರದೇಶದಿಂದ ತೆಗೆದು ಬಳಸಿಕೊಳ್ಳಲಾಗುತ್ತಿದೆ. ಅಭ್ರಕದಿಂದ ಕೂಡಿದ ಬೆಣಚುಕಲ್ಲಿನ ಶಿಲೆಯನ್ನು ಈ ತಾಲ್ಲೂಕಿನ ಕಾಪು, ಪಡು, ಮುಳೂರು, ಉಲಿಯಾರ್ಗೋಳಿ, ಉದ್ಯಾವರ, ನದಿಸಲ ಮತ್ತು ಹೆಜ್ಮಾಡಿಗಳಲ್ಲಿ ಕಾಣಬಹುದು. ಹೆಂಚು ತಯಾರಿಕೆಗೆ ಬೇಕಾದಂಥ ವಿಶಿಷ್ಟವಾದ ಮಣ್ಣು ಈ ತಾಲ್ಲೂಕಿನ ಮಲ್ಪೆ ಮುಂತಾದೆಡೆ ದೊರೆಯುತ್ತದೆ.

ಬತ್ತ, ಕಬ್ಬು ಮತ್ತು ನೆಲಗಡಲೆ ಮುಖ್ಯ ವ್ಯವಸಾಯ ಬೆಳೆಗಳು. ತೆಂಗು, ಅಡಕೆ, ಗೇರು ಮುಖ್ಯ ತೋಟಗಾರಿಕೆ ಬೆಳೆಗಳು 1999-2000. ಅಂಕಿ ಅಂಶಗಳ ಪ್ರಕಾರ ತೆಂಗು (5408), ಕಬ್ಬು (740), ಬತ್ತ (29647), ಗೇರು (4020), ನೆಲಗಡಲೆ (1110), ದ್ವಿದಳ ಧಾನ್ಯಗಳು (7687), ಅಡಕೆ (560), ಬಾಳೆ (342), ಮಾವು (632), ಸಿಹಿ ಗೆಣಸು (363), ಮೊದಲಾದ ಬೆಳೆಗಳು ಬೆಳೆಯುತ್ತಿವೆ.

ಇಲ್ಲಿಯ ಜನರ ಮುಖ್ಯ ಕಸಬು ವ್ಯವಸಾಯವಾದರೂ ಇತರ ಕ್ಷೇತ್ರಗಳಲ್ಲೂ ಅಭಿವೃದ್ಧಿ ಹೊಂದುತ್ತಿದ್ದಾರೆ. ಸ್ವರ್ಣ ನದಿ ಮತ್ತು ಸೀತಾ ನದಿಗಳಲ್ಲಿ ಹಾಗೂ ಸಮುದ್ರದಲ್ಲಿ ಮೀನು ಹಿಡಿದು ಮತ್ಸೋದ್ಯಮವನ್ನೇ ಮುಖ್ಯ ಕಸಬನ್ನಾಗಿ ಮಾಡಿಕೊಂಡಿರುವವರೂ ಇದ್ದಾರೆ. ಈ ತಾಲ್ಲೂಕಿನಲ್ಲಿ ಕೋಳಿಸಾಕಣೆ ಮತ್ತು ಪಶುಪಾಲನೆ ಕೇಂದ್ರಗಳೂ ಇವೆ. ಜಿಲ್ಲೆಯ ಎಲ್ಲ ಕಡೆಗೂ ಉತ್ತಮ ರಸ್ತೆ ಸಂಪರ್ಕವಿದೆ. ಒಟ್ಟು 343 ಪ್ರಾಥಮಿಕ ಶಾಲೆಗಳು 94 ಪ್ರೌಢ ಶಾಲೆಗಳು ಮತ್ತು ಕಾಲೇಜುಗಳೂ ಇವೆ. ಉಡುಪಿಗೆ ಉತ್ತರದಲ್ಲಿ ಮೂರು ಕಿಮೀ ದೂರದಲ್ಲಿರುವ ಮಣಿಪಾಲದಲ್ಲಿ ಮಣಿಪಾಲ ಮುದ್ರಣಾಲಯ. ಎಂಜಿನಿಯರಿಂಗ್, ವೈದ್ಯಕೀಯ ಮತ್ತು ಶಿಕ್ಷಣ ತರಬೇತಿ ಕಾಲೇಜುಗಳಿವೆ. ಸಿಂಡಿಕೇಟ್ ಬ್ಯಾಂಕ್‌ನ ಕೇಂದ್ರ ಕಚೇರಿ ಇದೆ. ಇಲ್ಲಿ ಸ್ಥಾಪಿತವಾಗಿರುವ ದಿ ಅಕಾಡೆಮಿ ಆಫ್ ಜನರಲ್ ಎಜುಕೇಷನ್ ಸಂಸ್ಥೆ ವಿದ್ಯಾಪ್ರಸಾರಣಾ ಕಾರ್ಯದಲ್ಲಿ ವಿಶೇಷ ರೀತಿಯ ಸೇವೆ ಸಲ್ಲಿಸುತ್ತಿದೆ. 33 ಪ. ಪೂ. ಕಾಲೇಜುಗಳು, 3 ಸರ್ಕಾರಿ ಕಾಲೇಜುಗಳಿವೆ. ಮಣಿಪಾಲದಲ್ಲಿ ವೈದ್ಯಕೀಯ ಮತ್ತು ಎಂಜಿನಿಯರಿಂಗ್ ಕಾಲೇಜಿದೆ.

ಉದ್ಯಾವರ, ಕಲ್ಯಾಣಪುರ, ತೋನ್ಸೆ, ಪೆರ್ಡೂರು, ಬ್ರಹ್ಮಾವರ, ಬಾರಕೂರು, ಮಂದರ್ತಿ - ಇವು ತಾಲ್ಲೂಕಿನ ಕೆಲವು ಮುಖ್ಯ ಸ್ಥಳಗಳು (ಇವುಗಳಿಗೆ ಪ್ರತ್ಯೇಕ ಲೇಖನಗಳಿವೆ). ಉಡುಪಿಗೆ ಹತ್ತಿರವಿರುವ ಕರಂಕರಪಾಡಿಯಲ್ಲಿ ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದ ಕೆಲವು ಕುರುಹುಗಳು ಸಿಕ್ಕಿವೆ. ಎಣ್ಣೆ ಹೊಳೆ ಮತ್ತು ಸ್ವರ್ಣನದಿ ಸಂಗಮದಲ್ಲಿರುವ ಭದ್ರಗಿರಿಯಲ್ಲಿ ವಿಠಲ ದೇವಾಲಯವಿದೆ. ಕಟಪಾಡಿಯಲ್ಲಿ ಪುರಾತನ ದೇವಾಲಯಗಳಿವೆ. ಕಾಪುವಿನಲ್ಲಿ ಜೈನಬಸದಿ ಮತ್ತು ಮಾರಿಯಮ್ಮನ ಗುಡಿಗಳೂ ಕೋಟದಲ್ಲಿ ನರಸಿಂಹ ಮಹಾದೇವ ಮತ್ತು ಅಮೃತೇಶ್ವರಿ ದೇವಾಲಯಗಳೂ ಇವೆ. ನಂದಿಕೂರಿನ ಅಮೃತೇಶ್ವರ, ಬಂಟ ಕಲ್ಲಿನಲ್ಲಿ ದುರ್ಗಾಪರಮೇಶ್ವರಿ, ನಾಯಂಪಳ್ಳಿಯ ಗೋಪಾಲಕೃಷ್ಣ, ನೀಲಾವರದ ದುರ್ಗಾಭಗವತಿ, ಸಾಲಿಗ್ರಾಮದ ಯೋಗಾನರಸಿಂಹ ಹೆಸರಿಸಬೇಕಾದ ಇತರ ದೇವಾಲಯಗಳು. ಸುರುಳುವಿನ ಮಹಾದೇವ ದೇವಾಲಯ ಪೂರ್ಣ ಕಪ್ಪು ಶಿಲೆಯಲ್ಲಿ ನಿರ್ಮಿತವಾದುದು. ಅಲೆವೂರಿನಲ್ಲಿ ದುರ್ಗಾ ಮತ್ತು ಜನಾರ್ದನ ದೇವಾಲಯಗಳಿವೆ. ಈ ಜನಾರ್ದನ ದೇವಾಲಯ ಕದಂಬ ಮಯೂರವರ್ಮ ಕಟ್ಟಿಸಿದ್ದೆಂದು ಪ್ರತೀತಿ. ಚಿತ್ರಪದಿ ದಕ್ಷಿಣ ಕನ್ನಡ ಜಿಲ್ಲೆಯ ಬಲ್ಲಾಳವಂಶದವರ ಮೂಲಸ್ಥಾನ. ಕುಂಜಾರು ಮಧ್ವಾಚಾರ್ಯರು ಹುಟ್ಟಿದ ಸ್ಥಳ. ಇಲ್ಲಿ ಮಹಿಷಾಸುರಮರ್ದಿನಿ ದೇವಾಲಯವೂ ನಾಲ್ಕು ಪುಷ್ಕರಣಿಗಳೂ ಇವೆ. ಹತ್ತಿರದಲ್ಲಿ ಕುಂಜಾರುಗಿರಿ ಮತ್ತು ಪರಶುರಾಮಗಿರಿ ಎಂಬ ಎರಡು ಚಿಕ್ಕ ಬೆಟ್ಟಗಳಿವೆ. ಪರಶುರಾಮಗಿರಿಯ ಮೇಲೆ ಪರಶುರಾಮ ವಿಗ್ರಹವಿದೆ. ಎರ್ಮಾಳಿನಲ್ಲಿ ಒಂದು ಚಂದ್ರನಾಥ ಬಸದಿ ಮತ್ತು ಮಧ್ವಾಚಾರ್ಯರು ಸ್ಥಾಪಿಸಿದ ಜನಾರ್ದನ ದೇವಾಲಯ ಇವೆ. ನಿಡಂಬೂರಿನಲ್ಲಿ ಆಂಜನೇಯ ದೇವಾಲಯವಿದೆ. ಇಲ್ಲಿ ಪ್ರಥಮವಾಗಿ ಪೂಜೆ ಸಲ್ಲಿಸಿದ ಅನಂತರವೇ ಉಡುಪಿಯ ಪರ್ಯಾಯ ಮಠಾಧಿಪತಿಗಳು ತಮ್ಮ ಪೂಜೆಯನ್ನು ಆರಂಭಿಸುವುದು ಪದ್ಧತಿ. ಪಡುಬಿದ್ರಿ ಒಂದು ದೊಡ್ಡ ಊರು, ಮೀನು ವ್ಯಾಪಾರಕ್ಕೆ ಪ್ರಸಿದ್ಧಿ, ಇಲ್ಲಿ ಕೆಲವು ದೇವಾಲಯಗಳೂ ಎರಡು ಪ್ರೌಢಶಾಲೆಗಳೂ ಇವೆ.

**ಪಟ್ಟಣ :** ಉಡುಪಿ ಈ ತಾಲ್ಲೂಕಿನಲ್ಲಿ ಆಡಳಿತ ಕೇಂದ್ರ. ಜಿಲ್ಲೆಯ ದೊಡ್ಡ ನಗರ. ಜನಸಂಖ್ಯೆ 113,039. ಮಂಗಳೂರಿಗೆ ಉತ್ತರದಲ್ಲಿ 58ಕಿಮೀ ದೂರದಲ್ಲಿದ್ದು ಮಂಗಳೂರು, ಕಾರ್ಕಳ, ಕುಂದಾಪುರ ಮುಂತಾದೆಡೆಗಳೊಡನೆ ಉತ್ತಮ ರಸ್ತೆ ಸಂಪರ್ಕವನ್ನು ಹೊಂದಿದೆ. ಪಶ್ಚಿಮಕ್ಕೆ 5ಕಿಮೀ ದೂರದಲ್ಲೇ ಮಲ್ಪೆ ಬಂದರಿದೆ.

ಉಡುಪಿ ಪ್ರಸಿದ್ಧ ಧಾರ್ಮಿಕ ಕೇಂದ್ರ ಹಾಗೂ ಯಾತ್ರಾಸ್ಥಳ. ಶಿಕ್ಷಣ, ಕೈಗಾರಿಕೆಗಳಲ್ಲಿ ಸಹ ಪ್ರಗತಿಪಥದಲ್ಲಿರುವ ಊರು. ಲಾ ಕಾಲೇಜು, ಆಯುರ್ವೇದ ಕಾಲೇಜು, ಪೂರ್ಣಪ್ರಜ್ಞ ಕಾಲೇಜು, ಮಹಾತ್ಮ ಗಾಂಧೀ ಸ್ಮಾರಕ ಕಾಲೇಜು, ಸಂಗೀತ, ಯಕ್ಷಗಾನ ಇತ್ಯಾದಿಗಳನ್ನು ಕಲಿಸುವ ಲಲಿತಕಲಾ ಕಾಲೇಜು ಮತ್ತು ವೇದ ವೇದಾಂತ ತರ್ಕ ವ್ಯಾಕರಣ ಇತ್ಯಾದಿಗಳನ್ನು ಕಲಿಸುವ ಸಂಸ್ಕೃತ ಮಹಾವಿದ್ಯಾಲಯ, ಎಂ. ಗೋವಿಂದ ಪೈ ಸಂಶೋಧನ ಕೇಂದ್ರ, ಸರ್ಕಾರಿ ಗ್ರಂಥಾಲಯ ಮುಂತಾದವು ಇಲ್ಲಿವೆ. ಏಳು ಪ್ರೌಢ ಶಾಲೆಗಳೂ ಹಲವಾರು ಮಾಧ್ಯಮಿಕ ಪ್ರಾಥಮಿಕ ಶಾಲೆಗಳೂ ಇವೆ. ಒಂದು ಹೆಂಚು ಕಾರ್ಖಾನೆ ಮತ್ತು ಕೊಬ್ಬರಿ ಎಣ್ಣೆ ಕಾರ್ಖಾನೆಗಳು ಇವೆ. ಮ್ಯಾಜಿಸ್ಟ್ರೇಟ್ ಮತ್ತು ಮುನ್ಸಿಫ್ ನ್ಯಾಯಾಲಯಗಳುಂಟು. ವ್ಯಾಪಾರೋದ್ಯಮಕ್ಕೆ ಅನುಕೂಲವಾಗುವ ಬಂಡವಾಳವನ್ನೊದಗಿಸುವ ಬ್ಯಾಂಕುಗಳು, ಹಣಕಾಸು, ಸಂಸ್ಥೆಗಳು, ಇಲ್ಲಿವೆ. ಭಾರತ ಜೀವವಿಮಾ ಸಂಸ್ಥೆಯ ವಿಭಾಗ ಕೇಂದ್ರ ಕಚೇರಿ, ಸರ್ಕಾರಿ ಸಾರ್ವಜನಿಕ ಆಸ್ಪತ್ರೆ ಇವೆ. ಅನೇಕ ಸಾಂಸ್ಕೃತಿಕ ಸಂಘ ಸಂಸ್ಥೆಗಳಿವೆ. ಉಡುಪಿಯಲ್ಲಿ ಪುರಸಭೆ ಇದೆ. ನದಿ ನೀರನ್ನು ಕುಡಿಯಲು ಬಳಸಿಕೊಳ್ಳುತ್ತಿದೆ.

14ನೆಯ ಶತಮಾನದ ತನಕ ಉಡುಪಿ ಎಂಬ ಹೆಸರು ಇಲ್ಲಿನ ಅನಂತೇಶ್ವರ ದೇವಾಲಯದ ಪರಿಸರದಲ್ಲಿ ಒಂದು ಅಗಲ ಕಿರಿದಾದ ಸ್ಥಳಕ್ಕೆ ಮಾತ್ರ ಅನ್ವಯಿಸಿತ್ತು. ಕಾಲಕ್ರಮೇಣ ಈ ಹೆಸರು ವೈಶಾಲ್ಯವನ್ನು ಪಡೆಯಿತು. ಉಡುಪಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಕ್ಕೆ ಶಿವಳ್ಳಿ ಎಂಬ ಹೆಸರು 8ನೆಯ ಶತಮಾನದಿಂದಲೇ ಇತ್ತು. ಇದರ ಸಮೀಪವೇ ಕಕ್ಕುಂಜೆ ಎಂಬಲ್ಲಿ ಬಹು ಪ್ರಾಚೀನವಾದ ಒಂದು ಜನಾರ್ದನ ಬಿಂಬ ಚಿಕ್ಕದಾದೊಂದು ಗುಡಿಯಲ್ಲಿದೆ. ಇತಿಹಾಸ ಕಾಲದಲ್ಲಿ ಉಡುಪಿ - ಶಿವಳ್ಳಿ - ನಿಡಂಬೂರು ಮತ್ತು ಬೆಟ್ಟುಪಾಡಿ ಬೀಡುಗಳು ಎಂಬ ಎರಡು ಪ್ರಮುಖ ವಿಭಾಗಗಳಿಂದ ಕೂಡಿತ್ತು. ಈ ಬೀಡುಗಳ ಅಧಿಕಾರಿಗಳು ಬ್ರಾಹ್ಮಣರಾಗಿದ್ದರು.

ಆನಂದಗಿರಿ ವಿರಚಿತ ಶಂಕರ ವಿಜಯದಲ್ಲೂ ಉಡುಪಿ ಮಹಾತ್ಮ್ಯದಲ್ಲೂ ಉಡುಪಿಗೆ ರಜತಪೀಠಪುರವೆಂಬ ಹೆಸರಿದೆ. ಸು.10ನೆಯ ಶತಮಾನದಲ್ಲಿ ಈ ಹೆಸರು ಬಳಕೆಯಲ್ಲಿತ್ತು. ತುಳು ನಾಡಿನ ಸಪ್ತಕ್ಷೇತ್ರಗಳಲ್ಲಿ ರೌಪ್ಯಪೀಠ ಅಥವಾ ರಜತಪೀಠಪುರ ಒಂದಾಗಿದೆ. ಚಂದ್ರ (ಉಡು+ಪಿ) ಶಾಪದಿಂದ ವಿಮೋಚನೆಯನ್ನು ಪಡೆಯುವುದಕ್ಕೋಸ್ಕರ ಶಿವನನ್ನು ಕುರಿತು ತಪಸ್ಸು ಮಾಡಿದಾಗ ಶಿವನು ಪ್ರತ್ಯಕ್ಷನಾದ ಸ್ಥಳ ಉಡುಪಿ ಎಂದು ಸ್ಥಳಪುರಾಣದ ಹೇಳಿಕೆ. ಉಡುಪಿ ಶಬ್ದ ನಾಗ ಸಂಬಂಧಿಯೂ ಆಗಿದ್ದುದರಿಂದ ಉಡುಪಿ ನಾಗಾರಾಧನೆಗೆ ಹೆಸರುವಾಸಿಯಾದ ಸ್ಥಳವೆನ್ನಬಹುದು.

ಇಲ್ಲಿಯ ಬಹು ಪ್ರಾಚೀನ ಚಾರಿತ್ರಿಕ ಅವಶೇಷ ಶ್ರೀ ಅನಂತೇಶ್ವರ ದೇವಾಲಯ, ಸು.8-9ನೆಯ ಶತಮಾನದ್ದು. ಇದು ಗಜಪೃಷ್ಠಾಕಾರವಾಗಿದ್ದು ಕರ್ನಾಟಕದ ಹಿರಿಯ ದೇವಾಲಯಗಳಲ್ಲಿ ಒಂದೆನ್ನಬಹುದು. ಈ ದೇವಾಲಯದ ಎದುರು ತಗ್ಗಾದ ಸ್ಥಳದಲ್ಲಿ ಚಂದ್ರಮೌಳೀಶ್ವರವೆಂಬ ದೇವಾಲಯವಿದೆ. ಇದು ಸಹ ಸು.9-10ನೆಯ ಶತಮಾನದ ದೇಗುಲ. ಈ ದೇವಾಲಯದ ನಿರ್ಮಾಣಕ್ಕಿಂತ ಮೊದಲು ಇದು ಕೆರೆಯಾಗಿರಬೇಕು.

ಇಲ್ಲಿನ ಕೃಷ್ಣದೇವಾಲಯ ಅಖಿಲ ಭಾರತದಲ್ಲೇ ಸಾಕಷ್ಟು ಖ್ಯಾತಿ ಪಡೆದಿದೆ. ಶ್ರೀ ಕೃಷ್ಣಮಠವೆಂದು ಕರೆಯಲ್ಪಡುವ ಈ ದೇವಾಲಯ ಅನಂತೇಶ್ವರ ದೇವಾಲಯದ ಪರಿಸರದಲ್ಲಿ ಈಶಾನ್ಯ ದಿಕ್ಕಿಗಿದೆ. ಈ ಮಠದ ರಚನೆ ಸರಳವಾಗಿದ್ದರೂ ಇದೊಂದು ಆಯುತಾಕಾರದ ಕಟ್ಟಡವಾಗಿದ್ದು ಉತ್ತರ ಭಾಗದಲ್ಲಿ ಒಳಗೆ ಪ್ರವೇಶವಿದ್ದು ಪಶ್ಚಿಮ ಭಾಗದ ಕಿಂಡಿಯಿಂದ (ಕನಕನ ಕಿಂಡಿ) ಶ್ರೀಕೃಷ್ಣನ ದರ್ಶನವನ್ನು ಮಾಡುವ ವ್ಯವಸ್ಥೆಯಿಂದ ಕೂಡಿದೆ. ಈ ಮೂರ್ತಿಯನ್ನು ಮಧ್ವಾಚಾರ್ಯರು 13ನೆಯ ಶತಮಾನದ ಅಂತ್ಯ ಭಾಗದಲ್ಲಿ ಪ್ರತಿಷ್ಠಾಪಿಸಿದರು. ಕೃಷ್ಣನ ಮೂರ್ತಿ ಉಡುಪಿಗೆ ಹಡಗಿನ ಮೂಲಕ ಬಂದ ವಿಚಾರದಲ್ಲಿ ಸಾಂಪ್ರದಾಯಿಕವಾದ ಒಂದು ಹೇಳಿಕೆ ಇದ್ದರೂ ಇದನ್ನು ಮಧ್ವಾಚಾರ್ಯರು ತಮ್ಮ ಔತ್ತರೇಯ ಪರ್ಯಟನ ಸಮಯದಲ್ಲಿ ತಂದು ಉಡುಪಿಯಲ್ಲಿ ಸ್ಥಾಪಿಸಿದರೆನ್ನಬಹುದು. ಬಲ ಕೈಯಲ್ಲಿ ದಂಡ ಹಿಡಿದಿರುವ 15" ಎತ್ತರದ ಈ ಮೂರ್ತಿ ಬಹು ಪ್ರಾಚೀನವೂ ಮಹತ್ವವುಳ್ಳದ್ದೂ ಆಗಿದೆ. ಶ್ರೀ ಕೃಷ್ಣಮಠದಲ್ಲೇ ಶಂಕರಾಚಾರ್ಯರ ಶಿಷ್ಯರಾದ ಹಸ್ತಾಮಲಕಾಚಾರ್ಯರಿಂದ ಪ್ರತಿಷ್ಠಿತ ವಾದದ್ದೆನ್ನಲಾದ ತೈಲಕೃಷ್ಣ ಎಂಬ ವ್ಯಾವಹಾರಿಕ ಹೆಸರನ್ನು ಪಡೆದಿರುವ ಇನ್ನೊಂದು ಸುಂದರ ಮೂರ್ತಿ ಇದೆ. ಇದು ಸು.9ನೆಯ ಶತಮಾನದ ವೇಣುಗೋಪಾಲ ಕೃಷ್ಣ ಮೂರ್ತಿ, ಶ್ರೀ ಕೃಷ್ಣಮಠದ ಒಂದು ಭಾಗದಲ್ಲಿ ಮಧ್ವಪುಷ್ಕರಿಣಿ ಇದೆ.

ಉಡುಪಿಯಲ್ಲಿ ಸೋದೆ, ಶಿರೂರು, ಕಾಣಿಯೂರು, ಕೃಷ್ಣಾಪುರ, ಆದಮಾರು ಪಲಿಮಾರು, ಪೇಜಾವರ, ಪುತ್ತಿಗೆ ಎಂಬ ಅಷ್ಟ ಮಠಗಳಿವೆ. ಈ ಮಠಗಳ ಯತಿಗಳು ಶ್ರೀಕೃಷ್ಣನ ಪೂಜೆಯನ್ನು ಪರ್ಯಾಯ ಕ್ರಮದಲ್ಲಿ ಎರಡೆರಡು ವರ್ಷಗಳ ತನಕ ಮಾಡುತ್ತಾರೆ. ಅಷ್ಟಯತಿಗಳ ಪರಂಪರೆಯನ್ನು ಸ್ಥಾಪಿಸಿದುದು ಶ್ರೀ ಮಧ್ವಾಚಾರ್ಯರಾದರೂ ಪರ್ಯಾಯ ಕ್ರಮವನ್ನು ಅನುಷ್ಠಾನಕ್ಕೆ ತಂದುದು ಸೋದೆ ಮಠದ ಯತಿವರ್ಯರಾದ ಶ್ರೀ ವಾದಿರಾಜರು.



ಹೊಸ ಮಾರಿಯಮ್ಮ ದೇವಾಲಯ, ಕಾಪು

ಅನುಕ್ರಮವಾಗಿ ಒಂದು ಮಠದ ಸ್ವಾಮಿಗಳಿಂದ ಇನ್ನೊಂದು ಮಠದ ಸ್ವಾಮಿಗಳು ಶ್ರೀ ಕೃಷ್ಣಮಠದ ಪೂಜಾಧಿಕಾರ ವಹಿಸಿಕೊಳ್ಳುವ ಸಮಾರಂಭವೇ ಪರ್ಯಾಯ ಮಹೋತ್ಸವ. ಇದು ಉಡುಪಿಯ ಅತ್ಯಂತ ದೊಡ್ಡ ಉತ್ಸವ, ಈ ಸಂದರ್ಭದಲ್ಲಿ ಭಕ್ತರು ಅಧಿಕ ಸಂಖ್ಯೆಯಲ್ಲಿ ಉಡುಪಿಗೆ ಬರುತ್ತಾರೆ. ಉಡುಪಿಯಲ್ಲಿ ನಡೆಯುವ ಲಕ್ಷದೀಪೋತ್ಸವ, ಮಕರ ಸಂಕ್ರಮಣೋತ್ಸವ, ಶ್ರೀಕೃಷ್ಣ ಜಯಂತಿ ಇತರ ಪ್ರಮುಖ ಉತ್ಸವಗಳು. (ಪಿ.ಜಿ.ಬಿ.)

**ಉತ್ತಂಗಿ ಚನ್ನಪ್ಪ:** 1881-1962. ಅಸ್ತವ್ಯಸ್ತಗೊಂಡು ತಾರುಮಾರಾಗಿದ್ದ ಸರ್ವಜ್ಞನ ವಚನಗಳನ್ನು ಶಾಸ್ತ್ರೀಯವಾಗಿ ಅಣಿಗೊಳಿಸಿ, ಅವನ ವಾಣಿಯನ್ನು ಮನೆ ಮನೆಗೆ ತಲುಪಿಸಿ ಅವನ ಸಮಗ್ರ ದರ್ಶನವನ್ನು ಮಾಡಿಸಿದ ಕೀರ್ತಿವಂತರು. ಕ್ರೈಸ್ತ ಧರ್ಮದ ಉಪದೇಶಕರು. ಇವರ ಪೂರ್ಣ ಹೆಸರು ರೆವರೆಂಡ್ ಚನ್ನಪ್ಪ ದಾನಿಯೇಲಪ್ಪ ಉತ್ತಂಗಿ. ಇವರ ಕಾವ್ಯನಾಮ ತಿರುಳ್ಗನ್ನಡ ತಿರುಕ. ಇವರ ಹಿರಿಯರು ಬಳ್ಳಾರಿ ಜಿಲ್ಲೆಯ ಉತ್ತಂಗಿಯಲ್ಲಿದ್ದರು.



ಕಾರಣಾಂತರದಿಂದ ವೀರಶೈವ ಧರ್ಮದಿಂದ ಕ್ರೈಸ್ತಧರ್ಮಕ್ಕೆ

ಮತಾಂತರಗೊಂಡು ಕಾಲ ಕ್ರಮೇಣ ಧಾರವಾಡದಲ್ಲಿ ನೆಲಸಿದರು. ಚನ್ನಪ್ಪನವರು 1881 ಡಿಸೆಂಬರ್ 9ರಂದು ಧಾರವಾಡದಲ್ಲಿ ಜನಿಸಿದರು. ತಂದೆ ದಾನಿಯೇಲಪ್ಪನವರು ಅಲ್ಲಿಯ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರಾಗಿದ್ದರು. ಧಾರವಾಡ, ಗದಗ, ಬೆಟಗೇರಿಗಳಲ್ಲಿ ಚನ್ನಪ್ಪನವರ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ನಡೆಯಿತು. ಇವರು ಬುದ್ಧಿವಂತರಾಗಿದ್ದರೂ ವ್ಯಾಸಂಗದಲ್ಲಿ ಆಸಕ್ತಿ ವಹಿಸಲಿಲ್ಲವಾಗಿ ಮೆಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಯಾಗಲಿಲ್ಲ. ಯಂತ್ರವಿಜ್ಞಾನವನ್ನು ಕಲಿಯಬೇಕೆಂದು ಆಶಿಸಿದರು. ಬಡತನದಿಂದ ಅದು ಸಾಧ್ಯವಾಗಲಿಲ್ಲ. ಕೊನೆಗೆ ತಾಯಿಯ ಅಪೇಕ್ಷೆಯಂತೆ ತಮ್ಮ 21ನೆಯ ವಯಸ್ಸಿನಲ್ಲಿ ಮಂಗಳೂರಿಗೆ ಹೋಗಿ ಅಲ್ಲಿಯ ಕ್ರೈಸ್ತಧರ್ಮ ಪಾಠಶಾಲೆಯಲ್ಲಿ ವ್ಯಾಸಂಗ ಮಾಡಿದರು. ಅನಂತರ ಅಲ್ಲಿಯ ಬಾಸೆಲ್ ಸಂಸ್ಥೆಯಲ್ಲಿ ಉಪದೇಶಕ ವೃತ್ತಿಯನ್ನು ಕೈಗೊಂಡರು (1908). ಮುಂದೆ ಧಾರವಾಡ, ಹುಬ್ಬಳ್ಳಿ, ಹಾವೇರಿ, ಗದಗ ಮುಂತಾದ ಸ್ಥಳಗಳಲ್ಲಿ ಉಪದೇಶಕರಾಗಿ ಸು.33 ವರ್ಷಗಳ ಕಾಲ ಸೇವೆಸಲ್ಲಿಸಿ 1942ರಲ್ಲಿ ನಿವೃತ್ತರಾದರು.

ಚಿಕ್ಕಂದಿನಿಂದಲೂ ಧಾರ್ಮಿಕ ಒಲವಿನವರಾಗಿದ್ದ ಇವರು ತತ್ತ್ವಜ್ಞಾನದಲ್ಲಿ ಆಸಕ್ತಿವಹಿಸಿ, ಅನೇಕ ತಾತ್ತ್ವಿಕ ಗ್ರಂಥಗಳನ್ನು ಸ್ವತಂತ್ರವಾಗಿ ವ್ಯಾಸಂಗಮಾಡಿದರು. ಉಪದೇಶಕ ವೃತ್ತಿಯನ್ನು ಕೈಗೊಂಡ ಮೇಲೂ ತಮ್ಮ ಈ ಅಧ್ಯಯನವನ್ನು ಮುಂದುವರೆಸಿ ಕ್ರೈಸ್ತಧರ್ಮದ ಜತೆಗೆ ಪ್ರಾಚ್ಯ ಮತ್ತು ಪಾಶ್ಚಾತ್ಯ ತತ್ತ್ವದರ್ಶನಗಳ ವ್ಯಾಸಂಗ ಮಾಡಿದರಲ್ಲದೆ ಅನುಭವದ ಆಗರಗಳಾದ ಉಪನಿಷತ್ತು, ಭಗವದ್ಗೀತೆಗಳ ಜತೆಗೆ ಪ್ಲೇಟೋ. ಕಾಂಟ್, ಬ್ರಾಡ್ಲೆ, ವಿಲಿಯಂಜೇಮ್ಸ್ ಮುಂತಾದವರ ಗ್ರಂಥಗಳನ್ನು ಓದಿ ವಿಚಾರ ಶಕ್ತಿಯನ್ನು ಬೆಳೆಸಿಕೊಂಡರು.

ಕ್ರೈಸ್ತ ಧರ್ಮದ ಉಪದೇಶಕರಾಗಿದ್ದ ಚನ್ನಪ್ಪನವರು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪಾಂಡಿತ್ಯ ಗಳಿಸಿದ್ದರು. 1915ರಲ್ಲಿ ಬರೆವಣಿಗೆಯನ್ನು ಆರಂಭಿಸಿದ ಇವರು ಒಟ್ಟು 18 ಕೃತಿಗಳನ್ನು ರಚಿಸಿದ್ದಾರೆ. ಇವರ ಕೃತಿಗಳನ್ನು ಎರಡು ವಿಭಾಗ ಮಾಡಬಹುದು. 1. ಕ್ರೈಸ್ತಧರ್ಮಕ್ಕೆ ಸಂಬಂಧಿಸಿದುದು. 2. ಕನ್ನಡ ಸಾಹಿತ್ಯ, ಸಂಸ್ಕೃತಿ ಮತ್ತು ಭಾರತೀಯ ಸಂಸ್ಕೃತಿಗಳಿಗೆ ಸಂಬಂಧಿಸಿದುದು. ಸಾಹಿತ್ಯಾರಾಧನೆಯೇ ಈ ಎಲ್ಲದರ ಘನ ಉದ್ದೇಶ.

ಚನ್ನಪ್ಪನವರ ಮೊದಲ ಕೃತಿ ಬನಾರಸಕ್ಕೆ ಬೆತ್ಲೆಹೇಮಿನ ವಿನಂತಿ (1921). ಯೇಸುಕ್ರಿಸ್ತನ ಜೀವನವನ್ನು ತುಲನಾತ್ಮಕವಾಗಿ ಅಧ್ಯಯನಮಾಡಿ ಶಾಸ್ತ್ರೀಯ ದೃಷ್ಟಿಯಿಂದ ಬರೆದದ್ದು. ಅನಂತರ ಹಿಂದೂ ಸಮಾಜದ ಹಿತಚಿಂತಕ (1921) ಎಂಬ ಗ್ರಂಥವನ್ನು ಪ್ರಕಟಿಸಿದರು. ಭಾರತದಲ್ಲಿರುವ ಜಾತಿಭೇದದ ಬಗ್ಗೆ ಶಾಸ್ತ್ರೀಯ ವಿವೇಚನೆಯನ್ನು ಈ ಗ್ರಂಥದಲ್ಲಿ ಮಾಡಿದ್ದಾರೆ. ಮಕ್ಕಳ ಶಿಕ್ಷಣಪಟ (1923) ಎಂಬುದು ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದ ಗ್ರಂಥ.

ಸಾಹಿತ್ಯ ರಂಗದಲ್ಲಿ ಚನ್ನಪ್ಪನವರಿಗೆ ಶಾಶ್ವತವಾದ ಕೀರ್ತಿಯನ್ನು ತಂದುಕೊಟ್ಟದ್ದು, ಸರ್ವಜ್ಞ ವಚನಗಳು (1924) ಎಂಬ ಇವರ ಸಂಪಾದಿತ ಗ್ರಂಥ. ಸುಮಾರು 9 ವರ್ಷಗಳ ದೀರ್ಘಕಾಲ ಈ ಗ್ರಂಥದ ಸಂಪಾದನೆಯ ಕಾರ್ಯಕ್ಕೆ ದುಡಿದ ಇವರು 2000 ವಚನಗಳನ್ನು ಪರಿಷ್ಕರಿಸಿದ್ದಾರೆ. ಈ ಗ್ರಂಥಕ್ಕೆ ಬರೆದಿರುವ 108 ಪುಟಗಳ ಉಪೋದ್ಘಾತದಲ್ಲಿ ಸರ್ವಜ್ಞನ ಪೂರ್ವೋತ್ತರ ಮತ್ತು ಅವನ ವ್ಯಕ್ತಿತ್ವ ಕುರಿತು ಮನಮುಟ್ಟುವಂತೆ ವಿವರಿಸಿದ್ದಾರೆ. ಸರ್ವಜ್ಞ ವಚನಗಳನ್ನು ಪಾರಮಾರ್ಥಿಕ ಮತ್ತು ಲೌಕಿಕ ವಿಚಾರಗಳೆಂದು ವಿಭಾಗಿಸಿ ಅಣಿಗೊಳಿಸಿದ್ದಾರೆ. ಈ ಕೃತಿ ಬಹು ಬೇಗ ಜನಪ್ರಿಯವಾಯಿತು. ಆಗಿನ ಮೈಸೂರು ಸರ್ಕಾರ ಈ ಗ್ರಂಥದ ಸ್ವಾಮ್ಯವನ್ನು ಚನ್ನಪ್ಪನವರಿಂದ ಪಡೆದು, ಸುಲಭ ಬೆಲೆಯ ಆವೃತ್ತಿಗಳ ಮಾಲೆಯಲ್ಲಿ ಪ್ರಕಟಿಸಿತು. ಈ ಗ್ರಂಥ ಸರ್ವಜ್ಞ ವಚನಗಳ ಅಕಾರಾದಿಯನ್ನು ಒಳಗೊಂಡಿದೆ. ಸಾಹಿತ್ಯಆವೃತ್ತಿ (1924), ಜೇಬಿನಆವೃತ್ತಿ (1935), ಜನಪದಆವೃತ್ತಿ (1935) ಮತ್ತು ಅಗ್ಗದಆವೃತ್ತಿ (1941)- ಹೀಗೆ ನಾಲ್ಕು ಆವೃತ್ತಿಗಳಲ್ಲಿ ಪ್ರಕಟಗೊಂಡಿರುವ ಏಕೈಕ ಗ್ರಂಥವಿದು.

ಭಾರತೀಯ ಕ್ರೈಸ್ತ ಹಾಗೂ ದೇಶಪ್ರೇಮಿಯಾಗಿದ್ದ ಮಹಾರಾಷ್ಟ್ರದ ಪ್ರಸಿದ್ಧ ಕವಿ ನಾರಾಯಣ ವಾಮನ ತಿಲಕರನ್ನು ಕುರಿತು ಜೆ.ಸಿ.ವಿನ್ಸೊ ಅವರು ಇಂಗ್ಲಿಷಿನಲ್ಲಿ ಬರೆದಿದ್ದ ಗ್ರಂಥವನ್ನು ಚನ್ನಪ್ಪನವರು ಕನ್ನಡಕ್ಕೆ ಭಾಷಾಂತರ ಮಾಡಿದ್ದಾರೆ (1927). ಇವರ ಇನ್ನೊಂದು ಅನುವಾದ ದೃಷ್ಟಾಂತದರ್ಪಣ (1939); 500 ದೃಷ್ಟಾಂತಗಳ ಸಂಗ್ರಹ.

ವೀರಶೈವಧರ್ಮ ಮತ್ತು ಸಿದ್ಧಾಂತಗಳಲ್ಲಿ ಪರಿಶ್ರಮ ಪಡೆದಿದ್ದ ಚನ್ನಪ್ಪನವರು ಮೋಳಿಗೆ ಮಾರಯ್ಯ ಮತ್ತು ರಾಣಿಮಹಾದೇವಿಯವರ ವಚನಗಳು (1950), ಆದಯ್ಯನ ವಚನಗಳು (1957) ಎಂಬ ಗ್ರಂಥಗಳನ್ನು ಸಂಪಾದಿಸಿದ್ದಾರೆ. ಸಿದ್ಧರಾಮ ಸಾಹಿತ್ಯ ಸಂಗ್ರಹ (1955) ಇವರ ಇನ್ನೊಂದು ಸಂಪಾದಿತ ಗ್ರಂಥ, ದೀರ್ಘವಾದ ಉಪೋದ್ಘಾತ ಮತ್ತು ವಿಮರ್ಶೆಗಳನ್ನು ಒಳಗೊಂಡಿದ್ದು ವಚನ ಸಾಹಿತ್ಯದಲ್ಲಿ ಇವರು ನಡೆಸಿದ ಸಂಶೋಧನೆಗೆ ಸಾಕ್ಷಿಯಂತಿದೆ. ಅನುಭವಮಂಟಪ : ಹಾರ್ಟ್ ಆಫ್ ಲಿಂಗಾಯಿತ್ ರಿಲಿಜಿನ್ ಎಂಬುದು ಇವರ ಒಂದು ಇಂಗ್ಲಿಷ್ ಗ್ರಂಥ.

ಹೀಗೆ ನಾನಾ ವಿಧದಲ್ಲಿ ಕ್ರೈಸ್ತಧರ್ಮ, ನಾಡು ಮತ್ತು ನುಡಿಗಳ ಸೇವೆಯನ್ನು ಮಾಡಿದ ಚನ್ನಪ್ಪನವರನ್ನು 1949ರಲ್ಲಿ ಗುಲ್ಬರ್ಗದಲ್ಲಿ ನಡೆದ 32ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಲಾಯಿತು. ಇವರ ಸಂಪಾದಿತ ಕೃತಿ ಸಿದ್ಧರಾಮ ಸಾಹಿತ್ಯ ಸಂಗ್ರಹಕ್ಕೆ ದೇವರಾಜ ಬಹದ್ದೂರ್ ದತ್ತಿ ಬಹುಮಾನ ಲಭಿಸಿದೆ.

ಚನ್ನಪ್ಪನವರು 1962 ಆಗಸ್ಟ್ 28ರಂದು ನಿಧನರಾದರು. ಇವರ ನಿಧನಾನಂತರ ಮೃತ್ಯುಂಜಯ (1963), ಲಿಂಗಾಯಿತ ಧರ್ಮ ಮತ್ತು ಕ್ರೈಸ್ತಧರ್ಮ (1969) ಎಂಬ ಎರಡು ಗ್ರಂಥಗಳು ಪ್ರಕಟವಾದವು. (ಎಸ್.ಆರ್.ಜಿ.)

**ಉತ್ತರ ಕನ್ನಡ :** ಕರ್ನಾಟಕದ ಪಶ್ಚಿಮ ಕರಾವಳಿಯ ಒಂದು ಜಿಲ್ಲೆ. ಈ ಜಿಲ್ಲೆಯ ಪೂರ್ವದಲ್ಲಿ ಧಾರವಾಡ, ಹಾವೇರಿ ಮತ್ತು ಶಿವಮೊಗ್ಗ ಜಿಲ್ಲೆಗಳು, ಪಶ್ಚಿಮದಲ್ಲಿ ಅರಬ್ಬೀಸಮುದ್ರ ಉತ್ತರದಲ್ಲಿ ಗೋವಾ ಮತ್ತು ಬೆಳಗಾಂವಿ ಜಿಲ್ಲೆ, ದಕ್ಷಿಣದಲ್ಲಿ ಉಡುಪಿ ಜಿಲ್ಲೆ ಇವೆ. ವಿಸ್ತೀರ್ಣ 10,291ಚಕಿಮೀ. ಜನಸಂಖ್ಯೆ 13,53,299. ಈ ಜಿಲ್ಲೆಯ ಕೇಂದ್ರಸ್ಥಳ ಕಾರವಾರ.



ಮಧುಕೇಶ್ವರ ದೇವಾಲಯ, ಬನವಾಸಿ

ಈ ಜಿಲ್ಲೆಯನ್ನು ಎರಡು ಭೌಗೋಳಿಕ ವಿಭಾಗಗಳನ್ನಾಗಿ ವಿಂಗಡಿಸಬಹುದು. ಸಮುದ್ರದಂಚಿನಿಂದ 10-15ಕಿಮೀ ಅಗಲ ಮತ್ತು ಸು.130ಕಿಮೀ ಉದ್ದವಾಗಿರುವ ಕರಾವಳಿ ಘಟ್ಟದ ಕೆಳಗಿನ ಭಾಗ. ಅದರ ಪೂರ್ವ ದಿಕ್ಕಿಗೆ ಗೋಡೆಯಂತೆ ದಕ್ಷಿಣೋತ್ತರವಾಗಿ ಹಬ್ಬಿದ ಜಂಬುಕಲ್ಲಿನ ಸಹ್ಯಾದ್ರಿ ಶ್ರೇಣಿ. ಬೆಟ್ಟದ ತಪ್ಪಲಿನಿಂದ ಹರಿದು ಸಮುದ್ರ ಸೇರುವ ಕಾಳಿ, ಗಂಗಾವಳಿ, ಅಘನಾಶಿನಿ, ಶರಾವತಿ ನದಿಗಳು ಸುತ್ತಲೂ ಹಸಿರು ಹಾಸಿ ಸೌಂದರ್ಯ ಬೆಳೆಸಿವೆ. ಶಿವಮೊಗ್ಗ ಮತ್ತು ಉತ್ತರ ಕನ್ನಡದ ಗಡಿಯಲ್ಲಿ ಹರಿಯುವ ಶರಾವತಿ, ಗೇರುಸೊಪ್ಪೆಯ ಬಳಿ 252ಮೀ ಕೆಳಗೆ ದುಮುಕಿ ಜಗತ್‍ಪ್ರಸಿದ್ಧ ಜೋಗ್ ಜಲಪಾತವನ್ನು ನಿರ್ಮಿಸಿದೆ. ಅಘನಾಶಿನಿ ನದಿಯ ಉಂಚಳ್ಳಿ, ಗಂಗಾವಳಿ ನದಿಯ ಮಾಗೋಡು, ಕಾಳಿನದಿಯ ಲಾಲಗುಳಿ, ಗಣೇಶಪಾಲ ಹೊಳೆಯ ಶಿವಗಂಗಾ ಜಲಪಾತಗಳೂ ನಿಸರ್ಗ ಸೌಂದರ್ಯದಿಂದ ಕೂಡಿವೆ. ಇವಲ್ಲದೆ ಸುಸುಬ್ಬಿಯಂಥ ಅನೇಕ ಚಿಕ್ಕಪುಟ್ಟ

ಜಲಪಾತಗಳಿವೆ. ಜೋಗದ ಶರಾವತಿ ಕವುರಿಯಲ್ಲಿ ಕಟ್ಟಲಾದ ಮಹಾತ್ಮಗಾಂಧಿ ವಿದ್ಯುತ್ ಉತ್ಪಾದನಾ ಕೇಂದ್ರವಿದೆ (1948). ಇಲ್ಲಿಂದ ಸ್ವಲ್ಪ ದೂರದಲ್ಲಿರುವ ಶರಾವತಿ ವಿದ್ಯುತ್ ಉತ್ಪಾದನಾ ಕೇಂದ್ರ (1965) ಏಷ್ಯಾದಲ್ಲಿ ಅತ್ಯಂತ ದೊಡ್ಡ ವಿದ್ಯುತ್ ಉತ್ಪಾದನಾ ಕೇಂದ್ರ.



ಕಲ್ಲಿನ ಮಂಚ, ಸೋಂದ

ಕಾರವಾರದಿಂದ ಭಟ್ಕಳದವರೆಗೆ ಚಾಚಿಕೊಂಡ ಕರಾವಳಿ ಮರಳುಮಯವಾಗಿದೆ. ಘಟ್ಟದ ಕೆಳಗೆ ಕಾರವಾರ, ಅಂಕೋಲಾ, ಕುಮಟ, ಹೊನ್ನಾವರ, ಭಟ್ಕಳ ತಾಲ್ಲೂಕುಗಳಿವೆ. ಘಟ್ಟದ ಮೇಲೆ ಶಿರಸಿ, ಯಲ್ಲಾಪುರ, ಸಿದ್ಧಾಪುರ, ಹಳಿಯಾಳ, ಜೊಯ್ಡ (ಸುಪಾ), ಮುಂಡಗೋಡ ತಾಲ್ಲೂಕುಗಳಿವೆ. ಕರಾವಳಿಯ ತಾಲ್ಲೂಕುಗಳಲ್ಲಿ ತೆಂಗು ವಿಪುಲವಾಗಿ ಬೆಳೆದರೆ ಘಟ್ಟದ ಮೇಲಿನ ತಾಲ್ಲೂಕುಗಳಲ್ಲಿ ಅಡಕೆ ಬೆಳೆಯುತ್ತದೆ.

ಇಲ್ಲಿಯ ಹವೆ ಹಿತಕರ. ಕರಾವಳಿ ತಾಲ್ಲೂಕುಗಳಲ್ಲಿ ಸೆಖೆ ಜಾಸ್ತಿ, ಘಟ್ಟದ ಮೇಲಿನ ತಾಲ್ಲೂಕುಗಳಲ್ಲಿ ಹೆಚ್ಚು ತಂಪಾದ ವಾಯುಗುಣವಿದೆ. ಮಳೆಗಾಲ ಜೂನ್‌ನಲ್ಲಿ ಆರಂಭಗೊಂಡು ಅಕ್ಟೋಬರ್‌ವರೆಗೂ ಇರುತ್ತದೆ. ವಾರ್ಷಿಕ ಸರಾಸರಿ ಮಳೆ 2835-3085 ಮಿಮೀ. ಕರಾವಳಿಯಲ್ಲಿ ಸಹ್ಯಾದ್ರಿಯ ಅಂಚಿನಲ್ಲಿ ಮಳೆ ಹೆಚ್ಚು. ಪೂರ್ವಕ್ಕೆ ಹೋದಂತೆ ಮಳೆ ಕಡಿಮೆಯಾಗುತ್ತದೆ.

ಜಿಲ್ಲೆಯ ಸೇ.80ರಷ್ಟು ನೆಲ ಅರಣ್ಯಾವೃತ. ಅರಣ್ಯದ ವಿಸ್ತೀರ್ಣ 8,15,057 ಹೆಕ್ಟೇರ್. 25,500 ಎಕರೆಯಲ್ಲಿ ತಾಳೆ ಬೆಳೆಯುತ್ತಾರೆ. ಸಾಗವಾನಿ, ಮತ್ತಿ, ಹೊನ್ನೆ, ನಂದಿ ಮೊದಲಾದ ಗಟ್ಟಿ ಮರಗಳಲ್ಲದೆ ಬೆಂಕಿಪೆಟ್ಟಿಗೆಯ ತಯಾರಿಕೆಗೆ ಉಪಯುಕ್ತವಾದ ಮೃದು ಮರಗಳೂ ಶ್ರೀಗಂಧದ ಮರವೂ ಇವೆ. ಬಿದಿರು ಹೇರಳವಾಗಿದೆ. ತೈಲಾಯುತ ಸಸ್ಯಜಾತಿಗಳೂ ಇವೆ. ಅಳಲೆ, ಸೀಗೆ, ಜೇನು, ಅರಗು, ಗೋಂದು, ಹಾಲಮಡ್ಡಿ ಇವು ಅರಣ್ಯೋತ್ಪನ್ನಗಳು. ರಾಜ್ಯದ ಅರಣ್ಯೋತ್ಪನ್ನದಲ್ಲಿ ಸೇ.65 ಈ ಜಿಲ್ಲೆಯಿಂದ ದೊರೆಯುತ್ತದೆ.

ಮ್ಯಾಂಗನೀಸ್, ಕಬ್ಬಿಣ, ಸುಣ್ಣದಕಲ್ಲು, ಜೇಡಿಮಣ್ಣು, ಇಲ್ಮನೈಟ್, ಗಾಜು, ಸಾಬೂನು, ಕಲ್ಲು, ಅಭ್ರಕ, ಬಾಕ್ಸೈಟ್ ಈ ಜಿಲ್ಲೆಯ ಖನಿಜಗಳು, ಜಿಲ್ಲೆಯಲ್ಲಿ ಅನೇಕ ಕಡೆ ಮ್ಯಾಂಗನೀಸ್ ದೊರೆಯುತ್ತದೆ. ಜೋಯ್ಡ ತಾಲ್ಲೂಕಿನ ಕೊಡ್ಲಿಗವಿಗಳು ಮ್ಯಾಂಗನೀಸ್‌ಗೆ ಪ್ರಸಿದ್ಧವಾಗಿದ್ದರೆ ಹೊನ್ನಾವರ ತಾಲ್ಲೂಕಿನ ಅಪ್ಪರಕೊಂಡದಲ್ಲು, ಕುಮಟ ತಾಲ್ಲೂಕಿನ ಯಾಣದಲ್ಲೂ ಕಬ್ಬಿಣದ ಅದಿರಿನ ನಿಕ್ಷೇಪವಿದೆ. ಸಹ್ಯಾದ್ರಿ ಪಾದಭಾಗಗಳಲ್ಲಿ ಕಬ್ಬಿಣವಲ್ಲದೆ ಇತರ ಲೋಹನಿಕ್ಷೇಪಗಳುಂಟು. ಯಾಣ ಮತ್ತಿತರ ಕಡೆಗಳಲ್ಲಿ ಸುಣ್ಣದಕಲ್ಲು ದೊರೆಯುತ್ತದೆ. ಹಲವೆಡೆ ಸ್ವರ್ಣಮಕ್ಕಿಕೆ ಬಿಳಿ ಜೇಡಿ ಇವೆ. ಬತ್ತ, ತೆಂಗು, ಕಬ್ಬು, ಅಡಕೆ, ಮೆಣಸು, ಏಲಕ್ಕಿ, ಬಾಳೆ ಮುಖ್ಯವಾದ ಬೆಳೆಗಳು. ಇವಲ್ಲದೆ ಜಿಲ್ಲೆಯಲ್ಲಿ ಗೋಡಂಬಿ, ಮಾವು, ಹುಣಸೆ, ನಿಂಬೆ, ಅನಾನಸು, ಹಲಸು, ಪಪ್ಪಾಯಿ, ಬಟಾಟೆ, ಬದನೆ, ಕಲ್ಲಂಗಡಿ, ಹೈಬ್ರಿಡ್‌ಜೋಳ, ರಾಗಿ, ಶೇಂಗಾ ಇತ್ಯಾದಿಗಳನ್ನು ಬೆಳೆಯುತ್ತಾರೆ. ಭತ್ತ 85924ಹೆ, ಕಬ್ಬು 1356ಹೆ, ಅಡಕೆ 11160ಹೆ, ತೆಂಗು 5907ಹೆ, ಗೋಡಂಬಿ 1827ಹೆ, ಮೆಣಸು 135ಹೆ, ಮಾವು 1140ಹೆ, ಬಾಳೆ 1320ಹೆ, ಏಲಕ್ಕಿ 369ಹೆ, ಅನಾನಸ್ 315ಹೆ, ಹಲಸು 206ಹೆ, ಪಪ್ಪಾಯಿ 114.9ಹೆ, ಹತ್ತಿ 14823ಹೆನಲ್ಲಿ ಬೆಳೆಸುತ್ತಾರೆ. ಅಡಕೆಯ ತೋಟದಲ್ಲಿ ಏಲಕ್ಕಿ, ಕಾಳುಮೆಣಸು, ಬಾಳೆ ಬೆಳೆಸುತ್ತಾರೆ. ಗದ್ದೆಯಲ್ಲಿ ರಾಗಿ, ಕಡಲೆ, ತೊಗರಿ ಮೊದಲಾದ ಧಾನ್ಯಗಳನ್ನೂ ಬೆಳೆಯುತ್ತಾರೆ.

ಈ ಜಿಲ್ಲೆಯಲ್ಲಿ ಮೀನುಗಾರಿಕೆ ಒಂದು ಮುಖ್ಯ ಉದ್ಯೋಗ. ಒಂದು ಕಾಲದಲ್ಲಿ ಹರಿಕಾಂತ, ತಾಂಡೇಲ, ಖಾರ್ವಿ, ಗಾಬಿತ, ಅಂಬಿಗ, ಮೊಗೇರ, ಆಗೇರ, ಕ್ರಿಶ್ಚಿಯನ್ ದಾಲಜಿಗಳಷ್ಟೇ ಈ ವೃತ್ತಿಯನ್ನವಲಂಬಿಸಿದ್ದರೆ ಇತ್ತೀಚೆಗೆ ಸಾಮಾನ್ಯವಾಗಿ ಎಲ್ಲ ಜಾತಿಯವರೂ ಮೀನು ಉದ್ಯಮದಲ್ಲಿ ತೊಡಗಿಕೊಂಡಿದ್ದಾರೆ. ಸುಮಾರು 54,763 ಜನ ಈ ವೃತ್ತಿಯಲ್ಲಿದ್ದಾರೆ. ಇವರು ಕರಾವಳಿ ಪ್ರದೇಶದ 118 ಹಳ್ಳಿಗಳಲ್ಲಿದ್ದಾರೆ. ಸಮುದ್ರದಿಂದ ಮೀನು ಹಿಡಿಯುವ ಕೇಂದ್ರಗಳೆಂದರೆ ಅರ್ಗಾ, ಭಟ್ಕಳ, ಬಿಣಗಾ, ಚೆಂಡಿಯೆ, ಗಂಗಾವಳಿ, ಕಾರವಾರ, ಹೊನ್ನಾವರ, ಖಾರವಿ, ಕೇಣಿ, ಕೋಡಾರ್, ಕುಮಟ, ಮಾಜಾಳಿ, ಮಂಕಿ, ಮುರ್ಡೇಶ್ವರ, ಶಿರಾಲಿ, ತದಡಿ. ಸಾಗರ ಮೀನುಗಾರಿಕೆಯಲ್ಲಿ 30094 ಟನ್ ಹಿಡಿದರೆ, ಸಿಹಿನೀರಿನಲ್ಲಿ 249ಟನ್ ಮೀನು ಹಿಡಿಯಲಾಗಿದೆ (2001).

ಮರ ಕೊಯ್ಯುವ ಗಿರಣಿ, ಹೆಂಚಿನ ಕಾರ್ಖಾನೆ, ನೇಯ್ಗೆ, ಮೇಣಬತ್ತಿಯ ಉತ್ಪಾದನೆ, ಸಾಬೂನು ತಯಾರಿಕೆ, ವಾಹನ ದುರಸ್ತಿ, ಮುದ್ರಣ, ಕೆತ್ತನೆಯ ಕೆಲಸ, ಚಿನ್ನ ಬೆಳ್ಳಿಯ ಕೆಲಸ, ಬುಟ್ಟಿ, ಚಾಪೆ ಹೆಣೆಯುವಿಕೆ, ಬೆತ್ತದ ಹೆಣಿಗೆ, ಜೇನು ಸಾಕಣೆ, ಕೋಳಿ ಕುರಿ ಸಾಕಣೆ, ರೇಷ್ಮೆ, ಚರ್ಮದ ಉದ್ಯೋಗ, ವ್ಯಾಪಾರ, ಏಜೆನ್ಸಿಗಳಲ್ಲಿ ಜನ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಜಿಲ್ಲೆಯಲ್ಲಿ ಮಂಜುಗೆಡ್ಡೆ ತಯಾರಿಕಾ ಕಾರ್ಖಾನೆಗಳು 52 ಇವೆ. ದಾಂಡೇಲಿಯಲ್ಲಿಯೂ ಕಾಗದದ ಕಾರ್ಖಾನೆ ದೊಡ್ಡ ಉದ್ದಿಮೆ. ಅಲ್ಲದೆ ಪ್ಲೈವುಡ್, ಫೆರೋಮ್ಯಾಂಗನೀಸ್ ಉದ್ದಿಮೆಗಳೂ ಇವೆ. ಕಾರವಾರ, ಬೆಲೆಕೇರಿ, ತದಡಿ, ಕುಮಟ, ಹೊನ್ನಾವರ, ಭಟ್ಕಳ-ಇವು ಮುಖ್ಯ ಬಂದರುಗಳು.

ಕಾರವಾರ ಸರ್ವಋತು ಬಂದರನ್ನು ಬೃಹತ್ತಾಗಿ ಕಟ್ಟಿದ್ದಾರೆ. ಬಳ್ಳಾರಿ ಪ್ರದೇಶದ ಕಬ್ಬಿಣದ ಅದುರನ್ನು ಸಾಗಿಸಲು ಕಾರವಾರ ಬಂದರು ಉಪಯುಕ್ತವಾಗುತ್ತದೆ.



ಸಹಸ್ರಲಿಂಗ

ಜಿಲ್ಲೆಯಲ್ಲಿ 329ಕಿಮೀಗಳ ರಾಷ್ಟ್ರೀಯ ಹೆದ್ದಾರಿ, 672ಕಿಮೀಗಳ ರಾಜ್ಯ ಹೆದ್ದಾರಿ ಮಾರ್ಗಗಳಿವೆ. ಜಿಲ್ಲಾ ಮುಖ್ಯ ರಸ್ತೆಗಳು 795ಕಿಮೀ. 24 ಭಾರೀ ಸೇತುವೆಗಳಿವೆ. ಪಶ್ಚಿಮ ಕರಾವಳಿಯ ಹೆದ್ದಾರಿ ದಕ್ಷಿಣಕ್ಕೆ ಕನ್ಯಾಕುಮಾರಿಯವರೆಗೆ, ಉತ್ತರಕ್ಕೆ ಕಾಶ್ಮೀರದವರೆಗೆ ಸಂಪರ್ಕ ಕಲ್ಪಿಸುತ್ತದೆ. ಕಾರವಾರದಿಂದ ಹುಬ್ಬಳ್ಳಿಯ ಕಡೆಗೆ ಹೋಗುವ ಹೆದ್ದಾರಿ ಅನೇಕ ನಗರಗಳ ಸಂಪರ್ಕ ಕಲ್ಪಿಸುತ್ತದೆ. ನಗರಗಳೊಂದಿಗೆ ಹಳ್ಳಿಗಳ ಸಂಪರ್ಕವನ್ನು ಕಲ್ಪಿಸುವ ರಸ್ತೆಗಳೂ ಇವೆ. ಘಟ್ಟದ ಮೇಲೆ ಸಿದ್ಧಾಪುರದಿಂದ ಹುಬ್ಬಳ್ಳಿಗೆ, ಕಾರವಾರಕ್ಕೆ, ದಾಂಡೆಲಿಗೆ, ಯಲ್ಲಾಪುರಕ್ಕೆ ಸಂಪರ್ಕ ದೊರಕಿಸುವ ರಸ್ತೆಗಳಿವೆ. ಇತ್ತೀಚೆಗೆ ಕೊಚ್ಚಿ ಮುಂಬೈಗಳಿಗೆ ಹೋಗುವ ಕೊಂಕಣ ರೈಲ್ವೆ ಈ ಜಿಲ್ಲೆಯ ಮೂಲಕ ಹೋಗುತ್ತದೆ. ಜಿಲ್ಲೆಯಲ್ಲಿ 179ಕಿಮೀ ಉದ್ದದ ರೈಲು ಮಾರ್ಗವಿದೆ. 15 ರೈಲು ನಿಲ್ದಾಣಗಳಿವೆ. ಇವುಗಳಲ್ಲಿ

ಮುಖ್ಯವಾದವು-ಭಟ್ಕಳ, ಹೊನ್ನಾವರ, ಕುಮಟ, ಗೋಕರ್ಣ, ಅಂಕೋಲಾ, ಕಾರವಾರ. ಇದಲ್ಲದೆ ಜಲಮಾರ್ಗದ ಸಂಪರ್ಕವೂ ಇದೆ.



ಜೈನಬಸದಿ, ಹಾಡುವಳ್ಳಿ

ಜಿಲ್ಲೆಯ ಒಟ್ಟು ಜನಸಂಖ್ಯೆ 13,52,299. ಇದರಲ್ಲಿ 9,65,345 ಜನ ಹಳ್ಳಿಯಲ್ಲಿ ವಾಸಿಸುತ್ತಾರೆ. ಇವರಲ್ಲಿ 4,90,001 ಗಂಡಸರು, 4,75,344 ಹೆಂಗಸರು. ಈ ಜಿಲ್ಲೆಯಲ್ಲಿ ಹಿಂದುಗಳೂ ಮುಸಲ್ಮಾನರೂ ಕ್ರೈಸ್ತರೂ ಇದ್ದಾರೆ. ಬಹುಸಂಖ್ಯಾತರು ಹಿಂದುಗಳು. ಈ ಜಿಲ್ಲೆಯಲ್ಲಿ ಬೌದ್ಧ, ಜೈನ ಮತಗಳೂ ಪ್ರಚಾರವಾದುವು. 10-12ನೆಯ ಶತಮಾನಗಳಲ್ಲಿ ನಾಥಪಂಥವೂ 16-18ನೆಯ ಶತಮಾನಗಳಲ್ಲಿ ವೀರಶೈವ ಪಂಥದ ಪ್ರಚಾರವೂ ನಡೆದವು. ಜಿಲ್ಲೆಯಲ್ಲಿ ಕ್ರೈಸ್ತ ಮಂದಿರಗಳೂ ಮಸೀದಿಗಳೂ ಸ್ಮಾರ್ತ, ಜೈನ, ವೀರಶೈವ, ವೈಷ್ಣವ ಮತಗಳೂ ಇವೆ. ಹಿಂದುಧರ್ಮದ ಹಲವು ಪಂಗಡಗಳಿಗೆ ಸೇರಿದ ನೂರಾರು ದೇವಾಲಯಗಳು ಇವೆ. ನಾಥಪಂಥದ ಅವಶೇಷಗಳು ಅಂಕೋಲಾ, ಬೆಳಂಬರ್, ಹೊನ್ನೆಬೈಲ, ಅಘುನಾಶಿನಿ, ಲಿಂಗೆ, ಮಾಜಾಳಿ, ಯಾಣ, ಕವಳೆಯಲ್ಲಿವೆ.

**ಸಹಕಾರ :** 1904ರಲ್ಲಿ ಸಹಕಾರಿಸಂಘಗಳ ನೋಂದಣಿ ಕಾಯಿದೆ ಜಾರಿಗೆ ಬಂದಿತು. 1912ರಲ್ಲಿ ಅದಕ್ಕೆ ತಿದ್ದುಪಡಿ ಬಂತು. 1912ರ ಕಾಯಿದೆಯಂತೆ ಕೃಷಿ, ಕೃಷಿಯೇತರ ಸಾಲ ಸಂಘಗಳು ಅಸ್ತಿತ್ವಕ್ಕೆ ಬಂದುವು. 1905ರಲ್ಲಿ ಶಿರಸಿ ಗ್ರಾಮೀಣ ಸಹಕಾರಿ ಸಂಘ, 1912ರಲ್ಲಿ ಹಳಿಯಾಳದ ಸಂಘ, 1913ರಲ್ಲಿ ಪಾಳಾದಲ್ಲಿ ಕೃಷೀತರ ಸಾಲ ಸಂಘ ಪ್ರಾರಂಭವಾದುವು. 1911ರಲ್ಲಿ ಶಿರಸಿ ಚರ್ಮಕಾರರ ಪರಸ್ಪರ ಪತ್ತಿನ ಸಂಘ, 1917ರಲ್ಲಿ ಹೊನ್ನಾವರ ಹವ್ಯಕ ಕೊ-ಆಪರೇಟಿವ್ ಸೊಸೈಟಿ, 1918ರಲ್ಲಿ ಕಾರವಾರ ಕೆನರಾ ಕೆಥೊಲಿಕ್ ಕ್ರೆಡಿಟ್ ಸೊಸೈಟಿ, 1915ರಲ್ಲಿ ಮೀನುಗಾರರ ಸಹಕಾರಿ ಸಂಘವಾದ ಹರಿತಂತ್ರ ಖಾರವಿ ಫಿಷರೀಸ್ ಸೊಸೈಟಿ ಕಾರವಾರದಲ್ಲಿ ಪ್ರಾರಂಭವಾದವು.

1912ರಲ್ಲಿ ಕಾರವಾರ ಮತ್ತು ಕುಮಟ ಪಟ್ಟಣ ಬ್ಯಾಂಕುಗಳು ಮತ್ತು ಶಿರಸಿ ಅರ್ಬನ್‌ಬ್ಯಾಂಕ್ ಆರಂಭವಾದುವು. 1920ರಲ್ಲಿ ಜಿಲ್ಲಾ ಮಧ್ಯವರ್ತಿ ಸಹಕಾರಿಬ್ಯಾಂಕ್, 1922ರಲ್ಲಿ ಕುಮಟಾದಲ್ಲಿ ತೋಟಗಾರ್ಸ್ ಕೊ-ಅಪ್ ಸೇಲ್ಸ ಸೊಸೈಟಿ, ಅರೆಕಾನೆಟ್ ಕೊ-ಆಪ್-ಸೊಸೈಟಿ, ಕಾರವಾರದಲ್ಲಿ 1935ರಲ್ಲಿ ಆರಂಭವಾದ ಭೂ ಅಡಮಾನಬ್ಯಾಂಕ್, 1913ರಲ್ಲಿ ಸ್ಥಾಪನೆಯಾದ ಶಿರಸಿ ತೋಟಗಾರ್ಸ್ ಸಹಕಾರಿ ಖರೀದಿ ವಿತರಣ ಮತ್ತು ಸಾಲ ಸಂಘ 1962ರ ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ಆಗಿ ಪರಿವರ್ತನೆಯಾಯಿತು. 1950ರಲ್ಲಿ ತಾಲ್ಲೂಕು ಕೃಷಿ ಹುಟ್ಟುವಳಿ ಮಾರಾಟ ಸಂಘಗಳು, ಕೂಲಿಕಾರರ ಸಹಕಾರಿ ಸಂಘಗಳು, ಮಹಿಳಾ ಸಹಕಾರಿ ಸಂಘಗಳು ಹುಟ್ಟಿದ್ದುವು. ಈಗ ಎಲ್ಲ ತಾಲ್ಲೂಕುಗಳಲ್ಲೂ ಭೂ ಅಭಿವೃದ್ಧಿ ಬ್ಯಾಂಕುಗಳು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು, ಕೃಷಿ ಹುಟ್ಟುವಳಿ ಮಾರಾಟ ಸಂಘಗಳು, ನೌಕರರ ಸಹಕಾರಿ ಸಂಘಗಳು, ಸಂಸ್ಕರಣ ಸಹಕಾರಿ ಸಂಘಗಳು, ಮೀನುಗಾರಿಕೆ ಸಹಕಾರಿ ಸಂಘಗಳು, ಸ್ಥಳೀಯ ಅರ್ಬನ ಬ್ಯಾಂಕುಗಳು, ಚೇತನಾ ಬ್ಯಾಂಕುಗಳು ಕಾರ್ಯ ನಿರ್ವಹಿಸುತ್ತವೆ. ಇವಲ್ಲದೆ ಕೂಲಿಕಾರರ ಅನೇಕ ಸಂಘಗಳಿವೆ. ಜಿಲ್ಲೆಯಲ್ಲಿ 160 ವ್ಯವಸಾಯ ಸಹಕಾರಿ ಸಂಘಗಳೂ 26 ಗೃಹ ನಿರ್ಮಾಣ ಸಹಕಾರ ಸಂಘಗಳೂ 9 ವ್ಯವಸಾಯೋತ್ಪನ್ನ ಮಾರಾಟ ಸಂಘಗಳೂ 32 ನಿಯಂತ್ರಿತ ಮಾರುಕಟ್ಟೆಗಳಿವೆ. ಹಾಲು ಉತ್ಪಾದಕರ ಮಾರಾಟ ಸಂಘಗಳು 138.

**ಉದ್ದಿಮೆಗಳು :** ಎಂಜಿನಿಯರಿಂಗ್ ಉದ್ಯಮ 14, ರಾಸಾಯನಿಕ ಕಾರ್ಖಾನೆಗಳು 9, ಬಟ್ಟೆ ಕಾರ್ಖಾನೆ 2, ಇತರೆ ಸಣ್ಣ ಪ್ರಮಾಣದ ಕಾರ್ಖಾನೆಗಳು 62, ಈ ಕಾರ್ಖಾನೆಗಳಲ್ಲಿ ಉದ್ಯೋಗಿಗಳು 1846. ಜಿಲ್ಲೆಯಲ್ಲಿ ಕೆಲವು ಬೃಹತ್ ಮತ್ತು ಮಧ್ಯಮ ಗಾತ್ರದ ಉದ್ದಿಮೆಗಳಿವೆ. ವೆಸ್ಟ್‌ಕೋಸ್ಟ ಪೇಪರ್ ಮಿಲ್ಸ್, ದಾಂಡೇಲಿಯ ಇಂಡಿಯನ್ ಪ್ಲೈವುಡ್ ಮ್ಯಾನ್ಯುಫ್ಯಾಕ್ಚರಿಂಗ್ ಕಂಪನಿ, ಜೈಹಿಂದ್ ಸಾಮೀಲ್, ಬಳ್ಳಾಪುರ ಇಂಡಸ್ಟ್ರಿಸ್ ಲಿ, ಬಿಣಗಾದ, ದಾಂಡೇಲಿ ಫೆರೊ ಅಲೋಯ್ಸ್ ಪ್ರೈ.ಲಿ.



ಸಾತೋಡ್ಡಿ ಜಲಪಾತ

ಇವು ಮುಖ್ಯ ಉದ್ದಿಮೆಗಳು. ಇವಲ್ಲದೆ ಸಣ್ಣ ಕೈಗಾರಿಕಾ ಘಟಕಗಳು, ಖಾದಿ ಗ್ರಾಮೋದ್ಯೋಗ ಕರಕುಶಲ ಘಟಕಗಳು ಹಾಗೂ ಕೈಮಗ್ಗದ ಘಟಕಗಳು ಜಿಲ್ಲೆಯಲ್ಲಿವೆ. ಹೆಂಚು ಕಾರ್ಖಾನೆಗಳಿವೆ. ಮೀನುಗಾರಿಕೆ ಘಟಕಗಳು, ದೋಣಿ ಕಟ್ಟುವ ಘಟಕಗಳು, ಆಹಾರ ಸಂಸ್ಕರಣ ಘಟಕಗಳು, ರಾಸಾಯನಿಕ ಘಟಕಗಳು ಚರ್ಮ ಮತ್ತು ರಬ್ಬರ್ ಘಟಕಗಳು, ಗಂಧ ಚಂದನ ಕೆತ್ತನೆಯ ಘಟಕಗಳು, ಮುದ್ರಣ ಘಟಕಗಳು, ನೂಲುವ ನೇಯುವ ಘಟಕಗಳು, ಜೇನು ಸಾಕಣೆ, ಬೆತ್ತ ಬಿದಿರುಗಳಿಂದ ವಸ್ತುಗಳನ್ನು ತಯಾರಿಸುವ ಘಟಕಗಳು, ಎಣ್ಣೆ ತಯಾರಿಕಾ

ಘಟಕಗಳು, ಕುಂಬಾರಿಕೆ ಮುಂತಾದ ಅನೇಕ ಉದ್ಯಮಗಳಿವೆ. ಇವುಗಳಲ್ಲಿ ಕೆಲವು ಕುಟೀರ ಕೈಗಾರಿಕೆಗಳು.

**ಶಿಕ್ಷಣ :** ಜಿಲ್ಲೆಯ ಸಾಕ್ಷರತಾ ಪ್ರಮಾಣ 76.59, ಪುರುಷರು 84.48, ಮಹಿಳೆಯರು 68.48 ಜಿಲ್ಲೆಯಲ್ಲಿ ಮೊದಲು ಜೈನ, ವೀರಶೈವ, ಬ್ರಾಹ್ಮಣ ಸಂಪ್ರದಾಯದ ಪಾಠಶಾಲೆಗಳು ನಡೆಯುತ್ತಿದ್ದವು, ಅದಕ್ಕೆ ಅನೇಕ ಅಗ್ರಹಾರಗಳು ಪ್ರಚಲಿತವಿದ್ದವು. ಅವುಗಳೆಲ್ಲ ಬ್ರಿಟಿಷರ ಆಳಿಕೆಯಲ್ಲಿ ಕೊನೆಗೊಳ್ಳುತ್ತ ಬಂದು 1866 ಸುಮಾರಿಗೆ ಸರ್ಕಾರಿ ಶಾಲೆಗಳಲ್ಲಿ 830 ವಿದ್ಯಾರ್ಥಿಗಳು ಪ್ರಾಥಮಿಕ ಹಂತದಲ್ಲಿ ಓದುತ್ತಿದ್ದರು. ಇವುಗಳಲ್ಲಿ ಹಳಿಯಾಳ, ಕುಮಟಾ, ಶಿರಸಿಗಳಲ್ಲಿ ಆ್ಯಂಗ್ಲೊವರ್ನಾಕ್ಯುಲರ್ ಶಾಲೆಗಳಿದ್ದವು. 1866ರಲ್ಲಿ ಒಂದು ಉರ್ದು ಶಾಲೆ ಹಳಿಯಾಳದಲ್ಲಿ ಆರಂಭವಾಯಿತು. 1880ರಲ್ಲಿ 96 ಶಾಲೆಗಳಿದ್ದುವು, 4979 ವಿದ್ಯಾರ್ಥಿಗಳಿದ್ದರು. 1890ರಲ್ಲಿ 206 ಶಾಲೆಗಳಲ್ಲಿ 12126 ವಿದ್ಯಾರ್ಥಿಗಳು ವ್ಯಾಸಂಗನಿರತರಾಗಿದ್ದರು. 1900ರಲ್ಲಿ 183 ಶಾಲೆಯಲ್ಲಿ 10204 ವಿದ್ಯಾರ್ಥಿಗಳಿದ್ದರು. 1910ರಲ್ಲಿ 287 ಶಾಲೆಗಳಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ 15571.

1864ರಲ್ಲಿ ಕಾರವಾರದಲ್ಲಿ ಮೊದಲ ಹೈಸ್ಕೂಲು ಪ್ರಾರಂಭವಾಯಿತು. 1935-36ರಲ್ಲಿ 853 ಪ್ರಾಥಮಿಕ ಶಾಲೆಗಳಿದ್ದುವು. 23,465 ಮಂದಿ ಶಿಕ್ಷಣ ಪಡೆಯುತ್ತಿದ್ದರು. ಇವರಲ್ಲಿ 5776 ವಿದ್ಯಾರ್ಥಿನಿಯರು. ಆ ವರ್ಷದಿಂದ ಪರಿಶಿಷ್ಟ ಜಾತಿಯ, ಮುಸ್ಲಿಂ ಸಮುದಾಯದ ವಿದ್ಯಾರ್ಥಿಗಳನ್ನು ಶಾಲೆಗೆ ಸೇರಿಸಲು ವಿಶೇಷ ಗಮನ ಕೊಡಲಾಯಿತು. ಜಿಲ್ಲಾ ಸ್ಕೂಲ್ ಬೋರ್ಡ್ 1944ರಲ್ಲಿ ಆರಂಭವಾಗಿ ಎಲ್ಲ ಶಾಲೆಗಳು ಸ್ಕೂಲ್ ಬೋರ್ಡ್ ಅಧೀನಕ್ಕೆ ಬಂದು ಶಿಕ್ಷಣದಲ್ಲಿ ಒಂದು ಬಗೆಯ ಶಿಸ್ತು ಬಂತು. ಸ್ಕೂಲ್‌ಬೋರ್ಡಿನಿಂದ ನಿಯಂತ್ರಣಗೊಂಡ ಶಿಕ್ಷಣ ಇಲಾಖೆಯ ಖರ್ಚು ಪೂರೈಸಲು ಸ್ಥಳೀಯ ಆಡಳಿತಗಳು ವಿದ್ಯಾಕರ ಸಂಗ್ರಹಿಸತೊಡಗಿದುವು.



ಶ್ರೀಮಾರಿಕಾಂಬ ದೇವಾಲಯ, ಶಿರಸಿ

ಕಡ್ಡಾಯ ಪ್ರಾಥಮಿಕ ಶಿಕ್ಷಣ ಕಾನೂನು (1918) ಜಾರಿಗೆ ಬಂದಾಗ ಹಳಿಯಾಳ ಮತ್ತು ಹೊನ್ನಾವರ ಪುರಸಭೆಗಳು ಈ ಯೋಜನೆಯನ್ನು ಜಾರಿಗೆ ತಂದುವು. 1947ರಲ್ಲಿ ಮುಂಬಯಿ ಪ್ರಾಥಮಿಕ ಶಿಕ್ಷಣ ಅಧಿನಿಯಮದಂತೆ 7-11 ವರ್ಷದ ಮಕ್ಕಳು ಶಾಲೆಗೆ ಹೋಗುವುದು ಕಡ್ಡಾಯವಾಯಿತು. ರಾಜ್ಯ ಪುನರ್ರಚನೆಯ ಕಾಲದಲ್ಲಿ 969 ಪ್ರಾಥಮಿಕ ಶಾಲೆಗಳೂ 71779 ವಿದ್ಯಾರ್ಥಿಗಳೂ 1759 ಶಿಕ್ಷಕರೂ ಇದ್ದರು. 1900ರ ವೇಳೆಗೆ ಘಟ್ಟದ ಕೆಳಗೆ ಐದು ಪ್ರೌಢಶಾಲೆಗಳೂ ಘಟ್ಟದ ಮೇಲೆ ಶಿರಸಿಯಲ್ಲಿ ಒಂದೇ ಒಂದು ಪ್ರೌಢಶಾಲೆಯೂ ಇದ್ದವು. 1947ರ ವರೆಗೂ ಶಿಕ್ಷಣ ಒಂದು ತೀವ್ರ ಆಸಕ್ತಿಯ ವಿಷಯವಾಗಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಅದುವರೆಗೆ ಜಿಲ್ಲೆಯಲ್ಲಿ ಪದವಿಯ ಮಟ್ಟದ ಉನ್ನತ ಶಿಕ್ಷಣದ ಸೌಲಭ್ಯಗಳಿರಲಿಲ್ಲ. ಸರ್ಕಾರದಿಂದ ಎಲ್ಲವನ್ನು ಅಪೇಕ್ಷಿಸುವುದು ಸಾಧ್ಯವಿಲ್ಲವೆಂದು ಮನಗಂಡ ಸಾರ್ವಜನಿಕರು 1947ರಲ್ಲಿ ಕುಮಟದಲ್ಲಿ ಕೆನರಾ ಎಜ್ಯುಕೇಶನ್ ಸೊಸೈಟಿಯನ್ನು ಆರಂಭಿಸಿದರು. 1919ರಲ್ಲಿ ಭಟ್ಕಳದಲ್ಲಿ ಆರಂಭವಾದ ಅಂಜುಮನ್ ಎಜ್ಯುಕೇಶನ್ ಟ್ರಸ್ಟ್, 1952ರಲ್ಲಿ ಸಿದ್ದಾಪುರದಲ್ಲಿ ಸ್ಥಾಪಿಸಿದ ಸಹಕಾರಿ ಶಿಕ್ಷಣ ಪ್ರಸಾರ ಸಮಿತಿ, 1954ರಲ್ಲಿ ಯಲ್ಲಾಪುರದಲ್ಲಿ ಆರಂಭವಾದ ಶಿವಾಜಿ ಎಜ್ಯುಕೇಶನ್ ಸೊಸೈಟಿ, 1961ರಲ್ಲಿ ಶಿರಸಿಯಲ್ಲಿ ಆರಂಭಿಸಲಾದ ಮಾಡರ್ನ್ ಎಜ್ಯುಕೇಶನ್ ಸೊಸೈಟಿ, 1962ರಲ್ಲಿ ಅಂಕೋಲೆಯಲ್ಲಿ ಆರಂಭಿಸಲಾದ ನೂತನ ಶಿಕ್ಷಣ ಸಭಾ ಟ್ರಸ್ಟ್, 1970ರಲ್ಲಿ ದಾಂಡೇಲಿಯಲ್ಲಿ ಆರಂಭಿಸಿದ ದಾಂಡೇಲಿ ಎಜ್ಯುಕೇಶನ್ ಸೊಸೈಟಿ, 1964ರಲ್ಲಿ ಹೊನ್ನಾವರದಲ್ಲಿ ಮಹಾವಿದ್ಯಾಲಯ ಸ್ಥಾಪಿಸಿದ ಮಲ್ನಾಡ ಪ್ರೊಗ್ರೆಸ್ಸಿವ್ ಎಜ್ಯುಕೇಶನ್ ಸೊಸೈಟಿ, 1953ರಲ್ಲಿ ದಿನಕರದೇಸಾಯಿ ಧುರೀಣತ್ವದಲ್ಲಿ ಸ್ಥಾಪಿತವಾದ ಕೆನರಾ ವೆಲ್‌ಫೇರ್ ಟ್ರಸ್ಟ್ ಮೊದಲಾದ ಅನೇಕ ಶಿಕ್ಷಣ ಸಂಸ್ಥೆಗಳು ಜಿಲ್ಲೆಯ ಶೈಕ್ಷಣಿಕ ಪ್ರಗತಿಯಲ್ಲಿ ಪ್ರಮುಖ ಪಾತ್ರ ವಹಿಸಿದುವು.



ಕವಡಿ ಕೆರೆ

1949ರಲ್ಲಿ ಕುಮಟದಲ್ಲಿ ಕೆನರಾ ಕಾಲೇಜು ಆರಂಭವಾಗಿ ಅನಂತರ ಅದು ಎ.ವಿ.ಬಾಳಿಗಾ ಕಾಲೇಜ್ ಎಂದು ನಾಮಕರಣ ಗೊಂಡಿತು. 1961ರಲ್ಲಿ ಕಾರವಾರದಲ್ಲಿ ಕಾಲೇಜು ಆರಂಭವಾಯಿತು. ಮುಂದಿನ ಹದಿನೈದು ವರ್ಷಗಳಲ್ಲಿ 13 ಪದವಿ ಮಹಾವಿದ್ಯಾಲಯಗಳು, 3 ವೃತ್ತಿಪರ ಮಹಾವಿದ್ಯಾಲಯಗಳು, 3 ಬಿ.ಇಡಿ. ಮಹಾ ವಿದ್ಯಾಲಯಗಳು, ಒಂದು ಕಾನೂನು ಮಹಾವಿದ್ಯಾಲಯ ಆರಂಭವಾದವು. 1984-85ರಿಂದ ಶಿರಸಿ ಕುಮಟ ಮತ್ತು ದಾಂಡೇಲಿಯಲ್ಲಿ ಪಾಲಿಟೆಕ್ನಿಕ್‌ಗಳು ನಡೆಯುತ್ತಿವೆ. 1958ರಲ್ಲಿ ಕಾರವಾರದಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು ಆರಂಭವಾಯಿತು. ಈಗ ಈ ಜಿಲ್ಲೆಯ ಭಟ್ಕಳದಲ್ಲಿ ಒಂದು ಎಂಜಿನಿಯರಿಂಗ್ ಕಾಲೇಜ್ ಇದೆ. ಸಿದ್ದಾಪುರದಲ್ಲೊಂದು ಆಯುರ್ವೇದ ಮಹಾವಿದ್ಯಾಲಯವಿದೆ. ಶಿರಸಿಯಲ್ಲಿ ಅರಣ್ಯ ವಿಜ್ಞಾನ ಕಾಲೇಜು ಇದೆ.

1937ರಲ್ಲಿ ಮುಂಬಯಿ ಸರ್ಕಾರದಿಂದ ಅನುದಾನಿತವಾದ ವಯಸ್ಕರ ಶಿಕ್ಷಣ ಸಮಿತಿಯ ರಚನೆಯಾಗಿತ್ತು. 1947-56ರ ಅವಧಿಯಲ್ಲಿ ಸಮುದಾಯ ಶಿಕ್ಷಣಕ್ಕೆ ಆದ್ಯತೆ ನೀಡಿದ್ದರಿಂದ ನಾಲ್ಕು ತಿಂಗಳ ಮತ್ತು ಆರು ತಿಂಗಳ ಅವಧಿಗಳ ಸಾಕ್ಷರತಾ ವರ್ಗಗಳು ಆರಂಭವಾದವು. 1980ರಲ್ಲಿ ಶಿರಸಿಯಲ್ಲಿ ವಯಸ್ಕರ ಶಿಕ್ಷಣಕ್ಕೆ ಯೋಜನಾ ಕಚೇರಿ ತೆರೆದ ಅನಂತರ ವಯಸ್ಕರ ಶಿಕ್ಷಣದತ್ತ ಹೆಚ್ಚಿನ ಗಮನ ಹರಿಯಿತು. ಈಗ 150 ವಯಸ್ಕರ ಶಿಕ್ಷಣ ಕೇಂದ್ರಗಳೂ 150 ಸಾಕ್ಷರೋತ್ತರ ತರಬೇತಿ ಕೇಂದ್ರಗಳೂ ಕೆಲಸ ಮಾಡುತ್ತಿವೆ. ಕೇಂದ್ರ ಸರ್ಕಾರದ ಯೋಜನೆಯಡಿ ನವೋದಯ ಶಾಲೆಯೂ ನಡೆಯುತ್ತಿದೆ.

ವಿದ್ಯಾರ್ಥಿಗಳಿಗೆ ವೃತ್ತಿ ಮಾರ್ಗದರ್ಶನ ಸಿಗುವ ನಿಟ್ಟಿನಲ್ಲಿ ಶಿಕ್ಷಣ ಖಾತೆ 1981-82ರಲ್ಲಿ ಪ್ರೌಢಶಾಲೆಯ 65 ಶಿಕ್ಷಕರಿಗೆ ತರಬೇತು ನೀಡಿ ಅವರನ್ನು ಕೆರಿಯರ್ ಮಾಸ್ಟರ್ಸ್ ಎಂದು ಕರೆದುದಲ್ಲದೆ ಬಿ.ಎಡ್. ವಿದ್ಯಾರ್ಥಿಗಳಿಗೂ ಈ ವಿಷಯ ಪರಿಚಯಿಸಿತು. ಜಿಲ್ಲೆಯಲ್ಲಿ 2164 ಪ್ರಾಥಮಿಕ ಶಾಲೆಗಳು, 240 ಪ್ರೌಢಶಾಲೆಗಳೂ 48 ಪದವಿಪೂರ್ವ ಕಾಲೇಜುಗಳೂ 24 ಸಾಮಾನ್ಯ ಶಿಕ್ಷಣ ಕಾಲೇಜುಗಳು, 6 ಪಾಲಿಟೆಕ್ನಿಕ್‌ಗಳು ಇವೆ (2000). ಜಿಲ್ಲೆಯಲ್ಲಿ 13 ಅಲೋಪತಿ ಆಸ್ಪತ್ರೆಗಳು, 2 ಭಾರತೀಯ ವೈದ್ಯ ಪದ್ಧತಿಯ ಆಸ್ಪತ್ರೆಗಳು, 58 ಪ್ರಾಥಮಿಕ ಆರೋಗ್ಯ ಕೇಂದ್ರಗಳು, 64 ಕುಟುಂಬ ಕಲ್ಯಾಣ ಕೇಂದ್ರಗಳು ಇವೆ.

**ಇತಿಹಾಸ :** ಇಲ್ಲಿನ ಇತಿಹಾಸ ಮೌರ್ಯರ ಕಾಲದಿಂದ ಪ್ರಾರಂಭವಾಗುತ್ತದೆ (ಕ್ರಿ.ಪೂ.4-3ನೆಯ ಶತಮಾನ). ಈ ಪ್ರದೇಶ ಮೌರ್ಯ ಸಾಮ್ರಾಜ್ಯದಲ್ಲಿತ್ತೆಂದೂ ವನವಾಸಿ ಅಥವಾ ಇಂದಿನ ಬನವಾಸಿ ಮುಖ್ಯ ಸ್ಥಳವಾಗಿತ್ತೆಂದೂ ಈ ಪ್ರದೇಶಕ್ಕೆ ಬೌದ್ಧ ಭಿಕ್ಷುಗಳನ್ನು ಧರ್ಮಪ್ರಸಾರಕ್ಕಾಗಿ ಅಶೋಕನ ಕಾಲದಲ್ಲಿ ಕಳಿಸಲಾಗಿತ್ತೆಂದೂ ಮಹಾವಂಶ, ದೀಪವಂಶ ಮೊದಲಾದ ಧರ್ಮಗ್ರಂಥಗಳಿಂದ ತಿಳಿಯುತ್ತದೆ. ಮುಂದೆ ಕ್ರಿ.ಪೂ.2 ರಿಂದ ಕ್ರಿ.ಶ.3ನೆಯ ಶತಮಾನದಲ್ಲಿ ಸಾತವಾಹನರ ಆಳ್ವಿಕೆಯಲ್ಲಿ ಇತ್ತೆಂದು ಬನವಾಸಿಯ ಉತ್ಖನನಗಳಿಂದ ತಿಳಿಯುತ್ತದೆ. ಇಲ್ಲಿ ಯಜ್ಞಶಾತಕರ್ಣಿಯ ಕೆಲವು ನಾಣ್ಯಗಳು ದೊರಕಿವೆ. 2 ಮತ್ತು 3ನೆಯ ಶತಮಾನದಲ್ಲಿ ಸಾತವಾಹನರ ಸಂಬಂಧಿಗಳಾದ ಚಟುಕುಲದವರು ಇಲ್ಲಿ ಆಳುತ್ತಿದ್ದರು. 4 ರಿಂದ 6ನೆಯ ಶತಮಾನದವರೆಗೆ ಈ ಪ್ರದೇಶ ಕದಂಬರ ಆಳ್ವಿಕೆಯಲ್ಲಿತ್ತು. ಕದಂಬರ ಅನಂತರ ಬಾದಾಮಿಯ ಚಳುಕ್ಯರು (6-8ನೆಯ ಶತಮಾನ), ರಾಷ್ಟ್ರಕೂಟರೂ (8-10ನೆಯ ಶತಮಾನ) ಆಳಿದರು. ರಾಷ್ಟ್ರಕೂಟರ ಮತ್ತು ಅನಂತರ ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಈ ಜಿಲ್ಲೆಯ ಬಹುಭಾಗ ಬನವಾಸಿ 12000 ಎಂಬ ಪ್ರಮುಖ ಪ್ರಾಂತ್ಯದ ಭಾಗವಾಗಿತ್ತು. ಅಂದಿನ ಆಳರಸರ ಪ್ರತಿನಿಧಿಗಳು ಬನವಾಸಿಯನ್ನು ತಮ್ಮ ಪ್ರಾಂತೀಯ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. 11 ಮತ್ತು 13ನೆಯ ಶತಮಾನಗಳಲ್ಲಿ ಹಾನಗಲ್ಲು ಮತ್ತು ಗೋವೆಯ ಕದಂಬರು ಚಾಳುಕ್ಯ ಸಾಮಂತರಾಗಿ ಹೆಚ್ಚುಮಟ್ಟಿಗೆ ಈ ಪ್ರದೇಶವನ್ನು ಆಳುತ್ತಿದ್ದರು. 14ನೆಯ ಶತಮಾನದಾರಭ್ಯ ಸು.16ನೆಯ ಶತಮಾನದವರೆಗೆ ಈ ಜಿಲ್ಲೆಯ ಬಹುಭಾಗ ವಿಜಯನಗರ ಸಾಮ್ರಾಜ್ಯಕ್ಕೆ ಸೇರಿತ್ತು. 17-18ನೆಯ ಶತಮಾನಗಳಲ್ಲಿ ಕೆಳದಿಯ ನಾಯಕರು ಮತ್ತು ಬಿಳಗಿ, ಸ್ವಾದಿ, ಗೇರುಸೊಪ್ಪೆ ಮೊದಲಾದ ಪಾಳೆಗಾರ ವಂಶದವರು ಜಿಲ್ಲೆಯ ಬೇರೆ ಬೇರೆ ಪ್ರದೇಶಗಳಲ್ಲಿ ಆಳುತ್ತಿದ್ದರು. 18ನೆಯ ಶತಮಾನದ ಉತ್ತರಾರ್ಧದಲ್ಲಿ, ಉತ್ತರ ಕನ್ನಡ ಜಿಲ್ಲೆ ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನರ ಆಳ್ವಿಕೆಯಲ್ಲಿ ಮೈಸೂರು ಸಂಸ್ಥಾನದ ಭಾಗವಾಯಿತು. 1799ರಲ್ಲಿ ಶ್ರೀರಂಗಪಟ್ಟಣದ ಪತನವಾದ ಅನಂತರ ಇದು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟು ಮುಂಬಯಿ ಪ್ರಾಂತ್ಯಕ್ಕೆ ಸೇರಿತು. ಸು.150 ವರ್ಷ ಆ ಪ್ರಾಂತ್ಯದಲ್ಲಿದ್ದ ಈ ಜಿಲ್ಲೆ ಭಾಷಾನುಗುಣ ಪ್ರಾಂತರಚನೆಯ ಅನಂತರ (1956) ಕರ್ನಾಟಕ ರಾಜ್ಯಕ್ಕೆ ಸೇರಿತು.

**ಸ್ವಾತಂತ್ರ್ಯ ಸಮರ :** 1862ಕ್ಕಿಂತ ಮೊದಲು ದಕ್ಷಿಣೋತ್ತರ ಜಿಲ್ಲೆಗಳು ಬೇರೆ ಬೇರೆಯಾಗಿರಲಿಲ್ಲ. ಆಗ ಈ ಇಡೀ ಜಿಲ್ಲೆಗೆ ಕನ್ನಡ ಜಿಲ್ಲೆ ಎಂಬ ಹೆಸರಿತ್ತು. ಈ ಜಿಲ್ಲೆಯ ಒಕ್ಕಟ್ಟು ಮುಂದೆ ಬ್ರಿಟಿಷ್ ಸರ್ಕಾರಕ್ಕೆ ಮುಳುವಾಗಬಹುದೆಂಬ ಶಂಕೆಯಿಂದ ಆಗಿನ ಜಿಲ್ಲಾ ಕಲೆಕ್ಟರ್ ಮುನ್ರೊ ಎಂಬಾತ ಈ ಜಿಲ್ಲೆಯನ್ನು ಎರಡಾಗಿ ಒಡೆಯಬೇಕೆಂದು ಸಲಹೆ ಮಾಡಿದ. ಅದರಂತೆ ಉತ್ತರ ಭಾಗವನ್ನು ಉತ್ತರ ಕನ್ನಡ ಎಂದು ಹೆಸರಿಸಿ ಮುಂಬಯಿ ಪ್ರಾಂತ್ಯಕ್ಕೂ ದಕ್ಷಿಣ ಭಾಗವನ್ನು ದಕ್ಷಿಣ ಕನ್ನಡ ಜಿಲ್ಲೆ ಎಂದು ಕರೆದು ಅದನ್ನು ಮದರಾಸು ಪ್ರಾಂತ್ಯಕ್ಕೂ ಸೇರಿಸಲಾಯಿತು. 1890ರಲ್ಲಿ ಜಿಲ್ಲೆಯ ಜನರಿಂದ ಜಂಗಲ್ ಸವಲತ್ತುಗಳನ್ನು ಕಸಿದುಕೊಳ್ಳಲಾಯಿತು. 1914-15ರಲ್ಲಿ ರೈತರ ಮೇಲೆ ವಿಪರೀತ ಕರ ಹೇರಲಾಯಿತು. ಮಾರಕ ರೋಗಗಳಾದ ಮಲೇರಿಯ, ಪ್ಲೇಗು ಹಬ್ಬಿ ಜನಸಂಖ್ಯೆ ಗಣನೀಯವಾಗಿ ಇಳಿಯಿತು. 1901ರಲ್ಲಿ 53,071 ಇದ್ದ ಜನಸಂಖ್ಯೆ 1931ರ ವೇಳೆಗೆ 37,000ಕ್ಕೆ ಇಳಿದಿತ್ತು. ಬ್ರಿಟಿಷ್ ಆಡಳಿತದಿಂದ ಜನ ಬೇಸರಗೊಂಡಿದ್ದರು.

ಮೂಲತಃ ಲೋಕಮಾನ್ಯ ಟಿಳಕರ ಕೇಸರಿಯ ಅಗ್ರಲೇಖದಿಂದ ಇಲ್ಲಿಯ ಜನ ಸ್ಫೂರ್ತಿ ಪಡೆದರು. ಕನ್ನಡ ಸುವಾರ್ತೆ (1882), ಹವ್ಯಕ ಸುಬೋಧ (1895), ಸಂಯುಕ್ತ ಕರ್ನಾಟಕ, ಕಾನಡಾವೃತ್ತ (1916), ಕಾನಡಾ ಧುರೀಣ, ಬಾಂಬೆಕ್ರಾನಿಕಲ್ ಪತ್ರಿಕೆಗಳಿಂದ ಜನರು ದೇಶವಿದೇಶದ ಸುದ್ದಿಗಳನ್ನು ತಿಳಿದುಕೊಂಡು ಬ್ರಿಟಿಷ್ ಆಡಳಿತದ ವಿರುದ್ಧ ಸಿಡಿದೆದ್ದರು. ಮೊದಲು ಟಿಳಕರ ವಿಚಾರಗಳನ್ನು ಬೆಂಬಲಿಸಿದ ಉತ್ತರ ಕನ್ನಡದ ಜನ ಟಿಳಕರ ಮರಣಾನಂತರ (1920) ಗಾಂಧೀಜಿಯವರು ನೇತೃತ್ವವಹಿಸಿದಾಗ ಅವರ ನಾಯಕತ್ವದಲ್ಲಿ ಹೋರಾಟ ಮುಂದುವರಿಸಿದರು.

ಸ್ವದೇಶಿ ಚಳವಳಿ (1906), ಅಸಹಕಾರ ಆಂದೋಲನ, ಉಪ್ಪಿನ ಸತ್ಯಾಗ್ರಹ, ಅರಣ್ಯ ಸತ್ಯಾಗ್ರಹ, ಕರನಿರಾಕರಣೆ, ವೈಯಕ್ತಿಕ ಸತ್ಯಾಗ್ರಹ ಇವುಗಳಲ್ಲೆಲ್ಲಾ ಜಾತಿಮತಗಳನ್ನೆಣಿಸದೆ ಸಾವಿರಾರು ಜನ ಬೀದಿಗಿಳಿದು ಬ್ರಿಟಿಷರ ವಿರುದ್ಧ ಹೋರಾಟದಲ್ಲಿ ನಿರತರಾದರು. ಅನೇಕರು ಶಾಲೆ ಕಾಲೇಜು ಕಚೇರಿಗಳನ್ನು ಬಿಟ್ಟು, ಆಸ್ತಿ ಪಾಸ್ತಿಗಳನ್ನು ಕಳೆದುಕೊಂಡು ಜೈಲು ಸೇರಿದರು, ಕಠಿಣ ಶಿಕ್ಷೆ ಅನುಭವಿಸಿದರು. ಶಿರಸಿ, ಸಿದ್ದಾಪುರ, ಅಂಕೋಲಾ ಹೋರಾಟದ ಕೇಂದ್ರಗಳಾಗಿದ್ದುವು. ನಾರಾಯಣ ಚಂದಾವರಕರ, ತಿಪ್ಪಯ್ಯ ಮಾಸ್ತರ, ಕಡವೆ ರಾಮಕೃಷ್ಣ ಹೆಗಡೆ, ವಾಮನ ಹೊರಿಕೆ, ಶಂಕರರಾವ್ ಗುಲ್ವಾಡಿ, ತಿಮ್ಮಪ್ಪ ನಾಯಕ, ನಾರಾಯಣ ಮರಾಠೆ, ಶಿರಳಗಿ ಸುಬ್ರಾಯಭಟ್ಟ, ಎಸ್.ಎಸ್. ಕೇಶವೈನ್ ಮೊಟೆನ್ಸರ್, ತಿಮ್ಮಪ್ಪ ಹೆಗಡೆ, ದೊಡ್ಮನೆ ನಾಗೇಶ ಹೆಗಡೆ, ಭವಾನಿಬಾಯಿ ಕಾನಗೋಡು, ಸೀತಾಬಾಯಿ ಮಡಗಾಂವಕರ, ಜೋಗಿ ಬೀರಣ್ಣ ನಾಯಕ, ಎನ್.ಜಿ.ಪೈ., ನಾರಾಯಣ ಪಿ ಭಟ್ಟ ಮೊದಲಾದವರು ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲ್ಗೊಂಡು ಉತ್ತರ ಕನ್ನಡ ಜಿಲ್ಲೆಯ ಸಾಧನೆಗೆ ಚರಿತ್ರೆಯ ಪುಟಗಳಲ್ಲಿ ಶಾಶ್ವತ ಸ್ಥಾನ ದೊರಕಿಸಿಕೊಟ್ಟಿದ್ದಾರೆ. ಈ ಜಿಲ್ಲೆಯ ಜನ ಮಾಡಿದ ಉಪ್ಪಿನ ಸತ್ಯಾಗ್ರಹ, ಕರನಿರಾಕರಣೆ ಚಳವಳಿ ಇವು ಹೊಸ ಇತಿಹಾಸ ನಿರ್ಮಿಸಿದವು.



ಮುರುಡೇಶ್ವರ ದೇವಾಲಯದ ಗೋಪುರ

ಭಾರತಕ್ಕೆ ಸ್ವಾತಂತ್ರ್ಯ ಬಂದಮೇಲೂ ಕರ್ನಾಟಕ ಏಕೀಕರಣ ಚಳವಳಿ ಮುಂದುವರಿಯಿತು. 1954ರಲ್ಲಿ ದಿನಕರ ದೇಸಾಯಿ ಮತ್ತು ಪಿ.ಎಸ್.ಕಾಮತರು ಮನವಿಯೊಂದನ್ನು ತಯಾರಿಸಿ ರಾಜ್ಯ ಮರುವಿಂಗಡಣೆ ಆಯೋಗಕ್ಕೆ ಒಪ್ಪಿಸಿದ್ದರು.

1940ರ ಸುಮಾರಿನಲ್ಲಿ ಉಳುವವನೆ ಭೂಮಿಯ ಒಡೆಯ ಎಂಬ ಘೋಷಣೆಯೊಂದಿಗೆ ಚುಟುಕು ಬ್ರಹ್ಮ ದಿನಕರ ದೇಸಾಯಿ

(ನೋಡಿ) ಅವರ ಧುರೀಣತ್ವದಲ್ಲಿ ನಡೆದ ಚಳವಳಿಯಲ್ಲಿ ಜಿಲ್ಲೆಯ ಜನ ಪಾಲ್ಗೊಂಡು ಅದನ್ನು ಒಂದು ಬಲಿಷ್ಠ ಸಂಘಟನೆಯನ್ನಾಗಿ ರೂಪಿಸಿದರು. ಸರ್ಕಾರ ಗಾಬರಿಗೊಂಡು 1940ರಿಂದ ದಿನಕರ ದೇಸಾಯಿಯವರು ಉತ್ತರ ಕನ್ನಡ ಗಡಿಯನ್ನು ಪ್ರವೇಶಿಸದಂತೆ ಆಜ್ಞೆ ಹೊರಡಿಸಿತು. ಆಗ ದಿನಕರ ದೇಸಾಯಿಯವರು ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿಯ ಸದಸ್ಯರಾಗಿ ಮುಂಬಯಿಯಲ್ಲಿದ್ದರು. ಆಗ ಶೇಷಗಿರಿ ಪಿಕಳೆ ಮತ್ತು ದಯಾನಂದ ನಾಡಕರ್ಣಿಯವರು ರೈತಕೂಟದ ಸೂತ್ರಗಳನ್ನು ಕೈಯಲ್ಲಿ ಹಿಡಿದುಕೊಂಡರು. ದಿನಕರ ದೇಸಾಯಿಯವರ ಮಾರ್ಗದರ್ಶನದಲ್ಲಿ ಚಳವಳಿ ನಡೆಯುತ್ತಿತ್ತು. ರೈತರು ಬಲಿಷ್ಠಗೊಳ್ಳಲೂ ಸ್ವತಂತ್ರರಾಗಲೂ ಇದು ಕುಮ್ಮಕ್ಕು ನೀಡಿತು. ಈ ಚಳವಳಿಯಲ್ಲಿ ಉತ್ತರ ಕನ್ನಡದ ಸಾವಿರಾರು ರೈತರು ರಾಜಕೀಯ ಪಕ್ಷಗಳ ಕಾರ್ಯಕರ್ತರು ಒಮ್ಮನಸ್ಸಿನಿಂದ ದುಡಿದು ಒಂದು ಸಾಮಾಜಿಕ ಕ್ರಾಂತಿಯನ್ನೇ ಮಾಡಿದರು.

**ಪ್ರೇಕ್ಷಣೀಯ ಸ್ಥಳಗಳು :** ಈ ಜಿಲ್ಲೆಯ ದಟ್ಟವಾದ ಕಾಡು, ಕಾಡಿನಲ್ಲಿ ಭೋರ್ಗರೆಯುವ ಜಲಪಾತಗಳು, ವಿಶಾಲವಾದ ಕಡಲ ದಂಡೆಗಳು ಪಯಣಿಗರ ಹೃದಯಗಳನ್ನು ಸೂರೆಗೊಳ್ಳುತ್ತವೆ. ಕಾರವಾರದ ಹತ್ತಿರದ ಅಂಜದೀವ ನಡುಗಡ್ಡೆ, ಕಣಿವೆ ಮಾರ್ಗವಾದ ಅಣಿಘಟ್ಟೆ, ಶಿರಸಿಯ ಪಡುವಣಕ್ಕಿರುವ ಬೆಡಸಗಾಂವ್ ಗುಡ್ಡ, ಹೊನ್ನಾವರದ ಬಳಿಯ ಬಸವರಾಜದುರ್ಗ (ನೋಡಿ), ಜಿಲ್ಲೆಯ ಉತ್ತರ ಭಾಗದ ದರ್ಶನಗುಡ್ಡ, ಭಟ್ಕಳ ಸಮೀಪದ ನೇತ್ರಾಣಿ ಗುಡ್ಡ (ನೋಡಿ) - ಇವು ಸುಂದರವಾಗಿವೆ. ಹೊನ್ನಾವರ ತಾಲ್ಲೂಕಿನ ಇಡಗುಂಜಿ (ನೋಡಿ), ಗೋಕರ್ಣ (ನೋಡಿ), ಬನವಾಸಿ (ನೋಡಿ), ಉಳವಿ (ನೋಡಿ), ಮಂಜುಗುಣಿ (ನೋಡಿ), ಸೋದೆ (ನೋಡಿ) - ಇವು ಪುಣ್ಯ ಕ್ಷೇತ್ರಗಳೆಂದು ಪರಿಗಣಿತವಾಗಿವೆ. ಮುಂಡಗೋಡ ತಾಲ್ಲೂಕಿನ ತಟ್ಟಿಹಳ್ಳಿಯಲ್ಲಿ ಟಿಬೆಟನರ ಬೃಹತ್ ವಸತಿ ಇದೆ. 1966ರಿಂದ ಟಿಬೆಟನ್‌ರು ಕೃಷಿ, ಕರಕುಶಲ ಕಲೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಬದುಕು ಸಾಗಿಸುತ್ತಿದ್ದಾರೆ. ಇವರು ಇಲ್ಲೊಂದು ಬೃಹತ್ ಬುದ್ಧಮಂದಿರ ಕಟ್ಟಿಸಿದ್ದಾರೆ. ಇದೊಂದು ಪ್ರೇಕ್ಷಣೀಯ ಪುಣ್ಯ ಕ್ಷೇತ್ರ. ಕಾಳಿ ನದಿಗೆ ಸುಪದಲ್ಲಿ ಜಲಾಶಯ ಕಟ್ಟಿದ್ದರಿಂದ ಆ ಪಟ್ಟಣ ಜಲಾವೃತವಾಯಿತು. ಈಗ ಜೋಯಿಡಾ ತಾಲ್ಲೂಕು ಕೇಂದ್ರವಾಗಿದೆ. ಲಂಬಿಕಾ ನಗರದಿಂದ ಮೂರು ಕಿಮೀ ದೂರದಲ್ಲಿರುವ ಸೈಕ್ಸ್ ಪಾಯಿಂಟ್ ಕಾಳಿ ನದಿಯ ವಿಹಂಗಮ ನೋಟ ಸುಂದರವಾಗಿದೆ. ಇದು ಪ್ರವಾಸಿಗರನ್ನು ಆಕರ್ಷಿಸುತ್ತಿದೆ.

ಈ ಜಿಲ್ಲೆಯಲ್ಲಿ ಹೆಚ್ಚು ಸಂಖ್ಯೆಯ ಜನ ಕನ್ನಡ ಮಾತನಾಡುವವರು. ಕೊಂಕಣಿ, ಉರ್ದು, ಮರಾಠಿ ಮಾತನಾಡುವವರೂ ಗಣನೀಯ ಸಂಖ್ಯೆಯಲ್ಲಿದ್ದಾರೆ. ತೆಲುಗು, ತಮಿಳು, ಮಲಯಾಳಂ, ತುಳು, ರಾಜಸ್ಥಾನಿ, ಕೊಡವ, ಹಿಂದಿ, ಗುಜರಾತಿ, ಸಿಂಧಿ, ನೇಪಾಳಿ, ಬಂಗಾಳಿ, ಪಂಜಾಬಿ, ಒರಿಯ, ಪರ್ಷಿಯನ್ ಭಾಷೆ ಮಾತನಾಡುವವರನ್ನೂ ಕಾಣಬಹುದು.



ಕಾಳಿ ಸೇತುವೆ, ಕಾರವಾರ

ಉತ್ತರ ಕನ್ನಡ ಜಿಲ್ಲೆ ಜನಪದ ಸಂಸ್ಕೃತಿಯ ಬೀಡಾಗಿದೆ. ಹಾಲಕ್ಕಿ, ಹಸಲರು, ನಾಮಧಾರಿ, ನವಾಯತರು, ಸಿದ್ದಿ, ಹವ್ಯಕ, ಗೊಂಡರು, ಮುಕ್ರಿ, ಸಾರಸ್ವತ, ಪಟಗಾರ, ಭಜಂತ್ರಿ, ದೈವಜ್ಞ (ಜನಿವಾರರು), ಗವಳಿ, ಮೀನುಗಾರರ ಉಪಸಂಸ್ಕೃತಿಗಳು ಇವೆ. ಇವರ ಹಾಡು-ಕುಣಿತ-ಹಬ್ಬಗಳು ಮನಮೋಹಕ. ಇಲ್ಲಿ ಜನಪದ ಗೀತೆಗಳನ್ನು ಸಂಗ್ರಹಿಸಿದ ಪ್ರಮುಖರಲ್ಲಿ ವಿ.ವೆ.ತೊರ್ಕೆ, ಮ.ಗ.ಶೆಟ್ಟಿ, ಜಿ.ಆರ್.ಹೆಗಡೆ, ಎಲ್.ಆರ್.ಹೆಗಡೆ, ಎನ್.ಆರ್.ನಾಯಕ, ಫಾದರ್‌ಸಿ.ಸಿ.ಎ.ಪೈ, ಎಲ್.ಜಿ.ಭಟ್ಟ, ಶಾಂತಿನಾಯಕ, ವಿ.ಗ.ನಾಯಕ ಮೊದಲಾದವರು ಪ್ರಮುಖರು. ವಿವಿಧ ಉಪಸಂಸ್ಕೃತಿಗಳ ಅಧ್ಯಯನ ಮಾಡಿದವರಲ್ಲಿ ಎಲ್.ಆರ್.:ಹೆಗಡೆ, ಎನ್.ಆರ್.ನಾಯಕ, ಜಿ.ಎಸ್.ಭಟ್ಟ, ಶ್ರೀಪಾದ ಶೆಟ್ಟಿ, ಶಾಲಿನಿ ರಘುನಾಥ್, ವಿಜಯನಳಿನಿ ರಮೇಶ, ಆರ್.ಜಿ.ಗುಂದಿ, ಶ್ರೀಪಾದ ಭಟ್ಟ ಇವರು ಮುಖ್ಯರು.



ಕೇತಾಪಿನಾರಾಯಣ ದೇವಾಲಯ, ಭಟ್ಕಳ

ಈ ಜಿಲ್ಲೆಯ ರಂಗಕಲೆಗಳಲ್ಲಿ ಯಕ್ಷಗಾನ ವಿಶಿಷ್ಟ ಸ್ಥಾನ ಗಳಿಸಿದೆ. ಕರ್ಕಿ ಪರಮಯ್ಯ ಹಾಸ್ಯಗಾರ (ನೋಡಿ), ಕೆರೆಮನೆ ಶಿವರಾಮ ಹೆಗಡೆ (ನೋಡಿ), ಕೆರೆಮನೆ ಮಹಾಬಲ ಹೆಗಡೆ (ನೋಡಿ), ಕೆರೆಮನೆ ಶಂಭು ಹೆಗಡೆ (ನೋಡಿ), ಚಿಟ್ಟಾಣಿ ರಾಮಚಂದ್ರ ಹೆಗಡೆ (ನೋಡಿ), ಎಕ್ಟರ್ ಜೋಶಿ, ಕೆರೆಮನೆ ಗಜಾನನ ಹೆಗಡೆ, ಪಿ.ವಿ.ಹಾಸ್ಯಗಾರ (ನೋಡಿ), ನಾರಾಯಣ ಹಾಸ್ಯಗಾರ, ಕೃಷ್ಣ ಹಾಸ್ಯಗಾರ, ಕೊಂಡದಕುಳಿ ರಾಮ ಹೆಗಡೆ, ಲಕ್ಷ್ಮಣ ಹೆಗಡೆ, ಮುರೂರು ದೇವರು ಹೆಗಡೆ (ನೋಡಿ), ಗೋಡೆ ನಾರಾಯಣ ಹೆಗಡೆ, ಡಿ.ಜಿ.ಹೆಗಡೆ, ಶಿರಳಗಿ ಭಾಸ್ಕರ ಜೋಶಿ, ಬಳ್ಕೂರ ಕೃಷ್ಣಯಾಜಿ, ವೆಂಕಟೇಶ ಜಲವಳ್ಳಿ, ಕಡತೋಕ ಮಂಜುನಾಥ ಭಾಗವತ, ನೆಬ್ಬೂರು ನಾರಾಯಣ ಭಾಗವತ ಪ್ರಮುಖ ಕಲಾವಿದರು. ಚಿಟ್ಟಾಣಿ ರಾಮಚಂದ್ರ ಹೆಗಡೆಯವರಿಗೆ ಜ್ಞಾನಪದ ಶ್ರೀ ಪ್ರಶಸ್ತಿ ಬಂದಿದೆ (2004). ತಾಳಮದ್ದಳೆಯ ಕಲಾವಿದರು ಅನೇಕರಿದ್ದಾರೆ. ನಾಟಕ ಕ್ಷೇತ್ರದಲ್ಲಿ ಹುಲಿಮನೆ ಸೀತಾರಾಮ ಶಾಸ್ತ್ರೀ (ನೋಡಿ) ಜಯಕರ್ನಾಟಕ ನಾಟಕ ಮಂಡಳಿ ಸ್ಥಾಪಿಸಿ ನಡೆಸಿದರು. ಸುಗ್ಗಿಕುಣಿತ, ಗುಮಟೆಯ ಪಾಂಡು, ದೋಣಿಯ ಹಾಡು, ಬೆಸ್ತರ ಪದ, ಜನಪದ ಗೀತೆಗಳು, ಸಿದ್ದಿಯರ ಕುಣಿತ- ಹಾಡುಗಳೂ ಜಿಲ್ಲೆಯ ಜನರನ್ನು ಮನರಂಜಿಸುತ್ತ ಬಂದಿವೆ.

ಸಾಹಿತ್ಯ ಕ್ಷೇತ್ರವನ್ನು ಕರ್ಕಿ ವೆಂಕಟರಮಣ ಶಾಸ್ತ್ರಿ ಸೂರಿ, ಜಿ.ಆರ್.ಪಾಂಡೇಶ್ವರ, ಗೌರೀಶ ಕಾಯ್ಕಿಣಿ, ಯಶವಂತ ಚಿತ್ತಾಲ, ಬಿ.ಎಚ್. ಶ್ರೀಧರ, ಶಾಂತಿನಾಥ ದೇಸಾಯಿ, ಸು.ರಂ.ಎಕ್ಕುಂಡಿ, ಅರವಿಂದ ನಾಡಕರ್ಣಿ, ಸ.ಪ.ಗಾಂವಕರ್, ಕೃಷ್ಣಾನಂದ ಕಾಮತ್, ಪ.ಸು.ಭಟ್ಟ, ಸುಂದರ ನಾಡಕರ್ಣಿ, ವಿ.ಜಿ.ಭಟ್ಟ, ದಿನಕರ ದೇಸಾಯಿ, ವಿ.ಜಿ.ಶಾನಭಾಗ, ಶಾ.ಮಂ.ಕೃಷ್ಣರಾಯ, ಗಂಗಾಧರ ಚಿತ್ತಾಲ, ಜಿ.ಜಿ.ಹೆಗಡೆ, ಜಿ.ಎಸ್.ಭಟ್ಟ, ಜಯಂತ ಕಾಯ್ಕಿಣಿ, ನಿರಂಜನ ವಾನಳ್ಳಿ, ರಾಜೀವ ಅಜ್ಜಿಬಳ ಇವರು ಸಮೃದ್ಧಗೊಳಿಸಿದ್ದಾರೆ. ಹೊಸ ತಲೆಮಾರಿನ ಅನೇಕ ಕವಿಗಳೂ ಲೇಖಕರೂ ಭರವಸೆ ಮೂಡಿಸುತ್ತಿದ್ದಾರೆ. ಪ್ರಮುಖ ಲೇಖಕರ ಬಗ್ಗೆ ಪ್ರತ್ಯೇಕ ಲೇಖನಗಳಿವೆ.

ಈ ಜಿಲ್ಲೆಯ ಪತ್ರಿಕೆಗಳಲ್ಲಿ ಹವ್ಯಕ ಸುಬೋಧ ಶಾಸ್ತ್ರಿ (1885), ಕಾರವಾರ ಚಂದ್ರಿಕೆ (1885), ಮಕ್ಕಳ ಪತ್ರಿಕೆ ಹಿತೋಪದೇಶ (1888), ಸರಸ್ವತಿ (1900), ವಿನೋದಿನಿ (1904)- ಇವು

ಮಾಸಪತ್ರಿಕೆಗಳು. 1919ರಲ್ಲಿ ಕುಮಟದಿಂದ ಕಾನಡಾ ಧುರೀಣ ಮೈಜೆಸ್ಟ್ (1922), ನಂದಿನಿ (1925) ಮಾಸ ಪತ್ರಿಕೆ ಮೊದಲು ಗೋಕರ್ಣದಿಂದ ಪ್ರಕಟಿಸಲಾಗುತ್ತಿದ್ದು ಕೆಲಕಾಲ ನಿಂತು 1937 ರಿಂದ ಶಿರಸಿಯಿಂದ ಪ್ರಕಟವಾಗತೊಡಗಿತು. ಶರಣ ಸಂದೇಶ (1931), ನವಚೇತನ (1941), ಸಾಧನ (1949) ಹೊನ್ನಾವರದಿಂದ ಪ್ರಕಟವಾಗುತ್ತಿತ್ತು. ಮಲಯವಾಣಿ (1955) ವಾರ್ಷಿಕ ಪತ್ರಿಕೆ. 1956ರಲ್ಲಿ ಭಾಮಾ ಮಾಸ ಪತ್ರಿಕೆ ಶಿರಸಿಯಿಂದ ಪ್ರಕಟವಾಗತೊಡಗಿತು. 1957ರಲ್ಲಿ ಶಿರಸಿಯಿಂದ ಪ್ರಕಟವಾಗುತ್ತಿದ್ದ ನಗರವಾಣಿ ಅಲ್ಪಾಯುವಾಯಿತು. ಸಹಕಾರಿ ಸಮಾಜ (1979), ಯಕ್ಷಗಾನ (1959), ಗೋಕರ್ಣ ಗೋಷ್ಠಿ (1959), ಸ್ವತಂತ್ರವಾಣಿ (1960), ಮಧುವನ (1960), ಗ್ರಾಮಜೀವನ, ಸಮಾಜ (1965), ಸಂಘಟನೆ, ರಮಣ ಸಂದೇಶ, (1971), ಶಿರಸಿ ಸಮಾಚಾರ, ಸಹಚರ, ಸಮನ್ವಯ (1975) ಇವಲ್ಲದೆ ಕಡಲಧ್ವನಿ (1983), ಆಚಾರ (1980), ಕರಾವಳಿ ಗ್ರಾಮ ವಿಕಾಸ (1987), ಗ್ರಾಮ ಭಾರತಿ ಅಭಯ (1965), ನುಡಿಜೇನು (1968), ಗಿರಿಘರ್ಜನೆ, ಯುಗವಾಣಿ (1964), ಸಮಾಜವಾಣಿ (1965), ಚುನಾವಣೆ, ಆಧ್ಯಾತ್ಮಿಕ ಪತ್ರಿಕೆ ಜೀವೋತ್ತಮ ಉಲ್ಲೇಖನೀಯ. ಮುನ್ನಡೆ (1988) ದಿನಪತ್ರಿಕೆಯಾಗಿ 2000ದಲ್ಲಿ ನಿಂತುಹೋಯಿತು. ಜಿಲ್ಲೆಯ ಮೊದಲ ದೈನಿಕ ಲೋಕಧ್ವನಿ (1983), ಜನಮಾಧ್ಯಮ (1988), ಧ್ಯೇಯನಿಷ್ಠ ಪತ್ರಕರ್ತ (1991), ಕರಾವಳಿಯ ಮುಂಜಾವು (1994) - ಇವು ಇಂದಿನ ಪ್ರಮುಖ ಪತ್ರಿಕೆಗಳು.

ದೀರ್ಘಕಾಲ ನಡೆದ ಪತ್ರಿಕೆಗಳಲ್ಲಿ ಕಾನಡಾವೃತ್ತದ ಸ್ಥಾನ ಅದ್ವಿತೀಯ. ಇದು 1916ರಲ್ಲಿ ಪ್ರಾರಂಭವಾಗಿ ಈಗಲೂ ನಡೆಯುತ್ತಿದೆ. 1946ರಲ್ಲಿ ಆರಂಭವಾದ ನಾಗರಿಕ ಈಗಲೂ ಪ್ರಕಟವಾಗುತ್ತಿದೆ. 1960ರಲ್ಲಿ ಜನತಾ, 1955ರಲ್ಲಿ ದಿನಕರ ದೇಸಾಯಿ ಪ್ರಾರಂಭಿಸಿದ ಜನಸೇವಕ ಇದು 1972ರ ವರೆಗೆ ನಡೆದು ಅನಂತರ ನಿಂತಿತು. ಶೃಂಗಾರ ಹೊನ್ನಾವರದಿಂದ ಪ್ರಕಟವಾಗುತ್ತಿತ್ತು. (ಎಸ್.ಎಂ.ಕೆ.)

**ಉತ್ತರದೇಶದ ಬಸವಲಿಂಗದೇವ :** ಸು.1600. ವೀರಶೈವ ಕವಿ. ಬಸವೇಶ್ವರಪುರಾಣದ ಕಥಾಸಾಗರ, ಭೈರವೇಶ್ವರಕಾವ್ಯದ ಕಥಾಸಾಗರ, ಉಚಿತ ಕಥೆಗಳು ಎಂಬ ಗ್ರಂಥಗಳನ್ನು ಗದ್ಯದಲ್ಲಿ ಬರೆದಿದ್ದಾನೆ. ಇವುಗಳಲ್ಲಿ ತಾನು ಷಟ್‌ಸ್ಥಲಚಕ್ರವರ್ತಿ ಚೆನ್ನಬಸವದೇವನ ಕಾರುಣ್ಯದ ಶಿಶುವೆಂದೂ ಬಸವಣ್ಣನ ಕಥೆಗಳನ್ನು ಭಕ್ತಮಾಹೇಶ್ವರರು ಸುಲಭದಲ್ಲಿ ತಿಳಿಯುವಂತೆ ಹೇಳಹೊರಟಿರುವೆನೆಂದೂ ಕವಿ ಹೇಳಿಕೊಂಡಿದ್ದಾನೆ. ಈತನ ಭಾಷಾ ಸ್ವರೂಪವನ್ನು ನೋಡಿದರೆ ಸುಮಾರು 17ನೆಯ ಶತಮಾನದವನೆಂದೂ ಹೇಳಬಹುದು.

ಬಸವೇಶ್ವರಪುರಾಣದ ಕಥಾಸಾಗರದಲ್ಲಿ 464 ಕಥೆಗಳಿವೆ. ಈ ಕಥೆಗಳಲ್ಲಿ ಅಷ್ಟಾದಶ ಪುರಾಣಗಳು, ರಾಮಾಯಣ, ಮಹಾಭಾರತ ಮೊದಲಾದ ಸಂಸ್ಕೃತ ಗ್ರಂಥಗಳಿಂದ ಆಯ್ದುಕೊಂಡ ಕೆಲವು ಕಥೆಗಳು ಕಂಡುಬರುತ್ತವೆಯಾದರೂ ಬಸವಣ್ಣನವರನ್ನು ಕುರಿತ ಕಥೆಗಳನ್ನು ನಿರೂಪಿಸುವುದು ಇಲ್ಲಿನ ಮುಖ್ಯ ಗುರಿ. ಆದ್ದರಿಂದ ಈತ ಹರಿಹರ, ರಾಘವಾಂಕ, ಲಕ್ಕಣ್ಣ ದಂಡೇಶ, ನೀಲಕಂಠಾಚಾರ್ಯ, ಸಿಂಗಿರಾಜ, ಗುಬ್ಬಿಯ ಮಲ್ಲಣಾರ್ಯ ಮೊದಲಾದ ಪ್ರಸಿದ್ಧ ವೀರಶೈವ ಕವಿಗಳ ಕಾವ್ಯಗಳಿಂದ ತನ್ನ ಕತೆಗಳನ್ನು ಆಯ್ದುಕೊಂಡಿದ್ದಾನೆ. ಈ ಮೂಲ ಕಾವ್ಯಗಳ ಪದಗಳನ್ನೂ ಪದಪುಂಜಗಳನ್ನೂ ಸಂಗ್ರಹಕಾರನು ತನ್ನ ನಿರೂಪಣೆಯಲ್ಲಿ ಬಳಸಿರುವುದರಿಂದ, ಹಿಂದಿನ ಕವಿಕಾವ್ಯಗಳ ಕರ್ತೃತ್ವವನ್ನು ನಿರ್ಧರಿಸುವಲ್ಲಿ ಈ ಕಥೆಗಳು ಬಹು ಉಪಯುಕ್ತವಾಗಿವೆ.

'ಭೈರವೇಶ್ವರಕಾವ್ಯದ ಕಥಾಸಾಗರ' ಕಿಕ್ಕೇರಿಯಾರಾಧ್ಯ ನಂಜುಂಡ ಕವಿಯ (ಸು.1550) ಭೈರವೇಶ್ವರಕಾವ್ಯದ ಕಥಾಮಣಿ ಸೂತ್ರರತ್ನಾಕರದಿಂದ ಎತ್ತಿಕೊಂಡ 316 ಕಥೆಗಳನ್ನು ಒಳಗೊಂಡಿದೆ. 'ಉಚಿತ ಕಥೆಗಳು' ಬೇರೆ ಬೇರೆ ಕಡೆಗಳಿಂದ ಸಂಗ್ರಹಿಸಿರುವ 74 ಕಥೆಗಳನ್ನು ಒಳಗೊಂಡಿದೆ. (ಟಿ.ಎಸ್.ಎಸ್.)

**ಉತ್ತರ ಪಿನಾಕಿನಿ :** ಉತ್ತರ ಪೆನ್ನಾರ್ ಎಂದೂ ಕರೆಯುವ ಈ ನದಿ ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ ತಾಲ್ಲೂಕಿನ ನಂದಿಬೆಟ್ಟದ ವಾಯುವ್ಯದಲ್ಲಿರುವ ಚೆನ್ನಕೇಶವ ಬೆಟ್ಟದಲ್ಲಿ ಹುಟ್ಟಿ ಮಂಚೇನಹಳ್ಳಿ ಮತ್ತು ಗೌರಿಬಿದನೂರು ಮೂಲಕ ಆಂಧ್ರಪ್ರದೇಶವನ್ನು ಪ್ರವೇಶಿಸಿ ಹಿಂದೂಪುರ ತಾಲ್ಲೂಕು, ಕಡಪ ಮತ್ತು ನೆಲ್ಲೂರಿನ ಮೂಲಕ ಹರಿದು, ನೆಲ್ಲೂರಿನ ಹತ್ತಿರ ಬಂಗಾಳ ಕೊಲ್ಲಿಯನ್ನು ಸೇರುತ್ತದೆ. ಕುಮುದ್ವತಿ ಮತ್ತು ಚಿತ್ರಾವತಿ ಇದರ ಉಪನದಿಗಳು.

ಕರ್ನಾಟಕದಲ್ಲಿ (ಕೋಲಾರ ಜಿಲ್ಲೆಯಲ್ಲಿ) ಈ ನದಿ 54ಕಿಮೀ ದೂರ ಹರಿಯುತ್ತದೆ. ಇದರ ಜಲಾನಯನ ಪ್ರದೇಶದ ವಿಸ್ತೀರ್ಣ 842 ಚಕಿಮೀ. 116 ಕೆರೆಗಳಿಗೆ ಈ ನದಿ ಆಸರೆಯಾಗಿದೆ. ಜಕ್ಕಲಮಡುಗು ಮತ್ತು ಶ್ರೀನಿವಾಸಸಾಗರ- ಇವು ಈ ನದಿಗೆ ಕಟ್ಟಿರುವ ಎರಡು ಮುಖ್ಯ ಅಣೆಕಟ್ಟುಗಳು. ಅನೇಕ ಕಾಲುವೆಗಳ ಮುಖಾಂತರ ಈ ನದಿಯ ನೀರನ್ನು ಚಿಕ್ಕಬಳ್ಳಾಪುರ ಮತ್ತು ಗೌರಿಬಿದನೂರು ತಾಲ್ಲೂಕುಗಳಲ್ಲಿ ಬೇಸಾಯಕ್ಕೆ ಬಳಸಿಕೊಳ್ಳುತ್ತಾರೆ. ವಿದುರಾಶ್ವತ್ಥ ಕ್ಷೇತ್ರ ಈ ನದಿ ದಡದಲ್ಲಿದೆ. *

**ಉದಯಕುಮಾರ್ :** 1935-85. ರಂಗಭೂಮಿ ಮತ್ತು ಚಲನಚಿತ್ರನಟ, ಚಿತ್ರನಿರ್ದೇಶಕ ಹಾಗೂ ಸಾಹಿತಿ. ಆನೇಕಲ್ಲು ತಾಲ್ಲೂಕಿನ ಬೊಮ್ಮಸಂದ್ರದಲ್ಲಿ 1935 ಮಾರ್ಚ್ 16ರಂದು ಜನಿಸಿದರು. ತಂದೆ ಶಾನುಭೋಗ ಶ್ರೀನಿವಾಸಯ್ಯ, ತಾಯಿ ಶಾರದಮ್ಮ. ಇವರ ಮೊದಲ ಹೆಸರು ಸೂರ್ಯನಾರಾಯಣ ಶಾಸ್ತ್ರಿ. ಪ್ರೌಢಶಾಲೆಯ ಹಂತದವರೆಗೂ ವ್ಯಾಸಂಗ ಮಾಡಿರುವ ಇವರು ಸಂಸ್ಕೃತವನ್ನು ವಿಶೇಷವಾಗಿ ಅಧ್ಯಯನ ಮಾಡಿದ್ದರು. 1951ರಲ್ಲಿ ದಾಂಪತ್ಯ ಜೀವನಕ್ಕೆ ಪ್ರವೇಶಿಸಿದರು. ಬೆಂಗಳೂರಿನ ಸರ್ವೋದಯ ಇಲಾಖೆಯಲ್ಲಿ ಸಾಹಿತ್ಯ ವಿಭಾಗದ ಕಾರ್ಯದರ್ಶಿಯಾಗಿ ಒಂದು ವರ್ಷ (1954), ಆನೇಕಲ್ಲಿನ ಸರ್ಕಾರಿ ಶಾಲೆಯಲ್ಲಿ ವ್ಯಾಯಾಮ ಶಿಕ್ಷಕರಾಗಿ ಕೆಲವು ವರ್ಷ ಕೆಲಸ ಮಾಡಿ ಕೊನೆಗೆ ಆ ಕೆಲಸವನ್ನು ಬಿಟ್ಟು ರಾಜಕೀಯ ಮತ್ತು ಸಾಂಸ್ಕೃತಿಕ ಪ್ರಚಾರ ಭಾಷಣಗಳನ್ನು ಮಾಡುವುದರಲ್ಲಿ ನಿರತರಾದರು. ನಟಿ ಬಿ.ಜಯಮ್ಮನವರ ಪರಿಚಯವಾಗಿ, ಅವರ ಮೂಲಕ ಗುಬ್ಬಿ ನಾಟಕ ಕಂಪೆನಿಯನ್ನು ಪ್ರವೇಶಿಸಿದ ಉದಯ ಕುಮಾರ್ ಪ್ರಾರಂಭದಲ್ಲಿ ಸಣ್ಣಪುಟ್ಟ ಪಾತ್ರಗಳನ್ನು ನಿರ್ವಹಿಸಿದರು. ಅನಂತರ ಕುರುಕ್ಷೇತ್ರ ನಾಟಕದಲ್ಲಿ ಪರಶುರಾಮನ



ಪಾತ್ರವನ್ನು ಅಭಿನಯಿಸಿ ತಮ್ಮ ಪ್ರತಿಭೆಯನ್ನು ಪ್ರದರ್ಶಿಸಿದರಲ್ಲದೆ. ನಾಟಕ ಕಂಪನಿಯ ಮಾಲೀಕರಾಗಿದ್ದ ಗುಬ್ಬಿವೀರಣ್ಣನವರ ಮೆಚ್ಚುಗೆಗೂ ಪಾತ್ರರಾದರು. ಅನಂತರ ಚಿತ್ರರಂಗವನ್ನು ಪ್ರವೇಶಿಸಿದ ಇವರು ಅಭಿನಯಿಸಿದ ಮೊದಲ ಚಿತ್ರ ಭಾಗ್ಯೋದಯ (1956). ಸೇಡಿಗೆಸೇಡು ಇವರ ಅಭಿನಯದ ನೂರನೆಯ ಚಿತ್ರ. ತಮ್ಮ ಅಭಿನಯನೈಪುಣ್ಯ ಮತ್ತು ಶ್ರದ್ಧೆಗಳಿಂದ ಪಾತ್ರಗಳನ್ನು ನಿರ್ವಹಿಸಿ ಚಿತ್ರರಂಗದಲ್ಲಿ ಬಹು ಬೇಗ ಜನ ಪ್ರಿಯರಾದರು. ಚಂದವಳ್ಳಿಯತೋಟದ ಶಿವನಂಜೇಗೌಡ, ವಿಜಯನಗರದ ವೀರಪುತ್ರದ ಕೃಷ್ಣದೇವರಾಯ, ರಾಮಾಂಜನೇಯ ಯುದ್ಧದ ಆಂಜನೇಯ ಈ ಪಾತ್ರಗಳು ಇವರ ಉನ್ನತ ಕಲಾಭಿನಯಕ್ಕೆ ಸಾಕ್ಷಿಯಾಗಿವೆ. ಇವರ ಅಭಿನಯವಿರುವ ಭಕ್ತಕನಕದಾಸ, ನಂದಾದೀಪ, ಸಂತತುಕಾರಾಂ, ಅಮರಶಿಲ್ಪಿ ಜಕಣಾಚಾರಿ, ಸತ್ಯಹರಿಶ್ಚಂದ್ರ, ಮಿಸ್ ಲೀಲಾವತಿ, ಸಂಧ್ಯಾರಾಗ ಮತ್ತು ಬಂಗಾರದ ಹೂ - ಈ ಚಿತ್ರಗಳು ರಾಷ್ಟ್ರಪ್ರಶಸ್ತಿ ಗಳಿಸಿವೆ. ತಮಿಳು ಮತ್ತು ತೆಲುಗು ಚಿತ್ರಗಳಲ್ಲೂ ಅಭಿನಯಿಸಿ ಆ ಭಾಷೆಗಳ ಚಿತ್ರಪ್ರೇಮಿಗಳಿಗೂ ಇವರು ಪರಿಚಿತರಾಗಿದ್ದಾರೆ. ಕನ್ನಡದಲ್ಲಿ ಸ್ವತಂತ್ರವಾಗಿ ಇದೇ ಮಹಾಸುದಿನ ಎಂಬ ಚಿತ್ರವನ್ನು ನಿರ್ಮಿಸಿದ್ದರು.

ಉದಯಕುಮಾರ್ ಅವರಿಗೆ 1964ರಲ್ಲಿ ರಾಷ್ಟ್ರಪ್ರಶಸ್ತಿ ಲಭಿಸಿತು. ಮದರಾಸಿನ ಫಿಲಂ ಫ್ಯಾನ್ಸ್ ಅಸೋಸಿಯೇಷನ್ ಇವರಿಗೆ

ಶ್ರೇಷ್ಠನಟ ಎಂಬ ಬಿರುದನ್ನಿತ್ತು ಗೌರವಿಸಿದೆ. ಕರ್ನಾಟಕದ ವಿವಿಧ ಸಾಂಸ್ಕೃತಿಕ ಸಂಸ್ಥೆಗಳು ಇವರಿಗೆ ಸನ್ಮಾನಿಸಿವೆ. ಕನ್ನಡದ ಕುಮಾರ ತ್ರಯರಲ್ಲಿ ಒಬ್ಬರೆಂದು ಪ್ರಸಿದ್ಧರಾಗಿದ್ದ ಇವರು 1985ರಲ್ಲಿ ಅಕಾಲಿಕವಾಗಿ ನಿಧನ ಹೊಂದಿದರು. (ಎಸ್.ಎಚ್.ವಿ.)

**ಉದಯವಾಣಿ :** ಕರಾವಳಿ ಕರ್ನಾಟಕದ ಒಂದು ದಿನಪತ್ರಿಕೆ. 1970ರಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಮಣಿಪಾಲದಲ್ಲಿ ಪ್ರಕಟಣೆ ಆರಂಭಿಸಿತು. ಈಗ ಬೆಂಗಳೂರು ಮತ್ತು ಮುಂಬಯಿ ಆವೃತ್ತಿಯನ್ನೂ ಹೊಂದಿದೆ. ಪತ್ರಿಕೆಯ ಇಂದಿನ ಪ್ರಸಾರ ಸಂಖ್ಯೆ 55,000. ಈ ಪತ್ರಿಕೆ ಕರಾವಳಿ ಕರ್ನಾಟಕದಲ್ಲಷ್ಟೇ ಅಲ್ಲ ಮುಂಬೈ, ಕೊಲ್ಲಿ ರಾಷ್ಟ್ರಗಳಲ್ಲೂ ಅಸಂಖ್ಯಾತ ಓದುಗರನ್ನು ಹೊಂದಿದೆ.

ಪ್ರತಿವರ್ಷ ವೈಶಿಷ್ಟ್ಯಪೂರ್ಣವಾಗಿ ದೀಪಾವಳಿ ವಿಶೇಷ ಸಂಚಿಕೆ ಪ್ರಕಟಿಸಿ ಓದುಗರಿಗೆ ವೈವಿಧ್ಯಮಯ ಸಾಹಿತ್ಯವನ್ನು ಒದಗಿಸಲಾಗುತ್ತಿದೆ. ಮಹಿಳಾ ಸಂಪದ, ನಮ್ಮ ಬೆಂಗಳೂರು, ಕ್ರೀಡಾ ಸಂಪದ, ಕಲಾವಿಹಾರ, ಆರೋಗ್ಯವಾಣಿ, ಕರ್ನಾಟಕ ಸಂಪದಗಳಂತಹ ವಿಶೇಷ ಪುರವಣಿಗಳನ್ನೂ ಹೊರತರುತ್ತಿದೆ. ಇವಲ್ಲದೆ ಪ್ರಾದೇಶಿಕ ವಾರ್ತೆಗಳಿಗೂ ಮಹತ್ತ್ವ ನೀಡುತ್ತಿದೆ. ಈ ಪತ್ರಿಕೆ ಈಗ ಇಂಟರ್‌ನೆಟ್‌ನಲ್ಲೂ ಲಭ್ಯ.




ಪತ್ರಿಕೆಯ ಒಡೆತನ ಮಣಿಪಾಲ ಮೀಡಿಯ ನೆಟ್‌ವರ್ಕ್ ಲಿಮಿಟೆಡ್‌ಗೆ ಸೇರಿದೆ. ಉದಯವಾಣಿಯ ಈಗಿನ ಸಂಪಾದಕರು ಎನ್. ಗುರುರಾಜ್, ಪ್ರಧಾನ ಸಂಪಾದಕರು ಟಿ.ಸತೀಶ್, ಯು.ಪೈ. ಮುದ್ರಣ ಮತ್ತು ವಿನ್ಯಾಸಕ್ಕೆ ಭಾರತ ಸರ್ಕಾರದ ಸುದ್ದಿ ಮತ್ತು ಪ್ರಸಾರ ಇಲಾಖೆಯಿಂದ ಎಂಟು ಬಾರಿ ರಾಷ್ಟ್ರೀಯ ಪ್ರಶಸ್ತಿಯನ್ನು ಈ ಪತ್ರಿಕೆ ಪಡೆದುಕೊಂಡಿದೆ. (ಟಿ.ಎಂ.)

**ಉದಯಶಂಕರ, ಚಿ. :** 1934-93. ಕನ್ನಡ ಚಲನಚಿತ್ರಗೀತೆ ಮತ್ತು ಸಂಭಾಷಣೆ ರಚನಕಾರರು. ತುಮಕೂರು ಜಿಲ್ಲೆಯ ಚಿತ್ನಹಳ್ಳಿ ಗ್ರಾಮದಲ್ಲಿ 1934 ಫೆಬ್ರುವರಿ 19ರಂದು ಜನಿಸಿದರು. ತಂದೆ ಚಿ. ಸದಾಶಿವಯ್ಯ, ಕೂಡ ಚಲನಚಿತ್ರ ಕ್ಷೇತ್ರದಲ್ಲಿ ಹೆಸರು ಮಾಡಿದವರು.

ಉದಯಶಂಕರ ಅವರು ಪ್ರೌಢಶಾಲಾ ವಿದ್ಯಾಭ್ಯಾಸವನ್ನು ಬೆಂಗಳೂರಿನ ನ್ಯಾಷನಲ್ ಪ್ರೌಢಶಾಲೆಯಲ್ಲಿ ಮಾಡಿದರು. ಇವರೊಬ್ಬ ಪ್ರತಿಭಾನ್ವಿತ ವಿದ್ಯಾರ್ಥಿಯಾಗಿದ್ದರು. ಆಗ ಮಕ್ಕಳ ಕೂಟದ ಬಾವುಟ ಪತ್ರಿಕೆಗೆ ಸಂಪಾದಕರಾಗಿ ಕೆಲಸ ನಿರ್ವಹಿಸಿದರು. ಪ್ರೌಢಶಾಲಾ ವಿದ್ಯಾಭ್ಯಾಸ ಮುಗಿದ ಬಳಿಕ ಸಿನಿಮಾಟಾಗ್ರಾಫಿಯಲ್ಲಿ (ಚಲನಚಿತ್ರ ಛಾಯಾಗ್ರಾಹಕ) ಜ್ಞಾನ ಸಂಪಾದಿಸಿದರು. ತಮ್ಮ ಕ್ಷೇತ್ರದ ಕಡೆಯೇ ದಾರಿ ಹಿಡಿದು ಬಂದ ಮಗನಿಗೆ ಮದರಾಸಿನಲ್ಲಿ ಸಹಕಾರ ಪ್ರೋತ್ಸಾಹ ನೀಡಿ ಅವನ ಬೆಳವಣಿಗೆಗೆ ಕಾರಣೀಭೂತರಾದವರು ತಂದೆ ಸದಾಶಿವಯ್ಯ. ಇವರಿಗೆ ಆಗ ಚಿಕ್ಕ ಪುಟ್ಟ ಪಾತ್ರದಲ್ಲಿ ನಟಿಸುವ ಅವಕಾಶ ದೊರೆಯಿತು. ವಿಜಯನಗರದ ವೀರಪುತ್ರ ಚಲನಚಿತ್ರದಲ್ಲಿ ನಟಿಸಿದರು. ಸಂತತುಕಾರಾಂ ಚಿತ್ರಕ್ಕೆ ಸಂಭಾಷಣೆ ಬರೆಯುವುದರ ಮೂಲಕ ಸಾಹಿತಿಯಾಗಿ ಚಿತ್ರರಂಗಕ್ಕೆ ಪಾದಾರ್ಪಣೆ ಮಾಡಿದರು (1963). ಶಿವರಾತ್ರಿ ಮಹಾತ್ಮೆ ಚಿತ್ರಕ್ಕಾಗಿ ಇವರು ಮೊದಲ ಹಾಡು ರಚಿಸಿದರು (1964). ಮಹಾಸತಿ ಅನುಸೂಯ ಚಿತ್ರಕ್ಕೆ ಸಂಭಾಷಣೆ ಮತ್ತು ಹಾಡು ಎರಡನ್ನೂ ಮೊದಲು ಬರೆದ ಖ್ಯಾತಿ ಇವರದು (1965). ಅನಂತರ ನೂರಾರು ಚಿತ್ರಗಳಿಗೆ ಸಾಹಿತ್ಯ ರಚಿಸಿದರು: ಸಂಭಾಷಣೆ ಹಾಗೂ ಸಾವಿರಾರು ಹಾಡುಗಳನ್ನು ಬರೆದು ಖ್ಯಾತಿ ಗಳಿಸಿದರು.

ಕನ್ನಡದಲ್ಲಿ ಹಾಡು ಮತ್ತು ಸಂಭಾಷಣೆಯನ್ನೇ ವೃತ್ತಿ ಮಾಡಿಕೊಂಡು ಪ್ರಬುದ್ಧಮಾನಕ್ಕೆ ಬಂದು ವೃತ್ತಿನಿರತ ಬರೆಹಗಾರರಾಗಿಯೇ ಬದುಕು ನಡೆಸಿದ ಏಕೈಕ ವ್ಯಕ್ತಿ ಎಂಬ ಹೆಗ್ಗಳಿಕೆ ಇವರದು. ಇವರು ಸರಳ ಸಜ್ಜನಿಕೆಗೆ ಹೆಸರಾಗಿದ್ದರು. ಚಿತ್ರರಂಗದ ಎಲ್ಲರ ಜೊತೆ ಪರಸ್ಪರ



ಅರಿವು ಮತ್ತು ಸಹಕಾರ ಮನೋಭಾವದಿಂದ ಚಿತ್ರದ ಯಶಸ್ಸಿಗೆ ಶ್ರಮಿಸುವ ಜಾಯಮಾನದವರಾಗಿದ್ದರು. ಚಲನಚಿತ್ರಕ್ಕೆ ಅಲ್ಲಿನ ಪಾತ್ರವರ್ಗ ತಮ್ಮ ಉತ್ತಮ ಅಭಿನಯ ಮತ್ತು ಚಿತ್ರಸಂಭಾಷಣೆಯಿಂದ ಜೀವ ತುಂಬಿದಾಗ ಮಾತ್ರ ಅದು ಯಶಸ್ವಿಯಾಗಬಲ್ಲದು ಎಂಬುದು ಇವರ ದೃಢ ನಂಬಿಕೆಯಾಗಿತ್ತು. ವೆಂಕಟೇಶ್ವರ ಮಹಾತ್ಮೆ ಚಿತ್ರಕ್ಕೆ ಚಿತ್ರಕಥೆ ಬರೆಯುವ ಅವಕಾಶ ಒದಗಿ ಬಂದಾಗ ಖುದ್ದಾಗಿ ತಿರುಪತಿಗೆ ತೆರಳಿ ಅಲ್ಲಿಯ ಸ್ಥಳಪುರಾಣದ ಹಾಗೂ ಸಂಸ್ಕೃತಿಯ ಬಗ್ಗೆ ಸ್ಥಳೀಯರೊಡನೆ ಅಧ್ಯಯನ ನಡೆಸಿದರು. ಅಂತೆಯೇ ಮಹಾಕವಿ ಕಾಳಿದಾಸ ಚಿತ್ರಕ್ಕೆ ಸಂಸ್ಕೃತ ವಿದ್ವಾಂಸರೊಬ್ಬರ ನೆರವು ಪಡೆದು ಆಮೂಲಾಗ್ರ ಅಧ್ಯಯನ ನಡೆಸಿ ಕಾರ್ಯೋನ್ಮುಖರಾದರು. ಇವರು ಗಮಕ ಪ್ರವೀಣರೂ ಆಗಿದ್ದುದರಿಂದ ಗೀತೆಗಳನ್ನು ಸುಲಭವಾಗಿ ರಚಿಸಿಬಿಡುತ್ತಿದ್ದರು.

ಡಾ.ರಾಜಕುಮಾರ್ ಅವರ ಸುಮಾರು ಎಪ್ಪತ್ತಕ್ಕೂ ಹೆಚ್ಚು ಚಲನಚಿತ್ರಗಳಿಗೆ ಇವರು ಸಂಭಾಷಣೆ ಬರೆದಿರುವುದು ಇವರ ಪ್ರತಿಭೆಗೆ ಸಾಕ್ಷಿ. ಗೀತರಚನೆ ಮತ್ತು ಸಂಭಾಷಣೆ ಬರೆಯುವುದರ ಜೊತೆಗೆ ಐವತ್ತಕ್ಕೂ ಹೆಚ್ಚು ಚಲನಚಿತ್ರಗಳಲ್ಲಿ ಇವರು ಅಭಿನಯಿಸಿದ್ದರು. ಲಗ್ನಪತ್ರಿಕೆ ಚಿತ್ರದ ಬಲುಅಪರೂಪ ನಮ್ ಜೋಡಿ ............ ಹಾಡಿಗೆ ಇವರು ನೀಡಿದ ಅಭಿನಯ ಜನಪ್ರಿಯ ಎನಿಸಿತು. ಚಿತ್ರರಂಗದಲ್ಲಿ ಬಹಳ ಕೀರ್ತಿ ಪ್ರತಿಷ್ಠೆಗಳನ್ನು ಪಡೆದು ಮೇಲಿಂದ ಮೇಲೆ ಉತ್ತುಂಗ ಶಿಖರಕ್ಕೇರುತ್ತಿದ್ದಾಗಲೇ ಉದಯೋನ್ಮುಖ ನಟನಾದ ಇವರ ಪುತ್ರ ಹರೆಯದಲ್ಲೇ ಅಪಘಾತದಲ್ಲಿ ತೀರಿಕೊಂಡದ್ದು ಇವರ ಬದುಕಿನ ದೊಡ್ಡ ದುರಂತ.

ಇವರಿಗೆ ಹಲವು ಪ್ರಶಸ್ತಿಗಳು ಬಂದಿವೆ. ಚಿತ್ರಪ್ರೇಮಿಗಳ ಸಂಘ ಇವರಿಗೆ ಕವಿರಾಜ ಎಂಬ ಬಿರುದನ್ನು ನೀಡಿ ಗೌರವಿಸಿದೆ. ಇನ್ನೊಂದು ಸಂಘ ಸಾಹಿತ್ಯ ರತ್ನ ಎಂಬ ಬಿರುದನ್ನು ನೀಡಿ ಸನ್ಮಾನಿಸಿದೆ. ಕುಲಗೌರವ, ನಾಗರಹಾವು, ಪ್ರೇಮದ ಕಾಣಿಕೆ, ಜೀವನ ಚೈತ್ರ ಚಿತ್ರಗಳ ಸಂಭಾಷಣೆಗಾಗಿ ಮತ್ತು ಭಾಗ್ಯದ ಲಕ್ಷ್ಮೀಬಾರಮ್ಮ, ಆನಂದ ಇವೇ ಮೊದಲಾದ ಚಿತ್ರಗಳ ಚಿತ್ರಕಥೆಗಳಿಗಾಗಿ ರಾಜ್ಯ ಸರ್ಕಾರದ ಶ್ರೇಷ್ಠ ಸಂಭಾಷಣಕಾರ ಹಾಗೂ ಶ್ರೇಷ್ಠ ಚಿತ್ರನಾಟಕ ಕರ್ತೃ ಪ್ರಶಸ್ತಿ ಲಭ್ಯವಾಗಿದೆ. ಇವರು 1993 ಜುಲೈ 7ರಂದು ನಿಧನರಾದರು. (ಎಸ್.ಜಿ.ಪಿ.)

**ಉದ್ಯಾನಗಳು :** ಅಲಂಕಾರದ ಎಲೆ ಹೂಗಳಿಂದ ಕೂಡಿದ ಗಿಡಮರಗಳಿಂದ ತುಂಬಿ ಶೋಭಾಯಮಾನವಾಗಿರುವ ಉದ್ಯಾನಗಳು ಮಾನವ ಬಾಳಿ ಬದುಕಲು ಒಳ್ಳೆಯ ವಾತಾವರಣವನ್ನು ಕಲ್ಪಿಸಿಕೊಡುತ್ತವೆ. ವಿಶ್ರಾಂತಿ ಮನೋಲ್ಲಾಸಗಳಿಗೂ ಆರೋಗ್ಯಕ್ಕೂ ಉದ್ಯಾನಗಳು ಆವಶ್ಯಕ. ಉದ್ಯಾನಗಳನ್ನು ನಿರ್ಮಿಸುವ ಕಲ್ಪನೆ ಬಹು ಪ್ರಾಚೀನವಾದದ್ದು. ಕನ್ನಡ ಕಾವ್ಯಗಳಲ್ಲಿ ಪ್ರಾಚೀನ ಶಾಸನಗಳಲ್ಲಿ ವನೋದ್ಯಾನಗಳ ಮತ್ತು ಪುಷ್ಪವಾಟಿಕೆಗಳ ಪ್ರಸ್ತಾಪ ಅನೇಕ ಕಡೆ ಬರುತ್ತದೆ. ರಾಜ ಮಹಾರಾಜರೂ ಋಷಿಮುನಿಗಳೂ ಆಶ್ರಮವಾಸಿಗಳೂ ಉದ್ಯಾನಗಳನ್ನು ನಿರ್ಮಿಸಿಕೊಳ್ಳುತ್ತಿದ್ದರು. ಮುಡಿಯುವ ಹೂವಿಗಾಗಿ, ದೇವರ ಪೂಜೆಗೆ ಮತ್ತು ಸುಂದರ ವಾತಾವರಣವನ್ನು ಕಲ್ಪಿಸಲು ದೇವಸ್ಥಾನ ಮನೆ ಬಂಗಲೆಗಳ ಆವರಣದಲ್ಲಿ ಉದ್ಯಾನಗಳನ್ನು ಬೆಳೆಸುವುದು ಹಿಂದಿನಿಂದಲೂ ರೂಢಿಯಲ್ಲಿದೆ.

ಆಧುನಿಕತೆ ಬೆಳೆದಂತೆಲ್ಲಾ ಉದ್ಯಾನಗಳ ಉದ್ದಿಶ್ಯ ವಿನ್ಯಾಸ ಮತ್ತು ತಂತ್ರ ಇವುಗಳಲ್ಲಿ ಅನೇಕ ವೈಜ್ಞಾನಿಕ ಅಂಶಗಳು ಬೆರೆಯುತ್ತ ಉದ್ಯಾನಗಳು ಹೊಸ ರೂಪವನ್ನು ಪಡೆಯುತ್ತಿವೆ. ಈ ಉದ್ಯಾನಗಳು ಕೇವಲ ಧನಿಕರ ಮನರಂಜನಾ ಸ್ಥಾನ ಮಾತ್ರವಾಗಿಲ್ಲದೆ ಸಾರ್ವಜನಿಕರೆಲ್ಲರ ಉಪಯೋಗಕ್ಕೆ ನಿರ್ಮಿತವಾಗುತ್ತಿವೆ. ಅದರಲ್ಲೂ ನಗರ ಪಟ್ಟಣಗಳಲ್ಲಿ ಕಾರ್ಖಾನೆ, ವಾಹನ ಇತ್ಯಾದಿಗಳಿಂದ ಕಲುಷಿತಗೊಂಡ ವಾತಾವರಣದಲ್ಲಿ ಈ ಉದ್ಯಾನಗಳು ಶುದ್ಧವಾಯುಪೂರೈಕೆಗೆ ಸಹಕಾರಿಗಳಾಗಿರುವುದಲ್ಲದೆ ಆ ಪ್ರದೇಶದ ಸೌಂದರ್ಯವನ್ನೂ ಹೆಚ್ಚಿಸುತ್ತಿವೆ.

ಈಗಿನ ಕಲ್ಪನೆಯ ಪ್ರಕಾರ ಉದ್ಯಾನವೆಂದರೆ ವರ್ಷದ ಎಲ್ಲ ಋತುವಿನಲ್ಲೂ ಒಂದಲ್ಲ ಒಂದು ಜಾತಿಯ ಬಣ್ಣ ಬಣ್ಣದ ಸುಗಂಧಭರಿತ ಹೂವು ಬಿಡುವ ಗಿಡ ಮರ ಬಳ್ಳಿಗಳಿಂದ ಕೂಡಿರುವ ಹುಲ್ಲಿನ ಮೈದಾನ, ಮುಖ್ಯ ರಸ್ತೆ, ಕಿರು ರಸ್ತೆ, ಕಲಾಕೃತ ಮಡಿಗಳು, ಅಲಂಕಾರದ ಕುರುಚಲು, ಪೊದೆಸಸ್ಯ ಮತ್ತು ಮರಗಳನ್ನು ವ್ಯವಸ್ಥಿತ ರೀತಿಯಲ್ಲಿ ಮನರಂಜಿಸುವಂತೆ ಬೆಳೆಸಿರುವ ಪ್ರದೇಶ.

ಸಾರ್ವಜನಿಕ ಉದ್ಯಾನಗಳನ್ನು ಅಭಿವೃದ್ಧಿಪಡಿಸುವುದರಲ್ಲಿ ಕರ್ನಾಟಕ ರಾಜ್ಯ ತೋಟಗಾರಿಕೆ ಇಲಾಖೆ ಪ್ರಮುಖ ಪಾತ್ರವಹಿಸುತ್ತಿದೆ. ಅನೇಕ ಕಡೆಗಳಲ್ಲಿ ಉತ್ತಮವಾದ ಉದ್ಯಾನಗಳನ್ನು ಇಲಾಖೆ ನಿರ್ಮಿಸಿರುವುದಲ್ಲದೆ ಸಾರ್ವಜನಿಕರು ತಮ್ಮ ಮನೆಗಳಲ್ಲಿ ಹಾಗೂ ಇತರ ಸಂಸ್ಥೆಗಳ ನಿವೇಶನಗಳಲ್ಲಿ ಉದ್ಯಾನಗಳನ್ನು ಬೆಳೆಸಲು, ವೈಜ್ಞಾನಿಕ ರೀತಿಯ ಸಲಹೆ, ಸಹಕಾರ ಮತ್ತು ಪ್ರೋತ್ಸಾಹಕ ಬಹುಮಾನಗಳನ್ನೂ ನೀಡುತ್ತಿದೆ. ಈ ಕಾರ್ಯಕ್ರಮಗಳಿಂದ ಸರ್ಕಾರಿ ಮತ್ತು ಖಾಸಗಿ ಸಂಘ ಸಂಸ್ಥೆಗಳು ಹೆಚ್ಚುಹೆಚ್ಚಾಗಿ ಉದ್ಯಾನಗಳನ್ನು ತಮ್ಮ ಪ್ರದೇಶಗಳಲ್ಲಿ ಬೆಳೆಸಿ, ಅಭಿವೃದ್ಧಿಪಡಿಸಿಕೊಂಡು ಬರುತ್ತಿದ್ದಾರೆ. ಕಾರ್ಖಾನೆಯ ಕಾರ್ಮಿಕರು ಮತ್ತು ಅದಕ್ಕೆ ಸಂಬಂಧಪಟ್ಟ ಇತರ ಶ್ರಮಜೀವಿಗಳು ಕೆಲಸ ನಿರ್ವಹಿಸಿ ಬಂದು ಉದ್ಯಾನಗಳಲ್ಲಿ ವಿಶ್ರಾಂತಿ, ವಿರಾಮ ಪಡೆದುಕೊಳ್ಳಲು ಅನುಕೂಲವಾಗುವಂತೆ ಅನೇಕ ಕಾರ್ಖಾನೆಗಳು ಉದ್ಯಾನಗಳನ್ನು ನಿರ್ಮಿಸುತ್ತಿವೆ. ನಗರ ಸಭೆ, ಪೌರಸಮಿತಿ ಮುಂತಾದ ಸಂಸ್ಥೆಗಳೂ ಮಕ್ಕಳ ಪ್ರಯೋಜನಕ್ಕಾಗಿ ನಗರ ಪಟ್ಟಣಗಳ ಮಧ್ಯೆ ಉದ್ಯಾನಗಳನ್ನು ನಿರ್ಮಿಸುವ ಕ್ರಮವನ್ನು ಕೈಗೊಂಡಿವೆ.

ಪ್ರತಿಯೊಂದು ನಗರ ಪಟ್ಟಣಗಳಲ್ಲಿ ಹೊಸದಾಗಿ ನಿರ್ಮಿತವಾದ ಬಡಾವಣೆಗಳಲ್ಲಿ ಮೊದಲು ಉದ್ಯಾನಕ್ಕಾಗಿ ಸ್ಥಳವನ್ನು ಗೊತ್ತುಮಾಡುವುದು ಹಾಗೂ ಸಾರ್ವಜನಿಕ ಉದ್ಯಾನಗಳಲ್ಲಿ ಸಸಿಕ್ಷೇತ್ರ, ಅಲಂಕಾರದ ಹಾಗೂ ನೆರಳಿನ ಮರಗಳು, ಹೂಮಡಿಗಳು, ಕಲಾಕೃತ ಮಡಿಗಳು, ಕಾಲುದಾರಿಗಳು, ಕಲ್ಲೇರಿಗಳು, ಲತಾಗೃಹ- ಇವುಗಳಿಗೆ ಉದ್ಯಾನ ವ್ಯವಸ್ಥೆಯಲ್ಲಿ ತಕ್ಕ ಸ್ಥಾನ ಕಲ್ಪಿಸುವುದು ಪದ್ಧತಿಯಾಗಿದೆ. ಮುಂದುವರೆದ ದೇಶಗಳಲ್ಲಿ ಕಂಡುಬರುವ ಅಲಂಕಾರೋದ್ಯಾನ ರಚನೆ ಕ್ರಮಗಳನ್ನು ಅನುಸರಿಸುವ ಪ್ರಯತ್ನಗಳೂ ನಡೆದಿವೆ.

ಕರ್ನಾಟಕದ ವಿವಿಧ ಭಾಗಗಳಲ್ಲಿ ಮುಖ್ಯ ಉದ್ಯಾನಗಳ ವಿವರಗಳನ್ನು ಇಲ್ಲಿ ಕೊಡಲಾಗಿದೆ.

**ಕೃಷ್ಣರಾಜೇಂದ್ರ ಗಿರಿಧಾಮ - ಕೆಮ್ಮಣ್ಣುಗುಂಡಿ:** ಚಿಕ್ಕಮಗಳೂರು ಜಿಲ್ಲೆಯಲ್ಲಿದೆ. ಪಶ್ಚಿಮಘಟ್ಟಗಳ ಸಹಜಸೌಂದರ್ಯವನ್ನು ಬಳಸಿಕೊಂಡು ಸು.22 ಎಕರೆ ವಿಸ್ತಾರವಾದ ಪ್ರದೇಶದಲ್ಲಿ ಇದನ್ನು ನಿರ್ಮಿಸಲಾಗಿದೆ. ಬಹುಮಂದಿ ಪ್ರವಾಸಿಗರು ಪ್ರತಿನಿತ್ಯ ಗಿರಿಧಾಮಕ್ಕೆ ಭೇಟಿ ನೀಡುತ್ತಾರಲ್ಲದೆ ಬೇಸಿಗೆಯ ದಿನಗಳಲ್ಲಿ ವಿಶ್ರಾಂತಿಗಾಗಿ ತಂಗುವುದೂ ಉಂಟು. ಇಳಿಜಾರಿನಲ್ಲಿ ಹಂತಹಂತವಾಗಿ ಕಡಿದು ಮಾಡಿದ ಜಗತಿ ತೋಟ, ಹುಲ್ಲಿನ ಮೈದಾನ, ಹೂಹಾಸಿಗೆ, ಕುರುಚಲು ಪೊದೆಸಸ್ಯ ಕಮಾನುಗಳ ಮೇಲೆ ಹಬ್ಬಿಸಿರುವ ಬಳ್ಳಿಗಳು ಎಲ್ಲ ಋತುಗಳಲ್ಲಿಯೂ ಹೂ ತುಂಬಿ ಮೆರಗುತ್ತವೆ. ಇದು ಒಳ್ಳೆಯ ವಿಶ್ರಾಂತಿ ಹಾಗೂ ಆರೋಗ್ಯಧಾಮ.

**ನಂದಿ ಗಿರಿಧಾಮ - ನಂದಿದುರ್ಗ:** ಇದು ರಾಜ್ಯದ ಪ್ರಸಿದ್ಧ ಗಿರಿಧಾಮ. ಕೋಲಾರ ಜಿಲ್ಲೆಯಲ್ಲಿದೆ. ಇಲ್ಲಿ ಅನುಕೂಲವಿರುವ ಕಡೆಗಳಲ್ಲೆಲ್ಲ ಉದ್ಯಾನವನ್ನು ಮಾಡಲಾಗಿದೆ. ಇಲ್ಲಿನ ನಿಸರ್ಗ ರಮಣೀಯವಾಗಿದೆ. ತಂಪು ಹವಾಗುಣವಿರುವುದರಿಂದ ಬೇಸಿಗೆ ಕಾಲದಲ್ಲಿ ಸಾರ್ವಜನಿಕರು ಬಂದು ಇಲ್ಲಿ ತಂಗುತ್ತಾರೆ. ಇದು ಉತ್ತಮ ಆರೋಗ್ಯಧಾಮವೆನಿಸಿಕೊಂಡಿದೆ.

**ಬೃಂದಾವನ ಉದ್ಯಾನ-ಕೃಷ್ಣರಾಜಸಾಗರ:** 1936ರಲ್ಲಿ 75ಎಕರೆ ವಿಸ್ತೀರ್ಣದ ಉದ್ಯಾನವನ್ನು ರಚನೋದ್ಯಾನ ಕ್ರಮವಾಗಿ ನಿರ್ಮಿಸಲಾಗಿದೆ. ವಿಶ್ವ ವಿಖ್ಯಾತಿಗಳಿಸಿರುವ ಬೃಂದಾವನ ಬಹಳ ಆಕರ್ಷಕ ಉದ್ಯಾನ.



ಸಂಗೀತ ಕಾರಂಜಿ, ಕೃಷ್ಣರಾಜಸಾಗರ

**ನಿಷಾದ್‌ಬಾಗ್ ಉದ್ಯಾನ - ಮೈಸೂರು:** ಇದು ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ ಕಾಲದಲ್ಲಿ ರಚಿತವಾದ ಉದ್ಯಾನ. ಇದರ ವಿಸ್ತೀರ್ಣ 12ಎಕರೆ. ಇದು ಹಿಂದೆ ಖಾಸಗಿಯವರ ಸ್ವತ್ತಾಗಿತ್ತಂತೆ; ಇದನ್ನು ಕುಪ್ಪಣ್ಣನ ತೋಟವೆಂದೂ ಕರೆಯುತ್ತಾರೆ. ಅರಮನೆಯ ಮೇಲ್ವಿಚಾರಕರಾಗಿದ್ದ ಜಿ.ಎಚ್. ಕ್ರಂಬೀಗಲ್‌ರವರ ಕಾಲದಲ್ಲಿ ಅಲಂಕಾರೋದ್ಯಾನವಾಯಿತು. ಅನಂತರ ರಾಜಮನೆತನದವರ ಮೇಲ್ವಿಚಾರಣೆಯಿಂದ ತೋಟಗಾರಿಕೆ ಇಲಾಖೆಗೆ ವರ್ಗಾಯಿಸಲಾಯಿತು.

**ದಕ್ಷಿಣ ವಿಭಾಗದ ಉದ್ಯಾನ - ಮೈಸೂರು:** ಇದು ಮೈಸೂರಿನ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್ ಅವರ ಕಾಲದಲ್ಲಿ ಸ್ಥಾಪಿತವಾಯಿತು. 60ಎಕರೆಯ ಈ ಉದ್ಯಾನದ ಸುತ್ತ ಮುತ್ತಲು ಪ್ರೌಢಶಾಲೆ, ಮಹಾರಾಣಿ ಕಾಲೇಜು, ಮಹಾರಾಜ ಕಾಲೇಜು, ಕ್ರಾಫರ್ಡ್ ಹಾಲ್, ಅಠಾರ ಕಚೇರಿ ಮತ್ತು ಅತಿಥಿ ಗೃಹಗಳು ಬೆಳೆದುಕೊಂಡಿವೆ. ಇಲ್ಲಿ ವರ್ಷದ ನಾನಾ ಋತುವಿನಲ್ಲಿ ಒಂದಲ್ಲ ಒಂದು ಜಾತಿಯ ಗಿಡಗಳು ಹೂವಿನಿಂದ ತುಂಬಿರುವುದನ್ನು ಕಾಣಬಹುದು. ರಾಜಮನೆತನದವರ ಆಳ್ವಿಕೆಯಿಂದ ತೋಟಗಾರಿಕೆ ಇಲಾಖೆಗೆ ವರ್ಗಾವಣೆಗೊಂಡ ಮೇಲೆ ಇದರ ಮೇಲ್ವಿಚಾರಣೆ ಪೂರ್ಣವಾಗಿ ತೋಟಗಾರಿಕೆ ಇಲಾಖೆಯದಾಗಿದೆ.

**ಕರ್ಜನ್ ಉದ್ಯಾನ - ಮೈಸೂರು:** 5ಎಕರೆ ವಿಸ್ತೀರ್ಣವುಳ್ಳ ಈ ಉದ್ಯಾನವನ್ನು ಲಾರ್ಡ್ ಕರ್ಜನ್ ಅವರ ಜ್ಞಾಪಕಾರ್ಥವಾಗಿ ನಿರ್ಮಿಸಿದ ಉದ್ಯಾನವೆಂದು ಪರಿಗಣಿಸಲಾಗಿದೆ. ಇದನ್ನು ಕೂಡ ಕಂಬಿಗಲ್‌ರವರ ಕಾಲದಲ್ಲಿ ಸ್ಥಾಪಿಸಲಾಯಿತು. ಇದು ಮೈಸೂರು ನಗರದ ಮಧ್ಯಭಾಗದಲ್ಲಿ ಅರಮನೆಯ ಉತ್ತರ ದಿಕ್ಕಿನ ದ್ವಾರದ ಎಡಪಾರ್ಶ್ವಗೋಡೆಯ ಪಕ್ಕದಲ್ಲಿದೆ.

**ಚೆಲುವಾಂಬ ಉದ್ಯಾನ - ಮೈಸೂರು:** 1915ರ ಲಾಗಾಯ್ತು ಮೈಸೂರು ನಗರಸಭೆಯ ಆಡಳಿತಕ್ಕೆ ಒಳಪಟ್ಟಿದೆ. ಮೈಸೂರಿನಲ್ಲಿ 5 ರಿಂದ 10 ಎಕರೆ ವಿಸ್ತೀರ್ಣವುಳ್ಳ 33 ಸಣ್ಣ ದೊಡ್ಡ ಉದ್ಯಾನಗಳಿವೆ. ಈ ಸೊಬಗಿನ ಉದ್ಯಾನಗಳಿಂದ ತುಂಬಿ ಪ್ರವಾಸಿಗರನ್ನು ಆಕರ್ಷಿಸುವುದರಿಂದ ಮೈಸೂರು ಉದ್ಯಾನ ನಗರವೆಂದು ಪ್ರಸಿದ್ಧಿಯಾಗಿದೆ.

**ಲಾಲ್‌ಬಾಗ್ ಉದ್ಯಾನ - ಬೆಂಗಳೂರು:** 10ಎಕರೆ ವಿಸ್ತೀರ್ಣದ ಈ ಉದ್ಯಾನ 1770ರಲ್ಲಿ ಹೈದರ್ ಅಲಿಯಿಂದ ಬೆಂಗಳೂರು ನಗರದ ಮಧ್ಯಭಾಗದಲ್ಲಿ ಪ್ರಾರಂಭವಾಯಿತು. ಅನಂತರ ಟಿಪ್ಪುಸುಲ್ತಾನ್ ಈ ಉದ್ಯಾನದ ಸೊಬಗು ಹಾಗೂ ಅಲ್ಲಿನ ವಿವಿಧ ಜಾತಿಯ ಕಣ್ಣು ಕೋರೈಸುವ ಹೂವಿನ ಸಸ್ಯಗಳನ್ನು ಕಂಡು ಲಾಲ್‌ಬಾಗ್ ಎಂಬ ಹೆಸರನ್ನು ಕೊಟ್ಟ. ತರುವಾಯ ಅನೇಕ ತಜ್ಞರು ಲಾಲ್‌ಬಾಗಿನ ಮೇಲ್ವಿಚಾರಕರಾಗಿದ್ದು ಇದರ ಅಭಿವೃದ್ಧಿಗಾಗಿ ದುಡಿದಿದ್ದಾರೆ. ಜಾನ್ ಕೆಮರಾನ್ ಎಂಬಾತ ಪರದೇಶಗಳ ಸಸಿಯನ್ನು ತಂದು ನೆಟ್ಟು ಬೆಳೆಸಲಾರಂಭಿಸಿದ ಅನಂತರ

ಜಿ.ಎಚ್.ಕ್ರಂಬಿಗಲ್ ಈ ಉದ್ಯಾನವನ್ನು ವಿವಿಧ ಭಾಗಗಳನ್ನಾಗಿ ವಿಭಾಗಿಸಿದ. ಜವರಯ್ಯ, ನಂಜಪ್ಪ, ಎಂ.ಎಚ್.ಮರಿಗೌಡ ಮುಂತಾದ ನಿರ್ದೇಶಕರ ಶ್ರಮದ ಫಲವಾಗಿ ಅಭಿವೃದ್ಧಿಹೊಂದಿ ಇಂದು (1976)



ಲಾಲ್‌ಬಾಗ್, ಬೆಂಗಳೂರು

240ಎಕರೆ ವಿಸ್ತೀರ್ಣವುಳ್ಳದ್ದಾಗಿದೆ. ಈ ಉದ್ಯಾನದಲ್ಲಿ ಮುಗಲ್, ಇಟಾಲಿಯನ್, ಜಪಾನ್ ಮಾದರಿಗಳ ಅಲಂಕಾರೋದ್ಯಾನ ರಚನೆಯನ್ನು ಕಾಣಬಹುದು ಹಾಗೂ ಗುಲಾಬಿ ವನ, ಮಲ್ಲಿಗೆ ವನ, ತಾವರೆ ಕೊಳ, ಟೋಪಿಯೆರಿ, ಪುಷ್ಪಾಭಿವೃದ್ಧಿ ವಿಭಾಗ, ಬ್ಯಾಂಡ್ ಸ್ಟ್ಯಾಂಡ್, ಎಕನಾಮಿಕ್ಸ್ ಉದ್ಯಾನ, ಫೈಕಸ್‌ಲಾನ್, ಸೇಡ್ ಉದ್ಯಾನ, ಸ್ಟ್ಯಾಚುರೌಂಡ್, ಮ್ಯಾಗ್ನೋಲಿಯ ಲಾನ್, ಬಾಹಿನಿಯಾ ಲಾನ್, ಕ್ಯಾಸಿಯ ಲಾನ್ ಮುಂತಾದ ಉದ್ಯಾನ ವಿಭಾಗಗಳಾಗಿ ವಿಂಗಡಿಸಲಾಗಿದೆ. ವಿಶ್ವದ ನಾನಾ ಮೂಲೆಗಳಿಂದ ತಂದು ಬೆಳೆಸಿದ ಸಸ್ಯಗಳಿಂದ ಈ ಉದ್ಯಾನ ವಿಶ್ವ ಪ್ರಖ್ಯಾತವಾಗಿದೆ. ಇದು ಕರ್ನಾಟಕ ರಾಜ್ಯದ ತೋಟಗಾರಿಕೆ ಇಲಾಖೆಗೆ ಮೂಲಸ್ಥಾನ. ಇದರಲ್ಲಿ ಹಿರಿಯ ರಸ್ತೆಗಳು, ಕಾಲುದಾರಿಗಳು ಕುರುಚಲು ಸಸ್ಯ, ಪೊದೆಸಸ್ಯ ಮುಂತಾಗಿ ಗಿಡಮರಗಳನ್ನು ವಿಂಗಡವಾಗಿ ಜೋಡಿಸಿರುವಂತೆ ಬೆಳೆಸಿದ್ದಾರೆ. ನಾನಾ ಋತುವಿನಲ್ಲೂ ವಿವಿಧ ಬಣ್ಣದ ಹೂಗಳಿಂದ ತುಂಬಿರುತ್ತದೆ.

**ಕಬ್ಬನ್ ಉದ್ಯಾನ - ಬೆಂಗಳೂರು:** ಸರ್ ಮಾರ್ಕ್ ಕಬ್ಬನ್ನರ ಜ್ಞಾಪಕಾರ್ಥವಾಗಿ ಈ ಉದ್ಯಾನಕ್ಕೆ ಈ ಹೆಸರು ಬಂದಿದೆ. ಇದರ ವಿಸ್ತೀರ್ಣ 300 ಎಕರೆ. ಕ್ರಂಬಿಗಲ್ ಕಾಲದಲ್ಲಿ ಇದರ ರಚನೆಯಾಯಿತು. ಇದು ಬೆಂಗಳೂರು ನಗರದ ಮಧ್ಯಭಾಗದಲ್ಲಿದೆ. ಇದನ್ನು ರಾಣಿ ಉದ್ಯಾನ, ಬ್ಯಾಂಡ್ ಸ್ಟ್ಯಾಂಡ್ ಉದ್ಯಾನ, ಚಾಮರಾಜೇಂದ್ರ ಫೇರಿ ಫೌಂಟನ್ ಉದ್ಯಾನ, ಶೇಷಾದ್ರಿ ಹಾಲ್ ಉದ್ಯಾನ, ಕ್ಯಾನಾಬೆಡ್ ಉದ್ಯಾನಗಳಾಗಿ ವಿಂಗಡಿಸಲಾಗಿದೆ. ವರ್ಷದ ಎಲ್ಲ ಋತುವಿನಲ್ಲೂ ಒಂದಲ್ಲ ಒಂದು ಜಾತಿಯ ಹೂ ತುಂಬಿರುತ್ತದೆ.

**ರಾಜಭವನ ಉದ್ಯಾನ - ಬೆಂಗಳೂರು:** ಸುಮಾರು 5 ಎಕರೆ ವಿಸ್ತೀರ್ಣವುಳ್ಳ ಈ ಉದ್ಯಾನ ವನದಲ್ಲಿ ಗುಲಾಬಿ ಮತ್ತಿತರ ಹೂವಿನ ಮಡಿಗಳನ್ನು, ಹುಲ್ಲಿನ ಪಸಲೆಗಳನ್ನು ಕಾಣಬಹುದು.

**ವಿಧಾನಸೌಧದ ಉದ್ಯಾನ - ಬೆಂಗಳೂರು:** ವಿಧಾನಸೌಧಕ್ಕೆ ಮೆರುಗನ್ನು ನೀಡುತ್ತಿರುವ 18 ಎಕರೆ ವಿಸ್ತೀರ್ಣವುಳ್ಳ ಈ ಉದ್ಯಾನ ಸೌಧದ ಸುತ್ತಲೂ ನೇರವಾಗಿ ಬೆಳೆದು ನಿಂತ ಪಾಲಿಯಾಲ್ತಿಯ ಪೆಂಡುಲ ಸಸ್ಯ ಮತ್ತು ನಾನಾಜಾತಿಯ ಸುಂದರವಾದ ಹೂವಿನ ಮಡಿಗಳು, ಹುಲ್ಲಿನ ಪಸಲೆಗಳನ್ನು ಅಲಂಕಾರೋದ್ಯಾನ ರಚನೆಯೊಂದಿಗೆ ನಿರ್ಮಿಸಲಾಗಿದೆ. ಸೌಧದ ಮಧ್ಯೆ ಎರಡು ಅಂಗಳದಲ್ಲಿ ಫೌಂಟನ್ ಗುಲಾಬಿ ಗಿಡಗಳನ್ನು ಬೋಗನ್‌ವಿಲ್ಯ ಗಿಡಗಳನ್ನು ಬೆಳೆಸಲಾಗಿದೆ.

ಈ ಮುಖ್ಯ ಉದ್ಯಾನಗಳಲ್ಲದೆ ಕರ್ನಾಟಕದ ನಾನಾ ಕಡೆಗಳಲ್ಲಿ ಕೆಳಕಂಡ ಉದ್ಯಾನಗಳನ್ನು ಅಭಿವೃದ್ಧಿಪಡಿಸಲಾಗಿದೆ.

**ಕೊಡಗು ಜಿಲ್ಲೆ:** ಮಡಿಕೇರಿಯ ರಾಜಾಸೀಟ್ ಉದ್ಯಾನ (ಸ್ಥಾಪನೆ: 1969-70, ವಿಸ್ತೀರ್ಣ 5 ಎಕರೆ), ಸುದರ್ಶನ ಉದ್ಯಾನ, ಫೋರ್ಟ್ ಉದ್ಯಾನ.

**ಚಿಕ್ಕಮಗಳೂರು ಜಿಲ್ಲೆ:** ಚಿಕ್ಕಮಗಳೂರಿನ ಮಹಾತ್ಮಾಗಾಂಧೀ ಉದ್ಯಾನ (1957, 4ಎಕರೆ), ಮಹಾತ್ಮಾಗಾಂಧೀ ಶತಮಾನೋತ್ಸವ ಉದ್ಯಾನ (1972, 36 ಎಕರೆ), ತರೀಕೆರೆಯ ವಿಜ್ಞಾನ್ ಇಂಡಸ್ಟ್ರೀಸ್ ಉದ್ಯಾನ ಮತ್ತು ಕೊಪ್ಪದ ಪಿ.ಜೆ. ಗುರ್ಜರ್ ಉದ್ಯಾನ.

**ಬಿಜಾಪುರ ಜಿಲ್ಲೆ:** ಬಿಜಾಪುರದಲ್ಲಿ ಗೋಳಗುಮ್ಮಟ, ಜೋಡಿ ಗುಮ್ಮಟ, ಗಗನ್ ಮಹಲ್ - ಈ ಪ್ರಾಚೀನ ಸ್ಮಾರಕಗಳ ಬಳಿ ಇರುವ ಉದ್ಯಾನಗಳು (1958, ಕ್ರಮವಾಗಿ 20, 2, 2 ಎಕರೆಗಳು). ರಾಣಿ ಬಗೀಚಾ (1942), ಸೈನಿಕರ ಶಾಲಾ ಉದ್ಯಾನ (1962) ಮತ್ತು ಸರ್ಕಾರಿ ಕಲಾ ಮತ್ತು ವಿಜ್ಞಾನ ಕಾಲೇಜು ಉದ್ಯಾನ.

**ಚಿತ್ರದುರ್ಗ ಜಿಲ್ಲೆ:** ದಾವಣಗೆರೆಯ ಭಾರತರತ್ನ ವಿಶ್ವೇಶ್ವರಯ್ಯ ಉದ್ಯಾನ ಮತ್ತು ರಾಜನಹಳ್ಳಿ ಹನುಮಂತಪ್ಪ ಮತ್ತು ಮಕ್ಕಳ ಖಾಸಗಿ ಉದ್ಯಾನ, ಹರಿಹರದ ಕಿರ್ಲೋಸ್ಕರ್ ಕಾರ್ಖಾನೆ ಉದ್ಯಾನ.

**ಧಾರವಾಡ ಜಿಲ್ಲೆ:** ಹುಬ್ಬಳ್ಳಿ-ಧಾರವಾಡದಲ್ಲಿರುವ ಮಹಾತ್ಮಾ ಗಾಂಧೀ ಶತಮಾನೋತ್ಸವ ಉದ್ಯಾನ (1969), ಕರ್ನಾಟಕ ವೈದ್ಯಕೀಯ ಕಾಲೇಜು ಉದ್ಯಾನ, ಕರ್ನಾಟಕ ವಿಶ್ವವಿದ್ಯಾಲಯದ ಉದ್ಯಾನ, ಆಜಾದ್ ಉದ್ಯಾನ ಮತ್ತು ಕಿತ್ತೂರು ಚೆನ್ನಮ್ಮ ಉದ್ಯಾನ. ಬ್ಯಾಡಗಿಯ ಪೌರಸಮಿತಿಯ ಉದ್ಯಾನ, ರಾಣೆಬೆನ್ನೂರಿನ ವಿವೇಕಾನಂದ ಉದ್ಯಾನ, ಗದಗಿನ ವೀರ ನಾರಾಯಣ ವನ, ರೋಣ ತಾಲ್ಲೂಕಿನ ಹಾಲಕೋರಿಯಲ್ಲಿನ ಖಾಸಗಿ ಉದ್ಯಾನ, ನರೇಗಲ್ಲದ ಪ್ರೌಢಶಾಲಾ ಉದ್ಯಾನ.

**ಕೋಲಾರ ಜಿಲ್ಲೆ:** ಕೋಲಾರದ ಶ್ರೀಕೃಷ್ಣ ರಾಜೇಂದ್ರ ಉದ್ಯಾನ (1940), ಕಮಲಾ ನೆಹರು ಸ್ಯಾನಿಟೋರಿಯಂ ಉದ್ಯಾನ (1959), ಮಿಷನ್ ಆಸ್ಪತ್ರೆಯ ಉದ್ಯಾನ (1910, 3 ಎಕರೆ), ನಚಿಕೇತ ನಿಲಯದ ಉದ್ಯಾನ (1955, 4 ಎಕರೆ), ನರಸಿಂಹರಾಜ ಆಸ್ಪತ್ರೆ ಉದ್ಯಾನ (1953, 2 ಎಕರೆ), ಟಿ.ಚೆನ್ನಯ್ಯ ಮಕ್ಕಳ ಉದ್ಯಾನ, ನೆಹರು ಉದ್ಯಾನ (1953, 2 ಎಕರೆ), ಮಾಲೂರಿನ ಉದ್ಯಾನ, ಬಂಗಾರಪೇಟೆಯ ಸಿಲ್ವರ್ ಜ್ಯೂಬಿಲಿ ಉದ್ಯಾನ (1902, 3 ಎಕರೆ), ಕಿಂಗ್ ಜಾರ್ಜ್ ಹಾಲ್ ಉದ್ಯಾನ, ಡಾ. ಅಂಬೇಡ್ಕರ್ ಉದ್ಯಾನ (1950, 2 ಎಕರೆ), ಮಾರಿಕುಪ್ಪಮ್ ಉದ್ಯಾನ (1968, 30 ಎಕರೆ), ಮುಳಬಾಗಿಲು ಉದ್ಯಾನ (3 ಎಕರೆ), ಶ್ರೀನಿವಾಸಪುರ ಪುರಸಭಾ ಉದ್ಯಾನ, ಮುದ್ದೇನಹಳ್ಳಿ ಸರ್ ಎಂ.ವಿಶ್ವೇಶ್ವರಯ್ಯ ಸ್ಮಾರಕ ಉದ್ಯಾನ (1970, 1 ಎಕರೆ), ಚಿಕ್ಕಬಳ್ಳಾಪುರ, ಗೌರಿಬಿದನೂರು, ಬಾಗೇಪಲ್ಲಿಗಳ ಪುರಸಭಾ ಉದ್ಯಾನಗಳು.



ಕಬ್ಬನ್ ಉದ್ಯಾನ, ಬೆಂಗಳೂರು

**ಬೆಳಗಾಂವಿ ಜಿಲ್ಲೆ:** ಶಾಹಪುರದ ಶಿವಾಜಿ ಉದ್ಯಾನ (8 ಎಕರೆ) ಟಿಳಕವಾಡಿಯ ಮಹಾತ್ಮಾ ಫೂಲೆ, ಕಾಂಗ್ರೆಸ್ ವೆಲ್, ನಾಥ್‌ಪೈ ಮತ್ತು

ಪುರಸಭಾ ಕಲಾ ಮಂದಿರ ಉದ್ಯಾನಗಳು, ಸಿವಿಲ್ ಆಸ್ಪತ್ರೆಗೆ ಸೇರಿದಂತಿರುವ ಡಾ.ಬಿ.ಆರ್.ಅಂಬೇಡ್ಕರ್ ಉದ್ಯಾನ ($2\frac{1}{2}$ ಎಕರೆ), ಕಪಿಲೇಶ್ವರ ಮಾರ್ಗದ ಬಳಿಯ ಸಾಂಬಾಜಿ ಉದ್ಯಾನ ($1\frac{3}{8}$ ಎಕರೆ), ನಿಪ್ಪಾಣಿ ನಗರ ಪಂಚಾಯಿತಿ ಉದ್ಯಾನ.

**ಹಾಸನ ಜಿಲ್ಲೆ:** ಜಿಲ್ಲಾಧಿಕಾರಿ ಕಾರ್ಯಾಲಯ ಉದ್ಯಾನ (1962-63, 2 ಎಕರೆ), ಹಾಸನ ಪುರಸಭಾ ಉದ್ಯಾನ ಸಿಲ್ವರ್ ಜೂಬ್ಲಿ ಪಾರ್ಕ್ ($2\frac{1}{2}$ ಎಕರೆ).

**ದಕ್ಷಿಣ ಕನ್ನಡ ಜಿಲ್ಲೆ:** ಮಂಗಳೂರಿನ ಟ್ಯಾಗೂರ್ ಉದ್ಯಾನ (1 ಎಕರೆ), ಪುರಸಭಾ ಉದ್ಯಾನ ($\frac{1}{2}$ ಎಕರೆ), ಗಾಂಧೀ ಉದ್ಯಾನ (1 ಎಕರೆ).

**ರಾಯಚೂರು ಜಿಲ್ಲೆ:** ರಾಯಚೂರು ಪುರಸಭಾ ಉದ್ಯಾನ (5 ಎಕರೆ), ದೇವಸುಗೂರು ಉದ್ಯಾನ (5 ಎಕರೆ), ರಾಮಪುರ ಉದ್ಯಾನ (10 ಎಕರೆ), ಗಂಗಾವತಿ ಪುರಸಭಾ ಉದ್ಯಾನ ($1\frac{1}{2}$ ಎಕರೆ), ಕೊಪ್ಪಳ ಪುರಸಭಾ ಉದ್ಯಾನ (1 ಎಕರೆ), ಹಟ್ಟಿ ಚಿನ್ನದ ಗಣಿ ಉದ್ಯಾನ (3 ಎಕರೆ), ಮುನೀರಾಬಾದಿನಲ್ಲಿ ಇಲಾಖೆಯವರು ತುಂಗಭದ್ರಾನದಿ ಎಡದಂಡೆಯ ಮೇಲೆ ಬೆಳೆಸಿರುವ 60 ಎಕರೆ ವಿಸ್ತೀರ್ಣದ ಜಪಾನ್ ಮಾದರಿ ಉದ್ಯಾನ.

**ಶಿವಮೊಗ್ಗ ಜಿಲ್ಲೆ:** ಶಿವಮೊಗ್ಗದ ಮಹಾತ್ಮಾ ಗಾಂಧೀ ಉದ್ಯಾನ (1956, 16 ಎಕರೆ), ತುಂಗಾನದಿ ಎಡದಂಡೆಯ ಮೇಲಿನ ರಾಮಣ್ಣ ಉದ್ಯಾನ (1 ಎಕರೆ), ತುಂಗಾನದಿ ಬಲದಂಡೆಯ ವಿದ್ಯಾನಗರದ ಪುರಸಭೆ ಉದ್ಯಾನ ($1\frac{1}{2}$ ಎಕರೆ), ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯ ಉದ್ಯಾನಗಳು, ಎಡೆಹಳ್ಳಿ, ತೀರ್ಥಹಳ್ಳಿ, ನೊಣಬೂರು, ಮಂಡಗದ್ದೆ, ನೆರಟೂರು, ಹೇರಂಬಪುರ ಮತ್ತು ಬಸವಾನಿ ಗ್ರಾಮಪಂಚಾಯಿತಿ ವನಗಳು. ಹೊನ್ನಾಳಿ ಪುರಸಭಾ ಉದ್ಯಾನ ($\frac{1}{2}$ ಎಕರೆ). ಶರಾವತಿ ಪ್ರವಾಸಿ ಮಂದಿರಗಳ ಉದ್ಯಾನಗಳು, ತಲಕಳಲೆ ಅಣೆಕಟ್ಟಿನ ಉದ್ಯಾನ, ಶಿಕಾರಿಪುರದ ಪುರಸಭಾ ಉದ್ಯಾನ ($1\frac{1}{2}$ ಎಕರೆ).

**ಉತ್ತರ ಕನ್ನಡ ಜಿಲ್ಲೆ:** ಭಟ್ಕಳ ಪುರಸಭಾ ಉದ್ಯಾನ (1958, 1 ಎಕರೆ) ಸಿದ್ದಾಪುರ, ಕಾರವಾರ, ಹಳಿಯಾಳ, ಕುಮಟ ಪುರಸಭಾ ಉದ್ಯಾನಗಳು, ದಾಂಡೇಲಿಯ ವೆಸ್ಟ್ ಕೋಸ್ಟ್ ಕಾಗದ ಕಾರ್ಖಾನೆ ಮತ್ತು ಮ್ಯಾಂಗನೀಸ್ ಗಣಿ ಉದ್ಯಾನಗಳು, ಅಂಬಿಕಾನಗರದ ಮೈಸೂರು ಪವರ್ ಕಾರ್ಪೋರೇಷನ್ ಉದ್ಯಾನ.

**ಬಳ್ಳಾರಿ ಜಿಲ್ಲೆ:** ನಾರಾಯಣರಾವ್ ಪುರಸಭಾ ಉದ್ಯಾನ (2 ಎಕರೆ), ಬಳ್ಳಾರಿ ಜಿಲ್ಲಾಧಿಕಾರಿ ಕಛೇರಿ ಉದ್ಯಾನ, ಸತ್ಯನಾರಾಯಣ ಪೇಟೆ ಉದ್ಯಾನ (4 ಎಕರೆ), ಸಂಡೂರು, ಕೊಟ್ಟೂರು, ಹಗರಿಬೊಮ್ಮನಹಳ್ಳಿ ಉದ್ಯಾನಗಳು, ಹಂಪೆಯ ಪಂಚವಟಿ ಉದ್ಯಾನ, ತುಂಗಭದ್ರಾ ಅಣೆಕಟ್ಟಿನ ಉದ್ಯಾನ, ಶ್ರೀರಾಮುಲು ಉದ್ಯಾನ (2 ಎಕರೆ), ಶಿರಗುಪ್ಪ ಪುರಸಭಾ ಮತ್ತು ಕೊಠಾರಿ ಸಕ್ಕರೆ ಕಾರ್ಖಾನೆ ಉದ್ಯಾನಗಳು.



ಕಾರಂಜಿ, ಕೃಷ್ಣರಾಜಸಾಗರ

**ಗುಲ್ಬರ್ಗ ಜಿಲ್ಲೆ:** ಗುಲ್ಬರ್ಗದ ಮಹಬೂಬ್ ಗುಲ್ಷನ್ ಉದ್ಯಾನ (30 ಎಕರೆ), ಪುಸ್ತಕ ಭಂಡಾರ, ಮಕ್ಕಳ ಕ್ಷೇಮಾಭಿವೃದ್ಧಿ ಮತ್ತು ಫಿಲ್ಟರ್‌ಬೆಡ್ ಉದ್ಯಾನಗಳು, ಗಂಗಾಪುರ, ಅಫಜಲಪುರ, ಶಾಹಬಾದ್, ಯಾದಗಿರಿ ಉದ್ಯಾನಗಳು.

**ಮಂಡ್ಯ ಜಿಲ್ಲೆ:** ಮಂಡ್ಯದ ಗಾಂಧೀ ಉದ್ಯಾನ (1942), ಕಸ್ತೂರಬಾ, ಶಿವನಂಜಪ್ಪ, ಪೌರಸಭಾ, ಜೂಬಿಲಿ, ನೀರು ಸರಬರಾಜು ಕಚೇರಿ (13 ಎಕರೆ), ಮೈಶುಗರ್ (1933-34), ಸರ್ಕಾರಿ ಆಸ್ಪತ್ರೆ (1962, 4 ಎಕರೆ) ಮತ್ತು ಜಿಲ್ಲಾಧಿಕಾರಿ ಕಛೇರಿ (1962, 3 ಎಕರೆ) ಉದ್ಯಾನಗಳು, ಪಶ್ಚಿಮವಾಹಿನಿ ಉದ್ಯಾನ (1954, 6 ಎಕರೆ), ಶ್ರೀರಂಗಪಟ್ಟಣದ ಶ್ರೀಜಯಚಾಮರಾಜೇಂದ್ರ ಉದ್ಯಾನ (1965, 34 ಎಕರೆ), ದರಿಯಾದೌಲತ್ ಉದ್ಯಾನ (50 ಎಕರೆ), ಗುಂಬಜ್ ಉದ್ಯಾನ (20 ಎಕರೆ), ಮಳವಳ್ಳಿ, ಶಿಂಷಾ, ಶಿವನಸಮುದ್ರ, ತೊರಕಾಡನಹಳ್ಳಿ ಉದ್ಯಾನಗಳು.

**ತುಮಕೂರು ಜಿಲ್ಲೆ:** ತುಮಕೂರಿನ ಪೆನ್ಸರ್ಸ್ ಪ್ಯಾರಡೈಸ್ (1956), ಕಸ್ತೂರಬಾ ($1\frac{1}{4}$ ಎಕರೆ, 1952), ತಿಲಕ್ (1957), ಗಾಂಧೀ (1969), ಆಜಾದ್ (1960), ಸಿಂಕ್ (1960), ಸುಬ್ರಹ್ಮಣ್ಯ (1970, 1 ಎಕರೆ) ಮತ್ತು ಹನುಮಂತಪುರ (1974) ಉದ್ಯಾನಗಳು, ತುರುವೇಕೆರೆ ಪುರಸಭಾ (1956) ಮತ್ತು ಸಿಮೆಂಟ್ ಕಾರ್ಖಾನೆ (1960- 2 ಎಕರೆ) ಉದ್ಯಾನಗಳು. ಕುಣಿಗಲು, ತಿಪಟೂರು ಉದ್ಯಾನಗಳು.

**ಬೀದರ್ ಜಿಲ್ಲೆ:** ಬಿದರೆ ಪುರಸಭಾ ಉದ್ಯಾನ (1964-65, 2 ಎಕರೆ), ತಲವಾಡಿ ಮಕ್ಕಳ ಉದ್ಯಾನ, ಬಿದರೆ ಕೋಟೆ ಉದ್ಯಾನ, ಸೋಲಾ ಸುಲ್ತಾನ್ ಮಸೀದಿ ಮುಂಭಾಗದ ಉದ್ಯಾನ, ಪೊಲೀಸ್ ಅಧಿಕಾರಿಗಳ ಕಛೇರಿ ಉದ್ಯಾನ, ಕರ್ನಾಟಕ ಕಾಮರ್ಸ್ ಕಾಲೇಜು, ಬಿ.ವಿ. ಭೂಮರೆಡ್ಡಿ ಕಾಲೇಜು ಉದ್ಯಾನಗಳು, ಸ್ಟೇಟ್‌ಬ್ಯಾಂಕ್ ಆಫ್ ಹೈದರಾಬಾದ್, ಜೈಲು, ಭೂಗರ್ಭ ಇಲಾಖೆ, ಹಾಬಿಸ್ಕಾಟ್ ಬಂಗಲೆ, ಜಿಲ್ಲಾಧಿಕಾರಿ ಬಂಗಲೆ, ಸಿವಿಲ್ ಆಸ್ಪತ್ರೆ, ಫಿಲ್ಟರ್ ಬೆಡ್ ಉದ್ಯಾನಗಳು. ಹುಮನಾಬಾದ, ಬಸವಕಲ್ಯಾಣ, ಭಾಲ್ಕಿ, ಸಂತಪುರ ಉದ್ಯಾನಗಳು.

**ಮೈಸೂರು ಜಿಲ್ಲೆ:** ಮೈಸೂರಿನ ಬಾಡಿಗಾರ್ಡ್, ಲಲಿತಮಹಲ್ (47 ಎಕರೆ) ಸರ್ಕಾರಿ ಅತಿಥಿಗೃಹ (50 ಎಕರೆ), ಜಲದರ್ಶಿನಿ (18 ಎಕರೆ), ಕೃಷ್ಣರಾಜೇಂದ್ರ ಆಸ್ಪತ್ರೆ, ಚೆಲುವಾಂಬ, ಮಾನಸ ಗಂಗೋತ್ರಿ, ಕ್ರಾಫರ್ಡ್‌ಹಾಲ್ ಉದ್ಯಾನಗಳು.

**ಬೆಂಗಳೂರು ಜಿಲ್ಲೆ:** ಬೆಂಗಳೂರಿನ ರಾಜ್ಯ ನ್ಯಾಯಾಲಯ, ಜೀವವಿಮೆ ಕಚೇರಿ, ಶಾಸಕರ ಭವನ, ಕುಮಾರಕೃಪ, ಸುದರ್ಶನ, ಆಕಾಶವಾಣಿ, ರಸ್ತೆ ಸಾರಿಗೆ ಕಾರ್ಯಾಲಯ, ವಿಮಾನ ಕಾರ್ಖಾನೆ, ಎಚ್.ಎಂ.ಟಿ., ಐ.ಟಿ.ಐ., ಮೈಕೊ, ಕಿರ್ಲೋಸ್ಕರ್, ಎಲ್.ಆರ್.ಡಿ.ಇ. ಉದ್ಯಾನಗಳು, ಅಶೋಕ ಹೋಟೆಲ್, ಗೋಕುಲ, ತಿಪ್ಪಗೊಂಡನಹಳ್ಳಿ ನೀರು ಸರಬರಾಜು ಕೇಂದ್ರ, ಹೆಸರುಘಟ್ಟ ಮುಂತಾದ ಉದ್ಯಾನಗಳು. ಇವಲ್ಲದೆ ನೂರಾರು ಗ್ರಾಮಗಳ, ಬಡಾವಣೆಗಳ ಮತ್ತು ದೊಡ್ಡ ದೊಡ್ಡ ಚೌಕಗಳ ಉದ್ಯಾನಗಳುಂಟು. (ಕೆ.ಟಿ.ಕೆ.)

**ಉದ್ಯಾವರ :** ಉಡುಪಿ ಜಿಲ್ಲೆ ಉಡುಪಿ ತಾಲ್ಲೂಕಿನ ಉಡುಪಿಯಿಂದ 5ಕಿಮೀ ನೈಋತ್ಯಕ್ಕೆ ಉದ್ಯಾವರ ನದಿಯ ಉತ್ತರ ದಡದಲ್ಲಿ ಸಮುದ್ರದಂಡೆಯಲ್ಲಿರುವ ಊರು. ಉದಯಪುರ, ಉದ್ಯೇವರ ಎಂದು ಶಾಸನಗಳಲ್ಲಿ ಉಲ್ಲೇಖವಾಗಿರುವ ಸ್ಥಳ. ಸು.10ನೆಯ ಶತಮಾನದವರೆಗೆ ಆಳುಪರ ರಾಜಧಾನಿಯಾಗಿತ್ತು. ಇದರ ಅವಶೇಷಗಳು ಸಮೀಪದ ಬೋಳಾರುಗದ್ದೆ ಎಂಬಲ್ಲಿರುವುದೆಂದು ಊಹೆ. 2-3ನೆಯ ಶತಮಾನದಲ್ಲಿಯೇ ಇಲ್ಲಿನ ಬಂದರಿನ ಮೂಲಕ ಮೆಡಿಟರೇನಿಯನ್ ಪ್ರದೇಶಗಳೊಡನೆ ವ್ಯಾಪಾರ ಸಂಪರ್ಕವಿತ್ತೆಂದು ಇತಿಹಾಸಕಾರರು ಊಹಿಸಿದ್ದಾರೆ. ದಕ್ಷಿಣ ಕನ್ನಡದ ಅತಿಪ್ರಾಚೀನ ದೇವಾಲಯಗಳಲ್ಲಿ ಒಂದಾದ ಚಂಬುಕಲ್ಲು ಶಿವಾಲಯ, ಪ್ರಾಯಶಃ ಆಳುಪರ ಕಾಲದ್ದು. ಸಪ್ತಮಾತೃಕೆಯರ ಮೃಣ್ಮಯ ಮೂರ್ತಿಗಳಿರುವ ಶಕ್ತ್ಯಾಲಯ ಇಲ್ಲಿದೆ. ಬೊಮ್ಮೇಶ್ವರವೆಂಬಲ್ಲಿ ಈಶ್ವರ ಮತ್ತು ವಿಷ್ಣು ಆಲಯವೂ ಬೋಳಾರಿನಲ್ಲಿ ದ್ವಿಬಾಹುಗಣಪತಿಯ ಆಲಯ ಹಾಗೂ ಜೀರ್ಣವಾದ ಮಹಿಷಮರ್ದಿನಿ ಮತ್ತು ಶಿವಾಲಯಗಳೂ ಇವೆ. ಈ ಎಲ್ಲ ದೇವಾಲಯಗಳೂ 11ನೆಯ ಶತಮಾನಕ್ಕಿಂತ ಪ್ರಾಚೀನವಾದವು. ಇಲ್ಲಿ ಸೋದೆ ಮಠದ ಒಂದು ಶಾಖೆಯೂ ಅಣ್ಣಯಾಚಾರ್ಯರ ಮಠವೆಂಬ ಇನ್ನೊಂದು ಮಾಧ್ವಮಠವೂ ಇವೆ. ಒಂದು ಚರ್ಚ್ ಸಹ ಇದೆ. (ಪಿ.ಜಿ.ಬಿ.)

**ಉದ್ರಿ :** ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಒಂದು ಐತಿಹಾಸಿಕ ಮತ್ತು ಸಾಂಸ್ಕೃತಿಕ ಕೇಂದ್ರ. ಸೊರಬಕ್ಕೆ ಈಶಾನ್ಯದಲ್ಲಿ 15ಕಿಮೀ ದೂರದಲ್ಲಿದೆ. ಈ ಗ್ರಾಮ ಮತ್ತು ಸುತ್ತಲಿನ ಪ್ರದೇಶ ಚಾಳುಕ್ಯರ ಕಾಲದಿಂದ ವಿಜಯನಗರ ಕಾಲದವರೆಗೂ ಜನನಿಬಿಡವಾಗಿತ್ತು. ಇಲ್ಲಿ ದೊರೆತಿರುವ ಶಾಸನಗಳು, ದೇವಾಲಯಗಳು ಹಾಗೂ ಮತ್ತಿತರ ಅವಶೇಷಗಳಿಂದ ಇದೊಂದು ಪ್ರಮುಖ ಸ್ಥಳವಾಗಿತ್ತೆಂದು ಭಾವಿಸಬಹುದು. ಶಾಸನಗಳಲ್ಲಿ ಈ ಊರನ್ನು ಪುದ್ದರೆ, ಉದ್ಧರೆ ಮತ್ತು ಉದ್ಧಾರಪುರವೆಂದು ಕರೆಯಲಾಗಿದೆ. ಹಿಂದೆ ಇದು ಬನವಾಸಿ ಮಂಡಲದ ಪ್ರಮುಖ ಸ್ಥಳಗಳಲ್ಲೊಂದಾಗಿದ್ದಿತು. ಚಾಳುಕ್ಯ ಎರಡನೆಯ ಜಗದೇಕಮಲ್ಲನ ಕಾಲದ ಶಾಸನ ಉದ್ರಿಯನ್ನು ಒಂದು ನೆಲೆವೀಡೆಂದು ಉಲ್ಲೇಖಿಸುತ್ತದೆ. 1217ರ ಸೇವುಣರ ಶಾಸನವೊಂದರಲ್ಲಿ ಈ ಸ್ಥಳವನ್ನು ಬ್ರಹ್ಮಪುರಿ ಎಂದು ಕರೆಯಲಾಗಿದೆ. ಇಲ್ಲಿ ದೊರೆತಿರುವ ಹಲವಾರು ನಿಷಧಿ ಶಾಸನಗಳಿಂದ ಹೊಯ್ಸಳರ ಕಾಲದಲ್ಲಿ ಇದೊಂದು ಜೈನ ಧರ್ಮದ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಹೊಯ್ಸಳರ ಕಾಲದಲ್ಲಿ ಇದು ಎಕ್ಕಲರಸ ಎಂಬ ಮಾಂಡಳಿಕನ ರಾಜಧಾನಿಯಾಗಿತ್ತು. ಈ ಸ್ಥಳದ ಮೇಲೆ ನಿಯಂತ್ರಣ ಸಾಧಿಸಲು ಹೊಯ್ಸಳರು ಮತ್ತು ಸೇವುಣರು ನಿರಂತರ ಹೋರಾಟ ನಡೆಸಿರುವುದಕ್ಕೆ ಇಲ್ಲಿ ದೊರೆತಿರುವ ಅನೇಕ ವೀರಗಲ್ಲುಗಳು ಸಾಕ್ಷಿಯಾಗಿವೆ. ಸಮುದ್ರ ತೀರದ ವಾಣಿಜ್ಯ ಮಾರ್ಗ ಈ ಪ್ರದೇಶದ ಮೂಲಕ ಹಾದು ಹೋಗುತ್ತಿದ್ದರಿಂದ ಅದನ್ನು ತಮ್ಮ ಸ್ವಾಧೀನ ಪಡಿಸಿಕೊಳ್ಳಲು ಈ ಹೋರಾಟ ನಡೆದಿರಬಹುದು.

ಇಲ್ಲಿರುವ ಈಶ್ವರ ದೇವಸ್ಥಾನ ಗರ್ಭಗೃಹ, ಸುಕನಾಸಿ ಮತ್ತು ನವರಂಗಗಳಿಂದ ಕೂಡಿದೆ. ಸುಕನಾಸಿಯ ದ್ವಾರದ ಎರಡೂ ಬದಿಯಲ್ಲೂ ಗೂಡುಗಳಿದ್ದು ಬಲಗಡೆ ಷಣ್ಮುಖನ ವಿಗ್ರಹವಿದೆ. ಸುಕನಾಸಿಯ ಬೋದಿಗೆಯ ಮೇಲೆ ಜಿನ ವಿಗ್ರಹವಿದೆ. ಮೂಲತಃ ಈ ದೇವಾಲಯ ಜಿನಾಲಯವಾಗಿರಬಹುದೆಂದು ಊಹಿಸಬಹುದು. ನವರಂಗದ ಚಾವಣಿಯಲ್ಲಿರುವ ಬೃಹತ್ ಪದ್ಮಭುವನೇಶ್ವರಿ ಶಿಲ್ಪ ಆಕರ್ಷಕವಾಗಿದೆ. 1197ರಲ್ಲಿ ಈ ದೇವಾಲಯ ನಿರ್ಮಿತವಾಗಿದೆ. ಇಲ್ಲಿರುವ ಗಣಪತಿಯ ಇನ್ನೊಂದು ದೇವಾಲಯ ಕೂಡ ಹಿಂದೆ ಜಿನಾಲಯವಾಗಿದ್ದುದಕ್ಕೆ ಆಧಾರಗಳು ದೊರೆತಿವೆ. ದೇವಾಲಯದ ಗೋಪುರ ಪಿರಮಿಡ್ಡಿನ ಆಕಾರದಲ್ಲಿದ್ದು ಅದರ ಎದುರಿಗೆ ಮೊಗಸಾಲೆಯ ಮೇಲಿನ ಒಂದು ಮುಂಚಾಚುವಿನಲ್ಲಿ ಛತ್ರಿಯ ಕೆಳಗೆ ಪೀಠಸ್ಥನಾಗಿರುವ ಜಿನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ಬಸದಿಯ ಆಸುಪಾಸಿನಲ್ಲಿ ಚಾಳುಕ್ಯರ ಕಾಲದ ಈಶ್ವರ ದೇವಾಲಯ ಮತ್ತು ಲಕ್ಷ್ಮೀನಾರಾಯಣ ಗುಡಿಗಳಿವೆ.

ಈ ಗ್ರಾಮದ ಪೂರ್ವಕ್ಕೆ ವೀರಭದ್ರ ದೇವಾಲಯವಿದೆ. ಈ ದೇವಾಲಯದ ಕಟ್ಟಡ ಇತ್ತೀಚಿನದಾಗಿದ್ದರೂ ದ್ವಾರಪಾಲಕರ ವಿಗ್ರಹಗಳು 1000 ವರ್ಷದಷ್ಟು ಹಳೆಯವು. ಈ ಸ್ಥಳದ ಸಮೀಪದ ಮುಂಚಿ ಎಂಬ ಗ್ರಾಮದಲ್ಲಿ ಆಂಜನೇಯ ದೇವಾಲಯವಿದೆ. ಚೈತ್ರಮಾಸದಲ್ಲಿ ಇಲ್ಲಿ ಜರುಗುವ ರಥೋತ್ಸವ ಪ್ರಸಿದ್ಧವಾದುದು. ಇಲ್ಲಿಗೆ ಸಮೀಪದ ಮಾವಳ್ಳಿಯ ಕಲ್ಲೇಶ್ವರ ದೇವಾಲಯದ ಶಿಲ್ಪ ಆಕರ್ಷಕವಾಗಿದೆ. *

**ಉನ್ನತ ಶಿಕ್ಷಣ ಮತ್ತು ಸಂಶೋಧನೆ :** ಪ್ರಿ ಯೂನಿವರ್ಸಿಟಿ ಶಿಕ್ಷಣದ ಅನಂತರ ವಿದ್ಯಾರ್ಥಿಗಳಿಗೆ ನೀಡುವ ಶಿಕ್ಷಣವನ್ನು ಕರ್ನಾಟಕದಲ್ಲಿ ಉನ್ನತ ಶಿಕ್ಷಣವೆಂದು ಪರಿಗಣಿಸಲಾಗಿದೆ. ಎಂದರೆ ಏಳು ವರ್ಷ ಪ್ರಾಥಮಿಕ ಶಿಕ್ಷಣವೂ 3+2 ವರ್ಷ ಪ್ರೌಢಶಿಕ್ಷಣವೂ ಸೇರಿದಂತೆ ಒಟ್ಟು ಹನ್ನೆರಡು ವರ್ಷಗಳ ಶಾಲಾಶಿಕ್ಷಣದ ಅನಂತರದ ಶಿಕ್ಷಣಕ್ಕೆ ಸಾಮಾನ್ಯವಾಗಿ ಈ ಹೆಸರನ್ನು ಬಳಸಲಾಗುತ್ತದೆ. ಇದು ವಿಶ್ವವಿದ್ಯಾಲಯಗಳಲ್ಲೂ ಅದರ ಆಂಗಿಕ ಮತ್ತು ಅಂಗೀಕೃತ ಕಾಲೇಜುಗಳಲ್ಲೂ ಸ್ನಾತಕೋತ್ತರ ವಿಭಾಗ ಅಥವಾ ಕೇಂದ್ರಗಳಲ್ಲೂ ಪರಿಗಣಿತ ವಿಶ್ವವಿದ್ಯಾಲಯಗಳಲ್ಲೂ ಇತರ ವಿಶಿಷ್ಟ ಶಿಕ್ಷಣ ಸಂಸ್ಥೆಗಳಲ್ಲೂ ವ್ಯವಸ್ಥೆಗೊಂಡಿದೆ. ಬೋಧನೆ, ಸಂಶೋಧನೆ, ವಿಸ್ತರಣೆ - ಈ ಸಾಂಪ್ರದಾಯಿಕ ಅಂಶಗಳು ಇಲ್ಲಿನ ಉನ್ನತ ಶಿಕ್ಷಣದ ಕರ್ತವ್ಯಗಳಾಗಿವೆ.

ಆಧುನಿಕ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಿರುವ ಉನ್ನತ ಶಿಕ್ಷಣ ವ್ಯವಸ್ಥೆ ಕರ್ನಾಟಕದಲ್ಲಿ 1853ರಲ್ಲಿ ಆರಂಭವಾಯಿತೆನ್ನಬಹುದು. ಆ ವರ್ಷ ಮೈಸೂರಿನ ಮಹಾರಾಜ ಕಾಲೇಜು ಅನಂತರ 1858ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜು ಅಸ್ತಿತ್ವಕ್ಕೆ ಬಂದವು. ಅವೆರಡೂ ಆಗ ಮದರಾಸು ವಿಶ್ವವಿದ್ಯಾಲಯದ ಅಂಗೀಕಾರ ಪಡೆದಿದ್ದವು. ಮದ್ರಾಸ್ ಸರ್ಕಾರ 1869ರಲ್ಲಿ ಮಂಗಳೂರಿನಲ್ಲಿ ಎರಡನೆಯ ದರ್ಜೆ ಕಾಲೇಜನ್ನು ಸ್ಥಾಪಿಸಿತು. 1879ರಲ್ಲಿ ಮಂಗಳೂರಿನಲ್ಲಿ ಸೇಂಟ್ ಅಲಾಸಿಯಸ್ ಕಾಲೇಜು ಮತ್ತು 1882ರಲ್ಲಿ ಬೆಂಗಳೂರಿನಲ್ಲಿ ಸೇಂಟ್ ಜೋಸೆಫ್‌ರ ಕಾಲೇಜು ಅಸ್ತಿತ್ವಕ್ಕೆ ಬಂದವು. 1902ರಲ್ಲಿ ಮೈಸೂರಿನ ಮಹಾರಾಜ ಕಾಲೇಜನ್ನು ಪ್ರಥಮ ದರ್ಜೆಗೆ ಏರಿಸಲಾಯಿತು. ಮೈಸೂರು ಸಂಸ್ಥಾನದಲ್ಲಿ ಪ್ರತ್ಯೇಕ ವಿಶ್ವವಿದ್ಯಾನಿಲಯ ಸ್ಥಾಪಿಸಲು ನಡೆಸಿದ ಪ್ರಯತ್ನದ ಫಲವಾಗಿ 1916ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಆರಂಭವಾಯಿತು. ಅನಂತರ 1950ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯವೂ 1964ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯವೂ ಅಸ್ತಿತ್ವಕ್ಕೆ ಬಂದವು. ಇವುಗಳ ಅಂಗ ಕಾಲೇಜುಗಳು ಪ್ರತಿ ಜಿಲ್ಲೆಯಲ್ಲೂ ಅಸ್ತಿತ್ವಕ್ಕೆ ಬಂದವು. 1963ರಲ್ಲಿ ಹೆಬ್ಬಾಳಿನ ಕೃಷಿ ವಿಶ್ವವಿದ್ಯಾಲಯ ಸ್ಥಾಪನೆಯಾಯಿತು.

ಹಿಂದೆ ರಾಜ್ಯದ ಸಾಮಾನ್ಯ ಶಿಕ್ಷಣದ ಮೂರು ವಿಶ್ವವಿದ್ಯಾಲಯಗಳೆಂದರೆ ಮೈಸೂರು ವಿಶ್ವವಿದ್ಯಾನಿಲಯ, ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳು ಪ್ರತ್ಯೇಕ ರಾಜ್ಯ ಶಾಸನಗಳಿಂದ ಸಂಘಟಿತವಾಗಿ ತಮ್ಮದೇ ಆದ ರೀತಿಯ ಆಡಳಿತ ವ್ಯವಸ್ಥೆಯನ್ನು ಹೊಂದಿದ್ದವು. ಆಡಳಿತದಲ್ಲಿ ಏಕತೆಯನ್ನು ತರಲು ರಾಜ್ಯಸರ್ಕಾರ 1975ರ ಕರ್ನಾಟಕ ವಿಶ್ವವಿದ್ಯಾಲಯಗಳ ಶಾಸನ ರೀತ್ಯಾ, ತಾರೀಖು 25-09-1975 ರಂದು ಒಂದು ಸುಗ್ರೀವಾಜ್ಞೆಯನ್ನು ಹೊರಡಿಸಿ, ಮೂರು ವಿಶ್ವವಿದ್ಯಾಲಯಗಳಿಗೂ ಏಕರೂಪದ ಶಾಸನವನ್ನು ರೂಪಿಸಿತು.

ಕ್ರಮೇಣ ಸರ್ಕಾರ ತಂದ ವಿವಿಧ ಕಾಯಿದೆ ತಿದ್ದುಪಡಿಗಳಿಂದಾಗಿ ವಿಶ್ವವಿದ್ಯಾಲಯದ ಆಡಳಿತ ವ್ಯವಹಾರಗಳ ಬಗ್ಗೆ ಸರ್ಕಾರದ ನಿಯಂತ್ರಣ ಹೆಚ್ಚಿದೆ. ವಿಶ್ವವಿದ್ಯಾಲಯದ ಪ್ರಮುಖ ಅಂಗವಾಗಿದ್ದ ಸೆನೆಟ್ ರದ್ದಾಗಿದ್ದು ಶಿಕ್ಷಣ ಮಂಡಳಿಯ ಸ್ವರೂಪವೂ ತೀವ್ರವಾಗಿ ಬದಲಾಗಿದೆ. ಕುಲಪತಿಗಳ ನೇಮಕದಲ್ಲೂ ಸರ್ಕಾರ ಹೆಚ್ಚಿನ ಅಧಿಕಾರ ಹೊಂದಿದೆ. ಮುಂದೆ ವಿಶ್ವವಿದ್ಯಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿ ಪ್ರಾರಂಭವಾದವು. ಮಂಗಳೂರು ವಿಶ್ವವಿದ್ಯಾಲಯ (1980), ಗುಲ್ಬರ್ಗಾ ವಿಶ್ವವಿದ್ಯಾಲಯ (1980), ಕುವೆಂಪು ವಿಶ್ವವಿದ್ಯಾಲಯ (1987), ಕನ್ನಡ ವಿಶ್ವವಿದ್ಯಾಲಯ (1991) - ಇವು ಪ್ರಾರಂಭವಾಗಿ ಸ್ನಾತಕೋತ್ತರ ಶಿಕ್ಷಣವು ವಿವಿಧ ಕೇಂದ್ರಗಳಲ್ಲಿ ಪ್ರಾರಂಭವಾಗಲು ಅವಕಾಶ ಕಲ್ಪಿತವಾಯಿತು. ತುಮಕೂರು, ಹಾಸನ, ಮಂಡ್ಯ, ದಾವಣಗೆರೆ, ಬಳ್ಳಾರಿ, ಬೆಳಗಾಂವಿ ಮೊದಲಾದವು ಸ್ನಾತಕೋತ್ತರ ಶಿಕ್ಷಣಗಳ ಕೇಂದ್ರಗಳನ್ನು ಪಡೆದಿವೆ. ಮೈಸೂರಿನ ಜೆ.ಎಸ್.ಎಸ್.ನಂತಹ ಶಿಕ್ಷಣ ಸಂಸ್ಥೆಗಳು ಕೆಲವು ವಿಷಯಗಳಲ್ಲಿ ಸ್ನಾತಕೋತ್ತರ ಶಿಕ್ಷಣವನ್ನು ನೀಡುತ್ತಿವೆ. ಚಾಮರಾಜನಗರದಲ್ಲಿ ಈ ಸಂಸ್ಥೆಯ ಸ್ನಾತಕೋತ್ತರ ಕೇಂದ್ರವಿದೆ. ಮಣಿಪಾಲ ಶಿಕ್ಷಣ ಸಂಸ್ಥೆ ಸಂಭಾವ್ಯ (ಡೀಮ್ಡ್) ವಿಶ್ವವಿದ್ಯಾಲಯದ ಸ್ಥಾನಮಾನ ಪಡೆದಿದೆ. ರಾಜ್ಯಾದ್ಯಂತ ಕಾನೂನು ಶಿಕ್ಷಣ ಕಾಲೇಜುಗಳು ಪ್ರಾರಂಭಗೊಂಡಿವೆ.

ವೈದ್ಯಕೀಯ, ದಂತವೈದ್ಯ ವಿಜ್ಞಾನ, ಆಯುರ್ವೇದ ಯುನಾನಿ, ಹೋಮಿಯೋಪತಿ, ದಾದಿವೃತ್ತಿ ಶಿಕ್ಷಣ, ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಶಿಕ್ಷಣ, ಅರಿವಳಿಕೆ ಹಾಗೂ ಔಷಧ ವಿಜ್ಞಾನಶಾಸ್ತ್ರದಲ್ಲಿ ಅನೇಕ ಪದವಿ ಮತ್ತು ಸ್ನಾತಕೋತ್ತರ ಕೇಂದ್ರಗಳು ಸ್ಥಾಪನೆಗೊಂಡಿವೆ. ರಾಜ್ಯದಲ್ಲಿ ಸು.258 ಸಂಸ್ಥೆಗಳು ವಿವಿಧ ಆರೋಗ್ಯ ವಿಜ್ಞಾನ ವಿಷಯಗಳಲ್ಲಿ ಶಿಕ್ಷಣ ನೀಡುತ್ತಿವೆ (2000). ಈ ಸಂಸ್ಥೆಗಳ ಪರೀಕ್ಷೆಗಳ ನಿರ್ವಹಣೆ ಮತ್ತು ಉಸ್ತುವಾರಿಗಾಗಿ ರಾಜೀವಗಾಂಧಿ ವೈದ್ಯಕೀಯ ವಿಶ್ವವಿದ್ಯಾಲಯ (ನೋಡಿ) ಸ್ಥಾಪಿಸಲಾಗಿದೆ (1996). ಹಾಗೆಯೇ ರಾಜ್ಯದಲ್ಲಿ ಅಸ್ತಿತ್ವಕ್ಕೆ ಬಂದಿರುವ ಮುನ್ನೂರಕ್ಕೂ ಹೆಚ್ಚು ಎಂಜಿನಿಯರಿಂಗ್, ತಾಂತ್ರಿಕ ಕಾಲೇಜುಗಳು ಹಾಗೂ ಪಾಲಿಟೆಕ್ನಿಕ್‌ಗಳನ್ನು ನಿರ್ವಹಿಸಲು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ (ನೋಡಿ) ಸ್ಥಾಪಿಸಲಾಗಿದೆ (1999). ಪಶುವೈದ್ಯ ವಿಶ್ವವಿದ್ಯಾಲಯವೂ ಸ್ಥಾಪನೆಗೊಂಡಿದೆ (2004).

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ (ನೋಡಿ) ಮೈಸೂರಿನಲ್ಲಿದ್ದು ಇದು ಹಿಂದೆ ಮೈಸೂರು ವಿಶ್ವವಿದ್ಯಾನಿಲಯ ನಡೆಸುತ್ತಿದ್ದ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯ ಕಾರ್ಯಭಾರವನ್ನು

ಈ ಕೆಳಕಂಡ ಕೋಷ್ಟಕದಲ್ಲಿ ಕರ್ನಾಟಕದ ಸಾಮಾನ್ಯ ವಿಶ್ವವಿದ್ಯಾಲಯಗಳ ಅಧೀನದಲ್ಲಿರುವ ಪದವಿ ಕಾಲೇಜುಗಳ ವಿವರವನ್ನು ನೀಡಲಾಗಿದೆ (1999-2000)

| ಕ್ರಮ ಸಂಖ್ಯೆ | ಜಿಲ್ಲೆ | ಸರ್ಕಾರಿ ಕಾಲೇಜುಗಳು | ಖಾಸಗಿ ಕಾಲೇಜುಗಳು | | ಕಾನೂನು ಕಾಲೇಜುಗಳು | |
|---|---|---|---|---|---|---|
| | | | ಹಣಕಾಸು ನೆರವು ಪಡೆದವು | ಹಣಕಾಸು ನೆರವಿಲ್ಲದವು | ಹಣಕಾಸು ನೆರವು ಪಡೆದವು | ಹಣಕಾಸು ನೆರವಿಲ್ಲದವು |
| | | ಬೆಂಗಳೂರು ವಿಶ್ವವಿದ್ಯಾಲಯ | | | | |
| 1. | ಬೆಂಗಳೂರು (ನಗರ) | 11 | 44 | 111 | – | 20 |
| 2. | ಬೆಂಗಳೂರು (ಗ್ರಾ.) | 07 | 04 | 07 | – | – |
| 3. | ತುಮಕೂರು | 10 | 04 | 20 | – | 02 |
| 4. | ಕೋಲಾರ | 11 | 05 | 05 | – | 01 |
| | | ಮೈಸೂರು ವಿಶ್ವವಿದ್ಯಾನಿಲಯ | | | | |
| 5. | ಮೈಸೂರು | 08 | 13 | 21 | 01 | 03 |
| 6. | ಚಾಮರಾಜನಗರ | 03 | 03 | 05 | – | – |
| 7. | ಮಂಡ್ಯ | 05 | 07 | 09 | – | 02 |
| 8. | ಹಾಸನ | 10 | 05 | 07 | 01 | 01 |
| | | ಕುವೆಂಪು ವಿಶ್ವವಿದ್ಯಾಲಯ | | | | |
| 9. | ಶಿವಮೊಗ್ಗ | 01 | 09 | 09 | 01 | – |
| 10. | ಚಿತ್ರದುರ್ಗ | 07 | 07 | 17 | – | 02 |
| 11. | ದಾವಣಗೆರೆ | 03 | 09 | 13 | – | 01 |
| 12. | ಚಿಕ್ಕಮಗಳೂರು | 07 | 04 | 04 | – | 01 |
| | | ಮಂಗಳೂರು ವಿಶ್ವವಿದ್ಯಾಲಯ | | | | |
| 13. | ದಕ್ಷಿಣ ಕನ್ನಡ | 07 | 19 | 18 | – | 04 |
| 14. | ಉಡುಪಿ | 07 | 13 | 11 | – | 02 |
| 15. | ಕೊಡಗು | 01 | 03 | 03 | – | – |
| | | ಕರ್ನಾಟಕ ವಿಶ್ವವಿದ್ಯಾಲಯ | | | | |
| 16. | ಧಾರವಾಡ | 02 | 16 | 22 | 01 | 03 |
| 17. | ಗದಗ | 04 | 09 | 09 | – | 01 |
| 18. | ಹಾವೇರಿ | 04 | 08 | 06 | – | 01 |
| 19. | ಉತ್ತರ ಕನ್ನಡ | 04 | 13 | 07 | 01 | 02 |
| 20. | ಬೆಳಗಾಂವಿ | 03 | 28 | 30 | 01 | 05 |
| 21. | ಬಿಜಾಪುರ | – | 14 | 14 | – | 02 |
| 22. | ಬಾಗಲಕೋಟೆ | 02 | 12 | 12 | – | 01 |
| | | ಗುಲ್ಬರ್ಗಾ ವಿಶ್ವವಿದ್ಯಾಲಯ | | | | |
| 23. | ಗುಲ್ಬರ್ಗ | 10 | 14 | 25 | 02 | – |
| 24. | ರಾಯಚೂರು | 04 | 05 | 06 | – | 01 |
| 25. | ಕೊಪ್ಪಳ | 04 | 03 | 02 | – | – |
| 26. | ಬಳ್ಳಾರಿ | 05 | 07 | 07 | – | 01 |
| 27. | ಬೀದರ್ | 01 | 10 | 17 | – | 01 |
| | ಒಟ್ಟು | **150** | **292** | **427** | **08** | **58** |

ವಹಿಸಿಕೊಂಡಿರುವುದಲ್ಲದೆ ತನ್ನ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಇತ್ತೀಚೆಗೆ ಬಿಜಾಪುರದಲ್ಲಿ ಮಹಿಳಾ ವಿಶ್ವವಿದ್ಯಾಲಯ ಅಸ್ತಿತ್ವಕ್ಕೆ ಬಂದಿದೆ (2004). ಮೈಸೂರಿನಲ್ಲಿರುವ ಅಖಿಲ ಭಾರತ ವಾಕ್‌ಶ್ರವಣ ಸಂಸ್ಥೆ (ನೋಡಿ), ಮೈಸೂರಿನ ಪ್ರಾದೇಶಿಕ ಕಾಲೇಜು, ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ (ನೋಡಿ), ಇನ್‌ಸ್ಟಿಟ್ಯೂಟ್ ಆಫ್ ಬ್ಯುಸಿನೆಸ್ ಮ್ಯಾನೇಜ್‌ಮೆಂಟ್, ಇನ್‌ಸ್ಟಿಟ್ಯೂಟ್ ಫಾರ್ ಸೋಷಿಯಲ್ ಅಂಡ್ ಎಕಾನಾಮಿಕ್ ಚೇಂಜ್ ಮೊದಲಾದವು ವಿಶಿಷ್ಟ ವಿಷಯಗಳಲ್ಲಿ ಸ್ನಾತಕ ಮತ್ತು ಸ್ನಾತಕೋತ್ತರ ಶಿಕ್ಷಣ ನೀಡುತ್ತಿವೆ. ಸಾಫ್ಟ್‌ವೇರ್ ಮತ್ತು ಮಾಹಿತಿ ತಂತ್ರಜ್ಞಾನದಲ್ಲಿ ಕ್ರಾಂತಿಕಾರಕ ಪ್ರಗತಿಯಾಗಿದ್ದು ಅವುಗಳಲ್ಲಿ ಶಿಕ್ಷಣ ನೀಡಲು ಹಲವಾರು ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳು ಮುಂದಾಗಿವೆ.

ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳೂ ಜನಸಾಮಾನ್ಯರಲ್ಲಿ ಉನ್ನತ ಶಿಕ್ಷಣದ ಪ್ರಸಾರಕಾರ್ಯವನ್ನು ನಿರ್ವಹಿಸುತ್ತಿವೆ. ಪ್ರಚಾರೋಪನ್ಯಾಸ ಮತ್ತು ಪ್ರಕಟಣೆಗಳ ಮೂಲಕ ವಿಶ್ವವಿದ್ಯಾಲಯದ ನಿಯತ ವಿದ್ಯಾರ್ಥಿಗಳು ಪಡೆಯುತ್ತಿರುವ ಜ್ಞಾನಾರ್ಜನೆಯ ಸೌಲಭ್ಯವನ್ನು ರಾಜ್ಯದ ವಿವಿಧ ಭಾಗಗಳಲ್ಲಿರುವ ಜನಸಾಮಾನ್ಯರಿಗೂ ಒದಗುವಂತೆ ಅವಕಾಶ ಕಲ್ಪಿಸಿದೆ. ಅದಕ್ಕಾಗಿ ಒಂದು ಪ್ರತ್ಯೇಕ ವಿಭಾಗವನ್ನೇ ವ್ಯವಸ್ಥೆಗೊಳಿಸಿಕೊಂಡಿವೆ.

**ಸಂಶೋಧನೆ:** ಎಲ್ಲ ಉನ್ನತ ಶಿಕ್ಷಣ ಸಂಸ್ಥೆಗಳಲ್ಲೂ ಸಂಶೋಧನೆಗೆ ಅವಕಾಶವಿದ್ದರೂ ಅದು ಮುಖ್ಯವಾಗಿ ವಿಶ್ವವಿದ್ಯಾಲಯಗಳ ಸ್ನಾತಕೋತ್ತರ ವಿಭಾಗಗಳಲ್ಲೂ ಸ್ನಾತಕೋತ್ತರ ಕೇಂದ್ರಗಳಲ್ಲೂ ನಡೆಯುತ್ತಿವೆ. ಇವುಗಳ ಜೊತೆಗೆ ಸಂಶೋಧನೆಗೆಂದೇ ಮೀಸಲಾಗಿರುವ ಸಂಸ್ಥೆಗಳೂ ವಿಶಿಷ್ಟ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಸಂಶೋಧನೆ ನಡೆಸುತ್ತಿವೆ. ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ವಿಶಿಷ್ಟ ಕ್ಷೇತ್ರಗಳಲ್ಲಿ ಶಿಕ್ಷಣವೀಯುವುದರ ಜೊತೆಗೆ ಉದ್ಯೋಗ ಮತ್ತು ರಕ್ಷಣೆಯ ಕಾರ್ಯಗಳಿಗೆ ಸಂಬಂಧಿಸಿದ ವಿವಿಧ ಸಮಸ್ಯೆಗಳನ್ನು ಕುರಿತು ಫಲದಾಯಕವಾದ ಸಂಶೋಧನೆ ನಡೆಸುತ್ತಿದೆ. ವಿವಿಧ ಉದ್ಯೋಗಗಳು ಎದುರಿಸುತ್ತಿರುವ ಸಮಸ್ಯೆಗಳನ್ನು ಬಿಡಿಸಿಕೊಡುವುದರಲ್ಲೂ ಇದು ಗಣನೀಯ ಪಾತ್ರ ನಿರ್ವಹಿಸುತ್ತಿದೆ. ಭಾರತೀಯ ಉದ್ಯಮಗಳೂ ರಕ್ಷಣಾಪಡೆಗಳೂ ಈ ಸಂಸ್ಥೆಯಿಂದ ಅನೇಕ ನೂತನ ವಿಧಾನಗಳನ್ನು ಪಡೆದುಕೊಂಡು ಕಾರ್ಯಕ್ಷೇತ್ರದಲ್ಲಿ ಬಳಸಿಕೊಳ್ಳುತ್ತಿವೆ. ಇದರಂತೆ ದಿವಂಗತ ಸರ್.ಸಿ.ವಿ. ರಾಮನ್ ಬೆಂಗಳೂರಿನಲ್ಲಿ ಸ್ಥಾಪಿಸಿರುವ ರಾಮನ್ ಸಂಶೋಧನಾ ಸಂಸ್ಥೆಯೂ ಭೌತಶಾಸ್ತ್ರದ ಸಂಶೋಧನೆಗಳಲ್ಲಿ ನಿರತವಾಗಿದೆ. ಔದ್ಯೋಗಿಕ ಮತ್ತು ವೈಜ್ಞಾನಿಕ ಸಂಶೋಧನ ಮಂಡಳಿಯ ನೇತೃತ್ವದಲ್ಲಿ ಏರ್ಪಟ್ಟಿರುವ ಎರಡು ಸಂಶೋಧನ ಸಂಸ್ಥೆಗಳು ಕರ್ನಾಟಕದಲ್ಲಿವೆ. ಮೈಸೂರಿನ ಕೇಂದ್ರ ಆಹಾರ ಸಂಶೋಧನ ಸಂಸ್ಥೆ ಜನತೆಯ ಹಾಗೂ ಸೈನ್ಯದ ಆಹಾರ ಸಮಸ್ಯೆಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಕುರಿತು ಸಂಶೋಧನೆ ನಡೆಸುತ್ತದೆ. ಇದು ಭಾರತದ ಅನೇಕ ಕಡೆ ತನ್ನ ಪ್ರಾದೇಶಿಕ ಸಂಶೋಧನ ಕೇಂದ್ರಗಳನ್ನು ಸ್ಥಾಪಿಸಿಕೊಂಡಿದೆ. ಆಹಾರ ತಯಾರಿಕೆಗೆ ಸಂಬಂಧಿಸಿದಂತೆ ಇದು ರೂಪಿಸಿದ ಅನೇಕ ವಿಧಾನಗಳು ಆಗಲೇ ವಾಣಿಜ್ಯ ಕ್ಷೇತ್ರದಲ್ಲಿ ಪ್ರಚಾರಕ್ಕೆ ಬಂದಿವೆ. ಬೆಂಗಳೂರಿನ ರಾಷ್ಟ್ರೀಯ ವಾಯುಯಾನ ಸಂಶೋಧನ ಸಂಸ್ಥೆಯೂ ವಿಮಾನಗಳ ವಿನ್ಯಾಸ ಮತ್ತು ಚಲನೆಗೆ ಸಂಬಂಧಿಸಿದಂಥ ಹಲವು ಪ್ರಧಾನ ಸಂಶೋಧನೆಗಳನ್ನು ನಡೆಸಿದೆ.

ಬೆಂಗಳೂರು ಮತ್ತು ಧಾರವಾಡದ ಕೃಷಿ ವಿಶ್ವವಿದ್ಯಾಲಯಗಳು ವ್ಯವಸಾಯ ಮತ್ತು ವ್ಯವಸಾಯೋದ್ಯಮಗಳಿಗೆ ಸಂಬಂಧಿಸಿದಂತೆ ಸಂಶೋಧನೆ ನಡೆಸುತ್ತಿವೆ. ಬತ್ತ, ಜೋಳ, ರಾಗಿ, ಹತ್ತಿ ಮುಂತಾದವುಗಳ ನೂತನ ತಳಿಗಳ ನಿರ್ಮಾಣದ ಮೂಲಕ ರಾಜ್ಯದ ವ್ಯವಸಾಯದ ಪ್ರಗತಿಗೆ ಸಹಾಯ ಮಾಡಿವೆ. ಇವು ಹೆಬ್ಬಾಳ, ಮಂಡ್ಯ, ಮೂಡಿಗೆರೆ, ಧಾರವಾಡ, ರಾಯಚೂರು- ಈ ಸ್ಥಳಗಳಲ್ಲಿ ಪ್ರಾದೇಶಿಕ ಸಂಶೋಧನ ಕೇಂದ್ರಗಳನ್ನು ಹೊಂದಿವೆ. ಬೆಂಗಳೂರಿನ ಆಗ್ನೇಯದಲ್ಲಿ ಹೊಸೂರು ರಸ್ತೆಯ ಬಳಿ ಇರುವ ರಾಷ್ಟ್ರೀಯ ಕ್ಷೀರೋದ್ಯಮಕ್ಕೆ ಸಂಬಂಧಿಸಿದ ಸ್ನಾತಕ ಮತ್ತು ಸ್ನಾತಕೋತ್ತರ ತರಗತಿಗಳನ್ನು ನಡೆಸುವುದರ ಜೊತೆಗೆ ಕ್ಷೀರೋದ್ಯಮಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಕುರಿತು ಸಂಶೋಧನೆಗಳನ್ನು ನಡೆಸಲಾಗುತ್ತಿದೆ. ಅದು ಹರಿಯಾಣದ ಕರ್ನಾಲ್‌ನಲ್ಲಿರುವ ಕ್ಷೀರೋದ್ಯಮ ಸಂಶೋಧನ ಸಂಸ್ಥೆಯ ಅಂಗವಾಗಿ ನಡೆದುಕೊಂಡುಬರುತ್ತಿದೆ (ನೋಡಿ: ಆಡುಗೋಡಿ ಕ್ಷೀರೋದ್ಯಮ ಸಂಶೋಧನ ಕೇಂದ್ರ).

**ಇತಿಹಾಸ:** ಪ್ರಾಚೀನ ಕರ್ನಾಟಕದಲ್ಲಿ ಉನ್ನತ ಶಿಕ್ಷಣಕ್ಕೆ ವ್ಯಾಪಕವಾದ ವ್ಯವಸ್ಥೆಯಿತ್ತು. ಕ್ರಿ.ಪೂ.4ನೆಯ ಶತಮಾನದ ಕೊನೆಯಲ್ಲಿ ಇಲ್ಲಿಗೆ ಆಗಮಿಸಿದ ಚಂದ್ರಗುಪ್ತ ಮೌರ್ಯ ಮತ್ತು ಅವನ ಗುರು ಭದ್ರಬಾಹುವಿನೊಡನೆ ಜೈನಧರ್ಮವೂ ಜೈನಸಂಸ್ಥೆಗಳೂ ಆಗಮಿಸಿದುವು. ನಾಡಿನ ಬೇರೆ ಬೇರೆ ಭಾಗಗಳಲ್ಲಿ ಜೈನಬಸದಿಗಳು ಆರಂಭವಾಗಿ ಮೋಕ್ಷಸಾಧನೆಗೆ ನಂಬಿಕೆ, ಭಕ್ತಿ, ಪೂಜೆ ಪುನಸ್ಕಾರಗಳಂತೆ ಸುಜ್ಞಾನವೂ ಅಗತ್ಯವೆಂದು ಸಾರಿ ಉನ್ನತ ಶಿಕ್ಷಣಕ್ಕೆ ಧಾರ್ಮಿಕ ಮನ್ನಣೆಯನ್ನೂ ಪ್ರೋತ್ಸಾಹವನ್ನೂ ನೀಡಿದುವು. ಅಶೋಕನ ಕಾಲದಲ್ಲಿ ಕರ್ನಾಟಕಕ್ಕೆ ಬೌದ್ಧ ಧರ್ಮದೊಡನೆ ಸಂಘಾರಾಮಗಳೂ ವಿಹಾರಗಳೂ ಆಗಮಿಸಿ ವ್ಯವಸ್ಥಿತ ರೀತಿಯ ಉನ್ನತ ಶಿಕ್ಷಣಕ್ಕೆ ಅವಕಾಶ ಕಲ್ಪಿಸಿದುವು. ಕ್ರಿಸ್ತಶಕದ ಆರಂಭದ ವೇಳೆಗೆ ದೇಶದ ಅನೇಕ ಕಡೆ ಬೌದ್ಧ ಮಠಗಳೂ ವಿಹಾರಗಳೂ ಏರ್ಪಟ್ಟವು. ಕ್ರಿ.ಶ. ಮೂರನೆಯ ಶತಮಾನದಲ್ಲಿ ಚುಟುಕುಲದ ಶಿವಸ್ಕಂದ ನಾಗಶ್ರೀ ಬನವಾಸಿಯಲ್ಲಿ ಒಂದು ಬೌದ್ಧವಿಹಾರವನ್ನು ಸ್ಥಾಪಿಸಿದ ವಿಷಯ ಅಲ್ಲಿನ ಮಧುಕೇಶ್ವರ ದೇವಾಲಯದ ನಾಗಶಿಲೆಯ ಶಾಸನವೊಂದರಿಂದ ತಿಳಿದುಬರುತ್ತದೆ. ನಮಗೆ ದೊರೆತಿರುವ ಸಾಕ್ಷ್ಯಾಧಾರಗಳ ಪ್ರಕಾರ ಇದು ಕರ್ನಾಟಕದಲ್ಲಿ ಮೊಟ್ಟ ಮೊದಲು ಆರಂಭವಾದ ಉನ್ನತ ಶಿಕ್ಷಣ ಸಂಸ್ಥೆ. ಜೈನ ಬೌದ್ಧ ಧರ್ಮಗಳು ಆರಂಭಿಸಿದ ಧಾರ್ಮಿಕ ಹಾಗೂ ಶೈಕ್ಷಣಿಕ ಸಂಸ್ಥೆಗಳು ಇಲ್ಲಿ ಪೌರಾಣಿಕ ಕಾಲದಿಂದಲೂ ಅಸ್ತಿತ್ವದಲ್ಲಿದ್ದ ಗುರುಕುಲ ಮತ್ತು ಆಶ್ರಮ ಶಿಕ್ಷಣ ಪದ್ಧತಿಗಳ ಮೇಲೆ ಪರಿಣಾಮ ಬೀರಿ ಶಿಕ್ಷಣಕ್ಕೆ ಸಂಘ ಸಂಸ್ಥೆಗಳ ನಿಯಂತ್ರಣ ಆರಂಭವಾಯಿತು. ಅವುಗಳಲ್ಲಿ ಘಟಿಕ ಎಂಬುವು ಅತ್ಯಂತ ಪ್ರಾಚೀನತಮ ಸಂಸ್ಥೆಗಳು. ಕದಂಬ ಮಯೂರಶರ್ಮ ಉನ್ನತ ಶಿಕ್ಷಣದ ಪ್ರೇಮಿಯಾಗಿದ್ದು ಅಂದು ಕಾಂಚೀಪುರದಲ್ಲಿದ್ದ ಘಟಿಕಾಲಯದ ಮಾದರಿಯಲ್ಲಿ ತನ್ನ ರಾಜ್ಯದಲ್ಲೂ ಘಟಿಕಗಳನ್ನು ಸ್ಥಾಪಿಸಿದ್ದ ಎಂದು ಕೆಲವರ ಊಹೆ. ನಾಗಾಯಿ, ಹೆಂಜಾರಪುರ, ಕಾಡಿಯೂರು, ಕುಕ್ಕೂರು, ಮೋರಿಗೆರೆ, ರಾಯಬಾಗ್ ಮುಂತಾದೆಡೆ ಖ್ಯಾತಿಪಡೆದ ಘಟಿಕಾಲಯಗಳು ಬೇರೆ ಬೇರೆ ಕಾಲಗಳಲ್ಲಿ ಅಸ್ತಿತ್ವದಲ್ಲಿದ್ದವು. ಅಲ್ಲಿ ಶಿಕ್ಷಣ ಮುಗಿಸಿದವರಿಗೆ, ಸಮಾರಂಭವೊಂದನ್ನು ನಡೆಸಿ ಘಟಿಕಸಾಹಸ ಎಂಬ ಪ್ರಶಸ್ತಿ ನೀಡುತ್ತಿದ್ದರು.

ಘಟಿಕಗಳಂತೆ ಅಗ್ರಹಾರಗಳೂ ಬ್ರಹ್ಮಪುರಿಗಳೂ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಅಸ್ತಿತ್ವದಲ್ಲಿದ್ದವು. ಅವು ಬ್ರಾಹ್ಮಣಪಂಡಿತರ ವಸತಿಗಳಾಗಿದ್ದು ವಿದ್ಯಾರ್ಥಿಗಳಿಗೆ ಉನ್ನತ ಶಿಕ್ಷಣವನ್ನು ಒದಗಿಸುತ್ತಿದ್ದವು. ತಾಳಗುಂದ, ಬಾದಾಮಿ, ಉಮ್ಮಚಿಗೆ, ದೇಗಾಂವಿ, ಕಾಡಿಯೂರು, ಸರ್ವಜ್ಞಪುರ ಮುಂತಾದ ಅಗ್ರಹಾರಗಳೂ ಬಳ್ಳಿಗಾವೆ, ತಲಕಾಡು, ವಿಕ್ರಮಪುರ ಮುಂತಾದ ಬ್ರಹ್ಮಪುರಿಗಳೂ ಉನ್ನತ ಶಿಕ್ಷಣದ ಪ್ರಸಿದ್ಧ ಕೇಂದ್ರಗಳಾಗಿದ್ದುವು.

ಹತ್ತನೆಯ ಶತಮಾನದ ವೇಳೆಗೆ ಬೌದ್ಧವಿಹಾರಗಳ ಮಾದರಿಯಲ್ಲಿ ವ್ಯವಸ್ಥೆಗೊಂಡ ಹಿಂದು ಮಠಗಳು ವೈವಿಧ್ಯಮಯವೆನ್ನಬಹುದಾದ ರೀತಿಯಲ್ಲಿ ಉನ್ನತ ಶಿಕ್ಷಣ ಕೊಡುತ್ತಿದ್ದುವು. ಕೋಡಿಮಠ, ನಾಗಾಯಿಮಠ, ಊರೂರಿಗೂ ವ್ಯಾಪಿಸಿದ್ದ ವೀರಶೈವ ಮಠಗಳು ಇವೆಲ್ಲ ಉನ್ನತ ಶಿಕ್ಷಣವನ್ನು ಪ್ರಸಾರ ಮಾಡುತ್ತಿದ್ದವು.

ಹತ್ತನೆಯ ಶತಮಾನದ ಸುಮಾರಿಗೆ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ದೇವಾಲಯದ ವಿದ್ಯಾಪೀಠಗಳು ಅನೇಕ ಸ್ಥಳಗಳಲ್ಲಿ ಅಸ್ತಿತ್ವಕ್ಕೆ ಬಂದುವು. ಅದುತನಕ ಸಂಸ್ಕೃತ ಉನ್ನತ ಶಿಕ್ಷಣದಲ್ಲಿ ಬೋಧನ ಮಾಧ್ಯಮವಾಗಿತ್ತು. ಈಗ ಕನ್ನಡವೂ ಆ ಕಾರ್ಯಕ್ಕೆ ಬಳಕೆಯಾಗುವುದು ಆರಂಭವಾಯಿತು. ಆ ಸುಮಾರಿಗೆ ಕನ್ನಡದಲ್ಲಿ ಸಾಹಿತ್ಯಿಕ, ಶಾಸ್ತ್ರೀಯ ಮತ್ತು ಇತರ ಗ್ರಂಥಗಳೂ ರಚನೆಯಾಗಿ ಅವುಗಳ ಅಧ್ಯಯನವೂ ನಡೆಯುತ್ತಿತ್ತು. ಸಾಲೊಟಗೆ, ಹರಿಹರದ ಹರಿಹರೇಶ್ವರ ದೇವಾಲಯ, ತಾಳಗುಂದದ ಪ್ರಣವೇಶ್ವರ ದೇವಾಲಯ, ಮನಗೋಳಿಯ ವ್ಯಾಕರಣ ವಿದ್ಯಾಪೀಠ, ಹೆಬ್ಬಾಳಿನ ಬುಜಪ್ವೇಶ್ವರ ದೇವಾಲಯ, ಜಟಂಗ ರಾಮೇಶ್ವರದ ವಿದ್ಯಾಪೀಠ, ಬಿಜಾಪುರದ ಮೀಮಾಂಸೆ ವಿದ್ಯಾಪೀಠ, ಕೂಡಲ ಸಂಗಮದೇವಾಲಯದ ವಿದ್ಯಾಪೀಠ - ಇವೆಲ್ಲ ಪ್ರಸಿದ್ಧ ಉನ್ನತ ಶಿಕ್ಷಣ ಕೇಂದ್ರಗಳಾಗಿದ್ದವು. ಸಾಮಾನ್ಯವಾಗಿ ಪಠ್ಯಕ್ರಮದಲ್ಲಿ ವ್ಯಾಕರಣ, ಪುರಾಣ, ವೇದ, ಆಗಮ, ಕಾವ್ಯ, ನಾಟಕ ಮುಂತಾದುವು ಸೇರಿದ್ದುವು. ಆದರೆ ಒಂದೊಂದು ಕೇಂದ್ರವೂ ತನ್ನದೇ ಆದ ವಿಶೇಷ ವಿಷಯದಲ್ಲಿ ಶಿಕ್ಷಣವೀಯಲು ಹೆಸರಾಗಿತ್ತು. ಕೋಡಿಮಠದಲ್ಲಿ ಷಡ್ದರ್ಶನಗಳೂ ಕುಪ್ಪತ್ತೂರು ಮಠದಲ್ಲಿ ವಾತ್ಸಾಯನನ ಕಾಮಸೂತ್ರವೂ ವಿಶಿಷ್ಟ ಅಧ್ಯಯನ ವಿಷಯಗಳಾಗಿದ್ದುವು. ಸರ್ವಜ್ಞಪುರ ಭಾಷಾಶಾಸ್ತ್ರದಲ್ಲೂ ಉಮ್ಮಚಿಗೆ ವ್ಯಾಕರಣ, ಛಂದಸ್ಸು, ಕಾವ್ಯರಚನೆ - ಇವುಗಳಲ್ಲೂ ವಿಶೇಷ ಶಿಕ್ಷಣ ನೀಡುತ್ತಿದ್ದುವು. ನಾಗಾಯಿಮಠ ಮನುಧರ್ಮಶಾಸ್ತ್ರ, ಶುಕ್ರಶಾಸ್ತ್ರ ಮತ್ತು ವ್ಯಾಸಕೃತಿಗಳ ಬೋಧನೆಗೆ ಹೆಸರುಗಳಿಸಿತ್ತು.

12-13ನೆಯ ಶತಮಾನಗಳಲ್ಲಿ ಆರಂಭವಾದ ಮುಸಲ್ಮಾನರ ದಾಳಿಯಿಂದ ಭಾರತದ ಇತರೆಡೆಗಳಂತೆ ಕರ್ನಾಟಕದಲ್ಲೂ ಉನ್ನತ ಶಿಕ್ಷಣಕ್ಕೆ ಧಕ್ಕೆಯೊದಗಿತು. ಅವರ ದಾಳಿಗೆ ಸಿಕ್ಕಿದ ದೇವಾಲಯದ ವಿದ್ಯಾಪೀಠಗಳು ಮುಚ್ಚಿಹೋದವು. ಅಗ್ರಹಾರ, ಬ್ರಹ್ಮಪುರಿ ಮುಂತಾದ ಇತರ ಉನ್ನತ ವಿದ್ಯಾವಸತಿಗಳು ಹಿಂದಿನ ಪ್ರೋತ್ಸಾಹವಿಲ್ಲದೆ ಹಿಂಬದಿಗೆ ಬಿದ್ದುವು. ನಾಡಿನ ಎಲ್ಲೋ ಕೆಲವೆಡೆ ದಾಳಿಗೆ ಸಿಕ್ಕದೆ ಉಳಿದುಕೊಂಡಿದ್ದ ಹಲವು ಮಠಗಳು ತಮ್ಮ ವಿದ್ಯಾಪ್ರಸಾರವನ್ನು ಹಾಗೂ ಹೀಗೂ ಕೆಲಕಾಲ ಮುಂದುವರೆಸಿದುವು. ವಿಜಯನಗರ ಸ್ಥಾಪನೆಯಾದ ಮೇಲೆ ಮುಖ್ಯನಗರಗಳಲ್ಲಿ ಮತ್ತೆ ಉನ್ನತ ಶಿಕ್ಷಣಕ್ಕೆ ಪ್ರೋತ್ಸಾಹವೇನೋ ದೊರೆಯಿತು. ಆದರೆ ಅದರ ಪತನಾನಂತರ ಸಣ್ಣಪುಟ್ಟ ಪಾಳೆಯಪಟ್ಟುಗಳು ಏರ್ಪಟ್ಟು ನಾಡು ನಿತ್ಯಕದನಗಳ ಬೀಡಾಗಿ ವ್ಯವಸ್ಥಿತ ರೀತಿಯಲ್ಲಿ ಶಿಕ್ಷಣ ಪ್ರಸಾರ ಇಲ್ಲವಾಯಿತು. ಮುಸಲ್ಮಾನರು

ಆಕ್ರಮಿಸಿದ ಪ್ರದೇಶಗಳಲ್ಲಿ ತಮ್ಮವರಿಗಾಗಿ ಮದ್ರಸಗಳೆಂಬ ಉನ್ನತ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿದರು. ಹದಿನಾಲ್ಕನೆಯ ಶತಮಾನದ ಮಧ್ಯಭಾಗದ ವೇಳೆಗೆ ಉತ್ತರ ಕರ್ನಾಟಕದಲ್ಲಿ ಅವು ಅಸ್ತಿತ್ವಕ್ಕೆ ಬಂದುವು. ಮಸೀದಿಗಳ ಅಂಗವಾಗಿ ಏರ್ಪಟ್ಟಿದ್ದ ಆ ಸಂಸ್ಥೆಗಳಲ್ಲಿ ಮುಸ್ಲಿಂ ಧರ್ಮಗ್ರಂಥಗಳನ್ನು ಬೋಧಿಸುತ್ತಿದ್ದರು. ಹೊನ್ನಾವರ ಪ್ರದೇಶದಲ್ಲಿದ್ದ ಕೆಲವು ಸಂಸ್ಥೆಗಳನ್ನು ಅಲ್ಲಿ ಸಂಚರಿಸುತ್ತಿದ್ದ ಇಬ್ನ ಬತೂತ ಕೊಂಡಾಡಿರುವನು. ಬಹಮನೀ ಅರಸರು ಉನ್ನತ ಶಿಕ್ಷಣದ ಪ್ರಚಾರದಲ್ಲಿ ತುಂಬ ಆಸಕ್ತಿ ವಹಿಸಿದ್ದರು. ಗುಲ್ಬರ್ಗ, ಬಿದರೆ ಮುಂತಾದೆಡೆ ಸ್ಥಾಪಿಸಿದ್ದ ಸಂಸ್ಥೆಗಳು ಪ್ರಸಿದ್ಧಿ ಪಡೆದಿದ್ದುವು. 15ನೆಯ ಶತಮಾನದ ಕೊನೆಯಲ್ಲಿ ಆ ರಾಜ್ಯದ ಮಂತ್ರಿಯಾಗಿದ್ದ ಮಹಮ್ಮದ್ ಗವಾನ್ ಬಿದರೆಯಲ್ಲಿ ವಿದ್ಯಾಲಯವೊಂದನ್ನು ಕಟ್ಟಿಸಿ ಧರ್ಮಶಾಸ್ತ್ರಗಳ ಜೊತೆಗೆ ಲೌಕಿಕ ವಿದ್ಯೆಗಳ ಬೋಧನೆಗೂ ವ್ಯವಸ್ಥೆಗೊಳಿಸಿದ. ಅಲ್ಲಿನ ಗ್ರಂಥಾಲಯಕ್ಕೆ ದೇಶವಿದೇಶಗಳಿಂದ ಅಮೂಲ್ಯ ಕೃತಿಗಳನ್ನು ತರಿಸಿ ಒದಗಿಸಿದ್ದ. ಅನಂತರ ಅಧಿಕಾರಕ್ಕೆ ಬಂದ ಆದಿಲ್ ಷಾಹೀ ಅರಸರು ಬಿಜಾಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಪ್ರಾಥಮಿಕ ಸಾರ್ವತ್ರಿಕ ಶಿಕ್ಷಣಕ್ಕಾಗಿ ಮಕ್ತಾಬ್‌ಗಳೆಂದು ಶಾಲೆಗಳನ್ನು ಆರಂಭಿಸಿ ಉನ್ನತ ಶಿಕ್ಷಣಕ್ಕೆ ವಿದ್ಯಾರ್ಥಿಗಳು ಅಧಿಕ ಸಂಖ್ಯೆಯಲ್ಲಿ ಬರುವ ಅವಕಾಶ ಕಲ್ಪಿಸಿದರು. ಅರಬ್ಬೀ ಮತ್ತು ಪಾರಸೀ ಭಾಷೆಗಳ ವ್ಯಾಸಂಗಕ್ಕೂ ಶಿಲ್ಪ, ವೈದ್ಯ ಮುಂತಾದ ವೃತ್ತಿಶಿಕ್ಷಣಕ್ಕೂ ಪ್ರೋತ್ಸಾಹವಿತ್ತರು. ಕರ್ನಾಟಕದಲ್ಲಿ ಮುಸಲ್ಮಾನ ಆಳರಸರು ತಮ್ಮ ಮತದವರ ಉನ್ನತ ಶಿಕ್ಷಣಕ್ಕೆ ಪ್ರೋತ್ಸಾಹನೀಡಿದ್ದರೂ ದೇಶೀಯ ಶಿಕ್ಷಣದ ಪುನರುಜ್ಜೀವನದ ಕಡೆಗೆ ಆಸಕ್ತಿ ತೋರಲಿಲ್ಲ. ಅಲ್ಲದೆ, ರಾಜಾಸ್ಥಾನದಲ್ಲಿ ಪುರಸ್ಕಾರವಿಲ್ಲದೆ ಜನತೆಗೂ ಅದರಲ್ಲಿ ಆಸಕ್ತಿ ತಪ್ಪಿತ್ತು. ಮೈಸೂರಿನ ಒಡೆಯರ ಕಾಲದಲ್ಲಿ ಅವರ ಆಡಳಿತ ಕ್ಷೇತ್ರದಲ್ಲೂ ರಾಜಧಾನಿಯಲ್ಲೂ ಸಂಗೀತ, ಶಾಸ್ತ್ರ, ಸಾಹಿತ್ಯ ಮುಂತಾದವಕ್ಕೆ ಪ್ರೋತ್ಸಾಹವನ್ನು ನೀಡಿದ್ದರು. 18ನೆಯ ಶತಮಾನದ ಆಡಳಿತ ಹೈದರ್ ಮತ್ತು ಅನಂತರ ಅವನ ಮಗ ಟಿಪ್ಪುವಿನ ಕೈಸೇರಿದಾಗ ಆ ಪ್ರೋತ್ಸಾಹ ಇಲ್ಲವಾಯಿತು. ಒಟ್ಟಿನಲ್ಲಿ ಸುಮಾರು ಎರಡು ಸಹಸ್ರ ವರ್ಷಗಳಿಂದ ಬೆಳೆದು ಬಂದಿದ್ದ ಉನ್ನತ ಶಿಕ್ಷಣದ ದೇಶೀಯ ಸಂಪ್ರದಾಯ ಕ್ರಮಕ್ರಮವಾಗಿ ಕುಂದುತ್ತ ಬಂದು ಮುಂದೆ ತಲೆಯೆತ್ತಲು ಅವಕಾಶವಿಲ್ಲವಾಯಿತು. (ಎನ್.ಎಸ್.ವಿ.)

**ಉಪಾಧ್ಯೆ, ಆ.ನೇ.** : 1906-75. ಸಂಸ್ಕೃತ, ಪ್ರಾಕೃತ, ಕನ್ನಡ, ಮರಾಠಿ, ಹಿಂದಿ ಭಾಷೆಗಳಲ್ಲಿ ಪಾಂಡಿತ್ಯ ಪಡೆದಿದ್ದ ಅಂತಾರಾಷ್ಟ್ರೀಯ ಖ್ಯಾತ ವಿದ್ವಾಂಸರು. ಇವರ ಪೂರ್ಣ ಹೆಸರು ಆದಿನಾಥ ನೇಮಿನಾಥ ಉಪಾಧ್ಯೆ. ಬೆಳಗಾಂವಿ ಜಿಲ್ಲೆಯ ಸದಲಗಿ ಗ್ರಾಮದಲ್ಲಿ 1906 ಫೆಬ್ರವರಿ 6ರಂದು ಜನಿಸಿದ ಇವರು ಬೆಳಗಾಂವಿಯಲ್ಲಿ ಆರಂಭದ ವ್ಯಾಸಂಗವನ್ನು ಮುಗಿಸಿದರು. ಸಂಸ್ಕೃತ ಪ್ರಾಕೃತ ಅರ್ಧಮಾಗಧೀ ಭಾಷೆ ಮತ್ತು ಸಾಹಿತ್ಯವನ್ನು ವ್ಯಾಸಂಗದ ವಿಷಯವನ್ನಾಗಿ ಆರಿಸಿಕೊಂಡು ಕೊಲ್ಹಾಪುರದ ರಾಜಾರಾಮ್ ಕಾಲೇಜು ಮತ್ತು ಸಾಂಗಲಿಯ ವಿಲಿಂಗ್‌ಡನ್ ಕಾಲೇಜುಗಳಲ್ಲಿ ವ್ಯಾಸಂಗಮಾಡಿ ಬಿ.ಎ. ಪದವಿ ಪಡೆದರು (1928). ಅನಂತರ ಪುಣೆಯ ಭಂಡಾರ್‌ಕರ್ ಸಂಸ್ಥೆಯಲ್ಲಿ ಕಲಿತು ಉನ್ನತ ಶ್ರೇಣಿಯಲ್ಲಿ ಎಂ.ಎ. ಪದವಿ ಪಡೆದರು. ಈ ಅವಧಿಯಲ್ಲಿ ವಿ.ಎಸ್. ಸುಕ್ತಂಕರ್, ಪಿ.ಎಲ್.ವೈದ್ಯ, ಎಸ್.ಕೆ. ಬೆಳವಲಕರ್ ಮೊದಲಾದ ಹೆಸರಾಂತ ವಿದ್ವಾಂಸರ ಉಪನ್ಯಾಸಗಳನ್ನು ಕೇಳಿ ಅವರಿಂದ ಪ್ರಭಾವಿತರಾದರು. ಕೊಲ್ಹಾಪುರದ ರಾಜಾರಾಮ್ ಕಾಲೇಜಿನಲ್ಲಿ ಅರ್ಧಮಾಗಧೀ ಪ್ರಾಕೃತ ವಿಭಾಗದ ಅಧ್ಯಾಪಕರಾಗಿ ನೇಮಕಗೊಂಡು (1930) ತಮ್ಮ ವೃತ್ತಿಜೀವನವನ್ನು ಆರಂಭಿಸಿದ ಉಪಾಧ್ಯೆ ಅವರು ಮುಂದೆ ಮೂರೇ ವರ್ಷಕ್ಕೆ ಪ್ರಾಧ್ಯಾಪಕರಾದರು. 1939ರಲ್ಲಿ ಮುಂಬಯಿ ವಿಶ್ವವಿದ್ಯಾಲಯದ ಡಿ.ಲಿಟ್. ಪದವಿಯನ್ನು ಪಡೆದರು. ಅದೇ ವಿಶ್ವವಿದ್ಯಾನಿಲಯದ ಸ್ಪ್ರಿಂಜರ್ ಸಂಶೋಧನ ಶಿಷ್ಯವೃತ್ತಿಯನ್ನು ಪಡೆದರು (1941-43). ರಾಜಾರಾಮ್ ಕಾಲೇಜಿನಲ್ಲಿ ಸುಮಾರು 33 ವರ್ಷಗಳ ಕಾಲ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸಿದರು. ನಿವೃತ್ತಿಯ ಅನಂತರ ಅದೇ ಕಾಲೇಜಿನಲ್ಲಿ ಯು.ಜಿ.ಸಿ. ಸಂಶೋಧನಾ ಪ್ರಾಧ್ಯಾಪಕರಾಗಿಯೂ ಕೆಲಸ ಮಾಡಿದರು. ಅನಂತರ ಇವರು ಮೈಸೂರು ವಿಶ್ವವಿದ್ಯಾನಿಲಯದ ಜೈನಶಾಸ್ತ್ರ ಮತ್ತು ಪ್ರಾಕೃತ ವಿಭಾಗದ ಸಂಸ್ಥಾಪಕ ಪ್ರಾಧ್ಯಾಪಕರಾಗಿಯೂ ಮತ್ತು ಆ ವಿಭಾಗದ ಮುಖ್ಯಸ್ಥರೂ ಆಗಿದ್ದರು (1971-75).

ಬೋಧನೆ, ಸಂಶೋಧನೆ ಮತ್ತು ಪ್ರಕಟಣೆ- ಇವು ಉಪಾಧ್ಯೆ ಅವರ ಕಾರ್ಯಕ್ಷೇತ್ರ. ಈ ಕ್ಷೇತ್ರದಲ್ಲಿ ಇವರು ಶ್ರದ್ಧಾಪೂರ್ವಕವಾದ ದುಡಿಮೆಯನ್ನು ಮಾಡಿದ್ದಾರೆ. ತಮ್ಮ 23ನೆಯ ವಯಸ್ಸಿನಲ್ಲಿಯೇ ಬರೆವಣಿಗೆಯನ್ನು ಆರಂಭಿಸಿದ ಇವರು ಸುಮಾರು 150 ವಿದ್ವತ್ಪೂರ್ಣವಾದ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. ಗ್ರಂಥಸಂಪಾದನಾ ಕಾರ್ಯವನ್ನು ಒಂದು ಕಾಯಕ ಎಂದು ನಂಬಿ ಬಂದಿದ್ದ ಉಪಾಧ್ಯೆ ಸುಮಾರು



ಇಪ್ಪತ್ತೈದಕ್ಕೂ ಮೀರಿದ ಸಂಸ್ಕೃತ, ಪ್ರಾಕೃತ, ಅಪಭ್ರಂಶ ಗ್ರಂಥ'ಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಪ್ರತಿಯೊಂದು ಸಂಪಾದಿತ ಗ್ರಂಥ'ಕ್ಕೂ ಪಾಂಡಿತ್ಯಪೂರ್ಣವಾದ ದೀರ್ಘಪೀಠಿಕೆ ಬರೆಯುವುದು ಇವರ ವೈಶಿಷ್ಟ್ಯ. ಇವರು ಸಂಪಾದಿಸಿರುವ ಕೆಲವು ಮುಖ್ಯ ಗ್ರಂಥ'ಗಳಿವು - ಪ್ರವಚನಸಾರ (1935), ಪರಮಾತ್ಮ ಪ್ರಕಾಶ (1936), ವರಾಂಗ ಚರಿತೆ (1936), ಕಂಸವಹೋ (1940), ಬೃಹತ್ ಕಥಾಕೋಶ (1943), ತಿಲೋಯಪಣ್ಣತ್ತಿ (1951), ಕುವಲಯಮಾಲಾ (1959-70), ಕಾರ್ತಿಕೇಯಾನುಪ್ರೇಕ್ಷಾ (1960), ಸಪ್ತಶತೀಸಾರ (1970), ಧರ್ಮರತ್ನಾಕರ (1974).

ಕನ್ನಡದಲ್ಲೂ ಉಪಾಧ್ಯೆ ಅವರು ದೇಶಿಕೋಶಗಳಲ್ಲಿನ ಕನ್ನಡ ಪದಗಳು, ಕವಿಪರಮೇಶ್ವರ ಅಥವಾ ಪರಮೇಷ್ಠಿ ಮುಂತಾದ ಸಂಶೋಧನಾ ಲೇಖನಗಳನ್ನು ಬರೆದಿದ್ದಾರೆ. ಇವರ ಪಾಲಿ ಮತ್ತು ಪ್ರಾಕೃತ ಎಂಬ ಗ್ರಂಥ ಕನ್ನಡಕ್ಕಿರುವ ಪ್ರಾಕೃತದ ಗಾಢ ಹಿನ್ನೆಲೆಯನ್ನು ವಿವರಿಸುತ್ತದೆ. ವಡ್ಡಾರಾಧನೆಯ ಮೇಲಿನ ಇವರ ಸಂಶೋಧನೆ ಬಹು ಬೆಲೆಯುಳ್ಳದ್ದು.

ಉಪಾಧ್ಯೆ ಅವರು ಹಲವು ವಿದ್ವತ್ ಸಮ್ಮೇಳನಗಳಿಗೆ ಅಧ್ಯಕ್ಷರಾಗಿದ್ದರು. ಅಖಿಲ ಭಾರತ ಪ್ರಾಚ್ಯ ಸಮ್ಮೇಳನ 1940ರಲ್ಲಿ ಹೈದರಾಬಾದಿನಲ್ಲಿ ನೆರೆದಿದ್ದಾಗ, ಅದರ ಪ್ರಾಕೃತ, ಬೌದ್ಧ, ಜೈನ ವಿಭಾಗಗಳ ಅಧ್ಯಕ್ಷರಾಗಿ ಇವರು ಆಯ್ಕೆಯಾಗಿದ್ದರು. ಅನಂತರ ಅಲಿಗಡದಲ್ಲಿ 1966ರಲ್ಲಿ ನಡೆದ ಪ್ರಾಚ್ಯ ಸಮ್ಮೇಳನಕ್ಕೆ ಇವರು ಅಧ್ಯಕ್ಷರಾಗಿದ್ದರು. ಶ್ರವಣಬೆಳಗೊಳದಲ್ಲಿ 1967ರಲ್ಲಿ ನಡೆದ 46ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಇವರನ್ನು ಅಧ್ಯಕ್ಷರನ್ನಾಗಿ ಆರಿಸಿ ಕನ್ನಡಿಗರು ಗೌರವಿಸಿದ್ದಾರೆ.

ರಾಷ್ಟ್ರದ ಹಲವು ಪ್ರಮುಖ ಸಂಘ ಸಂಸ್ಥೆ ಮತ್ತು ವಿಶ್ವವಿದ್ಯಾಲಯಗಳೊಂದಿಗೆ ಉಪಾಧ್ಯೆ ಅವರಿಗೆ ನಿಕಟವಾದ ಸಂಪರ್ಕವಿತ್ತು. ಸೊಲ್ಲಾಪುರದ ಜೀವರಾಜ ಜೈನಗ್ರಂಥಮಾಲೆ, ವಾರಾಣಸೀ ಜ್ಞಾನಪೀಠ ಮೂರ್ತಿದೇವಿ ಜೈನ ಗ್ರಂಥಮಾಲೆ ಮುಂತಾದ ಹಲವು ಗ್ರಂಥಮಾಲೆಗಳ ಪ್ರಧಾನ ಸಂಪಾದಕರಾಗಿದ್ದರು. ಭಾರತೀಯ ಜ್ಞಾನಪೀಠದೊಂದಿಗೆ ನಿಕಟ ಸಂಪರ್ಕ ಪಡೆದಿದ್ದ ಇವರು ಪೀಠದ ಕನ್ನಡ ಕಾವ್ಯಮಾಲೆಯ ಉದಯಕ್ಕೆ ಕಾರಣರಾಗಿದ್ದರು. ಕೊಲ್ಹಾಪುರದ ಶಿವಾಜಿ ವಿಶ್ವವಿದ್ಯಾಲಯದಲ್ಲಿ 9 ವರ್ಷ ಕಲಾವಿಭಾಗದ ಡೀನರಾಗಿದ್ದ ಇವರು ಪುಣೆ, ಗಯಾ, ಮುಂಬಯಿ, ನಾಗಪುರ, ಬೆಂಗಳೂರು ಮುಂತಾದ ಹಲವು ವಿಶ್ವವಿದ್ಯಾಲಯಗಳ ವಿವಿಧ ಮಂಡಳಿಗಳ ಸದಸ್ಯರಾಗಿದ್ದರು. ಪುಣೆಯ ಸಂಸ್ಕೃತ ಕೋಶ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸಂಪಾದಕೀಯ ಮಂಡಲಿಗಳಲ್ಲಿದ್ದರು.

ಭಾರತ ಸರ್ಕಾರದ ಪ್ರತಿನಿಧಿಗಳಾಗಿ ಕ್ಯಾನ್ಬರಾದಲ್ಲಿ (1971) ಮತ್ತು ಪ್ಯಾರಿಸ್‌ನಲ್ಲಿ (1973) ನಡೆದ ಅಂತಾರಾಷ್ಟ್ರೀಯ ಪ್ರಾಚ್ಯಪರಿಷತ್ತಿನಲ್ಲಿ ಭಾಗವಹಿಸಿ ಪ್ರಬಂಧಗಳನ್ನು ಓದಿದ್ದರು. ಬೆಲ್ಜಿಯಂನಲ್ಲಿ 1974ರಲ್ಲಿ ನಡೆದ ಎರಡನೆಯ ಜಾಗತಿಕ ಧರ್ಮ ಮತ್ತು ಶಾಂತಿ ಸಮ್ಮೇಳನದಲ್ಲೂ ಭಾಗವಹಿಸಿದ್ದರು.

ಭಾರತ ಸರ್ಕಾರ 1975ರ ಸ್ವಾತಂತ್ರ್ಯ ದಿನದಂದು ಉಪಾಧ್ಯೆ ಅವರಿಗೆ ಸಂಸ್ಕೃತ ವಿದ್ವಾಂಸ ಪ್ರಶಸ್ತಿಪತ್ರ ಕೊಟ್ಟು ಗೌರವಿಸಿತು. ಇದೇ ವರ್ಷ ಇವರ ಸಿದ್ಧಸೇನ ದಿವಾಕರನ ನ್ಯಾಯಾವತಾರ ಎಂಬ ಗ್ರಂಥಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣ ಮಹೋತ್ಸವ ಬಹುಮಾನ ಲಭಿಸಿತು. ಅವರು 1975 ಅಕ್ಟೋಬರ್ 8ರಂದು ನಿಧನರಾದರು. (ಎಂ.ಎ.)

**ಉಪ್ಪಿನಂಗಡಿ :** ದಕ್ಷಿಣ ಕನ್ನಡ ಜಿಲ್ಲೆ ಪುತ್ತೂರು ತಾಲ್ಲೂಕಿನಲ್ಲಿ ನೇತ್ರಾವತಿ ದಂಡೆಯ ಮೇಲಿರುವ ಒಂದು ಊರು. ಪುತ್ತೂರಿಗೆ 13ಕಿಮೀ ಈಶಾನ್ಯಕ್ಕಿದೆ. ಪ್ರಾಚೀನ ಕಾಲದಲ್ಲಿ ಸಮುದ್ರದಿಂದ ಹೇರಳವಾಗಿ ಉಪ್ಪು ತಯಾರಿಸಿ ತಂದು ಇಲ್ಲಿ ಮಾರುತ್ತಿದ್ದರು. ಘಟ್ಟದ ಮೇಲಿನವರು ದವಸ, ಸಂಬಾರ ಮತ್ತಿತರ ತಮ್ಮ ವಸ್ತುಗಳನ್ನು ನೀಡಿ ಉಪ್ಪು ಮತ್ತಿತರ ವಸ್ತುಗಳನ್ನು ಕೊಂಡುಕೊಂಡು ಹೋಗುತ್ತಿದ್ದರು. ಆದ್ದರಿಂದ ಈ ಸ್ಥಳಕ್ಕೆ ಉಪ್ಪಿನಂಗಡಿ ಎಂಬ ಹೆಸರು ಬಂದಿತು. ಶ್ರೀರಂಗಪಟ್ಟಣದ ಪತನದ ತರುವಾಯ 1800ರಲ್ಲಿ ಈ ನಗರವನ್ನು ವಶಪಡಿಸಿಕೊಳ್ಳಲು ವಿಠಲ ಹೆಗ್ಗಡೆ ಹಾಗೂ ಸುಬ್ಬರಾವ್ ಪ್ರಯತ್ನಿಸಿದ್ದರು. 1882ರಲ್ಲಿ ಪುತ್ತೂರು ತಾಲ್ಲೂಕು ಆಗುವವರೆಗೆ ಉಪ್ಪಿನಂಗಡಿ ಅದೇ ಹೆಸರಿನ ತಾಲ್ಲೂಕಿನ ಕೇಂದ್ರವಾಗಿತ್ತು.

ತುಳು ಭಾಷೆಯಲ್ಲಿ ಈ ಊರನ್ನು ಉಬಾರ್ ಎಂದು ಕರೆಯುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ನದಿಗಳಾದ ನೇತ್ರಾವತಿ ಮತ್ತು ಕುಮಾರಧಾರಾಗಳು ಇಲ್ಲಿ ಸಂಗಮಿಸುತ್ತವೆ. ಇದೊಂದು ಪ್ರಮುಖ ಪುಣ್ಯ ಕ್ಷೇತ್ರವೆಂದು ಪರಿಗಣಿತವಾಗಿದೆ. ನೇತ್ರಾವತಿ ನದಿಯ ನಡುವೆ ಸಹಸ್ರಲಿಂಗೇಶ್ವರ ಲಿಂಗವಿದೆ. ದಡದ ಮೇಲೆ ಈ ದೇವರ ಗುಡಿಯೂ ಇದೆ. ಈಶ್ವರನ ಪರಿವಾರದೇವತೆಗಳಾದ ಕಲ್ಕುಡದೈವ ಮತ್ತು ಮಾಂಕಾಳಿಯ ಗುಡಿಗಳು ಸಮೀಪದಲ್ಲಿವೆ. ಕುಂಭಮಾಸದಲ್ಲಿ ಇಲ್ಲಿ ಮೂರು ಜಾತ್ರೆಗಳು ನಡೆಯುತ್ತವೆ. ಇಲ್ಲಿ 400 ವರ್ಷಗಳಷ್ಟು ಹಳೆಯದಾದ ಲಕ್ಷ್ಮೀ ವೆಂಕಟರಮಣ ಸ್ವಾಮಿ ದೇವಸ್ಥಾನವಿದೆ. ಉಪ್ಪಿನಂಗಡಿ ಮೂಲಕ ಹಾಸನ - ಮಂಗಳೂರು ಹೆದ್ದಾರಿ ಹಾದು ಹೋಗುತ್ತದೆ. ಇಲ್ಲಿ ಪ್ರಥಮದರ್ಜೆಯ ಕಾಲೇಜಿದೆ. (ಎ.ಜಿ.ಕೆ.)

**ಉಪ್ಪಿನಕುದುರು ಕೊಗ್ಗ ಕಾಮತ್ :** 1921-2003. ಯಕ್ಷಗಾನ ಗೊಂಬೆಯಾಟದ ಹೆಸರಾಂತ ಕಲಾವಿದರು. ಇಂದಿನ ಉಡುಪಿಜಿಲ್ಲೆ ಕುಂದಾಪುರ ತಾಲ್ಲೂಕಿನ ಉಪ್ಪಿನಕುದುರು ಗ್ರಾಮದಲ್ಲಿ 1921 ನವೆಂಬರ್ 27ರಂದು ಜನಿಸಿದರು. ರಾಷ್ಟ್ರಪ್ರಶಸ್ತಿ ವಿಜೇತ ಉಪ್ಪಿನ ಕುದುರು ದೇವಣ್ಣ ಕಾಮತ್ (ನೋಡಿ) ಇವರ ತಂದೆ, ತಾಯಿ ರಾಧಾಬಾಯಿ. ವಂಶ ಪಾರಂಪರ್ಯವಾಗಿ ಯಕ್ಷಗಾನ ಗೊಂಬೆಯಾಟ ಕಲೆಯನ್ನು ಮುಂದುವರೆಸಿ ಕೊಂಡು ಬಂದ ತಂದೆಯಿಂದ ತರಬೇತಿ, ಅನುಭವ ಪಡೆದ ಕೊಗ್ಗ ಕಾಮತರು ಗೊಂಬೆಯಾಟಕ್ಕೆ ಹೊಸತನ ಹಾಗೂ ಜೀವಂತಿಕೆ ತುಂಬಿದರು. ಇವರು ತಮ್ಮ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿದ ಬಳಿಕ ತಮ್ಮ ತಂದೆ ಹಾಗೂ ಅಜ್ಜ ನಾಗಪ್ಪ ಭಾಗವತರ ಆಟಗಳನ್ನು ನೋಡಿ ತರಬೇತಿ ಪಡೆದರು. ತಮ್ಮ ಹನ್ನೆರಡನೆಯ ವಯಸ್ಸಿನಲ್ಲಿಯೇ ತಂದೆಯ ಗೊಂಬೆಯಾಟಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಶೃಂಗೇರಿಯಲ್ಲಿ ಪ್ರದರ್ಶನ ಮಾಡುವ ಹೊತ್ತಿಗೆ (1941) ಆರ್ಥಿಕ ಮುಗ್ಗಟ್ಟು ಹಾಗೂ ಸಾರ್ವಜನಿಕ ಪ್ರೋತ್ಸಾಹವಿಲ್ಲದೆ ತಮ್ಮ ತಂದೆ ಹತ್ತು ಎಕರೆ ಜಮೀನು ಕಳೆದುಕೊಂಡಿದ್ದನ್ನು ನೋಡಿದ್ದರು. ಆದ್ದರಿಂದ ಈ ಕಲೆಯನ್ನಾಧರಿಸಿದರೆ ಉದರ ನಿರ್ವಹಣೆಗೆ ತೊಂದರೆಯಾಗಬಹುದೆಂದು ಭಾವಿಸಿ ನಾಗಪುರ, ಪುಣೆ, ಮುಂಬಯಿಗಳಲ್ಲಿ ಕೆಲಕಾಲ ನೌಕರಿ ಮಾಡಿದರು. ಹದಿನಾಲ್ಕು ವರ್ಷಗಳ ಅನಂತರ ಕಲೆಯ ತುಡಿತದಿಂದ ಮರಳಿ ಊರಿಗೆ ಬಂದರು (1955). ಬಣ್ಣ ಕಳೆದುಕೊಂಡು, ವೇಷ ಹರಿದುಕೊಂಡು ಮೂಲೆಯಲ್ಲಿ ಬಿದ್ದ ಗೊಂಬೆಗಳನ್ನು ಕೈಗೆತ್ತಿಕೊಂಡು ಅವಕ್ಕೆ ಹೊಸರೂಪ ಕೊಡಲು ಮುಂದಾದರು. ಅಲ್ಲಲ್ಲಿ ಪ್ರದರ್ಶನ ನೀಡಲಾರಂಭಿಸಿದರು. ಆದರೂ ಜೀವನ ಸಾಗಿಸುವುದು ಕಷ್ಟವಾದಾಗ ಕುಂದಾಪುರದ ಒಂದು ಕಟ್ಟಿಗೆ ಕೊರೆಯುವ ಮಿಲ್ಲಿನಲ್ಲಿ ಕೆಲಸಕ್ಕೆ ಸೇರಿಕೊಂಡರು.



ಕಮಲಾದೇವಿ ಚಟ್ಟೋಪಾಧ್ಯಾಯರ ಪ್ರೋತ್ಸಾಹದಿಂದ ಹ್ಯಾಂಡಿಕ್ರಾಫ್ಟ್ ಬೋರ್ಡಿನಿಂದ ಆರಂಭವಾದ ಟ್ರೈನಿಂಗ್ ಸೆಂಟರ್ ಕಾರಣಾಂತರಗಳಿಂದ ಮುಚ್ಚಿಹೋಗಿದ್ದರೂ (1966) ತಯಾರಾದ ಗೊಂಬೆಗಳು ಸುಸ್ಥಿತಿಯಲ್ಲಿದ್ದವು. ಇಂಥ ಸಂದರ್ಭದಲ್ಲಿ ಮೈಸೂರು ಎಜ್ಯುಕೇಶನಲ್ ಕಲ್ಚರಲ್ ಅಂಡ್ ಸರ್ವಿಸ್ ಕೋ-ಆಪ್ ಸಂಸ್ಥೆಯವರು ಆರ್ಥಿಕ ಸಹಾಯಕವಮಾಡಿ ಗೊಂಬೆಯಾಟ ತರಬೇತಿ ಕೇಂದ್ರ ನಡೆಸುವಂತೆ ಮಾಡಿದರು. ಕೇಂದ್ರ ಸಂಗೀತ ನಾಟಕ ಅಕಾಡೆಮಿಯೂ ಕೊಂಚ ಆರ್ಥಿಕ ನೆರವು ನೀಡಿತು. ಈ ತರಬೇತಿ ಕೇಂದ್ರದ ವಿದ್ಯಾರ್ಥಿಗಳಿಗೆ ಅಕಾಡೆಮಿ ನೆರವು ನೀಡಲು ಮುಂದೆ ಬಂದರೂ ಕಾರಣಾಂತರಗಳಿಂದ ಕಾಮತರು ಅದನ್ನು ಸ್ವೀಕರಿಸಲಿಲ್ಲ.

ಕೇಂದ್ರ ಸಂಗೀತ ನಾಟಕ ಅಕಾಡೆಮಿ ದೆಹಲಿಯಲ್ಲಿ ನಡೆಸಿದ ಮುಖವಾಡ ಮತ್ತು ಗೊಂಬೆಗಳ ಉತ್ಸವಕ್ಕೆ ಕೊಗ್ಗ ಕಾಮತರನ್ನು ಆಹ್ವಾನಿಸಿತ್ತು (1972). ಅದೇ ವರ್ಷ ರಾಜ್ಯ ಸಾಹಿತ್ಯ ಅಕಾಡೆಮಿಯ ಸಹಕಾರದಿಂದ ಶಿವರಾಮ ಕಾರಂತರು ಏರ್ಪಡಿಸಿದ ಗೊಂಬೆಗಳ ಉತ್ಸವದಲ್ಲಿ ಭಾಗವಹಿಸಿ ಇವರು ಪ್ರಥಮ ಬಹುಮಾನ ಪಡೆದರು. ಕೇಂದ್ರ ಸಾಹಿತ್ಯ ಅಕಾಡೆಮಿ ದೆಹಲಿಯಲ್ಲಿ ವಿಚಾರಗೋಷ್ಠಿ ಏರ್ಪಡಿಸಿದಾಗ (1972), ಇವರ ಗೊಂಬೆಯಾಟ ಪ್ರದರ್ಶನಗೊಂಡಿತು. ಮುಂಬಯಿಯ ನ್ಯಾಷನಲ್ ಸೆಂಟರ್ ಫಾರ್ ಪರ್‌ಫಾರ್ಮಿಂಗ್ ಆರ್ಟ್ಸ್ ಸಂಸ್ಥೆ ಇವರನ್ನು ಆಮಂತ್ರಿಸಿ ಪ್ರದರ್ಶನ ಏರ್ಪಡಿಸಿದಾಗ (1976) ದೇಶವಿದೇಶಗಳಿಂದ ಬಂದ ಜನ ಇವರ ಗೊಂಬೆಯಾಟದ ಪ್ರದರ್ಶನ ನೋಡಿ ತಮ್ಮಲ್ಲಿ ಪ್ರದರ್ಶನ ನೀಡಲು ಇವರನ್ನು ಆಹ್ವಾನಿಸಿದರು.

ಕೊಗ್ಗ ಕಾಮತರ ಶ್ರೀ ಗಣೇಶ ಯಕ್ಷಗಾನ ಗೊಂಬೆಯಾಟ ಮಂಡಳಿಯೊಂದಿಗೆ ಸಂಪರ್ಕ ಹೊಂದಿದ ಕೆ.ಎಸ್. ಉಪಾಧ್ಯಾಯರ ಮೂಲಕ ಇವರು ಯುರೋಪ್ ದೇಶದ ವಿವಿಧ ಭಾಗಗಳಲ್ಲಿ ಪ್ರದರ್ಶನ ನೀಡಿ ಅಪಾರ ಜನಪ್ರಿಯತೆ ಗಳಿಸಿದರು (1978-79).

ಫ್ರಾನ್ಸಿನ ರೆನ್ನೆಯಲ್ಲಿ ನಡೆದ ಐದನೆಯ ಸಾಂಪ್ರದಾಯಿಕ ಕಲೆಗಳ ಉತ್ಸವದಲ್ಲಿ ಕಾಮತರು ಪಾಲ್ಗೊಂಡರು (1978). ಪ್ಯಾರಿಸ್‌ನಗರವೂ ಸೇರಿದಂತೆ ಫ್ರಾನ್ಸಿನ ಪ್ರಮುಖ ನಗರಗಳಲ್ಲಿ ಪ್ರದರ್ಶನ ನೀಡಿ ಭಾರತದ ಈ ಕಲೆಗೆ ಪ್ರತಿಷ್ಠೆ ತಂದುಕೊಟ್ಟರು. ಮೊದಲ ವಿದೇಶ ಯಾತ್ರೆಯಲ್ಲಿ ಜಯಭೇರಿ ಬಾರಿಸಿದ ಶ್ರೀ ಗಣೇಶ ಯಕ್ಷಗಾನ ಗೊಂಬೆಯಾಟ ಮಂಡಳಿಯನ್ನು ಫ್ರಾನ್ಸ್ ಮತ್ತೊಮ್ಮೆ ಆಹ್ವಾನಿಸಿ ಫ್ರಾನ್ಸಿನ ಲಿಲೆ ಉತ್ಸವದಲ್ಲಿ ಭಾಗವಹಿಸುವಂತೆ ಮಾಡಿದ್ದಲ್ಲದೆ ಇನ್ನೂ ಅನೇಕ ಕಡೆ ಪ್ರದರ್ಶನ ಏರ್ಪಡಿಸಿತು (1979).

ದಿ ರಾಯಲ್ ಟ್ರಾಪಿಕಲ್ ಇನ್‌ಸ್ಟಿಟ್ಯೂಟ್ ಆಫ್ ಆಮ್‌ಸ್ಟರ್‌ಡ್ಯಾಮ್, ಹಾಲೆಂಡ್ ಎಂಬ ಸಂಸ್ಥೆ ಈ ಯಕ್ಷಗಾನ ಗೊಂಬೆಯಾಟ ಮಂಡಳಿಯನ್ನು ಆಹ್ವಾನಿಸಿ ಆಮ್‌ಸ್ಟರ್ ಡ್ಯಾಮ್ ಮತ್ತು ಬ್ರಿಡಾಗಳಲ್ಲಿ ಪ್ರದರ್ಶನ ಏರ್ಪಡಿಸಿತ್ತು.

ಯಕ್ಷಗಾನ ಗೊಂಬೆಯಾಟವನ್ನು ಜನಪ್ರಿಯಗೊಳಿಸಿದ ಇವರಿಗೆ ಅನೇಕ ಗೌರವ ಪ್ರಶಸ್ತಿಗಳು ಲಭಿಸಿವೆ. ಅವುಗಳಲ್ಲಿ ಮುಖ್ಯವಾದವು- ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ (1979), ರಾಜ್ಯೋತ್ಸವ ಪ್ರಶಸ್ತಿ (1985), ಮಧ್ಯಪ್ರದೇಶ ಸರ್ಕಾರದ ಪ್ರತಿಷ್ಠಿತ ತುಳಸಿ ಸಮ್ಮಾನ (1995). ಕು.ಶಿ. ಹರಿದಾಸ ಭಟ್ಟರು ಕೊಗ್ಗ ಕಾಮತರ ಗೊಂಬೆಗಳು ಎಂಬ ಪುಸ್ತಕ ಬರೆದಿದ್ದಾರೆ.

ಕಾಮತರು ಸ್ವತಃ ತಯಾರಿಸುತ್ತಿದ್ದ ಗೊಂಬೆಗಳಿಗೂ ಬೇಡಿಕೆಯಿತ್ತು. ಈ ಗೊಂಬೆಗಳು ದೇಶ ವಿದೇಶದ ಅನೇಕ ವಸ್ತು ಸಂಗ್ರಹಾಲಯ

ಗಳನ್ನಲಂಕರಿಸಿವೆ. ಬಿಕ್ಕಟ್ಟಿನ ಪರಿಸ್ಥಿತಿಯಲ್ಲೂ ಈ ಕಲೆಯ ಬೆನ್ನು ಬಿಡದೆ ಶ್ರೀಗಣೇಶ ಯಕ್ಷಗಾನ ಗೊಂಬೆಯಾಟ ಮಂಡಳಿಯನ್ನು ಬದುಕಿಸಿಕೊಂಡು ಬಂದರು. ಲಕ್ಷ್ಮೀದೇವಿ ಇವರ ಪತ್ನಿ. ಈ ದಂಪತಿಗಳಿಗೆ ಒಬ್ಬ ಮಗ, ನಾಲ್ವರು ಹೆಣ್ಣು ಮಕ್ಕಳು. ಕೊಗ್ಗ ಕಾಮತರ ಮಗ ಭಾಸ್ಕರ ಕಾಮತರು 2003 ಆಗಸ್ಟ್ 27ರಂದು ನಿಧನರಾದರು. ತಮ್ಮ ತಂದೆಯ ಕಲೆಯನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ. (ಎಸ್.ಎಂ.ಕೆ.)

**ಉಪ್ಪಿನಕುದುರು ದೇವಣ್ಣ ಕಾಮತ್ :** 1888-1971. ಯಕ್ಷಗಾನ ಗೊಂಬೆಯಾಟದಲ್ಲಿ ರಾಷ್ಟ್ರಪ್ರಶಸ್ತಿ ಗಳಿಸಿದ ಕಲಾವಿದ. ಇಂದಿನ ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕಿನ ಉಪ್ಪಿನಕುದುರುವಿನಲ್ಲಿ 1888 ಸೆಪ್ಟೆಂಬರ್



17ರಂದು ಜನಿಸಿದರು. ಇವರ ಹಿರಿಯರು ಈ ಕಲೆಯನ್ನು ಪೋಷಿಸಿಕೊಂಡು ಬಂದದ್ದರಿಂದ ಇವರ ಮನೆತನಕ್ಕೆ ಭಾಗವತರ ಮನೆ ಎಂಬ ಹೆಸರು ಬಂತು. ಇವರ ತಂದೆ ವೆಂಕಟರಮಣ ಕಾಮತ್. ಆರಂಭದಲ್ಲಿ ಇವರಿಗೆ ಪ್ರಾಥಮಿಕ ಶಿಕ್ಷಣ ಮಾತ್ರ ದೊರೆತಿತ್ತು. ತಮ್ಮ ತಂದೆ ಹಾಗೂ ಅಜ್ಜ ಲಕ್ಷ್ಮಣಕಾಮತರಿಂದ ತರಬೇತಿ ಪಡೆದರು. ಅನಂತರ ಇವರು ತಮ್ಮ ಮಗ ಉಪ್ಪಿನಕುದುರು ಕೊಗ್ಗ ಕಾಮತರೊಂದಿಗೆ (ನೋಡಿ) ದೇಶದ ಬೇರೆ ಬೇರೆ ಭಾಗಗಳಲ್ಲಿ ಯಕ್ಷಗಾನ ಗೊಂಬೆಯಾಟದ ಪ್ರದರ್ಶನ ನೀಡಿ ಈ ಕಲೆಯ ಪ್ರಚಾರಕ್ಕೆ ಕಾರಣರಾದರು. ಇವರ ಪತ್ನಿ ರಾಧಾಬಾಯಿ. ಈ ದಂಪತಿಗಳಿಗೆ 3 ಗಂಡು, 3 ಹೆಣ್ಣು ಮಕ್ಕಳು.

ದೇವಣ್ಣ ಕಾಮತರು ಸ್ವತಃ ಯಕ್ಷಗಾನ ಕಲೆಯಲ್ಲಿ ನುರಿತವರಾದುದರಿಂದ ರಾಮಾಯಣ, ಮಹಾಭಾರತದ ಪ್ರಸಂಗಗಳಿಗೆ ಗೊಂಬೆಯ ಕುಣಿತ ಹೊಂದಿಸಿ ಅದೊಂದು ಮನರಂಜನೆಯ ಆಟ ವಾಗುವಂತೆ ಮಾಡಿದರು. ಯಕ್ಷಗಾನ ವೇಷಭೂಷಣ ಮುಖವರ್ಣಿಕೆಗೆ ಹೊಂದುವ ಗೊಂಬೆಗಳನ್ನು ತಾವೇ ತಯಾರಿಸಿದರು. ಪಾತ್ರಗಳಿಗೆ ಸೂಕ್ತವಾದ ವಸ್ತ್ರಾಲಂಕಾರ ಮಾಡಿ, ಹಿನ್ನೆಲೆಯಲ್ಲಿ ಯಕ್ಷಗಾನ ಸಂಗೀತ ಅಳವಡಿಸಿ ಗೊಂಬೆಗಳೂ ಮನುಷ್ಯರಂತೆ ಹಾವಭಾವ ಪೂರ್ಣವಾಗಿ ಕುಣಿಯುವಂತೆ ಮಾಡುವಲ್ಲಿ ಯಶಸ್ವಿಯಾದರು. ದೊಡ್ಡ ಆಕಾರದ ಮೂರ್ತಿಗಳ ರಚನೆ ಮಾಡಿ ಅವುಗಳ ಚಲನವಲನಕ್ಕೆ ಯೋಗ್ಯವಾದ ಸೂತ್ರಗಳನ್ನು ಜೋಡಿಸಿದ್ದು ಇವರ ಬಹು ದೊಡ್ಡ ಸಾಧನೆ.

1966ರಲ್ಲಿ ದೆಹಲಿಯ ಗಣರಾಜ್ಯೋತ್ಸವ ಸಮಾರಂಭಕ್ಕೆ ಆಮಂತ್ರಿತರಾದ ಇವರು ಅಂದಿನ ರಾಷ್ಟ್ರಪತಿ ಎಸ್. ರಾಧಾಕೃಷ್ಣನ್ ಅವರಿಂದ ರಾಷ್ಟ್ರಪ್ರಶಸ್ತಿ ಪಡೆದರು. ಆರ್ಥಿಕ ತೊಂದರೆಗಳ ನಡುವೆಯೂ ಇವರು ಛಲ ಮತ್ತು ನಿಷ್ಠೆಯಿಂದ ಈ ಕಲಾ ಸಂಪ್ರದಾಯವನ್ನು ಉಳಿಸಲು ಮತ್ತು ಬೆಳೆಸಲು ತುಂಬ ಪರಿಶ್ರಮಿಸಿದರು. ಕಮಲಾ ದೇವಿ ಚಟ್ಟೋಪಾಧ್ಯಾಯರ ನಿರ್ದೇಶನದಲ್ಲಿ ಸೆಂಟ್ರಲ್ ಹ್ಯಾಂಡಿಕ್ರಾಫ್ಟ್ ಬೋರ್ಡಿನ ಸಹಾಯದಿಂದ ಯಕ್ಷಗಾನ ಗೊಂಬೆಯಾಟ ತರಬೇತಿ ಕೇಂದ್ರವನ್ನು ಆರಂಭಿಸಿ ಅನೇಕ ವಿದ್ಯಾರ್ಥಿಗಳಿಗೆ ಈ ಕಲೆಯ ಪರಿಚಯ ಮಾಡಿಕೊಟ್ಟರು (1966-68). ಇವರು 1971 ಜುಲೈ 20ರಂದು ನಿಧನರಾದರು. (ಎಸ್.ಎಂ.ಕೆ.)

**ಉಪ್ಪೂರು ನಾರ್ಣಪ್ಪ ಭಾಗವತ :** 1918-84. ಯಕ್ಷಗಾನ ಬಡಗುತಿಟ್ಟಿನ ಹಳೆಯ ತಲೆಮಾರಿನ ಸಾಂಪ್ರದಾಯಿಕ ಶೈಲಿಯ ಪ್ರಸಿದ್ಧ ಭಾಗವತರು. ಖಚಿತ ರಾಗಜ್ಞಾನದಿಂದ, ಕುಣಿತಕ್ಕೆ ತಕ್ಕ ತಾಳವನ್ನು ನಡೆಸುವ ಸಾಮರ್ಥ್ಯದಿಂದ, ಹಾಡಿನ ಪದ ಪದಗಳನ್ನೂ ಹಿಂಜಿ ಅದರ ಭಾವವನ್ನು ಬಿಂಬಿಸುವ ಅಪರೂಪದ ಶೈಲಿಯಿಂದಾಗಿ ಯಕ್ಷಗಾನದ ಪ್ರಾಚಾರ್ಯರೆಂದೇ ಪರಿಚಿತರು. ಇವರು 1918ರಲ್ಲಿ ಜನಿಸಿದರು. ತಂದೆ ಶ್ರೀನಿವಾಸಭಾಗವತ. ಅವರೇ ಭಾಗವತಿಕೆಯಲ್ಲಿ ಮೊದಲ ಗುರು. ಉಪ್ಪೂರರು ಮೊದಲಿಗೆ ಸಂಗೀತಗಾರರಾಗಿ ಅನುಭವ ಪಡೆದು ಅನಂತರ ತಮ್ಮ 20ನೆಯ ವಯಸ್ಸಿನಲ್ಲೇ ಭಾಗವತರಾಗಿ ರೂಪುಗೊಂಡರು. ಅಮೃತೇಶ್ವರಿ, ಮಾರಣಕಟ್ಟೆ, ಕೊಲ್ಲೂರು, ಪೆರ್ಡೂರು, ಸೌಕೂರು, ಸಾಲಿಗ್ರಾಮ ಮುಂತಾದ ಮೇಳಗಳಲ್ಲಿ 30 ವರ್ಷಗಳನ್ನು ಕಳೆದರು.

ಭಾಗವತಿಕೆಯಲ್ಲಿ ಹೆಸರಾದಂತೆ ಇವರು ಯಕ್ಷಗಾನ ಕಲಿಕೆಯಲ್ಲಿ ಸಿದ್ಧಹಸ್ತರು. ಹಂಗಾರಕಟ್ಟೆ ಯಕ್ಷಗಾನ ಕಲಾಕೇಂದ್ರದ ಪ್ರಾಚಾರ್ಯರಾಗಿ 13 ವರ್ಷ ಯಕ್ಷಗಾನದಲ್ಲಿ ತರಬೇತಿ ನೀಡಿದರು. ಅಪಾರ ಸಂಖ್ಯೆಯ ಶಿಷ್ಯರನ್ನು ಬೆಳೆಸಿದ್ದು, ಹಲವು ಮೇಳಗಳಲ್ಲಿ ಇವರ ಶಿಷ್ಯಂದಿರು ಅಗ್ರಪಂಕ್ತಿಯ ಕಲಾವಿದರಾಗಿರುವುದು ಉಲ್ಲೇಖನೀಯ. ಯಕ್ಷಗಾನ ಲೋಕದಲ್ಲಿ ಮಿಂಚಿ ಬಹುಬೇಗ ಮಾಯವಾದ ಪ್ರತಿಭಾವಂತ ಯುವ ಭಾಗವತ ಗುಂಡ್ಮಿ ಕಾಳಿಂಗ ನಾವಡ (ನೋಡಿ) ಇವರ ಪ್ರಮುಖ ಶಿಷ್ಯರಲ್ಲೊಬ್ಬರು.

ಇವರು ಯಕ್ಷಗಾನ ಕುರಿತು ಯಕ್ಷಗಾನ ಶಿಕ್ಷಕ, ಯಕ್ಷಗಾನ ಅಧ್ಯಯನ ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಯಕ್ಷಗಾನದ ರಾಗ, ತಾಳ, ಕುಣಿತಗಳ ಬಗ್ಗೆ ದೀರ್ಘವಾದ ವಿವರಗಳು ಮತ್ತು ಮಾರ್ಗದರ್ಶಕ ಸೂತ್ರಗಳಿವೆ. ಸತ್ಯಂ ವಧ ಧರ್ಮಂ ಚರ ಎಂಬುದು ಇವರ ಒಂದು ಯಕ್ಷಗಾನ ಪ್ರಸಂಗ. ಉಪ್ಪೂರರು ಭಾಗವತರಾಗಿ ವಿದ್ವತ್ತು, ಸಹೃದಯತೆಯ ಜೊತೆಗೆ ಕಲಾವಿದರಿಗೆ ಮಾದರಿಯಾಗಬಲ್ಲ ವ್ಯಕ್ತಿತ್ವ ಹೊಂದಿದ್ದರು. ಸಂಪ್ರದಾಯಬದ್ಧ ಭಾಗವತಿಕೆಯನ್ನು ಮೈಗೂಡಿಸಿಕೊಂಡಿದ್ದರೂ ಹಲವಾರು ಅರ್ಥಪೂರ್ಣ ಬದಲಾವಣೆಗಳಿಗೆ ತಮ್ಮನ್ನು ಒಡ್ಡಿಕೊಂಡಿದ್ದರು. ಆದರೆ ಕೆಲವೊಮ್ಮೆ ಅತಿರೇಕದ ಬದಲಾವಣೆಗಳಿಗೆ ಇವರು ರಾಜಿಯಾಗಲಿಲ್ಲ. ಶಿವರಾಮ ಕಾರಂತರ ನೃತ್ಯ ನಾಟಕಗಳಲ್ಲಿ ಭಾಗವತರಾಗಿ ಭಾಗವಹಿಸಿದ್ದರಿಂದ, ಕಾರಂತರ ಪ್ರಯೋಗಗಳಿಂದ ತಮ್ಮ ಅನುಭವ ವಿಸ್ತಾರಗೊಂಡಿದ್ದನ್ನು ಇವರು ಒಪ್ಪಿಕೊಂಡಿದ್ದರು. ಯಕ್ಷಗಾನಕ್ಕೆ ನಾಟಕಗಳಲ್ಲಿರುವಂತೆ ನಿರ್ದೇಶನದ ಅಗತ್ಯವಿದೆ ಎಂಬ ಬಗ್ಗೆ ಇವರ ಸಹಮತವಿತ್ತು. ಇವರು 1984 ಏಪ್ರಿಲ್ 11ರಂದು ನಿಧನರಾದರು. (ಟಿ.ಎಂ.)

**ಉಮಾದೇವಿ :** ಹೊಯ್ಸಳ ಚಕ್ರವರ್ತಿ ಇಮ್ಮಡಿ ವೀರಬಲ್ಲಾಳನ (1173-1220) ಮಹಿಷಿಯರಲ್ಲಿ ಒಬ್ಬಳು. ಈಕೆಯ ವರ್ಣನೆ ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ. ಜಗನ್ನಾಥವಿಜಯದ ಕರ್ತೃ ರುದ್ರಭಟ್ಟ ತನ್ನ ಕಾವ್ಯದಲ್ಲಿ ಬಲ್ಲಾಳನನ್ನು ಉಮಾಕಾಮಿನೀಜೀವಿತೇಶ್ವರ ಎಂದು ಸಂಬೋಧಿಸಿದ್ದಾನೆ. ಬಲ್ಲಾಳನ ರಾಜ್ಯಾಡಳಿತದಲ್ಲಿ ಸಲಹೆಗಳನ್ನು ನೀಡುತ್ತಿದ್ದುದಲ್ಲದೆ ಸ್ವಯಂ ಯುದ್ಧಭೂಮಿಯಲ್ಲಿ ನಿಂತು ಶತ್ರುಗಳನ್ನು ಎದುರಿಸುತ್ತಿದ್ದಳು. 1196-97ರಲ್ಲಿ ಸೈನ್ಯಸಮೇತವಾಗಿ ಬೆಳಗವತ್ತಿಯ ಸಿಂಧಭೂಪಾಲನಾದ ಈಶ್ವರದೇವನ ರಾಜ್ಯವನ್ನು ಮುತ್ತಿ ಅವನ ಸೈನ್ಯವನ್ನು ಸೋಲಿಸಿ ಅಪಾರ ಐಶ್ವರ್ಯಸಮೇತ ಹಿಂದಿರುಗಿದಳೆಂದು ಹೊನ್ನಾಳಿ ತಾಲ್ಲೂಕಿನಲ್ಲಿ ದೊರೆತಿರುವ ಶಾಸನವೊಂದರಿಂದ ತಿಳಿದುಬರುತ್ತದೆ. ಈಕೆ ಸುಂದರಿಯೂ ಗೀತವಾದ್ಯ ನೃತ್ಯ ಚತುರೆಯೂ ಆಗಿದ್ದಳೆಂದು ಅರಸೀಕೆರೆ ಬಳಿ ಸಿಕ್ಕಿರುವ ತ್ರಿವಿಕ್ರಮ ಪಂಡಿತನದೆನ್ನಲಾದ ಶಾಸನವೊಂದರಿಂದ ತಿಳಿದು ಬರುತ್ತದೆ. *

**ಉಮ್ಮತ್ತೂರು :** ಚಾಮರಾಜನಗರ ಜಿಲ್ಲೆಯ ಅದೇ ತಾಲ್ಲೂಕಿನಲ್ಲಿ ಯಳಂದೂರಿನಿಂದ 14ಕಿಮೀ ದೂರದಲ್ಲಿರುವ ಗ್ರಾಮ. ಹಿಂದೆ ಇದು ಉಮ್ಮತ್ತೂರು ಪಾಳೆಯಗಾರರ ರಾಜಧಾನಿಯಾಗಿತ್ತು.

11ನೆಯ ಶತಮಾನದಲ್ಲಿಯೇ ಈ ಊರು ಇದ್ದುದಕ್ಕೆ ಇಲ್ಲಿರುವ ನಿಷಧಿಶಾಸನಗಳು ಸಾಕ್ಷಿ. ಆಗ ಇಲ್ಲಿ ಜೈನರ ವಸತಿ ಹೆಚ್ಚಾಗಿದ್ದಂತೆ ತೋರುತ್ತದೆ. ಇಲ್ಲಿರುವ ವರ್ಧಮಾನ ಬಸದಿ 13ನೆಯ ಶತಮಾನಕ್ಕೆ ಸೇರಿದ ಸರಳವಾದ ದ್ರಾವಿಡ ಶೈಲಿಯ ಕಟ್ಟಡ. 15-16ನೆಯ ಶತಮಾನಗಳಲ್ಲಿ ಈ ಪ್ರಾಂತ್ಯವನ್ನಾಳಿದ ಉಮ್ಮತ್ತೂರು ಅರಸರು ಇಲ್ಲಿ ಒಂದು ಕೋಟೆಯನ್ನು ಕಟ್ಟಿದ್ದರು. ಅದರ ಅವಶೇಷಗಳನ್ನು ಈಗಲೂ ಅಲ್ಲಲ್ಲಿ ಕಾಣಬಹುದು. ಊರಿನ ನೈಋತ್ಯಕ್ಕೆ ಆ ಅರಸರ ಅರಮನೆ ಇದ್ದುದು ನಾಮಾವಶೇಷವಾಗಿದೆ. ಅರಮನೆಯ ಹೊಲ ಎಂದು ಒಂದು ಹೊಲವನ್ನು ಸ್ಥಳೀಕರು ಗುರುತಿಸುತ್ತಾರೆ.

ಉಮ್ಮತ್ತೂರರಸರ ಕಾಲದಲ್ಲಿ ಈ ಊರಿನಲ್ಲಿ ಹಲವು ದೇವಾಲಯಗಳು ನಿರ್ಮಿತವಾದುವು. ಅವುಗಳಲ್ಲಿ ರಂಗನಾಥ ದೇವಾಲಯ ಮತ್ತು ಭುಜಂಗೇಶ್ವರ ದೇವಾಲಯಗಳು ದ್ರಾವಿಡ ಶೈಲಿಯಲ್ಲಿ ಕಟ್ಟಿರುವ ದೊಡ್ಡ ದೇವಾಲಯಗಳು. ಈ ದೇವಾಲಯಗಳ ಮುಂದೆ ಉನ್ನತವಾದ ಮತ್ತು ಸ್ಥೂಲವಾದ ಗರುಡಗಂಬಗಳಿವೆ. ರಂಗನಾಥಸ್ವಾಮಿ ದೇವಾಲಯದ ಮುಂದಿನ ಗರುಡಗಂಬದ ಬುಡದ ನಾಲ್ಕು ಮುಖಗಳಲ್ಲಿಯೂ ಕ್ರಮವಾಗಿ ಭಕ್ತವಿಗ್ರಹ ಹನುಮಾನ್, ಗರುಡ ಮತ್ತು ಪರವಾಸುದೇವರ ಮೂರ್ತಿಗಳಿವೆ. ಭಕ್ತವಿಗ್ರಹ, ಉಮ್ಮತ್ತೂರರಸನೊಬ್ಬನದಿರಬಹುದು. ಭುಜಂಗೇಶ್ವರ ದೇವಾಲಯದಲ್ಲಿಯೂ ಇಂಥದೇ ಒಂದು ಭಕ್ತವಿಗ್ರಹವನ್ನು ನೋಡಬಹುದು. ಈ ದೇವಾಲಯದಲ್ಲಿರುವ ಪಂಚಲಿಂಗಗಳಲ್ಲೊಂದರ ಮೇಲೆ ಜಟೆಯಿದ್ದು ಅದರ ಮೇಲೆ ಚತುರ್ಭುಜಳಾದ ಗಂಗೆಯ ಮೂರ್ತಿ ಇದೆ. ಇದು ಒಂದು ಅಪರೂಪ ಕೃತಿ. ಈ ದೇವಾಲಯದ ಮುಂದಿನ ಗರುಡಗಂಬದ ಚೌಕನಾದ ಬುಡದ ಮೇಲು ಮೂಲೆಯೊಂದರಲ್ಲಿ ತೆರೆದ ಬಾಯಿ ಕೋರೆಹಲ್ಲುಗಳು ಉಬ್ಬಿದ ಕಣ್ಣು ಕೆದರಿದ ತಲೆಯುಳ್ಳ ಸ್ಥೂಲಕಾಯದ ಒಂದು ಮೂರ್ತಿ ಇದೆ. ಇದನ್ನು ಬೇತಾಳನೆಂದೂ ಭುಜಂಗೇಶ್ವರ ದೇವಾಲಯವನ್ನು ಕಟ್ಟಿದ ಅನಂತರ ಆ ಊರ ಅರಸನಿಗೆ ಅದರಿಂದ ಬಿಡುಗಡೆಯಾಯಿತೆಂದೂ ಅದರಿಂದ ಆತ ಆ ಮೂರ್ತಿಯನ್ನು ಅಲ್ಲಿ ಕಂಡರಿಸಿದನೆಂದೂ ಹೇಳಿಕೆ ಇದೆ. ಈ ಎರಡು ದೇವಾಲಯಗಳಲ್ಲದೆ ಸಪ್ತಮಾತೃಕಾ, ವೀರಭದ್ರ ದೇವಾಲಯಗಳೂ ಇಲ್ಲಿವೆ. ಉಪ್ಪರಿಗೆ ಸಿಂಹಾಸನ ಮಠವೆಂಬ ಒಂದು ಮಠವೂ ಇಲ್ಲಿದ್ದುದಾಗಿ ತಿಳಿದುಬರುತ್ತದೆ. (ಎಂ.ಎಚ್.)

**ಉಮ್ಮತ್ತೂರು ಪಾಳೆಯಗಾರರು** : 15ನೆಯ ಶತಮಾನದ ಅಂತ್ಯ ಮತ್ತು 16ನೆಯ ಶತಮಾನದ ಆದಿಭಾಗಗಳಲ್ಲಿ ಮೈಸೂರು ಜಿಲ್ಲೆಯ ದಕ್ಷಿಣ ಭಾಗ ಮತ್ತು ಕೊಯಮತ್ತೂರು ಜಿಲ್ಲೆಯ ಕೆಲವು ಭಾಗಗಳನ್ನು ಆಳುತ್ತಿದ್ದ ಪಾಳೆಯಗಾರರು. ಚಾಮರಾಜನಗರ ತಾಲ್ಲೂಕಿನ ನಂಜನಗೂಡು-ಯಳಂದೂರು ರಸ್ತೆಯಲ್ಲಿ ಈಗ ಒಂದು ಚಿಕ್ಕ ಗ್ರಾಮವಾಗಿರುವ ಉಮ್ಮತ್ತೂರು ಇವರ ರಾಜಧಾನಿ. ಈ ವಂಶದ ಕೆಲವರು ಬೆಟ್ಟದ ಕೋಟೆ ಮತ್ತು ತೆರಕಣಾಂಬಿಯಲ್ಲಿ ಸಹ ಆಳುತ್ತಿದ್ದಂತೆ ತೋರುತ್ತದೆ.

ಮೂಲಾಧಾರಗಳು ಬಹು ವಿರಳವಾಗಿರುವದರಿಂದ ಈ ವಂಶದ ಇತಿಹಾಸ ಅಸ್ಪಷ್ಟ. ಶಾಸನಗಳ ಪ್ರಕಾರ ಈ ವಂಶದ ಆದ್ಯ ಹನುಮಪ್ಪ ಒಡೆಯ. ಇವನ ಮಗ ಇಮ್ಮಡಿರಾಯ ಒಡೆಯ. ಇವನಿಗೆ ಸೋಮರಾಯ ಎಂಬ ಹೆಸರೂ ಇದ್ದಂತೆ ತೋರುತ್ತದೆ. ಇವನ ಹಿರಿಯ ಮಗ ದೇವಣ್ಣ ಒಡೆಯ. ಈತ ಚೇರ, ಚೋಳ, ಪಾಂಡ್ಯ ಮೂವರುರಾಯರ ಗಂಡ, ನೀಲಗಿರಿ ಸಾಧಾರ ಒಡೆಯ, ನೀಲಗಿರಿ ನಾಡಾಳ್ವ ಇತ್ಯಾದಿ ಬಿರುದುಗಳನ್ನು ಧರಿಸಿ ಮೂಡಣಕೋಟೆಯಲ್ಲಿ (ಪ್ರಾಯಶಃ ಗುಂಡ್ಲುಪೇಟೆ ಬಳಿಯ ಗೋಪಾಲಸ್ವಾಮಿಬೆಟ್ಟ) ಆಳ್ವಿಕೆ ನಡೆಸುತ್ತಿದ್ದ (ಸು.1488-1504). ಇದೇ ಬಿರುದುಗಳಿರುವ ಗೋವಣ್ಣ ಒಡೆಯ (1504) ದೇವಣ್ಣನ ಮಗ. ದೇವಣ್ಣನ ಇನ್ನೊಬ್ಬ ಮಗ ಚಿಕ್ಕರಾಯ (ಮಲ್ಲರಾಜ) ಪೆನುಗೊಂಡೆ ಚಕ್ರೇಶ್ವರ ಎಂಬ ಬಿರುದಿನೊಡನೆ ತೆರಕಣಾಂಬಿಯಿಂದ ಆಳುತ್ತಿದ್ದ (ಸು.1505-12). ಇವನ ರಾಜ್ಯ ಕೊಯಮತ್ತೂರು ಜಿಲ್ಲೆಯ ಅವನಾಸಿ ತಾಲ್ಲೂಕಿನ ಭಾಗಗಳನ್ನೂ ಒಳಗೊಂಡಂತೆ ತೋರುತ್ತದೆ. ಇವನ ಚಿಕ್ಕಪ್ಪ, ಅಂದರೆ ದೇವಣ್ಣ ಒಡೆಯನ ತಮ್ಮ ನಂಜರಾಜ ಉಮ್ಮತ್ತೂರಿನಲ್ಲಿ ಆಳ್ವಿಕೆ ನಡೆಸಿದ (ಸು.1482-1504). ಇವನಿಗೆ ಫೇಣಾಂಕ ಚಕ್ರೇಶ್ವರ, ಪೆಸಾಳಿ ಹನುಮ ಇತ್ಯಾದಿ ಬಿರುದುಗಳಿದ್ದುವು. ಇವನ ರಾಜ್ಯ ಮೈಸೂರು ಜಿಲ್ಲೆಯ ದಕ್ಷಿಣ ಭಾಗವಲ್ಲದೆ ಕೊಯಮತ್ತೂರು ಜಿಲ್ಲೆಯ ಭಾಗಗಳಿಗೂ ಹಬ್ಬಿತ್ತು. ವಿಜಯನಗರದ ಕೃಷ್ಣದೇವರಾಯ ಪಟ್ಟಕ್ಕೆ ಬಂದ ತರುಣದಲ್ಲಿ (1509-12) ಉಮ್ಮತ್ತೂರು ಪಾಳೆಯಗಾರನನ್ನು ನಿಗ್ರಹಿಸಿ ತನ್ನ ಪ್ರತಿನಿಧಿಯನ್ನು ಇಲ್ಲಿಯ ಆಡಳಿತಕ್ಕೆ ನೇಮಿಸಿದ. ಈತ ಸೋಲಿಸಿದ ರಾಜನ ಹೆಸರು ಗಂಗರಾಜ ಎಂದು ಸಾಹಿತ್ಯಿಕ ಮೂಲಗಳಲ್ಲಿ ದೊರೆತರೂ ಈತ ನಂಜರಾಜ ಇರಬಹುದೆಂದು ಊಹಿಸಲಾಗಿದೆ. ಆದರೆ ಈ ನಂಜರಾಜ ಉಮ್ಮತ್ತೂರನ್ನು ಕಳೆದುಕೊಂಡರೂ ಕೊಯಮತ್ತೂರು ಜಿಲ್ಲೆಯ ಕೆಲವು ಭಾಗಗಳನ್ನು ಸು.1519ರವರೆಗೂ ಉಳಿಸಿಕೊಂಡಿರಬಹುದೆಂದು ಅಲ್ಲಿ ದೊರಕಿರುವ ಕೆಲವು ಶಾಸನಗಳಿಂದ ಊಹಿಸಬಹುದಾಗಿದೆ. *

ಉಮ್ಮತ್ತೂರಿನ ನಾಯಕರಿಗೂ ಕಳಲೆ ಒಡೆಯರಿಗೂ ಹಗೆತನವಿತ್ತು. ಒಮ್ಮೆ ಉಮ್ಮತ್ತೂರಿನ ನಾಯಕನೊಬ್ಬ ಕಳಲೆ ಮನೆತನದ ಎಲ್ಲರನ್ನೂ ವಂಚನೆಯಿಂದ ಕೊಲ್ಲಿಸಿದನೆಂದೂ ಆಗ ಒಬ್ಬ ಬಾಲಕ ಮಾತ್ರ ತಪ್ಪಿಸಿಕೊಂಡು ಅನಂತರ ತನ್ನ ಮನೆತನದ ಆಳ್ವಿಕೆಯನ್ನು ಪುನಃ ಸ್ಥಾಪಿಸಿದನೆಂದೂ ತಿಳಿದುಬರುತ್ತದೆ. 1612ರಲ್ಲಿ ವಿಜಯನಗರದ ವೆಂಕಟಪತಿರಾಯ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಸಿಕ್ಕಿ ಶ್ರೀರಂಗಪಟ್ಟಣ ಮತ್ತು ಉಮ್ಮತ್ತೂರುಗಳನ್ನು ರಾಜ ಒಡೆಯರಿಗೆ ನೀಡಿದುದಾಗಿ ತಿರುಮಕೂಡಲು ನರಸೀಪುರ ತಾಲ್ಲೂಕಿನಲ್ಲಿ ದೊರೆತಿರುವ ಶಾಸನವೊಂದರಿಂದ ತಿಳಿದುಬರುತ್ತದೆ. 1613ರಲ್ಲಿ ರಾಜ ಒಡೆಯ ಉಮ್ಮತ್ತೂರಿನ ಮೇಲೆ ದಂಡೆತ್ತಿ ಹೋಗಿ ಅಲ್ಲಿನ ಪಾಳೆಯಗಾರರನ್ನು ಸೋಲಿಸಿ ಅವನ ರಾಜ್ಯವನ್ನು ಮೈಸೂರು ರಾಜ್ಯಕ್ಕೆ ಸೇರಿಸಿಕೊಂಡ. ಈ ಅನಂತರ ಕಾಲದ ಉಮ್ಮತ್ತೂರಿನ ಪಾಳೆಯಗಾರರು ಯಾರು, ಇವರಿಗೂ ಮೊದಲಿನ ನಂಜರಾಜ ಇತ್ಯಾದಿ ಪಾಳೆಯಗಾರರಿಗೂ ಇದ್ದ ಸಂಬಂಧವೇನೆಂದು ತಿಳಿಯುವುದಿಲ್ಲ. (ಜಿ.ಆರ್.ಆರ್.)

**ಉರಿಲಿಂಗದೇವ** : ಸು.1170. ಹನ್ನೆರಡನೆಯ ಶತಮಾನದ ಶಿವಶರಣ ಹಾಗೂ ವಚನಕಾರ. ಈತ ಮಹಾರಾಷ್ಟ್ರದ ನಾಂದೇಡ ಜಿಲ್ಲೆಯಲ್ಲಿರುವ ಕಂದಹಾರ (ಕಂಧಾರ್, ಕಂದಾರಪುರ) ಎಂಬ ಪಟ್ಟಣದಲ್ಲಿ ಮಠಾಧಿಪತಿಯಾಗಿದ್ದ. ನಲ್ಲೂರಿ ಮಠದ ಸ್ವಾಮಿಯೂ ಆಗಿದ್ದ ಎನ್ನಲಾಗಿದೆ. ಈತ ಶರಣಸತಿ, ಲಿಂಗಪತಿ ಭಾವಸ್ಥಿತಿಯನ್ನು ಹೊಂದಿದ್ದ ನೈಷ್ಠಿಕ ಬ್ರಹ್ಮಚಾರಿ, ಆಚಾರ್ಯಪುರುಷ. ಎಂಥ ಕಷ್ಟಪರಿಸ್ಥಿತಿಯಲ್ಲೂ ಶಿವಯೋಗವನ್ನು ಬಿಟ್ಟವನಲ್ಲ. ಈತ ಕಾಶ್ಮೀರದಿಂದ ಬಂದು ಕಲ್ಯಾಣದಲ್ಲಿ ನೆಲೆಸಿದ ಮಹಾಪಂಡಿತ ಶಿವಲೆಂಕ ಮಂಚಣ್ಣನ ಮಗನೆಂದು ನೀಲಕಂಠಾರ್ಯನ ಆರಾಧ್ಯಚರಿತದಲ್ಲಿ (ಸು.1485) ಹೇಳಿದೆ. ಪೆದ್ದಣ್ಣ ಮತ್ತು ಕಾಳವ್ವೆಯರೆಂಬ ಅಸ್ಪೃಶ್ಯರಿಗೆ ಉರಿಲಿಂಗದೇವ ವೀರಶೈವೋಪದೇಶವಿತ್ತು ಶಿವಾನುಭವ ಶಾಸ್ತ್ರಕೋವಿದರನ್ನಾಗಿಸಿದ. ಅಷ್ಟೇ ಅಲ್ಲದೆ ಪೆದ್ದಣ್ಣನಿಗೆ ಮಠಾಧ್ಯಕ್ಷ ಪದವಿಯನ್ನೂ ದಯಪಾಲಿಸಿದ ಮಹಾಕ್ರಾಂತಿಕಾರಿ.

ಈತ 29 ವಚನಗಳನ್ನು ಬರೆದಿದ್ದಾನೆ. ಉರಿಲಿಂಗದೇವ ಎಂಬುದು ಈತನ ವಚನಗಳ ಅಂಕಿತ. ಇಂಬಿನ ಚುಂಬನವಮೃತಾಹಾರ ಆಲಿಂಗನವೆ ಆಭರಣಸೋಂಕೆ ಸುವಸ್ತ್ರ ನೋಟವೇ ಕೂಟ, ಒಡನಾಟವೆ ಅಷ್ಟಭೋಗ ಎನಗೆ ಉರಿಲಿಂಗ ದೇವನ ಕೂಟ ಪರಾತ್ಪರ ವಾಙ್ಮನೋತೀತ ಪರಮಸುಖವು ಎಂಬ ಒಂದು ವಚನ ಈತನ ಶರಣಸತಿ-ಲಿಂಗಪತಿ ಭಾವಕ್ಕೆ ಉಜ್ವಲ ಸಾಕ್ಷಿಯಾಗಿದೆ. (ಓ.ಎಲ್.ಎನ್.)

**ಉರಿಲಿಂಗಪೆದ್ದಿ** : 12ನೆಯ ಶತಮಾನದ ಶಿವಶರಣ ಹಾಗೂ ವಚನಕಾರ. ಉರಿಲಿಂಗದೇವನ ಶಿಷ್ಯ. ಪ್ರಸಿದ್ಧ ಶಿವಶರಣೆ ವಚನಕಾರ್ತಿ ಕಾಳವ್ವೆ ಈತನ ಸತಿ. ಈತನ ಸ್ಥಳ ಆಂಧ್ರ ಪ್ರದೇಶ. ಈತನ ಪೂರ್ವಾಶ್ರಮದ ಹೆಸರು ಪೆದ್ದಣ್ಣ. ಅಸ್ಪೃಶ್ಯಕುಲದಲ್ಲಿ ಹುಟ್ಟಿ, ಬಡವನಾಗಿದ್ದು ಕುಪ್ರಸಿದ್ಧ ಕಳ್ಳನಾಗಿದ್ದ. ಒಮ್ಮೆ ನಂದವಾಡ ಗ್ರಾಮದ ಸೂರಯ್ಯನಿಗೆ ಉರಿಲಿಂಗದೇವ ಲಿಂಗದೀಕ್ಷೆ ಕೊಡುತ್ತಿರುವಾಗ ಕಂಧಾರಕ್ಕೆ ಕಳ್ಳತನಕ್ಕಾಗಿ ಅದೇ ಮನೆಗೆ ಬಂದಿದ್ದ ಪೆದ್ದಣ್ಣ ಕುತೂಹಲದಿಂದ ದೀಕ್ಷಾಕಾರ್ಯವನ್ನು ನೋಡಿ ಮನಃಪರಿವರ್ತನೆಗೊಂಡನಂತೆ. ಅಂದಿನಿಂದ ಕಳ್ಳತನವನ್ನು ಬಿಟ್ಟು ಉರಿಲಿಂಗ ದೇವನನ್ನು ಲಿಂಗದೀಕ್ಷೆ ಕೊಡುವಂತೆ ಪ್ರಾರ್ಥಿಸಿ ಆತನ ಮಠಕ್ಕೆ ಹನ್ನೆರಡು ವರುಷ ಯಾರಿಗೂ ತಿಳಿಯದಂತೆ ಕಟ್ಟಿಗೆ ಹೊತ್ತುಹಾಕುತ್ತಿದ್ದ. ಒಮ್ಮೆ ಉರಿಲಿಂಗದೇವನಿಗೆ ಸಿಕ್ಕಿಬಿದ್ದು ಉರುವಲಿನ ಬೆಲೆ ತೆಗೆದುಕೋ ಎನ್ನಲು, ಸೂರಯ್ಯನಿಗೆ ಕೊಟ್ಟ ದೀಕ್ಷೆಯನ್ನೇ ನನಗೂ ಕೊಡಿ ಎಂದು ಕಾಡಿದ. ಬೇಸರ ಹೊಂದಿದ ಉರಿಲಿಂಗದೇವ ತೆಗೆದುಕೋ ಈ ಕಲ್ಲನ್ನು, ಹೊರಟುಹೋಗು-ಎಂದು ಹೇಳಿ ಒಂದು ಕಲ್ಲು ಎಸೆದನಂತೆ. ಪೆದ್ದಣ್ಣನ ಶುದ್ಧಭಕ್ತಿಯಿಂದ ಕಲ್ಲು ಲಿಂಗವಾಯಿತು. ಶಿಷ್ಯನ ನಿಷ್ಠಾಭಕ್ತಿಯನ್ನು ಕಂಡು ಗುರು ಆತನಿಗೆ ಲಿಂಗದೀಕ್ಷೆ ಕೊಟ್ಟು ಉರಿಲಿಂಗಪೆದ್ದಿಯೆಂದು ನಾಮಕರಣ ಮಾಡಿ ಮುಂದೆ ಆತನನ್ನೇ ತನ್ನ ಪೀಠಕ್ಕೆ ಕುಳ್ಳಿರಿಸಿದ. ಈ ಕಥೆ ಅದೃಶ್ಯಕವಿಯ ಪ್ರೌಢರಾಯಕಾವ್ಯ, ಬಸವಕವಿಯ ಮಹಾಲಿಂಗಲೀಲೆಗಳಲ್ಲಿ ಸೂಚಿತವಾಗಿದೆ.

ಈತ ಉರಿಲಿಂಗಪೆದ್ದಿಪ್ರಿಯ ಎಂಬ ಅಂಕಿತವನ್ನಿಟ್ಟುಕೊಂಡು ವಚನಗಳನ್ನು ರಚಿಸಿದ್ದಾನೆ. ಕೆಲವು ವಚನಗಳು 2-3 ಪುಟಗಳಷ್ಟು ದೀರ್ಘವಾಗಿದ್ದು ವೇದ ಶಾಸ್ತ್ರ ಪುರಾಣ ಆಗಮ ಉಪನಿಷತ್ತು ಮೊದಲಾದ ಧರ್ಮಗ್ರಂಥಗಳ ಪ್ರಮಾಣವಾಕ್ಯಭೂಯಿಷ್ಠವಾಗಿವೆ. ಲಿಂಗಲೀಲಾ

ವಿಲಾಸಚಾರಿತ್ರ, ಗಣಭಾಷ್ಯರತ್ನಮಾಲೆ - ಈ ಗ್ರಂಥಗಳಲ್ಲಿ ಈತನ ವಚನಗಳು ಉದ್ಧೃತವಾಗಿವೆ. ಪಾಲ್ಕುರಿಕೆ ಸೋಮನಾಥನ (ಸು.1195) ಸಹಸ್ರಗಣನಾಮದಲ್ಲಿ 350 ಅಮರಗಣಗಳೊಂದಿಗೆ ಈತನ ಹೆಸರಿದೆ. ಫ.ಗು. ಹಳಕಟ್ಟಿ ಇವನ 149 ವಚನಗಳನ್ನು ಸಂಗ್ರಹಿಸಿದ್ದಾರೆ (1936). ಈತ ತನ್ನ ಕೊನೆಯ ದಿನಗಳನ್ನು ಕಲ್ಯಾಣ ಪಟ್ಟಣಕ್ಕೆ ಬಂದು ಕಳೆದಂತೆ ಕಾಣುತ್ತದೆ. ಅಲ್ಲಿ ಇವನ ಮಠವೂ ಸಮಾಧಿಯೂ ಇದೆ ಎಂದು ಹೇಳುತ್ತಾರೆ. (ಕೆ.ಎಚ್.)

**ಉರುಟಣೆಯ ಹಾಡುಗಳು :** ಮದುವೆಯ ಸಂದರ್ಭದಲ್ಲಿ ವಧೂವರರಲ್ಲಿ ಸಂಕೋಚಪ್ರವೃತ್ತಿಯನ್ನು ಕಳೆಯಲು ಕೆಲವು ಹಾಡುಗಳನ್ನು ಹಾಡಿಸುವ ಉರುಟಣೆಯ ಸಂಪ್ರದಾಯ ಕರ್ನಾಟಕದಲ್ಲಿ ರೂಢಿಯಿದೆ. ನೂತನ ದಂಪತಿಗಳು ಹಸೆಮಣೆಯ ಮೇಲೆ ಕುಳಿತು ಅರಿಶಿನ ಕುಂಕುಮ ಗಂಧ ಪುಷ್ಪಗಳನ್ನು ಪರಸ್ಪರ ಅನುಲೇಪನ ಮಾಡಿ ತಾಂಬೂಲ ಕೊಡುವಾಗ ಈ ಹಾಡುಗಳನ್ನು ವಧುವೂ ಮತ್ತು ಸುಮಂಗಲಿಯರೂ ಹಾಡುತ್ತಾರೆ. ಈ ಹಾಡುಗಳು ಉರುಟಣೆಗೆ ಕರೆಯುವುದರಿಂದ ಪ್ರಾರಂಭವಾಗಿ ಕುಂಕುಮ ಅರಿಶಿನ ಹಚ್ಚುವುದು, ಚೆಂಡಾಡುವುದು, ತಾಂಬೂಲ ಕೊಡುವುದು, ಹಾರ ಹಾಕಿ ಆರತಿ ಬೆಳಗುವುದರೊಂದಿಗೆ ಮುಕ್ತಾಯವಾಗುವುವು. ಉರುಟಣೆಯ ಹಾಡುಗಳನ್ನು ಬಾಗಿಲು ತಡೆದು ವಧೂವರರ ಕೈಯಿಂದ ಹೆಸರು ಹೇಳಿಸುವುದು, ಓಕುಳಿಯಾಡುವುದು ಮುಂತಾದವುಗಳಲ್ಲೂ ಬಳಸುತ್ತಾರೆ. ಈ ಹಾಡುಗಳು ಒಗಟಾಗಿರಬಹುದು, ಹಾಸ್ಯದಿಂದ ಕೂಡಿ ಮನರಂಜನೆಯುಳ್ಳದ್ದಾಗಿರಬಹುದು, ಪತಿಭಕ್ತಿಪೂರ್ಣ ಹಾಡಾಗಿರಬಹುದು.

ಓಕುಳಿಯಾಡುವಾಗಿನ ಒಂದು ಸುಂದರ ಉರುಟಣೆಯ ಹಾಡು ಈ ರೀತಿ ಇದೆ :

ದೊಡ್ಡ ಲಕ್ಷ್ಮಣ ದೇವರೂ ಕರದಲ್ಲೀ  
ಚಿನ್ನ ಜೇರ್ಕೊಳವಿಯನೂ  
ಚಿನ್ನದುಂಗುರವನ್ನು ಕರದಲ್ಲಿ ಪಿಡಿಯುತ  
ಆಡಿದರೋಕುಳಿಯಾ ಸೀತಾರಾಮ  
ರಾಡಿದರೋಕುಳಿಯಾ

ಉರುಟಣೆಗೆ ವಧು ವರನನ್ನು ಕರೆಯುವ ಹಾಡು

ಜಯ ಜಾನಕೀಪತಿ ರಾಘವ ಮೂರುತಿ  
ದಯಮಾಡುರುಟಣೆಗೆ  
ನಿಗಮಾನುತ ಹೃದಯಾನ್ವಿತ  
ಸೇವಿತ ಸೇವಕಿ ನಾ ನಿಮಗೆ

ವರ ಹಸೆಮಣೆಗೆ ಬಂದು ಕುಳಿತಾಗಿನ ಹಾಡು

ಗಂಧವನು ಹಚ್ಚುವೆನು ಇಂದಿರೇಶ ನಿಮಗೆ  
ವಾಸನೆಯಿಂದಿರುವ ಕೇಸರಿಗಂಧವನು  
ಶ್ರೀಪತಿ ಈ ನಿಮ್ಮ ಮುತ್ತಿನ ಕಂದರಕೀಗ

ಎಂದು ವಧು ಹಾಡುತ್ತಾ ಅರಿಶಿನ, ಗಂಧ ಲೇಪನ ಮಾಡುತ್ತಾಳೆ. ಇದಕ್ಕೆಲ್ಲ ಹಿರಿಯ ಮುತ್ತೈದೆಯರು ನವವಧುವಿಗೆ ಮಾರ್ಗದರ್ಶನಮಾಡುವರು. ಹೂವಿನ ಚೆಂಡಾಟ ಮುಂತಾದ ಕಾರ್ಯಗಳು ಮುಗಿದು ಕೊನೆಗೆ ಹಾರಹಾಕಿ ಆರತಿ ಎತ್ತುವಾಗ ವಧು ಮತ್ತು ಇತರ ಸುಮಂಗಲಿಯರು ಹಾಡುವ ಹಾಡಿನಲ್ಲಿ ಮಧುರತೆ, ರಸಿಕತೆ ಅಷ್ಟೇ ಭಕ್ತಿ ಗೌರವವನ್ನು ಕಾಣಬಹುದು.

ಹಾರ ಹಾಕುವೆ ನಾಂ  
ಮಾರಸುಂದರ ನಿಮಗೆ  
ಜಾಜಿ ಸೇವಂತಿಗೆ ಮೈಸೂರು ಮಲ್ಲಿಗೆ  
ಪರಿಪರಿ ಪರಿಮಳ ಪುಷ್ಪಗಳಾ  
ದುಂಡುಮಲ್ಲಿಗೆ ಸರ ಕೆಂಡಸಂಪಿಗೆ ಹಾರ  
ಕಂಠಕ್ಕೆ ತೊಡಿಸುವೆ ಶ್ರೀಪತಿ ನಿಮಗೆ

ಎಂದು ಹಾರ ಹಾಕಿ

ನಳಿನಾಕ್ಷನೀಗ ಬೆಳಗೂವೆ ನಾ ಆರೂತಿಯನು  
ಕಾಳಿಂಗಮರ್ದನ ಕೃಷ್ಣಗೆ ಈಗ  
ಗೋಕುಲದಲಿ ಹುಟ್ಟಿ ಗೋವುಗಳನೆ ಕಾಯ್ದು  
ಗೋಪಿಯರೊಡೆಯ ಮುರಳೀಲೋಲನೆ

ಎಂದು ಹಾಡಿ ಆರತಿ ಬೆಳಗುತ್ತಾರೆ.ಮದುಮಕ್ಕಳು ಅಂದು ಲಕ್ಷ್ಮೀನಾರಾಯಣ ಸ್ವರೂಪವೆಂಬ ಪವಿತ್ರಭಾವನೆ ಉಂಟು. ಹಾಗೇ ಲಕ್ಷ್ಮೀನಾರಾಯಣ, ಶಿವ-ಪಾರ್ವತಿ, ರತಿ-ಮನ್ಮಥ, ಸೀತೆ-ರಾಮ, ಕೃಷ್ಣ-ರುಕ್ಮಿಣಿ, ವೆಂಕಟರಮಣ- ಪದ್ಮಾವತಿ - ಈ ದೇವತೆಗಳನ್ನು ಮತ್ತು ಸುಭದ್ರೆ-ಅರ್ಜುನ, ನಳ- ದಮಯಂತಿ ಮುಂತಾದವರನ್ನು ಕುರಿತ ಉರುಟಣೆಯ ಹಾಡುಗಳೂ ಇವೆ. (ಎಲ್.ಆರ್.ಎಚ್.,ಸಿ.ಎಸ್.ಸಿ.)

**ಉಲ್ಲಾಳ :** ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕಿನಲ್ಲಿ ಮಂಗಳೂರಿನಿಂದ 8ಕಿಮೀ ದೂರದಲ್ಲಿ ನೇತ್ರಾವತಿ ದಕ್ಷಿಣ ದಂಡೆಯ ಮೇಲಿರುವ ಊರು. ಇಂದು ಮಂಗಳೂರು ಪಟ್ಟಣದ ಸಮೂಹದಲ್ಲೇ ಸೇರಿಹೋಗಿದೆ.

ಪುತ್ತಿಗೆಯ ಚೌಟ ಅರಸುಮನೆತನದ ಒಂದು ಶಾಖೆಯ ರಾಜರು ಉಲ್ಲಾಳವನ್ನು ಆಳುತ್ತಿದ್ದರು. ಇಲ್ಲಿಯ ಸೋಮನಾಥ ಅವರ ಕುಲದೇವರು. 16ನೆಯ ಶತಮಾನದಲ್ಲಿ ರಾಜ್ಯಭಾರ ಮಾಡುತ್ತಿದ್ದ ಅಬ್ಬಕ್ಕ (ನೋಡಿ) ಈ ಶಾಖೆಯಲ್ಲಿ ಪ್ರಸಿದ್ಧಳು. ವಿದೇಶಿಯರ ಬಲವನ್ನು ಮುರಿಯಲು ಸರ್ವಪ್ರಯತ್ನಮಾಡಿದ ಈ ವೀರರಾಣಿ ಪೋರ್ಚುಗೀಸರಿಗೆ ಸಿಂಹಸ್ವಪ್ನವಾಗಿದ್ದಳು. ಆಕೆಯ ತರುವಾಯ ಉಲ್ಲಾಳ ರಾಜ್ಯವನ್ನಾಳಿದ ಆಕೆಯ ಮಗಳು ಕಾರ್ಕಳದ ಅರಸರೊಡನೆ ಯುದ್ಧ ಮಾಡಿ ಸತ್ತಳು. ಆಕೆಯ ಮಗ ಚಿಕ್ಕರಾಯ (1606-28) ಬಿದನೂರು ವೆಂಕಟಪ್ಪನಾಯಕನ ನೆರವನ್ನು ಪಡೆದು ಕಾರ್ಕಳದ ಅರಸನನ್ನು ಸೋಲಿಸಿದ (1608). ಭೋಜರಾಜನ ಆಳ್ವಿಕೆಯಲ್ಲಿ (1630-44) ಉಲ್ಲಾಳ ಬಿದನೂರು ಸಂಸ್ಥಾನಕ್ಕೆ ಸೇರಿತು.

ಉಲ್ಲಾಳದಲ್ಲಿ ಕೋಟೆ ಮತ್ತು ಅರಮನೆಯ ಅವಶೇಷಗಳಿವೆ. ಸೋಮನಾಥ ದೇವಾಲಯದಲ್ಲಿ ಇಟಾಲಿಯನ್ ಶೈಲಿಯ ಹಲವು ಸುಂದರ ಶಿಲ್ಪಗಳಿವೆ. ಊರಿನಿಂದ ಸು.9ಕಿಮೀ ದೂರದಲ್ಲಿ ಉಲ್ಲಾಳ ಅರಸರ ಭದ್ರತಾಣವಾಗಿದ್ದ ಉಚ್ಚಿಲ ಕೋಟೆ ಮತ್ತು ಮಣೇಲ ಅರಮನೆ ಇವೆ. ಕಾರ್ಕಳದ ಭೈರರಸ ಒಡೆಯರೂ ಇಲ್ಲಿ ಅರಮನೆಗಳನ್ನು ಕಟ್ಟಿದ್ದರೆಂದು ಹೇಳಿಕೆ.



ಸೈಯದ್‌ಮಹಮ್ಮದ್ ಷರೀಫ ಮದನೀ ದರ್ಗಾ

ಉಲ್ಲಾಳದಲ್ಲಿರುವ ಸೈಯದ್ ಮಹಮ್ಮದ್ ಷರೀಫ ಮದನೀ ಅವರ ದರ್ಗಾ ಬಹು ಪ್ರಸಿದ್ಧ. ಈ ಸಂತರು ಸು.400 ವರ್ಷಗಳ ಹಿಂದೆ ಮದೀನಾದಿಂದ ಬಂದು ಇಲ್ಲಿನ ಮೇಲಂಗಡಿ ಮಸೀದಿಯಲ್ಲಿ ನೆಲಸಿ ಇಲ್ಲಿಯೇ ಮದುವೆಯಾಗಿ ಅನೇಕ ಪವಾಡಗಳನ್ನು ಮೆರೆಸಿ ಜನಮನ್ನಣೆ ಗಳಿಸಿದರೆಂದು ಪ್ರತೀತಿ. ಇವರ ಗೌರವಾರ್ಥ ಐದು ವರ್ಷಗಳಿಗೊಮ್ಮೆ ಉರುಸ್ ನಡೆಯುತ್ತದೆ. ಎಲ್ಲ ಜಾತಿಮತಗಳ ಜನ ಇಲ್ಲಿಗೆ ಬರುತ್ತಾರೆ. ಸಂತರ ಮರಣಾನಂತರ ಕಟ್ಟಿದ ದರ್ಗಾ ನಾಲ್ಕು ಬಾರಿ ಪುನರ್ನಿರ್ಮಾಣವಾಯಿತು. ಇಂದು ಇರುವ ಭವ್ಯ ಕಟ್ಟಡ 1970ರ ರಚನೆ. ಈ ದರ್ಗಾದ ಆಡಳಿತವರ್ಗ ಅರಬ್ಬೀ ಕಾಲೇಜು ಮತ್ತು ಪ್ರೌಢಶಾಲೆಯನ್ನು ನಡೆಸುತ್ತಿದೆ. 16ನೆಯ ಶತಮಾನದಲ್ಲಿ ಫ್ರಾನ್ಸಿಸ್ಕನ್ ಪಾದ್ರಿಗಳು ಕಟ್ಟಿಸಿದ ಚರ್ಚ್ ನಗರದಲ್ಲಿದೆ. ಕವಿ ಉಲ್ಲಾಳ ಮಂಗೇಶರಾಯರು ಈ ಊರಿನವರು. (ವಿ.ಜಿ.ಕೆ.)

**ಉಷಾ ನವರತ್ನರಾಮ್ :** 1939-2000. ಕನ್ನಡದ ಜನಪ್ರಿಯ ಕಾದಂಬರಿಕಾರ್ತಿ. ಇವರು 1939 ನವೆಂಬರ್ 23ರಂದು ಮೈಸೂರಿನಲ್ಲಿ ಜನಿಸಿದರು. ತಂದೆ ಎಂ.ವಿ. ಸುಬ್ಬರಾವ್, ತಾಯಿ ಶಾಂತಾಬಾಯಿ. ಬೆಂಗಳೂರಿನ ಮೌಂಟ್ ಕಾರ್ಮಲ್ ಕಾಲೇಜಿನಲ್ಲಿ ಓದಿ ಬಿ.ಎ. ಪದವಿ ಪಡೆದರು. ಪತ್ರಿಕೋದ್ಯಮ, ಡಿಪ್ಲೊಮ, ಹರ್ಬಲ್ ಬ್ಯೂಟಿಕೇರ್‌ನಲ್ಲಿ ಸರ್ಟಿಫಿಕೇಟ್ ಕೋರ್ಸ್ ಮಾಡಿದ್ದ ಇವರು ಅನಂತರ ಇತಿಹಾಸದಲ್ಲಿ ಸ್ನಾತಕೋತ್ತರ ಪದವಿ ಪಡೆದರು. ಇವರಿಗೆ ಕರ್ನಾಟಕ ಸಂಗೀತ, ಭರತನಾಟ್ಯದಲ್ಲಿ ಪ್ರವೇಶವಿತ್ತು. ಫ್ರೆಂಚ್, ಜರ್ಮನ್ ಹಾಗೂ ಸಂಸ್ಕೃತವನ್ನು ಬಲ್ಲವರಾಗಿದ್ದರು. ಬೆಂಗಳೂರಿನ ಚಾಮರಾಜಪೇಟೆಯ ಮಹಿಳಾ ಸೇವಾ ಸಮಾಜದ ಶಾಲೆಯಲ್ಲಿ ಅಧ್ಯಾಪಕಿಯಾಗಿಯೂ ಸೇವೆ ಸಲ್ಲಿಸಿದ್ದಾರೆ. ಇವರು ಓದುತ್ತಿದ್ದ ಕಾಲಕ್ಕೇ ಬರೆಯುವ ಹವ್ಯಾಸವನ್ನು ರೂಢಿಸಿಕೊಂಡಿದ್ದರು. ತಮ್ಮಲ್ಲಿ ಫ್ರೆಂಚ್ ಕಲಿಯಲು ಬಂದ ನವರತ್ನರಾಮ್ ಎಂಬವರೊಡನೆ ಪ್ರೇಮಾಂಕುರವಾಗಿ ಅವರನ್ನೇ ಮದುವೆಯಾದರು (1963). ಇಲ್ಲಿಂದ ಮುಂದೆ ಉಷಾ ನವರತ್ನರಾಮ್ ಆಗಿ ಬರೆಹಗಾರ್ತಿಯಾಗಿ ಗುರುತಿಸಿಕೊಂಡರು. ಮದುವೆಯ ಅನಂತರ ನವರತ್ನರಾಮ್ ಫ್ರಾನ್ಸಿಗೆ ಹೋಗಿ ಅಲ್ಲಿಂದ ತಮ್ಮ ನಲ್ಲೆಗೆ ಬರೆದ ಪತ್ರಗಳು ಪ್ಯಾರಿಸ್ಸಿನಿಂದ ಪ್ರೇಯಸಿಗೆ ಎಂಬ ಹೆಸರಿನಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಗೊಂಡು ಜನಪ್ರಿಯವಾಗಿದೆ.

ಇವರು ಸುಮಾರು ಎಂಬತ್ತು ಕಾದಂಬರಿಗಳನ್ನು ರಚಿಸಿದ್ದಾರೆ. ಎರಡು ಕಥಾಸಂಕಲನಗಳೂ ಸೇರಿದಂತೆ ತೊಂಬತ್ತಕ್ಕೂ ಹೆಚ್ಚು ಸಣ್ಣ ಕತೆಗಳನ್ನು ರಚಿಸಿದ್ದಾರೆ. ಒಂದು ಕಾಲದಲ್ಲಿ ಕನ್ನಡದಲ್ಲಿ ಉಷಾ ನವರತ್ನರಾಮ್ ಅವರ ಕಥೆ ಕಾದಂಬರಿಗಳನ್ನು ಪ್ರಕಟಿಸದ ವಾರ ಹಾಗೂ ಮಾಸಿಕ ಪತ್ರಿಕೆಗಳೇ ಇರಲಿಲ್ಲ ಎಂದರೆ ಅತಿಶಯೋಕ್ತಿಯಲ್ಲ. ಆ ಸಂದರ್ಭದಲ್ಲಿ ಅಪಾರ ಓದುಗರ ಮೆಚ್ಚುಗೆಗೆ ಪಾತ್ರರಾಗಿದ್ದ ಇವರನ್ನು ಕಾದಂಬರಿಗಳ ಕಾರ್ಖಾನೆ ಎಂದು ಕರೆದದ್ದೂ ಉಂಟು. ಪತ್ರಿಕೆಗಳ ಅಗತ್ಯಕ್ಕೆ ತಕ್ಕಂತೆ ಓದುಗರನ್ನು ಆಕರ್ಷಿಸಬಲ್ಲ ಸೆಳೆತ



ಇವರ ಬರೆಹದ ಶೈಲಿಯಾಗಿತ್ತು. ಹೊಂಬಿಸಿಲು ಇವರ ಮೊದಲ ಕಾದಂಬರಿ (1970). ಯೌವನದ ಹೊನಲಲ್ಲಿ, ಬಂಧನ, ಹ್ಯಾಪಿ ಬರ್ತಡೇ, ಹಕ್ಕಿ ಹಾರುತಿದೆ, ಹೃದಯ ಮಿಲನ, ದೋಣಿ ಸಾಗಲಿ ಮುಂದೆ ಹೋಗಲಿ, ಒಲವಿನ ಬದುಕು, ಕಂಡು ಕಂಡು ನೀ ಎನ್ನ, ಕರುಣಾಳು ಬಾ ಬೆಳಕೆ, ಇಲ್ಲೇ ಸ್ವರ್ಗ, ಹೊಸರಾಗ - ಇವು ಇವರ ಕೆಲವು ಕಾದಂಬರಿಗಳು. ಎಲ್ಲರಿಗೂ ಸುಲಭವಾಗಿ ದಕ್ಕಬಲ್ಲ ಪ್ರೀತಿಯ ಕನಸುಗಳನ್ನು, ಒಂದು ರೀತಿಯ ಭ್ರಾಮಕ ಜಗತ್ತನ್ನು ಇವರು ತಮ್ಮ ಕಾದಂಬರಿಗಳಲ್ಲಿ ನಿರ್ಮಿಸಿದರು. ಪ್ರೀತಿಯ ಕನಸನ್ನು ಕಾಣುವ ಹದಿಹರೆಯದ ಎಳೆಯರು, ಯುವಕ ಯುವತಿಯರ ಒಂದು ಹೊಸವರ್ಗವೇ ಇಲ್ಲಿ ನಿರ್ಮಿತಗೊಂಡಿತ್ತು. ಪ್ರೇಮ, ಕಲ್ಪನೆಯ ಪ್ರೇಮ ಇವರ ಕಾದಂಬರಿಗಳ ಜಗತ್ತು; ಕೇಂದ್ರ ಬಿಂದು. ನಗರ ಕೇಂದ್ರಿತ ಮಧ್ಯಮ ವರ್ಗದ ಹಗಲುಗನಸಿನ ಬದುಕು ಭಾವನೆಗಳಿಗೆ ಇವರು ತಮ್ಮ ಕಾದಂಬರಿಗಳಲ್ಲಿ ಕಾಮನಬಿಲ್ಲು ರಚಿಸಿದರು. ಸಾಮಾಜಿಕ ಪಿಡುಗಾಗಿರುವ ವೇಶ್ಯಾವೃತ್ತಿ ಕುರಿತ ಹಗಲುಗನಸು, ಕ್ಯಾಬರೆ ನರ್ತಕಿಯೊಬ್ಬಳ ಶೋಚನೀಯ ಬದುಕಿನ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ಎಂಬ ಕಾದಂಬರಿಗಳು ಇವರ ವಿಭಿನ್ನ ಆಲೋಚನೆಯನ್ನು ಮುಂದಿಡುತ್ತವೆ. ಅಪಾರ ಓದುಗರ ಮೆಚ್ಚುಗೆ, ಪ್ರೀತಿಗೆ ಪಾತ್ರವಾಗಿದ್ದ ಹೊಂಬಿಸಿಲು, ಬಂಧನ ಎಂಬ ಕಾದಂಬರಿಗಳು ಚಲನಚಿತ್ರಗಳಾಗಿಯೂ ಇವರಿಗೆ ಅಪಾರ ಜನಪ್ರಿಯತೆಯನ್ನು ತಂದುಕೊಟ್ಟಿವೆ.

ಇವರು ಕಾದಂಬರಿಕಾರ್ತಿಯಾಗಿ ಅಷ್ಟೇ ಅಲ್ಲದೆ ಪತ್ರಿಕೋದ್ಯಮದಲ್ಲೂ ಅನುಭವ ಪಡೆದಿದ್ದರು. ಕೆಲಕಾಲ ಗೆಳತಿ ಎಂಬ ಪಾಕ್ಷಿಕ ಪತ್ರಿಕೆಯ ಸಂಪಾದಕಿಯಾಗಿ ಕಾರ್ಯನಿರ್ವಹಿಸಿದ್ದರು. ಸೌಂದರ್ಯದ ಬಗ್ಗೆ, ಪ್ರಾಣಿಗಳ ಬಗ್ಗೆ ವಿಶೇಷ ಆಸಕ್ತಿ, ಪ್ರೀತಿ ಇಟ್ಟುಕೊಂಡಿದ್ದ ಇವರು ಸೌಂದರ್ಯ ಸಂಕಿರಣ, ನನ್ನಮರಿ ಮುದ್ದುಮರಿ ಹಾಗೂ ಪಾಕಶಾಸ್ತ್ರ ಕುರಿತಂತೆ ಸವಿ ಎಂಬ ಕೃತಿಗಳನ್ನು ರಚಿಸಿದ್ದಾರೆ. ಇವರಿಗೆ ಹಲವು ಪ್ರಶಸ್ತಿಗಳು ದೊರೆಕಿವೆ. ಅತ್ಯುತ್ತಮ ಲೇಖಕಿ ಪ್ರಶಸ್ತಿ (1975), ಅತ್ಯುತ್ತಮ ಉಪಾಧ್ಯಾಯಿನಿ ಪ್ರಶಸ್ತಿ (1975), ರಾಜ್ಯೋತ್ಸವ ಪ್ರಶಸ್ತಿ (1982) - ಇವು ಕೆಲವು ಮುಖ್ಯ ಪ್ರಶಸ್ತಿಗಳು. ಇವರು 2000 ಅಕ್ಟೋಬರ್ 1ರಂದು ನಿಧನ ಹೊಂದಿದರು. (ಎಚ್.ಎಲ್.ಪಿ.)

**ಉಷಾ ಸುಂದರರಾಜ್ :** 1942-. ಪ್ರಸಿದ್ಧ ಟೇಬಲ್ ಟೆನ್ನಿಸ್ ಆಟಗಾರ್ತಿ. ಅರ್ಜುನ ಪ್ರಶಸ್ತಿ ವಿಜೇತೆ. 1942 ಮಾರ್ಚ್ 1ರಂದು ಬೆಂಗಳೂರಿನಲ್ಲಿ ಜನಿಸಿದರು. ಮಲ್ಲೇಶ್ವರಂ ಹೆಣ್ಣು ಮಕ್ಕಳ ಪ್ರೌಢಶಾಲೆ, ಮೌಂಟ್ ಕಾರ್ಮಲ್ ಕಾಲೇಜು ಹಾಗೂ ಸೆಂಟ್ರಲ್ ಕಾಲೇಜುಗಳಲ್ಲಿ ವ್ಯಾಸಂಗ ಮಾಡಿದರು. ಇಂಗ್ಲಿಷ್‌ನಲ್ಲಿ ಸ್ನಾತಕೋತ್ತರ ಪದವಿ ಪಡೆದರು. 1961ರಲ್ಲಿ ರಾಷ್ಟ್ರೀಯ ಚಾಂಪಿಯನ್ ಆಗಿ ರೂಪುಗೊಂಡು ಸತತ 7 ವರ್ಷಗಳ ತನಕ ರಾಷ್ಟ್ರೀಯ ಅಗ್ರ ಶ್ರೇಯಾಂಕ ಪಟ್ಟಿಯಲ್ಲಿ ತಮ್ಮ ಹೆಸರನ್ನು ಉಳಿಸಿಕೊಂಡಿದ್ದರು. ಇದರಲ್ಲಿ ಸತತ 4 ಬಾರಿ ರಾಷ್ಟ್ರೀಯ ಅಗ್ರ ಶ್ರೇಯಾಂಕ ಪಟ್ಟಿಯಲ್ಲಿ 2ನೆಯ ಸ್ಥಾನವನ್ನು ಪಡೆದಿದ್ದರು. 5 ಬಾರಿ ಅಗ್ರ ಶ್ರೇಯಾಂಕ ಪಟ್ಟಿಯಲ್ಲಿ ಮೊದಲಿಗರಾಗಿದ್ದರು. ಕರ್ನಾಟಕ ರಾಜ್ಯದ ಚಾಂಪಿಯನ್ನಾಗಿ ರಾಜ್ಯ ರ್ಯಾಂಕಿಂಗ್ ಪ್ರಶಸ್ತಿಯನ್ನು ಸತತ 21 ವರ್ಷಗಳ ಕಾಲ ತಮ್ಮ ಹೆಸರಿನಲ್ಲಿ ಉಳಿಸಿಕೊಂಡಿದ್ದು ದಾಖಲೆಯಾಗಿದೆ. ಇವರ ಈ ಸಾಧನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಉಲ್ಲೇಖಿಸಲಾಗಿದೆ. ಇವರು ಕರ್ನಾಟಕ ರಾಜ್ಯದ ಮಹಿಳಾ ತಂಡದ ನಾಯಕಿಯಾಗಿ ರಾಷ್ಟ್ರೀಯ ಚಾಂಪಿಯನ್‌ಷಿಪ್‌ಗಳಲ್ಲಿ ಭಾಗವಹಿಸಿದ್ದಾರೆ. ಇವರು ಅನೇಕ ಬಾರಿ ಅಂತಾರಾಷ್ಟ್ರೀಯ ಕ್ರೀಡಾಕೂಟಗಳಲ್ಲಿ ಆಟಗಾರರಾಗಿ ಮತ್ತು ತಂಡದ ನಾಯಕರಾಗಿ ಭಾರತವನ್ನು ಮುನ್ನಡೆಸಿದ್ದಾರೆ. ಏಷ್ಯನ್ ಚಾಂಪಿಯನ್ ಷಿಪ್, ವರ್ಲ್ಡ್ ಚಾಂಪಿಯನ್‌ಷಿಪ್, ಕಾಮನ್‌ವೆಲ್ತ್ ಚಾಂಪಿಯನ್ ಷಿಪ್ - ಇವು ಕೆಲವು ಮುಖ್ಯ ಕ್ರೀಡಾಕೂಟಗಳು. ಕೀನ್ಯ ಹಾಗೂ ಉಗಾಂಡಗಳಿಗೆ ಭಾರತ ತಂಡ ಪ್ರವಾಸ ಕೈಗೊಂಡಾಗ ಇವರು ನಾಯಕಿಯಾಗಿದ್ದರು. ಇವರು ತರಬೇತುದಾರರಾಗಿಯೂ ಉತ್ತಮ ಕೆಲಸ ನಿರ್ವಹಿಸಿದ್ದಾರೆ. ಭಾರತೀಯ ಹೆಣ್ಣು ಮಕ್ಕಳ ತಂಡ ಜಪಾನ್ ಪ್ರವಾಸ ಕೈಗೊಂಡಾಗ ಮತ್ತು ಭಾರತೀಯ ಮಹಿಳೆಯರ ತಂಡ ಸಿಯೋಲ್ ಏಷ್ಯನ್ ಗೇಮ್ಸ್ ಹಾಗೂ ಚೀನದ ಏಷ್ಯನ್ ಚಾಂಪಿಯನ್‌ಷಿಪ್ ಪಂದ್ಯಾಟಗಳಲ್ಲಿ ಭಾಗವಹಿಸಿದ ಸಂದರ್ಭಗಳು ಪ್ರಮುಖವಾದವು.

ಭಾರತೀಯ ಟೇಬಲ್ ಟೆನ್ನಿಸ್ ಫೆಡರೇಷನ್ ಅನೇಕ ಸಂದರ್ಭಗಳಲ್ಲಿ ಇವರ ತಾಂತ್ರಿಕ ಪರಿಣತಿಯ ಅನುಭವದ ಪ್ರಯೋಜನ ಪಡೆದುಕೊಂಡಿದೆ. ಇವರು ಭಾರತದ ಪ್ರತಿನಿಧಿಯಾಗಿ ಹಿರೋಷಿಮ ಮತ್ತು ನಾಗಸಾಕಿ ಹಾಗೂ ಒಸಾಕದಲ್ಲಿ ನಡೆದ ಮಹಿಳೆಯರ ಟೇಬಲ್ ಟೆನ್ನಿಸ್ ವಿಚಾರ ಸಂಕಿರಣದಲ್ಲಿ ಭಾಗವಹಿಸಿದ್ದರು. ಇವರು ಕರ್ನಾಟಕದ ಪ್ರತಿಷ್ಠಿತ ಕ್ರೀಡಾಪುರಸ್ಕಾರವಾದ ಏಕಲವ್ಯ ಪ್ರಶಸ್ತಿ ಆಯ್ಕೆ ಸಮಿತಿಯ ಸದಸ್ಯರಾಗಿದ್ದರು. 1996ರ ಅಟ್ಲಾಂಟಾ ಒಲಿಂಪಿಕ್ಸ್‌ಗೆ ಕರ್ನಾಟಕದ ಪ್ರತಿನಿಧಿಯಾಗಿ ಹೋಗಿದ್ದರು. ಇವರಿಗೆ ಅನೇಕ ಪ್ರಶಸ್ತಿ, ಪುರಸ್ಕಾರಗಳು ದೊರೆತಿವೆ. 1966ರಲ್ಲಿ ಕರ್ನಾಟಕದ ಅತ್ಯುತ್ತಮ ಕ್ರೀಡಾಪಟು ಪ್ರಶಸ್ತಿ ದೊರೆತಿದೆ. ಇದೇ ವರ್ಷ ಭಾರತ ಸರ್ಕಾರ ಅರ್ಜುನ ಪ್ರಶಸ್ತಿ ನೀಡಿ ಗೌರವಿಸಿದೆ. ಈ ಪ್ರಶಸ್ತಿ ಪಡೆದ ಮಹಿಳೆಯರಲ್ಲಿ ಇವರೇ ಮೊದಲಿಗರು. (ಎಸ್.ಆರ್.ಯು.)

**ಉಳುವಿ :** ಉತ್ತರ ಕನ್ನಡ ಜಿಲ್ಲೆಯ ಜೋಯಿಡ ತಾಲ್ಲೂಕಿನಲ್ಲಿ ಯಲ್ಲಾಪುರಕ್ಕೆ ಸಮೀಪದಲ್ಲಿ ಇರುವ ಒಂದು ಗ್ರಾಮ. ಹಿಂದೆ ಇದು ಶರಣರ ಕೇಂದ್ರವಾಗಿತ್ತು. ಈ ದುರ್ಗಮ ಪ್ರದೇಶಕ್ಕೆ ಬರಲು ಅಣಶಿ ಘಟ್ಟದ ಮತ್ತು ಸುಪದ ಮೋಲಿಂದ ಎರಡು ಅರಣ್ಯಮಾರ್ಗಗಳಿವೆ. ಗವಿಮಠ ಎನ್ನುವಲ್ಲಿ ವೀರಶೈವ ಸಾಧುಗಳ ಕೆಲವು ಗುಹೆಗಳಿವೆ. ಒಂದಕ್ಕೆ ಬಸವಣ್ಣನವರ ಸಹೋದರಿ ಅಕ್ಕನಾಗಮ್ಮನ ಗುಹೆ ಎನ್ನುವರು. 12ನೆಯ ಶತಮಾನದ ಕಲ್ಯಾಣದ ಕ್ರಾಂತಿಯ ಅನಂತರ ಚೆನ್ನಬಸವಣ್ಣ, ಅಕ್ಕನಾಗಮ್ಮ, ಕಿನ್ನರಿ ಬೊಮ್ಮಯ್ಯ, ಕೂಗಿನ ಮಾರಿತಂದೆ, ಮಡಿವಾಳ ಮಾಚಿದೇವ ಮೊದಲಾದ ಅನೇಕ ಶರಣರು ಉಳುವಿಗೆ ಬಂದು ನೆಲೆಸಿದರು. ಇಲ್ಲಿ ವೀರಶೈವ ಧರ್ಮ

ಪ್ರಸಾರದ ಬಗ್ಗೆ ಯೋಜನೆಗಳನ್ನು ರೂಪಿಸಿ ಯೋಗ್ಯರಾದ ಶರಣರಿಗೆ ವಹಿಸಲಾಯಿತು; ಇಲ್ಲಿಯೇ ಚೆನ್ನಬಸವಣ್ಣ ಲಿಂಗೈಕ್ಯನಾದ ಎಂದು ಪ್ರತೀತಿ.



ಚೆನ್ನಬಸವೇಶ್ವರ ದೇವಾಲಯ

ಚೆನ್ನಬಸವಣ್ಣನ ಸಮಾಧಿ ಇರುವ ಸ್ಥಳಕ್ಕೆ ಉಳುವಿಯ ಮಹಾಮನೆ ಎಂಬ ಹೆಸರಿದೆ. ಮಹಾಮನೆಯು ಗವಿಯ ಒಳಗೆ ಸಾವಿರಾರು ಜನರು ಕುಳಿತುಕೊಳ್ಳಬಹುದಾದ ದೊಡ್ಡ ಆವಾರವಿದೆ. ಈ ಮಹಾಮನೆಯಲ್ಲಿ ಕಡೆಯ ದಾಸೋಹ ನಡೆಯಿತೆಂದು ವೀರಶೈವ ಗ್ರಂಥಗಳು ತಿಳಿಸುತ್ತವೆ. ಮಹಾಮನೆಯಲ್ಲಿ ಪೂಜಾ ವಿಗ್ರಹಗಳೂ ವೀರಭದ್ರನ ವಿಗ್ರಹವೂ ಇವೆ. ಇಲ್ಲಿರುವ ಚೆನ್ನಬಸವೇಶ್ವರ ದೇವಾಲಯದಲ್ಲಿ ಶಿವರಾತ್ರಿಯ ಸಮಯದಲ್ಲಿ ದೊಡ್ಡ ಜಾತ್ರೆ ಸೇರುತ್ತದೆ. ನಾಡಿನ ನಾನಾ ಕಡೆಗಳಿಂದ ಸಾವಿರಾರು ಮಂದಿ ಭಕ್ತಾದಿಗಳು ಬರುತ್ತಾರೆ.

ಇಲ್ಲಿರುವ ವಿರಕ್ತಮಠ ಗವಿಮಠ ಮತ್ತು ವಡ್ಕಲದ ಬಳಿಯ ಹಳೆಯ ಕಟ್ಟಡ, ಬಾವಿಗಳು ಮೊದಲಾದವುಗಳಿಂದ ಒಂದು ಕಾಲದಲ್ಲಿ ಉಳುವಿ ಒಂದು ಪ್ರಮುಖ ಪ್ರದೇಶವಾಗಿತ್ತೆಂದು ತಿಳಿದುಬರುತ್ತದೆ. ಉಳುವಿಯ ಪೂರ್ವ ಭಾಗದ ಅಂಚಿನಲ್ಲಿರುವ ಬುದ್ಬುದ ತಲೆ ಎಂದು ಕರೆಯುವ ಬಾವಿಯಂತಿರುವ ಕೊಳದಲ್ಲಿ ನೀರು ಉಕ್ಕಿ ಮೇಲೆ ಬರುತ್ತದೆ. ಇಲ್ಲಿ ಜನ ಭಕ್ತಿಯಿಂದ ಮೀಯುತ್ತಾರೆ. ಈ ಕೊಳದ ಆಚೆಗೆ ಬೆಟ್ಟದ ಇಳಿಜಾರ ತುದಿಯಲ್ಲಿ ರುದ್ರಮಂಟಪವೆಂದು ಕರೆಯುವ ಸು.100' - 150' ಎತ್ತರವಿರುವ ಕಲ್ಲುಗಳ ಗುಂಪಿದೆ. ಇಲ್ಲೊಂದು ಗುಹೆ ಇದ್ದು ಅದರಲ್ಲಿ ಅನೇಕ ಲಿಂಗಗಳಿದ್ದುವೆಂದೂ ಭಾರಿ ಕಲ್ಲುಬಂಡೆಯೊಂದು ಅಡ್ಡಲಾಗಿ ಬಿದ್ದು ಅದನ್ನು ಮುಚ್ಚಿಬಿಟ್ಟಿದೆಯೆಂದೂ ಹೇಳುವರು.

ಹೈದರ್ ಈ ಪ್ರದೇಶವನ್ನು ಗೆದ್ದುಕೊಂಡು ತನ್ನ ರಾಜ್ಯಕ್ಕೆ ಸೇರಿಸಿಕೊಂಡ. ಟಿಪ್ಪು ಸತ್ತ ಅನುತರ ಇಲ್ಲಿ ಬಾರ್ದೆ ಬಾಬುರಾವ್ ಎಂಬುವವನು ಸಣ್ಣ ಕೋಟೆ ಕಟ್ಟಿಸಿದ. ಈಗಲೂ ಈ ಕೋಟೆಯನ್ನು ಕಾಣಬಹುದು. ಇದರ ಸಮೀಪದ ಬಾರ್ಘೂರ ಕುಣಂಗ ಗ್ರಾಮ ಒಂದು ವ್ಯಾಪಾರ ಕೇಂದ್ರ.

(ಎಂ.ಆರ್.ಪಿ.)

# ಊ

**ಊದುಬತ್ತಿ ಉದ್ಯಮ :** ಸಾಂಬ್ರಾಣಿ, ಹಾಲುಮಡ್ಡಿ, ಗಂಧದಪುಡಿ ಮುಂತಾದ ಸುವಾಸನೆ ಬೀರುವ ವಸ್ತುಗಳ ಸರಿಯನ್ನು ಬಳಿದು ಮಾಡಿರುವ ಕಡ್ಡಿಯನ್ನು ಅಗರಬತ್ತಿ, ಸುವಾಸನೆ ಕಡ್ಡಿ (ಇನ್‌ಸೆನ್ಸ್ ಸ್ಟಿಕ್), ಗಂಧದಕಡ್ಡಿ, ಸಾಂಬ್ರಾಣಿ ಕಡ್ಡಿ, ಜಾಸ್ ಸ್ಟಿಕ್ ಎಂದೂ ಕರೆಯುವುದಿದೆ.

ದೇವಸ್ಥಾನಗಳಲ್ಲಿ, ಮುಂಜಿ ಮತ್ತು ಮದುವೆ ನಡೆಯುವ ಸ್ಥಳಗಳಲ್ಲಿ ಮತ್ತು ಸಭೆಗಳು ನಡೆಯುವ ಸ್ಥಳಗಳಲ್ಲಿ ಮತ್ತು ಇತರ ಶುಭ ಸಮಾರಂಭಗಳಲ್ಲಿ, ದಿನನಿತ್ಯ ಮನೆಮನೆಗಳಲ್ಲಿ ಸಾಂಬ್ರಾಣಿ ಧೂಪ, ಗಂಧದಕಡ್ಡಿಗಳನ್ನು ವಾಡಿಕೆಯಾಗಿ ಉರಿಸುತ್ತಾರೆ. ಸುವಾಸನೆಯನ್ನು ಬೀರುವ ಇವುಗಳ ಹೊಗೆ ವಾತಾವರಣದ ಸೂಕ್ಷ್ಮ ಕ್ರಿಮಿಗಳನ್ನು ನಾಶಮಾಡಿ ಸಾಂಕ್ರಾಮಿಕ ರೋಗಗಳು ಹರಡುವುದನ್ನು ತಾತ್ಕಾಲಿಕವಾಗಿ ತಡೆಯುತ್ತದೆ. ಪ್ರಾಯಶಃ ಈ ಉದ್ದೇಶದಿಂದಲೇ ರೋಗಿಗಳ ಮತ್ತು ಬಾಣಂತಿಯರ ಕೊಠಡಿಗಳಲ್ಲಿ ಸಾಂಬ್ರಾಣಿ (ಗಮ್ ಬೆಂಜೋಯಿನ್) ಹೊಗೆಯನ್ನು ಹಾಕಿರುತ್ತಾರೆ. ಚಿತ್ತೈಕಾಗ್ರತೆಯಿಂದ ದೇವರ ಧ್ಯಾನ ಮಾಡಲು ಈ ಸುವಾಸನೆ ಸೌಲಭ್ಯ ಒದಗಿಸುತ್ತದೆ. ಹಿಂದಿನ ಕಾಲದಲ್ಲಿ ಹಲಗಾರತಿಯ ಕೆಂಡದಮೇಲೆ ದಶಾಂಗದ ಪುಡಿ ಉದುರಿಸಿ, ಬೇಕಾದ ಸುವಾಸನೆಯನ್ನು ಪಡೆಯುತ್ತಿದ್ದರು. ಈ ಸುಗಂಧ ವಾತಾವರಣವನ್ನು ಪಡೆಯಲು ಈಗ ಊದುಬತ್ತಿಯನ್ನು ಬಳಸಲಾಗುತ್ತಿದೆ.

ಊದುಬತ್ತಿ ಕೈಗಾರಿಕೆಯಲ್ಲಿ ವಿವಿಧ ಬೇರುಗಳು, ಮರಗಳು, ಬೀಜಗಳು, ತೊಗಟೆಗಳು, ಎಲೆಗಳು, ಗೋಂದುಗಳು, ಹೂಗಳು ಇತ್ಯಾದಿ ಅನೇಕ ಕಚ್ಚಾ ವಸ್ತುಗಳನ್ನು ಬಳಸುತ್ತಾರೆ. ಮರಗಳಲ್ಲಿ ಮುಖ್ಯವಾದುವು ಗಂಧ, ಅಗರ್ ಮತ್ತು ದೇವದಾರು; ಬೇರುಗಳಲ್ಲಿ ಮುಖ್ಯವಾದುವು ಖಸ್, ಕಾಸ್‌ಕಸ್, ನಲ್ ಮತ್ತು ಕೆಲೋಮಸ್; ತೊಗಟೆಗಳಲ್ಲಿ ಮುಖ್ಯವಾದುವು ದಾಲ್ಚಿನ್ನಿ, ಕಪೂರಕಚ್ರಿ; ಬೀಜಗಳಲ್ಲಿ ಮುಖ್ಯವಾದುವು ಆಮ್ ಬ್ರೆಟ್ಟೆ, ಆನಿಬೀಜ, ಕಸ್ತೂರಿ, ಮೆಲೊ, ಅಜವಾನ, ಗೌಲ, ಏಲಕ್ಕಿ; ಎಲೆಗಳಲ್ಲಿ ಮುಖ್ಯವಾದುವು ದವನ, ಪಚ್‌ಚೌಲಿ; ಹೂಗಳಲ್ಲಿ ಮುಖ್ಯವಾದುವು ಒಣಗಿದ ಗುಲಾಬಿ ಮೊಗ್ಗು, ಕೇಸರಿ, ಜಾಜಿ, ಬಕುಳ, ಲಾರೆಲ್ಸ್, ಇದಲ್ಲದೆ ಇದಕ್ಕೆ ಬಳಸುವ ಇತರ ವಸ್ತುಗಳೆಂದರೆ ಕಲ್ಲುಹೂ, ಓಕ್ ಮಾಸ್, ಸ್ಟೈರಾಕ್ಸಿ, ಬೆನ್ ಜೋಯಿನ್, ಮಿರ್, ಒಲಿಬಾನಮ್, ಹಾಲುಮಡ್ಡಿ, ಗೋಂದು ಮತ್ತು ರೇಸಿನ್, ಪ್ರಕೃತಿಯಲ್ಲಿ ದೊರೆಯುವ ಅತ್ಯಂತ ಬೆಲೆಬಾಳುವ ಸುಗಂಧ ವಸ್ತುಗಳೆಂದರೆ ಕಸ್ತೂರಿ, ಪುನುಗು ಮತ್ತು ಅಂಬರ್.

ಈ ಮೇಲಿನ ಕಚ್ಚಾ ಪದಾರ್ಥಗಳನ್ನು ಊದುಬತ್ತಿ ಕೈಗಾರಿಕೆಯನ್ನೇ ಕುಲಕಸುಬಾಗುಳ್ಳವರು ಬಳಸುತ್ತಾರೆ. ಕಸ್ತೂರಿ, ಪುನುಗು ಇತ್ಯಾದಿಗಳನ್ನು ಇತ್ತೀಚೆಗೆ ಕೃತಕ ರೀತಿಯಲ್ಲಿ ತಯಾರಿಸುತ್ತಿದ್ದಾರೆ. ಈ ಕೃತಕ ವಸ್ತುಗಳ ಬೆಲೆ ಸಾಮಾನ್ಯವಾಗಿ ಕಡಿಮೆ ಇರುತ್ತದೆ. ಎಲೆ, ಬೇರು, ತೊಗಟೆ ಮತ್ತು ರೇಸಿನ್‌ಗಳಿಂದ ಸುಗಂಧದ ಎಣ್ಣೆಗಳನ್ನು ಬಟ್ಟಿ ಇಳಿಸಿ ಊದುಬತ್ತಿಯಲ್ಲಿ ಬಳಸುತ್ತಾರೆ. ಕೃತಕ ರೂಪದಲ್ಲಿ ತಯಾರಾದ ಸುಗಂಧ ಎಣ್ಣೆಗಳೂ ಹೇರಳವಾಗಿ ದೊರೆಯುತ್ತವೆ. ಎರಡನೆಯ ಮಹಾಯುದ್ಧ ಮುಗಿದ ಅನಂತರ ಊದು ಬತ್ತಿ ಕೈಗಾರಿಕೆಯಲ್ಲಿ ಪ್ರಕೃತಿಯಿಂದ ದೊರಕುವ ಸುವಾಸನೆ ಎಣ್ಣೆಗಳ ಬಳಕೆ ಹೆಚ್ಚಿದೆ.

ತಾನು ಬಳಸುವ ಪುಡಿಗಳ ಮಿಶ್ರಣ, ಪ್ರಮಾಣ ಮತ್ತು ತಯಾರಿಸುವ ರೀತಿ ಈ ವಿಷಯಗಳನ್ನು ಪ್ರತಿಯೊಬ್ಬ ಊದುಬತ್ತಿ ತಯಾರಕನೂ ರಹಸ್ಯವಾಗಿ ಇಟ್ಟಿರುತ್ತಾನೆ. ಕಚ್ಚಾ ಪದಾರ್ಥಗಳನ್ನು ಸಣ್ಣಗೆ ಪುಡಿಮಾಡಿ, ಅಂಟಿಸುವ ವಸ್ತುವಿನ ಜೊತೆ ವಿವಿಧ ರೀತಿಯಿಂದ ಬೆರೆಸಿ, ಕಡೆಗೆ ತೆಳ್ಳಗಿರುವ ಬಿದಿರಿನ ಕಡ್ಡಿಗೆ ಈ ಮಿಶ್ರಣವನ್ನು ಹಚ್ಚಿ ಒಣಗಿಸುತ್ತಾರೆ. ಬಳಸಿರುವ ಕಚ್ಚಾ ಪದಾರ್ಥಗಳು, ಕಡ್ಡಿಯ ಉದ್ದ ಮತ್ತು ಗಾತ್ರಕ್ಕೆ ತಕ್ಕಂತೆ ಬತ್ತಿ ಉರಿಯುವ ಕಾಲ ವ್ಯತ್ಯಾಸವಾಗುತ್ತದೆ.

ತಯಾರಿಸುವ ವಿಧಾನ : ಉತ್ತಮ ದರ್ಜೆಯ ಊದುಬತ್ತಿಗಳನ್ನು ತಯಾರಿಸಲು ವಿವಿಧ ವಿಧಾನಗಳನ್ನು ಅನುಸರಿಸಲಾಗುತ್ತದೆ. ಮೊಟ್ಟ ಮೊದಲು ಕೆಂಪು ಮರದ ಪುಡಿ, ಬಿಳಿಯ ಚಿಪ್ಪಿನ ಪುಡಿ (ವೈಟ್ ಚಿಪ್ ಪೌಡರ್), ಇದ್ದಲು ಪುಡಿ, ಗಂಧದ ಪುಡಿ ಮತ್ತು ಮಸಾಲೆ ಪುಡಿ

**ಮಾದರಿ ಸೂತ್ರ**

| ಪ್ರತಿವಸ್ತು ಪ್ರಮಾಣ 29.07 ಗ್ರಾಂ | ಪ್ರತಿವಸ್ತು ಪ್ರಮಾಣ 58.15 ಗ್ರಾಂ | ಪ್ರತಿವಸ್ತು ಪ್ರಮಾಣ 81.41 ಗ್ರಾಂ | ಪ್ರತಿವಸ್ತು ಪ್ರಮಾಣ 116.3 ಗ್ರಾಂ | ಪ್ರತಿವಸ್ತು ಪ್ರಮಾಣ 174.45 ಗ್ರಾಂ | ಪ್ರತಿವಸ್ತು ಪ್ರಮಾಣ 232.6 ಗ್ರಾಂ |
|---|---|---|---|---|---|
| 1 ಸಾಬೂನು<br>2 ಜಾಪತ್ರೆ | 3 ಕೋಟಿಚಂದನ<br>4 ಗೌಲ<br>5 ಜಾಕಾಯಿ<br>6 ಏಲಕ್ಕಿ | 7 ಕಿನೇರಿಪಟ್ಟಿ<br>8 ತಾಳೀಸಪತ್ರೆ<br>9 ಚಂಗಲಕೋಷ್ಟ<br>10 ಅತಿಮಧುರ<br>11 ಲವಂಗ | 12 ಸಜ್ಜರಸ<br>13 ಲವಂಗ ಚಕ್ಕೆ<br>14 ಬಿಳಿಮಸ್ತಕಿ | 15 ಅನಾರಸ ಹೂ<br>16 ನಖನಾಗ ಕೇಸರಿ<br>17 ಗುಲಾಬಿ ಹೂ | 18 ಸಂಪಿಗೆಮೊಗ್ಗು<br>19 ಲವಂಗಪತ್ರೆ<br>20 ದೇಶಾವರ<br>21 ಕಲ್ಲು ಹೂ<br>22 ಲಾಮಂಚ<br>23 ಮುಡಿದಾಳ<br>24 ಕಚೋರ<br>25 ಬಾವಂಜೆ ಬೀಜ<br>26 ಸಣ್ಣ ರಾಶ್ಮೆ<br>27 ಪಚ್ಚೆ ಸೊಪ್ಪು<br>28 ತುಪ್ಪದ ದೇವದಾರು |

ಈ ಮಸಾಲೆ ಚೂರ್ಣಕ್ಕೆ ಕೆಳಗಿನ ವಸ್ತುಗಳನ್ನು ಸೇರಿಸಿ, ಮಿಶ್ರಣವನ್ನು ಪನ್ನೀರಿನ ಪಾತ್ರೆಯಲ್ಲಿ ಹಾಕಿ ಸ್ವಲ್ಪ ಹೊತ್ತು ನೆನೆ ಇಡಬೇಕು.

**ಮೇಲಿನ ಮಸಾಲೆಗೆ ಕೂಡಿಸುವ ವಸ್ತುಗಳು**

| ಪ್ರತಿವಸ್ತು ಪ್ರಮಾಣ 11.63 ಗ್ರಾಂ | ಪ್ರತಿವಸ್ತು ಪ್ರಮಾಣ 14.53 ಗ್ರಾಂ | ಪ್ರತಿವಸ್ತು ಪ್ರಮಾಣ 23.26 ಗ್ರಾಂ | ಪ್ರತಿವಸ್ತು ಪ್ರಮಾಣ 58.15 ಗ್ರಾಂ | ಪ್ರತಿವಸ್ತು ಪ್ರಮಾಣ 145.3 ಗ್ರಾಂ | ಪ್ರತಿವಸ್ತು ಪ್ರಮಾಣ 174.45 ಗ್ರಾಂ | ಪ್ರತಿವಸ್ತು ಪ್ರಮಾಣ 232.6 ಗ್ರಾಂ |
|---|---|---|---|---|---|---|
| ಜೇನುತುಪ್ಪ | ಪುನುಗು ಚೆಟ್ಟು | ಕಲ್ಲುಸಕ್ಕರೆ<br>ಶಿಲಾರಸ<br>ಬಿಳಿ ಹಾಲುಮಡ್ಡಿ | ಜಾಲಿಯ ಅಂಟು<br>ಬೆಲ್ಲ | ಶ್ರೀಗಂಧವನ್ನು ಸಾಣೆಕಲ್ಲಿನ ಮೇಲೆ ತಿಕ್ಕಿದಾಗ ಬಂದ ದ್ರವ | ಕವಡ<br>ಲೋಬಾನ | ಮೇಲಿನ ಮಸಾಲೆ ಚೂರ್ಣ, ಪುಳ್ಳಿ ದೇವದಾರು ಕಟ್ಟಿಗೆ ಯಿಂದ ತಯಾರಿಸಿದ ಇದ್ದಲು |

| ಪ್ರತಿವಸ್ತು ಪ್ರಮಾಣ 0.7 ಗ್ರಾಂ | ಪ್ರತಿವಸ್ತು ಪ್ರಮಾಣ 1.4 ಗ್ರಾಂ | ಪ್ರತಿವಸ್ತು ಪ್ರಮಾಣ 11.63 ಗ್ರಾಂ | ಪ್ರತಿವಸ್ತು ಪ್ರಮಾಣ 14.53 ಗ್ರಾಂ | ಪ್ರತಿವಸ್ತು ಪ್ರಮಾಣ 23.26 ಗ್ರಾಂ | ಪ್ರತಿವಸ್ತು ಪ್ರಮಾಣ 26.16 ಗ್ರಾಂ | ಪ್ರತಿವಸ್ತು ಪ್ರಮಾಣ 81.41 ಗ್ರಾಂ | ಪ್ರತಿವಸ್ತು ಪ್ರಮಾಣ 93.04 ಗ್ರಾಂ | ಪ್ರತಿವಸ್ತು ಪ್ರಮಾಣ 116.3 ಗ್ರಾಂ |
|---|---|---|---|---|---|---|---|---|
| ಉತ್ತಮ ಕಸ್ತೂರಿ ಜವಾಜಿ | ಕೇಸರಿ ಪುನುಗು | ಪಚ್ಚ ಕರ್ಪೂರ | ಕಸ್ತೂರಿ ಗೆಡ್ಡೆ | ಬಿಳಿಹಾಲುಮಡ್ಡಿ<br>ಶಿಲಾರಸ<br>ಜಾಲಿಯ ಅಂಟು<br>ಕಲ್ಲುಸಕ್ಕರೆ | ಪುನುಗು ಚೆಟ್ಟಿ | ಕವಡ ಲೋಬಾನ | ಮೇಲಿನ ಮಸಾಲೆ | ಇದ್ದಲು |

ಇವನ್ನು ತೂಕ ಮಾಡಿ ಅನಂತರ ಜರಡಿಯಾಡಿಸಿ, ಉತ್ತಮ ದರ್ಜೆಯ ನುಣುಪಾದ ಪುಡಿಯನ್ನು ಮಾಡಿಕೊಳ್ಳಬೇಕು. ಕೆಲವು ಸುಗಂಧಯುಕ್ತ ರಾಸಾಯನಿಕ ವಸ್ತುಗಳನ್ನು (ಕೌಮಾರೀನ್ ಹರಳುಗಳು, ಗುಲಾಬಿ ಹರಳುಗಳು, ವೆನಿಲನ್ ಇತ್ಯಾದಿ) ಪುಡಿಮಾಡಿ, ಮೇಲೆ ಹೇಳಿರುವ ನುಣುಪಾದ ಪುಡಿಯ ಜೊತೆ ಬೆರೆಸಬೇಕು. ಈ ಮಿಶ್ರಣಕ್ಕೆ ಶಿಲಾರಸ ಮತ್ತು ಸಾಂಬ್ರಾಣಿಯನ್ನು ಬೆರೆಸಬೇಕು. ಉತ್ತಮ ದರ್ಜೆಯ ನಯವಾದ ಸರಿ ಪಡೆಯಲು ಸ್ವಲ್ಪ ಜೇನುತುಪ್ಪವನ್ನು ಹಾಕಬೇಕು. ಯಾವುದೇ ಸಂದರ್ಭದಲ್ಲೂ ನೀರನ್ನು ಬಳಸಬಾರದು. ನೀರಿದ್ದರೆ ಊದುಬತ್ತಿ ಸರಿಯಾಗಿ ಉರಿಯುವುದಿಲ್ಲ. ಈಗ ಈ ಮಿಶ್ರಣಕ್ಕೆ ವಿವಿಧ ಸುಗಂಧಗಳ ಮಿಶ್ರಣವೊಂದನ್ನು ಹಾಕಿ ಚೆನ್ನಾಗಿ ಬೆರೆಸಬೇಕು. ನಯವಾದ ಮತ್ತು ಮೃದುವಾದ ಸರಿ ತಯಾರಾದ ಅನಂತರ, ಕೈಯಲ್ಲಿ ಹಿಡಿಯುವಷ್ಟು ಮುದ್ದೆಯನ್ನು ಮಾಡಿಕೊಳ್ಳಬೇಕು.

ಅನಂತರ ಬಿದಿರಿನ ಕಡ್ಡಿಗಳನ್ನು ಆರಿಸಬೇಕು. ಈ ಕಡ್ಡಿಗಳ ಒಂದು ಕಡೆಯ ಭಾಗದಲ್ಲಿ (ಸುಮಾರು 1-12 ಅಂಗುಲದವರೆಗೆ) ಬಣ್ಣಗಳನ್ನು (ಕೆಂಪು, ಹಸಿರು) ಬಳಿಯಬೇಕು. ಈ ಕಡ್ಡಿಗಳಿಗೆ ಮೊದಲೇ ಮೇಲೆ ತಯಾರಿಸಿದ ಮುದ್ದೆಯ ಮಸಾಲೆಯನ್ನು ಸಮಾನ ರೀತಿಯಲ್ಲಿ ಹಚ್ಚಬೇಕು. ಮೊದಲು ಕಡ್ಡಿಯ ಮೇಲೆ ಮಸಾಲೆಯನ್ನು ಹಚ್ಚಿ, ಅದನ್ನು ನುಣುಪಾದ ಮರದ ಹಲಗೆಯ ಮೇಲೆ ಅದುಮಿ, ಅನಂತರ ಕಡ್ಡಿಯನ್ನು ಉರುಳಿಸಬೇಕು. ಅಭ್ಯಾಸ

ಮತ್ತು ಅನುಭವ ಬಂದ ಮೇಲೆ, ಒಂದು ಸಲಕ್ಕೆ ಅನೇಕ ಕಡ್ಡಿಗಳಿಗೆ ಮಸಾಲೆ ಹಚ್ಚಿ, ಮರದ ಹಲಗೆಯ ಮೇಲೆ ಉರುಳಿಸಿ, ಒಂದೇ ಸಮನಾದ ಊದಿನ ಕಡ್ಡಿಗಳನ್ನು ಪಡೆಯಬಹುದು. ಅನುಭವಿ ಕೆಲಸಗಾರನೊಬ್ಬ, ಒಂದು ಗಂಟೆಯಲ್ಲಿ 550 ಗ್ರಾಂನಿಂದ 1 ಕಿಲೊಗ್ರಾಂನಷ್ಟು ಊದುಬತ್ತಿಯನ್ನು ತಯಾರಿಸಬಹುದು. ಕಡ್ಡಿಗಳ ಮೇಲಿನ ಮಸಾಲೆ ಮಿಶ್ರಣ ದೊಡ್ಡದಾಗಿಯೂ ಮತ್ತು ದಪ್ಪನಾಗಿಯೂ ಇರಬೇಕಾದರೆ, ಮಸಾಲೆ ಸರಿ ಶಕ್ತಿಯುತವಾಗಿಯೂ ಗಟ್ಟಿಯಾಗಿಯೂ ಇರಬೇಕು. ಊದುಬತ್ತಿಗೆ ಅಪೇಕ್ಷಿತ ಬಣ್ಣ ಬರಬೇಕಾದರೆ, ನುರ್ವ ಬಣ್ಣದ ಪುಡಿಯನ್ನು ಮರದ ಹಲಗೆಯ ಮೇಲೆ ಹಾಕಿಕೊಂಡು, ಬತ್ತಿಯನ್ನು ಅದರ ಮೇಲೆ ಉರುಳಿಸಬೇಕು. ಇಷ್ಟು ಮಾಡಿದಾಗ, ಊದು ಬತ್ತಿ ಒದ್ದೆಯಾಗಿರುತ್ತದೆ. ಇದನ್ನು ಗಾಳಿಯಲ್ಲಿ ಬಿಟ್ಟು ಒಣಗಿಸಬೇಕು. ಬಹಳ ಬಿಸಿಲಿಗೆ ಬಿಡಬಾರದು. ಮೊದಲ ಸಲ ಕಡ್ಡಿಗೆ ಹಚ್ಚಿದ ಮಸಾಲೆ ಸರಿಯಾಗಿ ಅಂಟಿಕೊಳ್ಳದಿದ್ದರೆ ಕಡ್ಡಿಗಳನ್ನು ಒಣಗಿಸಿದ ಮೇಲೆ ಪುನಃ ಮಸಾಲೆ ಹಚ್ಚಿ ಹಲಗೆಯ ಮೇಲೆ ಅದುಮಿ ಉರುಳಿಸಿದರೆ, ಸಮನಾದ ಬತ್ತಿ ಸಿಗುತ್ತದೆ. ಒಣಗಿದ ಊದು ಬತ್ತಿಯ ಮೇಲೆ ಸುಗಂಧವನ್ನು ಹಚ್ಚುತ್ತಾರೆ. ಅನಂತರ ತೂಕಮಾಡಿ, ಸುರುಳಿ ಮಾಡಿ ಪಾರದರ್ಶಕ ಕಾಗದಗಳಲ್ಲಿ ಸುತ್ತಿ ರಟ್ಟಿನ ಡಬ್ಬಿಗಳಲ್ಲಿ ಅಥವಾ ತಗಡಿನ ಕೊಳವೆಗಳಲ್ಲಿ ಪ್ಯಾಕ್ ಮಾಡುತ್ತಾರೆ. ಪೊಟ್ಟಣದ ಮೇಲೆ ಹೆಸರು ಮುದ್ರಿಸಿದ ಕಾಗದ ಅಂಟಿಸಿ, ಜಲ್ಲಿ ಕಾಗದದಿಂದ ಸುತ್ತುತ್ತಾರೆ.

ಉತ್ತಮ ದರ್ಜೆಯ ಊದುಬತ್ತಿಯಲ್ಲಿ ಸುಗಂಧ ಮತ್ತು ಪರಿಮಳ ಕೊಡುವ ವಸ್ತುಗಳನ್ನು ಚೆನ್ನಾಗಿ ಬೆರೆಸಿ ಇತರ ಕಚ್ಚಾ ಪದಾರ್ಥಗಳ ಜೊತೆ ಚೆನ್ನಾಗಿ ಅರೆದು, ಬರುವ ಮಸಾಲೆ ಮುದ್ದೆಯನ್ನು ತೆಳ್ಳಗಿನ ಬಿದಿರಿನ ಕಡ್ಡಿಗಳಿಗೆ ಅಂಟಿಸುವರು, ಕೀಳುದರ್ಜೆಯ ಊದುಬತ್ತಿಯಲ್ಲಿ, ಮೊದಲು ಬಿದಿರಿನ ಕಡ್ಡಿಗೆ ಗೋಂದು ಹಾಕಿ, ಇದ್ದಲು ಪುಡಿ ಮತ್ತು ಗಂಧದ ಪುಡಿಯನ್ನು ಅಂಟಿಸುತ್ತಾರೆ. ಕಡೆಗೆ ಈ ಕಡ್ಡಿಯನ್ನು ಸುಗಂಧದ ವಸ್ತುವಿನಲ್ಲಿ ನೆನೆಸಿಟ್ಟು, ಕೆಲವು ನಿಮಿಷಗಳ ಮೇಲೆ ಪ್ಯಾಕ್ ಮಾಡುತ್ತಾರೆ.

ಉತ್ತಮ ದರ್ಜೆಯ ಊದುಬತ್ತಿಯ ಗುಣ ಅದರ ಮಸಾಲೆಯನ್ನು ಅವಲಂಬಿಸಿದೆ. ಒಳ್ಳೆಯ ಮಸಾಲೆಯನ್ನು ತಯಾರಿಸಲು ಕೆಳಗಿನ ಮಾದರಿಸೂತ್ರದಲ್ಲಿ ಕೊಟ್ಟಿರುವಂತೆ ಕಚ್ಚಾ ಪದಾರ್ಥಗಳನ್ನು ಯುಕ್ತ ಪ್ರಮಾಣದಲ್ಲಿ ತೆಗೆದುಕೊಂಡು, ಚೆನ್ನಾಗಿ ಕುಟ್ಟಿ ನುಣುಪಾದ ಪುಡಿಯನ್ನು ತಯಾರಿಸಬೇಕು. ಪುಡಿಯನ್ನು ಬಟ್ಟೆಯಲ್ಲಿ ಸೋಸಬೇಕು. ಚೆನ್ನಾಗಿ ಸೋಸಿದ ಈ ಮಿಶ್ರಣದ ಪುಡಿಯೇ ಊದುಬತ್ತಿ ತಯಾರಿಕೆಗೆ ಮುಖ್ಯವಾದ ದಿನಸು. ಇದನ್ನು ಮಸಾಲೆ ಅಥವಾ ಸಾಂಬ್ರಾಣಿ ಎಂದು ಕರೆಯುತ್ತಾರೆ. ಯಾವುದೇ ಜಾತಿಯ ಉತ್ತಮ ಊದುಬತ್ತಿ ತಯಾರಿಸಬೇಕಾದರೆ, ಈ ಮಸಾಲೆಯನ್ನು ಸಿದ್ಧಪಡಿಸಿಕೊಂಡು, ಒಂದು ಡಬ್ಬಿಯಲ್ಲಿ ಇಟ್ಟುಕೊಂಡಿರಬೇಕು. ಅನಂತರ ಎಲ್ಲ ವಸ್ತುವನ್ನೂ ಸಣ್ಣದಾಗಿ ಅರೆಯಬೇಕು. ಗಟ್ಟಿಯಾದರೆ ಸ್ವಲ್ಪ ಪನ್ನೀರನ್ನು ಪುನಃ ಹಾಕಿ ಚೆನ್ನಾಗಿ ಅರೆಯಬೇಕು. ಮಸಾಲೆ ಬೆಣ್ಣೆಯಂತೆ ಮಂದವಾಗಿರಬೇಕು. ಹೆಚ್ಚಿಗೆ ಪನ್ನೀರು ಹಾಕಿ ಮಸಾಲೆಯನ್ನು ಅಳ್ಳಕ ಮಾಡಬಾರದು. ಅನಂತರ ಈ ಮಿಶ್ರಣವನ್ನು ಸಿದ್ಧವಿರುವ ಬಿದಿರಿನ ಕಡ್ಡಿಗಳಿಗೆ ಹಚ್ಚಬೇಕು. ಊದು ಬತ್ತಿಯ ಸುವಾಸನೆ ಕಡಿಮೆಯಾಗಿದ್ದರೆ ಮೈದಾಲ ಪುಡಿಯನ್ನು ಮಿಶ್ರಣದಲ್ಲಿ ಹಾಕಿ ಕಲೆಸಬೇಕು. ಆಗ ಊದುಬತ್ತಿಗೆ ಸಾಕಷ್ಟು ಸುವಾಸನೆ ಬರುತ್ತದೆ. ಯಥಾಪ್ರಕಾರ ಇವನ್ನು ಪ್ಯಾಕ್ ಮಾಡಬಹುದು.

ಜವಾಜಿ ಬತ್ತಿ ತಯಾರಿಸಬೇಕಾದರೆ ಮೇಲೆ ತಿಳಿಸಿದ ಮುಖ್ಯ ಸಾಮಗ್ರಿ ತೆಗೆದುಕೊಂಡು ಈ ಕೆಳಗಿನ ವಸ್ತುಗಳನ್ನು ಅದಕ್ಕೆ ಸೇರಿಸಬೇಕು.

ಇದೇ ರೀತಿ ಸಾಮಗ್ರಿಗಳನ್ನು ಬದಲಾಯಿಸಿಕೊಂಡು, ಪುನುಗಿನ ಊದುಬತ್ತಿ, ಕಸ್ತೂರಿ ಊದುಬತ್ತಿ ಮತ್ತು ಸಾದಾ ಊದುಬತ್ತಿಗಳನ್ನು ತಯಾರಿಸುತ್ತಾರೆ.

ಮಸಾಲೆ ಬತ್ತಿ, ಜವಾಜಿ ಬತ್ತಿ, ದರಬಾರ್ ಬತ್ತಿ, ಪುನುಗಿನ ಬತ್ತಿ ಇತ್ಯಾದಿ ಅನೇಕ ರೀತಿಯ ಊದುಬತ್ತಿಗಳಿವೆ. ವಿವಿಧ ಜಾತಿಗಳನ್ನು ಸೂಚಿಸಿ, ಗಿರಾಕಿಗಳನ್ನು ಆಕರ್ಷಿಸಲು, ಹಸಿರು, ಕೆಂಪು, ಕಪ್ಪು ಮತ್ತು ಹಳದಿ ಬಣ್ಣದ ಊದುಬತ್ತಿಗಳು ಇರುತ್ತವೆ. ಊದುಬತ್ತಿಯ ಕಡ್ಡಿಗಳು ತೆಳ್ಳಗೂ ದಪ್ಪಗೂ ಇರುತ್ತವೆ. ಕಡ್ಡಿಗಳ ಉದ್ದ: 8 ಅಂಗುಲ, 8.5 ಅಂಗುಲ, 10 ಅಂಗುಲ, 11 ಅಂಗುಲ ಮತ್ತು 13 ಅಂಗುಲ. ಊದುಬತ್ತಿಯ ಉದ್ದ ಮತ್ತು ಗಾತ್ರವನ್ನು ಇನ್ನೂ ಕ್ರಮೀಕರಿಸಿಲ್ಲ.

ಊದುಬತ್ತಿಯ ರಫ್ತು: ಊದುಬತ್ತಿಯನ್ನು ಮುಂಬಯಿ ಮತ್ತು ಕೋಲ್ಕತ್ತಗಳ ಮುಖಾಂತರ ಹೊರಗಿನ ದೇಶಗಳಿಗೆ ರಫ್ತು ಮಾಡಲಾಗುತ್ತದೆ.

ಊದುಬತ್ತಿ ಉದ್ಯಮ ಸಾವಿರಾರು ಜನರಿಗೆ ಉದ್ಯೋಗ ಒದಗಿಸಿದೆ. ಹೆಂಗಸರು ತಮ್ಮ ಮನೆಗೆ ಊದುಬತ್ತಿಯ ಮಸಾಲೆಯನ್ನು ತೆಗೆದುಕೊಂಡು ಹೋಗಿ, ಸಂಸಾರದವರೆಲ್ಲ ಸೇರಿ, ಊದುಬತ್ತಿ ತಯಾರಿಸಿ ಕೂಲಿ ಸಂಪಾದಿಸುತ್ತಾರೆ. ಕೆಲಸಗಾರರು ಗುತ್ತಿಗೆಯ ಪ್ರಕಾರ ಸಂಪಾದನೆ ಮಾಡುತ್ತಾರೆ. ಚುರುಕಾಗಿ ಕೆಲಸ ಮಾಡುವವರು ಎಂಟು ಗಂಟೆಯಲ್ಲಿ ಅರ್ಧ ಕಿಲೋ ಊದುಬತ್ತಿ ತಯಾರಿಸುತ್ತಾರೆ.

ಬಿದಿರಿನ ಕಡ್ಡಿಗಳನ್ನು ಮಾಡುವುದು ಮತ್ತು ತಗಡಿನ ಕೊಳವೆಗಳನ್ನು ತಯಾರಿಸುವುದು ಇವೆರಡೂ ಊದುಬತ್ತಿಯ ತಯಾರಿಕೆಯನ್ನು ಅವಲಂಬಿಸಿರುವ ಗೃಹಕೈಗಾರಿಕೆಗಳು. ಕರ್ನಾಟಕ ರಾಜ್ಯದಲ್ಲಿ ನೂರಕ್ಕಿಂತ ಹೆಚ್ಚು ಊದುಬತ್ತಿ ಕಾರ್ಖಾನೆಗಳಿವೆ. ಬೆಂಗಳೂರು, ಮೈಸೂರು, ಚಿಂತಾಮಣಿ, ಕೋಲಾರ ಮತ್ತು ಬೆಳಗಾಂವಿ ಇವು ಪ್ರಮುಖ ಸ್ಥಳಗಳು.

*

**ಋಷ್ಯಶೃಂಗಪುರ** (ಕಿಗ್ಗ): ಚಿಕ್ಕ ಮಗಳೂರು ಜಿಲ್ಲೆ ಶೃಂಗೇರಿ ತಾಲ್ಲೂಕಿನ ಕಸಬೆಯಿಂದ ಸು.10ಕಿಮೀ ಪಶ್ಚಿಮಕ್ಕಿರುವ ಗ್ರಾಮ, ಹೋಬಳಿ

# ಋ

ಕೇಂದ್ರ. ಈ ಗ್ರಾಮಕ್ಕೆ ಮರಕಲು ಎಂಬ ಹೆಸರೂ ಇದೆ.

ಇಲ್ಲಿರುವ ಶೃಂಗೇಶ್ವರ (ಋಷ್ಯಶೃಂಗೇಶ್ವರ) ದೇವಾಲಯ ಈ ಸುತ್ತಿನಲ್ಲಿ ಬಹು ಪ್ರಸಿದ್ಧವಾದುದು. ಇದು ದಕ್ಷಿಣ ಕರ್ನಾಟಕದ ಅತಿ ಪ್ರಾಚೀನ ದೇವಾಲಯಗಳಲ್ಲೊಂದು. ಇಲ್ಲಿರುವ ಆಳುಪ ವಂಶದ ಗುಣಸಾಗರ (ಸು.650-63) ಮತ್ತು ಚಿತ್ರವಾಹನ (ಸು.663-730) ಇವರ ಶಾಸನಗಳು ಈ ದೇವಾಲಯದ ಪ್ರಾಚೀನತೆಯನ್ನು ಸಾರುವುವಲ್ಲದೆ, ಅದು ಅಂದು ಕೀಬಿ



ಋಷ್ಯಶೃಂಗೇಶ್ವರ ದೇವಾಲಯ

ಗ್ಗನೇಶ್ವರ ದೇವಾಲಯ ಎಂದು ಪ್ರಸಿದ್ಧವಾಗಿತ್ತೆಂಬ ಅಂಶವನ್ನು ತಿಳಿಸುತ್ತವೆ. ದೇವಾಲಯದಲ್ಲಿ ಗರ್ಭಗೃಹ ಹಾಗೂ ಸುಕನಾಸಿ, ಪ್ರದಕ್ಷಿಣಾಪಥ', ನವರಂಗ, ಮುಖಮಂಟಪ ಮತ್ತು ಮುಂದೆ ನಂದಿಮಂಟಪವಿರುವ ಮುಖ್ಯ ಘಟಕವೂ ಇದರ ಸುತ್ತ ಎರಡು ಪ್ರಾಕಾರಗಳೂ ಇವೆ. ಗರ್ಭಗೃಹ, ಸುಕನಾಸಿ ಮತ್ತು ಪ್ರದಕ್ಷಿಣಾಪಥ ದೇವಾಲಯದ ಅತಿಪ್ರಾಚೀನ ಭಾಗಗಳು. ಇವೆಲ್ಲವನ್ನೂ ಸರಳವಾಗಿ ಕಟ್ಟಲಾಗಿದೆ.

ಗರ್ಭಗೃಹದ ಬಾಗಿಲ ಇಕ್ಕೆಲದಲ್ಲಿ ಗಣಪತಿ ಮತ್ತು ಮಹಿಷಮರ್ದಿನಿ ದೇವರುಗಳಿರುವ ಚಿಕ್ಕ ಗುಡಿಗಳಿವೆ. ನವರಂಗದ ಕಂಬಗಳು ಬುಡದಲ್ಲಿ ಚೌಕವಾಗಿಯೂ ಯಷ್ಟಿ ಭಾಗದಲ್ಲಿ ಅಷ್ಟಮುಖವಾಗಿಯೂ ಇವೆ. ಕಂಬಗಳ ಮೇಲೆ ಬಹುಶಃ ಅನಂತರದ ಕಾಲದಲ್ಲಿ ಕೆತ್ತಿದ, ಕಾಳಿಂಗಮರ್ದನ, ಉಗ್ರನರಸಿಂಹ, ನರ್ತಕಿಯರು ಒಯ್ಯುತ್ತಿರುವ ಋಷ್ಯಶೃಂಗ ಮೊದಲಾದ ವಿಜಯನಗರಕಾಲೀನ ತೆಳು ಉಬ್ಬುಶಿಲ್ಪಗಳಿವೆ. ಮುಖಮಂಟಪ ಆರು ಕಂಬಗಳದು. ಇದೂ ಹೊಸ ಸೇರ್ಪಡೆ. ಇದರ ಮುಂದೆ ನಂದಿಮಂಟಪವಿದೆ. ಗರ್ಭಗೃಹದಲ್ಲಿರುವ ಲಿಂಗ ವಿಚಿತ್ರ ರೀತಿಯದು. ಇದು ಕಂಬದಂತೆ ಸು.4 ಅಡಿಗಳಷ್ಟು ಎತ್ತರವಾಗಿದ್ದು ಅದರ ಮೇಲೆ ಮೂರು ಕೋಡುಗಳು ಎದ್ದಿವೆ. ಈ ಲಿಂಗ ಪುರಾಣ ಪ್ರಸಿದ್ಧ ಋಷ್ಯಶೃಂಗನ ಹೆಸರಿನಲ್ಲಿ ಸ್ಥಾಪಿತವಾದುದೆಂದೂ (ಅಥವಾ ಆತ ಅದರಲ್ಲಿ ಐಕ್ಯವಾಗಿದ್ದಾನೆಂದೂ) ಮೇಲಿನ ಕೋಡುಗಳಲ್ಲಿ ಒಂದು ಅವನ ಭಾರ್ಯೆ, ಶಾಂತಾಳನ್ನೂ ಇನ್ನೆರಡು ಅವನ ಶೃಂಗಗಳನ್ನೂ ಪ್ರತಿನಿಧಿಸುತ್ತವೆಯೆಂದೂ ಐತಿಹ್ಯ. ಈ ಲಿಂಗ ರುದ್ರಾಕ್ಷ ಸ್ವರೂಪವಾದುದು. ಇದರ ಶಕ್ತಿಯಿಂದ ಹನ್ನೆರಡು ಯೋಜನ ವಿಸ್ತೀರ್ಣದಲ್ಲಿ ಹರಡಿದ್ದ ಕ್ಷಾಮ ನಿವಾರಿತವಾಯಿತು. ಋಷ್ಯಶೃಂಗ ಮತ್ತು ಶಾಂತಾ ಇಲ್ಲಿ ನಂದಿನೀ ನದಿಯ ದಡದಲ್ಲಿ ವಾಸಿಸುತ್ತಾರೆ ಎಂದು ಸ್ಥಳಪುರಾಣ ತಿಳಿಸುತ್ತದೆ.

ದೇವಾಲಯದ ಪ್ರಾಕಾರದಲ್ಲಿ ನೈಋತ್ಯ ಭಾಗದಲ್ಲಿ ಒಂದು ಮಲ್ಲಿಕಾರ್ಜುನ ಗುಡಿ ಇದೆ. ಇದರ ಮುಂದಿರುವ ನಂದಿಮಂಟಪದಲ್ಲಿರುವ ನಂದಿ ವಿಗ್ರಹ ಬಹು ಸರಳವಾಗಿ ಸಹಜವಾಗಿ ನಿರೂಪಿತವಾಗಿದೆ. ಇದು ಪಲ್ಲವರ ಕಾಲದ ಶಿಲ್ಪ ಎಂದು ಅಭಿಪ್ರಾಯಪಡಲಾಗಿದೆ. (ಎಸ್.ಎನ್.)

**ಎಕ್ಕುಂಡಿ, ಸು.ರಂ. :** 1923-95. ಕನ್ನಡದ ಪ್ರಸಿದ್ಧ ಕವಿ. ಸುಬ್ಬಣ್ಣ ರಂಗನಾಥ ಎಕ್ಕುಂಡಿ ಇವರ ಪೂರ್ಣ ಹೆಸರು. ಕಲಬುರ್ಗಿಯ ಮಣ್ಣೂರು ಇವರ ಮೂಲ ಮನೆತನದ ಊರು. ಇವರು 1923 ಜನವರಿ 20ರಂದು ಇಂದಿನ ಹಾವೇರಿ ಜಿಲ್ಲೆ ರಾಣೆಬೆನ್ನೂರಿನಲ್ಲಿ ಜನಿಸಿದರು. ಇವರ ತಂದೆ ರಂಗಾಚಾರ್ಯ ಎಕ್ಕುಂಡಿಯವರು ರಾಣೆಬೆನ್ನೂರಿನಲ್ಲಿ ಶಿಕ್ಷಕರಾಗಿದ್ದರು. ತಾಯಿ ರಾಜಕ್ಕ. ಇವರಿಗೆ ಐದು ವರ್ಷಗಳಾಗಿದ್ದಾಗ ತಂದೆ ನಿಧನರಾದರು. ಚಿಕ್ಕಂದಿನಲ್ಲಿಯೇ ಸಂಸಾರದ ಭಾರ ತಲೆಯ ಮೇಲೆ ಬಿದ್ದುದರಿಂದ ಸವಣೂರಿನಲ್ಲಿ ಶ್ರೀ ಸತ್ಯಬೋ ಸೇವಾಸಂಘ ನಡೆಸುತ್ತಿದ್ದ ವಾಚನಾಲಯದ ಪುಸ್ತಕಗಳನ್ನು ಮನೆಮನೆಗೆ ಮುಟ್ಟಿಸುವ ಕೆಲಸಮಾಡಿದರು. ಪುಸ್ತಕಗಳನ್ನು ಪುಕ್ಕಟೆ ಓದುವ ಅವಕಾಶವಾದುದರಿಂದ ಬಾಲ್ಯದಲ್ಲಿ ಜ್ಞಾನಸಂಪಾದನೆ ಇವರ ಕಾಯಕವಾಯಿತು. ಇದರಿಂದ ಶಿಕ್ಷಣದತ್ತ ಒಲವು ಬೆಳೆಯಿತು. ಇವರ ಪ್ರಾಥಮಿಕಶಿಕ್ಷಣ ಹುಬ್ಬಳ್ಳಿಯಲ್ಲಾಯಿತು. ಪ್ರೌಢ ಶಾಲೆಯಲ್ಲಿದ್ದಾಗ ಉನ್ನತಿ ಎಂಬ ಕೈಬರೆಹದ ಮಾಸಿಕದ ಸಂಪಾದಕರಾದರು. ಇವರ ಗುರುಗಳು ಇವರಿಗೆ ಬಿ.ಎಂ.ಶ್ರೀ, ಟೆನಿಸನ್, ವರ್ಡ್ಸ್‌ವರ್ತ್ ಮುಂತಾದವರ ಸಾಹಿತ್ಯವನ್ನು ಪರಿಚಯ ಮಾಡಿಕೊಟ್ಟರು. ಇವರು ತಮ್ಮ ಹದಿನೈದನೆಯ ವಯಸ್ಸಿನಲ್ಲಿಯೇ ಕವಿತೆ ಬರೆಯಲಾರಂಭಿಸಿದರು. ಜಗದೀಶಚಂದ್ರ ಬೋಸರ ಸಾವು ಇವರ ಹೃದಯವನ್ನು ಕಲಕಿ ಕಾವ್ಯ ರೂಪದಲ್ಲಿ ಹೊರಬಂದಿತು.



ನಾಡಹಬ್ಬಕ್ಕೆ ಹುಬ್ಬಳ್ಳಿಗೆ ಬರುತ್ತಿದ್ದ ಬೇಂದ್ರೆ, ಗೋಕಾಕ, ಶಂ.ಬಾ.ಜೋಶಿ, ಶ್ರೀರಂಗ, ಬೆಟಗೇರಿ ಕೃಷ್ಣಶರ್ಮ ಮೊದಲಾದವರ ಪರಿಚಯವಾಗಿ ಕಾವ್ಯದಲ್ಲಿ ಆಸಕ್ತಿ ಬೆಳೆಯಿತು. ಇವರು ಸಾಂಗ್ಲಿಯ ವಿಲಿಂಗ್ಡನ್ ಕಾಲೇಜಿನಲ್ಲಿ ಓದುತ್ತಿದ್ದಾಗ ಚಾಸರ್, ಷೇಕ್ಸ್‌ಪಿಯರ್, ಜೇಮ್ಸ್ ಬ್ಯಾರಿ ಮುಂತಾದ ಪಾಶ್ಚಾತ್ಯ ಸಾಹಿತಿಗಳನ್ನು ಓದಿದ್ದರು. ಪೇಜಾವರ ಸದಾಶಿವರಾಯರ ವರುಣನಿಗೆ ಆಹ್ವಾನ ಎಂಬ ಕವಿತೆ ಓದಿ ಪ್ರಭಾವಿತರಾದ ಇವರು ಗಂಗಾಧರ ಚಿತ್ತಾಲ, ವರದರಾಜ ಹುಯಿಲಗೋಳ, ರಾ.ಯ. ಧಾರವಾಡಕರ, ವಿ.ಜಿ.ಭಟ್ಟ ಇವರ ಒಡಗೂಡಿ ವರುಣಕುಂಜ ಎಂಬ ಬರೆಹಗಾರರ ಬಳಗ ಆರಂಭಿಸಿದರು. ಅಲ್ಲಿ ಪ್ರತಿವಾರವೂ ಸಾಹಿತ್ಯಕ ಚರ್ಚೆ ನಡೆಯುತ್ತಿತ್ತು. ಇವರು ವಿಲಿಂಗ್ಡನ್‌ನಲ್ಲಿ ಓದುತ್ತಿದ್ದಾಗಲೇ ಪ್ರಥಮ ಕವನ ಸಂಗ್ರಹ ಸಂತಾನವನ್ನು ರಂ.ಶ್ರೀ. ಮುಗಳಿ ಪ್ರಕಟಿಸಿದರು (1953). ಇವರು ಪದವಿ ಪಡೆದ ಅನಂತರ ಹೈದರಾಬಾದಿನಲ್ಲಿ ಸಿ.ಐ. ಉನ್ನತ ಶಿಕ್ಷಣ ಪಡೆದು, ಮುಂದೆ ಬಂಕಿಕೊಡ್ಲಿನ ಆನಂದಾಶ್ರಮ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿ ಮುಖ್ಯೋಪಾಧ್ಯಾಯರಾಗಿ ಮೂವತ್ತೈದು ವರ್ಷ ಸೇವೆ ಸಲ್ಲಿಸಿ ನಿವೃತ್ತರಾದರು.

ಇವರು ಆನಂದತೀರ್ಥರು (ಖಂಡಕಾವ್ಯ 1953), ಹಾವಾಡಿಗರ ಹುಡುಗ (1967), ಮತ್ಸ್ಯಗಂಧಿ (1975), ಬೆಳ್ಳಕ್ಕಿಗಳು (1982), ಕಥನ ಕವನ (1985), ಬಕುಲದ ಹೂವುಗಳು (1991), ಗೋದಿಯ ತೆನೆಗಳು (1996) ಎಂಬ ಕಾವ್ಯಸಂಕಲನಗಳನ್ನು ಪ್ರಕಟಿಸಿದ್ದಾರೆ. ನೆರಳು ಎಂಬುದು ಇವರ ಕಥಾ ಸಂಕಲನ (1960). ಪು.ತಿ.ನರಸಿಂಹಾಚಾರ್ಯರು (ಜೀವನ ಚರಿತ್ರೆ, 1957), ಪಂಜುಗಳು (1998), ಎರಡು ರಷ್ಯನ್ ಕಾದಂಬರಿಗಳು, ಪ್ರತಿಬಿಂಬಗಳು, ಲೆನಿನ್ನರ ನೆನಪಿಗಾಗಿ, ನವ್ಯಕವಿತೆ, ವರುಣಕುಂಜ, ತಾಳತಂಬೂರಿ - ಇವು ಇವರ ಇತರ ಗ್ರಂಥಗಳು.

ಇವರು ಪ್ರಧಾನವಾಗಿ ಕವಿಯಾಗಿ ಹೆಸರು ಪಡೆದವರು. ಇವರ ಕಾವ್ಯದಲ್ಲಿ ಹೆಚ್ಚಾಗಿ ಉತ್ತರ ಕನ್ನಡ ಜಿಲ್ಲೆಯ ನಿಸರ್ಗ ಸೌಂದರ್ಯ ಮೈವೆತ್ತಿ ನಿಂತಿದೆ. ಅಲ್ಲಿಯ ಸಮುದ್ರ, ಮುಸಲಧಾರೆ ಮಳೆ, ಹಕ್ಕಿಪಕ್ಕಿಗಳ ಕಲರವ, ಹಾಲಕ್ಕಿ ಒಕ್ಕಲಿಗರ ಶ್ರಮಜೀವನ, ತೆಂಗಿನಮರಗಳ ಸೊಬಗು ಇವರ ಕವಿತೆಗಳಲ್ಲಿ ಜೀವಂತಿಕೆ ಪಡೆದಿವೆ. ಸಹಜ ಕವಿಯಾದ ಇವರ ಕಾವ್ಯದಲ್ಲಿ ಎಡಪಂಥೀಯ ಚಿಂತನೆಯ ಎಳೆಯನ್ನು ಗುರುತಿಸಬಹುದಾಗಿದೆ. ಕಾವ್ಯ ಜನವಾಣಿಯಾಗದ ಹೊರತು, ಸಮಾಜಮುಖಿಯಾಗದ ಹೊರತು ಅದಕ್ಕೆ ಬೆಲೆಯಿಲ್ಲವೆಂಬುದು ಇವರ ಅಭಿಪ್ರಾಯವಾಗಿದೆ. ಕೀಟ್ಸ್ ಇವರ ಪ್ರೀತಿಯ ಇಂಗ್ಲಿಷ್ ಕವಿ. ಕಥನ ಕವನ ಕಥೆಯ ಮೂಲಕ ಬರೆಯುವವನ ಅನುಭವಕ್ಕೂ ಓದುಗನ ಅನುಭವಕ್ಕೂ ಸೇತುವೆ ಕಟ್ಟುತ್ತದೆ ಎಂದು ಹೇಳಿದ ಇವರು ಕಥನ ಕವನಗಳಿಗೊಂದು ಹೊಸ ಆಯಾಮ ನೀಡಿದ್ದಾರೆ. ಇವರಿಗೆ ಅನೇಕ ಸನ್ಮಾನ, ಪ್ರಶಸ್ತಿಗಳು ಲಭ್ಯವಾಗಿವೆ. ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ (1970), ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ (1982), ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1992) ಇವು ಅವುಗಳಲ್ಲಿ ಕೆಲವು. ಇವರು ಕೆಲಕಾಲ ರೋಮನ್ ವಿಶ್ವವಿದ್ಯಾಲಯದ ಸಂದರ್ಶಕ ಪ್ರಾಧ್ಯಾಪಕರಾಗಿದ್ದರು. 1995 ಆಗಸ್ಟ್ 20ರಂದು ನಿಧನರಾದರು.

(ಎಸ್.ಎಂ.ಕೆ.)

**ಎಡೆಯೂರು :** ತುಮಕೂರು ಜಿಲ್ಲೆಯ ಕುಣಿಗಲು ತಾಲ್ಲೂಕಿನ ಒಂದು ಗ್ರಾಮ ಮತ್ತು ಯಾತ್ರಾಸ್ಥಳ. ಬೆಂಗಳೂರು-ಹಾಸನ ಹೆದ್ದಾರಿಯಲ್ಲಿ ಕುಣಿಗಲಿಗೆ ನೈಋತ್ಯದಲ್ಲಿ 19ಕಿಮೀ ದೂರದಲ್ಲಿದೆ. ಇಲ್ಲಿ 15ನೆಯ ಶತಮಾನದಲ್ಲಿದ್ದ

ತೋಂಟದ ಸಿದ್ಧಲಿಂಗಸ್ವಾಮಿಗಳ ಸಮಾಧಿ ಇದೆ. ವೀರಶೈವ ಮಠ, ಚಿತ್ರಮಠ, ಸುಂದರವಾದ ತಟಾಕ ಮತ್ತು ಶಿಥಿಲವಾಗಿರುವ ವರದರಾಜಸ್ವಾಮಿ ದೇವಸ್ಥಾನ ಇತರ ಮುಖ್ಯ ಆಕರ್ಷಣೆಗಳು. ಎಡೆಯೂರು ವೀರಶೈವ ಧಾರ್ಮಿಕ ಕೇಂದ್ರವಾಗಿದ್ದರೂ ಎಲ್ಲ ಮತಗಳವರೂ ಈ ಕ್ಷೇತ್ರಕ್ಕೆ ಬರುತ್ತಾರೆ.



ಸಿದ್ಧಲಿಂಗೇಶ್ವರ ದೇವಾಲಯ

ಸಿದ್ಧಲಿಂಗೇಶ್ವರ ದೇವಾಲಯ ದ್ರಾವಿಡ ವಾಸ್ತುಶೈಲಿಯಲ್ಲಿದೆ. ದೇವಾಲಯದ ಮಹಾದ್ವಾರದ ಬಲಬದಿಯ ಪ್ರಾಂಗಣದಲ್ಲಿರುವ ಶಾಸನದಲ್ಲಿ ದಾನಿ ವಾಸದ ಚೆನ್ನವೀರಪ್ಪ ಒಡೆಯ ಈ ಮಂದಿರವನ್ನು ಕಟ್ಟಿಸಿದನೆಂದು ತಿಳಿದು ಬರುವುದಲ್ಲದೆ ಸಿದ್ಧಲಿಂಗ ಸ್ವಾಮಿಗಳ ಮಾಹಾತ್ಮ್ಯವೂ ವರ್ಣಿತವಾಗಿದೆ. ಈಗ ಶಾಸನದ ಬಲಬದಿಗೆ 6' ಎತ್ತರವಿರುವ ಶಿಲೆಯ ಮೇಲೆ ಎಡಗೈಯಲ್ಲಿ ಲಿಂಗವನ್ನಿಟ್ಟುಕೊಂಡು ಕುಳಿತಿರುವ ಸ್ವಾಮಿಗಳ, ನಿಂತಿರುವ ಚೆನ್ನವೀರಪ್ಪ ಮತ್ತು ಆತನ ಪತ್ನಿ ಪಾರ್ವತಮ್ಮ ಇವರ ಚಿತ್ರಗಳನ್ನು ಕಾಣಬಹುದು. ಮುಖಮಂಟಪ ಮತ್ತು ಹಜಾರದ ಚಾವಣಿಯ ಮೇಲೆ ಸಿದ್ಧಲಿಂಗಸ್ವಾಮಿಗಳ ಜೀವನದ ಹಲವು ದೃಶ್ಯಗಳನ್ನು ಮತ್ತು ಶಿವನ ಇಪ್ಪತ್ತೈದು ಲೀಲೆಗಳನ್ನೂ ಚಿತ್ರಿಸಿ ಅವನ್ನು ಕನ್ನಡದಲ್ಲಿ ವಿವರಿಸಿದೆ. ಗದ್ದುಗೆಯ ಮೇಲೆ ಬೆಳ್ಳಿಯ ಕವಚವುಳ್ಳ ವಿಭೂತಿಲಿಂಗವೂ ಲೋಹದ ಉತ್ಸವಮೂರ್ತಿಯೂ ಇವೆ.

ಇಲ್ಲಿ ಪ್ರತಿ ವರ್ಷ ಯುಗಾದಿ ಆದ ಅನಂತರ ರಥೋತ್ಸವ ಜರುಗುತ್ತದೆ. ಸಾಲು ಮರಗಳ ತೋಪು ಮತ್ತು ಮಾರ್ಕೋನಹಳ್ಳಿಯ ಜಲಾಶಯದ ಹಿನ್ನೆಲೆಯಲ್ಲಿ ಇದೊಂದು ಸುಂದರ ನೆಲೆಯಾಗಿ ಹೆಚ್ಚು ಜನರನ್ನು ಆಕರ್ಷಿಸುತ್ತಿದೆ. (ಎಸ್.)

**ಎಡೆಯೂರು ಸಿದ್ಧಲಿಂಗೇಶ್ವರ :** ಸು.1470. ಪ್ರಸಿದ್ಧ ವೀರಶೈವ ಯತಿ, ಗುರು ಹಾಗೂ ಕವಿ. ಷಟ್ಸ್ಥಲಜ್ಞಾನಸಾರಾಮೃತ ಎಂಬ ಗ್ರಂಥದ ಕರ್ತೃ. ಚಾಮರಾಜನಗರ ಜಿಲ್ಲೆಯ ಅದೇ ತಾಲ್ಲೂಕಿನ ಹರದನಹಳ್ಳಿ ಇವರ ಜನ್ಮಸ್ಥಳ. ಗುರು ಗೋಸಲ ಚೆನ್ನಬಸವೇಶ್ವರ.

ಇವರಿಗೆ ತೋಂಟದ ಸಿದ್ಧಲಿಂಗ ಯತಿ, ಸಿದ್ಧಲಿಂಗ ಶಿವಯೋಗಿ ಎಂಬ ಹೆಸರುಗಳೂ ಇವೆ. ಎಡೆಯೂರಿನ ಸಮೀಪದ ಕಗ್ಗೆರೆಯ ಹತ್ತಿರವಿರುವ ನಾಗಿಣೀನದಿ ತೀರದ ತೋಟದಲ್ಲಿ ಸು.12 ವರ್ಷಕಾಲ ಧ್ಯಾನಸ್ಥರಾಗಿದ್ದು ಶಿವಯೋಗದಲ್ಲಿದ್ದುದರಿಂದ ಇವರಿಗೆ ತೋಂಟದ ಎಂಬ ವಿಶೇಷಣ ರೂಢಿಗೆ ಬಂದಂತೆ ತಿಳಿಯುತ್ತದೆ. ಇವರು ವಿಜಯನಗರದ ವಿರೂಪಾಕ್ಷನ (1465-85) ಕಾಲದಲ್ಲಿದ್ದು ಅನೇಕ ಪವಾಡಗಳನ್ನು ಮೆರೆದ ಮಹಿಮಾಪುರುಷರೆಂದೂ ನಿರಂಜನ ಗಣೇಶನ ಅಪರಾವತಾರವಾಗಿದ್ದರೆಂದೂ ವಿರೂಪಾಕ್ಷಪಂಡಿತನ ಚೆನ್ನಬಸವಪುರಾಣದಿಂದ ತಿಳಿದುಬರುತ್ತದೆ.

ಸಿದ್ಧಲಿಂಗೇಶ್ವರರು ಎಡೆಯೂರಿಗೆ ಬಂದು ನೆಲೆಸುವ ಮುನ್ನ ಸೌರಾಷ್ಟ್ರ, ಕೊಲ್ಲಿಪಾಕಿ, ಕೇದಾರ, ಚಿದಂಬರ, ಶ್ರೀರಂಗ, ಕಂಚಿ, ಕಾಳಹಸ್ತಿ, ಅರುಣಾಚಲ ಮೊದಲಾದ ಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಲ್ಲಿ ಕೆಲವು ಪವಾಡಗಳನ್ನು ಮೆರೆದು ವೀರಶೈವ ಧರ್ಮವನ್ನು ಪುನರುಜ್ಜೀವನಗೊಳಿಸಿದರು. ಅರುಣಾಚಲದ ರಾಜ ಇಂಥದೊಂದು ಪವಾಡವನ್ನು ಕಣ್ಣಾರೆ ಕಂಡು ಇವರ ಮಹಿಮೆಯನ್ನು ಮೆಚ್ಚಿ ವೀರಶೈವನಾಗಿ ಪರಿವರ್ತಿತನಾದಂತೆ ಪ್ರತೀತಿ ಇದೆ. ಒಮ್ಮೆ ಇವರು ಈಗಿನ ಸಿದ್ಧಗಂಗಾ ಕ್ಷೇತ್ರಕ್ಕೆ ಬಂದಾಗ ನೀರಿನ ಕ್ಷಾಮದಿಂದ ಬಳಲುತ್ತಿದ್ದ ಈ ನಾಡಿನಲ್ಲಿ ಇವರ ಪಾದಸ್ಪರ್ಶಮಾತ್ರದಿಂದ ಗಂಗೆ ಚಿಮ್ಮಿದಳೆಂದೂ ಅಂದಿನಿಂದ ಆ ಕ್ಷೇತ್ರಕ್ಕೆ ಸಿದ್ಧಗಂಗಾ ಕ್ಷೇತ್ರವೆಂದು ಹೆಸರಾಯಿತು ಎಂಬುದು ಇನ್ನೊಂದು ಪ್ರತೀತಿ. ಕುಣಿಗಲು ತಾಲ್ಲೂಕಿನ ಕಗ್ಗೆರೆಯಲ್ಲಿ 12 ವರ್ಷ ಶಿವಯೋಗದಲ್ಲಿದ್ದು ಅನಂತರ ಎಡೆಯೂರಿನ ಬಳಿಯ ಚಿತ್ರಾಮಠದಲ್ಲಿ ಕೆಲಕಾಲ ಕಳೆದು ಬೋಳಬಸವರಾಜೇಂದ್ರ ಎಂಬುವರನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಮಾಡಿ ಇವರು ಎಡೆಯೂರಲ್ಲಿ ನಿರ್ವಿಕಲ್ಪ ಸಮಾಧಿ ಹೊಂದಿದರೆಂದು ಐತಿಹ್ಯಗಳು ತಿಳಿಸುತ್ತವೆ. ಇವರ ಜ್ಞಾಪಕಾರ್ಥವಾಗಿ ಈ ಊರಿನ ಬಳಿ ಕಟ್ಟಿಸಿದ ಸಿದ್ಧಲಿಂಗೇಶ್ವರ ದೇವಸ್ಥಾನದ ಪ್ರಾಕಾರದಲ್ಲಿ ಈ ಯೋಗಿಯ ಮಹಿಮೆಯನ್ನು ಬಹಳವಾಗಿ ಕೊಂಡಾಡಿರುವ ಒಂದು ಶಿಲಾಶಾಸನವಿದೆ (1500). ಇದರಲ್ಲಿ ಇವರ ಶಿಷ್ಯರಲ್ಲಿ ಕೆಲವರ ಹೆಸರುಗಳನ್ನು ಉಲ್ಲೇಖಿಸಲಾಗಿದ್ದು, ಇವರಿಗಾಗಿ ಕೆಲಭಕ್ತರು ಈ ಊರಲ್ಲೇ ಒಂದು ಕಲ್ಲುಮಠ ಕಟ್ಟಿಸಿದಂತೆ ಹೇಳಿದೆ. ಚಿತ್ರದುರ್ಗದ ಶಾಸನದಲ್ಲಿ (1738) ಸಿದ್ಧಲಿಂಗೇಶ್ವರರ ವಚನವೊಂದು ಉಲ್ಲೇಖಿತವಾಗಿದೆ. ಇವರನ್ನು ಕುರಿತು ಶಾಂತೇಶನ ತೋಂಟದ ಸಿದ್ಧೇಶ್ವರನ ಪುರಾಣ, ವಿರಕ್ತ ತೋಂಟದಾರ್ಯನ ಸಿದ್ಧೇಶ್ವರ ಪುರಾಣ, ಸಿದ್ಧನಂಜೇಶನ ಭಾವರತ್ನಾಭರಣ (ಈ ಗ್ರಂಥ ದೊರೆತಿಲ್ಲ). ಹೇರಂಬನ ಸಿದ್ಧೇಶ್ವರ ಸಾಂಗತ್ಯ ಮೊದಲಾದ ಕೃತಿಗಳು ರಚಿತವಾಗಿವೆ. ಕರ್ತೃ ಗೊತ್ತಿಲ್ಲದ ತೋಂಟದ ಸಿದ್ಧೇಶ್ವರ ರಗಳೆಯಲ್ಲಿ ಇವರ ಪವಾಡಗಳನ್ನು ಬಣ್ಣಿಸಲಾಗಿದೆ. ಚೆನ್ನವೀರ ಜಂಗಮದೇವನ ಅಸಮಗ್ರ ಷಟ್ಸ್ಥಲ ವಲ್ಲಭದಲ್ಲಿ ಈ ಯತಿಯ ಚರಿತ್ರೆ ಮತ್ತು ಪವಾಡಗಳು ನಿರೂಪಿತವಾಗಿವೆ. ಎಡೆಯೂರಿನಲ್ಲಿ ಇರುವ ಇವರ ಗದ್ದುಗೆ ಶಿವಭಕ್ತರಿಗೆ ತೀರ್ಥಕ್ಷೇತ್ರವಾಗಿವೆ. ಸ್ವತಂತ್ರ ಸಿದ್ಧಲಿಂಗೇಶ್ವರ ಮತ್ತು ಗುಮ್ಮಳಾಪುರದ ಸಿದ್ಧಲಿಂಗೇಶ್ವರ ಇವರ ಶಿಷ್ಯವರ್ಗಕ್ಕೆ ಸೇರಿದವರು.

ಷಟ್ಸ್ಥಲಜ್ಞಾನಸಾರಾಮೃತ ವಚನರೂಪದಲ್ಲಿದೆ. ಇದರಲ್ಲಿ 701 ವಚನಗಳೂ 7 ವೃತ್ತಗಳೂ ಇವೆ. ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೆ ಎಂಬುದು ಇವರ ವಚನಗಳ ಅಂಕಿತ. ಗ್ರಂಥದಲ್ಲಿ ಷಟ್ಸ್ಥಲ ವಿಚಾರ ವಿಸ್ತಾರವಾಗಿ ನಿರೂಪಿತವಾಗಿದೆ. ಶಿವಯೋಗದ ಸೂಕ್ಷ್ಮವಾದ ವಿವರಣೆ ಇದೆ. ಇವರ ವಚನಗಳು ವಿಶೇಷವಾಗಿ ಬೆಡಗಿನಿಂದ ಕೂಡಿದ್ದು, ಕೆಲವು ವಚನಗಳಲ್ಲಿ ಉತ್ತಮ ಸಾಹಿತ್ಯಗುಣ ಕಂಡುಬರುತ್ತದೆ. ಇವು ಸಾಧಕನ ಕಳವಳ ಆತ್ಮರೋದನಗಳಿಗಿಂತ ಸಿದ್ಧಪುರುಷನ ಪ್ರಶಾಂತತೆಗೆ ಹೆಸರಾಗಿವೆ. ಕಾಮದಿಂದ ಕರಗಿದೆನಯ್ಯಾ, ಕ್ರೋಧದಿಂದ ಕೊರಗಿದೆನಯ್ಯಾ, ಲೋಭಮೋಹಗಳಿಂದ ಅತಿನೊಂದೆನಯ್ಯಾ, ಮದಮತ್ಸರಗಳಿಂದ ಬೆದೆಬೆದೆ ಬೆಂದೆನಯ್ಯಾ, ಅಹಂಕಾರ ಮಮಕಾರದಿಂದ ಮತಿಮಂದನಾಗಿರ್ದೆನಯ್ಯಾ, ಇದು ಕಾರಣ ಎನ್ನ ಕಾಮಾದಿ ಷಡ್ವರ್ಗಂಗಳ ಕಳೆದು ಅಹಂಕಾರ ಮಮಕಾರಗಳ ಮಾಣಿಸಿ ನಿರಹಂಕಾರಿಯೆಂದೆನಿಸಯ್ಯಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ ಎಂಬ ವಚನ ಇವರ ಮಹೋನ್ನತ ವ್ಯಕ್ತಿತ್ವಕ್ಕೆ ಸುಲಲಿತ ವಿಚಾರಧಾರೆಗೆ ನಿದರ್ಶನವಾಗಿದೆ. ಇವರ ವಚನಗಳಿಗೆ ಅನುಭಾವ ಸಾಹಿತ್ಯದಲ್ಲಿ ಮಿಗಿಲಾದ ಸ್ಥಾನವಿದೆ. (ಜಿ.;ಜಿ.ಎಂ.;ಓ.ಎನ್.ಎಲ್.)

**ಎಪಿಗ್ರಾಫಿಯ ಕರ್ನಾಟಿಕ :** ಕರ್ನಾಟಕದ ಶಾಸನಗಳುಳ್ಳ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಗ್ರಂಥಮಾಲೆ. 1884ರಲ್ಲಿ ಮೈಸೂರು ಸರ್ಕಾರದ ಕಾರ್ಯದರ್ಶಿ ಹಾಗೂ ಪುರಾತತ್ತ್ವ ಇಲಾಖೆಯ ನಿರ್ದೇಶಕರಾಗಿದ್ದ ಪ್ರಸಿದ್ಧ ವಿದ್ವಾಂಸ ಲೂಯಿರೈಸ್ ಮೈಸೂರು ಸಂಸ್ಥಾನ ಮತ್ತು ಕೊಡಗು ಪ್ರದೇಶದಲ್ಲಿ ದೊರೆಯುವ ಅನೇಕ ಶಾಸನಗಳನ್ನು ಸಂಗ್ರಹಿಸಿ ಪ್ರಸಿದ್ಧಪಡಿಸಬೇಕೆಂಬ ಯೋಜನೆಯನ್ನು ಕೈಕೊಂಡು 1886ರಲ್ಲಿ ಕೊಡಗಿನ 23 ಶಾಸನಗಳನ್ನು ಎಪಿಗ್ರಾಫಿಯ ಕರ್ನಾಟಿಕದ ಮೊದಲ ಸಂಪುಟವಾಗಿ ಪ್ರಸಿದ್ಧಪಡಿಸಿದರು. ಎರಡನೆಯ ಸಂಪುಟದಲ್ಲಿ ಶ್ರವಣಬೆಳಗೊಳದಲ್ಲಿ ದೊರೆತ ಸು.150 ಶಾಸನಗಳನ್ನು ಪ್ರಕಟಿಸಲಾಯಿತು (1889). ಇವೆರಡು ಸಂಪುಟಗಳ ಪ್ರಕಟಣೆಯಿಂದ ಶಾಸನಗಳ ಅಧ್ಯಯನದ ಬಗ್ಗೆ ಹೆಚ್ಚಿನ ಆಸ್ಥೆಯುಂಟಾಗಿ 1890ರಲ್ಲಿ ಆಗಿನ ದಿವಾನರಾದ ಶೇಷಾದ್ರಿ ಅಯ್ಯರ್ ಅವರ ಸಲಹೆಯಂತೆ ಹಳೆಯ ಮೈಸೂರು ಸಂಸ್ಥಾನದಲ್ಲಿ ಪ್ರತ್ಯೇಕವಾದ ಪುರಾತತ್ತ್ವ ಶಾಖೆಯನ್ನು ಲೂಯಿ ರೈಸರ ನೇತೃತ್ವದಲ್ಲಿ ಸ್ಥಾಪಿಸಲಾಯಿತು. ಅದರಿಂದ ಈ ಭಾಗದ ಪ್ರತಿಯೊಂದು ಜಿಲ್ಲೆಯಲ್ಲಿ ಶಾಸನಗಳ ಸಂಗ್ರಹ, ಅಧ್ಯಯನ ನಡೆದು ಸು.15 ವರ್ಷಗಳ

ಅವಧಿಯಲ್ಲಿ ಎಪಿಗ್ರಾಫಿಯ ಕರ್ನಾಟಿಕ 3ನೆಯ ಸಂಪುಟದಿಂದ 12ನೆಯ ಸಂಪುಟದವರೆಗೆ ಮೈಸೂರು (ಸಂ.3-4), ಹಾಸನ (ಸಂ.5), ಕಡೂರು (ಸಂ.6), ಶಿವಮೊಗ್ಗ (ಸಂ.7-8), ಬೆಂಗಳೂರು (ಸಂ.9), ಕೋಲಾರ (ಸಂ.10), ಚಿತ್ರದುರ್ಗ (ಸಂ.1) ಮತ್ತು ತುಮಕೂರು (ಸಂ.12) ಜಿಲ್ಲೆಗಳ ಶಾಸನಗಳನ್ನು ಪ್ರಸಿದ್ಧಪಡಿಸಲಾಯಿತು. ಹೀಗೆ 1886ರಿಂದ 1906 ರವರೆಗಿನ 20 ವರ್ಷಗಳ ಅವಧಿಯಲ್ಲಿ ರೈಸ್ 12 ಬೃಹತ್ ಸಂಪುಟಗಳನ್ನು ಸಂಪಾದಿಸಿ ಪ್ರಸಿದ್ಧಪಡಿಸಿದರು. ಈ ಸಂಪುಟಗಳಲ್ಲಿ ಸು.9000 ಶಾಸನಗಳು ಅಚ್ಚಾಗಿವೆ. ಆಗಿನ ಮೈಸೂರು ಸರ್ಕಾರ ಸಾಧಿಸಿದ ಇಂಥ ಮಹತ್ಕಾರ್ಯವನ್ನು ಭಾರತದ ಬೇರೆ ಯಾವ ಪ್ರಾಂತ್ಯವಾಗಲೀ ಸಂಸ್ಥಾನವಾಗಲೀ ಸಾಧಿಸಿಲ್ಲ. ಇಂಥ ಬೃಹತ್ ಯೋಜನೆಯನ್ನು ಕೈಕೊಂಡು ಕಾರ್ಯಗತವಮಾಡಿದ ಶ್ರೇಯಸ್ಸು ಲೂಯಿ ರೈಸರಿಗೆ ಸಲ್ಲುತ್ತದೆ. ಈ ಸಂಪುಟಗಳಲ್ಲಿ ಪ್ರಸಿದ್ಧಪಡಿಸಲಾದ ಶಾಸನಗಳ ಪಾಠವನ್ನು ಕನ್ನಡ ಮತ್ತು ರೋಮನ್ ಲಿಪಿಗಳಲ್ಲಿ ಕೊಟ್ಟಿದ್ದು ಅವುಗಳ ಇಂಗ್ಲಿಷ್ ಭಾಷಾಂತರವನ್ನು ಒದಗಿಸಲಾಗಿದೆ. ಇವಲ್ಲದೆ ಪ್ರತಿಯೊಂದು ಸಂಪುಟದಲ್ಲಿ ಪ್ರಸಿದ್ಧಪಡಿಸಿದ ಮಹತ್ವವನ್ನು ಕುರಿತು ವಿಸ್ತೃತವಾದ ಮುನ್ನುಡಿಯನ್ನು ರೈಸರೇ ಬರೆದಿದ್ದಾರೆ. ಎಪಿಗ್ರಾಫಿಯ ಕರ್ನಾಟಿಕದ 12 ಸಂಪುಟಗಳಲ್ಲಿ ಪ್ರಕಟವಾದ ಶಾಸನಗಳು ಕರ್ನಾಟಕದ ಇತಿಹಾಸ, ಸಂಸ್ಕೃತಿಗಳ ಅಧ್ಯಯನಕ್ಕೆ ತಳಹದಿಯಾಗಿದ್ದು ಕೆಲವು ಶಾಸನಗಳು ಭಾರತ ಇತಿಹಾಸ, ಸಂಸ್ಕೃತಿಗಳ ಮೇಲೆ ಮಹತ್ವದ ಬೆಳಕನ್ನು ಬೀರುತ್ತವೆ. 1914ರಲ್ಲಿ ಭಾರತ ಸರ್ಕಾರದ ಶಾಸನ ಇಲಾಖೆಯ ಎಚ್. ಕೃಷ್ಣಶಾಸ್ತ್ರಿ (ನೋಡಿ) ಅವರು ಎಪಿಗ್ರಾಫಿಯ ಕರ್ನಾಟಿಕದ ಮೊದಲ ಸಂಪುಟವನ್ನು ಪುನಃ ಪರಿಷ್ಕರಿಸಿ ಕೊಡಗಿನಲ್ಲಿ ದೊರೆತ ಹೆಚ್ಚಿನ ಶಾಸನಗಳನ್ನು ಸೇರಿಸಿ ವಿಸ್ತೃತವಾದ ಆವೃತ್ತಿಯನ್ನು ಪ್ರಸಿದ್ಧಪಡಿಸಿದರು. ತರುವಾಯ ಮೈಸೂರು ಪುರಾತತ್ತ್ವ ಶಾಖೆಯು ನಿರ್ದೇಶಕರಾದ ಆರ್.ನರಸಿಂಹಾಚಾರ್ಯರು (ನೋಡಿ) ಶ್ರವಣಬೆಳಗೊಳದ 2ನೆಯ ಸಂಪುಟವನ್ನು ಪುನಃ ಪರಿಶೀಲಿಸಿ ಸು.350 ಹೊಸ ಶಾಸನಗಳನ್ನು ಸೇರಿಸಿ ವಿಸ್ತೃತವಾದ ಆವೃತ್ತಿಯನ್ನು 1922-23ರಲ್ಲಿ ಪ್ರಸಿದ್ಧಪಡಿಸಿದರು. ಈ ವಿದ್ವಾಂಸರು 16 ವರ್ಷಗಳ (1906-22) ತಮ್ಮ ಅಧಿಕಾರಾವಧಿಯಲ್ಲಿ ಮೈಸೂರು ಸಂಸ್ಥಾನದಲ್ಲಿ ಸು.5000 ಹೊಸ ಶಾಸನಗಳನ್ನು ಸಂಗ್ರಹಿಸಿ ಪ್ರಕಟಣೆಗಾಗಿ ಸಿದ್ಧಪಡಿಸಿದರು. ಅವುಗಳಲ್ಲಿ ಕೆಲವು ಮಹತ್ವದ ಶಾಸನಗಳನ್ನು ತಾವು ಸಂಪಾದಿಸಿದ ವಾರ್ಷಿಕ ವರದಿಗಳಲ್ಲಿ ಪ್ರಸಿದ್ಧಪಡಿಸಿದ್ದಾರೆ. ಉಳಿದವನ್ನು ಎಪಿಗ್ರಾಫಿಯ ಕರ್ನಾಟಿಕದ 14ರಿಂದ 19ನೆಯ ಸಂಪುಟಗಳಲ್ಲಿ ಪ್ರಕಟಿಸಬೇಕೆಂದು ಯೋಚಿಸಲಾಗಿತ್ತು. 13ನೆಯ ಸಂಪುಟದಲ್ಲಿ 1 ರಿಂದ 12 ಸಂಪುಟಗಳಲ್ಲಿ ಪ್ರಕಟವಾದ ಶಾಸನಗಳ ಪದ ಸೂಚಿಯನ್ನು ಪ್ರಸಿದ್ಧಪಡಿಸಬೇಕೆಂದು ಉದ್ದೇಶಿಸಿ ಎಂ.ಎಚ್.ಕೃಷ್ಣ (ನೋಡಿ) ಅವರು ಅದರ ಮೊದಲ ಭಾಗದಲ್ಲಿ A ಯಿಂದ K ವರೆಗಿನ ಶಬ್ದಗಳನ್ನು 1934ರಲ್ಲಿ ಪ್ರಕಟಪಡಿಸಿರುವರಲ್ಲದೆ, ನರಸಿಂಹಾಚಾರ್ಯರು ಸಂಗ್ರಹಿಸಿದ್ದ ಶಾಸನಗಳಲ್ಲಿ ಮೈಸೂರು ಮತ್ತು ಹಾಸನ ಜಿಲ್ಲೆಯವನ್ನು 14 ಮತ್ತು 15ನೆಯ ಸಂಪುಟಗಳಾಗಿ 1942 ಮತ್ತು 1943ರಲ್ಲಿ ಹೊರತಂದರು. ತುಮಕೂರು ಜಿಲ್ಲೆಯ ಶಾಸನಗಳನ್ನೊಳಗೊಂಡ 16ನೆಯ ಸಂಪುಟವನ್ನು ನೀಲಕಂಠ ಶಾಸ್ತ್ರಿಗಳು 1956ರಲ್ಲೂ ಕೋಲಾರ ಮತ್ತು ಶಿವಮೊಗ್ಗ ಜಿಲ್ಲೆಯ ಶಾಸನಗಳನ್ನನೊಳಗೊಂಡ 17 ಮತ್ತು 18ನೆಯ ಸಂಪುಟಗಳನ್ನು ಎಂ.ಶೇಷಾದ್ರಿ ಅವರು 1965 ಮತ್ತು 1970ರಲ್ಲೂ ಪ್ರಸಿದ್ಧಪಡಿಸಿದರು. ಬೆಂಗಳೂರಿನ ಅನುಬಂಧ ಸಂಪುಟವೊಂದು ಪ್ರಕಟವಾಯಿತು. 1987ರಲ್ಲಿ ಅ.ಸುಂದರ ಅವರು ಪುರಾತತ್ತ್ವ ಇಲಾಖೆಯ ನಿರ್ದೇಶಕರಾಗಿದ್ದಾಗ ಆರ್.ನರಸಿಂಹಾಚಾರ್ಯರು ಸಂಪಾದಿಸಿದ್ದ K ಯಿಂದ Z ವರೆಗಿನ ಶಬ್ದಗಳಿಂದ ಕೂಡಿದ ಪದಸೂಚಿಯನ್ನು ಸಂಪುಟ 13ರ ಎರಡನೆಯ ಭಾಗವಾಗಿ ಪ್ರಕಟಿಸಿದರು. ಅಂತು ಮೈಸೂರು ಪುರಾತತ್ತ್ವ ಇಲಾಖೆ ಎಪಿಗ್ರಾಫಿಯ ಕರ್ನಾಟಿಕ ಸರಣಿಯಲ್ಲಿ ಒಟ್ಟು 19 ಸಂಪುಟಗಳನ್ನು ಹೊರತಂದಿದೆ. ಅವುಗಳಲ್ಲಿ ಸು.10.500ಕ್ಕಿಂತಲೂ ಹೆಚ್ಚಿನ ಶಾಸನಗಳು ಅಚ್ಚಾಗಿವೆ.

ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಈ ಸಂಪುಟಗಳನ್ನು ಪರಿಷ್ಕರಿಸಿ ಮುದ್ರಿಸುವ ಕಾರ್ಯವನ್ನು ಕೈಗೊಂಡಿದೆ. ಇದುವರೆಗೆ ಕೊಡಗು ಜಿಲ್ಲೆಯ ಶಾಸನಗಳುಳ್ಳ 1ನೆಯ ಸಂಪುಟ (1972), ಶ್ರವಣಬೆಳಗೊಳದ ಶಾಸನಗಳುಳ್ಳ 2ನೆಯ ಸಂಪುಟ (1973), ಮೈಸೂರು ಜಿಲ್ಲೆಯ ಗುಂಡ್ಲುಪೇಟೆ ನಂಜನಗೂಡು ಮತ್ತು ಹೆಗ್ಗಡದೇವನ ಕೋಟೆ ತಾಲ್ಲೂಕುಗಳ ಶಾಸನಗಳುಳ್ಳ 3ನೆಯ ಸಂಪುಟ (1974), ಚಾಮರಾಜನಗರ ಜಿಲ್ಲೆ ಯಳಂದೂರು, ಕೊಳ್ಳೇಗಾಲ, ಹುಣಸೂರು, ಪಿರಿಯಾಪಟ್ಟಣ ಈ ತಾಲ್ಲೂಕಿನ ಶಾಸನಗಳುಳ್ಳ 4ನೆಯ ಸಂಪುಟ ಪ್ರಕಟವಾಗಿದೆ (1975), ಕೃಷ್ಣರಾಜನಗರ, ಮೈಸೂರು ಮತ್ತು ತಿ.ನರಸೀಪುರ ತಾಲ್ಲೂಕುಗಳ ಶಾಸನಗಳಿಂದ ಕೂಡಿದ 5ನೆಯ ಸಂಪುಟ (1976), ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ, ಪಾಂಡವಪುರ ಮತ್ತು ಶ್ರೀರಂಗಪಟ್ಟಣ ತಾಲ್ಲೂಕಿನ ಶಾಸನಗಳನ್ನೊಳಗೊಂಡ 6ನೆಯ ಸಂಪುಟ (1977), ಹಾಗೂ ನಾಗಮಂಗಲ, ಮಂಡ್ಯ, ಮದ್ದೂರು ಮತ್ತು ಮಳವಳ್ಳಿ ತಾಲ್ಲೂಕುಗಳ ಶಾಸನಗಳಿರುವ 7ನೆಯ ಸಂಪುಟ (1979), ಹಾಸನ ಜಿಲ್ಲೆಯ ಹೊಳೇನರಸೀಪುರ, ಅರಕಲಗೂಡು, ಹಾಸನ ಮತ್ತು ಆಲೂರು ತಾಲ್ಲೂಕುಗಳಿಗೆ ಸೇರಿದ ಶಾಸನಗಳಿಂದ ಕೂಡಿದ 8ನೆಯ ಸಂಪುಟ (1984), ಬೇಲೂರು ಮತ್ತು ಸಕಲೇಶಪುರ ತಾಲ್ಲೂಕುಗಳ ಶಾಸನಗಳನ್ನುಳ್ಳ 9ನೆಯ ಸಂಪುಟ (1990), ಹಾಗೂ ಅರಸೀಕೆರೆ ಮತ್ತು ಚನ್ನರಾಯಪಟ್ಟಣ ತಾಲ್ಲೂಕುಗಳಿಗೆ ಸೇರಿದ ಶಾಸನಗಳಿರುವ 10ನೆಯ ಸಂಪುಟ (1997), ಹಾಗೂ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು, ಮೂಡಿಗೆರೆ ಮತ್ತು ಶೃಂಗೇರಿ ತಾಲ್ಲೂಕುಗಳ ಶಾಸನಗಳನ್ನು ಹೊಂದಿರುವ 11ನೆಯ ಸಂಪುಟ (1998), ಚಿಕ್ಕಮಗಳೂರು ಜಿಲ್ಲೆಗೆ ಸೇರಿದ ಕಡೂರು, ಕೊಪ್ಪ, ತರೀಕೆರೆ ಹಾಗೂ ನರಸಿಂಹರಾಜಪುರ ತಾಲ್ಲೂಕಿನ ಶಾಸನಗಳನ್ನು ಹೊಂದಿರುವ 12ನೆಯ ಸಂಪುಟ (2003) ಪ್ರಕಟಗೊಂಡಿವೆ. ಶಿವಮೊಗ್ಗ ಜಿಲ್ಲೆಗೆ ಸಂಬಂಧಿಸಿದ ಶಾಸನಪಾಠಗಳ ಪರಿಷ್ಕಾರ ಕಾರ್ಯ ನಡೆಯುತ್ತಿದೆ. (ಜಿ.ಎಸ್.ಜಿ.)

**ಎಱೆಗಂಗ I :** ತಲಕಾಡಿನ ಗಂಗ ಅರಸ (ಸು.843-70). ಒಂದನೆಯ ರಾಚಮಲ್ಲನ ಮಗ. ಇವನ ಹೆಸರು ಎಱೆಯಂಗ ಎಂದೂ ಇದೆ. ರಣವಿಕ್ರಮಯ್ಯ ಎಂಬ ಹೆಸರೂ ಇದ್ದಂತೆ ತಿಳಿಯುತ್ತದೆ. ನೀತಿಮಾರ್ಗ ಎಂಬುದು ಇವನ ಬಿರುದು. ಒಂದನೆಯ ರಾಚಮಲ್ಲನ ಅನಂತರ ಪಟ್ಟಕ್ಕೆ ಬಂದ ಈತ ರಾಷ್ಟ್ರಕೂಟರಿಂದ ಆಗತಾನೆ ಗಳಿಸಿದ್ದ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷನೊಡನೆ ಸೆಣಸಬೇಕಾಗಿತ್ತು. ಗಂಗರಾಜ್ಯದ ಮೇಲೆ ದಂಡೆತ್ತಿ ಬಂದ ರಾಷ್ಟ್ರಕೂಟ ದಳಪತಿ ಬಂಕೇಶನನ್ನು ರಾಜಾರಾಮೆಡು ಎಂಬಲ್ಲಿ ಎದುರಿಸಿದ ಇವನು ಶತ್ರು ಸೈನ್ಯ ಸೋತು ಹಿಮ್ಮೆಟ್ಟುವಂತೆ ಮಾಡಿದ. ಗಂಗರನ್ನು ತುಳಿಯುವುದು ಕಷ್ಟವೆಂದು ಅರಿತ ಅಮೋಘವರ್ಷ ತನ್ನ ಮಗಳು ಚಂದ್ರೊಬ್ಬಲಬ್ಬೆಯನ್ನು ಇವನ ಮಗ ಬೂತುಗನಿಗೆ ಲಗ್ನ ಮಾಡಿಕೊಟ್ಟು ಸ್ನೇಹ ಸಾಧಿಸಿದ. ಇದಕ್ಕೆ ಮೊದಲು ಇವನು ನೊಳಂಬಾಧಿರಾಜನ ನೆರವಿನಿಂದ ಬಾಣರ ಮೇಲೂ ದಂಡೆತ್ತಿಹೋಗಿದ್ದ. ಸು.870ರಲ್ಲಿ ಇವನು ನಿಧನನಾದಂತೆ ತೋರುತ್ತದೆ. ದೊಡ್ಡ ಹುಂಡಿಯಲ್ಲಿ ದೊರೆತ ಒಂದು ವೀರಗಲ್ಲು ಇವನು ಸ್ವರ್ಗವೇರಿದುದನ್ನು ತಿಳಿಸುತ್ತಾ ಇವನೊಡನೆ ಇವನ ಮನೆಮಗತ್ತಿಯಾಗಿದ್ದ ಅಗರಯ್ಯನೆಂಬುವವನು ಕೀಱ್ಗುಣ್ಣೆಯಾದುದಾಗಿ ತಿಳಿಸುತ್ತದೆ. ಮರಣಶಯ್ಯೆಯಲ್ಲಿರುವ ರಾಜನನ್ನು ತನ್ನ ತೊಡೆಯ ಮೇಲಿರಿಸಿಕೊಂಡು ಅಗರಯ್ಯ ಚಿತೆಯೇರಲು ಸಿದ್ಧನಾಗಿರುವುದೂ ಆಗ ಬಳಿಯಲ್ಲಿಯೇ ಇವನ ಮಗ ಸತ್ಯವಾಕ್ಯ ಎಱೆಯಪ್ಪ ದುಃಖಿತನಾಗಿ ನಿಂತಿರುವುದೂ ಈ ವೀರಗಲ್ಲಿನಲ್ಲಿ ಮನಮುಟ್ಟುವಂತೆ ಚಿತ್ರಿತವಾಗಿದೆ. (ಎಂ.ಎಚ್.)

**ಎಱೆಗಂಗ II :** ತಲಕಾಡಿನ ಗಂಗ ಅರಸ (ಸು.886-920). ಇಮ್ಮಡಿ ಸತ್ಯವಾಕ್ಯ ರಾಚಮಲ್ಲನ ತಮ್ಮ ಬೂತುಗನ ಮಗ. ಇವನಿಗೆ ಎಱೆಯಂಗ ಅಥವಾ ಎಱೆಯಪ್ಪ ಎಂಬ ಹೆಸರೂ ನೀತಿಮಾರ್ಗ ಎಂಬ ಬಿರುದೂ ಇದ್ದುವು. ಸತ್ಯವಾಕ್ಯ ರಾಚಮಲ್ಲ ಆಳುತ್ತಿದ್ದಾಗ ಅವನ ತಮ್ಮ ಯುವರಾಜ ಬೂತುಗ ನಿಧನನಾಗಲು ಈತ ಯುವರಾಜನಾಗಿ ಕೊಂಗಲ್‍ನಾಡು 8000, ನುಗುನಾಡು, ನವಿಲೆನಾಡುಗಳನ್ನು ಆಳುತ್ತಿದ್ದ. ಇವನೂ ಸತ್ಯವಾಕ್ಯ ರಾಚಮಲ್ಲನೂ ಕೆಲವು ಕಾಲ ಜೊತೆಯಾಗಿ ಆಳುತ್ತಿದ್ದು ರಾಚಮಲ್ಲನ ಅನಂತರ ಇವನೇ ಸ್ವಂತವಾಗಿ ಗಂಗ ಸಿಂಹಾಸನವನ್ನು ವಹಿಸಿಕೊಂಡಿದ್ದಂತೆ ತೋರುತ್ತದೆ. ಇವರು ಜೊತೆಯಲ್ಲಿ ಆಳುತ್ತಿದ್ದಾಗ ಪೂರ್ವ ಚಾಳುಕ್ಯ ಅಮ್ಮರಾಜ ನೊಳಂಬವಾಡಿಯ ಮೇಲೆ ದಂಡೆತ್ತಿ ಬಂದಿದ್ದ. ಆಗ ಎಱೆಯಪ್ಪನ ಸಹಾಯದಿಂದ ನೊಳಂಬ ಅಯ್ಯಪ ಅಮ್ಮರಾಜನನ್ನು ಎದುರಿಸಿ ಜೀವತೆತ್ತ. ಎಱೆಯಪ್ಪನ ಅನಂತರ ಇವನ ಮಗ ನರಸಿಂಹ ಪಟ್ಟಕ್ಕೆ ಬಂದ. (ಎಂ.ಎಚ್.)

**ಎಱೆಯಂಗ :** ಹೊಯ್ಸಳ ದೊರೆ (1098-1100) ವಿನಯಾದಿತ್ಯ ಮತ್ತು ಕೆಳೆಯಬ್ಬರಸಿಯರ ಮಗ. ಇವನು ರಾಜನಾಗಿ ರಾಜ್ಯವಾಳಿದನೋ ಇಲ್ಲವೋ

ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಬಹಳ ಭಿನ್ನಾಭಿಪ್ರಾಯಗಳಿವೆ. ರೈಸ್ ಅವರ ಪ್ರಕಾರ ಇವನು ಹೆಚ್ಚು ಕಾಲ ಬದುಕಿರಲಿಲ್ಲ ವಾದುದರಿಂದ ಇವನಿಗೆ ರಾಜ್ಯ ಪ್ರಾಪ್ತವಾಗಲಿಲ್ಲ. ಹಿಂದಿನ ಶಾಸನಗಳಲ್ಲಿ ಅಂದರೆ 1095ರ ದೇವಿಹಳ್ಳಿ ಶಾಸನ ಇವನನ್ನು ಮಹಾಮಂಡಲೇಶ್ವರ ವೀರ ಎರೆಯಂಗ ಹೊಯ್ಸಳ ದೇವ ಎಂದು ಕರೆದಿದೆ. ಮತ್ತೊಂದು ಶಾಸನ ಇವನನ್ನು ಯುವರಾಜನೆಂದು ಸಂಬೋಧಿಸಿದೆ.

ಪ್ರಾಯಶಃ ರಾಜನಾಗುವ ಹೊತ್ತಿಗೆ ಇವನು ವೃದ್ಧನಾಗಿದ್ದ. ಇವನು ಯುವರಾಜನಾಗಿದ್ದಾಗಲೇ ಕಲ್ಯಾಣದ ಚಾಳುಕ್ಯರೊಡನೆ ಸೇರಿ ಅವರ ಅನೇಕ ದಿಗ್ವಿಜಯಗಳಿಗೆ ಕಾರಣನಾದ. ಇವನು ಮಾಳವ ಸೈನ್ಯವನ್ನೂ ಧಾರಾ ನಗರವನ್ನೂ ತುಳಿದವನೆಂದೂ ಚೋಳ ರಾಜನನ್ನು ಸೋಲಿಸಿ ಅವನ ಶಿಬಿರವನ್ನು ಸುಟ್ಟವನೆಂದೂ ಕಳಿಂಗ ರಾಜ್ಯವನ್ನು ನೆಲಸಮಮಾಡಿದವನೆಂದೂ ಬಳೆಯ ಪಟ್ಟಣ ಎಂಬ ನಗರವನ್ನು ಸುಟ್ಟವನೆಂದೂ ಚಕ್ರಗೊಟ್ಟ ಎಂಬ ಪಟ್ಟಣವನ್ನು ವಶಪಡಿಸಿಕೊಂಡವನೆಂದೂ ಶಾಸನಗಳು ಹೇಳುತ್ತವೆ. ಈ ಎಲ್ಲ ಸಾಧನೆಗಳೂ ಚಾಳುಕ್ಯ ಸಾಮ್ರಾಟರ ಪರವಾಗಿಯೇ ಮಾಡಿದವುಗಳು. ಇವನ ಚಾಳುಕ್ಯಾಧೀನತ್ವದ ಕುರುಹಾಗಿ ಇವನಿಗೆ ತ್ರಿಭುವನ ಮಲ್ಲ ಎಂಬ ಬಿರುದು ಇತ್ತು. ಇವನು ವಿಕ್ರಮಾದಿತ್ಯನ ಬಲಭುಜದಂತಿದ್ದನೆಂದು ಒಂದು ಶಾಸನ ವರ್ಣಿಸಿದೆ. ಇವನು ಜೈನನಾಗಿದ್ದ. ಇವನ ಗುರು ಗೋಪನಂದಿ ಎಂಬುವವನಿಗೆ 1094ರಲ್ಲಿ ಸ್ವಲ್ಪ ಭೂಮಿಯನ್ನು ದಾನ ಕೊಟ್ಟನೆಂದು ಶಾಸನಗಳಲ್ಲಿ ಹೇಳಿದೆ. ಇವನಿಗೆ ಏಚಲದೇವಿ ಮತ್ತು ಮಹಾದೇವಿ ಎಂಬ ಇಬ್ಬರು ರಾಣಿಯರಿದ್ದರು. 1ನೆಯ ಬಲ್ಲಾಳ, ಬಿಟ್ಟಿದೇವ (ವಿಷ್ಣುವರ್ಧನ) ಮತ್ತು ಉದಯಾದಿತ್ಯ ಏಚಲದೇವಿಯಲ್ಲಿ ಹುಟ್ಟಿದ ಇವನ ಮಕ್ಕಳು. ಎರೆಯಂಗನ ಅನಂತರ ಒಂದನೆಯ ಬಲ್ಲಾಳ ಸು.1100ರಲ್ಲಿ ಪಟ್ಟಕ್ಕೆ ಬಂದ. (ಎಚ್.ವಿ.ಎಂ.)

**ಎಲ್ಲಮ್ಮ :** ಪ್ರಸಿದ್ಧ ಜನಪದ ದೇವತೆ. ಈಕೆಗೆ ರೇಣುಕಾದೇವಿ ಎಂಬ ಹೆಸರೂ ರೂಢಿಯಲ್ಲಿದೆ. ಈಕೆ ಮೂಲದಲ್ಲಿ ಜೈನದೇವತೆಯೇ ಆಗಿರಬೇಕೆಂದೂ ಅನಂತರ ವೈದಿಕದೇವತೆಯಾಗಿ ಪರಿವರ್ತಿತವಾಗಿರ ಬಹುದೆಂದೂ ಹಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈಗ ಇವಳು ಶುದ್ಧ ಹಿಂದು ದೇವತೆ. ಎಲ್ಲಮ್ಮನನ್ನು ಕುರಿತಂತೆ ಪುರಾಣಗಳಲ್ಲೂ ಜನಪದದಲ್ಲೂ ಹಲವಾರು ಕಥೆಗಳೂ ನಂಬಿಕೆಗಳೂ ಕಂಡುಬರುತ್ತವೆ. ಕೆಲವು ಕಥೆಗಳ ಪ್ರಕಾರ ಆದಿಶಕ್ತಿಯೇ ತ್ರೇತಾಯುಗದಲ್ಲಿ ಸೀತೆಯಾಗಿ, ದ್ವಾಪರಯುಗದಲ್ಲಿ ದ್ರೌಪದಿಯಾಗಿ, ಕಲಿಯುಗದಲ್ಲಿ ಎಲ್ಲಮ್ಮನಾಗಿ ಅವತರಿಸಿದಳಂತೆ. ಪರಶುರಾಮನ ತಾಯಿ ರೇಣುಕೆಯೇ ಇವಳು ಎಂದು ಇನ್ನೊಂದು ನಂಬಿಕೆ. ಮತ್ತೊಂದು ಕಥೆಯಲ್ಲಿ ಈಕೆ ಕಾರ್ತವೀರ್ಯನಿಗೆ ಸೋದರಿ. ಮಗದೊಂದರ ಪ್ರಕಾರ ಈಕೆ ಕಾರ್ತವೀರ್ಯ ಅಳುಪಿ ವರಿಸಬಯಸಿದ ಋಷಿಪತ್ನಿ. ಜನಪದದಲ್ಲಿ ರೂಢಿಯಲ್ಲಿರುವ ಕಥೆಗಳ ಪ್ರಕಾರ ರೇಣುಕ ರಾಜನ ಮಗಳೇ ರೇಣುಕೆ. ಈಕೆ ಜಮದಗ್ನಿಯ ಧರ್ಮಪತ್ನಿ. ಇನ್ನೊಂದು ಕಥೆಯ ಪ್ರಕಾರ ಇವಳು ಶಿವನ ಮಗಳು. ವೀರಶೈವರು ತಮ್ಮದೇ ಆದ ರೀತಿಯಲ್ಲಿ ಇವಳ ಕಥೆ ಕಟ್ಟಿ ಹೇಳಿದ್ದಾರೆ. ಆ ಪ್ರಕಾರ ಇವಳು ಉಗುರುಕೊಳ್ಳ ಗ್ರಾಮದ ಶ್ರೀಮಂತ ವೀರಶೈವ ಗೃಹಸ್ಥನೊಬ್ಬನ ಮಗಳು. ಬೆಳೆಯುವ ಕಾಲಕ್ಕೆ ಈಕೆಗೆ ತೊನ್ನುಹತ್ತಿ ಯಾರೂ ಮದುವೆಯಾಗಬಯಸಲಿಲ್ಲ. ಹೀಗಿರುವಲ್ಲಿ ಒಮ್ಮೆ ಸವದತ್ತಿಗೆ ಹೋದಾಗ ಅಲ್ಲಿಯ ಗುಡ್ಡದ ಮೇಲೆ ಎಕ್ಕಯ್ಯ ಜೋಗಯ್ಯ ಎಂಬ ಇಬ್ಬರು ಸಿದ್ಧರ ಪಾದುಕೆಯ ಮೇಲಿನ ಮಳೆನೀರು ಇವಳ ಮೇಲೆ ಬಿದ್ದ ಕ್ಷಣವೇ ತೊನ್ನು ಮಾಯವಾಯಿತಂತೆ. ಈ ಸಿದ್ಧರಿಂದ ಶಿವದೀಕ್ಷೆಯನ್ನು ಹೊಂದಿ ಅಂದಿನಿಂದ ಇವಳು ಸತ್ಯಕ್ಕನೆಂಬ ಹೆಸರಿನಿಂದ ಅಲ್ಲೇ ನೆಲೆಸಿದಳಂತೆ. ಈಕೆಗೆ ಏಳುಕೊಳ್ಳದ ಎಲ್ಲಮ್ಮನೆಂಬ ಹೆಸರೂ ಇದೆ. ಜನಪದದಲ್ಲಿ ರೂಢಿಮೂಲ ನಂಬಿಕೆಯಾಗಿ ಬೆಳೆದು ಬಂದಿರುವ ಈ ಕಥೆಗಳಲ್ಲಿ ಕ್ವಚಿತ್ತಾಗಿ ಐತಿಹಾಸಿಕ ಹಾಗೂ ಪೌರಾಣಿಕ ಸಂಗತಿಗಳು ವಿಚಿತ್ರವಾಗಿ ಹೆಣೆದುಕೊಂಡಿರುವುದರ ಸುಳಿವನ್ನು ಕಾಣಬಹುದಾಗಿದೆ.

ಸಾಮಾಜಿಕ ಹಾಗೂ ನೈತಿಕ ದೃಷ್ಟಿಯಿಂದ ಕೂಡ ಈಕೆ ತುಂಬ ಪ್ರಭಾವ ಬೀರಿದ ಶಕ್ತಿಯಾಗಿದ್ದಾಳೆ. ನಂಬಿ ನೆಚ್ಚಿ ನಡೆದುಕೊಳ್ಳುವ ಭಕ್ತಾದಿಗಳಿಗೆ ಇಷ್ಟಾರ್ಥವನ್ನು ಕೊಡುವಳೆಂದು ಹೆಸರಾಗಿರುವ ಇವಳಿಗೆ ಎಲ್ಲ ಜಾತಿಮತಪಂಥಗಳಲ್ಲೂ ಭಕ್ತರಿದ್ದಾರೆ. ಹೆಂಗಸರಾಗಲಿ ಗಂಡಸರಾಗಲಿ ಇವಳ ಸೇವೆಗೆಂದು ತಮ್ಮನ್ನು ತಾವೇ ಸಮರ್ಪಿಸಿಕೊಳ್ಳುವುದನ್ನು ಜೋಗ್ತಿ (ನೋಡಿ: ಜೋಗಿತಿ ಸಂಪ್ರದಾಯ) ಎಂದು ಕರೆಯುತ್ತಾರೆ. ಹೀಗೆ ಜೋಗ್ತಿಯಾದ ಹೆಣ್ಣನ್ನು ಜೋಗವ್ವನೆಂದೂ ಗಂಡನ್ನು ಜೋಗಪ್ಪನೆಂದೂ ಕರೆಯುವುದು ರೂಢಿಯಲ್ಲಿದೆ. ಜೋಗಪ್ಪನಾದವನು ಹೆಂಗಸರಂತೆ ಮೂಗುತಿ, ವಾಲೆ, ತಾಲಿ, ಕಡಗ, ಬುಗುಡಿ, ಕಾಲಂದುಗೆ, ಕಾಲುಂಗುರ, ಸೀರೆ, ರವಿಕೆ, ಎಲ್ಲಮ್ಮನ ಮುತ್ತಿನಸರ, ಕಾಸಿನಗಲದ ಕುಂಕುಮ ಧರಿಸಿ ಕಾಲಿಗೆ ಗೆಜ್ಜೆಕಟ್ಟಿ ಜಗ (ಅಲಂಕೃತ ಬಿಂದಿಗೆ) ಹೊತ್ತುಕೊಂಡು ಕುಣಿಯುತ್ತ ಊರೂರು ಕೇರಿ ಕೇರಿಗಳನ್ನು ಸುತ್ತುತ್ತಾನೆ. ಜೋಗವ್ವೆ ಹಳದಿ ಬಣ್ಣದ ನಿಲುವಂಗಿಯನ್ನು ಮಾತ್ರ ಧರಿಸುತ್ತಾಳೆ. ಜೋಗವ್ವನನ್ನು ಎಲ್ಲಮ್ಮನ ಸೂಳೆ ಅಥವಾ ಎಲ್ಲಮ್ಮನ ಬಸವಿ ಎಂದೂ ಕರೆಯುವುದುಂಟು. ಹೀಗೆ ದೀಕ್ಷೆ ಪಡೆದವರು ಶಾಸ್ತ್ರೋಕ್ತವಾಗಿ ಮದುವೆಯಾಗುವಂತಿಲ್ಲ. ದೇವದಾಸಿಯರಂತೆ ನಡೆದುಕೊಳ್ಳಲು ಮಾತ್ರ ಅವಕಾಶವಿದೆ. ಜೋಗಪ್ಪ ಮಾತ್ರ ಎಲ್ಲಮ್ಮನ ಪ್ರಭಾವದಿಂದ ಸಂಪೂರ್ಣ ನಪುಂಸಕನಾಗುವನಂತೆ. ಎಲ್ಲಮ್ಮನನ್ನು ಎಲ್ಲ ಜಾತಿಯ ಜನ ಆರಾಧಿಸಿದರೂ ಹೆಚ್ಚಾಗಿ ಕೆಳ ವರ್ಗದವರಲ್ಲಿ ಮಾತ್ರ ಜೋಗ್ತಿ ಬಿಡುವ ಸಂಪ್ರದಾಯ ಉಳಿದುಬಂದಿರುವಂತೆ ತೋರುತ್ತದೆ. ಕರ್ನಾಟಕದ ಹಲವೆಡೆಗಳಲ್ಲಿ, ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಇಂದಿಗೂ ಇವಳ ಹೆಸರಿನಲ್ಲಿ ಹಬ್ಬಹರಿದಿನಗಳು ನಡೆದು ಬೆನ್ನುಸಿಡಿಯಾಡುವುದು, ಕೊಂಡಹಾಯುವುದೂ ಚಾಲ್ತಿಯಲ್ಲಿದೆ. ಇವಳ ಕಥೆಯನ್ನು ಕರ್ನಾಟಕದ ವೃತ್ತಿಗಾಯಕರಲ್ಲಿ ಚೌಡಿಕೆಯವರು, ಗೊಂದಲಿಗರು, ಜೋಗಿಯರು, ತಂಬೂರಿಯವರು ಮತ್ತು ನೀಲಗಾರರು ಹಾಡುವುದು ಕಂಡುಬರುತ್ತದೆ (ನೋಡಿ: ಚೌಡಿಕೆ ಮೇಳ). ಈ ದೇವತೆಯನ್ನು ಕುರಿತಂತೆ ಐತಿಹ್ಯಗಳು, ಪುರಾಣ ಕಥೆಗಳು, ಲಾವಣಿಗಳು, ಬಿಡಿಗೀತೆಗಳು ಇವುಗಳ ಸಂಗ್ರಹ ಕಾರ್ಯ ಇತ್ತೀಚೆಗೆ ಹೆಚ್ಚಾಗಿ ನಡೆದಿದೆ.

*

**ಎಳಂದೂರು ಹರೀಶ್ವರ :** ಸು.1606. ವೀರಶೈವ ಕವಿ. ಪ್ರಭು ದೇವರ ಪುರಾಣ ಎಂಬ ಕಾವ್ಯದ ಕರ್ತೃ. ಮೈಸೂರು ಜಿಲ್ಲೆಯ ಯಳಂದೂರು ಸಿಂಹಾಸನಾಧೀಶ್ವರನಾದ ಗುರು ಹರೀಶ್ವರದೇವರ ಮೊಮ್ಮಗ. ತೋಂಟದಾರ್ಯನ ಮಗ. ಆಗಮಜ್ಞನಾದ ವೃಷಭಪುರದ ಸಿದ್ಧವೀರನ ಶಿಷ್ಯ. ಕಾವ್ಯದಲ್ಲಿ ಕೆಲವೆಡೆ ತನ್ನನ್ನು ಹರೀಶ್ವರದೇವ, ಹರಿದೇವ, ಹರೀಶ್ವರಾಚಾರ್ಯ ಎಂದೂ ಕರೆದುಕೊಂಡಿದ್ದಾನೆ. ಪೂರ್ವಕವಿಗಳಲ್ಲಿ ಕೆರೆಯ ಪದ್ಮರಸ, ಪಾಲ್ಕುರಿಕೆ ಸೋಮನಾಥ, ಪಂಡಿತದೇವ, ಗುಬ್ಬಿಯ ಮಲ್ಲಣ್ಣ, ಜಕ್ಕಣಾರ್ಯ, ಚಾಮರಸ, ಭೀಮಕವಿ, ನೀಲಕಂಠಾಚಾರ್ಯ, ಮಲ್ಹಣ, ಹಂಪೆಯ ಹರಿಹರ ಇವರನ್ನು ಸ್ತುತಿಸಿದ್ದಾನೆ.

ಪ್ರಭುದೇವರಪುರಾಣ ವಿವಿಧ ಷಟ್ಪದಿಗಳಲ್ಲಿ ರಚಿತವಾಗಿದೆ. 9 ಸಂಧಿ ಹಾಗೂ 1497 ಪದ್ಯಗಳಿರುವ ಈ ಕೃತಿಯಲ್ಲಿ ಅಲ್ಲಮಪ್ರಭುವಿನ ಸಮಗ್ರಚರಿತ್ರೆ ನಿರೂಪಿತವಾಗಿದೆ. ಕಾವ್ಯದ ಬಂಧ ಪ್ರೌಢವಾಗಿದೆ. ಕವಿಯೇ ಇದನ್ನು ಪ್ರಾಸರತ್ನಾಕರ ಎಂದು ಕರೆದಿದ್ದಾನೆ. ಲೌಕಿಕ ಪಾರಮಾರ್ಥಿಕ ಉದಾಹರಣೆಗಳಿಂದ ಚರಿತ್ರೆಯನ್ನು ಅತ್ಯಂತ ರಸವತ್ತಾದ ಕಾವ್ಯವನ್ನಾಗಿ ಮಾಡಿದ್ದಾನೆ. ತನ್ನ ಗ್ರಂಥವನ್ನು ವಿಶ್ವಾವಸು ಜ್ಯೇಷ್ಠ ಶುದ್ಧ ಪಾಡ್ಯದಲ್ಲಿ ಆರಂಭಿಸಿ ಪರಾಭವ ಜ್ಯೇಷ್ಠ ಶುದ್ಧ ಬಹುಳ ದಶಮಿಯಲ್ಲಿ (1606) ಮುಗಿಸಿದಂತೆ ಹೇಳಿಕೊಂಡಿದ್ದಾನೆ. (ಬಿ.ಎಸ್.ಎಸ್.)

**ಎಳನಾಡು :** ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಒಂದು ಗ್ರಾಮ. ಯಳನಾಡು ಎಂದೂ ಕರೆಯಲಾಗುತ್ತದೆ. ಇಲ್ಲಿ ದ್ರಾವಿಡ ಶೈಲಿಯಲ್ಲಿ ಕಟ್ಟಿರುವ ಸಿದ್ಧರಾಮೇಶ್ವರ ಎಂಬ ಬೃಹತ್ ದೇವಾಲಯವಿದೆ. ಇದಕ್ಕೆ ಪೂರ್ವದಲ್ಲಿ ಮತ್ತು ದಕ್ಷಿಣದಲ್ಲಿ ಎರಡು ಮಹಾದ್ವಾರಗಳಿವೆ. ವೀರಶೈವ ಗುರು ಸಿದ್ಧರಾಮೇಶ್ವರ ಇಲ್ಲಿ ತಪಸ್ಸು ಮಾಡಿದನೆಂದು ನಂಬಿಕೆ. ಈ ದೇವಾಲಯವಲ್ಲದೆ ಇಲ್ಲಿ ಲಕ್ಷ್ಮೀ, ರೇವಣ್ಣಸಿದ್ಧೇಶ್ವರ, ಹರಿಯಪ್ಪ ಮತ್ತು ಕರಿಯಮ್ಮ ದೇವಾಲಯಗಳೂ ಇವೆ. ಈ ಊರಲ್ಲಿ ರೇಣುಕಾ ಸಂಪ್ರದಾಯದ ವೀರಶೈವ ಮಠವೊಂದಿದೆ. ಇದನ್ನು ಶ್ರೀಮದರಸೀಕೆರೆ ಎಳನಾಡು ಸಂಸ್ಥಾನ ಎಂದು ಕರೆಯಲಾಗುತ್ತದೆ. ಇದು ಹತ್ತಿರದ ಗ್ರಾಮವಾದ ಗೋಡೆಕೆರೆ ಮಠದ ಶಾಖಾ ಮಠ. (ಎಸ್.ಜೆಎ.)

**ಎಳಮಲೆಯ ಗುರುಶಾಂತದೇವ :** ಸು.1565. ವೀರಶೈವ ಕವಿ. ಪುರಾತನ ವಚನಗಳ ಸಂಕಲನಕಾರ. ಸಂಪಾದನೆಯ ಚೆನ್ನಂಜೆದೇವನ ಶಿಷ್ಯ. ಗುರುವಿನಂತೆಯೇ ವಿವಿಧ ದೃಷ್ಟಿಕೋನಗಳಿಂದ ಒಳ್ಳೆಯ ವಚನಗಳನ್ನು

ಆಯ್ದು ಸಂಕಲಿಸಿ ಸಂಪಾದನೆಯ ಗುರುಶಾಂತದೇವ ಎಂದು ಹೆಸರಾಗಿದ್ದಾನೆ. ಇವನಿಂದ ಸಂಕಲಿತವಾದ ಗ್ರಂಥದಲ್ಲಿ ಶರಣಸ್ತೋತ್ರದ ವಚನ, ಲಿಂಗವಿಕಳಾವಸ್ಥೆಯ ವಚನ, ಷಟ್‌ಸ್ಥಲ ಸ್ತೋತ್ರದ ವಚನ, ಅಷ್ಟಾವರಣ ಸ್ತೋತ್ರದ ವಚನಗಳಿವೆ. ಇವುಗಳಲ್ಲಿ ಅನುಕ್ರಮವಾಗಿ ಶರಣರ ಮಹತಿಯನ್ನು ಕೊಂಡಾಡುವ 110 ವಚನಗಳೂ ಲಿಂಗಪತಿಯ ಸಂಯೋಗಕ್ಕಾಗಿ ಪರಿತಪಿಸುವ ಶರಣಪತಿಯ 110 ವಚನಗಳೂ ಷಟ್‌ಸ್ಥಲಗಳ ವಿಶೇಷ ಗುಣಪ್ರಶಂಸೆಯ 130 ವಚನಗಳೂ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದಗಳ ಮಹಿಮೆಯನ್ನು ಬಿತ್ತರಿಸುವ 161 ವಚನಗಳೂ ಸಂಕಲಿತವಾಗಿವೆ. ಇವನ ಶಿಷ್ಯ ಸಂಪಾದನೆಯ ಗುರುಲಿಂಗದೇವ ಈತನನ್ನು ಭಕ್ತಿಜ್ಞಾನವೈರಾಗ್ಯದ ಸಮರಸಾನುಭವಿ ಎಂದು ಪ್ರಶಂಸಿದ್ದಾನೆ.

(ಎಂ.ಎಂ.)

**ಏಂಜೆಲ್ ಮೇರಿ, ಜೋಸೆಫ್ :** ಅಥ್ಲೆಟಿಕ್ಸ್‌ನ ನಾನಾ ವಿಭಾಗಗಳಲ್ಲಿ ಪರಿಣತರಾದ ಪ್ರಸಿದ್ಧ ಕ್ರೀಡಾಪಟು. ಅರ್ಜುನ್ ಪ್ರಶಸ್ತಿ ವಿಜೇತೆ. ದಾವಣಗೆರೆಯಲ್ಲಿ ಜನಿಸಿದ ಇವರು ಬೆಂಗಳೂರಿನ ಮೌಂಟ್ ಕಾರ್ಮಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡುವ ಸಂದರ್ಭದಲ್ಲಿ ವಿಶ್ವವಿದ್ಯಾಲಯ ಕ್ರೀಡಾಕೂಟಗಳ ಮೂಲಕ ರೂಪುಗೊಂಡರು. ಪ್ರಾರಂಭದಲ್ಲಿ ಪೂರ್ಣವೇಗದ ಓಟ (ಸ್ಪ್ರಿಂಟ್) ಹಾಗೂ ಉದ್ದ ನೆಗೆತ (ಲಾಂಗ್ ಜಂಪ್) ಸ್ಪರ್ಧೆಗಳಲ್ಲಿ ಮೇಲ್ಮೆ ಸಾಧಿಸಿದರು. ಅನಂತರ ದಕ್ಷಿಣ ರೈಲ್ವೆ ತಂಡದಲ್ಲಿ ಪ್ರಮುಖ ಪಾತ್ರ ವಹಿಸಿ ಹಲವಾರು ವರ್ಷ ಭಾರತೀಯ ಕ್ರೀಡಾರಂಗದಲ್ಲಿ ದಕ್ಷಿಣ ರೈಲ್ವೆಯ ಕ್ರೀಡಾಪಟುವಾಗಿ ಭಾರತಕ್ಕೆ ಹಿರಿಮೆ ತಂದುಕೊಟ್ಟರು.

ಓಟದ ನಾನಾ ವಿಭಾಗಗಳಲ್ಲಿ ಸ್ಪರ್ಧಿಸಿ, ಮೂರು ಏಷ್ಯನ್ ಕ್ರೀಡೆಗಳಲ್ಲಿ ಭಾಗವಹಿಸಿದ್ದ ಈಕೆ ದೆಹಲಿಯ 1982ರ ಏಷ್ಯನ್ ಕ್ರೀಡೆಯ ಸ್ಪರ್ಧೆಯಲ್ಲಿ ಭಾಗವಹಿಸಿ ಅಂತಾರಾಷ್ಟ್ರೀಯ ಓಟದ ಸ್ಪರ್ಧೆಗಳಿಗೆ ವಿದಾಯ ಹೇಳಿದರು. 1978ರ ಬ್ಯಾಂಕಾಕ್ ಏಷ್ಯನ್ ಕ್ರೀಡೆಗಳಲ್ಲಿ ಭಾಗವಹಿಸಿ ಪೆಂಟಾತ್ಲಾನ್ ಹಾಗೂ ಉದ್ದ ನೆಗೆತದಲ್ಲಿ ಪಾಲ್ಗೊಂಡರು. ಉದ್ದ ನೆಗೆತದಲ್ಲಿ ಬೆಳ್ಳಿ ಪದಕ ಗಳಿಸಿದರು. 6.05 ಮೀಟರ್ ಉದ್ದ ಜಿಗಿತದೊಂದಿಗೆ ಇವರು ದಾಖಲೆ ನಿರ್ಮಿಸಿದ್ದಾರೆ. ಭಾರತದ ಅಥ್ಲೆಟಿಕ್ಸ್ ರಂಗದಲ್ಲಿ ಸಕಲ ವಿಭಾಗ ಕ್ರೀಡಾಪಟು (ಆಲ್ ರೌಂಡರ್) ಎಂದು ಖ್ಯಾತಿ ಪಡೆದಿದ್ದಾರೆ.

ಇವರ ಮಹತ್ತರವಾದ ಸಾಧನೆಗೆ ಮನ್ನಣೆಯಿತ್ತು ಭಾರತ ಸರ್ಕಾರ ಇವರಿಗೆ 1978-79ರ ಸಾಲಿನ ಅರ್ಜುನ ಪ್ರಶಸ್ತಿ ನೀಡಿದೆ. ಕರ್ನಾಟಕ ರಾಜ್ಯ ಸರ್ಕಾರ ರಾಜ್ಯ ಪ್ರಶಸ್ತಿ ಹಾಗೂ ದಸರಾ ಪ್ರಶಸ್ತಿಗಳನ್ನಿತ್ತು ಸನ್ಮಾನಿಸಿದೆ. ಇವರು ಸದ್ಯದಲ್ಲಿ ದಕ್ಷಿಣ ರೈಲ್ವೆ ವಿಭಾಗದ ಕ್ಷೇಮಾಭಿವೃದ್ಧಿ ಅಧಿಕಾರಿಯಾಗಿ ಬೆಂಗಳೂರಿನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. (ಎಸ್.ಆರ್.ಯು.)

# ಏ

**ಏಕಾಂತದ ರಾಮಯ್ಯ :** 12ನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಶಿವಭಕ್ತ. ಕನ್ನಡನಾಡಿನಲ್ಲಿ ಶೈವನಿಷ್ಠೆಯ ಮೇಲ್ಮೆಯನ್ನು ಸ್ಥಾಪಿಸಿದ ವೀರಶೈವರಲ್ಲಿ ಗಣ್ಯ. ಗುಲ್ಬರ್ಗ ಜಿಲ್ಲೆಯ ಅಳಂದೆ (ಅಳಂದ) ಇವನ ಜನ್ಮಸ್ಥಳ. ಶ್ರೀವತ್ಸಗೋತ್ರದ ಪುರುಷೋತ್ತಮ, ಪದ್ಮಾಂಬಿಕೆಯರಿಗೆ ವೀರಭದ್ರನ ವರಪ್ರಸಾದದಿಂದ ಹುಟ್ಟಿದ. ಅಳಂದೆಯ ಸೋಮನಾಥನನ್ನು ಏಕಾಂತದಲ್ಲಿ ಏಕಾಗ್ರಭಕ್ತಿಯಿಂದ ಆರಾಧಿಸುತ್ತಿದ್ದುದರಿಂದ ಈತನಿಗೆ ಏಕಾಂತದ ರಾಮಯ್ಯನೆಂದು ಹೆಸರು ಬಂತು.

ಈತ ವೀರಭಕ್ತನಾಗಿದ್ದು ಶೈವಧರ್ಮದ ಪುನರುದ್ಧಾರದಲ್ಲಿ ನಿಷ್ಠೆ ಹೊಂದಿದ್ದ. ಶೈವಧರ್ಮದ ಅಭ್ಯುದಯವೇ ಜೀವನದ ಪರಮಗುರಿಯೆಂದು ತಿಳಿದಿದ್ದ ಈತ ಅಳಂದೆಯಿಂದ ಧಾರವಾಡ ಜಿಲ್ಲೆಯ ಪುಲಿಗೆರೆಗೆ (ಈಗಿನ ಲಕ್ಷ್ಮೇಶ್ವರಕ್ಕೆ) ಬಂದ. ಅಲ್ಲಿಂದ ಹಿರೇಕೆರೂರು ತಾಲ್ಲೂಕಿನ ಅಬ್ಬಲೂರಿಗೆ ತೆರಳಿ ಅಲ್ಲಿ ಪ್ರಬಲರಾಗಿದ್ದ ಜೈನರನ್ನು ಸೋಲಿಸಿ ಶೈವಧರ್ಮವನ್ನು ಪ್ರಸಾರ ಮಾಡಿದ ವಿಷಯ ಪವಾಡ ರೂಪವಾಗಿ ಅಬ್ಬಲೂರಿನ ಶಾಸನ ಮತ್ತು ಹರಿಹರನ ಏಕಾಂತರಾಮಿತಂದೆಗಳ ರಗಳೆಗಳಲ್ಲಿ ವರ್ಣಿತವಾಗಿದೆ.



ಏಕಾಂತದ ರಾಮಯ್ಯನ ಶಿರಸ್ಸು ಪವಾಡ, ಅಬ್ಬಲೂರಿನ ಸೋಮೇಶ್ವರ ದೇವಾಲಯ

ಅವುಗಳ ಪ್ರಕಾರ ಈತ ಅಬ್ಬಲೂರಿಗೆ ಬಂದು ಅಲ್ಲಿ ಬ್ರಹ್ಮೇಶ್ವರ ದೇವಸ್ಥಾನದಲ್ಲಿದ್ದು ಜೈನರೊಡನೆ ಸ್ಪರ್ಧೆಹೂಡಿ ತಾನೇ ಕತ್ತರಿಸಿಕೊಂಡ ತನ್ನ ತಲೆಯನ್ನು ಏಳು ದಿನಗಳು ಕಳೆದ ಮೇಲೆ ಮತ್ತೆ ತನ್ನ ಅಟ್ಟೆಯ ಮೇಲಿಟ್ಟುಕೊಂಡು ಜೀವಂತವಾಗಿ ಎದ್ದು ಜಿನ ದೇವಾಲಯಗಳಲ್ಲಿ ಮತ್ತು ಬಸದಿಗಳಲ್ಲಿ ಶಿವಲಿಂಗ ಪ್ರತಿಷ್ಠೆಯನ್ನು ಮಾಡಿಸಿದ. ಇದರಿಂದ ವ್ಯಥೆಗೊಂಡ ಜೈನರು ದೊರೆ ಬಿಜ್ಜಳನಲ್ಲಿ ಮೊರೆಯಿಡಲು ಈತ ಮತ್ತೆ ತನ್ನ ತಲೆಯನ್ನು ಕತ್ತರಿಸಿ ಜೈನರ ಕೈಗೆ ಕೊಡುವುದಾಗಿಯೂ ಅವರು ಅದನ್ನು ಸುಟ್ಟ ಮೇಲೆ ತಾನು ಮತ್ತದನ್ನು ಪಡೆಯುವುದಾಗಿಯೂ ಘೋಷಿಸಿದ. ಜೈನರು ಇದಕ್ಕೆ ಹೆದರಲು ಬಿಜ್ಜಳ ಇವನ ಕಾಲುಗಳನ್ನು ತೊಳೆದು ಜಯಪತ್ರವನ್ನಿತ್ತು ಸೋಮನಾಥದೇವರ ಅಂಗಭೋಗಾದಿಗಳಿಗಾಗಿ ಗೋಗಾವೆ ಎಂಬ ಹಳ್ಳಿಯನ್ನು ಕೊಟ್ಟ. ಇವನ ಮಹಿಮೆಯನ್ನು ಕೇಳಿದ ಚಾಳುಕ್ಯ ಪ್ರಭು ತ್ರಿಭುವನಮಲ್ಲ ಸೋಮೇಶ್ವರ ಅಬ್ಬಲೂರನ್ನೂ ಕದಂಬ ಪ್ರಭು ಕಾಮರಸ ಮಳವಳ್ಳಿ ಗ್ರಾಮವನ್ನೂ ದಾನವಾಗಿ ಕೊಟ್ಟರು. ಇವನ ಹಲವು ಪವಾಡಗಳು ಅಬ್ಬಲೂರಿನ ಸೋಮೇಶ್ವರ ದೇವಾಲಯದ ಗೋಡೆಗಳ ಮೇಲೆ ಶಿಲ್ಪಿಸಿದ್ದು, ಅವುಗಳ ಕೆಳಗೆ ವಿವರಣಾತ್ಮಕ ಶಾಸನಗಳೂ ಇವೆ.

ಈತ ಚೆನ್ನರಾಮೇಶ್ವರಲಿಂಗ ಎಂಬ ಅಂಕಿತವನ್ನಿಟ್ಟುಕೊಂಡು ಕೆಲವು ವಚನಗಳನ್ನು ಬರೆದಿದ್ದಾನೆ. ಇವನ ಹತ್ತು ವಚನಗಳು ದೊರೆತಿವೆ. ಪಾಲ್ಕುರಿಕೆ ಸೋಮನಾಥ'ನ ಸಹಸ್ರಗಣನಾಮದಲ್ಲಿ ಇವನ ಹೆಸರಿದೆ. ಸುಮಾರು

ಹದಿನೇಳನೆಯ ಶತಮಾನದ ಶಾಂತ ನಿರಂಜನನ ಅಬ್ಬಲೂರು ಚರಿತೆ ಈತನನ್ನು ಕುರಿತದ್ದು. ಈತ ಪ್ರತಿಷ್ಠೆಮಾಡಿದ ವೀರಸೋಮೇಶ್ವರ ದೇವಾಲಯ ಈಗಲೂ ಅಬ್ಬಲೂರಿನಲ್ಲಿದೆ. (ಜಿ.ಎಸ್.ಎಸ್.ಐ.)

**ಏಚಲದೇವಿ :** ಈ ಹೆಸರಿನ ಮೂವರು ಹೊಯ್ಸಳ ವಂಶದಲ್ಲಿದ್ದಾರೆ. ಎರೆಯಂಗ ನೃಪನ ಪತ್ನಿಯೂ ವಿಷ್ಣುವರ್ಧನನ ತಾಯಿಯೂ ಆದವಳು ಒಬ್ಬಳು, 1ನೆಯ ನರಸಿಂಹನ ಪಟ್ಟಮಹಿಷಿಯೂ 2ನೆಯ ಬಲ್ಲಾಳನ ತಾಯಿಯೂ ಆದವಳು ಮತ್ತೊಬ್ಬಳು, ಹೊಯ್ಸಳ ರಾಜಕುಮಾರ ಉದಯಾದಿತ್ಯನ ಮಗಳು ಇನ್ನೊಬ್ಬಳು. ಕಡೆಯವಳ ವಿಚಾರ ಚಿಕ್ಕಮಗಳೂರು ತಾಲ್ಲೂಕಿನ ಒಂದೇ ಒಂದು ಶಾಸನದಿಂದ ಮಾತ್ರ ತಿಳಿದುಬರುವ ಸಂಗತಿಯಾಗಿದೆ. ಮೊದಲಿಬ್ಬರ ಬಗ್ಗೆ ಹಲವು ಕಡೆ ಶಾಸನ ಉಲ್ಲೇಖಗಳು ಸಿಗುತ್ತವೆ.

ಎರೆಯಂಗನ ಪತ್ನಿ ಏಚಲದೇವಿಯನ್ನು ಚೆಲ್ವಿಂಗೆರೆವಟ್ಟು ಶೀಲಗುಣದಿಂ ಎಂದೂ ನರಸಿಂಹನ ರಾಣಿ ಏಚಲದೇವಿಯನ್ನು ಮೃದುಪದೆ, ಸುದತಿ ಎಂದೂ ಬಣ್ಣಿಸಲಾಗಿದೆ. ಕೆಲವು ಕಡೆ ಏಚಲದೇವಿಗೆ ಸಂವಾದಿಯಾಗಿ ಏಚಲ, ಏಚಲೆ ಮತ್ತು ಏಚಲಾದೇವಿ ಎಂಬ ರೂಪುಗಳೂ ದೊರೆಯುತ್ತವೆ. (ಆರ್.ಜಿ.)

**ಏಣಗಿ ಬಾಳಪ್ಪ :** 1916-. ರಂಗಭೂಮಿಯ ಪ್ರಸಿದ್ಧ ನಟರು. ಸವದತ್ತಿ ತಾಲ್ಲೂಕಿನ ಏಣಗಿಯಲ್ಲಿ ಬಡಕುಟುಂಬ ಒಂದರಲ್ಲಿ ಜನಿಸಿದ ಇವರು ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡು ತಾಯಿಯ ಪೋಷಣೆಯಲ್ಲಿ ಬೆಳೆದರು.ಇವರಿಗೆ ಬಂದೊದಗಿದ ಕಷ್ಟದಿಂದ ಶಾಲಾಶಿಕ್ಷಣ ಪ್ರಾಥಮಿಕ ಮೂರನೆಯ ತರಗತಿಯವರೆಗೆ ಮಾತ್ರ ದೊರಕಿತು. ಚಿಕ್ಕಂದಿನಿಂದಲೂ ಇವರಿಗೆ ಬಯಲಾಟ, ಸಂಗೀತ ಎಂದರೆ ಬಹಳ ಆಸಕ್ತಿ. ಐದಾರು ವರ್ಷದ ಹುಡುಗ ನಾಗಿದ್ದಾಗ ಬಯಲಾಟಗಳಲ್ಲಿ ಚಿಕ್ಕ ಪಾತ್ರಗಳನ್ನು ಅಭಿನಯಿಸಿ ಜನರ ಪ್ರಶಂಸೆ ಪಡೆದರು. ಹನ್ನೊಂದು ವರ್ಷದ ಹುಡುಗನಾಗಿದ್ದಾಗ ಗರೂಡ ಸದಾಶಿವರಾಯರ ಪಾದುಕಾಪಟ್ಟಾಭಿಷೇಕ ನಾಟಕದಲ್ಲಿ ಭರತನ ಪಾತ್ರವಹಿಸುವ ಅವಕಾಶ ಒದಗಿಬಂತು. ಆ ನಾಟಕದಲ್ಲಿ ಇವರ ಪಾತ್ರ ಯಶಸ್ವಿಯಾಯಿತು.



ಇವರು ತಮ್ಮ ಮುಂದಿನ ಜೀವನದಲ್ಲಿ ಸಾಕಷ್ಟು ಬಡತನ ಎಡರು ತೊಡರುಗಳನ್ನು ಅನುಭವಿಸಿದರು. ಆ ಸಮಯದಲ್ಲಿ ಕವಿ ಹಾಗೂ ನಾಟಕಕಾರರಾದ ಶಿವಲಿಂಗಸ್ವಾಮಿಗಳು ಇವರ ಹಿತಚಿಂತಕರೂ ಮಾರ್ಗದರ್ಶಿಯೂ ಆಗಿದ್ದರು. ಅಬ್ಬಿಗೇರಿ ಬಂಧುಗಳಿಂದ ಆರಂಭವಾದ ಅಬ್ಬಿಗೇರಿ ನಾಟಕ ಸಂಘವನ್ನು ಇವರು 1926ರಲ್ಲಿ ಪ್ರವೇಶಿಸಿದರು. ಇದರೊಂದಿಗೆ ಇವರ ಕಲಾಜೀವನ ಆರಂಭವಾಯಿತು. ಆಗ ಇವರು ಅಭಿನಯಿಸಿದ ಕಿತ್ತೂರ ಚೆನ್ನಮ್ಮ ನಾಟಕ ಕರ್ನಾಟಕದಲ್ಲಿ ರಾಷ್ಟ್ರೀಯ ಇತಿಹಾಸವನ್ನು ನಿರ್ಮಿಸಿತು. ಅನಂತರ 1928ರಲ್ಲಿ ಮೈಲಾರೀ ಪ್ರಾಸಾದಿತ ಸಂಗೀತ ನಾಟಕ ಮಂಡಳಿಯನ್ನು ಪ್ರವೇಶಿಸಿದರು. 1932ರಲ್ಲಿ ಹುಚ್ಚಪ್ಪ ಸೂಡಿ ಎಂಬ ಸ್ನೇಹಿತರ ಸಹಕಾರದೊಂದಿಗೆ ಗುರುಸೇವಾ ಸಂಗೀತ ನಾಟಕ ಮಂಡಳಿಯನ್ನು ಕಟ್ಟಿದರು.

ಇವರು ಮುಖ್ಯವಾಗಿ ಸ್ತ್ರೀಪಾತ್ರಗಳನ್ನು ಹಾಕಿ ವಿವಿಧ ಕಂಪೆನಿಗಳಲ್ಲಿ ಆ ಮೂಲಕ ತಮ್ಮ ರಂಗ ಸೇವೆಯನ್ನು ಸಲ್ಲಿಸಿದ್ದಾರೆ. ಮಾರಿಕಾಂಬಾ ಪ್ರಾಸಾದಿಕ ನಾಟಕ ಮಂಡಳಿಯಲ್ಲಿ ಹೇಮರೆಡ್ಡಿ ಮಲ್ಲಮ್ಮ ಮತ್ತು ಕಿತ್ತೂರು ರುದ್ರಮ್ಮ ಈ ಎರಡೂ ನಾಟಕಗಳಲ್ಲಿ ಇವರು ವಹಿಸುತ್ತಿದ್ದ ನಾಯಕಿಯ ಪಾತ್ರಗಳು ತುಂಬ ಜನಪ್ರಿಯವಾದವು. ಮುಂದೆ ಇವರು ಪುರುಷ ಪಾತ್ರಗಳನ್ನು ಹಾಕಿ ಪ್ರಖ್ಯಾತಿ ಪಡೆದರು.

ಕೆಲವು ಕಾಲಾನಂತರ ಇವರು ಕಲಾವೈಭವ ನಾಟಕ ಮಂಡಳಿ ಎಂಬ ಸ್ವಂತ ಕಂಪೆನಿಯನ್ನು ಪ್ರಾರಂಭಿಸಿದರು. ಈ ಮಂಡಳಿಯ ನೇತಾರರಾಗಿ ಅವಿಶ್ರಾಂತವಾಗಿ ರಂಗಭೂಮಿಯ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ. ಕರುಣ ವೀರ ಹಾಸ್ಯರಸಗಳನ್ನು ಅಭಿವ್ಯಕ್ತಪಡಿಸುವಲ್ಲಿ ಶ್ರೀಯುತರು ತೋರುವ ಅಭಿನಯ, ಕಲೆಗಾರಿಕೆ ಮೆಚ್ಚುವಂಥದ್ದು. ಕರ್ನಾಟಕದ ರಂಗಭೂಮಿಯಲ್ಲಿ ಹವ್ಯಾಸಿ ಹಾಗೂ ವೃತ್ತಿರಂಗಗಳಿಗಿರುವ ಅಂತರವನ್ನು ತೊಡೆದುಹಾಕಬೇಕೆಂಬುದು ಇವರ ಮುಖ್ಯೋದ್ದೇಶವಾಗಿದೆ. ಇವರ ಮಾವ ಬಂದನಪೋ ಮಾವ ಎಂಬ ಸಾಮಾಜಿಕ ವಿಡಂಬನೆ ಈ ನಿಟ್ಟಿನಲ್ಲಿ ಒಂದು ಹೊಸ ಪ್ರಯೋಗ. ಇವರು ಬೆಳ್ಳಿತೆರೆಯಲ್ಲೂ ಅಭಿನಯಿಸಿದ್ದಾರೆ. ಇವರ ಅಭಿನಯ ಚಾತುರ್ಯವನ್ನು ಮೆಚ್ಚಿ ಕರ್ನಾಟಕ ಸರ್ಕಾರ ಪ್ರತಿಷ್ಠಿತ ಗುಬ್ಬಿ ವೀರಣ್ಣ ಪ್ರಶಸ್ತಿ ನೀಡಿ ಗೌರವಿಸಿದೆ (1994). ನಾಟ್ಯ ಭೂಷಣ ಅಭಿನಂದನಾ ಎಂಬ ಗ್ರಂಥವನ್ನು ಇವರಿಗೆ ಸಮರ್ಪಿಸಲಾಗಿದೆ (1998). ಪ್ರಸಿದ್ಧ ನಟ ಏಣಗಿ ನಟರಾಜ್ ಇವರ ಮಗ. (ಎನ್.ಕೆ.ಕೆ.)

**ಏಲಕ್ಕಿ :** ಕರ್ನಾಟಕದ ಮಲೆನಾಡು ಭಾಗಗಳಲ್ಲಿ ಬೆಳೆಯುವ ಪ್ರಮುಖ ಸಂಬಾರ ಹಾಗೂ ವಾಣಿಜ್ಯ ಬೆಳೆ. ಇದನ್ನು ವೈಜ್ಞಾನಿಕವಾಗಿ ಸೈಟಾಮಿನೆ ಉಪವರ್ಗದ ಜಿಂಜಿಬರೇಸಿ ಕುಟುಂಬಕ್ಕೆ ಸೇರಿದ ಏಕದಳ ಪಂಗಡದ ಬಹುವಾರ್ಷಿಕ ಸಸ್ಯ ಎಂದು ಪರಿಗಣಿಸಿದೆ. ಎಲೆಟೇರಿಯ ಕಾರ್ಡಮೋಮಮ್ ಇದರ ವೈಜ್ಞಾನಿಕ ಹೆಸರು. ಇದು ಜಗತ್ತಿನಲ್ಲೇ ಅತಿ ಬೆಲೆಬಾಳುವ ಸಂಬಾರ ಪದಾರ್ಥವೆನಿಸಿದ್ದು 'ಸಂಬಾರ ಬೆಳೆಗಳ ರಾಣಿ' ಎಂಬ ಹೆಗ್ಗಳಿಕೆಯ ಕೀರ್ತಿ ಇದಕ್ಕಿದೆ.

ಮುಖ್ಯವಾಗಿ ಭಾರತ ಮತ್ತು ಮಲಯ ಪರ್ಯಾಯ ದ್ವೀಪದಲ್ಲಿ ಇದನ್ನು ಬೆಳೆಯಲಾಗುತ್ತಿತ್ತು. ಈಗ ಇದು ತನ್ನ ಭೌಗೋಳಿಕ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಗ್ವಾಟೆಮಾಲ, ಟಾಂಜೇನಿಯ, ಶ್ರೀಲಂಕಾ, ಥಾಯ್‌ಲೆಂಡ್, ಲಾವೋಸ್, ವಿಯೆಟ್ನಾಂ, ಕೊಸ್ಟಾರಿಕಾ, ಎಲ್‌ಸಾಲ್ವೆಡಾರ್ ಮೊದಲಾದ ದೇಶಗಳಲ್ಲೂ ಇದನ್ನು ಬೆಳೆಯಲಾಗುತ್ತಿದೆ. ಅಲ್ಲಲ್ಲಿ ಕಾಡಿನಲ್ಲಿ ಸ್ವಾಭಾವಿಕವಾಗಿ ಬೆಳೆಯುತ್ತಿದ್ದ ಈ ಗಿಡದ ಹಣ್ಣುಗಳ ಪ್ರಯೋಜನವನ್ನು ಗುರುತಿಸಿ ಇದನ್ನು ತೋಟಗಳಲ್ಲಿ ಬೆಳೆಯಲು ಪ್ರಾರಂಭಿಸಲಾಯಿತು. ಕ್ರಿಸ್ತಪೂರ್ವದ ಶತಮಾನಗಳಲ್ಲಿ ರೋಮನ್ ಸಾಮ್ರಾಜ್ಯ ಪೂರ್ವದೇಶಗಳೊಂದಿಗೆ ನಡೆಸುತ್ತಿದ್ದ ವಾಣಿಜ್ಯದ ಸರಕು ಪಟ್ಟಿಯಲ್ಲಿ ಏಲಕ್ಕಿಯ ಉಲ್ಲೇಖವಿದೆ. ಇದನ್ನು ಇಲಾಚಿ ಎಂದೂ ಕರೆಯಲಾಗುತ್ತಿತ್ತು. ಅಂತಾರಾಷ್ಟ್ರೀಯ ವಾಣಿಜ್ಯ ವಿಸ್ತರಿಸಿದಂತೆಲ್ಲ, ಮಧ್ಯಪ್ರಾಚ್ಯ ಮತ್ತು ಐರೋಪ್ಯ ರಾಷ್ಟ್ರಗಳಲ್ಲಿ ಇದರ ಬೇಡಿಕೆ ಹೆಚ್ಚಿತು. ಶೀತ ಹವಾಗುಣವಿರುವ ದೇಶಗಳಲ್ಲಿ ಕಾಫಿ, ಟೀ ಮತ್ತು ತಂಪು ಪಾನೀಯಗಳೊಂದಿಗೆ ಇದನ್ನು ಸೇರಿಸಿ ಸೇವಿಸುವ ಪದ್ಧತಿ ರೂಢಿಗೆ ಬಂತು. ಅಡುಗೆಯಲ್ಲಿ ಇದನ್ನು ಇದರ ಪರಿಮಳ ಗುಣಕ್ಕಾಗಿ ಬಳಸಲಾಗುತ್ತದೆ. ಔಷಧೀಯ ಗುಣಗಳಿಗಾಗಿಯೂ ಇದು ಪ್ರಸಿದ್ಧವಾಗಿದೆ.

ಇದನ್ನು ಮುಖ್ಯವಾಗಿ ಮೂರು ಬಗೆಗಳಾಗಿ ವಿಂಗಡಿಸಲಾಗುವುದು. ಸಿಲೋನ್ ಏಲಕ್ಕಿ, ಮೈಸೂರು ಏಲಕ್ಕಿ ಮತ್ತು ಮಲಬಾರ್ ಏಲಕ್ಕಿ. ಮೊದಲನೆಯದು ಸ್ವಲ್ಪ ಉದ್ದ ಕಾಯಿಯಾದರೆ, ಇನ್ನೆರಡು ಚಿಕ್ಕ ಗಾತ್ರದವು. ಏಲಕ್ಕಿಯ ಇನ್ನೂ ದೊಡ್ಡ ಬಗೆಯದು ಆಗ್ನೇಯ ಏಷ್ಯ ಮತ್ತು ಆಫ್ರಿಕದ ಭೂಮಧ್ಯ ರೇಖಾ ವಲಯದ ಹವಾಗುಣದಲ್ಲಿ ಬೆಳೆಯುತ್ತದೆ. ಇದು ಮುಖ್ಯವಾಗಿ ಮಳೆಯಾಶ್ರಿತ ಬೆಳೆ. ತಂಪಾಗಿರುವ ಹಸುರು ಕಾಡಿನಿಂದ ಕೂಡಿರುವ ತೇವಾಂಶಭರಿತ ಮಣ್ಣಿನಲ್ಲಿ ಇದು ಚೆನ್ನಾಗಿ ಬೆಳೆಯುತ್ತದೆ. ಇಂತಹ ಈಬೆಳೆ ಬೆಳೆಯುವ ಶ್ರೇಷ್ಠವಾದ ಸ್ಥಳಕ್ಕೆ ಕರ್ನಾಟಕದ ಮಲೆನಾಡು ಭಾಗದಲ್ಲಿ ಹನಾಲು, ಹಡ್ಲು ಎಂದು ಕರೆಯುತ್ತಾರೆ. ಇಳಿಜಾರಿನ ಜಾಗದಲ್ಲೂ ಈ ಬೆಳೆಯನ್ನು ಬೆಳೆಯಬಹುದು. ಹಿಂದೆ ಕರ್ನಾಟಕದ ಕಾಡುಗಳಲ್ಲಿ ಅಲ್ಲಲ್ಲಿ ಕೆಲವು ಮರಗಳನ್ನು ಕಡಿದು ಉರುಳಿಸಿದಾಗ ಪ್ರಾಣಿ ಪಕ್ಷಿಗಳು ಹಿಕ್ಕೆಯ ರೂಪದಲ್ಲಿ ತಂದು ಹಾಕಿರುವ ಏಲಕ್ಕಿ ಬೀಜಗಳು ಸೂರ್ಯನ ಬಿಸಿಲಿಗೆ

ಮೊಳಕೆಯೊಡೆದು ಗಿಡಗಳಾಗಿ ಬೆಳೆಯುತ್ತಿದ್ದವು. ಮೂರು ವರ್ಷಗಳಲ್ಲಿ ಗಿಡ ಬಲಿತು ಕಾಯಿ ಬಿಡುತ್ತಿತ್ತು. ಹಣ್ಣು ಪಕ್ವವಾದ ಮೇಲೆ ಕುಯ್ದು ತಂದು ವ್ಯಾಪರಸ್ಥರಿಗೆ ಮಾರುತ್ತಿದ್ದರು. ಆದರೆ ಕಾಡು ಕಡಿಮೆಯಾದಂತೆ ವ್ಯವಸ್ಥಿತವಾದ ಕೃಷಿ ಪದ್ಧತಿಯಿಂದ ಮಾತ್ರ ಏಲಕ್ಕಿ ಬೆಳೆಯುವುದು ಸಾಧ್ಯವಾಗಿದೆ.

ಸಾಮಾನ್ಯವಾಗಿ ಇದನ್ನು ಬೀಜಗಳಿಂದ ವೃದ್ಧಿ ಮಾಡಲಾಗುತ್ತದೆ. ಉತ್ತಮ ಇಳುವರಿ ಮತ್ತು ಗುಣಗಳನ್ನು ಹೊಂದಿರುವ ಈ ಗಿಡಗಳಲ್ಲಿ ಹಿಡಿದಿರುವ ಇದರ ಹಣ್ಣನ್ನು ಆರಿಸಿ ಕುಯ್ದು ಬೀಜ ಮಾಡಲು ಬಳಸುತ್ತಾರೆ. ಇದರ ಸಿಪ್ಪೆ ತೆಗೆದು ಬೀಜವನ್ನು ಬೂದಿಯಿಂದ ಮಿಶ್ರಮಾಡಿ ನೆರಳಿನಲ್ಲಿ ಒಣಗಿಸಿ ಒಂದು ವಾರ ಬಿಟ್ಟು ನೆಲದಲ್ಲಿ ಅಂದರೆ ಮಡಿಗಳಲ್ಲಿ ಹಾಕಿ, ಕಾವು ಬರುವಂತೆ ಬತ್ತದ ಹುಲ್ಲು ಅಥವಾ ಚಿಮ್ಮಿ ಸೊಪ್ಪು ಅಥವಾ ಸೀಮೆಸೀಗೆ (ಲಂಟಾನ) ಸೊಪ್ಪನ್ನು ಮುಚ್ಚಿ ಮೇಲಕ್ಕೆ ಮೂರು ನಾಲ್ಕು ಅಡಿಗಳ ಎತ್ತರದಲ್ಲಿ ಚಪ್ಪರ ಹಾಕಿ ನೆರಳನ್ನು ಕಲ್ಪಿಸಲಾಗುತ್ತದೆ. ಹೀಗೆ ಒಟ್ಟು ಪಾತಿ ಮಾಡುವ ಜಮೀನನ್ನು ಬಹಳ ಸೂಕ್ಷ್ಮವಾಗಿ ಹದಮಾಡಿ ತಯಾರು ಮಾಡಬೇಕು. ಫಲವತ್ತಾದ ಮಣ್ಣನ್ನು ಅಷ್ಟೇ ಗೊಬ್ಬರದೊಂದಿಗೆ ಮಿಶ್ರಮಾಡಿ ಏರುಮಡಿಗಳನ್ನು ರಚಿಸಲಾಗುತ್ತದೆ. ಸಾಮಾನ್ಯವಾಗಿ ಈ ಮಡಿ ಅಥವಾ ಪಾತಿಗಳಿಗೆ ನಾಲ್ಕು ಅಡಿ ಅಗಲದ ಮುಕ್ಕಾಲು ಅಡಿ ಎತ್ತರದ ಪಾತಿ ಮಾಡುತ್ತಾರೆ. ಇದರಿಂದ ಮಳೆಗಾಲದಲ್ಲಿ ಹೆಚ್ಚಾದ ನೀರು ಬಸಿದು ಹೋಗಿ ಸಸಿಗಳು ಕೊಳೆಯದಂತೆ ರಕ್ಷಿಸಲು ಸಾಧ್ಯವಾಗುತ್ತದೆ. ಈ ಏರು ಮಡಿಗಳಲ್ಲಿ ಬೀಜಗಳನ್ನು ಬಿತ್ತಿ ಸ್ವಲ್ಪ ಮಣ್ಣಿನೊಳಗೆ ಹುಗಿದುಕೊಳ್ಳುವಂತೆ ಮೇಲ್ಮಣ್ಣನ್ನು ಚೆಲ್ಲುತ್ತಾರೆ. ಬೀಜ ಬಿತ್ತಿದ ಒಂದು ತಿಂಗಳ ಅನಂತರ ಮೊಳಕೆ ಬರಲು ಪ್ರಾರಂಭಿಸಿ ಸುಮಾರು ಎಂಟು ತಿಂಗಳಲ್ಲಿ ಸಸಿ ದೊಡ್ಡದಾಗುತ್ತದೆ. ಆಗ ತೀರ ಉದ್ದ ಅಂದರೆ ಎರಡು ಮೂರು ಅಡಿ ಉದ್ದ ಬಂದ ಸಸಿಗಳನ್ನು ಕಿತ್ತು ನೇರವಾಗಿ ತೋಟಗಳಲ್ಲಿ ಹಾಕುತ್ತಾರೆ. ಸಸಿಗಳು ಇನ್ನೂ ಚಿಕ್ಕವಾಗಿದ್ದರೆ ಮೂರು ನಾಲ್ಕು ಇಂಚಿಗೊಂದು ಗಿಡ ಬಿಟ್ಟು ಉಳಿದ ಸಸಿಗಳನ್ನು ಕಿತ್ತು ಪ್ರತ್ಯೇಕವಾಗಿ ಮಾಡಿದ ಪಾತಿಯಲ್ಲಿ ನೆಟ್ಟು ಮರುವರ್ಷ ಅವನ್ನೆಲ್ಲ ಕಿತ್ತು ತೋಟದಲ್ಲಿ ನೆಡುತ್ತಾರೆ. ಇತ್ತೀಚೆಗೆ ಬೀಜದಿಂದ ಮಾಡಿದ ಸಸಿಗಿಂತ ಗಿಡಗಳ ಬುಡದಲ್ಲಿ ಬರುವ ಕಂದುಗಳನ್ನು ನೇರವಾಗಿ ತೋಟದಲ್ಲಿ ನೆಡುವುದರಿಂದ ಅವು ಬೇಗ ಫಸಲು ಬಿಡುತ್ತವೆ ಮತ್ತು ಅಧಿಕ ಇಳುವರಿ ಕೊಡುತ್ತವೆ ಎಂದು ಕಂಡುಕೊಳ್ಳಲಾಗಿದೆ. ಇದಕ್ಕಾಗಿ ತೋಟದಲ್ಲಿ ಬಿಡಿ ಗಿಡಗಳನ್ನು ನೀರಿನ ಕೊರಕಲಿಗೆ ಹಾಕಿ ನೆಟ್ಟು ಅದರಿಂದ ಬರುವ ನಾಲ್ಕೈದು ಕಂದುಗಳನ್ನು ಅನಂತರ ಕಿತ್ತು ತೋಟಕ್ಕೆ ಹಾಕುವುದುಂಟು.

ತೋಟದಲ್ಲಿ ಸುಮಾರು ನಾಲ್ಕು ಐದಡಿ ದೂರಕ್ಕೊಂದು ಗುಂಡಿ ಬರುವಂತೆ ತೆಗೆದು ಬಡ್ಡೆಗಳನ್ನು ನೆಡಲಾಗುತ್ತದೆ. ಅವನ್ನು ದನಕರುಗಳು ತಿನ್ನದಂತೆ ನೋಡಿಕೊಳ್ಳಬೇಕು. ಕಳೆ ತೆಗೆದು ಗೊಬ್ಬರ ಹಾಕಿ, ಅಗತ್ಯ ಕ್ರಿಮಿನಾಶಕ ಸಿಂಪಡಿಸಿ ಪೋಷಿಸಬೇಕು. ಈ ಬೆಳೆಗೆ ಆಯ್ದುಕೊಂಡ ಜಾಗ ಫಲವತ್ತಾಗಿದ್ದು ಬೇಸಗೆಯಲ್ಲಿ ನೀರಾವರಿ ಅಥವಾ ಹನಿ ನೀರಾವರಿ ಒದಗಿಸುವುದು ಸಾಧ್ಯವಿದ್ದರೆ ಬೆಳೆ ಬೇಗ ಅಭಿವೃದ್ಧಿಯಾಗುತ್ತದೆ. ಗಿಡ ನೆಟ್ಟ ಮೂರು ವರ್ಷಗಳಲ್ಲಿ ಫಸಲು ಬರಲು ಪ್ರಾರಂಭವಾಗುತ್ತದೆ. ಆಯಾ ಭೂಮಿಯನ್ನನುಸರಿಸಿ ಐದರಿಂದ ಹತ್ತು ವರ್ಷಗಳವರೆಗೂ ಸುಸ್ಥಿತಿಯಲ್ಲಿರುತ್ತದೆ. ಸಾಂದ್ರ ಬೇಸಾಯ ಅನುಸರಿಸದೆ ಮಳೆಯನ್ನೇ ಆಧರಿಸಿ ಬೆಳೆ ಬೆಳೆದು ಸಾಮಾನ್ಯ ಕೃಷಿ ಮಾಡಿದರೆ ಎರಡು ಮೂರು ಫಸಲು ಕುಯ್ಯುವಷ್ಟರಲ್ಲಿ ತೋಟ ಕಳಪೆಯಾಗುತ್ತದೆ. ಮತ್ತೆ ಹೊಸದಾಗಿ ಗಿಡ ಹಾಕಬೇಕಾಗುತ್ತದೆ. ಏಲಕ್ಕಿ ಗಿಡಗಳಿಗೆ ರಾಸಾಯನಿಕ ಗೊಬ್ಬರಕ್ಕಿಂತ ಸಾವಯುವ ಗೊಬ್ಬರ ಹೆಚ್ಚು ಸೂಕ್ತವೆಂದು ತಿಳಿದುಬಂದಿದೆ. ಆಯಾ ಮಣ್ಣಿನ ಗುಣವನ್ನು ಪರೀಕ್ಷಿಸಿ ಸ್ವಲ್ಪ ಪ್ರಮಾಣದ ರಾಸಾಯನಿಕ ಗೊಬ್ಬರವನ್ನೂ ನೀಡಬಹುದು. ಈ ಬೆಳೆಯನ್ನು ಹೆಚ್ಚು ಸ್ಥಿರ ಬೆಳೆಯಾಗಿ ಮಾಡಲು ಪ್ರಯತ್ನಗಳು ಮುಂದುವರಿದಿವೆ.

1957ರಲ್ಲಿ ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕಿನಲ್ಲಿ ಮೂಡಿಗೆರೆ ಕೈಮರದ ಬಳಿ ಇದರ ಪ್ರಾದೇಶಿಕ ಸಂಶೋಧನ ಕೇಂದ್ರವನ್ನು ಸ್ಥಾಪಿಸಲಾಯಿತು. ಇದು ಪ್ರಾರಂಭದಲ್ಲಿ ಕೃಷಿ ಮತ್ತು ತೋಟಗಾರಿಕಾ ಇಲಾಖೆಗಳ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದು ಅನಂತರ ಇದನ್ನು ಕೃಷಿ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಸೇರಿಸಲಾಯಿತು (1965). ಈ ಸಂಸ್ಥೆ ಕಡೂರು-ಮಂಗಳೂರು ಹೆದ್ದಾರಿಯಲ್ಲಿದ್ದು ನೂರಾರು ಎಕರೆಗಳ ಜಮೀನು ಹೊಂದಿದೆ. ಈಗ ಇದೇ ಆವರಣದಲ್ಲಿ ತೋಟಗಾರಿಕೆ ಕಾಲೇಜು ಸ್ಥಾಪಿತವಾಗಿದೆ. ಏಲಕ್ಕಿ, ಮೆಣಸು, ಕಿತ್ತಳೆ ಇತ್ಯಾದಿಗಳನ್ನು ವೈಜ್ಞಾನಿಕವಾಗಿ ಬೆಳೆಸುವುದು ಮತ್ತು ಅವುಗಳ ಹೊಸ ತಳಿಗಳನ್ನು ಅಭಿವೃದ್ಧಿಪಡಿಸುವುದು ಈ ಸಂಸ್ಥೆಯ ಉದ್ದೇಶ. 1984ರಲ್ಲಿ ಈ ಸಂಸ್ಥೆಯ ವಿಜ್ಞಾನಿಗಳು ರೂಪಿಸಿದ ಮೂಡಿಗೆರೆ 1 ಏಲಕ್ಕಿ ತಳಿಯನ್ನು ಬಿಡುಗಡೆ ಮಾಡಲಾಯಿತು. 1994ರಲ್ಲಿ ಇನ್ನೂ ಸುಧಾರಿತ ತಳಿಯಾದ ಮೂಡಿಗೆರೆ 2ನ್ನು ಬಿಡುಗಡೆ ಮಾಡಲಾಯಿತು. ಬೆಳೆಗಾರರಿಗೆ ಸಸಿಗಳನ್ನು ಒದಗಿಸುವುದು, ಮಾದರಿ ಪ್ರಾತ್ಯಕ್ಷಿಕೆ ನಡೆಸಿ ಅವರಿಗೆ ತರಬೇತಿ ನೀಡುವುದು ಇದರ ಕಾರ್ಯಕ್ರಮಗಳಲ್ಲಿ ಸೇರಿವೆ.



ಏಲಕ್ಕಿ ಹೂಗೊಂಚಲು

ಈ ಗಿಡ ಸಮಗ್ರವಾಗಿ ಬೆಳೆದಾಗ ಐದು ಆರು ಅಡಿ ಎತ್ತರದವರೆಗೂ ಬೆಳೆಯುತ್ತದೆ. ಶುಂಠಿ, ಅರಿಶಿಣದಂತೆ ಈ ಸಸ್ಯ ಕಂಡುಬಂದರೂ ನೆಲದ ಒಳಗೆ ಗೆಡ್ಡೆ ರೂಪದಲ್ಲಿ ಫಲ ಬಿಡುವುದಿಲ್ಲ. ಕಾಂಡದಲ್ಲೂ ಫಲ ಬಿಡುವುದಿಲ್ಲ. ಏಲಕ್ಕಿ ಗಿಡದ ಬುಡದಲ್ಲಿ ಸುತ್ತ ಗರಿಗಳು ಬರುತ್ತವೆ. ಗರಿ ಎಂದರೆ ಉದ್ದಕ್ಕೆ ಬೇರಿನಂತಿರುವ, ಮಧ್ಯೆ ಮಧ್ಯೆ ಟಿಸಿಲೊಡೆದಿರುವ ಒಳ್ಳೆಯ ಮಾದರಿ. ಇದು ಏಪ್ರಿಲ್, ಮೇ ತಿಂಗಳಿನಿಂದಲೇ ಮೊದಲ ಮಳೆಗೆ ಹೊರಹೊಮ್ಮಲು ಪ್ರಾರಂಭವಾಗುತ್ತದೆ. ಒಂದು ಗಿಡಕ್ಕೆ ಇಂಥ ನಾಲ್ಕು ಗರಿಗಳು ಹೊರಟು ಹತ್ತಾರು ಟಿಸಿಲುಗಳೊಂದಿಗೆ ನೆಲದ ಮೇಲೆ ಸು.2 ಅಡಿಗಳವರೆಗೂ ಹಬ್ಬಿ ಹರಡಿಕೊಳ್ಳುತ್ತದೆ. ಮುಂಗಾರು ಮಳೆ ಹೆಚ್ಚಿದಂತೆಲ್ಲ ಈ ಗರಿಗಳಲ್ಲಿ ನೀಲಿ ಬಣ್ಣದ ಹೂ ಬಿಟ್ಟು ಕಾಯಿಗಟ್ಟುವ ಪ್ರಕ್ರಿಯೆ ನಡೆಯುತ್ತಿರುತ್ತದೆ. ಈ ಕಾಯಿಗಳು ಸೆಪ್ಟೆಂಬರ್ ಪ್ರಾರಂಭಕ್ಕೆಲ್ಲ ಪಕ್ವವಾಗತೊಡಗುತ್ತವೆ. ಹಣ್ಣಾದಂತೆಲ್ಲ ಕಿತ್ತು ಒಣಗಿಸಿ ಸಂಸ್ಕರಿಸಿ ಮಾರಾಟಕ್ಕೆ ಬಿಡುಗಡೆ ಮಾಡಲಾಗುತ್ತದೆ. ಹೂ ಬಿಡುವ ಕಾರ್ಯ ಮಳೆ ಚೆನ್ನಾಗಿದ್ದರೆ ನವೆಂಬರ್‌ವರೆಗೂ ಮುಂದುವರಿಯುತ್ತದೆ. ಆದ್ದರಿಂದ ಏಲಕ್ಕಿ ಕುಯಿಲು ಸಹ ಡಿಸೆಂಬರ್ ಅಂತ್ಯದವರೆಗೂ ನಡೆಯುತ್ತದೆ.

ಬಲಿತ ಹಣ್ಣು ಕಾಯಿಗಳನ್ನು 4-5 ದಿವಸಗಳ ಕಾಲ ಪದೇಪದೇ ಬಿಸಿಲಿನಲ್ಲಿ ಒಣಗಿಸಿ, ಸ್ವಚ್ಛಗೊಳಿಸಿ ವ್ಯಾಪಾರಕ್ಕೆ ಅಣಿಮಾಡುತ್ತಾರೆ. ತೊಟ್ಟು ಉದುರಿಸಿ ಸ್ವಚ್ಛಮಾಡಲು ಈಗ ಯಂತ್ರಗಳು ಬಂದಿವೆ. ಬಿಸಿಲು ಸಾಕಾಗದೆ

ಹೋಡಗಟ್ಟಿದ ವಾತಾವರಣದಲ್ಲಿ ಒಣಗಿಸಿದರೆ ಇದರ ಗುಣಮಟ್ಟ ಹಾಳಾಗುತ್ತದೆ. ಇದನ್ನು ನಿವಾರಿಸುವ ಸಲುವಾಗಿ ಮಣ್ಣಿನ ಗೂಡು ಕಟ್ಟಿ ಮೇಲೆ ಸಾರಿಸಿ, ಅದರ ಮೇಲೆ ಇದರ ಹಣ್ಣು ಹರಡಿ ಗೂಡಿನ ಒಳಗೆ ಬೆಂಕಿ ಹಾಕಿ ಅದರ ಕಾವಿನಿಂದ ಇದು ಒಣಗುವಂತೆಯೂ ಮಾಡುತ್ತಾರೆ. ಈ ಕ್ರಮದಿಂದ ಇದು ಹಸುರು ಬಣ್ಣಕ್ಕೆ ತಿರುಗುತ್ತದೆ. ಇದನ್ನು ಒಣಗಿಸಲು ಈಗ ಆಧುನಿಕ ಯಂತ್ರಗಳೂ ಬಂದಿವೆ. ಸುಸ್ಥಿತಿಯಲ್ಲಿರುವ ತೋಟದಲ್ಲಿ ವರ್ಷಕ್ಕೆ ಎಕರೆ ಒಂದಕ್ಕೆ ಐವತ್ತರಿಂದ ಅರವತ್ತು ಕೆ.ಜಿ. ಕುಯ್ಲುಮಾಡಬಹುದು. ಆಧುನಿಕ ಕೃಷಿ ಅನುಸರಿಸಿ ಬೇಸಿಗೆಯಲ್ಲಿ ತುಂತುರು ನೀರಾವರಿ ನೀಡಿದರೆ 500 ಕೆ.ಜಿ.ಗೂ ಹೆಚ್ಚು ಇದನ್ನು ಬೆಳೆಯಬಹುದೆಂದು ಕಂಡುಬಂದಿದೆ. ಈ ಬೆಳೆ ಸಮೃದ್ಧವಾಗುವುದು ಏಪ್ರಿಲ್ ಮತ್ತು ಮೇ ತಿಂಗಳಲ್ಲಿ ಬೀಳುವ ಮಳೆಯನ್ನು ಹೆಚ್ಚಾಗಿ ಅವಲಂಬಿಸಿದೆ. ಆಗ ಸರಿಯಾದ ಪ್ರಮಾಣದಲ್ಲಿ ಮತ್ತು ಸರಿಯಾದ ಬಿಡುವಿನಲ್ಲಿ ಮಳೆಯಾಗದಿದ್ದರೆ ಮುಂದೆ ಎಷ್ಟೇ ಮಳೆ ಬಂದರೂ ಫಸಲಿಗೆ ಧಕ್ಕೆಯಾಗುತ್ತದೆ. ಕೃತಕವಾಗಿ ತುಂತುರು ಅಥವಾ ಹನಿ ನೀರಾವರಿಯಿಂದ ಈ ಸಮಸ್ಯೆಯನ್ನು ಸ್ವಲ್ಪಮಟ್ಟಿಗೆ ಪರಿಹರಿಸಿ ಕೊಳ್ಳಬಹುದು. ಆದರೆ ವಾತಾವರಣದಲ್ಲಿ ಹೆಚ್ಚಿನ ತೇವಾಂಶ ಇಲ್ಲದಿದ್ದರೆ ಆಗಲೂ ಫಸಲು ಕಡಿಮೆಯಾಗುತ್ತದೆ.

ಇದಕ್ಕೆ ಅನೇಕ ರೋಗಬಾಧೆಗಳುಂಟು. ನಾನಾ ತರದ ಕೀಟಗಳು ಇದರ ಹೀಚು ಮಿಡಿಗೆ ಸೋಂಕಿ ಕಾಯಿ ಬಲಿಯದೆ ಪೊಳ್ಳಾಗುವಂತೆ ಮಾಡುತ್ತವೆ. ನುಸಿರೋಗ ತಗುಲಿದರೆ ಹೀಚಿನಲ್ಲೇ ಕಾಯಿಯ ಬೆಳೆವಣಿಗೆ ಕುಂಠಿತವಾಗಿ ಕಜ್ಜಿ ಕಾಯಿ ಎನಿಸಿಕೊಳ್ಳುತ್ತದೆ. ಕಾಂಡ ಕೊರಕ ಕೀಟಗಳು ಗಿಡಗಳ ದಿಂಡನ್ನು ತಿಂದು ಟೊಳ್ಳು ಮಾಡಿ ಗಿಡಗಳನ್ನೇ ನಾಶಪಡಿಸುತ್ತವೆ. ಇವುಗಳ ನಿವಾರಣೆಗೆ ವಿವಿಧ ಕ್ರಿಮಿನಾಶಕಗಳು ಮಾರುಕಟ್ಟೆಗೆ ಬಂದಿವೆ. ಅವುಗಳಲ್ಲಿ ಬೋರ್ಡೋ ಮಿಶ್ರಣ, ಮೋನೋ ಕ್ರೊಟೋಫಾಸ್ (ನುವಕ್ರಾನ್) ಫೋಸೋಲಾನ್ (ಝೊಲಾನ್) ಮುಖ್ಯವಾದವು. ಇವನ್ನು ನಿಗದಿತ ಪ್ರಮಾಣದಲ್ಲಿ ಸಿಂಪಡಿಸಿ ಕೀಟ ಬಾಧೆಯನ್ನು ನಿವಾರಿಸಿಕೊಳ್ಳಬಹುದು. ಈ ಗಿಡಗಳಿಗೆ ಬೇರಿನ ಸೋಂಕಿನಿಂದ ಕಟ್ಟೆರೋಗ ಬರುವುದುಂಟು. ಹಣ್ಣುಗಳಿಗೆ ಅಳಿಲು, ಹಕ್ಕಿಗಳ ಕಾಟವೂ ಇದೆ. ಮಂಗಗಳ ಕಾಟವೂ ಉಂಟು. ಮಂಗಗಳು ಗಿಡಗಳನ್ನು ಸಿಗಿದು ಹಾಳು ಮಾಡುವುದುಂಟು.

ಇದಕ್ಕಿರುವ ಬೇಡಿಕೆ ಮತ್ತು ಬೆಲೆಯಿಂದಾಗಿ ವಿವಿಧ ರಾಷ್ಟ್ರಗಳು ಹೊಸದಾಗಿ ಇದನ್ನು ಬೆಳೆಯಲು ಮುಂದಾಗಿವೆ. ಇದನ್ನು ಬೆಳೆಯುವ ಒಟ್ಟು ಪ್ರದೇಶದ ಸೇ.90ರಷ್ಟು ಪ್ರದೇಶ ಗ್ವಾಟೆಮಾಲದಲ್ಲಿದ್ದು ಅಲ್ಲಿನ ಉತ್ಪತ್ತಿ ಪ್ರಪಂಚದ ಇದರ ಉತ್ಪತ್ತಿಯ ಸೇ.48ರಷ್ಟು ಆಗುತ್ತದೆ. ಭಾರತದ ಕೇರಳದಲ್ಲಿ 44,250 ಹೆಕ್ಟೇರು, ಕರ್ನಾಟಕದಲ್ಲಿ 33,743 ಹೆಕ್ಟೇರು ಮತ್ತು ತಮಿಳುನಾಡಿನಲ್ಲಿ 6048 ಹೆಕ್ಟೇರುಗಳಲ್ಲಿ ಇದನ್ನು ಬೆಳೆಯಲಾಗುತ್ತಿದೆ. ಈ ಏಲಕ್ಕಿಯನ್ನು ಸಣ್ಣ ಏಲಕ್ಕಿ ಎಂದು ಕರೆಯಲಾಗುತ್ತದೆ. ಈಶಾನ್ಯ ಭಾರತದ ರಾಜ್ಯಗಳಾದ ಅಸ್ಸಾಂ, ಮಣಿಪುರ, ಮೇಘಾಲಯಗಳಲ್ಲೂ ಇದನ್ನು ಬೆಳೆಯುತ್ತಿದ್ದು ಆ ಏಲಕ್ಕಿಯನ್ನು ದೊಡ್ಡ ಏಲಕ್ಕಿ ಎಂದು ಕರೆಯಲಾಗುತ್ತದೆ. ಕರ್ನಾಟಕ ರಾಜ್ಯದಲ್ಲಿ ಹೆಚ್ಚು ಬೆಳೆಯುವ ಜಿಲ್ಲೆ ಕೊಡಗು (14,500 ಹೆಕ್ಟೇರ್). ಹಾಸನ (8,480 ಹೆಕ್ಟೇರ್), ಚಿಕ್ಕಮಗಳೂರು (5,347 ಹೆಕ್ಟೇರ್), ಶಿವಮೊಗ್ಗ (318 ಹೆಕ್ಟೇರ್) ಮತ್ತು ಉತ್ತರ ಕನ್ನಡ (317 ಹೆಕ್ಟೇರ್) ಜಿಲ್ಲೆಗಳು ಅನಂತರದ ಸ್ಥಾನದಲ್ಲಿ ಬರುತ್ತವೆ. ಹಾಸನ ಜಿಲ್ಲೆಯ ಮಂಜರಾಬಾದ್ ಅಥವಾ ಸಕಲೇಶಪುರ ತಾಲ್ಲೂಕಿನ ಏಲಕ್ಕಿ ಉತ್ತಮ ಗುಣಮಟ್ಟದ್ದು. ಇದಕ್ಕೆ ಸಿಗುವ ಬೆಲೆಯೂ ಹೆಚ್ಚು.

ಇಂದು ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಈ ಬೆಳೆ ಕ್ಷೀಣ ಸ್ಥಿತಿಯಲ್ಲಿದೆ. ಕಾಡಿನ ನಾಶ ಮತ್ತು ಪಾರಂಪರಿಕವಾಗಿ ಏಲಕ್ಕಿ ಬೆಳೆಯುತ್ತಿದ್ದ ಪ್ರದೇಶಗಳಲ್ಲಿ ಕಾಫಿ ಸಾಗುವಳಿಯನ್ನು ವಿಸ್ತರಿಸಿದ್ದು ಇಂಥ ಕ್ಷೀಣ ಸ್ಥಿತಿಗೆ ಕಾರಣಗಳಾಗಿವೆ ಎನ್ನಬಹುದು.

*

**ಏಲೇಶ್ವರದ ಕೇತಯ್ಯ :** ಹನ್ನೆರಡನೆಯ ಶತಮಾನದಲ್ಲಿದ್ದ ಶಿವಶರಣ ಹಾಗೂ ವಚನಕಾರ. ಗುಲ್ಬರ್ಗ ಜಿಲ್ಲೆಯ ಏಲೇಶ್ವರ ಅಥವಾ ಈಗಿನ ಏಲೇರಿ ಈತನ ಜನ್ಮಸ್ಥಳ. ಇವನ ಹೆಂಡತಿ ಸಾಯಿದೇವಿ, ಮಗ ಶಿವಣ್ಣ, ಮಗಳು ಶಿವಕ್ಕ. ಕೇತಯ್ಯ ವೀರಶೈವಾಚಾರದಲ್ಲಿ ಅತ್ಯಂತ ನಿಷ್ಠೆಯುಳ್ಳವನಾಗಿದ್ದ. ಈತ ರಾಜ ದಯಪಾಲಿಸಿದ ಲಿಂಗಮುದ್ರೆಯ ಭೂಮಿಯಲ್ಲಿ ವ್ಯವಸಾಯ ಮಾಡಿ ಉಪಜೀವನ ನಡೆಸುತ್ತಿದ್ದ. ಈತ ಭವಿಸಂಪರ್ಕವೇ ಇಲ್ಲದೆ ಇರಲು ಕೆಲವರು ವೀರಶೈವ ಸಂಪ್ರದಾಯ ದ್ರೋಹಿಗಳು ಇವನ ಕಣಜಕ್ಕೆ ಬೆಂಕಿಯನ್ನು ಹಾಕಿ ಉರಿಸಿದ್ದಾಗ ಬೆಂದ ಬೀಜವನ್ನೇ ಬಿತ್ತಿ ಬೆಳೆದನೆಂದೂ ತನ್ನನ್ನು ಕೊಲ್ಲಲು ಬಂದ ಕಟುಕರಿಗೆ ತನ್ನ ವಚನಗಳಮೂಲಕ ವೀರಶೈವಧರ್ಮ ಬೋಧಿಸಿ, ಅವರಿಗೆ ವೀರಶೈವದೀಕ್ಷೆ ಕೊಟ್ಟನೆಂದೂ ಕಥೆಯಿದೆ.

ಈತ ಸು.200 ವಚನಗಳನ್ನು ಬರೆದಿದ್ದಾನೆ. ರಾಮೇಶ್ವರಲಿಂಗ ಅಥವಾ ಏಲೇಶ್ವರಲಿಂಗ ಎಂಬುದು ಇವನ ವಚನಗಳ ಅಂಕಿತ. ಭಕ್ತರಿಗೆ ಬಯಕೆಯುಂಟೆ? ನಿತ್ಯಂಗೆ ಸಾವುಂಟೇ? ಸದ್ಭಕ್ತರಿಗೆ ಮಿಥ್ಯತಥ್ಯವುಂಟೇ? ಕೃತಕೃತ್ಯನಾದ ಶಾವಿನಲಿ ಪ್ರತ್ಯುತ್ತರಗೆಯ್ದಡೆ ಸತ್ಯ ಸದಾಚಾರಕ್ಕೆ ಹೊರಗೂ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದ ಆಣೆ ಎಂಬ ವಚನ ಇವನ ಶೈಲಿಗೆ ಉದಾಹರಣೆಯಾಗಿದೆ. (ಎಸ್.ಐ.)

**ಐಗಂಡಪುರ :** ಬೆಂಗಳೂರು ಉತ್ತರ ತಾಲ್ಲೂಕಿನ ಹೆಸರುಘಟ್ಟ ಕೆರೆಯ ದಕ್ಷಿಣ ದಂಡೆಯಲ್ಲಿರುವ ಗ್ರಾಮ. ಇದರ ಪ್ರಾಚೀನ ಹೆಸರು ಐವರ್ಕಂಡಪುರವೆಂದೂ ಐದು ಜನ- ಪಂಚಪಾಂಡವರು- ಕಂಡು ನೆಲೆಸಿದ ಗ್ರಾಮವಾದ್ದರಿಂದ ಇದಕ್ಕೆ ಈ ಹೆಸರು ಬಂದಿತೆಂದೂ ಹೇಳಲಾಗಿದೆ. ಇಲ್ಲಿ ಧರ್ಮೇಶ್ವರ ಎಂಬ ದೊಡ್ಡ ದೇವಾಲಯವಿದ್ದು ಅದರೊಳಗೆ ಭೀಮ, ನಕುಲ, ಸಹದೇವ ಮತ್ತು ಕುಂತಿಯರ ಹೆಸರಿನಲ್ಲಿ ಲಿಂಗಗಳನ್ನೊಳಗೊಂಡ ಸಣ್ಣ ಗುಡಿಗಳಿವೆ. ಧರ್ಮೇಶ್ವರಾಲಯ ದಕ್ಷಿಣಾಭಿಮುಖವಾಗಿದ್ದರೂ ಗರ್ಭಗುಡಿಯ ಲಿಂಗ ಪೂರ್ವಾಭಿಮುಖವಾಗಿದೆ. ಗರ್ಭಗೃಹ ಸುಕನಾಸಿ ಮತ್ತು ನವರಂಗಗಳನ್ನೊಳಗೊಂಡಿದೆ. ಗರ್ಭಗೃಹದ ಮೇಲೆ ಪಲ್ಲವ ಶೈಲಿಯ ಮೆಟ್ಟಲು ಮೆಟ್ಟಲಿನ ವಿಮಾನವಿದೆ. ಒಳಗೆ ಲಿಂಗೋದ್ಭವ ಮೂರ್ತಿಯ ವಿಗ್ರಹವೊಂದಿದೆ. ಲಿಂಗಪೀಠದ ಮೇಲಿರುವ ಸು.11ನೆಯ ಶತಮಾನದ ಪದ್ಯಶಾಸನಗಳಿಂದ ಈ ಪೀಠವನ್ನು ವಾಮನನ ಅಧೀನನಾದ ಮಾದನಾಯಕ ಮಾಡಿಸಿದುದಾಗಿ ತಿಳಿದುಬರುತ್ತದೆ.

ಇಲ್ಲಿನ ತಮಿಳು ಶಾಸನಗಳಿಂದ ಈ ಗ್ರಾಮದ ಮತ್ತು ಆಲಯ ಕುರಿತಾದ ಹೆಚ್ಚಿನ ವಿವರಗಳು ಲಭಿಸಿವೆ. ಚೋಳ ಮನೆತನದ 1ನೆಯ ರಾಜೇಂದ್ರ ಮತ್ತು 1ನೆಯ ಕುಲೋತ್ತುಂಗರು ಕ್ರಮವಾಗಿ 1033-34 ಮತ್ತು 1113-14ನೆಯ ವರ್ಷದ ಮತ್ತು ಹೊಯ್ಸಳ ರಾಮನಾಥನ ಆಳ್ವಿಕೆಯ 38ನೆಯ ವರ್ಷದ ಹಾಗೂ ಮುಮ್ಮಡಿ ಬಲ್ಲಾಳ 1302ರಲ್ಲಿ ಹೊರಡಿಸಿದ ತಮಿಳು ಶಾಸನಗಳು ಇಲ್ಲಿವೆ. ಚೋಳರ ಶಾಸನಗಳಿಂದ ಈ ಗ್ರಾಮ ವಿಕ್ರಮಚೋಳಮಂಡಲದ ಕುಕ್ಕನೂರು ನಾಡಿಗೆ ಸೇರಿದುದಾಗಿ ತಿಳಿದಿದೆ. ರಾಜೇಂದ್ರನ ಶಾಸನದಲ್ಲಿ ಈ ಗ್ರಾಮವನ್ನು ಕೊಳಿಸಂಪೂಚ್ಚೈ ಎಂದೂ ಕುಲೋತ್ತುಂಗನ ಶಾಸನದಲ್ಲಿ ಪೆರಿಯಮತ್ತಕ್ಕೂರು ಎಂದೂ ಕರೆದಿದೆ. ಹೊಯ್ಸಳ ರಾಮನಾಥನ ಶಾಸನದಲ್ಲಿ ಇಳೈಪಾಕನಾಡಿಗೆ ಸೇರಿದ ತೀಗೈಕೊಟ್ಟೈಪಯರ್ ಕಟ್ಟಂ ಎಂದಿದೆ. ಎಲ್ಲ ಶಾಸನಗಳಲ್ಲಿಯೂ ದೇವರನ್ನು ಐವರ್‌ಗಂಡ ಮಹಾದೇವ, ಐವರ್ಕಂಡೀಶ್ವರಮುಡೈಯ ಮಹಾದೇವ ಮತ್ತು ಐವರ್ಕಂಡೀಶ್ವರ ನಾಯನಾರ್ ಎಂದು ಕರೆದಿದೆ. ರಾಜೇಂದ್ರನ ಶಾಸನದಲ್ಲಿ ಈ ದೇವರನ್ನು ಸಿದ್ಧೇಶ್ವರನೆಂದು ಸಂಬೋಧಿಸಿದೆ. ಇದನ್ನು ಕಟ್ಟಿಸಿದಾತ ಯುದ್ಧಮಲ್ಲ. ದಂಡನಾಯಕ ಅಪ್ಪಯನ್ ವಾಮನಯ್ಯನ್ ಎಂದು ಹೇಳಿದೆ.

## ಐ

ಲಿಂಗಪೀಠದಲ್ಲಿ ದೊರೆತ ಶಾಸನದಲ್ಲಿ ಉಕ್ತನಾದ ವಾಮನ ಈತನೇ ಆಗಿರಬೇಕು. ಈ ದೇವಾಲಯ 11ನೆಯ ಶತಮಾನದ ಕಟ್ಟಡವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಕುಂತಿಲಿಂಗದ ಗುಡಿಯ ಬಳಿ ದೊರೆತ ಹೊಯ್ಸಳ ನರಸಿಂಹನ ಕನ್ನಡ ಶಾಸನದಲ್ಲಿ ಈ ದೇವರನ್ನು ಅಯ್ಯರಗಂಡ ದೇವನೆಂದೇ ಕರೆದಿದೆ. (ಬಿ.ಆರ್.ಜಿ.)

**ಐತಿಹ್ಯ :** ನಿರ್ದಿಷ್ಟ ಸ್ಥಳವೊಂದಕ್ಕೆ ಸಂಬಂಧಪಟ್ಟದ್ದಾಗಿದ್ದು, ಪ್ರಾಚೀನವಾಗಿದ್ದು, ವಾಸ್ತವಿಕ ಘಟನೆಯೊಂದರ ಆಧಾರದ ಮೇಲೆ ಕಾಲ್ಪನಿಕ ಅಂಶವನ್ನು ಒಳಗೊಂಡು ಬೆಳೆದು ನಿಂತಿರುವ, ಪರಂಪರಾಗತವಾಗಿ ಜನಪದ ನಂಬಿಕೊಂಡು ಬಂದ ಒಂದು ವಿಶೇಷ ಸಂಗತಿ. ಇಂಥ ಐತಿಹ್ಯಗಳು ಕರ್ನಾಟಕದ ಹಲವೆಡೆಗಳಲ್ಲಿ ಕಂಡುಬರುತ್ತವೆ. ಐತಿಹ್ಯಗಳು ಪ್ರಾಚೀನವಾದ ಚಾರಿತ್ರಿಕ ಘಟನೆಗಳ ಪಳೆಯುಳಿಕೆಗಳು ಎಂಬಂತೆ ತೋರಿದರೂ ಎಲ್ಲವೂ ಹಾಗಲ್ಲ. ಕೆಲವು ಸ್ವಲ್ಪಮಟ್ಟಿಗೆ ಚಾರಿತ್ರಿಕ ಅಂಶವನ್ನು ಸೂಚಿಸಿದರೂ ಬಹಳಷ್ಟು ಪೌರಾಣಿಕ ಮತ್ತು ಕಾಲ್ಪನಿಕ ಅಂಶಗಳಿಂದ ಕೂಡಿದ್ದು ಆಕರ್ಷಕವಾಗಿರುತ್ತವೆ. ಕೆಲವೊಮ್ಮೆ ಇವುಗಳಲ್ಲಿ ಚಾರಿತ್ರಿಕ ಅಂಶವೆಷ್ಟು, ಕಾಲ್ಪನಿಕ ಅಂಶವೆಷ್ಟು ಎಂಬುದನ್ನು ನಿರ್ಧರಿಸುವುದು ಕಷ್ಟವಾಗುತ್ತದೆ.

ಸ್ವರೂಪದಲ್ಲಿ ಐತಿಹ್ಯಗಳು ತುಂಬ ಚಿಕ್ಕವಾಗಿದ್ದು, ಗದ್ಯಾತ್ಮಕವಾಗಿದ್ದು ಒಂದು ಅಥವಾ ಎರಡು ಆಶಯಗಳ ವ್ಯಾಪ್ತಿಯನ್ನಷ್ಟೇ ಪಡೆದಿರುತ್ತವೆ. ಅವು ವ್ಯಕ್ತಿ, ಸ್ಥಳ ಅಥವಾ ಘಟನೆಯೊಂದರ ವಿವರಣಾತ್ಮಕ ಕಥೆಗಳಾಗಿರುತ್ತವೆ. ಆದರೆ ಇವು ಸಂಪ್ರದಾಯ ಮೂಲದಿಂದ ಬಂದವುಗಳಾಗಿದ್ದು ಐತಿಹ್ಯಗಳ ವ್ಯಾಪ್ತಿಯನ್ನು ಪಡೆದಿರುತ್ತವೆ. ತಾವು ಹುಟ್ಟಿದ ನಿಸರ್ಗಕ್ಕೆ ಅಂಟಿಕೊಂಡಿರುವುದು ಐತಿಹ್ಯಗಳ ಮತ್ತೊಂದು ವಿಶಿಷ್ಟ ಲಕ್ಷಣ.

ಐತಿಹ್ಯಗಳನ್ನು ವಸ್ತುವಿನ ದೃಷ್ಟಿಯಿಂದ ಪ್ರಧಾನವಾಗಿ ಪೌರಾಣಿಕ, ಐತಿಹಾಸಿಕ ಹಾಗೂ ಸಾಮಾಜಿಕ ಎಂದು ಮೂರು ಬಗೆಯಲ್ಲಿ ವಿಂಗಡಿಸಬಹುದು. ಈ ಒಂದೊಂದು ವಸ್ತುವಿಗೆ ಸಂಬಂಧಿಸಿದಂತೆ ಹುಟ್ಟಿಕೊಂಡಿರುವ ಕಥೆಗಳು ಸಂಪೂರ್ಣವಾಗಿ ಆಧಾರರಹಿತವಾದುವುಗಳಾಗಿರದೆ ವಾಸ್ತವಿಕಾಂಶದ ಜೊತೆಗೆ ಕಾಲ್ಪನಿಕಾಂಶಗಳಿಂದ ಕೂಡಿದ್ದು ಆಕರ್ಷಕವಾಗಿರುತ್ತವೆ. ಇವುಗಳಲ್ಲಿ ಜನಪದರ ನ್ಯಾಯ, ಧರ್ಮನಿಷ್ಠೆ ಹಾಗೂ ಅಂಥ ವಸ್ತುಗಳ ಬಗ್ಗೆ ಅವರಿಗಿರುವ ಪೂಜ್ಯ ಭಾವನೆಯನ್ನು ಕಾಣಬಹುದು.

ವಿತರಣೆಯ ದೃಷ್ಟಿಯಿಂದ ಐತಿಹ್ಯಗಳನ್ನು ಸ್ಥಳೀಯ ಹಾಗೂ ಸಂಚಾರಿ ಎಂದು ವಿಂಗಡಿಸಬಹುದು. ಸ್ಥಳೀಯ ಐತಿಹ್ಯಗಳು ಗೊತ್ತಾದ ಸ್ಥಳವೊಂದಕ್ಕೆ ಸೀಮಿತವಾಗಿದ್ದು, ಆ ನಿರ್ದಿಷ್ಟ ಸ್ಥಳವೊಂದರ ವೈಶಿಷ್ಟ್ಯಗಳನ್ನು ಬಣ್ಣಿಸುತ್ತವೆ, ಇಲ್ಲವೆ ಅಂಥ ಸ್ಥಳವೊಂದರ ಸಂಪ್ರದಾಯವನ್ನು ಕಾಯ್ದುಕೊಂಡು ಬರುವ ಕಥೆಯನ್ನು ಹೊಂದಿರುತ್ತವೆ. ಇವಕ್ಕೆ ಸಂಚಾರಿ ಗುಣವಿಲ್ಲ. ಸಾಮಾನ್ಯವಾಗಿ ಕಿನ್ನರ ಕಥೆಯ ಲಕ್ಷಣವನ್ನು ಪಡೆದಿದ್ದು, ಘಟನಾತ್ಮಕ ಹಾಗೂ ವಿವರಣಾತ್ಮಕವೆನಿಸಿದ್ದು ರಚನೆಯಲ್ಲಿ ಸರಳವಾಗಿರುತ್ತವೆ. ಸ್ಥಳೀಯ ಐತಿಹ್ಯಗಳಲ್ಲಿಯೂ ಸ್ಥಳದೇವತೆ, ಬಲಿ, ಕೌಟುಂಬಿಕ, ಐತಿಹಾಸಿಕ, ಕೆರೆ, ಬಾವಿ, ಕೊಳ, ಪ್ರಕೃತಿಯ ವೈಲಕ್ಷಣ್ಯ, ಊರಿನ ಹೆಸರು ಮುಂತಾದ ಹಲವಾರು ಬಗೆಗಳನ್ನು ಕಾಣಬಹುದು.

ಸಂಚಾರಿ ಐತಿಹ್ಯಗಳು ಲಕ್ಷಣ ಸ್ವಭಾವದಲ್ಲಿ ಸ್ಥಳೀಯ ಐತಿಹ್ಯಗಳಿಂದ ಭಿನ್ನವಾದವು. ಇವುಗಳಲ್ಲಿ ಆಶಯಗಳು ಜಾಸ್ತಿಯಿದ್ದು ಐತಿಹ್ಯ ದೀರ್ಘವಾಗಿರುತ್ತದೆ. ಎಷ್ಟೇ ಸಂಚಾರಗೊಂಡರೂ ಈ ಆಶಯಗಳು ಬದಲಾಗುವುದಿಲ್ಲ. ಯಾವುದೋ ಒಂದು ಸ್ಥಳದಲ್ಲಿ ರೂಪುಗೊಂಡಿದ್ದರೂ ಸಂಚಾರಗೊಂಡು ಹಲವು ಪಾಠಾಂತರಗಳನ್ನು ಪಡೆದುಕೊಂಡಿದ್ದು ಮೂಲ ಪಾಠವನ್ನು ಗುರುತಿಸುವುದು ಹಲವೊಮ್ಮೆ ಕಷ್ಟವಾಗುತ್ತದೆ.

ಸ್ಥಳೀಯ ಐತಿಹ್ಯವಾಗಲಿ, ಸಂಚಾರಿ ಐತಿಹ್ಯವಾಗಲಿ ವಿಶ್ವವ್ಯಾಪಿಯಾದುದು. ಅಲ್ಲಲ್ಲಿಯ ನಂಬಿಕೆ, ಧಾರ್ಮಿಕ ಶ್ರದ್ಧೆ, ಸಂಪ್ರದಾಯಗಳ ಪ್ರಾಬಲ್ಯಗಳಿಗನುಗುಣವಾಗಿ ಇವುಗಳ ಪ್ರಮಾಣವನ್ನು ಕಾಣಬಹುದು. ಇಂಥ ಐತಿಹ್ಯಗಳ ವಾಸ್ತವಿಕಾಂಶ ಏನೇ ಇರಲಿ ಅವು ನಮ್ಮ ಗಮನ ಸೆಳೆಯುವುದು ಅವುಗಳ ಅದ್ಭುತ ಕಲ್ಪನಾಸಾಮರ್ಥ್ಯದಿಂದ.

ಪೌರಾಣಿಕ ವ್ಯಕ್ತಿಗಳೆನಿಸಿದ ರಾಮ, ಸೀತೆ, ಆಂಜನೇಯ, ಅರ್ಜುನ, ಭೀಮ, ಧರ್ಮರಾಯ, ಕುಂತಿ, ಪರಶುರಾಮ ಮುಂತಾದವರಿಗೆ ಸಂಬಂಧಿಸಿದಂತೆ ಹುಟ್ಟಿಕೊಂಡಿರುವ ಐತಿಹ್ಯಗಳು ಕರ್ನಾಟಕದಾದ್ಯಂತವೂ ಕಂಡುಬರುತ್ತದೆ. ಇವರು ಕರ್ನಾಟಕದ ಯಾವೊಂದು ಸ್ಥಳವನ್ನು ಸಂದರ್ಶಿಸದೆ, ಸ್ಪರ್ಶಿಸದೆ ಬಿಟ್ಟಿಲ್ಲವೆಂಬಂತೆ ಎಲ್ಲೆಡೆಯೂ ತಂಗಿ ಹೋದ ಗುರುತನ್ನು ಸೂಚಿಸುವ ಕಥೆಗಳನ್ನು ಕಟ್ಟಿ ಹೇಳುವುದುಂಟು. ಇವುಗಳ ಸಂಖ್ಯೆಯಂತೂ ಅಪರಿಮಿತ.

ರಾವಣ ಬಲವಂತವಾಗಿ ಸೀತೆಯನ್ನು ಆಕಾಶಮಾರ್ಗದಲ್ಲಿ ಕದ್ದೊಯ್ಯುವಾಗ ಆಕೆಯ ಸೀರೆಯ ಸೆರಗು ಜಾರಿ ಬೆಟ್ಟದ ತುದಿಯನ್ನು ಸವರಿಕೊಂಡು ಹೋಯಿತು, ಆ ಗುರುತು ಈಗಲೂ ಹಾಗೆಯೇ ಉಳಿದಿದೆ ಎಂಬ ಐತಿಹ್ಯ ತುಮಕೂರು ಜಿಲ್ಲೆಯ ಸಿದ್ಧಗಂಗಾ ಕ್ಷೇತ್ರದ ಬಳಿಯಿರುವ ರಾಮದೇವರ ಬೆಟ್ಟದ ತುದಿಯಲ್ಲಿ ಕಾಣುವ ಸೆರಗಿನಾಕಾರದ ಪಟ್ಟಿಗೆ ಈಗಲೂ ಉಳಿದುಬಂದಿದೆ. ಹಂಪೆಯ ಬಳಿಯ ಬಂಡೆಯೊಂದರ ಮೇಲೆ ಸೀರೆಯನ್ನು ಒಣಗ ಹಾಸಿದಂತೆ ಕಾಣುವ ಜಾಗವೊಂದಕ್ಕೆ ಸೀತಾದೇವಿ ಮಡಿಯುಟ್ಟು ಒಣಗಲು ಹಾಕಿದ ಸೀರೆಯ ಗುರುತು ಎಂಬ ಐತಿಹ್ಯವಿದೆ. ರಾಮಾದಿಗಳು ವನವಾಸದಲ್ಲಿ ತೊಡಗಿ ಸಂಚರಿಸುತ್ತ, ಮೇಲುಕೋಟೆಯ ಬೆಟ್ಟದ ದಕ್ಷಿಣ ತುದಿಗೆ ಬಂದರೆಂದೂ ಅಲ್ಲಿಗೆ ಬರುವಷ್ಟರಲ್ಲಿ ಸೀತಾದೇವಿ ಬಾಯಾರಿಕೆಯಿಂದ ಬಳಲಿರಲು, ಲಕ್ಷ್ಮಣ ಅಲ್ಲಿದ್ದ ಬಂಡೆಯೊಂದರ ಮೇಲೆ ಬಾಣ ಪ್ರಯೋಗ ಮಾಡಿ ನೀರು ಬರಿಸಿದನೆಂದೂ ಬಾಣಾಘಾತಕ್ಕೆ ಪಕ್ಕದ ಬಂಡೆಯೂ ಬಾಯಿ ಬಿಟ್ಟಿತೆಂದೂ ನಂಬುವವರಿದ್ದಾರೆ. ಇಂದಿಗೂ ಇದನ್ನೊಂದು ಪವಿತ್ರ ಸ್ಥಳವೆಂದು ಭಾವಿಸಿ ಜನ ಸಂದರ್ಶಿಸುವುದುಂಟು. ಸಮುದ್ರಕ್ಕೆ ಸೇತುವೆ ಕಟ್ಟಲು ಕಲ್ಲು ಬಂಡೆಗಳನ್ನು ಸಾಗಿಸುತ್ತಿದಾಗ, ಆಂಜನೇಯನ ಕೈಯಿಂದ ಜಾರಿದ ಕಲ್ಲು ಎಂದು ತೋರಿಸುವ ಬಂಡೆಯೊಂದು ಹಾಸನ ಜಿಲ್ಲೆಯ ಸಾಲಿಗ್ರಾಮದ ಸಮೀಪದಲ್ಲಿದೆ. ಇದನ್ನು ಆಂಜನೇಯನ ಕಲ್ಲೆಂದೇ ಜನ ಕರೆಯುತ್ತಾರೆ. ಹೊಸಬರ ಕಣ್ಣಿಗೆ ಕೇವಲ ನಿರ್ಜೀವವಾಗಿ, ಸಾಮಾನ್ಯ ಕಲ್ಲಾಗಿ ಕಾಣುವ ಒಂದು ವಸ್ತು ಜನಪದರ ಕಣ್ಣಿಗೆ ಯಾವುದೋ ಮಹತ್ಕಥೆಯನ್ನು ಸಾರುವ, ಯಾವುದೋ ಮಹಾನ್‌ವ್ಯಕ್ತಿಯ ಅಪೂರ್ವ ಸಾಹಸ ಕಥೆಯನ್ನು ಬಣ್ಣಿಸುವ, ನೀತಿಯನ್ನೋ ಸತ್ಯವನ್ನೋ ಸಾರುವ ಸಜೀವ ವಸ್ತುಗಳಾಗಿರುತ್ತವೆ.

ಮಹಾಭಾರತಕ್ಕೆ ಸಂಬಂಧಿಸಿದಂತೆ ನೋಡಿದರೆ ನಮ್ಮ ಜನರನ್ನು ಬಹಳವಾಗಿ ಆಕರ್ಷಿಸಿರುವ ವ್ಯಕ್ತಿ ಭೀಮ. ಎಲ್ಲಿ ಒಂದು ಹೆಬ್ಬಂಡೆ ಕಾಣಲಿ ಅಥವಾ ಬಂಡೆಯ ಮೇಲೆ ಒಂದು ಗುಡಿ ಕಾಣಲಿ ಅದನ್ನು ಭೀಮನಿಗೆ ಆರೋಪಿಸಿ ಕಥೆಯೊಂದನ್ನು ಕಟ್ಟಿರುವುದು ಕಂಡುಬರುತ್ತದೆ. ಅರಗಿನಮನೆಯಿಂದ ತನ್ನ ತಾಯಿ ಹಾಗೂ ಸೋದರರನ್ನು ಹೆಗಲ ಮೇಲೆ ಹೊತ್ತು ಸಾಗುವಾಗ ಭೀಮ ಇಟ್ಟ ಹೆಜ್ಜೆ ಗುರುತೆಂದು ತೋರುವ ಹೆಜ್ಜೆಯಾಕಾರದ ಗುಡಿಯೊಂದು ಮಂಡ್ಯ ಜಿಲ್ಲೆಯ ಬೆಳ್ಳೂರಿನ ಬಳಿಯ ಅನಂತಗಿರಿಯಲ್ಲಿದೆ. ಒಬ್ಬ ವ್ಯಕ್ತಿ ನಿರಾಯಾಸವಾಗಿ ಹೊರಕ್ಕೆ ಕಾಣದಂತೆ ಮಲಗುವಷ್ಟು ವಿಶಾಲವಾದ ಜಾಗವಿದ್ದು ಇದಕ್ಕೆ ಭೀಮನ ಹೆಜ್ಜೆ ಎಂದು ಕರೆಯುವರು. ಇಷ್ಟೇ ಅಲ್ಲದೆ ಇಲ್ಲಿಂದ ಕೆಲವು ಮೈಲಿಗಳ ದೂರದಲ್ಲಿ ಆತ ಇಟ್ಟ ಮತ್ತೊಂದು ಹೆಜ್ಜೆಯ ಗುರುತೂ ಇದೆ ಎಂದು ಹೇಳುತ್ತಾರೆ. ಇದನ್ನು ಗಮನಿಸಿದಾಗ ಭೀಮನ ಶಕ್ತಿ ಹಾಗೂ ಅವನ ಬೃಹದಾಕಾರದ ಬಗ್ಗೆ ಜನಪದರು ಹೊಂದಿದ್ದ ಕಲ್ಪನೆಯ ಅರಿವಾಗದಿರದು. ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಹಳ್ಳಿಯೊಂದರ ಬಳಿ ಇರುವ ಕೆರೆಯಲ್ಲಿ ಒಂದು ಕಪ್ಪೆಯೂ ಇಲ್ಲದೆ ಮತ್ತೊಂದು ಕಡೆಯ ಗುಂಡಿಯಲ್ಲಿ ನೂರಾರು ಕಪ್ಪೆಗಳಿರುವುದಕ್ಕೆ ಹೇಳುವ ಕಥೆ ಸ್ವಾರಸ್ಯವಾಗಿದೆ. ಬಾಯಾರಿಹೋದ ಧರ್ಮರಾಯ ನೀರು ಕುಡಿಯಲು ಈ ಕೆರೆಗೆ ಬಂದು ಬೊಗಸೆಯಲ್ಲಿ ನೀರೆತ್ತಿಕೊಂಡಾಗ ಜೊತೆಯಲ್ಲಿಯೇ ಕಪ್ಪೆಯೊಂದು ಬರಲು ಆತ ಬೇಸರದಿಂದ ಕೈ ಕೊಡವಿದನಂತೆ. ಅಂದಿನಿಂದ ಆ ಕೆರೆಯಲ್ಲಿ ಒಂದು ಕಪ್ಪೆಯೂ ಇಲ್ಲವಂತೆ.

ಪರಶುರಾಮನಿಗೆ ಸಂಬಂಧಿಸಿದಂತೆಯೂ ಅಲ್ಲಲ್ಲಿ ಇಂಥ ಹಲವಾರು ಐತಿಹ್ಯಗಳು ಹುಟ್ಟಿಕೊಂಡಿವೆ. ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನ ಮೈಸೂರು - ತುಮಕೂರು ರಸ್ತೆಯ ಮೂಡಣ ದಿಕ್ಕಿನಲ್ಲಿರುವ ಆಲತಿಗಿರಿಗೆ ಪರಶುರಾಮ ಬಂದಿದ್ದನೆಂದು ಪ್ರತೀತಿ. ಗಿರಿಯನ್ನು ಏರಿ ಆಯಾಸಗೊಂಡ ಪರಶುರಾಮ ಆಯಾಸ ಪರಿಹಾರಕ್ಕಾಗಿ ನೆತ್ತಿಯ ಹೆಬ್ಬಂಡೆಯೊಂದರ ನೆರಳಲ್ಲಿ ಆಶ್ರಯ ಪಡೆದು, ಪರಮೇಶ್ವರಾ ಎಂದು ಉದ್ಗಾರ ತೆಗೆದ ತಕ್ಷಣವೇ ಇಲ್ಲಿದ್ದೇನೆ ಎಂಬ ಕೂಗು ಬಂಡೆಯೊಳಗಿನಿಂದ ಕೇಳಿಬಂತಂತೆ. ಆತ ಪರಮಾಶ್ಚರ್ಯಗೊಂಡು ಕೈಯಲ್ಲಿದ್ದ ಕೊಡಲಿಯಿಂದ ಬಂಡೆಯನ್ನು ಸೀಳಿದನಂತೆ. ಹತ್ತಿಪ್ಪತ್ತು ಗಜ ಸೀಳಿದಂತಿರುವ ಈ ಬಂಡೆಯಲ್ಲಿ ಅಲ್ಲಲ್ಲಿ

ಕೊಡಲಿಯಿಂದ ಕಡಿದಂತೆ ಗುರುತುಗಳೂ ಒಳಗಡೆ ಶಿವಲಿಂಗವೂ ಕತ್ತಲು ಕವಿದಿದ್ದರೂ ಬಂಡೆಯೊಳಗೆ ನೀರೂ ಕಂಡುಬರುತ್ತವೆ.

ಹೀಗೆ ಪೌರಾಣಿಕ ಅಂಶಗಳನ್ನೊಳಗೊಂಡ ಐತಿಹ್ಯಗಳು ಅಪಾರ ಸಂಖ್ಯೆಯಲ್ಲಿ ದೊರೆಯುತ್ತವೆ. ಅವುಗಳ ಪ್ರಭಾವಕ್ಕೆ ಜನಪದರು ಎಷ್ಟರಮಟ್ಟಿಗೆ ಒಳಗಾಗಿದ್ದರೆಂಬುದನ್ನು ಇದು ವ್ಯಕ್ತಪಡಿಸುತ್ತದೆ.

ಐತಿಹಾಸಿಕ ವಿಷಯಕ್ಕೆ ಸಂಬಂಧಿಸಿದಂತೆಯೂ ಹೇರಳವಾಗಿ ಐತಿಹ್ಯಗಳು ಹುಟ್ಟಿಕೊಂಡಿವೆ. ಪರಾಕ್ರಮಿಗಳ ಸಾಹಸವನ್ನು ಬಣ್ಣಿಸುವ , ಅವರ ತ್ಯಾಗ, ಸಾಹಸ, ಸತ್ಯಸಂಧತೆಯನ್ನು ಎತ್ತಿಹಿಡಿಯುವ ಘಟನೆಗಳನ್ನೊಳಗೊಂಡ ಐತಿಹ್ಯಗಳು ವಿಶೇಷವಾಗಿ ಕಂಡುಬರುತ್ತವೆ. ಇವುಗಳನ್ನು ಸಂಪೂರ್ಣ ಸತ್ಯವೆಂದು ನಂಬಲಾಗದಿದ್ದರೂ ಇತಿಹಾಸವನ್ನು ಕುರಿತು ಸಂಶೋಧನೆ ನಡೆಸುವವರಿಗೆ ಇಂಥವುಗಳಿಂದ ಸ್ವಲ್ಪವಾದರೂ ಸಹಾಯಕ ಅಂಶಗಳು ದೊರೆಯಬಹುದು. ರಾಜೇಂದ್ರ ಚೋಳನ ಮಹಿಮೆಗೆ ಸಂಬಂಧಿಸಿದಂತೆ ಹೇಳುವ ಒಂದು ಐತಿಹ್ಯ ಕುತೂಹಲಕಾರಿಯಾಗಿದೆ. ಬೆಂಗಳೂರು ಜಿಲ್ಲೆಯ ರಾಮನಗರದ ಬಳಿ ಅವ್ವೇರಹಳ್ಳಿಯಲ್ಲಿ ರೇವಣಸಿದ್ಧೇಶ್ವರ ಬೆಟ್ಟವಿದೆ. ಇದು ತೀರ ಕಡಿದಾಗಿದ್ದು ತನ್ನದೇ ಆದ ಸೌಂದರ್ಯದಿಂದ ಆಕರ್ಷಕವಾಗಿದೆ. ಹಿಂದೆ ಇಲ್ಲಿ ಶಿವರಾತ್ರೀಶ್ವರರು ತಪಸ್ಸು ಮಾಡುತ್ತಿದ್ದರಂತೆ. ಒಮ್ಮೆ ರೇಣುಕರು ರಾಜೇಂದ್ರ ಚೋಳನ ಕನಸಿನಲ್ಲಿ ಬಂದು ಶಿವರಾತ್ರೀಶ್ವರರ ದರ್ಶನ ಪಡೆ ಎಂದು ಹೇಳಿದಂತಾಗಲು, ಇವನ ಕುದುರೆ ಹತ್ತಿ ಕಡಿದಾದ ಆ ಬೆಟ್ಟವನ್ನು ನಿರಾಯಾಸವಾಗಿ ಏರಿ ಹೋದನೆಂದು ಅಲ್ಲಿ ಕುದುರೆ ಗೊರಸಿನ ಗುರುತುಗಳನ್ನು ಇಂದಿಗೂ ತೋರಿಸುತ್ತಾರೆ.

ಸಾಮಾಜಿಕ ಐತಿಹ್ಯಗಳು ಅತ್ಯಂತ ಆಕರ್ಷಕವಾಗಿರುತ್ತವೆ. ಸತ್ಯ, ಧರ್ಮ, ನ್ಯಾಯ, ನೀತಿ, ತ್ಯಾಗ ಮೊದಲಾದವುಗಳ ಮಹಿಮೆಯನ್ನು ವಿಶೇಷವಾಗಿ ಬೋಧಿಸುವಂತಿರುವ ಒಂದೊಂದು ವಸ್ತುವನ್ನೂ ಒಂದೊಂದು ನೆಲೆಯನ್ನೂ ತೋರಿಸಿ ಅದಕ್ಕೆ ಸಂಬಂಧಿಸಿದಂತೆ ಹೇಳುವ ಇಂಥ ಕಥೆಗಳು ನಮ್ಮ ಕುತೂಹಲವನ್ನು ಕೆರಳಿಸುತ್ತವೆ. ಯದುಗಿರಿಯ ಬಳಿಯಿರುವ ಅಕ್ಕ ತಂಗಿಯರ ಕೊಳಗಳ ನೀರು, ಒಂದರಲ್ಲಿ ಸಿಹಿಯಾಗಿಯೂ ಮತ್ತೊಂದರಲ್ಲಿ ಉಪ್ಪಾಗಿಯೂ ಇರುವುದಕ್ಕೆ ಅವರು ಕೊಡುವ ಕಾರಣ ನೀತಿಬೋಧಕವಾದುದು. ಅಕ್ಕ ಪ್ರೀತಿಯಿಂದ ಜನೋಪಕಾರ ದೃಷ್ಟಿಯಿಂದ, ಎಷ್ಟು ಹಣ ಖರ್ಚಾದರೂ ಲೆಕ್ಕಿಸದೆ ಕೊಳವನ್ನು ಕಟ್ಟಿಸಿದಳೆಂದೂ ಹಾಗಾಗಿ ಅದರಲ್ಲಿ ಸಿಹಿನೀರು ಬಂತೆಂದೂ ಅದರ ಪಕ್ಕದಲ್ಲಿಯೇ ತಂಗಿ ಅಕ್ಕನ ಮೇಲಿನ ಪೈಪೋಟಿಯಿಂದ, ಅಷ್ಟೇ ಹಣ ಸುರಿದು ಕೊಳ ಕಟ್ಟಿಸಿ ಎಷ್ಟೊಂದು ಹಣ ಖರ್ಚಾಯಿತು ಎಂದು ಲೆಕ್ಕ ಹಾಕಿದ್ದರಿಂದ ಉಪ್ಪುನೀರಾಯಿತೆಂದೂ ಹೇಳುತ್ತಾರೆ. ಮಾಡುವ ಕೆಲಸದಲ್ಲಿ ನಿಷ್ಠೆ ಮನಃಶುದ್ಧಿ ಇರಬೇಕೆಂಬುದನ್ನು ಈ ಕಥೆ ಸಾರಿ ಹೇಳುತ್ತದೆ. ತ್ಯಾಗಮಯಿ ನೀರಗಂಟಿ ಶ್ರವಣನ ಕಥೆ ಮನಕರಗಿಸುವಂಥದು. ಚಿತ್ರದುರ್ಗ ಜಿಲ್ಲೆಯ ಧರ್ಮಪುರದ ಬಳಿ ಹೊಸದಾಗಿ ಕೆರೆ ನಿರ್ಮಾಣವಾಗಿತ್ತು. ನಿರಂತರ ಹಾಗೂ ಭೀಕರ ಮಳೆಯಿಂದಾಗಿ ಕೆರೆ ತುಂಬಿ ತುಳುಕಾಡಲಾರಂಭಿಸಿ ಗಂಗೆ ಶ್ರವಣನನ್ನು ಕುರಿತು ಶ್ರವಣ ನಾನಿನ್ನು ತಡೆಯಲಾರೆ ಇಲ್ಲಿಂದ ಹೊರಟು ಹೋಗುತ್ತೇನೆ ಎಂದಳು. ನೀನು ಇಲ್ಲಿಂದ ಕಾಲ್ತೆಗೆದರೆ ನಮ್ಮ ಗತಿಯೇನೆಂದು ಶ್ರವಣ ಗಂಗೆಯನ್ನು ಬೇಡಿದ. ಕೊನೆಗೆ ಆತ ತಾಯಿ ತಾಳು ನಾನು ಊರೊಳಗೆ ಹೋಗಿ ಗೌಡರಿಗೆ ತಿಳಿಸಿ ಬರುವವರೆಗೂ ಇಲ್ಲಿಯೇ ಇರು ಎಂದು ಭಾಷೆ ಪಡೆದು ಹೊರಟು ಹೋದ. ಅತ್ತ ಹೋದ ಶ್ರವಣ ಊರನ್ನು ಸೇರಲಿಲ್ಲ. ಎಲ್ಲಿಯೋ ಕಣ್ಮರೆಯಾದ. ಶ್ರವಣನ ಬರುವಿಕೆಯನ್ನು ಕಾಯುತ್ತ ಗಂಗೆ ಇನ್ನೂ ಅಲ್ಲಿಯೇ ಕಾದಿದ್ದಾಳೆ ಎಂಬ ಐತಿಹ್ಯವಿದೆ.

ಕಟ್ಟಿದ ಕೆರೆ, ಕಟ್ಟೆ, ಕೋಟೆಗಳು ಸ್ಥಿರವಾಗಿ ನಿಲ್ಲಲು ತಮ್ಮನ್ನು ತಾವೇ ಬಲಿ ಕೊಟ್ಟುಕೊಂಡ ಅನೇಕ ಪ್ರಸಂಗಗಳು ದೊರೆಯುತ್ತವೆ. ಕೆರೆಗೆ ಹಾರ ಎಂಬ ಜನಪದ ಕಥೆಯನ್ನು ಇಲ್ಲಿ ನೆನೆಯಬಹುದು. ನಾಗಮಂಗಲದ ಬಳಿಯಿರುವ ಸೂಳೇಕೆರೆಗೆ ಸಂಬಂಧಿಸಿದಂತೆ ಹೇಳುವ ಒಂದು ಕಥೆ ಕೂಡ ರೋಮಾಂಚಕರವಾದುದು. ರಾಜನೊಬ್ಬ ಕಟ್ಟಿಸುತ್ತಿದ್ದ ಕೆರೆಯ ಏರಿ ಎಷ್ಟು ಪ್ರಯತ್ನಪಟ್ಟರೂ ನಿಲ್ಲದಿದ್ದಾಗ, ಕೊನೆಗೆ ರಾಜನ ಸೂಳೆ ತಾನೇ ಬಲಿಯಾಗಿ ಕೆರೆಯನ್ನು ಉಳಿಸಿದಳಂತೆ.

ದೊಂಬನೊಬ್ಬನ ಸಾಹಸವನ್ನು ಬಣ್ಣಿಸುವ ಕಥೆ ಚನ್ನಪಟ್ಟಣದ ಬಳಿಯಿರುವ ದೊಂಬನ ಕೊಡುಗೆಗೆ ಸಂಬಂಧಿಸಿದಂತೆ ಕಂಡುಬರುತ್ತದೆ. ಒಮ್ಮೆ ಬೊಮ್ಮ ಎಂಬ ದೊಂಬನೊಬ್ಬ ತಾನು ರೆಕ್ಕೆ ಕಟ್ಟಿಕೊಂಡು ಹಾರುವಷ್ಟು ಭೂಮಿಯನ್ನು ತನಗೆ ಕೊಡಬೇಕೆಂದು ಅಲ್ಲಿಯ ಪಾಳೆಯಗಾರನಿಗೆ ಷರತ್ತು ಹಾಕಿದನಂತೆ. ಅದರಂತೆ ಗೆದ್ದ ದೊಂಬನಿಗೆ ಪಾಳೆಯಗಾರ ತನ್ನ ಮಾತಿನಂತೆ ಆ ಪ್ರದೇಶವನ್ನೆಲ್ಲಾ ಬಳುವಳಿಯಾಗಿ ಕೊಟ್ಟನಂತೆ. ಈ ಜಾಗ ಈಗಲೂ ಗೋಮಾಳವಾಗೇ ಉಳಿದಿದ್ದು ಇದನ್ನು ದೊಂಬನ ಕೊಡುಗೆ, ಬೊಮ್ಮನ ಕೊಡುಗೆ ಎಂದು ಕರೆಯುತ್ತಾರೆ. ಚನ್ನಪಟ್ಟಣ ತಾಲ್ಲೂಕಿನ ದಶವಾರದ ಬಳಿ ಶ್ರೀ ನರಸಿಂಹಸ್ವಾಮಿ ಬೆಟ್ಟವಿದ್ದು ತುದಿಯಿಂದ ಕೆಳಕ್ಕೆ ಹರಿದಂತೆ ಕೆಂಪು ಪಟ್ಟೆಗಳಿವೆ. ಹಿಂದೊಮ್ಮೆ ಇಲ್ಲಿ ಪ್ರಹ್ಲಾದಚರಿತ್ರೆ ಎಂಬ ನಾಟಕವನ್ನು ಆಡಿದಾಗ, ನರಸಿಂಹನ ವೇಷಧಾರಿಯ ಮೈಮೇಲೆ ದೇವರು ಬಂದು, ಹಿರಣ್ಯಕಶಿಪು ಪಾತ್ರಧಾರಿಯನ್ನು ಎಲ್ಲಿ ಬಚ್ಚಿಟ್ಟರೂ ಬಿಡದೆ ಆ ಬೆಟ್ಟದ ಮೇಲೆ ಎಳೆದು ತಂದು ಕರುಳನ್ನು ಬಗೆದುದರ ಪರಿಣಾಮ ಬಂಡೆಯ ಮೇಲೆ ಹರಿದ ರಕ್ತದ ಗುರುತು ಎಂದು ಹೇಳುತ್ತಾರೆ. ಆ ಘಟನೆಯಿಂದಾಗಿ ಇಂದಿಗೂ ಈ ಸುತ್ತಮುತ್ತ ಎಲ್ಲೂ ಪ್ರಹ್ಲಾದ ಚರಿತ್ರೆಯನ್ನು ಆಡುವುದಿಲ್ಲವಂತೆ.

ಹೀಗೆ ಐತಿಹ್ಯಗಳು ಬಹಳವಾಗಿ ಪವಾಡಸದೃಶವಾದ, ಅದ್ಭುತ ಅಂಶಗಳನ್ನೇ ವಿವರಿಸಿದರೂ ವಾಸ್ತವಿಕಾಂಶದ ಬೀಜಾಂಶ ಅಲ್ಲಿ ಇದ್ದೇ ಇರುತ್ತದೆ ಎಂಬುದನ್ನು ಕಡೆಗಣಿಸುವಂತಿಲ್ಲ. ಅವುಗಳಲ್ಲಿ ಬಹುತೇಕ ಚಿರಂತನವಾಗಿ ಉಳಿಯಬಹುದು. ಮತ್ತೆ ಕೆಲವು ಆಧರಿಸಿದ ವಸ್ತು ಕಣ್ಮರೆಯಾಗುವವರೆಗೂ ಉಳಿದುಕೊಳ್ಳಬಹುದು. ಯಾವುದೋ ವಸ್ತುವನ್ನೊ ಘಟನೆಯನ್ನೊ ವ್ಯಕ್ತಿಯನ್ನೊ ಅಥವಾ ಚಿಹ್ನೆಯನ್ನೊ ನೆಪವಾಗಿಸಿಕೊಂಡು ತಮ್ಮ ಶ್ರೀಮಂತ ಕಲ್ಪನಾ ಪ್ರತಿಭೆಯಿಂದ ಅದ್ಭುತ ಕಥೆಯೊಂದನ್ನು ಹೆಣೆದು ಹೇಳುವ ಇಂಥ ಪ್ರಸಂಗಗಳಲ್ಲಿ ಕೆಲವು ಬದುಕಿಗೆ ಅವಶ್ಯವಾದ ಮೂಲತತ್ತ್ವಗಳನ್ನು ಸಾರಿ ಹೇಳುತ್ತವೆ. ಕರ್ನಾಟಕ ಇಂಥ ಅಪೂರ್ವ ಐತಿಹ್ಯಗಳ ಆಗರವಾಗಿದೆ. ಈ ಐತಿಹ್ಯಗಳು ಎಷ್ಟರಮಟ್ಟಿಗೆ ಸತ್ಯ ಎಂಬುದನ್ನಾಗಲಿ, ಇವುಗಳು ಹುಟ್ಟಿದ ಅಥವಾ ಅಂಥ ಘಟನೆಗಳು ನಡೆದಿರಬಹುದಾದ ಕಾಲವನ್ನಾಗಲಿ ತೀರ್ಮಾನಿಸುವುದು ಕಷ್ಟ. (ಡಿ.ಕೆ.ಆರ್.)

**ಐನಾಪುರ :** ಬೆಳಗಾಂವಿ ಜಿಲ್ಲೆ ಅಥಣಿ ತಾಲ್ಲೂಕಿನ ಒಂದು ಗ್ರಾಮ. ಅಥಣಿಯಿಂದ 4ಕಿಮೀ ದೂರದಲ್ಲಿ ಕೃಷ್ಣಾನದಿ ತೀರದಲ್ಲಿದೆ. ಈ ಊರಿನ ಪ್ರಪ್ರಥಮ ಉಲ್ಲೇಖ 1639ರಲ್ಲಿ ಜರ್ಮನಿಯ ಪ್ರವಾಸಿ ಮಂಡೆಲ್‌ಸ್ಲೊನ ಕಥನದಲ್ಲಿ ದೊರೆಯುತ್ತದೆ. ಅವನು ಇದನ್ನು ಈಯನಟೂರ್ ಎಂದು ಕರೆದಿದ್ದಾನೆ. 1791ರಲ್ಲಿ ಟಿಪ್ಪುವಿನ ವಿರುದ್ಧ ಮರಾಠರ ಸಹಾಯಕ್ಕಾಗಿ ಕಳುಹಿಸಲ್ಪಟ್ಟ ಕ್ಯಾಪ್ಟನ್ ಮೂರ್ ಐನಾಪುರದಲ್ಲಿ ಹಿಂದು ಮತ್ತು ಮುಸ್ಲಿಂ ವಾಸ್ತುಶೈಲಿಯ ಕಟ್ಟಡಗಳಿರುವುದನ್ನು ವರ್ಣಿಸಿರುವನು. 1942ರಲ್ಲಿ ಮೀರಜದ ಗೋಪಾಲರಾವ್ ಪಟವರ್ಧನನ ನಿಧನಾನಂತರ ಈ ಊರು ಬ್ರಿಟಿಷರ ಆಳಿಕೆಗೆ ಒಳಪಟ್ಟಿತ್ತು. ಐನಾಪುರ ಎಂಬ ಹೆಸರು ಜೈನಾಪುರದಿಂದ ಉತ್ಪತ್ತಿಯಾಗಿರಬೇಕೆಂದೂ ಅಯ್ಯನಾಪುರವೇ ಇಲ್ಲಿ ಐನಾಪುರವಾಗಿರಬೇಕೆಂದೂ ಅಭಿಮತವಿದೆ. ಇಲ್ಲಿ ಬ್ರಹ್ಮದೇವ, ವಿಶ್ವನಾಥ, ಸಿದ್ಧೇಶ್ವರ, ವೆಂಕಟರಮಣ, ಹನುಮಂತ, ರಾಮಲಿಂಗ ಮುಂತಾದ ದೇವಾಲಯಗಳಿವೆ. ವಿಶ್ವನಾಥ ದೇವಾಲಯ ಕೊನೆಯ ಚಾಳುಕ್ಯರ ಶೈಲಿಯ ಕಟ್ಟಡವಾಗಿದ್ದು ಗರ್ಭಗೃಹ ಅರ್ಧಮಂಟಪ, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿದೆ. ನವರಂಗದ ಕಂಬಗಳು ವರ್ತುಲಾಕಾರ ಮತ್ತು ಅಷ್ಟಕೋನಾಕೃತಿಯವು. ಈ ಊರ ಸರಹದ್ದಿನಲ್ಲಿ ಎತ್ತರವಾದ ಪ್ರದೇಶದಲ್ಲಿ ಭಾಗಶಃ ಶಿಥಿಲಗೊಂಡ ಒಂದು ದೇವಾಲಯವಿದೆ. ಈಗ ಇದನ್ನು ಗುಂಪು ಎಂದು ಕರೆಯುವರು. ಈ ದೇವಾಲಯದ ಗರ್ಭಗೃಹ ನಕ್ಷತ್ರಾಕಾರದಲ್ಲಿದೆ. ದೇವಾಲಯದ ಹೊರಗೋಡೆ ಸುಂದರವಾಗಿ ಕೆತ್ತಲ್ಪಟ್ಟಿದೆ. ನಾಟ್ಯ ಸರಸ್ವತಿ ಮತ್ತು ಮದನಿಕಾ ವಿಗ್ರಹಗಳ ಸಾಲು ಕೆತ್ತನೆ ಸುಂದರವಾಗಿದೆ. ಗರ್ಭಗೃಹದ ಬಾಗಿಲು ಸಮೃದ್ಧವಾಗಿ ಅಲಂಕರಿಸಲ್ಪಟ್ಟಿದೆ. ಇದು ವಿಷ್ಣುದೇವಾಲಯ ವಾಗಿರಬೇಕು. ಇದೇ ಗ್ರಾಮದ ಸರಹದ್ದಿನಲ್ಲಿ ಸಣ್ಣಗುಡ್ಡದ ಮೇಲೆ ಕಟ್ಟಲಾಗಿರುವ ರಾಮಲಿಂಗ ದೇವಾಲಯ ವಿಜಯನಗರದ ಅನಂತರದ ಶೈಲಿಯದು. ಗರ್ಭಗೃಹ ಮತ್ತು ಮುಖಮಂಟಪವನ್ನು ಹೊಂದಿದೆ. ದೇವಾಲಯದ ಹೊರಬದಿಯಲ್ಲಿ 4 ಕಂಬಗಳುಳ್ಳ ಚಿಕ್ಕದಾದ ನಂದಿ ಮಂಟಪವಿದ್ದು, ಭಾಗಶಃ ಹಾಳಾಗಿದೆ. ಈ ದೇವಾಲಯದ ಸಮೀಪವಿರುವ ಚಿಕ್ಕಗುಡ್ಡದ ಮೇಲೆ ಹೊಸದಾಗಿ ಕಟ್ಟಲ್ಪಟ್ಟ ಎಲ್ಲಮ್ಮನ ದೇವಾಲಯವಿದೆ. ವಿಜಯನಗರದ ಅನಂತರದ ಶೈಲಿಯಲ್ಲಿ ನಿರ್ಮಿತವಾಗಿದ್ದ ಸಿದ್ಧೇಶ್ವರ ದೇವಾಲಯ ಈಗ ಸಂಪೂರ್ಣವಾಗಿ ಜೀರ್ಣೋದ್ಧಾರಗೊಂಡಿದೆ. ಸಿದ್ಧೇಶ್ವರ ದೇವರ ವಾರ್ಷಿಕ ಜಾತ್ರೆ ಜನವರಿ

ತಿಂಗಳಲ್ಲಿ ನಡೆಯುತ್ತದೆ. ಆಗ ದನಗಳ ಜಾತ್ರೆಯೂ ಸೇರುವುದು.

ಇಲ್ಲಿರುವ ಆದಿನಾಥ ಮತ್ತು ಪಾರ್ಶ್ವನಾಥ ಬಸದಿಗಳು ಅನಂತರದ ಚಾಳುಕ್ಯ ಶೈಲಿಯಲ್ಲಿವೆ. ಪೂರ್ವದಿಕ್ಕಿನ ಕಡೆಗೆ ಮುಖ ಮಾಡಿರುವ ಆದಿನಾಥ ಬಸದಿಯಲ್ಲಿ ಗರ್ಭಗೃಹ, ಅರ್ಧಮಂಟಪ, ನವರಂಗ ಮತ್ತು ಮುಖಮಂಟಪಗಳಿವೆ. ಆದಿನಾಥನ ಮೂರ್ತಿಯನ್ನು ಬಿಜಾಪುರದಿಂದ ತರಲಾಗಿದೆ ಎಂದು ಪ್ರತೀತಿ. ಪಾರ್ಶ್ವನಾಥ ಬಸದಿ, ಗರ್ಭಗೃಹ, ಅರ್ಧಮಂಟಪ, ನವರಂಗ ಮತ್ತು ಮುಖಮಂಟಪಗಳನ್ನೊಳಗೊಂಡಿದೆ. ಗರ್ಭಗೃಹದಲ್ಲಿ ಇತ್ತೀಚೆಗೆ ಕಂಚಿನ ಪಾರ್ಶ್ವನಾಥ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ನವರಂಗದ ಬಲಭಾಗದಲ್ಲಿ ಪಾರ್ಶ್ವನಾಥಮೂರ್ತಿ ಮತ್ತು ಎಡಭಾಗದಲ್ಲಿ ಧ್ಯಾನದಲ್ಲಿರುವ ಮಹಾವೀರನ ಮೂರ್ತಿಗಳಿವೆ. ಅವುಗಳ ಪಾದಪೀಠದಲ್ಲಿ ಶಾಸನಗಳಿವೆ. ನವರಂಗದ ಬಲ ಮೂಲೆಯಲ್ಲಿ ನೆಲಮಾಳಿಗೆಯ ಕೋಣೆಗಳಿಗೆ ಹೋಗಲು ಕಿಂಡಿದಾರಿಯಿದೆ. ಸುಮಾರು ನೂರು ವರ್ಷಗಳ ಹಿಂದೆ ಆಚಾರ್ಯ ಕುಂತುಸಾಗರಜಿ ಎಂಬ ಜೈನಮುನಿ ಇಲ್ಲಿ ವಾಸವಾಗಿದ್ದರಂತೆ. ಮುಖಮಂಟಪದಲ್ಲಿ ಸಹಸ್ರ ಜಿನಬಿಂಬಗಳ ಕೆತ್ತನೆಯುಳ್ಳ ಚಿಕ್ಕ ಸ್ತಂಭವಿದೆ. ದೇವಾಲಯದ ಮುಂಭಾಗದಲ್ಲಿ ಸು.12ಮೀ ಎತ್ತರದ ಒಂದು ಮಾನಸ್ತಂಭವಿದೆ. ಗರ್ಭಗೃಹದ ತುದಿಯಲ್ಲಿ ಶಂಖಾಕಾರದ ಶಿಖರವಿದೆ. ಇದರ ಒಳಭಾಗದ ಒಂದು ಮಂಟಪದಲ್ಲಿ ಅಮೃತಶಿಲೆಯ ನೇಮಿನಾಥ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ಊರಲ್ಲಿ ಸಯ್ಯದ್ ಉಮರ್ ಖಾದ್ರಿ ಎಂಬವರಿಗೆ ಸಂಬಂಧಿಸಿದ ಒಂದು ದರ್ಗಾ ಇದೆ. ಇಲ್ಲಿ ಬಕ್ರೀದ್ ಹಬ್ಬದ ತರುವಾಯ ಮೂರು ದಿನಗಳವರೆಗೆ ಉರುಸ್ ನಡೆಯುತ್ತದೆ. (ಆರ್.ಐ.)

**ಐಮಂಗಲ :** ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನಲ್ಲಿ ಚಿತ್ರದುರ್ಗದಿಂದ 22ಕಿಮೀ ದೂರದಲ್ಲಿ ಹಿರಿಯೂರು ರಸ್ತೆಯಲ್ಲಿರುವ ಗ್ರಾಮ. ಐತಿಹಾಸಿಕ ಸ್ಥಳ. ಚಿತ್ರದುರ್ಗದ ಹಿರಿಮದಕರಿನಾಯಕನಿಂದ ವೀರಶೈವ ಅಯ್ಯನಿಗಾಗಿ (ಅರ್ಚಕ) ಕೋಟೆಯೊಂದನ್ನು ಕಟ್ಟಿದುದರಿಂದ ಈ ಹೆಸರು ಬಂತೆಂಬ ವಿವರಣೆ ಇದೆ. ದಾಸಯ್ಯನೊಬ್ಬ ತಾನು ಶಂಖವನ್ನೂದಿ ಗಂಟೆಯನ್ನು ಬಾರಿಸಿದಾಗ ಕೋಟೆಯನ್ನು ಕಟ್ಟಲು ಅಸ್ತಿಭಾರವನ್ನು ಹಾಕಿದರೆ ಕೋಟೆ ಅಜೇಯವಾಗಿ ಉಳಿಯುವುದೆಂದು ಹೇಳಿದುದಾಗಿಯೂ ಆ ಪ್ರಕಾರ ಗ್ರಾಮಸ್ಥರು ಕಾಯುತ್ತಿರಲು ಬೇರೊಬ್ಬ ದಾಸಯ್ಯ ಅವೇಳೆಯಲ್ಲಿ ಸೂಚನೆ ನೀಡಲು ಕೋಟೆ ಕೆಲಸ ಪ್ರಾರಂಭವಾಯಿತು, ಈ ತಪ್ಪಿನಿಂದಾಗಿ ಕೋಟೆ ಅಭ್ಯುದಯ ಕಾಣಲಿಲ್ಲ ಎಂದೂ ಒಂದು ಐತಿಹ್ಯವಿದೆ.

ಈ ಊರಿನಲ್ಲಿ ನೊಳಂಬರ ಕಾಲದ ಒಂದು ವೀರಗಲ್ಲಿದ್ದು (ಸು.975) ಅದರಲ್ಲಿ ಪೆರ್ಗ್ಗಡೆ ಗುಣ್ಡಯ್ಯ ಅಯ್ಯಪಮಂಗಲದ ಪೂರ್ವ ಮರ್ಯಾದೆಯನ್ನು ತಪ್ಪಿ ಅಕ್ರಮವನ್ನು ಮಾಡಿದಾಗ ವತ್ಸಗೋತ್ರದ ಏಚಯ್ಯ ಎಂಬುವನು ಆತನ ತಪ್ಪಿಗಾಗಿ ತನ್ನನ್ನು ತಾನೇ ಇರಿದುಕೊಂಡು ಹುತಾತ್ಮನಾಗಿ ಗುಂಡಯ್ಯನಿಗೆ ಕ್ಷಮೆದೊರೆಯುವಂತೆ ಮಾಡಿದನೆಂದು ತಿಳಿದುಬರುತ್ತದೆ. ಈ ಶಾಸನದ ಆಧಾರದಿಂದ 10ನೆಯ ಶತಮಾನ ದಿಂದಲಾದರೂ ಈ ಗ್ರಾಮ ಅಸ್ತಿತ್ವದಲ್ಲಿತ್ತೆಂದು ಹೇಳಬಹುದು. ಈ ಅಯ್ಯಪಮಂಗಲದಿಂದಲೇ ಐಮಂಗಲ ಎಂಬ ಹೆಸರು ಬಂದಿರಬಹುದು.

ಇಲ್ಲಿಯ ಪ್ರಮುಖ ಸ್ಮಾರಕಗಳೆಂದರೆ ಭಗ್ನವಾಗಿರುವ ಕೋಟೆ ಹಾಗೂ ವೀರಭದ್ರ ದೇವಾಲಯ. ಇವಲ್ಲದೆ ಇಲ್ಲಿ ಒಂದು ವಿರಕ್ತಮಠ ಮತ್ತು ವೈಷ್ಣವಮಠ ಇದ್ದುವೆಂಬುದಕ್ಕೆ ದಾಖಲೆ ಇದೆ. ಕೋಟೆ ಚತುರಸ್ರವಾಗಿದೆ. ಪ್ರತಿಮೂಲೆಯಲ್ಲೂ ಎತ್ತರವಾದ ಜಗಲಿ ಹಾಗೂ ಸುತ್ತ ಅಸಂಖ್ಯಾತ ಚಚ್ಚೌಕ ಬುರುಜುಗಳಿವೆ. ಮೂರು ಭಗ್ನವಾದ ಬಾಗಿಲುಗಳು ಉತ್ತರ, ಪೂರ್ವ ಮತ್ತು ಪಶ್ಚಿಮಕ್ಕೆ ಇವೆ. ಕೋಟೆಯ ಸುತ್ತಲೂ ಕಂದಕವಿತ್ತು. ವೀರಭದ್ರ ದೇವಾಲಯ ಗ್ರಾಮದ ಮುಖ್ಯರಸ್ತೆಯ ಉತ್ತರಕ್ಕೆ ವೈಷ್ಣವ ದೇವಾಲಯದ ಹತ್ತಿರದಲ್ಲಿದೆ. ಅಲ್ಲಿಯ ಭಗ್ನಾವಶೇಷಗಳನ್ನು ಗಮನಿಸಿದರೆ ಅಲ್ಲಿ ಅರಮನೆ ಇದ್ದಂತೆ ಕಂಡುಬರುತ್ತದೆ. ದೇವಾಲಯದಲ್ಲಿ ಗರ್ಭಗೃಹ ಮತ್ತು ಸುಕನಾಸಿ ಇವೆ. ಹೆಚ್ಚು ಕೆತ್ತನೆಗಳು ಇಲ್ಲ. ಇರುವ ಕೆಲವೇ ಶಿಲ್ಪಗಳು ನಾಯಕರ ಕಾಲದ ಶೈಲಿಯವು. ಐಮಂಗಲದಲ್ಲಿ ತಯಾರಾಗುವ ಖಾದಿ ಪ್ರಸಿದ್ಧಿ ಪಡೆದಿದೆ. (ಕೆ.)

**ಐರಣಿ :** ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲ್ಲೂಕಿನ ಒಂದು ಗ್ರಾಮ ಮತ್ತು ಪುಣ್ಯಕ್ಷೇತ್ರ. ತುಂಗಭದ್ರಾ ನದಿಯ ಎಡದಂಡೆಯ ಮೇಲೆ ರಾಣೆಬೆನ್ನೂರಿಗೆ ಪೂರ್ವದಲ್ಲಿ ಸು.22ಕಿಮೀ ದೂರದಲ್ಲೂ ಚಳಗೇರಿ ರೈಲು ನಿಲ್ದಾಣಕ್ಕೆ 10 ಕಿಮೀ ದೂರದಲ್ಲೂ ಇದೆ. ಮೆಡ್ಲೇರಿ ಹೋಬಳಿಗೆ ಸೇರಿದೆ. ಕೈಮಗ್ಗದ ಒರಟು ಉಣ್ಣೆಯ ಬಟ್ಟೆಗೆ ಈ ಗ್ರಾಮ ಪ್ರಸಿದ್ಧ. ಇಲ್ಲಿ ಪ್ರತಿ ಶುಕ್ರವಾರ ಸಂತೆ ಸೇರುತ್ತದೆ. ಈ ಗ್ರಾಮದ ಸಮೀಪದಲ್ಲಿ 2,500 ಅಡಿ ಎತ್ತರವಿರುವ ಐರಣಿ ಬೆಟ್ಟವಿದೆ.

ಐರಣಿಯಿಂದ ನೂರುಗಜ ದೂರದಲ್ಲಿ ತುಂಗಭದ್ರಾನದಿಯ ಎಡದಂಡೆಯ ಮೇಲೆ ಒಂದು ಹಳೆಯ ಕೋಟೆಯ ಅವಶೇಷವಿದೆ. ಶ್ರೀ ಜಗದ್ಗುರು ಮುಪ್ಪಿನಾರ್ಯ ಮಹಾಸ್ವಾಮಿಗಳು ಕಟ್ಟಿಸಿದ ಕೊಟ್ಟೂರೇಶ್ವರ ಮಠ ಅಥವಾ ಹೊಳೆ ಮಠವಿದೆ. ಇದನ್ನು ಮೊದಲು ಐರಾವತ ಕ್ಷೇತ್ರವೆಂದು ಕರೆಯುತ್ತಿದ್ದರೆಂದು ಹೇಳುವರು. ಇಲ್ಲಿ ಹುಚ್ಚಬಸವ ಸ್ವಾಮಿಗಳ, ಕೊಟ್ಟೂರಸ್ವಾಮಿಗಳ, ಉರಿಲಿಂಗದೇವರ ಮತ್ತು ಲಿಂಗಪ್ಪದೇವರ ಗದ್ದುಗೆಗಳಿವೆ. ಗೋಣಿಸ್ವಾಮಿ ಮಠ, ಕಣವಿಸಿದ್ಧೇಶ್ವರ ಆಲಯ, ತುಂಗಭದ್ರಾ ತಟಾಕದಲ್ಲಿ ಸಿದ್ಧನಾಯಕನ ಗದ್ದುಗೆಯೂ ಬೆಟ್ಟದ ಮೇಲೆ ಕೊಟ್ಟೂರೇಶ್ವರ, ಮಲ್ಲಿಕಾರ್ಜುನ, ಮುಂಡಬಸಪ್ಪ, ಮಳೆಮಲ್ಲಪ್ಪ ಆಲಯಗಳೂ ಸಿದ್ಧಾಶ್ರಮ ಮತ್ತು ಅವಧೂತಾಶ್ರಮಗಳೂ ಇದ್ದು, ಬೆಟ್ಟದ ಕೆಳಗೆ ಮದ್ದಾನೇಶ್ವರ ಆಲಯವಿದೆ. ಕಾರ್ತೀಕ ಮಾಸದ ಮತ್ತು ಚೈತ್ರ ಶುದ್ಧ ನವಮಿ ಪೂಜೆಗೆ ಇಲ್ಲಿ ಸಾವಿರಾರು ಮಂದಿ ಸೇರುವರು. ಐರಣಿಯನ್ನು ದಕ್ಷಿಣಕಾಶಿ ಎಂದೂ ಭಾವಿಸುತ್ತಾರೆ. (ಎಸ್.ಎಸ್.ಎನ್.)

**ಐಶ್ವರ್ಯ ರೈ :** 1975-. ವಿಶ್ವ ಸುಂದರಿಯಾಗಿ ಆಯ್ಕೆಗೊಂಡ (1994) ಕನ್ನಡತಿ, ರೂಪದರ್ಶಿ, ಚಲನಚಿತ್ರನಟಿ. ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿ 1975ರಲ್ಲಿ ಜನಿಸಿದರು. ಬೆಳೆದಿದ್ದು, ಓದಿದ್ದು ಮುಂಬಯಿಯಲ್ಲಿ. ವಿಶ್ವಸುಂದರಿಯಾಗುವ ಮುನ್ನ ಮುಂಬಯಿಯಲ್ಲಿ ರೂಪದರ್ಶಿ ಯಾಗಿದ್ದರು. ವಿಶ್ವಸುಂದರಿಯ ಪಟ್ಟ ಭಾರತದ ಬಾಲಿವುಡ್ (ಮುಂಬಯಿ) ಚಿತ್ರಜಗತ್ತಿನ ಪ್ರವೇಶಕ್ಕೆ ಹೆಬ್ಬಾಗಿಲು ಎಂಬ ಮಾತಿದೆ. ವಿಶ್ವಸುಂದರಿಯ ಪಟ್ಟ ಲಭಿಸಿದ ಒಂದು ವರ್ಷದೊಳಗೆ ಇವರು ಮಣಿರತ್ನಂ ನಿರ್ಮಿಸಿದ ತಮಿಳು ಚಿತ್ರ ಇರುವರ್ ಮೂಲಕ ಚಿತ್ರರಂಗ ಪ್ರವೇಶಿಸಿದರು.

ಅನಂತರ ಪ್ಯಾರ್ ಹೋಗಯಾ, ಜೀನ್ಸ್ ಮೊದಲಾದ ಹಿಂದಿ ಚಿತ್ರಗಳಲ್ಲಿ ನಟಿಸಿದರೂ ಅವು ಸಫಲವಾಗಲಿಲ್ಲ. ಆ ಅಬ್ ಲೌಟ್ ಚಲೇ, ಹಮ್ ದಿಲ್ ದೇ ಚುಕೇ ಸನಮ್, ತಾಲ್, ದೇವದಾಸ್, ಹಮ್ ತೋ ತೇರೇ ಹೈ ಸನಮ್, ದಿಲ್ ಕಾ ರಿಶ್ತಾ ಮೊದಲಾದ ಹಿಂದಿ ಚಲನಚಿತ್ರಗಳಲ್ಲಿ ಮನೋಜ್ಞ ಅಭಿನಯ ನೀಡಿದ್ದಾರೆ. ಅನುಪಮ ಸೌಂದರ್ಯದ ಜೊತೆಗೆ ಅಭಿನಯ ಕೌಶಲವನ್ನೂ ಮೈಗೂಡಿಸಿಕೊಂಡಿರುವುದರಿಂದ ಚಿತ್ರರಂಗದಲ್ಲಿ ಇವರಿಗೆ ಯಶಸ್ಸು



ದೊರೆಯುತ್ತಿದೆ ಎಂಬುದು ವಿಮರ್ಶಕರ ಅಭಿಪ್ರಾಯ. ಇಂಗ್ಲಿಷ್, ಬಂಗಾಲಿ ಮತ್ತು ಕನ್ನಡ ಚಲನಚಿತ್ರಗಳಲ್ಲಿ ಅಭಿನಯಿಸಲು ಕೂಡ ಇವರು ಒಪ್ಪಂದ ಮಾಡಿಕೊಂಡಿದ್ದಾರೆ. ಇಂಗ್ಲಿಷ್ ಸಿನಿಮಾ 'ಬ್ರೈಡ್ ಅಂಡ್ ಪ್ರಿಜ್ಯುಡೀಸ್' ನಲ್ಲಿ ನಟಿಸುವ ಮೂಲಕ ಹಾಲಿವುಡ್ ಚಿತ್ರರಂಗವನ್ನು ಪ್ರವೇಶಿಸಿದ್ದಾರೆ. ಅನೇಕ ರಾಷ್ಟ್ರೀಯ, ಅಂತಾರಾಷ್ಟ್ರೀಯ ಪ್ರಶಸ್ತಿ ಗೌರವಗಳಿಗೆ ಪಾತ್ರರಾಗಿದ್ದಾರೆ. (ಪಿ.ಇ.ವಿ.)

**ಐಹೊಳೆ :** ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನಲ್ಲಿರುವ ಬಾದಾಮಿಯ ಚಳುಕ್ಯರ ಕಾಲದ ಸುಂದರ ದೇವಾಲಯ ಸಮೂಹಗಳಿಂದ ಪ್ರಾಚೀನ ವಾಸ್ತುಶಿಲ್ಪ ಕಲಾಕೇಂದ್ರವೆಂದು ವಿಶ್ವಪ್ರಸಿದ್ಧವಾಗಿರುವ ಗ್ರಾಮ, ಪ್ರವಾಸಿಕೇಂದ್ರ. ಹುನಗುಂದದಿಂದ 26ಕಿಮೀ ಪಶ್ಚಿಮಕ್ಕೆ ಮಲಪ್ರಭಾ ನದಿಯ ಬಲದಂಡೆಯ ಮೇಲಿದೆ.




ಐಹೊಳೆ ನಕ್ಷೆ

ಬಾಗಲಕೋಟೆಯಿಂದ ಅಮೀನಗಡದ ಮೂಲಕ (ಸು.50ಕಿಮೀ) ಅಥವಾ ಬಾದಾಮಿಯಿಂದ ಪಟ್ಟದಕಲ್ಲಿನ ಮೂಲಕ (ಸು.30ಕಿಮೀ) ಐಹೊಳೆಯನ್ನು ತಲಪಲು ರಸ್ತೆ ಸಾರಿಗೆ ಸೌಕರ್ಯವಿದೆ. ಐಹೊಳೆಯಲ್ಲಿ ಉಳಿದುಕೊಳ್ಳಲು ಒಂದು ಪ್ರವಾಸಿ ಮಂದಿರ ಸಹ ಇದೆ. ಕೇಂದ್ರ ಪುರಾತತ್ತ್ವ ಇಲಾಖೆಯ ಒಂದು ಕಾರ್ಯಾಲಯ ಸಹ ಇಲ್ಲಿದೆ.

ಇತಿಹಾಸ : ಅಯ್ಯಾವೊಳೆ, ಆರ್ಯಪುರ ಇವು ಶಾಸನಗಳಲ್ಲಿ ಕಂಡುಬರುವ ಈ ಊರಿನ ಹೆಸರುಗಳು. ಐವಳ್ಳಿ, ಐಹೊಳ್ಳಿ, ಐಯ್ಯಹೊಳೆ ಎಂಬ ರೂಪಗಳೂ ಸ್ಥಳೀಯರಲ್ಲಿ ಪ್ರಚಾರದಲ್ಲಿವೆ. ಅಯ್ಯಗಳು, ಗುರುಗಳು ಈ ಊರಿನಲ್ಲಿ ವಾಸಿಸುತ್ತಿದ್ದುದರಿಂದ ಈ ಹೆಸರು ಬಂತೆಂದು ಊಹೆ. ಆರ್ಯಪುರ ಇದರಿಂದಲೇ ಹುಟ್ಟಿದ ಸಂಸ್ಕೃತ ರೂಪ ಪರಶುರಾಮ ಕ್ಷಾತ್ರವಧೆ ಪೂರೈಸಿದಮೇಲೆ ಇಲ್ಲಿಗೆ ಬಂದು ಮಲಪ್ರಭಾ ನದಿಯಲ್ಲಿ ತನ್ನ ಪರಶುವನ್ನು ತೊಳೆದಾಗ ನದಿಯ ನೀರೆಲ್ಲಾ ಕೆಂಪಾಯಿತು. ಮರುದಿನ ನದಿಗೆ ನೀರು ತರಲು ಹೋದ ಸ್ತ್ರೀಯರು ಕೆಂಪು ನೀರನ್ನು ಕಂಡು ಅಯ್ಯಯ್ಯ ಹೊಳೆ ಎಂದು ಉದ್ಗರಿಸಿದರು, ಅದರಿಂದ ಐಹೊಳೆ ಎಂಬ ಹೆಸರಾಯಿತು ಎಂದು ಒಂದು ಐತಿಹ್ಯ ಸಹ ಇದೆ. ಅಗಸ್ತ್ಯನಿಂದ ವಾತಾಪಿ ಹತನಾದಾಗ, ಅವನ ಸೋದರ ಇಲ್ವಲ ತಮ್ಮಿಬ್ಬರ ನೆನಪು ಉಳಿಯುವಂತೆ ಅಗಸ್ತ್ಯನನ್ನು ಪ್ರಾರ್ಥಿಸಿದನೆಂದೂ ಅಗಸ್ತ್ಯ ಒಪ್ಪಿದ್ದರಿಂದ ವಾತಾಪಿ ಬಾದಾಮಿಯಲ್ಲೂ ಇಲ್ವಲ ಐಹೊಳೆಯ ದಕ್ಷಿಣದಲ್ಲೂ ಗುಡ್ಡವಾಗಿ ಉಳಿದಿದ್ದಾರೆ ಎಂದೂ ಇನ್ನೊಂದು ಐತಿಹ್ಯವಿದೆ.



ದುರ್ಗ ದೇವಾಲಯ

ಈಗ ಚಿಕ್ಕಗ್ರಾಮವಾಗಿರುವ ಐಹೊಳೆ ಒಂದು ಕಾಲದಲ್ಲಿ ದೊಡ್ಡ ಪಟ್ಟಣ. ಇಲ್ಲಿನ ಅವಶೇಷಗಳ ಅವಗಾಹನೆಯಿಂದ ಕ್ರಿ.ಪೂ. ಸು.7-6ನೆಯ ಶತಮಾನದ ಹೊತ್ತಿಗೆ ಕಬ್ಬಿಣದ ಯುಗದಲ್ಲೇ ಇಲ್ಲಿ ಜನವಸತಿ ಇದ್ದಿರಬೇಕೆನಿಸುತ್ತದೆ. ಗ್ರಾಮದ ಸಮೀಪದಲ್ಲಿರುವ ಮೇಗುಟಿ ಗುಡ್ಡದ ಮೇಲೆ ಸು.2 ಎಕರೆಗಳಷ್ಟು ಹರಹಿನ ಪ್ರದೇಶದಲ್ಲಿ ಮೋರೇರ ಅಂಗಡಿಗಳು ಎಂದು ಕರೆಯಲಾದ ಬೃಹತ್ ಶಿಲಾಸಮಾಧಿಗಳು ಕಂಡುಬಂದಿವೆ. ಇವು ನಾಲ್ಕು ನೇರ ಚಪ್ಪಡಿಗಳನ್ನು ಪೆಟ್ಟಿಗೆಯಾಕೃತಿಯಲ್ಲಿ ಜೋಡಿಸಿ ಮೇಲೊಂದು ಚಪ್ಪಡಿಯಿಂದ ಮುಚ್ಚಿರುವ ಸಮಾಧಿಗಳು (ಸಿಸ್ಟ್). ಇಲ್ಲಿನ ಅಂಬಿಗೇರ ಗುಡಿ, ಹುಚ್ಚಪ್ಪಯ್ಯ ಮಠ ಇತ್ಯಾದಿಗಳ ಸಮೀಪದಲ್ಲಿ ಇತ್ತೀಚೆಗೆ ನಡೆಸಿದ ಅಗೆತಗಳಿಂದ ಕಂಡುಬಂದ ದೊಡ್ಡ ಪ್ರಮಾಣದ ಇಟ್ಟಿಗೆಗಳಿಂದ ಕಟ್ಟಿದ ಕಟ್ಟಡಗಳ ಅಡಿಪಾಯಗಳು, ಮಡಕೆಗಳು ಇತ್ಯಾದಿಗಳಿಂದ ಚಳುಕ್ಯ ಪೂರ್ವ ಕಾಲದಲ್ಲೂ ಇಲ್ಲಿ ಕಟ್ಟಡಗಳಿದ್ದುವೆಂದು ತಿಳಿಯುತ್ತದೆ. 6-7ನೆಯ ಶತಮಾನಗಳ ಹೊತ್ತಿಗೆ ಬಹುಶಃ ಬಾದಾಮಿಯ ಚಳುಕ್ಯರ ಆಳ್ವಿಕೆ ಪ್ರಾರಂಭವಾದಾರಭ್ಯ ಐಹೊಳೆ ದೊಡ್ಡ ಪಟ್ಟಣವಾಗಿ ಬೆಳೆಯಲಾರಂಭಿಸಿತು. 7-8ನೆಯ ಶತಮಾನಗಳು ಈ ಪಟ್ಟಣದ ವೈಭವದ ಕಾಲ. ಬಹುಪಾಲು ದೇವಾಲಯಗಳು ಹುಟ್ಟಿಕೊಂಡದ್ದು ಈ ಕಾಲದಲ್ಲಿಯೇ. ಇಲ್ಲಿನ ಅತಿಪ್ರಾಚೀನ ಶಾಸನಗಳು ಸು.6-7ನೆಯ ಶತಮಾನದವು. 8ನೆಯ ಶತಮಾನದಲ್ಲಿ ಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ ಕಾಣಿಸಿಕೊಂಡುವು. ಚಳುಕ್ಯ ರಾಜ್ಯ ಕೊನೆಗೊಂಡಾಗ ಐಹೊಳೆಯ ವೈಭವವೂ ಇಳಿಮುಖವಾದಂತೆ ತೋರಿದರೂ ಮುಂದೆ ಕಲ್ಯಾಣದ ಚಾಳುಕ್ಯರ ರಾಜ್ಯಾಂತ್ಯದವರೆಗೆ ಈ ನಗರ ಸ್ವಲ್ಪಮಟ್ಟಿಗಾದರೂ ಚಟುವಟಿಕೆಗಳ ಕೇಂದ್ರವಾಗಿ ಮುಂದುವರಿಯಿತು. ರಾಷ್ಟ್ರಕೂಟರ ಮತ್ತು ಕಲ್ಯಾಣದ ಚಾಳುಕ್ಯರ ಕಾಲದಲ್ಲೂ ಕೆಲವು ಶಾಸನಗಳು ಮತ್ತು ದೇವಾಲಯಗಳು ಹುಟ್ಟಿಕೊಂಡುವು. ಆದರೆ ಬಾದಾಮಿಯ ಚಳುಕ್ಯ ಕಾಲದವಕ್ಕೆ ಹೋಲಿಸಿದರೆ ಅವುಗಳ ಸಂಖ್ಯೆ ಕಡಿಮೆ. ಸ್ವರೂಪ, ವೈವಿಧ್ಯದಲ್ಲಿ ಸಹ ಅವು ಬಹು ಸಾಮಾನ್ಯ ದರ್ಜೆಯವು. 1169-70ರ ಒಂದು ಶಾಸನ ಐಹೊಳೆಯಲ್ಲಿ ದೊರಕಿರುವ ಕೊನೆಯ ಶಾಸನ. ತದನಂತರ ಉತ್ತರ ಕರ್ನಾಟಕದಲ್ಲಿ ಉಂಟಾದ ಸಾಮಾಜಿಕ ರಾಜಕೀಯ ಆಂದೋಳನದಿಂದಾಗಿ ಈ ಪ್ರಾಚೀನ ಪಟ್ಟಣ ತನ್ನ ಪ್ರಾಮುಖ್ಯವನ್ನು ಪೂರ್ಣವಾಗಿ ಕಳೆದುಕೊಂಡಂತೆ ತೋರುತ್ತದೆ.

ತನ್ನ ವೈಭವದ ಕಾಲದಲ್ಲಿ ಐಹೊಳೆ ವಿದ್ವಾಂಸರಿಂದ ತುಂಬಿದ್ದ ಊರಾಗಿತ್ತು. ಪ್ರಾಯಶಃ ಇದೊಂದು ಅಗ್ರಹಾರ. 8ನೆಯ ಶತಮಾನದ ಶಾಸನಗಳಲ್ಲಿ ಇಲ್ಲಿಯ ಮಹಾಜನರು ಶ್ರೀಮದಾರ್ಯಪುರದ ಶ್ರೀಮಹಾಚಾತುರ್ವಿದ್ಯಸಮುದಯಮಯ್ನೂರ್ವರು ಎಂದು ವರ್ಣಿತರಾಗಿದ್ದಾರೆ. ಹಾಗೆಯೇ ಇದು ಶ್ರೀಮಂತರ ನೆಲೆಯೂ ಆಗಿದ್ದಿರಬೇಕು. 8ರಿಂದ 17ನೆಯ

ಶತಮಾನದವರೆಗೆ ದಕ್ಷಿಣ ಭಾರತದಾದ್ಯಂತ ಪ್ರಸಿದ್ಧವಾಗಿದ್ದ ವರ್ತಕ ಸಂಘವೊಂದು ಅಯ್ಯಾವೊಳೆ ಐನೂರ್ವರು (ನೋಡಿ) ಎಂಬ ಹೆಸರಿನಿಂದ ಮೆರೆಯುತ್ತಿತ್ತು. ಮೇಲಿನ ಮಹಾಜನ ಐನೂರ್ವರ ಮತ್ತು ವರ್ತಕ ಸಂಘದ ಐನೂರ್ವರ ಪರಸ್ಪರ ಸಂಬಂಧ ತಿಳಿಯದಾದರೂ ಪ್ರಾಯಶಃ ಒಂದು ಕಾಲದಲ್ಲಿ ಈ ಸಂಘದ ಕೇಂದ್ರ ಐಹೊಳೆಯಾಗಿರಬೇಕು. ಐಹೊಳೆಯ ಪ್ರಾಮುಖ್ಯ ಕುಗ್ಗಿದರೂ ಈ ಸಂಘದಿಂದಾಗಿ ಈ ನಗರದ ನೆನಪು ಬಹು ಕಾಲದವರೆಗೆ ಉಳಿದಿದ್ದಿತು. ದಕ್ಷಿಣ ಭಾರತದ ಅರಸೀಕೆರೆ, ನಿಟ್ಟೂರು, ಕೌಲೂರು ಮುಂತಾದ ಹಲವು ಊರುಗಳನ್ನು ತೆಂಕಣ ಅಯ್ಯಾವೊಳೆಯೆಂದು ಹೊಗಳಿರುವುದೂ ಅಯ್ಯಾವೊಳೆ ಹಿಂದೆ ಬಹು ವಿಖ್ಯಾತ ಸ್ಥಳವಾಗಿದ್ದಿರಬೇಕೆಂಬುದನ್ನು ಸೂಚಿಸುತ್ತದೆ. ಈಗ ಐಹೊಳೆಯಲ್ಲಿ ಕಾಣುವ ದೇವಾಲಯ ಸಮೂಹ ಆ ಖ್ಯಾತಿಯ ದ್ಯೋತಕವಾಗಿದೆ.

**ವಾಸ್ತುಶಿಲ್ಪ :** ಐಹೊಳೆಯಲ್ಲಿ ಕಿರಿ ಹಿರಿಯವೆಲ್ಲ ಸೇರಿ ಸು.125 ದೇವಾಲಯಗಳಿವೆ. ಪುರಾತತ್ತ್ವ ಸರ್ವೇಕ್ಷಣ ಇಲಾಖೆಯವರು ಇವನ್ನು 22 ಗುಂಪುಗಳಾಗಿ ಹೀಗೆ ವಿಂಗಡಿಸಿದ್ದಾರೆ: 1 ಹುಚ್ಚಿಮಲ್ಲಿ, 2 ಚಿಕ್ಕೀ, 3 ಅಂಬಿಗೇರ, 4 ದುರ್ಗ, 5 ಗೌಡರ, ಲಾಡಖಾನ್ ಮತ್ತು ಸೂರ್ಯನಾರಾಯಣ, 6 ಚಕ್ರ ಮತ್ತು ಬಡಿಗೇರ, 7 ರಾಚಿ, 8 ಏಣಿಯರ್, 9 ಹುಚ್ಚಪ್ಪಯ್ಯ ಮಠ, 10 ಕುಂತಿ, 11 ಚರಂತಿಮಠ, 12 ತ್ರ್ಯಂಬಕೇಶ್ವರ, 13 ಗೌರಿ, 14 ಜೈನ, 15 ಮಲ್ಲಿಕಾರ್ಜುನ, 16 ಗುಡ್ಡದಮೇಲಿನ ಜೈನ, 17 ಮೇಗುಟಿ, 18 ಜ್ಯೋತಿರ್ಲಿಂಗ, 19 ರಾವಳಫಡಿ, 20 ಹುಚ್ಚಪ್ಪಯ್ಯ, 21 ಗಳಗನಾಥ ಮತ್ತು 22 ರಾಮಲಿಂಗ. ಈ ದೇವಾಲಯ ಗುಂಪುಗಳು ಐಹೊಳೆ ಗ್ರಾಮದಲ್ಲಿರುವ ಕೋಟೆಯ ಆವರಣದ ಒಳಗೆ ಹಾಗೂ ಅದರ ಸುತ್ತಮುತ್ತಲ ಪ್ರದೇಶಗಳಲ್ಲಿ ಹರಡಿಕೊಂಡಿವೆ. ಈ ಮುಂದೆ ಕೋಟೆ ಮತ್ತು ಕೆಲವು ಮುಖ್ಯ ದೇವಾಲಯಗಳನ್ನು ವಿವರಿಸಲಾಗಿದೆ.

**ಕೋಟೆ :** ಇಲ್ಲಿಯ ಕೋಟೆ ಸು.4-5 ಎಕರೆ ಪ್ರದೇಶವನ್ನು ಆವರಿಸಿದೆ. ಉಸಗು ಕಲ್ಲನ್ನು ದೊಡ್ಡ ಸೈಜುಗಲ್ಲುಗಳಾಗಿ ಕಂಡರಿಸಿ ಯಾವ ಬಂಧಕ ಸಾಮಗ್ರಿಯನ್ನೂ ಉಪಯೋಗಿಸದೆ ಒಂದರ ಮೇಲೊಂದು ಪೇರಿಸಿ ಹೊರಗೋಡೆಯನ್ನು ಕಟ್ಟಲಾಗಿದೆ. ಇದರ ದಪ್ಪ ಸು.3ಮೀ, ಎತ್ತರ ಸು.4ಮೀ. ಕೋಟೆ ಗೋಡೆ ಅಲ್ಲಲ್ಲಿ ಅಟ್ಟಾಲಕಗಳಿಂದ ಕೂಡಿದ್ದು ಸುಮಾರು ಅಂಡಾಕಾರದಲ್ಲಿ ಹಬ್ಬಿದೆ. ಸುತ್ತಲ ಕಂದಕವನ್ನೂ ಕೆಲವೆಡೆ ಗುರುತಿಸಬಹುದು. ಈಗ ಕೋಟೆಯ ಪಶ್ಚಿಮಭಾಗದ ಗೋಡೆಗಳು ಉಳಿದಿಲ್ಲ. ಪೂರ್ವದಲ್ಲಿ ಹೆಬ್ಬಾಗಿಲಿದೆ. ಕೋಟೆಯ ತೆನೆಗಳ ಮೇಲೆ ಸು.6-7ನೆಯ ಶತಮಾನದ ಹಳಗನ್ನಡ ಅಕ್ಷರದ ಶಾಸನಗಳಿವೆಯಾದ್ದರಿಂದ ಕೋಟೆ ಸು.6ನೆಯ ಶತಮಾನದ್ದೆಂದು ಹೇಳಬಹುದು. ಕರ್ನಾಟಕದಲ್ಲಿ ಉಳಿದು ಬಂದಿರುವ ಶಿಲಾಕೋಟೆಗಳಲ್ಲಿ ಇದೇ ಪ್ರಾಚೀನವಾದುದು.

**ದುರ್ಗಗುಡಿ :** ಉತ್ತರದ ರಸ್ತೆಯಿಂದ ಕೋಟೆಯನ್ನು ಪ್ರವೇಶಿಸುತ್ತಿದ್ದಂತೆಯೇ ಕಂಡುಬರುವುದು ಪ್ರಸಿದ್ಧವಾದ ದುರ್ಗ ದೇವಾಲಯ. ಇದು ದುರ್ಗ ದೇವತೆಗೆ ಮೀಸಲಾದ ದೇವಾಲಯವಾಗಿರದೆ, ಸುತ್ತಲೂ ದುರ್ಗದ ರೀತಿಯ ಕಟ್ಟಡವೊಂದರ ಮಧ್ಯ ಇದ್ದುದರಿಂದ ಈ ಹೆಸರು ರೂಢಿತವಾದಂತೆ ಕಾಣುತ್ತದೆ. ದುರ್ಗ ದೇವಾಲಯ ಸು.600ರ ರಚನೆ. ಇದರ ತಳವಿನ್ಯಾಸ ಬೌದ್ಧ ಚೈತ್ಯಾಲಯಗಳ ಮಾದರಿಯಲ್ಲಿ ಗಜಪೃಷ್ಠಾಕಾರವಾಗಿದೆ, ಪೂರ್ವಾಭಿಮುಖವಾಗಿದೆ. ಮುಂದುಗಡೆ ಆಯಾಕಾರದಲ್ಲಿ ಮುಂಚಾಚಿದ ಕಿರುಮಂಟಪವಿದ್ದು ಅದಕ್ಕೆ ಪ್ರವೇಶಿಸಲು ಅದರ ಮುಂದೆ ಎರಡು ಪಕ್ಕಗಳಿಂದ ಏರುವ ಪಾವಟಿಕೆಗಳಿವೆ. ಇಡೀ ದೇವಾಲಯ ಆರು ಅಡ್ಡದಿಂಡುಗಳಿರುವ ಎತ್ತರದ ಅಧಿಷ್ಠಾನದ ಮೇಲೆ ಇದೆ. ಇದರ ಮೇಲಿರುವ ಹೊರ ಅಂಚಿನ ಗೋಡೆ ಅರೆತೆರೆದ ರೀತಿಯದು. ಕುಳ್ಳು ಕೈಪಿಡಿಯ ಮೇಲೆ ಚೌಕಾಕಾರದ ಅಡ್ಡಕೊಯ್ತದ ಕಂಬಸಾಲುಗಳದು. ಇದು ಒಂದು ಕೈಸಾಲೆಯನ್ನು ಆವರಿಸಿದೆ. ಕೈಸಾಲೆಯ ನೆಲಮಟ್ಟದಿಂದ ಮತ್ತೊಂದು ಅಧಿಷ್ಠಾನವಿದ್ದು ಅದರ ಮೇಲೆ ಪುನಃ ಗಜಪೃಷ್ಠಾಕಾರದ ಗರ್ಭಗೃಹವಿದೆ. ಗರ್ಭಗೃಹ ಹೊರಗೋಡೆಯಿಂದ



ದುರ್ಗಗುಡಿಯ ಒಳಸುತ್ತಿನ ಗೋಡೆಯ ಕೋಷ್ಠದಲ್ಲಿರುವ ಮಹಿಷಮರ್ದಿನಿ

ಸರಿದಂತಿದ್ದು ಪ್ರದಕ್ಷಿಣೆಗೆ ಅನುಕೂಲವಿದೆ. ಗರ್ಭಗುಡಿಯ ಮುಂಭಾಗದಲ್ಲಿ ಎರಡು ಕಂಬಸಾಲುಗಳಿದ್ದು ಅವು ಸಭಾಮಂಟಪವನ್ನು ಉದ್ದುದ್ದವಾಗಿ ಮೂರು ಭಾಗಗಳಾಗಿ ವಿಂಗಡಿಸುತ್ತವೆ. ಮಧ್ಯದ ಅಂಕಣ ಗರ್ಭಗುಡಿಯ ಮುಂದೆಯೂ ಪಕ್ಕದ ಅಂಕಣಗಳು ಪ್ರದಕ್ಷಿಣಾ ಪಥಕ್ಕೆ ತೆರೆದಂತೆಯೂ ಇವೆ. ಗರ್ಭಗುಡಿ ಮತ್ತು ಮುಂದಿನ ಸಭಾ ಮಂಟಪದ ಕಂಬಸಾಲಿನ ಮಧ್ಯದ ಭಾಗದ ಮೇಲೆ ಮಟ್ಟವಾದ ಹಾಸುಗಲ್ಲಿನ ಚಾವಣಿ ಇದೆ. ಒಳ ಪ್ರದಕ್ಷಿಣಾಪಥ ಮತ್ತು ಸಭಾಮಂಟಪದ ಎರಡು ಪಕ್ಕದ ಭಾಗಗಳಿಗೆ ಮಟ್ಟ ಚಾವಣಿಗಿಂತ ಸ್ವಲ್ಪ ಕೆಳಮಟ್ಟದಲ್ಲಿ ಪುನಃ ಇಳಿಜಾರು ಚಾವಣಿಯೂ ಹೊರಗಿನ ಕೈಸಾಲೆಗೆ ಅದಕ್ಕಿಂತ ಕೆಳಮಟ್ಟದಲ್ಲಿ ಪುನಃ ಇಳಿಜಾರು ಚಾವಣಿಯೂ ಇವೆ. ಗರ್ಭಗುಡಿಯ ಮೇಲೆ ಚತುರಸ್ರಾಕಾರದ ಅಡ್ಡಕೊಯ್ತದ ಕುಳ್ಳಾದ ರೇಖಾನಾಗರ ಶಿಖರವಿದೆ. ಕಂಬಗಳು ಚತುರಸ್ರಾಕಾರದ ಅಡ್ಡಕೊಯ್ತವುಳ್ಳವು. ಕೆಲವು ಉಬ್ಬುಪಟ್ಟಿಗಳ ಹೊರತು ಬೇರೆ ಅಲಂಕರಣವಿಲ್ಲ, ಒ ಳ ' ಗಿ ನ '

ಬಾಗಿಲವಾಡದಲ್ಲೂ ಹೆಚ್ಚಿನ ಅಲಂಕರಣವಿಲ್ಲ. ಆದರೆ ದೇವಾಲಯದ ಮುಖಮಂಟಪದ ಹೊರ ಮೈಯಲ್ಲಿ ಅಡಿಪಟ್ಟಿಕೆಗಳ ಮೇಲಿನ ಕೈಪಿಡಿ ಭಾಗದಲ್ಲಿ ಸುಂದರ ಅಲ್ಪ ಉಬ್ಬು ಶಿಲ್ಪಗಳ ಸಾಲುಗಳೇ ಇವೆ. ರಾಮ ಲಕ್ಷ್ಮಣ ಸೀತೆಯರನ್ನು ಗುಹ ನಾವೆಯಲ್ಲಿ ನದಿ ದಾಟಿಸುತ್ತಿರುವುದು ಮುಂತಾದ ರಾಮಾಯಣದ ವಸ್ತುಗಳು ಇಲ್ಲಿ ಶಿಲ್ಪಿತವಾಗಿವೆ. ಅದರ ಮೇಲು ಪಟ್ಟಿಕೆಯಲ್ಲಿ ಮನುಷ್ಯ ಮುಖಗಳು ಇಣಿಕಿ ನೋಡುವಂತಿರುವ ಚೈತ್ಯಗೂಡುಗಳ ಸಾಲಿದೆ. ಕೈಸಾಲೆಯ ಸುತ್ತಲಿನ ಕಂಬಗಳು ಸಾದಾರೀತಿಯ ಚತುರಸ್ರಾಕಾರದ ಅಡ್ಡಕೊಯ್ತುವುಳ್ಳವು. ಆದರೆ ಮುಮ್ಮಂಟಪದಲ್ಲಿರುವ ಇದೇ ವಿನ್ಯಾಸದ ಕಂಬಗಳ ಮೇಲೆ ಅನೇಕ ಉಬ್ಬುಶಿಲ್ಪಗಳಿವೆ. ಇವುಗಳಲ್ಲಿ ಶಿವ, ನರಸಿಂಹ ಮೊದಲಾದ ದೇವ ವಿಗ್ರಹಗಳಲ್ಲದೆ, ನಾನಾ ಭಂಗಿಗಳಲ್ಲಿರುವ ಅನುರಕ್ತ ದಂಪತಿಗಳ ಶಿಲ್ಪಗಳೂ ಇವೆ. ಸೌಂದರ್ಯ ಮತ್ತು ವಿವಿಧ ಭಾವಗಳ ನಿರೂಪಣೆ ಇವುಗಳಿಂದಾಗಿ ಅವು ಚೇತೋಹಾರಿಯಾಗಿವೆ. ಕೈಸಾಲೆಯ ಭಾಗದಲ್ಲಿ ಒಳ ಹಜಾರದ ಹೊರಭಿತ್ತಿಯ ಮೇಲೆ ಸುತ್ತಲೂ ದೇವಕೋಷ್ಠಗಳಿದ್ದು ಒಂದೊಂದು ಕೋಷ್ಠದಲ್ಲೂ ವೃಷಭವಾಹನ ಶಿವ, ಮಹಿಷಮರ್ದಿನಿ, ವಿಷ್ಣು, ನರಸಿಂಹ, ವರಾಹ ಮೊದಲಾದ ದೇವಮೂರ್ತಿಗಳಿವೆ. ಮುಮ್ಮಂಟಪದಿಂದ ಒಳಮಂಟಪಕ್ಕೆ ಹೋಗುವ ದ್ವಾರದ ಮೇಲೆ ಗರುಡ ಮತ್ತು ಪಕ್ಕದ ನೆಲುಗಂಬಗಳ ಮೇಲೆ ಗಂಗಾ ಮತ್ತು ಯಮುನೆಯರ ಶಿಲ್ಪಗಳಿವೆ. ಗರ್ಭಗುಡಿಯಲ್ಲಿನ ಮೂಲಶಿಲ್ಪ ಈಗ ಉಳಿದಿಲ್ಲ. ಆದರೆ ಹಿಂದೆ ಇದು ವೈಷ್ಣವ ದೇವಾಲಯವಾಗಿರಬೇಕೆನಿಸುತ್ತದೆ. ದುರ್ಗ ದೇವಾಲಯ ಅದರ ವಿನ್ಯಾಸದಿಂದ ಹಾಗೂ ಭಾವಪೂರ್ಣ ಶಿಲ್ಪಗಳಿಂದ ಐಹೊಳೆಯಲ್ಲಿನ ಅತಿ ವೈಶಿಷ್ಟ್ಯಪೂರ್ಣ ವಾಸ್ತು ಕೃತಿಯಾಗಿದೆ. ಇಲ್ಲಿ ಒಂದೆರಡು ಶಾಸನಗಳಿದ್ದರೂ ಅವು ದೇವಾಲಯದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಒದಗಿಸುವುದಿಲ್ಲ. ದುರ್ಗಗುಡಿಯ ಬಳಿಯಲ್ಲೇ ಅದೇ ಕಾಲದ ಒಂದು ಕಲ್ಯಾಣಿ ಮತ್ತು ಇನ್ನೊಂದು ಚಿಕ್ಕ ಗುಡಿ ಇವೆ. ದೇವಾಲಯದ ದಕ್ಷಿಣದ ಕಡೆಗೆ ಬೇರೆಯಾಗಿ ನಿಂತಿರುವ ಮಹಾದ್ವಾರ ಮಂಟಪವಿದೆ. ಅದರ ಮೇಲೆ ಇಮ್ಮಡಿ ವಿಕ್ರಮಾದಿತ್ಯನ ಒಂದು ಶಾಸನ ಇದೆ.

**ಲಾಡಖಾನ್ ಗುಡಿ :** ದುರ್ಗ ಗುಡಿಯಿಂದ ಸ್ವಲ್ಪ ದಕ್ಷಿಣಕ್ಕೆ ಲಾಡಖಾನ್ ಗುಡಿಯ ಗುಂಪಿದೆ. ಈ ಗುಂಪಿನ ಹಲವು ದೇವಾಲಯಗಳಲ್ಲಿ ಲಾಡಖಾನ್ ಗುಡಿಯೇ ಬಹುಮುಖ್ಯವಾದುದು. ಲಾಡಖಾನ್ ಎಂಬುವನೊಬ್ಬ ಈ ಗುಡಿಯಲ್ಲಿ ವಾಸಿಸುತ್ತಿದ್ದರಿಂದ ಈ ಹೆಸರು ಬಂದಿದೆ. ಇದರಲ್ಲಿ ಚೌಕಾಕಾರದ ಮಂಟಪ ಮತ್ತು ಅದರ ಮುಂದೆ ಅಗಲವಾದ



ಲಾಡಖಾನ್ ಗುಡಿ

ಮುಖಮಂಟಪ ಇವೆ. ಚೌಕ ಮಂಟಪ ಮಧ್ಯದಲ್ಲಿರುವ ಕಂಬಗಳಿಂದ ಏಕಕೇಂದ್ರದ ಮೂರು ಚೌಕಾಂಕಣಗಳಂತೆ ರೂಪಿತವಾಗಿದೆ. ಕೇಂದ್ರ ಚೌಕ ನಾಲ್ಕು ಮೂಲೆಗಳಲ್ಲಿರುವ ನಾಲ್ಕು ಕಂಬಗಳಿಂದಾದುದು. ಅದನ್ನು ಮಧ್ಯದಲ್ಲಿ ಹೊಂದಿರುವ ಎರಡನೆಯ ಚೌಕ ಒಟ್ಟು 12 ಕಂಬಗಳಿಂದ, ಸಾಲಿಗೆ ನಾಲ್ಕರಂತೆ ಆದುದು. ಇದನ್ನೂ ಆವರಿಸಿಕೊಂಡಿರುವ ಚೌಕ ಹೊರಗೋಡೆಗಳಿಂದ ಆದುದು. ಈ ಹೊರ ಗೋಡೆ ಈಗ ಗೋಡೆಗೇ ಸೇರಿದಂತಿರುವ ಹಲವು ಕಂಬಗಳ ನಡುವೆ ದಪ್ಪ ಚಪ್ಪಡಿಗಳನ್ನು ಜೋಡಿಸಿ ಮಾಡಿರುವಂಥದು. ಪೂರ್ವ, ದಕ್ಷಿಣ ಮತ್ತು ಉತ್ತರ ಗೋಡೆಗಳಲ್ಲಿ ಸುಂದರವಾಗಿ ಕೆತ್ತಿದ ಜಾಲಂಧ್ರಗಳಿವೆ. ಒಳ ಹಜಾರದಲ್ಲಿ ಪಶ್ಚಿಮದ ಗೋಡೆಗೆ ಸೇರಿದಂತೆ ಚಿಕ್ಕ ಆಯಾಕಾರದ ಗರ್ಭಗೃಹವಿದೆ. ಇದರ ದ್ವಾರದ ಮೇಲೆ ಗರುಡ ವಿಗ್ರಹವಿದೆ. ಆದರೆ ಇದು ಶಿವ ದೇವಾಲಯ. ಒಳಗೆ ಲಿಂಗವಿದೆ. ಮಧ್ಯದ ಚೌಕಾಂಕಣದಲ್ಲಿ ಬಸವನ ವಿಗ್ರಹವಿದೆ. ಮೂರು ಚೌಕಾಂಕಣಗಳಿಗೂ ಬೇರೆ ಬೇರೆ ಮಟ್ಟದಲ್ಲಿ ಚಾವಣಿಗಳಿವೆ. ಮಧ್ಯದ ಚೌಕದಲ್ಲಿರುವುದು ಮಟ್ಟ ಚಾವಣಿ, ಉಳಿದ ಭಾಗಕ್ಕೆ ಇಳಿಜಾರು ಚಾವಣಿಗಳು. ಚಾವಣಿಗಳೆಲ್ಲ ಹಾಸುಗಲ್ಲಿನವು. ಮೇಲುಗಡೆ ಈ ಕಲ್ಲುಗಳು ಕೂಡುವ ಸ್ಥಳದಲ್ಲಿ ಒಳಕ್ಕೆ ನೀರಿಳಿಯದಂತೆ ಇನ್ನೊಂದು ಚಪ್ಪಡಿಯನ್ನು ಉದ್ದುದ್ದವಾಗಿ ಇಟ್ಟಿದೆ. ಮಟ್ಟ ಚಾವಣಿಯ ಮೇಲುಗಡೆ ಎರಡನೆಯ ಅಂತಸ್ತಾಗಿ ಮತ್ತೊಂದು ಕೋಣೆ ಇದೆ. ಮುಮ್ಮಂಟಪದಲ್ಲಿ ಇಟ್ಟಿರುವ ಕಲ್ಲು ಏಣಿಯಿಂದ ಈ ಅಂತಸ್ತನ್ನು ತಲುಪಬಹುದು. ದೇವಾಲಯದ ಕಂಬಗಳು ಚೌಕ ಅಡ್ಡ ಕೊಯ್ತು ರೀತಿಯವು; ಬಹು ದಪ್ಪವು. ಮುಂದಿನ ಮಂಟಪದ ಕಂಬಗಳಲ್ಲಿ ಮಾತ್ರ ಬಹು ಉತ್ತಮವಾಗಿ ಕೆತ್ತಿರುವ ಅನೇಕ ಉಬ್ಬುಶಿಲ್ಪಗಳಿವೆ. ಇವುಗಳಲ್ಲಿ ಯಮುನೆಯ ವಿಗ್ರಹ ಮತ್ತು ಕಾಮಕೇಳಿನಿರತ ರಸಿಕ ದಂಪತಿಗಳ ವಿಗ್ರಹಗಳು ಮನೋಹರ ಕೃತಿಗಳು. ಛತ್ತಿನ ಮೇಲಿನ ಕೋಣೆಯ ಮೂರು ಪಾರ್ಶ್ವದ ಗೋಡೆಗಳ ಮೇಲೂ ಹೊರಭಾಗದಲ್ಲಿ ದೇವಶಿಲ್ಪಗಳಿವೆ. ಅವುಗಳಲ್ಲಿ ಪಶ್ಚಿಮದ ಗೋಡೆಯ ಮೇಲಿರುವ ಸೂರ್ಯವಿಗ್ರಹ ಗಮನಾರ್ಹ. ಇತರ ವಿಗ್ರಹಗಳು ಅಸಂಪೂರ್ಣ. ಸರಳ ವಿನ್ಯಾಸ, ಸ್ಥಳೀಯ ಜನಪದ ವಾಸ್ತು ರೀತಿಗಳೊಡನೆ ಇದು ಹೊಂದಿರುವ ಸಾದೃಶ್ಯ - ಇವುಗಳಿಂದ ಈ ದೇವಾಲಯ ಐಹೊಳೆಯ ಅತಿ ಪ್ರಾಚೀನ ಗುಡಿ (ಸು.450) ಎಂದು ಅಭಿಪ್ರಾಯಪಡಲಾಗಿದೆ. ಆದರೆ ಈ ಊಹೆಯನ್ನು ಕೆಲವು ವಿದ್ವಾಂಸರು ಅಲ್ಲಗಳೆದಿದ್ದಾರೆ (ನೋಡಿ: ಚಾಳುಕ್ಯವಂಶ-ವಾಸ್ತುಶಿಲ್ಪ). ದೇವಾಲಯದ ಗೋಡೆಯ ಮೇಲೆ ಎರಡು ಶಾಸನಗಳಿವೆ. ಒಂದು ಶಾಸನ ಆರ್ಯಪುರದ ಮಹಾಜನರನ್ನು ಹೆಸರಿಸುತ್ತದೆ. ಈ ಶಾಸನಗಳು ದೇವಾಲಯದ ರಚನೆಯ ಕಾಲಕ್ಕಿಂತ ಈಚಿನವು. ಸು.8ನೆಯ ಶತಮಾನದವು.

**ಗೌಡರ ಗುಡಿ :** ಲಾಡಖಾನ್ ಗುಡಿಯ ಸಮೀಪದಲ್ಲೇ ಗೌಡರ ಗುಡಿ ಇದೆ. ಇದೂ ಸುಮಾರು ಲಾಡಖಾನ್ ಗುಡಿಯ ರೀತಿಯಲ್ಲಿ ಮಂಟಪದಂತಿರುವ ಕಟ್ಟಡ. ಎತ್ತರವಾದ ಅಧಿಷ್ಠಾನದ ಮೇಲೆ ನಿಂತಿದೆ. ಹೊರಗೋಡೆಯಲ್ಲಿ 16 ಕಂಬಗಳಿದ್ದು ಅವುಗಳ ನಡುವೆ ಕಲ್ಲುಚಪ್ಪಡಿಗಳನ್ನು ಗೋಡೆಯಾಗಿ ಜೋಡಿಸಲಾಗಿದೆ. ಮುಂಭಾಗವನ್ನುಳಿದು ಬೇರೆ ಕಡೆ ಕಕ್ಷಾಸನಗಳಿವೆ. ಅವುಗಳ ಹಿಂಭಾಗದಲ್ಲಿ ಪೂರ್ಣ ಕುಂಭಗಳ ಅಲಂಕರಣ ಇದೆ. ಒಳಗಡೆ ಮಧ್ಯದಲ್ಲಿ ನಾಲ್ಕು ಕಂಬಗಳು ಛತ್ತನ್ನು ಎತ್ತಿ ಹಿಡಿದಿವೆ. ಹಿಂಭಾಗದಲ್ಲಿ ಗರ್ಭಗುಡಿ ಇದ್ದು ಅದರ ಸುತ್ತಲೂ ಪ್ರದಕ್ಷಿಣೆ ಬರುವ ಅನುಕೂಲವಿದೆ. ಮಧ್ಯದ ಭಾಗದ ಮೇಲಿನ ಛತ್ತು ಮಟ್ಟವಾಗಿಯೂ ಬದಿಯ ಭಾಗದವು ಇಳಿಜಾರಾಗಿಯೂ ಇವೆ. ಕಂಬಗಳು ದಪ್ಪ, ಕುಳ್ಳು; ಬೋದಿಗೆಗಳೂ ಸಾದಾರೀತಿಯವು. ಮಧ್ಯಾಂಕಣದ ತೊಲೆಗಳಲ್ಲಿ ಮಾತ್ರ ಹೂವಿನ ಸುರುಳಿಗಳು, ಬಾಲಕರು ಮತ್ತು ಪ್ರಾಣಿಗಳ ಚಿತ್ರಗಳಿವೆ. ಗರ್ಭಗುಡಿಯ ದ್ವಾರಬಂಧ ಒಳ್ಳೆಯ ಕೆತ್ತನೆ. ದ್ವಾರತೋಳುಗಳ ಮೇಲೆ ಎರಡು ನೀಳ ಪುಷ್ಪಪಟ್ಟಿಗಳಿವೆ. ಚೌಕಟ್ಟಿನ ನೆತ್ತಿಯ ಮೇಲೆ ಗರುಡ ನಾಗಗಳ ಬಾಲಗಳನ್ನು ಹಿಡಿದು ಮನುಷ್ಯರೂಪೀ ಹಾರುತ್ತಿರುವಂತೆ ತೋರಿಸಲಾಗಿದೆ. ಅದರ ಮೇಲೆ ಮಾಡದಲ್ಲಿ ಕಮಲದ ಮೇಲೆ ಕುಳಿತ ಗಜಲಕ್ಷ್ಮಿಯ ಚಿತ್ರವಿದೆ. ಲಕ್ಷ್ಮಿ ಕಮಲಪಾಣಿಯಾಗಿದ್ದಾಳೆ. ಇಕ್ಕೆಲದಲ್ಲಿ ಒಂದೊಂದು ಆನೆ ಅಭಿಷೇಕ ಮಾಡುವಂತೆಯೂ ಕೆಳಗೆ ಸರೋವರದಲ್ಲಿ ಒಂದೊಂದು ಆನೆ ನಿಂತಂತೆಯೂ ಶಿಲ್ಪಿತವಾಗಿದೆ. ನಾಲ್ಕು ಆನೆಗಳಿಂದ ಕೂಡಿದ ಗಜಲಕ್ಷ್ಮಿ ಪ್ರಾಚೀನ ಸಂಪ್ರದಾಯದ್ದು. ಈಚೆಗೆ ಇದರ ಸುತ್ತಲೂ ನಡೆದ ಉತ್ಖನನದಿಂದ ಈ ಗುಡಿ ಲಾಡಖಾನಕ್ಕಿಂತ ಹಳೆಯದೆಂದು ಊಹಿಸಲು ಆಧಾರಗಳು ದೊರಕಿವೆ. ಆದರೆ ಶೈಲಿಯ ದೃಷ್ಟಿಯಲ್ಲಿ ಇದು ಲಾಡಖಾನಕ್ಕಿಂತ ಪರಿಷ್ಕೃತ ರೀತಿಯದು. ಇದು ಭಗವತಿಯ ಗುಡಿಯಾಗಿತ್ತೆಂದು ಅಲ್ಲಿನ 8ನೆಯ ಶತಮಾನದ ಒಂದು ಶಾಸನದಿಂದ ತಿಳಿಯುತ್ತದೆ.

**ಸೂರ್ಯನಾರಾಯಣ ಗುಡಿ :** ಇದು ಲಾಡಖಾನದಿಂದ ಈಶಾನ್ಯಕ್ಕೆ ಸ್ವಲ್ಪ ದೂರದಲ್ಲಿದೆ. ಇದರಲ್ಲಿ ನಾಲ್ಕು ಕಂಬಗಳ ಮುಖಮಂಟಪ, ನಡುವೆ ನಾಲ್ಕು ಕಂಬ, ಸುತ್ತ ಹನ್ನೆರಡು ಅರೆಗಂಬಗಳಿರುವ ಮಂಟಪ. ನಾಲ್ಕು ಕಂಬ ಮತ್ತು ಎರಡು ಅರೆಗಂಬಗಳುಳ್ಳ ಗರ್ಭಗುಡಿ ಇವೆ. ಮಂಟಪ ಸಾದಾ ರೀತಿಯದು, ದಪ್ಪ ಕಂಬ ಮತ್ತು ಮಟ್ಟ ಚಾವಣಿಯದು. ಮುಂಭಾಗದಲ್ಲಿ ಕಕ್ಷಾಸನಗಳಿವೆ. ಮಧ್ಯದ ಮಂಟಪ ಚೌಕ. ಮಧ್ಯದ ನಾಲ್ಕು ಕಂಬಗಳಲ್ಲಿ ಎರಡು ದ್ವಾರದ ಬಳಿ, ಇನ್ನೆರಡು ಗರ್ಭಗುಡಿಯ ಬಳಿ ಇವೆ. ಈ ಕಂಬಗಳು ದಪ್ಪ, ಚಚ್ಚೌಕ ಅಡ್ಡಕೊಯ್ತು ಮಾದರಿಯವು. ಇಲ್ಲಿನ ಗರ್ಭಗುಡಿಯ ಒಳಗೆ ನಾಲ್ಕು ಕಂಬಗಳಿರುವುದು ವಿಶೇಷ. ಇದರ ದ್ವಾರಬಂಧದ ಮೇಲೆ ನಾಗಹಿಡಿದ ಗರುಡ, ನಾಗಗಳ ಬಳಿ ಗಂಗಾ, ಯಮುನಾ ಮತ್ತು ಮೇಲಿನ ಪಟ್ಟಿಯಲ್ಲಿ ದ್ವಿಬಾಹು ಕಮಲಪಾಣಿಯಾದ ಆಸೀನ ಸೂರ್ಯವಿಗ್ರಹ ಇವೆ. ಗರ್ಭಗುಡಿಯ ಒಳಗೆ ಸಹ 2ಮೀ ಎತ್ತರದ ಹಸಿರುಮೋಡಿ ಕಲ್ಲಿನ ನಿಂತ ಸೂರ್ಯವಿಗ್ರಹವಿದೆ. ಮಂಟಪದ ಛತ್ತಿನಲ್ಲಿ ಪದ್ಮಾಸನಸ್ಥ ಶಿವಮೂರ್ತಿಯನ್ನು ಕೆತ್ತಿದೆ. ಗರ್ಭಗುಡಿಯ ಮೇಲೆ ಎರಡು ಭೂಮಿಗಳ ರೇಖಾನಾಗರ ಶಿಖರವಿದೆ. ಇದು ಚೈತ್ಯ ಪಟ್ಟಿಕೆಗಳು ಮತ್ತು ಆಮಲಕಗಳಿಂದ ಅಲಂಕೃತವಾಗಿದೆ. ಕಲಶ ಉಳಿದಿಲ್ಲ. ವಿಶಿಷ್ಟ ರೀತಿಯ ವಿನ್ಯಾಸವುಳ್ಳ ಈ ದೇವಾಲಯ ಚಿಕ್ಕದು, ಆದರೆ ಸುಂದರ ಕೃತಿ. ಇದರ ಕಾಲ ಅನಿರ್ದಿಷ್ಟ. ಶೈಲಿಯ ಆಧಾರದಿಂದ ಸು.7-8ನೆಯ ಶತಮಾನದ್ದೆಂದು ಹೇಳಬಹುದು.

**ಚಕ್ರಗುಡಿ :** ಲಾಡಖಾನ ಗುಂಪಿನಿಂದ ಮತ್ತಷ್ಟು ದಕ್ಷಿಣಕ್ಕಿರುವುದು ಚಕ್ರಗುಡಿ. ಇದು ದೊಡ್ಡ ಬಾವಿಯೊಂದರ ದಕ್ಷಿಣ ಪಾರ್ಶ್ವಕ್ಕಿದೆ. ಮಂಟಪ ಮತ್ತು ಗರ್ಭಗುಡಿಗಳಷ್ಟೇ ಇರುವ ಈ ದೇವಾಲಯದ ಮುಂಭಾಗ ಶಿಥಿಲವಾಗಿದೆ. ತಳ ಚೌಕವಿದ್ದು ಮೇಲೆ ದುಂಡು ಅಡ್ಡಕೊಯ್ತ ವಿನ್ಯಾಸವಿರುವ ಕಂಬಗಳು ಮಂಟಪದಲ್ಲಿವೆ. ಗರ್ಭಗುಡಿಯ ದ್ವಾರಬಂಧದ ತೋಳುಗಳಲ್ಲಿ ಒಂದೊಂದರಲ್ಲಿ ಹತ್ತರಂತೆ ಇಪ್ಪತ್ತು ರಸಿಕ ದಂಪತಿಗಳ ಶಿಲ್ಪಗಳಿವೆ. ಗರ್ಭಗುಡಿಯ ಮೇಲಿನ ಶಿಖರ ರೇಖಾನಾಗರ ರೀತಿಯದು. ಶಿಖರದಲ್ಲಿ ಎರಡು ಭೂಮಿಗಳಿದ್ದು ಮೇಲೆ ಆಮಲಕವಿದೆ. ಇದರ ಕಾಲ ಸು.9ನೆಯ ಶತಮಾನ.

**ಬಡಿಗೇರ ಗುಡಿ :** ಚಕ್ರ ಗುಡಿಯ ಪಶ್ಚಿಮಕ್ಕಿರುವ ಬಡಿಗೇರ ಗುಡಿ. ಮೂಲತಃ ಸೂರ್ಯದೇವಾಲಯ. ಮುಖಮಂಟಪ, ಮಂಟಪ ಮತ್ತು ಗರ್ಭಗುಡಿಗಳಿರುವ ಈ ದೇವಾಲಯಕ್ಕೆ ರೇಖಾನಾಗರ ಶಿಖರವಿದೆ. ಮುಖಮಂಟಪದ ಪ್ರದೇಶದ ಬಲಗಡೆಯ ಕಂಬದ ಮೇಲೆ ದಕ್ಷಬ್ರಹ್ಮ ಮತ್ತು ಎಡಗಡೆಯದರ ಮೇಲೆ ತ್ರಿಶೂಲ ರೀತಿಯ ಕಿರೀಟಧಾರಿಯಾದ ಕುಬ್ಜಮೂರ್ತಿಯೊಂದರ ಶಿಲ್ಪ ಇವೆ. ಶಿಖರದ ಮುಂಭಾಗದಲ್ಲಿರುವ ಚೈತ್ಯಗೂಡಿನಲ್ಲಿ ಸೂರ್ಯವಿಗ್ರಹವಿದೆ. ಈ ಗುಡಿಯೂ ಸು.9ನೆಯ ಶತಮಾನದ್ದು.

**ರಾಚಿಗುಡಿ :** ಇದು ಗ್ರಾಮದ ಪಶ್ಚಿಮ ಭಾಗದಲ್ಲಿದೆ. ಸು.11ನೆಯ ಶತಮಾನದಲ್ಲಿ ಕಟ್ಟಿದ ಈ ಗುಡಿ ತ್ರಿಕೂಟಾಚಲ ಶಿವಾಲಯ. ದೇವಾಲಯ ಪೂರ್ವಾಭಿಮುಖವಾಗಿದೆ. ಎತ್ತರವಾದ ಅಧಿಷ್ಠಾನವಿದೆ. ಅಂತರಾಳಸಹಿತವಾದ ಮೂರು ಗರ್ಭಗುಡಿಗಳು ಒಂದೇ ನವರಂಗ ಮಂಟಪಕ್ಕೆ ತೆರೆದಂತೆ ಮೂರು ಮುಖ್ಯ ದಿಕ್ಕುಗಳಲ್ಲಿವೆ. ಪೂರ್ವದಲ್ಲಿ ವಿಶಾಲವಾದ ಮುಖಮಂಟಪವಿದೆ. ಮುಖಮಂಟಪದ ಮಧ್ಯದಲ್ಲಿ ನಾಲ್ಕು ಕಂಬಗಳು ಛತ್ತನ್ನು ಎತ್ತಿ ನಿಲ್ಲಿಸಿವೆ. ಸುತ್ತಲೂ ಕಕ್ಷಾಸನವಿದ್ದು ಅದರ ಮೇಲೆ ಚಿಕ್ಕ ಕಂಬಗಳಿವೆ, ಮಧ್ಯದ ಚಾವಣಿ ಮಟ್ಟ, ಸುತ್ತಲೂ ಇಳಿಜಾರು. ಈ ಮಂಟಪದ ನಡುವೆ ನಂದಿಯಿದೆ. ನವರಂಗದಲ್ಲೂ ನಾಲ್ಕು ಕಂಬಗಳಿವೆ. ಮುಖ್ಯ ಗರ್ಭಗೃಹದ ಅಂತರಾಳದ ದ್ವಾರದ ಚೌಕಟ್ಟಿನಲ್ಲಿ ಜಾಲಂಧ್ರಗಳಿವೆ. ಎರಡು ಗರ್ಭಗುಡಿಗಳ ಮೇಲೆ ಶಿಖರಗಳು ಉಳಿದುಕೊಂಡಿವೆ. ಗುಡಿಯ ಹೊರಗೋಡೆಗಳ ಮೇಲೆ ಚಿಕ್ಕ ಕೋಷ್ಠಗಳೂ ಗಣಪತಿ, ನಟರಾಜ, ಭೈರವ, ವಿಷ್ಣು ಮೊದಲಾದ ಮೂರ್ತಿಗಳೂ ಇವೆ.

**ಹುಚ್ಚಪ್ಪಯ್ಯನ ಮಠ :** ಗ್ರಾಮದ ದಕ್ಷಿಣಭಾಗದಲ್ಲಿ ಹುಚ್ಚಪ್ಪಯ್ಯನ ಮಠವಿದೆ. ಇದರಲ್ಲಿ ಎರಡು ಕಟ್ಟಡಗಳು ಪಕ್ಕಪಕ್ಕದಲ್ಲಿವೆ. ಒಂದು ದೇವಾಲಯ, ಇನ್ನೊಂದು ಮಠ. ದೇವಾಲಯದಲ್ಲಿ ಗರ್ಭಗುಡಿ ಮತ್ತು ಮಂಟಪ ಮಾತ್ರ ಇವೆ. ಮಂಟಪದ ಮಧ್ಯದಲ್ಲಿ 3 ಕಂಬಗಳ ಎರಡು ಸಾಲುಗಳಿದ್ದು ಅಂಚಿನಲ್ಲಿ ಅವುಗಳ ನೇರದಲ್ಲಿ ಗೋಡೆಗೆ ಸೇರಿದ ಅರೆಗಂಬಗಳಿವೆ. ಮಧ್ಯದ ಅಂಕಣಕ್ಕೆ ಮಟ್ಟಚಾವಣಿಯೂ ಬದಿಯ ಭಾಗಗಳಿಗೆ ಇಳಿಜಾರು ಚಾವಣಿಯೂ ಇದೆ. ಈ ದೇವಾಲಯ ಸುಂದರ ಶಿಲ್ಪಗಳ ಬೀಡು. ಛತ್ತಿನ ಮೇಲೆ ತ್ರಿಮೂರ್ತಿಗಳ ಶಿಲ್ಪವಿದೆ. ಹಲವು ಕಂಬಗಳ ಮೇಲೆ ಅನೇಕ ರೀತಿಯ ಕಾಮಕೇಳಿಗಳಲ್ಲಿ ನಿರತರಾದ ಸುಂದರ ರಸಿಕ ದಂಪತಿಗಳ ಶಿಲ್ಪಗಳಿವೆ. ಎಲ್ಲದರಲ್ಲೂ ಶೃಂಗಾರಭಾವ ಮತ್ತು ಕ್ರಿಯೆಗಳು ಸಹಜವಾಗಿ ನಿರೂಪಿತವಾಗಿವೆ. ಈ ಗುಡಿ ಸು.8ನೆಯ ಶತಮಾನದ ರಚನೆ. ಮಠ, ಒಳಮಂಟಪ ಮತ್ತು ಹೊರಮಂಟಪ ಎಂಬ ಎರಡು ಭಾಗಗಳಿಂದ ಕೂಡಿದ್ದು, ಕಂಬಗಳು ಅಲಂಕಾರ ರಹಿತವಾದವು. ಚಾವಣಿ ಮಟ್ಟ ರೀತಿಯದು. ದ್ವಾರದ ಮೇಲೆ ಗಜಲಕ್ಷ್ಮಿಯ ವಿಗ್ರಹವಿದೆ. ಇದರ ಹೊರತು ಬೇರೆ ಶಿಲ್ಪಗಳಿಲ್ಲ. ಇಲ್ಲಿ 1067ರ ಒಂದು ಶಾಸನವಿದೆ.

**ಹಾಲಬಸಪ್ಪನ ಗುಡಿ :** ಗ್ರಾಮದ ಪಶ್ಚಿಮಕ್ಕಿದೆ. ಇದು ಸು.7ನೆಯ ಶತಮಾನದ ಚಿಕ್ಕ ಕಟ್ಟಡ. ಗರ್ಭಗುಡಿ ಮತ್ತು ಮಂಟಪವಷ್ಟೇ ಇವೆ. ಮಧ್ಯದ ಚಾವಣಿ ಮಟ್ಟವಾಗಿಯೂ ಹಿಂಭಾಗ ಮುಂಭಾಗ ಇಳಿಜಾರಾಗಿಯೂ ಇವೆ. ಮಂಟಪದ ದ್ವಾರದ ಬಲಮಗ್ಗುಲಿನಲ್ಲಿ ಆಮೆಯ ಮೇಲೆ ನಿಂತ ಯಮುನಾ ಮತ್ತು ಎಡಭಾಗದಲ್ಲಿ ಮೊಸಳೆಯ ಮೇಲೆ ನಿಂತ ಗಂಗಾ ವಿಗ್ರಹಗಳು ಇವೆ. ಜೊತೆಯಲ್ಲಿ ಶಂಖನಿಧಿ ಪೂರ್ಣಕುಂಭ ಮೊದಲಾದ ಮಂಗಲ ಚಿಹ್ನೆಗಳನ್ನು ಕೆತ್ತಲಾಗಿದೆ.



ಗುಹಾ ದೇವಾಲಯ

**ಕುಂತಿಗುಡಿ ಗುಂಪು :** ಪೇಟೆಯ ಒಳಗೆ ಸುಮಾರು ನಡುಮಧ್ಯದಲ್ಲಿ ಕುಂತಿಗುಡಿಗಳ (ಕೊಂತಿಗುಡಿ) ಗುಂಪಿದೆ. ಇದು ನಾಲ್ಕು ದೇವಾಲಯಗಳ ಕೂಟ. ಒಂದನೆಯ ದೇವಾಲಯ ಆಯಾಕಾರದ ಮಟ್ಟಚಾವಣಿಯ ಮಂಟಪ. ಒಳಗೆ 6 ಕಂಬಗಳ ಎರಡು ಸಾಲುಗಳಿವೆ. ಹಿಂಬದಿಯ ಗೋಡೆಗೆ ಸೇರಿದಂತೆ ಚಿಕ್ಕ ಆಯಾಕಾರದ ಗರ್ಭಗೃಹವಿದೆ. ಮಂಟಪದ ಛತ್ತಿನಲ್ಲಿ ಕಮಲಾಸೀನಬ್ರಹ್ಮ, ಅನಂತಶಾಯಿವಿಷ್ಣು ಮತ್ತು ಉಮಾಮಹೇಶ್ವರರ ಶಿಲ್ಪಚದರವೂ ಗರ್ಭಗುಡಿಯ ದಕ್ಷಿಣಗೋಡೆಯ ಮೇಲೆ ಶಿವತಾಂಡವ, ಅದರ ದ್ವಾರದ ಇಕ್ಕೆಲದಲ್ಲಿ ಶೈವ ದ್ವಾರಪಾಲಕರು, ಕಂಬಗಳ ಮೇಲೆ ರಸಿಕ ದಂಪತಿಗಳು ಮೊದಲಾದ ಶಿಲ್ಪಗಳೂ ಇವೆ. ಇದರ ಎದುರು ಸ್ವಲ್ಪ ಬದಿಗೆ ಇರುವ ಚೌಕ ತಳಪಾಯದ ಕಂಬಗಳ ಮೇಲೆ ನಿಂತ ಮಟ್ಟ ಚಾವಣಿಯ ಗುಡಿ ಎರಡನೆಯದು. ಇದರಲ್ಲೂ ಉಮಾಮಹೇಶ್ವರ, ಸೂರ್ಯ, ಗಣೇಶ, ಮಹಿಷಮರ್ದಿನಿ ಮೊದಲಾದ ಶಿಲ್ಪಗಳಿವೆ. ಈ ಎರಡು ಗುಡಿಗಳ ನಡುವೆ ನಾಲ್ಕು ಕಂಬಗಳ ಮೇಲೆ ನಿಂತ ಒಂದು ಮಂಟಪವಿದೆ. ಚಾವಣಿ ಮಟ್ಟವಾಗಿದ್ದು ಸುತ್ತಲೂ ಚಜ್ಜವಿದೆ. ಕಂಬದ ಮೇಲಿನ ಬೋದಿಗೆಗಳ ಕೆಳಗೆ ಯಾಳಿಗಳು ಮತ್ತು ಕುಬ್ಜಮೂರ್ತಿಗಳನ್ನು ಅಳವಡಿಸಲಾಗಿದೆ. ಈ ಮಂಟಪ ಉತ್ತಮ ಪ್ರಮಾಣ ಮತ್ತು ಅಲಂಕರಣದಿಂದ ಆಕರ್ಷಕವಾಗಿದೆ. 1 ಮತ್ತು 2ನೆಯ ಗುಡಿಗಳು ಸು.7ನೆಯ ಶತಮಾನದವು. ಆದರೆ ಈ ಗುಡಿಗಳಲ್ಲಿ ಕಂಡುಬರುವ ಸರಳ ವಿನ್ಯಾಸವನ್ನು ಆಧರಿಸಿ ಇವೇ ಐಹೊಳೆಯ ಅತಿ ಪ್ರಾಚೀನ ಗುಡಿಗಳು ಎಂಬ ಅಭಿಪ್ರಾಯವನ್ನು ಒಬ್ಬ ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಮಂಟಪ ಸು.9ನೆಯ ಶತಮಾನದ್ದು. ಕುಂತಿಗುಡಿ ಗುಂಪಿನಲ್ಲಿ 3ನೆಯದು ಸು.7ನೆಯ ಶತಮಾನದ್ದು. ವಿನ್ಯಾಸ ಒಂದನೆಯದರಂತೆಯೇ. ಇದು ಶೈವಗುಡಿ. ಗರ್ಭಗುಡಿಯ ದ್ವಾರದ ಇಕ್ಕೆಲದಲ್ಲಿ ಶಂಖನಿಧಿ ಪದ್ಮನಿಧಿಗಳ ಶಿಲ್ಪಗಳಿವೆ. ಗಜ, ವೃಷಭ, ವರಾಹ, ಎರಡೇ ಕಾಲುಗಳ

ಮೇಲೆ ನಿಂತಿರುವ ಮೂವರು ಸ್ತ್ರೀಯರ ಸಂಯುಕ್ತ ಶಿಲ್ಪ ಮೊದಲಾದ ಶಿಲ್ಪಗಳು ಈ ಗುಡಿಯಲ್ಲಿವೆ. 4ನೆಯ ಗುಡಿ ಸ್ವಲ್ಪಮಟ್ಟಿಗೆ ಹಾಳಾಗಿದೆ. ಇಲ್ಲಿ ಕೆಲವು ರಸಿಕ ದಂಪತಿಗಳ ಶಿಲ್ಪಗಳು ಉತ್ತಮವಾಗಿ ಮೂಡಿದೆ. ಇದು ಸು.10ನೆಯ ಶತಮಾನದಲ್ಲಿ ಕಟ್ಟಿದ್ದು.

**ಚರಂತಿಮಠ ಗುಂಪು :** ಕುಂತಿಗುಡಿಗಳಿಂದ ಸ್ವಲ್ಪವೇ ಈಶಾನ್ಯಕ್ಕೆ ಇದೆ. ಇದು ಜೈನಗುಡಿಗಳ ಗುಂಪು. ಕಾಲಾಂತರದಲ್ಲಿ ಇವು ಚರಂತಿ ಮಠದವರ ಅಧೀನಕ್ಕೆ ಬಂದುದರಿಂದ ಈ ಹೆಸರು ರೂಢಿಗೆ ಬಂದಂತೆ ತೋರುತ್ತದೆ. ಈ ಗುಂಪಿನಲ್ಲಿರುವ ಮುಖ್ಯ ಗುಡಿ ತ್ರಿಕೂಟಾಚಲ. ಸು.11-12ನೆಯ ಶತಮಾನದ್ದು. ಕಲ್ಯಾಣ ಚಾಳುಕ್ಯ ವಾಸ್ತುಸಂಪ್ರದಾಯದಲ್ಲಿರುವ ಈ ಕಟ್ಟಡದಲ್ಲಿ ಮೂರು ಗರ್ಭಗೃಹಗಳನ್ನು ಕೂಡಿಸುವ ಒಂದು ಮಂಟಪ ಮತ್ತು ಅದರ ಮುಂದೆ ಮುಖಮಂಟಪ ಇವೆ. ಮುಖ ಮಂಟಪದಲ್ಲಿ ಎರಡು ಕಂಬಗಳು ಮತ್ತು ಎರಡು ಅರೆಗಂಬಗಳಿವೆ. ಒಳಮಂಟಪದ ಮಧ್ಯದಲ್ಲಿ ಎತ್ತರವಾದ ಕಟ್ಟೆಯ ಮೇಲೆ ನಾಲ್ಕು ಕಂಬಗಳೂ ಗೋಡೆಗೆ ಸೇರಿದಂತೆ ಅರೆಗಂಬಗಳೂ ಇವೆ. ಇಲ್ಲಿಯ ಕಂಬಗಳು ಚೌಕತಳದವು. ಮೇಲೆ ದುಂಡಗೆ ತಿರುಗಣೆಯಲ್ಲಿ ಕಡೆದ ಅಲಂಕರಣವುಳ್ಳವು. ದೇವಾಲಯದ ಶಿಖರ ಈಗ ಉಳಿದಿಲ್ಲ. ಮುಂದಣ ಪ್ರವೇಶದ್ವಾರದ ಮೇಲೆ ತೀರ್ಥಂಕರ ಮತ್ತು ಮಗ್ಗಲಲ್ಲಿ ಇಬ್ಬರು ಗಂಧರ್ವರ ವಿಗ್ರಹಗಳಿವೆ. ಮಧ್ಯದ ಗರ್ಭಗುಡಿಯ ಮುಂದೆ ಅಂತರಾಳವಿದ್ದು, ಅದರ ದ್ವಾರ ಬಂಧವು ಗಜಲಕ್ಷ್ಮಿ, ಕೆಲವು ಚಿಕ್ಕ ಮೂರ್ತಿಗಳು ಮತ್ತು ಹೂವಿನ ಸುಳಿವುಗಳಿಂದ ಅಲಂಕೃತವಾಗಿದೆ.

ಇದೇ ಗುಂಪಿನಲ್ಲಿ ಅವಳಿ ಬಸದಿ ಇದೆ. ಎರಡಕ್ಕೂ ಒಂದೇ ಮುಖಮಂಟಪವಿದೆ. ಒಟ್ಟು 24 ತೀರ್ಥಂಕರರನ್ನು ಒಂದರಲ್ಲಿ ಹನ್ನೆರಡರಂತೆ ಎರಡರಲ್ಲಿ ಕಡೆಯಲಾಗಿದೆ. ಅಲ್ಲದೆ ಯಕ್ಷಿಗಳು ಮೊದಲಾದ ಇತರ ಜೈನಮೂರ್ತಿಗಳೂ ಇವೆ. ಒಂದು ಗರ್ಭಗುಡಿಯಲ್ಲಿ ಮಾತ್ರ ಜಿನಮೂರ್ತಿ ಇದೆ. ವಾಸ್ತುರಚನೆಯಲ್ಲಿ ಕಲ್ಯಾಣ ಚಾಳುಕ್ಯ ಸಂಪ್ರದಾಯದ ಅಂಶಗಳು ಚೆನ್ನಾಗಿ ಮೂಡಿವೆ. ಇದು 1120ರಲ್ಲಿ ರಚಿತವಾಯಿತೆಂದು ಇಲ್ಲಿನ ಒಂದು ಶಾಸನ ತಿಳಿಸುತ್ತದೆ.

**ತ್ರ್ಯಂಬಕೇಶ್ವರ ಗುಡಿಗಳ ಗುಂಪು :** ಚರಂತಿ ಮಠದ ಆಗ್ನೇಯಕ್ಕೆ ಸ್ವಲ್ಪ ದೂರದಲ್ಲಿದೆ. ಇದರಲ್ಲಿರುವುದು ಎರಡು ತ್ರಿಕೂಟಾಚಲಗಳು, ಎತ್ತರವಾದ ಅಧಿಷ್ಠಾನದ ಮೇಲಿರುವ ಈ ಗುಡಿಗಳು ಪಶ್ಚಿಮಾಭಿಮುಖವಾಗಿವೆ. ತ್ರಿಕೂಟಾಚಲಗಳಲ್ಲಿ ಮುಖಮಂಟಪ, ನವರಂಗ ಮತ್ತು ಅದರ ಸುತ್ತ ಮೂರು ಅಂತರಾಳಯುತ ಗರ್ಭಗೃಹಗಳಿವೆ. ನವರಂಗದ ಮಧ್ಯಭಾಗದಲ್ಲಿ ಚೌಕತಳ ಮತ್ತು ಮೇಲೆ ತಿರುಗಣೆಯಲ್ಲಿ ಮಾಡಿದ ದುಂಡುನಡುಗಳ ನಾಲ್ಕು ಕಂಬಗಳಿವೆ. ಇದರ ಕಾಲ ಸು.12ನೆಯ ಶತಮಾನ.

ಇದರ ಸಮೀಪದಲ್ಲಿರುವ ಮದ್ದಿನ ಗುಡಿಯೂ ಮೇಲಿನವುಗಳ ವಿನ್ಯಾಸದ ತ್ರಿಕೂಟಾಚಲ. ಗರ್ಭಗುಡಿಗಳ ಮೇಲೆ ಮೆಟ್ಟಿಲುಮೆಟ್ಟಿಲಾಗಿ ಏರುವ ಕದಂಬ ನಾಗರ ಶಿಖರಗಳಿವೆ. ಮಂಟಪದಲ್ಲಿ ನಟರಾಜನ ಸುಂದರ ಮೂರ್ತಿಯಿದೆ. ಈ ದೇವಾಲಯ ಸು.11ನೆಯ ಶತಮಾನದ್ದು.

**ಜೈನ ಗುಡಿಗಳ ಗುಂಪು :** ತ್ರ್ಯಂಬಕೇಶ್ವರ ಗುಂಪಿನಿಂದ ಉತ್ತರಕ್ಕೆ ಜೈನ ನಾರಾಯಣ ಅಥವಾ ಯೋಗಿನಾರಾಯಣ ಎಂದು ಕರೆಯುವ ಗುಂಪಿದೆ. ಪಕ್ಕದಲ್ಲಿರುವ ಗೌರಿ ಗುಡಿ ಮೊದಲು (ಯೋಗಿ) ನಾರಾಯಣನ ಗುಡಿಯಾಗಿದ್ದುದರಿಂದ, ಈ ಜೈನ ಗುಡಿಗಳಿಗೂ ಜೈನನಾರಾಯಣ ಗುಡಿ ಎಂಬ ಹೆಸರು ಬಂದಿರುವಂತೆ ತೋರುತ್ತದೆ. ಈ ಗುಂಪಿನಲ್ಲಿಯ ಮುಖ್ಯ ಗುಡಿಯೂ ಕಲ್ಯಾಣ ಚಾಳುಕ್ಯ ಶೈಲಿಯಲ್ಲಿರುವ ತ್ರಿಕೂಟಾಚಲ. 11ನೆಯ ಶತಮಾನದ್ದು. ಇದರಲ್ಲಿನ ಒಂದು ಕಂಬದ ಮೇಲೆ ಗಂಡವಿಮುಕ್ತ ಭಟ್ಟಾರಕನೆಂಬ ಜೈನಯತಿಯ ಸ್ತುತಿ ಇರುವ ಶಾಸನವಿದೆ. ನವರಂಗಕ್ಕೆ ತೆರೆದಂತಿರುವ ಮೂರು ಗರ್ಭಗುಡಿಗಳಲ್ಲಿ ಜೈನ ತೀರ್ಥಂಕರರ ಮೂರ್ತಿಗಳಿದ್ದುವು. ಈಗ ಮಧ್ಯದ ಗರ್ಭಗುಡಿಯಲ್ಲಿನ ಪಾರ್ಶ್ವನಾಥ ಮಾತ್ರ ಉಳಿದಿದೆ. ಬಲಗಡೆಯ ಮೇಲಿನ ಶಿಖರ ಸುಸ್ಥಿತಿಯಲ್ಲಿದೆ.

ಇದರ ಎದುರಿರುವ ಇನ್ನೊಂದು ಗುಡಿಯೂ ಜೈನ. ಸುಕನಾಸಿ ಮತ್ತು ಗರ್ಭಗುಡಿಗಳಷ್ಟೇ ಈಗಿವೆ. ಗರ್ಭಗುಡಿಯಲ್ಲಿ ಮೂಲವಿಗ್ರಹವಿಲ್ಲ. ಈಗ ಪರಶು, ಕಮಲ ಮತ್ತು ಪಾಶವನ್ನು ಹಿಡಿದಿರುವ ಯಕ್ಷನ ಮೂರ್ತಿ ಇದೆ. ಅದರ ಪೀಠದ ಮೇಲೆ ನವಿಲು ಅಥವಾ ಕುಕ್ಕುಟವಿದೆ. ಗುಡಿಯ ಮುಂದೆ ಚೌಮುಖಿ ಇದೆ. ಇದರ ಪ್ರತಿಯೊಂದು ಮಗ್ಗಲಲ್ಲೂ ಕಾಯೋತ್ಸರ್ಗಭಂಗದಲ್ಲಿರುವ ಐದು ತೀರ್ಥಂಕರರ ವಿಗ್ರಹಗಳಿವೆ. ಈ ಗುಡಿಯೂ ಸು.11ನೆಯ ಶತಮಾನದ ರಚನೆ. ಇವಲ್ಲದೆ ಇನ್ನೂ ಎರಡು ಜೈನಗುಡಿಗಳು ಈ ಗುಂಪಿನಲ್ಲಿವೆ.

**ಗೌರಿಗುಡಿ :** ಮೇಲಿನ ಗುಂಪಿನಿಂದ ಉತ್ತರಕ್ಕೆ ಗೌರಿಗುಡಿ (ವಿರೂಪಾಕ್ಷ ಗುಡಿ) ಇದೆ. ಇದರ ಮಂಟಪದಲ್ಲಿ ಎರಡು ಸ್ತ್ರೀ ಮೂರ್ತಿಗಳಿದ್ದು ಒಂದನ್ನು ಗೌರಿ ಎಂದು ಕರೆಯುವುದರಿಂದ ಗೌರಿಗುಡಿ ಎಂಬ ಹೆಸರೂ ಗರ್ಭಗುಡಿಯ ಲಿಂಗ ವಿರೂಪಾಕ್ಷ ಎನ್ನುವುದರಿಂದ ಆ ಹೆಸರೂ ಈ ದೇವಾಲಯಕ್ಕೆ ಬಂದಿರಬೇಕು. ಆದರೆ ಮೂಲತಃ ಇದು ವೈಷ್ಣವ ದೇವಾಲಯವೆಂಬುದು ಇಲ್ಲಿನ ಅನೇಕ ಶಿಲ್ಪಗಳಿಂದ ತಿಳಿಯುತ್ತದೆ. ದೇವಾಲಯದಲ್ಲಿ ಮುಂದೆ ಒಂದು ವಿಶಾಲವಾದ ಮಂಟಪ ಮತ್ತು ಹಿಂದೆ ಇದಕ್ಕೆ ಸೇರಿದಂತೆ ಸುಕನಾಸಿ ಮತ್ತು ಗರ್ಭಗುಡಿ ಇವೆ. ದೇವಾಲಯ ದಕ್ಷಿಣಾಭಿಮುಖವಾಗಿರುವುದು ವಿಶೇಷ. ಮಂಟಪಕ್ಕೆ ಪೂರ್ವ, ಪಶ್ಚಿಮ ಮತ್ತು ದಕ್ಷಿಣದ ಕಡೆಗಳಿಂದ ಪ್ರವೇಶ ದ್ವಾರಗಳಿವೆ. ಮಂಟಪದ ಮಧ್ಯದಲ್ಲಿರುವ ನಾಲ್ಕು ಎತ್ತರದ ಕಂಬಗಳು ಮತ್ತು ಸುತ್ತಲ ಕಕ್ಷಾಸನದ ಮೇಲಿರುವ ಕಿರುಗಂಬಗಳು ಛತ್ತನ್ನು ಎತ್ತಿಹಿಡಿದಿವೆ. ರಚನೆ ಪೂರ್ಣವಾಗಿ ಕಲ್ಯಾಣ ಚಾಳುಕ್ಯ ಸಂಪ್ರದಾಯದ್ದು. ಇದರ ಕಾಲ ಸು.12ನೆಯ ಶತಮಾನ. ಕಂಬಗಳ ಮೇಲೆ ವೈಷ್ಣವ ಮೂರ್ತಿಗಳ ಉಬ್ಬುಶಿಲ್ಪಗಳಿವೆ. ಅಂತರಾಳದ ಹೊರಗೋಡೆಗಳಲ್ಲಿ ನಾಲ್ಕು ಮಾಡಗಳಿವೆ. ಇವುಗಳಲ್ಲೂ ಹಿಂದೆ ಮೂರ್ತಿಗಳಿದ್ದಿರಬೇಕು. ಮಂಟಪದಲ್ಲಿ ಸುಂದರ ಕಮಲಭುವನೇಶ್ವರಿ ಇದೆ.

**ಅಂಬಿಗೇರ ಗುಡಿ ಗುಂಪು :** ಕೋಟೆಯ ಹೊರಗೆ ದುರ್ಗ ದೇವಾಲಯದಿಂದ ಪಶ್ಚಿಮಕ್ಕೆ ಈ ಗುಂಪಿದೆ. ಇಲ್ಲಿ ಮೂರು ದೇವಾಲಯಗಳಿವೆ. ಇವುಗಳಲ್ಲಿನ ದೊಡ್ಡ ಗುಡಿಯು ಮೇಲೆ ರೇಖಾನಾಗರ ಶಿಖರವಿದೆ. ತಳವಿನ್ಯಾಸದಲ್ಲಿ ಗರ್ಭಗುಡಿ ಮತ್ತು ಮಂಟಪಗಳಷ್ಟೇ ಇರುವ ಈ ದೇವಾಲಯ ಪೂರ್ವಾಭಿಮುಖವಾಗಿದ್ದರೂ ಮಂಟಪದ ಉತ್ತರ ಮತ್ತು ದಕ್ಷಿಣಕ್ಕೆ ಪ್ರವೇಶ ದ್ವಾರಗಳಿವೆ. ಮಂಟಪದ ದ್ವಾರಬಂಧದ ಮೇಲೆ ಸುರುಳಿಗಳು, ದ್ವಾರಪಾಲಕರು, ಗಣಪತಿ, ನವಿಲ ಮೇಲೆ ಕುಳಿತ ಸುಬ್ರಹ್ಮಣ್ಯ ಈ ಶಿಲ್ಪಗಳಿವೆ. ಹೊರಗೋಡೆಯ ಮೇಲೆ ಕಲಶ, ಬೋದಿಗೆಗಳನ್ನೆತ್ತಿರುವ ಅರೆಗಂಬಗಳ ಅಲಂಕರಣವಿದೆ. ಗುಡಿ ಸು.10ನೆಯ ಶತಮಾನದ್ದೆಂದು ಊಹಿಸಲಾಗಿದೆ. ಇನ್ನೆರಡು ಗುಡಿಗಳು ಸಾಧಾರಣ ರೀತಿಯವು. ಎರಡನೆಯ ಗುಡಿ ನಾಲ್ಕು ಅಡಿ ಎತ್ತರದ ಇಟ್ಟಿಗೆಯ ಕಟ್ಟೆಯ ಮೇಲೆ ಇದೆ. ಗರ್ಭಗುಡಿಯಲ್ಲಿ ಭಗ್ನವಾದ ಸೂರ್ಯ ಅಥವಾ ವಿಷ್ಣುವಿನ ವಿಗ್ರಹವಿದೆ.

**ಚಿಕ್ಕೀಗುಡಿಗಳ ಗುಂಪು :** ಅಂಬಿಗೇರ ಗುಡಿಯಿಂದ ಸ್ವಲ್ಪ ಉತ್ತರಕ್ಕೆ ಪ್ರವಾಸಿಮಂದಿರಕ್ಕೆ ಹೋಗುವ ಹಾದಿಯ ಎಡಗಡೆ ಇರುವುದೇ ಚಿಕ್ಕೀಗುಡಿಗಳ ಗುಂಪು. ಈ ಗುಂಪಿನಲ್ಲಿ ದೊಡ್ಡದಾದ ಚಿಕ್ಕೀಗುಡಿಯಲ್ಲಿ ಮುಖಮಂಟಪ, ಮಂಟಪ ಮತ್ತು ಮಂಟಪದ ಒಳಗೇ ಇರುವ ಗರ್ಭಗುಡಿ ಇವೆ. ತಳವಿನ್ಯಾಸ ಸುಮಾರು ಗೌಡರ ಗುಡಿ ರೀತಿಯದು. ಮುಖಮಂಟಪ ನಾಲ್ಕು ಚೌಕಕಂಬಗಳನ್ನುಳ್ಳ ಮಟ್ಟಸ ಚಾವಣಿಯದು. ಇದು ಮತ್ತು ಹಿಂದಿನ ಮಂಟಪ ಎತ್ತರದ ಅಧಿಷ್ಠಾನದ ಮೇಲೆ ಇವೆ. ಒಳಮಂಟಪದ ಮಧ್ಯದಲ್ಲಿ ನಾಲ್ಕು ಕಂಬಗಳಿವೆ. ಇವುಗಳ ಕೆಳಭಾಗ ಚೌಕ, ಮೇಲುಭಾಗ ಅಷ್ಟಕೋನ ಅಡ್ಡಕೊಯ್ತುವುಳ್ಳವು. ಇವುಗಳ ಮೇಲೆ ಅರ್ಧಪುಷ್ಪ, ಸರ, ಯಾಳಿ ಮೊದಲಾದ ಶಿಲ್ಪಗಳಿವೆ. ಗರ್ಭಗುಡಿಯ ಸುತ್ತ ಪ್ರದಕ್ಷಿಣಾಪಥವಿದೆ. ಪ್ರದಕ್ಷಿಣಾಪಥದ ಹೊರಗೋಡೆಗಳಲ್ಲಿ ಒಂದೊಂದರಲ್ಲೂ ಮೂರು ಮೂರು ಜಾಲಂಧ್ರಗಳಿವೆ. ಇವುಗಳಲ್ಲಿ ಮಧ್ಯದ ಜಾಲಂಧ್ರ ದೊಡ್ಡದು, ಪಕ್ಕದವು ಕಿರಿದು. ಗರ್ಭಗುಡಿಯ ದ್ವಾರಬಂಧದ ಮೇಲೆ ಬಳ್ಳಿ ಹೂವಿನ ಬಂಧಗಳಿವೆ. ದ್ವಾರಾಗ್ರ ಪಟ್ಟಿಯ ಮೇಲೆ ನಾಗಬಾಲಗಳನ್ನು ಹಿಡಿದು ಹಾರುತ್ತಿರುವ ಗರುಡನ ಶಿಲ್ಪವಿದೆ. ಚೌಕಟ್ಟಿನ ಅರ್ಧ ಕಂಬಗಳ ಮೇಲೆ ಬೋದಿಗೆಯೂ ಕೆಳಗೆ ಪೂರ್ಣಕುಂಭಗಳೂ ಇವೆ. ದ್ವಾರಾಗ್ರಪಟ್ಟಿಯ ಮೇಲುಗಡೆಯ ಪಟ್ಟಿಯಲ್ಲಿ ಚೈತ್ಯ ಕಿಟಿಕಿಗಳಿವೆ. ಇವುಗಳಲ್ಲಿ ಮಧ್ಯೆ ವೃಷಭಸಹಿತ ಶಿವ, ಬಲಗಡೆ ಬ್ರಹ್ಮ ಮತ್ತು ಎಡಗಡೆ ವಿಷ್ಣುವಿನ ನಿಂತಶಿಲ್ಪಗಳಿವೆ.

ಗರ್ಭಗುಡಿಯಲ್ಲಿ ದುಂಡಾದ ಶಾಲುಂಕದ ಮೇಲೆ ಶಿವಲಿಂಗವಿದೆ. ಗರ್ಭಗುಡಿಯ ಹೊರಗೋಡೆಯ ಮೇಲೆ ಮೂರು ಕಡೆ ಕೋಷ್ಠಗಳಿವೆ. ಗರ್ಭ ಗುಡಿಯ ಮುಂದಿನ ಮಂಟಪದಲ್ಲಿ ಕಮಲ, ಗಂಧರ್ವರು, ಅನಂತನ ಮೇಲೆ ಕುಳಿತ ಲಕ್ಷ್ಮೀಸಮೇತ ವಿಷ್ಣು, ತ್ರಿವಿಕ್ರಮ, ನಟರಾಜ ಮೊದಲಾದ ಶಿಲ್ಪಗಳನ್ನು ಛತ್ತಿನಲ್ಲಿ ಅಳವಡಿಸಲಾಗಿದೆ. ಮಂಟಪಕ್ಕೆ ಮಧ್ಯದಲ್ಲಿ ಮೇಲೆದ್ದ ಮಟ್ಟ ಚಾವಣಿಯಿದೆ. ಅದರ ಪಕ್ಕಗಳಿಂದ ಕಿಂಡಿಗಳನ್ನು ಮಾಡಿ ಛತ್ತಿನ ಶಿಲ್ಪಗಳಿಗೆ ಬೆಳಕು ಬೀಳುವಂತೆ ಮಾಡಿರುವುದು ಇಲ್ಲಿನ ವೈಶಿಷ್ಟ್ಯ. ಮಂಟಪದ ಬದಿಯ ಭಾಗಗಳಿಗೆ ಹಾಸುಗಲ್ಲುಗಳ ಇಳಿಜಾರು ಚಾವಣಿ ಇದೆ. ಗುಡಿ ಸು.7ನೆಯ ಶತಮಾನದ್ದೆಂದು ಊಹಿಸಲಾಗಿದೆ.

ಇದರ ಬಲಗಡೆ ನಿಂತ ಇನ್ನೊಂದು ಗುಡಿಯಲ್ಲಿ ಗರ್ಭಗುಡಿ, ಸುಕನಾಸಿ ಮತ್ತು ಮಂಟಪ ಇದ್ದುವು. ಈಗ ಮಂಟಪ ಬಿದ್ದಿದೆ. ಸುಕನಾಸಿಯ ಹತ್ತಿರ ಶೈವದ್ವಾರಪಾಲಕರ ವಿಗ್ರಹಗಳಿವೆ. ಪಕ್ಕದಲ್ಲಿ ಜಾಲಂಧ್ರಗಳಿವೆ. ಗುಡಿಯಲ್ಲಿ ಮೂಲವಿಗ್ರಹವಿಲ್ಲ. ಇದು ಸು.10ನೆಯ ಶತಮಾನದ ಕಟ್ಟಡ.

**ಹುಚ್ಚಿಮಲ್ಲಿ ಗುಂಪು :** ಗ್ರಾಮದ ಉತ್ತರಕ್ಕೆ ಪ್ರವಾಸಿ ಮಂದಿರದ ಹಿಂಬದಿಯಲ್ಲಿ ಕಾಣುವ ಒಂದು ಸುಂದರ ದೇವಾಲಯ ಹುಚ್ಚಿಮಲ್ಲಿ ಗುಡಿ. ಪಶ್ಚಿಮಾಭಿಮುಖವಾಗಿರುವ ಈ ದೇವಾಲಯ, ಗರ್ಭಗುಡಿ ಸಣ್ಣದಾದ ಸಭಾಮಂಟಪ ಮತ್ತು ಮುಖ ಮಂಟಪದಿಂದ ಕೂಡಿದ್ದು, ಎತ್ತರವಾದ ಅಧಿಷ್ಠಾನದ ಮೇಲಿದೆ. ಗರ್ಭಗುಡಿಯಲ್ಲಿ ಮೂಲ ಶಿವಲಿಂಗವಿದೆ. ಇದರ ಬಾಗಿಲ ಚೌಕಟ್ಟು ಎರಡು ಬದಿಯಲ್ಲಿ ನಾಲ್ಕು ಶಾಖೆಗಳಿಂದ ಕೂಡಿದ್ದು, ಚೆಲುವಾದ ಕುಸುರಿನ ಕೆತ್ತನೆಯಿಂದ ಅಲಂಕೃತವಾಗಿದೆ. ಎರಡು ಬದಿಯಲ್ಲಿಯ ಶಾಖೆಗಳಲ್ಲಿ ಅನುರಕ್ತ ದಂಪತಿಗಳು, ಆನೆ ಮತ್ತು ಗಂಗೆ ಯಮುನೆಯರ ಶಿಲ್ಪಗಳಿವೆ. ಚೌಕಟ್ಟಿನ ಮೇಲಿನ ಅಡ್ಡಜಂತಿಯ ಮಧ್ಯದಲ್ಲಿ ಗರುಡನ ಮೂರ್ತಿಯೂ ಮತ್ತು ಈ ಜಂತಿಯ ಮೇಲೆ ಬ್ರಹ್ಮ, ನಟರಾಜ ಮತ್ತು ವಿಷ್ಣು, ಉಚ್ಚಮಟ್ಟದ ಶಿಲ್ಪಗಳು, ಸಭಾಮಂಟಪದ ಮಧ್ಯದ ಕಂಬಗಳನ್ನು ಸೇರಿಸಿ ಬಾಗಿಲು ಮತ್ತು ಜಾಲರಿಯುಳ್ಳ ಅಡ್ಡಗೋಡೆಯೊಂದನ್ನು ಮಾಡಲಾಗಿದೆ. ಸಭಾಮಂಟಪದ ಮಾನಲ್ಲಿ ಇಂದ್ರ, ಯಮ, ಕುಬೇರ ಮತ್ತು ಬ್ರಹ್ಮ ಹಾಗೂ ಕಮಲಗಳ ಶಿಲ್ಪಗಳಿವೆ. ಗರ್ಭಗುಡಿಗೆ ಸುತ್ತುಹಾಕಲು ಪ್ರದಕ್ಷಿಣಾಪಥವಿದ್ದು, ಇದರ ಹೊರಬದಿಯಲ್ಲಿ ಜಾಲಂಧ್ರಗಳುಳ್ಳ ಗೋಡೆಗಳಿವೆ. ಸಭಾಮಂಟಪದ ಬಾಗಿಲ ಚೌಕಟ್ಟು ಗರ್ಭಗುಡಿಯ ತರಹದ್ದೇ. ಮುಖ ಮಂಟಪದಲ್ಲಿ ಕುಳಿತುಕೊಳ್ಳಲು ಎರಡು ಬದಿಯಲ್ಲೂ ಕಕ್ಷಾಸನಗಳಿವೆ. ಮುಂದೆ ಏರಿಬರಲು ಮೆಟ್ಟಿಲುಗಳಿವೆ. ನೆಲದ ಮಟ್ಟದಲ್ಲಿಯ ಮೆಟ್ಟಿಲಿನ ಮುಂದೆ ಅರ್ಧ ಚಂದ್ರಾಕೃತಿಯ ಹಾಸುಗಲ್ಲಿದೆ. ಕಕ್ಷಾಸನದ ಹೊರಬದಿಯಲ್ಲಿ ಪೂರ್ಣ ಘಟಗಳ ಸಾಲಿನ ಉಬ್ಬುಶಿಲ್ಪಗಳಿವೆ. ಮಾಡಿನಲ್ಲಿ ಸುಂದರವಾದ ಕಾರ್ತಿಕೇಯನ ಉಬ್ಬುಶಿಲ್ಪವಿದೆ. ಗರ್ಭಗುಡಿಯ ಮೇಲೆ ಔತ್ತರೇಯ ಪದ್ಧತಿಯ ರೇಖಾನಾಗರ ಶಿಖರವಿದೆ. ಇದರ ಉತ್ತರ ಮತ್ತು ಪೂರ್ವಬದಿಗಳಲ್ಲಿ ಬ್ರಹ್ಮ, ಸೂರ್ಯರ ಮೂರ್ತಿಗಳಿವೆ. ದಕ್ಷಿಣ ಬದಿಯಲ್ಲಿಯ ಮೂರ್ತಿ ಒಡೆದುಹೋಗಿದೆ. ಪಶ್ಚಿಮದ ಬದಿಯಲ್ಲಿ ಅಷ್ಟೊಂದಾಗಿ ಎದ್ದು ಕಾಣದ ಸುಕನಾಸಿಯಿದ್ದು ಮುಂಬದಿಯಲ್ಲಿ ನಟರಾಜನ ಶಿಲ್ಪವಿದೆ. ಈ ದೇವಾಲಯದ ಮುಂದೆ ಮೆಟ್ಟಿಲುಗಳುಳ್ಳ ಒಂದು ಕೊಳವಿದೆ. ಇದರ ಗೋಡೆಯ ಮೇಲಿನ ಹಂತದಲ್ಲೇ ಉದ್ದಕ್ಕೂ ಅಷ್ಟದಿಕ್ಪಾಲಕರು, ನಟರಾಜ, ಮಹಿಷಮರ್ದಿನಿ, ಗಜಾನನ, ಬ್ರಹ್ಮ, ವಿಷ್ಣು, ಗಜಲಕ್ಷ್ಮಿ, ಕಾರ್ತಿಕೇಯ, ಕುದುರೆ, ಆನೆ, ದೇವಭಕ್ತರು, ಪಂಚತಂತ್ರದ ಮೊಸಳೆ ಮಂಗಗಳ ಕಥೆಯ ಸನ್ನಿವೇಶ, ಕಿರಾತಾರ್ಜುನೀಯದ ಕಥೆ ಮುಂತಾದ ಅನೇಕ ಶಿಲ್ಪಗಳಿವೆ. ಸ್ವಲ್ಪ ಕೆಳಗೆ ಮೂಲೆಗಳಲ್ಲಿ ಸಿಂಹಗಳ ಶಿಲ್ಪಗಳೂ ಮೆಟ್ಟಿಲುಗಳ ಬದಿಯಲ್ಲಿ ಸಪ್ತಮಾತೃಕೆಯರ ಮೂರ್ತಿಯೂ ಇವೆ. ಇದು ಮೊದಲಿನಿಂದಲೂ ಶಿವ ದೇವಾಲಯ. ಹುಚ್ಚಿಮಲ್ಲಿ ಎಂಬುದು ಈಚೆಗೆ ಬಂದ ಹೆಸರು. ಇತ್ತೀಚೆಗೆ ಇದಕ್ಕೆ ಕಾರ್ತಿಕೇಯ ದೇವಾಲಯವೆಂದು ಹೆಸರಿಡಲಾಗಿದೆ. ಸು.6-7ನೆಯ ಶತಮಾನಗಳಲ್ಲಿ ಈ ದೇವಾಲಯ ರಚಿತವಾಗಿರಬಹುದು. (ಎ.ಎಸ್.)

ಹುಚ್ಚಿಮಲ್ಲಿ ಗುಡಿಯ ಎದುರಿಗೆ ಸ್ವಲ್ಪ ಅಂತರದಲ್ಲಿ ಇನ್ನೊಂದು ಚಿಕ್ಕ ಗುಡಿ ಇದೆ. ಇದರ ಗರ್ಭಗುಡಿ ಶಿಥಿಲವಾಗಿ ಈಗ ಮುಖಮಂಟಪ ಮಾತ್ರ ನಿಂತಿದೆ. ಇದರಲ್ಲಿ ಪೂರ್ಣಕುಂಭಗಳನ್ನು ಹೊರಬದಿಗೆ ಕೆತ್ತಿರುವ ಕಕ್ಷಾಸನಗಳಿವೆ.

ಹುಚ್ಚಿಮಲ್ಲಿ ಗುಡಿಯ ಉತ್ತರಕ್ಕೆ ಇನ್ನೊಂದು ಚಿಕ್ಕ ಗುಡಿಯಲ್ಲಿ ಗರ್ಭಗುಡಿ ಸುಕನಾಸಿ ಮತ್ತು ಮಂಟಪ ಮಾತ್ರ ಇವೆ. ಗರ್ಭಗುಡಿಯ ಮೇಲೆ ಕದಂಬ ನಾಗರ ರೀತಿಯ ಶಿಖರವಿದೆ. ಸುಕನಾಸಿಯ ಮುಂಗೋಡೆಯಲ್ಲಿ ಜಾಲಂಧ್ರಗಳಿವೆ. ಇದು ಸು.11ನೆಯ ಶತಮಾನದಲ್ಲಿ ರಚಿತವಾದ ಕಟ್ಟಡವೆಂದು ಊಹಿಸಲಾಗಿದೆ.



ಹುಚ್ಚಿಮಲ್ಲಿ ಗುಡಿ

**ರಾವಳಫಡಿ :** ಐಹೊಳೆಯಲ್ಲಿ ಮೂರು ಗುಹಾ ದೇವಾಲಯಗಳಿವೆ. ಅವುಗಳಲ್ಲಿ ಪ್ರಖ್ಯಾತವಾಗಿರುವುದು ರಾವಳ(ಣ)ಫಡಿ. ಇದು ಹುಚ್ಚಿಮಲ್ಲಿ ಗುಂಪಿನ ಗುಡಿಗಳಿಂದ ಸು.30ಮೀಟರುಗಳ ಆಗ್ನೇಯಕ್ಕಿದೆ. ದೊಡ್ಡ ಮರಳುಗಲ್ಲು ಬಂಡೆಯ ಒಂದು ಪಾರ್ಶ್ವದಲ್ಲಿ ಕೊರೆದಿರುವ ಈ ಗುಹೆ ಶೈವದೇವಾಲಯ. ಬಾದಾಮಿಯ ಗುಹೆಗಳಿಗೆ ಹೋಲಿಸಿದರೆ ಬಹು ಚಿಕ್ಕದು. ಇದರಲ್ಲಿ 5x4ಮೀ ಅಗಲವಾದ ಮಂಟಪವಿದ್ದು ಮಂಟಪದ ಬಲ ಎಡ ಭಾಗಗಳಲ್ಲಿ ಕೋಣೆಗಳು (ಅಥವಾ ಕೋಷ್ಠಗಳು), ಹಿಂಬದಿಯಲ್ಲಿ ಅಂತರಾಳ ಮತ್ತು ಗರ್ಭಗುಡಿ ಇವೆ. ಈ ಮೂರು ಕಡೆಯ ಭಾಗಗಳು ಮಂಟಪದ ನೆಲದ ಮಟ್ಟಕ್ಕಿಂತ ಸ್ವಲ್ಪ ಎತ್ತರವಾಗಿರುವುದಲ್ಲದೆ ಅವುಗಳ ಮುಂಬದಿಯಲ್ಲಿ ಎರಡೆರಡು ಕಂಬಗಳಿವೆ. ನಡುಮಂಟಪದ ಮುಂಬದಿಯಲ್ಲೂ ಎರಡು ಕಂಬಗಳಿವೆ. ರಾವಳಫಡಿಯ ಮುಖನೋಟ ಬಹು ಸಾಮಾನ್ಯ ರೀತಿಯದು. ಬಲ ಎಡ ಬದಿಗಳಲ್ಲಿನ ಕೋಷ್ಠಗಳಲ್ಲಿ ಶಂಖನಿಧಿ ಪದ್ಮನಿಧಿಗಳು ಅವುಗಳ ಹತ್ತಿರ ಶೈವ ದ್ವಾರಪಾಲಕ ವಿಗ್ರಹಗಳು ಇವು ಮಾತ್ರ ಇವೆ. ಆದರೆ ಆಲಯವನ್ನು ಪ್ರವೇಶಿಸಿದಾಗ ಇದರ ನಿಜ ಸ್ವರೂಪ ಎದ್ದು ಕಾಣುತ್ತದೆ. ಇದು ಸುಂದರ ಶಿಲ್ಪಗಳ ಬೀಡು. ಒಂದೊಂದು ಶಿಲ್ಪವೂ ಅಸಮ ಸೌಂದರ್ಯಕ್ಕೆ ಉತ್ತಮ ಭಾವರಸ ನಿರೂಪಣೆಗೆ ಹೆಸರಾದುವು. ಒಳಭಾಗದ ವಾಸ್ತುವಿನ್ಯಾಸದಲ್ಲೇ ಒಂದು ಸೊಬಗಿದೆ. ಮಂಟಪದ ಚಾವಣಿಯಲ್ಲಿ ಚೌಕ ಪಟ್ಟಿಗಳಿಂದ ಸುತ್ತುವರಿದ ದೊಡ್ಡ ಕಮಲವಿದೆ. ನವಿರಾಗಿ ಅಲ್ಪ ಉಬ್ಬಿನಲ್ಲಿ ಕೆತ್ತಿರುವ ಈ

ಶಿಲ್ಪಗಳಿರುವ ಭಾಗ ಮಧ್ಯದಲ್ಲಿ ಕೆಳಗಿಳಿದಂತಿದ್ದು, ಕಸೂತಿಯ ಚಿತ್ರಕೆಲಸವಿರುವ ದೊಡ್ಡ ರತ್ನಗಂಬಳಿಯನ್ನು ಮೇಲೆ ಹರಹಿದಂತೆ ಕಾಣುತ್ತದೆ. ಮಂಟಪದ ಒಳ ಗೋಡೆಗಳ ಮೇಲೆ, ಕೋಣೆ ಅಂತರಾಳಗಳ ಪ್ರವೇಶಭಾಗಗಳ ಪಕ್ಕಗಳಲ್ಲಿ, ಹರಿಹರ, ಗಂಗಾಧರ, ಅರ್ಧನಾರೀಶ್ವರ ಮೊದಲಾದ ಮೂರ್ತಿಗಳಿವೆ. ಮಂಟಪದೊಳಗೇ ಇರುವ ಪಕ್ಕದ ಕೋಣೆಗಳ ಕೆಳ ಅಧಿಷ್ಠಾನದಲ್ಲಿ ಗಣಗಳ ಸಾಲುಗಳಿವೆ. ಒಂದೊಂದು ಗಣವೂ ವಿವಿಧ ಆಟಗಳಲ್ಲಿ ಮಗ್ನವಾಗಿರುವಂತೆ ತೋರಿಸಲಾಗಿದೆ. ಒಂದು ಗಣ ತಲೆಕೆಳಗಾಗಿ ಕೈಮೇಲೆ ನಿಂತಿದ್ದರೆ, ಇನ್ನೊಂದು ಬಲಗಾಲು ಮತ್ತು ಕೈ ಊರಿ ಲಾಗ ಹಾಕುತ್ತಿದೆ. ಇನ್ನೊಂದು ಗಣ ಪಕ್ಕದಲ್ಲಿ ಮಲಗಿರುವ ಗಣದ ಕೂದಲು ಹಿಡಿದು ಜಗ್ಗುತ್ತಿದೆ. ಬಾಲ್ಯ ವಿನೋದಗಳೆಲ್ಲಾ ಇಲ್ಲಿ ಶಿಲ್ಪಿತವಾಗಿವೆ. ಅಂತರಾಳದ ಹಾಗೂ ಕೋಣೆಗಳ ಬದಿಯ ಗೋಡೆಗಳಲ್ಲಿ ಕೂಡ ವರಾಹ, ಮಹಿಷಮರ್ದಿನಿ ಮೊದಲಾದ ಶಿಲ್ಪಗಳ ಕೆತ್ತನೆಗಳಿವೆ. ಈ ಗುಹೆಗಳಲ್ಲಿ ಬಹಳ ಪ್ರಸಿದ್ಧವಾಗಿರುವ ಅತ್ಯಂತ ಸುಂದರವಾದ ಶಿಲ್ಪ ಶಿವ ನಟರಾಜನದು. ದಶಬಾಹುವಾದ ನರ್ತನನಿರತನಾದ ಈ ಶಿವ ವಿಗ್ರಹದ ಅಂಗಾಂಗಗಳ ಸಹಜ ಪ್ರಮಾಣ, ನೃತ್ಯ ಭಂಗಿಗೆ ಸಹಜವಾದ ಮೈಬಾಗುಗಳು, ಮುಖದಲ್ಲಿ ಎದ್ದುಕಾಣುವ ಭಾವತನ್ಮಯತೆ ಇವೆಲ್ಲವೂ ಮೂರ್ತಿಯ ಕಳೆಯನ್ನು ಹೆಚ್ಚಿಸಿವೆ. ಈ ವಿಗ್ರಹದ ಅಕ್ಕ ಪಕ್ಕದಲ್ಲಿರುವ ಅಷ್ಟಮಾತೃಕೆಯರ ಶಿಲ್ಪಗಳಲ್ಲಿ ಒಂದೊಂದೂ ನಟರಾಜನಿಗಿಂತಲೂ ಒಂದೊಂದು ಕೈ ಮಿಗಿಲಾಗಿವೆ. ಈ ನೀಳದೇಹಿ ಶಿಲ್ಪಗಳಲ್ಲಿ ಕಂಡುಬರುವ ಬಳುಕು, ಕೋಮಲತೆ, ಲಾಸ್ಯ ಮತ್ತು ಆಕರ್ಷಣೆ ಅದ್ಭುತವಾದುವು. ಬಹು ಸರಳವಾದರೂ ಉತ್ತಮ ವಿನ್ಯಾಸವಿರುವ ಈ ಗುಹೆ ಕರ್ನಾಟಕದ ಬಾದಾಮಿ ಚಾಳುಕ್ಯ ಕಾಲದ ಗುಹಾ ದೇವಾಲಯಗಳ ಸರಣಿಯಲ್ಲಿ ಬಹುಶಃ ಬಹು ಪ್ರಾಚೀನವಾದುದು ಎಂಬ ಅಭಿಪ್ರಾಯವಿದೆ. ಇದರ ಕಾಲ ಸು.6ನೆಯ ಶತಮಾನದ ಆದಿಭಾಗ.

**ಜ್ಯೋತಿರ್ಲಿಂಗ ಗುಡಿಗಳ ಗುಂಪು :** ರಾವಳಫಡಿಯಿಂದ ಸ್ವಲ್ಪದೂರ ನೈಋತ್ಯದಲ್ಲಿ, ಕೋಟೆಯ ಗೋಡೆಗೆ ಅನತಿದೂರದಲ್ಲಿ, 16 ಜ್ಯೋತಿರ್ಲಿಂಗ ಗುಡಿಗಳ ಗುಂಪಿದೆ. ಇಲ್ಲಿನ ಎರಡು ಗುಡಿಗಳು ಚಿಕ್ಕವು. ಮಟ್ಟಸ ಚಾವಣಿಯವು. ಇವುಗಳ ಮುಂದೆ ನಂದಿಮಂಟಪಗಳಿವೆ. ಇವುಗಳ ಅಧಿಷ್ಠಾನ ಬಹಳ ಸರಳವಾಗಿರುವುದು, ಅದರ ಮೇಲಿನ ಪಟ್ಟಿಕೆಯ ಮೇಲೆ ನಾಲ ಇರುವುದು. ಗರ್ಭಗುಡಿಗೆ ಹೋಗುವ ಇಕ್ಕೆಲದಲ್ಲಿ ಕಟಾಂಜನವಿರುವುದು ಮುಂತಾದ ಇತರ ಅಂಶಗಳ ಆಧಾರದ ಮೇಲೆ ಇವೇ ಐಹೊಳೆಯ ಅತ್ಯಂತ ಪ್ರಾಚೀನ ಕಟ್ಟಡಗಳೆಂದು ಒಬ್ಬ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಒಂದು ಗುಡಿಯ ದ್ವಾರದ ಇಕ್ಕೆಲದಲ್ಲಿ ಶಂಖನಿಧಿ ಪದ್ಮನಿಧಿಯರ ಶಿಲ್ಪಗಳಿವೆ. ಎರಡೂ ಗುಡಿಗಳಲ್ಲಿ ರಸಿಕದಂಪತಿಗಳು, ವರಾಹ, ಬ್ರಹ್ಮ ಮೊದಲಾದ ಶಿಲ್ಪಗಳೂ ಇವೆ. ಉಳಿದ ಗುಡಿಗಳಲ್ಲಿ ಸಾಮಾನ್ಯವಾಗಿ ಗರ್ಭಗುಡಿ, ಸುಕನಾಸಿ, ಮಂಟಪ ಮತ್ತು ಮುಖಮಂಟಪ ಇವೆ. ಎರಡು ಗುಡಿಗಳ ಮೇಲೆ ಕದಂಬ ನಾಗರ ವಿಮಾನಗಳಿವೆ. ಈ ಎರಡು ಗುಡಿಗಳಲ್ಲಿ ಕಲ್ಯಾಣ ಚಾಳುಕ್ಯರ ಕಾಲದ ಒಂದೊಂದು ಶಾಸನವಿದೆ. ಇತರ ಗುಡಿಗಳು ಬಹು ಶಿಥಿಲವಾಗಿವೆ. ಇವೆಲ್ಲ ಸು.8-10ನೆಯ ಶತಮಾನ ಕಾಲಗಳವು.

**ಮಲ್ಲಿಕಾರ್ಜುನ ಗುಡಿಗಳ ಗುಂಪು :** ಜ್ಯೋತಿರ್ಲಿಂಗ ಗುಂಪಿನಿಂದ ಸ್ವಲ್ಪ ಆಗ್ನೇಯಕ್ಕೆ ಕೋಟೆಯ ಪೂರ್ವ ಬಾಗಿಲ ಕಡೆಗೆ 5 ಮಲ್ಲಿಕಾರ್ಜುನ ಗುಡಿಗಳ ಗುಂಪಿದೆ. ಇದರಲ್ಲಿ ದೊಡ್ಡದು ಸು.8ನೆಯ ಶತಮಾನದ ಕಟ್ಟಡ. ಗರ್ಭಗುಡಿ, ಮಂಟಪ ಮತ್ತು ಮುಖಮಂಟಪಗಳಿರುವ ಈ ಗುಡಿ ಎತ್ತರವಾದ ಅಧಿಷ್ಠಾನದ ಮೇಲಿದೆ. ಮುಮ್ಮಂಟಪ ನಾಲ್ಕು ಚಚ್ಚೌಕ ಕಂಬಗಳದು. ಒಳಗಿನ ಮಂಟಪದಲ್ಲಿ ನಾಲ್ಕು ಕಂಬಗಳೂ ನಾಲ್ಕು ಅರೆಗಂಬಗಳೂ ಇವೆ. ಮುಮ್ಮಂಟಪ ಮತ್ತು ಒಳಮಂಟಪದ ಮಧ್ಯಾಂಕಣ ಇವುಗಳ ಮಾಡು ಮಟ್ಟವಾಗಿದೆ. ಮಧ್ಯಾಂಕಣದ ಬದಿಯ ಭಾಗಗಳಲ್ಲಿನ ಮಾಡುಗಳು ಇಳಿಜಾರಾಗಿವೆ. ಗರ್ಭಗುಡಿಯ ಮೇಲೆ ಕದಂಬನಾಗರ ಶೈಲಿಯ ಶಿಖರವಿದೆ. ಇಲ್ಲಿನ ಕಂಬಗಳ ಮೇಲೆ ಸಿಂಹಮುಖದಿಂದ ಹೊರಟ ಮಣಿಸರಗಳು, ವರ್ತುಲಗಳ ಮಧ್ಯದಲ್ಲಿ ನೃತ್ಯಗಾತಿಯರು, ವಾದ್ಯಗಾರರು, ರಸಿಕದಂಪತಿಗಳು, ನರಸಿಂಹ - ಇವೇ ಮೊದಲಾದ ತೆಳುಉಬ್ಬುಶಿಲ್ಪಗಳಿವೆ. ದ್ವಾರಬಂಧಗಳಲ್ಲಿ ಸಮಕಾಲೀನ ರೀತಿಯಲ್ಲಿ ನಾಗಗಳನ್ನು ಹಿಡಿದ ಗರುಡನ ಶಿಲ್ಪಗಳಿವೆ. ಈ ಗುಡಿಯ ಹತ್ತಿರದಲ್ಲೇ ಅಂತರಗಂಗೆಯೆಂಬ ಹೊಂಡವಿದೆ.

ಈ ಗುಂಪಿನ ಎರಡನೆಯ ಗುಡಿಯೂ ಮೇಲಿನದರ ಕಾಲದ್ದು, ರೀತಿಯದು, ಆದರೆ ಚಿಕ್ಕದು. ಇದರಲ್ಲಿ ಮಂಟಪ, ಅಂತರಾಳ ಮತ್ತು ಗರ್ಭಗುಡಿ ಮಾತ್ರ ಇವೆ. ಮೇಲಿನ ಕದಂಬನಾಗರ ಶಿಖರ ಅಪೂರ್ಣವಾಗಿದೆ. ಇತರ ಗುಡಿಗಳು ಸಾಮಾನ್ಯ ರೀತಿಯ ಕಟ್ಟಡಗಳು.

**ಗುಡ್ಡದ ಮೇಲಿನ ಗುಡಿಗಳು :** ಊರಿನ ಆಗ್ನೇಯ ದಿಕ್ಕಿಗಿರುವ ಗುಡ್ಡದ ಹಾದಿಯಲ್ಲಿ ಕೆಲವು ಚಿಕ್ಕ ದೇವಾಲಯಗಳಿವೆ. ಗುಡ್ಡದ ಮೇಲೆ ಮೇಗುಟಿ ದೇವಾಲಯವಿದೆ. ಗುಡ್ಡಕ್ಕೆ ಎರಡು ಕಡೆಗಳಲ್ಲಿ ಹಂತಗಳಿವೆ. ಬಲಗಡೆಯ ಮೆಟ್ಟಿಲುಗಳನ್ನು ಏರುತ್ತ ಸುಮಾರು ಮುಕ್ಕಾಲು ಎತ್ತರವನ್ನು ಕ್ರಮಿಸಿದಾಗ ಎರಡಂತಸ್ತಿನ ಶಿಲಾ ಕಟ್ಟಡವೊಂದು ಕಾಣುತ್ತದೆ. ಇದರ ಒಳಭಾಗ ನೈಸರ್ಗಿಕ ಗುಹೆ. ಕೆಳ ಅಂತಸ್ತಿನಲ್ಲಿ ನಾಲ್ಕು ಕಂಬಗಳು ಮತ್ತು ಎರಡು ಅರೆಗಂಬಗಳಿರುವ ಪಡಸಾಲೆ ಇದೆ. ಒಳಭಾಗದಲ್ಲಿ ಒಂದು ಗೋಡೆ, ಅದರ ಹಿಂಬದಿಯಲ್ಲಿ ಮೂರು ಸಣ್ಣ ಕೋಣೆಗಳು ಇವೆ. ಕೋಣೆಗಳು ಬಹಳ ಚಿಕ್ಕವು. ಮಧ್ಯದ ಕೋಣೆಯಲ್ಲಿ ದೇವಪೀಠವಿದೆ. ಮೇಲಂತಸ್ತಿನಲ್ಲೂ ಮುಂಭಾಗದಲ್ಲಿ ಕೆಳಗಿನ ರೀತಿಯ ಪಡಸಾಲೆ ಇದೆ. ಹಿಂಭಾಗದಲ್ಲಿ ಒಂದು ಚೌಕ ಕೋಣೆ ಇದೆ. ಕೆಳ ಗರ್ಭಗುಡಿಯ ಪೀಠದ ಮೇಲಿದ್ದ ವಿಗ್ರಹ ಇಂದು ಹೊರಗೆ ಇದೆ. ಇದು ಪದ್ಮಾಸನಸ್ಥನಾದ ಬುದ್ಧಮೂರ್ತಿ. ಇದೇ ರೀತಿಯ ಶಿಲ್ಪವನ್ನು ಮೇಲಂತಸ್ತಿನ ಪಡಸಾಲೆಯ ಛತ್ತಿನ ಮೇಲೂ ಕಡೆಯಲಾಗಿರುವುದರಿಂದ ಇದು ಬೌದ್ಧಾಲಯವೆಂದು ಹೇಳಬಹುದು. ಈ ಆಲಯ ಬೌದ್ಧ ವಿಹಾರವೆಂದು ಒಂದು ಅಭಿಪ್ರಾಯ. ಇದು ಚೈತ್ಯಗೃಹವೆಂದು ಮತ್ತೆ ಕೆಲವರ ಮತ. ಇಲ್ಲಿನ ಮೂರ್ತಿಗಳು ವಸ್ತ್ರಧಾರಿ ಜಿನ ವಿಗ್ರಹಗಳೆಂಬ ಹೇಳಿಕೆಯೂ ಇದೆ. ಗುಡ್ಡದ ಮೇಲಿನ ಜಿನಾಲಯವೆಂಬ ಹೆಸರೂ ಈ ಗುಡಿಗಿದೆ. ಕಟ್ಟಡ ಬಹಳ ಸಾದಾ ರೀತಿಯದಾಗಿರುವುದರಿಂದ ಇದು ಸು.5ನೆಯ ಶತಮಾನದ್ದೆಂದು ಊಹಿಸಲಾಗಿದೆ. ಇದರ ಕಂಬಗಳ ಮೇಲೆ ಶ್ರೀ ಬಿಣಅಮ್ಮನ್ ಮಹೇಂದ್ರ ಮುಂತಾದ ಹೆಸರುಗಳನ್ನು ಕೊರೆಯಲಾಗಿದೆ. ಲಿಪಿಯ ದೃಷ್ಟಿಯಿಂದ ಈ ಶಾಸನಗಳು ಸು.8ನೆಯ ಶತಮಾನದವು.

ಮೇಗುಟಿ ಗುಡ್ಡದ ಮೇಲಿರುವ ಮೇಗುಟಿ (ಮೇಗಣಗುಡಿ) ನಾಲ್ಕೂ ಕಡೆ ಒರಟು ಕಲ್ಲಿನ ಗೋಡೆಗಳಿಂದ ಆವೃತವಾದ ಬಹು ವಿಶಾಲವಾದ ಪ್ರಾಂಗಣದ ಮಧ್ಯೆ ಇದೆ. ದೇವಾಲಯದ ಮುಂಭಾಗದಲ್ಲಿ ನಾಲ್ಕು ಕಂಬಗಳ ನಾಲ್ಕು ಸಾಲುಗಳಿರುವ ಚೌಕ ಮಂಟಪವಿದೆ. ಅದರ ಮುಂದೆ ಎರಡು ಪಕ್ಕಗಳಿಂದ ಏರುವ ಪಾವಟಿಗೆಗಳುಂಟು. ಮಂಟಪದ ಹಿಂದೆ ಆಯಾಕಾರದ ಅಂತರಾಳ, ಅದರ ಹಿಂದೆ ಚೌಕ ಗರ್ಭಗುಡಿ ಇವೆ. ಗರ್ಭಗುಡಿಯ ಸುತ್ತ ಪ್ರದಕ್ಷಿಣಾಪಥವಿದೆ. ಅನಂತರದ ಯಾವುದೋ ಕಾಲದಲ್ಲಿ ಪ್ರದಕ್ಷಿಣಾಪಥದ ಮಧ್ಯೆ ಮಧ್ಯೆ ಚಿಕ್ಕ ಗೋಡೆಗಳನ್ನು ಎಬ್ಬಿಸಿ ಕೋಣೆಗಳಂತೆ ಮಾಡಿರುವುದರಿಂದ ಅದು ಈಗ ಪ್ರದಕ್ಷಿಣೆಗೆ ಅನುಕೂಲವಾಗಿಲ್ಲ. ಕೆಳಗರ್ಭಗುಡಿಯ ನೇರದಲ್ಲೇ ಮಾಳಿಗೆಯ ಮೇಲೆ ಇನ್ನೊಂದು ಗರ್ಭಗೃಹವುಂಟು. ಮಾಳಿಗೆಯ ಮೇಲಕ್ಕೆ ಹೋಗಲು ಅಂತರಾಳದಲ್ಲಿ ಮೆಟ್ಟಲುಗಳಿವೆ. ಹೊರ ಮೈಯ ಏರುವಿನ್ಯಾಸ ಬಹು ಸರಳ ರೀತಿಯದು. ಅಧಿಷ್ಠಾನ ಎತ್ತರವಾಗಿದೆ. ಹಲವು ಅಡ್ಡಪಟ್ಟಿಕೆಗಳಿಂದ ಕೂಡಿದ ಈ ಅಧಿಷ್ಠಾನದ ಮೇಲುಪಟ್ಟಿಕೆಯಲ್ಲಿ ಮನುಷ್ಯಮುಖಗಳಿರುವ ಚೈತ್ಯ ಕಿಂಡಿಗಳು, ಅದರ ಕೆಳಗಿನದರಲ್ಲಿ ದಂಪತಿಗಳು, ಹಾವಾಡಿಗ, ವಾದ್ಯಕಾರರು, ಮಲ್ಲರು ಮೊದಲಾದ ಚಿಕ್ಕ ಶಿಲ್ಪಗಳ ಅಲಂಕರಣ ಇದೆ. ಭಿತ್ತಿಯ ಮೇಲೆ ಕೆಲವು ಅರೆಗಂಬಗಳು ಮತ್ತು ಕೋಷ್ಠಗಳಿವೆ. ಆದರೆ ಶಿಲ್ಪಗಳಿಲ್ಲ. ಕಪೋತ ಚೌಕಪಟ್ಟಿಯ ರೀತಿಯದು. ಮೇಲ್ಮಾಳಿಗೆಯ ಗರ್ಭಗುಡಿಯಲ್ಲೂ ಮೂರು ಕಡೆ ಕೋಷ್ಠಗಳುಂಟು. ಅದರ ಚಾವಣಿ ಉಳಿದಿಲ್ಲ. ಹಿಂದೆಯೂ ಅದರ ಮೇಲೆ ಶಿಖರವಿದ್ದುದಕ್ಕೆ ಸೂಚನೆಗಳಿಲ್ಲ. ಮಂಟಪದ ಕಂಬಗಳು ಚಚ್ಚೌಕ ಅಡ್ಡಕೊಯ್ತ ರೀತಿಯವು. ದ್ವಾರಬಂಧಗಳು ಸಾದಾ ರೀತಿಯವು. ಪ್ರದಕ್ಷಿಣಾಪಥದ ಹೊರಗೋಡೆಯಲ್ಲಿ ಅಲ್ಲಲ್ಲಿ ಜಾಲಂಧ್ರಗಳನ್ನು ಅಳವಡಿಸಲಾಗಿದೆ. ಚಾವಣಿ ಮಟ್ಟಸವಾಗಿದೆ. ಗರ್ಭಗೃಹದಲ್ಲಿ ಸಿಂಹಾಸನದ ಮೇಲೆ ಕುಳಿತ ತೀರ್ಥಂಕರ ವಿಗ್ರಹವಿದೆ. ಪ್ರದಕ್ಷಿಣಾಪಥದಲ್ಲಿ ಜೈನ ಯಕ್ಷಿಣಿಯ ಮೂರ್ತಿಯಿದೆ. ಇದು ಸುಜಾತಾ ಅಥವಾ ಅಂಬಿಕಾಮೂರ್ತಿ.

ದೇವಾಲಯದ ರಚನಾವಿನ್ಯಾಸ ಅಥವಾ ಅಲಂಕರಣದಲ್ಲಿ ಹೆಚ್ಚಿನ ವೈಶಿಷ್ಟ್ಯಗಳನ್ನು ಗುರುತಿಸಲಾಗದಿದ್ದರೂ ವಾಸ್ತುಶಿಲ್ಪ ಇತಿಹಾಸಕಾರರ ದೃಷ್ಟಿಯಲ್ಲಿ ಇದು ಮಹತ್ವದ ಕಟ್ಟಡ. ರಚನೆಯ ಕಾಲ ಖಚಿತವಾಗಿ ಗೊತ್ತಿರುವ ಬಾದಾಮಿಯ ಚಳುಕ್ಯರ ಕಾಲದ ದೇವಾಲಯಗಳು ಹೆಚ್ಚಿಲ್ಲ. ಇರುವವುಗಳಲ್ಲಿ ಇದೇ ಅತ್ಯಂತ ಪ್ರಾಚೀನವಾದುದು. ದೇವಾಲಯದ ಅಂತರಾಳದ ಪೂರ್ವ ಹೊರಗೋಡೆಯಲ್ಲಿ ಅಳವಡಿಸಿರುವ ಕರಿಚಪ್ಪಡಿಯ ಮೇಲೆ ಕೆತ್ತಿರುವ ಒಂದು ಶಾಸನವೇ ಪ್ರಸಿದ್ಧ ಐಹೊಳೆ ಶಾಸನ. ಈ ದೇವಾಲಯ ಜಿನಮಂದಿರ. ಇಮ್ಮಡಿ ಪುಲಕೇಶಿಯ ಸಮೀಪವರ್ತಿಯಾಗಿದ್ದ ರವಿಕೀರ್ತಿ ಇದನ್ನು ಶಾ.ಶ.556ರಲ್ಲಿ (634-35) ರಚಿಸಿದ ಎಂದು ಈ ಶಾಸನ ತಿಳಿಸುತ್ತದೆ. ಬಾದಾಮಿಯ ಚಳುಕ್ಯವಂಶದ ಮತ್ತು ಇಮ್ಮಡಿ ಪುಲಕೇಶಿಯ ಸಾಧನೆಗಳ ವಿವರಗಳನ್ನೂ ಒಳಗೊಂಡಿರುವ ಈ ಶಾಸನ ಚಳುಕ್ಯ ಇತಿಹಾಸದ ರಚನೆಗೆ ಅಮೂಲ್ಯ ದಾಖಲೆಯೂ ಹೌದು. ಮೇಗುಟಿ ಬೆಟ್ಟದ ಮೇಲಿಂದ ಐಹೊಳೆಯ ದೇವಾಲಯ ಸಮೂಹಗಳ ಪಕ್ಷಿ ನೋಟ ದೊರಕುತ್ತದೆ. ಇಲ್ಲಿಂದ ಕಾಣುವ, ಬಳಸಿ ಸುತ್ತುವ ಮಲಪ್ರಭಾ ನದಿ, ದಿಗಂತದವರೆಗೆ ಹಬ್ಬುವ ಹಸುರು ಹೊಲಗಳ ಹರಹು. ಇವುಗಳದು ಸುಂದರ ದೃಶ್ಯ.

**ಜೈನ ಗುಹೆ :** ಮೇಗುಟಿ ಗುಡಿಯ ಆಗ್ನೇಯಕ್ಕೆ ಸು.400ಮೀ ದೂರದಲ್ಲಿ ಒಂದು ಚಿಕ್ಕ ಜೈನ ಗುಹಾದೇವಾಲಯವಿದೆ. ತಳವಿನ್ಯಾಸದಲ್ಲಿ ಇದು ರಾವಳ ಫಡಿಯನ್ನು ಹೋಲುತ್ತದೆ. ಮುಂದೆ ಒಂದು ಪಡಸಾಲೆ, ಅದರ ಹಿಂದೆ ಒಂದು ಮಂಟಪ, ಮಂಟಪದ ಹಿಂದೆ ಗರ್ಭಗುಡಿ, ಮಂಟಪದ ಎರಡೂ ಬದಿಯಲ್ಲಿ ಒಂದೊಂದು ಕೋಣೆ ಇವೆ. ಇಲ್ಲಿನ ಶಿಲ್ಪಗಳು ಕರ್ನಾಟಕದ ಅತಿ ಪ್ರಾಚೀನ ಜೈನ ಶಿಲ್ಪಗಳ ಸಾಲಿಗೆ ಸೇರಿದವು. ಪಡಸಾಲೆಯ ಎಡಗಡೆ ಆಳೆತ್ತರದ ಗೊಮ್ಮಟನ ಅತ್ಯುಬ್ಬು ಶಿಲ್ಪವಿದೆ. ಕಾಯೋತ್ಸರ್ಗ ಭಂಗಿಯಲ್ಲಿರುವ ಗೊಮ್ಮಟನ ಇಕ್ಕೆಲದಲ್ಲಿ ಅವನ ತಂಗಿಯರಾದ ಬ್ರಾಹ್ಮೀ ಮತ್ತು ಸುಂದರಿಯರು ಗೊಮ್ಮಟನ ಮೇಲೆ ಬೆಳೆದ ಮಾಧವೀಲತೆಗಳನ್ನು ಕೀಳುತ್ತಿರುವಂತೆ ತೋರಿಸಿರುವುದು ಈ ಶಿಲ್ಪದ ವೈಶಿಷ್ಟ್ಯ. ಎದುರು ಗೋಡೆಯ ಮೇಲೆ ಕಾಯೋತ್ಸರ್ಗ ಭಂಗಿಯಲ್ಲಿರುವ ಸುಪಾರ್ಶ್ವನಾಥನ ಶಿಲ್ಪವಿದೆ. ಗರ್ಭಗುಡಿಯಲ್ಲಿ ಪರ್ಯಂಕಾಸನದಲ್ಲಿರುವ ತೀರ್ಥಂಕರನ (ಮಹಾವೀರ) ಮೂರ್ತಿ ಇದೆ. ಮಂಟಪದ ಬಲ ಕೋಣೆಯಲ್ಲಿ ಗೋಡೆಗಳ ಮೇಲೆ ಪರ್ಯಂಕಾಸನದಲ್ಲಿರುವ ತೀರ್ಥಂಕರ ಮತ್ತು ಪರಿಚರ ವಿಗ್ರಹಗಳಿವೆ. ಎಡಕೋಣೆಯಲ್ಲಿ ವಿಗ್ರಹವಿಲ್ಲ. ಈ ಗೋಡೆಯ ಹತ್ತಿರ ಪ್ರಾಯಶಃ ಈ ಆಲಯಕ್ಕೆ ಭೇಟಿ ಕೊಟ್ಟ ಶ್ರೀ ಹಿರಿಯ, ವಿಕ್ರಮಪುತ್ರ ಮೊದಲಾದ ವ್ಯಕ್ತಿಗಳ ಹೆಸರುಗಳು 7ನೆಯ ಶತಮಾನದ ಅಕ್ಷರಗಳಲ್ಲಿವೆ.

**ಹುಚ್ಚಪ್ಪಯ್ಯನ ಗುಡಿ :** ಐಹೊಳೆಯ ಕೋಟೆಯ ದಕ್ಷಿಣಕ್ಕೆ ಮಲಪ್ರಭಾ ನದಿಯೆಡೆಗೆ ಹೊಲಗಳ ಮಧ್ಯೆ ಸಾಗುವ ಸುಮಾರು 1.5ಕಿಮೀ ಉದ್ದದ ರಸ್ತೆ ಇದೆ. ಇದರ ಬಲಬದಿಯಲ್ಲಿ ನದಿಯ ದಂಡೆಗುಂಟ ಅನೇಕ ದೇವಾಲಯಗಳಿವೆ. ಈ ಸಮೂಹದಲ್ಲಿ ಮೊದಲು ಸಿಗುವುದು ಹುಚ್ಚಪ್ಪಯ್ಯನ ಗುಡಿ. ಈ ಗುಡಿಯಲ್ಲಿ ಮುಖಮಂಟಪ, ಮಂಟಪ ಮತ್ತು ಗರ್ಭಗೃಹ ಇವೆ. ಅಧಿಷ್ಠಾನ ಪಟ್ಟಿಕೆಗಳ ಮೇಲೆ ನಿಂತಿರುವ ಭಿತ್ತಿಯಲ್ಲಿ ಕೆಲವು ಜಾಲಂಧ್ರಗಳುಂಟು. ಮೇಲೆ ಪಟ್ಟಿಕಪೋತ ಮತ್ತು ಮುಂಜೂರು ಇವೆ. ಗರ್ಭಗುಡಿಯ ಮೇಲೆ ರೇಖಾನಾಗರ ಶಿಖರವಿದೆ. ಮುಖಮಂಟಪ ಮತ್ತು ಒಳಮಂಟಪದ ಕಂಬಗಳು ಚೌಕ ರೀತಿಯವು, ದಪ್ಪವು. ವಾಸ್ತು ವಿನ್ಯಾಸಕ್ಕಿಂತಲೂ ಇಲ್ಲಿಯ ಶಿಲ್ಪಗಳು ಅಸಾಧಾರಣವಾದವು. ಮುಮ್ಮಂಟಪದ ಕಂಬಗಳ ಮೇಲೆ ಕಾಮಕೇಳಿನಿರತ ಅನುರಕ್ತ ದಂಪತಿಗಳ ವಿಗ್ರಹಗಳಿವೆ. ಇವುಗಳಲ್ಲಿ ಕಂಡುಬರುವ ಸಂದರ್ಭಸಹಜ ತಲ್ಲೀನತೆ, ಆನಂದಭಾವ ಇವುಗಳ ನಿರೂಪಣೆಯ ಸೊಗಸನ್ನು ನೋಡಿಯೇ ಆನಂದಿಸಬೇಕು. ಈ ಕಂಬಗಳ ಮೇಲೆ ಶಂಖನಿಧಿ ಪದ್ಮನಿಧಿಗಳ ಶಿಲ್ಪಗಳೂ ಇವೆ. ಛತ್ತಿನಲ್ಲಿ ನಟರಾಜ ವಿಗ್ರಹವಿದೆ. ಮುಖಮಂಟಪದಿಂದ ಒಳಹೋಗುವ ದ್ವಾರದ ಇಕ್ಕೆಲಗಳಲ್ಲಿ ಶೈವದ್ವಾರಪಾಲಕರನ್ನೂ ಪಕ್ಕದಲ್ಲಿ ರಸಿಕ ದಂಪತಿಗಳ ವಿಗ್ರಹಗಳನ್ನೂ ಕಾಣಬಹುದು. ಗರ್ಭಗುಡಿಯ ದ್ವಾರದ ಪಕ್ಕಗಳಲ್ಲೂ ಶೈವ ದ್ವಾರಪಾಲಕ ವಿಗ್ರಹಗಳಿವೆ. ಗಣೇಶ ಮತ್ತು ಮಹಿಷಮರ್ದಿನಿ ಒಂದೊಂದು ಪಕ್ಕಗಳಲ್ಲಿವೆ. ಮಧ್ಯದ ಮಂಟಪದ ಛತ್ತಿನಲ್ಲಿ ಅಷ್ಟದಿಕ್ಪಾಲಕರ ವಿಗ್ರಹಗಳುಂಟು (ಮಧ್ಯದ ಮಾಡಿನಲ್ಲಿ ತ್ರಿಮೂರ್ತಿಗಳ ಶಿಲ್ಪಗಳಿದ್ದುವು. ಈಗ ಅವು ಮುಂಬಯಿ ವಸ್ತು ಸಂಗ್ರಹಾಲಯದಲ್ಲಿವೆ). ಗರ್ಭ ಗುಡಿಯ ಹೊರ ಗೋಡೆಗಳ ಮೇಲೆ ಮೂರು ಕಡೆ ಒಂದೊಂದು ಕೋಷ್ಠಗಳಿವೆ. ಪಶ್ಚಿಮದಲ್ಲಿ ನರಸಿಂಹ, ಉತ್ತರದಲ್ಲಿ ಗಜಾಸುರ ಸಂಹಾರ ಮೂರ್ತಿಯ ಶಿಲ್ಪಗಳಿವೆ. ದಕ್ಷಿಣದ್ದು ಈಗ ಖಾಲಿ ಇದೆ. ಹುಚ್ಚಪಯ್ಯನ ಗುಡಿ ಶಿವಾಲಯ. ಇದರ ಗರ್ಭಗುಡಿಯಲ್ಲಿ ಲಿಂಗವಿದೆ. ಈ ದೇವಾಲಯ ಸು.8ನೆಯ ಶತಮಾನದ ರಚನೆ. ಈ ದೇವಾಲಯದಲ್ಲಿ ಅದೇ ಕಾಲದ ಎರಡು ಶಾಸನಗಳಿವೆ. ಅವುಗಳಲ್ಲಿ ಒಂದು ಶಾಸನ ವಾಸ್ತು ಪ್ರಾಸಾದಗಳನ್ನು ಕಟ್ಟಬಲ್ಲ ಇಂಥವನು ಜಂಬೂದ್ವೀಪದಲ್ಲಿ ಹಿಂದೆ ಆಗಿಲ್ಲ, ಮುಂದೆ ಆಗುವುದಿಲ್ಲ, ಎಂದು ನರಸೊಬ್ಬನೆಂಬ ಒಬ್ಬ ಶಿಲ್ಪಿಯನ್ನು ಹೊಗಳುತ್ತದೆ. ಇನ್ನೊಂದು ಶಾಸನದಲ್ಲಿ ಗನಸೊಬ್ಬ ಎಂಬ ಶಿಲ್ಪಿಯ ಹೆಸರಿದೆ. ಇವರಿಬ್ಬರೂ ಈ ದೇವಾಲಯದ ರಚನೆ ಮಾಡಿದವರಿರಬೇಕು.

**ಗಳಗನಾಥ ಗುಡಿಗಳ ಗುಂಪು :** ಹುಚ್ಚಪ್ಪಯ್ಯನ ಗುಡಿಯಿಂದ ಮತ್ತಷ್ಟು ದಕ್ಷಿಣಕ್ಕೆ ನದಿಯ ದಂಡೆಯ ಮೇಲೆಯೇ ಗಳಗನಾಥ ಗುಡಿಗಳ ಗುಂಪು ಇದೆ. ಇದರಲ್ಲಿ ಒಟ್ಟು ಸು.38 ಚಿಕ್ಕ ಗುಡಿಗಳಿವೆ. ಈ ಗುಂಪಿನ ಗುಡಿಗಳಿಗೆ ಹೋಗುವ ಮೊದಲು ಒಂದು ಕಲ್ಲುತೋರಣವಿದೆ. ತೋರಣದ ಕಂಬಗಳು ಹಾಗೂ ಮೇಲಿನ ಅಡ್ಡತೊಲೆಯ ಮೇಲೆ ಸೂಕ್ಷ್ಮವಾದ ಕೆತ್ತನೆಗಳಿವೆ. ಸಮೀಪದಲ್ಲಿ 966ರ ಒಂದು ಶಾಸನದಲ್ಲಿ ಮೋನಿಭಟಾರರ ಗುಹೆ ಎಂದು ಹೆಸರಿಸಲಾಗಿರುವ ಒಂದು ಸಣ್ಣ ಗುಹೆಯುಂಟು. ಈ ಗುಂಪಿನ ಹಲವು ಗುಡಿಗಳು ಶಿಥಿಲವಾಗಿವೆ. ಆದರೆ ಗಳಗನಾಥನ ಗುಡಿ ಚೆನ್ನಾಗಿ ಉಳಿದಿರುವ ಕಟ್ಟಡ. ಗರ್ಭಗುಡಿ, ಅಂತರಾಳ ಮತ್ತು ಮಂಟಪವಿರುವ ಈ ಗುಡಿ ಪೂರ್ವಾಭಿಮುಖವಾಗಿದೆ. ಮಂಟಪಕ್ಕೆ ಪೂರ್ವ, ದಕ್ಷಿಣ ಮತ್ತು ಉತ್ತರಗಳಲ್ಲಿ ಪ್ರವೇಶದ್ವಾರಗಳಿವೆ. ಮಂಟಪ ವಿಶಾಲವಾಗಿದೆ. ಮಧ್ಯದಲ್ಲಿರುವ ನಾಲ್ಕು ಕಂಬಗಳು ಛತ್ತನ್ನು ಎತ್ತಿ ಹಿಡಿದಿವೆ. ಗರ್ಭಗುಡಿಯ ಚೌಕಟ್ಟಿನ ಮೇಲೆ ಹಾವುಗಳನ್ನು ಹಿಡಿದಿರುವ ಗರುಡ ಶಿಲ್ಪವಿದೆ. ಒಳಗೆ ಗಳಗನಾಥ' ಲಿಂಗವಿದೆ. ಮಂಟಪದಲ್ಲಿ ಸಪ್ತಮಾತೃಕೆಯರಿರುವ ಒಂದು ಕಲ್ಲು ಪಟ್ಟಿಕೆ ಇಟ್ಟಿದೆ. ಮಂಟಪದ ಛತ್ತಿನಲ್ಲಿ ಬ್ರಹ್ಮ ಶಿಲ್ಪವಿದೆ. ಗುಡಿ ರೇಖಾನಾಗರ ಶಿಖರದಿಂದ ಅಲಂಕೃತವಾದದ್ದು. ಅದರ ಮುಂಚಾಚುವಿನಲ್ಲಿ ವಿಷ್ಣುವಿನ ವಿಗ್ರಹ ವಿರುವುದರಿಂದ ಇದು ಮೂಲತಃ ವಿಷ್ಣು ದೇವಾಲಯವಾಗಿದ್ದಂತೆ ತೋರುತ್ತದೆ. ದೇವಾಲಯ ಸು.8ನೆಯ ಶತಮಾನದ್ದು.

ಪಶ್ಚಿಮಕ್ಕೆ ಮುಖ ಮಾಡಿರುವ ಸು.10ನೆಯ ಶತಮಾನದ ತ್ರಿಕೂಟಾಚಲವೊಂದು ಇದೇ ಗುಂಪಿನಲ್ಲಿದೆ. ನದಿಯ ಹತ್ತಿರದಲ್ಲೇ ಇರುವ ಈ ಗುಡಿಯ ಮುಂದೆ ಒಂದು ಸುಂದರವಾದ ಮಕರದ ಶಿಲ್ಪವನ್ನು ಇಟ್ಟಿದೆ. ಈ ಗುಂಪಿನ ಇನ್ನೊಂದು ದೇವಾಲಯದಲ್ಲಿ ಭಗ್ನವಾದ ಕಾರ್ತಿಕೇಯ ವಿಗ್ರಹವಿದೆ.

**ಏಣಿಯರ್ ಗುಡಿಗಳ ಗುಂಪು :** ನದಿಯ ದಂಡೆಯಲ್ಲೇ ಮತ್ತಷ್ಟು ದಕ್ಷಿಣಕ್ಕೆ ಈ ಗುಂಪಿದೆ. ಈ ಗುಂಪಿನಲ್ಲಿ ಎಂಟು ದೇವಾಲಯಗಳಿವೆ. ಎಲ್ಲಾ 11-12ನೆಯ ಶತಮಾನಗಳ ಕಟ್ಟಡಗಳು. ಇವುಗಳಲ್ಲಿ ಸಾಮಾನ್ಯವಾಗಿ ಗರ್ಭಗುಡಿ, ಮಂಟಪ, ಮುಖಮಂಟಪ ಇರುತ್ತವೆ. ಚೌಕತಳದ ದುಂಡು ಯಷ್ಟಿಯ ಕಂಬಗಳೂ ಕಕ್ಷಾಸನಗಳೂ ಕಾಣುತ್ತವೆ. ಒಂದು ದೇವಾಲಯ ತ್ರಿಕೂಟಾಚಲ ಇನ್ನೊಂದು ಗುಡಿಯ ಬಳಿ ಒಂದು ಬಾವಿಯೆಡೆಗೆ ಹೋಗುವ ಮಾರ್ಗವಾಗಿ ಒಂದು ತೋರಣವಿದೆ. ಅದರ ಮುಂಭಾಗದಲ್ಲಿ ಸಿಂಹ ಮತ್ತು ತ್ರಿಮೂರ್ತಿಗಳನ್ನು ಕೆತ್ತಲಾಗಿದೆ.

**ರಾಮಲಿಂಗ ಗುಡಿಗಳ ಗುಂಪು :** ಮೇಲಿನ ಗುಂಪಿನಿಂದ ಮತ್ತಷ್ಟು ದಕ್ಷಿಣಕ್ಕೆ ನಡೆದರೆ ರಾಮಲಿಂಗ ದೇವಾಲಯಗಳ ಗುಂಪು ಸಿಗುತ್ತದೆ. ಇವುಗಳಲ್ಲಿ ಮುಖ್ಯವಾದುದು ರಾಮಲಿಂಗ ದೇವಸ್ಥಾನ. ಇದು 11ನೆಯ ಶತಮಾನದ ತ್ರಿಕೂಟಾಚಲ. ಮಧ್ಯದ ಗರ್ಭಗುಡಿಯಲ್ಲಿ ರಾಮಲಿಂಗ ಎಂಬ ಹೆಸರಿನ ಲಿಂಗ, ಬಲಗಡೆಯ ಗರ್ಭಗುಡಿಯಲ್ಲಿ ಸಿದ್ಧೇಶ್ವರ ಲಿಂಗ ಇವೆ. ಇದರ ಜೊತೆಯಲ್ಲೇ ಒಂದು ಉಮಾಮಹೇಶ್ವರ ಮೂರ್ತಿ ಇದೆ.

ಎಡಗಡೆಯ ಗರ್ಭಗುಡಿಯಲ್ಲಿರುವ, ಈಗ ಪಾರ್ವತಿ ಎಂದು ಕರೆಯುವ, ಸ್ತ್ರೀದೇವತೆ ಜೈನ ಯಕ್ಷಿಣಿಯದು. ಇದನ್ನು ಕಾಲಾಂತರದಲ್ಲಿ ಎಲ್ಲಿಂದಲೋ ತಂದು ಇಲ್ಲಿ ಪ್ರತಿಷ್ಠಾಪಿಸಿದಂತೆ ತೋರುತ್ತದೆ. ಈ ಗರ್ಭಗುಡಿಗಳು ತೆರೆದುಕೊಳ್ಳುವ ಮಂಟಪದ ಮಧ್ಯದಲ್ಲಿ ನಾಲ್ಕು ಕಂಬಗಳಿವೆ. ಮುಖ ಮಂಟಪದಲ್ಲಿ ಸುತ್ತಲೂ ಕಕ್ಷಾಸನಗಳಿವೆ. ಈಗ ಎರಡು ಗರ್ಭಗೃಹಗಳಿಗೆ ಮಾತ್ರ ಶಿಖರಗಳುಂಟು. ಇವು ಕದಂಬನಾಗರ ರೀತಿಯವು. ಈ ಗುಡಿ ಪಶ್ಚಿಮಾಭಿಮುಖವಾಗಿದೆ.

ಇದರ ಎದುರು ಪೂರ್ವಾಭಿಮುಖವಾಗಿರುವ ಗುಡಿ ವಿಷ್ಣು ದೇವಾಲಯ. ಗರ್ಭಗುಡಿ ಮತ್ತು ಮಂಟಪ ಮಾತ್ರವಿರುವ ಈ ದೇವಾಲಯವೂ 11ನೆಯ ಶತಮಾನದ್ದು. ಗರ್ಭಗುಡಿಯಲ್ಲಿ ವಿಷ್ಣುವಿಗ್ರಹವೂ ಗುಡಿಯ ಆವರಣದಲ್ಲಿ ಮಹಿಷಮರ್ದಿನಿ, ಸೂರ್ಯ, ಗಣಪತಿ ಮೊದಲಾದ ವಿಗ್ರಹಗಳೂ ಇವೆ.

ಇದೇ ಗುಂಪಿನಲ್ಲಿರುವ ಇನ್ನೊಂದು ದೇವಾಲಯ ಬ್ರಹ್ಮನದು. ಅಲ್ಲದೆ ಸಂಗಮನಾಥನದೆನ್ನುವ 12ನೆಯ ಶತಮಾನದ ಮತ್ತೊಂದು ದೇವಾಲಯವೂ ಇಲ್ಲಿದೆ. ಇದರ ಬಳಿ ರಾಮಲಿಂಗನ ಗುಡಿಯ ತೇರನ್ನು ನಿಲ್ಲಿಸುವ ಒಂದು ಆಧುನಿಕ ಕಟ್ಟಡವುಂಟು.

ರಾಮಲಿಂಗನ ಗುಡಿಯಿಂದ ನದಿಗೆ ಇಳಿಯಲು ಪಾವಟಿಗೆಗಳುಂಟು. ಅಲ್ಲಿ ಒಂದೆಡೆ ಒಂದು ಕೊಡಲಿಯ ಶಿಲ್ಪವಿದೆ. ಅದರ ಸಮೀಪದಲ್ಲೆ ಒಂದು ಚಿಕ್ಕ ಗುಡಿಯಲ್ಲಿ ಪರಶುರಾಮನ ಮೂರ್ತಿ ಇದೆ.

ಐಹೊಳೆಯ ಬಹುತೇಕ ಗುಡಿಗಳು ಇಂದು ಪಾಳುದೇಗುಲಗಳು. ಆದರೆ ರಾಮಲಿಂಗ ದೇವಾಲಯದಲ್ಲಿ ಪೂಜೆ ನಡೆಯುತ್ತದೆ. ಇಲ್ಲಿ ವರ್ಷಂಪ್ರತಿ ಫಾಲ್ಗುಣ ಶು.7ರಂದು ಜಾತ್ರೆ ನಡೆಯುತ್ತದೆ. ಹಮ್ಮೀರರಾಯ (ಅಂಬಿಗೇರ) ಕ್ಷತ್ರಿಯ ಮನೆತನದವರು ಆ ದಿವಸ ತೇರು ಎಳೆಯುವ ವ್ಯವಸ್ಥೆ ಮಾಡುವ ಸಂಪ್ರದಾಯವುಂಟು.

ಉಚ್ಚಮಟ್ಟದ ಶಿಲ್ಪಗಳಿಂದ ಅಲಂಕೃತವಾದ ಐಹೊಳೆಯ ನೂರಾರು ದೇವಾಲಯಗಳು ಕಲಾವಿಲಾಸಿಗಳಿಗೆ ಪ್ರಮುಖ ಆಕರ್ಷಣೆ. ಈ ದೇವಾಲಯಗಳು ಅವುಗಳ ಸೌಂದರ್ಯಕ್ಕಷ್ಟೇ ಅಲ್ಲದೆ, ದಕ್ಷಿಣ ಭಾರತದ ಶಿಲಾದೇವಾಲಯಗಳ ರಚನೆಯ ಸಂಪ್ರದಾಯದ ಉಗಮ ಮತ್ತು ವಿಕಾಸದ ಬಗ್ಗೆ ಬಹಳಷ್ಟು ಬೆಳಕು ಚೆಲ್ಲುವಂಥವು. ಒಂದು ದೃಷ್ಟಿಯಲ್ಲಿ ಐಹೊಳೆ ಶಿಲಾ ವಾಸ್ತುಸಂಪ್ರದಾಯದ ಪ್ರಯೋಗಶಾಲೆ. ಇಲ್ಲಿ ರೂಪಿತವಾದ ವಾಸ್ತುಶಿಲ್ಪ ವಿನ್ಯಾಸಗಳು ಕರ್ನಾಟಕದಲ್ಲಷ್ಟೇ ಅಲ್ಲದೆ ಭಾರತ ಮತ್ತು ಇತರ ಕಡೆಗಳಲ್ಲಿ ಸಹ ರಚಿತವಾದ ಮುಂದಿನ ದೇವಾಲಯಗಳಿಗೆ ಮಾದರಿಯನ್ನೋ ಸ್ಫೂರ್ತಿಯನ್ನೋ ಒದಗಿಸಿದುವು. ಬಾದಾಮಿ ಚಳುಕ್ಯ ಕಾಲದ ವಾಸ್ತು ಕಲಾಬೆಳೆವಣಿಗೆಯನ್ನು ಐಹೊಳೆಯಲ್ಲಿ ಸುಲಭವಾಗಿ ಗುರುತಿಸಬಹುದು (ನೋಡಿ: ಚಾಳುಕ್ಯ ವಂಶ ಲೇಖನದಲ್ಲಿ ಬಾದಾಮಿಯ ಚಳುಕ್ಯರು- ಶಿಲ್ಪ). ಇಂದು ಇಲ್ಲಿನ ಹೆಚ್ಚಿನ ದೇವಾಲಯಗಳು ರಾಷ್ಟ್ರೀಯ ಸ್ಮಾರಕಗಳೆಂದು ಪರಗಣಿತವಾಗಿ ಕೇಂದ್ರ ಸರ್ಕಾರದ ಪುರಾತತ್ತ್ವ ಇಲಾಖೆಯ ಆಡಳಿತಕ್ಕೊಳಪಟ್ಟಿವೆ. ಇವುಗಳನ್ನು ಸುಸ್ಥಿತಿಯಲ್ಲಿ ಕಾಪಾಡುವ ಮತ್ತು ಸ್ಥಳದ ಸೌಂದರ್ಯ ಸೌಕರ್ಯಗಳನ್ನು ಹೆಚ್ಚಿಸಿ ಉತ್ತಮ ಪ್ರವಾಸಿ ಕೇಂದ್ರವನ್ನಾಗಿ ಮಾಡುವ ಕಾರ್ಯಗಳು ಸಾಗುತ್ತಿವೆ. *

## ಒ

**ಒಕ್ಕಲಿಗರ ಪತ್ರಿಕೆ :** ಬೆಂಗಳೂರಿನಲ್ಲಿ 1906ರಲ್ಲಿ ಸ್ಥಾಪಿತವಾದ ಒಕ್ಕಲಿಗರ ಸಂಘದ ಮುಖಪತ್ರ, ವಾರಪತ್ರಿಕೆ. ಸಂಘದ ಧ್ಯೇಯೋದ್ದೇಶಗಳನ್ನು ಸಾಧಿಸಲು ಸಹಾಯಕವಾಗುವಂತೆ ಅದರ ಆಶ್ರಯದಲ್ಲಿ 1907 ಮಾರ್ಚ್ 15ರಂದು ಶುಕ್ರವಾರ ಯುಗಾದಿ ಹಬ್ಬದ ದಿನ ಈ ಪತ್ರಿಕೆಯ ಪ್ರಕಟಣೆ ಆರಂಭವಾಯಿತು. ಆಗ ಇದರ ಕೇಂದ್ರ ಕಛೇರಿ ಅರಳೇಪೇಟೆಯಲ್ಲಿತ್ತು. ಬೆಂಗಳೂರು ಕೋಟೆ ಪ್ರದೇಶದಲ್ಲಿದ್ದ, ಆಗಿನ ಕಾಲಕ್ಕೆ ಸ್ಟ್ಯಾಂಡರ್ಡ್ ಮತ್ತು ನುಡಿಗನ್ನಡಿ ಎಂಬ ಪತ್ರಿಕೆಗಳನ್ನು ಪ್ರಕಟಿಸುತ್ತಿದ್ದ ಶ್ರೀನಿವಾಸ ಅಯ್ಯಂಗಾರ್ ಎಂಬವರ ಮುದ್ರಣಾಲಯದಲ್ಲಿ ಇದು ಅಚ್ಚಾಗುತ್ತಿತ್ತು. ಆಗ ಬೆಂಗಳೂರಿನಲ್ಲಿ ಗಣ್ಯ ವಕೀಲರಾಗಿದ್ದ ಸಿ.ಲಕ್ಷ್ಮಣಗೌಡ ಈ ಪತ್ರಿಕೆಯ ಪ್ರಥಮ ಸಂಪಾದಕರು. ಮೊದಲನೆಯ ಸಂಚಿಕೆಯ ಸಂಪಾದಕೀಯದಲ್ಲಿ ಈ ಪತ್ರಿಕೆಯ ಧ್ಯೇಯಧೋರಣೆಗಳನ್ನು ಕುರಿತು ಹೀಗೆ ಪ್ರಸ್ತಾವಿಸಿದ್ದಾರೆ. ವರ್ತಮಾನಪತ್ರಿಕೆಗಳು ಯಾವ ದೇಶದಲ್ಲಿ ಹೆಚ್ಚುತ್ತ ಬರುತ್ತವೋ ಆ ದೇಶ ನವನಾಗರಿಕತೆಯಲ್ಲಿ ಉನ್ನತಸ್ಥಿತಿಗೆ ಬರುವುದು. ಜಪಾನ್ ದೇಶದಲ್ಲಿ ವೃತ್ತಪತ್ರಿಕೆಗಳು ದಿನದಿನಕ್ಕೆ ಹೆಚ್ಚಾದ ಕಾರಣ ಕೇವಲ 50 ವರ್ಷಗಳೊಳಗಾಗಿ ಜಪಾನ್ ದೇಶೀಯರು ಪ್ರಪಂಚದ ಪ್ರಮುಖ ದೇಶೀಯರೊಳಗೆ ತಾವೂ ಪ್ರಮುಖರಾಗಿ ಪ್ರಖ್ಯಾತಿ ಪಡೆದಿರುತ್ತಾರೆ. ಯಾವ ಜನರ ಕ್ಷೇಮವನ್ನು ಈ ಪತ್ರಿಕೆ ಮುಖ್ಯವಾಗಿ ಉದ್ದೇಶಿಸಿರುವುದೋ ಅವರ ಪುರೋಭಿವೃದ್ಧಿಯಿಂದ ದೇಶಕ್ಕೆ ಔನ್ನತ್ಯವುಂಟಾಗುವುದರಲ್ಲಿ ಸಂದೇಹವಿಲ್ಲ ಪಂಡಿತ ಪಾಮರರು, ಹಳ್ಳಿಗರು-ಪಟ್ಟಣಿಗರ ಮಧ್ಯೆ ಅನ್ಯೋನ್ಯತೆ ಬೆಳೆಯುವುದು ದೇಶದ ಅಭಿವೃದ್ಧಿಗೆ ಅತ್ಯಂತ ಸಹಕಾರಿಯಾಗುವುದು ದೇಶೋನ್ನತಿಗೆ ಕಾರಣ ಭೂತವಾದ ಏರ್ಪಾಡುಗಳನ್ನು ಮಾಡಿಕೊಳ್ಳಬೇಕಾದರೆ 'ಇಂಥ' ಅನ್ಯೋನ್ಯತೆ ಅತ್ಯಾವಶ್ಯಕವಾಗಿರುತ್ತದೆ. ಐಕಮತ್ಯಕ್ಕೆ ನ್ಯೂನತೆ ಉಂಟಾಗದಂತೆ ಪ್ರಯತ್ನ ಪಡಬೇಕೆಂಬುವುದು ತಮ್ಮ ಉದ್ದೇಶ. ತಮ್ಮ ಈ ಪ್ರಯತ್ನದಲ್ಲಿ "ಸರ್ವರೂ ಚೈತನ್ಯ ಕೊಟ್ಟು ಇದನ್ನು ಅಭಿವೃದ್ಧಿಪಡಿಸತಕ್ಕ ರೀತಿಗಳನ್ನು ತೋರಿಸಿಕೊಡುತ್ತ ಬರುವರೆಂದು ದೃಢವಾಗಿ ನಂಬಿದ್ದೇವೆ".

ಈ ಪತ್ರಿಕೆಯಲ್ಲಿ ಅನೇಕ ವಿಷಯಗಳನ್ನು ಕುರಿತು ಬಗೆಬಗೆಯ ಉತ್ತಮ ಲೇಖನಗಳಲ್ಲದೆ ಒಳದೇಶದ ವೃತ್ತಾಂತ, ವರ್ತಮಾನ ಸಂಗ್ರಹ, ಮೈಸೂರು ಗೆಜೆಟ್, ಇಂಡಿಯ ದೇಶದ ವೃತ್ತಾಂತ, ಸರ್ಕಾರಿ ಹುಕುಂಗಳು ಎಂಬ ಶಿರೋನಾಮೆಗಳಲ್ಲಿ ಎಲ್ಲ ಕಡೆಗಳ ಮುಖ್ಯ ವಾರ್ತೆಗಳು ಪ್ರಕಟವಾಗುತ್ತಿದ್ದುವು. ಮೊದಲನೆಯ ಸಂಚಿಕೆಯಲ್ಲಿ ಪ್ರಕಟವಾದ ದವಸದ ಬ್ಯಾಂಕುಗಳು ಎಂಬ ಲೇಖನದ ಒಂದು ವಾಕ್ಯ ಹೀಗಿದೆ: "ಗ್ರಾಮಸ್ಥರಿಗೆ ಸಾಧ್ಯವಾದ ಮಟ್ಟಿಗೂ ಬ್ಯಾಂಕುಗಳಿಂದಾಗುವ ಪ್ರಯೋಜನಗಳನ್ನು ಹೇಳಿ, ಅವರನ್ನು ಪರಸ್ಪರ ಸಹಾಯಕರನ್ನಾಗಿ ಮಾಡಿ, ಹಣಕ್ಕೆ ಬದಲಾಗಿ ದವಸವನ್ನು ಬಂಡವಾಳಕ್ಕೆ ಕೊಡುವಂತೆ ಬೋಧಿಸಿದರೆ ಸಾರ್ಥಕವಾಗುತ್ತದೆಂದು ತಿಳಿದು ನಮ್ಮ ಘನ ಸರ್ಕಾರದವರು ಗ್ರಾಮಗಳಲ್ಲಿ ದವಸದ ಬ್ಯಾಂಕುಗಳನ್ನು ಏರ್ಪಡಿಸುತ್ತಿದ್ದಾರೆ". ಸರಳ, ನೇರ ನಿರೂಪಣೆ, ವಸ್ತುನಿಷ್ಠಾತ್ಮಕ ವಿವೇಚನೆ, ಸಾಮಾನ್ಯನ ಹಿತದೃಷ್ಟಿಯ ಪ್ರತಿಪಾದನೆ - ಇವುಗಳಿಗೆ ಈ ಪತ್ರಿಕೆಯ ಲೇಖನಗಳು ಹೆಸರಾಗಿದ್ದವು. ಸಿ.ಲಕ್ಷ್ಮಣಗೌಡರ ಅನಂತರದಲ್ಲಿ ಬಿ.ಪುಟ್ಟಯ್ಯ, ಎಸ್.ವಿ.ವೆಂಕಟರಾಮಯ್ಯ, ಎಚ್.ಗಿರಿಯಪ್ಪ ಗೌಡ, ಎಂ.ಸುಬ್ಬಯ್ಯ, ಬಿ.ಹನುಮಂತಯ್ಯಗೌಡ, ಎಚ್.ಕೆ.ವೀರಣ್ಣ ಗೌಡ(1927-28), ಬಿ.ಪುಟ್ಟಸ್ವಾಮಯ್ಯ, ಬಿ.ಆರ್.ನರಸಿಂಹಯ್ಯ, ಡಿ.ಆರ್.ರಾಮಯ್ಯ (1932-33), ಬಿ.ಸಿ.ಹನುಮಂತಯ್ಯ (ಎರಡು ಬಾರಿ), ಸಿ.ಆರ್.ಕಾಮತ್,ಕೆ.ಪಿ.ಮುದ್ದಪ್ಪ,ಎಂ.ಶಂಕರಲಿಂಗೇಗೌಡ, ಎನ್.ಸಿ.ಅಣ್ಣಯ್ಯ, ಎಂ.ಕೆ.ತಿಮ್ಮೇಶಪ್ರಭು - ಇವರು ಈ ಪತ್ರಿಕೆಯ ಸಂಪಾದಕರಾಗಿದ್ದರು. ಈ ಪತ್ರಿಕೆ 1923ರಲ್ಲಿ ಒಕ್ಕಲಿಗರ ಸಂಘ ವಿಶ್ವೇಶ್ವರಪುರದಲ್ಲಿ ಸ್ಥಾಪಿಸಿದ ಸ್ವಂತ ಮುದ್ರಣಾಲದಲ್ಲಿ ಅಚ್ಚಾಗುತ್ತಿತ್ತು. ಪತ್ರಿಕೆ ನಿಲ್ಲುವವರೆಗೆ ಇದೇ ಮುದ್ರಣಾಲಯದಲ್ಲಿ ಅಚ್ಚಾಗುತ್ತಿತ್ತು. ಈ ಪತ್ರಿಕೆಯ ಬೆಳವಣಿಗೆಯಲ್ಲಿ ಎಚ್.ಕೆ.ವೀರಣ್ಣಗೌಡ ಹಾಗೂ ಡಿ.ಆರ್.ರಾಮಯ್ಯನವರು ಅಪಾರವಾಗಿ

ಶ್ರಮಿಸಿದ್ದರು. ಎಚ್.ಕೆ.ವೀರಣ್ಣಗೌಡರು ಈ ಪತ್ರಿಕೆಯ ಸಂಪಾದಕರಾಗಿದ್ದಾಗ ಬರೆಯುತ್ತಿದ್ದ ಬೀದಿಮಾತು ಎಂಬ ಲೇಖನಮಾಲೆ ಅಪಾರ ಜನಪ್ರಿಯತೆ ಗಳಿಸಿತ್ತಲ್ಲದೆ ಈ ಲೇಖನಮಾಲೆಯ ಟೀಕೆ ಟಿಪ್ಪಣಿಗಳು ಆ ಕಾಲಕ್ಕೆ ಅಲ್ಲೋಲ ಕಲ್ಲೋಲವುಂಟುಮಾಡಿದ್ದವು. ಇವರು ವಾರ್ಷಿಕ ಸಂಚಿಕೆಯೊಂದನ್ನು ಸಂಪಾದಿಸಿ ಪ್ರಕಟಿಸಿದ್ದರು (1928). ಆ ಕಾಲಕ್ಕೆ ವಾರಪತ್ರಿಕೆಗಳಲ್ಲಿ ವಾರ್ಷಿಕ ಸಂಚಿಕೆ ಪ್ರಕಟಿಸಿದ ಕನ್ನಡದ ಮೊದಲ ಪತ್ರಿಕೆಯಿದು. ಈ ವಾರ್ಷಿಕ ಸಂಚಿಕೆಯಲ್ಲಿ ಕುವೆಂಪು, ಪಂಡಿತ ತಾರಾನಾಥ', ಡಿ.ಕೆ.ಭಾರದ್ವಾಜ, ತೀ.ನಂ.ಶ್ರೀಕಂಠಯ್ಯ, ದೇವುಡು ನಹಸಿಂಹಶಾಸ್ತ್ರಿ, ತಿ.ತಾ.ಶರ್ಮ ಮೊದಲಾದ ಪ್ರಸಿದ್ಧ ಬರೆಹಗಾರರ ಲೇಖನಗಳೂ ಭಾವಚಿತ್ರಗಳೂ ಪ್ರಕಟವಾಗಿದ್ದವು. ಸು.65 ವರ್ಷಗಳ ಕಾಲ ಪ್ರಕಟವಾಗಿ 1972 ಫೆಬ್ರವರಿ 6ರಂದು ಪತ್ರಿಕೆ ತನ್ನ ಪ್ರಕಟಣೆಯನ್ನು ನಿಲ್ಲಿಸಿತು. *

**ಒಕ್ಕಲೇರಿ :** ಕೋಲಾರ ಜಿಲ್ಲೆ ಮಾಲೂರು ತಾಲ್ಲೂಕಿನ ಒಂದು ಸ್ಥಳ, ಹೋಬಳಿ ಕೇಂದ್ರ. ಕೋಲಾರ ಮಾಲೂರು ಮಾರ್ಗದಲ್ಲಿ ಮಾಲೂರಿಗೆ 13ಕಿಮೀ ದೂರದಲ್ಲಿದೆ. ಈ ಊರಿನಿಂದ ಸು.3ಕಿಮೀ ದೂರದ ಒಕ್ಕಲೇರಿ ಬೆಟ್ಟದಲ್ಲಿರುವ ಮಾರ್ಕಂಡೇಶ್ವರ ದೇವಾಲಯ ಅತ್ಯಂತ ಪ್ರಾಚೀನವಾದದ್ದು. ವಾಸ್ತುಶಿಲ್ಪದ ದೃಷ್ಟಿಯಿಂದ ಹೆಚ್ಚಿನ ಮಹತ್ವವನ್ನು ಪಡೆದಿದೆ. ಬೆಟ್ಟಕ್ಕೆ ಹೋಗಲು ಕಾಲುದಾರಿ ಹಾಗೂ ವಾಹನ ದಾರಿಗಳಿವೆ. ಈ ದೇವಾಲಯದ ಸಮೀಪದಲ್ಲಿ ಮೃಕಣ್ಣ ಮುನಿಯ ಆಶ್ರಮವಿತ್ತೆಂಬ ಪ್ರತೀತಿಯಿದೆ.

ಮಾರ್ಕಂಡೇಯ ದೇವಾಲಯದಲ್ಲಿ ಶಿವಲಿಂಗವಿದೆ. ನವರಂಗದಲ್ಲಿ ನಾಲ್ಕು ಕಂಬಗಳಿದ್ದು ಈ ಕಂಬಗಳ ನಾಲ್ಕೂ ಮುಖಗಳಲ್ಲಿ ದೇವತೆಗಳ ಸುಂದರ ಚಿತ್ರಗಳನ್ನು ಬಿಡಿಸಲಾಗಿದೆ. ಹಂಸ, ಗಂಡಭೇರುಂಡ, ಗಣಪತಿ, ಮತ್ಸ್ಯಾವತಾರ, ಗಜೇಂದ್ರಮೋಕ್ಷ, ನರಸಿಂಹ, ಆಂಜನೇಯ, ಶಂಖಚಕ್ರಧಾರಿ ವಿಷ್ಣುವಿನ ಚಿತ್ರಗಳು ಮನಸೆಳೆಯುತ್ತವೆ. ನವರಂಗದ ಮಧ್ಯದಲ್ಲಿ ಯೋಗನಂದಿಯ ವಿಗ್ರಹವಿದೆ. ಈ ದೇವಾಲಯದ ಸುತ್ತ ಉತ್ತರ ದಿಕ್ಕಿನಿಂದ ವೀರಭದ್ರೇಶ್ವರ, ಸಪ್ತಮಾತೃಕೆಯರು, ಗಣಪತಿ, ಸುಬ್ರಹ್ಮಣ್ಯ, ಚಂಡಿಕೇಶ್ವರ, ವೆಂಕಟೇಶ್ವರ, ಭೈರವೇಶ್ವರ ಮೂರ್ತಿಗಳುಳ್ಳ ಚಿಕ್ಕ ಗುಡಿಗಳಿವೆ. ವೀರಭದ್ರೇಶ್ವರನ ಗುಡಿಯ ಮುಂಭಾಗದಲ್ಲಿರುವ ವಸಂತ ಮಂಟಪ ಸುಂದರ ಚಿತ್ರಗಳ ಕೆತ್ತನೆಯಿಂದ ನೋಡುಗರ ಮನ ಸೆಳೆಯುತ್ತದೆ. ದೇವಾಲಯದ ಮುಂಭಾಗದಲ್ಲಿರುವ ಉಯ್ಯಾಲೆ ಮಂಟಪ ಹಾಗೂ ಪಾಕಶಾಲೆಗಳು ಮೋಹಕ ಶಿಲ್ಪಕಲಾಕೃತಿಗಳನ್ನು ಹೊಂದಿವೆ. ಮಾರ್ಕಂಡೇಶ್ವರನಿಗೆ ಶಿವರಾತ್ರಿಯಲ್ಲಿ ಎರಡು ದಿನಗಳ ವಿಶೇಷ ಪೂಜೆ ನಡೆಯುತ್ತದೆ. ಆ ಸಂದರ್ಭದಲ್ಲಿ ಅಧಿಕ ಪ್ರಮಾಣದಲ್ಲಿ ಭಕ್ತಾದಿಗಳು ಸೇರುತ್ತಾರೆ.

ಒಕ್ಕಲೇರಿ ಊರಿನಲ್ಲಿಯೂ ಸ್ಥಳದೇವರು ಎಂದು ಕರೆಯಲಾಗುವ ಮಾರ್ಕಂಡೇಶ್ವರ ದೇವಾಲಯವಿದೆ. ಒಕ್ಕಲೇರಿಯನ್ನು ಹಿಂದೆ ಕ್ರಮುಕಪುರಿ ಎಂದು ಕರೆಯಲಾಗುತ್ತಿತ್ತಂತೆ. ಇಲ್ಲಿ ಪ್ರತಿವರ್ಷ ಮಾಘಮಾಸದಲ್ಲಿ ಒಂದು ವಾರ ಜಾತ್ರೆ ನಡೆಯುತ್ತದೆ. ಜಾತ್ರೆಯಲ್ಲಿ ಜಾನುವಾರುಗಳ ಮಾರಾಟವೂ ಉಂಟು. ಈ ಊರಿನಲ್ಲಿ 8ನೆಯ ಶತಮಾನಕ್ಕೆ ಸೇರಿದ ಚಾಳುಕ್ಯರ ಕೆಲವು ತಾಮ್ರ ಶಾಸನಗಳೂ ದೊರೆತಿವೆ. (ಎ.ಬಿ.ಬಿ.)

**ಒಗಟು :** ಜನಸಾಮಾನ್ಯರ ಪ್ರತಿಭಾಸಾಮರ್ಥ್ಯಕ್ಕೂ ಅದ್ಭುತ ಕಲ್ಪನಾ ಶಕ್ತಿಗೂ ಜ್ವಲಂತ ನಿದರ್ಶನವಾಗುವ ಜನಪದಸಾಹಿತ್ಯ ಪ್ರಕಾರ. ಅರ್ಥಗೋಪನ, ಅಸ್ಪಷ್ಟತೆ, ರೂಪಕ, ಸಾಂಕೇತಿಕತೆ, ಹಾಸ್ಯ, ಅಶ್ಲೀಲತೆ, ಪ್ರಾಸ, ಅನುಪ್ರಾಸ, ಲಯಬದ್ಧತೆ, ಸಾರ್ವತ್ರಿಕತೆ ಇತ್ಯಾದಿಗಳು ಒಗಟಿನ ಲಕ್ಷಣಗಳು ಎನ್ನಬಹುದು. ಕನ್ನಡದಲ್ಲಿ ಒಂಟು, ಒಡಪು, ಒಡಗಥೆ ಮೊದಲಾದ ಹೆಸರುಗಳಿಂದಲೂ ಇದನ್ನು ಕರೆಯಲಾಗುತ್ತದೆ. ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಅಲ್ಲಲ್ಲಿ ಮುಂಡಿಗೆ ಮತ್ತು ಮುಡಿಗೆ ಎಂಬ ಪದಗಳು ಕಾಣಿಸಿಕೊಳ್ಳುತ್ತವೆ. ಇಬ್ಬರ ಮಧ್ಯೆ ವಾದವೊಂದು ಎದ್ದಾಗ ಅವರಲ್ಲಿ ಒಬ್ಬ ತನ್ನ ತಲೆಯ ಮೇಲಿನ ಉಡುಪನ್ನು (ಮುಂಡಾಸು) ತೆಗೆದು ಎಸೆದರೆ ಅದು ಸವಾಲಿನ ಸೂಚಕವಾಗಿದ್ದು, ಇನ್ನೊಬ್ಬ ಅದನ್ನು ಎತ್ತಿಕೊಂಡರೆ ಆ ಸವಾಲನ್ನು ಅಂಗೀಕರಿಸಿದಂತಾಗುತ್ತಿದ್ದು, ಹೀಗೆ ಮುಂಡಿಗೆ ಮತ್ತು ಮುಡಿಗೆಗಳು ಮೊದಲು ಶಿರೋವಸ್ತ್ರವನ್ನು ಸೂಚಿಸುವ ಪದಗಳಾಗಿದ್ದು ಕ್ರಮೇಣ ಸವಾಲು ಎಂಬ ಅರ್ಥವನ್ನು ಪಡೆದುವು ಎಂಬ ಅಭಿಪ್ರಾಯವನ್ನೂ ಪ್ರಾಚೀನ ಕಾವ್ಯಗಳಲ್ಲಿನ ಇಂಥ ಪದಗಳನ್ನು ಒಗಟಿನ ಹಿನ್ನೆಲೆಯಲ್ಲಿ ವಿಶ್ಲೇಷಿಸುವಾಗ ಇವು ಒಗಟಿನ ಸಮಾನಾರ್ಥ ಸೂಚಕ ಪದಗಳು ಎಂಬ ಅಭಿಪ್ರಾಯವನ್ನೂ ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಒಗಟುಗಳನ್ನು ಸ್ಥೂಲವಾಗಿ ಜನಪದ ಒಗಟುಗಳು ಮತ್ತು ಸಾಹಿತ್ಯಿಕ ಒಗಟುಗಳು ಎಂದು ಎರಡು ಭಾಗಗಳನ್ನಾಗಿ ವಿಂಗಡಿಸಬಹುದು. ಜನಸಾಮಾನ್ಯರ ಬಾಯಿಂದ ಬಾಯಿಗೆ ಹರಿದು ಬಂದಿರುವ ಒಗಟುಗಳು ಜನಪದ ಒಗಟುಗಳು. ಇವೇ ಉಳಿದ ವರ್ಗಕ್ಕೆಲ್ಲ ಮೂಲ ಹಾಗೂ ಪುರಾತನ. ಬಹು ಮಟ್ಟಿಗೆ ಕೃತಕವೆನಿಸಿ, ಸಾಹಿತ್ಯ ಪ್ರವಾಹದ ಮೂಲಕ ಹರಿದು ಬಂದಿರುವಂಥವು ಸಾಹಿತ್ಯಿಕ ಒಗಟುಗಳು. ಆದರೆ ಇವು ಎಷ್ಟೋ ಸಾರಿ ಪರಸ್ಪರ ಅವಲಂಬಿಗಳು.

ವಚನಸಾಹಿತ್ಯದಲ್ಲಿ ಬೆಡಗಿನ ವಚನಗಳೆಂಬ ರೂಪವೊಂದುಂಟು. ಇವು ಆಧ್ಯಾತ್ಮಿಕ ರಹಸ್ಯದ ಒಗಟುಗಳು. ಅಲ್ಲಮಪ್ರಭು ಮತ್ತು ಅಕ್ಕಮಹಾದೇವಿ ಇವರ ರಚನೆಗಳಲ್ಲಿ ಇಂಥ ವಚನಗಳನ್ನು ಕಾಣಬಹುದು. ಅಲ್ಲಮಪ್ರಭುವಿನ ಒಂದು ರಚನೆಯನ್ನು ಉದಾಹರಣೆಗಾಗಿ ನೋಡಬಹುದು: ರಕ್ಕಸಿಗಿಬ್ಬರು ಮಕ್ಕಳು, ತೊಟ್ಟಿಲಮೇಲೈವರು, ರಕ್ಕಸಿ ಬಾಣತಿಯಾದರೆ ಮಕ್ಕಳಿಗಿನ್ನೆಂತೊ? ತೊಟ್ಟಿಲ ತೂಗುವೆ ಜೋಗುಳವಾಡುವೆ, ರಕ್ಕಸಿ ಬಾಣತಿಯ ತೊಟ್ಟಿಲು ನುಂಗಿತ್ತು, ಇದೇನು ಹೇಳಾ ಗುಹೇಶ್ವರ. ಇದನ್ನು ವಿದ್ವಾಂಸರೊಬ್ಬರು ಹೀಗೆ ವ್ಯಾಖ್ಯಾನಿಸುತ್ತಾರೆ: ಮಾಯೆಗೆ ಜೀವ, ಪ್ರಾಣ ಎಂಬ ಇಬ್ಬರು ಮಕ್ಕಳು. ಈ ಮಕ್ಕಳಿಗೆ ಆಶ್ರಯಸ್ಥಾನವಾದ ದೇಹವೆಂಬ ತೊಟ್ಟಿಲ ಮೇಲೆ ಪಂಚಭೂತಗಳು. ಇವನ್ನೆಲ್ಲಾ ನುಂಗುವಳು ಮಾಯೆ. ಹೀಗೆ ಮಾಯಾಧೀನತೆಯಿಂದ ದೇಹ ಕರ್ಮವಶವಾಗಿರುವವರೆಗೂ ನನಗೆ ತೊಳಲಾಟ ಮತ್ತು ಬರಿಯ ಮಾತಿನ ಹೋರಾಟ; ಮಾಯೆಯನ್ನು ಒಳಗೊಂಡಿರುವುದು ಈ ದೇಹ.

ಕಂತಿ ಹಂಪನ ಸಮಸ್ಯೆಗಳು, ಹರಿಹರನ ಮುಡಿಗೆಯ ಅಷ್ಟಕ, ಕನಕನ ಮುಂಡಿಗೆಗಳು ಕೂಡ ಇಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಳ್ಳುತ್ತವೆ. ಇವುಗಳ ರೂಪ ಬಹುತೇಕವಾಗಿ ಒಗಟುಗಳ ರೂಪವನ್ನೇ ಹೋಲುತ್ತವೆ. ಕನಕದಾಸರ ಜೀವನಚರಿತ್ರೆಯಲ್ಲಿ ಇಂಥ ಒಗಟಿನ ಕೆಲವು ಪ್ರಸಂಗಗಳನ್ನು ಕಾಣಬಹುದು.

ಒಮ್ಮೆ ಕನಕದಾಸರ ಗುರುಗಳು ತಮ್ಮ ಶಿಷ್ಯರಿಗೆ ಸ್ವರ್ಗಕ್ಕೆ ಯಾರು ಹೋಗಬಲ್ಲಿರಿ ಎಂದು ಪ್ರಶ್ನೆ ಹಾಕಿದರಂತೆ. ಒಬ್ಬೊಬ್ಬರೂ ಒಂದೊಂದು ಬಗೆಯಲ್ಲಿ ಉತ್ತರ ಹೇಳಿದರಂತೆ. ಆಗ ಕನಕದಾಸರು ನಾನು ಹೋದರೆ ಹೋಗಬಹುದು ಎಂದರಂತೆ. ಈ ಮಾತು ಅರ್ಥಾಂತರೋಕ್ತಿಯಿಂದ ಕೂಡಿದೆ. ಇಲ್ಲಿ ನಾನು ಎಂದರೆ ಅಹಂಕಾರ ಎಂದರ್ಥ.

ಪುರಂದರದಾಸರ ಕೀರ್ತನೆಗಳಲ್ಲೂ ಅಲ್ಲಲ್ಲಿ ಇಂಥ ರಚನೆಗಳನ್ನು ಕಾಣಬಹುದೆಂಬುದಕ್ಕೆ ಒಂದು ನಿದರ್ಶನ: ಮುಳ್ಳುಕೊನೆಯ ಮೇಲೆ, ಮೂರು ಕೆರೆಯ ಕಟ್ಟಿ, ಎರಡು ಬರಿದು ಒಂದು ತುಂಬಲಿಲ್ಲ, ತುಂಬಲಿಲ್ಲದ ಕೆರೆಗೆ ಬಂದರು ಮೂವರೊಡ್ಡರು, ಇಬ್ಬರು ಕುಂಟರು ಒಬ್ಬಗೆ ಕಾಲೇ ಇಲ್ಲ.

ಗೂಢಾರ್ಥ, ಉಕ್ತಿಚಮತ್ಕಾರ ಮೊದಲಾದ ಗುಣಗಳನ್ನು ಇಂಥ ಕೆಲವು ರಚನೆಗಳಲ್ಲಿ ಕಾಣಬಹುದು. ಈ ದಿಸೆಯಲ್ಲಿ ಸರ್ವಜ್ಞನದು ಮತ್ತೊಂದು ಮುಖ್ಯ ಹೆಸರು. ಸುಣ್ಣ ಎಂಬ ಉತ್ತರವುಳ್ಳ, ಜನಪದ ಸಂಪ್ರದಾಯದಲ್ಲೂ ಪ್ರಚಲಿತವಿರುವ ಒಂದು ಒಗಟಿನ ಪದ್ಯವನ್ನು ಸರ್ವಜ್ಞನಲ್ಲಿ, ಕಲ್ಲರಳಿ ಹೂವಾಗಿ ಎಲ್ಲರಿಗು ಬೇಕಾಗಿ ಮಲ್ಲಿಕಾರ್ಜುನನ ಶಿಖರಕ್ಕೆ ಬೆಳಕಾಗಿ ಬಲ್ಲವರು ಹೇಳಿ ಸರ್ವಜ್ಞ - ಎಂಬ ರೂಪದಲ್ಲಿ ಕಾಣಬಹುದು. ಈತನ ಒಗಟುಗಳಲ್ಲಿ ಸ್ವಂತ ಸೃಷ್ಟಿಯವು ಕೆಲವಿದ್ದರೂ ಬಹುತೇಕವಾಗಿ ಜನಪದದಿಂದ ಆಯ್ದವು ಎಂದು ಹೇಳಬಹುದು. ಹೀಗೆ ಕನ್ನಡದಲ್ಲಿ ಒಗಟಿನ ಇತಿಹಾಸ ತನ್ನದೇ ಆದ ಒಂದು ವಿಶಿಷ್ಟಮಾರ್ಗವನ್ನು ರೂಪಿಸಿಕೊಂಡಿದೆ.

ಸಾಮಾನ್ಯವಾಗಿ ಗಾದೆಯಂತೆ ಸಾರ್ವಕಾಲಿಕ ಪಾತ್ರವಲ್ಲದ ಒಗಟುಗಳು ಹಳ್ಳಿಯ ಜನರ ವಿರಾಮ ಕಾಲದಲ್ಲಿ ಮನರಂಜನೆಗಾಗಿ ಸೃಷ್ಟಿಯಾದವುಗಳು. ಮಕ್ಕಳನ್ನು ಕುರಿತಾಗಿಯೋ ಹಾಸ್ಯಕ್ಕಾಗಿಯೋ ವಿನೋದಕ್ಕಾಗಿಯೋ ಅಂಥ

ಸಂದರ್ಭದಲ್ಲಿ ಬಳಕೆಯಾಗುತ್ತಿದ್ದರೂ ಬುದ್ಧಿಶಕ್ತಿಗೆ ಸಾಣೆ ಹಿಡಿಯುವ ಇವು ಅವರ ದೈಹಿಕ ಶ್ರಮವನ್ನು ಮರೆಯಿಸಲು ಸಹಾಯಕವಾಗುತ್ತಿದ್ದವು. ಒಟ್ಟಿನಲ್ಲಿ ಒಗಟುಗಳನ್ನು ಸಾಮಾಜಿಕ ಮನರಂಜನೆಯ ಅತ್ಯುತ್ತಮ ಮಾರ್ಗವೆಂದು ಪರಿಗಣಿಸಬಹುದು.

ವಾಕ್ ಸಂಪ್ರದಾಯದಲ್ಲಿ ಕಾಣಿಸಿಕೊಂಡಿರುವ ಕೆಲವು ಒಗಟುಗಳನ್ನೂ ಅವುಗಳ ಸ್ವಾರಸ್ಯವನ್ನೂ ಮುಂದೆ ನೋಡಬಹುದು. ಎಲ್ಲ ವಿಷಯಗಳನ್ನು ಒಳಗೊಳ್ಳುವ ಈ ಪ್ರಕಾರದಲ್ಲಿ ಉದಾಹರಣೆಗಾಗಿ ಕೆಲವನ್ನು ಮಾತ್ರ ತೆಗೆದುಕೊಳ್ಳಲಾಗಿದೆ.

**ಸಂಭಾಷಣಾರೂಪದ ಒಗಟುಗಳು :** ಇದರಲ್ಲಿ ಎರಡು ಬಗೆಯನ್ನು ಉದಾಹರಿಸಲಾಗಿದೆ. ಒಂದು, ಅತ್ತೆ ಅಳಿಯಂದಿರ ನಡುವಿನ ಸಂಬಂಧವನ್ನು ಪ್ರತಿಬಿಂಬಿಸುವ ಪ್ರಶ್ನೋತ್ತರ ರೂಪದ್ದು; ಇನ್ನೊಂದು, ಹಾಡಿನಲ್ಲೇ ಸಾಗಿಬರುವ ತ್ರಿಪದಿ ರೂಪದ್ದು.

ಅತ್ತೆ: ಕರ ಕಟ್ಟದೆ ಹೊರ್ಬುಲ್ಹಾಕದೆ ಕರ ಯಾಕೆ ಮೆಯ್‌ಲಿಲ್ಲ?
ಅಳಿಯ: ಮೋಡಗಟ್ಟದೆ ಮೊರಾಗದೆ ಮಳೆ ಯಾಕೆ ಹುಯ್‌ಲಿಲ್ಲ?

ಒಗಟಿನಲ್ಲಿ ಅತ್ಯಂತ ಪ್ರಾಚೀನ ರೂಪದ್ದೆಂದು ಹೇಳಲಾಗುವ, ವಿಶಿಷ್ಟ ಸಾಧನೆಯೆನಿಸಿರುವ ಪ್ರಶ್ನೋತ್ತರ ಒಗಟಿಗೆ ಇದೊಂದು ಒಳ್ಳೆಯ ಉದಾಹರಣೆ. ಸಾಮಾನ್ಯವಾಗಿ ಹಳ್ಳಿಗಳ ಕಡೆ ಅತ್ತೆ ಅಳಿಯಂದಿರು ಮಾತಾಡುವುದೇ ಅಪರೂಪ. ಮಾಧ್ಯಮ ರೂಪವಾಗಿ ಯಾರೂ ಇಲ್ಲದಿದ್ದಾಗಲೂ ನೇರವಾಗಿ ಮಾತಾಡುವುದಿಲ್ಲ. ಈ ಒಗಟು ಅಂಥ ಸಂಪ್ರದಾಯವನ್ನು ಸಮರ್ಥವಾಗಿ ಅಭಿವ್ಯಕ್ತಿಗೊಳಿಸುತ್ತಿರುವುದಲ್ಲದೆ ಸಂಭಾಷಣಾ ಚತುರತೆಯನ್ನೂ ವ್ಯಕ್ತಿಗಳ ಗುಣಗಳನ್ನೂ ನೈಸರ್ಗಿಕ ಕ್ರಿಯೆಗಳನ್ನೂ ಪ್ರತಿನಿಧಿಸುತ್ತದೆ. ಮೇಲಿನ ಒಗಟಿನ ಹಿಂದಿರುವ ಕಥೆ ಇದು. ಒಮ್ಮೆ ಅಳಿಯ ಅತ್ತೆ ಮನೆಗೆ ಹೋದನಂತೆ. ಬಂದ ಅಳಿಯನಿಗೆ ಅತ್ತೆ ಊಟಕ್ಕಿಕ್ಕಿದಳು. ಎಲ್ಲವೂ ಬಡಿಸಿ ಆಗಿದ್ದರೂ ಕೂಡ ಅಳಿಯ ಉಣ್ಣದೆ ಸುಮ್ಮನೆ ಕುಳಿತಿದ್ದ. ತುಪ್ಪ ಬಿಡಲಿಲ್ಲವೆಂಬುದು ಅದಕ್ಕೆ ಕಾರಣವಾಗಿತ್ತು. ಅತ್ತೆಯೂ ಬಹಳ ಜಿಪುಣೆ, ತುಪ್ಪ ಬಿಟ್ಟಿರಲಿಲ್ಲ. ಅಳಿಯ ಉಣ್ಣದೆ ಸುಮ್ಮನೆ ಕುಳಿತಿರುವುದನ್ನು ನೋಡಿದ ಅತ್ತೆ ಕರು ಬಿಟ್ಟಿದ್ದರೂ ಹೊರೆ ಹುಲ್ಲು ಹಾಕಿದ್ದರೂ ಕರು ಮೇಯ್ತಾ ಇಲ್ಲವಲ್ಲ ಕಾರಣವೇನು? ಎಂದು ಅಳಿಯನಿಗೆ ಹೇಳಿಯೂ ಹೇಳದಂತೆ ಮಾತಾಡುತ್ತಾಳೆ. ಅಳಿಯ ಅತ್ತೆಗಿಂತಲೂ ಕಿಲಾಡಿ. ಅತ್ತೆ ತುಪ್ಪ ಕಾಯಿಸಿ ಮೊವರು (ಮುದ್ರೆ) ಮಾಡಿ, ನೆಲುವಿನ ಮೇಲೆ ಮಡಗಿರುವ ಸಂಗತಿ ಹೇಗೋ ಅವನಿಗೆ ಗೊತ್ತಾಗಿರಬೇಕು; ಆದ್ದರಿಂದಲೇ ಅವನ ಹಟ. ಕಾಯಿಸಿದ ಮೇಲೆ ತುಪ್ಪ ಹೆತ್ತುಕೊಳ್ಳುವುದನ್ನು ಇಲ್ಲಿ ಮೋಡ ಎಂಬ ಪದವೂ ಅದನ್ನು ಮತ್ತೆ ಕಾಯಿಸಿದರೆ ದ್ರವವಾಗುವುದನ್ನು ಮಳೆ ಎಂಬ ಪದವೂ ಧ್ವನಿಸುತ್ತವೆ. ತುಪ್ಪ ಕಾಯಿಸಿ ಬಿಡುವ ಕ್ರಿಯೆಗೆ ಮೋಡ ಮಳೆಯಾಗಿ ಸುರಿಯುವ ಕ್ರಿಯೆಯನ್ನು ಹೋಲಿಸಿರುವುದು ಸಮುಚಿತವಾಗಿದೆ. ಅಳಿಯನಿಗೆ ಕೊಟ್ಟ ಕರುವಿನ ಪ್ರತಿಮೆಯೂ ಅಷ್ಟೇ ಉಚಿತವಾಗಿದೆ. ಕಾವ್ಯದ ದೃಷ್ಟಿಯಿಂದಲೂ ಈ ಒಗಟು ಗಮನಾರ್ಹವಾಗಿದೆ.

ಬದಿನಲ್ಲಿ ಹುಟ್ಟೋದು ಬದಿನಲ್ಲಿ ಬೆಳೆಯೋದು, ಹೋಗೋರ ಮುಂಜೆರಗ ಹಿಡಿಯೋದು - ಎಲೆ ಬಾಲೆ, ಬಾಲೆ ಇದರರ್ಥ ಒಡೆದ್ಹೇಳೆ? ನಿಮ್ಮ ಅರ್ಥವು ನಮ್ಮೀಗೆ ತಿಳಿಯಾವು, ನೀವಾಡಿದ ಮಾತು ಹುಸಿಯಲ್ಲ - ಮಾಳಿವನೆ, ಉತ್ತರಾಣಿಗಿಡ ಅರಸೋರು.

ಇದು ಹಾಡಿನ ರೂಪದ ಒಗಟಿಗೆ ಉದಾಹರಣೆ. ಉತ್ತರಾಣಿ ಎಂಬ ಗಿಡದಲ್ಲಿ ಹೂವೆಲ್ಲ ಮುಳ್ಳುಗಳೇ (ಈ ಗಿಡವನ್ನು ಅಂಟುಪುರ್ಲೆ ಎಂದೂ ಕರೆಯುತ್ತಾರೆ). ಗಿಡದ ಕಡ್ಡಿಯ ಉದ್ದಕ್ಕೂ ಸಾಲಾಗಿ ಕಾಣಿಸಿಕೊಳ್ಳುವ ಇವು ಹಿಮ್ಮುಖವಾಗಿರುತ್ತವೆ. ಯಾವ ವಸ್ತು ಸಿಕ್ಕಿದರೂ ಅದರಲ್ಲಿ ಸಹಜವಾಗಿಯೇ ಅಂಟಿಕೊಳ್ಳುತ್ತವೆ. ಅಂಥ'ದ್ದರಲ್ಲಿ ತೆಳುವಾದ ಸೀರೆಯ ಸೆರಗು ಸಿಕ್ಕರೆ ಇನ್ನೂ ಸುಲಭ. ಆದ್ದರಿಂದ ಇಲ್ಲಿ ಹೋಗೋರ ಮುಂಜೆರಗ ಹಿಡಿಯೋದು ಎಂಬ ಮಾತು ಧ್ವನಿಪೂರ್ಣವಾಗಿದೆ.

**ಗಣಿತ ಸಂಬಂಧವಾದ ಒಗಟುಗಳು :** ಇವು ಅತ್ಯಂತ ಸಮಸ್ಯಾತ್ಮಕವಾಗಿಯೂ ಕೆಲವು ಸಲ ವಿನೋದಾತ್ಮಕವಾಗಿಯೂ ಇರುತ್ತವೆ. ಉದಾ:

ನಾವು
ನಮ್ಮಷ್ಟು
ನಮ್ಮರ್ಧ
ನಮ್ಕಾಲು
ನೀನು ಸೇರಿದರೆ ನೂರು. ಹಾಗಾದರೆ ಬಂದ ಗಿಳಿಗಳೆಷ್ಟು?

ಈ ಒಗಟಿಗೆ ಉತ್ತರ ಇದು: ಒಂದು ಜೋಳದ ಹೊಲದಲ್ಲಿ ಒಂದು ಗಿಳಿ ಕುಳಿತಿರುತ್ತದೆ. ಅಲ್ಲಿಗೆ ಮತ್ತೆ ಕೆಲವು ಗಿಳಿಗಳು ಬರುತ್ತವೆ. ಆಗ ಮೊದಲೇ ಕುಳಿತಿದ್ದ ಗಿಳಿ ಬಂದ ಗಿಳಿಗಳನ್ನು ನೀವು ಎಷ್ಟು ಗಿಳಿಗಳು ಬಂದಿರಿ ಎಂದು ಕೇಳುತ್ತದೆ. ಅದಕ್ಕೆ ಉಳಿದ ಗಿಳಿಗಳು ಮೇಲಿನ ಒಗಟಿನ ರೂಪದಲ್ಲಿ ಉತ್ತರಿಸುತ್ತವೆ. ಉತ್ತರ ಮೂವತ್ತಾರು. ಬಂದ 36 ಗಿಳಿಗಳಿಗೆ ಅವರಷ್ಟು ಅಂದರೆ 36 ಸೇರಿಸಿದರೆ 72 ಗಿಳಿಗಳಾಗುತ್ತವೆ. ಇದಕ್ಕೆ ಅವುಗಳ ಅರ್ಧ 18 ಮತ್ತು ಕಾಲುಭಾಗ 9ನ್ನು ಸೇರಿಸಿದರೆ 99 ಆಗುತ್ತದೆ. ಇದಕ್ಕೆ ಮೊದಲು ಕುಳಿತಿದ್ದ ಗಿಳಿಯನ್ನು ಸೇರಿಸಿದರೆ 100 ಆಗುತ್ತದೆ.

**ನಂಬಿಕೆಗಳಿಗೆ ಸಂಬಂಧಿಸಿದವು :** ಗಂಡಹೆಂಡಿರು ಪರಸ್ಪರರ ಹೆಸರನ್ನು ಹೇಳಬಾರದೆಂಬುದು ಒಂದು ನಂಬಿಕೆ. ಕೆಲವು ವ್ಯಕ್ತಿಗಳ ಹೆಸರನ್ನು ಹೇಳಿದರೆ, ಹೇಳಿದವರಿಗೆ ತೊಂದರೆಯಾಗುತ್ತದೆ ಎಂಬುದೂ ಇನ್ನೊಂದು ನಂಬಿಕೆ. ಉದಾಹರಣೆಗೆ ತಂದೆಯ ಕೈಕೆಯ ಹೆಸರನ್ನು ಹೇಳಬಾರದೆಂಬುದು; ಹಾಗೆಯೇ ಮಂಡೋದರಿಯ ಹುಟ್ಟೆಸರು ಕೂಡ. ಇಂಥ ನಂಬಿಕೆಗಳ ಆಧಾರದ ಮೇಲೆ ಹುಟ್ಟಿಕೊಂಡಿರುವ ಒಗಟುಗಳಲ್ಲಿ ಒಂದು ಹೀಗಿದೆ: ಹತ್ತು ತಲೆ ಕೆಂಪು ಆರು ತಲೆ ಕಪ್ಪು ಆತನ ಸಖನ ಸುತನ ಒಡೆಯನ ವೈರಿಯ ಮಡದಿಯ ಹುಟ್ಟೆಸರೇನು? ಸಮಾಜದಲ್ಲಿ ಈ ನಿಷಿದ್ಧತೆ ಬರಲು ಕಾರಣವೇನು ಎಂಬುದಕ್ಕೆ ಉತ್ತರವಿಲ್ಲದಿದ್ದರೂ ಇಂಥ'ದೊಂದು ನಿಷಿದ್ಧತೆಯಿತ್ತು ಎಂಬುದಕ್ಕೆ ಉದಾಹರಣೆಯಾಗಿಯಾದರೂ ಇಂಥ' ಒಗಟುಗಳು ಉಳಿದುಕೊಂಡುಬಂದಿವೆ.

**ಸರ ಒಗಟುಗಳು :** ಒಂದು ಒಗಟಿಗೆ ಉತ್ತರ ಹೇಳಿದರೆ, ಆ ಉತ್ತರದಿಂದಲೇ ಪ್ರಾರಂಭವಾಗುವ ಮತ್ತೊಂದು ಒಗಟನ್ನು ಹೇರುವ ಚಾಕಚಕ್ಯತೆಯೂ ಈ ಪ್ರಕಾರದಲ್ಲಿ ಕಂಡುಬರುತ್ತದೆ. ಸೂಕ್ಷ್ಮಗ್ರಹಣ ಶಕ್ತಿಯುಳ್ಳವರೂ ಮೊನಚಾದ ಬುದ್ಧಿಯುಳ್ಳವರೂ ಒಂದೆಡೆ ಸೇರಿದಾಗ ಮನರಂಜನೆಗಾಗಿ ಒಬ್ಬರಿಗೊಬ್ಬರು ಪರೀಕ್ಷಿಸುವ ವಿಧಾನ ಕುತೂಹಲಕರವಾದದ್ದು.

ಒಬ್ಬ ಹೀಗೆ ಒಗಟನ್ನು ಎಸೆಯುತ್ತಾನೆ: ಏರಿ ಹಿಂದುಗಡೆ ಚೌಲ ಬಾರಿಸ್ತದೆ. ಏರಿಯ ಹಿಂದುಗಡೆ ಧನುರ್ಮಾಸದ ಗಾಳಿಗೆ ತಲೆದೂಗತ್ತ ನಿಂತ ಪೈರನ್ನು ದೊರೆಯ ಅಕ್ಕಪಕ್ಕ ನಿಂತ ಸೇವಕಿಯರು ಚವರಿ ಬೀಸುತ್ತಿರುವಂತೆ ಕಾಣಲಾಗಿದೆ. ಇದಕ್ಕೆ ಉತ್ತರ-ಬತ್ತ.

ಬತ್ತ ಎಂದು ಉತ್ತರ ಬಂದೊಡನೆಯೇ ಅದರ ಹಿಂದೆ ಇನ್ನೊಂದು ಒಗಟು: ಬತ್ತಕ್ಕೆ ಮೂರು ಮುತ್ತು. ಬೆಳಗಿನ ಜಾವದಲ್ಲಿ ಮುತ್ತಿನಂತೆಯೇ ಕಾಣುವ ಇಬ್ಬನಿ ಇದಕ್ಕೆ ಉತ್ತರ. ಉತ್ತರದ ಹಿಂದೆಯೇ ಇನ್ನೊಂದು ಒಗಟು ಸಿಡಿಯುತ್ತದೆ ಇಬ್ಬನಿಗೊಬ್ಬಣ್ಣ - (ಇಲ್ಲಿ ಅಣ್ಣ ಎಂದರೆ ಒಡೆಯ) ಇಬ್ಬನಿಗೆ ಒಡೆಯ ಸೂರ್ಯ. ಸೂರ್ಯನೇ ಇಲ್ಲಿಯ ಉತ್ತರ. ಸರಪಳಿ ರೂಪದ ಇಂಥ ಒಗಟುಗಳು ಕೇಳುಗರ ಮನಸ್ಸಿಗೆ ತೃಪ್ತಿ ಉಲ್ಲಾಸಗಳನ್ನು ನೀಡುತ್ತವೆ.

**ಅಶ್ಲೀಲ ರೂಪದವು :** ಒಗಟುಗಳಲ್ಲಿ ಕಂಡುಬರುವ ಮತ್ತೊಂದು ಗಮನಾರ್ಹ ಅಂಶವೆಂದರೆ ಅಶ್ಲೀಲತೆ. ಇದರಲ್ಲಿ ಎರಡು ರೀತಿ. ಹೊರನೋಟಕ್ಕೆ ಅಶ್ಲೀಲವೆಂಬಂತೆ ಕಂಡರೂ ಗಂಭೀರ ಕ್ರಿಯೆಯೊಂದನ್ನು ಹೇಳುವುದು ಒಂದು. ಹೊರನೋಟಕ್ಕೆ ಗಂಭೀರವೆಂಬಂತೆಯೇ ಕಂಡರೂ ಅಶ್ಲೀಲ ಅರ್ಥವನ್ನು ಒಳಗೊಂಡದ್ದು ಇನ್ನೊಂದು. ಅಂಥ ಒಂದೆರಡು ಉದಾಹರಣೆಗಳನ್ನು ಇಲ್ಲಿ ನೋಡಬಹುದು.

ಮಾತುಗೀತು ಯಾವಾಗ ಎದುರುಬದುರು ಕುಂತಾಗ
ಅಳಗಿಳ ಯಾವಾಗ ಅರ್ಧ ಒಳಕ್ಕೋದಾಗ
ನೆಗಾನುಡಿ ಯಾವಾಗ ಪೂರ್ತಿ ಒಳಕ್ಕೋದಾಗ

ಈ ಒಗಟು ಮೇಲ್ನೋಟಕ್ಕೆ ಲೈಂಗಿಕ ಕ್ರಿಯೆಯೊಂದನ್ನು ಹಂತಹಂತವಾಗಿ ಹೇಳುವಂತಿದ್ದರೂ ಅದರ ಧ್ವನಿಯೇ ಬೇರೆ. ಹಳ್ಳಿಗಳಲ್ಲಿ ಬಳೆಗಾರನ ಮುಂದೆ ಕೂತು ಬಳೆ ತೊಡಿಸಿಕೊಳ್ಳುವಾಗ ಹೆಣ್ಣುಮಗಳು ಸಿರಿಯಿಂದ ಕುಳಿತುಕೊಳ್ಳುತ್ತಾಳೆ. ಹೀಗೆ ಎದುರುಬದುರು ಕುಳಿತ ಅನಂತರ ತರತರದ ಬಳೆಗಳನ್ನು ಬಳೆಗಾರ ತೋರಿಸುತ್ತಿದ್ದಂತೆ ಅದರ ಬೆಲೆಯ ಬಗ್ಗೆ, ಬಳೆಯ ಅಂದಚೆಂದದ ಬಗ್ಗೆ ಮಾತುಕತೆ ನಡೆಯುತ್ತದೆ. ಕಡೆಗೆ ಯಾವುದೋ ಒಂದು ಬಗೆಯ ಬಳೆ ಅವಳಿಗೆ ಒಪ್ಪಿಗೆಯಾಗುತ್ತದೆ. ಬಳೆಗಾರ ಹೆಣ್ಣಿನ ಕೈ ಹಿಡಿದು ಬಳೆ ತೊಡಿಸಲು ಪ್ರಾರಂಭಿಸುತ್ತಾನೆ. ಬಳೆ ಅರ್ಧ ಮುಂಗೈ ಏರಿದಾಗ ಮೂಳೆ ಗಂಟುಗಳ ಹತ್ತಿರ ಸಿಕ್ಕಿಕೊಂಡು ಅಪಾರ ಸಂಕಟವಾಗುತ್ತದೆ. ಆಗ ಸಹಜವಾಗಿಯೇ ಹೆಣ್ಣು ಮಗಳ ಕಣ್ಣಲ್ಲಿ ನೀರಾಡುತ್ತದೆ. ಆಕೆ ನಿಶ್ಶಬ್ದವಾಗಿ ಬಿಕ್ಕುತ್ತಿರುವುದು ಮೇಲ್ನೋಟಕ್ಕೆ ಯಾರ ಗಮನಕ್ಕೂ ಬರುವುದಿಲ್ಲ. ಬಳೆ ಸಂಪೂರ್ಣ ಕೈಯ ಒಳಹೋಗಿ ತನ್ನ ಸ್ಥಾನವನ್ನು ಸೇರಿದಾಗ ಆ ಹೆಣ್ಣುಮಗಳ ಹರ್ಷಕ್ಕೆ ಪಾರವೇ ಇರುವುದಿಲ್ಲ. ಹೊಸ ಬಳೆಯೊಂದಿಗೆ ರಾರಾಜಿಸುವ ತನ್ನ ಕೈಗಳನ್ನು ನೋಡಿಕೊಳ್ಳುತ್ತ ಆಕೆ ಸಂತೋಷಾತಿರೇಕದಿಂದ ನಗುನಗುತ್ತ ಮಾತಾಡಲು ತೊಡಗುತ್ತಾಳೆ. ಮುತ್ತೈದೆತನಕ್ಕೆ, ತನ್ಮೂಲಕ ಬದುಕಿನ ಸುಖಶಾಂತಿಗಳಿಗೆ ಸಂಕೇತವಾದ, ಪವಿತ್ರಕಾರ್ಯವಾದ ಬಳೆ ತೊಡಿಸುವ ಶಾಸ್ತ್ರವನ್ನು ಕುರಿತು ಜನಪದರು ಕಟ್ಟಿರುವ ಈ ಒಗಟು ಧ್ವನಿಪೂರ್ಣವಾಗಿದೆ. ಒಗಟನ್ನು ಕೇಳಿದಾಗ ಮೂಗು ಮುರಿದು, ಮುಖ ಸಿಂಡರಿಸುವವರು ಅರ್ಥ ಹೊಳೆದ ಮೇಲೆ ಅಚ್ಚರಿಪಡುತ್ತಾರೆ. ಇತ್ತೀಚೆಗೆ ಹಳ್ಳಿಗಳಲ್ಲೂ ಕಣ್ಮರೆಯಾಗುತ್ತಿರುವ, ದೊಡ್ಡ ಮಂತಿಗೆ ಹಗ್ಗ ಹಾಕಿ ಮೊಸರು ಕಡೆಯುವ ವಿಧಾನವನ್ನು ಕುರಿತ ಒಂದು ಒಗಟು ಈ ರೀತಿ ಇದೆ. ಉಡದಾರದ ಕೆಳಗೆ ಬಡಿದಾಡ್ತದೆ. ಇಂಥ' ಒಗಟುಗಳನ್ನು ಬೇಸರ ಕಳೆಯಲೂ ಸಂತೋಷಾರ್ಥವಾಗಿಯೂ ಕುಚೋದ್ಯಕ್ಕಾಗಿಯೂ ಕಟ್ಟಿರಬಹುದಾದ ಸಾಧ್ಯತೆಗಳೆ ಹೆಚ್ಚೆಂದು ಹೇಳಬಹುದು.

ಕೆಲವು ಒಗಟುಗಳು ಮೇಲ್ನೋಟಕ್ಕೆ ಸಭ್ಯವಾಗಿ ಕಂಡರೂ ಒಳ ಅರ್ಥ' ಅಶ್ಲೀಲವಾಗಿರಬಹುದು ಅಥ'ವಾ ಲೈಂಗಿಕ ಅಂಶಗಳನ್ನು ಹೇಳುತ್ತಿರಬಹುದು. ಇಲ್ಲಿ ಅಂಥ' ಒಂದು ಉದಾಹರಣೆಯನ್ನು ನೋಡಬಹುದು. ಬುಗುರಿಕಾಯಿ ಹೆಣ್ಣುಮಕ್ಕಳಿಗೇ ಆಗಲಿ ಗಂಡು ಮಕ್ಕಳಿಗೇ ಆಗಲಿ ಬಲು ಪ್ರಿಯವಾದ ಆಟಿಕೆಯ ವಸ್ತು. ಆದರೆ ಚಿಗುರುಡುಗಿಗೆ ಬುಗುರಿಕಾಯಿ ಎಂಬ ಒಂದು ಒಗಟು ಮೊಲೆ ಎಂಬ ವಿಶೇಷ ಅರ್ಥ'ವನ್ನಡಗಿಸಿಕೊಂಡು ಬರುತ್ತದೆ. ಹೀಗೆ ಸಭ್ಯರೂಪದಲ್ಲಿಯೇ ಮಲಮೂತ್ರಾದಿಗಳನ್ನೂ ಲೈಂಗಿಕಾಂಗಗಳನ್ನೂ ಒಗಟುಗಳು ವರ್ಣಿಸುವುದುಂಟು.

**ಕಥೆಯ ಹಿನ್ನೆಲೆಯ ಒಗಟುಗಳು :** ಕೆಲವು ಒಗಟುಗಳು ದೀರ್ಘ ಕಥೆ ಯೊಂದನ್ನು ಹಿನ್ನೆಲೆಯಾಗುಳ್ಳಂಥವು. ಕಥೆ ತಿಳಿದಾಗ ಮಾತ್ರ ಒಗಟಿನ ಸ್ವಾರಸ್ಯ ವೇದ್ಯವಾಗುತ್ತದೆ. ಇಲ್ಲದಿದ್ದರೆ ಒಗಟು ವಿರೋಧಾಭಾಸವೆಂಬಂತೆ ಒಗಟೇ ಆಗಿ ಕಾಣುತ್ತದೆ. ಉದಾ: ಕತೆ ಯತೆಯಾಯ್ತು, ಸಂಸಾರ ಎರಡಾಯ್ತು, ನೆನ್ನೆ ಹೊಡೆದ ಮೊಲ ಎಸರಾಯ್ತು, ಮೊಲ ಹೊಡೆದೋನು ಸತ್ತು ಮೂರು ದಿನವಾಯ್ತು. ಈ ಒಗಟಿನ ಕಥೆ ಸ್ವಾರಸ್ಯವಾಗಿದ್ದು ಅದು ಹೀಗಿದೆ: ಹೆಂಡತಿ ಮತ್ತು ಮಿಂಡ ಸೇರಿ ತಮ್ಮ ಸುಖಕ್ಕೆ ಅಡ್ಡಿಬರುತ್ತಿದ್ದ ಗಂಡನನ್ನು ಕೊಂದು ಹೆಣವನ್ನು ಅಡವಿಯಲ್ಲಿ ಮರಕ್ಕೆ ನೇತುಹಾಕಿ ಬರುತ್ತಾರೆ. ಮೂರು ದಿನದ ಮೇಲೆ ಮಿಂಡ ಇತರರೊಂದಿಗೆ ಬೇಟೆಗೆ ಹೋಗುತ್ತಾನೆ. ಪೊದರಿನಿಂದ ಎದ್ದ ಮೊಲವೊಂದನ್ನು ಅಟ್ಟಿಸಿಕೊಂಡು ಹೋದಾಗ ಅದು ಓಡಿ ಓಡಿ ಗಂಡನನ್ನು ನೇತುಹಾಗಿದ್ದ ಮರದಡಿಯ ಪೊದೆಯಲ್ಲಿ ಅವಿತುಕೊಳ್ಳುತ್ತದೆ. ಬಿರುಗಾಳಿಯಿಂದಲೋ ಹಗ್ಗದ ಬಲ ಕುಂದಿದ್ದುದರಿಂದಲೋ ಹೆಣ ಮೇಲೆಬಿದ್ದು ಮೊಲ ಸಾಯುತ್ತದೆ. ಬೇಟೆಗಾರರು ಆ ಮೊಲವನ್ನು ಹಂಚಿಕೊಳ್ಳುತ್ತಾರೆ. ಮಿಂಡನೂ ಹೆಂಡತಿಯೂ ಅದನ್ನು ಎಸರು ಮಾಡಿಕೊಂಡು ಊಟಕ್ಕೆ ಕುಳಿತಾಗ ಮಿಂಡ ತಮ್ಮ ಕಥೆಯನ್ನೇ ಹೀಗೆ ಒಗಟಿನ ರೂಪದಲ್ಲಿ ಪ್ರೇಯಸಿಗೆ ಹೇಳುತ್ತಾನೆ. ಹೀಗೆ ಒಗಟುಗಳು ವೈವಿಧ್ಯಮಯವಾಗಿವೆ.

ಕನ್ನಡದಲ್ಲಿ ಒಗಟಿನ ಸಂಗ್ರಹಕಾರ್ಯ ಸಾಕಷ್ಟು ನಡೆದಿವೆ. ಮೊಟ್ಟಮೊದಲು ಒಗಟಿನ ಸಂಗ್ರಹವನ್ನು ಪ್ರಕಟಿಸಿದವರು ಶಂ.ಬಾ.ಜೋಷಿ. ಇವರ ಮಕ್ಕಳ ಒಡಪುಗಳು ಪ್ರಕಟವಾದುದು 1940ರಲ್ಲಿ. ಇದರಲ್ಲಿ 214 ಒಗಟುಗಳಿವೆ. ಅನಂತರ ಹಲವಾರು ಸಂಗ್ರಹಗಳು ಹೊರಬಂದಿವೆ. 1955ರಲ್ಲಿ ಎರಡು ಸಂಗ್ರಹಗಳು ಶಿವಕುಮಾರ್ ಅವರ ಒಗಟುಮಾಲೆ (61ಒಗಟುಗಳು) ಮತ್ತು ಶ್ರೀನಿವಾಸ ಪುರುಷೋತ್ತಮ ಭಟ್ ಅವರ ಜಾಣ್ಮೆಯ ಒಗಟುಗಳು (245) ಪ್ರಕಟವಾಗಿವೆ. 1956ರಲ್ಲಿ ಟಿ.ಚಂದ್ರರಾಜಶೆಟ್ಟಿ ಅವರ ಒಗಟುಗಳು ಮತ್ತು ಶ್ರೀನಿವಾಸ ಪುರುಷೋತ್ತಮ ಭಟ್ ಅವರ ಒಗಟುಗಳ ಗೊಂಚಲು (202), 1967ರಲ್ಲಿ ಜೀ.ಶಂ.ಪರಮಶಿವಯ್ಯ ಅವರ ಕನ್ನಡ ಒಗಟುಗಳು (300), 1969ರಲ್ಲಿ ಚಕ್ಕಲೂರು ಚನ್ನಪ್ಪ ಅವರ ಕನ್ನಡ ಒಗಟು ಮಾಲೆ (289), 1970ರಲ್ಲಿ ರಾಗೌ ಅವರ ನಮ್ಮ ಒಗಟುಗಳು (510), ಸುಧಾಕರ ಅವರ ಜನಪದ ಬೆಡಗಿನ ವಚನಗಳು (535), ಬಾಲಬಂಧು ಅವರ ಒಗಟಿನ ಗಂಟು (100), 1973ರಲ್ಲಿ ನಂ.ನಾರಾಯಣಗೌಡ ಅವರ ಜನಪದ ಒಗಟುಗಳು (246) ಮತ್ತು ಎಚ್.ಜೆ.ಲಕ್ಕಪ್ಪಗೌಡ ಅವರ ಒಗಟುಗಳು (1088) ಪ್ರಕಟಗೊಂಡಿವೆ. ಪ್ರಕಟಣೆಯ ವರ್ಷದ ನಮೂದಿಲ್ಲದ ನಾಲ್ಕು ಸಂಗ್ರಹಗಳಿವೆ: ಗಿರಿಜಮ್ಮ ಬಸವಪ್ರಭು ಇಚ್ಚಂಗಿಮಠ ಅವರ ಒಡಗಥೆ (118), ಶ್ರೀಕಂಠಶಾಸ್ತ್ರಿ ನಲವಡಿ ಅವರ ಒಗಟಿನ ಮಾಲೆ (201) ಈ ಸಂಗ್ರಹದಲ್ಲಿ ಉತ್ತರವಿಲ್ಲ; ಅಧ್ಯಾಪಕ ರಾಮಚಂದ್ರಾಚಾರ್ಯರ ಒಗಟುಗಳು, ಬಿ.ಜಿ.ಸಂಕೇಶ್ವರ ಅವರ ಒಗಟಿನ ಮಾಲೆ. ಈ ಪಟ್ಟಿಯಲ್ಲಿ ಕನ್ನಡ ತಾತ್ಪರ್ಯಸಹಿತ ಪ್ರಕಟವಾಗಿರುವ ಎಂ.ನಾರಾಯಣ ಅವರ ತುಳು ಒಗಟುಗಳು (1962), ದೀರ್ಘವಾದ ಪ್ರಸ್ತಾವನೆ ಮತ್ತು ಕನ್ನಡ ಅನುವಾದದೊಂದಿಗೆ 1971ರಲ್ಲಿ ಪ್ರಕಟವಾದ ಬಿ.ಎ.ವಿವೇಕ ರೈ ಅವರ ತುಳು ಒಗಟುಗಳು (507) ಎಂಬ ಸಂಗ್ರಹಗಳನ್ನು ಹೆಸರಿಸಬಹುದು.

ಇದುವರೆಗೆ ಪ್ರಕಟವಾಗಿರುವ ಈ ಸಂಗ್ರಹಗಳಲ್ಲಿ ವಿಶೇಷವಾಗಿ ಹೆಸರಿಸಬಹುದಾದವೆಂದರೆ ರಾಗೌ ಅವರ ನಮ್ಮ ಒಗಟುಗಳು ಹಾಗೂ ಸುಧಾಕರ ಅವರ ಜನಪದ ಬೆಡಗಿನ ವಚನಗಳು. ಇವುಗಳಲ್ಲಿ ವಿದ್ವತ್ಪೂರ್ಣವಾದ ಪ್ರಸ್ತಾವನೆಯೂ ವೈಜ್ಞಾನಿಕವಾದ ವಿಶ್ಲೇಷಣೆಯೂ ವಿಶೇಷ ಅನುಬಂಧಗಳೂ ಸಮಾವೇಶಗೊಂಡಿವೆ. ರಾಗೌ ಅವರ ನಮ್ಮ ಒಗಟುಗಳು ಸಂಗ್ರಹದ ಪ್ರಸ್ತಾವನೆಯಲ್ಲಿ ಒಗಟುಗಳ ಉಗಮ, ವಿಕಾಸ, ರೂಪಾಂಶ, ಕಾವ್ಯಾಂಶ, ಪ್ರಾಚೀನತೆ, ವೈವಿಧ್ಯ, ಪ್ರಯೋಜನ ಇತ್ಯಾದಿಗಳನ್ನು ಸಮಗ್ರವಾಗಿ ಸಮರ್ಥವಾಗಿ ವೈಜ್ಞಾನಿಕವಾಗಿ ವಿಶ್ಲೇಷಿಸಲಾಗಿದೆ. ಸುಧಾಕರ ಅವರೂ ತಮ್ಮ ಜನಪದ ಬೆಡಗಿನ ವಚನಗಳು ಸಂಗ್ರಹದ ಪ್ರಸ್ತಾವನೆಯಲ್ಲಿ ವಚನಕಾರರ ಬೆಡಗಿನ ವಚನಗಳಿಗೂ ಜನಪದ ಒಗಟುಗಳಿಗೂ ಇರುವ ಸಾದೃಶ್ಯವನ್ನು ವಿವೇಚಿಸಿ, ವಚನಕಾರರಷ್ಟೇ ಜನಪದ ಕವಿಗಳೂ ಈ ನಿಟ್ಟಿನಲ್ಲಿ ಶಕ್ತರು ಎಂಬ ಅಂಶವನ್ನು ಸಾಧಾರವಾಗಿ ನಿರೂಪಿಸಿದ್ದಾರೆ. (ಕೆ.ಆರ್.)

**ಒತ್ತೆಕೋಲ :** ಭೂತಾರಾಧನೆಯ ಭಾಗವಾಗಿ ಬರುವ ಒಂದು ವಿಶಿಷ್ಟ ಜನಪದ ಆಚರಣೆ; ವಿಷ್ಣು ದೈವಾರಾಧನೆ. ಕೇರಳ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಗಡಿ ಪ್ರದೇಶಗಳಲ್ಲಿ ಹರಕೆಯ ರೂಪದಲ್ಲಿ ವಿಷ್ಣುವಿನ ಒತ್ತೆ ಕೋಲವನ್ನು ನಡೆಸುವ ಪದ್ಧತಿ ರೂಢಿಯಲ್ಲಿದೆ. ಇದು ಕೇರಳ ಮೂಲದಿಂದ ಬಂದದ್ದು. ಇದರ ವೇಷ ಕಟ್ಟುವವರು ಕೂಡ ಮಲಯಾಳಿಗಳು. ಈ ಆಚರಣೆಯಲ್ಲಿ ಭೂತದ ಪಾತ್ರಿ ಉರಿಯುವ ಕೊಂಡ ಹಾಯುವನು.

ವಿಷ್ಣುವಿನ, ನರಸಿಂಹನ ಅವತಾರವನ್ನು ಸೂಚಿಸುವ, ತೆಂಗಿನ ಗರಿಗಳಿಂದ ತಯಾರಿಸಲ್ಪಟ್ಟ ಭೂತದ ವೇಷ ಭೂಷಣ ವಿಚಿತ್ರ ವಿನ್ಯಾಸಗಳಿಂದ ಕಂಗೊಳಿಸುತ್ತದೆ. ಒಂದು ಗಮನಾರ್ಹ ಸಂಗತಿ ಎಂದರೆ ಮಲವ ಜನಾಂಗದವರಿಗೆ ಇದು ಪರಂಪರಾಗತವಾಗಿ ಬಂದ ಕುಲಕಸುಬು. ಒತ್ತೆಕೋಲದ ಆಚರಣೆಯ ವಿಧಿ ವಿಧಾನಗಳು ಹೀಗಿವೆ: ಸಾಮಾನ್ಯವಾಗಿ ಮುಸ್ಸಂಜೆಯಿಂದ ಮುಂಜಾನೆಯವರೆಗೆ ಕೋಲ ನಡೆಯುತ್ತದೆ. ಕಾರ್ಯಕ್ರಮ ಮೂರು ಘಟ್ಟಗಳಲ್ಲಿ ನಡೆಯುತ್ತದೆ. ಮಲೇರಿಗೆ ಅಗ್ನಿ ಸ್ಪರ್ಶ ನೀಡುವುದು, ಕುಳಿಚ್ಚಾಟ್, ಕೆಂಡದ ರಾಶಿಗೆ ಭೂತ ಬೀಳುವುದು - ಇವೇ ಆ ಮೂರು ಘಟ್ಟಗಳು.

ಒತ್ತೆಕೋಲ ನಡೆಸುವ ದಿನ ನಿರ್ಧರಿತವಾದ ಮೇಲೆ ಹಲಸು ಅಥವಾ ಹಾಲು ಒಸರುವ ಮರದ ಬಳಿ ಹೋಗಿ ಪೂಜಿಸಿ ಒಂದು ಕೊಂಬೆಯನ್ನು ಕಡಿದುಕೊಂಡು ಬಂದು ಕೋಲ ನಡೆಸುವ ಸ್ಥಳದಲ್ಲಿ ಹಾಕುವರು. ಹೀಗೆ ಒಂದು ತಿಂಗಳ ಕಾಲ ಸೌದೆ ಶೇಖರಣೆಯಾಗಿ ಕೋಲದ ಆರಂಭದ ದಿನ ಈ ಸೌದೆಯನ್ನು ಚೌಕಾಕಾರವಾಗಿ ಅಳೆತ್ತರಕ್ಕೆ ಜೋಡಿಸುವರು. ಇದೇ

ಮಲೇರಿ. ಇದರ ಎದುರಿಗೇ ಐವತ್ತು ಅಡಿಗಳ ಅಂತರದಲ್ಲಿ ಪೂರ್ವಾಭಿಮುಖವಾಗಿ ತೆಂಗಿನ ಗರಿಗಳಿಂದ ಮಂಟಪ ರೂಪಿಸಿ ಅಲ್ಲಿ ತೆಂಗಿನಕಾಯಿ, ಹೊಂಬಾಳೆಯನ್ನು ಸೇರಿಸಿ ನೇತು ಹಾಕುವರು. ಬೆಳ್ಚಿಪಾಡರು ವಿಷ್ಣುಮೂರ್ತಿ ದೇವಾಲಯದಿಂದ ಭಂಡಾರವನ್ನು ತಂದು ಮಂಟಪದಲ್ಲಿಡುವರು. ಹದಿನಾರು ಬಾಳೆಎಲೆಗಳನ್ನು ಹಾಕಿ ಪ್ರತಿಯೊಂದರಲ್ಲಿ ಎರಡೆರಡು ಬಾಳೆಹಣ್ಣು, ತೆಂಗಿನಕಾಯಿ, ಅಡಕೆ ಹಾಗೂ ಹೊಂಬಾಳೆಗಳನ್ನು ನೈವೇದ್ಯಕ್ಕಿಟ್ಟು ಪೂಜೆ ಮಾಡುವರು. ಅನಂತರ ಮಲೇರಿಗೆ ಬೆಂಕಿ ಕೊಡುವರು.



ನರಸಿಂಹನ ಅವತಾರ

ಮಧ್ಯರಾತ್ರಿ ವೇಳೆ ಕುಳಿಚ್ಚಾಟ್ ಆರಂಭವಾಗುತ್ತದೆ. ಇಲ್ಲಿ ದೈವವನ್ನು ಕಟ್ಟುವವ ಮಲಯ ಜಾತಿಯ ಪಾತ್ರಿ. ಮಡಿಯುಟ್ಟು ಕೆಂಪು ವಸ್ತ್ರ ಅಂಗೈಯಲ್ಲಿ ಹಿಡಿದು ಮಲೇರಿಗೆ ಮೂರು ಬಾರಿ ಪ್ರದಕ್ಷಿಣೆ ಮಾಡುವನು. ಇವನ ವೇಷ ಭೂಷಣಗಳು ವಿಶೇಷತೆಯಿಂದ ಕೂಡಿರುತ್ತವೆ. ಬಳಿಕ ಈತ ಮಂಟಪದಲ್ಲಿ ನಿಲ್ಲುವನು. ಈತನ ಸಹಾಯಕರು ಚಂಡೆಯನ್ನು ಬಾರಿಸುವರು. ಒಡನೆ ಪಾತ್ರಿಗೆ ದೈವದ ಆವಾಹನೆಯಾಗುವುದು. ವಿಷ್ಣು ನರಸಿಂಹಾವತಾರ ತಾಳಿ ಹಿರಣ್ಯಕಶಿಪುವನ್ನು ವಧಿಸಿ ಪ್ರಹ್ಲಾದನನ್ನು ರಕ್ಷಿಸಿದ ಕಥೆಯನ್ನು ಇಬ್ಬರು ಮಲಯಾಳಂ ಭಾಷೆಯಲ್ಲಿ ಪಾಡ್ದನವನ್ನು ಹಾಡುವರು. ಆಗ ಪಾತ್ರಿ ಹಾಡಿಗೆ ತಕ್ಕಂತೆ ಭಾವಾಭಿನಯ ನೀಡುವನು. ಇದೇ ಕುಳಿಚ್ಚಾಟ್.

ಈ ಕಾರ್ಯಕ್ರಮ ಮುಂಜಾನೆವರೆಗೂ ನಡೆಯುತ್ತದೆ. ಅನಂತರ ಪಾತ್ರಿ ಕುಳಿಚ್ಚಾಟ್ ವೇಷ ಕಳಚಿ ಬೇರೆ ವೇಷ ಹಾಕುವನು. ವಿಷ್ಣುಮೂರ್ತಿಯ ಕೊಂಡ ಹಾಯುವ ಮೊದಲಹಂತ ಆರಂಭವಾಗುವುದು. ಪಾತ್ರಿಯು ಮೈ ತುಂಬ ಬಾಳೆ ನಾರನ್ನು ಸುತ್ತಿ, ಸೊಂಟದ ಸುತ್ತ ತೆಂಗಿನಗರಿ ಬಿಗಿದು ಕೊಂಡ ಹಾಯಲು ಸಿದ್ಧನಾಗುವನು. ಇವನಿಗೂ ಮೊದಲು ಬೆಳ್ಚಪ್ಪಾಡರು ಕೆಂಡದ ರಾಶಿ ಮೇಲೆ ಮೂರು ಬಾರಿ ಓಡಾಡುವರು. ಅನಂತರ ವಿಷ್ಣುವೇಷದ ಪಾತ್ರಿ ಕೆಂಡದ ಮೇಲೆ ಪದೇ ಪದೇ ಬೀಳುವನು. ಈತ ಹೀಗೆ ಬೀಳುತ್ತಿದ್ದಂತೆ ಸಹಾಯಕರಿಬ್ಬರು ಸೊಂಟಕ್ಕೆ ಕಟ್ಟಿರುವ ತೆಂಗಿನ ಗರಿಗಳನ್ನು ಹಿಡಿದು ಎಳೆಯುವರು. ಈ ಕ್ರಿಯೆ ನಿರಂತರವಾಗಿ ಬೆಳಗಿನವರೆಗೂ ನಡೆಯುತ್ತದೆ. ಅನಂತರ ಒತ್ತೆಕೋಲಕ್ಕೆ ಹರಕೆಯಾಗಿ ತಂದ ಕೋಳಿಗಳನ್ನು ಬಲಿ ಕೊಡುವರು. ಈ ಸಂದರ್ಭದಲ್ಲಿ ಭಕ್ತಾದಿಗಳು ಪಾತ್ರಿಯೊಡನೆ ಭವಿಷ್ಯ ಅಥವಾ ಕಣಿ ಕೇಳುವುದೂ ಉಂಟು. ಅನಂತರ ವೇಷಧಾರಿ ಭೂತದ ಕಲ್ಲು ಇರುವಲ್ಲಿಗೆ ಹೋಗಿ ದೈವಕ್ಕೆ ಪ್ರಾರ್ಥನೆ ಸಲ್ಲಿಸುವಲ್ಲಿಗೆ ಕೋಲದ ಆಚರಣೆ ಮುಗಿಯುತ್ತದೆ. (ಎಂ.ಆರ್‌ಇ.)

**ಒನಕೆವಾಡು** : ಒರಳಲ್ಲಿ ಬತ್ತವನ್ನೋ ಇತರ ಧಾನ್ಯವನ್ನೋ ಹಾಕಿ ಒನಕೆಯಿಂದ ಕುಟ್ಟುವಾಗ ಹಾಡುಗಳನ್ನು ಹಾಡುವ ಪದ್ಧತಿ ಕರ್ನಾಟಕದಲ್ಲಿ ಉಂಟು. ಈ ಸಂಪ್ರದಾಯ ಪ್ರಾಚೀನ ಎಂಬುದಕ್ಕೆ ಶಾಸನ ಹಾಗೂ ಕಾವ್ಯಾಧಾರಗಳಿವೆ. ಗಂಗರ ದೊರೆ ಶಿವಮಾರನ (8ನೆಯ ಶತಮಾನ) ಗಜಾಷ್ಟಕ ಕೃತಿ ಒನಕೆವಾಡಾಗುವಷ್ಟು ಜನಪ್ರಿಯವಾಗಿತ್ತೆಂದು ಶಾಸನವೊಂದರಲ್ಲಿ ಹೇಳಿದೆ. ಸೋಮೇಶ್ವರ ಚಕ್ರವರ್ತಿಯ ಮಾನಸೋಲ್ಲಾಸದಲ್ಲಿ (ಅಭಿಲಷಿತಾರ್ಥ ಚಿಂತಾಮಣಿ) ಧಾನ್ಯವನ್ನು ಕುಟ್ಟುವಾಗ ತ್ರಿಪದಿಗಳನ್ನು ಹಾಡಬೇಕು ಎಂಬ ಸೂಚನೆಯಿದೆ. ನೇಮಿಚಂದ್ರ ತನ್ನ ಲೀಲಾವತಿ ಕಾವ್ಯದಲ್ಲಿ ವೇಶ್ಯೆಯರು ಒರಳಲ್ಲಿ ಅಕ್ಕಿಯನ್ನು ಕುಟ್ಟುತ್ತ ಸೂಳೆಸಿದ್ಧಾಂತವನ್ನು ಒನಕೆವಾಡಾಗಿ ಹಾಡುತ್ತಿದ್ದರೆಂದು ತ್ರಿಪದಿಗಳ ಒಂದು ಗುಚ್ಛವನ್ನು ಕೊಡುತ್ತಾನೆ. ಇದರಿಂದ ಒನಕೆವಾಡುಗಳು ತ್ರಿಪದಿ ರೂಪದಲ್ಲಿರುತ್ತಿದ್ದವೆಂದು ತಿಳಿಯುತ್ತದೆ.

ಒನಕೆವಾಡು ಶೃಂಗಾರದ ಹಾಡುಗಳಿಂದ ಮತ್ತು ಜನಸಾಮಾನ್ಯರ ಲೋಕಾನುಭವಗಳಿಂದ ಅಥವಾ ಸಿರಿಯಾಳದ ಕಥೆಯಂಥ ಕಥೆಗಳಿಂದ ಕೂಡಿದ್ದಿರಬಹುದು.

ಎಲ್.ಆರ್.ಹೆಗಡೆ ಅವರು ಸಂಕಲಿಸಿರುವ ಸುವ್ವೀ ಸುವ್ವೀ ಸುವ್ವಾಲೆ ಸಂಕಲನದಲ್ಲಿ ಒಂದು ಕಥನಕವನ ಈ ರೀತಿ ಇದೆ.

ಒಂದುಬ್ಬೆ ಕುಟುವಾsಗ ಒಬ್ಬಣ್ಣನುಣುಬಂದೊ
ಒಬ್ಬಾಳಿಗುಬ್ಬೇs ನುರಿಯಾsವೋ|| ಅಣ್ಣಯ್ಯs
ಎಬ್ಬೀಸು ನಿನ್ನಾs ಮಡದೀsಯ||
ಸುವ್ವೀs ಸುವ್ವೀs ಸುವ್ವಾಲs||

ಇಂಥ ಪದ್ಯಗಳಲ್ಲಿ ಪಲ್ಲವಿಯಂತೆ ಕಾಣಿಸಿಕೊಳ್ಳುವ ಕೊನೆಯ ಸಾಲನ್ನು ಬಿಟ್ಟರೆ ಮೇಲಿನ ಒನಕೆವಾಡು ತ್ರಿಪದಿಯೇ ಆಗಿದೆ. (ಎಂ.ಪಿ.)

# ಓ

**ಓದುವಗಿರಿಯ** : ಸು.1525. ವೀರಶೈವ ಕವಿ. ಹರಿಶ್ಚಂದ್ರಸಾಂಗತ್ಯ ಎಂಬ ಕಾವ್ಯದ ಕರ್ತೃ. ಇವನ ಗುರು ಕಂತೆಯ ದೇವ. ತಂದೆ ಕರಿಯ ಸೋಮನಪ್ಪ. ಕವಿ ತನ್ನನ್ನು ಗಿರಿಯ, ಓದುವ ಗಿರಿಯ ಎಂದು ಕರೆದುಕೊಂಡಿದ್ದಾನೆ. ಶ್ರೀಗಿರಿಯಮಲ್ಲೇಶನ ಚರಣಕಮಲಮಧುಕರ, ವರಕವಿಶರಧಿಚಂದ್ರಮ ಎಂದು ವಿಶ್ಲೇಷಿಸಿಕೊಂಡಿರುವುದರಿಂದ ಶ್ರೀಗಿರಿಯಮಲ್ಲೇಶ ಕವಿಯ ಇಷ್ಟದೈವ ಎಂದು ತೋರುತ್ತದೆ. ಸಾನಂದಗಣೇಶಸಾಂಗತ್ಯ ಈತನ ಇನ್ನೊಂದು ಕೃತಿ. ಇದರಲ್ಲಿ ಬರುವ ಹರಿಣಪುರದ ಸಿಂಹಾಸನಾಧೀಶ್ವರ ಗುರುಕೆಂಪನಂಜೇಶನ ಕರಜಾತ ನಂಜಯ್ಯ ಬರೆಸಿಹ ಹರಿಶ್ಚಂದ್ರಚರಿತೆ ಸಾನಂದ ಕೃತಿಯನು ಎಂಬ ಪದ್ಯದಿಂದ ಹರಿಣಪುರ ಸಿಂಹಾಸನಾಧೀಶ್ವರ ಗುರುಕೆಂಪನಂಜೇಶನ ಕರಜಾತ ನಂಜಯ್ಯ ಈ ಎರಡೂ ಕೃತಿಗಳನ್ನು ಬರೆಸಿದಂತೆ ವ್ಯಕ್ತವಾಗುತ್ತದೆ. ಹರಿಶ್ಚಂದ್ರ ಸಾಂಗತ್ಯದಲ್ಲಿ ಧರೆಯೊಳಧಿಕಪುಷ್ಪಾಪುರದೊಳೆಸೆವ ಎಂಬ ಮಾತು ಬಂದಿದೆ. ಈ

ಅಧಿಕಪುಸ್ತಾಪುರವೆಂಬುದು ಈಗಿನ ದೊಡ್ಡಬಳ್ಳಾಪುರದ ಪರ್ಯಾಯನಾಮವಾದುದರಿಂದ ಕವಿ ಇದೇ ಊರಿನವನಾಗಿರಬಹುದು. ಈತ ಭಕ್ತಕವಿ, ಪೂರ್ವ ಕವಿಗಳಲ್ಲಿ ಬಾಣ, ಮಯೂರ, ಉದ್ಭಟ, ಕಾಳಿದಾಸ, ಹಂಪೆಯ ಹರೀಶ್ವರ, ಮಲುಹಣ, ರಾಘವಾಂಕ, ಹಲಾಯುಧ ಇವರನ್ನು ಸ್ಮರಿಸಿದ್ದಾನೆ.

ಹರಿಶ್ಚಂದ್ರಸಾಂಗತ್ಯ ಸಾಂಗತ್ಯದಲ್ಲಿ ರಚಿತವಾಗಿದೆ. ಇದರಲ್ಲಿ 6 ಸಂಧಿಗಳೂ 441 ಪದ್ಯಗಳೂ ಇವೆ. ಹರಿಶ್ಚಂದ್ರನ ಕಥೆ ಕಾವ್ಯವಸ್ತು. ಈ ಕೃತಿಯ ಹೆಚ್ಚಿನ ಪ್ರತಿಗಳು ಅಲಭ್ಯವಾದುದರಿಂದ ಇದರ ಬಗೆಗೆ ಹೆಚ್ಚಿನ ಮಾಹಿತಿಗಳು ದೊರಕುವುದಿಲ್ಲ. ಕಾವ್ಯದ ಆದಿಯಲ್ಲಿ ರಾಘವಾಂಕನನ್ನು ಸ್ತುತಿಸಿರುವುದರಿಂದ ಈತ ತನ್ನ ಕೃತಿಯನ್ನು ರಚಿಸಿಲು ಹರಿಶ್ಚಂದ್ರಕಾವ್ಯವನ್ನು ಆಧರಿಸಿರಬಹುದೆಂದು ಊಹಿಸಲಾಗಿದೆ.

ಸಾನಂದಗಣೇಶಸಾಂಗತ್ಯ ಸಾಂಗತ್ಯದಲ್ಲಿದ್ದು ಇದರಲ್ಲಿ 6 ಸಂಧಿಗಳೂ 432 ಪದ್ಯಗಳೂ ಇವೆ. ಸಾನಂದನೆಂಬ ಮುನಿ ನಾರಕಿಗಳನ್ನು ಉದ್ಧರಿಸಿದ ಕಥೆ ಇದರ ಕಥಾವಸ್ತು. ಕಾವ್ಯದಲ್ಲಿ ಹದಿನೆಂಟು ವರ್ಣನೆಗಳೂ ನರಕಜೀವಿಗಳಿಗೆ ದೊರೆಯುವ ಹಿಂಸೆ, ಪುಣ್ಯಜೀವಿಗಳಿಗೆ ದೊರೆಯುವ ಉಪಚಾರ, ಭೋಗ, ಕೈಲಾಸಲೋಕ ಮೊದಲಾದವುಗಳ ವರ್ಣನೆಗಳೂ ಅಡಕವಾಗಿವೆ. ಕೆಲವು ಶಿವಶರಣರ ಕಥಾನಕಗಳ ಉಲ್ಲೇಖಗಳೂ ಇವೆ. ಸಾನಂದನ ಕಥೆ ಪುರಾಣೋಕ್ತ, ಸಂಸ್ಕೃತದಲ್ಲಿ ರಚಿತ ಎಂಬ ಪ್ರತೀತಿ ಇದ್ದರೂ ಇಲ್ಲಿ ಅದರ ಸುಳಿವೂ ಸಿಕ್ಕುವುದಿಲ್ಲ. ಕೆಲವು ವರ್ಣನೆಗಳು ಚೆನ್ನಾಗಿವೆ. (ಆರ್.ಎನ್.ವಿ.)

**ಓಬವ್ವೆ** : ಶತ್ರುಗಳೊಡನೆ ಕಾದು ಚಿತ್ರದುರ್ಗವನ್ನು ರಕ್ಷಿಸಿದ ವೀರ ಮಹಿಳೆ. ಚಿತ್ರದುರ್ಗದ ಕೊನೆಯ ಪಾಳೆಯಗಾರ ಮದಕರಿನಾಯಕನಿಗೂ (1753-1778) ಹೈದರನಿಗೂ ಆಗಾಗ ಕಾಳಗ ನಡೆದು ಅನೇಕ ಸಾರಿ ಹೈದರ್ ಹಿಮ್ಮೆಟ್ಟಿದ್ದ. ಕೋಟೆಯನ್ನು ವಶಪಡಿಸಿಕೊಳ್ಳಲು ತನ್ನ ಬೇಹುಗಾರರು ತಂದ ಸುದ್ದಿಯಂತೆ ಹೈದರ್ ತನ್ನ ಸೈನಿಕರನ್ನು ಮೊಸರು ಮಾರುವವಳು ನುಸುಳಿ ಹೋದ ಕಳ್ಳಗಂಡಿಯ ಮೂಲಕ ಒಳಗೆ ನುಗ್ಗಿಸಲು ಪ್ರಯತ್ನಿಸಿದ. ಕಾವಲುಗಾರನೊಬ್ಬನ ಹೆಂಡತಿಯಾದ ಓಬವ್ವೆ ಕಳ್ಳಗಂಡಿಯ ಹತ್ತಿರದ ಕೊಳಕ್ಕೆ ನೀರು ತರಲು ಬಂದಾಗ ಶತ್ರುಗಳ ಸುಳಿವು ತಿಳಿದು, ಕೈಯಲ್ಲಿ ಒನಕೆ ಹಿಡಿದು ನುಸುಳಿ ಬಂದ ಶತ್ರುಸೈನಿಕರ ತಲೆಯನ್ನು ಚಚ್ಚಿ ಹಾಕುತ್ತಿದ್ದಳು. ಹೆಂಡತಿಯನ್ನು ಹುಡುಕಿಕೊಂಡು ಬಂದ ಕಾವಲುಗಾರ ಇದನ್ನು ಕಂಡ, ಕಹಳೆಯನ್ನು ಊದಿ ಕೋಟೆಯ ಸೈನಿಕರನ್ನು ಎಚ್ಚರಿಸಿದ. ಅಷ್ಟರಲ್ಲಿ ಹೈದರ್ ಕಡೆಯ ಸೈನಿಕನೊಬ್ಬ ಓಬವ್ವೆಯನ್ನು ತನ್ನ ಕತ್ತಿಯಿಂದ ಇರಿದ. ಚಿತ್ರದುರ್ಗದ ಸೈನಿಕರ ಹೊಡೆತ ತಾಳಲಾರದೆ ಹೈದರ್ ಸೈನಿಕರು ಓಡಿಹೋಗಬೇಕಾಯಿತು. ಓಬವ್ವೆ ತನ್ನ ಪ್ರಾಣವನ್ನು ತೆತ್ತು ಚಿತ್ರದುರ್ಗದ ಸ್ವಾತಂತ್ರ್ಯವನ್ನು ಕಾಪಾಡಿ ಅಮರಳಾದಳು. ಈ ಕಥೆಯಲ್ಲಿ ಐತಿಹಾಸಿಕತೆಯೊಡನೆ ಐತಿಹ್ಯವೂ ಸೇರ್ಪಡೆಗೊಂಡಿದೆ. ಕರ್ನಾಟಕದಲ್ಲಿ ಓಬವ್ವೆಯನ್ನು ಕುರಿತಾದ ಅನೇಕ ಜನಪದಕಥೆ, ಕವನಗಳು ಪ್ರಚಾರದಲ್ಲಿವೆ. (ಸಿ.ಕೆ.ವೈ.ಡಿ.)

**ಓಲೆ ಗ್ರಂಥಗಳು** : ತಾಳೆಯ ಮರದ ಗರಿಗಳನ್ನು ಹದಗೊಳಿಸಿ, ಅವುಗಳಲ್ಲಿ ಅಕ್ಷರಗಳನ್ನು ಕೊರೆದು ಸಿದ್ಧಪಡಿಸಿದ ಪುಸ್ತಕಗಳು. ಕಾಗದ ದೊರೆಯದಿದ್ದ ಪ್ರಾಚೀನ ಯುಗದ ಜ್ಞಾನ ತಲೆಮಾರಿನಿಂದ ತಲೆಮಾರಿಗೆ ಉಳಿದು ಬಂದಿರುವುದು ಇಂಥ ಗ್ರಂಥಗಳಿಂದಲೇ.

ಓಲೆಗರಿಗಳನ್ನು ಬರವಣಿಗೆಗೆ ಉಪಯೋಗಿಸುತ್ತಿದ್ದುದನ್ನು ಪ್ಲಿನೀ (23-79) ಎಂಬ ಪ್ರಕೃತಿಶಾಸ್ತ್ರಜ್ಞ ಉಲ್ಲೇಖಿಸಿದ್ದಾನೆ. ಭಾರತ ದೇಶವನ್ನು ಸಂದರ್ಶಿಸಿದ ಯುವಾನ್ ಚಾಂಗ್ (629-645) ಕೊಂಕಣಪುರದ ಉತ್ತರಕ್ಕೆ ತಾಳೆಮರಗಳ ಕಾಡಿರುವುದನ್ನೂ ಅವುಗಳ ಎಲೆಗಳನ್ನು ಜನ ಬರವಣಿಗೆಗಾಗಿ ಉಪಯೋಗಿಸುವುದನ್ನೂ ತಿಳಿಸಿದ್ದಾನೆ. ಸು.1030ರಲ್ಲಿ ಭಾರತಕ್ಕೆ ಬಂದಿದ್ದ ಆಲ್‌ಬೆರೂನಿ ಎಂಬ ಪ್ರವಾಸಿ ತಾಳೆ ಮತ್ತು ಭೂರ್ಜಪತ್ರಗಳನ್ನು ನೋಡಿದ್ದುದಾಗಿ ತಿಳಿಸಿದ್ದಾನೆ. ಖರ್ಜೂರ ಅಥವಾ ಉತ್ತುತ್ತೆ, ತೆಂಗಿನ ಮರಗಳನ್ನು ಹೋಲುವ ಒಂದು ಜಾತಿಯ ಮರಗಳು ದಕ್ಷಿಣ ದೇಶದಲ್ಲಿ ಬೆಳೆಯುತ್ತವೆ. ಅವುಗಳ ಹಣ್ಣುಗಳನ್ನು ತಿನ್ನುತ್ತಾರೆ. ಅವುಗಳ ಎಲೆಗಳು ಒಂದು ಗಜ ಉದ್ದವಾಗಿಯೂ ಮೂರು ಕೈ ಬೆರಳುಗಳಷ್ಟು ಅಗಲವಾಗಿಯೂ ಇದೆ. ಜನ ಇವನ್ನು ತಾರೀ (ತಾಲ ಅಥವಾ ತಾರ) ಎಂದು ಕರೆಯುವರೆಂದೂ ಬರೆವಣಿಗೆಗೆ ಉಪಯೋಗಿಸುವರೆಂದೂ ಬರೆದಾದ ಮೇಲೆ ಎಲ್ಲ ಎಲೆಗಳನ್ನೂ ಅವುಗಳ ಮಧ್ಯದಲ್ಲಿ ಮಾಡಿದ ರಂಧ್ರದ ಮೂಲಕ ದಾರವನ್ನು ಹಾಕಿ ಒಟ್ಟಿಗೆ ಕಟ್ಟಿಡುವರೆಂದೂ ತಿಳಿಸಿದ್ದಾನೆ. ಸು.1441ರಲ್ಲಿ ಬಂದಿದ್ದ ಅಬ್ದುಲ್ ರಜಾಕ್ ಎಂಬ ಪ್ರವಾಸಿ ವಿಜಯನಗರದಲ್ಲಿ ಓಲೆಗ್ರಂಥಗಳ ಬಳಕೆ ಇದ್ದುದನ್ನು ತಿಳಿಸಿ ಈ ಓಲೆಗರಿಗಳಲ್ಲಿ ತಾಲ ಮತ್ತು ಶ್ರೀತಾಲ ಎಂಬ ಎರಡು ಬಗೆ ಇರುವುದನ್ನು ಗುರುತಿಸಿದ್ದಾನೆ. ತಾಲ ಎಲೆಯ ಮೇಲೆ ಕಬ್ಬಿಣದ ಕಂಠದಿಂದ ಬರೆಯುತ್ತಿದ್ದರೆಂದೂ ಶ್ರೀತಾಲದ ಎಲೆಯನ್ನು ಮೊದಲು ಕಪ್ಪುಮಾಡಿ, ಅದರ ಮೇಲೆ ಲೇಖನಿಯಂಥ, ಮೃದುವಾದ ಚೂಪು ಕಲ್ಲಿನಿಂದ ಬರೆಯುತ್ತಿದ್ದರೆಂದೂ ಆತ ತಿಳಿಸಿದ್ದಾನೆ. ಈ ರೀತಿ ಬರೆಯುತ್ತಿದ್ದುದನ್ನು ತಾನು ಕನ್ನಡ ಜಿಲ್ಲೆಗಳಲ್ಲಿಯೂ ದಕ್ಷಿಣ ಭಾರತದಲ್ಲಿಯೂ ಕಂಡುದಾಗಿ ಎ.ಹ್ಯಾಮಿಲ್ಟನ್ ಎಂಬಾತ ಹೇಳಿದ್ದಾನೆ. ರಾಜೇಂದ್ರಮಿತ್ರ ಅವರು ಬಂಗಾಲದಲ್ಲಿ ಚಂಡಿ ಗ್ರಂಥ ಓಲೆಯಲ್ಲಿರುವುದಾಗಿ ತಿಳಿಸಿದ್ದಾರೆ.




ಎಡದಿಂದ ಬಲಕ್ಕೆ ೧, ೩, ೪ ಮೂರು ಬಗೆಯ ಕಂಠಗಳು. ಎರಡನೆಯದು ಕಂಠದ ಒರೆ, ಆನೆಯದು ಒರೆಯಲ್ಲಿ ಇಟ್ಟ ಕಂಠ

ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿಗಳ ಕೋಶಾಗಾರದಲ್ಲಿ ಕಾಲ ಉಲ್ಲೇಖವಾಗಿರುವ ಪುರಾತನ ಗ್ರಂಥವೆಂದರೆ ಸು.1235; ಗುಣವರ್ಮನ ಪುಷ್ಪದಂತ ಪುರಾಣವೆಂಬ ಚಂಪೂಗ್ರಂಥ. ಈ ಪ್ರತಿಯ ಕಾಲ 1436. ಇದಕ್ಕಿಂತಲೂ ಹಿಂದಿನದಾದ ಓಲೆಗ್ರಂಥವೆಂದರೆ ಶ್ರವಣಬೆಳಗೊಳದ ಜೈನಮಠದಲ್ಲಿರುವ ಪಂಪನ ಆದಿಪುರಾಣ.

ಪ್ರತಿಯ ಕಾಲ 1379. ಕಾಲ ನಮೂದಾಗಿರುವ ಮತ್ತೊಂದು ಮುಖ್ಯ ಪ್ರತಿಯೆಂದರೆ 1554ರಲ್ಲಿ ನಕಲಾಗಿರುವ ಗದುಗಿನ ನಾರಣಪ್ಪನ ಮಹಾಭಾರತದ ಪ್ರತಿ. ಇದರ ಪ್ರತಿ ಪತ್ರದ ಎರಡು ರಂಧ್ರಗಳಿಗೂ ಬೆಳ್ಳಿಯ ಉಂಗುರಗಳನ್ನು ಅಳವಡಿಸಿರುವುದು ವಿಶೇಷ ಸಂಗತಿಯಾಗಿದೆ.

ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿರುವ ದೇವೀಸ್ತೋತ್ರ ಮತ್ತು ರಾಮಾಯಣದ ಭಾಗವಾದ ಸುಂದರಕಾಂಡ ಓಲೆಗ್ರಂಥಗಳು ಸೂಕ್ಷ್ಮಲಿಪಿಗೆ ಪ್ರಸಿದ್ಧವಾಗಿವೆ. ದೇವೀಸ್ತೋತ್ರದಲ್ಲಿ ಒಟ್ಟು 90 ಪತ್ರಗಳಿದ್ದು ಪ್ರತಿ ಪತ್ರವೂ $3^{1}/_{4}$ x $1^{1}/_{2}$ ಅಂಗುಲ. ಈ ಉದ್ದದಲ್ಲಿ ೨೫ ಅಕ್ಷರಗಳನ್ನು ಕೊರೆದಿದ್ದಾರೆ. ಅಗಲದಲ್ಲಿ 18-23 ಪಂಕ್ತಿಗಳಿವೆ. ಇದು ತೆಲುಗು ಲಿಪಿಯಲ್ಲಿದೆ. ಸುಂದರಕಾಂಡ ಗ್ರಂಥಾಕ್ಷರದಲ್ಲಿದೆ. ಇದರ ಪ್ರತಿಪತ್ರವೂ $4^{1}/_{2}$ x $1^{3}/_{4}$ ಅಂಗುಲ ಅಳತೆಯುಳ್ಳದ್ದಾದರೂ ಬರೆವಣಿಗೆಯ ಭಾಗದ ಅಳತೆ $3^{3}/_{4}$ x $1^{1}/_{2}$ ಅಂಗುಲ. ಈ ಉದ್ದದಲ್ಲಿ 47 ಅಕ್ಷರಗಳಿದ್ದು, ಅಗಲದಲ್ಲಿ 21 ರಿಂದ 25 ಸಾಲುಗಳಿವೆ. ಇವುಗಳ ಜೊತೆಗೆ ಇದೇ ಮಾದರಿಯಲ್ಲಿ ಬರೆದಿರುವ, ಹೆಸರು ತಿಳಿಯದ ಯಾವುದೋ ಗ್ರಂಥದ ಒಂದು ಪತ್ರದ ಅಳತೆ 18 x $1^{1}/_{4}$ ಅಂಗುಲ, $1^{1}/_{4}$ ಅಂಗುಲ ಅಗಲದಲ್ಲಿ 22 ಪಂಕ್ತಿಗಳಿದ್ದು 18 ಅಂಗುಲ ಅಗಲದಲ್ಲಿ 420 ಅಕ್ಷರಗಳಿವೆ ಎಂದಾಗ ಬೆರಗು ಹುಟ್ಟಿ ಕುತೂಹಲ ಕೆರಳುವುದು ಸಹಜವಾಗಿದೆ.

ತಾಲ ಮತ್ತು ಶ್ರೀತಾಲಗಳಲ್ಲಿ ತಾಳೆಗರಿಗಳನ್ನೇ ಹೆಚ್ಚಾಗಿ ಉಪಯೋಗಿಸಿರುವುದು ಕಂಡುಬರುತ್ತದೆ. ಏಕೆಂದರೆ ಇದು ಸ್ವಲ್ಪ ಮಂದವಾಗಿ ಅಗಲವಾದ ಕಬ್ಬಿಣದ ಸಲಾಕೆಯಂಥ ಕಂಠದಿಂದ ಕೊರೆಯಲು ಅನುಕೂಲವಾಗಿತ್ತು. ಒಂದು ಸಾರಿ ಕೊರೆದ ಅಕ್ಷರಗಳು ಮತ್ತೆ ಅಳಿಸಿಹೋಗುತ್ತವೆಂಬ ಹೆದರಿಕೆ ಇರಲಿಲ್ಲ. ಕೊರೆದ ಅಕ್ಷರಗಳ ಮೇಲೆ ಕಪ್ಪುಬಣ್ಣದ ಪುಡಿಯನ್ನು ಹಚ್ಚಿದರೆ ಕೊರೆದ ಭಾಗದಲ್ಲಿ ಆ ಬಣ್ಣ ಸೇರಿ ಅಕ್ಷರಗಳು ಸ್ಪಷ್ಟವಾಗಿ ಕಾಣುತ್ತಿದ್ದುವು. ಈ ಕಪ್ಪುಬಣ್ಣ ಮಾಸಿ ಹೋದಾಗ ಮತ್ತೆ ಆ ಬಣ್ಣವನ್ನೇ ಉಪಯೋಗಿಸಿ ಚೆನ್ನಾಗಿ ಕಾಣುವಂತೆ ಮಾಡಬಹುದಾಗಿತ್ತು.

ತಾಳೆ ಎಲೆಗಳನ್ನು ಒಣಗಿಸಿ ಬೇಯಿಸಿ ಅಥವಾ ನೀರಿನಲ್ಲಿ ನೆನೆಸಿ ಮತ್ತೆ ಒಣಗಿಸಿ ಬೇಕಾದ ಅಳತೆಗೆ ಕತ್ತರಿಸಿ ಬರೆಯಲು ಉಪಯೋಗಿಸುತ್ತಿದ್ದರು ಎಂಬುದಾಗಿ ರಾಜೇಂದ್ರಲಾಲ್ ಮಿತ್ರ ಅವರು ತಿಳಿಸುತ್ತಾರೆ. ಗಿಡದಿಂದ ಎಲೆಯ ಮೋತೆ ಹೊರಹೊರಟು ಇನ್ನೇನು ಬಿಚ್ಚಿ ಹರಡುತ್ತದೆ ಎನ್ನುವಷ್ಟರಲ್ಲಿ ಹಾಡೆಯನ್ನು ಕತ್ತರಿಸಿ ತಂದು, ಕೊನೆಯಪಕ್ಷ ಏಳು ದಿನಗಳವರೆಗಾದರೂ ಬಿಸಿಲಿನಲ್ಲಿ ಒಣಗಿಸುತ್ತಿದ್ದರು. ಅನಂತರ ಮೂರು ತಿಂಗಳವರೆಗಾದರೂ ನೆಲದಲ್ಲಿ ಹೂಳಿ, ತೆಗೆದು ಶುದ್ಧಗೊಳಿಸಿ, ಬೇಕಾದ ಅಳತೆಗೆ ಎಲೆಗಳನ್ನು ಕತ್ತರಿಸಿ ಅಡಿಗೆಮನೆಯ ಅಟ್ಟಗಳಲ್ಲಿಡುತ್ತಿದ್ದರು. ಅಡಿಗೆಮನೆಯ ಹೊಗೆಯಿಂದ ಅವು ಹದಗೊಳ್ಳುತ್ತಿದ್ದುವು. ಹೀಗೆ ಹದಗೊಂಡವನ್ನು ತಮಗೆ ಬೇಕಾದಾಗ ತೆಗೆದು ಉಪಯೋಗಿಸುತ್ತಿದ್ದರು ಎಂಬುದಾಗಿ ಬಿ. ಭಟ್ಟಾಚಾರ್ಯರು ತಿಳಿಸುತ್ತಾರೆ.

ತಾಳೆಯ ಗರಿಗಳನ್ನು ಹಸಿ ಇರುವಾಗ ಕುದಿನೀರಿನಲ್ಲಿ ಬೇಯಿಸಿ ನೆರಳಲ್ಲಿ ಒಣಗಿಸಿ ನುಣುಪಾದ ಗಾರೆಯ ಕಲ್ಲಿನಿಂದ ಉಜ್ಜಿ ಮೃದುಗೊಳಿಸುತ್ತಾರೆ. ಆಗ ಅದರ ಎರಡು ಪಕ್ಕಗಳೂ ಸಮತಲವಾಗುತ್ತವೆ. ಬರೆಹಕ್ಕೆ ಯೋಗ್ಯವಾಗುತ್ತವೆ ಎಂದು ಡಿ.ಎಲ್. ನರಸಿಂಹಾಚಾರ್ ತಿಳಿಸಿದ್ದಾರೆ.

ಹೀಗೆ ಓಲೆಗರಿಗಳನ್ನು ವಿವಿಧ ರೀತಿಯಲ್ಲಿ ಹದಗೊಳಿಸಿ ಬರೆವಣಿಗೆಗೆ ಉಪಯೋಗಿಸುವಾಗ ವಿಷಯದ ಜೊತೆಗೆ ವಿಷಯನಿರೂಪಣೆಗೆ ಸಹಾಯಕವಾಗಿ ಕೆಲವು ಪ್ರತಿಗಳಲ್ಲಿ ಅಲ್ಲಲ್ಲಿಯೇ ಚಿತ್ರಗಳನ್ನೂ ಕೊರೆದಿದ್ದಾರೆ. ಇಂಥ ಚಿತ್ರಗಳನ್ನು ಮೂಡಬಿದರೆ ಮಠದಲ್ಲಿರುವ ಅರ್ಧಮಾಗಧಿ ಭಾಷೆಯ ಕನ್ನಡ ಶಾಸನ ಲಿಪಿಯ ಜೈನ ಧವಳಗ್ರಂಥದಲ್ಲಿಯೂ ನೇಮಿಚಂದ್ರನ ನೇಮಿನಾಥಪುರಾಣ ಹಸ್ತಪ್ರತಿಯಲ್ಲಿಯೂ ಕಾಣಬಹುದಾಗಿದೆ.

ಈ ಓಲೆಗ್ರಂಥಗಳಲ್ಲಿ ವಿವಿಧ ರೀತಿಯ ಬರೆವಣಿಗೆಯನ್ನೂ ಒಂದೇ ಕೃತಿಯ ಹಲವಾರು ಪ್ರತಿಗಳನ್ನೂ ನಾವು ಕಾಣುತ್ತೇವೆ.



ಓಲೆಗ್ರಂಥದ ಒಂದು ಮಾದರಿ

ಶ್ರೀತಾಲ ಎಲೆ ಬಹಳ ತೆಳುವಾಗಿರುವುದರಿಂದ ಕೊರೆಯಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಇದು ನಯವಾಗಿ ಮೃದುವಾಗಿದ್ದು ಮಸಿಯನ್ನು ಸುಲಭವಾಗಿ ಹೀರಬಲ್ಲುದಾಗಿದ್ದಿತು. ಬರೆದಾಗ ಚೆನ್ನಾಗಿ ಕಂಡರೂ ಯಾವುದೇ ಕಾರಣದಿಂದ ಅಳಿಸಿಹೋದಾಗ ಅದನ್ನು ಮತ್ತೆ ತುಂಬುವುದು ಸಮಸ್ಯೆಯಾಗಿ ಪರಿಣಮಿಸುತ್ತಿತ್ತು. ಅಂತಹದೇ ಮತ್ತೊಂದು ಪ್ರತಿ ದೊರೆಯದೆ ಅದನ್ನು ತುಂಬುವಂತಿರಲಿಲ್ಲ. ಆದ್ದರಿಂದಲೇ ಶ್ರೀತಾಲಕ್ಕಿಂತ ಹೆಚ್ಚಾಗಿ ತಾಳೆಗರಿಯನ್ನೇ ಎಲ್ಲೆಡೆಯೂ ಬಳಸಲಾಗಿದೆ.

ಮೂಲಗ್ರಂಥಗಳನ್ನು ನಕಲುಮಾಡಿ ಜನರು ಉಪಯೋಗಿಸುತ್ತಿದ್ದುದರಿಂದ, ನಮಗೆ ಕೃತಿಕಾರನೇ ಬರೆದ ಪ್ರತಿಗಳು ದೊರೆಯುವುದು ದುರ್ಲಭ. ದೊರೆಯುವ ಪ್ರತಿಗಳೆಲ್ಲವೂ ನಕಲುಗಳೇ. ಇಂಥ ನಕಲುಗಳನ್ನು ಆಯಾ ಭಾಷಾಗ್ರಂಥಗಳಲ್ಲಿ ಆಯಾ ಭಾಷಾಲಿಪಿಯನ್ನೇ ಸಾಮಾನ್ಯವಾಗಿ ಉಪಯೋಗಿಸಿದರೂ ಓದುಗರ ಇಚ್ಛೆಗೆ ಅನುಸಾರವಾಗಿ, ಆಯಾ ಪ್ರಾಂತದ ವಿಭಾಗದ ಜನರ ರೂಢಿಗೆ ತಕ್ಕಂತೆ ಕನ್ನಡ, ತಮಿಳು, ತೆಲುಗು, ತುಳು, ತಿಗಳಾರಿ, ನಾಗರಿ, ಗ್ರಂಥ ಮೊದಲಾದ ಹಲವಾರು



ಮಹಾಧವಳದ ಒಂದು ಪತ್ರ

ಲಿಪಿಗಳನ್ನು ಬೇರೆ ಬೇರೆ ಭಾಷಾಗ್ರಂಥಗಳಲ್ಲಿ ಬಳಸಿದ್ದಾರೆ. ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಭಾಷಾಭೂಷಣ ಹಸ್ತಪ್ರತಿ ಈ ಮಾದರಿಗೆ ಅತ್ಯಂತ ಉತ್ತಮ ನಿದರ್ಶನವಾಗಿದೆ. ಇದರಲ್ಲಿ ನೋಡುವುದು ಮಲಯಾಳಂ ಲಿಪಿಯನ್ನು, ಓದುವುದು ಸಂಸ್ಕೃತ ಭಾಷೆಯನ್ನು ತಿಳಿಯುವುದು ಕನ್ನಡ ವ್ಯಾಕರಣವನ್ನು ನಕಲುಮಾಡುವ ವ್ಯಕ್ತಿಗಳು ಬಹುಪ್ರಯಾಸದಿಂದ ಈ ಕೆಲಸ ನಿರ್ವಹಿಸುತ್ತಿದ್ದರು. ಕೆಲವರು ಅದನ್ನೇ ಒಂದು ವೃತ್ತಿಯನ್ನಾಗಿ ಮಾಡಿಕೊಂಡಿದ್ದರು. ನಕಲುಗಳನ್ನೆತ್ತಿದ ಪ್ರತಿಕಾರರು ಪ್ರತಿಗಳ ಕೊನೆಯಲ್ಲಿ ತಂತಮ್ಮ ವಿಳಾಸಗಳನ್ನು ಕೊಡುವುದರ ಜೊತೆಗೆ ಕೆಲವರು ತಿಥಿ ವಾರ ನಕ್ಷತ್ರಗಳನ್ನೂ ಕೊಟ್ಟಿದ್ದಾರೆ. ತಪ್ಪಿದ್ದರೆ ತಿದ್ದಿಕೊಳ್ಳಿರೆಂದು ಪ್ರಾರ್ಥಿಸಿದ್ದಾರೆ.

ರಾಸಾಯನಿಕ ಕ್ರಿಯೆಯಿಂದ ತಯಾರಾದ ಕಾಗದಕ್ಕಿಂತಲೂ ಪ್ರಕೃತಿಸಹಜವಾಗಿ ಬಂದ ಓಲೆಗರಿ ಹೆಚ್ಚು ಬಾಳಿಕೆ ಬರುವಂಥದೂ ಬಹುಬೇಗ ಹುಳುಗಳ ಹೊಡೆತಕ್ಕೆ ಬಲಿಯಾಗದುದೂ ಆದರೂ ಶೀತೋಷ್ಣಗಳಿಂದಲೂ ಹುಳುಗಳ ಕಾಟದಿಂದಲೂ ಹೊರತಾದುದಲ್ಲ. ಆದುದರಿಂದ ಈ ಅಮೂಲ್ಯ ಜ್ಞಾನಸಂಪತ್ತನ್ನು ರಕ್ಷಿಸುವಲ್ಲಿ ಹಲವರು ಹಲವು ಮಾರ್ಗಗಳನ್ನು ಅನುಸರಿಸಿದ್ದಾರೆ. ಕೆಲವರು ಅವನ್ನು ಬಣ್ಣದ ಬಟ್ಟೆಗಳಲ್ಲಿ ಸುತ್ತಿಟ್ಟು ದೂಳು ಮತ್ತು ಹುಳುಗಳಿಂದ ರಕ್ಷಿಸಿದ್ದಾರೆ. ಈ ಬಟ್ಟೆಯಲ್ಲಿ ಕೆಂಪು ಮತ್ತು ಹಳದಿ ಬಣ್ಣದವೂ ರೇಷ್ಮೆ ಬಟ್ಟೆಯೂ ಹುಳುಗಳನ್ನು ದೂರವಿಡಬಲ್ಲ ಶಕ್ತಿಯನ್ನು ಪಡೆದಿವೆಯೆಂದು ತಿಳಿದುಬರುತ್ತದೆ. ಕೆಲವರು ಓಲೆಕಟ್ಟಿನ ಆಕಾರಕ್ಕೆ ತಕ್ಕ ಮರದ ಪೆಟ್ಟಿಗೆಗಳಲ್ಲಿಟ್ಟು ಕಾಪಾಡಿದ್ದಾರೆ. ದಂತದ ಕುಸುರಿ ಕೆಲಸ ಮಾಡಿದ ಮರದ ಪೆಟ್ಟಿಗೆಗಳೂ ಕಂಡುಬರುತ್ತವೆ. ಮತ್ತೆ ಕೆಲವೆಡೆಗಳಲ್ಲಿ ಘೋಡಾವಚ, ಅದಕ್ಕಾಗಿಯೇ ಸಿದ್ಧಪಡಿಸಿದ ಎಣ್ಣೆ ಮೊದಲಾದುವುಗಳನ್ನೂ ಉಪಯೋಗಿಸುತ್ತಿದ್ದಾರೆ. ಇವುಗಳ ಸಂಗ್ರಹ, ಸಂರಕ್ಷಣೆ ಮತ್ತು ಪ್ರಕಟಣೆಗಾಗಿ ಹಲವಾರು ಸಂಸ್ಥೆಗಳು ಸ್ಥಾಪಿತವಾಗಿ ಕೆಲಸಮಾಡುತ್ತಿವೆ. *

# ಔ

**ಔರಾದ :** ಬೀದರ್ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಅದರ ಮುಖ್ಯಸ್ಥಳ. ಈ ತಾಲ್ಲೂಕು ಕರ್ನಾಟಕ ರಾಜ್ಯದ ಅತ್ಯಂತ ಉತ್ತರದ ಗಡಿಯಲ್ಲಿದೆ. ಪಶ್ಚಿಮ ಮತ್ತು ಉತ್ತರದಲ್ಲಿ ಮಹಾರಾಷ್ಟ್ರ, ಪೂರ್ವದಲ್ಲಿ ಆಂಧ್ರ ಪ್ರದೇಶ, ದಕ್ಷಿಣದಲ್ಲಿ ಭಾಲ್ಕಿ ಮತ್ತು ಬೀದರ್ ತಾಲ್ಲೂಕುಗಳು ಸುತ್ತವರಿದಿವೆ. 149 ಗ್ರಾಮಗಳಿವೆ. ತಾಲ್ಲೂಕಿನ ವಿಸ್ತೀರ್ಣ 1228.6ಚ.ಕಿಮೀ. ಜನಸಂಖ್ಯೆ 2,45,099.

ಮಾಂಜರಾ ನದಿ ಈ ತಾಲ್ಲೂಕಿನ ದಕ್ಷಿಣದಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಹರಿದು ತಾಲ್ಲೂಕು ಗಡಿಯಾಗಿ ಔರಾದವನ್ನು ಭಾಲ್ಕಿ ಮತ್ತು ಬೀದರ್ ತಾಲ್ಲೂಕುಗಳಿಂದ ಬೇರ್ಪಡಿಸುತ್ತದೆ. ಬೀದರ್ ಜಿಲ್ಲೆಯ ಇತರ ತಾಲ್ಲೂಕುಗಳಿಗಿಂತ ಈ ತಾಲ್ಲೂಕಿನಲ್ಲಿ ಅರಣ್ಯಪ್ರದೇಶ ಹೆಚ್ಚು. ಈ ತಾಲ್ಲೂಕು ಎರೆಮಣ್ಣಿನಿಂದ ಕೂಡಿದ್ದು ಮಳೆ ಕಡಿಮೆ. ವಾರ್ಷಿಕ ಸರಾಸರಿ 910ಮಿಮೀ. ಜೋಳ, ಹತ್ತಿ, ಕಡಲೆ, ಗೋದಿ, ಸೇಂಗ, ತೊಗರಿ ಮತ್ತು ಉದ್ದು ಇಲ್ಲಿಯ ಬೆಳೆಗಳು. ತಾಲ್ಲೂಕಿನ ದೇವಣಿ ತಳಿಯ ಎತ್ತುಗಳು ಪ್ರಸಿದ್ಧವಾದವು. ತಾಲ್ಲೂಕಿನಲ್ಲಿ ಹತ್ತಿ ಕಾರ್ಖಾನೆಗಳು, ಮರಕೊಯ್ಯುವ ಮತ್ತು ಹೆಂಚಿನ ಕಾರ್ಖಾನೆಗಳು ಇವೆ. ವಿಕಾರಾಬಾದ್ ಪರಭಣಿ ರೈಲುಮಾರ್ಗ ತಾಲ್ಲೂಕಿನ ಪಶ್ಚಿಮದ ಭಾಗಗಳಲ್ಲಿ ಕಮಾಲನಗರದ ಮೂಲಕ ಹಾದುಹೋಗಿದೆ. ಜೊತೆಗೆ ಉತ್ತಮ ರಸ್ತೆಗಳಿವೆ.

ಔರಾದ ಈ ತಾಲ್ಲೂಕು ಮತ್ತು ಹೋಬಳಿ ಕೇಂದ್ರ. ಜನಸಂಖ್ಯೆ 16,189. ಇಲ್ಲಿ ಅಮರೇಶ್ವರನ ದೇವಾಲಯವಿದೆ. ಪ್ರತಿ ವರ್ಷ ಶಿವರಾತ್ರಿಗೆ ಇಲ್ಲಿ ಜಾತ್ರೆ ನಡೆಯುತ್ತದೆ. (ಬಿ.)

# ಕ

**ಕಂಚಲದೇವಿ :** ಕಲ್ಯಾಣಿ ಚಾಳುಕ್ಯ ದೊರೆ ಎರಡನೆಯ ಸೋಮೇಶ್ವರ ಭುವನೈಕಮಲ್ಲನ (1068-1076) ಹಿರಿಯ ಹೆಂಡತಿ. ಪಿರಿಯರಸಿ ಕಂಚಲದೇವಿ ಮೂಲಗುಂದ ನಾಡನ್ನು ಆಳುತ್ತಿದ್ದಳೆಂಬುದಾಗಿ 1072ರ ಗುಡಿಗೇರಿ ಶಾಸನದಿಂದ ತಿಳಿದುಬರುತ್ತದೆ. (ನೋಡಿ : ಸೋಮೇಶ್ವರ[2]) *

**ಕಂಠಸ್ಥ ಸಂಪ್ರದಾಯ :** ಗ್ರಂಥಸ್ಥಮೂಲವನ್ನು ಅವಲಂಬಿಸದೆ ತಲೆ ಮಾರಿನಿಂದ ತಲೆಮಾರಿಗೆ ಕರ್ಣಾಕರ್ಣಿಯಾಗಿ ಭಾಷೆ, ಸಂಗೀತ, ಸಾಹಿತ್ಯ ಮೊದಲಾದ ಎಲ್ಲ ಬಗೆಯ ಜ್ಞಾನವನ್ನೂ ಕಾಪಾಡಿಕೊಂಡು ಬರುವ ಕ್ರಮ. ತಾಯಿಯಿಂದ ಮಗಳಿಗೆ, ತಂದೆಯಿಂದ ಮಗನಿಗೆ, ಗುರುವಿನಿಂದ ಶಿಷ್ಯನಿಗೆ, ಹಿರಿಯ ತಲೆಮಾರಿನಿಂದ ಕಿರಿಯ ತಲೆಮಾರಿಗೆ, ಪೈಕದಿಂದ ಪೈಕಕ್ಕೆ ಈ ಸಂಪ್ರದಾಯದ ಮೂಲಕ ಪರಂಪರಾನುಗತ ಜ್ಞಾನವನ್ನು ಅರ್ಪಿಸುವ ಬಗ್ಗೆ ಮಾನವಕುಲಕ್ಕೆ ಸಹಜವಾಗಿ ಬಂದ ಒಂದು ವರವಾಗಿದೆ. ಪ್ರಾಣಿಕುಲಕ್ಕೂ ಮಾನವಕುಲಕ್ಕೂ ಇರುವ ಮೂಲಭೂತ ಅಂತರವನ್ನು ಇದು ಶ್ರುತಪಡಿಸುತ್ತದೆ. ಓದು, ಬರೆಹ ಬೆಳೆದಂತೆಲ್ಲ ಈ ಸಂಪ್ರದಾಯದೊಂದಿಗೆ ಗ್ರಂಥಸ್ಥ ಸಂಪ್ರದಾಯವೂ ಬೆಳೆದುಬಂದಿತೆಂದು ತೋರುತ್ತದೆ.

ಜಾನಪದ ಸಮಗ್ರ ಸಂಸ್ಕೃತಿಯ ಎರಡು ಅಂಗಗಳೆಂದು ಜಾನಪದ ವಿದ್ವಾಂಸರು ಗುರುತಿಸಿರುವ ಶಿಷ್ಟಸಂಸ್ಕೃತಿ ಹಾಗೂ ಜನಪದ ಸಂಸ್ಕೃತಿಗಳು ಪರಸ್ಪರ ಸ್ವೀಕರಣಕ್ಕೆ ಬದ್ಧವಾಗಿದ್ದರೂ ಎರಡೂ ನಡೆದು ಬಂದಿರುವ ದಾರಿ ಬೇರೆ ಬೇರೆ. ಎರಡರಲ್ಲಿಯೂ ಪರಂಪರೆಯ ಮುದ್ರೆ ಇದ್ದೇ ಇದೆ. ಅದರ ಶಿಷ್ಟಸಂಸ್ಕೃತಿ ಗ್ರಂಥಗಳಿಂದ, ವಿದ್ವಾಂಸರಿಂದ, ಧಾರ್ಮಿಕ ವಿಧಿಗಳಿಂದ ಪರಿಷ್ಕಾರಗೊಂಡದ್ದು, ಗೊತ್ತಾದ ಮೂಲದಿಂದ ಇದು ಶಿಷ್ಟರೂಪದಲ್ಲಿ ಉಳಿದು ಬರುತ್ತದೆ. ಜನಪದ ಸಂಸ್ಕೃತಿ ವ್ಯಾಪಕವಾದುದು, ಕಂಠಸ್ಥಮೂಲದಲ್ಲಿ ಮಾತ್ರ ಉಳಿದು ಬರತಕ್ಕುದು. ಮೊದಲಿನದರಲ್ಲಿ ವ್ಯಷ್ಟಿಯ ಪಾತ್ರ ಹೆಚ್ಚಾದರೆ ಎರಡನೆಯದರಲ್ಲಿ ಸಮಷ್ಟಿಯ ಪಾತ್ರ ಹಿರಿದು.

ಅನಕ್ಷರಸ್ಥ ಸಮಾಜಗಳಲ್ಲಿ ಕಂಠಸ್ಥಸಂಪ್ರದಾಯದ ಪಾತ್ರ ವಿಶಿಷ್ಟವಾದುದು. ಬದುಕಿಗೆ ಬೇಕಾಗುವ ಸಕಲವಿದ್ಯೆ ಹಾಗೂ ವ್ಯವಹಾರಜ್ಞಾನವನ್ನು ಈ ಸಂಪ್ರದಾಯದಿಂದಲೇ ಗ್ರಹಿಸಬೇಕಾಗುತ್ತದೆ. ಮನರಂಜನೆ ಹಾಗೂ ದೈನಂದಿನ ಆವಶ್ಯಕತೆಗಳ ಪೂರೈಕೆಗೆ ಕಂಠಸ್ಥಸಂಪ್ರದಾಯದಲ್ಲಿಯೇ ಬಂದ ಜ್ಞಾನ ನೆರವಾಗುತ್ತದೆ. ಪುರಾಣ, ಐತಿಹ್ಯ, ಕಥೆ, ಗಾದೆ, ಒಗಟು, ಹಾಡು, ಲಾವಣಿ, ಭಾಷೆ, ನಂಬಿಕೆ, ಆಚರಣೆ, ಕಲೆ, ವೈದ್ಯ, ವ್ಯವಸಾಯದ ಕ್ರಮ, ಅಡಿಗೆಗಳ ರೀತಿ, ಬೇಟೆಯಾಡುವ ವಿಧಾನ, ಆಟ, ಮಂತ್ರ, ಮಾಟ ಹೀಗೆ ಎಲ್ಲವೂ ಕೇಳಿ ನೆನಪಿಡುವುದರ ಮೂಲಕ, ನೋಡಿ ಅನುಕರಿಸುವುದರ ಮೂಲಕ ಹಿರಿಯ ತಲೆಮಾರಿನಿಂದ, ಕಿರಿಯ ತಲೆಮಾರಿಗೆ ಹರಿದು ಬರುತ್ತವೆ. ನೋಡಿ ಅನುಕರಿಸುವ ಕೆಲವು ವಿಷಯಗಳನ್ನು ಬಿಟ್ಟರೆ ಮಿಕ್ಕ ಎಲ್ಲ ವಿಷಯಗಳು ಕಂಠಸ್ಥ ಮೂಲದಲ್ಲಿಯೇ ಸಾಗಿ ಬರುತ್ತವೆ. ಅನುಕರಣೆಯ ಮೂಲಕ ಕಲಿಕೆ ಹಾಗೂ ಕಂಠಸ್ಥ ಸಂಪ್ರದಾಯದ ಪರಪಂರಾನುಗತ ಜ್ಞಾನವನ್ನೇ ಜಾನಪದ (ಫೋಕ್‌ಲೋರ್) ಎಂದು ಕರೆಯಲಾಗಿದೆ.

ಜಾನಪದವನ್ನು ಸಂಗ್ರಹಿಸಿ, ಸಂಪಾದಿಸಿ ಪ್ರಕಟಿಸುವ ಹವ್ಯಾಸ ಎಲ್ಲ ದೇಶಗಳಲ್ಲೂ ಕಂಡು ಬಂದಿದೆ. ಕಥೆ, ಗೀತೆ, ಲಾವಣಿಗಳು ಬರವಣಿಗೆಗೆ ಇಳಿದಾಗ ಅವುಗಳ ಸಾಹಿತ್ಯಕ ಸ್ವರೂಪ ಮಾತ್ರ ಉಳಿದಂತಾಗುತ್ತದೆ. ಆದರೆ ಸಂಗೀತದ ಅಂಶವೂ ಅವುಗಳಲ್ಲಿ ಪ್ರಧಾನವಾದುದರಿಂದ, ಒಂದೊಂದು ಪ್ರಕಾರಕ್ಕೂ ವಿಶಿಷ್ಟವಾದ ಮಟ್ಟುಗಳು ಪರಂಪರೆಯಿಂದಲೇ ಬಂದಿರುವುದರಿಂದ ಅವುಗಳ ಮೂಲಧಾಟಿಗಳನ್ನು ಉಳಿಸುವ ಸಾಹಸವನ್ನೂ ವೈಜ್ಞಾನಿಕವಾಗಿ ಮಾಡಲಾಗುತ್ತಿದೆ. ಕರ್ನಾಟಕದಲ್ಲಿಯೂ ಈ ಕೆಲಸ ನಿರಂತರವಾಗಿ ನಡೆದಿದೆ. *

**ಕಂಠಿ, ಎಸ್.ಆರ್. :** 1908-69. ಕರ್ನಾಟಕದ ಮಾಜಿ ಮುಖ್ಯ ಮಂತ್ರಿ (1962). ಬಾಗಲಕೋಟೆ ತಾಲ್ಲೂಕಿನ ಕೆರೂರಿನಲ್ಲಿ 1908 ಡಿಸೆಂಬರ್ 21ರಂದು ಜನಿಸಿದರು. ಧಾರವಾಡದ ಕರ್ನಾಟಕ ಕಾಲೇಜು, ಕೊಲ್ಲಾಪುರದ ರಾಜಾರಾಮ್ ಕಾಲೇಜು ಮತ್ತು ಲಾ ಕಾಲೇಜುಗಳಲ್ಲಿ ವ್ಯಾಸಂಗ ಮಾಡಿದ ಇವರು ಬಾಗಲಕೋಟೆಯಲ್ಲಿ ವಕೀಲರಾಗಿ ತಮ್ಮ ವೃತ್ತಿಜೀವನವನ್ನು ಆರಂಭಿಸಿದರು (1935). ಹರಿಜನರ, ರೈತರ ಮತ್ತು ನೇಕಾರರ ಏಳ್ಗೆಗಾಗಿ ಶ್ರಮಿಸಿದರು. 1939ರಲ್ಲಿ ಕೆ.ಪಿ.ಸಿ.ಸಿ. ಮತ್ತು ಎ.ಐ.ಸಿ.ಸಿಗಳಿಗೆ ಸದಸ್ಯರಾಗಿ ಆಯ್ಕೆಯಾದರು. 1940-41ರಲ್ಲಿ ಬಿಜಾಪುರ ಜಿಲ್ಲೆಯಲ್ಲಿ ಸತ್ಯಾಗ್ರಹ ವ್ಯವಸ್ಥೆ ಮಾಡಿ 10 ತಿಂಗಳ ಸೆರೆಮನೆವಾಸ



ಅನುಭವಿಸಿದರು. 1942ರ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ಮತ್ತೊಮ್ಮೆ ಸೆರೆಯಾಗಿ ಅದೇ ವರ್ಷ ಬಿಡುಗಡೆ ಹೊಂದಿದರು. ಅನಂತರ ಮುಂಬಯಿ ಸ್ಥಳೀಯ ಆಹಾರ ಸಮಿತಿಯ ಕ್ರಿಯಾಶೀಲ ಸದಸ್ಯರಾಗಿದ್ದುಕೊಂಡು ಕ್ಷಾಮ ಪರಿಹಾರ ಸಮಿತಿಯ ಪರವಾಗಿ ಕ್ಷಾಮಪೀಡಿತ ಪ್ರದೇಶಗಳಿಗೆ ಊಟ, ಬಟ್ಟೆ ಇತ್ಯಾದಿ ಸರಬರಾಜು ಮಾಡುವ ಸಾರ್ವಜನಿಕ ಸೇವೆಯಲ್ಲಿ ಪ್ರವೃತ್ತರಾದರು. 1946ರಲ್ಲಿ ಬಿಜಾಪುರ ಜಿಲ್ಲೆಯ ರೈತ ಸಮ್ಮೇಳನಕ್ಕೆ ಅಧ್ಯಕ್ಷರಾಗಿ ಆಯ್ಕೆಯಾದರು. ಅನಂತರ ಅಂದಿನ ಮುಂಬಯಿ ಮಂತ್ರಿ ಮಂಡಲದಲ್ಲಿ ಸಂಸದೀಯ ಕಾರ್ಯದರ್ಶಿಯಾಗಿ ನೇಮಕಗೊಂಡು 6 ವರ್ಷಗಳ ಕಾಲ ಸೇವೆ ಸಲ್ಲಿಸಿದರು (1946-52). ಆಗ ಸುಮಾರು ಎರಡು ವರ್ಷಗಳ ಕಾಲ ಹಣಕಾಸಿನ ಶಾಖೆಯನ್ನು ಹಾಗೂ ಮೂರು ವರ್ಷಗಳ ಕಾಲ ವ್ಯವಸಾಯ, ಅರಣ್ಯ ಮತ್ತು ಸಹಕಾರ ಇಲಾಖೆಗಳ ಅಧಿಕಾರವನ್ನು ವಹಿಸಿಕೊಂಡಿದ್ದರು. 1952-56ರ ವರೆಗೆ ಮುಂಬಯಿ ವಿಧಾನಸಭೆಯ ಉಪಾಧ್ಯಕ್ಷರಾಗಿದ್ದರು. ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ ಕರ್ನಾಟಕ ರಾಜ್ಯದ ನಿರ್ಮಾಣದ ಬಗ್ಗೆ ವಿಷಯ ಸಂಗ್ರಹಿಸಿ ಭಾರತ ಸರ್ಕಾರಕ್ಕೆ ಮನವಿ ಸಲ್ಲಿಸಲು ರಚಿಸಿದ ಸಮಿತಿಗೆ ಇವರನ್ನು ಕಾರ್ಯದರ್ಶಿಯಾಗಿ ನೇಮಿಸಿತ್ತು. ಕರ್ನಾಟಕ ರಾಜ್ಯ ನಿರ್ಮಾಣವಾದ ಮೇಲೆ 1956ರಲ್ಲಿ ಮೈಸೂರು ವಿಧಾನ ಸಭೆಯ ಅಧ್ಯಕ್ಷರಾದ ಕಂಠಿಯವರು ಸುಮಾರು 6 ವರ್ಷಗಳ ಕಾಲ ಆ ಹುದ್ದೆಯಲ್ಲಿದ್ದರು. 1961ರಲ್ಲಿ ಪಶ್ಚಿಮ ಜರ್ಮನಿಗೆ ಭೇಟಿ ನೀಡಿದ ಸಂಸದೀಯ ನಿಯೋಗಕ್ಕೆ ಇವರು ಮುಖ್ಯಸ್ಥರಾಗಿದ್ದರು. ಮೂರನೆಯ ಸಾರ್ವತ್ರಿಕ ಚುನಾವಣೆಯಲ್ಲಿ ಹುನಗುಂದ ಕ್ಷೇತ್ರದಿಂದ ವಿಧಾನಸಭೆಗೆ ಆಯ್ಕೆಯಾದ ಇವರು 1962 ಮಾರ್ಚ್ 9ರಿಂದ 1962 ಜುಲೈ 20ರವರೆಗೆ ವಿಶಾಲ ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿದ್ದರು. ಅನಂತರ 1962 ಜುಲೈ 21ರಂದು ವಿದ್ಯಾಮಂತ್ರಿಯಾಗಿ ನೇಮಕಗೊಂಡರು. ಬೆಂಗಳೂರು ವಿಶ್ವವಿದ್ಯಾಲಯ ಸ್ಥಾಪನೆಯಾದದ್ದು ಇವರು ವಿದ್ಯಾಮಂತ್ರಿಯಾಗಿದ್ದಾಗ. ನಾಲ್ಕನೆಯ ಸಾರ್ವತ್ರಿಕ ಚುನಾವಣೆಯಲ್ಲಿ

ಮತ್ತೊಮ್ಮೆ ವಿಧಾನಸಭೆಗೆ ಆಯ್ಕೆಯಾಗಿ 1967 ಮಾರ್ಚ್ 14ರಿಂದ 1968 ಏಪ್ರಿಲ್ 29ರವರೆಗೆ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಮಂತ್ರಿಯಾಗಿದ್ದರು. ಇವರು ಕೆಲಕಾಲ ಕರ್ನಾಟಕ ಹಿಂದಿ ಪ್ರಚಾರ ಸಭೆಯ ಅಧ್ಯಕ್ಷರೂ ಮೈಸೂರು ಪ್ರದೇಶದ ಭಾರತ ಸೇವಕ ಸಮಾಜದ ಅಧ್ಯಕ್ಷರೂ ಆಗಿದ್ದರು. 1959ರಲ್ಲಿ ಲಂಡನಿನಲ್ಲಿ ನಡೆದ ಕಾಮನ್‌ವೆಲ್ತ್ ಸಂಸದೀಯ ಸಮ್ಮೇಳನಕ್ಕೆ ಕರ್ನಾಟಕ ಸರ್ಕಾರ ಇವರನ್ನು ತನ್ನ ಪ್ರತಿನಿಧಿಯನ್ನಾಗಿ ಕಳಿಸಿತ್ತು. ಆ ಸಂದರ್ಭದಲ್ಲಿ ತಮಗಾದ ಅನುಭವಗಳನ್ನು ಇವರು ನೋಟ್ಸ್ ಆನ್ ದಿ ಪಾರ್ಲಿಮೆಂಟರಿ ಕೋರ್ಸ್ ಎಂಬ ಗ್ರಂಥದಲ್ಲಿ ನಿರೂಪಿಸಿದ್ದಾರೆ.

ಕರ್ನಾಟಕದ ಏಳಿಗೆಗೆ ಅಪಾರವಾಗಿ ಶ್ರಮಿಸಿದ ಕಂಠಿಯವರು ರಾಜ್ಯ ವಿಧಾನ ಸಭೆಯ ಸದಸ್ಯರಾಗಿರುವಾಗಲೇ, 1969 ಡಿಸೆಂಬರ್ 25ರಂದು ನಿಧನ ಹೊಂದಿದರು. (ಟಿ.ಇ.ಎಚ್.)

**ಕಂಠೀರವ :** 1919ರ ಏಪ್ರಿಲ್ ಒಂದನೆಯ ತಾರೀಖು ಯುಗಾದಿ ದಿನದಂದು ಮಂಗಳೂರಿನಿಂದ ಪ್ರಕಟವಾದ ವಾರಪತ್ರಿಕೆ. ಕೆಲಕಾಲ ದ್ವೈವಾರ ಪತ್ರಿಕೆಯಾಗಿ ನಡೆಯಿತು (1933-53). ಅನಂತರ 1967ರ ನವೆಂಬರ್ ತಿಂಗಳಲ್ಲಿ ನಿಂತು ಕೆಲಕಾಲ ನಡೆದು ವಿಶೇಷ ಸಂಚಿಕೆಯೊಂದನ್ನು ಕಂಡು ಅದೇ ವರ್ಷ ನಿಂತು ಹೋಯಿತು. ಬೋಳಾರು ವಿಠಲರಾಯರು ಇದರ ಪ್ರಥಮ ಸಂಪಾದಕರು ಹಾಗೂ ಪ್ರಕಾಶಕರು. ಪ್ರಾರಂಭಕಾಲದಲ್ಲಿ ಸಂಪಾದಕ ವಿಭಾಗಕ್ಕೆ ಹುರುಳಿ ಭೀಮರಾಯರು, ಕಡೇಕಾರು ರಾಜ ಗೋಪಾಲಕೃಷ್ಣರಾಯರು, ಬೆನಗಲ್ ರಾಮರಾಯರು, ಡಿ.ಕೆ.ಭಾರದ್ವಾಜರು ಬರೆಯುತ್ತಿದ್ದರು. ಮೊದಲಿನಿಂದಲೂ ಸಂಪಾದಕೀಯವನ್ನು ಬರೆಯುತ್ತಿದ್ದ ಹುರುಳಿ ಭೀಮರಾಯರೇ 1943ರಲ್ಲಿ ಸಂಪಾದಕತ್ವವನ್ನು ವಹಿಸಿಕೊಂಡರು.




ಪ್ರಾರಂಭವಾದಾಗ ಪತ್ರಿಕೆ ಮಂಗಳೂರಿನ ಧರ್ಮಪ್ರಕಾಶ ಮುದ್ರಣಾಲಯದಲ್ಲಿ ಅಚ್ಚಾಗುತ್ತಿತ್ತು. ಮುಂದೆ 1923 ರಿಂದ 1938ರವರೆಗೆ ಸರಸ್ವತಿ ಪ್ರಿಂಟಿಂಗ್ ವರ್ಕ್ಸ್ ಲಿಮಿಟೆಡ್ ಮುದ್ರಣಾಲಯದಲ್ಲಿ ಅಚ್ಚಾಗುತ್ತಿದ್ದು 1939ರಲ್ಲಿ ಒಂದು ವರ್ಷ ಮಾತ್ರ ಮಂಗಳೂರಿನ ಬಾಸೆಲ್ ಮಿಶನ್ ಪ್ರೆಸ್ಸಿನಲ್ಲಿ ಮುದ್ರಣಗೊಂಡಿತು. ಬಳಿಕ 1941ರಿಂದ ಆಚೆ ಮಂಗಳೂರು ಪ್ರೆಸ್ಸಿನಲ್ಲಿ ಮುದ್ರಣವಾಗತೊಡಗಿತು. 1943ರಿಂದ ಮಂಗಳೂರು ಪ್ರೆಸ್ಸಿನ ಒಡೆಯರಾದ ಎಂ. ಬಾಬುರಾಯಪ್ರಭು ಕಂಠೀರವದ ಪ್ರಕಾಶಕರಾದರು.

ಹದಿನಾರು ಪುಟಗಳ ಪತ್ರಿಕೆಯಾಗಿ ಹೊರಟ ಕಂಠೀರವ ಜನಪ್ರಿಯವಾಗಿ ಅಭಿವೃದ್ಧಿಗೊಂಡು ಒಂದು ಕಾಲಕ್ಕೆ ಮೂವತ್ತೆರಡು ಪುಟಗಳ ಪತ್ರಿಕೆಯಾಯಿತು.

ಕಳೆದ ವಾರ, ಅದಿಷ್ಟು ಇದಿಷ್ಟು, ಅದೂ ಇದೂ ಎಲ್ಲವೂ- ಎಂಬ ಒಂದಲ್ಲ ಒಂದು ಶೀರ್ಷಿಕೆಯಲ್ಲಿ ವಾರದ ವಿಶೇಷ ವಿಚಾರಗಳು; ಮಧ್ಯಪುಟದಲ್ಲಿ ಸಂಪಾದಕೀಯದ ಬಳಿಕ ವಿದೇಶ, ಹಿಂದೂದೇಶ, ಕರ್ನಾಟಕ, ದಕ್ಷಿಣಕನ್ನಡ ಮತ್ತು ತಾಲ್ಲೂಕುಗಳ ವಾರ್ತಾಸಂಗ್ರಹ; ದಾಸಯ್ಯನ ಜೋಳಿಗೆ, ಮಿಸ್ಟರ್ ತಿಪ್ಪಯ್ಯನ ಡೈರಿ, ಮಹಮ್ಮದ್ ಸಾಹೇಬನ ಸೂಕ್ತಗಳು, ಗುಂಡನ ಗಜೇಟು ಎಂಬ ಶೀರ್ಷಿಕೆಗಳಲ್ಲಿ ಹುರುಳಿ ಭೀಮರಾಯರು ವ್ಯಂಗ್ಯಲೇಖನಗಳನ್ನು ಬರೆಯುತ್ತಿದ್ದರು. ಈ ಶೀರ್ಷಿಕೆಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದು ಪತ್ರಿಕೆಯ ಕೊನೆಯ ದಿನಗಳಲ್ಲಿ ಗುಂಡನ ಗಜೇಟು ಎಂಬ ಶೀರ್ಷಿಕೆ ಮಾತ್ರ ಉಳಿಯಿತು. ಇವುಗಳಲ್ಲದೆ ಆಗಾಗ್ಗೆ ವ್ಯಕ್ತಿಪರಿಚಯಗಳೂ ಸಣ್ಣಕಥೆಗಳೂ ಕವನಗಳೂ ಧಾರಾವಾಹಿ ಕಾದಂಬರಿಗಳೂ ಪ್ರಕಟವಾಗುತ್ತಿದ್ದುವು. ಪತ್ರವ್ಯವಹಾರ ಎಂಬ ವಿಭಾಗ ಯಾವಾಗಲೂ ಇರುತ್ತಿತ್ತು. ದ್ವೈವಾರಪತ್ರಿಕೆಯಾದಾಗ ಶುಕ್ರವಾರದ ಸಂಚಿಕೆಯಲ್ಲಿ ವಿಶೇಷ ಲೇಖನ ಮತ್ತು ಪತ್ರವ್ಯವಹಾರಗಳಿಗಿಂತ ವಾರ್ತೆಗೇ ಹೆಚ್ಚಿನ ಪ್ರಾಶಸ್ತ್ಯವಿತ್ತು.

1919ರಲ್ಲಿ ಪ್ರಾರಂಭವಾಗುವಾಗ ಮೊದಲ ಪುಟದ ಮೇಲ್ಗಡೆಯಲ್ಲಿ ಕಂಠೀರವ ಎಂಬ ಹೆಸರಿನ ಇಕ್ಕೆಡೆಗಳಲ್ಲಿ ಯೂನಿಯನ್ ಜಾಕ್ ಎಂಬ ಆಂಗ್ಲ ಸಾಮ್ರಾಜ್ಯ ಧ್ವಜವನ್ನೆತ್ತಿ ಹಿಡಿದ ಸಿಂಹಗಳು ಕುಳಿತ ಚಿತ್ರವಿತ್ತು. ಅದರ ಕೆಳಗಡೆಯಲ್ಲಿ ಸಂಸ್ಕೃತ ಕನ್ನಡಗಳಲ್ಲಿ ಕೆಳಗಿನ ಸೂಕ್ತಿಯಿತ್ತು:

> ಶ್ರೀ ಮದ್ಭೂಮಿತಲೇಷು ಭಾರತಮಹೀಭಾಗಃ ಪ್ರಶಾಸನ್ಮಹೀ
> ಪಾಲೇಷ್ವಾಂಗಲನಾಯಕೋ ನರಕುಲವ್ರಾತೇಷು ಚಾರ್ಯಾನ್ವಯಃ
> ಶಸ್ತ್ರಸ್ತದ್ವದಮೀಸು ಸಂವ್ಯವಹೃತಿ ಪ್ರಾಗಲ್ಭ್ಯ ಮತ್ತೋsನ್ವಹಂ
> ಜೀಯಾದ್ವಿಶ್ವಜನೀನ ವೃತ್ತಿಚತುರಶ್ರೀಕಂಠಕಂಠೀರವಃ
> ನರರ ಕುಲಗಳೊಳಾರ್ಯವಂಶವು ಧರೆಯ ದೇಶಗಳೊಳಗೆ ಭಾರತ
> ಅರಸುತನಗಳೊಳಾಂಗ್ಲರೊಡೆತನ ನುಡಿಗಳೊಳು ಮೆರೆವಾ
> ತಿರುಳುಗನ್ನಡವೊಂದಕ್ಕೊಂದೊಪ್ಪಿರುವ ತೆರ ಕಂಠೀರವನು ಮೆರೆ
> ದಿರಲಿ ವಂಶಕೆ ಧರೆಗೆ ಅರಸಗೆ ನುಡಿಗೆ ಸೊಬಗೆನಿಸೀ

ಇದಲ್ಲದೆ ಮಧ್ಯಪುಟದಲ್ಲಿ ಸಂಪಾದಕೀಯದ ಮೇಲ್ಗಡೆ ಪತ್ರಿಕೆಯ ಹೆಸರಿನ ಕೆಳಗೆ

> ವಿನಾ ನವಾರುಣಂ ನದೀನಾಯತೇ ನಿಶಾ
> ನವಾನಿಲಂ ವಿನಾ ಶಿಶಿರೋ ನ ಪುಷ್ಪವಾನ್

ಎಂದು ಮೊದಲಾಗುವ ಒಂದು ಶ್ಲೋಕವಿತ್ತು. ಮುಂದೆ ದೇಶದ ರಾಜಕೀಯ ವಾತಾವರಣಕ್ಕನುಗುಣವಾಗಿ ಕಂಠೀರವ ತನ್ನ ಧೋರಣೆಯನ್ನು ಬದಲಾಯಿಸಿಕೊಂಡಾಗ ಸಿಂಹಗಳು ಹಿಡಿದಿದ್ದ ಆಂಗ್ಲ ಸಾಮ್ರಾಜ್ಯಧ್ವಜ ಬಿದ್ದುಹೋಗಿ ಬರೇ ಸಿಂಹಗಳೆರಡು ಮಾತ್ರ ಉಳಿದುವು. ಅದರೊಂದಿಗೆ ಸಂಸ್ಕೃತ ಕನ್ನಡ ಶ್ಲೋಕಗಳೂ ಮಾಯವಾದುವು.

ಈ ಪತ್ರಿಕೆಯಲ್ಲಿ ಮೊದಮೊದಲು ಪಂಜೆ ಮಂಗೇಶರಾವ್, ಮಂಜೇಶ್ವರ ಗೋವಿಂದ ಪೈ, ಎಂ.ಎನ್.ಕಾಮತ್, ಉಳ್ಳಾಲ ಮಂಗೇಶರಾವ್ ಮುಂತಾದವರು ಬರೆಯುತ್ತಿದ್ದರು. ಅನಂತರ ಜೆ.ವಾಮನ ಭಟ್ಟ, ಕಡೆಂಗೋಡ್ಲು ಶಂಕರಭಟ್ಟ, ಕುಡ್ವಿ ವಾಸುದೇವ ಶಣ್ಯೆ, ಬಿ.ಶಂಕರಭಟ್ಟ ಮುಂತಾದವರೂ ಬರೆಯುತ್ತಿದ್ದರಲ್ಲದೆ ಜಿಲ್ಲೆಯ ಹೊರಗಿನ ವಿದ್ವಾಂಸರು ವಿಶೇಷ ಲೇಖನಗಳನ್ನೂ ಬರೆಯುತ್ತಿದ್ದರು. ಕಂಠೀರವ ದಸರ ವಿಶೇಷ ಸಂಚಿಕೆಗಳನ್ನೂ ರಾಜ್ಯೋತ್ಸವ ವಿಶೇಷ ಸಂಚಿಕೆಗಳನ್ನೂ ಪ್ರಕಟಿಸಿದೆ.

ಸ್ಪಷ್ಟವಾದ ಹಾಗೂ ತೀಕ್ಷ್ಣವಾದ ಸಂಪಾದಕೀಯಕ್ಕಾಗಿ ಕಂಠೀರವ ಪ್ರಸಿದ್ಧವಾಗಿತ್ತು. ಅದರಲ್ಲಿನ ಪತ್ರವ್ಯವಹಾರ ಅದೇ ರೀತಿಯಲ್ಲಿ ಸತ್ಯ ಸಂಗತಿಗಳ ಮೇಲೆ ಬೆಳಕು ಚೆಲ್ಲುತ್ತಿತ್ತು. ತನ್ನ ಧೋರಣೆ ಹಾಗೂ ಬರೆಹಗಳಿಗಾಗಿ ಕೆಲಕಾಲ ಅಂದಿನ ಮೈಸೂರು ಸಂಸ್ಥಾನದಲ್ಲಿ ಈ ಪತ್ರಿಕೆ ಬಹಿಷ್ಕಾರಕ್ಕೊಳಗಾಗಿತ್ತು.

1933 ಮೇ 23ರ ಸಂಚಿಕೆಯ ಕರ್ನಾಟಕ ಏಕೀಕರಣ ಎಂಬ ಸಂಪಾದಕೀಯದ ಒಂದು ವಾಕ್ಯ ಹೀಗಿದೆ:

ಹಲವು ಸರ್ಕಾರಗಳ ಆಡಳಿತಕ್ಕೆ ಒಳಪಟ್ಟು ಯಾವ ಮುಖಂಡ ಮಹನೀಯರ ಬೆಂಬಲವೂ ಇಲ್ಲದ ನಮ್ಮ ಅನಾಥ ದರಿದ್ರಕರ್ನಾಟಕ ಈ ಮಹತ್ಕಾರ್ಯವನ್ನು ಸಾಧಿಸುವುದೆಂದರೆ ಸ್ವಪ್ನಪ್ರಾಯವಲ್ಲವೇ ಎಂದು ಹಲವರು ಬಗೆಯಬಹುದಾದರೂ ಕನ್ನಡಿಗರು ತಮ್ಮ ನಿದ್ರಾವಸ್ಥೆಯಿಂದ ಎಚ್ಚತ್ತು ಏಕೀಕರಣ ಸದ್ಯದಲ್ಲೇ ಸಾಧಿಸದಿದ್ದರೂ ಅದು ಸಮೀಪಗತ ವಾಗುವುದರಲ್ಲಿ ಸಂದೇಹವಿಲ್ಲ.

1964 ಗಣರಾಜ್ಯೋತ್ಸವದ ದಿನದಂದು ದೀಕ್ಷಾದಿನವೆಂದು ಬರೆದ ಅಗ್ರಲೇಖನದ ಭಾಗ ಒಂದು ಹೀಗಿದೆ:

ಈವೊತ್ತು ನಮ್ಮದು ಪ್ರಜಾರಾಜ್ಯ. ಅದನ್ನು ಉಳಿಸಿ ಬೆಳೆಸಲು, ಆ ಕರ್ತವ್ಯ ಸಾಧಿಸಲು ನಾವು ಇಂದು ದೀಕ್ಷಾಬದ್ಧರಾಗಬೇಕಾಗಿದೆ. ಕಷ್ಟ ಕಾರ್ಪಣ್ಯ, ದುಃಖಯಾತನೆ, ಲೋಕಕ್ಕೆಲ್ಲ ಇರುವಂತೆ ನಮಗೂ ತಪ್ಪಿದ್ದಲ್ಲ. ಅದೇನಿದ್ದರೂ ಅದು ವ್ಯಕ್ತಿಗೂ ಸಮಾಜಗಳಿಗೂ ಅನ್ವಯಿಸುವಂಥದು. ರಾಷ್ಟ್ರ, ಅಂಥ ವ್ಯಕ್ತಿಗಳಿಗೂ ಸಮಾಜಗಳಿಗೂ ಅತಿ ಹೆಚ್ಚಿನದು. ಆ ರಾಷ್ಟ್ರ ಕಲ್ಯಾಣವಾದರೇನೇ ಆ ರಾಷ್ಟ್ರದ ಮತ್ತು ಸಮಾಜದ ಹಿತಸಾಧನೆ ಯಾಗುತ್ತದೆ. ಇದಕ್ಕೆ ಬೇರೆ ದಾರಿಯಿಲ್ಲ. ಅಂತಲೇ ನಾವು ಇಂದು ರಾಷ್ಟ್ರ ಉದ್ಧಾರದ ದಿಸೆಯಲ್ಲಿ ಕೆಲಕೆಲವು ದೀಕ್ಷಾಕ್ರಮಗಳನ್ನು ಕೈಗೊಳ್ಳಲೇಬೇಕಾಗುವುದು. *

**ಕಂಠೀರವ ನರಸರಾಜ ಒಡೆಯರ್ I :** ಮೈಸೂರು ರಾಜವಂಶದ ಖ್ಯಾತ ದೊರೆ (1638-59). 5ನೆಯ ಬೆಟ್ಟದ ಚಾಮರಾಜ ಒಡೆಯನ ಮಗ. ಇಮ್ಮಡಿ ರಾಜ ಒಡೆಯನ ಉತ್ತರಾಧಿಕಾರಿ. ಈತ 1615ರಲ್ಲಿ ಜನಿಸಿದ. ಚಿಕ್ಕವನಾಗಿದ್ದಾಗಲೇ ತನ್ನ ಸಾಹಸಪ್ರವೃತ್ತಿಯನ್ನೂ ಶೌರ್ಯಗುಣಗಳನ್ನೂ ಪ್ರದರ್ಶಿಸಿದ. ಆಗ ತಿರುಚಿನಾಪಳ್ಳಿ ಯಲ್ಲಿದ್ದ ಜಟ್ಟಿಯೊಬ್ಬ ಉಳಿದ ಮಲ್ಲರೆಲ್ಲರನ್ನೂ ಜಯಿಸಿ ಅಪ್ರತಿಮ ಮಲ್ಲನೆಂಬ ಹೆಸರನ್ನು ಗಳಿಸಿದ್ದ. ನರಸರಾಜ ಒಂದು ದಿನ ವೇಷ ಮರೆಸಿಕೊಂಡು ತಿರುಚಿನಾ ಪಳ್ಳಿಗೆ ಹೋಗಿ ಆಸ್ಥಾನದ ಸಾಮಂತರ ಸಮ್ಮುಖದಲ್ಲಿ ಆ ಜಟ್ಟಿಯನ್ನು ಅಪ್ಪಳಿಸಿ ಬಡಿದುಕೊಂದ. ಈ ಅಪೂರ್ವ ಸಾಧನೆಯನ್ನು ಕಂಡ ತಿರುಚಿನಾಪಳ್ಳಿಯ ಅರಸ ಇವನನ್ನು ಗೌರವಿಸಬಂದಾಗ, ಸಕಲ ಗೌರವಗಳನ್ನೂ ವಿನಯಪೂರ್ವಕವಾಗಿ ನಿರಾಕರಿಸಿ, ಯಾರಿಗೂ ತಿಳಿಯದಂತೆ ಮೈಸೂರಿಗೆ ಬಂದ.



ಈತ 1638ರಲ್ಲಿ ಮೈಸೂರಿನಲ್ಲಿ ಪಟ್ಟಾಭಿಷಿಕ್ತನಾದ. ಈತ ಅಧಿಕಾರವನ್ನು ವಹಿಸಿಕೊಂಡ ಕೂಡಲೇ ರಾಜನನ್ನೂ ಲೆಕ್ಕಿಸದೆ ಮತ್ತನಾಗಿದ್ದ ದೇಶ ದ್ರೋಹಿಯೂ ಕೊಲೆಗಾರನೂ ಆಗಿದ್ದ ದಳವಾಯಿ ವಿಕ್ರಮರಾಯನನ್ನು ಕೊಲ್ಲಿಸಿದ. ಈತ ಸಿಂಹಾಸನಾರೋಹಣ ಮಾಡಿದ ಮರುವರ್ಷವೇ ಬಾಹ್ಯಶತ್ರುಗಳನ್ನೂ ಎದುರಿಸಬೇಕಾಯಿತು. ಹಿಂದೆ ಚಾಮರಾಜನಿಂದ ಅವಮಾನಿತನಾಗಿದ್ದ ನಾಗಮಂಗಲದ ಚೆನ್ನಯ್ಯನೆಂಬುವನು ಮೈಸೂರು ರಾಜರ ವಿರುದ್ಧ ತನ್ನ ಸೇಡನ್ನು ತೀರಿಸಿಕೊಳ್ಳುವ ದೃಷ್ಟಿಯಿಂದ ಬಿಜಾಪುರಕ್ಕೆ ಹೋಗಿ ಸುಲ್ತಾನನ ಸೈನ್ಯದ ಸಹಾಯವನ್ನು ಬೇಡಿದ. ಶ್ರೀರಂಗಪಟ್ಟಣದ ಮೇಲೆ ದಾಳಿ ಮಾಡುವುದಕ್ಕೆ ಸುಲ್ತಾನ ತನ್ನ ಸೇನಾನಿ ರಣದುಲ್ಲಾಖಾನನನ್ನು ದೊಡ್ಡ ಸೈನ್ಯದೊಡನೆ ಕಳುಹಿಸಿಕೊಟ್ಟ. ರಣದುಲ್ಲಾಖಾನ್ ಮೊದಲು ಇಕ್ಕೇರಿಯನ್ನು ಧ್ವಂಸಮಾಡಿ ಅಪಾರ ಹಣವನ್ನೂ ಸೈನ್ಯವನ್ನೂ ಕೂಡಿಸಿಕೊಂಡು ಶ್ರೀರಂಗಪಟ್ಟಣವನ್ನು ಆಕ್ರಮಿಸಲು ಮುನ್ನಡೆದ. ಶ್ರೀರಂಗಪಟ್ಟಣದ ಬಳಿ ನಡೆದ ಭೀಕರ ಕದನದಲ್ಲಿ ನರಸರಾಜ ಶತ್ರುವನ್ನು ಸೋಲಿಸಿ ಶಾಂತಿ ಒಪ್ಪಂದ ಮಾಡಿಕೊಂಡ.

ಅನಂತರ ಇವನು ದಕ್ಷಿಣಾಭಿಮುಖವಾಗಿ ಹೊರಟು ದಣ್ಣಾಯಕನಕೋಟೆ, ಸತ್ಯಮಂಗಲ ಮೊದಲಾದ ಹಲವಾರು ಪ್ರಾಂತ್ಯಗಳನ್ನು ಮಧುರೆ ನಾಯಕನಿಂದ ವಶಪಡಿಸಿಕೊಂಡ. ಪಶ್ಚಿಮದಲ್ಲಿ ಅರಕಲಗೂಡು ಬೆಟ್ಟದಪುರಗಳನ್ನೂ ಉತ್ತರದಲ್ಲಿ ಹೊಸೂರನ್ನೂ ಜಯಿಸಿದ. ಮಾಗಡಿ ಕೆಂಪೇಗೌಡನನ್ನು ಸೋಲಿಸಿ ಅವನಿಂದ ಕಪ್ಪಕಾಣಿಕೆ ಪಡೆದ. 1646ರಲ್ಲಿ ಬಿಜಾಪುರದ ಸೈನ್ಯ ಮುಸ್ತಫಖಾನನ ನಾಯಕತ್ವದಲ್ಲಿ ತುರುವೇಕೆರೆಯ ಬಳಿ ನಡೆದ ಯುದ್ಧದಲ್ಲಿ ಮೈಸೂರು ರಾಜ್ಯದ ಮೇಲೆ ಮತ್ತೆ ದಾಳಿ ಮಾಡಿತು. ತುರುವೇಕೆರೆಯ ಬಳಿ ನಡೆದ ಯುದ್ಧದಲ್ಲಿ ಮೈಸೂರಿನ ದಳವಾಯಿ ನಂಜರಾಜಯ್ಯ ಪರಾಕ್ರಮದಿಂದ ಹೋರಾಡಿ, ಶತ್ರು ಸೈನ್ಯವನ್ನು ಹಿಂದಕ್ಕೆ ಅಟ್ಟಿದ. ಆದರೆ ಆತ ಯುದ್ಧಭೂಮಿಯಲ್ಲಿ ಮಡಿದ. 1648ರಲ್ಲಿ ನರಸರಾಜ ಮುಸ್ತಫಖಾನನ ಸೇನಾಧಿಪತ್ಯದಲ್ಲಿ ನಡೆದ ಬಿಜಾಪುರದ ಮತ್ತೊಂದು ದಾಳಿಯನ್ನು ಹಿಮ್ಮೆಟ್ಟಿಸಿದ. ಈ ಸಂದರ್ಭದಲ್ಲಿ ಬಿಜಾಪುರದವರೊಡನೆ ಆದ ಒಂದು ಒಪ್ಪಂದದ ಪ್ರಕಾರ ಚನ್ನರಾಯಪಟ್ಟಣದ ಕೋಟೆ ಮೈಸೂರು ಅರಸರ ವಶಕ್ಕೆ ಬಂತು.

ಇವನು ಅನೇಕ ರಕ್ಷಣಾತ್ಮಕ ಮತ್ತು ಧಾರ್ಮಿಕ ಕಾರ್ಯಗಳನ್ನು ಕೈಗೊಂಡ. ಶ್ರೀರಂಗಪಟ್ಟಣದ ಸುತ್ತಲೂ ಇದ್ದ ಕೋಟೆ ಕೊತ್ತಲಗಳನ್ನು ಬಲಪಡಿಸಿದ. ರಾಜ್ಯದ ಅನೇಕ ದೇಗುಲಗಳಿಗೆ ಅಪಾರ ಧನವನ್ನು ಉಂಬಳಿಯಾಗಿ ನೀಡಿದ. ಶ್ರೀರಂಗಪಟ್ಟಣದಲ್ಲಿ ನರಸಿಂಹ ದೇವಾಲಯವನ್ನು ಕಟ್ಟಿಸಿದ (ಈ ದೇವಾಲಯದಲ್ಲಿ ಈತನ ವಿಗ್ರಹವೊಂದಿದೆ). ಶ್ರೀರಂಗಪಟ್ಟಣದಲ್ಲಿ ಒಂದು ಟಂಕಸಾಲೆಯನ್ನು ಸ್ಥಾಪಿಸಿ ಅಲ್ಲಿ ಕಂಠೀರವಪಣ ಎಂಬ ನಾಣ್ಯಗಳನ್ನು ಟಂಕಿಸಿದ, ಹಲವಾರು ಅಗ್ರಹಾರಗಳನ್ನು ಕಟ್ಟಿಸಿದ, ಪ್ರಾಚೀನ ವ್ರತನಿಯಮಗಳನ್ನು ಪರಿಷ್ಕರಿಸಿದ. ಮೈಸೂರು ರಾಜ್ಯದ ವಿಸ್ತಾರ, ಬಲ ಮತ್ತು ಕೀರ್ತಿಯನ್ನು ಹೆಚ್ಚಿಸಿದ ಈತ 1659ರಲ್ಲಿ ಮೃತನಾದ. ಇವನ ರಾಣಿಯರು 1662ರಲ್ಲಿ ಕಳಲೆಯಲ್ಲಿ ಇವನ ಸ್ಮಾರಕವಾಗಿ ಒಂದು ಮಠವನ್ನು ಕಟ್ಟಿಸಿ ಅದಕ್ಕೆ ಉಂಬಳಿ ನೀಡಿದರು. ಇವನ ಕಾಲದಲ್ಲಿ ಮೈಸೂರು ರಾಜ್ಯ ಸಂಪತ್ಸಮೃದ್ಧಿಯಿಂದ ತುಂಬಿ ತುಳುಕುತ್ತಿತ್ತು. (ಬಿ.ಎಂ.)

**ಕಂಠೀರವ ನರಸರಾಜ ಒಡೆಯರ್ II :** ಮೈಸೂರು ರಾಜವಂಶದ ದೊರೆ (1704-1713). ಸುಪ್ರಸಿದ್ಧ ಚಿಕ್ಕದೇವರಾಜ ಒಡೆಯನ ಮಗ. ಜನ್ಮತಃ ಮೂಕನಾಗಿದ್ದರಿಂದ ಮೂಕರಸು ಎಂಬ ಅಡ್ಡಹೆಸರು ಈತನಿಗೆ ಪ್ರಾಪ್ತವಾಗಿತ್ತು. ಮೂಕನಾಗಿದ್ದರೂ ಅಮಾತ್ಯ ತಿರುಮಲಯ್ಯಂಗಾರ್ಯನ ಪ್ರಭಾವದಿಂದ ಇವನಿಗೆ ಪಟ್ಟ ಪ್ರಾಪ್ತವಾಯಿತು. ಪಟ್ಟವೇರಿದ ಪ್ರಾರಂಭದಲ್ಲೇ ಈತ ಚಿಕ್ಕದೇವರಾಜನ ಸರಿಯಾದ ಉತ್ತರಾಧಿಕಾರಿಯಲ್ಲ ಎಂಬ ಊಹೆಯ ನೆವದಲ್ಲಿ ಔರಂಗಜೇಬ್ ಮೈಸೂರು ರಾಜ್ಯವನ್ನು ಆಕ್ರಮಿಸಲು ಪ್ರಯತ್ನಿಸಿದಾಗ ಇವನು ಸ್ವಲ್ಪ ಮೊತ್ತವನ್ನು ಕಪ್ಪವಾಗಿ ಕೊಡಲು ಒಪ್ಪಿದ. ಕಾರಣಾಂತರಗಳಿಂದ ಈ ದ್ರವ್ಯ ಔರಂಗಜೇಬನಿಗೆ ತಲಪಲಿಲ್ಲ. ಕೆಲವು ದಿನಗಳ ಅನಂತರ ಮುಗಲ ಸೇನಾನಿ ಸಾದತುಲ್ಲಾ ದಂಡೆತ್ತಿ ಬಂದು ಅಪಾರ ಹಣವನ್ನು ವಸೂಲಿಮಾಡಿದ. ಇವನ ನಿಶ್ಶಕ್ತಿಯನ್ನು ಗಮನಿಸಿದ ಮುಗಲರು ಆಗಾಗ್ಗೆ ಮೈಸೂರು ಭಂಡಾರದ ಲಾಭ ಪಡೆಯುತ್ತಿದ್ದರು. ಇವನ ಕಾಲದಲ್ಲಿ ದಳವಾಯಿ ಕಾಂತಯ್ಯ ಚಿಕ್ಕಬಳ್ಳಾಪುರವನ್ನು ವಶಪಡಿಸಿಕೊಳ್ಳಲು ಯತ್ನಿಸಿ ಪ್ರಾಣ ಕಳೆದುಕೊಂಡ. ಆದರೆ ಅವನ ಪುತ್ರನಾದ ಬಸವರಾಜ ಚಿಕ್ಕಬಳ್ಳಾಪುರದ ಮುತ್ತಿಗೆಯನ್ನು ಮುಂದುವರಿಸಿ ಅಲ್ಲಿಂದ ಕಪ್ಪ ಸೆಳೆದುಕೊಂಡನೆಂದು ತೋರುತ್ತದೆ.



ಇವನಲ್ಲಿ ಚಿಕ್ಕದೇವರಾಜನಲ್ಲಿದ್ದ ಶಕ್ತಿ ಸಾಮರ್ಥ್ಯಗಳಾಗಲಿ, ದೂರದೃಷ್ಟಿಯಾಗಲಿ, ರಾಜನೀತಿ ವಿಚಕ್ಷಣತೆಯಾಗಲಿ ಇರಲಿಲ್ಲವಾಗಿ ಇವನ

ಕಾಲದಲ್ಲಿ ಮೈಸೂರು ಸಂಸ್ಥಾನಕ್ಕೆ ಕ್ಷೀಣದೆಶೆ ಬಂತು. ರಾಜ್ಯದ ಆಗುಹೋಗುಗಳು ದಳವಾಯಿಗಳ ಕೈಸೇರಿದವು. ಕಳಲೆ ವಂಶದ ದಳವಾಯಿಗಳು ಪ್ರಮುಖ ಪಾತ್ರ ವಹಿಸಲಾರಂಭಿಸಿದರು. ಈ ವಂಶದ ಚಲುವಾಜಮ್ಮಣ್ಣಿ ಕಂಠೀರವ ಇವನನ್ನು ಮದುವೆಯಾಗಿದ್ದಳು. ಇವನು 1713ರಲ್ಲಿ ಮೃತನಾದ.

ಶಿವರಾಮಕೃಷ್ಣ ಕವಿಯ ಅನಂಗವಿಜಯ ಭಾಣಃ ಎಂಬ ಸಂಸ್ಕೃತ ನಾಟಕ, ಮೈಸೂರು ದೊರೆಗಳ ಪೂರ್ವಾಭ್ಯುದಯವಿವರ ಎಂಬ ಕನ್ನಡ ಗ್ರಂಥ ಇವು ಇವನ ಕಾಲದಲ್ಲಿ ರಚಿತವಾದುವು. (ಎಸ್.)

**ಕಂಠೀರವ ನರಸಿಂಹರಾಜ ಒಡೆಯರ್ :** 1888-1940. ಮೈಸೂರಿನ ಯುವರಾಜ. ಮಹಾರಾಜ ಚಾಮರಾಜೇಂದ್ರ ಒಡೆಯರ (1863-94) ಎರಡನೆಯ ಮಗ, ನಾಲ್ವಡಿ ಕೃಷ್ಣರಾಜ ಒಡೆಯರ ತಮ್ಮ. 1888 ಜುಲೈ 5ರಂದು ಜನಿಸಿದರು. ಅಣ್ಣನೊಂದಿಗೆ ಸರ್‌ಸ್ಟ್ಯೂಯರ್ಟ್ ಫ್ರೇಸರ್‌ನಲ್ಲಿ ಬೇಸಗೆ ಅರಮನೆಯಲ್ಲಿ ಇವರ ವ್ಯಾಸಂಗ ನಡೆಯಿತು. ಪಿ.ರಾಘವೇಂದ್ರರಾವ್ ಇವರ ಇನ್ನೊಬ್ಬ ಗುರು. ರಾಜಯೋಗ್ಯವಾದ ಇತರ ವಿಷಯಗಳಲ್ಲೂ ಇವರಿಗೆ ಶಿಕ್ಷಣ ದೊರಕಿತು. ಓದಿನ ಜೊತೆಗೆ ಅಂಗ ಸಾಧನೆ, ಕುದುರೆ ಸವಾರಿ, ಶಿಕಾರಿ, ಕ್ರಿಕೆಟ್, ಟೆನಿಸ್, ಪೋಲೋ ಮೊದಲಾದವುಗಳಲ್ಲಿ ಇವರಿಗೆ ವಿಶೇಷ ಆಸಕ್ತಿಯಿತ್ತು. ಚಿಕ್ಕ ವಯಸಿನಲ್ಲೇ ರಾಜ್ಯದಲ್ಲೆಲ್ಲ ಪರ್ಯಟನ ಕೈಗೊಂಡಿದ್ದರಿಂದ ದೇಶದ ಸ್ಥಿತಿಯೂ ಜನಜೀವನದ ಪರಿಚಯವೂ ಇವರಿಗೆ ದೊರಕಿದ್ದವು. ಅಣ್ಣನೊಂದಿಗೆ ಇವರು ಬರ್ಮಾದಲ್ಲಿ ಪೆಗು, ಮಾಂಡಲೆ ಮುಂತಾದವನ್ನು ಸಂದರ್ಶಿಸಿ ಹಿಂತಿರುಗಿದರು. ಉನ್ನತ ವ್ಯಾಸಂಗಕ್ಕಾಗಿ 1903ರಲ್ಲಿ ಅಜ್ಮೀರಿನ ಮೇಯೋ ರಾಜಕುಮಾರ್ ಕಾಲೇಜನ್ನು ಸೇರಿದರೂ ಅನಾರೋಗ್ಯದ ದೆಸೆಯಿಂದ ಮರುವರ್ಷ ಮೈಸೂರಿಗೆ ಮರಳಿದರು. ಮೈಸೂರಿನಲ್ಲೇ ಕ್ಯಾಪ್ಟನ್ ಆರ್.ಜೆ.ಡಬ್ಲ್ಯೂ. ಹಿಲ್ ಮತ್ತು ಎಂ.ಎ.ನಾರಾಯಣ ಐಯಂಗಾರ್ಯರಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿದರು. 1908ರಲ್ಲಿ ಕರ್ನಲ್ ಡ್ರೇಕ್ ಬ್ರಾಕ್ಮಿನ ಜೊತೆಯಲ್ಲಿ ಕಾಶ್ಮೀರದ ಪ್ರವಾಸವನ್ನು ಕೈಗೊಂಡರು.



1902ರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಮೈಸೂರು ಸಂಸ್ಥಾನದ ರಾಜಸೂತ್ರವನ್ನು ವಹಿಸಿದಾಗ ಇವರು ಯುವರಾಜ ಪದವಿಯನ್ನಲಂಕರಿಸಿದರು. 1908-9ರಲ್ಲಿ ಜಪಾನ್ ದೇಶಕ್ಕೆ ಭೇಟಿಯಿತ್ತು ಆ ದೇಶದ ತಾಂತ್ರಿಕ ಮುನ್ನಡೆಯನ್ನು ಸಂದರ್ಶಿಸಿ ಹಿಂದಿರುಗಿದರು. 1910ರಲ್ಲಿ ಸರದಾರ್ ದಳವಾಯಿ ದೇವರಾಜೇ ಅರಸರ ನಾಲ್ಕನೆಯ ಮಗಳು ಕೆಂಪುಚಲುವಾಜಮ್ಮಣ್ಣಿಯನ್ನು ಮದುವೆಯಾದರು. 1911ರಲ್ಲಿ 5ನೆಯ ಜಾರ್ಜನ ಪಟ್ಟಾಭಿಷೇಕ ಮಹೋತ್ಸವದ ಸಂದರ್ಭದಲ್ಲಿ ದೆಹಲಿಯಲ್ಲಿ ನಡೆದ ದರ್ಬಾರಿಗೆ ತಮ್ಮ ಅಣ್ಣನೊಂದಿಗೆ ಹೋಗಿದ್ದರು. ಬ್ರಿಟಿಷ್ ದೊರೆಯಿಂದ ಇವರಿಗೆ ನೈಟ್ ಕಮಾಂಡರ್ ಪ್ರಶಸ್ತಿ ದೊರಕಿತು. 1913ರಲ್ಲಿ ಐರೋಪ್ಯ ಪ್ರವಾಸ ಕೈಗೊಂಡು ಇಂಗ್ಲೆಂಡ್, ಫ್ರಾನ್ಸ್, ಇಟಲಿ, ಸ್ವಿಟ್ಸರ್‌ಲೆಂಡ್ ಮತ್ತು ಬೆಲ್ಜಿಯಂ ರಾಷ್ಟ್ರಗಳನ್ನು ಸಂದರ್ಶಿಸಿದರು. ಇವರು ಪ್ರವಾಸದಿಂದ ಹಿಂದಿರುಗಿದ ಅನಂತರ ಇವರಿಗೆ ಮಹಾರಾಜರ ಸಚಿವ ಮಂಡಳಿಯ ವಿಶೇಷ ಸದಸ್ಯತ್ವ ದೊರಕಿತು. ಇವರಿಗೆ ಸೇನಾಖಾತೆಯ ಆಡಳಿತವನ್ನು ವಹಿಸಿದುದಲ್ಲದೆ ಪೊಲೀಸುದಳ, ವೈದ್ಯಕೀಯ, ನೈರ್ಮಲ್ಯ ಮತ್ತು ಸೆರೆಮನೆ ವಿಭಾಗಗಳ ಆಡಳಿತವನ್ನು ವಹಿಸಲಾಯಿತು. ಒಂದನೆಯ ಮಹಾಯುದ್ಧದ ಕಾಲದಲ್ಲಿ ಯುದ್ಧದಲ್ಲಿ ಹೋರಾಡಿದ ಮೈಸೂರಿನ ಯೋಧರಿಗೆ ನೋವುಂಡ ಕುಟುಂಬಗಳಿಗೆ ಪರಿಹಾರನಿಧಿಯನ್ನು ಸಂಗ್ರಹಿಸುವುದಲ್ಲದೆ ಯುದ್ಧದಲ್ಲಿ ಎಲ್ಲ ರೀತಿಯ ಸೌಕರ್ಯಗಳನ್ನೂ ಒದಗಿಸಿಕೊಡಲು ಇವರು ಪ್ರತ್ಯೇಕವಾದ ನಿಧಿಸಂಗ್ರಹವನ್ನು ಪ್ರಾರಂಭಿಸಿದರು. 1915ರಲ್ಲಿ ಬ್ರಿಟಿಷ್ ಸರ್ಕಾರದಿಂದ ಇವರಿಗೆ ಜಿ.ಸಿ.ಐ.ಇ. ಬಿರುದೂ 1918ರಲ್ಲಿ ಹಿಸ್ ಹೈನೆಸ್ ಪ್ರಶಸ್ತಿಯೂ ಲಭಿಸಿದುವು.

ಕಂಠೀರವ ನರಸಿಂಹರಾಜ ಒಡೆಯರಿಗೆ ಸಂಸ್ಥಾನದ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿ ಕಾರ್ಯಗಳಲ್ಲಿ ವಿಶೇಷ ಆಸಕ್ತಿಯಿತು. ಇವರು ಸಂಸ್ಥಾನದ ಸ್ಕೌಟ್ ಚಳವಳಿಯ ಮುಖ್ಯರಾಗಿದ್ದುದಲ್ಲದೆ ರೆಡ್ ಕ್ರಾಸ್ ಸಂಸ್ಥೆಯ ಸದಸ್ಯರಾಗಿದ್ದರು. ಗರ್ಭಿಣಿ ಮತ್ತು ಶಿಶುಸಂರಕ್ಷಣಾಕಾರ್ಯದಲ್ಲಿ ವಿಶೇಷ ಆಸ್ಥೆ ವಹಿಸಿದ್ದು ಈ ಕ್ಷೇತ್ರದಲ್ಲಿ ಅನೇಕ ಚಿಕಿತ್ಸಾಲಯಗಳ ಸ್ಥಾಪನೆಗೆ ಕಾರಣರಾದರು. ಕಿವುಡರ ಮತ್ತು ಕುರುಡರ ಶಿಕ್ಷಣಕ್ಕೆ ಇವರಿಂದ ವಿಶೇಷ ಪ್ರೋತ್ಸಾಹ ಲಭಿಸಿತು. ದೀನದಲಿತರಲ್ಲಿ ಇವರು ತೋರಿಸುತ್ತಿದ್ದ ಔದಾರ್ಯ ವಿಶೇಷವಾದುದಾಗಿತ್ತು. ಇವರ ಕಾಲದಲ್ಲಿ ಮೈಸೂರು ಸಂಸ್ಥಾನದಲ್ಲಿ ಹಲವು ಕಡೆಗಳಲ್ಲಿ ಸ್ಥಾಪಿತವಾದ ಹರಿಜನ ವಿದ್ಯಾರ್ಥಿನಿಲಯಗಳಿಗೆ ಇವರ ಹೆಸರನ್ನಿಡಲಾಗಿದೆ. ಸಂಗೀತ ಮತ್ತು ಸಾಹಿತ್ಯದಲ್ಲಿ ಇವರಿಗೆ ಹೆಚ್ಚಿನ ಅಭಿರುಚಿ ಇತ್ತು. ಇವರು ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪಕ ಅಧ್ಯಕ್ಷರೂ ಮಿಥಿಕ್ ಸೊಸೈಟಿಯ ಮುಖ್ಯ ಉಪಪೋಷಕರೂ ಮೈಸೂರು ವಿಶ್ವವಿದ್ಯಾನಿಲಯದ ಪ್ರೊ-ಛಾನ್ಸೆಲರೂ ಆಗಿದ್ದರು. ಕಂಠೀರವ ನರಸಿಂಹರಾಜ ನಾಮಾಂಕಿತ ಕಟ್ಟಡಗಳೂ ರಸ್ತೆಗಳೂ ಬಡಾವಣೆಗಳೂ ದಕ್ಷಿಣ ಕರ್ನಾಟಕದಲ್ಲಿವೆ. ಕಂಠೀರವ ನರಸಿಂಹರಾಜ ಒಡೆಯರು ಧರ್ಮಗಳ ವಿಷಯದಲ್ಲೂ ವಿಶೇಷ ಆಸಕ್ತಿ ವಹಿಸಿದ್ದರು. ಇವರು ಮುಖ್ಯವಾಗಿ ಹಿಂದು ಮುಸಲ್ಮಾನರ ಏಕತೆಗೆ ಸಾಕಷ್ಟು ಶ್ರಮಿಸಿದರು.

ಇವರು 1940 ಮಾರ್ಚ್ 11ರಂದು ಮುಂಬಯಿಯಲ್ಲಿ ನಿಧನರಾದರು. ಕೃಷ್ಣರಾಜ ಒಡೆಯರ ಅನಂತರ ಮೈಸೂರು ಸಂಸ್ಥಾನದ ರಾಜರಾದ ಜಯಚಾಮರಾಜ ಒಡೆಯರು (ನೋಡಿ) ಇವರ ಪುತ್ರ. (ಎಸ್.)

**ಕಂಠೀರಾವ್ :** 1926-. ಕರ್ನಾಟಕ ರಾಜಭಾಷಾ ಆಯೋಗದ ಅಧ್ಯಕ್ಷರು. ಕನ್ನಡ ಕಾನೂನು ಸಾಹಿತ್ಯ ಲೇಖಕರು. ಬಹು ಭಾಷಾ ವಿಶಾರದರು. ಇವರು ರಾಯಚೂರು ಜಿಲ್ಲೆ ಗುಡುಗುಂಟೆ ಸಂಸ್ಥಾನದ ಜಹಗೀರದಾರರ ಮನೆತನಕ್ಕೆ ಸೇರಿದವರು. 1926ರಲ್ಲಿ ಜನಿಸಿದರು. ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯದಿಂದ ಬಿ.ಎ. ಮತ್ತು ಎಲ್.ಎಲ್.ಬಿ. ಪದವಿಗಳನ್ನು ಪಡೆದರು. ಕರ್ನಾಟಕ ರಾಜ್ಯದ ಭಾಷಾಂತರ ನಿರ್ದೇಶನಾಲಯದಲ್ಲಿ ಸೇವೆ ಸಲ್ಲಿಸಿ ಅದರ ನಿರ್ದೇಶಕರಾಗಿ ನಿವೃತ್ತರಾದರು. ಆಡಳಿತ ಪದಕೋಶ ಪರಿಶೀಲನಾ ಸಮಿತಿಯ ಅಧ್ಯಕ್ಷರೂ ಆಗಿದ್ದ ಇವರು ಅನಂತರ ರಾಜಭಾಷಾ ಆಯೋಗದ ಅಧ್ಯಕ್ಷರೂ ಆದರು.

ಕಾನೂನು ಮತ್ತು ಆಡಳಿತ ವ್ಯವಸ್ಥೆಗೆ ಸಂಬಂಧಿಸಿದಂತೆ ಕನ್ನಡದಲ್ಲಿ 16ಕ್ಕೂ ಹೆಚ್ಚು ಗ್ರಂಥಗಳನ್ನು ಬರೆದಿದ್ದಾರೆ. ಭಾರತೀಯ ನ್ಯಾಯ ಪದ್ಧತಿ, ಮಕ್ಕಳು ಮತ್ತು ಕಾನೂನು ಎಂಬ ಗ್ರಂಥಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನಗಳು ಬಂದಿವೆ. ಆಡಳಿತ ವಿಷಯ ಪಾರಿಭಾಷಿಕ, ಇಸ್ಲಾಮೀನ್ಯಾಯ, ಕಾನೂನು ಭಾಷೆ-ಭಾಷಾಂತರ ಸಮಸ್ಯೆ, ನ್ಯಾಯ ನಿಬಂಧನೆ - ಇವರ ಇತರ ಮುಖ್ಯ ಕೃತಿಗಳು. ಆಡಳಿತ ಸಂಬಂಧಿಯಾದ ಶುಷ್ಕ ಭಾಷಿಕ ವಿಚಾರವನ್ನೂ ಹಿತವಾಗಿ ಹೃದ್ಯವಾಗಿ ಬರೆಯುವ ಕಲೆ ಇವರಿಗೆ

ಸಿದ್ಧಿಸಿತ್ತು. ಇಂಗ್ಲಿಷ್, ಸಂಸ್ಕೃತ, ಹಿಂದಿ ಭಾಷೆಗಳಲ್ಲಿ ಆಳವಾದ ಜ್ಞಾನ ಹೊಂದಿದ್ದ ಇವರು ಭಾರತೀಯ ಕಾನೂನಿನ ತಳಹದಿಯಾದ ಸಂಸ್ಕೃತ ಕೃತಿಗಳ ಸಾರವನ್ನು ಮನಮುಟ್ಟುವಂತೆ ನಿರೂಪಿಸುವ ಮತ್ತು ವಿಶ್ಲೇಷಿಸುವ ವಿಶೇಷ ಪಾಂಡಿತ್ಯ ಮತ್ತು ಸಾಮರ್ಥ್ಯವನ್ನು ಪಡೆದಿದ್ದರು. ಉತ್ತಮ ವಾಗ್ಮಿಯಾಗಿದ್ದ ಇವರು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದ ವಿಚಾರಗೋಷ್ಠಿಗಳಲ್ಲಿ ಪ್ರಬಂಧಗಳನ್ನು ಮಂಡಿಸಿ ವಿದ್ವಜ್ಜನರ ಮೆಚ್ಚುಗೆಗೆ ಪಾತ್ರರಾಗಿದ್ದರು. ರಾಜ್ಯದ ಭಾಷಾಂತರ ನಿರ್ದೇಶನಾಲಯದ ರೂವಾರಿಯಾಗಿದ್ದ ಇವರನ್ನು ವಿ.ಕೃ.ಗೋಕಾಕರು ಕನ್ನಡ ಕಾನೂನು ಆಚಾರ್ಯ ಎಂದು ಕರೆದಿದ್ದಾರೆ. ಸೇವೆಯಿಂದ ನಿವೃತ್ತರಾದ ಮೇಲೂ ಇವರು ರಾಜ್ಯ ಮತ್ತು ಕೇಂದ್ರ ಸರ್ಕಾರಗಳಿಗಾಗಿ ಹಲವು ಭಾಷಾಂತರ ಕಾರ್ಯಗಳಲ್ಲಿ ತೊಡಗಿದ್ದರು. ಇವರು ನಿವೃತ್ತಿಯ ಅನಂತರ ಹೆಚ್ಚುಕಾಲ ಬದುಕಲಿಲ್ಲ *

**ಕಂತಿ :** ಸು.110. ಕನ್ನಡದ ಮೊದಲ ಕಬ್ಬಿಗಿತಿ. ಈಕೆ ಅಭಿನವ ಪಂಪನ (ನಾಗಚಂದ್ರ) ಸಮಕಾಲೀನೆ, ದೋರರಾಯನ ಆಸ್ಥಾನ ಪಂಡಿತೆ ಎಂಬ ಹೇಳಿಕೆಗಳಿವೆ. ಇದರ ಬಗ್ಗೆ ಭಿನ್ನಾಭಿಪ್ರಾಯಗಳೂ ಇವೆ.

ಕಂತಿ, ಕಂತಿಕೆ ಜೈನಸಂನ್ಯಾಸಿನಿಯರನ್ನು ನಿರ್ದೇಶಿಸುವ ಸಾಮಾನ್ಯ ಹೆಸರು. ಇದರಿಂದ ಕಂತಿ ಎಂಬ ವ್ಯಕ್ತಿ ಇದ್ದಿರಬಹುದಾದರೂ ಜೈನ ಮತೀಯಳಿರಬೇಕೆಂದು ವಿದ್ವಾಂಸರ ಊಹೆ. ಇವಳ ಸಮಕಾಲೀನನೆಂದು ಹೇಳುವ ನಾಗಚಂದ್ರನ ಕಾವ್ಯಗಳಲ್ಲಿ ಕಂತಿ ಎಂಬ ಹೆಸರಿನ ಉಲ್ಲೇಖವಾಗಲಿ, ಅವಳಿಗೆ ಸಂಬಂಧಿಸಿದ ಯಾವುದೆ ವಿಷಯಗಳಾಗಲಿ ತಿಳಿದುಬರುವುದಿಲ್ಲ. ದೋರರಾಯ ಯಾರೆಂಬುದು ಸರಿಯಾಗಿ ತಿಳಿಯದು. ನಾಗಕುಮಾರ ಚರಿತ್ರೆಯ ಕರ್ತೃ ಬಾಹುಬಲಿ ಕವಿ (16ನೆಯ ಶತಮಾನ), ರಾಜಾವಳೀ ಕಥೆಯ ಕರ್ತೃ ದೇವಚಂದ್ರ (19ನೆಯ ಶತಮಾನ) ಇವಳ ಹೆಸರನ್ನು ಹೇಳುತ್ತಾರೆ. ಅಲ್ಲದೆ ಇವರ ಕಾವ್ಯಗಳಿಂದ ಕಂತಿಯ ಬಗ್ಗೆ ಕೆಲವು ಕುತೂಹಲಕರ ಸಂಗತಿಗಳೂ ತಿಳಿದುಬರುತ್ತವೆ. ರಾಜಾವಳೀ ಕಥೆಯಲ್ಲಿ ಕಂತಿ ಕಬ್ಬಿಗಿತಿ ಆದದ್ದು ಒಂದು ಪವಾಡವಾಗಿ ಚಿತ್ರಿತವಾಗಿದ್ದು ಆ ಕಥೆ ಹೀಗಿದೆ. ದೋರರಾಯನ ಮಂತ್ರಿಯಾದ ಧರ್ಮಚಂದ್ರನ ಮಗ ವೃತ್ತಿಯಿಂದ ಉಪಾಧ್ಯಾಯ. ಆತ ವಿದ್ಯಾರ್ಥಿಗಳಿಗೆ ಛಂದಸ್ಸು ಅಲಂಕಾರಶಾಸ್ತ್ರ ವ್ಯಾಕರಣ ಕಾವ್ಯಾದಿ ಪಾಠ ಹೇಳುತ್ತಿದ್ದು ಮಕ್ಕಳಿಗೆ ತಿಳುವಳಿಕೆ ಹೆಚ್ಚಿಸಲು ಜೋತಿಷ್ಮತೀ ತೈಲವೆಂಬ ವಿಶಿಷ್ಟ ತೈಲವನ್ನು ಸಿದ್ಧಪಡಿಸಿ ಒಂದು ಪುಟ್ಟ ಕುಡಿಕೆಯಲ್ಲಿಟ್ಟುಕೊಂಡಿದ್ದು ಸ್ವಲ್ಪ ದಡ್ಡರಾಗಿದ್ದ ಶಿಷ್ಯರಿಗೆ ಅರ್ಧ ಬಿಂದು ತೈಲ ಕುಡಿಸುತ್ತಿದ್ದ. ಇದರಿಂದ ಅವರಲ್ಲಿ ದಡ್ಡತನ ತೊಲಗಿ ಚುರುಕು ಕಾಣುತ್ತಿತ್ತು. ಕಂತಿ ಈತನ ಮನೆಗೆಲಸದವಳು. ಒಮ್ಮೆ ತಿಳಿಯದೆ ಆ ಕುಡಿಕೆಯಲ್ಲಿದ್ದ ತೈಲವನ್ನೆಲ್ಲ ಕುಡಿದುಬಿಟ್ಟಳು. ಕೂಡಲೆ ಅವಳ ಮೈಯಲ್ಲಿ ಉರಿ ಹತ್ತಿದಂತಾಗಿ ಅದರ ಶಮನಕ್ಕಾಗಿ ಹತ್ತಿರದ ಬಾವಿಗೆ ದುಮುಕಿದಳು. ಪುಣ್ಯವಿಶೇಷದಿಂದ ಬಾವಿಯಲ್ಲಿ ಹೆಚ್ಚಾಗಿ ನೀರಿಲ್ಲದ್ದರಿಂದಾಗಿ ಬದುಕಿದಳು. ಉರಿಯೆಲ್ಲ ಕಡಿಮೆಯಾಯಿತು. ಕುರಿತೋದದ ಕಂತಿ ಕಾವ್ಯ ಕಟ್ಟುವ ಪರಿಣತ ಮತಿಯಾದಳು. ಈಕೆಯ ಕಾವ್ಯಗಳಾವುವೂ ದೊರೆತಿಲ್ಲ. ಆದರೆ ಕಂತಿ ಹಂಪನ ಸಮಸ್ಯೆಗಳೆಂಬ - ಜನಪ್ರಿಯ ಹೆಸರು ಪಡೆದ ಈ ಸಂವಾದಗಳಲ್ಲಿ ಕೆಲವು ಸ್ಪರ್ಧಾಮನೋಭಾವದಿಂದ ಕೂಡಿರುವುದೂ ಉಂಟು. ಕಾವ್ಯದ ಬುದ್ಧಿಯ ಚಮತ್ಕಾರ ಬಹುವಾಗಿ ಕಂಡುಬರುತ್ತದೆ. ಅಲ್ಲಲ್ಲಿ ಕಾವ್ಯದ ಮಿಂಚು ಪಡೆದು ಕೆಲವು ಸಮಸ್ಯೆಗಳು ಸರಸಹಾಸ್ಯದ ಚೆಲುವೆಯಾಗಿ ಪುಟಿದಿವೆ. ಸಂವಾದದಲ್ಲಿ ನಾಗಚಂದ್ರ ಒಡ್ಡುವ ಸಮಸ್ಯೆಗಳನ್ನು ಕಂತಿ ಚಮತ್ಕಾರದಿಂದ ಉತ್ತರ ಕೊಟ್ಟು ಪರಿಹರಿಸುತ್ತಿದ್ದಳು. ಉದಾ: ದನವಂ ಕಡಿಕಡಿದು ಬಸದಿಗೆಟೆಯುತ್ತಿರ್ದರ್ ಎಂದು ಹಂಪ ಹೇಳಿದರೆ, ವನದೊಳಗೆ ಪುಟ್ಟಿ ಬೆಳೆಯುತೆ ತನಿಗಂಪಂ ಪತ್ತುದೆಸೆಗೆ ಬೀರುತ್ತಿರ್ಪಾ ಘನತರ ಸುರುಚಿರ ಸಚ್ಚಂದನವಂ ಕಡಿಕಡಿದು ಬಸದಿಗೆಟೆಯುತ್ತಿರ್ದರ್ ಎಂದು ಕಂತಿ ಉತ್ತರ ನೀಡುತ್ತಿದ್ದಳು. ಒಮ್ಮೊಮ್ಮೆ ಕಂತಿಯೂ ಹಂಪನಿಗೆ ಸಮಸ್ಯೆ ಒಡ್ಡುತ್ತಿದ್ದಳು. ಅಂಥ ಒಂದು ನಿದರ್ಶನ : 'ನಿನ್ನ ಕವಿತ್ವಮೆಲ್ಲಂ ಮಡಕೆ ತುಡಕೆ ಅಡುಕೆ ಹೊಡಕೆ ಎಂದು ಕಂತಿ ಹೇಳಿದರೆ, ಮಡಕೆ ನಿಮಿರ್ದಾಡೆ ಜಡೆಗಳ್ ತುಡುಕೆ ಶರೌಘಮುಮನಭವನತಿಕೋಪದೊಳಂ ಅಡಕೆ ಮರುಳ್ಗಳ್ ಪೆಣನಂ ಹೊಡಕೆಡೆದರ್ ದೈತ್ಯರಂದು ತ್ರಿಪುರಸ್ಥಳದೊಳ್' ಎಂದು ಹಂಪ ಉತ್ತರ ನೀಡಿದ. ಈ ಕಾವ್ಯಸ್ಪರ್ಧೆಯಲ್ಲಿ ಯಾವಾಗಲೂ ಕಂತಿಯದೇ ಮೇಲುಗೈ. ಇದರಿಂದಾಗಿ ಅಭಿನವವಾಗ್ದೇವಿಯೆಂದು ಹೆಸರು ಹೊಂದಿದ್ದ ಕಂತಿಯಿಂದ ಒಮ್ಮೆ ಹೊಗಳಿಸಿಕೊಳ್ಳಬೇಕೆಂದು ಅಭಿನವಪಂಪನಿಗೆ ಆಸೆಯಾಯಿತಂತೆ. ಇದಕ್ಕಾಗಿ ಆತ ಒಂದು ಉಪಾಯ ಯೋಚಿಸಿದ. ಒಂದು ದಿನ ತಾನು ಸತ್ತಂತೆ ಸುಳ್ಳು ಸುದ್ದಿ ಹಬ್ಬಿಸಿ ಮುಸುಕು ಹಾಕಿಕೊಂಡು ಮಲಗಿದ. ಸುದ್ದಿ ತಿಳಿದು ಕಂತಿ ಧಾವಿಸಿ ಬಂದಳು. ಸತ್ತುಮಲಗಿದ್ದ ಕವಿಯ ಶಕ್ತಿಸಾಮರ್ಥ್ಯಗಳನ್ನು ನಾನಾಪರಿಯಲ್ಲಿ ಸ್ತುತಿಸಿದಳು. ಹೊಗಳಿಸಿಕೊಂಡ ಪಂಪ ದಿಗ್ಗನೆ ಎದ್ದು ಕುಳಿತ. ತನ್ನ ಪಂಥ' ಗೆದ್ದಿತೆಂದ. ಅದಕ್ಕೂ ಕಂತಿ ಸೋಲದೆ ಸತ್ತ ಹಂಪನನ್ನು ಹೊಗಳಿದೆ ಎಂದಳಂತೆ. ಈ ಗ್ರಂಥದ ಶೈಲಿ ನಾಗಚಂದ್ರನ ಕಾಲದ ಹಳಗನ್ನಡವಾಗಿರದೆ ಹೊಸಗನ್ನಡದ ಒಂದು ಬಗೆ ಇರುವಂತಿದ್ದು ಸಮಸ್ಯಾಪದ್ಯಗಳಲ್ಲಿ ಹೆಚ್ಚಾಗಿ ಶ್ಲೇಷೆ, ವಿಚಿತ್ರ ಶಬ್ದಜೋಡಣೆ ಕಂಡುಬರುತ್ತದೆ. ಇದನ್ನು ಲಕ್ಷಿಸಿದರೆ ಕೊನೆಗೂ ಕಂತಿ ಕಲ್ಪನೆಯ ವ್ಯಕ್ತಿಯೇ, ಕಂತಿ ಹಂಪನ ಸಮಸ್ಯೆಗಳು ಇವಳು ರಚಿಸಿದ ಗ್ರಂಥವೇ ಎಂಬ ಅನುಮಾನ ಉಳಿಯುತ್ತದೆ. ಒಟ್ಟಿನಲ್ಲಿ ಇದರ ಬಗ್ಗೆ ನಿರ್ಣಯಾತ್ಮಕವಾಗಿ ಹೇಳಬಲ್ಲ ಆಧಾರಗಳು ಯಾವುವೂ ಇದುವರೆಗೆ ದೊರೆತಿಲ್ಲ. (ಎಚ್.ಪಿ.ಎನ್.)

**ಕಂದ** [1] **:** ಒಂದು ಮಾತ್ರಾವೃತ್ತ. ಚಂಪೂಕಾವ್ಯಗಳಲ್ಲಿ ಇದರ ಬಳಕೆ ವಿಶೇಷವಾಗಿ ಕಾಣುತ್ತದೆ. ಕಂದವನ್ನೇ ಮುಖ್ಯ ಛಂದಸ್ಸಾಗಿಟ್ಟುಕೊಂಡು ರಚಿಸಿರುವ ಕೃತಿಗಳೇ ಕನ್ನಡದಲ್ಲಿ ಇವೆ. ಲಕ್ಷಣಗ್ರಂಥಗಳ ಸೂತ್ರಗಳು ಸಾಮಾನ್ಯವಾಗಿ ಕಂದದಲ್ಲಿಯೇ ಕಟ್ಟಿದವಾಗಿವೆ. ಉದಾಹರಣೆಗೆ, ಜನ್ನಕವಿಯ ಯಶೋಧರ ಚರಿತೆ (1209), ಕೇಶಿರಾಜನ ಶಬ್ದಮಣಿ ದರ್ಪಣ (ಸು.1260) ಇಂಥವನ್ನು ಹೇಳಬಹುದು. ಹೀಗೆ ಕನ್ನಡ ಕವಿಗಳಿಗೆ ಕಂದ ಅಚ್ಚುಮೆಚ್ಚಿನ ಛಂದಸ್ಸು. ಕಂದಂಗಳಮೃತ ಲತಿಕಾ । ಕಂದಂಗಳ್ । .......... ಕಂದಂಗಳ್ ವಾಗ್ವನಿತೆಯ । ಕಂದಂಗಳ್ ......... ಎಂದು ಮುಂತಾಗಿ ಹರಿಹರ, ಸುರಂಗಕವಿ ಮೊದಲಾದ ಒಬ್ಬಿಬ್ಬರು ಕವಿಗಳು ತಮ್ಮ ಮೆಚ್ಚಿಗೆಯನ್ನು ವ್ಯಕ್ತವಾಗಿಯೇ ತಿಳಿಸಿದ್ದಾರೆ.

ಕನ್ನಡದಲ್ಲಿ ಕಂದದ ಬಳಕೆಗೆ ದೀರ್ಘವಾದ ಇತಿಹಾಸವಿದೆ. ಪ್ರಾಚೀನ ಕನ್ನಡ ಶಾಸನಗಳಲ್ಲಿಯೇ ಅದು ತಲೆದೋರಿದೆ. ಕವಿರಾಜಮಾರ್ಗದಲ್ಲಿಯ (ಸು.850) ಸೂತ್ರೋದಾಹರಣೆಗಳಲ್ಲಿ ಅದು ವಿಪುಲವಾಗಿ ಬಳಕೆಯಾಗಿದೆ. ಅದರ ಬಂಧದ ಸೊಗಸು ನೆನೆಯತಕ್ಕದ್ದಾಗಿದೆ. ಅಲ್ಲಿಂದೀಚೆಗೆ ಪಂಪ ಮೊದಲಾದ ಕನ್ನಡ ಚಂಪೂ ಕವಿಗಳು ತಮ್ಮ ಕೃತಿಗಳಲ್ಲಿ ಕಂದವನ್ನು ಇತರ ವೃತ್ತಜಾತಿಗಳಿಗಿಂತ ಪ್ರಾಯಃ ಹೆಚ್ಚಾಗಿಯೇ ಎನ್ನುವಂತೆ ಹೇರಳವಾಗಿ ಬಳಸಿದ್ದಾರೆ. ಕವಿರಾಜ ಮಾರ್ಗದ ಕರ್ತೃವೂ ಪಂಪ, ಜನ್ನ, ಷಡಕ್ಷರಿ ಈ ಮೊದಲಾದ ಕೆಲವರೂ ಕಂದ ಪದ್ಯವನ್ನು ಸೊಗಸಾಗಿ ಬರೆಯಬಲ್ಲವರೆಂದು ಹೆಸರಾಗಿದ್ದಾರೆ. ಅದು ಹಳಗನ್ನಡ ಸಾಹಿತ್ಯದ ಜೀವಾಳವಾದ ಛಂದಸ್ಸು. ಅದರ ಲಕ್ಷಣದಲ್ಲಿ, ನಡುಗನ್ನಡದ ಕಾಲದಿಂದೀಚೆಗೆ ಆಗಾಗ ಶೈಥಿಲ್ಯಗಳು ತಲೆದೋರದಿದ್ದರೂ ಇಂದಿಗೂ ಅದರ ರಚನೆ ನಿಂತಿಲ್ಲ.

ಕಂದಪದ್ಯ ಸಂಸ್ಕೃತದ ಮಾತ್ರಾವೃತ್ತಗಳಲ್ಲಿ ದ್ವಿಪದಿಯಾದ ಆರ್ಯಾ ಅಥವಾ ಪ್ರಾಕೃತದ ಮಾತ್ರಾವೃತ್ತಗಳಲ್ಲಿ ದ್ವಿಪದಿಯಾದ ಗಾಥಾ ಎಂಬ ವೃತ್ತಜಾತಿಯ ವರ್ಗಕ್ಕೆ ಸೇರಿದ್ದಾಗಿದೆ. ಆರ್ಯೆಯ ಸಾಮಾನ್ಯಲಕ್ಷಣ ಹೀಗೆ ಎರಡು ಅರ್ಧಗಳು ಪೂರ್ವಾರ್ಧದಲ್ಲಿ 7 ಚತುರ್ಮಾತ್ರಾಗಣ + 1 ಗುರು (=30ಮಾತ್ರೆ); ಉತ್ತರಾರ್ಧದಲ್ಲಿ 5 ಚತುರ್ಮಾತ್ರಾಗಣ + 1 ಲಘು + 1 ಚತುರ್ಮಾತ್ರಾಗಣ + 1 ಗುರು (=27ಮಾತ್ರೆ); ಎರಡೂ ಅರ್ಧಗಳ ವಿಷಮಸ್ಥಾನಗಳಲ್ಲಿ ಮಧ್ಯಗುರುವಿನ ಗಣ (ಜಗಣ) ಬರಕೂಡದು; ಪೂರ್ವಾರ್ಧದಲ್ಲಿ 6ನೆಯ ಗಣಸ್ಥಾನದಲ್ಲಿ ತಪ್ಪದೆ ಮಧ್ಯ ಗುರುವಿನ ಗಣ (ಜಗಣ); ಅಥವಾ ಸರ್ವಲಘುವಿನ ಗಣ ಬಂದಿರಬೇಕು ಸರ್ವ ಲಘುವಿನ ಗಣವಾಗಿದ್ದ ಪಕ್ಷದಲ್ಲಿ 2ನೆಯ ಲಘುವಿಂದ ಹೊಸಪದ ಆರಂಭವಾಗಿರಬೇಕು. ಆದರೆ ಪೂರ್ವಾರ್ಧದ 7ನೆಯ ಗಣ ಅಥವಾ ಉತ್ತರಾರ್ಧದ 5ನೆಯ ಗಣ ಇವು ಸರ್ವಲಘು ರೀತಿಯದಾಗಿದ್ದರೆ 1ನೆಯ ಲಘುವಿಂದಲೇ ಹೊಸಪದ ಆರಂಭವಾಗಬೇಕು. ಚತುರ್ಮಾತ್ರಾಗಣಗಳ ಕಟ್ಟು ಕೆಡಬಾರದು.

ಗಾಥಾದ ಲಕ್ಷಣವೂ ಇದೇ ರೀತಿಯಾಗಿರುತ್ತದೆ. ಆರ್ಯಾ ಮತ್ತು ಗಾಥಾ ಎರಡರಲ್ಲಿಯೂ ಲಕ್ಷಣದ ಚೌಕಟ್ಟನ್ನು ಹೀಗೆಯೇ ಉಳಿಸಿಕೊಂಡು ಮಾತ್ರಾಸಂಖ್ಯೆಯಲ್ಲಿ ಮಾತ್ರ ಅದಲು ಬದಲು ಮಾಡಿಕೊಳ್ಳುವುದರ ಮೂಲಕ, ಅಲ್ಪಸ್ವಲ್ಪ ವ್ಯತ್ಯಾಸವನ್ನು ಮಾಡಿ ಕೊಳ್ಳುವುದರ ಮೂಲಕ, ಕೆಲವು ಪ್ರಭೇದಗಳನ್ನು ಕಲ್ಪಿಸಿಕೊಂಡಿದೆ. ಆರ್ಯಾದಲ್ಲಿ ಗೀತಿ: 30, 30; ಉದ್ಗೀತಿ 27, 30; ಉಪಗೀತಿ 27, 27; ಆರ್ಯಾಗೀತಿ 32, 32 ಇತ್ಯಾದಿ. ಹೀಗೆಯೇ ಗಾಥಾದಲ್ಲಿ ಕೂಡ.

ಸಂಸ್ಕೃತದ ಆರ್ಯಾಪ್ರಭೇದಗಳಲ್ಲಿ ಆರ್ಯಾಗೀತಿ ಎಂಬುದೂ ಪ್ರಾಕೃತ ಗಾಥಾ ಪ್ರಭೇದಗಳಲ್ಲಿ ಸ್ಕಂಧಕ ಎಂಬುದೂ ಕನ್ನಡ ತೆಲುಗುಗಳ ಕಂದವನ್ನು ಹತ್ತಿರದಿಂದ ಹೋಲತಕ್ಕವಾಗಿವೆ. ಆದುದರಿಂದ ಅವುಗಳ ಸ್ವರೂಪವನ್ನು ಸ್ವಲ್ಪ ಗಮನಿಸಬೇಕಾಗುತ್ತದೆ.

ಸಂಸ್ಕೃತದಲ್ಲಿ ಆರ್ಯಾಗೀತಿ ಎಂದು ಹೇಳಿರುವುದನ್ನೆ ಪ್ರಾಕೃತದಲ್ಲಿ ಸ್ಕಂಧಕ ಎಂದಿರುತ್ತದೆ. ಭರತಪಿಂಗಲಾದ್ಯರು ಆರ್ಯಾಗೀತಿಯ ಲಕ್ಷಣವನ್ನೂ ಸ್ವಯಂಭು ಹೇಮಚಂದ್ರಾದ್ಯರು ಸ್ಕಂಧಕದ ಲಕ್ಷಣವನ್ನೂ ನಿರೂಪಿಸಿದ್ದಾರೆ. ಅವುಗಳ ಲಕ್ಷಣ ಒಂದೇ. ಅದು ಹೀಗೆ: ಎರಡು ಅರ್ಧಗಳು; ಪ್ರತಿಯರ್ಧದಲ್ಲಿಯೂ 8 ಚತುರ್ಮಾತ್ರಾಗಣಗಳಿರುತ್ತವೆ. ಎರಡೂ ಅರ್ಧಗಳ 6ನೆಯ ಗಣಸ್ಥಾನದಲ್ಲಿ ತಪ್ಪದೆ ಮಧ್ಯಗುರುವಿನ ಗಣವೋ (ಜಗಣ) ಸರ್ವಲಘುವಿನ ಗಣವೋ ಬಂದಿರುತ್ತದೆ. (ಸುಲ್ಹಣ ಮೊದಲಾದ ಕೆಲವರು ಆರ್ಯೆಯನ್ನೆ 2 ಮಾತ್ರೆಗಳಿಂದ ಬೆಳೆಸಿದ್ದು ಎಂಬುದಾಗಿ ಹೇಳಿರುವುದುಂಟು. ಆಗ ಮಾತ್ರಾ ಸಂಖ್ಯೆ ಕ್ರಮವಾಗಿ 32, 29 ಆಗುವುದು. ಆದರೆ 32 ಮಾತ್ರೆಗಳ 2 ಸಮಾರ್ಧಗಳಾಗಿ ತಿಳಿಯುವುದೇ ಸಾಮಾನ್ಯ).

ಆರ್ಯಾ ಅಥವಾ ಗಾಥಾಭೇದವಾದ, ಎರಡು ಸಮಾರ್ಧಗಳನ್ನುಳ್ಳ, ಗೀತಿಯ (30,30) ಎರಡೂ ಅರ್ಧಗಳ ಕೊನೆಯ ಗುರುವಿಗೆ ಇನ್ನೊಂದು ಗುರುವನ್ನು ಸೇರಿಸಿ ಒಂದು ಚತುರ್ಮಾತ್ರಾಗಣವನ್ನಾಗಿ ಮಾಡಿಕೊಂಡದ್ದು (32, 32) ಆರ್ಯಾಗೀತಿ ಅಥವಾ ಸ್ಕಂಧಕಯೆನಿಸಿದಂತೆ ತೋರುತ್ತದೆ. ಆರ್ಯೆ (ಗಾಥೆಯ) ಗೀತಿಯಾದಾಗ ಆರ್ಯೆಯ (ಗಾಥೆಯ) ಪೂರ್ವಾರ್ಧದ ಲಕ್ಷಣ ಗೀತಿಯ ಪೂರ್ವಾರ್ಧ ಉತ್ತರಾರ್ಧಗಳಿಗೂ ಅನ್ವಯಿಸಿದಂತೆ, ಗೀತಿ ಆರ್ಯಾಗೀತಿಯಾದಾಗ (ಸ್ಕಂಧಕವಾದಾಗ) ಗೀತಿಯ ಲಕ್ಷಣ ಆರ್ಯಾಗೀತಿಗೂ (ಸ್ಕಂಧಕಕ್ಕೂ) ಅನ್ವಯಿಸಿತೆಂದು ಸಹಜವಾಗಿಯೇ ತಿಳಿಯಬಹುದು. ಮುಖ್ಯವಾಗಿ, ಸೂತ್ರಕಾರರೂ ವ್ಯಾಖ್ಯಾನಕಾರರೂ ಆರ್ಯಾಗೀತೆ (ಸ್ಕಂಧಕ) ಪ್ರತಿಯರ್ಧದಲ್ಲಿ 8 ಚತುರ್ಮಾತ್ರಾಗಣಗಳಿಂದ ಕೂಡಿದ್ದು, ಅದರ 6ನೆಯ ಗಣ ಸ್ಥಾನದಲ್ಲೆಲ್ಲ ಮಧ್ಯಗುರುವಿನ ಗಣ (ಜಗಣ) ಅಥವಾ ಸರ್ವಲಘುವಿನ ಗಣ ಬರತಕ್ಕದ್ದು ಎಂಬುದನ್ನು ಒತ್ತಿ ಹೇಳಿದ್ದಾರೆ. ಆರ್ಯಾದ ಅಥವಾ ಗಾಥಾದ (ಗೀತಿಯ) 7ನೆಯ ಲಕ್ಷಣಾಂಶವನ್ನು ಎತ್ತಿರುವಂತೆ ತೋರುವುದಿಲ್ಲ. ಆದರೆ ಎರಡೂ ಅರ್ಧಗಳ 6 ಮತ್ತು 7ನೆಯ ಗಣಗಳು ಸರ್ವ ಲಘುವಿನ ಗಣಗಳಾದಾಗ ಪಾಲಿತವಾಗಬೇಕಾದ ನಿಯಮವನ್ನು ಕೂಡ ಆರ್ಯಾ ಗೀತಿಗೆ (ಸ್ಕಂಧಕಕ್ಕೆ) ಅವರು ಒಪ್ಪಿದ್ದಾರೆಂಬುದು ಗ್ರಹಿಸಬಹುದು.

ಮೊದಲು ಪ್ರಾಯಃ ಸಂಸ್ಕೃತದಲ್ಲಿ ಆರ್ಯಾಪ್ರಭೇದವಾಗಿ ಆರ್ಯಾಗೀತಿ ಕಾಣಿಸಿಕೊಂಡಿರಬೆಕು. ಅದೇ ಅನಂತರದಲ್ಲಿ ಪ್ರಾಕೃತಕ್ಕೆ ಸ್ಕಂಧಕವೆಂಬ ಹೆಸರಿಂದ ಗಾಥಾ ಪ್ರಭೇದಗಳ ಸಾಲಿಗೆ ಸ್ವೀಕೃತವಾಗಿರಬೇಕು. ಆರ್ಯಾಗೀತಿಯ ಲಕ್ಷಣವನ್ನು ಭರತ, ಪಿಂಗಲ, ಮೊದಲಾದ ಪ್ರಾಚೀನರು ಹೇಳಿರುವುದು ಈ ಭಾವನೆಗೆ ಅವಕಾಶಕೊಡುತ್ತದೆ. ಆದರೆ ಈ ಪೌರ್ವಾಪರ್ಯವನ್ನು ಹೀಗೆಯೇ ಸರಿ ಎನ್ನುವುದು ಕಷ್ಟ.

ಈಗ ಆರ್ಯಾಗೀತಿಗೂ ಸ್ಕಂಧಕಕ್ಕೂ ಒಂದೊಂದು ಉದಾಹರಣೆ ಯನ್ನು ನೋಡಬಹುದು.

1. ಆರ್ಯಾಗೀತಿಗೆ: ಅಜಮಜ| ರಮಮರ| ಮೇಕಂ| ಪ್ರತ್ಯ| ಕ್ಚೈತ|
   ನ್ಯಮೀಶ್ವ| ರಂ ಬ್ರ| ಹ್ಮಪರಮ್|
   ಆತ್ಮಾ| ನಂ ಭಾ| ವಯತೋ| ಭವಮು|ಕ್ತಿಃ ಸ್ಯಾ|
   ದಿತೀಯ| ಮಾರ್ಯಾ| ಗೀತಿಃ|

(ಪಿಂಗಲ ಛಂದಶಾಸ್ತ್ರ)

2. ಸ್ಕಂಧಕಕ್ಕೆ: ಚಲಿಅಂ | ಚವಾಣ | ರವಲಂ |
   ಚಲಿಪಿ | ತಮ್ಮಿಚ | ಲಕೇಸ| ಸಡು | ಜ್ಜೋಅಮ್ |
   ಗಹಿಅದಿ | ಸಾಪರಿ | ಣಾಹಂ |
   ವಊಹ | ಜಾಲಂ | ವದಿಣಅ | ರಸ್ಸ ಫು | ರನ್ತಮ್ |

(ಪ್ರವರಸೇನನ ಸೇತುಬಂಧ)

ಈ ಮೇಲಿನ ವಿವೇಚನೆಯು ಬೆಳಕಿನಲ್ಲಿ ಈಗ ಕಂದಪದ್ಯದ ಸ್ವರೂಪವನ್ನು ಪರಿಶೀಲಿಸುವುದು ಸುಲಭ. ಕನ್ನಡದಲ್ಲಿ ಕಂದದ ಲಕ್ಷಣವನ್ನು ಮೊದಲು ನಾಗವರ್ಮನ ಛಂದೋಂಬುಧಿಯಲ್ಲಿ (ಕ್ರಿ.ಶ.ಸು.990) ಅದರ ಚತುರ್ಥಾಧಿಕಾರದಲ್ಲಿ ಕಾಣುತ್ತೇವೆ. ಆರ್ಯಾ ಮತ್ತು ಅದರ ಕೆಲವು ಪ್ರಭೇದಗಳ ಲಕ್ಷಣವನ್ನು ಅಲ್ಲಿಯೇ ಹೇಳಿದ್ದರೂ ಕಂದಕ್ಕೆ ಅವುಗಳೊಡನೆ ಇರುವ ಸಂಬಂಧವನ್ನು ಉಚಿತವಾದ ಕ್ರಮದಲ್ಲಿ ಸ್ಪಷ್ಟವಾಗಿ ತೋರಿಸಿಲ್ಲ. ಆತನು ಕೊಡುವ ಕಂದಪದ್ಯದ ಲಕ್ಷಣ: 4 ಪಾದಗಳು; ಇವುಗಳಲ್ಲಿ ಕ್ರಮವಾಗಿ 3,5,3,5 ಗಣಗಳಿರುತ್ತವೆ. ಹಾಗೂ 12,20,12,20 ಮಾತ್ರೆಗಳು ಬರುತ್ತವೆ (4-5). ಹಿಂದೆ ಆರ್ಯಾದಿಗಳಿಗೆ ಹೇಳಿದ ಸಾಮಾನ್ಯ ಲಕ್ಷಣಗಳ್ನು ಇಲ್ಲಿಗೆ ಅನ್ವಯಿಸಿಕೊಳ್ಳಬೇಕು. ಎಂಬುದು ಆತನ ನಿರೂಪಣೆಯ ಕ್ರಮವನ್ನು ನೋಡಿದರೆ ತಿಳಿಯುತ್ತದೆ. ಕಂದದ ಗಣಗಳು ಕೂಡ ಚತುರ್ಮಾತ್ರೆಗಳಿಂದಾದವು. ಆ ಗಣಗಳು ⏑⏑–, –⏑⏑ ––, ⏑–⏑ ⏑⏑⏑⏑ ಎಂಬ ಐದು ತೆರನಾದವು. ಈ ಐದು ಗಣಗಳಲ್ಲಿ ⏑–⏑ ಎಂಬುದು ವಿಷಮಸ್ಥಾನಗಳಲ್ಲಿ ಬರಕೂಡದು. ಇವು ಹಾಗೆ ಅನ್ವಯವಾಗತಕ್ಕ ಲಕ್ಷಣಗಳು. ಇನ್ನು 6ನೆಯ ಗಣ ಸ್ಥಾನದಲ್ಲಿ ಮಧ್ಯಗುರುವಿನ ಅಥವಾ ಸರ್ವಲಘುವಿನ ಗಣವಾಗಿದ್ದ ಪಕ್ಷದಲ್ಲಿ 2ನೆಯ ಲಘುವಿನಿಂದ ಹೊಸಪದ ಆರಂಭವಾಗಿರಬೇಕು ಎಂಬುದನ್ನೂ ವ್ಯಕ್ತವಾಗಿ ಹೇಳದಿದ್ದರೂ ಲಕ್ಷಣಗಳನ್ನು ನೋಡಿ ತಿಳಿದುಕೊಳ್ಳಬೇಕು.

ಕಂದದ ಈ ನಿಯಮಗಳು ಈ ಮೊದಲು ನೋಡಿದ ಆರ್ಯಾಗೀತಿ ಅಥವಾ ಸ್ಕಂಧಕದ ನಿಯಮಗಳಿಗೆ ಅನುಸಾರವಾಗಿಯೇ ಇವೆ. ಕಂದದ ಮೂಲ ಆರ್ಯಾಗೀತಿಯೋ ಸ್ಕಂಧಕವೋ ಆಗಿರಬೇಕೆಂದು ತಿಳಿಯುವುದಕ್ಕೆ ಇದರಿಂದ ಅವಕಾಶವಾಗುತ್ತದೆ. ಪಾದಸಂಖ್ಯೆಯನ್ನು ಕಂದದಲ್ಲಿ ನಾಲ್ಕು ಎಂದು ನಾಗವರ್ಮ ಹೇಳಿರುವುದು ಒಂದು ತೋರಿಕೆಯ ವ್ಯತ್ಯಾಸ. ಆರ್ಯಾಗೀತಿ, ಸ್ಕಂದಕಗಳು ದ್ವಿಪದಿಗಳಾದ ಮಾತ್ರಾವೃತ್ತಗಳು. ಆದರೆ ಅವುಗಳಲ್ಲಿಯೂ ಆ ವರ್ಗದ ಇತರ ಪ್ರಭೇದಗಳಲ್ಲಿಯೂ ಪ್ರತಿಯರ್ಧದಲ್ಲಿಯೂ 12ನೆಯ ಮಾತ್ರೆಯಾದ ಯತಿ ಬರುವುದನ್ನು ನಿದರ್ಶನಗಳ ಪರಿಶೀಲನೆಯಿಂದ ಕಾಣುತ್ತೇವೆ ಎನ್ನುವುದರಿಂದಲೂ ಪಥ್ಯಾರ್ಯಾ ಮೊದಲಾದ ಕಡೆ ಅದನ್ನು ವ್ಯಕ್ತವಾಗಿಯೇ ಹೇಳಿರುವುದರಿಂದಲೂ ಪ್ರತಿಯರ್ಧವನ್ನೂ ಎರಡು ಭಾಗಗಳಾಗಿ ಗಣಿಸುವುದು ಸಹಜವೇ ಆಗಿದೆ. ಕನ್ನಡದಲ್ಲಿ ದ್ವಿತೀಯಾಕ್ಷರ ಪ್ರಾಸದ ಬಳಕೆಯಿಂದಾಗಿ ಕಂದ 4 ಸಾಲುಗಳಾಗಿಯೇ ರೂಪಗೊಂಡಿದೆ.

ಇದನ್ನು ಗಮನಿಸಿ ಕಂದದ ಲಕ್ಷಣವನ್ನು ಹೀಗೆ ಹೇಳಬಹುದು: 4 ಪಾದಗಳು, ಇವುಗಳಲ್ಲಿ 1,2 ನೆಯ ಪಾದಗಳಂತೆಯೇ 3,4 ನೆಯ ಪಾದಗಳಿರುತ್ತವೆ. 1,2 ನೆಯ ಪಾದಗಳಲ್ಲಿ ಕ್ರಮವಾಗಿ 3,5ರ ಹಾಗೆ ಒಟ್ಟು 8 ಚತುರ್ಮಾತ್ರಾಗಣಗಳು (12+20=32); 3,4 ನೆಯ ಪಾದಗಳಲ್ಲಿಯೂ ಹೀಗೆಯೇ (12+20=32). ಚತುರ್ಮಾತ್ರಾಗಣಗಳ ಕಟ್ಟು ಕೆಡಬಾರದು. ಪ್ರಥಮಾರ್ಧದ ಹಾಗೂ ದ್ವಿತೀಯಾರ್ಧದ 8ನೆಯ ಗಣಸ್ಥಾನದ ಅಂತ್ಯದಲ್ಲಿ ಗುರು ತಪ್ಪದೆ ಬಂದಿರಬೇಕು; ಈ ಎರಡೂ ಅರ್ಧಗಳ ವಿಷಮ ಸ್ಥಾನಗಳಲ್ಲಿ ಮಧ್ಯ ಗುರುವಿನ ಗಣ (ಜಗಣ) ಬರಬಾರದು. ಆದರೆ ಅವುಗಳ 6ನೆಯ ಗಣಸ್ಥಾನದಲ್ಲಿ ಮಧ್ಯ ಗುರುವಿನ ಗಣ (ಜಗಣ) ವಾಗಲಿ ಸರ್ವಲಘುವಿನ ಗಣವಾಗಲಿ ತಪ್ಪದೆ ಬಂದಿರಬೇಕು. ಸರ್ವಲಘುವಿನ ಗಣವಾಗಿದ್ದ ಪಕ್ಷದಲ್ಲಿ, ಹಾಗೆಯೇ ಮಧ್ಯಗುರುವಿನ ಗಣ ಎಂದರೆ ಜಗಣವಾಗಿದ್ದ ಪಕ್ಷದಲ್ಲಿಯೂ ಮೊದಲನೆಯ ಹ್ರಸ್ವದ ಮುಂದೆ ಯತಿಯಿರಬೇಕು. 7ನೆಯ ಗಣ ಸರ್ವಲಘುವಿನ ಗಣವಾಗಿದ್ದಲ್ಲಿ ಮೊದಲನೆಯ ಹ್ರಸ್ವದಿಂದಲೇ ಹೊಸಪದ ಮೊದಲಾಗಬೇಕು.

ಕನ್ನಡ ಸಾಹಿತ್ಯದಲ್ಲಿ ಪ್ರಾಚೀನ ಕವಿಗಳು ಬಲುಮಟ್ಟಿಗೆ ಈ ನಿಯಮಕ್ಕೆ ಅನುಗುಣವಾಗಿಯೇ ಕಂದಗಳನ್ನು ರಚಿಸಿದ್ದಾರೆ. ಕನ್ನಡದಲ್ಲಿ ಯತಿ

ನಿಯಮವು ಐಚ್ಛಿಕವಾದುದು ಎಂದು ತಿಳಿದಿರುವುದರಿಂದ ಯತಿಯನ್ನು ನಿಯತವಾಗಿ ಪಾಲಿಸುವ ವಿಷಯದಲ್ಲಿ ಅಲ್ಲಲ್ಲಿ ಅಪವಾದಗಳು ಕಾಣಿಸಿಕೊಂಡಿರವುದುಂಟು. ಹಾಗೆಯೇ ಈಚಿನ ಕಾಲದ ಕವಿಗಳು ಚತುರ್ಮಾತ್ರಾಗಣ ನಿಯಮಕ್ಕೆ ಸರಿಯಾಗಿ ಲಕ್ಷ್ಯಕೊಡದೆ, 8ನೆಯ ಗಣದ ಕೊನೆಗೆ ಗುರುವನ್ನು ತರದೆ,ಸಾಮಾನ್ಯ ನಿಯಮವನ್ನು ಮೀರಿರುವುದೂ ಉಂಟು. ಆದರೆ ಒಟ್ಟಿನಲ್ಲಿ ಕಂದದಲ್ಲಿ ಗಣನಿಯಮ ಯತಿನಿಯಮಗಳ ಪಾಲನೆ ಬಲುಮಟ್ಟಿಗೆ ಸರಿಯಾಗಿಯೇ ಆಗಿದೆಯೆಂಬುದನ್ನು ನಿದರ್ಶನಗಳ ಪರಿಶೀಲನೆಯಿಂದ ತಿಳಿಯಬಹುದು.

ಲಕ್ಷಣಾನ್ವಿತವಾದ ಕಂದಕ್ಕೆ ಉದಾಹರಣೆ

ಕಾವೇ | ರಿಯಿಂದ | ಮಾಗೋ |
ದಾವರಿ | ವರಮಿ | ರ್ಪನಾಡ | ದಾ ಕನ್ನಡದೊಳ್|
ಭಾವಿಸಿ | ದ ಜನಪ | ದಂ ವಸು | 
ಧಾವಳ | ಯವಿಲೀ | ನ ವಿಶದ | ವಿಷಯವಿಶೇಷಂ|

(ಕವಿರಾಜಮಾರ್ಗ1-36)

ಕಂದಪದ್ಯ ಸಂಸ್ಕೃತದ ಆರ್ಯಾಗೀತಿಯ ಅಥ‌ವಾ ಪ್ರಾಕೃತದ ಸ್ಕಂಧಕದ ಮೂಲಕವಾಗಿ ಬಂದಿದೆಯೆಂದು ಅವುಗಳ ತುಲನಾತ್ಮಕ ಪರಿಶೀಲನೆಯಿಂದ ಸಿದ್ಧಪಡುವುದು. ಆದರೆ ಅದು ಆರ್ಯಾಗೀತಿಯ ಮೂಲಕವಾಗಿ ಬಂತೇ ಸ್ಕಂಧಕದ ಮೂಲವಾಗಿ ಬಂತೇ ಎಂಬುದನ್ನು ಖಚಿತವಾಗಿ ನಿರ್ಣಯಿಸುವುದು ಕಷ್ಟ. ಆರ್ಯಾ ವರ್ಗವನ್ನು ಪ್ರಾಕೃತ ದಲ್ಲಿ ಸ್ಕಂಧಕ ಜಾತಿಯೆಂದೇ ತಿಳಿದಿರುವುದುಂಟು (ಸ್ವಯಂ ಭೂಚ್ಛಂದಃ). ಕನ್ನಡದಲ್ಲಿಯೂ ನಾಗವರ್ಮ ಹೀಗೆಯೇ ಮಾಡಿದಂತೆ ತೋರುತ್ತದೆ. ವಾಕಾಟಕ ಪ್ರವರಸೇನ IIನ (ಸು.410-40) ಸೇತುಬಂಧ ಪೂರ್ತಿಯಾಗಿ ಸ್ಕಂಧಕದಲ್ಲಿ ರಚಿತವಾಗಿರುವ ಪ್ರಾಕೃತಕಾವ್ಯ. ಇಲ್ಲಿಯ ಸ್ಕಂಧಕಗಳು ನಿಯಮಬದ್ಧವಾಗಿವೆ. ಕನ್ನಡ ಭಾಷೆಗೆ ಪ್ರಾಕೃತಭಾಷೆ ಸಾಹಿತ್ಯಗಳ ಸಂಪರ್ಕವಾದ ಆರಂಭಕಾಲದಲ್ಲಿ ಪ್ರಾಕೃತಕಾವ್ಯದ ಸ್ಕಂಧಕದ ಛಂದಸ್ಸು ಕಂದವಾಗಿ ಕನ್ನಡಕ್ಕೆ ಪ್ರವೇಶಿಸಿ, ಈ ಭಾಷೆಗೆ ಹೊಂದಿಕೊಂಡಿತೆಂದು ತೋರುತ್ತದೆ. ಕಂದ ಎಂಬ ಹೆಸರು ಕೂಡ ಸ್ಕಂಧಕದ ಪ್ರಾಕೃತ ರೂಪಗಳಲ್ಲಿ ಒಂದರಿಂದ ನಿಷ್ಪನ್ನವಾಗಿರುವಂತೆ ಕಾಣುವುದು (ಖಂಧಕಂ, ಖಂಧಅ, ಖಂಧಯ, ಎಂಬವು ಸ್ಕಂಧಕದ ಪ್ರಾಕೃತರೂಪಗಳು; ಖಂಧಅ -ಖಂದ- ಕಂದ ಎಂದು ಆಗಿರುವುದು ಸಾಧ್ಯ). ಈ ರೀತಿ ತಿಳಿಯುವುದಕ್ಕೆ ಅವಕಾಶಕೊಡುತ್ತವೆ.

ಕನ್ನಡದಲ್ಲಿ ಉತ್ತಮ ಕಂದಗಳಿಗೆ ಶಾಸನಗಳಲ್ಲಿಯೂ ಕವಿರಾಜಮಾರ್ಗದಲ್ಲಿಯೂ ಹೇರಳವಾದ ನಿದರ್ಶನಗಳು ಸಿಗುತ್ತವೆ. ಪಂಪ, ರನ್ನ, ಪೊನ್ನ, ಕಾದಂಬರಿಯ ನಾಗವರ್ಮ, ನಾಗಚಂದ್ರ, ನಯಸೇನ ಮೊದಲಾದ ಕವಿಗಳು ಇದನ್ನು ತಮ್ಮ ಕಾವ್ಯಗಳಲ್ಲಿ ವಿಪುಲವಾಗಿ ಬಳಸಿಕೊಂಡಿದ್ದಾರೆ. ವ್ಯಾಕರಣಕಾರರಾದ ನಾಗವರ್ಮ ಮತ್ತು ಕೇಶಿರಾಜರು ಸೂತ್ರಗಳನ್ನು ಶುದ್ಧ ಕಂದಛಂದಸ್ಸಿನಲ್ಲಿ ರಚಿಸಿದ್ದಾರೆ. ಜನ್ನನಂತೂ ತನ್ನ ಯಶೋಧರ ಚರಿತೆಯೆಂಬ ಕಾವ್ಯವನ್ನು ಕಂದದಲ್ಲೇ ನಿರ್ವಹಿಸಿರುವುದು ಗಮನಾರ್ಹವಾದ ಸಂಗತಿ. ಈಚೆಗೆ ಬಸವಪ್ಪ ಶಾಸ್ತ್ರಿಗಳು, ಡಿ.ವಿ.ಜಿ. ಮೊದಲಾದ ಆಧುನಿಕರಲ್ಲೂ ಉತ್ತಮ ಕಂದರಚನೆ ಕಂಡುಬರುತ್ತದೆ. ಈಚೆಗೆ ನವ್ಯಕಾವ್ಯ ಸೃಷ್ಟಿಯಾಗತೊಡಗಿದ ಮೇಲೆ ಕಂದ ಸ್ವಲ್ಪ ಹಿಂದೆ ಬಿದ್ದಿದೆಯೆನ್ನಬೇಕು. *

**ಕಂದ²** : ಕನ್ನಡದಲ್ಲಿ ಪ್ರಕಟವಾಗುತ್ತಿದ್ದ ಮಕ್ಕಳ ಮಾಸಪತ್ರಿಕೆ. ಮೈಸೂರು ನಗರದ ಜಯನಗರದಲ್ಲಿರುವ ಚಿಲ್ಡ್ರನ್ಸ್ ಬುಕ್ ಕೌನ್ಸಿಲ್ (ಶಿಶು ಸಾಹಿತ್ಯ ಸಂಘ) ಎಂಬ ಸಂಸ್ಥೆಯ ಆಶ್ರಯದಲ್ಲಿ 1947 ನವೆಂಬರ್ 27ರಂದು ಇದರ ಪ್ರಕಟಣೆ ಆರಂಭವಾಯಿತು. ಎನ್. ನಾಗೇಶರಾವ್ ಸಂಪಾದಕರು. ಮಕ್ಕಳ ಆಸಕ್ತಿಯನ್ನು ಪ್ರಚೋದಿಸುವ, ಸೃಜನಾತ್ಮಕ ಶಕ್ತಿಯನ್ನು ಬೆಳೆಸುವ ಮತ್ತು ಅವರ ಮನಸ್ಸುಗಳನ್ನು ರಂಜಿಸುವ ಲೇಖನ ಕವಿತೆ ಕಥೆ ಚುಟುಕಗಳೇ ಮುಂತಾದವನ್ನು ಅನುರೂಪ ಚಿತ್ರಗಳೊಂದಿಗೆ ಪ್ರಕಟಿಸುತ್ತ ಬಂದ ಈ ಪತ್ರಿಕೆ ಮೂರು ವರ್ಷಗಳ ಕಾಲ ನಡೆದು ನಿಂತಿತು. ಒಂದೊಂದು ಸಂಚಿಕೆಯಲ್ಲೂ ನಾನಾ ವಿಷಯಗಳನ್ನೊಳಗೊಂಡ ಪತ್ರಿಕಾರೂಪದ ಪ್ರಕಟಣೆಯ ಬದಲು ಒಂದೊಂದು ಸಂಚಿಕೆಯನ್ನು ಒಂದೊಂದು ವಿಷಯಕ್ಕೆ ಮೀಸಲಾಗಿಟ್ಟು



ಶಾಶ್ವತವಾದ ಮಕ್ಕಳ ಸಾಹಿತ್ಯ ಸೃಷ್ಟಿಯಲ್ಲಿ ಇದನ್ನು ತೊಡಗಿಸ ಬೇಕೆಂದು 1956 ನವೆಂಬರ್‌ನಲ್ಲಿ ನಡೆದ ಸಂಘದ ಸಭೆಯಲ್ಲಿ ಕೈ ಗೊಂಡ ತೀರ್ಮಾನಕ್ಕೆ ಅನುಗುಣವಾಗಿ ಈ ಪತ್ರಿಕೆಯನ್ನು 1957ರಲ್ಲಿ ಕಂದ ಕಾವ್ಯ ಮಾಲೆಯೆಂದು ಪರಿವರ್ತಿಸಲಾಯಿತು. ರಾಮಾಯಣ, ಮಹಾಭಾರತ ಮತ್ತು ಪೌರಸ್ತ್ಯ ಪಾಶ್ಚಾತ್ಯ ಕಥೆಗಳು, ಜೀವನ ಚರಿತ್ರೆಗಳು, ವಿಜ್ಞಾನ ವಿಚಾರ, ಚರಿತ್ರೆ, ಭೂವಿವರಣೆ, ಸಾಮಾನ್ಯಜ್ಞಾನ, ನಾಟಕಗಳು- ಇವೆಲ್ಲ ಈ ಮಾಲೆಯಲ್ಲಿ ಪ್ರಕಟವಾಗಿವೆ. ಇಂಥ ಸಂಚಿಕೆಗಳ ಒಟ್ಟು ಸಂಖ್ಯೆ 110. 1964ರಲ್ಲಿ ಕಂದಕಾವ್ಯಮಾಲೆಯೂ ನಿಂತು ಹೋಯಿತು. *

**ಕಂನಡ ಸಮಾಚಾರ** : ಕನ್ನಡದಲ್ಲಿ ಪ್ರಕಟವಾದ ಪ್ರಥಮ ವಾರ್ತಾ ಪತ್ರಿಕೆ. ಈ ಪತ್ರಿಕೆ ಮೊದಲು ಮಂಗಳೂರು ಸಮಾಚಾರ ಎಂಬ ಹೆಸರಿನಿಂದ 1843 ಜುಲೈ 1ನೆಯ ತಾರೀಕು ಪ್ರಾರಂಭವಾಯಿತು. 1838ರಲ್ಲಿ ಮಂಗಳೂರಿಗೆ ಬಂದು, ಕನ್ನಡ ಭಾಷೆ ಕಲಿತು, ಎರಡು ವರ್ಷಗಳ ಅನಂತರ ಕೊಡಗಿನಲ್ಲಿ ಉಪದೇಶಕನಾಗಿ ಕೆಲಸ ಮಾಡಿದ ಬಾಸೆಲ್‌ಮಿಶನ್ನಿನ ರೆವರೆಂಡ್ ಹರ್ಮನ್ ಮೊಗ್ಲಿಂಗ್ ಇದರ ಸ್ಥಾಪಕಸಂಪಾದಕ. ಪಕ್ಷಪತ್ರಿಕೆಯಾಗಿದ್ದ ಮಂಗಳೂರು ಸಮಾಚಾರ ಎಂಟು ತಿಂಗಳ ಕಾಲ ಮಂಗಳೂರಿನಿಂದ ಪ್ರಕಟವಾಯಿತು. ಅನಂತರ ಬಳ್ಳಾರಿಗೆ ಬಂತು. ಅಲ್ಲಿ ಪತ್ರಿಕೆಯ ಹೆಸರು ಕಂನಡ ಸಮಾಚಾರ ಎಂದು ಬದಲಾಯಿತು. ಈ ಬದಲಾವಣೆಗೆ ಸಂಪಾದಕ ಮೊಗ್ಲಿಂಗ್ ಮಂಗಳೂರು ಸಮಾಚಾರದ ಹದಿನಾರನೆಯ ಸಂಚಿಕೆಯಲ್ಲಿ ಈ ರೀತಿ ಕಾರಣ ಕೊಟ್ಟಿದ್ದಾನೆ: ಪತ್ರಿಕೆಗೆ ಸಂಪಾದಕನ ನಿರೀಕ್ಷೆಗಿಂತ ಹೆಚ್ಚು ಪ್ರೋತ್ಸಾಹ ದೊರೆಯಿತು. ಕನ್ನಡ ಜನರು ಪತ್ರಿಕೆಯನ್ನು ಓದಲು ಆಸಕ್ತಿ ತೋರಿದ್ದರಿಂದ ಈ ಆಸಕ್ತಿಯನ್ನು ಬೆಳೆಸಲು ಪತ್ರಿಕೆಯ ಮುದ್ರಣದಲ್ಲಿ ಅಭಿವೃದ್ಧಿ ಬಯಸಿ ಕಲ್ಲಚ್ಚಿನ ಬದಲು ಅಚ್ಚುಮೊಳೆಗಳನ್ನು ಉಪಯೋಗದಲ್ಲಿ ತರಲು ನಿರ್ಧರಿಸಲಾಯಿತು, ಇದಕ್ಕೆ ಬಳ್ಳಾರಿಯಲ್ಲಿ ಹೆಚ್ಚು ಸೌಕರ್ಯವಿದ್ದುದರಿಂದ ಮಂಗಳೂರಿನಿಂದ ಬಳ್ಳಾರಿಗೆ ಬದಲಾಯಿಸಲಾಯಿತು. ಕನ್ನಡ ಮಾತಾಡುವ ಎಲ್ಲ ಜನರಲ್ಲೂ ಹೆಚ್ಚು ಪ್ರಸಾರಕ್ಕೆ ಬರಲಿ ಎಂಬ ಆಶಯದಿಂದ ಪತ್ರಿಕೆಯ ಹೆಸರನ್ನೂ ಬದಲಾಯಿಸಲಾಯಿತು.

ಕಂನಡ ಸಮಾಚಾರದ ಮೊದಲ ಸಂಚಿಕೆ 1844 ಮಾರ್ಚ್ 1ರಂದು ಬಳ್ಳಾರಿಯಿಂದ ಪ್ರಕಟವಾಯಿತು. ಪುಟಸಂಖ್ಯೆ ನಾಲ್ಕರಿಂದ ಎಂಟಕ್ಕೆ ಹೆಚ್ಚಿತು. ಬೆಲೆ ಒಂದು ದುಡ್ಡು ಇದ್ದದ್ದು ಎರಡು ದುಡ್ಡಿಗೆ ಏರಿತು. ಪತ್ರಿಕೆ ಹತ್ತು ತಿಂಗಳ ಕಾಲ ನಡೆದು ಅನಂತರ ನಿಂತುಹೋಯಿತು.

ಮೊಗ್ಲಿಂಗ್ ತನ್ನ ಪತ್ರಿಕೆ ನಿಂತುಹೋದರೂ ಮೈಸೂರು ಸರ್ಕಾರದ ಆಶ್ರಯದಲ್ಲಿ ಪ್ರಕಟವಾದ ವಾಗ್ವಿಧಾಯಿನಿ, ಉಡುಪಿಯಲ್ಲಿ ಆರಂಭವಾದ ಕ್ರೈಸ್ತಸಭಾ ಪತ್ರಿಕೆಗಳಿಗೆ ಸಹಾಯ ಮಾಡಿದ. ಸಂಪರ್ಕ ಸಾಧನಗಳು ಹೆಚ್ಚಿಲ್ಲದಿದ್ದ ಆ ಕಾಲದಲ್ಲಿ ಮೊಗ್ಲಿಂಗ್ ಕಂನಡ ಸಮಾಚಾರದಲ್ಲಿ ಸ್ಥಳೀಯ ವಾರ್ತೆಗಳ ಜೊತೆಗೆ ದೇಶವಿದೇಶಗಳ ವಾರ್ತೆಯನ್ನೂ ಪ್ರಕಟಿಸುತ್ತಿದ್ದ. ಕಂನಡ ಸಮಾಚಾರವನ್ನು ಕ್ಯಾನರೀಸ್ ನ್ಯೂಸ್ ಪೇಪರ್ ಎಂದು ಭಾಷಾಂತರಿಸಿದ್ದ. ಆಗತಾನೆ ಬೆಳೆಯುತ್ತಿದ್ದ ಆಧುನಿಕ ಕನ್ನಡ ಗದ್ಯರಚನೆಯನ್ನು ಪತ್ರಿಕೋದ್ಯಮಕ್ಕೆ ಯಶಸ್ವಿಯಾಗಿ ಬಳಸಿಕೊಂಡ.

(ಎಂ.ಎನ್.ಪಿ.)

**ಕಂಪಣ (ಕುಮಾರ ಕಂಪಣ) :** ಮುಳಬಾಗಿಲು ಪ್ರಾಂತ್ಯದ ರಾಜ್ಯಾಧಿಕಾರಿ (ಸು.1356-66). ವಿಜಯನಗರದ ದೊರೆ ಒಂದನೆಯ ಬುಕ್ಕನ ಮಗ.

ಹಿಂದೆ ಹರಿಹರನಿಂದ ಸಹಾಯ ಪಡೆದಿದ್ದ ಶಂಬವರಾಯ ಸ್ವತಂತ್ರನಾಗಲು ಪ್ರಯತ್ನಿಸಿದಾಗ ಇವನು 1363ರಲ್ಲಿ ಅವನನ್ನು ಸೋಲಿಸಿ, ಕಂಚಿಯನ್ನು ಆಕ್ರಮಿಸಿಕೊಂಡು, ತಮಿಳುನಾಡಿನ ವಿಜಯನಗರ ಸಾಮ್ರಾಟನ ಪ್ರತಿನಿಧಿಯಾಗಿ ಕೆಲವು ಕಾಲ ಆಳಿದ. ಇವನ ಈ ದಕ್ಷಿಣದ ದಂಡಯಾತ್ರೆಯನ್ನು ವಸ್ತುವಾಗಿಟ್ಟುಕೊಂಡು ಈತನ ಹೆಂಡತಿ ಗಂಗಾದೇವಿ ಮಧುರಾ ವಿಜಯಂ ಅಥವಾ ವೀರಕಂಪರಾಯ ಚರಿತಂ ಎಂಬ ಐತಿಹಾಸಿಕ ಕಾವ್ಯವನ್ನು ಸಂಸ್ಕೃತದಲ್ಲಿ ಬರೆದಿದ್ದಾಳೆ. ತೊಂಡೈ ಮಂಡಳದ ರಾಜನಾಗಿದ್ದ ಶಂಬವರಾಯನ ಮೇಲೆ ಯುದ್ಧ ಮಾಡಲು ಇವನು ಬುಕ್ಕ ಆಜ್ಞಾಪಿಸಿದ, ಇವನು ಸುಸಜ್ಜಿತವಾದ ಸೈನ್ಯದೊಡನೆ ಹೊರಟು ಮುಳಬಾಗಿಲನ್ನು ತಲಪಿ ಅದನ್ನು ತನ್ನ ಕೇಂದ್ರವಾಗಿ ಮಾಡಿಕೊಂಡ, ಅನಂತರ ಪಾಲಾರ್ ನದಿಯ ಮೇಲಿನ ವಿರಿಂಜಿಪುರದ ಕಡೆಯಿಂದ ಶಂಬವರಾಯನ ರಾಜ್ಯವನ್ನು ಪ್ರವೇಶಿಸಿದ, ಭಯಂಕರವಾಗಿ ನಡೆದ ಕಾಳಗದಲ್ಲಿ ಶಂಬವರಾಯ ಸೋತು ತನ್ನ ರಾಜಧಾನಿ ಕಂಚಿಯ ದಿಕ್ಕಿನಲ್ಲಿ ಓಡಿಹೋದ, ಇವನು ಅವನನ್ನು ಬೆನ್ನಟ್ಟಿ ಕಂಚಿಯನ್ನು ಆಕ್ರಮಿಸಿಕೊಂಡ, ಶಂಬವರಾಯ ಹುದುಗಿಕೊಂಡಿದ್ದ ರಾಜಗಂಭೀರ ಕೋಟೆಯನ್ನು (ಪಡೈವೀಡು) ಮುತ್ತಿದ. ಶಂಬವರಾಯ ಇವನೊಡನೆ ನಡೆದ ದ್ವಂದ್ವಯುದ್ಧದಲ್ಲಿ ಮಡಿದ. ಇವನು ಕಂಚಿಯನ್ನು ಪ್ರವೇಶಿಸಿ ತನ್ನ ಆಳ್ವಿಕೆಯನ್ನು ಸ್ಥಾಪಿಸಿದ. ಹೀಗೆಂದು ಈ ಕಾವ್ಯದಲ್ಲಿ ವರ್ಣಿಸಲಾಗಿದೆ.

ಆ ಕಾಲದಲ್ಲಿ ಮಧುರೆಯ ಸುಲ್ತಾನ ಆ ಪ್ರದೇಶದ ಜನರಿಗೆ ಒಂದೇ ಸಮನೆ ಕಿರುಕುಳ ಕೊಟ್ಟು ಪೀಡಿಸುತ್ತಿದ್ದನಲ್ಲದೆ ಚಿದಂಬರಂ, ಶ್ರೀರಂಗ, ಮಧುರೆ ಮುಂತಾದ ಸ್ಥಳಗಳಲ್ಲಿ ದೇವಸ್ಥಾನಗಳೇ ಮುಂತಾದ ಮತೀಯ ಸಂಸ್ಥೆಗಳನ್ನು ನಾಶ ಮಾಡಿದ್ದ. ಶಂಬವರಾಯನ ರಾಜ್ಯವನ್ನು ಆಕ್ರಮಿಸಿಕೊಂಡ ಅನಂತರ ಇವನು ಅನೇಕ ವನರಾಜರನ್ನು ಸೋಲಿಸಿ, ಮಧುರೆಯವರೆಗೆ ಇದ್ದ ಮುಸ್ಲಿಂ ಸ್ವತಂತ್ರಾಧಿಕಾರಿಗಳನ್ನು ಅಡಗಿಸಿ, ಮಧುರೆಯ ಸುಲ್ತಾನನ ಮೇಲೆ ಯುದ್ಧ ಹೂಡಿದ. ಈ ಯುದ್ಧದಲ್ಲಿ ಇವನ ಸೇನಾಧಿಕಾರಿ ಗೋಪಣ್ಣ ಮುಖ್ಯ ಪಾತ್ರ ವಹಿಸಿದ್ದ. ಮಧುರೆಯ ಸುಲ್ತಾನ 1371ರಲ್ಲಿ ಯುದ್ಧದಲ್ಲಿ ಮಡಿದ. ದಕ್ಷಿಣ ದೇಶದಲ್ಲಿ ಇವನು ಮಹಮ್ಮದೀಯರ ಆಳ್ವಿಕೆಯನ್ನು ಕೊನೆಗಾಣಿಸಿ ವಿಜಯನಗರದ ಅಧಿಕಾರವನ್ನು ಬಲಪಡಿಸಿದ. ಸಿಂಹಳಕ್ಕೂ ಮುನ್ನಡೆದು ಕಪ್ಪ ವಸೂಲಿ ಮಾಡಿದ. ಮಹಮ್ಮದೀಯರ ದಾಳಿಯಿಂದ ರಕ್ಷಿಸಲು ತಿರುಪತಿಗೆ ಸಾಗಿಸಲಾಗಿದ್ದ, ಶ್ರೀರಂಗದ ದೇವಸ್ಥಾನದಲ್ಲಿನ ರಂಗನಾಥ ವಿಗ್ರಹವನ್ನು ಕುಮಾರ ಕಂಪಣ ಹಿಂದಕ್ಕೆ ತರಿಸಿ ಶ್ರೀರಂಗದಲ್ಲಿ ಪುನಃ ಪ್ರತಿಷ್ಠೆ ಮಾಡಿಸಿದ.

ಇವನ ದಂಡಯಾತ್ರೆಯಿಂದ ತುಂಗಭದ್ರಾ ನದಿಯ ದಕ್ಷಿಣಕ್ಕೆ, ದಕ್ಷಿಣ ಭಾರತವೆಲ್ಲ ವಿಜಯನಗರದ ಆಳ್ವಿಕೆಗೆ ಒಳಪಟ್ಟಿತು. ಈತ ತಮಿಳು ನಾಡಿನ ರಾಜಪ್ರತಿನಿಧಿಯಾಗಿ ಮುಂದುವರಿದು, ಆಕ್ರಮಿತ ಪ್ರದೇಶಗಳಲ್ಲಿ ಸುವ್ಯವಸ್ಥಿತವಾದ ಸರ್ಕಾರವನ್ನು ಸ್ಥಾಪಿಸಿದ. ದೇವಸ್ಥಾನಗಳು ಮತ್ತು ಇತರ ಸಂಸ್ಥೆಗಳಲ್ಲಿ ಧಾರ್ಮಿಕ ಕಾರ್ಯಗಳನ್ನು ಪುನರುಜ್ಜೀವನ ಗೊಳಿಸಿದ.ನಿವನ ಹೆಸರು ಚಿರಸ್ಮರಣೀಯವಾಗಿರಲು ಕಂಪರಾಜಪುರ (ಕೊಳ್ಳೇಗಾಲ ತಾಲ್ಲೂಕಿನಲ್ಲಿರುವ ಮೋಡಹಳ್ಳಿ) ಗ್ರಾಮವನ್ನು ಸ್ಥಾಪಿಸಲಾಯಿತು. ಈತ ಸು.1374ರಲ್ಲಿ ನಿಧನನಾದ. (ಎ.ವಿ.ವಿ.)

**ಕಂಪಿಲಿ ರಾಜ್ಯ :** 11-14ನೆಯ ಶತಮಾನಗಳ ಅವಧಿಯಲ್ಲಿ ಪ್ರಾಯಶಃ ಈಗಿನ ಬಳ್ಳಾರಿ, ಕೊಪ್ಪಳ, ಧಾರವಾಡ, ಚಿತ್ರದುರ್ಗ ಹಾಗೂ ಅನಂತಪುರ ಜಿಲ್ಲೆಗಳ ಕೆಲಭಾಗಗಳನ್ನು ಒಳಗೊಂಡಿದ್ದ ಒಂದು ಚಿಕ್ಕ ರಾಜ್ಯ. ಕುಮ್ಮಟ ಮತ್ತು ಕಂಪಿಲಿ ಇದರ ರಾಜಧಾನಿಗಳು.

ಕಂಪಿಲಿ ಮೊದಲು ಚಾಳುಕ್ಯರ ಪ್ರಾಂತೀಯ ರಾಜಧಾನಿಯಾಗಿತ್ತು. ಚಾಳುಕ್ಯ ಸಾಮಂತನಾಗಿದ್ದ ಜಗದೇಕಮಲ್ಲ ನೊಳಂಬ - ಪಲ್ಲವ 1022ರಲ್ಲಿ ಕಂಪಿಲಿಯಲ್ಲಿ ಆಳುತ್ತಿದ್ದ. 1046ರಲ್ಲಿ ರಾಜರಾಜ ಚೋಳ ಕಂಪಿಲಿಗೆ ಮುತ್ತಿಗೆ ಹಾಕಿ ಅದನ್ನು ನಾಶಪಡಿಸಿದನಂತೆ. ಸು.1046ರಲ್ಲಿ ಚಾಳುಕ್ಯ ವಿಜಯಾದಿತ್ಯ ಕಂಪಿಲಿ ರಾಜಧಾನಿಯಿಂದ ನೊಳಂಬವಾಡಿ ಪ್ರದೇಶವನ್ನು ಆಳುತ್ತಿದ್ದ. 1178ರ ಶಿಲಾಶಾಸನವೊಂದು ತಿಳಿಸುವಂತೆ, ಹೊಯ್ಸಳ ವಿಷ್ಣುವರ್ಧನ ಇಲ್ಲಿನ ದುರ್ಗವು ಕೋಟೆಯೆನಿಸಿದ್ದ ಕುಮ್ಮಟವನ್ನು ವಶಪಡಿಸಿಕೊಂಡ.

13ನೆಯ ಶತಮಾನದ ಅಂತ್ಯಭಾಗದಿಂದ ಕಂಪಿಲಿ ರಾಜ್ಯ ಒಂದು ಅಧೀನ ರಾಜಮನೆತನದ ಆಳಿಕೆಗೆ ಒಳಪಟ್ಟಿತು. ಇದರ ಸ್ಥಾಪಕ ಪ್ರಾಯಶಃ ಮುಮ್ಮಡಿ ಸಿಂಗೆಯ ನಾಯಕ (ಸು.1280-1300). ಇವನ ಮಗ ಕಂಪಿಲ ದೇವ (ಸು.1300-1327). ಇವನಿಗೆ ಖಂಡೆಯರಾಯನೆಂದೂ ಹೆಸರಿತ್ತು. ಇವನು ಸೇವುಣರ ಸಾರ್ವಭೌಮತ್ವವನ್ನು ಒಪ್ಪಿಕೊಂಡಿದ್ದ. ಇದರಿಂದ ಹೊಯ್ಸಳರ ಜೊತೆ ಆಗಾಗ್ಗೆ ಸೆಣಸಬೇಕಾಗಿತ್ತು. 1303ರ ಸುಮಾರಿನಲ್ಲಿ ಕಂಪಿಲದೇವ ಹೊಯ್ಸಳ ದಂಡನಾಯಕ ಸೋಮಯನನ್ನು ರಣರಂಗದಲ್ಲಿ ಕೊಂದ.

ಕಂಪಿಲಿಯ ಕಥೆ ಶೌರ್ಯ ಸಾಹಸಗಳಿಂದ ಕೂಡಿದ್ದು. ಕಂಪಿಲ ದೇವ ದಕ್ಷಿಣ ಭಾರತದಲ್ಲಿ ಬೆಳೆಯುತ್ತಿದ್ದ ವಿದೇಶೀ ಶಕ್ತಿಯ ಪ್ರಬಲ ವಿರೋಧಿಯಾಗಿದ್ದ. ಮಲಿಕ್ ಕಾಫರ್ ಸು.1314-15ರಲ್ಲಿ ಕಂಪಿಲಿಯ ಮೇಲೆ ದಂಡೆತ್ತಿ ಬಂದನಾದರೂ ಹೆಚ್ಚು ಯಶಸ್ವಿಯಾಗಲಿಲ್ಲ. ಅಲ್ಲದೆ ಮಹಮ್ಮದ್-ಬಿನ್-ತುಗಲಕನ ಅಧಿಕಾರಿಗಳು ಅಪೇಕ್ಷಿಸಿದ ಕಪ್ಪಕಾಣಿಕೆಗಳನ್ನು ಕೊಡಲು ಕಂಪಿಲದೇವ ನಿರಾಕರಿಸಿದ. ಇಲ್ಲಿಂದ ಸು.10 ವರ್ಷಗಳ ಕಾಲ ಕಂಪಿಲಿ ಅಭಿವೃದ್ಧಿ ಸಾಧಿಸಿತಾದರೂ ಅನಂತರ ದೆಹಲಿಯ ಸುಲ್ತಾನನ ದಾಳಿಗೆ ತುತ್ತಾಯಿತು. ಆ ಸಮಯದಲ್ಲಿ ಗುಲ್ಬರ್ಗದ ಸಮೀಪದ ಸಾಗರದ ರಾಜ್ಯಪಾಲನಾಗಿದ್ದ. ಸುಲ್ತಾನನ ಸೋದರ ಸಂಬಂಧಿ ಬಹಾಉದ್ದೀನ್ ಗುರ್ಷಾಸ್ಪ್ ಸ್ವಂತ ಕಾರಣಕ್ಕಾಗಿ ಸುಲ್ತಾನನ ವಿಷಯದಲ್ಲಿ ಅಸಮಾಧಾನವನ್ನು ಹೊಂದಿದ್ದು ದೆಹಲಿಯ ಸಿಂಹಾಸನಕ್ಕೆ ತನ್ನ ಹಕ್ಕನ್ನು ಹೂಡಲು ಪ್ರಯತ್ನಿಸಿ ದಂಗೆಯೆದ್ದಿದ್ದ. ಸುಲ್ತಾನನಾದರೊ ತನ್ನ ಸಾಮಂತರಾದ ಗುಜರಾತಿನ ರಾಜ್ಯಪಾಲ ಮಲಿಕ್ ಜಾದ ಮತ್ತು ದೇವಗಿರಿಯ ರಾಜ್ಯಪಾಲನಾದ ಮಜಿರ್ ಅಬುರಿಜ ಇವರಿಬ್ಬರಿಗೂ ಈ ದಂಗೆಕೋರನನ್ನು ಸದೆಬಡಿಯಲು ಆಜ್ಞಾಪಿಸಿದ. ಗೋದಾವರಿ ತೀರದಲ್ಲಿ ನಡೆದ ಯುದ್ಧದಲ್ಲಿ ಬಹಾಉದ್ದೀನ್ ಸೋತು, ತನ್ನ ಮಡದಿಮಕ್ಕಳೊಂದಿಗೆ ಓಡಿಬಂದು ಕಂಪಿಲಿಯ ನಾಯಕನಾದ ಕಂಪಿಲದೇವನಲ್ಲಿ ಆಶ್ರಯ ಪಡೆದ. ಇದನ್ನು ತಿಳಿದ ಸುಲ್ತಾನ ಈ ಹಿಂದು ರಾಜನನ್ನು ನಾಶಮಾಡುವಂತೆ ಆಜ್ಞಾಪಿಸಿದ. ಆದರೆ ಇದು ಅವನು ತಿಳಿದಷ್ಟು ಸುಲಭಸಾಧ್ಯವಾದ ಕೆಲಸವಾಗಿರಲಿಲ್ಲ. ಕುಮ್ಮಟ ಕೋಟೆಯನ್ನು ಹಿಡಿಯಲು ಮಲಿಕ್ ಜಾದ ಎರಡು ಬಾರಿ ಪ್ರಯತ್ನಿಸಿದರೂ ಸಫಲನಾಗಲಿಲ್ಲ. ಆದರೂ ಮೂರನೆಯ ಪ್ರಯತ್ನದಲ್ಲಿ ಯಶಸ್ವಿಯಾದ.

ಕುಮ್ಮಟ ಸುಲ್ತಾನನ ವಶವಾಗಿ, ಕಂಪಿಲದೇವ ಹೊಸದುರ್ಗ (ಆನೆಗೊಂದಿ)ದಲ್ಲಿ ರಕ್ಷಣೆ ಪಡೆದ. ಆದರೆ ಸುಲ್ತಾನನ ಸೇನೆ ಹೊಸದುರ್ಗವನ್ನೂ ಸುತ್ತುವರಿಯಿತು. ಕಂಪಿಲದೇವ ಬಹಾಉದ್ದೀನನನ್ನು ಆತನ ಸಂಸಾರದೊಂದಿಗೆ ಸುರಕ್ಷಿತವಾಗಿ ದ್ವಾರಸಮುದ್ರಕ್ಕೆ ತಲಪಿಸಿದ. ವೈರಿಗಳನ್ನು ಎದುರಿಸುವ ಮುನ್ನ ಅವನ ರಾಣೀ ಜನರೂ ಮಂತ್ರಿಗಳ ಹಾಗೂ ಸಾಮಂತರ ಪತ್ನಿಯರೂ ಅಗ್ನಿಪ್ರವೇಶ ಮಾಡಿದರು. ಅನಂತರ ಕಂಪಿಲದೇವ ಮತ್ತು ಅವನ ಮಗ ರಾಮನಾಥ ಕಡುಗಲಿಗಳಂತೆ ವೈರಿಗಳ ಮೇಲೆಬಿದ್ದು ಅನೇಕರನ್ನು ಧ್ವಂಸಮಾಡಿದರು. ಕೊನೆಗೆ ರಣಭೂಮಿಯಲ್ಲೇ ಸಾವನ್ನಪ್ಪಿದ (ಸು.1327) ಕಂಪಿಲದೇವನ ತಲೆಬುರುಡೆಯನ್ನು ಸುಲ್ತಾನನಿಗೆ ಕಳುಹಿಸಲಾಯಿತಂತೆ. ಕಂಪಿಲಿ ರಾಜ್ಯವನ್ನು ಸುಲ್ತಾನ ವಶಪಡಿಸಿಕೊಂಡು, ಅಲ್ಲಿಗೆ ತನ್ನವನಾದ ಮಲಿಕ್ ಮಹಮ್ಮದ್ ಎಂಬುವನನ್ನು ರಾಜ್ಯಪಾಲನಾಗಿ ನೇಮಿಸಿದ. ಅಲ್ಲಿನ ಸುತ್ತ ಮುತ್ತಲಿನ ಪ್ರದೇಶವನ್ನು ತನ್ನ ಹಿಡಿತದಲ್ಲಿಡುವ ಸಲುವಾಗಿ ಹೊಸದುರ್ಗದಲ್ಲಿ ಸೈನ್ಯವನ್ನಿಟ್ಟ. ಕಂಪಿಲ ದೇವನ ಮಗ ರಾಮನಾಥನು ತನ್ನ ಪ್ರಾಮಾಣಿಕ, ದೇಶಪ್ರೇಮ ಹಾಗೂ ತ್ಯಾಗಗಳಿಗೆ ಪ್ರಖ್ಯಾತನಾದ ವೀರಾಗ್ರಣಿಯಾಗಿ ಕುಮಾರರಾಮನೆಂಬ ಹೆಸರಿನಿಂದ ಹಲವು ಕಥೆಗಳ ನಾಯಕನಾಗಿ ಕನ್ನಡ ಸಾಹಿತ್ಯದಲ್ಲಿ ಪ್ರಖ್ಯಾತನಾಗಿದ್ದಾನೆ (ನೋಡಿ: ಕುಮಾರರಾಮ).

ಇಲ್ಲಿಂದ ಯುದ್ಧ ಕೈದಿಗಳಾಗಿ ದೆಹಲಿಗೆ ಕೊಂಡೊಯ್ದ ವ್ಯಕ್ತಿಗಳಲ್ಲಿ ಭಾವೀ ವಿಜಯನಗರದ ಸಂಸ್ಥಾಪಕರಾದ ಹರಿಹರ ಮತ್ತು ಬುಕ್ಕರೆಂಬ ಸಹೋದರರೂ ಸೇರಿದ್ದರೆಂಬುದು ಕೆಲವು ವಿದ್ವಾಂಸರ ಅಭಿಪ್ರಾಯ. (ಎಸ್.ಜಿ.)

**ಕಂಪ್ಲಿ :** ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನಲ್ಲಿ ಹೊಸಪೇಟೆಯ ವಾಯವ್ಯಕ್ಕೆ 32ಕಿಮೀ ದೂರದಲ್ಲಿ ತುಂಗಭದ್ರಾ ನದಿಯ ಸನಿಹದಲ್ಲಿರುವ ಒಂದು ಊರು. ಇತಿಹಾಸ ಪ್ರಸಿದ್ಧ ಸ್ಥಳ. ಕೈಗಾರಿಕಾ ಕೇಂದ್ರ. ಜನಸಂಖ್ಯೆ 35,386.

ತುಂಗಭದ್ರಾನದಿಯ ಅಂಚಿನಲ್ಲಿರುವ ಆ ನದಿಯ ಪಾತ್ರ ಭೂಮಿಯಲ್ಲಿ ಉಪಲಬ್ಧವಾದ ಕಪ್ಪು ಬಂಡೆಗಳಿಂದ ರಚಿತವಾಗಿರುವ ಇಲ್ಲಿನ ಕೋಟೆಯನ್ನು ಬಳ್ಳಾರಿಯ ಪಾಳೆಯಗಾರರಲ್ಲೊಬ್ಬ ಕಟ್ಟಿಸಿದನೆಂದು ಪ್ರತೀತಿ. ಕೋಟೆಯಲ್ಲಿ ಮತ್ತು ಕೋಟೆಯ ಹೊರಗಿರುವ ಪೇಟೆಯಲ್ಲಿ ಇಕ್ಕಟ್ಟಾದ ರಸ್ತೆಗಳ ಇಕ್ಕೆಲದಲ್ಲೂ ಗುಂಪು ಮನೆಗಳಿವೆ.

ಮೊದಲು ಇಲ್ಲಿ ನೇಯ್ಗೆ ಪ್ರಧಾನವೆನಿಸಿತ್ತು. ಕಬ್ಬಿನಿಂದ ಬೆಲ್ಲ ತಯಾರಿಸುತ್ತಿದ್ದರು. ಮರದ ಕೆತ್ತನೆ ಕೆಲಸ ಹಾಗೂ ಆಟದ ಸಾಮಾನುಗಳನ್ನು ಮಾಡುವ ಉದ್ಯಮಗಳಿಗೂ ಈ ಸ್ಥಳ ಹೆಸರಾಗಿತ್ತು. 1954ರಿಂದ ಇಲ್ಲಿ ಒಂದು ಸಹಕಾರಿ ಸಕ್ಕರೆ ಕಾರ್ಖಾನೆ ನಡೆಯುತ್ತಿದೆ. ಇದು ಕರ್ನಾಟಕದಲ್ಲಿ ಸ್ಥಾಪಿತವಾದ ಮೊದಲನೆಯ ಸಹಕಾರಿ ಸಕ್ಕರೆ ಕಾರ್ಖಾನೆ. ಕಬ್ಬು ಅರೆಯುವ ಕಾಲದಲ್ಲಿ ಇದು ಸು.1000 ಕಾರ್ಮಿಕರಿಗೆ ಉದ್ಯೋಗ ಒದಗಿಸುತ್ತದೆ. ಇಲ್ಲಿನ ನಗರ ಪಂಚಾಯಿತಿ 1896ರಲ್ಲೇ ಸ್ಥಾಪಿತವಾಗಿದ್ದು, ಬಳ್ಳಾರಿ ಜಿಲ್ಲೆಯಲ್ಲೇ ಅತಿ ಪುರಾತನ ಪಂಚಾಯಿತಿಗಳಲ್ಲೊಂದಾಗಿದೆ. ಇದು 1960ರಲ್ಲಿ ಹೊಸ ನಿಯಮಗಳಿಗನುಸಾರವಾಗಿ ಪುನರ್ರೂಪಿತವಾಗಿದೆ. 1958ರಲ್ಲಿ ಸ್ಥಾಪಿತವಾದ ಇಲ್ಲಿಯ ಮಹಿಳಾಸೇವಾ ಸಮಾಜ ಮಹಿಳೆಯರ ಅಭ್ಯುದಯಕ್ಕಾಗಿ ದುಡಿಯುತ್ತಿದೆ. ಗಾಂಧೀಕುಟೀರ ಸಮಾಜಸೇವೆ ನಡೆಸುತ್ತಿದೆ.

11-14ನೆಯ ಶತಮಾನಗಳಲ್ಲಿ ಇದು ಚಿಕ್ಕ ರಾಜ್ಯವೊಂದರ ರಾಜಧಾನಿಯಾಗಿತ್ತು (ನೋಡಿ: ಕಂಪಿಲಿ ರಾಜ್ಯ). 1851ರ ವರೆಗೆ ಇದು ತಾಲ್ಲೂಕಿನ ಕೇಂದ್ರವಾಗಿತ್ತು. ಅಂದಿನ ಕಂಪ್ಲಿ ತಾಲ್ಲೂಕು ಈಗಿನ ಹೊಸಪೇಟೆ ತಾಲ್ಲೂಕಿನ ಭಾಗಗಳನ್ನೊಳಗೊಂಡಿತ್ತು. (ಎಸ್.ಜಿ.)

**ಕಂಬದಹಳ್ಳಿ :** ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನಲ್ಲಿ ಕಸಬೆಯಿಂದ 16ಕಿಮೀ ದೂರದಲ್ಲಿ ಶ್ರವಣಬೆಳಗೊಳ ರಸ್ತೆಯಲ್ಲಿರುವ ಒಂದು ಜೈನಕ್ಷೇತ್ರ. ಇಲ್ಲಿನ ಪಂಚಕೂಟ ಬಸದಿಯ ಉತ್ತರದಲ್ಲಿರುವ 15.24ಮೀ ಎತ್ತರದ ಕರಿಕಲ್ಲಿನ ಬ್ರಹ್ಮದೇವರ ಕಂಬವೇ ಊರಿನ ಹೆಸರಿಗೆ ಕಾರಣ. ಈ ಕಂಬದ ತಳಭಾಗದ ಎಂಟು ಮುಖಗಳ ಮೇಲೂ ಅಷ್ಟದಿಕ್ಪಾಲಕರ ಶಿಲ್ಪಗಳಿವೆ. ಕಂಬದ ಮೇಲೆ ಪೂರ್ವಾಭಿಮುಖವಾಗಿ ಬ್ರಹ್ಮ



ಶಾಂತಿನಾಥ ಬಸದಿ

ದೇವರ ಶಿಲ್ಪವಿದೆ. ಸಮೀಪದಲ್ಲಿ ದ್ರಾವಿಡ ಶೈಲಿಯಲ್ಲಿ ಕಲ್ಲಿನಿಂದ ಕಟ್ಟಲಾದ ಏಳು ದೇವಾಲಯಗಳಿವೆ. 900ರ ಸುಮಾರಿನಲ್ಲಿ ಕಟ್ಟಲಾದ ಪಂಚಕೂಟ ಬಸದಿಯಲ್ಲಿ ನಡುವೆ ಇರುವುದೇ ತ್ರಿಕೂಟಾಚಲ ಆದಿನಾಥ ಬಸದಿ. ಈ ಕಣಶಿಲೆಯ ಕಟ್ಟಡದಲ್ಲಿ ಪಲ್ಲವ ಶೈಲಿಯ ಪ್ರಭಾವ ಕಂಡುಬರುತ್ತದೆ. ದೇವಾಲಯದ ಕೆಳಭಾಗ ಅಷ್ಟಕೋನಾಕಾರದ್ದು. ಗೋಡೆಯ ಮೇಲುಗಡೆ ಯಕ್ಷ ಮತ್ತು ಜಿನರ ಲತಾಪಟ್ಟಿಕೆಗಳಿವೆ. ಕೋಷ್ಠಗಳಿಗೆ ಪುಷ್ಪ ಅಥವಾ ಮಕರತೋರಣಗಳಿವೆ. ಇವುಗಳಲ್ಲಿ ಗಂಧರ್ವ, ಯಾಳಿ, ಮುಕ್ಕೊಡೆ, ಮಕರಗಳ ಅಲಂಕರಣಗಳಿವೆ. ಮೇಲ್ಛಾವಣಿಗಳು ಬಾಗಿವೆ. ಲಾಳದ ಆಕಾರದ ಕಮಾನುಗಳಿಂದ ಅಲಂಕೃತವಾಗಿವೆ. ಕೈಪಿಡಿ ಗೋಡೆಯ ಮೇಲೆ ಸಿಂಹ ಮುಖದ ಮೀನು, ನೀರ್ಗುದುರೆಗಳಿವೆ. ಗರ್ಭಗುಡಿಗಳಲ್ಲಿ ನೇಮಿನಾಥ, ಶಾಂತಿನಾಥ ವಿಗ್ರಹಗಳು ಕುಳಿತ ಭಂಗಿಯಲ್ಲಿವೆ. ಗುಡಿಯ ಪೂರ್ವದ ಶಿಖರ ದುಂಡು ಉತ್ತರದ್ದು ಚತುರಸ್ರ, ಪಶ್ಚಿಮದ್ದು ಅಷ್ಟಾಸ್ರ. ಇವುಗಳ ಮೇಲೆ ಲತಾಪಟ್ಟಿಕೆ ಮತ್ತು ಲಾಳದ ಆಕಾರದ ಕಮಾನುಗಳ ಅಲಂಕರಣವಿದೆ. ಗ್ರೀವಾಕಾರದ ಅಂತಸ್ತುಗಳುಳ್ಳ ಇಲ್ಲಿನ ಗೋಪುರಗಳು ಸುಂದರವಾಗಿ ಎತ್ತರವಾಗಿ ಸ್ತಂಭಿಕೆಗಳಿಂದ ಅಲಂಕೃತವಾಗಿವೆ. ಶಿಖರಗಳ ಮೇಲೆ ಮುಗುಚಿ ಹಾಕಿದ ಪದ್ಮ ಇವೆ. ಬಸದಿಯಲ್ಲಿರುವ ವಾಹನಸ್ಥ ದಿಕ್ಪಾಲಕರಾದಿಯಾದ ಹಲವು ಪ್ರತಿಮೆಗಳು ಗಮನಾರ್ಹವಾದವು.

ಇಲ್ಲಿನ ಒಂದು ಶಾಂತಿನಾಥ ಬಸದಿ ದ್ರಾವಿಡ ಸಂಪ್ರದಾಯದ್ದು. ಆಮೇಲೆ ಸೇರಿಸಿದ ಒಂಬತ್ತಂಕಣಗಳ ನವರಂಗದಲ್ಲಿ ನಾಲ್ಕು ಹೊಯ್ಸಳ ರೀತಿಯ ಬಳಪದ ಕಲ್ಲಿನ ಕಂಬಗಳಿವೆ. ಈ ಮಂದಿರವನ್ನು 12ನೆಯ ಶತಮಾನದಲ್ಲಿ ಹೊಯ್ಸಳ ವಿಷ್ಣುವರ್ಧನನ ದಂಡನಾಯಕ ಗಂಗರಾಜನ ಮಗ ಬೊಪ್ಪನು ದ್ರೋಹಘರಟ್ಟಾಚಾರಿ ಎಂಬ ಶಿಲ್ಪಿಯ ಸಹಾಯದಿಂದ ಕಟ್ಟಿಸಿದ. ಇದರ ಹೊರವಲಯದ ಗೋಡೆಗಳ ಮೇಲಿರುವ ಆನೆ, ಕುದುರೆ, ಸಿಂಹ ಮತ್ತು ಯಾಳಿಗಳ ಚಿತ್ರಪಟ್ಟಿಕೆಗಳು ಅಮೋಘ ಕೆತ್ತನೆಗಳು. ಇತರ ಹೊಯ್ಸಳ ದೇವಾಲಯಗಳಲ್ಲಿರುವ ಕೆತ್ತನೆಗಳನ್ನು ಇವು ಹೋಲುತ್ತವೆ. ಇಲ್ಲಿನ ಶಾಂತಿನಾಥ ವಿಗ್ರಹ 3.05ಮೀ ಎತ್ತರವಿದೆ. ಇದು ಕಂಬದಹಳ್ಳಿಯ ಬಹು ಸುಂದರ ಶಿಲ್ಪಕೃತಿಗಳಲ್ಲೊಂದಾಗಿದೆ. (ಬಿ.ಕೆ.ಜ.)

**ಕಂಬಳ :** ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ಪ್ರಮುಖ ಜನಪದ ವಿನೋದಗಳಲ್ಲಿ ಒಂದಾದ ಕೋಣಗಳ ಓಟದ ಸ್ಪರ್ಧೆ. ಹೊಲ ಗದ್ದೆಗಳನ್ನು ಉತ್ತು ಹರಗಿ ಆದ ಬಳಿಕ ವಿನೋದಕ್ಕಾಗಿ ಕೋಣಗಳನ್ನು ಗದ್ದೆಯಲ್ಲಿ ಓಡಿಸುತ್ತಿದ್ದ ಗ್ರಾಮೀಣ ಅಭಿರುಚಿಯ ವಿನೋದ ಉತ್ಸವವು ರೂಪತಾಳಿತು. ಗ್ರಾಮದ ಹಿರಿಯ ಗುತ್ತು ಮನೆಯವರೂ ನಾಡಿನ ಬಲ್ಲಾಳರೂ ಕಂಬಳಗಳನ್ನು ಏರ್ಪಡಿಸತೊಡಗಿದರು. ಅರಸರು ಜರುಗಿಸುತ್ತಿದ್ದ ದೊಡ್ಡ ಕಂಬಳಕ್ಕೆ ಅರಸುಕಂಬಳ ಎಂಬ ಹೆಸರಿತ್ತು. ಮೂಲ್ಕಿ ಸಾವಂತ ಅರಸರ ಕಾಲದ ಕಂಬಳ ಹೆಸರುವಾಸಿಯಾದುದು. ವಂಡಾರು ಎಂಬಲ್ಲಿಯ ಕಂಬಳ ಬಹು ಪ್ರಸಿದ್ಧ.

ಉತ್ತಮ ತಳಿಯ ಕೋಣಗಳನ್ನು ವಿಶೇಷ ಪೌಷ್ಟಿಕ ಆಹಾರ ಕೊಟ್ಟು ಕಂಬಳದ ಓಟಕ್ಕಾಗಿ ಪ್ರತ್ಯೇಕವಾಗಿ ಸಾಕುವ ಹವ್ಯಾಸ ಇತ್ತೀಚಿನವರೆಗೂ ಇತ್ತು. ಇಂಥ ಕೋಣಗಳ ಹೆಚ್ಚು ಜೊತೆಗಳನ್ನು ಸಾಕುವ ವ್ಯಕ್ತಿಯ ಪ್ರತಿಷ್ಠೆ ಹೆಚ್ಚಾಗುತ್ತಿತ್ತು. ಓಟಕ್ಕಾಗಿ ಮಾತ್ರ ಮೀಸಲಾಗಿದ್ದ ಇಂಥ ಕೊಬ್ಬಿದ ಕೋಣಗಳಿಂದ ಗದ್ದೆ ಉಳುವಂಥ ಶ್ರಮದ ಕೆಲಸಗಳನ್ನು ಮಾಡಿಸುತ್ತಿರಲಿಲ್ಲ. ನಾಗರಿಕ ಆಕರ್ಷಣೆಗಳು ಹೆಚ್ಚಾದಂತೆಲ್ಲ ಓಟದ ಕೋಣಗಳನ್ನು ಸಾಕುವ ಹವ್ಯಾಸ ಕಡಿಮೆಯಾಗುತ್ತಿದೆ.

ವಿಶಾಲವಾದ ಹೊಲದ ಒಂದು ಮುಗ್ಗುಲಿನ ಉದ್ದಕ್ಕೆ ಸು.4.57ಮೀ ಅಗಲಕ್ಕೆ ಕರೆ ಕಡಿದು ಓಟದ ಜಾಗವನ್ನು ಪ್ರಶಸ್ತಗೊಳಿಸುತ್ತಾರೆ. ಇದರ ಇಮ್ಮಡಿಯಷ್ಟು ಜಾಗವನ್ನು ಕಡಿದಿದ್ದರೆ ಅದಕ್ಕೆ ಜೋಡುಕರೆ ಎನ್ನುತ್ತಾರೆ. ಹೀಗಿದ್ದಲ್ಲಿ ಓಡಿದ ಕೋಣಗಳು ಹಿಂದೆ ತಿರುಗಿ ಬರುವುದಕ್ಕೂ ಸಾಧ್ಯವಾಗುತ್ತದೆ. ಓಟದ ಜಾಗಕ್ಕೆ ಒಂದು ಹದದಲ್ಲಿ ನೀರು ಬಿಟ್ಟಿರುತ್ತಾರೆ. ನೀರು ಹೆಚ್ಚು ಅಥವಾ ಕಡಿಮೆಯಾದರೆ ಓಟಕ್ಕೆ ಅಡ್ಡಿಯಾಗುತ್ತದೆ. ಕೆಲವು ಕಡೆ ಹೊಳೆಯ ನೀರನ್ನು ಕಾಲುವೆಯಂತೆ ಉಪಯೋಗಿಸುತ್ತಾರೆ. ಅಲ್ಲಿ ಕಂಬಳದ ಕರೆ ಕಡಿಸುವುದೂ ಉಂಟು.

ಕಂಬಳಕ್ಕೆ ಆಮಂತ್ರಣ ಹೋದಮೇಲೆ ಓಟದ ಕೋಣಗಳನ್ನು ಸಿಂಗರಿಸಿ, ವಾದ್ಯಘೋಷ ಕುಣಿತ ಹಾಡು ಸಿಡಿಮದ್ದುಗಳ ಸಮೇತ ಕಂಬಳದ ಗದ್ದೆಯ ಬಳಿಗೆ ತರುತ್ತಾರೆ. ಈಚೆಗೆ ಕೋಣವನ್ನು ಲಾರಿಯಲ್ಲಿ ಸಾಗಿಸುವುದೂ ಉಂಟು. ಅನಂತರ ಒಂದೊಂದೇ ಜೊತೆ ಕೋಣಗಳನ್ನು ವಿಧಿವತ್ತಾಗಿ ಕಂಬಳಕ್ಕೆ ಬಿಡುತ್ತಾರೆ. ಕೋಣಗಳಿಗೆ ಕಟ್ಟಿದ ಹರಗುವ ಹಲಗೆಯ

(ಗೋರುಹಲಗೆ) ಮೇಲೆ ಕೋಣಗಳನ್ನು ಓಡಿಸುವ ವ್ಯಕ್ತಿ ನಿಂತು, ಕೋಣಗಳ ಬಾಲಗಳನ್ನು ಎಡಗೈಯಿಂದ ಬಿಗಿಹಿಡಿದು ಬಲಗೈಯ ಚಾವಟಿಯಿಂದ ಬಲವಾಗಿ ಅವುಗಳಿಗೆ ಬಾರಿಸುತ್ತ ವೇಗವಾಗಿ ಓಡಿಸುವನು. ಸೊಕ್ಕಿದ ಕೋಣಗಳನ್ನು ನಿಯಂತ್ರಿಸುವುದು ಕಷ್ಟ ಮತ್ತು ಅಪಾಯಕಾರಿ ಕೆಲಸವಾದ್ದರಿಂದ ಅದನ್ನು ನಿರ್ವಹಿಸುವವ ಬಲಶಾಲಿಯೂ ನುರಿತವನೂ ಆಗಿರಬೇಕು.



ಕಂಬಳ ಓಟದ ಒಂದು ದೃಶ್ಯ

ಕೋಣಗಳು ಮುಂದಕ್ಕೆ ಓಡುತ್ತಿದ್ದಂತೆ ವ್ಯಕ್ತಿ ನಿಂತ ಅಡ್ಡಹಲಗೆ ನೀರನ್ನು ಮೇಲಕ್ಕೆ ಹಾಯಿಸುತ್ತದೆ. ಸಾಮಾನ್ಯವಾದ ಗೋರು ಹಲಗೆಯನ್ನೇ ಓಟಕ್ಕೂ ಅಡ್ಡಹಲಗೆಯಾಗಿ ಹಿಂದೆ ಉಪಯೋಗಿಸುತ್ತಿದ್ದರು. ಆದರೆ ಅದರ ಮೂಲಕ ಸಾಕಷ್ಟು ಹೆಚ್ಚು ಎತ್ತರಕ್ಕೆ ನೀರು ಚಿಮ್ಮುವುದಿಲ್ಲವೆಂದು ಅದರ ರಚನೆಯಲ್ಲಿ ಸ್ವಲ್ಪ ವ್ಯತ್ಯಾಸ ಮಾಡಿ ಕಣೆಹಲಗೆ ಎಂಬುದನ್ನು ಈಗ ಬಳಸತೊಡಗಿದ್ದಾರೆ.

ಕೋಣಗಳು ಓಡಿ ಗುರಿ ಮುಟ್ಟುವ ಕಂಬಳದ ಕೊನೆಯ ತುದಿಗೆ ಮಂಜೊಟ್ಟಿ ಎನ್ನುತ್ತಾರೆ. ಕಂಬಳದ ಕೋಣಗಳನ್ನು ಮಂಜೊಟ್ಟಿ ಕೋಣ ಎಂದು ಕರೆಯುವುದುಂಟು. ಹಿಂದೆ ನಡೆದುದೆನ್ನಲಾದ ಕಂಬಳದ ಒಂದು ದುರಂತ ಪ್ರಕರಣ ಮಂಜೊಟ್ಟಿಗೋಣ ಎಂಬ ತುಳುಪಾಡ್ದನವಾಗಿ ಈಗಲೂ ಪ್ರಚಲಿತವಿದೆ.

ಕಂಬಳದ ಕರೆಯ ಸುಮಾರು ಮಧ್ಯದಲ್ಲಿ ಅಥವಾ ಮಂಜೊಟ್ಟಿಗೆ ಸಮೀಪವಾಗಿ ಒಂದೋ ಎರಡೋ ನಿಶಾನೆಗಳನ್ನು ನೆಟ್ಟಿರುತ್ತಾರೆ. ಸು.7ಮೀ. ಎತ್ತರದಲ್ಲಿ ಅಡ್ಡವಾಗಿ ಕಟ್ಟುವ ನಿಶಾನೆಗೆ ಬಟ್ಟೆ ಅಥವಾ ಹಲಗೆಯನ್ನು ಉಪಯೋಗಿಸುತ್ತಾರೆ. ಆ ನಿಶಾನೆಗೆ ನೀರು ಮುಟ್ಟಿಸಿದ ಕೋಣಗಳು ಗೆದ್ದಂತೆ. ನಿಶಾನೆ ಎಷ್ಟು ಎತ್ತರಕ್ಕೆ ಒದ್ದೆಯಾಯಿತು ಎಂಬುದರ ಮೇಲಿಂದ ಒಂದನೆಯ ಎರಡನೆಯ ಇತ್ಯಾದಿ ಬಹುಮಾನಗಳು ಅನುಕ್ರಮವಾಗಿ ಸಲ್ಲುತ್ತವೆ. ಚಿನ್ನ ಬೆಳ್ಳಿಯ ಪದಕಗಳನ್ನೂ ಬಾಳೆಯ ಗೊನೆಯನ್ನೂ ಬಹುಮಾನಗಳಾಗಿ ಇರಿಸುವರು. ಕಂಬಳದ ಓಟದ ಜೊತೆಗೆ ಗೆಲ್ಲುವ ಕೋಣದ ಮೇಲೆ ಬಾಜಿಕಟ್ಟುವ ಜೂಜಾಡುವ ಪರಿಪಾಠವೂ ಇತ್ತೀಚೆಗೆ ಬೆಳೆದಿದೆ.

ಒಂದೇ ಸಾರಿ ಎರಡೆರಡು ಜೊತೆ ಕೋಣಗಳನ್ನು ಓಡಿಸಿ, ಓಟದಲ್ಲಿ ಯಾವುದು ಮೊದಲು ಬರುತ್ತದೆ ಎಂಬ ಸ್ಪರ್ಧೆಯನ್ನೂ ಈ ಕಾಲದಲ್ಲಿ ಏರ್ಪಡಿಸುವುದುಂಟು. ಕಂಬಳದ ಅಂಗವಾಗಿ ಕೋಳಿ ಕಾಳಗ ಮುಂತಾದ ಇತರ ಮನರಂಜನೆ ಆಟಗಳು ಈ ಸಂದರ್ಭದಲ್ಲಿ ನಡೆಯುತ್ತವೆ. (ಎ.ಎಸ್‌ಟಿ.)

**ಕಂಬಳಿ ಉದ್ಯಮ :** ಜನಪದರು ಹೊದೆಯಲು ಹಾಸಲು ಉಪಯೋಗಿಸುವ ಉಣ್ಣೆಯ ನೇಯ್ಗೆ. ಇದು ಉಷ್ಣ ಅವಾಹಕವಾದ್ದರಿಂದ ದೇಹೋಷ್ಣತೆಯನ್ನು ಒಳಗೆ ಕಾಪಿಡುವುದಲ್ಲದೇ ಪರಿಸರದ ಶೈತ್ಯ ಒಳಗೆ ಬರದಂತೆಯೂ ನಿವಾರಿಸುವದು.

ಭಾರತದಲ್ಲಿ ಋಗ್ವೇದದ ಕಾಲದಿಂದಲೂ ಉಣ್ಣೆಯ ವಸ್ತ್ರ ಬಳಕೆಯಲ್ಲಿ ಇತ್ತೆಂಬುದಕ್ಕೆ ಆಧಾರವಿದೆ. ಊರ್ಣವತೀ ಯುವತಿಃ ಶೀಲ ಮಾವತಿ, ಊರ್ಣವಂತಂ ಊರ್ಣವಸತ ಶ್ರಂದ್ರುವ ಮುಂತಾದ ಋಗ್ವೇದೋಕ್ತಿಗಳನ್ನು ಗಮನಿಸಬಹುದು. ಉಣ್ಣೆ, ನಾರು, ರೇಷ್ಮೆ ಮುಂತಾದವುಗಳಿಂದ ನೇದ ಬಟ್ಟೆಗಳು ದೇವಾತಾಕಾರ್ಯಗಳಲ್ಲಿ ತೊಟ್ಟುಕೊಳ್ಳಲು ಉಪಯೋಗಿಸಬಹುದಾದ ಮಡಿವಸ್ತ್ರಗಳೆಂದೂ ವೈದಿಕ ಕಾಲದಿಂದಲೂ ಬೆಳೆದು ಬಂದಿರುವ ಸಂಪ್ರದಾಯವೂ ಉಣ್ಣೆವಸ್ತ್ರದ ಪ್ರಾಚೀನತೆಗೆ ಸಾಕ್ಷಿ.

ಜಂಗಮ ದಾಸೋಹದಲ್ಲಿ ಸಣ್ಣ ಕಂಬಳಿ ಮತ್ತು ಶಾಲುಗಳ ಅರ್ಪಣೆಯೂ ಒಂದು ಪ್ರಮುಖ ವಿಧಿಯಾಗಿ ಬರುತ್ತದೆ. ಹನ್ನೆರಡನೆಯ ಶತಮಾನದ ವಚನಗಳಲ್ಲಿ ಕಂಬಳಿ ನಾಗಿದೇವ ಎಂಬ ವಚನಕಾರನೊಬ್ಬ ಪ್ರಾಯಶಃ ಕಂಬಳಿ ಮಾಡುವ ವೃತ್ತಿಯವನಿರಬೇಕು. ಕಂಬಳಿ ಮತ್ತು ಕರಿಯ ಕಂಬಳಿಗಳಂತೂ ಜನಪದ ಸಾಹಿತ್ಯ ಮತ್ತು ಗಾದೆಗಳಲ್ಲಿ ಪ್ರಸಿದ್ಧಿ ಪಡೆದಿದ್ದುವು. ಅಂಬಲಿಯಂತ ಊಟವಿಲ್ಲ ಕಂಬಳಿಯಂತ ಹೊದಿಕೆಯಿಲ್ಲ ಎಂಬ ಗಾದೆಯೇ ಜನಪದರಲ್ಲಿ ಅಂಬಲಿ, ಕಂಬಳಿಗಳ ಬಗೆಗಿನ ಪ್ರೀತಿ ಭಾವವನ್ನು ಪ್ರಕಟಿಸುತ್ತದೆ.

ಕನ್ನಡನಾಡು ಕಂಬಳಿ ತಯಾರಿಕೆಯಲ್ಲಿ ಬಹಳ ಪುರಾತನವಾದ ದೇಶ. ಹನ್ನೆರಡನೆಯ ಶತಮಾನದ ವಚನ ಸಾಹಿತ್ಯದಲ್ಲಿ ಕಂಬಳಿ ದಾನದ ಬಗ್ಗೆ ವಿಪುಲವಾದ ಹೇಳಿಕೆಗಳಿವೆ. ಕಂಬಳಿಯ ಗದ್ದುಗೆಯಂತೂ ಬಹಳ ಪ್ರಸಿದ್ಧವಾದುದು, ವಿಜಯನಗರದ ಅಕ್ಕಪಕ್ಕದ ಮೈದಾನಗಳಲ್ಲಿ ಹುಡುಗರು ಕುರಿಗಳ ಮೇಲೆ ಸವಾರಿ ಮಾಡುತ್ತಿದ್ದುದನ್ನು ಕಂಡುದಾಗಿ ಪೋರ್ಚುಗೀಸ್ ಯಾತ್ರಿಕ ಪೆಯಿಜ್ ಹೇಳಿದ್ದಾನೆ. ಈ ಹೇಳಿಕೆ ಆ ಕಾಲದ ಕುರಿಗಳ ಸುದೃಢತೆಗೆ ಸಾಕ್ಷಿ, ತರುವಾಯ ಮೈಸೂರು ಅರಸರು ಕುರಿಸಾಕಣೆ ಮತ್ತು ಉಣ್ಣೆಯ ಉದ್ಯಮಕ್ಕೆ ಉದಾರ ನೆರವು ನೀಡಿದರು.

**ಕಂಬಳಿ ತಯಾರಿಕೆ :** ಕಂಬಳಿ ತಯಾರಿಕೆಯ ಮೊದಲನೆಯ ಹಂತ ತುಪ್ಪಟ ಸಂಗ್ರಹ. ಇದನ್ನು ಬಂಡ ಎಂದು ಕರೆಯುತ್ತಾರೆ. ಗ್ರಾಮಾಂತರ ಪ್ರದೇಶದಲ್ಲಿ ಕುರುಬ, ಹಳ್ಳಿಕಾರ, ಹಟ್ಟಿಕಾರ, ಒಕ್ಕಲಿಗರು, ಗೊಲ್ಲರು, ಲಿಂಗಾಯಿತರು ಗೊಬ್ಬರ ಮತ್ತು ಮಾಂಸಕ್ಕಾಗಿ ಕುರಿ ಸಾಕುತ್ತಾರೆ. ಹೀಗೆ ಸಾಕಿದ ಕುರಿಗಳ ತುಪ್ಪಟದಿಂದ ಹೊದೆಯುವ ಕಂಬಳಿಗಳು ಅವರಿಗೆ ದೊರೆಯುವ ಉಪ ಆದಾಯ. ಮೇಲೆ ಹೇಳಿದ ಜನಾಂಗಗಳಲ್ಲಿ ಕುರಿಯ ತುಪ್ಪಟ ಕತ್ತರಿಸಿ ಕಂಬಳಿ ಮಾಡುವ ಕಲೆ ಕುರುಬ ಜನಾಂಗದವರಿಗೆ ಮಾತ್ರ ಸಿದ್ಧಿಸಿದೆ. ಯಂತ್ರಯುಗದ ಆರಂಭದವರೆಗೆ ಇದು ಕೇವಲ ಕುರುಬರ ಕಸಬಾಗಿತ್ತು. ಒಂದು ಕತ್ತರಿ, ಕೆಲವು ಕಂಬಳಿಗಳನ್ನು ಹೆಗಲ ಮೇಲೆ ಹಾಕಿಕೊಂಡು ಈ ಕಂಬಳಿ ನೇಯ್ಗೆಕಾರ ವರ್ಷಕ್ಕೆ ಎರಡುಬಾರಿ ಬಂಡ ಸಂಗ್ರಹಣೆಗೆ ಹಳ್ಳಿಗಳ ಮೇಲೆ ಹೋಗುತ್ತಾನೆ. ಕುರಿ ಸಾಕಿದ ರೈತರು ತುಪ್ಪಟ ಬೆಳೆದ ತಮ್ಮ ಕುರಿಗಳ್ನು ಕತ್ತರಿಸಲು ಅವನಿಗೊಪ್ಪಿಸಿ ಅದಕ್ಕೆ ಬದಲಾಗಿ ಕಂಬಳಿಗಳನ್ನು ಪಡೆಯುತ್ತಾರೆ. ಐವತ್ತು ಕುರಿಗಳ ಒಂದು ಸೊಲಿಗೆ ತುಪ್ಪಟಕ್ಕೆ ಒಂದು ದಡೂತಿ ಕಂಬಳಿ ವಿನಿಮಯವಾಗುತ್ತದೆ. ಹೀಗೆ ಪಡೆದ ಒಂದು ಸೊಲಿಗೆ ತುಪ್ಪಟ ಹಳೇ ತೂಕದ ಒಂದು ಮಣವಿರುತ್ತದೆ. ಅದರಲ್ಲಿ ಮೂರು ದಡೂತಿಯ ಕಂಬಳಿಗಳಾಗುತ್ತವೆ. ಅದರಿಂದ ಕಸುಬುದಾರನಿಗೆ ಎರಡು ಕಂಬಳಿಗಳ ಲಾಭ ದೊರೆಯುತ್ತದೆ.

ಬಂಡದಲ್ಲಿ ಎರಡು ವಿಧ. ಮೊದಲೇ ಕುರಿಗಳನ್ನು ಚೆನ್ನಾಗಿ ತೊಳೆದು ಕತ್ತರಿಸುವುದು ಮೊದಲನೆಯ ರೀತಿ. ಇದು ಒಳ್ಳೆಯ ಬಂಡ. ಏಕೆಂದರೆ ಕುರಿಗಳ ಮೈಗೆ ಅಂಟಿದ್ದ ಕಸಕಡ್ಡಿ, ಮುಳ್ಳು, ಕೊಳೆಯೆಲ್ಲ ಹೋಗಿ ತುಪ್ಪಟ ಸ್ವಚ್ಛವಾಗಿರುತ್ತದೆ. ಕುರಿಗಳನ್ನು ತೊಳೆಯದೆ ಕತ್ತರಿಸುವುದು ಎರಡನೆಯ ವಿಧ. ಅದನ್ನು ಬೆವರು ತುಪ್ಪಟ ಎಂದು ಕರೆಯುತ್ತಾರೆ. ಈ ಬೆವರು ತುಪ್ಪಟವನ್ನು ಗೆರೆಸಿಗಳಲ್ಲಿ ಹಾಕಿಕೊಂಡು ಕೆರೆಗಳಲ್ಲಿ ಅಥವಾ ಹೊಳೆಯ ತಿಳಿನೀರಿನಲ್ಲಿ ಕೀರೇಸೊಪ್ಪು ಜಾಲಿಸುವಂತೆ ಜಾಲಿಸಿ ತೊಳೆದು ಒಣಗಿಸುತ್ತಾರೆ. ಇದನ್ನು ಹಿಂಜಿ ಹಂಜಿ ಮಾಡುವುದು ಎರಡನೆಯ ಕೆಲಸ. ಈಗ ತುಪ್ಪಟ ಹಿಂಜುವುದಕ್ಕೆ ಯಂತ್ರಗಳಿವೆ. ಆದರೆ ಮೊದಲಿಗೆ ಪಿಂಜಾರರು ಕೈಬೆಸಗಳಿಂದ ತುಪ್ಪಟ ಹೊಡಚುತ್ತಿದ್ದರು. ಕಂಬಳಿ ತಯಾರಿಕೆ ಗೃಹಕೈಗಾರಿಕೆಯಾಗಿರುವ ಕಡೆಗಳಲ್ಲೆಲ್ಲ ಇಂದಿಗೂ ಈ ಪದ್ಧತಿ ಜಾರಿಯಲ್ಲಿದೆ. ಚೆನ್ನಾಗಿ ಹೊಡಚಿದ ತುಪ್ಪಟ ಬಹಳ ಮೃದುವಾಗುತ್ತದೆ. ಇದರಿಂದ ಹಂಜಿಗಳನ್ನು ತಯಾರುಮಾಡುತ್ತಾರೆ.

ಕಂಬಳಿ ನೇಯ್ಗೆಯಲ್ಲಿ ನೂಲುವುದು ಒಂದು ಪ್ರಮುಖವಾದ ಕಾರ್ಯ. ನೂಲು ಯಾವ ಮಟ್ಟವಿರುತ್ತದೆಯೋ ಕಂಬಳಿ ಆ

ಮಟ್ಟದ್ದಾಗುತ್ತದೆ. ಹೊಡಚಿ ಹಿಂಜಿ ಹಂಜಿಮಾಡಿದ ತುಪ್ಪಟವನ್ನು ಕಂಬಳಿಗಳ ವಿನ್ಯಾಸದ ಯೋಜನೆಗನುಗುಣವಾಗಿ ನೂಲುತ್ತಾರೆ.

ಬಹಳ ಹಿಂದೆ ಇಂಥ ಹಂಜಿಗಳನ್ನೂ ತೊಡೆಗದಿರಿನಿಂದ ನೂಲುತ್ತಿದ್ದರು. ಇದು ಬಹಳ ನಿಧಾನ ಮತ್ತು ಕಷ್ಟದ ಕೆಲಸವಾಗಿತ್ತು. ರಾಟೆಯ ಪ್ರವೇಶ ಬಹುಶಃ ನೂಲುವುದರ ಇತಿಹಾಸದಲ್ಲಿ ಒಂದು ಕ್ರಾಂತಿಯನ್ನು ಎಬ್ಬಿಸಿತು. ಈ ಕುಶಲ ಕಲೆ ಬೆಳೆದುಬಂದ ರೀತಿಯೇ ಒಂದು ಕೌತುಕದ ಕಥೆ. ಸು.600 ವರ್ಷಗಳಷ್ಟು ಹಳೆಯದಾದ ಚರಕವನ್ನು ಭಾರತೀಯರೇ ಮೊದಲು ಕಂಡುಹಿಡಿದದ್ದು ಎಂದು ಅನೇಕರ ಅಭಿಪ್ರಾಯ. ಆದರೆ ಇದನ್ನು ಕಂಡುಹಿಡಿದವರ ಹೆಸರು ಅಜ್ಞಾತವಾಗಿಯೇ ಉಳಿದಿದೆ. ತಿರುಗಿಸಲು ದೊಡ್ಡ ಚಕ್ರದ ಬಳಕೆ ಮತ್ತು ಅದಕ್ಕೆ ತಕ್ಕ ಕದರನ್ನು ಉಪಯೋಗಿಸಿದುದರಿಂದ ಚರಕವನ್ನು ವೇಗವಾಗಿ ತಿರುಗಿಸಲು ಸಾಧ್ಯವಾಗಿ ಹೆಚ್ಚು ನೂಲು ತೆಗೆಯಲು ಅನುಕೂಲವಾಯಿತು. ಆದುದರಿಂದಲೇ ಕಂಬಳಿ ಮತ್ತು ಜಮಖಾನೆಯ ಉದ್ಯಮದಲ್ಲಿ ಚರಕ ಬಹಳ ಪ್ರಮುಖವಾದ ಮಾಧ್ಯಮವಾಗಿದೆ.

ಚರಕದಿಂದ ನೂತ ನೂಲನ್ನು ಕಂಡಿಕೆಗಳಾಗಿ ಮಾಡಿಕೊಳ್ಳುತ್ತಾರೆ. ಕಂಬಳಿ ನೇಕಾರರೇ ನೂಲನ್ನು ನೂಲುವುದಿಲ್ಲ. ಬೇರೆಯವರಿಗೆ ಕೂಲಿ ಕೊಟ್ಟು ನೂಲಿಸುವುದೂ ಉಂಟು. ಇಪ್ಪತ್ತೆಂಟು ತೊಲ ಹಿಂಜಿದ ತುಪ್ಪಟಕ್ಕೆ ಒಂದು ಹಂಜಿ ಎಂದು ಹೆಸರು. ಇಂಥ ಮೂರು ಹಂಜಿಯನ್ನು ನೂತರೆ ಒಂದು ರೂಪಾಯಿ ಕೂಲಿ ಸಿಗುತ್ತದೆ. ನೂಲಿನಲ್ಲಿ ಅನೇಕ ವಿಧಗಳುಂಟು: 1 ಹುರಿಗಂಬಳಿ ನೂಲು, 2 ಉಜ್ಜುಗಂಬಳಿ ನೂಲು, 3 ಸಣ್ಣಕಂಬಳಿ ನೂಲು, ಇತ್ಯಾದಿ. ಒಟ್ಟಿನಲ್ಲಿ ನೂಲಿನ ಗುಣಮಟ್ಟದಂತೆ ಕಂಬಳಿ ತಯಾರಾಗುತ್ತದೆ.



ಕಂಬಳಿ ನೇಯುತ್ತಿರುವುದು

ಆಧಾರವೆಂತೆಂಬ ಅಂಬಲಿಯನೆ ತೊಡೆದು - ಎಂಬ ಜನಪದ ನುಡಿಯೊಂದರಂತೆ ಅಂಬಲಿಯ ತಯಾರಿಕೆ ಮತ್ತು ಅದನ್ನು ನೂತ ದಾರಕ್ಕೆ ಸವರುವುದು ಒಂದು ವಿಶಿಷ್ಟ ಕಲೆ. ಕಂಬಳಿಯ ತಯಾರಿಕೆಯಲ್ಲಿ ಅಂಬಲಿಯ ಪಾತ್ರ ಹಿರಿದಾದುದು. ಇದರ ತಯಾರಿಕೆಯೇ ಒಂದು ವಿಶಿಷ್ಟ ರೀತಿಯದು. ಮೊದಲು ಒಳ್ಳೆಯ ಹುಣಿಸೆ ಬೀಜವನ್ನು ಹದವರಿತು ಹುರಿಯಬೇಕು. ಆಮೇಲೆ ಅವನ್ನು ನೆಗ್ಗಿ ಮೇಲಿನ ಕರಿಯ ಸಿಪ್ಪೆ ತೆಗೆದರೆ ದೊರೆಯುವ ಬಿಳಿ ಪೊಪ್ಪುಗಳನ್ನು ಸುಮಾರು ಹನ್ನೆರಡು ಗಂಟೆಗಳ ಕಾಲ ಅಥವಾ ಒಂದು ರಾತ್ರಿ ನೀರಿನಲ್ಲಿ ನೆನೆಹಾಕಬೇಕು. ಚೆನ್ನಾಗಿ ನೆನೆದ ಬೀಜವನ್ನು ಒರಳಲ್ಲಿ ಹಾಕಿ ಚೆನ್ನಾಗಿ ನುಣ್ಣಗೆ ತಿರುವಿ ಆ ಹಿಟ್ಟನ್ನು ನೀರಿನಲ್ಲಿ ಕದರಿ ಒಲೆಯ ಮೇಲಿಟ್ಟು ಹದವಾದ ಉರಿಯಲ್ಲಿ ಚೆನ್ನಾಗಿ ಬೇಯಿಸಬೇಕು. ಉದ್ದನೆಯ ಕೋಲಿನ ತುದಿಗೆ ಈಚಲುಗರಿಯನ್ನು ಸಿಕ್ಕಿಸಿದ ಉಜ್ಜುಗುಲ್ಲದಿಂದ ಅದನ್ನು ಗಂಟಾಗದಂತೆ ತಿರುವುತ್ತಿರಬೇಕು. ಸುಮಾರು ಎರಡು ಮೂರು ಗಂಟೆಗಳ ಕಾಲ ಹೀಗೆ ಬೇಯಿಸಿದ ಅನಂತರ ಅದು ಚೆನ್ನಾಗಿ ಬೆಂದು ಒಂದು ರೀತಿಯ ಮುದ್ದೆಯಂತಾಗುತ್ತದೆ. ಈ ಮುದ್ದೆಯನ್ನು ಮತ್ತೆ ನೀರಿನಲ್ಲಿ ಕದರಿದರೆ ಅದು ಅಂಟು ಅಂಟಾದ ಗಂಜಿಯಂಥ ಸರಿಯಾಗುತ್ತದೆ. ಇದನ್ನು ಹುಣಿಸೆ ಅಂಬಲಿ, ಗಂಜಿಸರಿ ಎಂದೆಲ್ಲ ಕರೆಯುತ್ತಾರೆ.

ಮುಂದಿನ ಕ್ರಮ ದಾರವನ್ನು ಹಾಸುಮಾಡುವುದು. ಸುಮಾರು ಒಂಬತ್ತು ಮೊಳ ಉದ್ದದ 220ರಿಂದ 240 ಜೊತೆ ದಾರಗಳುಳ್ಳ ಹಾಸುಗಳನ್ನಾಗಿ ಮಾಡುತ್ತಾರೆ. ಹಾಸು ಎಂದರೆ ಎಳೆಗಳು ಬಿಡಿ ಬಿಡಿಯಾಗಿ ಒಂದರ ಪಕ್ಕದಲ್ಲೊಂದು ಬರುವಂತೆ ಜೋಡಿಸುವ ರೀತಿ. ಏಳು ಗೂಟಗಳ ಆರುಗಣಿ ಎಂಬ ಹಲಗೆಯಂಥ ಸಾಧನದಲ್ಲಿ ನೂಲನ್ನು ಹಾಸಿಕ್ಕುತ್ತಾರೆ. ಹೀಗೆ ಹಾಸಿದ ನೂಲನ್ನು ಒಂದು ಕ್ರಮದಲ್ಲಿ ಕಟ್ಟಿ ತಿಳಿಯಾದ ಹುಣಿಸೆ ಸರಿಯಲ್ಲಿ ಅದ್ದಿ ಬಿಸಿಲಿನಲ್ಲಿಟ್ಟುಕೊಂಡು ಕುಂಚಿಗೆ ಎಂಬ ಉಪಕರಣದ ಸಹಾಯದಿಂದ ಊಕೆ ಮಾಡುತ್ತಾರೆ - ಎಂದರೆ ನೂಲನ್ನು ನಯಗೊಳಿಸುವುದು ಎಂದರ್ಥ. ಆಗ ನೂಲಿನ ಕೂದಲು ಬಲಿಯೊಡನೆ ಸೇರಿ ಒಂದು ಹದಕ್ಕೆ ಬರುತ್ತದೆ. ಎಳೆಗಳು ಒಂದಕ್ಕೊಂದು ಅಂಟದೆ ಬಿಡಿಬಿಡಿಯಾಗಿರುತ್ತವೆ.

ಇಷ್ಟೆಲ್ಲ ಆದ ಮೇಲೆ ದಾರ ಅಥವಾ ಹುರಿಯನ್ನು ಮಗ್ಗಕ್ಕೆ ಏರಿಸುತ್ತಾರೆ. ಹೋಳು ಎನ್ನುವ ಸಾಧನದಲ್ಲಿ ನೂಲನ್ನು ಜೋಡಿಸಿ ಮಗ್ಗದಲ್ಲಿಟ್ಟು ನೇಯುತ್ತಾರೆ. ಈ ಹೋಳುಗಳು 9 ಮೊಳ ಉದ್ದ 3 ಮೊಳ ಅಗಲವಿರುತ್ತವೆ. ನೇಯ್ದ ಮೇಲೆ ಅನುಕೂಲಕ್ಕೆ ತಕ್ಕಹಾಗೆ ಈ ಹೋಳುಗಳನ್ನು (ಎರಡರಿಂದ ನಾಲ್ಕನ್ನು ಸೇರಿಸಿ ಒಂದು ಕಂಬಳಿ ಮಾಡುತ್ತಾರೆ). ಅಣಿಗಳನ್ನು ಬಿಡಿಸಿ ಗಂಜಿಯಲ್ಲಿ ಅದ್ದಿ ಸಿದ್ಧವಾದ ಹುರಿಯನ್ನು ಲಾಳಿಯ ಮೂಲಕ ಸೇರಿಸಿ ಮತ್ತೆ ಅಣಿಯನ್ನು ಕೂಡಿಸಿ ಬೇವು ಎಂಬ ಸಾಧನದಿಂದ ಒತ್ತಿ ಹುರಿಗಳನ್ನು ಹತ್ತಿರ ಸೇರಿಸುತ್ತ ಹೋಗುತ್ತಾರೆ. ಹೀಗೆ ನೇಯ್ದು ಸಿದ್ಧವಾದ ಕಂಬಳಿಯ ಹೋಳುಗಳಿಗೆ ಮತ್ತೆ ಹುಣಿಸೆ ಸರಿಯನ್ನು ಸವರಿ ಬಿಸಿಲಿನಲ್ಲಿ ನೇತು ಹಾಕಿ ಒಣಗಿಸುತ್ತಾರೆ. ಹೀಗೆ ಕ್ರಮಬದ್ಧವಾಗಿ ಒಣಗಿಸಿದ ನೇಯ್ದ ಹೋಳುಗಳನ್ನು ಅನುಕೂಲಕ್ಕೆ ಅನುಗುಣವಾಗಿ ಎರಡರಿಂದ ನಾಲ್ಕು ಹೋಳುಗಳನ್ನು ಉಣ್ಣೆಯ ದಾರದಿಂದ ಹೊಲೆದರೆ ಒಂದು ಪೂರ್ಣ ಕಂಬಳಿ ಸಿದ್ಧವಾದಂತಾಯಿತು.

ಕಂಬಳಿಗಳಲ್ಲಿ ಹಲವು ವಿಧಗಳುಂಟು. ತುಪ್ಪಟದ ಉತ್ಕೃಷ್ಟತೆ ಮತ್ತು ಮಾರುಕಟ್ಟೆಯ ಬೇಡಿಕೆಗೆ ಅನುಗುಣವಾಗಿ (1) ಹುರಿಗಂಬಳಿ (2) ಉಜ್ಜುಗಂಬಳಿ (3) ಸಣ್ಣಕಂಬಳಿ (4) ಶಾಲು (5) ಗದ್ದುಗೆ ದಾವಳಿ (6) ಕರಿಯಕಂತೆ ಇತ್ಯಾದಿ.

**ಹುರಿಗಂಬಳಿ :** ಇದು ಸಾಮಾನ್ಯ ಬಳಕೆಗೆ ತಯಾರುಮಾಡುವ ಒರಟು ಕಂಬಳಿ. ಅಂಥ ಮೃದುವಲ್ಲದ ತುಪ್ಪಟದಿಂದ ನೂತ ಕೊಂಚ ದಪ್ಪನೆಯ ನೂಲುಗಳಿಂದ ಇದನ್ನು ನೇಯುತ್ತಾರೆ. ನೂಲು ಹುರಿಯ ಗಾತ್ರ ವಿರುವುದರಿಂದ ಹುರಿಗಂಬಳಿ ಎಂದು ಕರೆಯುತ್ತಾರೆ. ಹುರಿಗಂಬಳಿ ನಾಲ್ಕು ಹೋಳುಗಳಿಂದ ತಯಾರಾಗಿರುತ್ತದೆ. ಒಂದೇ ಕಂಬಳಿಯ ಅರ್ಧವನ್ನು ಹಾಸಿ ಮತ್ತರ್ಧವನ್ನು ಹೊದೆಯುತ್ತಾರೆ. ಇದನ್ನು ಹೆಗ್ಗಂಬಳಿ ಎಂದೂ ಕರೆಯುತ್ತಾರೆ. ಹಳ್ಳಿಗಾಡುಗಳಲ್ಲಿ ವಾಸಿಸುವ ರೈತರು ಇದನ್ನು ಕೊಳ್ಳುತ್ತಾರೆ; ಕುರಿ ಸಾಕುವವರು ಬಂಡದ ವಿನಿಮಯಕ್ಕೆ ಪಡೆಯುತ್ತಾರೆ.

**ಉಜ್ಜುಗಂಬಳಿ :** ಕಂಬಳಿ ತಯಾರಿಕೆಯಲ್ಲಿ ಉಜ್ಜುಗಂಬಳಿ ಮಾಡುವುದು ಒಂದು ವಿಶೇಷ ಕಲೆ. ಕಂಬಳಿ ಮಾಡುವ ಎಲ್ಲ ಕಸುಬುದಾರರಿಗೂ ಇದು ಬರುವುದಿಲ್ಲ. ಆ ಕೆಲಸದಲ್ಲಿ ನಿಷ್ಣಾತರಾದ ಕೆಲವು ಜನ ಮಾತ್ರ ಇದನ್ನು ಮಾಡಬಲ್ಲರು. ಉಜ್ಜು ಕಂಬಳಿಯನ್ನು ಸಾಮಾನ್ಯ ಬಂಡದಿಂದ ಮಾಡಲು ಬರುವುದಿಲ್ಲ. ನೇಕಾರರು ತರುವ ರಾಶಿಬಂಡದಲ್ಲಿ ಮೃದುವಾದುದನ್ನು ಆರಿಸಬೇಕು. ಒಂದು ಮಣದಷ್ಟಿರುವ ಬಂಡದ ರಾಶಿಯಲ್ಲಿ ಇಂಥ ಮೃದುವಾದ ತುಪ್ಪಟ ಮೂರು ಅಥವಾ ನಾಲ್ಕು ಪೌಂಡು ದೊರೆಯುತ್ತದೆ. ಸಾಮಾನ್ಯವಾಗಿ ಈ ತುಪ್ಪಟ ಕುರಿಯ ಮೊದಲನೆಯ ಕತ್ತರಿಯದಾಗಿರಬೇಕು. ಕುರಿಯ ಕತ್ತಿನ ಭಾಗ ಮತ್ತು ಬೆನ್ನಿನ ಮೇಲಿನ ತುಪ್ಪಟ ಇದಕ್ಕೆ ಉತ್ತಮವಾದುದು. ಹೀಗೆ ಆರಿಸಿ ತೆಗೆದ ಅಪ್ಪಟವಾದ ಮೃದು ತುಪ್ಪಟವನ್ನು ಹಿಂಜಿ ಹಂಜಿ ಮಾಡಬೇಕು. ಈಗಿನಂತೆ ಹಿಂಜು ಯಂತ್ರಗಳು ಇಲ್ಲದಿದ್ದ ಹಿಂದಿನ ಕಾಲದಲ್ಲಿ ತುಪ್ಪಟವನ್ನೂ ಕೈಬೆಸಗಳಿಂದ ಹಿಂಜುತ್ತಿದ್ದರು. ಹಿಂಜಿದ ಹಂಜಿಯಿಂದ ಮೃದುವಾದ, ಹೆಚ್ಚು ಸಡಿಲವಲ್ಲದ, ಹೆಚ್ಚು ಹುರಿಯೂ ಅಲ್ಲದ ಹೆಚ್ಚು

ದಪ್ಪನಲ್ಲದ, ಹೆಚ್ಚು ಸಣ್ಣವೂ ಅಲ್ಲದ ಮಧ್ಯಮ ರೀತಿಯ ದಾರ ತೆಗೆಯಬೇಕು. ಉಜ್ಜುಗಂಬಳಿಯ ನೂಲು ತೆಗೆಯುವುದೇ ಇಲ್ಲಿ ಬಹು ಮುಖ್ಯ ಕೆಲಸ. ಎಷ್ಟರಮಟ್ಟಿಗೆ ಒಳ್ಳೆಯ ನೂಲು ಬರುತ್ತದೆಯೋ ಅಷ್ಟರ ಮಟ್ಟಿಗೆ ಕಂಬಳಿ ಉತ್ತಮವಾಗುತ್ತದೆ. ಉಜ್ಜುಗಂಬಳಿ ನೇಯ್ಗೆಯೂ ಒಂದು ವಿಶೇಷ ಕ್ರಮ. ಹುರಿಗಂಬಳಿ ನೇಯುವಾಗ ಹೊಕ್ಕನ್ನು ಹುಣಿಸೆ ಸರಿಯಲ್ಲಿ ನೆನೆಸಿ ಉಪಯೋಗಿಸುತ್ತಾರೆ. ಉಜ್ಜುಗಂಬಳಿಗೆ ಉಪಯೋಗಿಸುವ ಹೊಕ್ಕನ್ನು ಹುಣಿಸೆ ಸರಿಯಲ್ಲಿ ಅದ್ದುವುದಿಲ್ಲ. ನೇಯ್ಗೆಗೆ ತಯಾರಾದ ಹಾಸನ್ನು ತಕ್ಕ ಉಪಕರಣಗಳಿಂದ ಮಗ್ಗದಲ್ಲಿ ಜೋಡಿಸಿ ಹೊಕ್ಕಿನ ಎಳೆಗಳನ್ನು ಒಂದು ಕ್ರಮದಲ್ಲಿ ನೇಯುತ್ತಾರೆ. ಉಜ್ಜುಗಂಬಳಿಯ ತಯಾರಿಕೆಯಲ್ಲಿ ನೇಯ್ದೆ ಬಹಳ ಜಾಗರೂಕತೆಯಿಂದ ಮಾಡಬೇಕಾದ ಕೆಲಸ. ಹೀಗೆ ನೇಯ್ದ ಹೋಳುಗಳು 9ಮೊಳ ಉದ್ದ 2.5ಮೊಳ ಅಗಲವಿರುತ್ತವೆ. ಇಂಥ ಎರಡು ಹೋಳುಗಳನ್ನು ಸೇರಿಸಿ ಉಣ್ಣೆಯ ದಾರದಿಂದ ಹೊಲೆಯುತ್ತಾರೆ. ಆಗ ಅದು ಒಂದು ಕಂಬಳಿಯಾಗುತ್ತದೆ. ಈ 9ಮೊಳ ಉದ್ದ 5ಮೊಳ ಅಗಲದ ಕಂಬಳಿಯನ್ನು 6ಮೊಳ ಉದ್ದ 4ಮೊಳ ಅಗಲಕ್ಕೆ ಇಳಿಸುವ ಕಾರ್ಯ ಉಜ್ಜುವುದರಿಂದ ಆಗುತ್ತದೆ.

ಈಚಲು ಗರಿಗಳ ಸುತ್ತ ಇರುವ ಸೀಬು ಎಂಬ ನಾರನ್ನು ತಂದು ಅದನ್ನು ಹಿಂಜಿ ಹದಮಾಡಿ ಹಗ್ಗದಂಥ ದಾರ ತೆಗೆಯುತ್ತಾರೆ. ಈ ಹಗ್ಗವನ್ನು ಸುಮಾರು ನಾಲ್ಕು ಅಡಿ ಉದ್ದದ ನಾಲ್ಕು ಮರದ ತುಂಡುಗಳನ್ನು ಚಚ್ಚೌಕವಾಗಿ ಜೋಡಿಸಿ ಮಧ್ಯೆ ಚಪ್ಪಟೆಯಂತೆ ಒತ್ತಾಗಿ ಹೆಣೆಯುತ್ತಾರೆ. ಇದು ಒಂದು ರೀತಿಯ ಚೌಕಟ್ಟಿನಂತೆ ಕಾಣುತ್ತದೆ. ಇದನ್ನು ಚೌಕಾಕಾರವಾಗಿ ಒಂದೇ ಎತ್ತರದಲ್ಲಿ ನೆಟ್ಟಿರುವ 3ಅಡಿ ಎತ್ತರದ ನಾಲ್ಕು ಕಲ್ಲುಕಂಬಗಳ ಮೇಲಿಡುತ್ತಾರೆ.

ನೇಯ್ದ ಕಂಬಳಿಯನ್ನು ಕುದಿಯುವ ನೀರಿನಲ್ಲಿ ಚೆನ್ನಾಗಿ ನೆನೆಯುವಂತೆ ಅದ್ದಿ ವರ್ಚಿನ ಮೇಲೆ ಹಾಕಿ ನಾಲ್ಕು ಮಂದಿ ಬಲವಾದ ಆಳುಗಳು - ಆ ಕಡೆ ಇಬ್ಬರು ಈ ಕಡೆ ಇಬ್ಬರು - ಎದುರುಬದುರಾಗಿ ನಿಂತುಕೊಂಡು ಉಜ್ಜುತ್ತಾರೆ. ಮಧ್ಯೆ ಮಧ್ಯೆ ಕುದಿಯುವ ನೀರಿನಲ್ಲಿ ಅದ್ದಿಕೊಳ್ಳುತ್ತಿರುತ್ತಾರೆ. ಕಂಬಳಿಯ ಉದ್ದ 6ಮೊಳ ಅಗಲ 4ಮೊಳಕ್ಕೆ ಇಳಿಯುವವರೆಗೆ ಈ ಉಜ್ಜುವಿಕೆ ನಿರಂತರವಾಗಿ ನಡೆಯುತ್ತದೆ. ವಿರಳವಾಗಿ ಹೆಣೆಯಲಾಗಿದ್ದ ಕಂಬಳಿ ಒತ್ತಾಗಿ, ಮಂದವಾಗುತ್ತದೆ. ಎಳೆಗಳು ಒಡೆದು ಒಂದರೊಡನೊಂದು ಬಲವಾಗಿ ಹೊಂದಿಕೊಳ್ಳುತ್ತದೆ. ನೇಯ್ದ ಯಾವ ಗುರುತೂ ಈಗ ಉಳಿಯುವುದಿಲ್ಲ. ಹೀಗೆ ಉಜ್ಜಿದ ಕಂಬಳಿಯನ್ನು ಕೆರೆಗೋ, ಹೊಳೆಗೋ, ತೆಗೆದುಕೊಂಡು ಹೋಗಿ ಗಂಜಿಯೆಲ್ಲ ಹೋಗುವ ಹಾಗೆ ತಿಳಿನೀರಿನಲ್ಲಿ ಜಾಲಾಡಿ ತೊಳೆಯುತ್ತಾರೆ. ಅನಂತರ ಕಂಬಳಿಯನ್ನು ಬಿಸಿಲಿನಲ್ಲಿ ಒಣಗುಹಾಕಿ, ಸುಮಾರು ನಾಲ್ಕೈದು ಗಂಟೆ ಆದ ಮೇಲೆ, ಇನ್ನೂ ಹಸಿಯಿದ್ದ ಹಾಗೆಯೆ, ಕ್ರಮವಾಗಿ ಮಡಿಸಿ ಅಕ್ಕೆಗೆ ಹಾಕುತ್ತಾರೆ. ಇನ್ನೂ ಹಸಿಯಾಗಿರುವ ಕಂಬಳಿ ಹೇಗೆ ಎಳೆದರೆ ಹಾಗೆ ಬರುತ್ತದೆ. ಉದ್ದ ಅಗಲಗಳನ್ನು ಕ್ರಮವಾಗಿ ಎಳೆದು ಸರಿಪಡಿಸುತ್ತಾರೆ. ತರುವಾಯ ನೆಲದ ಮೇಲೆ ಹಾಕಿ ಅದರ ಮೇಲೆ ಒಣಗಿದ ಕಂಬಳಿಯನ್ನೋ ಚಾಪೆಯನ್ನೋ ಹಾಸಿ ಒಂದು ದಿನ ಬಿಡುತ್ತಾರೆ. ಮೂರನೆಯ ದಿನ ಮತ್ತೆ ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿ ಮಡಿಸಿಡುತ್ತಾರೆ. ಇಲ್ಲಿಗೆ ತಯಾರಿಕೆ ಪೂರ್ಣವಾದಂತಾಗಿ ಅದು ಹೊದೆಯಲು ಸಿದ್ಧವಾಗುತ್ತದೆ.

ಉಜ್ಜುಗಂಬಳಿಗೆ ಕೃತಕವಾದ ಬಣ್ಣಹಾಕುವುದು ಅಸಾಧ್ಯವಾದ ಮಾತೆಂದೇ ಹೇಳಬೇಕು. ಏಕೆಂದರೆ ಕಂಬಳಿಯನ್ನು ನೇಯ್ದಮೇಲೆ ಕುದಿಯುವ ನೀರಿನಲ್ಲಿ ಅದ್ದಿ ಅದ್ದಿ ಉಜ್ಜಿ ಅನಂತರ ತೊಳೆಯುವುದರಿಂದ ಕಟ್ಟಿದ ಬಣ್ಣ ಉಳಿಯುವುದು ಕಷ್ಟ. ಸಾಮಾನ್ಯವಾಗಿ ಉಣ್ಣೆಯ ಬಣ್ಣವೇ ಉಜ್ಜುಗಂಬಳಿಯ ಬಣ್ಣವೂ ಆಗಿದೆ. ಉಣ್ಣೆಯ ಪ್ರಕೃತಿದತ್ತವಾದ ಕಪ್ಪು, ಬಿಳಿ ಮಾಸಲು ಕಂದುಬಣ್ಣಗಳಲ್ಲಿ ಇವು ದೊರೆಯುತ್ತವೆ. ಈ ಬಣ್ಣಗಳು ಯಾವ ಪರಿವರ್ತನೆಯನ್ನೂ ಹೊಂದದೆ ಕಡೆಯತನಕ ಉಳಿಯುತ್ತವೆ. ಮೊನ್ನೆಮೊನ್ನೆಯವರೆಗೆ ಉಜ್ಜುಗಂಬಳಿಗಳು ಯಾವ ನಮೂನೆಯೂ ಇಲ್ಲದೆ ಪ್ರಕೃತಿದತ್ತ ಬಣ್ಣಗಳಲ್ಲಿ ದೊರೆಯುತ್ತಿದ್ದವು. ಈಗ ಕೊಳ್ಳುವವರ ಅಭಿರುಚಿಗೆ ತಕ್ಕಹಾಗೆ ಮೇಲೆ ಹೇಳಿದ ವಿವಿಧ ಬಣ್ಣದ ಉಣ್ಣೆಯನ್ನೂ ಉಪಯೋಗಿಸಿ, ಬಹು ಆಕರ್ಷಕವಾದ ಹೊಸ ಹೊಸ ನಮೂನೆಯ ಉಜ್ಜುಗಂಬಳಿಗಳನ್ನು ಮಾಡುತ್ತಾರೆ.

**ಶಾಲು, ಸಕಲಾತಿ ಮತ್ತು ಸಣ್ಣ ಕಂಬಳಿ :** ಉತ್ತಮವಾದ ಉಣ್ಣೆಯಿಂದ ಸಣ್ಣದಾಗಿ ನೂಲು ತೆಗೆದು ಈ ವಸ್ತ್ರಗಳನ್ನು ನೇಯುತ್ತಾರೆ. ಶಾಲು ಮತ್ತು ಸಕಲಾತಿಗಳು ಅತ್ಯುತ್ತಮವಾದ ಹೊದೆಯುವ ವಸ್ತ್ರಗಳು. ಇವು ಮೇಲು ದರ್ಜೆಯ ಜನರಿಗಾಗಿ ತಯಾರಾಗುತ್ತಿದ್ದುವು. ಈ ಯಂತ್ರಯುಗದಲ್ಲಂತೂ ಶಾಲು ಅತ್ಯಂತ ವ್ಯಾಪಕವಾದ ಜನಪ್ರಿಯತೆಯನ್ನು ಪಡೆದಿದೆ. ಸಕಲಾತಿ ಈಗ ಶಾಲಿನಲ್ಲಿ ಐಕ್ಯವಾಗಿದೆ. ಸಣ್ಣಕಂಬಳಿ ಶಾಲಿನ ರೀತಿಯ ಒರಟಾದ ಹೊದೆಯುವ ವಸ್ತ್ರ. ಇದನ್ನು ತೊಳೆಗಂಬಳಿ ಎಂದೂ ಕರೆಯುತ್ತಾರೆ. ಏಕೆಂದರೆ ಕೊಳೆಯಾದಾಗಲೆಲ್ಲ ಇದನ್ನು ತೊಳೆದು ಶುಭ್ರಗೊಳಿಸಬಹುದು. ಕೋಲಾರ, ರಾಣಿಬೆನ್ನೂರು, ದಾವಣಗೆರೆ, ಚಿಕ್ಕನಾಯಕನಹಳ್ಳಿಗಳಲ್ಲಿ ವಿಶೇಷವಾಗಿ ಇದನ್ನು ತಯಾರಿಸುತ್ತಾರೆ. ಶಾಲಿನ ತಯಾರಿಕೆ ಇಂದು ಬಹುಮಟ್ಟಿಗೆ ಯಂತ್ರಗಳಿಂದ ಆಗುತ್ತಿದೆ. ಕಾಶ್ಮೀರ ಇವುಗಳಿಗೆ ಜಗದ್ವಿಖ್ಯಾತವಾದ ಸ್ಥಳವಾಗಿದೆ.

**ಗದ್ದುಗೆ ಧಾವಳಿ :** ಧಾವಳಿ ಎಂದರೆ ಧವಳ, ಬಿಳಿ ಎಂದು ಅರ್ಥ. ಗದ್ದುಗೆ ಕೂರುವ ಸ್ಥಳ. ಆದುದರಿಂದ ಗದ್ದುಗೆಧಾವಳಿ ಕೂರಲು ಉಪಯೋಗಿಸುವ ಅಚ್ಚ ಬಿಳಿಯ ಕಂಬಳಿ. ಧಾರ್ಮಿಕ ಗುರುಗಳ ಗದ್ದುಗೆಗೂ ಮಿಕ್ಕಂತೆ ಪವಿತ್ರ ಕಾರ್ಯಗಳಲ್ಲಿಯೂ ಅದನ್ನು ಉಪಯೋಗಿಸುತ್ತಿದ್ದರು. ಈ ಕಂಬಳಿ ವಿಶೇಷವಾಗಿ ವೈದಿಕರ ಉಪಯೋಗಕ್ಕಾಗಿ ತಯಾರಾಗುತ್ತಿತ್ತು. ಗದ್ದುಗೆಗಾಗಿಯೇ ಇದನ್ನು ಹೆಚ್ಚಾಗಿ ಬಳಸುತ್ತಾರಾದರೂ ಇದನ್ನು ಶಾಲಿನಂತೆ ಹೊದೆಯಲು ಉಪಯೋಗಿಸುವುದೂ ಉಂಟು. ಪೂಜಾವಸ್ತುಗಳನ್ನಿಡುವ ಚೀಲಗಳನ್ನು ಇದರಿಂದ ತಯಾರಿಸುತ್ತಾರೆ.

**ಕರಿಯ ಕಂತೆ :** ಕುರುಬರ ಗುರು ರೇವಣ ಸಿದ್ಧೇಶ್ವರ ತನ್ನ ಅವತಾರ ಕಾಲದಲ್ಲಿ ಕುರಿ ಕಾಯುತ್ತಿದ್ದನೆಂದೂ ಅದರಿಂದಲೇ ಕುರುಬರಿಗೆ ಕುರಿಸಾಕಣೆಯ ಪರಂಪರೆ ಉಂಟಾಯಿತೆಂದೂ ನಂಬಿಕೆ. ರೇವಣ ಸಿದ್ಧೇಶ್ವರನಿಗೆ ಉಣ್ಣೆಯ ವಸ್ತ್ರ ಬಹುಪ್ರಿಯ. ಕುರುಬ ಜನಾಂಗ ಎಲ್ಲೆಲ್ಲುಂಟೊ ಅಲ್ಲೆಲ್ಲ ರೇವಣಸಿದ್ಧೇಶ್ವರನ ಮಠಗಳಿದ್ದು ಅಲ್ಲೆಲ್ಲ ಉಣ್ಣೆಯ ಕರಿಯ ವಸ್ತ್ರವನ್ನು ಗುರುವಿಗೆ ಅರ್ಪಿಸುತ್ತಾರೆ. ಇದನ್ನು ಕರಿಯ ಕಂತೆ ಎಂದು ಕರೆಯುತ್ತಾರೆ. ಕಂತೆ ಎಂದರೆ ಪೂಜೆಯ ಸಮಯದಲ್ಲಿ ಉಡುವ ವಸ್ತ್ರ - ಎಂದು ಅರ್ಥ. ಈ ಕರಿಯ ಕಂತೆಯ ಪ್ರಸ್ತಾಪ ಕುರುಬರ ಜನಾಂಗದ ನಂಬಿಕೆ ಮತ್ತು ಸಂಪ್ರದಾಯಗಳನ್ನು ವಿವರಿಸುವ ತಗರಪವಾಡ ಎಂಬ ಪ್ರಾಚೀನ ಗ್ರಂಥದಲ್ಲಿ ಬರುತ್ತದೆ.

ಕರಿಯ ಕಂತೆಯನ್ನು ಮಾಡುವವರು ಗುರುಪರಂಪರೆಯಲ್ಲಿ ಬಂದ ಒಡೆಯರ ಮನೆತನದವರು. ನಾಲ್ಕೈದು ಜನ ಸ್ನಾನಮಡಿಗಳಿಂದ ಉಪವಾಸವಿದ್ದು ಅಚ್ಚಕರಿಯ ತುಪ್ಪಟವನ್ನು ಕೈಯಲ್ಲಿಯೇ ಹಿಂಜಿ ಕೈಯಲ್ಲಿಯೇ ಎಳೆ ಹೊಸೆದು ಅಣಿಮಾಡಿ ವಸ್ತ್ರವನ್ನು ನೇಯುತ್ತಾರೆ. ಇದು ರೇವಣ ಸಿದ್ಧೇಶ್ವರನ ಗರ್ಭಗುಡಿಯಲ್ಲಿ ನಡೆಯುವ ಕೆಲಸ. ಇದೊಂದು ಮೂರು ಮೂಲೆಯ ಉಣ್ಣೆಯ ವಸ್ತ್ರ. ಕಂತೆ ಸಿದ್ಧವಾದ ಮೇಲೆ ಅದನ್ನು ರೇವಣಸಿದ್ಧೇಶ್ವರನಿಗೆ ಒದಿಸುವ ಪವಿತ್ರಸಮಾರಂಭ ವೈಭವಯುತವಾಗಿ ನಡೆಯುತ್ತದೆ. ಇದಲ್ಲದೆ ಅಚ್ಚಕರಿಯ ತುಪ್ಪಟದಿಂದ ಮಾಡಿದ ಕಂಬಳಿಯನ್ನು ಮದುವೆ ಸಂದರ್ಭಗಳಲ್ಲಿ ಗುರುಗಳಿಗೆ ಪೀಠವಾಗಿಯೂ ಧಾರೆ ಹರವಿಯ ಕೆಳಗೆ ಹಾಸಲೂ ಕುರುಬ ಜನಾಂಗದವರು ಇಂದಿಗೂ ಉಪಯೋಗಿಸುತ್ತಾರೆ.

ಕಂಬಳಿ ಮತ್ತು ಜಮಖಾನೆಯ ಉದ್ಯಮಕ್ಕೆ ಉಣ್ಣೆ, ಹತ್ತಿ, ಸೆಣಬು ಮುಖ್ಯವಾದ ಕಚ್ಚಾವಸ್ತುಗಳು. ಇವು ಪ್ರಪಂಚದ ಎಲ್ಲ ದೇಶಗಳಲ್ಲಿಯೂ ಇಂದು ಉತ್ಪನ್ನವಾಗುತ್ತಿವೆ. ಅಮೆರಿಕ, ಆಸ್ಟ್ರೇಲಿಯ, ಇಂಗ್ಲೆಂಡ್, ರಷ್ಯ ಉಣ್ಣೆಗೆ ಪ್ರಸಿದ್ಧವಾದರೆ, ಈಜಿಪ್ಟ್ ಹತ್ತಿಗೆ ಪ್ರಸಿದ್ಧವಾದರೆ, ಭಾರತ ಮತ್ತು ಪಾಕಿಸ್ತಾನ ಸೆಣಬಿಗೆ ಪ್ರಸಿದ್ಧವಾಗಿವೆ. ಇಂದು ವಿಶ್ವದ ಬಹುತೇಕ ದೇಶಗಳಲ್ಲಿ ಕಂಬಳಿ ಮತ್ತು ಜಮಖಾನೆಗಳ ಯಾಂತ್ರಿಕ ತಯಾರಿಕೆ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿದೆ. ಪಶ್ಚಿಮ ರಾಷ್ಟ್ರಗಳಲ್ಲಿಯಂತೂ ಈ ಉದ್ಯಮ ಸಂಪೂರ್ಣವಾಗಿ ಯಂತ್ರೀಕೃತವಾಗಿದೆ. ಭಾರತದಲ್ಲಿಯೂ ಅನೇಕ ಕಂಬಳಿ ಮಿಲ್ಲುಗಳು ವಿಪುಲವಾಗಿ ಕಂಬಳಿ ತಯಾರಿಕೆಯಲ್ಲಿ ತೊಡಗಿದ್ದರೂ ಕೈಮಗ್ಗಗಳಲ್ಲಿ ನೇಯುವ ಕಲೆ ಗ್ರಾಮಾಂತರ ಪ್ರದೇಶಗಳಲ್ಲಿ ಇಂದಿಗೂ ಉಳಿದುಕೊಂಡು ಬಂದಿರುವುದೊಂದು ಆಶ್ಚರ್ಯದ ಸಂಗತಿಯಾಗಿದೆ. *

**ಕಂಬಿಯ ಪದ :** ಕಂಬಿಯ ಅಯ್ಯಗಳು ಗಿರಿಯಮಲ್ಲಯ್ಯನನ್ನು ಕುರಿತು ಭಕ್ತಿಯಿಂದ ಸಂಬಾಳ ವಾದ್ಯದೊಡನೆ ಮೇಳದ ಜೊತೆ ಹಾಡುವ ಪದ. ಐದಾರು ಮೊಳ ಉದ್ದದ ಬಿದಿರ ತುಂಡಿನ (ಕೋಲು) ಎರಡೂ ತುದಿಗಳಲ್ಲಿ ಸಿಕ್ಕಿಸಿದ ಬೆತ್ತದ ಇಲ್ಲವೆ ಬಿದಿರಿನಲ್ಲಿ ಮಾಡಿದ ನಿಲವುಗಳಲ್ಲಿ (ಕಾವಡಿ) ಒಂದರಲ್ಲಿ ನೀರ ಬಿಂದಿಗೆಯನ್ನು ಇನ್ನೊಂದರಲ್ಲಿ ಬಟ್ಟೆಬರಿ ಬುತ್ತಿ ಮೊದಲಾದ ಸಾಮಗ್ರಿಗಳನ್ನೂ ತುಂಬಿದ ಅಡ್ಡೆಗೆ ಕಂಬಿಯೆಂದೂ ಮಲ್ಲಯ್ಯನ ಕಾವಡಿಯೆಂದೂ ಕರೆಯುವರು. ಕಂಬಿ (ಕೋಲು), ಕಾವಡಿ (ನೆಲವು) - ಇವು ಮೊದಲಿನಿಂದಲೂ ಮಲ್ಲಯ್ಯನಾಗಿ ಪೂಜೆಗೊಳ್ಳುತ್ತ ಬಂದಿವೆ. ಇವನ್ನು ಹೊರುವ ಕಂಬಿಯ ಅಯ್ಯಗಳಿಗೆ ಕಾವಡಿಯ ಅಯ್ಯಗಳು ಎಂಬ ಹೆಸರೂ ಇದೆ. ಶಿವರಾತ್ರಿಯ ಕಾಲಕ್ಕೊ ಯುಗಾದಿಯ ಹತ್ತಿರದಲ್ಲೊ ಬೆಳುವಲದ ಭಕ್ತರು ಮಲ್ಲಯ್ಯನ ದರ್ಶನಕ್ಕಾಗಿ ಶ್ರೀಶೈಲಕ್ಕೆ ಯಾತ್ರೆ ಹೊರಡುತ್ತಾರೆ. ಆ ಸಮಯದಲ್ಲಿ ಕಂಬಿಯ ಅಯ್ಯಗಳು ಕಂಬಿ ಹೊತ್ತು ಹೊರಡುವುದುಂಟು. ಹೀಗೆ ಯಾತ್ರೆ ಹೊರಟ ಯಾತ್ರಿಕರಿಗೆ ಮಾರ್ಗಮಧ್ಯದಲ್ಲಿ ವಿಶ್ರಾಂತಿಗಾಗಿ ಶ್ರೀಮಂತರಾದವರು ತಂಗುದಾಣಗಳನ್ನು ಮಾಡಿಸಿ ಅವರ ಊಟ ಉಪಚಾರವನ್ನು ಮಾಡುವುದೂ ಉಂಟು. ಒಮ್ಮೊಮ್ಮೆ ಈ ಶ್ರೀಮಂತರು ಕಂಬಿಯನ್ನು ತಮ್ಮ ಮನೆಯಲ್ಲೆ ಇಟ್ಟು ಪೂಜಿಸಿ ವರ್ಷಕ್ಕೊಂದು ಬಾರಿ ಕಂಬಿಯ ಅಯ್ಯಗಳಿಗೆ ಹಣ ನೀಡಿ ತಮ್ಮ ಪರವಾಗಿ ಶ್ರೀಶೈಲಕ್ಕೆ ಕಳಿಸುವುದೂ ಇದೆ. ಗಿರಿಗೆ ಹೋಗಲಾಗದ ಕೆಲವು ಭಕ್ತರು ಮಲ್ಲಯ್ಯನಿಗಾಗಿ ಕಾಣಿಕೆಗಳನ್ನು ಕಂಬಿಯ ಅಯ್ಯಗಳ ಜೊತೆ ಕಳುಹಿಸುತ್ತಾರೆ. ಭಕ್ತರು ಕೊಟ್ಟ ಹರಕೆಯನ್ನು ಒಯ್ಯುವ ಮೂಲಕ ಮಾಡುವ ಈ ಸೇವೆಯನ್ನು ಕಂಬಿಯ ಕಾಯಕ ಎನ್ನುವರು. ಶ್ರೀಶೈಲಕ್ಕೆ ಹೋಗಿಬಂದ ಕಂಬಿಗಳನ್ನು ಜನ ಮಲ್ಲಯ್ಯನೆಂದು ಪೂಜಿಸುವುದು ರೂಢಿ. ದೇವರ ದರ್ಶನ ಹೊಂದಿಬಂದ ಕಂಬಿಯ ಅಯ್ಯಗಳನ್ನೂ ಕಂಬಿಯನ್ನೂ ಜನ ಊರಿನಲ್ಲಿ ಬಹು ಸಂಭ್ರಮ ಹಾಗೂ ಭಕ್ತಿಯಿಂದ ಇದಿರುಗೊಳ್ಳುತ್ತಾರೆ. ಊರಿಗೆ ಬಂದ ಅಯ್ಯಗಳು ಕಂಬಿಗಳನ್ನು ಸಾಲಾಗಿ ಇಟ್ಟು ಪೂಜಿಸಿ ಅವುಗಳನ್ನು ಹೊತ್ತು ಆಡಿಸುತ್ತ ವಾಲಗಮಾಡುತ್ತ ಮಲ್ಲಯ್ಯನ ಬಿರುದಾವಳಿಗಳನ್ನು ಮೊದಲಿಗೆ ಹೇಳುತ್ತಾರೆ. ಇದಕ್ಕೆ ಉಗ್ಗಡಿಸುವುದು ಎನ್ನುವರು. ಅನಂತರ ಪದಗಳನ್ನು ಹಾಡುತ್ತಾರೆ. ಇವುಗಳಲ್ಲಿ ಮಲ್ಲಯ್ಯನ ಲೀಲೆಗಳೂ ಭಕ್ತರ ಭಕ್ತಿಯೂ ವಿಶೇಷವಾಗಿ ವರ್ಣಿತವಾಗಿರುತ್ತದೆ. ನಡುನಡುವೆ ನೀತಿಪ್ರಧಾನ, ಹಾಸ್ಯಪ್ರಧಾನ ಗೀತೆಗಳೂ ಕಾಣಿಸಿಕೊಳ್ಳುತ್ತವೆ. ತಮ್ಮ ಆರಾಧ್ಯದೈವವನ್ನು ಕೊಂಡಾಡುವುದು ಪ್ರಧಾನವಾಗಿ ಈ ಪದಗಳ ಉದ್ದೇಶವಾದರೂ ಯಾತ್ರಿಕರಲ್ಲಿ, ಕೇಳುವವರಲ್ಲಿ ಭಕ್ತಿಯ ಆವೇಶ, ಶ್ರದ್ಧೆ, ನಿಷ್ಠೆಗಳನ್ನು ತುಂಬುತ್ತವೆ. ಯಾತ್ರಿಕರಿಗೆ ಈ ಪದಗಳು ಕೈಪಿಡಿಯಂತೆ ಮಾರ್ಗದರ್ಶಿಯೂ ಹೌದು.

ಹಿಮ್ಮೇಳ ಮುಮ್ಮೇಳಗಳೊಡನೆ ತಾಳ ಹಾಕುತ್ತ ರಾಗವೆತ್ತಿ ಹಾಡುವ ಈ ಪದಗಳು ಕೇಳಲು ಇಂಪಾಗಿರುತ್ತವೆ. ನೋಡುವುದಕ್ಕೆ ಎರಡು ಸಾಲಿನ ವಿಶಿಷ್ಟ ಧಾಟಿಯ ದ್ವಿಪದಿಗಳಂತೆ ಕಂಡುಬಂದರೂ ಮೂಲತಃ ಇವು ತ್ರಿಪದಿಗಳು ಎನ್ನಲು ಸಾಕಷ್ಟು ನಿದರ್ಶನಗಳು ದೊರೆಕುತ್ತವೆ. ಧಾಟಿ ಮತ್ತು ವಸ್ತು ವಿನ್ಯಾಸದಲ್ಲಿ ಕೆಲವು ಪದಗಳು ಕೋಲಾಟದ ಗತ್ತಿಗೂ ಒಗ್ಗುತ್ತವೆ.

ಕಂಬಿಯ ಸಂಪ್ರದಾಯ ಸಾಕಷ್ಟು ಪ್ರಾಚೀನ ಸಂಪ್ರದಾಯ ಎಂದು ವಿದ್ವಾಂಸರು ಹಲವು ಆಧಾರಗಳಿಂದ ನಿರೂಪಿಸಿದ್ದಾರೆ. ಕಂಬಿಯ ಅಯ್ಯಗಳನ್ನು ಕುರಿತು ಸ್ವಲ್ಪ ಮಟ್ಟಿಗೆ ಸಂಶೋಧನೆ ನಡೆದಿದೆ. ಈ ದಿಸೆಯಲ್ಲಿ ಬಿ.ಎಸ್. ಗದ್ದಗಿಮಠ (ನೋಡಿ) ಅವರು ಕಂಬಿಯ ಹಾಡುಗಳು (1955) ಎಂಬ ಸಂಕಲನವನ್ನು ಹೊರತಂದಿದ್ದಾರೆ. (ಎಸ್.ಎಲ್.)

**ಕಂಸಾಳೆ :** ಮಲೆಯಮಾದೇಶ್ವರನ ಭಕ್ತರಾದ ದೇವರ ಗುಡ್ಡರು ಎಂಬ ಧಾರ್ಮಿಕ ವೃತ್ತಿಗಾಯಕರು ಬಳಸುವ ಕಂಚಿನ ತಾಳಗಳು. ಇದೊಂದು ಜನಪದ ಧಾರ್ಮಿಕ ವಾದ್ಯ. ಕಾಂಸ್ಯತಾಲ ಎಂಬುದರ ತದ್ಭವರೂಪವೆ ಕಂಸಾಳೆ. ದೇವರ ಗುಡ್ಡರು ಇದನ್ನು ಬಿರುದು ಎಂದೂ ಕರೆಯುತ್ತಾರೆ. ಸಾಧಾರಣ ಬಟು ತಾಳಗಳಿಗಿಂತ ಕಂಸಾಳೆ ಗಾತ್ರದಲ್ಲಿ ದೊಡ್ಡದು, ಆಕೃತಿಯಲ್ಲಿ ವಿಶಿಷ್ಟವಾದುದು. ಅಂಗೈ ಅಗಲದ ಚಕ್ರಾಕಾರವಾದ ಬಟ್ಟಲು, ಚಿಕ್ಕ ಜಾಗಟೆಯಂತಿರುವ ಮಟ್ಟಸವಾದ ಮೇಲುತಾಳ, ಮೇಲುತಾಳಕ್ಕೆ ಸೇರಿದಂತೆ ಹಿಡಿದುಕೊಳ್ಳಲು ಮಾಡಿಕೊಂಡ ಗೊಂಡೇವದ ಕಲಾತ್ಮಕ ಹುರಿ ಇವು ಕಂಸಾಳೆಯ ಮುಖ್ಯ ಭಾಗಗಳು. ಬಟ್ಟಲನ್ನು ಮೇಲು ಮುಖವಾಗಿ ಎಡ ಅಂಗೈ ಮೇಲೆ ಇರಿಸಿಕೊಂಡು ಬಲಗೈಯಲ್ಲಿ ಹಿಡಿದ ಮೇಲುತಾಳವನ್ನು ಅದರ ಮೇಲೆ ಕುಟ್ಟುವುದರಿಂದ ಕಣಿಕಣಿ ಎಂಬ ಮಧುರನಾದ ಉಂಟಾಗುತ್ತದೆ. ಈ ನಾದದ ಹಿನ್ನೆಲೆಯಲ್ಲಿ ಗುಡ್ಡರು ಹಾಡುತ್ತಾರೆ. ಕೆಲವೊಮ್ಮೆ ಕೆಲವು ಗುಡ್ಡರು ಕಂಚಿನ ತಾಳಗಳಿಗೆ ಬದಲಾಗಿ ಹಿತ್ತಾಳೆಯ ತಾಳಗಳನ್ನು ಬಳಸುವುದುಂಟು. ವೃತ್ತಿಗಾಯಕರು ಬಳಸುವ ವಾದ್ಯಗಳಲ್ಲೆಲ್ಲ ಭಿಕ್ಷಾಪಾತ್ರೆಯಾಗಿಯೂ ಬಳಸಲ್ಪಡುವ ಏಕಮಾತ್ರ ಸಾಧನ ಕಂಸಾಳೆ. ಗುಡ್ಡರು ಭಿಕ್ಷೆಯನ್ನು ಸ್ವೀಕರಿಸುವಾಗ ಕಂಸಾಳೆಯ ಬಟ್ಟಲನ್ನು ಮಾತ್ರ ಮುಂದೆ ಒಡ್ಡಿ ಅನಂತರ ಜೋಳಿಗೆಗೆ ಸುರಿದುಕೊಳ್ಳುತ್ತಾರೆ. ಇದೊಂದು ಪವಿತ್ರ ಸಾಧನವಾದುದರಿಂದ ಅರ್ಪಿಸುವ ಕಾಣಿಕೆ ಮಲೆಯ ಮಾದಯ್ಯನಿಗೆ ಸಮರ್ಪಿತವಾದಂತೆಯೇ ಎಂಬ ಭಾವನೆ ಗುಡ್ಡನಿಗೂ ದಾನಿಗೂ ಇರುತ್ತದೆ. ಕಂಸಾಳೆಯ ಮಹಿಮೆ ದೊಡ್ಡದು ಎಂದು ಭಾವಿಸುವ ಗುಡ್ಡ ಅದನ್ನು ಪೂಜಿಸುತ್ತಾನೆ. ಕೈಗೆತ್ತಿಕೊಳ್ಳುವ ಮುನ್ನ 'ಏಳ್ಮಲೆ ಹೆತ್ತಯ್ಯ ನಮ್ಮಪ್ಪಾಜಿ ಮಾಯ್ಕಾರ ಮಾದೇವ ನಿನ್ನ ಪಾದವೇ ಗತಿ ಕಣಪ್ಪ ಶರಣು ಶರಣಾರ್ತಿ' ಎಂದು ಶರಣು ಮಾಡಿ ಕಣ್ಣಿಗೊತ್ತಿಕೊಂಡು ಅನಂತರ ಬಾರಿಸುತ್ತಾನೆ.



**ಕಂಸಾಳೆ ಪದಗಳು :** ಭಿಕ್ಷಾಟನೆ ಹಾಗೂ ಯಾತ್ರೆಗಳ ಸಂದರ್ಭದಲ್ಲಿ ಬಿಡಿ ಹಾಡುಗಳನ್ನು ಹೇಳಿಕೊಳ್ಳಲು ಮಾತ್ರವಲ್ಲದೆ ವಿಶೇಷ ಸಂದರ್ಭಗಳಲ್ಲಿ, ಹಬ್ಬ ಆಚರಣೆಗಳಲ್ಲಿ ಮೇಳವನ್ನು ನಡೆಸಲೂ ಬೀಸುಕಂಸಾಳೆಯ ನೃತ್ಯದಲ್ಲಿ ಹಾಡಲೂ ಕುಣಿಯಲೂ ಕಂಸಾಳೆಯನ್ನು ಬಳಸುತ್ತಾರೆ. ಸಾಮಾನ್ಯವಾಗಿ ದೇವರಗುಡ್ಡರು ಎತ್ತರವಾದ ರಂಗದಲ್ಲಿ ಕುಳಿತು ಕತೆ ಮಾಡುತ್ತಾರೆ. ಕಂಸಾಳೆ ಪದಗಳನ್ನು ನಡೆಸಲು ಕೊನೆಯ ಪಕ್ಷ ಮೂವರು ಗುಡ್ಡರಾದರೂ ಬೇಕು. ಮೇಳದಲ್ಲಿ ಏಕತಾರಿ, ದಮ್ಮಡಿಗಳನ್ನು ಹಿಮ್ಮೇಳದವರು ಬಳಸುತ್ತಾರೆ. ಮುಖ್ಯ ಗುಡ್ಡ ಮುಮ್ಮೇಳಗಾರ ಕಂಸಾಳೆಯನ್ನು ಹಿಡಿಯುವನು. ಗುಡ್ಡರು ಹಾಡುವ ಗೀತೆಗಳು ತಾಳದ ಗತ್ತಿಗೆ ತಕ್ಕಂತೆ ವಿವಿಧ ಮಟ್ಟುಗಳಲ್ಲಿರುತ್ತವೆ. ಕಂಸಾಳೆಯ ನಾದವೈಖರಿಗೆ ತಕ್ಕಂತೆ ಶಕ್ತಿವತ್ತಾದ, ಲಯಬದ್ಧವಾದ ರಚನೆಗಳಿವು. ಉದಾ:

ಕೂಗೊ ಕೂಗೊ ಮಾದೇವನ  
ಕೂಗಯ್ಯ ದುಂಡು ಮಾದೇವನ  
ಕೂಗಿದರೆ ಕುಣಿಯುತ್ತ ಬರುವನು ಮಾದೇವ  
ಕೂಗಯ್ಯ ಮುದ್ದು ಮಾದೇವನ

ಮುಗ್ಗು ಮುಗ್ಗಲ ಗಿರಿಗೆ  
ಮೊಗ್ಗು ಬಂದವು ನೋಡಿರಿ  
ಮಾದಯ್ನ ಗಿರಿಗೆ  
ಹೂವು ಬಂದವು ನೋಡಿರಿ.

ಕಂಸಾಳೆಯ ಗತ್ತಿಗೆ ತಕ್ಕಂತೆಯೇ ತಾಳಕ್ಕೆ ಅನುಗುಣವಾಗಿಯೇ ಕಥೆಯನ್ನು ಪದ್ಯ, ನಡುನಡುವೆ ವಿಶೇಷವಾಗಿ ವಚನದಲ್ಲಿ ನಿರೂಪಿಸಲಾಗುತ್ತದೆ. ಈ ವಚನ ಒಂದು ವಿಶಿಷ್ಟವಾದ ಪದ್ಯಗಂಧಿಯಾದ

ಗದ್ಯ. ವಚನವನ್ನು ಪ್ರಧಾನ ಗಾಯಕ ನಿರೂಪಿಸುತ್ತಿರುವಾಗ ಅದರ ಪ್ರತಿ ಸಾಲಿನ ಅಂತ್ಯದಲ್ಲಿ ಸೊಲ್ಲಿನವರು ಹೌದು, ಹೌದೌದು, ಶಿವಶಿವಾ, ಮಾದೇವ, ಹುಂ ಮುಂತಾಗಿ ದನಿ ಕೊಡುತ್ತಿದ್ದು - ಇದು ಕಥಾವಾಹಿನಿ ನಿರ್ಗಳವಾಗಿ ಹರಿಯಲು ಪೋಷಕವಾಗಿರುತ್ತದೆ.

ಮಲೆಯ ಮಾದೇವ ಬರುವ ಚೆಂದವ
ನೋಡಿ ನಮ್ಮ ಶಿವನಾ ||ಪ||

ಒಂದೊಂದು ಪುಟ್ಟ ಪುಟ್ಟ ಪಾದದ ಅಂತ್ಯದಲ್ಲಿ ಕಂಸಾಳೆಯನ್ನು ಬಾರಿಸುತ್ತ ಕಥಾನಿರೂಪಣೆಗೆ ಚೈತನ್ಯವನ್ನು ತುಂಬಿಕೊಳ್ಳಲಾಗುತ್ತದೆ. ಹೆಜ್ಜೆಹಜ್ಜೆಗೂ ಕಂಸಾಳೆಯ ಮಿಡಿತ ಅದರ ಜೊತೆಯಲ್ಲಿ ಸಾಗುವ ವಿಸ್ತಾರ ಗದ್ಯಕಥನ ಆಕರ್ಷಕ ಕಥೆಯ ಓಟಕ್ಕೆ ಒಂದು ಉದಾಹರಣೆ:

ಹರ ಹರ ನಮ್ಮಪ್ಪಾಜಿ ಮಾಯಕಾರ ಮಾದೇವ
ಆ ಬಂಕಾಪುರಿ ಶ್ರವಣ ದೊರೆ ಮೇಲೆ
ದೃಷ್ಟಿ ಮಡಗುತಾರೆ ಮಾದೇವ||
ಮಲೆಯ ಮಾದೇವ ಬರುವ ಚಂದವ
ಆ ಶ್ರವಣದೊರೆ ಅಂದರೆ ಸಾಮಾನ್ಯವಲ್ಲ
ಈ ಭೂಮಿ ಭೂಮಂಡಲವನ್ನೆಲ್ಲ ಕೈಕೆಳಗಿಟ್ಟುಕೊಂಡಿದ್ದಾನೆ
ಸುರ ಮುನ್ನೂರು ಕೋಟಿ ದೇವಮಾನ್ಯವರ ತಂದು
ಕೈಸೆರೆ ಹಿಡಿದುಕೊಂಡಿದ್ದಾನೆ
ಕಂಗಳ್ಳಿ ಮಲ್ಲಿಕಾರ್ಜುನ ಪಟೇಲನಂತೆ
ಮುಡುಕುತೊರೆ ಮಲ್ಲಣ್ಣ ಚಾಕರನಂತೆ
ಕಂಕುಳಲ್ಲಿ ದೊಣ್ಣೆ ಕೊಟ್ಟಿದ್ದಾನೆ
ತಲೆದಿಂಬು ಮಾಡಿಕೊಂಡವನೆ ಶಿವನೆ
ಶನಿದೇವರ ಹಿಡಿದು ಮುಕ್ಕಡೆ ಕೆಡವಿಕೊಂಡು
ನಾಲ್ಕುಕಾಲು ಮಂಚ ಮಾಡಿಕೊಂಡು
ತನ್ನ ಪಾದವನ್ನು ಅವನ ಬೆನ್ನಮೇಲೆ ಇಟ್ಟುಕೊಂಡು ಕೂತವನೆ ಶಿವನೆ
ಮಲೆಯಮಾದೇವ ಬರುವ ಚೆಂದವ ನೋಡಿ ನಮ್ಮ ಶಿವನಾ||

ಪದ್ಯ, ವಚನಗಳೆರಡಕ್ಕೂ ಕಂಸಾಳೆಯ ನಾದ ಒಗ್ಗಿಕೊಳ್ಳುತ್ತದೆ. ಇದರ ಗುಂಗಿನಲ್ಲಿಯೇ ಕಥೆ ಸಾಗುತ್ತದೆ. *

ಮಲೆಯ ಮಾದೇಶ್ವರ ದೇವರಗುಡ್ಡರು ಹಾಡುವ ಪ್ರಧಾನ ಕಥೆ. ಇದೊಂದು ಜನಪದ ಮಹಾಕಾವ್ಯ. ಇದು ಇವರ ಧಾರ್ಮಿಕ ಕಾವ್ಯವೂ ಹೌದು. ಫಿನ್ಲೆಂಡಿನ ಕಲೇವಾಲಕ್ಕೂ ದೊಡ್ಡ ಗಾತ್ರದ ಕಾವ್ಯವೊಂದನ್ನು ಕೊಟ್ಟ ಕೀರ್ತಿ ದೇವರ ಗುಡ್ಡರದು. ಇದಲ್ಲದೆ ಇವರು ಪಿರಿಯಾಪಟ್ಟಣದ ಕಾಳಗ, ಸಾರಂಗಧರ, ಚೆನ್ನಿಗರಾಮ ಘನಪತಿರಾಯ, ಬಿಳಿಗಿರಿರಂಗಸ್ವಾಮಿ, ಬೆಟ್ಟದ ಚಾಮುಂಡಿ, ಬಾಲನಾಗಮ್ಮ, ರಾಜಾವಿಕ್ರಮ, ಮುಡುಕುತೊರೆ ಮಲ್ಲಪ್ಪ, ಬಸವಪುರಾಣ, ಕೋಳೂರುಕೊಡುಗೂಸು, ಬಂಜೆಹೊನ್ನಮ್ಮ ಮುಂತಾದ ಲೌಕಿಕ ಧಾರ್ಮಿಕ ಐತಿಹಾಸಿಕ ಕಾವ್ಯಗಳನ್ನು ಹಾಡುತ್ತಾರೆ. ಕೆಲವೊಮ್ಮೆ ನೀಲಗಾರರ ಧಾರ್ಮಿಕ ಕಥೆಯಾದ ಮಂಟೇಸ್ವಾಮಿ ಕಾವ್ಯವನ್ನು, ಅದರಲ್ಲೂ ಸಿದ್ಧಪ್ಪಾಜಿಗೆ ಸಂಬಂಧಿಸಿದ ಭಾಗವನ್ನು ಕಂಸಾಳೆ ಗತ್ತಿಗೇ ಅಳವಡಿಸಿಕೊಂಡು ಹಾಡುವುದೂ ಉಂಟು. ಪಿರಿಯಾಪಟ್ಟಣದ ಲಾವಣಿ ಮಾತ್ರ ವಿಶಿಷ್ಟವಾದ ಬಂಧುರವಾದ ಪದ್ಯಕಾವ್ಯವಾಗಿದ್ದು ಕಂಸಾಳೆಯ ಗತ್ತಿಗೇ ರಚಿಸಿದಂತೆ ತೋರುತ್ತದೆ. ಆ ಕಾವ್ಯದ ಒಂದು ತುಣುಕು ಹೀಗಿದೆ:

ತಂದನಾನಿ ತಂದಾನಿ ತಾನನ
- ತಂದೇ ನಾನ
ತಂದನಾನಿ ತಂದಾನಿ ತಾನನ
ಕೊಡಗು ಮಲೆಯಾಳ ರಾಜ್ಯಕೆ
ಗಡಿಯಾವುದು ಎಂದರೆ
ಬೆಡಗಿನಂಥ ಪಿರಿಯಾಪಟ್ಟಣ
ಬೆಡಗಿನಂಥ ಪಿರಿಯಾಪಟ್ಟಣಕೆ
ದೊರೆಯಾರು ಎಂದರೆ
- ಹೆಚ್ಚಿನ ದೊರೆ
ವೀರರಾಜು ದೊರೆರಾಯ. (ಪಿ.ಕೆ.ಆರ್.)

**ಕಂಸಾಳೆ ನೃತ್ಯ :** ಬೀಸುಕಂಸಾಳೆ ದೇವರಗುಡ್ಡರ ವಿಶಿಷ್ಟವಾದ ನೃತ್ಯ, ಕರ್ನಾಟಕದ ಜನಪದ ನೃತ್ಯಗಳಲ್ಲಿ ಅತ್ಯಪೂರ್ವವಾದುದು. ನೃತ್ಯದಲ್ಲಿ ಇಬ್ಬರಿಂದ ಎಂಟು ಮಂದಿಯವರೆಗೂ ಪಾಲುಗೊಳ್ಳಬಹುದು. ಇದರಲ್ಲಿ ತಾರ್‌ಬಟ್ಟು, ತಟ್‌ಬಟ್ಟು ಮುಂತಾದ ಬೇರೆ ಬೇರೆ ಬಗೆಯ ನೃತ್ಯಗಳಿವೆ. ನಾಲ್ಕು ಮಂದಿ ಗುಡ್ಡರು ಒಂದು ಕಡೆ ನಿಂತು ಲಿಂಗ ಬಾ ಮುದ್ದುಲಿಂಗ ಬಾ ನಮ್ಮ ಮುದ್ದು ಮಾದಯ್ಯನ ಲಿಂಗ ಬಾ ಎಂದು ಹಾಡುತ್ತಾರೆ. ಒಬ್ಬ ಗುಡ್ಡ ಕಂಸಾಳೆಯನ್ನು ಆ ತಾಳಕ್ಕೆ ತಕ್ಕಂತೆ ವಿವಿಧ ವಿನ್ಯಾಸದಲ್ಲಿ ಬಾರಿಸುತ್ತ ಕುಣಿಯುತ್ತಾನೆ. ತಲೆಯ ಮೇಲೆ, ಬೆನ್ನಹಿಂದೆ, ಕಾಲಕೆಳಗೆ, ಕುಳಿತು, ನಿಂತು, ಬಾಗಿಬಳುಕಿ, ತೀವ್ರಗತಿಯಲ್ಲಿ ನರ್ತಿಸುವ ಬಗೆ ಆಶ್ಚರ್ಯಕರವಾದುದು; ಅದ್ಭುತವಾದುದು. ಒಮ್ಮೊಮ್ಮೆ ಇಬ್ಬರು ಗುಡ್ಡರು ಕಲೆತು ನರ್ತಿಸುವುದು ಉಂಟು. ಒಬ್ಬರ ಕಂಸಾಳೆಗೆ ಇನ್ನೊಬ್ಬರ ಕಂಸಾಳೆಯನ್ನು ಕುಟ್ಟುತ್ತ ಕುಣಿಯುವ ವೈಖರಿ ಆಕರ್ಷಕವಾಗಿರುತ್ತದೆ. ಗಿರಿಯ ಮಾದಯ್ಯನ ಜಾತ್ರೆಯಲ್ಲಂತೂ ಎಲ್ಲ ಕಡೆಯ ಕಂಸಾಳೆಯ ಗುಡ್ಡರೂ ಸೇರಿ ಅವರದೇ ಒಂದು ದೊಡ್ಡ ಕೂಟವಾಗುತ್ತದೆ. ಆಗ ಎಲ್ಲೆಂದರಲ್ಲಿ ಕಂಸಾಳೆಯ ಮೇಳಗಳು ನಡೆಯುತ್ತಿರುತ್ತವೆ. ಕಂಸಾಳೆಯನ್ನು ಬಳಸುವ ಕಲಾವಿದರು ಮೈಸೂರು, ಮಂಡ್ಯ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ವಿಶೇಷವಾಗಿದ್ದಾರೆ. *

**ಕಂಸಾಳೆ ಮಹಾದೇವಯ್ಯ :** 1920-96. ಪ್ರಸಿದ್ಧ ಜನಪದ ಕಲಾವಿದ. ಇವರ ಮೂಲ ಹೆಸರು ಬಡಗಲಹುಂಡಿ ಮಹಾದೇವಯ್ಯ. ಕಂಸಾಳೆ ಜನಪದ ಕಲೆಗಾಗಿ ತಮ್ಮ ಬದುಕನ್ನು ಅರ್ಪಿಸಿಕೊಂಡದ್ದರಿಂದ ಇವರು ಕಂಸಾಳೆ ಮಹದೇವಯ್ಯ ಎಂದೇ ಪ್ರಸಿದ್ಧರು. ಮೂಲತಃ ಇವರು ಮೈಸೂರು ತಾಲ್ಲೂಕಿನ ವರಕೋಡು ಹೋಬಳಿಯ ಬಡಗಲಹುಂಡಿಯವರು. ಸು.1920ರಲ್ಲಿ ಜನಿಸಿದರು. ಕಂಸಾಳೆ ಕಲೆ ಇವರಿಗೆ ವಂಶಪಾರಂಪರ್ಯವಾಗಿ



ಬಂದ ಆಸ್ತಿ. ಇವರ ತಂದೆ ನಂಜಯ್ಯನವರೂ ಕಂಸಾಳೆ ಕಲಾವಿದರಾಗಿದ್ದು ಮೈಸೂರಿಗೆ ಬಂದು ಹಾಲು ಮಾರುವ ವೃತ್ತಿಯಲ್ಲಿ ತಮ್ಮನ್ನುತೊಡಗಿಸಿ ಕೊಂಡಿದ್ದರು. ಬಾಲ್ಯದಲ್ಲಿ ಈ ಕಲೆಯನ್ನು ತಂದೆಯಿಂದ ಕಲಿಯಲು ಇವರು ಇಷ್ಟ ಪಡಲಿಲ್ಲ. ಇವರ ತುಂಟಾಟ ಸಹಿಸದ ತಂದೆ ಕಂಬಕ್ಕೆ ಕಟ್ಟಿ ಹಾಕುತ್ತಿದ್ದುದುಂಟು. ಅಂಥ ಒಂದು ಸಂದರ್ಭದಲ್ಲಿ ಮನೆ ಮುಂದಿನ ದಾರಿಯಲ್ಲಿಸಾಗುತ್ತಿದ್ದ ನೀಲಗಾರ ಜೋಗಿಯೊಬ್ಬರು ಈ ಬಾಲಕನನ್ನು ಕಂಬದಿಂದ ಬಿಡಿಸಿದರಂತೆ. ಆ ನೀಲಗಾರ ಜೋಗಿಯಿಂದ ಕಂಸಾಳೆ ಕಲಿತ ಮಹಾದೇವಯ್ಯ ಹತ್ತು ವರ್ಷಗಳ ತರುವಾಯ ಪುನಃ ಮನೆಯವರಿಗೆ ಕಾಣಿಸಿಕೊಂಡದ್ದು ನಂಜನಗೂಡಿನ ಜಾತ್ರೆಯಲ್ಲಿ. ಮನೆಬಿಟ್ಟು ಹೋದಾಗಿನಿಂದ ಅವಿರತವಾಗಿ ಈ ಕಲೆಯನ್ನು ಕಲಿತು ಸ್ವಂತ ತಂಡವೊಂದನ್ನು ಅಷ್ಟು ಹೊತ್ತಿಗೆ ಕಟ್ಟಿಕೊಂಡಿದ್ದರು.

ಮಹದೇಶ್ವರನ ಒಕ್ಕಲೆಂದೇ ಕರೆಯಲಾಗುವ ದಕ್ಷಿಣ ಕರ್ನಾಟಕದ ಈ ಜನ ದೀಪಾವಳಿಯಂಥ ಹಬ್ಬಗಳ ಸಂದರ್ಭದಲ್ಲಿ ದೇವರ ಹೆಸರಿನಲ್ಲಿ ಮಹದೇಶ್ವರನ ಕಾವ್ಯವನ್ನು ಹಾಡುತ್ತ ಕಂಸಾಳೆ ಕುಣಿಯುತ್ತ ಬೆಟ್ಟಕ್ಕೆ ಹೋಗುವುದೊಂದು ವಾಡಿಕೆ. ಮಹಾದೇವಯ್ಯನವರು ಈ ಪರಂಪರೆಗೆ ಸೇರಿದವರು. ನಂಜನಗೂಡಿನಲ್ಲಿ ಪತ್ತೆಯಾದ ಮಹಾದೇವಯ್ಯ ಪುನಃ ಓಡಿಹೋಗಬಹುದೆಂದು ಹೆದರಿದ ಮನೆಯವರು ಏಳರ ಬಾಲೆ ಪುಟ್ಟಮಾದಮ್ಮನವರ ಜೊತೆ ವಿವಾಹ ಮಾಡಿಸಿದರು. ಅನಂತರ ಇವರಿಗೆ ರೈಲ್ವೆ ಇಲಾಖೆಯಲ್ಲಿ ಕೆಲಸವೊಂದನ್ನು ಕೊಡಿಸಿದರು. ಕಂಸಾಳೆ ಪ್ರದರ್ಶನ

ನೀಡಲು ಕಚೇರಿ ನಿಯಮಾವಳಿಗಳು ಅಡ್ಡ ಬರುತ್ತಿದ್ದುವು. ಇದರಿಂದ ಬೇಸತ್ತ ಇವರು ತಮ್ಮ ನೌಕರಿ ತ್ಯಜಿಸಿ ಸ್ವತಂತ್ರ ಕಲಾವಿದರಾದರು. ಇವರ ಕಲಾಸಾಧನೆಯನ್ನು ಗುರುತಿಸಿದ ಮೈಸೂರು ವಿಶ್ವವಿದ್ಯಾನಿಲಯ ಇವರನ್ನು ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಗೆ ಸಂದರ್ಶಕ ಕಲಾವಿದರನ್ನಾಗಿ ನೇಮಿಸಿಕೊಂಡಿತು. ಇಲ್ಲಿನ ಜಾನಪದ ವಸ್ತುಸಂಗ್ರಹಾಲಯದಲ್ಲಿ ಹಲವಾರು ವರ್ಷ ದುಡಿದು ಮಹಾದೇವಯ್ಯನವರು ಸ್ಥಳೀಯ ಹಾಗೂ ಹೊರರಾಜ್ಯಗಳ ವಿದ್ಯಾರ್ಥಿಗಳಿಗೆ, ಅಧ್ಯಾಪಕರಿಗೆ, ಆಸಕ್ತರಿಗೆ, ಕಂಸಾಳೆಕಲೆ ಕಲಿಸಿದರು. ಗಂಡುಕಲೆ ಕಂಸಾಳೆಯನ್ನು ಮಹಿಳೆಯರಿಗೆ ಮೊದಲು ಕಲಿಸಿದ ಕೀರ್ತಿಯೂ ಇವರದು. ದೇಶದ ನಾನಾ ಕಡೆಗಳಲ್ಲಿ ತರಬೇತಿಗಳನ್ನು ನೀಡಿದ ಇವರು ದೆಹಲಿಯ ರಾಷ್ಟ್ರೀಯ ನಾಟಕ ಶಾಲೆ, ಮೈಸೂರಿನ ರಂಗಾಯಣ ಮುಂತಾದ ಪ್ರತಿಷ್ಠಿತ ಸಂಸ್ಥೆಗಳ ಕಲಾವಿದರಿಗೆ ಕಂಸಾಳೆ ತರಬೇತಿ ನೀಡಿದರು. 1950ರ ದಶಕದಲ್ಲಿ ಎಂ.ವಿ.ಗೋಪಾಲಸ್ವಾಮಿಯವರು ಮೈಸೂರಿನಲ್ಲಿ ಆಕಾಶವಾಣಿ ಆರಂಭಿಸಿದಾಗ ಬಿತ್ತರವಾದ ಮೊದಲ ಜನಪದ ಗೀತೆ ಮಹಾದೇವಯ್ಯನವರದು.

ಅಪ್ಪಟ ಜನಪದ ಕಲಾವಿದರಾದ ಇವರು ಕಂಸಾಳೆ ಕಲೆಯನ್ನು ದೇಶಾದ್ಯಂತ ಪ್ರದರ್ಶಿಸಿದರು. 1974ರಲ್ಲಿ ಅಂತಾರಾಷ್ಟ್ರೀಯ ಜನಪದ ಕಲಾ ಮೇಳದಲ್ಲಿ ಭಾರತವನ್ನು ಪ್ರತಿನಿಧಿಸಿ ಇಟಲಿ, ಟರ್ಕಿ, ಸೈಪ್ರಸ್ ಮುಂತಾದ ಹೊರದೇಶಗಳಲ್ಲೂ ತಮ್ಮ ತಂಡದ ಪ್ರದರ್ಶನ ನೀಡಿ ಪ್ರತಿಭೆ ಪ್ರದರ್ಶಿಸಿದರು. ಗಣರಾಜ್ಯೋತ್ಸವ ಮೆರವಣಿಗೆಯಲ್ಲಿ ಭಾಗವಹಿಸಿದ ಇವರ ಕಲಾತಂಡದ ಪ್ರದರ್ಶನವನ್ನು ಅಂದಿನ ಪ್ರಧಾನಿಗಳಾಗಿದ್ದ ಇಂದಿರಾ ಗಾಂಧಿ ಮತ್ತು ರಾಜೀವ್ ಗಾಂಧಿ ಮೆಚ್ಚಿಕೊಂಡಿದ್ದರು.

ಇವರಿಗೆ ಅನೇಕ ಪ್ರಶಸ್ತಿ ಗೌರವಗಳು ದೊರೆತಿವೆ. ಅವುಗಳಲ್ಲಿ ಮುಖ್ಯವಾದವು- ಕರ್ನಾಟಕ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ (1968), ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ (1982), ಇಂದಿರಾಗಾಂಧಿ ಫೆಲೋಶಿಪ್ (1988), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1990), ಕರ್ನಾಟಕ ಸರ್ಕಾರದ ಅತ್ಯುನ್ನತ ಪ್ರಶಸ್ತಿಗಳಲ್ಲೊಂದಾದ 1995ನೆಯ ಸಾಲಿನ ಜಾನಪದಶ್ರೀಯನ್ನು ಮರಣೋತ್ತರವಾಗಿ ಇವರಿಗೆ ಪ್ರದಾನ ಮಾಡಲಾಗಿದೆ. ಇವರ ಸಿರಿಕಂಠದಲ್ಲಿ ಮಲೆಯ ಮಹದೇಶ್ವರ ಕಾವ್ಯದ ಇಪ್ಪತ್ತೈದು ಧ್ವನಿಸುರುಳಿಗಳು ಹೊರಬಂದಿವೆ. ಇವರ ಕಂಸಾಳೆ ಪ್ರದರ್ಶನಗಳನ್ನು ಕನ್ನಡ, ಹಿಂದಿ ಹಾಗೂ ಇಂಗ್ಲಿಷ್ ಚಲನಚಿತ್ರಗಳಲ್ಲೂ ಬಳಸಿಕೊಳ್ಳಲಾಗಿದೆ. ಏಕತಾರಿ ಹಾಗೂ ಕಂಜರಿಗಳನ್ನೂ ನುಡಿಸುತ್ತಿದ್ದ ಇವರ ಸಂಗೀತವನ್ನು ವಂಶವೃಕ್ಷ ಚಲನಚಿತ್ರದಲ್ಲಿ ಅಳವಡಿಸಿಕೊಂಡಿದೆ. ಮಹಾದೇವಯ್ಯ ಸಂಪ್ರದಾಯ ನಿಷ್ಠರಾಗಿದ್ದರು. ಸೋಮವಾರ ಹಾಗೂ ಶುಕ್ರವಾರ ಕ್ಯಾರಣ್ಯ(ಭಿಕ್ಷೆ)ಕ್ಕಾಗಿ ಕಂಸಾಳೆ ನುಡಿಸುತ್ತ ಮನೆ ಮನೆಗೆ ತೆರಳುತ್ತಿದ್ದುದುಂಟು. ಈ ಕಾಯಕವನ್ನು ಸಾಯುವವರೆಗೂ ನಿಲ್ಲಿಸಲಿಲ್ಲ. ನೋಡುಗರ ಮೈನವಿರೇಳುವಂತೆ ಕಂಸಾಳೆ ನೃತ್ಯ ಪ್ರದರ್ಶನ ನೀಡುತ್ತಿದ್ದ ಮಹಾದೇವಯ್ಯನವರ ಕಲೆಯಲ್ಲಿ ನೈಪುಣ್ಯ ಹಾಗೂ ಜನಪದ ಸೊಗಡು ಹದವಾಗಿ ಬೆರೆತಿರುತ್ತಿದ್ದುವು. ಕುಣಿತದ ಭಂಗಿ ಹಾಗೂ ಗತ್ತುಗಳಿಂದ ಇವರು ನಾಡಿನ ಅಪರೂಪದ ಕಲಾವಿದರಾಗಿದ್ದರು. ಇವರು 1996 ಏಪ್ರಿಲ್ 21ರಂದು ಮೈಸೂರಿನಲ್ಲಿ ನಿಧನರಾದರು.

ಇವರ ಮಗ ಕುಮಾರಸ್ವಾಮಿ ತಂದೆಯಂತೆಯೇ ಕಂಸಾಳೆ ಕಲೆಯಲ್ಲಿ ಪ್ರಾವೀಣ್ಯ ಪಡೆದಿದ್ದಾರೆ. ಮೊಮ್ಮಕ್ಕಳಾದ ಕೆ.ರವಿಚಂದ್ರ ಹಾಗೂ ಕೆ.ಮಹದೇವ ಕೂಡ ಈ ಕಲೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. (ಎಸ್.ಬಿಎಚ್.ಎ.)

**ಕಕ್ಕ I :** ಸು.8ನೆಯ ಶತಮಾನ ಕರ್ನಾಟಕವನ್ನು ಆಳಿದ ರಾಷ್ಟ್ರಕೂಟ ವಂಶದ ಅರಸರ ಮೂಲ ಪುರುಷರಲ್ಲಿ ಒಬ್ಬ. ಈತನ ಬಗ್ಗೆ ಇತಿಹಾಸದಲ್ಲಿ ವಿವರಗಳು ದೊರೆಯುವುದಿಲ್ಲ. ಇವನ ಆಳಿಕೆಯ ಕಾಲದ ಬಗ್ಗೆಯೂ ಖಚಿತವಾದ ಅಂಶಗಳು ಬೆಳಕಿಗೆ ಬಂದಿಲ್ಲ. ಈತ ಒಂದನೆಯ ಗೋವಿಂದರಾಜನ ಮಗ. ತನ್ನ ಪೂರ್ವಿಕರಾದ ದಂತಿವರ್ಮ, ಒಂದನೆಯ ಇಂದ್ರ ಮತ್ತು ತಂದೆಯಾದ ಗೋವಿಂದರಾಜನಂತೆ ಬಾದಾಮಿ ಚಾಲುಕ್ಯರ ಮಾಂಡಲಿಕನಾಗಿ ರಾಜ್ಯಭಾರ ನಡೆಸಿರಬಹುದೆಂದು ಊಹಿಸಬಹುದು. *

**ಕಕ್ಕ II :** ಕರ್ನಾಟಕವನ್ನಾಳಿದ ರಾಷ್ಟ್ರಕೂಟ ರಾಜರಲ್ಲಿ ಕೊನೆಯವ. ಕರ್ಕ ಎಂದೂ ಈತನನ್ನು ಕರೆಯುವುದುಂಟು. ರಾಷ್ಟ್ರಕೂಟ ದೊರೆಯಾದ ಮುಮ್ಮಡಿ ಅಮೋಘವರ್ಷನಿಗೆ (935-39), ಮೂರನೆಯ ಕೃಷ್ಣ (939-66), ಜಗತ್ತುಂಗ ಕೊಟ್ಟಿಗ (967-72) ಮತ್ತು ನಿರುಪಮ ಎಂಬ ನಾಲ್ವರು ಮಕ್ಕಳಿದ್ದರು. ಕಕ್ಕ ನಿರುಪಮನ ಮಗ. ಮೂರನೆಯ ಕೃಷ್ಣ ಮಕ್ಕಳಿಲ್ಲದೆ ತೀರಿಕೊಂಡಾಗ ಅವನ ತಮ್ಮ ಕೊಟ್ಟಿಗ ಸಿಂಹಾಸನವನ್ನೇರಿದ. ಆ ವೇಳೆಗಾಗಲೇ ಕೊಟ್ಟಿಗನಿಗೆ ಮುಪ್ಪಡರಿಸಿತ್ತಾದ್ದರಿಂದ ಆತ ಬಹುಕಾಲ ಆಳಲಿಲ್ಲ. ಆತನ ಅನಂತರ ಆಳಿದವನೇ ಕಕ್ಕ.

ಕೊಟ್ಟಿಗನ ಕಾಲದಲ್ಲೇ ರಾಷ್ಟ್ರಕೂಟರ ಅವನತಿ ತುತ್ತತುದಿ ಮುಟ್ಟುವುದರಲ್ಲಿತ್ತು. ಆತ ಮೊದಲೇ ಅಸಮರ್ಥ, ಜೊತೆಗೆ ಮುದುಕ. ಆದ್ದರಿಂದ ತನ್ನ ರಾಜ್ಯವನ್ನು ರಕ್ಷಿಸಲಾರದೆ ಹೋದ. ಹಳೆಯ ವೈರ ಸಾಧಿಸುತ್ತಿದ್ದ ಪರಮಾರ ದೊರೆ ಶಿಯಕ ಆತನ ಮೇಲೆ ದಂಡೆತ್ತಿ ಬಂದು ರಾಜಧಾನಿಯನ್ನು ಹಿಡಿದುಕೊಂಡು ಕೊಳ್ಳೆಹೊಡೆದ. ಕೊಟ್ಟಿಗ ಎದೆಯೊಡೆದು ಸತ್ತ. ಇಂಥ' ಸಮಯದಲ್ಲಿ ಅಧಿಕಾರಕ್ಕೆ ಬಂದ ಕಕ್ಕನಾದರೂ ದಕ್ಷನಾಗಿದ್ದಿದ್ದರೆ ಪರಿಸ್ಥಿತಿ ಸುಧಾರಿಸುತ್ತಿತ್ತು. ಆದರೆ ಇವನಿಗೂ ಆಡಳಿತ ಗೊತ್ತಿರಲಿಲ್ಲ. ಈತ ದುಷ್ಟ ಮಂತ್ರಿಗಳಿಬ್ಬರ ಕೈಗೊಂಬೆಯಾಗಿದ್ದ. ಈ ದೌರ್ಬಲ್ಯದಿಂದಾಗಿ ಇವನ ಸಾಮಂತರಾಜರಲ್ಲಿ ದುರಾಸೆ ಬೆಳೆಯಿತು. ಪಟ್ಟಕ್ಕೆ ಬಂದ ಹದಿನೆಂಟೇ ತಿಂಗಳಲ್ಲಿ ಕಕ್ಕ ರಾಜ್ಯ ಕಳೆದುಕೊಂಡ.

ರಾಷ್ಟ್ರಕೂಟ ಸಾಮ್ರಾಜ್ಯದ ದುಃಸ್ಥಿತಿಯ ದುರುಪಯೋಗ ಪಡಿಸಿಕೊಳ್ಳುವುದರಲ್ಲಿ ಪ್ರತಿಹಾರ ವಂಶದವರು ಮೊದಲಿಗರಾದರು. ಉತ್ತರ ಭಾರತದ ಹಲಕೆಲವು ಪಾಳೆಯಪಟ್ಟುಗಳೊಡನೆ ಸಂಚು ನಡೆಸಿ ರಾಷ್ಟ್ರಕೂಟ ಸಾಮ್ರಾಜ್ಯಕ್ಕೆ ಮುತ್ತಿಗೆ ಹಾಕಲು ಇವರು ಪ್ರಯತ್ನಿಸಿದರು. ಈ ಪ್ರಯತ್ನದಲ್ಲಿ ಇವರು ಎಷ್ಟರ ಮಟ್ಟಿಗೆ ಜಯಶಾಲಿಗಳಾದರು ಎಂಬುದರ ಬಗ್ಗೆ ಖಚಿತವಾಗಿ ಹೇಳುವುದು ಸಾಧ್ಯವಿಲ್ಲ. 972ರಲ್ಲಿ ಬರೆಯಲಾದ ಕರ್ಡಾಡದ ಶಾಸನವನ್ನು ನಂಬುವುದಾದರೆ ಈತ ಪ್ರತಿಹಾರರ ದಾಳಿಯನ್ನು ಹಿಮ್ಮೆಟ್ಟಿಸಲು ಸಮರ್ಥನಾದನೆಂದು ಹೇಳಬಹುದು.

ಆದರೂ ಕಕ್ಕನ ರಾಜ್ಯ ಉಳಿಯಲಿಲ್ಲ. ಬಾದಾಮಿಯ ಚಳುಕ್ಯ ವಂಶದ ಎರಡನೆಯ ತೈಲಪ ದಂಡೆತ್ತಿ ಬಂದ. ಮೂರನೆಯ ಗೋವಿಂದನಿಂದ ತರ್ದವಾಡಿ ಪ್ರಾಂತ್ಯದಲ್ಲಿ ಮಾಂಡಲಿಕನಾದಾಗಿನಿಂದಲೂ ಆತ ರಾಷ್ಟ್ರಕೂಟರನ್ನು ನಾಶಮಾಡುವ ಹಂಚಿಕೆ ಹೂಡಿದ್ದ. ಬಾದಾಮಿಯ ಚಳುಕ್ಯರ ವಂಶಜನೆಂದು ಭಾವಿಸಿದ್ದ ತೈಲಪನಿಗೆ ತನ್ನ ಹಿರಿಯರಿಂದ ರಾಷ್ಟ್ರಕೂಟರು ಕಿತ್ತುಕೊಂಡಿದ್ದ ಸಾಮ್ರಾಜ್ಯವನ್ನು ಮತ್ತೆ ಸಂಪಾದಿಸಬೇಕೆಂಬ ಆಕಾಂಕ್ಷೆಯಿತ್ತು. ಎರಡನೆಯ ಕಕ್ಕನ ಕಾಲದಲ್ಲಿ ಆತನಿಗೆ ಈ ಅವಕಾಶ ದೊರೆಯಿತು. ಕಕ್ಕನ ವಿರುದ್ಧವಾಗಿ ಎದ್ದ ತೈಲಪನನ್ನು ಅಡಗಿಸುವ ಉದ್ದೇಶದಿಂದ ದಂಡೆತ್ತಿಹೋದ ಕಕ್ಕನಿಗೆ ಸೋಲು ಕಾದಿತ್ತು (973). ಕಕ್ಕನ ಮಂತ್ರಿಗಳು ಕಾಳಗದಲ್ಲಿ ಕೊನೆಗೊಂಡರು. ಕಕ್ಕ ಮಾತ್ರ ಹೇಗೋ ತಲೆ ತಪ್ಪಿಸಿಕೊಂಡು ಹೋಗಿ ಮೈಸೂರು ಸೀಮೆಯ ಸೊರಬ ಪ್ರದೇಶದಲ್ಲಿ ಒಂದಿಷ್ಟು ನೆಲ ಗಿಟ್ಟಿಸಿಕೊಂಡು ಅಲ್ಲಿ 991ರ ವರೆಗೂ ಆಳ್ವಿಕೆ ನಡೆಸಿದ. ರಾಷ್ಟ್ರಕೂಟ ಸಾಮ್ರಾಜ್ಯವನ್ನು ಮತ್ತೆ ಸಂಪಾದಿಸುವ ಆಸೆಯನ್ನು ಕಕ್ಕ ಕೈಬಿಟ್ಟನಾದರೂ ಮೂರನೆಯ ಕೃಷ್ಣನ ಮಗನಾದ ನಾಲ್ಕನೆಯ ಇಂದ್ರನನ್ನು ಸಿಂಹಾಸನಕ್ಕೆ ತರಲು ಗಂಗವಂಶದ ದೊರೆ ಎರಡನೆಯ ಮಾರಸಿಂಹ ಪ್ರಯತ್ನಪಟ್ಟ. ಆದರೆ ಅದು ಫಲಿಸಲಿಲ್ಲ. *

**ಕಕ್ಕೇರಿ :** ಬೆಳಗಾಂವಿ ಜಿಲ್ಲೆ ಖಾನಾಪುರ ತಾಲ್ಲೂಕಿನ ಒಂದು ಗ್ರಾಮ. ಖಾನಾಪುರ- ಹಳ್ಯಾಳ ರಸ್ತೆಯಲ್ಲಿ ಖಾನಾಪುರಕ್ಕೆ 30ಕಿಮೀ ದೂರದಲ್ಲಿದೆ. ಇದು ವೀರಶೈವ ಶರಣನಾದ ಡೋಹರ ಕಕ್ಕಯ್ಯ ಚೆನ್ನಬಸವಣ್ಣನೊಂದಿಗೆ ಕಲ್ಯಾಣದಿಂದ ಉಳುವಿಗೆ ಹೋಗುವ ಮಾರ್ಗದಲ್ಲಿ ಕಳಚುರಿ ಸೈನ್ಯದೊಂದಿಗೆ ಹೋರಾಡಿ ವೀರಮರಣ ಹೊಂದಿದ ಸ್ಥಳವೆಂಬ ನಂಬಿಕೆ ಇದೆ. ಹೊಲಗಳ ಮಧ್ಯದಲ್ಲಿ ಡೋಹರ ಕಕ್ಕಯ್ಯನದು ಎನ್ನಲಾದ ಗದ್ದುಗೆಯಿದೆ. ಈ ಗುಡಿಗೆ ಒಂದು ಚಿಕ್ಕ ಗರ್ಭಗೃಹವಿದ್ದು ಇದರಲ್ಲಿ ಲಿಂಗಪೂಜೆಯಲ್ಲಿ ನಿರತನಾದ ಕಕ್ಕಯ್ಯನ ಕಲ್ಲಿನ ಮೂರ್ತಿಯಿದೆ. ಇವನ ಗದ್ದುಗೆ ಬಳಿ ಪ್ರತಿವರ್ಷ ಶಿವರಾತ್ರಿಯಲ್ಲಿ ಮೂರು ದಿನಗಳವರೆಗೆ ಜಾತ್ರೆ ನಡೆಯುವುದು.

ಈ ಗದ್ದುಗೆಯ ಸಮೀಪ ಇತ್ತೀಚೆಗೆ ನಿರ್ಮಿತವಾದ ಪ್ರಜ್ಞೋದಯ ಆಶ್ರಮ ಇದೆ. ಆಶ್ರಮದಲ್ಲಿ ವಿರಕ್ತ ಸನ್ಯಾಸಿನಿಯೊಬ್ಬರು ವಾಸವಾಗಿರುವರು. ಊರಲ್ಲಿ ವೀರಭದ್ರ, ಬಸವಣ್ಣ, ಮಾರವ್ವ ಮೂಕಮ್ಮ, ದುರಗವ್ವ ದೇವಾಲಯಗಳಿವೆ. ಅಡವಿ ಸಿದ್ಧೇಶ್ವರ ಎಂಬ ಮಠವಿದೆ. ಸುಮಾರು ಮೂರು ಶತಮಾನಗಳ ಹಿಂದೆ ನಿರ್ಮಿಸಲಾದ ಎರಡು ಹಳೆಯ ದೇವಾಲಯಗಳಲ್ಲಿ, ಒಂದನ್ನು ಸ್ಥಳೀಯರು ಬೀಸ್ಪದೇವಿ ದೇವಾಲಯವೆಂದು ಕರೆಯುವರು. ಅದು ಇಂಡೋ - ಸರಾಸೆನಿಕ್ ಶೈಲಿಯಲ್ಲಿದ್ದು, ಗುಮ್ಮಟವನ್ನು ಹೊಂದಿದೆ. ಈ ದೇವಿಯ ಜಾತ್ರೆ ವರ್ಷಕ್ಕೊಮ್ಮೆ 3 ದಿನಗಳವರೆಗೆ ನಡೆಯುತ್ತದೆ. ಈ ಊರಲ್ಲಿ ಸೇಂಟ್ ಅಂಥೊನಿ ಚರ್ಚ್ ಎಂದು ಕರೆಯಲಾಗುವ ಕೆಥೊಲಿಕ್ ಚರ್ಚ್ ಇದೆ. (ಆರ್.ಐ.)

**ಕಟೀಲು :** ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕಿನ ಒಂದು ಗ್ರಾಮ. ಮಂಗಳೂರಿನ ಪೂರ್ವಕ್ಕೆ 27ಕಿಮೀ ದೂರದಲ್ಲಿ ಕಿನ್ನಿಗೋಳಿಗೆ ಹೋಗುವ ರಸ್ತೆ ಬದಿಯಲ್ಲಿದೆ. ಇದು ದಕ್ಷಿಣಕನ್ನಡದ ಪ್ರಸಿದ್ಧ ತೀರ್ಥಕ್ಷೇತ್ರಗಳಲ್ಲಿ ಒಂದು. ನಂದಿನಿ ನದಿಯ ಎರಡು ಕವಲುಗಳ ಮಧ್ಯೆ ಬಂಡೆಗಳ ನಡುವೆ ಇರುವ ಉದ್ಭವ ಲಿಂಗದ ಆಕಾರದ ಮೂರ್ತಿಯನ್ನು ದುರ್ಗಾಪರಮೇಶ್ವರಿ ಎಂದು ಪೂಜಿಸುವರು. ನದಿಯ ಮಧ್ಯಭಾಗದಲ್ಲಿ ಅಂದರೆ ಕಟಿ ಪ್ರದೇಶದಲ್ಲಿ ಈ ಪವಿತ್ರ ಸ್ಥಳ ಇರುವುದರಿಂದ ಇದಕ್ಕೆ ಕಟೀಲು ಎಂಬ ಹೆಸರು ಬಂದಿರಬಹುದು. ಅಲ್ಲದೆ ಈ ದೇವಿಗೆ ಕಟಿಳಾ ಎಂಬ ಹೆಸರೂ ಇರುವುದರಿಂದ ಗ್ರಾಮದ ಹೆಸರು ರೂಪುಗೊಂಡಿರಬೇಕು. ಅಸ್ರಣ್ಣ ಉಪನಾಮದ ಮಾಧ್ವ ವೈಷ್ಣವ ಕುಟುಂಬದವರು ಇಲ್ಲಿನ ಅರ್ಚನೆ ಹಾಗೂ ಆಡಳಿತ ನೋಡುತ್ತ ಬಂದಿದ್ದಾರೆ. ಹಿಂದಿನ ದೇವಾಲಯ ಪ್ರವಾಹದಿಂದ ಕೊಚ್ಚಿಹೋದ ಕಾರಣ ಈಗ ಇರುವ ವಿಸ್ತಾರವಾದ ದೇವಸ್ಥಾನದ ಕಟ್ಟಡವನ್ನು 1944ರಲ್ಲಿ ಕಟ್ಟಲಾಗಿದೆ. ಕಲ್ಲಿನ ಕಂಬಗಳ ಮೇಲೆ ಕುಸುರಿ ಕೆಲಸದ ಪ್ರತಿಮೆಗಳಿವೆ. ಈ ದೇವಾಲಯ ನದಿಯ ಮಧ್ಯದ ದಿಬ್ಬದ ಮೇಲಿದ್ದು ಗೋಪುರಗಳನ್ನು ಹೊಂದಿದೆ. ಕಾರ್ಕಳದ ಶಿಲ್ಪಿ ರಂಜಾಳ ಗೋಪಾಲ ಕೃಷ್ಣ ಶೆಣೈ ಈ ದೇವಾಲಯದ ಶಿಲ್ಪಗಳನ್ನು ಕೆತ್ತಿದ್ದಾರೆ.



ದುರ್ಗಾಪರಮೇಶ್ವರಿ ದೇವಾಲಯ

ಸ್ಥಳಪುರಾಣದಂತೆ ಇಲ್ಲಿಂದ 3ಕಿಮೀ ದೂರದ ಎಕ್ಕಾರು ಗ್ರಾಮದಲ್ಲಿ ಇದ್ದ ಬ್ರಹ್ಮನ ವರ ಪಡೆದ ಅರುಣಾಸುರನೆಂಬ ದೈತ್ಯನನ್ನು ದೇವಿಯು ಬೃಹದಾಕಾರದ ಭ್ರಮರ ರೂಪದಿಂದ ಬಂದು ಕೊಂದು, ಭಕ್ತರ ಪ್ರಾರ್ಥನೆಯಂತೆ ದುರ್ಗಾ ರೂಪದಲ್ಲಿ ನೆಲೆನಿಂತಿದ್ದಾಳೆ. ದಿನವೂ ರಾಜಮರ್ಯಾದೆಗಳೊಡನೆ ಬಲಿ ಮೂರ್ತಿಯನ್ನು ದೇವಸ್ಥಾನದ ಆವರಣದಲ್ಲಿ ಮೆರೆಸುತ್ತಾರೆ. ಅನಂತರ ದೇವಿಯನ್ನು ಹೊತ್ತವರಿಂದ ಪ್ರಸಾದ ವಿನಿಯೋಗ. ಕೊನೆಗೆ (ದರ್ಪಣ) ವಸಂತ ಮಂಟಪದಲ್ಲಿ ದೇವಿಯನ್ನು ಕೂರಿಸಿ, ಅನೇಕ ಬಗೆಯಲ್ಲಿ ಪೂಜಿಸುತ್ತಾರೆ. ಗುಡಿ ಪ್ರವೇಶಿಸುವಾಗ ಪುಟ್ಟ ಗುಡಿಯಿರುವ ರಕ್ತೇಶ್ವರಿಕಲ್ಲು, ಒಳಗೆ ಗಣಪತಿ, ನಾಗರುಗಳಿವೆ. ಜಾತ್ರೆಯ ಸಮಯದಲ್ಲಿ ಹತ್ತಿರದ ಶಿಬರೂರು ಗ್ರಾಮದ ಕೊಡಮಣಿತ್ತಾಯ ಭೂತಕ್ಕೂ ಇಲ್ಲಿ ಮನ್ನಣೆಯಿದೆ.

ದೇವಸ್ಥಾನದಲ್ಲಿ ನಿತ್ಯ ಅನ್ನದಾನ ಸೇವೆಯಿರುತ್ತದೆ. ದೇವಸ್ಥಾನ ಮಂಡಳಿಯು ಪ್ರಾಥಮಿಕ ಶಾಲೆಯಿಂದ ಪದವಿ ಕಾಲೇಜಿನವರೆಗೆ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತದೆ. ಪ್ರಧಾನವಾಗಿ ದೇವಿಯ ಆರಾಧನೆಯ ರೂಪವಾಗಿ ಮೂರು ಯಕ್ಷಗಾನ ಮೇಳಗಳನ್ನು ನಡೆಸುತ್ತಿದೆ. ಮೇಳದವರು ಆಟ ನಡೆಸುವ ಊರಿನಲ್ಲಿ ಬೆಳಗ್ಗೆ ತಮ್ಮಲ್ಲಿನ ರಾಮಲಕ್ಷ್ಮಣರ ಕಿರೀಟಗಳಿಗೆ ಪೂಜೆ ಮಾಡುತ್ತಾರೆ. ಈ ಪೂಜೆ ಪ್ರಸಾದಕ್ಕೆ ಕಟೀಲಿನ ಪ್ರಸಾದದಂತೆಯೆ ಮನ್ನಣೆ ಇದ್ದು, ಭಕ್ತಾದಿಗಳು ಹರಕೆ ತೀರಿಸುವುದೂ ಉಂಟು. ಈ ಮೇಳದವರು ಕಟೀಲಿನಲ್ಲಿ ದೇವೀಮಹಾತ್ಮೆ, ಕಟೀಲು ಕ್ಷೇತ್ರ ಮಹಾತ್ಮೆ ಆಡುವಂತಿಲ್ಲ. ಇಲ್ಲಿ ಜಾಗ್ರತದೈವ ಎಂಬ ದೇವರಿದೆ. ಪ್ರತಿ ಹನ್ನೆರಡು ವರ್ಷಕ್ಕೆ ಒಮ್ಮೆ ಬ್ರಹ್ಮಕಳಶ ನಡೆಯುತ್ತದೆ. ಮಂಗಳೂರು ವಿಶ್ವವಿದ್ಯಾಲಯದ ಸಂಸ್ಕೃತ ಸ್ನಾತಕೋತ್ತರ ಕೇಂದ್ರ ಇಲ್ಲಿದೆ. (ಎಚ್.ಪಿ.ವಿ.)

**ಕಟ್ಟೀಮನಿ, ಬಸವರಾಜ :** 1919-89. ಕನ್ನಡ ಪ್ರಗತಿಶೀಲ ಸಾಹಿತ್ಯದ ಅಗ್ರಮಾನ್ಯ ಲೇಖಕರು. 1919 ಅಕ್ಟೋಬರ್ 5ರಂದು ಬೆಳಗಾಂವಿ ಜಿಲ್ಲೆಯ ಗೋಕಾಕದಲ್ಲಿ ಜನಿಸಿದರು. ತಂದೆ ಅಪ್ಪಯ್ಯಣ್ಣ, ತಾಯಿ ಬಾಳವ್ವ, ತಾಯಿಯ ತವರೂರು ಮಲಾಮರಡಿ. ಅಲ್ಲಿನ ಬಸವಣ್ಣ ದೇವರಿಗೆ ಹರಕೆ ಹೊತ್ತು ಹುಟ್ಟಿದ ಹುಡುಗ ಬಸ್ಯಾ. ಅದೇ ಹೆಸರು ನಾನಾ ರೀತಿಯಾಗಿ ಬೆಳೆಯಿತು. ಬಸಣ್ಣ, ಬಸಪ್ಪ, ಬಸವೇಶ್ವರ -ಹೀಗೆ ವಿವಿಧ ರೂಪ ತಾಳಿತು. ಪತ್ರಿಕಾ ಸಂಪಾದಕರೊಬ್ಬರು ಬಸವರಾಜ ಎಂದು ಕರೆದರು. ಅದೇ ಹೆಸರು ಉಳಿದು ಸಾಹಿತ್ಯ ಪ್ರಪಂಚದಲ್ಲಿ ಬಸವರಾಜ ಕಟ್ಟೀಮನಿ ಎಂದೇ ಪ್ರಸಿದ್ಧರಾದರು. ನಿರಕ್ಷರಿಯಾಗಿದ್ದ ತಂದೆ ಅಪ್ಪಯ್ಯಣ್ಣನವರು ಸಂಬಂಧಿಕರೊಬ್ಬರ ಮೋಸಕ್ಕೆ ಬಲಿಯಾಗಿ ಇದ್ದ ಸಣ್ಣಹೊಲವನ್ನೂ ಕಳೆದುಕೊಂಡರು. ಜೀವನಕ್ಕಾಗಿ ಸಶಸ್ತ್ರ ಪೊಲೀಸ್ ಪಡೆಯಲ್ಲಿ ಸಿಪಾಯಿಯಾಗಿ ಸೇರಿಕೊಂಡರು.

ಕಟ್ಟೀಮನಿಯವರ ವ್ಯಕ್ತಿತ್ವದಲ್ಲಿ ಕಾಣಿಸುತ್ತಿದ್ದ ನೇರವಾದ ನಡೆ, ನುಡಿ, ಪ್ರಾಮಾಣಿಕತೆ, ಸರಳತೆ, ಔದಾರ್ಯ ಮುಂತಾದ ಗುಣಗಳು ನಿರಕ್ಷರಿಗಳಾದ ರೈತಾಪಿವರ್ಗದ ತಂದೆ ತಾಯಿಗಳಿಂದಲೇ ಬಂದವು. ಕುಂದರನಾಡ ಮಣ್ಣಿನ ಗುಣಗಳಾದ ಸ್ವಾಭಿಮಾನ, ಧೈರ್ಯ, ಕ್ರಾಂತಿಕಾರಿ ಮನೋಭಾವಗಳನ್ನು ಇವರು ರೂಢಿಸಿಕೊಂಡಿದ್ದರು. ಹಸಿವು, ಬಡತನ ಹುಟ್ಟಿನಿಂದಲೇ ಬಂದವು. ತಂದೆಗೆ ಆಗಾಗ ಬೇರೆ ಬೇರೆ ಊರುಗಳಿಗೆ ವರ್ಗವಾಗುತ್ತಿತ್ತು. ಆ ಊರುಗಳಲ್ಲಿ ಸರಿಯಾದ ಶಾಲೆ ಇರುತ್ತಿರಲಿಲ್ಲ. ಜೊತೆಗೆ ಭಾಷೆಯ ಸಮಸ್ಯೆ ಬೇರೆ. ಇದರಿಂದ ಕಟ್ಟೀಮನಿಯವರಿಗೆ ಶಿಕ್ಷಣದಲ್ಲಿ ಒಂದು ಬಗೆಯ ನಿರಾಸಕ್ತಿ ಉಂಟಾಯಿತು. ತಾಯಿಯ ಒಲವು ಒತ್ತಾಸೆಗಳಿಂದಲೇ ಇವರು ಕೊಂಚ ಶಿಕ್ಷಣ ಪಡೆದರು.

ಇವರ ಪ್ರಾಥಮಿಕ ಶಿಕ್ಷಣ ತೊಡಗಿದ್ದು ಕಿತ್ತೂರಿನಲ್ಲಿ. ಅಲ್ಲಿಂದ ಗೋಕಾಕಕ್ಕೆ ಬಂದು ಮೂರನೆಯ ತರಗತಿಗೆ ಸೇರಿದರು. ಅಲ್ಲಿ ಅಭ್ಯಾಸ ಮಾಡುತ್ತಿದ್ದಾಗಲೆ ಇವರಿಗೆ ಕಿವುಡುತನ ಕಾಣಿಸಿಕೊಂಡಿತು. ಎಷ್ಟು ಪ್ರಯತ್ನಿಸಿದರೂ ಇವರು ಕಿವುಡುತನದಿಂದ ಪಾರಾಗಲಿಲ್ಲ. ಇದರಿಂದ ಇವರಲ್ಲಿ ಕೀಳರಿಮೆ ಬೆಳೆಯಿತು. ಸೂಕ್ಷ್ಮಗ್ರಹಣಶಕ್ತಿ ಹಾಗೂ ಜ್ಞಾಪಕ ಶಕ್ತಿಗಳು ಇವರನ್ನು ತರಗತಿಗಳಲ್ಲಿ ಮೊದಲಿಗರನ್ನಾಗಿಸುತ್ತಿದ್ದುವು. ಆದರೆ ಇವರಲ್ಲಿ ಏಕಾಂಗಿತನ ಮತ್ತು ಅಂತರ್‌ಮುಖತೆಗಳು ನೆಲೆಯಾದವು. ಈ ಅಂಶಗಳು ಇವರ ವ್ಯಕ್ತಿತ್ವದ ಮೇಲೂ ಪ್ರಭಾವಬೀರಿದುವು. ಬೆಳಗಾಂವಿಯಲ್ಲಿ ಇವರು ಪ್ರ.ಗೋ. ಕುಲಕರ್ಣಿಯವರ ಶಿಷ್ಯರಾಗಿದ್ದರು. ಕಟ್ಟೀಮನಿಯವರ ಬದುಕಿನಲ್ಲಿ ಗಾಢ ಪ್ರಭಾವ ಬೀರಿದ ವ್ಯಕ್ತಿಗಳಲ್ಲಿ ಅವರೂ ಒಬ್ಬರು. ಅವರ ಆಶ್ರಯದಲ್ಲಿ ಸಾಹಿತ್ಯದ ಅಭಿರುಚಿ ಬೆಳೆಸಿಕೊಂಡರು. ವಿದ್ಯಾರ್ಥಿ ಎಂಬ ಕೈಬರೆಹದ ಪತ್ರಿಕೆಯನ್ನೂ ಆರಂಭಿಸಿದರು. ಜಿಲ್ಲೆಗೆ ನಾಲ್ಕನೆಯವರಾಗಿ ಮುಲ್ಕಿ ಪರೀಕ್ಷೆಯಲ್ಲಿ ತೇರ್ಗಡೆಯಾದರು.

ತಂದೆಯವರಿಗೆ ಬೆಳಗಾಂವಿಯಿಂದ ಪುಣೆಗೆ ವರ್ಗವಾಯಿತು. ಆಗ ಶಿಕ್ಷಣಕ್ಕೆ ನಿಜವಾದ ತಡೆ ಉಂಟಾಯಿತು. ಕಟೀಮನಿಯವರನ್ನು ಬೆಳಗಾಂವಿಯಲ್ಲಿಯೇ ಬಿಡುವುದು ಅನಿವಾರ್ಯವಾಯಿತು. ತಮ್ಮ ಮನೆಯ ಸ್ಥಿತಿಗತಿಗಳನ್ನು ಚೆನ್ನಾಗಿ ತಿಳಿದಿದ್ದ ಇವರು ಬೆಳಗಾಂವಿಯಲ್ಲಿದ್ದಾಗ ಪತ್ರಿಕೆ ಹಂಚಿ, ಅಲ್ಪ ಸ್ವಲ್ಪ ಸಂಪಾದನೆ ಮಾಡುತ್ತ, ತಾವೇ ಅಡುಗೆ

ಮಾಡಿಕೊಂಡು ಅಭ್ಯಾಸ ಸಾಗಿಸಿದರು. ಗಣಿತ ಮಾತ್ರ ಇವರಿಗೆ ತಲೆನೋವಿನ ವಿಷಯವಾಗಿತ್ತು. ಅದರಿಂದಲೇ ಇವರು ಮೆಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಯಾಗದೆ ಉಳಿದರು. ಸರ್ಕಾರಿ ನೌಕರಿ ತಮ್ಮ ಗುರಿಯಲ್ಲ ಎಂದುಕೊಂಡು ಶಾಲೆ ತ್ಯಜಿಸಿದರು.

ಸಾಹಿತ್ಯ, ಪತ್ರಿಕೋದ್ಯಮಗಳಲ್ಲಿ ಕಟ್ಟೀಮನಿಯವರಿಗೆ ಆರಂಭದಿಂದಲೂ ಆಸಕ್ತಿ, ಜೀವನಕ್ಕಾಗಿ ಅದೇ ಕ್ಷೇತ್ರಗಳನ್ನು ಆಶ್ರಯಿಸಿದರು. ಇವರು ಕೆಲಸಕ್ಕೆ ಸೇರಿದ ಮೊದಲನೆಯ ಪತ್ರಿಕೆ 'ಸಂಯುಕ್ತ ಕರ್ನಾಟಕ'. ಅಲ್ಲಿಂದ ಮುಂದೆ 'ತರುಣ ಕರ್ನಾಟಕ'ದಲ್ಲಿ ಕೆಲಸಕ್ಕೆ ಸೇರಿದರು. ದಿವಾಕರರೊಡನೆ ನಡೆಸಿದ ಒಂದು ಸಂದರ್ಶನದ ಫಲವಾಗಿ ಅದನ್ನೂ ಬಿಡಬೇಕಾಯಿತು. ಘಾಣೇಕರ ಅವರ 'ಸಮಾಜ'



ಪತ್ರಿಕೆಗೆ ಸೇರಿದರು. ಅದು ಬೆಂಗಳೂರಿಗೆ ಹೋದಾಗ ತಾವೂ ಬೆಂಗಳೂರಿಗೆ ಹೋದರು. ಆದರೆ ಅಲ್ಲಿ ಅದರ ಮಾಲೀಕರಾಗಿದ್ದವರ ಅಧಿಕಾರಶಾಹಿ ಪ್ರವೃತ್ತಿಗೆ ಬೇಸತ್ತು ಪ್ರತಿಭಟಿಸಿ ಪುನಃ ಹುಬ್ಬಳ್ಳಿಗೆ ಬಂದು 'ಲೋಕ ಮತ' ಪತ್ರಿಕೆ ಸೇರಿದರು. ಅದನ್ನೂ ಬಿಟ್ಟು ಗದಗಿಗೆ ಹೋಗಿ ಅಲ್ಲಿ 'ಕರ್ನಾಟಕ ಬಂಧು' ಪತ್ರಿಕೆಯಲ್ಲಿ ಕೆಲಸಕ್ಕೆ ತೊಡಗಿದರು. ಆ ಪತ್ರಿಕೆಯಲ್ಲಿರುವಾಗಲೇ ಕನ್ನಡದ ಹಿರಿಯ ಸಾಹಿತಿಗಳಾದ ಮಾಸ್ತಿ, ಬೇಂದ್ರೆ, ಅನಕೃ ಮೊದಲಾದವರ ಸಂಪರ್ಕಉಂಟಾಯಿತು. ಯಾವ ಪತ್ರಿಕೆಯಲ್ಲಿಯೂ ಇಪ್ಪತ್ತು ರೂಪಾಯಿಗಿಂತ ಹೆಚ್ಚಿನ ಸಂಬಳ ದೊರೆಯುತ್ತಿರಲಿಲ್ಲ. 'ಕರ್ನಾಟಕ ಬಂಧು' ಪತ್ರಿಕೆಯಲ್ಲಿ ಇದ್ದಕ್ಕಿದ್ದಂತೆ ಸಂಬಳ ಕಡಿಮೆ ಮಾಡಿದ್ದರಿಂದ ಅದನ್ನು ಬಿಟ್ಟು ಬೆಂಗಳೂರಿಗೆ ಬಂದರು. ಶಿವಮೂರ್ತಿ ಶಾಸ್ತ್ರಿಗಳು ಸಂಪಾದಿಸುತ್ತಿದ್ದ 'ಸ್ವತಂತ್ರ ಕರ್ನಾಟಕ' ಪತ್ರಿಕೆ ಸೇರಿದರು. ಆದರೆ ಇಲ್ಲಿಯೂ ಬಹಳ ಕಾಲ ನಿಲ್ಲುವುದು ಕಟ್ಟೀಮನಿಯವರಿಗೆ ಸಾಧ್ಯವಾಗಲಿಲ್ಲ.

1942ರ ಚಲೇಜಾವ್ ಚಳವಳಿಯಲ್ಲಿ ಕಟ್ಟೀಮನಿಯವರೂ ದುಮುಕಿದರು. ಉಗ್ರಭಾಷಣಗಳನ್ನು ಮಾಡಿ, ಬಂಧನಕ್ಕೆ ಒಳಗಾದರು. ಇದರಿಂದ ಇವರ ಅನುಭವ ವಿಸ್ತಾರಗೊಂಡಿತು. ಸೆರೆಮನೆಯಿಂದ ಹೊರಬಂದ ಮೇಲೆ ಮತ್ತೆ ಪತ್ರಿಕೋದ್ಯೋಗದ ಹುಡುಕಾಟದಲ್ಲಿ ತೊಡಗಿದರು. 'ಉಷಾ' ಪತ್ರಿಕೆಯಲ್ಲಿ ದುಡಿದು ಆ ಪತ್ರಿಕೆಗೊಂದು ಹೆಸರು ತಂದರು. ಆಗ ಕನ್ನಡದ ಸಿದ್ಧಪ್ರಸಿದ್ಧರೆಲ್ಲ ಅದರಲ್ಲಿ ಬರೆಯುತ್ತಿದ್ದರು. 'ಉಷಾ' ಪತ್ರಿಕೆಯೊಡನೆ ಇವರೂ ಬೆಳೆದರು. ಅದೇ ದಿನಗಳಲ್ಲಿ ಇವರ ಮದುವೆಯೂ ಆಯಿತು. ಈ ದಂಪತಿಗಳಿಗೆ ಐವರು ಮಕ್ಕಳು. ಎರಡು ಗಂಡು, ಮೂರು ಹೆಣ್ಣು. ಪ್ರಗತಿಶೀಲ ವಿಚಾರಗಳನ್ನು ಆಧರಿಸಿ 'ಸ್ವತಂತ್ರ' ಪತ್ರಿಕೆಯನ್ನು ಸ್ವಲ್ಪ ಕಾಲ ನಡೆಸಿದ್ದು ಇವರ ಮಹತ್ವದ ಸಾಧನೆ. ಇವರ ನಿಷ್ಠುರ ಸ್ವಭಾವ ಇವರನ್ನು ಯಾವ ಪತ್ರಿಕೆಯಲ್ಲಿಯೂ ಬಹಳ ಕಾಲ ಉಳಿಯುವಂತೆ ಮಾಡಲಿಲ್ಲ.

ಇವರು ಸುಮಾರು ಅರುವತ್ತು ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಕಾದಂಬರಿಗಳದೇ ಮೇಲುಗೈ. ಹೆಚ್ಚು ಕಡಿಮೆ ನಲವತ್ತು ಕಾದಂಬರಿಗಳನ್ನು ಬರೆದಿದ್ದಾರೆ. ಹತ್ತು ಕಥಾಸಂಕಲನಗಳು ಪ್ರಕಟವಾಗಿವೆ. ಎರಡು ಕವನಸಂಗ್ರಹಗಳೂ ಎರಡು ಜೀವನಚಿತ್ರಗಳೂ ಒಂದು ಪ್ರವಾಸ ಕಥನವೂ ಪ್ರಕಟಗೊಂಡಿವೆ. ಕಾದಂಬರಿಕಾರನ ಆತ್ಮಕಥೆ ಶೀರ್ಷಿಕೆಯಲ್ಲಿ ಆತ್ಮಕಥೆ ರಚಿಸಿದ್ದಾರೆ (1981).

ಇವರ ಮೊದಲನೆಯ ಕಾದಂಬರಿ ಸ್ವಾತಂತ್ರ್ಯದೆಡೆಗೆ 1946ರಲ್ಲಿ ಪ್ರಕಟವಾಯಿತು. ಅಲ್ಲಿಂದ ಇವರು ಸತತವಾಗಿ ಬರೆಯತೊಡಗಿದರು. ಇವರ ಕಾದಂಬರಿಗಳಲ್ಲಿ ಅತ್ಯಂತ ಪ್ರಸಿದ್ಧವಾದವು ಎಂದರೆ ಮೋಹದ ಬಲೆಯಲ್ಲಿ (1952) ಮತ್ತು ಜರತಾರಿ ಜಗದ್ಗುರು (1953). ಆದರೆ ಗುಣದಲ್ಲಿ ಅವು ಅದೇ ಮಟ್ಟದವು ಎಂದು ಹೇಳುವಂತಿಲ್ಲ. ಇವರ ಕಾದಂಬರಿಗಳಲ್ಲಿ ನೆನೆಯಬೇಕಾದವು: ಮಾಡಿ ಮಡಿದವರು (1950), ಮಣ್ಣು ಮತ್ತು ಹೆಣ್ಣು (1953), ಖಾನಾವಳಿಯಲ್ಲಿ ನೀಲಾ (1953). ಜ್ವಾಲಾಮುಖಿಯ ಮೇಲೆ (1951), ಇವರಿಗೆ ಸೋವಿಯೆತ್ ದೇಶದ ನೆಹರೂ ಪ್ರಶಸ್ತಿ ತಂದು ಕೊಟ್ಟ ಕೃತಿ. ನಾನೂ ಪೊಲೀಸನಾಗಿದ್ದೆ ಹಾಗೂ ಬಂಗಾರದ ಜಿಂಕೆಯ ಹಿಂದೆ (1954) - ಈ ಎರಡೂ ಕಾದಂಬರಿಗಳು ಆತ್ಮಕಥನಾತ್ಮಕವಾದವು. ಗಿರಿಯ ನವಿಲು (1956) ಅಕ್ಕಮಹಾದೇವಿಯನ್ನು ಕುರಿತದ್ದು. ಇವರ ಯಾವುದೇ ಕಾದಂಬರಿಯಲ್ಲಾದರೂ ಆಸಕ್ತಿಯಿಂದ ಓದಿಸಿಕೊಳ್ಳುವ ಗುಣ ಇರುತ್ತದೆ. ಇವರ ಸಾಹಿತ್ಯದಲ್ಲಿ ವಾಸ್ತವತೆಯ ಯಥಾವತ್ತಾದ ಚಿತ್ರಣ ದೊರಕುತ್ತದೆ. ಅವುಗಳಲ್ಲಿ ಬರುವ ವ್ಯಕ್ತಿಗಳ ಹೆಸರಾದರೂ ನಿಜಜೀವನದ ವ್ಯಕ್ತಿಗಳ ಹೆಸರಿನ ಅಲ್ಪಸ್ವಲ್ಪ ಮಾರ್ಪಾಡೇ ಆಗಿರುತ್ತದೆ. ಇವರ ಕಾದಂಬರಿಗಳಲ್ಲಿ ಹೆಚ್ಚಿನ ಕಲೆಗಾರಿಕೆ ಕಾಣಿಸುವುದಿಲ್ಲ; ತಂತ್ರಗಾರಿಕೆಗೆ ಇವರು ಹೆಚ್ಚಿನ ಗಮನ ಕೊಡಲಿಲ್ಲ. "ಕಲೆಗಾಗಿ ಕಲೆ ಎನ್ನುವ ದೃಷ್ಟಿ ನನ್ನದಲ್ಲ. ನಮ್ಮ ಸುತ್ತಲಿನ ಹತ್ತಾರು ಜೀವಿಗಳ ಬದುಕು ಬಂಗಾರವಾಗಬೇಕು ಎನ್ನುವ ದೃಷ್ಟಿ ನನ್ನದು'' ಎಂದು ಇವರೇ ಹೇಳಿಕೊಂಡಿದ್ದಾರೆ.

ಕಟ್ಟೀಮನಿಯವರು ವಿಧಾನ ಪರಿಷತ್ತಿನ ನಾಮಕರಣ ಸದಸ್ಯರಾಗಿದ್ದರು (1968-74). ಸೋವಿಯೆತ್ ದೇಶಕ್ಕೂ ಭೇಟಿ ಕೊಟ್ಟಿದ್ದರು. ಕರ್ನಾಟಕ ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರಾಗಿದ್ದರು (1970-73). ಅನೇಕ ಸಂಘ ಸಂಸ್ಥೆಗಳೊಡನೆ ಇವರ ಸಂಬಂಧ ನಿಕಟವಾಗಿತ್ತು. ಇವರ ಜೀವನ ಮತ್ತು ಸಾಹಿತ್ಯವನ್ನು ಕುರಿತಂತೆ ಬಸವರಾಜ ಸಾದರ ಅಧ್ಯಯನ ಮಾಡಿ ಪಿಎಚ್.ಡಿ. ಪದವಿ ಪಡೆದಿದ್ದಾರೆ. (ಎಚ್.ಎಂ.ಎಸ್.ಎ.)

**ಕಡತೋಕ :** ಉತ್ತರ ಕನ್ನಡ ಜಿಲ್ಲೆ ಹೊನ್ನಾವರ ತಾಲ್ಲೂಕಿನ ಒಂದು ಧಾರ್ಮಿಕ ಸ್ಥಳ. ಹೊನ್ನಾವರದಿಂದ 14ಕಿಮೀ ದೂರದಲ್ಲಿದೆ. ಇಲ್ಲಿರುವ ಕೇಶವನಾರಾಯಣ, ನರಸಿಂಹ, ವಿಳುಕೊಪ್ಪರಿಗೆಗುಡಿ ಪ್ರಮುಖವಾದವುಗಳು. ಕೇಶವನಾರಾಯಣ ಪುರಾತನ ದೇವಾಲಯ. ಮರದ ಛಾವಣಿ ಇದ್ದ ಈ ದೇವಾಲಯ ಇತ್ತೀಚಿಗೆ ಜೀರ್ಣೋದ್ಧಾರಗೊಂಡಿದೆ. ಇದನ್ನು ಆಳುತ್ತಿದ್ದ ಮಹಾಮಾತ್ಯ ಪ್ರಭು ಸರಬತಿಥ್ಯ ಎಂಬವನ ಪ್ರತಿಕೃತಿ ಇದೆ. ಭೋಗವೆಗ್ಗಡೆಯಿಂದ ಸ್ಥಾಪಿಸಲ್ಪಟ್ಟ ಸ್ವಯಂಭುವಿನ ದೇವಾಲಯವೂ ಇದೆ. ಇದಲ್ಲದೆ ಹವ್ಯಕ ಸಮುದಾಯದ ಪ್ರಾಚೀನ ಮಠವೊಂದಿದೆ. ಇದನ್ನು ಲಕ್ಷ್ಮೀನರಸಿಂಹ ಮಠ ಎಂದೂ ಕರೆಯಲಾಗುತ್ತದೆ. ಇಲ್ಲಿನ ಶಂಭುಲಿಂಗ ಮಂದಿರವನ್ನು ಗ್ರಾಮದೇವತೆ ಎಂದು ಪರಿಗಣಿಸಿ ಪೂಜಿಸಲಾಗುತ್ತದೆ. ಚೋಳ-ಗಂಗ ಮಾದರಿಯಲ್ಲಿ ಈ ಕಟ್ಟಡವಿದೆ. ಕನ್ನಡ ಶಾಸನವೊಂದು ಇಲ್ಲಿದೆ. ತ್ರ್ಯಂಬಕೇಶ್ವರ ವಿಷ್ಣುಮೂರ್ತಿ, ಮಕ್ಕಿನಾರಾಯಣ ಹಾಗೂ ವಿಷ್ಣು ಮೊದಲಾದ ದೇವಸ್ಥಾನಗಳೂ ಇಲ್ಲಿವೆ. ಇಲ್ಲಿಯ ಹಳೇಮಠದ ಹತ್ತಿರ ಉತ್ಕೃಷ್ಟವಾದ ವಿಷ್ಣುವಿನ ಮೂರ್ತಿಯೊಂದಿದೆ. ಕಡತೋಕದ ಭಾಗವಾಗಿರುವ ಮಾಡಗೇರಿಯಲ್ಲಿ ನಾರಾಯಣನ ಮಂದಿರ ಇದೆ. ಇಲ್ಲಿ ಏಪ್ರಿಲ್‌ನಲ್ಲಿ ಜಾತ್ರೆ ಜರುಗುವುದು. ಆ ಸಂದರ್ಭದಲ್ಲಿ ಕೊಂಡ ಹಾಯುವ ಸಂಪ್ರದಾಯವಿದೆ. (ಎಸ್.ಎಚ್.ಇ.)

**ಕಡಬ :** ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕಿನಲ್ಲಿ ಕಸಬೆಯಿಂದ ನೈಋತ್ಯಕ್ಕೆ 19ಕಿಮೀ ದೂರದಲ್ಲಿ ಶಿಂಷಾನದಿಯ ಬಲದಂಡೆಯ ಮೇಲೆ ನಿಟ್ಟೂರು - ಮಾಯಸಂದ್ರ ಹಾದಿಯಲ್ಲಿರುವ ಗ್ರಾಮ. 1886ರವರೆಗೆ ಕಡಬ ಇದೇ ಹೆಸರಿನ ತಾಲ್ಲೂಕಿನ ಕೇಂದ್ರವಾಗಿತ್ತು. ಈಗ ಇದು ಹೋಬಳಿ ಕೇಂದ್ರ.

ದಶರಥ'ರಾಮ ಚತುರ್ವೇದಿಮಂಗಲಂ ಎಂಬುದು ಇಲ್ಲಿನ ತಮಿಳುಶಾಸನಗಳಲ್ಲಿ ಕಂಡುಬರುವ ಈ ಊರಿನ ಪ್ರಾಚೀನ ಹೆಸರು. ಹೆಸರೇ ಸೂಚಿಸುವಂತೆ ಈ ಊರು ಒಂದು ಪ್ರಾಚೀನ ಅಗ್ರಹಾರ. ಇದು ಹೆಬ್ಬಾರ್ ಶ್ರೀವೈಷ್ಣವರ ಪಂಚಗ್ರಾಮಗಳಲ್ಲಿ ಒಂದು. ರಾಮಾನುಜಾಚಾರ್ಯರು ಇಲ್ಲಿ ನೆಲಸಿದ್ದಂತೆ ಪ್ರತೀತಿ ಇದೆ. ಕದಂಬ ಋಷಿ ಇಲ್ಲಿನ ಶಿಂಷುಪ (ಶಿಂಷಾ) ನದಿಯ ದಡದಲ್ಲಿ ತಪಸ್ಸು ಮಾಡುತ್ತಿದ್ದುದರಿಂದ

ಊರಿಗೆ ಕಡಬ ಎಂದು ಹೆಸರಾಯಿತೆಂದೂ ರಾಮ ಲಂಕೆಯಿಂದ ಹಿಂದಿರುಗುವಾಗ ಸೀತೆಯ ಇಚ್ಛೆಯಂತೆ ಇಲ್ಲಿನ ತಟಾಕವನ್ನು ನಿರ್ಮಾಣ ಮಾಡಿದನೆಂದೂ ಸ್ಥಳಪುರಾಣ ತಿಳಿಸುತ್ತದೆ.

ಇಲ್ಲಿ ರಾಮ, ಕೈಲಾಸೇಶ್ವರ ಮತ್ತು ಹನುಮಾನ್ ದೇವಾಲಯಗಳಿವೆ. ರಾಮ ದೇವಾಲಯ ಒಂದೇ ಸಾಲಿನಲ್ಲಿ ಮೂರು ಗರ್ಭಗುಡಿಗಳಿರುವ ಕಣಶಿಲೆಯ ಕಟ್ಟಡ. ಹೆಸರು ರಾಮದೇವಾಲಯವಾದರೂ ಈಗ ಇಲ್ಲಿ ರಾಮವಿಗ್ರಹವಿಲ್ಲ. ಉತ್ತರದ ಗರ್ಭಗುಡಿಯಲ್ಲಿ ಯೋಗಾನರಸಿಂಹ, ಮಧ್ಯದಲ್ಲಿ ಜನಾರ್ದನ ದಕ್ಷಿಣದಲ್ಲಿ ವೇಣುಗೋಪಾಲ ವಿಗ್ರಹಗಳಿವೆ. ಯೋಗಾನರಸಿಂಹ ಹೊಯ್ಸಳ ಕಾಲದ ಶಿಲ್ಪ. ಉಳಿದೆರಡು ಪಾಳೆಯಗಾರರ ಕಾಲದ್ದು. ಕೆಲವು ತಮಿಳು ಶಾಸನಗಳ ತುಂಡುಗಳು ಕಟ್ಟಡದಲ್ಲಿ ಅಸ್ತವ್ಯಸ್ತವಾಗಿ ಸೇರಿಹೋಗಿದೆ. ಪ್ರಾಯಶಃ ಹೊಯ್ಸಳರ ಕಾಲದ ಮೂಲದೇವಾಲಯ ಪಾಳೆಯಗಾರರ ಕಾಲದಲ್ಲಿ ಪುನರ್ನಿರ್ಮಿತ ವಾಗಿರುವಂತೆ ತೋರುತ್ತದೆ. ದೇವಾಲಯದ ಮುಂದೆ ಸು.8ಮೀ ಎತ್ತರದ ಗರುಡಗಂಬವಿದೆ. ಗ್ರಾಮದ ಈಶಾನ್ಯದಲ್ಲಿ ಶಿಂಷಾ ಮತ್ತು ಕೆರೆಯ ಸಮೀಪದಲ್ಲಿ ಕೈಲಾಸೇಶ್ವರ ದೇವಾಲಯವಿದೆ. ಇದೂ ಕಣಶಿಲೆಯ ಸಾಮಾನ್ಯ ರೀತಿಯ ಚಿಕ್ಕ ಕಟ್ಟಡ. ಇದರ ಮುಂದೆಯೂ ಸು.6ಮೀ ಎತ್ತರದ ದೀಪದ ಕಂಬವಿದೆ. ಕೆರೆಯ ಪೂರ್ವದ ತೂಬಿನ ಬಳಿ ಹನುಮಾನ್ ಗುಡಿ ಇದೆ. ಇದರ ಬಳಿ ಇರುವ ಸು.5ಮೀ ಎತ್ತರದ ಉಯ್ಯಾಲೆ ಕಂಬ ಕೆತ್ತನೆಯ ಲತಾವಿನ್ಯಾಸಗಳಿಂದ ಸುಂದರವಾಗಿ ಅಲಂಕೃತವಾಗಿದೆ. (ಎಚ್.ವಿ.ಎಸ್.)

**ಕಡವ ಶಂಭುಶರ್ಮ :** 1895-1964. ಕನ್ನಡ ಅರುಣೋದಯ ಕಾಲದ ಹಿರಿಯ ವಿದ್ವಾಂಸರು, ಸಾಹಿತಿ, ಆಯುರ್ವೇದ ವೈದ್ಯ, ಪ್ರಯೋಗಶೀಲ ಕೃಷಿಕ, ಗಾಂಧೀವಾದಿ. ಇವರು 1895 ಆಗಸ್ಟ್ 8ರಂದು ಜನಿಸಿದರು. ಇವರ ತಂದೆ ಕಡವ ಕೃಷ್ಣಭಟ್, ತಾಯಿ ಸತ್ಯವತಿ. ಶಂಭುಶರ್ಮರು ಔಪಚಾರಿಕ ವಿದ್ಯಾಭ್ಯಾಸವನ್ನು ಮಾಡದೇ ಮದರಾಸು ಸಂಸ್ಕೃತ ಕಾಲೇಜಿನಿಂದ ಅದ್ವೈತ ವೇದಾಂತ ಶಿರೋಮಣಿ ಪದವಿ ಪಡೆದು



ಮುಂದೆ ಸ್ವಂತ ಪರಿಶ್ರಮದಿಂದ ಕನ್ನಡ ವಿದ್ವಾನ್ ಪದವಿ ಗಳಿಸಿಕೊಂಡರು. ಪುತ್ತೂರಿಗೆ ಬರುವ ಮೊದಲು ಕೆಲವು ಕಾಲ ಮದರಾಸಿನ ಪ್ರಾಚ್ಯವಿದ್ಯಾ ಸಂಸ್ಥೆಯಲ್ಲಿ ಕೆಲಸ ಮಾಡಿದರು. ಈ ಅವಧಿಯಲ್ಲಿ ಆಯುರ್ವೇದದ ಹಲವು ಕೃತಿಗಳನ್ನು ಅಧ್ಯಯನ ಮಾಡಿ ಸಿದ್ಧಿಯನ್ನು ಪಡೆದರು. ಅನಂತರ (1925) ಪುತ್ತೂರಿನ ಬೋರ್ಡ್ ಹೈಸ್ಕೂಲಿನಲ್ಲಿ ಉಗ್ರಾಣ ಮಂಗೇಶರಾಯರ ಸಹೋದ್ಯೋಗಿಯಾಗಿ ಸಾವಿರಾರು ಮಂದಿ ವಿದ್ಯಾರ್ಥಿಗಳಿಗೆ ಕನ್ನಡದ ಕಂಪು ಮತ್ತು ಇಂಪುಗಳನ್ನು ಉಣಬಡಿಸಿದರು. ಅಧ್ಯಾಪಕರಾಗಿರುವಾಗಲೇ ಬಿಡುವಿನ ವೇಳೆಯ ಪ್ರವೃತ್ತಿಯಾಗಿ ಸಿದ್ಧರಸ ವೈದ್ಯಶಾಲಾ ಸಂಸ್ಥೆಯನ್ನು ಆರಂಭಿಸಿ ಆಯುರ್ವೇದದ ಚಿಕಿತ್ಸೆಯನ್ನು ನೀಡತೊಡಗಿದರು. ಮಲೇರಿಯಾ, ರಕ್ತಭೇದಿ, ಆನೆಕಾಲು, ಪ್ಲೇಗ್ ರೋಗಕ್ಕೆ ಸ್ವಂತ ಪರಿಶ್ರಮದಿಂದ ಪರಿಣಾಮಕಾರಿ ಔಷಧಿಯನ್ನು ಶೋಧಿಸಿದ್ದರು. ಹೈನುಗಾರಿಕೆಯಲ್ಲಿ ಕ್ರಾಂತಿಕಾರಿ ಪ್ರಯೋಗ ಇವರದು. ಧೈರಿಯ ಕಲ್ಪನೆಯೇ ಇನ್ನೂ ಸರಿಯಾಗಿ ಮೊಳಕೆಯೊಡೆಯದಿದ್ದ ಕಾಲದಲ್ಲಿ ಕ್ಷೀರಸಾಗರ ಎಂಬ ಕೇಂದ್ರದ ಮೂಲಕ ಬಾಟಲಿಗಳಲ್ಲಿ ಹಾಲನ್ನು ಸರಬರಾಜು ಮಾಡಿದ್ದರು. ಇವರು ಸಿದ್ಧಪಡಿಸುತ್ತಿದ್ದ ಸುಗಂಧಾರ್ಕಮಧು ಅತ್ಯಂತ ಜನಪ್ರಿಯ ತಂಪು ಪಾನೀಯವಾಗಿತ್ತು. ತಮ್ಮ ಮನೆಯಲ್ಲಿಯೇ ಮಗ್ಗ, ಖಾದಿ ನೂಲನ್ನು ನೇಯಲು ವ್ಯವಸ್ಥೆ ಮಾಡಿ ಹತ್ತಾರು ಮಂದಿಗೆ ಜೀವನೋಪಾಯ ಕಲ್ಪಿಸಿಕೊಟ್ಟಿದ್ದರು. ದಲಿತರ ಮೇಲೆ ನಡೆಯುತ್ತಿದ್ದ ಶೋಷಣೆಯನ್ನು ಪ್ರತಿಭಟಿಸುವ ಸಲುವಾಗಿ 'ವಿಶ್ವಂಭರ ಸಂಘ'ದ ಸ್ಥಾಪನೆ ಮಾಡಿದ್ದರು. ಯಾವುದೋ ಒಂದು ಸಂದರ್ಭದಲ್ಲಿ ನಡೆದ ಅಪಘಾತದಲ್ಲಿ ಕಾಲನ್ನು ಕಳೆದುಕೊಂಡರು. ಊನತೆ ಬದುಕಿನ ದಾರಿಯನ್ನು ಬದಲಿಸಿತುದಿವರು ಬರೆವಣಿಗೆ, ಸಂಶೋಧನೆಯ ಕಡೆಗೆ ಹೆಚ್ಚು ಒಲವು ಮೂಡಿತು.

ಇವರಿಗೆ ಬರೆವಣಿಗೆ ಹೊಸದಾಗಿರಲಿಲ್ಲ. 22ರ ಹರಯಕ್ಕಾಗಲೇ ಸಂಸ್ಕೃತದಿಂದ ಭಾಸನ ಪ್ರತಿಮಾ ನಾಟಕ, ಶ್ರೀಹರ್ಷನ ನಾಗಾನಂದ ನಾಟಕವನ್ನು ಅನುವಾದಿಸಿದ್ದರು. ಅನಂತರ ಕಾಳಿದಾಸನ ರಘುವಂಶ, ಅಶ್ವಘೋಷನ ಸೌಂದರನಂದ, ಬುದ್ಧ ಚರಿತೆ ಹಾಗೂ ಶ್ರೀಮದ್ಭಗವದ್ಗೀತೆಯನ್ನು ಕನ್ನಡಕ್ಕೆ ಅನುವಾದಿಸಿದರು. ಇವರ ಅನುವಾದ ಮೂಲನಿಷ್ಠವಾದದ್ದು. ಇವರು ಮಾಡಿದ ಭಗವದ್ಗೀತೆಯ ಅನುವಾದವೂ ವಿಶಿಷ್ಟವಾದುದು. ಕನ್ನಡದಲ್ಲಿ ಭಾಮಿನಿ, ವಾರ್ಧಕ ಮೊದಲಾದ ಬಂಧಗಳಲ್ಲಿ ಗೀತೆಯ ಹಲವು ಅನುವಾದಗಳು ಬಂದಿವೆ. ಆದರೆ ಶರ್ಮರದು ಭಗವದ್ಗೀತೆಯ ವೃತ್ತಾನುವೃತ್ತ ಅನುವಾದ. ಮೂಲದ ಛಂದಸ್ಸು ಮತ್ತು ಲಯ ಇಲ್ಲಿನದು. ಇಡೀ ಕೃತಿಯನ್ನು ಮೂಲನಿಷ್ಠರಾಗಿ ಅನುಷ್ಟುಪ್ ಛಂದಸ್ಸಿನಲ್ಲಿ ಮರುಸೃಷ್ಟಿ ಮಾಡಿದ್ದಾರೆ.

ಇವರು ಗಾಂಧೀಜಿಯವರ ಅಭಿಮಾನಿ, ಅನುಯಾಯಿ. ಗಾಂಧೀಜಿಯವರ ಬದುಕು, ಆದರ್ಶ, ಸಂದೇಶಕ್ಕೆ ಸಂಬಂಧಿಸಿದಂತೆ ಗಾಂಧೀಲಹರಿ, ಗಾಂಧೀಶತಕಂ, ಗಾಂಧೀನಿರ್ವಾಣಂ, ಗಾಂಧೀಸಂದೇಶ ಮತ್ತು ಗಾಂಧೀವಿಜಯಂ ಎಂಬ ಕಾವ್ಯಗಳನ್ನು ಬರೆದಿರುವರು. ಗಾಂಧೀಜಿಯ ಬಗೆಗೆ ಇಷ್ಟೊಂದು ಕಾವ್ಯವನ್ನು ಬರೆದವರು ಬಹುತೇಕ ಕನ್ನಡದಲ್ಲಿ ಮತ್ತೊಬ್ಬರಿಲ್ಲ. ಗಾಂಧೀವಿಜಯಂ ಏಳು ಆಶ್ವಾಸಗಳಿರುವ ಕಾವ್ಯ. ಗಾಂಧೀಜಿಯ ಹುಟ್ಟಿನಿಂದ ಮರಣದವರೆಗಿನ ಕಥೆ ಇಲ್ಲಿ ತೆರೆದುಕೊಳ್ಳುತ್ತದೆ. ಕಟ್ಟುಕತೆಯಲ್ಲ, ಪ್ರೇಮಕತೆಯಲ್ಲ, ಸತ್ಯಶೋಧನೆಯ ಕತೆಯಿದು ಎಂದು ಕೃತಿಯ ಆರಂಭದಲ್ಲಿ ಹೇಳಿದ್ದಾರೆ.

ತಿಮ್ಮಪ್ಪಯ್ಯ ಸ್ಮಾರಕಂ 62 ಕಂದಪದ್ಯಗಳಿರುವ ಕಾವ್ಯ. ಮುಳಿಯ ತಿಮ್ಮಪ್ಪಯ್ಯನವರಿಗೆ ಇಲ್ಲಿ ಶ್ರದ್ಧಾಂಜಲಿ ಸಲ್ಲಿಸಿದ್ದಾರೆ. ಇವರ ಇನ್ನೊಂದು ಮಹತ್ವದ ಕೃತಿ 'ತುಳು ದೇಶಭಾಷಾ ವಿಚಾರವು'. 1955ರಷ್ಟು ಹಿಂದೆಯೇ ಬರೆದಿದ್ದ ಈ ಕೃತಿ ಪ್ರಕಟವಾದದ್ದು 1970ರಲ್ಲಿ. ತುಳು ದೇಶ, ಭಾಷೆ, ಪ್ರಾಚೀನತೆ, ನಾಥಪಂಥ ಮೊದಲಾದ ವಿಷಯದ ಬಗೆಗೆ ವಿಶೇಷ ಮಾಹಿತಿಯಿದೆ. ದೇಶೀಯ ಅಧ್ಯಯನ ಪರಂಪರೆಗೆ ಇದೊಂದು ಮಾದರಿ ಕೃತಿ. ಮದರಾಸು ಸರ್ಕಾರ ಈ ಪ್ರಬಂಧಕ್ಕೆ 1955ರಲ್ಲಿ ಬಹುಮಾನ ನೀಡಿ ಗೌರವಿಸಿದೆ.

ಮಂಗಳೂರು ನಾಥಪಂಥದ ಕೇಂದ್ರಗಳಲ್ಲಿ ಒಂದು. 10ನೆಯ ಶತಮಾನದ ಮಧ್ಯಭಾಗದಲ್ಲಿ ನಾಥಪಂಥ ಕರ್ನಾಟಕಕ್ಕೆ ಬಂತೆಂಬುದು ಸಂಶೋಧಕರ ಅಭಿಪ್ರಾಯ. ಆದರೆ ಶಂಭುಶರ್ಮರು ಇದಕ್ಕೆ ಸಹಮತವನ್ನು ವ್ಯಕ್ತಪಡಿಸುವುದಿಲ್ಲ. ನಾಥಪಂಥದ ಸ್ವಯಂಬೋಧ ಅಮನಸ್ಕಯೋಗ ಮತ್ತು ಆತ್ಮವಾದ, ಸಿದ್ಧಸಿದ್ಧಾಂತ ಪದ್ಧತಿ, ಚರ್ಪಟನಾಥ ಶತಕಂ, ನವನಾಥ ಕಥಾಚ ಮೊದಲಾದ ಕೃತಿಗಳನ್ನು ಇವರು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಹಠಯೋಗದ ಬಗೆಗೆ ಉಪನ್ಯಾಸ ಮಾಡುವಷ್ಟು ಪಾಂಡಿತ್ಯವನ್ನು ಇವರು ಪಡೆದಿದ್ದರು.

ಕಾವ್ಯದಲ್ಲಿ ಬಳಸುವ ಭಾಷೆಯ ಬಗೆಗೆ ಇವರದು ಖಚಿತವಾದ ನಿಲವು. ಯಾವುದೇ ನಿಯಮಗಳಿಲ್ಲದೆ ಕಾವ್ಯ ಬರೆಯುವುದನ್ನು ಇವರು ಒಪ್ಪುವುದಿಲ್ಲ. ಈ ದಿಸೆಯಲ್ಲಿ ಬಿ.ಎಂ.ಶ್ರೀಕಂಠಯ್ಯನವರ ನಿಲವುಗಳನ್ನೂ ಮುಲಾಜಿಲ್ಲದೆ ಟೀಕಿಸಿದ್ದರು.. ಡಿ.ವಿ.ಜಿ.ಯವರ ಮಂಕುತಿಮ್ಮನ ಕಗ್ಗ ಸಂಸ್ಕೃತಕ್ಕೆ ಅನುವಾದಿಸಿದ ಪಾಂಡಿತ್ಯ ಇವರದು. ಇವರ ಸಮಗ್ರ ಅಪ್ರಕಟಿತ ಕೃತಿಗಳನ್ನು 'ಕಡವ ಶಂಭಶರ್ಮ ಕೃತಿಸಂಚಯ' ಎಂಬ ಹೆಸರಿನಲ್ಲಿ ಎಚ್.ಜಿ. ಶ್ರೀಧರ್ ಅವರು ಸಂಪಾದಿಸಿ ಪ್ರಕಟಿಸಿದ್ದಾರೆ (2003).

ಪುತ್ತೂರು ಕರ್ನಾಟಕ ಸಂಘದ ಸ್ಥಾಪಕ ಸದಸ್ಯರಲ್ಲಿ ಇವರೂ ಒಬ್ಬರು. ಶಿವರಾಮ ಕಾರಂತರು ನಡೆಸುತ್ತಿದ್ದ ನಾಡಹಬ್ಬದ ಕಾರ್ಯಕ್ರಮದಲ್ಲಿ ಇವರು ಕ್ರಿಯಾತ್ಮಕವಾಗಿ ಪಾಲ್ಗೊಳ್ಳುತ್ತಿದ್ದರು. ಇವರ ವ್ಯಕ್ತಿತ್ವ ಆಳನಿರಾಳ ಕಾದಂಬರಿಯ ಒಂದು ಪಾತ್ರಕ್ಕೆ ಪ್ರೇರಣೆ ಎಂದು ಶಿವರಾಮಕಾರಂತರು ದಾಖಲಿಸಿದ್ದಾರೆ. ಇವರು 1964 ಮೇ 3ರಂದು ನಿಧನ ಹೊಂದಿದರು. (ಎಚ್.ಎಸ್.ಜಿ.)

**ಕಡಿದಾಳ್ ಮಂಜಪ್ಪ :** 1910-92. ಕರ್ನಾಟಕದ ಮಾಜಿ ಮುಖ್ಯ ಮಂತ್ರಿ, ಸ್ವಾತಂತ್ರ್ಯ ಹೋರಾಟಗಾರ, ವಕೀಲ, ರಾಜಕೀಯ ಧುರೀಣ ಹಾಗೂ ಕಾದಂಬರಿಕಾರರು. ಹುಟ್ಟಿದ್ದು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಹಾರಾಗೊಳಿಗೆ ಗ್ರಾಮದಲ್ಲಿ. 1910ರಲ್ಲಿ ಬಡ ರೈತರೊಬ್ಬರ ಮಗನಾಗಿ ಹುಟ್ಟಿದ ಇವರು ಬಾಲ್ಯದಲ್ಲಿ ತುಂಬ ಕಷ್ಟಕಾರ್ಪಣ್ಯಗಳನ್ನು ಅನುಭವಿಸಿದರು. ದನಕುರಿಗಳನ್ನು ಕಾಯುವುದು, ಗೊಬ್ಬರಗೋಡುಗಳನ್ನು ಹೊರುವುದು, ಗದ್ದೆ ಉಳುವುದು ಇವೇ ಮುಂತಾದ ಬಾಲ್ಯದ ಕೃಷಿಕ ಜೀವನದ ಅನುಭವಗಳು ಮತ್ತು ನಿಸರ್ಗ ರಮಣೀಯ ಮಲೆನಾಡಿನ ಪರಿಸರ ಇವರ ಬಾಳಿನ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡಿದುವು.

ಇವರ ವಿದ್ಯಾಭ್ಯಾಸ ಐಗಳ ಮಠದಲ್ಲಿ ಹರಡಿದ ಮರಳುರಾಶಿಯ ಮೇಲೆ ಅಕ್ಷರತಿದ್ದುವುದರಿಂದ ಆರಂಭವಾಯಿತು. ತೀರ್ಥಹಳ್ಳಿಯಲ್ಲಿ ಮಾಧ್ಯಮಿಕ ಶಿಕ್ಷಣವನ್ನು ಮುಗಿಸಿದ ಇವರು ಶಿವಮೊಗ್ಗದಲ್ಲಿ ಪ್ರೌಢಶಾಲಾ ಶಿಕ್ಷಣ ಪಡೆದರು. ಶಿವಮೊಗ್ಗ ಹಾಗೂ ಬೆಂಗಳೂರಿನಲ್ಲಿ ಇಂಟರ್ ಮಿಡಿಯೇಟ್ ಪರೀಕ್ಷೆ ಪೂರೈಸಿ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಓದಿ ಬಿ.ಎ. ಪದವಿ ಪಡೆದರು (1932). ಪುಣೆಯ ಲಾ ಕಾಲೇಜಿನಲ್ಲಿ ಕಾನೂನು ಶಿಕ್ಷಣ ಪಡೆದು ಉತ್ತೀರ್ಣರಾದರು (1934).

ಅಲ್ಲಿಂದ ಶಿವಮೊಗ್ಗಕ್ಕೆ ಬಂದು 1935ರಲ್ಲಿ ವಕೀಲ ವೃತ್ತಿಯನ್ನು ಆರಂಭಿಸಿದರು. ಅದೇ ವರ್ಷ ಅಖಿಲ ಭಾರತ ಕಾಂಗ್ರೆಸ್ಸಿನ ಸದಸ್ಯರಾದರು. ಇವರು ಪ್ರೌಢಶಾಲೆಯಲ್ಲಿದ್ದಾಗ ಶಿವಮೊಗ್ಗಕ್ಕೆ ಬಂದ ಗಾಂಧೀಜಿಯವರ



ದರ್ಶನದಿಂದಲೂ ಅವರು ಯಂಗ್ ಇಂಡಿಯಾ ಪತ್ರಿಕೆಯಲ್ಲಿ ಬರೆಯುತ್ತಿದ್ದ ಲೇಖನ ಗಳಿಂದಲೂ ಪ್ರಭಾವಿತರಾಗಿ ಚಿಕ್ಕಂದಿನಲ್ಲೇ ಇವರಲ್ಲಿ ರಾಷ್ಟ್ರಭಕ್ತಿ ಮೂಡಿ ಇವರು ರಾಜಕೀಯ ರಂಗಕ್ಕೆದುಮುಕುವಂತೆ ಮಾಡಿತು. 1937ರಿಂದ ಸುಮಾರು ಮೂರು ವರ್ಷ ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್ ಕಾರ್ಯದರ್ಶಿಯಾಗಿ ಕೆಲಸ ಮಾಡಿದರು. 1942ರಲ್ಲಿ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಿ 9 ತಿಂಗಳು ಸೆರೆಮನೆಯಲ್ಲಿದ್ದರು. ಮೈಸೂರಿನ ಜವಾಬ್ದಾರಿ ಸರ್ಕಾರ ಸ್ಥಾಪನೆಯ ಚಳವಳಿಯ ಸಂಬಂಧದಲ್ಲಿಯೂ ಕೆಲವು ತಿಂಗಳು ಸೆರೆಮನೆವಾಸ ಅನುಭವಿಸಿದರು.

1941-45ರ ಅವಧಿಯಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಕಾಂಗ್ರೆಸ್ ಸದಸ್ಯರಾಗಿಯೂ 1942-52ರ ಅವಧಿಯಲ್ಲಿ ಮೈಸೂರು ನ್ಯಾಯವಿಧಾಯಕ ಸಭೆ ಮತ್ತು ರಾಜ್ಯಾಂಗ ಸಭೆಗಳ ಕಾಂಗ್ರೆಸ್ ಸದಸ್ಯರಾಗಿಯೂ 1952-67ರ ಅವಧಿಯಲ್ಲಿ ಮೈಸೂರು ವಿಧಾನಸಭೆಯ ಕಾಂಗ್ರೆಸ್ ಸದಸ್ಯರಾಗಿಯೂ ಆಯ್ಕೆಯಾಗಿ ಸೇವೆ ಸಲ್ಲಿಸಿದರು. ಈ ಅವಧಿಯಲ್ಲಿ ಸುಮಾರು ಹತ್ತು ವರ್ಷಗಳ ಕಾಲ ಮಂತ್ರಿಯಾಗಿಯೂ ಕೆಲವು ತಿಂಗಳುಗಳ ಕಾಲ ಮುಖ್ಯಮಂತ್ರಿಯಾಗಿಯೂ ಇದ್ದರು.

1962ರಲ್ಲಿ ಬೆಂಗಳೂರಿನಲ್ಲಿ ನೆಲಸಿ ಇವರು ವಕೀಲಿ ಆರಂಭಿಸಿದರು. ಮಂಜಪ್ಪನವರು ತಮ್ಮ ಖಾಸಗಿ ಹಾಗೂ ರಾಜಕೀಯ ಜೀವನದಲ್ಲಿ ಪ್ರಾಮಾಣಿಕತೆ ಮತ್ತು ನಿಷ್ಠಾವಂತಿಕೆ ಮೆರೆದವರು. ಒಳ್ಳೆಯ ವಿಚಾರವಂತರಾದ ಇವರು ಯೌವನದಲ್ಲಿ ನಾಸ್ತಿಕರಂತೆ ಕಂಡರೂ ವಯೋಧರ್ಮ ಹಾಗೂ ಜೀವನದ ಅನುಭವಗಳಿಂದ ಪೂರ್ಣ ಆಸ್ತಿಕರಾಗಿದ್ದರು. ಇವರು ಕಾದಂಬರಿಕಾರರಾಗಿ ಹೆಸರು ಗಳಿಸಿದರು. ಇವರು ಪಂಜರವಳ್ಳಿಯ ಪಂಜು (1963) ಎಂಬ ಕಾದಂಬರಿಯಲ್ಲಿ ಮಲೆನಾಡಿನ ನಿಸರ್ಗ ಸೌಂದರ್ಯವನ್ನೂ ಅಲ್ಲಿಯ ಜನಜೀವನವನ್ನೂ ಯಥಾವತ್ತಾಗಿ ಚಿತ್ರಿಸಿದ್ದಾರೆ. ಮೂರು ತಲೆಮಾರಿನ ಕಥೆ ತಿಳಿಸುವ ಈ ಕಾದಂಬರಿಯಲ್ಲಿ ರಾಜಕಾರಣದಲ್ಲಿ ಗಾಂಧೀತತ್ತ್ವಗಳ ಅನುಷ್ಠಾನ ಅಗತ್ಯವೆಂದು ಹೇಳಿ ಕಾಂಗ್ರೆಸ್ಸಿನ ಧ್ಯೇಯ - ಧೋರಣೆ - ಸಾಧನೆಗಳನ್ನು ತಿಳಿಸಲಾಗಿದೆ. ಈ ಪುಸ್ತಕ ಇಂಗ್ಲಿಷ್ ಮತ್ತು ಮಲಯಾಳಂ ಭಾಷೆಗಳಿಗೆ ಅನುವಾದವಾಗಿದೆ. ನಾಳೆಯ ನೆಳಲು (1966) ಇವರ ಇನ್ನೊಂದು ಕಾದಂಬರಿ. ಸಾರ್ವಜನಿಕ ಜೀವನದ ಶುದ್ಧೀಕರಣ ಈ ಕಾದಂಬರಿಯ ಮುಖ್ಯ ಉದ್ದೇಶ. ಕ್ರಾಂತಿಕೂಟ (1974) ಇವರ ಮತ್ತೊಂದು ಕಾದಂಬರಿ. ನನಸಾಗದ ಕನಸು ಎಂಬುದು ಇವರ ಆತ್ಮಚರಿತ್ರೆ. ಕಾಯಕವೇ ಕೈಲಾಸ ಎಂಬ ತತ್ತ್ವಕ್ಕನುಗುಣವಾಗಿ ಇವರು ತಾವು ಸಕ್ರಿಯರಾಗಿರುವವರೆಗೂ ವಕೀಲವೃತ್ತಿ ನಡೆಸಿದರು. ಮಲೆನಾಡ ಗಾಂಧಿ ಎಂಬ ಅಭಿದಾನಕ್ಕೆ ಪಾತ್ರರಾಗಿದ್ದ ಇವರದು ಆದರ್ಶ ತುಂಬಿದ ಬದುಕು. ಸರ್.ಎಂ.ವಿಶ್ವೇಶ್ವರಯ್ಯನವರು ಇವರನ್ನು ತುಂಬಾ ಮೆಚ್ಚಿಕೊಂಡಿದ್ದರು. *

**ಕಡೂರು :** ಚಿಕ್ಕಮಗಳೂರು ಜಿಲ್ಲೆಯ ಪೂರ್ವಭಾಗದಲ್ಲಿರುವ ಒಂದು ತಾಲ್ಲೂಕು; ಆ ತಾಲ್ಲೂಕಿನ ಕೇಂದ್ರ. ಚಿತ್ರದುರ್ಗ, ತುಮಕೂರು, ಹಾಸನ ಜಿಲ್ಲೆಗಳು ಮತ್ತು ಚಿಕ್ಕಮಗಳೂರು, ತರೀಕೆರೆ ತಾಲ್ಲೂಕುಗಳು ಈ ತಾಲ್ಲೂಕನ್ನು ಬಳಸಿವೆ. ಕಡೂರು, ಬೀರೂರು, ಯಗಟಿ, ಹಿರೇನಲ್ಲೂರು, ಸಿಂಗಟಗೆರೆ, ಸಕ್ಕರೆಪಟ್ಟಣ ಈ ತಾಲ್ಲೂಕಿನ ಹೋಬಳಿಗಳು. ತಾಲ್ಲೂಕಿನಲ್ಲಿರುವ ಒಟ್ಟು ಗ್ರಾಮಗಳು 306. ತಾಲ್ಲೂಕಿನ ವಿಸ್ತೀರ್ಣ 1414.6ಚ.ಕಿಮೀ. ಜನಸಂಖ್ಯೆ 2,89,092.

ಕಡೂರು ತಾಲ್ಲೂಕು ಆಗಿಂದಾಗ್ಗೆ ಬದಲಾವಣೆಗೆ ಒಳಪಟ್ಟಿತು. ಬಲು ಹಿಂದೆ ಕಡೂರು, ಯಗಟಿ, ಗರುಡನಗಿರಿ ಮತ್ತು ಬಾಣಾವರ ಸೀಮೆಗಳಿದ್ದುವೆಂದೂ ಕಡೂರು ಯಗಟಿಗಳು ಇಕ್ಕೇರಿ ರಾಜ್ಯಕ್ಕೆ ಸೇರಿದ್ದುವೆಂದೂ ಹೇಳಲಾಗಿದೆ. ಇವನ್ನು ಮೈಸೂರು ದೊರೆಗಳು ವಶಪಡಿಸಿಕೊಂಡು ತರೀಕೆರೆಯ ಪಾಳೆಯಗಾರನಿಗೆ ಕೊಟ್ಟರು. ಹೈದರ್ ಇವನ್ನು ಮತ್ತೆ ಮೈಸೂರಿಗೆ ಸೇರಿಸಿಕೊಂಡ. 1835ರಲ್ಲಿ ಯಗಟಿಯನ್ನು ಕಡೂರಿಗೆ ಸೇರಿಸಲಾಯಿತು. 1876ರಲ್ಲಿ ಕಡೂರು ಬಾಣಾವರಗಳನ್ನು ಒಂದೇ ತಾಲ್ಲೂಕಾಗಿ ಮಾಡಿ ಅದನ್ನು ಬಾಣಾವರ ತಾಲ್ಲೂಕೆಂದು ಕರೆಯಲಾಯಿತು. 1882ರಲ್ಲಿ ಮತ್ತೆ ಕಡೂರು ತಾಲ್ಲೂಕು ಕೇಂದ್ರವಾಯಿತು. 1886ರಲ್ಲಿ ಅರಸೀಕೆರೆ ತಾಲ್ಲೂಕು ಆದಾಗ ಹಳೆಯ ಬಾಣಾವರ ತಾಲ್ಲೂಕಿನ ಭಾಗವನ್ನೂ ಬಾಣಾವರವನ್ನೂ ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿಗೆ ವರ್ಗಾಯಿಸಿ ಚಿಕ್ಕಮಗಳೂರು ತಾಲ್ಲೂಕಿನ ಸಕ್ಕರೆಪಟ್ಟಣವನ್ನು ಕಡೂರಿಗೆ ಸೇರಿಸಿ, ತಾಲ್ಲೂಕನ್ನು ಈಗಿರುವಂತೆ ರೂಪಿಸಲಾಯಿತು.



ಆಂಜನೇಯ ಹಾಗೂ ಆಂಜನೇಯ ದೇವಾಲಯದ ಅಲಂಕೃತ ಕಂಬ, ಕಡೂರು

ಕಡೂರು ತಾಲ್ಲೂಕಿನ ಪಶ್ಚಿಮಕ್ಕೆ ಬಾಬಾಬುಡನ್ ಪರ್ವತಶ್ರೇಣಿಯ ಪೂರ್ವದ ಕವಲುಗಳು ಹರಡಿವೆ. ದಕ್ಷಿಣದಲ್ಲಿ ಜಾವಗಲ್ಲಿನಿಂದ ಗರುಡನಗಿರಿಯವರೆಗೆ ಇನ್ನೊಂದು ಶ್ರೇಣಿಯುಂಟು. ತೊಟ್ಟಿಲಿನಂತಿರುವ ಈ ತಾಲ್ಲೂಕಿನ ನಡುಭಾಗದಲ್ಲಿ ಈಶಾನ್ಯಾಭಿಮುಖವಾಗಿ ಹರಿಯುವ ನದಿಯೇ

ವೇದಾವತಿ. ಬಾಬಾಬುಡನ್ ಪರ್ವತದಲ್ಲಿ ಹುಟ್ಟುವ ವೇದಾ ಮತ್ತು ಆವತಿ ನದಿಗಳು ಕೂಡಿ ವೇದಾವತಿಯಾಗಿದೆ. ಈ ನದಿಯನ್ನು ಯಗಟಿಯ ಬಳಿ ಕೂಡುವ ಇನ್ನೊಂದು ತೊರೆಯ ಹೆಸರು ಜಾವಗಲ್ಲು ಹಳ್ಳ. ವೇದಾ ನದಿ ಅಯ್ಯನಕೆರೆಯನ್ನೂ ಆವತಿ ನದಿ ಮದಗಕೆರೆಯನ್ನೂ ಕೂಡಿ ಮುಂದೆ ಸಾಗುತ್ತವೆ. ಅಯ್ಯನಕೆರೆ, ಮದಗಕೆರೆ ಮತ್ತು ವಿಷ್ಣು ಸಮುದ್ರ ಈ ಸುತ್ತಿನ ಅತಿ ದೊಡ್ಡ ಕೆರೆಗಳು. ವೇದ ಮತ್ತು ಆವತಿ ನದಿಗಳಿಗೆ ಕಟ್ಟೆಗಳನ್ನು ಕಟ್ಟಿ, ತಾಲ್ಲೂಕಿನಲ್ಲಿ ನೀರಾವರಿಯ ಬಲೆ ಹೆಣೆಯಲಾಗಿದೆ. ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ 558.51 ಮಿಮೀ. ತಾಲ್ಲೂಕಿನಲ್ಲಿ 9162 ಎಕರೆ ಅರಣ್ಯ ಪ್ರದೇಶವಿದೆ. ವಾಯವ್ಯ ಭಾಗದಲ್ಲಿರುವ ಹೊಗರಿ ಬೆಟ್ಟದಲ್ಲಿ ಕಬ್ಬಿಣದ ಅದುರು ಸಿಗುತ್ತದೆ.

ತಾಲ್ಲೂಕಿನಲ್ಲಿ ಫಲವತ್ತಾದ ಕಪ್ಪುಮಣ್ಣಿನಿಂದ ಮರಳು ಮಣ್ಣಿನವರೆಗೆ ಹಲವು ಬಗೆಯ ಮಣ್ಣು ಕಂಡಬರುತ್ತದೆ. ದಕ್ಷಿಣ ಪಶ್ಚಿಮಗಳಲ್ಲಿ ಒಳ್ಳೆಯ ಹೊಗೆಸೊಪ್ಪು ಬೆಳೆಯುತ್ತದೆ. ತಗ್ಗಿನ ಮರಳುನೆಲದಲ್ಲಿ ತೆಂಗಿನ ಮರಗಳು ವಿಶೇಷ. ತಾಲ್ಲೂಕಿನಲ್ಲಿ ತರಿ, ಖುಷ್ಕಿ ಮತ್ತು ಬಾಗಾಯತು ಈ ಮೂರೂ ಬೆಳೆಗಳೂ ಇವೆ. ಹಲವೆಡೆ ತೆಂಗು, ಬಾಳೆ, ಅಡಕೆ ಬೆಳೆಯುತ್ತಾರೆ. ಸಕ್ಕರೆಪಟ್ಟಣದ ಹಲಸು, ಬೀರೂರಿನ ಅಡಕೆ, ಅಣೆಗೆರೆಯ ಎಳನೀರು, ಎಮ್ಮೆದೊಡ್ಡಿಯ ಕಿತ್ತಳೆಹಣ್ಣು ಪ್ರಸಿದ್ಧ. ಕಡೂರು ಪಟ್ಟಣದ ಸುತ್ತಮುತ್ತ ಜೋಳ, ರಾಗಿ ಮತ್ತು ಮೆಣಸಿನಕಾಯಿ ವಿಶೇಷವಾಗಿ ಬೆಳೆಯುತ್ತಾರೆ. ಈ ತಾಲ್ಲೂಕಿನಲ್ಲಿ ಬೆಳೆಯುವ ಎಳ್ಳಿನಲ್ಲಿ ಕೊಬ್ಬಿನ ಅಂಶ ಹೆಚ್ಚು.

ಹಾಸನ-ಶಿವಮೊಗ್ಗ ರಸ್ತೆ ಹಾಗೂ ಅರಸೀಕೆರೆ-ಪುಣೆ ರೈಲುಮಾರ್ಗ ಈ ತಾಲ್ಲೂಕಿನ ಮೂಲಕ ಹಾದುಹೋಗುತ್ತವೆ. ಕಡೂರು-ಚಿಕ್ಕಮಗಳೂರು, ಬೀರೂರು-ಅಜ್ಜಂಪುರ, ಬೀರೂರು-ಲಿಂಗದಹಳ್ಳಿ, ಬಾಬಾಬುಡನ್‌ಗಿರಿ ರಸ್ತೆಗಳು ತಾಲ್ಲೂಕಿನ ಮುಖ್ಯ ಹಾದಿಗಳು.

ಈ ತಾಲ್ಲೂಕಿನ ಗ್ರಾಮಾಂತರ ಪ್ರದೇಶಗಳು ವೀರಗಾಸೆ ಕುಣಿತ, ಕರಡೆಮಜಲು, ಕರಪಾಲ, ಕೀಲುಕುದುರೆನರ್ತನ-ಮುಂತಾದವಕ್ಕೆ ಹೆಸರಾಗಿವೆ. ಗಿರಿಯಾಪುರ, ಕಾವೇನಹಳ್ಳಿ ಮುಂತಾದ ಊರುಗಳ ಕಲಾವಿದರು ನೆರೆ ರಾಜ್ಯಗಳಲ್ಲಿ ಕೂಡ ತಮ್ಮ ಕಲಾಕೌಶಲವನ್ನು ಪ್ರದರ್ಶಿಸಿ ಮನ್ನಣೆಗಳಿಸಿದ್ದಾರೆ.

ಐತಿಹಾಸಿಕ ಸ್ಥಳಗಳಾದ ಆಸಂದಿ (ನೋಡಿ) ಮಚೇರಿ (ನೋಡಿ) ಪ್ರಸಿದ್ಧ ರಂಗನಾಥ ದೇವಾಲಯವಿರುವ ಸಕ್ಕರೆಪಟ್ಟಣ (ನೋಡಿ), ರೈಲ್ವೆ ಮತ್ತು ವ್ಯಾಪಾರಸ್ಥಳ ಬೀರೂರು (ನೋಡಿ) ಈ ತಾಲ್ಲೂಕಿನಲ್ಲಿದೆ. ಕಡೂರಿನಿಂದ ಸು.20ಕಿಮೀ ದೂರದಲ್ಲಿ ಯಗಟಿ ಗ್ರಾಮದ ಬಳಿ ಇರುವ ವೇದಾ-ಆವತಿ ನದಿಗಳ ಸಂಗಮ ರಮಣೀಯವಾಗಿದೆ. ಹಿರೇನಲ್ಲೂರಿನಲ್ಲಿ ಬಹು ಪ್ರಾಚೀನವಾದ ದೇವಾಲಯಗಳಿವೆ.

ಕಡೂರು ಈ ತಾಲ್ಲೂಕಿನ ಆಡಳಿತ ಕೇಂದ್ರ. ಜನಸಂಖ್ಯೆ 30,802. ಇದು ಬೆಂಗಳೂರು-ಪುಣೆ, ರೈಲುಮಾರ್ಗ ಹಾಗೂ ಬೆಂಗಳೂರು-ಶಿವಮೊಗ್ಗ ರಸ್ತೆಯ ಮೇಲೆ, ಜಿಲ್ಲೆಯ ಮುಖ್ಯ ಪಟ್ಟಣವಾದ ಚಿಕ್ಕಮಗಳೂರಿನಿಂದ 39ಕಿಮೀ ಈಶಾನ್ಯಕ್ಕಿದೆ.

ಈಗಿನ ಕಡೂರು ಪಟ್ಟಣ ಇರುವ ಸ್ಥಳದಲ್ಲಿ ಸಾರ್ಣಪುರ ಅಗ್ರಹಾರವಿತ್ತೆಂದು ಹೇಳಲಾಗಿದೆ. ಮಾದನಾಯಕ ಒಮ್ಮೆ ಇತ್ತ ಮೃಗಾಯಾವಿಹಾರಕ್ಕಾಗಿ ಬಂದಿದ್ದಾಗ ಈ ಬಳಿಯಲ್ಲಿ ಕಡವೆಯೊಂದು ನಾಯಕನ ಬೇಟೆನಾಯಿಗಳನ್ನು ಅಟ್ಟಿಸಿಕೊಂಡು ಬಂತು. ನಾಯಕ ಇಲ್ಲೊಂದು ಕೋಟೆ ಕಟ್ಟಿಸಿದ. ಈ ಊರಿಗೆ ಕಡವೆಯ ಊರು ಅಥವಾ ಕಡೂರು ಎಂಬ ಹೆಸರು ಬಂತು ಎಂದು ಐತಿಹ್ಯವಿದೆ.

ಕಡೂರಿನ ಕೋಟೆಯೊಳಗೆ ಕೊಳದ ಬಳಿ ಇರುವ ಆಂಜನೇಯ ದೇವಸ್ಥಾನ ಈಚಿನದು. ಆದರೆ ಈ ದೇವಾಸ್ಥಾನದ ಮೊಗಸಾಲೆಯ ನಾಲ್ಕು ಕಂಬಗಳು ರಾಷ್ಟ್ರಕೂಟರ ಕಾಲದವು. ಹಲವು ಪುರಾಣಗಳ ದೃಶ್ಯಗಳನ್ನು ಈ ಕಂಬಗಳ ಮೇಲೆ ಕೆತ್ತಲಾಗಿವೆ. ಕಡೂರು ರೈಲ್ವೆನಿಲ್ದಾಣ ಪುಟ್ಟದಾದರೂ ಪ್ರಾಮುಖ್ಯ ಪಡೆದಿದೆ. ಬೀರೂರು ರೈಲ್ವೆ ಕೂಡು ತಾಣ ಇಲ್ಲಿಗೆ 6ಕಿಮೀ ದೂರದಲ್ಲಿದೆ.

ಕಡೂರಿನ ಸುತ್ತಮುತ್ತ ಇರುವ ಬಂಡೆಗಳಿಂದ ಚಪ್ಪಡಿ ತೆಗೆಯಲಾಗುತ್ತಿದೆ. ಇಲ್ಲೊಂದು ಹೆಂಚು ಕಾರ್ಖಾನೆ ಇದೆ. ಕಡೂರು ಈ ಜಿಲ್ಲೆಯ ಮಲೆನಾಡಿನ ಹೆಬ್ಬಾಗಿಲಿನಂತಿರುವುದರಿಂದ ಜಿಲ್ಲೆಯ ವ್ಯಾಪಾರದ ಒಂದು ಭಾಗ ಇದರ ಮೂಲಕ ನಡೆಯುವುದು. ಹಿಂದೆ ಕಡೂರು ಈ ಹೆಸರಿನ ಜಿಲ್ಲೆಯ ಮುಖ್ಯಸ್ಥಳವಾಗಿತ್ತು. ಅನಂತರ ಜಿಲ್ಲೆಯ ಮುಖ್ಯಸ್ಥಳ ಚಿಕ್ಕಮಗಳೂರು ಆಗಿ ಅದೇ ಹೆಸರು ಜಿಲ್ಲೆಗೂ ಬಂದಿತು. *

**ಕಡೆಂಗೋಡ್ಲು ಶಂಕರಭಟ್ಟ :** 1904-68. ಕವಿ, ಕತೆಗಾರ ಮತ್ತು ಪತ್ರಿಕೋದ್ಯಮಿ. ಮಂಗಳೂರು ಬಳಿಯ ಪೆರುವಾಯಿಯಲ್ಲಿ 1904 ಆಗಸ್ಟ್ 9ರಂದು ಜನಿಸಿದರು. ತಂದೆ ಈಶ್ವರ ಭಟ್ಟ. ಹುಟ್ಟೂರಿನಲ್ಲಿ ಆರಂಭದ ಶಿಕ್ಷಣವನ್ನು ಮುಗಿಸಿ, ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲಿ ಕಲಿಯುತ್ತಿದ್ದಾಗ, ಅಸಹಕಾರ ಚಳವಳಿಯ ಪ್ರಭಾವಕ್ಕೆ ಒಳಗಾಗಿ ಮಧ್ಯದಲ್ಲಿಯೇ ಶಾಲೆ ಬಿಟ್ಟರು. ಖಾದಿ ತೊಟ್ಟು ಸ್ವದೇಶಿ ವ್ರತಗಳನ್ನು ಕೈಗೊಂಡು ಮಂಗಳೂರಿನ ತಿಲಕ ವಿದ್ಯಾಲಯದಲ್ಲಿ ಸ್ವಲ್ಪ ಕಾಲ ಉಪಾಧ್ಯಾಯರಾಗಿದ್ದರು. ಇದೇ ಅವಧಿಯಲ್ಲಿ ಖಾಸಗಿಯಾಗಿ ವ್ಯಾಸಂಗ ಮಾಡಿ ಮದರಾಸು ವಿಶ್ವವಿದ್ಯಾಲಯದ ಪರೀಕ್ಷೆಗೆ ಕುಳಿತು ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದರು. 1927ರಲ್ಲಿ ಮಂಗಳೂರಿನ ಸೇಂಟ್ ಆಗ್ನೀಸ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಸೇರಿ 1964ರ ಆಗಸ್ಟ್‌ನಲ್ಲಿ ಆ ಹುದ್ದೆಯಿಂದ ನಿವೃತ್ತರಾದರು. ಪತ್ರಿಕಾ ಕ್ಷೇತ್ರದಲ್ಲಿ ಶಂಕರ ಭಟ್ಟರ ಸೇವೆ ಗಮನಾರ್ಹ. ನವಯುಗ ಪತ್ರಿಕಾಲಯದಲ್ಲಿ ಸ್ವಲ್ಪಕಾಲ ಕೆಲಸ ಮಾಡಿದರು. 1928-53ರ ವರೆಗೆ ರಾಷ್ಟ್ರ ಬಂಧು ಪತ್ರಿಕೆಗೆ ಸಂಪಾದಕರಾಗಿದ್ದರು. ರಾಷ್ಟ್ರಮತದ ಸಂಪಾದಕರಾಗಿ ಕೆನೆಯವರೆಗೂ ದುಡಿದರು. ಮುಳಿಯ ತಿಮ್ಮಪ್ಪಯ್ಯನವರು ಶಂಕರ ಭಟ್ಟರ ಸಮೀಪದ ಬಂಧುಗಳು. ಪಂಜೆಮಂಗೇಶರಾಯರಿಂದ ಇವರು ಪ್ರಭಾವಿತರಾಗಿದ್ದರು.

ಶಂಕರಭಟ್ಟರಿಗೆ ಕನ್ನಡದ ಜೊತೆಗೆ ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳಲ್ಲೂ ಪರಿಶ್ರಮವಿತ್ತು. ಇವರು 1927ರಲ್ಲಿ ಕಾಣಿಕೆ ಎಂಬ ಕವನ ಸಂಗ್ರಹವನ್ನು ಪ್ರಕಟಿಸಿದರು. ಅದು ವಿದ್ವಾಂಸರ ಮನ್ನಣೆಯನ್ನು ಗಳಿಸಿತು. ಅನಂತರ ನಲ್ಮೆ ಎಂಬ ಕವನ ಸಂಗ್ರಹವನ್ನು ಪ್ರಕಟಿಸಿದರು (1932).



ಹೊನ್ನಿಯ ಮದುವೆ, ಮಾದ್ರಿಯ ಚಿತೆ ಮತ್ತು ಮುರಲೀನಾದ ಎಂಬ ಮೂರು ಪದ್ಯಗಳಿರುವ ಈ ಸಂಕಲನ ಶಂಕರಭಟ್ಟರಿಗೆ ಕನ್ನಡ ಕಾವ್ಯಕ್ಷೇತ್ರದಲ್ಲಿ ಒಳ್ಳೆಯ ಹೆಸರನ್ನು ತಂದು ಕೊಟ್ಟಿತು. ಅದೇ ವರ್ಷ ಮಡಿಕೇರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಕವಿ ಗೋಷ್ಠಿಗೆ ಇವರು ಅಧ್ಯಕ್ಷ ರಾಗಿದ್ದರು. ಹಣ್ಣು, ಕಾಯಿ, ಘೋಷಯಾತ್ರೆ ಇವು ಇವರ ಇತರ ಕವನ ಸಂಗ್ರಹಗಳು, ಘೋಷಯಾತ್ರೆ ರಾಜ ದ್ರೋಹ ಪೂರಿತವಾದು ದೆಂದು ಅಂದಿನ ಸರ್ಕಾರ ಬಹಿಷ್ಕರಿಸಿತ್ತು. ಷಟ್ಪದಿ ಮತ್ತು ಚೌಪದಿಗಳಲ್ಲೂ ಇವರ ಕಾವ್ಯರಚನೆ ನಡೆದಿದೆ. ಧೂಮಕೇತು, ದೇವತಾ ಮನುಷ್ಯ ಮತ್ತು ಲೋಹದ ಕಣ್ಣು ಇವು ಇವರ ಕಾದಂಬರಿಗಳು, ಗುರುದಕ್ಷಿಣೆ, ಹಿಡಿಂಬೆ ಎಂಬ ಎರಡು ನಾಟಕಗಳನ್ನೂ ಗಾಜಿನ ಬಳೆ, ದುಡಿಯುವ ಮಕ್ಕಳು ಎಂಬ ಎರಡು ಕಥಾಸಂಕಲನಗಳನ್ನೂ ಪ್ರಕಟಿಸಿದ್ದಾರೆ. ಸ್ವರಾಜ್ಯ ಯುದ್ಧ ಎಂಬುದು ಇವರ ಒಂದು ಅನುವಾದ ಕೃತಿ. ವಾಙ್ಮಯ ತಪಸ್ಸು ಇವರ ಹಲವು ಲೇಖನಗಳ ಸಂಗ್ರಹ. ಸುಸಂಸ್ಕೃತ ಪ್ರೌಢಶೈಲಿ ಇವರ ಕೃತಿಗಳಲ್ಲಿ ಎದ್ದು ಕಾಣುವ ಲಕ್ಷಣ.

ಶಂಕರಭಟ್ಟರು 1930ರಲ್ಲಿ ಧಾರವಾಡ ಜಿಲ್ಲಾ ಸಾಹಿತ್ಯ ಸಮ್ಮೇಳನಕ್ಕೂ 1955ರಲ್ಲಿ ಕಾರವಾರದಲ್ಲಿ ನಡೆದ 45ನೆಯ ಕನ್ನಡ

ಸಾಹಿತ್ಯ ಸಮ್ಮೇಳನಕ್ಕೂ ಅಧ್ಯಕ್ಷರಾಗಿದ್ದರು. ಕಡೆಂಗೋಡ್ಲು ಶಂಕರಭಟ್ಟರ ಕಾವ್ಯ, ಕಾದಂಬರಿ, ನಾಟಕ, ಸಣ್ಣಕಥೆ ಮತ್ತು ಗದ್ಯ, ಪ್ರಬಂಧಗಳನ್ನು ಕಡೆಂಗೋಡ್ಲು ಸಮಗ್ರವಾಙ್ಮಯ ಎಂಬ ಹೆಸರಿನಲ್ಲಿ ಪ್ರಕಟಿಸಲಾಗಿದೆ. (ಟಿ.ಜಿ.ಕೆ.ಬಿ.)

**ಕಣಕುಂಬಿ :** ಬೆಳಗಾಂವಿ ಜಿಲ್ಲೆ ಖಾನಾಪುರ ತಾಲ್ಲೂಕಿನ ಒಂದು ಗ್ರಾಮ. ಖಾನಾಪುರದಿಂದ 38ಕಿಮೀ ದೂರದಲ್ಲಿದೆ. ಇದು ದಟ್ಟವಾದ ಕಾಡಿನಲ್ಲಿರುವ ಸುಂದರ ಸ್ಥಳ. ಕುಲ್ಲಕ ಎಂಬ ಮುನಿ ಇಲ್ಲಿ ಧ್ಯಾನ ಮಾಡುತ್ತಿದ್ದಾಗ ಅವನ ಕುಂಭದಿಂದ ಪವಿತ್ರ ಜಲ ಹರಿದುದರಿಂದ ಈ ಊರ ಹೆಸರು ಕುಲಕುಂಭಿ ಎಂದಾಯಿತಂತೆ. ಸ್ಥಳೀಯರು ಈಗಲೂ ಇದನ್ನು ಕುಲಕುಂಭಿ ಎಂದೇ ಕರೆಯುವರು. ಈ ಊರ ಹೊರಗೆ ಮಲಪ್ರಭಾ ನದಿಯ ಉಗಮ ಸ್ಥಾನವಿದೆ. ಅಲ್ಲಿ ಮಹಾದೇವ ಮತ್ತು ರಾಮೇಶ್ವರ ದೇವಾಲಯಗಳಿವೆ. ಮಹಾದೇವ ಮಂದಿರ ಇತ್ತೀಚೆಗೆ ನಿರ್ಮಿಸಲ್ಪಟ್ಟಿದ್ದು, ಗರ್ಭಗೃಹ ವಿಶಾಲವಾದ ಪ್ರಾಂಗಣ ಮತ್ತು ಮುಖಮಂಟಪ ಗಳನ್ನೊಳಗೊಂಡಿದೆ. ಗರ್ಭಗೃಹದ ನಾಲ್ಕು ಮೂಲೆಗಳಲ್ಲೂ ಬೆಣಚುಕಲ್ಲಿನ ರಾಷ್ಟ್ರಕೂಟ ಶೈಲಿಯಲ್ಲಿರುವ ಕಂಬಗಳಿದ್ದು, ಅವುಗಳ ಮೇಲೆ ಕಲಶಗಳ ಕೆತ್ತನೆಯಿದೆ. ಅರ್ಧ ವರ್ತುಲಾಕಾರದ ನಕ್ಷೆ ಹೊಂದಿದ ಛಾವಣಿ ಈ ಪ್ರಾಂಗಣದಲ್ಲಿದೆ. ನವರಂಗದ ಕಂಬಗಳು ವರ್ತುಲಾಕಾರವಾಗಿದ್ದು, ಕೆಂಪು ಮುರುಳುಕಲ್ಲಿನಿಂದ ಕೂಡಿವೆ. ಗರ್ಭಗೃಹದ ಎಡಪ್ರವೇಶ ದ್ವಾರದಲ್ಲಿ ರೇವರಿತು ಖಂಡೋಬಾ, ಕಾಳಭೈರವ ಗಣಪತಿ ಮೂರ್ತಿಗಳಿವೆ. ಪ್ರದಕ್ಷಿಣಾ ಪಥ'ದಲ್ಲಿರುವ ಮಾಡಿನಲ್ಲಿ ದೇವತೆಯ ಕಂಚಿನ ಮೂರ್ತಿ ಇದೆ. ಮುಖಮಂಟಪದ ಹೊರಗೆ ಕೆರೆಯ ಸಮೀಪ ತೆರೆದ ಮಂಟಪವಿದೆ. ಹೊಸದಾಗಿ ಹೆಂಚಿನ ಛಾವಣಿ ಮಾಡಿ ನಿರ್ಮಿಸಲಾಗಿರುವ ಶಾಂತೇರಿ ದೇವಾಲಯದ ಗರ್ಭಗೃಹದಲ್ಲಿ ಗಜಲಕ್ಷ್ಮಿ ಮೂರ್ತಿಯಿದೆ. ಈ ಗರ್ಭಗೃಹದಲ್ಲಿ ಮಹಿಷಮರ್ದಿನಿ, ದುರ್ಗಾಮೂರ್ತಿಗಳ ಎರಡು ವೀರಗಲ್ಲುಗಳೂ ಇವೆ. ಈ ದೇವಾಲಯದ ಮುಂದೆ ಒಂದು ಕೆರೆಯಿದ್ದು ಅದು ಮಲಪ್ರಭಾ ನದಿಯ ಮೂಲವೆಂದು ಪ್ರತೀತಿ. ಕೆರೆಯ ಮುಂದೆ ಗಣಪತಿಯ ದೇವಾಲಯವಿದೆ. ಈ ದೇವಾಲಯದ ಸ್ವಲ್ಪ ಅಂತರದಲ್ಲಿ ತೀರ್ಥವಿರುವ ಸ್ಥಳವಿದ್ದು, ಅಲ್ಲಿ ಚಿಕ್ಕ ಹಳ್ಳವಿದ್ದು ಅದರಲ್ಲಿ ಗುರುವು ಮಕರರಾಶಿ ಪ್ರವೇಶಿಸಿದ ಮುಹೂರ್ತದಲ್ಲಿ ನೀರು ಹಾಲಿನ ಬಣ್ಣದಲ್ಲಿರುವುದೆಂದು ಹೇಳಲಾಗಿದೆ. ಆಗ ಇಲ್ಲಿ ಜಾತ್ರೆ ನಡೆಯುವುದು. ಇಲ್ಲಿನ ನೀರಿನ ಹರಿವು ಅಂತರಗಾಮಿಯಾಗಿದೆ.

ಮಹಾದೇವ ದೇವಾಲಯದ ಹಿಂಬದಿಯಲ್ಲಿ ರಾಮೇಶ್ವರ ದೇವಾಲಯವಿದ್ದು, ಇದು ಮರಳುಗಲ್ಲಿನ ರಚನೆಯಾಗಿದೆ. ಗರ್ಭಗೃಹ ಮತ್ತು ವಿಶಾಲವಾದ ಅರ್ಧವರ್ತುಲಾಕಾರದ ಚಾವಣಿವುಳ್ಳ ಪ್ರಾಂಗಣವಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಇಲ್ಲಿಯ ಪ್ರವೇಶದ್ವಾರದ ಬಲಬದಿಗೆ ಗಣಪತಿ ಮೂರ್ತಿ ಮತ್ತು ಮಹಾಸತಿ ಕಲ್ಲುಗಳಿವೆ. ಮಲ್ಲವ್ವಳು ಸತಿ ಹೋದ ಬಗ್ಗೆ ಮಾಹಿತಿ ಇದೆ. ಇದರ ಹಿಂದೆ ಸದ ಎಂಬ ಗ್ರಾಮ ಕಣಕುಂಬಿಯಿಂದ 5ಕಿಮೀ ದೂರದಲ್ಲಿದ್ದು ಚೋರ್ಲಾ ದಾರಿಯಲ್ಲಿದೆ. ಇದು ಅತ್ಯಂತ ಎತ್ತರ ಪ್ರದೇಶವಾಗಿದ್ದು, ಇಲ್ಲಿಯ ಕೋಟೆಯನ್ನು ಶಿವಾಜಿ ಕಟ್ಟಿಸಿದನೆಂದು ಪ್ರತೀತಿ. ಒಂದು ಹಳೆಯ ಫಿರಂಗಿ ತೋಪು ಕೋಟೆಯೊಳಗೆ ಕಂಡುಬರುತ್ತದೆ. ಇಲ್ಲಿ ಭಗವತಿ ದೇವಾಲಯವಿದೆ. ಇಲ್ಲಿರುವ ಮರಾಠರು ತಮ್ಮ ಕೆಲವು ಧಾರ್ಮಿಕ ಆಚರಣೆ ಮತ್ತು ಸಂಪ್ರದಾಯಗಳನ್ನು ನಡೆಸಿಕೊಂಡು ಬರುತ್ತಿದ್ದಾರೆಂದು ತಿಳಿದುಬರುತ್ತದೆ. (ಆರ್.ಐ.)

**ಕಣ್ವ :** ಬೆಂಗಳೂರು ಜಿಲ್ಲೆಯಲ್ಲಿ ಹರಿಯುವ ಒಂದು ಚಿಕ್ಕ ನದಿ. ಮಾಗಡಿ ತಾಲ್ಲೂಕಿನ ಶ್ರೀಪತಿಹಳ್ಳಿ ಎಂಬ ಗ್ರಾಮದ ಸಮೀಪದಲ್ಲಿ ಹುಟ್ಟಿ ಚನ್ನಪಟ್ಟಣ ತಾಲ್ಲೂಕಿನ ನಡುವೆ ಉತ್ತರದಿಂದ ದಕ್ಷಿಣಕ್ಕೆ ಹರಿಯುತ್ತದೆ. ಈ ನದಿ ಹರಿಯುವ ಪ್ರದೇಶ ಸಮುದ್ರದಮಟ್ಟಕ್ಕಿಂತ 625ಮೀ ಎತ್ತರದಲ್ಲಿದೆ. ಜಲಾನಯನ ಪ್ರದೇಶ ಸು.215ಚ.ಕಿಮೀ. ಚನ್ನಪಟ್ಟಣ ತಾಲ್ಲೂಕಿನಲ್ಲಿ ಈ ನದಿ ಹರಿಯುವ ಭಾಗದ ಉದ್ದ 34ಕಿಮೀ. ಇದು ತಾಲ್ಲೂಕಿನ ಎಲ್ಲೆಯಿಂದ ಸುಮಾರು ಒಂದು ಕಿಮೀ ದೂರದಲ್ಲಿ ಸರಗೂರು ಗ್ರಾಮದ ಹತ್ತಿರ ಶಿಂಷಾ ನದಿಯನ್ನು ಸೇರುತ್ತದೆ. ಕಣ್ವನದಿ ಬೇಸಗೆಯಲ್ಲಿ ಒಣಗಿದ್ದು ಮಳೆಗಾಲದಲ್ಲಿ ಹೆಚ್ಚು ನೀರಿನಿಂದ ಕೂಡಿರುತ್ತದೆ. ಈ ನದಿ ಸು.420ಚ.ಕಿಮೀ ವಿಸ್ತೀರ್ಣದ ಪ್ರಮುಖ ತಗ್ಗು ಪ್ರದೇಶವೊಂದನ್ನು ನಿರ್ಮಿಸಿದೆ. ನದಿಯ ಉದ್ದಕ್ಕೂ ಇಕ್ಕೆಲಗಳಲ್ಲಿ ತೋಟಗಳಿವೆ. ಸ್ವಲ್ಪ ಕಬ್ಬು ಮತ್ತು ಬತ್ತ ಬೆಳೆಯುತ್ತಾರೆ. ಅಬ್ಬೂರು, ಮಳೂರು ಈ ನದಿಯ ದಂಡೆಯಲ್ಲಿರುವ ಯಾತ್ರಾಸ್ಥಳಗಳು.



ಕಣ್ವ ಜಲಾಶಯ

ಚನ್ನಪಟ್ಟಣ ತಾಲ್ಲೂಕಿನಲ್ಲಿ ಅಬ್ಬೂರಿನ ಬಳಿ ನದಿಗೆ ಅಡ್ಡವಾಗಿ ಒಂದು ಕಟ್ಟೆ ಕಟ್ಟಲಾಗಿದೆ (1940-46). ಇದರಿಂದ ಹೊರಡುವ ನಾಲೆಗಳು 40ಕಿಮೀ ದೂರ ನೀರು ಸಾಗಿಸಿ 5000 ಎಕರೆಗಳಿಗೆ ನೀರುಣಿಸುತ್ತವೆ. ಇದರಿಂದ 30 ಗ್ರಾಮಗಳಿಗೆ ಪ್ರಯೋಜನವುಂಟಾಗಿದೆ. (ಎಚ್.ಜಿ.)

**ಕಥಾಂಜಲಿ :** ಕನ್ನಡದಲ್ಲಿ ಸಣ್ಣಕಥೆಗಳಿಗೆ ಮೀಸಲಾಗಿದ್ದ ಪತ್ರಿಕೆ. 1929ರ ಜುಲೈನಲ್ಲಿ ಪ್ರಕಟಣೆಯನ್ನು ಆರಂಭಿಸಿತು. ಪ್ರಸಿದ್ಧ ಸಾಹಿತಿಗಳೂ ಸ್ವತಃ ಕಥೆಗಾರರೂ ಕಾದಂಬರಿಕಾರರೂ ಆಗಿದ್ದ ಅ.ನ.ಕೃಷ್ಣರಾಯರು ಇದರ ಸಂಪಾದಕರು. ಅನಂತರ ಕೃಷ್ಣರಾಯರು ಪತ್ರಿಕೆಯ ಪ್ರಕಾಶನದ ಜವಾಬ್ದಾರಿಯನ್ನು ಬಿ.ಎನ್.ಗುಪ್ತರವರಿಗೆ ವಹಿಸಿಕೊಟ್ಟು, ಪತ್ರಿಕೆಗೆ ಹದಿನಾಲ್ಕು ತಿಂಗಳು ತುಂಬುವವರೆಗೆ ಸಂಪಾದಕರಾಗಿದ್ದರು. ಅನಂತರ ಮಾ.ನಾ.ಚೌಡಪ್ಪ, ಶ್ರೀನಾಥ', (ಎಸ್.ಶ್ರೀನಿವಾಸರಾವ್), ಎಸ್.ವೆಂಕಟಾಚಲಪತಿ ಮತ್ತು ನಾಡಿಗೇರ ಕೃಷ್ಣರಾಯರು ಇದರ ಸಂಪಾದಕರಾಗಿದ್ದರು.


“ಕಥಾಂಜಲಿ”

ಮೊದಲನೆಯ ಮಜಲಿನಲ್ಲಿ ಕಥಾಂಜಲಿ 1931ರ ಕೊನೆಯವರೆಗೆ ಪ್ರಕಟಣೆಗೊಂಡು ನಿಂತು ಹೋಯಿತು. ಅನಂತರ ಎರಡನೆಯ ಘಟ್ಟದಲ್ಲಿ 1937ರ ಮಧ್ಯಭಾಗದಿಂದ 1941ರ ಅಂತ್ಯದ ವರೆಗೆ ಪ್ರಕಟವಾಯಿತು. ಹೀಗೆ ಕಥಾಂಜಲಿ ಸುಮಾರು ಏಳು ವರ್ಷಗಳ ಕಾಲ ಕನ್ನಡ ಸಾಹಿತ್ಯಕ್ಕೆ ತನ್ನ ಸೇವೆಸಲ್ಲಿಸಿತು.

ಕಥಾಂಜಲಿಯ ಸ್ಥಾಪನೆಯ ಉದ್ದೇಶವನ್ನು ಪತ್ರಿಕೆಯ ಪ್ರಥಮ ಸಂಪಾದಕೀಯ ಲೇಖನದಲ್ಲಿ ಈ ರೀತಿ ಸ್ಪಷ್ಟಪಡಿಸಲಾಗಿದೆ. "ನಮ್ಮ ಕನ್ನಡ ನಾಡಿನಲ್ಲಿ, ಕೇವಲ ಸಣ್ಣಕಥೆಗಳಿಗಾಗಿಯೇ ಸಮರ್ಪಿಸಲ್ಪಟ್ಟು ಒಂದು ನಿಯುಕ್ತ ಆದರ್ಶವನ್ನಿಟ್ಟುಕೊಂಡು ಹೊರಟಿರುವ ಪತ್ರಿಕೆಯ ಕೊರತೆ ಬಹುಕಾಲದಿಂದಲೂ ಇದ್ದೇ ಇದ್ದಿತು ನಮ್ಮಲ್ಲಿ ಸರ್ವತೋಮುಖವಾದ

ಬೆಳೆ ಬೆಳೆದು ಕುಯಿಲಿಗೆ ಸಿದ್ಧವಾಗಿದ್ದರೂ ಅದನ್ನು ಕುಯ್ದು ನಾಡಿಗರಿಗೆ ಹಂಚುವವರಿಲ್ಲವಲ್ಲ ಎಂದು ಎನಿಸುತ್ತಲೇ ಇದ್ದಿತು. ಈ ಅಂತಸ್ತಾಪವನ್ನು ದೂರಮಾಡಿ, ಸನ್ಮಿತ್ರರ ಸಹಾಯ ಸ್ಫೂರ್ತಿಗಳಿಂದ ಹುರಿಗೊಂಡು ನಾವು ಈ ಕೆಲಸಕ್ಕೆ ಉದ್ಯುಕ್ತರಾಗಿರುವೆವು. ಸಣ್ಣ ಕಥೆಗಳಲ್ಲಿ ನಾನಾ ಬಗೆಗಳುಂಟು, ಸಂಪ್ರದಾಯಗಳುಂಟು, ಶೈಲಿಗಳುಂಟು, ನಾವು ಯಾವ ಒಂದು ಶೈಲಿ ಸಂಪ್ರದಾಯಕ್ಕೂ ತಾಳಿಕಟ್ಟುವುದಿಲ್ಲ. ಎಲ್ಲವುಗಳ ಪರಿಚಯಾನುಭವವನ್ನು ಕನ್ನಡಿಗರಿಗೆ ಮಾಡಿಸಿಕೊಡಬೇಕೆಂಬುದೇ ನಮ್ಮಿಚ್ಛೆ. ಸ್ವಕಪೋಲಕಲ್ಪಿತವಾದ ಕನ್ನಡಿಗರ ಕಥೆಗಳಿಗೆ ಪ್ರಾಧಾನ್ಯ ಕೊಟ್ಟು ಅನಂತರ ಇತರ ಭಾಷೆಗಳಲ್ಲಿನ ಕಥೆಗಳ ಪರಿಚಯವನ್ನು ಉಂಟುಮಾಡಿಕೊಡುತ್ತೇವೆ".

ಕಥಾಂಜಲಿ ತನ್ನ ಜೀವಿತಾವಧಿಯಲ್ಲಿ ಈ ಧ್ಯೇಯವನ್ನು ಚೆನ್ನಾಗಿ ಪರಿಪಾಲಿಸಿಕೊಂಡು ಬಂದಿತೆನ್ನಬಹುದು. ತಂತ್ರವೈವಿಧ್ಯವುಳ್ಳ ಹಲವಾರು ಉತ್ತಮ ಕನ್ನಡ ಸಣ್ಣಕಥೆಗಳನ್ನೂ ಕನ್ನಡೇತರ ಭಾಷೆಗಳ ಕಥೆಗಳ ಅನುವಾದವನ್ನೂ ಅದು ಪ್ರಕಟಿಸಿತು. ವಸ್ತುನಿಷ್ಠವಾದ ಸಾಹಿತ್ಯ ಸಮೀಕ್ಷೆಯನ್ನೂ ನಡೆಸಿತು. ಹೊಸ ಲೇಖಕರ ವಿಕಾಸಕ್ಕೆ ನೆರವಾಯಿತು. ಸುಮಾರು 50 ಜನ ಲೇಖಕರು ಕಥಾಂಜಲಿಯಿಂದ ಮುಂದಕ್ಕೆ ಬಂದರು. ಸಣ್ಣಕಥೆಗಳ ವಿಪುಲವಾದ ಸೃಷ್ಟಿಗೂ ಕಥನಕಲೆಯ ನವ ವಿಜ್ಞಾನದ ಉದಯಕ್ಕೂ ಕಥಾಂಜಲಿ ಕಟ್ಟಿಬದ್ಧವಾಗಿ ದುಡಿಯಿತು.

ಶ್ರೀನಾಥ, ಮಾ.ನಾ.ಚೌಡಪ್ಪ,ವಾಣಿ, ನಾಡಿಗೇರ ಕೃಷ್ಣರಾಯ -ಇವರು ಕನ್ನಡ ಸಾಹಿತ್ಯಲೋಕವನ್ನು ಪ್ರವೇಶಿಸಿದ್ದು ಕಥಾಂಜಲಿಯ ಮೂಲಕ. ಜಿ.ಪಿ.ರಾಜರತ್ನಂ, ಮ.ನ.ಮೂರ್ತಿ, ಕ್ಷೀರಸಾಗರ (ಸೀತಾರಾಮ ಶಾಸ್ತ್ರಿ), ರಾಘವ (ಎಂ.ವಿ.ಸೀತಾರಾಮಯ್ಯ), ಇ.ಎ.ಭಾಸ್ಕರರಾವ್, ರಾ.ಶಿ. (ಎಂ.ಶಿವರಾಮ್) ಮುಂತಾದವರ ಆರಂಭಕಾಲದ ಲೇಖನಗಳಲ್ಲಿ ಹಲವು ಬೆಳಕು ಕಂಡದ್ದು ಕಥಾಂಜಲಿಯಲ್ಲಿ. ಆನಂದ (ಎ.ಸೀತಾರಾಂ), ಕೆ.ಗೋಪಾಲಕೃಷ್ಣರಾಯ, ದೇವುಡು, ಕೃಷ್ಣಕುಮಾರ ಕಲ್ಲೂರ, ಶ್ರೀರಂಗ (ಆದ್ಯ ರಂಗಾಚಾರ್ಯ), ಡಿ.ಕೆ.ಭಾರದ್ವಾಜ್, ಬೆಳ್ಳಾವೆ ನರಹರಿಶಾಸ್ತ್ರಿ ಮುಂತಾದ ಖ್ಯಾತ ಲೇಖಕರು ಕಥಾಂಜಲಿಯ ಲೇಖಕ ಬಳಗದಲ್ಲಿ ಸೇರಿದ್ದರು.
*

**ಕಥಾಕಾಲಕ್ಷೇಪ :** ಯಾವುದಾದರೊಂದು ಕಥೆಯನ್ನು ಸಂಗೀತಾಭಿನಯ ಉಪಕಥೆ; ಗಾದೆ ಮುಂತಾದುವುಗಳ ಮಿಶ್ರಣದಿಂದ ರಸವತ್ತಾಗಿ ತಿಳಿಯುತ್ತ ಕಾಲವನ್ನು ಕಳೆಯುವುದು ಕಥಾಕಾಲಕ್ಷೇಪ. ಈ ಪದ್ಧತಿ ಪ್ರಾರಂಭವಾದದ್ದು ಮಹಾರಾಷ್ಟ್ರದಲ್ಲಿ, ಕರ್ನಾಟಕದಲ್ಲಿ ಈ ಕಲೆ ಬಳಕೆಗೆ ಬರುವ ಮೊದಲು ಇಲ್ಲಿ ಪುರಾಣ ಪಠಣ, ಭಜನೆ ಮುಂತಾದುವುಗಳು ದೇವಾಲಯಗಳಲ್ಲಿ ನಡೆಯುತ್ತಿದ್ದುವು. ಇಲ್ಲಿ ಕೆಲವು ಕಾಲಾನಂತರ ಪುರಾಣ ಪಠಣವೇ ಕಥಾಕಾಲಕ್ಷೇಪವಾಗಿ ಪರಿವರ್ತಿತವಾಯಿತು.

ಕಥಾಕಾಲಕ್ಷೇಪವನ್ನು ದಕ್ಷಿಣ ಭಾರತದಲ್ಲಿ ಮೊಟ್ಟಮೊದಲಿಗೆ ಪ್ರಚುರಪಡಿಸಿದವರೆಂದರೆ ಮಹಾರಾಷ್ಟ್ರದ ಅನಂತಪದ್ಮನಾಭ ಗೋಸ್ವಾಮಿ. ಇವರ ಶಾರೀರಕ್ಕೆ ಮಾರುಹೋದ ಜನ ಇವರನ್ನು ಕೋಕಿಲಕಂಠ ಮೇರು ಸ್ವಾಮಿ ಎಂದೂ ಕರೆಯುತ್ತಿದ್ದರು. ಈ ಕಲೆಗೆ ಸರಿಯಾದ ಸ್ವರೂಪವನ್ನು ಕಲ್ಪಿಸಿ ಜನಪ್ರಿಯತೆಯೊಂದಿಗೆ ತುಂಬುಕಲೆಯಾಗಿ ಮಾರ್ಪಡಿಸಿದವರು ತಂಜಾವೂರಿನ ಕೃಷ್ಣ ಭಾಗವತರು ಮತ್ತು ಪಂಚಾ ಪಕೇಶ ಶಾಸ್ತ್ರಿಗಳು. ಇವರು ತೋರಿರುವ ಮಾರ್ಗವನ್ನೇ ಕರ್ನಾಟಕದ ಇಂದಿನ ಹರಿಕಥಾ ವಿದ್ವಾಂಸರೂ ಅನುಸರಿಸುತ್ತಿರುವುದು ಕಂಡುಬಂದಿದೆ.

ಕಥಾಕಾಲಕ್ಷೇಪದ ಮುಖ್ಯೋದ್ದೇಶ ಧಾರ್ಮಿಕ ಮತ್ತು ನೈತಿಕ ಮೌಲ್ಯಗಳನ್ನು ಬೋಧಿಸುವುದು. ಅಲ್ಲದೆ ಇದು ಮುಕ್ತಿಗೆ ಒಂದು ಸುಲಭಸಾಧ್ಯವಾದ ಮಾರ್ಗವೆನಿಸಿದೆ. ಇದರಲ್ಲಿ ಸಂಗೀತವು ಕಥೆಯ ನಿರೂಪಣೆಗಾಗಿ ರಾಗ ತಾಳಮೇಳ ಹಾಗೂ ಉಪಕಥೆಗಳೊಡನೆ ಹಿತಮಿತವಾಗಿ ಸಮ್ಮಿಲನಗೊಂಡು ವಿಶಿಷ್ಟವಾಗಿರುತ್ತದೆ. ಜನರಲ್ಲಿ ಧರ್ಮನೀತಿಗಳನ್ನು ಸೌಂದರ್ಯ ಕಲೋಪಾಸನೆಯನ್ನೂ ಜಾಗೃತಗೊಳಿಸಿದ ಈ ಕಲೆ ಸಂಗೀತಕ್ಕಿಂತ ಹೆಚ್ಚು ಜನಪ್ರಿಯತೆ ಗಳಿಸಿದೆ. ಅನಂತರಾಮ ಭಾಗವತರು, ಮುತ್ತಯ್ಯ ಭಾಗವತರು, ವೇದಾಂತ ಭಾಗವತರು ಮೊದಲಾದ ಅನೇಕ ಸಂಗೀತ ವಿದ್ವಾಂಸರು ಕಥಾಕಾಲಾಕ್ಷೇಪ ಕಲೆಯನ್ನು ಕಲಿತು ತಮ್ಮ ಸಂಗೀತದ ವಿದ್ವತ್ತನ್ನು ಇದರ ಮೂಲಕ ಪ್ರದರ್ಶಿಸಿದರು.

ಕಥಾಕಾಲಕ್ಷೇಪಕ್ಕಾಗಿ ಮಹಾರಾಷ್ಟ್ರದಲ್ಲಿ ಸಖಿ,ದಂಡಿ, ಅಂಜನಗೀತ, ಸವಾಯ್, ಓವಿ, ಅಭಂಗ ಮುಂತಾದವುಗಳನ್ನು ಬಳಸುತ್ತಾರೆ. ದಕ್ಷಿಣ ಭಾರತದಲ್ಲಿ ಕಥಾ ಪ್ರಾರಂಭದಲ್ಲಿ ಪಂಚಮುಖಿಯನ್ನು ಹಾಡುವುದುಂಟು. ಜೊತೆಗೆ ಸಂಗೀತದ ವಾದ್ಯಗಳಾದ ಹಾರ್ಮೋನಿಯಂ, ತಬಲ ಪಿಟೀಲು, ಮೃದಂಗ ಮುಂತಾದವುಗಳನ್ನು ಹಿಮ್ಮೇಳಕ್ಕಾಗಿ ಬಳಸುತ್ತಾರೆ.

ಕಥಾಕಾಲಕ್ಷೇಪ ಮಾಡುವ ವಿದ್ವಾಂಸರನ್ನು ಭಾಗವತರೆಂದು ಕರೆಯುವುದು ರೂಢಿ. ಕಥೆ ಸಂತ ಮಹಾನುಭಾವರ ಅಥವಾ ಭಗವತ್ಸಿದ್ಧಾಂತಗಳನ್ನು ತೋರುವ ಯಾವುದೇ ವಿಷಯವನ್ನು ಕುರಿತದ್ದಾದರೂ ಅದನ್ನು ಕ್ರಮಬದ್ಧರೀತಿಯಲ್ಲಿ ವಿಭಾಗಿಸಿ ಸಂಗೀತರಚನೆಗಳನ್ನೂ ಉಪಕಥೆಗಳನ್ನೂ ಗಾದೆಗಳನ್ನೂ ಸಂದರ್ಭೋಚಿತವಾಗಿ ಮಾಡುವಾಗ ಭಾಗವತರ ಜವಾಬ್ದಾರಿ ಗುರುತರವಾಗಿರುತ್ತದೆ. ಕಥೆಯಲ್ಲಿ ಬರುವ ವಿವಿಧ ಪಾತ್ರಗಳೂ ತಾವೇ ಎಂಬಂತೆ ಏಕಪಾತ್ರಾಭಿನಯವನ್ನು ಮಾಡುವ ಸಾಮರ್ಥ್ಯದ ಜೊತೆಗೆ ಭಾಷಾಜ್ಞಾನ, ಜ್ಞಾಪಕಶಕ್ತಿ ಮತ್ತು ಸಂಗೀತದ ವಿಷಯದಲ್ಲಿನ ಅರಿವುಗಳು ಭಾಗವತರಿಗೆ ಅತ್ಯವಶ್ಯಕವಾಗಿರುತ್ತದೆ. ಚತುರರಾದ ಹರಿಕಥಾ ವಿದ್ವಾಂಸರು ರಸಭಾವಗಳಿಗೆ ತಕ್ಕಂತೆ ಅಭಿನಯ ಉಪಕಥೆ ಸಂಗೀತ ಮುಂತಾದವುಗಳ ಮಿಶ್ರಣದಿಂದ ಕ್ರಮಬದ್ಧರೀತಿಯಲ್ಲಿ ಮಾಡಿದ ಕಥಾಕಾಲಕ್ಷೇಪದ ಗುರಿ ಶ್ರಾವಕರ ಚಿತ್ತದಲ್ಲಿ ಚಿರಕಾಲ ಉಳಿಯುವುದರಲ್ಲಿ ಸಂಶಯವಿಲ್ಲ.

ಕನ್ನಡನಾಡಿನಲ್ಲಿ ಕಥಾಕಾಲಕ್ಷೇಪ ಹರಿಕಥೆ ಎಂಬ ಮತ್ತೊಂದು ಹೆಸರಿನಲ್ಲಿ ಬಳಕೆಯಲ್ಲಿದೆ. ಈ ಕಲೆಗೆ ದಾಸರ ಕೊಡುಗೆ ಅಪಾರವಾದುದು. 20ನೆಯ ಶತಮಾನದಲ್ಲಿ ಕೋಣನೂರು, ಸೀತಾರಾಮ ಶಾಸ್ತ್ರಿ, ಶ್ರೀಕಂಠಶಾಸ್ತ್ರಿ, ಭದ್ರಗಿರಿ ಕೇಶವದಾಸರು, ಭದ್ರಗಿರಿ ಅಚ್ಯುತದಾಸರು, ವೇಣು ಗೋಪಾಲದಾಸರು, ಕುರ್ತಕೋಟಿ ಶ್ರೀಪಾದಶಾಸ್ತ್ರಿ, ಮುಂತಾದವರು ಹೆಸರಾಂತ ವಿದ್ವಾಂಸರೆನಿಸಿದ್ದಾರೆ. (ವಿ.ಆರ್.)

**ಕಥಾವಳಿ :** ಉತ್ತಮ ಕಥಾ ಸಾಹಿತ್ಯವನ್ನೊದಗಿಸಲು ಪ್ರಾರಂಭವಾದ ಮಾಸಪತ್ರಿಕೆ. 1938ರ ಜುಲೈನಲ್ಲಿ ಪ್ರಕಟಣೆಯನ್ನು ಆರಂಭಿಸಿದರು. ಓಲೇಟಿ ವಿ. ಗುಪ್ತರ ಒಡೆತನದಲ್ಲಿ ಡಿ.ಎಸ್. ರಾಮಕೃಷ್ಣರಾಯರ ಶ್ರದ್ಧೆ. ದುಡಿಮೆಗಳಿಂದ ಬೆಂಗಳೂರು ಅಕ್ಕಿಪೇಟೆಯ ಮೋಹನ್ ಪ್ರೆಸ್ ಎಂಬ ಸಣ್ಣ ಮುದ್ರಣಾಲಯದಲ್ಲಿ ಜನ್ಮತಾಳಿ,ಕೆಲವೇ ವರ್ಷಗಳಲ್ಲಿ ಕರ್ನಾಟಕದ ಪ್ರಸಿದ್ಧ ಮಾಸಪತ್ರಿಕೆಯಾಯಿತು. ಅದು ಪ್ರಾರಂಭವಾದ ಕಾಲ ಅದರ ಪ್ರಗತಿಗೆ ಅನುಕೂಲವಾಗಿಯೇ ಇತ್ತು. ಸಿ.ಕೆ. ವೆಂಕಟರಾಮಯ್ಯ, ಮಾಸ್ತಿ ವೆಂಕಟೇಶ ಐಯ್ಯಂಗಾರ್, ಆನಂದ ಮೊದಲಾದ ಪ್ರಸಿದ್ಧರು ಆಧುನಿಕ ಸಣ್ಣಕಥೆಗಳ ವೈಶಿಷ್ಟ್ಯವನ್ನು ಪರಿಚಯ ಮಾಡಿಕೊಟ್ಟು, ಜನತೆಯ ಆಸಕ್ತಿಯನ್ನು ಹೆಚ್ಚಿಸಿದ್ದರು.

ಕಥಾವಳಿ ಪ್ರಾರಂಭದಲ್ಲಿ ಕ್ರೌನ್ $^1/_4$ ಆಕಾರದಲ್ಲಿದ್ದು 1943 ರಿಂದ ಕ್ರೌನ್ $^1/_8$ ಆಕಾರದಲ್ಲಿ ಪ್ರಕಟವಾಯಿತು. ಅದರ ಬಿಡಿ ಪ್ರತಿ 4 ಆಣೆಯಿಂದ 6 ಆಣೆಯ ವರೆಗೂ ಹತ್ತಿ, ವಾರ್ಷಿಕ ಚಂದಾ 5 ರೂಪಾಯಿಗಳಾದುವು. ಪ್ರಾರಂಭದಲ್ಲಿ ಪ್ರಕಟವಾಗುತ್ತಿದ್ದ ಪ್ರತಿಗಳ ಸಂಖ್ಯೆ 1,000; ಪತ್ರಿಕೆ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ 1951ರಲ್ಲಿ ಪ್ರಕಟ ವಾಗುತ್ತಿದ್ದ ಪ್ರತಿಗಳು 7,000, ಮನರಂಜನೆಯೇ ಕಥಾವಳಿಯ ಮುಖ್ಯ ಗುರಿ. ಸಣ್ಣಕಥೆ, ಕವಿತೆ,ಹರಟೆ, ಏಕಾಂಕನಾಟಕ, ಹಾಸ್ಯ, ವ್ಯಕ್ತಿಚಿತ್ರಗಳು ಪ್ರಕಟವಾಗುತ್ತಿದ್ದವು. ಕಾರ್ಡಿನಲ್ಲಿ ಕಥೆಗಳು ಎಂಬ ವಿಭಾಗ ಅತ್ಯಂತ ಜನಪ್ರಿಯ ಅಂಕಣವಾಗಿತ್ತು.

ಕಥಾವಳಿಯ ಸಂಪಾದಕ ಮಂಡಲಿಯಲ್ಲಿ ಜಿ.ವರದರಾಜರಾವ್ ಹಾಗೂ ನಗುವನಂದ ಮಾಸಪತ್ರಿಕೆಯಲ್ಲಿ 1933ರಿಂದ ಹಾಸ್ಯಲೇಖನಗಳನ್ನು ಬರೆಯುತ್ತಿದ್ದ ವಿ.ಜಿ. ಕೃಷ್ಣಮೂರ್ತಿ ಅವರು ಬಹುಕಾಲವಿದ್ದು ಅದರ ಪ್ರಕಟಣೆಯ ಬಗ್ಗೆ ಉಪಯುಕ್ತ ಸಲಹೆಗಳನ್ನು ಕೊಡುತ್ತಿದ್ದರು. ಕಥಾವಳಿ ಉಚ್ಚಸ್ಥಾನದಲ್ಲಿದ್ದಾಗ ಅದರಲ್ಲಿ ಸಣ್ಣ ಕತೆಗಳಲ್ಲದೆ ಮಕ್ಕಳ ಬಳಗ, ವನಿತಾವಿಭಾಗ, ಸಂಶೋಧನ ಸಮಸ್ಯೆ, ಸಾಹಸವಾಹಿನಿ, ನಗೆಮಿಂಚು, ಸಾಹಿತ್ಯ ಭಂಡಾರ, ಚಲನಚಿತ್ರ, ರಾಶಿ ಭವಿಷ್ಯ ಮೊದಲಾದ ವಿಭಾಗಗಳಿದ್ದುವು. ಉಡುಪಿಯ ಗಿರಿಬಾಲೆ ವನಿತಾವಿಭಾಗವನ್ನು ನೋಡಿಕೊಳ್ಳುತ್ತಿದ್ದರು. ಮಕ್ಕಳ ಬಳಗ, ಬಿ.ಆರ್.ಎಂ.ಸ್ವಾಮಿಯವರ

ನೆರವಿನಿಂದ ಮಕ್ಕಳಿಗೆ ಪ್ರಿಯವಾಗಿತ್ತು. ಕಥೆಗಳನ್ನು ಸಮಸ್ಯೆಯ ರೂಪದಲ್ಲಿ ಕೊಟ್ಟು, ಸಾರಸ್ಯವಾದ ಘಟ್ಟದಲ್ಲಿ ನಿಲ್ಲಿಸಿ, ಮುಂದಿನ ಸಂಚಿಕೆಗಾಗಿ ಕಾಯುವಂತೆ ವಾಚಕರ ಉತ್ಸಾಹವನ್ನು ಕೆರಳಿಸುವ ವಿಧಾನವನ್ನು ಕಥಾವಳಿ ಪ್ರಾರಂಭಿಸಿತು. ಇದಲ್ಲದೆ ಸಾಹಸವಾಹಿನಿ ವಿಭಾಗದಲ್ಲಿ ಸಾಹಸದ ಕಥೆಗಳು ಅವಿಚ್ಛಿನ್ನವಾಗಿ ಪ್ರಕಟವಾಗುತ್ತಿದ್ದುವು.

ಕಥಾವಳಿಯ ವಿಶೇಷ ಆಕರ್ಷಣೆ ಪ್ರತಿವರ್ಷ ಜುಲೈ ತಿಂಗಳಲ್ಲಿ ಹೊರಡುತ್ತಿದ್ದ ಆದರ ವಾರ್ಷಿಕ ಸಂಚಿಕೆ. 250 ಪುಟಗಳಿಗೂ ಮಿಕ್ಕಿದ ಈ ವಿಶೇಷ ಸಂಚಿಕೆಗಾಗಿ ಏರ್ಪಡಿಸುತ್ತಿದ್ದ ವಾರ್ಷಿಕ ಕಥಾಸ್ಪರ್ಧೆಯಲ್ಲಿ ಉತ್ತಮ ಕಥೆಗಳಿಗೆ ಬಹುಮಾನ ನೀಡುವ ಪದ್ಧತಿ ಇತ್ತು. ಕಥಾವಳಿಯ 12ನೆಯ ವಾರ್ಷಿಕ ಕಥಾಸ್ಪರ್ಧೆಯಲ್ಲಿ 1950 ಪ್ರಥಮ ಬಹುಮಾನ ಗಳಿಸಿದ ಸಣ್ಣಕಥೆ ಸಮಸ್ಯೆಯ ಮಗು ಅದರ ಲೇಖಕಿ ತ್ರಿವೇಣಿಯವರ ಕಾದಂಬರಿ ಕ್ಷೇತ್ರದಲ್ಲಿನ ಉಜ್ವಲ ಭವಿಷ್ಯವನ್ನು ಸಾರಿತು. ಎಸ್.ವಿ.ಪರಮೇಶ್ವರಭಟ್ಟ, ಬಸವರಾಜ ಕಟ್ಟೀಮನಿ, ಗೋಪಾಲಕೃಷ್ಣ ಅಡಿಗ, ಜಿ.ಪಿ.ರಾಜರತ್ನಂ, ಜಿ.ವರದರಾಜರಾವ್, ಬಿ.ಪುಟ್ಟಸ್ವಾಮಯ್ಯ, ಎಂ.ವಿ.ಸೀತಾರಾಮಯ್ಯ, ಗೊರೂರು ರಾಮಸ್ವಾಮಿ ಐಯಂಗಾರ್, ವಿ.ಜಿ.ಕೃಷ್ಣಮೂರ್ತಿ, ಕೈವಾರ ರಾಜರಾವ್, ಕೃಷ್ಣಮೂರ್ತಿ ಪುರಾಣಿಕ, ಮತಿಘಟ್ಟ ಕೃಷ್ಣಮೂರ್ತಿ, ವಿ.ಎಂ.ಇನಾಂದಾರ್, ಕಾಂತರಾಜಯ್ಯ, ಗಿರಿಬಾಲೆ, ಅಮ್ಮೆಂಬಳ ಶಂಕರ ನಾರಾಯಣ ನಾವಡ, ನವಗಿರಿನಂದ, ಕೆ.ಗೋಪಾಲಕೃಷ್ಣರಾವ್, ಎನ್.ಸೂರಪ್ಪ ನಾಡಿಗೇರ ಕೃಷ್ಣರಾಯ, ಆರ್.ಎಸ್.ರಾಮರಾವ್, ತ್ರಿವೇಣಿ ಮೊದಲಾದ ನಾಡಿನ ಸುಪ್ರಸಿದ್ಧ ಸಾಹಿತಿಗಳು. ಕಥಾವಳಿಯ ಲೇಖಕವರ್ಗಕ್ಕೆ ಸೇರಿದವರು. ಸು.20 ವರ್ಷ ಸೇವೆ ಸಲ್ಲಿಸಿದ ಈ ಪತ್ರಿಕೆ 1958ರ ವರೆಗೂ ಅಸ್ತಿತ್ವದಲ್ಲಿದ್ದು ತರುವಾಯ ನಿಂತುಹೋಯಿತು.

*

**ಕದಂ, ಬಿ.ಪಿ. :** 1922-. ಸಂಸದೀಯ ಪಟು, ಸ್ವಾತಂತ್ರ್ಯ ಹೋರಾಟಗಾರ, ಸಾಮಾಜಿಕ ಕಾರ್ಯಕರ್ತ. ಇವರ ಪೂರ್ಣ ಹೆಸರು ಬಾಲಸು ಪುರುಷು ಕದಂ. ಉತ್ತರ ಕನ್ನಡ ಜಿಲ್ಲೆ ಕಾರವಾರದ ಸದಾಶಿವ ಗಡದಲ್ಲಿ 1922 ಡಿಸೆಂಬರ್ 2ರಂದು ಜನಿಸಿದರು. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಕಾರವಾರದಲ್ಲಿ ಮುಗಿಸಿದರು. ಕೊಲ್ಹಾಪುರದ ರಾಜಾರಾಮ ಕಾಲೇಜು, ಧಾರವಾಡದ ಕರ್ನಾಟಕ ಕಾಲೇಜು, ಕೊಲ್ಹಾಪುರದ ಕಾಲೇಜು ಗಳಲ್ಲಿ ಶಿಕ್ಷಣ ಮುಗಿಸಿದರು. ಕಾರವಾರದಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿ (1948), ಅಪಾರ ಯಶಸ್ಸು ಗಳಿಸಿದರು. 1972ರ ವರೆಗೂ ಈ ವೃತ್ತಿಯನ್ನು ಮುಂದುವರಿಸಿದರು.



ತರುಣ ರಾಷ್ಟ್ರೀಯವಾದಿ ಕದಂ ಕೊಲ್ಹಾಪುರ ಲಾ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿರುವಾಗ ಚಲೇಜಾವ್ ಚಳವಳಿಯಲ್ಲಿ ಭಾಗವಹಿಸಿ, ಎರಡು ತಿಂಗಳು ಭೂಗತರಾಗಿದ್ದರು. ಆಗ ಎರಡು ತಿಂಗಳು ಕಾಲೇಜಿನಲ್ಲಿ ಗೈರು ಹಾಜರಾಗಿದ್ದ ಬಗ್ಗೆ ಪ್ರಾಂಶುಪಾಲರಿಗೆ ತಮ್ಮ ಚತುರ ಮಾತಿನಿಂದ ಮನದಟ್ಟು ಮಾಡಿಕೊಟ್ಟು ಪರೀಕ್ಷೆಗೆ ಕುಳಿತು ತೇರ್ಗಡೆಯಾದರು. ವಕೀಲಿ ವೃತ್ತಿಯಲ್ಲಿದ್ದಾಗ ಬಡವರಿಗೆ, ರೈತರಿಗೆ, ಕಾರ್ಮಿಕರಿಗೆ ನೆರವಾದರು.

ರಾಜಕೀಯದಲ್ಲಿ ಧುಮುಕಿದ ಇವರು ಮುಂಬಯಿಯ ವಿಧಾನಸಭೆಗೆ ಕಾಂಗ್ರೆಸ್‌ಪಕ್ಷದ ಶಾಸಕರಾಗಿ ಆಯ್ಕೆಯಾದರು (1952-57). ಕರ್ನಾಟಕ ವಿಧಾನಸಭೆಗೆ ಕಾರವಾರ ಕ್ಷೇತ್ರದಿಂದ ಆಯ್ಕೆಯಾಗಿ ಏಕಪ್ರಕಾರ ಮೂರು ಅವಧಿಗೆ ಶಾಸಕರಾಗಿ ಸೇವೆ ಸಲ್ಲಿಸಿದರು. ಅನಂತರ ವಿಧಾನ ಸಭೆಯ ಉಪಸಭಾಪತಿ ಸ್ಥಾನ ಪಡೆದು ಐದು ವರ್ಷ ಕಾರ್ಯನಿರ್ವಹಿಸಿದರು. ಲೋಕಸಭೆಯ ಸದಸ್ಯರಾಗಿಯೂ ಕಾರ್ಯನಿರ್ವಹಿಸಿ (1977-81) ಉತ್ತರ ಕನ್ನಡ ಜಿಲ್ಲೆಯ ಅಭಿವೃದ್ಧಿಗಾಗಿ ದುಡಿದರು.

ಇವರು ಹಲವು ಸಂಘ ಸಂಸ್ಥೆಗಳಲ್ಲೂ ಸೇವೆಸಲ್ಲಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದವು ಸದಾಶಿವಗಡ ಶಿವಾಜಿ ಶಿಕ್ಷಣ ಸಂಸ್ಥೆಯ ಅಧ್ಯಕ್ಷ (1983-2002); ಕಾರವಾರ ಜಿಲ್ಲಾ ಸ್ಕೂಲ್ ಬೋರ್ಡ್ ಸಮಿತಿಯ ಉಪಾಧ್ಯಕ್ಷ (1950-53), ಕಾಳಿ ಪ್ರಾಜೆಕ್ಟ್ ಜಲಾಶಯ ಹಾಗೂ ನಿರಾಶ್ರಿತರ ಸಮಸ್ಯೆ ಸಮಿತಿ ಅಧ್ಯಕ್ಷ, ಪಾರ್ಲಿಮೆಂಟ್ ಕಾಯಿದೆ ಸಮಿತಿ ಸದಸ್ಯ ಇವು ಮುಖ್ಯವಾದುವು.

ಇವರಿಗೆ ಬೇಸಾಯದಲ್ಲಿ ವಿಶೇಷ ಆಸಕ್ತಿ. ಅಗಾಧ ಪುಸ್ತಕ ಪ್ರೇಮಿ, ಒಳ್ಳೆಯ ಭಾಷಣಕಾರರು, ಸಂಘಟನಾ ಚತುರರು. ಕನ್ನಡ, ಇಂಗ್ಲಿಷ್, ಮರಾಠಿ, ಕೊಂಕಣಿಯಲ್ಲಿ ಸುಲಲಿತವಾಗಿ ಮಾತನಾಡಬಲ್ಲರು. ಸಂಸದೀಯ ಹಾಗೂ ಸಂವಿಧಾನ ತಜ್ಞರಾಗಿ ಅನೇಕ ಸಮಿತಿಗಳಲ್ಲಿ ಸಲಹೆಗಾರರಾಗಿ ಕೆಲಸ ಮಾಡಿದ್ದಾರೆ. ತಮಗೆ ದೊರೆತ ಅಧಿಕಾರವನ್ನು ನಿಷ್ಠೆ, ಶ್ರದ್ಧೆ, ತ್ಯಾಗ, ಸಮರ್ಪಣ ಭಾವಗಳಿಂದ ನಿರ್ವಹಿಸಿದ್ದಾರೆ. ಇವರ ಧರ್ಮಪತ್ನಿ ರಮಾಬಾಯಿ. (ಆರ್.ಜಿ.ಆರ್.)

**ಕದಂಬ ವಂಶ :** ವಾಯವ್ಯ ಕರ್ನಾಟಕದಲ್ಲಿ 4-7ನೆಯ ಶತಮಾನ ಗಳಲ್ಲಿ ಬನವಾಸಿಯಿಂದ ಸ್ವತಂತ್ರವಾಗಿಯೂ 10-13ನೆಯ ಶತಮಾನಗಳಲ್ಲಿ ಹಾನಗಲ್ಲು, ಗೋವ ಮುಂತಾದ ಕಡೆಗಳಲ್ಲಿ ಬಹುತೇಕ ಸಾಮಂತ ಸ್ಥಿತಿಯಲ್ಲೂ ಆಳಿದ ಒಂದು ರಾಜಮನೆತನ.



ಕದಂಬ ಲಾಂಛನ

ಕದಂಬ ಮನೆತನದ ಮೂಲದ ಬಗ್ಗೆ ಹಲವು ಕಥೆಗಳಿವೆ. ತ್ರಿಲೋಚನ ಕದಂಬ ಈ ಮನೆತನದ ಮೂಲಪುರುಷ. ಶಿವನ ಬೆವರು ಕದಂಬ ವೃಕ್ಷದ ಕೆಳಗೆ ಬಿದ್ದು ಆತ ಹುಟ್ಟಿದ. ಆದ್ದರಿಂದಲೇ ಅವನ ವಂಶಸ್ಥರಿಗೆ ಕದಂಬರೆಂದು ಹೆಸರಾಯಿತು. ಅವನಿಗೆ ನಾಲ್ಕು ಕೈ, ಮೂರು ಕಣ್ಣು ಇದ್ದವಂತೆ. ಆ ತ್ರಿಲೋಚನ ಕದಂಬನ ಮಗ ಮಯೂರಶರ್ಮ. ಅವನೇ ಕದಂಬ ರಾಜ್ಯಸ್ಥಾಪಕ ಎಂದು ಒಂದು ಕಥೆ. ಮಯೂರ ಶರ್ಮನೇ ಕದಂಬ ವೃಕ್ಷದ ಕೆಳಗೆ ಹುಟ್ಟಿದನೆಂದು ಇನ್ನೊಂದು ಐತಿಹ್ಯ. ಅವನಿಗೂ ಹಣೆಯ ಮೇಲೆ ಕಣ್ಣಿದ್ದುದರಿಂದ ಕಿರೀಟವನ್ನು ಮುಡಿಯ ಮೇಲೆ ಕಟ್ಟಬೇಕಾಯಿತಂತೆ. ಪರಶುರಾಮ ಕ್ಷೇತ್ರಸೃಷ್ಟಿಯಾದ ಮೇಲೆ ಶಿವಪಾರ್ವತಿಯರು ಸಹ್ಯಾದ್ರಿಯ ಸುಂದರ ಪ್ರದೇಶಕ್ಕೆ ಬಂದಿದ್ದರೆಂದೂ ಅಲ್ಲಿ ಅವರಿಗೆ ಹುಟ್ಟಿದ ಮಗನೇ ಕದಂಬವಂಶದ ಆದ್ಯ ಪುರುಷನೆಂದೂ ಇನ್ನೊಂದು ಕಥೆಯಿದೆ. ಆದರೆ ಇಂಥ ಕಥೆಗಳೆಲ್ಲ ಕದಂಬರ ಆಡಳಿತ ಆರಂಭವಾದ ಅನೇಕ ವರ್ಷಗಳ ಮೇಲೆ ಹುಟ್ಟಿಕೊಂಡವಾದ್ದರಿಂದ ಇವಕ್ಕೆ ಹೆಚ್ಚಿನ ಬೆಲೆ ಕೊಡಬೇಕಾದುದಿಲ್ಲ. ಕದಂಬಪುಷ್ಪ ಪಾರ್ವತಿಗೆ ಪ್ರಿಯವಾದುದರಿಂದ ಶಿವಸಂಬಂಧವಾದ ಇಂಥ ಕಥೆಗಳು ಹುಟ್ಟಿಕೊಂಡಿರ ಬಹುದು ಎಂಬುದು ಇತಿಹಾಸಕಾರರ ಅಭಿಪ್ರಾಯ.

### ಬನವಾಸಿಯ ಕದಂಬರು

**ರಾಜಕೀಯ ಇತಿಹಾಸ :** ಬನವಾಸಿಯ ಕದಂಬರು 4ನೆಯ ಶತಮಾನದ ಆರಂಭದಲ್ಲಿ ಸುಮಾರು 3 ಶತಮಾನಗಳ ಕಾಲ ವಾಯವ್ಯ ಕರ್ನಾಟಕದ ಬಹು ಭಾಗವನ್ನಾಳಿದರು. ಇವರ ರಾಜಧಾನಿ ಬನವಾಸಿ. ಮಾನವ್ಯಗೋತ್ರದ ಹಾರಿತೀವಂಶದ ಬಾಹ್ಮಣ ವೀರಶರ್ಮ ಎಂಬುವನು ಈ ವಂಶದ ಆದ್ಯ. ಇವನ ಮಗ ಬಂಧುಷೇಣ ಕ್ಷಾತ್ರವೃತ್ತಿಯನ್ನು ಕೈಕೊಂಡಿದ್ದ ಎಂದು ಇತ್ತೀಚೆಗೆ ದೊರೆತ ಗುಡ್ನಾಪುರ ಶಾಸನ ತಿಳಿಸುತ್ತದೆ. ಅದೇ ಶಾಸನದಲ್ಲಿ ಬಂಧುಷೇಣನ ಮಗ ಮಯೂರಶರ್ಮ ಎಂದೂ ಈತ ಬ್ರಾಹ್ಮಣವನ್ನು ಪಾಲಿಸುತ್ತಿದನೆಂದೂ ತಿಳಿಸಿದರೆ, ತಾಳಗುಂದದಲ್ಲಿರುವ ಶಾಂತಿವರ್ಮನ ಶಾಸನ ಕದಂಬವಂಶ ಮತ್ತು ರಾಜ್ಯದ ಸ್ಥಾಪನೆಯ ಬಗ್ಗೆ ಹೆಚ್ಚು ವಿವರಗಳನ್ನು ಒದಗಿಸುತ್ತದೆ. ಅದರ ಪ್ರಕಾರ ಬ್ರಾಹ್ಮಣರಾದ ಈ ವಂಶಜರ ಮನೆಯ ಬಳಿ ಕದಂಬ ವೃಕ್ಷವೊಂದು ಇದ್ದುದರಿಂದ, ಈ ಮನೆಯವರಿಗೆ ಕದಂಬ ಎಂಬ ಹೆಸರು ಪ್ರಚಲಿತವಾಯಿತು. ಈ ಮಯೂರಶರ್ಮನೇ ಕದಂಬರಾಜ್ಯದ ಸ್ಥಾಪಕ. ಈತ ವೇದಾಧ್ಯಯನಕ್ಕಾಗಿ ತನ್ನ ತಾತ ವೀರಶರ್ಮನೊಡನೆ ಕಂಚಿಯ ಘಟಿಕಾಸ್ಥಾನಕ್ಕೆ ಹೋಗಿದ್ದ. ಅಲ್ಲಿಯ ರಾಜ ಅಶ್ವಮೇಧ ಯಾಗ ಮಾಡಿದಾಗ ಯಾವುದೋ ಕಾರಣದಿಂದ ಅವಮಾನಿತನಾಗಿ, ಛಲದಿಂದ ಶಸ್ತ್ರವಿದ್ಯೆ ಕಲಿತು ದಂಡುಕಟ್ಟಿ ದಾಳಿಮಾಡಿ ಪಲ್ಲವರ ಗಡಿನೆಲ ಶ್ರೀಪರ್ವತದ ಬಳಿಯ ಭಾಗವನ್ನಾಕ್ರಮಿಸಿಕೊಂಡ. ಮಗ್ಗುಲ ಮುಳ್ಳಾಗಿದ್ದ ಮಯೂರಶರ್ಮನ ವಿರೋಧ ಕಟ್ಟಿಕೊಳ್ಳಬಾರದೆಂಬ ಉದ್ದೇಶದಿಂದ ಪಲ್ಲವರು ಅವನಿಗೆ ಪಶ್ಚಿಮ ಸಮುದ್ರದಿಂದ ಪ್ರೇಹಾರ (ಪ್ರಾಯಶಃ ಮಲಪ್ರಭಾ ಅಥವಾ ಘಟಪ್ರಭಾ) ವರೆಗಿನ ಪ್ರದೇಶವನ್ನು ಬಿಟ್ಟುಕೊಟ್ಟರು.

ಮಯೂರಶರ್ಮ ಪಲ್ಲವಸಾಮಂತನಾಗಿ ಕದಂಬರಾಜ್ಯ ಸ್ಥಾಪನೆ ಮಾಡಿದರೂ ಸ್ವಲ್ಪ ಕಾಲದಲ್ಲೇ ಸ್ವಾತಂತ್ರ್ಯ ಘೋಷಿಸಿಕೊಂಡಂತೆ ತೋರುತ್ತದೆ. ಇವನ ಚಂದ್ರವಳ್ಳಿಯ ಶಾಸನದ ಪ್ರಕಾರ ಈತ ತ್ರೈಕೂಟಕ, ಅಭೀರ, ಪಲ್ಲವ, ಪರಿಯಾತ್ರಕ, ಶಕಸ್ಥಾನ, ಮೋಕರಿ, ಪುನ್ನಾಟ, ಸಯಿಂದಕ (ಸೇಂದ್ರಕ) ಮುಂತಾದ ರಾಜ್ಯಗಳನ್ನು ಗೆದ್ದ. ಆರಾವಳಿಯಿಂದ ವಿಂಧ್ಯದವರೆಗೆ ಇದ್ದದ್ದು ಸಯಿಂದಕರ ರಾಜ್ಯ. ಕಾವೇರಿ ಕಪಿನಿಗಳ ನಡುವಣ ರಾಜ್ಯ ಪುನ್ನಾಟ. ಮೋಕರಿಗಳು ಆಳುತ್ತಿದ್ದ ಉಜ್ಜಯಿನಿ ಮತ್ತು ರಾಜಸ್ಥಾನಗಳ ವರೆಗೆ ತನ್ನ ರಾಜ್ಯ ವಿಸ್ತರಿಸಿದನೇ ಎಂಬುದು ಸಂದೇಹಾಸ್ಪದ. ಅಂತೂ ಈ ನಾನಾ ರಾಜ್ಯಗಳ ಅರಸರೊಂದಿಗೆ ಈತ ಘರ್ಷಣೆ ನಡೆಸಿರಬಹುದೆಂಬುದಾಗಿ ಹೇಳಬಹುದಾಗಿದೆ. ಆದರೆ ಈಚೆಗೆ ಇಡೀ ಶಾಸನಪಾಠವನ್ನು ಪರಿಷ್ಕರಿಸಲಾಗಿದ್ದು, ಅದರ ಪ್ರಕಾರ ಶಾಸನವು ಕೆರೆಯೊಂದರ ನಿರ್ಮಾಣದ ವಿಷಯವನ್ನಷ್ಟೇ ಹೇಳುತ್ತದೆ. ಹಾಗೆಯೇ ಸೊರಬ ತಾಲ್ಲೂಕಿನ ಜಡೆ ಗ್ರಾಮದಲ್ಲಿ ದೊರೆತ ಏಳು ತಾಮ್ರಶಾಸನಗಳು ಕದಂಬರ ಕೆಲವು ಹೊಸ ಅರಸರ ಹೆಸರುಗಳನ್ನು - ಉದಾಹರಣೆಗೆ

**ಬನವಾಸಿಯ ಕದಂಬರ ವಂಶಾವಳಿ:**



ಪ್ರದ್ಯೋತವರ್ಮ - ತಿಳಿಸುತ್ತವೆ. ಈ ಬಗ್ಗೆ ವಿವರಗಳು ಪ್ರಕಟವಾಗಬೇಕಾಗಿವೆ.

ಕದಂಬರಸರ ಮೊದಲಿಗ ಮಯೂರಶರ್ಮನಾದರೂ (ಸು.325-45) ಅವನ ಅನಂತರ ಬಂದವರು ತಮ್ಮ ಹೆಸರುಗಳ ಕೊನೆಯ ಶಬ್ದವನ್ನು ವರ್ಮ ಎಂದು ಬದಲಾಯಿಸಿಕೊಂಡು ತಮ್ಮದು ರಾಜವಂಶವೆಂದು ಘೋಷಿಸಿಕೊಂಡರು. ಮಯೂರಶರ್ಮನ ಅನಂತರ ಕಂಗವರ್ಮ (ಸು.345-65), ಭಗೀರಥ (ಸು.365-85) ಮತ್ತು ರಘು (ಸು.385-405) ಪುತ್ರಾನುಕ್ರಮವಾಗಿ ಆಳಿದರು. ಅನಂತರ ಆಳಿದ ರಘುವಿನ ತಮ್ಮ ಕಾಕುತ್ಸ್ಥವರ್ಮ (ಸು.405-30) ಪ್ರಸಿದ್ಧ ದೊರೆ. ಈತ ಪಲ್ಲವರೊಂದಿಗೆ ಯುದ್ಧ ಮಾಡಿ, ನೆರೆಯ ಅರಸರೊಂದಿಗೆ ವಿವಾಹಸಂಬಂಧ ಬೆಳೆಸಿ ಕದಂಬ ರಾಜ್ಯವನ್ನು ವಿಸ್ತರಿಸಿ ಶಕ್ತಿಯುತವಾಗಿ ಮಾಡಿದ. ಆದರೆ ಇವನ ಮರಣಾನಂತರ ರಾಜ್ಯ ಭಾಗವಾಯಿತು. ಇವನ ಮಗ ಶಾಂತಿವರ್ಮ (ಸು.430-55) ಬನವಾಸಿಯಲ್ಲಿ ಆಳ್ವಿಕೆ ಮುಂದುವರಿಸಿದ. ಇನ್ನೊಬ್ಬ ಮಗ ಒಂದನೆಯ ಕೃಷ್ಣವರ್ಮ ತ್ರಿಪರ್ವತದಲ್ಲಿ ರಾಜ್ಯವಾಳತೊಡಗಿದ. ಶಾಂತಿವರ್ಮನ ಅನಂತರ ಬಂದ ಮೃಗೇಶ (ಸು.455-80) ಪಲ್ಲವರೊಂದಿಗೂ ಗಂಗರೊಂದಿಗೂ ಯುದ್ಧಮಾಡಿದ. ಮೃಗೇಶನ ಕಾಲದಲ್ಲಿ ಕದಂಬ ರಾಜ್ಯ ಇನ್ನೂ ವಿಸ್ತರಿಸಿತು. ಬನವಾಸಿಯ ಜೊತೆಗೆ ಪಲಾಶಿಕಾ ಎಂಬುದು (ಖಾನಾಪುರ ತಾಲ್ಲೂಕಿನಲ್ಲಿರುವ ಹಲಶಿ) ಎರಡನೆಯ ರಾಜಧಾನಿಯಾಯಿತು. ಮೃಗೇಶನ ತಮ್ಮ ಮಾಂಧಾತೃವರ್ಮನ ಹ್ರಸ್ವ ಆಳ್ವಿಕೆಯ (ಸು.480-85), ಅನಂತರ ಮೃಗೇಶನ ಮಗ ರವಿವರ್ಮ (ಸು.485-519), ಆಳಿದ. ಇವನು ವಿಷ್ಣುವರ್ಮನೆಂಬುವನನ್ನು ಸೋಲಿಸಿ ಕಾಂಚೀಪತಿ ಚಂಡದಂಡೇಶನನ್ನು ಕೊಂದು ರಾಜ್ಯವಿಸ್ತರಿಸಿದ. ಇವನ ಕಾಲದಲ್ಲಿ ಉಚ್ಚಂಗಿದುರ್ಗ (ಬಳ್ಳಾರಿ ಜಿಲ್ಲೆ) ಇನ್ನೊಂದು ರಾಜಧಾನಿಯಾಯಿತು. ರವಿವರ್ಮನ ಮಗ ಹರಿವರ್ಮ (ಸು.519-30) ಶಾಂತಿವರ್ಮನ ವಂಶದ ಕೊನೆಯ ದೊರೆ. ತ್ರಿಪರ್ವತ ಶಾಖೆಯ ಇಮ್ಮಡಿ ಕೃಷ್ಣವರ್ಮ ಇವನನ್ನು ಸೋಲಿಸಿ ಬನವಾಸಿಯನ್ನು ಆಕ್ರಮಿಸಿಕೊಂಡ. ಅನಂತರ ಆದ್ಯ ಕದಂಬರ ತ್ರಿಪರ್ವತ ಶಾಖೆಯವರ ಆಳ್ವಿಕೆ ಮುಂದುವರಿಯಿತು. ಈ ಶಾಖೆಯವರ ರಾಜಧಾನಿ ತ್ರಿಪರ್ವತ ಯಾವುದು, ಅವರ ಆಳ್ವಿಕೆಯುಪ್ರದೇಶದ ವಿಸ್ತಾರ ಎಷ್ಟು ಎಂಬುದು ಸರಿಯಾಗಿ ತಿಳಿದಿಲ್ಲ. ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಶಿಶಿಲವೇ ಮಯೂರಶರ್ಮನು ರಾಜ್ಯ ಸ್ಥಾಪನೆ ಮಾಡಿದ ತ್ರಿಪರ್ವತ ಅಥ'ವಾ ಶ್ರೀಪರ್ವತ ಎಂಬ ಅಭಿಪ್ರಾಯವೂ ಇದೆ. ಶ್ರೀಪರ್ವತ ಕರ್ನೂಲು ಜಿಲ್ಲೆಯ ಶ್ರೀಶೈಲಂ ಅಥ'ವಾ ನಾಗಾರ್ಜುನಕೊಂಡ ಎಂದು ಒಂದು ಊಹೆಯಾದರೆ, ಹಾಸನ ಜಿಲ್ಲೆಯ ಹಳೇಬೀಡು, ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ಅಥವಾ ಬೆಳಗಾಂವಿ ಜಿಲ್ಲೆಯ ಮುರ್ಗೋಡು ಎಂಬ ಊಹೆಗಳು ಇವೆ. ಒಂದನೆಯ ಕೃಷ್ಣವರ್ಮ (ಸು.430-60) ಶೂರದೊರೆ. ಈತ ನಾಗರನ್ನು (ಬಹುಶಃ ಸೇಂದ್ರಕರು) ಸೋಲಿಸಿ, ಪಲ್ಲವರಾಜ ನಣಕ್ಕಾಸನನ್ನೂ ಬಗ್ಗಿಸಿದ್ದಲ್ಲದೆ ಅಶ್ವಮೇಧಯಜ್ಞ ಮಾಡಿದ. ಇವನ ಅನಂತರ ವಿಷ್ಣುವರ್ಮ (ಸು.460-90), ಸಿಂಹವರ್ಮ (ಸು.490-516) ಮತ್ತು ಕೃಷ್ಣವರ್ಮ II (ಸು.516-40) ಪುತ್ರಾನುಕ್ರಮವಾಗಿ ಆಳಿದರು. ಕೃಷ್ಣವರ್ಮ ಮೂಲವಂಶದ ಹರಿವರ್ಮನನ್ನು ಸೋಲಿಸಿ ಬನವಾಸಿಯಲ್ಲಿ ನೆಲೆಗೊಂಡ. ಆದರೆ ಸು.540ರ ಹೊತ್ತಿಗೆ ಒಂದನೆಯ ಪುಲಕೇಶಿ ಕೃಷ್ಣವರ್ಮನನ್ನು ಸೋಲಿಸಿ ಚಳುಕ್ಯ ರಾಜ್ಯಸ್ಥಾಪನೆ ಮಾಡಿದ ಅನಂತರವೂ ಇಮ್ಮಡಿ ಪುಲಕೇಶಿಯ ಕಾಲದವರೆಗೆ ಕೃಷ್ಣವರ್ಮನ ವಂಶದ ಅಜವರ್ಮ, ರವಿವರ್ಮ ಮತ್ತು ಭೋಗಿವರ್ಮ ಎಂಬುವರು ಸಣ್ಣಪುಟ್ಟ ಪ್ರದೇಶಗಳನ್ನು ಉಳಿಸಿಕೊಂಡಿದ್ದರು. ಚಳುಕ್ಯ ರಾಜ್ಯ ವಿಸ್ತಾರದೊಡನೆ ಕದಂಬರ ಸ್ವತಂತ್ರ ಆಳ್ವಿಕೆ ನಿರ್ನಾಮವಾಯಿತು. (ಬಿ.ಎಚ್.ಎಸ್.)

**ಆಡಳಿತ ವ್ಯವಸ್ಥೆ :** ಕದಂಬರಾಜ್ಯದಲ್ಲಿದ್ದುದು ಏಕರಾಜಪ್ರಭುತ್ವವಾಗಿದ್ದು ರಾಜತ್ವ ವಂಶಪಾರಂಪರ್ಯವಾಗಿ ಬರುತ್ತಿತ್ತು. ರಾಜ್ಯಾಡಳಿತದಲ್ಲಿ ರಾಜ ನಿರಂಕುಶ ಪ್ರಭುವೇ ಆಗಿದ್ದರೂ ಆತ ಬುದ್ಧಿವಂತ ಮತ್ತು ನಿಷ್ಠಾವಂತ ಅಧಿಕಾರಿಗಳ ಸಹಾಯದಿಂದ ಧರ್ಮವಾಗಿ ಆಡಳಿತ ನಡೆಸಬೇಕಾಗಿತ್ತು. ಕೆಲವು ಕದಂಬ ಶಾಸನಗಳಲ್ಲಿ ರಾಜನ ಸಮೀಪಬಂಧುಗಳು ರಾಜ್ಯದ ಆಡಳಿತದಲ್ಲಿ ಭಾಗವಹಿಸುತ್ತಿದ್ದರೆಂಬುದಕ್ಕೆ ಆಧಾರಗಳಿವೆ (ಉದಾ: ಕಾಕುತ್ಸ್ಥನ ಅಳಿಯ ಪಶುಪತಿ). ಆದರೆ ಈ ಕಾಲದಲ್ಲಿ ರಾಣಿಯರು ರಾಜಕುಮಾರಿಯರು ಇವರುಗಳ ಪಾತ್ರ ಆಡಳಿತದಲ್ಲಿ ಇದ್ದಂತೆ ತೋರುವುದಿಲ್ಲ. ಕದಂಬ ರಾಜರು ಆಡಳಿತಕ್ಕೆ ಸಂಬಂಧಿಸಿದಂತೆ ವೃದ್ಧರ ಉಪದೇಶಗಳನ್ನು ಗ್ರಹಿಸುತ್ತಿದ್ದರೆಂಬುದು ಕೆಲವು ಶಾಸನಗಳಲ್ಲಿ ರಾಜನಿಗೆ ಅನ್ವಯವಾಗುವಂತಿರುವ ವೃದ್ಧೋಪದೇಶ ಗ್ರಾಹೀ ಎಂಬ ಮಾತಿನಿಂದ ತಿಳಿಯುತ್ತದೆ. ಹರಿವರ್ಮನಿಗೆ ಅವನ ಕಕ್ಕ ಶಿವರಥ'ನೂ ಇಮ್ಮಡಿ ಕೃಷ್ಣವರ್ಮನಿಗೆ ಹರಿದತ್ತ ಶ್ರೇಷ್ಠಿಯೂ ಮೃಗೇಶವರ್ಮನಿಗೆ ಧರ್ಮನನ್ದಆಚಾರ್ಯ ಮತ್ತು ರವಿನನ್ದ್ಯಾಚಾರ್ಯರು ಉಪದೇಶಕರಾಗಿದ್ದರು.

ಕದಂಬರ ವಿಸ್ತಾರ ರಾಜ್ಯದಲ್ಲಿ ವಿವಿಧ ಪ್ರದೇಶಗಳನ್ನು ರಾಷ್ಟ್ರ, ವಿಷಯ, ನಾಡು ಈ ರೀತಿಯ ಸಣ್ಣ ಆಡಳಿತ ಘಟಕಗಳಾಗಿ ವಿಂಗಡಿಸಲಾಗಿತ್ತು. ಅವರ ಶಾಸನಗಳಲ್ಲಿ ಸ್ಥಾನಕುನ್ದೂರ ವಿಷಯ, ಕರವನ್ನಾಡ್ಗ ವಿಷಯ, ತಗರೆ ವಿಷಯ, ಮೊಗಲೂರು ವಿಷಯ, ಸೇಂದ್ರಕ ವಿಷಯ, ಆಸನ್ದಿ ವಿಷಯ ಈ ಪ್ರಾಂತ್ಯಗಳ ಹೆಸರುಗಳು ಬರುತ್ತವೆ. ಕದಂಬ ವಿಷ್ಣುಶರ್ಮನ ತಂಗಳಿ ಶಾಸನದಲ್ಲಿ ಸಿನ್ದುಥ'ಯಾ ರಾಷ್ಟ್ರದ ಹೆಸರಿದೆ. ಹಲ್ಮಿಡಿ ಶಾಸನದಲ್ಲಿ ನರಿದಾವಿಳೆನಾಡನ್ನು ಹೆಸರಿಸಿದೆ. ಪ್ರಾಂತೀಯ ವಿಭಾಗಗಳಲ್ಲಿನ ಆಡಳಿತ ಹೇಗಿತ್ತೆಂಬುದಕ್ಕೆ ಸ್ಪಷ್ಟ ಆಧಾರಗಳಿಲ್ಲ. ಆದರೆ ಸೇಂದ್ರಕ ವಿಷಯದಂತ ಭಾಗದಲ್ಲಿ ಸೇಂದ್ರಕರು, ಹಾಗೇ ಕೊಂಕಣದ ಭಾಗದಲ್ಲಿ ಕೇಕಯರು ಈ ರೀತಿಯ ಸಣ್ಣ ರಾಜವಂಶಗಳವರು ವಂಶಪಾರಂಪರ್ಯವಾಗಿ ಅಧಿಕಾರದಲ್ಲಿರುತ್ತಿದ್ದರೆಂದು ತೋರುತ್ತದೆ. ಈ ಕಾಲದ ಶಾಸನಗಳಲ್ಲಿ ಉಕ್ತವಾಗಿರುವ ವಿಷಯಪತಿ, ಸಾಮಂತ, ಗ್ರಾಮಭೋಗಿಕ, ಮಹತ್ತರ, ದೇಶಾಧಿಪತಿ, ರಾಜಪುರುಷ ಮೊದಲಾದವರು ಪ್ರಾಂತ್ಯಗಳ ಹಾಗೂ ಗ್ರಾಮಗಳ ಅಧಿಕಾರಿಗಳಾಗಿರಬಹುದು. ಸೇನಾಪತಿ, ಬಹುಶಃ ಸಟ್ಟಿಜ್ಗ ಇವರುಗಳು ಸೈನ್ಯದ ಅಧಿಕಾರಿಗಳಾಗಿದ್ದರು.

ರಾಜರು ಪ್ರಜೆಗಳಿಂದ ಅನೇಕ ರೀತಿಯ ತೆರಿಗೆಗಳನ್ನು ಸಂಗ್ರಹಿಸಿ ಕೋಶಾಭಿವೃದ್ಧಿ ಮಾಡಿಕೊಂಡು ಆಡಳಿತ ನಡೆಸುತ್ತಿದ್ದರು. ಹಲ್ಮಿಡಿ ಶಾಸನದಲ್ಲಿ ಪತ್ತೊನ್ದಿ ಕುಱುಮ್ಬಿಡಿ ಈ ತೆರಿಗೆಗಳ ಹೆಸರು ಇವೆ.

**ಆರ್ಥಿಕ-ಸಾಮಾಜಿಕ ಸ್ಥಿತಿ :** ಕದಂಬರ ರಾಜಕೀಯ ಇತಿವೃತ್ತವನ್ನು ಗಮನಿಸಿದರೆ ಈ ಕಾಲದಲ್ಲಿ ಭದ್ರವಾದ ಆರ್ಥಿಕ ಸ್ಥಿತಿ ಮತ್ತು ವ್ಯವಸ್ಥೆಗಳು ಇದ್ದಂತೆ ತೋರುತ್ತದೆ. ವ್ಯವಸಾಯ ನಾಡಿನ ಮುಖ್ಯ ಆರ್ಥಿಕ ಮೂಲವಾಗಿತ್ತು. ಹಲವಾರು ಶಾಸನಗಳಲ್ಲಿರುವ ಭೂಮಿದಾನ ಮಾಡಿರುವುದರ ಪ್ರಸ್ತಾಪ ಈ ಅಂಶವನ್ನು ಸ್ಪಷ್ಟಪಡಿಸುತ್ತದೆ. ಭೂಮಿ ಸ್ಥಿರಾಸ್ತಿ, ಸರ್ವಕಾಲದಲ್ಲೂ ಉತ್ಪನ್ನ ನೀಡಬಲ್ಲುದು ಎಂಬುದೇ ಇದಕ್ಕೆ ಕಾರಣ. ವ್ಯವಸಾಯ ಭೂಮಿಗಳಲ್ಲಿ ಗಜ್ಜಿದ, ಖಜ್ಜಾಣ ಮೊದಲಾದ ಭಿನ್ನರೀತಿಯವು ಇದ್ದುದ್ದು ಕಂಡುಬರುತ್ತದೆ. ವ್ಯವಸಾಯದ ಅಭಿವೃದ್ಧಿಗೆ ರಾಜ್ಯದ ಪ್ರೋತ್ಸಾಹವೂ ಇರುತ್ತಿತ್ತು. ಚಂದ್ರವಳ್ಳಿ ಶಾಸನದಲ್ಲಿ ಮಯೂರಶರ್ಮ ಅಲ್ಲಿ ಕೆರೆ ಕಟ್ಟಿಸಿದ ವಿಷಯವಿದೆ. ರವಿಮಹಾರಾಜನ ಗುಡ್ನಾಪುರ ಶಾಸನದಲ್ಲಿ ಗುಡ್ಡ ತಟಾಕದ ಪ್ರಸ್ತಾಪವಿದೆ. ಕಾಕುತ್ಸ್ಥವರ್ಮ ತಾಳಗುಂದದಲ್ಲಿ ಕೆರೆಯೊಂದನ್ನು ಕಟ್ಟಿಸಿದ. ಪಶುಪಾಲನೆ, ನೇಯ್ಗೆ ಮೊದಲಾದ ಇತರ ಕಸಬುಗಳೂ ಈ ಕಾಲದಲ್ಲಿದ್ದಿರಬೇಕು. ಬಹುಶಃ ವ್ಯಾಪಾರ ಸಾಕಷ್ಟು ಅಭಿವೃದ್ಧಿಯಾಗಿರಬೇಕು. ಆದರೆ ಈ ವಿಷಯದಲ್ಲಿ ತಕ್ಕಷ್ಟು ಆಧಾರಗಳು ದೊರಕುವುದಿಲ್ಲ. ಕದಂಬರು ಗುಪ್ತರೇ ಮೊದಲಾದವರೊಡನೆ ಸಂಬಂಧ ಬೆಳೆಸಿದ್ದುದು, ಮಯೂರಶರ್ಮನ ಕಂಚಿಯ ಪ್ರಯಾಣ ಮೊದಲಾದ ಪ್ರಸ್ತಾಪಗಳು ಅಂದಿನ ಕಾಲದಲ್ಲಿ ಭಾರತದ ಇತರ ಭಾಗಗಳೊಡನೆ ಕದಂಬ ರಾಜ್ಯ ಒಳ್ಳೆಯ ಸಂಪರ್ಕವ್ಯವಸ್ಥೆ ಹೊಂದಿರಬೇಕೆನಿಸುತ್ತದೆ. ಇವು ವ್ಯಾಪಾರಕ್ಕೂ ಸಹಕಾರಿಯಾಗಿರಬೇಕು. ಅಲ್ಲದೆ ಆಗ್ನೇಯ ಏಷ್ಯದಲ್ಲಿ ದೊರಕಿರುವ ಹಲವು ಶಾಸನಗಳಲ್ಲಿ ಕದಂಬರ ಕಾಲದಲ್ಲಿದ್ದ ಲಿಪಿ ಹಾಗೂ ಶಾಸನ ಸ್ವರೂಪ ಅಲ್ಲಿಯೂ ಪ್ರಚಲಿತವಾಗಿತ್ತು ಎಂಬುದಕ್ಕೆ ಸ್ಪಷ್ಟ ಸಾಕ್ಷ್ಯಗಳು ದೊರಕುವುದರಿಂದ, ದ್ವೀಪಾಂತರಗಳೊಡನೆ ಕದಂಬರ ಕಾಲದಲ್ಲಿ ಕರ್ನಾಟಕ ಸಂಪರ್ಕ ಬೆಳೆಸಿಕೊಂಡಿತ್ತೆಂಬುದು ತಿಳಿಯುತ್ತದೆ. ಅಲ್ಲದೆ ಬನವಾಸಿಯ ಹೆಸರು ಈ ಕಾಲದಲ್ಲಿ ಬರ್ಮಾ, ಶ್ರೀಲಂಕಾಗಳಲ್ಲಿ ಸಹ ಪ್ರಸಿದ್ಧವಾಗಿತ್ತು. ಈ ಸಂಪರ್ಕಗಳು ಪ್ರಾರಂಭಿಕವಾಗಿ ವ್ಯಾಪಾರದಿಂದ ಕುದುರಿದ್ದರೆ ಆಶ್ಚರ್ಯವಿಲ್ಲ.

ವ್ಯಾಪಾರದ ಸಂಬಂಧದಲ್ಲಿ ರಾಜನ ಪ್ರೋತ್ಸಾಹವೂ ಸಾಕಷ್ಟಿರಬೇಕು. ಕದಂಬರ ಒಂದು ಶಾಸನದಲ್ಲಿ ನನ್ದಪದವೆಂಬ ಹಾದಿಯನ್ನೂ ಕರ್ಣ್ನೇಸಕವೆಂಬ ನದಿಗೆ ಒಂದು ಸೇತುವೆಯನ್ನೂ ಮಾಡಿಸಿದ ವಿಷಯವಿದೆ. ರಾಜರು ನಾಣ್ಯಗಳನ್ನು ಹೊರಡಿಸುತ್ತಿದ್ದುದು ವ್ಯಾಪಾರ ಸುಗಮವಾಗಿ ನಡೆಯಲು ಸಹಾಯಕವಾಗಿತ್ತು. ಹೀಗೆ ಬೆಳೆಯುತ್ತಿದ್ದ ಆರ್ಥಿಕ ವ್ಯವಸ್ಥೆಯಿಂದ ದೇಶ ಸಮೃದ್ಧವಾಗಿ, ರಾಜಧಾನಿ ಬನವಾಸಿಯಲ್ಲದೆ, ತಾಳಗುಂದ, ಹಲಶಿ, ಹರೇಶಪುರ, ಉಚ್ಚಂಗಿ ಮೊದಲಾದ ಅನೇಕ ನಗರಗಳು ಹುಟ್ಟಿಕೊಳ್ಳುವ ಸಾಧ್ಯತೆ ಉಂಟಾಯಿತು.

ಬನವಾಸಿಯ ಕದಂಬರ ಕಾಲದಲ್ಲಿ ಅವರ ರಾಜ್ಯದಲ್ಲಿ ಅನೇಕ ಧರ್ಮಗಳು ಪ್ರಚಲಿತವಾಗಿದ್ದುವು. ಆದರೆ ಈ ಹಿಂದೆ ಬನವಾಸಿ ಪ್ರದೇಶದಲ್ಲಿ ನೆಲೆಗೊಂಡಿದ್ದ ಬೌದ್ಧಧರ್ಮ ಎಷ್ಟರ ಮಟ್ಟಿಗೆ ಮುಂದುವರಿಯಿತು ಎಂಬುದಕ್ಕೆ ಐತಿಹಾಸಿಕ ಮಾಹಿತಿಗಳು ದೊರಕುವುದಿಲ್ಲ. ಹೊನ್ನಾವರದಲ್ಲಿ ದೊರಕಿದ ಒಂದು ತಾಮ್ರಪಟದಲ್ಲಿ ಮಾತ್ರ ಕದಂಬ ರವಿವರ್ಮನ ಸಾಮಂತನಾಗಿದ್ದ ಕೇಕಯ ಅರಸನೊಬ್ಬ ಬೌದ್ಧರಿಗೆ ದಾನಕೊಟ್ಟ ಪ್ರಸ್ತಾಪವಿದೆ. ಈ ಕಾಲದಲ್ಲಿ ಜೈನಧರ್ಮ ಮತ್ತು ಹಿಂದುಧರ್ಮಗಳು ಪ್ರಬಲಗೊಂಡು ಬೌದ್ಧಧರ್ಮ ಹಿಂದೆ ಸರಿದಿದ್ದಂತೆ ತೋರುತ್ತದೆ.

ಬನವಾಸಿಯ ಕದಂಬರ ಕಾಲದಲ್ಲಿ ಜೈನಧರ್ಮಕ್ಕೆ ಸ್ವಲ್ಪಮಟ್ಟಿನ ರಾಜ ಪ್ರೋತ್ಸಾಹ ದೊರಕಿತು. ಯುವರಾಜ ಕಾಕುತ್ಸ್ಥವರ್ಮ ಪಲಾಶಿಕೆಯಲ್ಲಿದ್ದಾಗ ಅರ್ಹಂತರಿಗೆ ಭೂಮಿದಾನ ಮಾಡಿದನೆಂದು ಹಲಶಿ ತಾಮ್ರಪಟದಲ್ಲಿ ಹೇಳಿದೆ. ಹಲಶಿಯ ಇನ್ನೊಂದು ತಾಮ್ರಪಟದಲ್ಲಿ ಮೃಗೇಶವರ್ಮ ತನ್ನ ತಂದೆಯ ಜ್ಞಾಪಕಾರ್ಥವಾಗಿ ಅದೇ ನಗರದಲ್ಲಿ ಜಿನಾಲಯವೊಂದನ್ನು ಕಟ್ಟಿಸಿ ಜೈನರಿಗೆ ದತ್ತಿಗಳನ್ನು ಕೊಟ್ಟ ವಿಷಯವಿದೆ. ಇದೇ ಹಲಶಿಯ ಜಿನಾಲಯಕ್ಕೆ ದತ್ತಿ ನೀಡಿದ ಬಗ್ಗೆ ರವಿವರ್ಮನ ಕಾಲದ ಶಾಸನಗಳೂ ಇವೆ. ರವಿವರ್ಮ ತನ್ನ ರಾಜಧಾನಿಯಲ್ಲಿ ಅರಮನೆಯ ಬಳಿಯಲ್ಲೇ ಕಾಮಜಿನಾಲಯವೊಂದನ್ನು ಕಟ್ಟಿಸಿದ ವಿಷಯ ಗುಡ್ನಾಪುರ ಶಾಸನದಿಂದ ತಿಳಿಯುತ್ತದೆ. ಕದಂಬರ ಕಾಲದಲ್ಲಿ ಜೈನರು ರಾಜರ ಮೇಲೆ ಸಾಕಷ್ಟು ಪ್ರಭಾವ ಬೀರುತ್ತಿದ್ದಿರಬೇಕು. ರವಿಮಹಾರಾಜ ಜೈನ ಕುಮಾರದತ್ತನಿಂದ ರಾಜ್ಯ ಹಾಗೂ ಧರ್ಮದ ವಿಷಯದಲ್ಲಿ ಸಲಹೆ ಪಡೆಯುತ್ತಿದ್ದನೆಂದು ಒಂದು ಶಾಸನ ತಿಳಿಸುತ್ತದೆ. ಈ ಕಾಲದ ಜೈನಧರ್ಮದಲ್ಲಿ ಹಲವು ಪಂಥೀಯ ಪ್ರಭೇದಗಳಿದ್ದುವು. ಕದಂಬ ಶಾಸನಗಳಲ್ಲಿ ಯಾಪನೀಯ ನಿರ್ಗ್ರಂಥ ದಿಗಂಬರ ಕೂರ್ಚಕ ಮತ್ತು ಶ್ವೇತಪಟ (ಶ್ವೇತಾಂಬರ) ಪಂಥಗಳ ಪ್ರಸ್ತಾಪ ದೊರಕುತ್ತದೆ. ಜೈನ ದೇವಾಲಯಗಳ ರಚನೆ, ಮುನಿಗಳು ಅಲ್ಲಿ ವಾಸಿಸುತ್ತಿದ್ದುದ್ದು, ಬಸದಿಗಳಲ್ಲಿ ಉಪಲೇಪನ, ಅಭ್ಯಂಜನ, ಭಿನ್ನ ಸಂಸ್ಕಾರ, ಮಹಿಮಾ (ಉತ್ಸವ) ಮೊದಲಾದವೂ ಆಹಾರ, ವಿದ್ಯಾದಾನಗಳೂ ನಡೆಯುತ್ತಿದ್ದುದು ಸಮಕಾಲೀನ ಶಾಸನಗಳಿಂದ ತಿಳಿಯುತ್ತದೆ.

ಬನವಾಸಿಯ ಕದಂಬರು ಬಹುತೇಕ ವೈದಿಕ ಧರ್ಮಾವಲಂಬಿಗಳಾಗಿದ್ದರು. ತಾಳಗುಂದ ಶಾಸನದಲ್ಲಿ ವೇದಾಧ್ಯಯನ ಮತ್ತು ಯಜ್ಞಯಾಗಾದಿಗಳಲ್ಲಿ ಕದಂಬ ಮನೆತನದವರು ನಿರತರಾಗಿದ್ದರೆಂದು ಹೇಳಿದೆ. ರವಿವರ್ಮ, ಕೃಷ್ಣವರ್ಮ ಮೊದಲಾದ ಅರಸರು ಅಶ್ವಮೇಧಾದಿ ಯಜ್ಞಗಳನ್ನು ಮಾಡಿದ್ದರು. ಕದಂಬ ವಂಶದವರು ಅಹಿಚ್ಛತ್ರದಿಂದ ಬ್ರಾಹ್ಮಣ ಕುಟುಂಬಗಳನ್ನು ತಂದು ತಮ್ಮ ರಾಜ್ಯದಲ್ಲಿ ನೆಲಸಿದರೆಂದು ಐತಿಹ್ಯಗಳಿವೆ. ಆ ಕಾಲದಲ್ಲಿ ವೇದಪಾರಗರೂ ಧನ್ವೋಪಾರಗರೂ ಯಜ್ಞವಿದರೂ ಷಟ್ಕರ್ಮನಿರತರೂ ಆದ ಬ್ರಾಹ್ಮಣರು ಇದ್ದರೆಂಬ ವಿಷಯ ಅನೇಕ ಕದಂಬ ಶಾಸನಗಳಲ್ಲಿ ದೊರೆಯುತ್ತದೆ. ಈ ಕಾಲದಲ್ಲಿ ವೈದಿಕ ಹಿಂದು ಧರ್ಮ ಮುಂದುವರೆಯುತ್ತಿದ್ದರೂ ಪೌರಾಣಿಕ ಹಿಂದುಧರ್ಮ ಸಹ ಪ್ರಚಾರದಲ್ಲಿತ್ತು. ಕದಂಬರಾಜರ ವ್ಯಕ್ತಿನಾಮಗಳಲ್ಲಿ ಕಂಡುಬರುವ ಭಗೀರಥ, ರಘು, ಕಾಕುತ್ಸ್ಥ, ರವಿ, ಕೃಷ್ಣ, ಹರಿ, ಭಾನು ಇಂಥ ಹೆಸರುಗಳು ರಾಮಾಯಣದೊಳಗಿನ ಮತ್ತು ವೈಷ್ಣವೀಯ ಹೆಸರುಗಳೇ ಆಗಿವೆ. ಮಯೂರಶರ್ಮನ ಹೆಸರು ಸ್ಕಂದನನ್ನು ಸೂಚಿಸುತ್ತದೆ. ಹಲ್ಮಿಡಿ ಮೊದಲಾದ ಶಾಸನಗಳಲ್ಲಿ ವಿಷ್ಣುಸ್ತುತಿ ತಾಳಗುಂದ ಶಾಸನದ ಮಹಾದೇವ ದೇವಾಲಯದ ಉಲ್ಲೇಖ, ಅಲ್ಲದೆ ಇತರ ಕೆಲವು ಶಾಸನಗಳಲ್ಲಿರುವ ಬ್ರಹ್ಮ ಮತ್ತು ತ್ರಿಮೂರ್ತಿಗಳನ್ನು ಕುರಿತ ಪ್ರಾರ್ಥನಾಪದ್ಯಗಳು ಈ ಕಾಲದ ಪೌರಾಣಿಕ ಹಿಂದುಧರ್ಮದ ಪ್ರಭಾವವನ್ನು ಪರಿಚಯಮಾಡಿಕೊಡುತ್ತವೆ. ಹಿಂದು ದೇವಾಲಯಗಳ ರಚನೆಯೂ ಈ ಕಾಲದಲ್ಲಿದ್ದುದಕ್ಕೆ ತಾಳಗುಂದ ಶಾಸನ ಮಾಹಿತಿ ನೀಡುತ್ತದೆ. ಶಿವಮೊಗ್ಗ ಜಿಲ್ಲೆಯ ಜಂಬೆಹಳ್ಳಿಯಲ್ಲಿ ಈ ಕಾಲದ ಮಹಿಷಮರ್ದಿನಿಯ ಶಿಲ್ಪವೊಂದು ದೊರಕಿದೆ.



ಜಂಬೆಹಳ್ಳಿಯ ದುರ್ಗಾ ವಿಗ್ರಹ

ವರ್ಣ ಮತ್ತು ಜಾತಿಗಳು ಈ ಕಾಲದ ಹೊತ್ತಿಗೆ ವ್ಯವಸ್ಥಿತವಾಗುತ್ತಿದ್ದುವು. ಮನು ಮೊದಲಾದವರ ಧರ್ಮಶಾಸ್ತ್ರಗಳು ಸಮಾಜದ ರೀತಿನೀತಿಗಳಿಗೆ ಆಧಾರಸ್ತಂಭಗಳಾಗಿ ಪರಿಗಣಿತವಾಗಿದ್ದುವು. ಚತುರ್ವರ್ಣಗಳ ಪ್ರಸ್ತಾಪವಲ್ಲದೆ, ವರ್ಣಾಶ್ರಮ ಧರ್ಮವನ್ನು ಸಂರಕ್ಷಿಸುವುದು ರಾಜನ ಕರ್ತವ್ಯವೆಂಬ ಭಾವನೆ ಬೆಳೆದಿತ್ತು. ಆದರೆ ಈ ವರ್ಣ ವ್ಯವಸ್ಥೆ ಮುಂದಿನ ಕಾಲದಲ್ಲಿದ್ದಷ್ಟು ಸ್ನಿಗ್ಧವಾಗಿದ್ದಂತೆ ತೋರುವುದಿಲ್ಲ. ಬ್ರಾಹ್ಮಣನಾಗಿದ್ದ ಮಯೂರಶರ್ಮ ಕ್ಷತ್ರಿಯಧರ್ಮವನ್ನು ಅನುಸರಿಸಿದ್ದು, ಆ ಕಾಲದ ಬ್ರಾಹ್ಮಣ ವರ್ಗಗಳಲ್ಲಿ ಹಲವರು ಸಂಸ್ಕೃತಾನ್ಯ ದೇಶೀರೂಪದ ವ್ಯಕ್ತಿನಾಮಗಳನ್ನು ಹೊಂದಿದ್ದು (ಉದಾ: ತದಂಗುಟ್ಟಿ) ಬ್ರಾಹ್ಮಣ ವಂಶೀಯನಾದ ಕಾಕುತ್ಸ್ಥ ವೈಶ್ಯಮೂಲದ ಗುಪ್ತರಂಥವರೊಡನೆ ಕೊಡುಕೊಳ್ಳುವ ಸಂಬಂಧ ಬೆಳೆಸಿದ್ದು ಮೊದಲಾದವು ಈ ಸ್ಥಿತಿಯ ಸೂಚಕಗಳಾಗಿವೆ. ಕದಂಬರ ಕಾಲದ ಹೊತ್ತಿಗೆ ವೃತ್ತಿ ಸಂಬಂಧವಾದ ಜಾತಿಗಳೂ ಬೆಳೆದಿರಬಹುದಾದರೂ ಇದಕ್ಕೆ ಸ್ಪಷ್ಟ ನೇರ ಆಧಾರಗಳು ದೊರಕುವುದಿಲ್ಲ. ಸ್ವಕುಲದ ಬಗ್ಗೆ ಗೌರವ ಬಹುಮಟ್ಟಿಗೆ ಬೆಳೆದು ಬಂದಿದ್ದು ಕುಲಾಭಿಮಾನ ಮತ್ತು ಕುಲಶುದ್ಧಿ ಮೊದಲಾದ ಅಂಶಗಳು ವರ್ಣ ಜಾತಿಗಳು ಸ್ನಿಗ್ಧವಾಗಲು ಅವಕಾಶ ಮಾಡಿಕೊಟ್ಟಂತೆ ಕಾಣುತ್ತದೆ. ಈ ಪ್ರವೃತ್ತಿಯ ಬಗ್ಗೆ ಸಮಕಾಲೀನ ಶಾಸನಗಳಲ್ಲಿ ಸಾಂದರ್ಭಿಕ ಸಾಕ್ಷ್ಯಗಳು ದೊರಕುತ್ತವೆ. ಜೈನ ಮತ್ತು ಬೌದ್ಧ ಸಂಪ್ರದಾಯಾನುಯಾಯಿಗಳು ಈ ವರ್ಣಜಾತಿ ವ್ಯವಸ್ಥೆಯ ಹೊರಗಿದ್ದಂತೆ ತೋರುತ್ತದೆ.

ಬನವಾಸಿಯು ಕದಂಬರ ಕಾಲದಲ್ಲಿ ಹುಟ್ಟಿದ ತಾಮ್ರ, ಶಿಲಾಶಾಸನಗಳನ್ನು ನೋಡಿದರೆ ಆ ಕಾಲದಲ್ಲಿ ಸಾಕಷ್ಟು ವಿದ್ಯಾಪ್ರೋತ್ಸಾಹ ವಿರಬೇಕೆಂಬುದು ತಿಳಿಯುತ್ತದೆ. ಬಹುಶಃ ತಾಳಗುಂದದಂಥ ಸ್ಥಳಗಳಲ್ಲಿ ಬ್ರಹ್ಮಪುರಿಗಳಿದ್ದು ಅವು ವಿದ್ಯಾ ಕೇಂದ್ರಗಳಾಗಿರಬೇಕು. ಸಮಕಾಲೀನ ಶಾಸನಗಳಲ್ಲಿ ನಾನಾ ಗೋತ್ರಸೂತ್ರದ ಬ್ರಾಹ್ಮಣರಿಗೆ ಗ್ರಾಮದಾನ ಮಾಡಿರುವ ವಿಷಯಗಳು ತಿಳಿಯುವುದರಿಂದ ಅಗ್ರಹಾರಗಳೂ ಇದ್ದು ವಿದ್ಯಾಧ್ಯಯನ ಮತ್ತು ಪ್ರಸಾರಕ್ಕೆ ಸಹಾಯಕವಾಗಿರಬಹುದೆಂದು ಊಹಿಸಬಹುದು. ಜೈನ ಕೇಂದ್ರಗಳಲ್ಲಿ ವಿದ್ಯಾದಾನವೂ ಮುಖ್ಯವಾಗಿತ್ತು. ವೇದ, ಛಂದಸ್ಸುಗಳಲ್ಲಿ ಪಾರಂಗತರಾಗಿದ್ದ ಬ್ರಾಹ್ಮಣರ ಪ್ರಸ್ತಾಪ ಶಾಸನಗಳಲ್ಲಿವೆ. ಶಾಸ್ತ್ರಾಗಮಗಳಲ್ಲಿ ಪಾಂಡಿತ್ಯವನ್ನು ಪಡೆದಿದ್ದ ಜೈನ ಕುಮಾರದತ್ತ ಎಂಬುವನ ಉಲ್ಲೇಖ ಹಲಶಿಯ ತಾಮ್ರಪಟದಲ್ಲಿದೆ. ಇವು ಆಕಾಲದ ಅಧ್ಯಯನ ವಿಷಯಗಳ ಬಗ್ಗೆ ಸ್ವಲ್ಪ ಸೂಚನೆ ನೀಡುತ್ತವೆ. ಸಂಸ್ಕೃತ ಭಾಷೆ ಕರ್ನಾಟಕದಲ್ಲಿ ವಿಶೇಷವಾಗಿ ಪ್ರಚಾರಕ್ಕೆ ಬಂದಿದ್ದು ಕದಂಬರ ಕಾಲದಲ್ಲಿ, ಇವರ ಹಲವಾರು ಶಾಸನಗಳು ಸಂಸ್ಕೃತ ಭಾಷೆಯಲ್ಲಿವೆ. ತಾಳಗುಂದ ಶಾಸನದಂಥ ಉತ್ಕೃಷ್ಟ ಕಾವ್ಯರಚನೆಗಳೂ ಈ ಕಾಲದಲ್ಲಿ ಕಂಡುಬರುತ್ತವೆ. ಬಹುಶಃ ಕನ್ನಡ ಭಾಷೆಯೂ ಆಡಳಿತಾದಿಗಳಲ್ಲಿ ಉಪಯೋಗಕ್ಕೆ ಬಂದು ಅದು ಗ್ರಂಥಸ್ಥ ಭಾಷೆಯಾಗಬಲ್ಲ ರೂಪವನ್ನು ಪಡೆದುಕೊಳ್ಳಲಾರಂಭಿಸಿರಬೇಕೆಂದು ಹಲ್ಮಿಡಿ ಶಾಸನದಿಂದ ತಿಳಿಯಬಹುದು. ಲಲಿತ ಕಲೆಗಳ ಬಗ್ಗೆ ಸಮಕಾಲೀನ ಮಾಹಿತಿಗಳು ಕಡಿಮೆ. ಸಮಾಜದ ಉನ್ನತ ವರ್ಗಗಳಲ್ಲಿ ಶಿಷ್ಟಸಂಗೀತ ರೂಪಿತವಾಗಿದ್ದಿತೆಂಬುದಕ್ಕೆ ತಾಳಗುಂದ ಶಾಸನದಲ್ಲಿ ಆಧಾರ ದೊರಕುತ್ತದೆ. ಕದಂಬರ ಮನೆಯಲ್ಲಿ ಸಂಗೀತ ಪ್ರತಿಧ್ವನಿಸುತ್ತಿತ್ತು ಎಂದು ಅದರಲ್ಲಿ ಹೇಳಲಾಗಿದೆ.

**ವಾಸ್ತುಶಿಲ್ಪ :** ಕಾಕುತ್ಸ್ಥವರ್ಮನ ತಾಳಗುಂದ ಶಾಸನದ ಮಹಾದೇವ ದೇವಾಲಯದ ಉಲ್ಲೇಖ, ಹಲಶಿ ತಾಮ್ರಪಟದಲ್ಲಿ ಬರುವ ಪಲಾಸಿಕ ಎಂಬಲ್ಲಿ ಮೃಗೇಶ ಕಟ್ಟಿಸಿದ ಜೈನಬಸದಿಯ ಪ್ರಸ್ತಾಪ ಇಂಥವು ಆ ಕಾಲದಲ್ಲಿ ದೇವಾಲಯ ರಚನೆ ರೂಢಿಯಲ್ಲಿತ್ತೆಂಬುದಕ್ಕೆ ಸಾಕ್ಷ್ಯಗಳಾಗಿವೆ. ಆದರೆ ಮೊದಲ ಕದಂಬ ಅರಸರ ಕಾಲಕ್ಕೆ ಖಚಿತವಾಗಿ ಸೇರಿದ ಕಟ್ಟಡಗಳನ್ನು ಗುರುತಿಸಿಲ್ಲವಾದ್ದರಿಂದ, ಅಂದಿನ ದೇವಾಲಯಗಳ ಸ್ವರೂಪವೇನು, ಭಾರತೀಯ ವಾಸ್ತುಶಿಲ್ಪ ಪರಂಪರೆಯಲ್ಲಿ ಅವುಗಳ ಸ್ಥಾನವೇನು ಎಂಬ ಮುಖ್ಯ ವಿಷಯಗಳು ತಿಳಿಯುವಂತಿಲ್ಲ. ದಕ್ಷಿಣ ಭಾರತದಲ್ಲಿ ಶಿಲಾದೇವಾಲಯಗಳ ರಚನಾ ಸಂಪ್ರದಾಯ ಸುಮಾರು 5-6ನೆಯ ಶತಮಾನದಲ್ಲಿ ಬಾದಾಮಿಯ ಚಳುಕ್ಯ ಮತ್ತು ಕಂಚಿಯ ಪಲ್ಲವ ಅರಸರ ಆಶ್ರಯದಲ್ಲಿ ವಿಶೇಷವಾಗಿ ಬೆಳೆಯಿತೆಂದು ಎಲ್ಲ ವಿದ್ವಾಂಸರೂ ಹೇಳುತ್ತಾರೆ. ಹಾಗಿದ್ದಲ್ಲಿ ಬನವಾಸಿಯ ಕದಂಬರ ಕಾಲದ ದೇವಾಲಯಗಳು ಮರ ಅಥವಾ ಇಟ್ಟಿಗೆಯಲ್ಲಿ ಕಟ್ಟಿದವುಗಳಾಗಿರಬೇಕು. ಶಿಲಾ ದೇವಾಲಯ ಗಳಿದ್ದುದೇ ಆದರೆ ಚಳುಕ್ಯ ಮತ್ತು ಪ್ರಾಯಶಃ ಪಲ್ಲವ ಶೈಲಿಗೆ ಕೂಡ ಮೂಲಮಾದರಿಗಳನ್ನು ಇವು ಒದಗಿಸಿರಬಹುದು. ಈಗ ತಾಳಗುಂದದಲ್ಲಿ ಕದಂಬ ಶಾಸನಗಳಲ್ಲಿ ಹೆಸರಿಸಿರುವ ಪ್ರಣವೇಶ್ವರ ದೇವಾಲಯ ವೆಂಬುದೊಂದಿದ್ದರೂ ಅದು ಇತ್ತೀಚೆಗೆ ಬಹುವಾಗಿ ನವೀಕರಿಸಲ್ಪಟ್ಟಿದ್ದು, ಸ್ಪಷ್ಟ ಪ್ರಾಚೀನ ಅಂಶಗಳೇನನ್ನೂ ಉಳಿಸಿಕೊಂಡಿಲ್ಲ. ಮೊದಲ ಕದಂಬರ ರಾಜಧಾನಿಯಾದ ಬನವಾಸಿಯಲ್ಲಿ ಅವರ ಕುಲದೈವ ಮಧುಕೇಶ್ವರನ ಗುಡಿ ಇದೆ. ಈಗ ಇರುವ ಕಟ್ಟಡದ ಮುಂಭಾಗವೆಲ್ಲಾ 12ನೆಯ ಶತಮಾನದ್ದು. ಗರ್ಭಗುಡಿ, ಸುತ್ತಿರುವ ಪ್ರದಕ್ಷಿಣಾಪಥ ಮತ್ತು ಒಳಮಂಟಪವನ್ನೊಳಗೊಂಡ ಮೂಲ ದೇವಾಲಯ ಹಳೆಯದು. ಆದರೆ ಇವುಗಳ ವಾಸ್ತುವಿನ್ಯಾಸ ಮತ್ತು ಕಂಬಗಳ ರಚನೆಗಳು ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯವೇ ಮುಂತಾದ 8ನೆಯ ಶತಮಾನದ ಕಟ್ಟಡಗಳ ಮಾದರಿಯಲ್ಲಿರುವುದರಿಂದ, ಈ ಗುಡಿಯೂ ಅದೇ ಕಾಲಕ್ಕೆ ಸೇರಿದ್ದೆಂದು ಹೇಳಬಹುದು. ಬನವಾಸಿ ಪ್ರಾಂತ್ಯ ಚಳುಕ್ಯರ ಅಧೀನದಲ್ಲಿತ್ತಾದ್ದರಿಂದ ಈಗಿನ ಬನವಾಸಿಯ ಮೂಲಗುಡಿ ಸಹ ಕದಂಬರ ಕೊಡುಗೆಯೆಂದು ಹೇಳುವುದು ಕಷ್ಟ. ಬೆಳಗಾಂವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಹಲಶಿಯಲ್ಲಿ ಕೆಲವು ಪ್ರಾಚೀನ ದೇವಾಲಯಗಳಿವೆ. ಶೈಲಿಯ ದೃಷ್ಟಿಯಿಂದ ನೋಡುವುದಾದರೆ ಇಲ್ಲಿಯ ಜೈನಬಸದಿ ಅತ್ಯಂತ ಹಳೆಯದು. ಇದರಲ್ಲಿ ಗರ್ಭಗೃಹ ಮತ್ತು ಸುಕನಾಸಿ ಮಾತ್ರ ಇವೆ. ಸುಕನಾಸಿ ಗರ್ಭಗೃಹಕ್ಕಿಂತ ದೊಡ್ಡದು. ದೊಡ್ಡ ದೊಡ್ಡ ಒರಟುಕಲ್ಲುಗಳನ್ನು ಪೇರಿಸಿ ಗೋಡೆಗಳನ್ನು ಏರಿಸಲಾಗಿದೆ. ದೇವಾಲಯದಲ್ಲಿ ಯಾವ ರೀತಿಯ ಅಲಂಕರಣವೂ ಇಲ್ಲ. ನಯನಾಜೂಕಿಲ್ಲದೆ ಕಟ್ಟಿರುವ ಈ ಕಟ್ಟಡ ಪ್ರಾಯಶಃ ದಕ್ಷಿಣ ಭಾರತದ ಶಿಲಾಕಟ್ಟಡಗಳ ರಚನೆಯಲ್ಲಿ ಪ್ರಾರಂಭಿಕ ಘಟ್ಟದ್ದೆಂದು ಹೇಳಬಹುದು. ಇಲ್ಲಿ ಯಾವ ಶಾಸನಗಳೂ ದೊರೆಕಿಲ್ಲವಾದ್ದರಿಂದ ಇದರ ಕಾಲನಿರ್ದೇಶ ಕಷ್ಟ. ಆದರೆ ಮೃಗೇಶವರ್ಮನ ತಾಮ್ರಪಟದಲ್ಲಿ ಉಲ್ಲೇಖಿಸಿರುವ ಜೈನಬಸದಿ ಇದೇ ಆದರೆ ಇದು ಅವನ ಕಾಲದ್ದೆಂದು ಹೇಳಬಹುದು. ಹಾಗಿದ್ದಲ್ಲಿ ಈ ದೇವಾಲಯವೇ ಕರ್ನಾಟಕದಲ್ಲಿ ಉಳಿದುಬಂದಿರುವ ಅತ್ಯಂತ ಪ್ರಾಚೀನ ಶಿಲಾ ಕಟ್ಟಡವಾಗುತ್ತದೆ.



ರವಿವರ್ಮನ ಗುಡ್ನಾಪುರ ಶಾಸನ

ಬನವಾಸಿಯ ಕದಂಬರ ಕಾಲದ್ದೆಂದು ಸ್ಪಷ್ಟವಾಗಿ ಹೇಳಬಹುದಾದ ಶಿಲ್ಪಗಳು ಅಲ್ಪ. ಸೊರಬ ತಾಲ್ಲೂಕು ಜಂಬೆಹಳ್ಳಿಯಲ್ಲಿರುವ ದೇವಿ ದೇವಾಲಯದ ಮುಂದಿರುವ ಶಾಸನವೊಂದರಿಂದ ಆ ಗುಡಿ ಮೂಲತಃ ಕದಂಬ ಶಾಂತಿವರ್ಮನ ಕಾಲದಲ್ಲಿ ಕಟ್ಟಿದ್ದೆಂದು ತಿಳಿಯುತ್ತದೆ. ಈಗ ಗುಡಿ ಹಾಳಾಗಿದ್ದರೂ ಅಲ್ಲಿ ದೊರಕಿರುವ ದುರ್ಗಾವಿಗ್ರಹ ಆ ದೇವಾಲಯದ ಮೂಲಶಿಲ್ಪ ಎಂದು ಹೇಳಬಹುದು. ಈ ಶಿಲ್ಪದಲ್ಲಿರುವ ಚತುರ್ಭುಜ ಮಹಿಷಮರ್ದಿನಿ ಪ್ರಾಣಿಯಾಕೃತಿಯಲ್ಲಿರುವ ಅಸುರನನ್ನು ಮೆಟ್ಟಿ ಎಡಗೈಯಲ್ಲಿ ಎಮ್ಮೆಯ ಬಾಲವನ್ನು ಹಿಡಿದೆತ್ತಿದ್ದಾಳೆ. ಇತರ ಕೈಗಳಲ್ಲಿ ಶಂಖ, ಕತ್ತಿ, ತ್ರಿಶೂಲಗಳಿವೆ. ದೇವಿಯ ಸುಂದರ ಮುಖ, ಆಯುಧಗಳನ್ನು ಹಿಡಿದಿರುವ ರೀತಿ, ನಿರಾಯಾಸವಾಗಿ ಅಸುರನನ್ನು ಮೆಟ್ಟಿ ಕೊಲ್ಲುತ್ತಿರುವ ಭಾವ ಮುಂತಾದವು ಸ್ಫುಟವಾಗಿ ವ್ಯಕ್ತವಾಗಿವೆ. ಇದು ಒಂದು ಉತ್ತಮ ಕಲಾಕೃತಿ.

**ಶಾಸನಗಳು :** ಮೊದಲ ಕದಂಬ ವಂಶಕ್ಕೆ ಸೇರಿದ ಶಾಸನಗಳಲ್ಲಿ ಹೆಚ್ಚಿನವು ತಾಮ್ರಪಟಗಳು. ಇವು ಮೈಸೂರು, ಹಾಸನ, ಕಡೂರು, ಶಿವಮೊಗ್ಗ, ಉತ್ತರ ಕನ್ನಡ ಮತ್ತು ಧಾರವಾಡ ಜಿಲ್ಲೆಗಳಲ್ಲಿ ದೊರಕಿವೆ.



ಹಲ್ಮಿಡಿ ಶಾಸನ

ಕದಂಬರ ತಾಮ್ರಪಟಗಳಲ್ಲಿ ಓಲೆಗರಿಯ ರೀತಿಯ ತೆಳುವಾದ ಆಯಾಕಾರದ ತಾಮ್ರದ ಹಲಗೆಗಳ ಮೇಲೆ ಬರೆಹವಿದ್ದು, ಮೂರು ಅಥವಾ ಅದಕ್ಕೂ ಹೆಚ್ಚಿನ ಸಂಖ್ಯೆಯ ಹಲಗೆಗಳು ಅವುಗಳ ಒಂದು ಕೊನೆಯಲ್ಲಿರುವ ದುಂಡು ತೂತಿನ ಮೂಲಕ ತಾಮ್ರದ ಉಂಗುರದಿಂದ ಪೋಣಿಸಲ್ಪಟ್ಟಿರುತ್ತವೆ. ತಾಮ್ರದ ಉಂಗುರದ ಮೇಲೆ ಕದಂಬರ ರಾಜಚಿಹ್ನೆಯಾದ ಸಿಂಹಮುದ್ರೆ ಇರುತ್ತದೆ. ಇವುಗಳಲ್ಲಿರುವ ಲಿಪಿ ಬಹುತೇಕ ಪೆಟ್ಟಿಗೆಯ ತಲೆಯ ದಾಕ್ಷಿಣಾತ್ಯ ಬ್ರಾಹ್ಮೀ, ಭಾಷೆ ಸಂಸ್ಕೃತ ಗದ್ಯ. ಈ ತಾಮ್ರಪಟಗಳೆಲ್ಲ ದಾನಶಾಸನಗಳು. ದಾನ ಕೊಡುವ ರಾಜನ ಮತ್ತು ಅವನ ವಂಶದ ವಿವರಣೆ ಇವುಗಳಲ್ಲಿರುವುದರಿಂದ ಇವು ಅಮೂಲ್ಯ ಚಾರಿತ್ರಿಕ ದಾಖಲೆಗಳು. ಇದುವರೆಗೆ ಮೊದಲ ಕದಂಬರಲ್ಲಿ ಮೃಗೇಶವರ್ಮ ಮತ್ತು ಅವನ ಅನಂತರದ ಅರಸರ ತಾಮ್ರಶಾಸನಗಳು ಮಾತ್ರ ದೊರಕಿವೆ.



ಶಿವಮಾಂಧಾತೃವರ್ಮನ ಶಿವಮೊಗ್ಗ ಶಾಸನ

ಈ ಕಾಲದ ಶಿಲಾಶಾಸನಗಳು ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿ, ಶಿವಮೊಗ್ಗ ಜಿಲ್ಲೆಯ ಮಳವಳ್ಳಿ ಮತ್ತು ತಾಳಗುಂದ, ಉತ್ತರ ಕನ್ನಡ ಜಿಲ್ಲೆಯ ಬನವಾಸಿ, ಗುಡ್ನಾಪುರ, ಹಾಸನ ಜಿಲ್ಲೆಯ ಹಲ್ಮಿಡಿ ಮುಂತಾದೆಡೆಗಳಲ್ಲಿ ಬೆಳಕಿಗೆ ಬಂದಿವೆ. ಇವುಗಳ ಲಿಪಿಯೂ ಮೇಲಿನ ರೀತಿಯ ಬ್ರಾಹ್ಮಿಯೇ. ಮಳವಳ್ಳಿ ಮತ್ತು ಚಂದ್ರವಳ್ಳಿ ಶಾಸನಗಳ ಭಾಷೆ ಪ್ರಾಕೃತ; ಆದರೆ ಚಂದ್ರವಳ್ಳಿ ಶಾಸನದ ಭಾಷೆ ಸಂಸ್ಕೃತ ಎಂದು ಈಚೆಗೆ ಭಾವಿಸಲಾಗಿದೆ. ತಾಳಗುಂದ, ಬನವಾಸಿ ಇತ್ಯಾದಿಗಳವು ಸಂಸ್ಕೃತದಲ್ಲಿ ಪದ್ಯರೂಪದಲ್ಲಿವೆ. ಹಲ್ಮಿಡಿ ಶಾಸನ ಕನ್ನಡದಲ್ಲಿ ಗದ್ಯರೂಪದಲ್ಲಿದೆ. ಈ ಶಿಲಾಶಾಸನಗಳ ಉದ್ದೇಶ ಬೇರೆಬೇರೆಯಾದವು. ಚಂದ್ರವಳ್ಳಿ ಮತ್ತು ತಾಳಗುಂದ ಶಾಸನಗಳು ತಟಾಕ ನಿರ್ಮಾಣವನ್ನು ಹೇಳಿದರೆ, ಹಲ್ಮಿಡಿ ಶಾಸನ ದಾನವನ್ನು ನಿರೂಪಿಸುತ್ತದೆ. ತಾಮ್ರಶಾಸನಗಳಂತೆ ಈ ಶಿಲಾಶಾಸನಗಳೂ ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತವೆ. ಅಲ್ಲದೆ ಹಲವು ಶಾಸನಗಳು ಭಾಷಾ ಸಾಹಿತ್ಯ ದೃಷ್ಟಿಯಿಂದಲೂ ಮುಖ್ಯವಾದವು. ಮಳವಳ್ಳಿ ಶಾಸನವು ಕರ್ನಾಟಕದಲ್ಲಿ ಪ್ರಚಲಿತವಿದ್ದ ಪ್ರಾಕೃತ ಭಾಷೆಯನ್ನು ಪರಿಚಯ ಮಾಡಿಕೊಟ್ಟರೆ ಹಲ್ಮಿಡಿ ಶಾಸನ 5ನೆಯ ಶತಮಾನದಲ್ಲಿ ರೂಢವಾಗಿದ್ದ ಕನ್ನಡ ಭಾಷೆಯ ಸ್ವರೂಪವನ್ನು ತೋರಿಸಿಕೊಡುತ್ತದೆ. ಈಗ ನಮಗೆ ತಿಳಿದಿರುವಂತೆ ಇದೇ ಅತ್ಯಂತ ಪ್ರಾಚೀನ ಕನ್ನಡ ಶಾಸನ. ಹಾಗೆಯೇ ತಾಳಗುಂದ ಶಾಸನವೂ ಕರ್ನಾಟಕದ ಅತ್ಯಂತ ಪ್ರಾಚೀನ ಸಂಸ್ಕೃತ ಶಾಸನವೆನಿಸಿದೆ. ಅಲ್ಲದೆ ಆ ಶಾಸನದಲ್ಲಿ ಅದನ್ನು ರಚಿಸಿದ ಕವಿ ಕುಬ್ಜನ ಹೆಸರೂ ಇದೆ. ಕುಬ್ಜನೇ ಈಗ ಗೊತ್ತಿರುವಂತೆ ಕರ್ನಾಟಕದ ಕವಿಗಳಲ್ಲಿ ಅತ್ಯಂತ ಪ್ರಾಚೀನ. ಇತ್ತೀಚೆಗೆ ಮೈಸೂರು ವಿಶ್ವವಿದ್ಯಾನಿಲಯದ ಪುರಾತತ್ತ್ವ ಇಲಾಖೆಯವರು ಬನವಾಸಿಯಲ್ಲಿ ಪತ್ತೆಹಚ್ಚಿದ ಮೃಗೇಶವರ್ಮನ ಶಾಸನವೇ ಕದಂಬರ ರಾಜಧಾನಿಯಲ್ಲಿ ದೊರಕಿರುವ ಮೊಟ್ಟ ಮೊದಲನೆಯ ಶಾಸನ. ಪೆಟ್ಟಿಗೆ ತಲೆಯ ದಾಕ್ಷಿಣಾತ್ಯ ಲಿಪಿಯಲ್ಲಿರುವ ಈ ಶಾಸನವನ್ನು ಬಲು ಸುಂದರವಾದ ಚತುರ್ಮುಖ ಶಿಲಾಸ್ತಂಭದ ಮೇಲೆ ಕೆತ್ತಲಾಗಿದೆ. ಇದೇ ಲಿಪಿ ಮತ್ತು ಸಂಸ್ಕೃತ ಭಾಷೆಯಲ್ಲಿ ಇರುವ ದೊಡ್ಡ ಸ್ತಂಭ ಶಾಸನವೊಂದು ಬನವಾಸಿಯ ಬಳಿಯ ಗುಡ್ನಾಪುರದಲ್ಲಿ ದೊರಕಿದ್ದು, ಕದಂಬ ಇತಿಹಾಸದ ಮೇಲೆ ಅಮೂಲ್ಯ ಬೆಳಕನ್ನು ಚೆಲ್ಲುತ್ತದೆ.

**ನಾಣ್ಯಗಳು :** ಮೊದಲ ಕದಂಬ ಅರಸರ ಕಾಲಕ್ಕೆ ಖಚಿತವಾಗಿ ಸೇರುವ ನಾಣ್ಯಗಳು ಇದುವರೆಗೆ ದೊರಕಿಲ್ಲ. ಆದರೆ ಪುಟ್ಟ ಬಟ್ಟಲಾಕಾರದ ಕೆಲವು ಚಿನ್ನದ ನಾಣ್ಯಗಳು ಈ ಕಾಲದವೆಂದು ಕೆಲವರ ಅಭಿಪ್ರಾಯ. ಇವನ್ನು ಪದ್ಮಟಂಕ ಎಂದು ಕರೆಯುತ್ತಾರೆ. ಗುಂಡಗಿರುವ ಈ ನಾಣ್ಯಗಳು 0.6-0.8 ಅಂಗುಲ ವ್ಯಾಸವಿದ್ದು, 52-70 ಗ್ರೇನ್ ತೂಗುತ್ತವೆ. ಸಾಮಾನ್ಯವಾಗಿ 52 ಮತ್ತು 66 ಗ್ರೇನ್‌ಗಳವೇ ಹೆಚ್ಚು. ಇವುಗಳ ತಗ್ಗಿನ ಕಡೆಯಲ್ಲಿ ಅಂಕನ ಮಾಡಿದ ಪದ್ಮದ ಚಿತ್ರವೂ ಸುತ್ತಲೂ ನಾಲ್ಕು ಸಣ್ಣ ಚಿಹ್ನೆಗಳೂ

ಇರುತ್ತವೆ. ಮೊದಮೊದಲು ಎರಡು ಶ್ರೀಕಾರಗಳು, ಶಂಖ ಮತ್ತು ಬಿಲ್ಲು ಇವೇ ಆ ಸಣ್ಣ ಚಿಹ್ನೆಗಳಾಗಿರುತ್ತಿದ್ದುವು. ಅನಂತರದ ಪದ್ಮಟಂಕಗಳಲ್ಲಿ ಇವುಗಳ ಬದಲು ನಾಲ್ಕು ಸಣ್ಣ ಸಿಂಹಗಳು ಕಾಣುತ್ತವೆ. ಹಿಂಭಾಗದಲ್ಲಿ ಯಾವ ಚಿಹ್ನೆಗಳೂ ಇರುವುದಿಲ್ಲ. ಇವುಗಳ ಮೇಲೆ ಯಾವ ಬರೆಹಗಳೂ ಇಲ್ಲದಿರುವುದರಿಂದ, ಇವು ಕದಂಬರೇ ಹೊರಡಿಸಿದವೆಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟ. (ಎಸ್.ಎನ್.)

## ಹಾನಗಲ್ಲಿನ ಕದಂಬರು

ಇವರು ಸು.10ನೆಯ ಶತಮಾನದ ಕಡೆಯ ಪಾದದಿಂದ 13ನೆಯ ಶತಮಾನದ ಮೊದಲನೆಯ ಪಾದದ ವರೆಗೆ ಹೆಚ್ಚು ಮಟ್ಟಿಗೆ ಉತ್ತರ ಕನ್ನಡ ಜಿಲ್ಲೆಯ ಪೂರ್ವ ಮತ್ತು ಧಾರವಾಡ ಜಿಲ್ಲೆಯ ಪಶ್ಚಿಮ ಭಾಗಗಳ ಮೇಲೆ ಒಡೆತನ ಪಡೆದಿದ್ದ ಸಾಮಂತರು. ಇವರ ರಾಜಧಾನಿ ಮೊದಲು ಬನವಾಸಿ, ಅನಂತರ ಹಾನಗಲ್ಲು (ಪಾನುಂಗಲ್ಲು, ಹಾನುಂಗಲ್ಲು, ಹಾನುಗಲ್ಲು.)

ಈಗ ತಿಳಿದಿರುವಂತೆ ಈ ಕದಂಬ ಶಾಖೆಯ ಆದ್ಯ ಚಟ್ಟಯ್ಯದೇವ (ಚಟ್ಟ, ಚಟ್ಟಿಗ ಸು.972-1015). ಇವನು ಆರಂಭದಲ್ಲಿ ರಾಷ್ಟ್ರಕೂಟ ಕಕ್ಕನ ಆಶ್ರಿತನಾಗಿದ್ದು, ಅನಂತರ ಚಾಳುಕ್ಯ ಇಮ್ಮಡಿ ತೈಲನ ಸಾಮಂತನಾಗಿ 979-80 ರಲ್ಲಿ ಬನವಾಸಿ ಪ್ರಾಂತ್ಯವನ್ನೂ, 982ರ ಹೊತ್ತಿಗೆ ಇದರ ಜೊತೆಗೆ ಸಾಂತಳಿಗೆ 1000 ಪ್ರಾಂತ್ಯವನ್ನೂ ಪುನಃ 986-87, 993, 1012ರಲ್ಲಿ ಬನವಾಸಿ 12,000 ಪ್ರಾಂತ್ಯವನ್ನು ಮಾತ್ರ ಆಳುತ್ತಿದ್ದನೆಂದು ಶಾಸನಗಳಿಂದ ತಿಳಿಯುತ್ತದೆ. ಈ ಮೇಲಿನ ವರ್ಷಗಳ ಮಧ್ಯಕಾಲದಲ್ಲಿ ಇತರ ಕೆಲವರು ಇದೇ ಪ್ರದೇಶವನ್ನು ಆಳುತ್ತಿದ್ದರೆಂದು ಕಾಣುವುದರಿಂದ ಚಟ್ಟಯ್ಯನ ಆಳ್ವಿಕೆ ಅವಿಚ್ಛಿನ್ನವಾಗಿರಲಾರದು. 1012ರಲ್ಲಿ ಬನವಾಸಿ ಪ್ರಾಂತ್ಯದ ಅಧಿಕಾರವನ್ನು ಚಾಳುಕ್ಯ ಇಱಿವಬೆಡಂಗ ಸತ್ಯಾಶ್ರಯನ ಅಳಿಯ ಕುಂದಮರಸ ವಹಿಸಿಕೊಂಡ. ಆದರೂ ಚಟ್ಟಯ್ಯ ಚಾಳುಕ್ಯರ ಆಶ್ರಿತನಾಗಿಯೇ ಮುಂದುವರೆದು, ಇಮ್ಮಡಿ ಜಯಸಿಂಹನ ಕಾಲದಲ್ಲಿ ಚೋಳ, ಪರಮಾರ, ಕಳಚುರಿಗಳು ಒಟ್ಟಾಗಿ ಮಾನ್ಯಖೇಟದ ಮೇಲೆ ದಾಳಿಮಾಡಿದಾಗ ಚಾಳುಕ್ಯರ ಪರವಾಗಿ ಶೌರ್ಯದಿಂದ ಕಾದು ಕಟಕದ ಗೋವ ಎಂಬ ಬಿರುದನ್ನು ಸಂಪಾದಿಸಿದ. ಚಟ್ಟಯ್ಯನ ಮಗ ಜಯಸಿಂಹ. ಇವನ ಮಕ್ಕಳು ಮಾವುಲಿ, ತೈಲ, ಶಾಂತಯ ದೇವ, ಜೋಕಿದೇವ ಮತ್ತು ವಿಕ್ರಮಾಂಕ. ಇವರ ಬಗ್ಗೆ ಏನೂ ತಿಳಿದಿಲ್ಲ. ಇವರ ಕಾಲದಲ್ಲಿ ಬನವಾಸಿ ಪ್ರದೇಶ, ದಂಡನಾಯಕ ಚಾವುಂಡರಾಯರಸ ಮತ್ತು ಇನ್ನೊಂದು ಕದಂಬ ಶಾಖೆಗೆ ಸೇರಿದ ಮಯೂರವರ್ಮ, ಅವನ ಹೆಂಡತಿ ಅಕ್ಕಾದೇವಿ ಮತ್ತು ಅವರ ಮಕ್ಕಳು ಜೋಯಿದೇವ ಮತ್ತು ಅರಿಕೇಸರಿ ಇವರ ಆಳ್ವಿಕೆಗೆ ಒಳಪಟ್ಟಿತ್ತೆಂದು ತೋರುತ್ತದೆ. ಈ ಅನ್ಯಶಾಖೆಯ ಮಯೂರವರ್ಮನೇ ಈ ಕಾಲದಲ್ಲಿ ಹಾನಗಲ್ಲಿನ ಮೇಲೆ ಒಡೆತನ ಪಡೆದ ಮೊದಲ ಕದಂಬ ವಂಶೀಯ.

ಚಟ್ಟಯ್ಯನ ವಂಶದ ಕೀರ್ತಿವರ್ಮ 1068ರ ಹೊತ್ತಿಗೆ ಬನವಾಸಿ ಪ್ರಾಂತ್ಯದ ಅಧಿಪತಿಯಾದ. ಇವನು ಇಮ್ಮಡಿ ಸೋಮೇಶ್ವರನ ವಿರುದ್ಧ, ಅವನ ತಮ್ಮ ಆರನೆಯ ವಿಕ್ರಮಾದಿತ್ಯನಿಗೆ ಸಹಾಯಮಾಡಿದ್ದರಿಂದ, ಸೋಮೇಶ್ವರ ಬನವಾಸಿಯ ಮೇಲೆ ದಾಳಿ ಮಾಡಿದ; ಸ್ವಂತ ತಮ್ಮನಾದ ತೈಲಪದೇವನೂ ಎದುರು ಬಿದ್ದ. ಕೊನೆಗೆ 1071ರಲ್ಲಿ ಕೀರ್ತಿವರ್ಮನ ಪ್ರಾಂತ್ಯಾಧಿಪತ್ಯ ಕೈಬಿಟ್ಟು, ಅವನ ಆಳ್ವಿಕೆ ಕೇವಲ ಬನವಾಸಿಪುರಕ್ಕೆ ಸೀಮಿತವಾದಂತೆ ತೋರುತ್ತದೆ. ಆರನೆಯ ವಿಕ್ರಮಾದಿತ್ಯ ಪಟ್ಟಕ್ಕೆ ಬಂದಮೇಲೂ ಇವನಿಗೆ ಅಧಿಕಾರ ದಕ್ಕಲಿಲ್ಲ.

ಆರನೆಯ ವಿಕ್ರಮಾದಿತ್ಯ 1087ರ ಹೊತ್ತಿಗೆ ಕೀರ್ತಿವರ್ಮನ ಚಿಕ್ಕಪ್ಪನಾದ ಶಾಂತಿವರ್ಮನಿಗೆ ಬನವಾಸಿ ಮತ್ತು ಹಾನಗಲ್ಲು ಪ್ರಾಂತ್ಯಗಳನ್ನು ವಹಿಸಿದ. ಇವನ ಮಗನಾದ ತೈಲ 1082ರ ಸುಮಾರಿನಲ್ಲಿಯೇ ತಂದೆಯ ಜೊತೆಯಲ್ಲಿ ಆಡಳಿತದಲ್ಲಿ ಭಾಗಿಯಾಗಿದ್ದರೂ ತಂದೆಯ ಮರಣಾನಂತರ 1089-90ರಲ್ಲಿ ಪಟ್ಟಕ್ಕೆ ಬಂದು 1130ರ ವರೆಗೆ ಆಳಿದ. ಈತ ಹೊಯ್ಸಳ ವಿಷ್ಣುವರ್ಧನನ ಸತತವಾದ ದಾಳಿಗಳಿಂದ ತನ್ನ ಪ್ರಾಂತ್ಯವನ್ನು ರಕ್ಷಿಸಿಕೊಂಡದ್ದಲ್ಲದೆ, ಕೆಲವು ಸಂದರ್ಭಗಳಲ್ಲಿ ತನ್ನ ಆಳ್ವಿಕೆಯನ್ನು ಬನವಾಸಿ ಮತ್ತು ಹಾನಗಲ್ಲು ಪ್ರಾಂತ್ಯಗಳ ಹೊರಗೂ ವಿಸ್ತರಿಸಿದ. ಇವನ ಮಗ ಮಯೂರವರ್ಮ (1130-32) ಇನ್ನೂ ಹೆಚ್ಚು ಪ್ರದೇಶಗಳನ್ನು ಅಧೀನ ಮಾಡಿಕೊಂಡಿದ್ದಂತೆ ತೋರುತ್ತದೆ.

**ಹಾನಗಲ್ಲು ಕದಂಬ ಶಾಖೆಯ ವಂಶಾವಳಿ:**



ಅನಂತರ ಮಯೂರವರ್ಮನ ತಮ್ಮ ಮಲ್ಲಿಕಾರ್ಜುನ (1132-46) ಹೊಯ್ಸಳರ ದಂಡನ್ನು ಯಶಸ್ವಿಯಾಗಿ ಎದುರಿಸಿ ಅವರ ವಶದಲ್ಲಿದ್ದ ಲೊಕ್ಕಿಗುಂಡಿಯ ಮೇಲೂ ದಾಳಿಮಾಡಿದ. ಮಲ್ಲಿಕಾರ್ಜುನನ ಅನಂತರ ಕ್ರಮವಾಗಿ ಇವನ ತಮ್ಮ ತೈಲಮ III (1147-1148) ಮತ್ತು ತೈಲಮನ ಮಗ ಮಾವುಲಿ ತೈಲ ಆಳಿದರು. ಅನಂತರ ಪಟ್ಟಕ್ಕೆ ಬಂದ ಮಾವುಲಿ ತೈಲನ ತಮ್ಮ ಕೀರ್ತಿವರ್ಮನ (ಸು.1161-00) ಆಳ್ವಿಕೆಯ ಕಾಲದಲ್ಲಿ ಚಾಳುಕ್ಯ, ಸೇವುಣ, ಕಳಚುರಿ ಮತ್ತು ಹೊಯ್ಸಳರು ಅಧಿಕಾರಕ್ಕಾಗಿ ಸೆಣಸುತ್ತಿದ್ದರಾದ್ದರಿಂದ, ಸಾಮಂತರ ಮನೆತನಗಳವರ ಸ್ಥಿತಿ ಇಕ್ಕಟ್ಟಿನದಾಗಿತ್ತು. ಕೀರ್ತಿವರ್ಮ 1163-68ರಲ್ಲಿ ಕಳಚುರಿ ಬಿಜ್ಜಳನ ಅಧೀನನಾಗಿದ್ದಂತೆ, ತೋರುತ್ತದೆ. ಉಚ್ಚಂಗಿಯ ವೀರಪಾಂಡ್ಯ ಕದಂಬರ ಅಧೀನನಾಗಿ ಪುಲಿಗೆರೆ ನಾಡನ್ನು ಆಳುತ್ತಿದ್ದ. ಸಾಂತಳಿಗೆಯ ಸಾಂತರ ದೊರೆ ಜಗದೇವ 1160ರಲ್ಲಿ ಬನವಾಸಿ ನಾಡಿನ ಕೆಲಪಾಲನ್ನು ದಾಳಿಮಾಡಿ ಗೆದ್ದುಕೊಂಡ. ಆದರೆ ಕೀತಿವರ್ಮ ಮತ್ತು ಬಿಜ್ಜಳ ಅವನನ್ನು ಸೋಲಿಸಿದರು. ಹೊಯ್ಸಳರು ಆಕ್ರಮಿಸಿಕೊಂಡಿದ್ದ ಕುಂತಳದ ಭಾಗಗಳೂ ಕೀತಿವರ್ಮನ ವಶವಾದುವು. 1175-80ರಲ್ಲಿ ಕದಂಬ ಚಕ್ರವರ್ತಿ ವೀರಸೋವಿದೇವ ಆಳುತ್ತಿದ್ದ. ಇವನು ಕದಂಬ ವಂಶದ ಅನ್ಯಶಾಖೆಗೆ ಸೇರಿದಂತೆ ತೋರುತ್ತದೆ. ಅನಂತರ ಪಟ್ಟಕ್ಕೆ ಬಂದ ಕೀತಿವರ್ಮನ ತಮ್ಮ ಕಾಮದೇವ (ಸು.1180-1217) ಕರ್ನಾಟಕದ ಅರಸುಮನೆತನಗಳು ಪರಸ್ಪರ ಹೋರಾಟದಲ್ಲಿ ನಿರತರಾಗಿದ್ದ ಸಂದರ್ಭವನ್ನು ಉಪಯೋಗಿಸಿಕೊಂಡು 1191ರಲ್ಲಿ ಸ್ವತಂತ್ರನಾಗಿ, ಚಾಳುಕ್ಯ ಚಕ್ರೇಶ್ವರರ ಎಲ್ಲ ಬಿರುದುಗಳನ್ನೂ ಧರಿಸಿ ಸುತ್ತಲಿನ ರಾಜ್ಯಗಳನ್ನೂ ಗೆದ್ದು ವಿಶಾಲವಾದ ರಾಜ್ಯಕ್ಕೆ ಅಧಿಪತಿಯಾದ. ಈತನಿಗೆ ಕಾಳಲದೇವಿ ಎಂಬ ಪತ್ನಿಯೂ ಬರ್ಮ, ಸೋಮ, ಮಲ್ಲ (ಮಲ್ಲಿದೇವ) ಎಂಬ ಮಕ್ಕಳೂ ಇದ್ದರು. ಕಾಮದೇವನ ಅನಂತರ ಮಲ್ಲಿದೇವ (ಸು.1217-52) ಮೊದಲು ಪ್ರಾಯಶಃ ಸ್ವತಂತ್ರವಾಗಿ ಅನಂತರ ಯಾದವ ಸಿಂಘಣನ ಆಶ್ರಿತನಾಗಿ ಆಳಿದ. ಆತ 1217ರ ಸುಮಾರಿನಲ್ಲಿ ಹೊಯ್ಸಳರನ್ನು ಸೋಲಿಸಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡರೂ ಮುಂದೆ ಅವರಿಂದ ಸೋತು ಕೆಲವು ಪ್ರದೇಶಗಳನ್ನು ಕಳೆದುಕೊಂಡ. ಮಲ್ಲಿದೇವ ಹಾನಗಲ್ಲು ಕದಂಬ ಶಾಖೆಯ ಕೊನೆಯ ದೊರೆ.

ಮಲ್ಲಿದೇವನ ಅನಂತರ ಕೆಲವು ಕದಂಬ ವಂಶೀಯರು ಆಗಾಗ್ಗೆ ಈ ಪ್ರದೇಶವನ್ನು ಆಳುತ್ತಿದ್ದರೂ ಅವರಿಗೂ ಹಾನಗಲ್ಲು ಶಾಖೆಗೂ ಇದ್ದ ಸಂಬಂಧ ತಿಳಿಯದು. (ಬಿ.ಎಚ್.ಎಸ್.)

### ಗೋವೆಯ ಕದಂಬರು

ಇವರು 10ರಿಂದ 13ನೆಯ ಶತಮಾನದವರೆಗೆ ಬಹುತೇಕ ಗೋವ ರಾಜ್ಯ, ಬೆಳಗಾಂವಿ, ಉತ್ತರ ಕನ್ನಡ ಮತ್ತು ಧಾರವಾಡ ಜಿಲ್ಲೆಗಳ ಭಾಗಗಳನ್ನೊಳಗೊಂಡಿದ್ದ ಪಲಸಿಗೆ-12,000 ಮತ್ತು ಕೊಂಕಣ-900 ವಿಭಾಗಗಳನ್ನು ಆಳುತ್ತಿದ್ದ ಸಾಮಂತರು. ಇವರ ರಾಜಧಾನಿ ಮೊದಲು ಚಂದ್ರಪುರ (ಗೋವದ ಸಾಲ್ಸೆತ್‌ನ ಈಗಿನ ಚಂದೋರ್.) ಅನಂತರ ಗೋವ (ಪಣಜಿ.) ಅಣಿಲಾಪುರ (ಧಾರವಾಡ ಜಿಲ್ಲೆಯ ಅಳಣಾವರ) ಸಹ ಇವರ ನೆಲೆವೀಡಾಗಿತ್ತು. ಶಿವನಿಂದ ಹುಟ್ಟಿದ ಜಯಂತ (ತ್ರಿಲೋಚನ ಪಲ್ಲವ) ಈ ವಂಶದ ಆದ್ಯನೆಂದು ಶಾಸನಗಳ ಹೇಳಿಕೆ. ಬನವಾಸಿ ಪುರವರಾಧೀಶ್ವರ, ತ್ಯಾಗ ಜಗಝ್ಝಂಪರಝಂಪಡಾಚಾರ್ಯ ಇವರ ಬಿರುದುಗಳು.

ಮೂಲತಃ ಬನವಾಸಿಯವರಾದ ಈ ವಂಶೀಯರು ಶಿಲಾಹಾರರನ್ನು ಗೆದ್ದು ಕೊಂಕಣದಲ್ಲಿ ತಳವೂರಿರಬೇಕು. ಈ ವಂಶದ ಮೊದಲಿಗ ಷಷ್ಠದೇವ I 'ಅವನ ಮಗ ನಾಗವರ್ಮ'. ಅವನ ಮಗ - ಗೂವಲ (ಗೂಹಲ್ಲ) ದೇವ I. ಈ ಅರಸುಗಳ ಬಗ್ಗೆ ಹೆಚ್ಚು ವಿವರಗಳು ತಿಳಿದಿಲ್ಲ. ಒಂದನೆಯ ಷಷ್ಠದೇವ ಚಾಳುಕ್ಯ ತೈಲಪನ ಅನುಗ್ರಹದಿಂದ ಗೋವದ ಮಂಡಲೇಶ್ವರನಾಗಿರಬಹುದು. ಒಂದನೆಯ ಗೂಹಲ್ಲದೇವನಿಗೆ ವ್ಯಾಘ್ರಮಾರಿ ಎಂಬ ಬಿರುದಿತ್ತೆಂದು ಒಂದು ದಾಖಲೆ ತಿಳಿಸುತ್ತದೆ. ಒಂದನೆಯ ಗೂಹಲ್ಲದೇವನ ಮಗ ಷಷ್ಠದೇವ II (ಸು.1000-1072) ಕಲ್ಯಾಣದ ಚಾಳುಕ್ಯರ ಸಾಮಂತತ್ವದಲ್ಲಿ ಶಿಲಾಹಾರರ ಆಳ್ವಿಕೆಯನ್ನು ಕೊನೆಗಾಣಿಸಿ ಇಡೀ ಕೊಂಕಣಕ್ಕೆ ಒಡೆಯನಾದ. ಈತನ ಕಾಲದಲ್ಲಿ ಗೋವೆ ಬಹುವಾಗಿ ಅಭಿವೃದ್ಧಿ ಹೊಂದಿತು. ಎರಡನೆಯ ಷಷ್ಠದೇವನಿಗೆ ಗೂವಲದೇವ II ಮತ್ತು ಜಯಕೇಶಿ I ಪೆರ್ಮಾಡಿದೇವ ಎಂಬ ಮಕ್ಕಳಿದ್ದರು. ಇವರಿಬ್ಬರೂ ತಂದೆಯ ಆಡಳಿತದಲ್ಲಿ ಮೊದಲಿನಿಂದಲೂ ಪಾಲುಗೊಂಡಿರಬೇಕು. ಪ್ರಾಯಶಃ ಹಿರಿಯನಾದ ಗೂವಲದೇವನ ಅಕಾಲಮರಣಾನಂತರ ಷಷ್ಠದೇವ ಮತ್ತು ಜಯಕೇಶಿ (ಸು.1050-78) ಜೊತೆಯಾಗಿಯೇ ಆಳುತ್ತಿದ್ದರೆಂದು ಅನೇಕ ಶಾಸನಗಳಿಂದ ಊಹಿಸಬಹುದಾಗಿದೆ. ಜಯಕೇಶಿ ರಾಜಧಾನಿಯನ್ನು ಗೋವಪಟ್ಟಣಕ್ಕೆ ಬದಲಾಯಿಸಿದ. ಇವನ ನೌಕಾ ಬಲ ಅಜೇಯವಾಗಿತ್ತು. ಎದುರು ಬಿದ್ದ ಕಾಪರ್ದಿಕ ದ್ವೀಪದ ಶಿಲಾಹಾರ ದೊರೆ ಮುಮ್ಮುರಿಯನ್ನು ಸದೆಬಡಿದ, ಲಾಟರಾಜನ ಸೊಕ್ಕನ್ನಿಳಿಸಿದ, ಗೋಕರ್ಣದಲ್ಲಿದ್ದ ಪಾಂಡ್ಯ ತ್ರಿಭುವನಮಲ್ಲ ಕಾಮದೇವನನ್ನು ಉನ್ಮೂಲನಗೊಳಿಸಿದ ಚೋಳರನ್ನೂ ಹಣ್ಣುಮಾಡಿದ ಎಂದು ಶಾಸನಗಳು ತಿಳಿಸುತ್ತವೆ. ಈತ ಚಾಳುಕ್ಯ ಎರಡನೆಯ ಸೋಮೇಶ್ವರನ ಸಾಮಂತನೂ ಗೆಳೆಯನೂ ಆಗಿದ್ದು, ರಾಜತಂತ್ರದ ಆವಶ್ಯಕತೆಯಿಂದ ಅವನ ತಮ್ಮ ಆರನೆಯ ವಿಕ್ರಮಾದಿತ್ಯನಿಗೆ ತನ್ನ ಮಗಳನ್ನು ಮದುವೆಮಾಡಿಕೊಟ್ಟು, ಅವನಿಗೆ ರಾಜನಾಗಲೂ ಸಹಾಯ ಮಾಡಿದ. ಕಂಚಿಯಲ್ಲಿ ಚಾಳುಕ್ಯರಿಗೂ ಚೋಳರಿಗೂ ರಾಜಿ ಮಾಡಿಸಿದ್ದು ಈತನ ತಂತ್ರನೈಪುಣ್ಯಕ್ಕೆ ಸಾಕ್ಷಿ. ಇದೆ ದೃಷ್ಟಿಯಿಂದ ತನ್ನ ಇನ್ನೊಬ್ಬ ಮಗಳನ್ನು ಅನಹಿಲವಾಡದ ಒಂದನೆಯ ಕರ್ಣನಿಗೆ ಮದುವೆಮಾಡಿಕೊಟ್ಟಿದ್ದ.



ವರಾಹನರಸಿಂಹ ದೇವಾಲಯ, ಹಲಶಿ

ಜಯಕೇಶಿಯ ಮಗ 3ನೆಯ ಗೂವಲದೇವ (ಸು.1078-1125) ಪಲಸಿಗೆ 12,000 ಮತ್ತು ಕೊಂಕಣ - 900 ಪ್ರಾಂತ್ಯಗಳನ್ನು ಆಳುತ್ತಿದ್ದರೂ ಅನಂತರದಲ್ಲಿ ಚಾಳುಕ್ಯ ವಿಕ್ರಮಾದಿತ್ಯ ಗೂವಲದೇವನ ತಮ್ಮ ವಿಜಯಾದಿತ್ಯನ ಮಗನಾದ ಎರಡನೆಯ ಜಯಕೇಶಿಗೆ ತನ್ನ ಮಗಳು ಮೈಳಲದೇವಿಯನ್ನು ಲಗ್ನಮಾಡಿಕೊಟ್ಟು ಪಲಸಿಗೆ 12,000 ಪ್ರಾಂತ್ಯವನ್ನು ಅವನಿಗೆ ಬಳುವಳಿಯಾಗಿ ಇತ್ತ. ಗೂವಲದೇವನ ಆಳ್ವಿಕೆಯ

ಕಡೆಯ ಕಾಲದಲ್ಲಿ ಈ ಜಯಕೇಶಿಯೂ ಗೋವ ಕದಂಬ ರಾಜ್ಯದ ಆಡಳಿತದಲ್ಲಿ ಸಮಭಾಗಿಯಾಗಿದ್ದಂತೆ ತೋರುತ್ತದೆ. 1122ರ ಸುಮಾರಿನಲ್ಲಿ, ಚಾಳುಕ್ಯ ರಾಜ್ಯದ ಸಂದಿಗ್ಧ ಸ್ಥಿತಿಯನ್ನು ಉಪಯೋಗಿಸಿಕೊಂಡು ಜಯಕೇಶಿ ಸ್ವತಂತ್ರನಾಗಲು ಪ್ರಯತ್ನಿಸಿದ. ಆದರೆ ಚಾಳುಕ್ಯರ ಪರವಾಗಿ ಸಿಂದ ಎರಡನೆಯ ಆಚುಗಿ ಇವನ ಮೇಲೆ ಯುದ್ಧಹೂಡಿ ಆ ಪ್ರಯತ್ನವನ್ನು ಮುರಿದು ಕೊಂಕಣವನ್ನೂ ಆಕ್ರಮಿಸಿಕೊಂಡ. ಕೇವಲ ಮೂರು ವರ್ಷಗಳಲ್ಲಿ (1125) ಪ್ರಾಯಶಃ ಗೂವಲದೇವನ ಮರಣಾನಂತರ, ಜಯಕೇಶಿ ಪುನಃ ಅಧಿಕಾರ ಪಡೆದುಕೊಂಡರೂ ಹಿಂದೆ ಈ ಮನೆತನದ ಅಧೀನದಲ್ಲಿದ್ದ ಅನೇಕ ಪ್ರಾಂತ್ಯಗಳನ್ನು ಕಳೆದುಕೊಂಡು, ಕೇವಲ ಹಲಸಿಗೆ-12,000, ಕೊಂಕಣ-900, ಹೈವೆ-500 ಮತ್ತು ಕವಡಿದ್ವೀಪ-1,25,000, ವಿಭಾಗಗಳ ಮಂಡಲೇಶ್ವರನಾದ, ಮುಂದೆ ಹೈವೆ-500ನ್ನು ಸಹ ಕಳೆದುಕೊಂಡ. 1133ರ ಒಂದು ಶಾಸನದಲ್ಲಿ ಹೊಯ್ಸಳ ವಿಷ್ಣುವರ್ಧನ ಜಯಕೇಶಿಯನ್ನು ಸೋಲಿಸಿದ ಪ್ರಸ್ತಾಪವಿದೆ. 1135ರ ಹೊತ್ತಿಗೆ ಹಲಸಿಗೆ ಭಾಗವೂ ವಿಷ್ಣುವರ್ಧನನಿಗೆ ಸೇರಿತು. 1140ರ ಅನಂತರ ಜಯಕೇಶಿ ಉತ್ತರ ಕೊಂಕಣದ ಶಿಲಾಹಾರ ಅಪರಾದಿತ್ಯನನ್ನು ಸೋಲಿಸಿ ಕೆಲವು ಪ್ರಾಂತ್ಯಗಳನ್ನು ವಶಪಡಿಸಿಕೊಂಡ.

ಜಯಕೇಶಿಯ ಜ್ಯೇಷ್ಠಪುತ್ರ ಪೆರ್ಮಾಡಿದೇವ ಶಿವಚಿತ್ತ (ಸು.1147-1192) ತನ್ನ ತಂದೆಯ ಕಾಲಾನಂತರ ಪಟ್ಟಕ್ಕೆ ಬಂದ. ಈತನ ತಮ್ಮ ವಿಜಯಾದಿತ್ಯ ವಿಷ್ಣುಚಿತ್ತ (ಸು.1147-1187) ಆಡಳಿತ ನಿರ್ವಹಣೆಯಲ್ಲಿ ಇವನ ಜೊತೆಗೂಡಿದ್ದ. ಇವರು ರಾಮಲಕ್ಷ್ಮಣರಂತಿದ್ದರೆಂದು ಒಂದು ಶಾಸನ ತಿಳಿಸುತ್ತದೆ. ಶಿವಚಿತ್ತನು ಚಾಳುಕ್ಯ ಜಗದೇಕಮಲ್ಲ ಮತ್ತು ಮೂರನೆಯ ತೈಲ ಇವರ ಸಾಮಂತನಾಗಿದ್ದರೂ ಅನಂತರ ಕಳಚುರಿಗಳ ಪ್ರಭಾವದಿಂದ ಚಾಳುಕ್ಯರು ಹಿಂದೆ ಸರಿದಾಗ ಸ್ವತಂತ್ರನಾಗಿ ರಾಜ್ಯಭಾರ ಮಾಡಲಾರಂಭಿಸಿದ. ಮುಂದೆ ನಾಲ್ಕನೆಯ ಸೋಮೇಶ್ವರ ರಾಜ್ಯಗಳಿಸಿದಾಗ ಅವನ ಸಾಮಂತತ್ವವನ್ನು ಒಪ್ಪಿದ್ದಲ್ಲದೆ, ಕೆಲವು ಕಾಲ ಅವನಿಗೆ ಗೋವೆಯಲ್ಲಿ ನೆಲಸಲೂ ಅವಕಾಶ ನೀಡಿದ್ದಂತೆ ತೋರುತ್ತದೆ. ವಿಜಯಾದಿತ್ಯನ ಅವಸಾನಾನಂತರ (ಸು.1187) ಅವನ ಮಗ ಮೂರನೆಯ ಜಯಕೇಶಿಯನ್ನು ಪೆರ್ಮಾಡಿದೇವ ತನ್ನ ಆಡಳಿತಕ್ಕೆ ಜೊತೆಮಾಡಿಕೊಂಡ. ಪೆರ್ಮಾಡಿದೇವನ ಮರಣಾನಂತರ ಮೂರನೆಯ ಜಯಕೇಶಿ (ಸು.1187-1225) ರಾಜನಾದ. ಇವನ ಮಗ ವಜ್ರದೇವನೂ ಆಡಳಿತದಲ್ಲಿ ಭಾಗಿಯಾಗಿದ್ದ. ಈ ಕಾಲದಲ್ಲಿ ಸೇವುಣ ಸಿಂಘಣ ಜಯಕೇಶಿಯ ಮೇಲೆ ದಂಡೆತ್ತಿಬಂದು ಪ್ರಾಯಶಃ ಸೋಲಿಸಿದನಾದರೂ ಕದಂಬ ಆಳ್ವಿಕೆ ಸಂಕುಚಿತವಾಯಿತೇ ಹೊರತು ಅಳಿಯಲಿಲ್ಲ. ಸು.1225ರಲ್ಲಿ ದೊರೆಯಾದ ಜಯಕೇಶಿಯ ಕಿರಿಯಮಗ ತ್ರಿಭುವನಮಲ್ಲ ಸೋಮದೇವ (ಸೋಯಿದೇವ, ಸು.1225-46) ಮತ್ತು ಅನಂತರ ಪಟ್ಟವೇರಿದ ಅವನ ಮಗ 3ನೆಯ ಷಷ್ಠ (ಸು.1246-60) ಇವರ ಬಗ್ಗೆ ಏನೂ ತಿಳಿದಿಲ್ಲ. 1260ರ ಅನಂತರ ಗೋವ ಕದಂಬರ ಬಗ್ಗೆ ಉಲ್ಲೇಖಗಳು ದೊರಕುವುದಿಲ್ಲವಾದ್ದರಿಂದ ಈ ಸುಮಾರಿನಲ್ಲಿ ಯಾದವ, ಹೊಯ್ಸಳರ ದಾಳಿಯಲ್ಲಿ ಅವರ ರಾಜತ್ವ ಅಳಿಸಿಹೋಗಿರಬೇಕು.

**ವಾಸ್ತುಶಿಲ್ಪ :** ಗೋವ ಕದಂಬ ಅರಸರ ಆಳ್ವಿಕೆಯಲ್ಲಿ ಅನೇಕ ಕಟ್ಟಡಗಳು ನಿರ್ಮಿತವಾಗಿವೆ. ಕದಂಬರ ಕಾಲದ ಬಹುತೇಕ ಕೃತಿಗಳಲ್ಲಿ ಹೊಯ್ಸಳ ಚಾಳುಕ್ಯ ಶೈಲಿಯ ಪ್ರಭಾವ ಕಂಡುಬರುತ್ತದೆ. ಆದರೆ ಕದಂಬರ ಕಟ್ಟಡಗಳಲ್ಲಿ ಕೆಲವು ವೈಶಿಷ್ಟ್ಯಗಳಿರುವುದರಿಂದ ವಾಸ್ತುಶಿಲ್ಪ ಪರಂಪರೆಯಲ್ಲಿ ಕದಂಬ ಶೈಲಿ ಎಂಬ ಒಂದು ಪ್ರಕಾರವನ್ನು ಗುರುತಿಸಬೇಕು. ಎಂಬುದು ವಿದ್ವಾಂಸ ಮೊರೇಸ್ ಅಭಿಪ್ರಾಯ. ಸುಕನಾಸಿ ಗರ್ಭಗುಡಿಗಿಂತ ಅಗಲವಾಗಿರುವುದು, ವಿವಿಧ ರೀತಿಯ ಜಾಲಂಧ್ರಗಳ ಅಳವಡಿಕೆ, ಚಾವಣಿಯ ಸುತ್ತ ಚಪ್ಪಡಿಗಳನ್ನು ಇಳಿಜಾರಾಗಿ ಜೋಡಿಸಿ ಮಾಡಿದ ಕಪೋತ ಮತ್ತು ಕದಂಬನಾಗರವೆಂಬ ಶಿಖರರೀತಿ ಇವು ಮೊರೇಸ್ ಪ್ರಕಾರ ಕದಂಬ ಶೈಲಿಯ ವೈಶಿಷ್ಟಗಳು. ಕದಂಬ ನಾಗರಶಿಖರ ಚತುರಸ್ರಾಕಾರದ ಚಾವಣಿಯ ಮೇಲೆ ಪಿರಮಿಡ್ಡಿನಾಕೃತಿಯಲ್ಲಿ ಮೆಟ್ಟಲುಮೆಟ್ಟಲಾಗಿ ಮೇಲೆ ಹೋದಂತೆ ಚಿಕ್ಕದಾಗುವ ಚಪ್ಪಟೆ ಸ್ತರಗಳಿಂದ ಎತ್ತಲ್ಪಟ್ಟಿದ್ದು ಮೇಲೆ ಕಳಶ ಹೊಂದಿರುತ್ತದೆ. ಶಿಖರದ ಮೇಲೆ ಯಾವ ರೀತಿಯ ಶಿಲ್ಪಗಳೂ ಇರುವುದಿಲ್ಲ. ಎಲ್ಲೋ ಕೆಲವು ಸಲ ಅಂಚುಗಳನ್ನು ಹಲ್ಲಿನಾಕೃತಿಯಲ್ಲಿ ಬಿಡಿಸಿರುವುದಷ್ಟೇ ಈ ಶಿಖರ ರೀತಿಯ ಅಲಂಕರಣ. ಕದಂಬ ವಾಸ್ತುಶಿಲ್ಪ ಶೈಲಿ ಆದ್ಯ ಕದಂಬರ ಕಾಲದಿಂದ ವಿಶಿಷ್ಟವಾಗಿ ಬೆಳೆದಿರಬೇಕು. ಕ್ರಮವಾಗಿ ಹಲಶಿಯ ಜೈನಬಸ್ತಿ,

**ಗೋವೆಯ ಕದಂಬ ಶಾಖೆಯ ವಂಶಾವಳಿ:**

- ಷಷ್ಠ I
  - ನಾಗವರ್ಮ
    - ಗೂವಲದೇವ I
      - ಷಷ್ಠ II (ಸು.1000-72)
        - ಗೂವಲದೇವ II (ಸು.1038)
        - ಜಯಕೇಶಿ I (ಸು.1050-78)
          - ಗೂವಲದೇವ III (ಸು.1078-1125)
          - ವಿಜಯಾದಿತ್ಯ
            - ಪದ್ಮಲದೇವಿ
            - ಜಯಕೇಶಿ II (ಸು.1125-47)
              - ಸಾವಿತ್ರಿ
              - ಪೆರ್ಮಾಡಿದೇವ (ಶಿವಚಿತ್ತ: ಸು.1147-92)
              - ವಿಜಯಾದಿತ್ಯ (ವಿಷ್ಣುಚಿತ್ತ: ಸು.1147-87)
                - ಜಯಕೇಶಿ III (ಸು.1187-1225)
                  - ವಜ್ರದೇವ (ಸು.1200-21)
                  - ತ್ರಿಭುವನಮಲ್ಲ (ಸು.1225-46)
                    - ಷಷ್ಠ III (ಸು.1246-60)
            - ತ್ರಿಭುವನಮಲ್ಲ
          - ಮಯಣಲ್ಲಾದೇವಿ
          - (ಇನ್ನೊಬ್ಬ ಮಗಳು)

ಮಲಪ್ರಭಾ ದಂಡೆಯ ಕದರೋಲಿಯ ಗುಡಿ, ಹಲಶಿಯ ಹತ್ತಿಕೇಶ್ವರ, ಕಲ್ಲೇಶ್ವರ, ಸುವರ್ಣೇಶ್ವರ ಮತ್ತು ರಾಮೇಶ್ವರ ದೇವಾಲಯಗಳಲ್ಲೂ ಅನಂತರ ಯಲವತ್ತಿಯ ಹಿಂದು ಮತ್ತು ಜೈನಗುಡಿಗಳಲ್ಲಿಯೂ ಮುಂದೆ ಈ ಶೈಲಿಯ ಪರಮೋಚ್ಚ ಕೃತಿಯನ್ನು ಬೆಳಗಾಂವಿ ಜಿಲ್ಲೆಯ ದೇಗಾಂವೆಯ ಕಮಲಾನಾರಾಯಣ ದೇವಾಲಯದಲ್ಲಿಯೂ ಕಾಣಬಹುದೆಂದು ಮೊರೇಸರ ಬರೆವಣಿಗೆಯಿಂದ ತಿಳಿದುಬರುತ್ತದೆ.



ದೇಗಾಂವೆಯ ಕಮಲಾನಾರಾಯಣ ಗುಡಿ

ಶಿವಚಿತ್ತನ (1147-92) ಪತ್ನಿ ಕಮಲಾದೇವಿಯ ಆಜ್ಞೆಯಿಂದ ತಿಪ್ಪೋಜನೆಂಬುವನು ದೇಗಾಂವೆಯ ಕಮಲಾನಾರಾಯಣ ದೇವಾಲಯವನ್ನು ಕಟ್ಟಿದನೆಂದು ಅಲ್ಲಿಯ ಒಂದು ಶಾಸನ ತಿಳಿಸುತ್ತದೆ. ಈ ದೇವಾಲಯ ಒಂದು ತ್ರಿಕೂಟಾಚಲ. ಮೂರು ದೇವಗೃಹಗಳು ಮುಂದಿನ ಮಂಟಪಕ್ಕೆ ತೆರೆದಂತಿವೆ. ದೇವಗೃಹಗಳಲ್ಲೊಂದೊಂದರಲ್ಲೂ ಒಂದು ಗರ್ಭಗೃಹ ಮತ್ತು ಸುಕನಾಸಿ ಇವೆ. ಸುಕನಾಸಿ ಮತ್ತು ಗರ್ಭಗೃಹದ ಬಾಗಿಲವಾಡಗಳು ಬಲು ನಾಜೂಕಾಗಿ ಶಿಲ್ಪಿತವಾಗಿವೆ. ಸುಕನಾಸಿಯ ಬಾಗಿಲುಗಳನ್ನು ಕಲಾತ್ಮಕವಾಗಿ ಕೆತ್ತಿದ ಜಾಲಂಧ್ರಗಳ ಚೌಕಟ್ಟಿನ ಮಧ್ಯದಲ್ಲಿರಿಸಲಾಗಿದೆ. ದೇವಾಲಯದ ಹೊರಗೋಡೆಯ ಮೇಲೆ ಕದಂಬನಾಗರ ರೀತಿಯ ಶಿಖರವನ್ನು ಹೊತ್ತಿರುವ ಜೋಡಿ ಅರೆಗಂಬಗಳ ಅಲಂಕರಣವಿದೆ. ಮೇಲಿನ ಕೈಪಿಡಿಯನ್ನು ಹೊತ್ತು ಸೆಟೆದು ನಿಂತ ಸಿಂಹಗಳೂ ಅವುಗಳ ಮಧ್ಯೆ ನೃತ್ಯ ಬಾಲಿಕೆಯರ ವಿಗ್ರಹಗಳೂ ಇವೆ. ಅಲಂಕರಣ, ಸ್ತಂಭರೀತಿ ಮುಂತಾದವುಗಳಲ್ಲಿ ಸಮಕಾಲೀನ ಚಾಳುಕ್ಯ ಹೊಯ್ಸಳ ಶೈಲಿಯ ಪ್ರಭಾವ ಎದ್ದು ಕಾಣುತ್ತದೆ. ದೇಗಾಂವೆಯ ಕಮಲಾನಾರಾಯಣ ಗುಡಿ ಕರ್ನಾಟಕದ ಸುಂದರ ದೇವಾಲಯಗಳಲ್ಲೊಂದೆಂಬುದರಲ್ಲಿ ಸಂದೇಹವಿಲ್ಲ. ಈ ಗುಡಿ ಕದಂಬ ವಾಸ್ತುಶಿಲ್ಪ ಶೈಲಿಯ ಉಚ್ಚ ಹಾಗೂ ಸ್ವರೂಪ ನಿರ್ದೇಶಕ ಕೃತಿ.

ಗೋವ ಕದಂಬರ ಕಾಲದ ಶಿಲ್ಪಗಳು ಹೆಚ್ಚುಮಟ್ಟಿಗೆ ಕಲ್ಯಾಣದ ಚಾಳುಕ್ಯ ಶೈಲಿಯಲ್ಲಿಯೇ ಇರುತ್ತವೆ. ಚೂಪುತಲೆಯ ಪ್ರಭಾವಳಿ ಮಾತ್ರ ಈ ಕದಂಬ ಶಿಲ್ಪಗಳ ವೈಶಿಷ್ಟ್ಯವಿರಬಹುದು. ಹಲಶಿಯ ದೇವಾಲಯದಲ್ಲಿರುವ ಲಕ್ಷ್ಮೀನಾರಾಯಣ ವಿಗ್ರಹ ಗೋವ ಕದಂಬ ಶಿಲ್ಪಗಳಿಗೆ ಒಂದು ಉತ್ತಮ ಉದಾಹರಣೆ. (ಎಸ್.ಎನ್.)

**ನಾಣ್ಯಗಳು :** ಗೋವ ಕದಂಬರ ನಾಣ್ಯಗಳು ಕಲಾತ್ಮಕವಾಗಿಯೂ ವೈವಿಧ್ಯಪೂರ್ಣವಾಗಿಯೂ ಇದ್ದು ಕರ್ನಾಟಕ ನಾಣ್ಯ ಇತಿಹಾಸದಲ್ಲಿ ಮುಖ್ಯವಾಗಿವೆ. ಚಿನ್ನ ಮತ್ತು ತಾಮ್ರದ ಇವರ ನಾಣ್ಯಗಳು ಗೋವದಲ್ಲಿಯೂ ಮಹಾರಾಷ್ಟ್ರದಲ್ಲಿಯೂ ವಿಶೇಷವಾಗಿ ದೊರಕಿವೆ. ಸಾಮಾನ್ಯವಾಗಿ ಈ ನಾಣ್ಯಗಳ ಮುಮ್ಮುಖದಲ್ಲಿ ಸಿಂಹ ಮತ್ತು ಸಂವತ್ಸರದ ಹೆಸರು, ಹಿಮ್ಮುಖದಲ್ಲಿ ನಾಗರೀ ಲಿಪಿಯಲ್ಲಿ ರಾಜನ ಹೆಸರು ಸೇರಿದಂತೆ ಬರೆಹ ಕಾಣಬರುತ್ತವೆ. ಮಲೆಗೆಭೈರವ ಮತ್ತು ಮಲವರಮಾರಿ ಎಂಬ ಇವರ ಬಿರುದುಗಳನ್ನು ಇವರ ನಾಣ್ಯಗಳ ಮೇಲೆ ಕಾಣಬಹುದು.

ಮೊದಲನೆಯ ಜಯಕೇಶಿಯ ನಾಣ್ಯಗಳು ಈ ರೀತಿ ಇವೆ: ಮುಮ್ಮುಖದಲ್ಲಿ ಸಿಂಹ ಮತ್ತು ನಾಗರೀಲಿಪಿಯಲ್ಲಿ ವಿಜಯ ಎಂಬ ಬರೆಹ ಹಿಮ್ಮುಖದಲ್ಲಿ ಬಿಂದುಗಳಿಂದ ಮಾಡಿದ ವೃತ್ತದಲ್ಲಿ, ಶ್ರೀಸಪ್ತಕೋಟೀಶ ಲಬ್ಧವರವೀರ ಜಯಕೇಶಿದೇವ ಮಲವರಮಾರಿ' ಎಂಬ ಐದು ಸಾಲಿನ ನಾಗರೀ ಬರೆಹ ಇವೆ. ಇವನ ಇನ್ನೊಂದು ರೀತಿಯ ನಾಣ್ಯಗಳಲ್ಲಿ ಮುಮ್ಮುಖದಲ್ಲಿ ಗಜಸಿಂಹ, ಹಿಮ್ಮುಖದಲ್ಲಿ ತ್ರಿಶೂಲ ಮತ್ತು ಶ್ರೀಮಲೆಗೈಭೈರವ ಎಂಬ ಎರಡು ಸಾಲುಗಳ ನಾಗರೀಲಿಪಿ ಇರುತ್ತವೆ. ಈ ನಾಣ್ಯಗಳು ಚಿನ್ನದಿಂದ ಮಾಡಿದವು. 76.5 ಗ್ರೇನ್ ತೂಕ, 0.6 ಅಂಗುಲ ವ್ಯಾಸವುಳ್ಳವು. 45 ಗ್ರೇನ್ ತೂಕ,0.45" ವ್ಯಾಸವಿದ್ದು ಹಿಮ್ಮುಖದಲ್ಲಿ ಶ್ರೀಮಲವರಮಾರಿ ಎಂಬ ನಾಗರೀಲಿಪಿಯ ಬರೆಹವಿರುವ ನಾಣ್ಯಗಳು ಸಹ ಇವನವೇ ಇರಬಹುದು. ಇವುಗಳಲ್ಲೂ ನಾಲ್ಕು ರೀತಿಯವಿವೆ. ಒಂದನೆಯ ನಾಣ್ಯದಲ್ಲಿ ಧ್ವಜಸ್ತಂಭ, ಎರಡನೆಯದರಲ್ಲಿ ರಾಜದಂಡ ಮತ್ತು ಛತ್ರಿ, ಮೂರನೆಯದರಲ್ಲಿ ಎತ್ತರವಾದ ಗೋಪುರವುಳ್ಳ ದೇವಾಲಯ, ನಾಲ್ಕನೆಯದರಲ್ಲಿ ಅಂಕುಶ, ಇವುಗಳ ಜೊತೆಗೆ ಸಿಂಹ ಇವು ಮುಮ್ಮುಖದಲ್ಲಿ ಕಾಣುತ್ತವೆ.

ಎರಡನೆಯ ಜಯಕೇಶಿ ಹೊರಡಿಸಿರಬುಹುದಾದ ಒಂದು ಚಿನ್ನದ ನಾಣ್ಯದಲ್ಲಿ 'ದುರ್ಮತಿ' ಎಂಬ ಸಂವತ್ಸರದ ಹೆಸರು ಮತ್ತು ಹಿಮ್ಮುಖದಲ್ಲಿ ಐದು ಸಾಲಿನ ಬರೆಹ ಕಾಣುತ್ತದೆ. ಶಿವಚಿತ್ತ, ಪೆರ್ಮಾಡಿಯ ಒಂದು ರೀತಿಯ ನಾಣ್ಯದಲ್ಲಿ ಮುಮ್ಮುಖದಲ್ಲಿ ಸಿಂಹ, ಸೂರ್ಯ ಮತ್ತು 'ಜಯ' ಎಂಬ ಬರೆಹ, ಹಿಮ್ಮುಖದಲ್ಲಿ 'ಸಪ್ತಕೋಟೀಶ ಲಬ್ಧವರ ವೀರ ಹೆಮ್ಮಾಡಿದೇವ ಮಲವರಮಾರಿ' ಎಂಬ ಐದು ಸಾಲುಗಳ ನಾಗರೀಬರೆಹವಿದ್ದರೆ ಮತ್ತೊಂದು ನಮೂನೆಯ ನಾಣ್ಯದಲ್ಲಿ ಶಿವಚಿತ್ತ ವೀರಹೆಮ್ಮಾಡಿದೇವ ಎಂಬ ಬರೆಹ ಕಾಣಬರುತ್ತದೆ. ಇವನ ನಾಣ್ಯಗಳಲ್ಲಿ ವಿಷ್ಣು, ಬಹುಧಾನ್ಯ, ಈಶ್ವರ, ಕೀಲಕ ಮುಂತಾದ ಸಂವತ್ಸರಗಳ ಹೆಸರುಗಳು ಕಾಣಬರುತ್ತವೆ. ಇನ್ನೊಂದು ರೀತಿಯ ನಾಣ್ಯವೊಂದನ್ನೂ ಈ ರಾಜ ಅಚ್ಚು ಹಾಕಿಸಿದ, ಮುಮ್ಮುಖದಲ್ಲಿ ಎರಡು ವೃತ್ತಗಳು. ಅದರೊಳಗೆ ನಿಂತಿರುವ ಸಿಂಹ, ಸಿಂಹದ ಬಾಯಿಯ ಸಮೀಪದಲ್ಲಿ ಸ್ವಸ್ತಿಕ ಚಿಹ್ನೆ, ಕೆಳಗೆ ಪ್ಲವ ಎಂಬ ನಾಗರೀ ಬರೆಹ, ಹಿಮ್ಮುಖದಲ್ಲಿ ಎರಡು ವೃತ್ತಗಳು, ಇದರೊಳಗೆ ಶಿವಚಿತ್ತ ಎಂಬ ಹೆಸರು ನಾಗರೀ ಲಿಪಿ ಮತ್ತು ಕನ್ನಡ ಲಿಪಿಗಳಲ್ಲಿ ಒಂದರ ಕೆಳಗೆ ಒಂದರಂತೆ ಬರೆಯಲ್ಪಟ್ಟಿರುತ್ತವೆ. ಮೊದಲನೆಯ, ಮೂರನೆಯ ಮತ್ತು ಐದನೆಯ ಸಾಲುಗಳು ನಾಗರೀಲಿಪಿಯಲ್ಲಿಯೂ ಎರಡು ಮತ್ತು ನಾಲ್ಕನೆಯ ಸಾಲುಗಳು ಕನ್ನಡ ಲಿಪಿಯಲ್ಲಿಯೂ ಇರುತ್ತವೆ. ಮೂರನೆಯ ಜಯಕೇಶಿಯ ನಾಣ್ಯಗಳು ಮೊದಲನೆಯ ಜಯಕೇಶಿಯ ನಾಣ್ಯಗಳಂತೆಯೇ ಇವೆ.



ಗೋವ ಕದಂಬರ ನಾಣ್ಯಗಳು

ಸೋಯಿದೇವನ ನಾಣ್ಯಗಳಲ್ಲೂ ಮುಮ್ಮುಖದಲ್ಲಿ ಸಿಂಹ ಮತ್ತು ಸಂವತ್ಸರದ ಹೆಸರು, ಹಿಮ್ಮುಖದಲ್ಲಿ ಸಪ್ತಕೋಟೇಶ್ವರ ಚರಣ ಲಬ್ಧವರ

ವೀರ ಸೋಯಿದೇವ ಎಂಬ ನಾಲ್ಕು ಸಾಲುಗಳ ನಾಗರೀ ಲಿಪಿಯ ಬರೆಹ ಇರುತ್ತದೆ. ಪ್ಲವ ಮತ್ತು ವಿಶ್ವಾವಸು ಸಂವತ್ಸರಗಳನ್ನುಳ್ಳ ಇವನ ನಾಣ್ಯಗಳು ಈವರೆವಿಗೆ ದೊರಕಿವೆ. ಇದಕ್ಕಿಂತ ಭಿನ್ನವಾದ ಇವನ ನಾಣ್ಯವೊಂದರ ಮುಮ್ಮುಖದಲ್ಲಿ ಬಿಂದುಗಳಿಂದ ಮಾಡಿದ ವೃತ್ತ, ಅದರೊಳಗೆ ಒಂದು ಕಾಲನ್ನು ಎತ್ತಿರುವ ಸಿಂಹ, ಅದರ ಮುಂದೆ ಶಂಖ ಮತ್ತು ಶ್ರೀಸೋಇ ಎಂಬ ಬರೆಹ ಇವೆ. ಹಿಮ್ಮುಖದಲ್ಲಿ ತ್ರಿಶೂಲ ಮತ್ತು ಶ್ರೀಮಲವರಮಾರಿ ಎಂಬ ಬರೆಹ ಇದೆ.

ಷಷ್ಠದೇವನಿಗೆ ಖಚಿತವಾಗಿ ಸೇರಬಹುದಾದ ನಾಣ್ಯಗಳು ದೊರಕಿಲ್ಲ. ದೇವಷಷ್ಠ ಸೋಮದೇವ ಎಂಬ ಬರೆಹವನ್ನುಳ್ಳ ನಾಣ್ಯ ಷಷ್ಠದೇವನಿಗೆ ಸೇರಿರಬೇಕೆಂದು ಮೊರೇಸರ ಅಭಿಪ್ರಾಯ. ಆದರೆ ಈ ಬರೆಹ ಸರಿಯಾಗಿದೆಯೇ ಎಂಬುದು ಇನ್ನೂ ತಿಳಿದಿಲ್ಲ.

ಇವುಗಳ ಜೊತೆಗೆ ಯಾವ ಗೋವ ಕದಂಬ ರಾಜನಿಗೂ ಖಚಿತವಾಗಿ ಸಂಬಂಧಿಸಿದೆಯೆಂದು ಹೇಳಲಾಗದ ಕೆಲವು ನಾಣ್ಯಗಳೂ ದೊರಕಿವೆ. ಇವುಗಳಲ್ಲಿ ಸಂವತ್ಸರದ ಹೆಸರು, ಸಪ್ತಕೋಟೀಶ್ವರ ಮುಂತಾದ ಬರೆಹಗಳು, ಸೂರ್ಯ, ಚಂದ್ರ, ಸಿಂಹ, ಸ್ವಸ್ತಿಕ ಮೊದಲಾದವುಗಳು ಕಾಣಬರುತ್ತವೆ.

ಗೋವ ಕದಂಬ ನಾಣ್ಯಗಳ ಒಂದು ಒಳ್ಳೆಯ ಸಂಗ್ರಹ ಮುಂಬಯಿಯ ಇಂಡಿಯನ್ ಹಿಸ್ಟಾರಿಕಲ್ ರಿಸರ್ಚ್ ಇನ್‍ಸ್ಟಿಟ್ಯೂಟ್‍ನಲ್ಲಿದೆ. (ಎ.ವಿ.ಎನ್.)

### ಇತರ ಕದಂಬ ಶಾಖೆಗಳು

**ಕರಡಿಕಲ್ಲಿನ ಕದಂಬರು :** ರಾಯಚೂರು ಜಿಲ್ಲೆಯಲ್ಲಿ ಲಭಿಸಿರುವ ಶಾಸನಗಳಿಂದ 11-12ನೆಯ ಶತಮಾನಗಳಲ್ಲಿ ಆ ಪ್ರದೇಶದ ಕರಡಿಕಲ್ಲು- 400 ಪ್ರಾಂತವನ್ನು ಕದಂಬ ಶಾಖೆಗೆ ಸೇರಿದ ಕೆಲವು ಸಾಮಂತರು ಆಳುತ್ತಿದ್ದರೆಂದು ತಿಳಿದಿದೆ. ಬನವಾಸಿಪುರವರೇಶ್ವರ, ಕದಂಬರಾಭರಣ ಎಂಬ ಬಿರುದುಗಳನ್ನು ಧರಿಸಿರುವುದರಿಂದ ಇವರು ಕದಂಬಕುಲಕ್ಕೆ ಸೇರಿದವರೆಂದು ಹೇಳಬಹುದಾಗಿದೆ. ಇತರ ಕದಂಬ ಶಾಖೆಗಳವರಿಂದ ಭಿನ್ನರೆಂಬುದು ಇವರು ಧರಿಸಿದ ನವಿಲೆಯ ಪಾರ್ಥ, ತೊಳೆದಡಿಯ ಭೀಮ, ಮನ್ನೆಯ ಗೂಡವೆ ಎಂಬ ವಿಶಿಷ್ಟಬಿರುದುಗಳಿಂದ ಕಂಡುಬರುತ್ತದೆ (ನವಿಲೆ ಎಂಬುದು ಈಗಿನ ನವಲಿ ಎಂಬ ಗ್ರಾಮ. ಇಲ್ಲಿನ ಜಡೆಯ ಶಂಕರದೇವರು 11ನೆಯ ಶತಮಾನದ ಶಂಕರ ದಾಸಿಮಯ್ಯನೆಂಬ ಶಿವಶರಣನ ಆರಾಧ್ಯದೈವ). ಈ ಶಾಖೆಯ ಮಹಾಸಾಮಂತ ನಾಗವರ್ಮರಸ ಚಾಳುಕ್ಯ ಮೊದಲನೆಯ ಸೋಮೇಶ್ವರನ ಅಧೀನದಲ್ಲಿ 1066ರಲ್ಲಿ ಕರಡಿಕಲ್ಲು- 400ನ್ನು ಆಳುತ್ತಿದ್ದ. 1113 ಮತ್ತು 1119ನೆಯ ವರ್ಷಗಳ ಶಾಸನಗಳಲ್ಲಿ ಮಹಾಮಂಡಲೇಶ್ವರ ಬೂತರಸನ ಪ್ರಸ್ತಾಪವಿದೆ. ಈತ ಆರನೆಯ ವಿಕ್ರಮಾದಿತ್ಯನ ಸಾಮಂತ, ಬಹುಶಃ ನಾಗವರ್ಮರಸನ ಅನಂತರ ಅಧಿಕಾರಕ್ಕೆ ಬಂದಾತ. ಮೂರನೆಯವ ಮಾಧವತ್ತಿಯರಸ, ಮುಮ್ಮಡಿ ಸೋಮೇಶ್ವರನ ಮಹಾಮಂಡಲೇಶ್ವರ -ಈತ ಕಾಣಿಸಿಕೊಳ್ಳುವ ಕಾಲ 1135. ಈತ ಬಹುಶಃ ಬೂತರಸನ ಉತ್ತರಾಧಿಕಾರಿ. ಆದರೆ ಇವರ ನಡುವಣ ಬಾಂಧವ್ಯ ಖಚಿತವಾಗಿ ತಿಳಿಯದು. ಬಹುಶಃ ಕ್ರಮವಾಗಿ ತಂದೆ ಮಕ್ಕಳಾಗಿರಬಹುದು.

ಸುಮಾರು ಆರು ದಶಕಗಳ ಅನಂತರ 1191ರ ಮತ್ತು 1215ರ ಕರಡಿಕಲ್ಲು ಮತ್ತು ಮುಟಗಲ್ಲಿನ ಶಾಸನಗಳಲ್ಲಿ ಕದಂಬ ಕುಲದ ಸಾಮಂತರ ಪ್ರಸ್ತಾಪವಿದೆ. ಮೇಲೆ ಹೇಳಿದ ಕದಂಬರು ಧರಿಸಿದ ವಿಶಿಷ್ಟವಾದ ಬಿರುದುಗಳನ್ನೇ ಇವರು ಸಹ ಧರಿಸಿದ್ದರು. ಆದರೆ ಇವರ ಹೆಸರುಗಳು ಮಾತ್ರ ಸ್ವಲ್ಪಭಿನ್ನ. ಲಭ್ಯ ಶಾಸನಗಳಿಂದ ಇವರ ವಂಶಾವಳಿಯನ್ನು ಹೀಗೆ ರೂಪಿಸಬಹುದು:

ಬಜ್ಜ I
|
ಕಾಚ I
|
ಬಜ್ಜ II (ಪತ್ನಿ, ಬಾಚಲದೇವಿ)
|
ಕಾಚ II (ಪತ್ನಿ, ಸಜ್ಜಲದೇವಿ)
|
ಬಜ್ಜ III (ಪತ್ನಿ, ಹೊಲ್ಲಾದೇವಿ)

ಶಾಸನದಲ್ಲಿ ಒಂದನೆಯ ಕಾಚನ ಮಗನನ್ನು ಅಗ್ರನಂದನನೆಂದಿರುವುದರಿಂದ ಇಮ್ಮಡಿ ಬಜ್ಜನಿಗೆ ಕಿರಿಯ ಸೋದರರಿದ್ದಿರಬಹುದು. ಮುಮ್ಮಡಿ ಬಜ್ಜ ಮುದುಗಲ್ಲ ಪಟ್ಟಣವನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡಿದ್ದ. ಈತನ ಮಹಾ ಪ್ರಧಾನನಾದ ಮಾಳಯನಾಯಕ ಅಂತರಿಸಿರ್ದ ಕದಂಬ ರಾಜ್ಯವಂಶೋದಯ ಮಾಗಲುದ್ಧರಿಸಿದನೆಂದು ಶಾಸನದಲ್ಲಿ ಹೇಳಿರುವುದನ್ನು ಗಮನಿಸಿದರೆ ಬಹುಶಃ ಮಾದವತ್ತಿಯರಸನ ಅನಂತರ ಇವರು ತಮ್ಮ ಅಧಿಕಾರವನ್ನು ಕಳೆದುಕೊಂಡಿದ್ದು, ಸ್ವಲ್ಪ ಕಾಲಾನಂತರ ಇನ್ನೊಮ್ಮೆ ತಮ್ಮ ಆಳ್ವಿಕೆಯ ಪ್ರದೇಶಗಳನ್ನು ಪಡೆದುಕೊಂಡರೆಂದು ಊಹಿಸಬಹುದಾಗಿದೆ.

ಈ ಕದಂಬರನ್ನು ಶಾಸನಗಳಲ್ಲಿ ಕಡಂಬರೆಂದೂ ಕರೆಯಲಾಗಿದೆ. ಇದು ಕೇವಲ ರೂಪಭೇದ, ಮೂರ್ಧನ್ಯೀಕರಣದ ಫಲ.

**ನೂಱುಂಬಾಡದ ಕದಂಬರು :** ಶಾಸನಗಳಲ್ಲಿ ಕಡಂಬರೆಂದೇ ಕರೆಯಲಾಗಿರುವ ಈ ಶಾಖೆಯವರು 12ನೆಯ ಶತಮಾನದಲ್ಲಿ ಇಂದಿನ ಹಾವೇರಿ ಜಿಲ್ಲೆಯ ರಾಣೆಬೆನ್ನೂರು ಮತ್ತು ಹಿರೇಕೆರೂರು ತಾಲ್ಲೂಕಿನ ಭಾಗಗಳನ್ನೊಳಗೊಂಡ, ರಟ್ಟಪಳ್ಳಿ-70 ಮತ್ತು ಇಟ್ಟಿಗೆ-70 ಎಂಬ ಎರಡು ಭಾಗಗಳನ್ನು ಸೇರಿಸಿ ಕರೆಯಲಾದ ನೂಱುಂಬಾಡ ಪ್ರಾಂತವನ್ನು ಆಳುತ್ತಿದ್ದರು. ಚಾಳುಕ್ಯ 1ನೆಯ ಸೋಮೇಶ್ವರನ ಸಮಕಾಲೀನನಾಗಿದ್ದ ಸಾಮಂತ ಬೀರದೇವ ಈ ಶಾಖೆಯ ಮೊದಲಿಗ. ಈತನ ಸೋದರ ಕೇತರಸ 1. ಈತನ ಮಗ ನಾಮರಸ, ಇವರ ವಂಶಾವಳಿ ಹೀಗಿದೆ:

ಬೀರದೇವ — ಕೇತರಸ I
|
ನಾಮರಸ
|
ಕೇತರಸ II (ಪತ್ನಿ, ಅತ್ತಿಯಬ್ಬೆ)
|
ಪುಲಕೇಶಿ, ಪೆರ್ಮ (ಪೆರ್ಮಾಡಿ), ರಾಣಕಿದೇವ, ಬೀರದೇವ II (ಪತ್ನಿ, ಬಾಚಲದೇವಿ), ಬಮ್ಮರಸ, ಮಲ್ಲಿದೇವ
|
ಕೇತರಸ III (ಪತ್ನಿಯರು- ಲಳಿಯಾದೇವಿ, ಕಂಚಲದೇವಿ, ದೊಣಲದೇವಿ)
|
ಗರುಡಪಾಂಡ್ಯ (ಪತ್ನಿ, ಬಾಚಲದೇವಿ), ವೀರಪಾಂಡ್ಯ

ಇಮ್ಮಡಿ ಕೇತರಸನ ಪತ್ನಿ ಅತ್ತಿಯಬ್ಬೆಗೆ ಇಮ್ಮಡಿ ಬೀರದೇವ, ಬಮ್ಮರಸ, ಮಲ್ಲಿದೇವರೆಂಬ ಮೂವರು ಮಕ್ಕಳಿದ್ದರೆಂದು ಶಾಸನದಲ್ಲಿ ಹೇಳಿದೆ. ಆದರೆ ಕೇತರಸನಿಗೆ ಪುಲಕೇಶಿ, ಪೆರ್ಮ ಮತ್ತು ರಾಣಕಿದೇವ ಎಂಬ ಇನ್ನೂ ಮೂವರು ಮಕ್ಕಳಿರುವುದನ್ನು ಸಹ ಶಾಸನದಲ್ಲಿ ಹೇಳಿದೆಯಾಗಿ, ಅವರು ಆತನ ಇನ್ನೊಬ್ಬ ಪತ್ನಿಯ ಮಕ್ಕಳಾಗಿರಬೇಕು. ಇಮ್ಮಡಿ ಬೀರದೇವನ ಪತ್ನಿ ಬಾಚಲದೇವಿ ಗುತ್ತವಂಶದ ರಾಜಕುಮಾರಿ. ಈತನ ಮಗ ಮುಮ್ಮಡಿ ಕೇತರಸನ ಪತ್ನಿ ಲಳಿಯಾದೇವಿ ಸಹ ಆ ವಂಶಕ್ಕೇ ಸೇರಿದವಳು. ಕಂಚಲದೇವಿ ಮತ್ತು ದೋರಲದೇವಿ ಈ ಕೇತರಸನ ಇನ್ನಿಬ್ಬರು ಪತ್ನಿಯರು. ದೋರಲದೇವಿ ಸಿಂದ ಕುಲದವಳು. ಗರುಡ ಪಾಂಡ್ಯನು ಗುತ್ತ 1ನೆಯ ವಿಕ್ರಮಾದಿತ್ಯನ ಮಗಳಾದ ಬಾಚಲದೇವಿಯನ್ನು ಮದುವೆಯಾಗಿದ್ದ. ಗರುಡಪಾಂಡ್ಯ 2ನೆಯ ಸೇವುಣ ಸಿಂಘಣನ ಮಾಂಡಲಿಕನಾಗಿದ್ದ ಇವನ ಪೂರ್ವಜರು ಆರಂಭದಲ್ಲಿ ಚಾಳುಕ್ಯರ, ಅನಂತರ ಕಳಚುರಿಗಳ ಸಾಮಂತರಾಗಿದ್ದರು.

**ಬಂಕಾಪುರದ ಕದಂಬರು :** 11-12ನೆಯ ಶತಮಾನಗಳಲ್ಲಿ ಹಾನಗಲ್ಲು ಪ್ರಾಂತವನ್ನು ಆಳುತ್ತಿದ್ದ ಕದಂಬ ಮನೆತನದಲ್ಲಿ ಮಯೂರವರ್ಮ ಎಂಬ ಅರಸನೂ ಇದ್ದನೆಂದು ಇದುವರೆಗೂ ಭಾವಿಸಲಾಗಿತ್ತು. ಆದರೆ ಲಭ್ಯಶಾಸನಗಳ ಆಧಾರದಿಂದ ಈ ಮಯೂರವರ್ಮ ಬಂಕಾಪುರಕ್ಕೆ ಸೇರಿದವನೆಂದು ತಿಳಿದುಬರುತ್ತದೆ. ಪಾಂಥಿ ಪುರಾಧಿಪ ಎಂಬುದು ಈತನ ವಿಶಿಷ್ಟ ಬಿರುದು. ಈತ ಚಾಳುಕ್ಯ ಇಮ್ಮಡಿ ಜಯಸಿಂಹನ ಸೋದರಿಯಾದ ಅಕ್ಕಾದೇವಿಯನ್ನು ಲಗ್ನವಾಗಿದ್ದ. 1034-35ರಲ್ಲಿ ಈತ ಬನವಾಸಿ

ಪನ್ನಿಚ್ಛಾಸಿರ ಮತ್ತು ಪಾನುಂಗಲ್ಯೆನೂರು ಪ್ರಾಂತಗಳನ್ನಾಳುತ್ತಿದ್ದ. ಮಯೂರವರ್ಮನನ್ನು ಹರಿಕಂತನ ಸಿಂಗನೆಂದು ವರ್ಣಿಸಿದೆ. ಈತನ ತಂದೆ ಹರಿಕಂತ ಅರಿಕೇಸರಿ ಆಗಿರಬಹುದು. ಅಕ್ಕಾದೇವಿಯ ಮಗ ತೋಯಿಮದೇವ. ಈತ 1062ರ ಅನಂತರ ಆಡಳಿತ ಹೊಣೆ ವಹಿಸಿದ. ಮಯೂರವರ್ಮ 1047ರ ವರೆಗೆ ಹಾನುಂಗಲ್ಲು ಪ್ರಾಂತಾಧಿಕಾರಿಯಾಗಿದ್ದ. ಅನಂತರ ಆತನ ಇನ್ನೊಬ್ಬ ಮಗ ಅರಿಕೇಸರಿ ಅಧಿಕಾರಕ್ಕೆ ಬಂದ. ಅವನ ಉತ್ತರಾಧಿಕಾರಿ ತಮ್ಮನಾದ ತೋಯಿಮ, ಈತ ಕೇವಲ 5-6 ವರ್ಷಗಳ ಕಾಲ ಆಳಿದ ಬಳಿಕ ಈ ಪ್ರಾಂತ ಹಾನುಗಲ್ಲಿನ ಕದಂಬರ ವಶವಾಯಿತು. ಇವರನ್ನು ಬಂಕಾಪುರದ ಕದಂಬರೆಂದು ಗುರುತಿಸಿ ಅವರ ವಂಶಾವಳಿಯನ್ನು ಹೀಗೆ ರೂಪಿಸಬಹುದು:

ಅರಿಕೇಸರಿ
|
ಮಯೂರವರ್ಮ (ಪತ್ನಿ, ಅಕ್ಕಾದೇವಿ)
|
ಅರಿಕೇಸರಿ II — ತೋಯಿಮ

**ಬಯಲ್ನಾಡ ಕದಂಬರು :** ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿನ ಭಾಗದಲ್ಲಿ 10-12ನೆಯ ಶತಮಾನಗಳಲ್ಲಿ ಕದಂಬ ಶಾಖೆಗೆ ಸೇರಿದ ಕೆಲವು ಸಾಮಂತರ ಶಾಸನಗಳು ದೊರೆತಿವೆ. ಇವರು ಬಯಲ್ನಾಡನ್ನು ಆಳುತ್ತಿದ್ದರೆಂದು ಅವುಗಳಲ್ಲಿ ಹೇಳಿದೆ. ರೈಸ್ ಅವರು ಈ ಸಾಮಂತರನ್ನು ಕುರಿತು ಪ್ರಸ್ತಾಪಿಸಿ, ಕೆಲವರ ಹೆಸರುಗಳನ್ನು ಕೊಟ್ಟಿದ್ದಾರೆ. ಆದರೆ ಈ ಶಾಸನಗಳ ಪುನಃಪರಿಶೀಲನೆಯಿಂದ ಜಾಗಿ, ಉರವಿಯಮ್ಮರಸ (998-99), ಈಕರವರ್ಮ (1079) ಮತ್ತು ಇರವಿಚಿಲ್ಲಮ್ಮ (1107) ಎಂಬುವರ ಹೆಸರುಗಳು ಈಗ ಸ್ಪಷ್ಟವಾಗಿ ತಿಳಿದಿವೆ. ಕದಂಬ ಕಣ್ಠೀರವ ಮುಕ್ಕಣ್ಣಕದಂಬ, ಕದಂಬ ವಂಶೋದ್ಭವ ಎಂಬುದು ಇವರ ಬಿರುದುಗಳು. ಈಕರವರ್ಮನನ್ನು ಬನವಾಸಿ ವಿಷಯಾಧೀಶ್ವರನೆಂದು ವರ್ಣಿಸಿದ್ದರೂ ಆತ ಆಳುತ್ತಿದ್ದ ಪ್ರದೇಶ ಬಯಲ್ನಾಡಯ್ದುವುನ್ನೂರು ಎಂದು ಹೇಳಿದೆ. ಇವರಲ್ಲಿ ಮೊದಲಿಗ ಜಾಗಿ ಮತ್ತು ಮುಂದಣವರ ಸಂಬಂಧ ಸ್ಪಷ್ಟವಾಗಿಲ್ಲ. ಇವರು ಬಹುಶಃ ಇದೆ ಕಾಲದಲ್ಲಿ ಈ ಪ್ರದೇಶದಲ್ಲಿ ಆಳುತ್ತಿದ್ದ ಚೋಳರ ಸಾಮಂತರಾಗಿದ್ದಿರಬಹುದು. ಇವರ ಶಾಸನಗಳ ಕನ್ನಡ ಭಾಷೆ ಬಹುಮಟ್ಟಿಗೆ ತಮಿಳಿನಿಂದ ಪ್ರಭಾವಿತವಾಗಿದೆ. ಇನ್ನೂ ಕೆಲವು ಕದಂಬ ಶಾಖೆಗಳು ವಿವಿಧ ಕಡೆಗಳಲ್ಲಿ ಆಳುತ್ತಿದ್ದವೆಂದು ತಿಳಿದುಬರುತ್ತದೆ. (ಬಿ.ಆರ್.ಜಿ.)

**ಕದ್ರಾ :** ಉತ್ತರ ಕನ್ನಡ ಜಿಲ್ಲೆ ಕಾರವಾರ ತಾಲ್ಲೂಕಿನ ಒಂದು ಧಾರ್ಮಿಕ ಕ್ಷೇತ್ರ. ಕಾರವಾರದಿಂದ 32ಕಿಮೀ ದೂರದಲ್ಲಿದೆ. ಅಂಶಿಘಟ್ಟದ ಕೆಳಭಾಗದಲ್ಲಿರುವ ಕದ್ರಾದಲ್ಲಿ ಇತ್ತೀಚೆಗೆ ಕಟ್ಟಲಾದ ಮಹಾಮಾಯಾ ದೇಗುಲ, ಕೆಥೊಲಿಕ್ ಚರ್ಚ್ ಹಾಗೂ ಒಂದು ಮಸೀದಿ ಇವೆ.

ಮಹಾಮಾಯಾ ದೇವಾಲಯದಲ್ಲಿ ದೀಪಾವಳಿಯ ಸಂದರ್ಭದಲ್ಲಿ 12 ದಿನಗಳ ಕಾಲ ಜಾತ್ರೆ ನಡೆಯುತ್ತದೆ. ಕದ್ರಾದಿಂದ ಕಾರವಾರದ ವರೆಗೆ ಕಾಳಿನದಿಯಲ್ಲಿ ಹಾಯ್ದೋಣಿಗಳಿದ್ದವು. ಇದು ಹಿಂದೆ ವಿಶೇಷವಾಗಿ ಆದಿಲ್ ಶಾಹಿಗಳ ಕಾಲದಲ್ಲಿ ಸಮುದ್ರ ವ್ಯಾಪಾರದ ಕೂಡು ಮಾರ್ಗದಲ್ಲಿತ್ತು. ಕದ್ರಾ ಬಳಿ ಆದಿಲ್‌ಶಾಹಿಗಳು ಕಟ್ಟಿಸಿದ ಒಂದು ಕೋಟೆ ಇದ್ದು ಅದನ್ನು ಸೋಂದಾ ಸದಾಶಿವನಾಯಕ (1705) ಕೆಡವಿ ಹಾಕಿದನೆಂದು ತಿಳಿದುಬರುತ್ತದೆ. ಹೈದರನ ಕಾಲದಲ್ಲಿ ಕದ್ರಾ ಒಂದು ಪರಗಣದ ಕೇಂದ್ರವಾಗಿತ್ತು. ಇಲ್ಲಿಗೆ ಸಮೀಪದ ಕೊಡಸಳ್ಳಿಯಲ್ಲಿ ಕಾಳಿ ಜಲವಿದ್ಯುತ್ ಉತ್ಪಾದನಾ ಯೋಜನೆಯ ಎರಡನೆಯ ಹಂತದ ಅಣೆಕಟ್ಟೆ ನಿರ್ಮಿತವಾಗಿದೆ. (ಎಸ್.ಎಚ್.ಇ.)

**ಕನಕಗಿರಿ :** ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಒಂದು ಗ್ರಾಮ. ಗಂಗಾವತಿಗೆ ಸು.21ಕಿಮೀ ಉತ್ತರದಲ್ಲಿ ಲಿಂಗಸುಗೂರು ಮಾರ್ಗದಲ್ಲಿದೆ. ಈ ಗ್ರಾಮದ ಮೂರು ದಿಕ್ಕುಗಳನ್ನು ಇಲ್ಲಿ ಹರಿಯುವ ಎರಡು ತೊರೆಗಳು ಸುತ್ತುವರಿದಿವೆ. ಕಣ್ಣಿದ್ದವರು ಕನಕಗಿರಿ ನೋಡಬೇಕೆಂಬುದು ಆ ಭಾಗದಲ್ಲಿನ ಜನವಾಣಿ. ಇದು ಈ ಊರಿನ ದೇವಾಲಯಗಳ ಪ್ರೇಕ್ಷಣೀಯತೆಯನ್ನು ಸೂಚಿಸುತ್ತದೆ. ಇಲ್ಲಿಯ ಕನಕಾಚಲಸ್ವಾಮಿಯ ದೇವಸ್ಥಾನದಲ್ಲಿ ಹಳೆಯ ಕಾಲದಿಂದಲೂ ಜಾತ್ರೆಯ ಮೂರು ದಿನಗಳಲ್ಲಿ ಹರಿಜನರನ್ನು ದೇವರ ದರ್ಶನಕ್ಕೆ ಬಿಡುವ ಪರಂಪರೆಯಿತ್ತು. ಹರಿಜನರಿಗಾಗಿಯೇ ಈ ದೇವರು ಇಲ್ಲಿ ನೆಲಸಿದನೆಂಬ ಪ್ರತೀತಿ ಇದೆ. ಇಲ್ಲಿನ ರಥೋತ್ಸವ ವರ್ಷಪ್ರತಿ ಫಾಲ್ಗುಣ ಬಹುಳ ಸಪ್ತಮಿಯಂದು ನಡೆಯುತ್ತದೆ.

ಕನಕನೆಂಬ ಮುನಿ ಇಲ್ಲಿ ತಪಸ್ಸು ಮಾಡಿದನೆಂದು ಹೇಳುವರು. ವಿಜಯದಾಸರು ಕ್ಷೇತ್ರ ಸುಳಾದಿಯಲ್ಲಿಯೂ ಈ ವಿಚಾರ ಹೇಳಿದ್ದಾರೆ. ಕನಕಗಿರಿಯ ಉತ್ತರ ದಕ್ಷಿಣ ಪ್ರದೇಶದಲ್ಲಿ (ಮಸ್ಕಿ, ಕೊಪ್ಪಳ) ಅಶೋಕನ ಶಾಸನಗಳು ದೊರೆತಿದ್ದು ಮತ್ತು ಕನಕಗಿರಿ ವ್ಯಾಪಾರೀ ಮಾರ್ಗದಲ್ಲಿ ಇರುವುದನ್ನು ನೋಡಿದರೆ ಈ ಊರೇ ಅಶೋಕನ ದಕ್ಷಿಣದ ಕಾರ್ಯಕೇಂದ್ರವಾಗಿದ್ದ ಸುವರ್ಣಗಿರಿ ಎಂಬ ಊಹೆಗೆ ಅವಕಾಶ ಮಾಡಿಕೊಡುತ್ತದೆ. ಎರಡನೆಯ ಶತಮಾನದ ಟಾಲೆಮಿಯ ಭೂಗೋಳದಲ್ಲಿ ಭೀಮಾನದಿ ಹಾಗೂ ಬನವಾಸಿಗಳ ನಡುವಣ ಮಾರ್ಗದಲ್ಲಿ ಬರುವ ಊರುಗಳನ್ನು ಹೆಸರಿಸುವಲ್ಲಿ ಹೇಳಿರುವ 'ಕಲ್ಲಿಗೇರಿಸ್' ಕನಕಗಿರಿ ಇರಬಹುದೆಂದು ಊಹಿಸಲಾಗಿದೆ. 15-17ನೆಯ ಶತಮಾನಗಳ ಅವಧಿಯಲ್ಲಿ ಈ ಊರು ಒಂದು ಪಾಳೆಯಪಟ್ಟಿನ ಕೇಂದ್ರವಾಗಿತ್ತು.

**ಕನಕಗಿರಿಯ ಪಾಳೆಯಗಾರರು :** ಇವರ ಇತಿಹಾಸ 15ನೆಯ ಶತಮಾನದ ಮಧ್ಯದಲ್ಲಿ ಆರಂಭವಾಗುತ್ತದೆ. ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ 12 ಗ್ರಾಮಗಳನ್ನು ಉಂಬಳಿಯಾಗಿ ಪಡೆದ ಗುಜ್ಜಲ ವಂಶದ ಪರಸಪ್ಪನಾಯಕ ಇಲ್ಲಿನ ಕನಕಾಚಲ ಲಕ್ಷ್ಮೀನರಸಿಂಹ ದೇವರ ಗರ್ಭಾಲಯವನ್ನು ಕಟ್ಟಿಸಿ ಹೊಸ ಊರಿನ ಸ್ಥಾಪನೆಗೆ ಕಾರಣನಾದ. ಇವನ ವಂಶದ ನಾಯಕರು ಮುಂದೆ ಪ್ರಬಲರಾಗಿ 40ಲಕ್ಷ ವರಹಗಳ ಆದಾಯದ ಪ್ರಾಂತ್ಯವನ್ನು ಗಳಿಸಿಕೊಂಡು ವಿಜಯನಗರದ ನರಪತಿಗಳ ಬಲಪಾರ್ಶ್ವದ ಮರ್ಯಾದೆಗಳನ್ನು ಹೊಂದಿದ ಪಾಳೆಯಗಾರರಾಗಿದ್ದರು. ಕೃಷ್ಣ ದೇವರಾಯನ ಆಮುಕ್ತಮಾಲ್ಯದ ಗ್ರಂಥದಲ್ಲಿ ಕನಕಗಿರಿಯ ಪ್ರಸ್ತಾಪವಿದೆ. ವಿಜಯನಗರ ನಾಶವಾದ ಅನಂತರ ಈ ನಾಯಕರಲ್ಲಿ ಕೆಲವರು ಬಿಜಾಪುರದ ಪರವಾಗಿಯೂ ಹೋರಾಡಿದಂತೆ ದಾಖಲೆಗಳಿವೆ. ವಿಜಯನಗರದ ಅರಸರಾದ ಸಾಳುವ ನರಸಿಂಹ, ಕೃಷ್ಣದೇವರಾಯ, ಅಚ್ಯುತರಾಯ ಇವರೆಲ್ಲ ಕನಕಗಿರಿಯ ದೇವಸ್ಥಾನಕ್ಕೆ ಗ್ರಾಮಗಳನ್ನು ದತ್ತಿ ಕೊಟ್ಟದ್ದಕ್ಕೆ ಕನಕಾಚಲ ದೇವಸ್ಥಾನದಲ್ಲಿ ಶಿಲಾಶಾಸನಗಳಿವೆ. ಶ್ರೀಮತ್ ಸ್ವರ್ಣಗಿರೀಶಸ್ಯ ನಾರಸಿಂಹಸ್ಯ ಶಾಸನಂ ಎಂಬುದು ಈ ಶಾಸನಗಳ ಪ್ರಾರಂಭ ಶ್ಲೋಕಭಾಗ.

ಪರಸಪ್ಪನಾಯಕನ ಮಗ ನವಾಬ ಉಡಿಚಿನಾಯಕ ಪ್ರಭಾವಶಾಲಿ ದೊರೆಯಾಗಿದ್ದ. ಏಳು ಗ್ರಾಮಗಳನ್ನು ಸೇರಿಸಿ ಕನಕಗಿರಿಯನ್ನು ಈತ ವಿಸ್ತರಿಸಿದ. ಗಂಗಾವತಿ ಹತ್ತಿರವಿರುವ ಎಮ್ಮೀಗುಡ್ಡದಲ್ಲಿ ಈತ ಕೋಟೆ ಕಟ್ಟಿಸಿದ. ಕನಕಗಿರಿಯಲ್ಲೇ ಮುನ್ನೂರಕ್ಕಿಂತ ಹೆಚ್ಚು ದೇವಾಲಯಗಳನ್ನು ಕಟ್ಟಿಸಿದನಂತೆ. ಇಲ್ಲಿನ ಮುಖ್ಯ ದೇವಾಲಯದ ಪ್ರಾಕಾರ, ಗೋಪುರಗಳನ್ನೆಲ್ಲ ಈತನೇ ಕಟ್ಟಿಸಿದ. ಈ ದೇವಾಲಯದಲ್ಲಿರುವ ಮಧ್ಯರಂಗ ಶಿಲ್ಪಕಲೆಯ ಒಂದು ಅದ್ಭುತ. ಇದು 54' ಉದ್ದ ಹಾಗೂ 36' ಅಗಲವಿರುವ ಒಂದು ನಾಟ್ಯ ಶಾಲೆ. ಮಧ್ಯ ಯಾವ ಆಧಾರವೂ ಇಲ್ಲದೆ ಪಕ್ಕದ ಸಿಂಹಸ್ತಂಭಗಳ ಮೇಲೆ ನಿಂತಿದೆ. ನವಾಬ ಉಡಿಚಿನಾಯಕನ ಮಗ ಕೆಲವಡಿ ಉಡಿಚಿನಾಯಕ ಹಾಗೂ ಅವನ ರಾಣಿಯರು ದೇವಸ್ಥಾನಗಳಲ್ಲೆಲ್ಲ ಸುಂದರವಾದ ಪೌರಾಣಿಕ ಪ್ರತಿಮೆಗಳನ್ನು ಮಾಡಿಸಿದರು. ಅನಂತರ ಬಂದ ಕನಕಯ್ಯ ಉಡಿಚಿನಾಯಕ ಊರಿನ ಎರಡು ಬದಿಯಲ್ಲಿ ವಿಶಾಲವಾದ ಪುಷ್ಕರಣಿಗಳನ್ನೂ ಅವನ ತಮ್ಮನಾದ ವೆಂಕಟಪ್ಪನಾಯಕ ಜಲಕ್ರೀಡಾ ಮಹಲನ್ನೂ (ವೆಂಕಟಪತಿ ಬಾವಿ) ಕಟ್ಟಿಸಿದ. ಹಂಪೆಯ ವಿರೂಪಾಕ್ಷ ದೇವಾಲಯದ ಉತ್ತರ ದಿಕ್ಕಿನ ಗೋಪುರ ಕನಕಗಿರಿಯ ನಾಯಕರು ಕಟ್ಟಿಸಿದ್ದು.

ಅನಂತರ ಬಂದ ಹಿರೇ ರಂಗಪ್ಪನಾಯಕ ಕವಿಗಳಿಗೂ ಪಂಡಿತರಿಗೂ ಆಶ್ರಯವಿತ್ತಿದ್ದ. ಕನ್ನಡದಲ್ಲಿ ಭಟ್ಟಂಗಿ ದಂಡಕಗಳನ್ನು ರಚಿಸಿರುವ ಹಾಗೂ ಘಳಿಗೆಯಲ್ಲಿ ನೂರು ಶ್ಲೋಕ ರಚಿಸಬಲ್ಲನೆಂಬ ಖ್ಯಾತಿಯಿದ್ದ ಜಯವೆಂಕಟಾಚಾರ್ಯ, ಶ್ರೀಕೃಷ್ಣಪಾರಿಜಾತ ನಾಟಕ ರಚಿಸಿದ ಅಪರಾಳ ತಮ್ಮಣ್ಣ, ಚಿದಾನಂದ ಅವಧೂತ ಇವರು ಈ ಪಾಳೆಗಾರನ ಆಶ್ರಯದಲ್ಲಿದ್ದವರು.

ಕೊನೆಯ ಪಾಳೆಯಗಾರ ಹಿರೇನಾಯಕನ ಕಾಲದಲ್ಲಿ ಕನಕಗಿರಿ ರಾಜ್ಯ ಹರಿಹರ ದಾವಣಗೆರೆಯವರೆಗೆ ಬೆಳೆದಿತ್ತು. ಆದರೆ ಸುತ್ತಲಿನ ಶತ್ರುಗಳ ಬಗ್ಗೆ ಇವನಿಗೆ ಎಚ್ಚರವಿರಲಿಲ್ಲ. ಹೈದರಾಬಾದಿನ ನಿಜಾಮ ಕನಕಗಿರಿಯ ನಾಯಕನ ಬಂಧುವೇ ಆದ ಸುರಪುರದ ಪಾಮನಾಯಕನ ಮೂಲಕ ಕನಕಗಿರಿಯ ಮೇಲೆ ದಾಳಿ ಮಾಡಿಸಿ ನಾಯಕನನ್ನು ಸೆರೆಹಿಡಿಸಿ ಹೈದರಾಬಾದಿನಲ್ಲಿ ಕೊಲ್ಲಿಸಿದ. ನಾಯಕನ ಮನೆತನಕ್ಕೆ 16 ಹಳ್ಳಿಗಳನ್ನು ಮಾತ್ರ ಕೊಡಲಾಯಿತು. ಸುರಪುರದ ಪಾಮನಾಯಕನಿಗೆ ಕನಕಗಿರಿಯ ದಮನ ಮಾಡಿದುದಕ್ಕಾಗಿ ರುಸೂಮು, ಜಾಗೀರಿಗಳು ಸಿಕ್ಕವು. ಆದರೆ ಅನತಿ ಕಾಲದಲ್ಲೇ ಸುರಪುರದ ಗತಿಯೂ ಕನಕಗಿರಿಯಂತೆಯೇ ಆಯಿತು.

ಕನಕಗಿರಿಯ ಮೇಲೆ ಟಿಪ್ಪುವಿನ ದಾಳಿಯೂ ಒಮ್ಮೆ ಆದಂತೆ, ಅಲ್ಲದೆ ಈ ನಾಯಕರು ಮರಾಠರನ್ನೂ ಎದುರಿಸಿದಂತೆ ದಾಖಲೆಗಳಿವೆ. (ಜೆ.ಆರ್.ಪಿ.)

**ಕನಕದಾಸ :** 1508-1606 ಪ್ರಸಿದ್ಧ ಹರಿದಾಸರು, ಕೀರ್ತನಕಾರರು ಹಾಗೂ ಕವಿ. ಪುರಂದರದಾಸರ ಸಮಕಾಲೀನರೂ ವ್ಯಾಸರಾಯರ ಶಿಷ್ಯರೂ ಆದ ಕನಕದಾಸರು ಧಾರವಾಡ ಜಿಲ್ಲೆಯ ಕಾಗಿನೆಲೆಯ ಸಮೀಪದಲ್ಲಿ ಇಂದಿಗೂ ವಾಸಿಸುತ್ತಿರುವ ದಾಸರೆಂಬ ಒಂದು ಬುಡಕಟ್ಟಿಗೆ ಸೇರಿದವರಿರಬಹುದೆಂದು ಕೆಲವರ ಅಭಿಪ್ರಾಯ. ಈ ದಾಸ ಜನಾಂಗದವರು ರಾಮಾನುಜ ಪಂಥದ ಅನುಯಾಯಿಗಳಾಗಿದ್ದರೆಂದೂ ಇದರಿಂದ ಕನಕದಾಸರು ತಮ್ಮ ಮೋಹನತರಂಗಿಣಿಯಲ್ಲಿ ರಾಮಾನುಜಾಚಾರ್ಯರನ್ನೂ ತಾತಾಚಾರ್ಯರನ್ನೂ ಸ್ತುತಿಸಿದ್ದಾರೆ ಎಂದೂ ತರ್ಕಿಸಲಾಗಿದೆ. ತಮ್ಮ ಕೆಲವು ಕೀರ್ತನೆಗಳಲ್ಲಿ ಬೇರೇ ದೇವರನ್ನು ಕೊಂಡಾಡಿರುವುದರಿಂದ ಇವರು ಕುರುಬರೆಂದು ಇಲ್ಲವೆ ಬೇಡರ ಬುಡಕಟ್ಟಿನ ನಾಯಕ ಪಂಥದವರೆಂದು ಹೇಳುವವರೂ ಇದ್ದಾರೆ. ಕಾಗಿನೆಲೆಯಲ್ಲಿ ಹುಟ್ಟಿಬೆಳೆದು, ಬಾಡವೆಂಬ ಪ್ರದೇಶದಲ್ಲಿ (ಹಾವೇರಿ ಜಿಲ್ಲೆ) ನಾಯಕರಾಗಿ ಆಡಳಿತ ನಡೆಸಿ, ಯಾವುದೋ ಒಂದು ಕಾಳಗದಲ್ಲಿ ಸೋತು, ತನ್ನವರೆಂಬುವರನ್ನೆಲ್ಲ ಕಳೆದುಕೊಂಡು, ಪರಮಾತ್ಮನ ಅನುಗ್ರಹದಿಂದ ಚೇತರಿಸಿಕೊಂಡು, ಹರಿದಾಸರಾದಂತೆಯೂ ಅನಂತರ ದೇಶಸಂಚಾರ ಮಾಡುತ್ತಿದ್ದು ಕೆಲವು ಕಾಲ ಉಡುಪಿ, ಹಂಪೆ, ತಿರುಪತಿ, ಬೇಲೂರುಗಳಲ್ಲಿ ನೆಲಸಿದ್ದಂತೆಯೂ ಇವರ ಕೃತಿಗಳಿಂದ ತಿಳಿಯುತ್ತದೆ. ಕಾಗಿನೆಲೆಯ ಆದಿಕೇಶವ ಇವರ ಆರಾಧ್ಯದೈವ. ಇವರಿಗೆ ತಿಮ್ಮಪ್ಪ, ಕನಕನಾಯಕ ಎಂಬ ಹೆಸರುಗಳಿದ್ದಂತೆ ತಿಳಿದುಬಂದರೂ ತಮ್ಮ ಕೃತಿ ಹಾಗೂ ಸಾಧನೆಯಿಂದ ಕನಕದಾಸರೆಂದೇ ಪ್ರಸಿದ್ಧಿ ಹೊಂದಿದರು. ಇವರು ಹಲವು ಪವಾಡಗಳನ್ನು ಮೆರೆದಂತೆ ತಿಳಿಯುತ್ತದೆ. ಉಡುಪಿಯ ಶ್ರೀಕೃಷ್ಣ ದೇವಾಲಯದಲ್ಲಿರುವ ಕನಕನ ಕಿಂಡಿ ಇಂಥ ಪವಾಡಗಳಲ್ಲಿ ಒಂದೆಂಬ ನಂಬಿಕೆಯಿದೆ.

ಕನಕದಾಸರು ಅನೇಕ ಭಾವಪೂರ್ಣ ಕೀರ್ತನೆಗಳನ್ನು ರಚಿಸಿರುವರಲ್ಲದೆ ಮೋಹನತರಂಗಿಣಿ, ನಳಚರಿತ್ರೆ, ಹರಿಭಕ್ತಿಸಾರ, ರಾಮಧಾನ್ಯ ಚರಿತ್ರೆ, ನೃಸಿಂಹಸ್ತವ ಎಂಬ ಕೃತಿಗಳನ್ನೂ ರಚಿಸಿದ್ದಾರೆ. ನೃಸಿಂಹಸ್ತವ ಉಪಲಬ್ಧವಿಲ್ಲ. (ಕೆ.ಎಂ.ಕೆ.)

ಮೋಹನತರಂಗಿಣಿ ಸಾಂಗತ್ಯ ಕಾವ್ಯ. ಇದರಲ್ಲಿ 42 ಸಂಧಿಗಳೂ 2,700 ಸಾಂಗತ್ಯಗಳೂ ಇವೆ. ಇದಕ್ಕೆ ಕೃಷ್ಣಚರಿತೆ ಎಂಬ ಹೆಸರೂ ಇದೆ. ಸ್ಕಾಂದಪುರಾಣ, ವಿಷ್ಣುಪುರಾಣ, ಮಹಾಭಾರತ, ಭಾಗವತ, ಹರಿವಂಶ ಇವುಗಳಲ್ಲಿ ಬರುವ ಕಥೆಗಳು ಈ ಗ್ರಂಥಕ್ಕೆ ಆಕರ. ಕಾವ್ಯದಲ್ಲಿ ಮನ್ಮಥ ದಹನ, ಕಾಮೋತ್ಪತ್ತಿ, ಶಂಬರಾಸುರ, ಬಾಣಾಸುರ ವಧೆ, ಅನಿರುದ್ಧ ಲೀಲೆ ಮುಂತಾದ ವಿಷಯಗಳು ನಿರೂಪಿತವಾಗಿವೆ. ಕಾವ್ಯದಲ್ಲಿ ಸಾಂಪ್ರದಾಯಿಕವಾದ ಹದಿನೆಂಟು ವರ್ಣನೆಗಳನ್ನು ಬಳಸಲು ಪ್ರಯತ್ನಿಸಲಾಗಿದೆ. ಇದರಿಂದ ಕಥೆಯ ಓಟಕ್ಕೆ ಸ್ವಲ್ಪಮಟ್ಟಿಗೆ ಭಂಗ ಬಂದಂತಾಗಿದೆ. ವರ್ಣನೆಗಳಲ್ಲಿ ಕೆಲವೊಮ್ಮೆ ಸಹಜತೆಯಿದೆ, ಸುಂದರವಾದ ಕಲ್ಪನಾವಿಲಾಸವಿದೆ. ಅಚ್ಚಗನ್ನಡದಿಂದ ಕೂಡಿದ ಈ ಸಾಂಗತ್ಯದ ಬಂಧ ಬಂಧುರವಾಗಿದೆ. ಇಲ್ಲಿನ ಅನೇಕ ವರ್ಣನೆಗಳಲ್ಲಿ ಸಮಕಾಲೀನ ಜೀವನದ ಪ್ರತಿಬಿಂಬಗಳಿವೆ. ತಮ್ಮ ಕೃತಿಯನ್ನು ಹರಿಶರಣರಚ್ಚು ಬುಧಜನರಿಗೆ ಮೆಚ್ಚು....... ಕೇಳ್ವರಿಗಿದು ತನಿಬೆಲ್ಲದಚ್ಚು ಎಂದು ಮುಂತಾಗಿ ದಾಸರೇ ಪ್ರಶಂಸಿಸಿಕೊಂಡಿದ್ದಾರೆ. ಒಟ್ಟಿನಲ್ಲಿ ಈ ಕೃತಿ ಮಹಾಕಾವ್ಯವಲ್ಲದಿದ್ದರೂ ಕವಿಯ ಮಾತಿನಲ್ಲೇ ಹೇಳುವುದಾದರೆ ಇದೊಂದು ಮೇಲ್ಗತೆ.

ನಳಚರಿತ್ರೆ ಭಾಮಿನೀ ಷಟ್ಪದಿಯಲ್ಲಿದ್ದು ಇದರಲ್ಲಿ 9 ಸಂಧಿಗಳೂ 480 ಪದ್ಯಗಳೂ ಇವೆ. ಮಹಾಭಾರತದಲ್ಲಿ ಉಕ್ತವಾಗಿರುವ ನಳೋಪಾಖ್ಯಾನವನ್ನು ಕವಿ ಇಲ್ಲಿ ಮನಕರಗುವಂತೆ ನಿರೂಪಿಸಿದ್ದಾರೆ. ಕಾವ್ಯ ಚಿಕ್ಕದಾದರೂ ಚೊಕ್ಕವಾಗಿದೆ. ರಾಜನಾದರೂ ವಿಧಿಯ ಕೈವಾಡಕ್ಕೆ ಸಿಕ್ಕು ಬಗೆಬಗೆಯ ಕೋಟಲೆಯನ್ನನುಭವಿಸಿ ಕಡೆಗೆ ಮಂಗಳದಲ್ಲಿ ಪರ್ಯವಸಾನವಾಗುವ ನಳನ ಕಥೆ ಕನಕದಾಸರ ಕೈಯಲಿ ಸಿಕ್ಕು ಉಜ್ವಲವಾದ ಕಾಂತಿ ಹೊಂದಿದೆ. ನಳ ದಮಯಂತಿಯರ ಚಿರಂತನ ಪ್ರೇಮದ ಚಿತ್ರಣ ಕಾವ್ಯದ ಜೀವಾಳವಾಗಿದೆ. ಸುಲಭ ಶೈಲಿ, ಘನವಾದ ವಸ್ತು, ಹೃದಯ ಸ್ಪರ್ಶಿಯಾದ ಚಿತ್ರಣಗಳಿಂದ ಈ ಕಾವ್ಯ ಕನ್ನಡಕ್ಕೆ ಅಪೂರ್ವ ಕೊಡುಗೆಯಾಗಿದೆ. (ಬಿ.ಎಸ್.ಎಸ್.)

ರಾಮಧಾನ್ಯ ಚರಿತ್ರೆ ಭಾಮಿನೀಷಟ್ಪದಿಯಲ್ಲಿದೆ. ಸುಮಾರು 156 ಪದ್ಯಗಳಲ್ಲಿ ರಾಮಧಾನ್ಯದ (ರಾಗಿ) ಉತ್ಕೃಷ್ಟತೆಯನ್ನು ಬಹಳ ಚಮತ್ಕಾರವಾಗಿ ನಿರೂಪಿಸಲಾಗಿದೆ. ರಾಮಾಯಣದಿಂದ ಆರಿಸಿಕೊಂಡ ವಸ್ತುವಿನಂತೆಯೇ ತೋರಿದರೂ ಇದೊಂದು ಸ್ವತಂತ್ರ ಕಲ್ಪನಾವಸ್ತುವುಳ್ಳ ಕೃತಿ. ರಾಗಿ, ಅಕ್ಕಿಗಳಲ್ಲಿ (ನರೆದಲೆಗ, ವ್ರೀಹಿ) ರಾಗಿಯೇ ಶ್ರೇಷ್ಠ ಎಂದು ಹೇಳುವುದು ಇಲ್ಲಿಯ ಮುಖ್ಯ ಉದ್ದೇಶ. ಇಂದಿನಂತೆಯೇ ಅಂದಿನ ಸಮಾಜದಲ್ಲಿಯೂ ನೆಲಸಿದ್ದ ದೀನಧನಿಕರ ಅಂತರವನ್ನು ಬಹಳ ಅರ್ಥವತ್ತಾಗಿ ವ್ಯಂಗ್ಯವಾಗಿ ಎತ್ತಿ ತೋರಿಸಲಾಗಿದೆ. ರಾಗಿ ಮತ್ತು ಅಕ್ಕಿಗಳ ಮಧ್ಯೆ ನಡೆಯುವ ಸಂವಾದಶೈಲಿ, ನಿಷ್ಪಕ್ಷಪಾತಿಯಾದ ಶ್ರೀರಾಮನ ವರ್ತನೆ ಮನನೀಯವಾಗಿದೆ. ಈ ಕಥೆಗೆ ಆಧಾರವೇನೋ ತಿಳಿಯದು. ಬಹುಶಃ ಕವಿ ಆ ಕಾಲದಲ್ಲಿ ಪ್ರಚಲಿತವಿದ್ದ ಜನಪದ ಕಥೆಯೊಂದನ್ನು ಅವಲಂಬಿಸಿ ಈ ಕೃತಿಯನ್ನು ಬರೆದಿರಬಹುದು.

ಹರಿಭಕ್ತಿಸಾರವನ್ನು ಒಂದು ರೀತಿಯಲ್ಲಿ ಭಕ್ತಿಭಾವಭರಿತ ಶತಕಗ್ರಂಥವೆನ್ನಬಹುದು. ಇದು ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿದೆ. 110 ಪದ್ಯಗಳಿವೆ. ಪ್ರತಿ ಪದ್ಯದಲ್ಲಿಯ ಕೊನೆಯ ಚರಣ ರಕ್ಷಿಸು ನಮ್ಮನನವರತ ಎಂದು ಮುಗಿಯುತ್ತದೆ. ನೀತಿ, ಭಕ್ತಿ, ವೈರಾಗ್ಯ ಇವುಗಳ ಬೋಧೆ ಗ್ರಂಥದ ಮುಖ್ಯ ಗುರಿ. ಕನಕದಾಸರ ತತ್ತ್ವಜ್ಞಾನ, ಜೀವನಾದರ್ಶ, ಲೋಕನೀತಿಗಳು ಇಲ್ಲಿ ತಿಳಿಯಾದ ಕನ್ನಡನುಡಿಯಲ್ಲಿ ಪ್ರತಿಪಾದಿತವಾಗಿವೆ. ನೃಸಿಂಹಸ್ತವ ಸಾಂಗತ್ಯ ಕೃತಿಯೆಂದು ತಿಳಿದುಬರುತ್ತದೆ.

ಕನಕದಾಸರ ಕೀರ್ತನೆಗಳು ಸಂಖ್ಯಾದೃಷ್ಟಿಯಿಂದ ಕಡಿಮೆ ಅನಿಸಿದರೂ ಗುಣದ ದೃಷ್ಟಿಯಿಂದ ಮಹತ್ತ್ವದ್ದಾಗಿವೆ. ಇದುವರೆಗೂ ಸುಮಾರು ನಾನೂರು ಕೀರ್ತನೆಗಳು ದೊರಕಿವೆ. ಇವರ ಮುದ್ರಿಕೆ ಕಾಗಿನೆಲೆಯ ಆದಿಕೇಶವನ ಹೆಸರಿನದಾಗಿದೆ. ತಲ್ಲಣಿಸದಿರು ಕಂಡ್ಯ ತಾಳು ಮನವೆ, ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೆ, ಕುಲಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ, ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ, ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ, ನೀ ಮಾಯೆಯೊಳಗೊ ನಿನ್ನೊಳು ಮಾಯೆಯೋ, ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ ಸುಜ್ಞಾನಿಗಳ ಕೂಡೆ ಜಗಳವೇ ಲೇಸು, ದೇವಿ ನಮ್ಮ ದ್ಯಾವರು ಬಂದರು ನೋಡಿರೆ ಮುಂತಾದ ಕೀರ್ತನೆಗಳಲ್ಲಿ ದೈವಭಕ್ತಿ, ಜೀವನದರ್ಶನ, ಸಮಾಜ ವಿಮರ್ಶೆ, ಲೋಕಾನುಭವ ಎಲ್ಲವೂ ಕಾವ್ಯಾತ್ಮಕವಾಗಿ ಹೊರಹೊಮ್ಮಿವೆ. ಕನಕದಾಸರು ಸಮಾಜದ ಅಂಕುಡೊಂಕುಗಳನ್ನು ಬಿಚ್ಚುಮಾತುಗಳಲ್ಲಿ ಚುಚ್ಚಿ ಎಚ್ಚರಿಸಿದ್ದಾರೆ. ಕಿಡಿಯಾಗಿ ಸಿಡಿಯುವ, ಅರಳಾಗಿ ಅರಳುವ ನುಡಿಗಳಿಂದ ದೀನದಲಿತರ ಮೂಢರೂಢಿಗಳನ್ನು ಬಯಲಿಗೆಳೆದು ಕಳಕಳಿಯಿಂದ ಕಳವಳಪಟ್ಟಿದ್ದಾರೆ. ದೇಶೀ ಶೈಲಿಯಲ್ಲಿ ಭಕ್ತಿಯ ತತ್ತ್ವವನ್ನು ಅರಳಿಸಿದ್ದಾರೆ. ಕೆಲವೊಮ್ಮೆ ಇವರು ಕೊಡುವ ಉಪಮಾನಗಳು ಮಾರ್ಮಿಕವಾಗಿವೆ. ಇವರ ಮಿಂಚಿನಂಥ ಮಾತುಗಳು ಇವರ ವಿಶಿಷ್ಟ ವ್ಯಕ್ತಿತ್ವದ್ಯೋತಕವಾಗಿದ್ದು ನಾಣ್ನುಡಿಯ ಸತ್ತ್ವದಿಂದ ಸಾರಭೂತವೂ ಆಗಿ ಸುಪ್ತಜನತೆಯನ್ನು ಬಡಿದೆಬ್ಬಿಸುತ್ತವೆ.

ಕನಕನ ಮುಂಡಿಗೆಗಳೆಂದು ಪ್ರಸಿದ್ಧವಾದ ಇವರ ಕೆಲವು ಕೀರ್ತನೆಗಳು ವಚನ ಸಾಹಿತ್ಯದಲ್ಲಿ ಕಂಡುಬರುವ ಬೆಡಗಿನ ವಚನಗಳಂತೆ, ಒಗಟಿನಂತೆ, ಬಿಡಿಸಲಾರದ ಕಗ್ಗಂಟಿನಂತೆ ಇವೆ. (ಕೆ.ಎಂ.ಕೆ.)

**ಕನಕಪುರ :** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಪಟ್ಟಣ. ಬೆಂಗಳೂರು ಜಿಲ್ಲೆಗೇ ದೊಡ್ಡದಾದ ಈ ತಾಲ್ಲೂಕಿನ ವಿಸ್ತೀರ್ಣ 1594ಚ.ಕಿಮೀ. ಜನಸಂಖ್ಯೆ 3,36,625. ಜಿಲ್ಲೆಯ ಅತ್ಯಂತ ದಕ್ಷಿಣಕ್ಕಿರುವ ಈ ತಾಲ್ಲೂಕನ್ನು ಪೂರ್ವದಲ್ಲಿ ತಮಿಳುನಾಡಿನ ಸೇಲಂ ಜಿಲ್ಲೆ, ಈಶಾನ್ಯದಲ್ಲಿ ಆನೇಕಲ್ಲು ತಾಲ್ಲೂಕು, ಉತ್ತರದಲ್ಲಿ ದಕ್ಷಿಣ ಬೆಂಗಳೂರು ತಾಲ್ಲೂಕು, ವಾಯವ್ಯದಲ್ಲಿ ರಾಮನಗರ ತಾಲ್ಲೂಕು, ಪಶ್ಚಿಮದಲ್ಲಿ ಚನ್ನಪಟ್ಟಣ ಮತ್ತು ಮಳವಳ್ಳಿ ತಾಲ್ಲೂಕುಗಳು ಸುತ್ತುವರಿದಿವೆ. ದಕ್ಷಿಣದಲ್ಲಿ ತಾಲ್ಲೂಕಿನ ಎಲ್ಲೆಯಾಗಿ ಕಾವೇರಿ ನದಿ ಇದೆ. ನದಿಯ ಆಚೆದಡದಲ್ಲಿ ಕೊಳ್ಳೇಗಾಲ ತಾಲ್ಲೂಕು ಇದೆ. ಕನಕಪುರ ತಾಲ್ಲೂಕಿನಲ್ಲಿ ಹಾರೋಹಳ್ಳಿ, ಕನಕಪುರ, ಮರಳವಾಡಿ, ಕೋಡಿಹಳ್ಳಿ, ಉಯ್ಯಂಬಳ್ಳಿ ಮತ್ತು ಸಾತನೂರು ಹೋಬಳಿಗಳಿದ್ದು, ಒಟ್ಟು 258 ಹಳ್ಳಿಗಳಿವೆ.

ಈ ತಾಲ್ಲೂಕು ಬಹುಮಟ್ಟಿಗೆ ಕಣಶಿಲೆಯ ಪ್ರದೇಶ, ಹೆಚ್ಚಿನ ಭಾಗದಲ್ಲಿ ಇದೇ ತಳಶಿಲೆ. ಕನಕಪುರದಿಂದ ರಾಮನಗರದ ಕಡೆಗೆ ಕಣಶಿಲೆಯ ಬೋಳುಗುಂಡುಗಳ ಬೆಟ್ಟಗುಡ್ಡಗಳು ಹರಡಿವೆ. ಕೆಲವೆಡೆ ಉದ್ಗತ ಕರಿಶಿಲೆಯ ಹೊಡೆಸಾಲುಗಳೂ (ಡೈಕ್) ಕಂಡುಬರುವುದುಂಟು. ತಾಲ್ಲೂಕಿನ ಉತ್ತರದಲ್ಲಿರುವ ಹಾರೋಹಳ್ಳಿಯ ವಾಯವ್ಯಭಾಗದಲ್ಲಿ ಚಾರ್ನಕೈಟ್ ಜಾತಿಯ ಹಾಗೂ ಹಾರ್ನ್‌ಬ್ಲೆಂಡ್‌ನ ಹೊಡೆಸಾಲೂಗಳು ಸ್ವಲ್ಪಮಟ್ಟಿಗೆ ಇವೆ. ಹಾರೋಶಿವರದ ಬಳಿ ಕಬ್ಬಿಣದ ಅದುರೂ ಸಾಲಹುಣಿಸೆ ಮತ್ತು ಮರಳಹಳ್ಳಿಗಳ ಬಳಿ ಪದ್ಮರಾಗವೂ ದೊರಕುತ್ತವೆ.



ಮುತ್ತತ್ತಿ ಸಮೀಪದಲ್ಲಿ ಕಾವೇರಿ ನದಿ

ನೆಲಮಂಗಲದ ಪಶ್ಚಿಮ ಕಡೆಯಿಂದ ಬರುವ ಶಿಲಾ ಬೆಟ್ಟಗಳು ಮಾಗಡಿ, ರಾಮನಗರ ತಾಲ್ಲೂಕುಗಳನ್ನು ಹಾಯ್ದು ಈ ತಾಲ್ಲೂಕನ್ನು ಉತ್ತರಭಾಗದಿಂದ ಪ್ರವೇಶಿಸಿ ಪೂರ್ವ ಪಶ್ಚಿಮ ಮತ್ತು ದಕ್ಷಿಣ ಅಂಚಿನಲ್ಲಿ ಕವಚದಂತೆ ಒತ್ತಾಗಿ ಹಬ್ಬಿವೆ. ಬೆಟ್ಟಗಳಲ್ಲಿ ಮುಖ್ಯವಾದವು - ಪಶ್ಚಿಮದಲ್ಲಿ ಬಾಣಂತಿಮಾರಿ ಬೆಟ್ಟ (1043ಮೀ) ಭೀಮಕಂಡಿ, ಕಡಕಲ್ ಮತ್ತು ಮುದವಾಡಿ, ನೈಋತ್ಯದಲ್ಲಿ ಪತ್ತಧಾರಿದೇವ, ಆಗ್ನೇಯದಲ್ಲಿ ದೇವರಬೆಟ್ಟ, ಕೊಪ್ಪಬೆಟ್ಟ (870ಮೀ) ಮತ್ತು ಬರೀಕಲ್ಲು ಬೆಟ್ಟ, ಪೂರ್ವದಲ್ಲಿ ಬಿಳೀಕಲ್ಲುಬೆಟ್ಟ ಮತ್ತು ಗುಲಕಲ್ ಬೆಟ್ಟ, ಉತ್ತರದಲ್ಲಿ ಗಂಗಾಧರಬೆಟ್ಟ. ಭೂಮಿ ಉತ್ತರದಿಂದ ದಕ್ಷಿಣದ ಕಾವೇರಿ ಕಣಿವೆಯ ಕಡೆಗೆ ಇಳಿಜಾರಾಗಿದೆ. ದಕ್ಷಿಣದ ತ್ರಿಭುಜಾಕೃತಿಯ ತಗ್ಗುಪ್ರದೇಶದಲ್ಲಿ ಎರೆಮಣ್ಣಿದೆ. ಉಳಿದ ಕಡೆಗಳಲ್ಲಿ ಅಗ್ನಿಶಿಲೆಯಿಂದಾದ ಹಗುರ ರಚನೆಯುಳ್ಳ ಕೆಂಪುಮಣ್ಣಿದೆ.

ಅರ್ಕಾವತಿ ನದಿ ವಾಯವ್ಯದಿಂದ ಈ ತಾಲ್ಲೂಕನ್ನು ಪ್ರವೇಶಿಸಿ ತಾಲ್ಲೂಕಿನ ಮಧ್ಯದಲ್ಲಿ ಉತ್ತರದಿಂದ ದಕ್ಷಿಣ ಮುಖವಾಗಿ ಹರಿದು ಸಂಗಮದ ಬಳಿ ಕಾವೇರಿಯನ್ನು ಕೂಡಿಕೊಳ್ಳುತ್ತದೆ. ವೃಷಭಾವತಿ ನದಿ ಮುದುವಾಡಿಯ ಬಳಿ ತಾಲ್ಲೂಕಿನ ಎಲ್ಲೆಯಲ್ಲೇ ಅರ್ಕಾವತಿಯನ್ನು ಸೇರಿಕೊಳ್ಳುವುದು. ಈಶಾನ್ಯದಿಂದ ಹರಿದು ಬರುವ ಅಂತರಗಂಗೆ, ಬಸವನ ಹೊಳೆ, ಕೂಟ್ಲೆ ಹೊಳೆಗಳು ಕನಕಪುರದ ಬಳಿ ಅರ್ಕಾವತಿಯನ್ನು ಸೇರುವುವು. ಆಗ್ನೇಯದ ಎಲ್ಲೆಯವರೆಗೂ ದೊಡ್ಡಹೊಳೆ ಹರಿದು ಬಂದು ಸಂಗಮದ ಎದುರು ದಂಡೆಯಲ್ಲೆ ಮಾಹಳ್ಳಿಯ ಬಳಿ ಅರ್ಕಾವತಿಯನ್ನು ಸೇರುತ್ತದೆ. ಬಂಡಿಹಳ್ಳ ಉಯ್ಯಂಬಳ್ಳಿ ಕಬ್ಬಾಳ ರಸ್ತೆಗೆ ಸಮಾನಾಂತರವಾಗಿ ಹರಿದು ಪಶ್ಚಿಮದ ಕಡೆಯಿಂದ ಅರ್ಕಾವತಿಯನ್ನು ಸೇರುವುದು.

ಮೇ-ನವೆಂಬರ್ ವರೆಗೆ ನೈಋತ್ಯ ಮಾರುತಗಳಿಂದ ಇಲ್ಲಿ ಸು.607ಮಿಮೀ ಮಳೆಯಾಗುತ್ತದೆ. ತಾಲ್ಲೂಕಿನ ಹೆಚ್ಚು ಪ್ರದೇಶ ಬೆಟ್ಟಕಾಡುಗಳಿಂದ ಕೂಡಿದೆ. ತಾಲ್ಲೂಕಿನ ಉತ್ತರ ಮತ್ತು ಮಧ್ಯಭಾಗಗಳಲ್ಲಿ ನದಿ ಹೊಳೆಗಳ ದಡಗಳಲ್ಲಿ ವ್ಯವಸಾಯ ಸಾಧ್ಯ. ಅರ್ಕಾವತಿ ನದೀಬಯಲು ಮುಖ್ಯವಾದದ್ದು. ಇಡೀ ಜಿಲ್ಲೆಯ ಬೇಸಾಯದ ಭೂಮಿಯಲ್ಲಿ $^1/_6$ ಭಾಗದಷ್ಟು ಇಲ್ಲಿ ಇದೆ. ಇಲ್ಲಿನ ಮುಖ್ಯ ಬೆಳೆಗಳು ರಾಗಿ ಮತ್ತು ಬತ್ತ. ಹಿಪ್ಪನೇರಳೆ, ಅವರೆ, ತೆಂಗು, ಹರಳು, ಹುಣಿಸೆ ಇತರ ಬೆಳೆಗಳು. ತಾಲ್ಲೂಕಿನಲ್ಲಿ ನೂರಕ್ಕೂ ಹೆಚ್ಚು ಕೆರೆಗಳಿವೆ. ಇವು ಬಹುತೇಕ ಸಣ್ಣವು. ಕನಕಪುರದ ದಕ್ಷಿಣಕ್ಕೆ 16ಕಿಮಿ. ದೂರದಲ್ಲಿರುವ ಸಾತನೂರು ಬಳಿಯ ಅಣೆಕಟ್ಟು ಮಧ್ಯಮ ತರಗತಿಯ ನೀರಾವರಿ ಯೋಜನೆಗಳಲ್ಲೊಂದು. ಇದರಿಂದ 10,000 ಎಕರೆ ಭೂಮಿ ನೀರಾವರಿಗೆ ಒಳಪಡುವುದು. ಅರ್ಕಾವತಿ ನದಿಗೆ ಹಾರೋಬಲೆಯ ಸಮೀಪದಲ್ಲಿ ಕಟ್ಟೆಕಟ್ಟುವ ಕಾರ್ಯ ನಡೆಯುತ್ತಿದೆ. ಮೇಕೆದಾಟು ವಿದ್ಯುತ್ ಯೋಜನೆಯೂ ಪರಿಶೀಲನೆಯಲ್ಲಿದೆ.

ಈ ತಾಲ್ಲೂಕಿಗೆ ರೈಲು ಸಂಪರ್ಕವಿಲ್ಲದಿದ್ದರೂ ಉತ್ತಮ ರಸ್ತೆಗಳಿವೆ. ಬೆಂಗಳೂರು- ಮಳವಳ್ಳಿ- ಮೈಸೂರು ರಸ್ತೆ ಈ ತಾಲ್ಲೂಕಿನ ಮುಖಾಂತರ ಹಾದು ಹೋಗುತ್ತವೆ. ಹಲಗೂರು- ಕನಕಪುರ, ಚನ್ನಪಟ್ಟಣ- ಹನಸನಹಳ್ಳಿ, ರಾಮನಗರ- ಕನಕಪುರ, ಚನ್ನಪಟ್ಟಣ- ಕನಕಪುರ ರಸ್ತೆಗಳು ಇತರ ಮುಖ್ಯಮಾರ್ಗಗಳು.

ಹಾರೋಹಳ್ಳಿ, ಮರಳವಾಡಿ, ಕೋಡಿಹಳ್ಳಿ, ಸಾತನೂರು, ಮಾವತ್ತೂರು ಇವು ತಾಲ್ಲೂಕಿನ ಕೆಲವು ಮುಖ್ಯ ಗ್ರಾಮಗಳು. ಬೇಚಿರಾಕ್ ಬಸವಾಪಟ್ಟಣ - ವೀರಸಂದ್ರದಲ್ಲಿರುವ ವೀರಶೈವ ಗುರು ಹುಚ್ಚಬಸವಪ್ಪನ ಗುಡಿ ಈ ಭಾಗದಲ್ಲಿ ಪ್ರಸಿದ್ಧ. ತಾಲ್ಲೂಕಿನ ದಕ್ಷಿಣ ಅಂಚಿನಲ್ಲಿರುವ ಮೇಕೆದಾಟು (ನೋಡಿ) ಸುಂದರ ಪ್ರೇಕ್ಷಣೀಯ ಸ್ಥಳ.

ಕನಕಪುರ ಈ ತಾಲ್ಲೂಕಿನ ಮುಖ್ಯ ಊರು, ಆಡಳಿತ ಕೇಂದ್ರ, ಬೆಂಗಳೂರಿಗೆ 56ಕಿಮೀ. ದಕ್ಷಿಣಕ್ಕೆ ಬೆಂಗಳೂರು - ಮಳವಳ್ಳಿ ಮಾರ್ಗಮಧ್ಯದಲ್ಲಿ ಅರ್ಕಾವತಿ ನದಿಯ ಬಲದಂಡೆಯ ಮೇಲಿದೆ ಜನಸಂಖ್ಯೆ 47,047

1947ರ ವರೆಗೂ ಈ ಊರಿಗೆ ಕಾನಕಾನಹಳ್ಳಿ ಎಂಬ ಹೆಸರಿತ್ತು. 13ನೆಯ ಶತಮಾನದ ಶಾಸನದಲ್ಲಿ ಕಾಣಿಕಾರಹಳ್ಳಿ ಎಂಬ ಉಲ್ಲೇಖವಿದೆ. ಇಲ್ಲಿನ ಕೋಟೆ ಚನ್ನಪಟ್ಟಣದ ಪಾಳೆಯಗಾರನಾಗಿದ್ದ ಜಗದೇವರಾಯ ಕಟ್ಟಿಸಿದ್ದೆಂದು ತೋರುತ್ತದೆ. 1630ರಲ್ಲಿ ಮೈಸೂರಿನ ಚಾಮರಾಜ ಇದನ್ನು ವಶಪಡಿಸಿಕೊಂಡ. ಶ್ರೀರಂಗಪಟ್ಟಣಕ್ಕೆ ಬರುತ್ತಿದ್ದ ಬ್ರಿಟಿಷ್ ಸೇನೆಗೆ ಈ ಊರು ತಂಗು ನಿಲ್ದಾಣವಾಗಕೂಡದೆಂಬ ಉದ್ದೇಶದಿಂದ ಟಿಪ್ಪುಸುಲ್ತಾನ ಎರಡು ಸಾರಿ ಈ ಪಟ್ಟಣವನ್ನು ಹಾಳುಗೆಡವಿದ್ದ. ಹಳೆಯ ಕೋಟೆಯಲ್ಲಿ ಜೀರ್ಣವಾದ ರಂಗನಾಥ ದೇವಾಲಯವಿದೆ.

ಶಿವನಸಮುದ್ರ ಮತ್ತು ಶಿಂಷಾಗಳಿಂದ ರಾಮನಗರ, ಬೆಂಗಳೂರು, ಕೋಲಾರದ ಚಿನ್ನದ ಗಣಿ ಮುಂತಾದೆಡೆಗಳಿಗೆ ಕನಕಪುರದ ಮುಖಾಂತರ ವಿದ್ಯುತ್ ಹರಿಯುತ್ತದೆ. ರೇಷ್ಮೆ ಬಿತ್ತನೆ ಕೋಠಿಗಳು, ರೇಷ್ಮೆಗೂಡಿನಿಂದ ರೇಷ್ಮೆ ತೆಗೆಯುವ (ಫಿಲೇಚರ್ಸ್) ಕಾರ್ಖಾನೆಯೂ ಇಲ್ಲುಂಟು. ಪ್ರಾಥಮಿಕ ಹಾಗೂ ಪ್ರೌಢಶಾಲೆಗಳು ಮತ್ತು ಕಾಲೇಜು ಇವೆ. ಪ್ರತಿ ಗುರುವಾರ ಕನಕಪುರದಲ್ಲಿ ಸಂತೆ ಸೇರುವುದು. ಇಲ್ಲಿಂದ ಮಳವಳ್ಳಿ, ಮೈಸೂರು, ಹಲಗೂರು, ಚನ್ನಪಟ್ಟಣ, ರಾಮನಗರ, ಬೆಂಗಳೂರು ಮುಂತಾದೆಡೆಗಳಿಗೆ ಉತ್ತಮ ರಸ್ತೆ ಸಂಪರ್ಕವಿದ್ದು ಒಂದು ವ್ಯಾಪಾರ ಸ್ಥಳವಾಗಿ ಅಭಿವೃದ್ಧಿಯಾಗುತ್ತಿದೆ. 1971 ನವಂಬರ್ ತಿಂಗಳಲ್ಲಿ ಬೆಂಗಳೂರು ಜಿಲ್ಲೆಯ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ ಇಲ್ಲಿ ನಡೆಯಿತು. ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಇಲ್ಲಿ 1999ರಲ್ಲಿ ಜರುಗಿತು. *

**ಕನ್ನಡ ಅಭಿವೃದ್ಧಿ ಪ್ರಾಧಿಕಾರ :** ಆಡಳಿತದ ಎಲ್ಲ ಹಂತಗಳಲ್ಲಿ ಕನ್ನಡವನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವ ಹಾಗೂ ಕರ್ನಾಟಕದ ಸಮಸ್ತ ಮಾಹಿತಿಗಳನ್ನು ದಾಖಲುಗೊಳಿಸುವ ಉದ್ದೇಶ ಹೊಂದಿದೆ. ಸರ್ಕಾರದ ಒಂದು ಕಾರ್ಯ ಯೋಜನೆಯ ಅಂಗವಾಗಿ ಸ್ಥಾಪಿತವಾದ. ಸಂಸ್ಥೆ. ಕನ್ನಡ ಭಾಷೆಯನ್ನು ಆಡಳಿತದಲ್ಲಿ ಜಾರಿಗೆ ತರಲು ಸೂಕ್ತ ಮಾರ್ಗದರ್ಶನ, ಸಲಹೆ, ಸೂಚನೆಗಳನ್ನು ನೀಡುವ ಉದ್ದೇಶದ ಹಿನ್ನೆಲೆಯಲ್ಲಿ 1983 ಜೂನ್ 23ರಂದು ಕನ್ನಡ ಕಾವಲು ಸಮಿತಿಯನ್ನು ರಚಿಸಲಾಯಿತು. ಕರ್ನಾಟಕದ ಗಡಿ ಸಮಸ್ಯೆಯನ್ನೂ ಈ ಸಮಿತಿಯ ವ್ಯಾಪ್ತಿಗೆ ಸೇರಿಸಿದ ತರುವಾಯ 1984 ಏಪ್ರಿಲ್ 18ರಂದು ಕನ್ನಡ ಕಾವಲು ಮತ್ತು ಗಡಿ ಸಲಹಾ ಸಮಿತಿ ಎಂದು ಪುನರ್ ನಾಮಕರಣ ಮಾಡಲಾಯಿತು. ಅನಂತರ 1990 ಅಕ್ಟೋಬರ್ 14ರಂದು ಸಮಿತಿಯ ಉದ್ದೇಶಗಳನ್ನೂ ಅಧಿಕಾರ ವ್ಯಾಪ್ತಿಗಳನ್ನೂ ಹಿಗ್ಗಿಸಿ ಕನ್ನಡ ಅಭಿವೃದ್ಧಿ ಮಂಡಳಿ ಎಂದು ಮರುನಾಮಕರಣ ಮಾಡಲಾಯಿತು. ಆಡಳಿತದ ಎಲ್ಲ ಹಂತದಲ್ಲಿ ಕನ್ನಡವನ್ನು ಬಳಸುವಂತೆ ಚಾಲನೆ ನೀಡುವುದು, ಪರಿಶೀಲಿಸುವುದು, ಕನ್ನಡವನ್ನು ಬಳಸದೇ ಹೋದ ಸಂದರ್ಭದಲ್ಲಿ ಶಿಸ್ತು ಕ್ರಮದ ಜಾರಿ ಮುಂತಾದ ಅಧಿಕಾರಗಳನ್ನು ಶಾಸನಬದ್ಧಗೊಳಿಸಿ 1992 ಫೆಬ್ರವರಿ 6ರಂದು ಈ ಮಂಡಳಿಯನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರ ಎಂಬ ಹೆಸರಿನಲ್ಲಿ ಉನ್ನತೀಕರಿಸಲಾಯಿತು. ಈ ಪ್ರಾಧಿಕಾರಕ್ಕೆ ಶಾಸನಬದ್ಧ ಅಧಿಕಾರವನ್ನು ನೀಡಲು ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ ಕಾಯಿದೆ ಜಾರಿಗೊಳಿಸಲಾಗಿದೆ (1995).

ಕನ್ನಡ ಭಾಷೆ ಮತ್ತು ಸಂಸ್ಕೃತಿಗಳ ರಕ್ಷಣೆಯಲ್ಲಿ ಜನತೆಯ ಆಶೋತ್ತರಗಳನ್ನು ರಚನಾತ್ಮಕವಾಗಿ ಕಾರ್ಯರೂಪಕ್ಕೆ ತರುವುದು ಪ್ರಾಧಿಕಾರದ ಮುಖ್ಯ ಧ್ಯೇಯ. ಆಡಳಿತದಲ್ಲಿ ಕನ್ನಡದ ಬಳಕೆ ಮತ್ತು ಸರೋಜಿನಿ ಮಹಿಷಿ ವರದಿಯ ಅನುಷ್ಠಾನಗಳು ಪ್ರಾಧಿಕಾರದ ಮುಖ್ಯ ಜವಾಬ್ದಾರಿಗಳಾಗಿವೆ. ಶಿಕ್ಷಣಕ್ಕೆ ಸಂಬಂಧಿಸಿದಂತೆ 1 ರಿಂದ 10ನೆಯ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಓದಿದವರಿಗೆ ವೃತ್ತಿಪರ ಶಿಕ್ಷಣದಲ್ಲಿ ಮೀಸಲಾತಿ ನೀಡುವಂತೆ ಪ್ರಾಧಿಕಾರ ಚಾರಿತ್ರಿಕ ಮಹತ್ವದ ವರದಿಯನ್ನು ಸಲ್ಲಿಸಿದೆ. ರಾಜ್ಯದಲ್ಲಿರುವವರೆಲ್ಲ ಕನ್ನಡ ಕಲಿಯಬೇಕೆಂಬ ಆಶಯದಿಂದ ಅಲ್ಪಸಂಖ್ಯಾತರಿಗೆ ಕನ್ನಡ ಕಲಿಸುವ ಯೋಜನೆ ಹಾಕಿಕೊಂಡಿದೆ.

ಪ್ರಾಧಿಕಾರದ ಆಡಳಿತ ವ್ಯವಸ್ಥೆಯನ್ನು ನೋಡಿಕೊಳ್ಳಲು ಸರ್ಕಾರ ನೇಮಿಸಿದ ಒಬ್ಬ ಅಧ್ಯಕ್ಷರಿರುತ್ತಾರೆ. ಇವರ ಅಧಿಕಾರಾವಧಿ ಮೂರು ವರ್ಷ. ಪ್ರಾಧಿಕಾರಕ್ಕೆ ಏಳು ಜನ ಅಧಿಕಾರೇತರ ಸದಸ್ಯರನ್ನು ಸರ್ಕಾರ ನಾಮನಿರ್ದೇಶನ ಮಾಡುತ್ತದೆ. ವಿವಿಧ ಇಲಾಖೆಗಳ ಮುಖ್ಯಸ್ಥರು ಹಾಗೂ ಕಾರ್ಯದರ್ಶಿಗಳು ಇದರ ಪದನಿಮಿತ್ತ ಸದಸ್ಯರು. ಜಿಲ್ಲಾಧಿಕಾರಿ ದರ್ಜೆಯ ಒಬ್ಬ ಅಧಿಕಾರಿಯನ್ನು ಸರ್ಕಾರ ಕಾರ್ಯದರ್ಶಿಯಾಗಿ ನೇಮಿಸುವುದು. ಈ ತನಕ ಸಿದ್ಧರಾಮಯ್ಯ, ಜಿ.ನಾರಾಯಣ, ಎಚ್.ನರಸಿಂಹಯ್ಯ, ಪಾಟೀಲ ಪುಟ್ಟಪ್ಪ, ಚಂದ್ರಶೇಖರ ಪಾಟೀಲ, ಬರಗೂರು ರಾಮಚಂದ್ರಪ್ಪ ಇದರ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ. ಬಿ.ಎಂ.ಇದಿನಬ್ಬ ಈಗಿನ ಅಧ್ಯಕ್ಷರು. ಮಾಹಿತಿ ತಂತ್ರಜ್ಞಾನದ ಪ್ರವಾಹದಲ್ಲಿ ಅನ್ಯಭಾಷೆಗಳಿಂದ ಅದರಲ್ಲೂ ಇಂಗ್ಲಿಷಿನಿಂದ ಕನ್ನಡವನ್ನು ರಕ್ಷಿಸುವ ಕೆಲಸ ಪ್ರಾಧಿಕಾರದ ಮುಂದಿರುವ ಬಹು ದೊಡ್ಡ ಸವಾಲಾಗಿದೆ. (ಎಸ್.ಬಿ.ಎಚ್.ಎ.)

**ಕನ್ನಡ ಕೇಸರಿ :** ಧಾರವಾಡದಿಂದ ಪ್ರಕಟವಾಗುತ್ತಿದ್ದ ವಾರಪತ್ರಿಕೆ. ಬಿಂದೂರಾವ್ ಮುತಾಲಿಕ ದೇಸಾಯಿ ಎಂಬವರು 1902ರಲ್ಲಿ ಈ ಪತ್ರಿಕೆಯನ್ನು ಆರಂಭಿಸಿದರು. ಇದು ಲೋಕಮಾನ್ಯ ಟಿಳಕರ ಪ್ರಸಿದ್ಧ ಮರಾಠಿ ಪತ್ರಿಕೆ ಕೇಸರಿಯ ಕನ್ನಡ ಅವತರಣ. ಬಂಗಾಳ ವಿಭಜನೆಯಂಥ ಘಟನೆಗಳು ಮತ್ತು ಮಹಾರಾಷ್ಟ್ರದಲ್ಲಿ ಟಿಲಕರು ಪ್ರಾರಂಭಿಸಿದ ರಾಷ್ಟ್ರೀಯ ಆಂದೋಳನಗಳ ಪ್ರಭಾವ ಉತ್ತರ ಕರ್ನಾಟಕದಲ್ಲಿ ಎಷ್ಟು ತೀವ್ರವಾಗಿತ್ತೆನ್ನುವುದಕ್ಕೆ ಕನ್ನಡ ಕೇಸರಿಯಂಥ ಪತ್ರಿಕೆಗಳ ಉಗಮ ಪ್ರಬಲ ನಿದರ್ಶನವಾಗಿದೆ.

ಪ್ರತಿವಾರವೂ ಮರಾಠಿ ಕೇಸರಿಯ ಲೇಖನಗಳನ್ನು ಕನ್ನಡದಲ್ಲಿ ಅನುವಾದಿಸಿ ಕನ್ನಡ ಕೇಸರಿಯಲ್ಲಿ ಪ್ರಕಟಿಸಲಾಗುತ್ತಿತ್ತು. ಪತ್ರಿಕೆಯ ಮುದ್ರಣದ ಕಾರ್ಯ ನಡೆಯುತ್ತಿದ್ದುದು ಹುಬ್ಬಳ್ಳಿಯಲ್ಲಿ. ಸತ್ಯಾಗ್ರಹ ಯೋಧ ಹಾಗೂ ಸೇವಾದಳದ ಸಂಸ್ಥಾಪಕರಾದ ನಾ.ಸು. ಹರ್ಡೀಕರ್ ಅವರು ಈ ಕಾರ್ಯದಲ್ಲಿ ನೆರವಾಗಲು ಮುಂದಾದರು. ಮುದ್ರಣದ ಮೇಲ್ವಿಚಾರಣೆಯ ಜೊತೆಗೆ ಅವರು ಮರಾಠಿಯ ಮೂಲ ಲೇಖನಗಳ ಕನ್ನಡ ಅನುವಾದ ಕಾರ್ಯವನ್ನೂ ನೆರವೇರಿಸುತ್ತಿದ್ದರು. ಲೇಖನಗಳ ಜೊತೆಗೆ ಹಲವಾರು ಸಾಂದರ್ಭಿಕ ಚಿತ್ರಗಳನ್ನೂ ಪ್ರಕಟಿಸಲಾಗುತ್ತಿತ್ತು. ಒಂದು ಸಂದರ್ಭದಲ್ಲಿ ಹರ್ಡಿಕರರು ಬರೆದ ಟಿಪ್ಪಣಿಯ ಭಾಷೆ ಎಷ್ಟು ತೀಕ್ಷ್ಣವಾಗಿತ್ತೆಂದರೆ ಸಂಪಾದಕರಾದ ಬಿಂದೂರಾಯರು ಕೊನೆಯ ಗಳಿಗೆಯಲ್ಲಿ ಅದನ್ನು ಗಮನಿಸಿ ಅಂಚೆಗೆ ಹೋದ ಪತ್ರಿಕೆಯನ್ನು ಮರಳಿ ತರಿಸಿಕೊಂಡು ಹರ್ಡೀಕರರ ಮಾತಿನ ಬಿಸಿಯನ್ನು ತಗ್ಗಿಸಿ ಬೇರೆ ಟಿಪ್ಪಣಿ ಬರೆದದ್ದುಂಟು. ಇಲ್ಲವಾದರೆ ಪತ್ರಿಕೆಗೆ ದುರ್ಭರವಾದ ಪ್ರಸಂಗವೊದಗುತ್ತಿತ್ತು. ಲೋಕಮಾನ್ಯ ಟಿಳಕರ ವಿಚಾರಗಳನ್ನೂ ರಾಷ್ಟ್ರೀಯ ಹೋರಾಟದ ಸ್ವರೂಪವನ್ನೂ ಜನತೆಗೆ ತಿಳಿಸುವಲ್ಲಿ ಯಶಸ್ವಿಯಾದ ಈ ಪತ್ರಿಕೆ ಆ ಕಾಲದಲ್ಲಿ ತುಂಬ ಜನಪ್ರಿಯವಾಗಿತ್ತು. *

**ಕನ್ನಡ ಕೋಗಿಲೆ :** ಮುಳಿಯ ತಿಮ್ಮಪ್ಪಯ್ಯನವರ ಸಂಪಾದಕತ್ವದಲ್ಲಿ ಮಂಗಳೂರಿನಿಂದ ಪ್ರಕಟವಾಗುತ್ತಿದ್ದ ಮಾಸಪತ್ರಿಕೆ. 1916ರ ಏಪ್ರಿಲ್‌ನಲ್ಲಿ



ಪ್ರಾರಂಭವಾಗಿ, ನಾಲ್ಕೂವರೆ ವರ್ಷ ನಡೆಯಿತು. ಮಂಗಳೂರಿನ ಶಾರದಾ ಮುದ್ರಣಾಲಯದಲ್ಲಿ ಮುದ್ರಿತವಾಗುತ್ತಿದ್ದ ಈ ಪತ್ರಿಕೆ ಧರ್ಮ, ಅರ್ಥ, ಸಮಾಜ ಮತ್ತು ಸಾಹಿತ್ಯ ವಿಷಯಗಳಿಗೆ ಸಂಬಂಧಿಸಿದ ಪ್ರೌಢ ಲೇಖನಗಳನ್ನು ಪ್ರಕಟಿಸುತ್ತಿತ್ತು. ಪ್ರಸಿದ್ಧ ಕವಿಗಳ ಕವನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ. ಖ್ಯಾತ ಲೇಖಕರಾಗಿದ್ದ ಪಿ.ಭೋಜರಾವ್ ಸಂಪಾದಕ ವರ್ಗದಲ್ಲಿದ್ದರು. ಉಗ್ರಾಣ ಮಂಗೇಶರಾವ್, ಮುಳಿಯ ಶಂಕರಭಟ್ಟ ಮೊದಲಾದವರು ಲೇಖಕ ವರ್ಗದಲ್ಲಿದ್ದರು. ಕನ್ನಡ ಕೋಗಿಲೆ ಸದ್ವಿಷಯದ ಪತ್ರಿಕೆಯೆಂದು ಹೆಸರು ಪಡೆದಿತ್ತು. (ಎಸ್.ವಿ.ಪಿ.)

**ಕನ್ನಡ ಚಂಪೂ ಸಾಹಿತ್ಯ :** ಸಂಸ್ಕೃತ ಕನ್ನಡಗಳಲ್ಲಿಯೂ ಇತರ ಕೆಲವು ಭಾರತೀಯ ಭಾಷೆಗಳಲ್ಲಿಯೂ ಚಂಪೂ (ಚಂಪು) ಎಂಬುದು ಪ್ರಾಚೀನವೂ ಪ್ರಸಿದ್ಧವೂ ಆದ ಒಂದು ಸಾಹಿತ್ಯ ಪ್ರಕಾರ. ಸಾವಿರ ವರ್ಷಗಳಿಗೆ ಮೇಲ್ಪಟ್ಟ ಇತಿಹಾಸ ಇದಕ್ಕಿದೆ. ಆಯಾ ಭಾಷೆಯಲ್ಲಿ ಬಹುಕಾಲ ನಿಲ್ಲುವ ಉತ್ಕೃಷ್ಟವಾದ ಸಾಹಿತ್ಯ ಈ ಪ್ರಕಾರದಲ್ಲಿ ನಿರ್ಮಿತವಾಗಿದೆ. ಕನ್ನಡದ ಮಟ್ಟಿಗೆ ಹೇಳುವುದಾದರೆ, ಮೊದಮೊದಲಿನ ಶ್ರೇಷ್ಠ ಕವಿಗಳು ಈ ಪ್ರಕಾರವನ್ನು ಯಶಸ್ವಿಯಾಗಿ ಬಳಸಿಕೊಂಡು ಉತ್ತಮ ಸಾಹಿತ್ಯವನ್ನು ನಿರ್ಮಾಣ ಮಾಡಿದ್ದು ಮುಂದೆ ಅದು ವಿಶೇಷವಾಗಿ ಪ್ರಬಲಿಸಿ ಕನ್ನಡ ಸಾಹಿತ್ಯದಲ್ಲಿ ಗಣ್ಯವೂ ಸುಸ್ಥಿರವೂ ಆದ ನೆಲೆಯನ್ನು ಗಳಿಸಿಕೊಳ್ಳುವಂತಾಯಿತು.

ಚಂಪೂವಿನ ಲಕ್ಷಣವನ್ನು ದಂಡಿಯ (ಸು.650) ಕಾವ್ಯಾದರ್ಶವೆಂಬ ಸಂಸ್ಕೃತ ಭಾಷೆಯ ಲಕ್ಷಣಗ್ರಂಥದಲ್ಲಿ ಮೊದಲು ನಿರೂಪಿಸಿದೆ. ಅನಂತರದಲ್ಲಿ ಹೇಮಚಂದ್ರ (1088-1172) ವಿಶ್ವನಾಥ (ಸು.1400) ವಿದ್ಯಾನಾಥ (ಸು.1400) ಮುಂತಾದವರು ತಮ್ಮ ಅಲಂಕಾರ ಗ್ರಂಥಗಳಲ್ಲಿ ಹೇಳಿದ್ದಾರೆ. ಹಾಗೆಯೇ ಕನ್ನಡದಲ್ಲಿಯೂ 2ನೆಯನಾಗವರ್ಮ ಉದಯಾದಿತ್ಯ ಇವರ ಅಲಂಕಾರಗ್ರಂಥಗಳಲ್ಲಿ ಆ ವಿಷಯದ ಉಲ್ಲೇಖವಿದೆ. ದಂಡಿ ಚಂಪೂವಿನ ಲಕ್ಷಣವನ್ನು ಗದ್ಯಪದ್ಯಮಯೀಕಾಚಿಚ್ಚಂಪೂರಿತ್ಯಭಿಧೀಯತೇ ಎಂದು ಹೇಳಿದ್ದಾನೆ. ಚಂಪೂ ಪ್ರಧಾನವಾಗಿ ಗದ್ಯ ಪದ್ಯಮಯಿಯಾದದ್ದು ಎಂಬುದು ಇಲ್ಲಿ ಸ್ಫುರಿಸಿರುವ ಅದರ ಲಕ್ಷಣ. ಹೆಚ್ಚಿನ ವಿವರಗಳಾಗಲಿ ವ್ಯತ್ಯಾಸವಾಗಲಿ ಇಲ್ಲದೆ ಇದೇ ಲಕ್ಷಣವನ್ನು ಈಚಿನವರು ಅನುವಾದ ಮಾಡಿದ್ದಾರೆ.

ಚಂಪೂ ಎಂಬ ಪದದ ಮೂಲ ಅನಿರ್ದಿಷ್ಟವಾದುದು. ಅದರ ನಿಷ್ಪತ್ತಿಯನ್ನು ಬೇರೆ ಬೇರೆ ರೀತಿಯಲ್ಲಿ ವಿದ್ವಾಂಸರು ವಿವರಿಸಿದ್ದಾರೆ. ಈ ಸಾಹಿತ್ಯಪ್ರಕಾರ ಸಂಸ್ಕೃತ ಮೂಲವಾದುದು ಎಂದು ಗ್ರಹಿಸುವವರು ಒಂದು ರೀತಿಯಾಗಿಯೂ ಕನ್ನಡ ಮೂಲವಾದುದೆಂದು ಗ್ರಹಿಸುವವರು, ಇನ್ನೊಂದು ರೀತಿಯಾಗಿಯೂ ಹೇಳುವುದು ಕಾಣುತ್ತದೆ. ಈ ಬಗೆಗೆ ವಿಚಾರಮಾಡುವುದು ಪ್ರಕೃತ ಲೇಖನದ ಉದ್ದೇಶವಲ್ಲ. ಚಂಪೂ ಮಾತೂ ರೀತಿಯೂ ಕನ್ನಡದ್ದೇ ಎಂದು ಹೇಳುವವರ ವಾದವನ್ನು ಮಾತ್ರ ಸಂಗ್ರಹವಾಗಿ ತಿಳಿಸಿ ಕನ್ನಡ ಚಂಪೂಸಾಹಿತ್ಯದ ಪರಿಚಯವನ್ನು ಇಲ್ಲಿ ನಿವೇದಿಸಲಾಗುತ್ತದೆ.

ಚಂಪೂವಿಗೆ ಕನ್ನಡ ಮೂಲವನ್ನು ಹೇಳುವವರ ಅಭಿಪ್ರಾಯ ಹೀಗಿದೆ: ಪ್ರಾಚೀನವಾದ ಸಂಸ್ಕೃತ ವಾಙ್ಮಯದಲ್ಲಿ ಚಂಪೂ ಸಾಹಿತ್ಯಪ್ರಕಾರ ಅಷ್ಟೇನೂ ಪ್ರಾಚೀನವಾದುದಲ್ಲ. ಈಚೆಗೆ ಕಾಣಿಸಿಕೊಂಡದ್ದು. ಆ ಭಾಷೆಯಲ್ಲಿ ಆ ರೀತಿಯ ಸಾಹಿತ್ಯ ಕಣ್ಣಿಗೆ ಬೀಳುವುದು 10ನೆಯ ಶತಮಾನದಿಂದ. ತ್ರಿವಿಕ್ರಮಭಟ್ಟನ (ಸು.915) ದಮಯಂತೀ ಕಥೆ ಅಥವಾ ನಳಚಂಪೂ ಮತ್ತು ಸೋಮದೇವನ ಯಶಸ್ತಿಲಕ ಚಂಪೂ (ಸು.959) ಇವು ಈಗ ತಿಳಿದಮಟ್ಟಿಗೆ ಆ ಭಾಷೆಯಲ್ಲಿಯ ಆದ್ಯ ಚಂಪೂ ಕೃತಿಗಳು. ಇವು ರಚನೆಯಾದದ್ದು ಕರ್ನಾಟಕದಲ್ಲಿ ಹಾಗೂ ಕನ್ನಡ ರಾಜರ ಆಶ್ರಯ ಪಡೆದ ಕವಿಗಳಿಂದ, ಇವರು ಆ ವೇಳೆಗಾಗಲೇ ಕನ್ನಡ ನಾಡಿನ ಕನ್ನಡ ಜೈನಕವಿಗಳು ಕಲ್ಪಿಸಿ ರೂಢಿಸಿದ್ದ ಚಂಪೂ ಮಾರ್ಗವನ್ನು ಅನುಸರಿಸಿದರೆಂದು ತೋರುತ್ತದೆ. ಕನ್ನಡದಲ್ಲಿ ಚಂಪೂಗ್ರಂಥಗಳು 8-9ನೆಯ ಶತಮಾನಗಳಲ್ಲಿಯೇ ಕಾಣಿಸಿಕೊಂಡಿದ್ದವೆಂದು ತಿಳಿಯುವುದಕ್ಕೆ ಆಧಾರಗಳಿವೆ. ಆದರೆ ಸು.7ನೆಯ ಶತಮಾನದ ದಂಡಿ ಚಂಪೂವಿನ ಲಕ್ಷಣವನ್ನು ಹೇಳಿದ್ದಾನಲ್ಲದೆ, ಆತನ ಕಾಲದಲ್ಲಿಯೂ ಅದಕ್ಕೆ ಮೊದಲಲ್ಲಿಯೂ ಸಂಸ್ಕೃತ ಚಂಪೂಗ್ರಂಥಗಳು ಇಲ್ಲದೆ ಹೀಗೆ ಹೇಳಿರುವುದು ಸಾಧ್ಯವೇ - ಎಂಬ ಪ್ರಶ್ನೆ ಸಹಜವಾಗಿ ಹುಟ್ಟುತ್ತದೆ. ದಂಡಿಗೆ ಪರಿಚಿತವಾಗಿದ್ದ ಚಂಪೂಸಾಹಿತ್ಯ ಪೂರ್ತಿಯಾಗಿ ನಷ್ಟವಾಗಿದೆ ಎಂಬುದು ತೃಪ್ತಿಕರವಾದ ಉತ್ತರವಲ್ಲ. ಆತ ದಾಕ್ಷಿಣಾತ್ಯನಾದುದರಿಂದ, ಆ ಕಾಲಕ್ಕೆ ದಕ್ಷಿಣದಲ್ಲಿ ಪ್ರಚಲಿತವಾಗಿದ್ದ ಕನ್ನಡ, ತಮಿಳು ಭಾಷೆಗಳಲ್ಲಿಯ ಚಂಪೂಕೃತಿಗಳನ್ನು ನೋಡಿದ್ದಿರಬಹುದು. ಒಂದು ಪಕ್ಷ ಚಂಪೂ ಮೂಲತಃ ಸಂಸ್ಕೃತದ್ದೆಂದು ತಿಳಿದರೂ ಅದು ಕನ್ನಡ ಸಾಹಿತ್ಯದಲ್ಲಿ ಪಡೆದ ರೂಪ ಸಂಸ್ಕೃತದ ಅನುಕರಣೆಯ ಫಲವಲ್ಲ. ಅದಕ್ಕೆ ಒಂದು ವೈಶಿಷ್ಟ್ಯವಿದೆ. ಇದಿಷ್ಟೂ ಒಟ್ಟಿನಲ್ಲಿ ಒಬ್ಬ ವಿದ್ವಾಂಸರ ವಿಚಾರಸರಣಿ.

ಇನ್ನೊಬ್ಬ ವಿದ್ವಾಂಸರು ಹೀಗೆಯೇ, ಸಂಸ್ಕೃತ ಸಾಹಿತ್ಯದಲ್ಲಿ ಚಂಪೂಸಾಹಿತ್ಯದ ಅರ್ವಾಚೀನತೆ, ಸಂಸ್ಕೃತದ ಪ್ರಾಚೀನ ಲಾಕ್ಷಣಿಕರಲ್ಲಿ ದಾಕ್ಷಿಣಾತ್ಯನಾದ ದಂಡಿಯೊಬ್ಬನೆ ಅದನ್ನು ಹೆಸರಿಸಿರತಕ್ಕವನು ಎಂಬ ಸಾಕ್ಷ್ಯ, ಚಂಪೂ ಶಬ್ದಕ್ಕೆ ಸಂಸ್ಕೃತದಲ್ಲಿ ಸ್ವರಸವಾದ ರೂಪನಿಷ್ಪತ್ತಿಯನ್ನು ಹೇಳುವುದರ ಆವಶ್ಯಕತೆ, ತಮಿಳು ಭಾಷೆಯ ಪ್ರಾಚೀನ ಕಾವ್ಯವಾದ ಶಿಲಪ್ಪದಿಕಾರಮ್‌ನ ಅನೇಕ ಸರ್ಗಗಳು ಗದ್ಯಪದ್ಯಾತ್ಮಕಗಳಾಗಿರುವುದು. ಇವನ್ನು ಗಮನಿಸಿ ಚಂಪೂಕಾವ್ಯರೂಪ ಭಾರತೀಯ ಸಾಹಿತ್ಯಕ್ಕೆ ದಕ್ಷಿಣ ಭಾರತದ ಕೊಡಿಗೆಯಾಗಿರಬೇಕೆಂದು ಭಾವಿಸಬಹುದು ಎಂದಿದ್ದಾರೆ. ಅಲ್ಲದೆ ಕನ್ನಡದ ಮಟ್ಟಿಗೆ ಹೇಳುವುದಾದರೆ, ಹಿಂದಿನಿಂದ ಪ್ರಚುರವಾಗಿದ್ದ ಚತ್ತಾಣದಲ್ಲಿ ಗದ್ಯಖಂಡಗಳು ವಚನಗಳು ನಡುನಡುವೆ ಸೇರಿ ಚಂಪೂ ತಲೆಯೆತ್ತಿರಬಹುದು ಎಂಬುದಾಗಿ ಕನ್ನಡದಲ್ಲಿ ಚಂಪೂವಿನ ಉಗಮವನ್ನು ಗುರುತಿಸಲು ಯತ್ನಿಸಿದ್ದಾರೆ. ಚತ್ತಾಣ ಎಂಬುದರ ಸ್ವರೂಪವನ್ನು ಅವರು ಹೀಗೆ ಹೇಳಿದ್ದಾರೆ. ಕವಿರಾಜಮಾರ್ಗದಲ್ಲಿ ಉಕ್ತವಾದ, ಅದಕ್ಕೆ ಹಿಂದಿನ ಕಾಲದಿಂದಲೂ ಕನ್ನಡದಲ್ಲಿ ಪ್ರಚಲಿತವಾಗಿದ್ದ ಕಾವ್ಯರೂಪ, ಇದು ಬಾಜನೆ ಗಬ್ಬ, ವಾಚಿಸತಕ್ಕದ್ದು, ಇದರಲ್ಲಿ ಕಂದ, ಹಲವು ಬಗೆಯ ಸಂಸ್ಕೃತ ವೃತ್ತಗಳು, ದೇಶೀಯ ಪದ್ಯಜಾತಿಗಳು ಇವೆಲ್ಲ ಬರುತ್ತವೆ. ಪದ್ದಳಿಯೂ ಬರಬಹುದು. ಇದು ಅಖಿಲ ವರ್ಣನೆಗಳಿಂದ ಕೂಡಿದ ಕಾವ್ಯ. ಆದಕಾರಣವೇ ಬಹುಶಃ ದೀರ್ಘವಾಗಿರುತ್ತದೆ.

ಅಂತೂ ಚಂಪೂವಿನ ಉಗಮದ ವಿಷಯದಲ್ಲಿ ಭಿನ್ನಮತವಿರುವುದೂ ಅನಿರ್ದಿಷ್ಟತೆಯಿರುವುದೂ ಇದರಿಂದ ಸ್ಪಷ್ಟವಾಗಿ ತೋರುತ್ತದೆ. ಸಂಶೋಧನೆಯಿಂದ ಹೊಸ ಸಂಗತಿಗಳು ಬೆಳಕಿಗೆ ಬಂದ ಹೊರತು ಈ ವಿಷಯದಲ್ಲಿ ಯಾವ ನಿರ್ಣಯಕ್ಕೂ ಬರುವುದು ಸಾಧ್ಯವಿಲ್ಲ.

ಕನ್ನಡದಲ್ಲಿ ಚಂಪೂಸಾಹಿತ್ಯವನ್ನು ಗಮನಿಸುವ ಮೊದಲು ಕನ್ನಡ ಚಂಪೂವಿನ ಸಾಮಾನ್ಯ ಚೌಕಟ್ಟನ್ನು ಸ್ವಲ್ಪ ಗಮನಿಸಬೇಕು. ಕನ್ನಡ ಚಂಪೂವನ್ನು ರೂಢಿಯಲ್ಲಿ ವಸ್ತುಕ, ಓದುಗಬ್ಬ, ಮಾರ್ಗ ಕವಿತ್ವ ಎಂದು ಹೇಳುವುದುಂಟು. ಅದರಲ್ಲಿ ಪ್ರತಿಪಾದಿತವಾಗುವ ವಸ್ತು ಲೌಕಿಕ, ಧಾರ್ಮಿಕ ಅಥವಾ ಐತಿಹಾಸಿಕವಾಗಿರುತ್ತದೆ. ರಾಮಾಯಣ, ಭಾರತಗಳು, ವೈದಿಕ ಜೈನಪುರಾಣಗಳು, ಕಲ್ಪಿತ ಕಥಾವಸ್ತುವುಳ್ಳ ಕಾವ್ಯಗಳು, ಐತಿಹಾಸಿಕ ವೃತ್ತಾಂತಗಳು ಇವು ವಸ್ತುವಿಗೆ ಪ್ರಮುಖವಾದ ಆಕರಗಳು. ಪ್ರಾಚೀನ ಸಂಸ್ಕೃತ ಕಾವ್ಯಪರಂಪರೆಯಲ್ಲಿ ಕಾಣುವಂತೆ, ಉದಾತ್ತನಾಯಕನ ಮಹಿಮಾತಿಶಯ ನಿರೂಪಣೆ, ನಾಯಕ ಪ್ರತಿನಾಯಕ ಸಂಘರ್ಷ, ಇಷ್ಟದೈವ, ದೈವಭಕ್ತಿ, ಧಾರ್ಮಿಕ ಕ್ಷೇತ್ರಾದಿಗಳ ಉತ್ಕರ್ಷ ಸಾಧನೆ ಮತ್ತು ಮಹಿಮೆ ಮುಂತಾದವುಗಳ ಕಥನ, ಮತಪ್ರಸಾರ, ತತ್ತ್ವಪ್ರಸಾರ, ಮನರಂಜನೆ ಇವು ಇಲ್ಲಿಯೂ ಕಾಣುತ್ತವೆ. ಸಂಸ್ಕೃತ ಸಾಹಿತ್ಯದ ಪ್ರೌಢಕವಿಗಳ ರೀತಿಯಲ್ಲಿ ಇರುವಂತೆಯೇ ವಿವಿಧ ಸಾಂಪ್ರದಾಯಿಕ ವರ್ಣನೆಗಳ ಪ್ರಾಚುರ್ಯ, ಅಲಂಕಾರಪ್ರಿಯತೆ, ವಿಭಿನ್ನ ರಸದೃಷ್ಟಿ ಇವು ಎದ್ದುಕಾಣುವಂತಿರುತ್ತವೆ. ಸಾಮಾನ್ಯವಾಗಿ ಕಥೆಗಿಂತಲೂ ವರ್ಣನೆಗೆ, ರಸಭಾವಗಳಿಗಿಂತಲೂ ಶಬ್ದಾರ್ಥಾಲಂಕಾರಗಳಿಗೆ, ಸ್ವಾನುಭವಕ್ಕಿಂತಲೂ ಕವಿಸಮಯಕ್ಕೆ ಹೆಚ್ಚು ಅವಕಾಶ ದೊರೆತಿರುತ್ತದೆ. ದೇಸೀಯವಾದ ಮಾತುಗಾರಿಕೆ ಮತ್ತು ಸಂಸ್ಕೃತ ಭೂಯಿಷ್ಠವಾದ ಆಲಂಕಾರಿಕ ಪದರಚನೆ ಇವುಗಳಲ್ಲಿ ಒಮ್ಮೆ ಅದು ಒಮ್ಮೆ ಇದು ಮೇಲುಗೈಯಾಗಿರುತ್ತದೆ. ವಿಶೇಷವಾಗಿ ಎರಡನೆಯದರ ಪ್ರಾಬಲ್ಯವೇ ಹೆಚ್ಚು. ಒಮ್ಮೊಮ್ಮೆ ಆ ಎರಡರ ಹಿತಮಿತವಾದ ಮಿಶ್ರಣವಿರುತ್ತದೆ.

ಕನ್ನಡ ಚಂಪೂವಿನಲ್ಲಿ, ಲಕ್ಷಣಾನುಸಾರವಾಗಿ ಗದ್ಯಪದ್ಯಗಳ ಸಮಪ್ರಾಚುರ್ಯ ಸಾಮಾನ್ಯವಾಗಿರುತ್ತದೆ. ಆದರೆ ಪದ್ಯ ಗದ್ಯಕ್ಕಿಂತ ಹೆಚ್ಚಾಗಿ ಬರುವುದೇ ಸಾಮಾನ್ಯ. ಗದ್ಯಪದ್ಯಗಳು ಇಷ್ಟೇ ಪ್ರಮಾಣದಲ್ಲಿ ಇಂಥದೇ ವಿಷಯಕ್ಕಾಗಿ, ಹೀಗೆಯೇ ಯೋಜನೆಗೊಂಡಿರಬೇಕೆಂಬ ನಿಶ್ಚಿತವಾದ ನಿಯಮವೇನಿಲ್ಲ. ಆದರೆ ವರ್ಣನೆಗಳು, ಇತಿವೃತ್ತಾತ್ಮಕ ವಿವರಣೆಗಳು, ಸಂಬಂಧಸೂಚನೆಗಳು ಗದ್ಯದಲ್ಲಿರುವುದುಂಟು. ಕೃತಿ ಸಾಮಾನ್ಯವಾಗಿ ಆಶ್ವಾಸಗಳಾಗಿ ವಿಭಾಗವಾಗಿರುತ್ತದೆ. ಆಶ್ವಾಸ ಸಂಖ್ಯೆ 14 ಅಥವಾ 16 ಇರಬಹುದು. ಮುಂದೆ ಮುಂದೆ ಈ ಸಂಖ್ಯೆಯಲ್ಲಿ ಹೆಚ್ಚುಕಡಿಮೆಗಳಾಗಿವೆ. ಅವುಗಳ ಆದ್ಯಂತಗಳಲ್ಲಿ ಒಂದು ಗೊತ್ತಾದ ರೀತಿಯ ಪದ್ಯಬಂಧ ಮತ್ತು ಗದ್ಯಬಂಧಗಳಿರುತ್ತವೆ. ಕೃತಿಯ ಉಪಕ್ರಮದಲ್ಲಿ ಇಷ್ಟದೇವತಾಸ್ತುತಿ, ಕೃತಿಕರ್ತೃವಿನ, ಪೋಷಕನ ವಿಚಾರ ಇತ್ಯಾದಿ ಸಾಂಪ್ರದಾಯಿಕ ಸರಣಿಯ ವಿವರಗಳೂ ಉಪಸಂಹಾರದಲ್ಲಿ ಫಲಶ್ರುತಿಯೂ ಬರುತ್ತದೆ. ಛಂದಸ್ಸಿನ ದೃಷ್ಟಿಯಿಂದ, ಕಂದಪದ್ಯಗಳೂ ಅವಕ್ಕೆ ಸ್ವಲ್ಪ ಕಡಿಮೆಯಾಗಿ ಖ್ಯಾತ ಕರ್ಣಾಟಕಗಳೆಂದು ರೂಢಿಯಾಗಿರುವ ಆರು ವರ್ಣವೃತ್ತಗಳೂ ಹೆಚ್ಚು ಸಂಖ್ಯೆಯಲ್ಲಿರುತ್ತವೆ. ಇವಲ್ಲದೆ ವಿರಳವಾಗಿ ತರಳ, ಮಲ್ಲಿಕಾಮಾಲೆ ಮುಂತಾದ ಇನ್ನೂ ಕೆಲವು ವರ್ಣವೃತ್ತಗಳೂ ಪ್ರಾಕೃತ ಪ್ರಭಾವದ ರಗಳೆಯ ಪ್ರಭೇದಗಳೂ ದೇಶೀಯಗಳಾದ ಅಕ್ಕರ ತ್ರಿಪದಿ ಮುಂತಾದವೂ ಕೃತಿಯ ಮೈಯಲ್ಲಿ ಅಲ್ಲಲ್ಲಿ ಸೇರಿಕೊಂಡಿರುತ್ತವೆ. ಒಟ್ಟಿನಲ್ಲಿ ಕಂದವೃತ್ತಗಳೂ ವಿರಳವಾಗಿ ಇತರ ಪದ್ಯಜಾತಿಗಳೂ ನಡುನಡುವೆ ಗದ್ಯವೂ ಹಾಸುಹೊಕ್ಕಾಗಿ ಸೇರಿಕೊಂಡು ಕೃತಿಯ ರೂಪದಲ್ಲಿ ನಾದಗಳಲ್ಲಿ ವೈವಿಧ್ಯ ಸಾಧಿತವಾಗಿರುತ್ತದೆ. ಕೃತಿವಸ್ತು ಇವಗಳಲ್ಲಿ ಅನುಸ್ಯೂತವಾಗಿ ಹರಿದುಕೊಂಡು ಹೋಗುತ್ತದೆ. ಒಮ್ಮೊಮ್ಮೆ, ಒಂದೇ ಪದ್ಯದಲ್ಲಿ ಅಥವಾ ಗದ್ಯಭಾಗದಲ್ಲಿ ಮುಗಿಯದ ಒಂದು ಸಂಗತಿಯೋ ಭಾವವೋ ಮುಂದಿನ ಪದ್ಯಕ್ಕೋ ಗದ್ಯಕ್ಕೋ ಮುಂದುವರಿಯುವುದುಂಟು. ಕೃತಿಯ ಛಂದಸ್ಸಿನ ವೈವಿಧ್ಯ ಒಂದೇ ಬಗೆಯ ಛಂದಸ್ಸಿನ ಬಳಕೆಯಿಂದುಂಟಾಗುವ ಗತಾನುಗತಿಕತೆಯನ್ನೂ ನಿಷ್ಟುರ ನಿಯಮ ಬದ್ಧತೆಯನ್ನೂ ನಿವಾರಿಸಿರುವುದಲ್ಲದೆ, ಕವಿಗೆ ಹೆಚ್ಚಿನ ರಚನಸ್ವಾತಂತ್ರ್ಯವೂ ಸೌಲಭ್ಯವೂ ಇದರಿಂದ ದೊರೆಯುವಂತಾಗಿದೆ. ರಚನೆಯ ಸೌಕರ್ಯಕ್ಕೆ ಹಾಗೂ ರಸಭಾವಗಳ ವೈವಿಧ್ಯಕ್ಕೆ ತಕ್ಕಂತೆ ಹೀಗೆ ವಿವಿಧ ಪದ್ಯಜಾತಿಗಳನ್ನೂ ಗದ್ಯವನ್ನೂ ಬಳಸುವುದು ಕಾವ್ಯಪುಷ್ಟಿಗೆ ಅನುಕೂಲವೇ ಆಗಿದೆ.

ಕನ್ನಡದಲ್ಲಿ ಚಂಪೂ ಸಾಹಿತ್ಯ ಪದ್ಧತಿಗೆ ಮೊದಲು ಚತ್ತಾಣ ಮತ್ತು ಬೆದಂಡೆ ಎಂಬ ಪ್ರಕಾರದ ಕಾವ್ಯಗಳು ಪ್ರಸಿದ್ಧವಾಗಿದ್ದವೆಂದು ಕವಿರಾಜಮಾರ್ಗದ ಉಲ್ಲೇಖದಿಂದ ತಿಳಿಯುತ್ತದೆ. ಆ ಗ್ರಂಥದಲ್ಲಿ ಉಕ್ತರಾದ ಪದ್ಯಕವಿಗಳು ಕೆಲವರಾದರೂ ಅಂಥ ಕಾವ್ಯಗಳನ್ನು ರಚಿಸಿರಬೇಕೆಂದು ತಿಳಿಯುವುದಕ್ಕೆ ಅಲ್ಲಿಯೇ ಅವಕಾಶವಿದೆ. ಆ ಕಾವ್ಯ ಪ್ರಕಾರಗಳ

ಸ್ವರೂಪವನ್ನು ಅಲ್ಲಿ ವಿವರಿಸಿದೆ. ಆ ಲಕ್ಷಣಗ್ರಂಥ ಮುಖ್ಯವಾಗಿ ದಂಡಿಯ ಕಾವ್ಯಾದರ್ಶವನ್ನು ಅನುಸರಿಸಿಯೂ ಚಂಪೂವಿನ ಹೆಸರನ್ನೆತ್ತದಿರುವುದನ್ನು ಗಮನಿಸಿದರೆ, ಆತನಿಗೆ ಪೂರ್ವದಲ್ಲಿಯೂ ಆತನ ಕಾಲದಲ್ಲಿಯೂ ಈ ಚತ್ತಾಣ, ಬೆದಂಡೆಗಳ ರೂಪದಲ್ಲಿ ಕೃತಿರಚನೆ ನಡೆಯುತ್ತಿದ್ದಿರಬೇಕೆಂಬ ಭಾವನೆಯುಂಟಾಗುತ್ತದೆ. ಕವಿರಾಜಮಾರ್ಗದ ಕಾಲದಿಂದೀಚೆಗೆ ಚತ್ತಾಣದಲ್ಲಿ ನಡುನಡುವೆ ಗದ್ಯಭಾಗಗಳು ಕೂಡಿ ಚಂಪೂ ರೀತಿ ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡಿರಬಹುದು.

ಕನ್ನಡ ಚಂಪೂಸಾಹಿತ್ಯಕ್ಕೆ ಉಜ್ಜ್ವಲವೂ ಸುದೀರ್ಘವೂ ಆದ ಇತಿಹಾಸವಿದೆ. ಉಳಿದ ಕಾವ್ಯಪದ್ಧತಿಗಳಿಗಿಂತ ಅದು ಕವಿಜನರಿಗೆ ಹೆಚ್ಚು ಆದರಣೀಯವೂ ವಿದ್ವನ್ಮಾನ್ಯವೂ ಆಗಿದ್ದುದು ಅದರಿಂದ ತಿಳಿಯುತ್ತದೆ. ಚಂಪೂಸಾಹಿತ್ಯ ಕನ್ನಡದಲ್ಲಿ ಎಂದಿನಿಂದ ರಚನೆಯಾಗುತ್ತ ಬಂದಿದೆ. ಆರಂಭಕಾಲದ ಚಂಪೂಕೃತಿಗಳು ಯಾವುವು ಎಂಬ ವಿಷಯಗಳು ನಮಗೆ ತಿಳಿದಿಲ್ಲ. ದೊರೆತವುಗಳಲ್ಲಿ ಪಂಪಕವಿಯ (ಸು.941) ಆದಿಪುರಾಣ ಮತ್ತು ವಿಕ್ರಮಾರ್ಜುನವಿಜಯಗಳೇ ಅತ್ಯಂತ ಪ್ರಾಚೀನವಾದವು. ಅವುಗಳ ಚೌಕಟ್ಟನ್ನು ಪರಿಶೀಲಿಸಿದರೆ ಅವು ಆ ಪದ್ಧತಿಯ ಪರಿಣತರಚನೆಗಳೇ ಆಗಿರುವಂತೆ ತೋರುತ್ತವೆ. ಶ್ರೇಷ್ಠ ಕವಿಯಾದ ಪಂಪ ಚಂಪೂ ರೀತಿಯನ್ನು ಕೌಶಲದಿಂದಲೂ ಸಾಮರ್ಥ್ಯದಿಂದಲೂ ನಿರ್ವಹಿಸಿದ್ದಾನೆ. ಆ ಪದ್ಧತಿ ಆತನಿಗೆ ಸ್ವಲ್ಪ ಹಿಂದಿನಿಂದಲೂ ಬೆಳೆದುಕೊಂಡು ಬಂದಿದ್ದು ಆ ಸಿದ್ಧರೂಪಕ್ಕೆ ಬಂದಿರುವುದು ಸಾಧ್ಯ. ಪಂಪ ಪೂರ್ವಕಾಲದ ಕವಿ ಒಂದನೆಯ ಗುಣವರ್ಮ (ಸು.900) ಬರೆದಿದ್ದಂತೆ ತಿಳಿದಿರುವ ಎರಡೂ ಕೃತಿಗಳಲ್ಲಿ ಶೂದ್ರಕ ಎಂಬುದು ಒಂದು ಚಂಪೂ ಕಾವ್ಯವಾಗಿರಬೇಕು. ಆ ಕಾವ್ಯದ ಕೆಲವು ಪದ್ಯಗಳ ಜೊತೆಗೆ ಒಂದು ಗದ್ಯಭಾಗವೂ ಅಭಿನವವಾದಿ ವಿದ್ಯಾನಂದನ ಕಾವ್ಯಸಾರದಲ್ಲಿ ದೊರೆಯುತ್ತಿರುವುದು ಅದಕ್ಕೆ ಸಾಕ್ಷಿ. ಪಂಪ, ರನ್ನ ಮೊದಲಾದ ಜೈನಕವಿಗಳ ಉತ್ತರಕಾಲೀನ ಕಾವ್ಯಸಂಪ್ರದಾಯವನ್ನು ಗಮನಿಸಿ, ಗುಣವರ್ಮನ ಲೌಕಿಕ ಕಾವ್ಯ ಚಂಪೂ ಆಗಿದ್ದಂತೆ, ಆತನ ಧಾರ್ಮಿಕ ಕಾವ್ಯ ಹರಿವಂಶ ಕೂಡ ಚಂಪೂ ಆಗಿದ್ದಿರಬೆಕು ಎಂದು ತಿಳಿದರೆ ತಪ್ಪಾಗಲಾರದು. ಈಚೆಗೆ 3ನೆಯ ಮಂಗರಸ (ಸು.1508) ತನ್ನ ನೇಮಿಜಿನೇಶಸಂಗತಿಯಲ್ಲಿ ಶ್ರೀವಿಜಯನೆಂಬ ಕವಿ ಚಂದ್ರಪ್ರಭಪುರಾಣವನ್ನು ಚಂಪೂರೂಪವಾಗಿ ರಚಿಸಿದ್ದಂತೆ ಹೇಳಿದ್ದಾನೆ. ಈ ಸಂಗತಿಯನ್ನು ಗಮನಿಸಿ ಕವಿರಾಜಮಾರ್ಗದಲ್ಲಿ ಉಲ್ಲೇಖವಾಗಿರುವ ಪ್ರಾಚೀನ ಪದ್ಯಕವಿಗಳಲ್ಲಿ ಒಬ್ಬನಾದ ಶ್ರೀವಿಜಯನೇ (ಸು.850) ಆ ಪುರಾಣಕರ್ತೃ ಎಂಬುದಾಗಿ ಕೆಲವರು ಭಾವಿಸಿದ್ದಾರೆ. ಇದು ನಿಜವಾದರೆ ಕನ್ನಡ ಚಂಪೂಸಾಹಿತ್ಯದ ಇತಿಹಾಸವನ್ನು 9ನೆಯ ಶತಮಾನದ ಪೂರ್ವ ಅಥವಾ ಮಧ್ಯ ಭಾಗದಿಂದಲೇ ಮೊದಲು ಮಾಡಲು ಸಾಧ್ಯವಾಗುತ್ತದೆ. ಆದರೆ ಕವಿರಾಜಮಾರ್ಗದಲ್ಲಿ ಉಕ್ತನಾಗಿರುವ ಶ್ರೀವಿಜಯನೇ ಚಂದ್ರಪ್ರಭಪುರಾಣಕರ್ತೃ ಎನ್ನುವುದಕ್ಕೆ ಪ್ರಬಲವಾದ ಆಧಾರಗಳಿಲ್ಲ. ಕವಿರಾಜಮಾರ್ಗದಲ್ಲಿ ಉಕ್ತರಾದ ಇತರ ಕವಿಗಳ ಕೃತಿವಿಚಾರ ನಮಗೆ ಸರಿಯಾಗಿ ಏನೂ ತಿಳಿಯದು. ಇನ್ನು ಅಸಗ ಕವಿ (ಸು.853) ಕನ್ನಡದಲ್ಲಿ ಕರ್ನಾಟ ಕುಮಾರಸಂಭವ ಕಾವ್ಯವನ್ನು ರಚಿಸಿದ್ದಂತೆ ನಿಶ್ಚಯವಾಗಿ ತಿಳಿದಿದೆಯಾದರೂ ಅದು ಯಾವ ರೂಪದಲ್ಲಿತ್ತು ಎಂಬುದನ್ನು ತಿಳಿಯಲು ನಮಗೆ ಆ ಗ್ರಂಥ ದೊರೆತಿಲ್ಲ. ಚಂಪೂ ಆಗಿದ್ದಿರುವುದು ಅಸಂಭವವೇನಲ್ಲ.

ಅಂತೂ ಕನ್ನಡದಲ್ಲಿ ಚಂಪೂವಿನ ಇತಿಹಾಸ ಈಗ ತಿಳಿದಮಟ್ಟಿಗೆ, ಒಂದನೆಯ ಗುಣವರ್ಮನಿಂದ (ಸು.900) ಆರಂಭವಾದಂತೆ ಇಟ್ಟುಕೊಳ್ಳುವುದು ಸೂಕ್ತ. (ಸು.10)ನೆಯ ಶತಮಾನದಿಂದ 12ನೆಯ ಶತಮಾನದ ಮಧ್ಯಭಾಗದ ವರೆಗೆ ಕನ್ನಡದಲ್ಲಿ ಚಂಪೂಸಾಹಿತ್ಯ ವಿಶೇಷವಾಗಿ ರಚನೆಯಾಗಿದೆ. ಈ ಕಾಲವನ್ನು ಚಂಪೂಯುಗ ಎನ್ನುವುದುಂಟು. 10ನೆಯ ಶತಮಾನವಂತೂ ಆ ಕಾಲದ ಉತ್ಕೃಷ್ಟ ಚಂಪೂಕಾವ್ಯಗಳ ರಚನೆಯಿಂದಾಗಿ ಕನ್ನಡ ಸಾಹಿತ್ಯದ ಸ್ವರ್ಣಯುಗವೆಂದು ಖ್ಯಾತವಾಗಿದೆ. ಈ ಅವಧಿಯ (10-12ಶ). ಚಂಪೂ ಸಾಹಿತ್ಯದ ಒಂದು ಸಾಮಾನ್ಯ ಸಮೀಕ್ಷೆಯನ್ನು ಈಗ ನೋಡಬಹುದು.

ಚಂಪೂ ಸಾಹಿತ್ಯಕ್ಕೆ ಭದ್ರವಾದ ನೆಲೆಗಟ್ಟು ಹಾಕಿದವ ಪಂಪಕವಿ. ಆತನ ಎರಡೂ ಕೃತಿಗಳು ಆದಿಪುರಾಣ ಮತ್ತು ವಿಕ್ರಮಾರ್ಜುನವಿಜಯ. ಅವುಗಳಲ್ಲಿ ಚಂಪೂಮಾರ್ಗದ ಸಿದ್ಧರೂಪ ಕಣ್ಣಿಗೆ ಕಟ್ಟಿ ನಿಲ್ಲುತ್ತದೆ. ಅದರ ಗಾಂಭೀರ್ಯ, ಸೊಗಸು ಸೌಲಭ್ಯಗಳು ಮನವರಿಕೆಯಾಗುತ್ತವೆ. ವಸ್ತು ಮತ್ತು ರೀತಿ ಎರಡು ದೃಷ್ಟಿಗಳಿಂದಲೂ ಆತನ ಚಂಪೂಕಾವ್ಯಗಳು ಉತ್ತರಕಾಲೀನ ಚಂಪೂ ಕವಿಗಳಿಗೆ ಅನುಕರಣೀಯುವಾದ ಆದರ್ಶವಾಗಿಯೂ ಮಾದರಿಯಾಗಿಯೂ ಪರಿಣಮಿಸಿದುವು. ಪಂಪನನ್ನು ಗೌರವದಿಂದ ನೆನೆಯುವ, ಆತನ ವಸ್ತುವನ್ನೂ ಭಾವವನ್ನೂ ಉಕ್ತಿಯನ್ನೂ ನಿರೂಪಣ ವಿಧಾನವನ್ನೂ ಕೊಳ್ಳುವ, ಕವಿಗಳ ಚರ್ಯೆಯನ್ನು ಪರಿಶೀಲಿಸಿರೆ ಈ ವಿಷಯ ಚೆನ್ನಾಗಿ ಮನದಟ್ಟಾಗುತ್ತದೆ. ಮುಂದಿನ ಕವಿಗಳು ಅನುಸರಿಸುವ ಚಂಪೂವಿನ ಚೌಕಟ್ಟು ಒಟ್ಟಿನಲ್ಲಿ ಪಂಪನ ಚಂಪೂವಿನ ಚೌಕಟ್ಟನ್ನೇ ಹೋಲುತ್ತದೆ. ಕವಿಯ ದೃಷ್ಟಿವಿಶೇಷಕ್ಕೆ ಅನುಸಾರವಾಗಿ, ಕಾಲಧರ್ಮಕ್ಕೆ ಅನುಸಾರವಾಗಿ ಆಗಾಗ ಕೆಲವು ವೈಲಕ್ಷಣ್ಯಗಳು ಹೊಸದಾಗಿ ತೋರಿರುವುದೂ ಉಂಟು.

ಪಂಪನ ಆದಿಪುರಾಣ ಆದಿತೀರ್ಥಂಕರನ ಚರಿತೆ, ವಿಕ್ರಮಾರ್ಜುನವಿಜಯ (ಪಂಪಭಾರತ) ಮಹಾಭಾರತದ ಕಥೆಯನ್ನು ಒಳಗೊಂಡದ್ದು, ಪೊನ್ನನ (ಸು.950) ಶಾಂತಿಪುರಾಣ 16ನೆಯ ತೀರ್ಥಂಕರನಾದ ಶಾಂತಿನಾಥನ ಚರಿತೆ. ಆತನ ಅನುಪಲಬ್ಧವಾದ ಭುವನೈಕರಾಮಾಭ್ಯುದಯ ಪ್ರಾಯಃ ರಾಮಾಯಣ ಕಥಾವಸ್ತುವನ್ನುಳ್ಳ ಚಂಪೂ. 1ನೆಯ ನಾಗವರ್ಮನ (ಸು.990) ಕರ್ನಾಟಕ ಕಾದಂಬರಿ ಕಲ್ಪಿತ ಕಥಾವಸ್ತುವನ್ನುಳ್ಳ ಬಾಣನ ಕಾದಂಬರಿಯ ಚಂಪೂ ರೂಪ. ರನ್ನನ (ಸು.993) ಅಜಿತಪುರಾಣ 2ನೆಯ ತೀರ್ಥಂಕರನಾದ ಅಜಿತನಾಥನ ಚರಿತೆ, ಸಾಹಸಭೀಮ ವಿಜಯ (ಗದಾಯುದ್ಧ) ಗದಾಸೌಪ್ತಿಕ ಪರ್ವಗಳ ಭಾರತದ ಕಥೆ, ಪಂಪಭಾರತದಿಂದ (13-14ನೆಯ ಆಶ್ವಾಸ) ಪ್ರಭಾವಿತವಾದದ್ದು. ದುರ್ಗಸಿಂಹನ (ಸು.1031) ಪಂಚತಂತ್ರ ವಸುಭಾಗಭಟ್ಟನ ಪಂಚತಂತ್ರವನ್ನು ಅನುಸರಿಸಿದ ನೀತಿಕಾವ್ಯ. ಶ್ರೀಧರಾಚಾರ್ಯನ (ಸು.1049) ಅನುಪಲಬ್ಧವಾದ ಚಂದ್ರಪ್ರಭಚರಿತೆ 8ನೆಯ ತೀರ್ಥಂಕರ ಚಂದ್ರಪ್ರಭನ ಚರಿತೆಯನ್ನೊಳಗೊಂಡ ಚಂಪುವಾಗಿರಬೇಕು. ಶಾಂತಿನಾಥನ (ಸು.1088) ಸುಕುಮಾರ ಚರಿತೆ ಜೈನ ಮಹಾಪುರುಷರಲ್ಲಿ ಉಪಸರ್ಗ ಕೇವಲಿಯೊಬ್ಬನ ಚರಿತೆ. ನಯಸೇನನ (ಸು.1112) ಧರ್ಮಾಮೃತ ಕಥಾರೂಪವಾಗಿ ಜೈನತತ್ತ್ವಗಳನ್ನು ಪ್ರತಿಪಾದಿಸಿರುವ ಕೃತಿ. ನಾಗಚಂದ್ರನ (ಸು.1140) ಮಲ್ಲಿನಾಥಪುರಾಣ 19ನೆಯ ತೀರ್ಥಂಕರನಾದ ಮಲ್ಲಿನಾಥನ ಚರಿತೆ ರಾಮಚಂದ್ರಚರಿತಪುರಾಣ (ಪಂಪರಾಮಾಯಣ) ವಿಮಲಸೂರಿ ರವಿಷೇಣರ ಸಂಪ್ರದಾಯದ ಜೈನರಾಮಾಯಣ. ಕರ್ಣಪಾರ್ಯನ (ಸು.1160-70) ನೇಮಿನಾಥಪುರಾಣ 22ನೆಯ ತೀರ್ಥಂಕರನಾದ ನೇಮಿನಾಥನ ಚರಿತೆ. ನೇಮಿಚಂದ್ರನ (ಸು.1180) ನೇಮಿನಾಥಪುರಾಣ (ಅರ್ಧನೇಮಿಪುರಾಣ) ಅದೇ ವಸ್ತುವನ್ನುಳ್ಳದ್ದು. ಆತನ ಲೀಲಾವತಿ ಕಲ್ಪಿತ ಕಥಾಕಾವ್ಯ. ರುದ್ರಭಟ್ಟನ (ಸು.1185) ಜಗನ್ನಾಥವಿಜಯ ಮುಖ್ಯವಾಗಿ ವಿಷ್ಣುಪುರಾಣದ ಆಧಾರದ ಮೇಲೆ ರಚಿತವಾಗಿರುವ ಕೃಷ್ಣಕಥೆ. ಅಗ್ಗಳನ (ಸು.1189) ಚಂದ್ರಪ್ರಭಪುರಾಣ ಆ ತೀರ್ಥಂಕರನ ಕಥೆ. ಆಚಣ್ಣನ (ಸು.1189-1205) ವರ್ಧಮಾನಪುರಾಣ 24ನೆಯ ತೀರ್ಥಂಕರನಾದ ವರ್ಧಮಾನನ ಚರಿತೆ.

ಈ ಅವಧಿಯಲ್ಲಿ ಇನ್ನೂ ಕೆಲವು ಚಂಪೂಕೃತಿಗಳು ರಚಿತವಾಗಿರುವ ಹಾಗೆ ತೋರುತ್ತದೆ. ಆದರೆ ಇವು ಯಾವುವೂ ಈವರೆಗೆ ನಮಗೆ ದೊರೆತಿಲ್ಲ. ವಿವರಗಳೂ ಸರಿಯಾಗಿ ತಿಳಿದಿಲ್ಲ. ಹೀಗೆ 10 ರಿಂದ 12ನೆಯ ಶತಮಾನದ ವರೆಗೆ, ವೀರಶೈವ ವಚನಕಾರರೂ ಕವಿಗಳೂ ಕಾಣಿಸಕೊಂಡು ವಚನಗಳನ್ನೂ ರಗಳೆ ಷಟ್ಪದಿ ಮೊದಲಾದ ಛಂದಸ್ಸುಗಳಲ್ಲಿ ಕಾವ್ಯಗಳನ್ನೂ ರಚಿಸಲು ಆರಂಭಿಸುವವರೆಗೆ ಚಂಪೂ ಸಾಹಿತ್ಯರಚನೆ ಉತ್ಕರ್ಷದಲ್ಲಿತ್ತು. ಈ ಕಾಲದ ಚಂಪೂವಿನ ಕೆಲವು ವೈಲಕ್ಷಣ್ಯಗಳನ್ನು ಈಗ ನೋಡಬಹುದು.

ಕನ್ನಡ ಸಾಹಿತ್ಯದಲ್ಲಿ ಚಂಪೂವಿನ ಪ್ರಥಮ ಪುರಸ್ಕರ್ತರು ಜೈನಕವಿಗಳು. ಅವರಲ್ಲಿ ಆದ್ಯರೂ ಅನಂತರದವರೂ ಸಂಸ್ಕೃತ (ಮತ್ತು ಪ್ರಾಕೃತ) ಭಾಷೆಯಲ್ಲಿ ರಚಿತವಾಗಿರುತ್ತಿದ್ದ ಪೂರ್ವಾಚಾರ್ಯರ ಪದ್ಯರೂಪದ ಜೈನ ಮಹಾಪುರಾಣ, ಹರಿವಂಶಪುರಾಣ ಮೊದಲಾದವನ್ನು ಅಥವಾ ಅವುಗಳ ಭಾಗಗಳನ್ನು ಯಥೋಚಿತವಾಗಿ ಸಂಗ್ರಹಿಸಿ ಅಥವಾ ವಿಸ್ತರಿಸಿ ಚಂಪೂರೂಪದಲ್ಲಿ ತಮ್ಮ ಜೈನ ಪುರಾಣಗಳನ್ನು ರಚಿಸಿದರು. ಹಾಗೆಯೇ ಅವರು ರಚಿಸಿದ ಲೌಕಿಕ ಕಾವ್ಯಗಳು ಕೂಡ ಪದ್ಯರೂಪದ ಸಂಸ್ಕೃತ (ಮತ್ತು ಪ್ರಾಕೃತ) ಭಾರತ ರಾಮಾಯಣಗಳ ಚಂಪೂ ರೂಪಗಳಾಗಿದ್ದೂ ಅವುಗಳಲ್ಲಿಯೇ ಸಂಸ್ಕೃತ ನಾಟಕಗಳ ಹಾಗೂ ಕಾವ್ಯಸಾಹಿತ್ಯದ ವಸ್ತು ಶೈಲಿಗಳೂ ಅಳವಟ್ಟಿರುವುದು ಕಂಡುಬರುತ್ತದೆ. ಕಾಳಿದಾಸಾದ್ಯರ ಸಂಸ್ಕೃತ ಮಹಾಕಾವ್ಯಗಳ ಸಾಂಪ್ರದಾಯಿಕ ಲಕ್ಷಣಗಳು, ವರ್ಣನೆಗಳು, ಅಲಂಕಾರ, ನಿರೂಪಣೆ, ವಿಧಾನ, ಕಥಾಂಶ, ನಾಯಕವ್ಯಕ್ತಿ ಇತ್ಯಾದಿ ಆ ಕಾವ್ಯಗಳಲ್ಲಿ ಗರ್ಭೀಕೃತವಾಗಿದೆ. ತೀರ್ಥಂಕರ ಚರಿತೆಗಳಲ್ಲಿ ಆಯಾ ತೀರ್ಥಂಕರನ ಮತ್ತು

ಸಹಚರ ಜೀವರ ಪೂರ್ವಭವಾವಳಿಗಳು ಮತ್ತು ಪಂಚಕಲ್ಯಾಣದ ವಿವರಗಳು ಬರುತ್ತವೆ. ಲೌಕಿಕ ಕಾವ್ಯಗಳಲ್ಲಿ ಪೌರಾಣಿಕ ಮತ್ತು ತತ್ಕಾಲಿನ ಚಾರಿತ್ರಿಕ ವ್ಯಕ್ತಿಗಳ ಸಮೀಕರಣ ಮೂಲಕವಾದ ವಸ್ತುಕಥನವಿರುತ್ತದೆ. ಇನ್ನು ಕಲ್ಪಿತಕಥಾವಸ್ತುವಿನ ಸಂಸ್ಕೃತ ಗದ್ಯಕಾವ್ಯಗಳನ್ನು ಕನ್ನಡಕ್ಕೆ ತಂದುಕೊಳ್ಳುವಾಗ, ಚಂಪೂ ಪದ್ಧತಿಗೆ ಅಳವಡಿಸಿಕೊಂಡು ನಿರೂಪಿಸುವ ಸಂಪ್ರದಾಯವನ್ನು ಮೊದಲು ಹೂಡಿದ ಕವಿ ನಾಗವರ್ಮ I. ಆತ ತನ್ನ ಕೃತಿ ಕರ್ನಾಟಕ ಕಾದಂಬರಿಯಲ್ಲಿ, ಕಲ್ಪಿತಕಥೆಯನ್ನು ಕಾವ್ಯವಸ್ತುವನ್ನಾಗಿ ಮಾಡಿಕೊಂಡದ್ದು ಹಾಗೂ ಗದ್ಯರೂಪದ ಕೃತಿಯನ್ನು ಚಂಪೂರೂಪಕ್ಕೆ ತಿರುಗಿಸಿದ್ದು ಒಂದು ವೈಶಿಷ್ಟಪೂರ್ಣವಾದ ಸಾಹಸ. ಈ ಪರಂಪರೆ ಮುಂದೆ ನೇಮಿಚಂದ್ರ, ದೇವಕವಿ ಮತ್ತು ಚೌಂಡರಸರ ಕೈಯಲ್ಲಿ ಮುಂದುವರಿಯಿತು. ಮೂಲ ಶುದ್ಧವಾಗಿ ಪದ್ಯದಲ್ಲಿರಲಿ ಅಥವಾ ಗದ್ಯದಲ್ಲಿರಲಿ, ಅದನ್ನು ಚಂಪೂವಿಗೆ ತಿರುಗಿಸುವ ಈ ಪ್ರಯತ್ನ ಕನ್ನಡ ಸಾಹಿತ್ಯದಲ್ಲಿ ಚಂಪೂವಿನ ಪ್ರಾಬಲ್ಯವನ್ನೂ ಕನ್ನಡ ಕವಿಗಳ ಒಲವು, ಸಂಪ್ರದಾಯ ಶ್ರದ್ಧೆಗಳನ್ನೂ ಎತ್ತಿ ತೋರಿಸುತ್ತದೆ.

ಒಂದನೆಯ ನಾಗವರ್ಮನ ಕರ್ನಾಟಕ ಕಾದಂಬರಿ ಅಖಂಡವಾದ ಕಥಾಸೂತ್ರವುಳ್ಳ ಚಂಪೂವಾದರೆ, ದುರ್ಗಸಿಂಹನ ಪಂಚತಂತ್ರ ಹಲವು ಕಥೆಗಳ ಚಂಪೂ. ದೇಸಿ, ಮಾರ್ಗಗಳೆರಡರಲ್ಲಿಯೂ ನಡೆಯುವ ಗದ್ಯಪದ್ಯಗಳು, ದೀರ್ಘತರ ಸಮಾಸ ರಚನೆ, ಶಬ್ದಾಲಂಕಾರಪ್ರಿಯತೆ ಈತನ ಪ್ರೌಢಶೈಲಿಯ ಚಂಪೂವಿನ ವೈಶಿಷ್ಟಗಳು. ಕಥಾಸಂಬಂಧಿಯಾದ ಚಂಪೂಗದ್ಯದ ಸ್ವರೂಪ ಹೇಗಿರಬಹುದೆಂದು ತಿಳಿಯುವುದಕ್ಕೆ ಇಲ್ಲಿ ಅವಕಾಶವಿದೆ. ಹಲವು ಕಥೆಗಳ ಚಂಪೂವಿನ ಈ ಪದ್ಧತಿ ಮುಂದೆ ನಯಸೇನ ಮೊದಲಾದವರ ಕೈಯಲ್ಲಿ ಪ್ರಬಲಿಸಿತು. ಶಾಂತಿನಾಥನ ಸುಕುಮಾರಚರಿತ ಪದ್ಧತಿಯಂತೆ ತೀರ್ಥಂಕರ ಚರಿತೆಯಾಗಿರದೆ ಉಪಸರ್ಗ ಕೇವಲಿಯೊಬ್ಬನ ಕಥೆಯಾಗಿರುವುದು ವಸ್ತುವಿನ ದೃಷ್ಟಿಯಿಂದ ಒಂದು ವಿಶೇಷ. ಆತನ ಚಂಪೂವಿನ ಚೌಕಟ್ಟಿನಲ್ಲಿ ರಗಳೆ ಮತ್ತು ದೇಸಿ ಛಂದಸ್ಸಿನ ಪ್ರಭೇದಗಳನ್ನು ಮನಸೆಳೆಯುವಂತೆ ಬಳಸಿದೆ.

ಈವರೆಗೆ ಬೆಳೆದು ಬಂದ ಪ್ರೌಢ ಚಂಪೂ ಮಾರ್ಗ ನಯಸೇನನ ಕಾಲದಲ್ಲಿ, ಆತ ದೇಸಿಗೆ ಕೊಟ್ಟ ಮಹತ್ವದಿಂದ ಸುಧಾರಣೆಗೊಂಡು ಸರಳವಾದ ರೂಪರೇಷೆಗಳನ್ನು ಪಡೆದುಕೊಂಡಿತು. ಸ್ವಲ್ಪಮಟ್ಟಿಗೆ ದುರ್ಗಸಿಂಹನ ಕೃತಿಯಲ್ಲಿಯೇ ಇದನ್ನು ಗುರುತಿಸಬಹುದು. ಚಂಪೂವಿನ ವಸ್ತು, ಭಾಷೆ ಮತ್ತು ಶೈಲಿ ಜನಸಾಮಾನ್ಯನ ಹೃದಯಕ್ಕೆ ಮೆಚ್ಚಾಗುವಂತೆ ಆಕರ್ಷಕವೂ ಅರ್ಥಯುಕ್ತವೂ ಆಯಿತು. ವ್ಯಾಪಕವಾದ ಜನಜೀವನದ ಸಂಸ್ಕೃತಿಯನ್ನೂ ಭಾಷೆಯನ್ನೂ ಹೃದಯಂಗಮವಾಗಿ ಪ್ರತಿಬಿಂಬಿಸಿರುವ ಈ ಚಂಪೂ ಕೃತಿಯ ಶೈಲಿ ವಿಶಿಷ್ಟವಾದುದು. ನಾಗಚಂದ್ರನ ಚಂಪೂಕೃತಿಗಳ ಮುಖ್ಯ ಲಕ್ಷಣಗಳು ಎಂದರೆ ಸಾಂಪ್ರದಾಯಿಕ ವರ್ಣನೆಗಳ ಪ್ರಾಚುರ್ಯ ಮತ್ತು ಶೈಲಿಯ ಸೌಕುಮಾರ್ಯ. ಇದಕ್ಕೆ ಪ್ರತಿಯಾಗಿ ಎನ್ನುವಂತೆ ಕರ್ಣಪಾರ್ಯನ ಕೃತಿ ಅದರ ವಿಶಾಲವಾದ ಕಥಾಭಿತ್ತಿಯಿಂದಾಗಿ ಸಾಂಪ್ರದಾಯಿಕ ವರ್ಣನೆಗಳ ಗೋಜು ಗೊಂದಲವಿಲ್ಲದೆ ರಚಿತವಾಗಿರುವ ಒಂದು ಸರಳಶೈಲಿಯ ಚಂಪೂಕಾವ್ಯ. ನೇಮಿಚಂದ್ರನ ಕೃತಿಗಳು ಕಥೆಗಿಂತ ವರ್ಣನೆಗಳಿಗೆ, ಚಮತ್ಕಾರಕವಾದ ಕಲ್ಪನೆಯ ಚಿತ್ರಗಳಿಗೆ, ಅಲಂಕಾರವೈಖರಿಗೆ ಗಮನ ಕೊಟ್ಟಿರತಕ್ಕವು. ರುದ್ರಭಟ್ಟನಲ್ಲಿಯೂ ಈ ಗುಣಗಳನ್ನು ಕಾಣಬಹುದು. ಆಚಣ್ಣ ತನ್ನ ಕೃತಿ ವರ್ಧಮಾನಪುರಾಣದಲ್ಲಿ ಚಂಪೂವಿನ ಸಾಂಪ್ರದಾಯಿಕ ಲಕ್ಷಣಗಳೊಡನೆ ಚಿತ್ರಕವಿತ್ವದ ವೈಲಕ್ಷಣ್ಯಗಳನ್ನೂ ಜೊತೆಗೂಡಿಸಿದ್ದಾನೆ.

12ನೆಯ ಶತಮಾನದ ಉತ್ತರಾರ್ಧದಲ್ಲಿ ಕನ್ನಡ ಸಾಹಿತ್ಯ ಹೊಸ ತಿರುವನ್ನು ಪಡೆದುಕೊಂಡಿತು. ಈ ಅವಧಿಯಲ್ಲಿ ಕನ್ನಡ ಸಾಹಿತ್ಯ ಹೆಚ್ಚು ಹೆಚ್ಚು ಜನಸಮ್ಮುಖವಾಗತೊಡಗಿತು. ವಚನ ಸಾಹಿತ್ಯದ ಕಾಲದಿಂದೀಚೆಗೆ ದೇಶಿಛಂದಸ್ಸುಗಳು ಹರುಪುಗೊಂಡು ಕಾವ್ಯವಾಹಕಗಳಾದವು. ಅವುಗಳಿಗೆ ಜೊತೆಜೊತೆಯಾಗಿ ಚಂಪೂ ಪದ್ಧತಿ ಮುನ್ನಡೆಯಿತಲ್ಲದೆ ಕ್ಷೀಣಿಸಲಿಲ್ಲ. ವಸ್ತು ಮತ್ತು ಶೈಲಿಯಲ್ಲಿ ಕಾಲಧರ್ಮಕ್ಕೆ ಅನುಸಾರವಾಗಿ ಸರಳತೆ ತಲೆದೋರಿತು. ಆದರೆ ಸಂಪ್ರದಾಯ ಶ್ರದ್ಧೆಯಿಂದ ಹುಟ್ಟಿದ ಪ್ರೌಢ ಚಂಪೂವಿನ ರಚನೆಯೇನೂ ನಿಲ್ಲಲಿಲ್ಲ. ನಯಸೇನನ ಮಾರ್ಗಕ್ಕಿಂತ ನೇಮಿಚಂದ್ರ, ರುದ್ರಭಟ್ಟರ ಮಾರ್ಗವೇ ಚಂಪೂ ಕವಿಗಳಿಗೆ ಹೆಚ್ಚು ಮೆಚ್ಚಾಯಿತು. 12ರಿಂದ 15ನೆಯ ಶತಮಾನದವರೆಗಿನ ಚಂಪೂ ಸಾಹಿತ್ಯ ಅದರ ಇತಿಹಾಸದಲ್ಲಿ ಎರಡನೆಯ ಘಟ್ಟ. ಈ ಅವಧಿಯ ಕೃತಿಗಳ ಒಂದು ಸಾಮಾನ್ಯ ಸಮೀಕ್ಷೆಯನ್ನು ಈಗ ನೋಡಬಹುದು.

ಬಂಧುವರ್ಮನ (ಸು.1200) ಹರಿವಂಶಾಭ್ಯುದಯ ಮುಖ್ಯವಾಗಿ ನೇಮಿನಾಥ' ಚರಿತ್ರೆ. ಆತನ ಜೀವಸಂಬೋಧನೆ ಜೈನಮತದ ದ್ವಾದಶಾನುಪ್ರೇಕ್ಷೆಗಳನ್ನು ಕಥಾರೂಪವಾಗಿ ಪ್ರತಿಪಾದಿಸುವ ಕೃತಿ. ದೇವಕವಿಯ (ಸು.1200) ಕುಸುಮಾವಳಿ ಒಂದು ಕಲ್ಪಿತಕಥಾಕಾವ್ಯ. ಹರಿಹರನ ಗಿರಿಜಾಕಲ್ಯಾಣ (ಸು.1200) ಶಿವಪಾರ್ವತಿಯರ ವಿವಾಹವನ್ನು ಕುರಿತದ್ದು. ಪಾರ್ಶ್ವಪಂಡಿತನ ಪಾರ್ಶ್ವನಾಥಪುರಾಣ (ಸು.1222) 23ನೆಯ ತೀರ್ಥಂಕರನಾದ ಪಾರ್ಶ್ವನಾಥನ ಚರಿತ್ರೆಯನ್ನು ಒಳಗೊಂಡದ್ದು. ಸೋಮರಾಜನ ಉದ್ಭಟಕಾವ್ಯ (ಸು.1222) ಉದ್ಭಟದೇವನೆಂಬ ಶಿವಭಕ್ತನ ಕಥೆ. ಜನ್ನನ ಅನಂತನಾಥಪುರಾಣ (ಸು.1230) 14ನೆಯ ತೀರ್ಥಂಕರನಾದ ಅನಂತನಾಥನ ಚರಿತೆ. ಕಮಲಭವನ ಶಾಂತೀಶ್ವರ ಪುರಾಣ (ಸು.1235) 16ನೆಯ ತೀರ್ಥಂಕರನಾದ ಶಾಂತಿನಾಥನ ಚರಿತೆ. ಆಂಡಯ್ಯನ ಕಬ್ಬಿಗರ ಕಾವ (ಸು.1235) ವೈದಿಕ ಕಥಾಮೂಲದ ಶಿವಮನ್ಮಥರ ವಿರಸವೃತ್ತಾಂತ. 2ನೆಯ ಗುಣವರ್ಮನ (ಸು.1255) ಪುಷ್ಪದಂತ ಪುರಾಣ 9ನೆಯ ತೀರ್ಥಂಕರನಾದ ಪುಷ್ಪದಂತನ ಚರಿತೆ. ಮಹಾಬಲನ ನೇಮಿನಾಥ ಪುರಾಣ (ಸು.1254) ನೇಮಿತೀರ್ಥಂಕರನ ಚರಿತೆ. ಚೌಂಡರಸನ (ಸು.1300) ಅಭಿನವ ದಶಕುಮಾರ ಚರಿತೆ ಕಲ್ಪಿತ ಕಾಥಾಕಾವ್ಯ. ನಾಗರಾಜನ ಪುಣ್ಯಾಸ್ರವ ಚಂಪೂ (ಸು.1331) ಜೈನ ತತ್ತ್ವಗಳನ್ನು ಕಥಾರೂಪದಲ್ಲಿ ಪ್ರತಿಪಾದಿಸುವ ಕೃತಿ. ವೃತ್ತವಿಲಾಸನ (ಸು.1350) ಧರ್ಮಪರೀಕ್ಷೆ ಜೈನಮತೋತ್ಕರ್ಷವನ್ನು ಕಥಾರೂಪದಲ್ಲಿ ನಿರೂಪಿಸುವ ಕೃತಿ. ಬಾಹುಬಲಿ ಪಂಡಿತನ ಧರ್ಮನಾಥ ಪುರಾಣ (ಸು.1352) ಮತ್ತು ಮಧುರನ (ಸು.1400) ಧರ್ಮನಾಥ ಪುರಾಣ 15ನೆಯ ತೀರ್ಥಂಕರನಾದ ಧರ್ಮನಾಥನ ಚರಿತೆಗಳಾಗಿವೆ. ಆಯತವರ್ಮನ (ಸು.1400) ಕನ್ನಡ ರತ್ನಕರಂಡಕ ಜೈನಮತದ ರತ್ನತ್ರಯಗಳನ್ನು ಕುರಿತ ಕೃತಿ. ಕವಿಮಲ್ಲನೆಂಬುವನ (ಸು.1400) ಮನ್ಮಥವಿಜಯವೆಂಬ ಕೃತಿ ಪ್ರಾಯಃ ಶೃಂಗಾರಪ್ರತಿಪಾದಕವಾದುದು.

ಈ ಕಾಲದ ಚಂಪೂವಿನ ಕೆಲವು ವೈಲಕ್ಷಣ್ಯಗಳು ಹೀಗಿವೆ: ಬಂಧುವರ್ಮ, ಪಾರ್ಶ್ವಪಂಡಿತ, ಜನ್ನ, ಕಮಲಭವ, 2ನೆಯ ಗುಣವರ್ಮ, ಮಹಾಬಲ, ಬಾಹುಬಲಿ ಪಂಡಿತ ಮತ್ತು ಮಧುರ ಈ ಜೈನಕವಿಗಳು ತೀರ್ಥಂಕರಚರಿತೆಗಳನ್ನು ಚಂಪೂ ರೂಪದಲ್ಲಿ ರಚಿಸಿದ್ದಾರೆ. ಇವು ಈ ಮೊದಲೇ ಸಂಪ್ರದಾಯಸಿದ್ಧವಾಗಿ ರಚಿತವಾಗುತ್ತ ಬಂದಿದ್ದ ತೀರ್ಥಂಕರಚರಿತೆಗಳ ಮಾದರಿಯಲ್ಲೇ ಬಲುಮಟ್ಟಿಗೆ ರಚಿತವಾಗಿರತಕ್ಕವು. ಕಥೆಗಿಂತ ವರ್ಣನೆಗಳು, ಸರಳತೆಗಿಂತ ಪ್ರೌಢಿಮೆ, ದೇಸಿಗಿಂತ ಮಾರ್ಗ ಇವುಗಳ ಕಡೆಗೆ ಕವಿಗಳ ಒಲವು ಕಾಣುತ್ತದೆ. ಪ್ರಾಯಃ ಒಂದೆರಡನ್ನು ಬಿಟ್ಟರೆ, ಉಳಿದ ತೀರ್ಥಂಕರ ಚರಿತೆಗಳಲ್ಲಿ ಕಥಾಭಿತ್ತಿಯೇ ಅಲ್ಪವಾಗಿದ್ದು ಸಾಂಪ್ರದಾಯಿಕವಾದ ಕಾವ್ಯಾಂಗಗಳ ವರ್ಣನೆಗಳಿಂದಲೂ ಪುರಾಣಲಕ್ಷಣಗಳಿಂದಲೂ ಅದನ್ನು ಹಿಗ್ಗಿಸಿರುವುದು ಕಾಣುತ್ತದೆ. ಪಾಂಡಿತ್ಯ ಪ್ರದರ್ಶನದ ಕಾಂಕ್ಷೆ ತಲೆದೋರಿದೆ. ಹರಿಹರ ಮತ್ತು ಸೋಮರಾಜರ ವೀರಶೈವ ಚಂಪೂ ಕೃತಿಗಳೂ ಬಲುಮಟ್ಟಿಗೆ ಅವೇ ವೈಲಕ್ಷಣ್ಯಗಳನ್ನು ಒಳಗೊಂಡಿವೆ. ಆದರೆ ವೀರಶೈವ ಚಂಪೂಗಳಲ್ಲಿ ಹರಿಹರನ ಗಿರಿಜಾಕಲ್ಯಾಣ ಉತ್ಕೃಷ್ಟವಾದುದಾಗಿದೆ. ಅನಂತರದ ಕವಿಗಳು ಆತನಿಂದ ಪ್ರಭಾವಿತವಾದುದು ಕಾಣುತ್ತದೆ. ಸೋಮರಾಜನ ಕೃತಿ ವಸ್ತುವಿನ ಆಯ್ಕೆಯ ದೃಷ್ಟಿಯಿಂದಲೂ ಅದರಲ್ಲಿಯ ಛಂದೋವೈವಿಧ್ಯದ ದೃಷ್ಟಿಯಿಂದಲೂ ಗಮನಿಸತಕ್ಕದ್ದಾಗಿದೆ.

ಗದ್ಯರೂಪವಾಗಿರುವ ಕಲ್ಪಿತಕಥಾಕಾವ್ಯವನ್ನು ಚಂಪೂವಿಗೆ ತಿರುಗಿಸುವ ನಾಗವರ್ಮನ ಕಾವ್ಯಪದ್ಧತಿ ದೇವಕವಿ, ಚೌಂಡರಸರ ಮೂಲಕ ಮುಂದುವರಿದಿದೆ. ದೇವಕವಿಯ ಕುಸುಮಾವಳಿ ಕಾವ್ಯ ಸುಬಂಧು, ಬಾಣರ ಗದ್ಯಕಾವ್ಯಗಳ ಪ್ರಭಾವದಿಂದಾದುದು. ಚೌಂಡರಸನ ಅಭಿನವ ದಶಕುಮಾರ ಚರಿತೆ, ದಂಡಿಯ ಗದ್ಯಕಾವ್ಯ ದಶಕುಮಾರ ಚರಿತೆಯ ಪರಿವರ್ತನೆ. ಇಲ್ಲಿಯೂ ಕಥೆಗಾರಿಕೆ, ರಸದೃಷ್ಟಿಗಳಿಗಿಂತ ವರ್ಣನೆಯ ದೃಷ್ಟಿ ಪ್ರಬಲವಾಗಿದೆ. ಇನ್ನು ಜೈನಮತ ತತ್ತ್ವಗಳನ್ನು ಕಥೆಗಳ ರೂಪದಲ್ಲಿ ಪ್ರತಿಪಾದಿಸುವ ನಯಸೇನನ ಕಾವ್ಯಪದ್ಧತಿ ಬಂಧುವರ್ಮ, ನಾಗರಾಜ, ವೃತ್ತ ವಿಲಾಸ ಇವರ ಕೈಯಲ್ಲಿ ಮುಂದುವರಿಯಿತು. ಬಂಧುವರ್ಮನ ಜೀವಸಂಬೋಧನೆಯ ಚಂಪೂವಿನ ಚೌಕಟ್ಟು ಸ್ವಾರಸ್ಯಕರವಾದುದು.

ಆಂಡಯ್ಯನ ಕಬ್ಬಿಗರ ಕಾವ ದೇಶ್ಯ ಮತ್ತು ತದ್ಭವ ಶಬ್ದಗಳನ್ನು ಮಾತ್ರ ಬಳಸಿದ ಹಾಗೂ ಪರಿಮಾಣದಲ್ಲಿ ಚಿಕ್ಕದಾಗಿರುವ ಚಂಪೂ. ಆಯತವರ್ಮನ ಕನ್ನಡ ರತ್ನಕರಂಡಕ ಕೇವಲ ತಾತ್ತ್ವಿಕ ವಿಷಯವನ್ನುಳ್ಳ

ಚಂಪೂ. ಹೀಗೆ ಈ ಅವಧಿಯ ಚಂಪೂ ರೂಪದಲ್ಲಿ ಪೌರಾಣಿಕ ವ್ಯಕ್ತಿಚರಿತ್ರೆ, ಕಥೆ, ತತ್ತ್ವ ಇವು ಅವಕಾಶ ಪಡೆದಿವೆ.

15ರಿಂದ 17ನೆಯ ಶತಮಾನದ ವರೆಗಿನ ಕಾಲ ಚಂಪೂ ಸಾಹಿತ್ಯದ ಇತಿಹಾಸದಲ್ಲಿ ಇಳಿಗಾಲ. ಈ ಅವಧಿಯಲ್ಲಿ ಷಟ್ಪದಿ, ಸಾಂಗತ್ಯ ಮೊದಲಾದ ಛಂದಸ್ಸುಗಳಲ್ಲಿ ರಚಿತವಾದ ಕಾವ್ಯಗಳು ಹೆಚ್ಚಾಗಿ ಬಂದವು. ಅವುಗಳ ಕರ್ತೃಗಳು ಆ ಕಾವ್ಯಗಳಲ್ಲಿಯೇ ಹಿಂದಿನ ಚಂಪೂಕಾವ್ಯಗಳ ವಸ್ತು ಮತ್ತು ಶೈಲಿಗಳ ಕೆಲವು ಲಕ್ಷಣಗಳನ್ನು ಅಳವಡಿಸಿದರು. ಚಂಪೂಕಾವ್ಯ ಪದ್ಧತಿಯ ಉತ್ತಮವಾದ ಮಾದರಿಗಳು ಸು.10-12ನೆಯ ಶತಮಾನದಲ್ಲಿಯೇ ಬಂದು ಹೋಗಿದ್ದು, ಈಚಿನವು ಹೆಚ್ಚಿನ ಮಟ್ಟಿಗೆ ಅವುಗಳ ಶುಷ್ಕ ಅನುಕರಣಗಳಾಗಿ ತೋರುತ್ತವೆ. ಮಧುರ ಕವಿಯ (1377-1404) ಧರ್ಮನಾಥಪುರಾಣ ಚಂಪೂಶೈಲಿಯ ಅವಸಾನದ ಹಂಸಗೀತೆ.

ಚಂದ್ರಕವಿಯ (ಸು.1430) ಪಂಪಾಸ್ಥಾನವರ್ಣನ ಹಂಪೆಯ ವಿರೂಪಾಕ್ಷ ದೇವರ ಆಸ್ಥಾನ ವರ್ಣನೆಯನ್ನು ಕುರಿತಿದೆ. ಸುರಂಗಕವಿಯ (ಸು.1500) ತ್ರಿಷಷ್ಟಿಪುರಾತನಚಾರಿತ್ರ ತಮಿಳುನಾಡಿನ 63 ಶಿವಭಕ್ತರ ಕಥೆಗಳನ್ನೊಳಗೊಂಡಿದೆ. ಕಥೆಯ ಒಂದು ಎಳೆಗೂ ಎಡೆಯಿಲ್ಲದಂತೆ ಕೇವಲ ವರ್ಣನೆಗಳಿಂದಲೇ ಕಾವ್ಯವನ್ನು ಕಟ್ಟಿರುವ ಚಂದ್ರಕವಿಯ ಕೌಶಲ ಕುತೂಹಲಕರವಾದುದು. ಈವರೆಗಿನ ಚಂಪೂ ಪದ್ಧತಿಯಲ್ಲಿ ನವೀನವಾದುದು. ಕನ್ನಡದ ಅತಿ ಪುಟ್ಟ ಚಂಪೂಕಾವ್ಯಗಳಲ್ಲಿ ಒಂದಾದ ಈ ಕೃತಿಯಲ್ಲಿ ಇರುವ ಅಲ್ಪಾವಕಾಶದಲ್ಲಿಯೇ ಸಾಂಪ್ರದಾಯಿಕ ವರ್ಣನೆಗಳು ಯಥೋಚಿತವಾಗಿ ಎಡೆಪಡೆದಿವೆ. ಸುರಂಗಕವಿಯ ಕೃತಿ, ಅದಕ್ಕೆ ಪ್ರತಿಯಾಗಿ ಎನ್ನುವಂತೆ, ಕನ್ನಡದ ಅತಿ ದೊಡ್ಡ ಚಂಪೂ ಕಾವ್ಯಗಳಲ್ಲಿ ಒಂದಾಗಿದ್ದು, ಹರಿಹರನ ಕಥಾಮೂಲವನ್ನೂ ಚಂಪೂಮಾರ್ಗವನ್ನೂ ಬಲುಮಟ್ಟಿಗೆ ಅನುಸರಿಸಿದ್ದು ಹರಿಹರನ ಅನಂತರದ ವೀರಶೈವ ಚಂಪೂಗ್ರಂಥಗಳಲ್ಲಿ ಗಣ್ಯವಾದದ್ದಾಗಿದೆ.

ಕಳೆದೆರಡು ಶತಮಾನಗಳಲ್ಲಿ ಸ್ಥಗಿತಗೊಂಡಿದ್ದ ಚಂಪೂಸಾಹಿತ್ಯರಚನೆ 17 ರಿಂದ 19ನೆಯ ಶತಮಾನದ ಅವಧಿಯಲ್ಲಿ ಪುನರುಜ್ಜೀವನಗೊಂಡಿತು. ಈ ಅವಧಿಯಲ್ಲಿ ವೀರಶೈವ ಕವಿಗಳೇ ಅಧಿಕ ಸಂಖ್ಯೆಯಲ್ಲಿ ಚಂಪೂಕೃತಿಗಳನ್ನು ರಚಿಸಿದರು. ಜೈನ ಕವಿಗಳು ಕಾರಣಾಂತರಗಳಿಂದ ಚಂಪೂಪದ್ಧತಿಯನ್ನು ಬಿಟ್ಟು ದೇಸೀ ಕಾವ್ಯಗಳ ರಚನೆಗೆ ತೊಡಗಿದರು. ಈ ಅವಧಿಯ ಚಂಪೂಸಾಹಿತ್ಯದ ಒಂದು ಸಾಮಾನ್ಯವಾದ ಸಮೀಕ್ಷೆ ಹೀಗಿದೆ.

ಪ್ರಭುಗನ (ಸು.1520) ಚೂಡನಾಸ್ಥಾನ ಮತ್ತು ವೈಭೋಗರಾಜಾಸ್ಥಾನಗಳು ಈಶ್ವರನ ಆಸ್ಥಾನದ ವರ್ಣನೆಯನ್ನು ಒಳಗೊಂಡಂಥವು. ವೀರಭದ್ರರಾಜನ (ಸು.1530) ವೀರಭದ್ರವಿಜಯ ವೀರೇಶನ ಚರಿತೆ. ಸದಾಶಿವಯೋಗಿಯ ರಾಮನಾಥವಿಲಾಸ (ಸು.1554) ವೀರಶೈವ ಮತೋತ್ಕರ್ಷವನ್ನು ಮಾಡಿದ ರಾಮನಾಥಾಚಾರ್ಯನ ಚರಿತ್ರೆ. ಮುರಿಗೆ ದೇಶಿಕೇಂದ್ರನ (ಸು.1560) ಹಮ್ಮೀರ ಕಾವ್ಯ ಶಿವಭಕ್ತನಾದ ಹಮ್ಮೀರರಾಜನ ಚರಿತೆ. ಸಿದ್ಧಲಿಂಗ ಶಿವಯೋಗಿಯ (ಸು.1600) ಭೈರವೇಶ್ವರಪುರಾಣ ಶಿವಭಕ್ತನಾದ ಭೈರವರಾಜನ ಕಥೆ. ಶಾಂತವೀರ ದೇಶಿಕನ (ಸು.1650) ಶಿವಲಿಂಗಚಾರಿತ್ರ ಶಿವಲಿಂಗಾರ್ಯನ ಕಥೆ. ಕವಿ ಮಾದಣ್ಣನ (ಸು.1650) ನನ್ನಯ್ಯಗಳ ಚರಿತ್ರೆ ಶಿವಭಕ್ತನಾದ ನನ್ನಯ್ಯನ ಚರಿತೆ. ಷಡಕ್ಷರಿಯ ರಾಜಶೇಖರವಿಲಾಸ (ಸು.1655) ಸತ್ಯೇಂದ್ರ ಚೋಳನ ಮಗನಾದ ರಾಜಶೇಖರನ ಕಥೆ. ಬಸವರಾಜ ವಿಜಯ ಅಥವಾ ವೃಷಭೇಂದ್ರ ವಿಜಯ (ಸು.1677) ಬಸವಣ್ಣನವರ ಚರಿತ್ರೆ. ಶಬರಶಂಕರವಿಲಾಸ ಮಹಾಭಾರತದ ಕಿರಾತಾರ್ಜುನೀಯ ಪ್ರಸಂಗವನ್ನು ಕುರಿತದ್ದು.

16-17ನೆಯ ಶತಮಾನದ ವೀರಶೈವ ಕವಿಗಳ ಈ ಚಂಪೂಸಾಹಿತ್ಯ ಮುಖ್ಯವಾಗಿ ಶಿವನನ್ನೂ ಶಿವಭಕ್ತರ ಪುಣ್ಯಕಥೆಗಳನ್ನೂ ಆಧಾರವಾಗಿಟ್ಟುಕೊಂಡು ರಚಿತವಾಗಿದೆ. ವಸ್ತು, ಶೈಲಿ ಮತ್ತು ಉದ್ದೇಶಗಳಲ್ಲಿ ಹರಿಹರನ ಕಾವ್ಯಮಾರ್ಗದ ಪ್ರಭಾವ ಇದರಲ್ಲಿ ಕಾಣುತ್ತದೆ. ಎಂದಿನಂತೆ ಇಲ್ಲಿಯೂ ವರ್ಣನೆ, ಅಲಂಕಾರ, ಕವಿಸಮಯಗಳಲ್ಲಿ ಕನ್ನಡ ಚಂಪೂಕಾವ್ಯಪರಂಪರೆ ಮುನ್ನಡೆದಿದೆ. ಪ್ರಭುಗನ ಶಿವಾಸ್ಥಾನ ವರ್ಣನೆಯ ಚಿಕ್ಕಚಂಪೂಗ್ರಂಥಗಳು ಒಂದೊಂದೂ 101 ಪದ್ಯಗಳನ್ನು ಒಳಗೊಂಡಿರುವುದರಿಂದ ಪ್ರಾಯಃ ಶತಕ ಚಂಪೂ ಆಕೃತಿಯನ್ನು ತಳೆದಂತೆ ಭಾವನೆಯುಂಟಾಗುತ್ತದೆ. ಅಲ್ಲದೆ ಇಲ್ಲಿ ಚಂದ್ರಕವಿಯ ಸಂಪ್ರದಾಯ ಮುನ್ನಡೆದಿದೆ. ವೀರಭದ್ರನ ಕೃತಿ ವರ್ಣನಾಭಾಗ ಹೆಚ್ಚಾಗಿರುವ ಚಂಪೂ, ಸದಾಶಿವಯೋಗಿಯ ಕೃತಿಯಲ್ಲಿ ಷಟ್ಪದಿಗಳು ಬಳಕೆಯಾಗಿವೆ. ಇನ್ನು ವೀರಶೈವ ಚಂಪೂ ಕಾವ್ಯಕರ್ತೃಗಳ ಪರಂಪರೆಯಲ್ಲಿ ಬಹು ಸಮರ್ಥನಾದವನೆಂದರೆ ಷಡಕ್ಷರಿ. ಒಳ್ಳೆಯ ಕವಿತ್ವಶಕ್ತಿಯೊಡನೆ ಪಾಂಡಿತ್ಯ ದೃಷ್ಟಿಯೂ ಸಂಪ್ರದಾಯ ನಿಷ್ಠೆಯೂ ಈತನಲ್ಲಿ ವಿಶೇಷವಾಗಿತ್ತು. ಈತನ ಚಂಪೂಕೃತಿಗಳಲ್ಲಿ ಪ್ರಾಚೀನ ಕಾಲದ ಪ್ರೌಢ ಚಂಪೂಕಾವ್ಯಗಳ ಗುಣಲಕ್ಷಣಗಳು ಪ್ರತಿಬಿಂಬಿತವಾಗಿವೆ. ಚಂಪೂಶೈಲಿಯ ಆಕರ್ಷಣೆ ಬಿಟ್ಟೂ ಬಿಡದಂತೆ ಕನ್ನಡ ಕವಿಗಳ ಮನಸ್ಸನ್ನು ಸೆರೆ ಹಿಡಿದಿದ್ದು, ಅವರ ಪ್ರತಿಭೆ ಪಾಂಡಿತ್ಯಗಳ ಪರೀಕ್ಷೆಗೆ ಒಳ್ಳೆಯ ನಿಕಷವಾಗಿತ್ತು. ಷಡಕ್ಷರಿಯಂಥ ಕವಿ ಆ ಪರೀಕ್ಷೆಯಲ್ಲಿ ಹೆಮ್ಮೆಯಿಂದ ಪಾಲುಗೊಂಡು, ಯಶಸ್ವಿಯಾಗಿರುವುದು ಕಾಣುತ್ತದೆ. ಕಥೆಯನ್ನು ನಿಮಿತ್ತವಾಗಿ ಮಾಡಿಕೊಂಡು, ಮುಖ್ಯವಾಗಿ ವರ್ಣನ ವೈಚಿತ್ರ್ಯಗಳನ್ನೂ ಕಲ್ಪನಾಚಾತುರ್ಯ ಮತ್ತು ಅಲಂಕಾರ ವೈಖರಿಗಳನ್ನೂ ತನ್ನ ಕೃತಿಗಳಲ್ಲಿ ಈತ ಮೆರೆದಿದ್ದಾನೆ.

17ನೆಯ ಶತಮಾನದ ಉತ್ತರಾರ್ಧದಲ್ಲಿ, ಮೈಸೂರರರಸರಲ್ಲಿ ಪ್ರಖ್ಯಾತನಾದ ಚಿಕ್ಕದೇವರಾಯನ (ಸು.1672-1704) ಆಶ್ರಯದಲ್ಲಿ ಕೆಲವರು ಬ್ರಾಹ್ಮಣಕವಿಗಳು ಚಂಪೂಸಾಹಿತ್ಯದ ಬೆಳವಣಿಗೆಗೆ ತುಂಬ ನೆರವಾದರು. ಚಿಕ್ಕದೇವರಾಜನ ಕಾಲದ ಹಾಗೂ ಅವನ ಪೋಷಣೆ ಪಡೆದ ಕವಿಸಮೂಹದಲ್ಲಿ ತಿರುಮಲಾರ್ಯ, ಚಿಕುಪಾಧ್ಯಾಯ, ತಿಮ್ಮಕವಿ, ಮಲ್ಲಿಕಾರ್ಜುನ, ಮಲ್ಲರಸ ಇವರು ಚಂಪೂಕೃತಿಗಳನ್ನು ರಚಿಸಿದರು. ಇವರಲ್ಲಿ ಕೆಲವರ ಕಾವ್ಯಮಾರ್ಗದ ಮೇಲೆ ಷಡಕ್ಷರಿಯ ಪ್ರಭಾವವಾಗಿರುವುದು ಸಾಧ್ಯ. ತಿರುಮಲಾರ್ಯನ (1645-1706) ಚಿಕದೇವರಾಜವಿಜಯ ಆ ದೊರೆಯ ಪೂರ್ವಜರ ವಿಷಯವನ್ನೂ ಆತನ ಜನನ ಬಾಲ್ಯದಿನಗಳನ್ನೂ ಕುರಿತಿದೆ. ಚಿಕುಪಾಧ್ಯಾಯನ (1672) ಹಸ್ತಿಗಿರಿಮಾಹಾತ್ಮ್ಯ (1679) ಬ್ರಹ್ಮಾಂಡಪುರಾಣದ ತೀರ್ಥಕಾಂಡಕಾದಲ್ಲಿ ಉಕ್ತವಾದ ಕಂಚಿಯ ಮಾಹಾತ್ಮ್ಯವನ್ನು ಕುರಿತದ್ದು. ಕಮಲಾಚಲ ಮಾಹಾತ್ಮ್ಯ (1680) ಭವಿಷ್ಯೋತ್ತರ ಪುರಾಣದ ತೀರ್ಥಕಾಂಡಕಾದಲ್ಲಿ ಉಕ್ತವಾದ ಹಿಮವದ್ಗೋಪಾಲಸ್ವಾಮಿ ಬೆಟ್ಟದ ಮಾಹಾತ್ಮ್ಯವನ್ನು ಕುರಿತದ್ದು. ರುಕ್ಮಾಂಗದ ಚರಿತೆ (1681) ಏಕಾದಶೀವ್ರತದ ಮಹಿಮೆಯನ್ನು ಹೇಳುತ್ತದೆ. ವಿಷ್ಣುಪುರಾಣ ಸಂಸ್ಕೃತ ವಿಷ್ಣುಪುರಾಣದ ಪರಿವರ್ತನೆ. ದಿವ್ಯಸೂರಿಚರಿತೆ 12 ಮಂದಿ ಆಳ್ವಾರರ ಚರಿತ್ರೆ. ಸಾತ್ತ್ವಿಕಬ್ರಹ್ಮವಿದ್ಯಾವಿಲಾಸ ಮತ್ತು ಅರ್ಥಪಂಚಕಗಳು ವಿಶಿಷ್ಟಾದ್ವೈತ ಮತಸಿದ್ಧಾಂತ ಗ್ರಂಥಗಳು. ತಿಮ್ಮಕವಿಯ (1677) ಯಾದವಗಿರಿ ಮಾಹಾತ್ಮ್ಯ (1677) ನಾರದೀಯ ಪುರಾಣೋಕ್ತವಾದ ಯಾದವಗಿರಿಯ (ಮೇಲುಕೋಟೆಯ) ಮಾಹಾತ್ಮ್ಯವನ್ನು ಕುರಿತದ್ದು. ಪಶ್ಚಿಮ ರಂಗಮಾಹಾತ್ಮ್ಯ ಶ್ರೀರಂಗಪಟ್ಟಣದ ಮಾಹಾತ್ಮ್ಯವನ್ನು ಕುರಿತದ್ದು. ವೆಂಕಟಗಿರಿಮಾಹಾತ್ಮ್ಯ (1679) ತಿರುಪತಿಯ ಮಾಹಾತ್ಮ್ಯವನ್ನು ಹೇಳುತ್ತದೆ. ಮಲ್ಲಿಕಾರ್ಜುನನ (1678) ಶ್ರೀರಂಗಮಾಹಾತ್ಮ್ಯ ಬ್ರಹ್ಮಾಂಡಪುರಾಣದಲ್ಲಿನ ಶ್ರೀರಂಗಕ್ಷೇತ್ರದ ಮಾಹಾತ್ಮ್ಯವನ್ನು ಕುರಿತದ್ದು. ಮಲ್ಲರಸನ (ಸು.1680) ದಶಾವತಾರ ಚರಿತೆಯಲ್ಲಿ ವಿಷ್ಣುವಿನ ಹತ್ತು ಅವತಾರಗಳ ಕಥನವಿದೆ. ಕೃಷ್ಣಶರ್ಮನ (ಸು.1700) ಸರಜಾ ಹನುಮೇಂದ್ರಚರಿತೆ ತರೀಕೆರೆ ಪ್ರಭು ಸರಜಾ ಹನುಮೇಂದ್ರ ಯಶೋವಿಲಾಸಂ ಚರಿತ್ರೆಯಾಗಿದೆ.

ಚಿಕ್ಕದೇವರಾಯನ ಕಾಲದಿಂದೀಚೆಗೆ ಕೂಡ ಕೆಲವು ಚಂಪೂಕೃತಿಗಳು ರಚಿತವಾಗಿವೆ. ಅವುಗಳ ಒಂದು ಸಾಮಾನ್ಯ ಸಮೀಕ್ಷೆ ಹೀಗಿದೆ. ಇಮ್ಮಡಿ ಮುರಿಗೆಯ ಸ್ವಾಮಿಯ ಹಾಲಾಸ್ಯಪುರಾಣ (ಸು.1720) ಮಧುರೆಯ ಸುಂದರೇಶ್ವರ 64 ಲೀಲೆಗಳನ್ನು ನಟಿಸಿದ ಕಥಾವೃತ್ತಾಂತವನ್ನು ಕುರಿತಿದೆ. ವೆಂಕಟೇಶನ (ಸು.1740) ಹಾಲಾಸ್ಯಮಾಹಾತ್ಮ್ಯವೂ ಶಿವಲೀಲಾಪರವಾದುದು. ಲಿಂಗಣ್ಣನ (ಸು.1750) ಕೆಳದಿ ನೃಪವಿಜಯ ಕೆಳದಿಯ ಅರಸರ ಚರಿತ್ರೆ. ವೆಂಕಾಮಾತ್ಯನ (ಸು.1770) ರಮಾಭ್ಯುದಯ ಕಾವ್ಯ ಲಕ್ಷ್ಮೀದೇವಿಯ ಅವತಾರವೇ ಮೊದಲಾದ ಪೌರಾಣಿಕ ಕಥೆಗಳನ್ನು ಒಳಗೊಂಡದ್ದು. ದೇವಚಂದ್ರನ ರಾಮಕಥಾವತಾರದಲ್ಲಿ (ಸು.1797) ಜೈನ ಸಂಪ್ರದಾಯದ ರಾಮಾಯಣ ಕಥೆ ಬಂದಿದೆ. ಚಾರುಕೀರ್ತಿ ಪಂಡಿತನ (ಚಂದ್ರಸಾಗರ ವರ್ಣಿಯ) ಭವ್ಯಜನಚಿಂತಾಮಣಿ (1815) ಜಿನಪೂಜಾಮಹಿಮೆಯಿಂದ ಸದ್ಗತಿ ಪಡೆದವರ ಕಥೆಗಳನ್ನು ಒಳಗೊಂಡಿದೆ. ತಮ್ಮಯ ಕವಿಯ ರಾಜವಂಶರತ್ನಪ್ರಭೆ (ಸು.1834) ಮೈಸೂರು ಅರಸರ ಚರಿತ್ರೆ. ಅಳಿಯ ಲಿಂಗರಾಜನ ನಳಕೂಬರ ವಿಲಾಸ (ಸು.1851) ಪೌರಾಣಿಕ ವ್ಯಕ್ತಿಯಾದ ನಳಕೂಬರನ ಕಥೆ, ನರಪತಿಚರಿತ ಅಲಂಕಾರಗ್ರಂಥ. ವೆಂಕಟರಮಣಯ್ಯನ ಗಯೋಪಾಖ್ಯಾನ

(ಸು.1857) ಕೃಷ್ಣಾರ್ಜುನರ ಸಂಗ್ರಾಮದ ಪೌರಾಣಿಕ ಕಥೆ. ಹಿರಿಣ್ಯಗರ್ಭನ (ಸು.1860) ಸರಸ್ವತೀ ಪ್ರಬಂಧ ಶ್ರೀ ಸರಸ್ವತೀದೇವಿ ಕಥೆಯೆಂಬ ಪೂರ್ವಕಥೆ. ಬಸವಪ್ಪಶಾಸ್ತ್ರಿಗಳ (19ನೆಯ ಶತಮಾನ) ದಮಯಂತೀಸ್ವಯಂವರ ಮಹಾಭಾರತದ ನಳೋಪಾಖ್ಯಾನವನ್ನು ಕುರಿತದ್ದು.

17ರಿಂದ 19ನೆಯ ಶತಮಾನದವರೆಗೆ ರಚಿತವಾಗಿರುವ ಈ ಚಂಪೂಸಾಹಿತ್ಯದ ವೈಲಕ್ಷಣ್ಯಗಳನ್ನು ಈಗ ಗಮನಿಸಬಹುದು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಆತನ ಪ್ರೇರಣೆಯಂತೆ ಆತನ ಪೋಷಣೆಯ ಹಲವರು ಕವಿಗಳೂ ಆ ಕವಿಗಳ ಪ್ರಚೋದನೆಯಿಂದ ಇತರ ಕೆಲವರೂ ಕೆಲವು ಚಂಪೂಕೃತಿಗಳನ್ನು ರಚಿಸಿದರು. ಹಲವು ಗ್ರಂಥಗಳ ಕರ್ತೃ ಚಿಕುಪಾಧ್ಯಾಯ ಸ್ವತಃ ಆರೇಳು ಚಂಪೂಕೃತಿಗಳನ್ನು ಬರೆದುದಲ್ಲದೆ ತಿಮ್ಮಕವಿ, ಮಲ್ಲಿಕಾರ್ಜುನ ಮೊದಲಾದವರ ಕೃತಿರಚನೆಗೆ ಪ್ರೇರಕನಾದ. ತಿರುಮಲಾರ್ಯ ಶುದ್ಧವಾದ ಐತಿಹಾಸಿಕ ವಸ್ತುವನ್ನು ಆಧರಿಸಿ ಮೊದಲ ಬಾರಿಗೆ ಚಂಪೂಗ್ರಂಥವನ್ನು ಬರೆದ ಮೇಲೆ, ಆ ಸಂಪ್ರದಾಯ ವೇಣುಗೋಪಾಲವರಪ್ರಸಾದಿ, ಕೃಷ್ಣಶರ್ಮ, ಲಿಂಗಣ್ಣ, ತಮ್ಮಯ ಕವಿ ಇವರ ಮೂಲಕವಾಗಿ ಮುಂದುವರಿಯಿತು. ತಿರುಮಲಾರ್ಯನ ಕೃತಿಯಲ್ಲಿ ತ್ರಿಪದಿಗಳ ಜೊತೆಗೆ ಸಾಂಗತ್ಯಗಳೂ ಹಾಡುಗಳೂ ಸೇರಿವೆಯೆಂಬುದು ಒಂದು ವಿಶೇಷ. ಚಿಕುಪಾಧ್ಯಾಯ ಪುರಾಣೋಕ್ತವಾದ ಕ್ಷೇತ್ರಮಾಹಾತ್ಮ್ಯಗಳನ್ನು ಚಂಪೂ ರೂಪದಲ್ಲಿ ಅಳವಡಿಸಿ ತಿಮ್ಮಕವಿ, ಮಲ್ಲಿಕಾರ್ಜುನ ಮೊದಲಾದವರಿಗೆ ಮಾರ್ಗದರ್ಶಕನಾದ. ಆತನ ಚಂಪೂಕೃತಿಗಳಲ್ಲಿ ಕ್ಷೇತ್ರಮಾಹಾತ್ಮ್ಯ, ಪೌರಾಣಿಕ ಕಥೆ, ಪುರಾಣಾನುವಾದ, ಆಚಾರ್ಯರ ಚರಿತ್ರೆ, ಹಾಗೂ ಮತಸಿದ್ಧಾಂತ ಈ ವಸ್ತುವೈವಿಧ್ಯ ಅಳವಟ್ಟಿದೆ. ಈ ಚಂಪೂಕಾಲದ ಚಂಪೂಪದ್ಧತಿಯ ಪುನರುಜ್ಜೀವನಕರ್ತರಲ್ಲಿ ಈತ ಪ್ರಮುಖನಾಗಿದ್ದಾನೆ. ಈತನ ದಿವ್ಯಸೂರಿಚರಿತೆ ಮತ್ತು ಅರ್ಥಪಂಚಕಗಳು ತಮಿಳು ಮೂಲದ ಗ್ರಂಥಗಳನ್ನು ಅನುಸರಿಸಿರುವಂತೆ ತಿಳಿಯುತ್ತದೆ. ಕೃಷ್ಣಶರ್ಮನ ಕೃತಿಯಲ್ಲಿ ಅಲ್ಲಲ್ಲಿ ಸಾಂಗತ್ಯಗಳನ್ನೂ ಷಟ್ಪದಿಗಳನ್ನೂ ಬಳಸಿದೆಯಲ್ಲದೆ ವರ್ಣನೆಗೆ ಪ್ರಾಶಸ್ತ್ಯವಿದೆ. ಲಿಂಗಣ್ಣನ ಕೆಳದಿನೃಪವಿಜಯದಲ್ಲಿ ಗದ್ಯದ ಪ್ರಾಚುರ್ಯ ಕಾಣುತ್ತದೆ. ತಮ್ಮಯ ಕವಿಯ ಕೃತಿ ರುಚಿಪ್ರಚಾರ ಎಂಬ ಐದು ವಿಭಾಗಗಳನ್ನು ಒಳಗೊಂಡಿರುವುದಲ್ಲದೆ, ಅದರಲ್ಲಿ ಕೆಲವು ಸೀಸಪದ್ಯಗಳೂ ಇವೆ. ಅಳಿಯ ಲಿಂಗರಾಜನ ನರಪತಿಚರಿತ ಲಕ್ಷಣಗ್ರಂಥವಾಗಿದ್ದರೂ ಚಂಪೂವಿನಲ್ಲಿದೆ. ವೆಂಕಟರಮಣಯ್ಯನ ಗಯೋಪಾಖ್ಯಾನದಲ್ಲಿ ಕೆಲವು ಷಟ್ಪದಿಗಳನ್ನು ಬಳಸಿದೆ. ಹೀಗೆ ಈ ಅವಧಿಯ ಚಂಪೂಕೃತಿಗಳು ವಸ್ತುವಿನಲ್ಲಿಯೂ ರೂಪದಲ್ಲಿಯೂ ಕೆಲಮಟ್ಟಿಗೆ ಹೊಸತಾಗಿದ್ದರೂ ಒಟ್ಟಿನಲ್ಲಿ ತನ್ನ ಸಾಂಪ್ರದಾಯಿಕ ಸ್ವರೂಪದಲ್ಲಿಯೇ ಮುನ್ನಡೆದಿರುವುದೂ ಮಾರ್ಗಕವಿತ್ವವನ್ನೂ ಹಳಗನ್ನಡ ಭಾಷೆಯನ್ನೂ ಜೀವಂತವಾಗಿಡಲು ಪ್ರಯತ್ನಿಸಿರುವುದೂ ಸ್ಪಷ್ಟವಾಗಿ ಗೋಚರಿಸುತ್ತದೆ. 19ನೆಯ ಶತಮಾನವನ್ನು ದಾಟಿಬಂದಿರುವ ಈ ಕಾಲದಲ್ಲಿಯೂ ಚಂಪೂರೂಪದಲ್ಲಿ ಕೃತಿರಚನೆ ಮಾಡುವ ಪ್ರಯತ್ನ ಕ್ವಚಿತ್ತಾಗಿ ನಡೆಯುತ್ತಿದೆ. ಇದು ಈ ಸಾಹಿತ್ಯಪ್ರಕಾರದ ಪ್ರಭಾವವನ್ನೂ ಅದರಲ್ಲಿ ಕವಿಗಳಿಗಿರುವ ಅಭಿಮಾನವನ್ನೂ ಎತ್ತಿ ತೋರಿಸತಕ್ಕದ್ದಾಗಿದೆ.

ಇಪ್ಪತ್ತನೆಯ ಶತಮಾನದಲ್ಲಿ ಚಂಪೂ ರೀತಿಯ ಭವಿಷ್ಯವೇನು ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಸಾಂಪ್ರದಾಯಿಕ ರೀತಿಯಲ್ಲಿ ರಚಿತವಾದ ಚಂಪೂಕಾವ್ಯಗಳು ಕೇವಲ ಅಲ್ಲೊಂದು ಇಲ್ಲೊಂದು ಹೊರಬಂದಿರುವುದುಂಟು. ಸೋಸಲೆ ಅಯ್ಯಶಾಸ್ತ್ರಿಗಳು ಈ ಶತಮಾನದ ಆದಿಯಲ್ಲಿ ಮಹೀಶೂರ ಮಹಾರಾಜ ಚರಿತಂ ಎಂಬೊಂದು ಗ್ರಂಥವನ್ನು ರಚಿಸಿದ್ದಾರೆ. ಅನಂತರ 1950ರಿಂದ ಈಚೆಗೆ ಟಿ.ಕೇಶವಭಟ್ಟರು ಸತ್ಯಾವಲೋಕನಂ ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಇದು ಶ್ರೀಕೃಷ್ಣನನ್ನು ಕುರಿತ ಕಥೆ. ಇಲ್ಲಿ ಅಗತ್ಯವಾಗಿ ಸೂಚಿಸಬೇಕಾಗಿರುವ ಇನ್ನೆರಡು ಗ್ರಂಥಗಳೆಂದರೆ ವಿನಾಯಕ ರಚಿತ ತ್ರಿವಿಕ್ರಮರ ಆಕಾಶಗಂಗೆ ಮತ್ತು ಇಂದಲ್ಲ ನಾಳೆ. ಮೊದಲ ಕೃತಿ ಆತ್ಮಚರಿತ್ರರೂಪವಾದುದು. ಆದರೂ ಆತ್ಮವಿಕಾಸವನ್ನೇ ಪ್ರಧಾನವಾಗಿ ಚಿತ್ರಿಸುವಂಥದ್ದು, ಎರಡನೆಯದು ಪೂರ್ವ ಮತ್ತು ಪಶ್ಚಿಮ ಸಂಸ್ಕೃತಿ ಮತ್ತು ಜೀವನ ಕ್ರಮಗಳ ಸಮೀಕ್ಷಾರೂಪವಾದುದು. ಎರಡರಲ್ಲೂ ಹೊಸಗನ್ನಡ ಛಂದಸ್ಸಿನ ಪದ್ಯದೊಂದಿಗೆ ಹೊಸಗನ್ನಡ ಗದ್ಯ ಹಾಸುಹೊಕ್ಕಾಗಿ ಬರುತ್ತದೆ. ಇಲ್ಲಿನ ಚಂಪೂ ಶೈಲಿಯಪ್ರಯೋಗ ಗಮನಾರ್ಹವಾದುದು. *

**ಕನ್ನಡ ಚಳವಳಿಗಳು** : ಏಕೀಕರಣೋತ್ತರ ಕರ್ನಾಟಕವನ್ನು ಪ್ರಗತಿ ಪರವಾಗಿ ರೂಪಿಸಲು ಬೌದ್ಧಿಕ ಹಾಗೂ ಭೌತಿಕ ಈ ಎರಡು ನೆಲೆಗಳಲ್ಲೂ ನಡೆಸಿದ ಚಳವಳಿಗಳನ್ನು ಕನ್ನಡ ಚಳವಳಿ ಎಂದು ಗುರುತಿಸಲಾಗುತ್ತದೆ. ಬೌದ್ಧಿಕವಾಗಿ ಅಥವಾ ಸೈದ್ಧಾಂತಿಕವಾಗಿ ಕರ್ನಾಟಕವನ್ನು ರೂಪಿಸುವ ಕಾರ್ಯದಲ್ಲಿ ಪ್ರಧಾನವಾದ ಪಾತ್ರವೆಂದರೆ, ಛಿದ್ರಗೊಂಡಿದ್ದ ಕನ್ನಡ ಪ್ರದೇಶಗಳಲ್ಲಿನ ಸೃಜನಶೀಲದ ಸಾಹಿತ್ಯಕ ಸೃಷ್ಟಿ. ಇದು ಕನ್ನಡದ ಸಂವೇದನೆಯನ್ನು ಕಾಯ್ದುಕೊಂಡು ಬಂದ ಸಾಂಸ್ಕೃತಿಕ ಪ್ರಕ್ರಿಯೆ. ಈ ಪ್ರಕ್ರಿಯೆ ಕವಿರಾಜಮಾರ್ಗಕಾರನಿಂದ ಮೊದಲ್ಗೊಂಡು ಬೇಂದ್ರೆ, ಕುವೆಂಪು ಅವರನ್ನು ಒಳಗೊಂಡಂತೆ ಇತ್ತೀಚಿನ ಸಾಹಿತ್ಯ ಸೃಷ್ಟಿಯವರೆಗೂ ಮುಂದುವರಿದಿದೆ. ಅಂದರೆ ನಾಡು, ನುಡಿ ಮತ್ತು ಕನ್ನಡಿಗರನ್ನು ಕುರಿತಂತೆ ಸಂಸ್ಕೃತ, ಇಂಗ್ಲಿಷ್ ಇನ್ನಿತರ ಭಾಷೆಗಳನ್ನು ಎದುರುಗೊಳ್ಳುವುದರೊಂದಿಗೆ ಕನ್ನಡದ ಅನನ್ಯತೆಯನ್ನು ಉಳಿಸಿಕೊಳ್ಳಲು ನಡೆಸಿದ ಪ್ರಯತ್ನ. 12ನೆಯ ಶತಮಾನದ ಎಲ್ಲ ವರ್ಗಗಳ ವಚನಕಾರರು ಕನ್ನಡ ಸಂವೇದನೆಯನ್ನು ಮೆರೆದದ್ದು ಮಹತ್ವಪೂರ್ಣವಾದುದು. ಎಲ್ಲ ರೀತಿಯ ಸಂವಹನ, ಅನುಸಂಧಾನಗಳಿಗೆ ಕನ್ನಡ ಭಾಷೆಯೊಂದನ್ನೇ ಮಾಧ್ಯಮವನ್ನಾಗಿಸಿದ್ದು ವಚನಗಳ, ವಚನಕಾರರ ಹೆಗ್ಗಳಿಕೆ. ಈ ದಿಸೆಯಲ್ಲಿ ವಚನಕಾರರನ್ನು ಮೊದಲ ಭಾಷಿಕ (ಕನ್ನಡ) ಹರಿಕಾರರು ಎನ್ನಬಹುದು. ಅನಂತರದ ನವೋದಯ, ಪ್ರಗತಿಶೀಲರ ಸಾಹಿತ್ಯ ಸೃಷ್ಟಿ, ಭಾರತದ ಸ್ವಾತಂತ್ರ್ಯ ಏಕೀಕರಣದ ಪ್ರಕ್ರಿಯೆ ಇವುಗಳು ಈ ಕನ್ನಡ ಚಳವಳಿಗಳಿಗೆ ಪ್ರೇರಣೆ ನೀಡಿದವು. ಇಂಥ ಪ್ರೇರಣೆ, ಪ್ರಯತ್ನಗಳಿಂದಾಗಿ ವಸಾಹತು ಕಾಲದಲ್ಲಿ ತುಂಡಾಗಿದ್ದ ಕನ್ನಡ ಭೂ ಪ್ರದೇಶಗಳು ಒಂದುಗೂಡಿದವು. ಹೀಗೆ ಒಂದಾದದ್ದೂ ಕನ್ನಡ ಚಳವಳಿಯೇ ಆಗಿದೆ. ಆದರೂ ಭಿನ್ನ ಸ್ವರೂಪದ ಚಳವಳಿಯ ಪ್ರಕ್ರಿಯೆಗಳು ಕಾಣಿಸಿಕೊಂಡದ್ದು ಏಕೀಕರಣದ ಅನಂತರವೇ.

ಸಾಂಸ್ಕೃತಿಕವಾಗಿ ದತ್ತವಾದ ಕನ್ನಡದ ಸಂವೇದನೆಗಳನ್ನು ತನ್ನದಾಗಿಸಿಕೊಂಡಿದ್ದ ರಾಜಕಾರಣ ಸೋಲನ್ನು ಅನುಭವಿಸತೊಡಗಿದ್ದು ಏಕೀಕರಣದ ಅನಂತರವೇ. ಆಡಳಿತದ ದೃಷ್ಟಿಯಿಂದ ಒಂದುಗೂಡಿದ ವಿಭಿನ್ನ ಪ್ರದೇಶಗಳ ಕನ್ನಡಿಗರ ಅಭಿರುಚಿ, ಸಂಸ್ಕೃತಿಗಳು ಭಿನ್ನವಾಗಿದ್ದುದರಿಂದ, ಇದನ್ನು ಅರಿಯಲು ಹಾಗೂ ಅರಿತು ಕನ್ನಡಿಗರ ಸಮಸ್ಯೆಗಳನ್ನು ಬಗೆಹರಿಸಲು ರಾಜಕಾರಣಿಗಳು ಸೋತರು. ಇದರ ಪರಿಣಾಮವಾಗಿಯೇ ಕನ್ನಡ ಚಳವಳಿ ಭಿನ್ನ ರೀತಿಯಲ್ಲಿ ಕಾಣಿಸಿಕೊಂಡಿತು. 1960ರ ದಶಕದಲ್ಲಿ ಕನ್ನಡ, ಕನ್ನಡಿಗ, ಕರ್ನಾಟಕದ ಆಶೋತ್ತರಗಳ ಈಡೇರಿಕೆಗಾಗಿ ಕನ್ನಡಿಗರು ಮತ್ತೆ ಸಂಘಟಿತರಾಗುವ ಅನಿವಾರ್ಯತೆ ಹುಟ್ಟಿಕೊಂಡಿತು. ಏಕೀಕೃತ ಕರ್ನಾಟಕ ಎಲ್ಲ ಕನ್ನಡ ಪ್ರದೇಶಗಳನ್ನು ಒಂದೇ ಆಡಳಿತದ ತೆಕ್ಕೆಗೆ ಪೂರ್ತಿಯಾಗಿ ತೆಗೆದುಕೊಂಡಿರಲಿಲ್ಲ. ಜತ್, ಅಕ್ಕಲಕೋಟೆ, ಸೊಲ್ಲಾಪುರ, ಕಾಸರಗೋಡು, ಆಲೂರು, ಆದವಾನಿ, ರಾಯದುರ್ಗ, ಮಡಕಶಿರ, ಗೂಳ್ಯಂ, ಕೌತಾಳ್, ಬದನೆಹಾಳ್, ಹೊಸೂರು, ತಾಳವಾಡಿ, ನೀಲಗಿರಿ ಮೊದಲಾದವು ಕನ್ನಡ ರಾಜ್ಯಕ್ಕೆ ಸೇರಲಿಲ್ಲ. ಬದಲಾಗಿ, ತೆಲುಗು, ತಮಿಳು, ಮಲೆಯಾಳ, ಮರಾಠಿ ಮೊದಲಾದ ಭಾಷಿಕರೊಂದಿಗೆ ಆಯಾ ರಾಜ್ಯ ಸರ್ಕಾರಗಳ ಒತ್ತಡಗಳಿಗೆ ಮಣಿಯುವಂತೆ ಆಗಿತ್ತು. ಏಕೀಕರಣ ಸ್ಥಳೀಯ ಗಡಿಭಾಗಗಳ ಕನ್ನಡಿಗರನ್ನು ಭಾಷಿಕ ಕೀಳರಿಮೆಗೆ ಒಳಗಾಗುವಂತೆ ಮಾಡಿತು. ಈ ಕುರಿತ ಸಮಸ್ಯೆಗಳು ಕರ್ನಾಟಕ ಸರ್ಕಾರದ ಆಡಳಿತ ನೀತಿಗೆ ಸವಾಲಾಗಿ ಪರಿಣಮಿಸಿದವು. ನಾಡಿನ ರಾಜಧಾನಿಯೂ ಆಡಳಿತ ವ್ಯವಸ್ಥೆಯ ಕೇಂದ್ರವೂ ಆಗಿದ್ದ ಬೆಂಗಳೂರು ನಗರ ಕನ್ನಡೇತರರ ಪ್ರಾಬಲ್ಯದ ಕೇಂದ್ರವಾಯಿತು. ಹಳೆಯ ಮೈಸೂರು, ಮುಂಬಯಿ, ಹೈದರಾಬಾದ್, ಮದರಾಸು ಹಾಗೂ ಕೊಡಗು ಪ್ರದೇಶಗಳಲ್ಲಿ ಕನ್ನಡಿಗರ ಮನೋಗತವನ್ನು ಅರಿಯುವಲ್ಲಿ ರಾಜಕಾರಣ ವಿಫಲವಾಯಿತು. ಸಾಂಸ್ಕೃತಿಕವಾಗಿ ಒಪ್ಪುತ್ತಿದ್ದ ಕರ್ನಾಟಕ ಎಂಬ ಹೆಸರಿಗೆ ಬದಲಾಗಿ ವಿಶಾಲ ಮೈಸೂರು ರಾಜ್ಯವೆಂಬ ಹೆಸರಿನಿಂದ ಏಕೀಕರಣವನ್ನು ಸಾಧಿಸಿದ್ದು ಕನ್ನಡಿಗರಲ್ಲಿ ಆಘಾತವನ್ನುಂಟುಮಾಡಿತ್ತು. ಇದಕ್ಕೆ ಮುಂಬಯಿ ಕರ್ನಾಟಕದ (ಉತ್ತರದ) ಕನ್ನಡಿಗರು ತೀವ್ರವಾಗಿ ಪ್ರತಿಕ್ರಿಯಿಸಿದ್ದೂ ಉಂಟು. ಇಂಥ ಹಲವು ಕಾರಣಗಳಿಂದಾಗಿ ನಾಡಿನ ಏಕೀಕರಣ ಸಮಾಧಾನವನ್ನುಂಟು ಮಾಡಿರಲಿಲ್ಲ. ಇದರ ಪರಿಣಾಮವೇ ಬೆಂಗಳೂರಿನ ಪರಿಸರದಲ್ಲಿ ಕನ್ನಡ ಚಳವಳಿ ಸಂಘಟಿತ ರೂಪ ಪಡೆದು, ನಾಡಿನ ಉಳಿದೆಡೆಗಳಿಗೆ ಅದು ಕ್ರಮೇಣ ಪಸರಿಸಿತು. ಆದರೆ ಇದರಲ್ಲಿ ಬೆಂಗಳೂರು ಕೇಂದ್ರಿತ ಕನ್ನಡ ಚಳವಳಿಗಳ ಪಾಲು ದೊಡ್ಡದು.

**ಬೆಂಗಳೂರಿನ ಕನ್ನಡ ಪರಿಸರ :** ಮೈಸೂರು ಸಂಸ್ಥಾನದ ಆಡಳಿತ ಕೇಂದ್ರವಾಗಿದ್ದ ಬೆಂಗಳೂರು ಏಕೀಕರಣದ ಅನಂತರ ರಾಜ್ಯದ ರಾಜಧಾನಿಯಾಗಿ ಮುಂದುವರಿಯಿತು. ಅದರಿಂದ ನಗರದ ಬೆಳವಣಿಗೆಯೂ ಸಾಧಿಸಿತು. ಆದರೆ ನಾಡು, ನುಡಿ, ಸಂಸ್ಕೃತಿಗಳ ಕೇಂದ್ರಸ್ಥಾನವಾಗಿ ಅದು ತನ್ನನ್ನು ಗುರುತಿಸಿಕೊಳ್ಳಲಿಲ್ಲ. ಕನ್ನಡಿಗರಿಗೆ ಭರವಸೆ ಮೂಡಿಸುವ ಹಾಗೂ ಕನಸುಗಳನ್ನು ನನಸಾಗಿಸುವ ನಿಟ್ಟಿನಲ್ಲಿ ಬೆಂಗಳೂರು ವಿಫಲವಾಯಿತು. ಇದಕ್ಕೆ ಕಾರಣವೆಂದರೆ ಅಲ್ಲಿ ನೆಲೆಸಿದ್ದ ಕನ್ನಡೇತರರ ಪ್ರಾಬಲ್ಯ, ಹಿಂದಿನ ಕಮೀಷನರು, ದಿವಾನರುಗಳ ಆಡಳಿತದಿಂದಲೂ ಶಿಕ್ಷಣ, ಉದ್ಯೋಗಗಳನ್ನರಸಿ ಬರುವ ಕನ್ನಡೇತರರಿಗೆ ಪ್ರೇರಣೆ ನೀಡಿತ್ತು. ದೇಶದ ಸ್ವಾತಂತ್ರ್ಯ ಮತ್ತು ಕರ್ನಾಟಕ ಏಕೀಕರಣದ ಅನಂತರವೂ ಅನೇಕ ಉದ್ದಿಮೆಗಳು ಬೆಂಗಳೂರಿನಿಂದ ಆಕರ್ಷಿತವಾದವು. ಇವುಗಳಲ್ಲಿ ದುಡಿಯುತ್ತಿದ್ದ ಕಾರ್ಮಿಕರು ಬಹುಪಾಲು ಪಕ್ಕದ ತಮಿಳುನಾಡಿನ ತಮಿಳುಭಾಷಿಕರೇ ಆಗಿದ್ದರು. ಜೊತೆಗೆ ಇತರ ಭಾಷಿಕರೂ ಇಲ್ಲಿಗೆ ಹೆಚ್ಚಿನ ಸಂಖ್ಯೆಯಲ್ಲಿ ಬಂದರು. ಕೇಂದ್ರ ಸರ್ಕಾರಿ ಉದ್ಯಮಗಳಲ್ಲೂ ಇವರ ಸಂಖ್ಯೆ ಗಮನಾರ್ಹವಾಗಿ ಹೆಚ್ಚಾಗಿತ್ತು. ಬೆಂಗಳೂರಿನಲ್ಲಿದ್ದ ಐ.ಟಿ.ಐ., ಬಿ.ಇ.ಎಲ್., ಎಚ್.ಎಂ.ಟಿ., ಮೈಕೋ ಮೊದಲಾದ ಕಾರ್ಖಾನೆಗಳಲ್ಲಿ ಕನ್ನಡಿಗರ ಸಂಖ್ಯೆ ತೀರ ಕಡಿಮೆ. ಸ್ಥಳೀಯ ಕನ್ನಡಿಗರಿಗೆ ಸೇಕಡ 50ರಷ್ಟು ಪ್ರಾತಿನಿಧ್ಯ ಕೊಡಬೇಕೆಂಬ ನಿಯಮವನ್ನು ಕೇಂದ್ರ ಸರ್ಕಾರಿ ಸಂಘ ಸಂಸ್ಥೆಗಳು ಮುರಿದಿದ್ದವು. ಅಂಚೆ, ತಂತಿ, ರೈಲ್ವೆ ಮೊದಲಾದ ಇಲಾಖೆಗಳಲ್ಲಿ ಕನ್ನಡ ಮಾತನಾಡುವವರೇ ಇರಲಿಲ್ಲ. ಸಾರಿಗೆ, ಪೋಲೀಸು ಇಲಾಖೆಗಳಂಥ ರಾಜ್ಯ ಸರ್ಕಾರಿ ನೌಕರಿಗಳಲ್ಲೂ ತಮಿಳರು ಉದ್ಯೋಗಗಳನ್ನು ಪಡೆದಿದ್ದರು.

ಬೆಂಗಳೂರಿನ ಜನನಿಬಿಡ ಪ್ರದೇಶಗಳಾದ ರೈಲ್ವೆ ನಿಲ್ದಾಣ, ಕೆಂಪೇಗೌಡ ಬಸ್ ನಿಲ್ದಾಣ (ಇಂದಿನ ಮೆಜೆಸ್ಟಿಕ್ ಪ್ರದೇಶ), ಗಾಂಧೀನಗರ ಮೊದಲಾದ ಕಡೆಗಳಲ್ಲಿ ತಮಿಳು ಮಾತನಾಡುವವರೇ ಹೆಚ್ಚಿನ ಸಂಖ್ಯೆಯಲ್ಲಿದ್ದರು. ಕನ್ನಡದ ನಾಮಫಲಕಗಳು ಕಾಣುತ್ತಿರಲಿಲ್ಲ. ಬದಲಾಗಿ ತಮಿಳು ಹಾಗೂ ಇಂಗ್ಲಿಷನವೆ ಹೆಚ್ಚು. ಕನ್ನಡಿಗರನ್ನು ಸ್ವಾಗತಿಸುತ್ತಿದ್ದ ಕೂಲಿ ಆಳುಗಳು, ರಿಕ್ಷಾ ಚಾಲಕರು ತಮಿಳರೇ ಆಗಿದ್ದರು. ತೆಲುಗು, ಮಲೆಯಾಳ, ಹಿಂದಿ, ಮರಾಠಿ ಭಾಷೆಗಳನ್ನು ಆಡುವವರನ್ನೂ ನೋಡಬಹುದಿತ್ತು. ದೂರದ ಊರುಗಳಿಂದ ಬೆಂಗಳೂರಿಗೆ ಬರುತ್ತಿದ್ದ ಕನ್ನಡಿಗರು ಕನ್ನಡೇತರರಿಂದ ಅವಮಾನ, ಕೀಟಲೆಗಳನ್ನು ಅನುಭವಿಸುವ ಪರಿಸ್ಥಿತಿ ಉದ್ಭವವಾಗಿತ್ತು. ಆಗ ಇದನ್ನು ಪ್ರತಿಭಟಿಸುವ ಯಾವುದೇ ಸಂಘಟಿತ ಮಾರ್ಗಗಳು ಕನ್ನಡಿಗರಿಗೆ ಇರಲಿಲ್ಲ. ಇಂಥ ವೇದಿಕೆಗಳನ್ನು ನಿರ್ಮಿಸಿಕೊಂಡು ಕನ್ನಡತನವನ್ನು ಮೂಡಿಸಲು ಮುಂದೆ ಬಂದವರು ಬೆರಳೆಣಿಕೆಯಷ್ಟು ಸಂಖ್ಯೆಯ ಮಂದಿ ಮಾತ್ರ. ಅ.ನ.ಕೃಷ್ಣರಾವ್, ಕೋಣಂದೂರು ಲಿಂಗಪ್ಪ, ಮ.ರಾಮಮೂರ್ತಿ, ನಾಡಿಗೇರ ಕೃಷ್ಣರಾವ್, ಮೈ.ಸು.ನಟರಾಜ, ಮೈ.ಸು.ಶೇಷಗಿರಿರಾವ್, ಕರ್ಲಮಂಗಲಂ ಶ್ರೀಕಂಠಯ್ಯ, ಬೆ.ನಿ.ಈಶ್ವರಪ್ಪ, ತಿ.ತಾ.ಶರ್ಮ, ಎಂ.ವಿ.ಸುಬ್ಬರಾವ್ ಮೊದಲಾದವರು ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾದರು. ಇವರೆಲ್ಲ 1960ರ ದಶಕದ ಆರಂಭಿಕ ವರ್ಷಗಳಲ್ಲಿ ಕನ್ನಡದ ಚಳವಳಿಗಾಗಿ ತಮ್ಮನ್ನು ತೊಡಗಿಸಿಕೊಂಡವರು. ಆದರೆ ಇವರನ್ನು ಒಂದು ವೇದಿಕೆಯಡಿಗೆ ತಂದ ಕೋಣಂದೂರು ಲಿಂಗಪ್ಪ ಅವರ ಪ್ರಯತ್ನಗಳು ಪ್ರಧಾನವಾದವು. ಕನ್ನಡ ಚಳವಳಿಗೆ ಆರಂಭಿಕ ನೆಲೆಗಟ್ಟನ್ನು ಹಾಕಿಕೊಟ್ಟ ಕೀರ್ತಿ ಅವರಿಗೂ ಇತರ ಆದ್ಯ ಹೋರಾಟಗಾರರಿಗೂ ಸಲ್ಲುತ್ತದೆ.

**ಚಳವಳಿಯ ಮೊದಲ ಘಟ್ಟ :** ರಾಮಮನೋಹರ ಲೋಹಿಯ ಅವರ ಭಾಷಿಕ ಸಿದ್ಧಾಂತಗಳಿಂದ ಪ್ರೇರಿತರಾಗಿದ್ದ ಶಾಂತವೇರಿ ಗೋಪಾಲಗೌಡರು ತಮ್ಮದೇ ಆದ ರೀತಿಯಲ್ಲಿ ಕನ್ನಡಕ್ಕಾಗಿ ಚಿಂತನೆ ನಡೆಸಿದ್ದರು. ರಾಜಕಾರಣದಲ್ಲಿ ಇವರು ಪ್ರಯತ್ನ ನಡೆಸಿದ್ದಂತೆ ಇದೇ ದಿಕ್ಕಿನಲ್ಲಿ ಸಾಹಿತ್ಯಕವಾಗಿ ಕುವೆಂಪು ಮೊದಲಾದವರು ಚಿಂತನೆ ನಡೆಸಿದ್ದರು. ಪ್ರಗತಿಶೀಲದ ವಲಯದಲ್ಲಿ ಅ.ನ.ಕೃ. ಆದಿಯಾಗಿ ಅನೇಕರು ಈ ಕುರಿತು ತಾತ್ವಿಕ ತಳಹದಿಯನ್ನು ರೂಪಿಸಲು ಪ್ರಯತ್ನಗಳನ್ನು ಮಾಡಿದ್ದು ಗಮನಾರ್ಹ. ಶಾಂತವೇರಿಯವರ ಶಿಷ್ಯರಾಗಿದ್ದ ಕೋಣಂದೂರು ಲಿಂಗಪ್ಪ ಬೆಂಗಳೂರಿಗೆ (ವಿದ್ಯಾರ್ಥಿ ದೆಸೆಯಲ್ಲಿ) ಬಂದಾಗ ತಮಿಳರಿಂದ ಅಪಮಾನಕ್ಕೆ ಒಳಗಾದರು. ಈ ಅಪಮಾನದ ಪರಿಣಾಮವಾಗಿ ಅವರು ಕರ್ನಾಟಕ (ಕನ್ನಡ) ಯುವಜನ ಸಭಾವನ್ನು ಹುಟ್ಟುಹಾಕಿದರು. 1957ರ ವೇಳೆಗೆ ಲೋಹಿಯ ಕರೆಯನ್ನು ಅನುಸರಿಸಿ ಅಂಗ್ರೇಜಿ (ಇಂಗ್ಲಿಷ್) ಹಟಾವೋ ಚಳವಳಿ ಆರಂಭಗೊಂಡಿತ್ತು. ಮೈಸೂರಿನಲ್ಲಿ ಕುವೆಂಪು ಅವರು ಸಹ ಈ ಕರೆಗೆ ಸ್ಪಂದಿಸಿದರು. ಇಂಗ್ಲಿಷ್ ಪ್ರಾಧ್ಯಾಪಕರ ರಾಷ್ಟ್ರೀಯ ಸಭೆಯೊಂದು ಮೈಸೂರಿನಲ್ಲಿ ನಡೆಯಿತು. ಇದಕ್ಕೆ ಪ್ರತಿಕ್ರಿಯಿಸಲು ಕೋಣಂದೂರು ಲಿಂಗಪ್ಪ, ಪೂರ್ಣಚಂದ್ರತೇಜಸ್ವಿ, ಕೆ.ಎಚ್. ಶ್ರೀನಿವಾಸ, ಕಡಿದಾಳ್ ಶಾಮಣ್ಣ ಮೊದಲಾದ ವಿದ್ಯಾರ್ಥಿಗಳಿಗೆ ಕುವೆಂಪು ಪ್ರೇರಣೆ ನೀಡಿದ್ದರು. ಈ ಪ್ರತಿಕ್ರಿಯೆಗೆ ಇಂಗ್ಲಿಷಿನಲ್ಲಿಯೇ ಪ್ರತಿಭಟನಾ ಕರಪತ್ರಗಳನ್ನು ರಚಿಸುವುದು ಅನಿವಾರ್ಯವಾಯಿತು. ಆಗ ಇಂಗ್ಲಿಷ್ ವಿರುದ್ಧ ಇಂಗ್ಲಿಷಿನಲ್ಲಿಯೇ ಕರಪತ್ರವೊಂದನ್ನು ಬರೆದುಕೊಟ್ಟವರು ಯು.ಆರ್.ಅನಂತಮೂರ್ತಿ, ಇಂಗ್ಲಿಷ್ ಪ್ರಾಧ್ಯಾಪಕರ ಸಭೆಯಲ್ಲಿ ಕನ್ನಡದ ಯುವಕರು ಈ ಕರಪತ್ರಗಳನ್ನು ಹಂಚುವುದರ ಮುಖೇನ ಕನ್ನಡದ ಪ್ರಾಶಸ್ತ್ಯದ ಕಡೆಗೆ ಗಮನ ಸೆಳೆದಿದ್ದರು. ಇಂಥ ಚಟುವಟಿಕೆಗಳನ್ನು ಹುಟ್ಟುಹಾಕಿದ ಮೊತ್ತಮೊದಲ ಯುವ ಸಂಘಟನೆಯೇ ಕನ್ನಡ ಯುವಜನ ಸಭಾ. ಇದು ಮೈಸೂರಿನ ಇಂದಿನ ದಾಸ್ ಪ್ರಕಾಶ್ ಹೊಟೇಲ್ ಬಳಿ ತನ್ನ ಮೊದಲ ಸಭೆ ಸೇರಿ ಕನ್ನಡದ ಅಳಿವು ಉಳಿವಿನ ಬಗ್ಗೆ ಚಿಂತನೆ ನಡೆಸಿತ್ತು. ಇದು ಕನ್ನಡ ಚಳವಳಿಯ ಚರಿತ್ರೆಯಲ್ಲಿಯೇ ಮೊದಲ ಸಂಘಟನೆಯಾಗಿತ್ತು. ಬೆಂಗಳೂರಿನಲ್ಲಿ ಕನ್ನಡತನವನ್ನು ಮೂಡಿಸುವುದಕ್ಕೆ ಕನ್ನಡ ಯುವಜನ ಸಭಾದ ವೇದಿಕೆಯನ್ನು ಬಳಸಿಕೊಳ್ಳಲಾಯಿತು. ಬೆಂಗಳೂರಿನಲ್ಲಿ ಚಳವಳಿ ಹೂಡುವುದಕ್ಕೆ ಮೊದಲು ನಾಡಿನ ಇತರ ಜಿಲ್ಲೆ, ತಾಲ್ಲೂಕುಗಳಲ್ಲಿ ಪ್ರವಾಸ ಮಾಡಿ 120ಕ್ಕೂ ಹೆಚ್ಚಿನ ಸಭಾದ ಶಾಖೆಗಳನ್ನು ತೆರೆದು ಸಂಘಟಿಸಿದ್ದು ಗಮನಾರ್ಹ ಸಂಗತಿ. 1959ರ ವೇಳೆಗೆ ಕನ್ನಡದ ಸ್ಥಿತಿಗತಿಗಳ ಸುಧಾರಣೆಗಾಗಿ ಕನ್ನಡಿಗರು ಸಂಘಟಿತರಾಗುವುದು ಅನಿವಾರ್ಯ ಎಂಬ ವಾತಾವರಣವನ್ನು ಮೂಡಿಸಲಾಗಿತ್ತು. ಇದಕ್ಕೆ ಸಾಹಿತಿ ಅ.ನ.ಕೃ. ಅವರ ಪ್ರಯತ್ನ, ಪ್ರವಾಸ ಕಾರ್ಯಕ್ರಮಗಳು ಹೆಚ್ಚಿನ ಹುರುಪನ್ನು ತಂದಿದ್ದವು. ಅ.ನ.ಕೃ. ಅವರನ್ನು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೆಂದು ಪರಿಷತ್ತು (ಕ.ಸಾ.ಪ.) ಈ ವೇಳೆಗಾಗಲೇ ಘೋಷಿಸಿತ್ತು. ಅ.ನ.ಕೃ. ಅವರು ತಮ್ಮ ಸಮ್ಮೇಳನಾಧ್ಯಕ್ಷ ಭಾಷಣದಲ್ಲಿ (ಮಣಿಪಾಲ, 1960), ಕನ್ನಡದ ಬಂಟರ ಆವಶ್ಯಕತೆಯನ್ನು ಒತ್ತಿ ಹೇಳಿದ್ದರು. ಸಮ್ಮೇಳನದಲ್ಲಿದ್ದ ಈ ಕನ್ನಡ ಯುವಜನ ಸಭಾದ ಯುವಕರು ಕನ್ನಡ ಯುವಜನ ಸಭೆಯನ್ನು ವರಕವಿ ಬೇಂದ್ರೆ ಅವರಿಂದ ವಿದ್ಯುಕ್ತವಾಗಿ ಉದ್ಘಾಟನೆ (28-12-1960) ಮಾಡಿಸಿದ್ದು ಒಂದು ದಾಖಲೆ. ಲಿಂಗಪ್ಪನವರು ಸಭಾದ ಸಂಚಾಲಕರಾಗಿ ನಾಡಿನ ವಿವಿಧ ಕಡೆಗಳಲ್ಲಿ ಅ.ನ.ಕೃ. ಅವರಿಂದ ಭಾಷಣ ಮಾಡಿಸಿ ಜಾಗೃತಿ ಮೂಡಿಸಿದರು. ಮುಂದೆ ಬೆಂಗಳೂರಿನಲ್ಲಿ ಸಭೆ ಸೇರಿ ಎಂ.ವಿ.ಸುಬ್ಬರಾಯರ ಸಾಹಿತ್ಯ ಕುಟೀರದ ಅಡಿಯಲ್ಲಿ ಕನ್ನಡ ಕೆಲಸದ ರೂಪ ರೇಷೆಗಳನ್ನು ಸಿದ್ಧಪಡಿಸಲಾಯಿತು. ಇದರಲ್ಲಿ ಬಹುಪಾಲು ಹಿರಿಯ ಸಾಹಿತಿ, ಕಲಾವಿದರು ಭಾಗವಹಿಸಿದ್ದರು. ಸಭಾದವರು ಹಿರಿಯರ ಸಹಕಾರ ಪಡೆದು ಆಲೂರ ವೆಂಕಟರಾಯರ ಕರೆಗೆ ಓಗೊಟ್ಟು ನವೆಂಬರ್ ತಿಂಗಳಿನಲ್ಲಿ ರಾಜ್ಯೋತ್ಸವವನ್ನು (1961) ಆಚರಿಸಿದ್ದು ಗಮನಾರ್ಹ. ಅಲ್ಲದೆ ಬೆಂಗಳೂರಿನಲ್ಲಿ ಕನ್ನಡಿಗರನ್ನು ಸಂಘಟಿಸಿ ಪ್ರತಿಕ್ರಿಯಿಸುವಂತೆ ಮಾಡಲು ಸಭಾದ ಯುವಕರು ಕನ್ನಡ ದಿನವನ್ನು ಆಚರಿಸಲು ಕರೆಕೊಟ್ಟರು. ಅದರಂತೆ 23-11-1961ರಂದು ನಾಡು ನುಡಿಗಳ ಬಗ್ಗೆ ಅರಿವು ಮೂಡಿಸಲಾಯಿತು. ಇದಾದ ಅನಂತರ ದಾವಣಗೆರೆಯಲ್ಲಿ ಬೃಹತ್ ಸಮಾವೇಶವೊಂದನ್ನು ನಡೆಸಲು ಸಿದ್ಧತೆಗಳನ್ನು ಮಾಡಲಾಯಿತು. ಬೆಂಗಳೂರಿನಲ್ಲಿ ಸಭಾದ ಮೊದಲ ಬೃಹತ್ ಅಧಿವೇಶನ ನಡೆಯಿತು. ಕನ್ನಡ ಭುವನೇಶ್ವರಿ ಬಾವುಟವನ್ನು ಹಾರಿಸುವುದರೊಂದಿಗೆ (4-12-1962) ಉದ್ಘಾಟನೆಗೊಂಡ ಈ ಬೃಹತ್ ಅಧಿವೇಶನ ಕನ್ನಡ ಚಳವಳಿಯ ಚರಿತ್ರೆಯಲ್ಲಿ ಮುಖ್ಯವಾದುದು. ಇಲ್ಲಿ ಕನ್ನಡ, ಕನ್ನಡಿಗ, ಕರ್ನಾಟಕಗಳಿಗೆ ಸಂಬಂಧಿಸಿದಂತೆ 15 ನಿರ್ಣಯಗಳನ್ನು ಮಂಡಿಸಿ ಸ್ವೀಕರಿಸಲಾಯಿತು. ನಾಡಿನ ಗಡಿಗಳು, ರೈಲ್ವೆ, ಪ್ರಶಸ್ತಿ, ಕನ್ನಡ ಬೆರಳಚ್ಚುಯಂತ್ರ, ವಿಶ್ವವಿದ್ಯಾಲಯಗಳಲ್ಲಿ ಶಿಕ್ಷಣ ಮಾಧ್ಯಮ, ಕನ್ನಡ ಕಲಾವಿದರಿಗೆ ಆದ್ಯತೆ, ಕನ್ನಡ ಚಲನಚಿತ್ರಗಳಿಗೆ ಪ್ರೋತ್ಸಾಹ, ಆರ್ಥಿಕ, ಅಭಿವೃದ್ಧಿ ಮೊದಲಾದ ಎಲ್ಲ ವಿಚಾರಗಳೂ ನಿರ್ಣಯಗಳಲ್ಲಿ ಸೇರಿದ್ದವು. ಈ ನಿರ್ಣಯಗಳನ್ನು ನಾಡಿನ ಎಲ್ಲ ಕನ್ನಡಪರವಾದ ಸಂಘಟನೆಗಳಿಗೂ ಕಳುಹಿಸಿಕೊಡಲಾಯಿತು. ಆದರೆ ಬೆಂಗಳೂರಿನ ಚಾಮರಾಜಪೇಟೆಯ ರಾಮಸೇವಾ ಮಂಡಲಿಯವರು ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಕನ್ನಡ ಕಲಾವಿದರನ್ನು ಕರೆಸದೆ ಸಭೆಯ ನಿರ್ಣಯಗಳನ್ನು ಮುರಿದರು. ಮದರಾಸಿನಿಂದ ಎಂ.ಎಸ್. ಸುಬ್ಬುಲಕ್ಷ್ಮಿಯವರನ್ನು ಕರೆಸಿ ಸಂಗೀತ ಕಛೇರಿಯನ್ನು ನಡೆಸಿದ್ದು ಕನ್ನಡ ಕಾರ್ಯಕರ್ತರ ಪ್ರತಿಭಟನೆಗೆ ಗುರಿಯಾಗುವಂತೆ ಮಾಡಿತು. ಶಾಂತ ರೀತಿಯಲ್ಲಿ ಕನ್ನಡದ ಕಳಕಳಿಯನ್ನು ಪ್ರದರ್ಶಿಸಲು ಹಾತೊರೆದಿದ್ದ

ಕಾರ್ಯಕರ್ತರನ್ನು ಕಿಡಿಗೇಡಿಗಳು ಕೆಣಕಿದರು. ಪರಿಸ್ಥಿತಿ ಹಿಂಸಾತ್ಮಕ ರೂಪ ಪಡೆದು, ಪೊಲೀಸರಿಂದ ಲಾಠಿ ಪ್ರಹಾರ ಆಯಿತು. ತಮಿಳು ಪತ್ರಿಕೆಗಳು ಇದನ್ನು ಭಾಷಿಕ ದ್ವೇಷವೆಂದು ತಿರುಚಿ ಬರೆದವು. ಕನ್ನಡಿಗರಿಗೆ ಸಂಕುಚಿತರೆಂಬ ಪಟ್ಟ ಕಟ್ಟಲು ಪ್ರಯತ್ನಿಸಿದ ಈ ಘಟನೆ ಕನ್ನಡ ಚಳವಳಿಯನ್ನು ಭಿನ್ನ ಸ್ವರೂಪದಲ್ಲಿ ಗ್ರಹಿಸಲು ಎಡೆಮಾಡಿಕೊಟ್ಟಿತು.

**ಕನ್ನಡ ಜಾಗೃತ ಪರಿಷತ್ ಹಾಗೂ ಸಂಯುಕ್ತ ರಂಗ :** ಬೆಂಗಳೂರಿನಲ್ಲಿ ಅ.ನ.ಕೃ., ಮ. ರಾಮಮೂರ್ತಿ ಮೊದಲಾದ ಚಳವಳಿ ನಾಯಕರು ಕನ್ನಡಪರವಾದ ಸಂಘ ಸಂಸ್ಥೆಗಳನ್ನು ಕಟ್ಟಿಕೊಳ್ಳಲು ಕರೆ ನೀಡಿದ್ದರು. ತಮಿಳರ ಸಂಘಟನೆಗಳು ವಿಪರೀತವಾಗತೊಡಗಿದ್ದವು. ಅದರಲ್ಲೂ ಡಿ.ಎಂ.ಕೆ. (ದ್ರಾವಿಡ ಮುನ್ನೇಟ್ರ ಕಳಗಂ) ಪಕ್ಷದವರ ಕಪ್ಪು ಮತ್ತು ಕೆಂಪು ಬಣ್ಣದ ಬಾವುಟಗಳ ಹಾರಾಟ ಹೆಚ್ಚಾಯಿತು. ಕನ್ನಡಿಗರಿಗೆ ನಿರ್ದಿಷ್ಟ ಕನ್ನಡ ಬಾವುಟ ಇರಲಿಲ್ಲ. ಭುವನೇಶ್ವರಿ, ಕರ್ನಾಟಕ ಭೂಪಟ, ಗಂಡಭೇರುಂಡ, ಚಿತ್ರಗಳಿರುವ ಬಾವುಟಗಳನ್ನೇ ಬಳಸುತ್ತಿದ್ದರು. ಹೀಗಾಗಿ ಕನ್ನಡದ ಈ ಸಂಘಟನೆಗಳು ಬಾವುಟದ ಕೊರತೆಯನ್ನು ಮನಗಂಡು ಕ್ರಿಯಾಶೀಲವಾಗಿದ್ದವು. ಕನ್ನಡಿಗರಲ್ಲಿ, ಸಂಘ ಸಂಸ್ಥೆಗಳಲ್ಲಿ ಅಭಿಮಾನವನ್ನು ಮೂಡಿಸಲು ಕನ್ನಡ ಜಾಗೃತ ಪರಿಷತ್ ಎಂಬ ಸಂಘಟನೆ ಹುಟ್ಟಿಕೊಂಡಿತು. ಕನ್ನಡದ ಅಭಿಮಾನಕ್ಕಾಗಿ, ಚಳವಳಿಯ ರೂಪರೇಷೆಗಳಿಗಾಗಿ ಈ ಸಂಘಟನೆ ಹೊರಡಿಸಿದ ಪತ್ರಿಕೆಯೇ 'ಕನ್ನಡ ಜಾಗೃತ ಪತ್ರ'. ಇದು ತ್ರೈಮಾಸಿಕವಾಗಿತ್ತು. ಕೆಲವೇ ದಿನಗಳಲ್ಲಿ ಇದೇ ಆಶಯಕ್ಕಾಗಿ ಧ್ರುವ ಎಂಬ ಮಾಸಿಕ ಹೊರಬಂತು. ಎಂ.ನಾಗರಾಜ್ ಅವರು ಇವೆರಡರ ಸಂಪಾದಕರಾಗಿದ್ದರು. ಪತ್ರಿಕೆ ನಡೆಸಿ, ನಷ್ಟ ಅನುಭವಿಸಿ ಆತ್ಮಹತ್ಯೆ, ಮಾಡಿಕೊಂಡರು. ಈ ದುರಂತ ಘಟನೆ ಕನ್ನಡ ಯುವಜನ ಸಭಾದವರಿಗೆ ಮತ್ತಷ್ಟು ಕೆಚ್ಚು, ಹುಮ್ಮಸ್ಸುಗಳನ್ನು ತುಂಬಿತು. ಸಭಾದವರು ಚಳವಳಿಗಳಿಗಾಗಿಯೇ 'ಕನ್ನಡ ಯುವಜನ' ಎಂಬ ಪತ್ರಿಕೆಯನ್ನು ಹೊರಡಿಸಲಾರಂಭಿಸಿದರು. ಇದರ ಸಂಪಾದಕರಾಗಿದ್ದವರು ಚಳವಳಿಗಾರ ಮ. ರಾಮಮೂರ್ತಿ. ಅ.ನ.ಕೃ. ಮತ್ತು ಮ.ರಾಮಮೂರ್ತಿ ಅವರು ಜನ ಕರೆದೆಡೆಗೆ ಹೋಗಿ ಕನ್ನಡಿಗರ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುವಲ್ಲಿ ಸಲಹೆ ನೀಡಿ ಸಂಘಟಿಸತೊಡಗಿದರು. ಇದರ ಪರಿಣಾಮವಾಗಿ ಹುಟ್ಟಿಕೊಂಡಿದ್ದೇ ಕರ್ನಾಟಕ ಸಂಯುಕ್ತ ರಂಗ. ಕನ್ನಡದ ಎಲ್ಲ ಸಂಸ್ಥೆಗಳನ್ನು ಒಂದೇ ವೇದಿಕೆಯಡಿಗೆ ತರುವುದು ಇದರ ಆಶಯವಾಗಿತ್ತು. 1962ರಲ್ಲಿ ಅಸ್ತಿತ್ವಕ್ಕೆ ಬಂದ ಈ ರಂಗದ ಅಧ್ಯಕ್ಷರು ಅ.ನ.ಕೃ., ಕಾರ್ಯದರ್ಶಿ ಮ. ರಾಮಮೂರ್ತಿ. ಇವರೊಂದಿಗೆ ತ.ರಾ.ಸು., ಅ.ನ.ಸುಬ್ಬರಾವ್, ಬೀಚಿ, ವೀರಕೇಸರಿ ಸೀತಾರಾಮಶಾಸ್ತ್ರೀ, ನಾ.ಕೃ. ಸತ್ಯನಾರಾಯಣ, ಭಾರತೀಂದ್ರಸ್ವಾಮಿ, ಸುಬ್ಬರಾವ್ ಮೊದಲಾದವರು ಸೇರಿಕೊಂಡಿದ್ದರು. ಸಂಯುಕ್ತ ರಂಗದಿಂದಾಗಿ ಪ್ರಧಾನ ಧಾರೆಗೆ ಸಭಾವು ಬರಲಾಗದಿದ್ದರೂ ತನ್ನದೇ ಆದ ಮಿತಿಗಳ ನಡುವೆಯೇ ಕನ್ನಡದ ಚಟುವಟಿಕೆಗಳನ್ನು ಚಾಲ್ತಿಯಲ್ಲಿ ಇಟ್ಟಿತ್ತು.

ಕನ್ನಡ ನಾಡು ಏಕೀಕೃತವಾಗಿ 1963ರ ವೇಳೆಗೆ ಏಳು ವರುಷಗಳಾಗಿದ್ದವು. ಆದರೆ ಕನ್ನಡಿಗರ ಆಶಯಗಳು ಈಡೇರಿರಲಿಲ್ಲ. ಈ ಕುರಿತು ಜಾಗೃತಿ ಮೂಡಿಸಲು ಆ ವರ್ಷದ ನವೆಂಬರ್ ಒಂದರಂದು ಸ್ವಾತಂತ್ರ್ಯೋತ್ಸವದ ರೀತಿಯಲ್ಲಿ ರಾಜ್ಯೋತ್ಸವವನ್ನು ಆಚರಿಸಲು ಸಂಯುಕ್ತ ರಂಗ ಯೋಜಿಸಿತು. ಅದರಂತೆ 1963ರ ನವೆಂಬರ್ 1ನ್ನು ರಾಜ್ಯೋತ್ಸವ ದಿನವನ್ನಾಗಿ ಅದ್ದೂರಿಯಾಗಿ ಆಚರಿಸಲಾಯಿತು. ನಾಡಿನ ಎಲ್ಲ ಕನ್ನಡಪರ ಸಂಘಟನೆಗಳನ್ನೂ ಬೆಂಗಳೂರಿನ ಧರ್ಮಾಂಬುಧಿ ಕೆರೆಯ (ಸುಭಾಶ್ ನಗರ, ಈಗಿನ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಕೇಂದ್ರ ನಿಲ್ದಾಣವಿರುವ ಪ್ರದೇಶ) ಮೈದಾನದಲ್ಲಿ ಸೇರುವಂತೆ ಮಾಡಿತು. ಕನ್ನಡ ಚಳವಳಿ ಚರಿತ್ರೆಯಲ್ಲಿ ಇದೇ ಪ್ರಥಮಬಾರಿ ರಾಜ್ಯೋತ್ಸವ ನಡೆಯಿತು. ಅನಂತರ ಪ್ರತಿ ವರ್ಷವೂ ಈ ಆಚರಣೆ ಜಾರಿಗೆ ಬಂತು. ಕನ್ನಡಕ್ಕಾಗಿ ದುಡಿದ ರಾಮಮೂರ್ತಿ ಅವರ ಉತ್ಸಾಹ, ಅಭಿಮಾನಗಳನ್ನು ಕಂಡು ಅವರನ್ನು ಕನ್ನಡ ಸೇನಾನಿ ಎಂದು ಕರೆಯಲಾಯಿತು. ಏಕೆಂದರೆ ಕನ್ನಡ ಕಾರ್ಯಕರ್ತರ ಮೊಕದ್ದಮೆಗಳಲ್ಲಿ ಇವರೇ ಜಾಮೀನುದಾರರು. ಕನ್ನಡದ ಕಾರಣಕ್ಕಾಗಿ ಇವರು ಅನೇಕ ಮೊಕದ್ದಮೆಗಳನ್ನು ಎದುರಿಸಿದರು.

**ಚಲನಚಿತ್ರ ಮತ್ತು ಕನ್ನಡ ಚಳವಳಿ :** ಇದೇ ವೇಳೆಗೆ ಕನ್ನಡ ಚಲನಚಿತ್ರ ರಂಗದಲ್ಲಿಯೂ ಕನ್ನಡತನ ಬಡವಾಗಿತ್ತು. ಕನ್ನಡ ಕಲಾವಿದರಿಗೆ ನಿರ್ಮಾಪಕ ನಿರ್ದೇಶಕರಿಗೆ ಕನ್ನಡನಾಡಿನಲ್ಲಿ ಪ್ರಾತಿನಿಧ್ಯವಿರಲಿಲ್ಲ. ಹೆಚ್ಚಾಗಿ ಪರಭಾಷೆಯ ಚಿತ್ರಗಳು ಓಡುತ್ತಿದ್ದವು. ಕನ್ನಡ ಚಿತ್ರಗಳಿಗೆ ಎರಡು ಅಥವಾ ಮೂರನೆಯ ಸ್ಥಾನ ಮೀಸಲಾಗಿತ್ತು. ಕನ್ನಡದ ಕಲಾವಿದರಲ್ಲಿ ಕೆಲವರು ಅನ್ಯಭಾಷೆಗಳಲ್ಲಿ ನೆಲೆನಿಂತು ಅಭಿಮಾನಶೂನ್ಯರಾಗಿದ್ದರು. ಕನ್ನಡಿಗರಿಗೆ ಥಿಯೇಟರ್, ಸ್ಟುಡಿಯೋ ಸಮಸ್ಯೆಗಳ ಜೊತೆಗೆ ಡಬ್ಬಿಂಗ್ ಹಾವಳಿಯೂ ಆವರಿಸಿಕೊಂಡಿತ್ತು. ಬೇರೆ ಭಾಷೆಗಳಲ್ಲಿನ ಚಿತ್ರಗಳು ಕನ್ನಡ ಭಾಷೆಗೆ ಡಬ್ ಆಗಿ ಕನ್ನಡತನವಿಲ್ಲದಂತೆ ಮಾಡಿದ್ದವು. ಕರ್ನಾಟಕ ಸರ್ಕಾರದಿಂದಲೂ ಕನ್ನಡ ಚಲನಚಿತ್ರೋದ್ಯಮಕ್ಕೆ ಆದ್ಯತೆ ದೊರೆತಿರಲಿಲ್ಲ. ಇಂಥ ಸಮಸ್ಯೆಗಳನ್ನು ಕನ್ನಡ ಚಳವಳಿಗಾರರು ಕೈಗೆತ್ತಿಕೊಂಡರು. ಮ.ರಾಮಮೂರ್ತಿ, ಅ.ನ.ಕೃ. ಮೊದಲಾದವರು ಪ್ರತಿಭಟನೆಯ ಹಾದಿ ಹಿಡಿದರು. ಈ ಸಂದರ್ಭದಲ್ಲಿ ವಾಟಾಳ್ ನಾಗರಾಜರಂಥ ಯುವಕರು ಚಳವಳಿಗೆ ಧುಮುಕಿದರು. ಕನ್ನಡದ ಮೇರು ನಟ ರಾಜಕುಮಾರ್ ಅವರನ್ನೂ ಒಳಗೊಂಡಂತೆ ಜಿ.ವಿ. ಅಯ್ಯರ್, ಬಾಲಕೃಷ್ಣ, ನರಸಿಂಹರಾಜು ಸೇರಿ ಕನ್ನಡ ಚಲನಚಿತ್ರ ಕಲಾವಿದರ ಸಂಘವನ್ನು ರಚಿಸಲಾಯಿತು. ಈ ಸಂಘಟನೆಯ ಅಡಿಯಲ್ಲಿ ಅನೇಕ ಕನ್ನಡ ಚಿತ್ರಗಳನ್ನು ನಿರ್ಮಿಸುವ ಪ್ರಯತ್ನಗಳು ನಡೆದವು. ಇಂಥ ಚಿತ್ರಗಳನ್ನು ಸಿನಿಮಾ ಮಂದಿರದ ಮಾಲೀಕರು ಕಡ್ಡಾಯವಾಗಿ ಪ್ರದರ್ಶಿಸಲು ಒತ್ತಾಯಿಸಲಾಯಿತು. ಖಾಸಗಿ ಉದ್ಯಮಗಳ, ಸಂಘಸಂಸ್ಥೆಗಳ ಯುವಕರೂ ಈ ಪ್ರತಿಭಟನೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಹೀಗಾಗಿ ಕನ್ನಡದ ನಿರ್ಮಾಪಕರುಗಳಿಗೆ, ಕನ್ನಡ ಚಿತ್ರಗಳಿಗೆ ಭರವಸೆಯ ವಾತಾವರಣ ಮೂಡುವಂತಾಯಿತು.

ಮದರಾಸಿನಲ್ಲಿ ಚಲನಚಿತ್ರದ ಉದ್ಯಮ ಪ್ರಗತಿಪರವಾಗಿತ್ತು. ಇದಕ್ಕೆ ಅಲ್ಲಿನ ಕಲಾವಿದರ, ರಾಜಕಾರಣಿಗಳ ಸ್ವಭಾಷಿಕ ಪ್ರೇಮವೇ ಕಾರಣವಾಗಿತ್ತು. ತಮಿಳು ಚಿತ್ರರಂಗಕ್ಕೆ ಎಂ.ಜಿ.ಆರ್.(ಎಂ.ಜಿ.ರಾಮಚಂದ್ರನ್), ಎಂ.ಕರುಣಾನಿಧಿ ಅವರು ನೀಡಿದ ಪ್ರೋತ್ಸಾಹ ಬಹು ದೊಡ್ಡದು. ಬೆಂಗಳೂರಿನ ಡಿ.ಎಂ.ಕೆ. ಪಕ್ಷದ ಕಾರ್ಯಕರ್ತರು ಇತರೆ ತಮಿಳು ಸಂಘಟನೆಗಳೊಂದಿಗೆ ಸೇರಿಕೊಂಡು ತಮಿಳು ಚಲನಚಿತ್ರಗಳಿಗೆ ಅತಿಯಾಗಿ ಪ್ರೋತ್ಸಾಹಿಸುತ್ತಿದ್ದರು. 1964ರ ವೇಳೆಗೆ ಎಂ.ಜಿ.ಆರ್. ನಟಿಸುತ್ತಿದ್ದ ಚಲನಚಿತ್ರಗಳು ಬೆಂಗಳೂರಿನ ತಮಿಳರನ್ನು ಅತಿಯಾಗಿ ವರ್ತಿಸುವಂತೆ ಮಾಡಿದ್ದವು. ಇದರ ಪರಿಣಾಮವಾಗಿ 'ಕಾಂಚಿ ತಲೈವನ್' ಚಲನಚಿತ್ರದ ವಿರುದ್ಧ ಕನ್ನಡ ಚಳವಳಿ ತೀವ್ರ ಸ್ವರೂಪ ಪಡೆದುಕೊಂಡಿತು.

'ಕಾಂಚಿ ತಲೈವನ್' ಚಲನಚಿತ್ರ (1964) ಕಂಚಿಯ ಪಲ್ಲವರ ದೊರೆ 1ನೆಯ ನರಸಿಂಹವರ್ಮ ಬಾದಾಮಿ ಚಳುಕ್ಯ ದೊರೆ ಇಮ್ಮಡಿ ಪುಲಕೇಶಿಯನ್ನು ಸೋಲಿಸಿದ ಕಥೆಯನ್ನೊಳಗೊಂಡಿದೆ. ಕನ್ನಡಿಗರನ್ನು ಅವಮಾನಿಸಲೋ ಎಂಬಂತೆ ತಮಿಳು ದೊರೆ ಕರ್ನಾಟಕದ ಬಾವುಟವನ್ನು ಕಾಲಿನಲ್ಲಿ ತುಳಿಯುವ ದೃಶ್ಯಗಳನ್ನು ಆ ಚಿತ್ರದಲ್ಲಿ ಚಿತ್ರೀಕರಿಸಲಾಗಿತ್ತು. ಚರಿತ್ರೆಯ ಸೂಕ್ಷ್ಮ ಸಂಗತಿಗಳನ್ನು ಭಾಷಿಕ ನೆಲೆಯಲ್ಲಿ ವೈಯಕ್ತಿಕವಾಗಿ ತೆಗೆದುಕೊಂಡ ಸಂದರ್ಭ ಇದಾಗಿತ್ತು. ತಮಿಳರ ಈ ವರ್ತನೆ ಕನ್ನಡಿಗರನ್ನು ಕೆರಳಿಸಿತು. ಚಳವಳಿಗಾರರು, ಇತಿಹಾಸ ತಜ್ಞರು, ವಿದ್ವಾಂಸರು, ಕನ್ನಡಾಭಿಮಾನಿಗಳು ಚಲನಚಿತ್ರದ ಕೆಲವು ಭಾಗಗಳನ್ನು ತೆಗೆದುಹಾಕಲು ಒತ್ತಾಯಿಸಿ ಪ್ರತಿಭಟಿಸಿದರು. ಆದರೂ ಆಕ್ಷೇಪಾರ್ಹ ಭಾಗಗಳನ್ನು ತೆಗೆಯದೆ ಚಿತ್ರವನ್ನು ಪ್ರದರ್ಶಿಸತೊಡಗಿದ್ದು ಕನ್ನಡಿಗರ ಸ್ವಾಭಿಮಾನವನ್ನು ಕೆರಳಿಸಿತು. ಈ ಘಟನೆ ಹಿಂಸಾರೂಪಕ್ಕೆ ತಿರುಗಿತು. ಈ ಘಟನೆಯೇ ಅ.ನ.ಕೃ. ಹಾಗೂ ರಾಮಮೂರ್ತಿಯವರಲ್ಲಿ ಭಿನ್ನಾಭಿಪ್ರಾಯಗಳಿಗೆ ಕಾರಣವಾಯಿತು. ಭಾವೋದ್ವೇಗ ಬಿಟ್ಟು ಚರಿತ್ರೆಯನ್ನು ನೋಡಬೇಕೆಂಬ ವಿಚಾರ ಅ.ನ.ಕೃ. ಅವರದು. ಭಾವನೆಯೂ ಚರಿತ್ರೆಯ ಭಾಗ ಎಂಬುದು ರಾಮಮೂರ್ತಿಯವರ ನಿಲವು. ಇಂಥ ತಾತ್ವಿಕ ಭಿನ್ನಾಭಿಪ್ರಾಯದಿಂದಾಗಿ ಕಡೆಗೆ ಅ.ನ.ಕೃ. ಕನ್ನಡ ಚಳವಳಿಯಿಂದ ಹಿಂದಕ್ಕೆ ಸರಿದರು. ಆದರೆ ನಾಡಿನ ಬೇರೆಡೆಗಳಲ್ಲೂ ಈ ಚಲನಚಿತ್ರ ಪ್ರದರ್ಶಿತವಾಗದಂತೆ ಮ.ರಾಮಮೂರ್ತಿ ಚಳವಳಿ ಹೂಡಿದರು. ಭದ್ರಾವತಿ, ಹಾಸನ ಮೊದಲಾದೆಡೆಗಳಲ್ಲಿ ಪರಿಸ್ಥಿತಿ ವಿಕೋಪಕ್ಕೆ ಹೋಗಿ ಚಳವಳಿಗಾರರ ಮೇಲೆ ಪೋಲೀಸರು ಮೊಕದ್ದಮೆಗಳನ್ನು ದಾಖಲು ಮಾಡಿದ್ದೂ ಇದೆ. ಇವೆಲ್ಲ ಕಾರಣಗಳಿಂದ ತಮಿಳರ ಹಾಗೂ ಕನ್ನಡಿಗರ ಮಧ್ಯೆ ಭಾಷಿಕ ವೈಷಮ್ಯ ವೃದ್ಧಿಸಿತು. ಇದರಿಂದಾಗಿ ಚಳವಳಿ ಹಾಗೂ ಪ್ರತಿಭಟನೆಗಳ ಮೂಲಕ ಕನ್ನಡ ಚಲನಚಿತ್ರರಂಗ ತನ್ನ ಅಸ್ತಿತ್ವವನ್ನು ಕಾಯ್ದುಕೊಂಡು ಬರುವಂತಾಯಿತು.

**ಮ.ರಾಮಮೂರ್ತಿ ಮತ್ತು ಕನ್ನಡ ಚಳವಳಿ :** ಅ.ನ.ಕೃ. ಅವರು ದೂರ ಸರಿದರೂ ಮ.ರಾಮಮೂರ್ತಿ ಅವರು ಏಕಾಂಗಿಯಾಗಿ ಸಂಯುಕ್ತ ರಂಗವನ್ನು

ಮುನ್ನಡೆಸಿದರು. ತಮಿಳರು ಡಿ.ಎಂ.ಕೆ. ಪಕ್ಷದವರ ಸಹಕಾರದಿಂದ ತಾವು ವಾಸಿಸುವ ಕಡೆಗಳಲ್ಲಿ ತಮಿಳು ಬಾವುಟಗಳನ್ನು ಹಾರಾಡಿಸಿದರು. ಈ ಸಂಗತಿ ಕನ್ನಡ ಕಾರ್ಯಕರ್ತರನ್ನು ಪ್ರಚೋದಿಸಿತು. ಕನ್ನಡದ ಪ್ರದೇಶಗಳಲ್ಲಿ ಕನ್ನಡದ ಬಾವುಟಕ್ಕೆ ಪ್ರಾಶಸ್ತ್ಯವೆಂದು ರಾಮಮೂರ್ತಿ ಚಳವಳಿ ಹೂಡಿದರು. ಇದರ ಪರಿಣಾಮವಾಗಿ ಹಿಂಸಾಕೃತ್ಯಗಳೂ ಜರುಗಿದವು. ತಮಿಳರ ಸಂಖ್ಯೆ ಹೆಚ್ಚಿದ್ದ ಕಡೆಗಳಲ್ಲಿ ಅಲ್ಪಸಂಖ್ಯಾತ ಕನ್ನಡಿಗರ ಮೇಲೆ ದೌರ್ಜನ್ಯಗಳು ನಡೆದವು. ಬೆಂಗಳೂರಿನಲ್ಲಿ ತಮಿಳರೇ ಹೆಚ್ಚಾಗಿದ್ದ ಶ್ರೀರಾಮಪುರ, ಜೋಗುಪಾಳ್ಯ, ನಾಗಪ್ಪ ಬ್ಲಾಕ್, ಕಾಕ್ಸ್ ಟೌನ್, ಫ್ರೇಜರ್ ಟೌನ್, ದಂಡು ಪ್ರದೇಶ ಮೊದಲಾದ ಕಡೆಗಳಲ್ಲಿ ಕನ್ನಡ ಚಳವಳಿ ಹಾಗೂ ಕನ್ನಡದ ಸಂಘಟನೆ ತೀವ್ರಗೊಂಡಿತು. ತಮಿಳರೇ ಹೆಚ್ಚಾಗಿದ್ದ ಕೆಲವು ಕಾರ್ಖಾನೆಗಳಲ್ಲಿ ಕನ್ನಡ ಕಾರ್ಮಿಕರು ಹಿಂಸೆ ಹಾಗೂ ಹಲ್ಲೆಗೆ ಒಳಗಾದರು. ಇದಕ್ಕೆ ಕೆಲವೊಮ್ಮೆ ಡಿ.ಎಂ.ಕೆಯಂಥ ರಾಜಕೀಯ ಪಕ್ಷದ ಬೆಂಬಲವೂ ಕೆಲವು ತಮಿಳುಪರ ಪತ್ರಿಕೆಗಳ ಬರೆವಣಿಗೆಯ ಬೆಂಬಲವೂ ಇತ್ತು.

ಸ್ಥಳೀಯ ಸಂಸ್ಥೆಗಳಿಗೆ ನಡೆಯುತ್ತಿದ್ದ ಚುನಾವಣೆಗಳಿಗೆ ತಮಿಳರೂ ಸ್ಪರ್ಧಿಸುವ ಮಟ್ಟಿಗೆ ಬಲಾಢ್ಯರಾದರು. ಹಿರಿಯೂರಿನಲ್ಲಿ ತಮಿಳರೇ ಹೆಚ್ಚು ಸಂಖ್ಯೆಯಲ್ಲಿದ್ದರು. ಇವರು ತಮ್ಮ ಕ್ಷೇತ್ರದಲ್ಲಿ ಡಿ.ಎಂ.ಕೆ. ಪಕ್ಷದ ಅಭ್ಯರ್ಥಿಗಳನ್ನು ಗೆಲ್ಲಿಸುವುದರೊಂದಿಗೆ ಪ್ರಾತಿನಿಧ್ಯ ಪಡೆದದ್ದು ಗಮನಾರ್ಹ ಸಂಗತಿ. ಹಿರಿಯೂರಿನ ವೃತ್ತದಲ್ಲಿ ಡಿ.ಎಂ.ಕೆ. ಪಕ್ಷದ ಬಾವುಟವನ್ನೂ ಪ್ರದರ್ಶಿಸಲಾಗಿತ್ತು. ಇದಕ್ಕೆ ಸ್ಥಳೀಯ ಕನ್ನಡಿಗರು ಪ್ರತಿಭಟಿಸಿದ್ದು ಪ್ರಯೋಜನಕ್ಕೆ ಬರಲಿಲ್ಲ. ಕೊನೆಗೆ ರಾಮಮೂರ್ತಿ ಅವರು ತಮ್ಮ ಕಾರ್ಯಕರ್ತರೊಂದಿಗೆ ಖುದ್ದಾಗಿ ಬಂದು ಡಿ.ಎಂ.ಕೆ. ಬಾವುಟವನ್ನು ತೆಗೆಸಿ ಕನ್ನಡಿಗರನ್ನು ಹುರಿದುಂಬಿಸಿದರು. ಈ ಎಲ್ಲ ಪ್ರಯತ್ನಗಳೂ ಕನ್ನಡಿಗರನ್ನು ಸಂಘಟಿಸುವುದರ ಜೊತೆಗೆ ಕನ್ನಡ ಬಾವುಟದ ಅನಿವಾರ್ಯತೆ ರಾಜಕಾರಣಿಗಳ ನಿರಭಿಮಾನವನ್ನು ಸಾಬೀತುಪಡಿಸಿದ್ದವು. ಇದರ ಪರಿಣಾಮವಾಗಿ ಚಳವಳಿಯಲ್ಲಿ ಜಾತೀಯತೆ, ರಾಜ ಕಾರಣದ ಸ್ವಾರ್ಥ ಚಿಂತನೆಗಳು ನುಸುಳುವಂತೆ ಆಯಿತು. ಕನ್ನಡೇತರರ ಮತಗಳನ್ನು ತಮ್ಮ ದೃಷ್ಟಿಯಲ್ಲಿ ಇಟ್ಟುಕೊಂಡಿದ್ದ ಕೆಲವು ರಾಷ್ಟ್ರೀಯ ಪಕ್ಷಗಳು ಕನ್ನಡಿಗರ ಸಮಸ್ಯೆಗಳಿಗೆ ಸ್ಪಂದಿಸಲು ಹಿಂಜರಿದವು. ಹೀಗಾಗಿ ಕನ್ನಡಿಗರ ಆಶೋತ್ತರಗಳಿಗಾಗಿ ಪ್ರಾದೇಶಿಕವಾದ ರಾಜಕೀಯ ಪಕ್ಷವೊಂದರ ಅಗತ್ಯತೆ ಕಾರ್ಯಕರ್ತರನ್ನು ಕಾಡಿತು. ಈ ನಿಟ್ಟಿನಲ್ಲಿ ಆಲೋಚಿಸುವುದಕ್ಕೆ ಮೊದಲೇ ಕನ್ನಡ ಚಳವಳಿಯಲ್ಲಿ ಜಾತೀಯವಾದ ತಲೆದೋರಿತು. ಬ್ರಾಹ್ಮಣ ಹಾಗೂ ಬ್ರಾಹ್ಮಣೇತರರೆಂಬ ಎರಡು ಗುಂಪುಗಳು ಹುಟ್ಟಿಕೊಂಡವು. ಸಂಯುಕ್ತ ರಂಗದ ಚಳವಳಿ ನಾಯಕರನ್ನು (ರಾಮಮೂರ್ತಿ ಅವರನ್ನೂ ಒಳಗೊಂಡಂತೆ) ಬ್ರಾಹ್ಮಣರ ಗುಂಪಿಗೆ ಸೇರಿಸಲಾಗಿತ್ತು. ಚಳವಳಿಯನ್ನು ಭಿನ್ನ ರೀತಿಯಾಗಿ ನಡೆಸುವಲ್ಲಿ, ಉತ್ಸಾಹ ತೋರಿದ್ದ ವಾಟಾಳ್ ನಾಗರಾಜರ ನೇತೃತ್ವದ ಗುಂಪು ಬ್ರಾಹ್ಮಣೇತರರೆಂದು ಗುರುತಿಸಿಕೊಳ್ಳುವಂತೆ ಆಯಿತು. ಅ.ಸಂಜೀವಪ್ಪ, ಸಾ.ಕೃ.ಸಂಪಂಗಿ, ಜಿ.ನಾರಾಯಣ ಕುಮಾರ್ ಮೊದಲಾದವರು ವಾಟಾಳರೊಂದಿಗೆ ಸೇರಿದರು. ಸೈದ್ಧಾಂತಿಕ ಒಡಕಿನಿಂದಾಗಿ ವಾಟಾಳ್ ನಾಗರಾಜರ ನೇತೃತ್ವದ ಕಾರ್ಯಕರ್ತರು ಸಂಯುಕ್ತ ರಂಗದಿಂದ ಹೊರಬಂದಿದ್ದರು. ವಾಟಾಳರು ಆಟೋ ಚಾಲಕರು, ಹೋಟೆಲು ಕಾರ್ಮಿಕರು, ಸಾರಿಗೆ ಸಿಬ್ಬಂದಿ ಮೊದಲಾದವರು ಕನ್ನಡ ಚಳವಳಿಯನ್ನು ತೀವ್ರ ಸ್ವರೂಪದಲ್ಲಿ ಗುರುತಿಸಿಕೊಳ್ಳುವಂತೆ ಸಾಹಿತಿ ಕಲಾವಿದರಿಗಿಂತ ಹೆಚ್ಚಾಗಿ ಜನಸಾಮಾನ್ಯ ಕನ್ನಡಿಗರು ಈ ವಿಚಾರದಲ್ಲಿ ಒಗ್ಗೂಡುವಂತೆ ತಂತ್ರ ರೂಪಿಸಿದರು. ಈ ಘಟ್ಟದಿಂದ ಕನ್ನಡ ಚಳವಳಿ ಛಿದ್ರವಾಗುತ್ತಾ ಹೋಯಿತು.

**ಮಹಾಜನ್ ಆಯೋಗ ಮತ್ತು ಚಳವಳಿಗಾರರು :** 1965ರ ವೇಳೆಗೆ ಬೆಂಗಳೂರಿನಲ್ಲಿ ರಾಜ್ಯೋತ್ಸವವನ್ನು ಎರಡು ಸ್ಥಳಗಳಲ್ಲಿ ನಡೆಸಲು ಆರಂಭವಾಯಿತು. ಆದರೂ ಮ. ರಾಮಮೂರ್ತಿ ಹಾಗೂ ವಾಟಾಳರು ಬೆಂಗಳೂರಿನಲ್ಲಿ ಕನ್ನಡ ಬಾವುಟದ ವಿಚಾರಕ್ಕಾಗಿ ಒಂದೆಡೆ ಸೇರಿದ್ದು ಗಮನಾರ್ಹ. ಅಲ್ಲದೆ ಈ ವೇಳೆಗೆ (1966) ಮರಾಠಿಗರ ಆಕ್ರಮಣಕಾರಿ ಭಾಷಿಕ ಪ್ರವೃತ್ತಿ ಹೆಚ್ಚಾಗತೊಡಗಿದ್ದವು. ಶಿವಸೇನೆಯ ಬಾಳಠಾಕ್ರೆ ಮೊದಲಾದವರಿಂದ ಕನ್ನಡಿಗರಿಗೆ (ಮುಂಬಯಿಯಲ್ಲಿ) ಕಿರುಕುಳ ಆರಂಭವಾಗಿತ್ತು. ಇದೇ ವೇಳೆಗೆ ಮಹಾರಾಷ್ಟ್ರ, ಕೇರಳ ಹಾಗೂ ಕರ್ನಾಟಕದ ಗಡಿಗಳಿಗೆ ಸಂಬಂಧಿಸಿದ ವಿವಾದಗಳ ಇತ್ಯರ್ಥಕ್ಕೆ ಮಹಾಜನ್ ಆಯೋಗ ನೇಮಕ ಆಗಿತ್ತು. ಈ ಆಯೋಗದ ಮೇಲೆ ಹಾಗೂ ಕೇಂದ್ರ ಸರ್ಕಾರದ ಮೇಲೆ ಮರಾಠಿಗರು ಒತ್ತಡ ಹೇರತೊಡಗಿದ್ದರು. ಇದಕ್ಕೆ ಕನ್ನಡಿಗರಿಂದ ಎಲ್ಲೆಡೆ ಪ್ರತಿರೋಧಗಳು ಕಾಣಿಸಿಕೊಂಡವು. ಬೆಳಗಾಂವಿ ಕರ್ನಾಟಕದ ಅವಿಭಾಜ್ಯ ಅಂಗವೆಂಬುದನ್ನು ಸಾಬೀತುಪಡಿಸುವುದು ಚಳವಳಿಗಾರರ ಆಶಯವಾಗಿತ್ತು. ಈ ನಿಟ್ಟಿನಲ್ಲಿ ಸಭಾದವರು 29-7-1966ರಂದು ನಡೆಸಿದ ಸಂಪೂರ್ಣ ಕರ್ನಾಟಕ ಸರ್ವಪಕ್ಷ ಸಮ್ಮೇಳನ ಪ್ರಧಾನವಾದುದು. ಹೀಗಾಗಿ ನಾಡಿನ ಎಲ್ಲೆಡೆ ಮಹಾಜನ್ ಆಯೋಗದ ವಿರುದ್ಧ ತೀವ್ರವಾದ ಪ್ರತಿಭಟನೆಗಳು ನಡೆದವು. ರಸ್ತೆ ತಡೆ, ರೈಲು ತಡೆ, ಮೆರವಣಿಗೆ, ಪ್ರದರ್ಶನಗಳು, ಬಂದ್ ಆಚರಣೆ ಇತ್ಯಾದಿಗಳು ಚಳವಳಿಕಾರರನ್ನು ಇನ್ನಷ್ಟು ಹುರಿದುಂಬಿಸಿದ್ದವು.

ಮಹಾಜನ್ ಆಯೋಗದ ವರದಿ ಜತ್, ಅಕ್ಕಲಕೋಟೆ, ಕಾಸರಗೋಡುಗಳನ್ನು ಕರ್ನಾಟಕಕ್ಕೂ ನಿಪ್ಪಾಣಿ, ಖಾನಾಪುರ, ಹಳಿಯಾಳಗಳನ್ನು ಮಹಾರಾಷ್ಟ್ರಕ್ಕೂ ಸೇರಿಸಬೇಕೆಂದು ಶಿಫಾರಸು ಮಾಡಿತ್ತು. ಅಲ್ಲದೆ ಕನ್ನಡ ನೆಲವಾದ ಬೆಳಗಾಂವಿಯನ್ನು ಕರ್ನಾಟಕದಲ್ಲಿಯೇ ಉಳಿಸಬೇಕೆಂದೂ ಶಿಫಾರಸ್ಸು ಮಾಡಿತ್ತು. ಈ ಆಯೋಗದ ವರದಿಗೆ ಒಪ್ಪಿಕೊಳ್ಳುವುದಾಗಿ ಹೇಳಿದ್ದ ಮರಾಠಿಗರು ಮಾತು ಮುರಿದು ಪ್ರತಿಕ್ರಿಯಿಸಿದರು. ಈ ವಿಚಾರ 1970 ರಲ್ಲಿ ದೆಹಲಿಯ ಪಾರ್ಲಿಮೆಂಟಿನ ಉಭಯ ಸದನಗಳಲ್ಲಿ ಚರ್ಚೆಗೆ ಬಂತು. ಮರಾಠಿಗರು ಕೇಂದ್ರ ಸರ್ಕಾರದ ಮೇಲೆ ಒತ್ತಡ ಹೇರಲಾರಂಭಿಸಿದ್ದರು. ಇದರಿಂದ ಕನ್ನಡಿಗರ ಪ್ರತಿಭಟನೆಗಳು ತೀವ್ರಸ್ವರೂಪ ಪಡೆದವು. ಈ ಘಟ್ಟದಲ್ಲಿ ಕೆಲವರು ಕನ್ನಡ ಚಳವಳಿಗಾರರು ಕರ್ನಾಟಕ ಎಕ್ಸ್‌ಪ್ರೆಸ್ ರೈಲನ್ನು ತಡೆಯಲು ಮುಂದಾದರು. ಈ ಪ್ರಯತ್ನದಲ್ಲಿ ಮು. ಗೋವಿಂದರಾಜು ಎಂಬ ಕಾರ್ಯಕರ್ತರು ತಮ್ಮ ಪ್ರಾಣವನ್ನೇ ಕಳೆದುಕೊಂಡರು. ಈ ಘಟನೆ (13-12-1970) ತಾತ್ಕಾಲಿಕವಾಗಿ ಮಹಾಜನ್ ವರದಿಯ ಅನುಷ್ಠಾನವನ್ನು ತಡೆಹಿಡಿಯಿತು. ಅಂದಿನಿಂದಲೂ ಇದುವರೆಗೂ ಕರ್ನಾಟಕಕ್ಕೆ ಸೇರಬೇಕಾದ ಕನ್ನಡದ ಭೂಪ್ರದೇಶಗಳು ಕರ್ನಾಟಕದ ಹೊರಗೇ ಉಳಿದಿವೆ.

**ಕನ್ನಡ ಬಾವುಟದ ಚರಿತ್ರೆ :** 1966ರ ವರೆಗೂ ಕನ್ನಡದ ಕಾರ್ಯಕರ್ತರಿಗೆ ಯಾವುದೇ ನಿರ್ದಿಷ್ಟ ಕನ್ನಡ ಬಾವುಟವೆಂಬುದು ಇರಲಿಲ್ಲ. ಕನ್ನಡ ಬಾವುಟದ ಕೊರತೆಯನ್ನು ನೀಗಲು ರಾಮಮೂರ್ತಿ ಹಾಗೂ ವಾಟಾಳರು ಬೆಂಗಳೂರಿನಲ್ಲಿ ಕನ್ನಡ ಸಂಘಟನೆಗಳ ಸಭೆ ಸೇರಿಸಿದರು. ಇಲ್ಲಿ ಪರಿಚಯಿಸಿದ ಬಾವುಟ ಕರ್ನಾಟಕದ ನಕಾಶೆಯನ್ನು ಹೊಂದಿತ್ತು. ನಕಾಶೆಯ ಮಧ್ಯೆ ಬೆಳೆಯುತ್ತಿರುವ ಪೈರಿನ ಚಿತ್ರಣವಿತ್ತು. ಈ ಬಾವುಟ ಕರ್ನಾಟಕಕ್ಕೆ ಸೇರಬೇಕಾದ ಗಡಿಭಾಗಗಳನ್ನು ಪ್ರತಿನಿಧಿಸುತ್ತದೆ ಎಂದು ಹೇಳಿಕೆ ನೀಡಲಾಯಿತು. ಎಲ್ಲರೂ ಈ ಬಾವುಟವನ್ನು ಒಪ್ಪಿದ್ದರು. ಆದರೆ ರಾಮಮೂರ್ತಿಯವರು ಬಾವುಟವನ್ನು ಬದಲಾಯಿಸಿದ್ದು (ನವೆಂಬರ್ 1969) ಕಾರ್ಯಕರ್ತರಲ್ಲಿ ಅಸಮಾಧಾನಕ್ಕೆ ಎಡೆಮಾಡಿಕೊಟ್ಟಿತು.

ಬಾವುಟದ ಬದಲಾವಣೆಯ ಪ್ರಕ್ರಿಯೆಗೆ ಅಂದಿನ ರಾಜಕಾರಣವೇ ಪ್ರಮುಖ ಕಾರಣ. ಮ. ರಾಮಮೂರ್ತಿ ಹಾಗೂ ವಾಟಾಳ್ ಇವರಿಬ್ಬರ ತಾತ್ವಿಕ ಭಿನ್ನಾಭಿಪ್ರಾಯಗಳು ಎರಡು ಪ್ರಾದೇಶಿಕ ಪಕ್ಷಗಳ ಹುಟ್ಟಿಗೆ ಕಾರಣವಾದವು. ರಾಮಮೂರ್ತಿ ಅವರ ಕನ್ನಡ ಪಕ್ಷ 1966ರ ನಗರಸಭಾ ಹಾಗೂ 1969ರ ವಿಧಾನಸಭಾ ಚುನಾವಣೆಗಳಲ್ಲಿ ಸ್ಪರ್ಧಿಸಿತು. ವಾಟಾಳರ ಚಳವಳಿ ಪಕ್ಷ ಕೊಂಚ ರಾಜಕೀಯ ಶಕ್ತಿಯನ್ನು ಪಡೆಯಿತು. ಜೊತೆಗೆ ಬ್ರಾಹ್ಮಣೇತರ ಚಳವಳಿಗಾರರ ಗುಂಪಾಗಿ ಗುರುತಿಸಿಕೊಂಡಿತ್ತು. ವಾಟಾಳರು ತಮ್ಮ ಪಕ್ಷದ ಚಿಹ್ನೆಯಾಗಿ ನಕಾಶೆಯಿರುವ ಬಾವುಟವನ್ನೇ ಬಳಸಿದ್ದರು. ಇದರಿಂದ ರಾಮಮೂರ್ತಿ ಅವರು ತಮ್ಮ ಕನ್ನಡ ಪಕ್ಷಕ್ಕಾಗಿ ಹೊಸ ಬಾವುಟವನ್ನು ಪರಿಚಯಿಸುವುದು ಅನಿವಾರ್ಯವಾಯಿತು.

ಮ.ರಾಮಮೂರ್ತಿ 1968ರ ವೇಳೆಗೆ ಸಂಯುಕ್ತ ರಂಗದ ಕಾರ್ಯಕರ್ತರ ಸಭೆ ಕರೆದು ಹೊಸ ಬಾವುಟವನ್ನು ಪರಿಚಯಿಸಿದರು. ಕರ್ನಾಟಕ ಮಿತ್ರ ಮಂಡಲಿಯ ಬಿ.ನಿ. ಈಶ್ವರಪ್ಪನವರು ಸೂಚಿಸಿದ ಬಾವುಟವನ್ನು ರಾಮಮೂರ್ತಿ ಒಪ್ಪಿದ್ದರು. ಕಾಟನ್‌ಪೇಟೆಯಲ್ಲಿ ನಡೆದ ಸಭೆಯಲ್ಲಿ ನಾಲ್ಕು ಮೂಲೆಗಳ ಹಳದಿ ಕೆಂಪು ಬಣ್ಣಗಳಿದ್ದ ಬಾವುಟವನ್ನು ಸರ್ವರೂ ಒಪ್ಪಿದ್ದರು. ಆದರೆ ಇದರಲ್ಲಿ ಕರ್ನಾಟಕದ ನಕಾಶೆ ಇರಲಿಲ್ಲ. ಬದಲಾಗಿ ಹಳದಿ ಕೆಂಪು ಬಣ್ಣಗಳನ್ನು ಶಾಂತಿ, ಸಹನೆ, ಕ್ರಾಂತಿಗಳ ಸಂಕೇತವೆಂದೂ ಅರಿಸಿನ ಕುಂಕುಮಗಳು ಮುತ್ತೈದೆತನದ ಸಂಕೇತವೆಂದೂ

ವಿವರಣೆ ನೀಡಲಾಗಿತ್ತು. ಮ.ರಾಮಮೂರ್ತಿ ಅವರು ಕನ್ನಡ, ಕನ್ನಡಿಗ, ಕರ್ನಾಟಕಗಳನ್ನು ಪ್ರತಿನಿಧಿಸುವ ಯಾವುದೇ ಸಭೆ, ಸಮಾರಂಭಗಳಿಗೆ ಈ ಹೊಸ ಬಾವುಟವನ್ನೇ ಬಳಸಲು ಕರೆಯಿತ್ತರು. ತಮ್ಮ ಕನ್ನಡ ಪಕ್ಷಕ್ಕೂ ಇದೇ ಬಾವುಟವನ್ನೇ ಬಳಸಿದ್ದರು. ಹೀಗಾಗಿ ಇಂದಿಗೂ ಹಳದಿ ಕೆಂಪು ಬಣ್ಣದ ಬಾವುಟಗಳೂ ಕನ್ನಡದ ಸಂಕೇತವಾಗಿ ಬಳಕೆಯಾಗುತ್ತಿವೆ.

**ವಾಟಾಳ್ ನಾಗರಾಜ್ ಮತ್ತು ಕನ್ನಡ ಚಳವಳಿ :** 1970ರ ದಶಕ ಬಹುಪಾಲು ವಾಟಾಳ್ ನೇತೃತ್ವದ ಕನ್ನಡ ಚಳವಳಿಯಾಗಿ ಪರಿಣಮಿಸಿತು. ಸಂಯುಕ್ತ ರಂಗದ ಅಧ್ಯಕ್ಷರಾಗಿದ್ದ ರಾಮಮೂರ್ತಿ ಅವರು ಆಕಸ್ಮಿಕ ಮರಣಕ್ಕೀಡಾದರು (25-12-1967). ತ.ರಾ.ಸು. ಅವರು ಕನ್ನಡ ಪಕ್ಷದ ಚುಕ್ಕಾಣಿ ಹಿಡಿದಿದ್ದರು. ಆದರೆ ವಾಟಾಳರ ಜನಪ್ರಿಯತೆಯ ಮುಂದೆ ಇನ್ನಾವುದೇ ನಾಯಕನೂ ಚಳವಳಿಯ ನೇತಾರನಾಗಲಿಲ್ಲ. ವಾಟಾಳರ ಹಿಂದೆ ಬೆಂಬಲಕ್ಕಿದ್ದವರೆಂದರೆ ಅ.ಸಂಜೀವಪ್ಪ, ಸಾ.ಕೃ.ಸಂಪಗಿ, ಜಿ.ನಾರಾಯಣ ಕುಮಾರ್, ಪ್ರಭಾಕರ್ ರೆಡ್ಡಿ ಮೊದಲಾದ ಚಳವಳಿಗಾರರು. ಇವರೆಲ್ಲರ ಬೆಂಬಲದಿಂದ ಕನ್ನಡ ಚಳವಳಿ ಪಕ್ಷ ರಾಜಕಾರಣದ ಬಲವನ್ನೂ ಪಡೆದಿತ್ತು. ಕನ್ನಡಿಗರ ಸಮಸ್ಯೆಗಳಿಗೆ ಇಂಥ ಪ್ರಾದೇಶಿಕ ಪಕ್ಷವೊಂದು ಸ್ಪಂದಿಸುವುದು ಎಲ್ಲರ ಗಮನ ಸೆಳೆಯಿತು. ಆದರೆ ವಾಟಾಳರ ಒಡನಾಡಿಗಳು ಭಿನ್ನಾಭಿಪ್ರಾಯಗಳನ್ನು ತಳೆದದ್ದು ಮತ್ತೆ ಕನ್ನಡ ಚಳವಳಿಯಲ್ಲಿ ಬಿರುಕನ್ನುಂಟುಮಾಡಿತು. 1980ರಲ್ಲಿ ಕನ್ನಡ ಚಳವಳಿ ವಾಟಾಳ್ ಪಕ್ಷ ಎಂದು ಹೊಸ ಹೆಸರು ಪಡೆಯುವವರೆಗೂ ವಾಟಾಳರು ನಾಡಿನ ಸಮಸ್ಯೆಗಳನ್ನು ಕುರಿತಂತೆ ಚಳವಳಿಗಳನ್ನು ಹೂಡುತ್ತಲೇ ಇದ್ದರು. ಅಂಥವುಗಳಲ್ಲಿ ತಾಳವಾಡಿ ಮುತ್ತಿಗೆ (1967) ಚಳವಳಿಯೂ ಒಂದು. ಕರ್ನಾಟಕಕ್ಕೆ ಸೇರಬೇಕಿದ್ದ ಹೊಸೂರು, ತಾಳವಾಡಿಗಳನ್ನು ತಮಿಳುನಾಡಿಗೆ ಸೇರಿಸಲಾಗಿತ್ತು. ಇವುಗಳನ್ನು ಪಡೆಯಲು ತಾಳವಾಡಿ ಮುತ್ತಿಗೆ ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಯಿತು. ಇದರಲ್ಲಿ ಭಾಗವಹಿಸಿದ್ದ ವಾಟಾಳರನ್ನು ಅಂದಿನ ತಮಿಳುನಾಡಿನ ಮುಖ್ಯಮಂತ್ರಿ ಎಂ.ಕರುಣಾನಿಧಿ ಬಂಧಿಸಲು ಆದೇಶಿಸಿದ್ದರು. ಬಂಧನಕ್ಕೊಳಗಾದ ವಾಟಾಳರ ಬಿಡುಗಡೆಗಾಗಿ ಒತ್ತಾಯಿಸಿ ಬೆಂಗಳೂರಿನಲ್ಲಿ ಪ್ರತಿಭಟನೆ, ಹಿಂಸಾಚಾರಗಳು ನಡೆದವು. ತಮಿಳರ ವಿರುದ್ಧ ಕನ್ನಡಿಗರು ಉಗ್ರ ರೂಪದಲ್ಲಿ ಪ್ರತಿಭಟನೆಗಳನ್ನು ಸಾರಿದರು. ಕನ್ನಡೇತರರ ಮತಗಳಿಗಾಗಿ ಕಾದಿದ್ದ ಕನ್ನಡದ ರಾಜಕಾರಣಿಗಳು ಈ ಘಟನೆಗೆ ಸ್ಪಂದಿಸದೆ ಇದ್ದದ್ದು ಕನ್ನಡಿಗರನ್ನು ಕೆರಳಿಸದಿರಲಿಲ್ಲ. ಅದೇ ರೀತಿ 1968ರಲ್ಲಿ ಸಿ.ರಾಜಗೋಪಾಲಾಚಾರಿ (ರಾಜಾಜಿ) ಅವರು ಕನ್ನಡಕ್ಕೆ ಅಪಮಾನವಾಗುವ ಮಾತುಗಳನ್ನು ಆಡಿದಾಗ ವಾಟಾಳ್ ನಾಗರಾಜ್ ಮತ್ತು ಇತರ ಚಳವಳಿಗಾರರು ಪ್ರತಿಕ್ರಿಯಿಸಿರಲಿಲ್ಲ. ಅಂತೆಯೇ ಕನ್ನಡ ಸಾಹಿತ್ಯ ಪರಿಷತ್ತೂ ಸಹ. ಇಂಥ ವಿರೋಧಾಭಾಸಗಳೂ ಕನ್ನಡ ಚಳವಳಿಯ ಚರಿತ್ರೆಯಲ್ಲಿ ಕಪ್ಪುಚುಕ್ಕೆಯಾಗಿ ಉಳಿದುಬಿಟ್ಟವು.

**ಗೋಕಾಕ್ ಚಳವಳಿ :** ಹಿಂದಿನ ಅವೈಜ್ಞಾನಿಕ ಶಿಕ್ಷಣ ನೀತಿಯೊಂದು ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ತೊಡಕಾಗಿ ಪರಿಣಮಿಸಿತ್ತು. ಇದನ್ನು ಸರಿಪಡಿಸಲು ವ್ಯಾಪಕವಾದ ಭಾಷಿಕ ಚಳವಳಿಯನ್ನೇ ಕನ್ನಡಿಗರು ಹೂಡಿದ್ದು ಗಮನಾರ್ಹ ಸಂಗತಿ. ಸಂಸ್ಕೃತ ಭಾಷೆಯನ್ನು ಮಾತೃಭಾಷೆಗೆ ಸರಿಸಮವೆಂದು ಕರ್ನಾಟಕ ಸರಕಾರದ ಶಿಕ್ಷಣ ನೀತಿ ಪರಿಗಣಿಸಿದ್ದು ಚಳವಳಿಗಳಿಗೆ ಕಾರಣವಾಗಿತ್ತು. ಅಂದರೆ ಕೇವಲ ಪ್ರೌಢಶಾಲೆಯಲ್ಲಿ ಶಿಕ್ಷಣ ಕ್ರಮ ಆರಂಭಿಸಲಾಗುವ ಸಂಸ್ಕೃತ ಹಿಂದಿನ ಏಳು ವರ್ಷಗಳಲ್ಲಿ ವಿದ್ಯಾರ್ಥಿಗಳು ಓದಿದ ಭಾಷೆಯೊಂದಕ್ಕೆ ಸಮವೆನಿಸಿತ್ತು. ಸಂಸ್ಕೃತ ಅಧ್ಯಾಪಕರ ಉದಾರ ಪ್ರೋತ್ಸಾಹ ಮತ್ತು ಹೆಚ್ಚು ಅಂಕ ನೀಡುವ ಪ್ರವೃತ್ತಿಯಿಂದ ಕನ್ನಡದ ವಿದ್ಯಾರ್ಥಿಗಳೂ ಸಂಸ್ಕೃತ ಭಾಷೆಯನ್ನು ಪ್ರಥಮ ಭಾಷೆಯಾಗಿ ಓದಲು ಆರಂಭಿಸಿದ್ದರು. ಇದರಿಂದ ರ‍್ಯಾಂಕ್ ಗಳಿಕೆ ಸುಲಭವಾಗಿತ್ತು. ಇಲ್ಲಿ ಇನ್ನೊಂದು ಅನುಕೂಲವೂ ಇತ್ತು. ಅದು ಈ ಭಾಷೆಯ ಪ್ರಶ್ನೆ ಪತ್ರಿಕೆಯನ್ನು ಕನ್ನಡ ಅಥವಾ ಇಂಗ್ಲಿಷಿನಲ್ಲಿ ಉತ್ತರಿಸುವುದು. ಈ ಬಗೆಯ ನೀತಿಯಿಂದ ಕನ್ನಡಕ್ಕೆ ಹೆಚ್ಚಿನ ಪ್ರಾಧಾನ್ಯ ದಕ್ಕಿರಲಿಲ್ಲ. ಹೀಗಾಗಿ ಸಂಸ್ಕೃತವನ್ನು ಪ್ರಥಮ ಭಾಷೆಗಳ ಪಟ್ಟಿಯಿಂದ ತೆಗೆದು ಮೂರನೆಯ ಸ್ಥಾನಕ್ಕೆ ಇಳಿಸುವ ಸರ್ಕಾರದ ಆಜ್ಞೆಗೆ (1969 ರ ಅಕ್ಟೋಬರ್) ಸಂಸ್ಕೃತವಾದಿಗಳಿಂದ ವಿರೋಧಗಳು ವ್ಯಕ್ತವಾದವು. ಇದಕ್ಕೆ ವಿರುದ್ಧವಾಗಿ ಕನ್ನಡ ಪರವಾದಿಗಳು ಸಹ ವಿರೋಧಿಸಲಾರಂಭಿಸಿದ್ದರು. ಕೊನೆಗೆ ಯಾವುದೇ ನಿರ್ಧಾರವನ್ನು ಕೈಗೊಳ್ಳಲಾಗದೆ ಸರ್ಕಾರ ವಿ.ಕೃ. ಗೋಕಾಕ್ ಅಧ್ಯಕ್ಷತೆಯಲ್ಲಿ ಭಾಷಾತಜ್ಞರ ಸಮಿತಿಯೊಂದನ್ನು ರಚಿಸಿತು (1980). ಈ ಸಮಿತಿಯಲ್ಲಿದ್ದ ಬಹುಪಾಲು ಸದಸ್ಯರು ಸಂಸ್ಕೃತದ ವಾದಿಗಳೆಂದೇ ಕನ್ನಡದ ವಾದಿಗಳು ಆರಂಭದಲ್ಲಿ ಶಂಕಿಸಿದ್ದರು. ಹೀಗಾಗಿ ಸಮಿತಿಯ ವಿರುದ್ಧವೇ ಮೊದಲ ಪ್ರತಿಭಟನೆಗಳು ಆರಂಭಗೊಂಡವು. ಈ ಸಮಿತಿ ವರದಿಯು ಸಿದ್ಧತೆಗೆ ನಾಡಿನಾದ್ಯಂತ ಕೈಗೊಂಡ ಪ್ರವಾಸಕ್ಕೆ ಆಗ ಪ್ರತಿರೋಧಗಳು ಕಂಡುಬಂದವು. ಆದರೆ ವರದಿ ಕನ್ನಡ ಪರವಾಗಿದ್ದು ಅಂಥ ಶಂಕೆ ಸಂದೇಹ ನಿವಾರಿಸಿತು. ಅಂತೆಯೆ ವರದಿಯನ್ನು ಅನುಷ್ಠಾನಗೊಳಿಸುವಲ್ಲಿ ಚಳವಳಿಗಾರರು ತೀವ್ರತರವಾದ ಹೋರಾಟಕ್ಕೆ ಇಳಿದಿದ್ದರು. ಗೋಕಾಕ್ ವರದಿ ಕುರಿತು ನಡೆದ ಚಳವಳಿ ಕನ್ನಡ ಚಳವಳಿಯೇ ಆಗಿ ಗೋಕಾಕ್ ಚಳವಳಿ ಎಂದೇ ಪ್ರಚಾರಕ್ಕೆ ಬಂತು.

ಗೋಕಾಕ ಚಳವಳಿಗೆ ಧಾರವಾಡದಿಂದ ಆರಂಭಿಕ ಚಾಲನೆ ದೊರೆತು ನಾಡಿನಾದ್ಯಂತ ವಿಭಿನ್ನ ಘಟ್ಟಗಳಲ್ಲಿ ಚಳವಳಿ ನಡೆಯಿತು. ಚಂದ್ರಶೇಖರ ಪಾಟೀಲ, ಎಂ.ಎಂ.ಕಲಬುರ್ಗಿ, ಬಸವರಾಜ ಕಟ್ಟೀಮನಿ, ಚನ್ನವೀರ ಕಣವಿ ಪಾಟೀಲ ಪುಟ್ಟಪ್ಪ ಮೊದಲಾದ ಸಾಹಿತಿಗಳು ಹಾಗೂ ಕಲಾವಿದರು, ಮಠಾಧೀಶರು ಉತ್ತರ ಕರ್ನಾಟಕದಲ್ಲಿ ಪ್ರತಿಕ್ರಿಯಿಸಲಾರಂಭಿಸಿದರು. ಅಂತೆಯೇ ಹಳೆಯ ಮೈಸೂರಿನ ಜಿಲ್ಲೆಗಳಿಂದ, ಬೆಂಗಳೂರನ್ನು ಕೇಂದ್ರವಾಗಿಸಿಕೊಂಡು ಚಳವಳಿ ಆರಂಭಗೊಂಡಿತು. ಇದರಲ್ಲಿ ಪಿ.ಲಂಕೇಶ್, ಜಿ.ಎಸ್.ಶಿವರುದ್ರಪ್ಪ, ಗೊರೂರು, ಸಿದ್ಧಯ್ಯಪುರಾಣಿಕ್, ಎಂ.ಚಿದಾನಂದಮೂರ್ತಿ, ಹಾ.ಮಾ.ನಾಯಕ, ಕೋ.ಚೆನ್ನಬಸಪ್ಪ, ಮಳಗಿ, ತ.ರಾ.ಸು., ಸತ್ಯ, ಪೂರ್ಣಚಂದ್ರತೇಜಸ್ವಿ ಮೊದಲಾದ ಸಾಹಿತಿಗಳು, ಕಲಾವಿದರು ಭಾಗವಹಿಸಿದ್ದರು. ಸಾಹಿತಿಗಳ, ಕಲಾವಿದರ ಬಳಗ ಹುಟ್ಟಿಕೊಂಡದ್ದು ಇದೇ ಸಂದರ್ಭದಲ್ಲಿಯೇ. ಚಳವಳಿಗಾರ ರಹಮಾನ್ ಖಾನ್, ಜಿ.ನಾರಾಯಣಕುಮಾರ್, ಕೆ.ಪ್ರಭಾಕರ ರೆಡ್ಡಿ ಮೊದಲಾದವರು ತೀವ್ರವಾಗಿ ಪ್ರತಿಕ್ರಿಯಿಸಿದರು. ಈ ಚಳವಳಿಗೆ ಕೇಂದ್ರ ಹಾಗೂ ಸ್ಥಳೀಯ ಕನ್ನಡ ಕ್ರಿಯಾ ಸಮಿತಿಗಳು, ಕನ್ನಡ ಸಂರಕ್ಷಣಾ ಸಮಿತಿ, ಕನ್ನಡ ಸಂಘರ್ಷ ಸಮಿತಿ, ಕನ್ನಡ ಪಕ್ಷ, ಮೈಸೂರಿನ ಚೇತನ ಕನ್ನಡ ಸಂಘ ಮೊದಲಾದ ಸಂಘಟನೆಗಳು ತಮ್ಮನ್ನು ತೊಡಗಿಸಿಕೊಂಡಿದ್ದವು. ಕರ್ನಾಟಕದ ಬಹುಪಾಲು ಎಲ್ಲ ಹಿರಿಕಿರಿಯ ಸಾಹಿತಿ ಕಲಾವಿದರೂ ಗೋಕಾಕ ಚಳವಳಿಯ ಸಂದರ್ಭದಲ್ಲಿ ಭಾಗವಹಿಸಿದ್ದು ಇಲ್ಲಿ ಉಲ್ಲೇಖನೀಯ. ಈ ಸಂದರ್ಭದಲ್ಲಿ ಪರ ವಿರೋಧದ ಧ್ವನಿಗಳೂ ಹುಟ್ಟಿಕೊಂಡಿದುಂಟು. ಸರ್ಕಾರ ಕನ್ನಡವನ್ನು ಒಂದು ಹಂತದಲ್ಲಿ ಕಡ್ಡಾಯವಾಗಿ ಪ್ರೌಢಶಾಲಾ ಹಂತದಲ್ಲಿ ಜಾರಿಗೊಳಿಸುವ ಸೂತ್ರ ಮುಂದಿಟ್ಟಿತು. ಆಗ ಅದನ್ನು ಒಪ್ಪಿ ಹಾ.ಮಾ.ನಾ., ಹಂಪನಾ, ವಿ.ಎಚ್.ಗೌಡ ಮೊದಲಾದವರು ಸ್ವಾಗತಿಸಿದರು. ಆದರೆ ಇದಕ್ಕೊಪ್ಪದವರು ಚಿದಾನಂದಮೂರ್ತಿಗಳು ಮತ್ತು ಪಾಟೀಲ ಪುಟ್ಟಪ್ಪನವರ ನೇತೃತ್ವದಲ್ಲಿ ಚಳವಳಿಯನ್ನು ಮುಂದವರಿಸಿ ಪ್ರಾಥಮಿಕ ಹಂತದಿಂದ ಕನ್ನಡ ಕಡ್ಡಾಯಮಾಡಲು ಆಗ್ರಹಿಸಿದರು. ಸರ್ಕಾರ ಗೋಕಾಕ್ ಭಾಷಾ ಸೂತ್ರವನ್ನು ಪೂರ್ಣ ಪ್ರಮಾಣದಲ್ಲಿ ಜಾರಿಗೆ ತರಲು ಹಿಂದೇಟು ಹಾಕಿದಾಗ ಚಳವಳಿ ವ್ಯಾಪಕವೂ ಹಿಂಸಾತ್ಮಕವೂ ಆಯಿತು. ಖ್ಯಾತ ನಟ ರಾಜಕುಮಾರ್ ಅವರು ಜಾಥಾದ ಮುಂದಾಳತ್ವವನ್ನು ವಹಿಸಿದ ಮೇಲೆ ಚಳವಳಿಗೆ ಇನ್ನಷ್ಟು ಚುರುಕು, ಬಿರುಸು ಪ್ರಾಪ್ತವಾಯ್ತು. ಮೆರವಣಿಗೆ, ಬಂದ್, ರಸ್ತೆ ರೈಲು ತಡೆ, ಜೈಲು ತುಂಬುವ ಚಳವಳಿ, ಪೋಲೀಸರ ಗೋಲಿಬಾರ್ ಸಾಮಾನ್ಯವಾದವು. ಅರಸಪ್ಪ ಎಂಬ ಕಾರ್ಯಕರ್ತರೊಬ್ಬರು ಪೋಲೀಸರ ಗುಂಡಿಗೆ ಬಲಿಯಾದರು. ಪರಿಸ್ಥಿತಿಗೆ ಮಣಿದ ಸರ್ಕಾರ ಸರ್ವಸಮ್ಮತ ಭಾಷಾಸೂತ್ರವನ್ನು ಪ್ರಕಟಿಸಿತು. ನಾಲ್ಕು ತಿಂಗಳ ಕಾಲ ನಡೆದ ಚಳವಳಿ ಅಂತ್ಯಗೊಂಡಿತು. ಆದರೆ ಕನ್ನಡೇತರರು, ಸಂಸ್ಕೃತಪರ ವಾದಿಗಳು ಅಲ್ಪಸಂಖ್ಯಾತರು ಕೋರ್ಟಿನಲ್ಲಿ ಕಟ್ಲೆಗಳನ್ನು ಹಾಕಿದ್ದರಿಂದ ವರದಿ ಜಾರಿಗೆ ಬರಲಿಲ್ಲ. 1984 ಜನವರಿ 24ರಂದು ಸರ್ಕಾರ ಈ ಎಲ್ಲ ಕಟ್ಲೆಗಳ ವಿಲೇವಾರಿ ಮಾಡಿ ಭಾಷಾಸೂತ್ರವನ್ನು ಜಾರಿಗೆ ತಂದಿತು. ಆದರೆ ವರದಿಯ ಸಂಪೂರ್ಣ ಅನುಷ್ಠಾನದ ಬಗ್ಗೆ ಇನ್ನೂ ಯಾವುದೇ ರೀತಿಯ ನಿರೀಕ್ಷಿತ ಫಲಿತಾಂಶ ಕಂಡುಬಂದಿಲ್ಲ.

**ಕನ್ನಡ ದೇಶ ಮತ್ತು ಕರ್ನಾಟಕ ಪ್ರಗತಿರಂಗ :** ಗೋಕಾಕ್ ಚಳವಳಿ ಅಂತ್ಯವಾಗುವ ವೇಳೆಗೆ ರಾಜ್ಯದಲ್ಲಿ ಕಾಂಗ್ರೆಸ್ ಪಕ್ಷದ ಆಡಳಿತ ಕೊನೆಗೊಂಡಿತು. ರೈತ (1983), ದಲಿತ ಹಾಗೂ ಭಾಷಾ ಚಳವಳಿಗಳ ಆಶೋತ್ತರಗಳನ್ನು ಈಡೇರಿಸುವ ಭರವಸೆಯನ್ನು ನೀಡಿ ಜನತಾ ಪಕ್ಷ

ಅಧಿಕಾರಕ್ಕೆ ಬಂತು. ಆದರೆ ಬಹಳ ಬೇಗ ಈ ಸರ್ಕಾರವೂ ಕನ್ನಡಿಗರ ಅಸಹನೆಗೆ ಗುರಿಯಾಯಿತು. ಈ ಸಂದರ್ಭದಲ್ಲಿ ಸ್ಥಳೀಯವಾದ ರಾಜ್ಯಪಕ್ಷವೊಂದರ ಅಗತ್ಯ ಕಂಡುಬಂತು. ಆಗ ಹೊಸ ರಾಜಕೀಯ ಪಕ್ಷವೊಂದರ ತುರ್ತು ಕನ್ನಡಿಗರಲ್ಲಿ ಕಾಣಿಸಿಕೊಂಡಿತು. ಇದರ ಪರಿಣಾಮವಾಗಿ ಹುಟ್ಟಿಕೊಂಡದ್ದೇ ಕನ್ನಡ ದೇಶ ಹಾಗೂ ಕರ್ನಾಟಕ ಪ್ರಗತಿರಂಗ ಎಂಬ ಪಕ್ಷಗಳು.

ವಾಟಾಳರ ಚಳವಳಿಪಕ್ಷ ಪ್ರಾದೇಶಿಕವಾಗಿ ಗುರುತಿಸಿಕೊಂಡಿದ್ದರೂ ಅದು ರಾಜ್ಯವ್ಯಾಪಿ ಪಕ್ಷವಾಗಿ ವಿಸ್ತೃತಗೊಂಡಿರಲಿಲ್ಲ. ಹೀಗಾಗಿ 1987ರಲ್ಲಿ ಕನ್ನಡ ದೇಶ ಪಕ್ಷ ಕವಿ ಕುವೆಂಪು ಅವರ ಪ್ರೇರಣೆಯಿಂದ ಅಸ್ತಿತ್ವಕ್ಕೆ ಬಂತು. ಈ ಪಕ್ಷದ ನೇತೃತ್ವವನ್ನು ವಹಿಸಿದ್ದವರು ರೈತ ಸಂಘದ ಎಂ.ಡಿ.ನಂಜುಂಡಸ್ವಾಮಿ ಅವರು. ಕನ್ನಡ ದೇಶ ಪಕ್ಷ ಕನ್ನಡಿಗರ ಅಶೋತ್ತರಗಳ ಈಡೇರಿಕೆಗೆ ದುಡಿಯುವ ಮುನ್ನವೇ ಸೋಲನ್ನು ಕಂಡಿತು. ಈ ಘಟ್ಟದಲ್ಲಿ ಎ.ಕೆ.ಸುಬ್ಬಯ್ಯನವರ ಕನ್ನಡಪರ ಪ್ರಯತ್ನಗಳೂ ಗಮನಾರ್ಹವೆನಿಸಿವೆ.

ಪ್ರಗತಿಪರ ಮನಸ್ಸುಳ್ಳ ವ್ಯಕ್ತಿಗಳು ಅದುವರೆಗಿನ ಎಲ್ಲಕೊರತೆಗಳನ್ನು ಪರಿಶೀಲಿಸಿ 1988ರಲ್ಲಿ ಕರ್ನಾಟಕ ಪ್ರಗತಿರಂಗ ಎಂಬ ರಾಜಕೀಯ ಪಕ್ಷವನ್ನು ರೂಪಿಸಿದರು. ಈ ರಂಗಕ್ಕೆ ಲಂಕೇಶ್ ಪತ್ರಿಕೆಯ ಮೂಲಕ ರೂಪಿಸಲಾದ ಹಿನ್ನೆಲೆ ಮತ್ತು ಸಿದ್ಧಾಂತಗಳಿದ್ದವು. ಕಾಂಗ್ರೆಸ್ ಮತ್ತು ಜನತಾ ಪಕ್ಷಗಳಿಗೆ ಪರ್ಯಾಯವಾಗಿ ಹುಟ್ಟಿಕೊಂಡ ಪಕ್ಷವಿದು. ಇದರ ನೇತೃತ್ವ ಪಿ.ಲಂಕೇಶ್ ಅವರದು. ಕನ್ನಡ, ಕನ್ನಡಿಗ, ಕರ್ನಾಟಕಗಳ ಬಗೆಗಿನ ಕಾಳಜಿಯಿಂದ ರಚನೆಗೊಂಡ ಈ ಪಕ್ಷಕ್ಕೆ ಕನ್ನಡಿಗರಿಂದ ನಿರೀಕ್ಷಿಸಲಾಗಿದ್ದ ಬೆಂಬಲ, ಪ್ರೋತ್ಸಾಹಗಳು ದೊರೆಯಲಿಲ್ಲ. ಈ ಪಕ್ಷವೂ ಸಂಘಟನಾ ಹಂತದಲ್ಲೇ ಕ್ಷೀಣಿಸಿತು. ಕನ್ನಡ ಚಳವಳಿಯ ಚರಿತ್ರೆಯಲ್ಲಿ ಈ ರಾಜಕೀಯ ಪಕ್ಷಗಳಿಗೆ ದೊರೆಯದೆ ಹೋದ ಬೆಂಬಲಗಳು ಕನ್ನಡಿಗರಿಂದ ಮತ್ತೆ ರಾಷ್ಟ್ರೀಯ ಪಕ್ಷಗಳಿಗೆ ದೊರೆತವು.

ಗೋಕಾಕ್ ಚಳವಳಿಯ ಅನಂತರ ಸಂಭವಿಸಿದ ರಾಜಕೀಯ ಬದಲಾವಣೆಗಳು ಚಳವಳಿಯ ಸ್ವರೂಪ ಬಹುಮುಖಿ ನೆಲೆಗಳನ್ನು ಕಂಡುಕೊಳ್ಳುವಂತೆ ಮಾಡಿತು. ಇದಕ್ಕೆ ಪ್ರಾತಿನಿಧ್ಯ, ಆಮಿಷ, ಅಗ್ಗದ ಪ್ರಚಾರ ಪ್ರಿಯತೆ, ಕನ್ನಡದ ಹೆಸರಿನಲ್ಲಿ ಲೂಟಿ, ಹಿಂಸೆಗಳು, ಜಾತಿ ಮುಖಂಡರ, ರಾಜಕಾರಣಿಗಳ ಭ್ರಷ್ಟಾಚಾರಗಳು ಎಲ್ಲವೂ ಕಾರಣ. 1980 ಹಾಗೂ 1990ರ ದಶಕದಲ್ಲಾದ ಈ ವೈಪರೀತ್ಯಗಳು ಕನ್ನಡ ಚಳವಳಿಯನ್ನು ಭಿನ್ನ ರೀತಿಯಲ್ಲಿ ಗ್ರಹಿಸಲು ಎಡೆಮಾಡಿಕೊಟ್ಟವು. ಆದರೆ ಇವೆಲ್ಲವುಗಳನ್ನೂ ಹೊರತುಪಡಿಸಿ ನಾಡು, ನುಡಿ, ಸಂಸ್ಕೃತಿಯ ನೆಲೆಗಳಲ್ಲಿ ಕಾರ್ಯನಿರ್ವಹಿಸಿದ ನಿಸ್ವಾರ್ಥ ಕನ್ನಡ ಚಳವಳಿಗಾರರನ್ನು, ಸಂಘಟನೆಗಳನ್ನು ಇಲ್ಲಿ ಪ್ರಸ್ತಾಪಿಸಬಹುದು.

**ಕನ್ನಡ ಶಕ್ತಿ ಕೇಂದ್ರ ಮತ್ತು ಇತರ ಸಂಘಟನೆಗಳು :** ಚಳವಳಿಗಳಿಗೆ ಸಂಬಂಧಿಸಿದ ಮಾರ್ಗದರ್ಶನಗಳನ್ನು ನೀಡಿ ನಡೆಸಿಕೊಂಡು ಹೋಗಲು ಸಾಹಿತಿ, ಕಲಾವಿದರ ಬಳಗ ಹುಟ್ಟು ಹಾಕಿದ ಸಂಸ್ಥೆಯೇ ಕನ್ನಡ ಶಕ್ತಿ ಕೇಂದ್ರ. 1988ರಲ್ಲಿ ಅಸ್ತಿತ್ವಕ್ಕೆ ಬಂದ ಈ ಕೇಂದ್ರ ಎಂ. ಚಿದಾನಂದಮೂರ್ತಿಯವರ ನೇತೃತ್ವದಲ್ಲಿ ಮುನ್ನಡೆದಿದೆ. ಇದು ಗೋಕಾಕ್ ಚಳವಳಿಯ ಅನಂತರ ಕನ್ನಡದ ಹೋರಾಟವನ್ನು ಇತರೆ ಸಮಸ್ಯೆಗಳ ಕಡೆಗೂ ಕೇಂದ್ರೀಕರಿಸುವಂತೆ ಮಾಡಿತು.

ಕನ್ನಡ ಶಕ್ತಿ ಕೇಂದ್ರ ಕನ್ನಡಿಗರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಡುವ ಸರೋಜಿನಿ ಮಹಿಷಿ ವರದಿಯ ಅನುಷ್ಠಾನಕ್ಕಾಗಿ ಒತ್ತಾಯಿಸಿತು. ಅಲ್ಲದೆ ನೈರುತ್ಯ ರೈಲ್ವೆ ವಲಯದ ಕೇಂದ್ರವನ್ನು ಹುಬ್ಬಳ್ಳಿಯಲ್ಲಿ ಸ್ಥಾಪಿಸುವವರೆಗೂ ಅನೇಕ ರೀತಿಯಲ್ಲಿ ಕನ್ನಡ, ಕನ್ನಡಿಗ, ಕರ್ನಾಟಕಗಳ ಬೇಡಿಕೆಗಳಿಗೆ ಸ್ಪಂದಿಸುತ್ತಿದೆ. ರಾಜ್ಯ ಲೋಕಸೇವಾ ಆಯೋಗದಲ್ಲಿ ಕನ್ನಡಕ್ಕೆ ಆದ್ಯತೆ, ದೂರದರ್ಶನದ ಕನ್ನಡೀಕರಣ, ಹಂಪಿಯಲ್ಲಿ ಕನ್ನಡ ವಿಶ್ವವಿದ್ಯಾಲಯದ ಸ್ಥಾಪನೆ, ಉರ್ದು ವಾರ್ತಾಪ್ರಸಾರ ತಡೆ, ಕಾವೇರಿ ಜಲವಿವಾದ ಚಳವಳಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಮತ್ತು ಕನ್ನಡ ಪುಸ್ತಕ ಪ್ರಾಧಿಕಾರಗಳ ಸ್ಥಾಪನೆ, ಬೆಳಗಾಂವಿಯಲ್ಲಿ ತಾಂತ್ರಿಕ ವಿಶ್ವವಿದ್ಯಾಲಯದ ಸ್ಥಾಪನೆ ಇತ್ಯಾದಿ ಕನ್ನಡ ಪರವಾದ ಸಾಧನೆಗಳಿಗಾಗಿ ಇದು ಶ್ರಮಿಸಿದೆ. ಕೆ.ಜಿ.ಎಫ್.ನಲ್ಲಿ ತಮಿಳರ ದೌರ್ಜನ್ಯ, ಬೀದರ್‌ನಲ್ಲಿ ಸಿಖ್ಖರಿಂದ ಆಗುತ್ತಿರುವ ಅತ್ಯಾಚಾರಗಳು, ಹಂಪಿ ಮತ್ತು ಗೋಕರ್ಣಗಳಲ್ಲಿನ ಹಿಪ್ಪಿಗಳ ಸ್ವೇಚ್ಛಾಚಾರ, ಬೆಳಗಾಂವಿಯಲ್ಲಿ ಎಂ.ಇ.ಎಸ್. ಪಕ್ಷದವರ ಕನ್ನಡ ವಿರೋಧಿ ಕಾರ್ಯಕ್ರಮಗಳ ವಿರುದ್ಧವೂ ಕನ್ನಡ ಶಕ್ತಿ ಕೇಂದ್ರ ಚಳವಳಿ ಮಾಡಿದೆ. ವಲಸಿಗರ ತಡೆ, ಅಂಚೆ ತಂತಿ ರೈಲ್ವೆ ಆಡಿಟರ್ ಕಚೇರಿಗಳಲ್ಲಿ ಕನ್ನಡೇತರರ ನೇಮಕಗಳ ಬಗೆಗೂ ಕನ್ನಡಪರವಾದ ಸಂಘಟನೆಗಳು ಪ್ರಯತ್ನಿಸುತ್ತಿವೆ. ಶಕ್ತಿ ಕೇಂದ್ರದ ಜೊತೆಗೆ ಕನ್ನಡ ಸಂಘರ್ಷ ಸಮಿತಿ, ಕನ್ನಡ ಸೇನೆ, ಕನ್ನಡ ಸಂರಕ್ಷಣಾ ವೇದಿಕೆ, ಕರ್ನಾಟಕ ರಕ್ಷಣಾ ವೇದಿಕೆ ಮೊದಲಾದ ಸಂಘಟನೆಗಳೂ ಸೇರಿಕೊಂಡಿವೆ. ಸಾರಿಗೆ, ಹೋಟೆಲು, ಚಿತ್ರಮಂದಿರ, ಆಟೋರಿಕ್ಷಾ, ಬ್ಯಾಂಕುಗಳು, ಉದ್ಯಮಗಳು ಮೊದಲಾದ ಸರ್ಕಾರಿ, ಅರೆ ಸರ್ಕಾರಿ, ಖಾಸಗಿ ಸಂಘ ಸಂಸ್ಥೆಗಳಲ್ಲಿನ ಕನ್ನಡ ಸಂಘಟನೆಗಳು ಗಮನಾರ್ಹವಾಗಿ ಕಾರ್ಯನಿರತವಾಗಿವೆ. ಅಂತೆಯೇ ಕರ್ನಾಟಕ ಕೆಥೊಲಿಕ್ ಕ್ರೈಸ್ತರ ಕನ್ನಡ ಸಂಘಗಳು ಕ್ರೈಸ್ತ ಮಂದಿರಗಳಲ್ಲಿ ಕನ್ನಡದಲ್ಲಿ ಕಲಾಪಗಳನ್ನು ನಡೆಸಲು ಚಳವಳಿ ಹೂಡಿವೆ.

ಕನ್ನಡ ಚಳವಳಿಗಳು ಕನ್ನಡ ಹೋರಾಟಗಳಾದದ್ದು 1990ರ ದಶಕದಿಂದೀಚೆಗೆ. ಕರ್ನಾಟಕದಲ್ಲೂ ರಾಜಕಾರಣಿಗಳ ಆಸೆ, ಆಮಿಷಗಳಿಂದಾಗಿ ಕೋಮುವಾದಿ ಬೀಜಗಳ ಬಿತ್ತನೆ ಆಯಿತು. ಭ್ರಷ್ಟಾಚಾರ ಮನೋವೃತ್ತಿಯ ರಾಜಕಾರಣಿಗಳು ಜನಸಾಮಾನ್ಯರನ್ನು ಶೋಷಿಸಲು ಕನ್ನಡ ಚಳವಳಿಗಳಿಗೆ ಹಿಂಸಾತ್ಮಕ ರೂಪ ಕೊಟ್ಟರು ಎಂಬುದೊಂದು ಗುರುತರ ಆರೋಪ. ಕನ್ನಡಿಗರ ಭಾಷಿಕ ಭಾವೋದ್ವೇಗಗಳು ಜಾತಿ, ಧರ್ಮ, ಕೋಮು, ಜನಾಂಗ, ಪ್ರದೇಶ, ನೀರು ಮೊದಲಾದ ಸೂಕ್ಷ್ಮ ಸಂವೇದನೆಗಳಿಗೆ ಬಂಡವಾಳವಾಗುವಂತೆ ಆಯಿತು. ಕನ್ನಡದ ಹೆಸರಿನಲ್ಲಿ ಕಿಡಿಗೇಡಿಗಳು ತಮಿಳು, ಮುಸ್ಲಿಮ್ ಸಹೋದರರ ಜೊತೆಗೆ ಕನ್ನಡಿಗರೂ ಪ್ರಾಣಗಳನ್ನು ತೆರುವಂತೆ ಮಾಡಿದರು. ಇಂಥ ಸನ್ನಿವೇಶಗಳಲ್ಲಿಯೇ ಕನ್ನಡ ಚಳವಳಿಗಳು ಕನ್ನಡ ಹೋರಾಟಗಳು ಎಂಬ ಭಿತ್ತಿಯನ್ನು ಅನಾವರಣಗೊಳಿಸಿದ್ದು.

ಕೇಂದ್ರ ಸರ್ಕಾರದ ಧೋರಣೆಗಳಿಂದಾಗಿ ಕರ್ನಾಟಕದಂಥ ರಾಜ್ಯಗಳು ತಮ್ಮ ಸಂಪನ್ಮೂಲಗಳನ್ನು ಬರಿದುಮಾಡಿಕೊಳ್ಳುತ್ತಿವೆ. ಜಪಾನ್ ಕೈಗಾರಿಕಾ ವಸಾಹತು, ಸಿಂಗಪೂರ್ ಟೌನ್‌ಷಿಪ್, ಗ್ಯಾಟ್ ಒಪ್ಪಂದಗಳು, ಗಂಗಡಿಕಲ್ಲು ಅದಿರು ಯೋಜನೆ, ತುಂಗಾ ಮೂಲ ನಾಶ, ಪರಿಸರ ಮಾಲಿನ್ಯ ಹೀಗೆ ಕನ್ನಡಿಗರು ಶೋಷಣೆಗೆ ಒಳಗಾಗುತ್ತಿದ್ದುದ್ದನ್ನು ಕನ್ನಡ ಚಳವಳಿಗಾರರು ಪ್ರತಿಭಟಿಸಿದರು. ಈ ನಿಟ್ಟಿನಲ್ಲಿ ಕರ್ನಾಟಕ ವಿಮೋಚನಾರಂಗ, ಪ್ರಜಾತಾಂತ್ರಿಕ ಜನರ ವೇದಿಕೆ, ತುಂಗಾಮೂಲ ಉಳಿಸಿ ಸಂಘಗಳಂಥ ಸಂಘಟನೆಗಳ ಹೋರಾಟಗಾರರ ಪಾತ್ರ ದೊಡ್ಡದು.

ಒಟ್ಟಾರೆ ಕನ್ನಡ ಚಳವಳಿಗಳ ಕಳೆದ ಎರಡು ದಶಕಗಳ ಚರಿತ್ರೆಯನ್ನು ಪರಿಶೀಲಿಸಿದರೆ ರಾಜಕಾರಣದ ಆಮಿಷ, ಪ್ರಚಾರಪ್ರಿಯತೆ, ಅಸಂಖ್ಯ ಪೋಷಿತ ಹಾಗೂ ಘೋಷಿತ ನಾಯಕರ ಸಂಘಟನೆಗಳು ಗೋಚರವಾಗುತ್ತವೆ. ಕನ್ನಡದ ರಾಜಕಾರಣಿಗಳು ಕನ್ನಡೇತರ ರಾಜಕೀಯ ಪಕ್ಷಗಳೊಂದಿಗೆ ಡಿ.ಎಂ.ಕೆ., ಅಣ್ಣಾ ಡಿ.ಎಂ.ಕೆ. ಇತ್ಯಾದಿಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡು ಸ್ಪರ್ಧಿಸುವುದೂ ಕಂಡುಬಂದಿದೆ. ಕನ್ನಡ, ಕನ್ನಡಿಗ, ಕರ್ನಾಟಕ ಪರವಾದ ಪ್ರಾದೇಶಿಕ ರಾಜಕೀಯ ಪಕ್ಷವೊಂದನ್ನು ರಚಿಸಿ ಅಧಿಕಾರಕ್ಕೆ ತರಲಾಗದ ಕನ್ನಡಿಗರ ಅಸಹಾಯಕತೆಯ ಸ್ಥಿತಿಯನ್ನು ಇದು ಸಂಕೇತಿಸುತ್ತದೆ. ಸಂಕುಚಿತ, ಭಾಷಿಕ ಭಾವೋದ್ವೇಗಗಳಿಂದ, ಅತಿರೇಕದ ಭಾಷಾಭಿಮಾನದಿಂದ ಕನ್ನಡ ಚಳವಳಿ ಮತ್ತು ಚಿಂತನೆಗಳು ಕೆಲವೊಮ್ಮೆ ಸೋತಿವೆಯೆನಿಸುತ್ತದೆ. ಕನ್ನಡದ ಅಧಿಕಾರಿಗಳೂ ನೌಕರರೂ ಕನ್ನಡವನ್ನು ಆಡಳಿತದಲ್ಲಿ ಬಳಸುವಲ್ಲಿ ಹೆಚ್ಚು ಉತ್ಸುಕರಾಗದಿರುವುದು ಕಂಡುಬಂದಿದೆ. ಆದ್ದರಿಂದಲೇ ಇಂದಿಗೂ ಶಿಕ್ಷಣ ರಂಗದಲ್ಲಿ ಕನ್ನಡ ಮಾಧ್ಯಮವಾಗಲಿ,ಸರೋಜಿನಿ ಮಹಿಷಿ ವರದಿಯ ಅನುಷ್ಠಾನವಾಗಲಿ, ಆಡಳಿತ ಭಾಷೆ ಕನ್ನಡವಾಗಲಿ ಪೂರ್ಣವಾಗಿ ಸಾಧ್ಯವಾಗಿಲ್ಲ. ಇತ್ತೀಚಿನ ಕೆಲವು ಪ್ರಕರಣಗಳು ಕನ್ನಡಿಗರನ್ನು ಭಿನ್ನವಾಗಿ ಆಲೋಚಿಸುವಂತೆ ಮಾಡಿವೆ. ಕಾಡುಗಳ್ಳ ವೀರಪ್ಪನ್‌ನಿಂದ ಆದ ನಟ ರಾಜಕುಮಾರ್ ಅಪಹರಣ, ಅಂತೆಯೇ ಸಚಿವ ನಾಗಪ್ಪ ಅವರ ಅಪಹರಣಗಳು ಹಾಗೂ ಅವರ ಸಾವು ಕನ್ನಡಿಗರ ತಾಳ್ಮೆಯನ್ನು ಪರೀಕ್ಷಿಸುವಂತೆ ಮಾಡಿವೆ. ಜೊತೆಗೆ ಕಾವೇರಿ ನದಿಯ ನೀರಿನ ವಿವಾದ, ಹೋರಾಟಗಳು ಉಗ್ರರೂಪ ತಳೆದು ರಾಜಕಾರಣದ ಸ್ವಾರ್ಥ, ಅಸಹಾಯಕತೆಗಳನ್ನು ಅನಾವರಣಗೊಳಿಸಿವೆ. ನಿಷ್ಠಾವಂತ ಕನ್ನಡಿಗರಿಂದ ಹಾಗೂ ಕರ್ನಾಟಕ ಸರ್ಕಾರದ ಪ್ರಗತಿಪರ ಸ್ವಾಭಿಮಾನ ಪೂರಿತ ಪ್ರಯತ್ನಗಳಿಂದ ಮುಂದೆ ಕರ್ನಾಟಕದ ಹಿತಗಳನ್ನು ಕಾಯ್ದುಕೊಳ್ಳುವುದು ಸಾಧ್ಯವಾಗಬಹುದೆಂದು ಆಶಿಸಬಹುದು. (ಸಿ.ಆರ್.ಜಿ.)

**ಕನ್ನಡ ಛಂದಸ್ಸು :** ಕನ್ನಡ ಭಾಷೆಯ ಪದ್ಯಸಾಹಿತ್ಯದಲ್ಲಿ ಬಹಳ ಹಿಂದಿನಿಂದಲೂ ವಾಡಿಕೆಯಾಗಿ ಬಳಕೆಯಾಗುತ್ತ ಬಂದಿರುವ ಸಂಸ್ಕೃತ ಮತ್ತು ಪ್ರಾಕೃತ ಪ್ರಭಾವದ ಪದ್ಯಜಾತಿಗಳನ್ನೂ ವಿಶೇಷವಾಗಿ ಅಚ್ಚಕನ್ನಡ ಮಟ್ಟುಗಳೆನಿಸಿದ ತ್ರಿಪದಿ ಮೊದಲಾದ ಪದ್ಯಜಾತಿಗಳು ಮತ್ತು ಹೊಸಗನ್ನಡ ಕವಿತೆಯ ಮಟ್ಟುಗಳನ್ನೂ ಕನ್ನಡ ಛಂದಸ್ಸು ಎಂಬ ಮಾತು ಒಳಗೊಳ್ಳುತ್ತದೆ.

ಉಪಲಬ್ಧ ಕನ್ನಡ ಛಂದೋಗ್ರಂಥಗಳಲ್ಲಿ 1ನೆಯ ನಾಗವರ್ಮ ಬರೆದ ಛಂದೋಂಬುಧಿ (ಸು.990) ಅತ್ಯಂತ ಪ್ರಾಚೀನವೂ ಪ್ರಮಾಣಭೂತವೂ ಪ್ರಸಿದ್ಧವೂ ಆದ ಗ್ರಂಥ. ಇದರಲ್ಲಿ ಕನ್ನಡ ಛಂದಸ್ಸಿಗೆ ಸಂಬಂಧಿಸಿದ ನಾನಾ ವಿಷಯಗಳು ಸ್ವತಂತ್ರವಾಗಿಯೂ ತಕ್ಕಮಟ್ಟಿಗೆ ವಿಸ್ತಾರವಾಗಿಯೂ ಪ್ರತಿಪಾದಿತವಾಗಿವೆ. ಇದಕ್ಕೂ ಮುಂಚಿನ ಕಾವ್ಯಲಕ್ಷಣಗ್ರಂಥವಾದ (ಸು.850) ಕವಿರಾಜಮಾರ್ಗ (ನೋಡಿ) ಕನ್ನಡ ಛಂದಸ್ಸಿಗೆ ಸಂಬಂಧಿಸಿದಂತೆ ಹಲವು ವಿಷಯಗಳನ್ನು ಒಳಗೊಂಡಿದೆ. ತಮಿಳು ಭಾಷೆಯ ಯಾಪ್ಪರುಂಗಲಕ್ಕಾರಿಹೈ ಎಂಬ ಪ್ರಾಚೀನ ಛಂದೋಗ್ರಂಥದ ವ್ಯಾಖ್ಯಾನದಲ್ಲಿ ಗುಣಗಾಂಕಿಯಂ ಎಂಬ ಕನ್ನಡ ಛಂದೋಗ್ರಂಥದ ಉಲ್ಲೇಖವಿದೆ. ಇದು ಈವರೆಗೆ ದೊರೆತಿಲ್ಲ. ಅಲ್ಲದೆ ಈ ಗ್ರಂಥದ ಅಸ್ತಿತ್ವ, ಕರ್ತೃತ್ವ, ಕಾಲ ಎಲ್ಲವೂ ತೀರ ಅನಿಶ್ಚಿತವೂ ವಿವಾದಾಸ್ಪದವೂ ಆಗಿವೆ. ಇಮ್ಮಡಿ ನಾಗವರ್ಮ (ಸು.1042) ಛಂದೋವಿಚಿತಿ ಎಂಬೊಂದು ಗ್ರಂಥವನ್ನು ಬರೆದಿದ್ದಂತೆ ಕಾವ್ಯಾವಲೋಕನದಲ್ಲಿ ದೊರೆಯುವ ಒಂದು ಆಧಾರದಿಂದ (ಪದ್ಯ 965) ತಿಳಿಯುತ್ತದೆ. ಇದೂ ದೊರೆತಿಲ್ಲ. ಈಶ್ವರಕವಿಯ ಕವಿಜಿಹ್ವಾಬಂಧನಂ, ಗುಣಚಂದ್ರನ ಛಂದಸ್ಸಾರ (ಸು.1650), ಶಾಲ್ಯದ ಕೃಷ್ಣರಾಜನ ಷಟ್ಪ್ರತ್ಯಯ ಮೊದಲಾದ ಛಂದೋಗ್ರಂಥಗಳಲ್ಲಿ ಛಂದಸ್ಸಿನ ಸಾಮಾನ್ಯ ವಿಷಯಗಳನ್ನೂ ಕನ್ನಡ ಛಂದಸ್ಸನ್ನೂ ಕುರಿತಂತೆ ಯಥೋಚಿತವಾಗಿ ವಿಷಯನಿರೂಪಣೆ ಕಂಡುಬರುತ್ತದೆ.

ಕೆಲವು ಸಂಸ್ಕೃತ ಲಕ್ಷಣ ಗ್ರಂಥಗಳಲ್ಲಿ ಕೂಡ ಪ್ರಾಸಂಗಿಕವಾಗಿ ಕನ್ನಡ ಛಂದಸ್ಸಿನ ಗಣಸ್ವರೂಪವನ್ನೂ ಪ್ರಸಿದ್ಧವಾದ ಪದ್ಯಜಾತಿಗಳನ್ನೂ ವಿವೇಚಿಸಿರುವುದು ಕಂಡುಬರುತ್ತದೆ. ಜಯಕೀರ್ತಿಯ ಛಂದೋನುಶಾಸನಮ್ (ಸು.1050) ಎಂಬ ಗ್ರಂಥ ಈ ದೃಷ್ಟಿಯಿಂದ ಮುಖ್ಯವಾದುದು. ಇದರಲ್ಲಿ ಕನ್ನಡ ಛಂದಸ್ಸಿನ ಸಂಗತಿಗಳು ಕ್ವಚಿತ್ತಾಗಿ ಉಕ್ತವಾಗಿರುವುದಲ್ಲದೆ, ಕರ್ಣಾಟಕ ವಿಷಯ ಭಾಷಾ ಜಾತ್ಯಧಿಕಾರವೆಂಬ 7ನೆಯ ಅಧಿಕಾರದಲ್ಲಿ ಪೂರ್ತಿಯಾಗಿ ಕನ್ನಡ ಛಂದಸ್ಸಿನ ವಿವೇಚನೆ ಲಕ್ಷಣ ಲಕ್ಷ್ಯ ಸಮನ್ವಿತವಾಗಿ ಬಂದಿದೆ. ಈ ಗ್ರಂಥದಲ್ಲಿ ನಾಗವರ್ಮನ ಛಂದೋಂಬುಧಿಯ ಪ್ರಭಾವವನ್ನು ಕಾಣಬಹುದಾಗಿದೆ. 3ನೆಯ ಸೋಮೇಶ್ವರನ ಮಾನಸೋಲ್ಲಾಸದಲ್ಲಿ (ಸು.1129) ಅದರ ಚತುರ್ವಿಂಶತಿಯ 6ನೆಯ ಅಧ್ಯಾಯದಲ್ಲಿ ಕನ್ನಡ ಛಂದಸ್ಸಿಗೆ ಸಂಬಂಧಪಟ್ಟಂತೆ, ಅಂಶಗಣಗಳ ಸ್ವರೂಪವನ್ನೂ ತ್ರಿಪದಿ ಷಟ್ಪದಿ ಹಾಗೂ ಕಂದಪದ್ಯ ಇವುಗಳ ಸ್ವರೂಪವನ್ನೂ ಲಕ್ಷಣ ಲಕ್ಷ್ಯಗಳೊಂದಿಗೆ ವಿವರಿಸಿದೆ. ಶಾರ್ಙ್ಗದೇವನ ಸಂಗೀತರತ್ನಾಕರವೆಂಬ ಗ್ರಂಥದಲ್ಲಿ, ಅದರ 4ನೆಯ ಪ್ರಬಂಧಾಧ್ಯಾಯದಲ್ಲಿ, ಕನ್ನಡ ಛಂದಸ್ಸಿನ ಏಳೆ, ತ್ರಿಪದಿ ಮತ್ತು ಷಟ್ಪದಿಗಳ ಲಕ್ಷಣವನ್ನು ನಿರೂಪಿಸಿದೆ. ಕನ್ನಡ ಭಾಷಾಸಾಹಿತ್ಯಗಳ ಪರಿಚಯವಿದ್ದಂತೆ ತೋರುವ ಈ ಲಾಕ್ಷಣಿಕರ ವಿವರಣೆಗಳಿಂದ ಕನ್ನಡ ಛಂದಸ್ಸಿನ ಸ್ವರೂಪಜ್ಞಾನಕ್ಕೆ ತುಂಬ ಉಪಕಾರವಾಗಿದೆ.

**ಕನ್ನಡ ಛಂದಸ್ಸಿನ ವಿವಿಧ ಗುಣಸ್ವರೂಪ :** ಕನ್ನಡದಲ್ಲಿ ಪ್ರಚಲಿತವಾಗಿರುವ ಪದ್ಯಜಾತಿಗಳು ಮೂರು ವಿಧ. ವರ್ಣವೃತ್ತಗಳು, ಮಾತ್ರಾವೃತ್ತಗಳು ಮತ್ತು ಅಂಶವೃತ್ತಗಳು. ವರ್ಣವೃತ್ತಗಳಲ್ಲಿ ಪ್ರತಿಪಾದದಲ್ಲಿಯೂ ನಿರ್ದಿಷ್ಟವಾದ ಅಕ್ಷರ ಸಂಖ್ಯೆಯಿದ್ದು ಲಘುವೋ ಗುರುವೋ ಆಗಿರುವ ಆಯಾ ಅಕ್ಷರಗಳ ವಿನ್ಯಾಸವೂ ನಿರ್ದಿಷ್ಟವಾಗಿರುತ್ತದೆ. ಮಯರಸತಜಭನ ಎಂಬುದಾಗಿ ಸಂಜ್ಞೆಗಳನ್ನು ಮಾಡಿಕೊಂಡು ಪದ್ಯಪಾದವನ್ನು 3-3 ಅಕ್ಷರಗಳ ಗಣಗಳನ್ನಾಗಿ ವಿಭಜಿಸಿ ವೃತ್ತಗಳ ಲಕ್ಷಣವನ್ನು ತಿಳಿಯಲಾಗುತ್ತದೆ. ಮಾತ್ರಾವೃತ್ತಗಳಲ್ಲಿ ಪ್ರತಿಪಾದದಲ್ಲಿಯೂ ಇಷ್ಟಿಷ್ಟು ಮಾತ್ರೆಗಳ ಇಷ್ಟಿಷ್ಟು ಗಣಗಳೆಂದಿದ್ದು ಮಾತ್ರಾ ಸಂಖ್ಯೆಗೆ ಅನುಗುಣವಾಗಿ ಕೆಲವು ಸಂದರ್ಭಗಳಲ್ಲಿ ಕೆಲವು ವಿಶಿಷ್ಟ ಗಣನಿಯಮಗಳನ್ನನುಸರಿಸಿ, ಗಣಭಾಗವಿರುತ್ತದೆ. ಅಂಶ ವೃತ್ತಗಳಲ್ಲಿ, ಪ್ರತಿಪಾದದಲ್ಲಿಯೂ ವಾಚನದ ಅಥವಾ ಗಾಯನದ ಗತಿಯನ್ನನುಸರಿಸಿ, ತಾಳಲಯಗಳು ಸರಿಯಾಗಿ ಹೊಂದಿಕೊಳ್ಳಲು ಲಘುಗುರುಗಳ ಮಾತ್ರಾ ಪರಿಮಾಣವೂ ಹಿಗ್ಗಿ ಅಥವಾ ಕುಗ್ಗಿ ಹೊಂದಿಕೆಗೆ ಅನುವಾಗುವ ಅಕ್ಷರ (ಅಂಶ)ಗಳಿಂದ ಕಟ್ಟಿದ ಗಣಗಳು ಬಂದಿರುತ್ತವೆ. ಎಂದರೆ ಹಾಗೆ ಅಕ್ಷರಗಳನ್ನು ಹೊಂದಿಸಿಕೊಳ್ಳಬೇಕಾಗುತ್ತದೆ. ಕ್ರಮವಾಗಿ 2, 3 ಮತ್ತು 4 ಅಂಶಗಳ ಗಣಗಳಿಗೆ ಬ್ರಹ್ಮ, ವಿಷ್ಣು, ರುದ್ರ ಎಂಬ ಸಂಕೇತಗಳನ್ನು ಕನ್ನಡದಲ್ಲಿ ಕೊಟ್ಟಿದೆ. ಅಚ್ಚಕನ್ನಡ ಮಟ್ಟುಗಳು ಅಂಶವೃತ್ತಗಳು.

**ಸಂಸ್ಕೃತ ಛಂದಸ್ಸಿನ ಮೂಲದ ವರ್ಣವೃತ್ತಗಳು :** ಪ್ರಾಚೀನ ಕನ್ನಡ ಸಾಹಿತ್ಯದ ಕಾವ್ಯಗಳೂ ಪುರಾಣಗಳೂ ವಿಶೇಷವಾಗಿ ಚಂಪೂ ಪದ್ಧತಿಯಲ್ಲಿ ರಚಿತವಾಗಿವೆ. ಚಂಪೂ ಪದ್ಧತಿಯ ಚೌಕಟ್ಟು ಮುಖ್ಯವಾಗಿ ಗದ್ಯ ಹಾಗೂ ಕಂದ, ವೃತ್ತಗಳಿಂದಾದುದು.

**ವೃತ್ತಗಳು, ವರ್ಣವೃತ್ತಗಳು :** ಸಮ, ಅರ್ಧಸಮ ಮತ್ತು ವಿಷಮ ಎಂಬ ಅವುಗಳ ಮೂರು ಪ್ರಕಾರಗಳಲ್ಲಿ ಮೊದಲನೆಯದೇ ವಿಶೇಷವಾಗಿ ಬಳಕೆಯಾಗಿರತಕ್ಕದ್ದು. ಉಳಿದವು ತೀರ ಕ್ವಚಿತ್ತಾಗಿ ಬಂದಿರತಕ್ಕವು. ವರ್ಣವೃತ್ತಗಳಲ್ಲಿ ಕೆಲವನ್ನು ಸಂಸ್ಕೃತ ಛಂದಸ್ಸಿನಿಂದ ಕನ್ನಡಕ್ಕೆ ನೇರವಾಗಿ ತೆಗೆದುಕೊಂಡಿದೆ. ಉದಾಹರಣೆಗೆ ಶಾರ್ದೂಲ ವಿಕ್ರೀಡಿತ, ಸ್ರಗ್ಧರೆ ಇತ್ಯಾದಿ: ಇನ್ನು ಕೆಲವನ್ನು ಆ ಮಾದರಿಗಳಲ್ಲಿ ಹೊಸದಾಗಿ ರಚಿಸಿಕೊಂಡಿದೆ. ಉದಾ: ಮತ್ತೇಭವಿಕ್ರೀಡಿತ, ಮಹಾಸ್ರಗ್ಧರೆ ಇತ್ಯಾದಿ. ಜೊತೆಗೆ ಕೆಲವು ವ್ಯತ್ಯಾಸಗಳನ್ನೂ ಕನ್ನಡ ಕವಿಗಳು ಮಾಡಿಕೊಂಡರು. ಸಂಸ್ಕೃತದಲ್ಲಿಯ ನಿಯತ ಯತಿಯನ್ನು ಐಚ್ಛಿಕವಾಗಿ ಭಾವಿಸಿದ್ದು. ಸಂಸ್ಕೃತದಲ್ಲಿಲ್ಲದ ದ್ವಿತೀಯಾಕ್ಷರ ಪ್ರಾಸವನ್ನು ಪಾಲಿಸಿದ್ದು, ಸಂಸ್ಕೃತದಲ್ಲಿರುವಂತೆ ಪಾದಾಂತ್ಯದಲ್ಲಿ ನಿಲುಗಡೆಯನ್ನು ಕಡ್ಡಾಯವಾಗಿಟ್ಟುಕೊಳ್ಳದೆ ಪಾದ ಮುಂದಕ್ಕೆ ಓಡುವಂತೆ ಮಾಡಿಕೊಂಡದ್ದು- ಇವು ಗಮನಿಸತಕ್ಕ ವ್ಯತ್ಯಾಸಗಳು. ಸಂಸ್ಕೃತ ವರ್ಣವೃತ್ತಗಳ ಧಾಟಿ ಘೋಷಗಳನ್ನು ಪಾಲಿಸುವುದಕ್ಕಾಗಿ ಕನ್ನಡದಲ್ಲಿ ಬಳಸಿದ ಅಂಥ ವರ್ಣವೃತ್ತಗಳಲ್ಲಿಯೂ ಸಂಸ್ಕೃತ ಶಬ್ದಗಳು ಹೆಚ್ಚು ಹೆಚ್ಚಾಗಿ ಬಳಕೆಗೆ ಬಂದು ಕನ್ನಡ ನುಡಿಗಳು ತಮ್ಮ ಸ್ವರಗಳೊಡನೆ ಎದ್ದು ನಿಂತು ಕಾಣದಂತಾಯಿತು ಎಂಬುದು ನಿಜ.

ಕನ್ನಡ ಪದ್ಯಸಾಹಿತ್ಯದಲ್ಲಿ ಬಹು ಪ್ರಚಲಿತವಾಗಿರತಕ್ಕ ವರ್ಣವೃತ್ತಗಳು ಖ್ಯಾತ ಕರ್ಣಾಟಕಗಳು ಎಂಬ ಹೆಸರಿನಲ್ಲಿ ರೂಢಿಯಾಗಿವೆ. ಇವು ಶಾರ್ದೂಲ ವಿಕ್ರೀಡಿತ, ಮತ್ತೇಭವಿಕ್ರೀಡಿತ, ಉತ್ಪಲಮಾಲೆ, ಚಂಪಕಮಾಲೆ, ಸ್ರಗ್ಧರೆ, ಮಹಾಸ್ರಗ್ಧರೆ, ಎಂಬ ಆರುವೃತ್ತಗಳು. ಇವು ಸರಿಸುಮಾರು 7ನೆಯ ಶತಮಾನದಿಂದ ಕನ್ನಡ ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಹೆಚ್ಚಾಗಿ ಬಳಕೆಯಲ್ಲಿವೆ. ಇವುಗಳ ಲಕ್ಷಣವನ್ನು ರೂಢಿಯ ಸಂಜ್ಞೆಗಳನ್ನು ಬಳಸಿದ ಪ್ರಸ್ತಾರ ನಿಯಮಕ್ಕೆ ಅನುಗುಣವಾಗಿ ಈ ಸೂತ್ರಗಳಿಂದ ನೆನಪಿಟ್ಟುಕೊಳ್ಳಬಹುದು: 1 ಶಾರ್ದೂಲ ವಿಕ್ರೀಡಿತ; ಕಣ್ಗೊಪ್ಪಲ್ | ಮಸಜಂ | ಸತಂತ| ಗಮುಮಾ | ಶಾರ್ದೂಲ | ವಿಕ್ರೀಡಿತಂ | 2 ಮತ್ತೇಭವಿಕ್ರೀಡಿತ : ಸಭರಂ | ನಂಮಯ| ಲಂಗಮುಂ | ಬಗೆಗೊಳಲ್ | ಮತ್ತೇ | ಭವಿಕ್ರೀ | ಡಿತಂ | 3 ಉತ್ಪಲಮಾಲೆ: ಉತ್ಪಲ| ಮಾಲೆಯ | ಪ್ಪುದು | ಭರಂನಭ | ಭಂರಲ | ಗಂನೆಗ | ಟ್ದಿರಲ್ | 4 ಚಂಪಕ ಮಾಲೆ: ನಜಭ | ಜಜಂಜ | ರಂ ಬಗೆ | ಗೊಳುತ್ತಿ | ರೆ ಚಂಪ | ಕಮಾಲೆ | ಯೆಂದಪರ್ | 5 ಸ್ರಗ್ಧರೆ: ತೋರಲ್ ಮಂ | ರಂಭನಂ | ಮೂಯಗ | ಣಮುಮ | ದೆತಾಂ ಸ್ರ | ಗ್ಧರಾವೃ| ತ್ತಮಕ್ಕುಂ | 6 ಮಹಾಸ್ರಗ್ಧರೆ: ಸತತಂ | ನಂಸಂರ | ರಂಗಂನೆ | ರೆದೆಸೆ | ಯೆ ಮಹಾ | ಸ್ರಗ್ಧರಾ | ವೃತ್ತಮ ಕ್ಕುಂ|. ಇಲ್ಲಿಯ ಪ್ರಸ್ತಾರ ಕ್ರಮವನ್ನು ಪರೀಶೀಲಿಸಿ ಧಾಟಿಯನ್ನರಿತುಕೊಂಡರೆ ಶಾರ್ದೂಲವಿಕ್ರೀಡಿತ, ಉತ್ಪಲಮಾಲೆ ಮತ್ತು ಸ್ರಗ್ಧರೆಗಳ ಪಾದಾದಿಯ ಗುರುವಿಗೆ ಎರಡು ಲಘುಗಳನ್ನಿಟ್ಟು ಕ್ರಮವಾಗಿ ಮತ್ತೇಭವಿಕ್ರೀಡಿತ, ಚಂಪಕಮಾಲೆ ಮತ್ತು ಮಹಾಸ್ರಗ್ಧರೆಗಳನ್ನು ಕನ್ನಡ ಕವಿಗಳು ಮಾಡಿಕೊಂಡಂತೆ ತೋರುವುದು (ಉತ್ಪಲ ಮಾಲೆ, ಚಂಪಕಮಾಲೆ ಈ ಜೋಡಿಯ ವಿಷಯದಲ್ಲಿ ಮಾತ್ರ. ಚಂಪಕಮಾಲೆಯ ಆದಿ ದ್ವಿಲಘುವಿಗೆ ಒಂದು ಗುರುವನ್ನಿಟ್ಟುಕೊಂಡು ಉತ್ಪಲಮಾಲೆಯನ್ನು ಮಾಡಿಕೊಂಡಿರುವ ಸಾಧ್ಯತೆಯಿದೆ). ಸಂಸ್ಕೃತದಲ್ಲಿ ಪೂರ್ವೋಕ್ತವಾದ ಶಾರ್ದೂಲಾದಿಗಳು ಪ್ರಸಿದ್ಧವಾಗಿರುವುದೂ ಮತ್ತೇಭಾದಿಗಳು ಏನೂ ಪ್ರಸಿದ್ಧವಾಗಿಲ್ಲದಿರುವುದೂ ಹೀಗೆ ತಿಳಿಯುವುದಕ್ಕೆ ಎಡೆಕೊಟ್ಟಿದೆ.

ಹಳಗನ್ನಡ ಸಾಹಿತ್ಯದಲ್ಲಿ ಖ್ಯಾತಕರ್ಣಾಟಕಗಳ ಜೊತೆಗೆ ಅಲ್ಲಲ್ಲಿ ವಿರಳವಾಗಿ ಬಳಸಿರುವ ಇನ್ನೂ ಕೆಲವು ವರ್ಣವೃತ್ತಗಳುಂಟು. ಮಾಲಿನಿ, ಹರಿಣಿ, ಪೃಥ್ವಿ, ಮಲ್ಲಿಕಾಮಾಲೆ, ತರಳ ಮೊದಲಾದವು ಹೀಗೆ

ಬಳಕೆಯಾಗಿರತಕ್ಕವು. ಕವಿಯ ಕೌಶಲವನ್ನು ಎತ್ತಿತೋರುವುದಕ್ಕಾಗಿಯೇ ರಚನೆಯಲ್ಲಿ ವೈವಿಧ್ಯವನ್ನು ತರುವುದಕ್ಕಾಗಿಯೇ ಒಂದೊಂದು ಕೃತಿಯಲ್ಲಿ ಅಲ್ಲಲ್ಲಿ 1-2ರಂತೆ ಅಥವಾ ಬೆರಳೆಣಿಕೆಗೆ ಸಿಗುವಷ್ಟು ಮಾತ್ರ ಇವು ಬಂದಿವೆ. ಇಲ್ಲಿಯೂ ಕೆಲವು ಸಂಸ್ಕೃತದಿಂದ ನೇರವಾಗಿ ಪಡೆದಂಥವು. ಕೆಲವು ಸ್ವತಃ ಮಾಡಿಕೊಂಡವು. ಈ ಎರಡು ಬಗೆಗಳೂ ಕಾವ್ಯ ಗ್ರಂಥ'ಗಳಿಗಿಂತ ಶಾಸ್ತ್ರಗ್ರಂಥಗಳಲ್ಲಿ ಕಾಣುವುದೇ ಹೆಚ್ಚು. ಉದಾಹರಣೆಗೆ ಚಂದ್ರರಾಜನ ಮದನತಿಲಕ, ಜನ್ನನ ಅನುಭವ ಮುಕುರ ಇತ್ಯಾದಿಗಳನ್ನು ನೋಡಬಹುದು. ಇಂಥ' ವೃತ್ತಗಳಲ್ಲಿ ಪ್ರಸಿದ್ಧವಾದವುಗಳ ಲಕ್ಷಣಗಳನ್ನು ಪಿಂಗಲ, ಜಯದೇವಾದ್ಯರ ಸಂಸ್ಕೃತ ಛಂದೋ ಗ್ರಂಥಗಳಲ್ಲಿಯೂ ನಾಗವರ್ಮ, ಗುಣ ಚಂದ್ರಾದ್ಯರ ಕನ್ನಡ ಛಂದೋಗ್ರಂಥಗಳಲ್ಲಿಯೂ ಹೇಳಿದೆ. (ಟಿ.ವಿ.ವಿ.,ಡಿ.ಎಸ್.ಕೆ.)

ಗದಾಯುದ್ಧ, ಪಂಪರಾಮಾಯಣ ಮುಂತಾದ ಕೆಲವು ಕಾವ್ಯಗಳಲ್ಲಿ ಲಲಿತ ವೃತ್ತವೆಂಬ ಪ್ರಸಿದ್ಧವಾದ ಮಾಲಾವೃತ್ತವನ್ನು ಬಳಸಿದೆ. ಲಕ್ಷಣ - ಇದರಲ್ಲಿ ನಾಲ್ಕು ಪಾದಗಳು, ಪ್ರತಿ ಪಾದದಲ್ಲಿಯೂ ಮೂವತ್ತು ಅಕ್ಷರಗಳು. ಅಕ್ಷರಗಳ ವಿನ್ಯಾಸ ಹೀಗೆ- ಭ ಜ ಸ ನ ಭ ಜ ಸ ನ ಭ ಯ. ನಿದರ್ಶನಕ್ಕೆ ಹೆಗ್ಗಡದೇವನ ಕೋಟೆ ತಾಲ್ಲೂಕಿನ ದೇಕಬ್ಬೆಯ ಶಾಸನದಲ್ಲಿ ಬರುವ ಲಲಿತವೃತ್ತದ ಒಂದು ಸಾಲು:

ಭ ಜ ಸ ನ ಭ ಜ
ಶ್ರೀ ರಮು | ಣಿ ಗೌರಿ | ಸಚಿ ಧಾ | ರಿಣಿಯ | ಪುತ್ರಿ ರ | ತಿ ಭೂರ|

ಸ ನ ಭ ಯ
ಮಣಿಯಂ | ದದ ಸ | ರೂಪವ | ಜಿವಳ್ಪ್ |

ಶಾಸನದಲ್ಲಿರುವ ಆ ಪದ್ಯದ ಪೂರ್ಣಪಾಠವನ್ನು ಗಮನಿಸಿ ಅದರಲ್ಲಿ ಮೂರು ಮೂರು ಅಕ್ಷರಗಳ ಹತ್ತು ಗಣಗಳಿವೆಯೆಂದು ಹೇಳಬಹುದು. ಆದರೆ ಅದು ಪ್ರತಿ ಪಾದದಲ್ಲಿಯೂ ಬರುವ ಅಕ್ಷರವಿನ್ಯಾಸವನ್ನು ಹೇಳಿದಂತಾಗುತ್ತದೆಯೆ ಹೊರತು, ಪದ್ಯವನ್ನು ಓದಿದಾಗ ನಮ್ಮ ಕಿವಿಗೆ ಬೀಳುವ ಲಯವನ್ನು ನಿರೂಪಿಸಿದಂತಾಗುವುದಿಲ್ಲ. ವಾಸ್ತವವಾಗಿ ಆ ಪದ್ಯದ ಪ್ರತಿ ಪಾದದಲ್ಲಿ ಐದು ಮಾತ್ರೆಯ ಏಳು ಗಣಗಳೂ ಕೊನೆಯಲ್ಲಿ ನಾಲ್ಕು ಮಾತ್ರೆಯ ಒಂದು ಗಣವೂ ನಮ್ಮ ಕಿವಿಗೆ ಕೇಳಿಸುತ್ತದೆ. ದ್ವಿತೀಯ ಪ್ರಾಸಾಕ್ಷರ ಪ್ರತಿ ಪಾದದಲ್ಲೂ ಮತ್ತೆ ಎರಡು ಸಾರಿ ಪುನರಾವರ್ತನಗೊಳ್ಳುವುದು ಇಲ್ಲಿ ಗಮನಿಸಬೇಕಾದ ಸಂಗತಿ.

ನಾಗವರ್ಮ ಛಂದೋಂಬುಧಿಯಲ್ಲಿ ಹೇಳಿರುವ ಈ ಲಲಿತ ವೃತ್ತವೇ ಲಯಗ್ರಾಹಿಯಾಗಿ ಮುಂದೆ ಚಿಕದೇವರಾಜಬಿನ್ನಪ ಮುಂತಾದ ಕೃತಿಗಳಲ್ಲಿ ಬಳಕೆಯಾಯಿತು. ತೆಲುಗಿನ ಕವಿಜನಾಶ್ರಯಮು ಮುಂತಾದ ಛಂದೋಗ್ರಂಥಗಳಲ್ಲೂ ಕನ್ನಡದ ಲಲಿತವೃತ್ತವನ್ನೇ ಲಯಗ್ರಾಹಿ ಎಂದು ಕರೆಯಲಾಗಿದೆ. ತೆಲುಗಿನ ಲಯಗ್ರಾಹಿಯಲ್ಲಿ ದ್ವಿತೀಯ ಪ್ರಾಸಾಕ್ಷರ ಪ್ರತಿ ಪಾದದಲ್ಲೂ ಮತ್ತೆ ಮೂರು ಸಾರಿ ಪುನರಾವರ್ತನಗೊಳ್ಳುತ್ತದೆ. ಕನ್ನಡದ ಲಲಿತಕ್ಕೂ ತೆಲುಗಿನ ಲಯಗ್ರಾಹಿಗೂ ಇರುವ ಒಂದು ಸಣ್ಣ ವ್ಯತ್ಯಾಸ ಇದು. ತೆಲುಗಿನ ಪ್ರಭಾವದಿಂದ ಹತ್ತು ಹನ್ನೊಂದನೆಯ ಶತಮಾನದ ಲಲಿತವೃತ್ತವು ಲಯಗ್ರಾಹಿ ಎಂದು ಹದಿನೈದನೆಯ ಶತಮಾನದಿಂದ ಈಚೆಗೆ ಕನ್ನಡದಲ್ಲಿ ಬಳಕೆಗೆ ಬಂದು, ತೆಲುಗಿನ ಲಕ್ಷಣಗಳನ್ನೆ ಪಡೆದುಕೊಂಡಿತು. ಅಂದರೆ, ಪ್ರಾಸಾಕ್ಷರ ಮತ್ತೆ ಮೂರು ಬಾರಿ ಪುನರಾವರ್ತನ ಗೊಳ್ಳುವುದನ್ನು ಈಚಿನ ಕನ್ನಡ ಲಯಗ್ರಾಹಿಗಳಲ್ಲಿ ಗುರುತಿಸಬಹುದು. ಷಡಕ್ಷರ ಕವಿಯ ರಾಜಶೇಖರವಿಳಾಸದ ಒಂದು ಲಯಗ್ರಾಹಿಯ ಮೊದಲ ಸಾಲು ಹೀಗಿದೆ: ಧೀರಜನರಿಂ ಶ್ರುತಿ ವಿಚಾರಪರರಿಂ ಲಸದುದಾರಗುಣದಿಂ ದುರಿತದೂರ ಶಿವಭಕ್ತ್ಯಾ|ಲಯಗ್ರಾಹಿ ಅನೇಕ ಕವಿಗಳಿಂದ ಬಳಕೆಯಾಗಿರುವುದಲ್ಲದೆ, ಇದರಲ್ಲೇ ನಂದಿದೇವ ಎಂಬ ಕವಿ ಲಯಗ್ರಾಹಿಶತಕ ಎಂಬ ಸ್ತೋತ್ರರೂಪವಾದ ಶತಕವನ್ನೇ ರಚಿಸಿದ್ದಾನೆ. ಲೀಲಾವತಿಯಲ್ಲಿ ಮಾತ್ರಾವರ್ಣ ಮಿಶ್ರ ಚತುಷ್ಪದಿಯಾದ (ಮಾತ್ರಾವೃತ್ತ) ಲಯೋತ್ತರವೆಂಬ ಒಂದು ವೃತ್ತವಿದೆ. ಹೀಗೆಯೇ ಇಂಥ ವೃತ್ತಗಳು ಇನ್ನೂ ಕೆಲವು ಬೇರೆ ಬೇರೆ ಕಾವ್ಯಗಳಲ್ಲಿರಬಹುದು. (ಎಂ.ಪಿ.)

ಹಳಗನ್ನಡ ಪದ್ಯಗ್ರಂಥಗಳಲ್ಲಿ ಅರ್ಧಸಮ ಮತ್ತು ವಿಷಮವೃತ್ತಗಳು ಹಾಗೂ ದಂಡಕಗಳು ಅಧಿಕ ಸಂಖ್ಯೆಯಲ್ಲಿ ಕಂಡುಬರುವುದಿಲ್ಲ. ಕವಿರಾಜಮಾರ್ಗ, ಕಾವ್ಯಾವಲೋಕನ, ಚಿಕದೇವ ರಾಜವಿಜಯ- ಇವುಗಳಲ್ಲಿ ಕ್ರಮವಾಗಿ ಪುಷ್ಪಿತಾಗ್ರ, ನಾಗ, ವಿಯೋಗಿನಿ ಮತ್ತು ವಸಂತಮಾಲಿಕೆ- ಈ ಅರ್ಧಸಮವೃತ್ತಗಳು ಬಳಕೆಯಾಗಿವೆ. ಮದನತಿಲಕದಲ್ಲಿ ತ್ರಿಪದೋನ್ನತಿಯೆಂಬ ವಿಷಮವೃತ್ತವಿದೆ.

ಸಂಸ್ಕೃತ ಕಾವ್ಯಗಳ, ಶಾಸ್ತ್ರಗಳ ಸುಪ್ರಸಿದ್ಧವಾದ ಶ್ಲೋಕಛಂದಸ್ಸು ಕನ್ನಡದಲ್ಲಿ ಕ್ವಚಿತ್ತಾಗಿ ಮಾತ್ರ ಕಾಣುತ್ತದೆ. ಕವಿರಾಜಮಾರ್ಗದಲ್ಲಿ ನಿಯಮಬದ್ಧವಾದ ಕೆಲವು ಶ್ಲೋಕಗಳಿವೆ. ಕಾವ್ಯಾವಲೋಕನದಲ್ಲಿಯೂ ಕೆಲವು ಶ್ಲೋಕಗಳಿವೆ. ಆದರೆ ಇದರ ಬಳಕೆ ಮುಂದೆ ಹೆಚ್ಚಾಗಿ ಆಗಲಿಲ್ಲ. ಕವಿರಾಜಮಾರ್ಗದಿಂದ ಒಂದು ಉದಾಹರಣೆಯನ್ನು ನೋಡಬಹುದು:

ತಾರಾ ಜಾನಕಿಯಂ ಪೋಗಿ |
ತಾರಾ ತರಳನೇತ್ರೆಯಂ |
ತಾರಾಧಿಪತಿತೇಜಸ್ವಿ |
ತಾರಾದಿವಿಜಯೋದಯಾ ||

ಇಲ್ಲಿಯ 4 ಪಾದಗಳಲ್ಲಿ, ಪ್ರತಿ ಪಾದದಲ್ಲಿಯೂ 5ನೆಯ ಅಕ್ಷರ ಲಘುವಾಗಿಯೂ 6ನೆಯದು ಗುರುವಾಗಿಯೂ ಇದ್ದು, 7ನೆಯ ಅಕ್ಷರ 1,3ನೆಯ ಪಾದಗಳಲ್ಲಿ ಗುರುವಾಗಿಯೂ 2,4ನೆಯ ಪಾದಗಳಲ್ಲಿ ಲಘುವಾಗಿಯೂ ಇರುವುದು ಕಾಣುತ್ತದೆ. ಕನ್ನಡ ಪದ್ಯಗಳಿಗೆ ಸಹಜವಾದ ಆದಿಪ್ರಾಸವನ್ನಿಟ್ಟುಕೊಂಡಿದೆ.

**ಸಂಸ್ಕೃತ-ಪ್ರಾಕೃತ ಪ್ರಭಾವದಿಂದ ಹುಟ್ಟಿದ ಮಾತ್ರಾವೃತ್ತಗಳು :** ಕನ್ನಡ ಸಾಹಿತ್ಯದ ಕಾವ್ಯಶಾಸ್ತ್ರಾದಿ ಗ್ರಂಥಗಳಲ್ಲಿ ಬಳಕೆಯಾಗಿರುವ ಕಂದಪದ್ಯವೂ ಅಲ್ಲಿಯೇ ವಿರಳವಾಗಿ ಬಳಕೆಯಾಗಿರುವ ರಗಳೆಯೂ ಈ ಗುಂಪಿನ ಗಣ್ಯವೃತ್ತಗಳಾಗಿವೆ. ಈ ಪದ್ಯಜಾತಿಗಳನ್ನೆ ತನಿಯಾಗಿ ಬಳಸಿ ಕೃತಿರಚನೆ ಮಾಡಿರುವುದೂ ಉಂಟು. ಲಕ್ಷಣ ಗ್ರಂಥಗಳ ರಚನೆಗೆ ಕಂದಪದ್ಯವನ್ನು ಹೆಚ್ಚಾಗಿ ಬಳಸಿದೆ. ಜನ್ನನ ಯಶೋಧರ ಚರಿತೆ ಕಾವ್ಯವಾಗಿಯೂ ಸಮಗ್ರವಾಗಿ ಕಂದದಲ್ಲಿ ರಚಿತವಾಗಿದೆ. ಹರಿಹರ ಮತ್ತು ಅವನಿಗೆ ಈಚಿನ ಕೆಲವು ಕವಿಗಳು ಬರೆದಿರುವ ಶೈವಪರವಾದ ಕೃತಿಗಳು ರಗಳೆಯಲ್ಲಿವೆ.

**ಕಂದ :** ಸಂಸ್ಕೃತದ ಆರ್ಯಾವೃತ್ತವರ್ಗದ ಆರ್ಯಗೀತೆಯೇ ಪ್ರಾಕೃತದಲ್ಲಿ ಸ್ಕಂಧಕ (ಖಂಧಅ)ವೆಂದಾಗಿ, ಆ ಮೂಲಕವಾಗಿ ಕನ್ನಡಕ್ಕೆ ಬಂದು ಕಂದ ಎಂಬ ಹೆಸರಿನಲ್ಲಿ ರೂಢಿಯಾಗಿರಬೇಕೆಂದು ತೋರುತ್ತದೆ. ಇದರ ಸಾಮಾನ್ಯಲಕ್ಷಣ ಹೀಗೆ: 4 ಪಾದಗಳು; ಇವುಗಳಲ್ಲಿ 1, 2ನೆಯ ಪಾದಗಳಂತೆಯೇ 3, 4ನೆಯ ಪಾದಗಳಿರುತ್ತವೆ. 1, 2ನೆಯ ಪಾದಗಳಲ್ಲಿ ಕ್ರಮವಾಗಿ 3, 5 ರ ಹಾಗೆ ಒಟ್ಟು 8 ಚತುರ್ಮಾತ್ರಾಗಣಗಳು (12+20=32); 3, 4ನೆಯ ಪಾದಗಳಲ್ಲಿಯೂ ಹೀಗೆಯೇ. ಚತುರ್ಮಾತ್ರಾ ಗಣಗಳ ಕಟ್ಟು ಕೆಡಬಾರದು. ಪ್ರಥಮಾರ್ಧದ ಹಾಗೂ ದ್ವಿತೀಯಾರ್ಧದ 8ನೆಯ ಗಣಸ್ಥಾನದ ಅಂತ್ಯದಲ್ಲಿ ಗುರು ತಪ್ಪದೆ ಬಂದಿರಬೇಕು. ಈ ಎರಡೂ ಅರ್ಧಗಳ ವಿಷಮ ಸ್ಥಾನಗಳಲ್ಲಿ ಮಧ್ಯಗುರುವಿನ (U–U) ಗಣ ಬರಬಾರದು. ಆದರೆ ಅವುಗಳ 6ನೆಯ ಗಣಸ್ಥಾನಗಳಲ್ಲಿ ಮಧ್ಯ ಗುರುವಿನ ಗಣವಾಗಲಿ ಸರ್ವಲಘುವಿನ (UUUU) ಗಣವಾಗಲಿ ತಪ್ಪದೆ ಬಂದಿರಬೇಕು. ಸರ್ವಲಘುವಿನ ಗಣವಾಗಿದ್ದ ಪಕ್ಷದಲ್ಲಿ ಹಾಗೆಯೇ ಮಧ್ಯಗುರುವಿನ ಗಣ (ಜಗಣ)ವಾಗಿದ್ದ ಪಕ್ಷದಲ್ಲಿಯೂ ಮೊದಲ ಹ್ರಸ್ವದ ಮುಂದೆ ಯತಿಯಿರಬೇಕು. 7ನೆಯ ಗಣ ಸರ್ವಲಘುವಿನ ಗಣವಾಗಿದ್ದಲ್ಲಿ ಮೊದಲನೆಯ ಹ್ರಸ್ವದಿಂದಲೇ ಹೊಸ ಪದ ಮೊದಲಾಗಬೇಕು. ಲಕ್ಷಣಾನ್ವಿತವಾದ ಕಂದಕ್ಕೆ ಉದಾಹರಣೆ:

ಕಾವೇ | ರಿಯಿಂದ | ಮಾ ಗೋ
ದಾವರಿ | ವರಮಿ | ರ್ಪ ನಾಡ | ದಾ ಕ | ನ್ನಡದೊಳ್
ಭಾವಿಸಿ | ದ ಜನಪ | ದಂ ವಸು
ಧಾವಳ | ಯ ವಿಲೀ | ನ ವಿಶದ | ವಿಷಯವಿ | ಶೇಷಂ|
(ಕವಿರಾಜಮಾರ್ಗ)

**ರಗಳೆ :** ನಾಗವರ್ಮ ಮತ್ತು ಜಯಕೀರ್ತಿ ಈ ಛಂದಸ್ಸಿನ ಲಕ್ಷಣವನ್ನು ಹೇಳಿದವರಲ್ಲಿ ಮುಖ್ಯರು. ಮಂದಾನಿಲ, ಲಲಿತ ಮತ್ತು ಉತ್ಸಾಹ ಎಂಬ ಹೆಸರಿನಲ್ಲಿ ಪ್ರಸಿದ್ಧವಾಗಿರುವ ರಗಳೆಯ ಮೂರು

ಪ್ರಭೇದಗಳು ಹರಿಹರನ ರಗಳೆಯ ಕಾವ್ಯಗಳಲ್ಲಿ ಮತ್ತು ಈಚೆಗೆ ಹೆಚ್ಚು ಸ್ಪಷ್ಟವಾದ ರೂಪದಲ್ಲಿ ಗೋಚರಿಸುತ್ತವೆ. ಆದರೆ ಇದಕ್ಕೆ ಮೊದಲೇ ಇವನ್ನು ಹೋಲುವ ಕೆಲವು ನಿದರ್ಶನಗಳು ಪಂಪ, ಪೊನ್ನ ರನ್ನ ಮೊದಲಾದ ಪ್ರಾಚೀನ ಕನ್ನಡ ಕವಿಗಳ ಚಂಪೂಕಾವ್ಯಗಳಲ್ಲಿ ಕ್ವಚಿತ್ತಾಗಿ ಕಂಡುಬರುತ್ತವೆ. ಇವುಗಳಲ್ಲಿ ಮಂದಾನಿಲ ರಗಳೆಯನ್ನು ಹೋಲುವ 16, 32 ಮುಂತಾಗಿ ಪಾದ ಪ್ರಮಾಣವನ್ನುಳ್ಳ ನಿದರ್ಶನಗಳೇ ಪ್ರಮುಖವಾದವು. ಇವುಗಳ ಲಕ್ಷಣವನ್ನು ಪರಿಶೀಲಿಸಿದಾಗ ಇವು ಅಪಭ್ರಂಶ ಕಾವ್ಯ ಪ್ರಚಲಿತಗಳಾದ ಪಜ್ಝಟಿಕಾ ಛಂದಸ್ಸನ್ನು ಬಳಸಿ ಕಟ್ಟಿರುವ ಷೋಡಶಪಾದ ಪ್ರಮಾಣದ ಕಡವಕಗಳ ಅನುಕರಣದಿಂದಾಗಿ ಹುಟ್ಟಿರಬೇಕೆಂಬ ಸಂಗತಿ ತಿಳಿದುಬಂದಿದೆ. ಜಯಕೀರ್ತಿಯು ಕೊಡುವ ರಘುಟಾಲಕ್ಷಣದ ಪದ್ಯದಲ್ಲಿ ದೊರೆಯುವ ಒಂದು ಸೂಚನೆಯಿಂದಲೂ ಅಲ್ಲಲ್ಲಿ ಇಂಥ ಪದ್ಯಗಳಿಗೆ ಪದ್ಧತಿ (ಪಜ್ಝಟಿಕೆ) ಎಂಬುದರ ಪ್ರತಿಶಬ್ದವಾಗಿ ಪದ್ದಳಿ, ಪಡ್ಡಳಿ ಎಂಬ ರೂಪಗಳು ಮಾತೃಕೆಗಳಲ್ಲಿ ಕಂಡುಬರುವುದರಿಂದಲೂ ಈ ವಿಷಯ ದೃಢಪಟ್ಟಿದೆ. ಕನ್ನಡದ ಪದ್ದಳಿಯ ರಗಳೆ ಅಪಭ್ರಂಶದ ಪಜ್ಝಟಿಕೆಯ ಕಡವಕಗಳ ಹಾಗೆ. ಹೀಗೆ ಪ್ರಾಕೃತ ಮೂಲವನ್ನು ಅನುಸರಿಸಿದಾಗ ಸ್ವತಂತ್ರಿಸಿ ಕೆಲವು ವ್ಯತ್ಯಾಸಗಳನ್ನು ಕನ್ನಡದಲ್ಲಿ ಮಾಡಿಕೊಂಡಿದೆ:

1 ಪಜ್ಝಟಿಕೆ ಛಂದಸ್ಸಿನ ಕಡವಕದ ಒಂದು ಪಾದಯುಗ್ಮ:
ಉತ್ತುಂ | ಗಸಿಹರು | ಸುರಗಿರಿ | ಸಮಾಣು
ಆಸ | ಣ್ಣು ಗಂಪಿ | ಮಣಹರು | ವಿಮಾಣು
(ಣಾಯಕುಮಾರ ಚರಿಉ)

ಅದೇ ಛಂದಸ್ಸಿನ (ಪದ್ದಳಿ, ಪಡ್ಡಳಿ) ರಗಳೆಯ ಒಂದು ಪಾದಯುಗ್ಮ:
ಸ್ಫುರಿತೇಂದ್ರ ನೀಲಮಣಿಖಚಿತಭೂಮಿ |
ಚೆಲುವಿಂಗಿದು ನೆಟ್ಟನೆ ಜನ್ಮಭೂಮಿ ‖ (ಆದಿಪುರಾಣ)

2 ಹೀಗೆಯೇ 4 ತ್ರಿಮಾತ್ರಾಗಣಗಳಿಂದಾದ ಕಡವಕದ ಒಂದು ಪಾದಯುಗ್ಮ:
ಕಾಣ | ಕುಂಟ | ಪಿಂಗ | ಲಾಹ
ಅಂಧ | ಮೂಯ | ಪಂಗು | ಲಾಹ ‖ (ಪುಷ್ಪದಂತನ ಮಹಾಪುರಾಣ)
ಅದನ್ನು ಹೋಲುವ ರಗಳೆಯ ಒಂದು ಪಾದಯುಗ್ಮ:
ಅದಱ | ಬಳಸಿ | ದುಪವ | ನಂಗ
ಳುದಿತ | ಕೋಕಿ | ಲಸ್ವ | ನಂಗ (ಅಜಿತಪುರಾಣ)

3 ಹೀಗೆಯೇ 4 ಪಂಚಮಾತ್ರಾಗಣಗಳಿಂದಾದ ಕಡವಕದ ಒಂದು ಪಾದಯುಗ್ಮ:
ಪರದರಣೆ | ಪರತರುಣಿ | ಪರದವಿಣ | ಕಂಖಾಎ
ಮರಿಹೇಸಿ | ದುಚ್ಚಾರ | ಖಲಚೋರ | ಸಿಕ್ಖಾಎ
ಅದನ್ನು ಹೋಲುವ ರಗಳೆಯ ಒಂದು ಪಾದಯುಗ್ಮ:
ಶ್ರೀಗೆ | ಕುಲ | ಸದನಮೆನೆ | ತೊಳಪ | ಮಣಿ | ಭವನದೊಳ್
ರಾಗರಸ ‖ ಮೊದವೆ | ಸರ | ಸಿರುಹ ಸಮ | ವದನದೊಳ್
(ಆದಿಪುರಾಣ)

ಚಂಪೂಕಾವ್ಯ ಪ್ರಚಲಿತಗಳಾದ, ಕ್ವಚಿತ್ತಾಗಿ ಶಾಸನಗಳಲ್ಲಿಯೂ ಕಾಣುವ ಈ ಮೂರು ಬಗೆಯ ರಗಳೆಗಳಿಗೂ ಅಪಭ್ರಂಶ ಛಂದಸ್ಸಿನಲ್ಲಿ ಕ್ರಮವಾಗಿ ತ್ರಿಕಲ, ಚತುಷ್ಕಲ ಮತ್ತು ಪಂಚಕಲಗಳ ಮೂರು ಬಗೆಯ ಛಂದಸ್ಸುಗಳಿಂದ ಕಟ್ಟಿದ ಕಡವಕಗಳೇ ಪ್ರಾಯಃ ಮೂಲ ಮತ್ತು ಪ್ರೇರಕ ಎಂಬುದು ಇದರಿಂದ ವಿಶದಪಡುತ್ತದೆ. ಇವುಗಳಿಗೆ ರಗಳೆಯೆಂಬ ಸಾಮಾನ್ಯ ವಾಚಕವಿದ್ದುದು ಸ್ಪಷ್ಟ, ಆದರೆ ಪ್ರಭೇದಗಳಿಗೆ ಪ್ರತ್ಯೇಕವಾಗಿ ಗೊತ್ತಾದ ಹೆಸರುಗಳಿದ್ದಂತೆ ತೋರುವುದಿಲ್ಲ. 3, 4 ಮತ್ತು 5 ಮಾತ್ರೆಗಳ ಈ ರಗಳೆಗಳಲ್ಲಿ ಪಾದಸಂಖ್ಯೆ, ಪ್ರಾಸಸಂಖ್ಯೆ, ಪ್ರಾಸವಿನ್ಯಾಸ, ಅಂತ್ಯಗಣನಿಯಮ ಮೊದಲಾದವುಗಳಲ್ಲಿ ಪ್ರಾಚೀನ ಕನ್ನಡ ಕವಿಗಳು ಅಪಭ್ರಂಶ ಕವಿಗಳ ಹಾಗೆಯೇ ತಾವೂ ವ್ಯತ್ಯಾಸಗಳನ್ನೂ ವೈವಿಧ್ಯಗಳನ್ನೂ ಕಾಣಿಸಿದ್ದಾರೆ. ಇವು 12ನೆಯ ಶತಮಾನದಲ್ಲಿ ಹರಿಹರನ ಕೈಯಲ್ಲಿ ಬಲುಮಟ್ಟಿಗೆ ಒಂದು ಸ್ಥಾಯಿಯಾದ ರೂಪವನ್ನು ಪಡೆದುಕೊಂಡು ಉತ್ಸಾಹ, ಮಂದಾನಿಲ ಮತ್ತು ಲಲಿತವೆಂಬ ಹೆಸರಿಂದ ಮುನ್ನೆಲೆಗೆ ಬಂದುವು. ವರ್ಣನೆ, ಕಥನಗಳಿಗೆ ಚೆನ್ನಾಗಿ ಒಗ್ಗುವ ಈ ಛಂದಸ್ಸನ್ನು ಕಾವ್ಯರಚನೆಗೆ ಪ್ರಮುಖವಾದ ಛಂದಸ್ಸಾಗಿ ಆತ ಯೋಜಿಸಿ ಅವಕ್ಕೆ ಮಹತ್ತ್ವವನ್ನು ತಂದುಕೊಟ್ಟ. ಬಲು ಮಟ್ಟಿಗೆ ನಿಯತ ಇಲ್ಲವೆ ಅಲ್ಪ ಸಂಖ್ಯೆಯ ಪಾದಪ್ರಮಾಣ, ಅಂತ್ಯ ಪ್ರಾಸನಿಬದ್ಧತೆ, ಹೊಂದಾಣಿಕೆಯ ಮಾತ್ರಾಲಯ, ಪಾದಾಂತದಲ್ಲಿ ಪದ ಮುಗಿಯದೆ ಮುಂದಿನ ಪದಕ್ಕೋಡುವುದು. ಅಂತ್ಯಗಣನಿಯಮಬದ್ಧತೆ, ಇವುಗಳ ಸ್ಥಾನದಲ್ಲಿ ಅನಿಯತ ಹಾಗೂ ಅಧಿಕಸಂಖ್ಯೆಯ ಪಾದಪ್ರಮಾಣ, ಆದ್ಯಂತ ಪ್ರಾಸಬದ್ಧತೆ, ಖಚಿತವಾದ ಮಾತ್ರಾಲಯ, ತಾಳಗತಿಗೆ ಅಡ್ಡಿಯಾಗದಂತೆ ಗಣೋಪಸಂಹಾರ- ಇವು ಹರಿಹರಾದ್ಯರು ಬಳಸಿದ ಉತ್ಸಾಹಾದಿ ರಗಳೆಗಳ ಸಾಮಾನ್ಯ ಲಕ್ಷಣಗಳಾದುವು.

ಉತ್ಸಾಹದ ಸಾಮಾನ್ಯ ಲಕ್ಷಣ ಒಂದು ರೀತಿ - 4 ತ್ರಿಮಾತ್ರಾಗಣಗಳಂತೆ ಪಾದಕ್ಕೆ 12 ಮಾತ್ರೆಗಳು

ಕುಳಿರ್ವ | ಪೂಗೊ | ಳಂಗ | ಳಲ್ಲಿ
ತಳಿರ |ಕಾವ | ಣಂಗ | ಳಲ್ಲಿ (ಕಬ್ಬಿಗರ ಕಾವ)

ಇನ್ನೊಂದು ರೀತಿ 8 ತ್ರಿಮಾತ್ರಾಗಣಗಳಂತೆ ಪಾದಕ್ಕೆ 16 ಮಾತ್ರೆಗಳು
ಮಗನ | ಕರೆಯ | ಲಂದು | ಶಂಕೆ | ಯಿಲ್ಲ | ದಿರ್ದ | ರೆಳ್ದು | ಪೋಗಿ
ಮಗನೆ | ಮಗನೆ | ಬಾರೆ | ನುತ್ತೆ | ತಂದೆ | ಕರೆದು | ನೋಡಿ ಬೀಗಿ ‖
(ಸಿರಿಯಾಳನ ರಗಳೆ)

ಮಂದಾನಿಲದ ಸಾಮಾನ್ಯ ಲಕ್ಷಣ: 4 ಚತುರ್ಮಾತ್ರಾಗಣಗಳಂತೆ ಪಾದಕ್ಕೆ 16 ಮಾತ್ರೆಗಳು:
ಪಂಕಜ | ದಂತಿರೆ | ಪುಟ್ಟಿದ | ಳೊಲವಿಂ
ಪಂಕವ | ನೆಂದುಂ | ಪೊರ್ದದೆ | ನಲವಿಂ
(ಆದಯ್ಯನ ರಗಳೆ)

ಲಲಿತದ ಸಾಮಾನ್ಯ ಲಕ್ಷಣ 4 ಪಂಚಮಾತ್ರಾಗಣಗಳಂತೆ ಪಾದಕ್ಕೆ 20 ಮಾತ್ರೆಗಳು:
ಸೊಂಪಿನಿಂ | ಕಂಪಿಡುವ | ಸಂಪಗೆಗ | ಳಂ ಕೊಂಡು ‖
ಹೊಂಪೆಸೆವ | ಹೊಂಗೇದ | ಗೆಯ ಹೂಗ | ಳಂ ಕೊಂಡು
(ಬಸವರಾಜದೇವರ ರಗಳೆ)

**ಅಚ್ಚಕನ್ನಡ ಛಂದಸ್ಸಿನ ಮಟ್ಟುಗಳು :** ಇದನ್ನು ನಾಗವರ್ಮ ಕರ್ಣಾಟಕ ವಿಷಯಜಾತಿವೃತ್ತ ಎಂದೂ ಜಯಕೀರ್ತಿ ಕರ್ಣಾಟಕ ವಿಷಯಭಾಷಾಜಾತಿ ಎಂದೂ ಕರೆದಿದ್ದಾರೆ. ಕನ್ನಡನಾಡಿನ ಅಥವಾ ಕನ್ನಡನಾಡಿನ ಭಾಷೆಯಲ್ಲಿರುವ ಜಾತಿವೃತ್ತಗಳು (ಜಾತಿ) ಎಂದರೆ ಸಂಸ್ಕೃತೇತರವಾದ ವೃತ್ತಗಳು ಎಂದು ಇದರ ಅರ್ಥ. ಅಕ್ಕರ, ತ್ರಿಪದಿ, ಏಳೆ, ಚೌಪದಿ, ಛಂದೋವತಂಸ, ಅಕ್ಕರಿಕೆ, ಮದನವತಿ, ಗೀತಿಕೆ, ಉತ್ಸಾಹ ಷಟ್ಪದಿ- ಈ ಹತ್ತು ಮುಖ್ಯವಾದ ಮಟ್ಟುಗಳನ್ನು ನಾಗವರ್ಮ ಹೇಳಿದ್ದಾನೆ. ಉತ್ಸಾಹವೆಂಬ ಒಂದು ಬಗೆಯನ್ನು ಮಾತ್ರ ಈತ ಮಿಶ್ರಾಧಿಕಾರದಲ್ಲಿ ಕೊಟ್ಟಿದ್ದಾನೆ. ಜಯಕೀರ್ತಿಯೂ ಇವನ್ನು ಹೇಳಿದ್ದಾನೆ. 3ನೆಯ ಸೋಮೇಶ್ವರನ ಮಾನಸೋಲ್ಲಾಸದಲ್ಲಿ ತ್ರಿಪದಿ ಷಟ್ಪದಿಗಳ ಉಲ್ಲೇಖವಿದೆ. ಶಾರ್ಙ್ಗದೇವನ ಸಂಗೀತರತ್ನಾಕರದಲ್ಲಿ ಆ ಎರಡನ್ನೂ ಒಳಗೊಂಡು ಏಳೆಯ ವಿಚಾರ ಬಂದಿದೆ. ಈ ಮಟ್ಟುಗಳಲ್ಲಿ ಕೆಲವು ಮಾತ್ರ ಪ್ರಾಚೀನ ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಬಳಕೆಯಾಗಿವೆ. ಕೆಲವಕ್ಕೆ ನಿದರ್ಶನಗಳು ದೊರೆತಿಲ್ಲ. ಏಳೆ, ತ್ರಿಪದಿಗಳಿಗೂ ಪಿರಿಯಕ್ಕರ ಅಕ್ಕರ ಭೇದಗಳಿಗೂ ಒಂದಕ್ಕೊಂದು ಸಂಬಂಧವಿರುವಂತೆ ತೋರುತ್ತದೆ. ಉಳಿದವು ಅಂಶಗಣದ ಜಾಯಮಾನವನ್ನನುಸರಿಸಿ ಬೇರೆ ಬೇರೆಯಾಗಿಯೇ ಹುಟ್ಟಿರಬಹುದು.

**ಅಕ್ಕರ :** ಇದರಲ್ಲಿ ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ ಮತ್ತು ಕಿರಿಯಕ್ಕರ ಎಂಬ ಐದು ಪ್ರಭೇದಗಳಿವೆ. ಸಂಸ್ಕೃತದಲ್ಲಿ ಇವಕ್ಕೆ ಕ್ರಮವಾಗಿ ಮಹಾಕ್ಷರ, ಸಮಾನಾಕ್ಷರ, ಮಧ್ಯಾಕ್ಷರ, ಅಂತರಾಕ್ಷರ ಮತ್ತು ಅಲ್ಪಾಕ್ಷರ ಎಂಬುವು ಪ್ರತಿ ನಾಮಗಳು. ಹಾಗೆಯೇ ತೆಲುಗಿನಲ್ಲಿ ಕ್ರಮವಾಗಿ ಮಹಾಕ್ಕರ, ಮಧ್ಯಾಕ್ಕರ, ಮಧುರಾಕ್ಕರ, ಅಂತರಾಕ್ಕರ, ಅಲ್ಪಾಕ್ಕರ ಎಂಬ ಹೆಸರುಗಳನ್ನು ಹೇಳಿದೆ.

**(I) ಪಿರಿಯಕ್ಕರ :** ಅಕ್ಕರ ಭೇದಗಳಲ್ಲಿ ಪ್ರಸಿದ್ಧವಾದುದು; ಪಿರಿಯಕ್ಕರ ಇದು ಪ್ರಾಚೀನ ಶಾಸನಗಳಲ್ಲೂ ಕಾವ್ಯಗಳಲ್ಲೂ ಕಂಡುಬಂದಿದೆ. ಸಾಮಾನ್ಯ ಲಕ್ಷಣ: 4 ಪಾದಗಳು, ಪ್ರತಿಪಾದದಲ್ಲಿ 1 ಬ್ರ, 5 ವಿ, 1 ರು ಹೀಗೆ 7 ಗಣಗಳು. ಆದರೆ ಕರ್ತೃವಿನ ಇಷ್ಟವನ್ನನುಸರಿಸಿ ಯಾವುದೇ ಪಾದದಲ್ಲಿ 2ನೆಯ ಮತ್ತು 4ನೆಯ ಗಣ ವಿಷ್ಣುವಿಗೆ ಬದಲಾಗಿ ಬ್ರಹ್ಮವಾಗಿರುವುದು.

ಇದು ಲಾಕ್ಷಣಿಕರು ಕೊಡುವ ಸಾಮಾನ್ಯ ನಿಯಮ. ಆದರೆ ಹಾಡಿಗೆ ಹೊಂದಿ ಪರ್ಯಾಯ ಗಣಗಳು ಯಾವುದೇ ಗಣಸ್ಥಾನದಲ್ಲಿ ಬರುವುದು ಸಾಧ್ಯ (ನಿದರ್ಶನಗಳಿಗೆ ನೋಡಿ- ಆದಿಪು. 2-44, 6-27, ಪಂಪಭಾ. 5-26, 42: 7-28; ಶಾಂತಿಪು. 10-9) ಉದಾಹರಣೆಗೆ ಒಂದು ಸಾಲು:

ಬೀರ | ದ ಳವಿಯ | ನನ್ನಿಯ | ಜಾಗದ | ಶಾಸನಂ | ಚಂದ್ರಾರ್ಕ | ತಾರಂಬರಂ (ಪಂಪಭಾರತ)

**(II) ದೊರೆಯಕ್ಕರ :** ಸಾಮಾನ್ಯ ಲಕ್ಷಣ 4 ಪಾದಗಳು; ಪ್ರತಿಪಾದದಲ್ಲಿ 2 ವಿ, 1 ಬ್ರ, 2 ವಿ, 1 ಬ್ರ, ಹೀಗೆ 6 ಗಣಗಳು. ಇಲ್ಲಿಯೂ ಯಾವುದೇ ಗಣ ಸ್ಥಾನದಲ್ಲಿ ಪರ್ಯಾಯ ಗಣಗಳು ಬರುವುದು ಸಾಧ್ಯ. ಇದು ಕಿವಿಗೆ ಇಂಪಾದುದೆಂದೂ ಅಕ್ಕರಿಗರಿಂದ ಹೆಚ್ಚು ಮಾನ್ಯತೆ ಪಡೆದದ್ದೆಂದೂ ಸಗ ಕವಿಯ ಕರ್ಣಾಟ ಕುಮಾರಸಂಭವ ಕಾವ್ಯದಲ್ಲಿ ಇದನ್ನು ಬಳಸಿದೆಯೆಂದೂ ಜಯಕೀರ್ತಿ ತಿಳಿಸಿದ್ದಾನೆ. ನಮಗೆ ಆ ಕಾವ್ಯ ದೊರೆತಿಲ್ಲ. ಅನ್ಯತ್ರ ಇದರ ಉದಾಹರಣೆಯಿಲ್ಲ. ಆದರೆ ಚಂದ್ರರಾಜ ತನ್ನ ಮದನತಿಲಕದಲ್ಲಿ ಎರಡು ಕಂದಮುಂ, ದ್ವಿಪದಿಕೆಯುಂ, ಗೀತಿಕೆಯುಮೈದು ಮಕ್ಕರಮುಮುಕ್ಕುಂ ಎಂದು ಹೇಳಿ ಕೊಡುವ ಪದ್ಯದಿಂದ ದೊರೆಯಕ್ಕರವನ್ನು ಪಡೆಯಬಹುದು. ನಿದರ್ಶನಕ್ಕೆ ಒಂದು ಸಾಲು

[ಗಿರಿಧರ] | ಸುತನೆನೆ | ಪರನಾ | ರಿಗೆ ವಾಯು | ಜ ಸ್ವಯಂ | ತಾನೆ (ಮದನತಿಲಕ 10-14, 15)

**(III) ನಡುವಣಕ್ಕರ :** ಇದು ಗಣಸಂಖ್ಯೆಯ ದೃಷ್ಟಿಯಿಂದ ಅಕ್ಕರಭೇದಗಲ್ಲಿ ಮಧ್ಯೆ ನಿಲ್ಲುವುದು. ಸಾಮಾನ್ಯ ಲಕ್ಷಣ ಪಾದಗಳು ಪ್ರತಿ ಪಾದದಲ್ಲಿ 1 ಬ್ರ, 3 ವಿ, 1 ರು ಹೀಗೆ 5 ಗಣಗಳು. ಇಲ್ಲಿಯೂ ಪರ್ಯಾಯ ಗಣಗಳು ಬರುವುದು ಸಾಧ್ಯ. ಕರ್ಣಾಟ ಮಾಲತೀಮಾಧವ ಮುಂತಾದ ಕಾವ್ಯಗಳಲ್ಲಿ ಇದನ್ನು ಬಳಸಿದೆಯೆಂದು ಜಯಕೀರ್ತಿ ತಿಳಿಸಿದ್ದಾನೆ. ಆದರೆ ಆ ಕಾವ್ಯಗಳು ದೊರೆತಿಲ್ಲ. ಚಂದ್ರರಾಜನ ಮದನತಿಲಕದಲ್ಲಿ ಒಂದು ಪದ್ಯವಿದೆ. ನಿದರ್ಶನಕ್ಕೆ ಆ ಪದ್ಯದ ಒಂದು ಸಾಲು

ನುಡಿಗು | ಮೋಪನ | ಪಡೆಮಾತ | ನಾತನಿ | ರ್ದೆಡೆಗೆ ವಕ್ಕುಂ |

**(IV) ಎಡೆಯಕ್ಕರ :** ಸಾಮಾನ್ಯ ಲಕ್ಷಣ: 4 ಪಾದಗಳು, ಪ್ರತಿಪಾದದಲ್ಲಿ 1 ಬ್ರ, 2 ವಿ, 1 ರು, ಹೀಗೆ 4 ಗಣಗಳು. ಇಲ್ಲಿಯೂ ಪರ್ಯಾಯ ಗಣಗಳು ಬರಬಹುದು. ಕರ್ಣಾಟೇಶ್ವರಕಥಾ ಮತ್ತು ಇತರ ಜೈನಕೃತಿಗಳಲ್ಲಿ ಇದರ ಬಳಕೆಯಾಗಿದೆಯೆಂದು ಜಯಕೀರ್ತಿ ತಿಳಿಸಿದ್ದಾನೆ. ಆದರೆ ಅವು ಯಾವುವೂ ನಮಗೆ ದೊರೆತಿಲ್ಲ. ಚಂದ್ರರಾಜನ ಮದನತಿಲಕದಲ್ಲೆ ಒಂದು ಪದ್ಯವಿದೆ (1-15) ನಿದರ್ಶನಕ್ಕೆ ಒಂದು ಸಾಲು

ಅಂಗ | ಯಿಂಗಿತ | ಶಿಕ್ಷಿತ | ನಿಂದುಯಶಂ

**(V) ಕಿರಿಯಕ್ಕರ :** ಅಕ್ಕರಭೇದಗಳಲ್ಲಿ ಎಲ್ಲಕ್ಕಿಂತ ಚಿಕ್ಕದು. ಸಾಮಾನ್ಯ ಲಕ್ಷಣ: 4 ಪಾದಗಳು ಪ್ರತಿ ಪಾದದಲ್ಲಿ 2 ವಿ, 1 ರು ಹೀಗೆ 3 ಗಣಗಳು, ಪರ್ಯಾಯ ಗಣಗಳು ಬರಬಹುದು. ಉದಾಹರಣೆ ದೊರೆಯುವುದೆಂದು ಜಯ ಕೀರ್ತಿ ತಿಳಿಸುವ ಶೃಂಗಾರಪಿಂಡದಂಥ ಕನ್ನಡ ಕಾವ್ಯಗಳು ಈಗ ದೊರೆಯುವುದಿಲ್ಲ.

ಚಂದ್ರರಾಜನ ಮದನತಿಲಕದಿಂದ (1-15) ಒಂದು ಕಿರಿಯಕ್ಕರವನ್ನು ಬಿಡಿಸಬಹುದು. ನಿದರ್ಶನಕ್ಕೆ ಒಂದು ಸಾಲು

ಇಂಗಿತ | ಶಿಕ್ಷಿತ | ನಿಂದುಯಶಂ (ಟಿ.ವಿ.ವಿ., ಡಿ.ಎಸ್.ಕೆ.)

ತ್ರಿಪದಿ ಮೂರು ಸಾಲಿನ ಒಂದು ಪದ್ಯಜಾತಿ. ತನ್ನ ಮೊದಲ ಘಟ್ಟದಲ್ಲಿ ಅಂಶಗಣಗಳಿಂದ ಕೂಡಿತ್ತು. ಗಣಗಳ ವಿನ್ಯಾಸ ಹೀಗೆ ಮೊದಲ ಪಾದದಲ್ಲಿ ನಾಲ್ಕು ಗಣ. ಎರಡನೆಯ ಪಾದದಲ್ಲಿ ನಾಲ್ಕು ಗಣ, ಮೂರನೆಯ ಪಾದದಲ್ಲಿ ಮೂರು ಗಣ, ಆರು ಮತ್ತು ಹತ್ತನೆಯ ಸ್ಥಾನದಲ್ಲಿ ಬ್ರಹ್ಮಗಣ, ಉಳಿದುವೆಲ್ಲ ವಿಷ್ಣುಗಣಗಳು. ಇದು ಸ್ಥೂಲ ಲಕ್ಷಣ

ವಿ | ವಿ | ವಿ | ವಿ |
ವಿ | ಬ್ರ | ವಿ | ವಿ |
ವಿ | ಬ್ರ | ವಿ |

ಆದರೆ ತ್ರಿಪದಿಯನ್ನು ವಾಚನ ಮಾಡುವಾಗ ಎರಡನೆಯ ಪಾದದ ಮೂರನೆಯ ಗಣಕ್ಕೆ ಬಂದು, ಅಲ್ಲಿ ನಿಲ್ಲಿಸಿ ಮತ್ತೆ ಇದೇ ಪಾದದ ಮೊದಲಿಗೆ ಹೊಗಿ ಇಡೀ ಪಾದವನ್ನು ಹೇಳಿ ಅನಂತರ ಮೂರನೆಯ ಪಾದಕ್ಕೆ ಹೋಗಬೇಕು. (ಈ ಪುನರಾವರ್ತನೆಯನ್ನು ಇಂದಿಗೂ ಹಳ್ಳಿಯ ತ್ರಿಪದಿಗಳಲ್ಲಿ ಜನಪದಗೀತೆಗಳಲ್ಲಿ ಕೇಳಬಹುದು.) ಮೂರು ಪಾದಗಳಲ್ಲೂ ಇರುವ (ದ್ವಿತೀಯ) ಪ್ರಾಸಾಕ್ಷರ ಮೊದಲ ಪಾದದ ಎರಡು ಗಣಗಳ ಬಳಿಕ ಮತ್ತೆ ಕಾಣಿಸಿಕೊಳ್ಳುತ್ತದೆ. ಪೊನ್ನನ ಶಾಂತಿಪುರಾಣದ ಕೆಳಗಿನ ತ್ರಿಪದಿ ಮೇಲೆ ಹೇಳಿದ ಎಲ್ಲ ಲಕ್ಷಣಗಳನ್ನು ಮೈಗೂಡಿಸಿಕೊಂಡಿದೆ.

ವಿ ವಿ ವಿ ವಿ
ಅಂತುಮಾ | ರೂಪನೆ | ಚಿಂತಿಸಿ | ಚಿಂತಿಸಿ
ವಿ ಬ್ರ ವಿ ವಿ
ಕಾಂತೆಯರ್ | ಪತಿಗೆ | ರತಿ ಸೋಲ್ತು | ಕೆಂದಳಿ
ವಿ ಬ್ರ ವಿ
ರಂತಲ | ರ್ಗಣೆಗೆ | ಡೊಣೆಯಾದರ್

ಎರಡನೆಯ ಪಾದ ಮತ್ತೆ ಮಗುಚಿ ಬರುವುದರಿಂದ, ವಾಚನದ ಸಂದರ್ಭದಲ್ಲಿ ಇದು ನಾಲ್ಕು ಸಾಲಿನ ಪದ್ಯವಾಗಿ ಕೇಳಿಸುತ್ತದೆ.

ವಿ | ವಿ | ವಿ | ವಿ |
ವಿ | ಬ್ರ | ವಿ |
ವಿ | ಬ್ರ | ವಿ | ವಿ
ವಿ | ಬ್ರ | ವಿ ||

ಆದ್ದರಿಂದ ಮೊದಲ ಪಾದದಲ್ಲಿ 4 ಗಣ, ಎರಡನೆಯ ಪಾದದಲ್ಲಿ 3 ಗಣಗಳಿರುವ ಏಳೆಯೇ ಇಮ್ಮಡಿಸಿ ತ್ರಿಪದಿಯಾಗಿರಬಹುದು.

ಮೇಲಿನ ಲಕ್ಷಣ ಸ್ಥೂಲವಾದುದು. ಏಕೆಂದರೆ ವಿಷ್ಣುವಿನ ಸ್ಥಾನದಲ್ಲಿ ಒಮ್ಮೊಮ್ಮೆ ಬ್ರಹ್ಮವೂ ಆಕಸ್ಮಿಕವಾಗಿ ರುದ್ರವೂ ಕಾಣಿಸಿಕೊಳ್ಳುವುದುಂಟು. ಆದರೆ 6 ಮತ್ತು 10ನೆಯ ಸ್ಥಾನದಲ್ಲಿ ಬರುವ ಬ್ರಹ್ಮ ಬಹುಮಟ್ಟಿಗೆ ನಿಯತವೆಂದೇ ಹೇಳಬೇಕು. ತ್ರಿಪದಿಯ ಬಂಧದಲ್ಲಿ ಇದು ಮುಖ್ಯವಾದುದಷ್ಟೆ ಅಲ್ಲದೆ, ಅದರ ಗಟ್ಟಿ ಭಾಗವೂ ಆಗಿದೆ. ಅಂಶವೃತ್ತವಾಗಿದ್ದ ತ್ರಿಪದಿ ಮುಂದೆ ಮಾತ್ರಾವೃತ್ತವಾದಾಗಲೂ 6 ಮತ್ತು 10ನೆಯ ಸ್ಥಾನಗಳಲ್ಲಿ ಬ್ರಹ್ಮಗಣ ಉಳಿದುಕೊಂಡು ಬಂದಿತು. ಬ್ರಹ್ಮಗಣಗಳು ತ್ರಿಪದಿಯ ನಡೆಗೆ ಒಂದು ಬಳುಕನ್ನು ನಾಟ್ಯವೈವಿಧ್ಯವನ್ನು ತಂದು ಕೊಡುತ್ತವೆ.

ಕನ್ನಡದಲ್ಲಿ ಬಾದಾಮಿ ಶಾಸನದ (ಸು.700) ತ್ರಿಪದಿಗಳೆ ಅತ್ಯಂತ ಪ್ರಾಚೀನವಾದುವು. ಕಪ್ಪೆಯರಭಟ್ಟನ ಶೌರ್ಯ ಸದ್ಗುಣಾದಿಗಳನ್ನು ವರ್ಣಿಸುವ ಅವು ಒಳ್ಳೆಯ ಕಾವ್ಯಗುಣವನ್ನೂ ಪಡೆದಿವೆ. ಈ ದೃಷ್ಟಿಯಿಂದ

ಕಟ್ಟಿದ ಸಿಂಘಮನ್ ಕೆಟ್ಟೊದೇನೆಮಗೆಂದು
ಬಿಟ್ಟವೋಲ್ ಕಲಿಗೆ ವಿಪರೀತಂಗಹಿತರ್ಕಳ್
ಕೆಟ್ಟರ್ಮೇಣ್ಸತ್ತರ ವಿಚಾರಂ||

ಎಂಬ ಪದ್ಯವನ್ನು ಗಮನಿಸಬಹುದು.

ಕನ್ನಡದಲ್ಲಿ ಲಿಖಿತಸಾಹಿತ್ಯ ದೊರೆಯುವುದಕ್ಕೆ ಮುಂಚೆಯೇ ತ್ರಿಪದಿ ರೂಪವಾದ ಜನಪದ ಸಾಹಿತ್ಯವಿದ್ದಿರಬೇಕು. ಇದು ಮುಖ್ಯವಾಗಿ ಜನಪದ ಮಟ್ಟು. ಬಾದಾಮಿ ಶಾಸನದ ತ್ರಿಪದಿಗಳು ಕನ್ನಡದಲ್ಲಿ ಅಂಥ ಜನಪದ ಸಾಹಿತ್ಯವಿದ್ದಿತೆಂಬುದಕ್ಕೆ ಒಂದು ಕುರುಹಾಗಿದೆ. ಅವಿದ್ಯಾವಂತರು, ಅಷ್ಟು ವಿದ್ಯಾವಂತರಲ್ಲದವರು ತ್ರಿಪದಿಗಳನ್ನು ಕಟ್ಟಿ, ಹಾಡಿ ನಲಿಯುತ್ತಿದ್ದರೆಂಬುದಕ್ಕೆ 971ರ ಶಾಸನವೊಂದರಲ್ಲಿ ಬಂದಿರುವ ಮಾತು (ತ್ರಿಪದಿ) ಸಾಕ್ಷಿಯಾಗಿದೆ. ಆ ಶಾಸನದಲ್ಲಿ ನಾರಣ ಎಂಬ ಕವಿ ತನ್ನ ವಿಷಯವನ್ನು ಹೀಗೆ ಹೇಳಿಕೊಂಡಿದ್ದಾನೆ

ವೇದವೇದಾಂಗಮನೋದದೆ ಶಾಸ್ತ್ರಮ
ನಾದಿಮಧ್ಯಾಂತಮಱಿಯದೆ ನಾರಣಂ
ಗಾದುದು ಕವಿತೆ ಸಹಜಮೇ ||

ತಾನು ವೇದ, ವೇದಾಂಗ ಶಾಸ್ತ್ರಗಳನ್ನು ಅರಿಯದವನಾದರೂ ತನಗೆ ಕವಿತೆ ಸಹಜವಾಗಿ ಬಂದಿದೆಯೆಂದು ಆತ ತ್ರಿಪದಿಯಲ್ಲಿ ಹೇಳಿಕೊಂಡಿರುವುದು ಗಮನಾರ್ಹ.

ಬೀಸುವಾಗ, ಕುಟ್ಟುವಾಗ ಜನಸಾಮಾನ್ಯರು ತ್ರಿಪದಿಗಳನ್ನು ಹಾಡುತ್ತಿದ್ದರು (ಈಗಲೂ ಕೆಲವೊಮ್ಮೆ ಹಾಡುತ್ತಾರೆ.) ಮಾನಸೋಲ್ಲಾಸದಲ್ಲಿ ತ್ರಿಪದಿಗಳನ್ನು ಬತ್ತಕುಟ್ಟುವಾಗ ಜನರು ಹಾಡುತ್ತಿದ್ದರೆಂಬ ಉಲ್ಲೇಖವಿದೆ. ಇಂಥ ಹಾಡುಗಳೇ ಒನಕೆವಾಡುಗಳು. ನೇಮಿಚಂದ್ರನ ಲೀಲಾವತಿಯಲ್ಲಿ ಬಂದಿರುವ ಒನಕೆವಾಡು ತ್ರಿಪದಿಗಳ ಒಂದು ಗುಚ್ಛವೇ ಆಗಿದೆ.

ಸು.700 ರಿಂದ ಸು.1140ರ ವರೆಗಿನ ಶಾಸನಗಳಲ್ಲಿ ಚಂಪೂ ಕಾವ್ಯಗಳಲ್ಲಿ ಮಧ್ಯೆ ಅಲ್ಲಲ್ಲಿ ಅನೇಕ ತ್ರಿಪದಿಗಳು ಕಾಣಿಸಿಕೊಳ್ಳುತ್ತವೆ. ಇವೆಲ್ಲ ಬಹುತೇಕ ಅಂಶಗಣಗಳಿಂದ ಕೂಡಿದುದಾಗಿವೆ.

ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ಅಂಶಗಣಗಳು ಮಾತ್ರಾಗಣಗಳಾದದ್ದು ಕನ್ನಡ ಛಂದಸ್ಸಿನ ಇತಿಹಾಸದಲ್ಲಿ ಬಹು ಪ್ರಮುಖವಾದ ಘಟನೆ. ಇದರ ಫಲವಾಗಿ ತ್ರಿಪದಿಯ 6 ಮತ್ತು 10 ನೆಯ ಸ್ಥಾನದಲ್ಲಿ ಬರುತ್ತಿದ್ದ ಬ್ರಹ್ಮಗಣಗಳನ್ನು ಬಿಟ್ಟು, ಉಳಿದೆಲ್ಲ ಅಂಶಗಣಗಳ ಸ್ಥಾನದಲ್ಲಿ ಮಾತ್ರಾಗಣಗಳು (ಸಾಮಾನ್ಯವಾಗಿ ಐದು ಮಾತ್ರೆಯ ಗಣಗಳು) ಕಾಣಿಸಿಕೊಂಡವು. ಇಂಥ ಅನೇಕ ತ್ರಿಪದಿಗಳನ್ನು ಅಕ್ಕಮಹಾದೇವಿಯಂಥ ವಚನಕಾರರು ಬರೆದಿರುವುದನ್ನು ನೋಡಬಹುದು.

1160ರ ಅನಂತರ ತ್ರಿಪದಿಗಳ ಇತಿಹಾಸ ಸರಳವಾಗಿಲ್ಲ. ಈ ಕಾಲದಲ್ಲಿ ಕೆಲವೆಡೆ ಕೇವಲ ಅಂಶಗಳಿಂದ ಕೂಡಿದ, ಕೆಲವೆಡೆ ಕೇವಲ ಮಾತ್ರಾಗಣಗಳಿಂದ ಕೂಡಿದ, ಕೆಲವೆಡೆ ಎರಡೂ ಜಾತಿಯ ಗಣಗಳಿಂದ ಕೂಡಿದ ತ್ರಿಪದಿಗಳನ್ನು ನೋಡುತ್ತೇವೆ. ಆದರೆ, ತ್ರಿಪದಿಯ ಉಳಿದ ಗಣಗಳು ಯಾವುದೇ ಆಗಿರಲಿ 6 ಮತ್ತು 10ನೆಯ ಸ್ಥಾನಗಳಲ್ಲಿ ಮಾತ್ರ ಬ್ರಹ್ಮಗಣ ಉಳಿದುಬಂತು.

ಹನ್ನೆರಡನೆಯ ಶತಮಾನದ ಉತ್ತರಾರ್ಧದಲ್ಲಿ ತ್ರಿಪದಿಗಳು ಚಂಪೂಕಾವ್ಯದ ಮಧ್ಯೆ ಅಲ್ಲಲ್ಲಿ ವೈವಿಧ್ಯಕ್ಕಾಗಿ ಕಾಣಿಸಿಕೊಂಡಿದ್ದುವು. ಅಥವಾ ತತ್ತ್ವ ಪ್ರಧಾನವಾದ ಚಿಕ್ಕ ಚಿಕ್ಕ ರಚನೆಗಳಿಗೆ ತ್ರಿಪದಿ ಬಳಕೆಯಾಗಿದ್ದಿತು. ತ್ರಿಪದೀರೂಪವಾದ ಕಥನ ಕಾವ್ಯಗಳು ಕನ್ನಡದಲ್ಲಿ ಬಹಳ ವಿರಳವೆಂದೇ ಹೇಳಬೇಕು. ಅಂಥ ವಿರಳ ಕಾವ್ಯಗಳಲ್ಲಿ ಸು.1500ರ ಚಂದನೆಯ ಕಥೆ ಬಹುಶಃ ಅತ್ಯಂತ ಪ್ರಾಚೀನವಾದುದು. ಚೋರ ಕಥೆ ತ್ರಿಪದಿ ಕಾವ್ಯಗಳಲ್ಲಿ ಇನ್ನೊಂದು ಉಲ್ಲೇಖಾರ್ಹ ಕೃತಿ. ತ್ರಿಪದಿಯ ಇತಿಹಾಸದಲ್ಲಿ ಬಹು ದೊಡ್ಡ ಹೆಸರು ಸರ್ವಜ್ಞನದು. ಇವನ ತ್ರಿಪದಿಗಳಲ್ಲಿ ಕೆಲವು ಅಂಶಲಯಾನ್ವಿತವೂ ಕೆಲವು ಮಾತ್ರಾಲಯಾನ್ವಿತವೂ ಆಗಿವೆ. ಕೆಲವು ಪದ್ಯಗಳಲ್ಲಿ ಇವೆರಡು ಲಯಗಳು ಮಿಶ್ರಗೊಂಡಿರವುದೂ ಉಂಟು. ಮುಂದಿನವರು ತ್ರಿಪದಿಗಳನ್ನು ಸರ್ವಜ್ಞನಂತೆ ಮುಕ್ತಕಗಳನ್ನು ಬರೆಯಲು ಬಳಸಿದರೇ ಹೊರತು ಕಥನಕಾವ್ಯಗಳನ್ನು ಬರೆಯಲಿಕ್ಕೆ ಬಳಸಲಿಲ್ಲ. ಜನಪದ ಸಾಹಿತ್ಯದ ಗಣನೀಯ ಭಾಗ ತ್ರಿಪದೀರೂಪವಾಗಿದೆ. ಇಂದಿಗೂ ಈ ತ್ರಿಪದಿಗಳಲ್ಲಿ ಅಂಶಲಯ ಮಿಡಿಯುತ್ತಿರುವುದನ್ನು ಗುರುತಿಸಬಹುದು. ಬೇಂದ್ರೆ, ತೀ.ನಂ.ಶ್ರೀ., ಪರಮೇಶ್ವರ ಭಟ್ಟ ಮುಂತಾದ ಆಧುನಿಕರೂ ತ್ರಿಪದಿಗಳನ್ನು ಬರೆದಿದ್ದಾರೆ.

ತ್ರಿಪದಿಯ ವ್ಯಾಪ್ತಿ ಕಿರಿದು. ಇದರಲ್ಲಿ ವಿಸ್ತಾರದ ವರ್ಣನೆಯನ್ನಾಗಲಿ, ದೀರ್ಘಕಾಲ ಮಿಡಿಯುವ ಭಾವವನ್ನಾಗಲಿ, ಸವಿವರವಾದ ಯಾವುದೊಂದು ವಿಚಾರವನ್ನಾಗಲಿ ಸಂಗತಿಯನ್ನಾಗಲಿ ಕೂರಿಸುವುದು ಅಸಾಧ್ಯ. ಬಿಡಿ ಬಿಡಿ ವಿಚಾರಗಳನ್ನು ಚಿಕ್ಕ ಚಿಕ್ಕ ಭಾವಗಳನ್ನು ಬೇರೆ ಬೇರೆಯಾಗಿ ಹೇಳುವುದಕ್ಕೆ ಬಿಡಿ ಬಿಡಿಯಾಗಿ ವ್ಯಕ್ತ ಮಾಡಲಿಕ್ಕೆ ಇದೂ ಸಹಾಯಕಾರಿ. ಆದ್ದರಿಂದಲೇ ಇದರಲ್ಲಿ ಹೇಳಿಕೊಳ್ಳುವಂಥ ಯಾವುದೇ ದೀರ್ಘಕಾವ್ಯವೂ ರಚಿತವಾಗಲಿಲ್ಲ. ಆದರೂ ವಿಶೇಷವಾಗಿ ಸರ್ವಜ್ಞನಿಗೆ, ಜನಪದ ಕವಿಗಳಿಗೆ ಕಾವ್ಯ ಮಾಧ್ಯಮವಾಗಿ ಕನ್ನಡಕ್ಕೆ ತ್ರಿಪದಿ ಕೊಟ್ಟಿರುವ ಕಾಣಿಕೆ ಹಿರಿದು. (ಎಂ.ಪಿ.)

**ಏಳೆ:** ಇದರ ಲಕ್ಷಣವನ್ನು ನಾಗವರ್ಮನೂ ಜಯಕೀರ್ತಿ ಶಾರ್ಙ್ಗದೇವರೂ ಹೇಳಿದ್ದಾರೆ. ಸಾಮಾನ್ಯ ಲಕ್ಷಣ: 2 ಪಾದಗಳು, ಅವುಗಳಲ್ಲಿ ಮೊದಲನೆಯ ಪಾದದಲ್ಲಿ 4 ಗಣ, ಎರಡನೆಯ ಪಾದದಲ್ಲಿ 3 ಗಣ ಹೀಗೆ 7 ಗಣಗಳು. ಇವುಗಳಲ್ಲಿ 6ನೆಯದು ಬ್ರಹ್ಮ, ಉಳಿದವು ವಿಷ್ಣು; ಮೊದಲನೆಯ ಪಾದದಲ್ಲಿ 2ನೆಯ ಗಣವಾದ ಮೇಲೆ ಯತಿ, 3ನೆಯ ಗಣದಲ್ಲಿ ದ್ವಿತೀಯಾಕ್ಷರ ಪ್ರಾಸದ ಆವೃತ್ತಿ (ಒಳಪ್ರಾಸ). ತ್ರಿಪದಿಯ ವಿಷಯದಲ್ಲಿ ನೋಡಿದಂತೆಯೇ ಇಲ್ಲಿಯೂ ವಿಷ್ಣುಗಣ ಸ್ಥಾನದಲ್ಲಿ ಸಾಮಾನ್ಯವಾಗಿ ಬ್ರಹ್ಮವೋ ರುದ್ರವೋ 6ನೆಯ ಬ್ರಹ್ಮದ ಸ್ಥಾನದಲ್ಲಿ ವಿರಳವಾಗಿ ವಿಷ್ಣುವೋ ರುದ್ರವೋ ಬರುವುದು ಸಾಧ್ಯ. ಏಳೆಗೆ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ನಿದರ್ಶನಗಳಿಲ್ಲ. ಜನಪದಸಾಹಿತ್ಯದಲ್ಲಿಯೂ ಈಚೆಗೆ ವಿರಳವಾಗಿ ಹೊಸಗನ್ನಡ ಕಾವ್ಯದಲ್ಲಿಯೂ ನಿದರ್ಶನಗಳು ದೊರೆಯುತ್ತವೆ.

ಸಾಮಾನ್ಯ ಲಕ್ಷಣಕ್ಕೆ ಒಪ್ಪುವ ಒಂದು ನಿದರ್ಶನ

ಹಡೆದ ತಾ | ಯಿಗೆ ಬನ್ನಿ | ಹಡೆದ ತಂ | ದೆಗೆ ಬನ್ನಿ |
ಪಡೆದ ಗಂ | ಡನಿಗೆ | ನಮ ಬನ್ನಿ

(ಟಿ.ವಿ.ವಿ., ಡಿ.ಎಸ್.ಕೆ.)

**ಚೌಪದಿ :** ಇದರಲ್ಲಿ ಅಂಶಗಣಾತ್ಮಕ ಮತ್ತು ಮಾತ್ರಾಗಣಾತ್ಮಕ ಎಂಬುದಾಗಿ ಎರಡು ಬಗೆ. ಇವುಗಳ ಹುಟ್ಟು ಮತ್ತು ಸ್ವರೂಪ ಬೇರೆ ಬೇರೆಯೆ. (I) ಅಂಶಗಣ ಚೌಪದಿ (ಚೌಪದಿಗೆ): ನಾಗವರ್ಮ ಮತ್ತು ಜಯಕೀರ್ತಿ ಇಬ್ಬರಲ್ಲೂ ಇದರ ಲಕ್ಷಣ ನಿರೂಪಣೆ ಒಂದೇ ರೀತಿಯಾಗಿದೆ. ಅದು ಹೀಗಿದೆ. ದ್ವಿತೀಯಾಕ್ಷರ ಪ್ರಾಸದೊಡನೆ ಪಾದಗಳು, ಪ್ರತಿಪಾದದಲ್ಲಿಯೂ 1 ವಿಷ್ಣುಗಣದ ಮುಂದೆ 1 ರುದ್ರಗಣ. ಕನ್ನಡದಲ್ಲಿ ಇಂಥ ಲಕ್ಷಣದ ಚೌಪದಿ ಈಗ ದೊರೆತಿರುವುದು ಒಂದು ಮಾತ್ರ. ಚಂದ್ರರಾಜನ ಮದನತಿಲಕದಲ್ಲಿ ಬರುವ ಆ ಪದ್ಯ ಹೀಗಿದೆ:

ರತಿಹೀನಂ | ಪೆಟಿವಂ ಕುಬ್ಜಂ
ಮತಿವಂತಂ | ಕೃಶನತ್ಯಂತ
ನೃತವಾಕ್ಯಂ | ಸತಿಯಂ ಕಾಯ
ಲ್ಕತಿ ಶಿಷ್ಟಂ | ಪೆಱತೇಂ ಶ್ರೇಷ್ಠಂ ||

ಇಂಥ ಇನ್ನೊಂದು ಚೌಪದಿಯನ್ನು ಇದೇ ಗ್ರಂಥ'ದ ಪ್ರಥಮಾಧಿಕಾರದ 15ನೆಯ ವೃತ್ತದ ಮೂಲಕವಾಗಿಯೂ ಪಡೆಯಬಹುದೆಂದು ಕವಿಯ ಸೂಚನೆಯಿದೆ. ಚೌಪದಿಗೆ ಉದಾಹರಣೆ ದೊರೆಯುವುದೆಂದು ಜಯಕೀರ್ತಿ ತಿಳಿಸಿರುವ ಚೂಡಾಮಣಿ ಎಂಬ ಗ್ರಂಥ ಈಗ ಉಪಲಬ್ಧವಿಲ್ಲ. (II) ಮಾತ್ರಾಗಣಚೌಪದಿ ಇದರ ಲಕ್ಷಣವನ್ನು ಪ್ರಾಚೀನ ಗ್ರಂಥಗಳಲ್ಲಿ ಹೇಳಿಲ್ಲ. ಛಂದೋಂಬುಧಿಯಲ್ಲಿ ಪ್ರಕ್ಷಿಪ್ತವಾಗಿ ಸೇರಿರುವ ಈ ಪದ್ಯಜಾತಿಯ ಲಕ್ಷಣ ಹೀಗಿದೆ: ಆದ್ಯಂತ ಪ್ರಾಸಗಳ ನಾಲ್ಕು ಪಾದಗಳು. ಪ್ರತಿಪಾದದಲ್ಲಿಯೂ ಒಟ್ಟು, 8 ಮಾತ್ರೆಗಳು, 8ನೆಯ ಅಕ್ಷರಕ್ಕೆ ಯತಿ (ಗಣವಿಭಜನೆಯನ್ನು ಗಮನಿಸಿದರೆ, ಪ್ರತಿಪಾದದಲ್ಲಿಯೂ 5 ಮಾತ್ರೆಗಳ 3 ಗಣಗಳೂ 2 ಮಾತ್ರೆಗಳ 1 ಗಣವೂ ಬರುವುದು ಕಾಣುತ್ತದೆ.) ಇಂಥ ಚೌಪದಿ ನಡುಗನ್ನಡ ಕಾಲದ ಹಲವು ಲಘುಕಾವ್ಯಗಳಲ್ಲಿ ದಾಸರ ಪದಗಳಲ್ಲಿ ಕಂಡುಬರುತ್ತವೆ. ಮಾನೌಮಿಯ ಚೌಪದದಿಂದ ಒಂದು ಉದಾಹರಣೆ:

ಮಳೆ ಹೊಯ್ದು | ಬೆಳೆ ಬೆಳೆದು | ಇಳೆ ದಣಿಯ | ಲೆಂದು
ತಿಳಿಗೊಳಗ | ಳುಕ್ಕಿ ಗೋ | ವ್ಗಳು ಕರೆಯ | ಲೆಂದು
ನಳಿನಮುಖಿ | ಯರು ಪುತ್ರಿ | ಯರ ಪಡೆಯ | ಲೆಂದು
ಇಳೆಯೊಳಗೆ | ಹರಸಿದೆವು | ಬಾಲಕರು | ಬಂದು

ತೆಲುಗು ಸಾಹಿತ್ಯದಲ್ಲಿ ಪ್ರಸಿದ್ಧವಾಗಿರುವ ದ್ವಿಪದ ಛಂದಸ್ಸು (3 ಇಂದ್ರಗಣ, 1 ಇನಗಣ) ಕನ್ನಡದಲ್ಲಿ ಮಾತ್ರಾಗಣಕ್ಕೆ ತಿರುಗಿದ ದ್ವಿಪದಿಯಾಗಿ ಈ ದ್ವಿಪದಿ ಕಾಲಕ್ರಮದಲ್ಲಿ ದ್ವಿಗುಣಗೊಂಡು ಈ ಚೌಪದಿ ಹುಟ್ಟಿದ್ದಾಗಿರಬಹುದು. ಇಲ್ಲವೆ ಅಚ್ಚಕನ್ನಡ ಛಂದಸ್ಸಿನ ಛಂದೋವತಂಸ ಮಾತ್ರಾಗಣಕ್ಕೆ ತಿರುಗಿದ್ದಾಗಿರಬಹುದು.

**ಛಂದೋವತಂಸ :** ನಾಗವರ್ಮನ ಪ್ರಕಾರ ಇದರ ಸಾಮಾನ್ಯ ಲಕ್ಷಣ ಹೀಗಿದೆ: ನಾಲ್ಕು ಪಾದಗಳು, ಪ್ರತಿ ಪಾದದಲ್ಲಿಯೂ ಮೊದಲಿಗೆ ಒಂದು ವಿಷ್ಣು ಅನಂತರ ನಾಲ್ಕು ಬ್ರಹ್ಮ, ಹೀಗೆ ಐದು ಗಣಗಳು

ನಿದರ್ಶನಕ್ಕೆ ನಾಗವರ್ಮನ ಲಕ್ಷಣ ಪದ್ಯದ ಒಂದು ಸಾಲು:

ಮಂದರ | ಧರಗಣ | ಮೆಸೆದಿರೆ | ಮೊದಲೊಳ್

**ಜಯಕೀರ್ತಿಯ ಲಕ್ಷಣ :** ನಾಲ್ಕು ಪಾದಗಳು. ಪ್ರತಿಪಾದದಲ್ಲಿಯೂ ಕಂದರ್ಪ (ವಿಷ್ಣು) ಗಣದ ಮುಂದೆ ನಾಲ್ಕು ರತಿ (ಬ್ರಹ್ಮ) ಗಣ, ಹೀಗೆ ಐದು ಗಣಗಳು. ನಿದರ್ಶನಕ್ಕೆ ಜಯಕೀರ್ತಿಯ ಲಕ್ಷಣಪದ್ಯದ ಒಂದು ಸಾಲು

ಕಂದರ್ಪ | ಗಣತೋ | ರತಿ ಗ | ಣಚತು | ಷ್ಕಂ ಚೇತ್

ಆದರೆ ಇದನ್ನು ಜಯಕೀರ್ತಿ ಆದಿವರಾಹ ಎಂದು ಕರೆದಿರುವುದು ಗಮನಾರ್ಹವಾಗಿದೆ. ಛಂದೋವತಂಸಕ್ಕೆ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಉದಾಹರಣೆಗಳು ದೊರೆಯುವುದಿಲ್ಲ. ಜಯಕೀರ್ತಿ ಕರ್ಣಾಟ ಕುಮಾರಸಂಭವಾದಿ ಕಾವ್ಯಗಳಲ್ಲಿ ತಾನು ಆದಿವರಾಹವೆಂಬ ಹೆಸರಿನಿಂದ ಕರೆದಿರುವ ಛಂದೋವತಂಸದ ನಿದರ್ಶನಗಳಿವೆಯೆಂದು ಹೇಳಿದ್ದಾನೆ. ಆದರೆ ಅಂಥ ಯಾವ ಕಾವ್ಯವೂ ನಮಗೆ ದೊರೆತಿಲ್ಲ. ನಡುಗನ್ನಡ ಕಾಲದ ದಾಸರ ಪದಗಳಲ್ಲಿ ಮತ್ತು ಇತರ ಕಡೆಗಳಲ್ಲಿ ಈ ಲಕ್ಷಣಕ್ಕೆ ಸರಿಬರುವ ಕೆಲವು ಪದ್ಯಗಳುಂಟು. ಆದರೆ ಇವು ನಿಶ್ಚಯವಾಗಿ ಛಂದೋವತಂಸದ ಉದಾಹರಣೆಗಳೇ ಎಂಬುದು ಸರಿಯಾಗಿ ತಿಳಿಯದು. (ಟಿ.ವಿ.ವಿ.)

**ಅಕ್ಕರಿಕೆ :** ಇದರ ಸಾಮಾನ್ಯ ಲಕ್ಷಣ ನಾಗವರ್ಮನ ಪ್ರಕಾರ 4 ಪಾದಗಳು. ಪ್ರತಿ ಪಾದದಲ್ಲಿ ವಿ, ಬ್ರ, ವಿ, ಬ್ರ, ವಿ, ರು ಹೀಗೆ 6 ಗಣಗಳು. 6ನೆಯ ಅಕ್ಷರಕ್ಕೆ 2 ಸಾರಿ ಯತಿ. ಜಯಕೀರ್ತಿಯ ಪ್ರಕಾರ ವಿ, ಬ್ರ, ವಿ, ಬ್ರ, ವಿ, ವಿ + ಗುರು ಹೀಗೆ ಗಣವಿನ್ಯಾಸ. ಪ್ರತಿ ಪಾದದಲ್ಲಿಯೂ ಮಾತ್ರೆಗಳಂತೂ ಇರಬೇಕು. ಪಾದಗಳಲ್ಲಿ ಒಟ್ಟು ಮಾತ್ರಾ ಸಂಖ್ಯೆ 104: 8-8 ಮಾತ್ರೆಗಳಿಗೊಮ್ಮೆ 2 ಸಾರಿ ಯತಿ. ಅಥವಾ ಅಂಶಗಣದ ಬದಲು ಜಗಣವಲ್ಲದ 6 ಚತುರ್ಮಾತ್ರಾಗಣಗಳು + ಗುರು ಕೂಡ ಬರಬಹುದು. ಈ ನಿರೂಪಣೆ ಪರಸ್ಪರವಾಗಿ ಭಿನ್ನವೆಂದು ತೋರಿದರೂ ಲಕ್ಷಣ ಒಟ್ಟಿನಲ್ಲಿ ಒಂದೇ. ಆದರೆ ಜಯಕೀರ್ತಿಯ ಲಕ್ಷಣ ನಾಗವರ್ಮನ ಲಕ್ಷಣಕ್ಕಿಂತ ಸಮಗ್ರವೂ ಸ್ಪಷ್ಟವೂ ಆಗಿದೆ. ಈ ಅಕ್ಕರಿಕೆ ಅನಂತರ ಮಾತ್ರಾಗಣವಾಗಿ ಪರಿಣಮಿಸಿತು.

ಷಡಕ್ಷರಿಯ ರಾಜಶೇಖರವಿಳಾಸದಿಂದ ನಿದರ್ಶನಕ್ಕೆ ಒಂದು ಸಾಲು:

ಸುರನುತ | ಚರಣೇ | ವರಗುಣ | ಭರಣೇ | ಖರರುಚಿ | ಬಿಂಬಗತೇ

**ಮದನವತಿ :** ನಾಗವರ್ಮನ ಪ್ರಕಾರ ಇದರ ಸಾಮಾನ್ಯ ಲಕ್ಷಣ ಮೂರು ರೀತಿಯ ಗಣವಿಭಜನೆಯ ಸಾಧ್ಯತೆಯನ್ನು ಕುರಿತಿರುವ ಹಾಗೆ ತೊರುತ್ತದೆ. 4 ಪಾದಗಳು ಮೊದಲನೆಯ ರೀತಿ 5 ವಿ + 1 ಗುರು; ಎರಡನೆಯ ರೀತಿ 4 ವಿ + 1 ರು, ಮೂರನೆಯ ರೀತಿ 3 ರು + 1 ವಿ. ಪಾದಪಾದಕ್ಕೆ ಗಣನಿಯಮ ವ್ಯತ್ಯಾಸವಾದರೂ ಪ್ರತಿಪಾದದಲ್ಲೂ 22 ಮಾತ್ರೆಯಿರಬೇಕು. ಜಯಕೀರ್ತಿಯ ಲಕ್ಷಣ ನಾಲ್ಕು ಪಾದಗಳು. ಮೊದಲ ಪಾದದಲ್ಲಿ 20 ಲಘು + 1 ಗುರು ಉಳಿದ ಸಾಲುಗಳಲ್ಲಿ 4 ವಿ + 1 ಬ್ರ. ಒಟ್ಟಿನಲ್ಲಿ ಪ್ರತಿ ಪಾದದಲ್ಲಿಯೂ 22 ಮಾತ್ರೆಗಳು ಯತಿಯೊಡಗೂಡಿ ಬಂದಿರಬೇಕು. ಈತನ ವಿವರಣೆಯೂ ಅಂಶ ಮತ್ತು ಮಾತ್ರಾಗಣಗಳ ಸಮ್ಮಿಶ್ರ ನಿರೂಪಣೆ ಬಂದಿರುವುದಕ್ಕೆ ಕಾರಣ. ಇದು ಕೂಡ ಅಂಶ ವೃತ್ತವಾಗಿಯೂ ಧಾಟಿಯಲ್ಲಿ ಮಾತ್ರಾವೃತ್ತವಾಗಿ ಪರಿಣಮಿಸಿರುವುದೇ ಆಗಿದೆ. ಆದರೆ ಲಕ್ಷಣ ನಿರೂಪಣೆಯಲ್ಲಿ ಮಾತ್ರಾ ಸಾಮ್ಯವನ್ನೊಪ್ಪಿಯೂ ಗಣವಿನ್ಯಾಸವನ್ನು ಬೇರೆಯಗಿ ಹೇಳಿರುವುದಕ್ಕೆ ಕಾರಣವೇನೋ ತಿಳಿಯದು. ಪ್ರಾಚೀನ ಸಾಹಿತ್ಯದಲ್ಲಿ ಇದು ಎಲ್ಲಿ ಬಳಕೆಯಾಗಿದೆಯೆಂಬುದು ಗೊತ್ತಾಗಿಲ್ಲ. ಜನಪದ ಸಾಹಿತ್ಯದಲ್ಲಿ ಇಂಥ ಪದ್ಯಗಳು ದೊರೆಯಬಹುದೆ ಎಂಬುದನ್ನು ಪರಿಶೀಲಿಸಬೇಕಾಗಿದೆ. ನಿದರ್ಶನಕ್ಕೆ ನಾಗರ್ವಮನ ಲಕ್ಷಣ ಪದ್ಯದ ಒಂದು ಸಾಲು

ಮದನನ | ತಂದೆಯ | ಗಣಮವು | ವಿಷಯದೊ | ಳಿರೆ ಗುರು | ಮುಂ

(ಟಿ.ವಿ.ವಿ., ಡಿ.ಎಸ್.ಕೆ.)

**ಗೀತಿಕೆ :** ನಾಗವರ್ಮ ಮತ್ತು ಜಯಕೀರ್ತಿ ಗೀತಿಕೆಯ ಲಕ್ಷಣಕ್ಕೆ ಕೊಟ್ಟಿರುವ ಪದ್ಯವೇ ಲಕ್ಷ್ಯವೂ ಆಗಿದೆ.

ನಾಗವರ್ಮನ ಲಕ್ಷಣ ಪದ್ಯ:

ಎರಡಜೊ | ಳಾಜೆಂ | ಬ(ಬಾ?) | ಸಂಖ್ಯೆಯೊಳ್ |
ಬರೆ ಪದ್ಮ | ಭವನುಱಿ | ದುವು ಮೆ | ಚ್ಚುವ ತೆಱದಿಂ|
ದಿರೆ ಮುಂ | ದಣ ಪ | ದಂ ಮುನ್ನಿನಂ
ತಿರೆ ಕರಂ | ಗೀತಿಕೆ | ಯಿಂತ | ಕ್ಕುಂ ಸಖೀ |

ಜಯಕೀರ್ತಿಯ ಲಕ್ಷಣಪದ್ಯ:

ರಗಣೋ ದ್ವಿತೀಯೇ ಷಷ್ಠೆ ಚ
ಲಗಣೋ ಧಗಣೋವ್ಯಾSನ್ಯತ್ರ ಪಂಚಸ್ಪರ್ಧಯೋಶ್ಚ
ತ್ರಿಗಣೋSಯುಕ್ ಸಮಪಾದೋಬ್ಧಿಗಣೋ
ನಿಗದಿತಾ ಗೀತಿಕಾಲಂಕಾರೇ ಪ್ರಭುಸೇನೀಯೈಃ

ನಾಗವರ್ಮನ ಪದ್ಯಕ್ಕೆ ಕನ್ನಡ ಕೈಪಿಡಿಯಲ್ಲಿ ಹೀಗೆ ವಿವರಿಸಿದ್ದಾರೆ. ಏಳೇಳು ಗಣದ ಎರಡು ಪಾದ ಮಾತ್ರ. ನಾಲ್ಕನೆಯ ಗಣದಲ್ಲಿ ಒಳಪ್ರಾಸ. ಕಡೆಯಲ್ಲಿ ರುದ್ರ, ಮಿಕ್ಕ ಕಡೆ ವಿಷ್ಣು (ರುದ್ರ ಪರ್ಯಾಯಗಣ). "2-6ರಲ್ಲಿ ಬ್ರಹ್ಮ ಎಂದು ಹೇಳಬಹುದೆ? ಗೀತಿಕೆ ಎಂಬುದರಿಂದ ಸಾಂಗತ್ಯ ಸಂಬಂಧಿಯಾಗಿರಬಹುದೆ?"

ಏಳೆ, ತ್ರಿಪದಿ, ಅಕ್ಕರ, ಗೀತಿಕೆ, ಸಾಂಗತ್ಯ- ಇವೆಲ್ಲವೂ ಒಂದೇ ಬುಡಕಟ್ಟಿನ ಛಂದೋರೀತಿಗಳಾದದ್ದರಿಂದ ಒಂದೊಂದಕ್ಕೆ ಪರಸ್ಪರ ಸಂಬಂಧ ಕಲ್ಪಿಸುವುದು ಕಷ್ಟವೇನಲ್ಲ. ಗೀತಿಕೆ ಗೇಯಾತ್ಮಕವಾಗಿದ್ದು, ಮುಂದೆ ಸಾಂಗತ್ಯ ಹಾಡುಗಬ್ಬಗಳಲ್ಲಿ ವಿಶೇಷ ಪ್ರಚಾರಕ್ಕೆ ಬಂದದ್ದರಿಂದ ಎರಡಕ್ಕೂ ಹತ್ತಿರದ ನಂಟು ಇರಬಹುದೆಂದು ಥಟ್ಟನೆ ತೋರುವುದು ಸಹಜ. ಏಳೆ, ತ್ರಿಪದಿ, ಸಾಂಗತ್ಯ- ಇವುಗಳ ನಡುವೆ ಕಂಡುಬರುವ ಸಂಬಂಧಸಾಮೀಪ್ಯ ಗೀತಿಕೆ ಸಾಂಗತ್ಯಗಳ ನಡುವೆ ಕಂಡುಬರುವುದಿಲ್ಲ.

ಇನ್ನು ಗೀತಿಕೆಗೆ 'ಏಳೇಳು ಗಣದ ಎರಡು ಪಾದ ಮಾತ್ರ' ಎಂಬ ಮಾತು ವಿಚಾರಾರ್ಹ. ಕವಿರಾಜಮಾರ್ಗದ ಲಕ್ಷ್ಯಪದ್ಯಗಳಿಂದ ಇದು ಸಮಚತುಷ್ಪದಿಯಾಗಿಯೂ ನಾಗವರ್ಮ ಜಯಕೀರ್ತಿಗಳ ಲಕ್ಷ್ಯಗಳ ಲಕ್ಷ್ಯ ಲಕ್ಷಣ ಸಮನ್ವಿತ ಪದ್ಯಗಳ ಪ್ರಕಾರ ಅರ್ಧಸಮ ಚತುಷ್ಪದಿಯಾಗಿಯೂ ಕಂಡುಬರುತ್ತದೆ. ನಾಗವರ್ಮ ಜಯಕೀರ್ತಿಗಳ ಲಕ್ಷಣಾನುಸಾರವಾಗಿ ಏಳೇಳು ಗಣಗಳುಳ್ಳ ಪೂರ್ವಾರ್ಧ ಉತ್ತರಾರ್ಧಗಳ 2-6ನೆಯ ಸ್ಥಾನಗಳಲ್ಲಿ ಬ್ರಹ್ಮಗಣ ಬಂದೇತೀರಬೇಕು. ಉಳಿದ 5 ಕಡೆಗಳಲ್ಲಿ ಬ್ರಹ್ಮ ವಿಷ್ಣು ರುದ್ರಗಳಲ್ಲಿ ಯಾವುದಾದರೂ ಬರಬಹುದು. ಈ ಐಚ್ಛಿಕತೆಗೆ ಅವಕಾಶವಿದ್ದರೂ ಸಾಮಾನ್ಯವಾಗಿ ವಿಷ್ಣುವಿನ ಪ್ರಾಚುರ್ಯವೇ ಹೆಚ್ಚು. ಈ ಲಕ್ಷಣಕ್ಕೆ ಅನುಗುಣವಾದ ಒಂದು ಪದ್ಯವೂ ಕನ್ನಡ ಕಾವ್ಯರಾಶಿಯಲ್ಲಿ ಕಂಡುಬರದಿರುವುದು ಸೋಜಿಗ.

ನಾಗವರ್ಮ ಮತ್ತು ಜಯಕೀರ್ತಿಯ ಪದ್ಯಗಳ ಆಧಾರದ ಮೇಲೆ ಕವಿರಾಜಮಾರ್ಗದ ಗೀತಿಕೆಗಳಿಗೆ ಲಕ್ಷಣ ಸಮನ್ವಯ ಮಾಡಲಾಗುವುದಿಲ್ಲ. ಇವರಿಬ್ಬರೂ ಈ ಪದ್ಯಗಳನ್ನು ಗಮನಿಸಿದ್ದರೋ ಇಲ್ಲವೋ ಹೇಳುವುದು ಕಷ್ಟ. ಕವಿರಾಜ ಮಾರ್ಗದ ಎಲ್ಲ ಗೀತಿಕೆಗಳ (ಇವು 23 ಇವೆ) ಸ್ಥೂಲ ಪರೀಕ್ಷಣದಿಂದ, ಅದರಲ್ಲಿನ ಗೀತಿಕೆಯ ಲಕ್ಷಣವನ್ನು ಹೀಗೆ ನಿರ್ದೇಶಿಸಬಹುದು: ಇದು ಸಮಚತುಷ್ಪದಿ. ಪ್ರತಿ ಪಾದದಲ್ಲಿಯೂ ನಾಲ್ಕು ನಾಲ್ಕು ಅಂಶಗಣ. ನಾಗವರ್ಮ ಹೇಳುವಂತೆ 2-6ನೆಯ ಸ್ಥಾನಗಳಲ್ಲಿ ಬ್ರಹ್ಮ ಇರಬೇಕೆಂಬ ನಿಯಮ ಕಂಡುಬರುವುದಿಲ್ಲ ಗಣ ವಿನ್ಯಾಸದಲ್ಲಿಯೂ ನಿಶ್ಚಿತ ನಿಯಮ ವ್ಯವಸ್ಥೆ ಇದ್ದಂತಿಲ್ಲ. ಓದುವ ಅಥವಾ ಹಾಡುವ ಧಾಟಿಯಲ್ಲಿ ಸಹಜ ಯತಿಯನ್ನು ಗಮನಿಸಿ ಗಣಯೋಜನೆಯನ್ನು ರೂಪಿಸಿಕೊಳ್ಳುವ ಧಾರಾಳತೆಗೆ ಅವಕಾಶವಿರುವಂತಿದೆ. ಕೆಲವೆಡೆ ಬಹು ಅಪೂರ್ವವಾಗಿ ಒಂದು ಪಾದದಲ್ಲಿ ಮೂರು ಗಣದ ವಿವಕ್ಷೆಯೂ ಕಂಡುಬರುವುದುಂಟು. ಅಂಥ ಪಾದದಲ್ಲಿ ನಾಲ್ಕು ಗಣಗಳ ಕಟ್ಟುಪಾಡನ್ನು ತುಂಬುವುದಕ್ಕಾಗಿ ಪಾದಾಂತ್ಯದ ಗುರುವನ್ನು (ಅಂಶವನ್ನು) ಪ್ರತ್ಯೇಕಿಸಿ, ಅದಕ್ಕೆ, ಗಣದ ಬೆಲೆಯನ್ನೇ ಕೊಡಬಹುದಾಗಿ ಕಂಡುಬರುತ್ತದೆ. ಕವಿರಾಜಮಾರ್ಗದ ಮೊದಲನೆಯ ಗೀತಿಕೆಯನ್ನು ಮಾದರಿಯ ಉದಾಹರಣೆಯಾಗಿ ತೆಗೆದುಕೊಳ್ಳಬಹುದು.

ಬ್ರ ವಿ ಬ್ರ ವಿ
ಕಾಣ | ನೇಗೆಯ್ದುಂ | ತನ್ನ | ದೋಷಮಂ
ವಿ ವಿ ವಿ ರು
ಕಾಣದಂ | ತೆಂದುಂ ಕ | ಣ್ಗಳ್ತಮ್ಮ | ಕಾಡಿಗೆಯಂ
ವಿ ರು ಬ್ರ
ಪೂಣೆಗ | ನಾದುದಱಿಂ | ಪೆಱರಿಂs
ವಿ ವಿ ವಿ ವಿ
ಜಾಣರಿ | ನೋದಿಸಿ | ಪೇೞ್ವುದು | ಕಬ್ಬಮಂ

ಮಾತ್ರಾವೃತ್ತಗಳಾದ ಆರ್ಯೆಯಿಂದಲೂ ಪ್ರಾಕೃತದ ಸ್ಕಂದಕದಿಂದಲೂ ಗೀತಿಕೆಯನ್ನು ಹೊರಡಿಸಬಹುದು. ಒಟ್ಟಿನ ಮೇಲೆ ಕವಿರಾಜಮಾರ್ಗಕಾರನೋ ಇಲ್ಲವೆ ಅವನಿಗಿಂತ ಪೂರ್ವದ ಸಂಸ್ಕೃತ ಛಂದೋರಚನೆಗಳನ್ನು ಬಲ್ಲ ಕವಿಗಳೋ ಪ್ರಚಾರದಲ್ಲಿದ್ದ ತ್ರಿಪದಿ ಮುಂತಾದ ಪದ್ಯಜಾತಿಗಳ ದೇಶ್ಯ ಛಂದಸ್ಸನ್ನು ಆಧರಿಸಿ ಗೀತಿಕೆಯನ್ನು ನಿರ್ಮಾಣ ಮಾಡಿರಬಹುದು. ಕಂದ ಪದ್ಯದ ಮೂಲ ಛಂದಸ್ಸಾದ ಆರ್ಯಾಗೀತಿ ಅಥವಾ ಗೀತಿ ಗೀತಿಕೆಯ ನಿರ್ಮಾಣಕ್ಕೆ ಪ್ರೇರಕ ವಾಗಿರಬಹುದು.

ಅಂಶಗಣನಿಬದ್ಧವಾದ 'ಗೀತಿ'ಯ ಪ್ರಕಾರಗಳು ತೆಲುಗಿನಲ್ಲೂ ಇವೆ. ತೆಲುಗು ಛಂದೋಗ್ರಂಥ'ಗಳಲ್ಲಿ ಅತ್ಯಂತ ಪ್ರಾಚೀನವಾದ ಕವಿಜನಾಶ್ರಯಮುವಿನ ಕರ್ತೃ ಅಪ್ಪ ಕವಿ (ಸು.1100) ತೆಲುಗು ಜಾತಿ ಛಂದಸ್ಸಿನ ಪ್ರಕಾರಗಳಲ್ಲಿ ಗೀತಿಯನ್ನೂ ಹೆಸರಿಸಿದ್ದಾನೆ. ಎತ್ತುಗೀತಿ, ಪ್ರಗೀತಿ, ಮೇಲನಗೀತಿ, ತೇಟಗೀತಿ, ಆಟವೆಲದಿ ಇವು ಗೀತಿಯ ಇತರ ಪ್ರಭೇದಗಳು. ಇವೆಲ್ಲವೂ ಸಮಚತುಷ್ಪದಿಗಳು. ಕವಿರಾಜಮಾರ್ಗದ ಗೀತಿಕೆಗೂ ಪ್ರತಿಪಾದಕ್ಕೂ 5 ಗಣಗಳುಳ್ಳ (ಸೂರ್ಯ- ಇಂದ್ರ- ಇಂದ್ರ- ಸೂರ್ಯ- ಸೂರ್ಯ = ಬ್ರ- ವಿ- ವಿ- ಬ್ರ- ಬ್ರ) ತೇಟಗೀತಿಗೂ ಬಹುಮಟ್ಟಿನ ಹೋಲಿಕೆ ಕಂಡುಬರುತ್ತದೆ.

ನಾಗವರ್ಮನ ಕಾವ್ಯಾವಲೋಕನದಲ್ಲಿನ ಪ್ರತಿಯೊಂದು ಅಧಿಕರಣ ಕೊನೆಯಾಗುವ ಸ್ವಲ್ಪ ಮೊದಲಿಗೆ ಒಂದು ಗೀತಿಕೆ ಬರುತ್ತದೆ. ಪ್ರಭುಸೇನನ ಅನುಯಾಯಿಗಳು (?) ಅಲಂಕಾರದಲ್ಲಿ ಗೀತಿಕೆಯನ್ನು ವರ್ಣಿಸಿರುವುದಾಗಿ ಜಯಕೀರ್ತಿ ಹೇಳಿದ್ದಾನೆ. ಆದರೆ ಆ ಗ್ರಂಥ' ಯಾವುದೆಂಬುದು ನಮಗೆ ಸರಿಯಾಗಿ ತಿಳಿಯದು.

ಈಗ ತಿಳಿದುಬಂದಿರುವ ಮಟ್ಟಿಗೆ ಗೀತಿಕೆಯ ಮೊದಲ ಉಲ್ಲೇಖ ಹಾಗೂ ಹಲವಾರು ಗೀತಿಕೆಗಳು ದೊರೆತಿರುವುದು ಕವಿರಾಜಮಾರ್ಗದಲ್ಲಿ. ಚತ್ತಾಣವೆಂಬ ಕಾವ್ಯ ಪ್ರಭೇದದ ಸ್ವರೂಪವನ್ನು ತಿಳಿಸುವಾಗ, ಕವಿರಾಜಮಾರ್ಗಕಾರ ಇದನ್ನು ಹೆಸರಿಸಿದ್ದಾನೆ. ಈ ಗ್ರಂಥಕ್ಕೂ ಪೂರ್ವದ ಶಾಸನಗಳಲ್ಲಿಯಾಗಲಿ ನಾಗವರ್ಮ ಛಂದೋಂಬುಧಿಯಲ್ಲಿ ಕೊಟ್ಟಿರುವ ಲಕ್ಷ್ಯ-ಲಕ್ಷಣ ಪದ್ಯವನ್ನೂ ಬಿಟ್ಟು ಉಳಿದ ಯಾವ ಪ್ರಾಚೀನ ಕಾವ್ಯದಲ್ಲಿಯಾಗಲಿ ಗೀತಿಕೆ ಕಂಡುಬರುವುದಿಲ್ಲ. ಚಂದ್ರರಾಜನ ಮದನತಿಲಕದಲ್ಲಿ ಒಂದೇ ಪದ್ಯದಲ್ಲಿ ಹಲವು ಛಂದೋಬಂಧಗಳು ಹೆಣೆದುಕೊಳ್ಳುವಂಥ' ಚಮತ್ಕಾರದ ಪದ್ಯರಚನೆಗಳಿವೆ. ಮಯೂರಕ್ರೀಡೆ ಎಂಬ ಇಂಥ ಒಂದು ಪದ್ಯದಲ್ಲಿ 'ಎರಡು ಕಂದಮುಂ ದ್ವಿಪದಿಕೆಯುಂ ಗೀತಿಕೆಯುಮೈದುವಕ್ಕರಮುಮುಕ್ಕುಂ' ಎಂದು ಹೇಳಿದ್ದಾನೆ. ಗೀತಿಕೆಯ ಲಕ್ಷಣವನ್ನು ಅನುಲಕ್ಷಿಸಿ ಈ ಮಯೂರಕ್ರೀಡೆಯಿಂದ ಗೀತಿಕೆಯನ್ನು ಹೊರಡಿಸಬಹುದೇ ಹೊರತು ಇದನ್ನೇ ಗೀತಿಕೆಯೆಂದು ಪರಿಗಣಿಸ ಲಾಗುವುದಿಲ್ಲ. ಸಂಸ್ಕೃತದ ಗೀತಿ, ಉದ್ಗೀತಿ ಮುಂತಾದ ಮಾತ್ರಾ ಛಂದಸ್ಸಿನ ವೃತ್ತಗಳಿಗೂ ಇದಕ್ಕೂ ನಾಮ ಸಾದೃಶ್ಯವೊಂದನ್ನು ಬಿಟ್ಟರೆ ಬೇರೆ ಯಾವ ಸಂಬಂಧವೂ ಇಲ್ಲ. (ಎಂ.ವಿ.ಎಸ್.)

**ಉತ್ಸಾಹ :** ನಾಗವರ್ಮನ ಪ್ರಕಾರ ಇದರ ಸಾಮಾನ್ಯ ಲಕ್ಷಣ 4 ಪಾದಗಳು, ಪ್ರತಿ ಪಾದದಲ್ಲಿ 7 ಬ್ರ + 1 ಗುರು. ಕೊನೆಯ ಗುರು ಲಯಗ್ರಾಹಿಯಾಗಿ ಮುನ್ನಡೆಯುತ್ತದೆ. ಪದ್ಯದಲ್ಲಿ ಎದ್ದು ತೋರುವ ಮಾತ್ರಾಲಯದ ಧಾಟಿಯೇ ಕಂಡುಬರುವುದರಿಂದ, ಅಕ್ಕರಿಕೆ, ಮದನವತಿಗಳ ಹಾಗೆಯೇ ಇದೂ ಮಾತ್ರಾವೃತ್ತವಾಗಿ ಪರಿಣಮಿಸಿದೆ ಎಂದು ಹೇಳಬಹುದು. ಉತ್ಸಾಹಪೂರ್ಣವಾದ ಲಯಗತಿಗೆ ಅನುಸಾರವಾಗಿ ವೃತ್ತದ ಹೆಸರು ಉತ್ಸಾಹ ಎಂದಿರುವುದು ಉಚಿತವೇ ಆಗಿದೆ. ಜಯಕೀರ್ತಿ ಈ ಪದ್ಯಜಾತಿಯನ್ನು ಮಿಶ್ರಾಧಿಕಾರದಲ್ಲಿ ಸೇರಿಸಿ ಮಾತ್ರಾವೃತ್ತವೆನ್ನುವಂತೆ ಹೀಗೆ ಲಕ್ಷಣವನ್ನು ಹೇಳಿದ್ದಾನೆ: 7 ಗುರುಲಘುಗಳ ಜೋಡಿ + 1 ಗುರು. ಯಾವುದೇ ಗುರು ಲಘುವಿನ ಜೋಡಿಯ ಸ್ಥಾನದಲ್ಲಿ ನಗಣ (UUU) ಕೂಡ ಬರಬಹುದು. ನಾಗವರ್ಮನ ಲಕ್ಷಣಪದ್ಯದಲ್ಲಿಯ ಮಾತ್ರಾಗತಿಯನ್ನು ನೋಡಿಯೇ ಜಯಕೀರ್ತಿ ಹೀಗೆ ಮಾತ್ರಾವೃತ್ತವನ್ನಾಗಿ ಹೇಳಿದ್ದಾನೆಂದು ಊಹಿಸಬಹುದು. ಪಂಪಭಾರತ (12-13), ಜಗನ್ನಾಥ'ವಿಜಯ, ಚಂದ್ರಪ್ರಭಪುರಾಣ (13-72, 75), ಕಬ್ಬಿಗರ ಕಾವ (ಪ-171), ಹರಿವಂಶಾಭ್ಯುದಯ (11-37), ಅನಂತನಾಥಪುರಾಣ (5-70)- ಮೊದಲಾದ ಕಾವ್ಯಗಳಲ್ಲಿ ಇದು ಬಳಕೆಯಾಗಿದೆ.

ಪಂಪಭಾರತದಿಂದ ಒಂದು ಸಾಲು:

ಎಚ್ಚ | ಡಸುರ | ನಿಟ್ಟ | ಬೆಟ್ಟ | ನೊಂದು | ವಜ್ರ | ಶರದಿ | ನಾ

ಜಯಸಿಂಹನ ತಲಂಗೆರೆ ಶಾಸನದಲ್ಲಿಯೂ (ಸು.10ನೆಯ ಶ.) ಒಂದು ನಿದರ್ಶನವಿದೆ. ಅದರ ಒಂದು ಸಾಲು:

ಊರ | ಕಡೆಯ | ತೊಱೆಯ | ತಡಿಯ | ಕಱಿಯ | ಕಲ್ಲ | ಮೋಱ | ದಿಮ್
(ಎಇ., 29 - ಪು. 205-6)

(ಈ ಪದ್ಯದ 2ನೆಯ ಪಾದದ 1ನೆಯ ಗಣ ವಿಷ್ಣುಗಣವಾಗಿದೆ.) (ಟಿ.ವಿ.ವಿ.)

**ಷಟ್ಪದಿ :** ಅಚ್ಚಕನ್ನಡ ಛಂದಸ್ಸಿನ ಮಟ್ಟುಗಳಲ್ಲಿ ತ್ರಿಪದಿಯಂತೆಯೇ ಗಮನಾರ್ಹವಾದ ಒಂದು ಮಟ್ಟು. ಮೊದಲಲ್ಲಿ ಅಂಶಗಣಗಳಿಂದ ಕಟ್ಟಿದ ಒಂದು ಬಗೆಯ ಷಟ್ಪದಿ ಕಾಣಿಸಿಕೊಂಡಿತು. ಅನಂತರದಲ್ಲಿ ಸು.12-13ನೆಯ ಶತಮಾನದಿಂದೀಚೆಗೆ ಮಾತ್ರಾ ಗಣಗಳಿಂದ ಕಟ್ಟಿದ ಆರು ಬಗೆಯ ಷಟ್ಪದಿಗಳು ಮುಖ್ಯವಾಗಿ ಕಾಣಿಸಿಕೊಂಡು ಪ್ರಬಲಿಸಿ ಪ್ರಸಿದ್ಧಿಗೆ ಬಂದುವು. ಆಗ ಮೊದಲನೆಯದು ಬಲು ಮಟ್ಟಿಗೆ ಕಣ್ಮರೆಯಾಯಿತು. ಷಟ್ಪದಿ ಸಾಹಿತ್ಯದ ಇತಿಹಾಸವನ್ನು ಪರಿಶೀಲಿಸಿದರೆ ಇದು ತಿಳಿಯುತ್ತದೆ.

**ಅಂಶಗಣಾತ್ಮಕ ಷಟ್ಪದಿ :** ನಾಗವರ್ಮ, ಜಯಕೀರ್ತಿ, 3ನೆಯ ಸೋಮೇಶ್ವರ, ಶಾರ್ಙ್ಗದೇವ ಈ ನಾಲ್ವರೂ ಇದರ ಲಕ್ಷಣವನ್ನು ಸಮಾನವಾಗಿ ಹೇಳಿದ್ದಾರೆ. ಲಕ್ಷಣ ಲಕ್ಷ್ಯಗಳನ್ನು ಸಮನ್ವಯಿಸಿಕೊಂಡು ಸಾಮಾನ್ಯ ಲಕ್ಷಣವನ್ನು ಹೀಗೆ ಹೇಳಬಹುದು. 3-3 ಪಾದಗಳ 2 ಸಮಾರ್ಧಗಳನ್ನುಳ 6 ಪಾದಗಳು. ಪೂರ್ವಾರ್ಧದಲ್ಲಿ 1, 2 ಮತ್ತು 3 ನೆಯ ಪಾದಗಳಲ್ಲಿ ಕ್ರಮವಾಗಿ 2ವಿ, 2ವಿ ಮತ್ತು 2ವಿ + 1ರು ಹೀಗೆ 7 ಗಣಗಳು (ವಿ+ವಿ+ವಿ+ವಿ+ವಿ+ವಿ+ರು) ಉತ್ತರಾರ್ಧದಲ್ಲಿಯೂ ಹೀಗೆಯೇ. ವಿಷ್ಣು ಮತ್ತು ರುದ್ರಗಣಗಳ ಸ್ಥಾನಗಳಲ್ಲಿ ವಿರಳವಾಗಿ ಪರ್ಯಾಯ ಗಣಗಳು ಬರುವುದುಂಟು.

ಸೋಮೇಶ್ವರನ ಮಾನಸೋಲ್ಲಾಸದಲ್ಲಿ ಈ ಷಟ್ಪದಿ ಕನ್ನಡ ಭಾಷೆಗೆ ಸೇರಿದ್ದೆಂದೂ ಆ ಭಾಷೆಯಲ್ಲಿ ಅದು ಹಾಡತಕ್ಕದ್ದೆಂದೂ ಕಥೆ'ಯನ್ನು ಅದು ಒಳಗೊಂಡಿರುತ್ತದೆಂದೂ ಮುಂತಾಗಿ ಕೆಲವು ಸಂಗತಿಗಳನ್ನು ಹೇಳಿದೆ. ಸು.12ನೆಯ ಶತಮಾನದ ಆದಿಭಾಗದಲ್ಲಿಯೇ (1126-39) ಷಟ್ಪದಿನಿಬದ್ಧವಾದ ಕಾವ್ಯಗಳು ಹುಟ್ಟಿದ್ದವೆಂದು ತಿಳಿಯುವುದಕ್ಕೆ ಈ ಗ್ರಂಥದಲ್ಲಿ ಕೆಲವು ಸೂಚನೆಗಳಿವೆ. ಆದರೆ ಅಂಥ ಕಾವ್ಯಗಳಾವುವೂ ದೊರೆತಿಲ್ಲ. ಇಂಥ' ಷಟ್ಪದಿಗಳು ಈವರೆಗೆ ಕೆಲವೇ ದೊರೆತಿವೆ. ಚಂದ್ರರಾಜನ ಮದನತಿಲಕ (ಸು.1025) ಶಾಂತಿನಾಥನ ಸುಕುಮಾರಚರಿತೆ (ಸು.1068) ಇವುಗಳಲ್ಲಿ ಒಂದೊಂದು, ಮಾನಸೋಲ್ಲಾಸದಲ್ಲಿಯ ಲಕ್ಷ್ಯಪದ್ಯವೊಂದು ಈ ಮೂರನ್ನು ಬಿಟ್ಟರೆ ಉಳಿದವೆಲ್ಲ ಶಾಸನಗಳಲ್ಲಿ ಕಾಣಿಸಿಕೊಂಡಿರತಕ್ಕವಾಗಿವೆ. ಅವು ಚಿತ್ರದುರ್ಗದ 47ನೆಯ ಶಾಸನ (1067). ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಚಡಚಣದ ಶಾಸನ (1067) ಅಮ್ಮಿನಭಾವಿಯ ಶಾಸನ (1071) ಮತ್ತು ಮೆಹಬೂಬ್‌ನಗರ ಜಿಲ್ಲೆಯ ಗಂಗಾಪುರದ ಶಾಸನ (ಸು.1,100-40) -ಇವಗಳಲ್ಲಿ ಕಂಡುಬಂದಿರತಕ್ಕವು.

ನಿದರ್ಶನಕ್ಕೆ:

ಅದು ಪರ | ಮಾಸ್ಪದ
ಮದು ಪುಣ್ಯ | ಸಂಪದ
ಮದು ಮಹಾ | ಭ್ಯುದಯ ವಿ | ಲಾಸಾವಾಸಂ
ಸುಕುಮಾರಚರಿತೆ- (12-51)

**ಮಾತ್ರಾಗಣಾತ್ಮಕ ಷಟ್ಪದಿಗಳು :** ಇವು ಶರ, ಕುಸುಮ, ಭೋಗ, ಭಾಮಿನೀ, ಪರಿವರ್ಧಿನಿ ಮತ್ತು ವಾರ್ಧಕ- ಎಂಬುದಾಗಿ ಆರು ಬಗೆ. ಇವುಗಳ ಜೊತೆಗೆ ಉದ್ದಂಡ ಎಂಬೊಂದು ಬಗೆ ಕೂಡ ಉಂಟು. ಮೊದಲು ಅಂಶ ಷಟ್ಪದಿಗೆ ಸಮೀಪವಾದ ಶರಕುಸುಮ ಷಟ್ಪದಿಗಳೂ ಆಮೇಲೆ ಷಟ್ಪದಿಯ ಮೂಲ ಚೌಕಟ್ಟಿಗೆ ಹೊಂದುವಂತೆ 2-2 ಮಾತ್ರೆಗಳ ಪ್ರಮಾಣವನ್ನು ವರ್ಧಿಸುವುದರ ಮೂಲಕವಾಗಿ ಭೋಗದಿಂದ ವಾರ್ಧಕದ ವರೆಗೆ ಉಳಿದ ಪ್ರಭೇದಗಳೂ ಹುಟ್ಟಿಕೊಂಡಿರಬೇಕೆಂದು ತೋರುತ್ತದೆ. ಇನ್ನು ಉದ್ದಂಡ ಎಂಬುದು ಒಟ್ಟಿನಲ್ಲಿ ವಾರ್ಧಕವನ್ನೇ ಹೋಲುವ

ಒಂದು ಬಗೆ. ಈ ಎಲ್ಲ ಬಗೆಗಳಲ್ಲಿಯೂ ಸ್ವತಂತ್ರವಾಗಿ ಕೃತಿರಚನೆಯಾಗಿದೆ. ರಾಘವಾಂಕ, ಚಾಮರಸ, ಕುಮಾರವ್ಯಾಸ, ಲಕ್ಷ್ಮೀಶ, ಮುಂತಾದವರು ಷಟ್ಪದಿಗಳಲ್ಲಿ ರಚಿಸಿರುವ ಕಾವ್ಯಗಳು ಪ್ರಸಿದ್ಧವಾಗಿವೆ. ಇವುಗಳ ಸಾಮಾನ್ಯ ಲಕ್ಷಣ:

**(I) ಶರಷಟ್ಪದಿ :** ಪೂರ್ವಾರ್ಧದಲ್ಲಿ 1, 2 ಮತ್ತು 3ನೆಯ ಪಾದಗಳಲ್ಲಿ ಕ್ರಮವಾಗಿ ಚತುರ್ಮಾತ್ರಾಗಣಗಳು 2, 2 ಮತ್ತು 3+1 ಗುರು ಉತ್ತರಾರ್ಧದಲ್ಲಿಯೂ ಹೀಗೆಯೇ

ಈಶನ | ಕರುಣೆಯ
ನಾಶಿಸು | ವಿನಯದಿ
ದಾಸನ | ಹಾಗೆಯೆ | ನೀ ಮನ | ವೇ (ಪದ್ಯಸಾರ)

**(II) ಕುಸುಮ ಷಟ್ಪದಿ :** ಪೂರ್ವಾರ್ಧದಲ್ಲಿ 1, 2 ಮತ್ತು 3 ನೆಯ ಪಾದಗಳಲ್ಲಿ ಕ್ರಮವಾಗಿ ಪಂಚಮಾತ್ರಾ ಗಣಗಳು 2, 2 ಮತ್ತು 3+1 ಗುರು ಉತ್ತರಾರ್ಧದಲ್ಲಿಯೂ ಹೀಗೆಯೇ

ನಿದರ್ಶನಕ್ಕೆ ಪೂರ್ವಾರ್ಧ

ನಾಡು ಮನ | ಸಿಜನೊಲವಿ
ನಾಡುವೆಡೆ | ಸಂತತಂ
ಬೀಡು ರತಿ | ಪತಿಗೆ ಸತ | ತ ನಿಧಾನ | ವು
(ಕುಮುದೇಂದು ರಾಮಾಯಣ)

**(III) ಭೋಗ ಷಟ್ಪದಿ :** ಪೂರ್ವಾರ್ಧದಲ್ಲಿ 1, 2 ಮತ್ತು 3 ನೆಯ ಪಾದಗಳಲ್ಲಿ ಕ್ರಮವಾಗಿ ತ್ರಿಮಾತ್ರಾಗಣಗಳು 4, 4 ಮತ್ತು 6 + 1 ಗುರು ಉತ್ತರಾರ್ಧದಲ್ಲಿಯೂ ಹೀಗೆಯೇ

ನಿದರ್ಶನಕ್ಕೆ ಪೂರ್ವಾರ್ಧ

ಮೆಚೆಯು | ತಿದ್ದ | ಭಾಗ್ಯ | ವೆಲ್ಲ
ಹಚಿದು | ಹೋಯಿ | ತೆನುತ | ತಿರುಕ
ಮರಳಿ | ನಾಚಿ | ಪೋಗು | ತಿದ್ದ | ಮರುಳ | ನಂತೆ | ಯೇ
(ಮುಪ್ಪಿನ ಷಡಕ್ಷರಿ)

**(IV) ಭಾಮಿನೀ ಷಟ್ಪದಿ :** ಪೂರ್ವಾರ್ಧದಲ್ಲಿ 1, 2 ಮತ್ತು 3ನೆಯ ಪಾದಗಳಲ್ಲಿ ಕ್ರಮವಾಗಿ 3, 4ರ ಹಾಗೆ ಬರುವ ಗಣಗಳು 2, 2 ಮತ್ತು 3 + 1 ಗುರು ಉತ್ತರಾರ್ಧದಲ್ಲಿಯೂ ಹೀಗೆಯೇ

ನಿದರ್ಶನಕ್ಕೆ ಕುಮಾರವ್ಯಾಸ ಭಾರತದ ಒಂದು ಪದ್ಯದ ಪೂರ್ವಾರ್ಧ

ವೀರ | ನಾರಾ | ಯಣನೆ | ಕವಿ ಲಿಪಿ
ಕಾರ | ಕುವರ | ವ್ಯಾಸ | ಕೇಳುವ
ಸೂರಿ | ಗಳು ಸನ | ಕಾದಿ | ಗಳು ಜಂ | ಗಮ ಜ | ನಾರ್ಧನ | ರು

**(V) ಪರಿವರ್ಧಿನಿ ಷಟ್ಪದಿ :** ಪೂರ್ವಾರ್ಧದಲ್ಲಿ 1, 2 ಮತ್ತು 3 ನೆಯ ಪಾದಗಳಲ್ಲಿ ಕ್ರಮವಾಗಿ ಚತುರ್ಮಾತ್ರಾಗಣಗಳು 4, 4 ಮತ್ತು 6 + 1 ಗುರು ಉತ್ತರಾರ್ಧದಲ್ಲಿಯೂ ಹೀಗೆಯೇ

ನಿದರ್ಶನಕ್ಕೆ ಪೂರ್ವಾರ್ಧ:

ದುರಿತ ವ | ನಂ ಬೆಳೆ | ವುದೆ ಪೊ | ಲಂ ಕೊಲೆ
ಪರ ಕಲಿ | ಸಿದ ನವ | ದೋಹಳ | ಮ ನೃತಂ
ಪರಿಕಾ | ಲುದಕಮೆ | ದಕೆ ಕಳ | ವನ್ಯ | ಸ್ತ್ರೀ ಸಂ | ಗಮೆ | ಗೆ | ಯ್ಮೆ
(ಜಯನೃಪಕಾವ್ಯ)
(ಟಿ.ವಿ.ವಿ., ಡಿ.ಎಸ್.ಕೆ.)

**(VI) ವಾರ್ಧಕ ಷಟ್ಪದಿ :** ಷಟ್ಪದಿಗಳಲ್ಲಿ ಇದು ಅತ್ಯಂತ ದೊಡ್ಡದು. ಪೂರ್ವಾರ್ಧದಲ್ಲಿ 1, 2 ಮತ್ತು 3ನೆಯ ಪಾದಗಳಲ್ಲಿ ಕ್ರಮವಾಗಿ ಪಂಚ ಮಾತ್ರಾ ಗಣಗಳು, 4, 4 ಮತ್ತು 6+1 ಗುರು. ಉತ್ತರಾರ್ಧದಲ್ಲಿಯೂ ಹೀಗೆಯೇ. ಆದರೆ ಇದರಲ್ಲಿ ⏑–⏑⏑ ⏑– ಎಂಬ ಗಣಗಳು ಬರಕೂಡದು. ಲಲಿತ ರಗಳೆಯೇ ವಾರ್ಧಕ ಷಟ್ಪದಿಯ ಆವಿರ್ಭಾವಕ್ಕೆ ಮೂಲ ಎಂದು ಕೆಲವು ವಿದ್ವಾಂಸರ ಅಭಿಪ್ರಾಯ. ಈ ಷಟ್ಪದಿಯ ಕಿರಿಯ ಚರಣಗಳಲ್ಲಿ ಲಲಿತ ರಗಳೆಯ ಸಾಲಿನಷ್ಟೇ ಮಾತ್ರೆಗಳು ಮತ್ತು ಗಣಗಳಿರುವುದು ಈ ನಿಲುವನ್ನು ಸಮರ್ಥಿಸುತ್ತದೆ: ಕುಸುಮ ಷಟ್ಪದಿಯನ್ನು ದ್ವಿಗುಣಿಸಿಯೂ ವಾರ್ಧಕವನ್ನು ಹೊರಡಿಸಲು ಸಾಧ್ಯವಿದೆ. ಭಾವಗಳನ್ನೂ ಕಥೆಯನ್ನೂ ಸಮರ್ಥವಾಗಿ ನಿರೂಪಿಸಲು ಈ ಷಟ್ಪದಿಯ ಬಂಧ ಅತ್ಯಂತ ಅನುಕೂಲಕರವಾಗಿದೆ, ಲಯವೂ ಲಲಿತವಾಗಿದೆ. ನಡುಗನ್ನಡದಲ್ಲಿ ಕ್ಲಿಷ್ಟವಾದ ಚಂಪೂಮಾರ್ಗವನ್ನು ಬಿಟ್ಟು ವಾರ್ಧಕ ಷಟ್ಪದಿಯಲ್ಲಿ ಕಾವ್ಯ ರಚನೆಯಾಗಲು ಇದರಲ್ಲಿ ಕಂಡುಬರುವ ಲಾಲಿತ್ಯ ಮತ್ತು ಸೌಲಭ್ಯಗಳೆ ಮುಖ್ಯ ಕಾರಣ. ಈ ಛಂದಸ್ಸನ್ನು ಅಧಿಕವಾಗಿ ಬಳಸಿಕೊಂಡು ವೀರಶೈವ ಕವಿಗಳು ಕಾವ್ಯಗಳನ್ನು ರಚಿಸಿದ್ದಾರೆ. ಕವಿ ರಾಘವಾಂಕನ ಹರಿಶ್ಚಂದ್ರಕಾವ್ಯ ವಾರ್ಧಕ ಷಟ್ಪದಿಯ ಮೊದಲ ಗಣ್ಯಕೃತಿ. ವಿರೂಪಾಕ್ಷಪಂಡಿತನ ಚೆನ್ನಬಸವಪುರಾಣ, ಲಕ್ಷ್ಮೀಶನ ಜೈಮಿನಿಭಾರತ ಮೊದಲಾದ ಕಾವ್ಯಗಳು ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿವೆ. ಮಂಗರಸನ ಸಮ್ಯಕ್ತ್ವಕೌಮುದಿ, ತಿರುಮಲಭಟ್ಟನ ಶಿವಗೀತೆ ಮತ್ತು ಸಾಳ್ವ ಕವಿಯ ಭಾರತ ಈ ಕೃತಿಗಳಲ್ಲಿರುವ ಪದ್ಯಗಳು ವಾರ್ಧಕ ಷಟ್ಪದಿಯ ಲಕ್ಷಣಕ್ಕನುಗುಣವಾಗಿದ್ದರೂ ಈ ಕಾವ್ಯಗಳ ಪ್ರಾಚೀನ ಹಸ್ತಲಿಖಿತ ಪ್ರತಿಗಳಲ್ಲಿ ಇದನ್ನು ಉದ್ದಂಡ ಷಟ್ಪದಿ ಎಂಬ ಹೆಸರಿನಿಂದ ಕರೆದಿರುವುದನ್ನು ಗಮನಿಸಿದರೆ ಒಂದು ಕಾಲದಲ್ಲಿ ವಾರ್ಧಕಕ್ಕೆ ಉದ್ದಂಡ ಎಂಬ ಹೆಸರೂ ರೂಢಿಯಲ್ಲಿತ್ತೆಂದು ತೋರುತ್ತದೆ.

ನಿದರ್ಶನಕ್ಕೆ ಪೂರ್ವಾರ್ಧ:

ಶ್ರೀವಧುವಿ | ನಂಬಕ ಚ | ಕೋರಕಂ | ಪೊರೆಯೆ ಭ
ಕ್ತಾವಳಿಯ | ಹೃತ್ಕುಮುದ | ಕೋರಕಂ | ಬಿರಿಯೆ ಜಗ
ತೀ ವಳಯ | ದಮಲ ಸೌ | ಭಾಗ್ಯ ರ | ತ್ನಾಕರಂ |
ಪೆರ್ಚೆನಿಂ | ಮೇರೆವರಿ | ಯೇ
(ಜೈಮಿನಿ ಭಾರತ)
(ಎಸ್.ಎನ್.ಕೆ.)

**(VII) ಉದ್ದಂಡ ಷಟ್ಪದಿ :** ಪೂರ್ವಾರ್ಧದಲ್ಲಿ 1, 2 ಮತ್ತು 3ನೆಯ ಪಾದಗಳಲ್ಲಿ ಕ್ರಮವಾಗಿ ಚತುರ್ಮಾತ್ರಾಗಣಗಳು 5, 5 ಮತ್ತು 8 ಉತ್ತರಾರ್ಧದಲ್ಲಿಯೂ ಹೀಗೆಯೇ

ನಿದರ್ಶನಕ್ಕೆ ಪೂರ್ವಾರ್ಧ:

ಪರಿಕಿಪ್ಪೊ | ಡೀಕೃತಿ | ಗಾವುದು | ಮೊದಲೆನೆ | ಹಳಚುವ
ತೆರೆಯೊಳು | ತಿರುಗುವ | ಕರಿಮಕ | ರಂಗಳ | ಪುಚ್ಛೋ
ತ್ಕರಹತಿ | ಯಿಂ ಚೆ | ಲ್ಲಿದ ಮಣಿ | ಗಳ ಬೆಳೆ |
ಗಿಂ ಶ್ವೇ | ತ ದ್ವೀ | ಪವನಣ | ಕಿಸುತ

ಈ ಮೇಲೆ ವಿವರಿಸಿದ ಷಟ್ಪದಿ ಭೇದಗಳಲ್ಲಿ ಗಮನಿಸತಕ್ಕ ಕೆಲವು ಸಾಮಾನ್ಯ ಸಂಗತಿಗಳೆಂದರೆ ಆದಿ ಪ್ರಾಸವಿರತಕ್ಕದ್ದು; ⏑ – ಎಂಬ ರೀತಿಯ ಗಣ ಬರತಕ್ಕದ್ದಲ್ಲ 3-6ನೆಯ ಪಾದಾಂತ್ಯದಲ್ಲಿ ಲಘುವಿದ್ದಾಗ ಎಣಿಕೆಗೆ ಗುರುವೆಂದಿಟ್ಟುಕೊಳ್ಳಬೇಕು - ಎಂಬುವು.

**ಸಾಂಗತ್ಯ :** ಅಚ್ಚಕನ್ನಡ ಛಂದಸ್ಸಿನ ಚರಿತ್ರೆಯಲ್ಲಿ ಸು.14-15ನೆಯ ಶತಮಾನಗಳಲ್ಲಿ ರೂಪುಗೊಂಡ ಮಟ್ಟು. ಅಲ್ಲಿಂದೀಚೆಗೆ ಕನ್ನಡ ಕವಿಗಳು ಈ ಛಂದಸ್ಸಿನಲ್ಲಿ ವಿಪುಲವಾಗಿ ಕೃತಿರಚನೆ ಮಾಡಿದ್ದಾರೆ. ರತ್ನಾಕರವರ್ಣಿ, ನಂಜುಂಡ ಕವಿ ಮೊದಲಾದವರು ರಚಿಸಿರುವ ಪ್ರಸಿದ್ಧ ಕಾವ್ಯಗಳು ಈ ಛಂದಸ್ಸಿನಲ್ಲಿವೆ. ಇದರ ಬೆಳವಣಿಗೆಯಲ್ಲಿ ಎರಡು ಮುಖ್ಯವಾದ ಘಟ್ಟಗಳಿವೆ. ಸು.1410ರಲ್ಲಿದ್ದ ದೇಪರಾಜನ ಸೊಬಗಿನ ಸೋನೆ ಮತ್ತು ಈಚೆಗೆ ಸೊಬಗಿನ ಸೋನೆ ಎಂಬ ಮಾತಿನ ಜೊತೆಗೆ ಸೇರಿಕೊಂಡು ಬಂದಿರುವ ತತ್ತ್ವದ ಸೊಬಗಿನ ಸೋನೆ, ಮದನಮೋಹಿನಿ ಕಥೆ, ಸೊಬಗಿನ ಸೋನೆ ವರ್ಣ ಇಂಥ ಕೆಲವು ಕೃತಿಗಳಲ್ಲಿ ತೋರುವ ಲಕ್ಷಣ ಒಂದು ರೀತಿಯಾಗಿಯೂ ರತ್ನಾಕರವರ್ಣಿಯ ಭರತೇಶವೈಭವ, ಹೊನ್ನಮ್ಮನ ಹದಿಬದೆಯ ಧರ್ಮ ಇಂಥ ಕೃತಿಗಳಲ್ಲಿ ತೋರುವ ಲಕ್ಷಣ ಇನ್ನೊಂದು ರೀತಿಯಾಗಿಯೂ ಇದೆ. ಸೊಬಗಿನ ಸೋನೆಯ

ಧಾಟಿಯ ಛಂದಸ್ಸನ್ನು ಸಾಮಾನ್ಯವಾಗಿ ಸಾಂಗತ್ಯವೆಂದೇ ತಿಳಿಯಲಾಗಿದೆ. ಆದರೆ ಇದನ್ನು ಸೊಬಗಿನ ಸೋನೆಯ ಛಂದಸ್ಸು (ವರ್ಣ) ಎಂದು ಪ್ರತ್ಯೇಕವಾಗಿಯೂ ಕರೆದಿರುವುದುಂಟು. ಐತಿಹಾಸಿಕವಾಗಿ ನೋಡಿದರೆ ಇದು ಸಾಂಗತ್ಯದ ಮೊದಲ ರೂಪವೆಂದೂ ಮುಂದೆ ಇದರಲ್ಲಿ ಮಾರ್ಪಾಟು ತಲೆದೋರಿ ನಿಷ್ಕೃಷ್ಟ ರೂಪಕ್ಕೆ ಬಂದು ಸಾಂಗತ್ಯವಾಗಿರಬಹುದೆಂದೂ ಊಹಿಸಬಹುದು.

**ಸೊಬಗಿನ ಸೋನೆಯ ಛಂದಸ್ಸಿನ ಸಾಮಾನ್ಯ ಲಕ್ಷಣ :** ಎರಡು ಸಮಾರ್ಧಗಳನ್ನುಳ್ಳ 4 ಪಾದಗಳು. ಪೂರ್ವಾರ್ಧದ 1, 2ನೆಯ ಪಾದಗಳಲ್ಲಿ ಕ್ರಮವಾಗಿ 4 ಮತ್ತು 3 ವಿಷ್ಣುಗಣಗಳು; ಉತ್ತರಾರ್ಧದಲ್ಲಿಯೂ ಹೀಗೆಯೇ, ವಿಷ್ಣುಗಣಗಳಿಗೆ ಪರ್ಯಾಯವಾಗಿ ಬ್ರಹ್ಮವೋ ರುದ್ರವೋ ಬರಬಹುದು.

ನಿದರ್ಶನಕ್ಕೆ ಪೂರ್ವಾರ್ಧ:

ಎಲೆ ಪ್ರಿಯೆ | ಕೇಳು ತೊ | ಳೆದ ಮುತ್ತು | ಕರತಳಾ
ಮಳಕವೀ | ಕಥೆ ಸೊಬ | ಗಿನ | ಸೋನೆ
(ಸೊಬಗಿನ ಸೋನೆ 1-21)

**ಸಾಂಗತ್ಯ ಛಂದಸ್ಸಿನ ಸಾಮಾನ್ಯ ಲಕ್ಷಣ :** ಎರಡು ಸಮಾರ್ಧಗಳನ್ನುಳ್ಳ 4 ಪಾದಗಳು. ಪೂರ್ವಾರ್ಧದ 1, 2ನೆಯ ಪಾದಗಳಲ್ಲಿ ಕ್ರಮವಾಗಿ 4ವಿ ಮತ್ತು 2 ವಿ+1 ಬ್ರ; ಉತ್ತರಾರ್ಧದಲ್ಲಿಯೂ ಹೀಗೆಯೇ ಆದರೆ ವಿಷ್ಣು ಮತ್ತು ಬ್ರಹ್ಮಗಳ ಸ್ಥಾನದಲ್ಲಿ ಪರ್ಯಾಯ ಗಣಗಳು ಬರಬಹುದು.

ನಿದರ್ಶನಕ್ಕೆ ಪೂರ್ವಾರ್ಧ

ಪರಮ ಪ | ರಂಜ್ಯೋತಿ | ಕೋಟಿ ಚಂ | ದ್ರಾದಿತ್ಯ
ಕಿರಣ ಸು | ಜ್ಞಾನ ಪ್ರ | ಕಾಶ
(ಭರತೇಶವೈಭವ)

ಪಿರಿಯಕ್ಕರ, ಗೀತಿಕೆ, ತ್ರಿಪದಿ, ಏಳೆ ಈ ಅಂಶವೃತ್ತಗಳಲ್ಲಿ ಯಾವುದಾದರೊಂದರ ಮೂಲಕವಾಗಿ ಸಾಂಗತ್ಯ ಹುಟ್ಟಿರಬೇಕೆಂದು ವಿದ್ವಾಂಸರು ವಿಚಾರ ಮಾಡಿದ್ದಾರೆ. ಆದರೆ ವಾಸ್ತವವಾಗಿ ಯಾವುದೇ ಕನ್ನಡ ಛಂದಸ್ಸಿನ ಮೂಲದಿಂದ ಸಾಂಗತ್ಯದ ರೂಪಸಿದ್ಧಿಯನ್ನು ತೃಪ್ತಿಕರವಾಗಿ ಸಾಧಿಸುವುದು ಕಷ್ಟ. ಜನಪ್ರಿಯವಾದ ತ್ರಿಪದಿಯ ಧಾಟಿ ಅದರ ಆವಿರ್ಭಾವದಲ್ಲಿ ಕೆಲಮಟ್ಟಿಗೆ ಪ್ರೇರಣೆ ಕೊಟ್ಟಿರಬಹುದು. ಸೊಬಗಿನ ಸೋನೆಯ ಮಟ್ಟಿನಲ್ಲಿ ಪ್ರತಿಯರ್ಧದ ಕೊನೆಗೆ ಬರುವ ವಿಷ್ಣುಗಣ ಕಾಲಕ್ರಮದಲ್ಲಿ ಆಲಾಪದ ಆವಶ್ಯಕತೆಗಾಗಿ ಬ್ರಹ್ಮಗಣವಾಗಿ ಮಾರ್ಪಟ್ಟು ಸ್ಥಿರಗೊಂಡು ಸಾಂಗತ್ಯವಾಗಿರಬಹುದೇನೋ.

ಅಚ್ಚಕನ್ನಡ ಛಂದಸ್ಸಿನ ಮಟ್ಟುಗಳಲ್ಲಿ ಈ ಮೇಲೆ ವಿವರಿಸಿದ ಪ್ರಸಿದ್ಧವೂ ಲಾಕ್ಷಣಿಕೋಕ್ತವೂ ಆದ ಕೆಲವು ಮಟ್ಟುಗಳು ಮಾತ್ರವಲ್ಲದೆ, ಜನಪದ ಸಾಹಿತ್ಯ ಹಾಗೂ ಯಕ್ಷಗಾನಾದಿಗಳಲ್ಲಿ ಇನ್ನೂ ಕೆಲವು ಮಟ್ಟುಗಳು ತ್ಯಾಗಮಾನ, ಯಾಲಪದ ಮೊದಲಾದ ಹೆಸರಿನಲ್ಲಿ ಕಂಡುಬರುತ್ತವೆ. ಇವುಗಳಲ್ಲಿ ಕೆಲವು ಅಂಶಗಣಗಳ ಕಟ್ಟಿನಲ್ಲಿ ನಡೆದರೆ, ಇನ್ನು ಕೆಲವು ಮಾತ್ರಾಗಣಗಳ ಕಟ್ಟಿನಲ್ಲಿವೆ. (ಟಿ.ವಿ.ವಿ.,ಡಿ.ಎಸ್.ಕೆ.)

**ತ್ಯಾಗಮಾನ :** ಅಂಶಗಣಗಳ ರಚನೆಯುಳ್ಳ ಒಂದು ಬಗೆಯ ಚೌಪದಿ. ಇದರ ರಚನೆ ಹೆಚ್ಚಾಗಿ ಯಕ್ಷಗಾನ ಕೃತಿಗಳಲ್ಲಿ ಕಂಡುಬರುತ್ತದೆ. ಏಕತಾಳ ಹಾಗೂ ತಿತ್ತಿತ್ತೈ ತಾಳಗಳ ಗತಿಗೆ ಒಡಂಬಡುವ ಈ ಪದ್ಯರೂಪಕ್ಕೆ ಇತ್ತೀಚಿನ ಯಕ್ಷಗಾನ ಕೃತಿಗಳಲ್ಲಿ ಕಾಂಭೋಜಿ, ಏಕತಾಳ ದೇಶಿ ಏಕತಾಳ ಅಥವಾ ತೋಡಿ ಅಷ್ಟತಾಳ ಎಂದು ಕರೆಯಲಾಗಿದೆ. ಇದು ಕೆಲವು ಕಡೆ ಎರಡೇ ಪಾದಗಳ ಪದ್ಯವಾಗಿರುವುದೂ ಉಂಟು. ಇದರ ಪ್ರತಿಯೊಂದು ಪಾದದಲ್ಲಿ ಮೂರು ರುದ್ರಗಣಗಳು, ಕೊನೆಯ ಗಣದ ಸಾಹಿತ್ಯ ಎರಡೆರಡು ಪಾದಗಳಲ್ಲಿ ಅಥವಾ ನಾಲ್ಕು ಪಾದಗಳಲ್ಲಿ ಪುನರುಕ್ತಿಗೊಳ್ಳುತ್ತದೆ. ಒಂದನೆಯ ಮತ್ತು ಮೂರನೆಯ ಪಾದಾಂತ್ಯದಲ್ಲಿ ಒಂದು ಬಗೆಯ ಬ್ರಹ್ಮಗಣ ಅದರ ಮುಂದಿನ ಪಾದಕ್ಕೆ ಪೋಷಕವಾಗಿ ಬರುತ್ತದೆ. ಈ ಅಂಶಗಣ ಕೆಲವೆಡೆ ಮಾತ್ರಾಗಣಕ್ಕೆ ತಿರುಗಿದುದೂ ಉಂಟು. ನಿದರ್ಶನಕ್ಕಾಗಿ ಒಂದು ಪದ್ಯ.

ನೋಡು ಮುಂದೆ | ಕಾಣುತಿದೆ ಎಲೊ | ಪಾರ್ಥ | ನಿಲ್ಲ
ದೋಡುತಿಹುದು | ಸೇನೆಯದಕೊ | ಎಲೊ ಪಾರ್ಥ
ರೂಢಿಪತಿಯ | ಸ್ಪಂದನವು | ಪೋಪುದು ಮುಂದೆ ಅದರ
ಕೂಡೆ ಮಾದ್ರೀಸುತರ ರಥವಿಹುದು ಹಿಂದೆ

ಯಕ್ಷಗಾನ ಸಾಹಿತ್ಯ ಸಂಗ್ರಹ ಸಮಗ್ರವಾಗಿ ನಡೆದು, ಅವುಗಳ ಛಂದಸ್ಸಿನ ಶಾಸ್ತ್ರೀಯ ಸಮಾಲೋಚನೆ ಇನ್ನೂ ನಡೆಯಬೇಕಾಗಿದೆ. (ಟಿ.ಕೆ.ಬಿ)

**ಹೊಸಗನ್ನಡ ಛಂದಸ್ಸು :** ಕನ್ನಡದಲ್ಲಿ ಛಂದಸ್ಸು ನಡೆದು ಬಂದ ದಾರಿಯನ್ನು ಗುರುತಿಸಲು ಹೊರಟರೆ 19ನೆಯ ಶತಮಾನದವರೆಗೆ ಅದು ಸಂಪ್ರದಾಯದ ಜಾಡಿನಲ್ಲಿಯೇ ನಡೆಯುತ್ತ ಆಗಾಗ ಹೊಸ ಹೊಸ ಪ್ರಯೋಗಗಳನ್ನು ನಡೆಸುತ್ತ, ಅವನ್ನು ಬೆಳೆಸುತ್ತ, ಬಲಿಸುತ್ತ, ಹಳೆಯದನ್ನು ಆವರ್ತಗೊಳಿಸುತ್ತ, ಕೆಲವನ್ನು ಬಿಡುತ್ತ ಬಂದುದು ಕಾಣುತ್ತದೆ. 20ನೆಯ ಶತಮಾನದಲ್ಲಿ ಕಾಲಿಡುತ್ತಿದ್ದಂತೆ ಕನ್ನಡ ಕವಿತ್ವದ ಮೇಲೆ ಇಂಗ್ಲಿಷ್ ಕವಿತ್ವದ ಪ್ರಭಾವ ಹೊಸದಾಗಿ ಬಿದ್ದು ಹಲವು ಹೊಸರೀತಿಯ ಪ್ರಯೋಗಗಳೂ ಹಳೆಯದರ ಹೊಸ ರೂಪಗಳೂ ಅನುವಾದಗಳ ಮತ್ತು ಸ್ವತಂತ್ರ ಕೃತಿಗಳ ಮೂಲಕ ನಡೆಯಲಾರಂಭಿಸಿದವು. ಭಾವದ ನಾನಾ ಸ್ಥಿತಿಗಳನ್ನು ಅವುಗಳ ಏರಿಳಿತಗಳಿಗೆ ತಕ್ಕಂತೆ ಸಮರ್ಥವಾಗಿ ಪ್ರತಿಬಿಂಬಿಸುವ ಬಗೆಬಗೆಯ ಧಾಟಿಗಳು ಹುಟ್ಟಿಕೊಂಡುವು. ಹೊಸಗನ್ನಡದ ಲಲಿತವಾದ ಮಾತುಗಾರಿಕೆಯನ್ನು ಬಳಸಿ, ವಿಶೇಷವಾಗಿ 3, 4 ಮತ್ತು 5 ಮಾತ್ರೆಗಳ ಗಣಗಳನ್ನು ಹೂಡಿ ನವೀನ ರೀತಿಯ ಚತುಷ್ಪದಿಗಳನ್ನೂ ಇತರ ಮಟ್ಟುಗಳನ್ನೂ ಕಟ್ಟುವುದು ರೂಢಿಗೆ ಬಂದಿತು. ತ್ರಿಪದಿ, ಷಟ್ಪದಿ, ಅಕ್ಕರ, ರಗಳೆ, ಸಾಂಗತ್ಯ ಮುಂತಾದ ಹಳೆಯ ಛಂದಸ್ಸುಗಳು ಹೊಸ ರೂಪದಲ್ಲಿ ಕಾಣಿಸಿಕೊಂಡುವು. ಇಂಗ್ಲಿಷಿನ ಸಾನೆಟ್, ಬ್ಲ್ಯಾಂಕ್‌ವರ್ಸ್, ಓಡ್ ಮುಂತಾದವು ಅಷ್ಟಷಟ್ಪದಿ, ಸರಳರಗಳೆ, ಪ್ರಗಾಥ ಮುಂತಾದ ಆವಿಷ್ಕಾರಗಳನ್ನು ಪಡೆದವು. ಬಿ.ಎಂ.ಶ್ರೀಕಂಠಯ್ಯನವರ ಇಂಗ್ಲಿಷ್ ಗೀತೆಗಳು, ಹಟ್ಟಿಯಂಗಡಿ ನಾರಾಯಣರಾಯರ ಆಂಗ್ಲಕವಿತಾಸಾರ, ಪಂಜೆ ಮಂಗೇಶರಾಯ ಮತ್ತು ಗೋವಿಂದ ಪೈ ಅವರ ಕವಿತೆಗಳು ಆರಂಭಕಾಲದ ಹೊಸ ಪ್ರಯೋಗಗಳನ್ನು ತೋರಿಸುತ್ತವೆ. ನುಡಿಗಳು, ಗಣಗಳು, ಪ್ರಾಸಯೋಜನೆ ಮೊದಲಾದವುಗಳಲ್ಲಿ ಸ್ವಯಂಚಾಲಿತವಾದ ಸ್ವಾತಂತ್ರ್ಯವಿದ್ದೂ ಕ್ರಮಬದ್ಧತೆಯೂ ಇವುಗಳಲ್ಲಿ ಕಾಣುತ್ತದೆ. ಮುಖ್ಯವಾಗಿ ಇವು ಮಾತ್ರಾವೃತ್ತಗಳು. ಆದರೆ ಔಚಿತ್ಯಕ್ಕೆ ತಕ್ಕಂತೆ ಮಾತ್ರೆಗಳ ಪ್ರಮಾಣವನ್ನು ಹಿಗ್ಗಿಸುವುದು ಕುಗ್ಗಿಸುವುದು ಪಾದಾಂತ್ಯದಲ್ಲಿ ಒಂದು ಅಕ್ಷರವನ್ನೋ (ಮುಡಿ) ಎರಡು ಅಥವಾ ಮೂರು ಅಕ್ಷರಗಳನ್ನೋ (ಪದ್ಮಗಣ) ನಿಲ್ಲಿಸುವುದು ಈ ಕೆಲವು ವೈಲಕ್ಷಣ್ಯಗಳು ಇಲ್ಲಿ ಕಾಣುತ್ತವೆ. ಇವುಗಳ ಬೇರುಗಳನ್ನು ಕೆಲಮಟ್ಟಿಗೆ ಹಳೆಯ ಛಂದಸ್ಸಿನಲ್ಲಿಯೇ ಗುರುತಿಸುವುದು ಸಾಧ್ಯ. ಹೀಗೆ ಸಂಪ್ರದಾಯ ಮತ್ತು ಪ್ರಗತಿ ಎರಡನ್ನೂ ಮೈಗೂಡಿಸಿಕೊಂಡು ಹೊಸಗನ್ನಡ ಛಂದಸ್ಸು ಮುನ್ನಡೆದಿದೆ.

ಈಗ ಸುಮಾರು ಎರಡು ದಶಕಗಳಿಂದ ಹೊಸಗನ್ನಡ ಛಂದಸ್ಸು ಎಲಿಯಟ್, ಡ್ರೈಡನ್ ಮೊದಲಾದ ಪಾಶ್ಚಾತ್ಯ ಕವಿಗಳ ಸ್ವಚ್ಛಂದ ಛಂದೋವಿಲಾಸದ ರೀತಿನೀತಿಗಳನ್ನು ರೂಢಿಸಿಕೊಂಡು ಇನ್ನೂ ಹೆಚ್ಚು ಹೆಚ್ಚಾಗಿ ಹೊಸ ರೂಪರೇಖೆಗಳನ್ನು ಪಡೆದುಕೊಳ್ಳುತ್ತಿದೆ. ಪಾದಸಂಖ್ಯೆ, ಲಯಗತಿ. ಗಣನಿಯಮ, ಪ್ರಾಸಯೋಜನೆ ಇವು ಮೊದಲಿಗಿಂತ ಹೆಚ್ಚು ಸಡಿಲಗೊಳ್ಳುತ್ತ ಬದಲಾಯಿಸುತ್ತ ಬಂದಿವೆ. ರಸದೃಷ್ಟಿಯನ್ನುಳ್ಳ, ಲಯನಿಷ್ಠೆಯನ್ನು ಬಯಸುವ, ಶ್ರುತಿಮಧುರವೂ ಭಾವಗಮ್ಯವೂ ಆದ ತಾಳಮಾನತೆ, ಗೇಯತೆಗಳಿಗಿಂತ, ಚಿಂತನ ದೃಷ್ಟಿಯನ್ನುಳ್ಳ ವಚೋನಿಷ್ಠೆಯನ್ನು ಬಯಸುವ ಬುದ್ಧಿಗಮ್ಯವಾದ ವಾಚ್ಯತೆ, ನವೋನವವಾದ ಪ್ರಯೋಗಾಕಾಂಕ್ಷೆ ಇವು ಈಚಿನ ಕನ್ನಡಕವಿತೆಯ ಛಂದಸ್ಸಿನಲ್ಲಿ ಕಾಣುತ್ತವೆ. ಇದಕ್ಕೆ ಹಿಂದಿನ ಛಂದಸ್ಸು ಕೂಡ ಇದರ ಜೊತೆಯಲ್ಲಿ ಸಾಗುತ್ತಿದೆ. ಬಿ.ಎಂ.ಶ್ರೀ., ಕೆ.ಎಸ್.ನ., ಪುತಿನ, ಕುವೆಂಪು, ದ.ರಾ.ಬೇಂದ್ರೆ ಮೊದಲಾದವರು ಅನೇಕ ಬಗೆಯ ಗೇಯ ಗೀತೆಗಳಲ್ಲಿ ವೈವಿಧ್ಯವನ್ನು ಕೊಟ್ಟಿದ್ದಾರೆ. ಕುವೆಂಪು ಅವರಂತೂ ಸರಳ ರಗಳೆಯನ್ನು ಯುಕ್ತವಾಗಿ ಮಾರ್ಪಡಿಸಿಕೊಂಡು ತಮ್ಮ ಶ್ರೀ ರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಮಹಾ ಛಂದಸ್ಸನ್ನಾಗಿಸಿದ್ದಾರೆ. ಗೋಪಾಲಕೃಷ್ಣ ಅಡಿಗ, ಚೆನ್ನವೀರ ಕಣವಿ, ಎ.ಕೆ.ರಾಮಾನುಜನ್, ಚಂದ್ರಶೇಖರ ಕಂಬಾರ, ಲಂಕೇಶ ಮೊದಲಾದವರು ಛಂದಸ್ಸಿನ ಹೊಸ

ಪ್ರಯೋಗಗಳನ್ನು ಮಾಡುತ್ತಲೇ ಬಂದಿದ್ದಾರೆ. ಗೋಕಾಕರಿಂದ ಪ್ರಾರಂಭವಾದ ಮುಕ್ತಛಂದಸ್ಸಿನ ಈ ಪರಂಪರೆ ಹಲವಾರು ವೈವಿಧ್ಯವನ್ನೂ ಹೊಸ ಹೊಸ ಆವಿಷ್ಕಾರವನ್ನೂ ಪಡೆಯುತ್ತ ಮುಂದುವರಿಯುತ್ತಿದೆ. ಇತ್ತೀಚಿನ ನವಪೀಳಿಗೆ ಹೊಸ ರೀತಿಯ ಕಾವ್ಯಾಭಿವ್ಯಕ್ತಿಯಲ್ಲಿ ತೊಡಗಿದೆ. ಕವನವಾಗಬೇಕಾದರೆ ಹೀಗೇ ಇರಬೇಕೆಂಬ ಕೆಲ ಧೋರಣೆಗಳು ಇಂದು ಬುಡಮೇಲಾಗಿದೆ. ಜೀವಂತಿಕೆ ಹಾಗೂ ದಟ್ಟ ಅನುಭವ ಕಾವ್ಯವಾಗಲು ಬೇಕಾದ ಮೂಲ ಬಂಡವಾಳ ಎಂಬ ಅಂಶದ ಮೇಲೆ ಹೆಚ್ಚಿನ ಒತ್ತು ಬಿದ್ದು ಕವನ ತನ್ನೆಲ್ಲ ದಿಗ್ಬಂಧನಗಳನ್ನೂ ಕಿತ್ತೊಗೆದು ಅರ್ಥಗರ್ಭಿತವಾಗುತ್ತ ಛಂದೋರೀತಿಯಲ್ಲಿ ವೈವಿಧ್ಯಮಯವಾಗುತ್ತ ಸರಳವಾಗುತ್ತ ನಡೆದಿದೆ.

ಹೊಸಗನ್ನಡ ಛಂದಸ್ಸಿನ ಒಂದು ನುಡಿ:

ಮೊದಲು ತಾಯ ಹಾಲ ಕುಡಿದು<br>
ಲಲ್ಲೆಯಿಂದ ತೊದಲಿ ನುಡಿದು<br>
ಕೆಳೆಯರೊಡನೆ ಬೆಳೆದು ಬಂದ ಮಾತದಾವುದು<br>
ನಲ್ಲೆಯೊಲವ ತೆರೆದು ತಂದ ಮಾತದಾವುದು (ಶ್ರೀ-ಕಾಣಿಕೆ)

ಸ್ವಚ್ಛಂದ ಛಂದಸ್ಸಿನಲ್ಲಿಯ ಕವನದ ಮೊದಲ ಎಂಟು ಸಾಲುಗಳು:

ಹೊಗೆ, ಬೆಂಕಿ<br>
- ಅಯ್ಯೊ, ಹಾಳಾಗ, ಉರಿ, ಸೆಖೆ, ತಾಪ ಹೊರಗೆ<br>
ರಣರಣ ಬಿಸಿಲು, ಒಳಗೆ ಮಾರಣ ಬೆಂಕಿ<br>
ಮಲಗಿತ್ತು ಮನ ಚಿತೆಯ ಮೇಲೆ ಆಫೀಸಿನಲ್ಲಿ<br>
ಭೂತಗನ್ನಡಿ ಬಿಸಿಲುಮಚ್ಚು ಚುಚ್ಚಿತು ತಲೆಯ<br>
ಮಿದುಳು - ಬಚ್ಚಲ ಹಂಡೆಯಲ್ಲಿ ಬೇಯುವ ಆಮೆ-<br>
ಎದ್ದೆದ್ದು ಬಿದ್ದು ಒದ್ದಾಡುತ್ತಿತ್ತು<br>
(ಹಿಮಗಿರಿಯ ಕಂದರ- ಗೋಪಾಲಕೃಷ್ಣ ಅಡಿಗ)

ಹೀಗೆ ಕನ್ನಡ ಛಂದಸ್ಸು ನಿಂತ ನೀರಾಗಿರದೆ ಒಂದು ಜೀವಂತ ಭಾವವಾಹಕ ಶಕ್ತಿಯಾಗಿದೆ ಎಂಬುದು ಅದರ ಇತಿಹಾಸದಿಂದ ಮನದಟ್ಟಾಗುತ್ತದೆ. (ಟಿ.ವಿ.ವಿ.,ಡಿ.ಎಸ್.ಕೆ.)

**ಕನ್ನಡದ ಉಪಭಾಷೆಗಳು :** ಕನ್ನಡ ಭಾಷಾ ಪ್ರದೇಶವನ್ನು ಗಮನಿಸಿ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಅದರಲ್ಲಿ ಅನೇಕ ಬಗೆಯ ಭಾಷಾ ಪ್ರಭೇದಗಳು ಕಾಣಿಸಿಕೊಳ್ಳುತ್ತವೆ. ಇವುಗಳಲ್ಲಿ ಮುಖ್ಯವಾಗಿ ಮೈಸೂರು ಕನ್ನಡ, ಕರಾವಳಿಕನ್ನಡ, ಧಾರವಾಡ ಕನ್ನಡ, ಗುಲ್ಬರ್ಗ ಕನ್ನಡ- ಎಂಬ ನಾಲ್ಕು ಉಪಭಾಷಾ ಪ್ರಭೇದಗಳನ್ನು ಗುರುತಿಸಬಹುದು. ಈ ಪ್ರಭೇದಗಳನ್ನು ಪ್ರಾದೇಶಿಕವಾಗಿ ಹಾಗೂ ಸಾಮಾಜಿಕವಾಗಿ ಪರಿಶೀಲಿಸಲು ಹೊರಟಾಗ ಇವುಗಳಲ್ಲೇ ಎಷ್ಟೋ ಬಗೆಯ ಒಳ ಪ್ರಭೇದಗಳು ಇರುವುದು ಕಂಡುಬರುತ್ತದೆ.

**ಮೈಸೂರು ಕನ್ನಡ :** ಮೈಸೂರು, ಮಂಡ್ಯ, ಬೆಂಗಳೂರು, ಕೋಲಾರ, ತುಮಕೂರು, ಹಾಸನ, ಶಿವಮೊಗ್ಗ, ಚಿತ್ರದುರ್ಗ, ಮತ್ತು ಚಿಕ್ಕಮಗಳೂರು- ಈ ಜಿಲ್ಲೆಗಳಲ್ಲಿ ಆಡುವ ಕನ್ನಡಭಾಷೆಯನ್ನು ಮೈಸೂರುಕನ್ನಡ ಎಂದು ಕರೆಯುವುದು ವಾಡಿಕೆ.

ಈ ಕನ್ನಡದಲ್ಲಿ ಸಾಮಾನ್ಯವಾಗಿ ಸಂಧ್ಯಕ್ಷರಗಳು ಗೋಚರಿಸುವುದಿಲ್ಲ. ವಿದ್ಯಾವಂತರ ಕನ್ನಡದಲ್ಲಿ ಅ, ಆ, ಇ, ಈ, ಉ, ಊ, ಎ, ಏ, ಒ, ಓ, ಎಂಬ ಹತ್ತು ಸ್ವರ ಧ್ವನಿಮಾಗಳಿವೆ. ಅವಿದ್ಯಾವಂತರ ಕನ್ನಡದಲ್ಲಿ ಈ ಹತ್ತು ಸ್ವರ ಧ್ವನಿಮಾಗಳ ಜೊತೆಗೆ ಆ, ಅ್ಯ ಮತ್ತು ಒ ಎಂಬ ಮೂರು ಸ್ವರ ಧ್ವನಿಮಾಗಳು ಸೇರಿ ಒಟ್ಟು 13 ಕ್ಕೂ ಹೆಚ್ಚು ಸ್ವರ ಧ್ವನಿಮಾಗಳು ಗೋಚರವಾಗುತ್ತವೆ; ಮಹಾಪ್ರಾಣಾಕ್ಷರಗಳು ಕಂಡುಬರುವುದಿಲ್ಲ. ಅವಿದ್ಯಾವಂತರ ಭಾಷೆಯಲ್ಲಿ ವಿಶೇಷವಾಗಿ ಮಂಡ್ಯ ಪ್ರಾಂತದಲ್ಲಿ ಹ ಕಾರ ಲೋಪವಾಗಿ ಹಾಲು ಎಂಬುದನ್ನು ಆಲು ಎಂತಲೂ ಹಲ್ಲು ಎಂಬುದನ್ನು ಅಲ್ಲು ಎಂತಲೂ ಹೇಳುವುದೂ ರೂಢಿ. ಹಾಗೆಯೇ ಅ ಮತ್ತು ಆ ಕಾರಗಳ ಸ್ಥಳದಲ್ಲಿ ಹ ಮತ್ತು ಹಾ ಕಾರಗಳು ನುಸುಳುವುದುಂಟು. ವಿದ್ಯಾವಂತ ಹಾಗೂ ಅವಿದ್ಯಾವಂತರಿಬ್ಬರಲ್ಲೂ ಙ, ಞ ಎಂಬ ಅನುನಾಸಿಕ ಧ್ವನಿಗಳು ನ ಅನುನಾಸಿಕ ಧ್ವನಿಮಾದ ಉಪಧ್ವನಿಗಳಾಗಿ ಕಂಡುಬರುತ್ತವೆ. ಅವಿದ್ಯಾವಂತರ ಕನ್ನಡದಲ್ಲಿ ಶ,ಷ,ಸ, ಎಂಬ ಊಷ್ಮ ಧ್ವನಿಗಳು ಕಂಡುಬರುತ್ತವೆಯಾದರೂ ಅವು ಬೇರೆ ಬೇರೆ ಧ್ವನಿಮಾಗಳಾಗಿರದೆ ಶ ಮತ್ತು ಷ ಧ್ವನಿಗಳು ಸ ಧ್ವನಿಯ ಉಪಧ್ವನಿಯಾಗಿ ಕಂಡಬರುತ್ತವೆ. ಇಂಗ್ಲಿಷಿನ ಕೆಲವು ಸ್ವೀಕೃತ ಪದಗಳಲ್ಲಿ ಫ (f) ಜ (z), ಇತ್ಯಾದಿ ಧ್ವನಿಗಳು ಕಂಡುಬರುತ್ತವೆ. ಆದರೂ ಅವುಗಳನ್ನು ಅವಿದ್ಯಾವಂತರು ಪ (ಕಾಫಿ > ಕಾಪಿ) ಮತ್ತು (ಡಜನ್ > ಡಜನ್) ಎಂದೇ ಉಚ್ಚರಿಸುತ್ತಾರೆ. ಪದದ ಆದಿಯಲ್ಲಿ ಬರುವ ಎ ಮತ್ತು ಒ ಸ್ವರಗಳು 'ಯೆ' ಮತ್ತು 'ವೊ' ಎಂದು ಉಚ್ಚಾರವಾಗುತ್ತವೆ. ಈ ಬಗೆಯ ಭಾಷಾ ವ್ಯತ್ಯಾಸ ಒಂದೇ ವರ್ಗದ ಅವಿದ್ಯಾವಂತರಿಗೆ ಮಾತ್ರ ಸೀಮಿತವಾಗಿರದೆ ಎಲ್ಲಾ ಜಾತಿ,ಸಂಸ್ಕೃತಿಯ ಜನರಿಗೂ ಅನ್ವಯಿಸುತ್ತದೆ. ನಿಮ್ನವರ್ಗದ ಜನರ ಆಡುಭಾಷೆಯನ್ನು ಗಮನಿಸಿದರೆ, ಅವರು 'ಏ' ಕಾರವನ್ನು 'ಯಾ' ಎಂತಲೂ ಮತ್ತೆ ಕೆಲವು ವಿದ್ಯಾವಂತರೂ ಕೂಡ ಈ ಬಗೆಯಲ್ಲಿಯೇ 'ಬೇಡ' ಎಂಬುದನ್ನು 'ಬ್ಯಾಡ' ಎಂತಲೂ ಪೇಟೆ ಎಂಬುದನ್ನು ಪ್ಯಾಟೆ ಎಂತಲೂ ಬೇಟೆ ಎಂಬುದನ್ನು ಬ್ಯಾಟೆ ಎಂತಲೂ ಉಚ್ಚರಿಸುವುದನ್ನು ಕಾಣಬಹುದು. ಹಾಸನ ಪ್ರಾಂತದ ಕೆಲವು ಕಡೆ ಅವಿದ್ಯಾವಂತರಲ್ಲಿ 'ಕ' ಕಾರ ಚಕಾರವಾಗಿ ಉಚ್ಚಾರವಾಗುತ್ತದೆ ಉದಾ: ಕೆಂಡ > ಚೆಂಡ, ಕೆರೆ > ಚೆರೆ, ಕೆಲ > ಚೆಲ. ಕೆಲವರು ಚ ಕಾರವನ್ನು ಸ ಕಾರವನ್ನಾಗಿ (ಚಾಪೆ > ಸಾಪೆ) ಉಚ್ಚರಿಸುವುದೂ ಉಂಟು. ಹಾಗೆಯೇ ಕಾಗದ > ಕಾದಗ, ಕಾಜಗ ಎಂದು ಉಚ್ಚರಿಸುವುದನ್ನು ಅಲ್ಲಲ್ಲಿ ಕಾಣಬಹುದು.

ಮೈಸೂರು ಕನ್ನಡದ ವಿದ್ಯಾವಂತ ಹಾಗೂ ಅವಿದ್ಯಾವಂತರ ಭಾಷೆಗಳ ನಡುವೆ ವ್ಯಾಕರಣ ವಿಚಾರಗಳಲ್ಲಿ ಕೇವಲ ಸ್ವಲ್ಪ ಅಂತರ ಕಂಡುಬರುತ್ತದೆ. ಅವನು ಎಂಬುದನ್ನು ಅವ್ನು, ಅವ ಎಂತಲೂ ಕೆಲವು ರೂಪಗಳು ವ್ಯತ್ಯಾಸಗೊಂಡು ಬಳಕೆಯಲ್ಲಿರುವುದನ್ನು ಗಮನಿಸಬಹುದು. ಹಾಗೆಯೇ ಮಾಡುತ್ತೇನೆ, ಮಾಡ್ತೇನೆ, ಮಾಡ್ತಿನಿ, ನೋಡುತ್ತೇನೆ, ನೋಡ್ತೇನೆ, ನೋಡುವ, ಮಾಡೋಣ, ಮಾಡುವ ಎಂಬ ವಿಧ್ಯರ್ಥಕ ರೂಪಗಳೂ ವಿದ್ಯಾವಂತ ಹಾಗೂ ಅವಿದ್ಯಾವಂತರ ನಡುವೆ ವ್ಯತ್ಯಸ್ತಗೊಂಡು ಉಚ್ಚಾರಗೊಳ್ಳುವುದನ್ನು ಕಾಣಬಹುದು. (ಕೆ.ಕೆ.ಜಿ.)

**ಕರಾವಳಿ ಕನ್ನಡ :** ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಎರಡು ರೀತಿಯ ಕನ್ನಡ ಬಳಕೆಯಲ್ಲಿದೆ. ತುಳು, ಕೊಂಕಣಿ, ಮರಾಠಿ, ಮಲೆಯಾಳಂ ಮೊದಲಾದ ಭಾಷೆಗಳನ್ನು ಮನೆಮಾತಾಗಿ ಬಳಸುವ ಜನರು ಪರಸ್ಪರ ಸಾಧನೆಗಾಗಿ ಬಳಸುವ ಕನ್ನಡ ಒಂದು ರೀತಿಯದಾದರೆ, ಹವ್ಯಕ, ಗೌಡ, ಕೋಟ, ಕುಂಬಾರ, ಬೈರ ಮೊದಲಾದ ಸಮಾಜಗಳಿಗೆ ಸೇರಿದ ಜನ ತಮ್ಮತಮ್ಮೊಳಗೆ ಬಳಸುವ ಕನ್ನಡ ಇನ್ನೊಂದು ರೀತಿಯದು. ಇವುಗಳಲ್ಲಿ ಮೊದಲಿನದನ್ನು ಸಾಂಪರ್ಕಿಕ ಕನ್ನಡವೆಂದು ಎರಡನೆಯದನ್ನು ತಾಯಿನುಡಿ ಕನ್ನಡವೆಂದೂ ಪ್ರತ್ಯೇಕಿಸಿ ಹೇಳಬಹುದು.

ಹೊರಗಿನಿಂದ ಬಂದವರಿಗೆ ಈ ಜಿಲ್ಲೆಯಲ್ಲಿ ಮೊದಲಿಗೆ ಕೇಳಿಸುವುದು ಸಾಂಪರ್ಕಿಕ ಕನ್ನಡ. ಇದನ್ನು ಆಡುವವರು ಬೇರೆ ಬೇರೆ ಭಾಷೆಗಳನ್ನು ಮನೆಮಾತಾಗಿ ಬಳಸುವವರಾದ್ದರಿಂದ, ಈ ನುಡಿಯಲ್ಲಿ ತುಳು, ಕೊಂಕಣಿ ಮೊದಲಾದ ಭಾಷೆಗಳ ಪ್ರಭಾವ ಹೆಚ್ಚು ಕಾಣಿಸುತ್ತದೆ. ಅಲ್ಲದೆ, ಈ ಕನ್ನಡವನ್ನು ಬಹುಮಂದಿ ಶಾಲೆ, ಕಾಲೇಜು, ಪುಸ್ತಕ, ಪತ್ರಿಕೆ ಇವುಗಳ ಮೂಲಕ ಮತ್ತು ಸಭೆ, ನಾಟಕಗಳ ಮೂಲಕ ಪಡೆದಿರುವವರಾದ್ದರಿಂದ ಇದು ಆಡುನುಡಿಗಿಂತಲೂ ಬರೆಹದ ಕನ್ನಡವನ್ನೇ ಹೆಚ್ಚು ಹೋಲುತ್ತದೆ. ಸಾಂಪರ್ಕಿಕ ಕನ್ನಡ ಯಾವ ರೀತಿಯಲ್ಲಿ ಬೆಳೆದುಬಂದಿದೆ. ಅದರ ಬೆಳವಣಿಗೆಗೂ ಆಡುನುಡಿಯ ಬೆಳವಣಿಗೆಗೂ ಏನು ಭೇದವಿದೆ. ಅದರಲ್ಲಿ ಬೇರೆ ಬೇರೆ ಸಮಾಜಗಳಿಗೆ ಮತ್ತು ಆ ಸಮಾಜದವರ ಮಾತೃಭಾಷೆಗಳಿಗೆ ಅನುಗುಣವಾಗಿ ಹೇಗೆ ಪ್ರಭೇದಗಳು ಮೂಡಿಬಂದಿವೆ. ಅದರ ಮೇಲೆ ವಿದ್ಯಾಭ್ಯಾಸದ ಪ್ರಭಾವ ಎಂಥದ್ದು ಇತ್ಯಾದಿ ಪ್ರಶ್ನೆಗಳನ್ನು ಉತ್ತರಿಸಲು ಇನ್ನೂ ಬಹಳಷ್ಟು ಸಂಶೋಧನೆಗಳನ್ನು ನಡೆಸುವ ಆವಶ್ಯಕತೆಯಿದೆ.

ಕನ್ನಡ ಭಾಷೆಯ ಚರಿತ್ರೆಯ ದೃಷ್ಟಿಯಿಂದ ನೋಡುವುದಾದರೆ, ಈ ಸಾಂಪರ್ಕಿಕ ಪ್ರಭೇದಕ್ಕಿಂತಲೂ ಹವ್ಯಕ, ಕೋಟ, ಗೌಡ, ಕುಂಬಾರ ಮೊದಲಾದ ಸಮಾಜಗಳವರು ಮನೆಮಾತಾಗಿ ಬಳಸುವ ಆಡುನುಡಿ ಕನ್ನಡ ಹೆಚ್ಚು ಪ್ರಮುಖವಾದುದೆಂದು ಹೇಳಬಹುದು. ಪಶ್ಚಿಮ ಘಟ್ಟಗಳ ಪಶ್ಚಿಮಕ್ಕಿರುವ

ಕರಾವಳಿ ಪ್ರದೇಶದಲ್ಲೆಲ್ಲಾ ಪ್ರಚಾರದಲ್ಲಿರುವ ಕನ್ನಡ ಇತರ ಒಳನಾಡ ಕನ್ನಡದ ಪ್ರಭೇದಗಳಿಂದ ಬೇರೆಯಾಗಿ ಸುಮಾರು ಒಂದೂವರೆ ಸಾವಿರ ವರ್ಷಗಳಾದರೂ ಕಳೆದಿರಬಹುದು. ಕನ್ನಡದ ಆಧುನಿಕ ಪ್ರಭೇದಗಳನ್ನೆಲ್ಲ ತೌಲನಿಕವಾಗಿ ಅಭ್ಯಾಸಮಾಡಿದಾಗ, ಕರಾವಳಿ ಮತ್ತು ಒಳನಾಡ ಕನ್ನಡಗಳೊಳಗೆ ನಡೆದ ಪೂರ್ವ ಪಶ್ಚಿಮ ವಿಭಜನೆ ಕನ್ನಡದ ಮಟ್ಟಿಗೆ ಅತ್ಯಂತ ಪ್ರಾಚೀನವಾದುದೆಂದು ತಿಳಿದುಬಂದಿದೆ. ಈ ವಿಭಜನೆ ಹಳಗನ್ನಡದ ಕಾಲಕ್ಕಿಂತಲೂ ಹಿಂದಿನದೆಂಬುದಕ್ಕೆ ಸ್ಪಷ್ಟವಾದ ಆಧಾರಗಳಿವೆ.

ಉದಾಹರಣೆಗಾಗಿ, ಹಳಗನ್ನಡದ ಕಾಲಕ್ಕಿಂತ ಮೊದಲು ಎಂದರೆ, ಆರು ಏಳನೆಯ ಶತಮಾನದಲ್ಲಿ ನಡೆದ ಮಧ್ಯಸ್ವರ ಉಚ್ಚಸ್ವರದೆದುರು ಉಚ್ಚವಾಗಿರುವ ಬದಲಾವಣೇಯನ್ನು ಗಮನಿಸಬಹುದು. ಈ ಬದಲಾವಣೆಯ ಫಲವಾಗಿ ಹಿಂದಿದ್ದ ಬೆಳಿ > ಬಿಳಿ, ಕೆವಿ > ಕಿವಿ, ಬೆಸಿ > ಬಿಸಿ, ಒಳಿ > ಉಳಿ, ತೊದಿ > ತುದಿ, ತೊಳಿ > ತುಳಿ ಇತ್ಯಾದಿಯಾಗಿ ಬದಲಾವಣೆ ಹೊಂದಿತು. ಐದೂ ಆರನೆಯ ಶತಮಾನಗಳ ಶಾಸನಗಳಲ್ಲಿ ಈ ಬದಲಾವಣೆಯಾದಂತೆ ಕಾಣಿಸುವುದಿಲ್ಲ. ಅಲ್ಲದೆ ಇಂದಿನ ಕರಾವಳಿಯ ಆಡುನುಡಿ ಕನ್ನಡದಲ್ಲೂ ಇದು ಕಾಣಿಸುತ್ತಿಲ್ಲ. ಈ ಪರಿಸ್ಥಿತಿಯು ಅರ್ಥವೇನೆಂದರೆ, ಐದು ಆರನೆಯ ಶತಮಾನಗಳು ಈ ಬದಲಾವಣೆ ನಡೆದ ಕಾಲಕ್ಕಿಂತ ಹಿಂದಿನವಾಗಿರಬೇಕು ಮತ್ತು ಕರಾವಳಿಯ ಆಡುನುಡಿ ಕನ್ನಡ ಈ ಬದಲಾವಣೆ ನಡೆದ ಕಾಲಕ್ಕಿಂತ ಹಿಂದೆಯೆ ಒಳನಾಡ ಕನ್ನಡದಿಂದ ಒಡೆದು ಬೇರಾಗಿ ಬಂದಿರಬೇಕು. ಮತ್ತು ಒಳನಾಡಿನಲ್ಲಿ ಮಾತ್ರವೆ ನಡೆದ ಈ ಬದಲಾವಣೆ ಇದಕ್ಕೆ ಒಳಪಡದೆ ಇದ್ದಿರಬೇಕು.

ಕರಾವಳಿಯ ಆಡುನುಡಿ ಕನ್ನಡವನ್ನು ಒಳನಾಡಿನ ಆಡುನುಡಿ ಕನ್ನಡದಿಂದ ಬೇರ್ಪಡಿಸುವ ಅಂಶಗಳು ಇನ್ನೂ ಹಲವಾರಿವೆ. ಉದಾಹರಣೆಗೆ ಒಳನಾಡಿನ ಆಡುನುಡಿ ಕನ್ನಡದ ಪ್ರಭೇದಗಳಲ್ಲೆಲ್ಲ ಮೂರಕ್ಷರದ ಪದಗಳಲ್ಲಿ ಬರುವ ಎರಡನೆಯ ಸ್ವರ ಲೋಪಗೊಂಡಿದೆ (ಹಗಲು- ಹಗ್ಲು, ಅಡಕೆ- ಅಡ್ಕೆ, ಅಂಗಡಿ- ಅಂಗ್ಡಿ, ಬಾಗಿಲು- ಬಾಗ್ಲು ಇತ್ಯಾದಿ.) ಆದರೆ ಈ ಬದಲಾವಣೆ ಕರಾವಳಿಯ ಆಡು ನುಡಿಯಲ್ಲಾಗಿಲ್ಲ. ಹಾಗೆಯೆ ದೀರ್ಘ ಸ್ವರದ ಅನಂತರ ಇಲ್ಲವೆ ಮೂರಕ್ಷರದ ಪದಗಳಲ್ಲಿ ಎರಡನೆಯ ಸ್ವರಕ್ಕೆ ಪರವಾಗಿ ಬರುವ ಅನುನಾಸಿಕಗಳು ಸಮಾನಸ್ಥಾನಿಯಾದ ವ್ಯಂಜನ ಪರವಾದಾಗ ಲೋಪಗೊಂಡಿರುವುದನ್ನು ಒಳನಾಡಿನ ಕನ್ನಡದಲ್ಲಿ ಕಾಣಬಹುದು (ನಾಂಟು- ನಾಟು, ನೂಂಕು- ನೂಕು, ಮುರುಂಟು- ಮುರುಟು, ಕಲಂಕು- ಕಲಕು ಇತ್ಯಾದಿ). ಕರಾವಳಿಯ ದಕ್ಷಿಣ ಭಾಗದಲ್ಲಿ ಈ ಲೋಪ ಸಂಭವಿಸಿಲ್ಲ.

ಈ ಪ್ರಭೇದಗಳ ವ್ಯಾಕರಣವನ್ನು ಗಮನಿಸಿದರೆ, ಕರಾವಳಿಯ ಪ್ರಭೇದಗಳು ಹಳಗನ್ನಡದಲ್ಲಿ ತೋರಿಬರುವ ನಿಷೇಧ ಕ್ರಿಯಾರೂಪ (ಕೇಳೆಂ, ಪೇಳೆಂ ಇತ್ಯಾದಿ) ಮತ್ತು ಭವಿಷ್ಯದ್ರೂಪ (ಕೇಳ್ವೆಂ, ಪೇಳ್ವೆಂ ಇತ್ಯಾದಿ) ಇವುಗಳನ್ನು ಉಳಿಸಿಕೊಂಡು ಬಂದಿರುವುದೂ ಒಳನಾಡಿನ ಪ್ರಭೇದಗಳು ಇವೆರಡನ್ನೂ ಕಳೆದುಕೊಂಡಿರುವುದ ಸ್ಪಷ್ಟವಾಗುತ್ತದೆ. ಅಲ್ಲದೆ ಹಳಗನ್ನಡದಲ್ಲಿ ಕಾಣಿಸದೆ ಇರುವ ಪೂರ್ಣ ವರ್ತಮಾನ ರೂಪವೊಂದು (ಕುಡ್ದೀನಿ, ಮಾಡ್ದೀನಿ, ಇತ್ಯಾದಿ) ಹೊಸತಾಗಿ ಈ ಒಳನಾಡಿನ ಪ್ರಭೇಧಗಳಲ್ಲಿ ಮೂಡಿಬಂದಿದೆಯೆಂಬ ವಿಷಯವೂ ತಿಳಿಯುತ್ತದೆ.

ಕರಾವಳಿಯ ಪ್ರಭೇದಗಳಲ್ಲಿ ಬರುವ ಪುರುಷವಾಚಕ ಪ್ರತ್ಯಯಗಳಿಗೆ ಎಲ್ಲಾ ಕಾಲವಾಚಕ ಕ್ರಿಯಾರೂಪಗಳಲ್ಲೂ ಒಂದೇ ರೂಪವಿದೆಯಾದರೆ, ಒಳನಾಡಿನ ಪ್ರಭೇದಗಳಲ್ಲೆಲ್ಲ ಇವಕ್ಕೆ ಭೂತ ಪ್ರತ್ಯಯದೆದುರು ಹ್ರಸ್ವರೂಪವಿದೆ ಮತ್ತು ಇತರೆಡೆಗಳಲ್ಲಿ ದೀರ್ಘರೂಪವಿದೆ (ಕುಡ್ದೆ- ಕುಡಿತೀನಿ. ಮಾಡ್ದೆ- ಮಾಡ್ತೀನಿ ಇತ್ಯಾದಿ).

ಕರಾವಳಿಯಲ್ಲೂ ಕೂಡ ದಕ್ಷಿಣ ಕನ್ನಡ ಉಡುಪಿಜಿಲ್ಲೆಗಳಲ್ಲಿ ಕಾಣಿಸುವ ಆಡುನುಡಿ ಕನ್ನಡ ಒಂದು ತೆರನಾದರೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಕಾಣಿಸುವ ಆಡುನುಡಿ ಕನ್ನಡ ಇನ್ನೊಂದು ತೆರ. ಸಾಮಾನ್ಯವಾಗಿ ಉತ್ತರ ಕನ್ನಡ ಜಿಲ್ಲೆಯ ಪ್ರಭೇದಗಳ ಮೇಲೆ ಒಳನಾಡ ಕನ್ನಡದ ಪ್ರಭಾವ ಸ್ಪಷ್ಟವಾಗಿಯೆ ಕಾಣಿಸುತ್ತಿದೆಯೆನ್ನಬಹುದು. ತುಳು- ಮಲೆಯಾಳಂಗಳ ಸಂಪರ್ಕವಿದ್ದುದರಿಂದಾಗಿ ಮತ್ತು ಕಳೆದ ನೂರು- ನೂರೈವತ್ತು ವರ್ಷಗಳಲ್ಲಿ ಕೇರಳ ಮತ್ತು ತಮಿಳುನಾಡುಗಳೊಡನೆ ಆಡಳಿತದ ಮಟ್ಟಿಗೂ ಹತ್ತಿರದ ಸಂಪರ್ಕವಿದ್ದುದರಿಂದಾಗಿ ದಕ್ಷಿಣ ಕನ್ನಡ ಜಿಲ್ಲೆಯ ಆಡುನುಡಿ ಕನ್ನಡ ತನ್ನದೇ ಆದ ವಿಶಿಷ್ಟ ರೂಪವನ್ನು ಪಡೆದಿದೆ.

ಕನ್ನಡ ಭಾಷೆಯ ಸ್ವರೂಪವನ್ನು ಮತ್ತು ಅದು ಬೆಳೆದು ಬಂದ ರೀತಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಕರ್ನಾಟಕದ ಮೂಲೆ ಮೂಲೆಗಳಲ್ಲಿ ಎಂತೆಂತಹ ಪ್ರಭೇದಗಳು ಪ್ರಚಾರದಲ್ಲಿವೆ ಎಂಬುದನ್ನು ಸರಿಯಾಗಿ ತಿಳಿದುಕೊಳ್ಳುವುದು ಆವಶ್ಯ. ಮುದ್ದಣನ ಊರಾದ ದಕ್ಷಿಣ ಕನ್ನಡ ಜಿಲ್ಲೆ ಈ ಮಟ್ಟಿಗೆ ಹಲವಾರು ವಿಶಿಷ್ಟವಾದ ಪ್ರಭೇದಗಳನ್ನು ಪಂಡಿತರ ಕೈಗೆ ಕೊಡಬಲ್ಲುದು. ಭೌಗೋಳಿಕ ಮತ್ತು ರಾಜಕೀಯ ಕಾರಣಗಳಿಂದಾಗಿ ಈ ಭಾಗ ಕರ್ನಾಟಕದ ಇತರ ಭಾಗಗಳಿಂದ 1956ರವರೆಗೂ ಬೇರಾಗಿಯೆ ಉಳಿದಿತ್ತು. ಇದರಿಂದಾಗಿ ಇಲ್ಲಿನ ಆಡುನುಡಿಗಳು ಕನ್ನಡದ ಇತರ ಆಡುನುಡಿಗಳಿಂದ ಬೇರೆಯಾಗಿದ್ದು, ತಮ್ಮವೇ ಆದ ದಿಕ್ಕಿನಲ್ಲಿ ಬೆಳೆದು ಬಂದಿವೆ. ಕೆಲವು ವಿಷಯಗಳಲ್ಲಿ ಇವು ಹೊಸ ಹಾದಿ ಹಿಡಿದಿವೆಯಾದರೆ ಇನ್ನು ಕೆಲವು ವಿಷಯಗಳಲ್ಲಿ ಇವು ಹಳೆಯ ಪ್ರಕಾರಗಳನ್ನು ಹಾಗೆಯೆ ಉಳಿಸಿಕೊಂಡು ಬಂದಿವೆ. (ಡಿ.ಎನ್.ಎಸ್.)

**ಧಾರವಾಡ ಕನ್ನಡ :** ಇದು ಕನ್ನಡದ ಪ್ರಾದೇಶಿಕ ಉಪಭಾಷೆಗಳಲ್ಲಿ ಪ್ರಮುಖ ಉಪಭಾಷಾಪ್ರಭೇದ. ಇದರಲ್ಲಿ ಧಾರವಾಡ, ಬಿಜಾಪುರ ಮತ್ತು ಬೆಳಗಾಂವಿ ಜಿಲ್ಲೆಗಳಲ್ಲಿ ಪ್ರಚಲಿತವಿರುವ ಭಾಷಾರೂಪಗಳು ಸಮಾವೇಶಗೊಳ್ಳುತ್ತವೆ. ಜಿಲ್ಲೆ ಜಿಲ್ಲೆಗೆ, ತಾಲ್ಲೂಕು ತಾಲ್ಲೂಕಿಗೆ, ಮತ್ತೆ ಒಳಭೇದಗಳು ಕಂಡುಬಂದರೂ ಈ ಪ್ರದೇಶದ ವಿಶಿಷ್ಟ ರೂಪಗಳೆನ್ನಲು ಬರುವಂಥ ಪ್ರಯೋಗಗಳಿವೆ. ಈ ಪ್ರಯೋಗಗಳನ್ನು ಇತರ ಉಪಭಾಷಾ ಪ್ರಭೇದಗಳಲ್ಲಿ ಕಂಡುಬರುವ ರೂಪಗಳೊಡನೆ ಹೋಲಿಸಿ ನೋಡಿದಾಗ ಧಾರವಾಡ ಕನ್ನಡದ ವೈಶಿಷ್ಟ್ಯಗಳು ವಿಶಿಷ್ಟವಾಗಿ ಕಂಡುಬಂದು, ಅದಕ್ಕೆ ಒಂದು ಭಿನ್ನಸ್ಥಾನ ಒದಗಿಸಿಕೊಡುತ್ತವೆ.

ಗ್ರಂಥಸ್ಥ ಭಾಷೆಯಲ್ಲಿ (ಅದೇ ರೀತಿ, ಮೈಸೂರು ಮುಂತಾದ ಪ್ರಭೇದಗಳಲ್ಲಿ) ಎ ಕಾರದಲ್ಲಿ ಕೊನೆಗೊಳ್ಳುವ ಶಬ್ದಗಳು ಇಲ್ಲಿ ಇ ಕಾರಾಂತವಾಗುತ್ತವೆ. ಉದಾ ಮನೆ- ಮನಿ,ತೆನೆ-ತೆನಿ, ತಲೆ-ತಲಿ, ಬರೆ-ಬರಿ ಇತ್ಯಾದಿ.

ಶಬ್ದಮಧ್ಯದ ಒ ಸ್ವರ ಇಲ್ಲಿ ಆ್ಯ ಆಗುತ್ತದೆ. ಉದಾ ಕೋಟೆ- ಕ್ವಾಟಿ, ದೋಸೆ- ದ್ವಾಸಿ, ಗೋಡೆ- ಗ್ವಾಡಿ ಕೊರೆ - ಕ್ವಾರಿ ಇತ್ಯಾದಿ

ಶಬ್ದಮಧ್ಯದ ಎ ಇಲ್ಲಿ ಆ್ಯ ಆಗಿದೆ. ಉದಾ ಮೇಲೆ - ಮ್ಯಾಲೆ ಕೆರೆ - ಕ್ಯಾರಿ ಮೆರೆ - ಮ್ಯಾರಿ ಇತ್ಯಾದಿ

ಮಹಾಪ್ರಾಣದ ಉಚ್ಚಾರ ಮೈಸೂರು ಕನ್ನಡದಲ್ಲಿ ಕಂಡುಬರುವುದಕ್ಕಿಂತ ಇಲ್ಲಿ ಹೆಚ್ಚು ಸ್ಪಷ್ಟವಾಗಿದೆ. ಉದಾ ಭಾಷೆ -(ಮೈ ಬಾಸಿ-) ವಿದ್ಯಾರ್ಥಿ -(ಮೈ ವಿದ್ಯಾರ್ತಿ-), ಭೆಟ್ಟಿ -(ಮೈ ಬೆಟ್ಟಿ-) ಇತ್ಯಾದಿ

ಇಲ್ಲಿ ಕಂಡುಬರುವ ಸಂಸ್ಕೃತ ಪದಗಳ ಉಚ್ಚಾರಣೆ (ಅನುಸ್ವಾರದ ಉಚ್ಚಾರ) ಮೈಸೂರು ಕನ್ನಡಕ್ಕಿಂತ ಭಿನ್ನವಾಗಿದೆ. ಉದಾ ಸಂಸಾರ (ಮೈ. ಸರ್ಮ್‌ಸಾರ,) ಸಿಂಹ (ಮೈ. ಸಿಮ್ಹ) ಇತ್ಯಾದಿ.

ಇಲ್ಲಿ ಬಳಕೆಯಾಗುವ ಇಂಗ್ಲಿಷ್ ಪದಗಳ ಉಚ್ಚಾರ ಮೈಸೂರು ಕನ್ನಡಕ್ಕಿಂತ ಭಿನ್ನವಾಗಿದೆ. ಉದಾ: ರೇಲು (ಮೈ.ರೈಲು), ಜಜ್ (ಮೈ.ಜಡ್ಜ್), ಜಾಯಿಂಟ್ (ಮೈ.ಜಂಟಿ), ರಜಿಸ್ಟ್ರಾರ್ (ಮೈ.ರಿಜಿಸ್ಟ್ರಾರ್) ಇತ್ಯಾದಿ.

ಕ್ರಿಯಾರೂಪಗಳಲ್ಲಿಯು ಶಬ್ದಾಂತ್ಯ- ಎ ಕಾರ ಇಲ್ಲಿ ಇ ಕಾರಾಂತವಾಗಿದೆ. ಉದಾ: ಹೋಗ್ತೀನಿ (ಹೋಗ್ತೇನಿ), ಬರ್ತೀನಿ (ಬರ್ತೇನೆ), ಕೊಡತೀನಿ (ಕೊಡತೇನೆ) ಇತ್ಯಾದಿ.

ಕ್ರಿಯಾರೂಪಗಳಲ್ಲಿಸವರ್ರೂಪಧಾರಣೆ ಇಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಉದಾ: ತಿನ್ನಿ (ತಿಂದೆ), ಬಾನ್ನಿ (ಬಂದೆ) ಮಲಕೊನ್ನಿ (ಮಲಗಿಕೊಂಡೆ), ತಾನ್ನಿ (ತಂದೆ) ಇತ್ಯಾದಿ.

ಕ್ರಿಯಾರೂಪಗಳಲ್ಲಿ ಇನ್ನೊಂದು ರೀತಿಯ ವೈಶಿಷ್ಟ್ಯವೂ ಇದೆ. ಉದಾ: ಬರತತಿ (ಮೈ. ಬರುತ್ತೆ), ಹೋಗತತಿ (ಮೈ. ಹೋಗತ್ತೆ), ತಿಂತತಿ (ಮೈ. ತಿನ್ನುತ್ತೆ) ಇತ್ಯಾದಿ.

ಧಾರವಾಡ ಕನ್ನಡಕ್ಕೆ ವಿಶಿಷ್ಟವೆನಿಸುವ ಕೆಲಪದಪ್ರಯೋಗಗಳಿವೆ. ಉದಾ ತಿನಸು (ಮೈ. ತಿಂಡಿ), ಗಿಡ (ಮೈ. ಮರ), ಆಯೆರೀ (ಮೈ.

ಉಡುಗೊರೆ), ತೊಪ್ಪಲು (ಮೈ. ಸೊಪ್ಪು), ಚಲೂ (ಮೈ. ಚನ್ನಾಗಿ, ಚನ್ನಾದು, ಅಮ್ಮ (ಮೈ. ಅಜ್ಜಿ), ಸಿರಾ (ಮೈ. ಕೇಸರಿಭಾತ್), ತಿಂದು (ಮೈ. ತಿಂದ್ಕೊಂಡು), ಹಾಲು ಹಿಂಡು (ಮೈ. ಹಾಲುಕರಿ), ಚಲೂ ಐತಿ (ಮೈ. ಚನ್ನಾಗಿದೆ). ದಂಡಿ ಮುಟ್ಟಬೇಕು (ಮೈ. ದಡ ಸೇರಬೇಕು) ಇತ್ಯಾದಿ.

ಇಲ್ಲಿಯ ಭೌಗೋಳಿಕ ಪರಿಸರ ಮತ್ತು ಐತಿಹಾಸಿಕ ಕಾರಣಗಳಿಂದ ಧಾರವಾಡ ಕನ್ನಡದ ಮೇಲೆ ಮರಾಠಿಯ ಪ್ರಭಾವ ಕಂಡುಬರುತ್ತದೆ. ಉದಾಹರಣೆಗೆ ಶಂಬರ್ (ನೂರು), ಸವ್ವಾಸೇರು (ಒಂದೂಕಾಲು ಸೇರು), ಪೋನೆ ಏಳು (6 ಮುಕ್ಕಾಲು), ಛತ್ತೀಸ್ (36, ಆಧ್ಯ ಮನುಷ್ಯ), ತಿರಸಟ್ಟಿ (63, ಎಡವಟ್ಟು ಮನುಷ್ಯ), ಟಕ್ಕೆ (ಪ್ರಮಾಣ), ಮಿಸಳ್ (ಒಂದು ತಿಂಡಿ), ಭಾಮಟ್ಯಾ (ಒಂದು ಬೈಗಳು), ಮುಂತಾದ ಪ್ರಯೋಗಗಳ ಬಹುಸಂಖ್ಯೆಯಲ್ಲಿ ಬಳಕೆಯಲ್ಲಿವೆ. ಮೈಸೂರು ಕನ್ನಡ ಗ್ರಂಥಸ್ಥ ಭಾಷೆಗೆ ಸಮೀಪವಾಗಿದ್ದರೆ ಧಾರವಾಡ ಕನ್ನಡ ಗ್ರಂಥಸ್ಥ ಭಾಷೆಗೆ ಬಲು ದೂರವಾಗಿದೆ. (ಜೆ.ಎಸ್.ಕೆ)

**ಗುಲ್ಬರ್ಗ ಕನ್ನಡ :** ಗುಲ್ಬರ್ಗ, ಬಿದರೆ, ರಾಯಚೂರು ಜಿಲ್ಲೆಗಳ ಕನ್ನಡವನ್ನು ಹೈದರಾಬಾದ್ ಕರ್ನಾಟಕ ಕನ್ನಡ ಎಂದೂ ಕರೆಯುವುದುಂಟು. ಈ ಉಪಭಾಷೆಯ ಮೇಲೆ ಮರಾಠಿ, ಉರ್ದು, ಸಂಸ್ಕೃತಗಳ ಪ್ರಭಾವ ತೀವ್ರತರವಾಗಿ ಆಗಿದೆ. ಮೊದಲಿಗೆ ಈ ಉಪಭಾಷೆಯನ್ನಾಡುವ ಪ್ರದೇಶ ಹೈದರಾಬಾದ್ ನಿಜಾಮರ ಆಳಿಕೆಗೆ ಒಳಗಾಗಿತ್ತಾದ ಕಾರಣ ಉರ್ದು ಈ ಭಾಷೆಯ ಮೇಲೆ ಹೆಚ್ಚಿನ ಪರಿಣಾಮ ಬೀರಿದೆ. ಈ ಉಪಭಾಷೆಯಲ್ಲೂ ಉಳಿದ ಕನ್ನಡದ ಉಪ ಭಾಷೆಗಳಲ್ಲಿ ಕಂಡುಬರುವಂತೆ ಆ ಧ್ವನಿಮಾ ಆ್ಯ ಮತ್ತು ಆ ಎಂಬ ಎರಡು ಧ್ವನಿಮಾ ಆಗಿ ರೂಪ ತಾಳಿದೆ. ಚ ಮತ್ತು ಜ ಎಂಬ ಈಷತ್ ಸ್ಪರ್ಶ ವ್ಯಂಜನ ಧ್ವನಿಮಾಗಳು ಈ ಕನ್ನಡದಲ್ಲಿ ಕಂಡುಬರುತ್ತವೆ. ಇವುಗಳ ಜೊತೆಗೆ ಚ ಜ ಎಂಬ ತಾಲವ್ಯ ಸ್ಪರ್ಶವ್ಯಂಜನ ಧ್ವನಿಮಾಗಳೂ ಬಳಕೆಯಲ್ಲಿವೆ. ಎಷ್ಟೋ ವೇಳೆ ಉರ್ದುವಿನ ಪ್ರಭಾವದಿಂದ ಕನ್ನಡದ ಜ ವ್ಯಂಜನ ಧ್ವನಿಮಾಕ್ಕೆ ಬದಲು ಜ ಬಳಕೆಯಾಗುತ್ತದೆ ಉದಾ: ಬೀಜ > ಬೀಜ, ಶಿಷ್ಟ ಕನ್ನಡದ ವಕಾರಾಂತ ಶಬ್ದಗಳು ವ್ಯಂಜನಾಂತವಾಗಿವೆ. ಹೆಚ್ಚಿನ ಬದಲಾವಣೆ ವ್ಯಾಕರಣ ಪ್ರಕ್ರಿಯೆಗಳಿಗಿಂತ ಪದಕೋಶಕ್ಕೆ ಸೀಮಿತವಾಗಿದೆ. ಕೆಲವೊಮ್ಮೆ ಊರುಗಳ ಹೆಸರುಗಳು ಗುರುತು ಸಿಗದಷ್ಟು ರೂಪಾಂತರ ಹೊಂದಿವೆ. ಗುಲ್ಬರ್ಗದ ಮೂಲ ಹೆಸರು ಕಲುಬುರುಗೆ ಎಂದಿದ್ದಿತಾದರೂ ಈಗಿನ ಹೆಸರಿನಲ್ಲಿ ಅದರ ಸುಳಿವೂ ಸಿಗುವುದಿಲ್ಲ. ಇಂಥ ಬದಲಾವಣೆಗಳು ಕೆಲವೊಮ್ಮೆ ಸ್ವಾಭಾವಿಕವಾಗಿಯೇ ಆಗಿರದೆ ಆಡಳಿತಗಾರರ ಬಲಾತ್ಕಾರದ ಹೇರಿಕೆಯಿಂದಲೂ ಆಗಿರುವುದುಂಟು. ಬಿಜಾಪುರ ಕನ್ನಡವನ್ನು ಕೆಲವೊಮ್ಮೆ ಗುಲ್ಬರ್ಗ ಕನ್ನಡದಲ್ಲೆ ಸೇರಿಸುವುದುಂಟು. ಈ ಎರಡೂ ಪ್ರಭೇದಗಳ ನಡುವೆ ಅಂತರ ಹೆಚ್ಚಾಗಿ ಕಂಡುಬರುವುದಿಲ್ಲ. ವ್ಯಾಕರಣಾಂಶಗಳಲ್ಲಿಯೂ ಬಿಜಾಪುರ ಕನ್ನಡ ಗುಲ್ಬರ್ಗ ಕನ್ನಡದೊಂದಿಗೆ ಸಾಮ್ಯ ಹೊಂದಿದೆ. ಈ ಎರಡು ಭಾಷಾರೂಪಗಳಲ್ಲಿ ಕೆಲವೊಮ್ಮೆ ಆಕಾರಾಂತ ಸಂಬಂಧಸೂಚಕ ಸರ್ವನಾಮಗಳು ಯಕಾರಾದಿಯಾಗುತ್ತವೆ. ಉದಾ: ಅಪ್ಪ > ಯಪ್ಪ, ಅವ್ವ > ಯವ್ವ. ಈ ಭಾಷಾ ಪ್ರಭೇದಗಳಲ್ಲಿ ಅನ್ಯರನ್ನು ಕುರಿತು ಸಂಬೋಧಿಸುವಾಗ 'ರಿ' ಎಂಬ ಪ್ರತ್ಯಯ ಹೆಚ್ಚಾಗಿ ಬಳಕೆಯಾಗುತ್ತದೆ. ವಿದ್ಯಾವಂತರ ಭಾಷೆಯಲ್ಲಿ ಮಾತ್ರ ಮಹಾಪ್ರಾಣಾಕ್ಷರಗಳು ಉಳಿದಿವೆ. ಅಲ್ಪಪ್ರಾಣವನ್ನೇ ಮಹಾಪ್ರಾಣವಾಗಿ ಉಚ್ಚರಿಸುವ ಪ್ರವೃತ್ತಿ ಅನ್ಯಭಾಷೆಯನ್ನಾಡುವವರಲ್ಲಿ ಕಂಡುಬರುತ್ತದೆ. ಅವಿದ್ಯಾವಂತರಲ್ಲಿ ಹಾಗೂ ಕೆಳವರ್ಗದವರಲ್ಲಿ ಹ ಕಾರ ಲೋಪವಾಗುತ್ತದೆ. ಉಕಾರಾಂತ ಪದಗಳ ವಿದ್ಯಾವಂತರ ನುಡಿಯಲ್ಲಿ ಅಕಾರಾಂತವಾಗುವುದುಂಟು (ಆಕಳು > ಆಕಳ). ಈ ಭಾಷೆಯಲ್ಲಿ ಬಳಕೆಯಾಗುವ ಬಹಳಷ್ಟು ಸಂಖ್ಯಾವಾಚಕಗಳು ಉರ್ದು ಇಲ್ಲವೇ ಮರಾಠಿ ಭಾಷೆಗಳಿಂದ ಎರವಲು ತಂದವಾಗಿವೆ. ತೀಸ್, ಅಡೀಚ್, ದೀಡು, ಶಂಭರ್ ಇತ್ಯಾದಿ. ತಿನ್ನದೆ, ಮಾಡದೆ ಎಂಬ ನಿಷೇಧಾರ್ಥಕ ರೂಪಗಳು ತಿನ್ಲಾರದೆ, ಮಾಡ್ಲಾರದೆ ಎಂಬ ರೂಪತಾಳಿ ಲಾರದೆ ಎಂಬ ಪ್ರತ್ಯಯಗಳನ್ನು ಹೊಂದುತ್ತವೆ. ರಾಯಚೂರು ಕನ್ನಡ ಕೂಡ ಗುಲ್ಬರ್ಗ ಕನ್ನಡವನ್ನೇ ಹೋಲುವುದಾದರೂ ಕೆಲವು ಸಾಮಾನ್ಯ ಬದಲಾವಣೆಗಳೂ ಕಂಡುಬರುತ್ತವೆ. ಈ ಪ್ರಭೇದದಲ್ಲಿ ಅವ, ಇವ, ಮಾವ, ಕಿವುಡ, ಕಿವಿ, ಸೋವಿ ಮುಂತಾದ ಪದಗಳಲ್ಲಿ ವಕಾರ ಅನುನಾಸಿಕವಾಗಿ ಉಚ್ಚಾರಗೊಳ್ಳುತ್ತದೆ.

ಉಪಭಾಷೆಗಳಲ್ಲಿ ಮೇಲೆ ಚರ್ಚಿಸಲಾದ ಪ್ರಾದೇಶಿಕ ಉಪಭಾಷೆಗಳ ಜೊತೆಗೆ ಆಯಾ ವಿಶಿಷ್ಟ ಸಮುದಾಯಕ್ಕೆ ಸೇರಿದ ಉಪಭಾಷೆಗಳೂ ಇವೆ. ಸೋಲಿಗ, ಬಡಗ, ಹವ್ಯಕ, ಕುರುಬ (ಕುರುಂಬ) ಇತ್ಯಾದಿ ಭಾಷೆಗಳು ಈ ಗುಂಪಿಗೆ ಸೇರುತ್ತವೆ. *

**ಸೋಲಿಗ :** ಚಾಮರಾಜನಗರ ಜಿಲ್ಲೆ ಬಿಳಿಗಿರಿರಂಗನ ಬೆಟ್ಟ, ಮಹದೇಶ್ವರ ಬೆಟ್ಟ, ಮೈಸೂರು ಜಿಲ್ಲೆಯ, ಹೆಗ್ಗಡದೇವನಕೋಟೆ, ಕಾಕನಕೋಟೆ ಹಾಗೂ ಬೆಂಗಳೂರು, ಮಂಡ್ಯ, ತುಮಕೂರು ಜಿಲ್ಲೆಗಳ ಕೆಲವು ಭಾಗಗಳಲ್ಲಿ ವಾಸವಾಗಿರುವ ಸೋಲಿಗ (ಶೋಲಿಗ) ಎಂಬ ಆದಿವಾಸಿ ಜನಾಂಗದವರ ಆಡು ಭಾಷೆ.

ಸೋಲಿಗ ಭಾಷೆಯನ್ನು ಸಾಮಾನ್ಯವಾಗಿ ಸೋಲಿಗ ಕನ್ನಡ ಎಂದು ಕರೆಯುವುದು ರೂಢಿ. ಮೈಸೂರು ಜಿಲ್ಲೆಯ ಕೊಳ್ಳೇಗಾಲ, ಯಳಂದೂರು ಮತ್ತು ಚಾಮರಾಜನಗರದ ಸುತ್ತಮುತ್ತಲ ಪ್ರದೇಶದ ಕನ್ನಡ ಭಾಷೆಯಲ್ಲಿ. ಸೋಲಿಗಕನ್ನಡದಲ್ಲಿ ಕಂಡುಬರುವ ಕೆಲವು ವೈಶಿಷ್ಟ್ಯಗಳನ್ನು ಕಾಣಬಹುದು. ಉದಾಹರಣೆಗೆ ಕರೆ > ಕರಿ, ಮರೆ > ಮರಿ, ಬರೆ > ಬರಿ, ತೆರೆ > ತೆರಿ, ಇತ್ಯಾದಿ. ಮಗು, ಮಕ್ಕಳು ಎಂಬ ಪದ ಈ ಸುತ್ತಮುತ್ತಲ ಪ್ರದೇಶಗಳಲ್ಲಿಯ ಕನ್ನಡದಲ್ಲಿ ಮಕ್ಕ, ಮಕ್ಕಗ ಎಂದು ಬಳಕೆಯಲ್ಲಿದೆ. ನಾಸಿಕತ್ವ ಈ ಭಾಷೆಯಲ್ಲಿ ಅರ್ಥವ್ಯತ್ಯಾಸವನ್ನುಂಟುಮಾಡುವ ಸಾಮರ್ಥ್ಯವನ್ನು ಪಡೆದಿದೆ. ಉದಾಹರಣೆಗೆ ಅವ > ಅವನು, ಬನ್ನೆ > ಬಂದೆ, ಮಾದ > ಮಾದ ಇತ್ಯಾದಿ.

ಸೋಲಿಗರ ಕನ್ನಡಕ್ಕೂ ಹಾಗೂ ಶಿಷ್ಟ ಕನ್ನಡಕ್ಕೂ ಇರುವ ಕೆಲವು ವೈಶಿಷ್ಟ್ಯಗಳನ್ನು ಹೀಗೆ ಗುರುತಿಸಬಹುದು.

ಸೋಲಿಗ ಕನ್ನಡದಲ್ಲಿ ಶಕಟರೇಫ ಸ್ವತಂತ್ರ ವರ್ಣವಾಗಿಯೂ ಎ ಕಾರ ಒಂದು ಧ್ವನಿಪ್ರಭೇದವಾಗಿಯೂ ಬಳಕೆಯಲ್ಲಿವೆ.

| ಉದಾಹರಣೆಗೆ : | ಸೋ.ಕನ್ನಡ | ಶಿ.ಕನ್ನಡ |
|---|---|---|
| | ಅಱೆ | ಅರೆಬಂಡೆ |
| | ಮುಱು | ಮುರಿ |
| | ಕೆಱೆ | ಕೆರೆ |
| | ಕೋಳಿ | ಕೋಳಿ |
| | ಉಱು ಉಳು | ಉಳು |
| | ಮಳೆ | ಮಳೆ |

ಶಿಷ್ಟ ಕನ್ನಡದಲ್ಲಿ ನಪುಂಸಕಲಿಂಗಗಳಿಗೆ ಹತ್ತುವ ಬಹುವಚನ ಪ್ರತ್ಯಯ ಸೋಲಿಗ ಕನ್ನಡದಲ್ಲಿ ಗ ಆಗಿದೆ.

| ಉದಾಹರಣೆಗೆ : | ಸೋ.ಕನ್ನಡ | ಶಿ.ಕನ್ನಡ |
|---|---|---|
| | ಮರಗ | ಮರಗಳು |
| | ಆನೆಗ | ಆನೆಗಳು |
| | ಕುರಿಗ | ಕುರಿಗಳು |
| | ಎತ್ತುಗ | ಎತ್ತುಗಳು |

ಚತುರ್ಥಿವಿಭಕ್ತಿ ಪ್ರತ್ಯಯಗಳಲ್ಲೂ ಸೋಲಿಗ ಕನ್ನಡ ಶಿಷ್ಟ ಕನ್ನಡದಿಂದ ಬೇರೆಯಾಗಿದೆ.

| ಉದಾಹರಣೆಗೆ : | ಸೋ.ಕನ್ನಡ | ಶಿ.ಕನ್ನಡ |
|---|---|---|
| | ಕಾಡಿಗ | ಕಾಡಿಗೆ |
| | ಕರುವಿಗ | ಕರುವಿಗೆ |
| | ನನಗ | ನನಗೆ |
| | ಹುಲಿಕ | ಹುಲಿಗೆ |
| | ಮನೆಕ | ಮನೆಗೆ |
| | ಮರಕ | ಮರಕ್ಕೆ |
| | ಅದಕ | ಅದಕ್ಕೆ |

ಭೂತಕಾಲ ಪ್ರತ್ಯಯವಾದ ನ್ ಕನ್ನಡದ ಬೇರೆ ಯಾವ ಉಪಭಾಷೆಗಳಲ್ಲೂ ಕಂಡುಬರುವುದಿಲ್ಲ, ಸೋಲಿಗ ಭಾಷೆಯಲ್ಲಿ ಕಂಡುಬರುತ್ತದೆ. ಈ ಭೂತಕಾಲ ಪ್ರತ್ಯಯ ಕೇವಲ ಉತ್ತಮಪುರುಷ

ಏಕವಚನ ಬಹುವಚನಗಳಲ್ಲೂ ಹಾಗೂ ಪ್ರಥ'ಮ ಪುರುಷ ಏಕವಚನದಲ್ಲೂ ಬರುತ್ತದೆ.

| **ಸೋ.ಕನ್ನಡ** | **ಶಿ.ಕನ್ನಡ** |
|---|---|
| ಹೋನೆ | ಹೋದೆ |
| ಹೋನೊ | ಹೋದೆವು |
| ಹೋನ | ಹೋದ (ಹೋದನು) |

ಈಗ ಸೋಲಿಗರು ಕನ್ನಡದ ಇತರ ಉಪಭಾಷೆಗಳನ್ನಾಡುವ ಜನರ ಸಂಪರ್ಕವನ್ನು ಹೊಂದುತ್ತಿರುವುದರಿಂದ, ಕಾಲಕ್ರಮೇಣ ಇವರ ಕನ್ನಡದಲ್ಲಿಯ ವೈಶಿಷ್ಟ್ಯಗಳು ಮರೆಯಾಗಬಹುದು. ಆದ್ದರಿಂದ ಈ ಉಪಭಾಷೆಯಲ್ಲಿ ದೊರೆಯುವ ಜನಪದ ಸಾಹಿತ್ಯವನ್ನು ಆದಷ್ಟು ಬೇಗ ಸಂಗ್ರಹಿಸುವ ಅವಶ್ಯಕತೆ ಇದೆ. (ಕೆ.ಎಸ್.ಜಿ.)

**ಬಡಗಭಾಷೆ :** ಈ ಭಾಷೆಯನ್ನು ಇತ್ತೀಚೆಗೆ ಕೆಲವು ವಿದ್ವಾಂಸರು ಒಂದು ಸ್ವತಂತ್ರ ದ್ರಾವಿಡ ಭಾಷೆ ಎಂದು ಪರಿಗಣಿಸಿದ್ದಾರೆ. ತಮಿಳುನಾಡು, ಕರ್ನಾಟಕ ಮತ್ತು ಕೇರಳ ರಾಜ್ಯಗಳ ನಡುವೆ ಸಾಲಾಗಿ ಹಬ್ಬಿರುವ ಮಧುಮಲೈ ಮತ್ತು ನೀಲಗಿರಿಬೆಟ್ಟಗಳ ಸುತ್ತಮುತ್ತಲ ಪ್ರದೇಶಗಳಲ್ಲಿ ವಾಸವಾಗಿರುವ ಸು.ಒಂದು ಲಕ್ಷಕ್ಕೂ ಹೆಚ್ಚು ಬಡಗರು ಈ ಭಾಷೆಯನ್ನಾಡುವರು. ಬಡಗ ಭಾಷೆಯಲ್ಲಿ ಹತ್ತು ಸ್ವರಧ್ವನಿಮಾಗಳು, 19 ವ್ಯಂಜನ ಧ್ವನಿಮಾಗಳು ಪ್ರಧಾನವಾಗಿ ಕಂಡುಬರುತ್ತವೆ. ಕನ್ನಡದಲ್ಲಿ ಪ ಕಾರ ಹ ಕಾರವಾಗಿ ಪರಿವರ್ತನೆಗೊಂಡಿರುವಂತೆ ಬಡಗದಲ್ಲಿ ಈ ಪರಿವರ್ತನೆ ಕಂಡುಬರುವುದಿಲ್ಲ. ಅನೇಕ ವ್ಯಾಕರಣಾಂಶಗಳಲ್ಲಿ ಬಡಗಭಾಷೆ ಕನ್ನಡ ಭಾಷೆಯನ್ನೇ ಹೆಚ್ಚು ಹೋಲುತ್ತದೆ. ಹಳಗನ್ನಡದ ಎಷ್ಟೋ ಧ್ವನಿಗಳೂ ಧ್ವನಿಮಾಗಳು, ಪದಗಳು ಮತ್ತು ವ್ಯಾಕರಣ ವೈಶಿಷ್ಟ್ಯಗಳು ಈ ಭಾಷೆಯಲ್ಲಿ ಕಂಡುಬರುತ್ತವೆ. ಬಡಗ ಭಾಷೆಯ ಮೇಲೆ ತಮಿಳು ಮತ್ತು ಮಲೆಯಾಳಂ ಭಾಷೆಗಳ ಪ್ರಭಾವ ತೀವ್ರತರವಾಗಿ ಕಂಡುಬಂದರೂ ಇದನ್ನು ತಮಿಳು ಭಾಷೆಯ ಅಥವಾ ಮಲೆಯಾಳಂ ಭಾಷೆಯ ಉಪಭಾಷೆ ಎಂದು ಹೇಳಲು ಬರುವುದಿಲ್ಲ.

ಭಾರತೀಯ ಭಾಷೆಗಳ ಸರ್ವೇಕ್ಷಣಾ ಕಾರ್ಯವನ್ನು ಕೈಗೊಂಡಿದ್ದ ಜಾರ್ಜ್ ಗ್ರಿಯರ್‌ಸನ್ ಬಡಗ ಭಾಷೆಯನ್ನು ಕನ್ನಡದ ಉಪಭಾಷೆ ಎಂದು ಪರಿಗಣಿಸಿ, ಈ ಕಾರಣದಿಂದಲೇ ಇದರ ಪ್ರಸ್ತಾಪವನ್ನು ಕನ್ನಡ ಭಾಷೆಯೊಂದಿಗೆ ಕೈಗೊಂಡಿದ್ದಾನೆ.

**ಹವ್ಯಕ :** ಹೆಚ್ಚಾಗಿ ದಕ್ಷಿಣ ಕನ್ನಡ, ಉಡುಪಿ, ಉತ್ತರ ಕನ್ನಡ, ಕೊಡಗು ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ನೆಲಸಿರುವ ಹವ್ಯಕರ ಆಡುಭಾಷೆ. ಇದನ್ನು ಸುಮಾರು ಒಂದು ಲಕ್ಷಕ್ಕೂ ಹೆಚ್ಚು ಜನ ಆಡುವವರಿದ್ದಾರೆ. ಇದು ಕನ್ನಡದ ಉಪಭಾಷೆಯಾಗಿದ್ದರೂ ಇದನ್ನಾಡುವ ಜನ ಹವ್ಯಕ ಕನ್ನಡ ಎಂಬ ಹೆಸರಿನಿಂದ ಕರೆಯುತ್ತಾರೆ. ಈ ಭಾಷೆಗೆ ತನ್ನದೇ ಆದ ಲಿಪಿ ಸೌಲಭ್ಯವಿಲ್ಲ.

ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ, ಶಿರಸಿ, ಸಿದ್ದಾಪುರ, ಯಲ್ಲಾಪುರ, ಕುಮಟ ಮುಂತಾದ ಕಡೆ ಆಡುವ ಹವ್ಯಕ ಭಾಷೆಗೂ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ಸುಳ್ಯ, ಪುತ್ತೂರು, ಮೂಡಬಿದರೆ, ಬಂಟ್ವಾಳ, ಮಂಗಳೂರು, ಉಡುಪಿ ಮುಂತಾದ ಕಡೆ ಆಡುವ ಭಾಷೆಗೂ ತುಂಬ ಅಂತರ ಕಂಡುಬರುತ್ತದೆ. ಈ ಅಂತರ ಅನುನಾಸಿಕತೆ, ತಾಲವ್ಯೀಕರಣ, ಓಷ್ಠ್ಯೀಕರಣ ಇತ್ಯಾದಿ ಧ್ವನಿಲಕ್ಷಣಗಳಲ್ಲಿ ಹೆಚ್ಚು. ಹಾಗೆಯೇ ಕೊಡಗು ಮತ್ತು ಶಿವಮೊಗ್ಗ ಜಿಲ್ಲೆಯ ಬೇರೆ ಬೇರೆ ಕಡೆಗಳಲ್ಲಿ ಆಡುವ ಹವ್ಯಕ ಭಾಷೆಯಲ್ಲೂ ಈ ವ್ಯತ್ಯಾಸಗಳಿವೆ. ಇದಕ್ಕೆ ಕಾರಣ ಕೆಲವು ಕಡೆ ತುಳು ಮಲೆಯಾಳಂ ಭಾಷೆಗಳ, ಮತ್ತೆ ಕೆಲವು ಕಡೆ ಕನ್ನಡ ಕೊಡಗು ಮತ್ತು ಕೊಂಕಣಿ ಭಾಷೆಗಳ ಪ್ರಭಾವವೆನ್ನಬಹುದು.

ಹವ್ಯಕ ಭಾಷೆಯಲ್ಲಿ ಸಂಸ್ಕೃತ ಪದಗಳು ಹೆಚ್ಚು. ಉಚ್ಚಾರದಲ್ಲಿ ಕೆಲವು ಸಂಸ್ಕೃತ ಪದಗಳು ವಿಕೃತಗೊಂಡಿವೆ; ಕೆಲವು ವ್ಯತ್ಯಾಸಗೊಂಡಿವೆ: ಮತ್ತೆ ಕೆಲವು ಹಾಗೆಯೇ ಉಳಿದುಕೊಂಡಿವೆ. ಈ ಭಾಷೆಯ ಧ್ವನಿಮಾ ಆಕೃತಿಮಾ ವಾಕ್ಯರಚನಾ ವ್ಯವಸ್ಥೆಗಳನ್ನು ಗಮನಿಸಿದಾಗ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಅಂಶಗಳು ಕಂಡುಬರುತ್ತವೆ. ಅದರಲ್ಲೂ ಪೂರ್ವದ ಹಳಗನ್ನಡ ರೂಪಗಳು ಹೇರಳವಾಗಿ ಕಂಡುಬರುತ್ತವೆ. ವ್ಯಾಕರಣಾಂಶಗಳಲ್ಲಿ ಈ ಭಾಷೆ ನಡುಗನ್ನಡವನ್ನೇ ಹೆಚ್ಚು ಹೋಲುತ್ತದೆ. ಅಭಿವ್ಯಾಪಕ, ವ್ಯಾವರ್ತಕ, ಪ್ರಥಮಪುರುಷ ಬಹುವಚನಗಳಲ್ಲಿನ ವ್ಯತ್ಯಾಸ ಹಳಗನ್ನಡ, ನಡುಗನ್ನಡಗಳಲ್ಲಿರುವಂತೆಯೇ ಇದೆ.

**ಕುರುಬ :** (ಕುರುಂಬ): ಕೇರಳದ ವೈನಾಡು (ಮಲಬಾರು), ತಮಿಳು ನಾಡಿನ ನೀಲಗಿರಿ, ಕರ್ನಾಟಕದ ಮೈಸೂರು ಮತ್ತು ಕೊಡಗು ಜಿಲ್ಲೆಗಳ ಬೆಟ್ಟಗುಡ್ಡಗಳಲ್ಲಿ ವಾಸಿಸುವ ಕುರುಬ ಎಂಬ ಆದಿವಾಸಿ ಜನಾಂಗದವರು ಈ ಭಾಷೆಯನ್ನಾಡುತ್ತಾರೆ. ಕುರುಬರಲ್ಲಿ ಪ್ರಮುಖವಾಗಿ ಊರುಕುರುಬ, ಕಾಡುಕುರುಬ ಎಂಬ ಎರಡು ಪಂಗಡಗಳಿವೆ. ಈ ಪಂಗಡಗಳಲ್ಲಿಯೂ ಹಲವಾರು ಒಳಪಂಗಡಗಳಿವೆ. ಇವರು ಆಡುವ ಭಾಷೆಯನ್ನು ಕುರುಬಕನ್ನಡ ಎಂದು ಕರೆಯುತ್ತಾರೆ. ಕನ್ನಡ ಭಾಷೆಯಲ್ಲಿ ಕಂಡುಬರುವ ಕೆಲವು ಸ್ವರ ಮತ್ತು ವ್ಯಂಜನ ಧ್ವನಿಮಾಗಳು ಈ ಭಾಷೆಯಲ್ಲೂ ಕಂಡುಬರುತ್ತವೆ. ಕಾಡುಕುರುಬರ ಭಾಷೆಯಲ್ಲಿ ಹಳಗನ್ನಡದ ಭಾಷಾಂಶಗಳು ಹೆಚ್ಚು. ಈ ಭಾಷೆಯ ಮೇಲೆ ತಮಿಳು ಮತ್ತು ಮಲೆಯಾಳಂ ಭಾಷೆಗಳು ಪ್ರಭಾವ ಬೀರಿದ್ದು ಕೆಲವರು ಭಾಷಾತಜ್ಞರು ಕುರುಬ ಭಾಷೆಯನ್ನು ಕನ್ನಡದ ಉಪಭಾಷೆ ಎಂದೂ ಮತ್ತೆ ಕೆಲವರು ತಮಿಳಿನ ಉಪಭಾಷೆ ಎಂದೂ ಅನುಮಾನಿಸಿದ್ದಾರೆ. (ಕೆ.ಕೆ.ಜಿ.)

## ಕನ್ನಡದಲ್ಲಿ ಅಂಕಣ ಸಾಹಿತ್ಯ :

ಇದೊಂದು ವಿಶಿಷ್ಟ ಬಗೆಯ ಪತ್ರಿಕಾಸಾಹಿತ್ಯ. ಪತ್ರಿಕೆಗಳಲ್ಲಿ ನಿಯತವಾಗಿ ಬರೆಯುವ ನಿರ್ದಿಷ್ಟ ಲೇಖನಕ್ಕೆ ಅಂಕಣ ಬರೆಹವೆಂದು ಹೆಸರು. ಕನ್ನಡದಲ್ಲಿ ಅಂಕಣ ಹಾಗೂ ಅಂಕಣ ಸಾಹಿತ್ಯದ ಪರಿಕಲ್ಪನೆ ಇಂಗ್ಲಿಷ್ ಪತ್ರಿಕೋದ್ಯಮದಿಂದ ಬಂದಿದ್ದು. ಇಂಗ್ಲಿಷಿನ ಕಾಲಂ ಎಂಬ ಪದ ಹಾಗೂ ಪರಿಕಲ್ಪನೆಗೆ ಸಂವಾದಿಯಾಗಿ ಕನ್ನಡದಲ್ಲಿ ಅಂಕಣ ಎಂಬ ಪದ ಬಳಕೆಯಾಗುತ್ತಿದೆ. ಯಾವುದೇ ವಸ್ತು ವಿಷಯವನ್ನು ಕುರಿತು ಒಂದು ನಿರ್ದಿಷ್ಟ ಪತ್ರಿಕೆ ಅಥವಾ ನಿಯತಕಾಲಿಕೆಗೆ ತಮ್ಮ ವೈಯಕ್ತಿಕ ಚಿಂತನೆಯನ್ನು ಸೇರಿಸಿ ನಿಯತವಾಗಿ ಬರೆಯುವವನೇ 'ಅಂಕಣಕಾರ'. ಅಂಕಣ ಬರೆಹದಲ್ಲಿ ಅಂಕಣಕಾರ ಸಮಕಾಲೀನ ವಸ್ತು ವಿಷಯಗಳಿಗೆ ಸ್ವಂತಿಕೆಯ ಲೇಪ ಹಾಗೂ ಛಾಪನ್ನು ನೀಡಬೇಕಾಗುತ್ತದೆ. - ಇದು ಅಂಕಣ ಬರೆಹದ ಒಂದು ಮುಖ್ಯಲಕ್ಷಣವಾಗಿದೆ.

ಇಂಗ್ಲಿಷ್‌ನಲ್ಲಿ ಅಂಕಣ ಸಾಹಿತ್ಯಕ್ಕೆ ಒಂದು ದೀರ್ಘ ಪರಂಪರೆಯೇ ಇದೆ. ಬೆಂಜಮಿನ್ ಫ್ರಾಂಕ್ಲಿನ್‌ನ ಸಹೋದರನಾದ ಜೇಮ್ಸ್ (ನ್ಯೂ ಇಂಗ್ಲೆಂಡ್ ಕೋರಂಟ್), ಜಾನ್ ಡಿಕಿನ್‌ಸನ್ಸ್ [ಲೆಟರ್ಸ್ ಫ್ರಂ ಎ ಫಾರ್ಮರ್ ಇನ್ ಪೆನ್ಸಿಲ್‌ವೇನಿಯ ಟು ದಿ ಇನ್ ಹ್ಯಾಬಿಟಂಟ್ಸ್ ಆಫ್ ದಿ ಬ್ರಿಟಿಷ್ ಕಾಲನಿಸ್, ಪೆನ್ಸಿಲ್‌ವೇನಿಯ ಕ್ರಾನಿಕಲ್ (1767-68)], ಅಲೆಕ್ಸಾಂಡರ್ ಹ್ಯಾಮಿಲ್ಟನ್, ಜೆಮ್ಸ್ ಮ್ಯಾಡಿಸನ್, ಜಾನ್ ಜೇ [ಫೆಡರಲಿಸ್ಟ್ ಲೇಟರ್ಸ್ ಇಂಡಿಪೆಂಡಂಟ್ ಜರ್ನಲ್ ಅಥವಾ ಜನರಲ್ ಅಡ್ವರ್ಟೈಸರ್ (1787-88)] ಮೊದಲಾದವರು ಅಂಕಣ ಸಾಹಿತ್ಯದಲ್ಲಿ ಆದ್ಯ ಬರೆಹಗಾರರಾಗಿದ್ದರು. ಆಂಬ್ರೋಸ್ ಬಿಯರ್ಸ್ (ಸ್ಯಾನ್‌ಫ್ರಾನ್ಸಿಸ್ಕೋ ಎಕ್ಸಾಮಿನರ್), ಅನಂತರದಲ್ಲಿ ಯೂಜಿನ್ ಫೀಲ್ಡ್ (ಡೆನ್ವರ್ ಟ್ರಿಬ್ಯೂನ್), ಹೊರೇಸ್ ಗ್ರೀಲಿ, ಜೇಮ್ಸ್ ಗೇರ್ಡನ್ ಬೆನ್ನಟ್, ಹೆನ್ರಿ, ವಾಟರ್‌ಸನ್ ಮೊದಲಾದವರು ಈ ಪರಂಪರೆಯನ್ನು ಮುಂದುವರಿಸಿದರು. ಪತ್ರಿಕಾ ಓದುಗರು ಸಂಪಾದಕೀಯದ ಜೊತೆಗೆ ಅಂಕಣ ಬರೆಹಗಳನ್ನೂ ಬಯಸುತ್ತಿದ್ದರು. ಕೆಲವೊಮ್ಮೆ ಅಂಕಣ ಬರೆಹಗಳು ಜನಸಾಮಾನ್ಯರ ಅಭಿಪ್ರಾಯ ಧ್ವನಿಯಾಗಿರುತ್ತಿದ್ದವು. ಹೀಗೆ ಬೆಳೆದ ಅಂಕಣ ಬರೆಹ ಪತ್ರಿಕೋದ್ಯಮದಲ್ಲಿ ಒಂದು ಚಿರಸ್ಥಾನವನ್ನು ಪಡೆಯಿತಲ್ಲದೆ ಇದಕ್ಕೆ ಒಂದು ಪರಂಪರೆಯೂ ಸೃಷ್ಟಿಯಾಯಿತು. ಇತ್ತೀಚಿನ ಸಮೀಕ್ಷೆಯ ಪ್ರಕಾರ ಪ್ರಪಂಚದ ಇಂಗ್ಲಿಷ್ ಮತ್ತಿತರ ಭಾಷೆಗಳ ಪತ್ರಿಕೋದ್ಯಮಕ್ಕೆ ಅಂಕಣ ಬರೆಹಗಳನ್ನು ಬರೆಹಗಾರರಿಂದ ಒದಗಿಸಿಕೊಡುವ ಸುಮಾರು ಇನ್ನೂರಕ್ಕೂ ಹೆಚ್ಚು 'ಸಿಂಡಿಕೇಟ್'ಗಳು ಕಾರ್ಯನಿರ್ವಹಿಸುತ್ತಿವೆ.

ಕನ್ನಡದಲ್ಲಿ ಅಂಕಣ ಸಾಹಿತ್ಯ 20ನೆಯ ಶತಮಾನದ ಆರಂಭದಲ್ಲಿ ಕಾಣಿಸಿಕೊಳ್ಳತೊಡಗಿತು. ಕನ್ನಡ ಪತ್ರಿಕೋದ್ಯಮದ ಆರಂಭವನ್ನು 'ಮಂಗಳೂರ ಸಮಾಚಾರ' (1843) ಪತ್ರಿಕೆಯಿಂದ ಗುರುತಿಸಲಾಗುತ್ತಿದೆ. ಅಂಕಣ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಬಗೆಯ ಗದ್ಯವಿರುತ್ತದೆ. ಇತ್ತ ವರದಿಯೂ ಅಲ್ಲದ ಅತ್ತ ಪೂರ್ಣವಾಗಿ ಸಾಹಿತ್ಯವೂ ಅಲ್ಲದ ಆದರೆ ಸಮಕಾಲೀನ ಆಗುಹೋಗುಗಳನ್ನು ಹಿಡಿದಿಡುವ ಸೃಜನಶೀಲತೆಯ ಸೆಲೆಯುಳ್ಳ ಬರೆಹವೇ ಕನ್ನಡ ಅಂಕಣ ಸಾಹಿತ್ಯವೆನಿಸಿಕೊಂಡಿತು. ಕನ್ನಡದ ಸಾಹಿತಿ

ಪತ್ರಿಕೋದ್ಯಮಿಗಳಾದ ಡಿವಿಜಿ ಮತ್ತು ಮಾಸ್ತಿ ವೆಂಕಟೇಶಅಯ್ಯಂಗಾರ್ ಅವರ ಸಂಪಾದಕೀಯ ಬರೆಹಗಳು ಕನ್ನಡ ಅಂಕಣ ಸಾಹಿತ್ಯದ ಉಗಮಕ್ಕೆ ತೋರುದೀವಿಗೆಗಳಾದವು. ಕನ್ನಡ ಪತ್ರಿಕೋದ್ಯಮ ಬೆಳೆಯುತ್ತ ಬಂದಂತೆ ಅದರ ವ್ಯಾಪ್ತಿಯೂ ವಿಸ್ತಾರವಾಗತೊಡಗಿತು. ಸಂಪಾದಕೀಯ ಬರೆಹಗಳ ಜೊತೆಗೆ ಅಂಕಣಗಳು ಪ್ರತ್ಯೇಕವಾಗಿ ಕಾಣಿಸಿಕೊಳ್ಳಲು ಆರಂಭವಾದವು. ಸ್ವದೇಶಾಭಿಮಾನಿ, ಅಂತರಂಗ, ದೇಶಬಂಧು, ಛಾಯಾ, ಪ್ರಜಾಮತ, ಪ್ರಜಾವಾಣಿ, ಕನ್ನಡ ಪ್ರಭ, ಕರ್ಮವೀರ, ವಿಶ್ವಕರ್ನಾಟಕ, ಪ್ರಪಂಚ ಮುಂತಾದ ಪತ್ರಿಕೆಗಳು ಅಂಕಣ ಬರೆಹಗಳಿಗೆ ವೇದಿಕೆಯನ್ನು ನೀಡಿದವಲ್ಲದೆ ಅಂಕಣ ಬರೆಹಕ್ಕೆ ಒಂದು ಆಯಾಮವನ್ನೂ ಕೊಟ್ಟವು. ಸಿದ್ಧವನಹಳ್ಳಿ ಕೃಷ್ಣಶರ್ಮ, ನಿರಂಜನ, ಎಚ್ಚೆಸ್ಕೆ, ಹಾ.ಮಾ.ನಾಯಕ, ಕು.ಶಿ,ಹರಿದಾಸಭಟ್ಟ, ಪಾ.ವೆಂ.ಆಚಾರ್ಯ, ತಿ.ತಾ.ಶರ್ಮ, ಎನ್ಕೆ, ಎಂ.ವಿ.ಕಾಮತ್, ಕಲ್ಲೆ ಶಿವೋತ್ತಮರಾವ್, ಕೀರ್ತಿನಾಥ ಕುರ್ತಕೋಟಿ, ಟಿ.ಎಸ್.ರಾಮ ಚಂದ್ರರಾವ್, ಬಿ.ವಿ.ವೈಕುಂಠರಾಜು, ಪಿ.ಲಂಕೇಶ್, ವೈಎನ್ಕೆ, ಜಿ.ವೆಂಕಟಸುಬ್ಬಯ್ಯ, ಸಿ.ವಿ.ರಾಜಗೋಪಾಲ ಬಿ.ಎ.ವಿವೇಕ ರೈ, ಎಸ್.ಎನ್.ಹೆಗಡೆ, ಸೋಮಶೇಖರ ಇಮ್ರಾಪುರ, ಲಿಂಗದೇವರು ಹಳೆಮನೆ ಮೊದಲಾದವರ ಅಂಕಣಗಳು ವಿಶಿಷ್ಟವಾದವು. ಪ್ರಸ್ತುತ ಕನ್ನಡ ಪತ್ರಿಕೋದ್ಯಮದಲ್ಲಿ ಈಗ ಅಂಕಣ ಬರೆಹ ಇಲ್ಲದ ಒಂದು ಪತ್ರಿಕೆಯೂ ಇಲ್ಲ ಎನ್ನಬಹುದು.

ಅಂಕಣ ಬರೆಹದ ವೈಶಿಷ್ಟ್ಯವೆಂದರೆ ಸಾಮಾನ್ಯ ಓದುಗರಿಂದ ಹಿಡಿದು ವಿದ್ವಾಂಸರ ತನಕ ಎಲ್ಲರನ್ನೂ ಆಕರ್ಷಿಸುವ ಗುಣವನ್ನು ಪಡೆದುಕೊಂಡಿರುವುದೇ ಆಗಿದೆ. ಓದುಗರಲ್ಲಿ ಅಭಿರುಚಿ ಮೂಡಿಸುವ ಕಾರ್ಯವನ್ನು ಅಂಕಣ ಬರೆಹ ಮಾಡುತ್ತದೆ. ಅಂಕಣ ಬರೆಹಗಳು ಆತ್ಮಕೇಂದ್ರಿತವೆ, ಸಮಾಜ ಸಾಹಿತ್ಯ ಸಂಸ್ಕೃತಿ ಕೇಂದ್ರಿತವೆ ಎಂಬ ಪ್ರಶ್ನೆಯೂ ಇದೆ. ಸಾಮಾನ್ಯವಾಗಿ ಅಂಕಣ ಬರೆಹದಲ್ಲಿ ಲೇಖಕ ನಾನು ಎಂಬ ಪ್ರತ್ಯಯವನ್ನು ಬಳಸಿದರೂ ಅದು ಆತ್ಮಕೇಂದ್ರಿತ ಅಥವಾ ಅಹಮಿಕೆಯನ್ನು ಸೂಚಿಸುವ ಪದವಾಗಿ ಉಳಿಯುವುದಿಲ್ಲ; ಬದಲಿಗೆ ಬರೆಹಕ್ಕೆ ಸಂವಾದ ಸ್ವರೂಪವನ್ನು ನೀಡುತ್ತದೆ.

ಅಂಕಣ ಬರೆಹಕ್ಕೆ ಸಮಕಾಲೀನ ಸಮಾಜದ ಯಾವ ಮುಖವಾದರೂ ವಸ್ತುವಾಗಬಹುದೆಂದು ಪ್ರಸಿದ್ಧ ಅಂಕಣಕಾರರಾದ ಹಾ.ಮಾ. ನಾಯಕರು ಅಭಿಪ್ರಾಯಪಟ್ಟಿದ್ದಾರೆ. ಹೆಚ್ಚಿನ ಅಂಕಣ ಬರೆಹಗಳು ಸಮಕಾಲೀನ ರಾಜಕೀಯ ವಿದ್ಯಾಮಾನಗಳನ್ನು ಕುರಿತಿರುತ್ತವೆ. ಸಾಹಿತ್ಯಕ ಪ್ರಸ್ತಾಪವುಳ್ಳ ಅಂಕಣಗಳು ಕನ್ನಡದಲ್ಲಿ ವಿರಳ. ವಿಜ್ಞಾನ, ಸಂಗೀತ, ಕಲೆ, ಶಿಕ್ಷಣ, ವೈದ್ಯಕೀಯ, ಕ್ರೀಡೆ ಮುಂತಾದ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಅಂಕಣಗಳು ದುರ್ಲಭವೇನಲ್ಲ. ಈಗೀಗ ಲಘು ಹರಟೆಗಳೂ ಅಂಕಣ ಬರೆಹದಲ್ಲಿ ಸ್ಥಾನಪಡೆದಿವೆ. ಸಾಹಿತ್ಯ ವಿಚಾರ ಪ್ರಧಾನವಾದ ಅಂಕಣಗಳಲ್ಲಿ ಸಾಮಾನ್ಯವಾಗಿ ವ್ಯಕ್ತಿ, ಕೃತಿ, ಸಂಸ್ಕೃತಿ, ಶಿಕ್ಷಣ ಹಾಗೂ ಕಲೆಗಳನ್ನು ಕುರಿತ ಚಿಂತನೆ ಇರುತ್ತದೆ. ಈ ಬಗೆಯ ಕನ್ನಡ ಅಂಕಣಕಾರರಲ್ಲಿ ನಿರಂಜನರೇ ಆದ್ಯರು. 'ಉಷಾ' ಪತ್ರಿಕೆಯಲ್ಲಿ ಬರೆದ ಸರೋಜ ಸಂಚಯ ಎಂಬ ಅಂಕಣ 'ಜನಪ್ರಗತಿ' ಪತ್ರಿಕೆಯಲ್ಲಿ ಬರೆದ ಸಾಧನ ಸಂಚಯ ಎಂಬ ಅಂಕಣ, 'ಚಿತ್ರಗುಪ್ತ' ಪತ್ರಿಕೆಯ ಐದು ನಿಮಿಷ ಎಂಬ ಅಂಕಣ, 'ಪ್ರಜಾವಾಣಿ' ಪತ್ರಿಕೆಯ ಬೇವು ಬೆಲ್ಲ ಎಂಬ ಅಂಕಣ 'ಕರ್ಮವೀರ' ಪತ್ರಿಕೆಯ ರಾಜ್ಯದ ರಾಜಧಾನಿಯಿಂದ ಹಾಗೂ ಅನಂತರದಲ್ಲಿ ನನ್ನ ದಿನಚರಿಯಿಂದ ಎಂಬ ಅಂಕಣಗಳು ಪ್ರಸಿದ್ಧವಾಗಿದ್ದವು. ಜಿ.ಪಿ.ರಾಜರತ್ನಂ ಅವರ ವಿಚಾರ ಸರಣಿ ವಿ.ಎಂ.ಇನಾಂದಾರರ ಸಾಹಿತ್ಯ ವಿಹಾರ, ಕು.ಶಿ.ಹರಿದಾಸಭಟ್ಟರ ಲೋಕಾಭಿರಾಮ, ಇವು ಪ್ರಮುಖ ಸಾಹಿತ್ಯಕ ಅಂಕಣಗಳಾಗಿದ್ದವು. ಇದೇ ವರ್ಗಕ್ಕೆ ಸೇರುವ, ಆದರೆ ಹೆಚ್ಚುಕಾಲ ಬರೆಯದ ಅಂಕಣಕಾರರಲ್ಲಿ ಸಿದ್ಧವನಹಳ್ಳಿ ಕೃಷ್ಣಶರ್ಮ, ಶ್ರೀರಂಗ, ಬಸವರಾಜ ಕಟ್ಟೀಮನಿ, ತರಾಸು, ಹಿರೇಮಲ್ಲೂರು ಈಶ್ವರನ್, ಬಿ.ಭಾಸ್ಕರರಾವ್, ಪಾಟೀಲ ಪುಟ್ಟಪ್ಪ, ಎಲ್.ಎಸ್.ಶೇಷಗಿರಿರಾವ್, ನಾ.ಡಿಸೋಜ ಮುಂತಾದವರನ್ನು ಹೆಸರಿಸಬಹುದು.

ಕನ್ನಡದಲ್ಲಿ ಹೆಚ್ಚು ನಿಯತಕಾಲಿಕೆಗಳಿಗೆ ಹೆಚ್ಚುಕಾಲ ಸಾಹಿತ್ಯಕ ಅಂಕಣ ಬರೆದವರಲ್ಲಿ ಹಾ.ಮಾ.ನಾಯಕ ಮತ್ತು ಎಚ್ಚೆಸ್ಕೆ ಅವರನ್ನು ಹೆಸರಿಸಬಹುದು. ಎಚ್ಚೆಸ್ಕೆ ಅವರ ಅಂಕಣ ಸಾಹಿತ್ಯಕ್ಕಷ್ಟೇ ಸೀಮಿತವಲ್ಲ, ಆರ್ಥಿಕ ವಿಚಾರ, ವ್ಯಕ್ತಿವಿಷಯ, ರಾಜಕೀಯ ಮುಂತಾದವೂ ಅಲ್ಲಿ ಪ್ರಸ್ತಾಪಗೊಳ್ಳುತ್ತವೆ. ಎಚ್ಚೆಸ್ಕೆ ಅವರು ದೇಶಬಂಧು, ವಿಶ್ವಕರ್ನಾಟಕ, ಛಾಯಾ, ಕನ್ನಡನುಡಿ, ಪ್ರಜಾವಾಣಿ, ಸುಧಾ ಪತ್ರಿಕೆಗಳಲ್ಲಿ ಐದಾರು ದಶಕಗಳ ಕಾಲ ಅಂಕಣ ವ್ಯವಸಾಯ ಮಾಡಿದ್ದಾರೆ. ವಾರದಿಂದ ವಾರಕ್ಕೆ, ವಾರದ ವ್ಯಕ್ತಿ, ವ್ಯಕ್ತಿ, ವಿಷಯ, ಆರ್ಥಿಕ ನೋಟ, ದುರ್ಬೀನು ತರಂಗ, ಮುಂತಾದವು ಇವರ ಅಂಕಣ ಶೀರ್ಷಿಕೆಗಳು. ಇತ್ತೀಚೆಗೆ ಇಂಗ್ಲಿಷ್‌ನಲ್ಲಿಯೂ ಸ್ಟಾರ್ ಆಫ್ ಮೈಸೂರು ಪತ್ರಿಕೆಯಲ್ಲಿ ಅಂಕಣಗಳನ್ನು ಬರೆಯುತ್ತಿದ್ದಾರೆ.

ಸಾಹಿತ್ಯ ಹಾಗೂ ಸಂಸ್ಕೃತಿಯನ್ನೇ ಅಂಕಣದ ಧ್ಯೇಯ ಹಾಗೂ ಮೂಲವಸ್ತು ಎನ್ನುವಂತೆ ಪರಿಗಣಿಸಿ ಬಹುದೀರ್ಘಕಾಲ ಅಂಕಣ ಕೃಷಿಯನ್ನು ನಡೆಸಿದವರು ಹಾ.ಮಾ. ನಾಯಕರು. ಇವರು ಅಂಕಣ ಪ್ರಕಾರಕ್ಕೆ ಒಂದು ಸಿದ್ಧಿಯನ್ನು ದೊರಕಿಸಿಕೊಟ್ಟವರು. ಇವರು 1951ರಲ್ಲಿ ನಂದಿನಿ ಎಂಬ ಪತ್ರಿಕೆಗೆ ಪೂರ್ಣಿಮೆಗೆ ಪತ್ರಗಳು ಎಂಬ ಶೀರ್ಷಿಕೆಯಲ್ಲಿ ಅಂಕಣ ಬರೆಹ ಆರಂಭಿಸಿದರು. ಅನಂತರ 'ನಾ ಕಂಡ ಸಾಹಿತಿಗಳು' ಅಂಕಣ ಬರೆದರು. ಕನ್ನಡ ಪ್ರಭದಲ್ಲಿ 1967 ರಿಂದ ಸಾಹಿತ್ಯ ಸಲ್ಲಾಪ ಎಂಬ ಅಂಕಣ ಬರೆಯಲಾರಂಭಿಸಿದರು. ಅನಂತರ ಡಾ.ಹಾ.ಮಾ.ನಾಯಕ ಬರೆಯುತ್ತಾರೆ (ಪ್ರಜಾಮತ), ವರ್ತಮಾನ (ಇಂಚರ), ಸಂಪ್ರತಿ (ಪ್ರಜಾವಾಣಿ), ಸ್ವಗತ (ತರಂಗ), ತಿಂಗಳ ಪುಸ್ತಕ (ಗ್ರಂಥಲೋಕ), ಗ್ರಂಥಲೋಕದ ಸುತ್ತಮುತ್ತ ಹಾಗೂ ತಿಂಗಳ ಆಯ್ಕೆ (ಗ್ರಂಥಲೋಕ), ಪುಸ್ತಕ ಪ್ರಸಂಗ (ಸಂಕೇತ) ಪುಸ್ತಕ ಪ್ರಸ್ತಾಪ (ಕರ್ಮವೀರ), ಸಂಪ್ರತಿ (ಸುಧಾ) ಇವು ಇವರ ಮುಖ್ಯವಾದ ಸಾಹಿತ್ಯಕ ಅಂಕಣಗಳು. ಐದು ದಶಕಗಳ ಕಾಲ ನಿರಂತರವಾಗಿ ಇವರು ಒಂದಲ್ಲ ಒಂದು ಸಾಹಿತ್ಯಕ ಅಂಕಣವನ್ನು ಬರೆದಿದ್ದಾರೆ. ನಿರಂಜನರು ಆರಂಭಿಸಿದ ಸಾಹಿತ್ಯಕ ಅಂಕಣ ಬರೆಹಗಳಿಗೆ ಸಾರ್ವಕಾಲಿಕತೆಯ ರೂಪಕೊಟ್ಟು ಅಂಕಣ ಬರೆಹವನ್ನು ಕೀರ್ತಿಶಿಖರಕ್ಕೆ ಏರಿಸಿದವರು ಹಾ.ಮಾ. ನಾಯಕರು. ಇವರು ಅಂಕಣ ಬರೆಹಕ್ಕೆ ರಾಷ್ಟ್ರೀಯ ಮಟ್ಟದಲ್ಲಿ ಸ್ಥಾನ ಕಲ್ಪಿಸಿಕೊಟ್ಟರು. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಮೊದಲ ಅಂಕಣಕಾರರೆಂಬ ಖ್ಯಾತಿಗೆ ಪಾತ್ರರಾದರು. ಆ ಮೂಲಕ ಅಂಕಣ ಸಾಹಿತ್ಯದ ಹಾಗೂ ಕನ್ನಡದ ಪ್ರತಿಷ್ಠೆಯನ್ನು ರಾಷ್ಟ್ರೀಯ ಮಟ್ಟದಲ್ಲಿ ಏರಿಸಿದರು. ಇಂದು ಕನ್ನಡ ಅಂಕಣ ಸಾಹಿತ್ಯ ವೈವಿಧ್ಯಪೂರ್ಣವಾಗಿ ಬೆಳೆದಿದೆ. ಬೆಳೆಯುತ್ತಿದೆ. ಕೆಲವು ಪತ್ರಿಕೆಗಳು ನಿತ್ಯ ಅಂಕಣವನ್ನೂ ಪ್ರಕಟಿಸುತ್ತಿವೆ. ಇದು ಅಂಕಣ ಬರೆಹದ ಜನಪ್ರಿಯತೆಗೆ ಸಾಕ್ಷಿ.

ಅಂಕಣ ಬರೆಹಗಳು ಕೃತಿರೂಪಗಳನ್ನೂ ಪಡೆದಿವೆ. ನಿರಂಜನರ ಅಂಕಣ (1972), ರಾಜಧಾನಿಯಿಂದ (1972) ಇಂಥ' ಪರಂಪರೆಗೆ ಮೂಲ. ಹಾಮಾನಾ ಅವರ ಸಾಹಿತ್ಯ ಸಲ್ಲಾಪ, ಸಂಪ್ರತಿ ಮುಂತಾದ ಹತ್ತೊಂಬತ್ತು ಅಂಕಣ ಗ್ರಂಥಗಳು, ಎಚ್ಚೆಸ್ಕೆ ಅವರ ಬೆಳಕು ಚೆಲ್ಲಿದ ಬದುಕು (1998), ಮಾನ್ಯರು-ಸಾಮಾನ್ಯರು (1999), ಗಗನಚುಕ್ಕಿ-ಭರಚುಕ್ಕಿ (2000), ಹೊನ್ನಾರು ಕಟ್ಟಿದವರು ಹೊನ್ನಬಿತ್ತಿಬೆಳೆದವರು (2004); ಕು.ಶಿ.ಹರಿದಾಸಭಟ್ಟರ 'ಲೋಕಾಭಿರಾಮ' ಸಂಪುಟಗಳು ಹೆಸರಿಸಬೇಕಾದ ಅಂಕಣ ಗ್ರಂಥಗಳು. (ಎಸ್.ಬಿಎಚ್‌ಎ.)

**ಕನ್ನಡದಲ್ಲಿ ಅಕ್ಷರಮಾಲಿಕೆಗಳು** : ವರ್ಣಮಾಲೆಯ ಅಕ್ಷರಗಳ ಅನುಕ್ರಮದಲ್ಲಿ ಪದ್ಯಗಳ ಆರಂಭವಿದ್ದು ಕವಿಯ ಇಷ್ಟದೇವತೆಯ ಸ್ತುತಿ ಮುಖ್ಯ ವಿಷಯವಾಗಿರುವ ಸ್ತೋತ್ರ ಸಾಹಿತ್ಯದ ಒಂದು ಬಗೆಯಾದ ಅಕ್ಷರಮಾಲಿಕೆಯ ಪ್ರಕಾರವನ್ನು ಕನ್ನಡ ಸಾಹಿತ್ಯದಲ್ಲಿ ಜೈನ, ವೀರಶೈವ ಮತ್ತು ಬ್ರಾಹ್ಮಣ ಕವಿಗಳು ಬಳಸಿದ್ದಾರೆ. ಒಂದೆರಡು ಮಾತ್ರ ಅಚ್ಚಾಗಿವೆ. ಇವುಗಳ ಪದ್ಯಗಳು ಸಾಮಾನ್ಯವಾಗಿ ಕಂದಗಳು.

ಈಗ ತಿಳಿದಿರುವ ಮಟ್ಟಿಗೆ ಪೊನ್ನನ (ಸು.950) ಜಿನಾಕ್ಷರಮಾಲೆ ಕನ್ನಡದ ಮೊದಲನೆಯ ಅಕ್ಷರಮಾಲಿಕೆ. ಇದರಲ್ಲಿ ಕರ್ತೃವಿನ ಹೆಸರನ್ನು ಕುರುಳ್ಗಳ ಸವಣ ಎಂದು ಹೇಳಿದೆ. ಇದು ಪೊನ್ನಕವಿಯ ಹೆಸರೆಂದು ತಿಳಿದಿರುವುದರಿಂದ, ಈತನೇ ಇದರ ಕರ್ತೃವೆಂದು ಭಾವಿಸಲಾಗಿದೆ. ಆದರೆ ಪೊನ್ನನ ಕರ್ತೃತ್ವವನ್ನು ವಿದ್ವಾಂಸರು ಸಂದೇಹಿಸಿರುವುದೂ ಉಂಟು. ಈ ಕೃತಿಯಲ್ಲಿ ಒಟ್ಟು 39 ಕಂದ ಪದ್ಯಗಳಿವೆ; ಜಿನಸ್ತುತಿ ಮುಖ್ಯ ವಿಷಯವಾಗಿದೆ. ಸಂಸ್ಕೃತ ಸ್ತೋತ್ರಗಳಲ್ಲಿ ಕಾಣುವಂತೆ ಅಂತಾದಿ ಕ್ರಮವನ್ನು ಅನುಸರಿಸಿದೆ. ಅಂತಾದಿ ಕ್ರಮ ಎಂದರೆ ಹಿಂದಿನ ಪದ್ಯದ ಅಂತ್ಯಾಕ್ಷರದಿಂದ ಮುಂದಿನ ಪದ್ಯ ಆರಂಭವಾಗುವುದು ಎಂದು ಅರ್ಥ. ಹೀಗೆ ಆರಂಭವಾಗುವಾಗ ಪದ್ಯಗಳಲ್ಲಿ ವರ್ಣಮಾಲೆಯ ಅನುಕ್ರಮ

ತಪ್ಪದಂತಿರಬೇಕಾದರೆ ಹಿಂದಿನ ಪದ್ಯದ ಅಂತಾಕ್ಷರ ಆ ಪದ್ಯದ ಆದ್ಯಕ್ಷರದ ಮುಂದಿನ ವರ್ಣಮಾಲಾಕ್ಷರವೇ ಆಗಿರುತ್ತದೆ. ಅಕ್ಷರಮಾಲಿಕೆಯ ರಚನಾಪದ್ಧತಿಯನ್ನೂ ಇದರಲ್ಲಿ ಒಮ್ಮೊಮ್ಮೆ ಪಾಲಿಸುವ ಅಂತಾದಿ ಕ್ರಮವನ್ನೂ ತಿಳಿಯಲು ಇಲ್ಲಿ ಎರಡು ಉದಾಹಣೆಗಳನ್ನು ಜಿನಾಕ್ಷರಮಾಲೆಯಿಂದ ಎತ್ತಿಕೊಡಲಾಗಿದೆ:

ಕಂತುಮದಹರ ದುರಿತಬಲಾಂತಕ ದಿವಿಜೇಂದ್ರವಂದ್ಯ ನಿರ್ವೃತಿಲಕ್ಷ್ಮೀ
ಕಾಂತಭವತ್ಪದಯುಗಮಂ ಚಿಂತಿಸುವಂಗಾವುದರಿದು ತುಹಿನಕರನಾಖಾ ||
ಖಚರ ಸುರೋರಗನರ ರಾತ್ರಿಚರ ಚಮೂವಂದ್ಯ ನೆಱೆಯೆ ಭಾವಿಸುವಾಗಳ್
ಸಚರಾಚರೋರ್ವ್ವಿಯೊಳ್ ನಿನ್ನ ಚರಿತ್ರಂ ಚಿತ್ರಮೆಂದು ಪೊಗಳ್ದಪುದು ಜಗಂ||

ನಾಗಚಂದ್ರ (ಸು.1130) ಒಂದು ಜಿನಾಕ್ಷರಮಾಲೆಯನ್ನು ಬರೆದಿದ್ದಂತೆ ದೇವಚಂದ್ರನ ರಾಜಾವಳೀ ಕಥೆಯಲ್ಲಿ ಹೇಳಿದೆ. ವೀರಶೈವಕವಿ ಹರಿಹರನೂ (ಸು.1200) ಒಂದು ಶಿವಾಕ್ಷರಮಾಲೆಯನ್ನು ರಚಿಸಿದ್ದನೆಂದು ಭಾವಿಸಲಾಗಿದೆ. ಆದರೆ ಇವು ದೊರೆತಿಲ್ಲ. ಅಜ್ಞಾತಕರ್ತೃಕವಾದ ಶಿವಾಕ್ಷರಮಾಲೆಯೊಂದನ್ನು (ಸು.1400) ಕವಿಚರಿತೆಕಾರರು ಗುರುತಿಸಿದ್ದಾರೆ. ಇದರಲ್ಲಿ 44 ಕಂದಗಳಿವೆಯೆಂದು ಸೂಚಿಸಿದ್ದಾರೆ. ಇವರೇ ಸೂಚಿಸಿರುವ 39 ಕಂದಗಳ ಹರ್ಯಕ್ಷರಮಾಲೆ (ಸು.1400) ಎಂಬುದೂ ಅಜ್ಞಾತ ಕರ್ತೃಕವೇ ಆಗಿದೆ. ಇದು ಹರಿಯ ಅವತಾರವಾದ ರಾಮನ ಸ್ತುತಿಯಾಗಿರುವಂತೆ ತೋರುತ್ತದೆ.

ಚಿಕುಪಾಧ್ಯಾಯನ (ಸು.1672) ಅಕ್ಷರಮಾಲಿಕಾ 104 ಸಾಂಗತ್ಯದ ಪದ್ಯಗಳಲ್ಲಿ ಕವಿಯ ಇಷ್ಟದೇವತೆ ರಂಗನಾಥಸ್ವಾಮಿಯ ಸ್ತುತಿಯನ್ನು ಒಳಗೊಂಡ ಕೃತಿ. ಇದರಲ್ಲಿ ಮೊದಲು ಚತುರ್ವಿಂಶತಿ ವಿಷ್ಣುನಾಮಗಳನ್ನು ಯಥಾಕ್ರಮದಲ್ಲಿ ಸ್ತುತಿಸಿ, ಅನಂತರದಲ್ಲಿ ಅಕಾರಾದಿಯಾಗಿಯೂ ಕಾಗುಣಿತದ ಅಕ್ಷರಕ್ರಮದಲ್ಲಿಯೂ ರಂಗನಾಥನ ಸ್ತೋತ್ರ ಮಾಡಿರುವುದು ಕಂಡುಬರುತ್ತದೆ. ಅಂತಾದಿಕ್ರಮವನ್ನು ಅನುಸರಿಸಿಲ್ಲ. ಪ್ರತಿಯಾಗಿ ಪ್ರತಿಪದ್ಯದ ಎರಡೆರಡು ಪಾದಗಳ ಆದಿಯಲ್ಲಿ ಹಾಗೂ ಪದ್ಯದ ನಡುವೆ ಅಕಾರ ಮೊದಲುಗೊಂಡು ಕೊನೆಯ ಅಕ್ಷರದವರೆಗೆ ಆಯಾ ವರ್ಣಮಾಲೆಯ ಅಕ್ಷರ ಪುನರಾವೃತ್ತಿಗೊಳ್ಳುವಂತೆಯೂ ಕ್ರಮವಾಗಿ ಕಕಾರಾದಿ ವ್ಯಂಜನಾಕ್ಷರಗಳೊಂದೊಂದರ ಕಾಗುಣಿತವೂ ಒಂದೊಂದು ಪದ್ಯದಲ್ಲಿ ಬಳಕೆಯಾಗುವಂತೆಯೂ ರಚಿಸಲಾಗಿದೆ. ಇದರಲ್ಲಿ ಭಕ್ತಿಗಿಂತ ಹೆಚ್ಚು ಶಬ್ದ ಚಮತ್ಕಾರವೇ ಎದ್ದು ತೋರುತ್ತದೆ.

ನಂಜುಂಡೇಶ್ವರನ ಸ್ತುತಿಯಿರುವ ಕರ್ತೃ ತಿಳಿಯದ ಒಂದು ಅಕ್ಷರಮಾಲಿಕೆ (ಸು.1700) ಶತಕಗಳಂತೆ ಇಷ್ಟದೈವದ ಅಂಕಿತದೊಡನೆ ಮುಗಿಯುವುದು ಗಮನಿಸತಕ್ಕದ್ದಾಗಿದೆ. ಪರಮದೇವನ (ಸು.1777) ನಾರಾಯಣಾಕ್ಷರಮಾಲಿಕೆ ದೊರೆತಿಲ್ಲ. ಮಾಣಿಕ್ಯಪುರದ ಜೈನಕವಿ ಪಾರಿಶನೆಂಬವನ ರಾಮವಿಜಯ ಎಂಬ ರಾಮಾಕ್ಷರ ಮಾಲೆಯೊಂದುಂಟು. ಇದರ ಕಾಲ ತಿಳಿಯದು. ನಡುಗನ್ನಡ ಕಾಲದ್ದಿರಬಹುದು. ಇದರಲ್ಲಿ 40 ಕಂದಪದ್ಯಗಳಿದ್ದು ಕೃತಿ ಪೊನ್ನನ ಜಿನಾಕ್ಷರಮಾಲೆಯಂತೆ ಅಂತಾದಿಕ್ರಮದಲ್ಲಿದೆ. ವಿಶೇಷವೆಂದರೆ ಇಷ್ಟದೇವತಾಸ್ತುತಿರೂಪದಲ್ಲಿರದೆ, ರಾಮಾಯಣ ಕಥೆಯನ್ನು ಸಂಕ್ಷೇಪವಾಗಿ ನಿರೂಪಿಸತಕ್ಕದ್ದಾಗಿದೆ. ಇದು ಜೈನ ಸಂಪ್ರದಾಯದ ರಾಮಾಯಣ ಕಥೆ. (ಟಿ.ವಿ.ವಿ.)

**ಕನ್ನಡದಲ್ಲಿ ಅಷ್ಟಕಗಳು :** ಸಾಮಾನ್ಯವಾಗಿ ಎಂಟು ಪದ್ಯಗಳ ಒಂದು ಗುಚ್ಛವನ್ನು ಅಷ್ಟಕವೆಂದು ಕರೆಯುವುದು ವಾಡಿಕೆ. ಈ ಪದ್ಯಗಳು ವೃತ್ತ ಷಟ್ಪದಿಗಳಾಗಿರಬಹುದು ಅಥವಾ ಮತ್ತೆ ಯಾವುದೇ ಛಂದೋರೂಪದಲ್ಲಿರಬಹುದು. ಎಲ್ಲ ಅಷ್ಟಕಗಳಲ್ಲಿಯೂ ಎಂಟು ಪದ್ಯಗಳೆ ಇರಬೇಕೆಂಬ ನಿಯಮ ನಿಯತವೇನೂ ಅಲ್ಲ. ಅನೇಕ ಅಷ್ಟಕಗಳಲ್ಲಿ ಈ ಸಂಖ್ಯೆ ಒಂಬತ್ತಾಗಬಹುದು, ಹತ್ತಾಗಬಹುದು, ಹನ್ನೊಂದಾಗಬಹುದು. ಅದು ಅನಿರ್ದಿಷ್ಟವಾಗಿ ಬೆಳೆದುಕೊಂಡು ಹೋಗಿರುವುದೂ ಉಂಟು. ಉದಾಹರಣೆಗೆ ಲಿಂಗಾಷ್ಟಕದಲ್ಲಿ ಎರಡೆರಡು ಪಂಕ್ತಿಯ ಪದ್ಯಗಳು ಐವತ್ತು ಇರುವುದು ಕಂಡುಬರುತ್ತದೆ. ಒಟ್ಟಾರೆ ನೋಡಿದಾಗ ಒಂಬತ್ತು ಪದ್ಯಗಳನ್ನೊಳಗೊಂಡಿರುವ ಅಷ್ಟಕಗಳೇ ಸಂಖ್ಯೆಯಲ್ಲಿ ಹೆಚ್ಚು ಕಂಡುಬರುತ್ತವೆ.

ಅಷ್ಟಕಗಳು ಇತರ ಪಂಚಕ, ಷಟ್ಕ, ದಶಕ, ಶತಕಗಳಂತೆ ಸ್ತೋತ್ರಸಾಹಿತ್ಯದ ಸಾಲಿನಲ್ಲಿ ಬರುತ್ತವೆ. ಇವುಗಳ ಪ್ರಧಾನ ವಿಷಯ ಭಕ್ತಿ ಮತ್ತು ವೈರಾಗ್ಯ, ಪ್ರತಿಯೊಂದು ಅಷ್ಟಕವೂ ಸಾಮಾನ್ಯವಾಗಿ ಇಷ್ಟದೈವವನ್ನು ಕುರಿತ ಸ್ತುತಿರೂಪವಾದ ಭಕ್ತಿಗೀತೆಯಾಗಿರುತ್ತವೆ. ಆ ಇಷ್ಟದೈವ ಜಿನನಾಗಬಹುದು. ಶಿವನಾಗಬಹುದು. ಹರಿಯಾಗಬಹುದು. ಅಥವಾ ಮತ್ತೆ ಯಾರಾದರೂ ಆಗಿರಬಹುದು. ಚಂದ್ರನಾಥಾಷ್ಟಕ, ಪಾರ್ಶ್ವನಾಥಾಷ್ಟಕ, ಹರ್ಯಷ್ಟಕ, ಲಿಂಗಾಷ್ಟಕ, ಶಂಕರಾಷ್ಟಕ, ವಿನಾಯಕಾಷ್ಟಕ, ಹೀಗೆ ವಿರಳವಾಗಿ ಅಷ್ಟಕಗಳಲ್ಲಿ ರಾಜನನ್ನು ಸ್ತುತಿಸಿರುವುದೂ ಉಂಟು. ದೇವರಾಜ ವಲ್ಲಭಾಷ್ಟಕ ಇದಕ್ಕೆ ನಿದರ್ಶನವಾಗಿದೆ. ವೈರಾಗ್ಯ, ತತ್ತ್ವಪ್ರತಿಪಾದನೆ ಮತ್ತು ಆತ್ಮನಿವೇದನೆಗಳೂ ಅಷ್ಟಕಗಳಲ್ಲಿ ವಿರಳವಾಗಿ ಕಂಡುಬರುತ್ತವೆ. ಪಂಚಪದಾಷ್ಟಕ ಮತ್ತು ತತ್ತ್ವಭೇದಾಷ್ಟಕಗಳು ವೈರಾಗ್ಯ ಮತ್ತು ತತ್ತ್ವಪ್ರತಿಪಾದನೆಯನ್ನು ಕುರಿತವಾಗಿವೆ. ಅಷ್ಟಕದ ಒಂದು ಸಾಮಾನ್ಯ ಲಕ್ಷಣವೆಂದರೆ ಅದರ ಪ್ರತಿಯೊಂದು ಪದ್ಯದ ಕೊನೆಯಲ್ಲೂ ಇಷ್ಟದೈವದ ಸಂಭೋದನೆಯಿರುತ್ತದೆ. ಚಂದ್ರನಾಥಾಷ್ಟಕದಲ್ಲಿ ಚಂದ್ರನಾಥಾ ಎಂಬ ಸಂಬೋಧನೆ ಪ್ರತಿಪದ್ಯದ ಕೊನೆಯಲ್ಲೂ ಬರುತ್ತದೆ. ಕೆಲವು ವೇಳೆ ಮೊದಲ ಪದ್ಯದ ಕೊನೆಯ ಸಾಲು ಪ್ರತಿಪದ್ಯದಲ್ಲಿಯೂ ಪುನರುಕ್ತವಾಗುತ್ತದೆ. ಷಡಕ್ಷರದೇವ ಸಂಸ್ಕೃತದಲ್ಲಿ ರಚಿಸಿರುವ ಸಿದ್ಧಲಿಂಗಾಷ್ಟಕದಲ್ಲಿ ಪ್ರತಿ ಪದ್ಯವೂ ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ಎಂಬುದರಿಂದ ಕೊನೆಯಾಗುತ್ತದೆ. *

**ಕನ್ನಡದಲ್ಲಿ ಕಾದಂಬರಿ ಸಾಹಿತ್ಯ :** ಇಂದಿನ ಸಾಹಿತ್ಯ ಪ್ರಕಾರಗಳಲ್ಲಿ ಕಾದಂಬರಿ ಅತ್ಯಂತ ಪ್ರಭಾವಶಾಲಿಯೂ ಜನಪ್ರಿಯವೂ ಆಗಿದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರೇರಣೆಯಿಂದ ಹೊಸಗನ್ನಡದಲ್ಲಿ ಸಣ್ಣಕಥೆ, ಪ್ರಬಂಧ, ಭಾವಗೀತೆ, ಜೀವನಚರಿತ್ರೆ ಮೊದಲಾದ ಹೊಸ ಪ್ರಕಾರಗಳು ಹುಟ್ಟಿದಂತೆ ನಾವೆಲ್ ಎಂಬ ಪ್ರಕಾರ ಕಾದಂಬರಿ ಎಂಬ ಹೆಸರಿನಿಂದ ಪ್ರಚುರವಾಯಿತು. ಕಾದಂಬರಿ ಎಂಬ ಹೆಸರು ಹೇಗೆ ಬಂದಿತೆಂಬ ವಿಷಯ ಕುತೂಹಲ ಹುಟ್ಟಿಸುವಂಥದ್ದು. ಸಂಸ್ಕೃತದಲ್ಲಿ ಬಾಣಭಟ್ಟ ರಚಿಸಿದ ಗದ್ಯಕಾವ್ಯ ಕಾದಂಬರಿ ಹೆಸರಿನಿಂದ ಪ್ರಸಿದ್ಧವಾಗಿದೆ. ಇದೇ ಉತ್ತರ ಕರ್ನಾಟಕದಲ್ಲಿ ತುರಮರಿಯವರಿಂದ ಕಾದಂಬರೀ ಕಾವ್ಯದ ಹೊಸಗನ್ನಡ ಗದ್ಯರೂಪ ಎಂಬ ಹೆಸರಿನಿಂದ ಪ್ರಕಟವಾಗಿ (1875) ಜನರ ಮನಸ್ಸನ್ನು ಸೂರೆಗೊಂಡಿತು. ಜೆ.ವೈ.ಕೃಷ್ಣಾಚಾರ್ಯರ ಕಾದಂಬರಿ ಕನ್ನಡ ಗದ್ಯಕಥೆಯ ಸವಿ ದಕ್ಷಿಣ ಕರ್ನಾಟಕದ ಮೈಸೂರು ಸಂಸ್ಥಾನದ ಜನರಿಗೆ ಉಂಟಾಗಿತ್ತು. ಕಾದಂಬರೀ ಕಾವ್ಯದ ಸೊಗಸು ನಾಗವರ್ಮನ ಕೃತಿಯ ಮೂಲಕ ಕನ್ನಡಿಗರಿಗೆ ಹಿಂದಿನಿಂದಲೂ ಪರಿಚಯವಾಗಿತ್ತು. ಕಥೆ, ಶೈಲಿ, ನಿರೂಪಣೆ, ವರ್ಣನೆಯ ಚಮತ್ಕೃತಿ, ರಸ ಮೊದಲಾದ ದೃಷ್ಟಿಗಳಿಂದ ಕಾದಂಬರೀ ಕಾವ್ಯ ಜನಮನವನ್ನು ಸೂರೆಗೊಂಡಿತು. ಆದುದರಿಂದ ಸಂಸ್ಕೃತದ ಕಾದಂಬರೀ ಕಾವ್ಯದಂತೆ ರಮ್ಯವಾದ ಎಲ್ಲ ಕೃತಿಗಳನ್ನೂ ಕಾದಂಬರಿ ಎಂಬ ಹೆಸರಿನಿಂದಲೇ ಕರೆಯುವ ವಾಡಿಕೆ ಏರ್ಪಟ್ಟಿತು. ಹೀಗಾಗಿ ನಾವೆಲ್ ಜಾತಿಗೆ ಕಾದಂಬರಿ ಎಂದು ಕನ್ನಡಿಗರು ಕೊಟ್ಟ ಹೆಸರು ಸಾರ್ಥಕವಾಗಿ ಸ್ಥಿರವಾಗಿ ಉಳಿಯಿತು.

ಕನ್ನಡ ಸಾಹಿತ್ಯದಲ್ಲಿ ನಾಗವರ್ಮನ ಕಾದಂಬರಿ, ದುರ್ಗಸಿಂಹನ ಪಂಚತಂತ್ರ, ನೇಮಿಚಂದ್ರನ ಲೀಲಾವತಿ ಪ್ರಬಂಧ, ಚೌಂಡರಸನ ಅಭಿನವದಶಕುಮಾರಚರಿತ್ರೆ, ದೇವಕವಿಯ ಕುಸುಮಾವಳಿ ಮೊದಲಾದುವು ಕುತೂಹಲಕರವಾದ ಕಥೆಗಳನ್ನುಳ್ಳ ಪದ್ಯಕಾವ್ಯಗಳು. ಗದ್ಯಕಥೆಗಳೂ ಕನ್ನಡ ಸಾಹಿತ್ಯದಲ್ಲಿ ಇಲ್ಲದಿಲ್ಲ. ಪ್ರಾಚೀನ ಗದ್ಯಗ್ರಂಥವಾದ ವಡ್ಡಾರಾದನೆ ಹಲವು ಉತ್ತಮ ಕಥೆಗಳ ಸಂಗ್ರಹ. ಮುದ್ದಣನ ರಾಮಾಶ್ವಮೇಧ ಈಚಿನ ಗದ್ಯ ಕಥೆ. ಆದರೆ ಇವು ಯಾವುವೂ ಕಾದಂಬರಿ ಎಂಬ ಸಾಹಿತ್ಯ ಪ್ರಕಾರಕ್ಕೆ ಸೇರುವುದಿಲ್ಲ. ಏಕೆಂದರೆ ಇವುಗಳಲ್ಲಿ ಮೊದಲನೆಯದು ಕೇವಲ ಕಥೆಗಳ ಗುಂಪು. ಎರಡನೆಯದು ಕಾವ್ಯ. ಮುಮ್ಮಡಿ ಕೃಷ್ಣರಾಜ ಒಡೆಯರ ಆಶ್ರಿತನಾಗಿದ್ದ ಕೆಂಪುನಾರಾಯಣನ (ಸು.1823) ಮುದ್ರಾ ಮಂಜೂಷವೆಂಬ ಗದ್ಯಕೃತಿಯಲ್ಲಿ ಕನ್ನಡ ಕಾದಂಬರಿಯ ರೂಪರೇಷೆಗಳನ್ನು ಗುರುತಿಸಬಹುದಾಗಿದೆ. ಮುದ್ದಣ 'ಗೋದಾವರಿ' ಎಂಬ ಒಂದು ಕಾದಂಬರಿಯನ್ನು ಬರೆದು ಮುಗಿಸುವಷ್ಟರಲ್ಲಿಯೇ ತೀರಿಕೊಂಡನೆಂದು ಹೇಳುತ್ತಾರೆ. ಕನ್ನಡಿಗರಿಗೆ ಕಾದಂಬರಿಗಳ ಮೊದಲ ಪರಿಚಯ ಕನ್ನಡದ ಮೂಲಕ ಆದುದು ಬಿ.ವೆಂಕಟಾಚಾರ್ಯರು ಮಾಡಿದ ಬಂಗಾಳಿ ಕಾದಂಬರಿಗಳ ಭಾಷಾಂತರದಿಂದ. ಬಂಕಿಮಚಂದ್ರರ ಕಾದಂಬರಿ ದುರ್ಗೇಶನಂದಿನಿಯನ್ನು ಬಂಗಾಳಿ ಭಾಷೆಯಿಂದ ಕನ್ನಡಕ್ಕೆ 1865ರಲ್ಲಿ ಭಾಷಾಂತರಿಸಲಾಯಿತು. ಆಚಾರ್ಯರು ಮೊದಲು ಭಾಷಾಂತರ ಮಾಡಿದ ಕೃತಿ ಭ್ರಾಂತಿವಿಲಾಸ. ಇದೇ ಕನ್ನಡದಲ್ಲಿ ಕಾದಂಬರಿಗಳ ಆರಂಭಕ್ಕೆ ನಾಂದಿ ಎಂದು ಹೇಳಬಹುದು. ಅಂದಿನಿಂದ ಇಂದಿನ ವರೆಗಿನ

ಕಾದಂಬರಿಗಳ ಬೆಳೆವಣಿಗೆ ಮತ್ತು ವಿಲಾಸಗಳನ್ನು ಕಾಲಮಾನ ರೀತಿಯಿಂದ ಮೂರು ಭಾಗಗಳಾಗಿ ವಿಂಗಡಿಸಬಹುದು. ಮೊದಲನೆಯದು ಆರಂಭ ಕಾಲ. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಿಂದ ಇಪ್ಪತ್ತನೆಯ ಶತಮಾನದ ಕಾಲು ಶತಕದವರೆಗೆ. ಎರಡನೆಯದು ನಿರ್ಮಾಣಶೀಲ ಯುಗ 1925 ಅಥವಾ 30ರಿಂದ ಸ್ವಾತಂತ್ರ್ಯೋದಯದವರೆಗೆ. ಮೂರನೆಯದು ಸ್ವಾತಂತ್ರ್ಯೋದಯದ ಯುಗ: ಸ್ವಾತಂತ್ರ್ಯೋದಯದ ಕಾಲದಿಂದ ಇಲ್ಲಿಯವರೆಗೆ.

ಮೈಲಾಪುರದಲ್ಲಿ ಹೈಕೋರ್ಟಿನ ವಕೀಲರಾಗಿದ್ದ ರೆಂಟ್ಲ ವೆಂಕಟಸುಬ್ಬರಾವ್ ಅವರಿಂದ ರಚಿತವಾಗಿ ಮದರಾಸಿನಲ್ಲಿ ಪ್ರಕಟವಾದ ಕೇಸರಿವಿಲಾಸ (1895) ಕಾದಂಬರಿಯು ವಿಶಿಷ್ಟ ಲಕ್ಷಣಗಳನ್ನುಳ್ಳ ಕನ್ನಡದ ಪ್ರಥಮ ಸ್ವತಂತ್ರ ಕಾದಂಬರಿ ಎಂಬುದು ಗೋವಿಂದ ಪೈ ಅವರ ಅಭಿಪ್ರಾಯ. ದಕ್ಷಿಣ ಕನ್ನಡ ಜಿಲ್ಲೆಯ ಗುಲ್ವಾಡಿ ವೆಂಕಟರಾಯರು ಬರೆದ ಇಂದಿರಾಬಾಯಿ ಅಥವಾ ಸದ್ಧರ್ಮ ವಿಜಯ (1899) ಎರಡನೆಯ ಸ್ವತಂತ್ರ ಸಾಮಾಜಿಕ ಕಾದಂಬರಿ. 250 ಪುಟಗಳ ಈ ಕಾದಂಬರಿಯಲ್ಲಿ ಅಂದಿನ ಸಾರಸ್ವತ ಸಮಾಜದ ವಾಸ್ತವಿಕ ಚಿತ್ರವಿದೆ. ಭಾಗೀರಥಿ, ಸೀಮಂತಿನಿ ಇವು ಇವರ ಇನ್ನೆರಡು ಕಾದಂಬರಿಗಳು. ಗಳಗನಾಥರ ಹೆಸರು ಕಾದಂಬರಿ ಸಾಹಿತ್ಯದ ಬೆಳೆವಣಿಗೆಯಲ್ಲಿ ಗುರುತಿಸುವಂಥದು. ಪದ್ಮನಯನೆ ಇವರ ಪ್ರಥಮ ಕಾಲ್ಪನಿಕ ಕಾದಂಬರಿ (1898). ಮಂಗಳೂರಿನ ಬೋಳಾರ ಬಾಬುರಾಯರ ಸ್ವತಂತ್ರ ಕಾದಂಬರಿ ವಾಗ್ದೇವಿ (1905). ಇದು ಸುಮಾರು 308 ಪುಟಗಳಿದ್ದು ಈ ಕಾದಂಬರಿಯ ವಸ್ತುವಿಗೆ ಆಗಿನ ಕಾಲದಲ್ಲಿ ನಡೆದ ಕೆಲವೊಂದು ಘಟನೆಗಳೇ ಆಧಾರ ಎಂಬುದಾಗಿ ತಿಳಿದವರು ಹೇಳುತ್ತಾರೆ. ಅಂದಿನ ಸಾಮಾಜಿಕ ಜೀವನದಲ್ಲಿ ಮಠಗಳ ಪಾತ್ರ, ನ್ಯಾಯ ವಿತರಣೆಯ ರೀತಿನೀತಿ, ಅಧಿಕಾರಿಗಳು ಸಾಮಾಜಿಕ ಜೀವನದಲ್ಲಿ ನಡೆಸುತ್ತಿದ್ದ ಕೃತ್ರಿಮ ಕೈವಾಡ ಇವೇ ಮೊದಲಾದ ವಾಸ್ತವ ಚಿತ್ರಗಳು ಈ ಕಾದಂಬರಿಯಲ್ಲಿ ಮೂಡಿಬಂದಿವೆ. ವಾಸ್ತವಿಕ ಘಟನೆಗಳ ಆಧಾರದ ಮೇಲೆ ಅಂದಿನ ಸಮಾಜದ ಕೆಲವೊಂದು ಲೋಪದೋಷಗಳನ್ನು ಎತ್ತಿ ತೋರಿಸುವ ಇಂಥ ಒಂದು ಕಾದಂಬರಿಯನ್ನು ರಚಿಸಿದುದು ಅಂದಿನ ಕಾಲಕ್ಕೆ ಒಂದು ದಿಟ್ಟತನವೆಂದೇ ಹೇಳಬಹುದು. 1906ರಲ್ಲಿ ಅಣ್ಣಾಜಿರಾವ್ ಗುಲ್ವಾಡಿ ಎಂಬುವರು ರಚಿಸಿದ 'ರೋಹಿಣಿ ಇಲ್ಲವೇ ಸಾರಸ್ವತ ಮಂಡಳ '232 ಪುಟಗಳನ್ನೊಳಗೊಂಡ ಒಂದು ಸಾಮಾಜಿಕ ಕಾದಂಬರಿ. ಉತ್ತರ ಕರ್ನಾಟಕದ ಕೆರೂರ ವಾಸುದೇವಚಾರ್ಯರು ರಚಿಸಿದ (1908) ಇಂದಿರೆ ಎಂಬ ಕಾದಂಬರಿ ಸ್ವತಂತ್ರ ಕಾದಂಬರಿಗಳ ಮಾಲೆಯಲ್ಲಿ ಒಂದು ಗಮನಾರ್ಹ ಕೃತಿ. ಉತ್ತರ ಕರ್ನಾಟಕ ಭಾಷೆಯನ್ನು ಕಾದಂಬರಿಯ ಗದ್ಯಕ್ಕೆ ಅಳವಡಿಕೊಳ್ಳಲು ಕಾದಂಬರಿಕಾರ ಮಾಡಿರುವ ಪ್ರಯತ್ನ ಇಲ್ಲಿ ಸ್ಮರಿಸುವಂಥದ್ದು. ಅಂದು ವಿಶೇಷವಾಗಿ ಚರ್ಚೆಗೆ ಒಳಗಾಗಿದ್ದ ವಿಧವಾವಿವಾಹ, ಸ್ತ್ರೀ ಶಿಕ್ಷಣ ಮತ್ತು ಸ್ತ್ರೀ ಸ್ವಾತಂತ್ರ್ಯದಂಥ ವಿಷಯಗಳು ಈ ಕಾದಂಬರಿಯಲ್ಲಿ ಬರುತ್ತವೆ. ಇಂದಿರೆಯನ್ನು ಆದರ್ಶ ಮಹಿಳೆಯನ್ನಾಗಿ ಚಿತ್ರಿಸಿ ಉತ್ತಮ ಸ್ತ್ರೀ ಶಿಕ್ಷಣದ ಬಗೆಗೆ ಒಳ್ಳೆಯ ನಿದರ್ಶನವನ್ನು ಒದಗಿಸಲಾಗಿದೆ. ಇಲ್ಲಿ ಗಮನಾರ್ಹವಾದ ಮತ್ತೊಂದು ಸಂಗತಿ ಕಾದಂಬರಿಯ ಸೌಂದರ್ಯವನ್ನು ಹೆಚ್ಚಿಸಲು ಉಪಯೋಗಿಸಿರುವ ಮೋಹಕ ವರ್ಣನೆಗಳು. ಔರಂಗಜೇಬ ಎಂಬುದು ಇತಿಹಾಸವನ್ನು ವಸ್ತುವಾಗುಳ್ಳ ಇವರ ಇನ್ನೊಂದು ಕಾದಂಬರಿ.

ಕಾದಂಬರಿಗಳ ಆರಂಭಕಾಲದ ಮೊದಲಿನಲ್ಲಿ ಕೃತಿಗಳನ್ನು ರಚಿಸಿದ ಕೆಲವರನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ವೃದ್ಧ ಪಿತಾಮಹ ವೆಂಕಟಕೃಷ್ಣಯ್ಯನವರು ರಚಿಸಿದ ಚೋರಗ್ರಹಣತಂತ್ರ ಕನ್ನಡದ ಪ್ರಥಮ ಪತ್ತೇದಾರಿ ಕಾದಂಬರಿ. ಎಂ.ಎಲ್.ಶ್ರೀಕಂಠೇಶಗೌಡ ಅವರ ಕನ್ಯಾವಿತಂತು 1895ರಲ್ಲಿ ಪ್ರಕಟವಾಯಿತು. ತೆಲುಗಿನಲ್ಲಿ ವಿರೇಶಲಿಂಗ ಪಂತುಲು ಅವರು ರಚಿಸಿದ ನೂತನ ರೀತಿಯ ಕಲ್ಪನಾ ಕಥೆಗಳಾದ ರಾಜಶೇಖರ ಚರಿತ್ರೆ, ಸತ್ಯವತೀ ಚರಿತ್ರೆ ಮತ್ತು ಸತ್ಯರಾಜಾ, ಪೂರ್ವದೇಶದ ಯಾತ್ರೆಗಳು ಎಂಬ ಮೂರು ಕೃತಿಗಳನ್ನು ಬೆನಗಲ್ ರಾಮರಾಯರು 1899ರ ಹೊತ್ತಿಗೆ ಕನ್ನಡಕ್ಕೆ ಭಾಷಾಂತರಿಸಿದ್ದರು. ಗೋಡೆ ಜೀವಣರಾಯರು ಜಾನ್‌ಸನ್ನನ ಕಾದಂಬರಿ ರಾಸೆಲಾಸನ್ನು ಕನ್ನಡಿಸಿದರು.

ಅಂದಿಗೆ ಕಾದಂಬರಿಗಳನ್ನು ಓದಬೇಕೆಂದು ಹಾತೊರೆಯುವ ಪ್ರವೃತ್ತಿಯುಂಟುಮಾಡಿ ಕನ್ನಡ ಜನತೆಯ ಹಂಬಲವನ್ನು ತುಂಬಿಕೊಟ್ಟವರು ವೆಂಕಟಾಚಾರ್ಯರು. ಅಂದು ಬಂಗಾಳಿ ಭಾಷೆಯಲ್ಲಿ ಕೃತಿರಚನೆ ಮಾಡಿ ನವಚೇತನವನ್ನು ನಾಡಿನ ಜೀವನದಲ್ಲಿ ತುಂಬಿದ್ದ ಈಶ್ವರಚಂದ್ರ ವಿದ್ಯಾಸಾಗರ, ಬಂಕಿಮಚಂದ್ರ, ರಮೇಶಚಂದ್ರದತ್ತ- ಇವರ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸಿಕೊಟ್ಟ ಕೀರ್ತಿ ಆಚಾರ್ಯರದು. ಇವರ ಕೃತಿರಚನೆ ಸುಮಾರು ಎರಡು ದಶಕಗಳಿಗಿಂತಲೂ ಹೆಚ್ಚು ಕಾಲ ಅವ್ಯಾಹತವಾಗಿ ನಡೆಯಿತು. ದೇಶಾಭಿಮಾನ, ಸಾಹಸ, ಭಕ್ತಿ ಮೊದಲಾದ ಗುಣಗಳಿಂದ ಮೆರೆಯುವ ಸ್ವತಂತ್ರ, ಐತಿಹಾಸಿಕ ಹಾಗೂ ಸಾಮಾಜಿಕ ಕಾದಂಬರಿಗಳನ್ನು ಬಂಗಾಳಿಯಲ್ಲಿ ರಚಿಸಿದ ಕೀರ್ತಿ ಬಂಕಿಮಚಂದ್ರರದು. ಆನಂದಮಠ, ದೇವಿಚೌಧುರಾಣಿ, ವಿಷವೃಕ್ಷ ಮೊದಲಾದ ಕಾದಂಬರಿಗಳನ್ನು ಇಂದಿಗೂ ಜನ ಓದಿ ಆನಂದಿಸಬಲ್ಲವರಾಗಿದ್ದಾರೆ. ಆ ಕಾಲಕ್ಕೆ ಇಂಗ್ಲಿಷಿನಲ್ಲಿ ಸರ್ ವಾಲ್ಟರ್ ಸ್ಕಾಟ್ ರಚಿಸಿದ ಐತಿಹಾಸಿಕ ಕಾದಂಬರಿಗಳು ಅತ್ಯಂತ ಜನಪ್ರಿಯವಾಗಿದ್ದುವು. ಬಂಕಿಮಚಂದ್ರರು ಸರ್ ವಾಲ್ಟರ್ ಸ್ಕಾಟ್ ಮತ್ತು ಸರ್ ವಿಲ್ಕಿ ಕಾಲಿನ್ಸರ ಕಾದಂಬರಿಗಳಿಂದ ಸ್ಫೂರ್ತಿ ಪಡೆದು ಭಾರತ ದೇಶದ ಚಾರಿತ್ರಿಕ ಘಟನೆಗಳ ಆಧಾರದ ಮೇಲೆ ಕಾದಂಬರಿಗಳನ್ನು ಬರೆದರು. ಅವರ ಸಾಮಾಜಿಕ ಕಾದಂಬರಿಗಳಲ್ಲಿ ವಿಧವಾ ವಿವಾಹ, ಸ್ತ್ರೀ ಶಿಕ್ಷಣ ಮೊದಲಾದ ಅಂದಿನ ಪ್ರಮುಖ ಸಾಮಾಜಿಕ ಸಮಸ್ಯೆಗಳ ವಿಶ್ಲೇಷಣವಿದೆ. ಸಜೀವ ಕಲ್ಪನೆ, ನಾಟಕೀಯ ಶಕ್ತಿ, ಪರಿಶುದ್ಧ ಧ್ಯೇಯ- ಇವು ಬಂಕಿಮಚಂದ್ರರ ಕಾದಂಬರಿಗಳ ವೈಶಿಷ್ಟ್ಯ. ಸಂಸ್ಕೃತ ಭೂಯಿಷ್ಠವಾದ ಶುದ್ಧಗ್ರಾಂಥಿಕ ಶೈಲಿ ಬಂಗಾಳಿ ಕಾದಂಬರಿಗಳದು. ಇದೇ ಶೈಲಿ ವೆಂಕಟಾಚಾರ್ಯರ ಅನುವಾದ ಕೃತಿಗಳಲ್ಲಿಯೂ ಹಾಸು ಹೊಕ್ಕಾಯಿತು.

ಗಳಗನಾಥರು ವೆಂಕಟಾಚಾರ್ಯರಂತೆಯೇ ಪ್ರಮುಖ ಕಾದಂಬರಿ ಕಾರರು. ಇವರು ಮರಾಠಿಯಿಂದ ಕನ್ನಡಕ್ಕೆ ಅನುವಾದ ಮಾಡಿರುವಂತೆ ಸ್ವಂತ ಕೃತಿಗಳನ್ನೂ ರಚಿಸಿದ್ದಾರೆ. ಅಂದಿಗೆ ಮರಾಠಿ ಕಾದಂಬರಿಕಾರರಲ್ಲಿ ಸತ್ತ್ವಶಾಲಿ ಕೃತಿಕಾರರಾಗಿದ್ದ ಹರಿನಾರಾಯಣ ಅಪ್ಪೆಯವರ ಗಢ ಆಲಾಪಣ ಸಿಂಹಗೇಲಾ ಎಂಬ ಕಾದಂಬರಿಯನ್ನು ಇವರು ಕಮಲಕುಮಾರಿ ಎಂಬ ಹೆಸರಿನಿಂದ ಕನ್ನಡಿಸಿದ್ದಾರೆ. ಉಳಿದ ಹಲವು ಕಾದಂಬರಿಗಳಿಗೆ ಮರಾಠಿಯಿಂದ ವಸ್ತುವನ್ನು ಒದಗಿಸಿಕೊಂಡು ತಮಗೆ ಸರಿಕಂಡ ಹಾಗೆ ತಿದ್ದಿ, ವಿಸ್ತರಿಸಿ, ಮೊಟಕುಮಾಡಿ ತಮ್ಮದೇ ಆದ ಒಂದು ರೀತಿಯಲ್ಲಿ ಕನ್ನಡಕ್ಕೆ ನೀಡಿದ್ದಾರೆ. ಸದ್ಬೋಧ ಚಂದ್ರಿಕೆ ಮತ್ತು ಸದ್ಗುರು ಎಂಬ ಪತ್ರಿಕೆಗಳಲ್ಲಿ ಭಾಗಭಾಗವಾಗಿ ಇವರ ಕಾದಂಬರಿಗಳು ಸಹೃದಯರಿಗೆ ದೊರಕಿದವು. ಮಾಧವಕರುಣಾವಿಲಾಸ (1923) ವಿಜಯನಗರದ ಇತಿಹಾಸವನ್ನು ವಸ್ತುವಾಗುಳ್ಳ ಗಳಗನಾಥರ ಸ್ವತಂತ್ರ ಮೇರುಕೃತಿ. ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದ ವಿಷಯ ಕುಮುದಿನಿಯಲ್ಲಿಯೂ ಬರುತ್ತದೆ. 'ಕನ್ನಡಿಗರ ಕರ್ಮಕಥೆ' ತಾಳೀ ಕೋಟೆಯ ಕಾಳಗದ ವಿಷಯವನ್ನೊಳಗೊಂಡ ಐತಿಹಾಸಿಕ ಕಾದಂಬರಿ. ಇವರ ಉಳಿದ ಬಹುತೇಕ ಕಾದಂಬರಿಗಳು ಮರಾಠರ ಮತ್ತು ರಜಪೂತರ ಚರಿತ್ರೆಗಳಿಗೆ ಸಂಬಂಧಪಟ್ಟುವು. ಈಶ್ವರೀಸೂತ್ರ, ಧಾರ್ಮಿಕ ತೇಜ, ಕ್ಷಾತ್ರತೇಜ, ಶಿವಪ್ರಭುವಿನ ಪುಣ್ಯ- ಇವೇ ಮೊದಲಾದ 22 ಕೃತಿಗಳನ್ನು ಇವರು ರಚಿಸಿದ್ದಾರೆ. ಇವರ ರಚನೆಯಲ್ಲಿ ಹೆಚ್ಚಿನವು ಐತಿಹಾಸಿಕ ಕಾದಂಬರಿಗಳು. ಇವರ ಕಾದಂಬರಿಗಳು ಕ್ಷಾತ್ರತೇಜಸ್ಸು, ಧಾರ್ಮಿಕ ಪ್ರಭಾವ ಮತ್ತು ದೇಶಪ್ರೇಮದಿಂದ ತುಂಬಿ ತುಳುಕುತ್ತಿವೆ. ಉತ್ತರ ಕರ್ನಾಟಕದ ಆಡುಭಾಷೆಯನ್ನು ಯಶಸ್ವಿಯಾಗಿ ಬಳಸಿರುವುದು ಇವರ ಕೃತಿಗಳಲ್ಲಿ ಕಾಣಬರುತ್ತದೆ. ಆದರೂ ಗಳಗನಾಥರ ಭಾಷೆಯು ಬಳಕೆ ಒಮ್ಮುಖ ವಾದುದೇ ಹೊರತು ವೈವಿಧ್ಯಮಯವಲ್ಲ.

ವೆಂಕಟಾಚಾರ್ಯರ ಮತ್ತು ಗಳಗನಾಥರ ಕಾದಂಬರಿಗಳು ಕೇವಲ ಓದುಗರ ಮೇಲೆಯೇ ಅಲ್ಲದೆ ಬರೆಯುವವರ ಮೇಲೆಯೂ ಸಾಕಷ್ಟು ಪ್ರಭಾವವನ್ನು ಬೀರಿದುವು. ವೀರಶೌರ್ಯೋದಾರ್ಯಾದಿ ಗುಣಗಳುಳ್ಳ ನಾಯಕ ನಾಯಕಿಯರಿಂದ ಕೂಡಿದ ಅದ್ಭುತ, ರಮ್ಯ, ಐತಿಹಾಸಿಕ ಸಾಮಾಜಿಕ ಕಾದಂಬರಿಗಳ ಪ್ರವಾಹ ಇಪ್ಪತ್ತನೆಯ ಶತಮಾನದ ಮೊದಲ ಮೂರು ದಶಕಗಳವರೆಗೆ ವ್ಯಾಪಕವಾಗಿಯೂ ಅನಂತರ ಕಿಂಚಿತ್ತಾಗಿಯೂ ಹರಿಯಿತು. ಹಲವಾರು ಕಾದಂಬರಿಗಳನ್ನು ರಚಿಸಿದ ಭಿ.ಪ.ಕಾಳೆ ಮತ್ತು ನಾಗೇಶ ಇವರನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ನಾಗೇಶರ ಈಶಸಂಕಲ್ಪ ಮತ್ತು ಎಚ್ಚಮನಾಯಕ ಕಾದಂಬರಿಗಳು ಕನ್ನಡನಾಡಿನ ಚರಿತ್ರೆಯ ಮೇಲೆ ಆಧಾರಿತವಾದವು. ಕನ್ನಡ ಗರಡಿಯಾಳು ಎಂಬುವರ ಕರ್ಮಫಲ ಅಥವಾ ಪ್ರೇಮಫಲ, ಬಿ.ಕೃಷ್ಣಪ್ಪನವರ ರಾಯಚೂರು ವಿಜಯ, ಡಿ.ಶ್ರೀನಿವಾಸ ಶರ್ಮರ ನೀಲವಸನಾ ಸುಂದರಿ ಇವು ಈ ಕಾಲದಲ್ಲಿ ರಚಿತವಾದ ಕೆಲವು ಕಾದಂಬರಿಗಳು.

ಈ ಕಾಲದಲ್ಲೇ ಪತ್ತೇದಾರಿ ಕಾದಂಬರಿಗಳೂ ಹುಟ್ಟಿದುವು. ಬಾಲ ಸರಸ್ವತಿ, ಭಿ.ಪ.ಕಾಳೆ, ನಾಗೇಶ ಮೊದಲಾದವರು ಪತ್ತೇದಾರಿ ಕಾದಂಬರಿಗಳನ್ನು ಕೊಟ್ಟವರಲ್ಲಿ ಮುಖ್ಯರು. ಬಾಲಸರಸ್ವತಿಯವರು ಕೆಲವು ಬಂಗಾಳಿ ಕಾದಂಬರಿಗಳನ್ನು ಕನ್ನಡಿಸಿದರು. ಪಾಂಚಕೊಡಿ ಡೇ ಅವರ ಹತ್ಯಾಕಾರಿ ಎಂಬ ಬಂಗಾಳಿ ಕಾದಂಬರಿಯ ಕಥೆಯನ್ನು ಅವಲಂಬಿಸಿ ಕುಮುದಿನಿ ರಚಿತವಾಯಿತು. (1911) ಚಿತ್ರಗುಪ್ತನ ದಫ್ತರಗಳು, ಗುರುತು ಕಂಡ ಕಳ್ಳ, ನರಬಲಿ- ಇವು ಬಾಲಸರಸ್ವತಿಯವರ ಪತ್ತೇದಾರಿ ಕಾದಂಬರಿಗಳು, ಕಂಠಾಭರಣ, ರಾಣೀ ಚೌಧುರಾಣಿ, ಕುಮಾರಕಂಠೀರವ ಮೊದಲಾದ ಸಾಮಾಜಿಕ ಹಾಗೂ ಸಾಂಸಾರಿಕ ಕಾದಂಬರಿಗಳನ್ನೂ ಇವರು ಬರೆದಿದ್ದಾರೆ.

ಕನ್ನಡ ಕಾದಂಬರಿಗಳ ಆರಂಭಕಾಲದಲ್ಲಿ ಸ್ತ್ರೀಯರೂ ಕೃತಿರಚನೆ ಮಾಡಿದ್ದಾರೆ. ಎಂಬುದಕ್ಕೆ ಸತೀಹಿತೈಷಿಣೀ ಗ್ರಂಥಮಾಲೆಯ ತಿರುಮಲಾಂಬಾ ನಿದರ್ಶನವಾಗಿದ್ದಾರೆ. ವಿರಾಗಿಣಿ, ವಿದ್ಯುಲ್ಲತಾ, ನಭ, ಪೂರ್ಣಕಲಾ- ಇವೇ ಮೊದಲಾದುವು ಇವರ ಕೃತಿಗಳು. ವಿಶೇಷವಾಗಿ ಸ್ತ್ರೀಯರಿಗೂ ಅವರ ಸಾಮಾಜಿಕ ಸ್ಥಾನಮಾನಗಳಿಗೂ ಸಂಬಂಧಿಸಿದ ವಿಷಯ ಇವರ ಕೃತಿಗಳ ವೈಶಿಷ್ಟ್ಯ. ಸಾಹಿತ್ಯಗುಣ ಅಷ್ಟೊಂದಾಗಿ ಇಂಥ ಕಾದಂಬರಿಗಳಲ್ಲಿ ಕಂಡುಬರುವುದಿಲ್ಲ. ಮಾಸ್ತಿಯವರು ಇವರ ಕೃತಿಗಳನ್ನು ನಾಟಕರೂಪದ ನಾವೆಲುಗಳೆಂದು ಕರೆದಿದ್ದಾರೆ.

ಇದೇ ಕಾಲದಲ್ಲಿ ಎ.ಎ.ಶ್ರೀನಿವಾಸಾಚಾರ್ಯ, ಉಲ್ಲಾಳ ಮಂಗೇಶರಾಯರು ಮುಂತಾದವರು ಇಂಗ್ಲಿಷಿನಿಂದ ಹಲವಾರು ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸಿದರು.

ಕಾದಂಬರಿಗಳ ಬೆಳವಣಿಗೆಯಲ್ಲಿ ಕ್ರಮೇಣ ನವೀನತೆ ಮತ್ತು ಆಧುನಿಕತೆಗಳು ತಲೆಹಾಕಲಾರಂಭಿಸಿದುವು. ಅಲ್ಲಲ್ಲಿ ಒಂದೊಂದು ಕೃತಿ ವಾಸ್ತವಿಕತೆಯ ಕಡೆಗೆ ತಿರುಗುತ್ತಿದ್ದುದು ಕಂಡುಬರುತ್ತಿತ್ತು. ಎಂ.ಎಸ್. ಪುಟ್ಟಣ್ಣನವರ ಮಾಡಿದ್ದುಣ್ಣೋ ಮಹಾರಾಯ (1914) ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ನಡೆದುದೆಂದು ಹೇಳಲಾದ ಹಲಕೆಲವು ಸಂಗತಿಗಳ ಆಧಾರದಿಂದ ರಚಿತವಾದೊಂದು ಗಮನಾರ್ಹ ಕೃತಿ. ಇವರು ಕಥೆ ಕಟ್ಟುವ ವೈಖರಿ, ಸನ್ನಿವೇಶಗಳನ್ನು ಸೃಷ್ಟಿಸುವ ಚಮತ್ಕಾರ, ಸ್ಥಳೀಯ ವಾತಾವರಣವನ್ನು ತರುವಲ್ಲಿ ಬಳಸಿರುವ ಭಾಷೆಯ ಪ್ರಾದೇಶಿಕತೆ, ಅಂದಿನ ಸಾಮಾಜಿಕ ಹಾಗೂ ರಾಜಕೀಯ ವಾಸನೆಯನ್ನು ಸಹಜವಾಗಿಸುವಂತೆ ಬಳಸುವ ಶಬ್ದಭಂಡಾರ - ಇವು ಎಂಥವರನ್ನೂ ಬೆರಗುಗೊಳಿಸುತ್ತವೆ. ಅಂದಿನ ಕಾಲದ ಜನಜೀವನಕ್ಕೆ ಇವರ ಕಾದಂಬರಿಗಳು ನಿಕಟವಾದವು. ಮುಸುಕು ತೆಗೆಯೆ ಮಾಯಾಂಗನೆ ಇವರ ಇನ್ನೊಂದು ಕೃತಿ. ಕಾದಂಬರಿಯ ಕ್ಷೇತ್ರದಲ್ಲಿ ಪುಟ್ಟಣ್ಣನವರದು ಮರೆಯಲಾಗದ ಹೆಸರು.

ಇಪ್ಪತ್ತನೆಯ ಶತಮಾನದ ಮೂರನೆಯ ದಶಕದಿಂದ ಮುಂದಕ್ಕೆ ಆಧುನಿಕ ಪ್ರವೃತ್ತಿಯ ಕಾದಂಬರಿಗಳ ನಿರ್ಮಾಣವನ್ನು ನಾವು ಸ್ಪಷ್ಟವಾಗಿ ಕಾಣುತ್ತೇವೆ. ವಸ್ತು, ನಿರೂಪಣೆ, ಶೈಲಿ, ತಂತ್ರಗಳಲ್ಲಿ ಆಧುನಿಕತೆ ಈ ಕಾದಂಬರಿಗಳ ನಿರ್ಮಾಣದ ಮುಖ್ಯತತ್ತ್ವಗಳು. ಆದುದರಿಂದ ಈ ಕಾಲಕ್ಕೆ ನಿರ್ಮಾಣಶೀಲಯುಗವೆಂದು ಹೆಸರಿಡಲಾಗಿದೆ. ಆನಂದಕಂದರ (ಬೆಟಗೇರಿ ಕೃಷ್ಣಶರ್ಮ) ಸುದರ್ಶನ (1933) ಹಾಗೂ ಮಗಳ ಮದುವೆ; ರಂ.ಶ್ರೀ. ಮುಗಳಿಯವರ ಬಾಳುರಿ, ಅನ್ನ, ಕಾರಣ ಪುರುಷ; ಜಡಭರತರ ಧರ್ಮಸೆರೆ ಮುಂತಾದ ಕಾದಂಬರಿಗಳು ಆದರ್ಶವಾದವನ್ನು ದೃಷ್ಟಿಯಲ್ಲಿಟ್ಟುಕೊಂಡು ಸೃಷ್ಟಿಯಾದವು. ಕಾರಂತರ ಚೋಮನ ದುಡಿ 1933ರಲ್ಲಿ ಪ್ರಕಟವಾಯಿತು. ಅ.ನ.ಕೃ. ಅವರ ಉದಯರಾಗ ಮತ್ತು ಜೀವನಯಾತ್ರೆ. ಶ್ರೀರಂಗರ ವಿಶ್ವಾಮಿತ್ರ ಸೃಷ್ಟಿ 1934ರಲ್ಲಿ ಬೆಳಕುಕಂಡವು. 1935ನೆಯ ಸಂವತ್ಸರದಲ್ಲಿ ಆನಂದಕಂದರ ರಾಜಯೋಗಿ ಮತ್ತು ಅಶಾಂತಿಪರ್ವಗಳೆಂಬ ಎರಡು ಐತಿಹಾಸಿಕ ಕಾದಂಬರಿಗಳೂ ವಿನಾಯಕರ ಇಜ್ಜೋಡು, ಅ.ನ.ಕೃ. ಅವರ ಸಂಧ್ಯಾರಾಗ ಮತ್ತು ಜಡಭರತರ ಧರ್ಮಸೆರೆ ಕನ್ನಡಿಗರ ಕೈಸೇರಿದುವು. 1936ರಲ್ಲಿ ಕುವೆಂಪು ಅವರ ಬೃಹತ್ ಕಾದಂಬರಿ ಕಾನೂರು ಸುಬ್ಬಮ್ಮ ಹೆಗ್ಗಡತಿ ಹೊರಬಂತು.

ನಿರ್ಮಾಣಶೀಲಯುಗದ ಪ್ರಮುಖ ಕಾದಂಬರಿಕಾರರೆಂದರೆ ಕುವೆಂಪು, ಶಿವರಾಮ ಕಾರಂತ, ಅ.ನ.ಕೃ. ಆನಂದಕಂದ, ರಂ.ಶ್ರೀ.ಮುಗಳಿ, ಕಡೆಂಗೋಡ್ಲು ಶಂಕರ ಭಟ್ಟ, ಶ್ರೀರಂಗ, ಮಿರ್ಜಿ ಅಣ್ಣಾರಾಯ, ದೇವುಡು ಮೊದಲಾದವರು. ಇವರೆಲ್ಲ ಆಧುನಿಕ ವಿದ್ಯಾಭ್ಯಾಸವನ್ನು ಪಡೆದವರೂ ವಿಚಾರಶೀಲರೂ ಆಗಿದ್ದಾರೆ. ಶ್ರೀನಿವಾಸರ ಸುಬ್ಬಣ್ಣವನ್ನು ಕಾದಂಬರಿಯೆಂದು ಹೇಳಲಾಗದು. ಆದರೆ ಇದು ಕಾದಂಬರಿಯ ಘನತೆಯುಳ್ಳ ನೀಳ್ಗತೆಯಾಗಿ ವಸ್ತು, ಶೈಲಿಗಳ ಮೇಲೆ ಅಚ್ಚಳಿಯದ ಪ್ರಭಾವ ಬೀರಿದ ಕೃತಿಯೆಂಬುದರಲ್ಲಿ ಸಂಶಯವಿಲ್ಲ. ಇದರಲ್ಲಿ ಸಂಗೀತಗಾರನೊಬ್ಬನ ಜೀವನಚಿತ್ರಣ, ಮಾಸ್ತಿಯವರ ಮನೋಧರ್ಮ, ಬದುಕಿನ ಬಗ್ಗೆ ಇವರಿಗಿರುವ ನೈಜ ತಿಳುವಳಿಕೆ ಇವುಗಳಿಂದ ಮೈತುಂಬಿಕೊಂಡಿದೆ. ಶಿವರಾಮ ಕಾರಂತರು ಮೂವತ್ತನಾಲ್ಕು ಕಾದಂಬರಿಗಳನ್ನು (1974) ರಚಿಸಿದ್ದಾರೆ. ಇವುಗಳಲ್ಲಿ ಸ್ವಾತಂತ್ರ್ಯಾನಂತರ ಬರೆದ ಕಾದಂಬರಿಗಳೂ ಸೇರಿವೆ. ಕಾರಂತರ ಮೊದಲ ಕಾದಂಬರಿ ಚೋಮನ ದುಡಿ ವಸ್ತು ಶೈಲಿ ಒಟ್ಟಿನ ಪರಿಣಾಮಗಳ ದೃಷ್ಟಿಯಿಂದ ನಿಜವಾಗಿಯೂ ಮೊದಲ ಬಾರಿಗೆ ವೈಶಿಷ್ಟ್ಯ ಸ್ಥಾಪಿಸಿತು. ಶೂದ್ರನೊಬ್ಬನ ಬದುಕು ಹೇಗೆ ತುಳಿತಕ್ಕೆ ಒಳಗಾಗಿ ನಾಶವಾಯಿತು ಎಂಬುದನ್ನು ಈ ಕಾದಂಬರಿಯು ಜೀವಂತವಾಗಿ ಚಿತ್ರಿಸುತ್ತದೆ. ಇವರ ಮರಳಿ ಮಣ್ಣಿಗೆ ಕನ್ನಡದ ಮಹಾಕಾದಂಬರಿಗಳಲ್ಲೊಂದು. ಈ ಕೃತಿಯಲ್ಲಿ ಕರಾವಳಿ ಪ್ರದೇಶದ ಮೂರು ತಲೆಮಾರುಗಳ ಜೀವನ ದರ್ಶನ ಅರಳಿದೆ. ಬೆಟ್ಟದ ಜೀವ, ಔದಾರ್ಯದ ಉರುಳಲ್ಲಿ, ಮುಗಿದ ಯುದ್ಧ, ಕುಡಿಯರ ಕೂಸು ಕಾರಂತರ ಕಾದಂಬರಿಗಳಲ್ಲಿ ವೈಶಿಷ್ಟ್ಯಪೂರ್ಣವಾದುವು. ಇವರ ಇನ್ನೊಂದು ಕಾದಂಬರಿ ಅಳಿದ ಮೇಲೆ ತಂತ್ರ, ವಸ್ತು, ಆಲೋಚನೆಗಳಲ್ಲಿ ಒಂದು ಮಹತ್ತ್ವಪೂರ್ಣ ಕೃತಿಯಾಗಿದೆ. ಕಾರಂತರ ವಿಚಾರಶೀಲ ವ್ಯಕ್ತಿತ್ವ ಇದರಲ್ಲಿ ವಿಕಾಸಗೊಂಡಿದೆ. ಮೈಮನಗಳಸುಳಿಯಲ್ಲಿ, ಮೂಕಜ್ಜಿಯ ಕನಸು ಹೊಸ ದೃಷ್ಟಿಯಿಂದ ಅಷ್ಟೇ ಮಹತ್ತ್ವಪೂರ್ಣ ಕೃತಿಗಳಾಗಿವೆ. ಇವರ ಇನ್ನೊಂದು ಮಹತ್ತ್ವದ ಕಾದಂಬರಿ ಧರ್ಮರಾಯನ ಸಂಸಾರ (1972). ಒಟ್ಟಿನಲ್ಲಿ ಇವರ ಕಾದಂಬರಿಗಳಲ್ಲಿ ಆಳವಾದ ಜೀವನಾನುಭವ, ಬದುಕನ್ನು ಸಮಗ್ರವಾಗಿ ಅದರ ಒಳಿತು ಕೆಡುಕುಗಳೊಂದಿಗೆ ನೋಡುವ ಸೂಕ್ಷ್ಮದೃಷ್ಟಿ. ಜೀವಂತ ಪಾತ್ರಗಳು, ಸಹಜ ಶೈಲಿ, ವೈಜ್ಞಾನಿಕನಿಗೊಪ್ಪುವ ಪ್ರಾಮಾಣಿಕತನ, ಯಾವ ಸಂಪ್ರದಾಯಕ್ಕೂ ಸೇರದ ಸ್ವತಂತ್ರ ಮನೋವೃತ್ತಿ ಇವು ಮುಖ್ಯವಾಗಿ ಕಂಡುಬರುತ್ತವೆ. ಕುವೆಂಪು ಅವರ ಕಾನೂರು ಸುಬ್ಬಮ್ಮ ಹೆಗ್ಗಡಿತಿ ಮತ್ತು ಮಲೆಗಳಲ್ಲಿ ಮದುಮಗಳು ಕನ್ನಡದ ಎರಡು ಮಹಾ ಕಾದಂಬರಿಗಳು ಎಂಬ ಪ್ರಖ್ಯಾತಿ ಪಡೆದಿವೆ. ಶ್ರೀ ರಾಮಾಯಣದರ್ಶನಂ ಇವರ ಪದ್ಯಕಾವ್ಯವಾದರೆ, ಕಾದಂಬರಿಗಳೆರಡೂ ಇವರ ಗದ್ಯಕಾವ್ಯಗಳು. ಇಲ್ಲಿ ಬಳಕೆಯಾಗಿರುವ ಭಾಷೆ ಕನ್ನಡ ಗದ್ಯಶೈಲಿಯ ಶ್ರೀಮಂತ ಪ್ರತಿನಿಧಿಯಾಗಿದೆ. ಮಲೆನಾಡಿನ ಜೀವನ ಚಿತ್ರವನ್ನು ಅದರ ಹಿನ್ನೆಲೆ, ವಿಸ್ತಾರ, ಆಳ, ವರ್ಣವಿನ್ಯಾಸಗಳೊಂದಿಗೆ ಚಿತ್ರಿಸಿರುವ ರೀತಿ ಅನ್ಯಾದೃಶವಾದುದು. ಕುವೆಂಪುರವರ ತಂತ್ರ, ರೀತಿ, ಶೈಲಿಗಳ ಮಾರ್ಗದಲ್ಲಿ ನಡೆದು ಚಿತ್ರವತ್ತಾಗಿ ಸನ್ನಿವೇಶಗಳನ್ನು ಜೋಡಿಸಿ, ಬೃಹತ್ತಾಗಿ ಪಾತ್ರಗಳನ್ನು ಸೃಷ್ಟಿಸುವ ಇನ್ನೊಂದು ಉದಾಹರಣೆ ಕಾಣಬರುತ್ತಿಲ್ಲ. ಒಂದು ಜನಾಂಗದ ಜೀವನ ಸಮಗ್ರವಾಗಿ ಅದರ ಆಳ ಅಗಲಗಳಲ್ಲಿ ನಿರೂಪಿತವಾಗಿರುವುದು ಇದೇ ಮೊದಲು. ಕಾದಂಬರಿ ಕರತಲ ರಂಗಭೂಮಿ ಎಂಬ ಅವರ ವಿಮರ್ಶಕ ನುಡಿಗೆ ಅವರ ಕಾದಂಬರಿಗಳೇ ಉದಾಹರಣೆಗಳಾಗಿವೆ. ಗೋಕಾಕರ ಇಜ್ಜೋಡು ಮೊದಲು ಎರಡು ಭಾಗಗಳಿಂದ ಪೂರ್ಣಗೊಂಡು ಸಮರಸವೇ ಜೀವನ ಎಂಬ ಹೆಸರಿನಲ್ಲಿ 1300 ಪುಟಗಳ ಬೃಹತ್ ಕಾದಂಬರಿಯಾಗಿ ಹೊರಬಂದಿದೆ. ಇಪ್ಪತ್ತೈದು ವರ್ಷಗಳಲ್ಲಿನ ಜೀವನದ ಸಾಮಾಜಿಕ ಸಮಸ್ಯೆಗಳು, ಸೋಲುಗೆಲವು, ಹೊಯ್ದಾಟ ಹೋರಾಟಗಳ ಚಿತ್ರ ಈ ಕಾದಂಬರಿಯಲ್ಲಿ ಮೂಡಿಬಂದಿದೆ. ಸಮರಸವೇ ಜೀವನ ಹಲವು ದೃಷ್ಟಿಗಳಿಂದ ಮಹತ್ತ್ವದ ಸ್ಥಾನ ಪಡೆದುಕೊಂಡಿದೆ. ಅ.ನ.ಕೃ. ಕನ್ನಡದಲ್ಲೆಲ್ಲ ಹೆಚ್ಚು ಕಾದಂಬರಿಗಳನ್ನು ರಚಿಸಿದವರೆಂದು ಖ್ಯಾತರಾಗಿದ್ದಾರೆ. ಸುಮಾರು ನೂರಕ್ಕೂ ಹೆಚ್ಚು ಕಾದಂಬರಿಗಳನ್ನು ರಚಿಸಿ ಸಮಾಜದ ಹಲವು ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಇವರು ಸಂಧ್ಯಾರಾಗದಿಂದ ಕಾದಂಬರಿಕಾರರೆಂದು ಪ್ರಸಿದ್ಧಿಪಡೆದರು. ನಟಸಾರ್ವಭೌಮ ಎಂಬ ದೊಡ್ಡ ಕಾದಂಬರಿಯಲ್ಲಿ ಕಲಾವಿದನ ಬಾಳಿನ ಏಳು ಬೀಳುಗಳ ಹೊಯ್ದಾಟ ತುಯ್ದಾಟಗಳ ಚಿತ್ರವಿದೆ. ಮಂಗಳಸೂತ್ರ, ಕಣ್ಣೀರು ಉತ್ತಮ ಕಾದಂಬರಿಗಳು. ಇವರ ಸರಳವಾದ ಚಿತ್ತಾಕರ್ಷಕ ಶೈಲಿ, ನಿರೂಪಣಾವಿಧಾನ, ಕನ್ನಡದ ಬಗ್ಗೆ ಇವರಿಗಿರುವ ಅಭಿಮಾನ, ಸಮಾಜದ ಲೋಪದೋಷಗಳನ್ನು ಎತ್ತಿ ಆಡುವಲ್ಲಿ ಕಾಣುವ ಉತ್ಸಾಹ, ಕಲಾವಿದರ ಬಗ್ಗೆ ಇವರಿಗಿರುವ

ಸಹಾನುಭೂತಿ, ಸಹಜ ಸಂಭಾಷಣೆಗಳನ್ನು ಹೆಣೆವಲ್ಲಿ ಕಾಣಬರುವ ಜಾಣ್ಮೆ ಈ ಗುಣಗಳಿಂದ ಅ.ನ.ಕೃ. ಜನಪ್ರಿಯ ಲೇಖಕರಾದರು. ಇವರ ಕಾದಂಬರಿಗಳಲ್ಲಿ ಆಳವಾದ ಅನುಭವವಿಲ್ಲ. ಪಾತ್ರಗಳಿಗೆ ಗುರಿಯಿಲ್ಲ. ಕಲೆ ಗಂಭೀರವಾಗಿ ನಿರೂಪಿತವಾಗುವುದೂ ಇಲ್ಲ. ವಿಚಾರಗಳು ಬಂದರೂ ಅವು ಕಡೆಗೆ ಭಾವನಾವಶತೆಯಲ್ಲಿ ತೇಲಿಬಿಡುತ್ತವೆ. ಸಂಖ್ಯೆ ದೊಡ್ಡದಾಗಿ ಬೆಳೆದರೂ ಗುಣದ ದೃಷ್ಟಿಯಿಂದ ಇವರ ಕಾದಂಬರಿಗಳು ದೊಡ್ಡವಾಗಲಿಲ್ಲ.

ಶ್ರೀರಂಗರ ವಿಶ್ವಾಮಿತ್ರ ಸೃಷ್ಟಿ. ಪುರುಷಾರ್ಥ, ಓದುಗರ ಗಮನ ಸೆಳೆದ ಎರಡು ಕಾದಂಬರಿಗಳು. ವಿಶ್ವಾಮಿತ್ರ ಸೃಷ್ಟಿಯಲ್ಲಿ ಪ್ರಜ್ಞಾಪ್ರವಾಹ ತಂತ್ರವನ್ನು ಬಳಕೆಮಾಡಿದ್ದಾರೆ. ಬುದ್ಧಿಯ ವಿಲಾಸ ಇಂಥ ಕಾದಂಬರಿಗಳಲ್ಲಿ ಕಂಡುಬರುವ ಪ್ರಮುಖ ಅಂಶ. ಸ್ವಾತಂತ್ರ್ಯಾನಂತರವೂ ಇವರು ಕೆಲವು ಕಾದಂಬರಿಗಳನ್ನು ಕೊಟ್ಟಿದ್ದಾರೆ. ದೇವುಡು ಅವರ ಮಯೂರ ಮೊದಲ ಐತಿಹಾಸಿಕ ಕಾದಂಬರಿ. ಇವರ ಅಂತರಂಗ ಒಂದು ವಿಶಿಷ್ಟ ಕೃತಿ. ಇದು ಮನಸ್ಸಿನ ಹೊಯ್ದಾಟ ತುಯ್ದಾಟಗಳನ್ನು ಮಾರ್ಮಿಕವಾಗಿ ಬಣ್ಣಿಸಲೆಳಸಿದ ಪ್ರಥಮ ಕಾದಂಬರಿ. ಇವರು ರಚಿಸಿರುವ ಹಲವು ಕಾದಂಬರಿಗಳಲ್ಲಿ ಮಹಾಬ್ರಾಹ್ಮಣ ಒಂದು ಶ್ರೇಷ್ಠ ಕೃತಿ. ವೇದಕಾಲದ ವಿಶ್ವಾಮಿತ್ರನ ಕಥೆ ಇದರಲ್ಲಿ ಸತ್ತ್ವಯುಕ್ತವಾಗಿ ಅರಳಿದೆ. ಮಿರ್ಜಿ ಅಣ್ಣಾರಾಯರ ನಿಸರ್ಗ ಕನ್ನಡ ಕಾದಂಬರಿಗಳ ಸಾಲಿನಲ್ಲಿ ಉತ್ತಮ ಸ್ಥಾನವನ್ನು ಗಳಿಸಿಕೊಂಡಿದೆ. ಒಲಿದ ಹೆಣ್ಣುಗಂಡುಗಳ ವಿಫಲ ಪ್ರಣಯದಿಂದಾದ ದುರಂತ ಆಡುನುಡಿಯ ಜೀವಂತ ಭಾಷೆಯಲ್ಲಿ ಸುಂದರ ಕಲಾಕೃತಿಯಾಗಿ ಮೂಡಿಬಂದಿದೆ. ರಾಷ್ಟ್ರಪುರುಷ, ಪ್ರತಿಸರಕಾರ, ಭಸ್ಮಾಸುರ, ಅಶೋಕಚಕ್ರ ಮೊದಲಾದುವು ಇವರ ಸಾಮಾನ್ಯ ದರ್ಜೆಯ ಕಾದಂಬರಿಗಳು. ಕಡೆಂಗೋಡ್ಲು ಶಂಕರಭಟ್ಟರ ಧೂಮಕೇತು, ದೇವತಾಮನುಷ್ಯ ಮತ್ತು ಲೋಕದ ಕಣ್ಣು ಸಾಮಾಜಿಕ ಕಾದಂಬರಿಗಳು, ಬಾ.ಕೃ.ಲಕ್ಷ್ಮೇಶ್ವರರ ಗ್ರಾಮ ಪಂಚಾನನ ಕಾದಂಬರಿಯಲ್ಲಿ ಮೊದಲ ಬಾರಿಗೆ ಹಳ್ಳಿಯ ಜನರ ಜೀವನಚಿತ್ರ ಬಂದಿರುವುದನ್ನು ಕಾಣಬಹುದು. ನಾ.ಕಸ್ತೂರಿಯವರ ಗಾಳಿಗೋಪುರ, ಚಕ್ರದೃಷ್ಟಿ, ಶಂಖವಾದ್ಯ, ಚಂಗೂಲಿ ಚಲುವ ಇವುಗಳನ್ನು ಕಾದಂಬರಿ ಎಂದು ಕರೆಯಲು ಆಕ್ಷೇಪಿಸಬಹುದಾದರೂ ಈ ಕಾದಂಬರಿಗಳಲ್ಲಿನ ತಂತ್ರ ಮತ್ತು ವಿಡಂಬನೆಗಳು ಗಮನಾರ್ಹ. ಭಗ್ನಮಂದಿರ ಈ ಕಾಲದ ಒಂದು ಮುಖ್ಯ ಸಾಮಾಜಿಕ ಕಾದಂಬರಿ.

ಸ್ವಾತಂತ್ರ್ಯ ಬಂದ ಆನಂತರದ ಇಪ್ಪತ್ತೈದು ವರ್ಷಗಳಲ್ಲಿ ಕಾದಂಬರಿಗಳ ರಚನೆ ವಿಪುಲವಾಗಿ ಮುಂದೆ ಸಾಗಿದೆ. ಸ್ವಾತಂತ್ರ್ಯ ಪೂರ್ವಕಾಲದ ಹಲವು ಜನ ಪ್ರಮುಖ ಕಾದಂಬರಿಕಾರರು ಸ್ವಾತಂತ್ರ್ಯ ನಂತರವೂ ಸತ್ತ್ವಶಾಲಿ ಕೃತಿಗಳನ್ನು ರಚಿಸಿದ್ದಾರೆ. ಅಲ್ಲದೆ ಹಲವು ಜನ ಹೊಸ ಕಾದಂಬರಿಕಾರರೂ ಮುಂದೆ ಬಂದಿದ್ದಾರೆ. ಅವರಲ್ಲಿ ಕೆಲವರು ಬಹುಸಂಖ್ಯೆಯಲ್ಲಿ ಕಾದಂಬರಿಗಳನ್ನು ರಚಿಸಿದವರಿದ್ದಾರೆ. ಕಾದಂಬರಿಗಳ ಹರಹು ಕೂಡ ವಿಸ್ತಾರವಾಗಿದೆ. 1953ನೆಯ ಇಸವಿಯಲ್ಲಿ ಸುಲಭ ಬೆಲೆಯ ಕೈ ಹೊತ್ತಗೆಗಳು ಆರಂಭವಾದಮೇಲೆ ಕಾದಂಬರಿಗಳನ್ನು ಕೊಳ್ಳುವ ಓದುವ ಕನ್ನಡಿಗರ ಸಂಖ್ಯೆ ಬೆಳೆಯಿತು. ಹಿರಿಯ ಹಾಗೂ ತರುಣ ಕಾದಂಬರಿಕಾರರಿಗೆ ಉತ್ತೇಜನ ದೊರಕಿತು. ಹಳೆಯ ಜಾಡಿನಲ್ಲಿಯೇ ಕಾದಂಬರಿಯ ರಚನೆಯಾಗಿರುವಂತೆ, ಹೊಸ ಜಾಡನ್ನು ಹಿಡಿದ ಹೊಸರೀತಿಯ ಕಾದಂಬರಿಗಳೂ ಪ್ರಕಟಗೊಂಡಿವೆ. ವಸ್ತು, ಶೈಲಿ, ನಿರೂಪಣೆ, ತಂತ್ರ ಮೊದಲಾದುವುಗಳಲ್ಲಿ ವೈವಿಧ್ಯ ಮೂಡಿದೆ. ಸಾಮಾಜಿಕ ಕಾದಂಬರಿಗಳೇ ವಿಪುಲವಾಗಿದ್ದರೂ ಕೆಲವು ಐತಿಹಾಸಿಕ, ಪೌರಾಣಿಕ ಮತ್ತು ಪತ್ತೇದಾರಿ ಕಾದಂಬರಿಗಳೂ ಬಂದಿವೆ.

ಭಾರತ ದೇಶದಲ್ಲಿ ನಡೆದ ರಾಜಕೀಯ ಹೋರಾಟ ಮತ್ತು ಸ್ವಾತಂತ್ರ್ಯ ಚಳವಳಿಗಳನ್ನು ವಸ್ತುವಾಗಿ ಉಳ್ಳ ಕೆಲವು ಕಾದಂಬರಿಗಳು ಕನ್ನಡದಲ್ಲಿ ಬಂದಿವೆ. ಶಿವರಾಮ ಕಾರಂತರ ಔದಾರ್ಯದ ಉರುಳಲ್ಲಿ ಭಾರತದ ರಾಜಕೀಯ ಹಾಗೂ ಶೈಕ್ಷಣಿಕ ರಂಗದಲ್ಲಿ ನಡೆದ ಪ್ರಯೋಗಗಳ, ಸೋಲುಗೆಲುವುಗಳ ಮಾರ್ಮಿಕ ಚಿತ್ರವಿದೆ. ಮಿರ್ಜಿ ಅಣ್ಣಾರಾಯರ ಪ್ರತಿಸರಕಾರ, ರಾಷ್ಟ್ರಪುರುಷ; ಬಸವರಾಜ ಕಟ್ಟೀಮನಿಯವರ ಸ್ವಾತಂತ್ರ್ಯದೆಡೆಗೆ ಮತ್ತು ಮಾಡಿಮಡಿದವರು, ತ.ರಾ.ಸು.ರವರ ರಕ್ತತರ್ಪಣ, ಕೋ. ಚೆನ್ನಬಸಪ್ಪನವರ ರಕ್ತತರ್ಪಣ, ಪ.ಸು.ಭಟ್ಟರ ಆತ್ಮಾರ್ಪಣೆ, ನಿರಂಜನರ ಚಿರಸ್ಮರಣೆ ಮೊದಲಾದವು ಸ್ವಾತಂತ್ರ್ಯಕ್ಕಾಗಿ ನಡೆದ ಚಳವಳಿಯನ್ನು ನೇರವಾಗಿ ನಿರೂಪಿಸುತ್ತವೆ. 1942ರ ಆಗಸ್ಟ್ ತಿಂಗಳು ಮುಂಬಯಿಯಲ್ಲಿ ನಡೆದ ಚಳವಳಿಯ ಹಿನ್ನೆಲೆಯಲ್ಲಿ ರಚಿತವಾದ ವಸ್ತು ವಿ.ಎಂ. ಇನಾಮದಾರರ ಮೂರಾಬಟ್ಟೆಯಲ್ಲಿ ಬರುತ್ತದೆ. ಅ.ನ.ಕೃ. ರವರ ಅಮರ ಆಗಸ್ಟ್, ಶ್ರೀರಂಗರ ಪುರುಷಾರ್ಥ ಮತ್ತು ಕುಮಾರಸಂಭವ ಇವೇ ಮೊದಲಾದ ಕಾದಂಬರಿಗಳಲ್ಲಿ ವಿಶಿಷ್ಟ ತಂತ್ರಗಳನ್ನು ಅಳವಡಿಸಿಕೊಂಡು ರಾಜಕೀಯ ಹೋರಾಟದ ಮತ್ತು ಜೀವನದ ಚಿತ್ರಗಳನ್ನು ಕೊಡಲಾಗಿದೆ. ಕಡಿದಾಳು ಮಂಜಪ್ಪನವರ ಪಂಜರವಳ್ಳಿಯ ಪಂಜು ಇತ್ತೀಚಿನ ರಾಜಕೀಯಕ್ಕೆ ಸಂಬಂಧಿಸಿದ ಒಂದು ಕಾದಂಬರಿ.

ಬಿ.ವೆಂಕಟಾಚಾರ್ಯರು ಹಾಗೂ ಗಳಗನಾಥರು ಆಗಿಹೋದ ಮೇಲೆ ಕನ್ನಡದಲ್ಲಿ ಐತಿಹಾಸಿಕ ಕಾದಂಬರಿಗಳ ರಚನೆ ಅಷ್ಟೊಂದು ವಿಪುಲವಾಗಿ ನಡೆಯಲಿಲ್ಲ ಎನ್ನಬಹುದು. ಆದರೂ ಹಲವಾರು ಕಾದಂಬರಿಕಾರರು ಇತಿಹಾಸಕ್ಕೆ ವಾಸ್ತವಿಕತೆಯ ರಕ್ತದಾನ ಮಾಡಿ ಕೃತಿಗಳನ್ನು ರಚನೆ ಮಾಡಿದರು. ಇಂಥ' ಕಾದಂಬರಿಗಳಲ್ಲಿ ಶ್ರೀನಿವಾಸರ ಚನ್ನಬಸವನಾಯಕ ಒಂದು ಮೈಲುಗಲ್ಲು. ಕೆಳದಿಯ ರಾಜ್ಯದ ಕೊನೆಯ ನಾಯಕರ ಸ್ಥಿತಿಯನ್ನು ಚಿತ್ರಿಸಿ ಹೈದರನ ಕುತಂತ್ರದ ಫಲವಾಗಿ ಆ ರಾಜ್ಯ ಮತ್ತು ರಾಜಧಾನಿ ಹೇಗೆ ಅವನ ವಶವಾಯಿತು ಎಂಬುದನ್ನು ನಿರೂಪಿಸಲಾಗಿದೆ. ಇಷ್ಟೇ ಗಮನಾರ್ಹವಾದ ಇವರ ಇನ್ನೊಂದು ಐತಿಹಾಸಿಕ ಕಾದಂಬರಿ ಚಿಕ್ಕವೀರರಾಜೇಂದ್ರ. ತ.ರಾ.ಸು. ಅವರ ಹಂಸಗೀತೆ. ಚಿತ್ರದುರ್ಗದ ಇತಿಹಾಸದ ಹಿನ್ನೆಲೆಯಲ್ಲಿ ರಚಿತವಾದ ಒಂದು ಉತ್ತಮ ಕೃತಿ. ಚಿತ್ರದುರ್ಗದ ಇತಿಹಾಸವನ್ನೇ ಆಧರಿಸಿ ಕಂಬನಿಯ ಕುಯಿಲು, ರಕ್ತರಾತ್ರಿ, ತಿರುಗುಬಾಣ, ಹೊಸ ಹಗಲು ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಈ ಕಾದಂಬರಿಗಳ ಪಾತ್ರರಚನೆ ವರ್ಣನೆ ಇವುಗಳಲ್ಲಿ ವೀರರಸ ಮಡುಗಟ್ಟಿದೆ. ಇವರ ಶಿಲ್ಪಶ್ರೀ, ಚಾವುಂಡರಾಯನ ಜೀವನದ ಆಧಾರದ ಮೇಲೆ ರಚಿತವಾದ ಇತ್ತೀಚಿನ ಕೃತಿ. ಅ.ನ.ಕೃ. ಕೂಡ ವಿಜಯನಗರದ ಇತಿಹಾಸದ ಮೇಲೆ ಕಾದಂಬರಿಗಳನ್ನು ರಚಿಸಿದ್ದಾರೆ. ಐತಿಹಾಸಿಕ ಕಾದಂಬರಿಗಳಲ್ಲಿ ನಮ್ಮ ಮನಸ್ಸನ್ನು ಮುತ್ತುವ ಇನ್ನೊಂದು ಕಾದಂಬರಿ ಕೆ.ವಿ.ಅಯ್ಯರ್ ಅವರ ಶಾಂತಲಾ. ಹೊಯ್ಸಳ ವಿಷ್ಣುವರ್ಧನನ ಶಾಂತಲಾ ದೇವಿಯ ಜೀವನ ಚಿತ್ರಣ ಕಾದಂಬರಿಯ ವಸ್ತು. ಬರೆವಣಿಗೆ ಸುಂದರವಾಗಿದೆ. ವೀರಕೇಸರಿ ಸೀತಾರಾಮಶಾಸ್ತ್ರಿಗಳು ಟಿಪ್ಪುಸುಲ್ತಾನನ ಕಾಲದ ಚರಿತ್ರೆಯನ್ನು ವಸ್ತುವಾಗಿ ಉಳ್ಳ ದೌಲತ್ ಎಂಬ ವೀರ ಶೃಂಗಾರಗಳಿಂದ ಕೂಡಿದ ಮೂರು ಭಾಗಗಳ ಬೃಹತ್ ಕಾದಂಬರಿಯನ್ನು ಬರೆದಿದ್ದಾರೆ. ಶ್ರೀನಿವಾಸರಾವ್ ಕೊರಟಿ ಕನ್ನಡದಲ್ಲಿ ಬಹುಸಂಖ್ಯೆಯಲ್ಲಿ ಕಾದಂಬರಿಗಳನ್ನು ರಚಿಸಿದ್ದು ಇವರ ಪರಮೇಶ್ವರ ಪುಲಿಕೇಶಿ ಖ್ಯಾತಿಪಡೆದ ಕಾದಂಬರಿಯಾಗಿದೆ. ಬಿ.ಪುಟ್ಟಸ್ವಾಮಯ್ಯ ನೂರ್ಮಡಿ ತೈಲಪನನ್ನೂ ವಿಜಯನಗರದ ಇತಿಹಾಸವನ್ನು ಕುರಿತಂತೆ ಹಲವಾರು ಕಾದಂಬರಿಗಳನ್ನೂ ಬರೆದಿದ್ದಾರೆ. ಇವರ ಕ್ರಾಂತಿಕಲ್ಯಾಣ 12ನೆಯ ಶತಮಾನದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ನಡೆದ ಕ್ರಾಂತಿಯನ್ನು ಚಿತ್ರಿಸುತ್ತದೆ. ಸಮೇತನಹಳ್ಳಿ ರಾಮರಾಯರ ಸವತಿ ಗಂಧವಾರಣೆ ವಿಷ್ಣುವರ್ಧನನ ರಾಣಿ ಶಾಂತಲಾದೇವಿಗೆ ಸಂಬಂಧಿಸಿದ ಒಂದು ಉತ್ತಮ ಕೃತಿ.

ಪೌರಾಣಿಕ ಕಾದಂಬರಿಗಳಲ್ಲಿ ಹೊಸ ಜಾಡನ್ನು ತುಳಿದು ಉತ್ತಮ ಕೃತಿಗಳನ್ನು ಕನ್ನಡಕ್ಕೆ ಕೊಟ್ಟವರಲ್ಲಿ ದೇವುಡು ಪ್ರಮುಖರು. ಇವರ ಮಹಾಬ್ರಾಹ್ಮಣ ಹಾಗೂ ಮಹಾಕ್ಷತ್ರಿಯ ಎರಡು ಉತ್ತಮ ಕಾದಂಬರಿಗಳು. ಪುರಾಣವಸ್ತು ದೇವುಡು ಅವರ ಕೈಯಲ್ಲಿ ಹೊಸತನದೊಂದಿಗೆ ನಿರೂಪಿತವಾಗುತ್ತದೆ. ಅಲ್ಲಿಯ ಪಾತ್ರಗಳು ಪುರಾಣಕ್ಕೆ ಸಂಬಂಧಿಸಿದವಾದರೂ ನಮಗೆ ಹೆಚ್ಚು ಹತ್ತಿರವಾಗುತ್ತವೆ. ಇತ್ತೀಚೆಗೆ ಹೊರಬಂದ ಜನಾರ್ಧನ ಗುರ್ಕಾರರ ಚೂಡಾಲ ಒಂದು ಉತ್ತಮ ಕೃತಿ. ತ.ರಾ.ಸು. ಅವರ ಬೆಳಕು ತಂದ ಬಾಲಕ ಪುರಾಣ ವಸ್ತುವನ್ನು ಬಳಸಿಯೂ ಹೇಗೆ ಉತ್ತಮವಾಗಿ ಕಾದಂಬರಿ ಬರೆಯಬಹುದೆಂಬುದಕ್ಕೆ ಒಂದು ನಿದರ್ಶನವಾಗಿದೆ. ಇತಿಹಾಸವನ್ನೊಳಗೊಂಡಿದ್ದೂ ಆಧ್ಯಾತ್ಮಿಕ ಸ್ತರದಲ್ಲಿ ನಡೆಯುವ ಕಾದಂಬರಿಗಳಲ್ಲಿ ಎಚ್.ತಿಪ್ಪೇರುದ್ರಸ್ವಾಮಿಯವರ ಕದಳಿಯ ಕರ್ಪೂರ, ಜ್ಯೋತಿ ಬೆಳಗುತ್ತಿದೆ, ಪರಿಪೂರ್ಣದೆಡೆಗೆ, ತ.ರಾ.ಸು. ಅವರ ಅಗ್ನಿರಥ ಮುಕ್ತಪಥ ಇವುಗಳನ್ನು ಹೆಸರಿಸಬಹುದು.

ಕಾದಂಬರಿಕಾರರ ದೃಷ್ಟಿ ಹಳ್ಳಿಗಳ ಕಡೆ ಹರಿದು, ಹಳ್ಳಿಗಳ ಜೀವನದ ಬಗ್ಗೆ ಕೆಲವು ಒಳ್ಳೆಯ ಕಾದಂಬರಿಗಳು ಬಂದಿರುವುದು ಗಮನಾರ್ಹ. ಎಚ್.ದೇವೀರಪ್ಪನವರ ಬೆಳವಲದ ಮಡಿಲಲ್ಲಿ, ಕೃಷ್ಣಮೂರ್ತಿ, ಪುರಾಣಿಕರ ಹಬ್ಬಿದ ಬಳ್ಳಿ, ಬಸವರಾಜ ಕಟ್ಟೀಮನಿಯವರ ಮಣ್ಣು ಮತ್ತು ಹೆಣ್ಣು, ಚದುರಂಗರ ಸರ್ವಮಂಗಳಾ,

ತ.ರಾ.ಸು. ಅವರ ಚಂದವಳ್ಳಿಯ ತೋಟ ಇವೇ ಮೊದಲಾದ ಕಾದಂಬರಿಗಳಲ್ಲಿ ಹಳ್ಳಿಗಳ ಸರಳ ಸುಂದರ ಜೀವನದ ಹಾಗೂ ಬದಲಾಗುತ್ತಿರುವ ಹಳ್ಳಿಗಳ ಜೀವನದ ವಾಸ್ತವಿಕ ಚಿತ್ರಣಗಳನ್ನು ಕಾಣಬಹುದು. ಹಳ್ಳಿಯ ಜೀವನವನ್ನು ಕುರಿತ ರಾವಬಹದ್ದೂರ ಅವರ ಗ್ರಾಮಾಯಣ ಈ ಕಾಲದ ವೈಶಿಷ್ಟ್ಯ ಪೂರ್ಣವಾದ ಉತ್ಕೃಷ್ಟ ಕಾದಂಬರಿ. ಹಳ್ಳಿಯ ಸರಳವಾದ ಚೊಕ್ಕ ಜೀವನವನ್ನು ಚಿತ್ರಿಸುತ್ತಿರುವಂತೆಯೆ ಬದಲಾಗುತ್ತಿರುವ ಹಳ್ಳಿಯ ಜೀವನದ ಲೋಪದೋಷಗಳನ್ನು ಇಷ್ಟೊಂದು ಮಾರ್ಮಿಕವಾಗಿ ಚಿತ್ರಿಸಿದವರು ವಿರಳ, ವೃಂದಾವನ, ಬಿತ್ತಿ ಬೆಳೆದವರು ಧೂಮಕೇತು ಇವರ ಈಚಿನ ಕಾದಂಬರಿಗಳು.

ಹರಿಜನರ ಸಮಸ್ಯೆಯ ಬಗ್ಗೆ ಬಂದ ಕಾದಂಬರಿಗಳು ಕಡಿಮೆ. ಕೆ.ಎ.ಎನ್.ರಾವ್ ಅವರ ಮುನಿಯನ ಮಾದರಿ, ಎಂ.ವಿ.ಸೀತಾರಾಮಯ್ಯ ನವರ ಮಾದನ ಮಗಳು, ಕಟ್ಟೀಮನಿಯವರ ನೀ ನನ್ನ ಮುಟ್ಟಬೇಡ ಇವುಗಳನ್ನು ಉದಾಹರಣೆಗಾಗಿ ಉಲ್ಲೇಖಿಸಬಹುದಾಗಿದೆ.

ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕಾದಂಬರಿಗಳನ್ನು ರಚಿಸಿದ ಕೆಲವು ಕಾದಂಬರಿಕಾರರನ್ನು ಹೆಸರಿಸಬಹುದು. ಶಿವರಾಮ ಕಾರಾಂತ, ಕುವೆಂಪು, ರಾವಬಹಾದ್ದೂರ, ದೇವುಡು (ಅಂತರಂಗ, ಮಲ್ಲಿ, ಎರಡನೆಯ ಜನ್ಮ), ಬಿ.ಪುಟ್ಟಸ್ವಾಮಯ್ಯ, ಶ್ರೀನಿವಾಸ, ಎಂ.ಆರ್.ಶ್ರೀನಿವಾಸಮೂರ್ತಿ, ಅ.ನ.ಕೃ.,ಶ್ರೀರಂಗ, ಗೋಕಾಕ, ಕೆ.ವಿ.ಅಯ್ಯರ್ ಮಿರ್ಜಿ ಅಣ್ಣಾರಾಯ, ತ.ರಾ.ಸು. (ಚಂದನದ ಬೊಂಬೆ, ಮಸಣದ ಹೂವು, ನಾಗರಹಾವು), ಬಸವರಾಜ ಕಟ್ಟೀಮನಿ (ಮೋಹದ ಬಲೆಯಲ್ಲಿ, ಜರತಾರಿ ಜಗದ್ಗುರು, ಖಾನಾವಳಿಯ ನೀಲಾ), ವಿ.ಎಂ.ಇನಾಂದಾರ್ (ಶಾಪ, ಈ ಪರಿಯ ಸೊಬಗು, ಮುಗಿಯದ ಕತೆ), ನಿರಂಜನ (ಅಭಯಾಶ್ರಮ, ಚಿರಸ್ಮರಣೆ), ಚದುರಂಗ (ಉಯ್ಯಾಲೆ), ಆನಂದಕಂದ (ಸುದರ್ಶನ, ಮಗಳ ಮದುವೆ), ಎಸ್.ಅನಂತನಾರಾಯಣ, (ಅತ್ತಿಗೆ), ಗೊರೂರು ರಾಮಸ್ವಾಮಿ ಅಯ್ಯಂಗಾರ್ (ಹೇಮಾವತಿ, ಊರ್ವಶಿ), ವ್ಯಾಸರಾಯ ಬಲ್ಲಾಳ (ಹೇಮಂತಗಾನ, ವಾತ್ಸಲ್ಯಪಥ, ಚಿರವಿರಹಿ), ಬೀಚಿ (ದಾಸಕೂಟ), ಕೃಷ್ಣಮೂರ್ತಿ ಪುರಾಣಿಕ (ಮುಗಿಲ ಮಲ್ಲಿಗೆ, ಮನೆ ತುಂಬಿದ ಹೆಣ್ಣು, ಮಣ್ಣಿನ ಮಗಳು, ತಂಪುನೆಳಲು), ರಾಮಚಂದ್ರ, ಕೊಟ್ಟಲಗಿ (ದೀಪ ಹತ್ತಿತು), ಭಾರತೀಸುತ (ಎಡಕಲ್ಲು ಗುಡ್ಡದ ಮೇಲೆ), ಎಸ್.ಎಲ್.ಭೈರಪ್ಪ (ವಂಶವೃಕ್ಷ, ಗೃಹಭಂಗ, ಗ್ರಹಣ, ದಾಟು). ವಿಶುಕುಮಾರ್ (ಕರಾವಳಿ, ಮದರ್), 'ಎನ್ಕೆ ಸಾವಿನ ಉಡಿಯಲ್ಲಿ, ಎರಡನೆ ಸಂಬಂಧ,' ಯಶವಂತ ಚಿತ್ತಾಲ (ಮೂರು ದಾರಿಗಳು ಶಿಕಾರಿ) ಶಾಂತಿನಾಥ ದೇಸಾಯಿ (ಮುಕ್ತಿ, ವಿಕ್ಷೇಪ), ಯು.ಆರ್.ಅನಂತಮೂರ್ತಿ (ಸಂಸ್ಕಾರ, ಭಾರತೀಪುರ, ಅವಸ್ಥೆ, ಭವ) ಪಿ.ಲಂಕೇಶ್ (ಬಿರುಕು), ಎ.ಕೆ.ರಾಮಾನುಜನ್ (ಹಳದಿ ಮೀನು), ಶಂಕರ ಮೊಕಾಶಿ ಪುಣೇಕರರ (ಗಂಗವ್ವ ಗಾಂಗಾಮಾಯಿ), ಪೂರ್ಣಚಂದ್ರತೇಜಸ್ವಿ (ಸ್ವರೂಪ), ಗಿರಿ (ಗತಿಸ್ಥಿತಿ), ಕಾಮರೂಪಿ (ಕುದುರೆಮೊಟ್ಟೆ), ಆರ್ಯ (ಗುರು), ಶ್ರೀಕೃಷ್ಣ ಅಲನಹಳ್ಳಿ, (ಕಾಡು, ಪರಸಂಗದ ಗೆಂಡೆತಿಮ್ಮ, ಭುಜಂಗಯ್ಯನ ದಶಾವತಾರ) ಮೊದಲಾದವರು.

ಸಂಸ್ಕಾರ, ವಂಶವೃಕ್ಷ, ದಾಟು, ಕರಾವಳಿ, ಮುಕ್ತಿ, ವಿಕ್ಷೇಪ, ಕಾಡು, ಗಂಗವ್ವಗಂಗಾಮಾಯಿ, ಗತಿಸ್ಥಿತಿ, ಬಿರುಕು, ಮಲೆಗಳಲ್ಲಿ ಮದುಮಗಳು, ಗ್ರಾಮಾಯಣ, ಮರಳಿಮಣ್ಣಿಗೆ, ಅಳಿದಮೇಲೆ, ಕುಸುಮಬಾಲೆ ಇವು ಇತ್ತೀಚೆಗೆ ಹೆಚ್ಚು ಚರ್ಚೆಗೆ ಒಳಗಾದ ಕಾದಂಬರಿಗಳಾಗಿವೆ.

ಸ್ತ್ರೀಯರೂ ಮುಂದೆ ಬಂದು ಕಾದಂಬರಿಗಳನ್ನು ರಚಿಸಿರುವುದು ಸ್ವಾತಂತ್ರ್ಯೋತ್ತರ ಕಾಲದ ಒಂದು ವೈಶಿಷ್ಟ್ಯ. ಶರಪಂಜರ, ಹಣ್ಣೆಲೆ ಚಿಗುರಿದಾಗ, ಬೆಕ್ಕಿನ ಕಣ್ಣು, ಬೆಳ್ಳಿಮೋಡ- ಮೊದಲಾದ ಕಾದಂಬರಿಗಳನ್ನು ಬರೆದಿರುವ ತ್ರಿವೇಣಿ ಅವರು ಓದುಗರಿಗೆ ಹೆಚ್ಚು ಪರಿಚಿತರಾಗಿದ್ದಾರೆ. ಮಾನವ ಜೀವನದ ಹಲವು ಜಟಿಲ ಹಾಗೂ ಮನೋವೈಜ್ಞಾನಿಕ ಸಮಸ್ಯೆಗಳ ಮೇಲೆ ಇವರು ಕಾದಂಬರಿಗಳನ್ನು ರಚಿಸಿದ್ದಾರೆ. ಅನುಪಮಾ ನಿರಂಜನ, ಎಂ.ಕೆ.ಇಂದಿರಾ, ವಾಣಿ, ಜಯಲಕ್ಷ್ಮಿ, ಆರ್ಯಾಂಬ ಪಟ್ಟಾಭಿ, ಗೀತಾಕುಲಕರ್ಣಿ, ಕೆ.ಸರೋಜರಾವ್, ಎ.ಪಿ.ಮಾಲತಿ, ವೀಣಾ ಬಿ.ಟಿ.ಲಲಿತಾನಾಯಕ, ಲತಾರಾಜಶೇಖರ, ಸುಧಾಮೂರ್ತಿ -ಮೊದಲಾದ ಕಾದಂಬರಿಕಾರ್ತಿಯರು ಕನ್ನಡದಲ್ಲಿ ಕಾದಂಬರಿ ರಚನೆಯಲ್ಲಿ ತೊಡಗಿದ್ದಾರೆ.

ಒಂದು ಕಡೆ ಸೃಜನಶೀಲ ಸಾಹಿತ್ಯ ಕಾದಂಬರಿ ಪ್ರಕಾರವನ್ನು ಶ್ರೀಮಂತಗೊಳಿಸಿದರೆ ಇನ್ನೊಂದೆಡೆ ಶ್ರೇಷ್ಠ ಭಾಷಾಂತರಗಳು ಈ ಸಾಹಿತ್ಯವನ್ನು ಹೆಚ್ಚು ಸಂಪದ್ಭರಿತಗೊಳಿಸಿವೆ. ಫ್ರೆಂಚ್, ಇಂಗ್ಲಿಷ್, ರಷಿಯನ್, ಮರಾಠಿ, ಬಂಗಾಳಿ, ಹಿಂದಿ, ತಮಿಳು, ತೆಲುಗು, ಮಲೆಯಾಳಂ ಹಾಗೂ ಇತರ ಹಲವು ಭಾಷೆಗಳಿಂದ ಭಾಷಾಂತರಕಾರ್ಯ ಸಾಗಿದೆ. ಹಮ್ಮು ಬಿಮ್ಮು, ಪುನರುತ್ಥಾನ, ಮದಾಂ ಬಾವರಿ, ಅನ್ನ, ಸೋತು ಗೆದ್ದವನು, ಕೆಂಪುಮೀನು ಮುಂತಾದ ಶ್ರೇಷ್ಠ ಕಾದಂಬರಿಗಳು ಕನ್ನಡಕ್ಕೆ ಅನುವಾದಗೊಂಡಿವೆ. (ನೋಡಿ: ಕನ್ನಡದಲ್ಲಿ ಭಾಷಾಂತರಗಳು).

ಅಗ್ಗದ ಕಿರುಹೊತ್ತಗೆಗಳಿಂದ ಒಂದು ಕಾಲದಲ್ಲಿ ಕಾದಂಬರಿ ಜನಪ್ರಿಯವಾಗಿತ್ತು. ಈಗ ಆ ಕೆಲಸವನ್ನು ದಿನಪತ್ರಿಕೆಗಳು ವಾರಪತ್ರಿಕೆಗಳು ಮಾಸಪತ್ರಿಕೆಗಳು ನೆರವೇರಿಸುತ್ತಿವೆ. ದೈನಿಕ ಧಾರಾವಾಹಿಯಾಗಿ ಕಾದಂಬರಿಯನ್ನು ಪ್ರಕಟಿಸುವ ಉದ್ಯಮವನ್ನು ಕನ್ನಡಪ್ರಭ ಮೊದಲಿಗೆ ಪ್ರಾರಂಭಿಸಿತು. ಮಯೂರ, ಮಲ್ಲಿಗೆ, ತುಷಾರ, ಸುಧಾ, ಪ್ರಜಾಮತ, ಜನಪ್ರಗತಿ, ಕರ್ಮವೀರ ಮುಂತಾದ ವಾರಪತ್ರಿಕೆಗಳಲ್ಲೂ ಕಾದಂಬರಿಗಳು ಪ್ರಕಟವಾಗುತ್ತಿವೆ. *

ಎಪ್ಪತ್ತರ ದಶಕದ ಉತ್ತರಾರ್ಧದ ಹೊತ್ತಿಗೆ ಕನ್ನಡ ಕಾದಂಬರಿ ಪರಂಪರೆಯಲ್ಲಿ ಮಹತ್ವದ ಬದಲಾವಣೆಯುಂಟಾಯಿತು. ಕುವೆಂಪು, ಕಾರಂತ, ನಿರಂಜನ, ತ.ರಾ.ಸು., ಬಸವರಾಜಕಟ್ಟೀಮನಿ, ವಿ.ಎಂ.ಇನಾಂದಾರ, ಎಸ್.ಎಲ್.ಭೈರಪ್ಪ, ಯು.ಆರ್.ಅನಂತಮೂರ್ತಿ, ಶಾಂತಿನಾಥ ದೇಸಾಯಿ, ವ್ಯಾಸರಾಯ ಬಲ್ಲಾಳ, ಯಶವಂತ ಚಿತ್ತಾಲ, ಅನುಪಮಾ ನಿರಂಜನ, ಎಂ.ಕೆ.ಇಂದಿರಾ ಮೊದಲಾದ ಕಾದಂಬರಿಕಾರರು ತಮ್ಮದೇ ಸಂಪ್ರದಾಯವನ್ನು ಈಗಾಗಲೇ ನಿರ್ಮಿಸಿಕೊಂಡಿದ್ದರು. ವಸ್ತು, ಶೈಲಿ, ಧೋರಣೆ, ಸಂವಿಧಾನ ಮೊದಲಾದ ವಿಷಯಗಳಲ್ಲಿ ಎದ್ದುಕಾಣುವ ತಮ್ಮತನದ ಮುದ್ರೆಯನ್ನು ತಮ್ಮ ಕಾದಂಬರಿಗಳಲ್ಲಿ ಇವರೆಲ್ಲಾ ಒತ್ತಿದ್ದರು. ತಮ್ಮ ಕೃತಿಗಳ ಬಗೆಗೆ ಪೂರ್ವ ನಿರೀಕ್ಷೆಯುಳ್ಳ ಓದುಗ ವರ್ಗವನ್ನು ಈ ಕಾದಂಬರಿಕಾರರು ಹುಟ್ಟು ಹಾಕಿದ್ದರು. ಇದಕ್ಕೆ ನಿದರ್ಶನವೆಂದರೆ, 1977ರಲ್ಲಿ ಬಂದ ಕಾರಂತರ 'ಅದೇ ಊರು ಅದೇ ಮರ' ಕಾದಂಬರಿಯು ಸುಧಾರಣಾವಾದಿ ಪಾತ್ರತೆಯೊಳಗಿನ ಬದಲಾವಣೆಯ ಬಗೆಗಿನ ಅಸಹನೆಯನ್ನೇ ಮುಂದುವರೆಸಿದೆ. 'ಗ್ರಾಮಾಯಣ'ದ ದರ್ಶನ ನೀಡಿದ ರಾವಬಹಾದ್ದೂರರು ಚಲೇಜಾವ್ ಚಳುವಳಿಯ ಸಂದರ್ಭದ ವಿವಿಧ ಬಗೆಯ ಜೀವನಾಸಕ್ತಿಯುಳ್ಳ ವ್ಯಕ್ತಿಗಳ ಅನುಭವವನ್ನು ಸೂಕ್ಷ್ಮ ಕಲೆಗಾರಿಕೆಯಲ್ಲಿ ದಾಖಲಿಸುತ್ತಾರೆ. 1978ರಲ್ಲಿ ಬಂದ ಯು.ಆರ್. ಅನಂತಮೂರ್ತಿಯವರ 'ಅವಸ್ಥೆ' ಕಾದಂಬರಿಯಲ್ಲಿ 'ಸಂಸ್ಕಾರ' 'ಭಾರತೀಪುರ' ಕಾದಂಬರಿಗಳ ಆಶಯವೇ ಮುಂದುವರಿಯಿತು. ಅಂತರಂಗ ಬಹಿರಂಗಗಳ ನಡುವಿನ ಗೆರೆಯನ್ನೇ ಇಲ್ಲವಾಗಿಸುವಷ್ಟು ಸಂಕೀರ್ಣ ಸಂಬಂಧವನ್ನು ಹೊಂದಿದ ವ್ಯಕ್ತಿತ್ವದ ಶೋಧವನ್ನು 'ಅವಸ್ಥೆ' ಕೈಗೊಳ್ಳುತ್ತದೆ. ಸಾಮಾಜಿಕ ಪ್ರಕ್ರಿಯೆಯ ಪಾತಳಿಯಲ್ಲಿ ರಾಜಕೀಯ ವ್ಯಕ್ತಿತ್ವವನ್ನು ಕೃಷ್ಣಪ್ಪನ ಪಾತ್ರ ಹೊಂದಿದರೆ, ವೈಯಕ್ತಿಕ ಪಾತಳಿಯಲ್ಲಿ ಪ್ರೇಮಿ, ಆಧ್ಯಾತ್ಮಿಯ ಪಾತ್ರವಿದೆ. ಇವೆರಡರ ನಡುವಿನ ದ್ವಂದ್ವದಲ್ಲಿ ವ್ಯಕ್ತಿ-ಸಮಾಜ -ಚರಿತ್ರೆಯ ವಾಸ್ತವಗಳು ನಿರ್ಮಾಣವಾಗುತ್ತವೆಂಬ ದರ್ಶನ ಈ ಕಾದಂಬರಿಯದು. ಭ್ರಷ್ಟ ರಾಜಕೀಯದ ಹಿನ್ನೆಲೆಯಲ್ಲಿ ಮನುಷ್ಯ ಪ್ರಜ್ಞೆಯ ವಿವಿಧ ಅವಸ್ಥಾಂತರಗಳನ್ನು ಕೃಷ್ಣಪ್ಪ ಪಾತ್ರದ ಬದುಕಿನ ವಿವಿಧ ಹಂತಗಳಲ್ಲಿ ಈ ಕಾದಂಬರಿ ಅನಾವರಣಗೊಳಿಸುತ್ತದೆ.

ಗ್ರಾಮ್ಯಜೀವನದ ಸಂಕ್ರಮಣಾವಸ್ಥೆಯನ್ನು ಶೋಧಿಸಲೆತ್ನಿಸುವ ಕಾದಂಬರಿಗಳಾದ ಲಂಕೇಶರ 'ಮುಸ್ಸಂಜೆಯ ಕಥಾ ಪ್ರಸಂಗ' ಹಾಗೂ ಚಂದ್ರಶೇಖರ ಕಂಬಾರರ 'ಕರಿಮಾಯಿ' 70ರ ದಶಕದವೇ. ಬರೆಯುವ ಪ್ರೇರಣೆಯನ್ನು ವಿಮರ್ಶಕರಿಂದ ಪಡೆಯುವಂತಿದ್ದ ನವ್ಯ ಸಂದರ್ಭವು 70ರ ದಶಕದ ಕೊನೆಯ ಹೊತ್ತಿಗಾಗಲೇ ಹೆಚ್ಚು ವಾಚಕಾಭಿಮುಖಿಯಾಗ ತೊಡಗಿತು. ಹೀಗಾಗಿ ಕಥನದ ತಾಂತ್ರಿಕತೆಯಕಡೆ ಒಲಿಯದ ನಿರಾಳ ಶೈಲಿಯನ್ನು ಲಂಕೇಶ ಮತ್ತು ಕಂಬಾರರು ಅನುಸರಿಸಿದರು. ಅಂತರಾಳದ ಸಂಘರ್ಷಗಳ ಶೋಧ ಉಸಿರುಗಟ್ಟಿಸುವಷ್ಟು ಅಸಹನೀಯವೆನಿಸಿದಾಗ, ಗ್ರಾಮ್ಯಸಹಜ ವ್ಯಕ್ತಿತ್ವಗಳ ಜೀವನೋತ್ಸಾಹಗಳನ್ನು ಕಾಣಿಸುವ ಉದ್ದೇಶ ಇವರಿಬ್ಬರಲ್ಲಿ ಕಂಡುಬರುತ್ತದೆ. ಆಧುನೀಕರಣ ಪ್ರಕ್ರಿಯೆಯನ್ನು ಸಿನಿಕತನದಿಂದ ನಿರಾಕರಿಸದೆ ಅದನ್ನು ಉತ್ಸಾಹ, ಬೆರಗಿನಿಂದ ಅರ್ಥೈಸಿಕೊಳ್ಳಲು ಎರಡೂ ಕಾದಂಬರಿಗಳು ಯತ್ನಿಸುತ್ತವೆ.

ನವ್ಯ ಸಾಹಿತ್ಯಕ್ಕೆ ದಕ್ಕಿದ ಈ ಆಯಾಮ ಸೃಜನಶೀಲತೆಯ ಸಾಧ್ಯತೆಗಳ ವಿಸ್ತಾರದ ಅರಿವನ್ನುಂಟುಮಾಡಿತು. ಈ ದಶಕದಲ್ಲಿ ಬಂದ ಶಾಂತಿನಾಥ ದೇಸಾಯಿಯವರ 'ಸೃಷ್ಟಿ' (1979) ಬದುಕಿನ ಅನಂತ ಸಾಧ್ಯತೆಗಳನ್ನೆಲ್ಲ ಸಾಹಿತ್ಯ ಒಳಗೊಳ್ಳುತ್ತದೆಂಬುದನ್ನು ಕಲಾತ್ಮಕವಾಗಿ ಬಿಂಬಿಸುವ ಕೃತಿ. ಸಾಮಾಜಿಕ ಬದ್ಧತೆ ಸೃಷ್ಟಿಕ್ರಿಯೆಯ ಪ್ರಮುಖ ಗುರಿಯಾದಾಗ ಲೆಕ್ಕಣಿಕೆಯ ಮಸಿಯನ್ನೆಷ್ಟು ಹರಿಸಿದರೂ ವ್ಯರ್ಥ; ರಕ್ತಕ್ರಾಂತಿ ಎಂಬ ಗಂಗಾವತರಣದಲ್ಲಿ ಮಿಂದು ಕಲಾವಿದರ ಪುನರ್ಜನ್ಮವಾಗಬೇಕೆಂಬ ಆಶಯ ಈ ಕಾದಂಬರಿಯದು. ಕನ್ನಡ ಕಥಾಸಾಹಿತ್ಯ ತನ್ನನ್ನು ಪರಂಪರೆಯ ಸಾಹಿತ್ಯರೂಪದಲ್ಲಿ ಸ್ಥಾಪಿಸಿಕೊಳ್ಳುವುದಕ್ಕೆ ಬದಲಾಗಿ ಹೊಸದಾಗಿ ಪುನಃ ರೂಪಿಸಿಕೊಂಡದ್ದನ್ನು ಸೂಚಿಸುವ ಕೃತಿಯಾಗಿ 'ಸೃಷ್ಟಿ' ಮುಖ್ಯವೆನಿಸುತ್ತದೆ.

'ಸೃಷ್ಟಿ' ಕ್ರಿಯೆಯಲ್ಲಿ ಅನುಭವದ ತಾತ್ವಿಕತೆಗಿಂತ ಅಭಿವ್ಯಕ್ತಿಯ ತಾಂತ್ರಿಕತೆಗಿಂತ 'ಅನುಭವವೇ' ಮುಖ್ಯವಾದ ಸಂದರ್ಭ ದಲಿತ ಬಂಡಾಯ ಚಳವಳಿಯದು. ಕಾದಂಬರಿ ರಚನೆಯ ಹಿಂದೆ ಕೆಲಸ ಮಾಡಿದ ಕಾಳಜಿಯನ್ನೇ ಪ್ರಧಾನನೆಲೆಗೆ ತರುವ ಹವಣಿಕೆ ಈ ಸಂದರ್ಭದ ಕಾದಂಬರಿಗಳದು. ವಸ್ತು, ತಂತ್ರ, ಶೈಲಿ, ವರ್ಣನೆಗಳು ತಮಗೆ ತಾವೇ ಮುಖ್ಯವಾಗದೆ ಅನುಭವದ ಒಡಲಾಳದಿಂದ ಮೂಡಿಬರುವ ಬದ್ಧತೆಗೆ ಪ್ರಾಧಾನ್ಯ ಬಂತು. ದೇವನೂರ ಮಹದೇವರ ಕಿರುಕಾದಂಬರಿ 'ಒಡಲಾಳ'ದ ಕೇಂದ್ರ ಪ್ರತಿಮೆ ಹಿಂಗಿಸಲು ಅಸಾಧ್ಯವಾಗುಳಿದ ಹಸಿವೆಯ ಬೆಂಕಿ. ಈ ಹಸಿವಿನ ಬೆಂಕಿ ನವೋದಯದ ಸುಧಾರಣಾವಾದಿ ಸುರಕ್ಷಿತ ನೆಲೆಯನ್ನು ದುಃಸ್ವಪ್ನದಂತೆ ಕಾಡಬಲ್ಲ ಕ್ರಾಂತಿಯ ಬೆಂಕಿ. ದುಃಸ್ವಪ್ನವಾದದ್ದು ಪ್ರಗತಿಶೀಲರಲ್ಲಿ ಅತಿಸರಳೀಕರಣಗೊಂಡು ರಂಜನೆಯ ವಿಷಯವಾಯಿತು. ಆದರೆ ದಲಿತ ಬಂಡಾಯದ ಸಂದರ್ಭ ಸ್ಪಷ್ಟವಾಗಿ ಸಾಮಾಜಿಕ ಸಂಚಲನಗಳನ್ನು ಸಂಘಟಿತ ರೂಪದಲ್ಲಿ ಸಾಧ್ಯವಾಗಿಸಿತು. ದಲಿತ ಸಂಘರ್ಷ ಸಮಿತಿ, ಬಂಡಾಯ ಸಂಘಟನೆಗಳು ಕನ್ನಡದ ಮಹತ್ವದ ಕಾದಂಬರಿಕಾರರ ಸಾಮಾಜಿಕ ಬದ್ಧತೆಯ ನೆಲೆಗಳಾದವು.

ವರ್ಣವ್ಯವಸ್ಥೆಯ ಸಂಕೀರ್ಣ ಗ್ರಾಮಸಮಾಜದ ಶೋಷಣೆಯ ಸ್ವರೂಪವನ್ನು ವಾಸ್ತವತಾವಾದೀ ನೆಲೆಯಲ್ಲಿ ಕಂಡರಿಸುವ ಯತ್ನ ಹಲವಾರು ಕಾದಂಬರಿಗಳದು. ಜಾತಿ, ಅಸ್ಪೃಶ್ಯತೆ, ವರ್ಗಸಂಬಂಧಗಳು, ಲಿಂಗ ವ್ಯವಸ್ಥೆಗಳ ನಡುವಿನ ಸಂಬಂಧಗಳ ಜಟಿಲತೆಯನ್ನು ಬರಗೂರು ರಾಮಚಂದ್ರಪ್ಪನವರ 'ಒಂದು ಊರಿನ ಕತೆ' ಸ್ಪಷ್ಟಪಡಿಸುತ್ತದೆ. 'ಸೂರ್ಯ', 'ಉಕ್ಕಿನ ಕೋಟೆ', 'ಹುತ್ತ' ಕಾದಂಬರಿಗಳಲ್ಲಿ ವ್ಯವಸ್ಥೆಯ ಕ್ರೌರ್ಯದ ಬಹುಮುಖಗಳನ್ನು ಹಾಗೂ ಶೋಷಿತರ ಪ್ರತಿರೋಧವನ್ನು ಬರಗೂರರು ಮುಖಾಮುಖಿಯಾಗಿಸುತ್ತಾರೆ. ಸಾಮಾಜಿಕ ಚಳವಳಿಯ ತಾತ್ವಿಕತೆಯ ವ್ಯಾಖ್ಯಾನರೂಪವಾಗಿ ಈ ಕಾದಂಬರಿಗಳು ನಿಲ್ಲುತ್ತವೆ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿನ ಬಡ ಗೇಣಿದಾರನ ಅತಂತ್ರ ಸ್ಥಿತಿಯನ್ನು ವಿಶುಕುಮಾರರ 'ಭೂಮಿ' ಹಿಡಿದಿಡುತ್ತದೆ. ನಾ.ಡಿಸೋಜರ 'ತಿರುಗೋಡಿನ ರೈತ ಮಕ್ಕಳು' (1979), ರಮೇಶ ಹುಲ್ಲುಕೆರೆಯವರ 'ತೆಂಡೆ', ನಾ.ಮೊಗಸಾಲೆ ಅವರ 'ಪಲ್ಲಟ' ಗ್ರಾಮ್ಯವೈಷಮ್ಯವನ್ನು ವಸ್ತುವಾಗಿಟ್ಟುಕೊಂಡ ಕಥನಗಳು. ಇದೇ ಅವಧಿಯಲ್ಲಿ ಬಂದ ಬಸವರಾಜ ಕಟ್ಟೀಮನಿಯವರ 'ಹರಿಜನಾಯಣ' ವರ್ಗ ಸಂಘರ್ಷದ ಸಮಸ್ಯೆಗಳನ್ನು ಸರಳೀಕೃತಗೊಳಿಸಿದ ಕಾದಂಬರಿ. ಕಾರಂತರಂಥ ಕಾದಂಬರಿಕಾರರು 'ನಾವು ಕಟ್ಟಿದ ಸ್ವರ್ಗ'ದಲ್ಲಿ ಸ್ವಾತಂತ್ರ್ಯೋತ್ತರ ಭಾರತವನ್ನು ಕುರಿತಂತೆ ಭ್ರಮನಿರಸನ ಭಾವವನ್ನು ಚಿತ್ರಿಸಿದರು.

70ರ ದಶಕದ ಉತ್ತರಾರ್ಧ ಕನ್ನಡದ ಹಿರಿಯ ಸಾಹಿತಿಗಳಿಗೆ ಭ್ರಮನಿರಸನವನ್ನುಂಟುಮಾಡಿದ ಕಾಲ. ಗ್ರಾಮ-ನಗರಗಳಲ್ಲಿನ ಏಕರೂಪ ಭ್ರಷ್ಟರೂಪದೊಂದಿಗೆ, ಇನ್ನಿಲ್ಲದ ಸಾಂಸ್ಕೃತಿಕ ಬಿಕ್ಕಟ್ಟುಗಳು ಮೂಡಿಬಂದ ಕಾಲವಿದು. 'ನಾವು ಕಟ್ಟಿದ ಸ್ವರ್ಗ' ಎಂಬ ವ್ಯಂಗ್ಯದ ನೆಲೆಯ ಕಾದಂಬರಿಯನ್ನು ಕಾರಂತರು ಬರೆದರೆ ಎಸ್.ಎಲ್.ಭೈರಪ್ಪನವರು 'ಪರ್ವ'ದ ಮೂಲಕ ಬಿಕ್ಕಟ್ಟುಗಳಿಗೆ ಪರ್ಯಾಯವನ್ನು ಹುಡುಕುವ ಹವಣಿಕೆಯಲ್ಲಿ ತೊಡಗಿದರು. ಮಹಾಭಾರತವನ್ನು ಸಮೂಹ ಜೀವನ ಸಂಹಿತೆಯ ನೆಲೆಯಿಂದ ವ್ಯಕ್ತಿಗತ ನೆಲೆಯಲ್ಲಿ ಸ್ಥಾಪಿಸುವ ನಾಟಕೀಯ ಹಾಗೂ ಭಾವಗೀತಾತ್ಮಕ ನಿರೂಪಣಾ ಶೈಲಿಯುಳ್ಳ ಕೃತಿಯಿದು. ಪ್ರಭುತ್ವ ಹಾಗೂ ಕುಟುಂಬ ವ್ಯವಸ್ಥೆಯೊಳಗಿನ ಸ್ತ್ರೀಪುರುಷ ಸಂಬಂಧಗಳ ಪಲ್ಲಟಗಳನ್ನು 'ಪರ್ವ' ವಿಭಿನ್ನ ನೆಲೆಯಲ್ಲಿ ಹಿಡಿದಿಡಲೆತ್ನಿಸುತ್ತದೆ. ಕತೆಯ ಮೂಲ ಪುರಾಣದ್ದಾದರೂ ಪುರಾಣಭಂಜನೆ ಮಾಡದೇ ಪುರಾಣವನ್ನು ಸಮಕಾಲೀನ ಸಂದರ್ಭದ ವ್ಯಾಖ್ಯಾನವಾಗಿ ರೂಪಾಂತರಿಸಲಾಗಿದೆ. ಸಿದ್ಧಪಾತ್ರಗಳ ಚೌಕಟ್ಟಿನಾಚೆ ಸ್ತ್ರೀಪಾತ್ರಗಳಿಗೆ ಈ ಕಾದಂಬರಿ ಕಲ್ಪಿಸಿರುವ ಆಯಾಮ 80ರ ದಶಕದಲ್ಲಿ ಪ್ರಚುರಗೊಂಡ ಮಹಿಳಾ ಆಂದೋಲನದ ಪೂರ್ವ ಸೂಚನೆಯಾಗಿದೆ. ಇದೇ ಅವಧಿಯಲ್ಲಿ (1980) ಬಂದ ಎಚ್.ವಿ.ಸಾವಿತ್ರಮ್ಮ ಅವರ 'ಸೀತೆ-ರಾಮ-ರಾವಣ' ಕಾದಂಬರಿಯು ರಾಮಾಯಣವನ್ನು ಸ್ತ್ರೀವಾದಿ ನೆಲೆಯಲ್ಲಿ ಕಟ್ಟಿಕೊಡಲೆತ್ನಿಸುತ್ತದೆ. ವ್ಯವಸ್ಥೆಯ ವೈರುಧ್ಯವಾದ ರಕ್ಷಣೆ-ಆಕ್ರಮಣಗಳ ಸುಳಿಗೆ ಸಿಕ್ಕ ಸ್ತ್ರೀ ಪಾತ್ರಗಳು ಈ ಕೃತಿಯಲ್ಲಿ ತಮ್ಮ 'ಅನುಭವ'ವನ್ನು ತಾತ್ವೀಕರಿಸಿಕೊಳ್ಳಲೆತ್ತಿಸುತ್ತವೆ. ಅನುಪಮಾ ನಿರಂಜನರ 'ಆಳ', ಗೀತಾನಾಗಭೂಷಣರ 'ಹಸಿಮಾಂಸ ಮತ್ತು ಹದ್ದು', ವೀಣಾ ಶಾಂತೇಶ್ವರ ಅವರ 'ಗಂಡಸರು' ಕಾದಂಬರಿಗಳು ಮಹಿಳಾ ಸಮಸ್ಯೆಯನ್ನು ಪ್ರಜ್ಞೆ- ಪರಿಸರಗಳ ನಡುವಿನ ಗತಿತಾರ್ಕಿಕತೆಯಲ್ಲಿ ಅತ್ಯಂತ ನೈಜವಾಗಿ ಸ್ಥಾಪಿಸಲೆತ್ನಿಸುತ್ತವೆ. ತನ್ನೆಲ್ಲ ಮಾನಸಿಕ ಭಾವದ್ರವ್ಯವನ್ನು ಮಹಿಳೆ ಪುರುಷ ಕೇಂದ್ರಕ್ಕೆ ಸಮರ್ಪಿಸುವ, 'ತ್ಯಾಗಸುಖ'ದ ಜನಪ್ರಿಯ ಕಥನಗಳಿಂದ ಭಿನ್ನವಾದ ಮಾರ್ಗವನ್ನು ಮಹಿಳಾ ಬರೆವಣಿಗೆ ಹಿಡಿಯತೊಡಗಿತು. ಮಹಿಳಾ ಶೋಷಣೆಯ ಪ್ರತೀಕವಾಗಿ 'ಹಸಿಮಾಂಸ ಮತ್ತು ಹದ್ದು'ವನ್ನು ಪರಿಭಾವಿಸುವ ಗೀತಾನಾಗಭೂಷಣರು ತಾಯ್ತನಕ್ಕಂಟಿಕೊಂಡಿರುವ ವೈಭವೀಕರಣವನ್ನು ಲಚ್ಚಿ ಪಾತ್ರದ ಮೂಲಕ ಸ್ಫೋಟಿಸಿದರು. ವಿದ್ಯಾವಂತ ಉದ್ಯೋಗಸ್ಥ ಹೆಣ್ಣಿನ ಪ್ರಜ್ಞಾಜಾಗೃತಿ ಒಳಗೊಳ್ಳಬಹುದಾದ ತಲ್ಲಣಗಳನ್ನು ನಿರೂಪಿಸುತ್ತಲೇ ಪುರುಷ ರಾಜಕಾರಣದ ಸ್ವರೂಪವನ್ನು ನಾಗರಿಕ ಸಂದರ್ಭದಲ್ಲಿ ತೆರೆದಿಡುವ ಯತ್ನ 'ಆಳ' ಹಾಗೂ 'ಗಂಡಸರು' ಕಾದಂಬರಿಗಳದು.

ಪಶ್ಚಿಮದ ಅಭಿವೃದ್ಧಿ ಸಿದ್ಧಾಂತಗಳನ್ನು ಅನುಮಾನದಿಂದ ನೋಡಬಲ್ಲ, ಪ್ರಶ್ನಿಸಬಲ್ಲ ಪರ್ಯಾಯ ಸೃಷ್ಟಿಯನ್ನು ಪೂರ್ಣಚಂದ್ರ ತೇಜಸ್ವಿಯವರ ಕಾದಂಬರಿಗಳು ಹೊಂದಿವೆ. ವ್ಯಕ್ತಿ, ಸಮೂಹ, ನಿಸರ್ಗದ ನಿತ್ಯದೈನಿಕದ ಸೂಕ್ಷ್ಮಾತಿಸೂಕ್ಷ್ಮ ಆಗುಹೋಗುಗಳ ದರ್ಶನ ಸುಲಭಗ್ರಾಹ್ಯವಲ್ಲ. ಎಲ್ಲವನ್ನೂ ಅರ್ಥೈಸಬಲ್ಲೆ ಎಂಬ ಬೌದ್ಧಿಕ ಅಹಂಕಾರಕ್ಕೆ ಸಿಗದೆ ನುಣುಚಿಕೊಳ್ಳುವ ವಾಸ್ತವಸತ್ಯವನ್ನು ಗ್ರಹಿಸುವ ಬಗೆ ಯಾವುದೆಂಬ ಹುಡುಕಾಟ 'ಕರ್ವಾಲೋ' ಕೃತಿಯದು. ಜೀವವಿಕಾಸ ಸಿದ್ಧಾಂತವನ್ನಾಧರಿಸಿದ ಅಭಿವೃದ್ಧಿ ಸಿದ್ಧಾಂತಗಳು, ಅವುಗಳನ್ನಾಧರಿಸಿದ ರಾಜಕಾರಣದಲ್ಲಿ 'ಮಂದಣ್ಣ'ನಂಥ ದೇಸಿ ಪ್ರತಿಭೆಗಳು 'ಸ್ಥಗಿತ ಪ್ರಜ್ಞೆ'ಯುಳ್ಳ ಜೀವಿಗಳಾಗಿ ತಪ್ಪು ವ್ಯಾಖ್ಯಾನಕ್ಕೊಳಗಾಗುತ್ತಿದ್ದಾರೆ. ಬೌದ್ಧಿಕತೆಗೆ ಮಾನವೀಯ ಸ್ಪರ್ಶವಿದ್ದಾಗ ಮಾತ್ರ ಸಾಮರ್ಥ್ಯದ ಅನಂತ ಸಾಧ್ಯತೆಗಳ ನೆಲೆಯಾಗಿ ಜೀವಿಯನ್ನು ಕಾಣಲು ಸಾಧ್ಯವೆಂಬ ತಾತ್ವಿಕ ಸತ್ವವನ್ನು 'ಕರ್ವಾಲೋ' ಒದಗಿಸುತ್ತದೆ. ವೇಗದ ಓಟದಲ್ಲಿ ಹಿಂದುಳಿದವರ ಅದಮ್ಯ ಶಕ್ತಿಯ ಅಪಾರ ಸಾಧ್ಯತೆಗಳ ಬಗೆಗೆ ಹೆಚ್ಚು ಆಶಾವಾದಿಯಾದ ಸಂದರ್ಭ 70ರ ದಶಕದ್ದು. ಸಾಮಾಜಿಕ ಸಂಘಟನೆಗಳ ನಾಯಕತ್ವವನ್ನು ಸುಧಾರಣಾವಾದಿ ನೆಲೆಗಿಂತ ಭಿನ್ನವಾಗಿ ವಿವರಿಸಿಕೊಳ್ಳಬೇಕಾದ ಅನಿವಾರ್ಯತೆ ಈ ಸಂದರ್ಭದಲ್ಲುಂಟಾಯಿತು. ಹೊಸ ಬದುಕಿನ ನಿರ್ಮಾಣಕ್ಕೆ ತೊಡಗುವವರು ಯಾವ ವರ್ಗದವರೇ ಇದ್ದರೂ ಮುಂಚೂಣಿಯ ನಾಯಕತ್ವ ದಲಿತರದೇ ಇರಬೇಕೆಂಬ ಆಶಯ ಬರಗೂರರ 'ಸೀಳುನೆಲ'ದ್ದು (1980). ಅಂತರ್ಮುಖವಾಗಿದ್ದು, ಕ್ರಾಂತಿಯ ಬಗೆಗಿನ ವೈಚಾರಿಕ ಪ್ರೇರಣೆಗಳನ್ನು ಹೊರಗಿನಿಂದ ಪಡೆದ ನಾಯಕನ ವ್ಯಕ್ತಿತ್ವದ ಮಿತಿಗಳನ್ನು 'ನಾಯಕತ್ವ'ದ ಸಮಸ್ಯೆಯಾಗಿ ಇಲ್ಲಿ ಕಾಣಿಸಲಾಗಿದೆ. ಈ ಹೊತ್ತಿನಲ್ಲೇ ಬಂದ ಎಚ್.ತಿಪ್ಪೇರುದ್ರಸ್ವಾಮಿಯವರ 'ನೆರಳಾಚೆಯ ಬೆಳಗು' ಕಾಯಕವನ್ನು ಯೋಗವಾಗಿಸಿಕೊಂಡು ಸಿದ್ಧರಾಮನನ್ನು ಸಿದ್ಧಕಥಾಚೌಕಟ್ಟಿನಲ್ಲಿಯೇ ಚಿತ್ರಿಸುತ್ತದೆ.

ನಗರ ಹಾಗೂ ಗ್ರಾಮವೆಂಬ ಭಿನ್ನತೆಯನ್ನು ಕಾಯ್ದುಕೊಳ್ಳಲಾರದಷ್ಟು ಸಂಕೀರ್ಣಗೊಂಡ ಸಾಮಾಜಿಕ ಸಂದರ್ಭವನ್ನು 80ರ ದಶಕದ ಕಾದಂಬರಿಗಳು ವಿಶ್ಲೇಷಣೆಗೊಳಪಡಿಸುತ್ತವೆ. ಚದುರಂಗರ 'ವೈಶಾಖ', ತೇಜಸ್ವಿಯವರ 'ಚಿದಂಬರ ರಹಸ್ಯ', ದೇವನೂರು ಮಹಾದೇವ ಅವರ 'ಕುಸುಮಬಾಲೆ', ಮನಜ ಅವರ 'ಮಾಗಿ', ಕುಂ. ವೀರಭದ್ರಪ್ಪನವರ 'ಕಪ್ಪು, ಪಕ್ಷಿ', ಅರವಿಂದ ಮಾಲಗತ್ತಿಯವರ 'ಕಾರ್ಯ', ಶ್ರೀಕೃಷ್ಣ ಆಲನಹಳ್ಳಿಯವರ 'ಭುಜಂಗಯ್ಯನ ದಶಾವತಾರಗಳು' ಇವು ಸಾಮಾಜಿಕ ಸ್ಥಿತ್ಯಂತರಗೊಳ್ಳುತ್ತಿರುವ ಭಾರತದ ದರ್ಶನವನ್ನು ಮಾಡಿಕೊಡುತ್ತವೆ. ಈ

ಕೃತಿಗಳು ದಲಿತ ಮತ್ತು ಮಹಿಳೆ ಹಾಗೂ ಅಂತಾರಾಷ್ಟ್ರೀಯ ರಾಜಕಾರಣದ ನೆಲೆಗಳಿಂದ ಸ್ಥಿತ್ಯಂತರದ ಸೂಕ್ಷ್ಮಗಳನ್ನು ಅರ್ಥೈಸಲೆತ್ನಿಸುತ್ತವೆ.

ಮಾನವನ ಅಂತರಂಗದ 'ನಿಗೂಢತೆ'ಯ ಶೋಧದಷ್ಟೇ ಮಾನವ ಸಮಾಜದ ಅಂತರಂಗವೂ ಅನೂಹ್ಯವೆಂಬುದನ್ನು ತೇಜಸ್ವಿಯವರ 'ಚಿದಂಬರ ರಹಸ್ಯ' ಸಾಧಿಸುತ್ತದೆ. ಸಮಾಜದ ಅಂತರಂಗವನ್ನು ಕಲಾತ್ಮಕ ರೂಪದಲ್ಲಿ ಹಿಡಿದಿಡಲೆತ್ನಿಸಿದಾಗ ತೆಳುಪತ್ತೇದಾರಿ ಕಥನದಷ್ಟೇ ವ್ಯರ್ಥವೆಂಬುದನ್ನು ಕೃತಿ ತಿಳಿಸುತ್ತದೆ. ಮೌಢ್ಯ, ಜಾತೀಯ ದಂಗೆ, ಅಸಂಗತ ದಾಂಪತ್ಯ, ಕಚ್ಚೆ ಹರುಕತನ, ಪರಿಸರ ನಾಶ, ಅಂತಾರಾಷ್ಟ್ರೀಯ ಮಾಫಿಯಾ ಚಟುವಟಿಕೆ, ಕೊಲೆ, ಸುಲಿಗೆಗಳೇ ತಾಣವಾದ 'ಕೆಸರೂರು' ಭಾರತೀಯ ಸಮಾಜದ ಅಡ್ಡಕೊಯ್ತದ ಮಾದರಿಯಾಗಿ ಕಾಣುತ್ತದೆ. ಇಷ್ಟೆಲ್ಲಾ ವೈಷಮ್ಯದ ಮಧ್ಯೆಯೂ ಪ್ರಕೃತಿ ಸಹಜ ಮುಗ್ಧ ಪ್ರಾಮಾಣಿಕ ಪ್ರಣಯಿಗಳು ವಿನಾಶದ ಬೆಂಕಿಯಿಂದ ಪಾರಾಗುವ ಆಶಯ ಆಶಾವಾದಿ ನೆಲೆಯದಾಗಿದೆ.

ವೈಶಾಖ ಮತ್ತು ಕುಸುಮಬಾಲೆ ಕಾದಂಬರಿಗಳು ಸ್ತ್ರೀ ಶೋಷಣೆಯೊಂದಿಗೆ ಹಾಸುಹೊಕ್ಕಾಗಿರುವ ವರ್ಣ-ವರ್ಗ ಸಮಾಜದ ಬೇರುಗಳನ್ನು ಶೋಧಿಸಲೆತ್ನಿಸುತ್ತವೆ. ಎರಡೂ ಕಾದಂಬರಿಗಳಲ್ಲಿ ಲೈಂಗಿಕತೆ ಪ್ರಮುಖ ವಿಷಯವಾಗಿದೆ. ಜಾತಿ ಮತ್ತು ಹೆಣ್ಣಿನ ಪಾವಿತ್ರ್ಯ ಪರಿಕಲ್ಪನೆಗಳು ಒಗ್ಗೂಡಿ ಬ್ರಾಹ್ಮಣ ಜಾತಿಯ ರುಕ್ಮಿಣಿಯನ್ನೂ ದಲಿತ ಲಕ್ಕನನ್ನೂ ಬಲಿತೆಗೆದುಕೊಳ್ಳುವ ಮಾರ್ಮಿಕ ಕಥ'ನ ವೈಶಾಖ ಕಾದಂಬರಿಯಲ್ಲಿದೆ. ಮಾನವ ಅಸ್ತಿತ್ವವೇ ನಿರಾಕೃತಗೊಂಡ ದಲಿತ ಸಮುದಾಯದ ಬದುಕನ್ನು ಹೋರಾಟದ ಬೃಹತ್ ರೂಪಕವಾಗಿ ದೇವನೂರರ 'ಕುಸುಮಬಾಲೆ' ಹಿಡಿದಿಟ್ಟಿದೆ. ಕರುಳು ಬಳ್ಳಿ ತೊಡಕುಗಳನ್ನು ಆವರಿಸಿರುವ ಶ್ರದ್ಧೆ-ನಂಬಿಕೆಗಳ ದಟ್ಟ ಲೋಕದೊಳಗೆ ಭೂತ-ವರ್ತಮಾನ-ಭವಿಷ್ಯವೆಂಬ ಕಾಲಪರಿಗಣನೆಯಿಲ್ಲ. ವರ್ಣವ್ಯವಸ್ಥೆಯ ಭದ್ರ ಬೇರುಗಳುಳ್ಳ ಮರ ಗಿಡದ ಟೊಂಗೆಯಲ್ಲರಳುವ ಕುಸುಮವು ವರ್ಣಸಂಕರದ ಸಹಜ ಧರ್ಮಕ್ಕೆ ಅಧೀನ. ಈ ಸಹಜತೆಯನ್ನು ಹೊಸಕಿಹಾಕಬಲ್ಲ ವ್ಯವಸ್ಥೆಯ ಹಿಂಸಾಗುಣಕ್ಕೆ ಮಾಂತ್ರಿಕ ಶಕ್ತಿಯಿದೆ. ಸಾವಿನೆದುರು ಬದುಕಲೆಳಸುವ ಹೋರಾಟದಲ್ಲಿ ಮೈದುಂಬಿಕೊಳ್ಳದಿದ್ದರೆ ಗತ್ಯಂತರವಿಲ್ಲ. ಕ್ರಾಂತಿಯ ಸೂಚಕವಾದ ರಕ್ತದೊಂದಿಗಿನ ನೆನಪುಗಳೊಂದಿಗೆ ಜೀವಂತ ಸಂಬಂಧವನ್ನು ಸ್ಥಾಪಿಸುತ್ತ ಕಾಯುತ್ತ ಕೂತ ದಲಿತ ಪ್ರಜ್ಞೆಯ ಜಾಗರಣವನ್ನು 'ಕುಸುಮ ಬಾಲೆ' ಪ್ರತಿಮಿಸುತ್ತದೆ. ಸಾಂಸ್ಕೃತಿಕ ನೆನಪುಗಳ ಮೂಲದ್ರವ್ಯವನ್ನು ಸಮಕಾಲೀನ ದಲಿತ-ಬಂಡಾಯ ಹೋರಾಟದ ತಾತ್ವಿಕ ಅಂಶವಾಗಿ ಹೇಗೆ ವಿನ್ಯಾಸಗೊಳಿಸಿಕೊಳ್ಳಬಹುದೆಂಬ ಮಹತ್ವದ ಸೂಚನೆ ಈ ಕಾದಂಬರಿಯಲ್ಲಿದೆ.

ಸಾಮಾಜಿಕ ಶೋಷಣೆಯನ್ನು ಸ್ತ್ರೀ ಕೇಂದ್ರದಿಂದ ನೋಡುತ್ತಾ ವಿಶಿಷ್ಟವಾಗಿ ವ್ಯಾಖ್ಯಾನಿಸುವ ಕೃತಿ - ಮ.ನ.ಜ. ಅವರ 'ಮಾಗಿ', ಪುರುಷ ಪ್ರಧಾನ ಕೌಟುಂಬಿಕ ಸಂರಚನೆಯೊಳಗೆ ಸೇರಿಯೂ ಸೇರದ ಮಹಿಳೆಯ ಅತಂತ್ರ ಸ್ಥಿತಿಯನ್ನು ಹಿಡಿದಿಡುತ್ತದೆ. ದಲಿತ ಮಹಿಳೆಯೊಬ್ಬಳ ಶ್ರಮ ಜೀವನದ ಮೌಲ್ಯವನ್ನು ಹೊಸ ಆರ್ಥಿಕ ಪರಿಭಾಷೆಯಲ್ಲಿ ಈ ಕೃತಿ ಕಟ್ಟುತ್ತದೆ.

ಉತ್ಪಾದನಾ ಸಾಧನವಾದ ಭೂಮಿ ಇಲ್ಲದಿದ್ದರೂ ಕೌಟುಂಬಿಕ ಸಂಬಂಧಗಳ ಆಪ್ತನೆಲೆಯನ್ನೂ ದಲಿತ ಪಾತ್ರಗಳು ಕಳೆದುಕೊಳ್ಳುವ ಪರಿ ಗೀತಾನಾಗಭೂಷಣರ 'ನೀಲಗಂಗಾ'ದಲ್ಲಿದೆ. ಜಮೀನ್ದಾರೀ ಪದ್ಧತಿಯ ಅಮಾನುಷ ಮುಖವನ್ನು ಬಸವಿ ಸಮಸ್ಯೆಯ ಮೂಲಕ ಕುಂ.ವೀ. ಅವರ 'ಕಪ್ಪು' ಪರಿಚಯಿಸುತ್ತದೆ. ಪಿತೃಪ್ರಾಧಾನ್ಯದ ಸಂಕೋಲೆಗಳ ಅರಮನೆಯಲ್ಲಿ ಹೆಣ್ಣೊಬ್ಬಳ ಜೀವಚೈತನ್ಯ ಮುರುಟಿಹೋಗುವುದನ್ನು ಚಂದ್ರಶೇಖರ ಕಂಬಾರರ 'ಸಿಂಗಾರೆವ್ವ ಮತ್ತು ಅರಮನೆ' ಹೃದಯಂಗಮವಾಗಿ ಚಿತ್ರಿಸುತ್ತದೆ.

ಸಿಂಗಾರೆವ್ವನಂತೆಯೇ ಬರಗೂರರ 'ಬೆಂಕಿ'ಯ ನಾಯಿಕೆ ಲಕ್ಷ್ಮಿ ಈಡೇರಿಸಿಕೊಳ್ಳಲಾಗದ ದೈಹಿಕ ಕಾಮನೆಗಳಿಂದ ತಪ್ತಳಾದವಳು. ದಾಂಪತ್ಯದ ಎಲ್ಲೆಕಟ್ಟನ್ನು ಮೀರುವಲ್ಲಿ ದ್ವಂದ್ವಕ್ಕೊಳಗಾದರೂ ಹೊಸಬಾಳಿನ ಸಂಕಲ್ಪವನ್ನು ಹೊತ್ತ ಪಾತ್ರವಾಗಿ ಲಕ್ಷ್ಮಿ ಮೂಡಿಬಂದಿದ್ದಾಳೆ. ಸ್ತ್ರೀವಾದಿ ತಾತ್ವಿಕತೆಯ ಹಿನ್ನೆಲೆಯಲ್ಲಿ ಸ್ತ್ರೀ ಪುರುಷ ಸಂಬಂಧಗಳನ್ನು ವಿಭಿನ್ನವಾಗಿ ನಿರ್ವಚಿಸಿಕೊಳ್ಳುವ ಯತ್ನ ವೀಣಾ ಶಾಂತೇಶ್ವರರ 'ಮಹಿಳೆ' ಶೋಷಣೆ ಬಂಡಾಯ ಇತ್ಯಾದಿಯಲ್ಲಿದೆ. ತನ್ನ ಪರಿಚಯದ ಮಹಿಳೆಯರ ಮೇಲಿನ ಶೋಷಣೆಯನ್ನು ಅರ್ಥಮಾಡಿಕೊಳ್ಳುತ್ತಲೇ ತಾನೂ ಅವರ ಸಾಲಿನ ಪಾತ್ರವಾಗಿಬಿಡುವ ವಿಶಿಷ್ಟತೆ ಶಶಿಯದು. ಬೌದ್ಧಿಕ ನೆಲೆಯ ಸ್ತ್ರೀವಾದಿ ತಾತ್ವಿಕತೆಗೆ ಕ್ರಿಯಾಶೀಲ ಆಯಾಮವಿಲ್ಲದಿದ್ದರೆ ಏನಾಗುತ್ತದೆಂಬುದನ್ನು ಈ ಕೃತಿ ಪ್ರಕಟಿಸುತ್ತದೆ. ಬಳೆಪ್ರಿಯ ಮಹಿಳೆಯರು ಹಾಗೂ ಬಳೆಮುರುಕ ಅತ್ಯಾಚಾರಿ ಗಂಡಸರನ್ನೊಳಗೊಂಡ ಈ ಸಮಾಜದಲ್ಲಿ ಮಹಿಳೆಯ ನೆಲೆ-ಬೆಲೆಗಳೇನೆಂಬುದರ ವಿವೇಚನೆ ಬಿ.ಟಿ.ಲಲಿತಾನಾಯಕರ 'ನೆಲೆ-ಬೆಲೆ' ಕಾದಂಬರಿಯಲ್ಲಿದೆ. ಆದರೆ ಈ ದಶಕದಲ್ಲಿಯೇ ಬಂದ ಎಂ.ಕೆ.ಇಂದಿರಾ ಅವರ 'ತಾಳಿದವರು' ತಾಳಿಕೆಯ ನೀತಿಯನ್ನೇ ಬೋಧಿಸಲೆತ್ನಿಸುವ ಕೃತಿಯಾಗಿದೆ.

ನಗರೀಕರಣದ ಸಮಸ್ಯೆಯನ್ನು ಯಶವಂತ ಚಿತ್ತಾಲರ ಶಿಕಾರಿ ಸಮರ್ಥವಾಗಿ ಮನಗಾಣಿಸುತ್ತದೆ (ಪರಿಸರದ ಕ್ರೌರ್ಯಕ್ಕೆ ಉಪಾಯವೆಂಬಂತೆ 'ಮಣ್ಣಿಗೆ ಮರಳುವ' ಆಶಯ ಕಾರಂತರ 'ಗೆದ್ದ ದೊಡ್ಡಸ್ತಿಕೆ'ಯಲ್ಲಿದೆ). ಇಂಥ ರಮ್ಯ ಕಲ್ಪನೆಯಾಚೆ, ಗತಬದುಕಿನ ಮಣ್ಣಿನ ಸೆಳೆತವನ್ನು ನಿಷ್ಠುರ ಪರೀಕ್ಷೆಗೆ ಚಿತ್ತಾಲರು ಒಡ್ಡುತ್ತಾರೆ. ಗತದ ಬೇರುಗಳ ಮೂಲಕ ಅಸ್ತಿತ್ವವನ್ನು ಕಟ್ಟಿಕೊಳ್ಳುವ ಯತ್ನವನ್ನು ಹೊಸಕಿಹಾಕಬಲ್ಲ ವ್ಯಾವಹಾರಿಕ ಸ್ಪರ್ಧಾ ಜಗತ್ತಿನ ಕ್ರೌರ್ಯವನ್ನು 'ಶಿಕಾರಿ' ನಿಚ್ಚಳವಾಗಿ ತೋರಿಸಲೆತ್ನಿಸುತ್ತದೆ.

ಯಶವಂತ ಚಿತ್ತಾಲರ ಶಿಕಾರಿ ಒಂದು ಮಹತ್ವದ ಕಾದಂಬರಿ. ಬೇಟೆಗೆ ಗುರಿಯಾಗುವವನಲ್ಲಿ ಇನ್ನಿಲ್ಲದ ಜೀವವಾಂಛೆಯನ್ನುದ್ದೀಪಿಸುವ ಕಲಾತ್ಮಕತೆ ಶಿಕಾರಿಗಿದೆ. ತನ್ನನ್ನು ತಾನು ಸಜ್ಜುಗೊಳಿಸಿಕೊಳ್ಳುವುದಕ್ಕೆ ಅವಕಾಶವನ್ನೇ ನೀಡದಂಥ ಕತ್ತಲಮರೆಯ ತರ್ಕಾತೀತ ಕ್ರೌರ್ಯವನ್ನು ಚಿತ್ತಾಲರ 'ಛೇದ' ಪರಿಣಾಮಕಾರಿಯಾಗಿ ನಿರೂಪಿಸುತ್ತದೆ. ಕೊಲೆ ಸುಲಿಗೆಗಳ ಕ್ರೂರಜಗತ್ತಿನಲ್ಲಿ ಕೋಯಿ ಬಚಾವ್ ಎಂಬ ಕೂಗು ಪ್ರತಿಧ್ವನಿಸುತ್ತ ಮಾನವತ್ವದ ಛೇದವನ್ನು ಅಭಿನಯಿಸುತ್ತದೆ. 'ಪುರುಷೋತ್ತಮ'ದಲ್ಲಿಯೂ (1990) ಕ್ರೌರ್ಯವನ್ನೇ ಕೇಂದ್ರ ವಸ್ತುವಾಗಿ ಚಿತ್ತಾಲರು ನಿರೂಪಿಸಿದ್ದಾರೆ. ಅಸ್ತಿತ್ವದ ಭದ್ರನೆಲೆ, ವಿಸ್ತಾರವಾಗಬಹುದಾದ 'ಮನೆ'ಯು ಅತಿಕ್ರಮಣಕ್ಕೆ ಗುರಿಯಾಗುವ ಅಪಾಯಕಾರಿ ಸ್ಥಿತಿಯಲ್ಲಿಯೇ ಪುರುಷೋತ್ತಮತ್ವದ ಪೂರ್ಣ ಪ್ರಕಟನೆ ಸಾಧ್ಯವೆಂಬ ಧ್ವನಿ ಇಲ್ಲಿದೆ. 1990ರಲ್ಲಿ ಬಂದ ಭೈರಪ್ಪನವರ 'ಅಂಚು' ಕೂಡ ಹತಾಶಬದುಕಿನ ಪರಿಣಾಮವಾದ ಮಾನಸಿಕ ದೌರ್ಬಲ್ಯ ವಿಕೃತಿಯಿಂದ ಜೀವಪರತೆಯಲ್ಲಿ ನೆಲೆಗೊಳ್ಳುವ ಹೆಣ್ಣಿನ ಕಥನ. ಕುಟುಂಬ ಸಂಬಂಧಗಳ ಗಟ್ಟಿನೆಲೆಗಳು ಕರಗಿ ವ್ಯಕ್ತಿಗಳು ಅತಂತ್ರಗೊಳ್ಳುವ ಪರಿಯನ್ನು 1983ರಲ್ಲಿ ಬಂದ ಭೈರಪ್ಪನವರ 'ನೆಲೆ' ವಿವರಿಸಲೆತ್ನಿಸುತ್ತದೆ. ಕಾಮ ಮತ್ತು ಸಾವಿನ ತೀವ್ರಾನುಭವಗಳು ವ್ಯಕ್ತಿ ನೆಲೆಯನ್ನು ಪ್ರಭಾವಗೊಳಿಸುವ ಬಗೆಯನ್ನು ಇಲ್ಲಿ ಕಾಣಿಸಲಾಗಿದೆ.

ವ್ಯಾಸರಾಯ ಬಲ್ಲಾಳರ 'ಬಂಡಾಯ' (1984) ಹಾಗೂ ಶಂಕರ ಮೊಕಾಶಿ ಪುಣೇಕರರ 'ಅವಧೇಶ್ವರಿ' (1987) ಕಾದಂಬರಿಗಳು ಸಮೂಹ ವ್ಯಕ್ತಿ ಪ್ರತಿಭಟನೆಯ ತಾತ್ವಿಕತೆಯನ್ನು ಚಾರಿತ್ರಿಕ ನೆಲೆಯಲ್ಲಿ ವ್ಯಾಖ್ಯಾನಿಸಲೆತ್ನಿಸುತ್ತವೆ. 'ಬಂಡಾಯ'ದ ವಸ್ತು ಸಮಕಾಲೀನ ಚಾರಿತ್ರಿಕತೆಯಾದರೆ, 'ಅವಧೇಶ್ವರಿ'ಯ ವಸ್ತು ವೇದಕಾಲ ಸ್ಥಿತ್ಯಂತರಗೊಳ್ಳುತ್ತಿರುವ ಚಾರಿತ್ರಿಕತೆ. ವರ್ಗ ಪ್ರಜ್ಞೆಯ ವಿಕಾಸದ ಹಂತದಲ್ಲಿ ಪಲ್ಲಟಗೊಳ್ಳುವ ಸಾಮಾಜಿಕ ಸಂಬಂಧಗಳನ್ನು 'ಬಂಡಾಯ' ಅನ್ವೇಷಿಸುತ್ತದೆ. ವರ್ಣ ಪ್ರಜ್ಞೆಯ ಸಂಹಿತೆಯೊಳಗಿನ ಸಡಿಲಿಕೆಯುಂಟುಮಾಡುವ ರಾಜಕೀಯ ಸಂಘರ್ಷವನ್ನು 'ಅವಧೇಶ್ವರಿ' ಪುನಾರಚಿಸುತ್ತದೆ. ಕುಟುಂಬದೊಳಗಿನ ಸಿದ್ಧಪಾತ್ರದಿಂದಾಚೆ ತುಡಿವ ಸ್ತ್ರೀಪಾತ್ರಗಳನ್ನು ಕೇಂದ್ರಬಿಂದುವಾಗಿಟ್ಟುಕೊಂಡು ಎರಡೂ ಕಾದಂಬರಿಗಳು ಸಾಮಾಜಿಕ ಬದಲಾವಣೆಯ ಸ್ವರೂಪ-ಸಾಧ್ಯತೆಗಳ ದರ್ಶನವನ್ನು ಕಟ್ಟಿಕೊಡುತ್ತವೆ. ಮಹಿಳೆಗೆ ವಿಧಿಸಿರುವ ಲೈಂಗಿಕ ಸಂಹಿತೆಯನ್ನು ಅನುಸರಿಸುವಾಗ ಎದುರಾಗಬಹುದಾದ ರಾಜಕೀಯ ತಾತ್ವಿಕತೆಯನ್ನು ಈ ಕಾದಂಬರಿಗಳು ಹಿಡಿದಿಡುತ್ತವೆ.

ಸಾಮಾಜಿಕ ಕ್ರಾಂತಿಯಲ್ಲಿನ ಮಹಿಳಾ ಸಹಭಾಗಿತ್ವವನ್ನು ಅನುಪಮಾ ನಿರಂಜನರ 'ಘೋಷ' (1985) ಹಾಗೂ 'ಮುಕ್ತಿಚಿತ್ರ' (1988) ಕಾದಂಬರಿಗಳು ಪ್ರಮುಖ ವಸ್ತುವನ್ನಾಗಿಸಿಕೊಂಡಿವೆ. ಅಬಲೆ, ಅಸಹಾಯಕಳೆಂದು ಕರೆಸಿಕೊಳ್ಳುತ್ತಿದ್ದ ಮಹಿಳೆ ಹೊಸ ಪ್ರಜ್ಞೆಯಿಂದ

ಜಾಗೃತಳಾಗಿ ಶೋಷಣೆಯ ವಿರುದ್ಧ ಬಂಡೇಳುವ ಕಥನ ಈ ಕಾದಂಬರಿಗಳದು.

ಕಾ.ತ.ಚಿಕ್ಕಣ್ಣನವರ 'ಮುಂಜಾವು' (1989) ಹಾಗೂ ಅರವಿಂದ ಮಾಲಗತ್ತಿಯವರ 'ಕಾರ್ಯ' (1989) ಕಾದಂಬರಿಗಳು ಶೋಷಿತರ ಬದುಕಿನ ಮೂಲರೂಪೀ ದುರಂತವನ್ನು ಚಿತ್ರಿಸುತ್ತವೆ. ದಲಿತರ, ಶೋಷಿತರ ಜೀವನ ಪ್ರೀತಿ, ಮುಗ್ಧತೆ, ಜಾಣತನ, ಸಹನೆ, ತಾಳ್ಮೆಗಳ ನಿರೂಪಣೆಗೆ ಹೊಸ ಆಯಾಮವನ್ನು ದಲಿತ ಬಂಡಾಯ ಸಂಘಟನೆ ಒದಗಿಸಿತು. ಮುಂಜಾವಿನ ತಿಮ್ಮಾಜಿಯ ದಂಗೆ ಹಾಗೂ 'ಕಾರ್ಯ'ದ ದಲಿತ ಸಮೂಹ ಕೈಗೊಳ್ಳಲೆತ್ನಿಸುವ ನ್ಯಾಯ ತೀರ್ಮಾನಗಳು ಸ್ಥಾಪಿತ ಸಂಸ್ಕೃತಿಯ ಸಂರಚನೆಯನ್ನೇ ಬುಡಮೇಲಾಗಿಸಬಲ್ಲಷ್ಟು ಸಶಕ್ತವಾಗಿವೆ. ಆದರೆ ತಮ್ಮಲ್ಲೇಳುವ ಪ್ರತಿರೋಧಕ ಅನುಭವವನ್ನು ಬೌದ್ಧಿಕ ನೆಲೆಯಲ್ಲಿ ಜ್ಞಾನರೂಪದ ತತ್ವವನ್ನಾಗಿಸಿಕೊಳ್ಳಲಾರದ ದುರಂತವನ್ನು 'ಕಾರ್ಯ' ಸೆರೆ ಹಿಡಿಯುತ್ತದೆ. ಹುಟ್ಟು ಸಾವುಗಳ ವರ್ತುಲಕ್ಕೆ ಸಂಬಂಧಿಸಿದ ಶ್ರದ್ಧೆ ನಂಬಿಕೆಗಳ ಮೂಲವಾದ ಭಾವದ್ರವ್ಯವನ್ನು ಪುರೋಹಿತಶಾಹಿ, ಊಳಿಗಮಾನ್ಯ ಪ್ರಬಲರು ಬಳಸಿಕೊಳ್ಳುವಲ್ಲಿ ಶೋಷಣೆಯ ಬೇರುಗಳಿರುವುದನ್ನು ಕಾರ್ಯ ಕಾದಂಬರಿ ಗುರುತಿಸುತ್ತದೆ.

ಮುಸ್ಲಿಂ ಸಮುದಾಯದ ಕೌಟುಂಬಿಕ, ಸಾಮಾಜಿಕ, ಧಾರ್ಮಿಕ, ಮೌಲ್ಯಗಳ ವಸ್ತುನಿಷ್ಠ ವಿಶ್ಲೇಷಣೆಯನ್ನು ಸಾರಾ ಅಬೂಬಕರ್‌ರವರ ಚಂದ್ರಗಿರಿಯ ತೀರದಲ್ಲಿ, ಸಹನಾ, ವಜ್ರಗಳು ಕಾದಂಬರಿಗಳು ಮಾಡಿವೆ. ಪಿತೃಪ್ರಧಾನ ಮೌಲ್ಯ ವ್ಯವಸ್ಥೆಯಡಿಯಲ್ಲಿ ನಲುಗಿಹೋದ ಮುಸ್ಲಿಂ ಮಹಿಳೆಯರ ಬವಣೆಯ ಕಥನ ಬಂಡಾಯದ ಆಶಯಕ್ಕೆ ಪೂರಕವಾಗಿದೆ.

ಒಟ್ಟಿನಲ್ಲಿ 1980ರ ದಶಕದ ಕಾದಂಬರಿಗಳು ವ್ಯಕ್ತಿ-ಸಮೂಹ ಸಾಧ್ಯತೆಗಳ ವಿಸ್ತಾರದ ಅರಿವನ್ನು ಹೆಚ್ಚಿಸಿದವು. ಈ ದಶಕದ ಪ್ರಾರಂಭದಲ್ಲಿ ಬಂದ ಶಾಂತಿನಾಥ ದೇಸಾಯಿ ಅವರ 'ಬೀಜ' ಕಾದಂಬರಿಯ ತಾತ್ವಿಕತೆಯಲ್ಲಿ ಇದು ಸ್ಪಷ್ಟವಾಗುತ್ತದೆ. ಬೀಜ, ಏಕಕಾಲಕ್ಕೆ ಬಂಧಿತ ಸ್ಥಿತಿಯನ್ನೂ ಬಿಡುಗಡೆಯ ಸಾಧ್ಯತೆಯನ್ನೂ ತನ್ನೊಳಗೆ ಅದ್ಭುತವಾಗಿ ಅಡಗಿಸಿಕೊಂಡ ರಹಸ್ಯ ಬಂಧನ ಒಡೆದು ಬೆಳೆದು ನಿಲ್ಲುವುದು ಮುಕ್ತಿ. ಬೀಜದ ಮುಕ್ತಿ ಸಂಗತಿ ಜಾಗೃತಿಗೆ ಆತ್ಮರತಿಯ ನವ್ಯನಾಯಕತ್ವದಿಂದ ಹೆಚ್ಚು ಸಮಾಜಮುಖಿಯಾಗಿ ಹೊರಳಿಕೊಳ್ಳುವ 'ಬೀಜ'ದ ನಾಯಕ ಶ್ರೇಯಾಂಸ-ಸ್ಥಿತ್ಯಂತರದ ಸೂಕ್ತ ಪ್ರತಿಮೆಯಾಗಿದ್ದಾನೆ.

ದಲಿತರ ವಿಚಾರ-ಭಾವದ್ರವ್ಯದ ಹರಣವನ್ನು ಕುರಿತ 'ಕಾರ್ಯ'ದ ಕಥನದ ಮುಂದುವರಿಕೆಯಾಗಿ 1992ರಲ್ಲಿ ಬಂದ ಮುಳ್ಳೂರು ನಾಗರಾಜ್ ಅವರ 'ಮರಣ ಮಂಡಲ ಮಧ್ಯದೊಳಗೆ' ಕಂಡುಬರುತ್ತದೆ. ಶೋಷಣೆಯ ಮೂಲವೇ ಮಿದುಳ ಹರಣವೆಂಬುದನ್ನು ಜಾನಪದೀಯ ಶೈಲಿಯಲ್ಲಿ ಈ ಕೃತಿ ನಿರೂಪಿಸುತ್ತದೆ. ಈ ಕೃತಿಯಲ್ಲಿ ಶುದ್ಧತೆ-ಅಶುದ್ಧತೆಯ ಪರಿಕಲ್ಪನೆಯನ್ನಾಧರಿಸಿದ ವರ್ಣಾಶ್ರಮ ವ್ಯವಸ್ಥೆಯ ಐತಿಹಾಸಿಕ ಪ್ರಕ್ರಿಯೆಯನ್ನು ಆಧುನಿಕ ಪೌರಾಣಿಕ ನೆಲೆಯಲ್ಲಿ ಹಿಡಿದಿಡಲಾಗಿದೆ. ವರ್ಣಸಂಕರದಿಂದ ಮೊಳೆಯುವ ಸ್ತ್ರೀ-ಪುರುಷ ಸಂಬಂಧಗಳು ಪ್ರೇಮ-ದ್ವೇಷ-ಅಸೂಯೆ-ಪ್ರತೀಕಾರ-ಪರಿವರ್ತನೆಗಳ ಸುಳಿಯಲ್ಲಿ ಸಿಲುಕಿಕೊಳ್ಳುವುದನ್ನು ಕಾದಂಬರಿ ಚಿತ್ರಿಸುತ್ತದೆ. ಕತ್ತಲ ರಾಜ್ಯದ ಸಾಂಕೇತಿಕತೆಯನ್ನು ಪ್ರಮುಖ ತಾತ್ವಿಕ ಪ್ರಶ್ನೆಯಾಗಿ ಬೆಳೆಸುವ ಪಾತ್ರವಾಗಿ ಬಸರಾಜು ಇದ್ದಾನೆ. ಆದರೆ ಸಂಘಟನೆಯು ಈ ತಾತ್ವಿಕತೆಯ ಅರಿವಿಲ್ಲದ ವ್ಯಕ್ತಿಗಳಲ್ಲಿರುವುದು ನೋವಿನ ಸಂಗತಿ. ಸಮಕಾಲೀನ ದಲಿತ ಬಂಡಾಯ ಸಂಘಟನೆಗಳ ಕುರಿತಾದ ಲೇಖಕರ ನಿಲುವೂ ಇದಾಗಿರಬಹುದೆನಿಸುತ್ತದೆ.

ಕಾರಂತ, ಕುವೆಂಪುರವರ ಕಾಲದ ಸಹ್ಯಾದ್ರಿಯ ಕಾಡುಗಳಿಗೂ ಈ ಹೊತ್ತಿನ ಪರಿಸ್ಥಿತಿಗೂ ಇರುವ ಅಂತರವನ್ನು ಪೂರ್ಣಚಂದ್ರ ತೇಜಸ್ವಿಯವರ 'ಜುಗಾರಿ ಕ್ರಾಸ್' ತೋರ್ಪಡಿಸುತ್ತದೆ. ಈ ಹೊತ್ತು ಕಾಳದಂಧೆಗಳ ತವರುಮನೆಯಾಗಿರುವ ಕಾಡು ರಮ್ಯ ಕಲ್ಪನೆಯ ತಾಣವಾಗಿಲ್ಲವೆಂಬ ವಾಸ್ತವವನ್ನು ಈ ಕಾದಂಬರಿ ಚಿತ್ರಿಸುತ್ತದೆ. ಅತ್ಯಂತ ಅಭದ್ರ ಸ್ಥಿತಿಯ ಅಂಚಿಗೆ ಸಾಮಾನ್ಯ ನಾಗರಿಕರನ್ನು ತಂದಿಟ್ಟ ಭ್ರಷ್ಟ ವ್ಯವಸ್ಥೆಯ ವಿಷವರ್ತುಲವನ್ನು ಈ ಕಾದಂಬರಿ ಪರಿಚಯಿಸುತ್ತದೆ. ಕೇಶವ ಮಳಗಿಯವರ ಕುಂಕುಮ ಭೂಮಿ - ಭೂಮಿಯೊಂದಿಗಿನ ಮಾನವ ಸಂಬಂಧಗಳ ಭಾವನಾತ್ಮಕ ಹಾಗೂ ಉಪಭೋಗಾತ್ಮಕ ನೆಲೆಗಳನ್ನು ಚರ್ಚಿಸುವ ಕೃತಿ. ಅಭಿವೃದ್ಧಿ ಸಿದ್ಧಾಂತಗಳ ರಾಜಕಾರಣವು ಪರಿಸರ ನಾಶದೊಂದಿಗೆ ಆ ಪರಿಸರವನ್ನಾಶ್ರಯಿಸಿದ್ದ ಶ್ರಮಜೀವಿಗಳನ್ನು ಹೊಸಕಿಹಾಕುವುದನ್ನು ನಾ.ಡಿಸೋಜರ 'ಒಡ್ಡು' ಸರಳವಾಗಿ ನಿರೂಪಿಸುತ್ತದೆ. ಪರಿಸರ ಅಧ್ಯಯನ ಆಯಾಮದ ಮೂಲಕ ಸ್ಥಳೀಯ ನೆಲೆಯ ಶೋಷಿತರ ಕಥನಗಳು ಜಾಗತಿಕ ನೆಲೆಗೆ ವಿಸ್ತಾರಗೊಳ್ಳುವುದನ್ನು 80ರ ದಶಕದ ಉತ್ತರಾರ್ಧದ ಕಾದಂಬರಿಗಳು ಸೂಚಿಸುತ್ತವೆ.

1990ರಲ್ಲಿ ಬಂದ ರೇಖಾ ಕಾಖಂಡಕಿಯವರ 'ಹೊಸ ಹೆಜ್ಜೆ' ಲಂಬಾಣಿ ಸಮುದಾಯದ ಸಾಂಸ್ಕೃತಿಕ ಬದುಕಿನ ವಿವರಗಳ ಒಡಲಿನಿಂದಲೇ ಬಂಡಾಯದ ಆಶಯವನ್ನು ಸ್ತ್ರೀಕೇಂದ್ರಿತ ನೆಲೆಯಲ್ಲಿ ಪ್ರಕಟಿಸುವ ಕೃತಿ. ಪುರುಷಕೇಂದ್ರದ ಸುತ್ತ ಕಟ್ಟಿಕೊಂಡ ತನ್ನ ಮಾನಸಿಕ ಭೌತಿಕ ಜೀವನದಿಂದ ಆಚೆ ಬರುವ ಕ್ರಿಯಾಶೀಲ ತಾತ್ವಿಕತೆ ಎಚ್.ವಿ.ಸಾವಿತ್ರಮ್ಮ ಅವರ 'ವಿಮುಕ್ತಿ'ಯಲ್ಲಿದೆ. ಸಾರ್ವತ್ರಿಕ ಜೀವನ ಸಂಹಿತೆಯಡಿ ಇಲ್ಲವಾಗುವ ರಾಮನ ಬದುಕೂ ಅದನ್ನವಲಂಬಿಸಿದ ಸೀತೆಯ ಸಂಕಷ್ಟಗಳನ್ನು ಲೇಖಕಿ ದಾಖಲಿಸುತ್ತಾರೆ. ಆ ಮೂಲಕ ಪುರುಷ ಪ್ರಧಾನವ್ಯವಸ್ಥೆಯೊಂದಿಗಿನ ಭಾವನಾತ್ಮಕ ಸಂಬಂಧಗಳನ್ನು ಮೀರಲೆಳಸುವ ಸೀತೆಯ ಮೂಲಕ ಸ್ತ್ರೀಸ್ವಾತಂತ್ರ್ಯದ ದರ್ಶನವನ್ನು 'ವಿಮುಕ್ತಿ' ನೀಡಿದೆ. ಜ್ಞಾನವನ್ನೇ ಅಧಿಕಾರವಾಗಿಸಿಕೊಂಡ ಯಜಮಾನ ಸಂಸ್ಕೃತಿಯ ದಬ್ಬಾಳಿಕೆಗೆ ಗುರಿಯಾದವರ ಬದುಕಿನ ಸತ್ವವನ್ನು (1989) ಸುನಂದಾ ಬೆಳಗಾಂವಕರರ 'ನಾಸು' ಕಳಕಳಿಯಿಂದ ಸ್ಥಾಪಿಸುತ್ತದೆ. ಸ್ತ್ರೀ ಗುಣಗಳೆಂದು ಪರಿಭಾವಿತವಾಗುವ ಅಂತಃ ಕರಣ, ಮೃದುತ್ವ, ಸಹನೆ, ಭಾವನಾತೀವ್ರತೆಗಳನ್ನು ಪುರುಷ ಚೇತನ ಅಂತರ್ಗತಮಾಡಿಕೊಳ್ಳಬೇಕಾದ ಜರೂರನ್ನು 'ನಾಸು' ಪಾತ್ರದ ಮೂಲಕ ಈ ಕೃತಿ ಮನಗಾಣಿಸುತ್ತದೆ. ಸಾಂಸ್ಕೃತಿಕ ಸ್ತ್ರೀವಾದೀ ಚಿಂತನೆಯನ್ನು ಪುರುಷಪಾತ್ರ ಕೇಂದ್ರದಿಂದ ಅಭಿವ್ಯಕ್ತಿಸುವ ಕಾದಂಬರಿ ಇದಾಗಿದೆ.

ಶೋಷಣೆಯ ಕಥನವನ್ನು ಮಾನವಶಾಸ್ತ್ರೀಯ ಸಂಶೋಧನ ಕುತೂಹಲದಿಂದ ಹಿಡಿದಿಡಲಾಗದೆಂಬುದು 1990ರ ದಶಕಗಳ ಕಾದಂಬರಿಗಳ ಮೂಲಕ ಇನ್ನಷ್ಟು ಸ್ಫುಟವಾಗುತ್ತದೆ. ಶಿವರಾಮ ಕಾರಂತರ ಅಥೆಂಟಿಸಿಟಿಗೂ 1990ರಿಂದೀಚಿಗಿನ ಸೃಜನಶೀಲತೆಯ ಅಥೆಂಟಿಸಿಟಿಗೂ ಗುಣಾತ್ಮಕ ವ್ಯತ್ಯಾಸ ಕಂಡುಬರುತ್ತದೆ. ಸಾಹಿತ್ಯಕ ಸೃಜನಶೀಲತೆ ಇನ್ನಿಲ್ಲದಂತೆ ಸಾಮಾಜಿಕ ಬದ್ಧತೆಯ ಪ್ರಶ್ನೆಯನ್ನು ಮುಖಾಮುಖಿ ಯಾಗಿಸಿಕೊಂಡ ಸಂದರ್ಭ ಇದಾಗಿದೆ.

ಸ್ವಂತ ಬದುಕಿನ ರಕ್ತ ಸಂಬಂಧಗಳ ಶೋಧದ ಮೂಲಕ ವರ್ಣಸಂಕರದ ಸಾಮಾಜಿಕ ಸೂಕ್ಷ್ಮಗಳನ್ನು ಅಧ್ಯಯನ ಮಾಡುವ ಕೇಂದ್ರ ಪಾತ್ರ - 'ಮೂಲಮುಖಿ'ಯ ಚಾರುಮತಿ. 1991ರಲ್ಲಿ ಹೊರಬಂದ ಈ ಕಾದಂಬರಿಯಲ್ಲಿ ಅನುಪಮಾ ನಿರಂಜನರು ಮಹಿಳಾ ಹೋರಾಟಗಳ ಮೂಲದ್ರವ್ಯವಾಗಿ ತಾತ್ವಿಕತೆಯೊಂದಿಗೆ ಕ್ರಿಯಾಶಾಲಿ ಜೀವನಾನುಭವವೂ ಅತ್ಯಗತ್ಯವೆಂದು ಸ್ಥಾಪಿಸುತ್ತಾರೆ. ಗ್ರಾಮ್ಯ ಬದುಕಿನ ಮುಗ್ಧತೆ, ಒಳಸಂಚುಗಳ ಸುಳಿಗಳು, ಔದಾರ್ಯ, ಕ್ಷುದ್ರತನಗಳ ಪ್ರತ್ಯಕ್ಷಾನುಭವದಲ್ಲಿಯೇ ಸಂಶೋಧನೆಗೆ ಮಾನವೀಯ ಆಯಾಮ, ಅಧಿಕೃತತೆ ಪ್ರಾಪ್ತವಾಗಬಲ್ಲುದೆಂಬುದನ್ನು ಈ ಕೃತಿ ಸೂಚಿಸುತ್ತದೆ. ಡಿ.ಎಸ್.ನಂದಾರಿಂದ ಪೂರ್ಣಗೊಂಡ ಅನುಪಮಾರ 'ದಿಟ್ಟೆ', ಸ್ವಂತ ನಿರ್ಧಾರಗಳ ಮೂಲಕವೇ ವೈಯಕ್ತಿಕವೂ ಹಾಗೂ ರಾಜಕೀಯ ವ್ಯಕ್ತಿತ್ವ ಉಳಿಸಿಕೊಂಡ ಅಬ್ಬಕ್ಕ ರಾಣಿಯ ದಿಟ್ಟತನವನ್ನು ಕೀರ್ತಿಸುತ್ತದೆ.

ಸೃಷ್ಟಿಯನ್ನು ಸ್ತ್ರೀತತ್ವವಾಗಿ ಅರ್ಥೈಸುವ ಪುರುಷ ಸೌಂದರ್ಯ ಮೀಮಾಂಸೆಯನ್ನು ಪುನರ್‌ವ್ಯಾಖ್ಯಾನಿಸುವ ನೆಲೆ ಸುನಂದಾ ಬೆಳಗಾಂವಕರ ಅವರ 'ಝುವಾದಿ'. ಸ್ವಾಹಿಲಿ ಭಾಷೆಯಲ್ಲಿ 'ಕಾಣಿಕೆ' ಎಂಬ ಅರ್ಥವುಳ್ಳ ಪದ 'ಝುವಾದಿ'. ಪ್ರಕೃತಿ ಹಾಗೂ ಸ್ತ್ರೀಯಲ್ಲಿನ ಸಂಗೋಪನಾ ಸತ್ವವನ್ನು ಕಾಣಿಕೆಯ ಭಾವದಲ್ಲಿ ಸ್ವೀಕರಿಸಿದಾಗ ಮಾತ್ರವೇ ಪುರುಷಅಹಂಕಾರ ಕರಗಿ ನಿಜಮಾನವತ್ವ ಸಾಧ್ಯವಾಗುತ್ತದೆ. ಅಂತರ್‌ದೃಷ್ಟಿ ಮೊಳೆಯುವ ತನಕ ಹೆಣ್ಣಿನ ಶೋಷಣೆ ಇರತಕ್ಕದ್ದೇ ಎಂಬ ನಿಲುವು ಈ ಕೃತಿಯದು.

ಕಥನದ ಸಾಂಪ್ರದಾಯಿಕ ಕ್ರಮಗಳಿಂದ ಬಿಡಿಸಿಕೊಂಡ ಸವಿತಾ ನಾಗಭೂಷಣರ 'ಸ್ತ್ರೀಲೋಕ' ಮಹಿಳಾ ಸಂಸ್ಕೃತಿಯ ವಿನೂತನ ಅಭಿವ್ಯಕ್ತಿಯಾಗಿದೆ. ಮಹಿಳೆಯರಿಬ್ಬರ ಸಂಭಾಷಣೆಯ ಘಟಕಗಳ ಮೂಲಕ ನಿತ್ಯ ದೈನಿಕವನ್ನು ವೈವಿಧ್ಯಮಯ ಗ್ರಹಿಕೆಗಳ ನೆಲೆಯಲ್ಲಿ ಈ ಕಾದಂಬರಿ ಸೃಷ್ಟಿಸುತ್ತದೆ. ಎಲ್ಲವನ್ನೂ ತಾತ್ವೀಕರಿಸುವ ಬೌದ್ಧಿಕತೆಯ ಅಹಂಕಾರಕ್ಕೆ ಉತ್ತರವೆಂಬಂತೆ ಸ್ತ್ರೀಲೋಕವನ್ನು ಈ ಕೃತಿ ಪುನರ್‌ವ್ಯಾಖ್ಯಾನಿಸುತ್ತದೆ.

80 ಹಾಗೂ 90ರ ದಶಕಗಳ ದಲಿತ ಬಂಡಾಯ ಕಥಾಸಾಹಿತ್ಯ ಈಗಾಗಲೇ ಸಿದ್ಧಗೊಂಡಿದ್ದ ತಾತ್ವಿಕತೆಯ ಒಳಶೋಧವನ್ನು ಸೂಕ್ಷ್ಮನೆಲೆಗೆ ವಿಸ್ತರಿಸಲೆತ್ನಿಸಿತು. ಹಾಗಾಗಿ, ಶೋಷಣೆಯ ಕಥನವನ್ನು ಸಮಕಾಲೀನ ಹಾಗೂ ಪುರಾತನ ನೆಲೆಗಳೆರಡರಲ್ಲೂ ಏಕಕಾಲಕ್ಕೆ ನಿರೂಪಿಸುವಂಥ ವಿನೂತನ ತಂತ್ರವನ್ನು ಬಳಸಿಕೊಳ್ಳಲಾಯ್ತು. ಆ ಮೂಲಕ ಆಚರಣಾತ್ಮಕ ಭಾವದ್ರವ್ಯಕ್ಕೆ ವೈಚಾರಿಕ, ಚಾರಿತ್ರಿಕ ವೇದಿಕೆಯನ್ನು ಕಲ್ಪಿಸಲಾಯಿತು. ಹಾಗೆಯೇ ಸಮಕಾಲೀನ ಸಮಾಜದ ವಾಸ್ತವದಲ್ಲಿನ ಹೋರಾಟಕ್ಕೆ ಭದ್ರವಾದ ಸಾಂಸ್ಕೃತಿಕ ಭಾವಕೋಶ ನಿರ್ಮಾಣಗೊಂಡಿತು.

ಸ್ವಾತಂತ್ರ್ಯೋತ್ತರ ಭಾರತೀಯ ಸಾಮಾಜಿಕ ಸಂದರ್ಭದ ಸಂಚಲನಗಳನ್ನು ಶೋಷಿತರ ನೆಲೆಯಿಂದ ಹಿಡಿದಿಡುವ ಕಾದಂಬರಿಗಳು ಸಾಕಷ್ಟು ಬಂದಿವೆ. ಭೂಮಿ ಮೇಲಿನ ಹಕ್ಕು, ವಿದ್ಯೆ ಹಾಗೂ ಉದ್ಯೋಗಾವಕಾಶಗಳ ಬೇಡಿಕೆ, ಸ್ವಾಭಿಮಾನ ಗಳಿಕೆ, ಸಾಂಸ್ಕೃತಿಕ ಗುರುತುಗಳ ಬಗೆಗಿನ ಹೆಮ್ಮೆ ಇತ್ಯಾದಿಗಳು ಕಾದಂಬರಿಗಳ ಪ್ರಮುಖ ಆಶಯಗಳಾಗಿವೆ. 1993ರ ಕುಂ.ವೀರಭದ್ರಪ್ಪನವರ 'ಕೊಟ್ರ ಹೈಸ್ಕೂಲಿಗೆ ಸೇರಿದ್ದು' ಜೀತದಾಳೊಬ್ಬನ ಮಗ ವಿದ್ಯೆ ಪಡೆಯಲು ಹೊರಟ ಸಂಘರ್ಷದ ಕತೆಯನ್ನು ಹೇಳುತ್ತದೆ. ಬಿಡುಗಡೆಯ ಸಾಧ್ಯತೆಗಳ ಅರಿವು ಮಾತ್ರ ದಲಿತರನ್ನು ಮಾನಸಿಕ ದಾಸ್ಯದಿಂದ ಮುಕ್ತರಾಗಿಸಬಲ್ಲದೆಂಬುದನ್ನು ಇವರ ಇನ್ನೊಂದು ಕಾದಂಬರಿ ಕೆಂಡದ ಮಳೆ (1989) ನಿರೂಪಿಸುತ್ತದೆ. ಭೂಹೀನ ದಲಿತರ ಬದುಕುವ ಹಕ್ಕುಗಳಿಗಾಗಿ ಅಧಿಕಾರಶಾಹಿ ವ್ಯವಸ್ಥೆಯೊಳಗಿದ್ದೇ ಹೋರಾಡುವ ದಲಿತ ಸರ್ಕಾರಿ ಅಧಿಕಾರಯೊಬ್ಬನ ಸೋಲು ಗೆಲವುಗಳ ಕಥನ ಆರ್.ವಿ.ಭಂಡಾರಿಯವರ 'ಬೆಂಕಿಯ ಮಧ್ಯೆ' (1984) ಕಾದಂಬರಿಯದು.

ಬಿ.ಟಿ.ಲಲಿತಾನಾಯಕರ ಗತಿ (1983) ಹಾಗೂ ಎಂ.ವೀರಪ್ಪ ಮೊಯಿಲಿಯವರ ಕೊಟ್ಟ (1993) - ಈ ಕೃತಿಗಳು ಲಂಬಾಣಿ ಮತ್ತು ಕೊರಗ ಜನಾಂಗದ ನಂಬಿಕೆ, ಆಚರಣೆಗಳ ಹಿನ್ನೆಲೆಯುಳ್ಳವು. ಪುರೋಹಿತಶಾಹಿ ಹಾಗೂ ಅಧಿಕಾರಶಾಹಿ ವ್ಯವಸ್ಥೆ ಈ ಸಮುದಾಯಗಳನ್ನು ಶೋಷಿಸುವ ಬಗೆ ಇಲ್ಲಿ ನಿರೂಪಿತವಾಗಿವೆ. ಜೈವಿಕ ಮಾದರಿಯ ಬಂಡಾಯವನ್ನು ಸಂಘಟಿತ ಶೋಷಿತರು ಕೈಗೊಳ್ಳಬೇಕಾದ ಅನಿವಾರ್ಯತೆಯನ್ನು 80ರಿಂದೀಚಿನ ಕಾದಂಬರಿಗಳು ಮನಗಾಣಿಸುತ್ತವೆ. ಜೀವಪ್ರೇಮಕ್ಕೆ ಇಂಬಾಗಬಲ್ಲ ವರ್ಣಸಂಕರದ ಪುರಾತನ ಘಟನೆಗೆ ಮರಣ ಮಂಡಲ ಮಧ್ಯದೊಳಗೆ ಕೃತಿಯ ನಾಯಕ ಬಸರಾಜುವಿನ ಕನಸಿನ ಕಣ್ಣು ಸಾಕ್ಷಿಯಾಗುತ್ತದೆ. ಈ ಕಣ್ಣು ಹೋರಾಟದ ತಾತ್ವಿಕತೆಗೆ ಜೀವಂತಿಕೆ ತರಬಲ್ಲುದೆಂಬ ಆಶಾವಾದ ಕೃತಿಯಲ್ಲಿದೆ.

ಇರುವಿಕೆ ಮತ್ತು ಆಗುವಿಕೆಗಳ ನಡುವಿನ ಗತಿ ತಾರ್ಕಿಕತೆಯಲ್ಲಿ ತಮ್ಮನ್ನು ಗುರುತಿಸಿಕೊಳ್ಳುವ ಮೂರು ತಲೆಮಾರಿನ ಪುರುಷ ಪಾತ್ರಗಳ ಕಥೆ ಅನಂತ ಮೂರ್ತಿಯವರ ಭವ ಕಾದಂಬರಿಯಾದು. ಆಗುವಿಕೆಯ ಹಂಬಲದಲ್ಲಿ ಮಾನವ ಸಂಬಂಧಗಳನ್ನು ಪುರುಷ ಪಾತ್ರಗಳು ಬೇಜವಾಬ್ದಾರಿಯಿಂದ ವ್ಯಾವಹಾರಿಕವಾಗಿ ಕಾಣುತ್ತವೆ. ಅದೇ, ನಿತ್ಯದೈನಿಕದ ಮಾನವಸಂಬಂಧಗಳನ್ನು ಜೀವಪ್ರೇಮದಿಂದ ಭವದ ಸ್ತ್ರೀಪಾತ್ರಗಳು ಕಾಣುತ್ತವೆ.

ಇವರ ದಿವ್ಯ ಕಾದಂಬರಿಯು ಸ್ತ್ರೀಸಾಮರ್ಥ್ಯದ ಬಗೆಗಿನ ತುಂಬು ವಿಸ್ಮಯದ ಕಥನವಾಗಿದೆ. ನೆಹರೂ ಪ್ರಣೀತ ಆಧುನಿಕ ಅಭಿವೃದ್ಧಿ ಸಿದ್ಧಾಂತದ ಪ್ರಾತಿನಿಧಿಕ ಪಾತ್ರ-ಘನಶ್ಯಾಮ. ಕೌಟುಂಬಿಕ ಹಾಗೂ ಸಾಮಾಜಿಕ ಸಂಬಂಧಗಳಲ್ಲಿ ಗಾಢವಾಗಿ ತೊಡಗಿಸಿಕೊಳ್ಳುತ್ತಲೇ ಪ್ರಕೃತಿಯೊಂದಿಗಿನ ತಾದಾತ್ಮ್ಯವನ್ನೂ ಬೆಳೆಸಿಕೊಂಡಾಕೆ ಗೌರಿ. ಈ ಎರಡು ಮೂಲಗಳಿಂದ ಒದಗಿಬರುವ ಜೀವನಾನುಭವಗಳನ್ನು ಬೌದ್ಧಿಕ ಜ್ಞಾನವಾಗಿಸಿಕೊಳ್ಳದೆ ಸಹಜಜ್ಞಾನಿಯಾಗುತ್ತ ಸಾಗಿದವಳೀಕೆ. ಒಳ ಹೊರಗುಗಳ ದ್ವಂದ್ವವುಳ್ಳ ಪುರುಷನಿಗೆ ಗೌರಿಯಂಥ ರಹಸ್ಯ ಚೇತನದ ಸಂಗಮ ಅತ್ಯಗತ್ಯ. ಚಿರವಾಸ್ತವದ ಪ್ರತೀಕವಾದ ಗೌರಿ ಪ್ರತಿನಿಧಿಸುವ ಜೀವನತತ್ವ ಚರವಾಸ್ತವದ ಮಿತ ತಿಳುವಳಿಕೆಯ ಪಾಲಿಗೆ ದಿವ್ಯವೇ ಆಗುತ್ತದೆ. ಕೃಷ್ಣಮೂರ್ತಿ ಹನೂರರು ನಿಕ್ಷೇಪದಲ್ಲಿ (1998) ನಾಗರಿಕ ವ್ಯಾವಹಾರಿಕತೆ ಹಾಗೂ ಪ್ರಾಕೃತಿಕ ಜೀವನ ಸೌಂದರ್ಯ, ಮುಗ್ಧತೆಗಳನ್ನು ಮುಖಾಮುಖಿಯಾಗಿಸುತ್ತಾರೆ. ಉಪಭೋಗ ಸಂಸ್ಕೃತಿಯ ಕ್ರೌರ್ಯದಡಿಯಲ್ಲಿ ಆದಿವಾಸಿ ಹೆಣ್ಣುಗಂಡುಗಳ ಸುಂದರ ಬದುಕು ನಿರ್ನಾಮವಾಗುವುದನ್ನು ಕಾದಂಬರಿ ನಿರೂಪಿಸುತ್ತದೆ.

ಚದುರಂಗರ ಹೆಜ್ಜಾಲ (1998) ಪ್ರಕೃತಿಯ ಜೀವ ಸಂಗೋಪನೆಯನ್ನು ಕೇಂದ್ರವಾಗಿಟ್ಟುಕೊಂಡ, ಕಾಲೂರನೆಂಬ ದಲಿತನ ಕಥಾನಕ. ಶ್ರೇಣೀಕೃತ ಸಮಾಜದ ಕ್ರೌರ್ಯ, ಶೋಷಣೆಗಳನ್ನು ಬಯಲಿಗೆಳೆಯುತ್ತಲೇ ಬಿಡುಗಡೆಯ ಸಾಧ್ಯತೆಗಳನ್ನು ನಮ್ಮ ಮುಂದಿಡುವ ಕೃತಿ. ವೀರಪ್ಪಮೊಯ್ಲಿಯವರ ತೆಂಬರೆ (1999) ಕಾದಂಬರಿ ಭೂತಾರಾಧನೆ ಸಂದರ್ಭದಲ್ಲಿ ಪಂಜುರ್ಲಿ ಭೂತವನ್ನು ಕಟ್ಟುವ ಪಂಬದ ಜನಾಂಗದ ಬದುಕನ್ನು ಹಿನ್ನೆಲೆಯಾಗಿಟ್ಟುಕೊಂಡಿದೆ. ತೆಂಬರೆ ವಾದ್ಯ ಸಾಮಾಜಿಕ ಕ್ರಾಂತಿಗೆ ಅತ್ಯಗತ್ಯವಾದ ಶೋಷಿತರ ಅಂತರಾಳದ ಜೀವಚೈತನ್ಯದ ಬೃಹತ್ ಪ್ರತೀಕವಾಗಿ ಬೆಳೆದು ನಿಲ್ಲುತ್ತದೆ.

90ರ ದಶಕದಲ್ಲಿ ಬಂದ ಕಾದಂಬರಿಗಳು ಶೋಷಿತ ಸಮುದಾಯಗಳ ಆತ್ಮಕಥನಗಳಂತೆ ನಿರೂಪಿತವಾಗಿವೆ. ಶೋಷಣೆಯ ಸುಳಿಯಲ್ಲೇ ಉಳಿಯುವ ಬಹುಸಂಖ್ಯಾತರ ನಡುವಿನಿಂದ ಬಂದ ಶಿಕ್ಷಿತ ಪಾತ್ರವಾಗಿ ಈ ಕಾದಂಬರಿಗಳ ಕರ್ತೃಗಳೂ ಸೇರಿಹೋಗಿದ್ದಾರೆ. ಸಮುದಾಯದಿಂದ ಪ್ರತ್ಯೇಕವಾಗಿ ತನ್ನನ್ನು ಪ್ರಜ್ಞೆಯ ನೆಲೆಯಲ್ಲಿ ಗುರುತಿಸಲೆತ್ನಿಸಿಕೊಳ್ಳುವ ನವ್ಯ ಕಾದಂಬರಿಗಳಿಗಿಂತ ಭಿನ್ನಹಾದಿಯನ್ನು ಈ ದಶಕದ ಅನಂತರದ ಕೃತಿಗಳು ಹಿಡಿಯಲಾರಂಭಿಸಿದವು. ವ್ಯಕ್ತಿಪ್ರಜ್ಞೆಯನ್ನು ಸಮುದಾಯದೊಂದಿಗಿನ ತಮ್ಮ ಸಂಬಂಧವನ್ನು ಮತ್ತೂ ಗಾಢ ಹಾಗೂ ಆಳಗೊಳಿಸಿಕೊಳ್ಳಲು ಈ ಕಾದಂಬರಿಕಾರರು ಬಳಸಿಕೊಳ್ಳುತ್ತಾರೆ. ಹೀಗಾಗಿ ಏಕತಾನತೆ, ಘೋಷಣೆಗಳಿಲ್ಲದ, ಬಹುಮುಖಿ ಆಯಾಮಗಳುಳ್ಳ ಸಮುದಾಯ ಕಥನಗಳು ಸೃಷ್ಟಿಗೊಳ್ಳತೊಡಗಿದವು.

ತೆಂಬರೆ ಕಾದಂಬರಿಯ ತೋಮುವಿನಂತೆಯೇ ನೇರ ಹೋರಾಟಕ್ಕಿಳಿದ ದಲಿತ ಕೃಷಿಕಾರ್ಮಿಕಪಾತ್ರ ಲಕ್ಷ್ಮಣರ 'ಬದುಕು' ಕಾದಂಬರಿಯ ಮಾಳಕ್ಕಜ್ಜಿ. ಅಸಹಾಯಕತೆಯ ಚಿಪ್ಪೊಡೆದು, ಅನ್ಯಾಯದ ಬಗೆಗಿನ ಅರಿವನ್ನು ಹೊಂದುವ ಮಾಳಕ್ಕಜ್ಜಿ ದಲಿತ ಹೋರಾಟದ ಆತ್ಮವಿಶ್ವಾಸದ ಸಂಕೇತವಾಗುತ್ತಾಳೆ. ಬುಡಕಟ್ಟಿನ ಜೀವನಕ್ರಮದಲ್ಲಿ ಉಂಟಾಗುವ ಪಲ್ಲಟಗಳನ್ನೂ ಅದರ ತಲ್ಲಣಗಳನ್ನೂ ಸಮರ್ಥವಾಗಿ ಜಂಬಣ್ಣ ಅಮರಚಿಂತರ ಕುರುವಯ್ಯ ಮತ್ತು ಅಂಕುಶದೊಡ್ಡಿ (1993) ಹಿಡಿದಿಟ್ಟಿದೆ.

ಶೋಷಕ ಶೋಷಿತ ಸಂಬಂಧವನ್ನು ದ್ವೈತದ ನೆಲೆಯಲ್ಲಿ ಪರಿಭಾವಿಸದೆ, ವ್ಯಕ್ತಿಗತ ನೆಲೆಯಲ್ಲಿ ಏಕತ್ರಗೊಳಿಸಿ ಕಾಣಿಸುವ ಯತ್ನ ಶಿವರುದ್ರ ಕಲ್ಲೋಳಿಕರರ ಹೊಲಗೇರಿಯ ರಾಜಕುಮಾರ (1994) ಕಾದಂಬರಿಯದು. ದಲಿತರು ಹಾಗೂ ಅಂಬೇಡ್ಕರ್ ಚಿಂತನೆಗಳ ನಡುವಿನ ಚಾರಿತ್ರಿಕ ಸಂಬಂಧವನ್ನು ಈ ಕೃತಿ ಸೂಕ್ಷ್ಮವಾಗಿ ವಿವೇಚಿಸುತ್ತದೆ. ಇಳಿತ, ಭರತ, ಪ್ರವಾಹ, ಸುಳಿ - ಎಂಬ ನಾಲ್ಕು ಭಾಗಗಳ ಯೋಜನೆಯುಳ್ಳ ಕೃತಿ - ಸಾರಾ ಅಬೂಬಕರ್‌ರವರ ಸುಳಿಯಲ್ಲಿ ಸಿಕ್ಕವರು (1994). ಬಡತನದಂತೆಯೇ ಶ್ರೀಮಂತಿಕೆಯೂ ಸುಳಿಯಾಗಬಲ್ಲದೆಂಬುದನ್ನು ಮುಮ್ಮಟಿ ಪಾತ್ರದ ಮೂಲಕ ಇಲ್ಲಿ ತೋರಿಸಿಕೊಡಲಾಗಿದೆ. ಈ ಸುಳಿಯಲ್ಲಿ ವಿಶೇಷವಾಗಿ ಸೇರ್ಪಡೆಯಾಗುವ ಕುಟುಂಬದ ಹೆಣ್ಣುಗಳ ನೋವು ಸಂಕಷ್ಟಗಳ ಸರಣಿಯ ನಿರೂಪಣೆಯಿದೆ. ಎಚ್.ಎಸ್.ಚಂಪಾವತಿಯವರ ಶಿವಗಂಗಾ (1997) ಎಂಬ ಕಾದಂಬರಿ ಮಹಿಳಾ ಹೋರಾಟದ ಅನುಭವಗಳು ವ್ಯಕ್ತಿಯ ಅಂತಃಕರಣದ ವಿಕಾಸಕ್ಕೆಡೆ ಮಾಡಿಕೊಡುವ ಸಾಧ್ಯತೆಗಳನ್ನು ಗಂಗಾ ಪಾತ್ರದ ಮೂಲಕ ವಿವೇಚಿಸುತ್ತದೆ. ತಮ್ಮ ಅಸ್ತಿತ್ವದ ಶೋಧಕ್ಕೆ ಹೆಣ್ಣನ್ನು ಜೈವಿಕವಸ್ತುವಾಗಿ ಪರಿಭಾವಿಸುವ ನವ್ಯಕಾದಂಬರಿಗಳ ನಾಯಕ ಪಾತ್ರಗಳನ್ನು ಶಿವಗಂಗಾ ಲಿಂಗವ್ಯವಸ್ಥೆಯ ನೆಲೆಯಲ್ಲಿ ವಿಮರ್ಶಿಸುತ್ತದೆ.

ಲಿಂಗವ್ಯವಸ್ಥೆಯೊಳಗಿನ ಹೆಣ್ಣಿನ ವಿವಿಧ ಮನಃಸ್ತರಗಳ ಸಂಕೀರ್ಣಲೋಕವನ್ನು ತಾರಾಭಟ್‌ರವರ ಅವ್ಯಕ್ತ ಪರಿಚಯಿಸುತ್ತದೆ. ಭಾವನೆ ಹಾಗೂ ವ್ಯಾವಹಾರಿಕ ಜಗತ್ತುಗಳ ನಡುವಿನ ದ್ವಂದ್ವವನ್ನು, ಸ್ತ್ರೀಯ ಪ್ರಜ್ಞಾವಿಕಾಸದ ಸಾಧ್ಯತೆಗಳು ಹೊಸಕಿಹೋಗುವ ಬಗೆಯನ್ನು ಈ ಕಾದಂಬರಿ ಕಾಣಿಸುತ್ತದೆ. ಲಿಂಗದರ್ಪವಿರದ ಅಮೆರಿಕನ್ ಜೋಫ್ರೆ ಕ್ಲಾರ್ಕನ ಕಣ್ಣಿನಿಂದ ದೊರಕುವ ನೋಟವನ್ನು ವಿಮರ್ಶಾತ್ಮಕವಾಗಿ ಲೇಖಕಿ ಬಳಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ. ಕೊಳೆಗೇರಿ ಬಾಲಕ ಕ್ಯಾತನ ಜೀವನಾನುಭವಗಳ ಹಿನ್ನೆಲೆಯಲ್ಲಿ ಪಿ.ಲಂಕೇಶರ 'ಅಕ್ಕ' (1991) ರಚಿತವಾಗಿದೆ. ಅಕ್ಕನೊಂದಿಗಿನ ಭಾವಸಂಬಂಧಗಳು ಮಾನಸಿಕ ಪೋಷಣೆಯ ನೆಲೆಯನ್ನೂ ದಾಟಿ ಸಾಮಾಜಿಕ

ವಾಸ್ತವದ ಕ್ರೌರ್ಯವನ್ನು ಒಳಗೊಳ್ಳುವುದನ್ನು ಕಾದಂಬರಿ ದರ್ಶಿಸುತ್ತದೆ. ಬಾಲಕನೊಬ್ಬನ ಪ್ರಜ್ಞೆಯ ಬೆಳೆವಣಿಗೆಯ ಗತಿಯೊಂದಿಗೇ ಆತನ ನಿರೂಪಣೆಯ ಮೂಲಕ ಸಾಮಾಜಿಕ ವಾಸ್ತವವನ್ನು ಈ ಕೃತಿ ಅಧಿಕೃತವಾಗಿ ಹಿಡಿದಿಡುತ್ತದೆ. ಸಾಕ್ಷಿ ಪ್ರಜ್ಞೆಯ ಮೂಲಕ ಗತ ಅನುಭವಗಳನ್ನು ವರ್ತಮಾನದ ಅರಿವಿನೊಂದಿಗೆ ಮುಖಾಮುಖಿಯಾಗಿಸುವ ಯತ್ನವನ್ನು ಶಾಂತಿನಾಥ ದೇಸಾಯಿಯವರು ತಮ್ಮ ಅಂತರಾಳ (1993) ಕಾದಂಬರಿಯಲ್ಲಿ ಮಾಡಿದ್ದಾರೆ. ಓಂಣಮೋ (1998) ಕಾದಂಬರಿಯಲ್ಲಿ ವ್ಯಕ್ತಿಸ್ವಾತಂತ್ರ್ಯದ ತಾತ್ತ್ವಿಕತೆಯನ್ನು ಜೈನದರ್ಶನ ಹಾಗೂ ಆಚರಣೆಗಳಲ್ಲಿ ಶೋಧಿಸುವ ಪ್ರಯತ್ನವನ್ನು ಶಾಂತನಾಥ' ದೇಸಾಯಿ ಮಾಡಿದ್ದಾರೆ. ವ್ಯಕ್ತಿನಿಷ್ಠ ನೆಲೆಯಲ್ಲಿಯೇ ಧರ್ಮದ ಸಾಮಾಜಿಕ ಆಯಾಮ ಸದಾ ಚಿಕಿತ್ಸೆಗೊಳಗಾಬೇಕಾದುದು ಅನಿವಾರ್ಯವೆಂಬ ಮಹತ್ವದ ನಿರ್ಧಾರ ಈ ಕೃತಿಯದು. ಕುಂ.ವೀರಭದ್ರಪ್ಪನವರ ಶಾಮಣ್ಣ (1998), ಸಾಂಪ್ರದಾಯಿಕ ವೈದಿಕ ಕುಟುಂಬದ ಮೂರು ತಲೆಮಾರುಗಳ ಏಳುಬೀಳುಗಳನ್ನು ಕಥಿಸುತ್ತಲೇ ಪಾಶ್ಚಾತ್ಯ ಹಾಗೂ ಪೌರ್ವಾತ್ಯ ಜೀವನ ಶೈಲಿಗಳ ಮುಖಾಮುಖಿಯಲ್ಲಿ ಪ್ರಕಟಗೊಳ್ಳಬಹುದಾದ ಅಸಂಗತತೆಯನ್ನು ವೈನೋದಿಕ ಶೈಲಿಯಲ್ಲಿ ಈ ಕಾದಂಬರಿ ಹಿಡಿದಿಡುತ್ತದೆ. ದಕ್ಷಿಣ ಕನ್ನಡದ ಗ್ರಾಮೀಣ ವರ್ಗದ ಬಡ ಮುಸ್ಲಿಂರ ಬದುಕನ್ನು ನಿಯಂತ್ರಿಸುವ ಧಾರ್ಮಿಕ ಮೂಲಭೂತವಾದವನ್ನು ರಫೀಕ್ ಉಪ್ಪಿನಂಗಡಿಯವರ ಅಜ್ಜಿಮಾದ (1998) ಪರಿಚಯಿಸುತ್ತದೆ. ಜೊತೆಗೆ ಮೂಲಭೂತವಾದವನ್ನು ಸ್ವಂತ ಸಂಕಲ್ಪಬಲದ ಮೂಲಕ ಪ್ರತಿಭಟಿಸುವ ಅಜ್ಜಿಮಾದಳ ಜೀವಪರತೆಯನ್ನು ಕೃತಿ ದಾಖಲಿಸುತ್ತದೆ.

ತುಳುನಾಡಿನ ಸಾಂಸ್ಕೃತಿಕ ಕಥನದ ಒಡಲಿನಿಂದಲೇ ಸಾಮಾಜಿಕ ಸಂಚಲನಗಳನ್ನು ದಲಿತ ಹಾಗೂ ಸ್ತ್ರೀಕೇಂದ್ರದಿಂದ ದಾಖಲಿಸುವ ಕೃತಿ ಎಚ್.ಎಸ್.ನಾಗವೇಣಿಯವರ 'ಗಾಂಧಿ ಬಂದ' (1999). ಜನರ ಬದುಕಿನ ಸೂಕ್ಷ್ಮವಿವರಗಳೊಂದಿಗೆ ಗಾಂಧೀ ತತ್ತ್ವ ಹಾಸುಹೊಕ್ಕಾಗಿ ಪ್ರಾಯೋಗಿಕ ರೂಪದಲ್ಲಿ ಪ್ರಕಟವಾಗುವ ಪರಿ ಇಲ್ಲಿದೆ. ಗುಲ್ಬರ್ಗ ಜಿಲ್ಲೆಯ ಗಡಸು ಗ್ರಾಮೀಣ ಭಾಷೆಯಲ್ಲಿ ಹಳ್ಳಿಯ ದಲಿತ ಹೆಣ್ಣುಮಕ್ಕಳ ಮೇಲಾಗುವ ಧಾರ್ಮಿಕ, ಆರ್ಥಿಕ, ಸಾಮಾಜಿಕ ಶೋಷಣೆಯನ್ನು ಗೀತಾ ನಾಗಭೂಷಣರ ಬದುಕು (2001) ಕಾದಂಬರಿ ವಿವರಿಸುತ್ತದೆ. ಊಳಿಗಮಾನ್ಯ ಹಾಗೂ ಬಂಡವಾಳಶಾಹೀ ವ್ಯವಸ್ಥೆಯಡಿ ನಲುಗಿ ಹೋಗುವ ಕುಟುಂಬದ ದುರಂತವನ್ನು ಈ ಕಾದಂಬರಿ ವಿಸ್ತೃತವಾಗಿ ಹಿಡಿದಿಟ್ಟಿದೆ. ಉಮಾರಾವ್‌ರವರ ನೂರುಸ್ವರ (1999) ಆಧುನಿಕ ಸಂವೇದನೆಯುಳ್ಳ ಮಹಿಳೆಯೊಬ್ಬಳ ತಲ್ಲಣಗಳನ್ನು ಸೂಕ್ಷ್ಮವಾಗಿ ಚಿತ್ರಿಸುವ ಕಾದಂಬರಿ. ಲತಾರಾಜಶೇಖರರ ಈ ಸ್ನೇಹ ಈ ಜೀವನ (1999) ಸಾಂಪ್ರದಾಯಿಕ ಕೌಟುಂಬಿಕ ಸಂಬಂಧಗಳನ್ನು ಶೋಧಿಸಲೆತ್ನಿಸುತ್ತದೆ. ಎಚ್.ಎಸ್.ಶ್ರೀಮತಿಯವರ ಉದ್ಗಮ (2000) ಎಂಬ ಕಾದಂಬರಿ ತನ್ನೊಳಗಿನ ರಹಸ್ಯಗಳಿಗೆ ಬಾಯಿಕೊಡಲೆತ್ನಿಸುವ ಮಹಿಳೆಯೊಬ್ಬಳ ಸ್ವಗತ ಕತೆ ಎನ್ನಬಹುದು. ಪುರಷನಿಗಿಂತಲೂ ಹೆಚ್ಚು ಆತಂಕ ಒತ್ತಡಗಳನ್ನು ಪ್ರೇಮವಿವಾಹವಾಗುವ ಮಹಿಳೆ ಹೊರಬೇಕಾದ ಸ್ಥಿತಿಯನ್ನು ಈ ಕೃತಿ ಚಿತ್ರಿಸುತ್ತದೆ. ಗ್ರಾಮ ರಾಜಕಾರಣದೆದುರು ಕೃಷಿಯ ಬಗೆಗಿನ ರಮ್ಯಕಲ್ಪನೆಗಳು ಧೂಳೀಪಟವಾಗುವುದನ್ನು ಎಂ.ಎಸ್.ವೇದಾರ ಜಮೀನು (2000) ಪರಿಣಾಮಕಾರಿಯಾಗಿ ನಿರೂಪಿಸುತ್ತದೆ. ಪಟ್ಟಣವಾಸಿ ನೌಕರನಾಗಿಯೂ ಭೂಮಿಯೊಂದಿಗಿನ ಸಂಬಂಧವನ್ನು ಜೀವಂತವಾಗಿಟ್ಟುಕೊಳ್ಳಲೆತ್ನಿಸಿ ಸೋಲುವ ಶಿವಪ್ಪ ಹಾಗೂ ಆತನ ಪತ್ನಿ ದೇವಮ್ಮರ ಪ್ರಯತ್ನದ ಸೂಕ್ಷ್ಮಚಿತ್ರ ಇಲ್ಲಿದೆ. ಗ್ರಾಮೀಣ ಸಂವೇದನೆಗಳೊಳಗಿನಿಂದಲೇ ತನ್ನ ಸುತ್ತಲಿನ ಸಾಮಾಜಿಕ ವ್ಯವಸ್ಥೆಯನ್ನು ಅದರೆಲ್ಲ ಕ್ರೌರ್ಯದೊಂದಿಗೆ ಕಾಣಿಸುವ ಕೃತಿಯಿದು. ಸರಸ್ವತಿಯವರ ಈಗೇನ್ ಮಾಡೀರಿ? (2001) ಎಂಬ ಕೃತಿಯಲ್ಲಿ ಬಂಡವಾಳಶಾಹಿ ಕ್ರೌರ್ಯಕ್ಕೆ ಸವಾಲೆಂಬಂತೆ ತಾಯಿಯ ನೆನಪುಗಳುಳ್ಳ ರಮ್ಯಭಾವಕೇಂದ್ರವನ್ನು ಜೀವಂತವಾಗಿಡಲು ಇಲ್ಲಿಯ ನಾಯಕಿ ಯತ್ನಿಸುತ್ತಾಳೆ.

ಕಲಾವಿದ ಚೇತನದ ಒಳತುಮುಲಗಳ ನಿರೂಪಣೆಯ ಮೂಲಕವೇ ಮಾನವ ಬದುಕಿನ ಸಾರ್ಥಕತೆಯ ಮಹತ್ವದ ಪ್ರಶ್ನೆಗಳನ್ನೆತ್ತುವ ಕೃತಿ ಎಸ್.ಎಲ್.ಭೈರಪ್ಪನವರ 'ಮಂದ್ರ'. ಕಲಾಜೀವನದಲ್ಲಾಗಲೀ ಬದುಕಿನಲ್ಲಾಗಲೀ ಮಾನವ ಸಂಬಂಧಗಳು ಹೊಂದಬಹುದಾದ ವ್ಯಾವಹಾರಿಕ ಹಾಗೂ ಆಧ್ಯಾತ್ಮಿಕ ನೆಲೆಯ ಸ್ವರೂಪವನ್ನು ಕುರಿತಂತೆ ಈ ಕೃತಿ ಚರ್ಚಿಸುತ್ತದೆ. ಸೋಸಲೆ ಗಂಗಾಧರ ಅವರ ಯಾಮಿನಿ (2001) ಶ್ರಮಜೀವನದಲ್ಲಿಯೇ ತಮ್ಮ ಸ್ವಾಭಿಮಾನದ ನೆಲೆಗಳನ್ನು ಅರ್ಥಪೂರ್ಣವಾಗಿ ದಕ್ಕಿಸಿಕೊಳ್ಳಲೆತ್ನಿಸುವ ದಲಿತ ಲೋಕದ ಕಥನವಾಗಿದೆ. ಕುಂ.ವೀರಭದ್ರಪ್ಪನವರ ಯಾಪಿಲ್ಲು (2001) ಆಧುನೀಕರಣ ಪ್ರಕ್ರಿಯೆಗೆ ಒಳಗಾಗುತ್ತಲೇ ದುರಂತದೆಡೆ ಹೆಜ್ಜೆ ಇಡುತ್ತಿರುವ ದಲಿತರ ಸ್ಥಿತಿಯನ್ನು ಅಸಹಾಯಕ ಚಲನೆಯ ಬಾಲಿಕೆಯ ರೂಪಕದಲ್ಲಿ ಹಿಡಿದಿಡುತ್ತದೆ. ಶಿಕ್ಷಣ ಹಾಗೂ ಆ ಮೂಲಕ ದಕ್ಕಬಹುದಾದ ಜೀವನಾವಶ್ಯಕಗಳು ಶೋಷಿತರ ಪಾಲಿಗೆ ಕಡೆಗೂ ಮರೀಚಿಕೆಯಾಗುವ ದುರಂತವನ್ನು ಕಾದಂಬರಿ ಹಿಡಿದಿಡಲು ಪ್ರಯತ್ನಿಸುತ್ತದೆ. ಜಾಗತೀಕರಣದ ನೆಲೆಯಲ್ಲಿನ ಭಾರತದಂತಹ ತೃತೀಯ ಜಗತ್ತಿನ ರಾಷ್ಟ್ರಗಳ ತಲ್ಲಣಗಳಿಗೂ ಈ ಕಾದಂಬರಿ ಪ್ರತೀಕವಾಗುತ್ತದೆ.

ಬಿಳುಮನೆ ರಾಮದಾಸ್ ಅವರ ನಂಬಿಕೆಟ್ಟವರಿಲ್ಲವೊ, ಎಸ್.ವಿ.ಪ್ರಭಾವತಿ ಅವರ ಶಕುಂತಲಾ, ಅಗ್ರಹಾರಕೃಷ್ಣಮೂರ್ತಿಯವರ ನೀರು ಮತ್ತು ಪ್ರೀತಿ, ದೇವುಹನೇಹಳ್ಳಿಯವರ ಶಿಲೆಯೊಳಡಗಿದ ಕಪ್ಪೆ, ಮಲ್ಲಿಕಾರ್ಜುನ ಹಿರೇ ಮಠರ ಹವನ, ವಿವೇಕ್ ಶಾನುಭಾಗರ ಇನ್ನೂ ಒಂದು ಇವು 2001ರಲ್ಲಿ ಬಂದಿರುವ ಕೆಲವು ಕಾದಂಬರಿಗಳು. ಪ್ರೀತಿಯ ಕಣ್ಣು (ಶಾಂತಾರಾಮ ಸೋಮಯಾಜಿ); ಅರ್ಥ (ನಾ.ಮೊಗಸಾಲೆ); ಚಿತ್ರಮಾಲ (ಆರ್.ವಿಜಯರಾಘವನ್); ಮಳೆನಿಂತ ಮೇಲಿನ ಮರ (ಶಿವಾನಂದ ಬೇಕಲ್); ಗೌರಿ (ಜಾನಕಿ ಸುಂದರೇಶ್); ಕಲ್ಲುಖಣಿಯಾಗು ಕರಿಕೆಬೇರಾಗು (ದಮಯಂತಿ ನರೇಗಲ್ಲ) - ಇವು 2002ರಲ್ಲಿ ಬಂದ ಕೆಲವು ಕಾದಂಬರಿಗಳು.

ಮನಜರ ಸೂರಪ್ಪ (2004) ಕಾದಂಬರಿ ಗತದ ಯಶೋಗಾಥೆ ಹಾಗೂ ದುರಂತದ ನೆನಪುಗಳೆರಡರ ಮೂಲಕ ದಲಿತತ್ವದ ಆತ್ಮತೇಜವನ್ನು ಸಶಕ್ತವಾಗಿ ಸೃಷ್ಟಿಸಿಕೊಳ್ಳುವ ಕಥನವಾಗಿದೆ. ಸಿಪಾಯಿ ಸೂರಪ್ಪನ ಧೈರ್ಯ ಸಾಹಸಗಳ ಕಥನದೊಂದಿಗೆ ಟಿಪ್ಪುಸುಲ್ತಾನನ ಬಗೆಗಿನ ಚರಿತ್ರೆ ಹೊಸ ಆಯಾಮವನ್ನು ಪಡೆದುಕೊಳ್ಳುವುದು ಈ ಕಾದಂಬರಿಯ ವಿಶೇಷತೆ. ಅಂತೆಯೇ ಯಜಮಾನ್ ಸೂರಪ್ಪನ ಜೀವನ ಕೌಶಲ್ಯದ ಕಥನವು ಹಳೇ ಮೈಸೂರು ಇತಿಹಾಸವನ್ನು ಹೊಸ ಬೆಳಕಿನಲ್ಲಿ ಅರ್ಥೈಸುತ್ತದೆ. ಅಂಚಿಗೆ ಒತ್ತರಿಸಲ್ಪಟ್ಟ ಚೇತನಗಳನ್ನು ಪ್ರಧಾನನೆಲೆಗೆ ತರುವುದರ ಮೂಲಕ ಈ ಕೃತಿ ಇತಿಹಾಸದ ಪುನರ್ ಮೌಲ್ಯಮಾಪನವನ್ನು ಕೈಗೊಳ್ಳುತ್ತದೆ. ಗ್ರಾಮೀಣ ಕೃಷಿಕ ಜೈನ ಸಮಾಜದ ಚಿತ್ರಣವುಳ್ಳ ಕೃತಿ ಬಾಳಾ ಸಾಹೇಬ ಲೋಕಾಪೂರರ ಹುತ್ತ (2002), ಅಹಿಂಸೆ ಹಾಗೂ ಹಿಂಸೆಗಳ ನಡುವಿನ ವೈರುಧ್ಯದಲ್ಲಿ ಪ್ರಕಟಗೊಳ್ಳುವ ಗ್ರಾಮರಾಜಕಾರಣವನ್ನೂ ಮಾನವಸಂಬಂಧಗಳ ಸೂಕ್ಷ್ಮಕಂಪನಗಳನ್ನೂ ಇದು ದಾಖಲಿಸುತ್ತದೆ.

ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂಚಲನಗಳನ್ನು ಕಲಾತ್ಮಕವಾಗಿ ಅಭಿವ್ಯಕ್ತಿಸುವ ಅನೇಕ ಮಹತ್ತ್ವದ ಕಾದಂಬರಿಗಳು ಹೊರಬಂದಿವೆ. ಪ್ರಯೋಗದ ನಾವೀನ್ಯತೆ ಹಾಗೂ ಪ್ರಬುದ್ಧತಾತ್ತ್ವಿಕತೆಯುಳ್ಳ ಕನ್ನಡ ಕಾದಂಬರಿಗಳು ಜಾಗತಿಕ ಕಥನ ಸಾಹಿತ್ಯಕ್ಕೆ ವಿಶಿಷ್ಟ ಆಯಾಮವನ್ನು ನೀಡುತ್ತ ಬಂದಿವೆ. (ಪಿ.ಎಸ್‌ಎಚ್.)

**ಕನ್ನಡದಲ್ಲಿ ಗದ್ಯ ಸಾಹಿತ್ಯ :** ಸದ್ಯದಲ್ಲಿ ಕನ್ನಡ ಗದ್ಯ ಸಾಹಿತ್ಯದ ಇತಿಹಾಸವನ್ನು ಹಲ್ಮಿಡಿ ಶಾಸನದಿಂದ (ಸು.450) ಗುರುತಿಸಬಹುದು. ಸು.5ನೆಯ ಶತಮಾನದಿಂದ ಸು.18ನೆಯ ಶತಮಾನದವರೆಗೆ ಅಸಂಖ್ಯ ಗದ್ಯ ಶಾಸನಗಳು ದೊರೆಯುತ್ತವೆ. ಅವುಗಳಲ್ಲಿ ವೀರಗಲ್ಲು, ಮಾಸ್ತಿಕಲ್ಲು, ದತ್ತಿಶಾಸನಗಳಲ್ಲಿಯ ಗದ್ಯ ಆಯಾ ಕಾಲದ ಐತಿಹಾಸಿಕ, ಸಾಮಾಜಿಕ ಮತ್ತು ಇತರ ಸಂಗತಿಗಳೊಂದಿಗೆ ಭಾಷಾಸ್ವರೂಪವನ್ನು ತಿಳಿಸುತ್ತದೆ.

ಕದಂಬ ಕಾಕುತ್ಸ್ಥವರ್ಮನ ಕಾಲಕ್ಕೆ ಸೇರಿದ ಹಲ್ಮಿಡಿ ಶಾಸನ ಪೂರ್ವದ ಹಳಗನ್ನಡ ಭಾಷೆಯಲ್ಲಿದೆ. ಅದರ ಕೆಲವು ಪಂಕ್ತಿಗಳನ್ನು ನೋಡಬಹುದು:

> ನಮಃ ಶ್ರೀಮತ್ಕದಂಬಪನ್ತ್ಯಾಗಸಂಪನ್ನನ್ಕಲಭೋರ (ನಾ) ಅರಿ ಕ
> ಕುಸ್ಥಭಟ್ಟೋರನಾಳೆ ನರಿದಾವಿ(ಳೆ)ನಾಡುಳ್ ಮೃಗೇಶನಾ
> ಗೇನ್ದ್ರಾಭೀಳಭ್ರ್ಬಟಹರಪ್ಪೊರ್ ಶ್ರೀಮೃಗೇಶನಾಗಾಹ್ವಯ
> ರಿವ್ರ್ವರಾ ಬಟರಿಕುಲಾಮಲವ್ಯೋಮತಾರಾಧಿನಾಥನ್ನಳಪ
> ಗಣಪಶುಪತಿ............................
> ಭಟ್ಟರ್ಗ್ಗೀಗಟ್ಟೆ ಒಡ್ಡಲಿ ಆಪತ್ತೊನ್ದಿವಿಟ್ಟಾರಕರ

ಆರಂಭದಲ್ಲಿನ ಶ್ಲೋಕವನ್ನು ಬಿಟ್ಟರೆ ಹಲ್ಮಿಡಿ ಶಾಸನದಲ್ಲಿ ಉಳಿದಿದ್ದೆಲ್ಲವೂ ಗದ್ಯದಲ್ಲಿದೆ. ಇದರಲ್ಲಿ ಸಂಸ್ಕೃತ ಪದಗಳ ಬಳಕೆ ಹೆಚ್ಚು. ಕನ್ನಡ ಪದಗಳು ಬೆರಳಲ್ಲಿ ಎಣಿಸುವಷ್ಟು ಮಾತ್ರ ಇವೆ. ಪೂರ್ವ ಹಳಗನ್ನಡದ ವಿಭಕ್ತಿ ಪ್ರತ್ಯಯಗಳು ಅಲ್ಲಲ್ಲಿ ಕಾಣುತ್ತವೆ. ಕರ್ಮಣೀಪ್ರಯೋಗದ ಒಂದು ರೂಪವೂ ಇದೆ. ಹೀಗೆ ಕನ್ನಡದ ಮೇಲೆ ಸಂಸ್ಕೃತದ ಪ್ರಭಾವ ಅನೇಕ ರಂಗಗಳಲ್ಲಿ ಬೆಳೆದುಕೊಡು ಬಂದಿತ್ತೆಂದು ಇದರಿಂದ ಸ್ಪಷ್ಟವಾಗುತ್ತದೆ. ಈ ಶಾಸನದಿಂದ 1-2ನೆಯ ಶತಮಾನಗಳ ಹಿಂದಿನಿಂದಲೂ ಕನ್ನಡ ಗ್ರಾಂಥಿಕ ಭಾಷೆಯಾಗಿ ಬೆಳೆಯತೊಡಗಿತ್ತು ಎಂದು ಹೇಳಬಹುದು. ಇದು ಸಂಸ್ಕೃತದ ಒತ್ತಡಕ್ಕೆ ಒಳಗಾದ ಕನ್ನಡದ ಪ್ರಯೋಗ ಕಾಲವೆಂದು ಹೇಳಬಹುದು.

ಹಲ್ಮಿಡಿ ಶಾಸನದ ಅನಂತರ ಬಾದಾಮಿಯ ಚಳುಕ್ಯ ರಾಜ ಮಂಗಳೇಶನ 578ರ ಗದ್ಯಶಾಸನವನ್ನು ಇಲ್ಲಿ ಹೆಸರಿಸಬೇಕು. ಈ ಶಾಸನದಲ್ಲಿ ಸಾಹಿತ್ಯ ಗುಣಗಳಿಲ್ಲದಿದ್ದರೂ ಪೂರ್ವದ ಹಳಗನ್ನಡ ಭಾಷೆಯ ವಿಶಿಷ್ಟ ರೂಪಗಳಿವೆ.

ಮುಂದೆ, 7, 8, 9ನೆಯ ಶತಮಾನದ ಗದ್ಯಶಾಸನಗಳಲ್ಲಿ ಹಳಗನ್ನಡ ಶಬ್ದಗಳ ಬಳಕೆಯನ್ನು ವಿಶೇಷವಾಗಿ ಕಾಣುತ್ತೇವೆ. ಅಲ್ಲಲ್ಲಿ ಪೂರ್ವದ ಹಳಗನ್ನಡದ ಪ್ರಯೋಗಗಳೂ ಇವೆ. ಸಂಸ್ಕೃತ, ಪ್ರಾಕೃತ ತದ್ಭವಗಳ ಮಿಶ್ರಣ ಈ ಕಾಲದ ಗದ್ಯ ಶಾಸನಗಳಲ್ಲಿ ಕಂಡುಬರುತ್ತದೆ. ಆದರೂ ಕನ್ನಡ ಭಾಷೆ, ಅದರ ವ್ಯಾಕರಣ ಪ್ರಯೋಗಗಳು ಬಹುಮಟ್ಟಿಗೆ ತಮಿಳು ಭಾಷೆಯನ್ನು ಹೋಲುತ್ತವೆ.

10ನೆಯ ಶತಮಾನದ ಹೊತ್ತಿಗೆ ಗದ್ಯಕ್ಕಿಂತ ಪದ್ಯದ ಕಡೆಗೆ ಒಲವು ಹೆಚ್ಚಿರುವುದು ಕಾಣುತ್ತದೆ. ಇದು ಚಂಪೂಯುಗದ ಸುವರ್ಣಕಾಲ. ಪಂಪ ರನ್ನರ ಪ್ರಭಾವ ಶಾಸನ ಕವಿಗಳ ಮೇಲೆಯೂ ಬಿದ್ದಿರಬೇಕು. ಈ ಕಾಲದಲ್ಲಿ ಗದ್ಯಶಾಸನಗಳಿಗಿಂತ ಪದ್ಯ ಶಾಸನಗಳೇ ಹೇರಳವಾಗಿವೆ. ಅನಂತರ 13-14ನೆಯ ಶತಮಾನಗಳಲ್ಲಿಯ ಶಾಸನಗಳು ಸಂಪ್ರದಾಯ ಹಾಗೂ ಅನುಕರಣಕ್ಕೆ ಮಾರುಹೋಗಿವೆ. ಅವುಗಳಲ್ಲಿ ಹೊಸತನವಿಲ್ಲ. ಅನಂತರ 15, 16, 17ನೆಯ ಶತಮಾನಗಳಲ್ಲಿಯ ಶಾಸನಗಳಲ್ಲಿಯೂ ಭಾಷಾಪ್ರೌಢಿಮೆಯಿಲ್ಲ. ದೇಶದಲ್ಲಿ ಮಹಮ್ಮದೀಯರು ಹಾಗೂ ಇಂಗ್ಲಿಷರ ಆಕ್ರಮಣದಿಂದ ಆಯಾ ಭಾಷೆಯ ಬಳಕೆಯ ಮಾತುಗಳು ಶಾಸನ ಸಾಹಿತ್ಯದಲ್ಲಿಯೂ ಸೇರಿಕೊಂಡಿವೆ.

ಸು.11 ರಿಂದ 18ನೆಯ ಶತಮಾನದ ಅವಧಿಯಲ್ಲಿ ಪದ್ಯ ಶಾಸನಗಳೇ ಹೇರಳವಾಗಿ ದೊರೆಯುತ್ತವೆ. ಗದ್ಯ ಶಾಸನಗಳು ಅಲ್ಲಲ್ಲಿ ಮಿನುಗುತ್ತವೆ. ವೀರಗಲ್ಲು, ದತ್ತಿಶಾಸನಗಳು ವಿಶೇಷವಾಗಿ ಗದ್ಯದಲ್ಲಿಯೇ ಸಿಗುತ್ತವೆ. ಅವು ಚಿಕ್ಕ ಚಿಕ್ಕವಾಗಿದ್ದರೂ ಮೇಲ್‌ಸ್ತರದ ಗದ್ಯಶೈಲಿಯನ್ನು ಅಲ್ಲಿ ಕಾಣಬಹುದು. ಈ ಕಾಲದ ಶಾಸನಗಳಲ್ಲಿ ಬಳಸಿದ ಗದ್ಯದಲ್ಲಿಯೂ ಒಂದು ಹೊಸ ನೋಟವಿದೆ. ಇಲ್ಲಿಯ ಗದ್ಯ ನೀರಸವಾಗಿರದೆ ಹೃದ್ಯವಾಗಿದೆ. ಚಾಳುಕ್ಯ ನಾಲ್ಕನೆಯ ಸೋಮೇಶ್ವರನ ಕಾಲದ ಸಜ್ಜನತಿಲಕನೆಂಬ ಕವಿ ಬರೆದ ಸಿರಸಂಗಿ ಶಾಸನ ಸೊಗಸಾದ ಚಿಕ್ಕ ಚಂಪೂ ಕಾವ್ಯ ಎನ್ನುವಂತಿದೆ. ಋಷ್ಯಶೃಂಗನ ಜನ್ಮಕಥೆ ಇದು ಹೃದಯಂಗಮವಾದ ಗದ್ಯ ಶೈಲಿಯಲ್ಲಿದೆ. ಒಂದು ಸುದೀರ್ಘವಾದ ವಾಕ್ಯದಲ್ಲಿ ಚಿಕ್ಕ ಚಿಕ್ಕ ವಾಕ್ಯಗಳ ಮಾಲೆಯನ್ನು ಹೆಣೆದು ಅದರಲ್ಲಿ ಚಿಕ್ಕ ಕಥೆಯನ್ನು ಜೋಡಿಸಿದುದು ಕಾವ್ಯದ ಮೇಲ್ಮಟ್ಟವನ್ನು ಸೂಚಿಸುತ್ತದೆ. ಇದೇ ಶಾಸನದಲ್ಲಿ ಮತ್ತೊಂದು ಗದ್ಯಭಾಗ ಹೀಗಿದೆ: ಇಂತೆನಿಸಿ ...............ಮುಟ್ಟಮೀರದೆ ಸಿಟ್ಟು ನುಡಿವ ದುಟ್ಟನಾಯಕರ ನಿಟ್ಟೆಲ್ವಂ ಮುಳುದೊಟ್ಟಜಿಯಿಂದಟ್ಟಿಯಾಡಿಸುವ ಬಿರುದನಾಯಕರ ಶಿರದ ಶಿರ್ಪಂ ಬಿದಿರ್ಚುವ ಚಪಳನಾಯಕ ಹೃದಯನಲ್ಲ, ಭೀತನಾಯಕರ ಕೊಲ್ಲ, ಸತ್ಯರಾಧೇಯ, ಸಾಹಸವೈನತೇಯ- ಈ ಮಾತುಗಳು ಹಚ್ಚೆಯ ನಾಯಕನ ಸಾಹಸವನ್ನು ಅವನ ಸತ್ಯಸಂಧತೆಯನ್ನು ಸಾರುತ್ತವೆ. ಇಲ್ಲಿಯ ಅಚ್ಚಗನ್ನಡದ ಪದಗಳ ಜೋಡಣೆ ಟಕಾರದ ಠೇಂಕಾರ ಮನೋಜ್ಞವಾಗಿದೆ. ಹೀಗೆ ಕೆಲವು ಶಾಸನಗಳು ಸಂಪ್ರದಾಯ ಹಾಗೂ ಅನುಕರಣಕ್ಕೆ ಮಾರುಹೋದರೆ, ಹಲವು ಶಾಸನಗಳು ಅಚ್ಚಗನ್ನಡದ ಬಿಗುವಿನಿಂದಲೂ ಚಿಕ್ಕ ಚಿಕ್ಕ ವಾಕ್ಯಗಳ ಶ್ರೇಷ್ಠ ಗದ್ಯಶೈಲಿಯಿಂದಲೂ ಶೋಭಿಸುತ್ತವೆ. ಶಾಸನದ ಗದ್ಯ ಕನ್ನಡದ ಗದ್ಯ ಸಾಹಿತ್ಯಕ್ಕೆ ಹಿರಿದಾದ ಕೊಡುಗೆಯನ್ನು ಕೊಟ್ಟಿದೆ. ಅಂದಿನ ಶಾಸನಗಳಲ್ಲಿ ಮುಖ್ಯವಾಗಿ ಆಡುಮಾತಿನ ಗ್ರಂಥಸ್ಥ ಭಾಷೆಯು, ವ್ಯಾವಹಾರಿಕ ಹಾಗೂ ಸರ್ಕಾರಿ ಭಾಷೆಯು, ಕಾವ್ಯಭಾಷೆಯು, ಪ್ರಾದೇಶಿಕ ಸೊಗಡಿನ ಎಲ್ಲ ಸ್ತರಗಳನ್ನೂ ಕಾಣಬಹುದಾಗಿದೆ.

ಕವಿರಾಜಮಾರ್ಗದಲ್ಲಿ (ಸು.850) ಪದಪಾದವಿಯುತ ನಿಯಮಾಸ್ಪದಮಲ್ಲದಳಂಕೃತಂ ಕ್ರಿಯಾಕಾರಕದೊಳ್ ಪುದಿದರ್ಥ ವ್ಯಕ್ತಿಯನೀವುದು ಗದ್ಯಮನೇಕ ರೂಪಭೇದವಿವಿಕ್ತಂ ಎಂದು ಗದ್ಯಕಾವ್ಯದ ಲಕ್ಷಣವನ್ನು ತಿಳಿಸಿದೆ. ವಿಮಳ, ಉದಯ, ನಾಗಾರ್ಜುನ, ಜಯಬಂಧು, ದುರ್ವಿನೀತಾದಿಗಳು ಗದ್ಯ ಕ್ಷೇತ್ರದಲ್ಲಿ ಖ್ಯಾತಿಯನ್ನು ಪಡೆದಿದ್ದಾರೆನ್ನುವುದು ಕವಿಯ ಅಭಿಪ್ರಾಯವಾಗಿದೆ. ಇಲ್ಲಿಯವರೆಗೆ ಇವರ ಯಾವ ಗ್ರಂಥಗಳೂ ದೊರೆತಿಲ್ಲ. ಇವರಲ್ಲದೆ ಇನ್ನೂ ಸಾಮಾನ್ಯ ಗದ್ಯ ಲೇಖಕರು ಎಷ್ಟು ಜನರಿದ್ದರೋ ತಿಳಿಯದು. ಅಂತು ನೃಪತುಂಗನ ಕಾಲಕ್ಕೆ ಸ್ವತಂತ್ರವಾದ ಗದ್ಯಲೇಖನ ಚೆನ್ನಾಗಿ ಬೆಳೆದುಬಂದಿತ್ತೆಂದು ಹೇಳಬಹುದು.

ವಡ್ಡಾರಾಧನೆ (ಸು.920) ಕನ್ನಡ ಸಾಹಿತ್ಯದ ಮೊಟ್ಟಮೊದಲನೆಯ ಗದ್ಯ ಗ್ರಂಥ (ನೋಡಿ ವಡ್ಡಾರಾಧನೆ). ಈ ಗ್ರಂಥದಲ್ಲಿ ಕವಿ ಜೈನ ತತ್ತ್ವಗಳನ್ನು ಕಥೆಗಳ ಮೂಲಕ ಸಾಮಾನ್ಯರಿಗೂ ಮನಮುಟ್ಟುವಂತೆ ಬೋಧಿಸಿದ್ದಾನೆ. ಶೈಲಿಯಲ್ಲಿ ಕನ್ನಡತನವಿದೆ. ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಕತೆಯ ಓಟ ಸುಗಮವಾಗಿ ಸಾಗುತ್ತದೆ. ಎಲ್ಲಿಯೂ ವರ್ಣನೆಗಳ ಆಡಂಬರವಿಲ್ಲ. ನಾಣ್ನುಡಿಗಳು, ಅನುಭವವೇದ್ಯವಾದ ದೃಷ್ಟಾಂತಗಳು ಅಡಿಗಡಿಗೆ ಬಂದು ಕಥೆಗಳಿಗೆ ಕಳೆಕಟ್ಟಿವೆ. ಹೀಗೆ ದೇಶೀಯ ಪ್ರಚುರತೆ, ವಿಶಿಷ್ಟವಾದ ವ್ಯಾಕರಣ ಪ್ರಕ್ರಿಯೆಗಳು, ಅಪೂರ್ವ ಪದಗಳು, ಜೀವಂತ ಮಾತುಗಾರಿಕೆ, ಅನುಭವ ಸಂಪನ್ನವಾದ ಅಭಿವ್ಯಕ್ತಿ, ಕನ್ನಡ ಸಂಸ್ಕೃತ ಪದಗಳ ಸಮತೂಕ ಇವುಗಳಿಂದ ವಡ್ಡಾರಾಧನೆಯ ಗದ್ಯ ವಿಶಿಷ್ಟವಾದರೂಪ ತಾಳಿದೆ. ಹಳಗನ್ನಡ ಗದ್ಯದ ಒಳ್ಳೆಯ ಮಾದರಿಗೆ ಈ ಗ್ರಂಥ ಮೇಲುಪಂಕ್ತಿಯಾಗಿದೆ.

ಕನ್ನಡ ಗದ್ಯ ಸಾಹಿತ್ಯ ಚರಿತ್ರೆಯಲ್ಲಿ ಶಾಸನಗದ್ಯ, ವಡ್ಡಾರಾಧನೆಯ ಗದ್ಯ ಒಂದೊಂದು ಘಟ್ಟವಾದರೆ ಚಾವುಂಡರಾಯನ ಗದ್ಯ ಇನ್ನೊಂದು ಘಟ್ಟ. ಇವನ ತ್ರಿಷಷ್ಟಿಲಕ್ಷಣ ಮಹಾಪುರಾಣ (ಸು.978) ಕನ್ನಡ ಗದ್ಯಸಾಹಿತ್ಯದ ಎರಡನೆಯ ಪ್ರಮುಖ ಗ್ರಂಥ. ಇದರಲ್ಲಿ ಜೈನಧರ್ಮದ ನಂಬಿಕೆಗಳೂ ತತ್ತ್ವಗಳೂ ಅರುವತ್ತುಮೂರು ಪುರಾತನರ ಚರಿತ್ರೆಗಳೂ ಅಡಕವಾಗಿವೆ. ಅಲ್ಲಲ್ಲಿ ಪದ್ಯಗಳೂ ಪ್ರಾಕೃತ ಗಾದೆಗಳೂ ಬಂದಿವೆ. ಈ ಕೃತಿಯ ಗದ್ಯಶೈಲಿ ವಡ್ಡಾರಾಧನೆಯದಕ್ಕಿಂತ ಸ್ವಲ್ಪಮಟ್ಟಿಗೆ ಪ್ರೌಢವೂ ಗಂಭೀರವೂ ಆಗಿದೆ. ಇದರಲ್ಲಿ ಸಂಸ್ಕೃತ ಪದಗಳ ಬಳಕೆ, ಮತಸಂಬಂಧವಾದ ವಿಷಯಗಳು ಹೆಚ್ಚು. ವಾಕ್ಯಗಳು ಉದ್ದುದ್ದವಾಗಿವೆ. ಕನ್ನಡ, ಸಂಸ್ಕೃತ, ಪ್ರಾಕೃತಗಳಲ್ಲಿ ಕವಿಗಿರುವ ಪಾಂಡಿತ್ಯ ಗ್ರಂಥದ ಉದ್ದಕ್ಕೂ ಕಾಣಬರುತ್ತದೆ. ಇಲ್ಲಿಯ ಸಾಹಿತ್ಯ ಸ್ವರೂಪ, ಭಾಷೆ ಪೂರ್ತಿಯಾಗಿ ಹಳಗನ್ನಡದಲ್ಲಿದೆ. ವಡ್ಡಾರಾಧನೆಯ ಅನಂತರ ಸು.60 ವರ್ಷಗಳಾದ ಮೇಲೆ ಬೆಳೆದು ಬಂದ ಈ ಗದ್ಯ ವೈಶಿಷ್ಟ್ಯಪೂರ್ಣವಾಗಿದೆ. ವಡ್ಡಾರಾಧನೆಯಲ್ಲಿ ಕಥಾ ಗದ್ಯಕ್ಕೆ ಪ್ರಾಧಾನ್ಯವಿದ್ದರೆ ಇಲ್ಲಿ ಕಥಾಗದ್ಯ ಮತ್ತು ಶಾಸ್ತ್ರೀಯ ಗದ್ಯ ಮಿಲನವಾಗಿವೆ. ಇವೆರಡನ್ನೂ ಹೀಗೆ ಮಿಲನ ಮಾಡಿದ ಈ ಕವಿ ಮೇಲ್ತರಗತಿಯ ಗದ್ಯಕಾರನೆಂದು ಹೇಳಬೇಕು.

ಚಂಪೂ ಗ್ರಂಥಗಳಲ್ಲಿ ಬಳಕೆಯಾದ ಗದ್ಯ, ಗದ್ಯ ಸಾಹಿತ್ಯದ ಬೆಳವಣಿಗೆಗೆ ತುಂಬ ಸಹಾಯವಾಗಿದೆ. ಪಂಪ ತನ್ನ ಎರಡೂ ಚಂಪೂಕೃತಿಗಳಲ್ಲಿ ಔಚಿತ್ಯಪೂರ್ಣವಾಗಿ ಗದ್ಯವನ್ನು ಬಳಸಿದ್ದಾನೆ. ತನ್ನ ಕಥಾನಾಯಕನಾದ ಅರಿಕೇಸರಿಯ ಯೌವನೋದಯ ಸಂದರ್ಭವನ್ನು ಸುಮಾರು 55 ಪಂಕ್ತಿಗಳ ಗದ್ಯದಲ್ಲಿ ಬಣ್ಣಿಸಿದ್ದಾನೆ. ಇಲ್ಲಿ ಅತಿಶಯೋಕ್ತಿಯಿದ್ದರೂ ಮನೋಹರತೆಯಿದೆ. ಕಥಾನಾಯಕನ ಸೊಬಗನ್ನು ಮಧುರವಾಗಿ ಚಿತ್ರಿಸಲಾಗಿದೆ. ಹೇರಳವಾದ ಹೋಲಿಕೆಗಳಿದ್ದರೂ ಎಲ್ಲವೂ ಹದವರಿತು ಬಂದಿವೆ. ಇದರಿಂದಾಗಿ ಸುದೀರ್ಘವಾದರೂ ಈ ಗದ್ಯಭಾಗ ಚಿತ್ತಾಕರ್ಷಕವಾಗಿದೆ. ಕಾವ್ಯಮಯವಾಗಿದೆ. ದೇಸೀ ನುಡಿಗಟ್ಟುಗಳು, ನಾದ ಸೂಕ್ಷ್ಮಗಳು ಇವನ ಕಾವ್ಯ ಶೈಲಿಯ ಗುಣಗಳು. ಈ ಎಲ್ಲವನ್ನೂ ನಾವು ಇವನ ಗದ್ಯದಲ್ಲೂ ಕಾಣಬಹುದು. ಈತನ ಚಂಪೂಕಾವ್ಯಗಳಲ್ಲಿ ಬಳಕೆಯಾದ ಗದ್ಯ ಮುಂದಿನ ತಲೆಮಾರಿನವರಿಗೆ ಮಾರ್ಗದರ್ಶಿಯಾಯಿತು.

ಪಂಪನ ಅನಂತರ ಬಂದ ಚಂಪೂಕಾವ್ಯಗಳಲ್ಲಿನ ಗದ್ಯ ಸಾಮಾನ್ಯವಾಗಿ ಪಾಂಡಿತ್ಯ ಪ್ರದರ್ಶನದಿಂದ ತುಂಬಿದೆ. ಕಥೆಯ ಬೆಳವಣಿಗೆಯ

ದೃಷ್ಟಿ, ವಿವರಗಳ ಸಂಕ್ಷಿಪ್ತತೆ ಪಂಪನಂತೆ ಕೆಲವು ಕವಿಗಳಲ್ಲಿ ಕಾಣುವುದಿಲ್ಲ. ರುದ್ರಭಟ್ಟ, ಜನ್ನ, ಷಡಕ್ಷರಿ ಮೊದಲಾದವರು ಇದಕ್ಕೆ ಹೊರತಾಗಿಲ್ಲ.

ದುರ್ಗಸಿಂಹ, ನಯಸೇನರ ಚಂಪೂ ಕೃತಿಗಳಲ್ಲಿನ ಗದ್ಯದಲ್ಲಿ ಸ್ಪಷ್ಟತೆ, ಸರಳತೆ, ಹೃದ್ಯತೆ ವಿಶೇಷವಾಗಿದೆ ದುರ್ಗಸಿಂಹನ ಪಂಚತಂತ್ರದಲ್ಲಿ ಪದ್ಯಕ್ಕಿಂತ ಗದ್ಯವೇ ಹೆಚ್ಚು. ಕಥಾನಿರೂಪಣೆಗೆ ಗದ್ಯ ಆವಶ್ಯಕವೆಂಬುದನ್ನು ಕವಿ ಇಲ್ಲಿ ತೋರಿಸಿಕೊಟ್ಟಿದ್ದಾನೆ. ಇವನ ಗದ್ಯದಲ್ಲಿ ನಾಣ್ಣುಡಿಗಳೂ ಜಾಣ್ಣುಡಿಗಳೂ ಇವೆ. ನಯಸೇನನ ಧರ್ಮಾಮೃತದಲ್ಲಿ ಈ ಸಂಪ್ರದಾಯ ಬೆಳೆದಿದೆ. ಧರ್ಮಾಮೃತದಲ್ಲಿ ದೀರ್ಘವಾದ ಗದ್ಯ ಹೆಚ್ಚಾಗಿಲ್ಲ. ಚಿಕ್ಕ ಚಿಕ್ಕದಾಗಿ ಹೆಣೆದ ಇಲ್ಲಿನ ಗದ್ಯ ಚೊಕ್ಕವಾಗಿದೆ. ಹೋಲಿಕೆಗಳಂತೂ ಹೊಳೆಯಾಗಿ ಹರಿದಿವೆ. ಕಥೆಯನ್ನು ಹೇಳಹೇಳುತ್ತಲೇ ರಾಶಿರಾಶಿಯಾಗಿ ಸಾದೃಶ್ಯ ಮಾಲಿಕೆಗಳನ್ನು ತರುವುದು ಇವನ ಶೈಲಿಯ ಗುಣವಿಶೇಷವೂ ಪರಿಮಿತಿಯೂ ಆಗಿದೆ. ಸಂಸ್ಕೃತವನ್ನು ಅಲ್ಲಲ್ಲಿ ಬಳಸಿದ್ದರೂ ತಿರುಳ್ಗನ್ನಡದ ಹೊಗರು ಹೆಚ್ಚಾಗಿ ಹೊರಹೊಮ್ಮಿದೆ. ಇವನ ಅನಂತರ ಬಂದ ಎಲ್ಲ ಚಂಪೂ ಕವಿಗಳ ಗದ್ಯ ಸುಮಾರಾಗಿ ಒಂದೇ ಮಾದರಿಯದು. ಇವರ ಗದ್ಯಭಾಗದಲ್ಲಿನ ಅಲಂಕಾರಗಳ ಬಾಹುಳ್ಯ ಮತ್ತು ಉದ್ದುದ್ದ ಸಮಾಸಗಳು ಕಥಾವಸ್ತುವಿಗೆ ಪೋಷಕವಾಗಿಲ್ಲದಿರುವುದು. ಗದ್ಯಬಂಧ ಬಿಗಿಯಾಗಿರದೆ ಶಿಥಿಲವಾಗಿರುವುದು ಕಂಡುಬರುತ್ತದೆ. ಆದರೂ ಚಂಪೂಗದ್ಯ, ಗದ್ಯ ಸಾಹಿತ್ಯದ ಬೆಳೆವಣಿಗೆಗೆ ಪ್ರೇರಕ, ಪೋಷಕ, ಸಹಾಯಕ ಆಗಿದೆ ಎಂಬ ಮಾತು ಸ್ಪಷ್ಟ.

ಕನ್ನಡ ಗದ್ಯಕ್ಕೆ ವಚನಗಳದು ಒಂದು ಅಪೂರ್ವವಾದ ಕಾಣಿಕೆ. ಅನುಭಾವಿಗಳ ಈ ಭಾಷೆಯಲ್ಲಿ ಉತ್ಕಟವಾದ ಭಾವಾವೇಶವಿದೆ, ಲಯವಿದೆ, ನಾದವಿದೆ, ಮಾಧುರ್ಯವಿದೆ. ಇವುಗಳನ್ನು ಗಮನಿಸಿದಾಗ ಈ ವಚನಗಳು ಪದ್ಯಜಾತಿಗೆ ಸೇರಿದುವೇ ಅಥವಾ ಗದ್ಯಜಾತಿಗೆ ಸೇರಿದುವೇ ಎಂಬ ಪ್ರಶ್ನೆ, ಆಲೋಚನೆ ಉಂಟಾಗುತ್ತದೆ. ಮೂಲದಲ್ಲಿ ಇವು ಛಂದೋಬದ್ಧ ರಚನೆಗಳೆಂದೇ ಕೆಲವು ವಿದ್ವಾಂಸರು ಹೇಳಿದರೆ, ಹಲವರು ಗದ್ಯವೆಂದೂ ಗದ್ಯಪದ್ಯಗಳ ನಡುವಿನ ಒಂದು ಮಾದರಿಯೆಂದೂ ಅಭಿಪ್ರಾಯಪಡುತ್ತಾರೆ.

ಹನ್ನೆರಡನೆಯ ಶತಮಾನದ ಉತ್ತರಾರ್ಧದಲ್ಲಿ ಉಕ್ಕಂದವಾಗಿ ಹರಿದ ಈ ಸಾಹಿತ್ಯ ಅತ್ಯಂತ ಶ್ರೀಮಂತವಾಯಿತು. ಅಲ್ಲಮ, ಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮ, ಚೆನ್ನಬಸವಣ್ಣ ಮೊದಲಾದವರ ವಚನ ಸಾಹಿತ್ಯವು ಅಂದಿನ ಸಾಹಿತ್ಯ ಧೋರಣೆ, ಜೀವನ, ಮತಧರ್ಮ ಮೊದಲಾದವಕ್ಕೆ ಸಾಕ್ಷಿಯಾಯಿತು. ಇವರ ವಚನಗಳಲ್ಲಿ ಹೊಸಗನ್ನಡ ಗದ್ಯದ ಪ್ರಾರಂಭವನ್ನು ಗುರುತಿಸಬಹುದು. ಅಚ್ಚುಕಟ್ಟಾದ ಗಾದೆ ಮಾತಿನಂಥ ಸೂತ್ರರೂಪದ ವಾಕ್ಯಗಳು, ಮಾಲೆಮಾಲೆಯಾಗಿ ಬರುವ ದೃಷ್ಟಾಂತಗಳು, ರೂಪಕಗಳು, ಉಪಮೆಗಳು, ಮಾತಿನ ಅಭಿಪ್ರಾಯದ ಹಿತಮಿತವಾದ ಪುನರಾವರ್ತನೆ, ಕಠೋರವೆನಿಸದ ಪ್ರಾಸನಿರ್ವಹಣೆ, ಕೊನೆಯಲ್ಲಿ ಹೊಳೆದು ನಿಲ್ಲುವ ತತ್ತ್ವ ಇವುಗಳಿಂದಾಗಿ ವಚನಗಳು ಇಂದಿಗೂ ತಮ್ಮ ಚೆಲುವನ್ನು ಕಳೆದುಕೊಂಡಿಲ್ಲ. ಈ ಪ್ರಕಾರ ಇಪ್ಪತ್ತನೆಯ ಶತಮಾನದ ಕೆಲವು ಕವಿಗಳಿಗೂ ಸ್ಫೂರ್ತಿಯನ್ನು ಕೊಟ್ಟಿದೆ ಎಂಬ ವಿಷಯುವನ್ನು ಇಲ್ಲಿ ಸ್ಮರಿಸಬಹುದು. ಮುಂದೆ 15ನೆಯ ಶತಮಾನದಲ್ಲಿ ಕೆಲವು ವಚನಕಾರರು ಹಿಂದಿನ ವಚನ ಸಾಹಿತ್ಯವನ್ನು ಅಚ್ಚುಕಟ್ಟಾಗಿ ಆಯ್ದು ಜೋಡಿಸಿದರು. ಇದರ ಪರಿಣಾಮವಾಗಿ ಶೂನ್ಯ ಸಂಪಾದನೆ ಮೊದಲಾದ ವಿಶಿಷ್ಟ ಮಾದರಿಯ ವಚನ ಗ್ರಂಥಗಳು ಹೊರಬಂದುವು.

ಹರಿಹರನ ರಗಳೆಯಲ್ಲಿಯ ಗದ್ಯ ಕನ್ನಡ ಗದ್ಯಕ್ಕೆ ಒಂದು ಹಿರಿದಾದ ಕೊಡುಗೆ. ಕಥೆ ದೊಡ್ಡದಾದಾಗ ಹರಿಹರ ಒಂದು ಭಾಗ ರಗಳೆ, ಇನ್ನೊಂದು ಭಾಗ ಗದ್ಯ, ಮತ್ತೆ ರಗಳೆ ಅನಂತರ ಗದ್ಯ ಹೀಗೆ ಸಂದರ್ಭಗಳನ್ನು ಬೆಳೆಸಿದ್ದಾನೆ. ಇದೊಂದು ಅಪೂರ್ವ ಪ್ರಯೋಗ. ಹಳೆಯ ಚಂಪೂಕ್ರಮ ಇಲ್ಲಿ ಇನ್ನೂ ಹಿಗ್ಗಿದೆ. ಪದ್ಯ ಭಾಗದಲ್ಲಿ ಹೇಗೊ ಹಾಗೆ ಗದ್ಯಭಾಗದಲ್ಲೂ ಕಥೆ, ವರ್ಣನೆ ಎಲ್ಲ ನಿರರ್ಗಳವಾಗಿ ಹರಿಯುತ್ತದೆ. ಚಂಪೂವಿನಲ್ಲಿ ಕಥೆಯ ಓಟಕ್ಕೆ ಸಹಾಯಕವಾಗಿದ್ದ ಗದ್ಯಕ್ಕೆ ಇಲ್ಲಿ ಸ್ವತಂತ್ರ ಅಸ್ತಿತ್ವ ದೊರಕಿತು. ಒಂದು ಕಡೆ ವಚನಗಳ ಧೋರಣೆ, ಇನ್ನೊಂದು ಕಡೆ ತಾನೇ ಬಳಸಿ ರೂಢಿಸಿದ ರಗಳೆ ಇವೆರಡರ ಸಂಗಮದಿಂದ ಇವನ ಗದ್ಯ ಹರಿತವಾಯಿತು. ಹೆಚ್ಚು ಜೀವಂತವಾಯಿತು. ಭಾಷೆ ಆಡುಮಾತಿಗೆ ಬಹು ಹತ್ತಿರವಾಯಿತು. ಅಂದರೆ ಇಲ್ಲಿ ಗದ್ಯದ ನಿಜವಾದ ಉದ್ದೇಶ ಸಫಲವಾಯಿತೆನ್ನಬಹುದು.

ಕನ್ನಡ ಗದ್ಯ ಸಾಹಿತ್ಯದ ಇತಿಹಾಸದಲ್ಲಿ ವ್ಯಾಖ್ಯಾನಕಾರರಿಗೆ ಒಂದು ಸ್ಥಾನವಿದೆ. ವೈದ್ಯ, ಜ್ಯೋತಿಷ, ಪಾಕ, ಸಂಗೀತ, ಗಣಿತ, ಸಾಮುದ್ರಿಕ, ಧರ್ಮ, ವ್ಯಾಕರಣ ಮೊದಲಾದ ವಿಷಯಗಳ ಮೇಲೆ ಕನ್ನಡದಲ್ಲಿ ಶಾಸ್ತ್ರೀಯ ಗ್ರಂಥಗಳಿವೆ. ಅವುಗಳಲ್ಲಿ ಕೆಲವಕ್ಕೆ ವಿಸ್ತಾರವಾದ ವ್ಯಾಖ್ಯಾನಗಳು, ಟೀಕೆ, ಟಿಪ್ಪಣಿಗಳು ಬಂದಿವೆ. ಸೂಚ್ಯವಾದುದನ್ನು ವಾಚ್ಯವಾಗಿ ವಿವರಿಸಿ ಹೇಳುವುದೇ ಇವುಗಳ ಮುಖ್ಯ ಗುರಿ. ಹೇಳುವ ಮಾತಿನಲ್ಲಿ, ಬಳಸುವ ಶಬ್ದಗಳಲ್ಲಿ ಕ್ಲಿಷ್ಟತೆ ಇದ್ದರೂ ಇದೊಂದು ಮಾದರಿಯ ಗದ್ಯವಾಗಿ ಬೆಳೆದುಕೊಂಡು ಬಂದಿದೆ. ಅಷ್ಟು ಉತ್ತಮ ಗದ್ಯವಲ್ಲದಿದ್ದರೂ ಇದಕ್ಕೆ ಗದ್ಯ ಸಾಹಿತ್ಯ ವಿವೇಚನೆಯಲ್ಲಿ ಒಂದು ಸ್ಥಾನವಿದೆ.

ಹಸ್ತಿಮಲ್ಲನ ಪೂರ್ವಪುರಾಣಕ್ಕೂ ಕನ್ನಡ ಗದ್ಯ ಸಾಹಿತ್ಯ ಚರಿತ್ರೆಯಲ್ಲಿ ಒಂದು ಸ್ಥಾನವಿದೆ. ಸು.14ನೆಯ ಶತಮಾನದ ಗದ್ಯದ ಒಂದು ಮಾದರಿಯನ್ನು ಇಲ್ಲಿ ಕಾಣಬಹುದಾಗಿದೆ. ಈ ಪುಟ್ಟ ಕೃತಿಯ ಗದ್ಯ ಸುಲಭವೂ ಸರಳವೂ ಆಗಿದೆ. ಚಿಕ್ಕ ಚಿಕ್ಕ ವಾಕ್ಯಗಳೂ ಆಡುಮಾತುಗಳೂ ಇಲ್ಲಿ ದೊರೆಯುತ್ತವೆ. ಸಾಮಾನ್ಯವಾಗಿ ಜೈನ ಪುರಾಣಗಳಲ್ಲಿ ಸಂಸ್ಕೃತ ಪದಗಳ ಬಳಕೆ ಹೆಚ್ಚು. ಆದರೆ ಇಲ್ಲಿ ಅವು ಕಡಿಮೆಯಾಗಿದ್ದು ಬಂದ ಕಡೆ ಚೆನ್ನಾಗಿ ಹೊಂದಿಕೊಂಡು ಬಂದಿರುವುದನ್ನು ಗಮನಿಸಬಹುದು.

14ನೆಯ ಶತಮಾನದಿಂದ 17ನೆಯ ಶತಮಾನದವರೆಗೆ ಕನ್ನಡ ಗದ್ಯ ಸಾಹಿತ್ಯದ ಸ್ರೋತ ಬತ್ತಿದಂತೆ ಕಾಣುತ್ತದೆ. ನಿಜಗುಣ ಶಿವಯೋಗಿ, ಗುಬ್ಬಿಯ ಮಲ್ಲಣ್ಣ, ಮಗ್ಗೆಯ ಮಾಯಿದೇವ ಮೊದಲಾದ ವೀರಶೈವ ಶಾಸ್ತ್ರೀಯ ಗದ್ಯಗ್ರಂಥಗಳನ್ನು ಬಿಟ್ಟರೆ ಗದ್ಯಸಾಹಿತ್ಯವನ್ನು ಬೆಳೆಸಿದ ಬೇರೆ ಕವಿಗಳ ಯಾವ ಕೃತಿಗಳೂ ಈ ಕಾಲದಲ್ಲಿ ಕಾಣುವುದಿಲ್ಲ.

17ನೆಯ ಶತಮಾನದಲ್ಲಿ ಮೈಸೂರು ಅರಸರೂ ಅವರ ಆಶ್ರಯದಲ್ಲಿದ್ದ ಕವಿಗಳೂ ಗದ್ಯಸಾಹಿತ್ಯವನ್ನು ಸಾಕಷ್ಟು ಬೆಳೆಸಿದರು. ಚಿಕ್ಕದೇವರಾಜನು ಚಿಕ್ಕದೇವರಾಜ ಬಿನ್ನಪವನ್ನೂ ಭಾಗವತ, ಶೇಷಧರ್ಮಗಳ ಟೀಕೆಗಳನ್ನೂ ಗದ್ಯದಲ್ಲಿ ಬರೆದಿದ್ದಾನೆ. ಶಾಂತಲಿಂಗ ದೇಶಿಕ, ತಿರುಮಲಾರ್ಯ, ಚಿಕುಪಾಧ್ಯಾಯ (ಸು.1672) ಈ ಕಾಲದ ಉತ್ತಮ ಗದ್ಯಕಾರರು. ಶಾಂತಲಿಂಗ ದೇಶಿಕನ ಕೃತಿಗಿಂತಲೂ ತಿರುಮಲಾರ್ಯನ ಚಿಕ್ಕದೇವರಾಜವಂಶಾವಳಿಯ ಭಾಷೆ ಪ್ರೌಢವಾಗಿಯೂ ಹಳಗನ್ನಡದ ಬಿಗುವಿನಿಂದಲೂ ಕೂಡಿದೆ. ಚಿಕುಪಾಧ್ಯಾಯನೇ ಸುಮಾರು ಏಳು ಗದ್ಯ ಗ್ರಂಥಗಳನ್ನು ಬರೆದಂತೆ ತಿಳಿಯುತ್ತದೆ. ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರದಲ್ಲಿ ಹಳಗನ್ನಡ ನಡುಗನ್ನಡ ಶಬ್ದರೂಪಗಳ ಮಿಶ್ರಣ ಕಂಡುಬರುತ್ತದೆ.

17-18ನೆಯ ಶತಮಾನದಲ್ಲಿ ಬಖೈರು, ಕೈಫಿಯತ್ತು ಎಂಬ ಹೆಸರಿನ ಐತಿಹಾಸಿಕ ಗದ್ಯಕೃತಿಗಳು ಸಿಗುತ್ತವೆ. ಇವುಗಳಲ್ಲಿ ಉರ್ದು, ಪಾರಸೀ ಶಬ್ದಗಳು ಹೇರಳವಾಗಿ ಬಳಕೆಯಾಗಿವೆ. ಬಖೈರುಗಳ ಗದ್ಯಶೈಲಿ ಇತಿಹಾಸವನ್ನು ಚಿತ್ರಿಸುವ ಅಂದವಾದ ಶೈಲಿಯಾಗಿದೆ. ಕನ್ನಡ ಗದ್ಯದ ಬೆಳೆವಣಿಗೆಯ ದೃಷ್ಟಿಯಿಂದ ಈ ಬಖೈರುಗಳು ಉಲ್ಲೇಖನಾರ್ಹವಾಗಿವೆ.

18-19ನೆಯ ಶತಮಾನದಲ್ಲಿ ಕನ್ನಡ ಗದ್ಯಸಾಹಿತ್ಯ ವಿಪುಲವಾಗಿ ಸಮೃದ್ಧವಾಗಿ ಬೆಳೆದಿದೆ. ಈ ಕಾಲದಲ್ಲಿ ಕಾಣಬರುವಷ್ಟು ಗದ್ಯ ಕೃತಿಗಳು ಹಿಂದೆ ಮತ್ತಾವ ಕಾಲದಲ್ಲಿಯೂ ಕಂಡುಬಂದಿಲ್ಲ. ಇದನ್ನು ಗದ್ಯ ಸಾಹಿತ್ಯದ ಸುವರ್ಣಯುಗವೆಂದೇ ಕರೆಯಬಹುದು. ಕಳಲೆ ನಂಜರಾಜ (1740), ದೇವಚಂದ್ರ (1770-1841), ಮುಮ್ಮಡಿ ಕೃಷ್ಣರಾಜ (1794-1868), ಕೆಂಪುನಾರಾಯಣ (ಸು.1823), ಅಳಿಯ ಲಿಂಗರಾಜ (1823-74), ಮುದ್ದಣ (1870-1901) ಮೊದಲಾದ ಗದ್ಯ ಲೇಖಕರು ಈ ಕಾಲದಲ್ಲಿ ಪ್ರಸಿದ್ಧರಾಗಿದ್ದಾರೆ. ಕೆಂಪುನಾರಾಯಣನ ಮುದ್ರಾಮಂಜೂಷ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಭಾಷೆಗಳಿಂದ ಮುಪ್ಪುರಿಗೊಂಡಿದೆ. ಕಥಾ ನಿರೂಪಣೆಗೆ ಉಚಿತವಾದ ಗದ್ಯವನ್ನಿಲ್ಲಿ ಕಾಣಬಹುದು. 20ನೆಯ ಶತಮಾನದ ಗದ್ಯಕ್ಕೆ ಈ ಗ್ರಂಥ ಮುಂಬೆಳಕಾಯಿತು. ಮುಂದೆ ಕ್ರೈಸ್ತ ಮಿಶನರಿಗಳು ಗದ್ಯಕ್ಕೆ ನ್ಯಾಯವಾದ ಸ್ಥಾನವನ್ನು ದೊರಕಿಸಿಕೊಟ್ಟರು. ಬೈಬಲ್ ಗ್ರಂಥ ಸು.1823ರಲ್ಲಿ ಕನ್ನಡ ಗದ್ಯದಲ್ಲಿ ಪ್ರಕಟವಾಯಿತು. 19ನೆಯ ಶತಮಾನದ ಮಧ್ಯದಲ್ಲಿ ಹೊರಟ ಸಭಾಪತ್ರ, ಸತ್ಯ ದೀಪಿಕೆಗಳೆಂಬ ಪತ್ರಿಕೆಗಳು ಪತ್ರಿಕಾ ವ್ಯವಸಾಯಕ್ಕೆ ನೆಲಗಟ್ಟಾದುವು.

ಮುದ್ದಣ ಎರಡು ಗದ್ಯಗ್ರಂಥಗಳನ್ನು ಬರೆದ. ಅದ್ಭುತ ರಾಮಾಯಣ ಸರಳ ಶೈಲಿಯಲ್ಲಿ ಚೊಕ್ಕವಾಗಿರುವ ಹಳಗನ್ನಡ ಗ್ರಂಥ. ಹಳಗನ್ನಡ ಅಭ್ಯಾಸಿಗಳಿಗೆ ಇದು ಹಿತಮಿತವಾದ ಕೃತಿ. ರಾಮಾಶ್ವ ಮೇಧದಲ್ಲಿ ಇವನ ಪ್ರತಿಭೆ ಇನ್ನೂ ಮಿಗಿಲಾಗಿದೆ. ಇಲ್ಲಿಯೇ ಕವಿ ಪದ್ಯಂ ವಧ್ಯಂ ಗದ್ಯಂ ಹೃದ್ಯಂ ಎಂದು ಗದ್ಯದ ಮೇಲ್ಮೆಯನ್ನು ಹೇಳಿದ್ದಾನೆ. ಇದರಲ್ಲಿ ಆರಂಭದ ಮಳೆಗಾಲದ ವರ್ಣನೆ, ಮುದ್ದಣ ಮನೋರಮೆಯರ ಸಂಭಾಷಣಾಕುಶಲತೆ, ಕಥಾನಿರೂಪಣೆಯಲ್ಲಿನ ನವೀನತೆ ಇವೆಲ್ಲವೂ ಇವನ ಗದ್ಯಶೈಲಿಯ ಬೆಡಗನ್ನು ತೋರುತ್ತವೆ. ಹಳಗನ್ನಡ ಭಾಷೆಯನ್ನು ಹೊಸಗನ್ನಡ ಧೋರಣೆಯಲ್ಲಿ ಬಳಸಿರುವುದೇ ಮುದ್ದಣನ ವೈಶಿಷ್ಟ್ಯ. ಇವನ ಶೈಲಿಯಲ್ಲಿ ಆಧುನಿಕ ಕಥೆಕಾದಂಬರಿಗಳ ಸೊಗಸು ವೈವಿಧ್ಯಗಳನ್ನು ಕಾಣಬಹುದಾಗಿದೆ.

ಹೊಸಗನ್ನಡ ಗದ್ಯ ಸಾಹಿತ್ಯ ಹೊಸ ಮಾದರಿಯಲ್ಲಿ ರೂಪುಗೊಂಡಿತು. ನಡುಗನ್ನಡ ಶಬ್ದಗಳು ಮಾಯವಾಗಿ ಹೊಸ ಹೊಸ ಶಬ್ದಗಳು ತಲೆದೋರಿದುವು. ಮುಸಲ್ಮಾನರು, ಫ್ರೆಂಚರು, ಪೋರ್ಚುಗೀಸರು, ಇಂಗ್ಲಿಷರು ಮುಂತಾದವರ ಭಾಷಾ ಸಾಹಿತ್ಯಗಳ ಪ್ರಭಾವ ನೇರವಾಗಿ ಕನ್ನಡದ ಮೇಲೆ ಆದುದರಿಂದ ಕನ್ನಡದಲ್ಲಿ ಅನ್ಯದೇಶ ಶಬ್ದಗಳು ಸೇರಿಕೊಂಡವು. ದೇಶೀಯ ಸಾಹಿತ್ಯದೊಂದಿಗೆ ಇಂಗ್ಲಿಷ್ ಹಾಗೂ ಇತರ ವಿದೇಶೀಯ ಸಾಹಿತ್ಯಗಳ ವ್ಯಾಸಂಗದ ಪರಿಣಾಮವಾಗಿ ಕನ್ನಡದಲ್ಲಿಯೂ ನವಜಾಗೃತಿಯುಂಟಾಯಿತು. ಗದ್ಯ ಸಾಹಿತ್ಯದ ವಿವಿಧ ಪ್ರಕಾರಗಳು ಬೆಳೆದುವು. ಕಾದಂಬರಿ, ಸಣ್ಣಕಥೆ, ಜೀವನಚರಿತ್ರೆ, ನಾಟಕ, ವ್ಯಕ್ತಿಚಿತ್ರ, ಪ್ರಬಂಧ, ಹರಟೆ, ಪ್ರವಾಸಸಾಹಿತ್ಯ, ಪತ್ರಸಾಹಿತ್ಯ, ವೈಜ್ಞಾನಿಕ ಸಾಹಿತ್ಯ, ಮಾನವಿಕ ಸಾಹಿತ್ಯ, ಮಕ್ಕಳ ಸಾಹಿತ್ಯ, ವಿಮರ್ಶೆ ಹೀಗೆ ನಾನಾ ರೂಪದಲ್ಲಿ ಹುಲುಸಾಗಿ ಬೆಳೆಯುತ್ತಿದೆ. ಇವುಗಳಲ್ಲಿ ಕೆಲವು ಮುಖ್ಯ ಪ್ರಕಾರಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸಲಾಗಿದೆ.

ಕಾದಂಬರಿ ಸಾಹಿತ್ಯ ಪ್ರಕಾರ ಕನ್ನಡಕ್ಕೆ ಹೊಸತು. ಇದು ಬಂಗಾಲಿ, ಮರಾಠಿ, ಇಂಗ್ಲಿಷ್ ಇತ್ಯಾದಿ ಭಾಷೆಗಳ ಪ್ರಭಾವದಿಂದ ಕನ್ನಡಕ್ಕೆ ಬಂದುದು. ಚ.ವಾಸುದೆವಯ್ಯನವರ ಆರ್ಯಕೀರ್ತಿ, ಭೀಷ್ಮ ಚರಿತೆಗಳು ಹೊಸಗನ್ನಡದ ಗದ್ಯಶೈಲಿಗೆ ಭದ್ರವಾದ ತಳಹದಿಯನ್ನು ಹಾಕಿದುವು. ಬಿ.ವೆಂಕಟಾಚಾರ್ಯರು ಮತ್ತು ಗಳಗನಾಥರು ಬಂಗಾಲಿ, ಮರಾಠಿ ಭಾಷೆಗಳ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದರು. ಎಂ.ಎಸ್.ಪುಟ್ಟಣ್ಣನವರ ಮಾಡಿದ್ದುಣ್ಣೋ ಮಹಾರಾಯ ಮೊದಲಾದ ಸ್ವತಂತ್ರ ಕಾದಂಬರಿಗಳಲ್ಲಿ ಮೈಸೂರು ಚಾಮರಾಜನಗರಗಳ ಕಡೆಯ ಅಂದಿನ ಕನ್ನಡದ ಪ್ರಾದೇಶಿಕ ಕಸುವನ್ನು ಕಾಣಬಹುದು. ಮುಂದೆ ಕಾದಂಬರಿ ಕ್ಷೇತ್ರ ವೈವಿದ್ಯ ಪೂರ್ಣವಾಗಿ ಬೆಳೆಯಿತು. ಐತಿಹಾಸಿಕ, ಪೌರಾಣಿಕ, ಸಾಮಾಜಿಕ, ರಾಜಕೀಯ, ಪತ್ತೇದಾರಿ ಹೀಗೆ ಐದು ಬಗೆಯಲ್ಲಿ ಅದು ವಿಕಸಿಸಿತು. ಶಿವರಾಮ ಕಾರಂತ, ಅ.ನ.ಕೃ., ಕೃಷ್ಣಮೂರ್ತಿ ಪುರಾಣಿಕ, ತ.ರಾ.ಸು., ಶ್ರೀನಿವಾಸರಾವ್ ಕೊರಟಿ, ತ್ರಿವೇಣಿ, ಬಸವರಾಜ ಕಟ್ಟೀಮನಿ, ವಿ.ಎಂ.ಇನಾಂದಾರ್ ಮೊದಲಾದವರ ಕಾದಂಬರಿಗಳಲ್ಲಿನ ಭಾಷೆ ಗದ್ಯಕ್ಕೆ ಹೊಸತನವನ್ನು ತಂದುಕೊಟ್ಟಿತು. ಭಾಷೆಯ ಪ್ರಾದೇಶಿಕ ವೈಭವಕ್ಕೆ ಕುವೆಂಪು, ಮಿರ್ಜಿ ಅಣ್ಣಾರಾಯ, ರಾವಬಹಾದ್ದೂರ, ಶಿವರಾಮ ಕಾರಂತ, ಶ್ರೀರಂಗ ಇವರ ಕೃತಿಗಳನ್ನು ವೀಕ್ಷಿಸಬಹುದು. ಇವರ ಗದ್ಯದಿಂದ ಅನೇಕಾನೇಕ ಪ್ರಾದೇಶಿಕ ಶಬ್ದಗಳು, ನುಡಿಗಟ್ಟುಗಳು ಭಾಷಾಮರ್ಯಾದೆಗಳು ಕನ್ನಡಕ್ಕೆ ಬಂದು ಸೇರಿವೆ. ಜೀವನವನ್ನು ವರ್ಣಿಸುವಲ್ಲಿ, ಸಂಭಾಷಣೆಗಳನ್ನು ಹೆಣೆಯುವುದರಲ್ಲಿ ಗದ್ಯಕ್ಕಿರುವ ಎಲ್ಲ ಸಾಮರ್ಥ್ಯವನ್ನೂ ಉಪಯೋಗಿಸಿರುವುದನ್ನು ಇಲ್ಲಿ ಕಾಣಬಹುದಾಗಿದೆ. ಮುಂದೆ ನವ್ಯ ಸಾಹಿತ್ಯ ಪ್ರಕಾರ ಬೆಳೆದು ಭಾಷೆಗೆ ಹೊಸ ಸತ್ವವನ್ನೂ ಜೀವಂತಿಕೆಯನ್ನೂ ತುಂಬಿತು. ಪಿ.ಲಂಕೇಶ್, ಯು.ಆರ್.ಅನಂತಮೂರ್ತಿ, ಗಿರಿ, ಶಾಂತಿನಾಥ ದೇಸಾಯಿ, ಪೂರ್ಣಚಂದ್ರ ತೇಜಸ್ವಿ, ಶ್ರೀಕೃಷ್ಣ ಆಲನಹಳ್ಳಿ ಮುಂತಾದ ಶ್ರೇಷ್ಠ ದರ್ಜೆಯ ಗದ್ಯ ಲೇಖಕರು ಕನ್ನಡ ಗದ್ಯದ ಬೆಳವಣಿಗೆಗೆ ಶಕ್ತಿ ನೀಡಿದ್ದಾರೆ.

ಹೊಸಗನ್ನಡ ಗದ್ಯ ಸಾಹಿತ್ಯದಲ್ಲಿ ಕಾದಂಬರಿಯ ಅನಂತರ ಸಣ್ಣ ಕಥೆಗಳದೇ ಅಗ್ರಸ್ಥಾನ. ಒಂದು ದೃಷ್ಟಿಯಲ್ಲಿ ಕಾದಂಬರಿಗಿಂತ ಸಣ್ಣಕಥೆಯ ರಚನೆ ಹೆಚ್ಚು ಕ್ಲಿಷ್ಟವಾದುದು. ಹೀಗಿರುವಲ್ಲಿ ಕನ್ನಡ ಸಣ್ಣಕಥೆಗಳು ತಮ್ಮ ಕ್ಷೇತ್ರದಲ್ಲಿ ಪಡೆದಿರುವ ಸಿದ್ಧಿಯನ್ನು ನೋಡಿದರೆ ಕನ್ನಡ ಗದ್ಯ ಎಷ್ಟರಮಟ್ಟಿಗೆ ವಿಕಸನಗೊಂಡಿದೆಯೆಂಬ ಅಂಶ ಸ್ವಯಂವೇದ್ಯವಾಗುತ್ತದೆ. ಕೆರೂರ ವಾಸುದೇವಾಚಾರ್ಯ, ಪಂಜೆ, ಮಂಗೇಶರಾಯ, ಎಂ.ಎನ್.ಕಾಮತ್, ಶ್ರೀನಿವಾಸ ಇವರು ಕನ್ನಡ ಸಣ್ಣ ಕಥೆಗಳ ಮೊದಲಿಗರು. ನವೋದಯದಲ್ಲಿ ಕುವೆಂಪು, ಚದುರಂಗ, ಅ.ನ.ಕೃ. ಅಶ್ವತ್ಥ, ಎ.ಆರ್.ಕೃ., ಮೊದಲಾದ ಲೇಖಕರೂ ನವ್ಯದಲ್ಲಿ ಯು.ಆರ್.ಅನಂತಮೂರ್ತಿ, ಪೂರ್ಣಚಂದ್ರ ತೇಜಸ್ವಿ, ಶಾಂತಿನಾಥ ದೇಶಾಯಿ, ಪಿ.ಲಂಕೇಶ್, ಟಿ.ಜಿ.ರಾಘವ, ಕಾಮರೂಪಿ, ಯಶವಂತ ಚಿತ್ತಾಲ ಮೊದಲಾದವರು ಉತ್ತಮ ಕಥೆಗಳನ್ನು, ಶ್ರೇಷ್ಠ ದರ್ಜೆಯ ಭಾಷೆಯನ್ನು ಕೊಟ್ಟಿದ್ದಾರೆ.

ಜೀವನಚರಿತ್ರೆಯೂ ಗದ್ಯ ಪ್ರಕಾರಗಳಲ್ಲಿ ಒಂದು. ಎಂ.ಎಸ್.ಪುಟ್ಟಣ್ಣ, ಚ.ವಾಸುದೇವಯ್ಯ, ಡಿ.ವಿ.ಜಿ., ಕುವೆಂಪು, ಆಲೂರ ವೆಂಕಟರಾಯ, ಸಿ.ಕೆ.ವೆಂಕಟರಾಮಯ್ಯ ಮೊದಲಾದವರು ಉತ್ತಮ ದರ್ಜೆಯ ಜೀವನ ಚರಿತ್ರೆಗಳನ್ನು ನೀಡಿದ್ದಾರೆ. ಅದರಲ್ಲಿಯೂ ಕುವೆಂಪು ಅವರ ಗದ್ಯ ವಿಶಿಷ್ಟವಾದದ್ದು, ಪ್ರೌಢವಾದದ್ದು. ದೇಜಗೌ ಅವರ ಭಾಷೆ ಹೆಚ್ಚು ಗ್ರಾಮೀಣವಾದದ್ದು. ಶಿವರಾಮ ಕಾರಂತರದು ಹದವರಿತ ಶೈಲಿ. ಬೆಳೆಯುತ್ತಿರುವ ಆಧುನಿಕ ಜೀವನವನ್ನು ಯುಕ್ತವಾಗಿ ನಿರೂಪಿಸಬಲ್ಲ ಶಕ್ತಿ ಕನ್ನಡ ಗದ್ಯಕ್ಕೆ ಇದೆ ಎನ್ನುವ ವಿಷಯ ಈ ಜೀವನ ಚರಿತ್ರೆಗಳಿಂದ ಸ್ಪಷ್ಟವಾಗುತ್ತದೆ.

ನಾಟಕ ಇನ್ನೊಂದು ಬಗೆಯ ಗದ್ಯಕ್ಕೆ ದಾರಿಮಾಡಿಕೊಟ್ಟಿದೆ. ಆಧುನಿಕ ಕನ್ನಡ ನಾಟಕಗಳನ್ನು ವಿವೇಚಿಸಬೇಕಾದರೆ ಆಳಸಿಂಗರಾಚಾರ್ಯ, ಬಸವಪ್ಪಶಾಸ್ತ್ರಿ, ಟಿ.ಪಿ.ಕೈಲಾಸಂ, ಶ್ರೀರಂಗ, ಕುವೆಂಪು ಮೊದಲಾದವರನ್ನು ಮರೆಯುವಂತಿಲ್ಲ. ಗಿರೀಶ ಕಾರ್ನಾಡ ಕನ್ನಡ ನಾಟಕಗಳಿಗೆ ಒಂದು ಹೊಸ ದೃಷ್ಟಿಕೋನ ಕೊಟ್ಟರು. ನವ್ಯನಾಟಕಕಾರರಲ್ಲಿ ಪಿ.ಲಂಕೇಶ್, ಎಚ್.ಎಂ.ಚನ್ನಯ್ಯ, ಚಂದ್ರಶೇಖರ ಪಾಟೀಲ, ಚದುರಂಗ, ಕೀರ್ತಿನಾಥ ಕುರ್ತಕೋಟಿ, ಚಂದ್ರಕಾಂತ ಕುಸನೂರ, ಚಂದ್ರಶೇಖರ ಕಂಬಾರ ಮೊದಲಾದವರು ಸಮರ್ಥ ಲೇಖಕರು. ಇವರ ಕೈಯಲ್ಲಿ ಕನ್ನಡ ಗದ್ಯ ಬೆಳೆದಿದೆ; ಶ್ರೀಮಂತವಾಗಿದೆ. ಇಂಥ ಬರೆಹಗಾರರಿಂದ ಕನ್ನಡ ಗದ್ಯಸಾಹಿತ್ಯ ಹೊಸಹೊಸ ಆಯಾಮವನ್ನು ಪಡೆಯುತ್ತಿದೆ. ಪೌರಾಣಿಕ, ರುದ್ರ ಪ್ರಹಸನ, ಏಕಾಂಕ ನಾಟಕ ಈ ಮೊದಲಾದ ಪ್ರಕಾರಗಳಲ್ಲಿ ನಾಟಕಕಾರರು ಬಳಸಿರುವ ಗದ್ಯಭಾಷೆ ತನ್ನ ವೈವಿಧ್ಯದಿಂದ ಔಚಿತ್ಯದಿಂದ ಸಂಕೀರ್ಣತೆಯಿಂದ ವ್ಯಾಸಂಗಯೋಗ್ಯವೆನಿಸಿದೆ.

ವಿಮರ್ಶಾತ್ಮಕ ಲೇಖನಗಳು, ಕೃತಿಗಳು, ಹೊಸಗನ್ನಡ ಗದ್ಯವನ್ನು ಬೆಳೆಸುವುದರಲ್ಲಿ ಹೆಚ್ಚಿನ ಕೆಲಸ ನಡೆಸಿವೆ. ಮೊದಮೊದಲು ಈ ಲೇಖನಗಳು ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಪ್ರಬುದ್ಧ ಕರ್ಣಾಟಕ, ಜಯಂತಿ, ಜಯಕರ್ನಾಟಕ, ಜೀವನ, ಶರಣಸಾಹಿತ್ಯ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದುವು. ಈಗ ಅವುಗಳ ಜೊತೆಗೆ ಕರ್ನಾಟಕ ಭಾರತಿ, ವಿಜ್ಞಾನ ಕರ್ಣಾಟಕ, ಮಾನವಿಕ ಕರ್ಣಾಟಕ, ಸಾಧನೆ, ಸಂಕ್ರಮಣ, ಸಾಕ್ಷಿ, ಸಮನ್ವಯ, ಜಾನಪದ ಮೊದಲಾದುವು ಸೇರಿವೆ. ಇವಲ್ಲದೆ ದೈನಂದಿನ ಮತ್ತು ವಾರಪತ್ರಿಕೆಗಳಾದ ಪ್ರಜಾವಾಣಿ, ಉದಯವಾಣಿ, ಕನ್ನಡಪ್ರಭ, ವಿಜಯ ಕರ್ನಾಟಕ, ಸಂಯುಕ್ತ ಕರ್ನಾಟಕ, ಸುಧಾ, ಕರ್ಮವೀರ, ತರಂಗ, ಪ್ರಜಾಮತ, ಜನಪ್ರಗತಿ ಮೊದಲಾದುವು ವರ್ಷಕ್ಕೆ ಒಂದು ಬಾರಿಯೋ ಎರಡು ಬಾರಿಯೋ ಹೊರತರುವ ವಿಶೇಷಾಂಕಗಳಲ್ಲೂ ಪ್ರೌಢಲೇಖನಗಳು ಅಚ್ಚಾಗುತ್ತಿವೆ. ವಿಮರ್ಶಾರಂಗ ವಿಶಾಲವಾಗಿ ಬೆಳೆಯುವುದಕ್ಕೆ ಈ ಪತ್ರಿಕೆಗಳಿಂದ ಆಗಿರುವ ಸಹಾಯ ಅಪಾರ. ಇವಲ್ಲದೆ ವಿಮರ್ಶನ ಗದ್ಯ ಕಾಲಕಾಲಕ್ಕೆ ಪುಸ್ತಕಗಳಾಗಿಯೂ ಹೊರಬಂದಿದೆ. ಪಂಪ, ರನ್ನ, ಕುಮಾರವ್ಯಾಸ, ಮುದ್ದಣ ಮೊದಲಾದವರನ್ನು ಕುರಿತ ಪ್ರಶಸ್ತಿಗಳು ಆಯಾ ಕವಿಯ ಮತ್ತು ಕಾವ್ಯದ ಪರಿಚಯವನ್ನು ಮಾಡಿಕೊಡುವ ವಿಮರ್ಶಾತ್ಮಕ ಕೃತಿಗಳು. ಇಲ್ಲಿಯ ಲೇಖನಗಳೆಲ್ಲ ಶಾಸ್ತ್ರೀಯ ಗದ್ಯ ಶೈಲಿಯಲ್ಲಿವೆ. ಇವೇ ಮುಂದಿನ ವಿಮರ್ಶಕರಿಗೆ ಮಾರ್ಗದರ್ಶನ ನೀಡಿದುವೆನ್ನಬಹುದು. ಅಭಿವಂದನೆ, ಸಂಭಾವನೆ, ಉಡುಗೊರೆ, ಉಪಾಯನ, ಬಾಗಿನ, ಗಂಗೋತ್ರಿ, ದೇಜಗೌ ಐವತ್ತು, ರಸಿಕರಂಗ, ಗಂಗೋತ್ರಿ, ಸಹ್ಯಾದ್ರಿ, ಕಾರಂತ ಪ್ರಪಂಚ, ಸವಿನೆನಪು, ಮಹಾಮಾರ್ಗ ಈ ಮೊದಲಾದ ಅಭಿನಂದನ ಗ್ರಂಥಗಳು ಕನ್ನಡ ವಿಮರ್ಶಾಗದ್ಯದ ಉಜ್ವಲ ಮಾದರಿಗಳನ್ನು ಒದಗಿಸುತ್ತವೆ. ವಿಮರ್ಶಾರಂಗದಲ್ಲಿ ಎಸ್.ವಿ.ರಂಗಣ್ಣ, ದೇಜಗೌ, ಹಾ.ಮಾ.ನಾಯಕ, ಎಲ್.ಬಸವರಾಜು, ಎಂ.ಚಿದಾನಂದಮೂರ್ತಿ, ರಂ.ಶ್ರೀ.ಮುಗಳಿ, ಜಿ.ಎಸ್.ಶಿವರುದ್ರಪ್ಪ, ಸಿ.ಪಿ.ಕೃಷ್ಣಕುಮಾರ್ ಮೊದಲಾದವರು ಸ್ಮರಣೀಯ ಕೆಲಸ ಮಾಡಿದ್ದಾರೆ. ಈ ಮಹನೀಯರಲ್ಲಿ

ಕೆಲವರು ಹಳಗನ್ನಡ ಕಾವ್ಯಗಳನ್ನು ಪರಿಷ್ಕರಿಸಿ ಸಂಪಾದಿಸಿ ಅವುಗಳಿಗೆ ಮುನ್ನುಡಿ, ಪ್ರಸ್ತಾವನೆಗಳನ್ನು ಗದ್ಯದಲ್ಲಿ ಬರೆದು ಗದ್ಯಸಾಹಿತ್ಯವನ್ನು ಪುಷ್ಟಿಗೊಳಿಸಿದ್ದಾರೆ. ಇವರಲ್ಲದೆ ಹೆಚ್ಚಾಗಿ ನವ್ಯ ಸಾಹಿತ್ಯವನ್ನು ಕುರಿತು ವಿಮರ್ಶಿಸಿ ಹೊಸದೃಷ್ಟಿಯನ್ನು ಬೆಳೆಸಿದವರಲ್ಲಿ ಗೋಪಾಲಕೃಷ್ಣ ಅಡಿಗ, ಎಂ.ಜಿ.ಕೃಷ್ಣಮೂರ್ತಿ, ಯು.ಆರ್.ಅನಂತಮೂರ್ತಿ, ಕುರ್ತಕೋಟಿ, ಶಂಕರ ಮೊಕಾಶಿ ಪುಣೇಕರ, ಪಿ.ಲಂಕೇಶ್, ಜಿ.ಎಚ್.ನಾಯಕ, ಎಚ್.ಎಂ.ಚನ್ನಯ್ಯ, ಎನ್.ಎಸ್.ಎಲ್.ಭಟ್ಟ, ಸುಮತೀಂದ್ರ ನಾಡಿಗ, ಡಿ.ಆರ್.ನಾಗರಾಜ್, ಟಿ.ಪಿ.ಅಶೋಕ, ನರಹಳ್ಳಿ ಬಾಲಸುಬ್ರಹ್ಮಣ್ಯ ಮೊದಲಾದವರು ಮುಖ್ಯರು.

ಗದ್ಯದ ಬೆಳವಣಿಗೆಗೆ ವೃತ್ತ ಪತ್ರಿಕೆಗಳು, ಸಾಪ್ತಾಹಿಕ ಪತ್ರಿಕೆಗಳು, ಮಾಸಪತ್ರಿಕೆಗಳು, ತ್ರೈಮಾಸಿಕ ಪತ್ರಿಕೆಗಳು, ಆಯನಪತ್ರಿಕೆಗಳು ನಾನಾಮುಖವಾಗಿ ಸೇವೆ ಸಲ್ಲಿಸುತ್ತಿವೆ. ಗದ್ಯ ವಿಕಸನಕ್ಕೆ ಆಡುಮಾತನ್ನು ಬಿಟ್ಟರೆ ಪತ್ರಿಕೆಗಳೇ ಪ್ರಮುಖ ರಂಗವನ್ನು ಒದಗಿಸಿವೆಯೆಂಬ ಮಾತು ನಿಜ. ಮಾತು, ಅಭಿಪ್ರಾಯ, ವರದಿ, ವರ್ಣನೆ, ವಾದ, ವಿವಾದ, ತರ್ಕ, ರಂಜನೆ ಎಲ್ಲ ಅನುಭವಗಳಿಗೂ ಪತ್ರಿಕೆ ಎಡೆಕೊಡುತ್ತದೆ. ತನ್ಮೂಲಕ ಗದ್ಯ ಮಾದರಿಗಳನ್ನು ಬೆಳೆಸುತ್ತದೆ. ಸದ್ಯಕ್ಕೆ ಒದಗಬಲ್ಲ ಹೊಸ ಹೊಸ ಪದಗಳ ಸೃಷ್ಟಿಯಾಗುವುದೂ ಪತ್ರಿಕೆಗಳಲ್ಲಿಯೇ. ಈ ದೃಷ್ಟಿಯಿಂದ ಪ್ರಜಾವಾಣಿ, ಉದಯವಾಣಿ, ಕನ್ನಡ ಪ್ರಭ, ಸಂಯುಕ್ತ ಕರ್ನಾಟಕ, ಸುಧಾ, ಕರ್ಮವೀರ, ಕಸ್ತೂರಿ, ಮಯೂರ, ತುಷಾರ, ತರಂಗ ಮೊದಲಾದವು ಮಾಡುತ್ತಿರುವ ಕೆಲಸ ಮುಖ್ಯವಾದುದು. ಹೀಗೆ ಪತ್ರಿಕೆ ಜೀವದ್ಭಾಷೆಯ ಪ್ರಯೋಗಶಾಲೆಯಾಗಿದೆ.

ಅನುವಾದಕೃತಿಗಳಿಂದಲೂ ಕನ್ನಡ ಗದ್ಯಭಾಷೆ ಹೆಚ್ಚು ಸಂಪದ್ಭರಿತವಾಗಿದೆ. ಸಂಸ್ಕೃತ, ಇಂಗ್ಲಿಷ್, ರಷ್ಯನ್ ಹಿಂದಿ, ತೆಲುಗು, ತಮಿಳು, ಮಲೆಯಾಳಂ, ಮರಾಠಿ, ಬಂಗಾಲಿ ಇತ್ಯಾದಿ ಭಾಷೆಗಳ ಅನುವಾದದಿಂದ ಕನ್ನಡದ ಗದ್ಯ ಹೊಸ ಸತ್ವವನ್ನು ಪಡೆಯುತ್ತಿದೆ. ವಿವಿಧ ಭಾಷೆಗಳ ವಿಶಿಷ್ಟ ಶಬ್ದಗಳು, ನುಡಿಗಟ್ಟು, ವಾಕ್ಯರಚನೆ ಮುಂತಾದುವನ್ನು ಕನ್ನಡಕ್ಕೆ ಅನುವಾದಿಸುವಲ್ಲಿ ಕನ್ನಡ ಹೇಗೆ ಅದನ್ನು ನಿರ್ವಹಿಸಿದೆ. ಅದರಲ್ಲಿ ಎರವಲು ಎಷ್ಟು, ಎಷ್ಟರಮಟ್ಟಿಗೆ ಅನುವಾದ ಸಫಲವಾಗಿದೆ ಎಂಬ ವಿಷಯಗಳನ್ನು ಪರಿಶೀಲಿಸಿದಲ್ಲಿ ಅನುವಾದದಿಂದ ಭಾಷೆ ಹೇಗೆ ಬೆಳೆಯಬಲ್ಲದೆಂಬ ಅಂಶ ಸ್ಪಷ್ಟವಾಗುತ್ತದೆ. ಸಂಸ್ಕೃತ ಗ್ರಂಥವನ್ನು ಅನುವಾದಿಸುವುದರಲ್ಲಿ ಕೆ.ಕೃಷ್ಣಮೂರ್ತಿಯವರ ಹೆಸರು ಹೊಸಗನ್ನಡ ಸಾಹಿತ್ಯದಲ್ಲಿ ಚಿರಸ್ಥಾಯಿಯಾಗಿ ಉಳಿಯುತ್ತದೆ. ದೇಜಗೌ ಅವರು ಇಂಗ್ಲಿಷ್ ಹಾಗೂ ರಷ್ಯನ್ ಸಾಹಿತ್ಯಾನುವಾದದಿಂದ ಕನ್ನಡದ ಗದ್ಯಸಂಪತ್ತನ್ನು ಬೆಳಗಿಸಿದ್ದಾರೆ. ಇವರ ಗದ್ಯದಲ್ಲಿ ಬಿಗು ಬಿನ್ನಾಣವಿದೆ, ಬನಿ ತನಿ ಇದೆ, ಆಡುಮಾತುಗಳ ಜಾಲವಿದೆ, ಅಸಂಖ್ಯ ಹೊಸ ಶಬ್ದಗಳ ಸೃಷ್ಟಿಯಿದೆ. ಶಾಸ್ತ್ರೀಯ ಅನುವಾದಕ್ಕೆ ಎನ್.ಬಾಲಸುಬ್ರಹ್ಮಣ್ಯಂ ಹೆಸರಾಗಿದ್ದಾರೆ. ಸಿ.ಪಿ.ಕೆ. ಅವರು ಸಂಸ್ಕೃತ, ಇಂಗ್ಲಿಷ್ ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿ ಗದ್ಯ ಸಾಹಿತ್ಯವನ್ನು ಬಲಪಡಿಸಿದ್ದಾರೆ.

ಇನ್ನು ವಿದ್ವಾಂಸರು ನಡೆಸಿದ ಹಿರಿಯ ಸಂಶೋಧನೆಗಳ ಪ್ರಕಟಣೆಗಳನ್ನು ಗಮನಿಸಬಹುದು. ಎ.ಆರ್.ಕೃ, ಅವರ ಕನ್ನಡ ನಾಟಕ, ಬಂಕಿಮಚಂದ್ರ, ಜಿ.ವರದರಾಜರಾವ್ ಅವರ ಕುಮಾರರಾಮನ ಸಾಂಗತ್ಯಗಳು, ಚಿದಾನಂದಮೂರ್ತಿಯವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಜಿ.ಎಸ್.ಶಿವರುದ್ರಪ್ಪನವರ ಸೌಂದರ್ಯ ಸಮೀಕ್ಷೆ, ಪ್ರಭುಶಂಕರರ ಭಾವಗೀತೆ, ಟಿ.ವಿ.ವೆಂಕಟಾಚಲಶಾಸ್ತ್ರೀ ಅವರ ಕನ್ನಡ ಛಂದಸ್ಸು, ಶ್ರೀನಿವಾಸ ಹಾವನೂರರ ಹೊಸಗನ್ನಡದ ಅರುಣೋದಯ ಮೊದಲಾದವು ಈ ಬಗೆಯ ಗದ್ಯಕ್ಕೆ ಉತ್ತಮ ಉದಾಹರಣೆಗಳು.

ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಿಂದ ಪ್ರಕಟವಾಗುತ್ತಿರುವ ಕನ್ನಡ ವಿಶ್ವಕೋಶದ ಸಂಪುಟಗಳು ಗದ್ಯ ಕ್ಷೇತ್ರದಲ್ಲಿ ಹೊಸದೊಂದು ವಿಕ್ರಮ ಸ್ಥಾಪಿಸುತ್ತಿವೆ. ಭಾಷೆಯನ್ನು ವೈಜ್ಞಾನಿಕವಾಗಿ ಬಳಸುವುದು, ಪದಪ್ರಯೋಗಗಳಲ್ಲಿ ಸಾಧ್ಯವಾದಷ್ಟು ಏಕತೆಯನ್ನು ಸಾಧಿಸುವುದು, ಅನುಚಿತವೆನಿಸಬಹುದಾದ ಕೆಲವು ಪ್ರತ್ಯಯಗಳನ್ನು ನಿವಾರಿಸುವುದು, ಭಿನ್ನ ಭಿನ್ನ ಲೇಖಕರ ಬರೆಹಗಳನ್ನು ಉಚಿತ ಸಂಯೋಜನೆಯಿಂದ ಒಂದು ಸಮಾನ ರೂಪಕ್ಕೆ ತರುವುದು ಈ ಮೊದಲಾದ ಅಂಶಗಳಿಂದಾಗಿ ಇಲ್ಲಿನ ಗದ್ಯ ಪರಿಶೀಲನಯೋಗ್ಯವಾಗಿದೆ. ವಿವಿಧ ಜ್ಞಾನಕ್ಷೇತ್ರಗಳಲ್ಲಿನ ಅದರಲ್ಲೂ ವಿಜ್ಞಾನ ವಿಭಾಗಗಳಲ್ಲಿನ ಸೂಕ್ಷ್ಮವೂ ಸಂಕೀರ್ಣವೂ ಆದ ಅಂಶಗಳನ್ನು ಶಾಸ್ತ್ರೀಯ ಸ್ಪಷ್ಟತೆಯಿಂದ ಕನ್ನಡ ಗದ್ಯ ರೂಪಿಸಬಲ್ಲುದೆಂಬುದಕ್ಕೆ ಈ ಕೋಶಗಳಲ್ಲಿ ನಿದರ್ಶನಗಳಿವೆ. ಇದರ ಜೊತೆಗೆ ವಿಜ್ಞಾನ ವಿಷಯಗಳನ್ನು ಕುರಿತು ಆರ್.ಎಲ್.ನರಸಿಂಹಯ್ಯ, ಶಿವರಾಮ ಕಾರಂತ, ಜೆ.ಆರ್.ಲಕ್ಷ್ಮಣರಾವ್, ಡಿ.ಎಸ್.ಶಿವಪ್ಪ, ಜಿ.ಟಿ.ನಾರಾಯಣರಾವ್ ಮೊದಲಾದವರು ರಚಿಸಿರುವ ಗ್ರಂಥಗಳನ್ನೂ ಕನ್ನಡ ವಿಜ್ಞಾನ ಸಾಹಿತ್ಯ ನಿರ್ಮಾಣ ಗ್ರಂಥಗಳನ್ನೂ ಪರಿಶೀಲಿಸಬಹುದು. ಇತ್ತೀಚೆಗೆ ಹೆಚ್ಚು ವಿಶಾಲವೂ ವೈಜ್ಞಾನಿಕವೂ ಆಗಿ ಬೆಳೆಯುತ್ತಿರುವ ವಿಷಯಗಳಲ್ಲಿ ಜಾನಪದವೂ ಒಂದು. ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಕಥೆ, ಒಗಟು, ಗಾದೆ, ಗೀತೆ ಪ್ರಮುಖವಾದವು. ನೂರಾರು ಜನಪದ ಕಥೆಗಳೂ ಗಾದೆ ಗೀತೆ ಒಗಟುಗಳೂ ಸಂಪಾದನೆ ಹೊಂದಿ ಪ್ರಕಟವಾಗಿವೆ. ಹಲವಾರು ವಿದ್ವಾಂಸರು ಈ ಕ್ಷೇತ್ರದಲ್ಲಿ ಸಾಕಷ್ಟು ಕೆಲಸ ಮಾಡಿ ಹೆಸರು ಗಳಿಸಿದ್ದಾರೆ. ಜಾನಪದದ ಬಗ್ಗೆ ಜನಪದ ಸಾಹಿತ್ಯದ ಬಗ್ಗೆ ಅನೇಕ ಲೇಖನಗಳೂ ವಿಮರ್ಶಾಕೃತಿಗಳೂ ಹೊರಬಂದಿವೆ. ಜನಪದ ಸಾಹಿತ್ಯದಲ್ಲಿ ಕಥೆ, ಒಗಟು, ಗಾದೆ ಇವುಗಳಲ್ಲಿ ಬಳಕೆಯಾಗಿರುವ ಗದ್ಯ ಆಡುಭಾಷೆಯ ಸೊಗಡಿನಿಂದ ಕೂಡಿದ್ದು ಜೀವಂತವಾಗಿದೆ. ಈ ಭಾಷೆ ಕನ್ನಡದ ನೈಜ ಜಾಯಮಾನದ ಸಂಪತ್ತಿನಿಂದ ಕೂಡಿದೆ.

ಇಂದು ಸೃಜನಶೀಲ ಗದ್ಯ ಒಂದು ಕಡೆ, ಶಾಸ್ತ್ರ ಗದ್ಯ ಇನ್ನೊಂದು ಕಡೆ ವೈವಿಧ್ಯಪೂರ್ಣವಾಗಿ ಬೆಳೆಯುತ್ತಿದೆ. ಪದ್ಯಕ್ಕಿಂತ ಗದ್ಯಕ್ಕೆ ಹೆಚ್ಚಿನ ವ್ಯಾವಹಾರಿಕ ಪ್ರಾಮುಖ್ಯವಿದೆ. ಆಧುನಿಕ ಯುಗದಲ್ಲಂತೂ ಗದ್ಯಕ್ಕೆ ಹೆಚ್ಚು ಪ್ರಾಮುಖ್ಯತೆ ಸಂದಿದೆ. ಈಚೆಗೆ ವಾಣಿಜ್ಯ ವ್ಯವಹಾರಗಳಲ್ಲಿ ಕನ್ನಡದ ಬಳಕೆ ಹೆಚ್ಚಿದೆ. ಕನ್ನಡ ಹಂತಹಂತವಾಗಿ ಆಡಳಿತ ಭಾಷೆಯಾಗಿ ರೂಢಿಯಾಗುತ್ತಿದೆ. ಪದವಿ ಮಟ್ಟದ ಶಿಕ್ಷಣ ಕನ್ನಡ ಮಾಧ್ಯಮದಿಂದ ಯಶಸ್ವಿಯಾಗಿ ನೆರವೇರುತ್ತಿದೆ. ಅದಕ್ಕನುಕೂಲವಾಗಿ ಪಠ್ಯಪುಸ್ತಕಗಳು ಸೃಷ್ಟಿಯಾಗುತ್ತಿವೆ. ಕನ್ನಡ ಗದ್ಯ ಸುಪುಷ್ಟವಾಗಿ ಬೆಳೆದು ಶಾಸ್ತ್ರಾಭಿವ್ಯಕ್ತಿಗೂ ಭಾವಾಭಿವ್ಯಕ್ತಿಗೂ ಸಮರ್ಥವಾದುದಾಗಿದೆ. ಕನ್ನಡ ಮಾಧ್ಯಮದಿಂದ ಯಾವ ವಿಷಯವನ್ನಾದರೂ ಹೇಳಲು ಕಲಿಯಲು ಬರುತ್ತದೆ ಎಂಬ ಅಂಶ ಮೇಲಿನ ಪರಿಶೀಲನೆಯಿಂದ ಸಹಜವಾಗಿ ಸ್ಪಷ್ಟಗೊಳ್ಳುತ್ತಿದೆ. *

1970ರ ದಶಕ ಕನ್ನಡ ಗದ್ಯಸಾಹಿತ್ಯಕ್ಷೇತ್ರದಲ್ಲಿ ಬಹಳ ಪ್ರಮುಖವಾದದ್ದು ನವೋದಯ ಕಾಲದ ಸಾಹಿತ್ಯ, ಪ್ರಗತಿಶೀಲ ಕಾಲದ ಸಾಹಿತ್ಯದ ಹಂತಗಳನ್ನು ದಾಟಿ ನವ್ಯಪಂಥದ ಕಾಲದ ಸಾಹಿತ್ಯ ಶಿಖರಾವಸ್ಥೆಯನ್ನು ತಲಪಿದ ಕಾಲವದು. ಕಾವ್ಯದ ಕ್ಷೇತ್ರದಲ್ಲಿ ನವ್ಯಪಂಥ ಒಂದು ವಿನೂತನ ಕಾವ್ಯಮಾದರಿಯನ್ನು ರೂಢಿಸಿತು. ಪದ್ಯಗಂಧಿ ಗದ್ಯ ಹೆಚ್ಚು ಪ್ರಬಲವಾಯಿತು. ಕಾವ್ಯ ತನ್ನ ಗೇಯತೆಯನ್ನು ಕಳೆದುಕೊಂಡು ವಾಸ್ತವಕ್ಕೆ ಹೆಚ್ಚು ಹತ್ತಿರವಾಯ್ತು. ಅನೇಕ ನವ್ಯ ಲೇಖಕರು ಕನ್ನಡ ಗದ್ಯವನ್ನು ಅತ್ಯಂತ ಸೃಜನಶೀಲವಾಗಿ ಬೆಳೆಸಿದರು. ಗದ್ಯವೂ ಕಾವ್ಯದಷ್ಟೇ, ಅದಕ್ಕೆ ಒಂದು ಕೈ ಮೇಲಾಗಿ ಸಾಹಿತ್ಯವನ್ನು ತುಂಬಿಕೊಂಡಿತು. ವಿಮರ್ಶೆಯ ಕ್ಷೇತ್ರ, ಅದರ ಪರಿಮಿತಿಗಳ ನಡುವೆಯೂ ಅತ್ಯಂತ ಶ್ರೀಮಂತವಾದದ್ದು ನವ್ಯ ಸಾಹಿತ್ಯ ಸಂದರ್ಭದಲ್ಲಿ. ಗೋಪಾಲಕೃಷ್ಣ ಅಡಿಗ, ಲಂಕೇಶ್, ಅನಂತಮೂರ್ತಿ, ಎಂ.ಜಿ.ಕೃಷ್ಣಮೂರ್ತಿ, ಮೊದಲಾದವರು ಕನ್ನಡ ಗದ್ಯಸಾಹಿತ್ಯ ಕ್ಷೇತ್ರದ ಕ್ಷಿತಿಜವನ್ನು ತಮ್ಮ ಬರಹಗಳಿಂದ ವಿಸ್ತರಿಸಿದರು. ಈ ವಿಸ್ತರಣೆಯಲ್ಲಿ ಸಾಕ್ಷಿ, ಸಂಕ್ರಮಣ ಮೊದಲಾದ ಸಾಹಿತ್ಯ ಪತ್ರಿಕೆಗಳ ಕೊಡುಗೆಯನ್ನು ನಾವು ಮರೆಯುವಂತಿಲ್ಲ. ಅನಂತರ ಬಂಡಾಯ, ದಲಿತ ಸಾಹಿತ್ಯದ ಸಂದರ್ಭದಲ್ಲಿ ಗದ್ಯ ನ ಭೂತೋ ನ ಭವಿಷ್ಯತಿ ಎಂಬಂತೆ ಸಹಸ್ರ ಮುಖಿಯಾಯ್ತು. ಕೆಳವರ್ಗದಿಂದ ಬಂದ ಲೇಖಕರ ತಾಜಾ ಅನುಭವಗಳ ಅಭಿವ್ಯಕ್ತಿ ಆಯಾ ಪ್ರಾದೇಶಿಕ ಭಾಷೆಯ ಎಲ್ಲ ಸತ್ವದೊಡನೆ ವಿಜೃಂಭಿಸಿತು. ಕನ್ನಡ ಗದ್ಯಕ್ಕೆ ಹೊಸ ರಕ್ತದಾನವಾಯಿತು.

ತೇಜಸ್ವಿ, ಲಂಕೇಶ್, ಬೆಸಗರಹಳ್ಳಿ ರಾಮಣ್ಣ, ಕುಂ.ವೀರಭದ್ರಪ್ಪ, ವೀರಭದ್ರ, ಗಿರೀಶ್ ಕಾರ್ನಾಡ್, ಬರಗೂರು ರಾಮಚಂದ್ರಪ್ಪ, ಚಂದ್ರಶೇಖರ ಪಾಟೀಲ, ಸಿದ್ದಲಿಂಗಪಟ್ಟಣಶೆಟ್ಟಿ, ಗಿರಡ್ಡಿ ಗೋವಿಂದರಾಜ, ಮಾಧವ ಕುಲಕರ್ಣಿ, ಚೆನ್ನಣ್ಣ ವಾಲೀಕಾರ ಮುಂತಾದವರು ಕನ್ನಡ ಗದ್ಯಕ್ಕೆ ಹೊಸ ಆಯಾಮವನ್ನು ನೀಡಿದರು. ಕಾರ್ನಾಡ್, ಕಂಬಾರ, ಲಂಕೇಶ್ ಮುಂತಾದವರು ನಾಟಕ ಕ್ಷೇತ್ರದ ಗದ್ಯದಲ್ಲಿ ಉತ್ತಮ ಸಾಧನೆ ಮಾಡಿದರು.

ಬಂಡಾಯ ಸಾಹಿತ್ಯದಲ್ಲಿ ಮುಖ್ಯವಾಗಿ ಮೂರು ಬಗೆಯ ಸಂವೇದನೆಗಳನ್ನು ನೋಡಬಹುದು - ದಲಿತ ಸಂವೇದನೆ, ಮಹಿಳಾ ಸಂವೇದನೆ

ಮತ್ತು ಮುಸ್ಲಿಂ ಸಂವೇದನೆ. ಸಣ್ಣಕಥೆಗಳ ಕ್ಷೇತ್ರದಲ್ಲಿ ಬರೆವಣಿಗೆಯ ಹೊಸತನ ಕಾಣಿಸಿಕೊಳ್ಳತೊಡಗಿತು. ಕುಂ.ವೀರಭದ್ರಪ್ಪನವರ ಇನ್ನಾದರೂ ಸಾಯಬೇಕು, ಬೆಸಗರಹಳ್ಳಿ ರಾಮಣ್ಣನವರ ಕನ್ನಂಬಾಡಿ, ಬರಗೂರು ರಾಮಚಂದ್ರಪ್ಪನವರ ಕಪ್ಪುನೆಲದ ಕೆಂಪುಕಾಲು, ಫಕೀರ್ ಮಹಮ್ಮದ್ ಕಟ್ಪಾಡಿಯವರ ನೋಂಬು, ಬಾನು ಮುಷ್ತಾಕ್ ಅವರ ಹೆಜ್ಜೆ ಮೂಡದ ಹಾದಿ, ವೀರಭದ್ರ ಅವರ ಕನ್ನಡಿ ನೋಡಿದ ನಾಯಿ, ಚದುರಂಗರ ಮೃಗಯಾ, ವೀಣಾ ಶಾಂತೇಶ್ವರರ ಬಿಡುಗಡೆ, ಕೊಡ್ಲೆಕೆರೆಯವರ ಯಕ್ಷಸೃಷ್ಟಿ, ತೇಜಸ್ವಿಯವರ ಕಿರಗೂರಿನ ಗಯ್ಯಾಳಿಗಳು, ಮೊಗಳ್ಳಿ ಗಣೇಶ್ ಅವರ ಬುಗುರಿ ಮುಂತಾದ ಕೃತಿಗಳಲ್ಲಿ ಗ್ರಾಮೀಣ ಲಕ್ಷಣವನ್ನುಳ್ಳ ಭಾಷೆಯನ್ನೂ ಗದ್ಯದ ವಿಕಾಸವನ್ನೂ ಕಾಣುತ್ತೇವೆ. ನಾ.ಡಿಸೋಜರವರ ಸಣ್ಣಕಥೆಗಳ ಭಾಷೆಯ ಸ್ವಾರಸ್ಯದಿಂದಾಗಿ ಓದುಗರು ಕ್ರೈಸ್ತ ಸಮಾಜ, ಸಮುದಾಯದ ನಡುವೆಯೇ ಇರುವಂತೆ ತೋರುತ್ತದೆ. ಕೆಳವರ್ಗದವರ ಬದುಕಿನ ಹೃದಯಸ್ಪರ್ಶಿ ಚಿತ್ರಣವನ್ನು ಅನೇಕ ಸಣ್ಣಕತೆಗಾರರ ಬರೆಹಗಳಲ್ಲಿ ಕಾಣುತ್ತೇವೆ. ದೇವನೂರು ಮಹಾದೇವ, ಮೊಗಳ್ಳಿ ಗಣೇಶ್, ಕುಂ.ವೀರಭದ್ರಪ್ಪ, ಅಮರೇಶ ನುಗುಡೋಣಿ, ಎಂ.ಎಸ್.ವೇದಾ ಮುಂತಾದವರ ಕಥೆಗಳನ್ನು ಭಾಷೆಯ ಸ್ವಾರಸ್ಯಕ್ಕಾಗಿಯೂ ಮತ್ತೆ ಮತ್ತೆ ಓದಬೇಕೆನಿಸುವುದುಂಟು.

ಇದೇ ಸಂದರ್ಭದಲ್ಲಿ ಬಂದ ಕಾದಂಬರಿಗಳೂ ಭಾಷೆಯ ಗತಿಸ್ಥಿತಿಯನ್ನು ವಿಸ್ತೃತಗೊಳಿಸಿದವು. ದೇವನೂರರ ಕುಸುಮಬಾಲೆ ಕಾದಂಬರಿಯ ಗದ್ಯ, ಒಡಲಾಳದ ಗದ್ಯ ಒಂದು ಸಮಾಜದ ಸಮುದಾಯವೊಂದರ ಆಡುಭಾಷೆಯ ಎಲ್ಲ ಕಸುವನ್ನೂ ಬೆರಗನ್ನೂ ಒಳಗೊಂಡಿರುವುದು ನಮ್ಮ ಗಮನ ಸೆಳೆಯುತ್ತದೆ. ಈ ಕೃತಿಗಳನ್ನು ಓದಲು, ಅರ್ಥೈಸಲು ಒಂದು ವಿಶಿಷ್ಟ ಬಗೆಯ ಮನೋಭಾವ, ಗ್ರಾಮೀಣ ಬದುಕಿನ ಅರಿವು ಅತ್ಯಂತ ಅಗತ್ಯವಾಗಿಬಿಡುತ್ತದೆ. ಕನ್ನಡ ಗದ್ಯಲೋಕ ಅದುವರೆಗೆ ಈ ಬಗೆಯ ಬೆರಗಿನ ಭಾಷೆಯನ್ನು ಕಂಡಿರಲಿಲ್ಲ.

ಕನ್ನಡದಲ್ಲಿ ನಾಟಕಗಳು ಕಡಿಮೆ ಎಂಬ ಭಾವನೆ ಇದೆ. ಶ್ರೀರಂಗರ ಅನಂತರ ಗಿರೀಶ್ ಕಾರ್ನಾಡ್, ಚಂದ್ರಶೇಖರ ಕಂಬಾರರು ನಾಟಕದ ಗದ್ಯವನ್ನು ಬೆಳೆಸಿದರು. ಕಂಬಾರರು ಉತ್ತರ ಕರ್ನಾಟಕದ ಭಾಷೆಯನ್ನು ಚೆನ್ನಾಗಿ ಬಳಸಿಕೊಂಡಿದ್ದಾರೆ. ಕಾರ್ನಾಡ್‌ರ ನಾಟಕಗಳು ಸೊಗಸಾದ ಗದ್ಯವನ್ನು ನಿರ್ಮಿಸಿಕೊಟ್ಟಿವೆ. ತುಘಲಕ್, ಯಯಾತಿ, ಹಯವದನ, ಅಗ್ನಿ ಮತ್ತು ಮಳೆ ಮುಂತಾದುವುಗಳ ಗದ್ಯವನ್ನು ನೋಡಬಹುದು. ಎಚ್.ಎಸ್.ಶಿವಪ್ರಕಾಶ್ ಅವರ ಸುಲ್ತಾನ್ ಟಿಪ್ಪು, ಮಹಾಚೈತ್ರ, ಟಿ.ಎನ್.ಸೀತಾರಾಮ್ ಅವರ ಆಸ್ಫೋಟ, ನಮ್ಮೊಳಗೊಬ್ಬ ನಾಜೂಕಯ್ಯ ಮುಂತಾದುವನ್ನೂ ಭಾಷೆಯದೃಷ್ಟಿಯಿಂದ ಪರಿಶೀಲಿಸಬೇಕು.

ಕನ್ನಡದಲ್ಲಿ ನವ್ಯಪಂಥದ ಕಾಲದಲ್ಲಿ ಕುರ್ತುಕೋಟಿ, ಆಮೂರ, ಗಿರಡ್ಡಿ, ಲಂಕೇಶ್, ಚಂದ್ರಶೇಖರ ಪಾಟೀಲ್, ಮಾಧವ ಕುಲಕರ್ಣಿ, ಎಚ್.ಎಂ.ಚನ್ನಯ್ಯ ಮುಂತಾದವರು ವಿಮರ್ಶೆಯ ಗದ್ಯವನ್ನು ಕನ್ನಡ ಜಾಯಮಾನಕ್ಕೆ ಒಗ್ಗುವಂತೆ ಬಳಸತೊಡಗಿದರು.

ದಲಿತ ಸಂವೇದನೆ ಸ್ಪಷ್ಟವಾಗಿ ಕನ್ನಡ ನೆಲದಲ್ಲಿ ಹಬ್ಬಿದ ಅನಂತರ ಕನ್ನಡ ಗದ್ಯಕ್ಕೆ ಹೊಸ ಆಯಾಮ ಲಭಿಸಿತು. ಅದುವರೆಗೆ ಶಿಷ್ಟರಿಗೆ ಅಗೋಚರವಾಗಿದ್ದ ಪರಿಶಿಷ್ಟರ ಗದ್ಯದ ಗತ್ತು ತಿಳಿದುಬಂದಿತು. ದೇವನೂರು ಮಹಾದೇವರ ಅನಂತರ ಮುಳ್ಳೂರು ನಾಗರಾಜ, ಮ.ನ.ಜ., ಮೊಗಳ್ಳಿ ಗಣೇಶ್, ಅರವಿಂದ ಮಾಲಗತ್ತಿ ಮೊದಲಾದವರ ಗದ್ಯ ದಲಿತ ಸಂವೇದನೆಯನ್ನು ಪ್ರಕಟಿಸತೊಡಗಿತು. ಮಹಿಳಾ ಸಂವೇದನೆ ಕಳೆದ ಕಾಲು ಶತಮಾನದಲ್ಲಿ ಬೆಳೆದಂತೆ ಹಿಂದೆಂದೂ ಬೆಳೆದಿರಲಿಲ್ಲ. ಹಿಂದೆ ಮಹಿಳಾ ಕಾದಂಬರಿಕಾರರು ಇದ್ದರೇ ವಿನಾ ಮಹಿಳಾ ಸಂವೇದನೆಯನ್ನು ಪ್ರತಿಪಾದಿಸುವ ಧೈರ್ಯವನ್ನು ತೋರುವವರು ತುಂಬಾ ಕಡಿಮೆ ಇದ್ದರು. ಮಹಿಳೆಯರಲ್ಲಿ ದಲಿತ ದಲಿತೇತರ ಎಂಬ ವ್ಯತ್ಯಾಸವೇನೂ ಇಲ್ಲ. ಏಕೆಂದರೆ ಇಡೀ ಸ್ತ್ರೀವರ್ಗವೇ ವಿಮೋಚನೆಯನ್ನು ಬಯಸುವ ಸ್ಥಿತಿಯಲ್ಲಿತ್ತು. ಉಷಾನವರತ್ನರಾಂ, ಸಿ.ಎನ್.ಮುಕ್ತಾ, ಈಚನೂರು ಸಹೋದರಿಯರು, ಸಾರಾ ಅಬೂಬಕರ್, ಬಾನು ಮುಷ್ತಾಕ್, ಗೀತಾ ನಾಗಭೂಷಣ, ವಿಜಯಾ, ಫಿಲೋಮಿನಾ, ಸಂಧ್ಯಾರೆಡ್ಡಿ, ಸುನಂದಾ ಬೆಳಗಾಂವಕರ, ವಿಜಯಾ ದಬ್ಬೆ, ಸುಮಿತ್ರಾಬಾಯಿ, ಪ್ರತಿಭಾ ನಂದಕುಮಾರ್, ನಾಗಚಂದ್ರ ಮೊದಲಾದ ಅನೇಕ ಲೇಖಕಿಯರು ಕೃತಿರಚನೆ ಮಾಡಿದ್ದಾರೆ. ಆದರೆ ಭಾಷೆಯ ವೈಶಿಷ್ಟ್ಯವನ್ನು ತೋರಿಸಿದವರಲ್ಲಿ ಸುನಂದಾ ಬೆಳಗಾಂವಕರ, ವೈದೇಹಿ ಮುಂತಾದವರು ಪ್ರಮುಖರು. ಮುಸ್ಲಿಂ ಸಂವೇದನೆ ತುಂಬ ತಡವಾಗಿ ಕನ್ನಡದಲ್ಲಿ ಕಾಣಿಸಿಕೊಂಡಿತು. ರಮಜಾನದರ್ಗಾ, ಅದೀಬ್‌ಅಕ್ತರ್, ಅಬ್ದುಲ್‌ರಷೀದ್, ಬೊಳುವಾರು, ಕಟ್ಪಾಡಿ, ರಹಮತ್ ತರೀಕೆರೆ ಮುಂತಾದವರು ಕನ್ನಡವನ್ನು ಮಾತೃಭಾಷೆಯೆಂಬಂತೆ ಬಳಸಿದ್ದಾರೆ. ಮುಚ್ಚಿದ ಸಮಾಜವೆನ್ನಿಸಿಕೊಂಡಿರುವ ಮುಸ್ಲಿಂ ಸಮಾಜದ ಒಳ ಆಯಾಮಗಳು ಇನ್ನೂ ಹೆಚ್ಚಾಗಿ ಬೆಳಕಿಗೆ ಬರುವಂತಾದರೆ ಕನ್ನಡ ಭಾಷೆಗೆ ಹೊಸ ಮಗ್ಗಲು ಪ್ರಾಪ್ತವಾಗುತ್ತದೆ.

ಕನ್ನಡ ನಿಯತಕಾಲಿಕೆಗಳಲ್ಲಿ ಅಂಕಣ ಸ್ಥಿರಶೀರ್ಷಿಕೆ ಪ್ರಾರಂಭವಾದ ಬಳಿಕ ಕನ್ನಡ ಗದ್ಯಕ್ಕೆ ಇನ್ನೊಂದು ಬಣ್ಣದ ಎಳೆ ಸೇರಿಕೊಂಡಿತು. ಕು.ಶಿ.ಹರಿದಾಸಭಟ್ಟ, ನಿರಂಜನ, ಹಾ.ಮಾ.ನಾಯಕ, ಎಚ್ಚೆಸ್ಕೆ ಮುಂತಾದ ಹಿರಿಯರು ಬರೆದಿರುವ ಅಂಕಣ ಗದ್ಯ ಕನ್ನಡಕ್ಕೆ ಇನ್ನೊಂದು ಗರಿಯನ್ನು ಮೂಡಿಸಿತು. ಎಚ್ಚೆಸ್ಕೆಯವರ ವ್ಯಕ್ತಿಚಿತ್ರ ವಿಶಿಷ್ಟ ಸ್ವರೂಪದ ಗದ್ಯವಾಗಿದೆ. ಉದಾಹರಣೆಗೆ 'ಬಕ್ಕತಲೆ, ಚೂಪಾದ ಮೂಗು, ಭೇದಿಸಿ ನೋಡುವ ಕಣ್ಣು, ಕಿವಿಯೊಳಗಿಂದ ಬೆಳೆದ ಪೊದೆಗೂದಲು, ಕೈಯಲ್ಲೊಂದು ಕೊಡೆ, ಪುಟಪುಟನೆ ನಡೆದು ಬರುತ್ತಿದ್ದ ಪುಟ್ಟ ಆಕೃತಿ'. ಹೀಗೆ ಭಾಷೆಯನ್ನು ಹೇಗೆಂದರೆ ಹಾಗೆ ನಿರಾಯಾಸವಾಗಿ ಬಳಸಿಕೊಳ್ಳುವ ಶಕ್ತಿ ಎಚ್ಚೆಸ್ಕೆಯವರಿಗಿರುವುದನ್ನು ಕಾಣುತ್ತೇವೆ.

ಸಾಹಿತ್ಯಕ ಬರೆಹಗಳಲ್ಲಿಯೂ ಗದ್ಯದ ಎಲ್ಲ ಸಾಧ್ಯತೆಗಳನ್ನೂ ದುಡಿಸಿಕೊಂಡ ಲೇಖಕರು ಕನ್ನಡದಲ್ಲಿ ಅನೇಕರಿದ್ದಾರೆ. ದೇಜಗೌ, ಎ.ಎನ್.ಮೂರ್ತಿರಾವ್, ಹಾ.ಮಾ.ನಾಯಕ, ಜಿ.ಎಸ್.ಶಿವರುದ್ರಪ್ಪ, ಗೋಪಾಲಕೃಷ್ಣ ಅಡಿಗ, ಎಂ.ಜಿ.ಕೃಷ್ಣಮೂರ್ತಿ, ಸುಮತೀಂದ್ರ ನಾಡಿಗ, ಲಂಕೇಶ್, ತೇಜಸ್ವಿ, ಎಂ.ಚಿದಾನಂದಮೂರ್ತಿ, ಎಚ್ಚೆಸ್ಕೆ ಮೊದಲಾದವರು ಕನ್ನಡ ಗದ್ಯ ಬರೆವಣಿಗೆಯನ್ನು ವಿಸ್ತೃತಗೊಳಿಸಿದರು. ಡಾಕ್ಟೋರೇಟ್ ಪದವಿಗಳಿಗೆ ಬರೆದ ನಿಬಂಧಗಳಿಂದಲೂ ಕನ್ನಡ ಗದ್ಯಕ್ಕೆ ಉತ್ತಮ ಕೊಡುಗೆ ಲಭ್ಯವಾಗಿದೆ. ಸಂಶೋಧನ ಗ್ರಂಥಗಳಲ್ಲಿಯೂ ಕೇವಲ ಶಾಸ್ತ್ರೀಯ ಪರಿಭಾಷೆಯನ್ನು ಮೀರಿದ ಗುಣಗಳನ್ನು ನಾವು ಕಾಣಬಹುದು. ಹಾಸ್ಯ ಬರೆಹಗಳು ಕನ್ನಡ ಗದ್ಯಕ್ಕೆ ಮೊನಚು ತಂದಿರುವುದು ಸ್ವಯಂವೇದ್ಯ ವಿಚಾರವೇ ಸರಿ. ರಾ.ಶಿ., ಪಾ.ವೆಂ., ಬೀಚಿ, ಅ.ರಾ.ಮಿತ್ರ, ಅ.ರಾ.ಸೇ., ಎಚ್.ಎಲ್.ಕೇಶವಮೂರ್ತಿ, ಮನೋಹರ ಚಂದ್ರನ್, ಭುವನೇಶ್ವರಿ ಹೆಗಡೆ, ಬಿ.ಚಂದ್ರೇಗೌಡ ಮುಂತಾದವರು ಗದ್ಯವನ್ನು ಬಳಸಿ ಬೆಳೆಸಿದ್ದಾರೆ. ವೈಎನ್ಕೆಯವರ 'ವಂಡರ್ ಕಣ್ಣು' ಅಂಕಣ ಒಂದು ವಿಶಿಷ್ಟ ಬಗೆಯ ಬರೆವಣಿಗೆ. ಅದು ವಿದ್ವತ್ಪೂರ್ಣವೂ ಹೌದು ಅತ್ಯಂತ ಸರಸವೂ ಸರಳವೂ ಹೌದು. ಇಂಥ ಸಮ್ಮಿಳನ ಬಹಳ ಅಪರೂಪ ಎನ್ನಬಹುದು. ಪುಂಡಲೀಕ ಶೇಟ್ ಬರೆಯುತ್ತಿದ್ದ ಹುಬ್ಬಳ್ಳಿಯಾಂವ ಶೀರ್ಷಿಕೆಯ ಹಾಸ್ಯ ಬರೆಹದ ಗದ್ಯ ಬಹಳ ಸೊಗಸಾದುದು. ಬಯಲು ಸೀಮೆಯ ಕಟ್ಟೆಪುರಾಣ ಶೀರ್ಷಿಕೆಯಲ್ಲಿ ಬಂದ ಬಿ.ಚಂದ್ರೇಗೌಡರ ಗದ್ಯವಂತೂ ಮಂಡ್ಯ ಹಾಸನ ಗಡಿಭಾಗದ ಆಡುಭಾಷೆಯ ಪ್ರತಿರೂಪವಾಗಿದೆ. "ಅಂಗಲ್ಲ ಕಣ ಮಾವ, ನಮಿಗುವೆ ಯಾವುದು ಸರಿ, ಯಾವುದು ತಪ್ಪು ಅಂತ ತಿಳಿವಳಿಕೆ ಬಂದದೆ, ಏನಾದ್ರೂ ಇದ್ದುದ್ದ ಬರಿಯೋ ಅಂತ ಸಗತಿನೂ ಬಂದದೆ, ಓದೋ ಸಗತಿನೂ ಅದೆ ..... ಅದರೊಳಿಕೋಗಿ ಬ್ಯಾಡಬ್ಯಾಡ ಅಂದ್ರೂವೆ ಕೋಟಿಕ್ಕಿ ಅದ್ಯೆಂತದ್ನೋ ಹಗ್ಗಬಿಗಿದಂಗೆ ಕತ್ತಿಗೆ ಬಿಗುದು ತಗಸಿದ್ರು ಆ ಪೋಟಾ ನೋಡಿದೋರ್ಯೆಲ್ಲ ನೀನು ರಾಜಕುಮಾರನಿಗೆ ಏನು ಕಮ್ಮಿ ಅಂದ್ರು ............" ಸಿದ್ಧಲಿಂಗ ಪಟ್ಟಣಶೆಟ್ಟಿ ಅವರ ಚಹಾದ ಜೋಡಿ ಚೂಡಾದಾಂಗ ಎಂಬ ಅಂಕಣ ಬರೆಹದ ಗದ್ಯವೂ ಅತ್ಯಂತ ಆಪ್ತವಾದದ್ದು.

ಆತ್ಮಚರಿತ್ರೆ, ಜೀವನ ಚರಿತ್ರೆಗಳ ರಚನೆಯಲ್ಲಿಯೂ ಭಾಷೆಯ ಅಂಶವನ್ನು ಪ್ರತ್ಯೇಕವಾಗಿ ಗಮನಿಸುವುದರಿಂದ ಆ ಗ್ರಂಥಗಳ ವಿಮರ್ಶೆಗೂ ಬೆಲೆ ಬರುತ್ತದೆ. ವಸ್ತು ಮತ್ತು ವಾಹಕಗಳೆರಡೂ ಇಲ್ಲಿ ಮುಖ್ಯ. ಎ.ಎನ್.ಮೂರ್ತಿರಾಯರ ಸಂಜೆಗಣ್ಣಿನ ಹಿನ್ನೋಟ, ಎಚ್.ನರಸಿಂಹಯ್ಯನವರ ತೆರೆದ ಮನ, ಕೋ.ಚನ್ನಬಸಪ್ಪನವರ ನ್ಯಾಯಾಧೀಶನ ನೆನಪುಗಳು, ತರಳಬಾಳು ಶಿವಾಚಾರ್ಯರ ಆತ್ಮನಿವೇದನ, ಕೆ.ಆರ್.ರಾಮಚಂದ್ರನ್ ಅವರ ತಾಪೇದಾರಿ, ಬಿ.ಡಿ.ಜತ್ತಿಯವರ ನನಗೆ ನಾನೇ ಮಾದರಿ, ಸಿದ್ಧಲಿಂಗಯ್ಯನವರ ಊರುಕೇರಿ ಮುಂತಾದುವನ್ನು ನೋಡಿದಾಗ ಕನ್ನಡ ಗದ್ಯ ಎಷ್ಟು ಸುಲಲಿತವಾದುದು ಎಂಬುದು ತಿಳಿಯುತ್ತದೆ. ಇಡೀ ಭಾರತದಲ್ಲಿಯೇ ಕನ್ನಡ ಅತ್ಯಂತ

ಸಮೃದ್ಧವಾದ ಭಾಷೆ ಎಂಬ ಮಾತು ಗದ್ಯ ಬರೆಹಕ್ಕೂ ಋಣಿಯಾಗಿದೆ ಎಂದರೆ ಅದು ಅತಿಶಯೋಕ್ತಿಯ ಮಾತಲ್ಲ. ಗದ್ಯಂ ಕವೀನಾಂ ನಿಕಷಂ ವದಂತಿ ಎಂಬ ಮಾತು ತ್ರಿಕಾಲಬಾಧಿತ ಸತ್ಯವೆಂದು ತೋರುತ್ತದೆ. ಇತ್ತೀಚಿನ ಕನ್ನಡ ಗದ್ಯದ ಕೆಲವು ಮಾದರಿಗಳನ್ನು ಇಲ್ಲಿ ನೋಡಬಹುದು.

'ಅಕ್ಷರ ರಹಿತ ಆತ್ಮಗಳ ಮೇಲೆ ಅಕ್ಷರಗಳು ಹರಿದಾಡಿ ಹೊರಟಾಗಿನ ಅದೇ ಅಲಂಕಾರರಹಿತ ಶಬ್ದಗಳ ಗ್ರಾಮ್ಯತೆ, ಒಂದು ವಿನೂತನ ಅಲಂಕಾರವನ್ನೂ ಅನುಭಾವ ಸೌಂದರ್ಯವನ್ನು ಕನ್ನಡ ಅಕ್ಷರಗಳು ಪಡೆಯತೊಡಗಿದವೆಂಬುದನ್ನು ಮರೆಯುವಂತಿಲ್ಲ'

'ಮಾನವನು ಸ್ವತಂತ್ರನಾಗಿಯೇ ಹುಟ್ಟಿಲ್ಲ. ಸ್ವತಂತ್ರನಾಗಲು ಹುಟ್ಟಿದವನು. ಸ್ವಾತಂತ್ರ್ಯದ ಪ್ರೇರಣೆಯು ಮಾನವ ಜೀವನದ ಮರ್ಮ'.

'ಮತಿದಾಸ್ಯ, ಮತದಾಸ್ಯ ಪೂರ್ವದ ಲಕ್ಷಣ ಬುದ್ಧಿ ಸ್ವಾತಂತ್ರ್ಯ, ವಿಚಾರ ಸ್ವಾತಂತ್ರ್ಯ ಪಶ್ಚಿಮದ ಲಕ್ಷಣ'

'ಬಡತನ, ಅಜ್ಞಾನ, ದಟ್ಟವಿಷಾದ ಹಾಗೂ ಬದುಕಿನ ವಿವಿಧ ಲಯಗಳು ಇಲ್ಲಿ ಜೀವಂತವಾಗಿವೆ.'

'ಕಂಡದ್ದನ್ನು ಮೈತುಂಬ ತುಂಬಿಕೊಂಡು ನಡುಗಿದರು. ಮತ್ತೆ ಕಣ್ಣು ತೆರೆದು ನೇರವಾಗಿ ನಿರ್ಭಯವಾಗಿ ನೋಡಿದರು. ಕೆಂಡದಂತೆ ಉರಿಯುತ್ತ ಅಬ್ಬರಿಯ ತಳದಲ್ಲಿ ಮಲಗಿದ್ದ ಹುಲಿಯೂ ಅವರನ್ನು ನೋಡಿತು. ಅವರ ಹಾಗೆ ಕಣ್ಣಗಲಿಸಿ, ನಿರ್ಭಯವಾಗಿ, ಯಾವ ಎಗ್ಗೂ ಇಲ್ಲದೆ, ನಿಶ್ಚಯ'

'ಕೂದಲು ಕತ್ತರಿಸಿದ ಮುಂಡೆಯಂತಿದ್ದ ತೋಟವನ್ನು ನೋಡಿದವರ ಸುತ್ತ ಸೊನ್ನೆಗಳು ಮಿಡತೆಗಳಂತೆ ಮುತ್ತಿದುವು. ಅಷ್ಟೆತ್ತರ ಹಸಿರು ಹೊತ್ತು ಬಳುಕುತ್ತಿದ್ದ ಅಡಿಕೆ ಮರಗಳು ಹೀಗೆ ರುಬ್ಬಾರುಬ್ಬಿ ಬೇರು ಸಹಿತ ಕಿತ್ತು ಯಾಕೆ ಬಿದ್ದಿವೆ?'

'ಪ್ರಾಣದ ವಿಸರ್ಜನೆಗೆ ಧ್ಯಾನಿಸುತ್ತಿರುವರೆಂಬಂತೆ ಕುಕ್ಕೂರು ಕೂತ ....... ಅವರು ಮಾತಾಡಲಿಲ್ಲ. ಮೌನಿಯ ವಸ್ತ್ರಾವೃತ ಆಕೃತಿ ಕಣ್ಣಿನಲ್ಲಿ ಊರಿದಂತಾಗಿ .........ರ ಸಲೀಸು ಬಾಯಿ ಸ್ತಬ್ಧವಾಯಿತು'

'ಅವನು ವ್ಯಾವಹಾರಿಕವಾದ ಘಟನೆಗಳಿಂದ ಕಾಯುವ, ಹೊಂದಿಕೊಳ್ಳುವ ಮೂಲಗಳಿಂದಲೇ ಅಸಹಕಾರದಿಂದ, ಅವಮಾನದಿಂದ, ವಿಶಿಷ್ಟ ಸಂಸ್ಕಾರಗಳನ್ನು ಪಡೆಯುತ್ತಾ ಬಂದಂತೆ ತನ್ನ ಪರಿಗಳನ್ನು ಕೀಳುತ್ತ ಕೀಳುತ್ತ ಜೈವಿಕ ಪ್ರಪಂಚದಿಂದ ದೂರವಾಗುತ್ತಾ ಒಂಟಿಯಾಗುತ್ತಾನೆ'

'ಒಂದು ಗುಂಪು ಅಥವಾ ಸಮಾಜ ಪರಂಪರಾಗತ ಮೌಲ್ಯದ ಒತ್ತಡ ಮಾತ್ರದಿಂದಲೇ ಅಲ್ಲದೆ ತಮ್ಮದೇ ಆದ ದೌರ್ಬಲ್ಯ, ಅಚಾತುರ್ಯ, ಅತಿಭಾವುಕತೆ, ಕಾರ್ಪಣ್ಯ, ಹಾಯಲಾರದ, ಕಟ್ಟಲಾರದ ಬದುಕಿನ ಪೇಚು ಇತ್ಯಾದಿಗಳಲ್ಲಿ ಯಾವುದೋ ಒಂದು ಅಥವಾ ಎಲ್ಲವೂ ಕಾರಣವಾಗಿ ಬದುಕಿನ ಅಸ್ಪಷ್ಟತೆ, ದುಃಖ, ಯಾತನೆಗಳನ್ನು ........ ಹೆಚ್ಚಾಗಿ ಗಮನಿಸಿದಂತೆನಿಸುವುದಿಲ್ಲ'

'ಆ ವಿಚಾರಗಳ ನೇಪಥ್ಯದಲ್ಲಿ ಅದರ ಒಡೆಯನ, ಸಜೀವ ಎದೆಬಡಿತವನ್ನು ಅಡಿಗಡಿಗೂ ಆಲಿಸಿ ಭಾವ ಆಲೋಚನೆಗಳ ಮಾತಂತಿರಲಿ, ಅವುಗಳನ್ನು ಶಬ್ದಗಳಲ್ಲಿ ಹರಳಿಸುವ ಮಾತುಗಾರಿಕೆಯ ಸಂವೇದನಾಶೀಲ ಗತಿ ಸೂಕ್ಷ್ಮಗಳ ಮೇಲೆ ನಯವಂತ ಗೇಯಾತ್ಮಕ ಲಯ ಸೌಕುಮಾರ್ಯದ ಮೇಲೆ ..... ಆನಂದಾಶ್ಚರ್ಯಗಳು ಅಷ್ಟಿಷ್ಟಲ್ಲ'.

'ವಾಸ್ತವತೆಯ ಹೆಸರಿನಲ್ಲಿ ತಮ್ಮ ಲೋಕಾನುಭವವನ್ನು ಹಾಗೆ ಹಾಗೇ ಕಚ್ಚಾ ಸ್ಥಿತಿಯಲ್ಲಿ ತೋಡಿಕೊಳ್ಳುತ್ತಿರುವ ಲೇಖಕರ ಅಪ್ರಬುದ್ಧ ಹುಂಬ ಹುಮ್ಮಸ್ಸಿಗೆ ಕಡಿವಾಣ ಜಡಿಯಬೇಕಾದದ್ದು ತುಂಬಾ ಸಮಂಜಸ'

ಮೇಲಿನ ಉದ್ಧೃತ ಭಾಗಗಳಲ್ಲಿ ಕೆಲವು ಉದ್ಧೃತಗಳು ಲಕ್ಷಣ ಸಮನ್ವಿತವಾಗಿರುವುದನ್ನೂ ಗಮನಿಸಬಹುದು. ಬಂಡಾಯ, ದಲಿತ, ಸಮನ್ವಯ ಎಂಬ ಹೆಸರಿನಲ್ಲಿ ಸಾಹಿತ್ಯ ಪ್ರಯಾಣ ಮುಂದುವರಿಯುವ ಮುನ್ನ ಕನ್ನಡ ಗದ್ಯದ ಒಂದು ಮುಖ ಹೇಗಿತ್ತು ಎಂಬುದನ್ನು ಈ ಮುಂದಿನ ಒಂದು ಉದ್ಧೃತ ಭಾಗದ ಸಹಾಯದಿಂದ ಕಲ್ಪಿಸಿಕೊಳ್ಳಬಹುದು.

'ಇದು ತುಂಬಾ ಅಥೆಂಟಿಕ್ ಆಗಿರುವಂತೆ ಕಂಡರೂ ಆಬ್ವಿಯಸ್ ಎನ್ನಿಸುವುದಿಲ್ಲ. ಪಾತ್ರಗಳ ಐಡೆಂಟಿಟಿ ಬಗ್ಗೆ ಅನುಮಾನವಿರುವುದಾದರೂ ಅವುಗಳ ಸ್ಟೆಬಿಲಿಟಿಗೆ ಕಾರಣವನ್ನು ಇದರಲ್ಲೇ ಹುಡುಕಬಾರದು'

ಕನ್ನಡ ಗದ್ಯ ಇಂದು ಬಹಳ ಶಕ್ತಿಯುತವಾಗಿ, ಭಾವನೆ ಆಲೋಚನೆಗಳ ಪ್ರಬಲ ಮಾಧ್ಯಮವಾಗಿ ಅಗತ್ಯಕ್ಕೆ ತಕ್ಕ ರೂಪವನ್ನು ಪಡೆಯುವ ಅಂತಃಸತ್ತ್ವವನ್ನು ಮೈಗೂಡಿಸಿಕೊಳ್ಳುತ್ತ ಸಾಗಿದೆ ಎಂದು ಹೇಳಬಹುದು. (ಎಂ.ಆರ್.)

**ಕನ್ನಡದಲ್ಲಿ ಗಾಂಧೀ ಸಾಹಿತ್ಯ :** 20ನೆಯ ಶತಮಾನದ ವಿಚಾರಶೀಲ ಸಾಹಿತ್ಯದಲ್ಲಿ ಗಾಂಧೀ ಸಾಹಿತ್ಯ ಒಂದು ಅನುಪಮ ಸ್ಥಾನವನ್ನು ಗಳಿಸಿದೆ. ಭಾರತ ಸ್ವಾತಂತ್ರ್ಯ ಸಂಗ್ರಾಮದ ಅಧ್ಯಯನದ ಉತ್ತಮ ಆಕರವಾಗಿರುವುದೇ ಅಲ್ಲದೆ ಭಾರತದ ಇತಿಹಾಸ, ಸಂಸ್ಕೃತಿ, ಲೋಪದೋಷಗಳು, ಅಭ್ಯುದಯ - ಇವುಗಳ ಮೇಲೆ ಜಿಜ್ಞಾಸಾತ್ಮಕ ಬರೆಹಗಳಾಗಿರುವ ಗಾಂಧೀ ಸಾಹಿತ್ಯದ ಕೃಷಿ ಕನ್ನಡದಲ್ಲೂ ಸಾಕಷ್ಟು ನಡೆದಿದೆ.

ಗಾಂಧೀ ಸಾಹಿತ್ಯ ಗಾಂಧೀಯವರ ಸ್ವಂತ ಬರೆಹಗಳನ್ನು, ಇತರರು ಅವರನ್ನು ಮತ್ತು ಅವರ ವಿಚಾರಗಳನ್ನು ಕುರಿತು ಬರೆದ ಬರೆಹಗಳನ್ನು ಒಳಗೊಳ್ಳುತ್ತದೆ. ಗಾಂಧೀಜೀಯವರೇ ಬರೆದಿರುವ ವಿಷಯಗಳ ವ್ಯಾಪ್ತಿ ಅಪಾರ. ಅಲ್ಪಸಂಖ್ಯಾತರು, ಅಸ್ಪೃಶ್ಯತೆ, ಅಹಿಂಸೆ, ಆರೋಗ್ಯ, ಆಹಾರ, ಇಸ್ಲಾಂ, ಉಪವಾಸ, ಕಸ್ತೂರಬಾ, ಕೈಗಾರಿಕಾ ಸಂಬಂಧಗಳು, ಕ್ರಿಶ್ಚಿಯನ್ನರು, ಖಿಲಾಫತ್ ಚಳವಳಿ, ಜಪಾನ್, ಜನನ ನಿಯಂತ್ರಣ, ಜಲಿಯನ್ ವಾಲಾಬಾಗ್, ಜಾತೀಯತೆ, ದೇವರು, ನೀತಿ, ಬೌದ್ಧಮತ, ಮುಷ್ಕರಗಳು, ಮೂಲ ಶಿಕ್ಷಣ, ರಾಷ್ಟ್ರಭಾಷೆ, ವೈದ್ಯ, ಶಿಕ್ಷಣ, ಸರ್ವೋದಯ, ಸತ್ಯಾಗ್ರಹ, ಸಿಖ್ ಮತ, ಸ್ವದೇಶೀ, ಸ್ತ್ರೀಯರು, ಸೋಷಿಯಲಿಸಂ ಮುಂತಾಗಿ ನಾನಾ ವಿಷಯಗಳ ಮೇಲೆ ಗಾಂಧೀಜಿ ಬರೆದಿದ್ದಾರೆ. ನಾನಾ ಸಮಸ್ಯೆಗಳನ್ನು ಸತ್ಯ ಅಹಿಂಸೆಯ ಆಧಾರದ ಮೇಲೆ ಸಾಮಾಜಿಕ ನ್ಯಾಯದೃಷ್ಟಿಯಿಂದ ವಿವೇಚಿಸಿ ತಮ್ಮ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ಅವರ ಬರೆಹಗಳನ್ನು 600 ಶೀರ್ಷಿಕೆಗಳಲ್ಲಿ ವಿಂಗಡಿಸಲಾಗಿದೆ. ಗಾಂಧೀಜಿಯವರನ್ನು ಬುದ್ಧ, ಕ್ರಿಸ್ತ, ಹೆನ್ರಿಫೋರ್ಡ್, ಲೆನಿನ್, ಸ್ಟಾಲಿನ್, ಟಾಗೂರ್, ಟಾಲ್‍ಸ್ಟಾಯರಿಗೆ ಹೋಲಿಸಿ ಬರೆದವರಿದ್ದಾರೆ. ಅವರನ್ನು ಸಂತರೆಂದೂ ಪ್ರವಾದಿಯೆಂದೂ ಕ್ರಾಂತಿಕಾರರೆಂದೂ ಸಮಾಜಸುಧಾರಕರೆಂದೂ ನಾನಾ ರೀತಿಯಲ್ಲಿ ಕರೆದವರಿದ್ದಾರೆ. ಗಾಂಧೀಜಿಯವರನ್ನು ಕುರಿತು ಬರೆದಿರುವ ಬರೆಹಗಳಲ್ಲಿ ಪೂರ್ಣಜೀವನ ಚರಿತ್ರೆ, ಅವರ ಜೀವನದ ನಾನಾ ಘಟನೆಗಳು, ಅಹಿಂಸಾದರ್ಶನ, ಸತ್ಯಾಗ್ರಹ ವಿಚಾರಧಾರೆಯನ್ನು ಕುರಿತ ಪ್ರಬಂಧಗಳು, ಲೇಖನಗಳು, ಪತ್ರಗಳು, ಪದ್ಯಗಳು, ಸಂದರ್ಶನ ವರದಿಗಳು, ಶ್ರದ್ಧಾಂಜಲಿಗಳು ಅನೇಕವಿವೆ. ಕಳೆದ ಐವತ್ತು ವರ್ಷಗಳಲ್ಲಿ ಭಾರತದ ಸಾಮಾಜಿಕ, ಆರ್ಥಿಕ, ರಾಜಕೀಯ ಪರಿಸ್ಥಿತಿಯನ್ನು ಕುರಿತು ಬರೆದಿರುವ ಪ್ರತಿಯೊಂದು ಪುಸ್ತಕದಲ್ಲೂ ಗಾಂಧೀಜಿಯವರ ಪಾತ್ರವನ್ನು ಕುರಿತು ಬರೆಯುವುದು ಅನಿವಾರ್ಯವೆನಿಸಿದೆ. ಈ ಲೇಖನಗಳು ಅವರ ಪ್ರಶಂಸಾಕಾರರಿಂದಲೂ ಸಹಾನುಭೂತಿಯುಳ್ಳ ಟೀಕಾಕಾರರಿಂದಲೂ ತೀವ್ರ ಎದುರಾಳಿಗಳಿಂದಲೂ ಬಂದಿದ್ದು ಗಾಂಧೀ ಸಾಹಿತ್ಯ ವೈವಿಧ್ಯಮಯವಾಗಿದೆ.

ಗಾಂಧೀಜಿಯವರು ಬರೆದಿರುವ ಪುಸ್ತಕಗಳಲ್ಲಿ ಈಗ ತಿಳಿದಿರುವಂತೆ ಕನ್ನಡದ ಪ್ರಥಮ ಅನುವಾದ ಅವರ ಇಂಡಿಯನ್ ಹೋಂ ರೂಲ್ ಎಂಬ ಪುಸ್ತಕ. ದ.ಕೃ.ಭಾರದ್ವಾಜರು ಆ ಕೆಲಸ ಮಾಡಿದ್ದಾರೆ (1919). ಇದೇ ರೀತಿ ಇನ್ನೂ ಮೂರು ಪುಸ್ತಕಗಳನ್ನು ಭಾರದ್ವಾಜರು ಅನುವಾದಿಸಿದ್ದಾರೆ. ಗಾಂಧೀಸಾಹಿತ್ಯ ಅನುವಾದಕರಲ್ಲಿ ಸಿದ್ಧವನಹಳ್ಳಿ ಕೃಷ್ಣಶರ್ಮರು ಅಗ್ರಗಣ್ಯರು. ಇವರು ತಮ್ಮ ಸರಳ ಹಾಗೂ ಶಕ್ತಿಯುತ ಶೈಲಿಯಲ್ಲಿ 20 ಪುಸ್ತಕಗಳನ್ನು ಸ್ವಂತವಾಗಿಯೂ ನಾಲ್ಕನ್ನು ಇತರರೊಡಗೂಡಿಯೂ ಅನುವಾದಿಸಿದ್ದಾರೆ. ಅನುವಾದಗಳ ಪೈಕಿ ಆರ್ಥಿಕ ವಿಚಾರಗಳಲ್ಲಿ 3, ಆರೋಗ್ಯ 1, ಖಾದಿ ಗ್ರಾಮೋದ್ಯೋಗ 1, ಜೀವನ ಚರಿತ್ರೆ (ಆತ್ಮಕಥೆ) 20, ಧರ್ಮ 8, ನೀತಿ ಸತ್ಯ ಅಹಿಂಸೆ 8, ಭಗವದ್ಗೀತೆ 3, ಮಹಿಳೆಯರು 4, ರಾಜಕೀಯ ವಿಚಾರಗಳು 14, ಶಿಕ್ಷಣ 3, ಸರ್ವೋದಯ 1, ಸಾಮಾಜಿಕ ದರ್ಶನ 6, -ಈ ರೀತಿ 72 ಪುಸ್ತಕಗಳಿವೆ. ಗಾಂಧೀಜಿಯವರ ಪ್ರಮುಖ ಕೃತಿಗಳಾದ ಸತ್ಯಶೋಧನೆ, ಹಿಂದ್ ಸ್ವರಾಜ್ಯ, ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ, ನನ್ನ ಕನಸಿನ ಭಾರತ,

ಅನಾಸಕ್ತಿಯೋಗ, ಸರ್ವೋದಯ, ಮೂಲಶಿಕ್ಷಣ ಮುಂತಾದ ಮುಖ್ಯ ಕೃತಿಗಳೆಲ್ಲವೂ ಕನ್ನಡಕ್ಕೆ ಅನುವಾದವಾಗಿವೆ.

ಅನುವಾದಕರಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್, ರಂ.ರಾ.ದಿವಾಕರ, ವಿ.ಎಸ್.ನಾರಾಯಣರಾವ್, ಜಿ.ವಿ.ನಾರಾಯಣಮೂರ್ತಿ, ಕೆ.ಎಸ್.ನರಸಿಂಹಸ್ವಾಮಿ, ಎಸ್.ವಿ.ಕೃಷ್ಣಮೂರ್ತಿರಾವ್ ಮುಖ್ಯರು. ಇವರೆಲ್ಲರೂ ನುರಿತ ಲೇಖಕರಾದುದರಿಂದ ಅನುವಾದಗಳು ಮೂಲದಂತೆಯೇ ಮನೋಜ್ಞವಾಗಿವೆ. ಹಿರಿಯ ರಾಜಕಾರಣಿ ಶಂಕರಗೌಡರು ಪ್ಯಾರೇಲಾಲ್‌ರವರ 'ಮಹಾತ್ಮ ಗಾಂಧೀ ಅಂತಿಮ ಹಂತ' ಎಂಬ ಬೃಹತ್ ಗ್ರಂಥವನ್ನು ಭಾಷಾಂತರಿಸಿದ್ದಾರೆ. ಗಾಂಧೀಸಾಹಿತ್ಯಕ್ಕೆ ಇದೊಂದು ಬಹುದೊಡ್ಡ ಕೊಡುಗೆ.

ಗಾಂಧೀನಿಧಿಯವರು ಅಚ್ಚುಕಟ್ಟಾಗಿ ಪ್ರಕಟಿಸಿರುವ, ಸುಲಭ ಬೆಲೆಯ ಇಪ್ಪತ್ತು ಕನ್ನಡ ಪುಸ್ತಕಗಳು ನಮಗೆ ಬಾಪುವಿನ ಜೀವನ ಸಾಧನೆಗಳನ್ನು ಸರಳ ಶೈಲಿಯಲ್ಲಿ ಸುಲಭವಾಗಿ ಅರ್ಥವಾಗುವಂತೆ ತಿಳಿಸುತ್ತವೆ.

ಮಹಾಪುರುಷರ ಜೀವನ ಚರಿತ್ರೆಗಳನ್ನು ಸಂಕ್ಷಿಪ್ತವಾಗಿ ಬರೆದ ಅನೇಕ ಪುಸ್ತಕಗಳಲ್ಲಿ ಗಾಂಧೀಜಿಯವರ ಬದುಕು, ಸಾಧನೆಯನ್ನು ಕುರಿತು ಬರೆದ ಅಧ್ಯಾಯಗಳಿವೆ. ಇವುಗಳಲ್ಲಿ ಮುಖ್ಯವಾದವು ಕುವೆಂಪುರವರ ವಿಭೂತಿ ಪೂಜೆ, ಎಚ್.ಕೃಷ್ಣರಾಯರ ಚರಿತ್ರೆಯ ಮಹಾಪುರುಷರು, ಮಿರ್ಜಿ ಅಣ್ಣಾರಾಯರ ಭಾರತದ ಬೆಳಕು, ಕೆ.ಎಸ್.ನಾರಾಯಣಸ್ವಾಮಿಯವರ ವಿಶ್ವಜ್ಯೋತಿಗಳು, ತೀ.ನಂ.ಶ್ರೀ. ಅವರ ನಂಟರು, ಸಾ.ಶಿ.ಮರುಳಯ್ಯನವರ ವಿಭೂತಿ ಪುರುಷರು ಮುಂತಾದ ಪುಸ್ತಕಗಳು ಗಮನಾರ್ಹವಾದವು.

ರಾಜಕೀಯ ಸಾಮಾಜಿಕ ವಿಚಾರಗಳಲ್ಲಿ ಕ್ರಾಂತಿಯೆಬ್ಬಿಸಿದ ಗಾಂಧೀಜಿಯವರ ವಿಚಾರಧಾರೆಗಳಿಗಿಂತ, ವೈಚಾರಿಕ ವಿಷಯಗಳ ಸಿದ್ಧಿಯಾದ ಭಾರತ ಸ್ವಾತಂತ್ರ್ಯ ಸಂಗ್ರಾಮ ಅಗಾಧ ಪರಿಣಾಮ ಬೀರಿತು. ಈ ಹೋರಾಟ ಜನಗಳಿಗೊಂದು ಅಪೂರ್ವ ಅನುಭವವನ್ನೊದಗಿಸಿತು. ಈ ಸಂಗ್ರಾಮದ ಕಾವು ಹೆಚ್ಚು ಚುರುಕಾಗಿ ತಟ್ಟಿದುದು ಉತ್ತರ ಕರ್ನಾಟಕದಲ್ಲೇ, ತ.ರಾ.ಸು. ಅವರ ಕಾದಂಬರಿ ರಕ್ತತರ್ಪಣದಿಂದ ಆರಂಭವಾಗಿ ಮಿರ್ಜಿ ಅಣ್ಣಾರಾಯ, ಬಸವರಾಜು ಕಟ್ಟೀಮನಿ, ಎಸ್.ಅನಂತನಾರಾಯಣ, ಅ.ನ.ಕೃ., ನಿರಂಜನ, ವಿ.ಎಂ.ಇನಾಂದಾರ, ಕೋ.ಚೆನ್ನಬಸಪ್ಪ, ಅಶ್ವತ್ಥ ಮೊದಲಾದವರ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಹೋರಾಟದ ವರ್ಣನೆ ಕಷ್ಟನಷ್ಟಗಳು ಪರಿಣಾಮಕಾರಿಯಾಗಿ ಚಿತ್ರಿತವಾಗಿವೆ. ಗೊರೂರು ರಾಮಸ್ವಾಮಿ ಅಯ್ಯಂಗಾರ್, ನಿರಂಜನ, ಅಶ್ವತ್ಥ, ಬಸವರಾಜ ಕಟ್ಟೀಮನಿ ಮುಂತಾದ ಲೇಖಕರ ಕಥೆಗಳಲ್ಲಿ ಗಾಂಧೀಜಿಯವರ ತತ್ತ್ವಗಳ ಪ್ರತಿಪಾದನೆ ಇದೆ. ಸ್ವಾತಂತ್ರ್ಯ ಸಂಗ್ರಾಮದ ಹಿನ್ನೆಲೆ ಇದೆ. ಆದರೆ ಈ ಎಲ್ಲ ಲೇಖಕರು ತಮ್ಮ ಕಲಾಕೃತಿಗಳಲ್ಲಿ ಗಾಂಧೀ ತತ್ತ್ವಗಳನ್ನು ಒರೆಗೆ ಹಚ್ಚಿಲ್ಲ ಎಂಬ ಟೀಕೆ ಇದ್ದೇ ಇದೆ. ಸಣ್ಣಕಥೆಗಳಲ್ಲಿಯೂ ಗಾಂಧೀಜಿಯವರ ಆದರ್ಶತತ್ತ್ವಗಳನ್ನು ಎತ್ತಿ ಹಿಡಿಯಲಾಗಿದೆ. ನಿರಂಜನರ ಬಾಪೂಜಿ ಬಾಪೂಜಿ, ರಾ.ಬಸವರಾಜರ ಕುರಿಗಳು ಸಾಕಿದ ತೋಳ, ಪೂರ್ಣಚಂದ್ರತೇಜಸ್ವಿ ಅವರ ಗಾಂಧೀಜಿ ದೆಸೆಯಿಂದ, ಅಶ್ವತ್ಥರ ಪುಣ್ಯಾತ್ಮರು, ಜನಾರ್ದನ ಗುರ್ಕಾರರ ಬಾಪೂಜಿ - ಮುಂತಾದ ಕಥೆಗಳು ಗಾಂಧೀ ತತ್ತ್ವಗಳಿಂದ ಪ್ರಭಾವಗೊಂಡು ಕನ್ನಡಕ್ಕೆ ಬಂದವು.

ಗಾಂಧೀಜಿಯವರ ಆದರ್ಶ, ನಡೆನುಡಿಗಳು, ಬರೆಹಗಳು ಭಾವಜೀವಿಗಳಾದ ಕವಿಗಳನ್ನು ಉತ್ತೇಜಿಸಿದುದರಲ್ಲಿ ಆಶ್ಚರ್ಯವಿಲ್ಲ. ಡಿ.ವಿ.ಜಿ.ಕುವೆಂಪು, ಮಾಸ್ತಿ, ರಂ.ಶ್ರೀ.ಮುಗಳಿ, ವಿ.ಸೀ., ಬೇಂದ್ರೆ, ಪು.ತಿ.ನ., ತೀ.ನಂ.ಶ್ರೀ., ಕಯ್ಯಾರ ಕಿಞ್ಞಣ್ಣ ರೈ, ಸುಜನಾ, ಕೆ.ಎಸ್.ನರಸಿಂಹಸ್ವಾಮಿ, ಜಿ.ಪಿ.ರಾಜರತ್ನಂ, ಎಸ್.ವಿ.ಪರಮೇಶ್ವರಭಟ್ಟ, ಚೆನ್ನವೀರ ಕಣವಿ, ಜಿ.ಎಸ್.ಶಿವರುದ್ರಪ್ಪ, ಗೋಪಾಲಕೃಷ್ಣ ಅಡಿಗ, ಸಿದ್ಧಲಿಂಗ ಪಟ್ಟಣಶೆಟ್ಟಿ, ವಿ.ಕೃ.ಗೋಕಾಕ, ದಿನಕರ ದೇಸಾಯಿ, ಸಿದ್ಧಯ್ಯ ಪುರಾಣಿಕ, ಚಂದ್ರಶೇಖರ ಪಾಟೀಲ, ಗಿರಡ್ಡಿ ಗೋವಿಂದರಾಜ, ನಿಸಾರ್ ಅಹಮದ್, ಡಿ.ಎಸ್.ಕರ್ಕಿ, ಸಿ.ಪಿ.ಕೆ - ಮೊದಲಾದವರ ಕವನಗಳಲ್ಲಿ ಗಾಂಧೀಜಿಯವರ ದರ್ಶನ, ಸಾಧನೆಗಳ ಪ್ರಶಂಸೆಯಿದೆ.

ಶ್ರೀರಂಗರ ಹರಿಜನ್ವಾರ, ಶೋಕಚಕ್ರ, ಕುವೆಂಪು ಅವರ ಬಲಿದಾನ, ಶಿವರಾಮ ಕಾರಂತರ ಗರ್ಭಗುಡಿ, ಬೇಂದ್ರೆಯವರ ಉದ್ಧಾರ ಎಂಬ ನಾಟಕಗಳಲ್ಲಿ ಅಸ್ಪೃಶ್ಯತೆ, ಮದ್ಯಪಾನ ನಿರೋಧ ಮುಂತಾದ ಗಾಂಧೀ ತತ್ತ್ವಗಳ ಪ್ರತಿಪಾದನೆ ಇದೆ. ರಾಜರತ್ನಂ ಅವರ ಸಂಭವಾಮಿ ಯುಗೇ ಯುಗೇ, ನಾ.ಕಸ್ತೂರಿಯವರ ಕ್ರಾಂತಿಮಾರ್ಗ, ಇದು ಭಾರತದ ದಾರಿ, ಎಚ್.ರಾಮಕೃಷ್ಣರಾವ್ ಅವರ ಗಾಂಧೀಜಿ ಸ್ವರ್ಗದಲ್ಲಿ, ಎಂ.ಎ.ದೊರೆಸ್ವಾಮಿ ಅಯ್ಯಂಗಾರ್ ಅವರ ಧರ್ಮಜ್ಯೋತಿ, ಪು.ತಿ.ನ. ಅವರ ವಿಕಟಕವಿ ವಿಜಯ ಮೊದಲಾದ ನಾಟಕಗಳು ಒಂದಲ್ಲ ಒಂದು ದೃಷ್ಟಿಕೋನದಲ್ಲಿ ಗಾಂಧೀಜಿ ಅವರ ತತ್ತ್ವಗಳನ್ನು ಪ್ರತಿಪಾದಿಸುವ ನಾಟಕಗಳಾಗಿವೆ. ಗಾಂಧೀತತ್ತ್ವಗಳನ್ನು ನಿರೂಪಿಸುವ ಮತ್ತು ಎತ್ತಿ ಹಿಡಿಯುವ ಕಥೆ, ಕಾದಂಬರಿ, ನಾಟಕ, ಪ್ರಬಂಧಗಳಿರುವಂತೆ ಸ್ವತಂತ್ರ ಪುಸ್ತಕಗಳು (ಲೇಖನಗಳ ಸಂಕಲನ) ಪ್ರಕಟಗೊಂಡಿವೆ. ಹರ್ಡೇಕರ ಮಂಜಪ್ಪ, ಗೊರೂರು, ರಂ.ರಾ.ದಿವಾಕರ, ಬಿಂದುಮಾಧವ, ಜಿ.ಪಿ.ರಾಜರತ್ನಂ, ಸಿದ್ಧವನಹಳ್ಳಿ ಕೃಷ್ಣಶರ್ಮ, ಪಾಟೀಲ ಪುಟ್ಟಪ್ಪ, ಎಚ್ಚೆಸ್ಕೆ, ಕಾರ್ನಾಡ ಸದಾಶಿವರಾಯ, ಕಡಪ ರಾಘವೇಂದ್ರರಾಯ, ಕಡೆಂಗೋಡ್ಲು ಶಂಕರಭಟ್ಟ, ಕೆ.ಕೆ.ಶೆಟ್ಟಿ, ನಾರಾಯಣರಾವ್ ಕೆಲ್ಲಿ ಈ ರೀತಿಯ ಬರೆವಣಿಗೆಯಲ್ಲಿ ಪ್ರಮುಖರು, ಮೈಸೂರು ವಿಶ್ವವಿದ್ಯಾನಿಲಯದ ಗಾಂಧೀಭವನ ಡಿ.ಜಿ.ತೆಂಡೂಲ್ಕರ್ ಅವರ ಮಹಾತ್ಮ ಸಂಪುಟಗಳನ್ನು ವಿವಿಧ ಲೇಖಕರಿಂದ ಭಾಷಾಂತರಿಸಿ ಪ್ರಕಟಿಸಿದೆ. ಇದಲ್ಲದೆ ಗೊರೂರು ರಾಮಸ್ವಾಮಿ ಅಯ್ಯಂಗಾರರ ಮಹಾತ್ಮಗಾಂಧೀಯವರ ಹಾಸ್ಯ ಪ್ರವೃತ್ತಿ ಮತ್ತು ಇತರ ಲೇಖನಗಳು, ದೇ.ಜವರೇಗೌಡರ ಲೋಕದ ಬೆಳಕು, ಎಚ್.ತಿಪ್ಪೇರುದ್ರಸ್ವಾಮಿಯವರು ಸಂಪಾದಿಸಿರುವ ಗಾಂಧೀ ವಿಚಾರ ಮಾರ್ಗ, ಮಹಾತ್ಮ ಗಾಂಧೀ - ನೂರುವರ್ಷಗಳು ಮುಂತಾದ ಪುಸ್ತಕಗಳು ಪ್ರಕಟವಾಗಿವೆ. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ ಎಂಬ ಕೃತಿಯನ್ನು ಪ್ರಕಟಿಸಿದೆ (1971). ಇದನ್ನು ಹಾ.ಮಾ. ನಾಯಕರು ಸಂಪಾದಿಸಿದ್ದಾರೆ. ಜಿ.ಪಿ.ರಾಜರತ್ನಂ ಅವರ ವಿಚಾರತರಂಗ, ಕೃಷ್ಣಾನುಭವ, ಸಿದ್ಧವನಹಳ್ಳಿ ಕೃಷ್ಣಶರ್ಮರ ಪರ್ಣಕುಟಿ - ಉತ್ತಮ ಬರವಣಿಗೆಗೆ ನಿದರ್ಶನಗಳಾಗಿವೆ. ಕೃಷ್ಣಶರ್ಮರ ಶೈಲಿಯಂತೂ ಚೈತನ್ಯಭರಿತವಾಗಿದೆ. ವಿಷಯನಿರೂಪಣೆ ಸೊಗಸಾಗಿದೆ. ನೇರವಾಗಿ ವಿಷಯ ಪ್ರತಿಪಾದಿಸುವುದು, ಕ್ಲಿಷ್ಟವಾದ ವಿಷಯಗಳನ್ನು ಸರಳವಾಗಿ ಹೇಳುವುದು ಇವರ ವೈಶಿಷ್ಟ್ಯ, ಸುಶೀಲಾ ಕೊಪ್ಪರ ಮತ್ತು ಮಂದಾಕಿನಿಬಾಯಿ ಮಹಿಳೆಯರ ಬಗ್ಗೆ ಗಾಂಧೀಜಿಯವರ ದೃಷ್ಟಿ ಎಂಥದ್ದು ಎಂಬುದನ್ನು ಕುರಿತು ಪ್ರಬಂಧಗಳನ್ನು ಬರೆದಿದ್ದಾರೆ.

ಗಾಂಧೀಜಿಯವರ ಆಲೋಚನೆ - ದೃಷ್ಟಿಕೋನಗಳನ್ನು ಕುರಿತು ಬರೆದ ಪುಸ್ತಕಗಳಲ್ಲಿ ಹರ್ಡೇಕರ ಮಂಜಪ್ಪನವರ 'ಖಾದಿಶಾಸ್ತ್ರ' ಬಹು ಮುಖ್ಯವಾದುದು. ಇದರಲ್ಲಿ ಖಾದಿಯ ಉಪಯೋಗಗಳನ್ನೂ ಅದರ ಗುಣವಿಶೇಷ ಮೊದಲಾದ ವಿಷಯಗಳನ್ನೂ ವಿವರವಾಗಿ ನಿರೂಪಿಸಲಾಗಿದೆ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಪೂರ್ಣಸ್ವದೇಶಿ ಎಂಬ ಗ್ರಂಥದಲ್ಲಿ ಗಾಂಧೀಜೀಯವರಿಗೆ ಹಳ್ಳಿಗಳ ಏಳ್ಗೆಯ ಬಗ್ಗೆ ಇದ್ದ ಪೂರ್ಣದೃಷ್ಟಿಯನ್ನು ಕುರಿತು ಬರೆಯಲಾಗಿದೆ. ಸಿದ್ಧವನಹಳ್ಳಿ ಕೃಷ್ಣಶರ್ಮರ ಸೇವಾಗ್ರಾಮ ಮತ್ತು ಸರ್ವೋದಯ, ಗಾಂಧೀಯೋಜನೆ, ವಿ.ಎಸ್.ನಾರಾಯಣರಾಯರ ಗಾಂಧೀವಾದ, ಗಾಂಧೀಯವರ ಆರ್ಥಿಕವಾದ - ಇವು ಗಾಂಧೀಜಿಯವರ ಸಾಮಾಜಿಕ, ಆರ್ಥಿಕ, ರಾಜಕೀಯ ದೃಷ್ಟಿ ಯಾವ ರೀತಿಯದ್ದು ಎಂಬ ವಿಷಯದ ಬಗ್ಗೆ ಬೆಳಕು ಚೆಲ್ಲುವ ಕೃತಿಗಳು. ಜಿ.ಪಿ. ರಾಜರತ್ನಂ ಅವರ 'ಗಾಂಧೀವಿದ್ಯಾ' ಖಾದಿಯ ಆರ್ಥಿಕತೆಯನ್ನು ಕುರಿತ ಪುಸ್ತಕ, ಮಹಾತ್ಮರ ಮರಣ ಹಾಗೂ ಇತರ ಉಪನ್ಯಾಸಗಳು, ದೇವರ ಸಾಕ್ಷಿ ಗಾಂಧೀಜಿ, ಗಾಂಧೀ ಸಾಹಿತ್ಯದ ಮೂಲ - ಇದೇ ಲೇಖಕರ ಇತರ ಕೃತಿಗಳು. ಕೆ.ಎಸ್.ಜೋಶಿಯವರ ಗಾಂಧೀಜಿಯ ತತ್ತ್ವಜ್ಞಾನದ ರಹಸ್ಯ, ರಂ.ರಾ.ದಿವಾಕರರ ಸತ್ಯಾಗ್ರಹ - ಇವು ಅಷ್ಟೇ ಗಮನಾರ್ಹವಾದ ಕೃತಿಗಳು. ದಿವಾಕರರ ಪುಸ್ತಕದಲ್ಲಿ ಗಾಂಧೀಜಿಯವರ ಸತ್ಯಾಗ್ರಹ ಸಿದ್ಧಾಂತಗಳು, ತಂತ್ರ, ಧೋರಣೆ, ಅದರ ಇತಿಮಿತಿ ಮುಂತಾದ ವಿಷಯಗಳು ತುಂಬ ಸೊಗಸಾಗಿ ನಿರೂಪಿತವಾಗಿವೆ.

ಕನ್ನಡದಲ್ಲಿ ಗಾಂಧೀಜಿಯವರ ಜೀವನಚರಿತ್ರೆಯನ್ನು ಕುರಿತಂತೆ ಹಲವಾರು ಪುಸ್ತಕಗಳು ಪ್ರಕಟಗೊಂಡಿವೆ. ಹರ್ಡೇಕರ ಮಂಜಪ್ಪನವರ ಮಹಾತ್ಮಾಗಾಂಧೀಯವರ ಚರಿತ್ರೆ - ಗಾಂಧೀಜಿಯವರ ಮೊದಲ 50 ವರ್ಷಗಳ ಬದುಕನ್ನು ತುಂಬ ಸರಳ ಭಾಷೆಯಲ್ಲಿ ನಿರೂಪಿಸಿರುವ ಕೃತಿ.

ಬಿ.ಎಲ್.ಆಚಾರ್ ಅವರ ಮಹಾತ್ಮಗಾಂಧೀ (ಜೀವನ ಚರಿತ್ರೆ, ಜಾತಕ), ಬಿ.ಎ.ಆರ್. ಅವರ ಪೂಜ್ಯ ಗಾಂಧೀಜಿ, ಧನ್ಯೆ ಕಸ್ತೂರಬಾ, ವಿ.ಎಸ್.ನಾರಾಯಣರಾವ್ ಅವರ ಮಹಾತ್ಮ ಬಾಪೂಜಿ, ನಭರವರ ಗಾಂಧೀಜಿ, ಅ.ನ.ಕೃ. ಅವರ ಭಾರತದ ಬಾಪು, ಗೊರೂರರ ಭಾರತ ಭಾಗ್ಯವಿಧಾತ, ಜೋನ್ ಆಫ್ ಆರ್ಕ್ ಮತ್ತು ಮಹಾತ್ಮ ಗಾಂಧೀ, ದಿವಾಕರರ ಮಹಾತ್ಮಗಾಂಧೀ, ಕರಗುಪ್ಪಿಯವರ ಮಹಾತ್ಮಗಾಂಧೀ ಚರಿತ್ರೆ, ರಾಮರಾಯರ ಮಹಾತ್ಮ ಗಾಂಧೀ - ಇವು ಕೆಲವು ಮುಖ್ಯ ಕೃತಿಗಳು. ದಿವಾಕರರ, ಗೊರೂರರ ಪುಸ್ತಕಗಳು ಜೀವನಚರಿತ್ರೆಯ ದೃಷ್ಟಿಯಿದ ಬಹುಮುಖ್ಯ ಗ್ರಂಥಗಳಾಗಿವೆ. ಸಿದ್ಧವನಹಳ್ಳಿ ಕೃಷ್ಣಶರ್ಮರ ಗಾಂಧೀ ಕಥೆಗಳು, ಕೃಷ್ಣಗೋಸಾವಿಯವರ ಬಾಪೂಜಿಯ ಬದುಕು- ಜೀವನಚರಿತ್ರೆಯ ಮಾದರಿಯಲ್ಲಿ ಬರೆದ ಗಾಂಧೀಜಿಯನ್ನು ಕುರಿತ ಗ್ರಂಥಗಳಾಗಿವೆ.

ಮಕ್ಕಳಿಗಾಗಿಯೇ ಗಾಂಧೀಜಿಯವರ ವಿಷಯ ಕುರಿತ ಹಲವಾರು ಪುಸ್ತಕಗಳು ಬಂದಿವೆ. ಹರ್ಡೇಕರ ಮಂಜಪ್ಪನವರ ಗಾಂಧೀ ಸಂದೇಶ - ಈ ಉದ್ದೇಶದಿಂದ ಮೊದಲು ಬಂದ ಕನ್ನಡ ಗ್ರಂಥ. ಇದರಲ್ಲಿ ತುಂಬ ಸರಳ ಹಾಗೂ ನೇರ ಭಾಷೆಯಲ್ಲಿ ಗಾಂಧೀಜಿಯುವರನ್ನು ಮಕ್ಕಳಿಗೆ ಪರಿಚಯ ಮಾಡಿಕೊಟ್ಟಿದ್ದಾರೆ. 'ಮಕ್ಕಳ ಕಹಳೆ' ಬಿ.ಎನ್.ಸುಂದರರಾವ್ ಅವರಿಂದ ಮಕ್ಕಳಿಗಾಗಿ ರಚಿತವಾದ ಪುಸ್ತಕದಲ್ಲಿ ಗಾಂಧೀಯವರನ್ನು ಕುರಿತ ಕೆಲವು ಕವನಗಳಿವೆ. ಪರಿಮಳ ಮತ್ತು ಟಿ.ಎಂ.ಆರ್.ಸ್ವಾಮಿ ಅವರು ಅಜ್ಜ ಅಜ್ಜಿ ಎಂಬ ಪುಸ್ತಕವನ್ನು ಹೊರತಂದಿದ್ದಾರೆ. ಈ ಪುಸ್ತಕ ಗಾಂಧೀಜಿ ಮತ್ತು ಕಸ್ತೂರ ಬಾ ಅವರ ಬಗ್ಗೆ ಮಕ್ಕಳಿಗೆ ತಿಳಿವಳಿಕೆ ನೀಡುತ್ತದೆ. ನಾರಾಯಣಶರ್ಮರ ಮಕ್ಕಳ ಮಹಾತ್ಮ ಗಾಂಧಿ, ರವಿಚಂದ್ರರ ಮಹಾತ್ಮಗಾಂಧಿ, ವಿ.ಎಸ್.ನಾರಾಯಣರಾಯರ ಗಾಂಧಿ ಕಥಾವಳಿ, ಸವ್ಯಸಾಚಿಯವರ ಭಾರತ ಭಾಗ್ಯವಿಧಾತ ಮೊದಲಾದ ಪುಸ್ತಕಗಳು ಮಕ್ಕಳ ಮನಸ್ಸಿಗೆ ರಂಜಕವಾಗುವ ರೀತಿಯಲ್ಲಿ ಗಾಂಧೀಜಿಯವರ ಜೀವನ ಹಾಗೂ ಕೃತಿಗಳನ್ನು ಕುರಿತು ರಚಿತವಾಗಿವೆ. ಮಕ್ಕಳ ಸಾಹಿತ್ಯಕ್ಕೆ ದೊಡ್ಡ ಕೊಡುಗೆಯನ್ನೇ ಇತ್ತಿರುವ ಜಿ.ಪಿ.ರಾಜರತ್ನಂ ಮಕ್ಕಳ ಗಾಂಧಿ ಎಂಬ ಬೃಹತ್ ಸಂಕಲನವನ್ನು ಹೊರತಂದಿದ್ದಾರೆ. ಇದರಲ್ಲಿ ಮಕ್ಕಳಿಗಾಗಿ ರಚಿತವಾದ ಕಥೆ, ಕವನ, ನಾಟಕಗಳು ಸಂಕಲನಗೊಂಡಿವೆ.

ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಬ್ರಿಟಿಷ್ ಸರ್ಕಾರದ ವಿರುದ್ಧ ಬರೆದು ಅದರ ಕೋಪಕ್ಕೆ ಪಾತ್ರವಾದ ವಿಶ್ವಕರ್ಣಾಟಕ, ತಾಯಿನಾಡು, ಸಂಯುಕ್ತ ಕರ್ನಾಟಕ, ಪ್ರಜಾಮತ ಪತ್ರಿಕೆಗಳನ್ನೂ ಇವುಗಳಲ್ಲಿ ದಿಟ್ಟತನದಿಂದ ಸಂಪಾದಕೀಯ ಬರೆಯುತ್ತಿದ್ದ ತಿ.ತಾ.ಶರ್ಮ, ಪಿ.ಆರ್.ರಾಮಯ್ಯ, ರಂ.ರಾ.ದಿವಾಕರ, ಬಿ.ಎನ್.ಗುಪ್ತ ಇವರ ಪ್ರಭಾವಶಾಲೀ ಬರೆಹಗಳನ್ನೂ ಯಾರೂ ಮರೆಯುವಂತಿಲ್ಲ.

ಪತ್ರಿಕೆಗಳಂತೆ ಪ್ರಕಾಶಕರಲ್ಲೂ ಎಲ್ಲರೂ ಗಾಂಧೀ ಸಾಹಿತ್ಯವನ್ನು ಒಂದಲ್ಲ ಒಂದು ರೀತಿಯಿಂದ ಪ್ರಕಟಿಸಿದ್ದಾರೆ. ಕಾವ್ಯಾಲಯ, ಉಷಾ ಸಾಹಿತ್ಯ ಮಾಲೆ, ಗೀತಾ ಬುಕ್ ಹೌಸ್, ಮೋಹನ ಪ್ರಕಾಶನ, ವಯಸ್ಕರ ಶಿಕ್ಷಣ ಸಮಿತಿ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಸತ್ಯಶೋಧನ ಪ್ರಕಟನಾಲಯ, ಸ್ಟ್ಯಾಂಡರ್ಡ್ ಬುಕ್ ಡಿಪೋ, ಗಾಂಧೀ ಸಾಹಿತ್ಯ ಮಂಡಳಿ, ಕರ್ನಾಟಕ ಸಂಘ - ಸೆಂಟ್ರಲ್ ಕಾಲೇಜು, ಸರ್ವೋದಯ ಸಂಘ, ಮಿಂಚಿನ ಬಳ್ಳಿ, ಸಾಧನ ಬುಕ್ ಡಿಪೋ, ಮನೋಹರ ಗ್ರಂಥಮಾಲೆ, ಗಾಂಧೀಭವನ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ - ಮೊದಲಾದವು ಈ ದಿಸೆಯಲ್ಲಿ ಸೇವೆ ಸಲ್ಲಿಸಿವೆ. ಇತ್ತೀಚೆಗೆ ಬೆಂಗಳೂರಿನ ಭಾರತೀಯ ವಿದ್ಯಾಭವನ ಕೇಂದ್ರ ಗಾಂಧೀಜಿಯವರ ಸಮಗ್ರ ಬರೆಹದ ಅನುವಾದ ಮಾಡಿಸಿ ಪ್ರಕಟಿಸುವ ಬೃಹತ್ಕಾರ್ಯವನ್ನು ಕೈಗೊಂಡಿದ್ದು ಅದರಲ್ಲಿ ಕೆಲವು ಸಂಪುಟಗಳು ಬೆಳಕುಕಂಡಿವೆ. (ಟಿ.ವಿ.ಎಸ್.)

**ಕನ್ನಡದಲ್ಲಿ ಗ್ರಂಥಸಂಪಾದನೆ :** ಕನ್ನಡದಲ್ಲಿ ಗ್ರಂಥಸಂಪಾದನೆ ಇಂದು ವಿಶಿಷ್ಟ ಶಾಸ್ತ್ರವಾಗಿ ಬೆಳೆದಿದೆ. ಮುದ್ರಣಸೌಲಭ್ಯವಿಲ್ಲದ ಕಾಲದಲ್ಲಿ ಗ್ರಂಥಗಳನ್ನು ಓಲೆಗರಿಗಳಲ್ಲಿ ಬರೆದಿಡಲಾಗುತ್ತಿತ್ತು. ಇದಕ್ಕಾಗಿ ನಿಯತವಾಗಿ ಪ್ರತಿಕಾರರೇ ಇರುತ್ತಿದ್ದರು. ಇಂಥ ಪ್ರತಿಕಾರರಿಂದಲೇ ದಾನಚಿಂತಾಮಣಿ ಅತ್ತಿಮಬ್ಬೆ ಪೊನ್ನನ ಶಾಂತಿಪುರಾಣದ ಸಹಸ್ರ ಪ್ರತಿಗಳನ್ನು ಮಾಡಿಸಿ ಹಂಚಿದ ವಿಷಯ ಇತಿಹಾಸ ಪ್ರಸಿದ್ಧವಾಗಿದೆ. ಹೀಗೆ ಪ್ರತಿ ಮಾಡುವಾಗ ಕೈ ತಪ್ಪಿನಿಂದಲೋ ಅನವಧಾನದಿಂದಲೋ ಕೆಲವು ದೋಷಗಳು ಉಂಟಾಗುತ್ತವೆ. ಕೆಲವು ಪ್ರೌಢ ಪ್ರತಿಕಾರರು ಬುದ್ಧಿ ಪೂರ್ವಕವಾಗಿಯೇ ಕೆಲವು ತಿದ್ದುಪಡಿ ಮಾಡಿರುವುದೂ ಹಲವಾರು ಪದ್ಯಗಳನ್ನೂ ಪದ್ಯಭಾಗಗಳನ್ನೂ ಹೊಸದಾಗಿ ಸೇರಿಸಿರುವುದೂ ಕಂಡುಬರುತ್ತದೆ.ಇಂಥ ಕಾರ್ಯದಿಂದ ಮೂಲಗ್ರಂಥಗಳ ಸ್ವರೂಪ ಬದಲಾಗಿ ಮೂಲಕರ್ತೃವಿನ ಪಾಠವೇನಿರಬಹುದೆಂಬ ಸಮಸ್ಯೆ ತಲೆದೋರುತ್ತದೆ. ಇಂಥ ಗ್ರಂಥದ ಹಲವು ಪ್ರತಿಗಳ ಸಹಾಯದಿಂದ ಮೂಲಪಾಠವನ್ನು ನಿರ್ಣಯಿಸಿ, ಕೃತಿಯ ಪರಿಚಯ ವಿಮರ್ಶೆ ಮೊದಲಾದವುಗಳೊಡನೆ ಗ್ರಂಥವನ್ನು ಹೊರತರುವುದೇ ಸಂಪಾದನಾ ಕಾರ್ಯ. ಈ ನಿಟ್ಟಿನಲ್ಲಿ ಅನುಸರಿಸಬೇಕಾದ ಮೂಲ ತತ್ವಗಳೇ ಸಂಪಾದನಾ ಶಾಸ್ತ್ರದ ನಿಯಮಗಳಾಗಿವೆ.

ಭಾರತದಲ್ಲಿ 19ನೆಯ ಶತಮಾನದ ಆದಿಭಾಗದಲ್ಲಿ ಮ್ಯಾಕ್ಸ್ ಮುಲ್ಲರ್, ಬ್ಯೂಲರ್ ಮೊದಲಾದ ವಿದೇಶಿ ವಿದ್ವಾಂಸರು ಹಾಗೂ ಪಿ.ಎಲ್.ವೈದ್ಯ, ಎಸ್.ಎಂ.ಕತ್ರೆ ಮೊದಲಾದ ಸ್ವದೇಶೀ ವಿದ್ವಾಂಸರಿಂದ ಗ್ರಂಥಸಂಪಾದನೆ ಕಾರ್ಯ ಒಂದು ಸ್ವರೂಪವನ್ನು ಪಡೆಯಿತು. ಇದನ್ನೇ ಕನ್ನಡದಲ್ಲಿಯೂ ವಿದ್ವಾಂಸರು ಆದರ್ಶವಾಗಿ ತೆಗೆದುಕೊಂಡರು. ಆದರೆ ಈ ಕಾರ್ಯ ಬಹು ಹಿಂದಿನಿಂದಲೂ ಭಾರತದಲ್ಲಿ ನಡೆಯುತ್ತಲೇ ಬಂದಿರುವುದನ್ನು ಯಾರೂ ಮರೆಯುವಂತಿಲ್ಲ. ಏಕೆಂದರೆ ಸು.1400ರಲ್ಲಿದ್ದ ಮಲ್ಲಿನಾಥ' ಮೇಘದೂತದಲ್ಲಿಯ ಪೂರ್ವಮೇಘದಲ್ಲಿನ ಕೆಲವು ಶ್ಲೋಕಗಳನ್ನು ಪ್ರಕ್ಷಿಪ್ತವೆಂದು ಗುರುತಿಸಿದ್ದಾನೆ. ಈ ದೃಷ್ಟಿಯಿಂದ ಪರಿಶೀಲಿಸಿದಾಗ ನಾವು ಕನ್ನಡ ಗ್ರಂಥಸಂಪಾದನೆಯ ಪ್ರಗತಿಯಲ್ಲಿ ಹಲವಾರು ಹಂತಗಳನ್ನು ಗುರುತಿಸಬಹುದು.

ಮುದ್ರಣ ಉಪಯೋಗ ಪಾಶ್ಚಾತ್ಯ ದೇಶಗಳಲ್ಲಿ 1457ರ ವೇಳೆಗೆ ಆರಂಭವಾದರೂ ಅದು ಕನ್ನಡ ಭಾಷೆಗೆ ಲಭ್ಯವಾದದ್ದು 1817ರಲ್ಲಿ. ಬಂಗಾಲದ ಶ್ರೀರಾಮಪುರದಲ್ಲಿ ಕ್ರೈಸ್ತಮತ ಪ್ರಚಾರಕನಾಗಿದ್ದ ವಿಲಿಯಂ ಕೇರಿ ಎಂಬುವನು ತನ್ನ ಹಿಸ್ಟರಿ ಆಫ್ ಕರ್ನಾಟ ಲಾಂಗ್ವೇಜ್ ಎಂಬ ಪುಸ್ತಕಕ್ಕೆ ಕನ್ನಡದ ಅಚ್ಚುಮೊಳೆಗಳನ್ನು ಪ್ರಥಮ ಬಾರಿಗೆ (1817ರಲ್ಲಿ) ಬಳಸಿದಂತೆ ತಿಳಿಯುತ್ತದೆ. ಅನಂತರ ಜಾನ್ ಮೆಕ್ಕೆರಲ್ ಎಂಬಾತ ಬರೆದ ಗ್ರಾಮರ್ ಆಫ್ ದಿ ಕರ್ನಾಟಿಕ ಲಾಂಗ್ವೇಜ್ ಎಂಬ ಮತ್ತೊಂದು ಕೃತಿ 1820ರಲ್ಲಿ ಮದರಾಸಿನಲ್ಲಿ (ಚೆನ್ನೈ) ಪ್ರಕಾಶಿತವಾಯಿತು. 1824ರಲ್ಲಿ ವಿಲಿಯಂರೀವ್ ಎಂಬುವನಿಂದ ರಚಿತವಾದ ಇಂಗ್ಲಿಷ್ - ಕನ್ನಡ ನಿಘಂಟು, 1832ರಲ್ಲಿ ಆತನಿಂದಲೇ ರಚಿತವಾದ ಕನ್ನಡ - ಇಂಗ್ಲಿಷ್ ನಿಘಂಟು ಪ್ರಕಟವಾದವು. ಅನಂತರ ಶ್ರೀರಂಗಪಟ್ಟಣದ ಕೃಷ್ಣಮಾಚಾರಿಯ 'ಹೊಸಗನ್ನಡ ನುಡಿಗನ್ನಡಿ' ಎಂಬ ಅಪೂರ್ವ ಕೃತಿ 1838ರಲ್ಲಿ ಮದರಾಸಿನಲ್ಲಿ ಮುದ್ರಿತವಾಯಿತು. ಇದಕ್ಕೂ ಮುಂಚೆ ಬಳ್ಳಾರಿಯಲ್ಲಿ ಕ್ರಿಶ್ಚಿಯನ್ನರ ಮೇಲ್ವಿಚಾರಣೆಯಲ್ಲಿ 1820ರಲ್ಲಿ ಬೈಬಲ್‌ನ ಕನ್ನಡ ಅನುವಾದವೊಂದು ತೆಲುಗು ಲಿಪಿಯಲ್ಲಿ ಪ್ರಕಟವಾಗಿತ್ತು.

ಆದರೆ ಪೂರ್ವಗ್ರಂಥಗಳನ್ನೂ ಬಿಡಿ ಹಾಡುಗಳನ್ನೂ ಸಂಕಲಿಸಿ ಪ್ರಕಟಿಸುವ ಸಂಪಾದನಾಕಾರ್ಯ ಮೊದಲುಗೊಂಡದ್ದು 1841ರಲ್ಲಿ ಮಂಗಳೂರಿನಲ್ಲಿ ಜರ್ಮನ್ ಮಿಶನರಿಯವರು ತೆರೆದ ಮುದ್ರಣಶಾಲೆಯದ ಮೂಲಕ. ಇವರು ಜನಪ್ರಿಯವಾದ ತುಳು ಕೀರ್ತನೆಗಳು, ಗಾದೆಗಳು, ದಾಸರ ಪದಗಳು ಹಾಗೂ ಜೈಮಿನಿ ಭಾರತ (1848), ಬಸವಪುರಾಣ (1850), ಕುಮಾರವ್ಯಾಸ ಭಾರತ (1851), ಚೆನ್ನಬಸವ ಪುರಾಣ (1851) -ಈ ಗ್ರಂಥಗಳನ್ನು ಕಲ್ಲಚ್ಚಿನ ಮೂಲಕ ಹೊರತಂದರು. ಮೊದಮೊದಲು ಶುದ್ಧವೋ ಅಶುದ್ಧವೋ ಜನತೆಗೆ ಗ್ರಂಥಗಳು ದೊರೆಯುವಂತಾಗಬೇಕೆಂಬ ಹಂಬಲದಿಂದ ಓಲೆಕಟ್ಟುಗಳಲ್ಲಿದ್ದುದನ್ನು ಮುದ್ರಿಸತೊಡಗಿದರು. ಆದರೆ ಮುದ್ರಿತ ಅನಂತರದಲ್ಲಿ ರೆವರೆಂಡ್ ಎಫ್.ಕಿಟ್ಟೆಲ್, ಬಿ.ಎಲ್.ರೈಸ್ ಮೊದಲಾದ ವಿದ್ವಾಂಸರು ಲಭ್ಯ ಹಸ್ತಪ್ರತಿಗಳನ್ನೆಲ್ಲ ಸಂಗ್ರಹಿಸಿ, ಅವುಗಳನ್ನು ಪರಸ್ಪರ ಪರಿಶೀಲಿಸಿ, ಮೂಲಪಾಠಗಳನ್ನು ನಿರ್ಣಯಿಸಿ, ಕೃತಿಯ ಪರಿಚಯ, ವಿಮರ್ಶೆ ಮೊದಲಾದ ಸೂಕ್ತ ಪೀಠಿಕೆಯೊಡನೆ ಗ್ರಂಥಗಳನ್ನು ಓದುಗರಿಗೆ ಒದಗಿಸಲು ಬದ್ಧಕಂಕಣರಾದರು. ಹಾಗಾಗಿ ಜೆ.ಗ್ಯಾರೆಟ್ ಎಂಬುವರು 1868ರಲ್ಲಿ ಪ್ರಕಟಿಸಿದ್ದ ಕೇಶಿರಾಜನ ಶಬ್ದಮಣಿದರ್ಪಣವನ್ನು ಅನಂತರ ಕಿಟ್ಟೆಲ್ಲರು ಒಂಬತ್ತು ಹಸ್ತಪ್ರತಿಗಳ ಆಧಾರದಿಂದ ಸಂಪಾದಿಸಿ ಪ್ರಕಟಿಸಿದರು (1872). ಮೂಲಪಾಠ ನಿಷ್ಕರ್ಷೆಯಲ್ಲಿ ತಾವು ಅಗಾಧ ಕಷ್ಟವನ್ನು ಅನುಭವಿಸಿರುವುದಾಗಿ, ತೊಳಲಾಟಕ್ಕೆ ಸಿಕ್ಕಿರುವುದಾಗಿ ಅವರು ಪೀಠಿಕೆಯಲ್ಲಿ

ಹೇಳಿಕೊಂಡಿದ್ದಾರೆ. ಈ ಗ್ರಂಥ'ವನ್ನೇ ಮತ್ತೆ ಸಂಪಾದಿಸಿದ ಡಿ.ಎಲ್.ನರಸಿಂಹಾಚಾರ್ಯರು ಪೀಠಿಕೆಯಲ್ಲಿ 'ಕೇಶಿರಾಜನ ಸ್ವಹಸ್ತಪ್ರತಿಯ' ಸ್ವರೂಪವನ್ನು ಕಂಡುಹಿಡಿಯುವುದಕ್ಕೂ ಅದು ಸಾಧ್ಯವಾಗದಿದ್ದಲ್ಲಿ ಅದಕ್ಕೆ ಅತಿ ಸಮೀಪವಾದ ಪಾಠವನ್ನು ಗೊತ್ತುಪಡಿಸುವುದಕ್ಕೂ ಪಾಠ ಸಮಸ್ಯೆಗಳ ವಿಶದೀಕರಣಕ್ಕೂ ಸರ್ವ ಪಾಠಭೇದಗಳನ್ನೊಳಗೊಂಡ ಸಶಾಸ್ತ್ರೀಯ ಸವಿಮರ್ಶೆ ಪರಿಷ್ಕರಣವನ್ನು (ವೇರಿಯೋರಂ ಅಂಡ್ ಕ್ರಿಟಿಕಲ್ ಎಡಿಷನ್ ಬೇಸ್ಡ್ ಆನ್ ದಿ ಸೈನ್ಸ್ ಆಫ್ ಟೆಕ್ಸ್ಚುಯಲ್ ಕ್ರಿಟಿಸಿಸಂ) ಸಿದ್ಧಪಡಿಸಬೇಕಾದ ಆವಶ್ಯಕತೆಯಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಇದರಿಂದ ಗ್ರಂಥ' ಸಂಪಾದನೆಯಲ್ಲಿರುವ ಸಂಕಷ್ಟಗಳೆಷ್ಟೆಂಬುದು ವಿದಿತವಾಗುತ್ತದೆ. ಎಫ್. ಕಿಟ್ಟೆಲ್ಲರು ಸಂಪಾದಿಸಿರುವ ಒಂದನೆಯ ನಾಗವರ್ಮನ ಛಂದೋಂಬುಧಿಯೂ ಶಬ್ದಮಣಿದರ್ಪಣದಂತೆಯೇ ಒಂದು ಮುಖ್ಯಕೃತಿಯಾಗಿದ್ದು ಇದು 1875ರಲ್ಲಿ ಪ್ರಕಟವಾಯಿತು. ಇದನ್ನು ಅವರು ಹದಿನಾಲ್ಕು ಪ್ರತಿಗಳನ್ನು ಆಧರಿಸಿ ಸಂಪಾದಿಸಿದ್ದಾರೆ. ಎಫ್.ಕಿಟ್ಟೆಲ್ಲರಂತೆಯೇ ಸಂಪಾದನಾಕಾರ್ಯದಲ್ಲಿ ಬಹು ಶ್ರದ್ಧೆಯಿಂದ ದುಡಿದ ಮುಖ್ಯರೆಂದರೆ ಶಾಸನ ಇಲಾಖೆಯ ಮುಖ್ಯಸ್ಥರಾಗಿದ್ದ ಬಿ.ಎಲ್.ರೈಸ್. ಇವರು ಕನ್ನಡ ಶಾಸನಗಳ ಸಂಗ್ರಹ, ಸಂಪಾದನೆ ಮತ್ತು ಪ್ರಕಟನೆಗಳಲ್ಲಿ ವಹಿಸಿದ ಆಸಕ್ತಿಯನ್ನೇ ಪ್ರಾಚೀನ ಕನ್ನಡ ಗ್ರಂಥ'ಗಳ ಪ್ರಕಾಶದಲ್ಲಿಯೂ ತೋರಿಸಿದರು. ಇವರಿಂದಲೇ ಬಿಬ್ಲಿಯೋಥಿಕ ಕರ್ನಾಟಿಕ ಎಂಬ ಅಂಕಿತದಲ್ಲಿ ಕನ್ನಡದ ಪ್ರಾಚೀನ ಕೃತಿಗಳ ಪ್ರಕಾಶನ ಮೊದಲಾಯಿತು. ಪಂಪ ರಾಮಾಯಣ (1882), ಕರ್ಣಾಟಕ ಶಬ್ದಾನು ಶಾಸನ (1890), ಕಾವ್ಯಾವಲೋಕನ, ಕರ್ಣಾಟಕ ಭಾಷಾಭೂಷಣ (1884), ಪಂಪಭಾರತ (1898), ಕವಿರಾಜಮಾರ್ಗ ಮೊದಲಾದ ಗ್ರಂಥಗಳು ಈ ಮಾಲೆಯಲ್ಲಿ ಪ್ರಸಿದ್ಧವಾದವು. ಈ ಗ್ರಂಥ'ಗಳೊಂದೊಂದಕ್ಕೂ ರೈಸ್ ಅವರು ಬರೆದಿರುವ ಪ್ರಸ್ತಾವನೆಗಳು ಮುಂದಣ ಸಂಪಾದಕರಿಗೆ ದಿಕ್ಸೂಚಿಯಾಗಿವೆ. ಕನ್ನಡದ ಮಹಾಕಾವ್ಯಗಳಲ್ಲಿ ಒಂದಾದ ಆದಿಕವಿ ಪಂಪನ ವಿಕ್ರಮಾರ್ಜುನ ವಿಜಯ (ಪಂಪ ಭಾರತ) ಮೊದಲ ಬಾರಿಗೆ ಪ್ರಕಟವಾದದ್ದು ಬಿ.ಎಲ್.ರೈಸ್ ಅವರಿಂದ. ಇವರ ಅನಂತರ ಈ ಕಾರ್ಯದಲ್ಲಿ ಮುಂದುವರಿದ ರಾ.ನರಸಿಂಹಾಚಾರ್ಯರೇ ಮೊದಲಾದವರು ರೈಸ್ ಅವರಿಗೆ ತಮ್ಮ ಕೃತಜ್ಞತೆಯನ್ನು ಸೂಚಿಸಿದ್ದಾರೆ.

ರಾ.ನರಸಿಂಹಾಚಾರ್ಯರು ರೈಸ್ ಅವರ ಹಾದಿಯಲ್ಲೇ ನಡೆದು ಎರಡನೆಯ ನಾಗವರ್ಮನ ಕಾವ್ಯಾವಲೋಕನವನ್ನು ನಾಲ್ಕು ಹಸ್ತಪ್ರತಿಗಳ ಸಹಾಯದಿಂದ ಸಂಪಾದಿಸಿ ಪ್ರಥಮ ಬಾರಿಗೆ ಪ್ರಕಟಿಸಿದರು (1902). ರೈಸ್ ಅವರ ಮೇಲ್ವಿಚಾರಣೆಯಲ್ಲಿಯೇ ಕವಿರಾಜಮಾರ್ಗವನ್ನು ಸಂಪಾದಿಸಿದ ಕೆ.ಬಿ.ಪಾಠಕ್ ಅವರು ಮೂರು ಹಸ್ತಪ್ರತಿಗಳನ್ನು ಆಧರಿಸಿ ಕೆಲಸಮಾಡಿದ್ದಾರೆ. ಈ ಕೃತಿ 1898ರಲ್ಲಿ ಪ್ರಕಟವಾಯಿತು. ಹೀಗೆ 19ನೆಯ ಶತಮಾನದಲ್ಲಿ ಆರಂಭವಾಗಿ 20ನೆಯ ಶತಮಾನದ ಆರಂಭ ಕಾಲದವರೆಗೆ ಕ್ರಮಕ್ರಮವಾಗಿ ಅಭಿವೃದ್ಧಿಹೊಂದಿದ ಕನ್ನಡ ಗ್ರಂಥ ಸಂಪಾದನೆಯ ಕಾರ್ಯ ಮುಂದಿನ ಪೀಳಿಗೆಗೆ ಭದ್ರವಾದ ಅಸ್ತಿಭಾರವನ್ನು ಹಾಕಿತು.

ಗ್ರಂಥ'ಸಂಪಾದನೆಗೆ ಆವಶ್ಯವಾಗಿ ಬೇಕಾಗಿದ್ದ ಹಸ್ತಪ್ರತಿಗಳ ಸಂಗ್ರಹಕಾರ್ಯ ಹಾಗೂ ಸಂಪಾದನೆ ಮೊದಲು ಪ್ರಾಕ್ತನ ಇಲಾಖೆಗೆ ಸೇರಿದ್ದಿತು. ಕನ್ನಡ ಸಾಹಿತ್ಯದ ಅಗಾಧ ಗ್ರಂಥ'ಸಮುದಾಯ ಹಸ್ತಪ್ರತಿಗಳಲ್ಲಡಗಿರುವುದನ್ನು ಗಮನಿಸಿದ ಸರ್ಕಾರ ಗ್ರಂಥ'ಗಳ ಸಂಪಾದನಾಕಾರ್ಯಕ್ಕಾಗಿಯೇ ಒಂದು ಪ್ರತ್ಯೇಕ ಇಲಾಖೆಯನ್ನು ತೆರೆಯಬೇಕೆಂಬ ಯೋಚನೆಯಿಂದ 1891ರಲ್ಲಿ ಮೈಸೂರಿನಲ್ಲಿ ಓರಿಯಂಟಲ್ ಲೈಬ್ರರಿಯನ್ನು ಸ್ಥಾಪಿಸಿತು. ಇಲ್ಲಿ ಸಂಸ್ಕೃತ, ಕನ್ನಡ ಗ್ರಂಥಗಳೆರಡನ್ನೂ ಸಂಪಾದಿಸುವ ಹಾಗೂ ಪ್ರಕಟಿಸುವ ಯೋಜನೆ ಸಿದ್ಧವಾಯಿತು. ಈ ಸಂಸ್ಥೆಯ ಕನ್ನಡ ಮಾಲೆಯಲ್ಲಿ ಪ್ರಕಟವಾದ ಮೊದಲ ಗ್ರಂಥ ಪಂಪನ ಆದಿಪುರಾಣ (1900). ಇದನ್ನು ಎಸ್.ಜಿ.ನರಸಿಂಹಾಚಾರ್ಯರು ಸಂಪಾದಿಸಿಕೊಟ್ಟರು. ಕುಮಾರವ್ಯಾಸಭಾರತ ಈ ಮೊದಲು ಅಚ್ಚಾಗಿದ್ದರೂ ಇದರ ಶುದ್ಧವಾದ ಪ್ರತಿಯನ್ನು ಹೊರತರಬೇಕೆಂಬ ಸದಿಚ್ಛೆಯಿಂದ ವಿ. ಶ್ಯಾಮಾಚಾರ್ಯರೇ ಮೊದಲಾದವರು ಮೊದಲ ಐದು ಪರ್ವಗಳನ್ನು ಸಂಪಾದಿಸಿದರು. ಯುದ್ಧಪಂಚಕದ ಸಂಪಾದನಾ ಕಾರ್ಯಕ್ಕೆ ಬಿ.ಎಂ.ಶ್ರೀಕಂಠಯ್ಯ, ಟಿ.ಎಸ್.ವೆಂಕಣ್ಣಯ್ಯ, ಡಿ.ಶ್ರೀನಿವಾಸಾಚಾರ್, ತೀ.ನಂ.ಶ್ರೀಕಂಠಯ್ಯ - ಇವರುಗಳನ್ನೊಳಗೊಂಡ ಸಂಪಾದಕ ಮಂಡಲಿಯನ್ನು ರಚಿಸಲಾಯಿತು. ಈ ಮಂಡಲಿಯಲ್ಲಿ ಆಗಿಂದಾಗ್ಗೆ ಬದಲಾವಣೆಗಳಾಗಿ ಸಂಪಾದನಾ ಕಾರ್ಯದಲ್ಲಿ ಎ.ಆರ್.ಕೃಷ್ಣಶಾಸ್ತ್ರೀ, ಎಂ.ಎಸ್.ಬಸವಲಿಂಗಯ್ಯ, ಡಿ.ಎಲ್.ನರಸಿಂಹಾಚಾರ್, ಎಚ್.ದೇವೀರಪ್ಪ ಮೊದಲಾದವರು ಭಾಗವಹಿಸಿದ್ದಾರೆ. ಒಟ್ಟಿನಲ್ಲಿ ಸಂಸ್ಥೆ ಪ್ರಕಟಿಸಿದ ಕುಮಾರವ್ಯಾಸ ಭಾರತದ 10 ಪರ್ವಗಳನ್ನು ಗಮನಿಸಿದರೆ ಕನ್ನಡ ಗ್ರಂಥಸಂಪಾದನಾಕಾರ್ಯದ ಹಲವು ಸಮಸ್ಯೆಗಳು, ಅದು ಬೆಳೆದು ಬಂದ ಹಲವಾರು ಹಂತಗಳು ವಿದಿತವಾಗುತ್ತದೆ. ಈ ಸಂಸ್ಥೆಯ ಆಶ್ರಯದಲ್ಲಿ 43 ಕನ್ನಡ ಗ್ರಂಥಗಳು ಪ್ರಕಟವಾದವು (1967). ವಿವಿಧ ಧರ್ಮಗಳಿಗೆ ಸಂಬಂಧಿಸಿದ ಕೃತಿಗಳನ್ನೂ ಶಾಸ್ತ್ರಗ್ರಂಥಗಳನ್ನೂ ಪ್ರಕಟಿಸಿದ ಯಶಸ್ಸು ಈ ಸಂಸ್ಥೆಗೆ ಸಲ್ಲುತ್ತದೆ.

ಕನ್ನಡ ಪ್ರಾಚೀನ ಗ್ರಂಥಗಳ ಪ್ರಕಟನೆಯ ಕಾರ್ಯದಲ್ಲಿ ಇದೇ ರೀತಿ ಮಹತ್ವದ ಪಾತ್ರ ವಹಿಸಿದ ಹಿರಿಯ ಸಂಸ್ಥೆಗಳಲ್ಲಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು, ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಕರ್ನಾಟಕ ವಿದ್ಯಾವರ್ಧಕ ಸಂಘ, ಕನ್ನಡ ಸಂಶೋಧನ ಸಂಸ್ಥೆ, ಕನ್ನಡ ಅಧ್ಯಯನ ಸಂಸ್ಥೆ, ಮದರಾಸು ವಿಶ್ವವಿದ್ಯಾಲಯ, ಕರ್ನಾಟಕ ವಿಶ್ವವಿದ್ಯಾಲಯ ಮುಖ್ಯವಾದುದಾಗಿವೆ. 1968ರಲ್ಲಿ ಅಸ್ತಿತ್ವಕ್ಕೆ ಬಂದ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಈಗಾಗಲೇ 37 ಪ್ರಾಚೀನ ಗ್ರಂಥ'ಗಳನ್ನು ಪ್ರಚುರಪಡಿಸಿದೆ. ಇವುಗಳಲ್ಲಿ ಬಹು ಕಾಲದಿಂದ ಅಲಭ್ಯವಾಗುಳಿದಿದ್ದ ಬಿ.ಎಸ್. ಸಣ್ಣಯ್ಯನವರಿಂದ ಸಂಪಾದಿತವಾಗಿರುವ ಎರಡನೆಯ ನಾಗವರ್ಮನ ವರ್ಧಮಾನ ಪುರಾಣ, (1974) ಬಹುಮುಖ್ಯವಾದುದು. ಹಾಗೆಯೇ ಇದುವರೆಗೆ ಅಪ್ರಕಟಿತವಾಗುಳಿದಿದ್ದ ಬಂಧುವರ್ಮನ ಹರಿವಂಶಾಭ್ಯುದಯ, ಇಮ್ಮಡಿ ಗುರುಸಿದ್ಧರ ಹಾಲಾಸ್ಯ ಪುರಾಣ ಮೊದಲಾದ ಗ್ರಂಥಗಳೂ ವಿದ್ವಾಂಸರ ಗಮನವನ್ನು ಸೆಳೆದಿವೆ. ಇವೇ ಅಲ್ಲದೆ ಇದೇ ಸಂಸ್ಥೆಯ ಹರಿದಾಸ ಸಾಹಿತ್ಯ ವಿಭಾಗದಿಂದ ಹರಿದಾಸರ ಕೀರ್ತನೆಗಳ ಸಂಪಾದನಾಕಾರ್ಯ ನಡೆದಿದ್ದು ಈಗಾಗಲೇ ಹನ್ನೆರಡು ಸಂಪುಟಗಳು ಪ್ರಕಟವಾಗಿವೆ. ಸಂಸ್ಥೆಯ ಜಾನಪದ ವಿಭಾಗದಿಂದ ಜಾನಪದ ಮಾಲೆಯಲ್ಲಿ ಅನೇಕ ಗ್ರಂಥಗಳು ಪ್ರಕಟವಾಗಿವೆ.

ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಪಂಪರಾಮಾಯಣ, ಪಂಪಭಾರತ, ಶಬ್ದಮಣಿದರ್ಪಣಗಳು ಗಮನಾರ್ಹವಾದುವಾಗಿವೆ. ಇವುಗಳ ಕಾರ್ಯ ತೃಪ್ತಿಕರವಾಗಿರಲು ಮುಖ್ಯ ಕಾರಣರಾದವರೆಂದರೆ ಬೆಳ್ಳಾವೆ ವೆಂಕಟನಾರಣಪ್ಪನವರು.

ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯವರು ಶಿ.ಶಿ.ಬಸವನಾಳ, ಶಿ.ಚೆ.ನಂದೀಮಠ, ಎಸ್.ಎಸ್.ಮಾಳವಾಡ ಮೊದಲಾದ ವಿದ್ವಾಂಸರ ಬೆಂಬಲದಿಂದ ಚೆನ್ನಬಸವಪುರಾಣ, ಪ್ರಭುಲಿಂಗಲೀಲೆ, ಗಿರಿಜಾಕಲ್ಯಾಣ, ರಕ್ಷಾಶತಕ, ಪಂಪಾಶತಕ ಮೊದಲಾದ ಗ್ರಂಥ'ಗಳನ್ನು ಪ್ರಸಿದ್ಧಪಡಿಸಿ ಸಂಪಾದನಾಕಾರ್ಯದಲ್ಲಿ ಸಾಕಷ್ಟು ಹೆಸರು ಗಳಿಸಿದ್ದಾರೆ.

ಹೀಗೆ ಸಂಸ್ಥೆಗಳಲ್ಲದೆ ಕೆಲವು ವ್ಯಕ್ತಿಗಳೂ ಈ ಸಂಪಾದನಾಕಾರ್ಯದಲ್ಲಿ ನಿಷ್ಣಾತರಾಗಿ ದುಡಿದಿದ್ದಾರೆ. ಇವರಲ್ಲಿ ಎಸ್.ಜಿ.ನರಸಿಂಹಾಚಾರ್ ಮತ್ತು ಎಂ.ಎ.ರಾಮಾನುಜಯ್ಯಂಗಾರ್ ಎಂಬ ಎರಡು ಹೆಸರುಗಳು ಪ್ರಮುಖವಾದುವು. ಇವರು ಕರ್ನಾಟಕ ಕಾವ್ಯ ಕಲಾನಿಧಿ ಮತ್ತು ಕರ್ನಾಟಕ ಕಾವ್ಯಮಂಜರಿ ಗ್ರಂಥಮಾಲೆಗಳ ಮೂಲಕ ಕನ್ನಡದ ಹಲವಾರು ಅಪೂರ್ವ ಗ್ರಂಥ'ಗಳನ್ನು ಸಂಪಾದಿಸಿ, ಮೊದಲ ಬಾರಿಗೆ ಪ್ರಕಟಿಸಿದರು. ಈ ಸಾಹಸದಿಂದ ಕನ್ನಡಿಗರ ಕೃತಜ್ಞತೆಗೆ ಪಾತ್ರರಾದರು. ನೇಮಿಚಂದ್ರನ ನೆಮಿನಾಥಪುರಾಣ (ಅರ್ಧನೇಮಿ), ಲೀಲಾವತಿ ಪ್ರಬಂಧ, ಮಂಗರಸನ ಜಯನೃಪಕಾವ್ಯ, ಚತುರಾಸ್ಯನ ಚತುರಾಸ್ಯ ನಿಘಂಟು ಮೊದಲಾದ ಗ್ರಂಥಗಳು ಇವರಿಂದ ಬೆಳಕು ಕಂಡವು.

ಒಂದನೆಯ ನಾಗವರ್ಮನ ಕರ್ನಾಟಕ ಕಾದಂಬರಿಯನ್ನು ಏಕೈಕ ಹಸ್ತಪ್ರತಿಯ ಸಹಾಯದಿಂದಲೇ ಸಂಪಾದಿಸಿ ಪ್ರಕಟಿಸಿದ ಕೀರ್ತಿ ಬಿ.ಮಲ್ಲಪ್ಪನವರಿಗೆ ಸಲ್ಲುತ್ತದೆ. ಇದು 1892ರಲ್ಲಿ ಮುದ್ರಿತವಾಗಿ ಸಂಶೋಧಕರ ಮೆಚ್ಚುಗೆಯನ್ನು ಗಳಿಸಿದೆ. ಬಿಜಾಪುರದಲ್ಲಿ ವಕೀಲರಾಗಿದ್ದ ರಾವಬಹದ್ದೂರ, ಫ.ಗು.ಹಳಕಟ್ಟಿಯವರು ವಚನಸಾಹಿತ್ಯ ಹಾಗೂ ಹರಿಹರನ ರಗಳೆಗಳನ್ನು ಸಂಪಾದಿಸಿ ಪ್ರಕಟಿಸುವಲ್ಲಿ ತಮ್ಮ ಆಯುಷ್ಯವನ್ನು ಸವೆಸಿದರು. ಸಂಪಾದನಾ ಕ್ಷೇತ್ರದಲ್ಲಿ ಅವರು ಮಾಡಿರುವ ಸೇವೆ ಅಪರಿಮಿತವಾದುದು. ಆರ್.ಸಿ.ಹಿರೇಮಠ, ಆರ್.ಎಸ್.ಪಂಚಮುಖಿ, ಎಸ್.ಎಸ್.ಭೂಸನೂರಮಠ, ಬಿ.ಶಿವಮೂರ್ತಿಶಾಸ್ತ್ರಿ, ಉಳ್ಳಾಲ

ಮಂಗೇಶರಾವ್, ಕೆ.ಜಿ.ಕುಂದಣಗಾರ, ಎ.ಶಾಂತರಾಜಶಾಸ್ತ್ರಿ, ಟಿ.ಎಸ್.ವೆಂಕಣ್ಣಯ್ಯ, ತೀ.ನಂ.ಶ್ರೀಕಂಠಯ್ಯ, ಎಂ.ವಿ.ಸೀತಾರಾಮಯ್ಯ, ಜಿ.ಬ್ರಹ್ಮಪ್ಪ, ಎಂ.ಎಂ.ಕಲಬುರ್ಗಿ, ಎಲ್.ಬಸವರಾಜು ಎಸ್.ಶಿವಣ್ಣ, ಜಿ.ಜಿ.ಮಂಜುನಾಥನ್, ಹ.ಕ.ರಾಜೇಗೌಡ ಮೊದಲಾದವರು ಈ ಕೆಲಸದಲ್ಲಿ ಶ್ರದ್ಧೆಯಿಂದ ದುಡಿದಿದ್ದಾರೆ. ಬೆಟಗೇರಿ ಕೃಷ್ಣಶರ್ಮರು ದಾಸಸಾಹಿತ್ಯಕ್ಕೆ ಸಂಬಂಧಿಸಿದಂತೆ ಪುರಂದರದಾಸರ ಕೀರ್ತನೆಗಳ 6 ಸಂಪುಟಗಳನ್ನೂ ಕನಕದಾಸರ ಕೀರ್ತನೆಗಳ ಒಂದು ಸಂಪುಟವನ್ನೂ ಪರಿಷ್ಕರಿಸಿ, ಸಂಪಾದಿಸಿ ಪ್ರಕಟಿಸಿರುವುದು ಅಭಿನಂದನಾರ್ಹವಾಗಿದೆ. ದೇ.ಜವರೇಗೌಡರು ಕಬ್ಬಿಗರ ಕಾವ ಮತ್ತು ಲೀಲಾವತಿ ಪ್ರಬಂಧಗಳನ್ನು (ಇತರರೊಡನೆ) ಸಂಪಾದಿಸಿ ಅವುಗಳಿಗೆ ಬರೆದಿರುವ ವಿದ್ವತ್ಪೂರ್ಣ ಕವಿ - ಕಾವ್ಯ ಪರಿಚಯಗಳು ಅತ್ಯಂತ ಮಹತ್ವದಿಂದ ಕೂಡಿವೆ. ಡಿ.ಎಲ್.ನರಸಿಂಹಾಚಾರ್ಯರ ವಡ್ಡಾರಾಧನೆ, ಅವರು ಟಿ.ಎಸ್.ವೆಂಕಣ್ಣಯ್ಯ ನವರೊಡನೆ ಸಂಪಾದಿಸಿರುವ ಸಿದ್ಧರಾಮಚಾರಿತ್ರ ಗಮನಾರ್ಹವಾದುವು. ಎಲ್.ಬಸವರಾಜು ಅವರು ಸಂಪಾದಿಸಿರುವ ಅಲ್ಲಮನ ವಚನಚಂದ್ರಿಕೆ, ಶಿವದಾಸ ಗೀತಾಂಜಲಿ, ಶೂನ್ಯಸಂಪಾದನೆ, ಆದಿಪುರಾಣ ಮೊದಲಾದ ಗ್ರಂಥಗಳು ಮುಂದಿನ ಸಂಪಾದಕರಿಗೆ ಮಾದರಿ ಗ್ರಂಥ'ಗಳಾಗಿವೆ. ಎನ್.ಬಸವಾರಾಧ್ಯ, ಕೆ.ವೆಂಕಟರಾಮಪ್ಪ, ಎಚ್.ತಿಪ್ಪೇರುದ್ರಸ್ವಾಮಿ, ಕೆ.ರಾಘುವೇಂದ್ರರಾವ್, ತೆಕ್ಕುಂಜೆ ಗೋಪಾಲಕೃಷ್ಣ ಭಟ್ಟ, ಬಿ.ಎಸ್.ಕುಲಕರ್ಣಿ, ಬಿ.ಎಸ್.ಸಣ್ಣಯ್ಯ, ಎಂ.ಪಿ.ಮಂಜಪ್ಪಶೆಟ್ಟಿ, ಮೈಲಹಳ್ಳಿ ರೇವಣ್ಣ, ಟಿ.ಎನ್.ನಾಗರತ್ನ, ವೈ.ಸಿ.ಭಾನುಮತಿ, ಎಫ್.ಟಿ.ಹಳ್ಳಿಕೇರಿ, ಕೆ.ರವೀಂದ್ರನಾಥ ಮೊದಲಾದವರೂ ಈ ಕಾರ್ಯದಲ್ಲಿ ನಿರತರಾಗಿದ್ದಾರೆ. ಗ್ರಂಥ ಸಂಪಾದನೆ ಶಾಸ್ತ್ರವನ್ನು ಕುರಿತಂತೆ ಡಿ.ಎಲ್.ನರಸಿಂಹಾಚಾರ್ ಅವರು ಕನ್ನಡ ಗ್ರಂಥಸಂಪಾದನೆ ಎಂಬ ಅಮೂಲ್ಯ ಗ್ರಂಥವನ್ನು ರಚಿಸಿದ್ದಾರೆ.

ಕನ್ನಡ ಗ್ರಂಥಸಂಪಾದನೆಯ ಕಾರ್ಯ ಒಂದು ನಿರಂತರ ಪ್ರಕ್ರಿಯೆ. ಅದು ನಡೆಯುತ್ತಲೇ ಇರಬೇಕು. ಹೊಸ ಹೊಸ ಹಸ್ತಪ್ರತಿಗಳ ಶೋಧವಾದಾಗಲೂ ಸಂಪಾದನ ಕಾರ್ಯವೂ ಶೋಧಿತವಾಗುತ್ತ ಹೊಸದು ಸೇರ್ಪಡೆಗೊಳ್ಳುತ್ತ ಸಾಗುತ್ತದೆ. ಈ ಹಿನ್ನೆಲೆಯಲ್ಲಿ ಕೆಲಸ ಮುಂದುವರಿದ್ದು, 1978 ರಿಂದೀಚೆಗೆ ಈ ಕ್ಷೇತ್ರದಲ್ಲಿ ಆಗಿರುವ ಕೆಲಸದ ಸ್ಥೂಲ ಪರಿಚಯುವನ್ನು ಇಲ್ಲಿ ಮಾಡಿಕೊಡಲು ಪ್ರಯತ್ನಿಸಲಾಗಿದೆ. ಹೀಗೆ ಪರಿಷ್ಕೃತವಾಗಿ ಪ್ರಕಟವಾಗಿರುವ ಗ್ರಂಥಗಳಲ್ಲಿ ಕೆಲವು ಪ್ರಥಮ ಬಾರಿಗೆ ಬೆಳಕು ಕಂಡರೆ, ಮತ್ತೆ ಕೆಲವು ಮರುಪರಿಷ್ಕರಣವಾಗಿವೆ. ಅಲ್ಲದೆ ಕೆಲವು ಸಂಗ್ರಹ ಕೃತಿಗಳಾಗಿಯೂ ಹೊರಬಂದಿವೆ. ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಿಂದ ಆರಾಧ್ಯ ಚಾರಿತ್ರ, ಚತುರಾಚಾರ್ಯ ಚಾರಿತ್ರ, ಸಹ್ಯಾದ್ರಿ ಖಂಡ, ಷಟ್ಸ್ಥಲ ತಿಲಕ, ಧರ್ಮಪರೀಕ್ಷೆ, ಚಂದ್ರಪ್ರಭ ಚರಿತೆ, ಕೃಷ್ಣಾರ್ಜುನರ ಕಾಳಗ, ಬತ್ತೀಸ ಪುತ್ತಳಿ ಕಥೆ, ರಾಜಾವಳಿ ಕಥಾಸಾರ ಮೊದಲಾದ ಕೃತಿಗಳು ದೊರೆತ ಹಸ್ತಪ್ರತಿಗಳನ್ನು ಉಪಯೋಗಿಸಿ ಶಾಸ್ತ್ರನಿಬದ್ಧವಾಗಿ ಪರಿಷ್ಕರಣಗೊಂಡು (1980-88). ಹಾಗೆಯೇ ಬೇರೆ ಬೇರೆ ಕಡೆಗಳಿಂದ ಪ್ರಕಟವಾಗಿರುವ ನಿಂಬಸಾಮಂತ ಚರಿತೆ, ಷಟ್ಸ್ಥಲ ಶಿವಾಯಣ ಮೊದಲಾದ ಕೃತಿಗಳೂ ಅಚ್ಚುಕಟ್ಟಾಗಿ ಸಂಪಾದಿತವಾಗಿ ಪ್ರಕಟವಾಗಿವೆ. ಇವೆಲ್ಲವೂ ಮೊದಲ ಬಾರಿಗೆ ಓಲೆಗಳಿಂದ ಬಿಡುಗಡೆಗೊಂಡು ಅಚ್ಚಿನ ಮೂಲಕ ಸಹೃದಯರ ಕೈಸೇರಿದ ಪ್ರಥಮ ಮುದ್ರಣಗಳಾಗಿವೆ.

ನೀಲಕಂಠಾಚಾರ್ಯ (1485) ರಚಿಸಿರುವ ಆರಾಧ್ಯ ಚಾರಿತ್ರ ಎಂಬ ವಾರ್ಧಕ ಷಟ್ಪದಿ ಗ್ರಂಥ'ವನ್ನು ಎನ್. ಬಸವಾರಾಧ್ಯರು ಪರಿಷ್ಕರಣ ಮಾಡಿದ್ದಾರೆ (1980). ಇದರ ಸಂಪಾದನೆಗೆ ಮೂರು ಹಸ್ತಪ್ರತಿಗಳನ್ನೂ ಒಂದು ಅಸಮಗ್ರ ಅಚ್ಚಿನ ಪ್ರತಿಯನ್ನೂ ಬಳಸಲಾಗಿದೆ. ಶುದ್ಧ ಹಸ್ತಪ್ರತಿಗಳು ದೊರೆತಿರುವುದರಿಂದ ಹೆಚ್ಚಿನ ಪಾಠ ಸಮಸ್ಯೆಗಳು ಕಂಡುಬರುವುದಿಲ್ಲ. ವಿಸ್ತಾರವಾದ ಪೀಠಿಕೆಯಲ್ಲಿ ಕವಿ ಕೃತಿಗಳ ವಿಷಯ ನಿರೂಪಣೆಯಲ್ಲದೆ ದೀರ್ಘ ಕಥಾಸಾರವನ್ನೂ ನೀಡಲಾಗಿದೆ. ಹಾಗೆಯೇ ಇದೇ ಸಂಪಾದಕರಿಂದ ಪರಿಷ್ಕೃತವಾದ ಸಂಪಾದನೆಯ ಪರ್ವತೇಶ (1698) ರಚಿಸಿರುವ ವಾರ್ಧಕ ಷಟ್ಪದಿಯ ಬೃಹತ್ಕೃತಿ ಚತುರಾಚಾರ್ಯ ಚಾರಿತ್ರ. ನಾಲ್ಕು ಹಸ್ತಪ್ರತಿಗಳ ಉಪಯೋಗದಿಂದ ಮಾಡಿರುವ ಸಂಪಾದನಾ ಕಾರ್ಯ ಉತ್ತಮವಾಗಿದೆ. ದೀರ್ಘ ಪೀಠಿಕೆಯಲ್ಲಿ ಕಥಾಸಾರ ಕವಿಕಾವ್ಯಗಳ ಪರಿಚಯ ಮಾಡಿಕೊಡಲಾಗಿದೆ.

ಸಹ್ಯಾದ್ರಿಖಂಡ (1984) 89 ಸಂಧಿಗಳೂ 3272 ಭಾಮಿನಿ ಷಟ್ಪದಿಗಳಿರುವ ಬೃಹತ್‌ಕಾವ್ಯ. ಇದನ್ನು ಎರಡು ಹಸ್ತಪ್ರತಿಗಳ ಸಹಾಯದಿಂದ ವೈ.ಸಿ.ಭಾನುಮತಿಯವರು ಸಮರ್ಥ ರೀತಿಯಲ್ಲಿ ಪರಿಷ್ಕರಿಸಿರುವರು. ಇದರಲ್ಲಿ ಅಳವಡಿಸಿರುವ ಭಾವಚಿತ್ರಗಳು ಕೃತಿಯ ಅಂದವನ್ನು ಹೆಚ್ಚಿಸಿವೆ.

ಪಾರ್ಶ್ವ ಕವಿಯ (ಸು.1700) ನಿಂಬಸಾಮಂತಚರಿತೆ ಎಂಬ ಷಟ್ಪದಿ ಕಾವ್ಯ ಎಂ.ಎಂ.ಕಲಬುರ್ಗಿಯವರಿಂದ ಸಂಪಾದಿತವಾಗಿದೆ (1981). ಇದರಲ್ಲಿ 5 ಸಂಧಿಗಳೂ 506 ಭಾಮಿನಿ ಷಟ್ಪದಿಗಳೂ ಇವೆ. ಈ ಕೃತಿಯನ್ನು ಎರಡು ಹಸ್ತಪ್ರತಿಗಳ ಆಧಾರದಿಂದ ಸಂಪಾದಿಸಲಾಗಿದೆ. ಪಾಠನಿರ್ಣಯ ಉತ್ತಮವಾಗಿದೆ. ಪ್ರಸ್ತಾಪನೆಯಲ್ಲಿ ನಿಂಬಸಾಮಂತನ ಬಗೆಗೆ ದೊರೆಯುವ ಎಲ್ಲ ಸಾಮಗ್ರಿಗಳನ್ನೂ ಕೂಡಿಸಿಕೊಂಡು ಮಾಡಿರುವ ವಿಮರ್ಶೆ ಉತ್ತಮ ಗುಣಮಟ್ಟದಿಂದ ಕೂಡಿದೆ. ಅನುಬಂಧಗಳು ಉಪಯುಕ್ತವಾಗಿವೆ.

ವಿಮಲಾನಂದನ ಕೃಷ್ಣಾರ್ಜುನರ ಕಾಳಗ ಎಂಬ ಕೃತಿಯನ್ನು ಕೆ.ಆರ್.ಶೇಷಗಿರಿ ಅವರು ಮೂರು ಹಸ್ತಪ್ರತಿಗಳ ಸಹಾಯದಿಂದ ಸಂಪಾದಿಸಿದ್ದಾರೆ (1981). ಕೆಲವು ಪ್ರಾಸಸ್ಥಾನಗಳನ್ನು ಬಿಟ್ಟರೆ ಹೆಚ್ಚಿನ ಪಾಠಸಂದಿಗ್ಧತೆ ಕಂಡುಬರುವುದಿಲ್ಲ. ಪೀಠಿಕೆಯಲ್ಲಿ ಮಾಡಿರುವ ವಿಚಾರ ವಿಮರ್ಶೆ ಚೆನ್ನಾಗಿದೆ. ಪದ್ಯಗಳ ಆಕಾರಾದಿ ಅರ್ಥಕೋಶಗಳು ಉಪಯುಕ್ತವಾಗಿವೆ.

ಇದೇ ಮೊದಲ ಬಾರಿಗೆ ಪ್ರಕಟವಾಗಿರುವ ದೇವಚಂದ್ರನ ರಾಜಾವಳೀ ಕಥಾಸಾರ (1988), ಬತ್ತೀಸಪುತ್ತಳಿ ಕಥೆ (1989) ಮೊದಲಾದ ಗದ್ಯಕೃತಿಗಳೂ ನಮ್ಮ ಗಮನ ಸೆಳೆಯುತ್ತವೆ. ಈ ಎರಡೂ ಕೃತಿಗಳನ್ನು ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಹೊರತಂದಿದೆ. ಎಲ್ಲ ವಿಧದ ಸಂಶೋಧಕರಿಗೆ ಅಗತ್ಯವಾಗಿ ಬೇಕಾದ ಮಾಹಿತಿಯನ್ನೊಳಗೊಂಡು ಸಾಹಿತ್ಯ ಧರ್ಮ ಜಾನಪದ ಇತಿಹಾಸಗಳಲ್ಲದೆ ತತ್ತ್ವನಿರೂಪಣೆಯ ತಾರ್ಕಿಕ ಮಂಡನೆಯನ್ನೊಳಗೊಂಡ ರಾಜಾವಳೀ ಕಥಾಸಾರವೆಂಬ ಅಪೂರ್ವ ಕೃತಿಯನ್ನು ಪರಿಷ್ಕರಣ ಮಾಡಿರುವವರು ಬಿ.ಎಸ್.ಸಣ್ಣಯ್ಯ ಅವರು. ಬತ್ತೀಸ ಪುತ್ತಳಿ ಕಥೆಯನ್ನು ವೈ.ಸಿ.ಭಾನುಮತಿ ಅವರು ಸಂಪಾದಿಸಿದ್ದಾರೆ.

ಹೀಗೆ ಮೊದಲ ಬಾರಿಗೆ ಪ್ರಕಟವಾಗಿರುವ ಗ್ರಂಥ'ಗಳಲ್ಲದೆ ಮರುಪರಿಷ್ಕರಣಗೊಂಡು ಹೊರಬಂದಿರುವ ಹಲವಾರು ಗ್ರಂಥಗಳು ನಮಗೆ ದೊರೆಯುತ್ತವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಪರಿಶೀಲಿಸಬಹುದಾಗಿದೆ.

ರನ್ನನ ಸಾಹಸಭೀಮವಿಜಯ ಗ್ರಂಥ'ವನ್ನು ಪೂರ್ವದ ಆವೃತ್ತಿಗಳೆಲ್ಲವನ್ನೂ ಗಮನಿಸಿ ಹೊಸ ಹಸ್ತಪ್ರತಿಯ ಸಹಾಯದಿಂದ ಪರಿಷ್ಕರಣ ಮಾಡಿರುವವರು ಬಿ.ಎಸ್. ಸಣ್ಣಯ್ಯ ಮತ್ತು ರಾಮೇಗೌಡ ಅವರು. ಇದು 1985ರಲ್ಲಿ ಪ್ರಕಟವಾಗಿದೆ. ಹೊಸ ಓಲೆ ಪ್ರತಿಯು ಶಕ 1264ರ ಕಾಲನಮೂದಿತ ಪ್ರತಿಯಾಗಿದ್ದು ಶಕಟರೇಫವನ್ನೊಳಗೊಂಡಿದೆ; ಸಾಕಷ್ಟು ಶುದ್ಧವಾಗಿದ್ದು ಉತ್ತಮ ಪಾಠಗಳು ದೊರೆಯುತ್ತವೆ. ಇದನ್ನು ಪೂರ್ವದ ಸಂಪಾದಕರಾರೂ ಬಳಸಿಕೊಂಡಿಲ್ಲ. ಇದಕ್ಕೆ ಆಧಾರವೆಂದರೆ ತೀನಂಶ್ರೀ ಅವರು ತಮ್ಮ ಗದಾಯುದ್ಧ ಸಂಗ್ರಹದಲ್ಲಿ ಸರಿಯಾದ ಪಾಠವಿರಬಹುದೆಂದು ಊಹಿಸಿ ಕಂಸದಲ್ಲಿ ಕೊಟ್ಟಿರುವ ಪಾಠಗಳು ಈ ಪ್ರತಿಯಲ್ಲಿ ದೊರೆಯುತ್ತವೆ. ಪೀಠಿಕೆಯಲ್ಲಿ ಮಾಡಿರುವ ಗ್ರಂಥ'ದ ಮೌಲ್ಯಮಾಪನ ಉತ್ತಮವಾಗಿದೆ; ಕಥಾಸಾರ ಮತ್ತು ಟಿಪ್ಪಣಿಗಳಿಂದ ಸಾಮಾನ್ಯ ಓದುಗರಿಗೂ ಅನುಕೂಲವಾಗಿದೆ.

ರನ್ನನ ಅಜಿತನಾಥ ತೀರ್ಥಂಕರ ಪುರಾಣತಿಲಕ ಎಂಬ ಕೃತಿಯನ್ನು ಬಿ.ಎಸ್.ಸಣ್ಣಯ್ಯ ಮತ್ತು ರಾಮೇಗೌಡಹೊಸ ಹಸ್ತಪ್ರತಿಯ ಸಹಾಯದಿಂದ ಪರಿಷ್ಕರಿಸಿದ್ದಾರೆ. ಇದರಲ್ಲಿ ಉತ್ತಮ ಪಾಠಗಳ ಆಯ್ಕೆಯಿದೆ. ಆಶ್ವಾಸ 5-61ನೆಯ ಪದ್ಯದ ನಾಲ್ಕನೆಯ ಪಾದದಲ್ಲಿದ್ದ ಅಪೂರ್ಣತೆಯನ್ನು ಹೋಗಲಾಡಿಸಲಾಗಿದೆ. ಮುಂದಣ 62ನೆಯ ಪದ್ಯದಲ್ಲಿ ಇದುವರೆಗೂ ಉಪಯೋಗವಾಗಿದ್ದ 'ಅರಳೆಲೆ' ಪದವನ್ನು ಪ್ರಾಸಕ್ಕನುಸಾರವಾಗಿ ತಿದ್ದಿ ಸಮರ್ಥನೆ ನೀಡಲಾಗಿದೆ. ಕವಿ ಕಾವ್ಯಗಳ ಬಗೆಗೆ ಮಾಡಿರುವ ವಿಮರ್ಶೆ ಉತ್ತಮವಾಗಿದೆ. ಕೊಟ್ಟಿರುವ ಟಿಪ್ಪಣಿಗಳು, ಪದ್ಯಗಳ ಅಕಾರಾದಿ ಓದುಗರಿಗೆ ಅನುಕೂಲಕರವಾಗಿದೆ.

ಈ ಮೊದಲಿಗೆ ಎರಡು ಮೂರು ಬಾರಿ ಪ್ರಕಟವಾಗಿದ್ದ ಜನ್ನನ ಯಶೋಧರ ಚರಿತೆಯನ್ನು ಸಿ.ಪಿ.ಕೃಷ್ಣಕುಮಾರ್ ಅವರು ಗದ್ಯಾನುವಾದ ಸಹಿತವಾಗಿ ಸಿದ್ಧಪಡಿಸಿದ್ದು, ಇದನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿ

ಹೊರತಂದಿದೆ (1994). ಇಲ್ಲಿನ ವಿಶೇಷವೆಂದರೆ ಇದುವರೆಗೆ ಪ್ರಕಟವಾಗಿದ್ದ ಆವೃತ್ತಿಗಳಲ್ಲಿ ಮೂಲಪಾಠಗಳು ಅರ್ಥವಾಗದೆ ಹೇಗೆ ಅಪಪಾಠಗಳನ್ನು ಊಹಿಸಿದ್ದಾರೆ ಎಂಬುದನ್ನು ಸಾಧಾರವಾಗಿ ನಿರೂಪಿಸಲಾಗಿದೆ. ಅಲ್ಲದೆ ಕಥಾಸಾರ ಆಕರ ಕಾವ್ಯೋದ್ದೇಶ ಪಾತ್ರರಚನೆ ವರ್ಣನೆಗಳು ಶೈಲಿ ಸ್ಥಾನನಿರ್ದೇಶ ಎಂಬ ಅಂಕಿತಗಳಲ್ಲಿ ಚಿಕ್ಕದಾದರೂ ಚೊಕ್ಕದಾದ ನಿರ್ದಿಷ್ಟ ವಿವರಣೆಗಳನ್ನು ನೀಡುವ ಮೂಲಕ ಕೃತಿಯ ಆಂತರಿಕ ಸೌಂದರ್ಯವನ್ನು ತೆರೆದು ತೋರಿಸಿರುವ ರೀತಿ ಮೆಚ್ಚುವಂಥದ್ದು.

ಹಿರಿಯ ವಿದ್ವಾಂಸರಾದ ಎಲ್.ಬಸವರಾಜು ಅವರು ಪಂಪನ ವಿಕ್ರಮಾರ್ಜುನ ವಿಜಯವನ್ನು ಸರಳ ಪಂಪಭಾರತ ಎಂಬ ಹೆಸರಿನಲ್ಲಿ, ಮುಖ್ಯವಾಗಿ ಸಾಮಾನ್ಯ ಓದುಗರನ್ನೂ ಪಂಡಿತ ವರ್ಗವನ್ನೂ ದೃಷ್ಟಿಯಲ್ಲಿಟ್ಟುಕೊಂಡು ವಿನೂತನವಾಗಿ ರೂಪಿಸಿದ್ದಾರೆ. ಈ ಆವೃತ್ತಿಯ ಅರಿಕೆಯಲ್ಲಿ ನಿರೂಪಣಕಾರರು ಪ್ರಸ್ತಾಪಿಸಿರುವಂತೆ ಚಂಪೂ ಶೈಲಿಯಲ್ಲಿ ಎಡೆಬಿಡದೆ ಸಂಧಿಸಮಾಸಗಳ ಉದ್ದುದ್ದವಾದ, ವಾಕ್ಯಗಳಿರುವದು ಪ್ರತಿಷ್ಠೆಯ ಮಾತಾಗಿತ್ತು......... ಅವರ ಕಾವ್ಯವನ್ನು ಎಲ್ಲಿ ನಿಲ್ಲಿಸಬೇಕು, ಯಾವುದನ್ನು ಎಲ್ಲೆಲ್ಲಿಗೆ ಬಿಡಿಸಿ ಕೂಡಿಸಿ ಓದಬೇಕೆಂಬುದೂ ತಿಳಿಯದೆ ಯಾರಾಗಲಿ ತಬ್ಬಿಬ್ಬಾಗುವುದುಂಟು ಎಂಬೆಲ್ಲಾ ಆಲೋಚನೆಯಿಂದ ಮಾಡಿರುವ ಈ ಪರಿಷ್ಕರಣ ಕಾರ್ಯ ಒಂದು ವಿನೂತನ ಮಾದರಿಯದು. ಆದರೆ ಹೀಗೆ ಪದ ಪದಪುಂಜಗಳನ್ನು ಬೇರೆ ಬೇರೆ ಮಾಡಿದಷ್ಟರಿಂದ ಸಾಮಾನ್ಯ ಓದುಗರೂ ಇದನ್ನು ಓದಬಹುದು ಎಂದು ಭಾವಿಸುವುದು ಸೂಕ್ತವಾದರೂ ಕಾವ್ಯಾರ್ಥವನ್ನು ಗ್ರಹಿಸಲು ಸ್ವಲ್ಪಮಟ್ಟಿನ ಭಾಷಿಕ ಪರಿಶ್ರಮ, ಸಾಮರ್ಥ್ಯ ಬೇಕೆಂಬ ಅಂಶವನ್ನು ನಾವು ಮರೆಯುವಂತಿಲ್ಲ.

ಸಾಹಿತ್ಯ ಕೃತಿಗಳಲ್ಲಿ 1978ರಲ್ಲಿ ಪ್ರಕಟವಾಗಿರುವ ಜಿನಸೇನ ದೇಶವ್ರತಿಯ ವರ್ಧಮಾನಪುರಾಣ, ಪರ್ವತದೇವನ ನನ್ನಯ್ಯ ಚಾರಿತ್ರ, 1979ರಲ್ಲಿ ಹೊರಬಂದಿರುವ ಸೋಮನಾಥನ ರುಕ್ಮಾಂಗದ ಚರಿತೆ, 1980ರಲ್ಲಿ ಪ್ರಕಟವಾಗಿರುವ ದೊಡ್ಡಯ್ಯನ ಚಂದ್ರಪ್ರಭ ಚರಿತೆ, ಸಿದ್ಧಕವಿಯ ಸಿರುಮಣನಾಯಕನ ಸಾಂಗತ್ಯ, 1996ರಲ್ಲಿ ಪ್ರಕಾಶಿತವಾಗಿರುವ ದೇವರಸನ ಮದನಮೋಹಿನಿ ಚರಿತೆ ಮೊದಲಾದ ಅನೇಕ ಕೃತಿಗಳು ಕಂಡುಬರುತ್ತವೆ. ಇವುಗಳಲ್ಲಿ ಬಹುಮಟ್ಟಿನವು ಪ್ರಥಮ ಬಾರಿಗೆ ಪ್ರಕಟವಾಗಿ ಕನ್ನಡ ಸಾಹಿತ್ಯದ ಶ್ರೀಮಂತಿಕೆಗೆ ಕಾರಣವಾಗಿವೆ. ಇವುಗಳಲ್ಲಿ ಜಿನಸೇನ ದೇಶವ್ರತಿಯ ವರ್ಧಮಾನ ಪುರಾಣ ಮತ್ತು ದೇವರಸನ ಮದನಮೋಹಿನಿ ಚರಿತೆಗಳು ಕನ್ನಡ ಸಾಹಿತ್ಯಕ್ಕೆ ಅಪರಿಚಿತವಾಗುಳಿದಿದ್ದ ಕೃತಿಗಳಾಗಿವೆ.

ಸಾಹಿತ್ಯದ ಇತರ ಪ್ರಕಾರಗಳಲ್ಲಿಯೂ ಅನೇಕ ಕೃತಿಗಳು ಹೊರಬಂದಿರುವುದುಂಟು. ಟಿ.ಎನ್.ನಾಗರತ್ನ ಅವರು ಪರಿಷ್ಕರಿಸಿರುವ ವಾದಿರಾಜರ ಕೃತಿಗಳು ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಿಂದ ಹೊರಬಂದಿವೆ (1980). ಇದರಲ್ಲಿ 290 ಕೀರ್ತನೆಗಳು, 10 ಸುಳಾದಿಗಳು, 12 ಉಗಾಭೋಗಗಳಿವೆ. ಇವುಗಳಲ್ಲಿ ಕೆಲವು ಈಗಾಗಲೆ ಪ್ರಕಟವಾಗಿದ್ದರೂ ಅನೇಕ ಹಸ್ತಪ್ರತಿಗಳನ್ನು ಬಳಸಿಕೊಂಡು ಮಾಡಿರುವ ಕೆಲಸ ಶಾಸ್ತ್ರ ನಿಬದ್ಧತೆಯನ್ನು ಪಡೆದು ಅಧಿಕೃತತೆಯನ್ನು ಹೊಂದಿದೆ. ಇವರೇ ಪರಿಷ್ಕರಿಸಿರುವ ಜಗನ್ನಾಥದಾಸರ ಕೃತಿಗಳು 1987ರಲ್ಲಿ ಪ್ರಕಟವಾಗಿದೆ. ಸುಮಾರು 112 ಆಕರಗಳನ್ನು ಆಧರಿಸಿ ಮಾಡಿರುವ ಕೃತಿ ಕರ್ತೃಗಳ ಮೌಲಿಕ ವಿಚಾರವನ್ನೊಳಗೊಂಡ ಉತ್ತಮ ಸಂಪಾದಿತ ಕೃತಿಯಿದು.

ಇತ್ತೀಚೆಗೆ ಹೆಸರಿಸಬಹುದಾದ ವಚನ ಸಾಹಿತ್ಯ ಕೃತಿಗಳೆಂದರೆ ಮುಖ್ಯವಾಗಿ ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದ ವೀರಶೈವ ಅಧ್ಯಯನ ಸಂಸ್ಥೆ ಪ್ರಕಟಿಸಿರುವ ಸ್ವರ ವಚನಗಳ ಆರು ಸಂಪುಟಗಳು (1982-86) ಮತ್ತು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಲ್ಲಿ ಹೊರಬಂದಿರುವ ಸ್ವರವಚನಗಳ ಹತ್ತು ಸಂಪುಟಗಳು (1995-98). ಹಾಗೆಯೆ ವೀರಶೈವ ಅಧ್ಯಯನ ಸಂಸ್ಥೆಯಿಂದ ಸಹೃದಯರ ಕೈಸೇರಿರುವ ವಚನ ಸಂಕಲನ ಸಂಪುಟ 1-5 ಗ್ರಂಥಗಳು ಪ್ರಮುಖವಾದುವಾಗಿವೆ (1990-92). ಈ ಎಲ್ಲ ಕೃತಿಗಳಲ್ಲಿ ಪೂರ್ವದಲ್ಲಿಯೇ ವಿವಿಧೆಡೆಗಳಲ್ಲಿ, ಬೇರೆ ಬೇರೆ ರೀತಿಯಲ್ಲಿ ಪ್ರಕಾಶಿತವಾಗಿದ್ದ ಕೃತಿಗಳು ಸೇರಿದ್ದರೂ ಎಲ್ಲವೂ ಒತ್ತಟ್ಟಿಗೆ ನವೀನ ರೀತಿಯಲ್ಲಿ ಹೊರಬಂದಿರುವದು ಉತ್ತೇಜನಕಾರಿಯಾಗಿದೆ. ಇವುಗಳ ಜತೆಗೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಜನಪ್ರಿಯ ಆವೃತ್ತಿಯ ಹೆಸರಿನಲ್ಲಿ ಸಮಗ್ರ ವಚನಗಳ 15 ಸಂಪುಟಗಳನ್ನು ಪ್ರಕಟಿಸಿದೆ (1993). ದಾಸಸಾಹಿತ್ಯದ 50 ಸಂಪುಟಗಳನ್ನು 2003ರಲ್ಲಿ ಹೊರತಂದಿದೆ. ಶಾಸ್ತ್ರ ಪ್ರಕಾರ ಗ್ರಂಥಗಳಲ್ಲಿಯೂ ಕೆಲವು ಉತ್ತಮ ಕೃತಿಗಳು ಹೊರಬಂದಿರುವುದುಂಟು. ಅವುಗಳಲ್ಲಿ ಬಿ.ಎಸ್.ಸಣ್ಣಯ್ಯ ಅವರಿಂದ ಪರಿಷ್ಕರಣವಾಗಿ 1984ರಲ್ಲಿ ಹೊರಬಂದಿರುವ ಸಕಲವೈದ್ಯ ಸಂಹಿತಾಸಾರಾರ್ಣವ ಸಂ.2 ಮತ್ತು ಇವರಿಂದಲೇ ಪರಿಷ್ಕರಣಗೊಂಡು 1993ರಲ್ಲಿ ಪ್ರಕಾಶಿತವಾಗಿರುವ ಬೊಮ್ಮರ್ಯ್ಯನ ವೈದ್ಯಕಂದ ಮೊದಲಾದುವನ್ನು ಇಲ್ಲಿ ಗಣಿಸಬಹುದಾಗಿದೆ. ಇವೆರಡೂ ಮೊದಲ ಬಾರಿಗೆ ಬೆಳಕು ಕಂಡರೆ ಛಂದೋಂಬುಧಿ, ಶಬ್ದಮಣಿದರ್ಪಣಂ ಮೊದಲಾದ ಇತರ ಗ್ರಂಥಗಳು ಮರುಪರಿಷ್ಕರಣವಾದ ವಿವಿಧ ಆವೃತ್ತಿಗಳಾಗಿವೆ.

ಈ ಎಲ್ಲಾ ಪರಿಷ್ಕೃತ ಕೃತಿಗಳನ್ನು ಪರಿವೀಕ್ಷಿಸಿದಾಗ ಕಂಡುಬರುವ ಅಂಶವೆಂದರೆ ಕೆಲವು ಕೃತಿಗಳು ಸಂಪಾದನಾಶಾಸ್ತ್ರಕ್ಕನುಗುಣವಾಗಿ ಸಂಪಾದಿತವಾಗಿದ್ದರೆ ಮತ್ತೆ ಕೆಲವು ಕೃತಿಗಳಲ್ಲಿ ಅನೇಕ ಲೋಪದೋಷಗಳು ನುಸುಳಿವೆ. ಮರುಪರಿಷ್ಕರಣವಾದ ಕೃತಿಗಳಲ್ಲಿ ಕೆಲವೊಮ್ಮೆ ಪೂರ್ವದ ಆವೃತ್ತಿಗಳಿಗಿಂತ ಗುಣಮಟ್ಟದಲ್ಲಿ ಹಿಂಜರಿತ ಉಂಟಾಗಿದೆ. ಅಲ್ಲದೆ ಅಪ್ರಕಟಿತ ಗ್ರಂಥಗಳು ಓಲೆಕಟ್ಟುಗಳಲ್ಲಿಯೇ ನಶಿಸಿ ಹೋಗುತ್ತಿದ್ದರೂ ಅವುಗಳನ್ನು ಗಮನಿಸಿದೆ ಪ್ರಕಟವಾಗಿರುವ ಕೃತಿಗಳನ್ನೆ ಸಂಪಾದನೆಗೆ ಆಯ್ದುಕೊಳ್ಳುವ ಪ್ರವೃತ್ತಿ ಹೆಚ್ಚಾಗಿದೆ. ಇಂತಹ ಮನೋವಾಂಛಲ್ಯದಿಂದ ಮುಕ್ತವಾದರೆ ಮಾತ್ರ ಹಲವಾರು ಅಪ್ರಕಟಿತ ಕೃತಿಗಳು ಪ್ರಕಟವಾಗಿ ಕನ್ನಡ ಸಾಹಿತ್ಯ ಶ್ರೀಮಂತವಾಗುವುದಲ್ಲದೆ ಪೂರ್ವದ ಕೃತಿಕಾರರ ಆಶಯವೂ ಈಡೇರಿದಂತಾಗುತ್ತದೆ. ಇಂತಹ ಕಾರ್ಯಸಾಧನೆಗೆ ಕನ್ನಡದಲ್ಲಿ ವಿಪುಲ ಅವಕಾಶಗಳಿವೆ. (ಬಿ.ಎಸ್.ಎಸ್.)

**ಕನ್ನಡದಲ್ಲಿ ಜೀವನ ಚರಿತ್ರೆಗಳು** : ಕನ್ನಡದಲ್ಲಿ ಜೀವನ ಚರಿತ್ರೆಯ ಇತಿಹಾಸ ಅಷ್ಟೊಂದು ಪ್ರಾಚೀನವೇನಲ್ಲ ಆದರೂ ಕರ್ನಾಟಕದಾದ್ಯಂತ ವಿಪುಲವಾಗಿ ಹರಡಿರುವ ಮಾಸ್ತಿಕಲ್ಲು. ವೀರಗಲ್ಲುಗಳಲ್ಲಿ, ಇನ್ನಿತರ ಶಿಲಾಶಾಸನಗಳಲ್ಲಿ ವ್ಯಕ್ತಿಗಳ ಜೀವನಕಥೆ ಮಿಂಚಿ ಮರೆಯಾಗುತ್ತದೆ. ಕನ್ನಡ ಕಾವ್ಯಗಳಲ್ಲಿಯೂ ಕವಿಗಳು ಸ್ವವಿಷಯವಾಗಿಯೂ ಪರವಿಷಯವಾಗಿಯೂ ಹೇಳಿರುವ ಮಾತುಗಳಲ್ಲಿ ಅವರ ಜೀವನಕ್ಕೆ ಸಂಬಂಧಿಸಿದ ಹಲವಾರು ವಿಷಯಗಳು ವ್ಯಕ್ತವಾಗಿವೆ. ಹರಿಹರ, ರಾಘವಾಂಕಾದಿಗಳೂ ಮೈಸೂರು ಒಡೆಯರ ಆಸ್ಥಾನ ಕವಿಗಳೂ ತಮ್ಮ ತಮ್ಮ ಆದರ್ಶ ವ್ಯಕ್ತಿಗಳನ್ನು ಕುರಿತು, ಪೋಷಕರ ಶೀಲ ಚಾರಿತ್ರ್ಯಾದಿಗಳನ್ನು ಕುರಿತು ಬಣ್ಣಿಸಿದ್ದಾರೆ. ಜನಪದ ಗೀತೆಗಳಲ್ಲಿಯೂ ಐತಿಹಾಸಿಕ, ಧಾರ್ಮಿಕ ವೀರವರೇಣ್ಯರ ಜೀವನ ಚಿತ್ರಿತವಾಗಿದೆ. ಸ್ಮರಣ ಚಿತ್ರಗಳು, ಪತ್ರಗಳು, ದಿನಚರಿಗಳು ಕೂಡ ಜೀವನ ಚರಿತ್ರೆಗೆ ಸಾಧನ ಸಲಕರಣೆಗಳಾಗಿವೆ. ಆದರೆ ಜೀವನ ಚರಿತ್ರೆ ಕನ್ನಡದಲ್ಲಿ ಒಂದು ಸಾಹಿತ್ಯ ಪ್ರಕಾರವಾಗಿ ಬೆಳೆದು ಬಂದದ್ದು ಇತ್ತೀಚೆಗೆ ಅದೂ ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಎನ್ನಬಹುದು.

ಸ್ವಾತಂತ್ರ್ಯಪೂರ್ವದ ಸುಮಾರು ಐದು ದಶಕಗಳ ಅವಧಿಯಲ್ಲಿ ಕನ್ನಡದಲ್ಲಿ ಐನೂರಕ್ಕೂ ಹೆಚ್ಚು ಗ್ರಂಥಗಳು ಪ್ರಕಟವಾಗಿವೆ. ಸ್ವಾತಂತ್ರ್ಯೋತ್ತರದಲ್ಲಿ ಇದೀಗ 1000ಕ್ಕೂ ಹೆಚ್ಚು ಜೀವನ ಚರಿತ್ರೆಗಳು ರಚಿತವಾಗಿವೆ. ಕನ್ನಡದಲ್ಲಿ ಮೊದಲು ರಚಿತವಾದ ಜೀವನ ಚರಿತ್ರೆಗಳು ಮಹಾಪುರುಷರ ಜೀವಿತದ ಸಾಧನೆ ಸಿದ್ಧಿಗಳನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡುವ, ಆ ಮೂಲಕ ದೇಶಾಭಿಮಾನವನ್ನೂ ಉನ್ನತ ಧ್ಯೇಯ ಧೋರಣೆಗಳನ್ನೂ ಜನತೆಯ ಮನಸ್ಸಿನಲ್ಲಿ ಬಿತ್ತುವ ಉದ್ದೇಶದಿಂದ ಕೂಡಿವೆ. ಹಾಗಾಗಿ ಧಾರ್ಮಿಕ ಪುರುಷರ, ಮಠಾಚಾರ್ಯರ, ಸಾಧುಸಂತರ, ಸಮಾಜ ಸುಧಾರಕರ, ಚರಿತ್ರೆಯ ಮಹಾನ್ ವ್ಯಕ್ತಿಗಳ ಜೀವನ ಚರಿತ್ರೆಗಳು ಪ್ರಕಟಗೊಂಡವು. ಇವುಗಳಲ್ಲಿ ಯೇಸುಕ್ರಿಸ್ತ (ಕಿಟ್ಟೆಲ್), ಬಸವ ಚರಿತ್ರೆ, ಭಗವಾನ್ ಬುದ್ಧನ ಚರಿತ್ರೆ, ಸ್ವಾಮಿ ರಾಮತೀರ್ಥ (ಹರ್ಡೇಕರ ಮಂಜಪ್ಪ), ಶಂಕರಾಚಾರ್ಯರ ಚರಿತ್ರೆ, (ದೊಡ್ಡ ಬೆಲೆ ನಾರಾಯಣ ಶಾಸ್ತ್ರಿ), ಮಧ್ವಾಚಾರ್ಯರ ಚರಿತ್ರೆ (ನಾ.ಶ್ರೀ.ರಾಜಪುರೋಹಿತ), ಅಲ್ಲಮಪ್ರಭು (ಸಿದ್ಧಯ್ಯ ಪುರಾಣಿಕ), ಮಹಮದ್ ಪೈಗಂಬರ್ (ಎಂ.ಪಿ.ಪೂಜಾರ), ರಜಿಯಾ ಬೇಗಂ (ಹುರುಳಿ ಭೀಮರಾಯ) ಅಬ್ರಹಾಂ ಲಿಂಕನ್ (ಬಿ.ಚಂದ್ರಶೇಖರಯ್ಯ, ಸಿ.ಕೆ.ವೆಂಕಟರಾಮಯ್ಯ, ಹೊನ್ನಾಪುರ ಮಠ), ಅಕ್ಬರ್, ಛತ್ರಪತಿ ಶಿವಾಜಿ, ಟಿಪ್ಪೂಸುಲ್ತಾನ, ನಾನಾ ಫಡ್ನವೀಸ, ರಣಜಿತ್ ಸಿಂಹ (ರಾ.ಹ.ದೇಶಪಾಂಡೆ), ನೆಪೋಲಿಯನ್ ಬೋನಪಾರ್ಟೆ (ಆನವಟ್ಟಿ ರಾಮರಾಯ) ಮೊದಲಾದವು ಗಮನಾರ್ಹವಾಗಿವೆ.

ಅನಂತರದ ಬೆಳವಣಿಗೆಯ ಘಟ್ಟದಲ್ಲಿ ಜೀವನಚರಿತ್ರೆಗಳ ವಿಷಯವೈವಿಧ್ಯ ವಿಸ್ತಾರವಾಯಿತು. ರಾಜಕಾರಣಿಗಳು, ದೇಶಭಕ್ತರು, ನಟರು, ವಿಜ್ಞಾನಿಗಳು, ಕವಿಗಳು- ಇವರನ್ನು ಕುರಿತಂತೆ ಜೀವನ ಚರಿತ್ರೆಗಳು ರಚನೆಗೊಂಡವು. ಸಾಹಿತ್ಯದ ವಿವಿಧ ರಂಗಗಳಲ್ಲಿ ಕೆಲಸ ಮಾಡಿದ ಮಹನೀಯರುಗಳು ಈ ಪ್ರಕಾರದಲ್ಲಿ ಬರೆಯತೊಡಗಿದ್ದರಿಂದ ಜೀವನಚರಿತ್ರೆ ಲಕ್ಷಣಬದ್ಧವಾದ ಒಂದು ಸಾಹಿತ್ಯ ಪ್ರಕಾರವಾಗಿ ಪರಿಣಮಿಸಿತು. ಇದರಿಂದಾಗಿ, ಚ.ವಾಸುದೇವಯ್ಯ, ಎಂ.ಎಸ್.ಪುಟ್ಟಣ್ಣ, ಆಲೂರ ವೆಂಕಟರಾಯ, ಡಿ.ವಿ.ಜಿ., ಮಾಸ್ತಿ, ಸಿ.ಕೆ.ವೆಕಂಟರಾಮಯ್ಯ, ಜಿ.ಪಿ.ರಾಜರತ್ನಂ, ಎ.ಆರ್.ಕೃಷ್ಣಶಾಸ್ತ್ರೀ, ಸುಬೋಧ ರಾಮರಾಯ, ದ.ಕೃ.ಭಾರದ್ವಾಜ, ಟಿ.ಎಸ್.ವೆಂಕಣ್ಣಯ್ಯ, ಕುವೆಂಪು ಮೊದಲಾದ ಸಮರ್ಥ ಲೇಖಕರು ಹುಟ್ಟಿಕೊಂಡರು.

ಬೌದ್ಧ, ಜೈನ, ವೈದಿಕ, ವೀರಶೈವ ಮೊದಲಾದ ಧರ್ಮಗಳಿಗೆ ಸಂಬಂಧಿಸಿದ ಧಾರ್ಮಿಕ ಆಚಾರ್ಯರನ್ನು ಕುರಿತ ಕೃತಿಗಳು ರಚಿತವಾದವು. ಬುದ್ಧನನ್ನು ಕುರಿತಂತೆ ಜಿ.ಪಿ.ರಾಜರತ್ನಂ ಅವರ ಗೌತಮ ಬುದ್ಧ ಒಂದು ಉತ್ತಮ ಜೀವನಚರಿತ್ರೆ. ಮಹಾವೀರನ ಜೀವನ ಚರಿತ್ರೆಯನ್ನು ಮಿರ್ಜಿ ಅಣ್ಣಾರಾಯರು ಸಮರ್ಪಕವಾಗಿ ನೀಡಿದ್ದಾರೆ. ಶೈವಧರ್ಮಕ್ಕೆ ಸಂಬಂಧಿಸಿದ 63 ಪುರಾತನರ ಜೀವನವನ್ನು ವಸ್ತುವಾಗುಳ್ಳ ಸಿದ್ಧಯ್ಯ ಪುರಾಣಿಕರ ಶರಣಚರಿತಾಮೃತ, ಆಳ್ವಾರರ ಬಗೆಗೆ ಯಾಮುನಾಚಾರ್ಯರು ಬರೆದಿರುವ ಆಳ್ವಾರರು- ಇವು ಉಲ್ಲೇಖನೀಯ. ಆದರೆ ಇವು ಶುದ್ಧ ಜೀವನಚರಿತ್ರೆಗಳಲ್ಲ. ಇದಕ್ಕೆ ಕಾರಣ ಇಂಥ ಜೀವನ ಚರಿತ್ರೆಗಳನ್ನು ಬರೆಯುವುದಕ್ಕೆ ದೊರಕುವ ಸಾಮಗ್ರಿಯ ಅಭಾವ, ರಾಮಾನುಜರನ್ನು ಕುರಿತು ಬರೆದ ಎಚ್ಚೆಸ್ಕೆ ಅವರ ಶ್ರೀ ರಾಮಾನುಜ ಧಾರ್ಮಿಕ ಪುರುಷರನ್ನು ಕುರಿತು ಬರೆದ ಜೀವನ ಚರಿತ್ರೆಗಳಲ್ಲಿ ಗಮನಾರ್ಹವಾದದ್ದು. ಬಸವಣ್ಣನವರ ಜೀವನಚರಿತ್ರೆಯನ್ನು ಕುರಿತಂತೆ ಸಾಕಷ್ಟು ಗ್ರಂಥಗಳು ರಚಿತವಾಗಿವೆ. ಮೈಸೂರು ಸರ್ಕಾರ ಬಸವೇಶ್ವರರ ಎಂಟನೆಯ ಶತಮಾನೋತ್ಸವ ಸಂದರ್ಭದಲ್ಲಿ ಹೊರತಂದ ಶ್ರೀ ಬಸವೇಶ್ವರರು- ಪ್ರಾಮಾಣಿಕವೂ ಪ್ರಾತಿನಿಧಿಕವೂ ಆದ ಗ್ರಂಥ. ಇದರಲ್ಲಿ ಕನ್ನಡದ ಹಲವಾರು ಶ್ರೇಷ್ಠ ವಿದ್ವಾಂಸರು ತಮ್ಮ ಲೇಖನಗಳಲ್ಲಿ ಬಸವಣ್ಣನವರ ಜೀವನ, ವ್ಯಕ್ತಿತ್ವ, ಸಾಧನೆ, ಸಿದ್ಧಿ- ಇವುಗಳ ಮೇಲೆ ಹೊಸ ಬೆಳಕು ಚೆಲ್ಲಿದ್ದಾರೆ. ಬಸವಣ್ಣನವರ ಬದುಕಿನ ವಿವಿಧ ಮುಖಗಳ ಪರಿಚಯ ಈ ಗ್ರಂಥದಿಂದ ತಿಳಿದುಬರುತ್ತದೆ. ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ ಬಸವಣ್ಣನವರ ವ್ಯಕ್ತಿತ್ವ ಹಾಗೂ ಜೀವನ ಸಿದ್ಧಿ- ಆರು ಉಪನ್ಯಾಸಗಳನ್ನೊಳಗೊಂಡ ಒಂದು ಉತ್ತಮ ಗ್ರಂಥ'. ಈ ರೀತಿಯ ಹಲವಾರು ಗ್ರಂಥ'ಗಳು ಕನ್ನಡ ಕವಿಗಳನ್ನು ಕುರಿತಂತೆ ಪ್ರಕಟಗೊಂಡಿವೆ. ಎಂ.ಚಿದಾನಂದಮೂರ್ತಿಯವರ 'ಬಸವಣ್ಣನವರು' ವಸ್ತುನಿಷ್ಠ ಹಾಗೂ ಸಂಶೋಧನ ದೃಷ್ಟಿಯನ್ನೊಳಗೊಂಡ, ವಚನ, ಶಾಸನ ಹಾಗೂ ಕಾವ್ಯಾಧಾರಗಳ ಮೇಲೆ ಬರೆದ ಗ್ರಂಥ'. 'ರಾಮಕೃಷ್ಣಾಲೀಲಾ ಪ್ರಸಂಗ', ಬಂಗಾಲಿಯಿಂದ ಸ್ವಾಮಿ ಪ್ರಣವೇಶಾನಂದರಿಂದ ಕನ್ನಡಕ್ಕೆ ಅನುವಾದಗೊಂಡ ರಾಮಕೃಷ್ಣಪರಮಹಂಸರನ್ನು ಕುರಿತ ಗ್ರಂಥ. 'ರಾಮಕೃಷ್ಣ ಶಿಷ್ಯಕೋಟಿ', ರಾಮಕೃಷ್ಣರ ಮೂವತ್ತು ಜನ ಶಿಷ್ಯರನ್ನೂ ಅವರ ಜೀವನ ಚರಿತ್ರೆಯನ್ನೂ ಸಂಕ್ಷೇಪವಾಗಿ ನಿರೂಪಿಸುವ ಒಂದು ಗಮನಾರ್ಹ ಕೃತಿ. ಸ್ವಾಮಿ ಸೋಮನಾಥಾನಂದರು ಶ್ರೀ ರಾಮಕೃಷ್ಣ ಪರಮಹಂಸ, ವಿವೇಕಾನಂದ, ಶಾರದಾದೇವಿ ಎಂಬ ಜೀವನ ಚರಿತ್ರೆಗಳನ್ನು ಬರೆದಿದ್ದಾರೆ. ಜಿ.ವೆಂಕಟಯ್ಯನವರ 'ಬುದ್ಧದೇವ' ತನ್ನ ಸರಳ ಶೈಲಿಯಿಂದ ಗಮನ ಸೆಳೆಯುತ್ತದೆ. ಬುದ್ಧನನ್ನು ಕುರಿತಂತೆ ಮರಾಠಿಯಲ್ಲಿ ರಚಿತವಾಗಿರುವ ಭಗವಾನ್ ಬುದ್ಧ ಶ್ರೀರಂಗರಿಂದ ಕನ್ನಡಕ್ಕೆ ಅನುವಾದಗೊಂಡಿದೆ. ಉ.ಕಾ. ಸುಬ್ಬರಾಯಚಾರ್ಯರ ಯೇಸುಕ್ರಿಸ್ತ ಎಂಬ ಜೀವನ ಚರಿತೆ ಹೆಸರಿಸಬೇಕಾದ ಮಹತ್ತ್ವ ಪಡೆದಿದೆ. ಕುವೆಂಪು ಅವರ ಶ್ರೀ ರಾಮಕೃಷ್ಣಪರಮಹಂಸ ಮತ್ತು ಸ್ವಾಮಿ ವಿವೇಕಾನಂದ ಎಂಬ ಜೀವನಚರಿತ್ರೆಗಳು ಕನ್ನಡ ಜೀವನ ಚರಿತ್ರೆಗಳ ಸಾಲಿನಲ್ಲಿ ವಿಶಿಷ್ಟವಾಗಿ ನಿಲ್ಲುವ ಮಹತ್ತ್ವ ಪಡೆದುಕೊಂಡಿವೆ. ವಿಷಯನಿರೂಪಣೆ, ಭಾಷೆ, ವರ್ಣನೆ ಈ ದೃಷ್ಟಿಗಳಿಂದ ಈ ಜೀವನ ಚರಿತ್ರೆಗಳು ಕಾದಂಬರಿಯ, ಕಾವ್ಯತ್ವದ ಓಜಸ್ಸನ್ನು ಪಡೆಯುತ್ತವೆ. ಕುವೆಂಪು ಅವರ ಶೈಲಿ ಈ ರಂಗದಲ್ಲೂ ಪ್ರತ್ಯೇಕವಾಗಿ ಗುರುತಿಸುವಷ್ಟರಮಟ್ಟಿಗೆ ಸ್ವಂತಿಕೆಯಿಂದ ಕೂಡಿದೆ. ಕೋ.ಚೆನ್ನಬಸಪ್ಪನವರ ಸ್ವಾತಂತ್ರ್ಯಯೋಧ ಶ್ರೀಅರವಿಂದ ಅರವಿಂದರ ಜೀವನವನ್ನು ಪರಿಚಯ ಮಾಡಿಕೊಡುತ್ತದೆ.

ಸಾಹಿತಿಗಳ, ಕಲಾವಿದರ ಜೀವನ ಚರಿತ್ರೆಗಳು ಕನ್ನಡದಲ್ಲಿ ವಿಪುಲ ಸಂಖ್ಯೆಯಲ್ಲಿವೆ. ಪ್ರಾಚೀನ ಕನ್ನಡ ಕವಿಗಳನ್ನು ಕುರಿತಂತೆ ಪಂಪ, ರನ್ನ, ಮುದ್ದಣ, ಕುಮಾರವ್ಯಾಸ ಮೊದಲಾದ ಪ್ರಶಸ್ತಿ ಗ್ರಂಥಗಳಲ್ಲಿ ಆಯಾ ಕವಿಗಳ ಜೀವನ ಪರಿಚಯ ಸಾಕಷ್ಟು ದೊರೆಯುತ್ತದೆ. ಪಂಪನನ್ನು ಕುರಿತಂತೆ ಪ್ರಕಟವಾಗಿರುವ ಮುಳಿಯ ತಿಮ್ಮಪ್ಪಯ್ಯನವರ 'ನಾಡೋಜ ಪಂಪ' ಸಂಶೋಧನೆ, ಚರಿತ್ರೆ, ಸಾಹಿತ್ಯ- ಈ ಮೂರು ಅಂಶಗಳನ್ನೊಳ ಗೊಂಡ ಜೀವನ ಚರಿತ್ರೆಯಾಗಿ ರೂಪುಗೊಂಡಿದೆ. ಇವರೇ ರಚಿಸಿದ ಪಾರ್ತಿಸುಬ್ಬ ಸಹ ಒಂದು ಗಮನಾರ್ಹ ಕೃತಿ. ದೇಜಗೌ ಅವರ ರಾಷ್ಟ್ರಕವಿ ಕುವೆಂಪು ಮತ್ತು ತೀನಂಶ್ರೀ, ಅನಕೃ ಅವರ ಕೈಲಾಸಂ, ತರಾಸು ಅವರ ಅನಕೃ, ವಿ.ಸೀ.ಅವರ ಶಿವರಾಮಕಾರಂತ, ಎನ್.ಅನಂತರಂಗಾಚಾರ್ಯರ ಪ್ರಾಕ್ತನ ವಿಮರ್ಶಾ ವಿಚಕ್ಷಣ, ರಾವ್‌ಬಹದ್ದೂರ ಆರ್.ನರಸಿಂಹಾಚಾರ್ಯ ಜೀವನ ಮತ್ತು ಕಾರ್ಯ, ಶಿವರಾಮಕಾರಂತರ ಕಲಾವಿದ ಕೃಷ್ಣಹೆಬ್ಬಾರರು, ತಿರುಮಲೆ ರಾಜಮ್ಮನವರ ವೀಣೆ ಶೇಷಣ್ಣ, ಕು.ಶಿ.ಹರಿದಾಸಭಟ್ಟ ಅವರ ಕೆ.ಕೆ.ಹೆಬ್ಬಾರರ ಕಲೆ ಮತ್ತು ಬದುಕು, ಎಚ್.ತಿಪ್ಪೇರುದ್ರಸ್ವಾಮಿಯವರ ಬಸವೇಶ್ವರ, ಗಾಂಧೀಜಿ, ಚೆನ್ನವೀರ ಕಣವಿಯವರ ಮಧುರಚೆನ್ನ, ವಿಜಯನಾರಸಿಂಹ ಅವರ ಪುಟ್ಟಣ್ಣ ಕಣಗಾಲ್, ಎಲ್.ಎಸ್.ಶೇಷಗಿರಿರಾವ್ ಅವರ ಟಿ.ಪಿ.ಕೈಲಾಸಂ, ವಿ.ಎಂ.ಇನಾಂದಾರರ, ಬಿ.ಎಂ.ಶ್ರೀ., ಶಾ.ಮಂ.ಕೃಷ್ಣರಾಯರ ಪಾಪು, ಬಸವರಾಜ ಮನ್ಸೂರ, ಕವಿ ತಿಪ್ಪಯ್ಯ, ಮಾಸ್ತರ್, ಅ.ನ.ಕೃಷ್ಣರಾಯ, ಬಳ್ಳಾರಿ ಬೀಚಿ ಪ್ರತಿಭಾಶಿಖರಗಳು, ಕೀರ್ತಿಕಳಶಗಳು, ಹಾ.ಮಾ.ನಾಯಕರ ಸ್ತವನ, ಆರ್.ವಿ.ಎಸ್. ಸುಂದರಂರವರ ರಾಮಕೋಟೀಶ್ವರರಾವ್, ಪಟ್ಟಾಭಿ ಸೀತಾರಾಮಯ್ಯ, ಪಾಲ್ಕುರಿಕೆ ಸೋಮನಾಥ, ವೇಮನ, ಅಕ್ಕಮಹಾದೇವಿಯವರ ದಾಸವರೇಣ್ಯ, ಅನ್ನಮಾಚಾರ್ಯರು, ಬಿ.ಶಾಮಸುಂದರ ಅವರ ಫ.ಗು, ಹಳ್ಳಕಟ್ಟಿ, ಮಾಚಿದೇವ, ಡಾ.ಹಾನಿಮನ್ ಮೊದಲಾದ ಗ್ರಂಥಗಳು ಗಮನಾರ್ಹವಾಗಿವೆ. ರಾಜಕುಮಾರ್ ಹಾಗೂ ಕಾಡುಗಳ್ಳ ವೀರಪ್ಪನ್ ಕುರಿತ ಅನೇಕ ಜೀವನ ಚರಿತ್ರೆಗಳು ಪ್ರಕಟವಾಗಿವೆ.

ಪ್ರಪಂಚದ ವಿಜ್ಞಾನಿಗಳ ಜೀವನ ಚರಿತ್ರೆಯಲ್ಲಿ ಕೆಲವು ಕೃತಿಗಳು ಕನ್ನಡಕ್ಕೆ ಅನುವಾದವಾಗಿಯೂ ಬಂದಿವೆ. ಐಸಾಕ್ ನ್ಯೂಟನ್, ಥಾಮಸ್ ಆಲ್ವ ಎಡಿಸನ್, ಯಂತ್ರಯೋಗಿ ಕಿರ್ಲೋಸ್ಕರ್ ಲಕ್ಷ್ಮಣರಾಯ, ಮಹಾವಿಜ್ಞಾನಿಗಳು, ಭಾರತೀಯ ವಿಜ್ಞಾನಿಗಳು, ಮೇರಿ ಕ್ಯೂರಿ, ಮೇಡಂ ಕ್ಯೂರಿ, ಚಾರ್ಲ್ಸ್ ಡಾರ್ವಿನ್, ಅಲೆಗ್ಸಾಂಡರ್ ಫ್ಲೆಮಿಂಗ್, ಲೂಯಿ ಪ್ಯಾಶ್ಚರ್, ಆಲ್ಬರ್ಟ್ ಐನ್‌ಸ್ಟಿನ್, ಹೆನ್ರಿ ಫೋರ್ಡ್, ದೇಶ ವಿದೇಶದ ಪ್ರಭೃತಿಗಳಾದ ಮ್ಯಾಕ್ಸಿಂ ಗಾರ್ಕಿ, ಸಾಕ್ರಟೀಸ್, ಸ್ಟ್ಯಾಲಿನ್, ಲೆನಿನ್, ನಿಕ್ಸನ್, ಕಾರ್ಲ್ ಮಾರ್ಕ್ಸ್, ಕೆಮಾಲ್ ಪಾಷಾ, ಜಾನ್ ಸ್ಟುವರ್ಟ್ ಮಿಲ್, ಫ್ರ್ಯಾಂಕ್ಲಿನ್, ಮಾರ್ಟಿನ್ ಲೂಥರ್ ಕಿಂಗ್, ಸ್ಯಾಮ್ಯುಯಲ್ ಜಾನ್‌ಸನ್, ಅಬ್ರಹಾಂ ಲಿಂಕನ್, ಕೆನಡಿ ಮೊದಲಾದವರ ಜೀವನ ಚರಿತ್ರೆಗಳು ಸ್ವಂತ ಕೃತಿಗಳಾಗೋ ಅನುವಾದ ಕೃತಿಗಳಾಗೋ ಕನ್ನಡಿಗರಿಗೆ ದೊರಕಿವೆ. (ಎಸ್.ವಿ.ಪಿ.ಬಿ.)

ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಹಲವು ರಾಷ್ಟ್ರೀಯ ನಾಯಕರ ಮತ್ತು ಭಾರತೀಯ ಲೇಖಕರನ್ನು ಕುರಿತಂತೆ ಜೀವನ ಚರಿತ್ರೆಗಳನ್ನು ಪ್ರಕಟಿಸಿವೆ. ಈ ಮಾಲೆಗಳಲ್ಲಿ ರಾಜಾರಾಮಮೋಹನರಾಯ್, ಕಬೀರ, ಚಂಡಿದಾಸ್, ಜಯದೇವ ಮೊದಲಾದ ಸಮಾಜ ಸುಧಾರಕರು, ಸಂತರು, ಕವಿಗಳನ್ನು ಕುರಿತಂತೆ ಜೀವನ ಚರಿತ್ರೆಗಳು ಪ್ರಕಟವಾಗಿವೆ. ಶ್ರೀನಿವಾಸರಾಘುವನ್‌ರ್ ನಮ್ಮಾಳ್ವಾರ್ (ಪುತಿನ) ಕಂಬನ್ (ಎಸ್.ಮಹಾಜನ್) ದೇವೇಂದ್ರನಾಥ್ ಠಾಕೂರ್ (ನಾ.ಚೌಧರಿ) ಅನುವಾದಗೊಂಡಿವೆ. ಸ್ನೇಹಲತಾ ರೆಡ್ಡಿಯವರ ಜೈಲಿನ ದಿನಚರಿ (ಯು.ಆರ್.ಅನಂತಮೂರ್ತಿ), ಅನುವಾದಗೊಂಡಿದೆ. ಬೆಂಗಳೂರಿನ ಶ್ರೀ ರಮಣ ಸೆಂಟರ್ ಫಾರ್ ಲರ್ನಿಂಗ್ ಸಂಸ್ಥೆಯು ಫಾಲ್ ಬ್ರೆಂಟನ್‌ರ ರಮಣ ಮಹರ್ಷಿ ಅವರ ಸಂದೇಶಗಳನ್ನು ಅನುವಾದಿಸಿ (ಎ.ಎಸ್.ವೇಣುಗೋಪಾಲರಾವ್) ಪ್ರಕಟಿಸಿದೆ. ಬಿ.ವಿ.ನರಸಿಂಹ ಸ್ವಾಮಿಯವರು ರಚಿಸಿದ ಸೆಲ್ಫ್ ರಿಯಲೈಸೇಷನ್ ಎಂಬುದು ರಮಣ ಮಹರ್ಷಿಗಳ ಜೀವನ ಚರಿತ್ರೆ. ಇದನ್ನು ಕೆ.ಎ.ನಾರಾಯಣ್ ಅನುವಾದಿಸಿದ್ದಾರೆ. ನಾ.ಕಸ್ತೂರಿಯವರ ಸತ್ಯಂ ಶಿವಂ ಸುಂದರಂ ಎಂಬುದು ಸತ್ಯಸಾಯಿಬಾಬಾರವರ ಜೀವನ ಚರಿತ್ರೆ. ಕೆ.ಎಸ್.ನಾರಾಯಣ ಸ್ವಾಮಿಯವರು

ಅಬ್ರಹಾಂ ಲಿಂಕನ್, ಲೆನಿನ್ ಮತ್ತು ಗಾಂಧೀಜಿಯವರ ಜೀವನ ಚರಿತ್ರೆ ರಚಿಸಿದ್ದಾರೆ. ಕ.ರಾ.ಸಾರಂಗರ ರಾಜೇಂದ್ರಪ್ರಸಾದ್, ಮತ್ತೂರು ಕೃಷ್ಣಮೂರ್ತಿಯವರ ಡಾ.ಜಾಕೀರ್ ಹುಸೇನ್, ಡಿ.ವಿ.ಜಿ.ಯವರ ಮೈಸೂರಿನ ದಿವಾನರುಗಳು ಜ್ಞಾಪಕ ಚಿತ್ರಶಾಲೆ ಸಂಪುಟಗಳು, ಬಿ.ಆರ್.ಪ್ರಾಣೇಶರಾಯರ, ಲಾಲ್ ಬಹದ್ದೂರ್ ಶಾಸ್ತ್ರೀ, ರಾಜಾರಾವು ಮೋಹನರಾಯ, ಕೆ.ಎಸ್.ಪಾಟೀಲರ ಸಮಾಜವಾದಿ ಇಂದಿರಾಗಾಂಧೀ, ನೇತಾಜಿ ಸುಭಾಷ್‌ಚಂದ್ರ ಬೋಸ್, ಜಿ.ಎಸ್.ಭಟ್ಟರ ರಾಜಾರಾವ್ ಮೋಹನ ರಾಯ್, ಸಾಹಿತ್ಯ ಕಲಾ ಸಂಪನ್ನರು, ಲೋಕಮಾನ್ಯ, ರಾಷ್ಟ್ರಶಿಲ್ಪಿ (ಸರ್ದಾರ ಪಟೇಲ್) ಲಾಲಾ ಲಜಪತರಾಯ್, ಟಿ.ಆರ್.ಅನಂತರಾಮು ಅವರ ಶಕ್ತಿ ಸಾರಥಿ ರಾಷ್ಟ್ರಪತಿ (ಅಬ್ದುಲ್ ಕಲಾಂ), ಎಂ.ಎಸ್.ಜಾಂದ್ ಕವಟಿರವರ ಸೇವೆ ತ್ಯಾಗ (ಡಿ.ವಿ.ನಂಜುಂಡಪ್ಪನವರ ಜೀವನ ಚರಿತ್ರೆ), ಹೊ.ಶ್ರೀನಿವಾಸಯ್ಯನವರ ಎನ್.ಎಸ್.ಹರ್ಡೀಕರ, ದೇಜಗೌ ಅವರ ಅಮೇರಿಕಾ ಗಾಂಧಿ, ಲೋಕದ ಬೆಳಕು, ಲೋಕನಾಯಕ ವಿಚಾರವಾದಿ ಪೆರಿಯಾರ್, ನಿತ್ಯ ಸಚಿವ, ಕರ್ನಾಟಕದ ರೂವಾರಿ, ತೀ.ತಾ.ಶರ್ಮರ ಮೋಕ್ಷಗುಂಡಂ, ವಿ.ಎಂ.ಇನಾಂದಾರ್‌ರ ಡಾ.ಅಂಬೇಡ್ಕರ್ ವ್ಯಕ್ತಿ ಮತ್ತು ವಿಚಾರ, ರಂಜಾನ್ ದರ್ಗಾರ ನೆಲ್ಸನ್ ಮಂಡೇಲಾ, ಪಾಟೀಲ್ ಪುಟ್ಟಪ್ಪನವರ ಭಾರತದ ಬೆಳಕು, ನೆಲದ ನಕ್ಷತ್ರಗಳು, ಜೀವನ ಪ್ರಕಾಶ, ಡಿ.ಎಸ್.ಜಯಪ್ಪಗೌಡರ ಸರ್.ಎಂ.ವಿಶ್ವೇಶ್ವರಯ್ಯನವರ ಕಾರ್ಯಸಾಧನೆಗಳು ಮೊದಲಾದವು ಕನ್ನಡ ನಾಡಿನ ಭಾರತೀಯ ಹಾಗೂ ಅಂತಾರಾಷ್ಟ್ರೀಯ ಖ್ಯಾತಿವೆತ್ತ ರಾಜಕಾರಣಿಗಳ ಜೀವನ ಚರಿತ್ರೆಯನ್ನು ನಿರೂಪಿಸುತ್ತವೆ. ಎಚ್ಚೆಸ್ಕೆಯವರ ಸುಧಾ ವಾರಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ವ್ಯಕ್ತಿ ಚಿತ್ರಗಳ ಮೂರು ಬೃಹತ್ ಸಂಪುಟಗಳಾದ ಬೆಳಕು ಚೆಲ್ಲಿದ ಬದುಕು, ಮಾನ್ಯರು ಸಾಮಾನ್ಯರು, ಗಗನಚುಕ್ಕಿ-ಭರಚುಕ್ಕಿ -ಇವು ಉಲ್ಲೇಖನೀಯ. ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯು ಕನ್ನಡ ಪ್ರತಿಭೆ ಎಂಬ ಕೃತಿಯನ್ನು ಪ್ರಕಟಿಸಿದೆ. ಇದರಲ್ಲಿ ಸಾಹಿತ್ಯ, ಸಂಗೀತ, ನೃತ್ಯ, ಆಡಳಿತ, ಶಿಕ್ಷಣ, ಸಮಾಜಸೇವೆ, ಕ್ರೀಡೆ ಮೊದಲಾದ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿಗಳ ಬಗ್ಗೆ ಚಿತ್ರಣವಿದೆ. ಮೈಸೂರಿನ ಮುಲಕನಾಡು ಸಭಾದವರು ಮುಲಕನಾಡು ಮಹನೀಯರು ಎಂಬ ಮಾಲಿಕೆಯಲ್ಲಿ ವಿಶ್ವೇಶ್ವರಯ್ಯ, ಟಿ.ಎಸ್.ವೆಂಕಣ್ಣಯ್ಯ, ಎಚ್.ವಿ.ನಂಜುಂಡಯ್ಯ ಬಿ.ಕೃಷ್ಣಪ್ಪ, ದೇವುಡು ಮೊದಲಾದ ವ್ಯಕ್ತಿಗಳನ್ನು ಕುರಿತು 20 ಕೃತಿಗಳನ್ನು ಹೊರತಂದಿದ್ದಾರೆ.

ಒಬ್ಬ ವ್ಯಕ್ತಿಯ ಸಾಧನೆಯ ಗೌರವಾರ್ಥವಾಗಿ ಅರ್ಪಿಸುವ ಅಭಿನಂದನಾ ಗ್ರಂಥಗಳು, ಸಂಭಾವನಾ ಗ್ರಂಥಗಳು ಜೀವನ ಚರಿತ್ರೆಗೆ ದೊಡ್ಡ ಕೊಡುಗೆಗಳೇ ಆಗಿವೆ. ಇಲ್ಲಿ ಲೇಖಕರು ವಿವಿಧ ದೃಷ್ಟಿ ಕೋನಗಳಿಂದ ಅಭಿನಂದಾನಾರ್ಹ ವ್ಯಕ್ತಿಯ, ಜೀವನದ ವಿವಿಧ ಮುಖಗಳ ಪರಿಚಯ ವಿಮರ್ಶೆಗಳನ್ನು ಒದಗಿಸಿರುತ್ತಾರೆ. ವ್ಯಕ್ತಿಯ ಜೀವನ ಚರಿತ್ರೆ ಸಾಧ್ಯವಾದ ಮಟ್ಟಿಗೆ ಇವುಗಳಲ್ಲಿ ಸಮರ್ಪಕವಾಗಿ ಸಿಗುತ್ತದೆ. (ನೋಡಿ: ಕನ್ನಡದಲ್ಲಿ ಸಂಕಲನ ಗ್ರಂಥಗಳು).

ಕನ್ನಡದ ಅನೇಕ ಪ್ರಮುಖ ಸಾಹಿತಿಗಳು ಅಂಕಣ ಪ್ರಕಾರ ಸಾಹಿತ್ಯದಲ್ಲಿ ಕೆಲಸ ಮಾಡಿದ್ದಾರೆ. ಈ ಬರೆಹಗಳಲ್ಲಿ ಹಲವು ವ್ಯಕ್ತಿಗಳ ಜೀವನ, ಸಾಧನೆಗಳು ದೊರೆಯುತ್ತವೆ (ನೋಡಿ: ಕನ್ನಡದಲ್ಲಿ ಅಂಕಣ ಸಾಹಿತ್ಯ). ಕನ್ನಡದಲ್ಲಿ ಕವಿಕೃತಿಗಳನ್ನು ಕುರಿತಂತೆ ಹಲವರು ಪ್ರೌಢ ಪ್ರಬಂಧಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಆ ಲೇಖಕರ ಜೀವನ ಚರಿತ್ರೆಗಳು ಲಭ್ಯವಾಗಿವೆ. ಸಾಹಿತ್ಯ ಸಂಪದ ಎಂಬ ಮಾಲೆಯಲ್ಲಿ ನವಕರ್ನಾಟಕ ಪ್ರಕಾಶನ ಸಂಸ್ಥೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಲೇಖಕರ ಬಗೆಗೆ ಕೃತಿಗಳನ್ನು ಹೊರತರುವ ಯೋಜನೆಯನ್ನು (ಸಂ: ಹಾ.ಮಾ. ನಾಯಕ, ಪ್ರಧಾನ ಗುರುದತ್ತ) ಹಮ್ಮಿಕೊಂಡಿದ್ದು, ಇದುವರೆಗೆ 20 ಕೃತಿಗಳು ಹೊರಬಂದಿವೆ (2004).

ಆತ್ಮಕಥೆಗಳು : ವ್ಯಕ್ತಿ ತನ್ನ ಜೀವನ ವಿಚಾರಗಳನ್ನು ತಾನೇ ಬರೆದಲ್ಲಿ ಆತ್ಮಕಥೆ ಎನಿಸಿಕೊಳ್ಳುತ್ತದೆ. ಅದನ್ನೇ ಇತರರು ಬರೆದಾಗ ಜೀವನ ಚರಿತ್ರೆಯಾಗುತ್ತದೆ. ಆತ್ಮಕಥೆ ಜೀವನ ಚರಿತ್ರೆಯೆಂಬ ಸಾಹಿತ್ಯ ಪ್ರಕಾರದ ಒಂದು ಭಾಗ. ಆತ್ಮಕಥೆ ವ್ಯಕ್ತಿಯೊಬ್ಬನ ಚರಿತ್ರೆಯಾಗಿರುವಂತೆ ಆತನ ಪರಿಸರದ ಚರಿತ್ರೆಯೂ ಆಗಿರುತ್ತದೆ. ಕಥಾನಾಯಕ ತನ್ನ ಮತ್ತು ತನ್ನ ಸುತ್ತುಮುತ್ತಿನ ಜೀವನವನ್ನು ತಾನು ಕಂಡಂತೆ ಇಲ್ಲಿ ವರ್ಣಿಸಿರುತ್ತಾನೆ. ಬರೆಯುವಷ್ಟು ಶಕ್ತಿ ಮತ್ತು ತಾಳ್ಮೆ ಇದ್ದಲ್ಲಿ ಪ್ರತಿಯೊಬ್ಬನೂ ತನ್ನ ಆತ್ಮಕಥೆಯನ್ನು ಬರೆಯಬಹುದು. ಒಂದೊಂದೊಂದಕ್ಕೂ ಪ್ರಾಮುಖ್ಯ ಇದ್ದೇ ಇದೆ. ಬರೆದಾತ ಸಮಾಜದಲ್ಲಿ ಗಣ್ಯವ್ಯಕ್ತಿಯಾದಾಗಲಂತೂ ಆತ ಬರೆದ ಆತ್ಮಕಥೆಗೆ ಹೆಚ್ಚಿನ ಪ್ರಾಧಾನ್ಯ ಒದಗುತ್ತದೆ.

ಕನ್ನಡದಲ್ಲಿ ಆತ್ಮಕಥಾಸಾಹಿತ್ಯ ಹೆಚ್ಚು ಬೆಳೆದಿಲ್ಲವೆನ್ನಬೇಕು. ಈಗ ಬಂದಿರುವ ಜೀವನಚರಿತ್ರೆಗಳಲ್ಲಿ ಅರ್ಧದಷ್ಟೂ ಆತ್ಮಕಥೆಗಳಿಲ್ಲ. ಬಂದಿರುವಂಥವು ಅರ್ಧ ಸ್ವತಂತ್ರ ಆತ್ಮಕಥೆಗಳಾದರೆ ಉಳಿದವು ಅನುವಾದಗಳು. ಅವು ರಾಷ್ಟ್ರನಾಯಕರು, ಅನ್ಯರಾಷ್ಟ್ರನಾಯಕರು, ಸಾಹಿತಿಗಳು ಮತ್ತು ವಿಜ್ಞಾನಿಗಳನ್ನು ಕುರಿತವಾಗಿವೆ. ಸ್ವತಂತ್ರ ಆತ್ಮಕಥೆಯಲ್ಲಿ 50ಕ್ಕೂ ಹೆಚ್ಚು ಜನ ಸಾಹಿತಿಗಳ ಮತ್ತು ಕಲಾವಿದರ ಆತ್ಮವೃತ್ತಾಂತಗಳನ್ನು ಕಾಣಬಹುದು. 1350 ಪುಟಗಳಷ್ಟು ವ್ಯಾಪ್ತಿವುಳ್ಳ ಕೆಲವು ಸಂಪುಟಗಳಲ್ಲಿ ಪ್ರಕಟವಾಗಿರುವ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಭಾವ (1968-69) ಕನ್ನಡದ ಆತ್ಮಚರಿತ್ರೆಗಳಲ್ಲಿ ಒಂದು ದೊಡ್ಡ ಹೆಜ್ಜೆ. ಗಾತ್ರದಲ್ಲಿಯೂ ಪಾತ್ರದಲ್ಲಿಯೂ ಹಿರಿದಾದ ಸ್ಥಾನವನ್ನು ಪಡೆದಿರುವ ಈ ಗ್ರಂಥ ಅವರ ಸಾರ್ಥಕ ಬಾಳಿನ ಅರ್ಧಶತಮಾನವನ್ನು ಬಿಂಬಿಸಿದೆ. ಮೊದಲ ಭಾಗದಲ್ಲಿ ತಮ್ಮ ಊರಿಗೆ ಮಾಸ್ತಿ ಎಂದು ಹೆಸರು ಬರಲು ಕಾರಣ, ತಮ್ಮ ಬಾಲ್ಯ, ವಿದ್ಯಾಭ್ಯಾಸ, ಆಗಿನ ಕಾಲದ ಸಂಪ್ರದಾಯ ಮೊದಲಾದವುಗಳನ್ನು ವಿವರವಾಗಿ ಚಿತ್ರಿಸಿದ್ದಾರೆ. ಎರಡನೆಯ ಭಾಗದಲ್ಲಿ ಅವರ ಅಧಿಕಾರಾವಧಿಯ ವಿಕಮುಖ ಚಿತ್ರವಿದೆ. ಮೂರನೆಯ ಭಾಗದಲ್ಲಿ ವಿಶ್ರಾಂತಿ ಕಾಲದ ಬದುಕಿದೆ. ಮಾಸ್ತಿಯವರ ಸಮಕಾಲೀನರಾಗಿ ಕನ್ನಡಕ್ಕಾಗಿ ಬಹುವಿಧವಾಗಿ ದುಡಿದ ಕೆಲವು ಹಿರಿಯ ಚೇತನಗಳ ವಿಷಯಗಳೂ ಹಾಸುಹೊಕ್ಕಾಗಿ ಈ ಗ್ರಂಥದಲ್ಲಿ ಬಂದಿವೆ. ಒಂದು ದೃಷ್ಟಿಯಿಂದ ಇದು ಸುಮಾರು ಆರು ದಶಕಗಳ ಕನ್ನಡನಾಡಿನ ಚಿತ್ರವನ್ನೂ ಕನ್ನಡ ನಿಧಾನವಾಗಿಯಾದರೂ ಸುಪುಷ್ಟವಾಗಿ ತಲೆಯೆತ್ತಿದ ಬಗೆಯನ್ನೂ ಪ್ರತಿಬಿಂಬಿಸುತ್ತದೆ.

ಹುಚ್ಚು ಮನಸ್ಸಿನ ಹತ್ತು ಮುಖಗಳು (1948) ಕೆ.ಶಿವರಾಮ ಕಾರಂತರ ಕಾಲುಶತಮಾನದ ಬಾಳಿನ ಕಥೆ. ಈ ಕೃತಿ ಕಾರಂತರ ಸಮೃದ್ಧಾನುಭವಕ್ಕೂ ಬಹುಮುಖ ಪ್ರತಿಭೆಗೂ ಜ್ವಲಂತ ಸಾಕ್ಷಿಯಾಗಿದೆ. ಗುರುವಿಲ್ಲದೆ, ಗುರಿಯಿಲ್ಲದೆ ಹುಚ್ಚು ಮನಸ್ಸು ತೋರಿದ ದಿಕ್ಕಿನಲ್ಲಿ ನಡೆದು ಇವರ ಸಾಧನೆ ಅದ್ಭುತ. ವಿಷ್ಣುವಿಗೆ ಬರಿಯ ಹತ್ತು ಅವತಾರಗಳಾದರೆ, ತನ್ನ ಧ್ಯೇಯಗಳು ಹದಿನಾರು ಅವತಾರಗಳನ್ನು ತಳೆಯುವಂತಾಯಿತೆಂದು ಲೇಖಕರೇ ಹೇಳಿಕೊಂಡಿದ್ದಾರೆ. ರಾಷ್ಟ್ರಭಕ್ತಿ, ಸ್ವದೇಶಿಚಳವಳಿ, ವ್ಯಾಪಾರ, ಪತ್ರಿಕೋದ್ಯಮ, ಅಧ್ಯಾತ್ಮಸಾಧನೆ, ಕಲೆಯ ಭಿನ್ನ ಭಿನ್ನ ಮುಖಗಳು, ಫೋಟೋಗ್ರಫಿ, ನಾಟಕ, ನೃತ್ಯ, ಚಿತ್ರ, ವಾಸ್ತು, ಸಂಗೀತ, ಚಲನಚಿತ್ರ, ಸಮಾಜಸುಧಾರಣೆ, ಗ್ರಾಮೋದ್ಧಾರ, ಶಿಕ್ಷಣ ವಲಯದಲ್ಲಿ ಪ್ರಯೋಗಗಳು, ಉದ್ಯೋಗ ಇವೆಲ್ಲ ಅವತಾರಗಳೂ ಅವಾಂತರಗಳೂ ಕಾರಂತರ ಜೀವನದಲ್ಲಿ ಆಗಿಹೋಗಿವೆ. ಸ್ವತಂತ್ರ ಜೀವನದಿಂದ ಸನ್ಯಾಸಿ ಜೀವನದ ಮೂಲಕ ಹಾದು ಸಂಸಾರಿಯಾಗಿಯೂ ಸಾಗಿದ್ದೇನೆ ಎಂದು ಅವರೇ ಹೇಳಿಕೊಂಡಿದ್ದಾರೆ. ಪ್ರಚಲಿತ ವಿಷಯಗಳ ಬಗ್ಗೆ ಆಳವಾಗಿ ಆಲೋಚನೆ ಮಾಡಿ, ಅಸಾಧ್ಯ ಸಾಹಸಗಳಿಗೆ ಕೈಹಾಕಿ ಜಯಿಸಿದ ಕೀರ್ತಿ ಕಾರಂತರದು. ಇಷ್ಟೊಂದು ವ್ಯಾಪಕ ಹವ್ಯಾಸಗಳನ್ನುಳ್ಳ ಬೇರೊಬ್ಬ ಕನ್ನಡ ಸಾಹಿತಿಯನ್ನು ಹೆಸರಿಸುವುದು ಕಷ್ಟ. ಸ್ಮೃತಿಪಟಲದಿಂದ (1977-78 ಮೂರು ಭಾಗಗಳು) ಎಂಬ ಕೃತಿ ಕಾರಂತರ ಆತ್ಮಕಥೆಯ ಮುಂದುವರಿದ ಭಾಗ.

ಹೋರಾಟದ ಬದುಕು (1968) ದೇ.ಜ.ಗೌ. ಅವರ ಆತ್ಮಕಥೆ. ಇದು ಅಚ್ಚಕನ್ನಡದ ಧೀಮಂತ ಯೋಧನ ಹೋರಾಟದ ಬದುಕನ್ನು ಒಳಗೊಂಡಿದೆ. ಬಡಕುಟುಂಬದಲ್ಲಿ ಗುಡಿಸಲಿನಲ್ಲಿ ಜನಿಸಿ, ಅಡಿಗಡಿಗೆ ನಾನಾ ಎಡರುತೊಡರುಗಳನ್ನು ಎದುರಿಸಿ, ಗೊತ್ತುಗುರಿಯಿಲ್ಲದೆ ಬೆಳೆದು, ಗುರು ಕುವೆಂಪು ಅವರ ಕೃಪಾಕಟಾಕ್ಷಕ್ಕೆ ಪಾತ್ರವಾಗಿ, ಅವರ ಆಶೀರ್ವಾದದ ಮಹಾರಕ್ಷೆಯಲ್ಲಿ ಕನ್ನಡದ ದೀಕ್ಷೆಯನ್ನು ಪಡೆದು, ಕನ್ನಡಕ್ಕಾಗಿ ದುಡಿದು, ಕನ್ನಡದಿಂದ ಕೀರ್ತಿ, ಯಶಸ್ಸುಗಳನ್ನು ಪಡೆದು, ಕನ್ನಡಕ್ಕಾಗಿಯೇ ತನು, ಮನ, ಧನಗಳನ್ನು ಸಮರ್ಪಿಸಿಕೊಂಡ ಮಹಾಚೇತನವೊಂದರ ಆತ್ಮವೃತ್ತಾಂತವಿದು. ಗುಡಿಸಲಿನಿಂದ ಗಂಗೋತ್ರಿಯವರೆಗೆ ನಡೆದ ಜೀವನಾವಧಿಯಲ್ಲಿ ನಾನಾ ಕಾರಣಗಳಿಂದ, ನಾನಾ ರೀತಿಯಲ್ಲಿ ಲೇಖಕರು ನಡೆಸಿದ ಹೋರಾಟಗಳ ವೃತ್ತಾಂತವನ್ನೊಳಗೊಂಡಿರುವ ಈ ಕೃತಿಗೆ

ಹೋರಾಟದ ಬದುಕು ಎಂಬ ಹೆಸರು ಉಚಿತವಾಗಿದೆ. ಆರಂಭದಲ್ಲಿ ಬಡತನದೊಂದಿಗೆ, ಜಾತೀಯತೆಯೊಂದಿಗೆ ಹೋರಾಟ ನಡೆದಿರುವುದು ಕಂಡುಬಂದರೂ ಪ್ರಮುಖವಾದ ಹೋರಾಟ ಕನ್ನಡಕ್ಕೆ ಸಂಬಂಧಿಸಿದುದಾಗಿದೆ. ಈ ಕೃತಿ ಆತ್ಮಕಥಾಸಾಹಿತ್ಯಕ್ಕೆ ಒಂದು ಮಹತ್ತರ ಕೊಡುಗೆಯಾಗಿದೆ. ಇಲ್ಲಿನ ಗದ್ಯದ ಗತ್ತು ಮತ್ತು ಗ್ರಾಮೀಣ ಭಾಷಾ ಬಳಕೆಯ ಸೊಗಡು ಹೆಚ್ಚು ಆಕರ್ಷಣೀಯವೂ ಮನೋಜ್ಞವೂ ಆಗಿದ್ದು ಶೈಲಿಯ ಹೊಸದೊಂದು ಮಾದರಿಗೆ ಬುನಾದಿಯಾಗಿದೆ. ಕನ್ನಡದ ಮುನ್ನಡೆಗೆ ಇರಬಹುದಾದ ತೊಡಕುಗಳು, ಅಡ್ಡಬಂದ ವ್ಯಕ್ತಿಗಳು, ಸನ್ನಿವೇಶಗಳು, ಕನ್ನಡ ಪ್ರಗತಿಯ ಹಲವಾರು ಮಾರ್ಗಗಳು, ಕನ್ನಡ ನಾಡಿನಲ್ಲಿ ನಡೆದ ಹೋರಾಟದ ವಿವರ ಇಲ್ಲಿ ಚಿತ್ರಿತವಾಗಿರುವುದರಿಂದ ಕನ್ನಡ ನುಡಿ ಮತ್ತು ಸಾಹಿತ್ಯದ ಬಗೆಗಿನ ಮೂಲ ವಸ್ತುವನ್ನೊದಗಿಸುವುದರಲ್ಲಿ ಈ ಕೃತಿಗೆ ಸಾರ್ಥಕತೆ ಲಭಿಸಿದೆ.

ಹತ್ತು ವರುಷ (1939) ಜಿ.ಪಿ.ರಾಜರತ್ನಂ ಅವರ ಆತ್ಮಕಥೆ. 152 ಪುಟಗಳ ಈ ಕೃತಿಯಲ್ಲಿ ಲೇಖಕರ ಹತ್ತು ವರ್ಷಗಳ ಜೀವನ ಕಥೆಯಿದೆ. ಇದರಲ್ಲಿ ರಾಜರತ್ನಂ ಅಯ್ಯಂಗಾರ್ ರಾಜರತ್ನಂ ಆದುದು, ನಮ್ಮ ನಮ್ಮವರು ಕೃತಿ ಅಚ್ಚಾದುದು ಈ ಎರಡು ಭಾಗಗಳು ತುಂಬ ಸ್ವಾರಸ್ಯವಾಗಿವೆ. ರತ್ನನ ತಂದೆ ತೀರಿಕೊಂಡಾಗ ನಂಟರಾರೂ ಸಹಕರಿಸದೆ ಶವವನ್ನು ಜಟಕಾ ಗಾಡಿಯಲ್ಲಿ ತೆಗೆದುಕೊಂಡು ಹೋಗಿ ಸಂಸ್ಕಾರ ಮಾಡಿದ್ದನ್ನು ಓದಿದಾಗ ಎಂಥವರ ಎದೆಯೂ ಕರಗುತ್ತದೆ. ಸತಿಯನ್ನು ಕ್ಷಯದ ಆಸ್ಪತ್ರೆಗೆ ಸೇರಿಸಿ ಹಿಂತಿರುಗಿ ಬರುವಾಗ ದಾರಿಯಲ್ಲಿ ಕಂಡ ಹೆಂಡದಂಗಡಿಯ ಅನುಭವವೇ ಅವರ ರತ್ನನ ಪದಗಳು ಸೃಷ್ಟಿಯಾಗಲು ಕಾರಣವಾಯಿತೆಂದು ಓದಿದಾಗ ಕುತೂಹಲವೂ ಆಶ್ಚರ್ಯವೂ ಉಂಟಾಗುತ್ತದೆ.

ಮಿಂಚಿನ ಬಳ್ಳಿ ಕಾರ್ಯಾಲಯದಿಂದ ಪ್ರಕಟವಾದ ಸಾಹಿತ್ಯಜ್ಞರ ಆತ್ಮಕಥನ (1946) ಇನ್ನೊಂದು ವಿಶಿಷ್ಟ ಕೃತಿ. ಈ ಕೃತಿಯಲ್ಲಿ ಹನ್ನೊಂದು ಪ್ರಸಿದ್ಧ ಸಾಹಿತಿಗಳ ಭಿನ್ನಾನುಭವಗಳ ವೈವಿಧ್ಯಮಯವೂ ಸ್ವಾರಸ್ಯಪೂರ್ಣವೂ ಆದ ಪರಿಚಯವನ್ನು ಅವರವರ ಮಾತಿನಲ್ಲಿಯೇ ಕಾಣಬಹುದು. ಗೋವಿಂದ ಪೈ, ಆರ್.ವಿ.ಜಾಗೀರದಾರ್, ದೇವುಡು ನರಸಿಂಹಶಾಸ್ತ್ರೀ, ರಂ.ಶ್ರೀ.ಮುಗಳಿ, ಸಿ.ಕೆ.ವೆಂಕಟರಾಮಯ್ಯ, ವಿ.ಕೃ.ಗೋಕಾಕ, ಶಂ.ಬಾ.ಜೋಶಿ, ಚನಪ್ಪ ಉತ್ತಂಗಿ, ಬೆಟಗೇರಿ ಕೃಷ್ಣಶರ್ಮ, ಎ.ಆರ್.ಕೃಷ್ಣಶಾಸ್ತ್ರೀ, ದ.ರಾ.ಬೇಂದ್ರೆ, ಇವರುಗಳೇ ಅಲ್ಲಿನ ಸಾಹಿತಿಗಳು.

ನಾಟ್ಯನೆನಪುಗಳು ಎಂಬ ಕೃತಿಯಲ್ಲಿ ಶ್ರೀರಂಗರು ರಂಗಭೂಮಿಗೂ ತಮಗೂ ಇರುವ ನಂಟನ್ನು ಹೇಳಿಕೊಂಡಿದ್ದಾರೆ. ನಡೆದು ಬಂದ ದಾರಿಯ ಮೂರನೆಯ ಸಂಪುಟದಲ್ಲಿ (1961) ಬೇಂದ್ರೆ ಅವರು ಚತುರ್ಮುಖ ಎಂಬ ಶೀರ್ಷಿಕೆಯಲ್ಲಿ ತಮ್ಮ ಆತ್ಮವೃತ್ತಾಂತವನ್ನು ಬರೆದಿದ್ದಾರೆ. ಮನ್ವಂತರದ ಒಂದನೆಯ ಸಂಪುಟದಲ್ಲಿಯೂ ಅವರು ತಮ್ಮ ಕಾವ್ಯಜೀವನದ ಹಿನ್ನೆಲೆಯನ್ನು ವಿವರಿಸಿದ್ದಾರೆ. ಸಿಂ.ಪಿ.ಲಿಂಗಣ್ಣನವರು ಮೂವತ್ತೈದು ವರ್ಷಗಳು ಎಂಬ ಕೃತಿಯಲ್ಲಿ ತಾವು ಕಂಡುಂಡ ಸಿಹಿಕಹಿಗಳ ಅನುಭವಗಳನ್ನು ಹೇಳಿಕೊಂಡಿದ್ದಾರೆ. ಆಲೂರು ವೆಂಕಟರಾಯರ ಜೀವನ ಸ್ಮರಣೆ ಎಂಬ ಗ್ರಂಥದಲ್ಲಿ ಕರ್ನಾಟಕದ ಹೊಸ ಪ್ರಜ್ಞೆಯ ಬೆಳವಣಿಗೆಯನ್ನು ಕಾಣಬಹುದು.

ನವರತ್ನ ರಾಮರಾಯರ ಕೆಲವು ನೆನಪುಗಳು, ವಾಸುದೇವಾಚಾರ್ಯರ ನೆನಪುಗಳು, ಡೂನು ಅವರ ಕಾಡಿನಲ್ಲಿ ಕಳೆದ ದಿನಗಳು, ದಿವಾಕರರ ಸೆರೆಮನೆ ಇವು ಅತ್ಯುತ್ತಮ ನೆನಪುಗಳಾಗಿವೆ. ಗುಬ್ಬಿ ವೀರಣ್ಣನವರ ಕಲೆಯೇ ಕಾಯಕ (1967) ಕಲಾವಿದನೊಬ್ಬನ ಹಲವು ಹನ್ನೆರಡು ಬವಣೆಗಳ, ನೂರಾರು ಸಮಸ್ಯೆಗಳ ಪ್ರಾತಿನಿಧಿಕ ಗ್ರಂಥದಂತಿದೆ. ಕನ್ನಡ ರಂಗಭೂಮಿಗೆ ಗುಬ್ಬಿ ವೀರಣ್ಣನವರು ಸಲ್ಲಿಸಿದ ಬಹುಮುಖ ಸೇವೆಯನ್ನೂ ಅವರ ಸಾಧನೆ ಸಿದ್ಧಿಗಳನ್ನೂ ಇಲ್ಲಿ ಕಾಣಬಹುದು.

ಸುಧಾ, ಕರ್ಮವೀರ ಮೊದಲಾದ ವಾರಪತ್ರಿಕೆಗಳಲ್ಲಿಯೂ ಪ್ರಜಾವಾಣಿ ದಿನಪ್ರತಿಕೆಯಲ್ಲಿಯೂ ಅನೇಕರ ಆತ್ಮಕಥೆಗಳು ಪ್ರಕಟವಾಗಿವೆ. ಕರ್ನಾಟಕದಲ್ಲಿ ಕರ್ಣನ ಪಾತ್ರಕ್ಕೆ ಅತ್ಯಂತ ಹೆಸರುವಾಸಿಯಾದ ಕೊಟ್ಟೂರಪ್ಪ ಮತ್ತು ಭೀಮನ ಪಾತ್ರದ ಮೂಲಕ ಹೆಸರು ಪಡೆದ ಸ್ತ್ರೀ ನಾಟಕ ಮಂಡಳಿಯ ನಾಗರತ್ನಮ್ಮ ಇವರ ಆತ್ಮಚರಿತ್ರೆಗಳು ಸುಧಾ ವಾರಪತ್ರಿಕೆಯಲ್ಲಿ ಪ್ರಕಟವಾಗಿವೆ.

ಕನ್ನಡದ ಅತ್ಯಂತ ಜನಪ್ರಿಯ ನಾಯಕ ನಟ ರಾಜಕುಮಾರ್ ಅವರ ಹೃದ್ಯವಾದ ಆತ್ಮಕಥೆ ಪ್ರಜಾವಾಣಿ ದಿನಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಯಿತು (1970). ಮಣ್ಣಿನ ಮಗನೊಬ್ಬ ತನಗೆ ರಕ್ತಗತವಾಗಿ ಬಂದ ಕಲೆಯನ್ನು ಭಯ ಭಕ್ತಿ ಶ್ರದ್ಧೆ ಗೌರವಗಳಿಂದ ಆರಾಧಿಸಿ, ಸಾಧಿಸಿ, ಅತ್ಯುನ್ನತ ಮಟ್ಟಕ್ಕೇರಿದ ಚಿತ್ರವನ್ನಿಲ್ಲಿ ಕಾಣಬಹುದು. ಸಾಧನೆಯ ಸಮಯದಲ್ಲಿ ಆತ ಪಟ್ಟ ಪಾಡು, ತೊಟ್ಟ ನಿಷ್ಠೆ, ಕನ್ನಡ ಪ್ರೇಮ ಎಂಥವರಿಗೂ ಮೆಚ್ಚಿಗೆ ತರುವಂಥವು.

ಆತ್ಮಕತೆ ನಿವೇದಿಸಿದವರಲ್ಲಿ ಹೆಸರಾಂತ ಲೇಖಕರು, ಕಲಾವಿದರು, ಕ್ರೀಡಾಪಟುಗಳು, ಚಲನಚಿತ್ರ ಮತ್ತು ರಂಗಭೂಮಿಯ ನಟನಟಿಯರು ಸೇರಿದ್ದಾರೆ. ವ್ಯಕ್ತಿಗಳಿಗೆ ಸಮರ್ಪಿಸಿದ ಅಭಿನಂದನ ಗ್ರಂಥಗಳಲ್ಲಿ ಅವುಗಳ ಪ್ರಾರಂಭದ ಪುಟಗಳಲ್ಲಿ ಆಯಾ ವ್ಯಕ್ತಿಗಳು ತಮ್ಮ ಜೀವನ ವೃತ್ತಾಂತವನ್ನು ನಿರೂಪಿಸಿದ್ದಾರೆ. ಕನ್ನಡದಲ್ಲಿ ಅಭಿನಂದನ ಗ್ರಂಥಗಳ ಒಂದು ಪರಂಪರೆಯೇ ಇರುವುದನ್ನು ನಾವು ಮರೆಯುವಂತಿಲ್ಲ. ಕನ್ನಡದ ಕೆಲವು ಮುಖ್ಯ ಆತ್ಮಕಥೆಗಳನ್ನು ಈ ಮುಂದೆ ಹೆಸರಿಸಲಾಗಿದೆ. ರಾವ್ ಬಹದ್ದೂರರ ಮರೆಯದ ನೆನಪುಗಳು (1959), ಡಿವಿಜಿಯವರ ಜ್ಞಾಪಕ ಚಿತ್ರಶಾಲೆ (1967-74), ರಾಜಕುಮಾರ್ ಅವರ ನಟಸಾರ್ವಭೌಮ (1970), ವಿ.ಸೀತಾರಾಮಯ್ಯನವರ ಕಾಲೇಜು ದಿನಗಳು (1971) ಮತ್ತು ಮುಂಬಯಿ ವಾಸದ ನೆನಪುಗಳು (1976), ಅನಕೃ ಅವರ ಬರಹಗಾರನ ಬದುಕು (1972), ಅಲೂರು ವೆಂಕಟರಾಯರ ನನ್ನ ಜೀವನ ಸ್ಮೃತಿಗಳು (1973), ಕೋ.ಚೆನ್ನಬಸಪ್ಪನವರ ನನ್ನ ಮನಸ್ಸು ನನ್ನ ನಂಬುಗೆ (1973), ಎಚ್.ಕೆ.ವೀರಣ್ಣಗೌಡರ ಬದುಕು-ಮೆಲಕು (1974), ಆರ್.ನಾಗೇಂದ್ರರಾವ್ ಅವರ ಇದು ನನ್ನ ಕಥೆ (1974), ಮಳವಳ್ಳಿ ಸುಂದರಮ್ಮನವರ ಅಭಿನಯಶಾರದೆ (1975), ಬಸವರಾಜ ಕಟ್ಟೀಮನಿ ಅವರ ಕುಂದರನಾಡಿನ ಕಂದ (1976) ಮತ್ತು ಕಾದಂಬರಿಕಾರನ ಕಥೆ (1981), ಬೀಚಿಯವರ ನನ್ನ ಬಯಾಗ್ರಫಿ (1976), ಶಾರದ ವಿ.ಗೋಕಾಕ್ ಅವರ ಒಲವೆ ನನ್ನ ಬದುಕು (1977), ಶ್ರೀರಂಗರಾಜು ಅವರ ನಾನು ತುಳಿದ ಹಾದಿ (1978), ಇ.ಎ.ಎಸ್.ಪ್ರಸನ್ನರ ಪ್ರಸನ್ನ ಜೀವನ ಒಂದು ಆತ್ಮಕಥೆ (1978), ಕೆದಂಬಾಡಿ ಜತ್ತಪ್ಪ ರೈ ಅವರ ಬೇಟೆಯ ನೆನಪುಗಳು (1978-79), ಬಿ.ಜಿ.ಎಲ್.ಸ್ವಾಮಿ ಅವರ ಪ್ರಾಧ್ಯಾಪಕನ ಪೀಠದಲ್ಲಿ (1979), ಬಿ.ಜಯಮ್ಮನವರ ಅಭಿನೇತ್ರಿ (1979), ಡಿ.ಕೆಂಪರಾಜ ಅರಸ್ ಅವರ ಅರವತ್ತು ವರ್ಷಗಳು (1980), ಕುವೆಂಪು ಅವರ ನೆನಪಿನ ದೋಣಿಯಲ್ಲಿ (1980), ಶೇ.ಗೋ.ಕುಲಕರ್ಣಿ ಅವರ ನಾನು ಕಂಡ ಗೆಳೆಯರ ಗುಂಪು (1980), ರಂ.ಶ್ರೀ.ಮುಗಳಿಯವರ ಜೀವನ ರಸಿಕ (1982), ಮಲ್ಲಿಕಾರ್ಜುನ ಮನ್ಸೂರರ ನನ್ನ ರಸಯಾತ್ರೆ (1983), ಎನ್ಕೆ ಕುಲಕರ್ಣಿಯವರ ನಾನಿಯ ನೆನಪುಗಳು (1983), ಚಿ.ನ.ಮಂಗಳಾ ಅವರ ಅಧ್ಯಾಪಕಿಯಾಗಿ ಇಪ್ಪತ್ತೈದು ವರ್ಷ ಮತ್ತು ಸ್ನೇಹಸಿಂಧು (1985), ಅನುಪಮಾ ನಿರಂಜನರ ನೆನಪು ಸಿಹಿ ಕಹಿ (1985) ಮತ್ತು ಬರಹಗಾರ್ತಿಯ ಬದುಕು (1990), ಜಿ.ಎಸ್.ಶಿವರುದ್ರಪ್ಪ ಅವರ ಚದುರಂಗ (1986), ತ.ಸು.ಶಾಮರಾಯರ ಮೂರುತಲೆಮಾರು (1987), ಸ.ಸ.ಮಾಳವಾಡರ ದಾರಿ ಸಾಗಿದೆ (1989). ಅಂಬುಜಾ ತ.ರಾ.ಸು. ಅವರ ಹಿಂತಿರುಗಿ ನೋಡಿದಾಗ (1990), ಎ.ಎನ್.ಮೂರ್ತಿರಾವ್ ಅವರ ಸಂಜೆಗಣ್ಣಿನ ಹಿನ್ನೋಟ (1990), ಬಿ.ಡಿ.ಜತ್ತಿ ಅವರ ನನಗೆ ನಾನೇ ಮಾದರಿ (1990), ಸಮೇತನಹಳ್ಳಿ ರಾಮರಾಯರ ಕೋಟು ಕೊಟ್ಟಮನೆ (1991), ತ.ಸು.ಶಾಮರಾಯರ ನೆನಪಿನ ಅಲೆಗಳು (1991), ಉತ್ತಂಗಿ ಚನ್ನಪ್ಪನವರ ಆತ್ಮಚರಿತ್ರೆ (1991), ಕು.ಶಿ.ಹರಿದಾಸಭಟ್ಟರ ನಿವೇದನೆ (1992), ಎಸ್.ಆರ್.ಗುಂಜಾಳ ಅವರ ನಾನು (1992), ನಂಜುಂಡಸ್ವಾಮಿಯವರ ಅಜ್ಞಾತ ಅಧ್ಯಾಪಕನ ಆತ್ಮಚರಿತ್ರೆ (1994), ಪೆರ್ಲ ಕೃಷ್ಣಭಟ್ಟರ ಬದುಕಿ ಫಲವೇನು (1994), ಅರವಿಂದ ಮಾಲಗತ್ತಿಯವರ ಗೌರ್ಮೆಂಟ್ ಬ್ರಾಹ್ಮಣ (1994), ಪಿ.ಲಂಕೇಶರ ಹುಳಿಮಾವು (1997), ಆರ್.ಸಿ.ಹಿರೇಮಠ ಅವರ ಉರಿ ಬರಲಿ ಸಿರಿ ಬರಲಿ (1995), ಎಚ್.ನರಸಿಂಹಯ್ಯನವರ ಹೋರಾಟದ ಹಾದಿ (1995), ಜಿ.ಎಂ.ಪಾಟೀಲರ ನೆನಪಿನಂಗಳದಲ್ಲಿ (1995), ಕೆರೆಮನೆ ಶಿವರಾಮ ಹೆಗಡೆಯವರ ನೆನಪಿನ ರಂಗಸ್ಥಳ (1996), ಕಯ್ಯಾರಕಿಞ್ಞಣ್ಣರೈ ಅವರ ದುಡಿಮೆಯೇ ನನ್ನ ದೇವರು (1996), ಸೇಡಿಯಾಪು ಕೃಷ್ಣಭಟ್ಟರ ಈಶ್ವರ ಸಂಕಲ್ಪ ಅಥವಾ ದೈವಲೀಲೆ (1996), ಸಿದ್ಧಲಿಂಗಯ್ಯನವರ ಊರು ಕೇರಿ

(1996), ಎಸ್.ಎಲ್.ಭೈರಪ್ಪನವರ ಭಿತ್ತಿ (1996), ಎಚ್.ಎಲ್. ನಾಗೇಗೌಡರ ನಾಗಸಿರಿ (1996 ನಾಲ್ಕು ಸಂಪುಟಗಳು) ಪಿ.ಲಂಕೇಶರ ಹುಳಿಮಾವಿನ ಮರ (1998), ಕೆ.ಗೋವಿಂದರಾಜು ಅವರ ಮನವಿಲ್ಲದವರ ಮಧ್ಯೆ (2001), ಸಿ.ಜಿ.ಕೃಷ್ಣಸ್ವಾಮಿ ಅವರ ಕತ್ತಾಲೆ ಬೆಳದಿಂಗಳೊಳಗೆ (2002), ಹಿರಿಯಡಕ ಗೋಪಾಲರಾಯರ, ಮದ್ದಳೆಯ ಮಾಯಾಲೋಕ, ಬಿ.ವಿ.ಕಾರಂತರ ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ (2003), ಎಚ್.ಎಸ್.ಶಿವಪ್ರಕಾಶ್ ಅವರ ಬತ್ತೀಸರಾಗ (2003), ಸ.ಜ.ನಾಗಲೋಟಿಮಠ ಅವರ ಬಿಚ್ಚಿದ ಜೋಳಿಗೆ (2003), ಇಂಥ ಸ್ವತಂತ್ರ ಕೃತಿಗಳಲ್ಲದೆ ಕನ್ನಡಕ್ಕೆ ಅನೇಕ ಆತ್ಮಕಥೆಗಳು ಅನುವಾದಗೊಂಡಿವೆ. ಇವುಗಳಲ್ಲಿ ಹೆಚ್ಚಿನವು ಭಾರತೀಯ ಮತ್ತು ವಿದೇಶೀಯ ರಾಷ್ಟ್ರನಾಯಕರ, ವಿಜ್ಞಾನಿಗಳ ಮತ್ತು ಸಾಹಿತಿಗಳ ಆತ್ಮಕಥೆಗಳಾಗಿವೆ. ಸತ್ಯಶೋಧನ ಪ್ರಕಟಣ ಮಂದಿರದವರ ಸತ್ಯಶೋಧನೆ ಅಥವಾ ಗಾಂಧೀಜಿ ಅವರ ಆತ್ಮಕಥೆ ಮತ್ತು ಸಿದ್ಧವನಹಳ್ಳಿ ಕೃಷ್ಣಶರ್ಮರ ಗಾಂಧೀಜಿ ಆತ್ಮಕಥೆ (ಸಂಕ್ಷಿಪ್ತ) ಪ್ರಕಟವಾಗಿವೆ. ಜವಾಹರಲಾಲ್ ನೆಹರೂ ಅವರ ಆತ್ಮಕಥೆಯನ್ನು ಗುರುನಾಥ ಜೋಶಿ ಅವರು ನನ್ನ ಕಥೆ ಎಂಬ ಶೀರ್ಷಿಕೆಯಲ್ಲಿ ಕನ್ನಡಕ್ಕೆ ತಂದಿದ್ದಾರೆ (1958). ಗಾಂಧಿ ಮತ್ತು ನೆಹರೂ ಅವರ ಆತ್ಮಕಥೆಗಳು ಅಂತಾರಾಷ್ಟ್ರೀಯ ಮನ್ನಣೆಯನ್ನು ಪಡೆದಿರುವುದು ಮಾತ್ರವಲ್ಲದೆ ಅನೇಕರು ತಮ್ಮ ಆತ್ಮಕಥೆಯನ್ನು ಬರೆಯಲು ಪ್ರೇರಣೆಯನ್ನುಂಟುಮಾಡಿವೆ. ಕೃಷ್ಣ ಹಥೀಸಿಂಗ್ ಅವರ ವಿತ್ ನೋ ರಿಗ್ರೆಟ್ಸ್ ಎಂಬ ಆತ್ಮಕಥೆಯನ್ನು ದೇ.ಜ.ಗೌ, ಅವರು ನೆನಪು ಕಹಿಯಲ್ಲ ಎಂಬ ಹೆಸರಿನಿಂದ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಇದು ನೆಹರೂ ತಂಗಿಯ ಆತ್ಮಕಥೆಯಾದರೂ ಇಲ್ಲಿ ಸಮಸ್ತ ನೆಹರೂ ಮನೆತನದ ಅರ್ಧ ಶತಮಾನದ ತ್ಯಾಗಭೋಗಗಳ ಜೀವನದ ಕಥೆಯಿದೆ. ಸಿದ್ಧವನಹಳ್ಳಿ ಕೃಷ್ಣಶರ್ಮರು ಬಾಬು ರಾಜೇಂದ್ರ ಪ್ರಸಾದರ ಸ್ವವೃತ್ತಾಂತವನ್ನು ರಾಜೇಂದ್ರ ಪ್ರಸಾದ್ ಆತ್ಮಕಥೆ ಎಂಬ ನಾಮಾಂಕಿತದಲ್ಲಿ ಕನ್ನಡಕ್ಕೆ ತಂದಿದ್ದಾರೆ (1959). ಸ್ವಾತಂತ್ರ್ಯಯೋಧ ದೇಶಭಕ್ತನ ರೋಮಾಂಚಕಾರಿಯಾದ ಈ ಕಥೆ 866 ಪುಟಗಳಲ್ಲಿ ಹೊರಬಂದಿರುವ ಬೃಹತ್ ಗ್ರಂಥ. ಗೌರೀಶಂಕರದ ತುತ್ತತುದಿಗೇರಿ ಹೊಸ ದಾಖಲೆಯೊಂದನ್ನು ಸ್ಥಾಪಿಸಿದ ತೇನ್‍ಸಿಂಗನ ಆತ್ಮಕಥೆಯನ್ನು ಎವರೆಸ್ಟ್ ವೀರ ಎಂಬ ಹೆಸರಿನಲ್ಲಿ ಕೂಡಲಿ ಚಿದಂಬರಂ ಮತ್ತು ಜನಾರ್ದನ ಗುರ್ಕಾರ್ ಅವರು ಸುಂದರವಾಗಿ ಅನುವಾದಿಸಿದ್ದಾರೆ (1957). ಟಾಲ್‍ಸ್ಟಾಯ್ ಅವರ ಸುಪ್ರಸಿದ್ಧ ಆತ್ಮಚರಿತ್ರೆಯನ್ನು ಲಿಯೊ ಟಾಲ್‍ಸ್ಟಾಯ್ ಎಂಬ ಶೀರ್ಷಿಕೆಯಲ್ಲಿ ಆನಂದರು ಕನ್ನಡಕ್ಕೆ ತಂದಿದ್ದಾರೆ (1958). 388 ಪುಟಗಳ ಈ ಕೃತಿಯಲ್ಲಿ ಟಾಲ್‍ಸ್ಟಾಯ್ ಅವರ ಬಾಲ್ಯ ಮತ್ತು ಯೌವನಗಳ ಜೀವನಪರಿಚಯವಿದೆ.

ಲೋಕವಿಖ್ಯಾತ ವಿಜ್ಞಾನಿ ಚಾರಲ್ಸ್ ಡಾರ್ವಿನ್ನರ ಆತ್ಮಕಥೆಯನ್ನು ಶ್ರೀಮತಿ ಜೀವೂಬಾಯಿ ಲಕ್ಷ್ಮಣರಾವ್ ಅವರು ಚಾರಲ್ಸ್ ಡಾರ್ವಿನ್ನನ ಆತ್ಮಕಥೆ ಎಂಬ ಹೆಸರಿನಲ್ಲಿ ಅನುವಾದಿಸಿದ್ದರು (1969). ಸುಪ್ರಸಿದ್ಧ ರಾಜಕಾರಣಿ ಬೆಂಜಮಿನ್ ಫ್ರಾಂಕ್ಲಿನ್ ಆತ್ಮಕಥೆ ಅದೇ ಹೆಸರಿನಿಂದ ಜನಾರ್ದನ ಗುರ್ಕಾರ್ ಅವರಿಂದ ಕನ್ನಡಕ್ಕೆ ಬಂದಿದೆ (1958). ಪ್ರಖ್ಯಾತ ಮಹಿಳೆ ಹೆಲನ್ ಕೆಲ್ಲರಳ ಆತ್ಮಕಥೆಯನ್ನು ಚಿ.ನ. ಮಂಗಳ ಅನುವಾದಿಸಿದ್ದಾರೆ. ಅಮೆರಿಕದ ಅಧ್ಯಕ್ಷರಾಗಿದ್ದ ರೂಸ್ವೆಲ್ಟ್ ಅವರ ಪತ್ನಿ ಎಲೀನರ್ ರೂಸ್‍ವೆಲ್ಟ್ ಅವರ ಆತ್ಮಕಥೆ ಸವಿನೆನಪು ಎಂಬ ಹೆಸರಿನಲ್ಲಿ ಕನ್ನಡಕ್ಕೆ ಬಂದಿದೆ. ವೆರಿಯರ್ ಎಲ್ವಿನ್ನರ ಗಿರಿಜನ ಪ್ರಪಂಚ ಎಚ್.ಎಲ್. ನಾಗೇಗೌಡರಿಂದ ಅನುವಾದಿತವಾಗಿರುವ ಇನ್ನೊಂದು ಆತ್ಮಕಥಾಗ್ರಂಥ ಮರಾಠಿಯಿಂದ ಅನೇಕ ದಲಿತ ಆತ್ಮಕಥೆಗಳು ಕನ್ನಡಕ್ಕೆ ಅನುವಾದಗೊಂಡು ಕನ್ನಡ ದಲಿತ ಸಂವೇದನೆಗಳನ್ನು ಈ ನೆಲೆಯಲ್ಲಿ ಉನ್ಮೀಲನಗೊಳಿಸಿ ಹೊಸ ಬಗೆಯ ಬರೆವಣಿಗೆಗೆ ಹಾದಿ ಮಾಡಿಕೊಟ್ಟಿವೆ. ಅಕ್ರಮಸಂತಾನ, ಉಚಲ್ಯಾ (ಅನು: ದು.ನಿಂ. ಬೆಳಗಲಿ), ಇವು ದಲಿತ ಬದುಕಿನ ಭೀಕರವಾದ ಹಾಗೂ ಬೆರಗಿನ ಲೋಕವನ್ನು ತೆರೆದಿಟ್ಟಿವೆ. ಪಂಜಾಬಿ ಲೇಖಕಿ ಅಜಿತ್ ಕೌರ್ ಅವರ ಆತ್ಮಚರಿತ್ರೆ ಲವ್‍ಲೀನ್ ಜಾಲಿ (2003). ಅಲೆಮಾರಿ ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಗೊಂಡಿದೆ. (ಅನು: ವಿಜಯಲಕ್ಷ್ಮೀಅರಸ್) ಕನ್ನಡ ಆತ್ಮಕಥಾ ಸಾಹಿತ್ಯ ಅನುವಾದಗಳೂ ಸೇರಿದಂತೆ ಶ್ರೀಮಂತವಾಗುತ್ತಿದೆ. *

**ಕನ್ನಡದಲ್ಲಿ ದಾಸ ಸಾಹಿತ್ಯ :** ಕನ್ನಡಕ್ಕೆ ಹರಿದಾಸರ ಕೊಡುಗೆ ಅಪಾರ. ಅನೇಕಾನೇಕ ಹಾಡುಗಳಾಗಿ, ಭಗವದ್ಭಕ್ತರ ಜೀವನಕಥನಗಳಾಗಿ, ವಚನರೂಪದ ಸುಳಾದಿ ಉಗಾಭೋಗಗಳಾಗಿ ಅದು ಬೆಳೆದಿದೆ. ತತ್ತ್ವಬೋಧೆಯನ್ನು ರಮ್ಯವಾಗಿ ಸುಲಭಗ್ರಾಹ್ಯವಾಗಿ ಹೇಳುವಲ್ಲಿ, ಆಡುಮಾತನ್ನೂ ಕನ್ನಡ ಛಂದಸ್ಸುಗಳನ್ನೂ ಬಳಸುವಲ್ಲಿ ಅದರ ವೈಶಿಷ್ಟ್ಯವನ್ನು ಕಾಣಬಹುದು. 13ನೆಯ ಶತಮಾನದ ವೇಳೆಗೆ ದ್ವೈತಸಿದ್ಧಾಂತವನ್ನು ಸಾರಿದ ಮಧ್ವಾಚಾರ್ಯರು ಹರಿದಾಸ ಪಂಥಕ್ಕೆ ಮೂಲಪ್ರೇರಕರು. ಅವರ ದ್ವಾದಶಸ್ತೋತ್ರ ಹರಿದಾಸರಿಗೆ ಸ್ಫೂರ್ತಿಯ ಸೆಲೆ. ಅವರ ದ್ವೈತಸಿದ್ಧಾಂತ ಹರಿದಾಸರ ಸಿದ್ಧಾಂತವೂ ಹೌದು. ಮಧ್ವಮತದ ತತ್ತ್ವಗಳನ್ನೊಪ್ಪಿ, ಅವುಗಳ ಪ್ರತಿಪಾದನೆಯೊಂದಿಗೆ ತಮ್ಮ ಭಕ್ತಿ ಸಾಧನೆಯನ್ನೂ ಮೇಳವಿಸಿದ್ದಾರೆ ಹರಿದಾಸರು. ಇತ್ತೀಚೆಗೆ ದೊರೆತಿರುವ ಕನ್ನಡ ಭಾಷೆಯ ಒಂದು ಓಲೆಗ್ರಂಥದ ನಾಲ್ಕೇನಾಲ್ಕು ಓಲೆಗರಿಗಳಲ್ಲಿ ಅಚಲಾನಂದರನ್ನು ಕುರಿತ ಕೆಲವು ಸಂಗತಿಗಳಿವೆ. ಆ ಪ್ರಕಾರ ಸು.9ನೆಯ ಶತಮಾನದಲ್ಲಿ ಒಬ್ಬರು ಅಚಲಾನಂದರು ಇದ್ದರು. ಅವರು ಮಠಾಧಿಪತಿಗಳಾಗಿದ್ದುದಲ್ಲದೆ ಪಾಂಡುರಂಗ, ಕಳಸ, ವಿದ್ಯಾನಗರ, ಪೆನುಗೊಂಡೆ, ರಾಮೇಶ್ವರ, ಕಾಶಿ, ಕೆಳದಿ, ಬಿದನೂರುಗಳಲ್ಲಿ ಒಂದೊಂದು ಮಠವನ್ನು ಸ್ಥಾಪಿಸಿದರು. ಆದರೆ ಅವರದೆನ್ನಲಾಗಿರುವ ಕೃತಿಗಳ ಭಾಷೆ 9ನೆಯ ಶತಮಾನದ್ದಲ್ಲ; 15-16ನೆಯ ಶತಮಾನದ ಕನ್ನಡ. ಈ ಸಂದಿಗ್ಧವನ್ನು ಗಮನಿಸಿ ಬೇರೆ ಬೇರೆ ಕಾಲಕ್ಕೆ ಸೇರಿದ ಇಬ್ಬರು ಅಚಲಾನಂದರು ಇದ್ದಿರಬೇಕು ಎಂದು ಹೇಳಿದ ವರದರಾಜರಾಯರ ಊಹೆ ನಿಜವಾದುದು. ಇವರ ಈ ಊಹೆಗೆ 1722ರ ತೊಣ್ಣೂರು ದೇವಾಲಯದ ತಾಮ್ರಶಾಸನವೊಂದು ಪೂರಕ ಮಾಹಿತಿ ನೀಡುತ್ತದೆ. ಮೈಸೂರಿನ ದೊರೆ ಒಂದನೆಯ ಕೃಷ್ಣರಾಜ ತೊಂಡೂರು, ಅತ್ತಿಕುಪ್ಪೆ ಹಳ್ಳಿಗಳನ್ನು ಅಗ್ರಹಾರವನ್ನಾಗಿ ಮಾಡಿ, ಅದನ್ನು ವೃತ್ತಿಗಳಾಗಿ ವಿಭಜಿಸಿ, ಹೊರನಾಡುಗಳಿಂದ ಆಹ್ವಾನಿತರಾಗಿ ಬಂದ ಬ್ರಾಹ್ಮಣರಿಗೆ ಅಲ್ಲಿಯೇ ನೆಲೆಸಲೆಂದು ಹಂಚಿಕೊಟ್ಟ ವಿಚಾರ ಅದರಲ್ಲಿದೆ.

................. ಅಚಲಾನನ್ದದಾಸಾಖ್ಯ<br>
ವಿಷ್ಣುಕುಲೋದ್ಭವಃ ಆಶ್ವಲಾಯನ<br>
ವಾಸಿಷ್ಠ ಋಕ್ಯಾಖ್ಯಪ್ಪಣ ಪುತ್ರಜಃ ವೃತ್ತಿಂ<br>
ನೃಸಿಂಹಜೋ ತ್ರೈಕಾಂ ಹರಿದಾಸಸ್ಸಮಶ್ನುತೇ

ವೃತ್ತಿಗಳನ್ನು ಪಡೆದ 112 ಜನರಲ್ಲಿ ವೈಷ್ಣವ ಮನೆತನದಲ್ಲಿ ಹುಟ್ಟಿದ, ನೃಸಿಂಹನ ಮಗನೂ ಅಪ್ಪಣನ ಮೊಮ್ಮಗನೂ ಆದ, ವಾಸಿಷ್ಠಗೋತ್ರ ಆಶ್ವಲಾಯನ ಸೂತ್ರ ಋಕ್ ಶಾಖಾಧ್ಯಾಯಿ ಅಚಲಾನಂದದಾಸರೂ ಒಬ್ಬರು. ಅಚಲಾನಂದರನ್ನು ಹೆಸರಿಸುವ ಇನ್ನೊಂದು ಶಾಸನ 15-16ನೆಯ ಶತಮಾನಕ್ಕೆ ಸೇರಿದ ಹಾಸನ ಜಿಲ್ಲೆ ಆಲೂರು ತಾಲ್ಲೂಕಿನ ನಲ್ಲೂರು ಶಾಸನ. ಈ ಶಾಸನದಲ್ಲಿ 'ಶ್ರೀ ಅಚಲಾನಂದನ ವಿಠಲ' ಎಂಬ ಬರೆಹವಿದೆ. ಈ ಎಲ್ಲ ದಾಖಲೆಗಳನ್ನು ಗಮನಿಸಿದಾಗ ದೊರೆತಿರುವ ಅಚಲಾನಂದ ವಿಠಲಾಂಕಿತ ಕೀರ್ತನೆಗಳು 9ನೆಯ ಶತಮಾನದ ಮಠಾಧಿಪತಿ ಅಚಲಾನಂದರದಲ್ಲ 16ನೆಯ ಶತಮಾನದ ಹರಿದಾಸ ಅಚಲಾನಂದರದು ಎಂಬುದು ಸ್ಪಷ್ಟ. ಹೀಗಾಗಿ ಹರಿದಾಸಪಂಥಕ್ಕೆ ಅಚಲಾನಂದ ದಾಸರು ಮೊದಲಿಗರೆನ್ನುವ ವಾದವನ್ನು ಒಪ್ಪಲಾಗುವುದಿಲ್ಲ.

ಬೇಲೂರು ಕೇಶವದಾಸರು ಮತ್ತು ಎ.ಟಿ.ಪಾಟೀಲರು ಸು.9ನೆಯ ಶತಮಾನದಲ್ಲಿದ್ದರೆನ್ನಲಾದ ಅಚಲಾನಂದದಾಸರೇ ಹರಿದಾಸಪಂಥಕ್ಕೆ ಮೊದಲಿಗರೆಂದು ಅಭಿಪ್ರಾಯಪಟ್ಟಿದ್ದಾರೆ. ಅಚಲಾನಂದವಿಠಲ ಎಂಬ ಅಂಕಿತದಲ್ಲಿರುವ ಕೀರ್ತನೆ, ಉಗಾಭೋಗಗಳ ಭಾಷೆ 15ನೆಯ ಶತಮಾನದ್ದಾಗಿ ಕಾಣುವುದರಿಂದಲೂ ಅಚಲಾನಂದರು ಮಧ್ವಮತದ ವಿಷಯವನ್ನೆತ್ತಿರುವುದರಿಂದಲೂ ಇವರ ಕಾಲ 13ನೆಯ ಶತಮಾನದಿಂದ ಈಚಿನದಾಗುತ್ತದೆ ಎಂದು ಆರ್.ಎಸ್.ಪಂಚಮುಖಿ, ಕೆ.ಎಂ.ಕೃಷ್ಣರಾವ್, ಎಚ್.ಕೆ.ವೇದವ್ಯಾಸಾಚಾರ್ಯ, ಜಿ.ವರದರಾಜರಾವ್, ರಂ.ಶ್ರೀ.ಮುಗಳಿ ಮೊದಲಾದ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

13ನೆಯ ಶತಮಾನದ ಮಧ್ವಾಚಾರ್ಯರ ನೇರಶಿಷ್ಯರಾದ ನರಹರಿತೀರ್ಥರೇ ಹರಿದಾಸ ಪಂಥದ ಆದ್ಯಪ್ರವರ್ತಕರೆಂಬ ಒಂದು ವಾದವೂ ಇದೆ. ಅವರವೆಂದು ಹೇಳಲಾಗಿರುವ ಕೇವಲ ಮೂರೇ ಮೂರು

ಕೀರ್ತನೆಗಳು ದೊರೆತಿವೆ. ಈ ವಾದದ ಬಗ್ಗೆ ಚರ್ಚಿಸಿದವರಲ್ಲಿ ಆರ್.ಎಸ್.ಪಂಚಮುಖಿ, ಗೋರಬಾಳ ಹನುಮಂತರಾವ್, ಕೆ.ಎಂ.ಕೃಷ್ಣರಾವ್ ಮುಖ್ಯರು. ಅವರ ವಾದದ ಸಾರಾಂಶವಿಷ್ಟು: ದೊರೆತಿರುವ ಮೂರು ಕೀರ್ತನೆಗಳಲ್ಲೂ ಅಂಕಿತ ನಿರ್ದಿಷ್ಟವಾಗಿಲ್ಲ. ನರಹರಿತೀರ್ಥರ ಶಿಷ್ಯಪರಂಪರೆಯಿಲ್ಲ; ಹರಿದಾಸ ಪರಂಪರೆಯನ್ನು ಕುರಿತ ವಂದನಾ ಶ್ಲೋಕದಲ್ಲಿ ಅವರ ಹೆಸರಿಲ್ಲ; ಅವರ ಮಾತೃಭಾಷೆ ಕನ್ನಡವಲ್ಲ. ಈ ಕೆಲವು ಅಂಶಗಳನ್ನು ಗಮನಿಸಿ ನರಹರಿತೀರ್ಥರು ದಾಸಸಾಹಿತ್ಯಕ್ಕೆ ಮೊದಲಿಗರೆಂದು ಒಪ್ಪುವುದು ಕಷ್ಟ. ಈ ಎಲ್ಲ ವಿಚಾರಗಳನ್ನು ಗಮನಿಸಿ ಜಿ.ವರದರಾಜರಾಯರು ಅವುಗಳ ಜೊತೆಗೆ ನರಹರಿತೀರ್ಥರ ಕೃತಿಗಳಲ್ಲಿ ಕಂಡುಬರುವ ಅನುಪಲ್ಲವಿಯ ಪ್ರಯೋಗ ಆ ಕಾಲದ ಸಂಗೀತಶಾಸ್ತ್ರ ನಿಯಮಗಳಿಗೆ ವಿರುದ್ಧವಾದುದೂ ಐತಿಹಾಸಿಕವಾಗಿಯೂ ಅಸಂಗತ ಎಂಬ ವಿಚಾರಗಳನ್ನು ಎತ್ತಿ ತೋರಿಸಿ ಶ್ರೀಪಾದರಾಜರೇ ಕನ್ನಡ ಹರಿದಾಸಸಾಹಿತ್ಯದ ಆದ್ಯಪ್ರವರ್ತಕರೆಂಬುದನ್ನು ಸಾಧಾರವಾಗಿ ಸ್ಥಾಪಿಸಿದ್ದಾರೆ.

ನರಹರಿತೀರ್ಥರ ಬಳಿಕ ಸುಮಾರು ಒಂದು ಶತಮಾನದ ಅನಂತರ ನಮಗೆ ಶ್ರೀಪಾದರಾಯರ ಹೆಸರು ಸಿಕ್ಕುತ್ತದೆ. ಇವರು 15ನೆಯ ಶತಮಾನದಲ್ಲಿದ್ದ ಖ್ಯಾತ ಮಠಾಧಿಪತಿ, ಹರಿದಾಸಸಾಹಿತ್ಯದ ಪ್ರಮುಖರಲ್ಲೊಬ್ಬರು. ಚನ್ನಪಟ್ಟಣದ ಬಳಿಯಿರುವ ಅಬ್ಬೂರು ಇವರ ಜನ್ಮಸ್ಥಳ. ರಂಗವಿಠಲ ಎಂಬ ಅಂಕಿತದಿಂದ ಕೃತಿರಚನೆ ಮಾಡಿದ್ದಾರೆ. ಸಂಸ್ಕೃತದ ಬಲವಿದ್ದರೂ ಕನ್ನಡದ ಒಲವನ್ನು ಕೃತಿಗಳಲ್ಲಿ ತೋರಿದ್ದಾರೆ. ಅನೇಕ ವರ್ಷಗಳ ಕಾಲ ಶ್ರೀರಂಗದಲ್ಲಿದ್ದು, ತಮಿಳಿನ ಆಳ್ವಾರರ ಕೃತಿಗಳು ಸಾಮಾನ್ಯ ಜನರ ಮೇಲೆ ಬೀರಿದ್ದ ಪ್ರಭಾವವನ್ನು ಕಣ್ಣಾರೆ ಕಂಡಿದ್ದವರು. ನರಹರಿತೀರ್ಥರ ಮೇಲ್ಪಂಕ್ತಿಯೊಂದಿಗೆ ಶಿವಶರಣರ ಪ್ರಭಾವವೂ ಸೇರಿ ಇವರ ಕೃತಿರಚನೆಗೆ ಪುಷ್ಟಿ ದೊರೆತಂತೆ ಕಾಣುತ್ತದೆ. ಹರಿದಾಸ ಸಾಹಿತ್ಯವಾಹಿನಿ ಇವರಲ್ಲಿ ವೈವಿಧ್ಯಪೂರ್ಣವಾಗಿ, ಬಹುಮುಖವಾಗಿ ವಿಕಸಿಸಿದೆ. ದಾಸ್ಯ, ಸಖ್ಯ, ಮಧುರ, ವಾತ್ಸಲ್ಯ ಹಾಗೂ ಶಾಂತಭಾವಗಳ ಮೂಲಕ ಭಕ್ತಿ ಇಲ್ಲಿ ಹೊನಲಿಟ್ಟಿದೆ. ಜೋಗುಳದ ಹಾಡಿನಲ್ಲಿ ಹರಿಯ ದಶಾವತಾರಗಳನ್ನು ಇಲ್ಲಿ ಚಿತ್ರಿಸಲಾಗಿದೆ. ಒಂದು ಪ್ರಸಂಗ ಅಥವಾ ಸಂದರ್ಭವನ್ನು ಆರಿಸಿಕೊಂಡು ನೀಳವಾದ ಕೀರ್ತನೆ ರಚಿಸಿರುವುದು ಇವರ ಇನ್ನೊಂದು ವೈಶಿಷ್ಟ್ಯ. ಶ್ರೀ ರುಕ್ಮಿಣಿಸತ್ಯಭಾಮ ವಿಲಾಸವನ್ನು ನಿದರ್ಶನವಾಗಿ ಹೆಸರಿಸಬಹುದು. ಇವರಲ್ಲಿ ಭಾಗವತಕ್ಕೆ ಹೆಚ್ಚು ಪ್ರಾಶಸ್ತ್ಯ ದೊರೆತಿದೆ. ಈ ಎಲ್ಲ ಕಾರಣಗಳಿಂದಾಗಿ ಹರಿದಾಸ ಸಾಹಿತ್ಯದ ಮುನ್ನಡೆಗೆ ಶ್ರೀಪಾದರಾಯರೇ ಮೊದಲಿಗರೆನ್ನಬಹುದು. ಕೀರ್ತನೆ, ಸುಳಾದಿ, ಉಗಾಭೋಗಗಳೊಂದಿಗೆ ದಂಡಕ, ವೃತ್ತನಾಮಗಳನ್ನೂ ಇವರು ಬಳಸಿಕೊಂಡಿದ್ದಾರೆ. ಇವರ ಅನಂತರದ ಹರಿದಾಸರಿಗೆ ಇವರ ಕೃತಿಗಳು ಸಾಂಪ್ರದಾಯಕವಾಗಿ ಪರಿಣಮಿಸಿದುವು. ಇವರ ಆತ್ಮಸಾಧನೆ ಉಳಿದವರಿಗೆ ಮಾರ್ಗದರ್ಶಕವಾಯಿತು.

ಶ್ರೀಪಾದರಾಯರ ಅನಂತರ ಇವರ ಶಿಷ್ಯೋತ್ತಮರಾದ ವ್ಯಾಸರಾಯರನ್ನು ಹೆಸರಿಸಬೇಕು. ಇವರು ಸು.1447ರಲ್ಲಿ ವಹ್ನಿಪುರದಲ್ಲಿ (ಈಗಿನ ಬನ್ನೂರು) ಜನಿಸಿದರು. ವಿಜಯನಗರದ ಕೃಷ್ಣದೇವರಾಯನ ಸಮಕಾಲೀನರೂ ರಾಜಮರ್ಯಾದೆಗೆ ಪಾತ್ರರೂ ಆಗಿದ್ದ ಗಣ್ಯ ಮಠಾಧಿಪತಿ ಇವರು. ಶ್ರೀಕೃಷ್ಣ ಎಂಬ ಅಂಕಿತದಿಂದ ಕೃತಿರಚನೆ ಮಾಡಿದ್ದಾರೆ. ಇವರ ಮತ್ತು ಇವರ ಶಿಷ್ಯರಿಂದ ಹರಿದಾಸರ ಒಂದು ಒಕ್ಕೂಟ ಪ್ರಾರಂಭವಾಯಿತು. ಪುರಂದರದಾಸ, ಕನಕದಾಸ, ವಾದಿರಾಜರು ದಾಸಕೂಟದ ಪ್ರಮುಖ ಸ್ತಂಭಗಳು, ಪ್ರತಿನಿಧಿಗಳು. ಶ್ರೀಪಾದರಾಯರಲ್ಲಿ ಕಂಡುಬರುವ ದೃಷ್ಟಿ ಭಾವಾದಿಗಳು ಇವರಲ್ಲಿ ಇನ್ನೂ ಬೆಳೆವಣಿಗೆ ಹೊಂದಿವೆ. ಅಪೂರ್ವವಾದ ಕೆಲವು ಭಾವನೆಗಳನ್ನು ಇವರಲ್ಲಿ ಕಾಣಬಹುದು. ಆದಿಕವಿ ಪಂಪ ಬನವಾಸಿಯಲ್ಲಿ ಮರುಹುಟ್ಟು ಬಯಸಿದಂತೆ ವ್ಯಾಸರಾಯರು ಬೃಂದಾವನದಲ್ಲಿ ಮತ್ತೊಮ್ಮೆ ಹುಟ್ಟಬೇಕೆಂದು ಹಂಬಲಿಸುತ್ತಾರೆ. ಕೃಷ್ಣನನ್ನು ಕುರಿತು 'ಏನಬೇಡಲೊ ನಿನ್ನ ದೇವಾಧಿದೇವ' ಎಂದು ಪ್ರಶ್ನಿಸುತ್ತ 'ವನಿತೆಯರ ಬೇಡಲೆ ಬ್ರಹ್ಮಚಾರಿ' ಎಂದು ಉದ್ಗರಿಸುತ್ತಾರೆ. ವಾಮನಾವತಾರದಲ್ಲಿ ವಟುವಾಗಿ ಬಂದ ಆ ಕೃಷ್ಣನನ್ನು ವ್ಯಾಸರಾಯರು ಪ್ರಶ್ನಿಸಿರುವ ರೀತಿ ಇದು. ದಾಸಕೂಟದ ಮೇಲ್ವಿಚಾರಕರ ಸ್ಥಾನದಲ್ಲಿರುವ ಇವರನ್ನು ಕುರಿತು ಗುರುವೆಂದೂ ಜ್ಞಾನಿಗಳ ಅರಸನೆಂದೂ ಪುರಂದರದಾಸರು ಹೊಗಳಿದ್ದಾರೆ.

ವ್ಯಾಸರಾಯರ ಶಿಷ್ಯಪರಂಪರೆಯಲ್ಲಿ ಕರ್ನಾಟಕದ ಮನೆ ಮನೆಯಲ್ಲಿಯೂ ಕೇಳಿಬರುವ ಹೆಸರೆಂದರೆ ಪುರಂದರದಾಸರದು (ನೋಡಿ). ತಮ್ಮ ಅಪಾರ ಕೃತಿರಾಶಿಯಿಂದ ಇವರು ಕನ್ನಡಿಗರಿಗೆ ಚಿರ ಪರಿಚಿತರಾಗಿದ್ದಾರೆ. ಇವರು ಸು.1484ರಲ್ಲಿ ಪುರಂದರಗಡ ಎಂಬಲ್ಲಿ ಜನಿಸಿದರು. ಪೂರ್ವಾಶ್ರಮದ ಹೆಸರು ಶ್ರೀನಿವಾಸನಾಯಕ, ಹೆಂಡತಿ ಸರಸ್ವತಿ. ದಾಸದೀಕ್ಷೆಯನ್ನು ಕೈಗೊಳ್ಳುವ ಮೊದಲು ಅತ್ಯಂತ ಶ್ರೀಮಂತರಾಗಿ ವೈಭವದಿಂದ ಮೆರೆದವರು. ಮೂಗುತಿಯ ಕಾರಣದಿಂದ ಮನಃ ಪರಿವರ್ತನೆಯಾದ ಮೇಲೆ, ಐಶ್ವರ್ಯವನ್ನೆಲ್ಲ ದಾನಮಾಡಿ ವ್ಯಾಸರಾಯರ ಬಳಿ ಬಂದು ದಾಸದೀಕ್ಷೆಯನ್ನು ಕೈಗೊಂಡರು ಇತ್ಯಾದಿ ವಿಚಾರಗಳು ಪ್ರಚಲಿತವಾಗಿವೆ. ಆದರೆ ಕಮಲಾಪುರದ ತಾಮ್ರಶಾಸನದಿಂದ (1526 ಫೆಬ್ರವರಿ 24) ಅಧಿಕೃತವಾಗಿ ತಿಳಿದಿರುವ ಅಂಶಗಳು ಹೀಗಿವೆ. ಪುರಂದರದಾಸರು ವಸಿಷ್ಠಗೋತ್ರದ ಯಜುಶ್ಶಾಖೆಯವರು. ಇವರಿಗೆ ಲಕ್ಷ್ಮಣದಾಸ, ಹೇಬಣದಾಸ ಮತ್ತು ಮಧ್ವಪದಾಸ ಎಂಬ ಮೂವರು ಮಕ್ಕಳಿದ್ದರು. ಪುರಂದರದಾಸರು ಬದುಕಿದ್ದಾಗಲೇ ವಿಜಯನಗರದ ಅರಸ ಕೃಷ್ಣದೇವರಾಯನಿಂದ ಹೊರಟ ಶಾಸನವಿದು. ಇವರು ವ್ಯಾಸರಾಯರ ಶಿಷ್ಯರಾಗಿದ್ದುದು ಇವರ 'ವ್ಯಾಸರಾಯರ ಚರಣಕಮಲದರುಶನ .............' ಎಂಬ ಕೀರ್ತನೆಯಿಂದಲೇ ಸ್ಪಷ್ಟವಾಗುತ್ತದೆ. ಅವರಿಂದಲೇ ದಾಸದೀಕ್ಷೆ ಪಡೆದು ಪುರಂದರವಿಠಲ ಎಂಬ ಅಂಕಿತದಿಂದ ಕೃತಿರಚನೆ ಮಾಡಿದರು. ಹೆಂಡತಿಯ ಮೂಲಕ ಭಕ್ತಿಯೆಡೆಗೆ ತಿರುಗಿದ ಮನಸ್ಸು ಗುರುಮುಖೇನ ದೀಕ್ಷೆಯನ್ನು ಪಡೆಯಿತು. ಪಂಚಭಾವಗಳ ಮೂಲಕ ಭಗವಂತನನ್ನು ಇವರು ಬಗೆಬಗೆಯಾಗಿ ಸ್ತುತಿಸಿದ್ದಾರೆ. ವಾತ್ಸಲ್ಯಭಾವಕ್ಕೆ ಇವರಲ್ಲಿ ಹೆಚ್ಚಿನ ಪ್ರಾಮುಖ್ಯ ದೊರೆತಿದೆ. ಭಕ್ತಿಸಾಧನೆಯೊಂದಿಗೆ ಸಮಾಜದ ರೀತಿ ನೀತಿಗಳನ್ನು ಸರಿಪಡಿಸುವ ಹೊಣೆಯನ್ನು ಹೊತ್ತು ನಿರ್ವಹಿಸಿದ್ದಾರೆ. ನಡೆದಂತೆ ನುಡಿಯುತ್ತ ಸಮಾಜವನ್ನು ಚಿಕಿತ್ಸಕ ದೃಷ್ಟಿಯಿಂದ ವೈದ್ಯನಂತೆ ನೋಡುತ್ತ ಅದರ ಸರಿತಪ್ಪುಗಳನ್ನು ಎತ್ತಿ ಆಡಿದ್ದಾರೆ. ಇವರು ಶುಷ್ಕ ನೀತಿಬೋಧಕರಲ್ಲ, ಜನರೊಡನೆ ಬೆರೆತು, ಅವರ ಕಷ್ಟ ಸುಖಗಳನ್ನು ಹಂಚಿಕೊಂಡು ಅವರಿಗೆ ಮುಕ್ತಿ ಪಥವನ್ನು ತೋರಿಸಿಕೊಟ್ಟು ದಿಟ್ಟರು. ಮಧ್ವಮತ ತತ್ತ್ವ, ವೇದಾಂತಸಾರಗಳನ್ನು ಕನ್ನಡದಲ್ಲಿ ಸಾರಿದ ಹರಿಕಾರರು. ವ್ಯಾಸರಾಯರು ಇವರ ಕೃತಿಗಳನ್ನು ಒಟ್ಟಾಗಿ ಪುರಂದರೋಪನಿಷತ್ತು ಎಂದು ಕರೆದು ಶ್ಲಾಘಿಸಿದ್ದಾರೆ. ಅದರಲ್ಲಿ ಕೀರ್ತನೆಗಳು ಮಾತ್ರವಲ್ಲ, ಅನುಭವದ ರಸಗಟ್ಟಿಗಳಾದ ಉಗಾಭೋಗಗಳೂ ತತ್ತ್ವಭೂಯಿಷ್ಠವಾದ ಸುಳಾದಿಗಳೂ ಅಡಕವಾಗಿವೆ. ಆತ್ಮಚರಿತ್ರೆ, ಆಧ್ಯಾತ್ಮಿಕದೃಷ್ಟಿ ಹಾಗೂ ಲೋಕಚರಿತ್ರೆ ಈ ದೃಷ್ಟಿಗಳಿಂದಲೂ ಇವರ ಕೃತಿಗಳು ವಿಶಿಷ್ಟವಾಗಿವೆ. ಜನಸಾಮಾನ್ಯರ ಬದುಕನ್ನು ಅನಂತರೀತಿಯಲ್ಲಿ ನೋಡುವ ಒಂದು ವಿಸ್ತಾರ ದೃಷ್ಟಿ ಇವರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಸಾರ್ವಜನಿಕ ಹಾಗೂ ಸಾರ್ವಕಾಲಿಕ ಧರ್ಮಸತ್ಯಗಳನ್ನು ಎತ್ತಿಹಿಡಿಯುವುದರಲ್ಲಿ ಹರಿದಾಸ ಸಾಹಿತ್ಯದಲ್ಲಿ ಕನಕದಾಸರನ್ನು ಬಿಟ್ಟರೆ ಉಳಿದವರಾರೂ ಇವರ ಸಮಕ್ಕೆ ಬರಲಾರರು. ಸಾಹಿತ್ಯ, ಸಂಗೀತ ಮತ್ತು ಪಾರಮಾರ್ಥಿಕಗಳ ಸಮ್ಮಿಲನ ಇವರ ಕೃತಿಗಳಲ್ಲಿದೆ. ಕೃಷ್ಣನ ವಿವಿಧ ಲೀಲೆಗಳನ್ನು ದಶಾವತಾರಗಳನ್ನು ಬಗೆಬಗೆಯಾಗಿ ವರ್ಣಿಸುವ ಅಸಂಖ್ಯಾತ ಕೃತಿಗಳು ಶ್ರೇಷ್ಠ ಭಾವಗೀತೆಗಳಾಗಿವೆ. ಧರ್ಮವೇ ಜಯವೆಂಬ ದಿವ್ಯಮಂತ್ರ ಎಂಬ ಹಾಡಿನಲ್ಲಿ ಧರ್ಮಜೀವನದ ತುತ್ತತುದಿಯ ಆದರ್ಶವನ್ನು ಬಹು ಸೊಗಸಾಗಿ ವರ್ಣಿಸಿದ್ದಾರೆ. ಶಾಸ್ತ್ರೀಯ ಸಂಗೀತದ ಆರಂಭದ ಅಭ್ಯಾಸಿಗಳಿಗೆ ಪಿಳ್ಳಾರಿಗೀತೆಗಳನ್ನು ರಚಿಸಿಕೊಟ್ಟಿದ್ದಾರೆ. ಇವರು ನಾರದಾಂಶಸಂಭೂತರೆಂದು ಪ್ರತೀತಿ. ಕರ್ನಾಟಕ ಸಂಗೀತಕ್ಕೆ ಭದ್ರವಾದ ತಳಪಾಯವನ್ನು ಹಾಕಿದವರೇ ಇವರು. ಶಾಸ್ತ್ರೀಯ ಸಂಗೀತಕ್ಕೆ ಹೊಂದುವ ಕನ್ನಡ ಹಾಡುಗಳನ್ನು ರಚಿಸಿರುವುದು ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿ. ದಾಸರೆಂದರೆ ಪುರಂದರದಾಸರಯ್ಯ ಎಂದು ಗುರು ವ್ಯಾಸರಾಯರೇ ಇವರನ್ನು ಮುಕ್ತ ಕಂಠದಿಂದ ಹೊಗಳಿದ್ದಾರೆ.

ಪುರಂದರದಾಸರ ಸಮಕಾಲೀನರೂ ವ್ಯಾಸರಾಯರ ಶಿಷ್ಯರೂ ಆದ ಮತ್ತೊಬ್ಬ ದಾಸಶ್ರೇಷ್ಠರು ಕನಕದಾಸರು. ಇಂದಿನ ಹಾವೇರಿ ಜಿಲ್ಲೆಯ ಬಂಕಾಪುರದ ಬಳಿ ಇರುವ ಬಾಡ ಎಂಬಲ್ಲಿ ಜನಿಸಿದರು (ಸು.1500) ಜಾತಿಯಲ್ಲಿ ಕುರುಬರು. ಹೆಸರು ತಿಮ್ಮ, ಚಿಕ್ಕಂದಿನಲ್ಲೇ ತಂದೆ-ತಾಯಿಗಳು ತೀರಿಕೊಂಡರು. ಬಾಲಕ ತಿಮ್ಮನಿಗೆ ಬೇಟೆ, ಕತ್ತಿವರಸೆ, ಕಾಳಗಗಳಲ್ಲಿ

ವಿಶೇಷ ಆಸಕ್ತಿ ಮೂಡಿತು. ಅನೇಕ ಗ್ರಾಮಗಳ ಢಣಾಯಕನಾದ. ನಿಧಿಯೊಂದು ಸಿಕ್ಕಿದ್ದರಿಂದ ಕನಕನಾಯಕನೆಂದು ಪ್ರಸಿದ್ಧನಾದ. ಪುರಂದರರಂತೆ ವೈರಾಗ್ಯದ ಕಡೆ ತಿರುಗಿ ವ್ಯಾಸರಾಯರ ಗುರುತ್ವದಲ್ಲಿ, ಆದಿಕೇಶವ ಎಂಬ ಅಂಕಿತದಲ್ಲಿ ಕೃತಿರಚನೆ ಮಾಡಿ ಕನಕದಾಸರಾದರು. ಇವರದು ಶ್ರೀವೈಷ್ಣವ ಸಂಪ್ರದಾಯವೋ ಮಾಧ್ವ ಸಂಪ್ರದಾಯವೋ ಎಂಬ ಬಗ್ಗೆ ಏಕಾಭಿಪ್ರಾಯವಿಲ್ಲ. ಇವರ ಕಾವ್ಯಗಳಲ್ಲೊಂದಾದ ಮೋಹನ ತರಂಗಿಣಿಯಿಂದ ಇವರು ಶ್ರೀವೈಷ್ಣವಸಂಪ್ರದಾಯಸ್ಥರೆನ್ನಲು ಅವಕಾಶವಿದೆ. ವ್ಯಾಸರಾಯರ ಶಿಷ್ಯರಾಗಿ ಮಧ್ವಮತ ತತ್ತ್ವಗಳನ್ನೂ ಬೋಧಿಸಿದ್ದಾರೆ. ಹರಿ ಹರ ಸಾಮರಸ್ಯದೃಷ್ಟಿ ಮೋಹನ ತರಂಗಿಣಿಯಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತದೆ. ಇವರ ಸಾಮರಸ್ಯದೃಷ್ಟಿ ಭಿನ್ನಧರ್ಮದ ನಾಯಕ ನಾಯಿಕೆಯರನ್ನು ವಿವಾಹಬಂಧನದ ಮೂಲಕ ಒಟ್ಟುಗೂಡಿಸುವವರೆಗೂ ಚಾಚಿದೆ. ಇವರ ಕ್ರಾಂತಿಕಾರಕ ಮನೋಭಾವಕ್ಕೆ ಇದೊಂದು ನಿದರ್ಶನ. ಸಮಾಜದ ರೀತಿನೀತಿಗಳನ್ನು ಕಟುವಾಗಿ ಟೀಕಿಸಬಲ್ಲ ಎದೆಗಾರಿಕೆ ಇವರದು. ಡೊಂಕುಬಾಲದ ನಾಯಕರೆ ನೀವೇನೂಟವ ಮಾಡಿದಿರಿ ಎಂಬ ಹಾಡಿನಲ್ಲಿ ಸಾಮಾಜಿಕ ವಿಡಂಬನೆ ಕಾಣುತ್ತದೆ. ಕನಕನ ಕಿಂಡಿಯು ಕಲ್ಪಿತ ಕಥೆ ಮಾರ್ಮಿಕವಾಗಿ ಅಂದಿನ ಸಾಮಾಜಿಕ ನಡೆವಳಿಕೆಯನ್ನೂ ಕನಕದಾಸರ ಭಕ್ತಿಪಾರಮ್ಯವನ್ನೂ ಸೂಚಿಸುತ್ತದೆ. ಲೋಕ ಹೇಗೆ ತಿಳಿಯಲಿ ವ್ಯಾಸರಾಯರು ಕನಕರನ್ನು ಶಿಷ್ಯರನ್ನಾಗಿ ಸ್ವೀಕರಿಸಿದರು, ಪುರಂದರದಾಸರು ಸ್ನೇಹಿತರಾಗಿ ಕಂಡರು. ಮೋಹನತರಂಗಿಣಿ, ನಳಚರಿತ್ರೆ, ರಾಮಧಾನ್ಯಚರಿತ್ರೆ, ಹರಿಭಕ್ತಿ ಸಾರ -ಈ ಕಾವ್ಯಗಳನ್ನು ರಚಿಸಿ, ಹರಿದಾಸ ಪಂಥದಲ್ಲಿ ಕವಿಯೆನಿಸಿ ಕೊಂಡಿದ್ದಾರೆ. ಪದ, ಸುಳಾದಿ, ಉಗಾಭೋಗಗಳೊಂದಿಗೆ ಮುಂಡಿಗೆಗಳನ್ನೂ ರಚಿಸಿದ ವೈಶಿಷ್ಟ್ಯ ಇವರದು.

ಕನಕದಾಸರ ಬಳಿಕ ವ್ಯಾಸರಾಯರ ಪ್ರಮುಖ ಶಿಷ್ಯರಲ್ಲೊಬ್ಬರಾದ ವಾದಿರಾಜರು. ಸೋದೆಮಠದ ಅಧಿಪತಿಯಾಗಿದ್ದ (1480-1600) ಇವರ ಹುಟ್ಟು ಹೆಸರು ವರಾಹ. ವಾದದಲ್ಲಿ ಇವರು ನಿಸ್ಸೀಮರು. ಸಂಸ್ಕೃತ, ಕನ್ನಡಗಳಲ್ಲಿ ಪಾಂಡಿತ್ಯ ಪಡೆದಿದ್ದ ಸವ್ಯಸಾಚಿ, ಉಡುಪಿಯ ಅಷ್ಟಮಠಗಳನ್ನು ಒಂದು ವ್ಯವಸ್ಥೆಗೆ ತಂದು, ಪರ್ಯಾಯದ ಏರ್ಪಾಡು ಮಾಡಿದವರು. ಇಷ್ಟದೈವ ಇವರಿಗೆ ಕುದುರೆಯ ರೂಪದಲ್ಲಿ ದರ್ಶನಕೊಟ್ಟಿತಂತೆ. ಹಯವದನ ಎಂಬ ಅಂಕಿತದಿಂದ ಕೃತಿರಚನೆ ಮಾಡಿದ್ದಾರೆ. ಶಾಸ್ತ್ರೀಯ ವಿಚಾರಗಳತ್ತ ಇವರಿಗೆ ಗಮನ ಹೆಚ್ಚು. ಸಂಭಾಷಣಾರೂಪದಲ್ಲಿ ಕೃತಿರಚನೆ ಮಾಡಿರುವುದು ಇವರ ವೈಶಿಷ್ಟ್ಯ. ಮಹಾಭಾರತದ ಕೀಚಕವಧೆಯ ಪ್ರಸಂಗವನ್ನು ಮನೋಹರವಾಗಿ ಚಿತ್ರಿಸಿದ್ದಾರೆ. ಕೀರ್ತನೆಯನ್ನು ಕಟ್ಟುತ್ತಿದ್ದ ದಾಸರದೃಷ್ಟಿ ಇಲ್ಲಿ ಕಥನಕವನದ ಘಟ್ಟವನ್ನು ಮುಟ್ಟಿದೆ. ಸ್ವಪ್ನಪದ, ಲಕ್ಷ್ಮೀಶೋಭಾನೆ, ವೈಕುಂಠ ವರ್ಣನೆಗಳಂಥ ಖಂಡಕಾವ್ಯಗಳೆನ್ನಬಹುದಾದ ಕೃತಿಗಳನ್ನೂ ರಚಿಸಿದ್ದಾರೆ. ವೈಕುಂಠವರ್ಣನೆ ನಾಲ್ಕು ಸಂಧಿಗಳಲ್ಲಿ ಅಡಕವಾಗಿರುವ ಸಾಂಗತ್ಯ ಕೃತಿ. ಕನ್ನಡಿಯಂತಿರುವ ಪೂರ್ಣಪ್ರಜ್ಞರ ಮತದ ಸಾರವನ್ನು ಕನ್ನಡಿಸುವುದೇ ತನ್ನ ಕರ್ತವ್ಯವೆಂದು ಒಂದು ಕಡೆ ಹೇಳಿಕೊಂಡಿದ್ದಾರೆ. ಉಭಯ ಭಾಷಾವಿಶಾರದರಾದ ಇವರ ಈ ಸಂಕಲ್ಪ ಕನ್ನಡಿಗರಿಗೆ ನಿಜಕ್ಕೂ ಒಂದು ವರವಾಗಿ ಪರಿಣಮಿಸಿದೆ. ತತ್ತ್ವ ಪ್ರಕಾಶಿಕಾ, ಭಗವದ್ಗೀತಾಟಿಪ್ಪಣಿ, ಮಹಾಭಾರತಟೀಕಾ ಮೊದಲಾದ ಸಂಸ್ಕೃತಗ್ರಂಥಗಳನ್ನು ರಚಿಸಿದ್ದಾರೆ. ನೂರಿಪ್ಪತ್ತು ವರ್ಷಗಳ ತುಂಬುಬಾಳನ್ನು ಬಾಳಿದ ಇವರು ಅನೇಕ ಕೀರ್ತನೆಗಳು, ಉಗಾಭೋಗಗಳು, ಸುಳಾದಿಗಳನ್ನು ರಚಿಸಿದ್ದಾರೆ. 'ತಾಳುವಿಕೆಗಿಂತ ತಪವು ಇಲ್ಲ' ಎಂಬುದು ಇವರು ನೀಡಿದ ಸಂದೇಶ.

ವಿಜಯದಾಸರು, ಗೋಪಾಲದಾಸರು ಮತ್ತು ಜಗನ್ನಾಥದಾಸರು ದಾಸಸಾಹಿತ್ಯ ಪರಂಪರೆಯನ್ನು ಮುಂದುವರಿಸಿದವರು. ಕಾವ್ಯಮಯವಾದ ದೃಷ್ಟಿಕೋನದಿಂದ ಶಾಸ್ತ್ರಭೂಯಿಷ್ಠವಾಗಿ ಪರಿಣಮಿಸಿದ ಹರಿದಾಸ ಸಾಹಿತ್ಯದ ಒಂದು ತಿರುವನ್ನು ವಿಜಯದಾಸರ ಕೃತಿಗಳಲ್ಲಿ ಗುರುತಿಸಬಹುದು. 18ನೆಯ ಶತಮಾನದಲ್ಲಿ ಚೀಕಲಪರಿವೆ ಎಂಬಲ್ಲಿ ಇವರು ಜನಿಸಿದರು. ಸ್ವಪ್ನದಲ್ಲಿ ಪುರಂದರದಾಸರ ಅನುಗ್ರಹವಾಯಿತು. ವಿಜಯವಿಠಲ ಎಂಬ ಅಂಕಿತ ದೊರೆಯಿತು. ಇವರು ಕೀರ್ತನೆಗಳಲ್ಲಿ ತಮ್ಮ ಪರೋಕ್ಷ ಗುರುವನ್ನು ನಾನಾವಿಧವಾಗಿ ಸ್ತುತಿಸಿದ್ದಾರೆ. ಇವರಲ್ಲಿ ಭಾವ ವೈವಿಧ್ಯ, ಲಾಲಿತ್ಯ, ಕಡಿಮೆ, ತತ್ತ್ವಗಳ ನಿರೂಪಣೆಗೆ ಅನುಗುಣವಾಗಿ ಸುಳಾದಿಯಂಥ ಬಿಗುಬಂಧ ರೂಪುಗೊಂಡಿದೆ. ಗಹನತತ್ತ್ವಗಳನ್ನು ಸರಳವಾಗಿ ನಿರೂಪಿಸಿರುವ ಕೌಶಲ ಮೆಚ್ಚುವಂಥದು. ಹರಿ ಸರ್ವೋತ್ತಮತ್ವ, ಬಿಂಬರೂಪಿ ಪರಮಾತ್ಮನನ್ನು ಒಲಿಸಿಕೊಳ್ಳುವ ಬಗೆ, ಜ್ಞಾನ - ಭಕ್ತಿ - ವೈರಾಗ್ಯಗಳ ಸಂಪಾದನೆ, ಪ್ರಾಣದೇವರಸ್ತುತಿ, ಮಾನವ ಜನ್ಮದಲ್ಲಿ ಕರ್ಮದ ಪಾತ್ರ ಇತ್ಯಾದಿ ಅನೇಕ ಗಹನ ತತ್ತ್ವಗಳನ್ನು ತೆಗೆದುಕೊಂಡು ಅವನ್ನು ವಿವರಿಸಲೆತ್ನಿಸಿದ್ದಾರೆ. ಇವರ ಶಿಷ್ಯ ಗೋಪಾಲದಾಸರು, ಇವರ ಪೂರ್ವಾಶ್ರಮದ ಹೆಸರು ಭಾಗಣ್ಣ, ಭಕ್ತಿಯಲ್ಲಿ ಭಾಗಣ್ಣ ಎಂಬ ಜನಪ್ರಿಯೋಕ್ತಿಯೊಂದಿದೆ. ದಾಸಚತುಷ್ಟಯ ಎಂದು ಪ್ರಸಿದ್ಧರಾಗಿರುವವರಲ್ಲಿ ಪುರಂದರ, ವಿಜಯ ಹಾಗೂ ಜಗನ್ನಾಥದಾಸರೊಂದಿಗೆ ಇವರೂ ಒಬ್ಬರು. ವಿಜಯದಾಸರಿಂದ ದೀಕ್ಷೆಪಡೆದು 'ಗೋಪಾಲವಿಠಲ' ಎಂಬ ಅಂಕಿತದಲ್ಲಿ ಕೃತಿರಚನೆ ಮಾಡಿದ್ದಾರೆ.

ಅನಂತರದ ಹರಿದಾಸ ಪೀಳಿಗೆಯಲ್ಲಿ ಜಗನ್ನಾಥದಾಸರು ಮುಖ್ಯರು. ವಿಜಯದಾಸರಲ್ಲಿ ಕಾಣುವ ಶಾಸ್ತ್ರಪ್ರಾವೀಣ್ಯ ಇವರಲ್ಲಿ ಇನ್ನೂ ಹೆಚ್ಚಿನ ಪಕ್ವತೆ ಪಡೆದಿದೆ. ಸು.1727ರಲ್ಲಿ ಮಾನ್ವಿ ತಾಲ್ಲೂಕಿನ ಬ್ಯಾಗವಟ್ಟದಲ್ಲಿ ಜನಿಸಿದರು. ಮೊದಲ ಹೆಸರು ಶ್ರೀನಿವಾಸ. ಅಂಕಿತ ಜಗನ್ನಾಥವಿಠಲ. ಹರಿಕಥಾಮೃತಸಾರ ಇವರ ತಾತ್ತ್ವಿಕ ಉದ್ಗ್ರಂಥ. ಇದರಲ್ಲಿ ಶುಷ್ಕವೈದಿಕ ತತ್ತ್ವಬೋಧನೆ ಮಾತ್ರವಿರದೆ ಸರಳವಾಗಿ, ಅರ್ಥವಾಗುವಂತಿರುವುದು ಇದರ ವೈಶಿಷ್ಟ್ಯ. ಈ ಕೃತಿಯಲ್ಲಿ 32 ಸಂಧಿಗಳಿವೆ. ಭಾಮಿನೀಷಟ್ಪದಿಯಲ್ಲಿ ರಚಿತವಾಗಿರುವ ಶುದ್ಧಕಾವ್ಯವಿದಲ್ಲ ಎಂದು ಕವಿಯೇ ಹೇಳಿಬಿಟ್ಟಿದ್ದಾರೆ. ಶಾಸ್ತ್ರದಲ್ಲಿ ಅಭಿರುಚಿ, ಧರ್ಮದಲ್ಲಿ ಶ್ರದ್ಧೆ, ಪರಮಾತ್ಮನಲ್ಲಿ ಪ್ರೀತಿಯಿರುವ ಎಲ್ಲರಿಗೂ ಈ ಗ್ರಂಥ ಒಂದು ಸವಿಯುಣಿಸಾಗಬಲ್ಲುದು. ಇದರೊಂದಿಗೆ ಅನೇಕ ಕೀರ್ತನೆಗಳನ್ನೂ ಸುಳಾದಿಗಳನ್ನೂ ಇವರು ರಚಿಸಿದ್ದಾರೆ. ಸುವ್ವಾಲಿಗಳ ರಚನೆ ಇವರ ಮತ್ತೊಂದು ವೈಶಿಷ್ಟ್ಯ.

ವಾತ್ಸಲ್ಯ ಭಾವದ ಪ್ರತಿಪಾದನೆಯ ದೃಷ್ಟಿಯಿಂದ ಜಗನ್ನಾಥದಾಸರ ಸಮಕಾಲೀನರಾದ ಪ್ರಸನ್ನ ವೆಂಕಟದಾಸರನ್ನು ಗಮನಿಸಬೇಕಾಗುತ್ತದೆ. ವಾತ್ಸಲ್ಯ ಭಾವದ ಪ್ರತಿಪಾದನೆ ಎಲ್ಲ ದಾಸರಲ್ಲೂ ಸಾಮಾನ್ಯವಾಗಿ ಕಂಡುಬಂದರೂ ಇವರಲ್ಲಿ ವಿಶೇಷವಾಗಿದೆ. ಕೃಷ್ಣಾದಿಗಳ ಬಾಲಭಾಷೆಯನ್ನು ಬಳಸಿ ಕೊಂಡಿರುವುದು ಇವರ ವೈಶಿಷ್ಟ್ಯ. ಹೀಗೆ ಹರಿದಾಸ ಪರಂಪರೆಯನ್ನು ಗಮನಿಸಿದರೆ ಪ್ರಾಣೇಶವಿಠಲರು (ಸು.1736-1822), ಗುರುಶ್ರೀಶವಿಠಲರು (ಸು.1740-1840), ಶ್ರೀದವಿಠಲರು (ಸು.1800), ಹರಪನಹಳ್ಳಿ ಭೀಮವ್ವ (ಸು.1823-1903), ಗುರುಜಗನ್ನಾಥವಿಠಲರು (ಸು.1841-1930) ಮೊದಲಾದ ಸುಮಾರು ಮೂರುನೂರಾ ಐವತ್ತು ಮಂದಿ ದಾಸರು ಆಗಿಹೋಗಿದ್ದಾರೆ.

ಹರಿದಾಸ ಸಾಹಿತ್ಯವನ್ನು ಒಟ್ಟಾಗಿ ಪರಿಶೀಲಿಸಿದಾಗ ಕೆಲವು ವಿಶಿಷ್ಟ ಗುಣಗಳನ್ನು ಗುರುತಿಸಬಹುದು. ಮಧ್ವಾಚಾರ್ಯರ ಹನುಮ, ಭೀಮ, ಮಧ್ವ - ಈ ಅವತಾರಾತ್ರಯದಲ್ಲಿ ಹರಿದಾಸರೆಲ್ಲರಿಗೂ ನಂಬಿಕೆಯಿದೆ. ಹರಿಯ ದಶಾವತಾರಗಳನ್ನೊಪ್ಪಿಕೊಂಡ ವಿಷ್ಣುಪಂಥೀಯರಿವರು. ಹನುಮನಿಗೆ ಗುರುಪದವಿಯನ್ನು ಕೊಟ್ಟಿರುವ ದ್ವೈತಿಗಳು. ಈ ಹಿನ್ನೆಲೆಯಲ್ಲಿ, ವಿಷ್ಣುಭಕ್ತಿಯ ಆಗರಗಳಾದ ರಾಮಾಯಣ, ಮಹಾಭಾರತ, ಭಾಗವತಗಳನ್ನು ತಮ್ಮ ತತ್ತ್ವಪ್ರತಿಪಾದನೆಗಳಲ್ಲಿ ಧಾರಾಳವಾಗಿ ಇವರು ಬಳಸಿಕೊಂಡಿದ್ದಾರೆ. ಹನುಮನ ಸ್ವಾಮಿಭಕ್ತಿದ್ಯೋತಕವಾಗಿರುವ ರಾಮಾಯಣ, ಭೀಮನ ಪರಾಕ್ರಮದ ಪ್ರತೀಕವಾಗಿರುವ ಮಹಾಭಾರತ, ವಿಷ್ಣುವಿನ ಲೀಲಾಕಥನವೇ ಆದ ಭಾಗವತ - ಇವು ಅನುಸರಣೀಯವಾದುದರಲ್ಲಿ ಆಶ್ಚರ್ಯವಿಲ್ಲ. ತಮ್ಮ ನಂಬಿಕೆಗಳನ್ನು ಧ್ರುವ, ಅಜಾಮಿಳ, ಪ್ರಹ್ಲಾದ, ಗಜೇಂದ್ರ, ಬಲಿ, ಅಂಬರೀಷ ಮೊದಲಾದವರ ಉದಾಹರಣೆಗಳ ಮೂಲಕ ನಮಗೆ ಮತ್ತೆ ಮತ್ತೆ ದಾಸರು ಸ್ಪಷ್ಟಪಡಿಸುತ್ತಾರೆ. ಅಂತೆಯೇ ಪೂತನಿ, ಕಂಸ, ಶಕಟಾಸುರ, ಕಾಳಿಂಗನೇ ಮೊದಲಾದ ದುಷ್ಟರ ನಿಗ್ರಹ ದಾಸರಿಗೆ ಮಾದರಿಯಾಗಿದೆ. ಭಾಗವತದ ದಶಮಸ್ಕಂದವನ್ನಂತೂ ದಾಸರ ಪದಗಳಿಂದಲೇ ಪುನಾರಚಿಸಬಹುದು. ಪ್ರತಿಯೊಬ್ಬ ದಾಸರೂ ಗುರುಮುಖೇನ ಅಂಕಿತವನ್ನು ಪಡೆದಿರುವುದು ಸ್ಪಷ್ಟವಿದೆ.

ಸಾಮಾನ್ಯ ಜನರ ಉದ್ಧಾರಕ್ಕೆ ಕಂಕಣಬದ್ಧರಾಗಿ ನಿಂತಂಥ ಹರಿದಾಸರು ಆ ಜನರ ಪ್ರತಿನಿತ್ಯದ ಜೀವನದ ಕಡೆಗೂ ತಮ್ಮ ದೃಷ್ಟಿಯನ್ನು ಹರಿಸಿರುವುದು ಸ್ತುತ್ಯರ್ಹ. ಲೌಕಿಕ ಘಟನೆಗಳನ್ನು ಬಣ್ಣಿಸಿ

ಅದಕ್ಕೆ ಒಂದು ಪಾರಮಾರ್ಥಿಕ ಅರ್ಥವನ್ನಳವಡಿಸಿರುವುದು ಹರಿದಾಸರ ವೈಶಿಷ್ಟ್ಯಗಳಲ್ಲೊಂದು. ಜೀವನದಲ್ಲಿ ಅಂಟಿಯೂ ಅಂಟದಂತೆ ಬಾಳಬೇಕೆಂಬುದೇ ಹರಿದಾಸರ ಉಪದೇಶದ ಸಾರ. ಮಾನವಧರ್ಮವನ್ನು ಕಟ್ಟುವ ಪ್ರಯತ್ನ ಅವರದು. ಸಮಾಜದಲ್ಲಿದ್ದ ಸಣ್ಣತನ, ಮತ್ಸರ, ಮೋಹ, ಭ್ರಮೆ, ಅಂಧಶ್ರದ್ಧೆ, ಕುರುಡುನಿಷ್ಠೆ- ಇತ್ಯಾದಿ ರೋಗಾಣುಗಳನ್ನೆಲ್ಲ ತಮ್ಮ ಸಾಹಿತ್ಯವೆಂಬ ಸಿದ್ಧೌಷಧದಿಂದ ನಾಶಪಡಿಸಲೆತ್ನಿಸಿದರು. ತಮ್ಮದು ನ್ಯಾಯಮಾರ್ಗವೆಂಬ ಪ್ರಜ್ಞೆಯನ್ನು ಎಲ್ಲಿಯೂ ಅವರು ಮರೆತಂತಿಲ್ಲ. ಆ ಧೈರ್ಯದಿಂದಲೇ ಅವರು ಭಗವಂತನೊಡನೆ ವಾದ ಮಾಡಲು ಶಕ್ತರಾದುದು. ಪರಮಾತ್ಮನ ಸ್ವರೂಪ, ಗುಣಾದಿ ವಿಷಯಗಳಿಗೆ ಬಂದಾಗಲಂತೂ ಅವರ ಸರಳ ಸುಂದರ ನಿರೂಪಣೆಗಳು ಅಚ್ಚರಿಯನ್ನುಂಟುಮಾಡುತ್ತವೆ. ವೇದೋಪನಿಷತ್ತುಗಳ ಸಾರವನ್ನೇ ಕನ್ನಡಕ್ಕವರು ಭಟ್ಟಿಯಿಳಿಸಿಕೊಟ್ಟಿದ್ದಾರೆ.

ಇಡೀ ಭಾರತದಲ್ಲೇ ಧರ್ಮಜಾಗೃತಿಯ ಕಾಲವಾಗಿದ್ದ ಆ ಪರ್ವಕಾಲದಲ್ಲಿ, ಕರ್ನಾಟಕದಲ್ಲಿ ಧರ್ಮ ಹಾಗೂ ವಿಷ್ಣುಭಕ್ತಿಗಳನ್ನು ಪುನರುಜ್ಜೀವನಗೊಳಿಸಿದ ಕೀರ್ತಿ ಹರಿದಾಸರದು. ತಮ್ಮ ನಾದಮಯ ಪದಸೃಷ್ಟಿಯನ್ನು ತಂಬೂರಿಯ ಶ್ರುತಿಯೊಂದಿಗೆ ಮೇಳವಿಸಿ, ಕಾಲಿಗೆ ಗೆಜ್ಜೆಕಟ್ಟಿಕೊಂಡು ನರ್ತಿಸುತ್ತ ಹಾಡಿ, ಮನೆ ಮನೆಗೂ ಸಂಗೀತ, ಸಾಹಿತ್ಯ, ನೃತ್ಯಗಳ ರಸಾನುಭವವನ್ನು ಮುಟ್ಟಿಸಿದರು.

ದಾಸಸಾಹಿತ್ಯದಲ್ಲಿ ನಿರೂಪಣಾ ಮಾಧ್ಯಮಗಳು ವೈವಿಧ್ಯ ಪೂರ್ಣವಾಗಿವೆ. ಕೀರ್ತನೆ, ಉಗಾಭೋಗ, ಸುಳಾದಿ, ದಂಡಕ, ಸುವ್ವಾಲಿ, ವೃತ್ತನಾಮ ಮೊದಲಾದ ಪ್ರಕಾರಗಳಲ್ಲಿ ಅವು ಹೊರಹೊಮ್ಮಿವೆ. ಕೆಲವು ಉದಾಹರಣೆಗಳನ್ನು ಈ ಮುಂದೆ ಕೊಟ್ಟಿದೆ.

ಕೀರ್ತನೆ:

ಈಸಬೇಕು ಇದ್ದು ಜಯಿಸಬೇಕು
ಹೇಸಿಕೆ ಸಂಸಾರದಲ್ಲಿ | ಆಸೆ ಲೇಶ ಇಡದ್ಹಾಂಗೆ

ತಾಮರಸಜಲದಂತೆ | ಪ್ರೇಮವಿಟ್ಟು ಭವದೊಳು
ಸ್ವಾಮಿ ರಾಮ ಎನುತ ಪಾಡಿ | ಕಾಮಿತ ಕಯ್ಗೊಂಬರೆಲ್ಲ

ಗೇರುಹಣ್ಣಿನಲ್ಲಿ ಬೀಜ | ಸೇರಿದಂತೆ ಸಂಸಾರದಿ
ಮೀರಿಯಾಸೆ ಮಾಡದಲೆ | ಧೀರ ಕೃಷ್ಣನ ಭಕುತರೆಲ್ಲ

ಮಾಂಸದಾಸೆಗೆ ಮತ್ಸ್ಯಸಿಲುಕಿ | ಹಿಂಸೆ ಪಟ್ಟಪರಿಯಂತೆ
ಮೋಸ ಹೋಗದ್ಹಾಂಗೆ | ಜಗದೀಶ ಪುರಂದರ ವಿಠಲನ ನೆನೆದು

ಉಗಾಭೋಗ :

ನಿನ್ನಂಥ ಸ್ವಾಮಿ ಎನಗುಂಟು ನಿನಗಿಲ್ಲ
ನಿನ್ನಂಥ ತಂದೆ ಎನಗುಂಟು ನಿನಗಿಲ್ಲ

ನೀನೆ ಪರದೇಶಿ ನಾನೆ ಸ್ವದೇಶಿ
ನಿನ್ನರಸಿ ಲಕುಮಿ ಎನ್ನ ತಾಯಿ
ನಿನ್ನ ತಾಯ ತೋರೋ ಶ್ರೀ ಪುರಂದರವಿಠಲ

ಸುಳಾದಿ :

ಒಡೆಯ ಹಾವಿಗೆ ಮೆಟ್ಟಿ ಹಾವಿಗೆಯವ ನಾನು
ಒಡೆಯ ಮೆಲ್ಲಡಿಯಿಡಲು ಕಟ್ಟಿಗೆಯವ ನಾನು
ಕಡೆಯ ತಾಂಬೂಲವನುಗುಳುವ ವೇಳ್ಯಗಳಲ್ಲಿ ಕಾಳಾಂಚಿಯವ ನಾನು

ಒಡೆಯನೊಡ್ಡೋಲಗದಲ್ಲಿ ಚಿತ್ತೈಸಿರೆ
ಛತ್ರ ಚಾಮರ ಕನ್ನಡಿ ಪಿಡಿವವ ನಾನೊಡೆಯಗೆ
ಒಡೆಯ ಪುರಂದರವಿಠಲರಾಯನ ಉಗುರು ಬಿದ್ದಲ್ಲಿ
ಯೆನ್ನ ಶಿರವ ಕೊಡುವೆ ನಾನೊಡೆಯಗೆ

ಮಠ್ಯತಾಳ

ಹರಿಯನೋಲೈಸುವೆಂಬಣ್ಣಗಳಿರ ಕೇಳಿರೊ
ಶರಧಿಯ ಕಟ್ಟಿಟ್ಟು ಕುಲಂಕೆಯ ಮುಟ್ಟಿ
ಕುರಾವಣಾದಿಗಳ ಕೂಡೆ ಇರಿದಾಡುತಿರಬೇಕು
ಪುರಂದರ ವಿಠಲನೋಲಗದೊಳೀಗ ಘನಾ

ಅಟ್ಟತಾಳ

ಚಂದ್ರಮ ನೀನಿನ್ನು ನಿಂದಿರೆ ತೆರವಿಲ್ಲ
ಸೂರೆಯಗೈಯಿನ್ನು ತಿರುಗದಲೆ ಹೊತ್ತು
ಇಂದ್ರಾದಿಗಳಿಗೆಲ್ಲ ಹರಿಹರಿ ನಿಂದು ತಲೆ
ಯನು ತುರಿಸಲು ಹೊತ್ತಿಲ್ಲ
ಬೊಮ್ಮಾದಿಗಳಿಗೂ ಒಮ್ಮೆಯೂ ತೆರಪಿಲ್ಲ
ಈ ದೇವರೆಲ್ಲರೊಳೊಬ್ಬನೆ ಮೆಟ್ಟಿ
ಆಡುವ ನಮ್ಮ ಪುರಂದರವಿಠಲ ಕಟ್ಟಾಳು ಕಾಣಿರೊ

ಆದಿತಾಳ

ಧರೆಯಂಜುತಲಿದೆ ಗಿರಿಗಳಂಜುತಲಿವೆ
ಮರಬಳ್ಳಿಗಳಂಜಿ ಫಲವನೀವುತಲಿವೆ
ಸರಿತು ಸಮುದ್ರಗಳಂಜಿ ಬೆಚ್ಚುತಲಿವೆ
ಪುರಂದರವಿಠಲ ನೀನೆಂಥ ಅರಸೂ

ಜತೆ

ನಾ ಘನ ನೀ ಘನ ತಾ ಘನಯೆನಬೇಡಾ|
ಪುರಂದರವಿಠಲನೊಬ್ಬನೆ ಘನ

ಸಂಖ್ಯಾಬಾಹುಳ್ಯದಿಂದ ನೋಡುವುದಾದರೆ ಪದ ಅಥವಾ ಕೀರ್ತನೆಗಳು ಹೆಚ್ಚಿನ ಸಂಖ್ಯೆಯಲ್ಲಿ ಸಿಕ್ಕುತ್ತವೆ. ಅನಂತರ ಸುಳಾದಿಗಳು, ಬಳಿಕ ಉಗಾಭೋಗಗಳು, ದಂಡಕ, ವೃತ್ತನಾಮ, ಸುವ್ವಾಲಿಗಳು ಅಲ್ಲಲ್ಲಿ ಕಾಣಸಿಗುತ್ತವೆ.

ಹರಿದಾಸಸಾಹಿತ್ಯವನ್ನು ಸಂಗ್ರಹಿಸಿ, ಪರಿಷ್ಕರಿಸಿ ಪ್ರಕಟಿಸುವ ಕಾರ್ಯ ಹಲವಾರು ವ್ಯಕ್ತಿ, ಸಂಸ್ಥೆ ಮತ್ತು ಸರ್ಕಾರದಿಂದ ಕರ್ನಾಟಕದಲ್ಲಿ ನಿರಂತರವಾಗಿ ನಡೆದಿದೆ. ವ್ಯಕ್ತಿ ಹಂತದಲ್ಲಿ ಸುಬೋಧ ರಾಮರಾಯರು, ಗೋರಬಾಳ ಹನುಮಂತರಾವ್, ಪಾವಂಜೆ ಗುರುರಾಯರನ್ನು ಹೆಸರಿಸಬಹುದು. ಅಂತೆಯೇ ಕನಕದಾಸರ ನಾಲ್ಕನೆಯ ಶತಮಾನೋತ್ಸವ ಸಮಿತಿಯವರು ಕನಕದಾಸರ ಕೃತಿಗಳನ್ನೂ ಅಖಿಲ ಕರ್ನಾಟಕ ಪುರಂದರದಾಸರ 400ನೆಯ ವರ್ಷದ ಉತ್ಸವಮಂಡಳದವರು (ಧಾರವಾಡ) ಪುರಂದರದಾಸರ ಕೃತಿಗಳನ್ನೂ ಪ್ರಕಟಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯ ಆಶ್ರಯದಲ್ಲಿ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹರಿದಾಸಸಾಹಿತ್ಯ ವಿಭಾಗ 'ಹರಿದಾಸಸಾಹಿತ್ಯ ಮಾಲೆ'ಯಾಗಿ ದಾಸಸಾಹಿತ್ಯದ ಸಂಪಾದನ ಕಾರ್ಯವನ್ನು ಕೈಗೊಂಡು ಹಸ್ತಪ್ರತಿಗಳನ್ನು ಸಂಗ್ರಹಿಸಿ, ಪರಿಷ್ಕರಿಸಿ ಪ್ರಕಟಿಸುವ ಕಾರ್ಯದಲ್ಲಿ ತೊಡಗಿದೆ. ಇದುವರೆಗೆ ಈ ಮಾಲೆಯಲ್ಲಿ 14 ಕೃತಿಗಳು ಪಂಡಿತ ಹಾಗೂ ಜನಪ್ರಿಯ ಆವೃತಿಗಳಲ್ಲಿ ಪ್ರಕಟವಾಗಿವೆ. ದಾಸ ಸಾಹಿತ್ಯ ಪ್ರಕಟಣ ಯೋಜನೆಯನ್ನು ಇತ್ತೀಚೆಗೆ ಕರ್ನಾಟಕ ಸರ್ಕಾರ ಸಮಗ್ರ ದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಯ ಕಾರ್ಯವಾಗಿ ಕೈಗೆತ್ತಿಕೊಂಡು ಐವತ್ತು ಸಂಪುಟಗಳಲ್ಲಿ ಹೊರತಂದಿದೆ.

ಕನ್ನಡದಲ್ಲಿ ದಾಸಸಾಹಿತ್ಯ ಕುರಿತ ಸಂಶೋಧನೆ ಸಾಕಷ್ಟು ನಡೆದಿದ್ದು ಅನೇಕ ಕೃತಿಗಳು ಹೊರಬಂದಿವೆ. ಪ್ರಸನ್ನ ವೆಂಕಟಾದಾಸರು ಮತ್ತು ಅವರ ಕೃತಿಗಳು (ಎ.ಟಿ.ಪಾಟೀಲ), ಕರ್ನಾಟಕದ ಹರಿದಾಸರು (ಎಚ್.ಕೆ.ವೇದವ್ಯಾಸಾಚಾರ್ಯ), ಜಗನ್ನಾಥದಾಸರು (ಕೆ.ಎಂ.ಕೃಷ್ಣರಾವ್), ಪ್ರಸಾದಯೋಗ (ವಿ.ಎ.ದಿವಾಣಜಿ), ಶ್ರೀವಿಜಯದಾಸರು ಜೀವನ ಮತ್ತು ಕೃತಿಗಳ ಸಮೀಕ್ಷೆ (ಕೆ.ಗೋಕುಲನಾಥ್), ಹರಿದಾಸರ ಭಕ್ತಿ ಸ್ವರೂಪ (ಟಿ.ಎನ್.ನಾಗರತ್ನ), ಶ್ರೀವಾದಿರಾಜರ ಕನ್ನಡ ಕೃತಿಗಳು (ಎಚ್.ಜಿ. ಲೋಕೂರ), ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳ ಸಾಂಸ್ಕೃತಿಕ ಅಧ್ಯಯನ (ಅಕ್ಕಮಹಾದೇವಿ), ಬಸವೇಶ್ವರ ಮತ್ತು

ಪುರಂದರದಾಸ (ಬಸವರಾಜ ಸಬರದ), ಹರಿದಾಸ ಅಂದೋಲನ - ಒಂದು ಅಧ್ಯಯನ (ಎಸ್.ಕೆ.ರಾಮಶೇಷನ್), ದಾಸಸಾಹಿತ್ಯದಲ್ಲಿ ಜಾನಪದ ಅಂಶಗಳು- ಒಂದು ಅಧ್ಯಯನ (ಆರ್.ಸುನಂದಮ್ಮ), ಹತ್ತೊಂಬತ್ತನೆಯ ಶತಮಾನದ ಹರಿದಾಸ ಸಾಹಿತ್ಯ (ಅನಂತ ಪದ್ಮನಾಭರಾವ್) - ಇವು ದಾಸಸಾಹಿತ್ಯ ಕ್ಷೇತ್ರದಲ್ಲಿ ಡಾಕ್ಟೊರೇಟ್ ಪಡೆದಿರುವ ಮಹಾಪ್ರಬಂಧಗಳು.

ಆರ್.ಎಸ್.ಪಂಚಮುಖಿಯವರ ಕರ್ನಾಟಕದ ಹರಿದಾಸ ಸಾಹಿತ್ಯ, ಬೇಲೂರು ಕೇಶವದಾಸರ ಕರ್ನಾಟಕ ಭಕ್ತವಿಜಯ, ಆರ್.ಆರ್.ದಿವಾಕರರ ಹರಿಭಕ್ತಿಸುಧೆ, ಜಿ.ವರದರಾಜರಾಯರ ಹರಿದಾಸ ಹೃದಯ ಇವು ದಾಸಸಾಹಿತ್ಯವನ್ನು ಕುರಿತ ಕೆಲವು ಮೌಲಿಕ ಕೃತಿಗಳು. ಈ ಶತಮಾನದಲ್ಲೂ ದಾಸಪರಂಪರೆಯನ್ನುಳಿಸಿಕೊಂಡು ಕೃತಿರಚನೆಯಲ್ಲಿ ತೊಡಗಿರುವವರಲ್ಲಿ ಚಿತ್ರದುರ್ಗದ ರಾಮಚಂದ್ರರಾವ್ (ತಂದೆ ವೆಂಕಟೇಶ ವಿಠಲ), ಮೈಸೂರಿನ ಎಂ.ಆರ್.ಗೋವಿಂದರಾವ್ (ಗುರುಗೋವಿಂದ ವಿಠಲ) ಮತ್ತು ಜೀವೂಬಾಯಿ (ಕಮಲನಾಭವಿಠಲ) ಮೊದಲಾದವರನ್ನು ಹೆಸರಿಸಬಹುದು. ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನ ಸಾಹಿತ್ಯ ಐದುನೂರು ವರ್ಷಗಳಲ್ಲಿ ಸಮೃದ್ಧವಾಗಿ ಬೆಳೆದಿದೆ. ಸುಮಾರು ಮೂವತ್ತು ಸಾವಿರಕ್ಕೂ ಹೆಚ್ಚು ಕೀರ್ತನೆಗಳು ರಚಿತವಾಗಿವೆ. ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ತ್ವಪೂರ್ಣ ಭಾಗವಾದ ದಾಸಸಾಹಿತ್ಯ ವಾಹಿನಿ ಇಂದಿಗೂ ಜೀವಂತವಾಗಿ ಮುಂದುವರಿದಿದೆ. (ಟಿ.ಎನ್.ಎನ್.)

**ಕನ್ನಡದಲ್ಲಿ ನವ್ಯಕಾವ್ಯ :** ನವೋದಯ ಕಾವ್ಯದಂತೆ ನವ್ಯಕಾವ್ಯವೂ ಇಂಗ್ಲಿಷ್ ಕಾವ್ಯದ ಪ್ರೇರಣೆಯಿಂದಲೇ ಹುಟ್ಟಿಕೊಂಡದ್ದು. ನವ್ಯಕಾವ್ಯ ಇಂಗ್ಲಿಷಿನ ಮಾಡರ್ನ್ ಪೊಯಿಟ್ರಿಗೆ ಸಂವಾದಿಯಾದ ಪದ. ನವೋದಯ ಕಾವ್ಯಕ್ಕೆ ಆಧುನಿಕ ಕಾವ್ಯ ಎಂಬ ಇನ್ನೊಂದು ಹೆಸರೂ ಬಳಕೆಯಲ್ಲಿ ಇದ್ದಿತಾದ್ದರಿಂದ ಇಂಗ್ಲಿಷಿನ ಮಾಡರ್ನ್ ಪೊಯಿಟ್ರಿಯಿಂದ ಪ್ರೇರಣೆಪಡೆದ ಕನ್ನಡ ಕಾವ್ಯವನ್ನು ಆಧುನಿಕ ಕಾವ್ಯ ಎಂದು ಕರೆಯುವಂತಿರಲಿಲ್ಲ. ಆದ್ದರಿಂದ ಅದನ್ನು ಕನ್ನಡದ ಸಂದರ್ಭದಲ್ಲಿ ನವ್ಯಕಾವ್ಯ ಎಂದು ಕರೆಯಬೇಕಾಗಿ ಬಂದಿತೆಂದು ತೋರುತ್ತದೆ. ನವೋದಯ ಕಾವ್ಯಕ್ಕಿಂತ ಭಿನ್ನರೀತಿಯ ಕಾವ್ಯಪ್ರಕಾರವಿದು ಎಂದು ನಿರ್ದೇಶಿಸುವ ಅನುಕೂಲಕ್ಕಾಗಿ ಬಳಸಿದ ಪಾರಿಭಾಷಿಕ ಪದವೆಂದು ಮಾತ್ರ ಇದನ್ನು ತಿಳಿಯಬೇಕಾಗುತ್ತದೆ. ಶ್ರೇಷ್ಠಕಾವ್ಯ ಯಾವ ಕಾಲಕ್ಕೂ ನವ್ಯವಾಗಿಯೆ ಇರುತ್ತದೆ. ಇದು ನವ್ಯ ಎಂದಕೂಡಲೆ ಎಲ್ಲ ರೀತಿಯಿಂದಲೂ ನವ್ಯ-ನ ಭೂತೋ ನ ಭವಿಷ್ಯತಿ ಎಂದು ಅರ್ಥ ಹಚ್ಚಬೇಕಾಗಿಲ್ಲ ಎಂಬ ಗೋಪಾಲಕೃಷ್ಣ ಅಡಿಗರ ಮಾತನ್ನು ಇಲ್ಲಿ ನೆನೆಯಬಹುದು (ಹೊಸ ಕವಿತೆಯನ್ನು ಕುರಿತು, 1953). ನವ್ಯಕಾವ್ಯ ಎಂಬ ಕಾವ್ಯ ಪ್ರಕಾರಕ್ಕೆ ಆ ಹೆಸರನ್ನು ಕೊಟ್ಟವರು ವಿ.ಕೃ. ಗೋಕಾಕರು.

ಕನ್ನಡದ ನವೋದಯ ಕಾವ್ಯ 19ನೆಯ ಶತಮಾನದ ಇಂಗ್ಲೆಂಡಿನ ರೊಮ್ಯಾಂಟಿಕ್ ಕಾವ್ಯ ಸಂಪ್ರದಾಯದಿಂದ ಪ್ರೇರಣೆ ಪಡೆದದ್ದಾಗಿತ್ತು. ನಮ್ಮಲ್ಲಿ 20ನೆಯ ಶತಮಾನದ ಪೂರ್ವಾರ್ಧದಲ್ಲಿ ಅದರ ಪ್ರಭಾವ ಗಾಢವಾಗಿತ್ತು. ಆ ಹೊತ್ತಿಗಾಗಲೇ ಇಂಗ್ಲೆಂಡಿನಲ್ಲಿ ತೀವ್ರತರವಾದ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿಗಳ ಬದಲಾವಣೆಗಳಿಂದಾಗಿ ಕಾವ್ಯ ಕ್ಷೇತ್ರದಲ್ಲಿಯೂ ಅಪೂರ್ವವಾದ ಬದಲಾವಣೆಗಳು ಆಗತೊಡಗಿದ್ದವು. ರೊಮ್ಯಾಂಟಿಕ್ ಯುಗ ಮುಗಿದು ವಿಕ್ಟೋರಿಯನ್ ಯುಗವೂ ಕಳೆದು ಟಿ.ಇ.ಹ್ಯೂಮ್ ಮುಂತಾದವರು ಕಾವ್ಯ ಅಭಿವ್ಯಕ್ತಿ ತಂತ್ರ ಮತ್ತು ಧೋರಣೆಗಳಿಗೆ ಸಂಬಂಧಿಸಿದಂತೆ ಭಿನ್ನ ನಿಲವನ್ನು ಪ್ರತಿಪಾದಿಸಿ ಪ್ರತಿಮಾನಿಷ್ಠ ಆಂದೋಲನಕ್ಕೆ ಕಾರಣರಾಗಿದ್ದರು. ಎಜ್ರಾ ಪೌಂಡ್ ಕವಿಯೂ ಅದನ್ನು ಬೆಂಬಲಿಸಿದ್ದ. ಮುಂದೆ ಟಿ.ಎಸ್.ಎಲಿಯಟ್ ಪ್ರತಿಮಾನಿಷ್ಠ ಕಾವ್ಯ ರೀತಿಯೊಂದಿಗೆ ಅನುಭಾವ ಪಂಥ ಮತ್ತು ಫ್ರೆಂಚ್ ಸಂಕೇತನಿಷ್ಠ ಕಾವ್ಯಗಳ ಉತ್ತಮಾಂಶಗಳನ್ನೂ ಸಮನ್ವಯಗೊಳಿಸಿ ಹೆಚ್ಚು ಸಂಕೀರ್ಣವೂ ಸಮಗ್ರವೂ ಆದ ಕಾವ್ಯ ರೀತಿಯನ್ನೂ ವಿಮರ್ಶಾ ವಿಧಾನವನ್ನೂ ಬೆಳೆಸಿದ. ಈ ಮಧ್ಯೆ ಯೇಟ್ಸ್ ಕವಿಯೂ ತನ್ನ ಕೊನೆಗಾಲದ ಕವನಗಳಲ್ಲಿ ತನ್ನ ಸ್ವಂತಿಕೆಯನ್ನು ಉಳಿಸಿಕೊಂಡಂಥ' ನವ್ಯಕಾವ್ಯವನ್ನು ಬರೆಯುತ್ತಿದ್ದ. ಎಲಿಯಟ್‌ನ ವೇಸ್ಟ್‌ಲ್ಯಾಂಡ್ ಕಾವ್ಯ ಪ್ರಕಟವಾಗುವುದಕ್ಕಿಂತ ನಾಲ್ಕು ವರ್ಷ ಮೊದಲು (1918) ಹಾಪ್‌ಕಿನ್ಸ್‌ನ ಕವನಗಳ ಸಂಗ್ರಹವನ್ನು ಆತನ ಮರಣೋತ್ತರಕಾಲದಲ್ಲಿ ರಾಬರ್ಟ್ ಬ್ರಿಡ್ಜಸ್ ಎಂಬುವನು ಪ್ರಕಟಿಸಿದ್ದ. ಹಾಪ್‌ಕಿನ್ಸ್ ತನ್ನ ಕಾವ್ಯದಲ್ಲಿ ಭಾಷೆ ಮತ್ತು ಛಂದೋರೂಪಗಳಿಗೆ ಸಂಬಂಧಿಸಿದಂತೆ ಹೊಸ ಬಗೆಯ ಪ್ರಯೋಗಗಳನ್ನು ನಡೆಸಿದ್ದ. ಮುಂದೆ ಬಂದ ತರುಣ ಪೀಳಿಗೆಯ ಆಡೆನ್, ಸಿ.ಡೇ.ಲೂಯಿ, ಸ್ಟೀಫನ್ ಸ್ಪೆಂಡರ್, ಡಿಲಾನ್ ಥಾಮಸ್ ಮುಂತಾದ ಕವಿಗಳು ಹಾಪ್‌ಕಿನ್ಸ್ ಮತ್ತು ಎಲಿಯಟ್ ಈ ಇಬ್ಬರ ಕಾವ್ಯಗಳ ಪ್ರಭಾವಕ್ಕೂ ಒಳಗಾದರು. ಮುಂದೆ ರಾಜಕೀಯವಾಗಿ ವಾಮಪಂಥೀಯ ಒಲವನ್ನು ಬೆಳೆಸಿಕೊಳ್ಳುವುದರ ಮೂಲಕ ಹಾಪ್‌ಕಿನ್ಸ್ ಮತ್ತು ಎಲಿಯಟರ ಪ್ರಭಾವದಿಂದಲೂ ಬಿಡಿಸಿಕೊಳ್ಳಲು ತರುಣ ಕವಿಗಳು ಹಾತೊರೆದರು. ಎರಡನೆಯ ಮಹಾಯುದ್ಧದ ಕಾಲದಲ್ಲಿ ಹಿಟ್ಲರ್ ಮತ್ತು ರಷ್ಯ ನಡುವಿನ ಒಡಂಬಡಿಕೆಯಾಗಿ ಅವರ ವಾಮಪಂಥೀಯ ಧೋರಣೆ ಕರಗಿಹೋಗುವಂತಾಯಿತು. ಅನಂತರದ ಕಾಲದ ಇಂಗ್ಲೆಂಡಿನ ಕವಿಗಳ ಧೋರಣೆ ತಮ್ಮ ತಮ್ಮ ವೈಯಕ್ತಿಕ ಋಜುತ್ವವನ್ನು (ಇಂಟೆಗ್ರಿಟಿ) ಉಳಿಸಿಕೊಳ್ಳುವುದರಲ್ಲಿ ಮತ್ತು ಘೋರವಾದ ಯುದ್ಧಗಳನ್ನು ತಡೆಯುವುದರ ಮೂಲಕ ಹೇಗೆ ತಮ್ಮನ್ನೂ ಪ್ರಪಂಚವನ್ನೂ ಉಳಿಸಿಕೊಳ್ಳಬೇಕೆಂಬುದರಲ್ಲಿ ಕೇಂದ್ರೀಕೃತವಾಗುವಂತಾಗಿತ್ತು. ಇಂಗ್ಲಿಷ್ ನವ್ಯ ಕಾವ್ಯದ ಈ ಅವಸ್ಥಾಂತರಗಳ ವಿವರವಾದ ಹಿನ್ನೆಲೆಯನ್ನು ಬಲ್ಲವರಾಗಿದ್ದ ವಿ.ಕೃ.ಗೋಕಾಕರು ಮತ್ತು ಗೋಪಾಲಕೃಷ್ಣ ಅಡಿಗರು ತಮ್ಮದೇ ಆದ ಒಲವು ವ್ಯಾಖ್ಯಾನಗಳಿಗೆ ಅನುಗುಣವಾಗಿ ನವ್ಯಕಾವ್ಯವನ್ನು ಕನ್ನಡದಲ್ಲಿ ಹುಟ್ಟುಹಾಕಲು, ಬೆಳೆಸಲು ಸಿದ್ಧರಾದರು. ಭಾರತದಲ್ಲಿಯೂ ಸ್ವಾತಂತ್ರ್ಯಾನಂತರದ ಕಾಲದಲ್ಲಿ ಆದ ತೀವ್ರತರವಾದ ರಾಜಕೀಯ, ಸಾಮಾಜಿಕ ಪರಿವರ್ತನೆಗಳು, ಜನಸಮಷ್ಟಿಯ ಆಶೋತ್ತರಗಳು, ವಾಸ್ತವ ಪರಿಸ್ಥಿತಿಗಳು ಅವರ ಕಾವ್ಯಧೋರಣೆಗಳನ್ನು ರೂಪಿಸುವುದರಲ್ಲಿ ಪೋಷಕಾಂಶಗಳಾದವು.

ವಿ.ಕೃ.ಗೋಕಾಕರು ಸಮುದ್ರಗೀತೆಗಳು (1940), ಅಭ್ಯುದಯ (1946), ನವ್ಯಕವಿಗಳು (1950) ಎಂಬ ಕವನ ಸಂಕಲನಗಳಲ್ಲಿ ಅವರದೇ ಆದ ಬಗೆಯಲ್ಲಿ ನವ್ಯಕಾವ್ಯ ಪ್ರಯೋಗಗಳನ್ನು ನಡೆಸುತ್ತಿದ್ದರಾದರೂ ಆ ಬಗೆಯ ಕಾವ್ಯ ರೀತಿಗೆ ಒಂದು ತಾತ್ತ್ವಿಕ ಹಿನ್ನೆಲೆಯನ್ನು ರೂಪಿಸಿಕೊಂಡಿರಲಿಲ್ಲ; ಇಲ್ಲವೆ ಬಹಿರಂಗವಾಗಿ ಪ್ರತಿಪಾದಿಸಿರಲಿಲ್ಲ. 1950ರಲ್ಲಿ ಮುಂಬಯಿಯಲ್ಲಿ ನಡೆದ 34ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಲೇಖಕಗೋಷ್ಠಿಯ ಅಧ್ಯಕ್ಷಭಾಷಣದಲ್ಲಿ ಆ ಕೆಲಸವನ್ನು ಅವರು ಮಾಡಿದರು. ಆ ಭಾಷಣ ಮುಂದೆ ನವ್ಯತೆ ಹಾಗೂ ಕಾವ್ಯಜೀವನ ಎಂಬ ಹೆಸರಿನಲ್ಲಿ ಪ್ರಕಟವಾಯಿತು. ಧಾರವಾಡದ ಬಾನುಲಿ ಕೇಂದ್ರದಿಂದ ಅವರು ಪ್ರಸಾರ ಮಾಡಿದ ನವ್ಯ ಕಾವ್ಯದ ರೀತಿ ಎಂಬ ಭಾಷಣದಲ್ಲಿಯೂ ಚೆನ್ನವೀರ ಕಣವಿಯವರ ಜೊತೆಯಲ್ಲಿ ಸಂಪಾದಿಸಿದ 'ನವ್ಯ ಧ್ವನಿ' (1956) ಎಂಬ ಬೇರೆ ಬೇರೆ ಕವಿಗಳ ನವ್ಯ ಕವನಗಳ ಸಂಚಯದ ಮುನ್ನುಡಿಯಲ್ಲಿಯೂ ನವ್ಯಕಾವ್ಯವನ್ನು ಕುರಿತಂಥ ಗೋಕಾಕರ ವಿಚಾರ, ವಿವರಣೆಗಳಿವೆ.

ಗೋಕಾಕರು ನವ್ಯಕಾವ್ಯ ಮತ್ತು ಕನ್ನಡದಲ್ಲಿ ಅದರ ಆವಶ್ಯಕತೆಯನ್ನು ಕುರಿತಂತೆ ಹೇಳಿರುವ ಕೆಲವು ಮಾತುಗಳನ್ನು ಇಲ್ಲಿ ಗಮನಿಸಬಹುದಾಗಿದೆ. ನವ್ಯಕಾವ್ಯವೆಂದರೆ ಆಧುನಿಕ ಕಾವ್ಯಕ್ಕಿಂತ ಬೇರೆಯಾದ ಕಾವ್ಯ. ವಿಶೇಷ ತಂತ್ರ ವಿಧಾನಗಳನ್ನು ಪಡೆದ ಕಾವ್ಯ. ಮುದ್ದಣನ ಕಾಲದಿಂದ ಬೆಳೆದು ಬಂದ ಆಧುನಿಕ ಕಾವ್ಯವು ಆಧುನಿಕ ಕಾವ್ಯ ಪ್ರಕಾರಗಳನ್ನು ಕಾವ್ಯವಸ್ತುಗಳನ್ನು ಕನ್ನಡಕ್ಕೆ ತಂದಿತು. ಈ ಕಾವ್ಯಪ್ರಕಾರ - ವಸ್ತುಗಳಿಗೆ ಉಚಿತವಾದ ಶೈಲಿ - ಛಂದಸ್ಸುಗಳನ್ನು ನಿರ್ಮಾಣ ಮಾಡಿತು. ವ್ಯಕ್ತಿತ್ವ ನಿರೂಪಣೆಯನ್ನು ಸಾಧಿಸಿತು. ಈಗ ಆಧುನಿಕ ಕಾವ್ಯದ ಪರಂಪರೆಯೊಂದು ನಿರ್ಮಿತವಾಗಿದೆ. ಒಂದು ಪರಂಪರೆ ಪೂರ್ಣವಾದಾಗ ಇನ್ನೊಂದು ಹೊಳಹನ್ನು ಹಾಕದೆ ಉಕ್ತಿಗೆ ಸಮಗ್ರತೆಯೂ ಕಾಂತಿಯೂ ಬರುವುದು ಕಠಿಣ. ಅಂತೇ ಇಂದು ನವ್ಯ ಕಾವ್ಯ ಆವಶ್ಯಕತೆಯೂ ಉಂಟಾಗಿದೆ. ಒಂದು ಪರಂಪರೆ ತನ್ನ ಸಿದ್ಧಿಯನ್ನು ಮುಟ್ಟಿದಾಗ ಇನ್ನೊಂದು ಸಿದ್ಧತೆಯು ತನ್ನ ಸಿದ್ಧಿಯ ದಾರಿಯನ್ನು ಹುಡುಕುತ್ತಿರುತ್ತದೆ. ಇಂಥ ಆಂತರಿಕ ಆವಶ್ಯಕತೆಯಿಂದ ಪ್ರಚೋದನೆಗೊಂಡ ಬಂಗಾಲಿ ಹಾಗೂ ಮರಾಠಿ ಕಾವ್ಯಗಳೂ ನವ್ಯಕಾವ್ಯದ ದಾರಿಯನ್ನು ನೇರವಾಗಿ ತುಳಿಯಹತ್ತಿವೆ. ಆಧುನಿಕ ಕನ್ನಡ ಕಾವ್ಯವೂ ತನ್ನ ಪರಂಪರೆಯ ಸಿದ್ಧಿಯನ್ನು ಮುಟ್ಟಿದಾಗ-ಮುಂದೇನೆಂಬ ಪ್ರಶ್ನೆ ಏಳುತ್ತದೆ. ಈ ಪ್ರಶ್ನೆಗೆ ಉತ್ತರ ನವ್ಯ ಕಾವ್ಯ; ಚಂಪೂ, ಷಟ್ಪದಿ, ವಚನ, ಸಾಂಗತ್ಯ, ತ್ರಿಪದಿ- ಹೀಗೆ ಅನೇಕ ರೂಪಗಳನ್ನು ತಾಳಿದ ಕನ್ನಡ ಕಾವ್ಯ ಇಲ್ಲಿಯವರೆಗೆ ಆಧುನಿಕವಾಗಿ

ಬೆಳೆಯಿತು. ಅದು ನವ್ಯವಾಗುವುದೂ ಒಂದು ಬಗೆಯ ಚಂದ. ಈ ನವೀನ ಪರಿಸ್ಥಿತಿಯೂ ಒಂದು ಪರಂಪರೆಯ ಕೃತಕೃತ್ಯತೆಯೂ ನವ್ಯಕಾವ್ಯದ ಅಗತ್ಯವನ್ನು ಸೂಚಿಸುತ್ತಿವೆ.

ಬಳಕೆಮಾತು, ಛಂದಸ್ಸಿನಲ್ಲಿಯ ನವೀನ ಪ್ರಯೋಗ, ಪ್ರತಿಮಾ, ಪ್ರಧಾನತೆ, ವಾಸ್ತವಿಕ ಚಿತ್ರಸೃಷ್ಟಿ, ಪಾರಿಭಾಷಿಕ ಶೈಲಿ, ವಸ್ತುವಿನ ಆಯ್ಕೆಯಲ್ಲಿಯ ಸ್ವಾತಂತ್ರ್ಯ, ಬುದ್ಧಿ ಪ್ರಧಾನತೆ, ವ್ಯಕ್ತ್ಯತೀತ ಮೌಲ್ಯಗಳಿಗೆ ಪ್ರಧಾನತೆ - ಈ ಎಂಟು ನವ್ಯಕಾವ್ಯದ ಲಕ್ಷಣಗಳೆಂದು ಗೋಕಾಕರು ಪಟ್ಟಿಮಾಡಿ ವಿವರಿಸಿದ್ದಾರೆ. ಅವರು ಮೊದಲಿನ ಐದು ಲಕ್ಷಣಗಳಲ್ಲಿ ಆಧುನಿಕ ಕಾವ್ಯವೂ ಕ್ರಮೇಣ ಆಸ್ಥೆ ವಹಿಸಿದೆಯೆಂದೂ ಅವೆಲ್ಲವುಗಳ ಸಮಯೋಚಿತ ಪ್ರಜ್ಞೆಯನ್ನು ನವ್ಯಪ್ರಜ್ಞೆಯೆಂದು ಕರೆಯಬಹುದೆಂದೂ ಅಭಿಪ್ರಾಯಪಟ್ಟಿದ್ದಾರೆ. ಡಿ.ವಿ.ಜಿ. ಅವರ ಮಂಕುತಿಮ್ಮನ ಕಗ್ಗ, ಗೋವಿಂದ ಪೈ ಅವರ ಕವನಗಳು, ಬೇಂದ್ರೆ ಅವರ ಕರಿಮರಿನಾಯಿ, ಕೈಗಲ್ಲ, ನರಬಲಿ, ಕೆ.ವಿ.ಪುಟ್ಟಪ್ಪನವರ ಕೋಗಿಲೆ ಮತ್ತು ಸೋವಿಯೆತ್ ರಷ್ಯಾ, ಜಿ.ಪಿ.ರಾಜರತ್ನಂ ಅವರ ಎಂಡ್ಕುಡ್ಕ ರತ್ನ, ವಿ.ಸೀ. ಅವರ ಗಡಿದಾಟು, ಕ್ರೋಧಕೇತನ, ಗೋಪಾಲಕೃಷ್ಣ ಅಡಿಗರ ಹಿಮಗಿರಿಯ ಕಂದರ, ಗೊಂದಲಪುರ, ರಾಮಚಂದ್ರ ಶರ್ಮರ ಏಳುಸುತ್ತಿನ ಕೋಟೆ, ಚೆನ್ನವೀರಕಣವಿ, ಸು.ರಂ.ಎಕ್ಕುಂಡಿ, ವಿ.ಜಿ.ಭಟ್ಟ ಮೊದಲಾದವರ ಸಾಮಾಜಿಕ ಕವನಗಳು - ಇವೆಲ್ಲವನ್ನೂ ನವ್ಯಕಾವ್ಯ ಪ್ರಕಾರಕ್ಕೆ ಗೋಕಾಕರು ಸೇರಿಸಿದ್ದಾರೆ (ನವ್ಯಕಾವ್ಯದ ರೀತಿ). ಚೆನ್ನವೀರ ಕಣವಿಯವರೊಂದಿಗೆ ಸಂಪಾದಿಸಿದ ನವ್ಯಧ್ವನಿ ಎಂಬ ನವ್ಯಕಾವ್ಯ ಸಂಚಯದ ಕವನಗಳನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಿ ಪ್ರಗತಿಪರ, ಉಪನವ್ಯ, ನವ್ಯ, ವ್ಯಂಗ್ಯನವ್ಯ ಎಂದು ಗೋಕಾಕರು ಕರೆದಿದ್ದಾರೆ. ಇನ್ನೊಂದು ಕಡೆ ನವ್ಯಕಾವ್ಯದ ಆದ್ಯಗುರು ಸರ್ವಜ್ಞ ಎಂದು ಹೇಳುತ್ತಾರೆ. ನವ್ಯಕಾವ್ಯದ ಕೆಲವು ವಿಶೇಷಗುಣಗಳನ್ನು ಹಾಪ್‌ಕಿನ್ಸ್, ಅರವಿಂದ ಹಾಗೂ ತಮ್ಮ ಕಾವ್ಯಗಳಿಂದ ಉದಾಹರಿಸಿ ತೋರಿಸಿದ್ದಾರೆ. ನವ್ಯಕಾವ್ಯದ ರಹಸ್ಯವನ್ನು ಅರವಿಂದರ ಮಾತುಗಳನ್ನು ಉದ್ಧರಿಸುವುದರ ಮೂಲಕವೇ ತಿಳಿಸಿದ್ದಾರೆ (ನವ್ಯಕಾವ್ಯ ರೀತಿ), ಇವೆಲ್ಲವನ್ನು ವಿವರವಾಗಿ ಪರಿಶೀಲಿಸುತ್ತ ಹೋದಂತೆ ನವ್ಯಕಾವ್ಯವನ್ನು ಕುರಿತ ಗೋಕಾಕರ ಅಭಿಪ್ರಾಯಗಳ ಹಿಂದಿರುವ ಏಕಸೂತ್ರತೆಯನ್ನು ಕಂಡುಕೊಳ್ಳುವುದು ಸುಲಭವಾಗುವುದಿಲ್ಲ.

1950ರ ಅನಂತರದ ಕಾಲದಲ್ಲಿ ಗೋಕಾಕರು ಉಗಮ, ಊರ್ಣನಾಭ, ಚಿಂತನ, ದ್ಯಾವಾಪೃಥಿವೀ ಮುಂತಾದ ಕವನಸಂಗ್ರಹಗಳನ್ನು ಪ್ರಕಟಿಸಿದ್ದಾರೆ. ಅವರ ಕಾವ್ಯವನ್ನೂ ನವ್ಯಕಾವ್ಯದ ಸೈದ್ಧಾಂತಿಕ ಪ್ರತಿಪಾದನೆಯನ್ನೂ ಒಟ್ಟಿನಲ್ಲಿ ನೋಡಿದಾಗ, ಭಾಷೆ ಮತ್ತು ಛಂದೋರೂಪಗಳಲ್ಲಿ ಅವರು ಬದಲಾವಣೆ, ಬಗೆಬಗೆಯ ಪ್ರಯೋಗಮಾಡಿದ್ದು ಕಂಡುಬರುತ್ತದೆ. ಛಂದೋರೂಪಗಳಲ್ಲಿ ಮಾಡಿದ ಪರಿವರ್ತನೆಯನ್ನು ಮುಕ್ತಛಂದಸ್ಸು ಎಂದು ಕರೆಯಲಾಗಿದೆ. ತಂತ್ರವಿಧಾನದಲ್ಲಿ ಪ್ರತಿಮಾನಿಷ್ಠತೆ, ಸಾಂಕೇತಿಕತೆಗಳನ್ನು ಅಳವಡಿಸಿಕೊಳ್ಳುವ ಬಗೆಯಲ್ಲಿಯೂ ಹೊಸತನ ಕಾಣುತ್ತದೆ. ಕಾವ್ಯ ಧೋರಣೆಗೆ ಸಂಬಂಧಿಸಿದಂತೆ ನವೋದಯದವರೊಂದಿಗೆ ಹೇಳಿಕೊಳ್ಳುವಂಥ' ಭಿನ್ನತೆ ಇದ್ದಂತೆ ತೋರುವುದಿಲ್ಲ. ಭಾರತೀಯ ಮತ್ತು ಜಾಗತಿಕ ವಿದ್ಯಮಾನಗಳ ಸಂದರ್ಭದಲ್ಲಿ ಒಟ್ಟು ಮಾನವ ಸಮಷ್ಟಿಯ ಕ್ಷೇಮಚಿಂತನೆಗೆ ಅರವಿಂದರ ಅಂತಃಪ್ರಜ್ಞೆಯ (ಇಂಟ್ಯೂಷನ್) ನೆರವಿನಿಂದ ಸಮನ್ವಯ ಸಂಜೀವಿನಿ ಸೂತ್ರವೊಂದನ್ನು ರೂಪಿಸಿಕೊಳ್ಳುವುದರ ಕಡೆಗೆ ಹೆಚ್ಚಾದ ಆಶಾವಾದದಿಂದ ನೋಡುವ ಒಲವು, ಒತ್ತು ಇರುವುದು ಕಾಣುತ್ತದೆ. ಆದ್ದರಿಂದ ನವೋದಯದವರ ಕನಸುಗಾರಿಕೆ, ದಿವ್ಯ ಆದರ್ಶ, ಭಾರತೀಯವಾದುದರ ಬಗೆಗಿನ ಭಾವನಾತ್ಮಕವಾದ ಆರಾಧನಾಭಾವಗಳು ಇವರಲ್ಲಿಯೂ ಕಾಣುತ್ತವೆ. ಲೋಕದ ವಿಲಯವನ್ನು ತಪ್ಪಿಸುವ ಹೊಣೆಗಾರಿಕೆಯನ್ನು ಸ್ವಯಂ ಆರೋಪಿಸಿಕೊಂಡ ನೆಹರೂ ರೀತಿಯ ಆದರ್ಶಕ್ಕೆ ಕಾವ್ಯದಲ್ಲಿ ನುಡಿಗೊಡುವ ಹಂಬಲವೂ ಅದರೊಟ್ಟಿಗೆ ಸೇರಿಕೊಂಡಿದೆ. ಅಭಿಜಾತಕಾವ್ಯ ಪ್ರತಿಭೆಗಿಂತ ವ್ಯುತ್ಪತ್ತಿ ಪ್ರಧಾನವಾದ ಕಾವ್ಯಮೀಮಾಂಸೆ, ಆಧ್ಯಾತ್ಮಿಕ ವಿಚಾರಗಳೇ ಅವರ ಕಾವ್ಯವನ್ನು ನಡೆಸಿಕೊಂಡು ಹೋದದ್ದರಿಂದ ಗೋಕಾಕರ ಈ ಮೇಲಿನ ಹೊಸ ಪ್ರಯೋಗಗಳು, ಸದ್ಭಾವನೆ ಸದುದ್ದೇಶಗಳು ಎಷ್ಟೇ ಪ್ರಾಮಾಣಿಕವಾಗಿದ್ದರೂ ಶ್ರೇಷ್ಠ ಕಾವ್ಯವಾಗಿ ಅಭಿವ್ಯಕ್ತಿಪಡೆದು ಸಾರ್ಥಕಗೊಳ್ಳುವುದರಲ್ಲಿ ನಿರೀಕ್ಷಿತ ಯಶಸ್ಸನ್ನು ಪಡೆಯಲಾಗಲಿಲ್ಲ.

ಗೋಕಾಕರ ಕಾವ್ಯ ಮತ್ತು ಸಾಹಿತ್ಯ ಚಿಂತನದ ಪ್ರಭಾವಕ್ಕೆ ಒಳಗಾಗಿಯೂ ತಮ್ಮ ದನಿವಿಶಿಷ್ಟತೆಯನ್ನು ಬೆಳೆಸಿಕೊಂಡವರಲ್ಲಿ ಮುಖ್ಯರಾದವರು ಗಂಗಾಧರ ಚಿತ್ತಾಲ, ಸು.ರಂ.ಎಕ್ಕುಂಡಿ, ಶಂಕರ ಮೊಕಾಶಿ ಪುಣೇಕರ ಮತ್ತು ಎಂ.ಅಕಬರ ಅಲಿ. ಗಂಗಾಧರ ಚಿತ್ತಾಲರ ಮನುಕುಲದ ಹಾಡು, ಹರಿವ ನೀರಿದು ಎಂಬ ಸಂಕಲನಗಳಲ್ಲಿ ಬದುಕು ಮತ್ತು ಸಾವಿನ ಗೂಢದ ಬಗೆಗೆ ಚಿಂತನೆಯಿದೆ. ಮನುಷ್ಯ ಸಂಬಂಧದ ಸುಖದ ಕ್ಷಣಗಳ ಉತ್ಕರ್ಷಭಾವವಿದೆ. ಆತ್ಮೀಯರ ಸಾವು ತಂದ ದುರಂತ ವೇದನೆಯಿದೆ. ಅವರ ಬರೆವಣಿಗೆಯಲ್ಲಿ ಬೌದ್ಧಿಕ ಮತ್ತು ಭಾವನಾತ್ಮಕ ದ್ರವ್ಯದ ಕೊರತೆಯಿಲ್ಲ. ಆದರೆ, ಧ್ವನಿಶಕ್ತಿಯ ಕೊರತೆಯಿರುವುದು ಕಾಣುತ್ತದೆ. ಕವನಗಳ ಲಯಗತಿಯಲ್ಲಿ ಮುದತರುವ ಗುಣವಿದೆ. ಪ್ರಯೋಗಶೀಲತೆಯಿದೆ. ಸಮುದ್ರವನ್ನು ಕುರಿತ ಗೀತಗಳಲ್ಲಿ ತನ್ಮಯತೆ ಇದೆ. ಮನುಷ್ಯ ಸಂಬಂಧಗಳಲ್ಲಿ ಹೆಚ್ಚಿನ ಗೌರವ, ಆತ್ಮೀಯತೆ, ಅಂತಃಕರಣ ಇದೆ. ಸಂತಾನ, ಹಾವಾಡಿಗರ ಹುಡುಗ, ನೆರಳು, ಮತ್ಸ್ಯಗಂಧಿ ಕವನ ಸಂಕಲನಗಳನ್ನು ಪ್ರಕಟಿಸಿದ ಎಕ್ಕುಂಡಿಯವರ ಕಾವ್ಯದಲ್ಲಿ ನವೋದಯ ರೀತಿಯ ಛಂದೋರೂಪ, ಗೇಯತೆಯ ಅಂಶ ಹೆಚ್ಚಾಗಿದೆ. ಸಮರ್ಥವಾಗಿದೆ. ಭಾವಗೀತೆಯ ಗುಣ ಸಮೃದ್ಧವಾಗಿದೆ. ಅವರ ಭಾಗವತ ಧೋರಣೆ ಪುರಾಣದ ವಸ್ತು, ಪ್ರತಿಮೆಗಳ ಮೂಲಕ ಅಭಿವ್ಯಕ್ತಗೊಳ್ಳುವ ಬಗೆ ಅನನ್ಯವಾಗಿದೆ. ಕಾವ್ಯಪ್ರತಿಮೆಗಳ ಬಳಕೆಯ ಕ್ರಮವೂ ವಿಶಿಷ್ಟವಾಗಿದೆ. ಕಾವ್ಯವಸ್ತುವಿನ ಸಹಜ, ನೇರನಿರೂಪಣೆಯೊಂದಿಗೆ ಸದ್ದಿಲ್ಲದೆ ಧ್ವನಿಪರಿವೇಷವನ್ನು ಕಟ್ಟುತ್ತ ಸಾಗಿ ಕವನದ ಕೊನೆಗೆ ಬಂದು ಮುಟ್ಟಿದಾಗ, ಅನುಭವ ಸಮಸ್ತವೂ ಒಂದು ಕಾವ್ಯಪ್ರತಿಮೆಯ ಹಿಡಿಯಲ್ಲಿ ಇಡಿಯಾಗಿ ದೀಪ್ತಗೊಳ್ಳುವಂತೆ ಮಾಡುವ ಬಗೆ, ಯಶಸ್ವಿಯಾದ ಪ್ರಯತ್ನ ಹಾವಾಡಿಗರ ಹುಡುಗ, ಅತಿಥಿ ಮುಂತಾದ ಕೆಲವು ಕವನಗಳಲ್ಲಿ ಕಾಣುತ್ತದೆ. ಒಟ್ಟಿನಲ್ಲಿ ಎಕ್ಕುಂಡಿಯವರ ಕಾವ್ಯ ಭಾವಪ್ರಧಾನವಾದದ್ದು. ಬುದ್ಧಿ ಪ್ರಧಾನವಾದದ್ದಲ್ಲ. ಮೊಕಾಶಿಯವರ ಕವನಸಂಕಲನ ಮಾಯಿಯ ಮೂರು ಮುಖಗಳು. ಅವರು ಪ್ರಯೋಗಪ್ರಿಯರು. ಸೀಮಂತಿನೀಕೋಪಾಖ್ಯಾನ ಕಂದ ಮತ್ತು ಚಂಪೂಗದ್ಯಗಳಿಂದ ಕೂಡಿದ ಕವನವಾದರೆ (ಗೋಕಾಕರೂ ಇಂದಿಲ್ಲ ನಾಳೆಯಲ್ಲಿ ಚಂಪೂ ರೀತಿಯನ್ನು ಬಳಸಿದ್ದಾರೆ) 'ಸಂಸ್ಕೃತಿ' ಅಷ್ಟಷಟ್ಪದಿ ಮತ್ತು ಹೊಸಗನ್ನಡದ ಗದ್ಯದ ನಿರೂಪಣೆಯನ್ನು ಬಳಸಿಕೊಂಡಿರುವ ಬರೆವಣಿಗೆಯಾಗಿದೆ. ಈ ಬಗೆಯ ಬರೆವಣಿಗೆಗಳು ತಮ್ಮ ವಿಚಿತ್ರ ರೀತಿಯಿಂದಾಗಿ ಗಮನ ಸೆಳೆಯುತ್ತವೆ; ಕಾವ್ಯ ಗುಣಗಳಿಂದಲ್ಲ; ಗಂಧಕೊರಡು, ನೆರಳು ಬೆಳಕು, ಅಪಸ್ವರದಂಥ ಕವನಗಳು ಮೊಕಾಶಿಯವರ ಕಾವ್ಯಪ್ರತಿಭೆ ಇನ್ನೂ ಹೆಚ್ಚು ಗಂಭೀರವಾದದ್ದನ್ನು ಬರೆಯಬಹುದಾದ ಸಾಮರ್ಥ್ಯವುಳ್ಳದ್ದೆಂಬ ಅನಿಸಿಕೆಯನ್ನು ಓದುಗನಲ್ಲಿ ಹುಟ್ಟಿಸುತ್ತದೆ. ಮಾಯಿಯ ಮೂರು ಮುಖಗಳು ಎಂಬ ಕವನದ ಯಶಸ್ಸು ಈ ಅನಿಸಿಕೆ ಹುಸಿಯಲ್ಲ ಎಂಬುದನ್ನು ಸಾಬೀತುಪಡಿಸುತ್ತದೆ. 'ನನ್ನ ಕಾವ್ಯ ಜೀವನಕ್ಕೆ ಆವಶ್ಯಕವಾದ ಅಂತಃಕರಣದ ಮಾರ್ಗದರ್ಶನ ನೀಡಿದವರು ಗೋಕಾಕರು' ಎಂದು ಹೇಳಿಕೊಂಡಿದ್ದರೂ ಎಂ.ಅಕಬರ ಅಲಿಯವರು ಗೋಕಾಕರನ್ನು ಕಣ್ಣುಮುಚ್ಚಿ ಅನುಕರಿಸದೆ ನವಚೇತನ, ಸುಮನ ಸೌರಭ, ಗಂಧ ಕೇಸರ ಎಂಬ ಸಂಕಲನಗಳಲ್ಲಿ ಅಭಿವ್ಯಕ್ತಿಯಲ್ಲಿ ತನ್ನತನದ ಹುಡುಕಾಟದಲ್ಲಿರುವುದು ಕಾಣುತ್ತದೆ. ಕಾವ್ಯಸತ್ತ್ವದ ದೃಷ್ಟಿಯಿಂದ ಇನ್ನೂ ಮಹತ್ವ ಪೂರ್ಣವಾದ ಅನನ್ಯವಾದ ದನಿಯನ್ನು ರೂಢಿಸಿಕೊಳ್ಳಬಹುದಾದ ಸಾಧ್ಯತೆಗಳು ಅವರ ಕಾವ್ಯದಲ್ಲಿ ಕಾಣುತ್ತವೆಯಾದರೂ ತನ್ನೊಳಗಿನ ನಿಜದನಿಯನ್ನು ಮೈಚಳಿ ಬಿಟ್ಟು ಎಬ್ಬಿಸಲಾರದ ಸಂಕೋಚದ ಪೊರೆಯೊಂದು ಉದ್ದಕ್ಕೂ ಆವರಿಸಿಕೊಂಡಿರುವಂತೆ ತೋರುತ್ತದೆ. ಆಶಾವಾದಿತ್ವವಿದ್ದರೂ ಜೀವನದ ವಾಸ್ತವವನ್ನು ನಿರಾಕರಿಸದೆ, ಹೀಗಳೆಯದೆ ಅದರ ಅಸ್ತಿತ್ವ ಮತ್ತು ಅದರ ಪ್ರಾಣಶಕ್ತಿಯನ್ನು ಒಪ್ಪಿಕೊಂಡು ಪರವನ್ನು ಅರಸಬೇಕೆಂಬ ಆರೋಗ್ಯಕರವಾದ ಧೋರಣೆ ಅವರಲ್ಲಿರುವುದು ಕಾಣುತ್ತದೆ. ಹಾವು ಹೆಡೆ ಬಿಡಿಸಿದಾಗ, ಲೋಕವೇ ಸಾಕ್ಷಿಯಂಥ ಕೆಲವು ಕವನಗಳು ಈ ಮಾತಿಗೆ ನಿದರ್ಶನಗಳಾಗಿವೆ.

ಗೋಪಾಲಕೃಷ್ಣ ಅಡಿಗರು ತಮ್ಮ ನಡೆದು ಬಂದ ದಾರಿ (1952) ಕವನ ಸಂಕಲನದ ಸಹೃದಯರಿಗೆ ಎಂಬ ತಲೆಬರೆಹವುಳ್ಳ ಮುನ್ನುಡಿ ರೂಪದ ಮಾತುಗಳಲ್ಲಿ ಹೊಸ ಕಾವ್ಯದ ಅಗತ್ಯವನ್ನೂ ಅನಿವಾರ್ಯತೆಯನ್ನೂ ವಿವರಿಸಿದರು. ಅದುವರೆಗೆ ನವೋದಯ ಕಾವ್ಯ ರೀತಿಯಲ್ಲಿ ಭಾವತರಂಗ, ಕಟ್ಟುವೆವು ನಾವು ಕವನಸಂಗ್ರಹಗಳನ್ನು ಪ್ರಕಟಿಸಿ

ಸತ್ತ್ವಶಾಲಿ ಕವಿಯೆಂದು ಪ್ರಸಿದ್ಧಿ ಪಡೆದಿದ್ದರಾದರೂ ಆ ಬಗೆಯ ಕಾವ್ಯರಚನೆಯನ್ನು ಇನ್ನು ಮುಂದೆ ಮಾಡುವುದಿಲ್ಲ. ಮಾಡುವುದರಲ್ಲಿ ಅರ್ಥವಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಅವರ ಮಾತುಗಳಲ್ಲಿಯೇ ಅವರ ಅಭಿಪ್ರಾಯಗಳನ್ನು ನೋಡಬಹುದು.

"ಆಧುನಿಕ ಕನ್ನಡ ಕಾವ್ಯದಲ್ಲಿ ಒಂದು ಘಟ್ಟ ಕಳೆದು ಈಗ ಇನ್ನೊಂದು ಘಟ್ಟ ಮೊದಲಾಗುತ್ತಿದೆ. ಕಾವ್ಯರೂಪದಲ್ಲಿ ಬದಲಾವಣೆ ಆಗಬೇಕಾದ ಕಾಲ ಆಗಲೇ ಬಂದುಬಿಟ್ಟಿದೆ. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬರುವ ತನಕ ಇದ್ದ ವಾತಾವರಣ ಈಗ ಸಮೂಲ ಪರಿವರ್ತನೆಗೊಂಡಿದೆ. ಸ್ವಾತಂತ್ರ್ಯ ಸಂಗ್ರಾಮದ ಉತ್ಸಾಹ, ಉದ್ವೇಗ, ಆದರ್ಶಪರವಶತೆಯ ಹಾರಾಟ ಮುಗಿದು ಈಗ ನಮ್ಮ ಮನಸ್ಸು ಮತ್ತೆ ನೆಲಕ್ಕಿಳಿದಿದೆ. ಮೋಡವಾಗಿ ಮೇಲೇರಿದ ಮನಸ್ಸು ಮಳೆಯಾಗಿ ಬಿದ್ದು ಮತ್ತೆ ಹಳ್ಳಕೊಳ್ಳಗಳಲ್ಲಿ ತುಂಬಿಕೊಂಡಿದೆ. ತಳದಲ್ಲಿ ಕೂತಿದ್ದ ಕೊಳೆ ಕಸ ರಾಡಿಯೆಲ್ಲ ಈಗ ಮೇಲೆದ್ದು ಬಂದು ಕನ್ನಡಿಯಂಥ ನೀರು ಕಲಕಿದೆ. ಹೊಸ ಆದರ್ಶಕ್ಕಾಗಿ ಹೊಸ ಕನಸಿಗಾಗಿ ದೇಶದ ಮನಸ್ಸು ಹಸಿದು ಕಾಯುತ್ತಿದೆ. ಇಂಥ' ವಾತಾವರಣ ಸುತ್ತುಮುತ್ತಲೂ ಇರುವಾಗ, ಜೀವನಾವಲಂಬಿಯಾದ ಕಾವ್ಯವೂ ಪರಿವರ್ತನೆಗೊಳ್ಳುವುದು ಸಹಜ. ಗಾಂಧಿಯುಗದಲ್ಲಿ ಬರೆದ ರೀತಿಯಲ್ಲೇ ಇನ್ನೂ ಬರೆದರೆ ಬಹುಶಃ ಅದು ಕಾವ್ಯಾಭಾಸವಾಗುತ್ತದೆ. ಇಲ್ಲವೇ ಸತ್ವಹೀನ ಕಾವ್ಯವಾಗುತ್ತದೆ. ಚರ್ವಿತಚರ್ವಣವಾಗುತ್ತದೆ. ಆಗ ಭಾವವನ್ನು ಕೊಲ್ಲುವ ಮಾತು ಬೇತಾಳದಂತೆ ನಮ್ಮ ಬೆನ್ನು ಹತ್ತಿ ಸಮಾಜದ ಬೆಳೆವಣಿಗೆಗೆ ಮಾರಕವಾಗುತ್ತದೆಂದು ನನಗೆ ತೋರುತ್ತದೆ. ಆದ ಕಾರಣ ಈಗ ಕಾಣುತ್ತಿರುವ ಹೊಸ ಮನೋಧರ್ಮವನ್ನು ವ್ಯಕ್ತಪಡಿಸಲು ಹೊಸ ನಾಲಗೆ, ಹೊಸ ನುಡಿಕಟ್ಟು, ರೂಪುಗೊಳ್ಳಬೇಕಾಗಿದೆ. ಈಗ ಬರೆಯುತ್ತಿರುವ ಕವಿಗಳೆಲ್ಲ ಈ ಕುರಿತು ಯೋಚನೆ ಮಾಡಬೇಕಾದದ್ದು ಅನಿವಾರ್ಯ, ಹೊಸ ಹೊಸತಾಗಿ ಬರೆಯುತ್ತಿರುವ ತರುಣ ಕವಿಗಳಂತೂ ಈ ಸಮಸ್ಯೆಯನ್ನು ಎದುರಿಸದೆ ಗತ್ಯಂತರವಿಲ್ಲ. ನಮ್ಮ ಹಿರಿಯ ಕವಿಗಳ ದಾರಿಯಲ್ಲಿ ನಡೆಯುವುದರಿಂದಲೂ ಅಷ್ಟು ಕವಿತೆ ಬಂದೀತು. ಆದರೆ ಅದಕ್ಕೆ ಜೀವ ಕೊಡುವ ಸತ್ವವಾಗಲೀ ಹೊಸ ಸಮಾಜದ ವಾಣಿಯಾಗುವ ಸಾಮರ್ಥ್ಯವಾಗಲೀ ಖಂಡಿತ ಬರಲಾರದು; ನಮ್ಮ ಹಿರಿಯ ಕವಿಗಳು ಆಧುನಿಕ ಕಾವ್ಯಕ್ಕೆ ತಕ್ಕ ಭಾಷೆಯನ್ನು ಸಿದ್ಧಗೊಳಿಸಿ ಅದರಲ್ಲಿ ಅಮೋಘವಾದ ಕೆಲಸವನ್ನು ಮಾಡಿದ್ದಾರೆ. ಆದರೆ ಅದೇ ರೀತಿ ಅಮೋಘವಾದ ಕೆಲಸವನ್ನು ಹೊಸ ತಲೆಮಾರಿನವರೂ ಮಾಡಿ ತೋರಿಸಬೇಕಾಗಿದೆ....... ಗತಕಾಲದ ಭಾಷೆಭಾವವನ್ನು ಕೊಲ್ಲುತ್ತದೆ; ಮನಸ್ಸನ್ನು ಮಂಕಾಗಿಸುತ್ತದೆ. ಅರ್ಥಕ್ಕಿಂತ ಶಬ್ದಗಳ ಹಾರಾಟವೇ ಹೆಚ್ಚಿ ಅರ್ಥ ಮರೆಯಾಗುತ್ತದೆ. ಸಂಕೇತ ಮೂಲರೂಪವನ್ನು ಮರಸುತ್ತದೆ; ಉತ್ಸವಮೂರ್ತಿ ತಾನೇ ಮೂಲವಿಗ್ರಹವೆಂದು ವಿಜೃಂಭಿಸುತ್ತದೆ. ಆದಕಾರಣವೇ ಹೊಸ ಜೀವನ ಭಾವನೆಗಳಿಗೆ ತಕ್ಕ ರೀತಿ ರೂಪುಗೊಳ್ಳಬೇಕಾದ ಕಾಲ ಈಗ ಸಾಹಿತಿಗಳನ್ನು ಎದುರಿಸಿ ನಿಂತಿದೆ; ಹತ್ತೊಂಬತ್ತನೆಯ ಶತಮಾನದ ಆಂಗ್ಲಕವಿಗಳಾದ ವರ್ಡ್ಸ್‌ವರ್ತ್, ಶೆಲ್ಲಿ, ಕೀಟ್ಸ್ ಮುಂತಾದ ರೊಮ್ಯಾಂಟಿಕ್ ಕವಿಗಳಿಂದ ಪ್ರೇರಿತವಾದ ನಮ್ಮ ಆಧುನಿಕ ಕನ್ನಡ ಕಾವ್ಯ ಆ ಸಂಪ್ರದಾಯದಲ್ಲಿ ತಾನು ಮಾಡಬಹುದಾದಷ್ಟು ಕೆಲಸವನ್ನು ಮಾಡಿ ಮುಗಿಸಿದೆ. ಆ ಸಂಪ್ರದಾಯದ ಸತ್ವ ಈಗ ತೀರಿದೆ. ಅದಕ್ಕೆ ಅವನತಿ ಬಂದಿದೆ. ಅದರ ದೋಷಗಳೆಲ್ಲ ಈಗ ಎದ್ದು ಕಾಣಿಸುತ್ತಿವೆ. ನೆಲದ ಮೇಲೆ ಕಾಲೂರಿನಿಂತೇ ನಕ್ಷತ್ರವನ್ನು ತುಡುಕುತ್ತಿದ್ದುದು ಈಗ ನೆಲಬಿಟ್ಟು ಮೇಲೇರಿ ವೇದಾಂತದ ಮಂಜಿನಲ್ಲಿ ಮರೆಯಾಗಿ ಹೋಗುತ್ತಿದೆ. ಶಬ್ದಗಳು ಅರ್ಥದ ಸ್ಥಾನವನ್ನು ಆಕ್ರಮಿಸುತ್ತಿವೆ. ಪ್ರತಿಯೊಂದು ಭಾವವೂ ಅನುಭವವೂ ಅತಿಸರಳವಾಗಿ ಸತ್ಯದಿಂದ ದೂರದೂರ ಹೋಗುತ್ತಿವೆ. ಇಂಥ ಕಾಲದಲ್ಲಿ ಕಾವ್ಯಕ್ಕೆ ಮತ್ತೆ ವಾಸ್ತವದ ರಕ್ತದಾನ ನಡೆಯಬೇಕು. ಕಾವ್ಯದಲ್ಲಿ ಮತ್ತೆ ಮಣ್ಣಿನ ವಾಸನೆ ಹೊಡೆಯಬೇಕು. ಈ ಜಗತ್ತನ್ನು ಬಿಟ್ಟು ಕಾವ್ಯ ಬದುಕಲಾರದು, ಎಂಬುದನ್ನು ಮತ್ತೆ ಕವಿಗಳು ಅರಿಯಬೇಕಾಗುತ್ತದೆ. ನಿಜವಾದ ಕವಿ ಈ ಮಾತನ್ನು ಎಂದೂ ಮರೆಯುವುದಿಲ್ಲ. ಮರೆಯಲಾರ, ಆದರೆ ಕೇವಲ ವಾಸ್ತವ ಇಂದ್ರಿಯಗಮ್ಯವಾದುದು ಮಾತ್ರವೇ ಕಾವ್ಯದ ವಸ್ತುವಾಗಲಾರದು. ಈ ಜಗತ್ತಿನಲ್ಲಿ ನಮ್ಮ ಸುತ್ತ ಕಾಣುವ ವಸ್ತುಗಳು ಎಷ್ಟು ನಿಜವೋ ಆ ವಸ್ತುಗಳ ವಿಷಯದಲ್ಲಿ ನಮ್ಮ ಮನಸ್ಸಿನಲ್ಲಿ ಹುಟ್ಟುವ ಭಾವಗಳೂ ಅಷ್ಟೇ ನಿಜ. ಪಂಚಭೌತಿಕವಾದದ್ದು ಕಾವ್ಯಕ್ಕೆ ಎಷ್ಟು ಅಗತ್ಯವೋ ಅಷ್ಟೇ ನಮ್ಮ ಆದರ್ಶವೂ ಕಲ್ಪನೆಯೂ ಕನಸೂ ಅಗತ್ಯ.ಈ ಎರಡೂ ಸೇರಿ ಆದ ಪಾಕವೇ ಕಾವ್ಯ. ವಿದ್ಯಮಾನಗಳ, ಅನುಭವಗಳ ಆದರ್ಶ ಸ್ವರೂಪದ ಕನಸಿನ ಒಂದಂಶ ಸೇರದೆ ಇದ್ದದ್ದು ಕಾವ್ಯವಾಗಲಿ ಸಾಹಿತ್ಯವಾಗಲಿ ಆಗಲಾರದು. ಈ ದೃಷ್ಟಿಯಿಂದ ಆಧುನಿಕ ಇಂಗ್ಲಿಷ್ ಕಾವ್ಯದ ಪ್ರಸಿದ್ಧ ಕವಿಗಳಾದ ಈಲಿಯಟ್, ಆಡೆನ್ ಮುಂತಾದವರಿಂದ ನಾವು ಇನ್ನು ಮುಂದೆ ಸ್ಫೂರ್ತಿ ಪಡೆಯಬೇಕಾದದ್ದು ಅತ್ಯಗತ್ಯ. ಆದರೆ ನಮ್ಮ ಹೊಸ ಕವಿತೆ ಆ ಇಂಗ್ಲಿಷ್ ಕವಿಗಳ ಕಾವ್ಯದಂತೆಯೇ ರೂಪುಗೊಳ್ಳಲಾರದು. ಆ ಕವಿಗಳ ಅಂಧಾನುಕರಣೆಯಿಂದ ಹೊಸತನ ಬಂದೀತು. ಆದರೆ ಅದು ಕಾವ್ಯವಾಗಲಾರದು. ನಮ್ಮ ಹೊಸ ಕಾವ್ಯ ನಮ್ಮ ನಾಡಿನ ಹೊಸ ವಾತಾವರಣಕ್ಕೂ ನಮ್ಮ ಜನಜೀವನಕ್ಕೂ ನಮ್ಮ ಹೊಸಭಾಷೆಯ ಪರಿಪಾಕದ ಪರಿಮಿತಿಗೂ ಒಳಪಟ್ಟಿದೆ ಎಂಬುದನ್ನು ನಾವು "ಮರೆಯತಕ್ಕದ್ದಲ್ಲ".

ಇಲ್ಲಿ ಅಡಿಗರ ಹೊಸ ಕಾವ್ಯವನ್ನು ಕುರಿತಂಥ' ಅಲೋಚನ ಕ್ರಮದಲ್ಲಿ ನಿರ್ದಿಷ್ಟತೆ ಇದೆ, ಖಚಿತತೆ ಇದೆ. ಹೊಸ ಕವಿತೆಯನ್ನು ಕುರಿತು (1953), ಇಂದಿನ ಜೀವನ ಕ್ಲಿಷ್ಟ ಎಂದರೇನು (1954), ಸಾಕ್ಷಿ (1962), ಕಳೆದ ಹತ್ತು ವರ್ಷಗಳ ಕನ್ನಡ ಕಾವ್ಯ (1965), ಮಣ್ಣಿನ ವಾಸನೆ, ನವ್ಯಕವಿತೆಯಲ್ಲಿ ಪ್ರತಿಮಾ ವಿಧಾನ (1967)- ಈ ಲೇಖನಗಳಲ್ಲಿ ವಿಚಾರಪಥ' ಗ್ರಂಥ'ದಲ್ಲಿ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಇರುವ ಲೇಖನಗಳಲ್ಲಿ ಇನ್ನೂ ಮುಂತಾದ ಕಡೆಗಳಲ್ಲಿ ಹರಡಿಕೊಂಡಿರುವ ಸಾಹಿತ್ಯವನ್ನು ಕುರಿತಂಥ ವಿಚಾರಸರಣಿಗಳು ಈ ಮೇಲೆ ಉದ್ಧರಿಸಿದಂಥ ಮಾತುಗಳಿಗೆ ಇನ್ನಷ್ಟು ಸ್ಪಷ್ಟವಾದ ಪ್ರಬುದ್ಧವಾದ ವಿವರಣೆ, ವ್ಯಾಖ್ಯಾನಗಳಾಗಿವೆಯೇ ಹೊರತು 'ನಡೆದು ಬಂದ ದಾರಿ'ಯ ಮುನ್ನುಡಿ ರೂಪದ ಮಾತುಗಳಿಗೆ ವ್ಯತಿರಿಕ್ತವಾದ ಮಾತುಗಳಾಗಿಲ್ಲ ಎಂಬುದು ಮುಖ್ಯವಾದ ಸಂಗತಿಯಾಗಿದೆ. ಅಡಿಗರ ಹೊಸ ಕಾವ್ಯದ ಕಲ್ಪನೆ ಪ್ರಥಮ ದರ್ಜೆಯ ಕಾವ್ಯಸತ್ವವುಳ್ಳ ಕವಿಯೊಬ್ಬನ ಅಂತರಂಗದ ನಿಜದನಿಗೆ ನುಡಿ ಕೊಟ್ಟದ್ದಾಗಿತ್ತು. ಹೊಸತು ಬೇಕೆಂಬ ಕೇವಲ ತೋರಿಕೆಯ ಅನಿಸಿಕೆಯ ಮಾತಾಗಿರಲಿಲ್ಲ ಎಂಬುದನ್ನು ಮುಂದಿನ ಅವರ ಚಂಡೆ ಮದ್ದಳೆ, ಭೂಮಿಗೀತ, ವರ್ಧಮಾನ, ಇದನ್ನು ಬಯಸಿರಲಿಲ್ಲ ಎಂಬ ಕವನ ಸಂಕಲನಗಳು ಸಿದ್ಧಪಡಿಸಿ ತೋರಿಸಿವೆ. ಅಷ್ಟೇ ಅಲ್ಲದೆ, ಮುಂದೆ ಸುಮಾರು ಕಾಲು ಶತಮಾನಗಳ ಕಾಲ ಅವರಿಗಿಂತ ಕಿರಿಯ ತಲೆ ಮಾರಿನವರ ಕಾವ್ಯದ ಮೇಲೆ ಮಾತ್ರವಲ್ಲ ಹಿರಿಯ ತಲೆಮಾರಿನ ಮತ್ತು ಓರಗೆಯ ತಲೆಮಾರಿನ ಕವಿ, ಸಾಹಿತಿಗಳ ಮೇಲೆ ಹಾಗೂ ಬೇರೆ ಬೇರೆ ಸಾಹಿತ್ಯ ಪ್ರಕಾರಗಳ ಮೇಲೆ ಅವರ ಕಾವ್ಯ ಮತ್ತು ಸಾಹಿತ್ಯ ಚಿಂತನೆ ಬೀರಿದ ಪ್ರಭಾವ, ಒಡ್ಡಿದ ಸವಾಲು ಕನ್ನಡ ಸಾಹಿತ್ಯ ಚರಿತ್ರೆಯ ಮುಖ್ಯ ಅಧ್ಯಾಯಗಳಲ್ಲೊಂದಾಗಿದೆ. ಅಡಿಗರ ಕಾವ್ಯ ಮತ್ತು ಸಾಹಿತ್ಯಿಕ ಚಿಂತನೆಗಳು ಕಳೆದ ಕಾಲು ಶತಮಾನದಿಂದಲೂ ಪ್ರಬಲವಾದ ವಿರೋಧಿ ಮತ್ತು ಪ್ರಬಲವಾದ ಸಮರ್ಥನೆ ಎರಡನ್ನೂ ಎದುರಿಸಿಕೊಂಡು ಕುದುರಿಸಿಕೊಂಡು ಬೆಳೆದು ಬಂದದ್ದಾಗಿದೆ.

ಗೋಕಾಕರ ರೀತಿಯು ನವ್ಯಕಾವ್ಯದಂತೆ ಅಡಿಗರ ರೀತಿಯು ನವ್ಯಕಾವ್ಯದಲ್ಲಿಯೂ ಸಂಕೇತ ನಿಷ್ಠತೆ, ಪ್ರತಿಮಾ ಪ್ರಧಾನತೆ, ನವೋದಯ ರೀತಿಯ ನಿಯತ ಛಂದಸ್ಸಿನ ಉಲ್ಲಂಘನೆ, ಬುದ್ಧಿ ಪ್ರಧಾನತೆಗಳ ಮೇಲೆ ಒತ್ತು ಬಿದ್ದದ್ದು ಕಾಣುತ್ತದೆ. ಗೋಕಾಕರಂತೆ ಅಡಿಗರಲ್ಲಿಯೂ ಅಧ್ಯಾತ್ಮದ ತುಡಿತವಿರುವುದು ಕಾಣುತ್ತದೆ. ಗೋಕಾಕರು ಅರವಿಂದರ ದರ್ಶನದ ಬಗೆಗೆ ಬೆಳೆಸಿಕೊಂಡ ನಂಬಿಕೆ, ಶ್ರದ್ಧೆಗಳ ಮೂಲಕ ಲೋಕದ ವಿದ್ಯಮಾನಗಳನ್ನು ಅಧಿಮಾನಸ, ವಿಶ್ವಮಾನವತಾವಾದಗಳ ಪರಿಕಲ್ಪನೆಯ ಸಂದರ್ಭದಲ್ಲಿಟ್ಟು ಧೇನಿಸುತ್ತಾರೆ, ವ್ಯಾಖ್ಯಾನಿಸುತ್ತಾರೆ. ಅಡಿಗರು ಸ್ವಾನುಭವದ ನಿಜದನಿಗಳನ್ನು ಆಪ್ತವಾಗಿ ಕೇಳಿಸಿಕೊಂಡು ಗುಣಾತ್ಮಕ ನಿರಪೇಕ್ಷತೆಯಲ್ಲಿ ಪರಿಭಾವಿಸಿ ಅದರೆಲ್ಲ ದ್ವಂದ್ವ, ಸಂಕೀರ್ಣತೆಗಳಲ್ಲಿ ಅದಕ್ಕೆ ಭಾಷೆಯಲ್ಲಿ ಆಕಾರ ಕೊಡುವ ವ್ರತನಿಷ್ಠ ಮನೋಭಾವದ ಕವಿಯಾಗಿದ್ದಾರೆ. ಆದ್ದರಿಂದ ವಿಶ್ವಮಾನವ ಪ್ರಜ್ಞೆಯ ಆದರ್ಶವು ಆರೋಪಿತಭಂಗಿ, ಪಾತ್ರಾಭಿನಯದ ನಿಲುವು ಎಂದು ಅವರಿಗೆ ತೋರಿದರೆ ಆಶ್ಚರ್ಯವಿಲ್ಲ. ವ್ಯಕ್ತಿಪ್ರಜ್ಞೆ ನಿಷ್ಠೂರ ವಾಸ್ತವದ ನೆಲೆಯಲ್ಲಿ ಶೋಧನೆಗೊಳಗಾದಾಗ ಮನುಷ್ಯನ

ದೌರ್ಬಲ್ಯ, ಸಣ್ಣತನಗಳನ್ನೂ ಅದು ಎತ್ತಿ ತೋರಿಸುವುದರಿಂದ ಅಂಥ ಕಾವ್ಯ ಮಾನವ ಚೈತನ್ಯದ ಔನ್ನತ್ಯದ ಬಗೆಗೆ ಆತ್ಮವಿಶ್ವಾಸ, ಆಶಾವಾದಿತ್ವ, ಮಹತ್ವಾಕಾಂಕ್ಷೆಗಳನ್ನು ಕುದುರಿಸದೆ ಓದುಗನಲ್ಲಿ ವಿಷಾದದ, ನಿರಾಶಾವಾದದ, ಸಿನಿಕತನದ ಧೋರಣೆಯನ್ನೇ ಹೆಚ್ಚಾಗಿ ಪೋಷಿಸೀತೆಂಬ ದಿಗಿಲು ಗೋಕಾಕರಿಗೂ ಇದ್ದರೆ ಆಶ್ಚರ್ಯವಿಲ್ಲ. ಒಟ್ಟಿನಲ್ಲಿ ಈ ಇಬ್ಬರೂ ಭಿನ್ನ ಪ್ರಕೃತಿಯ, ಭಿನ್ನ ದೃಷ್ಟಿಕೋನದ ಕವಿಗಳೆಂಬುದೂ ನವ್ಯಕಾವ್ಯದ ಎರಡು ಪ್ರಧಾನ ಪ್ರವೃತ್ತಿಗಳ ಪ್ರವರ್ತಕರೆಂಬುದೂ ಮುಖ್ಯವಾದ ಸಂಗತಿಯಾಗಿದೆ.

ಅಡಿಗರ ನವ್ಯಮಾರ್ಗದಿಂದ ಪ್ರಭಾವಿತರಾಗಿ ತಮ್ಮ ಕಾವ್ಯಜೀವನವನ್ನು ರೂಪಿಸಿಕೊಂಡ ಕವಿಗಳ ಸಂಖ್ಯೆ ಹೇರಳವಾಗಿದೆ. ಯುವತಲೆಮಾರಿನ ಪ್ರತಿಭಾಶಾಲಿ ಕವಿಗಳಲ್ಲಿ ಹಲವರು ಈ ಮಾರ್ಗಕ್ಕೆ ಸೇರುತ್ತಾರೆ. ಬಿ.ಸಿ.ರಾಮಚಂದ್ರಶರ್ಮರದು ನವ್ಯಕಾವ್ಯದ ಆರಂಭದ ಕಾಲದಲ್ಲಿ ಅಡಿಗರ ಜೊತೆ ಜೊತೆಯಲ್ಲೇ ಕೇಳಿಬರುತ್ತಿದ್ದ ಹೆಸರಾಗಿತ್ತು. ಏಳುಸುತ್ತಿನ ಕೋಟೆ (1953), ಬುವಿ ನೀಡಿದ ಸ್ಫೂರ್ತಿ, ಹೇಸರಗತ್ತೆ ಇವು ಅವರ ನವ್ಯಕಾವ್ಯ ಸಂಕಲನಗಳು. ಲೈಂಗಿಕ ವಸ್ತುವಿನಲ್ಲಿಯೇ ಹೆಚ್ಚಾದ ಲೋಲುಪತೆ ತೋರಿಸಿದ ಶರ್ಮರು ಅಭಿವ್ಯಕ್ತಿ ವಿಧಾನದ ಹೊಸತನ ಮತ್ತು ಕಸುವಿನಿಂದಾಗಿ ತುಂಬ ಭರವಸೆ ಹುಟ್ಟಿಸಿದ್ದರು. ಮುಂದೆ ಅವರ ಕಾವ್ಯಜೀವನ ಪ್ರವರ್ಧಮಾನವಾಗದೆ ಇಳಿಮುಖವಾಗಿರುವುದಕ್ಕೆ ಅವರ ಹೇಸರಗತ್ತೆ ಕವನ ಸಂಕಲನ ನಿದರ್ಶನವಾಗಿದೆ. ಮುಂದೆ ಶರ್ಮರಂತೆ ಕಾಮವೇ ಪ್ರಧಾನವಸ್ತುವಾಗಿ ಉಳ್ಳ ಕವನಗಳನ್ನು ಹೆಚ್ಚಾಗಿ ಬರೆದು ಶರ್ಮರನ್ನು ನೆನಪಿಗೆ ತಂದವರು ಕಾಮಿ, ಆಮೆ ಸಂಕಲನಗಳ ಎಚ್.ಎಂ.ಚನ್ನಯ್ಯನವರು. ಭಾಷೆಯ ಉಪಯೋಗ ಮತ್ತು ಲಯಗತಿಯಲ್ಲಿ ತಮ್ಮದೇ ಆದ ವಿಶಿಷ್ಟತೆಯನ್ನು ಅವರು ರೂಢಿಸಿದರು. ಯು.ಆರ್.ಅನಂತಮೂರ್ತಿಯವರ 'ಬಾವಲಿ' ಸಂಕಲನವೇ ಇನ್ನೂ ಕೆಲವು ಕವನಗಳನ್ನೊಳಗೊಂಡು 15 ಪದ್ಯಗಳು ಎಂಬ ಹೆಸರಿನಲ್ಲಿ ಪ್ರಕಟವಾಗಿದೆ. ಭಿಕ್ಷುಕರು, ಕಿಳ್ಳೇಕ್ಯಾತರ ಹುಡುಗಿ, ರಾಜನ ಹೊಸ ವರ್ಷದ ಬೇಡಿಕೆಗಳಂಥ ಉತ್ತಮ ಕವನಗಳು ಅದರಲ್ಲಿವೆ. ಪಿ.ಲಂಕೇಶರು ಬಿಚ್ಚು, ತಲೆಮಾರು ಎಂಬ ಕವನಸಂಕಲನಗಳನ್ನು ಪ್ರಕಟಿಸಿದ್ದಾರೆ. ಇವರ ಪ್ರಥಮ ಸಂಕಲನವಾದ ಬಿಚ್ಚುವಿನಲ್ಲಿ ಹಲವು ಉತ್ತಮ ಕವನಗಳಿವೆ. ಅಡಿಗರಿಗೆ ಭಿನ್ನವಾದ ಲಯಸಾಧ್ಯತೆಗಳ ಹುಡುಕಾಟವಿದೆ. ಕವಿಯ ವಿಶಿಷ್ಟವೂ ಸತ್ವಪೂರ್ಣವೂ ಆದ ದನಿಯ ಮುದ್ರೆ ಇದೆ. ಅವರ ಅವ್ವ ಕನ್ನಡದ ಅತ್ಯುತ್ತಮ ಕವನನಗಳಲ್ಲೊಂದೆಂದು ಸುಪ್ರಸಿದ್ಧವಾಗಿದೆ. ಬೃಹನ್ನಳೆ ಸೋಮುವಿನ ಸ್ವಗತ ಲಹರಿ ಸಂಕಲನದ ಅನಂತರ ಪೂರ್ಣಚಂದ್ರ ತೇಜಸ್ವಿಯವರು ಕವನಗಳನ್ನು ಹೆಚ್ಚು ಬರೆಯಲಿಲ್ಲ.

ಚಂದ್ರಶೇಖರ ಪಾಟೀಲರು ಬಾನುಲಿ, ಮಧ್ಯಬಿಂದು, ಹತ್ತೊಂಬತ್ತು ಕವನಗಳು ಮುಂತಾದ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಸಮಕಾಲೀನ ಪ್ರಜ್ಞೆ, ಜೀವನದ ಬಗ್ಗೆ ಲವಲವಿಕೆ, ವಿಡಂಬನೆಯ ಮಾತುಗಾರಿಕೆ, ಅರ್ಥಭಾರವನ್ನು ಹಗುರಾಗಿ ತೇಲಿಸುವ ಜಾಣ್ಮೆ, ಅಭಿವ್ಯಕ್ತಿಯ ವ್ಯಂಗ್ಯಪೂರ್ಣತೆ ಇವು ಎಲ್ಲ ಕವಿತೆಗಳ ಸಾಮಾನ್ಯ ಲಕ್ಷಣಗಳು ಎಂದು ಹತ್ತೊಂಬತ್ತು ಕವನಗಳು ಸಂಗ್ರಹದ ಹಿನ್ನುಡಿಯಲ್ಲಿ ಕೀರ್ತಿನಾಥ ಕುರ್ತಕೋಟಿಯವರು ಹೇಳಿದ ಮಾತು ಪಾಟೀಲರ ಒಟ್ಟು ಕಾವ್ಯಕ್ಕೇ ಅನ್ವಯವಾಗಬಹುದಾದ ಮಾತಾಗಿದೆ. ಚಂದ್ರಶೇಖರ ಕಂಬಾರರ ಹೇಳತೇನ ಕೇಳ, ತಕರಾರಿನವರು ನವ್ಯಕಾವ್ಯ ಸಂಕಲನಗಳಾಗಿವೆ. ಜನಪದ ಭಾಷೆಯ ಬಳಕೆ ಮತ್ತು ಕಲ್ಪಕತೆಯ ಸಮೃದ್ಧಿ ಪ್ರಥಮ ದರ್ಜೆಯದಾಗಿದೆ. ನವ್ಯಧೋರಣೆ ಮತ್ತು ಅಭಿವ್ಯಕ್ತಿ ತಂತ್ರಕ್ಕೆ ಜನಪದದ ಜೀವಂತ ಆಡುಭಾಷೆಯನ್ನು ಕಸಿಗೊಳಿಸುವುದರಲ್ಲಿ ಅವರ ಸಾಧನೆ ಅಪೂರ್ವವಾದದ್ದಾಗಿದೆ. ಜನ್ಮಜಾತ ಕವಿಪ್ರತಿಭೆಯ ಪುಟಿತ ಇವರಷ್ಟು ಸಹಜ ಸಮೃದ್ಧಿಯಲ್ಲಿ ಅಡಿಗರ ಅನಂತರದ ಇನ್ನಾವ ನವ್ಯಕವಿಯಲ್ಲಿಯೂ ಕಾಣುವುದಿಲ್ಲ. ಕಂಬಾರರು ಅಡಿಗರ ಪ್ರಭಾವದಿಂದ ಬಿಡಿಸಿಕೊಳ್ಳಬೇಕೆಂಬ ತಮ್ಮ ಅನಿಸಿಕೆಯನ್ನು ಇತರರೊಂದಿಗೆ ತಾವು ಸಂಪಾದಿಸಿದ 'ಅಕಾವ್ಯ' ಎಂಬ ಪತ್ರಿಕೆಯಲ್ಲಿ 'ಏನೇನೋ ಮಾಡಿ ಸುದ್ದಿಯಲ್ಲಿರುವ ಗತ್ತಲ್ಲ 'ಅಕಾವ್ಯ'. ಅಥವಾ ಜಾತೀಯತೆಯ ಕಿಡಿಗೇಡಿ ರಾಜಕೀಯವೂ ಅಲ್ಲ. ನಮಗೂ ಗಂಭೀರ ಕಾಳಜಿಗಳಿವೆ. ಘೋಷಣೆಗಳಿಂದ ಹೊಸ ಕಾವ್ಯ ಹುಟ್ಟಬಾರದೆಂದೇನು ನಿಯಮವಿದೆಯೇ? ಅಕಾವ್ಯ ನಮಗೆ ನಾವೇ ಹಾಕಿಕೊಂಡ ಸವಾಲು, ಅದಕ್ಕೆ ಜವಾಬು ಹುಡುಕುವುದು ನಮ್ಮ ಜವಾಬ್ದಾರಿ. ಸತ್ವವಿದ್ದರೆ ಅದನ್ನು ಗುರುತಿಸುವುದು ಗುಣಪಕ್ಷಪಾತಿಗಳಾದ ಸಹೃದಯರ ಜವಾಬ್ದಾರಿ' ಎಂದು ದಿಟ್ಟತನದಿಂದ ಪ್ರತಿಪಾದಿಸಿದ್ದುಂಟು.

ನಿಮ್ಮ ಪ್ರೇಮಕುಮಾರಿಯ ಜಾತಕ, ಕಪ್ಪು ದೇವತೆ ಮತ್ತು ಲೀಲಾರಾಮರ ಕವನಗಳು ಎಂಬ ಸಂಕಲನಗಳ ಸುಮತೀಂದ್ರ ನಾಡಿಗರು ಪದ್ಯ ಕಟ್ಟುವುದರಲ್ಲಿ ತೋರುವ ಚಾಕಚಕ್ಯತೆ, ಸಹಜತೆಗಳು ಮನಸೆಳೆಯುವಂತಿವೆ. ಎಲ್ಲ ಕವನಗಳಿಗೂ ತಮ್ಮನ್ನು ಓದಿಸಿಕೊಳ್ಳುವ ಗುಣ ಇದ್ದೇ ಇದೆ. ಕಪ್ಪು ದೇವತೆ ಬಹುಶಃ ಅವರ ಅತ್ಯುತ್ತಮ ಕವನವಾಗಿದೆ. ಪದ್ಯ ಕಟ್ಟುವ ಚಾಕಚಕ್ಯತೆಯಲ್ಲಿ, ಸಹಜತೆಯಲ್ಲಿ ಸುಮತೀಂದ್ರರನ್ನೂ ಮೀರಿಸುವಂತಿರುವ ನಿಸಾರ್ ಅಹಮದ್ ಅವರು ಮನಸ್ಸು ಗಾಂಧಿ ಬಜಾರು, ನೆನೆದವರ ಮನದಲ್ಲಿ, ಸುಮುಹೂರ್ತ, ಸಂಜೆ ಐದರ ಮಳೆ, ನಾನೆಂಬ ಪರಕೀಯ ಮುಂತಾದ ಸಂಕಲನಗಳನ್ನು ಪ್ರಕಟಿಸಿದ್ದಾರೆ. ವೃತ್ತ, ಸುಳಿ, ನಿನ್ನೆಗೆ ನನ್ನ ಮಾತು ಮುಂತಾದ ಹಲವಾರು ಸಂಕಲನಗಳನ್ನು ಪ್ರಕಟಿಸಿರುವ ಎನ್.ಎಸ್.ಲಕ್ಷ್ಮೀನಾರಾಯಣಭಟ್ಟರೂ ಹೇಳುವುದನ್ನು ಪರಿಷ್ಕಾರವಾಗಿ ರುಚಿಕರವಾಗಿ ಹೇಳುವುದರ ಮೂಲಕ ಓದುಗನನ್ನು ಮುಟ್ಟುವ ಕವಿ. ರಸಗಂಗೆ, ಉತ್ತರ, ಚಿತ್ರವಿಚಿತ್ರ ಎಂಬ ಸಂಕಲನಗಳನ್ನು ಪ್ರಕಟಿಸಿರುವ ಜಿ.ಎಸ್.ಸಿದ್ಧಲಿಂಗಯ್ಯನವರೂ ಅಂಜೂರ, ನದಿಯ ಮೇಲಿನ ಗಾಳಿ ಸಂಕಲನಗಳನ್ನು ಪ್ರಕಟಿಸಿರುವ ಕ.ವೆಂ.ರಾಜಗೋಪಾಲರೂ ಯಾವ ಅತಿಗೂ ಹೋಗದೆ ಕಾವ್ಯ ರಚಿಸಬೇಕೆಂಬ ಹಂಬಲವಿರುವವರು. ರಾಜಗೋಪಾಲರ ಮನಸ್ಸಿಗೆ ಮೃದುವಾಗುವ, ಕರಗುವ ಗುಣ ಇದೆ. ಸಿದ್ಧಲಿಂಗಯ್ಯನವರ ಮನಸ್ಸು ಸರಿ ತಪ್ಪುಗಳ ಬಗೆಗೆ ಹೆಚ್ಚಿನ ಆತ್ಮವಿಶ್ವಾಸದಿಂದ ವ್ಯವಹರಿಸುತ್ತದೆ. ಅವರ 'ಮಿಥಿಲೆಗಿಲ್ಲಿಂದಲೇ ಮಾರ್ಗವೇನು ಗುರು' ಸಾಕಷ್ಟು ಪ್ರಸಿದ್ಧಿಪಡೆದ ಕವನವಾಗಿದೆ.

ಕೆ.ವಿ.ತಿರುಮಲೇಶರು ಮುಖವಾಡಗಳು, ವಠಾರ, ಮಹಾಪ್ರಸ್ಥಾನ ಮುಂತಾದ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಭಾಷೆ ಮತ್ತು ಲಯದ ದೃಷ್ಟಿಯಿಂದ ನೋಡಿದಾಗ ಅವರು ಅನನ್ಯತೆಯನ್ನು ಪ್ರಕಟಿಸಿರುವುದು ಕಂಡು ಬರುತ್ತದೆ. ಕೊಕ್ಕೊಡುತ್ತ ಹರಿಯುವ ಲಯಗತಿ ಅವರ ಕಾವ್ಯದ ಲಯವಿಧಾನದಲ್ಲಿ ಹೆಚ್ಚಾಗಿ ಕಾಣುತ್ತದೆ. ಮಹಾಪ್ರಸ್ಥಾನ ಅವರ ಕಾವ್ಯ ಗಂಭೀರವಾದ ಆಯಾಮವನ್ನು ಮೈಗೂಡಿಸಿಕೊಳ್ಳುತ್ತ ಬೆಳೆಯುತ್ತಿದೆ ಯೆಂಬುದಕ್ಕೆ ಸಾಕ್ಷಿ ನುಡಿಯುವಂತಿದೆ. ಶ್ರೀಕೃಷ್ಣ ಆಲನಹಳ್ಳಿಯವರ ಮಣ್ಣಿನ ಹಾಡು, ಕಾಡುಗಿಡದ ಹಾಡು ಪಾಡು ಸಂಕಲನಗಳ ಕವನಗಳು ತಮ್ಮ ಕಸುವು ಮತ್ತು ಜೀವನಾನುರಕ್ತಿಯಿಂದಾಗಿ ಮನಸೆಳೆಯುತ್ತವೆ. ಗೋಪಿ ಮತ್ತು ಗಾಂಡಲೀನ ಸಂಕಲನದ ಬಿ.ಆರ್.ಲಕ್ಷ್ಮಣರಾವ್ ಅವರ ಬರೆವಣಿಗೆಗೆ ತನ್ನದೇ ಆದ ಧಾಟಿ ಧೋರಣೆಗಳಿವೆ.

ಅನನ್ಯ ರೀತಿಗಳಲ್ಲಿ ಆಡುಭಾಷೆಯ ಪ್ರಯೋಗ ನಡೆಸುವುದರ ಮೂಲಕ ನವ್ಯಕಾವ್ಯಕ್ಕೆ ವೈವಿಧ್ಯವನ್ನೂ ಹೊಸ ಆಯಾಮವನ್ನೂ ತಂದುಕೊಟ್ಟವರು 'ಹೊಕ್ಕುಳಲ್ಲಿ ಹೂವಿಲ್ಲ' ಸಂಕಲನದ ಎ.ಕೆ.ರಾಮನುಜನ್ ಮತ್ತು ಶಿಲಾಲತೆ, ಮನೆಯಿಂದ ಮನೆಗೆ ಸಂಕಲನಗಳ ಕೆ.ಎಸ್.ನರಸಿಂಹ ಸ್ವಾಮಿಯವರು. ಅಡಿಗರು ಹೆಚ್ಚು ಸಂಕೀರ್ಣವೂ ವೈವಿಧ್ಯಪೂರ್ಣವೂ ಆದ ಬಗೆಯಲ್ಲಿ ಕನ್ನಡ ಭಾಷೆಯ ಸಾಧ್ಯತೆಯನ್ನು ಸೂರೆಮಾಡಿದ್ದು ನಿಜ. ಆದರೆ ಈ ಇಬ್ಬರೂ ಕೇವಲ ಶಿಷ್ಟ ಕನ್ನಡ ನುಡಿಯನ್ನು ಶ್ರುತಿಗೊಳಿಸುವುದರ ಮೂಲಕವೇ ಎಂಥೆಂಥ ಲಯವಿನ್ಯಾಸ, ಏನೆಲ್ಲ ಪಲುಕು, ಸೂಕ್ಷ್ಮಗಳನ್ನು ದುಡಿಸಿಕೊಳ್ಳಬಹುದೆಂಬುದನ್ನು ಅತ್ಯುತ್ತಮ ಮಟ್ಟದಲ್ಲಿ ತಮ್ಮದೇ ಆದ ರೀತಿಯಲ್ಲಿ ತೋರಿಸಿಕೊಟ್ಟಿದ್ದಾರೆ. ನಾಗರಿಕ (ಅರ್ಬನ್) ಭಾಷೆಯಲ್ಲಿಯೇ ವಿವಿಧ ಲಯ ಸಾಧ್ಯತೆಗಳನ್ನು ಲಂಕೇಶರೂ ಅನಂತರದ ತಿರುಮಲೇಶರೂ ತೆರೆದು ತೋರಿಸಿ ಆಡುನುಡಿಗೆ ಲಯವೈವಿಧ್ಯವನ್ನು ತಂದದ್ದು ಉಂಟಾದರೂ ಅವರಿಬ್ಬರ ಆ ಪ್ರಯೋಗಗಳಲ್ಲಿಯೂ ಲಯ ಗತಿಯ ವೇಗ, ತುಯ್ತಗಳು ಜಾಸ್ತಿಯಾಗಿದ್ದವು. ಚಂದ್ರಶೇಖರ ಕಂಬಾರರೂ ಜನಪದ ಆಡುಭಾಷೆಯನ್ನು ಬಳಸಿದಲ್ಲೆಲ್ಲ ಅದನ್ನು ಹೊಸ ಸಂವೇದನೆಗೆ ಒಗ್ಗಿಸುವುದರ ಮೂಲಕ ನವ್ಯಕಾವ್ಯರೀತಿಗೆ ಹೊಸ ವೈವಿಧ್ಯ, ಆಯಾಮ ತಂದಿದ್ದಾರೆ. ಆದರೆ ರಾಮಾನುಜನ್ ಮತ್ತು ಕೆ.ಎಸ್.ನ ಅವರು ಆಡುನುಡಿಯ ನಡಿಗೆಯನ್ನು ನಿಧಾನಗೊಳಿಸಿ ಗದ್ಯಗತಿಗೆ ಪದ್ಯದ ಲಯಗತಿಯನ್ನು ಎಷ್ಟು ಹತ್ತಿರ ತಂದು ಕಾವ್ಯವನ್ನು ಸೃಷ್ಟಿಸಬಹುದೆಂಬುದನ್ನು ಕನ್ನಡದಲ್ಲಿ ಅದರ ಆತ್ಯಂತಿಕ ಸ್ಥಿತಿಯಲ್ಲಿ ತೋರಿಸಿಕೊಟ್ಟವರೆಂಬುದನ್ನು ಮರೆಯುವಂತಿಲ್ಲ. ರಾಮಾನುಜನ್

ಅವರ ಮೇಲೆ ಅಡಿಗರ ಪ್ರಭಾವ ತೋರಿಸುವುದು ಕಷ್ಟ. ಅವರದು ಶುದ್ಧವಾಗಿ ಹೊಸದನಿ. ಕೆ.ಎಸ್.ನರಸಿಂಹಸ್ವಾಮಿಯವರು ಮೈಸೂರು ಮಲ್ಲಿಗೆ, ಇರುವಂತಿಗೆ ಮುಂತಾದ ಕವನಸಂಕಲನಗಳಲ್ಲಿ ನವೋದಯದ ರೀತಿಯಲ್ಲಿ ಸುಕುಮಾರವಾಗಿ, ಅಚ್ಚುಕಟ್ಟಾಗಿ ಬರೆಯುತ್ತಿದ್ದವರು. ಶಿಲಾಲತೆಯಿಂದ ಮುಂದಿನ ಕಾವ್ಯದಲ್ಲಿ ಸೌಕುಮಾರ್ಯ, ಅಚ್ಚುಕಟ್ಟುಗಳು ಇಲ್ಲವೆಂದಲ್ಲ. ಆದರೆ ಅವು ಬದುಕಿನ ಗಂಭೀರ ಆಳಗಳನ್ನು ಬಗೆಯುವಲ್ಲಿ ಬಳಕೆಯಾದ ರೀತಿ ಅನನ್ಯವಾಗಿದೆ. ರಾಮಾನುಜನ್ ಅವರ ಬರೆವಣಿಗೆಯ ಪ್ರಭಾವ ಕೆಲವು ಎಳೆಯ ಕವಿಗಳ ಮೇಲೆ ಆದಂತೆ ನರಸಿಂಹಸ್ವಾಮಿಯವರ ಪ್ರಭಾವ ಅಷ್ಟಾಗಿ ಆದಂತೆ ತೋರುವುದಿಲ್ಲ. ರಾಮಾನುಜನ್ ಅವರನ್ನು ಅನುಕರಿಸಿದವರಿಗೂ ರಾಮಾನುಜನ್ ಅವರ ಶಿಷ್ಟ ನಾಜೂಕನ್ನು (ಸೊಫಿಸ್ಟಿಕೇಷನ್) ರೂಢಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಆದ್ದರಿಂದ ಉಳಿದವರಲ್ಲಿ ಹೆಚ್ಚು ಕಡೆಗಳಲ್ಲಿ ಲಯದ ಕಸರತ್ತುಗಳಾಗಿಯೇ ಕಾಣಿಸುವಂತಾಯಿತು.

ಜಿ.ಎಸ್.ಶಿವರುದ್ರಪ್ಪ ಮತ್ತು ಚೆನ್ನವೀರ ಕಣವಿಯವರು ತಮ್ಮ ಕವಿ ಜೀವನದ ಪ್ರಥಮ ಹಂತದಲ್ಲಿ ನವೋದಯದ ಸೌಂದರ್ಯಾರಾಧಕ ಮನೋಭಾವವನ್ನು ಬೆಳೆಸಿಕೊಂಡಿದ್ದವರು. ಶಿವರುದ್ರಪ್ಪನವರ ಸಾಮಗಾನ, ಚೆಲುವು - ಒಲವು, ದೇವಶಿಲ್ಪಗಳೂ ಕಣವಿಯವರ ಕಾವ್ಯಾಕ್ಷಿ, ಭಾವಜೀವಿ, ಆಕಾಶಬುಟ್ಟಿ, ಮಧುಚಂದ್ರಗಳೂ ಆ ರೀತಿಯ ಮನೋಭಾವವನ್ನೂ ಪ್ರತಿನಿಧಿಸುತ್ತವೆ. ಶಿವರುದ್ರಪ್ಪನವರ ದೀಪದ ಹೆಜ್ಜೆ ಕವನಸಂಕಲನ ಅವರ ಕಾವ್ಯಜೀವನದ ಮಹತ್ತ್ವದ ಘಟ್ಟವನ್ನು ಸೂಚಿಸಿತು. ಅವರ ಕಾವ್ಯಶಕ್ತಿ ಹೊಸ ಚೈತನ್ಯವನ್ನು ರೂಢಿಸಿಕೊಳ್ಳುತ್ತದೆ ಎಂಬ ಭರವಸೆಯನ್ನೂ ಹುಟ್ಟಿಸಿತು. ಆದರೆ ಮುಂದೆ ಬಂದ ಕಾರ್ತೀಕ, ಅನಾವರಣ, ತೆರೆದ ದಾರಿ, ಗೋಡೆ ಸಂಕಲನಗಳು ನಿರೀಕ್ಷಿತ ಬೆಳೆವಣಿಗೆಯನ್ನು ತೋರಿಸದಿದ್ದುದು ಆಶ್ಚರ್ಯ. ಕಣವಿಯವರ ಮಣ್ಣಿನ ಮೆರವಣಿಗೆ, ನೆಲಮುಗಿಲು, ಎರಡು ದಡಗಳಲ್ಲಿ ಮಹತ್ವಾಕಾಂಕ್ಷೆಯ ಬರೆವಣಿಗೆ ಕಾಣುತ್ತದೆ. ಈ ಇಬ್ಬರು ಕವಿಗಳನ್ನು 'ಸಮನ್ವಯ' ಕವಿಗಳೆಂದು ಕರೆಯುವ ಪರಿಪಾಠ ಬಂದುಹೋಗಿದೆ. ನವೋದಯ ನವ್ಯಗಳ ನಡುವೆ ತಮ್ಮದೇ ಆದ ವಿಶಿಷ್ಟ ಬಗೆಯ ಸೃಜನಾತ್ಮಕ ಭಾವಸಂಬಂಧ ಸ್ಥಾಪಿಸಲು ಹೆಣಗುವುದರಲ್ಲಿ ಅವರಿಬ್ಬರಲ್ಲಿ ಕಂಡುಬರುತ್ತಿರುವ ಸಾಮ್ಯವೇ ಅವರನ್ನು ಹಾಗೆ ಕರೆಯುವುದಕ್ಕೆ ಕಾರಣವಾಗಿರುವಂತಿದೆ. ಇಲ್ಲಿಯೇ ಹೆಸರಿಸಬಹುದಾದ ಇನ್ನಿಬ್ಬರು ಕವಿಗಳು ನಾಣ್ಯಯಾತ್ರೆ, ಮಂಗಳಾರತಿ, ಕುಂಡಗಳೇ ಸಾಕು ಸಂಕಲನಗಳ ಸುಜನಾ (ಎಸ್.ನಾರಾಯಣ ಶೆಟ್ಟಿ) ಮತ್ತು ತಾರಾಸಖಿ, ಅನಂತ ಪೃಥ್ವೀ, ಪ್ರಕೃತಿ, ವರ್ತಮಾನ, ಸಂಕಲನಗಳ ಸಿ.ಪಿ.ಕೆ. (ಸಿ.ಪಿ.ಕೃಷ್ಣಕುಮಾರ್).

ನವೋದಯ ಕಾವ್ಯರೀತಿಗೆ ಭಿನ್ನವಾದ ರೀತಿಯ ಕಾವ್ಯಸೃಷ್ಟಿಯಲ್ಲಿ ತೊಡಗಿದ ಮೊದಲಿಗರಲ್ಲಿ ದಿವಂಗತ ಪೇಜಾವರ ಸದಾಶಿವರಾಯ ಮತ್ತು ವಿ.ಜಿ.ಭಟ್ಟರನ್ನು ಮರೆಯುವಂತಿಲ್ಲ. ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಇಟಲಿಯಲ್ಲಿ ತೀರಿಹೋದ ಶಿಲ್ಪಶಾಸ್ತ್ರ ತಜ್ಞರೂ ಕವಿಯೂ ಆದ ಪೇಜಾವರ ಸದಾಶಿವರಾಯರ ವರುಣ ಎಂಬ ಸಂಕಲನ ಅವರ ಮರಣಾನಂತರ 1952ರಲ್ಲಿ ಪ್ರಕಟವಾದರೂ ನವ್ಯಕಾವ್ಯದ ಅಧಿಕೃತ ಘೋಷಣೆಯಾಗುವುದಕ್ಕಿಂತ ಹಿಂದೆಯೇ ಅಂದರೆ 1950ಕ್ಕಿಂತ ಮೊದಲೇ ಅವರು ನಾಟ್ಯೋತ್ಸವ, ವರುಣದಂಥ' ಕವನಗಳನ್ನು ಬರೆದಿದ್ದಂತೆ ತಿಳಿದುಬರುತ್ತದೆ. ನಾಟ್ಯೋತ್ಸವ ಇಂದಿಗೂ ತನ್ನ ಜೀವನೋತ್ಸಾಹ, ಲಯ ವೈವಿಧ್ಯ, ಹೊಸತನಗಳಿಂದಾಗಿ ಮನಸೆಳೆಯುವಂತಿದೆ. ಪಲಾಯನ, ರಕ್ತಾಂಜಲಿ, ತುಂಟನ ಪದಗಳು, ಕಾವ್ಯ ವೇದನೆ, ಕಿಷ್ಕಿಂದೆ ಸಂಕಲನಗಳ ವಿ.ಜಿ.ಭಟ್ಟರು ಸೂತ್ರಗಳಿಗೆ ಸಿಲುಕದೆ ಸುಸೂತ್ರವಾಗಿ ಬದುಕಲು ಆಗುವುದೆಂಬ ವಿಶ್ವಾಸವುಳ್ಳವರೆಂದು ತಾವೇ ಹೇಳಿಕೊಂಡಿದ್ದಾರೆ. ಸೂತ್ರಗಳಿಗೆ ಸಿಗದ ಸ್ವತಂತ್ರಮನೋಧರ್ಮ ಅವರದೆಂಬುದರಲ್ಲಿ ಅನುಮಾನಕ್ಕೆ ಎಡೆಯಿಲ್ಲ. ಆದರೆ 'ಸುಸೂತ್ರ' ಎಂಬ ಮಾತಿಗೆ ಸಲೀಸಾಗಿ ಎಂಬ ಸಾಮಾನ್ಯಾರ್ಥ ಮಾಡಿದರೆ ಅವರೂ ಒಪ್ಪಲಿಕ್ಕಿಲ್ಲ. ಏಕೆಂದರೆ ಅವರಿಗೆ ಬದುಕಿನ ಸಲೀಸುತನದಲ್ಲಿ ನಂಬಿಕೆಯಿಲ್ಲ. ಒಳ್ಳೆಯ ಸೂತ್ರವೊಂದು ತಮ್ಮ ಕಾವ್ಯದಲ್ಲಿದೆ ಎಂಬರ್ಥದಲ್ಲಿ ಅವರು ಸುಸೂತ್ರ ಎಂಬ ಪದ ಬಳಸಿದ್ದರೆ ಅದರಲ್ಲಿ ಆತ್ಮಪ್ರತ್ಯಯ ಕಂಡುಬಂದರೂ ಸತ್ಯಾಂಶವಿದೆ. ಇಲ್ಲಿಯೇ ಹೆಸರಿಸಬೇಕಾದವರು ನಂದನ, ನಾಯಿಕೊಡೆ ಸಂಕಲನಗಳ ಎಚ್.ಎಸ್.ಬಿಳಿಗಿರಿಯವರು. ವಿ.ಜಿ.ಭಟ್ಟರಂತೆ ಅವರೂ ಯಾವ ಸೂತ್ರಕ್ಕೂ ಸಿಲುಕದ ಕವಿ. ವಿಡಂಬನ ಬರೆವಣಿಗೆಗೆ ಹೆಸರಾದವರು. ಅವರ ವಿಡಂಬನೆಯಲ್ಲಿ ಮೊನಚಿದ್ದರೂ ಪರೋಕ್ಷವಾದ ಆತ್ಮಪ್ರಶಂಸೆಯಿಲ್ಲದ ನಿರ್ಲಿಪ್ತ ಮನೋಭಾವವಿದೆ. ಭಟ್ಟರಿಗೂ ಬಿಳಿಗಿರಿಯವರಿಗೂ ತಮ್ಮ ಬರೆವಣಿಗೆಯಿಂದ ಲೋಕ ತಿದ್ದುತ್ತೇವೆಂಬ ಭಂಗಿಯನ್ನು ಆರೋಪಿಸಿಕೊಳ್ಳುವ ಉಮೇದಿಲ್ಲ. ನೇರವಾಗಿ ಸೂಕ್ಷ್ಮವಾಗಿ ನೋಡುವ ಚುರುಕು ಆಸಕ್ತಿಯಿದೆ.

ಕಾವ್ಯಾರ್ಪಣ, ಮಾಯಾವಿ, ಜರಾಸಂಧ- ಸಂಕಲನಗಳನ್ನು ಪ್ರಕಟಿಸಿದ ಆರವಿಂದ ನಾಡಕರ್ಣಿ; 'ಹಸಿರು ದೀಪ'ದ ಸುಂದರ ನಾಡಕರ್ಣಿ; 'ಶೂದ್ರ'ದ ಹಾ. ಮಾ. ಪಟೇಲ; 'ರಂಗದಿಂದೊಂದಿಷ್ಟು ದೂರ'ದ ಜಯಂತ ಕಾಯ್ಕಿಣಿ; 'ಮನುಷ್ಯ'ದ ಆರ್ಯ; 'ಬೆಂಕಿಬಳ್ಳಿ', 'ಹೊಕ್ಕಳು'ಗಳ ಜಿ.ಎಸ್.ಅವಧಾನಿ,; 'ನೀನಾ', 'ಔರಂಗಜೇಬ'ದ ಸಿದ್ಧಲಿಂಗ ಪಟ್ಟಣಶೆಟ್ಟಿ; 'ರಸವಂತಿ', 'ಮರ್ಲಿನ್ ಮನ್ರೋ ಮತ್ತು ಇತರ ಪದ್ಯಗಳು' ಕಾವ್ಯದ ಗಿರಡ್ಡಿ ಗೋವಿಂದರಾಜ; 'ಹೂವು ಚೆಲ್ಲಿದ ಹಾದಿಯಲ್ಲಿ'ಯ ಕೆ.ವಿ.ಸುಬ್ಬಣ್ಣ; 'ನಂದಿಕೋಲು'ನ ಚಂದ್ರಕಾಂತ ಕುಸನೂರ; ಮುಸುಕು ನಸುಕು ಜೀವಜೀವಂತ ಸಂಕಲನಗಳ ವೇಣುಗೋಪಾಲ ಸೊರಬ 'ವಿದಾಯ'ದ (ದಿ) ಯರ್ಮುಂಜ ರಾಮಚಂದ್ರ; 'ಬೆಂಕಿ', 'ಗಂಡಹೆಂಡಿರ ಜಗಳ ಗಂಧ ತೀಡಿದ್ಹಾಂಗ'ಗಳ ಸೋಮಶೇಖರ ಇಮ್ರಾಪುರ; ಪರಿವೃತ್ತ, ಬಾಗಿಲು ಬಡಿವ ಜನ, ಮೊಖ್ತಾ ಸಂಕಲನಗಳ ಎಚ್.ಎಸ್.ವೆಂಕಟೇಶಮೂರ್ತಿ; 'ಅಜ್ಜಗಾವಲು'ನ ಶಾಮಸುಂದರ ಬಿದರಕುಂದಿ; ಜಗಲಿ ಹತ್ತಿ ಇಳಿದು, ಕಣ್ಣು ನಾಲಗೆ ಕಡಲು, ನಾಡಾಡಿ ಸಂಕಲನಗಳ ದೊಡ್ಡರಂಗೇಗೌಡ, ಇಲ್ಲದ್ದು, ಇನ್ನಾದರೂ ಬದುಕಬೇಕು ಸಂಕಲನಗಳ ಜಯಸುದರ್ಶನ,; 'ತುಡುಗಿ'ಯ.ಎಚ್.ಎಸ್. ಭೀಮನಗೌಡರ; 'ಕಿಸ್ಮಿ'ಯ ಸಿಂಹ ಕೊಳ್ಳೇಗಾಲ; 'ಗದ್ಯದಿಂದ ಪದ್ಯಕ್ಕೆ' ಸಂಕಲನದ ಜಾಗೋ; ಏಕಾಂತ, ಉತ್ತರ ಧ್ರುವಗಳ ಕಾವ್ಯದ ಕೆ.ಎನ್.ಶಿವಪ್ಪ; ಋತಗೀತಾಮೃತ, ರಾಮದಾಸರ ಕವನಗಳು ಸಂಕಲನಗಳ ರಾಮದಾಸ್; (ಪ್ರೇಮಸೋದರ); 'ಅಭೀಪ್ಸೆ'ಯ ಸಣ್ಣಗುಡ್ಡಯ್ಯ; 'ಯಾತ್ರೆ'ಯ ರಾಗೌ; 'ತಾಕಲಾಟ'ದ ಬಿ.ಎಸ್.ಜಗದೀಶ; 'ಮರಕುಟಿಗ'ದ ಬರಗೂರು ರಾಮಚಂದ್ರಪ್ಪ,; 'ಮುಕ್ತ'ದ ಜೈರಾಮ ಹೆಗ್ಗಡೆ; 'ಇರುತ್ತವೆ'ಯ ಡಿ.ವಿಜಯ; 'ತೆರೆ'ಯ ಸುಬ್ರಾಯ ಚೊಕ್ಕಾಡಿ; 'ಅಸ್ತವ್ಯಸ್ತ'ದ ವಿ.ಮ.ಜಗದೀಶ; 'ಕಲೈಡೋಸ್ಕೋಪ'ದ ಎಂ.ಎಲ್.ಚೆನ್ನಕೇಶವಶಾಸ್ತ್ರಿ; 'ಶಾಪ'ದ ಬಿ.ಸೋಮಶೇಖರ; ಮೊದಲು ತೊದಲು ಸಂಕಲನದ ಸಂ.ವಾ.ದ; ನಕ್ಷತ್ರಗಳು ಸಂಕಲನದ ನಾಗಭೂಷಣಸ್ವಾಮಿ,; 'ಪಿಸುಗುಟ್ಟಿತು ಬಯಕೆ'ಯ ಪರಮೇಶ, 'ಅಕ್ಟೋಪಸ್'ದ ಎಸ್.ಜಿ.ಶಿವಶಂಕರ್; ದಾರಿ ಮಗ್ಗುಲಹಾಡು ಸಂಕಲನದ ಮು. ಶಿವನಂಜಯ್ಯ; 'ನಾಲ್ಕು ಹಿಡಿಬೆಂಕಿ'ಯ ದೇಶಪಾಂಡೆ ಸುಬ್ಬರಾಯ; 'ಕರೀತೆಲಿ ಮಾನವನ ಜೇಪದ'ದ ಚೆನ್ನಣ್ಣ ವಾಲೀಕಾರ; 'ಚಿಗಳಿ'ಯ ಸಿದ್ಧಲಿಂಗ ದೇಸಾಯಿ; 'ನಸುಕು ಹರಿಯುವ ಮುನ್ನ'ದ ಎಂ.ಬಿ.ನಟರಾಜ; 'ಹುಲ್ಲು ಹೆಜ್ಜೆ' 'ಶಬ್ದರಕ್ತಮಾಂಸ'ದ ಬುದ್ದಣ್ಣ ಹಿಂಗಮಿರೆ; ಹತ್ತರ ಕೂಡ ಹನ್ನೊಂದು ಸಂಕಲನದ ಶಿವಶರಣ ಜಾವಳಿ; ಪ್ರಣಯ ಚೈತ್ರ, ವಿಷಾದನಕ್ಷೆಗಳ ವೀಚಿ; ನೆರಳು ಸಂಕಲನದ ಗಂಗಾಧರ ಭಟ್; 'ಕಾರವಾನ'ದ ವಿಷ್ಣುಮೂರ್ತಿ; ಗರಿ ಮುರಿದ ಹಕ್ಕಿಗಳು ಸಂಕಲನದ ವೇಣುಗೋಪಾಲಕಾಸರಗೋಡು; 'ಸಾರಂಗ'ದ ವಿ.ಎನ್.ನಾಯಕ; ಹೊಲೆಮಾದಿಗರ ಹಾಡು ಸಂಕಲನದ ಸಿದ್ಧಲಿಂಗಯ್ಯ; 'ಮೂಡಲದನಿ'ಯ ಸಿ.ವೀರಣ್ಣ; 'ಹಿಪ್ಪೆಮರ'ದ ಸತ್ಯನಾರಾಯಣ ರಾವ್ ಅಣತಿ; ಬೆತ್ತಲೆ ಪದ್ಯಗಳು ಸಂಕಲನದ ಹೊ.ಮ. ಪಂಡಿತಾರಾಧ್ಯ; ಕೆಲವು ಕವನಗಳು ಸಂಕಲನದ ಪ್ರಭುಸ್ವಾಮಿಮಠ, 'ರುದ್ರಾಕ್ಷಿ'ಯ ರಾಜಶೇಖರ, 'ಮೊರೆಮೊರೆ'ತದ ರಾಧಾಕೃಷ್ಣ, 'ಕಲ್ಲುತೋಟ'ದ ಜೆ.ಎಂ.ಹನಸೋಗೆ, ಮಂಗೇಶ ನಾಡಕರ್ಣಿ, ಭೈರವಮೂರ್ತಿ, ರಾಮಚಂದ್ರದೇವ, ದೇವನೂರ ಮಹಾದೇವ, ಕಮಲಾ ಹೆಮ್ಮಿಗೆ, ಎಸ್.ಮಾಲತಿ, ಎಸ್.ಉಷಾ, (ತೊಗಲು ಗೊಂಬೆಯ ಆತ್ಮಕತೆ) ಉಮಾದೇವಿ, ಚ.ಸರ್ವಮಂಗಳಾ (ಅಮ್ಮನ ಗುಡ್ಡ) ಲಕ್ಷ್ಮೀಶ ತೋಳ್ಪಾಡಿ, ಕಾಳೇಗೌಡ ನಾಗವಾರ, ಕೆ.ಎನ್.ಶಿವತೀರ್ಥನ್ (ಬೆಸ್ತ), ಅಬ್ದುಲ್ ಮಜೀದ್ ಖಾನ್, ಯು.ಕೆ.ವಿ.ಆಚಾರ್ಯ, ಗಂಗಾಧರಮೂರ್ತಿ, ಬೀ.ಪ.ಹನುಮಕ್ಕ, ಎ.ಎನ್.ಪ್ರಸನ್ನ, ಎಂ.ಎನ್.ಜೈಪ್ರಕಾಶ್, ಶ್ರೀಕಂಠಕೂಡಿಗೆ, ಅಲ್ಲಮಪ್ರಭು ಬೆಟ್ಟದೂರು, ಶಿವಳ್ಳಿ ಕೆಂಪೇಗೌಡ, ಜಿ.ಎಸ್.ಭಟ್ಟ ಉಬರಡ್ಕ, ಕಿರಣ, ಜಂಬಣ್ಣ ಅಮರಚಿಂತ, ಶಾಂತರಸ, ನಾಗಭೂಷಣರಾವ್ ಸಿಂಧೆ, ಬನ್ನಂಜೆ ಗೋವಿಂದಾಚಾರ್ಯ, ವಿ.ಎನ್.ಲಕ್ಷ್ಮೀನಾರಾಯಣ, ಬಿ.ಎನ್.ನಾಗರಾಜಭಟ್, ನಳಿನೀ ದೇಶಪಾಂಡೆ, ಶಾಂತಾರಾಮಹಿಚ್ಕಡ

ಮೊದಲಾದ ಕವಿಗಳು ಕಾವ್ಯರಚನೆಯಲ್ಲಿ ತೊಡಗಿದ್ದಾರೆ. ಕೆಲವರಲ್ಲಿ ಉತ್ತಮಮಟ್ಟದ ಪ್ರತಿಭೆಯ ಲಕ್ಷಣಗಳು ಕಂಡುಬಂದರೆ, ಇನ್ನು ಹಲವರಲ್ಲಿ ಆ ಮಟ್ಟದ ಪ್ರತಿಭೆ ಕಂಡುಬರುವುದಿಲ್ಲ.

ಕನ್ನಡದಲ್ಲಿ ನವ್ಯಕಾವ್ಯವನ್ನು ಕುರಿತ ಈ ಬರೆವಣಿಗೆಯಲ್ಲಿ ನವೋದಯ ಕಾವ್ಯ ರೀತಿಗೆ ಭಿನ್ನವಾದ ದನಿಗಳಾಗಿ ಬಂದ ಕಳೆದ ಕಾಲು ಶತಮಾನದ ಕಾವ್ಯ ರಾಶಿಯನ್ನು ಪರಿಚಯ ಮಾಡಿಕೊಡುವ ಪ್ರಯತ್ನ ಮಾಡಲಾಗಿದೆ. ಗೋಕಾಕರ ನವ್ಯಕಾವ್ಯ ಮಾರ್ಗ, ಅಡಿಗರ ನವ್ಯಕಾವ್ಯ ಮಾರ್ಗಗಳು ಪ್ರಮುಖವಾದ ನವ್ಯಕಾವ್ಯ ಮಾರ್ಗಗಳಾಗಿವೆ. ಅದರಲ್ಲೂ ಅಡಿಗರ ನವ್ಯಕಾವ್ಯ ಮಾರ್ಗದ ಪ್ರಭಾವಕ್ಕೆ ಬಂದ ಕವಿಗಳ ಸಂಖ್ಯೆ ಹೇರಳವಾಗಿದೆ. ಈ ಮಧ್ಯೆ ರಾಮಾನುಜನ್ ಅವರದೇ ಆದ ಹೊಸದನಿಯ ನವ್ಯಕಾವ್ಯ ಸದ್ದಿಲ್ಲದೆ ಕೆಲವು ಕವಿಗಳ ಮೇಲೆ ಪ್ರಭಾವ ಬೀರುತ್ತಿದೆ. ಅಡಿಗರ ಮತ್ತು ಗೋಕಾಕರ ಕಾವ್ಯಮಾರ್ಗಕ್ಕೆ ಪ್ರತಿಕ್ರಿಯೆಯಾಗಿ ನವೋದಯ ಕಾವ್ಯದ ಜಾಡಿನಲ್ಲಿಯೇ ಹೊಸತನ ರೂಢಿಸಬಹುದೆಂದು ಪ್ರಯತ್ನಿಸಿದ ಶಿವರುದ್ರಪ್ಪ, ಕಣವಿಯವರ ಸಮನ್ವಯ ಕಾವ್ಯ ಕೆಲಕಾಲ ಪ್ರತ್ಯೇಕವಾಗಿ ಬೆಳೆದಂತೆ ಕಂಡುಬಂದರೂ ಇತ್ತೀಚೆಗೆ ಗೋಕಾಕರ ರೀತಿಗೆ ಹೆಚ್ಚು ಹತ್ತಿರವಾಗುತ್ತಿರುವಂತೆ ಗೋಕಾಕರೂ ಸಮನ್ವಯದವರೊಟ್ಟಿಗೇ ಸೇರಿ ಹೋಗುತ್ತಿರುವಂತೆ ಕಾಣುತ್ತಿದೆ. ಅಥವಾ ಸಮನ್ವಯದವರೇ ಅವರೊಟ್ಟಿಗೆ ಸೇರಿಕೊಂಡಿದ್ದಾರೆ. ಅಡಿಗರ ಪ್ರಭಾವಕ್ಕೆ ಒಳಗಾಗಿ ಬರೆಯುತ್ತಿದ್ದ ಲಂಕೇಶ್, ಕಂಬಾರ, ತೇಜಸ್ವಿ, ಚಂದ್ರಶೇಖರ ಪಾಟೀಲ ಮುಂತಾದವರು ಅಡಿಗರ ಕಾವ್ಯರೀತಿಗೆ ಭಿನ್ನವಾದ ರೀತಿಯ ಕಾವ್ಯದ ಆವಶ್ಯಕತೆಯನ್ನು ಪ್ರತಿಪಾದಿಸಿದರು. ಅವರಿಗಿಂತ ಇನ್ನೂ ಎಳೆಯ ತಲೆಮಾರಿನ ಕವಿಗಳಲ್ಲಿ ಕೆಲವರು ಈವರೆಗೆ ಹೊಸಗನ್ನಡದಲ್ಲಿ ನವೋದಯವನ್ನೂ ಸೇರಿಸಿಕೊಂಡು ಬೆಳೆದು ಬಂದ ಕಾವ್ಯಮಾರ್ಗಗಳ ಬಗೆಗೆ ಅಸಹನೆಯನ್ನು ತೋರಿಸುತ್ತಿದ್ದಾರೆ. ಹೊಸ ಕಾವ್ಯರೀತಿಯ ಹುಡುಕಾಟದಲ್ಲಿ ತೊಡಗುವ ಸಂಕಲ್ಪ ತೊಟ್ಟಂತೆ ತೋರಿಬರುತ್ತಿದೆ. ಒಟ್ಟಿನಲ್ಲಿ ಸಾರಾಂಶವಿಷ್ಟೆ: ನವ್ಯಕಾವ್ಯಕ್ಕಿಂತ ಭಿನ್ನವಾದ ಹೊಸ ಕಾವ್ಯ ರೀತಿ ಮೈಮುರಿದೇಳಲು ತವಕಿಸುತ್ತಿದೆ. ಹೀಗೆ ಆಗುವುದರಲ್ಲಿ ತಪ್ಪೂ ಇಲ್ಲ, ಅದು ಸೋಜಿಗದ ಸಂಗತಿಯೂ ಅಲ್ಲ. ಜೀವಂತವಾದ ಜನಾಂಗದ ಲಕ್ಷಣ ಯಾವಾಗಲೂ ಮುಂದೆ ನೋಡುತ್ತ ಹೋಗುವುದಾಗಿದೆ. ಉಢಾಫೆಗಿಂತ ವಿವೇಕ ಈ ನೋಟಕ್ಕೆ ಪ್ರೇರಕ ಶಕ್ತಿಯಾದಾಗ ಜನಾಂಗ ಹೊಸ ಜೀವಂತಿಕೆ ಲವಲವಿಕೆಯಿಂದ ಕಳಿಕಳಿಸುತ್ತದೆ. ಇಂಥ ಸಂಧಿಕಾಲದಲ್ಲಿ ಹೊಸದೆಲ್ಲವನ್ನೂ ಉಢಾಫೆಯಿಂದೇ ನೋಡುವ ದೃಷ್ಟಿಯನ್ನು ಬಿಟ್ಟು, ವಸ್ತುನಿಷ್ಠವಾಗಿ ತೆರೆದ ಮನಸ್ಸಿನಿಂದ ಹೊಸ ಬದಲಾವಣೆ, ಹೊಸ ಪ್ರಯೋಗಗಳನ್ನು ಗಮನಿಸುತ್ತ, ಬೆಲೆ ಕಟ್ಟಲು ಪ್ರಯತ್ನಿಸುತ್ತ ಸಾಗಬೇಕಾದದ್ದು ಸಹೃದಯರ ಮತ್ತು ವಿಮರ್ಶಕರ ಹೊಣೆಗಾರಿಕೆಯಾಗಿದೆ. ಸದ್ಯಕ್ಕೆ ಇನ್ನೂ ಒಂದು ತಲೆಮಾರಿನ ತನಕವಾದರೂ ಉತ್ತಮಕಾವ್ಯ ರೊಮ್ಯಾಂಟಿಕ್ ಸಂಪ್ರದಾಯಕ್ಕೆ ತೀರ ವಿರುದ್ಧವಾದ ದಿಕ್ಕಿನಲ್ಲೇ ಹರಿದೀತು ಎಂದು ತೋರುತ್ತದೆ. ಯಾವ ಸಂಪ್ರದಾಯದ್ದೇ ಆಗಲಿ, ಉತ್ತಮ ಕವಿತೆ ಯಾವಾಗಲೂ ಉತ್ತಮ ಕವಿತೆಯೇ. ಆದರೆ ಅದು ರಚಿತವಾದ ಕಾಲದಲ್ಲಿ ಅದು ಎಷ್ಟು ಉತ್ತಮ ಎಂದು ತಿಳಿದಿದ್ದರೋ ಅಷ್ಟು ಉತ್ತಮ ಅದಲ್ಲ, ಅದು ಉತ್ತಮವಾಗಿರುವ ರೀತಿ ಈಗ ಸಲ್ಲ ಎಂದು ಮುಂದಿನ ತಲೆಮಾರು ನಿರ್ಧರಿಸಬಹುದು. ಹಾಗೆಯೇ ಇನ್ನೂ ಮುಂದಿನ ತಲೆಮಾರಿನಲ್ಲಿ ಅದೇ ಉತ್ತಮ ಕವಿತೆ, ಆ ರೀತಿಯೇ ರೀತಿ ಈಗ ಸಲ್ಲ ಎಂದು ಮುಂದಿನ ತಲೆಮಾರಿನಲ್ಲಿ ಅದೇ ಉತ್ತಮ ಕವಿತೆ, ಆ ರೀತಿಯೇ ರೀತಿ ಎಂತಲೂ ಮತ್ತೊಮ್ಮೆ ವಿಚಾರ ಕ್ರಾಂತಿಯಾಗಬಹುದು ಎಂಬ ಅಡಿಗರ ಮಾತು (ಹೊಸ ಕವಿತೆಯನ್ನು ಕುರಿತು 1953) ಈ ಸಂದರ್ಭದಲ್ಲಿಯೂ ಮನನೀಯವಾಗಿದೆ.

ಕೊನೆಯದಾಗಿ, ನವ್ಯಕಾವ್ಯದ ಬೆಳೆವಣಿಗೆಯಲ್ಲಿಯೂ ನವೋದಯ ಕಾವ್ಯದ ಬೆಳೆವಣಿಗೆಯಲ್ಲಿ ಎಂತೋ ಅಂತೆ ಅನೇಕ ದಿನ, ವಾರ, ಮಾಸ, ದ್ವೈಮಾಸಿಕ, ತ್ರೈಮಾಸಿಕ, ಅನಿಯತಕಾಲಿಕ ಪತ್ರಿಕೆಗಳು ಕವನಗಳ ಪ್ರಕಟನೆ, ಕೃತಿಗಳ ವಿಮರ್ಶೆ, ಅವಲೋಕನ, ಸಾಹಿತ್ಯ ಸ್ಪರ್ಧೆಗಳನ್ನು ಏರ್ಪಡಿಸುವುದು ಮುಂತಾದ ಬಗೆಯಲ್ಲಿ ತಮ್ಮ ಪಾಲಿನ ಕಾಣಿಕೆ ಸಲ್ಲಿಸಿವೆ. ಸಾಕ್ಷಿ, ಲಹರಿ, ಸಮೀಕ್ಷಕ, ಸಂಕೀರ್ಣ, ಸಮನ್ವಯ, ಸಂಕ್ರಮಣ, ರುಜುವಾತು, ಕವಿತಾ ಮುಂತಾದ ಪತ್ರಿಕೆಗಳು ನವ್ಯಸಾಹಿತ್ಯಕ್ಕಾಗಿಯೇ ಮೀಸಲಾದ ಪತ್ರಿಕೆಗಳಾಗಿವೆ. ನವ್ಯಧ್ವನಿ, ನಡೆದು ಬಂದ ದಾರಿ-1, ಅಕ್ಷರ ಹೊಸ ಕಾವ್ಯ, ಹೊಸ ಜನಾಂಗದ ಕವಿತೆಗಳು, ಸಂಕ್ರಮಣ ಕಾವ್ಯ- ಇವು ನವ್ಯಕಾವ್ಯದ ಮಹತ್ವದ ಸಂಚಯಗಳಾಗಿವೆ. (ಜಿ.ಎಚ್.ಎನ್.)

**ಕನ್ನಡದಲ್ಲಿ ನಾಟಕ ಸಾಹಿತ್ಯ :** ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳು ಶ್ರೀಮಂತವಾಗಿರುವಂತೆ, ನಾಟಕ ಪ್ರಕಾರವೂ ಶ್ರೀಮಂತವಾಗಿದೆ. ಆದರೆ ಇದರ ಹುಟ್ಟನ್ನು ಬೆಳೆವಣಿಗೆಯನ್ನು ಗುರುತಿಸಲು ಹೊರಟರೆ 1680ರ ಸುಮಾರಿನಲ್ಲಿ ಚಿಕ್ಕದೇವರಾಜ ಒಡೆಯರ ಆಸ್ಥಾನಕವಿ ಸಿಂಗರಾರ್ಯನಿಂದ ರಚಿತವಾದ ಮಿತ್ರವಿಂದಾ ಗೋವಿಂದ ಕನ್ನಡದ ಮೊಟ್ಟಮೊದಲ ನಾಟಕವೆಂದು ಕಂಡುಬರುತ್ತದೆ. ಇದು ಶ್ರೀಹರ್ಷನಿಂದ ಸಂಸ್ಕೃತದಲ್ಲಿ ರಚಿತವಾದ ರತ್ನಾವಳಿ ನಾಟಕದ ಕನ್ನಡ ಅನುವಾದ. ಅನುವಾದವಾದರೂ ಒಂದು ರೀತಿಯಲ್ಲಿ ಸ್ವತಂತ್ರ ಕೃತಿ ಎನ್ನುವಂತೆ ನಾಟಕಕಾರ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾನೆ. ಆದ್ದರಿಂದ ಇದನ್ನು ರೂಪಾಂತರವೆನ್ನಲೂಬಹುದು. ಮೂಲದ ಕಥೆ ಉದಯನನ್ನು ಕುರಿತದ್ದಾಗಿದ್ದು, ಈ ನಾಟಕದ ಕಥೆ ಶ್ರೀ ಕೃಷ್ಣನ ಕಥೆಯನ್ನು ಹೇಳುತ್ತದೆ. ಜೊತೆಗೆ ಇಲ್ಲಿನ ಪಾತ್ರಗಳ ಹೆಸರುಗಳಲ್ಲೂ ಘಟನೆಗಳಲ್ಲೂ ಒಂದೆರಡು ಸಣ್ಣಪುಟ್ಟ ಬದಲಾವಣೆಗಳಾಗಿವೆ. ಭಾಗವತದಲ್ಲಿರುವ ಕೃಷ್ಣನ ಕಥೆ ಮಿತ್ರವಿಂದಾ ಗೋವಿಂದ ನಾಟಕಕ್ಕೆ ಮೂಲ. ನಾಟಕದ ಭಾಷೆ ಹಳಗನ್ನಡ. ಹಲವರ ಅಭಿಪ್ರಾಯದಂತೆ ಈ ನಾಟಕ ಮೂಲ ರತ್ನಾವಳಿಯಷ್ಟು ತೃಪ್ತಿ ಕೊಡುವುದಿಲ್ಲವಾದರೂ ದೊರೆತ ಕನ್ನಡ ನಾಟಕಗಳಲ್ಲಿ ಮೊದಲನೆಯದೆಂಬ ದೃಷ್ಟಿಯಿಂದ ಇದಕ್ಕೆ ಐತಿಹಾಸಿಕ ಮಹತ್ತ್ವವಿದೆ.

ದುರ್ಗಸಿಂಹನು ನೆನೆದ ಕನ್ನಮಯ್ಯ ಬರೆದ ಮಾಲತೀಮಾಧವ, ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಸೂಚಿತವಾದ ಸುಭದ್ರಾಹರಣ ಮತ್ತು ಪ್ರಬೋಧಚಂದ್ರ ಇವು ಕನ್ನಡ ನಾಟಕಗಳಿರಬೇಕೆಂಬುದು ವಿದ್ವಾಂಸರ ಅಭಿಪ್ರಾಯ. ಎರಡನೆಯ ನಾಗವರ್ಮನ ಕಾವ್ಯಾವಲೋಕನದಲ್ಲಿ ಕಾಳಿದಾಸನ ವಿಕ್ರಮೋರ್ವಶೀಯ ನಾಟಕದ ಒಂದು ಪದ್ಯವೂ ಶ್ರೀಹರ್ಷನ ನಾಗಾನಂದ ಹಾಗೂ ಭವಭೂತಿಯ ಮಾಲತೀಮಾಧವ ಈ ನಾಟಕಗಳ ಕೆಲವು ಪದ್ಯಗಳೂ ಕನ್ನಡಕ್ಕೆ ಬಂದಿವೆ. ಇದರಿಂದ ಅಂದಿನ ಕಾಲಕ್ಕಾಗಲೇ ಸಂಸ್ಕೃತ ನಾಟಕಗಳು ಕನ್ನಡಕ್ಕೆ ಅನುವಾದಗೊಂಡಿರಬಹುದೆಂದು ಸಂಶೋಧಕರು ಊಹಿಸುತ್ತಾರೆ.

ಕನ್ನಡ ನಾಟಕ ಸಾಹಿತ್ಯ ಪರಂಪರೆಯನ್ನು ವಿವೇಚಿಸುವಾಗ ಮಿತ್ರವಿಂದಾ ಗೋವಿಂದ ನಾಟಕಕ್ಕೆ ಮೊದಲು ಕನ್ನಡದಲ್ಲಿ ನಾಟಕಗಳಿರಲಿಲ್ಲವೇ ಎಂಬ ಪ್ರಶ್ನೆ ವಿದ್ವಾಂಸರನ್ನು ಬಹಳಷ್ಟು ಕಾಡಿದೆ. ಇದಕ್ಕೆ ಉತ್ತರವಾಗಿ ನಾಟಕಗಳಿದ್ದರೂ ಈ ರೂಪದಲ್ಲಿ ಇದ್ದಿರುವುದಕ್ಕೆ ಸಾಧ್ಯವಿಲ್ಲ ಎಂದು ಅವರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಹಿಂದಿನ ಕನ್ನಡ ಕಾವ್ಯಗಳಲ್ಲಿ ನಾಟಕಶಾಲೆ, ನಾಟಕ ಇವೇ ಮೊದಲಾದ ಪದ ಪ್ರಯೋಗಗಳು ಕಂಡುಬರುವುದರಿಂದ, ಅಭಿನಯಕ್ಕೆ ಸಂಬಂಧಿಸಿದಂತೆ ರಾಜಾಸ್ಥಾನಗಳಲ್ಲಿ ದೃಶ್ಯರೂಪಕಗಳು ಇದ್ದಿರಬೇಕು. ಅಭಿನಯ ನೃತ್ಯಗಳು ಇದ್ದಿರಲೂಬಹುದು. ಇದರಿಂದ ಅಂದಿನ ಅರಮನೆಗಳಲ್ಲಿ ನಾಟಕಶಾಲೆಗಳು ಇದ್ದಿರಬೇಕು ಎನ್ನುವುದಕ್ಕೆ ಸಾಕಷ್ಟು ಉದಾಹರಣೆಗಳು ಸಿಗುತ್ತವೆ. ಮೈಸೂರಿನ ಕಂಠೀರವ ನರಸರಾಜರ ಅರಮನೆಯಲ್ಲಿ ನಾಟಕಶಾಲೆ ಇದ್ದಿತೆಂದು ಕಂಠೀರವ ನರಸರಾಜವಿಜಯದಿಂದ ತಿಳಿದುಬರುತ್ತದೆ. ಕೆಳದಿಯ ವೆಂಕಟಪ್ಪ ನಾಯಕ (1582-1629) ತನ್ನ 'ಇಕ್ಕೇರಿಯರಮನೆಯೊಳ್ವಿಚಿತ್ರತರ ರಚನಾ ಕೌಶಲದಿಂ ನಾಟಕಶಾಲೆಯಂ ನಿರ್ಮ್ಮಾಣಗೈಯ್ಸಿದನ್' ಎಂದು - ಕೆಳದಿನೃಪ ವಿಜಯದಲ್ಲಿ ಹೇಳಿದೆ. ರತ್ನಾಕರವರ್ಣಿ ತನ್ನ ಭರತೇಶವೈಭವದಲ್ಲಿ ನಾಟಕ ಎಂಬ ಪದವನ್ನು ಬಳಸಿದ್ದಾನೆ. ನಾಟಕಶಾಲೆಯ ವರ್ಣನೆಗಳನ್ನು ಮಾಡಿದ್ದಾನೆ. ಅಲ್ಲದೆ ಅವನ ಕಾವ್ಯದಲ್ಲಿ ಪೂರ್ವನಾಟಕ, ಉತ್ತರನಾಟಕ ಎಂಬ ಎರಡು ಸಂಧಿಗಳಿವೆ. ಕೃಷ್ಣದೇವರಾಯನ ರಾಜಧಾನಿಯಲ್ಲಿ ಪಟ್ಟದ ನಾಟಕಶಾಲೆಯೂ ಇಕ್ಕೇರಿ, ಮೊದಲಾದೆಡೆಗಳಲ್ಲಿ ರತ್ನಖಚಿತವಾದ ಅಲಂಕಾರಗಳನ್ನು ಹೊಂದಿದ್ದ ನಾಟಕಶಾಲೆಗಳೂ ನಿರ್ಮಾಣವಾಗಿದ್ದಿತೆಂದು ಕಂಡುಬರುತ್ತದೆ. ಧಾರವಾಡದ ಸಮೀಪದ ಮುಗದ ಗ್ರಾಮದಲ್ಲಿರುವ ಹನ್ನೊಂದನೆಯ ಶತಮಾನದ ಶಿಲಾಫಲಕದಲ್ಲಿ ಶ್ರೀಮನ್ಮಹಾಸಾಮನ್ತಂ ಮಾರ್ತಾಣ್ಡಯಂ ತಮ್ಮ ಮುತ್ತಯ್ಯಂ ಮಾಡಿಸಿದ ಬಸದಿಯಂ ಪಡಿಸಲಿಸಿ

ನಾಟಕಶಾಲೆಯಂ ಮಾಡಿಸಿ, ತನ್ನ ಕೀರ್ತಿ ಶಿಲಾಸ್ತಂಭವಂ ಆಚಂದ್ರಾರ್ಕತಾರಾಂಬರಂ ನಿಲಿಸಿದಂ ಎಂದಿದೆ. ಬಸವಪುರಾಣ, ಶೃಂಗಾರರತ್ನಾಕರ, ವಿವೇಕಚೂಡಾಮಣಿ, ಕಂಠೀರವವಿಜಯ, ಕರ್ನಾಟ ಭಾರತ ಕಥಾಮಂಜರಿ ಮೊದಲಾದ ಕಾವ್ಯಗಳಲ್ಲಿ ನಾಟಕ ಎನ್ನುವ ಮಾತು ಬಂದಿದೆ. ದುರ್ಗಸಿಂಹನ ಪಂಚತಂತ್ರದಲ್ಲಿ ನಾಟಕ ಎಂಬ ಮಾತಿನ ಬಳಕೆಯಾಗಿದೆ. ಹೊಯ್ಸಳ ದೊರೆ ವೀರಬಲ್ಲಾಳ ಒಬ್ಬ ಶ್ರೇಷ್ಠ ನಟನಾಗಿದ್ದನೆಂದು ಸೊರಬದ ಶಿಲಾಶಾಸನದಲ್ಲಿ ವರ್ಣಿತವಾಗಿದೆ. ಪಂಪ, ಪೊನ್ನ, ರನ್ನ ಇವರುಗಳೂ ನಾಟಕ ಹಾಗೂ ನಾಟಕಕ್ಕೆ ಸಂಬಂಧಿಸಿದ ಹಲವು ಮಾತುಗಳನ್ನು ತಮ್ಮ ಕಾವ್ಯಗಳಲ್ಲಿ ಆಡಿದ್ದಾರೆ. ಪಂಪ 'ಕೃತಾನುಕರಣಮೆ ನಾಟಕಂ' ಎಂದಿದ್ದಾನೆ. ಹಿಂದಿನ ಕವಿಗಳು ಕಾವ್ಯಗಳನ್ನೆ ರಚಿಸಿದರೂ ಅವರ ದೃಷ್ಟಿ ನಾಟಕದ ಕಡೆಗೆ ಇದ್ದಿತು ಎನ್ನುವುದಕ್ಕೆ ರನ್ನನ ಗದಾಯುದ್ಧ ಹಾಗೂ ರಾಘವಾಂಕನ ಹರಿಶ್ಚಂದ್ರಕಾವ್ಯಗಳಲ್ಲಿ ಬರುವ ನಾಟಕೀಯ ಸನ್ನಿವೇಶಗಳ ಸಂಭಾಷಣೆಯ ಚತುರತೆ ಸಾಕ್ಷಿಯಾಗಿದೆ. ಹದಿನೇಳನೆಯ ಶತಮಾನದಲ್ಲಿ ಕನ್ನಡದ ಮೊದಲ ನಾಟಕ ನಮಗೆ ದೊರೆತರೂ ಹತ್ತನೆಯ ಶತಮಾನದಿಂದಲೆ ನಾಟಕ ಎಂಬ ಹೆಸರಿನ ಸಾಹಿತ್ಯ ಪ್ರಕಾರ ಇದ್ದಿತು ಎಂಬ ವಿಷಯ ಮೇಲಿನ ವಿವರಣೆಗಳಿಂದ ಸ್ಪಷ್ಟಪಡುತ್ತದೆ. ಹಾಗಾದರೆ ಕನ್ನಡದಲ್ಲಿ ನಾಟಕಗಳೇಕೆ ಆ ಕಾಲದಲ್ಲಿ ರಚಿತವಾಗಲಿಲ್ಲ ಎಂಬ ಪ್ರಶ್ನೆ ಏಳುತ್ತದೆ. ಇದಕ್ಕೆ ಉತ್ತರವಾಗಿ ಅಂದು ಸಂಸ್ಕೃತ ಭಾಷೆಯ ಪ್ರಾಬಲ್ಯ ಬಹಳವಾಗಿದ್ದುದರಿಂದ, ಕನ್ನಡ ಭಾಷೆಯಲ್ಲಿ ಸ್ವತಂತ್ರ ನಾಟಕಗಳು ರಚಿತವಾಗಲಿಲ್ಲ ಎಂದು ಊಹಿಸಲು ಸಾಧ್ಯವಿದೆ.

ಕನ್ನಡದಲ್ಲಿ ನಾಟಕ ಸಾಹಿತ್ಯದ ನಿರಂತರಧಾರೆ 19ನೆಯ ಶತಮಾನದ ಅಂತ್ಯದಿಂದ ಹೊಸತಾಗಿ ಪ್ರಾರಂಭವಾಯಿತೆಂದು ಹೇಳಬಹುದು. ಮೈಸೂರಿನ ಚಾಮರಾಜ ಒಡೆಯರ ಆಳಿಕೆಯ ಕಾಲದಲ್ಲಿ (1881-94) ಪಾರಸೀ ಕಂಪನಿಯೊಂದು ಕನ್ನಡ ನಾಡಿಗೆ ಬಂದು ಕೆಲವು ನಾಟಕಗಳನ್ನು ಪ್ರಯೋಗಿಸಿತು. ಈ ನಾಟಕಗಳಲ್ಲಿನ ಅಭಿನಯ, ರಂಗಸಾಧ್ಯತೆ, ರಂಗಪರಿಕರಗಳು ಕನ್ನಡಿಗರನ್ನು ಆಕರ್ಷಿಸಿದವು. ಕಲೆಗೆ ಆಶ್ರಯಸ್ಥಾನವಾಗಿದ್ದ ಅರಮನೆ 1882ರಲ್ಲಿ ತನ್ನದೇ ಆದ ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ ಎಂಬ ನಾಟಕ ಸಂಸ್ಥೆಯನ್ನು ಸ್ಥಾಪಿಸಿತು. ಒಡೆಯರ ಆಸ್ಥಾನಕವಿಯಾಗಿದ್ದ ಬಸವಪ್ಪಶಾಸ್ತ್ರಿಗಳು ಈ ಸಭೆಗಾಗಿ ನಾಟಕಗಳನ್ನು ಬರೆಯಲು, ಸಿದ್ಧರಾದರು. ಇದರಿಂದಾಗಿ ಶಾಕುಂತಲಾ, ವಿಕ್ರಮೋರ್ವಶೀಯ, ರತ್ನಾವಳಿ, ಉತ್ತರರಾಮಚರಿತೆ, ಮಾಲತೀಮಾಧವ, ಚಂಡಕೌಶಿಕ ಮೊದಲಾದ ನಾಟಕಗಳು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಗೊಂಡವು. ಇವರು ಇಂಗ್ಲಿಷ್ ನಾಟಕಗಳ ಕಡೆಗೂ ಗಮನ ಹರಿಸಿ ಷೇಕ್ಸ್‌ಪಿಯರನ ಒಥೆಲೊ ಶೂರಸೇನ ಚರಿತ್ರೆಯಾಗಿ ಕನ್ನಡಕ್ಕೆ ಬಂತು. ಇವರ ಷೇಕ್ಸ್‌ಪಿಯರ್ ನಾಟಕದ ಅನುವಾದ ಅಷ್ಟಾಗಿ ಉತ್ತಮವಾಗಿಲ್ಲ ಎಂಬ ಅಭಿಪ್ರಾಯ ವಿದ್ವಾಂಸರಲ್ಲಿರುವುದಾದರೂ ಸಂಸ್ಕೃತ ಅನುವಾದಗಳು ಹೆಚ್ಚಿನ ಪ್ರಶಂಸೆಗೆ ಪಾತ್ರವಾದವು. ಅದರಲ್ಲೂ ಶಾಕುಂತಲಾ ಒಂದು ಉತ್ಕೃಷ್ಟ ಅನುವಾದ ಎಂಬ ಖ್ಯಾತಿಪಡೆಯಿತು. ಮೂಲ ನಾಟಕದ ತಿರುಳು, ಸೌಂದರ್ಯ, ಆಳ, ಔನ್ನತ್ಯಗಳು ಅನುವಾದದಲ್ಲೂ ಮೂಡಿಬಂದಿವೆ. ಈ ಅನುವಾದ ಕನ್ನಡದ್ದೇ ಎಂಬಷ್ಟರ ಮಟ್ಟಿಗೆ ಸಮರ್ಪಕವಾಗಿದೆ. ಭಾಷಾಂತರ ಕಲೆಗೆ ಈ ನಾಟಕ ಒಂದು ಉತ್ತಮ ನಿದರ್ಶನವಾಯಿತು. ಭಾಷಾಂತರದ ಕೆಲಸದಲ್ಲಿ ಎದ್ದುಕಾಣುವ ಮತ್ತೊಂದು ಹೆಸರು ಅಳಸಿಂಗರಾಚಾರ್ಯರದು. ಇವರು ಹೆಚ್ಚಾಗಿ ಅನುವಾದ ಮಾಡಿಲ್ಲವಾದರೂ ಇವರ ಭಾಸನ ಸ್ವಪ್ನವಾಸವದತ್ತ ಹಾಗೂ ಪಂಚರಾತ್ರ - ಈ ಎರಡು ನಾಟಕಗಳು ಹೆಸರುಗಳಿಸಿವೆ. ಭಾಸನ ನಾಟಕಗಳಲ್ಲೆಲ್ಲ ಉತ್ತಮ ನಾಟಕ ಎಂದು ಪ್ರಶಂಸೆ ಹೊಂದಿದ ಸ್ವಪ್ನವಾವವದತ್ತವನ್ನು ಮೂಲಕ್ಕೆ ಲೋಪವಾಗದಂತೆ ಇವರು ಕನ್ನಡಕ್ಕೆ ತಂದರು. ಹಾಗೆಯೇ ಪಂಚರಾತ್ರ ರೂಪಕವೂ ಮನೋಜ್ಞವಾಗಿ ಅನುವಾದಗೊಂಡಿತು.

ಶ್ರೀಹರ್ಷನ ನಾಗಾನಂದ ನಾಟಕ ಕನ್ನಡಕ್ಕೆ ಅನುವಾದಗೊಂಡಿರುವ ಶ್ರೇಷ್ಠ ಸಂಸ್ಕೃತ ನಾಟಕಗಳಲ್ಲಿ ಒಂದು. ಇದನ್ನು ಮೈಸೂರಿನ ಅನಂತನಾರಾಯಣಶಾಸ್ತ್ರಿ ಮೊದಲಿಗೆ ಅನುವಾದ ಮಾಡಿದರು.ಇವರ ಅನುವಾದದ ಭಾಷೆ, ಶೈಲಿ ಚೆನ್ನಾಗಿದ್ದು ಮೂಲವನ್ನು ಚಾಚೂ ತಪ್ಪದೆ ಅನುಸರಿಸಿದೆ. ಶೂದ್ರಕನಿಂದ ರಚಿತವಾದ ಮೃಚ್ಛಕಟಿಕ ಕನ್ನಡಕ್ಕೆ ಬಂದಿರುವ ಮುಖ್ಯ ನಾಟಕಗಳಲ್ಲೊಂದು. ಇದನ್ನು ಹಲಕೆಲವು ಬದಲಾವಣೆಗಳೊಂದಿಗೆ ನಂಜನಗೂಡು ಸುಬ್ಬಾಶಾಸ್ತ್ರಿಗಳು ಕನ್ನಡಕ್ಕೆ ಅನುವಾದಿಸಿದರು. ಇವರು ಮೂಲದ ಕೆಲವು ಶ್ಲೋಕಗಳನ್ನು ಗದ್ಯದಲ್ಲಿ ಬರೆದಿದ್ದಾರೆ ಸಣ್ಣಪುಟ್ಟ ಬದಲಾವಣೆಗಳನ್ನು ಮಾಡಿಕೊಂಡಿದ್ದರೂ ಇದು ರಂಗಭೂಮಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾಡಿದ ಒಳ್ಳೆಯ ಅನುವಾದ ಎನ್ನಬಹುದು.

ಮೇಲೆ ಹೇಳಿದ ಅನುವಾದಗಳೆಲ್ಲವೂ ಬಹಳ ಹಿಂದೆಯೇ ಸಂಸ್ಕೃತದಿಂದ ಕನ್ನಡಕ್ಕೆ ಬಂದವು. ಈ ಕೆಲಸ ಇಂದಿಗೂ ಸಾಗುತ್ತಿದೆ. ಮೂಲ ಕೃತಿಗಳು ಶ್ರೇಷ್ಠ ಕೃತಿಗಳಾಗಿದ್ದಲ್ಲಿ ಅನುವಾದಕರಿಗೆ ಯಾವುದೋ ಒಂದು ಕೃತಿಯಲ್ಲಿ ಮಹತ್ತು ಕಂಡಲ್ಲಿ ಅಂಥ'ದನ್ನು ಅನುವಾದಕ್ಕೆ ಎತ್ತಿಕೊಂಡರು. ಹೀಗಾಗಿ ಕಾಳಿದಾಸ, ಭಾಸ, ಭಟ್ಟನಾರಾಯಣ, ಶೂದ್ರಕ, ಶ್ರೀಹರ್ಷ ಮೊದಲಾದವರ ಸಂಸ್ಕೃತ ನಾಟಕಗಳನ್ನು ಎಲ್.ಗುಂಡಪ್ಪ, ಕೆ.ಕೃಷ್ಣಮೂರ್ತಿ, ಎಸ್.ವಿ.ಪರಮೇಶ್ವರಭಟ್ಟ, ಸಿ.ಪಿ.ಕೆ., ಎಂ.ವಾಸುದೇವ ಭಟ್ಟ, ಗಣಪತಿ ಮೊಳಿಯಾರ್, ಪಂಡಿತ ಕವಲಿ ಮೊದಲಾದವರು ಕನ್ನಡಕ್ಕೆ ತಂದಿದ್ದಾರೆ. ಹಾಗೆ ಮಾಡುವಲ್ಲಿ ಕೆಲವರು ಹೊಸ ಹೊಸ ಛಂದಸ್ಸಿನಲ್ಲಿ ಮೂಲ ಶ್ಲೋಕಗಳನ್ನು ಅನುವಾದ ಮಾಡಿದರು. ಆಳವಾದ ಅಭ್ಯಾಸ, ಭಾಷಾಪ್ರೌಢಿಮೆ, ಸದಭಿರುಚಿ ಹಾಗೂ ಗ್ರಂಥದ ಮೂಲ ಉದ್ದೇಶಕ್ಕೆ ಭಂಗ ತಾರದ ನಿರೂಪಣೆ ಈ ಅನುವಾದಕರಲ್ಲಿ ಕಾಣಬಹುದಾದ ಶ್ರೇಷ್ಠ ಗುಣಗಳು.

ಸಂಸ್ಕೃತದಿಂದ ನಾಟಕಗಳು ಅನುವಾದಗೊಂಡಂತೆ ಇಂಗ್ಲಿಷ್‌ನಿಂದಲೂ ನಾಟಕಗಳು ಕನ್ನಡಕ್ಕೆ ಅನುವಾದಗೊಂಡವು. ಇಲ್ಲಿ ಕೆಲವರು ಮೂಲದಲ್ಲಿದ್ದಂತೆ ಅನುವಾದ ಮಾಡಿದರೆ ಕೆಲವರು ರಂಗಭೂಮಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಅನುವಾದ ಮಾಡಿದರು, ರೂಪಾಂತರ ಮಾಡಿದರು. 1890ರ ಸುಮಾರಿನಲ್ಲೇ ಎಂ.ಎಲ್.ಶ್ರೀಕಂಠೇಶ ಗೌಡರು ಷೇಕ್ಸ್‌ಪಿಯರನ ಮ್ಯಾಕ್‌ಬೆತ್ ಹಾಗು ಎ ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್ ನಾಟಕಗಳನ್ನು ಪ್ರತಾಪರುದ್ರದೇವ ಹಾಗೂ ಪ್ರಮೀಳಾರ್ಜುನೀಯ ಎಂಬ ಹೆಸರುಗಳಿಂದ ಕನ್ನಡಕ್ಕೆ ತಂದರು. ಪ್ರತಾಪರುದ್ರದೇವ ನಾಟಕದಲ್ಲಿ ಅನುವಾದ ಮಾಡುವಾಗ, ಅಲ್ಲಿನ ಪಾತ್ರಗಳ ಹೆಸರುಗಳನ್ನೆಲ್ಲ ಬದಲಾಯಿಸಿದ್ದಾರೆ. ಆದರೆ ಮೂಲದ ಭಾವಗಳನ್ನು ಬದಲಾಯಿಸಿರುವುದಿಲ್ಲ. ಹೀಗಾಗಿ ಅಲ್ಲಿನ ಘಟನೆಗಳು ಅಸ್ವಾಭಾವಿಕ ಅನಿಸುತ್ತದೆ. ಪ್ರಮೀಳಾರ್ಜುನೀಯದಲ್ಲಿಯೂ ಮೂಲವನ್ನೂ ಹಾಗೆಯೇ ಇಟ್ಟುಕೊಂಡು, ಹೆಸರುಗಳಲ್ಲಿ ಹಾಗೂ ಸಂಭಾಷಣೆಗಳಲ್ಲಿ ತಮ್ಮತನವನ್ನು ತೋರಿದ್ದಾರೆ. ಈ ಎರಡೂ ನಾಟಕಗಳನ್ನು ನೋಡಿದಾಗ ಗೌಡರು, ರಂಗವನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿರುವಂತೆ ಕಾಣುತ್ತದೆ. ಮ್ಯಾಕ್‌ಬೆತ್ ನಾಟಕ ಡಿ.ವಿ.ಜಿ. ಅವರಿಂದ ಮೂಲದಲ್ಲಿದ್ದಂತೆಯೇ ಕಾವ್ಯವಿದ್ದಲ್ಲಿ ಕಾವ್ಯ, ಗದ್ಯವಿದ್ದಲ್ಲಿ ಗದ್ಯ ಹೀಗೆ ಅನುವಾದಗೊಂಡಿದೆ. ಇದೊಂದು ಒಳ್ಳೆಯ ಅನುವಾದ.

ಈ ಸಾಲಿನಲ್ಲಿ ಬಿ.ಎಂ.ಶ್ರೀ. ಅವರ ಪಾರಸಿಕರು, ಎಸ್.ಜಿ.ಶಾಸ್ತ್ರಿ ಅವರ ಸಾಕ್ರಟೀಸನ ಕೊನೆಯ ದಿನಗಳು, ಆರ್ಯಕ ಮತ್ತು ಸೂತ್ರದ ಬೊಂಬೆ -ಇವುಗಳನ್ನು ಒಳ್ಳೆಯ ಅನುವಾದಗಳೆಂದು ಹೆಸರಿಸಬಹುದು. ಸಾಕ್ರಟೀಸನ ಕೊನೆಯ ದಿನಗಳು ನಾಟಕದಲ್ಲಿ ಅವನ ಮನಸ್ಸಾಮರ್ಥ್ಯ ಅದ್ಭುತವಾಗಿ ಪ್ರದರ್ಶಿತಗೊಂಡಿದೆ. ಆರ್ಯಕ ನಾಟಕದಲ್ಲಿ ನಾರ್ವೆ ದೇಶದ ಪ್ರಾಚೀನ ಜನರಲ್ಲಿ ನೆಲಸಿದ್ದ ಸಮುದ್ರಯಾನ ಜೀವನ, ಆ ಜನದ ಕ್ರೌರ್ಯಶೌರ್ಯಗಳೂ, ಮಾನಾಭಿಮಾನಗಳೂ ವರ್ಣಿತವಾಗಿವೆ. ನೋರಾ, ಹೆಲ್ಮರ್ ಮತ್ತು ಇವರ ಮೂರು ಮಕ್ಕಳ ಒಂದು ಸಂಸಾರ ಹೆಲ್ಮರನಿಗೆ ಸಿಕ್ಕಿರುವ ಒಂದು ಕೆಲಸ. ಬರಲಿರುವ ಕ್ರಿಸ್‌ಮಸ್ ಹಬ್ಬ ಈ ಮನೋಹರವಾದ ವಾತಾವಣದಲ್ಲಿ ಆರಂಭವಾದ ಈ ನಾಟಕ ನೋರಾಳ ಗೃಹತ್ಯಾಗದೊಡನೆ ಮುಗಿಯುತ್ತದೆ.

ಗುಂಡೋ ಕೃಷ್ಣ ಚುರುಮುರಿಯವರಿಂದ ಅನುವಾದಿತವಾದ ಷೇಕ್ಸ್‌ಪಿಯರನ ಒಥೆಲೊ ನಾಟಕ, ಸಿ.ಆನಂದರಾಯರು ಅನುವಾದ ಮಾಡಿರುವ ರಾಮವರ್ಮ ಲೀಲಾವತಿ (ರೋಮಿಯೋ ಜ್ಯೂಲಿಯಟ್). ಇವುಗಳಲ್ಲಿ ಕಥೆ ಭಾಷಾಂತರಗೊಂಡು, ಅಲ್ಲಿನ ಪಾತ್ರಗಳ ಹೆಸರು ರೂಪಾಂತರಗೊಂಡಿದೆ. ರಾಮವರ್ಮ ಲೀಲಾವತಿ ನಾಟಕ ಮಾತ್ರ ರಂಗಭೂಮಿಯ ಮೇಲೆ ಬಹಳ ಜನಪ್ರಿಯವಾಗಿತ್ತೆಂದು ತಿಳಿದುಬರುತ್ತದೆ.

ಒಥೆಲೊ ಮಾಸ್ತಿಯವರಿಂದ ಶೂರಸೇನೆ ಎಂಬ ಹೆಸರಿನಲ್ಲೂ ಬರ್ನಾರ್ಡ್‌ಷಾನ ಪಿಗ್‌ಮೇಲಿಯೆನ್ ಅದೇ ಹೆಸರಿನಲ್ಲಿ ವಿ.ಸೀತಾರಾಮಯ್ಯನವರಿಂದಲೂ ಅನುವಾದಗೊಂಡಿವೆ.

ಷೇಕ್ಸ್‌ಪಿಯರನ ಟೆಂಪೆಸ್ಟ್ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಬಿರುಗಾಳಿ ಎಂದು ಹೆಸರು ಹೊತ್ತು ಕುವೆಂಪು ಅವರಿಂದ ಒಂದು ಒಳ್ಳೆಯ ಅನುವಾದವಾಗಿದೆ. ಹ್ಯಾಮ್ಲೆಟ್ ನಾಟಕ ಆಧರಿಸಿ ಬರೆದ ರಕ್ತಾಕ್ಷಿ ಕನ್ನಡದ ಅತ್ಯುತ್ತಮ ಐತಿಹಾಸಿಕ ನಾಟಕಗಳಲ್ಲಿ ಒಂದಾಯಿತು.

ಪಿ.ಲಂಕೇಶ್ ಅವರ ಈಡಿಪಸ್ ಹಾಗೂ ಅಂತಿಗೊನೆ, ಕನ್ನಡ ನಾಟಕಗಳ ಅನುವಾದಗಳಲ್ಲಿ ಮುಖ್ಯವಾದದ್ದು. ಇಲ್ಲಿನ ಭಾಷೆ ಆಡುಮಾತಿಗೆ ಹತ್ತಿರವಾಗಿ, ಸಂವೇದನೆಯ ದೃಷ್ಟಿಯಿಂದ ಇದು ಮೂಲಕ್ಕೆ ಹತ್ತಿರವಾಗಿದೆ ಅನಿಸುತ್ತದೆ. ಈ ಹಿಂದೆ ಕೆ.ವಿ.ರಾಘವಾಚಾರ್ಯರಿಂದ ಆದ ಅಂತಿಗೊನೆ ಅನುವಾದ ಹಳಗನ್ನಡದ್ದು. ಎಚ್.ಕೆ.ರಾಮಚಂದ್ರಮೂರ್ತಿ ಅವರಿಂದ ಟೆನಿಸಿ ವಿಲಿಯಮ್‌ನ ಗ್ಲಾಸ್‌ಮೆನಾಜಂ ಕನ್ನಡಕ್ಕೆ ಗಾಜಿನ ಗೊಂಬೆ ಎಂದು ಹೆಸರು ಪಡೆದು ಬಂದಿದೆ. ರೂಪಾಂತರದಂತೆ ಕಂಡರೂ ಇದು ಅನುವಾದವೇ. ಭಾಷೆ ಮೂಲಕ್ಕೆ ಹತ್ತಿರವಾಗಿದ್ದು ಮೂಲಕ್ಕೂ ಅನ್ಯಯವಾಗದೆ ಕನ್ನಡದ ಸ್ವತಂತ್ರ ಕೃತಿಯಂತೆ ರೂಪುಗೊಂಡಿದೆ. ಎಮಿಡ್‌ಸಮ್ಮರ್ ನೈಟ್ಸ್ ಡ್ರೀಮ್‌ನ ಅನುವಾದ ಅದೇ ಹೆಸರಿನಲ್ಲಿ ಕೆ.ಎಸ್.ನಿಸಾರ್ ಅಹಮದ್ ಅವರಿಂದ ಆಗಿದೆ.

ಅನುವಾದಗಳಂತೆಯೇ ಪ್ರಪಂಚದ ಬೇರೆಬೇರೆ ಸಾಹಿತ್ಯದಿಂದ ರೂಪಾಂತರಗೊಂಡು ಹಲವು ಸಾಹಿತ್ಯಕೃತಿಗಳು ಕನ್ನಡಕ್ಕೆ ಬಂದಿವೆ. ರೂಪಾಂತರಗೊಳ್ಳುವಲ್ಲಿ ಮೂಲದ ಚೌಕಟ್ಟು ಹಾಗೆಯೇ ಇದ್ದು, ವಸ್ತು ಮತ್ತು ಪಾತ್ರಗಳು ನಮ್ಮದಾಗಿವೆ. ಹೀಗೆ ರೂಪಾಂತರಗೊಂಡಾಗ ಇವುಗಳ ಮೂಲ ಚೌಕಟ್ಟೂ ಇತರರದ್ದಲ್ಲ ಎನಿಸುವಷ್ಟು ಕನ್ನಡದ್ದಾಗಿದೆ. ಹೀಗೆ ಈ ಹಿಂದೆ ರೂಪಾಂತರಗೊಂಡ ಸಾಮಾಜಿಕ ನಾಟಕಗಳಲ್ಲಿ ಎ.ಎನ್. ಮೂರ್ತಿರಾಯರ ಆಷಾಢಭೂತಿ, ಪರ್ವತವಾಣಿ ಅವರ ಬಹದ್ದೂರ್ ಗಂಡ, ವಾರ್ಷಿಕೋತ್ಸವ, ಉಂಡಾಡಿ ಗುಂಡ ಮೊದಲಾದವು ಮುಖ್ಯವಾಗಿ ಹೆಸರಿಸಬೇಕಾದಂಥ ನಾಟಕಗಳು.

ಕನ್ನಡದಲ್ಲಿ ಮೊದಲಿಗೆ ಕಂಡುಬಂದ ನಾಟಕಗಳು ಏನಿದ್ದರೂ ಪೌರಾಣಿಕ ವಸ್ತುಗಳನ್ನುಳ್ಳ ಸಂಸ್ಕೃತದಿಂದ ಅನುವಾದಗೊಂಡು ಬಂದ ನಾಟಕಗಳು. ಸ್ವತಂತ್ರ ನಾಟಕಗಳನ್ನು ರಚಿಸುವಾಗಲೂ ಲೇಖಕರಿಗೆ ಈ ಅನುವಾದಗಳ ಮಾದರಿಯೇ ಆದರ್ಶವಾಯಿತು. ಹೊಸದಾಗಿ ನಾಟಕ ರಚಿಸ ಹೊರಟವರು ಸಾಮಾಜಿಕ ವಸ್ತುಗಳನ್ನು ಕೈಗೆತ್ತಿಕೊಳ್ಳದೆ ಹೆಚ್ಚಾಗಿ ಪೌರಾಣಿಕ ವಸ್ತುಗಳನ್ನೇ ಆಯ್ಕೆಮಾಡಿಕೊಂಡರು. ಇದಕ್ಕೆ ಕಾರಣ ಇಂದಿನ ಸಮಸ್ಯೆಗಳೇ ರೂಪಾಂತರಹೊಂದಿ ಸಾರ್ವಕಾಲಿಕ ಸಮಸ್ಯೆಗಳಾಗಿ ಪರಿಣಮಿಸುತ್ತವೆ ಎಂಬ ದೃಷ್ಟಿಯಿದ್ದುದರಿಂದ ಎಂದು ತೋರುತ್ತದೆ.

ಕೆಲವರು ಸ್ವತಂತ್ರವಾಗಿ ಪೌರಾಣಿಕ ನಾಟಕಗಳನ್ನು ರಚಿಸಿದರು. ಈ ರಚನೆಗಳಿಗೆ ಕಾರಣ ಕನ್ನಡ ಅಭಿಮಾನ ಹಾಗೂ ಕನ್ನಡ ರಂಗಭೂಮಿಯನ್ನು ಜೀವಂತಗೊಳಿಸಬೇಕೆಂಬ, ಪ್ರಚಾರಗೊಳಿಸಬೇಕೆಂಬ ಹಂಬಲ. ಮುಖ್ಯವಾಗಿ ಉತ್ತರ ಕರ್ನಾಟಕದಲ್ಲಿ ಮರಾಠಿ ನಾಟಕಗಳು ಪ್ರದರ್ಶಿತವಾಗುತ್ತಿದ್ದಾಗ, ಕನ್ನಡ ಜನ ಅವುಗಳಿಗೆ ಮಾರುಹೋಗುತ್ತಿದ್ದಾಗ, ಕನ್ನಡ ರಂಗಭೂಮಿ ನಶಿಸಿಹೋಗಬಾರದು ಎಂಬ ಅಭಿಮಾನದಿಂದ ಮೊದಲಿಗೆ ಸ್ವತಂತ್ರ ಕನ್ನಡನಾಟಕ ರಚಿತವಾಯಿತು ಎಂದು ಹೇಳಬಹುದು. ಹೀಗೆ ಮೊದಲು ರಚಿಸಿದವರು ಶಾಂತಕವಿಗಳು. ಇವರ ನಾಟಕಗಳು ಬಯಲಾಟಗಳಿಗೂ ನಾಟಕಗಳಿಗೂ ನಡುವೆ ಬರುತ್ತವೆ. ಇವರ ಎಲ್ಲ ನಾಟಕಗಳಲ್ಲಿ ಬಯಲಾಟದ ಮಾದರಿ ಕಂಡುಬರುತ್ತದೆ. ಗಿರಿಜಾಕಲ್ಯಾಣ, ಉಷಾಹರಣ, ವತ್ಸಲಾಹರಣ - ಈ ಮಾದರಿಯಲ್ಲಿ ರಚಿತವಾದ ಇವರ ಮುಖ್ಯ ನಾಟಕಗಳು. ಇವರು ಪುರಾಣ ವಸ್ತುಗಳನ್ನು ನಾಟಕಕ್ಕೆ ಬಳಸಿಕೊಳ್ಳುವಾಗ ಯಾವುದೇ ಹೊಸ ದೃಷ್ಟಿಕೋನವಾಗಲಿ, ಸಂವಿಧಾನ ಕೌಶಲವಾಗಲಿ ಕಂಡುಬರುವುದಿಲ್ಲ. ಆದರೂ ಕನ್ನಡದಲ್ಲಿ ಮೊದಲು ಬಂದ ಸ್ವತಂತ್ರ ರಂಗಕೃತಿಗಳೆಂಬ ದೃಷ್ಟಿಯಿಂದ ಇವು ಗಮನಾರ್ಹವಾಗುತ್ತವೆ.

ರಂಗಭೂಮಿಗಾಗಿಯೇ ನಾಟಕ ಬರೆಯಲು ಹೊರಟವರಲ್ಲಿ ಬೆಳ್ಳಾವೆ ನರಹರಿ ಶಾಸ್ತ್ರಿಗಳು ಮುಖ್ಯರು. ಸಾಹಿತ್ಯಕವಾಗಿಯಾಗಲಿ, ಸಂವಿಧಾನ ಕೌಶಲದೃಷ್ಟಿಯಿಂದಾಗಲಿ ಇವರ ರಚನೆಗಳಲ್ಲಿ ಹೊಸತನ ಕಂಡುಬರುವುದಿಲ್ಲವಾದರೂ ಇವರ ನಾಟಕಗಳು ರಂಗಭೂಮಿಯ ಮೇಲೆ ಯಶಸ್ವೀ ಪ್ರಯೋಗಗಳಾದವು. ಕೃಷ್ಣಲೀಲಾ, ಶ್ರೀಕೃಷ್ಣಪಾರಿಜಾತ, ರುಕ್ಮಿಣೀಸ್ವಯಂವರ, ಮಾರ್ಕಂಡೇಯ, ತುಕಾರಾಂ - ಇವು ಇವರ ಮುಖ್ಯ ರಂಗನಾಟಕಗಳು.

ಇದೇ ಹಾದಿಯಲ್ಲಿ ಮುಂದೆ ನಡೆದ ನಂಜನಗೂಡು ಶ್ರೀಕಂಠಶಾಸ್ತ್ರಿಗಳು ಶಕ್ತಿವಂತರು. ಇವರಿಗಿದ್ದ ಪಾಂಡಿತ್ಯ ಹೆಚ್ಚಿನದು ಅನ್ನುವುದು ಇವರ ರಚನೆಗಳಲ್ಲಿ ಕಂಡುಬರುತ್ತದೆ. ಸೀತಾಪರಿಣಯ, ಸೀತಾ ಸ್ವರ್ಣಮೃಗ, ಅಭಿಜ್ಞಾನ ಪ್ರಧಾನ, ರಾಜಸೂಯಯಾಗ ಮೊದಲಾದವು ಇವರು ರಚಿಸಿರುವ ಹಲವಾರು ನಾಟಕಗಳಲ್ಲಿ ಮುಖ್ಯ ನಾಟಕಗಳು.

ಈ ಮೂವರಿಗಿಂತಲೂ ಸ್ವಲ್ಪ ಭಿನ್ನವಾದವರು ಬಿ.ಪುಟ್ಟಸ್ವಾಮಯ್ಯ. ಇವರೂ ರಂಗಭೂಮಿಗಾಗಿಯೇ ಕೆಲವು ನಾಟಕಗಳನ್ನು ರಚಿಸಿದವರು. ಅವುಗಳಲ್ಲಿ ಮುಖ್ಯವಾದವು ಸತಿತುಳಸಿ, ಅಕ್ಕಮಹಾದೇವಿ, ಕುರುಕ್ಷೇತ್ರ, ದಶಾವತಾರ, ಗೌತಮಬುದ್ಧ, ಷಹಜಹಾನ್. ಈ ನಾಟಕಗಳ ವಸ್ತು ಪೌರಾಣಿಕ ಹಾಗೂ ಐತಿಹಾಸಿಕವಾದರೂ ಇವರ ರಚನೆಗಳಲ್ಲಿ ಹೊಸ ದೃಷ್ಟಿಯನ್ನು ಕಾಣಬಹುದು. ಮೊದಲಿನಂತೆ ನಾಟಕಗಳಲ್ಲಿ ಪುರಾಣ ಪುಣ್ಯಕಥೆಗಳನ್ನು ಕೇಳಿಹೋಗಲು ಪ್ರೇಕ್ಷಕರನ್ನು ಬಿಡದೆ ಅವರ ದೃಷ್ಟಿಯನ್ನು ಬದಲಾಯಿಸಲು ನಾಟಕಗಳ ಮುಖಾಂತರ ಪ್ರಯತ್ನಿಸಿದ್ದಾರೆ. ಉಳಿದಂತೆ ಸಾಂಪ್ರದಾಯಿಕ ನಾಟಕಗಳ ಸಂವಿಧಾನ ಕೌಶಲವನ್ನೇ ಉಳಿಸಿಕೊಂಡಿದ್ದಾರೆ.

ಭಾಷಾಂತರ ಕಲೆಯಲ್ಲಿ ಮುಂದುವರಿದ ಕನ್ನಡ ನಾಟಕ ರಚನೆ ಕಾಲಾನಂತರದಲ್ಲಿ ಬದಲಾವಣೆ ಹೊಂದಿತು. ಇಂಗ್ಲಿಷ್, ಗ್ರೀಕ್ ಮೊದಲಾದ ಸಾಹಿತ್ಯಗಳ ಅಭ್ಯಾಸ ಮಾಡಿದವರು ಆ ಸಾಹಿತ್ಯಗಳ ಪ್ರಭಾವಕ್ಕೆ ಒಳಗಾದರು. ಇದರ ಪರಿಣಾಮವಾಗಿ ಕನ್ನಡದಲ್ಲಿ ಓದಲೂ ಆಡಲೂ ಸಾಧ್ಯವಾಗುವಂಥ ಕೆಲವು ನಾಟಕಗಳು ಬಂದವು. ಇವುಗಳಲ್ಲಿ ರೂಪಾಂತರಗಳೂ ಅನುವಾದಗಳೂ ಸ್ವತಂತ್ರ ಕೃತಿಗಳೂ ಇವೆ. ಈ ಹಿಂದೆ ನೋಡಿದ ರಚನೆಗಳೊಡನೆ ಹೋಲಿಸಿದಾಗ ಇದು ಕನ್ನಡ ನಾಟಕ ಪರಂಪರೆಯಲ್ಲಿ ಮಹತ್ವದ ಹೆಜ್ಜೆ ಎಂಬುದು ಸ್ಪಷ್ಟವಾಗುತ್ತದೆ. ಈ ಸಾಲಿನಲ್ಲಿ ಬಿ.ಎಂ.ಶ್ರೀ., ಕುವೆಂಪು, ಮಾಸ್ತಿ, ಡಿ.ವಿ.ಜಿ., ವಿ.ಸೀ., ಎಲ್.ಗುಂಡಪ್ಪ, ಜಿ.ಪಿ.ರಾಜರತ್ನಂ, ಕಡೆಂಗೋಡ್ಲು ಶಂಕರಭಟ್ಟ ಮೊದಲಾದವರನ್ನು ಗಮನಿಸಬಹುದು. ಬಿ.ಎಂ.ಶ್ರೀ. ಅವರ ಇಂಗ್ಲಿಷ್, ಗ್ರೀಕ್ ಹಾಗೂ ಕನ್ನಡ ಸಾಹಿತ್ಯದ ಆಳವಾದ ಅಭ್ಯಾಸದ ಫಲ ಗದಾಯುದ್ಧ, ಅಶ್ವತ್ಥಾಮನ್ ಮತ್ತು ಪಾರಸಿಕರು. ಗದಾಯುದ್ಧ ನಾಟಕದಲ್ಲಿ ನೇರವಾಗಿ ಗ್ರೀಕ್ ನಾಟಕದ ಪ್ರಭಾವವಿರದಿದ್ದರೂ ಆ ಸಾಹಿತ್ಯದ ಅಭ್ಯಾಸದ ಲಕ್ಷಣಗಳನ್ನು ಗುರುತಿಸಬಹುದು. ರನ್ನನ ಕಾವ್ಯದ ಗಾಢ ಪ್ರಭಾವ, ಪಾಶ್ಚಾತ್ಯ ಸಾಹಿತ್ಯ ಪ್ರಭಾವದಿಂದಾದ ಪ್ರೇರಣೆ ಇವುಗಳಿಂದ ಕನ್ನಡಕ್ಕೆ ಒಂದು ಆಧುನಿಕ ನಾಟಕ ದೊರೆಯಿತು. ಅಶ್ವತ್ಥಾಮನ್ ನಾಟಕ ಸಾಫೊಕ್ಲಿಸನ ಅಯಾಸ್ ನಾಟಕದ ರೂಪಾಂತರ. ಈ ರೂಪಾಂತರ ಸಾಧ್ಯವಾದದ್ದು ಗ್ರೀಕ್ ಪುರಾಣ ಕಥೆಗಳಿಗೂ ನಮ್ಮ ಪುರಾಣ ಕಥೆಗಳಿಗೂ ಸಾಮ್ಯವಿರುವುದರಿಂದ. ಇದು ರೂಪಾಂತರವಾದರೂ ಕನ್ನಡ ನೆಲಕ್ಕೆ ಸೇರಿದ್ದು ಎನ್ನುವಷ್ಟು ಸ್ವತಂತ್ರ ಕೃತಿಯಾಗಿದೆ. ಅಶ್ವತ್ಥಾಮನನ್ನು ಚಿರಂಜೀವಿ ಎಂದು ತೋರಿಸಿದ ಈ ನಾಟಕ ಒಂದು ಕಾಲಕ್ಕೆ ಕ್ರಾಂತಿಯ ರಚನೆಯಾಯಿತು. ಪಾರಸಿಕರು ಮೂಲ ಗ್ರೀಕ್ ನಾಟಕ ಇದ್ದಂತೆಯೇ ಅನುವಾದಗೊಂಡಿದೆ. ಗ್ರೀಕ್ ಸಾಹಿತ್ಯದ ವಾಸನೆ ಇಲ್ಲಿ ಸಂಪೂರ್ಣವಾಗಿ ಇದೆ. ಈ ನಾಟಕದಿಂದ ಈಸ್ಕಲಸ್‌ನ ಪರಿಚಯ ಕನ್ನಡಿಗರಿಗೆ ಸ್ವಲ್ಪಮಟ್ಟಿಗೆ ಆಯಿತು.

ಜಗತ್ತಿನ ಶ್ರೇಷ್ಠ ಕೃತಿಗಳು ಕನ್ನಡಕ್ಕೆ ಅನುವಾದಗೊಂಡು ರೂಪಾಂತರಗೊಂಡು ರಂಗಭೂಮಿಯ ಮೇಲೆ ಬರುತ್ತಿದ್ದಂತೆಯೇ ಕನ್ನಡ ರಂಗಭೂಮಿಯ ಮೇಲೆ ಸ್ವತಂತ್ರ ಕೃತಿಗಳೂ ಕಾಣಿಸಿಕೊಂಡವು. ಉತ್ತರ ಕನ್ನಡ ಜಿಲ್ಲೆಯಲ್ಲಿ, ಹವ್ಯಕರು ಮಾತನಾಡುವ ಕನ್ನಡದಲ್ಲಿ ರಚಿತವಾದ ಇಗ್ಗಪ್ಪ ಹೆಗಡೇ ವಿವಾಹ ಪ್ರಹಸನ ಮೊದಲ ಸಾಮಾಜಿಕ ನಾಟಕ

ಎನ್ನುವ ಐತಿಹಾಸಿಕ ಮಹತ್ತ್ವ ಪಡೆದಿದೆ. ಈ ದಿಶೆಯಲ್ಲಿ ಕೆಲಸ ಮಾಡಿದ ಮೊದಲಿಗರೆಂದರೆ ಟಿ.ಪಿ.ಕೈಲಾಸಂ ಹಾಗೂ ಶ್ರೀರಂಗ. ಕೈಲಾಸಂ ಅವರು ಬರ್ನಾರ್ಡ್ ಷಾ, ಇಬ್ಸನ್ ಮೊದಲಾದವರ ಮಾದರಿಯಲ್ಲಿ ನಾಟಕಗಳನ್ನು ರಚಿಸತೊಡಗಿದರು. ಇವರ ನಾಟಕಗಳಲ್ಲಿ ಹೆಚ್ಚಾಗಿ ಮಧ್ಯಮವರ್ಗದ ಜನರ ಜೀವನ ಚಿತ್ರಿತವಾಯಿತು. ಸಮಸ್ಯೆಗಳೂ ಅವರವೇ. ಗೇಲಿ, ಅನುಕಂಪ, ವ್ಯಂಗ್ಯ, ಟೀಕೆಗಳ ಮೂಲಕ ಸಮಾಜವನ್ನು ತಿದ್ದಲು ತೊಡಗಿದರು. ಮಧ್ಯಮವರ್ಗದ ಮನೆಮಾತು ರಂಗಭಾಷೆಯಾಯಿತು. ಅಹೋಬ್ಳು, ಗಂಗಣ್ಣ, ಸಾವಿತ್ರಮ್ಮ, ಸುಬ್ಬಣ್ಣ, ಪಾರ್ವತಮ್ಮ ಇವರುಗಳಿಗೆ ರಂಗದ ಮೇಲೆ ಸ್ಥಾನ ದೊರಕಿತು. ಈ ಎಲ್ಲ ದೃಷ್ಟಿಯಿಂದ ರಂಗಭೂಮಿಯಲ್ಲಿ ಕ್ರಾಂತಿಯಾಯಿತೆಂದು ಹೇಳಬಹುದು. ಕೈಲಾಸಂ ನಾಟಕಗಳು ಒಂದೇ ಸಮನೆ ಪ್ರಯೋಗವಾದುವು. ಇಂಥ ನಾಟಕಗಳ ಪ್ರಯೋಗ ಮಾಡುವುದು ಸಣ್ಣ ಸಣ್ಣ ಗುಂಪುಗಳಿಗೆ ಕಷ್ಟವಾಗುತ್ತಿರಲಿಲ್ಲ. ರಂಗಸಜ್ಜಿಕೆ, ಬೆಳಕು, ಉಡುಗೆ ತೊಡುಗೆ ಹಾಗೂ ರಂಗಪರಿಕರಗಳ ಬಗ್ಗೆ ನಾಟಕವಾಡುವವರು ಅಷ್ಟಾಗಿ ತಲೆ ಕೆಡಿಸಿಕೊಳ್ಳಬೇಕಾಗಿರಲಿಲ್ಲ. ಹೀಗೆ ರಚನೆಗೊಂಡ ನಾಟಕಗಳಲ್ಲಿ ಮುಖ್ಯವಾದವು ಟೊಳ್ಳುಗಟ್ಟಿ, ಬಂಡ್ವಾಳ್ವಿಲ್ಲದ್ಬಡಾಯಿ, ಹುತ್ತದಲ್ಲಿ ಹುತ್ತ, ಪಾತೂ ತೌರ್ಮನೆ, ಸಾತೂ ತೌರ್ಮನೆ, ಬಹಿಷ್ಕಾರ ಮೊದಲಾದವು. ಇವರ ಕೀಚಕ, ಮಹಾಭಾರತದಲ್ಲಿ ಒಂದು ಪಾತ್ರವನ್ನು ಆಧರಿಸಿ ಬರೆದ ಹೊಸ ರೀತಿಯ ನಾಟಕ. ಕೈಲಾಸಂ ಅವರಂತೆಯೇ ಶ್ರೀರಂಗರೂ ಸಾಮಾಜಿಕ ಸಮಸ್ಯೆಗಳನ್ನು ಎತ್ತಿಕೊಂಡರೂ ಇವರ ವಿಮರ್ಶೆ ಹರಿತವಾಗಿದೆ. ಸಮಾಜ ಪುನರ್ನಿರ್ಮಾಣವಾಗಬೇಕೆಂಬ ದೃಷ್ಟಿಯಿಂದ ಇವರು ನಾಟಕ ರಚನೆಗೆ ಕೈಹಾಕಿದರು. ಹಳತು-ಹೊಸತು, ಮುಪ್ಪು-ಯೌವನ, ಪ್ರಾಮಾಣಿಕತೆ-ಕುತಂತ್ರ, ನ್ಯಾಯ-ಅನ್ಯಾಯ - ಇವುಗಳನ್ನೆಲ್ಲ ಚಿತ್ರಿಸಿದರು. ಈ ದೃಷ್ಟಿಯಿಂದ ಹರಿಜನ್ವಾರ ನಾಟಕ ಒಂದು ಗಮನಾರ್ಹ ಕೃತಿಯಾಗಿದೆ. ಅಂತೆಯೇ ಇವರ ಸಂಸಾರಿಗ ಕಂಸ, ನರಕದಲ್ಲಿ ನರಸಿಂಹ, ಪ್ರಪಂಚ ಪಾಣಿಪತ್ತು ಮೊದಲಾದ ನಾಟಕಗಳೂ ಮುಖ್ಯವಾಗುತ್ತವೆ. ಇತ್ತೀಚೆಗೆ ಶ್ರೀರಂಗರ ಬರೆವಣಿಗೆಯ ಧೋರಣೆ ಬದಲಾಗಿದೆ. ಹೆಚ್ಚಿಗೆ ಅವು ಬುದ್ಧಿನಾಟಕಗಳಾಗಿವೆ. ಮಾತಿನ ಜಾಣತನ, ರಂಗಸಜ್ಜಿಕೆ, ಬೆಳಕು, ಉಡುಗೆ-ತೊಡುಗೆ ಇವುಗಳಲ್ಲಿ ರಂಗಸಾಧ್ಯತೆಗಳನ್ನು ತರಲು ಹೋಗಿದ್ದಾರೆ. ಅಲ್ಲದೆ ಪ್ರೇಕ್ಷಕ ಹಾಗೂ ನಾಟಕಕಾರನಿಗೆ ಒಂದು ಮಹತ್ತರ ಸ್ಥಾನವನ್ನು ನಾಟಕಗಳಲ್ಲಿ ತಂದುಕೊಟ್ಟಿದ್ದಾರೆ. ಇವರ ಕತ್ತಲೆ-ಬೆಳಕು, ಏನ ಬೇಡಲಿ ನಿನ್ನ ಬಳಿಗೆ ಬಂದು, ಯಾರಿಗೆ ಮಾಡ್ತೀ ಮ್ಯಾಂ ಮೊದಲಾದವು ಈ ಮಾದರಿಯ ಕೃತಿಗಳು. ಇವರ ನಾಟಕಗಳಲ್ಲಿ ಎದ್ದುಕಾಣುವ ನ್ಯೂನತೆ ಎಂದರೆ ಒಂದು ವಿಚಾರ ಹಲವು ನಾಟಕಗಳಲ್ಲಿ ಬೇರೆಬೇರೆ ರೀತಿಯಲ್ಲಿ ಬಂದಿರುವುದು. ಇಷ್ಟಾದರೂ ಶ್ರೀರಂಗರು ರಂಗಭೂಮಿಯ ಬೆಳೆವಣಿಗೆಯ ದೃಷ್ಟಿಯಿಂದ ಅತ್ಯಂತ ಮಹತ್ವದ ಕೊಡುಗೆ ನೀಡಿದ್ದಾರೆ ಎಂದು ಹೇಳಬಹುದು.

ಕೈಲಾಸಂ, ಶ್ರೀರಂಗರು ಸಾಮಾಜಿಕ ಸಮಸ್ಯೆಗಳನ್ನು ಎತ್ತಿಕೊಂಡು ಬರೆಯಲು ಪ್ರಾರಂಭಿಸಿದ ಮೇಲೆ ಹಲವಾರು ನಾಟಕಕಾರರು ಬಂದರು. ಇವರಲ್ಲಿ ಮುಖ್ಯರಾದವರೆಂದರೆ ಪರ್ವತವಾಣಿ. ಇವರಿಂದ ರಚಿತವಾದ ಹಲವು ನಾಟಕಗಳು ರೂಪಾಂತರವಾದರೂ ಹವ್ಯಾಸಿ ರಂಗಭೂಮಿಯನ್ನು ಜೀವಂತವಾಗಿಡುವ ದೃಷ್ಟಿಯಿಂದ ಇವುಗಳಿಗೆ ಒಂದು ಮುಖ್ಯ ಸ್ಥಾನವಿದೆ. ಇವರ ಮುಖ್ಯ ನಾಟಕಗಳೆಂದರೆ ಬಹದ್ದೂರ್ ಗಂಡ, ಉಂಡಾಡಿ ಗುಂಡ, ವಾರ್ಷಿಕೋತ್ಸವ, ಹಣಹದ್ದು ಮೊದಲಾದವು. ಇನ್ನೂ ಕೆಲವರು ನಾಟಕಕಾರರು ಪ್ರಹಸನಗಳನ್ನು ರಚಿಸಿದರು. ಹೀಗೆ ಬರೆದಾಗ ಹಲವರು ಹವ್ಯಾಸಿ ರಂಗಭೂಮಿಯನ್ನೇ ದೃಷ್ಟಿಯಿಟ್ಟುಕೊಂಡು ಬರೆದರು ಎನ್ನುವುದೂ ಕಂಡುಬರುತ್ತದೆ. ಈ ದಿಕ್ಕಿನಲ್ಲಿ ದಾಶರಥಿ ದೀಕ್ಷಿತ್, ಎ.ಎಸ್.ಮೂರ್ತಿ, ಎನ್ಕೆ.ನಾ.ಕಸ್ತೂರಿ, ಕೆ.ಎಸ್.ಸುಬ್ಬನರಸಿಂಹ, ಗುಂಡಣ್ಣ ಮೊದಲಾದವರು ಶ್ರಮಿಸಿದರು. ಎ.ಎಸ್.ಮೂರ್ತಿ ಅವರ ಬರೆವಣಿಗೆಯಲ್ಲಿ ಬದಲಾವಣೆಯನ್ನು ಗುರುತಿಸಬಹುದು. ಅಯ್ಯಾ ನಾನು ಯಾರು, ಸುಳಿಯಲ್ಲಿ ಸಿಕ್ಕಾಗ ಮೊದಲಾದವುಗಳಲ್ಲಿ ಪ್ರವೃತ್ತಿಯ ಬದಲಾವಣೆ ಕಂಡುಬರುತ್ತದೆ.

ಈ ಕಾಲದಲ್ಲೇ ಇಂಗ್ಲಿಷ್‌ನ ಅಪೇರಾ ಮಾದರಿಯ ನಾಟಕಗಳು ಗೀತರೂಪಕಗಳು ಎಂಬ ಹೆಸರಿನಿಂದ ಕನ್ನಡಕ್ಕೆ ಬಂದವು. ಈ ಕ್ಷೇತ್ರದಲ್ಲಿ ದುಡಿದವರೆಂದರೆ ಶಿವರಾಮ ಕಾರಂತ ಹಾಗೂ ಪು.ತಿ.ನ. ಇವರುಗಳ ಗೀತನಾಟಕಗಳು ರಚನೆಯಲ್ಲಿ ಭಿನ್ನವಾಗಿವೆ. ಕಾರಂತರು ತಮ್ಮ ಗೀತನಾಟಕಗಳಲ್ಲಿ ಜನಪದ ದೇಸಿಯನ್ನು ಉಪಯೋಗಿಸಿದರೆ ಪು.ತಿ.ನ. ತಮ್ಮ ನಾಟಕಗಳಿಗೆ ಪುರಾಣಗಳಿಂದ ವಸ್ತುಗಳನ್ನು ಆಯ್ದು ಸ್ವತಂತ್ರ ಕೃತಿಗಳನ್ನು ರಚಿಸಿದರು. ಇಂಥ ನಾಟಕಗಳಲ್ಲಿ ಕಾರಂತರ ಗೀತನಾಟಕಗಳು, ಪು.ತಿ.ನ. ಅವರ ಅಹಲ್ಯೆ, ಗೋಕುಲ ನಿರ್ಗಮನ, ಹಂಸದಮಯಂತಿ ಮತ್ತು ಇತರ ರೂಪಕಗಳು ಮುಖ್ಯವಾದವು. ಕೀರ್ತಿನಾಥ' ಕುರ್ತುಕೋಟಿಯವರು ಈ ರಂಗದಲ್ಲಿ ಕೆಲಸ ಮಾಡಿ ಸ್ವಪ್ನದರ್ಶಿ ಮತ್ತು ಇತರ ಗೀತನಾಟಕಗಳು ಎಂಬ ಕೃತಿಯನ್ನು ನೀಡಿದ್ದಾರೆ.

ರೇಡಿಯೋಕ್ಕಾಗಿಯೇ ಬರೆದ ನಾಟಕಗಳು, ರಂಗಭೂಮಿಗಾಗಿ ಬರೆದ ನಾಟಕಗಳಿಗಿಂತ ಬೇರೆಯಾಗಿವೆ. ಈ ದೃಷ್ಟಿಯಿಂದ ರಚನೆಯಾದ ನಾಟಕಗಳಲ್ಲಿ ಹೆಸರಿಸಬಹುದಾದುವೆಂದರೆ ಬೀಚಿ ಅವರ ರೇಡಿಯೋ ನಾಟಕಗಳು. ಎಚ್.ಕೆ.ರಂಗನಾಥ ಅವರ ದುರಂತ ಮತ್ತು ಇತರ ಪ್ರಸಾರ ನಾಟಕಗಳು, ಎಸ್.ಎನ್.ಶಿವಸ್ವಾಮಿ ಅವರ ಹೃದಯಾಂತರಾಳ, ವಸಂತಕವಲಿ ಅವರ ಪುರಂದರದರ್ಶನ ಮೊದಲಾದುವುಗಳು.

ಪ್ರಬುದ್ಧರಿಗಾಗಿ ನಾಟಕಗಳು ರಚನೆಯಾದಂತೆ ಮಕ್ಕಳಿಗಾಗಿಯೂ ರಚನೆಗೊಂಡಿವೆ. ಆದರೂ ಈ ದಿಶೆಯಲ್ಲಿನ ಸಾಹಿತ್ಯ ರಚನೆ ಕಡಿಮೆ ಎಂದೇ ಹೇಳಬೇಕು. ಕೆಲವು ಅನುವಾದಗಳೂ ಕಥೆಗಳನ್ನು ಆಧರಿಸಿ ರಚಿಸಿದ ಕೃತಿಗಳೂ ಬಂದಿವೆ. ಮಕ್ಕಳಿಗಾಗಿ, ಮಕ್ಕಳಿಂದ ಮಕ್ಕಳಿಗಾಗಿ ದೊಡ್ಡವರಿಂದ ನಾಟಕಗಳು ರಂಗಭೂಮಿಯಲ್ಲಿ ಕಾಣಿಸಿಕೊಳ್ಳುತ್ತಿವೆ. ಈ ಹಿನ್ನೆಲೆಯಲ್ಲಿ ಕೆಲವು ಪ್ರಯೋಗಗಳು ಗಮನಾರ್ಹವಾಗಿವೆ. ಈ ರಂಗದಲ್ಲಿ ಉತ್ಸಾಹದಿಂದ ದುಡಿದವರೆಂದರೆ ಹೊಯಿಸಳರು. ಇವರ ಅಗಿಲಿನ ಮಗಳು. ಪ್ರಸಾದ, ವಾತಾಪಿ ಮೊದಲಾದ ನಾಟಕಗಳು ಮಕ್ಕಳ ಮನಸ್ಸನ್ನು ಸೆರೆಹಿಡಿಯುತ್ತವೆ. ಈ ನಿಟ್ಟಿನಲ್ಲಿ ಕುವೆಂಪು ಅವರ ಪ್ರಯತ್ನವೂ ಸ್ತುತ್ಯರ್ಹವಾದದ್ದು. ಇವರ ಮೋಡಣ್ಣನ ತಮ್ಮ, ನನ್ನ ಗೋಪಾಲ ಎಂಬ ನಾಟಕಗಳು ಭಾಷಾದೃಷ್ಟಿಯಿಂದ, ರಚನೆ ಹಾಗೂ ಪ್ರಯೋಗ ದೃಷ್ಟಿಗಳಿಂದ ಗಮನಾರ್ಹವಾಗಿವೆ. ಇತ್ತೀಚೆಗೆ ಈ ಪ್ರಕಾರ ಚೆನ್ನಾಗಿ ಬೆಳೆಯುತ್ತಿದೆ. ಹೊಸ ರೀತಿಯ ರಂಜನೆಯನ್ನುಂಟುಮಾಡುವ ನಾಟಕಗಳಲ್ಲಿ ಕೆ.ವಿ.ಸುಬ್ಬಣ್ಣನವರ ಕಾಡಿನಲ್ಲಿ ಕಥೆ, ಬಿ.ವಿ.ಕಾರಂತರ ಪಂಜರಶಾಲೆ ಮೊದಲಾದವುಗಳನ್ನು ಇಲ್ಲಿ ಹೆಸರಿಸಬಹುದು.

ಸಾಹಿತ್ಯದೃಷ್ಟಿಯಿಂದ ಹಾಗೂ ರಂಗಭೂಮಿಯ ದೃಷ್ಟಿಯಿಂದ ಕೆಲವು ನಾಟಕಗಳು ಬಹಳ ಮುಖ್ಯವಾಗಿವೆ. ಮಾಸ್ತಿ ಅವರ ಕಾಕನಕೋಟೆ ಒಂದು ಗಮನಾರ್ಹ ಕೃತಿ. ರಂಗದ ಮೇಲೂ ಯಶಸ್ವಿ ಪ್ರಯೋಗವನ್ನು ಕಂಡಿದೆ. ಕುವೆಂಪು ಅವರ ಬೆರಳ್‌ಗೆ ಕೊರಳ್‌ನ ಸರಳ ರಚನೆ ಪಾತ್ರನಿರ್ವಹಣೆಯಲ್ಲಿ ಹೆಚ್ಚು ಸಹಾಯವಾಗಿದೆ. ದೃಶ್ಯವಿನ್ಯಾಸವೂ ಅಷ್ಟೇ ಚೆನ್ನಾಗಿದೆ. ಸ್ಮಶಾನ ಕುರುಕ್ಷೇತ್ರ ಭಾರತದ ಕಥೆಗೆ ಹೊಸ ದೃಷ್ಟಿಕೋನ ನೀಡಿದೆ. ಕನ್ನಡದ ಇನ್ನೊಬ್ಬ ಪ್ರಮುಖ ನಾಟಕಕಾರರೆಂದರೆ ಜಡಭರತರು (ಜಿ.ಬಿ.ಜೋಶಿ). ಇವರ ಕದಡಿದ ನೀರು, ಆ ಊರು ಈ ಊರು ನಾಟಕಗಳು ಭಾಷಾದೃಷ್ಟಿಯಿಂದ, ಸಾಹಿತ್ಯದೃಷ್ಟಿಯಿಂದ ಮುಖ್ಯವಾಗಿವೆ. ಇವರ ಸತ್ತವರ ನೆರಳು, ಸಮಾಜದ ಒಂದು ಪಂಗಡದಲ್ಲಿ, ಆಚಾರದ ನೆವದಲ್ಲಿ ಆಗುವ ಶೋಷಣೆ ಹಾಗೂ ಮೌಢ್ಯವನ್ನು ಚಿತ್ರಿಸುವ ಗಮನಾರ್ಹ ಕೃತಿಯಾಗಿದೆ. ಸಂಸ ಅವರ ನಾಟಕಗಳು ತಮ್ಮಷ್ಟಕ್ಕೆ ತಾವೇ ಪ್ರತ್ಯೇಕವಾಗಿವೆ. ಇವರ ಎಲ್ಲ ಐತಿಹಾಸಿಕ ನಾಟಕಗಳೂ ಹೆಚ್ಚಾಗಿ ಮೈಸೂರು ಇತಿಹಾಸಕ್ಕೆ ಸಂಬಂಧಪಟ್ಟವು. ಭಾಷಾ ಬಳಕೆ ಹಾಗೂ ಪ್ರಯೋಗ ದೃಷ್ಟಿಯಿಂದ ಗಮನಾರ್ಹವಾಗಿವೆ. ವಿಗಡ ವಿಕ್ರಮರಾಯ, ಬಿರುದೆಂತೆಂಬರ ಗಂಡ -ಇವುಗಳನ್ನು ಇಲ್ಲಿ ಹೆಸರಿಸಬಹುದು. ಬೇಂದ್ರೆ, ಗೋಕಾಕ, ಕುರ್ತುಕೋಟಿ, ವಿ.ಸೀ., ಶಿವರಾಮ ಕಾರಂತ ಮೊದಲಾದವರ ಕೃತಿಗಳು ಸಾಹಿತ್ಯ ಇಲ್ಲವೇ ರಂಗಭೂಮಿಯ ದೃಷ್ಟಿಯಿಂದ ಮುಖ್ಯ ಕೃತಿಗಳಾಗುತ್ತವೆ. ಕೀರ್ತಿನಾಥರ ಆ ಮನಿ, ಕಾರಂತರ ಗರ್ಭಗುಡಿ ಒಳ್ಳೆಯ ನಾಟಕಗಳು. ಆ ಮನಿಯಲ್ಲಿ ಸಾಂಕೇತಿಕತೆ ದಟ್ಟವಾಗಿದೆ. ಗರ್ಭಗುಡಿ ಸಾಮಾಜಿಕ ಸಮಸ್ಯೆಯೊಂದನ್ನು ಪ್ರಭಾವಪೂರ್ಣವಾಗಿ ಚಿತ್ರಿಸುತ್ತದೆ. ಎಂ.ಆರ್.ಶ್ರೀ., ಅವರ ಧರ್ಮದುರಂತ ಐತಿಹಾಸಿಕ ನಾಟಕಗಳಲ್ಲಿ ಹೆಸರಿಸಬೇಕಾದ ಮಹತ್ತ್ವ ಪಡೆದಿದೆ.

ವಸ್ತು, ಪಾತ್ರ, ರಚನೆ, ರಂಜನೆ -ಇವುಗಳನ್ನೇ ಗಮನದಲ್ಲಿಟ್ಟುಕೊಂಡು ಬಂದ ಸಾಂಪ್ರದಾಯಿಕ ನಾಟಕಗಳು ರಚನೆಯಾಗುತ್ತಿದ್ದಂತೆಯೇ ಕನ್ನಡ ರಂಗಭೂಮಿಯ ಮೇಲೆ ಹೊಸ ಗಾಳಿ ಬೀಸತೊಡಗಿತು. ಪಾಶ್ಚಾತ್ಯ ಸಾಹಿತ್ಯ ಹಾಗೂ ರಂಗಭೂಮಿಯ ಪರಿಚಯ ಪ್ರಭಾವ ನಮ್ಮ ಬುದ್ಧಿಜೀವಿಗಳ ಮೇಲೆ ದಟ್ಟವಾದ ಪ್ರಭಾವ ಬೀರಿದವು. ಜೀವನದ ಮೌಲ್ಯಗಳಲ್ಲಾದ ಏರುಪೇರು, ಪಟ್ಟಭದ್ರರ ಮೇಲುಗೈ, ರಾಜಕೀಯ ದೊಂಬರಾಟ ಹಾಗೂ ಅವರುಗಳ ಮೇಲುಗೈ, ವ್ಯಕ್ತಿ ಸ್ವಾತಂತ್ರ್ಯಕ್ಕೆ ಉಂಟಾದ ಧಕ್ಕೆ, ಜೀವನದ ಅಸಾಂಗತ್ಯ - ಇವುಗಳು ಬುದ್ಧಿಜೀವಿಗಳನ್ನು ಕೆಣಕಿ ಕಾಡಿದವು. ಸಾಂಪ್ರದಾಯಿಕ ಜಾಡಿನಲ್ಲಿ ರಚನೆಯಾದ ನಾಟಕಗಳು ಅವರಿಗೆ ಬೇಡಾದವು. ಇವರು ಅವನ್ನು ವಿರೋಧಿಸುವುದರ ಜೊತೆಗೆ ಕ್ರಿಯಾತ್ಮಕವಾಗಿ ಹೊಸ ದಾರಿ ತುಳಿದರು. ಇದರ ಪರಿಣಾಮವಾಗಿ ಹೊಸ ಸಂವೇದನೆಯ ನಾಟಕಗಳು ರಚಿತವಾದವು. ಈ ಜಾಡಿನ ನಾಟಕಗಳೇ ಅಸಂಗತ ನಾಟಕಗಳು. ಕನ್ನಡಕ್ಕೆ ಇದೊಂದು ವಿಶಿಷ್ಟ ಕೊಡುಗೆ. ಈ ದಿಕ್ಕಿನಲ್ಲಿ ಮೊಟ್ಟಮೊದಲು ಅಯನಸ್ಕೋವಿನ ಬಾಲ್ಡ್‌ಸೊಪ್ರಾನೋ ಸುಮತೀಂದ್ರ ನಾಡಿಗರಿಂದ ಬೊಕ್ಕತಲೆಯ ನರ್ತಕಿಯಾಗಿ ಕನ್ನಡಕ್ಕೆ ಬಂದಿತು. ಇದಕ್ಕೆ ಐತಿಹಾಸಿಕ ಮಹತ್ವವಿದೆ. ಇವರು ಮುಂದೆ ಈ ಮಾದರಿಯ ನಾಟಕಗಳನ್ನು ರಚಿಸಲಿಲ್ಲ. ಅನಂತರ ಪಿ.ಲಂಕೇಶ್, ನ.ರತ್ನ, ಪೂರ್ಣಚಂದ್ರ ತೇಜಸ್ವಿ, ಚಂದ್ರಶೇಖರ ಪಾಟೀಲ, ಚಂದ್ರಶೇಖರ ಕಂಬಾರ, ಚಂದ್ರಕಾಂತ ಕುಸನೂರ, ರಾಮಚಂದ್ರ ಶರ್ಮ, ಚದುರಂಗ ಮೊದಲಾದವರು ಈ ಪ್ರಕಾರದಲ್ಲಿ ಹೆಚ್ಚು ಕೆಲಸ ಮಾಡಿದರು. ವ್ಯಕ್ತಿಗಳ ವ್ಯಕ್ತಿತ್ವದ ಅಂತರಂಗ ಹಾಗೂ ಬಹಿರಂಗಗಳ ಸ್ವರೂಪ ಹಾಗೂ ಸಂಬಂಧಗಳನ್ನು ವಿಶ್ಲೇಷಿಸುವುದೆ ಲಂಕೇಶರ ತೆರೆಗಳು ನಾಟಕದ ಉದ್ದೇಶವಾಗಿದೆ. ನ.ರತ್ನರ ಎಲ್ಲಿಗೆ ನಾಟಕದಲ್ಲಿ ಜೀವನದ ಅಸಾಂಗತ್ಯ ಧ್ವನಿಪೂರ್ಣವಾಗಿ ಚಿತ್ರಿತವಾಗಿರವುದನ್ನು ನೋಡಬಹುದು. ವ್ಯಕ್ತಿಯ ಅನ್ವೇಷಣೆಯಲ್ಲಿನ ಅಸಾಧ್ಯತೆಯನ್ನು ವ್ಯಂಗ್ಯವಾಗಿ ನೋಡುವ ನಾಟಕ ಇದು. ಪೂರ್ಣಚಂದ್ರ ತೇಜಸ್ವಿ ಅವರ ಯಮಳಪ್ರಶ್ನೆಯಲ್ಲಿ ಯಂತ್ರಕ್ಕೆ ಸಿಗುವ ಪ್ರಾಮುಖ್ಯತೆ ಮಾನವನಿಗೆ ಸಿಗುವುದಿಲ್ಲ ಎನ್ನುವ ಜೀವನದ ವ್ಯಂಗ್ಯ ನಾಟಕದ ವಸ್ತುವಾಗಿದೆ. ಚಂದ್ರಶೇಖರ ಪಾಟೀಲರ ಅಪ್ಪ ನಾಟಕದಲ್ಲಿ ಬರುವ ಬಸವ ಸಮಾಜದಲ್ಲಿ ತನ್ನನ್ನು ತಾನು ಗುರುತಿಸಿಕೊಳ್ಳಲು ಪಡುವ ಪ್ರಯತ್ನ ಅವನದೇ ಆಗಿರದೆ ಸಮಾಜದ ಯಾವ ಒಬ್ಬ ವ್ಯಕ್ತಿಯದೂ ಆಗುತ್ತದೆ. ಚಂದ್ರಶೇಖರ ಕಂಬಾರರ ಚಾಳೇಶದಲ್ಲಿ ವ್ಯಕ್ತಿತ್ವಗಳ ನಡುವೆ, ಸುಳ್ಳು ಮತ್ತು ಸತ್ಯಗಳ ನಡುವೆ, ಕನಸು ಮತ್ತು ಎಚ್ಚರಗಳ ನಡುವೆ ಇರುವ ದ್ವಂದ್ವವನ್ನು (ವ್ಯಕ್ತಿಯ ಸಂಕಟ) ನೋಡಬಹುದು. ಇಲಿ ಬೋನು, ಹಳ್ಳಾಕೊಳ್ಳಾ ನೀರು, ಕೊಡೆಗಳು ಮೊದಲಾದ ನಾಟಕಗಳಲ್ಲಿ ಜೀವನದ ಅಸಂಗತತೆಯ ಚಿತ್ರಣ ಸಾಂದ್ರತರವಾಗಿ ಅಭಿವ್ಯಕ್ತವಾಗಿದೆ. ಋಷ್ಯಶೃಂಗ, ಸಂಕ್ರಾಂತಿ ನಾಟಕಗಳಲ್ಲಿನ ಇತಿಹಾಸಕ್ಕೆ ಹೊಸ ಅರ್ಥ ಬರುತ್ತದೆ. ಎಚ್.ಎಂ.ಚನ್ನಯ್ಯನವರ ಎಲ್ಲರಂಥವನಲ್ಲ ನನ ಗಂಡ, ಚಂದ್ರಶೇಖರ ಕಂಬಾರರ ಜೋಕುಮಾರಸ್ವಾಮಿ, ಚಂದ್ರಶೇಖರ ಪಾಟೀಲರ ಗೋಕರ್ಣದ ಗೌಡಶಾನಿ- ಈ ನಾಟಕಗಳು ರಚನೆಯ ದೃಷ್ಟಿಯಿಂದ ಪ್ರತ್ಯೇಕವಾಗಿವೆ - ಇವು ಎಪಿಕ್ ನಾಟಕದ ಮಾದರಿಯ ನಾಟಕಗಳು. ಎಲ್ಲರಂಥವನಲ್ಲ ನನ ಗಂಡ ಹಾಗೂ ಜೋಕುಮಾರಸ್ವಾಮಿ ಪ್ರಯೋಗದ ದೃಷ್ಟಿಯಿಂದ ಗಮನಾರ್ಹ ಕೃತಿಗಳಾಗಿವೆ.

ಗಿರೀಶ್ ಕಾರ್ನಾಡರು ಐತಿಹಾಸಿಕ, ಪೌರಾಣಿಕ ವಸ್ತುಗಳನ್ನು ಎತ್ತಿಕೊಂಡು ಅವಕ್ಕೆ ಹೊಸ ವ್ಯಾಖ್ಯಾನ ಮಾಡಿ ನಾಟಕಗಳನ್ನು ರಚಿಸುತ್ತ ಬಂದಿದ್ದಾರೆ. ಯಯಾತಿ, ತುಘಲಕ್, ಹಯವದನ, ಅಗ್ನಿ ಮತ್ತು ಮಳೆ ಇವರ ಮುಖ್ಯ ಕೃತಿಗಳು. ಯಯಾತಿಯಲ್ಲಿ ಹೊಸ ಪಾತ್ರಗಳೂ ಸೇರಿದಂತೆ ಹೊಸ ವ್ಯಾಖ್ಯಾನವಿದ್ದರೆ, ತುಘಲಕ್ ನಾಟಕದಲ್ಲಿ ತುಘಲಕನ ಪಾತ್ರದಲ್ಲಿ ಅಸಾಂಗತ್ಯವಿದೆ. ಈ ನಾಟಕ ಕಾಮುವಿನ ಕ್ಯಾಲಿಗುಲಕ್ಕೆ ಬಹಳಷ್ಟು ಋಣಿಯಾಗಿದೆ. ಹಯವದನ ಬಹಳ ತಂತ್ರಗಳುಳ್ಳ ನಾಟಕ. ಪಾತ್ರಗಳ ವಿಶ್ಲೇಷಣೆಯ ದೃಷ್ಟಿಯಿಂದ, ತಂತ್ರದ ದೃಷ್ಟಿಯಿಂದ ಹೊಸತು-ಹಳತುಗಳ ಬೆಸುಗೆಯಿಂದ ಇವರ ನಾಟಕಗಳು ಮುಖ್ಯವಾಗುತ್ತವೆ.

ಇಂಥ ಸ್ವತಂತ್ರ ಕೃತಿಗಳ ರಚನೆಯ ಜೊತೆಗೆ ಪ್ರಪಂಚದ ಹಾಗೂ ಭಾರತದ ಇತರ ಭಾಷೆಯ ಹೊಸ ಸಂವೇದನೆಯ ಕೃತಿಗಳು ಕನ್ನಡಕ್ಕೆ ಅನುವಾದಗೊಳ್ಳುತ್ತಿವೆ. ಬಂಗಾಲಿ, ಮರಾಠಿ, ಹಿಂದಿ ಮೊದಲಾದ ಭಾಷೆಗಳಿಂದ ಕೆಲವು ಗಮನಾರ್ಹ ಕೃತಿಗಳು ಅನುವಾದಗೊಂಡಿವೆ. ಮರಾಠಿಯಿಂದ ವಿಜಯ ತೆಂಡೂಲ್ಕರ್ ಅವರ ಶಾಂತತಾ ಕೋರ್ಟ್ ಚಾಲು ಹೈ ಕನ್ನಡದಲ್ಲಿ ಸದ್ದು ವಿಚಾರಣೇ ನಡೀತಾ ಇದೆ ಎಂದೂ ಬಾದಲ್ ಸರ್ಕಾರ್ ಅವರ ಪಗಲಾ ಘೋಡಾ ಹಾಗೂ ಬಾಕಿ ಇತಿಹಾಸ್ ಎನ್.ಎಸ್.ವೆಂಕಟರಾಂ ಅವರಿಂದ ಹುಚ್ಚು ಕುದುರೆ ಹಾಗೂ ಬಾಕಿ ಇತಿಹಾಸ ಎಂದೂ ಬಿ.ವಿ.ಕಾರಂತರಿಂದ ಏವಂ ಇಂದ್ರಜಿತ್ ಅದೇ ಹೆಸರಿನಲ್ಲೂ ಮೋಹನ್ ರಾಕೇಶ್ ಅವರ ಆಷಾಢ್ ಕೆ ಏಕ್ ದಿನ್ ಸಿದ್ಧಲಿಂಗಪಟ್ಟಣ ಶೆಟ್ಟಿ ಅವರಿಂದ ಆಷಾಢದಲ್ಲಿ ಒಂದು ದಿನ ಎಂದೂ ಅನುವಾದಗೊಂಡಿವೆ. ಬರ್ನಾರ್ಡ್ ಷಾ ಅವರ 'ಆರಮ್ಸ್ ಅಂಡ್ ದಿ ಮ್ಯಾನ್' ನಾಟಕವನ್ನು 'ಚಾಕೊಲೇಟ್ ಸಿಪಾಯಿ' ಎಂದು ಎಚ್.ಎ.ರಾಮಕೃಷ್ಣ ಅನುವಾದ ಮಾಡಿದ್ದಾರೆ. ಈ ಮೇಲಿನ ವಿವರಣೆಗಳು ಸಾಹಿತ್ಯಕೃತಿಗಳ ದೃಷ್ಟಿಯಿಂದ, ರಂಗಭೂಮಿಯ ದೃಷ್ಟಿಯಿಂದ ಕನ್ನಡ ನಾಟಕ ಸಂಪತ್ತು ಚೆನ್ನಾಗಿಯೇ ಬೆಳೆಯುತ್ತ ಬಂದಿದೆ ಎಂಬುದನ್ನು ವಿಶದಪಡಿಸುತ್ತದೆ.

ಅನುವಾದ, ರೂಪಾಂತರ, ಸ್ವತಂತ್ರ ರಚನೆ - ಹೀಗೆ ವೈವಿಧ್ಯಮಯವಾಗಿ ಬೆಳೆದುಕೊಂಡು ಬಂದ ಕನ್ನಡ ನಾಟಕ-ರಂಗಭೂಮಿಯ ಮೇಲೆ ಆಗಾಗ್ಗೆ ಪಾಶ್ಚಾತ್ಯ ಗಾಳಿ ಬೀಸಿದೆ. ನಾಟಕಗಳು ರಚನೆ ದೃಷ್ಟಿ ಹಾಗೂ ಮೌಲ್ಯಗಳ ದೃಷ್ಟಿಯಿಂದ ಒಂದು ಹಂತವನ್ನು ಮುಟ್ಟಿವೆ. ಕನ್ನಡ ವೃತ್ತಿ ರಂಗಭೂಮಿ ನಾಟಕ ಸಾಹಿತ್ಯರಚನೆಗೆ ಸ್ಫೂರ್ತಿ ನೀಡಿದೆ. ಹವ್ಯಾಸಿ ರಂಗಭೂಮಿ ಸಾಹಿತ್ಯರಚನೆಯ ದೃಷ್ಟಿಯಿಂದ ಹಾಗೂ ಪ್ರಯೋಗದ ದೃಷ್ಟಿಯಿಂದ ಮುಖ್ಯವಾಗಿದೆ. ಎಪ್ಪತ್ತರ ದಶಕದಲ್ಲಿ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಿಗೆ ಸಿಕ್ಕಿದ್ದಷ್ಟೇ ಪ್ರಾಮುಖ್ಯತೆ ನಾಟಕ ರಚನೆ ಮತ್ತು ರಂಗಭೂಮಿ ಪ್ರದರ್ಶನಗಳಿಗೂ ಸಿಕ್ಕಿತು. ಕನ್ನಡದಲ್ಲಿ ನಾಟಕಗಳಿಲ್ಲ ಎಂಬ ಗೊಣಗಾಟದ ನಡುವೆಯೇ ಗಣನೀಯವಾದ ಸಂಖ್ಯೆಯಲ್ಲಿ ನಾಟಕಗಳು ರಚಿತವಾದವು. ಹಾಗೆಯೇ ಗಣನೀಯವಾದ ಸಂಖ್ಯೆಯಲ್ಲಿ ಬೇರೆಬೇರೆ ಭಾಷೆಗಳಿಂದ ನಾಟಕಗಳು ಕನ್ನಡಕ್ಕೆ ಅನುವಾದಗೊಂಡವು. ಅತಿ ಹೆಚ್ಚಿನ ನಾಟಕಗಳು ರಚನೆಯಾಗುವುದಕ್ಕೆ ಕಾರಣ ರಂಗಭೂಮಿಯ ಸ್ವರೂಪದಲ್ಲಿ ಆದ ಬದಲಾವಣೆಗಳು. ಎಪ್ಪತ್ತರ ದಶಕದಲ್ಲಿ ರಂಗಭೂಮಿ ಅತ್ಯಂತ ಕ್ರಿಯಾಶೀಲವಾಗಿ ಕೆಲಸ ಮಾಡತೊಡಗಿತು. ಅದರಿಂದಾಗಿ ನಾಟಕ ಎಂಬ ಪ್ರಕಾರವನ್ನು ನೋಡುವ ದೃಷ್ಟಿಯೇ ಬದಲಾಗತೊಡಗಿತು. ನಾಟಕವನ್ನು ಏಕಕಾಲದಲ್ಲಿ 'ಲಿಖಿತ ಕೃತಿ'ಯನ್ನಾಗಿಯೂ 'ರಂಗಕೃತಿ'ಯನ್ನಾಗಿಯೂ ಪರಿಭಾವಿಸುವ ದೃಷ್ಟಿ ಹುಟ್ಟಿಕೊಂಡಿತು. (ಎಸ್.ಎ.)

ಎಪ್ಪತ್ತರ ದಶಕದಲ್ಲಿ ಕರ್ನಾಟಕದಲ್ಲಿ ಹುಟ್ಟಿಕೊಂಡ ಕೆಲವು ಸಾಮಾಜಿಕ ಮತ್ತು ಸಾಂಸ್ಕೃತಿಕ ಚಳವಳಿಗಳು ನಾಟಕ ರಚನೆಯ ಮೇಲೆ ಅಗಾಧವಾದ ಪರಿಣಾಮ ಬೀರಿದವು. ದಲಿತ ಸಂಘರ್ಷ ಸಮಿತಿ, ರೈತ ಸಂಘಟನೆ, ಎಡಪಂಥೀಯ ಸಂಘಟನೆ ಮತ್ತು ಬಂಡಾಯ ಸಾಹಿತ್ಯ ಸಂಘಟನೆ ತಮ್ಮ ಪ್ರಖರವಾದ ರಾಜಕೀಯ, ಸಾಮಾಜಿಕ, ಆರ್ಥಿಕ ಚಿಂತನೆಗಳ ಹಿನ್ನೆಲೆಯಲ್ಲಿ ಇಡೀ ಸಮಾಜದ ಚಾರಿತ್ರಿಕ ದ್ವಂದ್ವಮಾನ ಮತ್ತು ಗತಿತಾರ್ಕಿಕತೆಯನ್ನು ವಿಶ್ಲೇಷಿಸತೊಡಗಿದ್ದವು. ಈ ಎಲ್ಲಾ ಪ್ರಭಾವಗಳೂ ನಾಟಕ ಬರೆವಣಿಗೆಯ ಮೇಲೆ ನೇರ ಪ್ರಭಾವ ಬೀರತೊಡಗಿದವು. ಇದರಿಂದ ರಾಜಕೀಯ ನೆಲೆಯ ಅನೇಕ ಆಯಾಮಗಳನ್ನು ವಿಶ್ಲೇಷಿಸುವ ನಾಟಕಗಳು ಬರತೊಡಗಿದವು. ಅಲ್ಲಿಯವರೆಗೆ ನಾಟಕ ಬರೆಯುತ್ತಿದ್ದ ಗಿರೀಶ್ ಕಾರ್ನಾಡ್, ಚಂದ್ರಶೇಖರ ಕಂಬಾರ, ಚಂದ್ರಶೇಖರ ಪಾಟೀಲ, ಜಿ.ಬಿ.ಜೋಷಿ ಮೊದಲಾದ ನಾಟಕಕಾರರ ಮೇಲೂ ಇದರ ಪ್ರಭಾವ ಕಂಡುಬರತೊಡಗಿತು.

ಎಪ್ಪತ್ತೈದರ ಹಿಂದೆ ವಾಸ್ತವವಾದದ ನೆಲೆಯಲ್ಲಿ, ಅಸಂಗತವಾದದ ನೆಲೆಯಲ್ಲಿ ಹಾಗೂ ಅಭಿವ್ಯಕ್ತಿವಾದದ ನೆಲೆಯಲ್ಲಿ ನಾಟಕ ಬರೆಯುತ್ತಿದ್ದ ಕೈಲಾಸಂ, ಶ್ರೀರಂಗ, ಲಂಕೇಶ್, ಜಡಭರತ, ಗಿರೀಶ್ ಕಾರ್ನಾಡ್, ಚಂದ್ರಶೇಖರ ಕಂಬಾರ ಮೊದಲಾದವರು ಎಪ್ಪತ್ತಾರರ ಅನಂತರ ನಾಟಕ ಬರೆಯಲು ಪ್ರಾರಂಭಿಸಿದ ನಾಟಕಕಾರರಿಗೂ ವಸ್ತು ಮತ್ತು ತಂತ್ರದ ದೃಷ್ಟಿಯಿಂದ ಸಾಕಷ್ಟು ವ್ಯತ್ಯಾಸಗಳಿವೆ. ಎಪ್ಪತ್ತಾರರ ಹೊತ್ತಿಗಾಗಲೇ ಜರ್ಮನಿಯ ನಾಟಕಕಾಕರ ಬರ್ಟೋಲ್ಟ್ ಬ್ರೆಕ್ಟ್‌ನ "ಎಪಿಕ್ ತಂತ್ರ" ರಂಗಭೂಮಿಯನ್ನು ಪ್ರವೇಶಿಸಿಯಾಗಿತ್ತು. ನಾಟಕದ ವಸ್ತು ಸೈದ್ಧಾಂತಿಕ ನೆಲೆಯಲ್ಲಿ ರೂಪುಗೊಳ್ಳುತ್ತಿತ್ತು. ಜಾತಿ ಸಂಘರ್ಷ, ವರ್ಗ ಸಂಘರ್ಷ, ರಾಜಕೀಯ ಶಿಥಿಲತ್ವ, ಸಾಮಾಜಿಕ ಅಸಮಾನತೆ - ಹೀಗೆ ಸಮಕಾಲೀನ ವೈರುಧ್ಯಗಳು ನಾಟಕದ ವಸ್ತುಗಳಾಗಿ ಕಾಣಿಸಿಕೊಳ್ಳತೊಡಗಿದವು.

ಈ ಅವಧಿಯಲ್ಲಿ ಹಿರಿಯ ತಲೆಮಾರಿನ ಅನೇಕ ನಾಟಕಕಾರರು ತಮ್ಮ ನಾಟಕದ ಬರೆವಣಿಗೆಯನ್ನು ಮುಂದುವರೆಸಿದರು. ಅವರ ಜೊತೆ ಜೊತೆಗೇ ಅನೇಕ ಹೊಸಪೀಳಿಗೆಯ ನಾಟಕಕಾರರೂ ಹುಟ್ಟಿಕೊಂಡರು. ಹಿರಿಯ ನಾಟಕಕಾರರ ನಾಟಕಗಳು ವಸ್ತು ಮತ್ತು ತಂತ್ರದ ದೃಷ್ಟಿಯಿಂದ ಸಾಕಷ್ಟು ಬದಲಾವಣೆಗೂ ಒಳಪಟ್ಟವು. ಗಿರೀಶ್ ಕಾರ್ನಾಡ್ ಅವರು ತಲೆದಂಡ, ನಾಗಮಂಡಲ, ಅಗ್ನಿ ಮತ್ತು ಮಳೆ ಎಂಬ ನಾಟಕಗಳನ್ನು ರಚಿಸಿದರು. ತಲೆದಂಡ ಹನ್ನೆರಡನೆಯ ಶತಮಾನದ ಶರಣ ಚಳವಳಿಯ ಹಿನ್ನೆಲೆಯ ನಾಟಕ. ಧರ್ಮ ಮತ್ತು ರಾಜಕೀಯದ ಮಧ್ಯದ ಸಂಘರ್ಷದ ಕಥೆ. 'ನಾಗಮಂಡಲ' ಜನಪದ ಕಥೆಯನ್ನಾಧರಿಸಿದ ನಾಟಕ. ಗಿರೀಶರನ್ನು ಅಪಾರವಾಗಿ ಕಾಡಿದ ಸೀಳು ವ್ಯಕ್ತಿತ್ವದ ಕತೆ ಇಲ್ಲಿದೆ. 'ಅಗ್ನಿ ಮತ್ತು ಮಳೆ' ಮಹಾಭಾರತದ ಉಪಾಖ್ಯಾನವೊಂದನ್ನು ಆಧರಿಸಿದ ನಾಟಕ. ವೈದಿಕಾಚರಣೆಗಳ ಶುಷ್ಕತೆ ಹಾಗೂ ದೇಸೀ ಮೂಲಗಳ ಫಲವತ್ತತೆಯನ್ನು ಅತ್ಯಂತ ಸಂಕೀರ್ಣವಾಗಿ ಹಿಡಿದಿಡುವ ನಾಟಕ. ಶತಮಾನದ ಕಡೆಯಲ್ಲಿ ಗಿರೀಶರು ಟಿಪ್ಪು ಕಂಡ ಕನಸು ಎಂಬ ಇನ್ನೊಂದು ನಾಟಕ ಬರೆದರು. ಇದು ಮುಖ್ಯವಾಗಿ ಸಾಮ್ರಾಜ್ಯಶಾಹಿ ಬ್ರಿಟಿಷರ ವಿರುದ್ಧ ಹೋರಾಡಿದ ಟಿಪ್ಪು ಸುಲ್ತಾನನ ಆಶೋತ್ತರಗಳನ್ನು ಪ್ರತಿಫಲಿಸುತ್ತದೆ. ಆದರೆ ಇದು ಗಿರೀಶರ ಮಿಕ್ಕ ನಾಟಕಗಳಷ್ಟು ಪರಿಣಾಮಕಾರಿಯಾಗಿ ಮೂಡಿ ಬಂದಿಲ್ಲ. ಈ ಅವಧಿಯಲ್ಲಿಯೂ ಗಿರೀಶ್ ಕಾರ್ನಾಡ್ ಕನ್ನಡದ ಮಹತ್ವದ ನಾಟಕಕಾರರಾಗಿಯೇ ಉಳಿದಿದ್ದಾರೆ ಎಂಬುದು ಗಮನಾರ್ಹ. ಪಿ.ಲಂಕೇಶ್ ಈ ಅವಧಿಯಲ್ಲಿ ಗುಣಮುಖ ನಾಟಕ ಬರೆದರು. ಇದು ಭಾರತದ ಮೇಲೆ ಆಕ್ರಮಣ ಮಾಡಿದ ಪರ್ಷಿಯನ್ ದೊರೆ ನಾದಿರ್‌ಶಾ ದೈಹಿಕವಾಗಿ ಮತ್ತು ಮಾನಸಿಕವಾಗಿ ಅಸ್ವಸ್ಥನಾದುದರ ಹಿನ್ನೆಲೆ ಹೊಂದಿದೆ. ನಾಟಿವೈದ್ಯನೊಬ್ಬನ ಮಾನವೀಯ ಚಿಕಿತ್ಸೆಯಿಂದ ಅವನು ಸ್ವಸ್ಥನಾಗುತ್ತಾ ಹೋಗುತ್ತಾನೆ. ನಾಟಕವನ್ನು ಪ್ರಧಾನ ಸೃಜನಶೀಲ ಅಭಿವ್ಯಕ್ತಿಯಾಗಿ ಮುಂದುವರೆಸಿದ ಇನ್ನೊಬ್ಬ ಪ್ರಮುಖ ನಾಟಕಕಾರರೆಂದರೆ ಚಂದ್ರಶೇಖರ ಕಂಬಾರ. ಇವರು ಹುಲಿಯ ನೆರಳು, ಸಾಂಬಶಿವ ಪ್ರಹಸನ, ಹರಕೆಯ ಕುರಿ, ಜೈಸಿದನಾಯ್ಕ, ಸಿರಿಸಂಪಿಗೆ, ತುಕ್ರನ ಕನಸು, ನಾಯಿಕತೆ, ಮಹಾಮಾಯಿ ಮುಂತಾದ ನಾಟಕಗಳನ್ನು ರಚಿಸಿದರು. ಹರಕೆಯ ಕುರಿ ಮತ್ತು ಜೈಸಿದನಾಯ್ಕ ಮುಖ್ಯವಾಗಿ ಸಮಕಾಲೀನ ರಾಜಕೀಯ ನಾಟಕಗಳು. 'ತುಕ್ರನ ಕನಸು' ಚೀನಿ ಕತೆಯೊಂದರಿಂದ ಪ್ರೇರಿತವಾದ ಸಮಕಾಲೀನ ವಸ್ತುವನ್ನು ಉಳ್ಳದ್ದು. ಕಂಬಾರರ ನಿಜವಾದ ನಾಟ್ಯ ಪ್ರತಿಭೆ ಉಜ್ವಲವಾಗಿ ಬೆಳಗಿರುವುದು ಅವರ ಜಾನಪದೀಯ ಹಿನ್ನೆಲೆಯ ನಾಟಕಗಳಲ್ಲಿ. ಅದ್ಭುತವಾದ ಹಾಸ್ಯಪ್ರಜ್ಞೆ, ಜಾನಪದೀಯ ಮತ್ತು ಪೌರಾಣಿಕ ರೂಪಗಳನ್ನು ಸಮಕಾಲೀನವಾಗಿ ವ್ಯಾಖ್ಯಾನಗೊಳಿಸುವ ಇವರ ಪ್ರತಿಭೆ ಬೆರುಗುಗೊಳಿಸುವಂಥದ್ದು. ಇವರು ಕನ್ನಡ ನಾಟಕ ಸ್ವರೂಪಕ್ಕೆ ಬೆರಗಿನ ಬೆಡಗನ್ನು ನೀಡಿದವರು. ಇವರು ಮಕ್ಕಳ ನಾಟಕಗಳನ್ನೂ ಅಷ್ಟೇ ಯಶಸ್ವಿಯಾಗಿ ರಚಿಸಿದ್ದಾರೆ. ಇವರ ಕಿಟ್ಟಿಕಥೆ, ಪುಷ್ಪರಾಣಿ, ಅಲಿಬಾಬಾ ಮತ್ತು ನಲವತ್ತು ಮಂದಿ ಕಳ್ಳರು, ಮಕ್ಕಳ ನಾಟಕದ ಪರಿಕಲ್ಪನೆಯನ್ನು ವಿಸ್ತರಿಸುವಲ್ಲಿ ದೊಡ್ಡಪಾತ್ರ ವಹಿಸಿವೆ. ಕನ್ನಡ ನಾಟಕ ಸಾಹಿತ್ಯವನ್ನು ಸಮೃದ್ಧಿಗೊಳಿಸಿದ ಶ್ರೀರಂಗರು ಈ ಅವಧಿಯಲ್ಲಿ ನೀವೇ ಹೇಳಿರಿ ಮತ್ತು ಅಗ್ನಿಸಾಕ್ಷಿ ಎಂಬ ಎರಡು ನಾಟಕಗಳನ್ನು ಪ್ರಕಟಿಸಿದ್ದಾರೆ. ಜಿ.ಬಿ.ಜೋಷಿಯವರು ನಾನೇ ಬಿಜ್ಜಳ, ಪರಿಮಳದವರು ಎಂಬ ನಾಟಕಗಳನ್ನು ಪ್ರಕಟಸಿದ್ದಾರೆ.

ಎಂಬತ್ತರ ದಶಕದಲ್ಲಿ ಕನ್ನಡ ನಾಟಕ ಸಾಹಿತ್ಯದಲ್ಲಿ ಹೊಸದೊಂದು ರೀತಿಯ ಬೆಳೆವಣಿಗೆ ಕಾಣತೊಡಗಿತು. ಅನೇಕ ಜನ ಯುವ ನಾಟಕಕಾರರು ನಾಟಕ ಬರೆಯಲು ಆರಂಭಿಸಿದರು. ಈ ರೀತಿ ಯುವ ನಾಟಕಕಾರರು ದೊಡ್ಡ ಸಂಖ್ಯೆಯಲ್ಲಿ ನಾಟಕಕಾರರಾಗಿ ಹೊರಹೊಮ್ಮುವುದಕ್ಕೆ ಮುಖ್ಯ ಕಾರಣ ರಂಗಭೂಮಿಯಲ್ಲಾದ ಬದಲಾವಣೆ, ಎಡಪಂಥೀಯ ಚಳವಳಿ, ರೈತ ಸಂಘಟನೆ, ದಲಿತ-ಬಂಡಾಯ ಸಂಘಟನೆಗಳು ತಮ್ಮ ಪ್ರಖರ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಿಂತನೆಗಳನ್ನು ಬರೆವಣಿಗೆಯ ಮೂಲಕ ಅಭಿವ್ಯಕ್ತಿಸಲು ತೊಡಗಿದವು. ಅಂಥ'ವರಿಗೆ ರಂಗಭೂಮಿ ಬಹಳ ಮುಖ್ಯವಾದ ಮಾಧ್ಯಮವಾಗಿ ಕಂಡುಬಂದಿತು. ಇದರ ಫಲವಾಗಿ ರಾಜಕೀಯ ವಸ್ತುವಿನ, ಸಾಮಾಜಿಕ ಬದ್ಧತೆಯ ಹಿನ್ನೆಲೆಯ ನಾಟಕಗಳು ಹೆಚ್ಚಿನ ಸಂಖ್ಯೆಯಲ್ಲಿ ಬರತೊಡಗಿದವು. ನಾಟಕ ಮತ್ತು ರಂಗಭೂಮಿಯ ಮೂಲಕ ಸಾಮಾಜಿಕ ಜಾಗೃತಿಯನ್ನುಂಟುಮಾಡುವ ಉದ್ದೇಶ ಇದರ ಹಿನ್ನೆಲೆಗಿತ್ತು. ಬದ್ಧತೆಯೊಂದಿಗೆ ನಾಟಕ ಬರೆಯುವುದರ ಜೊತೆಗೆ, ಬದ್ಧತೆಯ ವಸ್ತುವನ್ನುಳ್ಳ ಕಥೆ, ಕಾದಂಬರಿಗಳನ್ನು ನಾಟಕಗಳನ್ನಾಗಿ ಪರಿವರ್ತಿಸ ತೊಡಗಿದರು. ಹಾಗೆಯೇ ಬೇರೆ ಬೇರೆ ಭಾಷೆಗಳಿಂದ ನಾಟಕಗಳನ್ನು ಭಾಷಾಂತರಿಸತೊಡಗಿದರು. ಇಲ್ಲಿಯವರೆಗೆ ಅಷ್ಟಾಗಿ ಕನ್ನಡದಲ್ಲಿ ಪರಿಚಯವಿರದ ಅನೇಕ ಭಾಷಾನೆಲೆಯ ನಾಟಕಕಾರರು ಕನ್ನಡಕ್ಕೆ ಪ್ರವೇಶಿಸಿದರು. ಮಕ್ಕಳ ನಾಟಕಗಳೂ ಈ ಅವಧಿಯಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡವು. ರಾಷ್ಟ್ರೀಯ ನಾಟಕ ಶಾಲೆ (ಎನ್.ಎಸ್.ಡಿ.), ಹೆಗ್ಗೋಡಿನ ನೀನಾಸಂ ನಾಟಕ ಶಾಲೆ, ಹಾಗೂ ಅನೇಕ ರಂಗತರಬೇತಿ ಶಿಬಿರಗಳಲ್ಲಿ ತರಬೇತಿ ಪಡೆದುಕೊಂಡ ರಂಗನಿರ್ದೇಶಕರು ಈ ರೀತಿಯ ನಾಟಕಗಳ ಹುಟ್ಟಿಗೆ ಕಾರಣರಾದರೆಂಬುದು ಮುಖ್ಯ ವಿಷಯ. ಪ್ರಧಾನಧಾರೆಯ ನಾಟಕಗಳ ಜೊತೆಗೆ ಬೀದಿನಾಟಕಗಳ ಹುಟ್ಟು ಕೂಡಾ ಇದೇ ಸಂದರ್ಭದಲ್ಲಿ ದೊಡ್ಡ ಪ್ರಮಾಣದಲ್ಲಿಯೇ ಆಯಿತು.

ಈ ಅವಧಿಯಲ್ಲಿ ಬಂದ ಪ್ರಮುಖ ನಾಟಕಕಾರರೆಂದರೆ ಬಿ.ವಿ.ವೈಕುಂಠರಾಜು, ಎಚ್.ಎಸ್.ಶಿವಪ್ರಕಾಶ್, ಪ್ರಸನ್ನ, ಲಿಂಗದೇವರು ಹಳೆಮನೆ, ಸಿದ್ಧಲಿಂಗಯ್ಯ, ಹೂಲಿಶೇಖರ್, ಟಿ.ಎನ್.ಸೀತಾರಾಮ್, ಕೆ.ವಿ.ಸುಬ್ಬಣ್ಣ, ಕೆ.ವಿ.ಅಕ್ಷರ, ಎಚ್.ಎಸ್.ವೆಂಕಟೇಶಮೂರ್ತಿ, ಗೋಪಾಲ ವಾಜಪೇಯಿ, ನಿಸರ್ಗಪ್ರಿಯ, ಕಿ.ರಂ.ನಾಗರಾಜ ಮೊದಲಾದವರು.

ಬಿ.ವಿ.ವೈಕುಂಠರಾಜು ಅವರು ಸಂದರ್ಭ, ಸನ್ನಿವೇಶ ಮತ್ತು ಕಾನನ್‌ದೇವಿ ಎಂಬ ನಾಟಕಗಳನ್ನು ಬರೆದಿದ್ದಾರೆ. ಇವರ ನಾಟಕಗಳು ಸಮಕಾಲೀನ ರಾಜಕೀಯ ವಸ್ತುಗಳನ್ನಾಧರಿಸಿವೆ. ಕೆ.ವಿ.ನಾರಾಯಣ ಅವರು ಸಂಸರ 'ವಿಗಡ ವಿಕ್ರಮರಾಯ' ನಾಟಕವನ್ನು ಆಧರಿಸಿ ಹುತ್ತವ ಬಡಿದರೆ ಎಂಬ ನಾಟಕವನ್ನು ರಚಿಸಿದ್ದಾರೆ. ಬರ್ಟೋಲ್ಟ್ ಬ್ರೆಕ್ಟ್‌ನ ಎಪಿಕ್‌ತಂತ್ರವನ್ನು ಅತ್ಯಂತ ಯಶಸ್ವಿಯಾಗಿ ಅಳವಡಿಸಿಕೊಂಡಿರುವ ಈ ನಾಟಕ ಇತಿಹಾಸವನ್ನು ಸಮಕಾಲೀನವಾಗಿ ಅರ್ಥೈಸುವ ಹೊಸದೊಂದು ಕ್ರಮವನ್ನು ಪರಿಚಯಿಸಿತ್ತು. ಟಿ.ಎನ್.ಸೀತಾರಾಮ್ ಅವರ ಆಸ್ಫೋಟ, ನಮ್ಮೊಳಗೊಬ್ಬ ನಾಜೂಕಯ್ಯ ಎಂಬ ನಾಟಕಗಳು ಕನ್ನಡದಲ್ಲಿ ಬಂದ ಅತ್ಯಂತ ಸಶಕ್ತ ರಾಜಕೀಯ ನಾಟಕಗಳು. ಇವು ಸಮಕಾಲೀನ ರಾಜಕೀಯ ಮತ್ತು ಸಾಮಾಜಿಕ ಸಂಬಂಧಗಳನ್ನು ಅವುಗಳ ಸಂಕೀರ್ಣ ಸ್ತರದಲ್ಲಿ ಹಿಡಿದಿಡಬಲ್ಲ ಅಪರೂಪದ ನಾಟಕಗಳು. ದಲಿತಕವಿ ಸಿದ್ಧಲಿಂಗಯ್ಯನವರು ಪಂಚಮ, ನೆಲಸಮ ಮತ್ತು ಏಕಲವ್ಯ ಎಂಬ ನಾಟಕಗಳನ್ನು ಬರೆದಿದ್ದಾರೆ. ದಲಿತರ ಸ್ಥಿತಿ, ನೋವು, ಅವಮಾನ ಮತ್ತು ಜಾಗೃತಿಗಳನ್ನು ಕೇಂದ್ರವಾಗಿಟ್ಟುಕೊಂಡು ಬರೆದ ನಾಟಕಗಳಿವು. ದಲಿತ ಸಾಹಿತ್ಯಕ್ಕೆ ಸಂದ ಮಹತ್ವದ ಕೊಡುಗೆಗಳು. ಬಹುಮುಖ್ಯವಾಗಿ 'ಏಕಲವ್ಯ' ನಾಟಕದಲ್ಲಿ ಅವರು ಏಕಲವ್ಯ ಬಲಗೈ ಹೆಬ್ಬೆರಳನ್ನು ಕಳೆದುಕೊಂಡರೂ ಎಡಗೈ ಹೆಬ್ಬೆರಳಿನ ಮೂಲಕ ಧನುರ್ವಿದ್ಯೆಯನ್ನು ಮುಂದುವರೆಸುವ ರೀತಿಯ ಬದಲಾವಣೆಯ ಮೂಲಕ ದಲಿತರ ಕಲಿಯುವ ಛಲವನ್ನು ಅತ್ಯಂತ ಪ್ರಖರವಾಗಿ ಚಿತ್ರಿಸಿದ್ದಾರೆ.

ಈ ತಲೆಮಾರಿನ ನಾಟಕಕಾರರಲ್ಲಿ ಅತಿ ಹೆಚ್ಚಿನ ಮತ್ತು ಅತಿಮಹತ್ವದ ನಾಟಕಗಳನ್ನು ಬರೆದಿರುವರು ಎಚ್.ಎಸ್.ಶಿವಪ್ರಕಾಶ್, ಮಹಾಚೈತ್ರ, ಸುಲ್ತಾನ್ ಟಿಪ್ಪು, ಮಾದಾರಿ ಮಾದಯ್ಯ, ಮಂಟೇಸ್ವಾಮಿ ಕಥಾಪ್ರಸಂಗ, ಷೇಕ್ಸ್‌ಪಿಯರನ ಸ್ವಪ್ನನೌಕೆ, ಮಧುರೆಕಾಂಡ, ಮಾಧವಿ ಮಾತೃಕಾ ಇವು ಇವರು ಬರೆದ ನಾಟಕಗಳು. 'ಮಹಾಚೈತ್ರ' ಹನ್ನೆರಡನೆಯ ಶತಮಾನದ ವಚನ ಚಳವಳಿಯನ್ನು ದುಡಿಯುವ ವರ್ಗದ ನೆಲೆಯಲ್ಲಿ ಕಂಡಿರುವ ನಾಟಕ. 'ಸುಲ್ತಾನ್ ಟಿಪ್ಪು' ಬ್ರಿಟಿಷರ ವಿರುದ್ಧ ಹೋರಾಡಿದ ಟಿಪ್ಪುವಿನ ಹಿನ್ನೆಲೆ ಒಳಗೊಂಡಿದೆ. 'ಮಾದಾರಿಮಾದಯ್ಯ ಮತ್ತು ಮಂಟೇಸ್ವಾಮಿ ಕಥಾ ಪ್ರಸಂಗ' ನಮ್ಮ ಪ್ರಸಿದ್ಧ ಜನಪದ ಮಹಾಕಾವ್ಯಗಳನ್ನು ಆಧರಿಸಿದ ನಾಟಕಗಳು. ತಮಿಳು ಮಹಾಕಾವ್ಯ 'ಶಿಲಪ್ಪದಿಗಾರಂ' ಆಧರಿಸಿದ ತ್ರಿವಳಿ ನಾಟಕಗಳು - ಮಧುರೆಕಾಂಡ, ಮಾಧವಿ ಮತ್ತು ಮಾತೃಕಾ ಚರಿತ್ರೆ. ಪುರಾಣಗಳ ದ್ವಂದ್ವಮಾನ ವೈರುಧ್ಯಗಳನ್ನು ಸಮಕಾಲೀನವಾಗಿ ಚಿತ್ರಿಸುವಲ್ಲಿ ಶಿವಪ್ರಕಾಶರು ಹೆಚ್ಚು ಆಸಕ್ತಿ ತೋರುತ್ತಾರೆ. ಮೂಲತಃ ಕವಿಯಾದ ಇವರು ತಮ್ಮ ನಾಟಕ ರಚನಾ ಶೈಲಿಯಲ್ಲಿ ವಸ್ತುವನ್ನು ವಿಶ್ಲೇಷಿಸುವ ಕ್ರಮದಲ್ಲಿ

ಬೇರೆ ಎಲ್ಲಾ ನಾಟಕಕಾರರಿಗಿಂತ ಅನನ್ಯವಾಗಿ ಎದ್ದುಕಾಣುತ್ತಾರೆ. ಷೇಕ್ಸ್‌ಪಿಯರನ 'ಮ್ಯಾಕ್‌ಬೆತ್' ನಾಟಕವನ್ನು ಆಧರಿಸಿ 'ಮಾರನಾಯಕ' ಎಂಬ ನಾಟಕವನ್ನು ಕನ್ನಡದ್ದೇ ಸ್ವಂತ ಕೃತಿ ಎಂಬಂತೆ ರಚಿಸಿದ್ದಾರೆ. ಪ್ರಸನ್ನ ಈ ಅವಧಿಯ ಇನ್ನೊಬ್ಬ ಮಹತ್ವದ ನಾಟಕಕಾರರು. ರಂಗನಿರ್ದೇಶಕರೂ ಆದ ಇವರು ತಮ್ಮ ನಾಟಕಗಳನ್ನು ರಂಗನಿರ್ಮಿತಿಯ ದೃಷ್ಟಿಕೋನವಿಟ್ಟುಕೊಂಡು ರಚಿಸಿದ್ದಾರೆ. ಇವರ ಒಂದು ಲೋಕ ಕಥೆ, ದಂಗೆಯ ಮುಂಚಿನ ದಿನಗಳು, ತದ್ರೂಪಿ, ಮಹಿಮಾಪುರ, ಹದ್ದುಮೀರಿದ ಹಾದಿ ಮತ್ತು ಜಂಗಮದ ಬದುಕು ಇವು ಇವರ ಪ್ರಮುಖ ನಾಟಕಗಳು. ಸಮಾಜದ ಶಿಥಿಲತ್ವವನ್ನೂ ಅವನತಿಯನ್ನೂ ಚಿತ್ರಿಸುವುದರಲ್ಲಿ ಇವರಿಗೆ ಹೆಚ್ಚಿನ ಆಸಕ್ತಿ. ವ್ಯಕ್ತಿ ಮತ್ತು ಸಮಾಜದ ಮಧ್ಯದ ಸಂಬಂಧಗಳು ಕಲುಷಿತಗೊಳ್ಳುವ ನೆಲೆಗಳನ್ನು ಅನ್ವೇಷಿಸುವ ಪ್ರಯತ್ನವನ್ನು ಇವರು ತಮ್ಮ ಬಹುತೇಕ ನಾಟಕಗಳಲ್ಲಿ ಮಾಡಿದ್ದಾರೆ. ಲಿಂಗದೇವರು ಹಳೆಮನೆಯವರ ಚಿಕ್ಕದೇವಭೂಪ, ಹೈದರ್, ಅಂತೆಂಬರಗಂಡ - ಇವು ಮೈಸೂರಿನ ಇತಿಹಾಸದ ನೆಲೆಯಲ್ಲಿ ಎಡಪಂಥೀಯ ದೃಷ್ಟಿಕೋನದಿಂದ ಬರೆದ ನಾಟಕಗಳು. ಇತಿಹಾಸ ಇರುವುದು ಪುನರ್ ಸೃಷ್ಟಿಸುವುದಕ್ಕಲ್ಲ ಪುನರ್‌ಪ್ರತಿಪಾದಿಸುವುದಕ್ಕೆ ಎಂಬ ಧೋರಣೆಯನ್ನು ಇವು ಎತ್ತಿ ಹಿಡಿಯುತ್ತವೆ. ಕಿ.ರಂ.ನಾಗರಾಜ ಅವರು ನೀಗಿಕೊಂಡ ಸಂಸ, ಕಾಲಜ್ಞಾನಿ ಕನಕ ಎಂಬ ಎರಡು ಮಹತ್ವದ ನಾಟಕಗಳನ್ನು ಬರೆದಿದ್ದಾರೆ. ನೀಗಿಕೊಂಡ ಸಂಸ ಕನ್ನಡದ ಖ್ಯಾತ ನಾಟಕಕಾರರಾದ ಸಂಸ ಅವರ ಬದುಕನ್ನು ಕುರಿತದ್ದು. ಕಾಲಜ್ಞಾನಿ ಕನಕ ಕನಕದಾಸರನ್ನು ಕುರಿತದ್ದು. ಈ ಇಬ್ಬರು ವ್ಯಕ್ತಿಗಳ ಸಂಕೀರ್ಣ ವ್ಯಕ್ತಿತ್ವವನ್ನು ಅತ್ಯಂತ ವಿಶಿಷ್ಟ ರೀತಿಯಲ್ಲಿ ನಾಟಕವಾಗಿಸಲಾಗಿದೆ. ಟಿ.ಎನ್.ನರಸಿಂಹನ್ ಅವರು ಕೈಲಾಸಂ ಜೀವನವನ್ನಾಧರಿಸಿ ಟಿಪಿಕಲ್ ಟಿ.ಪಿ.ಕೈಲಾಸಂ ಎಂಬ ಏಕವ್ಯಕ್ತಿ ಪ್ರಸ್ತುತಿಯ ನಾಟಕವನ್ನು ರಚಿಸಿದ್ದರು. ಅದಕ್ಕಿಂತ ಭಿನ್ನವಾಗಿ ನಿಲ್ಲುವ ಸಂಸರ ನಾಟಕವನ್ನು ಕಿ.ರಂ.ನಾಗರಾಜ ರಚಿಸಿರುವುದು ವಿಶೇಷವಾಗಿ ಉಲ್ಲೇಖಾರ್ಹ. ನಿಸರ್ಗಪ್ರಿಯ ಅವರು ಪುರಾಣ ಮತ್ತು ಜನಪದ ಕಥೆಗಳನ್ನು ಆಯ್ಕೆಮಾಡಿಕೊಂಡು ನಾಟಕಗಳನ್ನು ಬರೆದಿದ್ದಾರೆ. ಚೋರಪುರಾಣ, ತಿರುಕರಾಜ, ವ್ಯವಸ್ಥೆ, ಶುನಶ್ಯೇಪ, ಯಶೋಧರ ಚಕ್ರವರ್ತಿ, ಜುಂಜಪ್ಪ ಇವು ಇವರು ರಚಿಸಿದ ನಾಟಕಗಳು. ಸರಸಮಯವಾದ ಕಥಾ ನಿರೂಪಣೆ, ಲವಲವಿಕೆಯ ಸಂಭಾಷಣೆ, ಸರಳವಾದ ಪಾತ್ರರಚನೆ ನಿಸರ್ಗಪ್ರಿಯರ ನಾಟಕಗಳ ಲಕ್ಷಣ.

ಉತ್ತರ ಕರ್ನಾಟಕದಿಂದ ಬಂದ ಯುವಪೀಳಿಗೆಯ ನಾಟಕಕಾರರಲ್ಲಿ ಹೂಲಿಶೇಖರ ಮುಖ್ಯರು. ಇವರು ಕಲ್ಯಾಣದಲ್ಲಿ ಕ್ರಾಂತಿ, ಹಾವು ಹರಿದಾಡತಾವ, ಅರಗಿನ ಬೆಟ್ಟ ಮುಂತಾದ ನಾಟಕಗಳನ್ನು ಬರೆದಿದ್ದಾರೆ. ಸಮಕಾಲೀನ ಸಾಮಾಜಿಕ ಸಮಸ್ಯೆಯನ್ನು ಜಾನಪದ ಚೌಕಟ್ಟಿನಲ್ಲಿ ಅತ್ಯಂತ ಆಕರ್ಷಣೀಯವಾಗಿ ಹೇಳುವ ನಾಟಕೀಯತೆ ಹೂಲಿ ಶೇಖರ್‌ರವರಿಗೆ ಸಿದ್ಧಿಸಿದೆ. ಆದರೆ ಸಮಸ್ಯೆಯನ್ನು ಇವರು ನೋಡುವ ಸರಳ ದೃಷ್ಟಿಯಿಂದಾಗಿ ಇವರ ನಾಟಕಗಳು ಗಾಢವಾಗಿ ತಟ್ಟುವುದಿಲ್ಲ. ಎಚ್.ಎಸ್.ವೆಂಕಟೇಶಮೂರ್ತಿಯವರು ಅಗ್ನಿವರ್ಣ, ಚಿತ್ರಪಟ ಮತ್ತು ಉರಿಯ ಉಯ್ಯಾಲೆ ಎಂಬ ಮೂರು ನಾಟಕಗಳನ್ನು ಪುರಾಣದ ವಸ್ತುಗಳನ್ನಾಧರಿಸಿ ಮರು ಸೃಷ್ಟಿಸಿದ್ದಾರೆ. ಆಕರ್ಷಕ ಮಾತುಗಾರಿಕೆ ಈ ನಾಟಕಗಳ ಪ್ರಮುಖ ಆಕರ್ಷಣೆ. ಉರಿಯ ಉಯ್ಯಾಲೆ ಸ್ತ್ರೀವಾದಿ ನೆಲೆಯಲ್ಲಿ ದ್ರೌಪದಿಯನ್ನು ಚಿತ್ರಿಸಿರುವ ನಾಟಕ.

ಒಂದೋ ಎರಡೋ ನಾಟಕಗಳನ್ನು ಬರೆದು ಕನ್ನಡ ನಾಟಕ ಸಾಹಿತ್ಯಕ್ಕೆ ವಿಶಿಷ್ಟವಾದ ಕೊಡುಗೆ ನೀಡಿರುವ ಅನೇಕ ಯುವ ನಾಟಕಕಾರರಿದ್ದಾರೆ. ಅವರಲ್ಲಿ ಕೆಲವರನ್ನು ಇಲ್ಲಿ ಹೆಸರಿಸಬೇಕು. ಗೋಪಾಲ ವಾಜಪೇಯಿಯವರ 'ದೊಡ್ಡಪ್ಪ' ದೇವದಾಸಿ ಪದ್ಧತಿಯ ಹಿಂದಿರುವ ಶೋಷಣೆಯನ್ನಾಧರಿಸಿದ ನಾಟಕ. ಚಿ.ಶ್ರೀನಿವಾಸರಾಜು ಅವರ ಮೂರು ಏಕಾಂಕಗಳು, ಅಸಂಗತ ನಾಟಕಗಳನ್ನು ನೆನಪಿಸುವ ಮನುಷ್ಯನ ಉದ್ದೇಶ ರಹಿತ ಕ್ರೌರ್ಯವನ್ನು ತೋರುವ ನಾಟಕಗಳು. ಕೆ.ವಿ.ಅಕ್ಷರ ಅವರು ಪರಿಸರ ನಾಶದ ಸಮಸ್ಯೆಯನ್ನು ಎತ್ತಿಕೊಂಡು ಸಹ್ಯಾದ್ರಿಕಾಂಡ ಎಂಬ ನಾಟಕವನ್ನೂ ಕೋಮು ಸಮಸ್ಯೆಯನ್ನು ಎತ್ತಿಕೊಂಡು ಚೂರಿ ಕಟ್ಟೆ ಅರ್ಥಾತ್ ಕಲ್ಯಾಣಪುರ ಎಂಬ ಎರಡು ಮಹತ್ವದ ನಾಟಕಗಳನ್ನು ರಚಿಸಿದ್ದಾರೆ.

ಕನ್ನಡಕ್ಕೆ ಬೇರೆ ಬೇರೆ ಭಾಷೆಯಿಂದ ಸಮೃದ್ಧವಾಗಿ ನಾಟಕಗಳು ಅನುವಾದಗೊಂಡು ಬಂದಿವೆ. ಸಂಸ್ಕೃತ ರಂಗಭೂಮಿಯ ಪ್ರಸಿದ್ಧ ನಾಟಕಗಳನ್ನು ಕೆ.ವಿ.ಸುಬ್ಬಣ್ಣ ಅವರು ಕನ್ನಡದ ಪರಿಸರದಲ್ಲಿ ಪುನರ್‌ರಚಿಸುವ ಕೆಲಸವನ್ನು ಮಾಡಿದ್ದಾರೆ. ಭಗವದುಜ್ಜುಕೀಯ, ಅಭಿಜ್ಞಾನಶಾಕುಂತಲ, ಮುದ್ರಾರಾಕ್ಷಸ ಮತ್ತು ಮಾಲವಿಕಾಗ್ನಿಮಿತ್ರ ಈ ನಾಟಕಗಳನ್ನು ಸೂಳೆ ಮತ್ತು ಸನ್ಯಾಸಿ, ಲೋಕಶಾಕುಂತಲ, ಚಾಣಕ್ಯ ಪ್ರಪಂಚ ಮತ್ತು ವಿದಿಶೆಯ ವಿದೂಷಕ ಎಂದು ಪರಿವರ್ತಿಸಿದ್ದಾರೆ. ಇವುಗಳನ್ನು ಇವರು ಕನ್ನಡದ ಪರಿಸರಕ್ಕೆ ಹೊಂದಿಸಿರುವ ರೀತಿ ಅನನ್ಯವಾದುದು. ಬರ್ಟೋಲ್ಟ್ ಬ್ರೆಕ್ಟ್‌ನ ಅನೇಕ ನಾಟಕಗಳು ಈ ಅವಧಿಯಲ್ಲಿ ಕನ್ನಡಕ್ಕೆ ಬಂದಿವೆ. ಸಿ.ವೀರಣ್ಣ ಮದರ್ ನಾಟಕವನ್ನೂ ಕೆ.ವಿ.ಸುಬ್ಬಣ್ಣ, ಲಿಂಗದೇವರು ಹಳೆಮನೆ, ರಂಶಾ ಅವರು ಪ್ರತ್ಯೇಕವಾಗಿ ಗುಡ್‌ವುಮೆನ್ ಆಫ್ ಸೆಜುವಾನ್ ನಾಟಕವನ್ನೂ ಜೆ.ಆರ್.ಲಕ್ಷ್ಮಣರಾವ್ ಮತ್ತು ರಾಮಚಂದ್ರಮೂರ್ತಿ ಅವರು ಗೆಲಿಲಿಯೋ ನಾಟಕವನ್ನೂ, ಗೋಪಾಲ ವಾಜಪೇಯಿ, ಜೆ.ಆರ್.ಲಕ್ಷ್ಮಣ್‌ರಾವ್ ಅವರು ಕಕೇಷಿಯನ್ ಚಾಕ್ ಸರ್ಕಲ್ ನಾಟಕವನ್ನೂ ಲಿಂಗದೇವರು ಹಳೆಮನೆ ಅವರು ಮದರ್‌ಕರೇಜ್ ನಾಟಕವನ್ನೂ ಅನುವಾದಿಸಿದ್ದಾರೆ. ಷೇಕ್ಸ್‌ಪಿಯರನ ಅನೇಕ ನಾಟಕಗಳು ಈ ಅವಧಿಯಲ್ಲಿ ಮತ್ತೆ ಕನ್ನಡಕ್ಕೆ ಭಾಷಾಂತರಗೊಂಡಿವೆ. ಎಚ್.ಎಸ್.ಶಿವಪ್ರಕಾಶ್, ಕೆ.ಎಸ್.ಭಗವಾನ್, ನಿಸಾರ್ ಅಹಮದ್, ರಾಮಚಂದ್ರದೇವ ಪ್ರಮುಖವಾಗಿ ಈ ಭಾಷಾಂತರಗಳನ್ನು ಮಾಡಿದ್ದಾರೆ. ಸ್ಟ್ರಿಂಡ್‌ಬರ್ಗ್, ಗೊಗಲ್, ಚೆಕಾಫ್, ಲೋರ್ಕ, ಇಬ್ಸೆನ್ ಮೊದಲಾದವರ ಪ್ರಸಿದ್ಧ ನಾಟಕಗಳೂ ಕನ್ನಡಕ್ಕೆ ಬಂದಿವೆ. ಹಾಗೆಯೇ ಹಿಂದಿ, ಮರಾಠಿ ಮತ್ತು ಬೇರೆ ಭಾರತೀಯ ಭಾಷೆಗಳಿಂದಲೂ ಅನೇಕ ನಾಟಕಗಳು ಅನುವಾದಗೊಂಡಿವೆ.

ಮಕ್ಕಳ ನಾಟಕಗಳ ರಚನೆ ಹೊಸ ರೂಪವನ್ನು ಈ ಅವಧಿಯಲ್ಲಿ ಪಡೆದುಕೊಂಡಿತು. ಬೇಸಗೆ ಶಿಬಿರ ಮತ್ತು ಮಕ್ಕಳ ಶಿಬಿರಗಳಿಂದಾಗಿ ಮಕ್ಕಳ ನಾಟಕ ರಚನೆಗೆ ವಿಶೇಷ ಪ್ರೋತ್ಸಾಹ ದೊರಕಿತು. ಇದರಿಂದಾಗಿ ಅನೇಕ ಹಿರಿಯಕಿರಿಯ ನಾಟಕಕಾರರು ಮಕ್ಕಳಿಗಾಗಿಯೇ ಬರೆಯತೊಡಗಿದರು. ಬಿ.ವಿ.ಕಾರಂತ, ಕೆ.ವಿ.ಸುಬ್ಬಣ್ಣ, ಚಂದ್ರಶೇಖರ ಕಂಬಾರ, ಅಬ್ದುಲ್ ರೆಹಮಾನ್ ಪಾಷ, ಪ್ರೇಮಾಕಾರಂತ, ವೈದೇಹಿ ಮೊದಲಾದವರು ಮಕ್ಕಳಿಗಾಗಿ ಉತ್ತಮ ನಾಟಕಗಳನ್ನು ಬರೆದಿದ್ದಾರೆ. ಬಿ.ವಿ.ಕಾರಂತರ ಪಂಜರಶಾಲೆ, ನೀಲಿಕುದುರೆ, ಹೆಡ್ಡಾಯಣ - ಇವು ಕನ್ನಡ ಮಕ್ಕಳ ನಾಟಕ ಸಾಹಿತ್ಯಕ್ಕೆ ಸ್ಫೂರ್ತಿತಂದ ನಾಟಕಗಳು. ಕೆ.ವಿ.ಸುಬ್ಬಣ್ಣನವರ ಜಯಂಟ್‌ಮಾಮು, ಬೆಟ್ಟಕ್ಕೆ ಚಳಿಯಾದರೆ, ಅಬ್ದುಲ್ ರೆಹಮಾನ್ ಪಾಷ ಅವರ ಬೆಳೆದವರು, ನಕ್ಕಳಾ ರಾಜಕುಮಾರಿ, ನೀ ನನಗಿದ್ದರೆ ನಾ ನಿನಗೆ, ವೈದೇಹಿಯವರ ಧಾಂ ಧೂಂ ಸುಂಟರಗಾಳಿ, ಸೂರ್ಯಬಂದ, ಮೂಕನ ಮಕ್ಕಳು ಮುಂತಾದವು ಮಕ್ಕಳ ರಂಗಭೂಮಿಯ ಸಾಧ್ಯತೆಗಳನ್ನು ವಿಸ್ತರಿಸಿವೆ. ಎಂ.ಎಸ್.ಮೂರ್ತಿ, ಎಚ್.ಎಸ್.ವೆಂಕಟೇಶಮೂರ್ತಿ, ಕೃಷ್ಣಮೂರ್ತಿ ಬಿಳಿಗೆರೆ ಮೊದಲಾದವರು ಈಗಲೂ ವಸ್ತು ವೈವಿಧ್ಯದ ಮಕ್ಕಳ ನಾಟಕಗಳನ್ನು ರಚಿಸುತ್ತಿದ್ದಾರೆ.

ಕನ್ನಡದ ಪ್ರಮುಖ ಕಥೆಗಳು ಮತ್ತು ಕಾದಂಬರಿಗಳು ನಾಟಕದ ರೂಪವನ್ನು ತಳೆಯಲಾರಂಭಿಸಿದ್ದು ಈ ಅವಧಿಯ ಇನ್ನೊಂದು ಪ್ರಮುಖ ಅಂಶವೆನ್ನಬಹುದು. ದೇವನೂರು ಮಹಾದೇವ ಅವರ ಕಥೆಗಳು ಮತ್ತು ಕಾದಂಬರಿಗಳು, ಪೂರ್ಣಚಂದ್ರ ತೇಜಸ್ವಿಯವರ ಕಥೆಗಳು ಮತ್ತು ಶಿವರಾಮ ಕಾರಂತರ ಕಾದಂಬರಿಗಳು ನಾಟಕದ ಸ್ವರೂಪವನ್ನು ತಳೆದವು. ಹಾಗೆಯೇ ಕನ್ನಡ ಪ್ರಮುಖ ಕಾವ್ಯಗಳೂ ರಂಗ ಪ್ರದರ್ಶನಕ್ಕೆ ಅಣಿಯಾದವು. ಬಹುಮುಖ್ಯವಾಗಿ ದೇವನೂರು ಮಹಾದೇವ ಅವರ ದ್ಯಾವನೂರು, ಒಡಲಾಳ ಮತ್ತು ಕುಸುಮಬಾಲೆ ಇವು ರಂಗಕೃತಿಯಾಗಿ ಹೊಸದೊಂದು ಟ್ರೆಂಡ್‌ಅನ್ನೇ ಸೃಷ್ಟಿಸಿದವು. ಶಿವರಾಮ ಕಾರಂತರ 'ಚೋಮ', ತೇಜಸ್ವಿಯವರ ಕುಬಿ ಮತ್ತು ಇಯಾಲ, 'ಕಿರಗೂರಿನ ಗಯ್ಯಾಳಿಗಳು' ಕುಂ.ವೀರಭದ್ರಪ್ಪನವರ 'ಬೇಲಿ ಮತ್ತು ಹೊಲ' ಈ ನಿಟ್ಟಿನಲ್ಲಿ ಮೂಡಿ ಬಂದ ನಾಟಕಗಳು.

ಬೀದಿ ನಾಟಕ ಒಂದು ಪ್ರಮುಖ ರಂಗಮಾಧ್ಯಮವಾಗಿ ಹೊರಹೊಮ್ಮಿದ್ದೂ ಈ ಅವಧಿಯಲ್ಲಿಯೇ. ಎ.ಎಸ್.ಮೂರ್ತಿಯವರ ಬಂದ್ರಪ್ಪೋ ಬಂದ್ರು, ಚಂದ್ರಶೇಖರ ಪಾಟೀಲ ಅವರ ಜಗದಂಬೆಯ ಬೀದಿ ನಾಟಕ, ಸಿ.ಜಿ.ಕೃಷ್ಣಸ್ವಾಮಿಯವರ ಬೆಲ್ಚಿ ಮುಂತಾದವು ಬೀದಿನಾಟಕದ

ಸ್ವರೂಪಕ್ಕೊಂದು ಸ್ಪಷ್ಟ ಸ್ವರೂಪ ನೀಡಿರುವ ನಾಟಕಗಳು. ಈಗಲೂ ಬೀದಿ ನಾಟಕಗಳು ತತ್‌ಕ್ಷಣದ ಪ್ರತಿಕ್ರಿಯೆಯಾಗಿ ಹುಟ್ಟಿಕೊಳ್ಳುತ್ತಲೇ ಇವೆ.

ಹೀಗೆ ಕನ್ನಡ ನಾಟಕ ಸಾಹಿತ್ಯ ಬಹುಮುಖವಾದ ಬೆಳವಣಿಗೆಯನ್ನು ತೋರಿದ ಅವಧಿ ಇದು. ಕನ್ನಡದಲ್ಲಿಯೇ ಸ್ವಂತ ನಾಟಕಗಳು ದೊಡ್ಡ ಪ್ರಮಾಣದಲ್ಲಿ ಸೃಷ್ಟಿಯಾದದ್ದರ ಜೊತೆಜೊತೆಗೇ ಬಹುಸಂಖ್ಯೆಯ ಹೊರಗಿನ ನಾಟಕಗಳೂ ಕನ್ನಡಕ್ಕೆ ಬಂದವು. ಹಾಗೆಯೇ ಕನ್ನಡದ ಬಹಳಷ್ಟು ನಾಟಕಗಳು ಬೇರೆ ಬೇರೆ ಭಾಷೆಗಳಿಗೂ ಅನುವಾದಗೊಂಡವು. ಈ ದೃಷ್ಟಿಯಿಂದ ಇಪ್ಪತ್ತನೆಯ ಶತಮಾನದ ಕೊನೆಯ ಎರಡೂವರೆ ದಶಕಗಳು ಕನ್ನಡ ನಾಟಕ ಸಾಹಿತ್ಯದ ಅತ್ಯಂತ ಫಲಪ್ರದ ದಶಕಗಳೆನ್ನಬಹುದು. (ಎಲ್.ಎಚ್.)

**ಕನ್ನಡದಲ್ಲಿ ಪತ್ತೆದಾರಿ ಸಾಹಿತ್ಯ :** ಸಮಾಜ ವಿರೋಧಿಯಾದ ಕೊಲೆ ಸುಲಿಗೆ ಮೊದಲಾದ ಕಾನೂನುಬಾಹಿರ ಕೆಲಸಗಳನ್ನು ಎಸಗಿ ತಲೆ ತಪ್ಪಿಸಿಕೊಂಡವರನ್ನು ಪತ್ತೆ ಹಚ್ಚುವ ಕಥಾವಿಷಯಗಳ ಸಾಹಿತ್ಯ ಪ್ರಕಾರ (ಡಿಟೆಕ್ಟಿವ್ ಫಿಕ್ಷನ್). ಕೊಲೆಗಾರ ಯಾರು ಎಂಬ ಸಮಸ್ಯೆಯನ್ನು ಬಿಡಿಸುವ ಬಗ್ಗೆ ಪತ್ತೆದಾರನ ಚಿಂತನೆ, ತರ್ಕ, ಸಾಹಸ, ಅಪಾಯ, ಸಂದಿಗ್ಧ ಪರಿಸ್ಥಿತಿ-ಇವುಗಳಲ್ಲಿ ವಾಚಕರು ಕುತೂಹಲದಿಂದ ಪಾಲುಗೊಳ್ಳುತ್ತಾರೆ. ವಾಚಕರ ಬುದ್ಧಿವಂತಿಕೆಗೆ ಸವಾಲೊಡ್ಡುವುದರ ಜೊತೆಗೆ ಭಾವೋದ್ರೇಕಗೊಳಿಸುವ ತಂತ್ರ ಇಂಥ ಕಥೆಗಳಲ್ಲಿ ಹೇರಳ. ಸಮಸ್ಯೆ ಬಹಿರಂಗವಾಗುವವರೆಗೆ ವಾಚಕರು ಕಾದಂಬರಿಯನ್ನು ಕುತೂಹಲದಿಂದ ಓದುತ್ತಾರೆ. ಕೊಲೆಯನ್ನು ಪತ್ತೆ ಹಚ್ಚುವುದರಲ್ಲಿ ಕಾದಂಬರಿ ನೀಡುವ ಬೌದ್ಧಿಕ ವ್ಯಾಯಾಮದಿಂದ ವಾಚಕರಿಗೆ ತೃಪ್ತಿಯುಂಟಾಗುತ್ತದೆ.

ಎಲ್ಲ ಜನಪ್ರಿಯ ಕಲೆಗಳಂತೆ ಪತ್ತೆದಾರಿ ಕಾದಂಬರಿಯೂ ಬಲು ಪ್ರಾಚೀನವಾದುದು. ಬೈಬಲಿನ ಹಳೆಯ ಒಡಂಬಡಿಕೆಯ ಕೆಲವು ಕಥೆಗಳಲ್ಲಿ ಆದಿಕಾಲದ ಅಪರಾಧ ಶೋಧನೆಯ ನಿದರ್ಶನಗಳಿವೆ. ಉದಾ ಸುಸಾನ್ನಳ ವಿರುದ್ಧ ಸುಳ್ಳು ಸಾಕ್ಷ್ಯನೀಡಿದ ಹಿರಿಯರಿಗೆ ಡ್ಯಾನಿಯಲ್ ಅಡ್ಡ ಪ್ರಶ್ನೆಗಳನ್ನು ಹಾಕಿ ಅವಳನ್ನು ಬಿಡಿಸುವುದು ಹಾಗೂ ಡ್ಯಾನಿಯಲ್ ಬೆಲ್ ದೇವತೆಯ ಪುರೋಹಿತರ ಮೋಸವನ್ನು ಕಂಡುಹಿಡಿಯುವದು. ಪತ್ತೆದಾರಿ ಕಥೆಗಳಲ್ಲಿ ಒಗ್ಗೂಡಿಸುವ ಆಶಯುಗಳೆಲ್ಲ ಪ್ರಾಚೀನ ಮಾನವನ ಕಲ್ಪನೆಗಳಿಗೆ ಅನುಗುಣವಾಗಿವೆ. ಪತ್ತೆದಾರಿ ಕಥೆಗೂ ಜಾನಪದವೇ ಮೂಲವೆಂದು ವಿದ್ವಾಂಸರ ಅಭಿಪ್ರಾಯ. ಪತ್ತೆದಾರಿ ಕಥೆಯ ಕೊಲೆಯ ಸಮಸ್ಯೆ ಅಥವಾ ಒಗಟಿನ ಆಶಯ ಜನಪದ ಕಥೆಗಳಿಂದ ಬಂದಿದೆ. ದುಷ್ಟರನ್ನು ಪತ್ತೆ ಹಚ್ಚಿ ಶಿಕ್ಷಿಸುವ ಆಶಯ ಪೌರಾಣಿಕ ಹಿನ್ನೆಲೆಯನ್ನು ಹೊಂದಿದೆ. ಭಾರತೀಯ ಸಾಹಿತ್ಯದಲ್ಲಿ ಹೆಸರುಗಳಿಸಿರುವ ಬೃಹತ್‌ಕಥೆಯಲ್ಲಿ ಅಂಥ ಉದಾಹರಣೆಗಳು ಹೇರಳವಾಗಿವೆ. ಈ ಆಶಯಗಳೆಲ್ಲ ಸಾಹಿತ್ಯಪೂರ್ವ ಕಾಲದವು. ಆಧುನಿಕ ಪತ್ತೆದಾರಿ ಕಥೆಗೆ ಮೂಲವಸ್ತು ಒದಗಿರುವುದು ಈಸೋಪ್, ಹೀರಡಟಸ್, ಸಿಸಿರೊ, ವರ್ಜಿಲ್ ಮೊದಲಾದ ಪ್ರಾಚೀನ ಲೇಖಕರಿಂದ. ಪಾರಸಿ, ತುರ್ಕಿ ಮತ್ತು ಸಂಸ್ಕೃತ ಗ್ರಂಥಗಳಲ್ಲಿ ಪತ್ತೆದಾರಿ ಮಾದರಿಯ ಕಥೆಗಳಿವೆ. ಪತ್ತೆದಾರಿ ಅಂಶಗಳು ಹೆಚ್ಚಾಗಿ ಕಾಣುವುದು ಅರೇಬಿಯನ್ ನೈಟ್ಸ್ ಕಥೆಗಳಲ್ಲಿ. 14ನೆಯ ಶತಮಾನದಲ್ಲಿ ಬೊಕಚಿಯೊ ಬರೆದ ಕಥೆಗಳಲ್ಲಿ ಸಹ ಪತ್ತೆದಾರಿ ಅಂಶವಿದೆ. 18ನೆಯ ಶತಮಾನದಲ್ಲಿ ವಾಲ್ಟೇರ್ ಬರೆದ ಜಾಡಿಗ್ ಎಂಬ ಗ್ರಂಥದ ಅಧ್ಯಾಯವೊಂದರಲ್ಲಿ ದಾರ್ಶನಿಕ ಕಥಾನಾಯಕ ಕಳೆದು ಹೋದ ಹಾಗೂ ತಾನು ಕಂಡಿಲ್ಲದ ಕುದುರೆ ಮತ್ತು ನಾಯಿಗಳನ್ನು ಶಾಸ್ತ್ರೀಯವಾಗಿ ವರ್ಣಿಸುವ ವಿಧಾನ 19ನೆಯ ಶತಮಾನದ ಪತ್ತೆದಾರಿ ಲೇಖಕರಿಗೆ ಸ್ಫೂರ್ತಿನೀಡಿತು.

ಪತ್ತೆದಾರಿ ಕಥೆ ಆಧುನಿಕ ಸಾಹಿತ್ಯ ಪ್ರಕಾರವೆಂದು ಗುರುತಿಸಿಕೊಂಡು ತನ್ನ ಶತಮಾನೋತ್ಸವವನ್ನು 1941ರಲ್ಲಿ ಆಚರಿಸಿತು. ಪತ್ತೆದಾರಿಯ ವರ್ಗದ ಪ್ರಪ್ರಥಮ ಕಥೆ ಏಪ್ರಿಲ್ 1841ರಲ್ಲಿ ಅಮೆರಿಕದ ಫಿಲಿಡೆಲ್ಫಿಯ ನಗರದ ಗ್ರಹಾಮ್ಸ್ ಮ್ಯಾಗಜೀನ್ ಎಂಬ ಪತ್ರಿಕೆಯಲ್ಲಿ ಪ್ರಕಟವಾಯಿತು. ಅದರ ಲೇಖಕ ಎಡ್ಗರ್ ಲೇನ್ ಪೋ. ಕಥೆಯ ಹೆಸರು ದಿ ಮರ್ಡರ್ ಇನ್‌ದಿರೂಮೊರ್ಗ್. ಡೊರೊತಿ ಎಲ್ ಸೇಯರಾಳ ಅಭಿಪ್ರಾಯದಲ್ಲಿ ಈ ಕಥೆ ಪತ್ತೆದಾರಿ ಕಾದಂಬರಿಯ ಸಿದ್ಧಾಂತ ಮತ್ತು ರಚನೆಯ ಕೈಪಿಡಿಯಂತಿದೆ. ಅಂದಿನಿಂದ ಪ್ರಪಂಚದ ಎಲ್ಲ ಕಡೆ ಪತ್ತೆದಾರಿ ಸಾಹಿತ್ಯ ವಿಪುಲವಾಗಿ ಬೆಳೆದಿದೆ.

ಭಾರತೀಯರಲ್ಲಿ ಬೃಹತ್ಕಥಾಕೋಶ, ಕಥಾಸರಿತ್ಸಾಗರ ಮೊದಲಾದ ಸಂಸ್ಕೃತ ಗ್ರಂಥಗಳಿಂದ ಅಳವಡಿಸಿಕೊಂಡ ಪತ್ತೆದಾರಿ ಅಂಶದ ಕೆಲವು ಕಥೆಗಳು ಹಾಗೂ ಚೋರನಾಯಕರ ಸಾಹಸಗಳು 20ನೆಯ ಶತಮಾನದ ಪ್ರಾರಂಭದವರೆಗೆ ಮನರಂಜನೆ ನೀಡುತ್ತಿದ್ದುವು. ಪಾಶ್ಚಾತ್ಯ ಮಾದರಿಯ ಪತ್ತೆದಾರಿ ಕಾದಂಬರಿಗಳ ರಚನೆ ವಿಲ್ಕಿ ಕಾಲಿನ್ಸ್, ಕಾನನ್ ಡಾಯಲ್ ಮೊದಲಾದವರ ಪ್ರಭಾವದಿಂದ, ಭಾರತದಲ್ಲಿ ಹೆಚ್ಚಾಗಿ ಪ್ರಕಟವಾಗುತ್ತಿರುವುದು ಎರಡನೆಯ ಮಹಾಯುದ್ಧದ ತರುವಾಯ. ಪ್ರಕಾಶಕರು ಸಾಮಾಜಿಕ ಕಾದಂಬರಿಗಳಿಗೆ ಹೆಚ್ಚು ಗಮನ ನೀಡುತ್ತಿರುವಲ್ಲಿ, ಅಗ್ಗದ ಕಾಗದದಲ್ಲಿ ಪತ್ತೆದಾರಿ ಕಾದಂಬರಿಗಳನ್ನು ಪ್ರಕಟಿಸುವ ಪ್ರಕಾಶನ ಸಂಸ್ಥೆಗಳು ಇಡೀ ಭಾರತದಲ್ಲಿ ಹುಟ್ಟಿಕೊಂಡಿವೆ. ತಮಿಳು, ಮಲಯಾಳಂ ಮತ್ತು ತೆಲುಗು ಭಾಷೆಗಳಲ್ಲಿ ಇವು ಹೇರಳ. ತಮಿಳಿನ ಕಲ್ಕಿ, ಆನಂದವಿಗಡನ್, ಕಲ್ಕಂಡು, ದಿನಮಣಿ ಕದಿರ್ ಮೊದಲಾದ ಪತ್ರಿಕೆಗಳಲ್ಲಿ ಸಹ ಪತ್ತೆದಾರಿ ಕಥೆಗಳು ಪ್ರಕಟವಾಗುತ್ತವೆ. ತೆಲಗು ಭಾಷೆಯಲ್ಲಿ ಭಾಷಾಂತರಿತ ಪತ್ತೆದಾರಿ ಕಾದಂಬರಿಗಳು ಹೆಚ್ಚು. ಪೂರ್ವಘಟ್ಟದ ಪರ್ವತವಾಸಿಗಳು ಹಾಗೂ ಕಳ್ಳರು ಅನೇಕ ಸ್ವತಂತ್ರ ಪತ್ತೆದಾರಿ ಕಾದಂಬರಿಗಳ ನಾಯಕರು. ರೋಮಾಂಚಕ ಪತ್ತೆದಾರಿ ಕಾದಂಬರಿಗಳು ಅಸ್ಸಾಮಿ ಭಾಷೆಯಲ್ಲಿ ಅಧಿಕ. ಹಿಂದಿಯಲ್ಲಿ ಗೋಮಲ್ ರಾಂ ಗಹಮಾರಿ ಅನೇಕ ಪತ್ತೆದಾರಿ ಕಾದಂಬರಿಗಳನ್ನು ರಚಿಸಿದರು. ಬಂಗಾಲಿಯಲ್ಲಿ ಉತ್ತಮ ಕಾದಂಬರಿಗಳು ಪ್ರಕಟವಾಗಿವೆ.

ಕನ್ನಡದಲ್ಲಿ ಪತ್ತೆದಾರಿ ಸಾಹಿತ್ಯದ ಬೇರುಗಳನ್ನು ವಡ್ಡಾರಾಧನೆಯ ಕಾಲದಿಂದಲೇ (ಸು.920) ಗುರುತಿಸಬಹುದು. ಈ ಕೃತಿಯಲ್ಲಿ ಬರುವ ವಿದ್ಯುತ್ ಚೋರ ರಿಸಿಯ ಕಥೆ ಒಂದು ರೋಮಾಂಚಕಾರಿಯಾದ ಅತ್ಯುತ್ತಮ ಪತ್ತೆದಾರಿ ಕಥೆಯಾಗಿದೆ. ಆದರೆ ಆಧುನಿಕ ರೂಪದಲ್ಲಿ ಕನ್ನಡದಲ್ಲಿ ಪತ್ತೆದಾರಿ ಕಾದಂಬರಿಗಳು 20ನೆಯ ಶತಮಾನದ ಎರಡನೆಯ ದಶಕದಿಂದ ಪ್ರಕಟವಾಗತ್ತಿದ್ದವು. ಪಾಂಚಕೋಡಿ ಡೋ ಅವರ ಹತ್ಯಾಕಾರಿ ಎಂಬ ಬಂಗಾಲಿ ಕಾದಂಬರಿಯ ಕಥೆಯನ್ನು ಅವಲಂಬಿಸಿ ಕುಮುದಿನಿ ಕಾದಂಬರಿ ರಚಿತವಾಯಿತು (1911). ಬಾಲಸರಸ್ವತಿ ಅವರು ನರಬಲಿ, ಗುರುತುಕಂಡ ಕಳ್ಳ, ಚಿತ್ರಗುಪ್ತನ ದಫ್ತರಗಳು ಮೊದಲಾದವನ್ನು ಬರೆದರು. ಬಿ.ವೆಂಕಟಾಚಾರ್ಯರ ಪರಿಮಳಾ ಕನ್ನಡ ಪತ್ತೆದಾರಿ ಕಾದಂಬರಿ ಕ್ಷೇತ್ರದಲ್ಲಿ ಹೊಸ ಮೈಲಿಗಲ್ಲು. ಅದರಲ್ಲಿ ಪತ್ತೆದಾರ ಸಂಜೀವಬಾಬು ತನ್ನ ಸಾಹಸಗಳಿಂದ ವಾಚಕರನ್ನು ಆಕರ್ಷಿಸುತ್ತಾನೆ. ಈಗಿನ ಪ್ರತೀಕ್ಷಾಜನ್ಯ ಕಾದಂಬರಿಯ ಲಕ್ಷಣಗಳನ್ನು ಈ ಕಾದಂಬರಿ ಹೊಂದಿದೆ. ಶಿವರಾಮ ಕಾರಂತರು ವಿಚಿತ್ರಕೂಟ, ದೇವುಡು ನರಸಿಂಹಶಾಸ್ತ್ರಿ, ಕಳ್ಳರ ಕೂಡ ಎಂಬ ಕಾದಂಬರಿಗಳನ್ನು ಬರೆದರು. ವೆಂಕಟಾದ್ರಿ ಶಾಸ್ತ್ರಿಗಳು ಮಾಯಾವಿ, ಮನೋರಮ ಕಾದಂಬರಿಗಳನ್ನು ರಚಿಸಿದರು. ದಾಸುರಾವ್ ಅವರು ಧನ್ವಂತ ಎಂಬ ಲೇಖನಾಮದಲ್ಲಿ ಎಡ್ಗರ್ ಅಲೆನ್ ಪೋನ ದಿ ಮರ್ಡರ್ ಇನ್‌ದಿರೂಮೊರ್ಗ್ ಕಥೆಯನ್ನು ಕನ್ನಡಕ್ಕೆ ರೂಪಾಂತರಿಸಿ ಅದನ್ನು ಸಾವಿಗೆ ಮುಂಚೆ ಸಮಾಧಿ ಎಂಬ ಹೆಸರಿನಲ್ಲಿ ಪ್ರಕಟಿಸಿದರು. ನಗುವನಂದ ಮಾಸಪತ್ರಿಕೆ ಫೆಬ್ರವರಿ 1934ರಿಂದ ಫೆಬ್ರವರಿ 1935ರವರೆಗೆ ರಘುಪತಿ ಅವರ ಕಲವಾಣಿ ಎಂಬ ಪತ್ತೆದಾರಿ ಕಾದಂಬರಿಯನ್ನು ಧಾರಾವಾಹಿಯಾಗಿ ಪ್ರಕಟಿಸಿತು. ಇದೇ ಮಾಸಪತ್ರಿಕೆಯಲ್ಲಿ ವಿ.ಜಿ.ಕೃಷ್ಣಮೂರ್ತಿ ಅವರ ಸಣ್ಣ ಪತ್ತೆದಾರಿ ಕಥೆ ಹನುಮಂತರಾವ್, ಸಿ.ಐ.ಡಿ. ಅಚ್ಚಾಯಿತು (1935). ಎಚ್ಚೆಸ್ಕೆ ಅವರ ಅರಿಂದಮನ ಸಾಹಸ ಎಂಬ ಪತ್ತೆದಾರಿ ಕಾದಂಬರಿ 1938ರಲ್ಲಿ ಪ್ರಕಟವಾಯಿತು.

ಎರಡನೆಯ ಮಹಾಯುದ್ಧದ ತರುವಾಯ ಇಂಗ್ಲಿಷ್ ಪತ್ತೆದಾರಿ ಪುಸ್ತಕಗಳ ಹಾಗೂ ಸಿನಿಮಾಗಳ ಪ್ರಭಾವದಿಂದ ಕನ್ನಡದಲ್ಲಿ ಪತ್ತೆದಾರಿ ಕಾದಂಬರಿಗಳ ಪ್ರಕಟಣೆ ಹೆಚ್ಚಿತು. 1945ರ ನಡುವೆ ಇಂಥ ಕಾದಂಬರಿಗಳನ್ನು ಬರೆಯಲು ಪ್ರಾರಂಭಿಸಿದವರಲ್ಲಿ ಭಿ.ಪ.ಕಾಳೆ, ಎಂ.ರಾಮಮೂರ್ತಿ, ವಿ.ಜಿ.ಕೃಷ್ಣಮೂರ್ತಿ, ಎನ್.ನರಸಿಂಹಯ್ಯ, ಗುರುರಾಜಾಚಾರ್ಯ, ಗುಂಡಾಶಾಸ್ತ್ರಿ, ನಾಗೇಶ, ಬಿ.ಕೆ.ಸುಂದರರಾವ್ ಮಾ.ಭಿ.ಶೇ., ಎಂ.ಶಿವಾಜಿರಾವ್ ಮೊದಲಾದವರು ಪ್ರಮುಖರು.

ಭಿ.ಪ.ಕಾಳೆ ತಮ್ಮ ಧಾರವಾಡದ ಶೇಷಾಚಲ ಗ್ರಂಥಮಾಲೆಯ ಮೂಲಕ 1946-61ರ ನಡುವೆ ಪತ್ತೆದಾರಿ ಕಾದಂಬರಿಗಳನ್ನು ಬರೆದು ಪ್ರಕಟಿಸಿದರು. ಕಾಲಸರ್ಪ (1946), ಘಾತಕ ಶಿತಿಕಂಠ (1946), ಭಗವಾನ್ ದಾಸ (1946), ಕಂಕಣ ಚೋರ (1950), ನನ್ನ ಗತಿ (1951), ಅಂಬಿಕೆ (1961), ನಾಲ್ವರು ಸಾಕ್ಷಿಗಳು (1961) ಮೊದಲಾದವುಗಳನ್ನು ಹೆಸರಿಸಬಹುದು. ನಾಗೇಶ ಅವರ ಮಾಯಾವಿನಿ ಕಾದಂಬರಿ ಭಿ.ಪ.ಕಾಳೆಯವರ ಶೇಷಾಚಲ ಗ್ರಂಥ'ಮಾಲೆಯಲ್ಲಿಯೇ ಪ್ರಕಟವಾಯಿತು (1950).

ಎಂ.ರಾಮಮೂರ್ತಿ 1940ರ ದಶಕದಲ್ಲಿ ಪತ್ತೆದಾರಿ ಕಾದಂಬರಿ ರಚನೆಗೆ ಕೈಹಾಕಿ ತಮ್ಮ ಗ್ರಂಥಗಳಲ್ಲಿ ಅನೇಕವನ್ನು ತಮ್ಮ ವಿನೋದಿನಿ ಪ್ರಕಟನಾಲಯದಿಂದ ಪ್ರಕಟಿಸಿದರು. ಅವರು ಅಗಾತ ಕ್ರಿಸ್ಟಿ, ಪೀಟರ್ ಚೇನಿ ಮೊದಲಾದವರ ಕಾದಂಬರಿಗಳಿಂದ ಸ್ಫೂರ್ತಿಗೊಂಡು ಕೆಲವು ಕಾದಂಬರಿಗಳನ್ನು ಬರೆದರು. ಪಾಕಿಸ್ತಾನ ಗುಪ್ತಚಾರ, ಕಾಲುವೆ ಮನೆ, ವೈಯ್ಯಾಳಿ ಕಾವಲ್, ನೀಲಕಮಲ, ಮೆಟ್ಟಿಲ ಕೆಳಗೆ, ಪತ್ತೆ ಮಾಡಬೇಡಿ, ಇಬ್ಬರು ಗೆಳೆಯರು (1956), ಜುಲೇಖಾ (1958), ಕಡೆಯ ಮೀನು (1960), ತಪ್ಪಿಸಿಕೊಂಡ ಗಂಡು (1960), ಚೂರಿ ಹಿಡಿದ ದಸ್ಯುಕನ್ಯೆ (1960), ಪುನ್ಯ ಜಲೇಖಾ (1960), ವಜ್ರದ ಹರಳು (1960), ಒಂಟಿಯಾಗಿದ್ದ ಹೆಂಗಸು (1962), ಅವಳೇನಾದಳು (1962), ಕಣ್ಮರೆಯಾದ ಪ್ರೇಯಸಿ (1961), ಕೈಕೊಟ್ಟ ಪ್ರೇಮಪತ್ರ (1962), ವ್ಯಭಿಚಾರಿಣಿಯ ಮಗಳು (1962), ಪಾಪಿಯ ಮಗ (1963), ನೆನೆಸಿದ್ದೇ ಬೇರೆ (1964), ಬಯಕೆ ಈಡೇರಲಿಲ್ಲ (1968), ಮುತ್ತಿನ ಬಳೆಯವಳು (1968), ಎರಡು ಚೂರಿಗಳು (1972) ಇವು ಅವರ ಕೆಲವು ಜನಪ್ರಿಯ ರಚನೆಗಳು.

1948-54ರ ನಡುವೆ ಕಥಾವಳಿ ಮಾಸಪತ್ರಿಕೆ ಸಂಶೋಧನ ಸಮಸ್ಯೆ ಎಂಬ ಅಂಕಣದಲ್ಲಿ ಪ್ರಕಟಿಸುತ್ತಿದ್ದ ವಿ.ಜಿ. ಕೃಷ್ಣಮೂರ್ತಿಯವರ ಪತ್ತೆದಾರಿ ಸಣ್ಣಕಥೆಗಳು ಜನಪ್ರಿಯವಾಗಿದ್ದುವು. ಈ ಕಥೆಗಳಲ್ಲಿ ಕೆಲವು: ವಾಲ್ಟರ್ ಮೊಕದ್ದಮೆ (1948), ಜಪಮಾಲೆ ಮೊಕದ್ದಮೆ ರಹಸ್ಯ (1949) ಕತ್ತರಿಸಿದ ಬೆರಳು (1949), ವಾಷಿಂಗ್ಟನ್ ವಜ್ರಾಭರಣ (1949), ಸಂಶಯದ ಸಮಸ್ಯೆ (1949), ಮಂಜಿನಲ್ಲಿ ಮೃತ್ಯು (1949), ಅಪರಾಧಿ ಯಾರು? (1950), ಫ್ರಾಂಕ್ ಜೆನಿಯ ಕೊಲೆ (1950), ಕಣಿವೆಯಲ್ಲಿ ಕಂಬನಿ (1950), ಟ್ಯಾಕ್ಸಿಯವರ ಸಮಸ್ಯೆ (1950), ಒಡೆಯದ ಕಾಗದ (1950), ರಕ್ತ ಸರೋವರ (1950), ವಿಷದ ಸೀಸೆ (1950), ರತ್ನದಲ್ಲಿ ರಕ್ತ (1950), ಹಿಮದಲ್ಲಿ ಶವ (1960), ನಿದ್ರ ಸಂಚಾರಿ (1950), ಕ್ರೂರ ರಾತ್ರಿ (1950) ಬಂಗಲೆಯಲ್ಲಿ ಭೀಕರ ಕೊಲೆ (1951). ಇದೇ ಲೇಖಕರ ಸೇಡಿನ ಸಂಘ ಎಂಬ ಪತ್ತೆದಾರಿ ಕಾದಂಬರಿಯನ್ನು ಕಥಾವಳಿ 1954ರಲ್ಲಿ ಧಾರವಾಹಿಯಾಗಿ ಪ್ರಕಟಿಸಿತು. 1955ರಲ್ಲಿ ಪ್ರಕಟವಾದ ಇವರ ಗೈತಾಯಾಮಿನಿ ಕಾದಂಬರಿಯಲ್ಲಿ ಹೊಸ ತಂತ್ರವಿದೆ. ಇವರ ಸಮಾಧಿಯ ಸುರಂಗ (1960) ಕಾದಂಬರಿ ಬಲು ಜನಪ್ರಿಯವಾಯಿತು. ಇವರ ಇತರ ಪತ್ತೆದಾರಿ ಕಾದಂಬರಿಗಳು: ರಕ್ಕಸಿಯರ ರಹಸ್ಯ (1955), ನಾಗರ ನಂಜು (1961), ನೀಲ ನಕಾಸೆ (1967), ಚೋರನಾವೆ (1968), ದರೋಡೆ (1972), ಕಣಿವೆಯ ಮನೆ (1973), ಎರಡು ಬೀಗದ ಬಾಗಿಲು (1974), ಹಿಂದೆ ಬಂದ ನೆರಳು (1974), ಬಂಧನದಿಂದ ಬಯಲಿಗೆ.

ಎನ್.ನರಸಿಂಹಯ್ಯನವರು 1952ರಲ್ಲಿ ಬರೆಯಲು ಪ್ರಾರಂಭಿಸಿ ನೂರಾರು ಪತ್ತೆದಾರಿ ಕಾದಂಬರಿಗಳನ್ನು ಬರೆದಿದ್ದಾರೆ. ಕನ್ನಡ ಪತ್ತೆದಾರಿ ಕಾದಂಬರಿಕಾರರಾಗಿ ಖ್ಯಾತಿ ಪಡೆದವರಲ್ಲಿ ಇವರೂ ಒಬ್ಬರು. ಪ್ರೈಮರಿ ಶಾಲೆಯ ಶಿಕ್ಷಣ ಮುಗಿದು ದರ್ಜಿ, ಬಸ್ ಕ್ಲೀನರ್ ಮತ್ತು ಕಂಡಕ್ಟರ್ ಕೆಲಸಗಳಲ್ಲಿ ಸ್ವಲ್ಪ ಕಾಲವಿದ್ದು ಕಾದಂಬರಿ ರಚನೆಗೆ ಇಳಿದರು. 1952-62ರ ನಡುವೆ ಇವರ ಬರೆವಣಿಗೆ ತೀವ್ರವಾಯಿತು. ಅನೇಕ ಕಾದಂಬರಿಗಳು ಒಳ್ಳೆಯ ಹೆಸರು ಮಾಡಿದವು. ಸಮಕಾಲೀನ ಸ್ಥಿತಿಕೂಡ ಇವರ ಕೃತಿ ರಚನೆಗೆ ಸಹಾಯ ಒದಗಿಸಿತು. ನರಸಿಂಹಯ್ಯ ಅವರಿಗೆ ಸ್ಫೂರ್ತಿ ಒದಗಿದ್ದು ಸಮಕಾಲೀನ ಕಾದಂಬರಿಕಾರರಿಂದ. ಪತ್ತೆದಾರಿವಸ್ತುವನ್ನು ಸಂಗ್ರಹಿಸಲು ಇವರು ಕ್ರಿಮಿನಲ್ ಕೋರ್ಟುಗಳಿಗೆ ಭೇಟಿ ಕೊಡುತ್ತಿದ್ದರು. ಇವರ ಕೆಲವು ಜನಪ್ರಿಯ ಕಾದಂಬರಿಗಳು: ಪತ್ತೆದಾರಿ ಪುರುಷೋತ್ತಮ (1952), ವಿಚಿತ್ರ ಕೊಲೆಗಾರ (1954), ಭಯಂಕರ ಭೈರಾಗಿ, (1955) ಅರಮನೆಯ ಚೋರ (1956), ಕೆರಳಿದ ಕೇಸರಿ (1958), ಮಾಟಗಾತಿಯ ಮಗಳು (1961), ಅಡವಿಯ ರಾಜ (1969), ಪಂಜರದ ಪಿಶಾಚಿ (1971), ಎರಡು ದೆವ್ವಗಳು (1972), ಪತ್ತೆದಾರಿ ಕಥೆಗಳು (1976).

ಎಸ್.ಎನ್.ಗುರುರಾಜಾಚಾರ್ಯರ ಕಾದಂಬರಿಗಳೂ ಉತ್ತಮ ವಾಚನವನ್ನು ನೀಡಿವೆ. ಅವರು ಬರೆದ ಕಾದಂಬರಿಗಳಲ್ಲಿ ಕೆಲವು: ಉಮಾಕಾಂತನ ಉಯಿಲು, ಮಾಲತಿ, ತಾರಾಮೋಹಿನಿ (1954), ವಂಚಕಿಯಾದ ವಿಮಲೆ (1954), ಸೌಭಾಗ್ಯಸುಂದರಿ. ಎನ್.ಗುಂಡಾಶಾಸ್ತ್ರಿ, ಅವರ ಕಾದಂಬರಿಗಳು ಪಂಜಿನ ಕಳ್ಳರು (1958), ಕಡಲ್ಗಳ್ಳರು, ಅಳುವ ನಾಯಿ (1962), ಇನ್‌ವೆಸ್ಟಿಗೇಷನ್ (1964). ಎಂ.ಶಿವಾಜಿರಾವ್ ಅವರ ಅಂದಮಾನಿನಲ್ಲಿ ಖೈದಿ (1976), ಮಾ.ಭೀ.ಶೇ. ಅವರ ರಹಸ್ಯ ಪತ್ರ; ಬಿ.ಕೆ.ಸುಂದರರಾವ್ ಅವರ ಅಪರಾಧಿಯ ಹಂಬಲ ಮೊದಲಾದವು ವಾಚಕರನ್ನು ಆಕರ್ಷಿಸಿವೆ. ಜಿಂದೆ ನಂಜುಂಡಸ್ವಾಮಿ ಅವರು ನಾನೇ ಕೊಲೆಗಾರ ಮೊದಲಾದ ಕಾದಂಬರಿಗಳನ್ನು ಬರೆದುದಲ್ಲದೆ 1972-74ರ ನಡುವೆ ಮದರಾಸಿನಿಂದ ರಹಸ್ಯಚಾರ ಎಂಬ ಪತ್ತೆದಾರಿ ಹಾಗೂ ಗೂಢಚಾರ ಕಥೆಗಳಿಗೆ ಮೀಸಲಾದ ಮಾಸಪತ್ರಿಕೆಯನ್ನು ಪ್ರಕಟಿಸಿದರು. ಈ ಪತ್ರಿಕೆ 12 ಸಂಚಿಕೆಗಳ ಅನಂತರ ನಿಂತುಹೋಯಿತು.

ಟಿ.ಕೆ.ರಾಮರಾವ್ ಅವರು ಪತ್ತೆದಾರಿ ಸಾಹಿತ್ಯ ಲೇಖಕರಾಗಿಯೂ ಪ್ರಸಿದ್ಧರು. ಕಪ್ಪುನಾಯಿ, ಶಕುನಪಕ್ಷಿ (1974), ತೋರು ಬೆರಳು (1973) ಮುಂತಾದ ಕಾದಂಬರಿಗಳನ್ನು ಬರೆದು ಉತ್ತಮ ಲೇಖಕರೆನಿಸಿಕೊಂಡಿದ್ದಾರೆ. ಈ ಕಾಲದ ಇತರ ಲೇಖಕರಲ್ಲಿ ಕೆಲವರು: ಎಸ್.ರಾಜರತ್ನಂ (ನಾನು ನಿನ್ನ ಹಿಂದೆ ಬರಲಾರೆ), ಎಂ.ವಾಮನ ಮಲ್ಯ (ಮುಯ್ಯಕ್ಕೆ ಮುಯ್ಯ), ಯಂ.ಶೇಷಪ್ಪ ಶೆಟ್ಟಿ (ನಿಗೂಢ ಕೊಲೆ, 1976), ಬಿ.ಎಸ್.ಸಂಜೀವ ಮೂರ್ತಿ, (ಪ್ರಳಯ ಮೋಹಿನಿ), ಎಚ್.ವೆಂಕಟೇಶ್ (ರೈಲಿನ ರೂಪಸಿ 1972), ಗಸ್ಪರನುಜ (ಬೇಹುಗಾರ ಮುದ್ದಣ), ವಸಂತ (ಸೇಡಿನ ಸರ್ಪ), ಎಲ್.ಎಸ್.ಇನಾಂದಾರ (ಮೃತ್ಯುವಿನ ಮಡಿಲಲ್ಲಿ), ಕುಂದಾನಿ ಸತ್ಯನ್ (ಹಗೆ ತೀರಿತು), ನವಗಿರಿನಂದ (ಹಂತಕನು ಯಾರು?, ಕಾಲಾಬಜಾರ್), ವಿಜಯಲತ (ಗುರಿಯಿಲ್ಲದ ಪಯಣ), ವೈ.ಎನ್.ನಾಗೇಶ್ (ಚತುರ ಚೋರ), ರವೀಂದ್ರ (ನೀಲಿ ತೋಳ), ಎಸ್.ಶಿವಕುಮಾರ್ (ಬಂಗಾರದ ರಹಸ್ಯ), ಮಾ.ಬಾ.ಕುಲಕರ್ಣಿ (ಗುಪ್ತ ಪೋಲಿಸರ ಗಂಡ), ಭಟ್ಟ ಸದಾಶಿವಶರ್ಮ (ಭಯಂಕರ ಸೇಡು), ಜಿ.ಎಸ್.ಪ್ರಭಾಕರ (ನಾನು ಕೊಲೆಗಾರನೆ?), ವಿಜಯಾ ಸುಧಾಕರ್ (ಮಾಯವಾದ ಹೆಣ್ಣು, ಕಾಡು ಬೆಕ್ಕು, ನಕಲಿ ನೆಕ್ಲೇಸ್), ಟಿ.ಎಲ್.ಸತ್ಯಮೂರ್ತಿ (ಪಾಷಾಣ ಕನ್ಯೆ, ಅದ್ಭುತ ಕೊಲೆಗಾರ), ಜಿ.ಕೆ.ಮೂರ್ತಿ (ಬೆದರಿಕೆ ಪತ್ರ, ಪತ್ತೆದಾರ ರಮೇಶ್), ಜಿ.ಮಲ್ಹಾರಿ ಭಟ್ (ಭೀಕರ ಕೊಲೆ), ಬಿ.ಎಚ್.ಸಂಜೀವ ಭಟ್ (ಅವಳು ಯಾರು?), ಬೇಲೂರು ಸ.ಶ್ರೀನಿವಾಸನ್ (ಪಾತಾಳ ಬೈರಾಗಿ, ಕೆರಳಿದ ಸುಂದರಿ), ಟಿಂಪೋರಾವ್ (ಗಗನ ಸಖಿ ಭಾಗ1,2,) ವಿ.ಸುಬ್ರಹ್ಮಣ್ಯಂ (ರಹಸ್ಯ ಕೊಲೆಗಾರ), ಕೆ.ಶಿವರಾಜ (ಸಿ.ಐ.ಡಿ.), ಆರ್.ಜಿ.ಕುಮಟಾ (ಕಪಟ ವ್ಯೂಹ), ನಾರಾಯಣ ಶಿಡೆನೋರ (ದರೋಡೆಕಾರ ಗರ್ಬಾಲ್ ಸಿಂಗ್), ಪಿ.ರಾಜು (ಸಕ್ಕರೆ ಗೊಂಬೆ, ಮೃತ್ಯುವಿಗೆ ಮೆಟ್ಟಲೆಷ್ಟು?), ರಮೇಶ (ಬ್ಲಾಕ್ ಕ್ಯಾಟ್: ಕೊಂದವರು ಯಾರು?) ಶಾಮೂ (ಬಲಿಗುಡಿ), ಕಾಕೋಳು ರಾಮಯ್ಯ (ರಕ್ಕಸರ ವರ್ಮ), ಮಾಯಾರಾಜ್ (ಸುರಂಗದಲ್ಲಿ ಸಮಾಧಿ), ಜಿ.ಎಸ್.ಮಾಧವ, (ಸ್ಮಗ್ಲರ್), ಆರ್.ಸೂರ್ಯನಾರಾಯಣಮೂರ್ತಿ, (ಕ್ಷಣಕ್ಕೊಂದು ಕೊಲೆ), ಬಿ.ಆರ್.ಶಂಕರ (ಕೊಲೆಯ ರಹಸ್ಯ), ಚಂದ್ರಕಾಂತ ಕುಸನೂರ (ಚರ್ಚ್‌ಗೇಟ್), ಎಚ್.ಕೆ.ಅನಂತರಾವ್ (ಅಂತ), ಮನು (ಚಕ್ರವ್ಯೂಹ).

ಈಗ ಇತರ ಪ್ರಕಾರಗಳಲ್ಲಿ ಕೃತಿ ರಚಿಸುತ್ತಿರುವವರೂ ಪತ್ತೆದಾರಿ ಸಾಹಿತ್ಯ ಬರೆಯುತ್ತಿದ್ದಾರೆ. ಹೀಗೆಯೇ ಬೇರೆ ಭಾಷೆಯ ಪ್ರಸಿದ್ಧ ಪತ್ತೆದಾರಿ ಕಾದಂಬರಿಗಳ ಅನುವಾದಗಳೂ ಪ್ರಕಟವಾಗುತ್ತಿವೆ. ಪತ್ತೆದಾರಿ ಸಾಹಿತ್ಯ ಆಯಾ ಕಾಲದ ವೈಜ್ಞಾನಿಕ ಬೆಳೆವಣಿಗೆಯಿಂದ ಅನೇಕ ನವೀನ ಸಂಗತಿಗಳನ್ನು ಬಳಸಿಕೊಳ್ಳುತ್ತ ಬೆಳೆದುಬರುತ್ತಿದೆ. ಸಾಮಾಜಿಕ ಪತ್ತೆದಾರಿ

ಕಾದಂಬರಿಗಳಂತೆ ವೈಜ್ಞಾನಿಕ ವಿಚಾರಗಳನ್ನೊಳಗೊಂಡ ಕೃತಿಗಳೂ ಪ್ರಕಟವಾಗಿವೆ. ರಾಜಶೇಖರ ಭೂಸನೂರಮಠ ಅವರ ಕಾದಂಬರಿಗಳು ಈ ನಿಟ್ಟಿನಲ್ಲಿ ಅಪಾರ ಜನಮನ್ನಣೆಗಳಿಸಿವೆ. ಕೆಲವು ಪತ್ತೇದಾರಿ ಕಾದಂಬರಿಗಳು ಚಲನಚಿತ್ರಗಳಾಗಿಯೂ ಪ್ರಸಿದ್ಧವಾಗಿವೆ. ಎಚ್.ಕೆ.ಅನಂತರಾವ್ ಅವರ 'ಅಂತ' ಕಾದಂಬರಿಯಾಧಾರಿತ ಚಲನಚಿತ್ರ ಕನ್ನಡ ಚಲನಚಿತ್ರರಂಗದಲ್ಲಿ ಹೊಸ ದಾಖಲೆಯನ್ನು ನಿರ್ಮಿಸಿತು. ಅಂಬರೀಷ್ ಅವರ ಅಭಿನಯ ಬದುಕಿನಲ್ಲಿ ಈ ಚಿತ್ರ ಒಂದು ವಿಶಿಷ್ಟ ಸ್ಥಾನ ಪಡೆದುಕೊಂಡಿದೆ. ರಾಜಕುಮಾರ್ ಅವರು ಅಭಿನಯಿಸಿದ ಪತ್ತೇದಾರಿ ಕಾದಂಬರಿಯಾಧಾರಿತ ಅನೇಕ ಚಿತ್ರಗಳು ಪ್ರಸಿದ್ಧಿ ಪಡೆದಿವೆ. ಪತ್ತೇದಾರಿ ಕಥೆ ಕಾದಂಬರಿಗಳಿಗೆ ಈಗ ಇತರ ಬಗೆಯ ಕಥೆ ಕಾದಂಬರಿಗಳ ಸ್ಥಾನಮಾನ ದೊರಕಿದೆ. ಎಲ್ಲ ಸಾಹಿತ್ಯ ಪ್ರಕಾರಗಳಿಗಿಂತ ಈ ಪ್ರಕಾರಕ್ಕೆ ಹೆಚ್ಚು ಜನಪ್ರಿಯತೆ ಇರುವುದರಿಂದ ಈ ಮಾಧ್ಯಮವನ್ನು ಜನತೆಯಲ್ಲಿ ಓದುವ ಹವ್ಯಾಸವನ್ನು ಬೆಳೆಸಲು, ಕೊಲೆ ಸುಲಿಗೆ ಅತ್ಯಾಚಾರಗಳಿಂದ ಏನೂ ಲಾಭವಿಲ್ಲ ಎಂಬ ನೀತಿಯನ್ನು ಹರಡಲು ಬಳಸಿಕೊಳ್ಳಬಹುದು. ಒಳ್ಳೆಯ ಪತ್ತೇದಾರಿಕಥೆಯಲ್ಲಿ ಮನ ಒಪ್ಪುವ, ಕಾನೂನು ಒಪ್ಪುವ ತರ್ಕವಿರಬೇಕು. ಕಥೆಯ ವಸ್ತು ಜನಜೀವನಕ್ಕೆ ಹತ್ತಿರವಾದುದೂ ಸಹಜವಾದುದೂ ಆಗಿರಬೇಕು. ಕಥೆಯಲ್ಲಿನ ವರ್ಣನೆ ಅಸಹಜವಾಗಬಾರದು. ಸಂಭಾಷಣೆಯಲ್ಲಿ ಚತುರತೆ ಇರಬೇಕು. ಇಡೀ ಬರೆವಣಿಗೆ ಕಳ್ಳನಾರು ಎಂಬ ಕುತೂಹಲವನ್ನು ಬೆಳೆಸುವಂತಿರಬೇಕು. ಕಥೆಯಲ್ಲಿ ತನಿಖೆಯ ವ್ಯವಹಾರಗಳು, ಕ್ರಿಮಿನಲ್ ಕೋರ್ಟಿನ ವ್ಯವಹಾರಗಳು ಅಷ್ಟೇ ನೈಜವಾಗಿರಬೇಕು. ಕಥೆಯಲ್ಲಿ ಸಾಮಾಜಿಕ ರಾಜಕೀಯ ಸಾಂಸಾರಿಕ ಜೀವನ ಚಿತ್ರಗಳಲ್ಲಿ ಒಂದೊ ಎರಡೊ ಬಂದರೆ ಇನ್ನೂ ಮೇಲು. ಕನ್ನಡದಲ್ಲಿ ಇಂಥ ಅಂಶಗಳನ್ನೊಳಗೊಂಡ ಕೃತಿಗಳ ರಚನೆಗೆ ವಿಪುಲ ಅವಕಾಶವಿದೆ. *

**ಕನ್ನಡದಲ್ಲಿ ಪ್ರಬಂಧ ಸಾಹಿತ್ಯ :** ಆಧುನಿಕ ಸಾಹಿತ್ಯದ ಇತರ ಪ್ರಕಾರಗಳಂತೆ ಕನ್ನಡ ಪ್ರಬಂಧವೂ ರಚನಾವಿಧಾನ ದೃಷ್ಟಿಯಿಂದ ಇಂಗ್ಲಿಷ್ ಪ್ರಬಂಧದಿಂದ ಪ್ರಭಾವಿತವಾಗಿದ್ದರೂ ನಮ್ಮ ನುಡಿನೆಲದಲ್ಲಿ ಹುಟ್ಟಿ ಬೆಳೆದದ್ದು ಎಂಬಂತೆ ಸ್ವಂತ ಸತ್ವದಿಂದ ಶೋಭೆ ಪಡೆದಿದೆ. ಸಾಹಿತ್ಯಗುಣ ಸಿದ್ಧಿಸುವಂತೆ ವಿಶಿಷ್ಟ ಪದಬಂಧಗಳಿಂದ ನಿರ್ಮಾಣವಾದ ಯಾವ ಸಾಹಿತ್ಯ ಕೃತಿಯನ್ನಾದರೂ ಪ್ರಬಂಧ ಎಂದು ಹೇಳಬಹುದು. ಪ್ರಬಂಧ ಎಂಬ ಮಾತು ಬಹಳ ಹಳೆಯದು. ಕನ್ನಡದ ಅನೇಕ ಪ್ರಾಚೀನ ಕವಿಗಳು ತಮ್ಮ ಕಾವ್ಯಗಳನ್ನು 'ಪ್ರಬಂಧ' ಎಂದು ಕರೆದಿರುವುದೂ ಉಂಟು. ಆದರೆ ಪ್ರಾಚೀನರ ದೃಷ್ಟಿಯಲ್ಲಿ ಪ್ರಬಂಧ ಎಂದರೆ ಕಾವ್ಯ ಎಂದರ್ಥ.

ನಮ್ಮಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸ ಪ್ರಾರಂಭವಾದಮೇಲೆ ಶಾಲಾಕಾಲೇಜುಗಳ ಶಿಕ್ಷಣ ಕ್ರಮದಲ್ಲಿ 'ಪ್ರಬಂಧ' ಎಂಬ ಮಾತಿಗೆ ಒಂದು ನಿರ್ದಿಷ್ಟ ವಿಷಯದ ಮೇಲೆ ಬರೆದ ಸಂಕ್ಷೇಪವಾದ ಗದ್ಯರಚನೆ ಎಂಬ ಅರ್ಥ ಬಂತು. ಪ್ರಬಂಧ ರಚನೆ ಅಭ್ಯಾಸವಿಷಯವಾಯಿತು. ಇಂಗ್ಲಿಷಿನ ಎಸ್ಸೆ ಕನ್ನಡದಲ್ಲಿ ಪ್ರಬಂಧ, ಲಘು ಪ್ರಬಂಧ, ನಿಬಂಧ, ಹರಟೆ, ನ್ಯಾಸ, ಪ್ರಸಂಗ, ಲಲಿತ ಪ್ರಸಂಗ ಎಂಬ ಬೇರೆ ಬೇರೆ ಹೆಸರುಗಳಲ್ಲಿ ಅವತರಿಸಿತು. ಈ ಎಸ್ಸೆ ಎಂಬ ಇಂಗ್ಲಿಷ್ ಪದವನ್ನೇ ಈ ಪ್ರಕಾರಕ್ಕೆ ಕನ್ನಡದಲ್ಲೂ ಬಳಸಿದವರೂ ಬಳಸುತ್ತಿರುವವರೂ ಉಂಟು. ಸಂಕ್ಷಿಪ್ತತೆ ಮತ್ತು ಅಸಮಗ್ರತೆಯಲ್ಲಿಯೂ ಪರಿಪೂರ್ಣತೆಯ ತೋರಿಕೆ ಈ ಬರೆಹದ ವಿಶಿಷ್ಟ ಲಕ್ಷಣ. ನಮ್ಮ ವಿಮರ್ಶಕರು ಬಳಸುವ ಭಾವಪ್ರಬಂಧ, ಲಲಿತಪ್ರಬಂಧ, ಲಘುಪ್ರಬಂಧ ಎಂಬ ಪದಗಳಲ್ಲಿನ ವಿಶೇಷಣಗಳು ಪ್ರಬಂಧದ ಕಾವ್ಯಗುಣವನ್ನೂ ಶೈಲಿಯ ಸೊಬಗನ್ನೂ ಸಂಕ್ಷಿಪ್ತವೂ ಹಗುರವೂ ಆದ ನಿರೂಪಣಾ ಕ್ರಮವನ್ನೂ ಸೂಚಿಸುತ್ತವೆ. ಸ್ವಂತ ಭಾವನೆಗಳನ್ನೂ ಆಲೋಚನೆಗಳನ್ನೂ ಇನ್ನೊಬ್ಬರಿಗೆ ಆತ್ಮೀಯವಾಗಿ ಹೇಳುವ ಪ್ರಬಂಧದ ವ್ಯಕ್ತಿನಿಷ್ಠ ಕಥನಕ್ರಮದಲ್ಲಿ ಹರಟೆಯ ಧೋರಣೆ ಇದ್ದರೂ ಪ್ರಬಂಧ ಹೆಚ್ಚು ಗಂಭೀರವಾದದ್ದು. ಆದರೂ ಕನ್ನಡದ ಮಟ್ಟಿಗೆ, ಪ್ರಬಂಧ - ಹರಟೆಗಳನ್ನು ಒಂದೇ ಸಾಹಿತ್ಯಪ್ರಕಾರದ ಅವಳಿಜವಳಿಗಳೆಂದು ಎಣಿಸಬಹುದು.

ವಿಜ್ಞಾನ, ತತ್ತ್ವಜ್ಞಾನ, ಸಾಹಿತ್ಯ ವಿಮರ್ಶೆ ಮುಂತಾದ ನಾನಾ ಶಾಸ್ತ್ರಗಳ ತೂಕದ ವಿಷಯಗಳನ್ನು ಕುರಿತು ಒಳ್ಳೆಯ ರಂಜಕ ಶೈಲಿಯಲ್ಲಿ ಬರೆದ ಲೇಖನಗಳನ್ನೂ ಪ್ರಬಂಧಗಳೆಂದೇ ಕರೆಯಬಹುದು. ಆದರೆ, ಅವುಗಳ ಗುರಿ ತಿಳಿವಳಿಕೆ ನೀಡುವುದೇ ಹೊರತು ಮನೋಲ್ಲಾಸವಲ್ಲ. ಇವುಗಳನ್ನು ಶುದ್ಧ ಎಸ್ಸೆಯಿಂದ ಬೇರ್ಪಡಿಸಿ, 'ವಿಚಾರ ಪ್ರಬಂಧ' ಎಂದು ಕರೆಯಬಹುದು.

ಕನ್ನಡ ಪ್ರಬಂಧ ಅನುಕರಣಶೀಲವಾಗದೆ ಸ್ವತಂತ್ರವಾಗಿಯೇ ಬೆಳೆದು ಬಂದಿದ್ದರೂ ಇಂಗ್ಲಿಷ್ ಪ್ರಬಂಧದಿಂದ ಭಿನ್ನವಾದ ಲಕ್ಷಣಗಳನ್ನೇನೂ ಹೊಂದಿಲ್ಲ. ಕನ್ನಡದ ಪ್ರಬಂಧಗಳನ್ನೇ ಬಹುಮಟ್ಟಿಗೆ ಅಧಿಕರಿಸಿ ಪ್ರಬಂಧದ ಸಾಮಾನ್ಯ ಲಕ್ಷಣಗಳನ್ನು ವಿವರಿಸುವ ಲೇಖನಗಳು ಪ್ರಬಂಧ ಸಂಗ್ರಹಗಳ ಮುನ್ನುಡಿಗಳ ರೂಪದಲ್ಲಿಯೂ ಪ್ರತ್ಯೇಕವಾಗಿಯೂ ಪ್ರಕಟವಾಗಿವೆ. ದ.ರಾ.ಬೇಂದ್ರೆ, ವಿ.ಕೃ.ಗೋಕಾಕ, ವಿ.ಸೀ., ಗೊರೂರು ರಾಮಸ್ವಾಮಿ ಅಯ್ಯಂಗಾರ್, ಜಿ.ವೆಂಕಟಸುಬ್ಬಯ್ಯ, ಎ.ಎನ್.ಮೂರ್ತಿರಾವ್ ಮುಂತಾದವರ ಮುನ್ನುಡಿಗಳು ವಿಮರ್ಶಾತ್ಮಕ ಸಮೀಕ್ಷೆಗಳನ್ನು ಒಳಗೊಂಡಿವೆ. ವರದರಾಜ ಹುಯಿಲಗೋಳರು ಲಲಿತ ಪ್ರಬಂಧಗಳು ಎಂಬ ಸಮೀಕ್ಷಾ ಗ್ರಂಥವನ್ನೇ ಬರೆದಿದ್ದಾರೆ. ಎ.ಎನ್.ಮೂರ್ತಿರಾಯರ ಹರಟೆ ಮತ್ತು ಪ್ರಬಂಧ, ಎಚ್ಚೆಸ್ಕೆ ಅವರ ಕನ್ನಡದಲ್ಲಿ ಹರಟೆಯ ಸ್ಥಾನ ಎಂಬ ಲೇಖನಗಳು ಪ್ರಬಂಧದ ಸ್ವರೂಪವನ್ನು ಚೆನ್ನಾಗಿ ತಿಳಿಸಿಕೊಡುತ್ತವೆ. ಹೊಸಗನ್ನಡ ಪ್ರಬಂಧ ಸಂಕಲನದ (1961) ಸಂಪಾದಕರಾದ ಗೊರೂರು ರಾಮಸ್ವಾಮಿ ಅಯ್ಯಂಗಾರರ ಕೆಲವು ಮಾತುಗಳನ್ನು ಕನ್ನಡ ಪ್ರಬಂಧಕ್ಕೆ ಸಂಬಂಧಪಟ್ಟಂತೆ ಇಲ್ಲಿ ಉಲ್ಲೇಖಿಸಬಹುದು.

"ಲಘುಪ್ರಬಂಧಕ್ಕೆ ವಿಷಯ ಇಂತಹುದೇ ಆಗಬೇಕೆಂಬ ನಿಯಮವಿಲ್ಲ. ಸಣ್ಣ ವಿಷಯ, ದೊಡ್ಡ ವಿಷಯ, ಯಾವುದು ಬೇಕಾದರೂ ಆಗಬಹುದು. .......... ಲಘು ಪ್ರಬಂಧವನ್ನು ಓದಿದ ಕೂಡಲೇ ಒಂದು ತೃಪ್ತಿಯ ಮನೋಭಾವ ಉಂಟಾಗಬೇಕು. ಹೇಳುವುದನ್ನೆಲ್ಲ ಹೇಳಿಯಾಯಿತು ಎಂಬಂತೆ ಇರಬಾರದು .......... ಒಂದು ದೃಷ್ಟಿಯಿಂದ ಪೂರ್ಣವಾಗಿ ತೋರಿದರೂ ಮತ್ತೊಂದು ದೃಷ್ಟಿಯಿಂದ ಹೆಚ್ಚಿನ ಜ್ಞಾನಕ್ಕೆ ಅದು ಸೋಪಾನವಾಗಬೇಕು. ಉತ್ತಮವಾದ ಎಸ್ಸೆ ನಮ್ಮನ್ನು ನಲಿಸಲೂ ಬೇಕು, ತಿದ್ದಲೂ ಬೇಕು ......... ಭಾವನೆಗಳು ಅನುಭವಗಳು ಹಾಸ್ಯನಗೆ ಇವು ಉದ್ದಕ್ಕೂ ಮಿಂಚುತ್ತಿರಬೇಕು ......... ಗುರಿ ಮುಟ್ಟುವುದೊಂದೇ ಮುಖ್ಯವಲ್ಲ ಮಾರ್ಗಪ್ರಯಾಣವೂ ಆಕರ್ಷಕವಾಗಿರಬೇಕು". ಈ ಮಾತುಗಳು ಪ್ರಬಂಧದ ವಿಷಯ, ಉದ್ದೇಶ, ವ್ಯಾಪ್ತಿ, ಗುಣ ಇವುಗಳ ಬಗ್ಗೆ ಸಂಪೂರ್ಣ ಜ್ಞಾನ ನೀಡುತ್ತವೆ.

ವಿ.ಕೃ.ಗೋಕಾಕರು ಇಂಗ್ಲಿಷ್ ಹಾಗೂ ಕನ್ನಡ ಪ್ರಬಂಧ ಸಾಹಿತ್ಯವನ್ನು ಅನುಲಕ್ಷಿಸಿ ನಿಬಂಧ ಹಾಗೂ ಹರಟೆಯ ವಿಭಾಗಗಳು ಅನೇಕ ಸಲ ಬೆರೆಯುವುದುಂಟೆಂದೂ ಅವುಗಳ ಬೆರಕೆಯಿಂದ ಸಣ್ಣಪುಟ್ಟ ಭೇದಗಳು ಹುಟ್ಟುವುದೆಂದೂ ಹೇಳಿ ಅಂತಹ ಉಪಭೇದಗಳನ್ನು ಹೀಗೆ ಒಕ್ಕಣಿಸಿದ್ದಾರೆ: ಚಿಂತನಪರ (ಮಾಸ್ತಿಯವರ ಶಾಂತಿ); ಚಾರಿತ್ರಿಕ (ಸಿದ್ಧವನಹಳ್ಳಿ ಕೃಷ್ಣಶರ್ಮರ ಕನ್ನಡ ಕಿಡಿಗಳು); ಐತಿಹಾಸಿಕ (ಆಲೂರ ವೆಂಕಟರಾಯರ ಕರ್ನಾಟಕ ಗತವೈಭವದ ಲೇಖನಗಳು); ವೈಜ್ಞಾನಿಕ (ಕನ್ನಡ ನಿಯತಕಾಲಿಕಗಳಲ್ಲಿ ಪ್ರಕಟವಾಗುವ ವಿಜ್ಞಾನಕ್ಕೆ ಸಂಬಂಧಿಸಿದ ಲೇಖನಗಳು); ವಿಮರ್ಶಾತ್ಮಕ ಇಲ್ಲವೇ ವಿವೇಚನಾತ್ಮಕ (ಸಾಹಿತ್ಯ, ಕಲೆ ಮುಂತಾದುವನ್ನು ಕುರಿತವು); ಸ್ವಭಾವ ವಿಭಜನಾತ್ಮಕ (ಕೆ.ಎಸ್.ಕಾರಂತರ ಮುಂದಾಳುಗಳು - ಮಂದಾಳುಗಳು); ಲಘು ಕಥಾತ್ಮಕ (ಗೊರೂರು ರಾಮಸ್ವಾಮಿ ಅಯ್ಯಂಗಾರರ ವಿಮೆ ಯಮನನ್ನೇ ಹೆದರಿಸಿತು); ವರ್ಣನಪರ (ವಿ.ಜಿ. ಕುಲಕರ್ಣಿ ಅವರ ಮಾವು); ಪತ್ರಪ್ರಬಂಧ ಇಲ್ಲವೇ ಹರಟೆಯೋಲೆ (ಶಿ.ಕೃಷ್ಣರ ಮುಗುದೆಯರ ಪತ್ರಗಳು); ಹರಟೆ (ರಂ.ಶ್ರೀ.ಮುಗಳಿಯವರ ನಾದುರಸ್ತು). ಇವುಗಳ ಜೊತೆಗೆ ವ್ಯಕ್ತಿಚಿತ್ರಗಳನ್ನೂ (ಎಚ್ಚೆಸ್ಕೆ ಅವರ ಎತ್ತರದ ವ್ಯಕ್ತಿಗಳು) ಮತ್ತು ಸ್ಮೃತಿ ಚಿತ್ರಗಳನ್ನೂ (ಡಿ.ವಿ.ಜಿ. ಅವರ ಜ್ಞಾಪಕ ಚಿತ್ರಶಾಲೆ) ನಾವು ಸೇರಿಸಬಹುದು. ಈ ಎಲ್ಲ ಪ್ರಭೇದಗಳನ್ನೂ ಒಟ್ಟಿನ ಮೇಲೆ, ವರ್ಣನಾತ್ಮಕ, ಚಿಂತನಾತ್ಮಕ, ವಿಚಾರಾತ್ಮಕ ಅಥವಾ ವಿವೇಚನಾತ್ಮಕ, ಲಘುಪ್ರಬಂಧ ಅಥವಾ ಹರಟೆ (ವಿನೋದಾತ್ಮಕ ಮತ್ತು ವಿಡಂಬನಾತ್ಮಕ) ಎಂದು ನಾಲ್ಕೈದು ಸ್ಥೂಲ ಪ್ರಭೇದಗಳಲ್ಲಿ ಅಡಕ ಮಾಡಬಹುದು.

ಬಂಕಿಮಚಂದ್ರರ ಬಂಗಾಲಿ ಪ್ರಬಂಧಗಳ ಕನ್ನಡ ಅನುವಾದ, ಲೋಕರಹಸ್ಯ ಬಿ.ವೆಂಕಟಾಚಾರ್ಯರಿಂದ 1898ರಲ್ಲಿ ಪ್ರಕಟವಾಯಿತೆನ್ನಲಾದ ಇದು ಕನ್ನಡದ ಮೊದಲ ಪ್ರಬಂಧ ಸಂಕಲನ. ಅನಂತರ ಪ್ರಕಟವಾದ ಆರ್.ಶ್ರೀನಿವಾಸರಾವ್ ಅವರ ವಿವೇಕಮಂಜರಿ (1912) ಕನ್ನಡ ಪ್ರಬಂಧ

ಸಂಕಲನಗಳಲ್ಲಿ ಎರಡನೆಯದು. ಬಿ.ವೆಂಕಟಾಚಾರ್ಯರಿಂದ ರಚಿತವಾದ ದಾಡಿಯ ಹೇಳಿಕೆ ಕನ್ನಡದಲ್ಲಿ ಪ್ರಕಟವಾದ ಸ್ವತಂತ್ರ ಲಲಿತ ಪ್ರಬಂಧ. ಚಿತ್ರವಿಚಿತ್ರಾವಳಿ ಇದೇ ಲೇಖಕರ ಇನ್ನೊಂದು ಪ್ರಬಂಧ ಸಂಕಲನ. ಕೆ.ಲಕ್ಷ್ಮಣರಾವ್ ಅವರ ಕಲಿಯುಗ ಸುಧನ್ವ ಇದೇ ಕಾಲದ್ದಾಗಿದ್ದು, ಪರೀಕ್ಷೆಯಲ್ಲಿ ಅನುತ್ತೀರ್ಣನಾದ ವ್ಯಕ್ತಿಯೊಬ್ಬನ ಸ್ವಾನುಭವ ಚಿತ್ರಣ ಇದರಲ್ಲಿ ಮೂಡಿಬಂದಿದೆ. ಸ್ವಲ್ಪಕಾಲದ ಅನಂತರ ಪ್ರಕಟವಾದ ಬಾಳಾಜಿ ಕೃಷ್ಣಪೇಟೆಯವರ ಎಲ್ಲಿದೆ ಸ್ತ್ರೀ ಸೌಂದರ್ಯವು (1923), ಸಳಕೆರೆ ಜಯರಾವ್ ಅವರ ಒಂದು ಗಳಿಗೆಯ ಮೋಜು (1925), ರಾಘವೇಂದ್ರರಾವ್ ತಡಸ ಅವರ ಇತ್ಯಾದಿಯ ಆತ್ಮವೃತ್ತ ಕಥನ (1927) - ಪ್ರಮುಖವಾದವುಗಳು. 1930ರ ದಶಕವನ್ನು ಗಮನಿಸಿ ಹೇಳುವುದಾದರೆ ರಚಿತವಾದ ಪ್ರಬಂಧಗಳ ಸಂಖ್ಯೆ ಕಡಿಮೆಯಷ್ಟೇ ಅಲ್ಲದೆ ಅವುಗಳನ್ನು ರಚಿಸಿದ ಯಾರೂ ಪ್ರಮುಖ ಪ್ರಬಂಧಕಾರರೆಂಬ ಹೆಸರು ಗಳಿಸಲಿಲ್ಲ. ಈ ಕಾಲವನ್ನು ಕನ್ನಡ ಪ್ರಬಂಧಗಳ ಬಾಲ್ಯಾವಸ್ಥೆಯ ಕಾಲವೆಂದು ಹೇಳಬಹುದು.

ಕಾಲಮಾನ ದೃಷ್ಟಿಯಿಂದ 1931 ಲಲಿತ ಪ್ರಬಂಧಗಳ ಇತಿಹಾಸದಲ್ಲಿ ಎರಡನೆಯ ಘಟ್ಟದ ಆರಂಭವೆನ್ನಬಹುದು. ಇಂಗ್ಲಿಷ್ ಪ್ರಬಂಧದ ಜಾಡನ್ನು ಮೊತ್ತಮೊದಲಿಗೆ ಹಿಡಿಯಲು ಯತ್ನಿಸಿದ ಬರೆಹ ಎಂದರೆ, ಎಂ.ಜಿ. ವೆಂಕಟೇಶಯ್ಯನವರ ಪುಲ್ಲಯ್ಯನ ಪ್ರಬಂಧಗಳು. ಇದು ಎರಡು ಭಾಗಗಳಲ್ಲಿ ಪ್ರಕಟವಾಗಿದೆ. ಜೈಲ್ದರ್ಶನ, ಶೈಲಿ, ಮೀಸೆ, ಮುಖಸ್ತುತಿ ಇವು ಇವರ ಉತ್ತಮ ಪ್ರಬಂಧಗಳು. ಅನಂತರದಲ್ಲಿ ಸಂಪದ್ಗಿರಿರಾಯರ ಇಜಾರ, ವಿ.ಸೀತಾರಾಮಯ್ಯನವರ ಮೈಸೂರು ರುಮಾಲು ಹಾಗೂ ಖಾಯಿಲೆಗಳು ಎಂಬ ಪ್ರಬಂಧಗಳು ಸಾಹಿತ್ಯ ರಸಿಕರ ಮನಸ್ಸನ್ನು ಸೆಳೆದು, ಕನ್ನಡ ಪ್ರಬಂಧದ ಬೆಳೆವಣಿಗೆಗೆ ಮಾರ್ಗದರ್ಶಕವಾದುವು. ಜಯಕರ್ನಾಟಕ, ಪ್ರಬುದ್ಧ ಕರ್ಣಾಟಕ ಮುಂತಾದ ಸಾಹಿತ್ಯ ಪತ್ರಿಕೆಗಳಲ್ಲಿ ಪ್ರಬಂಧಗಳು ಕ್ರಮವಾಗಿ ಪ್ರಕಟವಾಗತೊಡಗಿದುವು. ಸ್ವಲ್ಪ ಒರಟು ಎನ್ನಿಸಿದರೂ ಹಾಸ್ಯದ ಬರೆಹಕ್ಕೆ ಹಾದಿ ತೆರೆದಿದ್ದು ವಿಕಟ ವಿನೋದಿನಿ, ದ.ರಾ.ಬೇಂದ್ರೆಯವರು ಹೊರತಂದ ಹರಟೆಗಳು (ಪ್ರಥಮ ಪ್ರಾತಿನಿಧಿಕ ಹರಟೆಗಳ ಸಂಕಲನ), ವಿ.ಕೃ.ಗೋಕಾಕರ ಮುನ್ನುಡಿಯುಳ್ಳ ಸುಳುವು ಹೊಳವು (ಪ್ರಾತಿನಿಧಿಕ ಪ್ರಬಂಧ ಸಂಕಲನ). ಇವು ಹೊರಬರುವ ವೇಳೆಗೆ (ಸು.1938-39) ಆ.ನ.ಕೃಷ್ಣರಾಯರ ಹೊಸ ಹುಟ್ಟು, ಎ.ಎನ್.ಮೂರ್ತಿರಾಯರ ಹಗಲುಗನಸುಗಳು, ಕೆ.ವಿ.ಪುಟ್ಟಪ್ಪನವರ ಮಲೆನಾಡಿನ ಚಿತ್ರಗಳು, ಪು.ತಿ.ನರಸಿಂಹಾಚಾರ್ಯರ ರಾಮಾಚಾರಿಯ ನೆನಪು ಮುಂತಾದ ಪ್ರಬಂಧ ಸಂಗ್ರಹಗಳು ಪ್ರಕಟವಾಗಿ ಕನ್ನಡ ಪ್ರಬಂಧ ಸಾಹಿತ್ಯದ ಆಶಾದಾಯಕ ಬೆಳೆವಣಿಗೆಗೆ ನಿದರ್ಶನಗಳಾಗಿದ್ದವು. ಸಣ್ಣಕಥೆ, ಕಾದಂಬರಿ ಸಾಹಿತ್ಯ ಪ್ರಕಾರಗಳಷ್ಟು ಜನಪ್ರಿಯವಲ್ಲದ ಪ್ರಬಂಧ ಸಾಹಿತ್ಯ ಪ್ರಕಾರ ಕೆಲವು ಕಾಲ ಹಿಂದೆ ಸರಿದಂತೆ ಕಂಡುಬಂದದ್ದೂ ಉಂಟು. ಆದರೆ ಈಚಿನ ದಶಕಗಳಲ್ಲಿ ಅನೇಕ ಹೊಸ ಪ್ರಬಂಧಕಾರರೂ ನಗೆಬರೆಹಗಾರರೂ ಬೆಳಕಿಗೆ ಬಂದು ಕೃಷಿ ಮಾಡಿದ್ದರಿಂದ ಕನ್ನಡ ಪ್ರಬಂಧ ಸಾಹಿತ್ಯದ ಪರಂಪರೆ ಅವಿಚ್ಛಿನ್ನವಾಗಿ ಮುಂದುವರಿದುಕೊಂಡು ಬಂದಿದೆ. ಅದರ ಗುಣಮಟ್ಟ ಇಳಿಯದೆ, ವೈವಿಧ್ಯಪೂರ್ಣವಾದ ಬಾಹುಳ್ಯ ಬೆಳೆಯಲು ಅವಕಾಶವಾಗಿದೆ. ಈ ಬೆಳೆವಣಿಗೆಗೆ ಇಂಗ್ಲೆಂಡಿನಂತೆ ಇಲ್ಲಿಯೂ ನಿಯತಕಾಲಿಕ ಪತ್ರಿಕೆಗಳು ತುಂಬ ಸಹಕಾರಿಯಾಗಿವೆ.

ಕೆಲವು ಕನ್ನಡ ಪ್ರಬಂಧಗಳ ಹೆಸರುಗಳನ್ನು ಗಮನಿಸಿದರೆ, ಕನ್ನಡ ಪ್ರಬಂಧ ಸಾಹಿತ್ಯದ ವಿಷಯವೈವಿಧ್ಯ ವೈಶಿಷ್ಟ್ಯ ಸ್ಪಷ್ಟವಾಗುತ್ತದೆ. ಶಾಂತಿ (ಶ್ರೀನಿವಾಸ), ಬರೆಹಗಾರನ ಹಣೆಬರಹ (ಗೋವಿಂದ ಪೈ), ಕೋಗಿಲ (ವಿ.ಕೃ.ಗೋಕಾಕ), ವ್ಯಾಸಂಗದ ಹವ್ಯಾಸ (ಡಿ.ಎಲ್.ನರಸಿಂಹಾಚಾರ್), ಸಾವಿನ ಕೂಡ ಸರಸ (ದ.ರಾ.ಬೇಂದ್ರೆ), ಹೋಟೆಲುಗಳು (ಎ.ಎನ್.ಮೂರ್ತಿರಾವ್), ಅಜ್ಜಯ್ಯನ ಅಭ್ಯಂಜನ (ಕೆ.ವಿ.ಪುಟ್ಟಪ್ಪ), ತುಂಬೆಯ ಹೂ (ಎಂ.ವಿ.ಸೀತಾರಾಮಯ್ಯ), ನನ್ನ ಬೆನ್ನು (ನಾ.ಕಸ್ತೂರಿ), ನೆಗಡಿ, ತಿಗಣೆ, (ತೀ.ನಂ.ಶ್ರೀಕಂಠಯ್ಯ), ನನ್ನ ಸ್ವಂತ ಶ್ರಾದ್ಧ (ಶ್ರೀರಂಗ), ಮಂಕರು ಬೆಪ್ಪರು (ರಾ.ಶಿ) ಇತ್ಯಾದಿ.

ಕರ್ನಾಟಕದ ಪ್ರಸಿದ್ಧ ಲೇಖಕರೆಲ್ಲರೂ ಒಂದೋ ಎರಡೋ ಹಲವೋ ಕೆಲವೋ ಪ್ರಬಂಧಗಳನ್ನು ಬರೆದಿರುವರಾದರೂ ಪ್ರಬಂಧಕಾರರೆಂದು ಹೆಸರು ಮಾಡಿರುವವರ ಸಂಖ್ಯೆಯೂ ಕಡಮೆಯೇನಲ್ಲ. ಇವರ ಕೊಡುಗೆಯಿಂದಾಗಿ ಕನ್ನಡ ಪ್ರಬಂಧಸಾಹಿತ್ಯ ನಮಗೆ ಹೆಚ್ಚು ಪರಿಚಿತವಾದ ಇಂಗ್ಲಿಷ್ ಪ್ರಬಂಧ ಸಾಹಿತ್ಯಕ್ಕೆ ಸರಿದೊರೆಯಾಗಿ ನಿಲ್ಲಬಲ್ಲ ಯೋಗ್ಯತೆಯನ್ನು ಪಡೆದಿದೆ. ಪ್ರಸಿದ್ಧರಾದ ಪ್ರಬಂಧಕಾರರಲ್ಲಿ ಒಬ್ಬೊಬ್ಬರದ್ದು ಒಂದೊಂದು ವೈಶಿಷ್ಟ್ಯ. ಎ.ಎನ್.ಮೂರ್ತಿರಾಯರ (ಹಗಲುಗನಸುಗಳು, ಅಲೆಯುವ ಮನ, ಮಿನುಗು ಮಿಂಚು) ಹೂವರಳಿದಂತೆ ಅರಳುವ ಮಧುರಭಾವಗಳ ಮೋಹಕತೆ ಹಾಗೂ ಲಲಿತಶೈಲಿ, ವಿ.ಸೀ. ಅವರ (ಬೆಳುದಿಂಗಳು, ಶೀಕರಣೆ) ರಸಿಕ ಹೃದಯದಿಂದ ಹೊಮ್ಮುವ ಭಾವುಕತೆಯೊಂದಿಗೆ ಬೆರೆತ ತಿಳಿ ವಿಚಾರಧಾರೆ, ಪು.ತಿ.ನ. ಅವರ (ರಥಸಪ್ತಮಿ ಮತ್ತು ಇತರ ಚಿತ್ರಗಳು, ಈಚಲುಮರದ ಕೆಳಗೆ, ಧೇನುಕಪುರಾಣ) ಸಂಸ್ಕೃತ ಭೂಯಿಷ್ಠ ಪ್ರೌಢ ಶೈಲಿಯ ವಸ್ತುನಿಷ್ಠ ವೈಚಾರಿಕತೆ ಮತ್ತು ಭಾವಸಾಂದ್ರತೆ, ತೀ.ನಂ.ಶ್ರೀ.ಯವರ (ನಂಟರು) ಅಚ್ಚುಕಟ್ಟಾದ ಒಪ್ಪ ಓರಣದ ಸಮಗ್ರ ದೃಷ್ಟಿಯ ಗಂಭೀರತೆಯ ವಿಷಯ ವಿವೇಚನೆ, ರಾ.ಕುಲಕರ್ಣಿ ಅವರ (ಗಾಳಿಪಟ, ದೇವಕನ್ಯೆ), ಕಾವ್ಯಪ್ರಪಂಚಕ್ಕೂ ವಾಸ್ತವ ಜಗತ್ತಿಗೂ ಗಂಟುಹಾಕಿ ವಿವಿಧ ಕೋನಗಳಿಂದ ವಸ್ತುದರ್ಶನ ಮಾಡಿಸುವ ವಿಶಿಷ್ಟ ತಂತ್ರದ ಬಳಕೆ, ಎಂ.ವಿ.ಸೀ. ಅವರ (ಧೂಮಲೀಲೆ ಮತ್ತು ಮುಗಿಲುಗಳು) ಹದವಾದ ಗದ್ಯಶಿಲ್ಪದಲ್ಲಿ ಮೂಡಿಬಂದಿರುವ ಚಿತ್ರವಿನ್ಯಾಸ, ಜಿಜ್ಞಾಸೆಯ ಬಲೆಯನ್ನು ಹೆಣೆಯುವ ಕ್ರಮ, ಎನ್.ಪ್ರಹ್ಲಾದರಾವ್ ಅವರ (ರಥರಥಿಕ, ಮಧುವ್ರತ, ಮುತ್ತಿನ ಹಾರ) ಆತ್ಮಾಭಿವ್ಯಕ್ತಿಯ ಭಾವಲಹರಿಗಳ ಆತ್ಮೀಯತೆ, ಶುಚಿಯಾದ ಹಾಸ್ಯ, ಹಾ.ಮಾ.ನಾಯಕರ (ನಮ್ಮ ಮನೆಯ ದೀಪ) ಮಕ್ಕಳ ಜಗತ್ತಿನ ಮುಗ್ಧ ರಮ್ಯತೆ ಎಚ್.ಎಲ್.ನಾಗೇಗೌಡರ (ನನ್ನೂರು) ಆಡುಮಾತಿನ ಲಯಬದ್ಧ ಗ್ರಾಮ್ಯ ಬರೆವಣಿಗೆ ಇವು ಕನ್ನಡ ಪ್ರಬಂಧ ಸಾಹಿತ್ಯಕ್ಕೆ ಎತ್ತರಬಿತ್ತರಗಳನ್ನೂ ವೈವಿಧ್ಯಪೂರ್ಣ ಸೌಂದರ್ಯವನ್ನೂ ನೀಡಿವೆ. ಈ ಪ್ರಬಂಧಕಾರರ ಸಾಲಿನಲ್ಲಿ ನಿಲ್ಲತಕ್ಕ ಅರ್ಹತೆಯನ್ನು ಹೊಂದಿರುವ ಹಿರೇಮಲ್ಲೂರ ಈಶ್ವರನ್ (ಶಿವನ ಬುಟ್ಟಿ), ಕಲ್ಯಾಣಸುಂದರ (ಸ್ನೇಹದೃಷ್ಟಿ), ಆನಂದ (ಆನಂದಲಹರಿ), ರಮಾನಂದರಾವ್, (ಹುಚ್ಚು ಬೆಳದಿಂಗಳಿನ ಹೂಬಾಣ), ಎನ್.ಎಸ್.ಗದಗಕರ (ಒಡೆದ ಕನ್ನಡಿ), ಬಿ.ಆರ್.ವಾಡಪ್ಪಿ (ಸುಳಿಗಾಳಿ), ಎಚ್ಚೆಸ್ಕೆ (ಜೇಡನ ಬಲೆ), ಎಂ.ರಾಮರಾವ್ (ನಮ್ಮ ಅರಣ್ಯಯಾತ್ರೆ), ಎಸ್.ಮಂಜುನಾಥ್ (ಪುಸ್ತಕವನ್ನು ಬಿಡು), ಅ.ನ.ಕೃ. (ಪೊರಕೆ), ಡಿ.ಎಸ್.ಕರ್ಕಿ (ನಾಲ್ದೆಸೆಯ ನೋಟ), ಶ್ರೀಧರಮೂರ್ತಿ (ಲಂಚ ಪ್ರಪಂಚ), ದ.ಬಾ.ಕುಲಕರ್ಣಿ (ಸಾವಧಾನ, ಬದುಕಿದ ಬಾಳು), ರಾ.ಯ. ಧಾರವಾಡಕರ (ಧೂಮ್ರವಲಯ), ಎಸ್.ಅನಂತನಾರಾಯಣ (ಇಂಥವರೂ ಇದ್ದಾರೆ), ಕೆ.ವೆಂಕಟರಾಯಪ್ಪ (ವಿಚಾರಲಹರಿ), ಸದಾಶಿವ ಒಡೆಯರ (ಜೀವನಕಥೆ) - ಮುಂತಾದವರು ತಮ್ಮ ಕೊಡುಗೆಗಳಿಂದ ಪ್ರಬಂಧದ ಪರಿಧಿಯನ್ನು ವಿಸ್ತರಿಸಿದ್ದಾರೆ.

ಪ್ರಬಂಧದ ಕಕ್ಷೆಯಲ್ಲೆ ಬಂದರೂ ವಿನೋದ, ವ್ಯಂಗ್ಯ, ವಿಡಂಬನೆ ಮುಂತಾದ ವಿಭಿನ್ನ ಗುಣಗಳಿಂದ ಪ್ರತ್ಯೇಕ ಗಣ್ಯತೆಗೆ ಅರ್ಹವಾದ ಹರಟೆಯ ಪ್ರಕಾರ ಅನೇಕ ಪ್ರತಿಷ್ಠಿತ ಸಾಹಿತಿಗಳನ್ನೂ ಹೊಸ ಬರೆಹಗಾರರನ್ನೂ ಆಕರ್ಷಿಸಿದೆ. ಇವರಲ್ಲಿ ನಾ.ಕಸ್ತೂರಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್ (ಹೇಮಾವತಿಯ ತೀರದಲ್ಲಿ, ನಮ್ಮೂರಿನ ರಸಿಕರು), ರಾ.ಶಿ.ಶ್ರೀರಂಗ, ಶಿವರಾಮ ಕಾರಂತ, (ಮೈಲಿಕಲ್ಲಿನೊಡನೆ ಮಾತುಕತೆ), ಬೀಚಿ (ತಿಮ್ಮನ ತಲೆ), ನಾಡಿಗೇರ ಕೃಷ್ಣರಾಯ (ಮೆಲ್ಲೋಗರ), ಜಿ.ಪಿ.ರಾಜರತ್ನಂ, ಲಾಂಗೂಲಾಚಾರ್ಯ ಮುಂತಾದವರು ವಿವಿಧ ಕೃತಿಗಳ ಮೂಲಕ ನಗೆಬರೆಹಗಳ ಹೆದ್ದಾರಿ ಹಾಕಿದರು. ಇದೇ ದಾರಿಯಲ್ಲಿ ನಡೆದು ಪ್ರಬಂಧ ಸಾಹಿತ್ಯಕ್ಕೆ ವಿನೋದ ವಿಡಂಬನೆಗಳ ಮುಖವನ್ನು ಕೊಟ್ಟವರಲ್ಲಿ - ಅ.ರಾ.ಸೇ. (ಸುಳಿನಗು), ದಾಶರಥಿ ದೀಕ್ಷಿತ್ (ಗಾಂಪರ ಹರಟೆಗಳು), ಅಷ್ಟಾವಕ್ರ, ಎನ್ಕೆ (ಮುಂಗಾಲ್ ಪುಟಿಗೆ), ನಾಡಿಗೇರ ಗೋವಿಂದರಾವ್ (ನಗೆಬರಹಗಳು), ಕುಡ್ಡಿ ವಾಸುದೇವ ಶೆಣೈ (ಕಸದ ಡಬ್ಬಿಗಳು), ಅ.ರಾ.ಮಿತ್ರ (ಯಾರೋ ಬಂದಿದ್ದರು) ಇವರುಗಳು ಗಮನಾರ್ಹರು. ಇವರಲ್ಲದೆ ಎಚ್.ಕೆ.ರಂಗನಾಥ (ವೈದ್ಯನಲ್ಲದ ಗಂಡ), ಉಮಾಪತಿ (ಅಡಿಗೆಮನೆ), ಎ.ಕೃಷ್ಣಮೂರ್ತಿ, ಎ.ಎಸ್.ರಾಮಕೃಷ್ಣ (ಹುಟ್ಟೂರಿನ ಮೋಹ), ಅಶ್ವತ್ಥ, ಸಚ್ಚಿದಾನಂದ ಶಿರೋಡ್ಕರ್, ಸದಾಶಿವ ಎಣ್ಣೆಹೊಳೆ (ಸನ್ಮಾನ), ಎಚ್.ಎಲ್.ಕೇಶವ ಮೂರ್ತಿ (ನೀನ್ಯಾಕೊ ನಿನ್ನ ಹಂಗ್ಯಾಕೊ,

ಹ್ಯಂಗಾರ ಟಿಕೇಟ್ ಕೊಡಿ) ಮೊದಲಾದ ಬರೆಹಗಾರರು ಪ್ರಬಂಧ ಸಾಹಿತ್ಯದ ಗಮನಾರ್ಹ ಲೇಖಕರಾಗಿದ್ದಾರೆ. ಹರಟೆಗಾರರ ಬಳಗ ಬೆಳೆಯುತ್ತಲೇ ಇದ್ದು, ಹರಟೆ ಕನ್ನಡ ಸಾಹಿತ್ಯದಲ್ಲಿ ಹಾಸ್ಯದ ಕೊರತೆಯನ್ನು ಬಹುಮಟ್ಟಿಗೆ ಹೋಗಲಾಡಿಸಿದೆ. ಬಿಗುವಿನ ಪ್ರಬಂಧಕ್ಕಿಂತ ನಗುವಿನ ಹರಟೆ ಜನಪ್ರಿಯ ಎನಿಸಿದೆ. ಇಂಗ್ಲಿಷ್‌ನ ಕೆಲವು ಪ್ರಸಿದ್ಧ ಪ್ರಬಂಧಗಳನ್ನು ಎಸ್.ಮಂಜುನಾಥ್, ಎಂ.ರಾಮರಾವ್, ಎನ್.ಎಸ್.ರಾಮಚಂದ್ರಯ್ಯ, ಎಸ್.ವಿ.ಪರಮೇಶ್ವರಭಟ್ಟ ಮುಂತಾದವರು ಭಾಷಾಂತರಮಾಡಿ ಕನ್ನಡಕ್ಕೆ ಒಳ್ಳೆಯ ಮಾದರಿಗಳನ್ನು ಒದಗಿಸಿದ್ದಾರೆ. (ಎಂ.ವಿ.ಎಸ್.)

ನವ್ಯ ಸಾಹಿತ್ಯದ ಪ್ರಖರತೆ ಕಡಿಮೆಯಾದ ಅನಂತರದಲ್ಲಿ ದಲಿತ ಬಂಡಾಯ ಸಾಹಿತ್ಯದ ನೆರಳಿನಲ್ಲಿ ಲಲಿತ ಪ್ರಬಂಧ ಪ್ರಕಾರ ಹೊಸಹುಟ್ಟನ್ನು ಪಡೆದಿರುವುದನ್ನು ಕಾಣಬಹುದಾಗಿದೆ. ನವ್ಯದ ಸಂದರ್ಭ ಒಬ್ಬನೇ ಒಬ್ಬ ಪ್ರಬಂಧಕಾರನನ್ನು ಸೃಜಿಸಲಿಲ್ಲ. ನವ್ಯದ ತಾತ್ತ್ವಿಕತೆಯ ಮಂದಶ್ರುತಿಯ ಭಾವಗೀತೆಯೆನಿಸಿದ ಪ್ರಬಂಧ ಪ್ರಕಾರವನ್ನು ಇಡಿಯಾಗಿ ತಿರಸ್ಕರಿಸಿತು. ಹೀಗೆಂದ ಮಾತ್ರಕ್ಕೆ ನವ್ಯದ ಕಾಲದಲ್ಲಿ ಪ್ರಬಂಧಗಳೇ ರಚಿತವಾಗಿಲ್ಲವೆಂದಲ್ಲ. ಕು.ಶಿ.ಹರಿದಾಸಭಟ್ಟ, ಹಾ.ಮಾ.ನಾಯಕ, ಪಾ.ವೆಂ.ಆಚಾರ್ಯ, ಪ್ರಭುಶಂಕರ, ಸಿ.ಪಿ.ಕೆ., ದೇಜಗೌ, ಜಿ.ಶಂ.ಪ., ಟಿ.ಸುನಂದಮ್ಮ ಮುಂತಾದವರೆಲ್ಲ ಪ್ರಬಂಧಗಳನ್ನು ರಚಿಸಿದ್ದಾರೆ. ಆದರೆ ನಿಜವಾದ ತಾತ್ತ್ವಿಕವಾಗಿ ಇವರು ನವೋದಯಕ್ಕೆ ಬದ್ಧರಾದವರು.

ವ್ಯಕ್ತಿಕೇಂದ್ರಿತ ನೆಲೆಯಲ್ಲಿ ಜಗತ್ತನ್ನು ಕಾಣುವ ನವ್ಯರ ಪರಿಭಾಷೆಯನ್ನು ನಿರಾಕರಿಸಿ ಕಾವ್ಯ ಹೇಗೆ ಸಂಗೀತದ ಸಾಹಚರ್ಯವನ್ನು ಮೈಗೂಡಿಸಿಕೊಂಡು ಮರುಜೀವವನ್ನು ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ಪಡೆಯಿತೋ ಹಾಗೆ, ಲಲಿತ ಪ್ರಬಂಧವೂ ಸಾಹಿತ್ಯ ಮತ್ತು ಸಾಹಿತ್ಯೇತರ ಕಾರಣಗಳಿಂದ ಮರುಹುಟ್ಟನ್ನು ಪಡೆಯಿತು. ಸಮಷ್ಟಿಯೊಂದಿಗಿನ ಮುಖಾಮುಖಿ, ಸಾಹಿತಿಗಳ ಸಾಮಾಜಿಕ ಕಳಕಳಿ, ಹರಟುವ ಲಕ್ಷಣ ತೀವ್ರಗತಿಯಲ್ಲಿ ಪುನಃ ಸ್ಥಾಪನೆಗೊಂಡಿದ್ದು ಸಾಹಿತ್ಯಕ ಲಕ್ಷಣಗಳಾದರೆ, ಸಾಹಿತ್ಯ ಅಕಾಡೆಮಿಯಂಥ ಸಾಹಿತ್ಯ ಸಂಘಟನೆ ಈ ಪ್ರಕಾರವನ್ನು ಪೋಷಿಸಿದ್ದು ಸಾಹಿತ್ಯೇತರ ಕಾರಣ. ದಲಿತ ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ಅನೇಕ ಪ್ರಬಂಧಕಾರರು ಪ್ರಬಂಧಗಳನ್ನು ಬರೆಯತೊಡಗಿದರು.

ಹಿರಿಯ ಪ್ರಬಂಧಕಾರರಲ್ಲಿ ಗೊರೂರರ 'ಹಳೆಯ ಪಳೆಯ ಮುಖಗಳು' ಶಿವರಾಮಕಾರಂತರ 'ಅಳಿದುಳಿದ ನೆನಪುಗಳು' ಈ ಎರಡರಲ್ಲೂ ಹಳೆಯ ಪ್ರಬಂಧಗಳಲ್ಲಿ ಚಿತ್ರಿತವಾಗದಿರುವ ಸ್ಮೃತಿಗಳಿವೆ. ಪು.ತಿ.ನ ಅವರ 'ಯದುಗಿರಿಯಲ್ಲಿ ಗೆಳೆಯರು' (1981) 'ರಥಸಪ್ತಮಿ ಮತ್ತು ಇತರ ಚಿತ್ರಗಳು' ಕೃತಿಯ ಬಂಧದ ವಿಷಯಕ್ಕೆ ಸೇರುವಂಥವು. 'ರಾಮಾಚಾರಿಯ ನೆನಪು'ವಿನ ಶಿವ ಇಲ್ಲಿಯೂ ಕಾಣಿಸಿಕೊಳ್ಳುತ್ತಾನೆ. ಇಲ್ಲಿನ 'ಗೆಳೆಯರು' ಕಾಲ್ಪನಿಕರು. ಗೊರೂರು, ಕಾರಂತ ಮತ್ತು ಪು.ತಿ.ನ. ಅವರ ಲಲಿತ ಪ್ರಬಂಧದ ಕೊನೆಯ ರೇಖೆಗಳನ್ನಿಲ್ಲಿ ಕಾಣಬಲ್ಲೆವು.

ಎ.ಎನ್.ಮೂರ್ತಿರಾಯರ 'ಸಮಗ್ರ ಲಲಿತ ಪ್ರಬಂಧಗಳು' ಕ್ಷಿಪ್ರಗತಿಯಲ್ಲಿ ಮರುಮುದ್ರಣ ಕಂಡಿರುವುದು ಇವರ ಪ್ರಬಂಧಗಳು ಜನಮನವನ್ನು ಇಂದಿಗೂ ಆಕರ್ಷಿಸಿರುವುದನ್ನು ಸೂಚಿಸುತ್ತದೆ. ಈ ಹಿಂದೆಯೇ ಪ್ರಕಟವಾಗಿದ್ದ (ಹಗಲುಗನಸುಗಳು, ಅಲೆಯುವ ಮನ ಮತ್ತು ಮಿನುಗುಮಿಂಚು) ಮೂರು ಸಂಕಲನಗಳ ಜೊತೆಗೆ, ಸಂಕಲಿತ ಪ್ರಬಂಧಗಳು ಎಂಬ ಶೀರ್ಷಿಕೆಯಡಿ ಒಂಬತ್ತು ಪ್ರಬಂಧಗಳನ್ನು ಹೊಸದಾಗಿ ಸೇರಿಸಿದ್ದಾರೆ. ತೀ.ನಂ.ಶ್ರೀ.ಯವರಿಗೆ ಪಂಪಪ್ರಶಸ್ತಿ ಲಭಿಸಿದಾಗ ಮಾಡಿದ ಅಭಿನಂದನಾ ಭಾಷಣ ಹಾಗೂ 'ನಮಗೆ ಬೇಕಾದ ಸಾಹಿತ್ಯ' ಮತ್ತು 'ಸಾಹಿತ್ಯ ಮತ್ತು ಸಮಾಜ' ಎಂಬೆರಡು ಬರೆಹಗಳೂ ಈ ಸಮಗ್ರಸಂಕಲನದಲ್ಲಿ ಸೇರಿವೆ. 'ಚಿತ್ರಗಳು ಪತ್ರಗಳು' ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅಪರೂಪದ ಬರೆಹವೆನಿಸಿದೆ.

ಎರಡನೆಯ ತಲೆಮಾರಿನ ಪ್ರಬಂಧಕಾರರಲ್ಲಿ ಪ್ರಮುಖರಾದ ಅ.ರಾ. ಮಿತ್ರ ಅವರ ಎಪ್ಪತ್ತೊಂಬತ್ತು ಪ್ರಬಂಧಗಳನ್ನು 'ಅ.ರಾ.ಮಿತ್ರರ ಸಮಗ್ರ ಲಲಿತ ಪ್ರಬಂಧಗಳು' ಎಂಬ ಹೆಸರಿನಲ್ಲಿ ಹೊರತರಲಾಗಿದೆ. ಎಂ.ಎಚ್.ಕೃಷ್ಣಯ್ಯನವರ ಮೌಲಿಕವಾದ ಪ್ರಸ್ತಾವನೆ ಪ್ರಬಂಧಗಳಿಗೆ ಉತ್ತಮ ಪ್ರವೇಶಿಕೆಯನ್ನು ಕಲ್ಪಿಸಿದೆ. "ಅ.ರಾ.ಮಿತ್ರರು ತಮ್ಮ ಪ್ರಬಂಧಗಳಲ್ಲಿ ಮಾನವ ಸ್ವಭಾವದ ಅರೆಕೊರೆಗಳನ್ನು ವ್ಯಕ್ತಪಡಿಸುವ ರೀತಿ ಅನನ್ಯವಾಗಿದೆ. ನಯನಾಜೂಕಿನ ಭಾಷೆ ವಸ್ತುವನ್ನು ಸಮರ್ಥಿಸುತ್ತಿದ್ದರೂ ಅದನ್ನು ನಿಜವಾಗಿಯೂ ಖಂಡಿಸುತ್ತಿದ್ದಾರೆ ಎಂದು ನಂಬಿಕೆ ಹುಟ್ಟಿಸುವ ಶೈಲಿ, ವಸ್ತುವನ್ನು ವಿವಿಧ ಮಗ್ಗಲುಗಳಿಂದ ನೋಡಿ ಅದರಲ್ಲಿ ಹರಿಗಡಿಯದ ಏಕಸೂತ್ರತೆಯ ರೀತಿ ಹಾಗೂ ಪ್ರಸನ್ನ ಮನೋಧರ್ಮಗಳನ್ನು ವ್ಯಕ್ತಪಡಿಸುತ್ತಾ ಅ.ರಾ.ಮಿತ್ರರು ತಮ್ಮ ಪ್ರಬಂಧಗಳಲ್ಲಿ ಹಿರಿದಾದ ಯಶಸ್ಸನ್ನು ಪಡೆದಿದ್ದಾರೆ" ಎಂಬ ವೀರೇಂದ್ರ ಸಿಂಪಿಯವರ ಮಾತುಗಳು ಗಮನಾರ್ಹವಾದುದು.

'ರಾ.ಕು.' ಅವರ ಪ್ರಬಂಧಗಳಲ್ಲಿ ವ್ಯಂಗ್ಯೋಕ್ತಿ, ಕಟೋಕ್ತಿ, ತರ್ಕ, ಜಿಜ್ಞಾಸೆ, ಹಳೆಗನ್ನಡ ಕಾವ್ಯದ ಸಾಲುಗಳು, ಉಪಮೆಗಳು, ವಿಚಾರಗಳು - ಇವುಗಳನ್ನು ಬೆರೆಸಿರುವ ಬಗೆ ಆಕರ್ಷಣೀಯವೆನಿಸಿದೆ. 'ಗಾಳಿಪಟ' ಹಾಗೂ 'ದೇವಕನ್ಯೆ' ಇವೆರಡೂ ರಾ.ಕು. ಅವರ ಮಹತ್ತ್ವದ ಸಂಕಲನಗಳು. ಹಾ.ಮಾ. ನಾಯಕರು ಹೇಳುವಂತೆ ರಾ.ಕು. ಅವರ ಪ್ರಬಂಧಗಳಲ್ಲಿ 'ತತ್ತ್ವಶಾಸ್ತ್ರೀಯ ಚಿಂತನವೂ ಕವಿಯ ಕಲ್ಪನಾ ವಿಲಾಸವೂ ಸಮರಸವಾಗಿ ಬೆರೆತುಕೊಂಡಿದೆ'.

ಮುಂಗಾಲ್ ಪುಟಿಗೆ (1945) ಎಂಬ ಸಂಕಲನದ ಮೂಲಕ ಗಮನಸೆಳೆದಿದ್ದ ಎನ್.ಕೆ.ಕುಲಕರ್ಣಿ (ಎನ್ಕೆ) ಯವರ ಎಂಬತ್ತೊಂದು ಬರೆಹಗಳಿರುವ ಎನ್ಕೆ ಲಲಿತ ಪ್ರಬಂಧಗಳು ಇತ್ತೀಚೆಗೆ ಪ್ರಕಟಗೊಂಡಿರುವ ಬೃಹತ್ ಸಂಪುಟ. ವೈವಿಧ್ಯಪೂರ್ಣವಾದ ಪ್ರಬಂಧಗಳನ್ನಿಲ್ಲಿ ಕಾಣಬಹುದು. ಈ ಸಂಪುಟ ಇವರ ಸಮಗ್ರ ಪ್ರಬಂಧ ಸಂಪುಟವಲ್ಲ ಎಂಬುದನ್ನು ಗಮನಿಸಬೇಕು. ಈ ಸಂಕಲನದಲ್ಲಿರುವ ಎರಡೂವರೆಪಟ್ಟು ಲೇಖನಗಳು ಸಂಕಲಿತವಾಗದೆ ಉಳಿದಿವೆ.

ಟಿ.ಸುನಂದಮ್ಮನವರ 'ಸಮಗ್ರ' ಸಂಕಲನ ಈ ಕಾಲಮಾನದಲ್ಲಿ ಪ್ರಕಟಗೊಂಡಿರುವ ಬೃಹತ್ ಸಂಪುಟ. ಹಾಸ್ಯ ಹರಟೆಯ ಪ್ರಸಂಗಗಳೇ ಹೆಚ್ಚಾಗಿರುವ ಇಲ್ಲಿನ ಬರೆಹಗಳಲ್ಲಿ ಲಲಿತವಾದುವು ತೀರ ವಿರಳ.

ಕರ್ನಾಟಕ ಸಾಹಿತ್ಯ ಅಕಾಡೆಮಿ ದಶವಾರ್ಷಿಕ ಪ್ರಬಂಧ ಹಾಗೂ ವಾರ್ಷಿಕ ಪ್ರಬಂಧಗಳನ್ನು ಪ್ರಕಟಿಸುವ ಮೂಲಕ ಲಲಿತ ಪ್ರಬಂಧ ಸಂಕಲನಗಳ ಹೊಸಶಕೆಯನ್ನೇ ಆರಂಭಿಸಿತು. ದಶವಾರ್ಷಿಕ ಪ್ರಬಂಧಗಳು (1974-83) ಅತ್ಯಂತ ಮಹತ್ವದ ಸಂಕಲನ. ಈ ಅವಧಿಯಲ್ಲಿ ಸರಿಸುಮಾರು ಎಂಟನೂರು ಲಲಿತ ಪ್ರಬಂಧಗಳು ಪ್ರಕಟಗೊಂಡಿರುವ ಉಲ್ಲೇಖ ಇಲ್ಲಿದೆ. ಹಿರಿಯ ಕಿರಿಯ ಪ್ರಬಂಧಗಳೂ ಸೇರಿದಂತೆ, ಐವತ್ತಾರು ಪ್ರಬಂಧಗಳು ಈ ಸಂಕಲನದಲ್ಲಿ ಸೇರಿವೆ. ಸಂಖ್ಯೆಯ ದೃಷ್ಟಿಯಿಂದಲ್ಲದೆ ಗುಣಮಟ್ಟದ ದೃಷ್ಟಿಯಿಂದಲೂ ವಿಪುಲವಾದ ಪ್ರಬಂಧಗಳು ಈ ಅವಧಿಯಲ್ಲಿ ಪ್ರಕಟಗೊಂಡಿವೆ. ಭಾರತದ ಬೇರೆ ಭಾಷೆಗಳ ಯಾವುದೇ ಅಕಾಡೆಮಿ ಕೈಗೊಳ್ಳದ ಅನನ್ಯ ಪ್ರಯತ್ನ ಇದಾಗಿದೆ. ಪ್ರತಿವರ್ಷವೂ ವಾರ್ಷಿಕ ಪ್ರಬಂಧಗಳನ್ನು ಅಕಾಡೆಮಿ ಪ್ರಕಟಿಸುತ್ತಿರುವುದು ಆಯಾ ವರ್ಷದಲ್ಲಿ ಪ್ರಬಂಧ ಸೃಷ್ಟಿಯ ಹರಹನ್ನು ದಾಖಲಿಸುವ ಪ್ರಯತ್ನವಾಗಿದೆ. ಪ್ರಬಂಧ 1976 (ಸಂ.ಅನಂತನಾರಾಯಣ), 1981 (ಸಂ.ಪ್ರಭುಶಂಕರ), 1987 (ಸಂ.ಡಿ.ಆರ್.ನಾಗರಾಜ್), 1988 (ಸಂ.ಪುರುಷೋತ್ತಮ ಬಿಳಿಮಲೆ) ಗಮನಾರ್ಹವಾದ ಸಂಕಲನಗಳು. ನಾಗರಾಜ್ ಹಾಗೂ ಬಿಳಿಮಲೆಯವರ ಪ್ರಸ್ತಾವನೆಗಳು ಆ ತಲೆಮಾರು ಪ್ರಬಂಧ ಸಾಹಿತ್ಯವನ್ನು ಗ್ರಹಿಸಿರುವ ಬಗೆಗಿನ ದಾಖಲೆಯಾಗಿದೆ ಎನ್ನಬಹುದು.

ಹಿರಿಯ ಲಲಿತ ಪ್ರಬಂಧಕಾರರಲ್ಲಿ ಒಬ್ಬರಾದ ರಾ.ಯ. ಧಾರವಾಡಕರರಿಗೆ ಎಪ್ಪತ್ತು ವರ್ಷ ತುಂಬಿದಾಗ ಅರ್ಪಿಸಿರುವ 'ಪ್ರಬಂಧ ಪ್ರಪಂಚ' ಎಂಬ ಅಭಿನಂದನಗ್ರಂಥ (ಸಂ.ಎಚ್.ವಿ.ನಾಗೇಶ) ಪ್ರಬಂಧ ಸಾಹಿತ್ಯವನ್ನು ಕುರಿತು ಅದುವರೆವಿಗೆ ನಡೆದಿರುವ ಅಧ್ಯಯನಗಳನ್ನು ಒಂದೆಡೆ ಸಂಕಲಿಸಿದೆ. ಈ ಗ್ರಂಥದ ವಿಶೇಷವೆಂದರೆ ಪ್ರಬಂಧ ವಿಸ್ತಾರ ಎಂಬ ವಿಭಾಗ. ಇಲ್ಲಿ ಎನ್.ಬಾಲಸುಬ್ರಮಣ್ಯರ ಫ್ರೆಂಚ್ ಮೂಲ, ಮಾಂಟೇನನ ಪ್ರಬಂಧಗಳು ಎಂಬ ಲೇಖನದಿಂದ ತೊಡಗಿ ಹಿಂದಿ ಗುಜರಾತಿ, ತಮಿಳು, ತೆಲುಗು, ಮಲಯಾಳಂ, ಬಂಗಾಲಿ ಮತ್ತು ಮರಾಠಿ ಭಾಷೆಗಳಲ್ಲಿ ಪ್ರಬಂಧ ಸಾಹಿತ್ಯ ಪ್ರಕಾರ ಬೆಳೆದು ಬಂದಿರುವ ಹೆಜ್ಜೆಗಳನ್ನು ಗುರುತಿಸುವ

ಪ್ರಯತ್ನವಿದೆ. ಇದು ಉಲ್ಲೇಖಾರ್ಹ ದಾಖಲೆ. ಭಾರತೀಯ ಲಲಿತ ಪ್ರಬಂಧಗಳ ಎಡೆಯಲ್ಲಿ ಕನ್ನಡ ಪ್ರಬಂಧಗಳ ಅನನ್ಯತೆಯನ್ನು ಅಧ್ಯಯನ ಮಾಡಲು ದಾರಿದೀಪವಾಗಿದೆ. ಇದರೊಂದಿಗೆ ವಿ.ಕೃ.ಗೋಕಾಕ, ಗೊರೂರರು ಪ್ರಬಂಧ ಸಂಕಲನಗಳಿಗೆ ಬರೆದಿರುವ ಪ್ರಸ್ತಾವನೆಯೂ ಸೇರಿದಂತೆ, ಬೇಂದ್ರೆ, ಪಂಜೆ, ಪಡುಕೋಣೆ, ವಿಸೀ, ಪ್ರಹ್ಲಾದರಾವ್, ಮಾಸ್ತಿ, ತೀನಂಶ್ರೀ, ಕಡೆಂಗೋಡ್ಲು, ಮೂರ್ತಿರಾವ್, ಬೀಚಿ, ಪು.ತಿ.ನ., ಗೊರೂರು, ಕುವೆಂಪು, ಕಾರಂತ, ಎಂ.ವಿ.ಸೀ., ಪಾವೆಂ., ಹಾಮಾನಾ., ಮಿತ್ರ, ಸಿಂಪಿ ಲಿಂಗಣ್ಣ, ಎನ್ಕೆ, ರಾ.ಕು. ಪ್ರಬಂಧ ಸಾಹಿತ್ಯದ ಸಮೀಕ್ಷೆ ಇದೆ. ಒಟ್ಟಿನಲ್ಲಿ ಲಲಿತಪ್ರಬಂಧದ ಬಗ್ಗೆ ಆಸಕ್ತ ಅಧ್ಯಯನಕಾರರಿಗೆ ಪ್ರಬಂಧ ಪ್ರಪಂಚ ಕೈಮರವಿದ್ದಂತೆ. ಈ ಕೃತಿಯ ಯೋಜನೆಯ ಮೂಲಕ ಸಂಪಾದಕರಾದ ಎಚ್.ವಿ.ನಾಗೇಶ್ ಅಗತ್ಯ ದಾಖಲೆಯನ್ನು ಕನ್ನಡ ಸಾಹಿತ್ಯ ಚರಿತ್ರೆಗೆ ಕೊಟ್ಟಿದ್ದಾರೆ.

ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ 'ಶತಮಾನದ ಲಲಿತ ಪ್ರಬಂಧಗಳು' (ಸಂ.ಗುರುಲಿಂಗ ಕಾಪಸೆ, 2000) ಲಲಿತ ಪ್ರಬಂಧ ನಡೆದು ಬಂದ ದಾರಿಯನ್ನು ಅತ್ಯಂತ ಸಮರ್ಪಕವಾಗಿ ಪರಿಚಯಿಸುವ ಸಂಕಲನವಾಗಿದೆ. ಗೋವಿಂದ ಪೈ, ಪಂಜೆಮಂಗೇಶರಾಯರಿಂದ ತೊಡಗಿ ಇಂದಿನ ಮಹತ್ವದ ಪ್ರಬಂಧಕಾರರಾದ ಚಂದ್ರಶೇಖರ ಆಲೂರು, ಬಿ.ಚಂದ್ರೇಗೌಡ ಮೊಗಳ್ಳಿ ಗಣೇಶ, ಈರಪ್ಪ ಎಂ.ಕಂಬಳಿ, ಗುರುದೇವಿ ಹುಲೆಪ್ಪನವರ ಮುಂತಾದವರೆಗೆ ಸರಿಸುಮಾರು ಎಂಬತ್ತು ತೊಂಬತ್ತು ವರ್ಷಗಳಲ್ಲಿ ವಿಕಾಸಗೊಂಡಿರುವ ಲಲಿತ ಪ್ರಬಂಧ ಸಾಹಿತ್ಯದ ಹಾಸನ್ನು ಈ ಸಂಕಲನ ಸಮರ್ಥವಾಗಿ ಪ್ರತಿನಿಧಿಸಿದೆ. ಗುರುಲಿಂಗ ಕಾಪಸೆಯವರ 'ಪ್ರಸ್ತಾವನೆ' ಅಭ್ಯಾಸಯೋಗ್ಯವಾದುದು.

ಕಳೆದ ಎರಡು ಮೂರು ದಶಕಗಳಲ್ಲಿ ಅನೇಕ ಗಮನಾರ್ಹ ಕೃತಿಗಳು ಪ್ರಕಟಗೊಂಡಿವೆ. ಮಹತ್ವದ ಕೃತಿಗಳನ್ನು ಗಮನಿಸುವುದಾದರೆ ಪು.ತಿ.ನ. ಅವರ ಯದುಗಿರಿಯಲ್ಲಿ ಗೆಳೆಯರು, ಶಿವರಾಮಕಾರಂತರ, ಅಳಿದುಳಿದ ನೆನಪುಗಳು, ಹಾ.ಮಾ.ನಾಯಕರ ಸೃಜನ, ಸೂಲಂಗಿ ಮತ್ತು ಸಂಗತಿ, ಕು.ಶಿ.ಹರಿದಾಸಭಟ್ಟರವರ ಲೋಕಾಭಿರಾಮ, ಸ.ಸ.ಮಾಳವಾಡರ ದೃಷ್ಟಿಕೋನ, ಗೀತಾಕುಲಕರ್ಣಿಯವರ 'ಹುರಿಗಾಳು', ಪ್ರಭುಶಂಕರರ 'ಜನಮನ', ಟಿ.ವಿ.ವೆಂಕಟಾಚಲಶಾಸ್ತ್ರೀಯವರ ಸದ್ದಂತೆಂಬರ ಗಂಡ, ಎಚ್ಚೆಸ್ಕೆಯವರ ಮೇಘಲಹರಿ, ಹವಳದ ಸರ, ಡಿ.ಕೆ.ರಾಜೇಂದ್ರ ಅವರ 'ಮಾತಿನ ಮಲ್ಲರು', ಘಟನೆಗಳು, ರಾ.ಕು. ಅವರ ಸಲ್ಲಾಪ, ರಾಶಿಯವರ ಕೊರವಂಜಿ ಕಂಡ ಸಮಾಜ, ಸುನಂದಾ ಬೆಳಗಾಂವಕರರ 'ಕಜ್ಜಾಯ', ಮ.ಸು.ಕೃಷ್ಣ ಮೂರ್ತಿಯವರ ಚಂಕ್ರಮಣ, ಹಂಪನಾ ಅವರ ಹೆಸರಿನ ಸೊಗಸು, ಅನಂತ ಕುಲಕರ್ಣಿಯವರ ತಳಿರು, ಎಂ.ಎಸ್.ವೇಣುಗೋಪಾಲರ ಆತ್ಮೀಯ, ವೀರೇಂದ್ರ ಸಿಂಪಿಯವರ ಭಾವಮೈದುನ, ಬಿ.ಆರ್.ವಾಡಪ್ಪಿ ಯವರ 'ಗಾಳಿಗುದುರಿ', ಕಾಂತರಾಜು ಮಿರ್ಲೆಯವರ 'ಪ್ರೇಮದರ್ಶನ', ಪಿ.ಎಸ್.ರಾಮನುಜಂ ಅವರ 'ಪ್ರಬಂಧ ವಿಹಾರ', ಬಿ.ಶಾಮಸುಂದರ ಅವರ ಮುಖಗಳು, ರಸ್ತೆ ಹಾಗೂ ಇತರ ಪ್ರಬಂಧಗಳು, ವೈದೇಹಿಯವರ ಮಲ್ಲಿನಾಥನ ಧ್ಯಾನ, ಚಂದ್ರಶೇಖರ ಆಲೂರರ 'ಒಲಿದಂತೆ ಹಾಡುವೆ' ಹೀಗೆ ಅನೇಕವನ್ನು ಹೆಸರಿಸಬಹುದು.

ಈಚಿನ ದಶಕಗಳಲ್ಲಿ ಲಂಕೇಶರ 'ಟೀಕೆ ಟಿಪ್ಪಣಿ'ಯ ಲಂಕೇಶ್ ಪತ್ರಿಕೆಯ ಸಂಗ್ರಹಗಳಲ್ಲಿರುವ ರಾಮು ಎಂಬ ಹುಡುಗ, ಮೋಕ್ಷ ಹುಡುಕುತ್ತ ಪ್ರೀತಿಯ ಬಂಧನದಲ್ಲಿ ಹಾಗೂ 'ಗುಬ್ಬಚ್ಚಿ ಗೂಡು' ಇತ್ಯಾದಿ ಪ್ರಬಂಧಗಳು ಕನ್ನಡ ಗದ್ಯ ಸಾಹಿತ್ಯಕ್ಕೆ ಸಂದ ಅನನ್ಯ ಕೊಡುಗೆಗಳು. ಲಂಕೇಶ್ ಪತ್ರಿಕೆಯಲ್ಲಿ ಎಸ್.ಮಂಜುನಾಥ'ರ ಇಪ್ಪತ್ತಕ್ಕೂ ಹೆಚ್ಚು ಪ್ರಬಂಧ'ಗಳು ಪ್ರಕಟಗೊಂಡಿವೆ. ಇವಿನ್ನೂ ಸಂಕಲನ ರೂಪದಲ್ಲಿ ಪ್ರಕಟವಾಗಿಲ್ಲ.

ಹೊಸ ತಲೆಮಾರಿನ ಪ್ರಬಂಧಕಾರರಲ್ಲಿ ಚಂದ್ರಶೇಖರ ಆಲೂರು ವೈದೇಹಿ ಮೊಗಳ್ಳಿ ಗಣೇಶ ಉತ್ತಮ ಕಥ'ನ ಪ್ರಬಂಧಗಳನ್ನು ರಚಿಸುತ್ತಿದ್ದಾರೆ. ಇವರು ರಚಿಸುತ್ತಿರುವ ಪ್ರಬಂಧಗಳ ವಸ್ತು, ನಿರೂಪಣೆ ಹಿಂದೆಂದಿಗಿಂತಲೂ ಭಿನ್ನವೆನಿಸಿದೆ. ಅಂತರಂಗ ನಿರೀಕ್ಷಣೆ ಈ ಪ್ರಬಂಧಗಳಲ್ಲಿ ಎದ್ದು ಕಾಣುವ ಗುಣ. ಜಯಂತ ಕಾಯ್ಕಿಣಿಯವರ 'ಬೊಗಸೆಯಲ್ಲಿ ಮಳೆ' ಹಾಗೂ 'ಶಬ್ದತೀರ' ಶೀರ್ಷಿಕೆಯಡಿ ಪ್ರಕಟಗೊಂಡಿರುವ ಪ್ರಬಂಧಗಳು ವಿಶಿಷ್ಟ ಸಂವೇದನೆಗಳನ್ನು ಅಂತರ್ಗತವಾಗಿಸಿಕೊಂಡಿವೆ. ಬಿ.ಆರ್.ಲಕ್ಷ್ಮಣರಾಯರ 'ಇತ್ಯಾದಿ' ಕೃತಿ ಗಮನಾರ್ಹವಾದುದು.

ವಿವಿಧ ನಿಯತ ಕಾಲಿಕೆಗಳಲ್ಲಿ ಬೆಳಕು ಕಾಣುತ್ತಿರುವ ಹೊಸ ಪ್ರಬಂಧಕಾರರಲ್ಲಿ ಎಂ.ಆರ್.ಮಂದಾರವಲ್ಲಿ, ನಂದಾ. ಡಿ., ನರೇಂದ್ರ ರೈ ದೇರ್ಲ, ವಸುಮತಿ ಉಡುಪ, ಭಾರತೀ ಕಾಸರಗೋಡು, ಆರ್.ನಿರ್ಮಲ, ಜಯಾ ಯಾಜಿ, ಶಿರಾಲಿ, ಶೈಲಾ ಛಬ್ಬಿ, ಸೂರಿ ಹಾರ್ದಳ್ಳಿ, ಪ.ರಾಮಕೃಷ್ಣ ಶಾಸ್ತ್ರಿ, ಶ್ರೀನಿವಾಸ ಚಲವಾದಿ, ಹ.ಶಿ.ಭೈರವಟ್ಟಿ, ಜಾನಕಿ ಸುಂದರೇಶ, ಲೀಲಾ ದಾಮೋದರ, ಭುವನೇಶ್ವರಿ ಹೆಗಡೆ, ಪ್ರತಿಭಾ ನಂದಕುಮಾರ್, ರವಿ ಬೆಳಗೆರೆ ಮುಂತಾದವರು ಲಲಿತ ಪ್ರಬಂಧಗಳನ್ನು ಸೃಷ್ಟಿಸುತ್ತಿದ್ದಾರೆ.

ಕನ್ನಡ ವಿಮರ್ಶೆ 'ಲಲಿತ ಪ್ರಬಂಧ' ಪ್ರಕಾರವನ್ನು ಅಷ್ಟಾಗಿ ಗಮನಿಸಿಲ್ಲ. ಈ ಕ್ಷೇತ್ರದಲ್ಲಿ ನಡೆದಿರುವ ಅಧ್ಯಯನಗಳು ಬಿಡಿ ಬಿಡಿಯಾಗಿ ಪ್ರಬಂಧಕಾರರನ್ನು ಅಲ್ಲಲ್ಲಿ ಅನುಲಕ್ಷಿಸಿರುವುದನ್ನು ಬಿಟ್ಟರೆ ಸಮಗ್ರವಾದ ಸಮಾಜೋ - ಸಾಂಸ್ಕೃತಿಕ ಗ್ರಹಿಕೆಗಳನ್ನು ಅಭ್ಯಸಿಸಲು ವಿಪುಲವಾದ ಅವಕಾಶಗಳಿವೆ. (ಎಚ್.ಎಸ್.ಎಸ್.)

**ಕನ್ನಡದಲ್ಲಿ ಪ್ರವಾಸ ಸಾಹಿತ್ಯ :** ಕನ್ನಡ ಪ್ರವಾಸ ಸಾಹಿತ್ಯ 19ನೆಯ ಶತಮಾನದಲ್ಲಿಯೇ ಆರಂಭವಾಯಿತು. ಕರ್ಕಿ ವೆಂಕಟರಮಣ ಶಾಸ್ತ್ರಿ ಸೂರಿಯವರು (ನೋಡಿ) 1890ರಲ್ಲಿ ದಕ್ಷಿಣ ಭಾರತ ಯಾತ್ರೆ ಎಂಬ ಪ್ರವಾಸ ಗ್ರಂಥವನ್ನು ಪ್ರಕಟಿಸಿದರು. ಮುಂದೆ 35 ವರ್ಷಗಳ ಕಾಲ ಯಾವ ಪ್ರವಾಸ ಗ್ರಂಥ'ವೂ ಬರಲಿಲ್ಲ. 1920ರಲ್ಲಿ ವಿ.ಸೀ.ಯವರ ಪಂಪಾಯಾತ್ರೆ ಪ್ರಕಟವಾಯಿತು. ಈ ವಿಭಾಗದಲ್ಲಿ ಇದು ಆದ್ಯ ಹಾಗೂ ಮೇರುಕೃತಿ. ಲೇಖಕರು ತಮ್ಮ ಮಿತ್ರರೊಂದಿಗೆ ಹಂಪೆಗೆ ಹೋಗಿ, ಅಲ್ಲಿನ ಹಾಳು ಹಂಪೆಯನ್ನು ಕಂಡು ತಮಗಾದ ಅನುಭವವನ್ನು ಈ ಗ್ರಂಥದಲ್ಲಿ ಪಡಿಮೂಡಿಸಿದ್ದಾರೆ. ಇದೊಂದು ರಸಭರಿತ ಪ್ರಬಂಧ. ಇಲ್ಲಿ ಲೇಖಕರ ಅಗಾಧವಾದ ಲೋಕಾನುಭವ, ತತ್ತ್ವಚಿಂತನ ಮತ್ತು ಜೀವನ ದೃಷ್ಟಿಗಳ ತ್ರಿವೇಣೀಸಂಗಮವನ್ನು ಕಾಣಬಹುದು. ಎರಡು ದಿನಗಳ ಅಲ್ಪಾವಧಿಯಲ್ಲಿ ಇನ್ನೂರ ಐವತ್ತು ವರ್ಷಗಳ ಚರಿತ್ರೆಯನ್ನು ಸ್ವತಃ ಲೇಖಕರು ಇಲ್ಲಿ ಅನುಭವ ಮಾಡಿಸಿಕೊಡುತ್ತಾರೆ. ಸುಖ ದುಃಖಗಳೆರಡನ್ನೂ ಓದುಗರಿಗೆ ಉಣಬಡಿಸುತ್ತಾರೆ. ಕೊನೆಯಲ್ಲಿ ಬರುವ ಸ್ವಪ್ನ ಮಾಲಿಕೆಗಳಲ್ಲಿ ಗತಕಾಲದ ವೈಭವ, ವಿನಾಶಗಳು ಹೃದಯವಿದ್ರಾವಕವಾಗಿ ನಿರೂಪಿತವಾಗಿವೆ. ಕವಿಯ ಅನುಭವಕ್ಕೆ ಐತಿಹಾಸಿಕ ದೃಷ್ಟಿಯೂ ಉಜ್ವಲ ಅಭಿಮಾನವೂ ಬೆಸೆದುಕೊಂಡಿವೆ.

ಬಿ.ಪುಟ್ಟಯ್ಯನವರ ಅಭಿವೃದ್ಧಿ ಸಂದೇಶ ಪಶ್ಚಿಮ ದೇಶದಲ್ಲಿಯ ಪ್ರವಾಸದ ಪ್ರಥಮ ಗ್ರಂಥ. ವಿ.ಕೃ.ಗೋಕಾಕರ ಸಮುದ್ರದಾಚೆಯಿಂದ, ಇಂದಲ್ಲ ನಾಳೆ ಮತ್ತು ಸಮುದ್ರದೀಚೆಯಿಂದ ಗ್ರಂಥಗಳು ಕನ್ನಡ ಪ್ರವಾಸ ಸಾಹಿತ್ಯದ ಗಮನಾರ್ಹ ಕೃತಿಗಳು. 1936-37ರಲ್ಲಿ ಉನ್ನತ ವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ಹೋದ ತಮ್ಮ ಅನುಭವಗಳನ್ನು ಪತ್ನಿ ಹಾಗೂ ಸ್ನೇಹಿತರನ್ನು ಸಂಬೋಧಿಸಿ ಬರೆದ ಪತ್ರಗಳ ಸಂಕಲನವೇ ಸಮುದ್ರದಾಚೆಯಿಂದ ಎಂಬ ಗ್ರಂಥ. ಇಂದಲ್ಲ ನಾಳೆ ಎಂಬ ಗ್ರಂಥದಲ್ಲಿ ಅಮೆರಿಕದ ಗಡಿಬಿಡಿಯ ಬದುಕು, ನಿರಾಸಕ್ತಿ, ನಾಗರಿಕತೆಗಳ ಚಿತ್ರಣ ಕಾವ್ಯಮಯವಾಗಿ ಮೂಡಿಬಂದಿದೆ. ಇಲ್ಲಿನ ನವೀನ ಚಂಪೂ ಶೈಲಿ ವಸ್ತು ನಿರೂಪಣೆಯ ಹೊಸತೊಂದು ಮಾರ್ಗವನ್ನು ತೆರೆದಿದೆ. 1967ರಲ್ಲಿ ಪಿ.ಇ.ಎನ್. ಸಮ್ಮೇಳನಕ್ಕಾಗಿ ಜಪಾನಿಗೆ ಹೋದಾಗಿನ ಅನುಭವ ಸಮುದ್ರದೀಚೆಯಿಂದ ಎಂಬ ಗ್ರಂಥದಲ್ಲಿ ಮೂಡಿವೆ. ಒಟ್ಟಿನಲ್ಲಿ ಗೋಕಾಕರಿಗೆ ಕಾವ್ಯದ ಮುಖ್ಯ ಪ್ರೇರಣೆಯೇ ಪ್ರವಾಸ ಎನ್ನುವ ಜಿ.ಎಸ್.ಶಿವರುದ್ರಪ್ಪನವರ ಮಾತು ಒಪ್ಪತಕ್ಕುದಾಗಿದೆ.

ಶಿವರಾಮ ಕಾರಂತರ ಅಪೂರ್ವ ಪಶ್ಚಿಮ (1953) ಪ್ರವಾಸ ಸಾಹಿತ್ಯದ ಬಹುಮುಖ್ಯ ಕೃತಿ. ಇದೊಂದು ಕಲೆಗಾರನ ಅನುಭವದ ಕಥೆ. ಇಲ್ಲಿ ಭಾವದ ಕಾವೂ ಆಲೋಚನೆಯ ತೀಕ್ಷ್ಣತೆಯೂ ಮಿಳಿತವಾಗಿವೆ. ಪಾಶ್ಚಾತ್ಯ ಪ್ರವಾಸದ ಅನುಭವಗಳು ಇಲ್ಲಿ ವಿಸ್ತಾರವಾಗಿ ಸವಿವರವಾಗಿ ಬಂದಿವೆ. ಕಾರಂತರ ಆತ್ಮಕಥ'ನವಾದ ಹುಚ್ಚು ಮನಸ್ಸಿನ ಹತ್ತು ಮುಖಗಳು ಎಂಬ ಗ್ರಂಥದಲ್ಲೂ ಆಳನಿರಾಳದಂಥ ಅವರ ಬಹುಪಾಲು ಕಾದಂಬರಿಗಳಲ್ಲೂ ಪ್ರವಾಸಾನುಭವ ಕಥೆಯೊಂದಿಗೆ ಮಿಳಿತವಾಗಿ ಬಂದಿದೆ.

ದಿನಕರ ದೇಸಾಯಿಯವರ ನಾ ಕಂಡ ಪಡುವಣ, ಮನೋಹರ ಗ್ರಂಥಮಾಲೆಯವರ ನಡೆದು ಬಂದ ದಾರಿಯ ಮೂರನೆಯ ಸಂಪುಟದಲ್ಲಿ ಅಚ್ಚಾಗಿದೆ. ದೇಸಾಯಿಯವರು ಭಾರತದ ಪ್ರತಿನಿಧಿಯಾಗಿ ಅಂತಾರಾಷ್ಟ್ರೀಯ ಕೂಲಿಕಾರ ಪರಿಷತ್ತಿನಲ್ಲಿ ಭಾಗವಹಿಸಲು ಪ್ರವಾಸವಾಡಿದಾಗಿನ ಅನುಭವವಾಲಿಕೆಯೇ ಈ ಕೃತಿ. ಈ ಗ್ರಂಥದಲ್ಲಿ ದೇಸಾಯಿಯವರು ಕೂಲಿಕಾರರ ಸಂಘಟನೆ, ಸಾರಿಗೆ ವ್ಯವಸ್ಥೆ, ಶಿಸ್ತು, ಪಾಕಶಾಸ್ತ್ರ ಮುಂತಾದವುಗಳ ಬಗ್ಗೆ ಕಥೆಯ ರೀತಿಯಲ್ಲಿ ತಮ್ಮ ಅನುಭವಗಳನ್ನು ನೀಡಿದ್ದಾರೆ. ಅಮೆರಿಕವನ್ನು ಕುರಿತು ಬಂದ ಗ್ರಂಥಗಳಲ್ಲಿ ಬಿ.ಜಿ.ಎಲ್. ಸ್ವಾಮಿಯವರ ಅಮೆರಿಕದಲ್ಲಿ ನಾನು ಎಂಬುದು ಅತ್ಯುತ್ತಮ ಗ್ರಂಥ. ಸ್ವಾಮಿಯವರು ಸಸ್ಯವಿಜ್ಞಾನದಲ್ಲಿ ಸಂಶೋಧನೆ ನಡೆಸಲು ಅಮೆರಿಕಕ್ಕೆ ಹೋಗಿ ಆರು ವರ್ಷಗಳ ಕಾಲ ಅಲ್ಲಿದ್ದು, ಅಲ್ಲಿನ ಜನಜೀವನ ಸಂಸ್ಕೃತಿ ವ್ಯವಹಾರ ಸ್ವಭಾವ ಧರ್ಮ ಹಾಗೂ ಭಾರತೀಯ ಮತ್ತು ಅಮೆರಿಕದ ಜೀವನದಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ಕುರಿತು ಬರೆದಿದ್ದಾರೆ. 'ನಮ್ಮಂತೆಯೇ ಅಮೆರಿಕನ್ನರು ಅಮೆರಿಕನ್ನರಂತೆಯೇ ನಾವು' ಎಂಬುದು. ಅವರ ಅನುಭವ: ಕೃಷ್ಣಾನಂದ ಕಾಮತರ ನಾನೂ ಅಮೆರಿಕೆಗೆ ಹೋಗಿದ್ದೆ ಎಂಬುದು ಅಮೆರಿಕ ಪ್ರವಾಸವನ್ನು ವಿವರಿಸುವ ಮತ್ತೊಂದು ಉತ್ತಮ ಕೃತಿ. ಹೋಗುವ ಮುಂಚೆ ಹಲವು ಕಲ್ಪನೆಗಳನ್ನು ಕಟ್ಟಿಕೊಂಡು ಹೋಗಿ ಅಲ್ಲಿ ಹೋದ ಬಳಿಕ ತಾವು ಎದುರಿಸಿದ ಸಮಸ್ಯೆಗಳನ್ನು ಲೇಖಕರು ಹೊಸಬಗೆಯಲ್ಲಿ ವಿವರಿಸಿದ್ದಾರೆ.

ಶ್ರೀರಂಗರ ಶ್ರೀರಂಗಯಾತ್ರೆ ಮತ್ತೊಂದು ಉತ್ತಮ ವಿದೇಶಿ ಪ್ರವಾಸ ಗ್ರಂಥ'. ಯುರೋಪಿನ ಈ ಪ್ರವಾಸಕಥ'ನ ಕುತೂಹಲ ಭರಿತವಾಗಿದೆ. ಶ್ರೀರಂಗ, ನೆಗಳೂರು ರಂಗನಾಥ, ಎಚ್.ಎಲ್.ಪಾಟೀಲ -ಈ ಮೂವರೂ ಕೂಡಿ ಹಳೇಬೀಡು, ಬೇಲೂರು, ಶ್ರವಣಬೆಳಗೊಳ ಮುಂತಾದ ದಕ್ಷಿಣ ಮೈಸೂರಿನ ಪ್ರದೇಶಗಳಲ್ಲಿ ಮಾಡಿದ ಪ್ರವಾಸಕಥನ ಮುಕ್ಕಣ್ಣಯಾತ್ರೆ ಎಂಬ ಪುಸ್ತಕದಲ್ಲಿ ರಮ್ಯವಾಗಿ ಚಿತ್ರಿತವಾಗಿದೆ (1946).

ನವರತ್ನರಾವ್ ಬರೆದ ಪ್ಯಾರಿಸ್ಸಿನಿಂದ ಪ್ರೇಯಸಿಗೆ ಎಂಬ ಪುಸ್ತಕ ಆಕರ್ಷಕ ಶೈಲಿ ಹಾಗೂ ಸುಂದರ ಸನ್ನಿವೇಶಗಳಿಂದ ಕೂಡಿದೆ. ಪ್ಯಾರಿಸ್ಸಿನ ಸ್ವಚ್ಛಂದ ಪ್ರೇಮ ವಾತಾವರಣವನ್ನು ಚಿತ್ರಿಸುವುದರಲ್ಲಿ ರಾವ್ ಯಶಸ್ವಿಯಾಗಿದ್ದಾರೆ. ವಕೀಲರಾದ ಕೆ.ಆರ್.ಕಾರಂತರು ಯುರೋಪಿನಲ್ಲಿ ಪ್ರವಾಸಮಾಡಿ ಪ್ರವಾಸಿಯ ಪತ್ರಗಳು (1951) ಎಂಬ ಗ್ರಂಥ'ವನ್ನು ರಚಿಸಿದ್ದಾರೆ. ಇದರಲ್ಲಿ ರಾಜಕೀಯದ ಮತ್ತು ಪ್ರಜಾಪ್ರಭುತ್ವದ ವಿಶ್ಲೇಷಣೆ ವಿಶೇಷವಾಗಿ ಬಂದಿದೆ. ಸಾಗರದಾಚೆ ಮತ್ತು ನಮ್ಮ ಕಾಗದಗಳು ಎಂಬೆರಡು ಹೊತ್ತಗೆಗಳಲ್ಲಿ ನಾಡಿಗ ಕೃಷ್ಣಮೂರ್ತಿಯವರು ಪತ್ರಿಕೋದ್ಯಮದ ವಿಷಯ ಸಂಗ್ರಹಣೆಗಾಗಿ ಅಮೆರಿಕದಲ್ಲಿ ಪ್ರವಾಸ ಮಾಡಿದಾಗಿನ ತಮ್ಮ ಅನುಭ'ವಗಳನ್ನು ವ್ಯಕ್ತಪಡಿಸಿದ್ದಾರೆ. ಎಂ.ವೀರಪ್ಪನವರ ಸಯೋನರ ಜಪಾನ್, ಜಪಾನ್ ಪ್ರವಾಸದ ಅನುಭವಗಳನ್ನು ತಿಳಿಸುವ ಪತ್ರರೂಪದ ಕಥನ.

ವಿದೇಶಗಳಲ್ಲಿ ನಾಲ್ಕು ವಾರ ಎಂಬುದು ದೇಜಗೌ ಅವರ ಮೊದಲ ಪ್ರವಾಸ ಗ್ರಂಥ. ಈ ಕ್ಷೇತ್ರದ ಉತ್ತಮ ಕೃತಿಗಳಲ್ಲೊಂದು. 1970ರ ಅಕ್ಟೋಬರ್- ನವೆಂಬರ್ ತಿಂಗಳುಗಳಲ್ಲಿ ರಷ್ಯದ ಕೀವ್ ವಿಶ್ವವಿದ್ಯಾಲಯದಲ್ಲಿ ಲೆನಿನ್ ಪ್ರಶಸ್ತಿ ಸ್ವೀಕರಿಸಲೂ ಆಸ್ಟ್ರಿಯ, ಜರ್ಮನಿ ಹಾಗೂ ಲಂಡನ್ ವಿಶ್ವವಿದ್ಯಾಯಲಯಗಳನ್ನು ವೀಕ್ಷಿಸಲೂ ಕೈಗೊಂಡ ಪ್ರವಾಸ ಸಮಯದಲ್ಲಿನ ತಮ್ಮ ಅನುಭವಗಳ ದಿನಚರಿಯನ್ನು ಇಲ್ಲಿ ಕೊಡಲಾಗಿದೆ. 'ನನ್ನ ನಾಡು ಬಡವಾಗಿದ್ದರೂ ಅದೇ ನನಗೆ ಮೆಚ್ಚು; ನನ್ನ ಜನ ಹರಕು ಚಿಂದಿಯಲ್ಲಿದ್ದರೂ ಅವರೇ ನನಗೆ ಹೆಚ್ಚು; ನನ್ನ ನೆಲ ನನಗೆ ಹುಚ್ಚು. ಬೇರೆಯವರ ಬಗೆಗೆ ದ್ವೇಷವಿಲ್ಲ. ಅಷ್ಟೇ ಅಲ್ಲ ಅವರ ಬಗೆಗೆ, ಅವರು ಸಾಧಿಸಿರುವ ಸಿದ್ಧಿಯ ಬಗೆಗೆ ನನಗೆ ಅಪಾರ ಗೌರವ. ನಮ್ಮ ಸಂಸ್ಕೃತಿಗೆ ಬಾಧಕವಾಗದಂತೆ ಅದರ ಪ್ರಗತಿಯ ದೃಷ್ಟಿಯಿಂದ ಅನ್ಯ ಸಂಸ್ಕೃತಿಯ ಶ್ರೇಷ್ಠ ಗುಣಗಳನ್ನು ಅಳವಡಿಸಿಕೊಳ್ಳಬೇಕೆಂಬುದೇ ನನ್ನ ಸ್ಪಷ್ಟ ನಿಲುವು' ಎಂದು ತಮ್ಮ ನಿಲುವನ್ನು ಸ್ಪಷ್ಟಪಡಿಸಿದ್ದಾರೆ. ಈ ಗ್ರಂಥದಲ್ಲಿ ಅವರು ಪ್ರವಾಸ ಮಾಡಿದ ದೇಶಗಳ ಜನರ ವಾಸ್ತವ ಚಿತ್ರಣ ನೈಜವಾಗಿ ಮೂಡಿಬಂದಿದೆ. ವಿದೇಶಿಯರ ಗುರಿ ನಿಲುವು ಕರ್ತವ್ಯ ಶ್ರದ್ಧೆ ತಾಯ್ನಾಡು ಮತ್ತು ತಾಯ್ನುಡಿಗಳ ಬಗ್ಗೆ ಅವರಿಗಿರುವ ಕಾಳಜಿಗಳು ಗ್ರಂಥದುದ್ದಕ್ಕೂ ಮಿನುಗುತ್ತವೆ.

ವಿದೇಶ ಯಾತ್ರೆಯನ್ನು ಕುರಿತ ಈ ಗ್ರಂಥ'ಗಳಲ್ಲದೆ ಹಲವು ಪತ್ರಿಕೆಗಳಲ್ಲಿ ಸಾಪ್ತಾಹಿಕ, ಮಾಸಿಕಗಳಲ್ಲಿ ಹಾಗೂ ಪ್ರಬಂಧ ಸಂಕಲನಗಳಲ್ಲಿ ಪ್ರಕಟವಾದ ಪ್ರವಾಸ ಸಾಹಿತ್ಯ ಲೇಖನಗಳಂತೂ ಅಸಂಖ್ಯಾತವಾಗಿವೆ. ಬಹುಪಾಲು ಉತ್ತಮ ಲೇಖನಗಳು ಹೀಗೆ ಚೆಲ್ಲಾಪಿಲ್ಲಿಯಾಗಿವೆ. ರಂ.ಶ್ರೀ.ಮುಗಳಿ, ಎಸ್.ಪಿ.ಭಟ್ಟ, ಬಸವರಾಜ ಕಟ್ಟೀಮನಿ, ಸ.ಸ.ಮಾಳವಾಡ, ಬಿ.ವಿ.ರಾಮನ್, ಭಾಸ್ಕರ್ ರಾವ್ ಮಾಲೂರ್ಕರ್, ಸಿದ್ಧವನಹಳ್ಳಿ ಕೃಷ್ಣಶರ್ಮ, ತೀ.ನಂ.ಶ್ರೀಕಂಠಯ್ಯ, ಪ.ಸು.ಭಟ್ಟ, ಆರ್.ಸಿ.ಹಿರೇಮಠ, ಹಾ.ಮಾ.ನಾಯಕ, ಸರೋಜಿನಿಮಹಿಷಿ, ಮತ್ತೀಹಳ್ಳಿ ನಾಗರಾಜರಾವ್, ಸಿಸು ಸಂಗಮೇಶ- ಮುಂತಾದವರ ಹೆಸರುಗಳನ್ನು ಉದ್ಧರಿಸಬಹುದು.

ಸರ್ಕಾರದ ಉನ್ನತ ಹುದ್ದೆಯಲ್ಲಿದ್ದು ವಿಶ್ವದಲ್ಲಿ ಹಲವು ಬಾರಿ ಸಂಚರಿಸಿ ಹಲವು ದೇಶದ ಹಲವು ಜನರ ಜೀವನ ಸಂಸ್ಕೃತಿಗಳನ್ನು ತುಂಬ ಹತ್ತಿರದಿಂದ ಕಂಡು ವಿದೇಶೀಯರ ಬಗೆಗೆ ಅತ್ಯಂತ ನೈಜವಾಗಿ ರಚಿತವಾಗಿರುವ ಗ್ರಂಥವೆಂದರೆ ಕೆ.ಪಿ.ಎಸ್.ಮೆನನ್ ಅವರ ವಿಶ್ವಪರ್ಯಟನೆ. ಇಂಗ್ಲಿಷಿನಲ್ಲಿರುವ ಈ ಗ್ರಂಥವನ್ನು ಮಾ.ಭೀ.ಶೇಷಗಿರಿರಾವ್‌ರವರು ಕನ್ನಡಕ್ಕೆ ಅನುವಾದಿಸಿ ಕನ್ನಡ ಪ್ರವಾಸ ಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆ ಕೊಟ್ಟಿದ್ದಾರೆ.

ಕನ್ನಡದಲ್ಲಿ ಪ್ರಕಟವಾಗಿರುವ ಪ್ರವಾಸ ಕಥನಗಳಲ್ಲಿ ಅರ್ಧಕ್ಕಿಂತ ಹೆಚ್ಚು ಗ್ರಂಥ'ಗಳು ಕ್ಷೇತ್ರ ಪರಿಚಯವನ್ನು ಮಾಡಿ ಕೊಡುವಂಥ'ವು. ಭಾರತದ ಹಾಗೂ ಕರ್ನಾಟಕದ ಹಲವು ಕ್ಷೇತ್ರಗಳನ್ನು ಪರಿಚಯಿಸುವ ಈ ಗ್ರಂಥಗಳಲ್ಲಿ ಸಾಹಿತ್ಯ ಮೌಲ್ಯಕ್ಕಿಂತ ಹೆಚ್ಚಾಗಿ ಕ್ಷೇತ್ರ ಪರಿಚಯವೇ ಮುಖ್ಯ ಗುರಿಯಾಗಿದೆ. ಇಂಥ ಕೆಲವು ಗ್ರಂಥಗಳಲ್ಲಿ ಕ್ಷೇತ್ರಮಹಿಮೆಯನ್ನು ಕುರಿತು ರಚಿತವಾಗಿರುವ ಹಾಡುಗಳಲ್ಲಿ ಸಾಹಿತ್ಯಾಂಶವನ್ನು ಕಾಣಬಹುದಾಗಿದೆ. ಬಹುಪಾಲು ಗ್ರಂಥ'ಗಳು ಸಚಿತ್ರವಾಗಿರುವುದರಿಂದ ಆಕರ್ಷಕವಾಗಿವೆ. ಇವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಹೆಸರಿಸಬಹುದು.

ಕೃಷ್ಣ ನಾರಾಯಣ ಗೋಸಾಮಿ ಅವರ ಹಿಮಾಲಯ ದರ್ಶನ, ಕೈಲಾಸ - ಮಾನಸ ಸರೋವರ ಯಾತ್ರೆ ಮತ್ತು ಬದರಿಯಾತ್ರೆ, ಭಾರದ್ವಾಜರ ಸಚಿತ್ರ ಭಾರತಯಾತ್ರೆ, ಶ್ರೀನಿವಾಸ ಕಂಪನಿಯವರ ಸಚಿತ್ರ ವಿಜಯನಗರ, ನ.ರಾ.ಗಲಗಲಿಯವರ ಬದರಿನಾರಾಯಣ ದರ್ಶನ, ಜಿ.ವೆಂಕಟಯ್ಯನವರ ಚಿನ್ನದ ಗಿರಿ ಯಾತ್ರೆ, ಬನದ ಸೆರಗು, ಸೋಮನಾಥಾನಂದರ ಅಮರನಾಥ' ಯಾತ್ರೆ ಮತ್ತು ಹೈಮಾಚಲ ಸಾನ್ನಿಧ್ಯದಲ್ಲಿ, ಬಿ.ಶಿವಮೂರ್ತಿಶಾಸ್ತ್ರಿಗಳ ಕರ್ನಾಟಕ ಸಂದರ್ಶನ, ಯು.ರಾಘವೇಂದ್ರ ಭಟ್ಟರ ರಜತಪೀಠ'ದಿಂದ ರಜತಾದ್ರಿಗೆ, ಮಹದೇವಿಯಮ್ಮನವರ ದೇವತಾತ್ಮ, ಪಿ.ಆರ್.ಜಯಲಕ್ಷ್ಮಮ್ಮನವರ ಬದರೀ ಯಾತ್ರೆ, ಮ.ನ.ಮೂರ್ತಿಯವರ ನಮ್ಮ ಪ್ರವಾಸ ಮತ್ತು ನಾವು ಕಂಡ ಬೆಂಗಳೂರು, ಡಿ.ಟಿ.ರಂಗಸ್ವಾಮಿಯವರ ಭಾರತ ಯಾತ್ರೆ, ಎಚ್.ಆರ್.ನಾಗರಾಜ್‌ರವರ ಹಿಮಾಚಲ ಪ್ರದೇಶ, ಜೆ.ವಿ.ನರಸಿಂಹಮೂರ್ತಿಯವರ ಆಸೇತುಹಿಮಾಚಲ ಯಾತ್ರೆ, ಎಂ.ವೆಂಕಟಾಚಲ ಭಟ್ಟರ ಕಾಶ್ಮೀರ ಅಮರನಾಥ' ಯಾತ್ರೆ, ಕೋ.ಚೆನ್ನಬಸಪ್ಪನವರ ದಕ್ಷಿಣೇಶ್ವರ ದರ್ಶನ, ಗುರುನಾಥ' ಜೋಶಿಯವರ ಪ್ರವಾಸ, ಭದ್ರಗಿರಿ ಕೇಶವದಾಸರ ದಾಸ ಕೀರ್ತನೆ ಮಂಡಳಿಯ ಪ್ರಥಮ ಯಾತ್ರೆ, ಕೆ.ಗಣೇಶಮಲ್ಯರ ಶರಾವತಿಯಿಂದ ಗೋದಾವರಿವರೆಗೆ, ಶ್ರೀರಂಠಶಾಸ್ತ್ರೀಯವರ ಮಾನಸ ಸರೋವರ ಮತ್ತು ಕೈಲಾಸ ಕ್ಷೇತ್ರ ಪ್ರಕರಣ, ಟಿ.ಚಂದ್ರರಾಜ ಶೆಟ್ಟಿಯವರ ಮಂಗಳೂರಿನಿಂದ ಮಧುರೆಗೆ, ಕೆ.ಗೋಪಾಲಕೃಷ್ಣರಾಯರ ತಿರುಪತಿ ಯಾತ್ರೆ, ಎಂ.ಎನ್.ಶೇಷಾದ್ರಿ ಅಯ್ಯಂಗಾರ್ ಅವರ ಧರ್ಮಸ್ಥಳದ ಯಾತ್ರೆ, ವಿ.ನಾ.ಅವರ ಯಾತ್ರಿಕನ ಪತ್ರಗಳು, ಕೆ.ಕೊಟ್ಟುರಗೌಡರ ನಮ್ಮ ಪ್ರವಾಸ, ಎಸ್.ರಜತಾದ್ರಿಯವರ ಪಶ್ಚಿಮದ ಹೊಂಬೆಳಕು ಮುಂತಾದ ಗ್ರಂಥಗಳು ಒಂದೇ ಮಾಲಿಕೆಯಲ್ಲಿ ಬರಬಹುದಾದ ಕೃತಿಗಳಾಗಿವೆ.

ಇವೇ ಅಲ್ಲದೆ ಬಾಲಕನೊಬ್ಬ ಬಾಲಕರಿಗಾಗಿ ಬರೆದ ಅಜಿತಕುಮಾರನ ನನ್ನ ಪ್ರವಾಸ ಕಥನ, ಎಸ್.ವಿ.ಕೃಷ್ಣಮೂರ್ತಿರಾಯರ ದಿಲ್ಲಿಯ ಪತ್ರಗಳು, ಎಚ್.ವಿ.ಶ್ರೀರಂಗರಾಜು ಅವರ ಸೋವಿಯೆಟ್ ದಿನಚರಿ, ಗೊರೂರು

ರಾಮಸ್ವಾಮಿ ಅಯ್ಯಂಗಾರ್ ಅವರ ಮಹಾತ್ಮಾ ಗಾಂಧಿಯವರ ದಕ್ಷಿಣ ಯಾತ್ರೆ, ಗುಂಡ್ಮಿ ಚಂದ್ರಶೇಖರ ಐತಾಳರ ಸೌಂದರ್ಯದ ಸಾನ್ನಿಧ್ಯದಲ್ಲಿ, ಮಿರ್ಜಿ ಅಣ್ಣಾರಾಯರ ನಾ ಕಂಡ ನಾಡು, ಎಚ್.ಜಿ.ಜೋಶಿಯವರ ಶಿಲಾಹೃದಯ, ವೆಂ.ಮು.ಜೋಶಿಯವರ ಸೈನಿಕ ಉವಾಚ, ಎನ್.ಎಸ್.ಗದಗಕರ್‌ರವರ ಗೋವಾಯಾತ್ರೆ, ಟಿ.ಚಂದ್ರರಾಜ ಶೆಟ್ಟಿ ಅವರ ಭಾರತದ ಮಹಾನಗರಗಳು, ಎ.ಎಂ.ಅಣ್ಣಿಗೇರಿಯವರ ಕರ್ನಾಟಕದ ಸಾಂಸ್ಕೃತಿಕ ಸ್ಥಳಗಳು, ಹಿರೇಮಲ್ಲೂರು ಈಶ್ವರನ್ ಅವರ ಕವಿ ಕಂಡ ನಾಡು - ಕನ್ನಡ ಪ್ರವಾಸ ಸಾಹಿತ್ಯಕ್ಕೆ ಕೊಟ್ಟ ಮಹತ್ವದ ಕೊಡುಗೆಗಳಾಗಿವೆ.

ಕ್ಷೇತ್ರ ಪರಿಚಯ ಗ್ರಂಥಗಳಲ್ಲಿ ಶಿವರಾಮ ಕಾರಂತರ ಅಬುವಿನಿಂದ ಬರಾಮಕ್ಕೆ ಒಂದು ಅಪೂರ್ವ ಕೃತಿ. ಅಬು, ಅಜ್ಮೀರ, ಪುಷ್ಕರ, ಜಯಪುರ, ಸಿಮ್ಲಾ, ಆಗ್ರ, ಕಾಶಿ, ಡಾಲ್ಮಿಯಾ, ಕಲ್ಕತ್ತ ಮತ್ತು ಬರಾಮಗಳಲ್ಲಿ ಸಂಚರಿಸಿ ಅಲ್ಲಿನ ನಿಸರ್ಗ ಮತ್ತು ಸಂಗೀತ, ಸಾಹಿತ್ಯ, ಜನಜೀವನಾದಿಗಳನ್ನು ಈ ಗ್ರಂಥದಲ್ಲಿ ಕಂಡರಿಸಿದ್ದಾರೆ. ಕೆ.ಬಿ. ಪ್ರಭುಪ್ರಸಾದರ ದೇಗುಲಗಳ ದಾರಿಯಲ್ಲಿ ಎಂಬುದು ಒಂದು ಉತ್ತಮ ಗ್ರಂಥ. ಸಹಜವಾಗಿ, ನೇರವಾಗಿ, ಸರಳವಾಗಿ ತಮ್ಮ ಅನುಭವಗಳನ್ನು ಲೇಖಕರು ಇಲ್ಲಿ ಮೂಡಿಸಿದ್ದಾರೆ. ಹ.ರಾ.ಪುರೋಹಿತರ ರಾಮೇಶ್ವರ ಕನ್ಯಾಕುಮಾರಿ ದರ್ಶನ ಮತ್ತು ಬದರಿ ಕೇದಾರನಾಥ ದರ್ಶನಗಳು ಭಕ್ತಿ ಭಾವದಿಂದ ಬರೆದ ಗ್ರಂಥಗಳಾಗಿವೆ.

1943ರಲ್ಲಿ ಶಿವಮೊಗದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಮಿತ್ರರೊಂದಿಗೆ ಹೋಗಿದ್ದ ಮಾಸ್ತಿ ನರಸಿಂಗರಾಯರು ತಮ್ಮ ಮತ್ತು ಮಿತ್ರರ ಅನುಭವಗಳನ್ನು ಕನ್ನಡ ಯಾತ್ರೆಯಲ್ಲಿ ತಂದುಕೊಟ್ಟಿದ್ದಾರೆ. ಸಿದ್ಧವನಹಳ್ಳಿ ಕೃಷ್ಣಶರ್ಮರ ವಾರ್ಧಾಯಾತ್ರೆಯಲ್ಲಿ ಕಥನ ಕೌಶಲ, ವರ್ಣನೆ, ವಿನೋದ ವಿಲಾಸ ಮೊದಲಾದ ಅನೇಕ ಗುಣಗಳು ಕೃಷ್ಣಶರ್ಮರ ಮನಃ ಶಕ್ತಿಗಳ ಪರಿಪಾಕದೊಡನೆ ಇದರಲ್ಲಿ ಸ್ವಚ್ಛಂದವಾಗಿ ಬಂದಿವೆ ಎಂದು ಬೇಂದ್ರೆಯವರು ಅಭಿಪ್ರಾಯಪಟ್ಟಿದ್ದಾರೆ. ಇವರ ಭೂದಾನಯಜ್ಞ ಯಾತ್ರೆ ಉತ್ತರ ಭಾರತ ಪ್ರವಾಸದ ವಿವರವನ್ನೊಳಗೊಂಡ ಮತ್ತೊಂದು ಕೃತಿ. ಒಕ್ಕಲುತನದ ಪ್ರವಾಸ ಗ್ರಂಥಗಳಲ್ಲಿ ವೀ.ಚ.ಹಿತ್ತಲಮನಿಯವರ ಶರಾವತಿಯಿಂದ ಸಾಬರಮತಿ, ವಿ.ಪುರಂದರ ರೈರವರ ನಮ್ಮ ಪ್ರವಾಸಾನುಭವ ಗಣನೀಯ ಕೃತಿಗಳು.

ಜಿ.ಪಿ.ರಾಜರತ್ನಂ ಅವರ ಚೀನಾದೇಶದ ಬೌದ್ಧ ಯಾತ್ರಿಕರು, ಫಾಹಿಯಾನನ ಕ್ಷೇತ್ರಯಾತ್ರೆ ಎಂಬುವು ವಿದೇಶೀ ಯಾತ್ರಿಕರ ಅನುಭವಗಳನ್ನು ಕುರಿತ ಅನುವಾದ ಗ್ರಂಥಗಳು. ಪ್ರಾಚೀನ ಕಾಲದಿಂದಲೂ ಭಾರತಕ್ಕೆ ಬಂದು ಹೋದ ನೂರಾರು ಪ್ರವಾಸಿಗಳ ಪ್ರವಾಸ ಕಥನವನ್ನು ಸಮಗ್ರವಾಗಿ ಕನ್ನಡಕ್ಕೆ ತಂದುಕೊಟ್ಟ ಕೀರ್ತಿ ಎಚ್.ಎಲ್.ನಾಗೇಗೌಡರಿಗೆ (ನೋಡಿ) ಸಲ್ಲುತ್ತದೆ. ಮಾರ್ಕೋಪೋಲೋನ ಪ್ರವಾಸ ಕಥನವನ್ನು ಮೊದಲು ಕನ್ನಡಕ್ಕೆ ತಂದು, ಈ ಅನುವಾದದಿಂದ ಪ್ರೋತ್ಸಾಹಿತರಾಗಿ, ದಶಕಗಳಷ್ಟು ಕಾಲ ಇಡೀ ಭಾರತದಲ್ಲಿ ಸಂಚರಿಸಿ ಹಲವು ಪ್ರಾಚ್ಯ ಕೋಶಾಗಾರಗಳಲ್ಲೂ ಗ್ರಂಥ ಹಾಗೂ ವಸ್ತು ಸಂಗ್ರಹಾಲಯಗಳಲ್ಲೂ ಹುದುಗಿದ್ದ ವರದಿಗಳನ್ನು ಹೆಕ್ಕಿ ತಂದು ಅವುಗಳ ಸಾರವನ್ನು ಭಟ್ಟಿ ಇಳಿಸಿ ಸು.200 ಜನ ವಿದೇಶೀಪ್ರವಾಸಿಗರ ಪ್ರವಾಸ ಕಥನವನ್ನು ಕನ್ನಡದಲ್ಲಿ ಪ್ರವಾಸಿ ಕಂಡ ಇಂಡಿಯಾ ಎಂಬ ಹೆಸರಿನಲ್ಲಿ ಐದು ಬೃಹತ್ ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ. ಈ ಗ್ರಂಥಗಳ ಮೂಲಕ ಕನ್ನಡ ಸಾಹಿತ್ಯಕ್ಕೆ ಅತ್ಯಮೂಲ್ಯ ಕಾಣಿಕೆ ಕೊಟ್ಟು ಕನ್ನಡಿಗರೆಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ರಾಮಬಹಾದ್ದೂರ ಅವರ ನಾನು ಕಂಡ ಬಾಂಗ್ಲಾದೇಶ (1972) ಕೃಷ್ಣಾನಂದ ಕಾಮತರ ವಂಗದರ್ಶನ (1972), ಜಿ.ಎಸ್.ಶಿವರುದ್ರಪ್ಪನವರ ವಿದೇಶಗಳಲ್ಲಿ ಇಪ್ಪತ್ತೆರಡು ದಿನ (1973), ದೇಜಗೌ ಅವರ ಪ್ರವಾಸಿಯ ದಿನಚರಿ (1974), ಹ.ವೆಂ.ನಾಗರಾಜರಾವ್ ಅವರ ನವರಷ್ಯದ ನೋಟ (1974), ಶಾಂತಾದೇವಿ ಮಾಳವಾಡ ಅವರ ಶ್ರೀಗಿರಿಯಿಂದ ಹಿಮಗಿರಿಗೆ (1974)- ಇವು ಇತರ ಕೆಲವು ಮುಖ್ಯ ಪ್ರವಾಸ ಗ್ರಂಥಗಳು.

ಶಾಂತಾದೇವಿ ಮಾಳವಾಡರ ಶ್ರೀಗಿರಿಯಿಂದ ಹಿಮಗಿರಿಗೆ ಹಾಗೂ ರುಕ್ಮಿಣಿ ಗಿರಿಮಾಜಿಯವರ ಬೆಂಗಳೂರಿಂದ ಬದರಿನಾಥಕ್ಕೆ (1974), ಎಂಬ ಕೃತಿಯು ತೀರ್ಥಯಾತ್ರೆಯು ನೆಪದಲ್ಲಿ ಭಾರತದ ಹಲವು ಪ್ರದೇಶಗಳ ಸಾಂಸ್ಕೃತಿಕ ಬದುಕಿನ ಪದರಗಳನ್ನು ಚಿತ್ರಿಸುತ್ತವೆ. ಹ.ವೆಂ.ನಾಗರಾಜರಾವ್ ಅವರ ನವರಷ್ಯದ ನೋಟ (1974) ಲೆನಿನ್ ನಾಯಕತ್ವದ ಮಹಾಕ್ರಾಂತಿಯ ಅನಂತರದ ರಷ್ಯದ ವಿವಿಧ ರೀತಿಯ ಸ್ಥಿತ್ಯಂತರಗಳನ್ನು ದಾಖಲಿಸುತ್ತದೆ.

ಜವಹರಲಾಲ್ ನೆಹರೂರವರು ಕೆ.ಪಿ.ಎಸ್.ಮೆನೆನ್‌ರವರ ಗ್ರಂಥಕ್ಕೆ ಮುನ್ನುಡಿ ಬರೆಯುತ್ತ ಹೀಗೆ ಹೇಳಿದ್ದಾರೆ: 'ಪ್ರವಾಸ ಮಾಡುವುದು ಒಳ್ಳೆಯದು; ಹಾಗೆ ಪ್ರವಾಸ ಮಾಡಲಾರದೇ ಹೋದಾಗ ಪ್ರವಾಸದ ಬಗೆಗೆ ಬಂದಿರುವ ಸಾಹಿತ್ಯವನ್ನಾದರೂ ಓದುವುದು ಉತ್ತಮ ಹವ್ಯಾಸ'. ಕನ್ನಡಿಗರು ಈ ಹವ್ಯಾಸ ಬೆಳೆಸಿಕೊಳ್ಳಲು ಸಾಕಷ್ಟು ಸರಕಿದೆ. ಪ್ರವಾಸ ಸಾಹಿತ್ಯದ ಬೆಳೆ 80 ಮತ್ತು 90ರ ದಶಕದಲ್ಲಿ ಅಪೂರ್ವವೂ ಸಾಹಿತ್ಯ ಶ್ರೀಮಂತವೂ ಆಗಿದೆಯೆಂದು ಅಭಿಮಾನದಿಂದಲೇ ಹೇಳಬಹುದಾದಷ್ಟು ವಿಪುಲ ಸಂಖ್ಯೆ, ಭಿನ್ನ ವಿಭಿನ್ನ ದೃಷ್ಟಿಕೋನ ಹಾಗೂ ಅನುಭವದ ಪ್ರವಾಸ ಕೃತಿಗಳು ಪ್ರಕಟವಾಗಿರುವುದನ್ನು ನೋಡಬಹುದಾಗಿದೆ. ಪ್ರತಿಯೊಬ್ಬ ಲೇಖಕನೂ ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಹೊಸ ನಾಡಿನ ಹೊಸ ಕತೆಯೊಂದನ್ನು ಕೊಟ್ಟಿದ್ದಾನೆ. ಕೆಲವೊಂದು ಕಥನಗಳಂತೂ ಜಾಗತಿಕ ಪ್ರವಾಸ ಸಾಹಿತ್ಯ ಕೃತಿಗಳ ಮಟ್ಟಕ್ಕೆ ನಿಲ್ಲುವಷ್ಟು ಚೆನ್ನಾಗಿವೆ. ಶೈಕ್ಷಣಿಕ ಮಹತ್ವ ಹಾಗೂ ವಿಭಿನ್ನ ಅನುಭವದ ನೆಲೆಗಳು ಇಂದು ಪ್ರವಾಸ ಸಾಹಿತ್ಯದ ಒಳಸೂತ್ರವಾಗಿ ನಿಂತಿವೆ. ಪ್ರವಾಸಾನುಭವ ಕಥನ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ, ಸಾಮಾಜಿಕ- ಹೀಗೆ ಭಿನ್ನ ಕೋನಗಳಿಂದ ಅನ್ಯ ಸಂಸ್ಕೃತಿಯನ್ನು ಸಾಂದ್ರವಾಗಿ ತಾಗುವ ದಿಕ್ಕಿನಲ್ಲಿ ಸಾಗಿದೆ. ಈ ಪ್ರಯತ್ನದ ಹಾದಿಯಲ್ಲಿ ಪ್ರವಾಸ ಸಾಹಿತ್ಯದ ಸಂಖ್ಯೆಯೂ ಮಹಿಳಾ ಬರೆಹಗಾರ್ತಿಯರ ಸಂಖ್ಯೆಯೂ ವೃದ್ಧಿಸಿದೆ. ಸ್ವಾತಂತ್ರ್ಯೋತ್ತರ ಕಾಲದಿಂದ ಇಲ್ಲಿಯವರೆಗೆ 50ಕ್ಕೂ ಹೆಚ್ಚು ಮಹಿಳಾ ಪ್ರವಾಸ ಕಥನಗಳು ದೊರಕುತ್ತವೆ. ಪ್ರವಾಸಕ್ಕಾಗಿ ಒದಗುತ್ತಿರುವ ಕಾರಣಗಳೂ ಗಮನಾರ್ಹವಾಗಿ ಹೆಚ್ಚಾಗಿವೆ. ಯುನೆಸ್ಕೋ ಸೇವೆಗಾಗಿಯೋ ವಿವಿಧ ಸಾಹಿತ್ಯ ಸಂಘಗಳ ಮೂಲಕವೋ ಸಾಂಸ್ಕೃತಿಕ ತಂಡಗಳ ಪರವಾಗಿಯೋ ಅಕಾಡೆಮಿಗಳ ನೆರವಿನಿಂದಲೋ ಕೆಲವೊಮ್ಮೆ ಸ್ವಂತ ಖರ್ಚಿನಿಂದಲೋ ದೇಶೀಯ ಹಾಗೂ ವಿದೇಶೀಯ ಸ್ಥಳಗಳ ಪ್ರವಾಸ ಸಮೃದ್ಧವಾಗಿದೆ. (ಜಿ.ಎಸ್.ಪಿ.ಎಂ.)

ಹೊ.ಶ್ರೀನಿವಾಸಯ್ಯನವರ ನಾ ಕಂಡ ಜರ್ಮನಿ (1975), ದೇಜಗೌ ಅವರ ಆಫ್ರಿಕಾ ಯಾತ್ರೆ (1975) ಸಾಂಸ್ಕೃತಿಕ ಹಾಗೂ ಜನಪದೀಯ ನೆಲೆಗಳನ್ನು ಕುರಿತ ಅಧ್ಯಯನ ಶೀಲ ದೃಷ್ಟಿಕೋನವನ್ನು ಹೊಂದಿವೆ. ಆಶಾ ಪೋತೆದಾರ್ ಅವರ ಪೌರ್ವಾತ್ಯ ದೇಶಗಳ ಹಕ್ಕಿನೋಟ (1977) ಎಂಬ ಕೃತಿಯಲ್ಲಿ ಜಪಾನ್, ಹಾಂಕಾಂಗ್, ಥಾಯ್‌ಲೆಂಡ್‌ಗಳಲ್ಲಿ ಕಾರ್ಖಾನೆಗಳ ಕುರಿತ ಕುತೂಹಲಗಳಿವೆ. ವಿವಿಧ ಸ್ಥಳಗಳ ದರ್ಶನ ಮಾಡಿಸುವ ಅನುಪಮಾ ನಿರಂಜನ ಅವರ ಸ್ನೇಹಯಾತ್ರೆ (1978), ಕೊಡತ್ತೂರು ನಯನಾಭಿರಾಮ ಉಡುಪರ ಔತ್ತರೇಯ ಖಂಡ ದರ್ಶನ (1978), ರಾಗು ಜೋಶಿಯವರ ರಾಯಚೂರಿನಿಂದ ರಾಮೇಶ್ವರದಾಟಿ (1978) - ಇವುಗಳನ್ನು ಹೆಸರಿಸಬಹುದು. ಶ್ರೀ ಮೂಜಗಂ ಅವರ ನಮ್ಮ ವಿದೇಶಯಾತ್ರೆ (1979), ಉ.ಕಾ.ಸುಬ್ಬರಾಯಚಾರ್ ಅವರ ಸೋವಿಯತ್ ನಾಡಿನಲ್ಲಿ ಹತ್ತುದಿನಗಳು (1980), ಎಂ.ಕೆ.ಇಂದಿರಾ ಅವರ ಅನುಭವ ಕುಂಜ (1980) ಕೃತಿಗಳೂ ಇದೇ ಸಾಲಿನಲ್ಲಿ ಬರುವಂಥವು.

ಇಲ್ಲಿ ವಿಶೇಷವಾಗಿ ದಾಖಲಿಸಬೇಕಾದ ಎರಡು ಮುಖ್ಯ ಕೃತಿಗಳೆಂದರೆ ಎ.ಎನ್.ಮೂರ್ತಿರಾಯರ ಅಪರವಯಸ್ಕನ ಅಮೆರಿಕಾ ಯಾತ್ರೆ (1979) ಹಾಗೂ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಅಮೆರಿಕದಲ್ಲಿ ಗೊರೂರು (1979). ಶೈಕ್ಷಣಿಕ ಮೌಲ್ಯವುಳ್ಳ ಪರಸಂಸ್ಕೃತಿ, ಜೀವನ ಸಂಪ್ರದಾಯಗಳನ್ನು ಅತ್ಯಂತ ನಿಕಟವೆಂಬಂತೆ ಪರಿಚಯಿಸುವ ಶೈಲಿ ಈ ಕೃತಿಗಳ ವೈಶಿಷ್ಟ್ಯ. ಹಾಸ್ಯದ ಲೇಪನವುಳ್ಳ ಅಮೆರಿಕದಲ್ಲಿ ಗೊರೂರು ನಮ್ಮನ್ನು ಹೆಚ್ಚು ಆಕರ್ಷಿಸುತ್ತದೆ. ಈ ಎರಡೂ ಕೃತಿಗಳಲ್ಲಿ ಸಾಮ್ಯವಿದೆ. ಭಾರತೀಯ ಹಾಗೂ ಪಾಶ್ಚಿಮಾತ್ಯ ದೇಶಗಳ ಸಂಸ್ಕೃತಿಗಳನ್ನು ಹೋಲಿಕೆಯ ಮಾನದಂಡದಿಂದ ವಿಶ್ಲೇಷಿಸದೆ ಸಣ್ಣಸಣ್ಣ ಸಂಗತಿಗಳನ್ನೂ ನಿರ್ಲಕ್ಷಿಸದೆ,

ಹೇಗೆ ಬೃಹತ್ತಾಗಿ ಬೆಳೆದಿವೆ ಎಂಬ ಪರಿಶೀಲನಾ ದೃಷ್ಟಿಯಿದೆ. ಪ್ರವಾಸ ಸಾಹಿತ್ಯಗಳ ಸಾಲಿನಲ್ಲಿ ಈ ಕೃತಿಗಳು ಭಿನ್ನವಾಗಿ ನಿಲ್ಲುವುದೇ ಈ ವೈಶಿಷ್ಟ್ಯದಿಂದ.

ಸೀತಮ್ಮ ನಂಜೇಗೌಡ ಅವರ ನಾ ಕಂಡ ಅಮೆರಿಕಾ (1981), ಸರೋಜಾ ಚಾಮರಾಜರ ಉತ್ತರ ಭಾರತ ಪ್ರವಾಸ ಕುರಿತ ಸಿಂಹಾಚಲದಿಂದ ಹೈಮಾಚಲದವರೆಗೆ (1981), ಕು.ಶಿ.ಹರಿದಾಸಭಟ್ಟರ ಜಗದಗಲ (1981), ಸರೋಜಾ ಗೋಪಾಲ್ ಅವರ ಭೂಪ್ರದಕ್ಷಿಣೆ (1982)- ಈ ಕೃತಿಗಳು ಸಾಂಸ್ಕೃತಿಕ ಭಿನ್ನತೆಗಳನ್ನು ವಿವಿಧ ನೆಲೆಗಳಲ್ಲಿ ಪರಿಚಯಿಸಿಕೊಡುತ್ತವೆ. ಎಚ್.ವಿ.ಶ್ರೀನಿವಾಸರಾವ್ ಅವರ ವೇಲ್ಸ್ ದಿನಚರಿಯಿಂದ (1982) ಹಾಗೂ ಜಿ.ಗೋಪಾಲ್ ಅವರ ಮೈಸೂರಿನಿಂದ ಮೆಕ್ಸಿಕೋಗೆ (1982) ಕೃತಿಗಳೂ ಭಿನ್ನ ಭಿನ್ನ ಸಾಂಸ್ಥಿಕ ಯೋಜನೆಗಳ ರೀತಿನೀತಿಗಳನ್ನು ಪರಿಶೀಲಿಸಿವೆ.

ಯುನೆಸ್ಕೋ ಪ್ರವಾಸದ ಈಜಿಪ್ಟ್, ಇರಾನ್, ನೈಜೀರಿಯ, ಘಾನಾ, ರೊಮೇನಿಯ, ಫಿಲಿಪ್ಪೈನ್ಸ್, ಇಂಡೋನೇಷ್ಯಗಳ ಸಾಂಸ್ಕೃತಿಕ ವರದಿ ನೀಡುವ ಎಚ್.ಕೆ.ರಂಗನಾಥ'ರ ಪರದೇಶಿಯಾದಾಗ (1983), ಕು.ಶಿ.ಹರಿದಾಸಭಟ್ಟರ ಒಮ್ಮೆ ರಷಿಯಾ ಒಮ್ಮೆ ಇತಾಲಿಯಾ (1983), ವಿ.ಪುಟ್ಟಮಾದಪ್ಪನವರ ನೆಮ್ಮುಗೆಯ ನಾಡು, ಅನುಪಮಾ ನಿರಂಜನರ ಅಂಗೈಯಲ್ಲಿ ಯುರೋ ಅಮೆರಿಕಾ (1984), ಎಡಿನ್‌ಬರೋದಲ್ಲಿನ ವೈದ್ಯಕೀಯ ವ್ಯವಸ್ಥೆಯನ್ನೂ ಆಸ್ಪತ್ರೆಯ ನಿಯಮಾವಳಿಗಳನ್ನೂ ದಾಖಲಿಸುವ ಹಾಗೂ ಆ ಹಿನ್ನೆಲೆಯಲ್ಲಿ ಅಲ್ಲಿನ ಸಾಮಾಜಿಕ ಎತ್ತರ ಬಿತ್ತರಗಳನ್ನು ಪರಿಶೀಲಿಸುವ ಜಿ.ಗೋಪಾಲರ ವೈದ್ಯನ ವಿದೇಶ ಯಾತ್ರೆ (1984) ಮುಂತಾದ ಕೃತಿಗಳು ಭಿನ್ನ ಭಿನ್ನ ಸಾಂಸ್ಕೃತಿಕ, ಸಾಮಾಜಿಕ ಹಾಗೂ ಐತಿಹಾಸಿಕ ದೃಷ್ಟಿಕೋನಗಳಿಂದ ಆಯಾ ದೇಶಗಳನ್ನು ವಿಮರ್ಶಿಸುವ ಕೃತಿಗಳಾಗಿವೆ. ಈ ನಿಟ್ಟಿನಲ್ಲಿ ರಂಜನಭಟ್ಟ ಅವರ ಕುಬೇರ ರಾಜ್ಯದ ಚಿತ್ರವಿಚಿತ್ರ (1983) ಕೃತಿಯನ್ನು ಗಮನಿಸಬೇಕು. ಅಮೆರಿಕದ ವ್ಯಾಪಾರೀಕರಣದ ಗುಣ ಆ ಸಮಾಜದಲ್ಲಿ ಸೃಷ್ಟಿಸಿರುವ ಚಿತ್ರ ವಿಚಿತ್ರಗಳು, ಮೃತ್ಯುವಿನ ಸಮ್ಮುಖದಲ್ಲಿ ಮನುಷ್ಯನ ಭಾವ ಭಾವನೆಗಳ ಚಿತ್ರ, ಅಮೆರಿಕೆಯ ಜೀವನ ವ್ಯವಸ್ಥೆಯ ಒಳಚಿತ್ರಗಳ ಪರಿಚಯವನ್ನು ಈ ಕೃತಿ ನೀಡುತ್ತದೆ. ಅಲ್ಲಲ್ಲಿ ಬರುವ ಅಮೆರಿಕದ ನಿಸರ್ಗ ನಿರ್ಜನವಾದುದು, ಬರ್ಕಲಿ ಹೂವಿಲ್ಲದ ಹಕ್ಕಿಯಿಲ್ಲದ ಊರು ಎಂಬ ಮಾತುಗಳು ಕುಬೇರ ರಾಜ್ಯದ ನಿರ್ಜೀವ ಪರಿಸರವನ್ನು ದಾಖಲಿಸುತ್ತದೆ.

ಶಿರಂಗಲ್ಲು ಈಶ್ವರಭಟ್ಟರ ಅಮರನಾಥ' ದರ್ಶನ (1984), ದೊಡ್ಡೇರಿ ವೆಂಕಟರಾವ್ ಅವರ ಏಕಾಕಿ ಪ್ರವಾಸಿ (1984), ನಾ ಕಂಡ ಪಡುವಣ, ಎಚ್.ಎಸ್.ಹರಿಶಂಕರ್ ಅವರ ಸುಂದರ ಮಾಸ್ಕೋ ಸುಂದರ ರಶಿಯಾ (1985), ಗೌತಮರ ನಯಾಗರಾಕ್ಕೆ ಐದು ಮೈಲಿ, ಜಿ.ಗೋಪಾಲರ ಬೆಂಗಳೂರಿಂದ ಬಾರ್ಸೆಲೋನಾಕ್ಕೆ- ಇವು ಗಮನಿಸಬೇಕಾದಂತಹ ಕೃತಿಗಳು. ನೀಳಾದೇವಿಯವರ ನಾ ಕಂಡ ಆ ಖಂಡ (1985) ಅಮೆರಿಕದ ಶ್ರೀಮಂತಿಕೆಗೆ ಕಾರಣವಾಗುವ ಅವರ ಜೀವನಶ್ರದ್ಧೆ, ಅಪಾರ ಪರಿಶ್ರಮದ ಜೀವನವನ್ನು ವ್ಯವಸ್ಥಿತ ಸಾಮಾಜಿಕ ಬದುಕು, ಕಾಲವನ್ನು ಬಳಸಿಕೊಳ್ಳುವಲ್ಲಿನ ಶಿಸ್ತು- ಇವುಗಳನ್ನು ಅತ್ಯಂತ ಎಚ್ಚರಿಕೆಯಿಂದ ಪರಿಶೀಲಿಸುತ್ತದೆ. ಇದೇ ಸಾಲಿನಲ್ಲಿ ಬರುವ ನಭ ಅವರ ಕ್ಯಾಮರೂನಿನ ಬಣಗಳೊಡನೆ (1985) ಎಂಬ ಕೃತಿಯಲ್ಲಿ ಆಫ್ರಿಕದ ಕ್ಯಾಮರೂನನ್ನು ಅಲ್ಲಿಯ ಜನ ದೇವತೆಗಳ ರಥ' ಎಂದು ಬಣ್ಣಿಸಿರುವುದನ್ನು ವಿವರಿಸಲಾಗಿದೆ. ಎಚ್.ಎಸ್.ರಾಘವೇಂದ್ರರಾಯರ ಜನಗಣಮನ ಎಂಬ ಕೃತಿಯಲ್ಲಿ ಪಶ್ಚಿಮ ಬಂಗಾಲವನ್ನು ಅತೀ ವ್ಯಾವಹಾರಿಕ ಜಗತ್ತು ಎಂದೂ ಅಲ್ಲಿನ ಅರಾಜಕತೆಯ ಹಿಂದೆ ಒಂದು ಜೀವಂತಿಕೆಯೂ ನಿಗೂಢ' ಚೆಲುವಿಕೆಯೂ ಇರುವುದನ್ನು ಗುರುತಿಸಿದ್ದಾರೆ. ನಭ ಅವರು ಯುನೆಸ್ಕೋ ಸೇವೆಯಲ್ಲಿ (1985) ಎಂಬ ಕೃತಿಯಲ್ಲಿ ಇಂಡೊನೇಷ್ಯದ ಪ್ರಸಿದ್ಧ ಬೋರಾಂ ಬೋದೂರಿನ ಒಂಬತ್ತು ಅಂತಸ್ತುಗಳ ಬೌದ್ಧ ಸ್ತೂಪವನ್ನು ವಿಶಿಷ್ಟವಾಗಿ ವರ್ಣಿಸಿದ್ದಾರೆ. ಬೆಂಗಳೂರಿಂದ ಬಾರ್ಸೆಲೋನಾಕ್ಕೆ ಕೃತಿಯಲ್ಲಿ ಜಿ.ಗೋಪಾಲರು ಬಾರ್ಸೆಲೋನಾದ ಜನಪದ ನೃತ್ಯ, ಸಂಗೀತ ರಚನೆ, ಕೊಲಂಬಸ್ ಹಡಗಿನ ಕುತೂಹಲ ಈ ಎಲ್ಲವನ್ನೂ ವೈದ್ಯಕೀಯ ಹಾಗೂ ಸಾಮಾಜಿಕ ಗ್ರಹಿಕೆಗಳೊಂದಿಗೆ ಪರಿಭಾವಿಸಿದ್ದಾರೆ. ನಾ ಕಂಡ ಜರ್ಮನಿಯಲ್ಲಿ ಹೊ.ಶ್ರೀನಿವಾಸಯ್ಯನವರು ದಾಖಲಿಸುವ ಕೈರೋ ಮ್ಯೂಸಿಯಂ, ಟುಟುನ್ ಖಾಮೆನ್ ಕಾಲದ ಖಡ್ಗಗಳು, ಮಮ್ಮಿಗಳು, ಸ್ತ್ರೀ ಮುಖ ಮತ್ತು ಸಿಂಹದ ಮೈ ಹೊಂದಿರುವ ಸ್ಫಿಂಕ್ಸ್ - ಇವುಗಳು ವಿಶೇಷ ಅಧ್ಯಯನ ಮೂಲದ ದೃಷ್ಟಿಕೋನಗಳಾಗಿವೆ. ಇದೇ ಹಂತದಲ್ಲಿ ಬಿ.ಜಿ.ಎಲ್. ಸ್ವಾಮಿಯವರ ಹಸಿರು ಹೊನ್ನು ಕೃತಿಯನ್ನೂ (1983) ನೆನೆಯಬೇಕು. ಅಧ್ಯಯನಶೀಲತೆಯೇ ಪ್ರಧಾನ ಎಂಬಂತೆ ಸಸ್ಯಕ್ಷೇತ್ರದ ಅನ್ವೇಷಣೆಯ ದಾಖಲಾತಿ ಇದಾಗಿದೆ. ಪ್ರವಾಸ ಸಾಹಿತ್ಯದ ಹಿಂದಿರುವ ಸಿದ್ಧಾಂತಗಳ ನೆಲೆಗೊಂದು ಭಿನ್ನ ಒಳನೋಟವನ್ನು ಈ ಕೃತಿ ನೀಡುತ್ತದೆ.

90ರ ದಶಕದಲ್ಲಿ ಅನೇಕ ಮಹತ್ವದ ಪ್ರವಾಸ ಸಾಹಿತ್ಯ ಕೃತಿಗಳು ಪ್ರಕಟಗೊಂಡಿವೆ. ಲತಾಗುತ್ತಿಯವರ ಯುರೋನಾಡಿನಲ್ಲಿ (1986), ರುಕ್ಮಿಣಿಕುಮಾರಿಯವರ ಸುವರ್ಣ ಮಧುಚಂದ್ರ (1988), ವ್ಯಾಸರಾಯ ಬಲ್ಲಾಳರ ನಾನೊಬ್ಬ ಭಾರತೀಯ ಪ್ರವಾಸಿ (1989), ಸುಶೀಲಾ ಕೊಪ್ಪರ ಅವರ ಪಡುವಣ ಪತ್ರಮಾಲೆ (1989), ವಿ.ಕೃ.ಗೋಕಾಕರ ಪ್ರವಾಸ ಸಾಹಿತ್ಯ (1988), ರಾ.ಯ.ಧಾರವಾಡಕರರ ನಾಕಂಡ ಅಮೆರಿಕೆ (1988), ಜಿ.ಎಸ್.ಕಾಪಸೆ ಅವರ ಶಾಲ್ಮಲೆಯಿಂದ ಗೋದಾವರಿವರೆಗೆ (1989), ನಭ ಅವರ ನಾ ಕಂಡ ಕೆನ್ಯಾ (1986) ಮುಂತಾದುವುಗಳನ್ನು ಹೆಸರಿಸಬಹುದು.

ಯಜ್ಞಾವತಿ ಕೇಶವ ಕಂಗೆನ್ ಅವರ ಸ್ಮರಣೀಯ ಪ್ರವಾಸ (1991), ಹೇಮಲತಾ ಮಹಿಷಿ ಅವರ ಯುರೋದರ್ಶನ (1991), ಶಮಂತರ ನೇಪಾಳದ ಹಿಮಾಲಯ ಚಾರಣ ಅನುಭವ ನೀಡುವ ಗಿರಿಸ್ನೇಹ (1992), ಶಿವಲಿಂಗಮ್ಮ ಕಟ್ಟಿಯವರ ಲಂಡನ್ ಭೇಟಿ ಕುರಿತ ಪಡುವಣ ಪಯಣ (1993), ಪದ್ಮಾಶೆಣೈ ಅವರ ಅಮೆರಿಕವಾಸ - ಪ್ರವಾಸ (1993), ಬಿ.ಕೆ.ನರ್ಮದ ಅವರ ಸುಂದರಸ್ವಪ್ನ, ಅನಸೂಯಾ ರಾವ್ ಅವರ ಸುಂದರ ಕರ್ನಾಟಕ, ಜಯಾ ರಾಜಶೇಖರ ಅವರ ಶ್ರೀಲಂಕಾ - ಇಂಗ್ಲೆಂಡ್ ಅಮೆರಿಕಾ ಪ್ರವಾಸ ಕುರಿತ ಮರಳಿ ಬಂದ ಮಧುರ ಮಾಸ, ಟಿ.ಆರ್.ನಾಗಪ್ಪನವರ ದೇಶ ನೋಡು ಕೋಶ ಓದು (1992), ಜಾನಕಿ ಬ್ರಹ್ಮಾವರ ಅವರ ತಿರುಗಾಟದ ತಿರುಳು, ನನ್ನ ಪ್ರವಾಸ ಕಥ'ನ ಮೊದಲಾದವು ಪ್ರವಾಸ ಸಾಹಿತ್ಯ ಪಟ್ಟಿಯಲ್ಲಿನ ಪ್ರಮುಖ ಸೇರ್ಪಡೆಗಳು.

ಉಳಿಯ ದನಿ ಕಡಲಮೊರೆ (1994) ಪಿ.ವಿ.ನಾರಾಯಣ ಅವರ ಒರಿಸ್ಸ ರಾಜ್ಯ ಪ್ರವಾಸ ಕುರಿತದ್ದು. ಎಚ್.ಎಸ್.ಮುಕ್ತಾಯಕ್ಕನವರ ಮದಿರೆಯ ನಾಡಿನಲ್ಲಿ ಎಂಬ ಕೃತಿಯಲ್ಲಿ ಗೋವೆಯ ಭೇಟಿಯ ಚಿತ್ರಣವಿದೆ. ದೇವಕೀ ಮೂರ್ತಿ ಅವರ ಯುರೋ-ಅಮೆರಿಕಾದ ಇಣುಕುನೋಟ (1994), ಪದ್ಮಗುರುರಾಜ್ ಅವರ ಕಾಂಗರೂಗಳ ನಾಡಿನಲ್ಲಿ (1995), ಲೀಲಾ ಮಿರ್ಲೆಯವರ ಪ್ರವಾಸ (1995), ಆರ್.ನಂಜುಂಡೇಗೌಡರ ಕೆರೆಬಿಯನ್ ಪ್ರವಾಸ, (1996)- ಈ ಕೃತಿಗಳು ನಮ್ಮ ಕುತೂಹಲವನ್ನು ತಣಿಸುತ್ತವೆ. ಕೆರೆಬಿಯನ್ ದ್ವೀಪದ ಸೊಬಗು, ಕಪ್ಪುಜನರ ಬದುಕು, ಕಾರ್ನಿವಾಲ್ ಹಬ್ಬ, ಉತ್ತರ ಮತ್ತು ದಕ್ಷಿಣ ಅಮೆರಿಕಗಳ ನಡುವಣ ಭಾಗದ ಈ ದ್ವೀಪ ಸಮುಚ್ಚಯದಲ್ಲಿ ರೂಪುಗೊಂಡ ಬಗೆಯನ್ನು ಕೆರೆಬಿಯನ್ ಪ್ರವಾಸ ಎಂಬ ಕೃತಿ ಮನೋಜ್ಞವಾಗಿ ವಿಶ್ಲೇಷಿಸುತ್ತದೆ. ಹಿ.ಚಿ.ಬೋರಲಿಂಗಯ್ಯನವರ ಗಿರಿಜನ ನಾಡಿಗೆ ಪಯಣ (1991) ಕೃತಿ ಭಾರತದ ಎಲ್ಲೆಕಟ್ಟಿನೊಳಗೆ ಕರಾವಳಿಯ ಸುಂದರ ಗಿರಿಶಿಖರ ಶ್ರೇಣಿಗಳು, ಹಸುರು, ಸಾಗರ ನಡುಗಡ್ಡೆಯ ಸೊಬಗು, ಹವಳ ಕಣಿವೆಯ ಸೌಂದರ್ಯ, ಗೊಂಡರ ಜೀವನ-ಸಂಸ್ಕೃತಿ-ಪರಿಚಯ- ಹೀಗೆ ಅನೇಕ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣ ಜನಪದ ಮಾಹಿತಿಯ ದಾಖಲೆಯಾಗಿದೆ.

ಜಿ.ಎನ್.ಮೋಹನ ಅವರ ನನ್ನೊಳಗಿನ ಹಾಡು ಕ್ಯೂಬಾ (2000) ಒಂದು ವಿಶಿಷ್ಟ ರೀತಿಯ ಪ್ರವಾಸ ಕೃತಿ. ಹೊಟ್ಟೆಯಲ್ಲಿ ಅಳುವಿಟ್ಟುಕೊಂಡು ಸದಾ ನಾದದ ಅಲೆಗಳ ಮೇಲೆ ನಿಂತಿರುವ ದೇಶ ಕ್ಯೂಬಾ ಎಂದು ಲೇಖಕರು ಹೇಳುವ ಮಾತು ಅರ್ಥಪೂರ್ಣವಾಗಿದೆ. ಕ್ರಾಂತಿ ನಮ್ಮನ್ನು ಮನುಷ್ಯರನ್ನಾಗಿ ಮಾಡುತ್ತದೆ ಎಂದಿದ್ದ ಚೆಗೆವಾರನ ಮಾತಿನಂತೆ ಸೋಲುಗಳನ್ನು ಏಣಿ ಮಾಡಿಕೊಂಡು ಮೇಲೇರಿದ ಕ್ಯೂಬಾದ ದಣಿವಿನ ಕತೆಯನ್ನು ಇಲ್ಲಿ ಲೇಖಕರು ಆಪ್ತ ಧಾಟಿಯಲ್ಲಿ ವರ್ಣಿಸಿದ್ದಾರೆ.

ಕೆ.ಅನಂತರಾಮು ಅವರ ದಕ್ಷಿಣದ ಸಿರಿನಾಡು (1997), ಇಸ್ರೇಲಿನ ಸಾಧನೆಗಳ ರೋಚಕ ಇತಿಹಾಸವನ್ನೊಳಗೊಂಡ ಮತ್ತಿಹಳ್ಳಿ ನಾಗರಾಜರ ಮರುಭೂಮಿ ಚಿಗುರಿತು (2000), ಎಸ್.ಎಲ್.ಕುಲಕರ್ಣಿ ಯವರ ಭಾರತ ದರ್ಶನ (2000), ಭಾರತಿ ಭಟ್ ಅವರ ನನ್ನ ಬೆಲ್ಜಿಯಂ ಪ್ರವಾಸ (2000), ಕೆ.ಜಿ.ಗುರುಮೂರ್ತಿ ಅವರ ಅಮೆರಿಕೆಯಲ್ಲಿ ಪ್ರವಾಸ (2000), ವಿಜಯಾ ಸುಬ್ಬರಾಜ್‌ರ ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ ಮುಂತಾದ ಕೃತಿಗಳು ವಿಷಯನಿರೂಪಣೆ, ಕುತೂಹಲದ ವರ್ಣನೆಗಳಿಂದ ನಮ್ಮ ಗಮನವನ್ನು ಸಾಕಷ್ಟು ಸೆಳೆಯುತ್ತವೆ.

ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರ ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ (1990) ಎಂಬ ಕೃತಿಗಳು ಪ್ರವಾಸ ಸಾಹಿತ್ಯದ ಏಕಮುಖ ಏಕತಾನವನ್ನು ಮೀರಿದ ಕೃತಿಗಳು. ಇಲ್ಲಿನ ಕಥನತಂತ್ರ ಹೊಸ ರೀತಿಯ ವಸ್ತು, ಶೋಧನೆ, ಅನುಭವದ ಆಳ ವಿಸ್ಮಯಗೊಳಿಸುವಂಥವು. ಜಿ.ಟಿ.ನಾರಾಯಣರಾಯರ ಸಪ್ತ ಸಾಗರದಾಚೆಯೆಲ್ಲೋ (1999) ವಿಜ್ಞಾನ ವಾಙ್ಮಯದ ಮತ್ತೊಂದು ಮಗ್ಗುಲಿನ ಪರಿಶೋಧನೆಯೇ ಆಗಿದೆ. ಎಸ್.ಸಂಧ್ಯಾ ಅವರು ಹಲವು ಕಾಲಗಳ ನಾಡು- ಗುಜರಾತು (1997), ಕಾಶ್ಮೀರದ ತಲ್ಲಣದ ಚಿತ್ರ ನೀಡುವ ಶಮಂತ ಅವರ ಹಿಮದಗ್ನಿ (1996), ಜಯಾ ಕಲ್‌ಬಾಗಲ್ ಅವರ ಅಮೆರಿಕದಲ್ಲಿ 67ರ ಹುಟ್ಟುಹಬ್ಬ, ಸಿದ್ದರಾಮ ಹೊನ್ನಲ್ ಅವರ ಪಂಜಾಬು ಕುರಿತ ಪಂಚನದಿಗಳ ನಾಡಿನಲ್ಲಿ (1996), ಶಂಕರ ಪಾಟೀಲರ ಹಿಮಾಚಲದ ಹಿನ್ನೆಲೆಯಲ್ಲಿ (1997), ಪಿ.ವಿ.ಕೃಷ್ಣಮೂರ್ತಿಯವರ ವಿಂಧ್ಯ ನರ್ಮದೆಯರ ನಾಡಿನಲ್ಲಿ (1999), ಎಚ್.ಎಸ್.ಗೋಪಾಲರಾವ್ ಅವರ ಗೋದಾವರಿಯ ಆಸುಪಾಸಿನಲ್ಲಿ (1999), ದೇಜಗೌ ಅವರ ಸ್ವಿಟ್ಸರ್ಲೆಂಡ್ ಕುರಿತ ನಿಚ್ಚ ಹಸುರಿನ ನಾಡಿನಲ್ಲಿ, ವಸಂತೀ ಚಂದ್ರರ ಕನಕಕ್ಷೇತ್ರ-ಕರ್ನಾಟಕ ಭಾಗ-1 (1999), ನೀಳಾದೇವಿಯರ ಮಕ್ಕಳಿಗೆಂದೇ ಬರೆದ ಸಬಲನ ವಿದೇಶ ಪ್ರವಾಸ (1997), ಕುಲಶೇಖರಿ ಅವರ ಅಮೆರಿಕ ಕುರಿತ ಬೊಗಸೆ ಬುತ್ತಿ, ಶ್ವೇತಾಕೋಟೆ ಅವರ ಪುಟಾಣಿಯ ಕಂಗಳಲ್ಲಿ ನೂರು ಬಣ್ಣಗಳು (1997), ವಿಜಯಾದಬ್ಬೆ ಅವರ ಒರಿಸ್ಸ ಕುರಿತ ಉರಿಯ ಚಿಗುರ ಉತ್ಕಲೆ (1998), ದೊಡ್ಡಿ ಸಾರಾಬಾಯಿ ಅವರ ತೀರ್ಥಕ್ಷೇತ್ರ ಮಹಿಮೆ (1998), ಬಿ.ಎನ್.ಸುಮಿತ್ರಾಬಾಯಿ ಅವರ ಅಸ್ಸಾಂ ಕುರಿತ ಬ್ರಹ್ಮಪುತ್ರದ ಕಣಿವೆಯಲ್ಲಿ, ವನಜ ರಾಜನ್ ಅವರ ಕಣ್ಣಂಚಿನಲ್ಲಿ ಪೂರ್ವ ಪಶ್ಚಿಮ (1998), ಶಿವಲಿಂಗಮ್ಮ ಕಟ್ಟಿ ಅವರ ಬೆಳಕಿನೆಡೆಗೆ (1998), ಲೀಲಾವತಿ ದೇವದಾಸರ ಏಸುವಿನ ತಾಣವಾದ ಇಸ್ರೇಲ್ ಕುರಿತಾದ ಪವಿತ್ರನಾಡಿನಲ್ಲಿ ಪ್ರವಾಸ (1999), ಶಾರದಾ ಹೆಮ್ಮಿಗೆ ಅವರ ಕರ್ನಾಟಕದ ಒಂದು ನಿರ್ದಿಷ್ಟ ದಿಕ್ಕಿನ ಹಳ್ಳಿಯ ಸುತ್ತಮುತ್ತ (1999), ನೇಮಿಚಂದ್ರರು ಹೇಮಲತಾ ಮಹಿಷಿಯವರೊಂದಿಗೆ ಕೈಗೊಂಡ ಯುರೋಪಿನ ಪ್ರವಾಸ ವಿಶೇಷವಾಗಿ ಮಹಿಳಾ ಸಾಹಿತಿ, ವಿಜ್ಞಾನಿ, ಕಲೆಗಾರರುಗಳ ಬಗೆಗಿನ ವಿವರಗಳನ್ನೂ ಒಳಗೊಂಡ ಒಂದು ಕನಸಿನ ಪಯಣ (1999), ವಸಂತೀ ಚಂದ್ರರ ಅಮೆರಿಕ ಕುರಿತ ಭೋಗಭೂಮಿಯ ಮಡಿಲಲ್ಲಿ ಭಾಗ-1 (1999), ಪ್ರವೀಣ್ ಫರ್ನಾಂಡಿಸ್ ಅವರ ಜಪಾನ್ ಕುರಿತ ಕಣ್ಣು ಕುಕ್ಕುವ ಜಪಾನ್ (1998), ಎಸ್.ವಿ.ಶ್ರೀನಿವಾಸರಾವ್ ಅವರ ಅಮೆರಿಕ ಕುರಿತ ಇಣುಕು ನೋಟ (1997), ಲತಾಗುತ್ತಿ ಅವರ ನಾ ಕಂಡ ಅರೇಬಿಯಾ (1995) ಎಸ್.ಕೇಶವಮೂರ್ತಿ ಅವರ ನೇಪಾಳ ಯಾತ್ರೆ (2000), ವಿಜಯಾ ಸುಬ್ಬರಾವ್ ಅವರ ಅಂಡಮಾನಿನ ಪ್ರವಾಸ ಕುರಿತ ಸ್ವರ್ಗದ್ವೀಪದ ಕನಸಿನ ಬೆನ್ನೇರಿ (2000), ಇಂದಿರಾ ಶಿವಣ್ಣ ಅವರ ಹಾಲೆಂಡ್‌ನಿಂದ ಲಂಡನ್‌ವರೆಗೆ (2001), ಎಸ್.ಕೇಶವಮೂರ್ತಿ ಅವರ ಉತ್ತರಾಖಂಡದ ಯಾತ್ರೆ (2000), ಬಿ.ವಿ.ನಾಗರಾಜರ ಕೆನಡಾದಲ್ಲಿ ಬಿ.ವಿ.ದಿನಚರಿ (1999), ದೇಜಗೌ ಅವರ ಅಲಾಸ್ಕ ಪ್ರವಾಸ ಕುರಿತ ಜಗತ್ತಿನ ನಡುನೆತ್ತಿಯ ಮೇಲೆ (1999), ಮುಂತಾದ ಕೃತಿಗಳನ್ನು ಗಮನಿಸಿದರೆ ವಿಶೇಷವಾಗಿ ಈ ಅವಧಿಯಲ್ಲಿ ಬಂದ ಮಹಿಳಾ ಪ್ರವಾಸ ಕಥನಕಾರರ ಸಂಖ್ಯೆ, ಸಾಧನೆ, ಕೌಶಲ ಗಮನಸೆಳೆಯುವಂಥದ್ದು.

2001-2003ರ ಅವಧಿಯಲ್ಲಿಯೂ ಹಲವು ಕೃತಿಗಳು ಈ ಕ್ಷೇತ್ರದಲ್ಲಿ ಪ್ರಕಟವಾಗಿವೆ. ರಹಮತ್ ತರೀಕೆರೆ ಅವರ ಅಂಡಮಾನ್ ಕನಸು (2001), ಬಿ.ಎಸ್.ಸಣ್ಣಯ್ಯನವರ ನಾನೂ ಹೋಗಿದ್ದೆ ಅಮೆರಿಕೆಗೆ (2001), ಜಲಜಾ ಗಂಗೂರ್‌ರವರ ಅವನಿಯ ಅಪ್ಸರೆ ಅಮೆರಿಕ (2001), ಸುಧಾಮೂರ್ತಿ ಅವರ ಕಾವೇರಿಯಿಂದ ಮೆಕಾಂಗಿಗೆ (2001), ಹಕ್ಕಿಯ ತೆರದಲಿ (2001), ಆರ್ಯಾಂಬ ಪಟ್ಟಾಭಿ ಅವರ ವಿದೇಶ ಪ್ರವಾಸ (2001), ಸಾರಾ ಅಬೂಬಕರ್ ಅವರ ಐಷಾರಾಮದ ಆಳದಲ್ಲಿ (2001), ಪಿ.ಎಂ.ಹೆಗ್ಗಡೆಯವರ ಆಲ್ಮನೆಯಿಂದ ಆ್ಯನ್ ಆರ್ಬರ್‌ಗೆ (2002), ಚಂದ್ರಶೇಖರ ಆಲೂರರ ಅಮೆರಿಕಾದಲ್ಲಿ ಆಲೂರು (2002), ಕೃಷ್ಣಾನಂದ ಕಾಮತರ ನಾನೂ ಅಮೆರಿಕೆಗೆ ಹೋಗಿದ್ದೆ (2002), ಕೆ.ರಾಮಣ್ಣ ಅವರ ಜಗವ ಸುತ್ತಿ ನಲಿ - ಜನರ ನೋಡಿ ಕಲಿ (2002), ಶಾಂತಾ ನಾಗರಾಜರ ಸಿಂಗಾಪುರ, ಮಲೇಷಿಯಾ ಕುರಿತ ಯಾನ ಸಂಸ್ಕೃತಿ (2002)- ಅಜ್ಜಂಪುರ ಕೃಷ್ಣಸ್ವಾಮಿಯವರ ಜಪಾನ್ (2002), ಸುಮನಾ ವಿಶ್ವನಾಥ್‌ರವರ ಮತ್ತೂರರೊಂದಿಗೆ ಕಾಶಿಯಾತ್ರೆ (2002), ಕೆ.ಸಿ.ಲಕ್ಷ್ಮೀನರಸಿಂಹಯ್ಯ ಅವರ ನಾ ಕಂಡ ಭಾರತ (ವಿಸ್ತೃತ-2002), ಜಗದಂಬಾ ಮಲ್ಲೆದೇವರು ಅವರ ಪಯಣಗಳಾಗಿ ಪಶ್ಚಿಮದೆಡೆಗೆ (2002), ನಾಗತಿಹಳ್ಳಿ ಚಂದ್ರಶೇಖರ ಅವರ ಅಮೆರಿಕಾ ಅಮೆರಿಕಾ (2002), ಪಿ.ವಿ.ನಾರಾಯಣ ಅವರ ಭುವಿಯ ಬಸಿರಿಗೆ ಪಯಣ (2002), ವಾಣಿರಾವ್ ಅವರ ಹಿಮಗಿರಿಯ ಶಿಖರದ ಮೇಲೆ (2002), ಡಿ.ವಿ.ಗುರುಪ್ರಸಾದರ ಯೂರೋಪಿನಿಂದ ಆಸ್ಟ್ರೇಲಿಯಾವರೆಗೆ ವಿಶ್ವಪರ್ಯಟನಾ ದಿನಚರಿ (2002), ಕೆ.ಮರುಳಸಿದ್ದಪ್ಪ ಅವರ ನೋಟ ನಿಲುವು (2002), ಪ್ರಭಾಮೂರ್ತಿಯವರ ಹಸಿರು ಹವಳ (2002), ಜೇ.ವಿ.ಕುಲಕರ್ಣಿಯವರ ಜೇವಿ ಕಂಡ ಅಮೆರಿಕ (2002), ಸಿದ್ದರಾಮ ಹೊಸ್ಮಲ್ ಅವರ ಕನ್ಯಾಕುಮಾರಿಯಿಂದ ಹಿಮಾಲಯದೆಡೆಗೆ (2002), ಎಸ್.ಪಿ.ಪದ್ಮಪ್ರಸಾದ್ ಅವರ ರಾಜಾಸ್ಥಾನದ ಜೈನ ಮಂದಿರಗಳು (2002), ವೆಂಕಟೇಶ ಮಾಚಕನೂರು ಅವರ ಥೇಮ್ಸ್‌ನಿಂದ ಟೈಬರ್‌ವರೆಗೆ (2002), ಸುನೀತಾ ಎಂ.ಶೆಟ್ಟಿ ಅವರ ಪ್ರವಾಸಿಯ ಹೆಜ್ಜೆಗಳು (2002), ವಸಂತರಾಜ್.ಎನ್.ಕೆ. ಅವರ ಅಮೆರಿಕಾದೊಳಗೊಂದು ಇಣುಕು (2001), ಮೀನಾ ಮೈಸೂರು ಅವರ ಫ್ರಾನ್ಸ್‌ಪ್ರವಾಸದ ಎತ್ತಣಿಂದೆತ್ತ (2003), ಮೊಳಕಾಲ್ಮೂರು ಶ್ರೀನಿವಾಸಮೂರ್ತಿಯವರ ಬುದ್ಧನೊಡನೆ ಇಪ್ಪತ್ತು ದಿನಗಳು (2003) ಎಚ್.ಎಂ.ನಾಗರಾಜುರವರ ಸೂರ್ಯ ಮುಳುಗದ ಸಾಮ್ರಾಜ್ಯದಲ್ಲಿ ಮೊದಲಾದ ಕೃತಿಗಳು ನಿರಂತರವಾಗಿ ಹುಲಸಾಗಿ ಬೆಳೆಯುತ್ತ ಸಾಗಿರುವ ಪ್ರವಾಸ ಸಾಹಿತ್ಯದ ದಿಕ್ಸೂಚಿಯಾಗಿದೆ ಎನ್ನಬಹುದು.

ಪ್ರವಾಸ ಸಾಹಿತ್ಯದ ಹಲವು ಉತ್ತಮ ಅನುವಾದ ಗ್ರಂಥಗಳು ಕನ್ನಡಕ್ಕೆ ಬಂದಿವೆ. ಬಂಗಾಲಿ ಲೇಖಕ ಪ್ರಬೋಧಕುಮಾರ ಸನ್ಯಾಲರ ಪ್ರವಾಸ ಪ್ರಬಂಧವನ್ನು ಎಂ.ಕೆ.ಭಾರತೀರಮಣಾಚಾರ್ಯರು ಮಹಾಪ್ರಸ್ಥಾನದ ಪಥದಲ್ಲಿ ಎಂಬ ಹೆಸರಿನಿಂದ ಕನ್ನಡಕ್ಕೆ ತಂದಿದ್ದಾರೆ. ಇದು ಒಂದು ಉತ್ತಮ ಕಾದಂಬರಿಯಂತಿದೆ. ಸಾಮ್ಯುಯಲ್ ಎಲಿಯೆಟ್ ಮಾರಿಸನ್‌ರವರ ನಾವಿಕ ಕ್ರಿಸ್ಟೊಫರ್ ಕೊಲಂಬಸ್ ಗ್ರಂಥವನ್ನು ಎಚ್.ವಿ.ನಾರಾಯಣ ರಾಯರು, ಥಾರ್ ಹೆಯರ್ ಡಾಹಾಲ್‌ರ ಕಾಂಟಿಕಿಯ ಸಾಹಸವನ್ನು ಎಚ್.ಎನ್.ಮಾಧವರಾವ್ ಅವರೂ ಕನ್ನಡಕ್ಕೆ ಅನುವಾದಿಸಿದ್ದಾರೆ. ಸ್ವಾಮಿ ವಿವೇಕಾನಂದರ ಕೊಲಂಬೊ ಇಂದ ಆಲ್ಮೋರಕ್ಕೆ ಮತ್ತು ಜವಹರಲಾಲ್ ನೆಹರುರವರ ಮಗಳಿಗೆ ತಂದೆಯ ಓಲೆಗಳು ಎಂಬೆರಡು ಕೃತಿಗಳು ಕೂಡ ಕನ್ನಡದಲ್ಲಿ ಪ್ರಕಟವಾಗಿದ್ದು ಪ್ರವಾಸ ಸಾಹಿತ್ಯದ ಹರವಿಗೂ ಬರಬಹುದಾದ ಗ್ರಂಥಗಳಾಗಿವೆ. ಪ್ರದೀಪ ಕೆಂಜಿಗೆಯವರ ಅದ್ಭುತಯಾನ (1995), ಬಿ.ಜಿ.ಎಲ್.ಸ್ವಾಮಿ ಅವರ ನಡೆದಿಹೆ ಬಾಳೌ ಕಾವೇರಿ (2001) ಎಂಬ ಕೃತಿಗಳನ್ನು ಈ ನಿಟ್ಟಿನಲ್ಲಿ ಉಲ್ಲೇಖಿಸಬಹುದು. (ಜಿ.ಎನ್.)

**ಕನ್ನಡದಲ್ಲಿ ಬೇಟೆ ಸಾಹಿತ್ಯ :** ಮಾನವನ ಬದುಕಿನೊಂದಿಗೆ ಹತ್ತಿರದ ಸಂಬಂಧ ಪಡೆದುಕೊಂಡಿದ್ದ, ಇತಿಹಾಸದುದ್ದಕ್ಕೂ ಏಳುಬೀಳುಗಳನ್ನು ಕಂಡ 'ಬೇಟೆ' ಮಾನವನ ಸೃಜನಶೀಲ ಅಭಿವ್ಯಕ್ತಿಗಳಾದ ಕಲೆ, ಸಾಹಿತ್ಯ, ನೃತ್ಯ, ನಾಟಕ, ಸಂಗೀತ ಮೊದಲಾದವುಗಳೊಂದಿಗೆ ಸಹಭಾಗಿಯಾಗಿರುವುದು ಕುತೂಹಲದಾಯಕ ವಿಚಾರವಾಗಿದೆ.

ಬೇಟೆಯನ್ನು ಪ್ರಧಾನ ಅಥವಾ ಆನುಷಂಗಿಕವಾಗಿ ಒಳಗೊಂಡ ಬರೆಹಗಳನ್ನು 'ಮೃಗಯಾ ಸಾಹಿತ್ಯ' ಎಂಬ ಸಾಹಿತ್ಯ ಪ್ರಕಾರವಾಗಿ ವಿಭಾಗಿಸಿ ಅಧ್ಯಯನ ಮಾಡಲಾಗುತ್ತದೆ. ಕನ್ನಡದ ಮೃಗಯಾ ಸಾಹಿತ್ಯ ವಿಶಾಲ ಅರ್ಥದಲ್ಲಿ ಬಹು ವ್ಯಾಪಕವಾಗಿದ್ದು ಕನ್ನಡದ ಮೊದಲ ಕೃತಿ

ಕವಿರಾಜಮಾರ್ಗದಿಂದ ಇಂದಿನವರೆಗಿನ ಕಾಲಘಟ್ಟದ ವಿವಿಧ ಕೃತಿಗಳಲ್ಲಿ ದಾಖಲಾಗಿರುವುದು ಅಧ್ಯಯನ ಯೋಗ್ಯವಾಗಿದೆ.

ಹಿಂದಿನ ದೊರೆಗಳು ತಮ್ಮ ಪ್ರಜಾಪರಿಪಾಲನೆ ಕರ್ತವ್ಯದ ಅಂಗವಾಗಿಯೂ ಸಾಹಸ ಪ್ರದರ್ಶನ, ಮನರಂಜನೆಯ ಗೀಳಿನಲ್ಲಿಯೂ ಆಗಾಗ ವನ್ಯಜೀವಿಗಳ ಬೇಟೆಯಾಡುತ್ತಿದ್ದುದುಂಟು. ಕವಿಗಳಿಗೆ ಅಷ್ಟಾದಶವರ್ಣನೆಗಳಲ್ಲಿ ಬೇಟೆಯೂ ಒಂದು. ತಮ್ಮ ಕೃತಿಗಳಲ್ಲಿ ಬೇಟೆ ಪ್ರಸಂಗಗಳನ್ನು ಉತ್ಸುಕತೆಯಿಂದ ವರ್ಣಿಸುತ್ತಿದ್ದರು. ಆಧುನಿಕ ಸಂದರ್ಭದಲ್ಲಿ ಬಹುಮಟ್ಟಿಗೆ ಇಂಗ್ಲಿಷ್ ಸಾಹಿತ್ಯದಲ್ಲಿನ ಬೇಟೆ ಅನುಭವಗಳ ವರ್ಣರಂಜಿತ ನಿರೂಪಣೆಗಳ ಪ್ರೇರಣೆಗಳಿಂದ ಹೊಸಗನ್ನಡದಲ್ಲಿಯೂ ಪೂರ್ಣ ಪ್ರಮಾಣದ ಮೃಗಯಾ ಸಾಹಿತ್ಯ ಸೃಷ್ಟಿಯಾಗತೊಡಗಿತ್ತು.

ಕನ್ನಡ ಮೃಗಯಾ ಸಾಹಿತ್ಯದ ಕೃತಿಗಳನ್ನು ಅಧ್ಯಯನ ಸೌಲಭ್ಯಕ್ಕಾಗಿ ಪ್ರಧಾನವಾಗಿ ಎರಡು ಗುಂಪುಗಳಾಗಿ ವರ್ಗೀಕರಿಸಿ ಕೊಳ್ಳಬಹುದು:

I ಪ್ರಾಚೀನ ಕೃತಿಗಳು
- 1 ಕಾವ್ಯ, ಪುರಾಣ, ನಾಟಕ
- 2 ಶಾಸನಗಳು
- 3 ಚಾರಿತ್ರಿಕ ಬರೆಹಗಳು, ಪ್ರವಾಸ ಕಥನ, ಪತ್ರವ್ಯವಹಾರಗಳು
- 4 ಜನಪದ ಸಾಹಿತ್ಯ

II ಆಧುನಿಕ ಕೃತಿಗಳು
- 1 ಬೇಟೆ ಅನುಭವಗಳ ನಿರೂಪಣೆ
  - ಕನ್ನಡಕೃತಿಗಳು
    - ಸ್ವಯಂನಿರೂಪಣೆ
    - ಅನ್ಯನಿರೂಪಣೆ
  - ಅನುವಾದಗಳು
- 2 ಬೇಟೆ ಅಧ್ಯಯನಗಳು

**ಪ್ರಾಚೀನ ಕೃತಿಗಳು :** ಕನ್ನಡದ ಪ್ರಾಚೀನ ಕವಿಗಳಲ್ಲಿ ಕೆಲವರಿಗೆ 'ಬೇಟೆ' ಸ್ವಾನುಭವದ್ದಾಗಿರಬಹುದಾದರೂ ಕೆಲವರು ಇತರ ಕವಿಗಳಿಂದ ಪ್ರೇರಿತರಾಗಿ, ಅಷ್ಟಾದಶವರ್ಣನೆಗೆ ಕಟ್ಟುಬಿದ್ದು ಬೇಟೆ ವರ್ಣನೆಗೆ ಇಳಿದಂತೆ ಭಾಸವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಕರ್ನಾಟಕದ ವನ್ಯ ಪ್ರದೇಶದಲ್ಲಿ ಸಾಮಾನ್ಯವಾಗಿ ಇರದ ಸಿಂಹ ಅಥವಾ ಶರಭ, ಗಂಡಭೇರುಂಡಗಳಂತಹ ಕೇವಲ ಕವಿಸಮಯದ - ಪೌರಾಣಿಕ ಪ್ರಪಂಚದ - ವನ್ಯ ಮೃಗಗಳು ಸಹಜವಾಗಿ ಕಂಡಂತೆ ವರ್ಣಿತವಾಗಿವೆ.

ಜೈನ, ವೀರಶೈವ, ಬ್ರಾಹ್ಮಣ ಕವಿಗಳು ಸ್ವತಃ ಅಹಿಂಸಾ ಧರ್ಮ ಪಾಲಕರಾದರೂ ತಾವೂ ಸ್ವತಃ ಬೇಟೆಗಾರರಾಗಿದ್ದಂತೆ ಬೇಟೆಯ ವರ್ಣನೆಯಲ್ಲಿ ತೊಡಗಿರುವುದೂ ಚಿಂತನಾರ್ಹವಾಗಿದೆ. ಕಾವ್ಯ ಕರ್ಮಪಾಲನೆಯಲ್ಲಿ ಇದು ಅವರಿಗೆ ಅನಿವಾರ್ಯವಾದುದು ಆಗಿತ್ತು. ಯುದ್ಧದಂತೆ ಬೇಟೆಯಲ್ಲಿಯೂ ಇದ್ದಿರಬಹುದಾದ ವಿನಾಯಿತಿಯೂ ಈ ಮನೋಭಾವಕ್ಕೆ ಕಾರಣ ಆಗಿರಬಹುದು. ನಮ್ಮ ಕೆಲ ಕವಿಗಳು 'ಸವ್ಯಸಾಚಿ'ಗಳಾಗಿದ್ದರೆಂಬುದೂ ಇಲ್ಲಿ ಸ್ಮರಣೀಯ. ಕನಕದಾಸರಂತಹ ಕವಿಗಳಿಗೆ ಬೇಟೆ ಸಹಜ ಅನುಭವವಾಗಿರಬಹುದು. ಶಿವತತ್ವಚಿಂತಾಮಣಿ ಬರೆದ ಲಕ್ಕಣ್ಣದಂಡೇಶನಿಗೆ ಗಜವೇಂಟೆಗಾರ ಎಂಬ ಬಿರುದು ಇದ್ದದ್ದೂ ಇಲ್ಲಿ ಉಲ್ಲೇಖನೀಯ.

ಇದೇ ಸಂದರ್ಭದಲ್ಲಿ ನಮ್ಮ ಪ್ರಾಚೀನ ಕಾವ್ಯಗಳ ಕಥಾವಿನ್ಯಾಸದ ಬಗೆಗೆ ಪ್ರಸ್ತಾಪಿಸುವುದು ಉಚಿತವಾಗಿದೆ. ಈ ಕಾವ್ಯಗಳ ಕಥಾಹಂದರ ಹೇಗಿರುತ್ತದೆ ಎಂದರೆ ಇವುಗಳ ಬಹುಪಾಲು ನಾಯಕರು ಕಥೆಯ ಆರಂಭದಲ್ಲಿಯೇ ಬೇಟೆಗೆ ಹೋಗಬೇಕಾದ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಮುಂದಿನ ಕತೆಗೆ ತಿರುವು ನೀಡುವ ಭೂಮಿಕೆಯಾಗಿಯೂ ಬೇಟೆ ಪ್ರಸಂಗ ಮಹತ್ವ ಪಡೆಯುತ್ತದೆ. ಇನ್ನೂ ವಿಶೇಷವೆಂದರೆ ಈ ಸಂದರ್ಭದ ಬೇಟೆಯಲ್ಲಿ ಕಥಾನಾಯಕ 'ಮಾಯಾವರಾಹ'ವನ್ನು ಬೆನ್ನತ್ತಿ ಬೇಟೆಯಾಡಬೇಕಾಗುತ್ತದೆ. ಎಲ್ಲ ಕಾವ್ಯಗಳಲ್ಲಿ ವರಾಹವೇ ಪ್ರಧಾನವಾಗಿ ಕಾಣಿಸಿಕೊಳ್ಳುವುದು ಏಕೆ ಎಂಬುದು ಕುತೂಹಲದ ಪ್ರಶ್ನೆ. ವನ್ಯಜೀವಿಗಳಲ್ಲಿ ಕಾಡುಹಂದಿ ಅತ್ಯಂತ ಬಲಿಷ್ಠವಾದ, ಅದನ್ನು ಇರಿದುಕೊಲ್ಲುವುದು ಮಹಾಬಿಲ್ಗಾರನಿಗೂ ಸವಾಲಿನ ಕಾರ್ಯ ಎಂಬುದು ಇದರ ಮುಖ್ಯ ಕಾರಣ ಇದ್ದಿರಬಹುದು. ಹುಲಿ, ಸಿಂಹಗಳಿಗಿಂತಲೂ ಕಾಡುಹಂದಿಗಳ ಉಪಟಳ ಪರಿಸರದಲ್ಲಿ ಬಹು ವ್ಯಾಪಕವಾಗಿದ್ದಿರಬಹುದು.

ಪ್ರಾಚೀನ ಕವಿಗಳು ಬೇಟೆಗೆ ಸಂಬಂಧಿಸಿದ ಕೆಲವು ಸಾಮಾನ್ಯ ವಿಷಯಗಳನ್ನು ಅನಿವಾರ್ಯವಾಗಿ ಹೇಳಿದ್ದರೂ ಸಾಂದರ್ಭಿಕವಾಗಿ ಬಹುಮಟ್ಟಿಗೆ ಪ್ರತಿಯೊಬ್ಬರೂ ತಲಾ ಒಂದಾದರೂ ಹೊಸ ಹೊಸ ವಿಷಯಗಳನ್ನು ದಾಖಲಿಸುವತ್ತ ಗಮನಕೊಟ್ಟಿರುವುದೂ ಉಂಟು. ನಿದರ್ಶನಕ್ಕೆ ಮುಮ್ಮಡಿ ಕೃಷ್ಣರಾಜ ಒಡೆಯರು ತಮ್ಮ 'ಸೌಗಂಧಿಕಾ ಪರಿಣಯ'ದಲ್ಲಿ ಬೇಟೆಯಲ್ಲಿ ಕುದುರೆಗಳು ಕೆನೆಯದಂತೆ ಅವುಗಳ ಬಾಯಿಗೆ ಕಟ್ಟು ಹಾಕುತ್ತಿದ್ದ ಬಗ್ಗೆ ಹೇಳಿದ್ದಾರೆ. ಬೇಟೆ ವಿಧಗಳ ಪ್ರಸ್ತಾಪವೂ ಅಲ್ಲಿ ಬಂದಿದೆ. ತಿರುಮಲಾರ್ಯನ 'ಚಿಕ್ಕದೇವರಾಜ ವಂಶಾಳಿ'ಯಲ್ಲಿ ಬೇಟೆಯ ಹುಚ್ಚಿನಿಂದ ರಾಜನು ತನ್ನ ರಾಜ್ಯವನ್ನೇ ಕಳೆದುಕೊಳ್ಳುವ, ಬೇಟೆಯಲ್ಲಿ ಬಂದೂಕು ಬಳಸಿದ ವಿವರಗಳು ಪ್ರಸ್ತಾಪವಾಗಿವೆ. ವಿರೂಪಾಕ್ಷ ಪಂಡಿತನ 'ಚೆನ್ನಬಸವಪುರಾಣ'ದಲ್ಲಿ ಪ್ರಾಣಿಗಳ ಮುಖವಾಡ ಧರಿಸಿ ಬೇಟೆಯಾಡುತ್ತಿದ್ದ ಅಪರೂಪದ ಮಾಹಿತಿ - ತಂತ್ರ ದಾಖಲಾಗಿವೆ.

ಪ್ರಾಚೀನ ಕವಿಗಳು ಬೇಟೆಯನ್ನು ನೆವ ಮಾಡಿಕೊಂಡು ವಿನೂತನ ಕಲ್ಪನೆ, ಚಮತ್ಕಾರದ ವರ್ಣನೆಗಳ ತಮ್ಮ ಪ್ರತಿಭಾ ಪ್ರದರ್ಶನದ ಮೂಲಕ ಕಾವ್ಯಾಸಕ್ತ ಸಹೃದಯರಿಗೆ ಮುದನೀಡಿರುವುದೂ ಉಂಟು. ಉದಾ: ಲಕ್ಷ್ಮೀಶನಲ್ಲಿ ಒಂದು ಚಮತ್ಕಾರದ ವರ್ಣನೆ ಹೀಗಿದೆ: ಬೇಡತಿಯೊಬ್ಬಳನ್ನು ಆನೆ ಎಂದು ತಿಳಿದ ಸಿಂಹವೊಂದು ಅವಳ ಮೇಲೆ ಬೀಳುವಾಗ, ಅವಳ ನಡುವನ್ನು ನೋಡಿ ಅದೊಂದು ಸಿಂಹವೆಂದು ಅರಿತು ಸುಮ್ಮನಾಗುವಾಗ, ಅವಳ ಕಣ್ಣುಗಳನ್ನು ನೋಡಿ ಅದು ಹರಿಣಿ ಎಂದು ತೀರ್ಮಾನಿಸಿ ಮತ್ತೆ ಅವಳ ಮೇಲೆ ಬಿದ್ದು ಹಿಡಿಯಲು ಎಳೆಸುತ್ತಿರುವಾಗ, ತೂರಿಬಂದ ಬೇಡನ ಬಾಣಕ್ಕೆ ತುತ್ತಾಗಿ ಪ್ರಾಣನೀಗುತ್ತದೆ. ಕನಕದಾಸರ 'ಮೋಹನ ತರಂಗಿಣಿ'ಯಲ್ಲಿ ಬೇಟೆನಾಯಿಯೊಂದು ಪೂರ್ಣಚಂದ್ರನಲ್ಲಿನ ಮೊಲವನ್ನು ಕಂಡು ಮೊಗವೆತ್ತಿ ಬೊಗಳಿದ್ದು ಅತಿಶಯೋಕ್ತಿ ವರ್ಣನೆಯ ಇನ್ನೊಂದು ನಿದರ್ಶನವಾಗಿದೆ. ಹರಿಹರನ 'ಗಿರಿಜಾ ಕಲ್ಯಾಣ'ದಲ್ಲಿ ಬೇಟೆಯಾಡಿದ ಬೇಡರ ಮೈಮೇಲಿನ ಗೀಚು ಗಾಯಗಳ ಗುರುತನ್ನು ಕಂಡ ಬೇಡತಿಯರು ಅವು ಅನ್ಯ ಪ್ರೇಯಸಿಯರೊಂದಿಗೆ ರತಿಸುಖದಲ್ಲಿ ಮಾಡಿಕೊಂಡ ಗಾಯಗಳೆಂದು ಜಗಳ ತೆಗೆದ ಸನ್ನಿವೇಶದ ಚಿತ್ರಣವಿದೆ. ಕವಿ ರುದ್ರಭಟ್ಟನ 'ಜಗನ್ನಾಥ' ವಿಜಯ'ದಲ್ಲಿ ನಿಜವಾಗಿಯೂ ಇನ್ನೊಬ್ಬಳೊಂದಿಗೆ ಕೂಡಿ ಸುಖಿಸಿದ ತರುಣ ಬೇಡನೊಬ್ಬ ಅದು ಹುಲಿಯ ಉಗುರಿನ ಗುರುತೆಂದು ತನ್ನ ಮಡದಿ ಭಾವಿಸಲೆಂದು ಒಂದು ಹುಲಿಯುಮರಿಯನ್ನು ಕಂಕುಳಲ್ಲಿ ಇರುಕಿಕೊಂಡು ಬರುವ ಚಿತ್ರಣವಿದೆ.

ಪಂಪನ 'ವಿಕ್ರಮಾರ್ಜುನ ವಿಜಯ'ದ ಎರಡು ಸನ್ನಿವೇಶಗಳಲ್ಲಿ ಬೇಟೆಯ ವರ್ಣನೆ ಬಂದಿದೆ. ಬೇಟೆಗೆ ಬರುವಂತೆ ಅರ್ಜುನನನ್ನು ವನಪಾಲಕರು ವಿನಂತಿಸುವ ಸಂದರ್ಭ ಹಾಗೂ ಇನ್ನೊಂದು ಪ್ರಸಿದ್ಧ ಇಂದ್ರಕೀಲ ಪ್ರಸಂಗ (5ನೆಯ ಆಶ್ವಾಸ). ಇವುಗಳಲ್ಲಿ ಮೊದಲನೆಯದು ಲೌಕಿಕನೆಲೆಯ ಬೇಟೆಯಾದರೆ ಎರಡನೆಯದು ಕಿರಾತವೇಷದ ಶಿವ ಹಾಗೂ ಮಾಯಾವರಾಹಗಳಿಂದಾಗಿ ಅಲೌಕಿಕನೆಲೆಗೂ ಏರುತ್ತದೆ. ಧಾರ್ಮಿಕವಾಗಿ ಜೈನನಾದ ಈ ಕವಿ ಸ್ವತಃ ಅನುಭವಿ ಬೇಟೆಗಾರನೆಂಬಂತೆ ಬೇಟೆಯ ಪ್ರಯೋಜನ (ಇದರಲ್ಲಿ ಕಾಳಿದಾಸನ ಪ್ರಭಾವ ಇದ್ದಿರಬಹುದು), ಬೇಟೆಗಾರನ ಲಕ್ಷಣ, ಬೇಟೆನಾಯಿ, ಪೆರ್ವೇಂಟೆ, ಕಿರುವೇಂಟೆ, ದೀಪದ ಬೇಟೆ, ಹಂದಿ ಬೇಟೆಯ ತಂತ್ರ - ವಿವರ, ಬೇಟೆಗೆ ಸೂಕ್ತವಾದ ಕಾಲ ಮೊದಲಾದವುಗಳ ಬಗೆಗೆ ನೀಡಿರುವ ಮಾಹಿತಿಗಳು ಅಪೂರ್ವವಾಗಿವೆ. ಹಂದಿಗಳ ಗುಂಪಿನಲ್ಲಿ ಹೆಣ್ಣು ಹಂದಿ, ತೆನೆಹಂದಿ, ಕುರುಡು ಕುಂಟು ಹಂದಿಯಂಥವುಗಳನ್ನು ಸೂಕ್ಷ್ಮವಾಗಿ ಗುರುತಿಸಿ ಅವುಗಳನ್ನು ಕೊಲ್ಲದಂತೆ ಎಚ್ಚರವಹಿಸಬೇಕೆಂದು ಹೇಳಿರುವುದು ಪಂಪನ ಜೀವದಯೆಯೊಂದಿಗೆ ಪರಿಸರದ ಅರಿವಿನ ಪ್ರತೀಕವೂ ಆಗಿದೆ.

ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ದಲ್ಲಿ ಹರಿಶ್ಚಂದ್ರನ ಬಾಳಿನಲ್ಲಿ ಒಂದು ಮಹತ್ತರ ತಿರುವು ತರುವುದರ ಸಂಕೇತವಾಗಿ ಬೇಟೆ ಪ್ರಸಂಗ ಒದಗಿಬರುತ್ತದೆ. ಆವರೆಗೂ ದೊರೆ ಪ್ರಜೆಗಳ ರಕ್ಷಣೆಗೆ ವನ್ಯಮೃಗಗಳ ಬೇಟೆಯಾಡುವವನಾದರೆ ಅಂದಿನಿಂದ ವಿಶ್ವಾಮಿತ್ರ ಹರಿಶ್ಚಂದ್ರನನ್ನು (ಆತನ ಕುಟುಂಬವನ್ನು) 'ಬೇಟೆ' ಆಡುವುದು ಪರೋಕ್ಷವಾಗಿ ಚಿತ್ರಿತವಾಗಿದೆ. ಇಂತಹ ಒಂದು ಬಹುಮುಖ್ಯ ಪ್ರಸಂಗವನ್ನು ಕವಿ ಸಾಕಷ್ಟು ವಿಸ್ತಾರವಾಗಿ, ಪರಿಣಾಮಕಾರಿಯಾಗಿ ವರ್ಣಿಸಿದ್ದಾನೆ. ಈ ಸಂದರ್ಭದಲ್ಲಿ ಆತ ತಡಿಕೆವಲೆ, ತಟ್ಟಿವಲೆ, ಹಾಸುವಲೆ, ಬೀಸುವಲೆ ಮೊದಲಾದ 24 ಬಗೆಯ ಬಲೆಗಳು, ಕೋರವ, ಸೀಗಡಿ, ಗೆಂಡೆ ಮೊದಲಾದ ವಿವಿಧ ಜಾತಿ ಮೀನುಗಳು, ದೀಪದ ಬೇಟೆ, ದಿಗ್‌ಬಂಧನ ಬೇಟೆ, ಗೋರಿಬೇಟೆ, ಪಳಹರದ ಬೇಟೆ, ಪಟಬೇಟೆ, ಚಿತ್ರಬೇಟೆ ಮೊದಲಾದ ಎಂಟು ರೀತಿಯ ಬೇಟೆಗಳು, ಕಿರಾತರ ವೃತ್ತಿ ನೈಪುಣ್ಯ, ಬುತ್ತಿಗಂಟನ್ನು ಬೆನ್ನಿಗೆ ಕಟ್ಟಿಕೊಂಡು ಹೋಗುತ್ತಿದ್ದ ಬೇಡರು ಮೊದಲಾದ ಕುತೂಹಲಕರ ವಿವರಗಳನ್ನು ದಾಖಲಿಸಿದ್ದಾನೆ.

ಕುದುರೆ ಮೇಲೇರಿ ಬೇಟೆಯಾಡುವುದನ್ನು 'ಅಶ್ವಿನಾ' ಎಂದು ಕರೆಯುತ್ತಿದ್ದುದು 'ಸೌಗಂಧಿಕಾ ಪರಿಣಯ'ದಿಂದ ತಿಳಿದುಬರುತ್ತದೆ. ಹೀಗೆ ಕುದುರೆ ಮೇಲೆ ಕುಳಿತು ದೊರೆಯು ಹಂದಿ ಬೇಟೆಯಾಡಿದ ಪ್ರಸ್ತಾಪ ವಡ್ಡಾರಾಧನೆಯ 'ಚಿತಲಾಪುತ್ರ' ಕತೆಯಲ್ಲಿಯೂ ಬರುತ್ತದೆ. ಮುಂದೆ 'ನಳಚರಿತ್ರೆ'ಯಲ್ಲಿಯೂ ನಳರಾಜನು ಕುದುರೆ ಮೇಲೆ ಕುಳಿತು ಬೇಟೆಗೆ ಹೊರಟಿದ್ದಾಗಿ ಕವಿ ಚಿತ್ರಿಸಿದ್ದಾನೆ. 'ಮೋಹನ ತರಂಗಿಣಿ'ಯಲ್ಲಿ ಬೇಟೆಯ ಆಯಾಸ ಪರಿಹಾರಕ್ಕಾಗಿ ಕೊನೆಯಲ್ಲಿ ಬೇಡ ಬೇಡತಿಯರು ಸಾಂಪ್ರದಾಯಿಕ ನೃತ್ಯಮಾಡಿದ್ದೂ ವರ್ಣಿತವಾಗಿದೆ. ಚೌಂಡರಸ ತನ್ನ 'ದಶಕುಮಾರ ಚರಿತೆ'ಯಲ್ಲಿ ಬೇಟೆ ಬಳಿಕ ತಮ್ಮ ಬೀಡಿನಲ್ಲಿ ಬೇಡರು ಯಾವ ಯಾವ ಚಟುವಟಿಕೆಗಳಲ್ಲಿ ತೊಡಗಿರುತ್ತಿದ್ದರೆಂಬುದನ್ನು ಚಿತ್ರಿಸಿದ್ದಾನೆ. ಬೇಟೆ ಕೈಗೂಡಲೆಂದು ಜೀವಬಲಿ ನೀಡುತ್ತಿದ್ದ ಸಂಪ್ರದಾಯವನ್ನು ಈ ಕವಿ ದಾಖಲಿಸಿರುವುದು ಗಮನಾರ್ಹವಾಗಿದೆ. ನಂಜುಂಡ ಕವಿ ತನ್ನ 'ರಾಮನಾಥ ಚರಿತೆ'ಯಲ್ಲಿ ಬೇಟೆಯಲ್ಲಿ ಆದ ಗಾಯಗಳಿಗೆ ಬೇಡತಿಯರು ತಾಂಬೂಲದ ಕಟ್ಟು ಹಾಕುತ್ತಿದ್ದ ವಿಷಯವನ್ನು ದಾಖಲಿಸಿದ್ದು ಜನಪದ ವೈದ್ಯಪದ್ಧತಿಯ ಅಭ್ಯಾಸ ದೃಷ್ಟಿಯಿಂದಲೂ ಉಲ್ಲೇಖನೀಯವಾಗಿದೆ.

ಷಡಕ್ಷರ ಕವಿಯ 'ರಾಜಶೇಖರ ವಿಳಾಸ' ಹಾಗೂ 'ಶಬರಶಂಕರ ವಿಳಾಸ' ಕಾವ್ಯಗಳಲ್ಲಿಯೂ ಬೇಟೆ ಪ್ರಸಂಗ ಕಥಾಭಾಗವಾಗಿ ನಿರೂಪಿತವಾಗಿವೆ. ಕವಿ ಆ ಕಾಲದ ಕೆಲವು ಬೇಟೆ ತಂತ್ರಗಳ ಬಗೆಗೆ ಹೇಳುತ್ತಾನೆ. ಶಬರಶಂಕರ ವಿಳಾಸದಲ್ಲಿ 'ಭ್ರಾಂತಿಯನ್ನುಂಟುಮಾಡುವ ದೀಪ'ದ ತಂತ್ರ ಬಹುಶಃ ಪಂಪ ಉಲ್ಲೇಖಿಸಿರುವ 'ದೀಪದ ಬೇಟೆ'ಯೇ ಆಗಿರುವ ಸಾಧ್ಯತೆ ಇದೆ. ಆದರೆ ಆತ ಹೇಳಿರುವ ಇನ್ನೊಂದು ಬೇಟೆ ತಂತ್ರ 'ಮಂಕುಬೂದಿ ಎರಚಿ ಪ್ರಾಣಿಗಳನ್ನು ಸೆರೆ ಹಿಡಿಯುವುದು' ಇತರರಿಂದ ಅಷ್ಟಾಗಿ ಉಲ್ಲೇಖಗೊಳ್ಳದ ವಿಶಿಷ್ಟ ತಂತ್ರವಾಗಿ ಕಂಡುಬರುತ್ತದೆ. ಇದೇ ಕವಿಯ 'ವೃಷಭೇಂದ್ರ ವಿಜಯ'ದ 'ಶರಣ ಕಥಾ ವಿಜಯ' ಭಾಗದಲ್ಲಿ 'ಅಂಟು ಬಲೆ'ಯ ಪ್ರಸ್ತಾಪವೂ ಬಂದಿದೆ. ವೀರ, ಶೃಂಗಾರ, ಹಾಸ್ಯರಸಗಳ ನಿರೂಪಣೆಗೆ ಕವಿ ಬೇಟೆ ಪ್ರಸಂಗವನ್ನು ಒಂದು ಒಳ್ಳೆಯ ಅವಕಾಶವಾಗಿ ಬಳಸಿಕೊಂಡಿದ್ದರೂ ಆತ ಅಷ್ಟಕ್ಕೇ ಸಂಭ್ರಮಿತವಾಗದೆ ಬೇಟೆ ಒಂದು ಪಾಪಕೃತ್ಯ ಎಂದು ಖಂಡಿಸುವಲ್ಲಿ ಮೊದಲಿಗನಾಗಿರುವುದೂ ಇಲ್ಲಿ ವಿಶೇಷ ಉಲ್ಲೇಖನೀಯ ಅಂಶವಾಗಿದೆ.

ಕುಮಾರವಾಲ್ಮೀಕಿಯ 'ತೊರವೆ ರಾಮಯಣ'ದಲ್ಲಿ ಶಂಭಕಾಸುರನ ವಧೆಗಾಗಿ ಸ್ವತಃ ದೇವತೆಗಳೇ ಕಿರಾತರ ವೇಷಧರಿಸಿ ಬೇಟೆಗೆ ಬರುತ್ತಾರೆ. ಕರ್ಣಪಾರ್ಯನ ನೇಮಿನಾಥ ಪುರಾಣದಲ್ಲಿ ಕಿರಾತ ದಂಪತಿಗಳು ದಿಗಂಬರ ಯತಿಗಳನ್ನು ಅಪೂರ್ವಮೃಗವೆಂದು ತಿಳಿದು ಬೇಟೆಗೆ ಮುಂದಾದ ಅನಂತರ ಧರ್ಮಬೋಧೆ ಪಡೆದು ಪರಿವರ್ತಿತರಾದ ಕಥೆ ಬರುತ್ತದೆ. ನಂಜುಂಡಕವಿಯ ರಾಮನಾಥ ಚರಿತೆ, ಲಕ್ಷ್ಮೀಶನ ಜೈಮಿನಿ ಭಾರತ, ಜನ್ನನ ಯಶೋಧರ ಚರಿತೆ ಮತ್ತು ಅನಂತನಾಥ ಪುರಾಣ, ತಿರುಮಲಾರ್ಯನ ಚಿಕ್ಕದೇವರಾಜ ವಂಶಾವಳಿ, ಹರಿಹರನ ಗಿರಿಜಾಕಲ್ಯಾಣ, ದೇಪರಾಜನ ಸೊಬಗಿನ ಸೋನೆ, ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ, ಬಾಹುಬಲಿ ಪಂಡಿತನ ಧರ್ಮನಾಥ ಪುರಾಣ, ಮಲ್ಲಿಕಾರ್ಜುನನ ಸೂಕ್ತಿ ಸುಧಾರ್ಣವ, ಗೋವಿಂದ ಕವಿಯ ನಂದಿಮಹಾತ್ಮ್ಯ, ನೇಮಿಚಂದ್ರನ ಲೀಲಾವತೀ ಮಹಾಪ್ರಬಂಧ, ಕುಮಾರವ್ಯಾಸನ ಕರ್ಣಾಟ ಭಾರತ ಕಥಾಮಂಜರಿ, ನಾಗವರ್ಮನ ಕರ್ನಾಟಕ ಕಾದಂಬರಿ, ಪರ್ವತೇಶನ ಚತುರಾಚಾರ್ಯ ಚಾರಿತ್ರ, ಪಾಯಣ್ಣನ ಸಮ್ಯಕ್ತ್ವ ಕೌಮುದಿ, ಪದ್ಮನಾಭನ ಜಿನದತ್ತ ಚರಿತೆ, ಮಲ್ಲಿಕಾರ್ಜುನನ ತೋಂಟದಾರ್ಯನ ಸಾಂಗತ್ಯ ಮುಂತಾದ ಕಾವ್ಯಗಳಲ್ಲಿ ಬೇಟೆ ಪ್ರಸ್ತಾಪಿತವಾಗಿರುವುದನ್ನೂ ವರ್ಣಿತವಾಗಿರುವುದನ್ನೂ ಗಮನಿಸಬಹುದಾಗಿದೆ.

**ಕಾವ್ಯ ಪುರಾಣ, ನಾಟಕಗಳು :** ಪುರಾಣ ಪ್ರಸಂಗಗಗಳನ್ನು ಆಧರಿಸಿ ರಚಿತವಾದ ಪೌರಾಣಿಕ ನಾಟಕಗಳಲ್ಲಿಯೂ ಬಹುಮಟ್ಟಿಗೆ ಬೇಟೆ ಒಂದು ಮುಖ್ಯ ಪ್ರಸಂಗವಾಗಿ ಬರುತ್ತದೆ. ದುಷ್ಯಂತನು ಶಕುಂತಲೆಯನ್ನು ಮೋಹಿಸಿ ವರಿಸುವುದೇ ಆತ ಬೇಟೆಗೆಂದು ಜಿಂಕೆಯೊಂದರ ಬೆನ್ನು ಹತ್ತಿ ಬಂದಾಗ. ನಮ್ಮ ಗ್ರಾಮೀಣರಲ್ಲಿ ಜನಪ್ರಿಯ ನಾಟಕಗಳಾದ ರಾಜಾಹರಿಶ್ಚಂದ್ರ, ನಳದಮಯಂತಿ ಅಥವಾ ನಳಚರಿತ್ರೆಯಂತಹ ನಾಟಕಗಳಲ್ಲಿಯೂ ಬೇಟೆ ಮುಖ್ಯ ಸಂದರ್ಭವಾಗಿದೆ. ಹಾವಳಿ ಮಾಡುತ್ತಿದ್ದ ವನ್ಯಜೀವಿಗಳ ನಿಯಂತ್ರಣಕ್ಕೆಂದು ವನಪಾಲಕರ ಕೋರಿಕೆಯಂತೆ ರಾಜ ಬೇಟೆಗೆ ಹೋದಾಗ ಎದಿರಾಗುವ ಹಂದಿಯನ್ನು ಅಡ್ಡಹಾಕಿ 'ನಿಲ್ಲಲೆ ನಿಲ್ಲಲೆ, ಎಲ್ಲಿಗೆ ಪೋಗುವೆ! ಹಂದಿಯೆ ನಿನ್ನಯ, ಹಲ್ಲನು ಮುರಿಯುವೆ' ಎಂಬಂತಹ ಹಾಡನ್ನು ಸೂಕ್ತ ರಾಗ ಮಟ್ಟಿನಲ್ಲಿ ಹಾಡುವುದನ್ನು ಸಾಮಾನ್ಯವಾಗಿ ಕೇಳುತ್ತೇವೆ. ಬೇಟೆಗೆ ಹೊರಡುವಾಗ ಬೇಟೆಗಾರರು ಬೇಟೆದೇವರು ಮಾಡುವುದು, ಆಗ ನಡೆಯುವ ವಿನೋದ ದೃಶ್ಯಗಳೂ ಪ್ರೇಕ್ಷಕರಲ್ಲಿ ಹಾಸ್ಯರಸಾನುಭವ ಉದ್ದೀಪಿಸುವಲ್ಲಿ ಯಶಸ್ವಿಯಾಗುವುದರೊಂದಿಗೆ ನಮ್ಮ ಗ್ರಾಮೀಣ ಜನರ ನಂಬಿಕೆ, ಸಂಪ್ರದಾಯ, ಸಾಮಾಜಿಕ ಬದುಕಿನ ಮೇಲೆ ಬೆಳಕು ಚೆಲ್ಲುವ ಕೆಲಸವನ್ನು ಮಾಡುತ್ತವೆ.

**ಶಾಸನಗಳು :** ಸಮಾಜದ ಹಿತಕ್ಕಾಗಿ ಹೋರಾಡಿ ಪ್ರಾಣತ್ಯಾಗಮಾಡಿದ ಅಥವಾ ಗೆದ್ದು ಸಾಹಸ ತೋರಿದ ವೀರರ ಸ್ಮರಣಾರ್ಥ ಶಾಸನ ಹಾಗೂ ವೀರಗಲ್ಲುಗಳನ್ನು ಗೆಯ್ಯಿಸುತ್ತಿದ್ದುದು ನಮ್ಮಲ್ಲಿ ವ್ಯಾಪಕವಾಗಿದ್ದ ಒಂದು ಪರಂಪರೆ. ಇಂಥ ವೀರರಲ್ಲಿ ಕ್ರೂರಪ್ರಾಣಿಗಳೊಂದಿಗೆ ಹೋರಾಡಿದ ಬೇಟೆಗಾರರೂ ಅವರ ನೆಚ್ಚಿನ ಬೇಟೆ ನಾಯಿಗಳೂ ಸೇರಿದ್ದು ಅಂಥ ಬೇಟೆಗಾರರ ಮತ್ತು ನಾಯಿಗಳ ನೆನಪಿಗಾಗಿಯೂ ಸ್ಮಾರಕಶಿಲೆ ನೆಡಿಸುತ್ತಿದ್ದುದುಂಟು. ಪ್ರಖ್ಯಾತವಾದ ಆತಕೂರಿನ ವೀರಗಲ್ಲಿನಲ್ಲಿ ಮಣಾಲನೆಂಬುವನು ತನ್ನ ಪ್ರೀತಿಪಾತ್ರವಾದ ಕಾಳಿ ಎಂಬ ನಾಯಿ ಬಲಶಾಲಿ ಹಂದಿಯೊಂದನ್ನು ಕೊಂದು ತಾನೂ ಸತ್ತದ್ದರ ನೆನಪಿಗಾಗಿ ಆ ವೀರಗಲ್ಲು ನೆಡಿಸಿದ ಕಥೆ ನಿರೂಪಿತವಾಗಿದೆ. ಲೋಕ ಮತ್ತು ದಳಗ ಎಂಬ ತನ್ನ ಎರಡೂ ನಾಯಿಗಳು ಬೇಟೆಯಲ್ಲಿ ಪ್ರಾಣಿಯೊಂದಿಗೆ ಹೋರಾಡಿ ಸತ್ತದ್ದರ ನೆನಪಿಗೆ ಪಿರಿಸಿಂದಿ ಎಂಬಾತ 975ರಲ್ಲಿ ವೀರಗಲ್ಲೊಂದನ್ನು ನೆಡಿಸಿದ. ರಾಷ್ಟ್ರಕೂಟ ಅರಸ ಮುಮ್ಮಡಿ ಗೋವಿಂದ ಬೇಟೆಗಾಗಿ ಹಂದಿ ಮೇಯಿಸಿದ್ದ ಸಂಗತಿ 804ರ ತಾಮ್ರಶಾಸನದಿಂದ ತಿಳಿದುಬರುತ್ತದೆ. ತಮ್ಮ ಗಾವುಣ್ಡ ಎಂಬಾತ ಹುಲಿಯೊಂದಿಗೆ ಹೋರಾಡಿ, ಅದನ್ನು ಕೊಂದು ತಾನೂ ಜೀವ ಬಿಟ್ಟಾಗ, ಅವನ ಸಾಹಸ ಮೆಚ್ಚಿ ಗಂಗ ಪೆರ್ಮಾಡಿ ಭೂಮಿಯನ್ನು ಉಂಬಳಿ ಬಿಟ್ಟಿದ್ದಕ್ಕೆ ವೀರಗಲ್ಲು ಸಾಕ್ಷಿಯಾಗಿದೆ. ಕೊಡಗಿನ ದೊರೆ ಲಿಂಗರಾಜೇಂದ್ರ ಒಡೆಯನ ಕಾಲದ ಒಂದು 'ಹುಕುಂನಾಮೆ' (ಸರ್ಕಾರದ ಆಜ್ಞೆ) ಪ್ರಕಾರ ಆ ಕಾಲದಲ್ಲಿ ಜನರು ನಿಗದಿ ಪಡಿಸಿದ ಒಂದು ದಿನ ಅರಮನೆಯ 'ಬಿಟ್ಟಿ' ಕೆಲಸವಾಗಿ ಬೇಟೆಗೆ ಹೋಗಬೇಕಾದುದು ಕಡ್ಡಾಯವಾಗಿತ್ತು. ಇಂಥ ವೀರಗಲ್ಲು, ಶಾಸನ ಹಾಗೂ ಹುಕುಂನಾಮಗಳು ಕನ್ನಡ ನಾಡಿನಲ್ಲಿ ಅಸಂಖ್ಯವಾಗಿವೆ.

**ಚಾರಿತ್ರಿಕ ಬರೆಹಗಳು, ಪ್ರವಾಸಕಥನ, ಪತ್ರ ವ್ಯವಹಾರಗಳು :** ಭಾರತಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿಗರು ಬರೆದ ಪ್ರವಾಸ ಕಥನಗಳು, ರಾಜರ ಆಸ್ಥಾನದಲ್ಲಿದ್ದ ಕವಿಗಳು, ಕಲಾವಿದರು, ಅಧಿಕಾರಿಗಳು ಮತ್ತಿತರರು

ನಡೆಸಿದ ಪತ್ರವ್ಯವಹಾರಗಳು ಮತ್ತಿತರ ಚಾರಿತ್ರಿಕ ದಾಖಲೆಗಳಲ್ಲಿಯೂ ಬೇಟೆಗೆ ಸಂಬಂಧಿಸಿದ ಅನೇಕ ಸಂಗತಿಗಳ ಪ್ರಸ್ತಾಪವಾಗಿರುವುದು ಅಧ್ಯಯನ ಯೋಗ್ಯವಾಗಿವೆ. ವಿಜಯನಗರಕ್ಕೆ ಭೇಟಿ ನೀಡಿದ್ದ (1441) ಅಬ್ದುಲ್ ರಜಾಕ್ ಎಂಬ ಪ್ರವಾಸಿ ಆಗ ಆನೆಗಳನ್ನು ಹಿಡಿಯುತ್ತಿದ್ದ ಕ್ರಮದ ಬಗ್ಗೆ ಬರೆದಿದ್ದಾನೆ. ಮೊಗಲರ ಕಾಲದ ಅನೇಕ ಚಿಕಣಿ ಚಿತ್ರಗಳಲ್ಲಿ ಆನೆ ಇತ್ಯಾದಿಗಳನ್ನು ಸುಲ್ತಾನರು ಬೇಟೆಯಾಡುತ್ತಿದ್ದ ಪ್ರಸಂಗಗಳು ಯಥಾವತ್ತು ಎಂಬಂತೆ ಆ ಕಾಲದ ಕಲಾವಿದರಿಂದ ಚಿತ್ರಿಕತವಾಗಿವೆ. ಕೊಡಗಿನ ಅರಸ ಚಿಕವೀರರಾಜೇಂದ್ರನ ಅನಾರೋಗ್ಯಕ್ಕೆ ಚಿಕಿತ್ಸೆ ನೀಡಲು ಬಂದಿದ್ದ ಜಾಫರ್‌ಸನ್ ಎಂಬ ವೈದ್ಯ, ಆ ಬಳಿಕ ದೊರೆಯೊಂದಿಗೆ ಕೊಡಗಿನ ಕಾಡುಗಳಲ್ಲಿ ಬೇಟೆಯಾಡಿದ ಬಗೆಗೆ, ದೊರೆಯ ಬೇಟೆ ಸಾಹಸ, ಲೈಟುಶಿಕಾರಿ ಇತ್ಯಾದಿಗಳ ಬಗೆಗೆ ತನ್ನ ಗೆಳೆಯನಿಗೆ ಬರೆದ ಪತ್ರದಲ್ಲಿ ವಿವರವಾಗಿ ದಾಖಲಿಸಿದ್ದು ಐತಿಹಾಸಿಕ ಮಹತ್ವದ ಬೇಟೆ ಕುರಿತ ದಾಖಲೆಯಾಗಿದೆ.

**ಜನಪದ ಸಾಹಿತ್ಯ :** ಬೇಟೆಯೊಂದಿಗೆ ನೇರ ಅನುಭವವುಳ್ಳ ನಮ್ಮ ಗ್ರಾಮೀಣರು ಜನಪದ ಕಥೆ, ಕಾವ್ಯ, ಗಾದೆ ಮೊದಲಾದ ಅಭಿವ್ಯಕ್ತಿ ಪ್ರಕಾರಗಳಲ್ಲಿ ಬೇಟೆ ಕುರಿತ ಅನೇಕ ಸಂಗತಿಗಳನ್ನು ದಾಖಲಿಸಿರುವುದು ಗಮನಿಸುವಂಥದ್ದು. ಕಥಾನಾಯಕನು ಮಹಾವೀರ, ಸಾಹಸಿ ಎಂಬುದನ್ನು ಮನವರಿಕೆ ಮಾಡಿಕೊಡಲು ಆತ ಹುಲಿ ಬೇಟೆಯಾಡಿದಂತೆ ಚಿತ್ರಿತವಾಗುವುದು ಕೆಲ ಕಥನಗೀತೆ/ಲಾವಣಿಗಳಲ್ಲಿ ಕಂಡುಬರುತ್ತದೆ. ಮಲೆಮಾದೇಶ್ವರನಂಥ ಆಧ್ಯಾತ್ಮಿಕ/ದೈವೀಶಕ್ತಿಯನ್ನು ತೋರ್ಪಡಿಸಲು ಆತ ಹುಲಿ ಏರಿಬರುವಂತೆ ಕಲ್ಪಿಸಲಾಗಿದೆ. ಬೇಟೆಗೆಂದು ಕಾಡಿಗೆ ಹೋದ ದೊರೆ ಅಲ್ಲಿ ಕಥಾನಾಯಕಿಯನ್ನು ಕಂಡು, ಅವಳನ್ನು ಅರಮನೆಗೆ ಕರೆತಂದು ವಿವಾಹವಾದ ಪ್ರಸಂಗಗಳು ಕೆಲವು ಕಥೆಗಳಲ್ಲಿ ಬರುತ್ತವೆ. ಬೇಟೆಯ ಸಂದರ್ಭದಲ್ಲಿ ಉತ್ಸಾಹ ಪ್ರಚೋದನೆಗಾಗಿ ಹಾಡುವ ಬೇಟೆ ಹಾಡುಗಳೂ ಇವೆ. ಬೇಟೆಯ ನಿರ್ದಯತೆಯನ್ನೂ ಅಮಾನವೀಯತೆಯನ್ನೂ ಟೀಕಿಸುವಂತಹ ಬಿಡಿಗೀತೆಗಳೂ ಜನಪದ ಸಾಹಿತ್ಯದಲ್ಲಿ ಕಂಡುಬರುತ್ತವೆ.

ಜನಪದ ಸಾಹಿತ್ಯ, ಸಂಪ್ರದಾಯಗಳ ಬಹುಮುಖತೆಯನ್ನು ಅದರ ಪರಂಪರೆ - ಪ್ರಸ್ತುತತೆಯನ್ನು ಅಧ್ಯಯನ ಮಾಡುವ, ದಾಖಲಿಸುವ ದೃಷ್ಟಿಯಿಂದ ಕೆಲವಾರು ಜಾನಪದ ಅಧ್ಯಯನಾಸಕ್ತರು ಬೇಟೆ ಕುರಿತ ಹಾಡು-ಆಚರಣೆ-ಸಂಪ್ರದಾಯ ಇತ್ಯಾದಿಗಳನ್ನು ಕ್ಷೇತ್ರಕಾರ್ಯದ ಮೂಲಕ ಅಭ್ಯಾಸಮಾಡಿ ಲೇಖನಗಳನ್ನೂ ಅಧ್ಯಯನ ಗ್ರಂಥಗಳನ್ನೂ ರಚಿಸಿರುವುದು ಗಮನಾರ್ಹವಾಗಿದೆ.

**ಆಧುನಿಕ ಕೃತಿಗಳು :** ಬೇಟೆಯನ್ನೇ ಕೇಂದ್ರವಾಗಿಟ್ಟುಕೊಂಡು ತಮ್ಮ ಅನುಭವಗಳು, ವಿವರಗಳು ಹಾಗೂ ಆಶಯಗಳನ್ನು ದಾಖಲಿಸುವ ಮತ್ತು ಅಭಿವ್ಯಕ್ತಿಸುವ ಪ್ರಯತ್ನಗಳು ಆಧುನಿಕ ಸಂದರ್ಭದಲ್ಲಿ ವಿಶೇಷವಾಗಿ ನಡೆದಿರುವುದು ಬದುಕಿನಲ್ಲಿ ಬೇಟೆ ಹೇಗೆ ವ್ಯಾಪಕ ಸಂಬಂಧವನ್ನು ಪಡೆದಿತ್ತು ಎಂಬುದರ ನಿದರ್ಶನವಾಗಿದೆ. ಇಂಗ್ಲಿಷ್ ಸಾಹಿತ್ಯಾಧ್ಯಯನದಿಂದ ವಿಶೇಷವಾಗಿ ನಮ್ಮಲ್ಲಿದ್ದ ಕೆಲವರು ಆಂಗ್ಲರು ಪ್ರಕಟಿಸಿದ ತಮ್ಮ ರೋಮಾಂಚಕ ಬೇಟೆ ಅನುಭವ ಕಥನಗಳಿಂದ ಪ್ರೇರಿತರಾದ ಕನ್ನಡಿಗ ಬೇಟೆಗಾರರೂ ತಮ್ಮ ಅನುಭವಗಳಿಗೆ ಶಬ್ದರೂಪ ಕೊಡಲು ಮುಂದಾದದ್ದು ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹೊಸಬಗೆಯ ಮೃಗಯಾ ಸಾಹಿತ್ಯ ನಿರ್ಮಾಣಕ್ಕೆ ಕಾರಣವಾಯಿತೆನ್ನಬಹುದು. ಇವರಲ್ಲಿ ಅಕ್ಷರಸ್ಥ ಬೇಟೆಗಾರರು ತಮ್ಮ ಅನುಭವ ಕಥನಗಳನ್ನು ಸ್ವಯಂ ನಿರೂಪಿಸಿದರೆ, ಬರೆಹ ಸಾಧ್ಯವಾಗದವರು ಇತರರಿಗೆ ಹೇಳಿ ಅಥವಾ ಆಸಕ್ತ ಲೇಖಕರು ಅಂತಹವರ ಅನುಭವ ಕೇಳಿ ಅವುಗಳಿಗೆ ಸಾಹಿತ್ಯಕ ನಿರೂಪಣೆ ನೀಡಿದ್ದು ನಡೆದಿದೆ. ಇನ್ನು ಕೆಲವರು ಇಂಗ್ಲಿಷ್‌ನಲ್ಲಿದ್ದ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸುವ ಮೂಲಕ ಆಂಗ್ಲರ ಬೇಟೆಯ ಅನುಭವಗಳನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡುವ ಕಾರ್ಯಮಾಡಿದ್ದೂ ಇದೆ.

ಜಿಮ್‌ಕಾರ್ಬೆಟ್, ಕೆನ್ನೆತ್ ಅಂಡರ್ಸನ್ ಮೊದಲಾದವರು ಮಾನವೀಯ ದೃಷ್ಟಿ ಮತ್ತು ಪರಿಸರ ಕಾಳಜಿಗಳಿಂದ ನರಭಕ್ಷಕ ಮೃಗಗಳನ್ನು ಮಾತ್ರ ಕೊಲ್ಲುವ ತತ್ತ್ವಕ್ಕೆ ಬದ್ಧರಾದ ನಿಪುಣ ಬೇಟೆಗಾರರಾಗಿದ್ದು ಅವರು ತಮ್ಮ ನೂರಾರು ಬೇಟೆ ಅನುಭವಗಳನ್ನು ಪುಸ್ತಕಗಳ ರೂಪದಲ್ಲಿ ಪ್ರಕಟಿಸಿದ್ದಾರೆ. ಅವುಗಳಲ್ಲಿ ಬಹಳಷ್ಟು ಕನ್ನಡಕ್ಕೂ ಅನುವಾದಗೊಂಡಿವೆ. ಬಿ.ಈಶ್ವರ ಭಟ್ ಅವರು 1962 ರಷ್ಟು ಹಿಂದೆಯೇ ಅಂಡರ್ಸನ್‌ನ 'ಶಿವನಿಪಳ್ಳಿಯ ಕಪ್ಪು ಚಿರತೆ' - ಕೃತಿಯ ಮೊದಲ ಐದು ಅಧ್ಯಾಯಗಳನ್ನು ಕನ್ನಡಕ್ಕೆ ತಂದಿದ್ದಾರೆ. ಮಾಗಡಿ ಬಳಿ ಆತ ಚಿರತೆಯೊಂದನ್ನು ಕೊಂದ ಪ್ರಸಂಗವೂ ಇಲ್ಲಿ ನಿರೂಪಿತವಾಗಿದೆ. ಅಂಡರ್ಸನ್ ಬೆಂಗಳೂರು ನಿವಾಸಿಯಾಗಿದ್ದ ಎಂಬುದೂ ಉಲ್ಲೇಖನೀಯ. ಅವನ ಈ ಕೃತಿ ಕೇವಲ ಬೇಟೆಗಾರನ ರೋಚಕ ಅನುಭವಗಳ ನಿರೂಪಣೆಯಾಗದೆ ಚಿರತೆ ಮತ್ತು ಹುಲಿಗಳ ಗುಣ ಸ್ವಭಾವ ಕುರಿತು ಆತ ನೀಡುವ ಸೂಕ್ಷ್ಮ ವಿವರಗಳು ಆತನನ್ನು ಒಬ್ಬ ಪ್ರಾಣಿವಿಜ್ಞಾನಿಯ ಮಟ್ಟಕ್ಕೂ ಕೊಂಡೊಯ್ಯುತ್ತವೆ. ಸುಂದರ ವನ್ಯಜೀವಿಗಳನ್ನು ಕೊಂದು, ಒಣಹುಲ್ಲು ತುಂಬಿ, ಗೊಂಬೆಗಳನ್ನು ಷೋಕೇಸಿನಲ್ಲಿ ಇಡುವುದಕ್ಕಿಂತಲೂ ಕ್ಯಾಮರಾದಲ್ಲಿ ಅವುಗಳ ಸುಂದರ ಚಿತ್ರಗಳನ್ನು 'ಷೂಟ್' ಮಾಡುವುದು ಅತ್ಯುತ್ತಮ ಕೆಲಸ ಎಂದು ಆತ ಅಭಿಪ್ರಾಯಪಟ್ಟಿರುವುದು ಮಾರ್ಮಿಕವಾದ, ಬೋಧಪ್ರದವಾದ ಕಿವಿಮಾತಾಗಿದೆ. ಇಂಗ್ಲಿಷಿನ 'ಬೆಂಗಾಳ ಊರು' (ಅವರೆ ಕಾಯಿಗಳ ನಗರ) ಎಂಬುದೇ ಕನ್ನಡದಲ್ಲಿ ಬೆಂಗಳೂರು ಆಗಿದೆ ಎಂಬುದು ಅವನ ಅಭಿಪ್ರಾಯವಾಗಿದೆ. ಈ ಪ್ರದೇಶದ ಅವರೆಕಾಯಿಗಳ ರುಚಿ ಬಲ್ಲವರೇ ಬಲ್ಲರು ಎಂದೂ ಆತ ಮೆಚ್ಚಿ ಬರೆದಿದ್ದಾನೆ.

ಪೂರ್ಣಚಂದ್ರ ತೇಜಸ್ವಿ ಅವರು ಇದೇ ಲೇಖಕರ 'ಜಾಲಹಳ್ಳಿಯ ಕುರ್ಕ', 'ಬೆಳ್ಳಂದೂರಿನ ನರಭಕ್ಷಕ', 'ಪೆದ್ದಚೆರುವಿನ ರಾಕ್ಷಸ' ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ (1999). ಹೊಸಗನ್ನಡದಲ್ಲಿ ಮೃಗಯಾ ಸಾಹಿತ್ಯವನ್ನೇ ಒಂದು ಪ್ರಕಾರವೆಂಬಂತೆ ಪರಿಗಣಿಸುವಷ್ಟು ಕೃತಿ ರಚನೆ ಮಾಡಿದವರು ಕೆದಂಬಾಡಿ ಜತಪ್ಪ ರೈ (ನೋಡಿ) ಬೇಟೆಯ ನೆನಪುಗಳು (1978), ಈಡೊಂದು ಹುಲಿಯೆರಡು (1979), ಬೇಟೆಯ ಉರುಳು (1982) ಹಾಗೂ ಬೆಟ್ಟದ ತಪ್ಪಲಿಂದ ಕಡಲ ತಡಿಗೆ - ಈ ನಾಲ್ಕು ಕೃತಿಗಳಲ್ಲಿ ಅವರು ಬೇಟೆ ಅನುಭವಗಳನ್ನು ಕುತೂಹಲ ಕೆರಳುವಂತೆ ಬರೆದಿದ್ದಾರೆ. ಬೇಟೆಯ ಉರುಳು ಎಂಬ ಕೃತಿಯಲ್ಲಿ ಆದಿಮಾನವನಿಂದ ಆಧುನಿಕನ ವರೆಗೆ ಬೇಟೆ ಬೆಳೆದುಬಂದ ಬಗೆಯನ್ನೂ ವಿವರಿಸಿರುವುದು ಲೇಖಕರ ಅಧ್ಯಯನಶೀಲತೆಯ ನಿದರ್ಶನವೂ ಆಗಿದ್ದು ಅಭ್ಯಾಸಿಗಳಿಗೆ ಆಕರ ಕೃತಿಯೂ ಆಗಿದೆ.

ಕಡಿದಾಳಿನ ಕೆ.ಎಸ್.ರಾಮಪ್ಪಗೌಡರ 'ಮಲೆನಾಡಿನ ಶಿಕಾರಿಯ ನೆನಪುಗಳು' ಸ್ವಾತಂತ್ರ್ಯ ಪೂರ್ವದ ಅವರ ಶಿಕಾರಿಯ ಅನುಭವಗಳನ್ನು ನಿರೂಪಿಸಿದರೆ, ಕೊಡಗಿನ ಸಂಪ್ರದಾಯದಂತೆ ಹುಲಿಮದುವೆ ಮಾಡಿಸಿಕೊಂಡ 'ಕಾಕೆಮಾನಿ' (ಬಿ.ಡಿ.ಸುಬ್ಬಯ್ಯ) ಅವರ 'ಬೇಟೆ ನೆನಪು' ಅಂಡಮಾನಿನಲ್ಲಿ ಅವರು ಆದಿವಾಸಿಗಳು ಬೇಟೆ ಆಡಿದ್ದನ್ನೂ ದಾಖಲಿಸುತ್ತದೆ. 'ಅರಣ್ಯಾಧಿಕಾರಿಯ ದಿನಚರಿ' ತಮ್ಮ ಮಿತ್ರರೊಬ್ಬರ ದಿನಚರಿ ಆಧರಿಸಿದ ಬೇಟೆ ಅನುಭವಗಳ ನಿರೂಪಣೆಯಾಗಿದೆ.

ಕೈಂತಜೆ ವಿಷ್ಣುಭಟ್ಟರು ತಮ್ಮ ಹಾಗೂ ತಮ್ಮ ಪರಿಸರದ ಇತರರ ಬೇಟೆ ಅನುಭವಗಳನ್ನು ಬೇಟೆಯ ಸುತ್ತ ಮುತ್ತ ಎಂಬ ಕೃತಿಯಲ್ಲಿ ಸ್ವಾರಸ್ಯಕರವಾಗಿ ಬರೆದಿದ್ದರೆ, ಶಶಿಧರ ವಿಶ್ವಾಮಿತ್ರ ಅವರ ಕಡೆಯ ಚಿರತೆ ಅನ್ಯ ಬೇಟೆಗಾರರ ಅನುಭವಗಳನ್ನು ಆಧರಿಸಿ ರಚಿಸಿದ್ದಾಗಿದೆ. ನೂರಾರು ಹುಲಿ, ಕಾಡುಕೋಣ ಮೊದಲಾದವುಗಳನ್ನು ಕೊಂದು ನಿಸ್ಸೀಮರೆನಿಸಿದ್ದ ಬಡ್ಡಡ್ಕ ಅಪ್ಪಯ್ಯಗೌಡರ ಅನುಭವಗಳಿಗೆ ಪ್ರಭಾಕರ ಶಿಶಿಲರು 'ಶಿಕಾರಿಯ ಸೀಳುನೋಟದಲ್ಲಿ' ಅಕ್ಷರರೂಪ ನೀಡಿದ್ದಾರೆ.

1948ರ ಹೊತ್ತಿನಲ್ಲಿ ಬೆಂಗಳೂರು ಚಾಮರಾಜಪೇಟೆಯ ಉಮಾ ಟಾಕೀಸಿನ ಬಳಿ ಚಿರತೆಯೊಂದನ್ನು ಕೊಂದ ಸಂಗತಿಯನ್ನು ಮೇಜರ್ ಎಚ್.ಸಿ.ವೇಣುಗೋಪಾಲ್ ಅವರು ತಮ್ಮ 'ನೆನಪು ಕೆದರಿದಾಗ' ಗ್ರಂಥದ ಒಂದೆಡೆ ಪ್ರಸ್ತಾಪಿಸಿದ್ದಾರೆ. ತೋವಿನಕೆರೆ ಸೀತಾರಾಮ ಜೋಯಿಸರೂ ತಮ್ಮ 'ನೆನಪಿನ ಅಂಗಳದ' ಒಂದು ಅಧ್ಯಾಯದಲ್ಲಿ ಗುಂಡಪ್ಪ ನಾಯಕ

ಎಂಬವನ ಬೇಟೆ ಅನುಭವ ನಿರೂಪಿಸಿದ್ದಾರೆ. ಜಿ.ವೆಂಕಟಯ್ಯ ಅವರು 'ಬನದಸಿರಿ'ಯಲ್ಲಿ ಬಿಳಿಗಿರಿರಂಗನಬೆಟ್ಟದ ಪರಿಸರ ಹಾಗೂ ಬೇಟೆಗೆ ಸಂಬಂಧಿಸಿದಂತೆ ಕೆಲವೊಂದು ಮಾಹಿತಿಗಳನ್ನು ಪ್ರಸ್ತಾಪಿಸಿದ್ದಾರೆ. ಹಾಗೆಯೇ ವೈ.ಎನ್.ಪುಟ್ಟಣ್ಣ ಅವರ 'ನಾನು ಕಂಡ ಮಲೆನಾಡು', ಡಿ.ಎನ್.ಕೃಷ್ಣಯ್ಯ ಅವರ 'ಕೊಡಗಿನ ಇತಿಹಾಸ' ಕೃತಿಗಳಲ್ಲಿ ಸಹ ಬೇಟೆ ವಿಷಯಗಳು ಸಾಂದರ್ಭಿಕವಾಗಿ ಪ್ರಸ್ತಾಪವಾಗಿವೆ.

ಅನೇಕ ಕಥೆ, ಕಾದಂಬರಿ, ಆತ್ಮಕಥೆ, ಜೀವನ ಚಿತ್ರ, ಪ್ರಬಂಧ ಸಾಹಿತ್ಯ ಮೊದಲಾದ ಪ್ರಕಾರಗಳಲ್ಲಿಯೂ ಬೇಟೆಗೆ ಸಂಬಂಧಿಸಿದ ಸಂಗತಿಗಳು ಕಾಣಿಸಿಕೊಂಡಿವೆ. ಕುವೆಂಪು ಅವರ ಎರಡು ಕಾದಂಬರಿಗಳಾದ ಕಾನೂರು ಹೆಗ್ಗಡತಿ, ಮಲೆಗಳಲ್ಲಿ ಮದುಮಗಳು ಹಾಗೂ ಮಲೆನಾಡಿನ ಚಿತ್ರಗಳು ಎಂಬ ಕೃತಿಗಳಲ್ಲಿ ಬೇಟೆಯ ದಟ್ಟ ಅನುಭವಗಳು ದಾಖಲಾಗಿರುವುದನ್ನು ಗಮನಿಸಬಹುದಾಗಿದೆ. ಭಾರತೀಸುತರ 'ಹುಲಿಯ ಹಾಲಿನ ಮೇವು' ಮೊದಲಾದ ಕೃತಿಗಳಲ್ಲಿಯೂ ಬೇಟೆಯ ಚಿತ್ರಣ ಅಲ್ಲಲ್ಲಿ ಕಂಡುಬರುತ್ತದೆ. ವನ್ಯಜೀವಿಗಳು ಪರಸ್ಪರ ನಡೆಸುವ 'ಬೇಟೆ' ಕುರಿತ ಅನೇಕ ಕುತೂಹಲದ ಮಾಹಿತಿಗಳನ್ನು ಕುರಿತು ಬರೆದ ಆ ಮೂಲಕ ವನ್ಯಜೀವಿಗಳ ಬದುಕು ಸ್ವಭಾವದ ಮೇಲೆ ಬೆಳಕು ಚೆಲ್ಲುವ ಹಲವು ಕೃತಿಗಳೂ ಕನ್ನಡದಲ್ಲಿವೆ. ಪೂರ್ಣಚಂದ್ರ ತೇಜಸ್ವಿ (ಪರಿಸರದ ಕತೆ), ಉಲ್ಲಾಸ ಕಾರಂತ (ಕಾಡು ಪ್ರಾಣಿಗಳ ಜಾಡಿನಲ್ಲಿ), ಅಜ್ಜಂಪುರ ಕೃಷ್ಣಸ್ವಾಮಿ (ಖಗಸಿರಿ, ವನಸಿರಿ) ಮೊದಲಾದವರ ಕೃತಿಗಳನ್ನು ಇಲ್ಲಿ ಸ್ಮರಿಸಬಹುದು.

**ಬೇಟೆ ಅಧ್ಯಯನಗಳು :** ಸಂಸ್ಕೃತಿ, ಸಾಹಿತ್ಯ ಹಾಗೂ ಪರಿಸರ ಚಿಂತನೆಯ ಹಿನ್ನೆಲೆಯಲ್ಲಿ ವಿಶೇಷ ಗಮನ ಸೆಳೆದ 'ಬೇಟೆ'ಯನ್ನು ಕುರಿತು ವಿವಿಧ ನೆಲೆಯಲ್ಲಿ ಅಧ್ಯಯನ ಮಾಡುವ ಪ್ರಯತ್ನಗಳೂ ಆಧುನಿಕ ಸಂದರ್ಭದಲ್ಲಿ ಗಮನಾರ್ಹ ರೀತಿಯಲ್ಲಿ ನಡೆದಿವೆ. 'ಕನ್ನಡದಲ್ಲಿ ಬೇಟೆ ಸಾಹಿತ್ಯ' ಎಂಬುದು ನರೇಂದ್ರ ರೈ ದೇರ್ಲ ಅವರು ಎಂ.ಫಿಲ್.ಪದವಿಗಾಗಿ ನಡೆಸಿದ ಅಧ್ಯಯನವಾಗಿದ್ದು, ಈ ವಿಷಯದ ಉತ್ತಮ ಪರಾಮರ್ಶನ ಗ್ರಂಥವಾಗಿದೆ. ಹಂಪಿ ಕನ್ನಡ ವಿಶ್ವವಿದ್ಯಾಲಯ 'ಬೇಟೆ: ಸಾಂಸ್ಕೃತಿಕ ಪದಕೋಶ' (ಸಂ.ಸ.ಚಿ.ರಮೇಶ್) ಎಂಬ ಕೃತಿ ಪ್ರಕಟಿಸಿದೆ. ಎಂ.ಪಿ.ಮಂಜಪ್ಪಶೆಟ್ಟಿ ಅವರ 'ಮಲೆನಾಡಿನ ಶಿಕಾರಿಗಳು' ಬೇಟೆಯನ್ನೇ ಕುರಿತ ವೈವಿಧ್ಯಮಯ ಮಾಹಿತಿಗಳನ್ನೊಳಗೊಂಡ ಕೃತಿಯಾಗಿದೆ. ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿರುವ 'ಗ್ರಾಮೀಣ ಬೇಟೆಗಳು' ರಾಜ್ಯದ ವಿವಿಧ ಪ್ರದೇಶಗಳ ಬೇಟೆ ತಂತ್ರ, ಪದ್ಧತಿಗಳನ್ನು ಒಳಗೊಂಡ ಕೃತಿಯಾಗಿದೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಉಪಸಂಸ್ಕೃತಿ ಮಾಲೆಯಲ್ಲಿ ಪ್ರಕಟವಾದ ಬಹಳಷ್ಟು ಕೃತಿಗಳು ಬುಡಕಟ್ಟು ಹಾಗೂ ಅಲೆಮಾರಿ ಜನಾಂಗಗಳ ಬದುಕು ಮತ್ತು ಸಂಸ್ಕೃತಿಯ ಅಧ್ಯಯನಗಳಾಗಿದ್ದು ಅವುಗಳಲ್ಲಿ ಅವರ ಜೀವನ ವಿಧಾನವೂ ಆದ 'ಬೇಟೆ'ಯ ಬಗೆಗೂ ಮಾಹಿತಿಗಳು ಲಭ್ಯವಾಗುತ್ತವೆ. ಬಿ.ಪಿ.ರಾಮಯ್ಯ, ಎಂ.ಎಲ್.ಶಂಕರಲಿಂಗಪ್ಪ, ಟಿ.ಗೋವಿಂದರಾಜು ಮೊದಲಾದವರ ಬೇಟೆ ಕುರಿತ ಬಿಡಿ ಲೇಖನಗಳು ವಿವಿಧ ಪತ್ರಿಕೆಗಳಲ್ಲಿಯೂ ಸಂಸ್ಮರಣ ಗ್ರಂಥಗಳಲ್ಲಿಯೂ ಪ್ರಕಟವಾಗಿವೆ. ಕಾನೂನು ಬಾಹಿರ ಬೇಟೆ ಆಚರಣೆ ಬಗೆಗೆ ಜನತೆಯಲ್ಲಿ ಜಾಗೃತಿ ಮೂಡಿಸುವಂತಹ ಚಿತ್ರ ಲೇಖನಗಳು ಸಾಮಾನ್ಯವಾಗಿ ನಿಯತಕಾಲಿಕಗಳಲ್ಲಿ ಬೇಟೆ ಋತುವಿನಲ್ಲಿ ಪ್ರಕಟವಾಗುವುದು ಹೊಸ ಬೆಳವಣಿಗೆಯಾಗಿದೆ. (ಟಿ.ಜಿ.)

**ಕನ್ನಡದಲ್ಲಿ ಭಾವಗೀತೆ :** ಭಾವಗೀತೆ ಎಂಬ ಸಾಹಿತ್ಯ ರೂಪ ಮೂಲತಃ ಕನ್ನಡದ್ದಲ್ಲ. ಮೊದಲು ಗ್ರೀಕ್ ಭಾಷೆಯಲ್ಲಿ ಪ್ರಚುರವಾದ ಈ ಸಾಹಿತ್ಯರೂಪ ಅನೇಕ ಶತಮಾನಗಳ ಅನಂತರ ಇಂಗ್ಲಿಷ್ ಭಾಷೆಯಲ್ಲಿ ಸಮೃದ್ಧವಾಗಿ ಬೆಳೆಯಿತು. ಇಂಗ್ಲಿಷ್ ಸಾಹಿತ್ಯದ ಪ್ರಭಾವ ಕನ್ನಡದ ಮೇಲೆ ಆದಂತೆ ಅಲ್ಲಿ ಲಿರಿಕ್ ಎಂದು ಕರೆಯುತ್ತಿದ್ದ ಈ ವಿಧಾನವನ್ನು ಇಲ್ಲಿ ಸ್ವೀಕರಿಸಿ ಭಾವಗೀತೆ ಎಂದು ಕರೆಯಲಾಯಿತು. ಕನ್ನಡದ ಅನೇಕ ಪ್ರತಿಭಾಶಾಲಿ ಕವಿಗಳು ವಿಪುಲ ಸಂಖ್ಯೆಯಲ್ಲಿ ಶ್ರೇಷ್ಠಮಟ್ಟದ ಭಾವಗೀತೆಗಳನ್ನು ರಚಿಸಿದ್ದಾರೆ. ಕಾದಂಬರಿ ಕ್ಷೇತ್ರವನ್ನು ಬಿಟ್ಟರೆ ಇಷ್ಟು ಪುಷ್ಟವಾಗಿ ಬೆಳೆದ ಮತ್ತೊಂದು ಸಾಹಿತ್ಯ ಪ್ರಕಾರ ಹೊಸಗನ್ನಡದಲ್ಲಿ ಇಲ್ಲ.

ಕನ್ನಡಿಗರಿಗೆ ಈ ಸಾಹಿತ್ಯ ಪ್ರಕಾರವನ್ನು ಸ್ಫೂರ್ತಿದಾಯಕವಾದ ರೀತಿಯಲ್ಲಿ ಪರಿಚಯ ಮಾಡಿಸಿದ ಕೀರ್ತಿ ಐದಾರು ಜನ ಸಾಹಿತಿಗಳಿಗೆ ಸಲ್ಲುವುದಾದರೂ ಅವರಲ್ಲಿ ಅಗ್ರಗಣ್ಯರಾದವರು ಬಿ.ಎಂ.ಶ್ರೀಕಂಠಯ್ಯನವರು. ಅಭಿನಂದನೀಯವಾದ ಈ ಕಾರ್ಯದಲ್ಲಿ ತೊಡಗಿದ್ದ ಇತರ ಸ್ಮರಣೀಯ ವ್ಯಕ್ತಿಗಳೆಂದರೆ ಎಸ್.ಜಿ.ನರಸಿಂಹಾಚಾರ್ಯರು, ಪಂಜೆ ಮಂಗೇಶರಾಯರು, ಹಟ್ಟಿಯಂಗಡಿ ನಾರಾಯಣರಾಯರು, ಎಂ.ಗೋವಿಂದ ಪೈ ಅವರು ಹಾಗೂ ಡಿ.ವಿ.ಗುಂಡಪ್ಪನವರು. ಇವರಲ್ಲಿ ಅನೇಕರು ಅನುವಾದಕ್ಕೆ ಕನ್ನಡದ ಹಳೆಯ ಛಂದೋರೂಪಗಳನ್ನೇ ಬಳಸಿಕೊಂಡರು. ಇವರಲ್ಲಿ ಪ್ರಾಸತ್ಯಾಗದ ಧೀರ ನಿರ್ಧಾರವನ್ನು ಕೈಗೊಂಡವರು ಗೋವಿಂದ ಪೈ ಅವರು. 1911ರ ಸುಮಾರಿಗೆ ಅವರು ಪ್ರಾಸವನ್ನು ಬಿಡುವುದಾಗಿ ತೀರ್ಮಾನಿಸಿದರು. ಅಂದಿನ ದಿನಕ್ಕೆ ಅದು ಸಾಹಸದ ಮಾತು. ಹೀಗೆ ಮಾಡಿದುದಕ್ಕೆ ಅವರು ಕೊಟ್ಟ ಕಾರಣ 'ಕನ್ನಡಕ್ಕೆ ಪ್ರಾಸವೇನು ವೇದವಾಕ್ಯವೂ ಅಲ್ಲ, ಶಾಶ್ವತವೂ ಅಲ್ಲ, ಅದನ್ನು ಬೇಕಾದಾಗ ಬೇಕಾದಂತೆ ಬಿಟ್ಟುಬಿಡಬಹುದು' ಎಂದು. ಈ ಪ್ರಾಸತ್ಯಾಗ ಕವಿಯ ಭಾವಗಳು ನಿರರ್ಗಳವಾಗಿ ಹರಿಯಲು ಅವಕಾಶ ಮಾಡಿಕೊಟ್ಟಿತು.

ಹಟ್ಟಿಯಂಗಡಿ ನಾರಾಯಣರಾಯರು 1900ಕ್ಕೆ ಮುಂಚೆಯೇ ಕಾಲಿನ್ಸ್, ಗ್ರೇ, ಟೈಲರ್, ಷೆಲ್ಲಿ, ಕೀಟ್ಸ್, ವರ್ಡ್ಸ್‌ವರ್ತ್, ಲಾಂಗ್‌ಫೆಲೋ, ವ್ಹಿಟ್ಟಿಯರ್ ಮತ್ತು ಎಮರ್ಸನ್ ಮುಂತಾದ ಕವಿಗಳ ಕವನಗಳನ್ನು ಅನುವಾದ ಮಾಡಿದ್ದರು. ಆದರೆ ಇವರ ಕವನಗಳು ಅಚ್ಚಾದದ್ದು ಮಾತ್ರ ಕೆಲವು ವರ್ಷಗಳ ಅನಂತರ. ಇವರಲ್ಲಿ ಮೂಲದ ಭಾವಗಳನ್ನು ಸಂಗ್ರಹಿಸುವ ಪ್ರವೃತ್ತಿ ಇದ್ದುದರಿಂದ ಮೂಲದ ಎಷ್ಟೋ ಸುಂದರವಾದ ಭಾವಗಳು ಅನುವಾದದಲ್ಲಿ ಹಾರಿಹೋಗಿವೆ. ಅನುವಾದ ಬಹುಮಟ್ಟಿಗೆ ವಿಫಲವಾಗಿದೆ. 'ಆದರೆ ಈ ಪ್ರಥಮ ಪ್ರಯತ್ನದ ಸೋಲಿಗೂ ಚಾರಿತ್ರಿಕವಾಗಿ ವಿಶೇಷವಾದ ಪ್ರಾಮುಖ್ಯತೆಯಿದೆ. ಇದರ ಹಿಂದೆ ಕನ್ನಡದ ಏಳಿಗೆಗಾಗಿ, ಕನ್ನಡದಲ್ಲಿ ನೂತನ ಮಾರ್ಗವನ್ನು ತೆರೆಯುವುದಕ್ಕಾಗಿ ಆಳವಾಗಿ ಆಲೋಚಿಸುವ ನಿರಂತರವೂ ಶ್ರಮಿಸುವ' ಚೇತನವೊಂದು ಇದೆ ಎಂಬುದನ್ನು ನಾವು ಮರೆಯುವಂತಿಲ್ಲ.

ಆಧುನಿಕ ಕನ್ನಡ ಕಾವ್ಯ ಪ್ರಪಂಚಕ್ಕೆ ಹೊಸದೊಂದು ಹೆದ್ದಾರಿಯನ್ನು ತೆರೆದು ಚಿರಂಜೀವಿಯಾಗುವ ಸತ್ವವನ್ನು ತಳೆದಿರುವ ಕೃತಿ ಬಿ.ಎಂ.ಶ್ರೀ.ಅವರ ಇಂಗ್ಲಿಷ್ ಗೀತಗಳು. ಇಂಗ್ಲಿಷ್‌ನ ನ್ಯಾಷ್, ಬ್ರಿಡ್ಜಸ್, ಷೆಲ್ಲಿ, ಕೀಟ್ಸ್, ವರ್ಡ್ಸ್‌ವರ್ತ್, ಕೋಲ್‌ರಿಜ್, ಲೇಡಿ ಲಿಂಡ್ಸೆ ಮೊದಲಾದ ಕವಿಗಳ ಕವನಗಳನ್ನು ಸೊಗಸಾದ ರೀತಿಯಲ್ಲಿ ಶ್ರೀಯವರು ಅನುವಾದ ಮಾಡಿದ್ದಾರೆ. ಇಂಗ್ಲಿಷ್ ಗೀತಗಳು ಸಂಕಲನವನ್ನು ಸ್ವಾಗತಿಸುತ್ತ 'ಆಂಗ್ಲೇಯ ಸಾಹಿತ್ಯವನ್ನು ಕಾಣದೆ ಇರುವವರಿಗೆ ಆ ಸಾಹಿತ್ಯದ ಐಶ್ವರ್ಯವೆಂಥದೆಂದು ತಿಳಿಯುವುದಕ್ಕೆ ಕನ್ನಡದಲ್ಲಿ ಇಂಥ ಒಂದು ಭಾಷಾಂತರ ಬೇಕಾಗಿತ್ತು. ಈ ಅತ್ಯವಶ್ಯಕವಾದ ಕಾರ್ಯವನ್ನು ಕೈಗೊಂಡಿದ್ದಕ್ಕಾಗಿ ಕನ್ನಡಿಗರು ಗ್ರಂಥಕರ್ತರನ್ನು ವಂದಿಸಬೇಕಾಗಿದೆ. ಶ್ರೀಕಂಠಯ್ಯನವರು ಪ್ರಯೋಗಿಸಿರುವ ಛಂದೋರೂಪಗಳು ಸುಂದರವಾಗಿವೆ; ಕಾವ್ಯ ವಸ್ತುವಿಗೆ ಅನುಕೂಲವಾಗಿವೆ; ಕನ್ನಡದ ಮರ್ಯಾದೆಗೆ ಒಪ್ಪಿವೆ. ಮುಖ್ಯವಾಗಿ ಶೈಲಿಯಲ್ಲಿಯೂ ಛಂದಸ್ಸಿನಲ್ಲಿಯೂ ಶ್ರೀಕಂಠಯ್ಯನವರು ಮಾರ್ಗದರ್ಶಿಗಳು. ಇನ್ನು ಮೇಲೆ ಬರುವ ಕವಿಗಳು ಇವರು ತೋರಿಸಿಕೊಟ್ಟಿರುವ ದಾರಿಯಲ್ಲಿ ಹೆಚ್ಚು ಹೆಚ್ಚಾಗಿ ನಡೆಯುವರೆಂಬುದರಲ್ಲಿಯೂ ಇದರಿಂದ ನಮ್ಮ ಸಾಹಿತ್ಯವು ಪಂಡಿತರಿಗೆ ಮಾತ್ರವಲ್ಲದೆ ಈಗಿನದಕ್ಕಿಂತ ಹೆಚ್ಚಾಗಿ ಜನಸಾಮಾನ್ಯಕ್ಕೆ ನಿಲುಕುವಂತಾಗುತ್ತದೆಂಬುದರಲ್ಲಿಯೂ ಸಂದೇಹವಿಲ್ಲ' ಎಂದು ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಬರೆದ ಮಾತುಗಳು ಈ ಕೃತಿಯ ಮಹತ್ತ್ವವನ್ನು ಸೂಚಿಸುತ್ತವೆ. 'ವಿಮರ್ಶಕರ ನಿರೀಕ್ಷೆ ನಿಷ್ಫಲವಾಗಲಿಲ್ಲ. ಕೃತಿಯ ಅಂತರ್ನಿಹಿತವಾದ ಶಕ್ತಿಯ ಪ್ರಭಾವದಿಂದಲೂ ಸಹೃದಯರ ಮತ್ತು ವಿಮರ್ಶಕರ ತೋಲನ ದಕ್ಷತೆಯಿಂದಲೂ ಕನ್ನಡದ ಅಗತ್ಯದಿಂದಲೂ ಮಾರ್ಗದರ್ಶನದ ಕಠಿಣ ಕಾರ್ಯವನ್ನು ಸಾಮಾನ್ಯ ಜನಮನದ ನಿರೀಕ್ಷಣೆಯನ್ನು ಮೀರಿದ ಮಹತ್ ಪ್ರಮಾಣದಲ್ಲಿ ಈ ಕೃತಿ ಸಾಧಿಸಿತು'.

ಕೆಲವು ಕನ್ನಡ ಕವಿಗಳು ಕಾವ್ಯಾಭಿವ್ಯಕ್ತಿಯ ಹೊಸ ಮಾಧ್ಯಮಕ್ಕಾಗಿ ಸ್ವಂತವಾಗಿ ಪ್ರಯೋಗಗಳನ್ನು ನಡೆಸುತ್ತಿದ್ದರು. ಇಂಗ್ಲಿಷ್

ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದ್ದ ಕುವೆಂಪು ಅವರೂ ಅಂಥವರಲ್ಲಿ ಒಬ್ಬರು. ತಾವು ಕೂಡ ನೂತನ ಛಂದೋವೈವಿಧ್ಯಗಳನ್ನು ಕುರಿತು ಸ್ವತಂತ್ರವಾಗಿ ಪ್ರಯೋಗಗಳಲ್ಲಿ ತೊಡಗಿದ್ದರೆಂದು ಅವರು ಹೇಳುತ್ತಾರೆ. ಆದರೂ ಎಲ್ಲರಿಗೂ ಸ್ಪಷ್ಟವಾದ ಒಂದು ಮಾರ್ಗದರ್ಶನ ಶ್ರೀಯವರ ಇಂಗ್ಲಿಷ್ ಗೀತಗಳಿಂದ ದೊರಕಿತು ಎಂಬುದರಲ್ಲಿ ಭಿನ್ನಾಭಿಪ್ರಾಯಗಳಿಲ್ಲ.

ಇಂಗ್ಲಿಷ್ ಗೀತಗಳು ಮುಖ್ಯವಾಗಿ ಸಾಧಿಸಿ ತೋರಿಸಿದ ಅಂಶಗಳು ಎರಡು. ಮೊದಲನೆಯದು, ಕನ್ನಡ ಅದುವರೆಗೆ ಕಾಣದಿದ್ದ ವಸ್ತು ವೈವಿಧ್ಯವನ್ನು ನಮ್ಮ ಜನದ ಮುಂದೆ ತೆರೆದಿಟ್ಟದ್ದು. ಎರಡನೆಯದು, ಹಳೆಯ ಮಾತ್ರಾಗಣಗಳನ್ನು ಆಧಾರವಾಗಿಟ್ಟುಕೊಂಡು ಹೊಸ ಹೊಸ ರೂಪವೈವಿಧ್ಯವನ್ನು ತರಬಹುದು ಎಂದು ತೋರಿಸಿದ್ದು.

ವಸ್ತುವಿನ ನೂತನತೆಯ ಬಗೆಗೆ ಒಂದು ಮಾತನ್ನು ಒತ್ತಿ ಹೇಳಬೇಕಾದ ಅಗತ್ಯವಿದೆ. ಈ ಶತಮಾನದ ಆದಿಯಲ್ಲಿ ಕೆಲವರಾದರೂ ಕವಿಗಳು ವಸ್ತುವಿನಲ್ಲಿ ನೂತನತೆಯನ್ನು ತರಲು ಪ್ರಯತ್ನಿಸಿದ್ದರು ಎಂಬುದಕ್ಕೆ ಆಧಾರಗಳಿವೆ.

ರೈಲನ್ನು ಕುರಿತು ಎಸ್.ಜಿ.ನರಸಿಂಹಾಚಾರ್ಯರು ಬರೆದ ಹೊಗೆಯಗಾಡಿ ಎಂಬ ಕವಿತೆ ಚೌಪದದಲ್ಲಿದೆ. ಅದರ ಕೆಲವು ಪಂಕ್ತಿಗಳು:

> ನೊಗವನೆತ್ತಿನ ಕೊರಳೊಳಿಡುವ ಪಾಡಿಲ್ಲ
> ಬಿಗಿದ ಕುದುರೆಯ ಹೂಡುವಾಯಾಸವಿಲ್ಲ
> ಮಿಗೆ ಕಾದ ನೀರ ಹಬೆಯಿಂದ ಬಲುಬೇಗ
> ಹೊಗೆಯ ಗಾಡಿಯು ನೋಡು ಹೋಗುತಿಹುದೀಗ

ರೈಲನ್ನು ಕುರಿತು ಆಸ್ಥಾನ ವಿದ್ವಾನ್ ಜಯರಾಯಾಚಾರ್ಯರು ಬರೆದ ರೈಲುಗಾಡಿ ಎಂಬ ಪದ್ಯ:

> ಓಡುತಿರ್ಪುದು| ರೈಲು ‖ ಪಲ್ಲವಿ ‖
> ನೋಡು ಕೂಡಿರುವ ಜನರ|
> ಗಾಡಿಯನೊಳಕೊಂಡು ಬೇಗ ‖ ಅನುಪಲ್ಲವಿ ‖
>
> ಮುಂದಿನಿಂಜಿನಲ್ಲಿ ಬೆಂಕಿ
> ಯೊಂದೆಡೆಯೊಳಗಾ ಬೆಂಕಿ
> ಯಿಂದ ನೀರು ಕಾಯ್ದು ಹಬೆಯು|
> ಬಂದಪುದಾ ಹಬೆಯ ಬಲದಿ‖

ಸಿದ್ದೇಶ್ವರ ಮಳೀಮಠ ಎಂಬವರು ಅತ್ಯಧಿಕ ಸಂತಸದಿಂದ ಇಪ್ಪತ್ತು ರೌಪ್ಯವ ಕೊಟ್ಟು ಕೊಂಡ ಕಾಲುಗಾಡಿ (ಸೈಕಲ್)ಯ ಸವಾರಿಯನ್ನು ಕುರಿತು ರಚಿಸಿರುವ ಒಂದು ಷಟ್ಪದಿ ಹೀಗಿದೆ:

> ಬಲು ಭಯದಿ ಸತ್ತಿರುವ ನರಗಳ
> ಸೆಳೆದು ಬಿಗಿದನು ಕಚ್ಚೆ ದವಡೆಯ
> ಉಲುಕದುಸುರನು ಬಿಡದಲೆದೆಯನು ಗಟ್ಟಿ ಪಿಡಿದಿಹನು
> ನಿಲದೆ ಗಣಗಣ ಗಂಟೆ ಹೊಡೆಯುತ
> ಹಲವು ಕುತ್ತನು ದಾಂಟಿ ಗುಡ್ಡದ
> ಹೊಲಲ ಹೊರಗಿರ್ಪಿಳುಕಲಿನ ಮಾರ್ಗದಲಿ ನಡೆತಂದ

ಇವೆಲ್ಲ ಒಳ್ಳೆಯ ಭಾವಗೀತೆಗಳಿಗೆ ನಿದರ್ಶನ ಎಂದು ಭಾವಿಸುವಂತಿಲ್ಲ. ಆದರೆ ವಸ್ತುವಿನಲ್ಲಿ ನೂತನತೆಯನ್ನು ತರುವ ಪ್ರಯತ್ನ ನಡೆದಿತ್ತು ಎಂಬುದನ್ನು ಇದು ಸೂಚಿಸುತ್ತದೆ.

ಇಂಗ್ಲಿಷ್ ಕವನಗಳ ಅನುವಾದದಿಂದ ಕನ್ನಡ ಕಾವ್ಯ ಪ್ರಪಂಚವನ್ನು ಶ್ರೀಮಂತಗೊಳಿಸಲು ಶ್ರಮಿಸಿದ ಬಿ.ಎಂ.ಶ್ರೀಯವರೇ ಸ್ವಯಂ ಕವಿಗಳಾಗಿದ್ದು ಉತ್ತಮವಾದ ಕೆಲವು ಸ್ವತಂತ್ರ ಭಾವಗೀತೆಗಳನ್ನು ರಚಿಸಿದ್ದಾರೆ. ತಿಳಿಯಾದ ಕನ್ನಡದಲ್ಲಿ, ಹೇಳಬೇಕಾದುದನ್ನು ಕಣ್ಣಿಗೆ ಕಟ್ಟುವಂತೆ ಹೇಳುವ ಕಲೆ ಶ್ರೀಯವರಿಗೆ ಸಿದ್ಧಿಸಿತ್ತು. ಈ ಕೆಲವು ಪಂಕ್ತಿಗಳು ಅದಕ್ಕೆ ಸಾಕ್ಷಿ:

> ಕನ್ನಡ ನುಡಿ, ನಮ್ಮ ಹೆಣ್ಣು
> ನಮ್ಮ ತೋಟದಿನಿಯ ಹಣ್ಣು
> ಬಳಿಕ, ಬೇರೆ ಬೆಳೆದ ಹೆಣ್ಣು
> ಬಳಿಗೆ ಸುಳಿದಳು
> ಹೊಸದು ರಸದ ಬಳ್ಳಿ ಹಣ್ಣು
> ಒಳಗೆ ಸುಳಿದಳು

ಶ್ರೀಯವರು ರಚಿಸಿರುವ ಕನ್ನಡ ತಾಯನೋಟ, ಶುಕ್ರಗೀತೆ ಮತ್ತು ಶ್ರೀ ಕೃಷ್ಣರಾಜ ರಜತ ಮಹೋತ್ಸವ ಪ್ರಗಾಥ ಎಂಬ ಮೂರು ಪ್ರಗಾಥಗಳು ಕನ್ನಡಕ್ಕೆ ಕವಿ ನೀಡಿರುವ ಉತ್ತಮ ಕಾಣಿಕೆಗಳು.

ಶ್ರೀಯವರಿಗಿಂತ ಹತ್ತು ಹದಿನೈದು ವರ್ಷಗಳ ಹಿಂದೆಯೇ ಅನುವಾದಗಳನ್ನು ಮಾಡಿ, ಸ್ವತಂತ್ರ ಕವನಗಳನ್ನು ರಚಿಸಿ ಕಾವ್ಯಕ್ಷೇತ್ರವನ್ನು ಸಮೃದ್ಧಗೊಳಿಸಲು ಪ್ರಯತ್ನಿಸಿದ್ದ ಮತ್ತೊಬ್ಬರು ಪಂಜೆ ಮಂಗೇಶರಾಯರು. 1893ಕ್ಕೆ ಮುಂಚಿನಿಂದಲೂ ಪಂಜೆಯವರು ಕವಿತೆಗಳನ್ನು ಬರೆಯುತ್ತಿದ್ದರು ಎಂದು ತೀರ್ಮಾನಿಸುವುದಕ್ಕೆ ಆಧಾರಗಳಿವೆ. ಅವರ ಕವಿತೆಗಳಲ್ಲಿ 'ಅದೊಂದು ಬಗೆಯ ದ್ರವಣವಿದೆ, ಮನೆವಳಿಕೆ ಇದೆ' ಎನ್ನುತ್ತಾರೆ ಗೋವಿಂದ ಪೈ. ಅವರ ಲಲಿತವಾದ ಶೈಲಿ ಮುಂದೆ ಕನ್ನಡದಲ್ಲಿ ಇತರರು ಅನುಕರಣ ಮಾಡಬೇಕಾದಂಥದು ಎನಿಸಿತು. ಅವರ ಹುತ್ತರಿ ಹಾಡು ಕೊಡಗರಿಗೆ ನಾಡಗೀತೆಯಾಯಿತು. ಕೊಡಗರ ಸಾಹಸವನ್ನು ಕೊಂಡಾಡುತ್ತ ಪಂಜೆಯವರು ನೀಡಿರುವ ಚಿತ್ರಗಳು ಭಯಮಿಶ್ರಿತ ರೋಮಾಂಚನವನ್ನು ಉಂಟುಮಾಡುವಂಥವು:

> ಸವಿದು ಮೆದ್ದರೊ ಯಾರು ಪೂರ್ವದಿ ಹುಲಿಯ ಹಾಲಿನ ಮೇವನು,
> ಕವಣೆ ತಿರಿ ಕಲ್ಲಾಟ ಹಗ್ಗಕೆ ಸೆಳೆದರೋ ಹೆಬ್ಬಾವನು,
> ಸವರಿ ಆನೆಯ ಸೊಂಡಲಿನ ರಣಕೊಂಬನಾರ್ ಭೋರ್ಗರೆದರೋ
> ಸವೆದು ಸವೆಯದ ಸಾಹಸತ್ವದ ಕ್ಷಾತ್ರಬೇಟೆಯ ಮೆರೆದರೋ,
> ಅವರೆ ಸೋಲ್ ಸಾವರಿಯರು !
> ಅವರೆ ಕಡುಗಲಿ ಗರಿಯರು !
> ಅವರೆ ಕೊಡಗಿನ ಹಿರಿಯರು !

ಇದೇ ತಲೆಮಾರಿನ ಕವಿಗಳಲ್ಲಿ ಗಮನೀಯರಾದವರು ಎಸ್.ಜಿ. ನರಸಿಂಹಾಚಾರ್ಯರು. ಇವರು ಅನೇಕ ಇಂಗ್ಲಿಷ್ ಕವನಗಳನ್ನು ತುಂಬ ಸೊಗಸಾಗಿ ಅನುವಾದ ಮಾಡಿದ್ದಾರೆ. ಇವರ ಕನ್ನಡದ ಹದಕ್ಕೆ ಈ ಕೆಳಗಿನ ಉದಾಹರಣೆ: ವರ್ಡ್ಸ್‌ವರ್ತ್ ಕವಿಯ ಟು ದಿ ಕಕೂ ಎಂಬ ಕವನದ ಪಂಕ್ತಿಗಳ ಅನುವಾದ ಇದು:

> ಬಾರೊ ಬಸಂತದ ಕಂದಾ ಬಾ ಬಾರೊ
> ಹಾರುವ ಹಕ್ಕಿ ನೀನಲ್ಲ
> ಸಾರುವ ದನಿ, ಮಾಯದಗಂಟು|, ಕಣ್ಣಿಗೆ
> ತೋರದ ಹುರುಳಾಗಿ ಸುಳಿವೆ

ಅನುವಾದಗಳಲ್ಲದೆ ಸ್ವತಂತ್ರ ಕವನಗಳ ರಚನೆಯನ್ನು ನೋಡಿದರೆ ನರಸಿಂಹಾಚಾರ್ಯರು ಹುಟ್ಟುಕವಿ. ಕನ್ನಡ ಭಾಷೆ ಇವರ ಕೈಯಲ್ಲಿ ಹೊಸ ಹದವನ್ನು ಕಂಡಿತು ಎಂದು ಹೇಳಬೇಕಾಗುತ್ತದೆ. ಅದಕ್ಕೆ ನಿದರ್ಶನ 'ನೋಡು ಕಾವೇರಿಯು ನಾಡಿನ ಜನರಿಗೆ ಬೇಡಿದ ಫಲಗಳ ನೀಡುತ ಪೊರೆವಳು', 'ಬಾರೋ ನಾವಾಡುವ ಬಾರೋ, ಸಾರಿತು ಸುಗ್ಗಿಯ ತಿಂಗಳಿದು' ಎಂದು ಆರಂಭವಾಗುವ ಕವನಗಳು ಹಳೆಯ ಷಟ್ಪದಿ ಛಂದಸ್ಸಿನಲ್ಲಿ ರಚಿತವಾದುದಾದರೂ ನಮ್ಮ ಭಾಷೆಗೆ ಹೊಸದು ಎನ್ನುವಂಥ ಶೋಕಗೀತೆಯೊಂದನ್ನು ರಚಿಸಿದವರು ಇವರೇ. 1894ರಲ್ಲಿ ಚಾಮರಾಜ ಒಡೆಯರು ತೀರಿಕೊಂಡಾಗ ಬರೆದ ಚರಮಗೀತೆ ಅದು. ಸಂಗೀತ ನಾಟಕಗಳಿಗೆ ಆಶ್ರಯ ಕೊಟ್ಟಿದ್ದ ಪ್ರಭು ಅವರು. ಅವರೇ ತೀರಿಕೊಂಡಮೇಲೆ ಇನ್ನೆಲ್ಲಿ ಆ ಕಲೆಗಳಿಗೆ ಉಳಿವು ಎಂಬ ಭಾವ ಹೀಗೆ ಬಂದಿದೆ:

> ವೀಣೆಗಳು ಮುಸುಕಿಟ್ಟು ಮೌನದಿ
> ಕೋಣೆಯೊಳಡಗಿದುವು ಬಿನ್ನನೆ
> ಜಾಣಳಿದು ನಾಟಕಗಳುಳಿದುವು ತೆರೆಯ ಮರೆಯೊಳಗೆ ‖

1918ಕ್ಕೆ ಮುಂಚೆಯೇ ಸ್ವತಂತ್ರವಾದ ಕವನಗಳನ್ನು ರಚಿಸಿ ಭಾವಗೀತೆಯ ಪಂಥಕ್ಕೆ ಒಳ್ಳೆಯ ಬುನಾದಿಯನ್ನು ಹಾಕಿದ ಮತ್ತೊಬ್ಬ ಗಣ್ಯರು ಬಾಳಾಚಾರ್ಯ ಗೋಪಾಳಾಚಾರ್ಯ ಸಕ್ಕರಿ (ಶಾಂತಕವಿ). ಕನ್ನಡಿಗರನ್ನು ಎಚ್ಚರಿಸಲು ಬರೆದ ಒಂದು ಕವನದ ಕೆಲವು ಪಂಕ್ತಿಗಳು ಇವು:

ಏಳು ಸಾಯಣ ಕಟ್ಟು ಗ್ರಂಥವ
ನೇಳು ಪಂಪಾಕ್ಷೇತ್ರಕೆ
ಗಾಳಿಗಂಟುಗಳೋದಿದೇತಕೆ
ಏಳು ಈ ಕ್ಷಣಮಾತ್ರಕೆ

ಶ್ರೀಯವರು ತೆರೆದ ನೂತನ ಕಾವ್ಯಮಾರ್ಗವನ್ನು ವಿಸ್ತರಿಸುತ್ತ ಹೋದ ಕವಿಗಳಲ್ಲಿ ಮುಖ್ಯರಾದವರು ಡಿ.ವಿ.ಗುಂಡಪ್ಪನವರು. ಹಳೆಯ ವಸ್ತು, ಛಂದಸ್ಸುಗಳನ್ನು ಉಳಿಸಿಕೊಂಡು ಹೊಸದರ ಕಡೆಗೆ ಕಣ್ಣು ಹಾಯಿಸಿದ್ದು ಇವರ ಕವನಗಳ ವೈಶಿಷ್ಟ್ಯ. ಸೀಸ, ವೃತ್ತ, ಕಂದ, ಖಂಡಭೋಗ ಷಟ್ಪದಿ ಮುಂತಾದ ಛಂದೋರೂಪಗಳನ್ನು ಇವರು ಬಳಸಿಕೊಂಡರು. ಸಂಗೀತದ ಕಡೆಗೆ ಒಲವು ಹೆಚ್ಚಾಗಿರುವ ಈ ಕವಿ ಗಡುಸಾದ, ಆದರೆ ಇಂಪಾದ ಅನೇಕ ಕವನಗಳನ್ನು ರಚಿಸಿದ್ದಾರೆ. ವನಸುಮ ಎಂಬುದು ಸುಮಾರು ನಾಲ್ಕು ದಶಕಗಳ ಕಾಲ ಕನ್ನಡನಾಡಿನ ಜನರೆಲ್ಲರ ಕಿವಿ ಮನಗಳನ್ನು ತುಂಬಿದ ಕವನ. ಎಸ್.ಅನಂತನಾರಾಯಣ ಅವರು ಹೇಳುವಂತೆ ಇವರ ಹೆಚ್ಚಿನ 'ಗೀತೆಗಳೆಲ್ಲ ಜೀವಂತ ಕಳೆ ಪಡೆಯುವುದು ಹಾಡಿದಾಗ ............ ಇಲ್ಲಿಯ ಲಾಲಿತ್ಯ, ಪದಗಳನ್ನು ಜೋಡಿಸುವ ಕೌಶಲ್ಯ, ನೃತ್ಯಲಯ - ಇವುಗಳು ಅಂತಃಪುರಗೀತೆ (1950)ಯಲ್ಲಿ ಪರಿಪೂರ್ಣ ಪಾಕವನ್ನು ಪಡೆದಿವೆ.' ಅನೇಕ ಕವಿಗಳಿಗೆ ಸ್ಫೂರ್ತಿದಾಯಕರಾಗಿದ್ದು, ಆಚಾರ್ಯ ಸ್ಥಾನದಲ್ಲಿ ನಿಂತ ಡಿ.ವಿ.ಜಿ. ಅವರ ಕವನಗಳಲ್ಲಿ ಕನ್ನಡ ಕಬ್ಬವೆಣ್ಣು ಸನಾತನ ಮತ್ತು ನೂತನಗಳ ಮಧ್ಯೆ ಹೊಸ್ತಿಲಮೇಲೆ ನಿಂತಂತಿದೆ. ಅನೇಕ ಪದ್ಯಗಳು ವೃತ್ತಕಂದ ರೂಪವಾಗಿವೆ. ಆತ್ಮವು ನೂತನವಾದರೂ ವೇಷವು ಪುರಾತನವಾದುದು ಎಂಬುದು ಕುವೆಂಪು ಅವರ ಅಭಿಪ್ರಾಯ. ಡಿ.ವಿ.ಜಿ. ಅವರಂತೆಯೇ ಗಡುಸಾಗಿಯೂ ಚಿಂತನಾಂಶಗಳಿಂದ ಕೂಡಿದುವೂ ಆದ ಭಾವಗೀತೆಗಳನ್ನು ರಚಿಸಿದವರು ಮಂಜೇಶ್ವರ ಗೋವಿಂದ ಪೈ ಅವರು. ಇವರು ಶ್ರೀಯವರಂತೆಯೇ ಅನೇಕ ಇಂಗ್ಲಿಷ್ ಕವನಗಳನ್ನು ಸಮರ್ಥವಾಗಿ ಕನ್ನಡಕ್ಕೆ ತಂದಿರುವುದಲ್ಲದೆ ಸ್ವತಂತ್ರವಾಗಿಯೂ ಕವನಗಳನ್ನು ರಚಿಸಿ ಯಶಸ್ಸು ಗಳಿಸಿದ್ದಾರೆ. ಈ ದಿಕ್ಕಿನಲ್ಲಿ ಇವರ ಗಿಳಿವಿಂಡು (1930) ಗಮನಾರ್ಹವಾದ ಸಂಕಲನ.

1925 ರಿಂದ 1950ರ ವರೆಗಿನ ಇಪ್ಪತ್ತೈದು ವರ್ಷಗಳು ಕನ್ನಡ ಭಾವಗೀತೆಯ ಇತಿಹಾಸದಲ್ಲಿ ಸುವರ್ಣಯುಗ. ಕೆ.ವಿ.ಪುಟ್ಟಪ್ಪ, ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಪು.ತಿ.ನರಸಿಂಹಾಚಾರ್, ವಿ.ಸೀತಾರಾಮಯ್ಯ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಜಿ.ಪಿ.ರಾಜರತ್ನಂ, ಕೆ.ಎಸ್.ನರಸಿಂಹಸ್ವಾಮಿ, ಎಂ.ಗೋಪಾಲಕೃಷ್ಣ ಅಡಿಗ ಮುಂತಾದ ಪ್ರತಿಭಾಶಾಲಿ ಕವಿಗಳು ಭಾವಗೀತೆಯ ಕ್ಷೇತ್ರದಲ್ಲಿ ಸಮೃದ್ಧವಾದ ಸುಗ್ಗಿಯನ್ನು ತಂದರು. ಪ್ರಕೃತಿ, ಪ್ರೇಮ, ದೇಶಭಕ್ತಿ, ಸಮಾಜ, ಸಂಸಾರ ಎಲ್ಲವೂ ಈ ಕವಿಗಳಿಗೆ ವಸ್ತುವಾದುವು. ಕನ್ನಡದಲ್ಲಿ ಇದುವರೆಗೆ ಕಾಣದಿದ್ದ ವಸ್ತುವೈವಿಧ್ಯವನ್ನು ಭಾವಗೀತಕಾರರು ಪ್ರದರ್ಶಿಸಿದರು. ಜೊತೆ ಜೊತೆಗೇ ಕನ್ನಡ ಭಾಷೆ ಹೆಚ್ಚು ಸತ್ತ್ವಪೂರ್ಣವಾದ ಅಭಿವ್ಯಕ್ತಿಗೆ ಪಾತ್ರವಾಗುವಂತೆ ಮಾಡಲು ಶ್ರಮಿಸಿದರು. ವಸ್ತುವೈವಿಧ್ಯದಂತೆಯೇ ಛಂದೋ ವೈವಿಧ್ಯವೂ ಪ್ರದರ್ಶಿತವಾಯಿತು. ಒಟ್ಟಿನಲ್ಲಿ ಭಾವಗೀತಕಾರರಿಂದ ಕನ್ನಡದ ಕಾವ್ಯ ಪ್ರಕಾರ ಸಂಪದ್ಭರಿತವಾಯಿತು.

ಭಾವಗೀತೆಯ ಸಮೃದ್ಧಿಗೆ ಕಾರಣರಾದ ಕವಿಗಳಲ್ಲಿ ಪ್ರಧಾನರಾದವರು ಕುವೆಂಪು. ಕೊಳಲು, ನವಿಲು, ಪಕ್ಷಿಕಾಶಿ, ಅಗ್ನಿಹಂಸ, ಪ್ರೇಮಕಾಶ್ಮೀರ, ಇಕ್ಷುಗಂಗೋತ್ರಿ, ಚಂದ್ರಮಂಚಕೆ ಬಾ ಚಕೋರಿ, ಜೇನಾಗುವಾ, ಕೋಗಿಲೆ ಮತ್ತು ಸೋವಿಯೆಟ್ ರಷ್ಯಾ ಮುಂತಾದ ಕವನ ಸಂಕಲನಗಳಲ್ಲಿ ಪ್ರಕಟವಾಗಿರುವ ಇವರ ಭಾವಗೀತೆಗಳ ವಸ್ತು ಪ್ರಕೃತಿ ವರ್ಣನೆ, ಅಧ್ಯಾತ್ಮ, ಪ್ರೇಮ, ಸಾಮಾಜಿಕ ಚಿಂತನೆ, ಕುಟುಂಬಜೀವನದ ರಸನಿಮಿಷಗಳು ಇತ್ಯಾದಿ. ಪ್ರಕೃತಿ ಮತ್ತು ಅಧ್ಯಾತ್ಮಗಳು ಈ ಭಾವಗೀತಕಾರರ ಶ್ವಾಸಕೋಶಗಳು. ಮನೋಹರವಾದ ಪ್ರಕೃತಿಯ ವಿವಿಧ ಅಂಶಗಳು, ಬಿಳಿ ಮಳಲ ರಾಶಿ, ಕಾಡಿನ ಹಸುರೆಲೆಯ ಸಾಗರ ಮುಂತಾದುವು ಕವಿಯ ದೃಷ್ಟಿಗೆ ಆವೇಶ ಭಾವಗಳು; ವಿಶ್ವರೂಪಿಯಾದ ಭಗವಂತನ ಶರೀರದ ಚಿನ್ಮಯವಾದ ಅಂಗಗಳು; ಬ್ರಹ್ಮದ ಮಹಾಚಿತ್ತ ಶರಧಿಯ ಅಲೆಗಳು, ವರ್ಡ್ಸ್‌ವರ್ತನಿಗೆಂತೋ ಅಂತು ಮನಸ್ಸಿನ ಚಿಂತೆಗಳಾಗಿ, ನಾಡಿಯಲ್ಲಿ ಹರಿಯುವ ರಕ್ತಬಿಂದುಗಳಾಗಿ ಅವು ಪರಿವರ್ತನೆ ಹೊಂದಿವೆ. ತಾವು ಉಸಿರಾಡಿದರೆ ಮೋಡಗಳು ಉಸಿರಾಡುತ್ತವೆ ಎನ್ನುವ ತಾದಾತ್ಮ್ಯ ದೊರೆತಿದೆ ಈ ಕವಿಗೆ. ಪ್ರಕೃತಿಸಾಧನೆಯ ವಿಷಯಕವಾದ ಕವಿಯ ಜೀವನ ಮಂತ್ರ ಇದು. ಪ್ರಕೃತಿಯಾರಾಧನೆಯೇ ಪರಮನಾರಾಧನೆ. ಈ ಭಾವದಿಂದ ಕವಿಯ ಪ್ರಕೃತಿಯ ಆರಾಧನೆ ಮುಂದುವರಿದಿದೆ. ಇವರ ಪ್ರಕೃತಿಯ ಕಲ್ಪನೆ 'ಉದಯಾಸ್ತಗಳು, ವನಗಿರಿಗಳು, ತಂಗಾಳಿ, ರುದ್ರವರ್ಷ, ತಿಂಗಳು, ಹಿಮಮಣಿಗಳು, ಕಾಜಾಣ, ಕಾಮಳ್ಳಿ, ಕೋಗಿಲೆ, ಗಿಳಿಗಳನ್ನು ಮಾತ್ರ ಒಳಗೊಂಡು ಮುಕ್ತಾಯವಾಗಿಲ್ಲ. ಮಾನವ ಸೌಂದರ್ಯ, ಒಲುಮೆ, ಸ್ನೇಹಗಳನ್ನೂ ಅದು ವ್ಯಾಪಿಸಿದೆ. ಆ ಎಲ್ಲದರಲ್ಲಿ ತಮ್ಮ ಇಷ್ಟದೇವತೆಯ ಗುಡಿಯನ್ನು ಕಟ್ಟಿ ಕವಿ ಪೂಜೆಯಲ್ಲಿ ತಲ್ಲೀನರಾಗಿದ್ದಾರೆ'. ಸೂರ್ಯೋದಯ ಚಂದ್ರೋದಯ ದೇವರ ದಯ ಕಾಣೋ ಎಂದು ಈ ಕವಿ ಹಾಡಿದರು. ಹೀಗೆಯೇ ಪ್ರೇಮ, ಅಧ್ಯಾತ್ಮಗಳನ್ನು ಕುರಿತ ಇವರ ಕವನಗಳೂ ಸಹೃದಯರ ಮೆಚ್ಚುಗೆಯನ್ನು ಗಳಿಸಿದುವು.

ಕುವೆಂಪು ಅವರ ಸಾಮಾಜಿಕ ಗೀತೆಗಳು ಇಂದಿನ ಕ್ರಾಂತಿಯನ್ನು ಮೂರು ನಾಲ್ಕು ದಶಕಗಳಷ್ಟು ಮುಂಚೆಯೇ ನಿರೀಕ್ಷಿಸಿದ್ದವು. ಇವರ ಕಲ್ಕಿ ಅತ್ಯಂತ ಶಕ್ತಿಪೂರ್ಣವಾದ ಒಂದು ಸಾಮಾಜಿಕ ಗೀತೆ. ಅಪಾರವಾದ ಧ್ವನಿ ಪ್ರಪಂಚವನ್ನು ಮಾತ್ರವಲ್ಲದೆ ನಾಳೆಯನ್ನು ಇಂದೇ ತೆರೆದು ತೋರಿಸಿದ ಆ ಕವನದ ಕೆಲವು ಪಂಕ್ತಿಗಳು ಇವು:

ಬಡಬಗ್ಗರ ಜಠರಾಗ್ನಿಯು ಎದ್ದು,
ಗುಡಿಸಲುಗಳಿಗೇ ಬೆಂಕಿಯು ಬಿದ್ದು,
ಧಗಧಗ ಧಗಧಗ ಹೊತ್ತಿದುದು
ಭುಗಿಭುಗಿಲೆನ್ನುತ ಮುತ್ತಿದುದು
ಮುಗಿಲಿನವರೆಗೂ ಬಾನಿನವರೆಗೂ
ದಿಕ್ಕುದಿಕ್ಕುಗಳ ಜುಟ್ಟಿನವರೆಗೂ
ಬಡವರ ಬೆಂಕಿಯು ನಾಲಗೆ ಚಾಚಿ
ಶ್ರೀಮಂತರನಪ್ಪಿತು ಬಾಚಿ

ಸಾಮಾನ್ಯವಾದ ಅಗ್ನಿಯಲ್ಲ ಅದು, 'ಅದರ ಮುಂದೆ ಬಡಬಾಗ್ನಿಯು ತಲೆ ತಗ್ಗಿತು ನಾಚಿ'.

ಜನಪದ ಛಂದಸ್ಸು ಲಯಗಳನ್ನು ಬಳಸಿಕೊಂಡು ಉತ್ತರ ಕರ್ನಾಟಕದ ಜನರ ಆಡುಭಾಷೆಯಲ್ಲಿ ತುಂಬ ಸತ್ತ್ವಪೂರ್ಣವಾದ ಅನೇಕ ಭಾವಗೀತೆಗಳನ್ನು ರಚಿಸಿದವರು ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರು. ಗರಿ, ಉಯ್ಯಾಲೆ, ನಾದಲೀಲೆ, ಸಖೀಗೀತ, ಮೂರ್ತಿ ಮತ್ತು ಕಾಮಕಸ್ತೂರಿ, ಗಂಗಾವತರಣ, ನಾಕುತಂತಿ ಮುಂತಾದ ಕವನ ಸಂಕಲನಗಳ ಮೂಲಕ ಭಾವಗೀತೆಯ ಪ್ರಕಾರಕ್ಕೆ ಈ ಕವಿ ಅಮರವಾದ ಕಾಣಿಕೆಯನ್ನು ನೀಡಿದ್ದಾರೆ. ನಾದದ ಗುಂಗು, ಭಾವದ ಸೊಗಸು, ಮಾತಿನ ಮೋಡಿ - ಇವು ಇವರ ಕವನಗಳ ವಿಶಿಷ್ಟಲಕ್ಷಣಗಳು. ಭಾವ ತೀವ್ರವಾಗಿ, ಗಾನ ಪ್ರಧಾನವಾಗಿ ಅನನ್ಯ ಮನೋಹರತೆಯಿಂದ ವಿಶಿಷ್ಟತೆಯನ್ನು ಪಡೆದಿವೆ ಇವರ ಕವನಗಳು. ಬೆಳಗು ಬೆಳುದಿಂಗಳುಗಳ ವರ್ಣನೆ ಇವರಿಂದ ಕನ್ನಡ ಕಾವ್ಯದಲ್ಲಿ ಹೊಚ್ಚ ಹೊಸದಾಗಿ ಉಳಿದಿವೆ.

ಈ ಕೆಲವು ದಶಕಗಳಲ್ಲಿ ಎಲ್ಲರ ಬಾಯಲ್ಲೂ ಕೇಳಿಬರುತ್ತಿರುವ, ಸರ್ವಜನ ಮೋಹಕವಾಗಿರುವ ಇವರ ಕವನ 'ಬೆಳಗು', ಅತ್ಯಂತ ಸರಳವಾದ, ಅಚ್ಚಗನ್ನಡ ಪದಗಳಿಂದ ಅತ್ಯಪೂರ್ವವಾದ ವರ್ಣನೆ, ಅನುಭವಗಳನ್ನು ಒಳಗೊಂಡಿರುವ ಈ ಕವನ ಆ ಕಾರಣಗಳಿಗಾಗಿಯೇ ಸರ್ವಜನಪ್ರಿಯತೆಯನ್ನು ಪಡೆದಿದೆ. ಅದರ ಆರಂಭದ ಸಾಲುಗಳು ಹೀಗಿವೆ:

ಮೂಡಲ ಮನೆಯಾ ಮುತ್ತಿನ ನೀರಿನ
ಎರಕವ ಹೊಯ್ದಾ
ನುಣ್ಣ - ನ್ನೆರಕವ ಹೊಯ್ದಾ
ಬಾಗಿಲ ತೆರೆದೂ ಬೆಳಕು ಹರಿದೂ
ಜಗವೆಲ್ಲಾ ತೊಯ್ದಾ
ಹೋಯ್ತೋ - ಜಗವೆಲ್ಲಾ ತೊಯ್ದಾ

ಸೂಕ್ಷ್ಮವಾದ ಕವಿಕಲ್ಪನೆ ಪ್ರಕೃತಿಯ ವರ್ಣನೆಯಲ್ಲೇ ತನ್ನನ್ನು ಮುಗಿಸಿಕೊಂಡಿಲ್ಲ. ಸಾಮಾಜಿಕ ಅನ್ಯಾಯಗಳ ಖಂಡನೆ, ದೇಶಭಕ್ತಿ ಮುಂತಾದ ಅನೇಕ ಭಾವಗಳು ಸುಂದರ ಪ್ರತಿಮಾ ಕವನಗಳ (ಕುರುಡು ಕಾಂಚಾಣಾ, ಪುಟ್ಟ ವಿಧವೆ, ಮೂವತ್ತು ಮೂರು ಕೋಟಿ) ರಚನೆಗೆ ಕಾರಣವಾಗಿವೆ.

ಚಿಂತನಪ್ರಧಾನವಾದ, ಚಿಂತನೆಯ ಸಾಣೆಗೆ ಭಾವವನ್ನು ಒಡ್ಡಿ ಹರಿತಗೊಳಿಸಿದ ಅನೇಕ ಅಮೂಲ್ಯವಾದ ಕವನಗಳನ್ನು ರಚಿಸಿರುವ ಅಗ್ರಪಂಕ್ತಿಯ ಮತ್ತೊಬ್ಬ ಕವಿ ಪು.ತಿ.ನರಸಿಂಹಾಚಾರ್ಯರು. ಹಣತೆ, ಮಾಂದಳಿರು, ಶಾರದಯಾಮಿನೀ, ಗಣೇಶದರ್ಶನ, ರಸಸರಸ್ವತಿ, ಮಲೆದೇಗುಲ ಮುಂತಾದ ಕವನಸಂಕಲನಗಳಲ್ಲಿ ಮಾತ್ರವಲ್ಲದೆ ಗೋಕುಲನಿರ್ಗಮನ, ಅಹಲ್ಯೆ ಮುಂತಾದ ಗೀತರೂಪಕಗಳಲ್ಲೂ ಇವರ ಅತ್ಯುತ್ಕೃಷ್ಟವಾದ ಭಾವಗೀತೆಗಳಿವೆ. ಪ್ರಕೃತಿಯ ಆಸ್ವಾದನೆಯಂತೆಯೇ ಭಕ್ತಿ, ಪ್ರಪತ್ತಿಗಳ ಪ್ರತಿಪಾದನೆಯೂ ಕಾವ್ಯಕ್ಕೆ ನೂತನತೆಯ ಸೊಗಡನ್ನು ತರುವ ವಸ್ತುವಾಗಬಹುದು ಎಂಬುದನ್ನು ಪು.ತಿ.ನ. ತೋರಿಸಿದ್ದಾರೆ. ಜಗತ್ತಿನ ಚೆಲುವನ್ನು ಗುರುತಿಸುವುದೂ ಅದನ್ನು ಆಹ್ವಾನಿಸುವುದೂ ಭಗವಂತನ ಅಹೇತುಕ ಕರುಣೆಯಿಂದಲೇ ಎನ್ನುವುದು ಈ ಕವಿಯ ಅಚಲವಿಶ್ವಾಸ. 'ಜಗ ಚೆಲುವೆನ್ನುವ ಬಗೆಯನುರಣನೆ ವಿಶ್ವಾತ್ಮನ ನಿಹೇತುಕ ಕರುಣೆ', ಜಗದ ಚೆಲುವಿನ ಒಂದು ಮುಹೂರ್ತದ ಆಸ್ವಾದನೆಯಿಂದ ತೃಪ್ತಿಪಡೆದ ಇವರ ಮನಸ್ಸು ಮರುಗಳಿಗೆಯೆ ಆಲೋಚನಾಮಗ್ನವಾಗುತ್ತದೆ. ಚಿಂತನೆ ಇವರ ಕವನಗಳಲ್ಲಿ ಭಾವದ ಅವಿನಾಸಂಗಿ, ಜೊತೆಗೆ ಆಶ್ಚರ್ಯ ಇವರ ಕವನಗಳ ಇನ್ನೊಂದು ಲಕ್ಷಣ. ಸೊಗವು ತೋರಬೇಕಾದಲ್ಲಿ ಅಳಲು ತೋರುವುದು, ವಿಷಾದದ ಛಾಯೆಯಲ್ಲಿ ಲೀನವಾಗುವುದು ಇವರ ಕೆಲವು ಮುಖ್ಯ ಕವನಗಳಲ್ಲಿ ಎದ್ದು ಕಾಣುವ ಮತ್ತೊಂದು ಅಂಶ. ಒಂದು ಸಂಜೆ ಎಂಬ ಇವರ ಪುಟ್ಟ ಕವನವೊಂದು ಇವರ ಕಾವ್ಯದ ಲಕ್ಷಣಗಳಿಗೆಲ್ಲ ಸುಂದರವಾದ ನಿದರ್ಶನ:

ಹೊತ್ತು ಮುಳುಗಿತು - ಮಾಸಿಹೋಯಿತು
  ಭೂಮಿ ಹೊರಳುತ ನಸುಕೊಳು,
ತಾಯಿ ಕಣ್ಮರೆಯಾಗೆ ಧೂಳಿನೊ -
  ಳಾಡಿ ಮಾಸುವ ಮಗುವೊಲು
ಕತ್ತಲಾಯಿತು ಹೊಳೆದುವಿದುಗೋ
  ಮೇಲೆ ಚುಕ್ಕಿಗಳಂದದಿ
ಅಂಧಕಾರದ ತೆರೆಗಳಾವುದೊ
  ಬೆಳಕ ಬಿಂಬಿಸುವಂದದಿ
ತಲದಿ ನಾನಿಹೆನೀ ಪುರಾತನ
  ತಮರು ತಾರೆಗು ಮೋಹಿಸಿ,
ನಿಜ ವಿಷಾದದೊಳಲ್ಲಿಗಲ್ಲಿಗೆ
  ಹೊಳೆವ ಭಾವಕೆ ಹೋಲಿಸಿ

ಅರುಣ, ಬಿನ್ನಹ, ತಾವರೆ - ಇವು ಮಾಸ್ತಿವೆಂಕಟೇಶ ಅಯ್ಯಂಗಾರ್ಯರ ಭಾವಗೀತೆಗಳ ಸಂಕಲನಗಳು. ಭಗವಂತನ ಅನುಗ್ರಹಕ್ಕಾಗಿ ಕಾತರತೆ, ಚೆಲುವಿನ ಬಗೆಗೆ ನವುರಾದ ವಿಸ್ಮಯ - ಇವು ಇವರ ಕವನಗಳ ಪ್ರಧಾನ ವಸ್ತು. ಸತ್ವದಲ್ಲಿ ಇವರ ಸಣ್ಣಕಥೆಗಳ ಮಟ್ಟಕ್ಕೆ ಬರುವ ಸಾಮರ್ಥ್ಯ ಇವರ ಕವನಗಳಿಗಿಲ್ಲ. ಆದರೆ ಸಂಖ್ಯೆಯಲ್ಲಿ ಇವು ವಿಪುಲವಾಗಿವೆ.

ಕನ್ನಡದ ಮತ್ತೊಬ್ಬ ಪ್ರಮುಖ ಭಾವಗೀತಕಾರರು ವಿ.ಸೀತಾರಾಮಯ್ಯನವರು. ಬಹುಮುಖ ಪ್ರತಿಭೆಯ ಈ ಕವಿ ಭಾವಗೀತಕಾರನ ಕರ್ತವ್ಯವೇನು ಎಂಬುದನ್ನು ಸೂಚಿಸಿದರು. 'ಕವಿಯು ಪ್ರಪಂಚವನ್ನು ಕಣ್ತುಂಬ ನೋಡಲಿ ತನ್ನ ಆದೇಶಗಳು ಒಂದು ಹದಕ್ಕೂ ಪಾಕಕ್ಕೂ ಬರುವಂತೆ ಮನಸ್ಸನ್ನು ನಿರಂತರವಾಗಿ ಒಂದು ಶಾಖದಲ್ಲಿಟ್ಟುಕೊಳ್ಳಲಿ: ತನ್ನ ವ್ಯಕ್ತಿತ್ವದ ಮುದ್ರೆಯನ್ನು ಕವಿತೆಯ ಮೇಲೆ ಹಾಕಲಿ (ಅವನು ನಿಜವಾಗಿ ವ್ಯಕ್ತಿಯಾದರೆ ಆ ಮುದ್ರೆ ಬಿದ್ದೇ ಅವನ ವಾಣಿ ಕೇಳುವುದು); ಪ್ರಪಂಚಕ್ಕೆ ಒಂದು ಹೊಸ ದೃಷ್ಟಿಯನ್ನೂ ಸಾತ್ವಿಕದಿಂದ ಮಿಡಿಯುವ ಒಂದು ಮೃದು ಜೀವನವನ್ನೂ ಕಾಣಿಕೆಯಾಗಿ ಅರ್ಪಿಸಲಿ; ಅದರಿಂದ ಪ್ರಪಂಚದ ಸತ್ಯವು ಬೆಳೆಯುವಂತಾಗಲಿ'. ಗೀತಗಳು, ದೀಪಗಳು, ನೆಳಲು-ಬೆಳಕು, ದ್ರಾಕ್ಷಿ ದಾಳಿಂಬೆ, ಹೆಜ್ಜೆ ಪಾಡು, ಅರಲು ಬರಲು - ಇವು ವಿ.ಸೀ. ಅವರ ಕವನಸಂಕಲನಗಳು. ಸೊಗಸಾದ ಕನ್ನಡ ಪದಗಳು, ಮುಗಿಲಿನವರೆಗೂ ಬೀಸುವ ಭಾವ, ಹೃದಯದ ಆಳದವರೆಗೂ ಇಳಿಯುವ ಸಂವೇದನೆ, ಇವೆಲ್ಲದರೊಡನೆ ಹದವಾಗಿ ಬೆರೆಯುವ ಸೂಕ್ಷ್ಮ ಸಂವೇದನೆ, ಕೆಲವೊಮ್ಮೆ ಹದವಾದ ಸಂಗೀತ ಗುಣ - ಇವು ವಿ.ಸೀ. ಅವರ ಭಾವಗೀತೆಯ ಲಕ್ಷಣಗಳು. ವಿಶ್ವಾಸ ಎನ್ನುವ ಕವನದ ಎರಡು ಪಂಕ್ತಿಗಳು ಇವು:

ಮಾನವನೆತ್ತರ ಆಗಸದೇರಿಗೆ ಏರುವವರೆಗೂ ಏರೇವು;
ಮಾನವಹೃದಯಕೆ ವಿಶ್ವವಿಶಾಲತೆ ಹಾಯುವವರೆಗೂ ಹಾರೇವು,

ಕನ್ನಡದ ಅತಿಶ್ರೇಷ್ಠ ಭಾವಗೀತೆಗಳ ಪಂಕ್ತಿಯಲ್ಲಿ ನಿಲ್ಲುವ ಕವನ ವಿ.ಸೀ.ಅವರ ಮನೆ ತುಂಬಿಸುವುದು, ಜಿ.ಎಸ್.ಶಿವರುದ್ರಪ್ಪನವರ ಮಾತಿನಲ್ಲಿ 'ಮುಟ್ಟಿದರೆಲ್ಲಿ ಮಾಸುವುದೋ ಎಂಬಂತೆ ಥಳಥಳಿಸುವ ಇಬ್ಬನಿಯಂತೆ ಇದರ ಚೆಲುವು'. ಆ ಕವನದ ಮೊದಲ ಪಂಕ್ತಿಗಳು:

ಎಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು
ನಿಮ್ಮ ಮಡಿಲೊಳಗಿಡಲು ತಂದಿರುವೆವು
ಕೊಳ್ಳಿರೀ ಮಗುವನ್ನು ಎಮ್ಮ ಮನೆ ಬೆಳಕನ್ನು
ನಿಮ್ಮ ಮನೆಯನ್ನು ತುಂಬಲೊಪ್ಪಿಸುವೆವು

ಸಾಮಾನ್ಯಾತಿಸಾಮಾನ್ಯರು ಆಡುವ ಮಾತಿನ ಸೊಗಡನ್ನು ಕಾವ್ಯಕ್ಕೆ ಕನ್ನಡದಲ್ಲಿ ಬಹುಶಃ ಮೊಟ್ಟಮೊದಲ ಬಾರಿಗೆ ತಂದು ಅನೇಕ ಶ್ರೇಷ್ಠ ಭಾವಗೀತೆಗಳನ್ನು ರಚಿಸಿದ ಕವಿ ಜಿ.ಪಿ.ರಾಜರತ್ನಂ. ರತ್ನನ ಪದಗಳು ಮತ್ತು ನಾಗನ ಪದಗಳು ಇವರು ಕನ್ನಡ ಕಾವ್ಯಕ್ಕೆ ನೀಡಿರುವ ಅಪೂರ್ವ ಕಾಣಿಕೆಗಳು. ಪ್ರಕೃತಿಯ ಸೊಬಗು, ಕೌಟುಂಬಿಕ ಜೀವನದ ಹತ್ತು ಹಲವು ರಸನಿಮಿಷಗಳು, ಕನ್ನಡದ ಉತ್ಕಟಪ್ರೇಮ - ಇವೆಲ್ಲಕ್ಕೂ ಆಡುಭಾಷೆ ಅಭಿವ್ಯಕ್ತಿಮಾಧ್ಯಮವಾಗಬಲ್ಲದು ಎಂಬುದನ್ನು ರಾಜರತ್ನಂ ಯಶಸ್ವಿಯಾಗಿ ತೋರಿಸಿಕೊಟ್ಟಿದ್ದಾರೆ. ತಾಯಿ ಮಗುವನ್ನು ಎತ್ತಿಕೊಂಡಂತೆ, ಒಂದು ಮತ್ತೊಂದನ್ನು ಕೂಡಿ ಅಂಟಿಕೊಂಡಂತೆ ಮಡಿಕೇರಿಯನ್ನು ಎತ್ತಿಕೊಂಡಿದ್ದ ಮಂಜಿನ ಶುಭ್ರತೆಯನ್ನು ಸೂಚಿಸುವ ವರ್ಣನೆ ಇದು:

ಮಲಗಾಕ್ ಸೊಳ್ಳೇಪರದೆ ಕಟ್ಟಿ
ಒದಿಯಾಕ್ ಒಗದಿದ್ ದುಪಟಿ ಕೊಟ್ಟಿ
ಪಕ್ದಾಗ್ ಗಂದದ್ ದೂಪ ಆಕ್ದಂಗ್
ಮಡಿಕೇರಿಮೇಲ್ ಮಂಜು!

ಸೂರ್ಯನನ್ನು ಹೆಂಡಕುಡುಕನಿಗೆ ಹೋಲಿಸಿ ಬರೆದಿರುವ ಸಮಾಧಾನ ಎಂಬ ಕವನ ಇವರ ಇನ್ನೊಂದು ಉತ್ತಮ ಪದ್ಯ. ಕವಿಯು ಕನ್ನಡ ಪ್ರೇಮ ಎಷ್ಟು ಉತ್ಕಟವಾದುದು ಎಂಬುದನ್ನು ತೋರಿಸುವ ಪಂಕ್ತಿಗಳು:

ನರಕಕ್ ಇಳ್ಸಿ ನಾಲ್ಗೆ ಸೀಳ್ಸಿ
ಬಾಯ್ ಒಲಿಸಾಕಿದ್ರೂನೆ -
ಮೂಗ್ನಲ್ ಕನ್ನಡ್ ಪದವಾಡ್ತೇನಿ!
ನನ್ ಮನಸನ್ ನೀ ಕಾಣೆ!

ತೀ.ನಂ.ಶ್ರೀಕಂಠಯ್ಯನವರ ಒಲುಮೆ (1932) ಕನ್ನಡ ನವೋದಯ ಸಾಹಿತ್ಯದಲ್ಲಿ ಪ್ರೇಮಕವನಗಳ ಪ್ರಥಮ ಸಂಕಲನ. 1930ರಲ್ಲಿ ಪ್ರಕಟವಾದ ಕುವೆಂಪು ಅವರ ಕೊಳಲು ಸಂಕಲನದಲ್ಲಿಯೇ ಕೆಲವು ಮುಗ್ಧವಾದ ಪ್ರೇಮಗೀತೆಗಳಿವೆ. ಆದರೂ ಪ್ರೇಮಗೀತೆಗಳೇ ಒಂದು ಸಂಕಲನವಾಗಿ ಪ್ರಕಟವಾದುದು ತೀ.ನಂ.ಶ್ರೀ. ಅವರ ಒಲುಮೆಯಲ್ಲೇ. ಸ್ವಲ್ಪವೂ ಆಡಂಬರವಿಲ್ಲದ ಸಹಜವಾದ ಸರಳ ಶೈಲಿಯಲ್ಲಿ ಶುಚಿಯಾದ ಸಾಂಸಾರಿಕ ಪ್ರೇಮವನ್ನು ವರ್ಣಿಸಿದ ಕೀರ್ತಿ ತೀ.ನಂ.ಶ್ರೀ. ಅವರ ಕವನಗಳಿಗೆ ಸಲ್ಲುತ್ತದೆ. ಮೊದಲ ದಿನ ತಮ್ಮ ಜೀವನ ಸಂಗಾತಿಯನ್ನು ಕಂಡ ಸಂದರ್ಭವನ್ನು ನಮ್ಮ ಸಾಮಾಜಿಕ ಸಂಪ್ರದಾಯದ ಹಿನ್ನೆಲೆಯಲ್ಲಿ ಕವಿ ವರ್ಣಿಸಿರುವ ರೀತಿ ಇದು:

ಬಾರೆ ತಾಯಿ, ಮಾವನವರಿ
ಗೆರಗು ಎಂದ ಮಾತಿಗೆ -
ತೋರಿ, ಮೆಲ್ಲನೊಳಗಿನಿಂದ
ನಡೆದು ಬಂದ ಮಿಂಚಿದು,
ಅವಳ ಮುಗುಳುನಗೆಯ ಹೊನಲು
ಮನೆಯನೆಲ್ಲ ತುಂಬಿತು.
ಅವಳ ಕಣ್ಣ ಬೆಳಕಿನಲ್ಲಿ
ಹಗಲ ಮಂಕು ಚೆದರಿತು.

ಪ್ರೇಮಗೀತೆಗಳನ್ನೇ ಗಮನಿಸಿ ಹೇಳುವುದಾದರೆ ಭಾವಗೀತೆಗಳ ಇತಿಹಾಸದಲ್ಲಿ ಕೆ.ಎಸ್.ನರಸಿಂಹಸ್ವಾಮಿಯವರಿಗೆ ವಿಶಿಷ್ಟವಾದ ಒಂದು ಸ್ಥಾನವಿದೆ. ಪ್ರೇಮದ ತೋಟದಲ್ಲಿ ಕೃಷಿ ಮಾಡಿ, ಮಲ್ಲಿಗೆ, ಇರುವಂತಿಗೆಗಳನ್ನು ಅರಳಿಸಿದವರು ಇವರು. ಕರ್ನಾಟಕದಾದ್ಯಂತ ಮನೆಮನೆಗಳಲ್ಲೂ ಇವರ ಹೆಸರು ಅನುರಣಿಸುವಂತೆ ಮಾಡಿದ ಕವನ ಸಂಕಲನ 'ಮೈಸೂರು ಮಲ್ಲಿಗೆ'. ಇವರದು ಮಲ್ಲಿಗೆ ಶೈಲಿ. ಅಚ್ಚಕನ್ನಡದ ಪದಗಳು, ನವುರಾದ ಭಾವ, ಸುಂದರವಾದ ಸ್ವಪ್ನಲೋಕವನ್ನು ಸೃಷ್ಟಿಸುವ ಉಪಮೆಗಳು ಇವರ ಭಾವಗೀತೆಗಳ ಲಕ್ಷಣಗಳು. ತಮ್ಮ 'ಗೃಹಲಕ್ಷ್ಮಿ'ಯನ್ನು ವರ್ಣಿಸುವ ಇವರ ಕವನದ ಕೆಲವು ಪಂಕ್ತಿಗಳು ಇವು:

ನನ್ನವಳು ನನ್ನೆದೆಯ ಹೊನ್ನಾಡನಾಳುವಳು
ಬೆಳಗುಗೆನ್ನೆಯ ಚೆನ್ನೆ ನನ್ನ ಮಡದಿ;
ಹೊಳೆಯ ಸುಳಿಗಳಿಗಿಂತ ಆಳ ಕಣ್ಣಿನ ಚೆಲುವು
ಅವಳೊಮ್ಮೆ ಹೆರಳ ಕೆದರಿ
ಕಪ್ಪುಗುರುಳನು ಬೆನ್ನ ಮೇಲೆಲ್ಲ ಹರಡಿದರೆ
ದೂರದಲಿ ಗಿರಿಯ ಮೇಲೆ
ಇಳಿದಂತೆ ಇರುಳ ಮಾಲೆ

ಉಂಗುರ, ಇರುವಂತಿಗೆ, ದೀಪದ ಮಲ್ಲಿ, ಐರಾವತ - ಇವು ಕೆ.ಎಸ್.ನರಸಿಂಹಸ್ವಾಮಿಯವರ ಇತರ ಕವನ ಸಂಕಲನಗಳು. ಹೆಣ್ಣಿನ ಹೃದಯದ ನಿಕಟವಾದ ಪರಿಚಯ, ಅವಳ ಹೂ ಮನಸಿನ ಹೊಂಗನಸುಗಳ ಚಿತ್ರಣ, ಸಂಸಾರದ ಮಧುರ ನಿಮಿಷಗಳ ಕಲಾತ್ಮಕ ಅಭಿವ್ಯಕ್ತಿ, ಉಪಮೆಗಳ ನೂತನತೆ, ಶೈಲಿಯ ಮಾರ್ದವತೆ - ಈ ಎಲ್ಲ ಲಕ್ಷಣಗಳೂ ಇವರ ಅನೇಕ ಕವನಗಳಲ್ಲಿ ಎದ್ದು ಕಾಣುತ್ತವೆ. ಮಣ್ಣಿನಂತೆ ಕಾಣುವ ಜೀವನದ ಹೊನ್ನನ್ನು ಅನನ್ಯವಾದ ರೀತಿಯಲ್ಲಿ ತೆರೆದು ತೋರಿಸುವ ಈ ಕವಿ ಜನತೆಗೆ ತೀರ ಹತ್ತಿರ, ತುಂಬ ಪ್ರಿಯ.

ನವೋದಯ ಭಾವಗೀತಕಾರರಾಗಿ ಪ್ರಾರಂಭವಾಗಿ ನವ್ಯ ಪಂಥದ ಕವಿಗಳಾಗಿ ಪರ್ಯವಸಾನಗೊಂಡ ಎಂ.ಗೋಪಾಲಕೃಷ್ಣ ಅಡಿಗರು ಭಾವತರಂಗ ಮತ್ತು ಕಟ್ಟುವೆವು ನಾವು ಕವನಸಂಕಲನಗಳಲ್ಲಿ ಕೆಲವು ಮಹತ್ವದ ಭಾವಗೀತೆಗಳನ್ನು ನೀಡಿದ್ದಾರೆ. ಇವರ 'ಮೋಹನ - ಮುರಲಿ', ಒಂದು ಸುಂದರ, ಶಕ್ತಿಪೂರ್ಣ ಕಲಾಸೃಷ್ಟಿ. ಪ್ರಾಸ, ಅನುಪ್ರಾಸಗಳು ಮರುಕಳಿಸಿ, ರಹಸ್ಯಪೂರ್ಣವಾದ, ಆದರೆ ನಮ್ಮ ಅಂತರಂಗ ಜಗತ್ತಿನಲ್ಲಿ ಅಸ್ತಿತ್ವದಲ್ಲಿದೆ ಎನ್ನುವಂಥ ವಾಸ್ತವ ಭಾವಗಳನ್ನು ಮೂರ್ತರೂಪದಲ್ಲಿ ನೀಡುವ ಶಕ್ತಿ ಅಡಿಗರಿಗೆ ಸಿದ್ಧಿಸಿದೆ. ಇವರ ಮೋಹನ - ಮುರಲಿಯ ಕೆಲವು ಪಂಕ್ತಿಗಳು ಇವು:

ಹೂವು ಹಾಸಿಗೆ, ಚಂದ್ರ ಚಂದನ, ಬಾಹುಬಂಧನ, ಚುಂಬನ;
ಬಯಕೆ ತೋಟದ ಬೇಲಿಯೊಳಗೆ ಕರಣಗಣದೀ ರಿಂಗಣ
ಒಲಿದ ಮಿದುವೆದೆ ರಕ್ತಮಾಂಸದ ಬಿಸಿದು ಸೋಂಕಿನ ಪಂಜರ;
ಇಷ್ಟೆ ಸಾಕೆಂದಿದ್ದೆಯಲ್ಲೋ! ಇಂದು ಏನಿದು ಬೇಸರ?

ಸಾಮಗಾನ, ಸಂಜೆದಾರಿ, ಚೆಲುವು- ಒಲವುಗಳ ಮೂಲಕ ಭಾವಗೀತೆಯ ಕ್ಷೇತ್ರದಲ್ಲಿ ತಮ್ಮ ಸ್ಥಾನವನ್ನು ಸ್ಥಾಪಿಸಿದ ಕವಿ ಜಿ.ಎಸ್.ಶಿವರುದ್ರಪ್ಪ. ಸರಳವಾದ ಮಾತುಗಳಲ್ಲಿ ಸಾಮಾನ್ಯ ಎಂದು ನಮಗೆ ತೋರುವಂಥ ವಿಷಯಗಳಲ್ಲಿ ಕೂಡ ಆಶ್ಚರ್ಯವನ್ನು ವ್ಯಕ್ತಪಡಿಸಿ, ಮೋಹಕವಾದ ವರ್ಣನೆಯಿಂದ, ನಮ್ಮ ಮನಸ್ಸನ್ನು ಸೆರೆಹಿಡಿಯುವ ಶಕ್ತಿ ಈ ಕವಿಯ ಶೈಲಿಯಲ್ಲುಂಟು. ಬಯಲನ್ನು - ಅದೂ ಬರಿಯ ಬಯಲನ್ನು ಕಂಡು ಕೂಡ ಕವಿ ರೋಮಾಂಚನ ಗೊಳ್ಳುತ್ತಾರೆ 'ಎರಡು ಬಯಲ ಬೇಟಕಾಗಿ ಇರುಳು ತೆರೆಯ ಕಟ್ಟಿದೆ, ಮೌನವೊಂದೇ ಹಾಡಿದೆ'. ಮಲ್ಲಿಗೆ, ಜಡೆ, ಮುಂಬಯಿ ಜಾತಕ, ಮಬ್ಬಿನಿಂದ ಮಬ್ಬಿಗೆ, ಸಂಜೆದಾರಿ ಮುಂತಾದ ಇವರ ಕವನಗಳು ಭಾವಗೀತೆಯ ಕ್ಷೇತ್ರಕ್ಕೆ ಕವಿ ನೀಡಿರುವ ಅಮರವಾದ ಕಾಣಿಕೆಗಳು. ಪು.ತಿ.ನ. ಅವರು ಇವರ ಜಡೆ ಎಂಬ ಕವನವನ್ನು 'ಭಾವೋಪಮಾಪೂರ್ಣವಾದದ್ದು' ಎಂದು ಕರೆದಿದ್ದಾರೆ. ಭವಪ್ರಪಂಚದಲ್ಲಿ ಆರಂಭವಾಗಿ ಭಾವಪ್ರಪಂಚದಲ್ಲಿ ವಿಹರಿಸಿ ಭವ್ಯತಾಪ್ರಪಂಚದ ಸೀಮೆಯಲ್ಲಿ ಲೀನವಾಗಿದೆ ಕವನ. ಕಣ್ಣಿಗೆ ಕಾಣುವ ಹೆಣ್ಣಿನ ಜಡೆಗಳ ವೈವಿಧ್ಯದಿಂದ ಪ್ರಾರಂಭವಾಗಿ, ಪುರಾಣಪ್ರಪಂಚದ ಪ್ರಖ್ಯಾತ ಜಡೆಗಳನ್ನು ನೆನೆದು ಓ ಓ ಈ ಜಡೆಗೆಲ್ಲಿ ಕಡೆ ಎಂದು ಆಶ್ಚರ್ಯವನ್ನು ವ್ಯಕ್ತಪಡಿಸಿ ಅನಂತರ ಪ್ರಕೃತಿಯ ವಿವಿಧ ಮುಖಗಳಲ್ಲಿ ಹೆಣೆದುಕೊಂಡಿರುವ ಜಡೆಗಳನ್ನು ವರ್ಣಿಸುವ ಪಂಕ್ತಿಗಳು ಇವು:

ಸಂಜೆಯಲಿ ಹಗಲು ಕೆದರುವ ಕತ್ತಲೆಯ
ಕಾಳಜಡೆ
ಬೆಳಗಿನಲಿ ಇರುಳು ಬಿಚ್ಚುವ ಬೆಳ್ಳನೆಯ
ಬೆಳಕು ಜಡೆ
ಒಮ್ಮೊಮ್ಮೆ ಮುಗಿಲಿನಲಿ ತೇಲುತ್ತ ಬರುವಂಥ
ಬೆಳ್ಳಕ್ಕಿಗಳ ಜಡೆ,
ಕೊಂಚೆಗಳ ಜಡೆ
ಮರಮರದಿ ಬಳಕುತ್ತ ಹೂ ಬಿಟ್ಟ ಬಳ್ಳಿ ಜಡೆ
ಕಾಡು ಬಯಲಿನ ಹಸರು ಹಸರದಲಿ ಹರಿಹರಿದು
ಮುನ್ನಡೆವ ಹೊಳೆಯ ಜಡೆ;
ಶ್ರೇಣಿ ಶ್ರೇಣಿಗಳಾಗಿ ಹರಿದಿರುವ ಗಿರಿಯ ಜಡೆ

ಚೆನ್ನವೀರ ಕಣವಿಯವರೂ ಪ್ರಕೃತಿಯನ್ನು ಮೆಚ್ಚಿ ಆರಾಧಿಸಿದ ಕವಿ. ಕಾವ್ಯಾಕ್ಷಿ, ಆಕಾಶಬುಟ್ಟಿ, ಭಾವಜೀವಿ, ಮಧುಚಂದ್ರ, ನೆಲ ಮುಗಿಲು ಮುಂತಾದ ಕವನಸಂಕಲನಗಳ ಅನೇಕ ಕವನಗಳು ಇವರ ಕಾವ್ಯಪ್ರತಿಭೆಯನ್ನು ಎತ್ತಿ ಸಾರುತ್ತಿವೆ. ನಿಯಮೋಲ್ಲಂಘನ ಎಂಬುದು ಇವರ ಅತ್ಯುತ್ತಮ ಕವನಗಳಲ್ಲಿ ಒಂದು. ಅದರ ಒಂದು ಚರಣ ಹೀಗಿದೆ:

ತರುಲತಾದಿಗಳಲ್ಲಿ ಚಿಗುರಿಲ್ಲ ಹೊಗರಿಲ್ಲ-
ಅಸ್ಥಿಪಂಜರವಾಗಿ ಸವೆಯುತಿಹವು
ಎಲ್ಲೊ ಅಂಗೈಯಗಲ ಹಸಿರು ಕಂಡರೆ ಸಾಕು
ಮನದ ಆಸೆಗಳಲ್ಲಿ ಸೇರುತಿಹವು

'ಕಾಲ' ಚೆನ್ನವೀರ ಕಣವಿಯವರ ಇನ್ನೊಂದು ಉತ್ತಮ ಕವನ.

ಈ ಸಮೀಕ್ಷೆಯಲ್ಲಿ ಸಾಂಕೇತಿಕವಾಗಿ ಕನ್ನಡದ ಕೆಲವು ಪ್ರಮುಖ ಕವಿಗಳ ಕಾವ್ಯಶೈಲಿಯನ್ನು ತೋರಿಸಲಾಗಿದೆ. ಇವರಲ್ಲದೆ ಇನ್ನೂ ನೂರಾರು ಜನ ಭಾವಗೀತಕಾರರು ತಮ್ಮ ಕವನಸಂಕಲನಗಳ ಮೂಲಕ ಭಾವಗೀತೆಯ ಪ್ರಕಾರವನ್ನು ಶ್ರೀಮಂತಗೊಳಿಸಿದ್ದಾರೆ. ಅವರಲ್ಲಿ ಪ್ರಮುಖರಾದ ಕೆಲವರು: ಪೇಜಾವರ ಸದಾಶಿವರಾಯರು, ಎಂ.ವಿ.ಸೀತಾರಾಮಯ್ಯ, ಸಿದ್ಧಯ್ಯ ಪುರಾಣಿಕ, ರಂಗನಾಥ ಎಕ್ಕುಂಡಿ, ಎಸ್.ಐ.ಇಂಚಲ, ಡಿ.ಎಸ್.ಕರ್ಕಿ, ಕುಸುಮಾಕರ ದೇವರಗೆಣ್ಣೂರ, ಸೇಡಿಯಾಪು ಕೃಷ್ಣಭಟ್ಟ, ಕಯ್ಯಾರ ಕಿಞ್ಞಣ್ಣ ರೈ, ಗಣಪತಿರಾವ್ ಪಾಂಡೇಶ್ವರ, ಜಿ.ಗುಂಡಣ್ಣ, ಗಂಗಾಧರ ಚಿತ್ತಾಲ, ಮಧುರಚೆನ್ನ, ದಿನಕರ ದೇಸಾಯಿ, ಎಸ್.ವಿ.ಪರಮೇಶ್ವರಭಟ್ಟ, ರಂ.ಶ್ರೀ.ಮುಗಳಿ, ಬ.ಗಿ.ಯಲ್ಲಟ್ಟಿ, ಸಾಲಿ ರಾಮಚಂದ್ರರಾಯರು, ಜಿ.ವರದರಾಜರಾವ್, ಅರ್ಚಕ ವೆಂಕಟೇಶ, ಅಕಬರ ಅಲಿ, ಹಿ.ಮ.ನಾಗಯ್ಯ.

ಭಾವಗೀತೆಗಳ ಇತಿಹಾಸ ಸುಮಾರು ಅರ್ಧ ಶತಮಾನಗಳ ಅವಧಿಯದ್ದು, ಈ ಐವತ್ತು ವರ್ಷಗಳಲ್ಲಿ ರಚಿತವಾಗಿರುವ ಭಾವಗೀತೆಗಳು ಗುಣದಲ್ಲೂ ಸಂಖ್ಯೆಯಲ್ಲೂ ಯಾವುದೇ ಸಾಹಿತ್ಯಕ್ಕೂ ಹೆಮ್ಮೆ ಸಮಾಧಾನಗಳನ್ನು ತರುವ ಅಂತಸ್ಸತ್ವವನ್ನು ಉಳ್ಳವು ಎಂಬ ಅಂಶ ಗಮನಾರ್ಹವಾದದ್ದು. ಈ ಭಾವಗೀತ ಪ್ರಕಾರವೇ ಮುಂದೆ ನವ್ಯಕಾವ್ಯದ ಜನನಕ್ಕೆ ಬೀಜಾಂಕುರವಾಯಿತು. (ಪಿ.ಎಸ್.)

**ಕನ್ನಡದಲ್ಲಿ ಭಾಷಾಂತರಗಳು** : ಕನ್ನಡ ಸಾಹಿತ್ಯ ತನ್ನ ಸಾವಿರದ ಮುನ್ನೂರು ವರ್ಷಗಳ ಇತಿಹಾಸದಲ್ಲಿ ಉದ್ದಕ್ಕೂ ಭಾಷಾಂತರಗಳಿಂದ ಪುಷ್ಟವಾಗಿದೆ. ಈ ಭಾಷಾಂತರ ಪರಂಪರೆಯನ್ನು ಕವಿರಾಜಮಾರ್ಗದ ಕಾಲದಿಂದಲೂ ಗುರುತಿಸಬಹುದು. ಹಿಂದೆ ಸಂಸ್ಕೃತ ಪ್ರಾಕೃತಗಳಿಂದ, ಆಧುನಿಕ ಕಾಲದಲ್ಲಿ ವಿಶೇಷವಾಗಿ ಇಂಗ್ಲಿಷಿನಿಂದ ಭಾಷಾಂತರಗಳು ಬಂದಿವೆ. ಪ್ರಾಚೀನ ಕನ್ನಡ ಸಾಹಿತ್ಯವೆಲ್ಲ ಭಾಷಾಂತರವೆಂದು ಹೇಳುವುದುಂಟು. ಇದು ಪೂರ್ಣ ಸತ್ಯವಲ್ಲ. ಹಿಂದಿನ ಕನ್ನಡ ಕವಿಗಳು ಸಂಸ್ಕೃತ ಪ್ರಾಕೃತಗಳಿಂದ ವಸ್ತುವನ್ನು ಸ್ವೀಕರಿಸುತ್ತಿದ್ದರೆಂಬ ಬಹು ಸ್ಥೂಲವಾದ ಅರ್ಥದಲ್ಲಿ ಅವರ ಕೃತಿಗಳನ್ನು ಭಾಷಾಂತರಗಳೆನ್ನಬಹುದು. ಆದರೆ ಅವರು ಪ್ರತಿಭೆ, ಸ್ವೋಪಜ್ಞತೆಗಳನ್ನು ತಮ್ಮ ಕಾವ್ಯಗಳಲ್ಲಿ ಮೇಳವಿಸುತ್ತಿದ್ದರು. ಅವರಲ್ಲಿ ಭಾಷಾಂತರ ಎನ್ನುವುದು ಕೇವಲ ಒಂದು ಅಂಗವಾಗಿತ್ತಷ್ಟೆ. ಆದ್ದರಿಂದ ಹಿಂದಿನ ಕನ್ನಡ ಕಾವ್ಯಗಳನ್ನು ಬರಿಯ ಭಾಷಾಂತರಗಳೆನ್ನದೆ ಸ್ವತಂತ್ರ ಕೃತಿಗಳೆಂದೇ ಪರಿಗಣಿಸಬೇಕಾಗುತ್ತದೆ. ಪಂಪ, ಕುಮಾರವ್ಯಾಸರ ಭಾರತಗಳನ್ನು ಒಂದರ್ಥದಲ್ಲಿ ಭಾಷಾಂತರಗಳೆನ್ನಬಹುದಾದರೂ ಮತ್ತೊಂದು ದೃಷ್ಟಿಯಿಂದ ಅವು ಸ್ವತಂತ್ರ ಕಾವ್ಯಗಳೇ. ಇಂದು ಭಾಷಾಂತರವೆಂದರೆ ಯಾವ ನಿಷ್ಕೃಷ್ಟವಾದ ಖಚಿತವಾದ ಕಲ್ಪನೆಯಿದೆಯೋ ಅದು ಹಿಂದಿನವರಿಗಿರಲಿಲ್ಲ. ಭಾಷಾಂತರಿಸುವುದು ಅವರ ಉದ್ದೇಶವಲ್ಲ. ಆದರೆ ಇಂದಿನ ಅರ್ಥದಲ್ಲಿ ಕೂಡ ಭಾಷಾಂತರದ ಅಂಶಗಳನ್ನು ಪ್ರಾಚೀನ ಕನ್ನಡ ಸಾಹಿತ್ಯ ವಿಪುಲವಾಗಿ ತೋರಿಸಿಕೊಡುತ್ತಿದೆ ಎಂಬುದು ಗಮನಾರ್ಹ ಸಂಗತಿ. ರೂಪಾಂತರ, ಭಾವಾನುವಾದ, ಸಂಗ್ರಹಾನುವಾದ, ವಿಸ್ತಾರಾನುವಾದ, ನಿಕಟಾನುವಾದ ಮುಂತಾದ ಬಗೆಗಳಿಗೆಲ್ಲ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ನಿದರ್ಶನಗಳಿವೆ. ನಮ್ಮ ಹಿಂದಿನ ಕವಿಗಳು ಯಾವುದೋ ಒಂದು ಆಕರವನ್ನು ಆಧಾರವಾಗಿಟ್ಟುಕೊಂಡಿದ್ದರೂ ಅದಕ್ಕೆ ಮಾತ್ರ ತಮ್ಮನ್ನು ಸೀಮಿತಗೊಳಿಸಿಕೊಳ್ಳದೆ ವರ್ಣನಾವಸರದಲ್ಲಿ ನಾನಾ ಮೂಲಗಳಿಂದ ಅನುವಾದಿಸುವುದೂ ಉಂಟು. ಒಟ್ಟಿನಲ್ಲಿ ಪ್ರಾಚೀನ ಕನ್ನಡ ಕೃತಿಗಳು ಸ್ಥೂಲವಾಗಿ ಅಂಶತಃ ಭಾಷಾಂತರಗಳಾಗಿವೆ. ನಿಯತವಾದ ಅರ್ಥದಲ್ಲಿ ಅಪ್ಪಟ ಭಾಷಾಂತರಗಳನ್ನು ನಾವು ನೋಡುವುದು ಆಧುನಿಕ ಕಾಲದಲ್ಲೇ.

ಹಳಗನ್ನಡದಲ್ಲಿ ಕಂಡುಬರುವ ಕೆಲವು ಭಾಷಾಂತರ ನಿದರ್ಶನಗಳನ್ನು ಮೊದಲು ನೋಡಬಹುದು. ದಂಡಿಯ ಕಾವ್ಯಾದರ್ಶವನ್ನು ಬಹುಮಟ್ಟಿಗೆ ಅವಲಂಬಿಸಿರುವ ಕವಿರಾಜಮಾರ್ಗದ ಪ್ರಾರ್ಥನಾಪದ್ಯವೇ ಭಾಷಾಂತರವಾಗಿದೆ. ಜನ್ನನ ಯಶೋಧರಚರಿತೆ ಕಾವ್ಯವೆಲ್ಲ ಬಹುಮಟ್ಟಿಗೆ ವಾದಿರಾಜನ ಸಂಸ್ಕೃತ ಯಶೋಧರ ಚರಿತದ ನಿಕಟಾನುವಾದವಾಗಿದೆ.

ಹೊಸಗನ್ನಡ ಸಾಹಿತ್ಯ ಭಾಷಾಂತರಗಳಿಗೆ ಬಹಳ ಋಣಿಯಾಗಿದೆ. 16ನೆಯ ಶತಮಾನದ ಅನಂತರ ಮಡುಗಟ್ಟಿ ನಿಂತ ನೀರಾಗಿದ್ದ ಕನ್ನಡ ಸಾಹಿತ್ಯವಾಹಿನಿಗೆ 19-20ನೆಯ ಶತಮಾನಗಳಲ್ಲಿ ಹೊಸ ಪಾತ್ರವನ್ನು ನಿರ್ಮಿಸಿದ ಶ್ರೇಯಸ್ಸು ಭಾಷಾಂತರಗಳದು. ಅದರಲ್ಲೂ ಇಂಗ್ಲಿಷಿನಿಂದಾದ ಭಾಷಾಂತರಗಳದು. ವಿಲಿಯಂ ಕೇರಿಯ ಬೈಬಲಿನ ಭಾಷಾಂತರ 1829ರಲ್ಲೇ ಪ್ರಕಟವಾಯಿತು. ಮುದ್ರಾಮಂಜೂಷವನ್ನು ಬಿಟ್ಟರೆ ಇದೇ ಹೊಸಗನ್ನಡದಲ್ಲಿ ಮೊದಲು ಅನುವಾದವಾದ ಗದ್ಯಗ್ರಂಥ.

ಕನ್ನಡದಲ್ಲಿ ಆಗಿರುವ ಭಾಷಾಂತರಗಳಲ್ಲಿ ನಾಟಕಗಳು ಬಹುಸಂಖ್ಯೆಯಲ್ಲಿವೆ. ಕನ್ನಡದಲ್ಲಿ ನಮಗೆ ಮೊದಲು ಸಿಕ್ಕುವ ನಾಟಕ 17ನೆಯ ಶತಮಾನದಲ್ಲಿ ರಚಿತವಾದ ಸಿಂಗರಾರ್ಯನ ಮಿತ್ರವಿಂದಾಗೋವಿಂದ. ಇದು ಸಂಸ್ಕೃತ ರತ್ನಾವಳಿಯ ಅನುವಾದ. ಮುಂದೆ 19-20ನೆಯ ಶತಮಾನಗಳಲ್ಲಿ ಮುಖ್ಯ ಸಂಸ್ಕೃತ ನಾಟಕಗಳೆಲ್ಲ ಕನ್ನಡಕ್ಕೆ ಬಂದುವು. ಬಸವಪ್ಪಶಾಸ್ತ್ರಿಗಳು ಶಾಕುಂತಲ, ವಿಕ್ರಮೋರ್ವಶೀಯ, ರತ್ನಾವಳಿ, ಉತ್ತರರಾಮಚರಿತೆ ಮತ್ತು ಚಂಡಕೌಶಿಕ ನಾಟಕಗಳನ್ನು ಭಾಷಾಂತರಿಸಿದರು. ಅವರ ಶಾಕುಂತಲದ ಅನುವಾದ ಶ್ರೇಷ್ಠವೆನಿಸಿದೆ. ಅವರಿಗಿಂತ ಮೊದಲೆ ಚುರಮುರಿ ಶೇಷಗಿರಿರಾಯರು ಶಾಕುಂತಲವನ್ನು ಹಾಡಿನ ರೂಪದಲ್ಲಿ ಅನುವಾದಿಸಿದ್ದರು. ಬಿ.ಕೃಷ್ಣಪ್ಪನವರು ಅದನ್ನು ಗದ್ಯದಲ್ಲಿ ಪರಿವರ್ತಿಸಿದ್ದರು. ಧೋಂಡೊ ನರಸಿಂಹ ಮುಳಬಾಗಿಲರು ಉತ್ತರರಾಮಚರಿತೆ, ಮಾಲವಿಕಾಗ್ನಿಮಿತ್ರ, ಮೃಚ್ಛಕಟಿಕ, ವೇಣೀಸಂಹಾರಗಳನ್ನು ಭಾಷಾಂತರಿಸಿದ್ದಾರೆ. ಅಳಸಿಂಗಾಚಾರ್ಯರಿಂದ ಸ್ವಪ್ನವಾಸವದತ್ತ, ಪಂಚರಾತ್ರಗಳು, ಮೈಸೂರು ಸೀತಾರಾಮಶಾಸ್ತ್ರಿಗಳಿಂದ ಪ್ರತಿಮಾನಾಟಕ, ನಂಜನಗೂಡು ಸುಬ್ಬಾಶಾಸ್ತ್ರಿಗಳಿಂದ ಮೃಚ್ಛಕಟಿಕ, ಅನಂತನಾರಾಯಣಶಾಸ್ತ್ರಿಗಳಿಂದ ನಾಗಾನಂದ ಅನುವಾದಗೊಂಡಿವೆ. ವೇಣೀಸಂಹಾರವನ್ನು ಸೀತಾರಾಮಶಾಸ್ತ್ರಿಗಳೂ ಜಯರಾಯಾಚಾರ್ಯರೂ ಭಾಷಾಂತರಿಸಿದ್ದಾರೆ. ಈ ಎಲ್ಲ ಭಾಷಾಂತರಗಳೂ ಕಂದವೃತ್ತಗಳ ರೂಪದಲ್ಲಿವೆ. ಹೊಸಗನ್ನಡ ಛಂದಸ್ಸಿನಲ್ಲೂ ಸಂಸ್ಕೃತ ನಾಟಕಗಳನ್ನು ಅನುವಾದಿಸಲಾಗಿದೆ. ಎಸ್.ವಿ.ಪರಮೇಶ್ವರಭಟ್ಟರು ಕಾಳಿದಾಸ, ಭಾಸರ ಎಲ್ಲ ನಾಟಕಗಳನ್ನೂ ಕೆ.ಕೃಷ್ಣಮೂರ್ತಿಯವರು ಪ್ರತಿಮಾನಾಟಕ, ಉತ್ತರಾಮಚರಿತೆ, ಯಜ್ಞಫಲ, ಆಶ್ಚರ್ಯ ಚೂಡಾಮಣಿಗಳನ್ನೂ ಕನ್ನಡಿಸಿದ್ದಾರೆ. ಎಲ್.ಗುಂಡಪ್ಪನವರು ಭಾಸನ ಏಕಾಂಕ ನಾಟಕಗಳನ್ನೂ ಪ್ರತಿಜ್ಞಾ ಯೌಗಂಧರಾಯಣ ನಾಟಕ, ಸ್ವಪ್ನವಾಸವದತ್ತ ನಾಟಕಗಳನ್ನೂ ಅನುವಾದಿಸಿದ್ದಾರೆ. ತೀ.ನಂ.ಶ್ರೀಯವರ ರಾಕ್ಷಸನ ಮುದ್ರಿಕೆ ಸಂಸ್ಕೃತ ಮುದ್ರಾರಾಕ್ಷಸದ ಸಂಗ್ರಹಾನುವಾದ. ಸಿ.ಪಿ.ಕೆ.ಅವರಿಂದ ಸ್ವಪ್ನವಾಸವದತ್ತ, ಪ್ರತಿಜ್ಞಾಯೌಗಂಧರಾಯಣ, ರತ್ನಾವಳಿ, ನಾಗಾನಂದ, ವೇಣೀಸಂಹಾರಗಳು ಭಾಷಾಂತರಗೊಂಡಿವೆ.

ಇಂಗ್ಲಿಷಿನಿಂದ ನಾಟಕಗಳನ್ನು ಅನುವಾದಿಸಿದವರಲ್ಲಿ ಎಂ.ಎಲ್. ಶ್ರೀಕಂಠೇಶಗೌಡರು ಮೊದಲಿಗರು. ಅವರು ಷೇಕ್ಸ್‌ಪಿಯರನ ಮ್ಯಾಕ್‌ಬೆತ್, ಎ ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್ ನಾಟಕಗಳನ್ನು ಅನುಕ್ರಮವಾಗಿ ಪ್ರತಾಪರುದ್ರದೇವ, ಪ್ರಮೀಳಾರ್ಜುನೀಯ ಎಂದು ಕನ್ನಡಕ್ಕೆ ತಂದಿದ್ದಾರೆ. ಚುರಮುರಿಯವರು ಒಥೆಲೊ ನಾಟಕವನ್ನು ರಾಘವೇಂದ್ರರಾವ್ ನಾಟಕ ಎಂದೂ ಸಿ.ಆನಂದರಾಯರು ರೋಮಿಯೊ ಅಂಡ್ ಜೂಲಿಯಟ್ ನಾಟಕವನ್ನು ರಾಮವರ್ಮ ಲೀಲಾವತಿ ಎಂದೂ ಪರಿವರ್ತಿಸಿದ್ದಾರೆ. ಮ್ಯಾಕ್‌ಬೆತ್ ನಾಟಕವನ್ನು ಡಿ.ವಿ.ಜಿ.ಯವರು ಸೊಗಸಾಗಿ ಕನ್ನಡಿಸಿದ್ದಾರೆ. ಕುವೆಂಪು ಅವರ ರಕ್ತಾಕ್ಷಿ ಮತ್ತು ಬಿರುಗಾಳಿ ಷೇಕ್ಸ್‌ಪಿಯರನ ನಾಟಕಗಳ ರೂಪಾಂತರಗಳು. ಷೇಕ್ಸ್‌ಪಿಯರನ ಕೆಲವು ನಾಟಕಗಳು ಮಾಸ್ತಿಯವರಿಂದಲೂ ಅನುವಾದಗೊಂಡಿವೆ. ಕೆ.ಎಸ್.ಭಗವಾನ್ ಅವರಿಂದ ಜೂಲಿಯಸ್ ಸೀಸರ್, ಮ್ಯಾಕ್‌ಬೆತ್, ಒಥೆಲೋಗಳು ತರ್ಜುಮೆಗೊಂಡಿವೆ. ಬರ್ನಾರ್ಡ್‌ಷಾನ ಪಿಗ್ಮೇಲಿಯನ್ ಮತ್ತು ಮೇಜರ್ ಬಾರ್ಬರಾಗಳನ್ನು ವಿ.ಸೀ.ಕನ್ನಡಿಸಿದ್ದಾರೆ.

ಗ್ರೀಕ್ ಸಾಹಿತ್ಯದಿಂದ ಅನೇಕ ನಾಟಕಗಳು ಕನ್ನಡಕ್ಕೆ ಬಂದಿವೆ. ಪಾರಸಿಕರು, ಅಂತಿಗೊನೆ, ಏಜಾಕ್ಸ್, ದೊರೆ ಈಡಿಪಸ್, ಕಪ್ಪೆಗಳು, ಬದ್ಧಪ್ರಮಿತ್ಯೂಸ್, ಮೀಡಿಯಾ ಇವುಗಳನ್ನು ಕನ್ನಡಕ್ಕೆ ತಂದಿರುವವರು ಬಿ.ಎಂ.ಶ್ರೀ., ಕೆ.ವಿ.ರಾಘವಾಚಾರ್, ಸುಜನಾ, ಟಿ.ವಿ.ವೆಂಕಟಾಚಲಶಾಸ್ತ್ರೀ ಮತ್ತು ಕೆ.ಎಸ್.ನರಸಿಂಹಸ್ವಾಮಿ. ಇಬ್ಸನ್ನನ ಕೆಲವು ನಾಟಕಗಳನ್ನು ಎಸ್.ಜಿ.ಶಾಸ್ತ್ರೀ, ಅಡಿಗ, ಶ್ರೀರಂಗರು ಕನ್ನಡಿಸಿದ್ದಾರೆ. ಮೋಲಿಯರನ ಎರಡು ನಾಟಕಗಳನ್ನು ಎ.ಎನ್.ಮೂರ್ತಿರಾಯರು ಅನುವಾದಿಸಿದ್ದಾರೆ. ಗಯಟೆಯ ಫೌಸ್ಟ್ ನಾಟಕದ ಪ್ರಥಮ ಭಾಗ ಪು.ತಿ.ನ.ಅವರಿಂದ ಭಾಷಾಂತರವಾಗಿದೆ. ಪಿ.ಲಂಕೇಶರ 'ದೊರೆ ಈಡಿಪಸ್ ಮತ್ತು ಅಂತಿಗೊನೆ' ಇತ್ತೀಚಿನ ಸಮರ್ಥ ಅನುವಾದ ಗ್ರಂಥ. ಷೇಕ್ಸ್‌ಪಿಯರನ ಎ.ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್ ನಾಟಕವನ್ನು ನಿಸಾರ್ ಅಹಮದ್ ಕನ್ನಡಕ್ಕೆ ಅದೇ ಹೆಸರಿನಲ್ಲಿ ಅನುವಾದಿಸಿದ್ದಾರೆ. ಆಲ್ಬರ್ಟ್ ಕಾಮುವಿನ ಎರಡು ನಾಟಕಗಳನ್ನು (ಕಾಲಿಗುಲ; ತಪ್ಪಿದ ಎಳೆ) ಡಿ.ಎ.ಶಂಕರ್, ಅ.ರಾ.ಮಿತ್ರ ಅನುವಾದಿಸಿದ್ದಾರೆ.

ಹೊಸಗನ್ನಡ ಕವಿತೆ ಭಾಷಾಂತರಗಳಿಂದಲೇ ಮೊದಲಾಯಿತು. 19ನೆಯ ಶತಮಾನದ ಮಧ್ಯಭಾಗದಲ್ಲಿ ಇಂಗ್ಲಿಷ್, ಜರ್ಮನ್ ಮುಂತಾದ ಭಾಷೆಗಳಿಂದ ಕ್ರಿಶ್ಚಿಯನ್ ಮಿಷನರಿಗಳು ಕವಿತೆಗಳನ್ನೂ ಗೀತೆಗಳನ್ನೂ ಅನುವಾದಿಸಿ ಪ್ರಕಟಿಸಿದ್ದರು. ಕಳೆದ ಶತಮಾನದ ಕಡೆಯಲ್ಲಿ ಮತ್ತು ಈ ಶತಮಾನದ ಮೊದಲ ಎರಡು ದಶಕಗಳಲ್ಲಿ ಈ ಅನುವಾದಕಾರ್ಯ ವ್ಯಾಪಕವಾಗಿ ನಡೆಯಿತು. ಈ ಕ್ಷೇತ್ರದಲ್ಲಿ ಹಟ್ಟಿಯಂಗಡಿ ನಾರಾಯಣರಾಯ, ಎಸ್.ಜಿ.ನರಸಿಂಹಾಚಾರ್ಯ, ಜಯರಾಯಾಚಾರ್ಯ, ಪಂಜೆ ಮಂಗೇಶರಾಯ, ಗೋವಿಂದ ಪೈ, ಬಿ.ಎಂ.ಶ್ರೀಕಂಠಯ್ಯನರು ಮುಖ್ಯರು. 1921ರಲ್ಲಿ ಪ್ರಕಟವಾದ ಶ್ರೀಯವರ ಇಂಗ್ಲಿಷ್ ಗೀತಗಳು ಹೊಸಗನ್ನಡ ಕಾವ್ಯದ ಚರಿತ್ರೆಯಲ್ಲಿ ಒಂದು ಮೈಲುಗಲ್ಲು. ಅದು ಕನ್ನಡ ಕವಿಗಳಿಗೆ ಹೊಸ ಹೊಸ ವಸ್ತುಗಳನ್ನು ತೋರಿಸಿಕೊಟ್ಟಿತಲ್ಲದೆ ಹೊಸ ಲಯಗಳನ್ನು ರೂಪಿಸಿ, ಭಾವಗೀತೆಗಳ ಯುಗಕ್ಕೆ ನಾಂದಿಯಾಯಿತು. ಕುವೆಂಪು ಅವರ ದೇವಕೇತು (ಹೌಂಡ್ ಆಫ್ ಹೆವನ್), ಬೊಮ್ಮನಹಳ್ಳಿಯ ಕಿಂದರಿಜೋಗಿ,

ಎಲ್.ಗುಂಡಪ್ಪನವರ ಸೊಹ್ರಾಬ್-ರುಸ್ತುಂ, ಅಡಿಗರ ಹುಲ್ಲಿನ ದಳಗಳು (ಲೀವ್ಸ್ ಆಫ್ ಗ್ರಾಸ್) ಇತ್ಯಾದಿ ಅನುವಾದಗಳನ್ನು ಈ ಕ್ಷೇತ್ರದಲ್ಲಿ ಹೆಸರಿಸಬಹುದು. ಇಲಿಯಡ್ ಮತ್ತು ಒಡಿಸ್ಸಿ ಕಾವ್ಯಗಳು ಎಲ್.ಎಸ್.ಶೇಷಗಿರಿರಾವ್ ಹಾಗೂ ಜಿ.ಎ.ರೆಡ್ಡಿಯವರಿಂದ ಗದ್ಯರೂಪದಲ್ಲಿ ಕನ್ನಡಕ್ಕೆ ತರ್ಜುಮೆಗೊಂಡಿವೆ. ಏಟ್ಸ್ ಕವಿಯ 50 ಕವನಗಳನ್ನು ಎನ್.ಎಸ್.ಲಕ್ಷ್ಮೀನಾರಾಯಣಭಟ್ಟ ಅನುವಾದಿಸಿ ಚಿನ್ನದ ಹಕ್ಕಿ ಎಂಬ ಸಂಕಲನವನ್ನು ತಂದಿದ್ದಾರೆ. ವೆರಿಯರ್ ಎಲ್ವಿನ್‌ರ ಕೃತಿಯನ್ನು ಕಾಡಿನ ಹಾಡುಗಳು ಎಂಬ ಶೀರ್ಷಿಕೆಯಲ್ಲಿ ಸಿ.ಪಿ.ಕೆ.ಯವರು ಕನ್ನಡಿಸಿದ್ದಾರೆ.

ಸಂಸ್ಕೃತದಿಂದ ಕೆಲವು ಕಾವ್ಯಗಳನ್ನು ಕನ್ನಡಕ್ಕೆ ತರಲಾಗಿದೆ. ಎ.ಆರ್.ಕೃಷ್ಣಶಾಸ್ತ್ರಿಗಳ ವಚನ ಭಾರತ ಹಾಗೂ ಕಥಾಮೃತ ಇವು ಗಣ್ಯವಾದ ಕೃತಿಗಳು. ಶ್ರೀ ಮನ್ಮಹಾಭಾರತ ಸಂಪುಟಗಳು ಸುಬ್ರಹ್ಮಣ್ಯ ಕೌಶಿಕರು ಕನ್ನಡಕ್ಕೆ ತಂದ ಸರಳಾನುವಾದಗಳು. ಎನ್.ರಂಗನಾಥಶರ್ಮರು. ಶ್ರೀಮದ್ವಾಲ್ಮೀಕಿ ರಾಮಾಯಣಮ್ ಕೃತಿಯನ್ನು ಅನುವಾದಿಸಿದ್ದಾರೆ. ಚುರಮುರಿಯವರಿಂದ ಬಾಣನ ಕಾದಂಬರಿ ಅನುವಾದಗೊಂಡಿದೆ. ಎಸ್.ವಿ.ಪರಮೇಶ್ವರ ಭಟ್ಟರು ಗೀತಗೋವಿಂದ, ಗಾಥಾಸಪ್ತಶತಿ, ಅಮರಶತಕ, ಭರ್ತೃಹರಿಶತಕ, ಬುದ್ಧಚರಿತಗಳನ್ನು ಕನ್ನಡಿಸಿದ್ದಾರೆ. ಅಶ್ವಘೋಷನ ಬುದ್ಧಚರಿತೆ ಹಾಗೂ ಸೌಂದರನಂದ ಕೃತಿಗಳನ್ನು ಇತ್ತೀಚೆಗೆ ಎಲ್.ಬಸವರಾಜು ಅವರು ಅನುವಾದಿಸಿದ್ದಾರೆ. ಬೇಂದ್ರೆಯವರ ಮೇಘದೂತದ ಅನುವಾದ ಶ್ಲಾಘ್ಯವಾಗಿದೆ. ಎಂ.ಜಿ.ನಂಜುಂಡಾರಾಧ್ಯರು ಶಿಶುಪಾಲವಧವನ್ನು, ಕಡವ ಶಂಭುಶರ್ಮರು ಸೌಂದರನಂದವನ್ನು, ವೈ.ನಾಗೇಶಶಾಸ್ತ್ರಿಗಳು ರಘುವಂಶವನ್ನು, ಅಮ್ಮೆಂಬಳ ಶಂಕರನಾರಾಯಣರು ಕುಮಾರಸಂಭವವನ್ನು, ಸಿ.ಪಿ.ಕೆ.ಯವರು ಯಶೋಧರಚರಿತೆ, ಸೌಂದರ್ಯ ಲಹರಿಗಳನ್ನು, ಮೇವುಂಡಿ ಮಲ್ಲಾರಿಯವರು ಶಿವಾನಂದಲಹರಿಯನ್ನು, ಕೆ.ಕೃಷ್ಣಮೂರ್ತಿ ಅವರು ಕಿರಾತಾರ್ಜುನೀಯದ ಕೆಲವು ಸರ್ಗಗಳನ್ನು ಅನುವಾದಿಸಿದ್ದಾರೆ. ತೀ.ನಂ.ಶ್ರೀ.ಯವರ ಬಿಡಿಮುತ್ತು ಸಂಸ್ಕೃತ ಸುಭಾಷಿತಗಳ ಚೆಲುವಾದ ಭಾಷಾಂತರ.

ಅರಿಸ್ಟಾಟಲ್ ಮತ್ತು ಹೋರೇಸನ ಕಾವ್ಯಮೀಮಾಂಸೆ ಎನ್.ಬಾಲಸುಬ್ರಹ್ಮಣ್ಯಂ ಅವರಿಂದ, ಷೆಲ್ಲಿಯ ಡಿಫೆನ್ಸ್ ಆಫ್ ಪೊಯಟ್ರಿ (ಕಾವ್ಯಸಮರ್ಥನೆ) ಸಿ.ಮಹದೇವಪ್ಪನವರಿಂದ ಹಡ್ಸನ್, ಅಬರ್‌ಕ್ರಾಂಬಿ ಅವರ ಕೃತಿಗಳು ಸಿ.ಪಿ.ಕೆ. ಅವರಿಂದ, ಎಲಿಯಟ್ಟನ ಕೆಲವು ಬರೆಹಗಳು ಆರ್.ನಾಗರಾಜ ಮತ್ತು ಸಿ.ಪಿ.ಕೆ ಅವರಿಂದ ಭಾಷಾಂತರಗೊಂಡಿವೆ. ಪ್ರಮುಖವಾದ ಸಂಸ್ಕೃತ ಅಲಂಕಾರಗ್ರಂಥಗಳನ್ನೆಲ್ಲ ಕೆ.ಕೃಷ್ಣಮೂರ್ತಿಯವರೂ ಧನಂಜಯನ ದಶರೂಪಕವನ್ನು ಕೆ.ವಿ.ಸುಬ್ಬಣ್ಣನವರೂ ಕನ್ನಡಿಸಿದ್ದಾರೆ.

ಕಥೆಕಾದಂಬರಿಗಳ ರಂಗದಲ್ಲಿಯೂ ಕೆಲವು ಭಾಷಾಂತರಗಳಿವೆ. ರೆ.ವೆಗಲ್ ಮಾಡಿದ ಪಿಲ್‌ಗ್ರಿಮ್ಸ್ ಪ್ರೋಗ್ರೆಸ್ ಗ್ರಂಥದ ಭಾಷಾಂತರ ಯಾತ್ರಿಕನ ಸಂಚಾರ ಎಂಬ ಹೆಸರಿನಲ್ಲಿ 1847ರಲ್ಲಿ ಪ್ರಕಟವಾಯಿತು. ಮುದ್ರಾಮಂಜೂಷವನ್ನು ಬಿಟ್ಟರೆ ಸುದೀರ್ಘ ಕಥೆ ಅಥವಾ ಕಾದಂಬರಿಯಾಗಿ ಕನ್ನಡದಲ್ಲಿ ಭಾಷಾಂತರಗೊಂಡಿರುವುದು ಇದೇ ಮೊದಲನೆಯದು. ಬಿ.ವೆಂಕಟಾಚಾರ್ಯರು ಬಂಗಾಲಿಯಿಂದ ಅನುವಾದಿಸಿದ ಮತ್ತು ಗಳಗನಾಥರು ಮರಾಠಿಯಿಂದ ರೂಪಾಂತರಿಸಿದ ಕಾದಂಬರಿಗಳು ಕನ್ನಡ ಕಾದಂಬರಿ ಪ್ರಪಂಚಕ್ಕೆ ತಳಹದಿ ಹಾಕಿದುವು. ದೇವದಾಸಿ ಜೀವನ ಚಿತ್ರಿಸುವ ಮರಾಠಿಯ ಜೋಗವ್ವವನ್ನು ಶಾ.ಮಂ.ಕೃಷ್ಣರಾಯರು ಕನ್ನಡಕ್ಕೆ ತಂದಿದ್ದಾರೆ. ವೆಂಕಟಾಚಾರ್ಯರು ಬಂಕಿಮಚಂದ್ರರನ್ನೂ ಗಳಗನಾಥರು ಹರಿನಾರಾಯಣ ಆಪ್ಟೆಯವರನ್ನೂ ಕನ್ನಡಕ್ಕೆ ತಂದರು. ಈಚೆಗೆ ಇಂಗ್ಲಿಷಿನಿಂದ ಅನೇಕ ಕಥೆಕಾದಂಬರಿಗಳು ಕನ್ನಡಕ್ಕೆ ಬಂದಿವೆ.

ವಾಲ್ಟರ್ ಸ್ಕಾಟ್‌ನ ಕೆನಿಲ್‌ವರ್ತ್‌ಅನ್ನು ನಾಗೇಗೌಡರು, ಸ್ಟೀವನ್‌ಸನ್ನನ ಡಾ.ಜೆಕಿಲ್ ಅಂಡ್ ಮಿ.ಹೈಡನ್ನು ಆನಂದರು (ಪುರುಷಾಮೃಗ), ಚಾರಲ್ಸ್ ಡಿಕನ್ಸ್‌ನ ಡೇವಿಡ್ ಕಾಪರ್‌ಫೀಲ್ಡನ್ನು ಎ.ಪಿ.ಸುಬ್ಬಯ್ಯನವರು, ಜೇನ್ ಆಸ್ಟೆನ್ನಳ ಪ್ರೈಡ್ ಅಂಡ್ ಪ್ರಿಜುಡಿಸ್ ಅನ್ನು ದೇಜಗೌ ಅವರು (ಹಮ್ಮು-ಬಿಮ್ಮು), ಜಾರ್ಜ್ ಎಲಿಯಟ್ಟಳ ಸೈಲಾಸ್ ಮಾರ್ನರನ್ನು ಎಂ.ರಾಮರಾಯರು, ರೈಡರ್ ಹಗಾರ್ಡನಷಿ ಅನ್ನು ಎ.ಮೈಲಾರಿರಾಯರು (ಆಷಾ) ಭಾಷಾಂತರಿಸಿದ್ದಾರೆ. ಥೋರೋನ ವಾಲ್ಡನ್ ದೇವುಡು ನರಸಿಂಹಶಾಸ್ತ್ರಿಗಳಿಂದ, ಹೆಮಿಂಗ್ವೇಯ ಓಲ್ಡ್ ಮ್ಯಾನ್ ಅಂಡ್ ದಿ ಸೀ, ಪಂಕಜ ಅವರಿಂದ (ಗೆದ್ದು ಸೋತವನು), ಹಾಥಾರ್ನನ ಹೌಸ್ ಆಫ್ ಸೆವನ್ ಗೇಬಲ್ಸ್ ಎಂ.ವಿ.ಸೀತಾರಾಮಯ್ಯನವರಿಂದ (ಏಳು ಇಪ್ಪಾರಿನ ಮನೆ) ಕನ್ನಡಿಸಲ್ಪಟ್ಟಿವೆ. ಥಾಮಸ್ ಹಾರ್ಡಿಯ ಮೇಯರ್ ಆಫ್ ಕ್ಯಾಸ್ಟರ್‌ಬ್ರಿಡ್ಜನ್ನು ಆನಂದರಾಯರು ಸಂಗ್ರಹಾನುವಾದ ಮಾಡಿದ್ದಾರೆ (ಏರಿಳಿತ). ಇದೇ ಲೇಖಕನ ಎರಡು ಕಾದಂಬರಿಗಳನ್ನು ಗೌರೀಶ ಕಾಯ್ಕಿಣಿ ಅನುವಾದಿಸಿದ್ದಾರೆ. ರಿಟರ್ನ್ ಆಫ್ ದಿ ನೇಟೀವ್ ಮತ್ತು ಟೆಸ್ ಆಫ್ ದ ಡಿ ಅರ್ಬರ್ ವಿಲೆ, ಕಾದಂಬರಿಗಳನ್ನು ವಿ.ನಾಗರಾಜರಾವ್ ಕನ್ನಡಕ್ಕೆ ಅನುವಾದಿಸಿದ್ದಾರೆ. ಆಲ್ಬರ್ಟ್ ಕಾಮುವಿನ ದಿ ಔಟ್ ಸೈಡರ್ (ಅನ್ಯ) ಡಿ.ಎ.ಶಂಕರ್ ಅವರಿಂದ ಅನುವಾದವಾಗಿದೆ. ಅವರೇ ಮುಲ್ಕ್ ರಾಜ್ ಆನಂದರ ಅನ್‌ಟಚಬಲ್ಸ್ ಕೃತಿಯನ್ನು ಅಸ್ಪೃಶ್ಯ ಎಂಬ ಹೆಸರಿನಲ್ಲಿ ಕನ್ನಡೀಕರಿಸಿದ್ದಾರೆ. ಆರ್.ಕೆ.ನಾರಾಯಣ್, ಮಾಳಗಾಂವಕರ್ ಮೊದಲಾದ ಭಾರತೀಯ ಇಂಗ್ಲಿಷ್ ಲೇಖಕರ ಕೆಲವು ಕಾದಂಬರಿಗಳೂ ಕನ್ನಡಕ್ಕೆ ಬಂದಿವೆ. ಎ.ಎನ್.ಮೂರ್ತಿರಾಯರು ಅನೇಕ ಪಾಶ್ಚಾತ್ಯ ಕಥೆಗಳನ್ನು ಯೋಧನ ಪುನರಾಗಮನ ಮತ್ತು ಪಾಶ್ಚಾತ್ಯ ಸಣ್ಣಕಥೆಗಳು ಎಂಬೆರಡು ಸಂಕಲನಗಳಲ್ಲಿ ಕೊಟ್ಟಿದ್ದಾರೆ. ಸಿ.ಪಿ.ಕೆ. ಅವರ ಹನ್ನೊಂದು ಹೊರಗಿನ ಕತೆಗಳನ್ನೂ ಇಲ್ಲಿ ಹೆಸರಿಸಬಹುದು. ಎರಿಕ್ ಫ್ರಾಮ್‌ನ ಮನೋವೈಜ್ಞಾನಿಕ ಕೃತಿಯನ್ನು 'ಪ್ರೀತಿಸುವುದೆಂದರೆ' ಎಂದು ಕೆ.ವಿ.ನಾರಾಯಣ ಅವರು ಅನುವಾದಿಸಿದ್ದಾರೆ.

ಇತರ ಭಾಷೆಗಳ ಕೆಲವು ಕೃತಿಗಳು ಇಂಗ್ಲಿಷಿನ ಮೂಲಕ ಕನ್ನಡಕ್ಕಿಳಿದಿವೆ. ವಿಕ್ಟರ್ ಹ್ಯೂಗೋವಿನ ಲೆ ಮಿಸರಬಲ್ ಕಾದಂಬರಿಯನ್ನು ಎ.ಪಿ.ಸುಬ್ಬಯ್ಯ ಮತ್ತು ನಾ.ಕಸ್ತೂರಿ ಅನುವಾದಿಸಿದ್ದಾರೆ. ಡ್ಯೂಮಾನ ತ್ರೀ ಮಸ್ಕೆಟೀರ್ಸನ್ನು ಮಾಧವ ಬಾಳಿಗರು, ವಾಲ್ಟೇರನ ಕ್ಯಾಂಡಿಡ್ ಅನ್ನು ಜಿ.ಪಿ.ರಾಜರತ್ನಂ ಭಾಷಾಂತರಿಸಿದ್ದಾರೆ. ಲಿಯೊ ಟಾಲ್‌ಸ್ಟಾಯ್ ಅವರ ರಷ್ಯನ್ ಕಾದಂಬರಿ ರಿಸರಕ್ಷನ್ ದೇಜಗೌ ಅವರಿಂದ ಪುನರುತ್ಥಾನವಾಗಿ ಕನ್ನಡಕ್ಕೆ ಲಭಿಸಿದೆ. ಅದೇ ಸಾಹಿತಿಯ ವಾರ್ ಅಂಡ್ ಪೀಸ್ ಎಂಬ ಕೃತಿಯನ್ನು ಸಮರ ಮತ್ತು ಶಾಂತಿ ಎಂದು ಅನುವಾದಿಸಿದ ದೇಜಗೌ ಅವರೇ ಅನ್ನ ಕರೇನಿನ ಕೃತಿಯನ್ನು ಕನ್ನಡಕ್ಕೆ ನೀಡಿದ್ದಾರೆ. ಟಾಲ್‌ಸ್ಟಾಯ್‌ನ ಕೆಲವು ಕಥೆಗಳನ್ನು ಎಲ್.ಗುಂಡಪ್ಪನವರೂ ಅಲೆಕ್ಸಿ ಟಾಲ್‌ಸ್ಟಾಯ್ ಅವರ ಆರ್ಡಿಯಲನ್ನು ಆನಂದರೂ ಗಾರ್ಕಿಯ ಆತ್ಮಕಥೆಯನ್ನು ನಿರಂಜನರೂ ಭಾಷಾಂತರಿಸಿದ್ದಾರೆ. ಗೊರೂರು, ಮ.ಶ್ರೀಧರಮೂರ್ತಿ, ತ.ರಾ.ಸು., ಅನಕೃ ಮೊದಲಾದವರು ರಷ್ಯನ್ ಕೃತಿಗಳನ್ನು ಅನುವಾದಿಸಿಕೊಟ್ಟಿದ್ದಾರೆ. ಬುದ್ದಣ್ಣಹಿಂಗಮಿರೆ ಅವರು ಪುಷ್ಕಿನ್ ಕವಿತೆಗಳು ಎಂಬ ಹೆಸರಿನಲ್ಲಿ 41 ಕವಿತೆಗಳನ್ನು ಅನುವಾದಿಸಿದ್ದಾರೆ. ಶಾ.ಬಾಲೂರಾಯರು ಆ್ಯನ್ನಾ ಆದ್ಮತೋವ ಎಂಬ ಕವಯಿತ್ರಿಯ ನೂರು ಕವನಗಳನ್ನು ಕನ್ನಡಕ್ಕೆ ತಂದಿದ್ದಾರೆ. ಸಿ.ಪಿ.ಕೆ. ಅವರು ಟಾಲ್‌ಸ್ಟಾಯ್‌ನ ಕಲೆ ಕುರಿತ ಗ್ರಂಥವನ್ನು ಕನ್ನಡಿಸಿದ್ದಾರೆ.

ಎಸ್.ವಿ.ಪರಮೇಶ್ವರ ಭಟ್ಟ, ಎಂ.ರಾಮರಾವ್ ಮತ್ತು ರಾಮಚಂದ್ರಯ್ಯನವರು ಅನೇಕ ಇಂಗ್ಲಿಷ್ ಪ್ರಬಂಧಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಪ್ಲೇಟೋವಿನ ರಿಪಬ್ಲಿಕ್ ಕೆ.ವೆಂಕಟರಾಮಪ್ಪನವರಿಂದ, ಮ್ಯಾಕಿಯವೆಲ್ಲಿಯ ರಾಜನೀತಿ ನವರತ್ನ ರಾಮರಾಯರಿಂದ ಭಾಷಾಂತರಗೊಂಡಿವೆ. ಎಚ್.ಎಲ್.ನಾಗೇಗೌಡರ ಪ್ರವಾಸಿ ಕಂಡ ಇಂಡಿಯಾದ ಸಂಪುಟಗಳು ಪ್ರವಾಸ ಸಾಹಿತ್ಯದ ಅನುವಾದ. ಲೂಯಿ ಫಿಶರ್, ಲಾರೆನ್ಸ್ ಬನ್ಯನ್ ಮೊದಲಾದವರು ಬರೆದ ಜೀವನ ಚರಿತ್ರೆಗಳೂ ಕೆಲವು ಆತ್ಮಕಥೆಗಳೂ ಕನ್ನಡಕ್ಕೆ ಬಂದಿವೆ. ಗಾಂಧೀ, ನೆಹರು, ವಿವೇಕಾನಂದ, ಅರವಿಂದ, ಟಾಗೂರ್, ಕೃಷ್ಣಾ ಹಥೀಸಿಂಗ್, ರಾಜಾಜಿ ಮೊದಲಾದ ಭಾರತೀಯ ಲೇಖಕರ ಸಾಹಿತ್ಯ ಕನ್ನಡದಲ್ಲಿ ಸಿಗುತ್ತದೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ ಮತ್ತು ಗಾಂಧೀಭವನಗಳು ಹಾಗೂ ಭಾರತೀಯ ವಿದ್ಯಾಭವನ ಕೇಂದ್ರವೂ ಮಹಾತ್ಮಗಾಂಧೀಜಿಯವರ ಕೃತಿಗಳನ್ನೂ ಬರೆಹ, ಭಾಷಣಗಳನ್ನೂ ಜೀವನ ಚರಿತ್ರೆಗಳನ್ನೂ ಕನ್ನಡಕ್ಕೆ ಸಮಗ್ರವಾಗಿ ತಂದಿವೆ. ಆನಂದರು ಟಾಲ್‌ಸ್ಟಾಯ್‌ನ ಆತ್ಮಕಥೆಯ ಮೂರು ಭಾಗಗಳನ್ನು ಅನುವಾದಿಸಿದ್ದಾರೆ. ನೆಹರು ಅವರ ಡಿಸ್ಕವರಿ ಆಫ್ ಇಂಡಿಯಾ ಭಾರತದರ್ಶನ ಎಂಬ ಹೆಸರಿನಿಂದ ಅನುವಾದಗೊಂಡಿದೆ. ಬರ್ಟ್ರಂಡ್ ರಸಲ್‌ನ ಇಂಪ್ಯಾಕ್ಟ್ ಆಫ್ ಸೈನ್ಸ್ ಆನ್ ಸೊಸೈಟಿ ಸಮಾಜದ ಮೇಲೆ ವಿಜ್ಞಾನದ ಪ್ರಭಾವ ಎಂಬ ಹೆಸರಿನಿಂದ ಭಾಷಾಂತರಗೊಂಡಿದೆ.

ನೂರಾರು ವಿಜ್ಞಾನ ಗ್ರಂಥಗಳು ಇಂಗ್ಲಿಷ್ ಹಾಗೂ ಇತರ ಭಾಷೆಗಳಿಂದ ಕನ್ನಡಕ್ಕೆ ಅನುವಾದಗೊಂಡಿವೆ ಎಂದು ಅಂದಾಜಿಸಲಾಗಿದೆ.

ಇವನ್ನು ಪಠ್ಯಪುಸ್ತಕಗಳು, ಜನಪ್ರಿಯ ಗ್ರಂಥಗಳು, ಆಕರ ಗ್ರಂಥಗಳು ಎಂದು ಮೂರು ವಿಭಾಗಗಳಾಗಿ ವಿಂಗಡಿಸಬಹುದು. 1969ರ ವರೆಗೂ ಪ್ರಕಟಗೊಂಡಿರುವ ಅನುವಾದ ಗ್ರಂಥಗಳು ಬಹುಪಾಲು ಮೊದಲಿನ ಎರಡು ವಿಭಾಗಗಳಿಗೇ ಸೀಮಿತವಾಗಿವೆ. ಈಗ ಸಿಕ್ಕಿರುವ ಮೊದಲ ಅನುವಾದಿತ ಗ್ರಂಥದ ಹೆಸರು ಅಂಕಗಣಿತವು (ಇಂಗ್ಲಿಷಿನಿಂದ ಅನುವಾದಿಸಿದವರು ಚನ್ನಬಸಪ್ಪಾ ಬಸಲಿಂಗಪ್ಪಾ ಧಾರವಾಡಕರ, 1873). 1969ರಿಂದ ಈಚೆಗೆ ಮುಖ್ಯವಾಗಿ ವಿಶ್ವವಿದ್ಯಾಲಯಗಳ ನೆರವಿನಿಂದ ಆಕರ ಗ್ರಂಥಗಳ ಕನ್ನಡ ಅನುವಾದಗಳು ಬರತೊಡಗಿವೆ. ಕನ್ನಡ ಬೋಧನ ಮಾಧ್ಯಮವಾಗಲು ಈ ಬಗೆಯ ಶಾಸ್ತ್ರಗ್ರಂಥಗಳ ಅನುವಾದ ಅಗತ್ಯವೆನಿಸಿದೆ. ಈ ಕಾರ್ಯ ಬಹು ತ್ವರೆಯಿಂದ ಜರುಗುತ್ತಿದ್ದು ಆಧಾರ ಗ್ರಂಥಗಳೆಲ್ಲವುಗಳ ಅನುವಾದ ನಡೆಯುತ್ತಿದೆ.

ಹಿಂದಿ, ತಮಿಳು, ತೆಲುಗು, ಮಲಯಾಳಂ, ಬಂಗಾಲಿ, ಮರಾಠಿ, ಉರ್ದು, ಪಂಜಾಬಿ ಮುಂತಾದ ಭಾರತೀಯ ಭಾಷೆಗಳೂ ಕನ್ನಡಕ್ಕೆ ಕೊಡುಗೆಗಳನ್ನಿತ್ತಿವೆ. ಈ ದಿಶೆಯಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ, ನ್ಯಾಷನಲ್ ಬುಕ್ ಟ್ರಸ್ಟ್‌ಗಳು ಮಹತ್ತ್ವದ ಪಾತ್ರವಹಿಸಿವೆ. ಹಿಂದಿಯಿಂದ ರಾಮಚರಿತಮಾನಸ, ಆಂಸೂ ಮುಂತಾದ ಕಾವ್ಯಗಳೂ ಪ್ರೇಮಚಂದ್, ಯಶಪಾಲ್, ವೃಂದಾವನಲಾಲವರ್ಮ, ಹಜಾರಿಪ್ರಸಾದ್‌ದ್ವಿವೇದಿ, ದೇವಕಿನಂದನ ಖತ್ರಿ, ಜಯಶಂಕರ ಪ್ರಸಾದ್, ಮೊದಲಾದವರ ಕಥೆ ಕಾದಂಬರಿ ನಾಟಕ ಪ್ರಬಂಧಗಳೂ ಭಾಷಾಂತರಗೊಂಡಿವೆ. ದ.ಕೃ.ಭಾರದ್ವಾಜ, ಗುರುನಾಥ ಜೋಶಿ, ಕುಮುದಪ್ರಿಯ, ಎಂ.ಎಸ್.ಕೃಷ್ಣ ಮೂರ್ತಿ, ಮೇ.ರಾಜೇಶ್ವರಯ್ಯ, ಪ್ರಧಾನ್ ಗುರುದತ್ತ, ತಿಪ್ಪೇಸ್ವಾಮಿ ಮೊದಲಾದವರು ಈ ಕ್ಷೇತ್ರದಲ್ಲಿ ಕೆಲಸ ಮಾಡಿದ್ದಾರೆ. ಬಂಗಾಲಿಯಿಂದ ಶರಚ್ಚಂದ್ರ, ಟಾಗೂರ್ ಮೊದಲಾದವರ ಕೃತಿಗಳನ್ನು ಅಹೋಬಲ ಶಂಕರ, ಎಚ್.ಕೆ.ವೇದವ್ಯಾಸಾಚಾರ್ಯ, ಶಂಕರಾನಂದ ಸರಸ್ವತಿ, ಎಚ್.ವಿ.ಸಾವಿತ್ರಮ್ಮ ಮೊದಲಾದವರು ಕನ್ನಡಿಸಿದ್ದಾರೆ. ಟಾಗೂರರ ಪ್ರಬಂಧಗಳು ಟಿ.ಎಸ್.ವೆಂಕಣ್ಣಯ್ಯ ಮತ್ತು ಎ.ಆರ್.ಕೃಷ್ಣಶಾಸ್ತ್ರಿಯವರಿಂದ ಅನುವಾದಿತ ವಾಗಿವೆ. ತಮಿಳಿನಿಂದ ಮತ್ತೂರು ಕೃಷ್ಣಮೂರ್ತಿ, ಎಲ್.ಗುಂಡಪ್ಪ, ಕೆ.ಸಂಪದ್ಗಿರಿರಾವ್ ಮೊದಲಾದವರೂ ತೆಲುಗಿನಿಂದ ಕೆ.ವೆಂಕಟರಾಮಪ್ಪ, ಕೋ.ಚೆನ್ನಬಸಪ್ಪ, ವೀರಭದ್ರ, ಆರ್.ವಿ.ಎಸ್.ಸುಂದರಂ ಮೊದಲಾದವರೂ ಮಲಯಾಳಂನಿಂದ ನಾ.ಕಸ್ತೂರಿ, ಕರುಣಾಕರನ್, ಬಿ.ಕೆ.ತಿಮ್ಮಪ್ಪ ಮೊದಲಾದವರೂ ಮರಾಠಿಯಿಂದ ಬಾಲಚಂದ್ರ ಘಾಣೇಕರ, ವಿ.ಎಂ.ಇನಾಂದಾರ್, ಸರಸ್ವತಿಗಜಾನನರಿಸಬೂಡ ಶಾ.ಮಂ.ಕೃಷ್ಣರಾಯ, ಮೊದಲಾದವರೂ ಭಾಷಾಂತರಿಸಿದ್ದಾರೆ. ಮರಾಠಿಯ ಛಾಯಾದಾತಾರ್‌ರ ಸ್ತ್ರೀ ಪುರುಷ ಕೃತಿ ಸರಸ್ವತಿಯವರಿಂದ ಕನ್ನಡೀಕರಣಗೊಂಡಿದೆ. ಪರ್ಷಿಯನ್ ಕವಿ ರೂಮಿಯನ 64 ಕವಿತೆಗಳನ್ನು ಡಿ.ಆರ್.ನಾಗರಾಜ್‌ರವರು ವಸಂತಸ್ಮೃತಿ ಎಂಬ ಶೀರ್ಷಿಕೆಯಲ್ಲಿ ಕನ್ನಡಕ್ಕೆ ತಂದಿದ್ದಾರೆ. ಹಿಂದಿಯ ನಿರ್ಮಲ್‌ವರ್ಮಾ ಅವರ ಕಾದಂಬರಿ ವೇದಿನ್ ಕನ್ನಡಕ್ಕೆ ಆ ದಿನಗಳು ಎಂಬ ಹೆಸರಿನಲ್ಲಿ ಅನುವಾದಗೊಂಡಿದೆ (ತಿಪ್ಪೇಸ್ವಾಮಿ).

ಸಂಸ್ಕೃತದಿಂದ ವೇದ, ಉಪನಿಷತ್, ಗೀತೆ, ಪುರಾಣ, ರಾಮಾಯಣ, ಭಾರತಾದಿಗಳೂ ಹಲವಾರು ಶಾಸ್ತ್ರಕೃತಿಗಳೂ ಕನ್ನಡಕ್ಕೆ ಬಂದಿವೆ. ಈ ದಿಶೆಯಲ್ಲಿ ಮೈಸೂರು ಅರಮನೆಯಿಂದ ಪ್ರಕಟವಾಗಿರುವ ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲೆಯಲ್ಲಿ 34 ಸಂಪುಟಗಳು ಅನುವಾದಗೊಂಡು ಬೆಳಕು ಕಂಡಿವೆ. ಎಚ್.ಪಿ.ವೆಂಕಟರಾವ್ ಅವರು ಋಗ್ವೇದ ಸಂಹಿತೆ ಸಂಪುಟಗಳನ್ನು ಅನುವಾದಿಸಿದ್ದಾರೆ. ಟಿಳಕರ ಶ್ರೀಮದ್ಭಗವದ್ಗೀತಾ ರಹಸ್ಯ ಕೃತಿಯನ್ನು ವೆಂಕಟೇಶ ಭೀಮರಾವ್ ಆಲೂರ ಮತ್ತು ವಿ.ಎಸ್.ಕೆರೂರು ಅವರು ಅನುವಾದಿಸಿದ್ದಾರೆ.

ಭಾಷಾಂತರ ಪ್ರಕಾರ ದಿನೇ ದಿನೇ ಹೆಚ್ಚು ಮಹತ್ತ್ವವನ್ನು ಪಡೆದುಕೊಳ್ಳುತ್ತಿದೆ. ಹೊರಗಿನ ಸಾಹಿತ್ಯ ಕೃತಿಗಳನ್ನು ಪರಿಚಯಿಸಿಕೊಳ್ಳಲು ಹಾಗೂ ವಿಜ್ಞಾನ, ಮಾನವಿಕ, ಶಾಸ್ತ್ರಗ್ರಂಥಗಳು ಮತ್ತು ತಂತ್ರಜ್ಞಾನದ ಕ್ಷೇತ್ರದಲ್ಲಿ ಆಗಿರುವ ಪ್ರಗತಿಯನ್ನು ತಿಳಿಯಲು ಭಾಷಾಂತರಕ್ಕೆ ಮೊರೆ ಹೋಗಲಾಗುತ್ತಿದೆ. ಇತ್ತೀಚಿನ ಅನುವಾದಗಳಲ್ಲಿ ಕೆಲವನ್ನು ಇಲ್ಲಿ ಹೆಸರಿಸಬಹುದು. ಕೆ.ಎಂ.ಜಾರ್ಜ್ ಸಂಪಾದಿಸಿರುವ ಕಂಪ್ಯಾರಿಟಿವ್ ಇಂಡಿಯನ್ ಲಿಟರೇಚರ್ ಸಂಪುಟಗಳು ಕನ್ನಡಕ್ಕೆ ತರ್ಜುಮೆಗೊಂಡಿವೆ. ಇವನ್ನು ಎಲ್.ಎಸ್.ಶೇಷಗಿರಿರಾವ್ ಸಂಪಾದಿಸಿದ್ದು ಭಾರತೀಯ ಸಾಹಿತ್ಯ ಸಮೀಕ್ಷೆ ಎಂಬ ಶೀರ್ಷಿಕೆಯಡಿ ಹೊರತರಲಾಗಿದೆ. ಗ್ರೀಕ್ ಮೂಲದ ಲಾಂಜಿನಸ್‌ನ ಕೃತಿಯನ್ನು ಔನ್ನತ್ಯ ವಿಚಾರ ಚರ್ಚೆ ಎಂಬ ಶೀರ್ಷಿಕೆಯಲ್ಲಿ ಎನ್.ಬಾಲಸುಬ್ರಹ್ಮಣ್ಯರವರು ಕನ್ನಡಿಸಿದ್ದಾರೆ. ಜಾರ್ಜ್ ಆರ್‌ವೆಲ್‌ರ ನೈನ್‌ಟೀನ್ ಎಯ್ಟಿಫೋರ್ ಎಂಬ ಕಾದಂಬರಿಯನ್ನು ಎಚ್.ಎಚ್.ಅಣ್ಣಯ್ಯ ಗೌಡರು ಕನ್ನಡಕ್ಕೆ ತಂದಿದ್ದಾರೆ (1984).

ಸಂಸ್ಕೃತ ಕೃತಿಗಳು ಮತ್ತೆ ಮತ್ತೆ ಭಾಷಾಂತರಗೊಂಡಿರುವುದನ್ನು ಕಾಣಬಹುದು. ಉದಾಹರಣೆಗೆ ಜಯದೇವ ಕವಿಯ ಗೀತಗೋವಿಂದ ಕೃತಿ ಬಿ.ಶ್ರೀನಿವಾಸಮೂರ್ತಿಯವರಿಂದ ಭಾಷಾಂತರಗೊಂಡಿದೆ. ಬಿ.ಗೋಪಾಲರಾವ್ ಅವರು ಕಾಳಿದಾಸ ಭಾಸಾದಿಗಳ ವಿವಿಧ ಕೃತಿಗಳನ್ನು ಕನ್ನಡಕ್ಕೆ ಮೂಲ ಮತ್ತು ಅರ್ಥವ್ಯಾಖ್ಯೆ ಸಹಿತ ಅನುವಾದಿಸಿ ಪ್ರಕಟಿಸಿದ್ದಾರೆ. ಕಾಳಿದಾಸ ವಿರಚಿತ ಕುಮಾರ ಸಂಭವ ಮಹಾಕಾವ್ಯ (1999) ಅಂತಹವುಗಳಲ್ಲಿ ಒಂದು. ಕಲ್ಹಣನ ರಾಜತರಂಗಿಣಿಯನ್ನು ನಿರ್ಪಾಜೆ ಭೀಮಭಟ್ಟರು ಭಾಷಾಂತರಿಸಿದ್ದಾರೆ (1994). ಶೇಷ ನವರತ್ನರಿಂದ ನಾಲ್ಕು ವೇದಗಳು ಎಂಬ ಸಂಪುಟಗಳು ಹೊರಬಂದಿವೆ. ಶ್ರೀಮಧ್ವಾಚಾರ್ಯರ ದ್ವೈತ ವೇದಾಂತ ದರ್ಶನ ಎಂಬ ಶೀರ್ಷಿಕೆಯಲ್ಲಿ ಸುರೇಂದ್ರನಾಥ್ ದಾಸಗುಪ್ತರ ಆಂಗ್ಲ ಕೃತಿಯನ್ನು ಆರ್.ಜಿ.ಕುಲಕರ್ಣಿಯವರು ಕನ್ನಡೀಕರಿಸಿದ್ದಾರೆ.

ಇಂಗ್ಲಿಷೇತರ ಐರೋಪ್ಯ ಸಾಹಿತ್ಯವನ್ನು ಪರಿಚಯಿಸುವ ವಿವಿಧ ಭಾಷಾಂತರ ಗ್ರಂಥಗಳ ಪ್ರಕಟಣೆ ಮುಂದುವರೆದಿದೆ. ಕೆ.ಎಲ್.ಗೋಪಾಲ ಕೃಷ್ಣರಾವ್‌ರವರು ತೊಲ್‌ಸ್ತೋಯ್ ನೀಳ್ಗತೆಗಳು ಎಂಬುದರಲ್ಲಿ ರಷ್ಯನ್ ಮಹಾಕವಿ ಟಾಲ್‌ಸ್ಟಾಯ್‌ರವರ ಕಥಾಸಾಹಿತ್ಯವನ್ನು ಅನುವಾದಿಸಿದ್ದಾರೆ. ಜಾನ್ ರೀಡ್‌ರ ಟೆನ್ ಡೇಸ್ ದಟ್ ಷುಕ್ ದ ವರ್ಲ್ಡ್ ಎಂಬ ರಷ್ಯದ ಕ್ರಾಂತಿ ಕುರಿತ ಕೃತಿಯನ್ನು ಎಚ್.ಎಸ್.ಹರಿಶಂಕರ ಅವರು ಕನ್ನಡೀಕರಿಸಿದ್ದಾರೆ. ಪ.ವಿ.ಚಂದ್ರಶೇಖರ್ ರಷ್ಯಾದ ಸಣ್ಣ ಕಥೆಗಳು ಎಂಬ ಆಯ್ದ ಕಥೆಗಳ ಸಂಕಲನವನ್ನು ಕನ್ನಡಕ್ಕೆ ತಂದಿದ್ದಾರೆ. ಜರ್ಮನ್ ಮೂಲದ ಜಾರ್ಜ್ ಬುಖ್ನರ್‌ರ ಕೃತಿಯನ್ನು ವಾಯ್‌ಜೆಕ್ ಎಂಬ ಶೀರ್ಷಿಕೆಯಲ್ಲಿ ಕೆ.ವಿ.ಸುಬ್ಬಣ್ಣ ಅನುವಾದಿಸಿದ್ದಾರೆ. (ಸಿ.ಪಿ.ಕೆ.)

ಮರಾಠಿ ಸಾಹಿತ್ಯ ಅನುವಾದಕರ ಗಮನವನ್ನು ಹೆಚ್ಚಾಗಿ ಸೆಳೆದಿದೆ. ದುರ್ಗಾಭಾಗವತರ ವ್ಯಾಸಪರ್ವ ಕೃತಿ ಗೌರೀಶ ಕಾಯ್ಕಿಣಿಯವರಿಂದ ತರ್ಜುಮೆಗೊಂಡಿದೆ. ಅಶೋಕ ಪ್ರಭಾಕರರ ಮರಾಠಿ ಕೃತಿ ಕ್ಷಿತಿಜ ಅಂಕೋಲಾರಿಂದ ಕನ್ನಡಕ್ಕೆ ಲಭ್ಯವಾಗಿದೆ. ರಘುನಾಥ ಬಿಡೆಯವರ ಮರಾಠಿಯ ವಾಲ್ಮೀಕಿ ರಾಮಾಯಣದಲ್ಲಿ ಶಾಪ ಮತ್ತು ವರ (ಅನು. ಸರಸ್ವತಿ ಗಜಾನನ ರಿಸಬೂಡ), ಮಹಾಭಾರತದಲ್ಲಿ ಕುಮಾರ ಸಂಭವ (ಅನು. ವಿರೂಪಾಕ್ಷ ಕುಲಕರ್ಣಿ) ಕನ್ನಡಕ್ಕೆ ಬಂದಿವೆ. ಅಶೋಕ ನೀಲಗಾರರು ಶಿವಾಜಿ ಸಾವಂತರ ಮರಾಠಿ ಕೃತಿ ಮೃತ್ಯುಂಜಯವನ್ನು ಅನುವಾದಿಸಿದ್ದಾರೆ. ನರೇಂದ್ರ ಪಾಲ್ ಸಿಂಘರ ಪಂಜಾಬಿ ಮೂಲದ ಕೃತಿಯನ್ನು ಕತ್ತಲೆಯಿಂದ ಕಗ್ಗತ್ತಲೆಗೆ ಎಂಬ ಶೀರ್ಷಿಕೆಯಲ್ಲಿ ಪಿ.ಶಶಿಕಲಾ ಅನುವಾದಿಸಿದ್ದಾರೆ. ಚಂದ್ರಕಾಂತ ಪೋಕಳೆ ಅವರಿಂದ ಮರಾಠಿಯ ಮಹಾನಂದ ಕಾದಂಬರಿ ಮಾನು ಎಂಬ ಹೆಸರಿನಲ್ಲಿ ಕನ್ನಡೀಕರಣಗೊಂಡಿದೆ. ಅದೇ ಭಾಷೆಯ ಶರಣಕುಮಾರ ಲಿಂಬಾಳೆಯವರ ಕೃತಿಯನ್ನು ಅಕ್ರಮ ಸಂತಾನ ಎಂದು ದು.ನಿಂ.ಬೆಳಗಲಿ ಭಾಷಾಂತರಿಸಿದ್ದಾರೆ. ಮರಾಠಿಯಿಂದ ಲಕ್ಷ್ಮಣಗಾಯಕ್‌ವಾಡರ. ಉಚಲ್ಯಾ ಎಂಬ ಕಾದಂಬರಿಯನ್ನು ಇವರೇ ಕನ್ನಡಕ್ಕೆ ಅನುವಾದಿಸಿದ್ದಾರೆ. ಪ್ರೇಮಚಂದರ ನಿರ್ಮಲಾ ಎಂಬ ಕಾದಂಬರಿಯ ಕನ್ನಡ ಅವತರಣಿಕೆಯನ್ನು ತಿಪ್ಪೇಸ್ವಾಮಿಯವರು ತಂದಿದ್ದಾರೆ. ಒರಿಯ ಮೂಲದ ನಿಶ್ಶಬ್ದದಲ್ಲಿ ಕವಿ ಎಂಬ ಸೀತಾಕಾಂತ ಮಹಾಪಾತ್ರರ ಒಂದು ಕೃತಿ ಸಿ.ಪಿ.ಕೆ.ಯವರಿಂದ ಕನ್ನಡಕ್ಕೆ ಬಂದಿದೆ. ಹೀಗೆ ತೆಲುಗು, ತಮಿಳು, ಬಂಗಾಲಿ, ಮರಾಠಿ ಮೊದಲಾದ ಭಾಷೆಗಳಿಂದ ಕನ್ನಡಕ್ಕೆ ಅನುವಾದಗೊಂಡ ಕೃತಿಗಳ ಸಂಖ್ಯೆ ಹೆಚ್ಚುತ್ತಲೇ ಇದೆ.

ವಿವಿಧ ವಿಶ್ವವಿದ್ಯಾಲಯಗಳು ಮತ್ತು ಸಂಶೋಧನಾ ಸಂಸ್ಥೆಗಳು ಹಾಗೂ ಧಾರ್ಮಿಕ ಕೇಂದ್ರಗಳು ಭಾಷಾಂತರ ಕೃತಿಗಳನ್ನು ಹೊರತರುವಲ್ಲಿ ನಿರತವಾಗಿವೆ. ಇದರಿಂದಾಗಿ ಬೇರೆ ಬೇರೆ ಅಧ್ಯಯನ ಶಿಸ್ತುಗಳಲ್ಲಿ ಅನುವಾದ ಕೃತಿಗಳು ಬರುತ್ತಿವೆ. ಸಾಹಿತ್ಯ ಮತ್ತು ಸಂಸ್ಕೃತಿ ಹಾಗೂ ಇತಿಹಾಸಗಳಿಗೆ ಪೂರಕವಾದ ಗಂಭೀರ ಕೃತಿಗಳೂ ಭಾಷಾಂತರ

ಗೊಳ್ಳುತ್ತಿರುವುದನ್ನು ಕಾಣಬಹುದು. ಹಿಂದೂಧರ್ಮವನ್ನು ಕುರಿತ ಗ್ರಂಥಗಳಂತೆಯೇ ಜೈನ, ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳ ಸಂಬಂಧವಾದ ಕೃತಿಗಳು ಆಯಾ ಧಾರ್ಮಿಕ ಕೇಂದ್ರಗಳಿಂದ ಭಾಷಾಂತರಗೊಳ್ಳುತ್ತಿವೆ. ಬೌದ್ಧ ಸಾಹಿತ್ಯದ ಕೃತಿಗಳು ಬೆಳಕು ಕಾಣುತ್ತಿರುವುದು ಒಂದು ವಿಶೇಷ ವಿದ್ಯಮಾನವಾಗಿದೆ. ಎಚ್.ವಿ.ಶ್ರೀರಂಗರಾಜು ಅವರು ದೀಘ್ನನಿಕಾಯವನ್ನು ಅನುವಾದಿಸಿದ್ದಾರೆ (1984). ಬಿ.ನಂ.ಚಂದ್ರಯ್ಯನವರ ಬುದ್ಧನ ಜಾತಕ ಕಥೆಗಳು ಈ ಕ್ಷೇತ್ರದಲ್ಲಿ ಉಲ್ಲೇಖಾರ್ಹ ಕೃತಿ. ಕೆ.ಎಸ್.ಭಗವಾನ್ ರವರ ಬುದ್ಧ ಅಥವಾ ಕಾರ್ಲ್‌ಮಾರ್ಕ್ಸ್ ಎಂಬ ಅನುವಾದ ಕೃತಿಯ ಮೂಲ ಲೇಖಕರು ಸ್ವಾಮಿ ಧರ್ಮತೀರ್ಥರು.

ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ ಯುಗಯಾತ್ರೀ ಭಾರತೀಯ ಸಂಸ್ಕೃತಿ ಎಂಬ ಅನುವಾದ ಸಂಪುಟಗಳು ಕಲ್ಚರಲ್ ಹೆರಿಟೇಜ್ ಆಫ್ ಇಂಡಿಯಾ ಕೃತಿ ಸರಣಿಯ ಅನುವಾದ; ವಿವಿಧ ಲೇಖಕರು ಅನುವಾದ ಮಾಡಿದ್ದಾರೆ. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಪಿ.ವಿ.ಕಾಣೆಯವರ ಹಿಸ್ಟರಿ ಆಫ್ ಧರ್ಮಶಾಸ್ತ್ರ ಎಂಬ ಕೃತಿಯ ಮೊದಲ ಸಂಪುಟವನ್ನು ಅನುವಾದಿಸಿ ಎರಡು ಭಾಗಗಳಲ್ಲಿ ಧರ್ಮಶಾಸ್ತ್ರದ ಇತಿಹಾಸ ಎಂಬ ಹೆಸರಿನಲ್ಲಿ ಪ್ರಕಟಿಸಿದೆ. ಭಾರತೀಯ ವಿದ್ಯಾಭವನದ ಬೆಂಗಳೂರು ಕೇಂದ್ರ ಅದೇ ಸಂಸ್ಥೆಯ ಹಿಸ್ಟರಿ ಅಂಡ್ ಕಲ್ಚರ್ ಆಫ್ ಇಂಡಿಯನ್ ಪೀಪಲ್ ಎಂಬ ಇತಿಹಾಸ ಸರಣಿ ಕೃತಿಗಳ ಅನುವಾದ ಮತ್ತು ಪ್ರಕಟಣೆಯಲ್ಲಿ ತೊಡಗಿಕೊಂಡಿದೆ. ಅದೇ ಸಂಸ್ಥೆಯು ಮಹಾತ್ಮ ಗಾಂಧೀಜಿಯವರ ಸಮಗ್ರ ಸಾಹಿತ್ಯದ ಅನುವಾದ ಕಾರ್ಯ ಕೈಗೆತ್ತಿಕೊಂಡಿದೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ ಮತ್ತು ಗಾಂಧೀಭವನಗಳು ಮಹಾತ್ಮರಿಗೆ ಸಂಬಂಧಿಸಿದ ಅನೇಕ ಕೃತಿಗಳನ್ನು ಅನುವಾದಿಸಿವೆ. ನೆಹರು, ಅಂಬೇಡ್ಕರ್, ಲಾಲ್‌ಬಹದ್ದೂರ್ ಶಾಸ್ತ್ರಿ, ಸರ್ವೇಪಲ್ಲಿ ರಾಧಾಕೃಷ್ಣನ್ ಮೊದಲಾದ ರಾಷ್ಟ್ರನಾಯಕರ ಜೀವನ ಚರಿತ್ರೆಗಳು ಅನುವಾದದ ಮೂಲಕ ಕನ್ನಡಿಗರಿಗೆ ಲಭ್ಯವಿವೆ.

ಕನ್ನಡ ಭಾಷಾಂತರಗಳು ಒಂದು ಕಾಲದಲ್ಲಿ ಮುಖ್ಯವಾಗಿ ಕಥೆ, ಕಾದಂಬರಿಗಳ ಕ್ಷೇತ್ರದಲ್ಲಿ ಹೆಚ್ಚಾಗಿ ಕಂಡುಬರುತ್ತಿದ್ದುವು. ಅನಂತರದ ದಿನಗಳಲ್ಲಿ ಭಾಷಾಂತರ ಇತರ ಗಂಭೀರ ಸಾಹಿತ್ಯದತ್ತಲೂ ಮುಖ ಮಾಡಿತು. ಮುಖ್ಯವಾಗಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳು ಇಂಥ ಕೆಲಸಕ್ಕೆ ಚಾಲನೆ ನೀಡಿದುವು. ಬೆಂಗಳೂರಿನ ಕೃಷಿ ವಿಶ್ವವಿದ್ಯಾಲಯವೂ ಪ್ರತ್ಯೇಕ ಪ್ರಕಟಣಾ ಶಾಖೆಯನ್ನು ಪ್ರಾರಂಭಿಸಿ ಈ ನಿಟ್ಟಿನಲ್ಲಿ ಗಮನ ಹರಿಸಿದೆ. ಹಂಪೆಯ ಕನ್ನಡ ವಿಶ್ವವಿದ್ಯಾನಿಲಯ ಪ್ರತ್ಯೇಕ ಭಾಷಾಂತರ ವಿಭಾಗವನ್ನೇ ಸ್ಥಾಪಿಸಿದೆ. ಅಕಾಡೆಮಿಗಳು, ಪುಸ್ತಕ ಪ್ರಾಧಿಕಾರ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳು ಅನುವಾದ ಕೃತಿಗಳನ್ನು ಹೊರತಂದಿವೆ. ಕನ್ನಡ ಭಾಷೆಯ ಸತ್ವ ಹೆಚ್ಚಲು ಮತ್ತು ಬೋಧನೆಯಲ್ಲಿ ಅದು ಪರಿಣಾಮಕಾರಿಯಾದ ಮಾಧ್ಯಮವಾಗಲು ಅತ್ಯಾಧುನಿಕ ತಂತ್ರಜ್ಞಾನ ಕ್ಷೇತ್ರದಿಂದ ಹಿಡಿದು ವಿವಿಧ ಜ್ಞಾನ ಶಾಖೆಗಳಲ್ಲಿ ಭಾಷಾಂತರ ಕೃತಿಗಳು ಹೊರಬರಬೇಕೆಂದು ನಿರೀಕ್ಷಿಸಲಾಗಿದೆ.

ಇಂದು ಭಾಷಾಂತರ ರಾಜ್ಯ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿಗಳಿಂದ ಮಾನ್ಯತೆ ಪಡೆದಿರುವ ಸಾಹಿತ್ಯ ಪ್ರಕಾರವಾಗಿದೆ. ಕನ್ನಡ ಅನುವಾದಕರಲ್ಲಿ ಕೆಲವರು ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪಡೆದಿರುವುದು ಹೆಮ್ಮೆಯ ವಿಷಯ. ಎಸ್.ವಿ.ಪರಮೇಶ್ವರ ಭಟ್ಟ, ಪ್ರಧಾನ ಗುರುದತ್ತ, ತಿಪ್ಪೇಸ್ವಾಮಿ, ಎಚ್.ಎಸ್.ವೆಂಕಟೇಶಮೂರ್ತಿ, ನೀರ್ಪಾಜೆ ಭೀಮಭಟ್ಟ, ಶೇಷನಾರಾಯಣ, ಕೀರ್ತಿನಾಥ ಕುರ್ತಕೋಟಿ, ಬಿ.ಆರ್.ನಾರಾಯಣ, ಹಮೀದ್ ಅಲ್ಮಾಸ್, ಉಮಾ ವಿರೂಪಾಕ್ಷ ಕುಲಕರ್ಣಿ ಮೊದಲಾದವರು ಈ ಪ್ರಶಸ್ತಿಗೆ ಸೇರಿದ್ದಾರೆ. *

ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ ಈ ಎರಡೂ ಸಂಸ್ಥೆಗಳು ಅನುವಾದ ಕ್ಷೇತ್ರದಲ್ಲಿ ದೊಡ್ಡ ಪ್ರಮಾಣದಲ್ಲಿ ಪ್ರಕಟಣೆಗಳನ್ನು ಕೈಗೊಂಡಿವೆ. ಕೇಂದ್ರ ಸರ್ಕಾರದ ನೆರವಿನಿಂದ ನಡೆಯುತ್ತಿರುವ ಈ ಸಂಸ್ಥೆಗಳು ಭಾರತೀಯ ಭಾಷೆಗಳ ಅಭಿವೃದ್ಧಿಗಾಗಿ ಮತ್ತು ವಿವಿಧ ಭಾಷೆಗಳ ಸಾಹಿತ್ಯವನ್ನು ಪರಸ್ಪರ ಪರಿಚಯಿಸುವುದಕ್ಕಾಗಿ ವಿವಿಧ ಮಾಲಿಕೆಗಳನ್ನು ಪ್ರಾರಂಭಿಸಿ ಲೇಖಕರನ್ನು ಗುರುತಿಸಿ ಅನುವಾದ ಕಾರ್ಯವನ್ನು ಕೈಗೊಂಡಿವೆ. ಕೇಂದ್ರ ಸಾಹಿತ್ಯ ಅಕಾಡೆಮಿ ದಕ್ಷಿಣ ಪ್ರಾದೇಶಿಕ ಕಚೇರಿ ಬೆಂಗಳೂರಿನಲ್ಲಿದೆ. ಅದು ವಿವಿಧ ಮಾಲೆಗಳಲ್ಲಿ ಕನ್ನಡ ಅನುವಾದ ಗ್ರಂಥಗಳನ್ನು ಪ್ರಕಟಿಸಿದೆ.ಕಾದಂಬರಿಗಳು, ಕಥಾ ಸಂಕಲನ, ಕಾವ್ಯ, ಜಾನಪದ, ನಾಟಕ, ಭಾರತೀಯ ಸಾಹಿತ್ಯ ನಿರ್ಮಾಣಕಾರರು ಮೊದಲಾದ ಶೀರ್ಷಿಕೆಗಳ ಅಡಿಯಲ್ಲಿ ಕೃತಿಗಳು ಪ್ರಕಟವಾಗಿವೆ. ಮರಾಠಿಯ ಹರಿನಾರಾಯಣ ಆಪ್ಟೆಯವರ ಯಾರು ಲಕ್ಷಿಸುವರು? ಎಂಬ ಕಾದಂಬರಿ (ಲೀಲಾ ಕಾರಂತ ಮತ್ತು ಶಿವರಾಮ ಕಾರಂತ), ಗುಜರಾತಿಯ ಕುಂದನಿಕಾ ಕಪಾಡಿಯಾ ಅವರ ಗೋಡೆಗಳಿಂದ ಆಚೆ ಆಕಾಶ ಎಂಬ ಕಾದಂಬರಿ (ಎಸ್.ಕೆ.ರಮಾದೇವಮ್ಮ ಮತ್ತು ಲಿಂಗರಾಜು) ಅನುವಾದಗೊಂಡಿವೆ. ಮಲಯಾಳಂ ಮೂಲದ ಪಿ.ಕೆ.ಬಾಲಕೃಷ್ಣನ್ ರಚಿಸಿರುವ 'ನಾನಿನ್ನು ನಿದ್ರಿಸುವೆ' ಕೃತಿಯ ಅನುವಾದಕರು ಸಾರಾ ಅಬೂಬಕರ್. ಅಸ್ಸಾಮಿ ಮೂಲದ ಬೀರೇಂದ್ರ ಕುಮಾರ್ ರಚಿಸಿದ ಜನತೆಯ ರಾಜ್ಯ ಎಂಬ ಕಾದಂಬರಿಯನ್ನು ಕೆ.ಪುಟ್ಟರಾಜು ಕನ್ನಡಿಸಿದ್ದಾರೆ.

ಜಾನಕಿರಾಮನ್‌ರ ತಮಿಳು ಕೃತಿ ಶಕ್ತಿವೈದ್ಯ ಎಂಬ ಕಥಾಸಂಕಲನವನ್ನು ಶೇಷನಾರಾಯಣರು ಕನ್ನಡಕ್ಕೆ ತಂದಿದ್ದಾರೆ. ಒರಿಯಾ ಮೂಲದ ಕಾಣೆಯಾದ ಟೋಪಿಯ ರಹಸ್ಯ ಮತ್ತಿತರ ಕಥೆಗಳು ಎಂಬ ಸಂಕಲನದ ಅನುವಾದಕರು ಎಂ.ಎಸ್.ಕೆ.ಪ್ರಭು. ಇಂಗ್ಲಿಷಿನಲ್ಲಿರುವ ಶಿವ್ ಕೆ.ಕುಮಾರ್ ಅವರ 'ಕಾವ್ಯ ದೇವರ ಸ್ವಗತ' ಎಂಬ ಹೆಸರಿನಲ್ಲಿ (ಬಿ.ಸಿ.ರಾಮಚಂದ್ರ ಶರ್ಮ) ಕನ್ನಡಕ್ಕೆ ಬಂದಿದೆ. ಇಂಗ್ಲಿಷ್‌ನ ವಾಲ್ಟ್‌ವಿಟ್‌ಮನ್‌ನ ಕೃತಿಯನ್ನು ಗೋಪಾಲಕೃಷ್ಣ ಅಡಿಗರು 'ಹುಲ್ಲಿನ ದಳಗಳು' ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರೆ. ರವೀಂದ್ರನಾಥ ಠಾಕೂರರ 'ನೂರೊಂದು ಕವನ' ಕೃತಿಯನ್ನು ದ.ರಾ.ಬೇಂದ್ರೆ ಮತ್ತು ನಾರಾಯಣ ಸಂಗಮ ಅನುವಾದಿಸಿದ್ದಾರೆ. ಮರಾಠಿ ಮೂಲದ ಎ.ಆರ್.ದೇಶಪಾಂಡೆಯವರ ಕೃತಿ 'ಭಗ್ನಮೂರ್ತಿ' ಎಂಬ ಹೆಸರಿನಲ್ಲಿ ದ.ರಾ.ಬೇಂದ್ರೆಯವರಿಂದ ಕನ್ನಡಕ್ಕೆ ಬಂದಿದೆ. ಪಂಜಾಬಿ ಮೂಲದ ಭಾಯಿವೀರ್ ಸಿಂಗ್‌ರ ಕಾವ್ಯ ನನ್ನ ಪ್ರಿಯತಮನೇ ಬಾಳು ಎಂಬ ಕೃತಿ ಎನ್.ಮಾಲತಿಯವರಿಂದ ಅನುವಾದಗೊಂಡಿದೆ.

ಗ್ರೀಕ್, ಇಂಗ್ಲಿಷ್, ಸಂಸ್ಕೃತ ನಾಟಕ ಕೃತಿಗಳೂ ಕನ್ನಡದಲ್ಲಿ ಪ್ರಕಟವಾಗಿವೆ. ಮುದ್ದುಕೃಷ್ಣ ಸಂಪಾದಿಸಿರುವ 'ತೆಲುಗು ಏಕಾಂಕ ನಾಟಕಗಳು' ಕೃತಿಯನ್ನು ಲಕ್ಷ್ಮಿ ಜಿ.ಎ.ರೆಡ್ಡಿ ಮತ್ತು ಜಿ.ಎ.ರೆಡ್ಡಿ ಕನ್ನಡಿಸಿದ್ದಾರೆ. ಎ.ಎನ್.ಮೂರ್ತಿ ರಾಯರು ಮೋಲಿಯೇರನ ಎರಡು ನಾಟಕಗಳನ್ನು ಭಾಷಾಂತರಿಸಿದ್ದಾರೆ. ಪ್ರಬಂಧ ಸಾಹಿತ್ಯ ಮತ್ತಿತರ ಪ್ರಕಾರದ ಕೃತಿಗಳ ಅನುವಾದಗಳನ್ನು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಕಟಿಸಿದೆ. ರವೀಂದ್ರನಾಥ ಠಾಕೂರರ ನಿಬಂಧಮಾಲಾ-I ಸ್ವಾಮಿ ಶಂಕರಾನಂದ ಸರಸ್ವತಿಯವರಿಂದ ಕನ್ನಡದಲ್ಲಿ ಬೆಳಕು ಕಂಡಿದೆ. ಹಿಂದಿ ಮೂಲದ ಮೋತಿಚಂದ್ರ ವಿರಚಿತ ಸಾರ್ಥವಾಹವನ್ನು ಎಚ್.ಎಸ್.ಪಾಟೀಲರು ಅನುವಾದಿಸಿದ್ದಾರೆ. ಭಾರತೀಯ ಸಾಹಿತ್ಯ ನಿರ್ಮಾಣಕಾರರು ಎಂಬ ಮಾಲಿಕೆಯಲ್ಲಿ ಜಯಶಂಕರ್ ಪ್ರಸಾದ್, ಮಹಾಕವಿ ಉಳ್ಳೂರ್, ಗಾಲಿಬ್, ಈಶ್ವರಚಂದ್ರ ವಿದ್ಯಾಸಾಗರ, ಯಶ್‌ಪಾಲ್ ಮೊದಲಾದವರ ಬಗೆಗೆ ಬಂದಿರುವ ಕೃತಿಗಳು ಕನ್ನಡಕ್ಕೆ ಅನುವಾದಗೊಂಡಿವೆ.

ನ್ಯಾಷನಲ್ ಬುಕ್ ಟ್ರಸ್ಟ್ ಕೂಡ ಭಾರತ ದೇಶ ಮತ್ತು ಜನ ಮಾಲೆ, ತರುಣ ಭಾರತೀ, ಜನಪ್ರಿಯ ವಿಜ್ಞಾನ ಮಾಲೆ, ಅಂತರ ಭಾರತೀಯ ಪುಸ್ತಕಮಾಲೆ, ಜಾನಪದ ಮಾಲೆ, ರಾಷ್ಟ್ರೀಯ ಜೀವನ ಚರಿತ್ರೆ ಮಾಲೆ, ನವಸಾಕ್ಷರತೆ ಸಾಹಿತ್ಯ ಮಾಲೆ, ಸತತ ಶಿಕ್ಷಣ ಪುಸ್ತಕ ಮಾಲೆ, ಏಷ್ಯಾ ಪೆಸಿಫಿಕ್ ಸಹ ಪ್ರಕಾಶನ, ಭಾರತೀಯ ಸಾಹಿತ್ಯ ನಿಧಿ, ಸೃಜನಶೀಲ ಕಲಿಕೆ, ಹೊಸ ಕಾರ್ಯಕ್ಷೇತ್ರ ಮೊದಲಾದ ಮಾಲೆಗಳಲ್ಲಿ ಪ್ರಕಟಣೆಯನ್ನು ಕೈಗೊಂಡಿದ್ದು ಅವುಗಳಲ್ಲಿ ಹೆಚ್ಚಿನವು ಭಾಷಾಂತರಗಳು.

ಸಿ.ಶಿವರಾಮಮೂರ್ತಿಯವರ ಭಾರತೀಯ ಚಿತ್ರಕಲೆ ಎಂಬ ಕೃತಿಯನ್ನು ಪಿ.ಆರ್.ತಿಪ್ಪೇಸ್ವಾಮಿಯವರು ಅನುವಾದಿಸಿದ್ದಾರೆ. ಬಂಗಾಲಿ ರಂಗಭೂಮಿ ಕೃತಿಯ ಅನುವಾದಕರು ಎಚ್.ಕೆ.ರಂಗನಾಥ್. ಮಹಾತ್ಮಾ ಗಾಂಧಿಯವರ ಹಿಂದೂಧರ್ಮ ಎಂದರೇನು ಎಂಬ ಕೃತಿಯ ಅನುವಾದಕರು ಎನ್.ಬಾಲಸುಬ್ರಹ್ಮಣ್ಯ. ಬಸವರಾಜ ಪುರಾಣಿಕರು ಕೆಲವು ಉರ್ದು

ಕಥೆಗಳನ್ನು ಕನ್ನಡೀಕರಿಸಿದ್ದಾರೆ. ಪಠಾಣಿ ಪಟ್ನಾಯಕ್‌ರ 'ಒರಿಯಾ ಕಥೆಗಳು' ಎಸ್.ವಿ.ಶ್ರೀನಿವಾಸರಾವ್‌ರಿಂದ ಅನುವಾದಗೊಂಡಿವೆ. ಎ.ಎಂ.ರಾವಲ್‌ರ ಗುಜರಾತಿ 'ಏಕಾಂಕಗಳು' ಪ್ರೇಮಾಕಾರಂತರಿಂದ ಅನುವಾದಗೊಂಡಿದೆ. ಎಂ.ಟಿ.ವಾಸುದೇವನ್ ನಾಯರ್‌ರ ಮಲಯಾಳಂ ಕೃತಿ 'ಚೌಕಟ್ಟಿನ ಮನೆ' ಬಿ.ಕೆ.ತಿಮ್ಮಪ್ಪನವರಿಂದ ಅನುವಾದವಾಗಿದೆ. ಹರಭಜನ್‌ಸಿಂಗ್‌ರ ಪಂಜಾಬಿ ಕಥೆಗಳು ಎಂಬ ಕೃತಿಯನ್ನು ಗೌರೀಶ ಕಾಯ್ಕಿಣಿಯವರು ಕನ್ನಡಿಸಿದ್ದಾರೆ. ಚಂದ್ರಗುಪ್ತ ವಿದ್ಯಾಲಂಕಾರರ ಹಿಂದಿ ಏಕಾಂಕ ಕೃತಿ ಎಸ್.ಬಿ.ಕೊಡದರಿಂದ ಅನುವಾದಗೊಂಡಿದೆ. ಆರ್.ಕೆ.ನಾರಾಯಣ್‌ರ 'ಸ್ವಾಮಿ ಮತ್ತು ಅವನ ಸ್ನೇಹಿತರು' ಎಂಬ ಕೃತಿಯನ್ನು ಎಚ್.ವೈ.ಶಾರದಾಪ್ರಸಾದ್ ಕನ್ನಡಿಸಿದ್ದಾರೆ. ವಿವಿಧ ಲೇಖಕರ ಹದಿಮೂರು ಶ್ರೇಷ್ಠ ಕಥೆಗಳು ಎಂಬ ಕೃತಿಯನ್ನು ಎಲ್.ಎಸ್.ಶೇಷಗಿರಿರಾವ್ ಅನುವಾದಿಸಿದ್ದಾರೆ. ವಿಷ್ಯಾದ ಆಯ್ದ ಕಥೆಗಳು ಎಂಬ ಕೃತಿಯನ್ನು ಎಸ್.ಕೆ.ರಮಾದೇವಮ್ಮ ಕನ್ನಡೀಕರಿಸಿದ್ದಾರೆ.

ಜಾನಪದ ಕ್ಷೇತ್ರದಲ್ಲಿಯೂ ಅನೇಕ ಅನುವಾದ ಕೃತಿಗಳನ್ನು ಈ ಸಂಸ್ಥೆ ಪ್ರಕಟಿಸಿದೆ. ಬಿ.ರಾಮರಾಜರ 'ಆಂಧ್ರ ಜಾನಪದ' (ಆರ್ಬಿಯಸ್ ಸುಂದರಂ), ಡಿ.ಆರ್.ಅಹುಜ 'ರಾಜಾಸ್ಥಾನದ ಜಾನಪದ' (ಸಿ.ಪಿ.ಕೃಷ್ಣ ಕುಮಾರ್) ಅನುವಾದಗೊಂಡಿವೆ. ಶಾಂತಾ ರಂಗಾಚಾರಿಯವರ 'ಎಲ್ಲಾ ಕಾಲಕ್ಕೂ ಬರುವ ಕಥೆಗಳು', ಎಂಬುದನ್ನು ಕೆ.ವಿ.ಸುಬ್ಬಣ್ಣ ಅನುವಾದಿಸಿದ್ದಾರೆ. ಮನೋಜ್‌ದಾಸ್‌ರ, 'ಸಾರ್ವಕಾಲಿಕ ಪುಸ್ತಕಗಳು' ಎಂ.ಗೋಪಾಲಕೃಷ್ಣ ಅಡಿಗರಿಂದ ಅನುವಾದಗೊಂಡಿದೆ. ಲೀಲಾವತಿ ಭಾಗವತ್‌ರ 'ಸ್ವರ್ಗಕ್ಕೆ ಸವಾರಿ ಮತ್ತು ಇತರ ಕಥೆಗಳು' ಎಂಬ ಕೃತಿಯನ್ನು ಯು.ಆರ್.ಅನಂತಮೂರ್ತಿ ಕನ್ನಡಿಸಿದ್ದಾರೆ. ಲೀಲಾ ಜಾರ್ಜ್‌ರ 'ಸತ್ಯಶೋಧನೆ' ಜಿ.ಆರ್.ರಂಗಸ್ವಾಮಯ್ಯನವರಿಂದ ಅನುವಾದಗೊಂಡಿದೆ. ಅನುವಾದ ಆಧುನಿಕ ಕಾಲದಲ್ಲಿ ಹೆಚ್ಚು ಹೆಚ್ಚು ಮಹತ್ವ ಪಡೆದುಕೊಂಡಿದ್ದು ಅದು ಸೃಜನಾತ್ಮಕ ಪ್ರಕಾರವನ್ನಷ್ಟೇ ಅಲ್ಲದೆ ಜ್ಞಾನದ ಎಲ್ಲ ಶಾಖೆಗಳನ್ನೂ ವ್ಯಾಪಿಸಿದೆ. *

**ಕನ್ನಡದಲ್ಲಿ ಮಕ್ಕಳ ಸಾಹಿತ್ಯ :** ಮಕ್ಕಳ ಮಾನಸಿಕ ಹಾಗೂ ಬೌದ್ಧಿಕ ಬೆಳವಣಿಗೆಯನ್ನು ಗಮನದಲ್ಲಿಟ್ಟುಕೊಂಡು ರಚಿತವಾದ ಸಾಹಿತ್ಯವನ್ನು ಮಕ್ಕಳ ಸಾಹಿತ್ಯವೆನ್ನಬಹುದು. ಮಕ್ಕಳ ಸಾಹಿತ್ಯ ಕಿವಿಯ ಮೂಲಕ ಗ್ರಹಿಸುವ ಲಾಲಿ ಹಾಡುಗಳಿಂದಲೇ ಮೊದಲಿಟ್ಟಿರಬಹುದು. ಅನಂತರ ಕಥೆಗಳಿಂದ ಬೆಳೆದಿರಬಹುದು. ಹಾಡುವ ಹಾಗೂ ಕಥೆ ಹೇಳುವವರ ಹಾವ ಭಾವಗಳನ್ನು ನೋಡಿಯೂ ಮಗು ಗ್ರಹಿಸಿರಬಹುದು. ಈ ಕಾರಣದಿಂದ ಮಾನವನ ಸಾಹಿತ್ಯದ ಬುನಾದಿ ಇದಾಗಿದೆ ಎಂದರೆ ತಪ್ಪಾಗಲಾರದು. ಇದರ ಮೂಲ ಜಾನಪದವಾಗಿರಬಹುದು. ಜಗತ್ತಿನಲ್ಲಿ ಇದು ಹೇಗೇ ಪ್ರಾರಂಭವಾಗಿರಲಿ ಮಕ್ಕಳಿಗೆ ಅತ್ಯಗತ್ಯವಾದುದು, ಉಪಯುಕ್ತವಾದುದು ಎನ್ನುವುದಕ್ಕೆ ಎರಡನೆಯ ಮಾತಿಲ್ಲ. ಹಿರಿಯರೂ ಇದನ್ನು ಸವಿಯಬಹುದು ಎನ್ನುವುದು ಇದರ ಒಂದು ವಿಶೇಷ ಲಕ್ಷಣ.

ಮಕ್ಕಳ ಸಾಹಿತ್ಯ ಮಕ್ಕಳಿಗೆ ನಲಿವು, ತಿಳಿವು ಎರಡನ್ನೂ ಕೊಡಬೇಕು. ಸಂಸ್ಕೃತಿ, ಶಿಕ್ಷಣ, ಕುಟುಂಬ, ಪರಿಸರ ಈ ನಾಲ್ಕರ ಪ್ರಭಾವವೂ ಅದರಲ್ಲಿ ಬರಬೇಕು. ಮಕ್ಕಳ ಮಾನಸಿಕ, ಬೌದ್ಧಿಕ, ಸಾಮಾಜಿಕ ಮತ್ತು ಭಾಷಿಕ ಬೆಳವಣಿಗೆಗೆ ಸಹಾಯಕವಾಗಬೇಕು ಮೊದಲಾದ ಅನೇಕ ಅಭಿಪ್ರಾಯಗಳು ಈ ಸಾಹಿತ್ಯ ಕುರಿತು ವ್ಯಕ್ತವಾಗಿವೆ. ಒಟ್ಟಾರೆ ಮಕ್ಕಳ ಸಾಹಿತ್ಯ ಮಕ್ಕಳಿಗೆ ಸಂತೋಷ ನೀಡಬೇಕು, ಭಾಷೆಯನ್ನು ಕಲಿಸಬೇಕು, ಆಲೋಚನಾ ಶಕ್ತಿಯನ್ನು ಬೆಳೆಸಬೇಕು, ಜೊತೆಗೆ ಬದುಕುವ ವಿವೇಕವನ್ನು ಹೊಳೆಯಿಸಬೇಕು. ಆಗ ಅದು ಸಾರ್ಥಕವಾದೀತು.

ಕಾವ್ಯ ಜಗತ್ತಿನಲ್ಲೇ ಮಕ್ಕಳ ಪದ್ಯಗಳನ್ನು ಫ್ರಾನ್ಸ್ ದೇಶದ ಪೆಕಾಟ್ ಎನ್ನುವಾತ ಮೊದಲು ಪ್ರಕಟಿಸಿದನೆಂದು ನಂಬಲಾಗಿದೆ. 'ಸಾಂಗ್ಸ್ ಆಫ್ ನರ್ಸರಿ' 1717ರಲ್ಲಿ ಪ್ರಕಟವಾಯಿತೆಂದು ತಿಳಿದುಬರುತ್ತದೆ. ಕನ್ನಡದಲ್ಲಿ 1862ರಲ್ಲಿ ಹೊರಬಂದ ಬಾಲ ಗೀತೆಗಳು ಎನ್ನುವ ಮೊದಲ ಸಂಕಲನವನ್ನು ಸಿದ್ಧಪಡಿಸಿದವರು ಜಿ.ಮ್ಯಾಕ್ ಅವರು (ಈ ಕೃತಿ ಅಲಭ್ಯ). ಕೆರೋಡಿ ಸುಬ್ಬರಾಯರು, ಎಸ್.ಜಿ.ನರಸಿಂಹಾಚಾರ್ಯರು ಇಂಗ್ಲಿಷ್ ಭಾಷೆಯಿಂದ ಮಕ್ಕಳಿಗಾಗಿ ಕೆಲವು ಕವಿತೆಗಳನ್ನು ಅನುವಾದಿಸಿದ್ದಾರೆ. ಇವುಗಳಲ್ಲಿ ಭಾಷೆ, ಛಂದಸ್ಸುಗಳು ಹಳೆಯ ಶೈಲಿಯಲ್ಲಿದ್ದರೂ ಇವು ಮೊದಲ ಪ್ರಯತ್ನಗಳಾಗಿವೆ.

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಮಕ್ಕಳಿಗೆಂದೇ ಸಿದ್ಧಪಡಿಸಿದ ಪಠ್ಯ ಹಾಗೂ ಕ್ರಮಿಕ ಪುಸ್ತಕಗಳಲ್ಲಿ, ವಾಚಿಕೆಗಳಲ್ಲಿ ಮಕ್ಕಳ ಕವಿತೆಗಳು ಕಂಡುಬರುತ್ತವೆ. ಈ ಪ್ರಯತ್ನಗಳಲ್ಲಿ ಕ್ರೈಸ್ತ ಮಿಷನರಿಗಳದು ಶ್ಲಾಘನೀಯ ಪಾತ್ರ. ಮೊದಮೊದಲಿಗೆ ದೇವರ ಪ್ರಾರ್ಥನೆ, ಆದರ್ಶಗಳ ಬೋಧನೆ ಇಂಥವು, ಜೊತೆಗೆ ಕ್ಲಿಷ್ಟವಾದ ಪದಗಳ ಸಂಯೋಜನೆಗಳು ಕಾಣಿಸಿಕೊಂಡವು. ಬರಬರುತ್ತ ಸರಳವಾದ, ಸೊಗಸಾದ ರಚನೆಗಳು ಬಂದಿರುವುದು ಈಗ ಇತಿಹಾಸವಾಗಿದೆ. ಮುದ್ರಣಾಲಯಗಳು ಪ್ರಾರಂಭವಾದ ಮೇಲೆ ಹೊಸ ಕ್ರಾಂತಿಯೇ ನಡೆಯಿತು. ಜಯರಾಯಾಚಾರ್ಯರ ಅನುಕರಣ ಗೀತಗಳು, ಸೋಸಲೆ ಅಯ್ಯಾಶಾಸ್ತ್ರಿಗಳ ಪದ್ಯಗಳು ಗಮನ ಸೆಳೆಯುತ್ತವೆ. ಇಂಥವರು ಅನೇಕರು ಮಕ್ಕಳ ಕಾವ್ಯದ ಬೆಳೆಗಾಗಿ ನೆಲವನ್ನು ಹದ ಮಾಡಿದರು. ವಸ್ತು, ಭಾಷೆ, ತಂತ್ರಗಳಲ್ಲಿ ಪ್ರಯೋಗಗಳು ನಡೆಯುತ್ತ ಹೋದವು.

ಪಂಜೆ ಮಂಗೇಶರಾಯ, ಹೊಯಿಸಳ, ಜಿ.ಪಿ.ರಾಜರತ್ನಂ ಇವರು ಮೂವರನ್ನೂ ಮಕ್ಕಳ ಸಾಹಿತ್ಯದ ರತ್ನತ್ರಯರು ಎನ್ನಬಹುದು. ಕುವೆಂಪು, ಶಿವರಾಮ ಕಾರಂತ, ದಿನಕರ ದೇಸಾಯಿ, ರಾಘವ, ಎಲ್.ಗುಂಡಪ್ಪ, ಮೇವುಂಡಿ ಮಲ್ಲಾರಿ, ಸಿದ್ದಯ್ಯ ಪುರಾಣಿಕ, ತೋನ್ಸೆ ಮಂಗೇಶ ರಾವ್, ಸಿ.ಫ.ಕಟ್ಟೀಮನಿ ಮೊದಲಾದವರು ಕವಿತೆಗಳನ್ನು ರಚಿಸಿ ಮಕ್ಕಳನ್ನು ಖುಷಿ ಪಡಿಸಿದರು. ಜಿ.ಪಿ.ರಾಜರತ್ನಂ ಅವರ ಒಂದು ಚುಟುಕ ಹೀಗಿದೆ:

ಗಡಗಡ ಓಡಿತು ರೈಲು!<br>
ನಿಮಿಷಕೆ ಸಾವಿರ ಮೈಲು!<br>
ಸಾವಿರ ಮೈಲನ್ನು!<br>
ಮೀರುತ ಹೋಗಲು!<br>
ಆಗದು ರೈಲಿನ ಕೈಲು!

ಅವರ ರಚನೆಗಳಲ್ಲಿ ಇಂತಹ ಚೋಟಾರಿ ಮೋಟಾರಿ ಚುಟುಕಗಳ ಜೊತೆಗೆ ಮಕ್ಕಳನ್ನು ಕುಣಿಸಿ, ತಣಿಸಬಲ್ಲ ಪದ್ಯಗಳಿವೆ. ಇಂಥ ಹಿರಿಯರೆಲ್ಲ ಬಿತ್ತಿದ ನೆಲಕ್ಕೆ ನೀರೆರೆದು ಗೊಬ್ಬರ ಹಾಕಿದವರು ಮುಂದಿನ ಹಂತದ ಕವಿಗಳು. ಶಂ.ಗು.ಬಿರಾದಾರ, ಕಯ್ಯಾರ ಕಿಞ್ಞಣ್ಣ ರೈ, ಸಿಸು ಸಂಗಮೇಶ, ಬಿ.ಎ.ಸನದಿ, ರಸಿಕ ಪುತ್ತಿಗೆ, ಶಶಿಕುಮಾರ, ಪಳಕಳ ಸೀತಾರಾಮ ಭಟ್ಟ, ಮುಂಡಾಜೆ ರಾಮಚಂದ್ರ ಭಟ್ಟ, ಶ್ರೀನಿವಾಸ ಶೆಟ್ಟಿ, ಈಶ್ವರ ಕಮ್ಮಾರ, ಚನ್ನವೀರ ಕಣವಿ, ಕಂಚ್ಯಾಣಿ ಶರಣಪ್ಪ, ಎಂ.ವಿ.ಸೀತಾರಾಮಯ್ಯ, ನೀ.ರೇ ಹಿರೇಮಠ ಮೊದಲಾದವರು ಈ ಸಾಲಿಗೆ ಸೇರುತ್ತಾರೆ. ತಲೆಯೆತ್ತಿದ ಸಸಿಗೆ ಆಧಾರ ನೀಡಿ ಅದನ್ನು ಪೋಷಿಸುತ್ತಿರುವವರು ಹಲವಾರು ಕವಿಗಳು. ಎಚ್.ಎಸ್.ವೆಂಕಟೇಶಮೂರ್ತಿ, ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟ, ಟಿ.ಎಸ್.ನಾಗರಾಜ ಶೆಟ್ಟಿ, ಎನ್.ಶ್ರೀನಿವಾಸ ಉಡುಪ, ಸಿ.ಎಂ.ಗೋವಿಂದ ರೆಡ್ಡಿ, ಸುಮತೀಂದ್ರ ನಾಡಿಗ, ಆರ್.ಕೆ.ಶಾನಭೋಗ, ಬಿ.ತಿಪ್ಪೇರುದ್ರಪ್ಪ ಮೊದಲಾದವರನ್ನು ಹೆಸರಿಸಬಹುದು.

ಮುಪ್ಪಿನ ಷಡಕ್ಷರಿಯ (ಸು.1500) ತಿರುಕನ ಕನಸು, ಹಳೆಯದಾದರೂ ಅತ್ಯಂತ ಆಕರ್ಷಕವೂ ಅರ್ಥಪೂರ್ಣವೂ ಆದ ಗೋವಿನ ಹಾಡು, ಕುವೆಂಪು ಅವರ ಬೊಮ್ಮನ ಹಳ್ಳಿಯ ಕಿಂದರಿ ಜೋಗಿ, ಎನ್.ಶ್ರೀನಿವಾಸ ಉಡುಪರ ಕುಂಭಕರ್ಣನ ನಿದ್ದೆ ಶ್ರೇಷ್ಠಮಟ್ಟದ ಕಥನ ಕವನಗಳು. ಎಚ್.ಎಸ್.ವೆಂಕಟೇಶ ಮೂರ್ತಿಯವರ ಘಟ್ಟದ ಯೋಗಿ ಕೂಡ ಚೆನ್ನಾಗಿದೆ.

ಕುವೆಂಪು ಅವರ ಬೊಮ್ಮನಹಳ್ಳಿಯ ಕಿಂದರಿ ಜೋಗಿಯ ಕೆಲವು ಸಾಲುಗಳು:

ಇಲಿಗಳು! ಇಲಿಗಳು! ಇಲಿಗಳ ಹಿಂಡು!<br>
ಬಳಬಳ ಬಂದುವು ಇಲಿಗಳ ದಂಡು!<br>
ಅನ್ನದ ಮಡಕೆಯನಗಲಿದುವು!<br>
ಟೋಪಿಯ ಗೂಡನು ತ್ಯಜಿಸಿದುವು!<br>
ಬಂದುವು ಅಂಗಿಯ ಜೇಬನು ಬಿಟ್ಟು,

ಮಕ್ಕಳ ಕಾಲಿನ ಚೀಲವ ಬಿಟ್ಟು,
ಹಾರುತ ಬಂದುವು, ಓಡುತ ಬಂದುವು,
ನೆಗೆಯುತ ಬಂದುವು, ಕುಣಿಯುತ ಬಂದುವು,
ಜೋಗಿಯು ಬಾರಿಸೆ ಕಿಂದರಿಯ!

ಈ ಕವಿತೆ ಇಂಗ್ಲಿಷ್ ಕವಿ ರಾಬರ್ಟ್ ಬ್ರೌನಿಂಗನ ದಿ ಪೈಡ್ ಪೈಪರ್ ಆಫ್ ಹ್ಯಾಮೆಲಿನ್ ಎನ್ನುವ ಕವನದ ಭಾವಾನುವಾದವಾಗಿದೆ.

ನಮ್ಮ ನೆನಪಿನಲ್ಲಿ ಚಿರಕಾಲ ಉಳಿದು ಅನುರಣಿಸುವ ಗುಣಮಟ್ಟದ ಕವಿತೆಗಳು ಒಟ್ಟಾರೆ ಬಹಳ ಕಡಮೆಯಾಗಿವೆ ಎನ್ನದೆ ವಿಧಿಯಿಲ್ಲ. ಇತ್ತೀಚಿನ ಕೆಲವು ಕವಿಗಳ ರಚನೆಗಳು ಆಶಾದಾಯಕವಾಗಿವೆ. ಕೆ.ಚಿದಾನಂದರ ವಿಜ್ಞಾನ ಪದ್ಯಗಳು ವಿಜ್ಞಾನವನ್ನು ಮಕ್ಕಳಿಗೆ ಕವಿತೆಯ ಮೂಲಕ ತಿಳಿಸುವ ಸರಳ ಸುಂದರ ಕೊಡುಗೆ. ಕವಿಯ ಒಟ್ಟಾರೆಯ ಕವಿತೆಗಳು ಒಂದೆಡೆ ಸಿಗುವಂತೆ ಕೆಲವು ಸಂಪುಟಗಳು ಬಂದಿವೆ: ಪಂಜೆಯವರ ಪದ್ಯಗಳು, ಜಿ.ಪಿ.ರಾಜರತ್ನಂ ಅವರ ಕಂದನ ಕಾವ್ಯ ಮಾಲೆ, ಟಿ.ಎಸ್.ನಾಗರಾಜಶೆಟ್ಟಿ ಅವರ ಸಮಗ್ರ ಮಕ್ಕಳ ಕವಿತೆಗಳು, ಕಂಚ್ಯಾಣಿ ಶರಣಪ್ಪ ಅವರ ಆಯ್ದ ನೂರೊಂದು ಕವಿತೆಗಳು, ಎಂ.ಡಿ.ಗೋಗೇರಿ ಅವರ ಪುಟ್ಟನ ಪರಿಸರ.

**ಕತೆ :** ಪಂಚತಂತ್ರ, ಕಥಾ ಸರಿತ್ಸಾಗರ, ಹಿತೋಪದೇಶ, ಇಂಥ ಕತೆಗಳು ಭಾರತದಲ್ಲಿ ಹುಟ್ಟಿ ಪ್ರಸಿದ್ಧವಾಗಿವೆ. ಪಂಚತಂತ್ರದ ಕತೆಗಾರಿಕೆ, ಚಮತ್ಕಾರ, ಬುದ್ಧಿವಂತಿಕೆ, ವ್ಯವಹಾರ, ಜ್ಞಾನ ಮುಂತಾದ ಗುಣಗಳು ಶ್ರೇಷ್ಠ ಕತೆಗಳ ಮಾದರಿಯೇ ಸರಿ. ಕತೆ ಎಂದರೆ ಸಾಕು ಮಕ್ಕಳ ಕಿವಿ ನೆಟ್ಟಗಾಗುತ್ತದೆ. ಅವರು ಕತೆ ಹೇಳಲು ಹಿರಿಯರನ್ನು ಪೀಡಿಸುವುದೂ ಉಂಟು. ನಮ್ಮ ಇಂದಿನ ಹಿರಿಯರು ಕುತೂಹಲ ಕೆರಳಿಸುವ, ಅವರ ಕಲ್ಪನಾ ಲೋಕದ ಬಾಗಿಲು ತೆರೆಯುವ, ಮನಸ್ಸಿಗೆ ಮುದ ನೀಡುವ ಕತೆಗಳನ್ನು ಹೆಣೆದು ಹೇಳಿದ್ದಾರೆ. ಪಂಜೆ ಮಂಗೇಶರಾಯ (ಇಲಿಗಳ ತಕ್ಕಥೈ, ಗುಡುಗುಡು ಗುಮ್ಮಟ ದೇವರು, ಸೀಗಡಿ ಯಾಕೆ ಒಣಗಲಿಲ್ಲ), ಹೊಯಿಸಳ (ಹೂವಿನ ಹಾಸಿಗೆ, ಪಠಾಕ್ಷಿ, ಪುಟ್ಟರಸು, ಪೋರಿ), ದೇವುಡು (ಬುದ್ಧಿಯ ಕತೆಗಳು, ಮಂಗಪ್ಪಾಜಿಯ ಪುರಾಣ), ಶಿವರಾಮ ಕಾರಂತ (ಗಜರಾಜ), ಜಿ.ಪಿ.ರಾಜರತ್ನಂ, ಟಿ.ಎಂ.ಆರ್.ಸ್ವಾಮಿ, ಮೇವುಂಡಿ ಮಲ್ಲಾರಿ, ಎಂ.ಎಸ್.ಪುಟ್ಟಣ್ಣ (ನೀತಿ ಚಿಂತಾಮಣಿ), ಸುಬೋಧ ರಾಮರಾಯರು, ಆನವಟ್ಟಿ ರಾಮರಾಯರು (ಬಾಲಕರ ನೀತಿ ಕಥಾವಳಿ) ಹೆಸರಿಸಬಹುದಾದ, ಮೊಟ್ಟ ಮೊದಲ ಮಕ್ಕಳ ಕಥೆಗಳ ಲೇಖಕರಾಗಿದ್ದಾರೆ. ಕತೆಗಳಲ್ಲಿ ಜಾನಪದ ಕತೆಗಳು, ಸಾಹಸದ ಕತೆಗಳು, ಪುರಾಣ ಕತೆಗಳು, ವೈಜ್ಞಾನಿಕ ಕತೆಗಳು, ಪ್ರಾಣಿ ಕತೆಗಳು, ಸಾಮಾಜಿಕ ಕತೆಗಳು ಮುಂತಾದ ಪ್ರಕಾರಗಳು ಕಂಡುಬರುತ್ತವೆ. ಇವೆಲ್ಲವೂ ಮಕ್ಕಳನ್ನು ಸದಾ ರಂಜಿಸಿವೆ. ಅವರಿಗೆ ವಿವಿಧ ವಿಷಯಗಳನ್ನು ತಿಳಿಸಿವೆ, ಕಲಿಸಿವೆ.

ನಾ.ಡಿಸೋಜ, ಸಿಸು ಸಂಗಮೇಶ (ನರಿಯ ಫಜೀತಿ), ರಸಿಕ ಪುತ್ತಿಗೆ (ಸುಕ್ಕಿನುಂಡೆ ಸುಬ್ಬ), ಟಿ.ಎಸ್.ನಾಗರಾಜ ಶೆಟ್ಟಿ (ಕರಡಿ ರಸಾಯನ) ಮತ್ತೂರು ಸುಬ್ಬಣ್ಣ (ಅಂಶು ಮತ್ತು ರಾಬೋಟ್), ಕೃ.ನಾರಾಯಣರಾವ್ (ದಿನಕ್ಕೊಂದು ಕತೆ), ಎಂ.ಜಿ.ಗೋವಿಂದರಾಜು (ಆಕಾಶದ ಅಂಚು), ರಾಜಶೇಖರ ಭೂಸನೂರಮಠ (ವೈಜ್ಞಾನಿಕ ಕತೆಗಳು) ಮೊದಲಾದವರು ಈಚಿನ ಕತೆಗಾರರು. ಇತ್ತೀಚೆಗೆ ಅಪಾರ ಸಂಖ್ಯೆಯ ಕತೆಗಳ ರಚನೆಗೊಂಡಿವೆ.

ಬಹುತೇಕ ಸಮಕಾಲೀನ ಮಕ್ಕಳ ಕತೆಗಳಲ್ಲಿ ಭಾವನೆಗಳನ್ನು ದುಡಿಸಿಕೊಳ್ಳುವ ಪ್ರಯತ್ನವಿದೆಯೇ ಹೊರತು ಅವರ ಬುದ್ಧಿಯನ್ನು ದುಡಿಸಿಕೊಂಡು ಯೋಚನೆ ಮಾಡುವಂತೆ ಪ್ರಚೋದಿಸುವ ಕತೆಗಳು ಕೆಲವೇ. ಹೆಚ್ಚು ಕಡಿಮೆ ಸಮಕಾಲೀನ ಬರೆಹಗಾರರಲ್ಲಿ ಯಾವುದೇ ಹೊಸ ಪ್ರಯೋಗ ಕಡಿಮೆ. ಬಹುಶಃ ಪ್ರಯೋಗ ನಡೆಸುವಷ್ಟು ಒತ್ತಡ ಕಂಡುಕೊಳ್ಳದಿರುವುದು ಅವರ ಸೃಜನಶೀಲತೆಯಲ್ಲಿ ಇರುವ ಕೊರತೆ ಎನಿಸುತ್ತದೆ. ಅಂದರೆ ಬದಲಾಗುತ್ತಿರುವ ಬದುಕಿನ, ಮಕ್ಕಳ ಪ್ರಪಂಚದ ರೀತಿ ನೀತಿಗಳಿಗೆ ನಮ್ಮ ಶಿಶು ಸಾಹಿತಿಗಳು ಸ್ಪಂದಿಸಿಲ್ಲ ಎಂದು ಎನ್.ಎಸ್.ರಘುನಾಥ್ ಅಭಿಪ್ರಾಯಪಟ್ಟಿದ್ದಾರೆ. ಸಮಕಾಲೀನತೆಗೆ ಸ್ಪಂದಿಸುವ (ಕಂಪ್ಯೂಟರ್ ಯುಗ) ಕತೆಗಳು ಇನ್ನೂ ಬರಬೇಕಾಗಿದೆ.

ಅನುಪಮಾ ನಿರಂಜನ ಅವರು ಮಕ್ಕಳಿಗಾಗಿ ಸಂಪಾದಿಸಿ ಕೊಟ್ಟಿರುವ ದಿನಕ್ಕೊಂದು ಕತೆ ಸಂಪುಟಗಳು ಒಂದು ಅಮೂಲ್ಯ ಕೊಡುಗೆ. ಬೇರೆ ಬೇರೆ ದೇಶಗಳ, ಭಾಷೆಗಳ ಕತೆಗಳೂ ಇದರಲ್ಲಿ ಸೇರಿವೆ. ಸಿಸು ಸಂಗಮೇಶರ ಆಯ್ದ ಕತೆಗಳು, ಟಿ.ಎಸ್.ನಾಗರಾಜ ಶೆಟ್ಟಿ ಅವರ ಕರಡಿ ರಸಾಯನ (ಇಪ್ಪತ್ತೈದು ಕತೆಗಳು) ಈ ಸಂಕಲನಗಳನ್ನು ಇಲ್ಲಿ ಹೆಸರಿಸಬಹುದು. ಬಿಡಿಬಿಡಿಯಾದ ಮಕ್ಕಳ ಕತೆಗಳ, ಕವಿತೆಗಳ ಪುಸ್ತಕಗಳನ್ನು ತರುವಲ್ಲಿ ಅನೇಕ ಸಂಸ್ಥೆಗಳು ದುಡಿದಿವೆ. ನವಕರ್ನಾಟಕ ಪ್ರೈ.ಲಿ., ಸ್ವಪ್ನ ಬುಕ್ ಹೌಸ್, ಟಿ.ನಾರಾಯಣ ಅಯ್ಯಂಗಾರ್ ಪ್ರಕಾಶನ, ಬಿಜಾಪುರದ ಭಾರತಿ ಪ್ರಕಾಶನ, ತಿಪಟೂರಿನ ನಿರ್ಮಲ ಪ್ರಕಾಶನ, ಮಿತ್ತಬೈಲಿನ ಶಿಶು ಸಾಹಿತ್ಯ ಮಾಲೆ, ಬೆಂಗಳೂರಿನ ಇಂಡಿಯ ಬುಕ್‌ಹೌಸ್ (ಅಮರ ಚಿತ್ರ ಕಥಾ ಮಾಲಿಕೆ), ಗುಬ್ಬಚ್ಚಿ ಪುಸ್ತಕ ಮಾಲೆ, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಮೈಸೂರು ರಾಜ್ಯದ ಶಿಕ್ಷಣ ಇಲಾಖೆ, ಮೈಸೂರಿನ ಕಾವ್ಯಾಲಯ ಪ್ರಕಾಶನ ಇತ್ಯಾದಿ ನೂರಾರು ಪ್ರಕಾಶಕರ ಸೇವೆ ಸ್ಮರಣೀಯವಾದುದು. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರತಿ ವರ್ಷವೂ ಕನ್ನಡದ ನಿಯತಕಾಲಿಕೆಗಳಲ್ಲಿ ಪ್ರಕಟವಾಗುವ ಮಕ್ಕಳ ಕತೆ, ಕವನಗಳನ್ನು ಸಂಪಾದನೆ ಮಾಡಿಸಿ ಪ್ರಕಟಿಸುತ್ತಿದೆ. ಅಲ್ಲದೆ ಕಾಲು ಶತಮಾನದ ಸಾಹಿತ್ಯ ಮಾಲಿಕೆಯಲ್ಲಿ ಕತೆ ಹಾಗೂ ಕವಿತೆಗಳ ಒಂದೊಂದು ಸಂಪುಟವನ್ನು ಪ್ರತ್ಯೇಕವಾಗಿ ಪ್ರಕಟಿಸಿದೆ. ಇತ್ತೀಚೆಗೆ ಎನ್.ಎಸ್.ರಘುನಾಥ್ ಅವರ ಸಂಪಾದಕತ್ವದಲ್ಲಿ ಶತಮಾನದ ಮಕ್ಕಳ ಸಾಹಿತ್ಯ ಎಂಬ ಸಂಪುಟವನ್ನು ಹೊರತಂದಿದೆ. ಇದರಲ್ಲಿ ಆಯ್ದ 101 ಕವಿತೆಗಳು, 104 ಕತೆಗಳು ಮತ್ತು 19 ನಾಟಕಗಳು ಸೇರಿವೆ.

**ನಾಟಕ :** ಅಭಿನಯ, ಸಂಭಾಷಣೆ, ಹಾಡು, ವಿಶೇಷ ವಸ್ತ್ರ ವಿನ್ಯಾಸ, ದೃಶ್ಯ ವೈಭವ ಮುಂತಾದ ಹಲವು ಮಿಶ್ರಕಲೆಗಳ ಸಂಯೋಜನೆಯಾದ ನಾಟಕ ಎಲ್ಲರನ್ನು ಆಕರ್ಷಿಸುವ ಕಲೆ. ನೋಡಿ ಸಂತೋಷಿಸುವ ಹಾಗೆಯೇ ಓದಿಯೂ ಆನಂದಿಸಬಹುದು. ಈ ದಿಸೆಯಲ್ಲಿ ಆಲೋಚಿಸಿ ಬರೆದವರೆಂದರೆ ನಾರಾಯಣಸ್ವಾಮಿ (ಪೃಥ್ವೀರಾಜ ಜಯಚಂದ್ರ, ಹುಲಿ ಶಿಕಾರಿ, 1925), ಕುವೆಂಪು (ಮೋಡಣ್ಣನ ತಮ್ಮ, 1926), ಎಂ.ಎನ್.ಕಾಮತ್, ಪಂಜೆ ಮಂಗೇಶರಾಯ, ಎಂ.ಎಸ್.ಪುಟ್ಟಣ್ಣ, ಹೊಯಿಸಳ (ಮಕ್ಕಳ ಮಂಟಪ, ಚಂದ್ರಹಾಸ), ಚಿ.ಸದಾಶಿವಯ್ಯ, ಬೆಂ.ಶ್ರೀ.ಪಾಂಡುರಂಗರಾಯ (ಸುಳ್ಳಿನ ಸೋಲು 1940), ಶಿವರಾಮ ಕಾರಂತ (ಹೊಟ್ಟೆಯ ಹಾಡು, ನಾಲ್ಕನೆಯ ಪಿಶಾಚಿ), ಜಿ.ಪಿ.ರಾಜರತ್ನಂ (ಬೆಳೆಯುವ ಪೈರು, ಧ್ವಜ ವಂದನೆ) ಮೊದಲಾದವರನ್ನು ಹೆಸರಿಸಬಹುದು. ಕಾಲ ಕ್ರಮೇಣ ನಾಟಕಗಳ ರಚನೆಯ ಸಂಖ್ಯೆ ಹೆಚ್ಚಾಯಿತು. ವಿವಿಧತೆಯ ಜೊತೆಗೆ ಗುಣಮಟ್ಟ ಹೆಚ್ಚಿರುವ ನಾಟಕಗಳೂ ಬಂದುವು.

ಕೀರ್ತಿನಾಥ ಕುರ್ತಕೋಟಿಯವರ ಆ ಮನಿ ಮಕ್ಕಳ ಲೋಕವನ್ನು ಅದರ ಎಲ್ಲ ಗುಣಗಳೊಂದಿಗೆ ಕಣ್ಣೆದಿರು ತೆರೆದಿಡುವುದು ಆಕರ್ಷಕವಾಗಿದೆ. ಕುವೆಂಪು ಅವರ ಮೋಡಣ್ಣನ ತಮ್ಮ ಗೀತರೂಪಕವಾಗಿದ್ದು ಮಕ್ಕಳಲ್ಲಿ ನಿಸರ್ಗ ಪ್ರೀತಿಯನ್ನು ಮೂಡಿಸಬಲ್ಲುದು. ಆರ್ಯ ಅವರ ಮಳೆ ಬಂತು, ಚಂದ್ರಶೇಖರ ಕಂಬಾರರ ಅಲೀಬಾಬಾ ಮತ್ತು ನಲವತ್ತು ಮಂದಿಕಳ್ಳರು, ಪುಷ್ಪರಾಣಿ ಎನ್.ಎಸ್.ವೆಂಕಟರಾಮ್ ಅವರ ಹಿಮಾನಿ ಮತ್ತು ಏಳು ಜನ ಕಳ್ಳರು, ಅಬ್ದುಲ್ ರೆಹಮಾನ್ ಪಾಷ ಅವರ ನಕ್ಕಳಾ ರಾಜಕುಮಾರಿ ಜಾನಪದ ಸತ್ವವನ್ನು ಮೈಗೂಡಿಸಿಕೊಂಡಿವೆ. ಮೇವುಂಡಿ ಮಲ್ಲಾರಿ ಅವರ ಮಯೂರ ವರ್ಮ, ನಾರಾಯಣ ಸ್ವಾಮಿ ಅವರ ಶಿವಾಜಿ, ಎಂ.ವಿ.ಸೀತಾರಾಮಯ್ಯ ಅವರ ಕರುಣೆಯ ಕುಡಿ, ಶ್ರೀನಿವಾಸ ಅವರ ಬೈಲಂಗಡಿಯ ರಾಣಿ, ರಘುಸುತ ಅವರ ಹೊಸ ಬೆಳಕು ಮುಂತಾದವು ಐತಿಹಾಸಿಕ ನಾಟಕಗಳಾಗಿದ್ದು ಮಕ್ಕಳಲ್ಲಿ ಸಾಹಸಪ್ರಿಯತೆ, ಆದರ್ಶಗಳ ಬಗೆಗಿನ ಒಲವನ್ನು ಹೆಚ್ಚಿಸುವುದರ ಜೊತೆಗೆ ವಾಸ್ತವವಾಗಿ ನೆಲೆಸಿದ್ದ ಮಹಾನ್ ಸಾಧಕರ ಬಗೆಗಿನ ಕುತೂಹಲವನ್ನು ತಣಿಸಬಲ್ಲವು.

ಹೆಗ್ಗೋಡಿನ ಅಕ್ಷರ ಪ್ರಕಾಶನ ಹೊರತಂದಿರುವ ಅನೇಕ ಮಕ್ಕಳ ನಾಟಕಗಳು (ಬಿ.ವಿ.ಕಾರಂತರ ಪಂಜರ ಶಾಲೆ, ಕಂಬಾರರ ಕಿಟ್ಟೀ ಕಥೆ, ಪ್ರಸನ್ನ ಅವರ ಒಂದಾನೊಂದು ಕಾಡಿನಲ್ಲಿ, ಕೆ.ವಿ.ಸುಬ್ಬಣ್ಣ ಅವರ ಬೆಟ್ಟಕ್ಕೆ ಚಳಿಯಾದರೆ, ನೀಲಿ ಕುದುರೆ) ಹೊಸ ಶೈಲಿಯಲ್ಲಿ ರಚನೆಯಾಗಿದ್ದು ರಂಗ ಪ್ರಯೋಗಗಳಾಗಿಯೂ ಅಪಾರ ಯಶಸ್ಸನ್ನು ಪಡೆದಿವೆ. ಇವುಗಳ ಜೊತೆಗೆ ವೈದೇಹಿ ಅವರ ಕೆಲವು ನಾಟಕಗಳೂ ಗುಣಮಟ್ಟದ ದೃಷ್ಟಿಯಿಂದ ಮೇಲು ಮಟ್ಟದವು. ಮಕ್ಕಳನ್ನು ಅಪಾರವಾಗಿ ರಂಜಿಸಬಲ್ಲವು ಕೂಡ. ಅದ್ಭುತ ರಮ್ಯತೆಯನ್ನು, ಪೌರಾಣಿಕ ಕತೆಗಳನ್ನು, ವಿಜ್ಞಾನ ಮನೋವಿಜ್ಞಾನಗಳನ್ನು ಬಳಸಿಕೊಂಡಿರುವ ನಾಟಕಗಳೂ ಇವೆ. ಸೂ.ಸುಬ್ರಹ್ಮಣ್ಯಂ ಅವರ ನಕ್ಕಿತು ನಕ್ಷತ್ರ - ನಕ್ಷತ್ರಗಳನ್ನು ಕುರಿತು ಹೊಸ ತಂತ್ರದ ಮೂಲಕ ತಿಳಿಯಪಡಿಸುವ ವಿಶಿಷ್ಟವಾದ ನಾಟಕವಾಗಿದೆ. ಈಚೆಗೆ ಪ್ರಕಟವಾಗಿರುವ ಆರ್.ಕೆ.ಶಾನಭೋಗರ ಅಪೂರ್ವ ಹಾಗೂ ಉಪ್ಪಿನ ಕಾಯಿಯ ಅತ್ತೆ, ಬಿಳಿಗೆರೆ ಕೃಷ್ಣಮೂರ್ತಿ ಅವರ ಮಳೆ ಹುಚ್ಚ ಮತ್ತು ನವಿಲೂರಿನ ಕತೆ, ಗ.ಸು.ಭಟ್ಟ ಅವರ ನಲಿಯಿತು ನವಿಲು ಆಕರ್ಷಕ ಭಾಷೆಯಿಂದ ಕೂಡಿರುವ ಲವಲವಿಕೆಯ ನಾಟಕಗಳಾಗಿವೆ. ನಾಟಕಗಳ ಸಾರ್ಥಕತೆ ಇರುವುದು ರಂಗಾಭಿನಯದಲ್ಲಿ, ಪ್ರದರ್ಶನದಲ್ಲಿ. ಹೀಗೆ ನಾಟಕಗಳನ್ನು ಪ್ರದರ್ಶಿಸುವುದರಲ್ಲಿ ಹೆಗ್ಗೋಡಿನ ನೀನಾಸಂ, ತಿಪಟೂರಿನ ಅಭಿನಯ, ಬೆಂಗಳೂರಿನ ಬಿಂಬ, ಮೈಸೂರಿನ ರಂಗಾಯಣ, ತಮರಿಯ ಕಿನ್ನರ ಮೇಳ ಮುಂತಾದ ತಂಡಗಳು ಸಾಕಷ್ಟು ಆಸಕ್ತಿಯಿಂದ ದುಡಿಯುತ್ತಿವೆ.

**ಕಾದಂಬರಿ :** ಕನ್ನಡದ ಮಕ್ಕಳ ಸಾಹಿತ್ಯದಲ್ಲಿ ಅತಿ ಹೆಚ್ಚು ಸಂಖ್ಯೆಯಲ್ಲಿ ಬಂದಿರುವುದು ಕತೆಗಳೇ. ಅನಂತರ ಜೀವನ ಚರಿತ್ರೆ, ವಿಜ್ಞಾನ ಮತ್ತಿತರ ವಿಷಯಕ ವಸ್ತುಗಳ ಕೃತಿಗಳು ಬಹಳವಾಗಿವೆ. ಕಾವ್ಯದ್ದು ಮೂರನೆಯ ಸ್ಥಾನ ಇರಬಹುದು. ನಾಟಕಗಳೂ ಬಹಳ ಕಡಿಮೆ. ಕಾದಂಬರಿಗಳ ಸಂಖ್ಯೆಯಂತೂ ಮತ್ತೂ ಕಡಿಮೆ. ಕಾದಂಬರಿ ಬಹು ಕಾಲದ ಓದುವ ಸಹನೆಯನ್ನು ಅಪೇಕ್ಷಿಸುತ್ತದೆ. ಬೆಳೆದ ಮಕ್ಕಳು (ಹನ್ನೆರಡು ವರ್ಷಗಳಿಗಿಂತ ದೊಡ್ಡವರು) ಮಾತ್ರ ಓದಬಲ್ಲರೆಂದು ಕಾಣುತ್ತದೆ. ಕನ್ನಡದಲ್ಲಿ ವಯಸ್ಸಿಗನುಗುಣವಾಗಿ ಸಾಹಿತ್ಯ ರಚನೆ ಆಗಿಲ್ಲ. ಇಂಗ್ಲಿಷಿನಲ್ಲಿ ಅಂಥ' ಪ್ರಯತ್ನಗಳಾಗಿವೆ. ಐದರಿಂದ ಎಂಟು ವರ್ಷದ ವಯೋಮಾನದವರು, ಒಂಬತ್ತರಿಂದ ಹನ್ನೆರಡು ವಯಸ್ಸಿನ ಮಕ್ಕಳು, ಹದಿಮೂರರಿಂದ ಹದಿನೈದರವರೆಗಿನವರು ಎಂದು ಮಕ್ಕಳ ಸಾಹಿತ್ಯವನ್ನು ವಿಂಗಡಿಸಿದ್ದಾರೆ. ಆಯಾ ವಯಸ್ಸಿನ ಮಕ್ಕಳ ಸ್ವಭಾವ, ಸಾಮರ್ಥ್ಯ, ಅಗತ್ಯಗಳನ್ನು ಅನುಸರಿಸಿ ಸಾಹಿತ್ಯ ರಚನೆ ಆಗಬೇಕೆನ್ನುವುದು ಮನೋವಿಜ್ಞಾನಿಗಳ ಅಭಿಪ್ರಾಯ.

ಕಾದಂಬರಿ ಕ್ಷೇತ್ರದಲ್ಲಿ ಸಾಹಸ ಪ್ರಧಾನ ವಸ್ತುವಿನ ರಚನೆಗಳು ಮೇಲುಗೈ ಸಾಧಿಸಿವೆ. ರಸಿಕ ಪುತ್ತಿಗೆ ಅವರ ಕೆಂಪು ಕಾರು, ಎಂ.ಪಿ.ಮನೋಹರ ಚಂದ್ರನ್ ಅವರ ಪೂಪ ಕಾಡಿನಲ್ಲಿ ಪಾಪು, ಎಚ್.ಎಸ್.ವೆಂಕಟೇಶಮೂರ್ತಿ ಅವರ ಅಮಾನುಷರು, ಅಗ್ನಿಮುಖಿ, ಸುಮತೀಂದ್ರ ನಾಡಿಗರ ಸಾಹಸ, ಬಿ.ಎಲ್.ವೇಣು ಅವರ ಗುಹೆ ಸೇರಿದವರು, ಟಿ.ಕೆ.ರಾಮರಾವ್ ಅವರ ದಿಬ್ಬದ ಮನೆ ಇವುಗಳನ್ನು ಹೆಸರಿಸಬಹುದು. ಹುಡುಗ ಹುಡುಗಿಯರ ಮನಸ್ಸಿನ ಕುತೂಹಲ ತಣಿಸುವಲ್ಲಿ, ಅವರನ್ನು ತುದಿಗಾಲಲ್ಲಿ ನಿಲ್ಲಿಸಿ ರೋಮಾಂಚನ ಗೊಳಿಸುವುದರಲ್ಲಿ, ಅನಿರೀಕ್ಷಿತ ತಿರುವುಗಳ ಮೂಲಕ ಬೆರಗು ಮೂಡಿಸುವುದರಲ್ಲಿ ಈ ಕೃತಿಗಳು ಯಶಸ್ವಿಯಾಗಿವೆ. ಆನಂದ ಪಾಟೀಲರ ಬೆಳದಿಂಗಳು, ಎನ್.ವಿ.ಶ್ರೀನಿವಾಸರಾವ್ ಅವರ ಹಾರೋ ಹನುಮ - ಈ ಕೃತಿಗಳು ಅದ್ಭುತ ರಮ್ಯತೆಯನ್ನು ಬಹಳ ಚೆನ್ನಾಗಿ ದುಡಿಸಿಕೊಂಡಿವೆ. ಆರ್.ವಿ.ಭಂಡಾರಿ ಅವರ ಬಿರುಗಾಳಿ ಒಂದು ವಿಶಿಷ್ಟ ಕಾದಂಬರಿ. ಜಂಬುನಾಥ ಕಂಚ್ಯಾಣಿ ಅವರ ಮಿಡಿದ ಕರುಳು ಮಕ್ಕಳಲ್ಲಿ ಭಾವೈಕ್ಯತೆಯ ಭಾವನೆ ಮೂಡಿಸುವುದರ ಜೊತೆಗೆ ರಂಜನೆಯನ್ನು ನೀಡಬಲ್ಲದು. ಗೀತಾ ಕುಲಕರ್ಣಿ ಅವರ ನೇಜಿ ಗುಬ್ಬಚ್ಚಿ ಕೂಡ ಬಹಳ ಅಪರೂಪದ ಕೃತಿ. ರಾಜಶೇಖರ ಭೂಸನೂರಮಠ ಅವರು ರಾಕ್ಷಸ ದ್ವೀಪ, ಅಟ್ಲಾಂಟಿಸ್ ಮುಂತಾದ ಮನಸೂರೆಗೊಳ್ಳುವ ಅನೇಕ ವೈಜ್ಞಾನಿಕ ಕಾದಂಬರಿಗಳನ್ನು ಹೆಣೆದು ಮಕ್ಕಳ ಕೈಗೆ ಇತ್ತಿದ್ದಾರೆ.

ಪಾತಾಳದಲ್ಲಿ ಪಾಪಚ್ಚಿ (ನಾ.ಕಸ್ತೂರಿ), ಪಿನೋಕಿಯೋ (ಅನು: ಎಸ್.ಪ್ರಹ್ಲಾದರಾವ್), ಭೂಗರ್ಭ ಯಾತ್ರೆ, ಬನದ ಮಕ್ಕಳು, (ಎಂ.ಗೋಪಾಲ ಕೃಷ್ಣ ಅಡಿಗ), ಸಮುದ್ರ ತಳದಲ್ಲಿ ಇಪ್ಪತ್ತು ಸಾವಿರ ಯೋಜನೆಗಳು (ಅನು: ವಾಸುದೇವ ರಾವ್) ಮುಂತಾದ ಒಳ್ಳೆಯ ಹಲವು ಅನುವಾದಿತ ಕೃತಿಗಳೂ ಬಂದಿವೆ. ಕೆ.ನಟರಾಜ್ ಅವರ ಚಂದ್ರಲೋಕಕೆ ಹೋಗೋಣು ಬಾರಾ, ಪುಟಾಣಿ ಕಂಡ ಪರಮಾಣು ಲೋಕ, ಆರ್.ಕೆ.ಶಾನಭೋಗ ಅವರ ಅಂಟಾರ್ಕಟಿಕಾ - ಇವು ಉತ್ತಮ ವೈಜ್ಞಾನಿಕ ಕಾದಂಬರಿಗಳು. ಮಕ್ಕಳ ಕಾದಂಬರಿಕ್ಷೇತ್ರ ಸಾಧಿಸಬೇಕಾದದ್ದು ಇನ್ನೂ ಇದೆ. ಇದಕ್ಕೆ ಅವಕಾಶವೂ ಅಪಾರವಾಗಿದೆ.

ಕನ್ನಡ ಪತ್ರಿಕೋದ್ಯಮ ಕ್ಷೇತ್ರ ಮಕ್ಕಳ ಸಾಹಿತ್ಯ ಸೃಷ್ಟಿಗೆ ಸಾಕಷ್ಟು ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆ ಮೊದಲಾದ ನಿಯತಕಾಲಿಕಗಳಲ್ಲಿ ಮಕ್ಕಳ ಸಾಹಿತ್ಯ ಸೃಷ್ಟಿ ಸಾಕಷ್ಟು ನಡೆದಿದೆ. ಹೀಗೆಯೇ ಮಕ್ಕಳ ಸಾಹಿತ್ಯ ಪ್ರಕಟಣೆಗೇ ಮೀಸಲಾದ ಮಕ್ಕಳ ಪತ್ರಿಕೆಗಳು ಕೂಡ ಮಕ್ಕಳ ಸಾಹಿತ್ಯದ ಅಭಿವೃದ್ಧಿಗೆ ಸಾಕಷ್ಟು ಶ್ರಮಿಸಿವೆ, ಶ್ರಮಿಸುತ್ತಿವೆ; 'ಮಕ್ಕಳ ಪುಸ್ತಕ' ಕನ್ನಡದ ಮೊತ್ತ ಮೊದಲ ಮಕ್ಕಳ ಪತ್ರಿಕೆ (1926). ಅಶ್ವತ್ಥ ನಾರಾಯಣರಾಯ ಎಂಬವರು ಇದನ್ನು ಹುಟ್ಟು ಹಾಕಿದರು. ಅನಂತರ ಇದನ್ನು ದ.ಕೃ.ಭಾರದ್ವಾಜ, ದೇವುಡು ಅವರು ಸಂಪಾದಕರಾಗಿ ಮುನ್ನಡೆಸಿದರು. ದೇವುಡು ಅವರು ಅನಂತರ ನಮ್ಮ ಪುಸ್ತಕ ಎಂಬ ಒಂದು ಸ್ವತಂತ್ರ ಪತ್ರಿಕೆಯನ್ನೂ ನಡೆಸಿದರು. ಬಾಲವನ (ಶಿವರಾಮ ಕಾರಂತ), ಬಾಲಚಂದ್ರ (ಉಳ್ಳಾಲ ಮಂಗೇಶರಾಯ), ಕಂದಮಾಸಿಕ (ಆರ್.ಎಸ್.ಮೈಲಾರಯ್ಯ ಮತ್ತು ಡಿ.ಆರ್.ನಾಥ್), ತುತ್ತೂರಿ (ರಾ.ಮೋ.ವಿಶ್ವಾಮಿತ್ರ), ವಿಶ್ವಾಮಿತ್ರ (ಪದ್ಮನಾಭ ನಾಯಕ), ಮಕ್ಕಳ ಪತ್ರಿಕೆ (ಶಿವರಾಮ ಕಾರಂತ), ಕನ್ನಡ ಕಂದ (ಮೇವುಂಡಿ ಮಲ್ಲಾರಿ), ಬೆಂಗಳೂರಿನ ಮಕ್ಕಳ ಕೂಟ ಮಕ್ಕಳ ಬಾವುಟ (ಮೈಸೂರಿನ ಚಿಲ್ಡ್ರನ್ ಬುಕ್ ಕೌನ್ಸಿಲ್), ಬಾಲ ಭಾರತಿ (ಸಿಸು ಸಂಗಮೇಶ), ಮಕ್ಕಳ ಮನೆ (ಈಶ್ವರ ಕಮ್ಮಾರ) ಇವೆಲ್ಲ ಕೆಲ ಕಾಲ ನಡೆದು ನಿಂತು ಹೋದ ಪತ್ರಿಕೆಗಳು. ಬೆಂಗಳೂರಿನಿಂದ ಹೊರಟ ಪತ್ರಿಕೆಗಳಲ್ಲಿ ಪಾಪಚ್ಚಿ, ಸಂತೃಪ್ತಿ, ಪುಟಾಣಿ, ಚಂಪಕ - ಒಳ್ಳೆಯ ಪ್ರಯತ್ನಗಳು. ಕೇರಳದ ಮಂಗಳ ಪ್ರಕಾಶಕರು ಬಾಲ ಮಂಗಳ ಎಂಬ ಪಾಕ್ಷಿಕವನ್ನು ಹೊರತರುತ್ತಿದ್ದಾರೆ. ಮಣಿಪಾಲದ ಮಣಿಪಾಲ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ತುಂತುರು ಎಂಬ ಮಾಸ ಪತ್ರಿಕೆಯನ್ನು ಸುಂದರವಾಗಿ ಮುದ್ರಿಸುತ್ತಿದ್ದಾರೆ. ಮದರಾಸಿನಿಂದ ಬರುತ್ತಿದ್ದ ಚಂದಮಾಮ ಮತ್ತು ಬಾಲಮಿತ್ರ ಪತ್ರಿಕೆಗಳು ಕೆಲಕಾಲ ಸ್ಥಗಿತಗೊಂಡಿದ್ದು ಇದೀಗ ಮತ್ತೆ ಪ್ರಾರಂಭವಾಗಿವೆ. ಬೊಂಬೆ ಮನೆ ಇಂಥದೇ ಮತ್ತೊಂದು ಪತ್ರಿಕೆ. ಕರ್ನಾಟಕ ವಿಜ್ಞಾನ ಪರಿಷತ್ತು ಬಾಲ ವಿಜ್ಞಾನ ಎಂಬ ಬಹಳ ಉಪಯುಕ್ತವಾದ ವೈಜ್ಞಾನಿಕ ಮಾಸಿಕವನ್ನು ಹೊರಡಿಸುತ್ತಿದೆ. ಅಂಗಳ ಎಂಬ ಒಂದು ವಾರ ಪತ್ರಿಕೆ ಬೆಂಗಳೂರಿನಿಂದ ಹೊರಬರುತ್ತಿದೆ. ಇತ್ತೀಚಿನ ದಿನಗಳಲ್ಲಿ ಮಕ್ಕಳಿಗಾಗಿ ಜೀವನ ಚರಿತ್ರೆಗಳು, ಮಾಹಿತಿ ಪುಸ್ತಕಗಳು, ವಿಜ್ಞಾನ ವಿಚಾರಗಳು ಅಪಾರ ಸಂಖ್ಯೆಯಲ್ಲಿ ಪ್ರಕಟವಾಗುತ್ತಿವೆ. ರಾಷ್ಟ್ರೋತ್ಥಾನ ಪರಿಷತ್ತು 'ಭಾರತ ಭಾರತಿ' ಪುಸ್ತಕ ಮಾಲಿಕೆಯಲ್ಲಿ 510 ಪುಸ್ತಕಗಳನ್ನು ಪ್ರಕಟಿಸಿದೆ. ಐಬಿಎಚ್ ಪ್ರಕಾಶನ ಸಂಸ್ಥೆ ಕನ್ನಡ ನಾಡು ಮತ್ತು ಕನ್ನಡಿಗರ ಪರಂಪರೆ ಮಾಲೆಯಲ್ಲಿ ಅನೇಕ ಕೃತಿಗಳನ್ನು ಪ್ರಕಟಿಸಿದೆ.

ಕನ್ನಡದಲ್ಲಿ ಮಕ್ಕಳ ಕಾಮಿಕ್ಸ್‌ಗಳಿಗೂ ಬರವಿಲ್ಲ. ಐ.ಬಿ.ಎಚ್.ನ. ಅಮರ ಚಿತ್ರಕಥಾಮಾಲಿಕೆಯಲ್ಲಿ ಪುರಾಣ ಪುಣ್ಯ ಪುರುಷರ ಕಥೆಗಳು ಅರ್ಥಪೂರ್ಣ ಚಿತ್ರಗಳೊಂದಿಗೆ ಅಚ್ಚಾಗಿವೆ. ಕಾಮಿಕ್ಸ್ ಲೋಕ ಮಕ್ಕಳ ಕಲ್ಪನಾ ರಮ್ಯತೆಯನ್ನು (ಫ್ಯಾಂಟಸಿ) ಗರಿಗೆದರಿಸುವಲೋಕ. ಅನೇಕ ಇಂಗ್ಲಿಷ್ ಕಾಮಿಕ್ಸ್ ಕಥಾಮಾಲಿಕೆಗಳು ಕನ್ನಡಕ್ಕೆ ಅನುವಾದಗೊಂಡು ಜನಪ್ರಿಯವಾಗಿವೆ. ಫ್ಯಾಂಟಮ್, ಮಾಡಸ್ಟಿಬ್ಲೇಸ್, ಮೋಗ್ಲಿ, ಮಾಂಡ್ರೇಕ್ ಮೊದಲಾದ ಕಥಾಮಾಲಿಕೆಗಳು ಮಕ್ಕಳನ್ನು ರಂಜಿಸಿವೆ.

ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಶ್ವಕೋಶ ಮಾದರಿಯ ಪರಾಮರ್ಶನ ಗ್ರಂಥಗಳನ್ನು ಸಿದ್ಧಪಡಿಸುವ ಕಾರ್ಯವೂ ಕನ್ನಡದಲ್ಲಿ ಸಾಗಿದೆ. ಶಿವರಾಮ ಕಾರಂತರ ಬಾಲ ಪ್ರಪಂಚ (ಮೂರು ಸಂಪುಟ), ವಿಜ್ಞಾನ ಪ್ರಪಂಚ (ನಾಲ್ಕು ಸಂಪುಟ) ಮೊದಲ ಗಟ್ಟಿ ಪ್ರಯತ್ನಗಳು. ನಿರಂಜನರ

ಸಂಪಾದಕತ್ವದಲ್ಲಿ ಪ್ರಕಟಗೊಂಡ ಜ್ಞಾನ ಗಂಗೋತ್ರಿ (ಏಳು ಸಂಪುಟ) ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಮೈಲುಗಲ್ಲೆನ್ನಬಹುದು. ಹಂಪಿಯ ಕನ್ನಡ ವಿಶ್ವವಿದ್ಯಾಲಯ ಕಿರಿಯರಿಗಾಗಿ ಪ್ರಕಟಿಸಿರುವ ಕಿರಿಯರ ಕರ್ನಾಟಕ ವಿಶ್ವಕೋಶವನ್ನೂ ಇಲ್ಲಿ ಸ್ಮರಿಸಬಹುದು. ನವಕರ್ನಾಟಕ ಪ್ರಕಾಶನದವರು ಪ್ರಕಟಿಸಿರುವ ಜ್ಞಾನ ವಿಜ್ಞಾನ ಕೋಶ (ನಾಲ್ಕು ಸಂಪುಟ) ಮಕ್ಕಳ ವಿಜ್ಞಾನ ಕ್ಷೇತ್ರದ ಅದ್ವಿತೀಯ ಕೊಡುಗೆಯಾಗಿದೆ. ಇದೇ ಪ್ರಕಾಶನದ ವಿಜ್ಞಾನ ಪದವಿವರಣಕೋಶ ಕೂಡ ಉಲ್ಲೇಖನೀಯ ಕೃತಿಯಾಗಿದ್ದು ಉಪಯುಕ್ತವಾಗಿದೆ. ಚಿತ್ತಾಕರ್ಷಕ ಬಣ್ಣದ ಚಿತ್ರಗಳ, ಉತ್ತಮ ಗುಣಮಟ್ಟದ ಕಾಗದದ ಬಳಕೆಯ, ಉತ್ಕೃಷ್ಟ ಖಚಿತಜ್ಞಾನದ ಈ ಬಗೆಯ ಉತ್ಪಾದನೆ ಕನ್ನಡದ ಮಟ್ಟಿಗೆ ಹೇಳುವುದಾದರೆ ಮೊದಲ ಮಾದರಿ ಎನ್ನಬಹುದು. ಇಂಥ ಚಿತ್ತಾಕರ್ಷಕವಾದ, ಕಣ್ಮನಗಳನ್ನು ತಣಿಸಬಲ್ಲ ವಿವಿಧ ವಿಷಯಕ ವಿಶ್ವಕೋಶಗಳ ಅಗತ್ಯ ಕನ್ನಡದ ಮಕ್ಕಳಿಗೆ ಇನ್ನೂ ಇದೆ.

ಮಕ್ಕಳ ಸಾಹಿತ್ಯ ಕುರಿತಂತೆ ವಿಮರ್ಶಾತ್ಮಕ ಹಾಗೂ ವಿಶ್ಲೇಷಣಾತ್ಮಕವಾದ ಕೆಲವು ಕೃತಿಗಳೂ ಬಂದಿವೆ. ನಿರುಪಮಾ ಅವರ ನಿಮ್ಮ ಮಕ್ಕಳಿಗೆಂತಹ ಸಾಹಿತ್ಯ ಬೇಕು, ಟಿ.ಎಸ್.ನಾಗರಾಜ ಶೆಟ್ಟಿ ಅವರ ಮಕ್ಕಳ ಸಾಹಿತ್ಯ, ಏಕೆ ಬೇಕು? ಸಿಸು ಸಂಗಮೇಶ ಅವರ ಮಕ್ಕಳ ಸಾಹಿತ್ಯ ನಾನು ಕಂಡಂತೆ ಅಂಥವುಗಳಲ್ಲಿ ಪ್ರಮುಖವಾದವು. ಮಕ್ಕಳ ಪುಸ್ತಕಗಳ ವಿಷಯ ವೈವಿಧ್ಯ, ರಚನೆ, ಉತ್ಪಾದನೆ, ಮಾರಾಟ ಈ ಎಲ್ಲ ಕ್ಷೇತ್ರಗಳಲ್ಲಿಯೂ ಸಾಕಷ್ಟು ಸುಧಾರಣೆಗಳು ನಡೆಯಬೇಕಾಗಿದೆ. (ಟಿ.ಎಸ್.ಎನ್.)

**ಕನ್ನಡದಲ್ಲಿ ಮಹಿಳಾ ಸಾಹಿತ್ಯ :** ಸಾವಿರದೈನೂರು ವರ್ಷಗಳ ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದರೆ 20ನೆಯ ಶತಮಾನಕ್ಕೆ ಕಾಲಿರಿಸುವವರೆಗೆ ಮಹಿಳೆಯರೇ ರಚಿಸಿದ ಸಾಹಿತ್ಯ, ಮಹಿಳಾ ಸಾಹಿತ್ಯವೆಂಬ ಹೆಸರಿನಲ್ಲಿ ಗುರುತಿಸಬಹುದಾದಂಥದ್ದು ಹೆಚ್ಚು ಕಂಡುಬರುವುದಿಲ್ಲ. ಸ್ತ್ರೀಯರು ವಿದ್ಯೆಯಿಂದ ವಂಚಿತರಾದದ್ದು, ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಸಾರ್ವಜನಿಕ ಜೀವನದಲ್ಲಿ ಭಾಗಿಯಾಗುವ ಹೆಚ್ಚಿನ ಅವಕಾಶಗಳು ಸೃಷ್ಟಿಯಾಗದೇ ಹೋದದ್ದು, ಸ್ವಾತಂತ್ರ್ಯವಿರದ ಅವಲಂಬನೆಯ ಜೀವನವೇ ಪ್ರಧಾನವಾದದ್ದು - ಇಂಥ ಅನೇಕ ಕಾರಣಗಳಿಂದಾಗಿ ಮಹಿಳೆ ಕನ್ನಡ ಸಾಹಿತ್ಯದ ಮುಖ್ಯವಾಹಿನಿಯಲ್ಲಿ ಬಹುಕಾಲದವರೆಗೆ ಅನನ್ಯತೆಯನ್ನು ಕಂಡುಕೊಳ್ಳಲು ಸಾಧ್ಯವಾಗಲಿಲ್ಲ. ಇದಕ್ಕೆ ಅಲ್ಲೊಂದು ಇಲ್ಲೊಂದು ಅಪವಾದಗಳಿರಬಹುದು. ಗುರುತಿಸುವಂಥ ಸೃಜನಶೀಲತೆ ನಮಗೆ ಕಾಣುವುದು 20ನೆಯ ಶತಮಾನದಲ್ಲಿಯೇ ಎನ್ನಬಹುದು.

ಸಾತವಾಹನರ ಕಾಲದಿಂದಲೂ ಆಡಳಿತ, ರಾಜ್ಯಭಾರ ಇತ್ಯಾದಿ ಕ್ಷೇತ್ರಗಳಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುವ ಶಕ್ತಿಸಾಮರ್ಥ್ಯಗಳನ್ನು ಪ್ರದರ್ಶಿಸಿದ ಕೆಲ ಮಹಿಳೆಯರು ಪ್ರತಿಭೆಗೆ ಉದಾಹರಣೆಯಾಗಿ ಕಾಣಸಿಗುತ್ತಾರೆ. ಬಾದಾಮಿ ಚಳುಕ್ಯ ಚಕ್ರವರ್ತಿ ಇಮ್ಮಡಿ ಪುಲಕೇಶಿಯ (ಸು.610-42) ಎರಡನೆಯ ಮಗನಾದ ಚಂದ್ರಾದಿತ್ಯನ ಪ್ರಿಯ ಮಹಿಷಿ 'ವಿಜ್ಜಿಕೆ' ಎಂದು ಹೆಸರಾದ ವಿಜಯಮಹಾದೇವಿ ಸಂಸ್ಕೃತ ಪಂಡಿತೆಯೂ ಉತ್ತಮ ಕವಯಿತ್ರಿಯೂ ಆಗಿದ್ದು ಕೌಮುದೀ ಮಹೋತ್ಸವ ಎಂಬ ಸಂಸ್ಕೃತ ನಾಟಕವನ್ನು ರಚಿಸಿದಳೆಂದು ತಿಳಿದುಬರುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆಯ ಸಂದರ್ಭದಲ್ಲಿ ಸಾಂಸ್ಕೃತಿಕವಾಗಿ ಅತ್ತಿಮಬ್ಬೆ ಎಂಬ ಜೈನ ಮಹಿಳೆಯ ಹೆಸರು ಪ್ರಸಿದ್ಧವಾದದ್ದು. ಈಕೆ ಸಾವಿರದೈನೂರು ಜಿನ ಬಸದಿಗಳನ್ನು ನಿರ್ಮಿಸಿ, ಜಿನ ಪ್ರತಿಮೆಗಳನ್ನು ಮಾಡಿಸಿ ದಾನ ಚಿಂತಾಮಣಿ ಎಂಬ ಬಿರುದು ಗಳಿಸಿದ್ದವಳು. ಕವಿ ರನ್ನನಿಂದ ಅಜಿತ ಪುರಾಣ ಕಾವ್ಯವನ್ನು ಬರೆಸಿ, ಪೊನ್ನ ಬರೆದ ಶಾಂತಿಪುರಾಣದ ಸಹಸ್ರ ಪ್ರತಿಗಳನ್ನು ಮಾಡಿಸಿ ದಾನ ಮಾಡಿದವಳು. ಸು.1100ರಲ್ಲಿದ್ದಳೆಂದು ಭಾವಿಸಲಾಗಿರುವ ಕಂತಿ (ನೋಡಿ) ಕನ್ನಡದ ಪ್ರಪ್ರಥಮ ಕವಯಿತ್ರಿ. ಈಕೆಗೆ ಅದ್ಭುತ ಕವಿತಾ ಸಾಮರ್ಥ್ಯವಿತ್ತೆಂದೂ ಅಭಿನವ ವಾಗ್ದೇವಿ, ಅಧಿಕ ಕವೀಶ್ವರಿ ಇತ್ಯಾದಿ ಬಿರುದುಗಳಿದ್ದವೆಂದೂ ಕಂತಿ ಹಂಪನ ಸಮಸ್ಯೆಗಳು ಎಂಬ ಕೃತಿಯನ್ನು ಬರೆದಿರುವಳೆಂದೂ ತಿಳಿದುಬರುತ್ತದೆ.

ಕಂತಿಯ ಅನಂತರ 12ನೆಯ ಶತಮಾನದಲ್ಲಿ ಹಲವಾರು ವಚನಕಾರ್ತಿಯರು ಕನ್ನಡದಲ್ಲಿ ವಚನಗಳನ್ನು ರಚಿಸಿ ಒಂದು ಚಳವಳಿಯನ್ನೇ ನಡೆಸಿದರು. ಮಹಿಳೆಯರು ತಮ್ಮ ಸಾಹಿತ್ಯದಲ್ಲಿ ಸಮಾಜದ ಬಗ್ಗೆ ಗಂಭೀರವಾಗಿ ಚಿಂತನೆ ನಡೆಸಿ, ಸಾಹಿತ್ಯ ರಚಿಸತೊಡಗಿದ್ದನ್ನು ನಾವು ಕೆಲವು ಹಂತಗಳಲ್ಲಿ ಗುರುತಿಸಬಹುದು. ಮೊದಲನೆಯದು ಹನ್ನೆರಡನೆಯ ಶತಮಾನದ ವಚನಕಾರ್ತಿಯರ ಕಾಲದಲ್ಲಿ; ಎರಡನೆಯ ಹಂತ, ದೇಶದ ಸ್ವಾತಂತ್ರ್ಯ ಚಳವಳಿಗಳು ನಡೆಯತೊಡಗಿ, ಸ್ವಾತಂತ್ರ್ಯಪೂರ್ವ ಸಂದರ್ಭದಲ್ಲಿ ಮಹಿಳೆಯರು ಶಿಕ್ಷಣದ ಮಹತ್ತ್ವದ ಬಗ್ಗೆ ಅರಿವು ಮೂಡಿಸಿಕೊಂಡಾಗ; ಮೂರು ಮತ್ತು ನಾಲ್ಕನೆಯ ಹಂತ, ಇಪ್ಪತ್ತನೆಯ ಶತಮಾನದ ಎಪ್ಪತ್ತು - ಎಂಬತ್ತರ ದಶಕದಲ್ಲಿ, ದಲಿತ - ಬಂಡಾಯ ಹಾಗೂ ಸ್ತ್ರೀಶೋಷಣೆಯ ಅಥವಾ ಸ್ತ್ರೀವಾದದ ಹೊಸ ಎಚ್ಚರ, ಹೊಸ ಅರಿವು ಮೂಡಿದಾಗ. ಈ ಸಂದರ್ಭಗಳಲ್ಲೆಲ್ಲ ಮಹಿಳೆಯರು ಸಮಾಜದ ಸಮಸ್ಯೆಗಳ ಬಗ್ಗೆ, ಅವುಗಳನ್ನು ತೊಡೆಯಲು ಆಗಬೇಕಾದ ಸುಧಾರಣೆಗಳ ಬಗ್ಗೆ ಗಂಭೀರ ಚಿಂತನೆ ನಡೆಸಿ ಸಾಹಿತ್ಯ ರಚಿಸಿದ್ದಾರೆ. ಇವೆಲ್ಲದರ ಜೊತೆ ಜೊತೆಗೇ ಪ್ರತ್ಯೇಕವಾಗಿ ಹರಿದು ಬಂದ ಜನಪದ ಸಾಹಿತ್ಯವನ್ನೂ ನಾವು ಮರೆಯುವಂತಿಲ್ಲ.

ಹನ್ನೆರಡನೆಯ ಶತಮಾನದಲ್ಲಿ ಶರಣರು ಧಾರ್ಮಿಕ ಬದಲಾವಣೆಯ ಮೂಲಕ ಸಮಾಜದ ಪರಿವರ್ತನೆಗೆ ಪ್ರಯತ್ನಿಸಿದರು. ಸಾಮಾಜಿಕ, ಸಾಹಿತ್ಯಕ ಆಂದೋಲನವನ್ನು ರೂಪಿಸಿದರು. ಮೊದಲ ಬಾರಿಗೆ ಮಹಿಳೆಯರೂ ಸಾಹಿತ್ಯ ಸೃಷ್ಟಿಗೆ ಹಾಗೂ ಸಾಂಸ್ಕೃತಿಕ ಬದಲಾವಣೆಗೆ ಸ್ಪಂದಿಸಿದರು. ಕನ್ನಡ ಮಹಿಳಾ ಸಾಹಿತ್ಯದ ಆರಂಭದ ಕುರುಹುಗಳನ್ನು ನಾವು ವಚನ ಚಳವಳಿಯಲ್ಲಿ ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ವಚನ ಸಾಹಿತ್ಯದ ಮೂಲಕ ಸಾಹಿತ್ಯ ಆರಂಭಗೊಂಡಿದೆ. ಅಕ್ಕಮಹಾದೇವಿ, (ಚನ್ನಮಲ್ಲಿಕಾರ್ಜುನ), ಅಕ್ಕಮ್ಮ (ರಾಮೇಶ್ವರ ಲಿಂಗ), ರೆಮ್ಮವ್ವೆ (ಗುಮ್ಮೇಶ್ವರ), ಗಂಗಮ್ಮ, ಲಕ್ಕಮ್ಮ ಮೊದಲಾದ ವಚನಕಾರ್ತಿಯರು ವಚನ ರಚನೆಯಲ್ಲಿ ಪಾಲುದಾರರಾದರು. ಮೂವತ್ತಾರಕ್ಕೂ ಹೆಚ್ಚು ಶಿವಶರಣೆಯರು ವಚನಗಳನ್ನು ರಚಿಸಿದ್ದು ಸೂಳೆ ಸಂಕವ್ವೆ, ಹೊಲತಿ ಗುಡ್ಡವ್ವೆ, ಉರಿಲಿಂಗ ಪೆದ್ದಿಯ ಪತ್ನಿ ಕಾಳವ್ವೆ, ಕುಂಬಾರ ಕೇತಲದೇವಿ, ಲಕ್ಕವ್ವೆ ಮೊದಲಾದ ದಲಿತ ಸ್ತ್ರೀಯರೂ ವಚನಗಳಲ್ಲಿ ಮಾತನಾಡಿದ್ದು ಆ ಕಾಲಕ್ಕೆ ಪವಾಡಸದೃಶ ಸಂದರ್ಭವಾಗಿತ್ತು. ಹೀಗೆ ವಚನಕಾರ್ತಿಯರು ವಚನ ಸಾಹಿತ್ಯಕ್ಕೆ ತಮ್ಮ ಅಮೂಲ್ಯ ಕಾಣಿಕೆ ನೀಡಿದರು. ಸಮಾಜದ ರೀತಿ-ನೀತಿಗಳನ್ನು ಜಾತಿ ಭೇದಗಳನ್ನು ಲಿಂಗ ಭೇದಗಳನ್ನು ತೊಡೆದು ಹಾಕುವ ಚಿಂತನೆ ಮಾಡಿದರು. ಇಂದಿನ ಮಹಿಳಾವಾದಕ್ಕೆ, ದಲಿತ ವಾದಕ್ಕೆ ಸಮಾಜದಲ್ಲಿ ಸಮಾನತೆ ಬೇಕೆಂಬ ಆಲೋಚನೆ ಮತ್ತು ಬೇಡಿಕೆಗಳಿಗೆ, ಇತಿಹಾಸದಲ್ಲಿ ಈ ವಚನಕಾರ್ತಿಯರು ಮೊದಲ ಮೆಟ್ಟಿಲನ್ನು ಕಟ್ಟಿಕೊಟ್ಟಿದ್ದಾರೆ ಎಂದು ಹೇಳಬಹುದು. ಅಕ್ಕಮಹಾದೇವಿಯನ್ನು ಕನ್ನಡ ಸಾಹಿತ್ಯದ ಮೊದಲ ಬಂಡಾಯ ಲೇಖಕಿ ಎಂದು ನಾವು ಗುರುತಿಸಬಹುದು.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಕಂಪಣನ ರಾಣಿಯಾದ ಗಂಗಾಂಬಿಕೆ ಮಧುರಾವಿಜಯವನ್ನು (ವೀರ ಕಂಪಣರಾಯ ಚರಿತೆ) ಸಂಸ್ಕೃತದಲ್ಲಿ ಬರೆದಳು. ಅಚ್ಯುತರಾಯನ ಹಿರಿಯ ರಾಣಿ ತಿರುಮಲಾಂಬೆ ಪತಿಯ ಎರಡನೆಯ ವಿವಾಹವನ್ನು ವಸ್ತುವಾಗಿಟ್ಟುಕೊಂಡು ವರದಾಂಬಿಕಾ ಪರಿಣಯ ಎಂಬ ಕೃತಿಯನ್ನು ರಚಿಸಿದಳು. ಅಭಿರಾಮ ಕಾಮಾಕ್ಷಿ ಎಂಬಾಕೆ ಅಭಿನವ ರಾಮಾಭ್ಯುದಯವನ್ನೂ ರಾಮಭದ್ರಾಂಬ ಎಂಬಾಕೆ ರಘುನಾಥ ಅಭ್ಯುದಯವನ್ನೂ ರಚಿಸಿರುವುದಾಗಿ ಹೇಳಲಾಗಿದೆ. ರಘುನಾಥ ನಾಯಕನ ಆಸ್ಥಾನದಲ್ಲಿ ಮಧುರವಾಣಿ ಎಂಬ ಕವಯಿತ್ರಿ ಇದ್ದಳೆಂದು ತಿಳಿದುಬರುತ್ತದೆ.

ಚಿಕ್ಕದೇವರಾಜ ಒಡೆಯರ (1672-1704) ಆಸ್ಥಾನದಲ್ಲಿ ಸಂಚಿಯ ಹೊನ್ನಮ್ಮ, ಶೃಂಗಾರಮ್ಮ ಎಂಬ ಕವಯಿತ್ರಿಯರಿದ್ದರು. ಸಂಚಿಯ ಹೊನ್ನಮ್ಮ (ನೋಡಿ) ಹದಿಬದೆಯ ಧರ್ಮ ಎಂಬ ಕಾವ್ಯವನ್ನು ಸಾಂಗತ್ಯದಲ್ಲಿ ರಚಿಸಿದ್ದಾಳೆ. ಈಕೆ ಸಮಾಜದಲ್ಲಿಯ ಪುರುಷ ಪ್ರಾಧಾನ್ಯವನ್ನು ಸಂಪೂರ್ಣ ಒಪ್ಪಿಕೊಂಡು, ಪುರುಷನ ಸುಖ- ಸಂತೋಷಗಳಿಗಾಗಿ ಹೆಣ್ಣು ದುಡಿದರೆ, ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ಸುಖ-ನೆಮ್ಮದಿಗಳಿರುತ್ತವೆ ಎಂಬ ಅಭಿಪ್ರಾಯವನ್ನೇ ತನ್ನ ಕೃತಿಯ ಉದ್ದಕ್ಕೂ ಹೇಳಿಕೊಂಡು ಬಂದಿದ್ದಾಳೆ. ಈಕೆ ಸ್ತ್ರೀ ಪ್ರಗತಿಯ ಚಿಂತಕಿಯೂ ಅಲ್ಲ, ಪುರುಷ

ಪ್ರಾಧಾನ್ಯವನ್ನು ಪ್ರಶ್ನಿಸಿದವಳೂ ಅಲ್ಲ. ಕುವರನಾದರೆ ಬಂದ ಗುಣವೇನದರಿಂದ ಕುವರಿಯಾದೊಡೆ ಕುಂದೇನು; ಹೆಣ್ಣು ಹೆಣ್ಣೆಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು; ಪೆಣ್ಣು ಪೆತ್ತವರು ಪೆಚ್ಚುರ್ವರು; ಪೆಣ್ಣ ನಿಂದಿಸಲೇಕೆ ಪೆರರು; ಪೆಣ್ಣಿಂದ ಪೆರ್ಮೆಗೊಂಡನು ಹಿಮವಂತನು - ಹೀಗೆ ಸ್ತ್ರೀಪರವಾದ ಚಿಂತನೆಯ, ಹೆಣ್ಣು ಕೀಳಲ್ಲ ಎಂಬ ಭಾವನೆಯ ತಣ್ಣಗಿನ, ಮೆಲುದನಿಯ ಪ್ರತಿಭಟನೆಯ ದನಿಯನ್ನು ನಾವು ಇವಳಲ್ಲಿ ಸ್ಪಷ್ಟವಾಗಿ ಗುರುತಿಸಬಹುದು.

ಶೃಂಗಾರಮ್ಮ (ನೋಡಿ) ಬರೆದ ಪದ್ಮಿನೀ ಕಲ್ಯಾಣ ಸಾಂಗತ್ಯ ರೂಪದ ಒಂದು ಸಾಮಾನ್ಯ ಕಾವ್ಯ. ದೊಡ್ಡ ಕೃಷ್ಣರಾಜ ಒಡೆಯರ (1713-32) ಪಟ್ಟ ಮಹಿಷಿಯಾಗಿದ್ದ ಚೆಲುವಾಂಬೆ (ನೋಡಿ) ವರನಂದೀ ಕಲ್ಯಾಣ ಎಂಬ ಕೃತಿಯನ್ನು ರಚಿಸಿದ್ದಾಳೆ. ವೆಂಕಟಾಚಲ ಮಾಹಾತ್ಮ್ಯ ಲಾಲಿಪದ, ಅಲಮೇಲುಮಂಗೈ ಲಾಲಿಪದ, ತಲಕಾವೇರಿ ಮಹಾತ್ಮ್ಯ ಟೀಕೆ - ಇವು ಈಕೆ ರಚಿಸಿದ ಇತರ ಕೃತಿಗಳು. ಹೆಳವನಕಟ್ಟೆ ಗಿರಿಯಮ್ಮ (ನೋಡಿ) ಚಂದ್ರಹಾಸನ ಕಥೆ, ಸೀತಾ ಕಲ್ಯಾಣ, ಉದ್ದಾಳಿಕನ ಕಥೆ, ಬ್ರಹ್ಮ ಕೊರವಂಜಿ ಮುಂತಾದ ಹಾಡುಗಬ್ಬಗಳನ್ನು ರಚಿಸಿದ್ದಾಳೆ. ಚಂದ್ರಹಾಸನ ಕಥೆಗೆ ಲಕ್ಷ್ಮೀಶನ ಜೈಮಿನೀ ಭಾರತ ಮೂಲ ಆಧಾರವೆಂದು ಈಕೆ ಹೇಳಿಕೊಂಡಿದ್ದಾಳೆ. ದಾಸ ಸಾಹಿತ್ಯದ ಸಂದರ್ಭದಲ್ಲಿಯೂ ಅನೇಕ ಸ್ತ್ರೀಯರು ಕೀರ್ತನೆಗಳನ್ನೂ ರಚಿಸಿದ್ದಾರೆ. ರುಕ್ಮಿಣೀಬಾಯಿ, ವಿಜಾಪುರದ ಪ್ರಯಾಗಬಾಯಿ, ಗಲಗಲಿ ಅವ್ವ, ಹರಪನಹಳ್ಳಿ ಭೀಮವ್ವ ಮೊದಲಾದವರು ಹಲವಾರು ಕೀರ್ತನೆಗಳನ್ನು ರಚಿಸಿದ್ದಾಗಿ ತಿಳಿದುಬಂದಿದೆ. ಗೋಪಾಲಕೃಷ್ಣ ವಿಠಲ ಎಂಬ ಅಂಕಿತ ಪಡೆದು 400ಕ್ಕೂ ಹೆಚ್ಚು ಹಾಡುಗಳನ್ನೂ ದ್ವಿಪದಿ ಛಂದಸ್ಸಿನ ರಾಮಾಯಣವನ್ನೂ ಬರೆದ ಚಿತ್ರದುರ್ಗದ ಅಂಬಾಬಾಯಿಯ (ಸು.1902) ಜೀವನ ವಿವರಗಳು ಇತ್ತೀಚೆಗೆ ದೊರಕಿದ್ದು ಆಕೆಯ ಹಾಡಿನ ಕ್ಯಾಸೆಟ್‌ಗಳು ಬಿಡುಗಡೆಯಾಗಿವೆ (2003).

ಜನಪದ ಗೀತೆಗಳ ರಚನೆಯಲ್ಲಿ ಮಹಿಳೆಯರದೇ ಸಿಂಹಪಾಲು. ಆದರೆ ಇಂಥವರ ರಚನೆಗಳು ಕಳೆದುಹೋಗಿರುವುದೇ ಹೆಚ್ಚು. ಸೀತಾ ಪರಿತ್ಯಾಗ, ರುಕ್ಮಿಣೀ ಕಲ್ಯಾಣ, ಚಂದ್ರಾವಳಿ ಮುಂತಾದ ಕೃತಿಗಳ ಲೇಖಕಿ ಯಶೋದಾಬಾಯಿ, ಜನಪದ ಛಂದಸ್ಸನ್ನು ಬಳಸಿ ಕೀರ್ತನ ರಾಮಾಯಣ ಬರೆದ ಬೊಮ್ಮಸಂದ್ರದ ಭಾಗೀರಥಮ್ಮ ಇಂಥ ಅಲ್ಲೊಬ್ಬ ಇಲ್ಲೊಬ್ಬರ ರಚನೆಗಳು ಅಕಸ್ಮಾತ್ ಉಳಿದುಬಂದಿರುವುದನ್ನು ನಾವು ಕಾಣಬಹುದು.

ಮೈಸೂರು ಅರಸರ ಕಾಲದ ಅನಂತರ ಹತ್ತೊಂಬತ್ತನೆಯ ಶತಮಾನದವರೆಗೆ-ಹೊಸಗನ್ನಡದ ಅರುಣೋದಯದ ಕಾಲದವರೆಗೆ - ಸಾಹಿತ್ಯ ರಚನೆ ಅಷ್ಟಾಗಿ ಕಂಡುಬರುವುದಿಲ್ಲ. ಹತ್ತೊಂಬತ್ತನೆಯ ಶತಮಾನದಲ್ಲಿ, ಸಾಂಸ್ಕೃತಿಕ ವಾತಾವರಣದಲ್ಲಿ ಸ್ತ್ರೀಪರ ಆಲೋಚನೆಗಳು ಕಾಣಿಸಿಕೊಳ್ಳ ತೊಡಗಿದ್ದವು. ರಾಷ್ಟ್ರೀಯ ಪುನರುತ್ಥಾನ ಆಂದೋಲನದಲ್ಲಿ ಸ್ತ್ರೀಯರ ಉದ್ಧಾರದ ಕಳಕಳಿಯೂ ಸೇರಿಕೊಂಡಿತ್ತು. ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ, ಶಾಲಾ ಶಿಕ್ಷಣ ಪಡೆದ ಮತ್ತು ಸಾಹಿತ್ಯದಲ್ಲಿ ಒಂದಿಷ್ಟು ಆಸಕ್ತಿ ಹೊಂದಿದ ಸ್ತ್ರೀಯರು ಅಲ್ಲಲ್ಲಿ ಕಾಣ ಸಿಕ್ಕರೂ ಸಾಹಿತ್ಯ ಕ್ಷೇತ್ರಕ್ಕೆ ಕಾಲಿಡುವ ಧೈರ್ಯ ಮಾಡಿರಲಿಲ್ಲ. ಮಹಿಳೆಯರ ಪರವಾಗಿ ಪುರುಷರೇ ಬರೆಯಬೇಕಾದ ಸಂದರ್ಭವಿತ್ತು. ಆ ಕಾಲದ ಕೆಲವು ಪತ್ರಿಕೆಗಳು ಮತ್ತು ಸಂಘ-ಸಂಸ್ಥೆಗಳು, ಹೆಣ್ಣು ಮಕ್ಕಳ ಬರವಣಿಗೆಗೆ ಪ್ರೋದನೆ ನೀಡುವ ಉದ್ದೇಶದಿಂದ ಮಹಿಳೆಯರ ಬರೆಹಗಳಿಗೆ ಬಹುಮಾನಗಳನ್ನಿಟ್ಟು ಸ್ಪರ್ಧೆಗಿಳಿಸಿದವು. ಹೀಗೆ ಸ್ಪರ್ಧೆಗೆ ಬರೆಯುವ ಮೂಲಕ, ಬರವಣಿಗೆಯ ಬದುಕು ಆರಂಭಿಸಿದ ಶಾಂತಾಬಾಯಿ ನೀಲಗಾರ, ತಿರುಮಲಾಂಬಾ, ಸರಸ್ವತಿ ದೇವಿಗೌಡರ ಮೊದಲಾದವರು, ನಿಬಂಧ, ಕಾದಂಬರಿ ಅಥವಾ ಲೇಖನಗಳನ್ನು ಬರೆದು ಬಹುಮಾನಗಳನ್ನೂ ಪಡೆದರು. ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘ ಇಂಥ ನಿಬಂಧವನ್ನು ಆಹ್ವಾನಿಸಿದಾಗ, ಧಾರವಾಡದ ಹೆಣ್ಣುಮಕ್ಕಳ ಟ್ರೇನಿಂಗ್ ಶಾಲೆಯಲ್ಲಿ ಮುಖ್ಯೋಪಾಧ್ಯಾಯರಾಗಿದ್ದ ಶಾಂತಾಬಾಯಿ ನೀಲಗಾರ ಎಂಬ ಮಹಿಳೆ ಸದ್ಗುಣಿ ಕೃಷ್ಣಾಬಾಯಿ (ಉತ್ತಮ ಗೃಹಿಣಿ) ಎಂಬ ಕೃತಿಯನ್ನು ಬರೆದರು. ಇದು ವಾಗ್ಭೂಷಣ ಗ್ರಂಥಮಾಲೆಯಲ್ಲಿ ಪ್ರಕಟವಾಯಿತು (1908). ಇದು ಆಧುನಿಕ ಕಾಲದಲ್ಲಿ ಮಹಿಳೆಯೊಬ್ಬರು ಬರೆದ ಮೊತ್ತ ಮೊದಲ ಕಾದಂಬರಿ. ಶಾಂತಾಬಾಯಿ ನೀಲಗಾರರೇ ಮೊದಲ ಕಾದಂಬರಿಕಾರ್ತಿ. ಈ ಕೃತಿಯಲ್ಲಿ ಆ ಕಾಲದ ಸಮಾಜದಲ್ಲಿ ಮಹಿಳೆಯರ ಶಿಕ್ಷಣದ ಬಗ್ಗೆ ಇದ್ದ ಆತಂಕ ಮತ್ತು ಅನುಮಾನಗಳನ್ನು ದೂರಮಾಡುವ ಪ್ರಯತ್ನವಿದೆ. 'ಜ್ಞಾನವು ಎಲ್ಲ ಹೆಂಗಸರಿಗೂ ಗಂಡಸರಿಗೂ ಸರಿಯಾಗಿಯೇ ಅಗತ್ಯವಾದದ್ದು. ವಿದ್ಯೆ ಕಲಿತ ಹೆಂಗಸರೇ ವಿದ್ಯೆ ಕಲಿತ ಗಂಡಸರ ಮನಸ್ಸಿಗೆ ತಮ್ಮ ಭಾಷಣ ಮುಂತಾದ್ದರಿಂದ ಆನಂದಪಡಿಸುವರಲ್ಲದೆ ಮೂಢ ಹೆಂಗಸರು ಪಡಿಸಲಾರರು. ವಿದ್ಯೆ ಕಲಿಯದ ಹೆಂಡಂದಿರು, ಸುಶಿಕ್ಷಿತ ಗಂಡಂದಿರಿಗೆ, ಕೇವಲ ವಂಶಾಭಿವೃದ್ಧಿಯ ಕೆಲಸದಲ್ಲಿ ಮಾತ್ರ ಉಪಯೋಗವಾಗುವರು. ಸುಶಿಕ್ಷಿತ ಸ್ತ್ರೀಯರು ಮಕ್ಕಳಿಗೂ ಗಂಡಂದಿರಿಗೂ ಗುರುಹಿರಿಯರಿಗೂ ಉಪಯುಕ್ತರಾಗಿ ದೇಶೋನ್ನತಿಗೆ ಸಹ ಕಾರಣರಾಗುತ್ತಾರೆ' ಎಂಬಂತಹ ವಿಚಾರ ನೀತಿಸಂಹಿತೆಯಂತೆ ಕಂಡರೂ ಸಂಸ್ಕೃತಭೂಯಿಷ್ಠ ಶೈಲಿ ಅನಿಸಿದರೂ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡಬೇಕಾದ ಅಗತ್ಯದ ಬಗ್ಗೆ ಆಲೋಚನೆ ಮಾಡುವಂತೆ ಮಾಡಿದರು.

ಶಾಂತಾಬಾಯಿಯವರ ಕಾದಂಬರಿ ದೊರಕುವವರೆಗೆ ನಂಜನಗೂಡು ತಿರುಮಲಾಂಬಾ ಅವರೇ ಆಧುನಿಕ ಕನ್ನಡದ ಮೊತ್ತಮೊದಲ ಕಾದಂಬರಿಕಾರ್ತಿ ಎಂದೂ ಅವರು ಪ್ರಕಟಿಸಿದ ಸುಶೀಲೆ (1913) ಕಾದಂಬರಿಯೇ ಮೊದಲ ಮಹಿಳಾ ಕಾದಂಬರಿ ಎಂದೂ ಪರಿಗಣಿಸಲಾಗಿತ್ತು. ತಿರುಮಲಾಂಬಾ ಮತ್ತು ಆರ್.ಕಲ್ಯಾಣಮ್ಮನವರು ಸ್ವತಃ ನವೋದಯದ ಲೇಖಕರಿಗಿಂತ ಹೆಚ್ಚು ಹಳೆಯ ಪೀಳಿಗೆಯವರ ಸುಧಾರಣಾ ಮನೋಭಾವ, ವಿಚಾರ ಮತ್ತು ಭಾಷೆಗಳನ್ನು ತಮ್ಮ ಆದರ್ಶವಾಗಿಸಿಕೊಂಡವರು. ಸ್ವತಃ ವಿಧವೆಯರಾಗಿದ್ದು ವಿದ್ಯಾಭ್ಯಾಸ ಮಾತ್ರವಲ್ಲದೆ, ಕೇಶಮುಂಡನ ಸಮಸ್ಯೆ, ಅಸಮ ವಿವಾಹ, ಬಾಲ್ಯ ವಿವಾಹ, ವಿಧವಾ ವಿವಾಹ ಮುಂತಾದ ಸುಧಾರಣಾ ಅಂಶಗಳ ಬಗ್ಗೆ ಆಲೋಚನೆ ನಡೆಸಿದರು. ಸಮಾಜದ ಮನಸ್ಸನ್ನೂ ಸ್ತ್ರೀಯರ ಸ್ಥಾನಮಾನವನ್ನೂ ತಿದ್ದಲು ಬೇಕಾದಂತಹ ಪಾತ್ರಸನ್ನಿವೇಶಗಳನ್ನು ತಮ್ಮ ಕೃತಿಗಳಲ್ಲಿ ತಂದು ಕಥೆ, ಕಾದಂಬರಿ, ನಾಟಕ, ಲೇಖನ ಇತ್ಯಾದಿ ವಿವಿಧ ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿದರು. ತಿರುಮಲಾಂಬಾರವರು ಸತೀಹಿತೈಷಿಣಿ ಗ್ರಂಥಮಾಲೆ ಎಂಬ ಪ್ರಕಟಣಾ ಸಂಸ್ಥೆಯನ್ನೂ (1913) ಕರ್ನಾಟಕ ನಂದಿನಿ ಎಂಬ ಪತ್ರಿಕೆಯನ್ನೂ ಆರಂಭಿಸಿದ್ದರು (1916). ತಿರುಮಲಾಂಬಾರವರಿಗಿಂತ ಹೆಚ್ಚು ನಿಖರವಾದ ನಿಲುವುಳ್ಳ ಆರ್.ಕಲ್ಯಾಣಮ್ಮನವರು 'ಶ್ರೀ ಶಾರದಾ ಸ್ತ್ರೀ ಸಮಾಜ' (1913) ಆರಂಭಿಸುದುದಲ್ಲದೆ ಸ್ತ್ರೀ ಸಮಸ್ಯೆಗಳು, ಸ್ತ್ರೀ ಜಗತ್ತಿನ ವಿವಿಧ ವಿಷಯಗಳು, ಜ್ಞಾನಾಭಿವೃದ್ಧಿ ಅಂಕಣಗಳು, ಸಾಂಸ್ಕೃತಿಕ ಕಾರ್ಯಕ್ರಮಗಳ ವರದಿ, ಕೌಟುಂಬಿಕ ಸಲಹೆ ಇತ್ಯಾದಿ ವಿಷಯಗಳನ್ನೊಳಗೊಂಡ ಸರಸ್ವತಿ ಎಂಬ ಪತ್ರಿಕೆಯನ್ನು ಆರಂಭಿಸಿ (1917) ಸು.43 ವರ್ಷಗಳ ಕಾಲ ನಡೆಸಿದರು. ಇದೇ ಪತ್ರಿಕೆಯ ಮಕ್ಕಳ ಬಾವುಟ ವಿಭಾಗ ಮಕ್ಕಳ ಬರೆಹಗಳನ್ನು ಪ್ರಕಟಿಸಿ, ಆ ಕಾಲದಲ್ಲಿ ಮಕ್ಕಳಲ್ಲಿ ಸಾಹಿತ್ಯ ರಚನೆಯನ್ನೂ ಅಧ್ಯಯನದ ಅಭಿಲಾಷೆಯನ್ನೂ ಮೂಡಿಸುವಲ್ಲಿ ನೆರವಾಯಿತು. ಪೌರ ಸಾಮಾಜಿಕ ಕಾರ್ಯಗಳಿಗೂ ತಮ್ಮ ಜವಾಬ್ದಾರಿಯನ್ನು ಹೆಂಗಸರು ವಿಸ್ತರಿಸಲು ಅನುವಾಗುವಂತೆ ಸಾಮಾಜಿಕ ಪ್ರಜ್ಞೆಯನ್ನು ಬೆಳೆಸುವ ರೀತಿಯಲ್ಲಿ ಸ್ತ್ರೀಯರಿಗೆ ವಿದ್ಯೆಯಾಗಬೇಕು ಎಂಬುದನ್ನು ಇವರು ಪ್ರತಿಪಾದಿಸಿದರು. ಸಾಮಾಜಿಕ ವಾತಾವರಣ ಬದಲಾಗುತ್ತ ಹೋದಂತೆ ತಮ್ಮ ಬರೆಹದ ಧಾಟಿ, ಧೋರಣೆಗಳನ್ನೂ ಇವರು ಬದಲಾಯಿಸಿಕೊಂಡರು.

ಭಾರತ ಸ್ವಾತಂತ್ರ್ಯ ಚಳವಳಿಯ ಸಂದರ್ಭದಲ್ಲಿ ಅನೇಕ ಮಹಿಳೆಯರು ಭಾಗವಹಿಸಿದರು. ಅದುವರೆಗೆ ಅಡುಗೆಮನೆಯನ್ನು ದಾಟದವರಿಗೆ, ದೇಶದ ಸ್ವಾತಂತ್ರ್ಯದ ಪರಿಕಲ್ಪನೆಯೊಂದಿಗೆ ಶಿಕ್ಷಣದ ಪರಿಕಲ್ಪನೆ ಮೂಡಿತು. ಸಮಾಜವೆಂದರೆ ಕೇವಲ ಪುರುಷರಲ್ಲ, ಅದರಲ್ಲಿ ಸ್ತ್ರೀಯೂ ಸೇರಿದ್ದಾಳೆ ಎಂಬ ಭಾವನೆ ಬೆಳೆಯಲಾರಂಭವಾಯಿತು. ಸ್ತ್ರೀಗೂ ಶಿಕ್ಷಣ ಬೇಕು, ಆಗಲೇ ಸಮಾಜದ ಅಭಿವೃದ್ಧಿ ಸಾಧ್ಯ ಎಂಬುದನ್ನು ಕಂಡುಕೊಳ್ಳುವ ಪ್ರಯತ್ನಗಳು ನಡೆದವು. ತಿ.ತಾ.ಶರ್ಮರ ಪತ್ನಿ ತಿರುಮಲೆ ರಾಜಮ್ಮ (ಸು.1900) ನವರು ಭಾರತಿ ಎಂಬ ಕಾವ್ಯನಾಮದಿಂದ ಕಾವ್ಯ, ನಾಟಕ, ವ್ಯಕ್ತಿಚಿತ್ರ, ರೂಪಕ ಮುಂತಾದ ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿದರು. ಮಹಾತ್ಮಾ ಗಾಂಧೀಜಿಯವರನ್ನು ತಮ್ಮ ಸಂಗೀತದಿಂದ ಪ್ರಭಾವಿಸಿದರು. ಇವರು ಬರೆದ ತಪಸ್ವಿನಿ, ಮಹಾಸತಿ, ವಾತ್ಸಲ್ಯ, ತರಂಗಲೀಲ ಎಂಬ ನಾಟಕಗಳು; ಸ್ವರ್ಗ ನಿರಸನ, ದುಂದುಭಿ ಮುಂತಾದ ಕೃತಿಗಳು; ಜೀವನ ಜಿಜ್ಞಾಸೆ, ಅಂತರವಾಣಿ ಮುಂತಾದ ಕವಿತೆಗಳು,

ವಿಮರ್ಶೆ, ಪ್ರಬಂಧ, ಮಕ್ಕಳ ಸಾಹಿತ್ಯ - ಇವು ಇವರು ಕನ್ನಡಕ್ಕೆ ನೀಡಿದ ಉತ್ತಮ ಕೊಡುಗೆಗಳು. ಇವರು ರಚಿಸಿದ 'ಜೈ ಭಾರತ ಭುವಿಗೆ ಮಾತೆಗೆ ಜೈ ಪಾವನ ಮೂರ್ತಿಗೆ ಜೈ' ಎಂಬುದು ಆ ಕಾಲದ ಅತ್ಯಂತ ಜನಪ್ರಿಯ ದೇಶಭಕ್ತಿ ಗೀತೆಯಾಗಿತ್ತು.

ಇವರ ಅನಂತರದ ಪೀಳಿಗೆಯವರಾದ ಶ್ಯಾಮಲಾದೇವಿಯವರು (1910) ಮಿಸೆಸ್ ಬಿ.ಟಿ.ಜಿ.ಕೃಷ್ಣ ಎಂಬ ಹೆಸರಿನಿಂದ ಕಥೆಗಳನ್ನು ಬರೆದರು. ಕೊಡಗಿನ ಗೌರಮ್ಮ (1912-39), ಗಿರಿಬಾಲೆ (ಸರಸ್ವತಿಬಾಯಿ ರಾಜವಾಡೆ, 1913), ಎಚ್.ವಿ.ಸಾವಿತ್ರಮ್ಮ (1913) - ಇವರು ಆಧುನಿಕ ಶಿಕ್ಷಣ, ಸುಧಾರಣೆಯ ಮನೋಧರ್ಮಗಳನ್ನು ಹೊಂದಿದ್ದು, ಮುಂದುವರೆದ ನೆಲೆಯಲ್ಲಿ ತಮ್ಮ ಚಿಂತನೆ ಮತ್ತು ಬರೆಹಗಳಿಗೆ ತೊಡಗಿದರು. ಸ್ತ್ರೀಯರ ಮತ್ತು ಬಡವರ ಶೋಷಣೆಯ ಸಮಸ್ಯೆಗಳನ್ನು ವಸ್ತುವಾಗಿಟ್ಟುಕೊಂಡು ಇವರೆಲ್ಲರೂ ಕೃತಿ ರಚನೆ ಮಾಡಿದ್ದಾರೆ. 'ಕಂಬನಿ' ಕೊಡಗಿನ ಗೌರಮ್ಮನವರ (ನೋಡಿ) ಸಣ್ಣಕಥೆಗಳ ಸಂಕಲನ, ಅವರ ನಿಧನಾನಂತರ ಪ್ರಕಟವಾಯಿತು. ಗಿರಿಬಾಲೆಯವರು ಕ್ರೌರ್ಯ, ಸ್ವಾರ್ಥ, ಬಡತನ, ಡಾಂಭಿಕತೆ, ಮೌಢ್ಯಗಳನ್ನು ತೀಕ್ಷ್ಣವಾಗಿ ತರ್ಕಬದ್ಧವಾಗಿ ತಮ್ಮ ಹರಿತವಾದ ಭಾಷೆಯಲ್ಲಿ ಚಿತ್ರಿಸಿದರು. ಅನ್ಯಾಯದ ವಿರುದ್ಧ ಬಂಡೇಳಬಲ್ಲ ಗಟ್ಟಿತನ, ವಿಚಾರಶಕ್ತಿಗಳು ಇವರ ಕೃತಿಗಳಲ್ಲಿವೆ. ಹೂ ಬಿಸಿಲು (1936), ಹೊಂಬಿಸಿಲು (1943) ಎಂಬ ಕಥಾಸಂಕಲನಗಳ ಕರ್ತೃವಾದ ಶ್ಯಾಮಲಾದೇವಿ ಬೆಳಗಾಂವಕರ್ ಅವರು ಸಾಮಾಜಿಕ ಸಮಸ್ಯೆಗಳಿಗೆ ಕಲಾತ್ಮಕ ರೂಪ ಕೊಟ್ಟವರು. ತಮ್ಮ ಪತಿಯೊಂದಿಗೆ ಜಯ ಕರ್ನಾಟಕ ಪತ್ರಿಕೆಯನ್ನು ನಡೆಸಲು ಎಲ್ಲ ರೀತಿಯಲ್ಲಿ ನೆರವಾದವರು. ಎಚ್.ವಿ.ಸಾವಿತ್ರಮ್ಮನವರು ಸೀತೆ-ರಾಮ-ರಾವಣ, ವಿಮುಕ್ತಿ ಎಂಬ ಕಾದಂಬರಿಗಳಲ್ಲಿ ರಾಮಾಯಣದ ಕಥೆಯಲ್ಲೇ ಜಾಗೃತ ಸ್ತ್ರೀ ಪಾತ್ರಗಳನ್ನು ಕೆತ್ತಿದ್ದಾರೆ. ಸಂಕಷ್ಟ ಪರಿಸ್ಥಿತಿಯಲ್ಲಿ ಪುರುಷರ ಪಲಾಯನವಾದ, ಸ್ವಾರ್ಥ, ಅವಿಶ್ವಾಸಗಳನ್ನು ಈ ಕೃತಿಗಳು ಗಮನಕ್ಕೆ ತರುತ್ತವೆ. ಈ ಎಲ್ಲ ಲೇಖಕಿಯರು ಸ್ತ್ರೀ ಸಂವೇದನೆಯ ಕೃತಿಗಳನ್ನು ರಚಿಸಿದವರು.

ಬೆಳಗೆರೆ ಜಾನಕಮ್ಮನವರು (1912) ಕಲ್ಯಾಣ ಎಂಬ ಒಂದೇ ಕವನ ಸಂಕಲನ ತಂದರೂ ಇದು ಸ್ತ್ರೀವಾದಿ ದೃಷ್ಟಿಯಿಂದ ಮಹತ್ತ್ವದ ಕೃತಿಯಾಗಿದೆ. ಸ್ತ್ರೀ ಪರ ಕಾಳಜಿಯುಳ್ಳ ಕೃತಿ ರಚಿಸಿದ ಮೊದಲಿಗರಲ್ಲಿ ಇವರೂ ಒಬ್ಬರು. ಆ ಕಾಲದ ಸ್ತ್ರೀಯರ ಬವಣೆಗಳ ಬಗ್ಗೆ, ಬಂಧನ ಮತ್ತು ಕಟ್ಟುಪಾಡುಗಳ ಬಗ್ಗೆ, ಪಾರತಂತ್ರ್ಯದ ಬಗ್ಗೆ ಇವರ ಕವನಗಳು ನಮ್ಮ ಗಮನ ಸೆಳೆಯುತ್ತವೆ.

ಹೆಣ್ಣಿನ ಮುಕ್ತಿಗೆ, ಸುಖಕ್ಕೆ ಮದುವೆ-ಮಕ್ಕಳು ಬಿಟ್ಟು ಬೇರೆ ಪ್ರಪಂಚವೂ ಕಾರ್ಯರಂಗವೂ ಇದೆ, ಉಪಯುಕ್ತ ಸೇವೆಗಳಿವೆ ಎಂಬ ಹೊಸ ಮಾತನ್ನು ಹೇಳಿದ ವಿಶಿಷ್ಟ ಕತೆಗಾರ್ತಿ ಎಚ್.ಎಸ್.ಕಾತ್ಯಾಯನಿ (1923-95). ರಸಪಾಕದಿಂದ ಹಿಡಿದು ಶೂರರಾಣಿ ಕೆಳದಿಯ ಚೆನ್ನಮ್ಮಾಜಿಯಂತಹ ಸಂಶೋಧನಾತ್ಮಕ ಕೃತಿಗಳನ್ನೊಳಗೊಂಡಂತೆ ಇಪ್ಪತ್ತಾರಕ್ಕೂ ಹೆಚ್ಚು ವಿವಿಧ ವಿಷಯಗಳ ಕುರಿತು ಕೃತಿ ರಚಿಸಿದ ಶಾಂತಾದೇವಿ ಮಾಳವಾಡ (1922), ಸ್ತ್ರೀ ಸಂಬಂಧದ ಪರಂಪರಾಗತ ಮೌಲ್ಯಗಳು ಹಾಗೂ ಧೋರಣೆಗಳನ್ನು ಒರೆಗೆ ಹಚ್ಚಿ ನೋಡುವ ಹೊಸ ಕೆಲಸವನ್ನು ತಮ್ಮ ಹಲವಾರು ನಾಟಕ, ಸಣ್ಣಕತೆ, ಕಾವ್ಯ, ಪ್ರಬಂಧಗಳ ಮೂಲಕ ಮಾಡಿದ ಸರಸ್ವತೀ ದೇವಿಗೌಡರ (1923-73), ಸ್ತ್ರೀಯನ್ನು ಕನಿಕರದಿಂದ ಕಾಣದೆ ಸಮಾನ ಭಾವನೆಯಿಂದ ಕಾಣಬೇಕೆಂದು ಪ್ರತಿಪಾದಿಸಿ ಸಣ್ಣಕತೆ, ಕಾದಂಬರಿ, ನಾಟಕ, ಶಿಶುಸಾಹಿತ್ಯಗಳ ಪ್ರಕಾರದಲ್ಲಿ ಕೊಡುಗೆ ನೀಡಿದ ಗೀತಾ ಕುಲಕರ್ಣಿ (1927-86) ಇವರುಗಳ ಕೊಡುಗೆಯೂ ಈ ನಿಟ್ಟಿನಲ್ಲಿ ಗಮನಾರ್ಹವಾದುದು.

ಹಿಂದಿ, ಕೊಂಕಣಿ ಮತ್ತು ಕನ್ನಡದಲ್ಲಿ ಕೃತಿಗಳನ್ನು ರಚಿಸಿದ ಸೀತಾದೇವಿ ಪಡುಕೋಣೆ (1903), ಸಾಕಷ್ಟು ಸಂಕಷ್ಟಗಳ ನಡುವೆಯೂ ಸ್ವಂತ ಕೃತಿಗಳನ್ನೂ ಹಿಂದಿಯಿಂದ ಕನ್ನಡಕ್ಕೆ ಮತ್ತು ಕನ್ನಡದಿಂದ ಹಿಂದಿಗೆ ಭಾಷಾಂತರಿಸಿದ ರಚನೆಗಳನ್ನು ಹೊರತಂದ ವಾಸಂತಿ ಪಡುಕೋಣೆ (1908-95), ನೈತಿಕ ನಿಲುವಿನಲ್ಲಿಯೇ ಮಹಿಳೆಯರ ಪ್ರಗತಿಯ ಬಗ್ಗೆಯೂ ಯೋಚಿಸಿ ಗ್ರಾಮೋದ್ಧಾರಕ ರಾಮಚಂದ್ರ, ಕುಮುದಿನಿ, ಕೃಪಾಶಂಕರ್, ಚಂಚಲೆ, ಪರಿಮಳೆ, ಜೀವನದ ಕರೆ ಮುಂತಾಗಿ ತಮಿಳು ಮತ್ತು ಕನ್ನಡಗಳಲ್ಲಿ ಕಥೆ, ಕಾದಂಬರಿ, ಮತ್ತಿತರ ಪ್ರಕಾರದಲ್ಲಿ ಸಾವಿರಕ್ಕೂ ಹೆಚ್ಚು ಲೇಖನ ಹಾಗೂ ಕಥೆಗಳನ್ನು ರಚಿಸಿದ (ಸರೋಜ ಕಾವ್ಯನಾಮದ) ಜಯಲಕ್ಷ್ಮಿ ಶ್ರೀನಿವಾಸನ್ (1911), ಸಂಪ್ರದಾಯಗಳ ದಾರಿಯಲ್ಲಿ, ಸಿದ್ಧರಾಮೇಶ್ವರ ಪುರಾಣ, ತಾಯಿಯ ಪದಗಳು, ಜಯಗೀತ, ಬಂದೇವು ಕಲ್ಯಾಣಕೆ ಮುಂತಾದ ಧಾರ್ಮಿಕ ನೆಲೆಯ ಕೃತಿಗಳನ್ನು ರಚಿಸಿ, ಕನ್ನಡದ ಉಳಿವಿಗೆ ಸೊಲ್ಲಾಪುರ ಪ್ರದೇಶದಲ್ಲಿ ಹೋರಾಟ ನಡೆಸಿದ ಜಯದೇವಿತಾಯಿ ಲಿಗಾಡೆ (1912-86), ಸೋದರಿ ಎಂಬ ವಾರಪತ್ರಿಕೆಯ ಮೂಲಕ ಹಲವು ಮಹಿಳೆಯರ ಅರಿವಿಗೆ ಹಾಗೂ ಪ್ರಗತಿಗೆ ಅಗತ್ಯ ಸಾಮಗ್ರಿಗಳನ್ನೊದಗಿಸಿ, ಹಲವರನ್ನು ಬರೆಹಕ್ಕೆ ತೊಡಗಿಸಿದ ಎಂ.ಆರ್.ಲಕ್ಷ್ಮಮ್ಮ (1913), ಹಾಸ್ಯ ಕ್ಷೇತ್ರದಲ್ಲಿ ಲೇಖಕಿಯಾಗಿ ನವಿರು ಹಾಸ್ಯದ ಉತ್ತಮ ಕೃತಿಗಳನ್ನು ಕೊಟ್ಟ ಟಿ.ಸುನಂದಮ್ಮ (1917), ಸಂಪ್ರದಾಯಗಳ ಬೇರಿಗೆ ಅಂಟಿಕೊಳ್ಳದೆ, ಕ್ರಿಸ್ತನಲ್ಲೇ ರಾಮನನ್ನು ಕಾಣುತ್ತ ವಿಜಾತೀಯರಲ್ಲಿ ಮತ್ತು ವಿದೇಶೀಯರಲ್ಲಿ ಮಾನವೀಯ ಅಂಶಗಳನ್ನು ಗಮನಿಸಿ ತಮ್ಮವರಾಗಿ ಕಾಣುವ ವಿಶಾಲ ಮನೋಭಾವನೆಯಿಂದ ಲೇಖಕನ ಹೆಂಡತಿ ಮತ್ತು ಇತರ ಕಥೆಗಳು, ಕಣ್ಮುಚ್ಚಿ ನೋಡಿದಾಗ ಮೊದಲಾದ ಕೃತಿಗಳನ್ನು ಹೊರ ತಂದ ಸುಶೀಲಾ ಕೊಪ್ಪರ್ (1924), ಜೀವನಪ್ರೀತಿಯನ್ನು ತೋರುವ ಕಥೆಗಳನ್ನು ಬರೆಯುತ್ತಿದ್ದ ರಾಜೇಶ್ವರಿ ನರಸಿಂಹಮೂರ್ತಿ (1916-73), ಗಂಗರಸ ದುರ್ವಿನೀತ, ಶಪ್ತವಾಪಿ ಎಂಬ ಉತ್ತಮ ಚಾರಿತ್ರಿಕ ಕಾದಂಬರಿಗಳನ್ನು ಬರೆದ ಮೊದಲ ಕನ್ನಡ ಮಹಿಳೆ ಸಿ.ಎನ್.ಜಯಲಕ್ಷ್ಮೀದೇವಿ (1925-95), ವೀರಮಾತೆ ಎಂಬ ಪತ್ರಿಕೆಯ ಸಂಪಾದಕಿಯೂ ಸಮರ್ಥ ಮಂತ್ರಿಯೂ ಮುಳ್ಳು ಗುಲಾಬಿ, ನವಿಲು, ಇಂಚರ ಎಂಬ ಶಿಶುಸಾಹಿತ್ಯವನ್ನೂ ಕಾವ್ಯ ಕೃತಿಗಳನ್ನೂ ಕರ್ನಾಟಕದ ಕವಯಿತ್ರಿಯರು ಎಂಬ ಸಂಶೋಧನಾ ನಿಬಂಧವನ್ನೂ ಹಲವಾರು ಲೇಖನಗಳನ್ನೂ ರಚಿಸಿದ ಅಪಾರ ವಿದ್ವತ್ ಪ್ರತಿಭೆಯ ಸರೋಜಿನಿ ಮಹಿಷಿ ಮೊದಲಾದವರು ಸಾಹಿತ್ಯವನ್ನು ಗಂಭೀರವಾಗಿ ಪರಿಗಣಿಸಿ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಗಮನಾರ್ಹ ಕೆಲಸ ಮಾಡಿದ್ದಾರೆ. ಮಂಡ್ಯದ ಶೃಂಗಾರಮ್ಮನವರು ಶ್ರೀದೇವಿ ಎಂಬ ಕಾವ್ಯನಾಮದಲ್ಲಿ ಆಗಮ ಶಾಸ್ತ್ರಗಳ ಬಗ್ಗೆ ಪುಸ್ತಕಗಳನ್ನು ಬರೆದ ಮೊದಲ ಲೇಖಕಿಯಾಗಿ ಕಂಡುಬರುತ್ತಾರೆ.

ತ್ರಿವೇಣಿ (1928-65) ಕಾವ್ಯನಾಮದ ಅನಸೂಯ ಮಹಿಳಾ ಕಾದಂಬರಿಕಾರ್ತಿಯರಲ್ಲಿ ದೊಡ್ಡ ಹೆಸರು. ಇವರು ಇಪ್ಪತ್ತನೆಯ ಶತಮಾನದ 50-60ರ ದಶಕದಲ್ಲಿ ಲೇಖಕಿಯರ ಸುಧಾರಣಾ ಸಾಹಿತ್ಯ ಮಾರ್ಗವನ್ನೂ ಅ.ನ.ಕೃ., ಕಾರಂತ ಮೊದಲಾದವರು ಸಿದ್ಧಪಡಿಸಿಟ್ಟ ಕಾದಂಬರಿಯ ವೇದಿಕೆಯನ್ನೂ ಮನೋವೈಜ್ಞಾನಿಕ ಸೂತ್ರಗಳನ್ನು ಬಳಸಿಕೊಂಡು ಮಹಿಳೆಯರ ವಿವಿಧ ಬಗೆಯ ಸಮಸ್ಯೆಗಳನ್ನು ವಸ್ತುವಾಗಿಟ್ಟುಕೊಂಡು, ಆಕರ್ಷಕ ಶೈಲಿ, ಸುಂದರ ಭಾಷೆ ಮತ್ತು ನಿರೂಪಣೆಯ ಜಾಣ್ಮೆಯಿಂದ ಒಂದು ದಶಕದ ಅವಧಿಯಲ್ಲಿ ಇಪ್ಪತ್ತನಾಲ್ಕು ಕಥೆ-ಕಾದಂಬರಿಗಳನ್ನು ರಚಿಸಿ ಅಪಾರ ಜನಪ್ರಿಯತೆ ಗಳಿಸಿದರು. ಕಾದಂಬರಿ ಪ್ರಕಾರದ ಮಹತ್ತ್ವವನ್ನೂ ಓದುಗರ ಸಂಖ್ಯೆಯನ್ನೂ ಇವರ ರೀತಿ ಬರೆಯುವ ಲೇಖಕಿಯರ ಸಂಖ್ಯೆಯನ್ನೂ ಹೆಚ್ಚಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಹಣ್ಣೆಲೆ ಚಿಗುರಿದಾಗ, ಬೆಳ್ಳಿಮೋಡ, ಶರಪಂಜರ, ಹೂವು ಹಣ್ಣು ಕನ್ನಡದಲ್ಲೂ ಬೆಕ್ಕಿನ ಕಣ್ಣು ಮಲೆಯಾಳಂನಲ್ಲೂ ಚಲನಚಿತ್ರಗಳಾಗಿ ಭರ್ಜರಿ ಯಶಸ್ಸುಗಳಿಸಿದ ಕಾದಂಬರಿಗಳು. ದೂರದ ಬೆಟ್ಟ, ಹಣ್ಣೆಲೆ ಚಿಗುರಿದಾಗ, ಸೋತು ಗೆದ್ದವಳು, ಕೀಲುಗೊಂಬೆ ಮುಂತಾದವು ಹೆಚ್ಚಿನ ಜನಮೆಚ್ಚುಗೆ ಪಡೆದ ಇತರ ಕಾದಂಬರಿಗಳು (ನೋಡಿ: ತ್ರಿವೇಣಿ).

ತ್ರಿವೇಣಿಯವರ ಅನಂತರದ ಮಹತ್ತ್ವದ ಹೆಸರು ಎಂ.ಕೆ.ಇಂದಿರಾ (1917). ತಮ್ಮ 44ನೆಯ ವಯಸ್ಸಿನಲ್ಲಿ ಬರೆಹಕ್ಕೆ ತೊಡಗಿ ಮೊದಲ ಕಾದಂಬರಿಯಾದ ತುಂಗಭದ್ರದಿಂದ ಜನಪ್ರಿಯರಾದವರು. ಸಾಮಾಜಿಕ ಜೀವನವನ್ನು ಸಂಪ್ರದಾಯಪರ ನಿಲುವಿನಲ್ಲಿಯೇ ಚಿತ್ರಿಸಿದರೂ ಸಮಾಜದ ವಿವಿಧ ಬಗೆಯ ಸಾಮಾಜಿಕ ಸಮಸ್ಯೆಗಳನ್ನೂ ಸ್ತ್ರೀಯರ ಜಗತ್ತಿನಲ್ಲಿ ಆಗುತ್ತಿರುವ ಶೋಷಣೆಯ ಸೂಕ್ಷ್ಮ ಎಳೆಗಳನ್ನೂ ಕಂಡರಿಸಿದ್ದರೆ, ತಪೋವನ ಎಂಬ ಕಾದಂಬರಿಯಲ್ಲಿ ದೇವರು, ಭಕ್ತಿ ಇತ್ಯಾದಿಗಳ ಬೂಟಾಟಿಕೆಗಳನ್ನು ಸಮಾಜಕ್ಕೆ ತೋರಿಸಿಕೊಟ್ಟಿದ್ದಾರೆ. ಗೆಜ್ಜೆಪೂಜೆಯಲ್ಲಿ ವಿವಾಹದ ದಾರಿಯಲ್ಲಿ ಹೋಗಬೇಕೆಂದು ಬಯಸುವ ವೇಶ್ಯೆಯೊಬ್ಬಳ ಮಗಳು ಎದುರಿಸುವ

ಸಮಸ್ಯೆಗಳ ಬಗ್ಗೆ ಚಿತ್ರಣವಿದೆ. ವೇಶ್ಯೆಯ ಸಮಸ್ಯೆಯ ಬಗ್ಗೆ ಸಮಾಜ ಯೋಚಿಸುವಂತೆ ಮಾಡಿದ ಕೃತಿಯಿದು. ವಿಧವಾ ಸಮಸ್ಯೆಯನ್ನು ಕುರಿತ ಇವರ ಫಣಿಯಮ್ಮ ಕಾದಂಬರಿ ಚಲನಚಿತ್ರವಾಗಿಯೂ ಹೆಸರು ಗಳಿಸಿದೆ. ಪ್ರೇಮಾಕಾರಂತರು ಈ ಕಾದಂಬರಿಯನ್ನು ಯಶಸ್ವೀ ಚಲನಚಿತ್ರವಾಗಿ ತೆರೆಗೆ ತಂದಿದ್ದಾರೆ. ಗೆಜ್ಜೆಪೂಜೆ ಕಾದಂಬರಿಯೂ ಚಲನಚಿತ್ರವಾಗಿ ಪ್ರಸಿದ್ಧವಾಗಿದೆ.

1970ರ ಅನಂತರ ದಲಿತ, ಬಂಡಾಯ ಸಾಹಿತ್ಯದ ದನಿ ಕೇಳಲಾರಂಭಿಸಿತು. ದಲಿತರ ಮೇಲೆ ನಡೆಯುವ ದೌರ್ಜನ್ಯ, ಶೋಷಣೆಗಳ ಚಿತ್ರಣ ಮೊದಲಿಗೆ ಕಾವ್ಯದಲ್ಲಿ, ಅನಂತರ ಗದ್ಯ ಸಾಹಿತ್ಯದಲ್ಲಿ ಗಟ್ಟಿಯಾಗಿ ಕಾಣಿಸಿಕೊಳ್ಳಲು ಆರಂಭವಾಯಿತು. ಆಗ ಕೆಲವು ಲೇಖಕಿಯರೂ ಬರೆಯತೊಡಗಿದರು. ಅವರ ಬರೆವಣಿಗೆ ಈ ದಲಿತ ಬಂಡಾಯದಿಂದ ಇನ್ನಷ್ಟು ಪ್ರಖರಗೊಳ್ಳಲು ಸಾಧ್ಯವಾಯಿತು. ಗೀತಾ ನಾಗಭೂಷಣ, ಬಿ.ಟಿ.ಲಲಿತಾನಾಯಕ್, ಬಿ.ಟಿ.ಜಾಹ್ನವಿ, ಸರಸ್ವತಿ ಚಿಮ್ಮಲಗಿ, ಸುಕನ್ಯಾ ಮಾರುತಿ ಮುಂತಾದವರು ದಲಿತ ಸಮಾಜವನ್ನೂ ಅವರ ಸಮಸ್ಯೆಗಳನ್ನೂ ಬಹು ಸೂಕ್ಷ್ಮವಾಗಿ ಸಾಹಿತ್ಯದಲ್ಲಿ ಚಿತ್ರಿಸತೊಡಗಿದರು. ಗೀತಾ ನಾಗಭೂಷಣರವರ ಹಸಿ ಮಾಂಸ ಮತ್ತು ಹದ್ದುಗಳು, ಮಾಪುರ ತಾಯಿ ಮಕ್ಕಳು, ಬದುಕು, ಬಿ.ಟಿ.ಲಲಿತಾನಾಯಕ್‌ರವರ ಹಬ್ಬ ಮತ್ತು ಬಲಿ ಮುಂತಾದ ಕೃತಿಗಳು ಕೆಳವರ್ಗದಲ್ಲಿ ನಡೆಯುವ ಜೀವನ ಸಂಗತಿಗಳನ್ನು ಸಮಾಜದ ಗಮನಕ್ಕೆ ಸಾಹಿತ್ಯದ ಮೂಲಕ ತರಲು ಪ್ರಯತ್ನ ಮಾಡಿದವು. ದಲಿತಪರ ಕಾಳಜಿಯಿಂದ ತಮ್ಮ ಚಿಂತನೆಯನ್ನು ದಲಿತೇತರ ಬರೆಹಗಾರ್ತಿಯರೂ ಮಾಡಿದರು. ವೈದೇಹಿ (ಅಸ್ಪೃಶ್ಯರು), ಅನುಪಮಾ ನಿರಂಜನ (ಘೋಷ), ಎಂ.ಎಸ್.ವೇದಾ (ಪಾಲು), ಕೆ.ಎಂ.ವಿಜಯಲಕ್ಷ್ಮೀ (ಭೇದವಿಲ್ಲದ ಆಸೆಗಳು), ಎಚ್.ನಾಗವೇಣಿ (ನಾಕನೇ ನೀರು, ಗಾಂಧಿ ಬಂದ) ಮೊದಲಾದವರ ಕೃತಿಗಳಲ್ಲಿ ಕೆಳವರ್ಗದವರ ಸಮಸ್ಯೆ ಮತ್ತು ನೋವುಗಳ ಬಗ್ಗೆ ತುಡಿತವಿರುವುದನ್ನು ನಾವು ಗುರುತಿಸಬಹುದು.

ದಲಿತ ಬಂಡಾಯದ ಜೊತೆ ಜೊತೆಗೆ ನಡೆದ ಇನ್ನೊಂದು ಚಳವಳಿ ಎಂದರೆ ಸ್ತ್ರೀಯರ ಹೊಸ ಎಚ್ಚರದ ಮತ್ತು ಗಂಭೀರ ಚಿಂತನೆಯನ್ನು ಹೊಂದಿದ ಸ್ತ್ರೀವಾದಿ ಚಳವಳಿ. 1975ರ ಅಂತಾರಾಷ್ಟ್ರೀಯ ಮಹಿಳಾ ವರ್ಷದಿಂದ ಈ ಚಳವಳಿ ಪ್ರಾರಂಭಗೊಂಡಿತೆನ್ನಬಹುದು. ಗಮನಾರ್ಹ ಪ್ರಮಾಣದಲ್ಲಿ ಕನ್ನಡ ಸಾಹಿತಿಗಳು ಸ್ತ್ರೀವಾದಕ್ಕೆ ತೆರೆದುಕೊಳ್ಳತೊಡಗಿದರು. 'ಸಮಾಜ, ಉದ್ಯೋಗ ಮತ್ತು ಕುಟುಂಬಗಳಲ್ಲಿ ಮಹಿಳೆಯರ ತುಳಿತ ಹಾಗೂ ಶೋಷಣೆಯ ಬಗ್ಗೆ ಅರಿವು ಮೂಡಿಸಿ, ಈ ಪರಿಸ್ಥಿತಿಯನ್ನು ಪರಿವರ್ತಿಸಲು ಪುರುಷರು ಮತ್ತು ಸ್ತ್ರೀಯರು ಸೇರಿ ನಡೆಸುವ ಪ್ರಜ್ಞಾಪೂರ್ವಕ ಕ್ರಿಯೆಯೇ ಸ್ತ್ರೀವಾದ' ಎಂದು ಸ್ತ್ರೀವಾದಿ ನೆಲೆಯನ್ನು ವ್ಯಾಖ್ಯಾನಿಸಲಾಯಿತು. ಎಂಬತ್ತರ ದಶಕದಲ್ಲಿ ಸ್ತ್ರೀವಾದಿ ನೆಲೆಯ ಚಿಂತನೆ ಪ್ರಖರವಾಯಿತು. ಪುರುಷ ಪ್ರಧಾನ ವ್ಯವಸ್ಥೆಯನ್ನು ಅರ್ಥಪೂರ್ಣವಾಗಿ ಪ್ರಶ್ನಿಸುವ ಈ ಒಳ ಬಂಡಾಯದ ದನಿ ಕನ್ನಡ ಸಾಹಿತ್ಯ ರಚನೆಗೆ ಹೊಸ ಆಯಾಮವನ್ನು ಸೇರಿಸಿತು. ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಸಾಹಿತ್ಯದ ನೆಲೆಯಿಂದ ಮಹಿಳೆಯರು ಸಾಹಿತ್ಯ ರಚನೆಯ ಕಾರ್ಯದಲ್ಲಿ ಆಯಾ ಸಾಹಿತ್ಯ ಸಿದ್ಧಾಂತಗಳ ಹಿನ್ನೆಲೆಯಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿದ್ದುಂಟು. ಅವರೆಗೆ ಹೆಣ್ಣಿಗಾಗುತ್ತಿದ್ದ ಅನ್ಯಾಯಗಳನ್ನು ಖಂಡಿಸಿ, ಆ ಬಗ್ಗೆ ಸಮಾಜ ಆಲೋಚಿಸಬೇಕಾದಂತಹ ಕೃತಿಗಳನ್ನು ಅತ್ಯಂತ ಸಂಕೀರ್ಣತೆಯಲ್ಲಿ ಸಾಹಿತ್ಯಕವಾಗಿ ಹೃದಯಕ್ಕೆ ಮುಟ್ಟುವಂತೆ ತರತೊಡಗಿದರು. ವೀಣಾ ಶಾಂತೇಶ್ವರ ಮತ್ತು ರಾಜಲಕ್ಷ್ಮೀ ಎನ್.ರಾವ್ ಅವರು ನವ್ಯದ ಸಂದರ್ಭದಲ್ಲಿ ಹೊಸ ವಿಧಾನದಲ್ಲಿ ಅಭಿವ್ಯಕ್ತಿಸಿದವರು. ರಾಜಲಕ್ಷ್ಮೀಯವರ ಸಂಗಮ, ವೈಶಾಖ ಶುದ್ಧ ಪೂರ್ಣಿಮ, ಕಲ್ಯಾಣೀ ಮುಂತಾದ ಕಥೆಗಳು ಉಲ್ಲೇಖನೀಯವಾಗಿವೆ. ಸ.ಉಷಾ, ಚ.ಸರ್ವಮಂಗಳಾ, ಶಶಿಕಲಾವಸ್ತ್ರದ, ಜಯ ಭಾಗ್ಯಸುದರ್ಶನ, ಎನ್.ವಿ.ಭಾಗ್ಯಲಕ್ಷ್ಮೀ, ಶೈಲಜಾ ಉಡಚಣ, ಎಚ್.ಎಲ್.ಪುಷ್ಪ, ಸರಸ್ವತಿಗೌಡ ಮುಂತಾದ ಕವಯಿತ್ರಿಯರು ತಮ್ಮ ವ್ಯಕ್ತಿ ವಿಶಿಷ್ಟತೆಯನ್ನು, ಈ ಹೊಸ ಧೋರಣೆಯನ್ನು ಕಾವ್ಯ ಮಾಧ್ಯಮದಲ್ಲಿ ಅತ್ಯಂತ ಶಕ್ತಿಯುತವಾಗಿ ಅಭಿವ್ಯಕ್ತಿಸತೊಡಗಿದರು. ಸ.ಉಷಾ ಅವರ ತೊಗಲು ಗೊಂಬೆಯ ಆತ್ಮಕಥೆ (1973), ವಿಜಯಾದಬ್ಬೆಯವರ ಇರುತ್ತವೆ (1975), ಚ.ಸರ್ವಮಂಗಳಾ ಅವರ ಅಮ್ಮನಗುಡ್ಡ ಎಂಬ ಕವನ ಸಂಕಲನಗಳೂ ಶಾಂತಾದೇವಿ ಕಣವಿಯವರ ಬಯಲು ಆಲಯ, ಜಾತ್ರೆ ಮುಗಿದಿತ್ತು, ವೀಣಾ ಶಾಂತೇಶ್ವರರ ಗಂಡಸರು (1978), ಎನ್.ವಿ.ಭಾಗ್ಯಲಕ್ಷ್ಮೀಯವರ ಬೆರಳಸಂದಿಯ ಬದುಕು (1976), ಅನುಪಮಾ ನಿರಂಜನರ ಮಾಧವಿ (1976), ಭಾಗ್ಯ ಜಯಸುದರ್ಶನ ಅವರ ಬದುಕಿನ ತೆಕ್ಕೆಯಲ್ಲಿ (1978), ಶಾಂತಾ ಜಗದೀಶ್ ಅವರ ಎರಡು ಸೆಳೆ (1977), ಕೊಪ್ಪುಮನೆ ವಿಜಯಲಕ್ಷ್ಮಿಯವರ ಕೆಂಪು ಹೂ (1978) ಮೊದಲಾದ ಹಲವಾರು ಕೃತಿಗಳು ಈ ದಶಕದಲ್ಲಿ ಪ್ರಕಟವಾದುವು.

ಮಹಿಳೆಯರ ಬದುಕಿನ ವಿವಿಧ ಬರೆಹ ಕುರಿತು ಮಹಿಳೆಯರೇ ರಚಿಸಿರುವ 23 ಕೃತಿಗಳು ಕನ್ನಡ ಸಾಹಿತ್ಯ ಪರಿಷತ್ತಿನ ಮೂಲಕ ಪ್ರಕಟವಾದುವು (1975). ಈ ಪ್ರಕಟಣೆಗಳು ಮಹಿಳೆಯರ ಆತ್ಮವಿಶ್ವಾಸಕ್ಕೆ ಹಾಗೂ ಮುಂದಿನ ಬರೆವಣಿಗೆಗೆ ಪ್ರೇರಕವಾದವೆನ್ನಬಹುದು. ಈಗ ಕನ್ನಡದಲ್ಲಿ ಮಹಿಳೆಯರು ರಚಿಸುತ್ತಿರುವ ಸಾಹಿತ್ಯ ವಿಪುಲವಾಗಿ ಪ್ರಕಟವಾಗುತ್ತಿದೆ. ಅನೇಕರು ಈ ಕ್ಷೇತ್ರದಲ್ಲಿ ಸಾಧನೆಯ ಪಥದಲ್ಲಿದ್ದಾರೆ. ಪ್ರತಿಭಾ ನಂದಕುಮಾರ್, ಹೇಮಾ ಪಟ್ಟಣಶೆಟ್ಟಿ, ಮಾಲತಿ, ಮಮತಾ ಜಿ.ಸಾಗರ, ಸವಿತಾ ನಾಗಭೂಷಣ, ಎಚ್.ಎಸ್.ಮುಕ್ತಾಯಕ್ಕ, ಆರ್.ಸುನಂದಮ್ಮ, ಮೊದಲಾದ ಲೇಖಕಿಯರು ಸ್ತ್ರೀವಾದಿ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಕಾವ್ಯ, ಕಥೆ, ಕಾದಂಬರಿ, ವಿಚಾರ ಮೊದಲಾದ ಪ್ರಕಾರಗಳಲ್ಲಿ ಕಲಾತ್ಮಕವಾಗಿ ಕೃತಿ ರಚನೆ ಮಾಡುತ್ತಿದ್ದಾರೆ.

ಹೊಸ ತಲೆಮಾರಿನ ವೀಣಾ ಶಾಂತೇಶ್ವರರ ಸ್ತ್ರೀವಾದಿ ಅಂಶಗಳನ್ನೊಳಗೊಂಡ ಗಂಡಸರು (1978) ಕಾದಂಬರಿ ಹೆಚ್ಚಿನ ಚರ್ಚೆಗೆ ಒಳಪಟ್ಟ ಕೃತಿ. ಅನುಪಮಾನಿರಂಜನರು ಪ್ರಗತಿಶೀಲ ಪಂಥದ ಜೊತೆ ತಮ್ಮ ಸಾಹಿತ್ಯಕ ನಿಲವನ್ನು ಗುರುತಿಸಿಕೊಂಡ ಬಳಿಕ ಬಂದ ಕೃತಿಗಳಾದ ಒಂದು ಗಿಣಿಯ ಕಥೆ, ಒಂದು ಘಟನೆ ಮತ್ತು ಆ ನಂತರ, ಮಾಧವಿ ಮತ್ತು ಎಳೆಗಳಲ್ಲಿ ವ್ಯಕ್ತಿಯ ಆಂತರಿಕ ತಳಮಳ ಮತ್ತು ಬಾಹ್ಯ ಪರಿಸರದ ವಾಸ್ತವಗಳನ್ನು ಸ್ತ್ರೀ ಶೋಷಣೆಯನ್ನು ಅದರಾಚೆಗೆ ಹಾರುವ ಸ್ತ್ರೀ ಪ್ರತೀಕಗಳನ್ನು ಸೃಷ್ಟಿಸಿದರು. ವಿಜಯಾ ಅವರು ಎಲ್ಲಿದ್ದೇವೆ ನಾವು ಎಲ್ಲಿದ್ದೇವೆ ಎಂಬಂತಹ ಬೀದಿ ನಾಟಕಗಳಲ್ಲಿ, ಹೆಣ್ಣು ಮತ್ತು ಗಂಡು ಮಕ್ಕಳನ್ನು ಬೆಳೆಸುವ ವಿಧಾನದಲ್ಲಿಯೇ ಇರುವ ತಾರತಮ್ಯಗಳನ್ನು ಎತ್ತಿ ತೋರಿಸುವ ಕೆಲಸ ಮಾಡಿದರು. ಸಾರಾ ಅಬೂಬಕರ್ ಶೋಷಿತ ಮುಸಲ್ಮಾನ ಮಹಿಳೆಯರ ನಿರಂತರ ನೋವುಗಳನ್ನು ತಮ್ಮ ಕಾದಂಬರಿ, ಕತೆಗಳಲ್ಲಿ ತಂದರು (ಚಂದ್ರಗಿರಿಯ ತೀರದಲ್ಲಿ). ವೈದೇಹಿ ಅತ್ಯಂತ ಸೂಕ್ಷ್ಮ ಮತ್ತು ಹೆಪ್ಪುಗಟ್ಟಿಸುವ ರೀತಿಯಲ್ಲಿ ಸ್ತ್ರೀವಾದಿ ನೆಲೆಯ ಕೃತಿಗಳನ್ನು ನೀಡಿದರು. ನೇಮಿಚಂದ್ರರವರು ಸ್ತ್ರೀ ಸಂವೇದನೆಯನ್ನು ತಮ್ಮ ಕೃತಿಗಳಲ್ಲಿ ತಂದರು. ವಿಜಯಾ ದಬ್ಬೆ, ಬಿ.ಎನ್.ಸುಮಿತ್ರಾಬಾಯಿ, ಪ್ರೀತಿ ಶುಭಚಂದ್ರ, ಚಂದ್ರಮತಿ ಸೋಂದಾ ಮೊದಲಾದವರು ಸ್ತ್ರೀ ವಾದಿ ದೃಷ್ಟಿಕೋನದಿಂದ ಕನ್ನಡದ ಪ್ರಮುಖ ಕೃತಿಗಳನ್ನು ವಿಮರ್ಶಿಸತೊಡಗಿದರು.

ಈಗ ಸ್ತ್ರೀ ಜಗತ್ತಿನ ಆಲೋಚನೆಗಳನ್ನು ಮಂಡಿಸಿ, ಹೊಸ ಅನುಭವವನ್ನೂ ಹೊಸ ದೃಷ್ಟಿಯನ್ನೂ ಒದಗಿಸಿ ಕೊಡುವ ಕಲಾತ್ಮಕ ಕೃತಿಗಳನ್ನು ಅನೇಕರು ರಚಿಸುತ್ತಿದ್ದಾರೆ. ಎಚ್.ಎಸ್.ಪಾರ್ವತಿ, ಗಂಗಾ ಪಾದೇಕಲ್, ಕಮಲಾ ಹೆಮ್ಮಿಗೆ, ವಿಜಯ ಸುಬ್ಬರಾಜ್, ಕೆ.ಎಂ.ವಿಜಯಲಕ್ಷ್ಮಿ (ಕೊಪ್ಪುಮನೆ), ಭಾಗೀರಥಿ ಹೆಗಡೆ, ಬಾನು ಮುಷ್ತಾಕ್, ಕೆ.ಆರ್.ಸಂಧ್ಯಾರೆಡ್ಡಿ, ಮಲ್ಲಿಕಾ ಘಂಟಿ, ಎಸ್.ವಿ.ಪ್ರಭಾವತಿ, ಸುನೀತಾ ಶೆಟ್ಟಿ, ಗಿರಿಜಾ ಶಾಸ್ತ್ರಿ, ತುಳಸಿ ವೇಣುಗೋಪಾಲ್ ಮೊದಲಾದವರು ಸ್ತ್ರೀವಾದೀ ಸಿದ್ಧಾಂತಗಳ ಅರಿವಿನ ಹಿನ್ನೆಲೆಯಲ್ಲಿ, ಶಕ್ತಿಯುತವಾಗಿ ಕೃತಿ ರಚಿಸುವ ಮತ್ತು ವಿಮರ್ಶಿಸುವ ಲೇಖಕಿಯರ ದೊಡ್ಡ ಪಡೆಯೇ ಇದೆ. ಕಜ್ಜಾಯ, ನಾಸು ಅಂತಹ ಶ್ರೇಷ್ಠ ಕೃತಿಗಳನ್ನು ಕೊಟ್ಟ ಸುನಂದಾ ಬೆಳಗಾಂವಕರ್, ಜೈನ ಸಾಹಿತ್ಯದಲ್ಲಿ ವಿಶೇಷ ಪರಿಣತಿ ಇರುವ ಕಮಲಾ ಹಂಪನಾ, ಹಲವು ಭಾಷೆಗಳ ಜ್ಞಾನವಿರುವ ಸಾಕಷ್ಟು ಸಾಹಿತ್ಯ ರಚಿಸಿರುವ ನಿರುಪಮಾ; ಹಲವಾರು ಉತ್ತಮ ಕಾದಂಬರಿಗಳನ್ನು ಕೊಟ್ಟಿರುವ ರೇಖಾ ಕಾಖಂಡಕಿ ಹಾಗೂ ವಸುಮತಿ ಉಡುಪ; ಕಥೆಗಾರ್ತಿ ಪ್ರೇಮಾಭಟ್, ಎಂ.ಎಸ್.ವೇದಾ, ಮೊದಲಾದವರು ಯಾವುದೇ ವಾದಕ್ಕೆ ಅಂಟಿಕೊಳ್ಳದೆ ಬರೆಯುವಂಥ' ಸಮರ್ಥ ಲೇಖಕಿಯರು. ಮಹಿಳಾ

ಚಳವಳಿಯ ತಾತ್ತ್ವಿಕತೆಯನ್ನು ಕುರಿತಂತೆ ಬಿ.ಎಸ್.ವೆಂಕಟಲಕ್ಷ್ಮಿ, ಎನ್.ಗಾಯತ್ರಿ ನಾವಡ, ಧರಣೀದೇವಿ ಮಾಲಗತ್ತಿ, ಪ್ರೀತಿ ಶುಭ ಚಂದ್ರ, ಎಚ್.ಎಸ್.ಶ್ರೀಮತಿ ಮೊದಲಾದವರು ಕೃತಿಗಳನ್ನು ಹೊರತಂದಿದ್ದಾರೆ.

ಕರ್ನಾಟಕದಲ್ಲಿ ಸ್ತ್ರೀವಾದವನ್ನು ಚಳವಳಿಯಾಗಿ ರೂಪಿಸುವಲ್ಲಿ ಬಹಳಷ್ಟು ಶ್ರಮ ವಹಿಸಿದ ಬೆಂಗಳೂರಿನ ಕರ್ನಾಟಕ ಲೇಖಕಿಯರ ಸಂಘದ (1979) ಸಾಧನೆ ಕೂಡ ಗಮನಾರ್ಹವಾದದ್ದು. ಈ ಸಂಘ ಮಹಿಳೆಯರನ್ನು ಸಂಘಟಿಸುವ ಕೆಲಸವನ್ನು ಆರಂಭಿಸಿ, ಮಹಿಳೆಯರ ದನಿಗೆ ಪ್ರತ್ಯೇಕ ವೇದಿಕೆಯನ್ನು ಒದಗಿಸಿಕೊಟ್ಟಿದ್ದಲ್ಲದೆ ಸ್ತ್ರೀವಾದದ ಉದ್ದೇಶ, ಅರ್ಥ, ಚಿಂತನೆ, ಅದರ ಆವಶ್ಯಕತೆ ಇತ್ಯಾದಿಗಳ ಬಗ್ಗೆಯೇ ಹೆಚ್ಚು ಒತ್ತುಕೊಟ್ಟು ಹಲವಾರು ಕಾರ್ಯಕ್ರಮಗಳನ್ನೂ ವಿಚಾರ ಸಂಕಿರಣಗಳನ್ನೂ ಕಾರ್ಯಾಗಾರಗಳನ್ನೂ ನಡೆಸಿತು. ಈ ಸಂಘ ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನಗಳನ್ನೂ ನಡೆಸಿದೆ. ಬೆಂಗಳೂರಿನಲ್ಲಿ ಸರೋಜಿನಿ ಮಹಿಷಿಯವರ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಪ್ರಥಮ ಸಮ್ಮೇಳನ ನಡೆಯಿತು (1985). ಅನಂತರ ಪದ್ಮಾ ಶೆಣೈರವರ ಅಧ್ಯಕ್ಷತೆಯಲ್ಲಿ ದ್ವಿತೀಯ ಸಮ್ಮೇಳನ (1988), ಧಾರವಾಡದಲ್ಲಿ ಶಾಂತಾದೇವಿ ಮಾಳವಾಡರ ಅಧ್ಯಕ್ಷತೆಯಲ್ಲಿ ಮೂರನೆಯ ಸಮ್ಮೇಳನ (1993), ಮಂಗಳೂರಿನಲ್ಲಿ ಎಚ್.ಎಸ್.ಪಾರ್ವತಿಯವರ ಅಧ್ಯಕ್ಷತೆಯಲ್ಲಿ ನಾಲ್ಕನೆಯ ಸಮ್ಮೇಳನ (1996), ವೀಣಾ ಶಾಂತೇಶ್ವರರ ಅಧ್ಯಕ್ಷತೆಯಲ್ಲಿ ಐದನೆಯ ಸಮ್ಮೇಳನ ನಡೆದುವು. ಸ್ತ್ರೀ ಸಾಹಿತ್ಯ ಚರಿತ್ರೆಗೆ ಉಪಯುಕ್ತವಾಗುವ ಹಲವು ಪುಸ್ತಕಗಳನ್ನೂ ಈ ಸಂಘ ಪ್ರಕಟಿಸಿದೆ. ಈ ಸಂಘದ ಪ್ರಭಾವ ಮತ್ತು ಪ್ರೋತ್ಸಾಹಗಳಿಂದ ಉತ್ತರ ಕರ್ನಾಟಕ ಲೇಖಕಿಯರ ಸಂಘ (1985), ದಕ್ಷಿಣ ಕನ್ನಡ ಮತ್ತು ಕಾಸರಗೋಡು ಕರಾವಳಿ ಲೇಖಕಿಯರ ಮತ್ತು ವಾಚಕಿಯರ ಸಂಘ (1987) ಸ್ಥಾಪನೆಯಾಗಿ ಸ್ತ್ರೀವಾದಕ್ಕೆ ಬೆಂಬಲ ನೀಡಿದುವು.

ಯಾವುದೇ ಸಾಹಿತ್ಯದ ಚಳವಳಿಯ ಪ್ರಭಾವ ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಕಾಣಿಸಿಕೊಳ್ಳುತ್ತದೆ. ಎನ್.ಎಂ.ಕೆ.ಆರ್.ವಿ. ಕಾಲೇಜಿನಲ್ಲಿ ಚಿ.ನಾ.ಮಂಗಳಾ ಅವರಿಂದ 1987ರಲ್ಲಿ 'ಮಹಿಳಾ ಅಧ್ಯಯನ' ಎಂಬ ಹೊಸ ವಿಷಯ ಬಿ.ಎ. ವಿದ್ಯಾರ್ಥಿನಿಯರಿಗಾಗಿ ಆರಂಭಗೊಂಡು, ಈಗ ಹೆಚ್ಚು ಕಡಿಮೆ ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳಲ್ಲಿ ಅಳವಡಿಸಲಾಗಿದೆ. ಸ್ತ್ರೀವಾದದ ಪ್ರಭಾವದಿಂದಾಗಿ, ಕನ್ನಡದ ಕೆಲ ಮಹಿಳೆಯರು ವಿಶ್ವವಿದ್ಯಾಲಯಗಳಲ್ಲಿ, ಕಾನೂನು ಕ್ಷೇತ್ರ, ವೈದ್ಯಕೀಯ, ವೈಜ್ಞಾನಿಕ ಕ್ಷೇತ್ರ-ಹೀಗೆ ತಾವು ದುಡಿಯುವ ಕ್ಷೇತ್ರಗಳಲ್ಲಿ, ಮಹಿಳೆಯರ ಸ್ಥಾನಮಾನವನ್ನು ಹೆಚ್ಚಿಸಲು ಒಂದಲ್ಲ ಒಂದು ರೀತಿಯಲ್ಲಿ ಶ್ರಮಿಸುತ್ತಿದ್ದಾರೆ.

ಮಾನವತಾವಾದದ ಒಂದು ಅಂಗವಾದ ಈ ಸ್ತ್ರೀವಾದ ಈಗ ಸರ್ವಮಾನ್ಯವಾಗಿದೆ. ಕೇವಲ ಲೇಖಕಿಯರ ಬರೆಹಗಳಲ್ಲಷ್ಟೇ ಅಲ್ಲದೆ ಲೇಖಕರ ಸಾಹಿತ್ಯ ಕೃತಿಗಳಲ್ಲಿಯೂ ಸ್ತ್ರೀವಾದಿ ನೆಲೆಯನ್ನು ನಾವು ಇತ್ತೀಚಿನ ದಿನಗಳಲ್ಲಿ ಸ್ಪಷ್ಟವಾಗಿ ಕಾಣಬಹುದಾಗಿದೆ. (ಕೆ.ಎಂ.ವಿ.)

**ಕನ್ನಡದಲ್ಲಿ ಮುಕ್ತಕ ಸಾಹಿತ್ಯ :** ಸಂಸ್ಕೃತ ಸಾಹಿತ್ಯದಲ್ಲಿ ಲೋಕೋಕ್ತಿ, ಶೋಕಗೀತೆ, ಚರಮಗೀತೆ, ಚಾಟುಪದ್ಯ, ಸೂಕ್ತಿ, ಸುಭಾಷಿತ ಮುಂತಾದ ಎಲ್ಲ ಬಗೆಯ ಲಘು ಪದ್ಯಗಳನ್ನೂ ಒಟ್ಟಾಗಿ ಮುಕ್ತಕಗಳು ಎಂಬ ಹೆಸರಿನಿಂದ ಕರೆಯುವುದು ರೂಢಿಯಲ್ಲಿದೆ. ಕನ್ನಡದಲ್ಲಿ ಕೂಡ ಈ ಬಗೆಯ ಲಘು ಪದ್ಯಗಳು ಪೂರ್ವದಿಂದಲೂ ರಚಿತವಾಗುತ್ತಲೇ ಬಂದಿವೆ. ಪ್ರಾಚೀನ ಕನ್ನಡದಲ್ಲಿ ಇವನ್ನು ಇಡುಕುಂಗಬ್ಬ, ಮುಕ್ತಕ, ವಚನ, ಚಾಟುಪದ್ಯ, ಶೋಕಗೀತೆ ಮುಂತಾಗಿ ಕರೆದರೆ ಹೊಸಗನ್ನಡದಲ್ಲಿ ನಾಟುನುಡಿ, ಹನಿಗವನ, ಮಿನಿಗವನ, ಚುಟುಕ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಹಾಗೆಯೇ ತೆಲುಗಿನಲ್ಲಿ ಚಾಟುಪದ್ಯ ಎಂದೂ ತಮಿಳಿನಲ್ಲಿ ನಾಟುನುಡಿ ಎಂದೂ ಉರ್ದುವಿನಲ್ಲಿ ಶಾಯಿರಿ ಎಂದೂ ಪ್ರಾಕೃತದಲ್ಲಿ ಗಾಹೆ ಎಂದೂ ಜಪಾನೀ ಭಾಷೆಯಲ್ಲಿ ಹೈಕು ಎಂದೂ ಕರೆಯುತ್ತಾರೆ. ಪಾಶ್ಚಿಮಾತ್ಯ ಸಾಹಿತ್ಯದಲ್ಲಿಯಂತೂ ಈ ಕಾವ್ಯ ಪ್ರಕಾರದ ಮಹಾಪೂರವೇ ಹರಿದಿದೆ. ಇಂಗ್ಲಿಷ್‌ನಲ್ಲಿ ಎಪಿಗ್ರಮ್, ಲಿಮೆರಿಕ್, ಎಪಿಗ್ರಮ್ಯಾಟಿಕ್, ಎಲಿಜಿ, ನಾನ್‌ಸೆನ್ಸ್ ಪೊಯೆಮ್ಸ್ ಮುಂತಾಗಿ ಕರೆಯಲ್ಪಡುವ ರಚನೆಗಳು ನಮ್ಮ ಮುಕ್ತಕವನ್ನು ಹೋಲುವ ಪದ್ಯಗಳೇ ಆಗಿವೆ.

ಮುಕ್ತಕ ಆಕಾರದಲ್ಲಿ ಅತ್ಯಂತ ಸಣ್ಣದಾದ, ಒಂದೇ ಒಂದು ಭಾವವನ್ನು ಅರ್ಥಗರ್ಭಿತವಾಗಿ ಅಭಿವ್ಯಕ್ತಿಸುವ ಒಂದು ಬಿಡಿಪದ್ಯ. ಭಾವಕ್ಕೆ ಸೂಕ್ತ ಭಾಷೆಯಲ್ಲಿ ಅಭಿವ್ಯಕ್ತಗೊಂಡು ಮಿಂಚಿನಂತೆ ಕೋರೈಸುವ ಗುಣವುಳ್ಳದ್ದು. ಕಾವ್ಯ ಪ್ರಕಾರಗಳಲ್ಲಿಯೇ ಮುಕ್ತಕ ಅತ್ಯಂತ ಸಣ್ಣದಾದದ್ದೂ ಸುಂದರವಾದದ್ದೂ ಹೌದು.

ಮುಕ್ತಕದ ಪ್ರಾಚೀನತೆಯನ್ನು ಗುರುತಿಸುವುದು ಸುಲಭವಲ್ಲ. ಈಗ ತಿಳಿದಿರುವ ಮಟ್ಟಿಗೆ ವೇದಗಳೇ ಅತ್ಯಂತ ಪ್ರಾಚೀನತಮ ಕೃತಿಗಳಾಗಿರುವುದರಿಂದ ಸದ್ಯದ ಮಟ್ಟಿಗೆ ಇವೇ ಮುಕ್ತಕ ಪರಂಪರೆಯ ತಲಕಾವೇರಿಗಳೆಂದು ಹೇಳಬಹುದು. ಆದರೆ ವೇದಗಳಿಗಿಂತಲೂ ಮೊದಲು ಜನಪದರಲ್ಲಿ, ಜನಪದ ಗೀತೆಗಳ ರೂಪದಲ್ಲಿ ಈ ಮುಕ್ತಕಗಳು ಸೃಷ್ಟಿಗೊಂಡಿರಬಹುದೆಂದು ಹೇಳಬಹುದು.

ವೇದಗಳಲ್ಲದೆ ಬ್ರಾಹ್ಮಣ, ಆರಣ್ಯಕ, ಉಪನಿಷತ್ತು, ರಾಮಾಯಣ, ಮಹಾಭಾರತ, ಭಾಗವತಗಳಲ್ಲಿಯೂ ಮುಕ್ತಕ ರೂಪಗಳು ದೊರೆಯುತ್ತವೆ. ಸಂಸ್ಕೃತ ಸಾಹಿತ್ಯವಂತೂ ಮುಕ್ತಕಗಳ ಉಗ್ರಾಣವೇ ಆಗಿದೆ. ಅಲ್ಲಿ ಮುಕ್ತಕಗಳು ಮಹಾಕಾವ್ಯ, ಪುರಾಣ, ಐತಿಹಾಸಿಕ ಕಾವ್ಯ, ನಾಟಕ, ಕಥೆ, ಖಂಡಕಾವ್ಯ, ಶಾಸನ ಮುಂತಾದ ಕೃತಿಗಳ ನಡುನಡುವೆ ಬಿಡಿಯಾಗಿ ದೊರೆಯುತ್ತವೆ. ಅಲ್ಲದೆ ಬರಿಯ ಮುಕ್ತಕಗಳನ್ನೇ ಸಂಕಲನ ರೂಪದಲ್ಲಿ ಹೊಂದಿರುವ ಸಾಹಿತ್ಯ ರಾಶಿಯೇ ಸಂಸ್ಕೃತದಲ್ಲಿದೆ. ಪ್ರಾಕೃತ ಭಾಷೆಯಲ್ಲಿಯೂ ಮುಕ್ತಕಗಳು ವಿಶೇಷವಾಗಿ ರಚನೆಯಾಗಿವೆ. ಗಾಥಾಸಪ್ತಶತಿ, ತಂದುಲವೇಯಾಲಿಯಾ, ಭಕ್ತಪರಿಣ್ಣಾಯ, ವಜ್ಜಾಲಗ್ಗಂ, ಗಾಥಾಕೋಶೊ ಮುಂತಾದವು ಪ್ರಸಿದ್ಧ ಮುಕ್ತಕ ಸಂಕಲನಗಳು.

ಕನ್ನಡದಲ್ಲಿಯೂ ಮುಕ್ತಕಗಳು ಅಪಾರ ಸಂಖ್ಯೆಯಲ್ಲಿ ರಚಿತವಾಗಿವೆ. ಕನ್ನಡ ಶಾಸನಗಳು ಮತ್ತು ಪ್ರಾಚೀನ ಕನ್ನಡ ಕಾವ್ಯಗಳ ನಡುನಡುವೆ ಮುಕ್ತಕಗಳು ಸೇರಿಕೊಂಡಿರುವುವಲ್ಲದೆ ಹಲವು ಬಗೆಯ ಮುಕ್ತಕ ಸಂಕಲನಗಳೂ ಸಂಕಲಿತವಾಗಿವೆ.

ಕನ್ನಡದ ಸುಪ್ರಸಿದ್ಧ ಸಂಕಲನ ಗ್ರಂಥಗಳಾದ ಸೂಕ್ತಿ ಸುಧಾರ್ಣವ ಮತ್ತು ಕಾವ್ಯಸಾರ, ತಾತ್ತ್ವಿಕ ಗ್ರಂಥಗಳಾದ ಹದಿಬದೆಯ ಧರ್ಮ, ಅನುಭವ ಮುಕುರ, ಅನುಭವಸಾರ, ದ್ವಾದಶಾನುಪ್ರೇಕ್ಷೆ, ಅನುಭವಾಮೃತ, ಸಮಯ ಪರೀಕ್ಷೆ ಮುಂತಾದ ಕೃತಿಗಳಲ್ಲಿ ವಿಪುಲವಾಗಿ ಮುಕ್ತಕ ರೂಪದ ಪದ್ಯಗಳು ದೊರೆಯುತ್ತವೆ. ಪ್ರಾಚೀನ ಕನ್ನಡದ ವಿವಿಧ ಲಕ್ಷಣ ಗ್ರಂಥಗಳಾದ ಕವಿರಾಜಮಾರ್ಗ, ಛಂದೋಂಬುಧಿ, ಉದಯಾದಿತ್ಯಾಲಂಕಾರ, ಶೃಂಗಾರ ರತ್ನಾಕರ, ಶಬ್ದಮಣಿದರ್ಪಣ, ಕಾವ್ಯಾವಲೋಕನ, ರಸರತ್ನಾಕರ, ಛಂದಸ್ಸಾರ ಮುಂತಾದ ಕೃತಿಗಳಲ್ಲಿಯೂ ಮುಕ್ತಕಗಳು ದೊರೆಯುತ್ತವೆ. ವೈಯಾಕರಣರು, ಆಲಂಕಾರಿಕರು, ಛಾಂದಸರು ಮೊದಲಾದ ಲಾಕ್ಷಣಿಕರು ತಮ್ಮ ಲಕ್ಷಣ ಗ್ರಂಥಗಳಲ್ಲಿ ಬೇರೆ ಬೇರೆ ಕಾವ್ಯಗಳಿಂದಾಯ್ದು ಇಂಥ ಪದ್ಯಗಳನ್ನು ಸಂದರ್ಭವರಿತು ಉದಾಹರಿಸಿರುತ್ತಾರೆ. ಇದೇ ರೀತಿ ಕನ್ನಡದಲ್ಲಿ ವಿಶೇಷವಾಗಿ ರಚನೆಯಾಗಿರುವ ಅಷ್ಟಕಗಳು ಮತ್ತು ಶತಕಗಳು ಸಹ ಶ್ರೇಷ್ಠಮಟ್ಟದ ಮುಕ್ತಕಗಳನ್ನು ಒಳಗೊಂಡಿವೆ.

ಕನ್ನಡ ಸಾಹಿತ್ಯಕ್ಕೆ ಸಾವಿರಾರು ಸಂಖ್ಯೆಯಲ್ಲಿ ಅಮೂಲ್ಯ ಮುಕ್ತಕಗಳನ್ನು ಒದಗಿಸಿದ ಇನ್ನೊಂದು ಸಾಹಿತ್ಯವೆಂದರೆ ಅದು ವಚನ ಸಾಹಿತ್ಯ. ಕನ್ನಡದ ಅತ್ಯಂತ ಜನಪ್ರಿಯ ಕವಿ ಸರ್ವಜ್ಞನ ಖ್ಯಾತಿಗೆ ಅವನ ಸರಳಸುಂದರ ವಚನಗಳೇ ಕಾರಣವಾಗಿವೆ. ಅವನ ಪ್ರತಿಯೊಂದು ವಚನವೂ ಒಂದು ಅಪೂರ್ವ ಮುಕ್ತಕವಾಗಿದ್ದು, ಸರ್ವಜ್ಞ ಕನ್ನಡ ಮುಕ್ತಕ ಸಾಮ್ರಾಜ್ಯದ ಸಾಮ್ರಾಟ ಎಂಬ ಖ್ಯಾತಿಗೂ ಪಾತ್ರನಾಗಿದ್ದಾನೆ.

ಕನ್ನಡ ಜನಪದ ಸಾಹಿತ್ಯ ಮುಕ್ತಕ ಸಾಹಿತ್ಯದ ಗಣಿಯಿದ್ದಂತೆ. ಏಳೆ, ದ್ವಿಪದಿ, ತ್ರಿಪದಿ ಮತ್ತು ಸಾಂಗತ್ಯ ರೂಪದಲ್ಲಿ ರಚಿತವಾಗಿರುವ ಈ ಮುಕ್ತಕಗಳು ಜನಪದರ ಅನುಭವದ ರಸಘಟ್ಟಿಗಳಾಗಿ ರಾರಾಜಿಸುತ್ತಿವೆ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ದೊರೆಯುವ ಮುಕ್ತಕಗಳಿಗೆ ಕೆಲವು ಉದಾಹರಣೆಗಳನ್ನು ಕೊಡಬಹುದು. ಒಂದು ಶೃಂಗಾರ ಮುಕ್ತಕ:

ನೆನೆಯಲು ಬೇಗುದಿಗೊಳಿಸುವಳು
ಕಾಣಲು ಹುಚ್ಚನು ಹಿಡಿಸುವಳು
ಮುಟ್ಟಲು ಮೂರ್ಛೆಗೆ ಸಲಿಸುವಳು
ಪ್ರೇಯಸಿ ಎಂತಿವಳು

ಪ್ರೇಯಸಿಯೊಬ್ಬಳು ತನ್ನ ಪ್ರಿಯತಮನ ಮೇಲೆ ಬೀರುವ ಗಾಢ ಪ್ರಭಾವವನ್ನು ಈ ಮುಕ್ತಕ ವರ್ಣಿಸುತ್ತದೆ.

ಕನ್ನಡ ಕಾವ್ಯ ಹೇಗೆ ವಿಭಿನ್ನ ರಸಿಕರನ್ನು ರಂಜಿಸಬೇಕೆಂಬುದನ್ನು ಬಯಸುವ ಕವಿಯೊಬ್ಬನ ಅನಿಸಿಕೆಯ ರೂಪ ಹೀಗಿದೆ:

ಅಯ್ಯಯ್ಯ ಚೆನ್ನಾದುದೆನೆ ಕನ್ನಡಿಗರು
ರಯ್ಯಾ ಮಂಚಿದಿಯೆನೆ ತೆಲುಗಾ
ಅಯ್ಯಯ್ಯ ಎಂಚ ಪೊರ್ಲಾಂಡೆಂದು ತುಳುವರು
ಮೆಯ್ಯುಬ್ಬಿ ಕೇಳಬೇಕಣ್ಣ (ರತ್ನಾಕರವರ್ಣಿ)

ಧನಮದದಿಂದ ಮೆರೆಯುವವರನ್ನು ವಿಡಂಬಿಸುವ ವಚನಸಾಹಿತ್ಯದ ಒಂದು ಮುಕ್ತಕ:

ಹಾವು ತಿಂದವರ ನುಡಿಸಬಹುದು
ಗರ ಹೊಡೆದವರ ನುಡಿಸಬಹುದು
ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ
ಬಡತನವೆಂಬ ಮಂತ್ರವಾದಿ ಹೊಗಲು
ಒಡನೆ ನುಡಿವರು ನೋಡಾ ಕೂಡಲ ಸಂಗಮದೇವ (ಬಸವಣ್ಣ)

ಸ್ತ್ರೀ ಪುರುಷರು ಪರಸ್ಪರ ಪ್ರೀತಿಸಿ ಮದುವೆಯಾಗುವುದರ ಮಹತ್ತ್ವವನ್ನು ಸಾರುವ ಸರ್ವಜ್ಞನ ಒಂದು ಸುಂದರ ಮುಕ್ತಕ ಹೀಗಿದೆ:

ಮನಬಂದ ಹೆಣ್ಣನ್ನು ವಿನಯದಲಿ ಕರೆದಿತ್ತು
ಮನ ಮುಟ್ಟಿ ಬಾಳ್ವೆ ಮಾಡಿದರೆ ಅಮೃತದ
ಕೆನೆಯ ಸವಿದಂತೆ ಸರ್ವಜ್ಞ

ಹೆತ್ತು ಹೊತ್ತ ತಂದೆ ತಾಯಿಗಳ ಹಿರಿಮೆಯನ್ನು ವರ್ಣಿಸುವ ಒಂದು ಜನಪದ ಮುಕ್ತಕ:

ತಂದೀನ ನೆನೆದರೆ ತಂಗೂಳು ಬಿಸಿಯಾಯ್ತು
ಗಂಗಾದೇವಿ ನನ್ನ ಹಡೆದವ್ವ ನೆನೆದರೆ
ಮಾಸೀದ ತಲೆಯು ಮಡಿಯಾಯ್ತು

ಹೊಸಗನ್ನಡದಲ್ಲಿಯೂ ವಿಪುಲವಾಗಿ ಮುಕ್ತಕಗಳು ರಚನೆಗೊಂಡಿವೆ. ಸಂಸ್ಕೃತ, ಪ್ರಾಕೃತ, ಹಿಂದಿ, ಇಂಗ್ಲಿಷ್ ಹಾಗೂ ಇತರ ಭಾರತದ ಮತ್ತು ವಿದೇಶೀಯ ಭಾಷೆಗಳ ಪ್ರಭಾವದಿಂದಾಗಿ ಹೊಸಗನ್ನಡ ಕವಿಗಳು ಮುಕ್ತಕಧಾರೆಯನ್ನೇ ಹರಿಸಿದ್ದಾರೆ. ಅವುಗಳಲ್ಲಿ ನಾನಾಛಂದಸ್ಸು, ನಾನಾಲಯ ಹಾಗೂ ವಸ್ತುಗಳು ಮೈಗೂಡಿಕೊಂಡಿವೆ. ಹಳಗನ್ನಡ, ನಡುಗನ್ನಡ, ಜನಪದ ಮತ್ತು ಹೊಸಗನ್ನಡದ ಮಿಕ್ಕ ಶೈಲಿಗಳಲ್ಲಿ ಈ ಮುಕ್ತಕಗಳು ರಚಿತವಾಗಿವೆ. ಹಿಂದೆಂದೂ ಕಾಣದಂಥ ಮುಕ್ತಕ ವೈವಿಧ್ಯವನ್ನು ನಾವು ಇಂದಿನ ಮುಕ್ತಕ ಸಾಹಿತ್ಯದಲ್ಲಿ ಕಾಣಬಹುದಾಗಿದೆ.

ಹೊಸಗನ್ನಡದಲ್ಲಿ ಮುಕ್ತಕ ರಚನೆ ಯಾರಿಂದ ಮೊದಲಾಯಿತೆಂದು ಖಚಿತವಾಗಿ ಹೇಳುವುದಕ್ಕೆ ಬರುವುದಿಲ್ಲವಾದರೂ ನಮಗೆ ದೊರಕುವ ಆಧಾರದ ಮೇಲೆ ಆ ಕೀರ್ತಿ ಕುವೆಂಪು ಅವರಿಗೆ ಸಲ್ಲುತ್ತದೆ. ಅವರು 1928ರಿಂದಲೇ ಇವುಗಳ ರಚನೆಗೆ ತೊಡಗಿದರು. ತೀ.ನಂ.ಶ್ರೀ ಅವರೂ ಸುಮಾರು ಇದೇ ಸಮಯದಲ್ಲಿ ಬಿಡಿ ಪದ್ಯಗಳ ರಚನೆಗೆ ತೊಡಗಿದರು. 1932ರಲ್ಲಿ ಪ್ರಕಟವಾದ ಅವರ ಒಲುಮೆ ಕವನ ಸಂಕಲನದಲ್ಲಿ ಅಂಥ ಕೆಲವು ಮುಕ್ತಕಗಳನ್ನು ಸೇರಿಸಿ ಪ್ರಕಟಿಸಿ, ಹೊಸಗನ್ನಡದಲ್ಲಿ ಈ ಕಾವ್ಯ ಪ್ರಕಾರ ಬೆಳೆಯುವುದಕ್ಕೆ ಅಂಕುರಾರ್ಪಣ ಮಾಡಿದರು. ಇವರ ಅನಂತರ 1938ರಲ್ಲಿ ಬಿ.ಶ್ರೀಕಂಠಯ್ಯ ಎಂಬವರು ಸೂಕ್ತಿಸುಧೆ ಎಂಬ ಸ್ವತಂತ್ರ ಮುಕ್ತಕ ಸಂಕಲನವನ್ನು ಪ್ರಕಟಿಸಿದರು. ಅದಾದ ಮೇಲೆ 1940ರಲ್ಲಿ ಜಿ.ಪಿ.ರಾಜರತ್ನಂ ಅವರು ತಮ್ಮ ನೂರು ಪುಟಾಣಿ ಎಂಬ ಸಂಕಲನವನ್ನೂ ಅನಂತರ ಚುಟುಕ ಎಂಬ ಸಂಕಲನವನ್ನೂ ಪ್ರಕಟಿಸಿ ಮುಕ್ತಕ ರಚನೆಗೆ ಚಾಲನೆ ನೀಡಿದರು.

ಹೊಸಗನ್ನಡದ ಸಂದರ್ಭದಲ್ಲಿ ಅನೇಕ ಕವಿಗಳು ಸಾವಿರಾರು ಮುಕ್ತಕಗಳನ್ನು ರಚಿಸಿದ್ದಾರೆ. ಅಂಥವರಲ್ಲಿ ವಿ.ಜಿ.ಭಟ್ಟ, ಡಿ.ವಿ.ಜಿ., ಅಕಬರ ಆಲಿ, ತೋಫಖಾನೆ ಶ್ರೀನಿವಾಸ, ಎಸ್.ವಿ.ಪರಮೇಶ್ವರಭಟ್ಟ, ದಿನಕರ ದೇಸಾಯಿ, ಸಿಪಿಕೆ, ಗುಂಡ್ಮಿ ಚಂದ್ರಶೇಖರ ಐತಾಳ, ಎನ್.ಪ್ರಹ್ಲಾದರಾವ್, ದ್ವಾರಕಾನಾಥ್ ಕಬಂಡಿ, ನಾ.ಕಸ್ತೂರಿ, ಇಟಗಿ ಈರಣ್ಣ, ದುಂಡಿರಾಜ್. ವಿಡಂಬಾರಿ, ಸಿದ್ದಯ್ಯ ಪುರಾಣಿಕ, ಬಿ.ಆರ್.ಲಕ್ಷ್ಮಣರಾವ್, ಸದಾಶಿವ ಎಣ್ಣೆಹೊಳೆ, ಸುಜನಾ, ಡಿ.ವಿ.ಬಡಿಗೇರ, ಚಿತ್ರಲಿಂಗಯ್ಯ, ಜರಗನಹಳ್ಳಿ ಶಿವಶಂಕರ, ದೊಡ್ಡರಂಗೇಗೌಡ, ಬೆಮೆಲ್ ಕಂಪ್ಲಪ್ಪ, ಕೆ.ವಿ.ರಾಜೇಶ್ವರಿ ಮೊದಲಾದವರನ್ನು ಹೆಸರಿಸಬಹುದು. ಮುಕ್ತಕೇ ಕವಯೋನಂತಾಃ (ಮುಕ್ತಕ ಕವಿಗಳಿಗೆ ಲೆಕ್ಕವಿಲ್ಲ) ಎಂದಂತೆ ಇಂದು ನೂರಾರು ಮಂದಿ ಕವಿಗಳು ಮುಕ್ತಕ ರಚನೆಯಲ್ಲಿ ತೊಡಗಿದ್ದಾರೆ. ಹೊಸಗನ್ನಡ ಮುಕ್ತಕಗಳಿಗೆ ಕೆಲವು ಉದಾಹರಣೆಗಳು ಹೀಗಿವೆ:

ಮಾನವ ತನ್ನ ಜೀವನದಲ್ಲಿ ಅಮೂಲ್ಯವಾದ ಕಾಲವನ್ನು ಹೇಗೆ ಅಳವಡಿಸಿಕೊಳ್ಳಬೇಕೆಂಬುದನ್ನು ಬಲು ಸ್ವಾರಸ್ಯಪೂರ್ಣವಾಗಿ ಹೇಳುವ ಒಂದು ಮುಕ್ತಕ:

ಒಮ್ಮೆ ಹೂದೋಟದಲಿ ಒಮ್ಮೆ ಕೆಳೆಕೂಟದಲಿ
ಒಮ್ಮೆ ಸಂಗೀತದಲಿ ಒಮ್ಮೆ ಶಾಸ್ತ್ರದಲಿ
ಒಮ್ಮೆ ಸಂಸಾರದಲಿ ಮತ್ತೊಮ್ಮೆ ಮೌನದಲಿ
ಬ್ರಹ್ಮಾನುಭವಿಯಾಗೊ ಮಂಕುತಿಮ್ಮ (ಡಿ.ವಿ.ಜಿ.)

ಮಡದಿ ಮನೆಯಲ್ಲಿಲ್ಲದಿರುವಾಗಿನ ವಿರಹವೇದನೆಯನ್ನು ಚಿತ್ರಿಸುವ ಒಂದು ಮುಕ್ತಕ:

ಮಲ್ಲಿಗೆಯ ಹೂವಿಂದೆ ಮನೆಯೆಲ್ಲ ಘಂ
ಮುಡಿಯುವವಳಿಲ್ಲದೆಯೆ ಮನ ಬಿಕೋ ಬಿಂ (ಕುವೆಂಪು)

ಒಲವಿಲ್ಲದ ಹೆಣ್ಣಿನ ಸಹವಾಸವನ್ನು ಬಿಟ್ಟುಬಿಡುವುದೇ ಲೇಸು, ಇಲ್ಲವಾದರೆ ಗಂಡಾಂತರ ತಪ್ಪಿದ್ದಲ್ಲ ಎಂಬುದನ್ನು ಸಾರುವ ಒಂದು ಮುಕ್ತಕ:

ಮನೆ ಬಿಟ್ಟ ಹೆಣ್ಣನು ನೆಲೆ ಬಿಟ್ಟ ಬಸ್ಸನು
ಹಿಡಿಯುವೆನೆಂದೊಡಬೇಡ
ಮತ್ತೊಂದು ಮಾರಿಯ ಮತ್ತೊಂದು ಲಾರಿಯ
ಬಾಯಿಗೆ ಸಿಕ್ಕೀಯೆ ನೋಡ (ಎಸ್.ವಿ.ಪರಮೇಶ್ವರಭಟ್ಟ)

ಹಟಮಾರಿ ಗಂಡನ ನಿರ್ಬಂಧಕ್ಕೆ ಸಿಲುಕಿಕೊಂಡು ತೊಳಲುವ ಹೆಂಡತಿಯ ಕರುಣಾಜನಕ ಸ್ಥಿತಿಯನ್ನು ಚಿತ್ರಿಸುವ ಒಂದು ಮುಕ್ತಕ:

ಮನೆಯಲ್ಲೂ ನೆರೆಯಲ್ಲೂ ಹಾಲಿಲ್ಲವೆಂದರೂ
ಗಂಡ ಒದರಿದ ಬೇಕೇ ಬೇಕು ಕಾಫೀ
ಎಂತೆಂತೋ ಮಾಡಿದಳು ಕಾಫಿಯನು, ಮಗು ಅತ್ತು
ಹಾಲಿಲ್ಲ ಅಂದಿತ್ತು ಮೊಲೆಯ ಸೀಪಿ (ವಿ.ಜಿ.ಭಟ್ಟ)

ಬೂಟಾಟಿಕೆಯ ಜನರನ್ನು ವಿಡಂಬಿಸುವ ಒಂದು ಮುಕ್ತಕ:

ಗಾಂಧಿ ಜಯಂತಿಯಂದು ಮಾಂಸವನ್ನು ತಿನ್ನಬಹುದೇ ಎಂಬ
ಪ್ರಶ್ನೆಯೊಮ್ಮೆ ಮನಸ್ಸಿಗೆ ಬಂತು, ಮರು ಕ್ಷಣದಲ್ಲಿ
ಮನಸ್ಸು ಹೇಳಿತು ಅಯ್ಯೊ ಹುಚ್ಚ! ಗಾಂಧಿಯನ್ನೆ
ತಿಂದಿದ್ದೇವೆ, ಇನ್ನು ಮಾಂಸದಲ್ಲೇನಿದೆ (ಸಿ.ಪಿ.ಕೆ.)

ತಾಯಿ ವಾತ್ಸಲ್ಯದ ಮಹಿಮೆ ಅಪಾರವಾದುದು, ಅವ್ಯಾಜವಾದುದು ಎಂಬುದನ್ನು ಬಲು ಮಾರ್ಮಿಕವಾಗಿ ಅಭಿವ್ಯಕ್ತಿಸುವ ಒಂದು ಮುಕ್ತಕ:

ತಾಯಿ ತೋಳಿಂದೊಮ್ಮೆ ನನ್ನನ್ನು ನೇವರಿಸಿದಳು
ಓ, ತಿಂಗಳ ಮುಡಿದವನೇ
ಸಾವಿರಾರು ಪುಟ ಹೇಳದ ವಾತ್ಸಲ್ಯವನು
ಅವಳ ಬೆರಳುಗಳು ತಿಳಿಸಿದುವು (ಗುಂಡ್ಮಿ ಚಂದ್ರಶೇಖರ ಐತಾಳ)

ಹೀಗೆ ಕನ್ನಡಲ್ಲಿ ಮುಕ್ತಕ ಸಾಹಿತ್ಯದ ಬೆಳೆ ಹುಲುಸಾಗುತ್ತ ಸಾಗಿದೆ.

(ಎಂ.ಪಿ.ಎಂ.)

**ಕನ್ನಡದಲ್ಲಿ ವಚನ ಸಾಹಿತ್ಯ :** ವಚನ ಕನ್ನಡದ ವಿಶಿಷ್ಟ ಸಾಹಿತ್ಯ ಪ್ರಕಾರ; ವೀರಶೈವಸಾಹಿತ್ಯದ ಮೊದಲ ಬೆಳೆ. ಈ ಸಾಹಿತ್ಯವನ್ನು ಐತಿಹಾಸಿಕವಾಗಿ ಬಸವಪೂರ್ವಯುಗ, ಬಸವಯುಗ, ಬಸವೋತ್ತರಯುಗ ಎಂದು ವಿಭಾಗಿಸಲಾಗುತ್ತದೆ.

ಶಂಕರದಾಸಿಮಯ್ಯ, ಜೇಡರದಾಸಿಮಯ್ಯ, ಕೊಂಡಗುಳಿ ಕೇಶಿರಾಜ ಮೊದಲಾದವರು ಬಸವಪೂರ್ವಯುಗದ ಶರಣರು. ಇವರಲ್ಲಿ ಚಾಳುಕ್ಯ 2ನೆಯ ಜಯಸಿಂಹನ (1015-44) ಅರಸಿ ಸುಗ್ಗಲೆಯ ಗುರುವಾದ ಜೇಡರದಾಸಿಮಯ್ಯನ ವಚನಗಳು ಲಭಿಸಿವೆ. 10ನೆಯ ಶತಮಾನದ ಉತ್ತರಾರ್ಧದಲ್ಲಿ ಹುಟ್ಟಿರಬಹುದಾದ ಈತನ ಗುರು ಶಂಕರದಾಸಿಮಯ್ಯನೂ ವಚನಗಳನ್ನು ರಚಿಸಿರಬಹುದು. ಜೇಡರ ದಾಸಿಮಯ್ಯನ ಹದಗೊಂಡ ಶೈಲಿಯೂ ಈ ಹೇಳಿಕೆಗೆ ಪುಷ್ಟಿ ನೀಡುತ್ತದೆ. ಅದಕ್ಕಾಗಿ ಈ ಸಾಹಿತ್ಯಪ್ರಕಾರದ ಪ್ರಾಚೀನತೆ 10ನೆಯ ಶತಮಾನದಷ್ಟು ಹಿಂದೆ ಸರಿಯಬಹುದಾಗಿದೆ. ಈ ಕಾಲದ ವಚನಗಳು ಅಲ್ಲಲ್ಲಿ ಅಂಶಲಯ ಒಳಪ್ರಾಸಯುಕ್ತವಾಗಿದ್ದು ಗಾತ್ರದಲ್ಲಿ ಚಿಕ್ಕವಾಗಿವೆ. ಕಡೆಗೀಲಿಲ್ಲದ ಬಂಡಿ ಹೊಡೆಗೆಡೆಯದಿಪ್ಪುದೆ, ಎತ್ತಪ್ಪೆ ಶರಣಂಗೆ, ತೊತ್ತಪ್ಪೆ ಶರಣಂಗೆ, ಇಳೆ ನಿಮ್ಮ ದಾನ ಬೆಳೆ ನಿಮ್ಮ ದಾನ, ನಾನೊಂದು ಸುರಿಗೆಯನೇನೆಂದು ಹಿಡಿಯುವೆನು ಇತ್ಯಾದಿಯಾದ ಜೇಡರದಾಸಿಮಯ್ಯನ ವಚನಗಳು ಇದಕ್ಕೆ ನಿದರ್ಶನ. ಮುಂದಣ ಯುಗದ ವಚನಸಾಹಿತ್ಯದ ಮೇಲೆ ಇವುಗಳ ಪ್ರಭಾವ ಕೆಲಮಟ್ಟಿಗೆ ತೋರಿಬರುತ್ತದೆ. ಈ ಯುಗದ ವಚನ ಸಾಹಿತ್ಯ ಈಗ ಕಡಿಮೆ ಪ್ರಮಾಣದಲ್ಲಿ ಸಿಕ್ಕಿದ್ದರೂ ಶೋಧಿಸಿದಲ್ಲಿ ಹೊಸ ವಚನಗಳು, ವಚನಕಾರರು ಹೊರಬರುವ ಸಂಭವವಿದೆ.

ಬಸವಯುಗ ವಚನಸಾಹಿತ್ಯದ ಸುಗ್ಗಿಕಾಲ. 12ನೆಯ ಶತಮಾನದ ಮಧ್ಯ ಭಾಗದಲ್ಲಿ ಮೈಮುರಿದು ಎದ್ದ ವೀರಶೈವ ಆಂದೋಲನ ಕನ್ನಡ ಸಮಾಜಕ್ಕೆ ಹೊಸ ತಿರುವು ಕೊಟ್ಟಿತು. ಆಚಾರ-ವಿಚಾರ, ಭಾಷೆ-ಸಾಹಿತ್ಯ ಮುಂತಾದ ಹಲವು ಕ್ಷೇತ್ರಗಳಲ್ಲಿ ಹೊಸತನ್ನು ತುಂಬಿತು. ಬಸವಣ್ಣ, ಚೆನ್ನಬಸವ, ಪ್ರಭುದೇವ, ಅಕ್ಕಮಹಾದೇವಿ, ಸಿದ್ಧರಾಮ - ಇವರು ಸುಪ್ರಸಿದ್ಧ ವಚನಕಾರರು. ಈ ಕಾಲದ ವಚನಸಂಖ್ಯೆ ಹಲವು ಸಾವಿರ, ಹಲವು ಲಕ್ಷ, ಕೋಟಿ ಎಂಬ ಹೇಳಿಕೆಗಳಿವೆ. ಕನ್ನಡ ಭಾಷೆಯ ಅಭಿವ್ಯಕ್ತಿ ಸಾಧ್ಯತೆಯನ್ನು ತಳಮುಟ್ಟ ಕೈವಶಮಾಡಿಕೊಂಡ ವಚನಕಾರರು ಆ ಸಾಧ್ಯತೆಯನ್ನು ಇನ್ನೂ ಹಿಗ್ಗಿಸಿದರು. ಅನುಭವ ಹಾಗೂ ಅಭಿವ್ಯಕ್ತಿಗಳಲ್ಲಿ ಪ್ರಾಮಾಣಿಕತೆಯನ್ನು ಸಾಧ್ಯಮಾಡಿ ತೋರಿಸಿದರು. ಈ ಆಂದೋಲನದ ಅಧಿನಾಯಕ ಬಸವಣ್ಣ, ಕಾರ್ಯಚಟುವಟಿಕೆಗಳ ಕೇಂದ್ರಸ್ಥಳ ಕಲ್ಯಾಣ.

ಅಂದಿನ ಅನುಭವಮಂಟಪದ ಅಧ್ಯಕ್ಷನಾಗಿ ಮೆರೆದವನೆಂದರೆ ಅಲ್ಲಮಪ್ರಭು. ಈತ ಹಿರಿಯ ಆತ್ಮಜ್ಞಾನಿ, ನಿಜವಾದ ವೈರಾಗ್ಯವನ್ನು ಪಡೆದವ. ತನಗಿಂತ ಕಿರಿಯರಾದ ಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮ ಮೊದಲಾದವರ ಧ್ಯೇಯ ಧೋರಣೆಗಳಲ್ಲಿನ ಇತಿಮಿತಿಗಳನ್ನು ಎತ್ತಿ ತೋರಿಸಿ ಅವರನ್ನು ಸರಿಯಾದ ಮಾರ್ಗಕ್ಕೆ ಕೊಂಡೊಯ್ದ ಹಿರಿಯ. ಈತ ತನ್ನ ವಚನಗಳಲ್ಲಿ ತಾನು ಕಂಡ ಸತ್ಯವನ್ನು ತನಗೆ ಹಿಡಿಸದ ಆಚಾರ-ವಿಚಾರಗಳನ್ನು ತೀಕ್ಷ್ಣವಾಗಿ ಪ್ರಸ್ತಾಪಿಸಿದ್ದಾನೆ. ಇವನಿಗೆ ತನ್ನವರು ಪರರು ಎಂಬ ಹಂಗಿಲ್ಲ. ಅನಾಚಾರವನ್ನು ಎಲ್ಲೇ ಕಾಣಲಿ ಈತ ಟೀಕಿಸುತ್ತಾನೆ. ವಚನಸಾಹಿತ್ಯದಲ್ಲೆಲ್ಲ ಈತನ ವಚನಗಳು ಅತಿ ಕಠಿಣವೆನಿಸಿವೆ. ಈತನ ಬೆಡಗಿನ ವಚನಗಳಂತೂ ಪಾರಿಭಾಷಿಕ ಸಂಕೇತಗಳಿಂದ ಕೂಡಿ ಭೇದಿಸಲಸಾಧ್ಯವಾಗಿವೆ:

> ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದೊಡೇನು?
> ಹಸಿವು ಹೋಹುದೇ? ಅಂಗದ ಮೇಲೆ ಲಿಂಗಸ್ವಾಯತವಾದರೇನು?
> ಇಟ್ಟ ಕಲ್ಲು ಮೆಳೆಯ ಮೇಲೆ ಸಿಕ್ಕಿದಡೆ ಆ ಕಲ್ಲು ಲಿಂಗವೆ?
> ಆ ಮೆಳೆ ಭಕ್ತನೆ? ಇಟ್ಟಾತ ಗುರುವೆ? ಇಂತಪ್ಪವರ
> ಕಂಡಡೆ ನಾನು ನಾಚುವೆನಯ್ಯ ಗುಹೇಶ್ವರಾ

> ಮುನಿಯದಿರಿ, ಮುನಿಯದಿರಿ, ನಿಮಗೊಂದು ಯುಕ್ತಿಯ
> ಹೇಳುವೆನು. ಅದೆಂತೆಂದೊಡೆ ನೀವೆನ್ನ ವಂಶೀಭೂತರಾದ
> ಕಾರಣ ನಿಮ್ಮ ಹೆಚ್ಚು ಕುಂದು ಎನ್ನದಾಗಿ, ನಿಮ್ಮ ಅಸ್ತಿ ನಾಸ್ತಿ
> ಎನ್ನದಾಗಿ, ನಿಮ್ಮ ಹಾನಿ ವೃದ್ಧಿ ಎನ್ನದಾಗಿ ಹಾವ ಹಿಡಿದವರು
> ಬೇಲಿಯ ಹೊಗದೆ ಹೋಹರೇ ಅಯ್ಯ? ವ್ಯಾಧನು ಸೂಸಲ
> ಚೆಲ್ಲಿ, ಜಂತ್ರವ ಹಣ್ಣಿ, ಅಡಿಗಲ್ಲನೊಡ್ಡಿ ಹೋದ ಬಳಿಕ,
> ಸೂಸಲ ಕಂಪಿಂಗೆ ಹೆಗ್ಗಣ ಬಂದು ಬಿದ್ದಂತೆ ಬಿದ್ದಿರಲ್ಲಾ
> ಮಾಯದ ಬಲೆಯಲ್ಲಿ! ಕೋಪವೆಂಬ ರಾಡನೊಡ್ಡಿ, ತಾಪವೆಂಬ
> ಅರೆಗಲ್ಲನಿರಿಸಿ, ಹುಸಿ ಎಂಬ ಮೀಟುಗವಣೆಯ ಜಂತ್ರಿಸಿ,
> ಹೊನ್ನು ಹೆಣ್ಣು ಮಣ್ಣೆಂಬ ಅಡಿಗಲ್ಲನೊಡ್ಡಿ ಕೆಡಹಿದನಲ್ಲಾ
> ನಿಃಕರುಣೆ ಮುಕ್ಕಣ್ಣವ್ಯಾಧನು! ಹೊನ್ನು ಹೆಣ್ಣು ಮಣ್ಣೆ
> ನಾಶೆಯ ಬಿಟ್ಟು, ಕೋಪ ತಾಪವಂ ಬಿಟ್ಟು, ಭ್ರಾಂತಿ
> ಭ್ರಮೆಯಂ ಬಿಟ್ಟು, ಜಂಗಮವಾಗಬೇಕು ಕಾಣಿರೋ
> ಮರುಳುಗಳಿರಾ! ಇಂತೀ ಷಡುಲೋಭದ ರುಚಿಯ
> ಹಿಂಗಿ ಜಂಗಮನಾದಲ್ಲದೆ ಭವ ಹಿಂಗದು ಕಾಣಾ ಗುಹೇಶ್ವರಾ

ಅಲ್ಲಮನ ವಚನಗಳು ಬಸವಣ್ಣ ಅಥವಾ ಮಹಾದೇವಿಯಕ್ಕನ ವಚನಗಳಷ್ಟು ಜನಪ್ರಿಯವಾಗಿರದಿದ್ದರೂ ತಮ್ಮ ಆಳವಾದ ತತ್ತ್ವಸಾರದಿಂದ, ಶೈಲಿಯಿಂದ, ಕಾವ್ಯತ್ವದಿಂದ ಕಾಂತಿಯುಕ್ತವಾಗಿವೆ. ಉಳಿದವರಲ್ಲಿನ ಅತಿರೇಕಗಳಾವುವೂ ಅಲ್ಲಮನಲ್ಲಿ ಕಾಣವು. ಈ ದೃಷ್ಟಿಯಿಂದ ಇವನ ವಚನಗಳು ವ್ಯಾಸಂಗಯೋಗ್ಯವಾಗುತ್ತವೆ.

ಭಕ್ತಿಭಂಡಾರಿ ಎಂಬ ಕೀರ್ತಿಗೆ ಭಾಜನನಾದ ಬಸವಣ್ಣನ ವಚನಗಳಲ್ಲಿ ಭಕ್ತಿಯ ಅತಿರೇಕವನ್ನು ಕಾಣುತ್ತೇವೆ. ಹೆಂಗರುಳಿನ ಸಹಾನುಭೂತಿಯನ್ನು ಕಾಣುತ್ತೇವೆ. ಒಂದು ದೇಶದ ಮಹಾಮಂತ್ರಿ ಯಾಗಿದ್ದರೂ ಈತ ಅಹಂಕಾರಪಟ್ಟವನಲ್ಲ. ಜಂಗಮಸೇವೆಯೇ ಲಿಂಗದ ಸೇವೆ ಎಂದು ತನ್ನ ತನುಮನಧನಗಳನ್ನು ಜಂಗಮ ದಾಸೋಹಕ್ಕಾಗಿ ಮುಡಿಪಾಗಿಟ್ಟ ಭಕ್ತಶ್ರೇಷ್ಠನೀತ. ಅನುಕಂಪ, ಜೀವನಾನುಭವದ ಸಾರ, ರಸಾರ್ದ್ರಹೃದಯ, ಲೋಕಹಿತಸಾಧನೆಯ ಉದ್ದೇಶ - ಇವು ಕ್ಷಣಕ್ಷಣಕ್ಕೂ ಈತನ ವಚನಗಳಲ್ಲಿ ಕಾಣುತ್ತವೆ. ಮತೋಪದೇಶಕ್ಕೆಂದೇ ಕಟ್ಟಿದವಾದರೂ ಈತನ ವಚನಗಳಲ್ಲಿ ಹೃದ್ಯವಾದ ರಸಭಾವ ಮಿಡಿವ ಮಾತುಗಳು ಉದ್ದಕ್ಕೂ ಬರುತ್ತವೆ:

> ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ!
> ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ!
> ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ!
> ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ ಇರಿಸು
> ಕೂಡಲಸಂಗಮದೇವ

> ನಾದಪ್ರಿಯನಲ್ಲ, ವೇದಪ್ರಿಯನಲ್ಲ ಭಕ್ತಿಪ್ರಿಯ ನಮ್ಮ
> ಕೂಡಲಸಂಗಮದೇವ

> ಸಂಸಾರಸಾಗರ ತೆರೆಕೊಬ್ಬಿ, ಮುಖದ ಮೇಲೆ ಅಲೆವುತ್ತಲಿದ್ದುದೇ?
> ಸಂಸಾರಸಾಗರ ಉರದುದ್ದವೇ ಹೇಳಾ?
> ಸಂಸಾರಸಾಗರ ಕೊರಳುದ್ದವೇ ಹೇಳಾ?
> ಸಂಸಾರಸಾಗರ ಶಿರದುದ್ದವಾದ ಬಳಿಕ ಏನ ಹೇಳುವೆನಯ್ಯ? ಅಯ್ಯಾ
> ಅಯ್ಯಾ, ಎನ್ನ ಹುಯ್ಯಲ ಕೇಳಯ್ಯ ಕೂಡಲಸಂಗಮದೇವಯ್ಯ
> ನಾನೇವೆನಯ್ಯ

> ಕಾಂಚನವೆಂಬ ನಾಯ ನಚ್ಚಿ ನಿಮ್ಮ ನಾನು ಮರೆದೆನಯ್ಯ!
> ಕಾಂಚನಕ್ಕೆ ವೇಳೆಯಲ್ಲದೆ ಲಿಂಗಕ್ಕೆ ವೇಳೆಯಿಲ್ಲ ಹಡಕಿಗೆ
> ಮೆಚ್ಚಿದ ಸೊಣಗನು ಅಮೃತದ ರುಚಿಯ ಬಲ್ಲುದೆ
> ಕೂಡಲಸಂಗಮದೇವ

ಹೀಗೆ ಬಸವಣ್ಣನಿಂದ ನೂರಾರು ಉತ್ತಮ ವಚನಗಳನ್ನು ಎತ್ತಿ ತೋರಿಸಬಹುದು. ಷಟ್ಪದಿಕಾರರಲ್ಲಿ ಕುಮಾರವ್ಯಾಸ, ದಾಸರಲ್ಲಿ ಪುರಂದರದಾಸ ಇರುವಂತೆ ವಚನಕಾರರಲ್ಲಿ ಬಸವಣ್ಣ ಬಹುಜನಪ್ರಿಯ.

ವಚನಸಾಹಿತ್ಯ ಪ್ರಧಾನವಾಗಿ ಅನುಭಾವಸಾಹಿತ್ಯ, ಭಕ್ತಿ ಸಾಹಿತ್ಯ. ಅಂಥದರಲ್ಲಿ ಜ್ಞಾನಮಾರ್ಗವನ್ನೇ ಹೆಚ್ಚಾಗಿ ಎತ್ತಿಹಿಡಿದವನೆಂದರೆ ಚೆನ್ನಬಸವಣ್ಣ. ಮುಕ್ತಿ ಸಾಧನೆಯ ಮಾರ್ಗಗಳಲ್ಲೆಲ್ಲ ಇದು ಕಠಿಣತಮವಾದುದು:

ಹೆಗ್ಗಣವನಿಕ್ಕಿ ನೆಲಗಟ್ಟು ಕಟ್ಟಿದಂತೆ ಆಯಿತ್ತೆನ್ನ ಕಾಯಗುಣ
ಅಹಂಕಾರ ಪ್ರಬೋಧೆಗಳೇಕಯ್ಯ? ಕಾಮ ಕ್ರೋಧ ಲೋಭ
ಮೋಹ ಮದ ಮತ್ಸರಂಗಳನಿಕ್ಕಿ ಎನ್ನ ಮಾಡಿದಿರಿ, ಎನ್ನ
ಬಾಧಿಸಲಿಂತು ಲಿಂಗಯ್ಯ ತಂದೆ? ಆದಿ ವ್ಯಾಧಿಗಳೆಲ್ಲವ
ಕಳೆದು ನಿರ್ವಾಣವಪ್ಪ ಪದವ ಕರುಣಿಸಯ್ಯ
ಕೂಡಲಚೆನ್ನಸಂಗಮದೇವ

ತಾಳು ಬೋಳು ಕಪ್ಪರವೆಂತೆಂಬರು, ತಾಳಾವುದು, ಬೋಳಾವುದು,
ಕಪ್ಪರವಾವುದೆಂದರಿಯರು, ಕಾಯದ ಕಳವಳದ ಗುಣವ
ತಾಳಬಲ್ಲಡೆ ತಾಳು, ಸಂಸಾರವಿಷಯವ ಬೋಳಿಸಬಲ್ಲಡೆ
ಬೋಳು, ಪರದಲ್ಲಿ ಪರಿಣಾಮಿಸಬಲ್ಲಡೆ ಕಪ್ಪರ, ಇಂತಿಲ್ಲ
ದಿದ್ದಡೆ ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ ಡೊಂಬರ ಬೋಳು.

ಬಸವಣ್ಣನವರೇ ತನ್ನ ಗುರುವೆಂದೂ ಇಷ್ಟಲಿಂಗವನ್ನು ದಯಪಾಲಿಸಿ ತನ್ನನ್ನು ಉದ್ಧರಿಸಿದ ಮಹಾತ್ಮರೆಂದೂ ಹೇಳಿಕೊಂಡ ಚೆನ್ನಬಸವಣ್ಣ ಶುದ್ಧ ಜ್ಞಾನಮಾರ್ಗದ ಬೋಧಕನಾಗಿ ಹೆಸರು ಪಡೆದಿದ್ದಾನೆ.

ಸಿದ್ಧರಾಮಯೋಗಿ ಕರ್ಮಯೋಗಿ, ಪರೋಪಕಾರ, ವಿದ್ಯಾಪ್ರಸಾರ ಮೊದಲಾದ ಸಮಾಜಸೇವೆಯೇ ತನ್ನ ಜೀವನದ ಧ್ಯೇಯವೆಂದು ಸಾರಿದಾತ. ಕೆರೆ ಕಟ್ಟಿಸುವುದು, ಮಠಾದಿಗಳನ್ನು ನಿರ್ಮಿಸುವುದು ಮುಂತಾದ ಕೆಲಸಗಳಲ್ಲಿ ನಿರತನಾಗಿದ್ದವ. ಇವನ ಉಪದೇಶವನ್ನು ಮೆಚ್ಚಿದ ಸಹಸ್ರಾರು ಶಿಷ್ಯರು ಇವನೊಡನೆ ಸೇರಿ ಕಾಯಕನಿರತರಾಗಿದ್ದರು:

ಕೃಷಿಯ ಮಾಡಿ ಉಣ್ಣದೆ, ಹಸಿವು ಹರಿವ ಪರಿ ಇನ್ನೆಂತೋ?
ಕರ್ಮಯೋಗವ ಮಾಡದೆ ನಿರ್ಮಲ ಸುಚಿತ್ತವನರಿವ ಪರಿ ಇನ್ನೆಂತೋ?
ಬೇಯದೆ ಅಶನನುಂಬ ಠಾವಾವುದು ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೆ?

ಮಹಾದೇವಿಯಕ್ಕ ಬಸವಣ್ಣನಂತೆ ಬಹು ಜನಪ್ರಿಯಳಾದ ವಚನಕಾರ್ತಿ. ವೈರಾಗ್ಯವನ್ನೂ ಶರಣಸತಿ ಲಿಂಗಪತಿ ಎಂಬ ತತ್ತ್ವವನ್ನೂ ಜೀವನದಲ್ಲಿ ಅನುಸರಿಸಿದಳಲ್ಲದೆ ವಚನಗಳಲ್ಲಿ ಬೋಧಿಸಿದಳು. ದೇವರ ಹಂಬಲವನ್ನೇ ವಸ್ತುವನ್ನಾಗುಳ್ಳ ಈಕೆಯ ವಚನಗಳು ಉತ್ತಮ ಕಾವ್ಯಗುಣವನ್ನು ಪಡೆದಿವೆ:

ಹಸಿವಾದಡೆ ಭಿಕ್ಷಾನ್ನಗಳುಂಟು, ತೃಷೆಯಾದಡೆ ಕೆರೆ ಹಳ್ಳಬಾವಿ ಗಳುಂಟು, ಶಯನಕ್ಕೆ ಹಾಳು ದೇಗುಲಗಳುಂಟು, ಚೆನ್ನಮಲ್ಲಿಕಾರ್ಜುನಯ್ಯ, ಆತ್ಮಸಂಗಾತಕ್ಕೆ ನೀನೆನಗುಂಟು

ವನವೆಲ್ಲನೀವೆ ವನದೊಳಗಣ ದೇವತರುವೆಲ್ಲ ನೀವೆ, ತರುವಿನೊಳ ಗಾಡುವ ಖಗಮೃಗವೆಲ್ಲನೀವೆ. ಚೆನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರ

ವಚನಸಾಹಿತ್ಯದ ಹಿರಿಮೆಯನ್ನು ಶ್ರುತಪಡಿಸಲು ಇಲ್ಲಿ ಹೀಗೆ ಕೆಲವು ಉದಾಹರಣೆಗಳನ್ನು ಮಾತ್ರ ಕೊಡಲಾಗಿದೆ. ನಿಜವಾಗಿ ವಚನಸಾಹಿತ್ಯದ ಮುತ್ತು ರತ್ನಗಳನ್ನೆಲ್ಲ ಆಯ್ದು ಒಂದೆಡೆ ಇಟ್ಟು ನೋಡಿದಲ್ಲಿ ಅವುಗಳ ಯೋಗ್ಯತೆ, ಹಿರಿಮೆ ತಿಳಿಯುತ್ತದೆ. ಅಂದಿನಿಂದ ಇಂದಿನವರೆಗೂ ಅವುಗಳ ಕಾಂತಿ ಮಾಸಿಲ್ಲ.

13-14ನೆಯ ಶತಮಾನಗಳಲ್ಲಿ ವೀರಶೈವ ಶರಣರು ಆಂಧ್ರ ಪ್ರದೇಶದ ಓರಂಗಲ್ಲು, ಶ್ರೀಶೈಲ; ಮಧ್ಯಕರ್ನಾಟಕದ ಉಳವಿ, ಹಂಪೆ, ದ್ವಾರಸಮುದ್ರಗಳಲ್ಲಿ ನೆಲೆನಿಂತರು. ವಚನರಚನೆ ಇಳಿಮುಖವಾಯಿತು. ವಚನಕಾರರ ಬದುಕನ್ನು ಬರೆಹಕ್ಕೆ ಇಳಿಸುವ ಕೆಲಸ ಪ್ರಾರಂಭವಾಯಿತು. ವೀರಶೈವ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣಗಳ ಯುಗ ಪ್ರಾರಂಭವಾಯಿತು. ಆದರೂ ವೀರಶೈವಕ್ಕೆ ಸ್ಥಿರನೆಲೆ ಸಿಕ್ಕಿದ್ದು ನೂರೊಂದು ವಿರಕ್ತರು ಬಾಳಿದ ಪ್ರೌಢದೇವರಾಯನ ಕಾಲದಲ್ಲಿ. ವಿಪ್ಲವಕ್ಕೆ ಗುರಿಯಾಗಿ ನಷ್ಟಗೊಳ್ಳುತ್ತಿದ್ದ ಮತ್ತು ಪುರಾಣರಚನೆಯಿಂದ ಅಲಕ್ಷಿಸಲ್ಪಟ್ಟ ಹಿಂದಣ ವಚನಸಾಹಿತ್ಯದ ಸಂಗ್ರಹ, ಸಂಕಲನ, ಸಂಪಾದನಕಾರ್ಯ ಪ್ರಾರಂಭವಾಯಿತು. ಈ ಕಾರ್ಯವನ್ನು ನಿರ್ವಹಿಸಿದವರಲ್ಲಿ ಮಹಲಿಂಗ ಮೊದಲಾದವರೂ ಪ್ರೇರಣೆ ಕೊಟ್ಟವರಲ್ಲಿ ಲಕ್ಕಣದಂಡೇಶ ಮುಂತಾದವರೂ ಪ್ರಮುಖರು. ಇವರ ಪ್ರಯತ್ನದಿಂದಾಗಿ ಸಕಲಪುರಾತನರ ವಚನ, ಏಕೋತ್ತರಶತಸ್ಥಲ, ಲಿಂಗಲೀಲಾ ವಿಲಾಸಚಾರಿತ್ರ ಮೊದಲಾದ ಗ್ರಂಥಗಳಲ್ಲಿ ವಚನಗಳು ತತ್ತ್ವದ ತಳಹದಿಯ ಮೇಲೆ ಸೂತ್ರಬದ್ಧವಾಗಿ ಹೆಣೆಯಲ್ಪಟ್ಟವು. ಹೀಗೆ ವಚನಸಾಹಿತ್ಯ ಹೊಸ ರೂಪವನ್ನು ರೂಪಿಸಿಕೊಂಡು ಮುನ್ನಡೆಯಿತು. ಶಿವನಿಷ್ಠೆಯ ಸಂಗಮವಂಶ ಕೊನೆಗೊಂಡ ಹದಿನೈದನೆಯ ಶತಮಾನದಲ್ಲಿ ನಡೆದ ವಚನಸಾಹಿತ್ಯ ಸಂಬಂಧವಾದ ಆಂದೋಲನದ ಕೇಂದ್ರವ್ಯಕ್ತಿ ತೋಂಟದ ಸಿದ್ಧಲಿಂಗ; ಷಟ್‌ಸ್ಥಲದ ಇತಿಹಾಸದಲ್ಲಿ ಎರಡನೆಯ ಚೆನ್ನಬಸವಣ್ಣನೆನಿಸಿದ. ಈತನ ದೈವೀಬಲದಿಂದ ವಚನಗಳ ಸಂಕಲನ, ಸಂಪಾದನೆ ಇನ್ನೂ ತೀವ್ರಗೊಂಡಿತು. ಈ ಜಾಗೃತ ಸಮಯದಲ್ಲಿ ಹುಟ್ಟಿದ ನಾಲ್ಕು ಶೂನ್ಯಸಂಪಾದನೆಗಳಲ್ಲಿ ಕೊನೆಯವೆರಡು ಈತನ ಶಿಷ್ಯವರ್ಗದವರಿಂದ ರಚನೆಗೊಂಡುದು ಗಮನಿಸಬೇಕಾದ ಸಂಗತಿ. ಸಾಲದುದಕ್ಕೆ ಈತನ ಶಿಷ್ಯರಲ್ಲಿ ಸಂಪಾದನೆಯ ಒಂದು ಶಿಷ್ಯಪರಂಪರೆಯೇ ಮುಂದುವರಿಯಿತು. ಈ ಸಂಪ್ರದಾಯಕ್ಕೆ ಸಂಬಂಧಿಸಿದ ಸಂಪಾದನೆಯ ಚೆನ್ನಂಜೆದೇವ, ಸಂಪಾದನೆಯ ಬೋಳಬಸವದೇವ, ಸಂಪಾದನೆಯ ಗುರುಶಾಂತದೇವ, ಸಂಪಾದನೆಯ ಸಿದ್ಧವೀರಣಾರ್ಯ ಮೊದಲಾದವರು ಕಾರಣವಾಗಿ ಲಿಂಗವಿಕಳಾವಸ್ಥೆಯ ವಚನ, ಮಿಶ್ರ ಸ್ತೋತ್ರದ ವಚನ, ಆಚರಣೆಯ ವಚನ, ಬಸವಸ್ತೋತ್ರದ ವಚನ, ಶರಣಸ್ತೋತ್ರದ ವಚನ - ಇತ್ಯಾದಿ ಹೊಸ ಹೊಸ ವಚನಸಂಕಲನ ಗ್ರಂಥಗಳು ಹೊರಬಂದುವು. ಹೀಗೆ ಬಸವಣ್ಣನ ತರುವಾಯದ ಅವಧಿ ವಚನಗಳ ಸಂಕಲನ, ಸಂಪಾದನೆಗಳ ಯುಗವೆನಿಸಿದರೂ ತೋಂಟದ ಸಿದ್ಧಲಿಂಗ, ಘನಲಿಂಗಿದೇವ, ಕಾಡಸಿದ್ಧ, ಷಣ್ಮುಖಸ್ವಾಮಿ ಮೊದಲಾದವರು ವಚನಗಳನ್ನೂ ರಚಿಸಿದ್ದಾರೆ. ಗುಣ, ಗಾತ್ರ ಎರಡು ದೃಷ್ಟಿಯಿಂದಲೂ ಇವರ ವಚನಗಳು ಬಸವಯುಗದ ವಚನಗಳ ಎತ್ತರಕ್ಕೆ ಬಾರವು.

ಶರಣರು ತ್ರಿವಿಧಿ, ಮಂತ್ರಗೋಪ್ಯ, ಕರಣಹಸಿಗೆ, ವಿವಿಶ್ರಾರ್ಪಣ ಇತ್ಯಾದಿ ಪ್ರಕಾರಗಳನ್ನು ನಿರ್ಮಿಸಿದ್ದರೂ ವಚನ ಪ್ರಕಾರ ಅವರ ವ್ಯಕ್ತಿಸಿದ್ಧಿಯ ಪತಾಕೆ. ಇದರಲ್ಲಿ ವಚನ, ಸ್ವರವಚನವೆಂದು ಎರಡು ವಿಧಗಳುಂಟು. ಒಂದು ಅನುಭಾವದ ಗದ್ಯ ಪ್ರಕಾರ, ಇನ್ನೊಂದು ಅನುಭಾವದ ಗೀತಪ್ರಕಾರ. ವಚನಗಳು ತಮ್ಮ ಉಜ್ವಲ ಸಾಹಿತ್ಯದಿಂದ, ಸ್ವರವಚನಗಳು ತಮ್ಮ ಗೇಯ ಗುಣದಿಂದ ಸಮಸ್ತ ಸಹೃದಯರನ್ನೂ ಆಕರ್ಷಿಸಿವೆ.

ಪ್ರತಿಯೊಬ್ಬ ಶರಣನ ವಚನ ಮತ್ತು ಸ್ವರವಚನಗಳ ಕೊನೆಗೆ ಕೃತಿಕಾರನನ್ನು ಸೂಚಿಸುವ, ಆರಾಧ್ಯದೈವನಾಮಾಂಕಿತವಾದ ಮುದ್ರೆ ಇರುತ್ತದೆ. ಕೂಡಲ ಸಂಗಮದೇವ, ಕೂಡಲಚೆನ್ನಸಂಗಮದೇವ ಹೀಗೆ ಒಂದೊಂದು ದೇವತೆಯ ಸುತ್ತ ಇರುವ ಕೆಲವು ಅಂಕಿತಗಳು ಒಂದೊಂದು ವರ್ಗವನ್ನು ನಿರ್ಮಿಸುತ್ತವೆ.

ಗಾತ್ರದೃಷ್ಟಿಯಿಂದ ವಚನ ಒಂದು ಬಿಡಿ ಮುಕ್ತಕ. ಸ್ವರವಚನ 3-5, 7-9 ನುಡಿಗಳ ಒಂದು ಪುಂಜ. ಹಾಡುಗಬ್ಬಗಳಾದ ಈ ಸ್ವರವಚನಗಳು ಬಸವ ಮೊದಲಾದವರಿಂದ ಪ್ರವೃತ್ತವಾಗಿದ್ದು ಮುಂದೆ ಬಂದ ನಿಜಗುಣಶಿವಯೋಗಿ, ಮುಪ್ಪಿನ ಷಡಕ್ಷರಿ, ಸರ್ಪಭೂಷಣ ಶಿವಯೋಗಿ, ಬಾಲಲೀಲಾಮಹಾಂತ ಶಿವಯೋಗಿ, ಕಡಕೋಳ ಮಡಿವಾಳಪ್ಪ, ಮೈಲಾರದ ಬಸವಲಿಂಗ ಶರಣ ಮೊದಲಾದವರ ಕೈಯಲ್ಲಿ ಉಚ್ಛ್ರಾಯಸ್ಥಿತಿಗೇರಿದುವು. ವಚನಸಾಹಿತ್ಯದ ಈ ರಮ್ಯ ಮಾರ್ಗ ವಿಕಾಸಗೊಂಡು ಹಲವು ಬಗೆಯಾಗಿ ಬೆಳೆದಿರುವುದನ್ನು ಮುಂದಿನ ದಾಸಸಾಹಿತ್ಯದಲ್ಲೂ ಇಸ್ಲಾಮೀ ಅನುಭಾವ ಸಾಹಿತ್ಯದಲ್ಲೂ ಕಾಣಬಹುದಾಗಿದೆ.

ವಚನಗಳು ಚರಿತ್ರೆ, ತತ್ತ್ವ, ಸಾಹಿತ್ಯ ದೃಷ್ಟಿಗಳಿಂದ ಅಮೂಲ್ಯ ವೆನಿಸಿವೆ. ತಾವು ಸತ್ಯವನ್ನು ಕಂಡ ಉಂಡ ಅನುಭವವನ್ನು ಅಭಿವ್ಯಕ್ತಗೊಳಿಸುವಲ್ಲಿ ಕೆಲವು ಸಲ ಶರಣರ ವ್ಯಕ್ತಿಗತ ಅಂಶಗಳೂ ವಚನಗಳಲ್ಲಿ ನುಸುಳಿಬಂದಿವೆ. 'ಆರು ಜನ್ಮದವ ಬಸವಣ್ಣನೆಂಬರು ಈ ಗಾರುಮಾತ ಕೇಳಲಾಗದು, ಆನು ಹಾರುವನೆಂದರೆ ಕೂಡಲಸಂಗಯ್ಯ ನಗುವನಯ್ಯ, ಕೆಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡಾ ಒಬ್ಬ ಜಂಗಮದ ಅಭಿಮಾನದಿಂದ, ಎನ್ನ ಸತಿ ನೀಲಲೋಚನೆ ಪೃಥ್ವಿಗಗ್ಗಳ ಚಲುವೆ' ಇಂಥ ಅಂಶಗಳು ಶರಣರ ಚರಿತೆ ಬರೆಯುವಲ್ಲಿ ಪ್ರಮಾಣಗಳಾಗಿ ನಿಲ್ಲುತ್ತವೆ.

ವಚನಗಳಲ್ಲಿ ಹೆಚ್ಚು ಸ್ಪಷ್ಟವಾಗಿ ಸಮಕಾಲೀನ ಸಮಾಜ ಚಿತ್ರ ಮೂಡಿದೆ. 'ಮಾರಿಕವ್ವೆಯನೋಂತು ಕೊರಳಲ್ಲಿ ಕಟ್ಟಿಕೊಂಬರು, ಮರನ

ಗೋಟಿಗೆ ಬರ್ಪ ಕಿರುಕುಳದೈವಕ್ಕೆ ಕುರಿಯನಿತ್ತಿಹೆವೆಂದು ನಲಿನಲಿದಾಡುವರು, ವಿಷ್ಣುವ ಪೂಜಿಸಿ ಮುಡಿಹ ಸುಡಿಸಿಕೊಂಬುದ ಕಂಡೆ, ಜಿನನ ಪೂಜಿಸಿ ಬತ್ತಲೆಯಪ್ಪುದ ಕಂಡೆ, ಮೈಲಾರನ ಪೂಜಿಸಿ ನಾಯಾಗಿ ಬೊಗಳುವುದ ಕಂಡೆ' ಇಂಥ ಈ ವ್ಯಕ್ತಿಗತ ಸಂಗತಿ ಮತ್ತು ಸಮಾಜ ಚಿತ್ರಣಗಳಿಗಿಂತ ಶರಣರಿಗೆ ಮುಖ್ಯವಾದುದು ವೀರಶೈವಧರ್ಮದ ತತ್ತ್ವ ಮತ್ತು ಆಚರಣೆಗಳ ಪ್ರತಿಪಾದನೆ. ಹೀಗಾಗಿ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ ಇತ್ಯಾದಿಗಳ ತಾತ್ತ್ವಿಕ ವಿವೇಚನೆ ಅಲ್ಲಿ ವಸ್ತುವಾಗಿ ನಿಂತಿತು. ಕಾಯಕ, ಜಾತಿಭೇದ ನಿರ್ಮೂಲನ, ಸ್ತ್ರೀಪುರುಷ ಸಮಾನತೆ - ಮುಂತಾದ ಆಚರಣೆಗಳು ಅಲ್ಲಿ ಪ್ರತಿಪಾದಿಸಲ್ಪಟ್ಟು, ಕಾಯಕವೇ ಕೈಲಾಸ, ಸಕಲ ಜೀವಾತ್ಮರಿಗೆ ಲೇಸ ಬಯಸುವನೇ ಕುಲಜ, ದಯವೇ ಧರ್ಮದ ಮೂಲ, ಅರಿವೇ ಗುರು, ದೇವನೊಬ್ಬ ನಾಮ ಹಲವು ಕೂಡಲಸಂಗನ ಒಲಿಸಲು ಬಂದ ಪ್ರಸಾದಕಾಯವ ಕೆಡಿಸಲಾಗದು, ಭಕ್ತಿ ಪ್ರಿಯ ನಮ್ಮ ಕೂಡಲಸಂಗಮ ದೇವ, ಆಚಾರವೇ ಸ್ವರ್ಗ ಅನಾಚಾರವೇ ನರಕ ಎಂಬ ಲೋಕಮಾನ್ಯ ವಿಚಾರಗಳು ಆವಿರ್ಭವಿಸಿದುವು. ಹೀಗೆ ಹೊಸ ಆಚಾರ ಹೊಸ ವಿಚಾರಗಳನ್ನು ತುಂಬಿಕೊಂಡ ವಚನಗಳು ಹೊಸ ಭಾಷೆ ಹೊಸ ಸಾಮಗ್ರಿ ಹೊಸ ಸಂವೇದನೆಗಳನ್ನು ಹೊತ್ತು ಹೊರಬಂದುವು. ಇದರ ಫಲವಾಗಿ ಕಮ್ಮಟ, ಗಂಜಳ, ಹನ್ನಿಬ್ಬರು, ಉಳ್ಳವರು, ಮೇಳಾಪ, ತುಯ್ಯಲ ಇತ್ಯಾದಿ ದೇಶೀಪದಗಳು ಸಾಹಿತ್ಯದಲ್ಲಿ ಸಾರ್ಥಕಗೊಂಡುವು. ಬದುಕಿನ ಹಂಚು ಹರಳು ಇತ್ಯಾದಿ ವಸ್ತುಕೋಟಿಯೆಲ್ಲ ಅವರ ಕೈಯಲ್ಲಿ ಹದವಾಗಿ ಬಳಕೆಗೊಂಡುವು. ಅವರವರ ಕಾಯಕಗಳು ವಚನಗಳಲ್ಲಿ ರೂಪಕ ರೂಪತಾಳಿ ಶೋಭಿಸಿದುವು. ಇದರಿಂದ ಕನ್ನಡ ಭಾಷೆಯ ಅಭಿವ್ಯಕ್ತಿ, ಸತ್ತ್ವ ಸಾವಿರ ಪಾಲು ವಿಸ್ತಾರಗೊಂಡಿತು.

ಸಾಮಾನ್ಯವಾಗಿ ವಚನ ಸಾಹಿತ್ಯವೆಂದರೆ ಸ್ವಾನುಭವ ಲೋಕಾನುಭವಗಳ ಸಂಗಮ. ಶೈಲಿದೃಷ್ಟಿಯಿಂದ ಈ ಸಾಹಿತ್ಯವನ್ನು ಪ್ರಸನ್ನಶೈಲಿ, ಬೆಡಗಿನ ಶೈಲಿ, ಶಾಸ್ತ್ರಶೈಲಿಯೆಂದು ವಿಭಾಗಿಸಬಹುದು. ಪ್ರಸನ್ನಕ್ಕೆ ಬಸವ, ಬೆಡಗಿಗೆ ಪ್ರಭುದೇವ, ಶಾಸ್ತ್ರಕ್ಕೆ ಚೆನ್ನಬಸವ ಇವರ ವಚನಗಳು ಮಾದರಿ. ಆಡುಮಾತಿನ ಕೆಚ್ಚು, ಕಮನೀಯತೆ, ಅನುಭವದ ಪ್ರಾಮಾಣಿಕತೆ, ಅಭಿವ್ಯಕ್ತಿಯ ತೀವ್ರಪರಿಣಾಮ - ಇವು ಗುಣವಿಶೇಷಗಳು. ಹೀಗಾಗಿ ಇದು ಕನ್ನಡದ ಅನುಪಮ ಅನುಭಾವಸಾಹಿತ್ಯ, ವಿಶ್ವವಾಙ್ಮಯಕ್ಕೆ ಕನ್ನಡ ನೀಡಿದ ವಿಶಿಷ್ಟ ಸಾಹಿತ್ಯ ಎಂಬ ಕೀರ್ತಿ ಗಳಿಸಿದೆ.

ವಚನಶಾಸ್ತ್ರ ಪಿತಾಮಹರೆನಿಸಿದ ಫ.ಗು.ಹಳಕಟ್ಟಿಯವರು ಪ್ರಥಮತಃ ವಚನ ಸಾಹಿತ್ಯವನ್ನು ಸಂಗ್ರಹಿಸಿ ಮುದ್ರಿಸಿದ ಮೇಲೆ ಕರ್ನಾಟಕ ವಿಶ್ವವಿದ್ಯಾಲಯವೂ ಬೆಂಗಳೂರಿನ ಬಸವ ಸಮಿತಿಯೂ ವಚನ ಸಾಹಿತ್ಯವನ್ನು ಪರಿಷ್ಕರಿಸಿ ಮುದ್ರಿಸುವ ಕೆಲಸವನ್ನು ಮಾಡಿವೆ. ಎಂ.ಆರ್.ಶ್ರೀನಿವಾಸಮೂರ್ತಿ, ಬಿ.ಶಿವಮೂರ್ತಿಶಾಸ್ತ್ರೀ, ಆರ್.ಸಿ.ಹಿರೇಮಠ, ಭೂಸನೂರುಮಠ, ಸ.ಸ.ಮಾಳವಾಡ, ಎಲ್.ಬಸವ ರಾಜು, ಎಂ.ಎಂ.ಕಲಬುರ್ಗಿ ಮೊದಲಾದ ವಿದ್ವಾಂಸರು ಈ ಕ್ಷೇತ್ರದಲ್ಲಿ ಗಣ್ಯ ಕೆಲಸ ಮಾಡಿದ್ದಾರೆ.

ಇಪ್ಪತ್ತನೆಯ ಶತಮಾನದಲ್ಲಿಯೂ ವಚನ ಕನ್ನಡ ಸಾಹಿತ್ಯಕ್ಕೇ ವಿಶಿಷ್ಟವಾದ ಒಂದು ಸಾಹಿತ್ಯಪ್ರಕಾರ. ಗದ್ಯವೂ ಅಲ್ಲದ ಪದ್ಯವೂ ಅಲ್ಲದ ಶಿವಶರಣರ ವಚನ ವಾಙ್ಮಯ ಲೋಕದ ಅನುಭಾವಸಾಹಿತ್ಯಕ್ಕೆ ಒಂದು ಶ್ರೀಮಂತ ಕೊಡುಗೆ. ಸುಮಾರು ಹನ್ನೆರಡನೆಯ ಶತಮಾನದ ಹೊತ್ತಿಗೆ ಯಶಸ್ಸಿನ ತುದಿಯನ್ನೇರಿದ ಈ ಸಾಹಿತ್ಯಪ್ರಕಾರ ಬರಬರುತ್ತಾ ತನ್ನ ಉಜ್ಜ್ವಲ ಕಾಂತಿಯನ್ನು ಕಳೆದುಕೊಂಡು ಕೊನೆಗೊಮ್ಮೆ ನಿಂತೇ ಹೋಯಿತು. ನಡುವೆ ಒಂದು ಸಲ ಅದರ ಪುನರುಜ್ಜೀವನದ ಪ್ರಯತ್ನ ನಡೆದಿರುವುದಕ್ಕೇನೋ ಸಾಹಿತ್ಯಚರಿತ್ರೆಯಲ್ಲಿ ಉಲ್ಲೇಖಗಳಿವೆ. ಆದರೆ ಯಶಸ್ಸಿನ ದಾಖಲೆಗಳಿಲ್ಲ. ಬಸವಣ್ಣ, ಅಕ್ಕಮಹಾದೇವಿ ಮೊದಲಾದವರು ಈ ಅಭಿವ್ಯಕ್ತಿಮಾಧ್ಯಮದಲ್ಲಿ ತೋರಿದ ಕೌಶಲವೇ ಒಂದು ಜಲಚಿಹ್ನೆಯಾಗಿ ನಿಂತು ಹೋಯಿತು. ಇದನ್ನು ಅನುಸರಿಸಿದವರು, ಅನುಕರಿಸಿದವರು ಅನೇಕರು; ಆದರೆ ಮೀರಿದವರು ಮಾತ್ರ ಒಬ್ಬರೂ ಇಲ್ಲ. ಸರಳವಾದ ಮಾತುಗಳಲ್ಲಿ ಅನುಭವ ತೀವ್ರತೆಯನ್ನು ಪ್ರಾಮಾಣಿಕ ಆತ್ಮವಿಮರ್ಶೆಯಲ್ಲಿ ದಿಟ್ಟತನವನ್ನು, ಅಲಂಕಾರ ಭಾರವಿಲ್ಲದ ರಚನೆಯಲ್ಲಿ ಕಲೆಗಾರಿಕೆಯನ್ನು ಹೊಮ್ಮಿಸುವುದು ಮುಂದಿನವರಿಗೆ ಹೆಚ್ಚು ಸಾಧ್ಯವಾಗಲಿಲ್ಲ. ಆದರೂ ಪ್ರಯೋಗಪ್ರಿಯರಿಗೆ ವಚನಗಳ ಮಾದರಿ ಯಾವಾಗಲೂ ಒಂದು ಆಹ್ವಾನವಾಗಿ ಉಳಿದದ್ದರಲ್ಲಿ ಆಶ್ಚರ್ಯವಿಲ್ಲ. ವಿಚಾರಧಾರೆ, ಆವೇಶ, ಉತ್ಸಾಹಗಳು ಛಂದಸ್ಸಿನ ಚೌಕಟ್ಟಿನಲ್ಲಿ ಸಿಕ್ಕಿ ಸೊರಗದಿರಬೇಕಾದರೆ ವಚನದಂಥ ಒಂದು ಮಾಧ್ಯಮ ಎಲ್ಲ ಕಾಲಕ್ಕೂ ಸಮರ್ಪಕವಾಗಿ ಅಗತ್ಯವಾಗಿ ತೋರಿದ್ದರಲ್ಲಿಯೇ ಈ ಪ್ರಕಾರದ ಮಹತ್ತ್ವವಿದೆ. ಅಂತೆಯೇ ಹೊಸ ಸಾಹಿತ್ಯದಲ್ಲಿಯೂ ವಚನ ಪ್ರಕಾರ ಒಂದು ಪ್ರೇರಣೆಯ ಸೆಲೆಯಾಗಿದೆ; ಅನುಕರಣೆಗೆ ಮಾದರಿಯಾಗಿದೆ.

ಸಾಹಿತ್ಯಚರಿತ್ರೆಯ ಪರಿಭಾಷೆಯಲ್ಲಿ ನಮಗೆ ಪರಿಚಿತರಾಗಿರುವಂಥ ವಚನಕಾರರು ಇಂದು ಇಲ್ಲ. ಆದರೆ ಸಾಹಿತ್ಯಕ್ಷೇತ್ರದ ಬೇರೆ ಬೇರೆ ಪ್ರಕಾರಗಳಲ್ಲಿ ಇಂದು ಕೆಲಸ ಮಾಡುತ್ತಿರುವ ಅನೇಕರು ವಚನಗಳನ್ನು ರಚಿಸಿದ್ದಾರೆ. ಈ ಗದ್ಯಗೀತ ಪ್ರಕಾರದ ರೂಪಾಂಶಕ್ಕೆ ಹೊಸ ಲೇಖಕರಿಗೆ ಅನ್ಯಮೂಲಗಳ ಸ್ಫೂರ್ತಿಯೂ ಲಭಿಸಿದೆ. ವಾಲ್ಟ್ ವಿಟ್‌ಮನ್ನನ ಹುಲ್ಲಿನ ದಳಗಳು, ರವೀಂದ್ರನಾಥ ಠಾಕೂರರ ಕವಿತೆಗಳ ಇಂಗ್ಲಿಷ್ ಅನುವಾದಗಳು ಈ ನಿಟ್ಟಿನಲ್ಲಿ ಒಡನೆಯೇ ನೆನಪಿಗೆ ಬರುವ ಮೂಲಗಳು.

ಸಮಕಾಲೀನರು ಅನೇಕರು ವಚನಗಳನ್ನು ಇಲ್ಲವೇ ರೂಪಾಂಶದಲ್ಲಿ ವಚನಗಳಿಗೆ ತೀರ ಹತ್ತಿರವಾದ ಕೃತಿಗಳನ್ನು ರಚಿಸಿದ್ದಾರೆ. ಸುಮಾರು ಇಪ್ಪತ್ತೆರಡು ಜನ ಲೇಖಕರು ಮೂವತ್ತಕ್ಕೂ ಹೆಚ್ಚು ಸಂಗ್ರಹಗಳನ್ನು ಪ್ರಕಟಿಸಿದ್ದಾರೆ. ಹದಿನೆಂಟು ಜನರ ವಚನಗಳು, ಬೇರೆ ಬೇರೆ ಗ್ರಂಥಗಳಲ್ಲಿ ಪತ್ರಿಕೆಗಳಲ್ಲಿ ಅಚ್ಚಾಗಿವೆ ಅಥವಾ ಹಸ್ತಪ್ರತಿಯ ರೂಪದಲ್ಲಿವೆ. ಈ ಲೇಖಕರಲ್ಲಿ ಮೂರೇ ಮೂರು ವಚಗಳನ್ನು ಬರೆದ ತೀ.ನಂ.ಶ್ರೀಕಂಠಯ್ಯನವರೂ ಮೂರು ಸಾವಿರದ ಐದುನೂರು ವಚನಗಳನ್ನು ಬರೆದು ಪ್ರಖ್ಯಾತರಾದ ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಚೆನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳೂ (ಜಚನಿ) ಸೇರಿದ್ದಾರೆ; ಶಂಕರಮ್ಮ, ಓಂಕಾರಮ್ಮನವರ ಹಾಗೆ ವಾಚಕರಿಗೆ ಪರಿಚಯವೇ ಇಲ್ಲದವರೂ ನಾಡಿನಲ್ಲಿ ಮನೆಮಾತಾಗಿರುವ ಕುವೆಂಪು, ಬೇಂದ್ರೆಯವರೂ ಇದ್ದಾರೆ; ರಂಗಣ್ಣ, ದಿವಾಕರರಂಥ ಹಿರಿಯರೂ ಚಂದ್ರಶೇಖರ ಐತಾಳ, ಭೈರವಮೂರ್ತಿಯಂಥವರೂ ಸಿಂಪಿ ಲಿಂಗಣ್ಣನವರಂಥ ಮಾಸ್ತರರೂ ಸದಾಶಿವ ಶಿವಾಚಾರ್ಯರು, ಗಂಗಾಧರ ಶಿವಾಚಾರ್ಯರಂಥ ಮಠಾಧೀಶರೂ ಜೋಳದರಾಶಿ ದೊಡ್ಡನಗೌಡರಂಥ ಗಮಕಿಗಳೂ ಈ ಪಟ್ಟಿಯಲ್ಲಿ ಬರುತ್ತಾರೆ. ಈ ಎಲ್ಲ ಲೇಖಕರು ಬರೆದಿರುವ ವಚನಗಳ ಸಂಖ್ಯೆ ಒಂದು ಅಂದಾಜಿನಂತೆ ಸುಮಾರು ಹತ್ತು ಸಾವಿರವಾಗುತ್ತದೆ. ಇದೇನು ಸಾಮಾನ್ಯವಾದ ಸಾಧನೆಯಲ್ಲ.

ರಚನೆಯ ವಿನ್ಯಾಸದ ದೃಷ್ಟಿಯಿಂದಲೂ ವಸ್ತುವೈವಿಧ್ಯದ ದೃಷ್ಟಿಯಿಂದಲೂ ಈ ವಚನಗಳು ನಾನಾ ಬಗೆಯಾಗಿವೆ. ಇವುಗಳಲ್ಲಿ ಪ್ರಾಚೀನ ಸಂಪ್ರದಾಯವಿದೆ, ಆಧುನಿಕ ವಿಚಾರಧಾರೆಯಿದೆ, ಆತ್ಮಶೋಧನೆಯಿದೆ, ಪ್ರಕೃತಿವರ್ಣನೆಯಿದೆ, ಭಕ್ತಿ ಇದೆ, ರಾಜಕೀಯವಿದೆ, ಭಾವುಕತೆಯಿದೆ, ವೈಚಾರಿಕತೆಯಿದೆ, ಪರದ ಆದರ್ಶವಿದೆ, ಇಹದ ವಾಸ್ತವಿಕತೆಯಿದೆ, ಮರಗಟ್ಟಿಕೊಂಡ ಪ್ರತಿಭೆಯೊಡನೆ ಕುಡಿಯೊಡೆದ ಪ್ರಜ್ಞೆಯಿದೆ. ಇಲ್ಲಿ ಅರಳಿದ ವಚನಗಳಿವೆ, ಕರುಳಿನ ವಚನಗಳಿವೆ; ಅನುಕರಿಸಿದ ವಚನಗಳಿಗೂ ಸೋಗಿನ ವಚನಗಳಿಗೂ ಬರವಿಲ್ಲ. ಈ ಆಧುನಿಕ ವಚನಸಾಹಿತ್ಯ ಮೈದಾಳಿರುವ ರೀತಿ, ಅದರ ಮುಖ್ಯ ಒಲವು ನಿಲುವುಗಳು, ಪ್ರವೃತ್ತಿಗಳು ವಿಸ್ತಾರವಾದ ಪ್ರತ್ಯೇಕ ಅಧ್ಯಯನಕ್ಕೆ ಅರ್ಹವಾಗಿವೆ.

ಆಧುನಿಕ ವಚನಕಾರರಲ್ಲಿ ಮೊದಲು ಗಮನ ಸೆಳೆಯುವ ಹೆಸರು ಎಸ್.ವಿ.ರಂಗಣ್ಣನವರದು. ಜಚನಿ ಅವರನ್ನು ಬಿಟ್ಟರೆ ರಂಗಣ್ಣನವರೇ ಅತಿ ಹೆಚ್ಚಿನ ಸಂಖ್ಯೆಯ ವಚನಗಳನ್ನು ಬರೆದಿದ್ದಾರೆ. ರಂಗಬಿನ್ನಪ ಎಂಬ ಹೆಸರಿನಲ್ಲಿ ಪ್ರಕಟವಾಗಿರುವ ಇವರ ವಚನಗಳು ಆಧುನಿಕ ಸಾಹಿತ್ಯದಲ್ಲಿ ಮೊತ್ತಮೊದಲಿಗೆ ವಚನಗಳನ್ನು ಬರೆಯನ್ನು ಕೀರ್ತಿ ಇವರಿಗೆ ತಂದುಕೊಟ್ಟಿವೆ. 1925ರ ಅಕ್ಟೋಬರ್ ತಿಂಗಳಿನಲ್ಲಿ ಅವರು ತಮ್ಮ ಪ್ರಥಮ ವಚನವನ್ನು ಬರೆದುದಾಗಿ ಹೇಳಿಕೊಂಡಿದ್ದಾರೆ. ಸುಮಾರು ಹತ್ತು ವರ್ಷಗಳ ಅನಂತರ (1934) ಇವರ ಹದಿನೈದು ವಚನಗಳನ್ನು ರಂಗಯ್ಯನ ವಚನಗಳು ಎಂಬ ಶೀರ್ಷಿಕೆಯಲ್ಲಿ ಪ್ರಬುದ್ಧ ಕರ್ಣಾಟಕ ಮೊದಲ ಬಾರಿಗೆ

ಪ್ರಕಟಿಸಿತು. ಆಧುನಿಕರಲ್ಲಿ ಇದಕ್ಕಿಂತ ಮೊದಲು ಬೇರೊಬ್ಬರು ವಚನಗಳನ್ನು ಪ್ರಕಟಿಸಿರುವುದು ಗಮನಕ್ಕೆ ಬಂದಿಲ್ಲ. ಐತಿಹಾಸಿಕವಾಗಿ ಆಧುನಿಕ ವಚನಕಾರರಲ್ಲಿ ರಂಗಣ್ಣನವರು ಮೊದಲಿಗರಾಗಿರುವುದು ಮಾತ್ರವಲ್ಲದೆ ಈ ಸಾಹಿತ್ಯಪ್ರಕಾರಕ್ಕೆ ರಾಷ್ಟ್ರದ ಅತ್ಯುಚ್ಚ ಪ್ರಶಸ್ತಿಯನ್ನು ಗಳಿಸಿ ಸಫಲತೆಯನ್ನು ಪಡೆದಿದ್ದಾರೆ.

ಒಂದು ದೃಷ್ಟಿಯಿಂದ ದ.ರಾ.ಬೇಂದ್ರೆಯವರೇ ರಂಗಣ್ಣನವರಿಗಿಂತ ಮೊದಲು ವಚನಗಳನ್ನು ರಚಿಸಿದವರು ಎನ್ನಬೇಕು. ಇವರ ಪ್ರಖ್ಯಾತವಾದ ಕರುಳಿನ ವಚನಗಳು ಜಯ ಕರ್ನಾಟಕದಲ್ಲಿ 1931ರಲ್ಲಿ ಪ್ರಕಟವಾದರೂ ಅವನ್ನು ಪೂರ್ಣಗೊಳಿಸಿದ್ದು 1942ರಲ್ಲಿಯೇ ಎಂದೂ ಅವರೇ ಹೇಳಿದ್ದಾರೆ. ಆದರೆ ರಂಗಣ್ಣನವರ ವಚನಗಳು ರಚನಾವಿನ್ಯಾಸದಲ್ಲಿ ವಚನಗಳ ಚೌಕಟ್ಟಿನಲ್ಲಿ ಬರುವ ಹಾಗೆ ಬೇಂದ್ರೆಯವರ ವಚನಗಳು ಬರುವುದಿಲ್ಲ ಎಂಬುದನ್ನು ನಾವು ಗಮನಿಸಬೇಕು. ಬೇಂದ್ರೆಯವರ ವಚನಗಳು ಹೆಚ್ಚು ಕಡಿಮೆ ಮುಕ್ತಛಂದಸ್ಸು ಸ್ವಚ್ಛಂದ ಗೀತೆಗಳೇ ಸರಿ. ಪ್ರಾಚೀನರ ವಚನಗಳು ಶುದ್ಧ ಪಾರಮಾರ್ಥಿಕ ಸಾಧನೆಯ ಮಾರ್ಗದೊಳಗಿನವು. ಕರುಳಿನ ವಚನಗಳೊ ಲೌಕಿಕ ಭಾವದ ಪ್ರಕಟನೆಗೆ ಬಳಸಿಕೊಂಡಂಥ'ವು ಎಂಬ ಬೇಂದ್ರೆಯವರ ಮಾತುಗಳು ಸಹಜವಾಗಿ ವಸ್ತುವನ್ನುದ್ದೇಶಿಸುತ್ತವೆ. ರೂಪಾಂಶದಲ್ಲಿ ಅವು ಪ್ರಾಚೀನರ ವಚನಗಳಿಗಿಂತಲೂ ವಿಟ್‌ಮನ್, ಠಾಕೂರರ ಕೃತಿಗಳಿಗೆ ಹತ್ತಿರವಾದ ಗದ್ಯಗೀತಗಳು. ಕುವೆಂಪು ಅವರ ಕಿಂಕಿಣಿಗೂ ದಿವಾಕರರ ಅಂತರಾತ್ಮನಿಗೆ ಕೃತಿಗೂ ಈ ಮಾತುಗಳೇ ಅನ್ವಯವಾಗುತ್ತವೆ.

ರಂಗಣ್ಣನವರ ವಚನಗಳಲ್ಲಿ ಪ್ರಾಚೀನ ವಚನಗಳ ಪ್ರತಿಧ್ವನಿಯನ್ನು ಸ್ಪಷ್ಟವಾಗಿ ಕೇಳಬಹುದಾಗಿದೆ. ಇದು ಆ ಸಾಹಿತ್ಯ ಪ್ರಕಾರ ಹೊಸ ಕಾಲದ ಲೇಖಕರ ಮೇಲೆ ಪ್ರಭಾವ ಬೀರಿರುವುದಕ್ಕೆ ಒಂದು ಉದಾಹರಣೆಯೂ ಹೌದು. ಎಂಟುನೂರು ವರ್ಷಗಳಷ್ಟು ಹಿಂದಿನ ಆ ವಚನಗಳು ರೂಪಗೊಂಡ ಅನ್ಯಾದೃಶ ಸೊಗಸಿಗೆ, ಅವುಗಳಲ್ಲಿ ಅಭಿವ್ಯಕ್ತಗೊಂಡ ನಿಚ್ಚಳ ಪ್ರಾಮಾಣಿಕತೆಗೆ, ತುಯ್ತ ತುಡಿತಗಳಿಗೆ ರಂಗಣ್ಣನವರ ಪ್ರತಿಭೆ ಸ್ಪಂದಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಹೊಸ ಕಾಲಕ್ಕೆ ತಕ್ಕಂತೆ ಸಾಹಿತ್ಯವೂ ಹೊಸ ರೂಪವನ್ನು ಪಡೆಯುವುದು ಅನಿವಾರ್ಯವಾದುದರಿಂದ, ಈ ವಚನಗಳಾದರೂ ಪ್ರಾಚೀನದ ಪ್ರತಿರೂಪವಾದರೆ ಹೆಚ್ಚಿನದೇನನ್ನೂ ಸಾಧಿಸುವಂತಿರಲಿಲ್ಲ. ಆಗಲೇ ವಚನಸಾಹಿತ್ಯಸೃಷ್ಟಿಯ ಎರಡನೆಯ ಆವರ್ತದಲ್ಲಿಯೆ ವಚನಗಳ ಬಣ್ಣ ಅಳಿಸಿರುವುದು, ಕಾವು ಕಳೆದಿರುವುದು, ದನಿ ಮಾಸಿರುವುದು ಸಾಹಿತ್ಯಚರಿತ್ರೆಯ ವಿದ್ಯಾರ್ಥಿಗಳಿಗೆ ತಿಳಿದಿದೆ. ಬದಲಾದ ಮೌಲ್ಯಗಳು ಸಾಹಿತ್ಯನಿರ್ಮಾಣದಲ್ಲಿ ಸ್ಪಂದಿಸದೆ ಹೋದರೆ ಎಲ್ಲ ಕಾಲದ ಕಥೆಯೂ ಹೀಗಾಗುತ್ತದೆ. ಹೊಸ ಕಾಲದ ವಚನ ಹೀಗಾಗಬಾರದೆಂಬುದನ್ನು ಆರಂಭಕ್ಕೇ ರಂಗಣ್ಣನವರು ಅರಿತುಕೊಂಡರು. ಅವರಿಗೆ ವಚನಕಾರರ ಸೃಷ್ಟಿಯ ಸೀಮೆಯ ಪರಿಚಯವಿತ್ತು, ಸೀಮಿತಗಳ ತಿಳಿವಳಿಕೆಯಿತ್ತು. ವಚನ ಅದೇ ರೂಪದಲ್ಲಿ ಉಳಿಯುವುದು ಸಾಧ್ಯವಿಲ್ಲ ಎನ್ನುವುದೂ ಅವರಿಗೆ ಖಚಿತವಾಯಿತು. ಆಧುನಿಕ ವಚನ ಯಾವ ರೂಪ ತಾಳಬೇಕೆಂಬುದಕ್ಕೆ ಅವರು ವಿವಿಧ ಪ್ರಯೋಗಗಳನ್ನು ನಡೆಸಿದರು. ಹೊಸ ಕಾಲದ ಲೇಖಕರ ಈ ನಿಟ್ಟಿನ ಎಲ್ಲ ಪ್ರಯತ್ನಗಳಿಗೂ ಅವರು ಆಚಾರ್ಯರಾದರು. ಕೆಲವು ಉದಾಹರಣೆಗಳು ಹೀಗಿವೆ:

ಕರ್ನಾಟಕ ಜನಪದವಿಂದು ಕುರಿಮಂದೆ, ನರಿಬಳಗ, ಹೆಬ್ಬಾವು ಸಂಸಾರ, ಎಮ್ಮೆ ದೊಡ್ಡಿ, ತಟ್ಟು ಕೊಟ್ಟಿಗೆ, ಇರುವೆ ಗೂಡು; ಎಲ್ಲವನ್ನು ಎಲ್ಲರನ್ನು ಎಚ್ಚರಿಸಿ ಇದಿರು ನಿಲ್ಲಿಸಿಕೊಂಡು, ಆಣತಿ ಪಾಲಿಸಯ್ಯ; ಕನ್ನಡವ ಕಾಪಿಡಲು ಸಂಕಲ್ಪ ತಿಳಿಸಯ್ಯ, ಕೌಸಲ್ಯ ಕಲಿಸಯ್ಯ.

ಏಳನೆಯ ಮಾಸದಲ್ಲಿ ಬಸುರಿ ಬಲಬಾಹುವಿಗೆ ಕನ್ನಡ ರಕ್ಷೆ ಕಟ್ಟಬೇಕು. ಶಿಶು ಜನಿಸಿದ ಒಡನೆ ತಿನ್ನಿಸುವ ಬಜೆಬೆಣ್ಣೆಯ ಜೊತೆಗೆ ಕನ್ನಡವ ಬೆರೆಸುವುದ ಮರೆಯಬಾರದು. ಅನ್ಯಭಾಷೆಯ ಅನ್ಯಾಯ ಕಾಮವೆನ್ನುವ ಸಾಂಕ್ರಾಮಿಕ ಜಾಡ್ಯ ಸೋಂಕದಿರಲು, ಆರು ತಿಂಗಳು ತೀರುವುದರೊಳಗೆ ಕನ್ನಡ ಸಿಡುಬು ಹಾಕಿಸಬೇಕು. ಆಮೇಲೆ ಸಮಸಂವತ್ಸರ ನಡೆಯುವಾಗ ಕತ್ತರಿಸಲಯ್ಯ ಕನ್ನಡಕೆ ಮುಡಿಯ, ಓನಾಮ ಹಬ್ಬಕ್ಕೆ ಸ್ವಾಮಿಯಾಗಿರಲಿ ಕನ್ನಡದಿಂದ ಮಾಡಿದ ಸಿದ್ಧಿವಿಘ್ನೇಶ. ವಿದ್ಯಾಭ್ಯಾಸ ಆಗಬೇಕು ಕನ್ನಡ ಹಲಗೆ ಬಳಪ ಬಾಲಬೋಧೆಗಳ ಬಳಸುತ್ತ. ಮುಂಜಿಯಲಿ ಕನ್ನಡ ಜನಿವಾರ ಕನ್ನಡ ಗಾಯತ್ರಿ; ಮದುವೆಯಲ್ಲಿ ಕನ್ನಡ ಬಾಸಿಂಗ, ಕನ್ನಡ ಮಾಂಗಲ್ಯ, ಕನ್ನಡ ಸಂಕಲಿಕೆ ಕನ್ನಡ ಧಾರೆಯಸೀರೆ. ತರುವಾಯ ಮನೆ ಕಟ್ಟಬೇಕು ಕನ್ನಡ ಇಟ್ಟಿಗೆ ದೂಲ ಹೆಂಚುಗಳಿಂದ; ಮೇಲೆ ಏರಿಸಬೇಕು ಕನ್ನಡ ಬಾವುಟವ. ದಿನದಿನವು ಕನ್ನಡದ ಆಹಾರ, ಕನ್ನಡದ ವಿಹಾರ, ಕನ್ನಡದಲ್ಲಿ ಶಯನ; ಎದ್ದೊಡನೆ ಕನ್ನಡದ ಸ್ಮರಣೆ, ಮಧ್ಯಾಹ್ನ ಕನ್ನಡ ಪೂಜೆ. ಈ ನಾಡು ಆ ನಾಡು ನುಡಿಗಳೆಲ್ಲ ನೆಮ್ಮದಿಯ ದಾಸದಾಸಿಯರಾಗಿ ಓಡಾಡಿ ಗೆಯ್ಮೆ ದುಡಿದು ತಂದು ತುಂಬಿಸಲಿ ಕನ್ನಡ ಕುಟುಂಬದುಗ್ರಾಣವನ್ನು, ಕನ್ನಡ ಕುಲವ ಭಾರಿಯದಾಗಿ ಬೆಳೆಸಿ ಏಳಿಸಲಿ.

ಇಂಥ ಬಾಲ ಪದ್ಧತಿಯೆ ಕನ್ನಡಿಗನಿಗೆ ಸವಿ ಸಾರ್ಥಕವಾದ ನರಜನುಮದಾನಂದ ದೀಕ್ಷೆ; ಅಪ್ಪಣೆಯ ಹಾಡಯ್ಯ, ಅನುಕೂಲ ಮಾಡಯ್ಯ, ವಿಧಿಕೂಸ ಹೊಕ್ಕಳಲಿ ಹೆತ್ತವನೆ ರಂಗಯ್ಯ

ಹಾಗೆ ಕನಸಾಯ್ತು:  
ನೆನ್ನೆ ಮೊನ್ನೆ ಸರ್ಕಾರದಾಶ್ರಯದಲ್ಲಿ  
ಒಂದು ಗುಮಾಸ್ತಿಕೆಗಾಗಿ  
ಪರೀಕ್ಷೆ ತೆಗೆದುಕೊಂಡ ವಾಲ್ಮೀಕಿ.  
ಆ ವರ್ಷ ಸಾಹಿತ್ಯ ಪ್ರಶ್ನಪತ್ರಿಕೆಯಲ್ಲಿ  
ರಾಮಾಯಣವ ಕುರಿತು ಕೆಲವ ಕೇಳಿತ್ತು  
ವಾಲ್ಮೀಕಿ ತೇರ್ಗಡೆಯಾಗಲಿಲ್ಲ!  
ಏತಕ್ಕೆ ಆಗಲಿಲ್ಲ?  
ಗೋವಿಂದರಾಜ ತಿಲಕ ಮಹೇಶ್ವರ ತೀರ್ಥ  
ಯಾವೊಂದು ವ್ಯಾಖ್ಯಾನವನು ಅವ ಓದಿಯೇ ಇರಲಿಲ್ಲ  
ಎನ್ನಜ್ಞಾನ, ರಂಗ ಸರ್ವಜ್ಞ!

ಇಂದಿನ ವಚನಗಳಿಗೂ ಹಿಂದಣ ವಚನಗಳಿಗೂ ಕೆಲವು ವಿಚಾರಗಳಲ್ಲಿ ಸಾದೃಶ್ಯ ವೈದೃಶ್ಯಗಳಿರುವುದನ್ನು ನಾವು ಗಮನಿಸಬಹುದು: ಹಿಂದಿನ ವಚನಗಳ ತಿರುಳು ಭಕ್ತಿ, ವಿಚಾರ ಮತ್ತು ವಿಮರ್ಶೆ. ಹೊಸ ಕಾಲದ ವಚನಗಳು ವಿಚಾರವಿಮರ್ಶೆಗಳ ಜೊತೆಗೆ ಆರಿಸಿಕೊಂಡದ್ದು ವಚನರಚನೆಯ ವಿಧಾನವನ್ನು. ವಚನಗಳ ಒಂದು ಸಾಮಾನ್ಯ ಲಕ್ಷಣ ಅವುಗಳಲ್ಲಿ ಕಂಡುಬರುವ ಲಯಬದ್ಧತೆ. ಯಾವುದೇ ಬದ್ಧತೆ ಮುಕ್ತತೆಗಳಿಂದ ಬೇರೆಯಾಗಿ ವಚನಗಳು ಗದ್ಯಪದ್ಯದ ಒಂದು ನಡುವಣ ಸ್ಥಿತಿಯಲ್ಲಿವೆ. ವಚನಗಳ ಲಯದ ಪ್ರಾಸಾದಿಕತೆ ಅವುಗಳ ಉಗಮವನ್ನು ಹಾಡುಗಳಲ್ಲೊ ತ್ರಿಪದಿಗಳಲ್ಲೊ ಕಾಣುವಂತೆ ಅನೇಕ ವಿದ್ವಾಂಸರನ್ನು ಪ್ರಚೋದಿಸಿದೆ. ಒಂದು ನಿರ್ದಿಷ್ಟವಾದ ಛಂದಸ್ಸಿನ ಚೌಕಟ್ಟಿನಿಂದ ವಚನವನ್ನು ಹೊರಗೆಳೆಯಬೇಕಾಗಿಲ್ಲ. ಭಾವಭರಿತವಾದ, ಆವೇಶಯುಕ್ತವಾದ ಮಾತು ತನಗೆ ತಾನೇ ಲಯಬದ್ಧವೂ ನಾದಮಯವೂ ಆಗುತ್ತದೆ. ಭಾಷೆ ಆರಂಭಗೊಂಡಾಗ ಅದು ನಾದಯುಕ್ತವಾಗಿತ್ತೆಂದೇ ಅನೇಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇಂದಿನ ವೃತ್ತಪತ್ರಿಕೆಗಳ ವರದಿರೂಪದ ಬರಹಗಳಲ್ಲಿಯೂ ಭಾಷೆಯ ಅನಿವಾರ್ಯ ಅಂಶವಾದ ಲಯಗುಣವನ್ನು ಗುರುತಿಸಬಹುದು. ಆದುದರಿಂದ ವಚನಗಳಲ್ಲಿ ಭಾಷೆಯ ಈ ಸಹಜ ಲಯ, ಭಾವತೀವ್ರತೆ ಅನುಭವತೀವ್ರತೆಗಳಿಂದಾಗಿ ಮಿಕ್ಕ ಕಡೆಗಳಿಗಿಂತ ಸ್ಪಷ್ಟವಾಗಿ ಮೈದೋರಿದೆಯೆಂಬುದನ್ನು ಗಮನಿಸಿದರೆ ಸಾಕು. ಈ ದೃಷ್ಟಿಯಿಂದ ಇಂದಿನ ವಚನಗಳನ್ನು ಹಳೆಯ ವಚನಗಳೊಂದಿಗೆ ಹೋಲಿಸಿ ಪರಿಶೀಲಿಸಿದಾಗ, ಇಂದಿನ ವಚನಗಳ ಬಂಧದಲ್ಲಿ ಒಂದು ಬಗೆಯ ಶಿಥಿಲತೆ ಕಾಣಿಸುತ್ತದೆ. ಹಳೆಯ ವಚನಗಳಲ್ಲಿ ಹಾಡುಗಬ್ಬಗಳ ಒಲವಿದ್ದರೆ ಇಂದಿನವು ಓದುಗಬ್ಬಗಳಾಗಿವೆ. ಅಂದಿನ ವಚನಗಳಲ್ಲಿ ಅಲ್ಲಲ್ಲಿ ತ್ರಿಪದಿಗಳೇ ಹುದುಗಿಕೊಂಡಿದ್ದರೆ, ಇಂದಿನ ವಚನಗಳಲ್ಲಿ ಎಷ್ಟೋ ಕಡೆ ತೆಳುವಾದ ಒರಟು ಗದ್ಯವಿದೆ.

ತಂತ್ರದ ದೃಷ್ಟಿಯಿಂದ ಇನ್ನೊಂದು ಸಾಮಾನ್ಯ ಅಂಶವೆಂದರೆ, ಪ್ರಾಚೀನ ವಚನಗಳು ಬರೆದವರ ಗುಪ್ತ ಅಂಕಿತಗಳನ್ನೊಳಗೊಂಡಿರುವುದು. ಮಧ್ಯಕಾಲದ ಭಕ್ತಿ ಸಾಹಿತ್ಯದ ಒಂದು ಪ್ರಧಾನ ಲಕ್ಷಣ ಇದು. ಹೆಚ್ಚು ಕಡಿಮೆ ಇಂದಿನ ವಚನಕಾರರೆಲ್ಲ ಈ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿದ್ದಾರೆ. ಕುವೆಂಪು, ಬೇಂದ್ರೆ ಅವರಿಗೆ ವಚನ ಬರೆಹ ಕೇವಲ ಒಂದು

ಕಾವ್ಯವಿಧಾನ, ಅಷ್ಟೆ. ಅವರಂತೆಯೆ ಸಿಂಪಿ ಲಿಂಗಣ್ಣ, ವಾಮನ ಭಟ್ಟ ಮೊದಲಾದವರಿಗೆ ಅಂಕಿತದ ಅಗತ್ಯ ತೋರಲಿಲ್ಲ. ಆರ್.ಬಾಳ ಮೊದಲಾದ ಇನ್ನೂ ಕೆಲವರಿಗೆ ಇದರಲ್ಲಿ ಯಾವುದೇ ವಿಧದ ಕಟ್ಟುನಿಟ್ಟಿಲ್ಲ. ರಂಗಣ್ಣ, ಜಚನಿ, ಪರಮೇಶ್ವರ ಭಟ್ಟ ಅವರಂಥವರಿಗೆ ಇದು ತಾಂತ್ರಿಕ ಅನಿವಾರ್ಯತೆ. ದಿವಾಕರರ ಒಳನುಡಿಗಳಲ್ಲಿಯೂ ಅಂತರಾತ್ಮನನ್ನು ಕುರಿತು ಸಂಬೋಧನೆಯಿದೆ.

ಮತಾತೀತವಾದ ಭಕ್ತಿಯನ್ನೂ ಲೌಕಿಕ ಜೀವನದ ವಿವಿಧ ನಿಲವುಗಳನ್ನೂ ಅಭಿವ್ಯಕ್ತಗೊಳಿಸಿರುವುದು ಆಧುನಿಕ ವಚನಗಳ ಒಂದು ಸಾಧನೆಯಾಗಿದೆ. ಜಚನಿ ಅವರನ್ನುಳಿದು ಇತರ ವೀರಶೈವ ಮಠಾಧೀಶರು ರಚಿಸಿದ ವಚನಗಳು ತೀರ ಸೀಮಿತವಾದ ಧಾರ್ಮಿಕ ಪರಿಸರದಲ್ಲಿ ಸುಂದರವಾಗಿ ಅರಳದೆ ಹೋಗಿವೆ. ಜಚನಿ ಅವರ ಆರಂಭದ ವಚನಗಳನ್ನು ಅವರ ಈಚಿನ ವಚನಗಳೊಂದಿಗೆ ಹೋಲಿಸಿದಾಗ ವೈವಿಧ್ಯ ಕುಂದಿರುವುದು ಸ್ಪಷ್ಟವಾಗುತ್ತದೆ. ದೊಡ್ಡನಗೌಡರು, ಜೀರಿಗೆಕಟ್ಟೆ ಬಸಪ್ಪನವರು ಮೊದಲಾದವರು ಸಂಪ್ರದಾಯದ ವಚನಗಳಿಂದ ಸಂಪೂರ್ಣವಾಗಿ ಪ್ರಭಾವಿತರಾಗಿದ್ದರೂ ಲೌಕಿಕವನ್ನು ಕಡೆಗಣಿಸುವುದಿಲ್ಲ. ದಿವಾಕರ ಹಾಗೂ ಸಿಂಪಿಯವರ ವಚನಗಳಲ್ಲಿ ಅತೀಂದ್ರಿಯ ಪ್ರಜ್ಞೆಯ ಪುಣ್ಯಸ್ಪರ್ಶದಿಂದ ಪುಳಕಿತಗೊಳ್ಳುವ ಕವಿಚೇತನದ ಕಂಪನವಿದೆ:

ವಿಜ್ಞಾನಿಗಳಿಗೆ ಅಜ್ಞಾನವಾಗಿ ಕಾಡಿತ್ತು ಮಾಯೆ  
ಸತ್ಯರಿಗೆ ಅಸತ್ಯವಾಗಿ ಕಾಡಿತ್ತು ಮಾಯೆ  
ಸಾಹಿತಿಗಳಿಗೆ ಸಂಪ್ರದಾಯವಾಗಿ ಕಾಡಿತ್ತು ಮಾಯೆ  
ವಿರಾಗಿಗೆ ಅನುರಾಗವಾಗಿ ಕಾಡಿತ್ತು ಮಾಯೆ  
ಹಿರಿಯರಿಗೆ ಕಿರುಕುಳವಾಗಿ ಕಾಡಿತ್ತು ಮಾಯೆ  
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ  
ಮಾಯಾ ಮೋಹಕೆ ಮರುಳಾಗದವರ ಕಾಣೆನಯ್ಯ

ಹೊಟ್ಟೆಯ ಪಾಡಿಂಗೆ ಪಟ್ಟಕ್ಕೇರುವವರಿಗೆ  
ನುಡಿಸೇವೆಯ ಮಾತೇಕೆ, ನಾಡಸೇವೆಯ ದಂದುಗವೇಕೆ?  
ವಂದನೆಗೆ ಆಶಿಸುವರು; ಪರನಿಂದೆಗೆ ಆನಂದಿಸುವರು  
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರನ  
ಸುಖಸಾರಾಯವು ಅವರಿಗೆ ರುಚಿಸದು  
ಸೀಮೆ ರಾಜನಿಗಲ್ಲದೆ ರಸಜ್ಞನಿಗುಂಟೆ?  
ಸೀಮೆ ವಾರಿಧಿಗಲ್ಲದೆ ವಾಙ್ಮಯಕ್ಕುಂಟೆ?  
ಸೀಮೆ ರಸಾನ್ನಕ್ಕುಂಟಲ್ಲದೆ ರಸೋಕ್ತಿಗುಂಟೆ?  
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ  
ಸೀಮಾತೀತ ಸಾಹಿತಿ; ಸೀಮಾತೀತ ಸಾಹಿತ್ಯ

ಬೇಂದ್ರೆಯವರ ಕರುಳಿನ ವಚನಗಳಲ್ಲಿ ವಾತ್ಸಲ್ಯಭಾವ ಮಡುಗಟ್ಟಿದ್ದರೆ, ಕುವೆಂಪು ಅವರು ಕಿಂಕಿಣಿಯ ನಾದದಲ್ಲಿ ಆತ್ಮಶೋಧನೆಗೆ ತೊಡಗುತ್ತಾರೆ. ರಂಗಣ್ಣನವರ ವಿಮರ್ಶನ ಪ್ರಜ್ಞೆ ವಿಶ್ವವ್ಯಾಪಕವಾದುದು: ಪರಮೇಶ್ವರ ಭಟ್ಟರು ಸಮಕಾಲೀನ ಜೀವನದ ಸಣ್ಣಪುಟ್ಟ ಸಂಗತಿಗಳಿಗೆ ವಿಲಕ್ಷಣವಾದ ತಿರುವು ಕೊಡುತ್ತಾರೆ. ಚಂದ್ರಶೇಖರ ಐತಾಳರ ವಚನಗಳ ಕೇಂದ್ರಬಿಂದು ತಾಯಿ, ತಾಯಿತನ. ಒಟ್ಟದಲ್ಲಿ ಇಂದಿನ ವಚನ ಸೆಕ್ಯುಲರ್ ಆಗಿದೆ. ಅಂದಮಾತ್ರಕ್ಕೆ ಅದು ಆರ್ತತೆಯನ್ನು, ಆತ್ಮನಿರೀಕ್ಷಣೆಯನ್ನು, ಆನಂದಾನುಭವವನ್ನು ಕಡೆಗಣಿಸಿದೆ ಎಂದು ಅರ್ಥವಲ್ಲ. ಹಿಂದಿನ ವಚನಗಳಲ್ಲಿ ಒಂದೇ ಸಮನೆ ಕೇಳಿಸುತ್ತಿದ್ದುದು, ಪರಮಾತ್ಮನನ್ನು ಅರಸುತ್ತಿದ್ದ ಆತ್ಮದ ಕರೆ, ಈ ಹಾದಿಯಲ್ಲಿ ಕಲ್ಲು ಮುಳ್ಳು ಕಸ ಇರಬಾರದೆಂದು ಪದೇ ಪದೇ ಒತ್ತಿಹೇಳುವ ಶುಚಿಜೀವನದ ಸಂದೇಶ. ಇಂದಿನ ವಚನಗಳಿಗಾದರೊ ಬೇಲಿಯಿಲ್ಲ. ಜೀವನದ ವಿಸ್ತಾರವನ್ನೆಲ್ಲ ಅವು ಆವರಿಸುತ್ತವೆ. ಸಂಕೀರ್ಣ ಬದುಕಿನ ಎಲ್ಲ ಪದರಗಳನ್ನೂ ವರ್ಣಿಸಲು ಅವು ಸಮರ್ಥವಾಗಿವೆ. ಅಂದರೆ ಹನ್ನೆರಡನೆಯ ಶತಮಾನದಲ್ಲಿ ವಚನ ಸಾಧಿಸಿದುದನ್ನೆಲ್ಲ ಇಂದು ಸಾಧಿಸಲಾಗದು. ಅದನ್ನು ನಿರೀಕ್ಷಿಸುವುದೂ ಸಾಧ್ಯವಿಲ್ಲ; ಸಾಧುವೂ ಅಲ್ಲ. ಅಂದಿನವರೆದುರಿಗಿದ್ದುದು ಒಂದೇ ಧ್ಯೇಯ: ಕಾವ್ಯ ಶುದ್ಧ ಜೀವನ ಸಂಹಿತೆ. ಇಂದಿನ ಲೇಖಕನೋ ಸಂಕೀರ್ಣತೆಯ ಶಿಶು. ಭಾಷೆಯಾದರೋ ಅಂದಿನವರು ನಡೆದುದೆ ದಾರಿ: ಇಂದು ಮಾರ್ಗನಿರ್ಮಾಣ ಸುಲಭವಲ್ಲ.

ಪರಮೇಶ್ವರಭಟ್ಟರು ವಚನಗಳನ್ನು ಬರೆದವರಲ್ಲಿ ಅತ್ಯಂತ ಮುಖ್ಯರು. ಜಚನಿ ಹಾಗೂ ರಂಗಣ್ಣನವರನ್ನುಳಿದರೆ ಭಟ್ಟರೇ ಹೆಚ್ಚು ಸಂಖ್ಯೆಯ ವಚನಗಳನ್ನು ಬರೆದಿರುವವರು. ಅವರ ಉಪ್ಪು ಕಡಲು ಸಂಗ್ರಹದಲ್ಲಿ 705 ವಚನಗಳಿವೆ. ಇದು ಆಧುನಿಕ ಕನ್ನಡ ಸಾಹಿತ್ಯದ ಶ್ರೇಷ್ಠ ಕೃತಿಗಳಲ್ಲೊಂದು. ಭಟ್ಟರ ಪರಿಣತ ಕೃತಿಯೂ ಹೌದು. ಯಶಸ್ಸಿನ ದೃಷ್ಟಿಯಿಂದಲಂತೂ ಅವರ ರಚನೆಗಳು ವಿಶೇಷ ಉಲ್ಲೇಖಕ್ಕೆ ಅರ್ಹವಾದವು. ಇವನ್ನು ಹೋಲಿಸಬಹುದಾದರೆ ಕೇವಲ ರಂಗಣ್ಣನವರ ವಚನಗಳೊಂದಿಗೆ ಮಾತ್ರ. ಹಾಗೆ ಮಾಡಿದರೂ ರಂಗಣ್ಣನವರ ವಚನಗಳಲ್ಲಿ ಅಷ್ಟಾಗಿ ಕಾಣಿಸದ ಕೆಲವು ಗುಣಗಳೂ ಭಟ್ಟರ ವಚನಗಳಲ್ಲಿ ಕಾಣಿಸುತ್ತವೆ.

ರಂಗಣ್ಣನವರು ಪ್ರಧಾನವಾಗಿ ಪಂಡಿತರು, ವಿಮರ್ಶಕರು. ಅವರ ವಚನಗಳಾದರೂ ಪಾಂಡಿತ್ಯವಿಮರ್ಶೆಯಿಂದಲೇ ತುಂಬಿವೆ ಎನ್ನಬಹುದು. ರಂಗಣ್ಣನವರ ಜೀವನಾನುಭವದೊಡನೆ ಅವರ ವ್ಯಾಪಕವಾದ ಅಧ್ಯಯನ ಸ್ಪರ್ಧಿಸುತ್ತಿರುವಂತೆ ಕಾಣುತ್ತದೆ. ಭಟ್ಟರು ಕೇವಲ ವಿಮರ್ಶಕರಲ್ಲ, ಕವಿಗಳೂ ಹೌದು. ಅವರ ವಚನಗಳಲ್ಲಿ ಯಥೇಚ್ಛವಾಗಿ ಕಾವ್ಯ ಹೊಳಹು ಹಾಕಿದೆ. ತಾಂತ್ರಿಕವಾಗಿ ಇಬ್ಬರೂ ಪ್ರಾಚೀನ ವಚನಗಳಿಗೆ ಸರಿಸಮನಾದ ರಚನೆಗಳನ್ನು ಮಾಡಿದ್ದಾರೆ. ಆದರೆ ಭಟ್ಟರ ವಚನಗಳಲ್ಲಿ ವಚನರೂಪ ಖಚಿತಗೊಂಡಿರುವ ಹಾಗೆ ರಂಗಣ್ಣನವರ ವಚನಗಳಲ್ಲಿ ಕಾಣಿಸುವುದಿಲ್ಲ. ಸದಾಶಿವ ಗುರುವಿಗೆ ಭಟ್ಟರು ಮೊರೆ ಹೋಗುವುದರಲ್ಲಿ ಅಭಿವ್ಯಕ್ತವಾಗುವ ಆರ್ತತೆ ಉತ್ಕಟತೆಗಳು ರಂಗಣ್ಣನವರು ಮಾವಿನಕೆರೆಯ ಅಧಿದೈವಕ್ಕೆ ಪ್ರಾರ್ಥನೆ ಸಲ್ಲಿಸುವಾಗ ತೋರುವುದಿಲ್ಲ. ರಂಗಬಿನ್ನಪದ ವೈಚಾರಿಕತೆ ಭಾಷಣಾತ್ಮಕವಾದುದ್ದು; ಉಪ್ಪುಕಡಲಿನ ವೈಚಾರಿಕತೆ ನಿವೇದನಾತ್ಮಕವಾದದ್ದು, ಮೊದಲನೆಯದರಲ್ಲಿ ನಿರೂಪಣೆ; ಎರಡನೆಯದರಲ್ಲಿ ತೋಡಿಕೆ. ರಂಗಯ್ಯ ಆತ್ಮವನ್ನು ಮರೆಯದಿದ್ದರೂ ಲೋಕಕ್ಕೆ ಸನಿಹದವನು; ಸದಾಶಿವಗುರು ಲೋಕವನ್ನು ಕಡೆಗಾಣದಿದ್ದರೂ ಆತ್ಮಕ್ಕೆ ಹತ್ತಿರದವನು.

ಈ ವಚನಗಳಲ್ಲಿ ಕಡಲಿನ ಆಳ ವೈಶಾಲ್ಯ ವೈವಿಧ್ಯಗಳನ್ನು ವರ್ಣಿಸುವ ನೆಪದಲ್ಲಿ ಕವಿ ಮನುಷ್ಯನ ಅಲ್ಪತೆಗಳನ್ನೆಲ್ಲ ಎತ್ತಿ ಆಡಿದ್ದಾನೆ. ಈ ವಚನಗಳು ಕಡಲಿನ ಒಂದು ವರ್ಣಮಯ ಆಲ್ಬಂ. ಇಲ್ಲಿಯ ಕಡಲಿನ ಮೊರೆತ ಮಾನವಹೃದಯದ ತುಯಿತ; ಇದು ಅಪ್ಪಳಿಸುವುದಿಲ್ಲ, ಸ್ಪರ್ಶಿಸುತ್ತದೆ; ಭೋರ್ಗರೆಯುವುದಿಲ್ಲ ಪಿಸುಗುಡುತ್ತದೆ. ಕಡಲ ಕಥನಕ್ಕೆ ಮೀಸಲಾದ ಈ ವಚನಗಳ ಜೀವನದ ವಿಮರ್ಶೆಯಿದೆ; ಅನುಭವದ ತುಡಿತವಿದೆ; ಆತ್ಮವಿಮರ್ಶೆಯು ಕೆಚ್ಚಿದೆ. ಬದುಕಿನ ನಾನಾಮುಖಗಳಲ್ಲಿ ಕಂಡು ಉಂಡ ಅನುಭವ ಈ ವಚನಗಳಲ್ಲಿ ತೊಟ್ಟಿಕ್ಕುತ್ತದೆ. ಇವುಗಳ ವಸ್ತು ನಿತ್ಯಜೀವನ. ಇವುಗಳ ನಿರ್ವಹಣೆಯಲ್ಲಿ ಪ್ರತಿಭೆಯಿದೆ, ಪಾಂಡಿತ್ಯವಿದೆ, ವ್ಯುತ್ಪತ್ತಿಯಿದೆ. ಇಲ್ಲಿಯ ಎಷ್ಟೋ ಸಂಗತಿಗಳು ಪರಮೇಶ್ವರ ಭಟ್ಟರ ಮಿಕ್ಕ ಕೃತಿಗಳನ್ನು ಬಲ್ಲವರಿಗೆ ಹೊಸವಲ್ಲ. ಅವರ ಅನೇಕ ವಿಚಾರಗಳು ಇಲ್ಲಿ ರೂಪಾಂತರಗೊಂಡಿರುವುದನ್ನು ಗಮನಿಸಬಹುದು. ಪ್ರತಿಮೆ ಉಪಮೆ ಹೋಲಿಕೆ ಮೊದಲಾದ ಈ ವಚನಗಳ ಪರಿಕರಗಳು ಬಹುವಾಗಿ ಸಮಕಾಲೀನ ಜೀವನದಿಂದ ಎತ್ತಿಕೊಂಡವು. ಸ್ಕೂಟರ್ ಮೇಲೆ ಹೋಗುತ್ತಿರುವ ಗಂಡಹೆಂಡಿರು ಆಧುನಿಕ ದಾಂಪತ್ಯಕ್ಕೆ ಅದ್ಭುತ ಸಂಕೇತವಾಗಬಲ್ಲರು:

ಸ್ಕೂಟರು ನಡೆಸುವ ಗಂಡನ ಮುಖ ಪಯಣದ ದಿಕ್ಕಿಗೆ  
ಮನೆಯ ಕಡೆಗೆ!  
ಹಿಂದೆ ಕುಳಿತ ಹೆಂಡತಿಯ ಮುಖ ಬೀದಿಯ ದಿಕ್ಕಿಗೆ  
ಅಂಗಡಿಯ ಕಡೆಗೆ!  
ಹೀಗೆ ಪತಿಯ ಮುಖ ಅತ್ತ ಸತಿಯ ಮುಖ ಇತ್ತ!  
ಆದರೇನು ಒಮ್ಮುಖವಾದರೆ ಚಿತ್ತಸುಖವದುವೆ ಸದಾಶಿವಗುರು

ಇಲ್ಲಿನ ಮಾತುಗಳು ಒಡೆಯುವುದಕ್ಕೂ ಸಂಕೇತ, ಕೂಡುವುದಕ್ಕೂ ಸಂಕೇತ. ಎರಡೇ ಸಾಲುಗಳಲ್ಲಿ ಭಾರತ ದೇಶದ ಸ್ವಾತಂತ್ರ್ಯೋತ್ತರ ಪರಿಸ್ಥಿತಿಯನ್ನು ವರ್ಣಿಸಿರುವ ರೀತಿ:

ನಮ್ಮ ದೇಶಕ್ಕೆ ಸ್ವಾತಂತ್ರ್ಯದ ಜತೆಗೆ ಸ್ವೈರ ಬಂತು  
ಮಗುವಿಗೆ ಮಾತಿನ ಜತೆಗೆ ಉಗ್ಗು ಬಂದಂತೆ ಸದಾಶಿವಗುರು

ಬದುಕಿನ ಹೊಣೆಗಾರಿಕೆಯನ್ನು ಆತ್ಮವಿಶ್ವಾಸವನ್ನು ಹೇಳುವ ಹೊಸ ವಿಧಾನ:

ಬ್ರೇಕಿಲ್ಲದ ಬೆಲ್ಲಿಲ್ಲದ ಲೈಟಿಲ್ಲದ ಲೈಸೆನ್ಸಿಲ್ಲದ ಸೈಕಲ್ಲನು ಮೆಟ್ಟೆಂದೆ
ಟಾರಿಲ್ಲದ ಕಲ್ಲಿಲ್ಲದ ಈ ಹೊಳ್ಳದೆ ಈ ಕೊಳ್ಳದೆ ನಡೆಯೆಂದೆ
ಆದರೂ ನಾನೆದೆಗೆಡದೆಯೆ ಎಡೆಬಿಡದೆಯೆ ಪೆಡಲೊತ್ತುವೆ
ಮುಂದಾಗುವೆ ಗುರಿಮುಟ್ಟುವೆ ಸದಾಶಿವಗುರು

ಒಂದು ಪಂಕ್ತಿಯಿಂದ ಹಿಡಿದು ಮುಕ್ಕಾಲು ಪುಟದವರೆಗೆ ಸಾಮಾನ್ಯವಾಗಿ ಇವರ ವಚನಗಳ ವ್ಯಾಪ್ತಿ. ಅವುಗಳ ರಚನಾವಿನ್ಯಾಸ ಎಲ್ಲ ವಿವರಗಳಲ್ಲಿಯೂ ಸಂಪೂರ್ಣವಾಗಿ ಪ್ರಾಚೀನದ ಶ್ರೇಷ್ಠ ವಚನಗಳನ್ನು ನೆನಪಿಗೆ ತರುತ್ತವೆ. ರೂಪಾಂಶದ ದೃಷ್ಟಿಯಿಂದ ಎಷ್ಟೋ ಸಂದರ್ಭಗಳಲ್ಲಿ ಈ ವಚನಗಳನ್ನು ಹಳೆಯ ವಚನಗಳಿಂದ ಬೇರ್ಪಡಿಸುವುದು ಕೂಡ ಸಾಧ್ಯವಾಗುವುದಿಲ್ಲ. ಭಟ್ಟರ ಪ್ರಾಸಪ್ರಯೋಗಗಳು ವಿಚಿತ್ರ ರೀತಿಯಲ್ಲಿ ಪರಿಣಾಮವನ್ನುಂಟುಮಾಡುತ್ತವೆ. ಪರಿಚಿತ ಪ್ರಸಂಗಗಳಿಗೆ, ಮಾತುಗಳಿಗೆ ಭಟ್ಟರು ತರುವ ಅನಿರೀಕ್ಷಿತ ತಿರುವಿನಿಂದಲೆ ಒಂದು ಸ್ವಾರಸ್ಯ ಉಂಟಾಗುತ್ತದೆ. ಹಳೆಯ ಗಾದೆಯ ಮಾತುಗಳಿಗೆ ಅವರು ವಿಲಕ್ಷಣ ಪ್ರತಿಕ್ರಿಯೆಯನ್ನೊದಗಿಸುತ್ತಾರೆ. ಪದಗಳಲ್ಲಿ ತೀರ ಹೊಸ ಅರ್ಥವನ್ನು ಅವರು ಒಮ್ಮೊಮ್ಮೆ ಹೊಮ್ಮಿಸಬಲ್ಲರು. ಆತ್ಮವಿಮರ್ಶೆ ಈ ವಚನಗಳಲ್ಲಿ ತಾನೇ ತಾನಾಗಿ ತುಂಬಿಕೊಂಡಿದೆ. ಒಟ್ಟಿನಲ್ಲಿ ಆಧುನಿಕ ವಚನಸಾಹಿತ್ಯದ ಬೆಳಸು ಆಶಾದಾಯಕವಾಗಿದೆ ಎನ್ನಬಹುದು. ಇಂದು ವಚನ ಸಾಹಿತ್ಯ ಸಾಕಷ್ಟು ಹೊಸ ವಿಚಾರಗಳನ್ನು ತೆಗೆದುಕೊಂಡು ಬೆಳೆಯುತ್ತಿದೆ. ಮಾತೆ ಮಹಾದೇವಿಯವರಿಂದ ಹಿಡಿದು ಹಲವು ಹತ್ತು ಕವಿಗಳು ಕವಯಿತ್ರಿಯರು ಈ ಕ್ಷೇತ್ರದಲ್ಲಿ ಕೆಲಸಮಾಡುತ್ತಿದ್ದಾರೆ. *

**ಕನ್ನಡದಲ್ಲಿ ವಿಚಾರ ಸಾಹಿತ್ಯ :** ವಿಚಾರ ಸಾಹಿತ್ಯವೆಂದು ಕರೆಯಬಹುದಾದ ಚರ್ಚೆ, ಶಾಸ್ತ್ರ, ಮೀಮಾಂಸೆಯ ಒಂದು ಸಾಹಿತ್ಯ ಪ್ರಕಾರ ಕನ್ನಡದಲ್ಲಿ ಬಹಳ ಹಿಂದಿನಿಂದಲೂ ಸಮೃದ್ಧವಾಗಿ ಬೆಳೆದುಬಂದಿದೆ. ಆದರೆ ಶುದ್ಧ ವೈಚಾರಿಕ ಕೃತಿಗಳು ಹೆಚ್ಚಾಗಿ ಕಾಣಿಸಿಕೊಳ್ಳತೊಡಗಿದ್ದು ಮಾತ್ರ 20ನೆಯ ಶತಮಾನದಲ್ಲಿ. ಶಾಸನಗಳಲ್ಲೂ ವೈಚಾರಿಕ ಅಂಶಗಳು ಕಂಡುಬರುತ್ತವೆಯಾದರೂ ಅವು ಸಾಹಿತ್ಯ ಪ್ರಕಾರಕ್ಕೆ ಹೆಚ್ಚಾಗಿ ಸೇರುವುದಿಲ್ಲ. 10-11ನೆಯ ಶತಮಾನದವರೆಗೆ ಜೈನಸಾಹಿತ್ಯ ತನ್ನ ದಾರ್ಶನಿಕ ರಂಗದಲ್ಲಿಯೂ ವಿಕಾಸಗೊಂಡಿತ್ತು. ಅಂದಿನ ಸಾಹಿತ್ಯದಲ್ಲಿ ಜ್ಞಾನ ಮತ್ತು ಭಾವ (ರಸ) ಎಂಬ ಎರಡು ಪ್ರಕಾರಗಳನ್ನು ಕಲ್ಪಿಸಿದರೆ ಜ್ಞಾನಸಾಹಿತ್ಯದ ಅಂಗವಾಗಿ ವ್ಯಾಕರಣ, ಛಂದಸ್ಸು, ಕಾವ್ಯರೀತಿ ಲಕ್ಷಣಾದಿಗಳಷ್ಟಕ್ಕೆ ಮಾತ್ರ ಕನ್ನಡ ವಿಚಾರ ಸಾಹಿತ್ಯ ಸೀಮಿತವಾಗಿತ್ತು. ಇದಕ್ಕೆ ಕವಿರಾಜಮಾರ್ಗ ಸಾಕ್ಷಿ. ಅನಂತರ ಬಂದ ಕೇಶಿರಾಜನ ಶಬ್ದಮಣಿದರ್ಪಣ, ಭಟ್ಟಾಕಳಂಕನ ಶಬ್ದಾನುಶಾಸನ ಅಲ್ಲದೆ ಆಯುರ್ವೇದ, ಜ್ಯೋತಿಷ ಮುಂತಾದವುಗಳನ್ನು ಕುರಿತ ಗ್ರಂಥಗಳು ಆ ಯುಗದ ವೈಚಾರಿಕ ವಾಙ್ಮಯದ ಉದಾಹರಣೆಗಳು (ನೋಡಿ-ಕನ್ನಡದಲ್ಲಿ ಶಾಸ್ತ್ರ ಸಾಹಿತ್ಯ). ಅನಂತರ 12ನೆಯ ಶತಮಾನದಲ್ಲಿ ವೀರಶೈವ ಸಾಹಿತ್ಯಧಾರೆ ಹರಿಯತೊಡಗಿತ್ತು. ಅಂದಿನ ವಿಚಾರಸರಣಿ ಅನಿವಾರ್ಯವಾಗಿ ಮತೀಯ ಸಂಪ್ರದಾಯದ ಹಿನ್ನೆಲೆಯಲ್ಲಿ ಮುಂದುವರಿದರೂ ಸ್ವತಂತ್ರ ವಿಚಾರಗಳು, ಆಲೋಚನೆಗಳ ಮಥನಕ್ರಿಯೆ ನಡೆಯಿತು. ವಚನಸಾಹಿತ್ಯ ಭಕ್ತಿ ಜ್ಞಾನ ವೈರಾಗ್ಯ ಶರಣಾರ್ಥಿ ಅನುಭಾವ ನೀತಿ ಧರ್ಮಗಳ ಪ್ರಚಾರ ಪುರಸ್ಕಾರಗಳ ಧ್ವನಿಯಾಯಿತು.

ಅಂದಿನಿಂದ ಇಂದಿನವರೆಗೆ ಬಹುಮುಖವಾಗಿ ಹರಿದುಬಂದ ಕನ್ನಡ ಸಾಹಿತ್ಯವಾಹಿನಿಯಲ್ಲಿ ಒಟ್ಟಾರೆ ವಿಚಾರ ಸಾಹಿತ್ಯದ ಮೊತ್ತ ಕಡಿಮೆಯೇ. ವಿಚಾರ ಸಾಹಿತ್ಯದ ಪ್ರಧಾನ ಕ್ಷೇತ್ರಗಳೆಂದರೆ ಶಾಲಾಕಾಲೇಜುಗಳ ಪಠ್ಯಪುಸ್ತಕಗಳ ಹಾಗೂ ಪ್ರಾಧ್ಯಾಪಕರ ಲೇಖನಪ್ರಪಂಚ ಮತ್ತು ವಿಶ್ವವಿದ್ಯಾಲಯಗಳ ಪ್ರಚಾರೋಪನ್ಯಾಸಗಳ ವ್ಯಾಸಂಗ ವಿಸ್ತರಣೆಯ ಫಲವಾದ ಜನಪ್ರಿಯ ಶಾಸ್ತ್ರೀಯ ಗ್ರಂಥ ನಿರ್ಮಿತಿ. ಕರ್ನಾಟಕದ ಬಹುಪಾಲು ವಿಶ್ವವಿದ್ಯಾಲಯಗಳು ವಿಚಾರ ಸಾಹಿತ್ಯ ಕೃತಿಗಳನ್ನು ಪ್ರಕಟಿಸಿವೆ. ಇಲ್ಲಿ ಮೌಲಿಕ ಸಂಶೋಧನೆ ಇದ್ದರೂ ಅದರ ಪರಿಮಾಣ ಕಡಿಮೆ. ಸಂಗ್ರಹ ಸಂಪಾದನೆಗಳೇ ಹೆಚ್ಚು. ಒಂದು ಮಾತು ನಿಜ, ಮೂಲಭೂತವಾದ ಶಾಸ್ತ್ರವಿಷಯಗಳನ್ನು ಶುದ್ಧ ಕನ್ನಡದ ಮೂಲಕ ಜನಸಾಮಾನ್ಯರಿಗೂ ಒದಗಿಸಿದ ಕೀರ್ತಿ ಈ ಪ್ರಕಟನೆಗಳಿಗೆ ಸಲ್ಲುತ್ತದೆ. ಇದರಿಂದ ಜನತೆಯಲ್ಲಿ ವೈಚಾರಿಕ ಮನೋಧರ್ಮ ಅಂಕುರಿಸಿ ಬೆಳೆಯಲು ಆಸ್ಪದವಾಯಿತು ಎನ್ನಬಹುದು.

ಆಧುನಿಕ ಯುಗದ ಆರಂಭದ ದಶಕಗಳಲ್ಲಿ ವಚನಶಾಸ್ತ್ರದ ಮೇಲೆ ಬೆಳಕು ಚೆಲ್ಲಿದವರು ಫ.ಗು.ಹಳಕಟ್ಟಿ. ಉತ್ತಂಗಿ ಚನ್ನಪ್ಪನವರು ಸರ್ವಜ್ಞನನ್ನು ಬೆಳಕಿನಲ್ಲಿ ತಂದಿರಿಸಿದರೆ ಆರ್ಯದ್ರಾವಿಡ ಕಂದಮಿಳು ಜನಾಂಗದ ಮೂಲ ಮತ್ತು ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆಯನ್ನು ಕುರಿತು ಅಗಾಧ ಪರಿಶ್ರಮದಿಂದ ಸಂಶೋಧನೆ ಸಾಗಿಸಿದವರು ಶಂ.ಬಾ.ಜೋಶಿ. ಶೂನ್ಯಸಂಪಾದನೆಯನ್ನು ಕುರಿತು ಗ್ರಂಥ ರಚಿಸಿರುವ ಎಚ್.ತಿಪ್ಪೇರುದ್ರಸ್ವಾಮಿ, ಛಂದೋವಿಕಾಸವನ್ನು ಬರೆದ ಡಿ.ಎಸ್.ಕರ್ಕಿ ಇಂಥ ಮಹನೀಯರನ್ನು ಇಲ್ಲಿ ಸ್ಮರಿಸಬೇಕು. ಹಾಗೆಯೇ ಒಂದು ತಲೆಮಾರಿನ ಇತಿಹಾಸ ಪ್ರಜ್ಞೆಯನ್ನು, ಸ್ವಾಭಿಮಾನವನ್ನು ಬಡಿದೆಬ್ಬಿಸಿದ ಕರ್ನಾಟಕ ಗತವೈಭವದ ಲೇಖಕರಾದ ಆಲೂರವೆಂಕಟರಾಯರು ಕನ್ನಡದ ಕುಲಪುರೋಹಿತರೆಂದು ಹೆಸರಾದವರು. ಪ್ರಾಚೀನ ಕವಿಗಳ ಕಾಲನಿರ್ಣಯದಲ್ಲಿ ಕವಿ ಗೋವಿಂದ ಪೈಗಳು ಧನ್ಯಸೇವೆ ಸಲ್ಲಿಸಿದ್ದಾರೆ. ಇತಿಹಾಸ ಸಂಶೋಧನೆಯಲ್ಲಿ ಪಾಂಡುರಂಗರಾವ್ ದೇಸಾಯಿ, ತಿರುಮಲೆ ತಾತಾಚಾರ್ಯ ಶರ್ಮ ಮೊದಲಾದವರು ಗಣ್ಯ ಕೆಲಸ ಮಾಡಿದ್ದಾರೆ.

ಭಾವ(ರಸ)ಸಾಹಿತ್ಯವಿಮರ್ಶನಕ್ಷೇತ್ರದಲ್ಲಿ ತೀ.ನಂ.ಶ್ರೀಕಂಠಯ್ಯನವರ ಭಾರತೀಯ ಕಾವ್ಯಮೀಮಾಂಸೆ, ದ.ರಾ.ಬೇಂದ್ರೆಯವರ ಸಾಹಿತ್ಯ ಮತ್ತು ವಿಮರ್ಶೆ, ಸಾಹಿತ್ಯದ ವಿರಾಟ್ ಸ್ವರೂಪ, ಗೋಪಾಲಕೃಷ್ಣ ಅಡಿಗರ ಮಣ್ಣಿನ ವಾಸನೆ, ಬಿ.ಎಚ್.ಶ್ರೀಧರರ ಕಾವ್ಯಸೂತ್ರ (ಅನಂತರ ಜ್ಞಾನಸೂತ್ರ), ರಂ.ಶ್ರೀ.ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆ, ಶಿವರುದ್ರಪ್ಪನವರ ವಿಮರ್ಶೆಯ ಪೂರ್ವ ಪಶ್ಚಿಮ ಹಾಗೂ ಸೌಂದರ್ಯಸಮೀಕ್ಷೆ, ಕೀರ್ತಿನಾಥ ಕುರ್ತಕೋಟಿಯವರ ಕನ್ನಡ ಸಾಹಿತ್ಯ ಪ್ರಕಾರಗಳನ್ನು ವಿಮರ್ಶಿಸುವ ಇತಿಹಾಸ ಲೇಖನಗಳು - ಇವೇ ಕೆಲವು ಈ ಕ್ಷೇತ್ರದಲ್ಲಿಯ ವೈಚಾರಿಕ ಪ್ರಗತಿಯ ಮೈಲುಗಲ್ಲುಗಳು. ಶಿವರಾಮ ಕಾರಂತರ ವಿಚಾರ ಸಾಹಿತ್ಯ ನಿರ್ಮಾಣವೆಂಬ ಪುಸ್ತಕ ಮಹತ್ತ್ವಪೂರ್ಣವಾಗಿದೆ. ಅಷ್ಟೇ ಮಹತ್ತ್ವಪೂರ್ಣವಾದ ಇನ್ನೊಂದು ಕೃತಿ ಬಿಡಿ ಬರೆಹಗಳು. ಅದೇ ರೀತಿ ವಿ.ಸೀತಾರಾಮಯ್ಯನವರ ಸಾಹಿತ್ಯ ಸಂಪ್ರದಾಯ ಮತ್ತು ಹೊಸ ಮಾರ್ಗ, ಸತ್ಯ ಮತ್ತು ಮೌಲ್ಯ, ಮುಗಳಿಯವರ ಸಾಹಿತ್ಯ ವಿಮರ್ಶೆಯ ಮಾರ್ಗದರ್ಶಕ ಸೂತ್ರಗಳು, ಪ್ರಾಚೀನ ಸಾಹಿತ್ಯದ ಕೆಲವು ಪ್ರಕಾರಗಳು ಮೊದಲಾದುವು ವೈಶಿಷ್ಟ್ಯಪೂರ್ಣವಾಗಿವೆ.

ಡಿ.ವಿ.ಜಿ. ಅವರ ಜೀವನ ಸೌಂದರ್ಯ ಮತ್ತು ಸಾಹಿತ್ಯ ಕನ್ನಡದ ವೈಚಾರಿಕ ಪ್ರಜ್ಞೆಗೆ ಒಂದು ನಿದರ್ಶನವಾಗಿದೆ. ಎಸ್.ವಿ.ರಂಗಣ್ಣ ನವರ ರುಚಿ, ಶ್ರೀರಂಗರ ನಗೆ, ಸುಂಕಾಪುರ ಅವರ ಹೆಬ್ಬೊತ್ತಗೆ ಕನ್ನಡ ಸಾಹಿತ್ಯದಲ್ಲಿ ಹಾಸ್ಯ, ಅ.ನ.ಕೃ. ಅವರ ಸಾಹಿತ್ಯ ಮತ್ತು ಕಾಮ ಪ್ರಚೋದನೆ, ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ, ವಿ.ಸೀ.ಅವರ ಹಣಪ್ರಪಂಚ, ಶ್ರೀರಂಗರ ಶಾರದೆಯ ಸಂಸಾರ, ರಂಗನಾಥ ದಿವಾಕರರ ಗಾಂಧೀವಾದ, ಗೌರೀಶ ಕಾಯ್ಕಿಣಿ ಅವರ ಮಾರ್ಕ್ಸ್‌ವಾದ, ವಿಚಾರವಾದ, ಎಸ್.ಎಲ್. ಭೈರಪ್ಪನವರ ಸತ್ಯ ಮತ್ತು ಸೌಂದರ್ಯ, ಹಾಲಪ್ಪನವರ ರಾಜಕಾರಣ ಮೂಲಸೂತ್ರಗಳು, ಎನ್.ಆರ್. ರಾವ್‌ರವರ ರಾಜಕೀಯ ಜಿಜ್ಞಾಸೆ, ಅಡಿಗರ ಲೋಹಿಯಾ ಇತಿಹಾಸ ಚಕ್ರ (ಅನುವಾದ), ವಿಚಾರಪಥ, ಕನ್ನಡ ಅಭಿಮಾನ ಮತ್ತು ಇತರ ಲೇಖನಗಳು ಇವೆಲ್ಲ ತತ್ತ್ವವಿವೇಚನೆಯ ಗಮನಾರ್ಹ ಗ್ರಂಥಗಳೆಂದು ಗುರುತಿಸಬಹುದು.

ಮತೀಯ ಸಿದ್ಧಾಂತಗಳನ್ನು ಕುರಿತು ಅನೇಕ ಗ್ರಂಥಗಳು ಪ್ರಕಟವಾಗಿವೆ. ಆದರೆ ಅವು ಹೆಚ್ಚಾಗಿ ವಿವರಣಾತ್ಮಕಗಳೇ ಹೊರತು ವಿಶ್ಲೇಷಣೆ, ತೌಲನಿಕ ವಿಮರ್ಶೆ ಮಾಡುವಂಥವಲ್ಲ. ಜೈನಮತ ತತ್ತ್ವಗಳ ಬಗೆಗೆ ಮಿರ್ಜಿ ಅಣ್ಣಾರಾಯರ ಗ್ರಂಥ ಜೈನಧರ್ಮ ಉಲ್ಲೇಖನೀಯವಾಗಿದೆ. ಹಾಗೆಯೇ ಸಂ.ಶಿ.ಭೂಸನೂರಮಠ ಅವರ ಶೂನ್ಯಸಂಪಾದನೆಯ ಪರಾಮರ್ಶೆ ಹೆಸರಿಸಬೇಕಾದ ಪ್ರಮುಖ ಗ್ರಂಥ. ನಿಜವಾದ ವಿಚಾರ ಸಾಹಿತ್ಯವೆಂಬ ದೃಷ್ಟಿಯಿಂದ ಸ್ವಾನುಭವ ಸ್ವೋಪಜ್ಞತೆಯಿಂದ ಬದುಕಿನ ಮರ್ಮವನ್ನರಿತ ತನ್ನ ವಿಚಾರಧಾರೆಯನ್ನು ಕಾರಂತರು ಬಾಳ್ವೆಯ ಬೆಳಕು, ಡಿ.ವಿ.ಜಿ.ಯವರು ಬಾಳಿಗೊಂದು ನಂಬಿಕೆ ಈ ಗ್ರಂಥಗಳಲ್ಲಿ ಪ್ರಕಟಿಸಿದ್ದಾರೆ. ಆದರೂ ಇಂಥ ಬರೆಹದ ಕೊರತೆ ಕನ್ನಡದಲ್ಲಿ ಬಹಳವಾಗಿದೆ.

ಪ್ರಾಚೀನ ಕಾವ್ಯಕೃತಿಗಳ ಪುನರ್ವಿಮರ್ಶೆ, ಮೌಲ್ಯಮಾಪನಗಳು ಕನ್ನಡದಲ್ಲಿ ಸಾಕಷ್ಟು ಆಗಿವೆ. ಸಿ.ಕೆ.ವೆಂಕಟರಾಮಯ್ಯನವರು ಭಾಸನ

ನಾಟಕಗಳ ಬಗೆಗೂ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಆದಿಕವಿ ವಾಲ್ಮೀಕಿ ಮತ್ತು ಮಹಾಭಾರತದ ಬಗೆಗೂ ಎ.ಆರ್.ಕೃಷ್ಣಶಾಸ್ತ್ರಿಗಳು ಸಂಸ್ಕೃತ ನಾಟಕಗಳ ಬಗೆಗೂ ಎಸ್.ವಿ.ರಂಗಣ್ಣನವರು ಕಾಳಿದಾಸ ಮತ್ತು ಪಾಶ್ಚಾತ್ಯ ಗಂಭೀರ ನಾಟಕಗಳ ಬಗೆಗೂ ವಿ.ಸೀ.ಯವರು ಕರ್ನಾಟಕ ಕಾದಂಬರಿಯ ಬಗೆಗೂ ಮಹತ್ವದ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಶ್ರೀರಂಗರ ಗೀತಾಗಾಂಭೀರ್ಯ, ಡಿ.ವಿ.ಜಿಯವರ ಭಗವದ್ಗೀತಾ ತಾತ್ಪರ್ಯ ಅಥವಾ ಜೀವನಧರ್ಮಯೋಗ, ಬೇಂದ್ರೆಯವರ ಕನ್ನಡ ಸಾಹಿತ್ಯದ ನಾಲ್ಕು ನಾಯಕರತ್ನಗಳು, ಶಂ.ಬಾ.ಜೋಶಿ ಅವರ ಕರ್ಣನ ಮೂರು ಚಿತ್ರಗಳು, ಕುವೆಂಪು ಅವರ ತಪೋನಂದನ, ದ್ರೌಪದಿಯ ಶ್ರೀಮುಡಿ, ರಸೋ ವೈಸಃ ಕಾವ್ಯ ವಿಹಾರ, ಮುಗಳಿಯವರ ತವನಿಧಿ, ದೇಜಗೌ ಅವರ ಕೆಲವು ಕೃತಿಗಳನ್ನು ಇಲ್ಲಿ ಎತ್ತಿಹೇಳಬಹುದು. ಇದೇ ಜಾಡಿನಲ್ಲಿ ಆರ್.ಆರ್.ದಿವಾಕರರ ವಚನಶಾಸ್ತ್ರರಹಸ್ಯ, ಉಪನಿಷದ್ರಹಸ್ಯ, ಎಂ.ಆರ್.ಶ್ರೀನಿವಾಸಮೂರ್ತಿಯವರ ವಚನಧರ್ಮಸಾರ, ಹಲಸಂಗಿ ಚನ್ನಮಲ್ಲಪ್ಪನವರ ಕಾಳರಾತ್ರಿ ಮತ್ತು ಅರವಿಂದರ ಪೂರ್ಣಯೋಗದ ಪರಿಚಯ ಮಾಡಿಕೊಡುವ ಅನುಭಾವೀ ಬರೆಹಗಳೂ ವಿಚಾರಣೀಯವಾಗಿವೆ. ಹಾಗೆಯೇ ಬೆಂಗಳೂರಿನ ಕನ್ನಡ ಅಧ್ಯಯನ ಕೇಂದ್ರ ಪ್ರಕಟಿಸಿರುವ ಪಂಪ ಒಂದು ಅಧ್ಯಯನ, ಮೂರು ಸಂಪುಟಗಳ ವಿಚಾರಸಾಹಿತ್ಯ, ಎಂ.ಎಂ.ಕಲಬುರ್ಗಿಯವರ ಕವಿರಾಜಮಾರ್ಗ ಕಾಲಪರಿಸರದ ಕನ್ನಡ ಸಾಹಿತ್ಯ, 'ಮಾರ್ಗ' ಸಂಪುಟಗಳು, ಎಸ್.ವಿ.ರಂಗಣ್ಣನವರ ಹಳಗನ್ನಡ ಕವಿಗಳನ್ನು ಕುರಿತ 'ಶೈಲಿ' ಮುಂತಾದ ಬರೆಹಗಳು ಉಲ್ಲೇಖನೀಯವಾದವು.

ಪ್ರಗತಿಶೀಲ ಸಾಹಿತ್ಯದ ಚಳವಳಿಯಿಂದಾಗಿ ಅ.ನ.ಕೃ., ತ.ರಾ.ಸು., ಬಸವರಾಜ ಕಟ್ಟೀಮನಿ, ನಿರಂಜನ ಮುಂತಾದವರು ತಮ್ಮ ಲೇಖನಗಳಲ್ಲಿ ಆರ್ಥಿಕ ರಾಜಕೀಯ ಪ್ರಜ್ಞೆಯ ವೈಚಾರಿಕತೆಯನ್ನು ತುಂಬಿದರು. ಒಂದನೆಯ ಮಹಾಯುದ್ಧದ ಅನಂತರ ಹೊಸ ಸಾಹಿತ್ಯ ಹುಟ್ಟಿತು. ಎರಡನೆಯ ಮಹಾಯುದ್ಧದ ಅನಂತರ ಹೊಸ ವಿಮರ್ಶೆ ಹುಟ್ಟಿಬಂದಿತು. ಮೂವತ್ತರ ದಶಕದಲ್ಲಿ ಮಾರ್ಕ್ಸ್‌ವಾದಿ ದೃಷ್ಟಿ ತೆರೆದರೆ 50ರ ದಶಕದಲ್ಲಿ ಮನೋವೈಜ್ಞಾನಿಕ ದೃಷ್ಟಿ ಬೆಳಗಿತು. ಸಾಂಪ್ರದಾಯಿಕ ವಿಚಾರವನ್ನು ಆಧುನಿಕ ಭಾಷೆಯಲ್ಲಿ ದೇವುಡು ನರಸಿಂಹಶಾಸ್ತ್ರಿಗಳಂಥವರು ಯಶಸ್ವಿಯಾಗಿ ಕೊಡಲು ಯತ್ನಿಸಿದರು. ಗಾಂಧೀವಾದವನ್ನು ಸಿದ್ದವನಹಳ್ಳಿ ಕೃಷ್ಣಶರ್ಮರು ತಮ್ಮದೇ ಆದ ಲಲಿತ ಮಧುರ ಶೈಲಿಯಲ್ಲಿ ಕನ್ನಡಕ್ಕೆ ನೀಡಿದರು. ಹಾಗೆಯೇ ರವೀಂದ್ರನಾಥ ಠಾಕೂರ್ ಹಾಗೂ ಸರೋಜಿನಿ ನಾಯ್ಡು ಅವರನ್ನು ಕುರಿತು ಎಸ್.ಎಸ್.ಒಡೆಯರು ಎರಡು ಸಮಾಲೋಚನಾತ್ಮಕ ಪುಸ್ತಕಗಳನ್ನು ನೀಡಿದ್ದಾರೆ. ಚನ್ನವೀರಕಣವಿಯವರೂ ಸಾಹಿತ್ಯಚಿಂತನೆಯನ್ನು ಚಿಂತನೀಯವಾಗಿ ಮಾಡಿದ್ದಾರೆ. ಅದೇ ರೀತಿ ಧಾರವಾಡಕರ, ಎನ್ಕೆ, ಆರ್.ಕೆ.ಕುಲಕರ್ಣಿ, ಗೊರೂರು, ಗದಗಕರ ಮೊದಲಾದವರ ಹರಟೆಗಳಲ್ಲಿಯೂ ವೈಚಾರಿಕ ಅಂಶ ಒಡೆದೆದ್ದು ಕಾಣಿಸುವುದೂ ಇದೆ.

ಅನುವಾದ ರಂಗದಲ್ಲಿ ಅರವಿಂದರ ಭಾರತೀಯ ನವಜನ್ಮವನ್ನು ಬೇಂದ್ರೆಯವರೂ ಭಾರತೀಯ ರಾಜಧರ್ಮ ಮತ್ತು ಜಾನ್ ಸ್ಟೂವರ್ಟ್ ಮಿಲ್ಲನ ಲಿಬರ್ಟಿಯನ್ನು (ಸ್ವಾತಂತ್ರ್ಯ) ಎನ್.ಸಿ.ಆರ್. ಮತ್ತು ಬಿ.ಎಚ್.ಶ್ರೀಧರರೂ ಧ್ವನ್ಯಾಲೋಕ ಮತ್ತು ಕಾವ್ಯಪ್ರಕಾಶಾದಿಗಳನ್ನು ಕೆ.ಕೃಷ್ಣಮೂರ್ತಿಯವರೂ ದಶರೂಪಕವನ್ನು ಕೆ.ವಿ.ಸುಬ್ಬಣ್ಣನವರೂ ಆಡ್ಲರನ ವ್ಯಕ್ತಿಮನೋವಿಜ್ಞಾನವನ್ನು (ಬಾಳಿನ ಗುಟ್ಟು) ಗೌರೀಶ ಕಾಯ್ಕಿಣಿಯವರೂ ಕನ್ನಡದಲ್ಲಿ ನೀಡಿದ್ದಾರೆ. ರಘುನಾಥಬಿಡೆ ಅವರ ವಾಲ್ಮೀಕಿ ರಾಮಾಯಣದಲ್ಲಿ ಶಾಪ ಮತ್ತು ವರ ಮರಾಠಿಯಿಂದ ಕನ್ನಡಕ್ಕೆ ಅನುವಾದಗೊಂಡಿವೆ.

ಮನೋವಿಜ್ಞಾನ ರಂಗದಲ್ಲಿ ಕುಪ್ಪುಸ್ವಾಮಿ ಅವರ ಮನೋವಿಜ್ಞಾನ, ಹನುಮಂತರಾಯರ ಮಾನಸದರ್ಪಣ, ಸಿ.ಆರ್.ಚಂದ್ರಶೇಖರ ಅವರ ನಿದ್ರೆ ಮತ್ತು ಕನಸುಗಳು, ಕೆ.ವಾರಿಜಾ ಅವರ ನಿಮ್ಮ ಮನಸ್ಸು, ಗೌರೀಶ ಕಾಯ್ಕಿಣಿಯವರ ಮನೋವಿಜ್ಞಾನದ ರೂಪರೇಖೆಗಳು, ಗಂಡು, ಹೆಣ್ಣು ಮತ್ತು ಪ್ರೀತಿ, ವಿಚಾರವಾದ, ಎಂ.ಶಿವರಾಮ್ ಅವರ ಮನಮಂಥನ, ಮೀನಗುಂಡಿ ಸುಬ್ರಹ್ಮಣ್ಯಂ ಅವರ ಮನಸ್ಸು ಇಲ್ಲದ ಮಾರ್ಗ, ಈ ವರ್ತನೆಗಳು ನಿಮ್ಮಲ್ಲಿ ಎಷ್ಟಿವೆ, ವಿಚಾರವಾದಿ ಕೋವೂರರ ದೇವರು, ದೆವ್ವ ವಿಜ್ಞಾನ - ಇವೇ ಮುಂತಾದವನ್ನು ಹೆಸರಿಸಬಹುದು.

ವಿಜ್ಞಾನರಂಗದಲ್ಲೂ ಅನೇಕ ಗ್ರಂಥಗಳು ಪ್ರಕಟವಾಗಿವೆ. ಆದರೆ ವಿಜ್ಞಾನವನ್ನು ಕುರಿತು ಸಮುನ್ನತ ವೈಚಾರಿಕ ಕಾಣಿಕೆಯನ್ನು ದೊಡ್ಡ ಮೊತ್ತದಲ್ಲಿ ತಮ್ಮ ವಿಜ್ಞಾನಕೋಶದ ಮೂರು ಸಂಪುಟಗಳಲ್ಲಿ ಸಲ್ಲಿಸಿದವರು ಶಿವರಾಮ ಕಾರಂತರು.

ಪುರಂದರದಾಸರ ಕನಕದಾಸರ ಚತುಶ್ಶತಮಾನೋತ್ಸವಗಳ ನಿಮಿತ್ತ ಉಭಯದಾಸರ ಭಕ್ತಿಕಾವ್ಯದ ಬಗೆಗೆ ಅನೇಕ ಲೇಖನಸಂಗ್ರಹಗಳ ಸುಗ್ಗಿಯೇ ಬೆಳೆದು ಬಂದಿತು. ಹಾಗೆಯೇ ಷೇಕ್ಸ್‌ಪಿಯರನ ಆರನೆಯ ಶತಮಾನೋತ್ಸವದ ನಿಮಿತ್ತ ಹೊಸ ದಿಲ್ಲಿಯಲ್ಲಿ ಕನ್ನಡ ಭಾರತೀ ಸಂಸ್ಥೆಯವರು ಒಂದು ಉತ್ಕೃಷ್ಟ ಪರಿಸಂವಾದಾತ್ಮಕ ಗ್ರಂಥ'ವನ್ನು (ಷೇಕ್ಸ್‌ಪಿಯರನಿಗೆ ನಮಸ್ಕಾರ) ಪ್ರಕಟಿಸಿದ್ದಾರೆ. ಎ.ಎನ್.ಮೂರ್ತಿರಾಯರು ಷೇಕ್ಸ್‌ಪಿಯರನ ಕೃತಿಗಳನ್ನು ಕುರಿತು ಒಂದು ಪರಿಚಯ ಗ್ರಂಥ'ವನ್ನು ಬರೆದಿದ್ದಾರೆ. ಮುಂದೆ ಗಾಂಧೀ ಶತಾಬ್ದಿಯ ನಿಮಿತ್ತವೂ ಗಾಂಧೀತತ್ತ್ವ ವಿಚಾರಗಳ ಅನೇಕ ಲೇಖನ-ಉಪನ್ಯಾಸ ಸಂಗ್ರಹಗಳು ಬೆಳಕಿಗೆ ಬಂದಿವೆ. ಇದಲ್ಲದೆ ಎಚ್.ನರಸಿಂಹಯ್ಯನವರ ಆತ್ಮಕಥೆ ತೆರೆದ ಮನ, ಪಂಡಿತ ತಾರಾನಾಥರ ಧರ್ಮಸಂಭವ, ಸ.ಜ.ನಾಗಲೋಟಿಮಠ ಅವರ ಸತ್ತ ಮೇಲೆ ಸಮಾಜಸೇವೆ - ಇವೆಲ್ಲವನ್ನು ವಿಚಾರಸಾಹಿತ್ಯದಲ್ಲಿ ಉಲ್ಲೇಖಿಸಬಹುದು.

ಧಾರವಾಡದ ಮಿಂಚಿನಬಳ್ಳಿ ಪ್ರಕಾಶನ ಸಂಸ್ಥೆ ಬುರ್ಲಿ ಬಿಂದುಮಾಧವ ಅವರ ನೇತೃತ್ವದಲ್ಲಿ ಕಾಲುಶತಮಾನವನ್ನು ಮೀರಿ ಕೇವಲ ವಿಚಾರಸಾಹಿತ್ಯವನ್ನೆ ಪಂಥ ತೊಟ್ಟು ಪ್ರಕಟಿಸುತ್ತ ಬಂದಿರುವುದನ್ನು ಇಲ್ಲಿ ನೆನೆಯಲೇಬೇಕು. ಹಾಗೆಯೇ ಮೈಸೂರು ವಿಶ್ವವಿದ್ಯಾನಿಲಯದ ಪ್ರಬುದ್ಧ ಕರ್ಣಾಟಕ ಮತ್ತು ಅದರ ವಿಸ್ತರಣೆಗಳಾದ ವಿಜ್ಞಾನ ಕರ್ಣಾಟಕ ಮತ್ತು ಮಾನವಿಕ ಕರ್ಣಾಟಕ, ಕರ್ನಾಟಕ ವಿಶ್ವವಿದ್ಯಾಲಯದ ಕರ್ನಾಟಕ ಭಾರತಿ, ಬೆಂಗಳೂರು ವಿಶ್ವವಿದ್ಯಾಲಯದ ಸಾಧನೆ ಮುಂತಾದ ನಿಯತಕಾಲಿಕಗಳೂ ಕನ್ನಡದಲ್ಲಿರುವ ವೈಚಾರಿಕ ವಾಙ್ಮಯ ಪ್ರಕಾಶನಕ್ಕೆ ಆಧಾರವಾಗಿವೆ. ಹೊಸ ವಿಮರ್ಶೆಯ ಪ್ರತಿಕ್ರಿಯಾಮಾಲೆಯೆಂಬಂತೆ ಸಾಕ್ಷಿ, ಸಂಕ್ರಮಣ, ಮನ್ವಂತರ, ಪರಂಪರೆ ಇತ್ಯಾದಿ ನಿಯತಾನಿಯತ ಕಾಲಿಕಗಳು ಕೇವಲ ಸಾಹಿತ್ಯ ಚರ್ಚೆಗಾಗಿಯೇ ಮೀಸಲಾಗಿ ಹೊರಟಿದ್ದು ಶ್ಲಾಘನೀಯ ಸಾಹಸ.

ವಸ್ತುತಃ ವಿಚಾರಸಾಹಿತ್ಯ ವಿಸ್ತಾರವಾಗಿ ಬರಬೇಕಾದದ್ದು ಸಾಮಾಜಿಕ ವಿಚಾರ ಕ್ಷೇತ್ರದಲ್ಲಿ. ಇಂದು ಸ್ಥಿತ್ಯಂತರಗೊಳ್ಳುತ್ತಿರುವ ಸಾಮಾಜಿಕ ಜೀವನದ ಬಗೆಗೆ ಆರ್ಥಿಕ, ಮನೋವೈಜ್ಞಾನಿಕ, ಮಾನವವಂಶಶಾಸ್ತ್ರೀಯ, ಸಾಂಸ್ಕೃತಿಕ - ಹೀಗೆ ನೂರು ಮುಖವಾಗಿ ವಿಚಿಕಿತ್ಸೆ ನಡೆಯಬೇಕು. ನಾಗರಿಕನ ಅಸಹಾಯಕತೆ, ಏಕಾಂಗಿ ವ್ಯಕ್ತಿತ್ವ, ನಾಯಕತ್ವ, ಬಹುರಾಷ್ಟ್ರ ನಾಗರಿಕತ್ವ, ಬಹುಭಾಷಿಕ ರಾಷ್ಟ್ರೀಯತ್ವ, ಜಾತೀಯತೆ, ವಿಕಾಸಾಭಿವೃದ್ಧಿಯ ಸಾಂಸ್ಕೃತಿಕ ಫಲಿತಾಂಶ, ಪಕ್ಷಪದ್ಧತಿ, ಜನಾಭಿಪ್ರಾಯ ನಿರ್ಮಿತಿ, ಯುವಜನರ ಸಮಸ್ಯೆ-ಇಂಥ' ವಿವಿಧ ಯಕ್ಷಪ್ರಶ್ನೆಗಳನ್ನು ಪರಿಶೀಲಿಸಿ ಪರಿಷ್ಕರಿಸುವುದಿರಲಿ,ಆ ಕುರಿತು ಪ್ರಜ್ಞೆಯನ್ನು ಜಾಗ್ರತಗೊಳಿಸಲು ಪರಿಸಂವಾದಗಳನ್ನು ಆರಂಭಿಸಬಲ್ಲ ಸಾಹಿತ್ಯ ಗುಣದಲ್ಲಿಯೂ ಗಾತ್ರದಲ್ಲಿಯೂ ತುಸು ಬೆಳೆದುಬರಬೇಕು. ಇಂಥ' ಸಾಮಾಜಿಕ ವಿಚಾರದಲ್ಲಿ ಶಂ.ಬಾ.ಜೋಶಿಯವರ ಸಮಾಜದರ್ಶನದ ಅನಂತರ ಶಾಸ್ತ್ರೀಯ ವಿಚಿಕಿತ್ಸೆಗೆ ಕೈಹಾಕಿದ ಪುಸ್ತಕಗಳೆಂದರೆ ಎಚ್.ಎಂ.ಮರುಳಸಿದ್ದಯ್ಯನವರ ಸಮಾಜಕಾರ್ಯ ಮತ್ತು ಸಮಾಜ ಶಾಸ್ತ್ರದ ಕೆಲವು ಪಾಠಗಳು, ಎನ್.ಆರ್.ರಾವ್ ಅವರ ಜನಾಭಿಪ್ರಾಯ, ಪ್ರಚಲಿತ ಸಾರ್ವಜನಿಕ ಚರಿತ್ರೆಯನ್ನು ಕುರಿತ ಕಾಣಿಕೆಯೆಂದರೆ ಮಾಸ್ತಿ ವೆಂಕಟೇಶ ಅಯ್ಯಂಗಾರರ ಜೀವನ ಪತ್ರಿಕೆಯ ಸಂಪಾದಕೀಯಗಳ ಲೋಕಚರಿತವೆಂಬ ಸಂಕಲನ. ಈ ಮಾದರಿಯ ಬರೆಹ ಕನ್ನಡಕ್ಕೆ ಅಪೂರ್ವವೆನ್ನಬಹುದು. ಎ.ಎನ್.ಮೂರ್ತಿರಾಯರ ದೇವರು ಎಂಬ ಕೃತಿ ಇಲ್ಲಿ ಉಲ್ಲೇಖನೀಯ. ಕುವೆಂಪು ಅವರ ವಿಚಾರ ಕ್ರಾಂತಿಗೆ ಆಹ್ವಾನ ಎಂಬ ವೈಚಾರಿಕ ಲೇಖನಗಳನ್ನು ಮರೆಯುವಂತಿಲ್ಲ. ನಿರಂಕುಶಮತಿಗಳಾಗಿ, ಷಷ್ಟಿನಮನ, ಮನುಜಮತ ವಿಶ್ವಪಥ' ಮುಂತಾದ ಕೃತಿಗಳೂ ವಿಶೇಷವಾಗಿ ಇಲ್ಲಿ ಉಲ್ಲೇಖಾರ್ಹ. ಕುವೆಂಪು ಅವರ ದಾರ್ಶನಿಕ ಕಾವ್ಯಮೀಮಾಂಸೆ ಆ ಕ್ಷೇತ್ರದ ಒಂದು ಮಹತ್ವದ ಕೃತಿ, ಸ್ವೋಪಜ್ಞ ಚಿಂತನೆಯ ಫಲ, ಎಚ್.ತಿಪ್ಪೇರುದ್ರಸ್ವಾಮಿಯವರ 'ಕುವೆಂಪು ಅವರ ವೈಚಾರಿಕತೆ' ಎಂಬುದು ಆ ಕವಿಯ ವ್ಯಾಪಕ ಚಿಂತನೆಯ ಎಲ್ಲ ಮಗ್ಗುಲುಗಳ ದರ್ಶನ ಮಾಡಿಕೊಡಲು ಹವಣಿಸುವ ಕೃತಿಯಾಗಿದೆ.

ವಿಚಾರ ಸಾಹಿತ್ಯವೆಂಬ ಒಂದು ಪ್ರತ್ಯೇಕ ಪ್ರಕಾರದ ಕಕ್ಷೆಯೊಳಕ್ಕೆ ಎಂಥ ಕೃತಿಗಳು ಬರುವುವೆಂಬ ಜಿಜ್ಞಾಸೆ ಬಹಳ ಕಷ್ಟದ್ದು; ವೈಚಾರಿಕತೆ ಇಲ್ಲದ ಕೃತಿ ಇಲ್ಲವೇ ಇಲ್ಲವೆಂದು ಹೇಳಬೇಕು. ಸೃಜನಶೀಲ ಎಂಬ ಕೃತಿಯಲ್ಲೂ ಹಿನ್ನೆಲೆಯಲ್ಲಿ ವೈಚಾರಿಕತೆ ಇದ್ದೇ ಇರುತ್ತದೆ. ಆದರೆ ಅದು ಸುಪ್ತವಾಗಿ ಕಂಡೂ ಕಾಣದಂತೆ, ಹಾಲಿನಲ್ಲಿ ಸಕ್ಕರೆ ಬೆರೆತಂತೆ ವ್ಯಾಪಿಸಿರುತ್ತದೆ. ಕಾವ್ಯಮೀಮಾಂಸಕಾರರ ಪ್ರಕಾರ ಕಾವ್ಯದಲ್ಲಿ (ಸ್ಥೂಲವಾಗಿ ಎಲ್ಲ ಸೃಜನ ಸಾಹಿತ್ಯದಲ್ಲಿ) ಪ್ರತಿಭೆ ಮತ್ತು ಪ್ರಜ್ಞೆ - ಈ ಎರಡೂ ಅಂಶಗಳಿರುತ್ತವೆ. ಪ್ರತಿಭೆ ಹೃದಯಸಂಬಂಧಿಯಾದ್ದು, ಚಿತ್ತವೃತ್ತಿ ಪ್ರಧಾನವಾಗಿದ್ದಾಗ ಹೊಮ್ಮುವಂಥದ್ದು, ಪ್ರತಿಭೆ ಎಂದರೆ ಹೊಳಹು ಎನ್ನುತ್ತಾರೆ ತೀನಂಶ್ರೀ. ಪ್ರಜ್ಞೆ ಬುದ್ಧಿಸಂಬಂಧಿ ಎನ್ನಬಹುದು. ಇದು ಮುಖ್ಯವಾಗಿ ಸ್ಮೃತಿ ಬುದ್ಧಿ ಮತ್ತು ಮತಿ ಇವನ್ನೊಳಗೊಳ್ಳುತ್ತವೆ. ಹಿಂದೆ ಆದದ್ದನ್ನು ನೆನೆಯುವುದು ಸ್ಮೃತಿ, ಈಗ ನಡೆಯುವುದನ್ನು ಪರಿಶೀಲಿಸುವುದು ಬುದ್ಧಿ; ಮುಂದೆ ಆಗುವುದನ್ನು ಊಹಿಸುವುದು ಮತಿ. ಈ ಮೂರೂ ವಿಚಾರ ಸಾಹಿತ್ಯದಲ್ಲಿ ಎದ್ದು ಕಾಣುತ್ತವೆ. ಅದರಲ್ಲೂ ರಂಜನೆಯ ಅಂಶ ಇರಬೇಕು, ಆದರೆ ಅದು ಸಂಯಮದಿಂದ ಕೂಡಿದ್ದು ಹಿನ್ನೆಲೆಯಲ್ಲಿರುತ್ತದೆ. ಹನ್ನೆರಡನೆಯ ಶತಮಾನದ ವೀರಶೈವ ವಚನಕಾರರ ವಚನಗಳಲ್ಲಿ ವಿಚಾರ ಪ್ರಾಧಾನ್ಯವನ್ನು ಗಮನಿಸಬಹುದು. ಅವು ಮುಖ್ಯವಾಗಿ ಆಧ್ಯಾತ್ಮಿಕ ಎನ್ನಬಹುದಾದರೂ ಜಗತ್ತು, ಸಮಾಜ ಮುಂತಾದ ವಿಚಾರಗಳ ವಿವೇಚನೆಯೂ ಪ್ರಧಾನವಾಗಿರುತ್ತದೆ.

ಸೃಜನ ಪ್ರಧಾನ ಸಾಹಿತ್ಯ ಸಾಮಾನ್ಯವಾಗಿ ಸಂಶ್ಲೇಷಣಾತ್ಮಕವಾದ್ದು ಎನ್ನುವುದಾದರೆ ವಿಚಾರ ಸಾಹಿತ್ಯ ವಿಶ್ಲೇಷಣಾತ್ಮಕವಾದ್ದು. ಯಾವುದೇ ವಿಷಯವನ್ನು ಕುರಿತಂತೆ ಪ್ರಯೋಗಪೂರ್ವಕವಾಗಿ ಚಿಕಿತ್ಸಕ ದೃಷ್ಟಿಯನ್ನು ಬೀರಿ ಅದರ ಸತ್ತ್ವವನ್ನು ಗುರುತಿಸಿ, ಸಂಗ್ರಹಿಸಿದ ಮಾಹಿತಿಯನ್ನೆಲ್ಲ ವಿಂಗಡಿಸಿ ವಿವೇಚಿಸಿ ಕರಾರುವಾಕ್ಕು ಎನಿಸುವಂತೆ ನಿರ್ಣಯ ನೀಡುವ ದಿಕ್ಕಿನಲ್ಲಿ ಮುಂದುವರಿಯುವುದು ವಿಚಾರ ಸಾಹಿತ್ಯದ ರೀತಿ ಎನ್ನುವುದಾದರೆ, ನಮ್ಮಲ್ಲಿ ಸೃಷ್ಟಿಯಾಗಿರುವ ಎಲ್ಲ ಸ್ವೋಪಜ್ಞ ಚಿಂತನಶೀಲ ವಿವೇಚನೆ ಹಾಗೂ ಇದಮಿತ್ಥಂ ಎಂಬ ನಿಲುವೂ ವಿಚಾರ ಸಾಹಿತ್ಯದ ಕಕ್ಷೆಯೊಳಗೆ ಬರುತ್ತವೆ. ಮುಖ್ಯವಾಗಿ ಯಾವುದೋ ಒಂದು ನಿಶ್ಚಿತ ವಿಷಯದ ಬಗ್ಗೆ ಸಂಶೋಧನೆ, ಅದರ ಫಲವಾದ ಜ್ಞಾನದ ದಾಖಲೆ, ಅನುಶೀಲನೆ, ನಿರ್ಣಯಗಳಿಂದ ಕೂಡಿದ್ದು ವಿಚಾರ ಸಾಹಿತ್ಯ ಎನಿಸಿಕೊಳ್ಳುತ್ತದೆ. ವಿಜ್ಞಾನ, ಮಾನವಿಕ, ಸಮಾಜ ವಿಜ್ಞಾನ ಮುಂತಾದ ಕ್ಷೇತ್ರಗಳಲ್ಲಿ ನಡೆಯುವ ಸಂಶೋಧನೆಯ ಫಲಶ್ರುತಿಗಳು ನಿಬಂಧ ರೂಪದಲ್ಲಿ ಬಂದಾಗ ಅವು ಆಧಾರಭೂತ ವಿಚಾರಸಾಹಿತ್ಯ ಎನಿಸಿಕೊಳ್ಳುತ್ತವೆ. ವಿದ್ವಾಂಸರ ಅಥವಾ ಆಯಾ ಕ್ಷೇತ್ರದ ತಜ್ಞರ ಹಾಗೂ ಜ್ಞಾನಾರ್ಥಿಗಳ ಗಮನವನ್ನು ಸೆಳೆಯುವ ಅಂಥ ನಿಬಂಧಗಳ ಆಧಾರದ ಮೇಲೆ ಇತರರಿಗೆ, ಅನಂತರ ಸಾಮಾನ್ಯರಿಗೆ-ಹೀಗೆ ಮೂರು ಹಂತಗಳಲ್ಲಿ ವಿಚಾರ ಸಾಹಿತ್ಯ ಪ್ರವಹಿಸಬೇಕು. ಆದರೆ ಈ ನಿಟ್ಟಿನಲ್ಲಿ ಸೆಮಿನಾಲ್- ಬೀಜಸ್ವರೂಪಿ- ಎಂಬ ಕೃತಿಗಳು ಕನ್ನಡದಲ್ಲಿ ಬಹಳ ಕಡಿಮೆ. ಆಧುನಿಕ ಕಾಲದವರೆಗೂ ಸಂಸ್ಕೃತ ಪ್ರಾಕೃತ ಗ್ರಂಥಗಳಲ್ಲಿಯ ಮೂಲಭೂತ ಚಿಂತನೆಯ ಕೃತಿಗಳನ್ನೇ ಆಧರಿಸಿ ರಚನೆಯಾಗುತ್ತ ಬಂದ ಕನ್ನಡ ಕೃತಿಗಳಲ್ಲಿ ಸ್ವೋಪಜ್ಞತೆಯ ಅಂಶ ಬಹಳ ಕಡಿಮೆ.

ಬೀಜಸ್ವರೂಪಿ ಕೃತಿ ರಚನೆ ಇಲ್ಲದೆ ಮುಂದಿನ ಎರಡು ಹಂತಗಳಲ್ಲಿ ವಿಚಾರ ಹರಿದು ಬರುವುದೆಂದು ನಿರೀಕ್ಷಿಸುವುದು ತಪ್ಪು. ಆದರೂ ವಿರಳವಾಗಿಯಾದರೂ ಅಂಥ ಕೃತಿಗಳು ಬರುತ್ತಿವೆಯೆಂದು ಸಮಾಧಾನಪಟ್ಟುಕೊಳ್ಳಬೇಕು. ಹಿಂದೆ ಹೇಳಿದ ಮಹಾನ್ ಲೇಖಕರ ಕೃತಿಗಳಲ್ಲದೆ ಈಚಿನ ವರ್ಷಗಳಲ್ಲಿ ಮುಖ್ಯವಾಗಿ ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಈ ಪ್ರಯತ್ನ ಮುಂದುವರಿದಿದೆ. ತುಂಬ ವ್ಯಾಪಕವಾದ ಕ್ಷೇತ್ರ ಇದಾದ್ದರಿಂದ ಕೆಲವು ದಿಕ್ಸೂಚಿಗಳನ್ನಷ್ಟೆ ಇಲ್ಲಿ ನೀಡಬಹುದು. ಆದರೂ ಇದು ಸಮಸ್ತ ಎನಿಸಲಾರದು. ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಪುಸ್ತಕ ಪ್ರಾಧಿಕಾರ ಇವುಗಳ ಕೆಲವು ಪ್ರಕಟಣೆಗಳು ಈ ಪ್ರಕಾರಕ್ಕೆ ಸೇರುತ್ತವೆ. ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಪ್ರಕಟವಾದ ಕೆಲವು ಮಹತ್ತ್ವದ ಕೃತಿಗಳು ಪುನರ್ಮುದ್ರಣಗಳಾದರೂ ಉಲ್ಲೇಖಾರ್ಹ.

ನವ ಕರ್ನಾಟಕ ಪ್ರಕಾಶನ ಸಂಸ್ಥೆ ಅನೇಕ ವಿಚಾರ ಸಾಹಿತ್ಯ ಕೃತಿಗಳನ್ನು ಪ್ರಕಟಿಸಿದೆ. ಸಂಪ್ರದಾಯ, ವಿಜ್ಞಾನ ಮತ್ತು ಸಮಾಜ (ಎಸ್.ಬಾಲಚಂದ್ರರಾವ್), ವೈಜ್ಞಾನಿಕ ಮನೋಧರ್ಮ (ಜಿ.ಟಿ.ನಾರಾಯಣ ರಾವ್), ಮಾರ್ಕ್ಸ್‌ವಾದ ಮತ್ತು ಭಗವದ್ಗೀತೆ (ಅನು: ಎಸ್.ಆರ್.ಭಟ್), ಧರ್ಮ ಮತ್ತು ವೈಚಾರಿಕತೆ (ಬಿ.ವಿ.ವೀರಭದ್ರಪ್ಪ), ನಾನೇಕೆ ನಾಸ್ತಿಕ (ಅನು: ಎನ್.ಗಾಯತ್ರಿ) ಮೊದಲಾದ ಕೆಲವು ಕೃತಿಗಳನ್ನು ಇಲ್ಲಿ ಉಲ್ಲೇಖಿಸಬಹುದು.

ಈ ಸಂದರ್ಭದಲ್ಲಿ ಎಚ್ಚೆಸ್ಕೆ ಅವರ ವಿಚಾರ ವಿಹಾರ, ಕನ್ನಡದ ಸ್ಥಿತಿಗತಿ, ಶಿಕ್ಷಣ ಸಂಸ್ಕೃತಿ, ಸರ್ವಾರ್ಥ ಸಾಧನೆ - ಈ ಕೃತಿಗಳು ವಿಚಾರ ಸಾಹಿತ್ಯದ ಹಲವು ಪ್ರಕಾರಗಳ ವಿಹಂಗಮ ನೋಟ ನೀಡುತ್ತವೆ. ಪ್ರಾಧಿಕಾರದ ಜಾಗತಿಕ ಚಿಂತಕರ ಮಾಲೆ, ವಿಜ್ಞಾನ ಶಿಕ್ಷಣ ಮಾಲೆ, ಅನುವಾದ ಮಾಲೆ, ಮೂಲ ಭೂತ ಶೈಕ್ಷಣಿಕ ಮಾಲೆ, ವಿಜ್ಞಾನದೀಪ ಮಾಲೆ- ಇವು ಸಾಮಾನ್ಯರ ಜ್ಞಾನದ ಪರಿಧಿಯನ್ನು ವಿಸ್ತರಿಸುವ ಪ್ರಯತ್ನಗಳಾಗಿ ಸ್ವಾಗತಾರ್ಹವೆನಿಸುತ್ತವೆಯಾದರೂ ಸ್ವೋಪಜ್ಞತೆಯಿಂದ ಕೂಡಿದ್ದನ್ನಲಾದ ಆಚಾರ್ಯ ಕೃತಿಗಳು ಬಹುತೇಕ ಇಲ್ಲವೇ ಇಲ್ಲವೆನ್ನಬೇಕು.

ತನ್ಮಯತೆ ಮತ್ತು ತಾಟಸ್ಥ್ಯ, ತಪಶೀಲು ಮತ್ತು ತಾತ್ತ್ವಿಕತೆ-ಇವುಗಳ ನಡುವೆ ಒಂದು ತೂಕದ ತಕ್ಕ ಸಮನ್ವಯ ಸಾಧಿಸುವ ಪ್ರಜ್ಞಾ ಪರಿಷ್ಕಾರ ನಮ್ಮ ಸುಶಿಕ್ಷಿತ ವರ್ಗಗಳಲ್ಲಿ ಸ್ಥಿರವಾಗುವ ತನಕ ದೊಡ್ಡ ಪ್ರಮಾಣದ ವಿವಿಧ ಪ್ರಕಾರದ ವಿಚಾರ ಸಾಹಿತ್ಯಕ್ಕಾಗಿ ನಾವು ಕಾಯಬೇಕು. ಈ ಕ್ಷೇತ್ರದ ಈವರೆಗಿನ ಕೃಷಿಯಿಂದ ವಿಚಾರ ಸಾಹಿತ್ಯ ಸ್ವತಂತ್ರವಾಗಿ ಸಮೃದ್ಧವಾಗಿ ಬೆಳೆಯಬಹುದೆಂಬ ಭರವಸೆಯನ್ನು ತಾಳಬಹುದು. (ಜ.ಕೆ.)

**ಕನ್ನಡದಲ್ಲಿ ವಿಜ್ಞಾನ ಸಾಹಿತ್ಯ :** ಜನಸಾಮಾನ್ಯರೆಡೆಗೆ ವೈಜ್ಞಾನಿಕ ಮಾಹಿತಿಗಳನ್ನು ಸಾಗಿಸುವುದು ಮತ್ತು ಸಮಾಜದಲ್ಲಿ ವಿಜ್ಞಾನ - ತಂತ್ರಜ್ಞಾನಗಳ ಪ್ರಗತಿಗೆ ತಕ್ಕ ವಾತಾವರಣವನ್ನು ನಿರ್ಮಿಸುವುದು - ಇವು 20ನೆಯ ಶತಮಾನದ ಆರಂಭದಲ್ಲಿ ಕನ್ನಡ ವಿಜ್ಞಾನ ಸಾಹಿತ್ಯ ರಚನೆಗೆ ತೊಡಗಿಸಿಕೊಂಡವರ ಮುಖ್ಯ ಉದ್ದೇಶಗಳಾಗಿದ್ದುವು. 20ನೆಯ ಶತಮಾನದ ನಾಲ್ಕನೆಯ ಮತ್ತು ಐದನೆಯ ದಶಕಗಳಲ್ಲಿ ಪ್ರೌಢಶಾಲಾ ಶಿಕ್ಷಣ ಮಾಧ್ಯಮವಾಗಿ ಕನ್ನಡ ಬರತೊಡಗಿತು. ಕನ್ನಡ ಮಾಧ್ಯಮವನ್ನು ಆರಿಸುವ ಸ್ವಾತಂತ್ರ್ಯ ಆರನೆಯ ದಶಕದ ಕೊನೆಗೆ ಕಾಲೇಜು ವಿದ್ಯಾರ್ಥಿಗಳಿಗೂ ಸಿಕ್ಕಿತು. ಇದರಿಂದ ಕನ್ನಡದಲ್ಲಿ ವಿಜ್ಞಾನ ಪಠ್ಯಗಳನ್ನೂ ಪ್ರೌಢ ಗ್ರಂಥಗಳನ್ನೂ ಜನಪ್ರಿಯ ಕೃತಿಗಳನ್ನೂ ಪ್ರಕಟಣೆಗೆ ಎತ್ತಿಕೊಳ್ಳುವ ಪ್ರವೃತ್ತಿ ಬೆಳೆಯಿತು. ಕ್ರಮೇಣ ಮಕ್ಕಳ ವಿಜ್ಞಾನ ಪುಸ್ತಕಗಳು, ವಿಜ್ಞಾನ ಪತ್ರಿಕೆ, ಕೈಪಿಡಿ, ವಿಶ್ವಕೋಶ, ನಿಘಂಟುಗಳು ಪ್ರಕಟವಾಗತೊಡಗಿದುವು. ವಿಶ್ವವಿದ್ಯಾಲಯಗಳು, ಕನ್ನಡ ಸಾಹಿತ್ಯ ಪರಿಷತ್ತು, ಆಸಕ್ತ ಬರೆಹಗಾರರು ಮತ್ತು ಖಾಸಗಿ ಪ್ರಕಾಶಕರು ವಿಜ್ಞಾನ ಕೃತಿಗಳ ಪ್ರಕಟಣೆಯಲ್ಲಿ ಪಾಲುಗೊಂಡರು.

1997ರಲ್ಲಿ ಕನ್ನಡ ವಿಜ್ಞಾನ ಗ್ರಂಥ ಸೂಚಿಯನ್ನು ತಯಾರಿಸುವ ಒಂದು ಯೋಜನೆಯನ್ನು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಕೈಗೆತ್ತಿಕೊಂಡಿತು. ಇದರಿಂದಾಗಿ ರಾಜ್ಯದ ಹಾಗೂ ಹೊರ ರಾಜ್ಯಗಳ ಅನೇಕ ಗ್ರಂಥಭಂಡಾರಗಳಲ್ಲಿ ನಡೆಸಿದ ಸಮೀಕ್ಷೆಯಿಂದ ಸು.3000 ಪ್ರಕಟಿತ ಕೃತಿಗಳನ್ನು ಗುರುತಿಸಲು ಸಾಧ್ಯವಾಯಿತು. ಕಾಲಾನುಕ್ರಮದಲ್ಲಿ ಪ್ರಕಟಣೆಗಳ ಸಂಖ್ಯೆ ಹೀಗಿದೆ: 130 (1900ರವರೆಗೆ), 160 (1901-30), 460 (1931-60), 1830 (1961-90), 840 (1991-95ರವರೆಗೆ). ವರ್ಷಗಳು ಕಳೆದಂತೆ ವಿಜ್ಞಾನ ಸಾಹಿತ್ಯ ಕೃತಿಗಳ ಸಂಖ್ಯೆ ಹೆಚ್ಚಾದುದು ಇದರಿಂದ ಸ್ಪಷ್ಟವಾಗುತ್ತದೆ. ಸು.40 ವಿಭಾಗಗಳಲ್ಲಿ ಈ ಪುಸ್ತಕಗಳು ಹಂಚಿಹೋಗಿವೆ. ವೈದ್ಯವಿಜ್ಞಾನ (900), ಪಠ್ಯ ಪುಸ್ತಕಗಳು (450), ಸಾಮಾನ್ಯ ವಿಜ್ಞಾನ (440), ಕೃಷಿ (415), ಭೌತವಿಜ್ಞಾನ (214), ಜೀವನ ಚರಿತ್ರೆ (211), ಪ್ರಾಣಿವಿಜ್ಞಾನ (195), ಸಸ್ಯವಿಜ್ಞಾನ (115), ಗಣಿತ (110), ಖಗೋಳ (99), ಪಶುಪಾಲನೆ (80), ರಸಾಯನ ವಿಜ್ಞಾನ (70), ಎಂಜಿನಿಯರಿಂಗ್ ಮತ್ತು ತಂತ್ರಜ್ಞಾನ (62), ಪರಿಸರ, ವಾಸ್ತು, ಕಂಪ್ಯೂಟರ್, ಭೂವಿಜ್ಞಾನ, ಶಕ್ತಿ, ಅರಣ್ಯ ವಿಜ್ಞಾನ, ಆನುವಂಶೀಯತೆ, ಗೃಹವಿಜ್ಞಾನ, ತೋಟಗಾರಿಕೆ, ಸಂಖ್ಯಾಕಲನ ಮೊದಲಾದ ಶಾಖೆಗಳಲ್ಲಿ ಕೃತಿಗಳು ರಚನೆಯಾಗಿವೆ.

ವಿಜ್ಞಾನವನ್ನು ಜನಪ್ರಿಯಗೊಳಿಸುವ ಮತ್ತು ವೈಜ್ಞಾನಿಕ ಮನೋಭಾವದ ಪ್ರಸಾರ ಇವನ್ನು ಮುಖ್ಯ ಉದ್ದೇಶಗಳಾಗಿಟ್ಟುಕೊಂಡು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಸ್ಥಾಪಿತವಾಯಿತು. ಕರ್ನಾಟಕದ ನೂರಾರು ಊರುಗಳಲ್ಲಿ ಇದರ ಘಟಕಗಳಿವೆ. ಜನರಿಗೆ ಉಪಯುಕ್ತವಾದ ನೂರಕ್ಕಿಂತಲೂ ಅಧಿಕ ವಿಜ್ಞಾನ ಕೃತಿಗಳನ್ನು ಪ್ರಕಟಿಸದ್ದಷ್ಟೇ ಅಲ್ಲದೆ ತನ್ನ ಉದ್ದೇಶ ಸಾಧನೆಗಾಗಿ ಇದು ಜನವಿಜ್ಞಾನ ಜಾಥಾ ಮತ್ತು ಕಲಾಮಾಧ್ಯಮಗಳನ್ನು ಬಳಸಿಕೊಂಡುದರಿಂದ ಹಾಡಬಹುದಾದ ವಿಜ್ಞಾನ ಗೀತೆಗಳೂ ಆಡಬಹುದಾದ ವೈಜ್ಞಾನಿಕ ಹಿನ್ನೆಲೆಯ ನಾಟಕಗಳೂ ಸೃಷ್ಟಿಯಾದುವು. ಪ್ರಯೋಗ ಮತ್ತು ವೈಜ್ಞಾನಿಕ ವೀಕ್ಷಣೆಗಳಿಗೆ ಅನುಕೂಲವಾದ ಕೈಪಿಡಿಗಳೂ ಪ್ರಕಟವಾದುವು. ಹಲವು ಸ್ಥಳೀಯ ಘಟಕಗಳೂ ವಿಜ್ಞಾನ ಕೃತಿಗಳ ಪ್ರಕಟಣೆ ಮತ್ತು ಪ್ರಸಾರದಲ್ಲಿ ಸಕ್ರಿಯವಾಗಿ ಪಾಲುಗೊಂಡುವು. ಹಂಪಿಯ ಕನ್ನಡ ವಿಶ್ವವಿದ್ಯಾಲಯ, ಕನ್ನಡ ಪುಸ್ತಕ ಪ್ರಾಧಿಕಾರ, ವೈದ್ಯವಿಜ್ಞಾನ ಸಾಹಿತ್ಯ ಪರಿಷತ್ತು ನವಕರ್ನಾಟಕ ಪ್ರಕಾಶನ. ಇವು ವಿಜ್ಞಾನ ಪುಸ್ತಕಗಳನ್ನು ಪ್ರಕಟಿಸಿದ ಇತರ ಸಂಸ್ಥೆಗಳಲ್ಲಿ ಮುಖ್ಯವಾದುವು.

**ವಿಜ್ಞಾನ ಪತ್ರಿಕೆಗಳು :** 1978ರ ಮೊದಲೇ ಪ್ರಕಟವಾಗುತ್ತಿದ್ದ ವಿಜ್ಞಾನ ಲೋಕ, ವಿಜ್ಞಾನ ಕರ್ನಾಟಕ ಮೊದಲಾದ ವಿಜ್ಞಾನ ಪತ್ರಿಕೆಗಳ ನಿಯತಕಾಲಿಕ ಪ್ರಕಾಶನಕ್ಕೆ ತೊಂದರೆಯಾದರೂ ಅನಂತರದ ಕೆಲವು ಪತ್ರಿಕೆಗಳಿಗೆ ಹಾಗಾಗಲಿಲ್ಲ. 1978 ನವೆಂಬರ್ 1ರಂದು 'ಬಾಲವಿಜ್ಞಾನ' ಮಾಸಿಕದ (ಕರಾವಿಪದಿಂದ ಪ್ರಕಟಿತ) ಮೊದಲ ಸಂಚಿಕೆ ಪ್ರಕಟವಾಯಿತು. ಮುಂದಿನ ಎರಡು ದಶಕಗಳಲ್ಲಿ ಸುಮಾರು ಎರಡೂವರೆ ಸಾವಿರಗಳಿಗೂ ಅಧಿಕ ಸಂಖ್ಯೆಯ ಲೇಖನಗಳು ಇದರಲ್ಲಿ ಪ್ರಕಟವಾಗಿವೆ. ವಿದ್ಯಾರ್ಥಿಗಳು ನಡೆಸಬಹುದಾದ ವಿಜ್ಞಾನ ಪ್ರಯೋಗಗಳು, ಪಠ್ಯಪೂರಕ ವಿಷಯಗಳು, ವಿಜ್ಞಾನದ ಮುನ್ನಡೆ, ವಿಜ್ಞಾನ ಕೌತುಕ, ಪಾರಿಭಾಷಿಕ ಪದ ಸಂಪದ, ವಿಜ್ಞಾನಿಗಳ ಪರಿಚಯ, ಪ್ರಶ್ನೋತ್ತರ, ವಿಜ್ಞಾನ ಪದಬಂಧ ಇವೆಲ್ಲ ಮುಖ್ಯ ಲೇಖನಗಳೊಂದಿಗೆ ಸ್ಥಿರಶೀರ್ಷಿಕೆಗಳಾಗಿ ಅಥ‌ವಾ ಆವರ್ತ ಶೀರ್ಷಿಕೆಗಳಾಗಿ ವಿವಿಧ ಸಂಚಿಕೆಗಳಲ್ಲಿ ಪ್ರಕಟಗೊಂಡಿವೆ.

ವಿಜ್ಞಾನ ಸಂಗಾತಿ, ಕನ್ನಡ ವಿಶ್ವವಿದ್ಯಾಲಯ (ಹಂಪಿ) ಅಡಿಕೆ ಪತ್ರಿಕೆ (ಬೆಳೆಗಾರರೇ ಪ್ರಕಾಶಕರು), ಸುಜಾತ, ಮೋಟಿವಿದ್ಯೆ, ನಮ್ಮ ಪರಿಸರ, (ಕರಾವಿಪ), ಜೀವನಾಡಿ (ದಿಕ್ಸೂಚಿ ಬಳಗ), ಮಕ್ಕಳ ವಿಜ್ಞಾನ ಮಾಸಿಕ, ಪುಟಾಣಿ ವಿಜ್ಞಾನ - ಇವೆಲ್ಲ 1978ರ ಅನಂತರ ಬೆಳಕು ಕಂಡಂಥ ಇತರ ಪತ್ರಿಕೆಗಳು. ಸಂಶೋಧಕ, ವಿಜ್ಞಾನ ವಾಹಿನಿ ಈ ಬಗೆಯ ಕೆಲವು ಪತ್ರಿಕೆಗಳು ವೈಯಕ್ತಿಕ ಆಸಕ್ತಿ ಮತ್ತು ಪ್ರಯತ್ನಗಳಿಂದ ಹುಟ್ಟಿದ್ದರೂ ದೀರ್ಘಕಾಲ ಬಾಳಲಿಲ್ಲ. ವಯಸ್ಕರ ಶಿಕ್ಷಣ ಸಮಿತಿಯ ವತಿಯಿಂದ ಪ್ರಕಟವಾಗುತ್ತಿದ್ದ ಪುಸ್ತಕ ಪ್ರಪಂಚದಲ್ಲಿ ಪ್ರಕಟವಾಗಿರುವ ವಿಜ್ಞಾನ ಸಂಬಂಧ ಲೇಖನಗಳನ್ನು ನಾವು ಗಮನಿಸಬೇಕು. ವಿಜ್ಞಾನ ಪತ್ರಿಕೆಗಳಿಂದಾಗಿ ನೂರಾರು ವಿಜ್ಞಾನ ಬರೆಹಗಾರರಿಗೆ ಬರೆಯಲು ಆಸ್ಪದ ದೊರಕಿದ್ದಷ್ಟೇ ಅಲ್ಲ, ವಿದ್ಯಾರ್ಥಿ - ಅಧ್ಯಾಪಕ ಕಾರ್ಯನಿರತ ವಿಜ್ಞಾನಿಗಳೊಂದಿಗೆ ಆಸಕ್ತ ನಾಗರಿಕರೂ ಲಿಖಿತ ಮಾಧ್ಯಮದ ಮೂಲಕ ವಿಜ್ಞಾನ ವಿಚಾರಗಳ ಬಗ್ಗೆ ಅಂತರ್ವರ್ತಿಸುವಂತಾಯಿತು.

**ಅಂಕಣ ಬಿಡಿಬರೆಹಗಳು:** ಕನ್ನಡದಲ್ಲಿ ಸಾಮಾನ್ಯ ದಿನಪತ್ರಿಕೆ, ವಾರಪತ್ರಿಕೆ ಮತ್ತು ಮಾಸಿಕಗಳ ಸಂಖ್ಯೆಯೂ 1978ರ ಅನಂತರ ಹೆಚ್ಚಿದೆ. ಸ್ಥಳೀಯ ಅಥ‌ವಾ ಪ್ರಾದೇಶಿಕ ವ್ಯಾಪ್ತಿಯ ಪತ್ರಿಕೆಗಳೂ ನಗರ ಕೇಂದ್ರಿತವಾಗಿ ಹೆಚ್ಚಿವೆ. ಇವುಗಳಲ್ಲಿ ಸಚಿತ್ರ ಬಿಡಿಬರೆಹಗಳ ರೂಪದಲ್ಲಾಗಲೀ ನಿಶ್ಚಿತ ಶೀರ್ಷಿಕೆಯನ್ನು ಹೊತ್ತು ವರ್ತಮಾನ ಕಾಲದ ವಿಜ್ಞಾನ ವಿಷಯಗಳನ್ನು ತಿಳಿಸಿ ಚರ್ಚಿಸುವ ಅಂಕಣಗಳಲ್ಲಾಗಲೀ ಪ್ರಕಟವಾಗುವ ವಿಜ್ಞಾನ ಸಾಹಿತ್ಯದ ಪ್ರಮಾಣ ಗಮನಾರ್ಹವಾದುದು. ಉದಾಹರಣೆಗೆ ವಿಜ್ಞಾನ ವಿಶೇಷ (ಪ್ರಜಾವಾಣಿ), ವಿಜ್ಞಾನ ವಿಹಾರ (ಕನ್ನಡ ಪ್ರಭ) - ಈ ಅಂಕಣಗಳು ಲಲಿತ ಶೈಲಿಯಲ್ಲಿ ವಿಜ್ಞಾನ ಕ್ಷೇತ್ರದ ಬೆಳೆವಣಿಗೆಗಳ ಬಗ್ಗೆ ವಾರ ವಾರವೂ ಬೆಳಕು ಚೆಲ್ಲುತ್ತವೆ. ನಭೋಮಂಡಲ (ಹೊಸತು), ನೆಟ್‌ನೋಟ (ವಿಜ್ಞಾನ ಸಂಗಾತಿ) ಎಂಬ ಅಂಕಣಗಳು ರಾತ್ರಿ ಆಕಾಶದ ವೀಕ್ಷಣೆ, ಇಂಟರ್‌ನೆಟ್‌ನ ಬೆಳೆವಣಿಗೆಯಂಥ‌ ವಿಶೇಷ ಆಸಕ್ತಿಗಳನ್ನು ತಣಿಸಬಲ್ಲುವಾದುವು. ದಿನಪತ್ರಿಕೆಗಳ ವಿಶೇಷ ಪುರವಣಿಗಳಲ್ಲೂ ವಿಶೇಷ ವಿಜ್ಞಾನ ಲೇಖನಗಳು ಪ್ರಕಟವಾಗುವ ಪ್ರವೃತ್ತಿ ಬೆಳೆಯಿತು.

**ಆಕರ ಗ್ರಂಥಗಳು :** ಬರೆಹಗಾರರ ವೈಯಕ್ತಿಕ ಒಲವು ಮತ್ತು ಕನ್ನಡದ ಪ್ರಾದೇಶಿಕ ಭಿನ್ನತೆಗಳಿಂದಾಗಿ ಇಂಗ್ಲಿಷಿನ ಒಂದು ನಿರ್ದಿಷ್ಟ ಪಾರಿಭಾಷಿಕ ಪದಕ್ಕೆ ಎರಡು ಅಥ‌ವಾ ಹೆಚ್ಚು ಸಮಾನ ಪದಗಳು ಹಿಂದೆ ಬಳಕೆಯಾಗುತ್ತಿದ್ದುವು. ಒಂದು ಶಬ್ದದ ಏಕರೂಪ ಬಳಕೆಯ ವಿಚಾರವಾಗಿ ವಿಜ್ಞಾನ ಬರೆಹಗಾರರಲ್ಲಿ ಅನೇಕ ಭಿನ್ನಾಭಿಪ್ರಾಯಗಳಿದ್ದುವು. 1984 ಮೇ ತಿಂಗಳಲ್ಲಿ ಧಾರವಾಡದಲ್ಲಿ ನಡೆದ ಮೊದಲನೆಯ ಅಖಿಲ ಕರ್ನಾಟಕ ವಿಜ್ಞಾನ ಸಮ್ಮೇಳನದಲ್ಲಿ ಈ ಸಮಸ್ಯೆಯ ಬಗ್ಗೆ ಚರ್ಚಿಸಲಾಯಿತು. ಬಳಿಕ ರಾಜ್ಯದ ವಿವಿಧ ಪ್ರದೇಶಗಳನ್ನು ಪ್ರತಿನಿಧಿಸುವ ವಿದ್ವಾಂಸರ ಮತ್ತು ವಿಜ್ಞಾನಿಗಳ ಸಹಾಯದಿಂದ ವಿಜ್ಞಾನ ಶಬ್ದಕೋಶದ ಯೋಜನೆಯನ್ನು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಕೈಗೆತ್ತಿಕೊಳ್ಳಬೇಕೆಂಬ ನಿರ್ಣಯವನ್ನು ಅಂಗೀಕರಿಸಿತು. ಅದರಂತೆ ಇಂಗ್ಲಿಷ್ - ಕನ್ನಡ ವಿಜ್ಞಾನ ಶಬ್ದಕೋಶ ಸಿದ್ಧವಾಯಿತು (1990). ಈ ಶಬ್ದಕೋಶ ರಚನೆಯಲ್ಲಿ ಯಾವ ಬಗೆಯ ಪಾರಿಭಾಷಿಕ ಪದಗಳನ್ನು ನೇರವಾಗಿ ಇಂಗ್ಲಿಷಿನಿಂದ ಪಡೆಯಬಹುದು, ಯಾವ ಬಗೆಯ ಪದಗಳಿಗೆ ಸಮಾನ ಪದಗಳನ್ನು ಸೃಷ್ಟಿಸಬಹುದು ಹಾಗೂ ಸೃಷ್ಟಿಸುವಾಗ ಅನುಸರಿಸುವ ಮಾರ್ಗಗಳಾವುವು ಎಂಬುದರ ಬಗ್ಗೆ ಮಾರ್ಗದರ್ಶಿ ಸೂತ್ರಗಳನ್ನು ರೂಪಿಸಿ ಅನ್ವಯಿಸಲಾಯಿತು. ಸಮಾನ ಶಬ್ದಕಾಂಡ ಮತ್ತು ಪ್ರತ್ಯಯಗಳ ಪಟ್ಟಿಯನ್ನೂ ನೀಡಲಾಯಿತು. ಈ ಜಾಡಿನಲ್ಲೇ ಮುಂದುವರಿದು ನವಕರ್ನಾಟಕ ಪ್ರಕಾಶನವು ವಿಜ್ಞಾನ ಪದ ವಿವರಣ ಕೋಶವನ್ನು ಪ್ರಕಟಿಸಿತು (2001). ಇದರಲ್ಲಿ ಕನ್ನಡ ಪಾರಿಭಾಷಿಕ ಪದಗಳನ್ನು ಅಕಾರಾದಿಯಾಗಿ ನೀಡಿ, ಅವುಗಳ ಇಂಗ್ಲಿಷ್ ಸಮಾನ ಪದಗಳೊಂದಿಗೆ ಕನ್ನಡದಲ್ಲಿ ವಿವರಣೆಯನ್ನೂ ಇಂಗ್ಲಿಷ್ ಪಾರಿಭಾಷಿಕ ಪದಗಳಿಗೆ ಕನ್ನಡ ಸಮಾನ ಪದಗಳನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ನೀಡಲಾಯಿತು. ಇದರಿಂದ ಬರೆಹಗಾರರಿಗಷ್ಟೇ ಅಲ್ಲದೆ ಓದುಗರಿಗೂ ಅನುಕೂಲವಾಯಿತು. ಹಾಗೆಯೇ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟುವಿನ ಪರಿಷ್ಕರಣವೂ ಒಂದು ಮುಖ್ಯ ಹೆಜ್ಜೆ. 1946 ರಿಂದಲೂ ಪಾರಿಭಾಷಿಕ ಪದಗಳನ್ನು ಆರಿಸುವಲ್ಲಿ ಈ ನಿಘಂಟು ಒಂದು ಮುಖ್ಯ ಆಕರವಾಗಿತ್ತು. ಈ ನಿಘಂಟನ್ನು ಪರಿಷ್ಕರಿಸಿ ನಾಲ್ಕು ಸಂಪುಟಗಳಲ್ಲಿ ಪ್ರಕಟಿಸುವ ಯೋಜನೆ 1989ರಲ್ಲಿ ಆರಂಭವಾಗಿ ಈಗ ಮುಗಿದಿದೆ (2004).

ಕನ್ನಡ ವಿಜ್ಞಾನ ಸಾಹಿತ್ಯ ನಿರ್ಮಾಣದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ವಿಶ್ವಕೋಶದ ಕೊಡುಗೆಯೂ ಗಮನಾರ್ಹ. 14 ಸಂಪುಟಗಳ ಈ ಯೋಜನೆ ಈಗ ಪೂರ್ಣಗೊಂಡಿದೆ (2004). 1970ರ ದಶಕದಲ್ಲಿ ಪ್ರಕಟವಾಗಿದ್ದ ಏಳು ಸಂಪುಟಗಳ ಕಿರಿಯರ ವಿಶ್ವಕೋಶ 'ಜ್ಞಾನ ಗಂಗೋತ್ರಿ'ಯ ಪ್ರತಿಗಳು ಈಗ ಅಲಭ್ಯ. ಈ ಸನ್ನಿವೇಶದಲ್ಲಿ ಕೇವಲ ವಿಜ್ಞಾನಕ್ಕೆ ಮೀಸಲಾದ ನವಕರ್ನಾಟಕ ಜ್ಞಾನ ವಿಜ್ಞಾನ ಕೋಶ (ನವಕರ್ನಾಟಕ ಪ್ರಕಾಶನ 1998) ಕನ್ನಡ ಓದುಗರಿಗೆ ನೀಡಿದ ವಿಶಿಷ್ಟ ಕೊಡುಗೆಯಾಯಿತು. ಅಂದವಾದ ಮುದ್ರಣ ಮತ್ತು ಪುಟಪುಟಗಳಲ್ಲಿ ಪಠ್ಯಕ್ಕೆ ಪೂರಕವಾದ ವರ್ಣಮಯ ಚಿತ್ರಗಳಿಂದಾಗಿಯೂ ಈ ಪ್ರಕಟಣೆ ದಾಖಲೆ ನಿರ್ಮಿಸಿತು. ಹಂಪಿ ಕನ್ನಡ ವಿಶ್ವವಿದ್ಯಾಲಯವು ವೈದ್ಯವಿಜ್ಞಾನದ ವಿಶ್ವಕೋಶವನ್ನು ಪ್ರಕಟಿಸಿದ್ದರಿಂದ ಕನ್ನಡ ವಿಜ್ಞಾನ ಸಾಹಿತ್ಯಕ್ಕೆ ಮತ್ತೊಂದು ಆಕರ ಗ್ರಂಥದ ಸೇರ್ಪಡೆಯಾದಂತಾಯಿತು.

ಕರ್ನಾಟಕ ರಾಜ್ಯದ ವಿಶ್ವವಿದ್ಯಾಲಯಗಳು 20ನೆಯ ಶತಮಾನದ ಎಂಟನೆಯ ದಶಕದಲ್ಲಿ ಸ್ನಾತಕ ವಿದ್ಯಾರ್ಥಿಗಳಿಗೆ ಅಗತ್ಯವಾದ ಅನೇಕ ವಿಜ್ಞಾನ ಪಠ್ಯಗಳನ್ನೂ ಪರಾಮರ್ಶನ ಗ್ರಂಥಗಳನ್ನೂ ಪ್ರಕಟಿಸಿದ್ದುವು. ಆದರೆ ಸ್ನಾತಕ ಮಟ್ಟದಲ್ಲಿ ಕನ್ನಡ ಮಾಧ್ಯಮಕ್ಕೆ ಪ್ರೋತ್ಸಾಹ ಸಿಗದಿದ್ದಾಗ ಇಂಥ ಪ್ರಕಟಣೆಗಳು ಮುಂದುವರಿಯಲಿಲ್ಲ. ಇದಕ್ಕೆ ಅಪವಾದ ಎಂಬಂತೆ ಇಂಥ ಪ್ರಕಟಣೆಗಳು ಬೆಂಗಳೂರು ಕೃಷಿ ವಿಶ್ವವಿದ್ಯಾಲಯದಲ್ಲಿ 1990ರ ದಶಕದಲ್ಲೂ ಮುಂದುವರಿದುವು. ಕನ್ನಡ ಮಾಧ್ಯಮದಲ್ಲಿ ಓದಿ ಬಿ.ಎಸ್‌ಸಿ. (ಕೃಷಿ) ಪದವಿ ಪಡೆದ ವಿದ್ಯಾರ್ಥಿಗಳು ಯಾವುದೇ ಕೀಳರಿಮೆಗೆ ತುತ್ತಾಗದೆ ಆಡಳಿತ ಮತ್ತು ಕೃಷಿ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವುದನ್ನೂ ಸ್ನಾತಕೋತ್ತರ ಕೋರ್ಸುಗಳಿಗೆ ಕಾಲಿರಿಸಿ ಯಶಸ್ವಿಯಾಗುತ್ತಿರುವುದನ್ನೂ, ಕೃಷಿ

ವಿಶ್ವವಿದ್ಯಾಲಯ ಅಧಿಕೃತವಾಗಿ ಸಾರಿದೆ. ಹಂಪಿ ಕನ್ನಡ ವಿಶ್ವವಿದ್ಯಾಲಯ ಪದವಿಪೂರ್ವ ತರಗತಿಗಳಿಗಾಗಿ ವಿಜ್ಞಾನ ಪಠ್ಯ ಪುಸ್ತಕಗಳನ್ನು ಬರೆಯಿಸಿ ಪ್ರಕಟಿಸಿದೆ. ಪಠ್ಯಪುಸ್ತಕಗಳಲ್ಲಿ ಸಂಗ್ರಹವಾಗಿ ನಿರೂಪಿಸಿರುವ ವಿಷಯಗಳ ಬಗ್ಗೆ ಇನ್ನಷ್ಟು ತಿಳಿದುಕೊಳ್ಳಲು ಬಯಸುವ ವಿದ್ಯಾರ್ಥಿಗಳಿಗೂ ಅಧ್ಯಾಪಕರಿಗೂ ನೆರವಾಗುವ ಪುಸ್ತಕಗಳು ಕನ್ನಡದಲ್ಲಿ ದೊರೆಯಬೇಕೆಂಬ ಇರಾದೆಯಿಂದ ಕನ್ನಡ ಪುಸ್ತಕ ಪ್ರಾಧಿಕಾರ 'ಮೂಲಭೂತ ಶೈಕ್ಷಣಿಕ ಪುಸ್ತಕ ಮಾಲೆ'ಯಲ್ಲಿ ಹಲವು ವಿಜ್ಞಾನ ಕೃತಿಗಳನ್ನು ಪ್ರಕಟಿಸಿದೆ. ವಿಜ್ಞಾನ ದೀಪಮಾಲೆ, ಜನಪ್ರಿಯ ಪುಸ್ತಕ ಮಾಲೆಯಲ್ಲಿಯೂ ವಿಜ್ಞಾನ ಕೃತಿಗಳು ಬಂದುವು. ಹೀಗಿದ್ದರೂ ಮಾಧ್ಯಮಿಕ ಹಾಗೂ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಸಿಗುವ ವಿಜ್ಞಾನ ಪಠ್ಯಗಳೂ ಪ್ರತಿ ವರ್ಷವೂ ಒಂದಲ್ಲ ಒಂದು ಬಗೆಯ ಟೀಕೆಗೆ ಒಳಗಾಗುತ್ತಿವೆ. ಎಳೆಯ ವಿದ್ಯಾರ್ಥಿಗಳ ಮೇಲೆ ಆಳ ಪರಿಣಾಮ ಬೀರಬಲ್ಲ ವಿಜ್ಞಾನ ಪಠ್ಯಗಳಲ್ಲಿ ಪರಿಕಲ್ಪನೆ, ಸತ್ಯಾಂಶ, ವ್ಯಾಕರಣ, ಚಿತ್ರ ಮತ್ತು ಮುದ್ರಣಕ್ಕೆ ಸಂಬಂಧಿಸಿದ ದೋಷಗಳನ್ನು ನಿವಾರಿಸಲು ಬೇಕಾದ ವ್ಯವಸ್ಥೆಯನ್ನು ಕೆಲವೊಮ್ಮೆ ರೂಪಿಸಲು ಸಾಧ್ಯವಾಗದಿರುವುದೇ ಇದಕ್ಕೆ ಕಾರಣವಾಗಿದೆ.

ಇತ್ತೀಚೆಗೆ ಭೌತವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿವಿಜ್ಞಾನಗಳಂಥ ಸಾಂಪ್ರದಾಯಿಕ ವಿಭಾಗಗಳಷ್ಟೇ ಅಲ್ಲದೆ ಕಂಪ್ಯೂಟರ್, ಜೀವಿವೈವಿಧ್ಯ, ಪರಿಸರ, ಜೀವರಸಾಯನ ವಿಜ್ಞಾನ, ಸಾವಯವ ಕೃಷಿಯಂಥ ವಿಷಯಗಳೂ ಹೆಚ್ಚು ಹೆಚ್ಚಾಗಿ ಲೇಖಕರ ಗಮನ ಸೆಳೆಯುತ್ತಿವೆ. ಗ್ರಹಣ, ಧೂಮಕೇತು, ಅಂತರ್ಜಲ, ತ್ಯಾಜ್ಯವಸ್ತು ನಿರ್ವಹಣೆ, ಮಳೆನೀರಿನ ಸಂಗ್ರಹ, ಮೂಢನಂಬಿಕೆ, ಪವಾಡ ಪ್ರದರ್ಶನ, ಪ್ರಳಯ, ಫಲಜ್ಯೋತಿಷ್ಯ, ವಾಸ್ತುಗಳಂಥ ವಿಚಾರಗಳನ್ನು ವಸ್ತುನಿಷ್ಠವಾಗಿ ತಿಳಿಯಬೇಕೆನ್ನುವ ಕನ್ನಡದ ಓದುಗರಿಗೆ ಅವಶ್ಯವಾದ ಕೃತಿಗಳಿಗೆ ಈಗ ಅಭಾವವಿಲ್ಲ. ಉತ್ತಮ ವಿಜ್ಞಾನ ಕೃತಿಗಳು ಓದುಗರನ್ನು ಅಪಾರವಾಗಿ ಆಕರ್ಷಿಸುತ್ತಿವೆ. (ಜೆ.ಆರ್‌ಎಲ್.)

ವಿಜ್ಞಾನ ಸಾಹಿತ್ಯದಲ್ಲಿ ಬೇರೆ ಬೇರೆ ಪ್ರಕಾರಗಳುಂಟು. ವಿವಿಧ ಪ್ರಕಾರಗಳ ವಿಜ್ಞಾನ ಸಾಹಿತ್ಯದ ಆವಶ್ಯಕತೆ ಮತ್ತು ಅವುಗಳ ಪೂರೈಕೆ ಸಮಾಜದಲ್ಲಿ ಹೇಗೆ ಬೆಳೆಯುತ್ತದೆ ಎಂಬುದನ್ನು ವಿಶಾಲವಾಗಿ ಪರಿಶೀಲಿಸಿ ಕನ್ನಡ ಭಾಷೆಯಲ್ಲಿ ವಿಜ್ಞಾನ ಸಾಹಿತ್ಯದ ಬೆಳೆವಣಿಗೆಯನ್ನು ಸಮೀಕ್ಷಿಸಲಾಗಿದೆ.

ಕಾರ್ಯನಿರತ ವಿಜ್ಞಾನಿಗಳು ಸಾಮಾನ್ಯವಾಗಿ ವಿಜ್ಞಾನ ಸಾಹಿತ್ಯ ಎಂದು ಕರೆಯುವುದು ಸಂಶೋಧನೆಯ ಫಲಿತಾಂಶಗಳನ್ನು ಪ್ರಚುರಪಡಿಸುವ ಕೃತಿಗಳನ್ನು. ಆಧುನಿಕ ವಿಜ್ಞಾನ ಇಂದಿನ ರೂಪದಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಜನ್ಮತಾಳಿದ ಹೊಸದರಲ್ಲಿ, ಸಂಶೋಧನ ವರದಿಗಳ ಪ್ರಕಟಣೆಗೇ ಮೀಸಲಾದ ವಿಜ್ಞಾನ ಪತ್ರಿಕೆಗಳು ಇನ್ನೂ ಹೆಚ್ಚಾಗಿ ಇಲ್ಲದಿದ್ದ ಕಾಲದಲ್ಲಿ, ವಿಜ್ಞಾನಿಗಳು ತಮ್ಮ ಸಂಶೋಧನೆಯ ಫಲಿತಾಂಶಗಳನ್ನು ಸಹ ಪುಸ್ತಕಗಳ ರೂಪದಲ್ಲಿ ಪ್ರಚುರಪಡಿಸುತ್ತಿದ್ದರು. ಕೊಪರ್ನಿಕಸ್‌ನ ಡಿ ಆರ್ಬಿಯಂ ಸೆಲೆಸ್ಟಿಯಂ ರೆವಲ್ಯೂಷನಿಬಸ್, ಡಾರ್ವಿನ್ನನ ಆರಿಜಿನ್ ಆಫ್ ಸ್ಪೀಷೀಸ್, ನ್ಯೂಟನ್ನನ ಪ್ರಿನ್ಸಿಪಿಯ, ರಾಬರ್ಟ್ ಬಾಯಿಲನ ಸ್ಕೆಪ್ಟಿಕಲ್ ಕೆಮಿಸ್ಟ್- ಇವೆಲ್ಲವೂ ಅಂಥ ಪುಸ್ತಕಗಳೇ. ಇಂದು ಸಾಮಾನ್ಯವಾಗಿ ಸಂಶೋಧನೆಯ ವರದಿಗಳೆಲ್ಲವೂ ಪ್ರಕಟವಾಗುವುದು ಅದಕ್ಕೇ ಮೀಸಲಾಗಿರುವ ಅನೇಕಾನೇಕ ನಿಯತಕಾಲಿಕ ಪತ್ರಿಕೆಗಳಲ್ಲಿ. ವಿಜ್ಞಾನಿಗಳು ಪರಿಮಿತ ಅರ್ಥದಲ್ಲಿ ಸಾಹಿತ್ಯ ಎಂಬ ಶಬ್ದವನ್ನು ಬಳಸುವುದು ಈ ಪ್ರಕಾರದ ಸಾಹಿತ್ಯಕ್ಕೆ. ಕನ್ನಡದಲ್ಲಿ ಈ ಬಗೆಯ ಸಾಹಿತ್ಯ ಇಲ್ಲವೇ ಇಲ್ಲ ಎನ್ನಬಹುದು. ಇದಕ್ಕೆ ಕಾರಣ ಶತಮಾನಗಳ ಕಾಲ ದಾಸ್ಯದಲ್ಲಿ ಸಿಕ್ಕಿದ್ದ ಭಾರತದಲ್ಲಿ ಆಧುನಿಕ ವಿಜ್ಞಾನ ಯುರೋಪ್ ದೇಶಗಳಲ್ಲಿ ವಿಕಾಸಗೊಂಡಂತೆ ಸ್ವಾಭಾವಿಕವಾಗಿ ವಿಕಾಸಗೊಳ್ಳಲು ಸಾಧ್ಯವಾಗಲಿಲ್ಲ. ಕಳೆದ ಒಂದು ಶತಮಾನದಲ್ಲಿ ಯುರೋಪಿನಿಂದ ಇಲ್ಲಿಗೆ ಬಂದ ವಿಜ್ಞಾನ, ಇಂಗ್ಲಿಷ್ ಭಾಷೆಯ ಮೂಲಕ ಬಂತು. ಆದ್ದರಿಂದ ಈಚೆಗೆ ಸ್ವತಂತ್ರ ಸಂಶೋಧನೆಗಳನ್ನು ಕೈಗೊಂಡ ವಿಜ್ಞಾನಿಗಳು ಸಹಜವಾಗಿಯೇ ತಮ್ಮ ಫಲಿತಾಂಶಗಳನ್ನು ವಿದೇಶಿ ಭಾಷೆಗಳ ಮೂಲಕವೇ ವರದಿಮಾಡುತ್ತ ಬಂದಿದ್ದಾರೆ.

ವಿದ್ಯಾರ್ಥಿಗಳಿಗೆ ಅವಶ್ಯವಾದ ಪಠ್ಯಪುಸ್ತಕಗಳು, ಪ್ರಕರಣ ಗ್ರಂಥಗಳು (ಟ್ರಿಟೈಸಸ್), ಏಕಪ್ರಬಂಧಗಳು (ಮೊನೊಗ್ರಾಫ್ಸ್) ಮುಂತಾದವು ಇನ್ನೊಂದು ಬಗೆಯವು. ಕನ್ನಡ ಮಾಧ್ಯಮದಲ್ಲಿ ಬೋಧನೆ ನಡೆದು,ಈ ಬಗೆಯ ಸಾಹಿತ್ಯಕ್ಕೆ ಬೇಡಿಕೆ ಒದಗಿಬಂದರೆ ಅವು ತಾವಾಗಿಯೇ ಬೆಳಕು ಕಾಣುತ್ತವೆ. ಐವತ್ತು ವರ್ಷಗಳ ಹಿಂದೆ ಮಾಧ್ಯಮಿಕ ಶಾಲೆಯಲ್ಲಿ ಸಹ ಇಂಗ್ಲಿಷ್ ಮಾಧ್ಯಮವೇ ಬಳಕೆಯಲ್ಲಿದ್ದ ಕಾಲದಲ್ಲಿ ಬಹುಶಃ ಆಧುನಿಕ ವಿಜ್ಞಾನದ ಅಧ್ಯಯನಕ್ಕೆ ಬೇಕಾಗುವ ಪಠ್ಯಪುಸ್ತಕಗಳ ಹೆಸರೇ ಇರಲಿಲ್ಲವೆಂದು ಕಾಣುತ್ತದೆ. 1930-40ರ ದಶಕದಲ್ಲಿ ನಮ್ಮ ಪ್ರೌಢಶಾಲೆಗಳಲ್ಲಿ ಕನ್ನಡ ಮಾಧ್ಯಮವನ್ನು ಜಾರಿಗೆ ತಂದಮೇಲೆ ಆ ಮಟ್ಟಕ್ಕೆ ತಯಾರಿಸಿದ ವಿಜ್ಞಾನ ಪಠ್ಯಪುಸ್ತಕಗಳು ಹೇರಳವಾಗಿ ಪ್ರಕಟವಾಗಿವೆ. ಮೈಸೂರು ವಿಶ್ವವಿದ್ಯಾನಿಲಯ ಕೈಗೊಂಡಿರುವ ಕನ್ನಡ ಗ್ರಂಥ ಸೂಚಿ (ಬಿಬ್ಲಿಯೊಗ್ರಫಿ) ಯೋಜನೆಯ ಅಂಗವಾಗಿ ಪ್ರಕಟವಾಗಿರುವ (1971) ಅದರ ಮೊದಲನೆಯ ಸಂಪುಟದ ಪುಟಗಳ ಮೇಲೆ ಕಣ್ಣು ಹಾಯಿಸಿದರೆ ಈ ಮಾತು ಸತ್ಯವೆಂಬುದು ಸ್ಪಷ್ಟವಾಗುತ್ತದೆ. ಈ ಸಂಪುಟದಲ್ಲಿ ಗಣಿತ ಮತ್ತು ವಿವಿಧ ವಿಜ್ಞಾನಗಳಿಗೆ ಸಂಬಂಧಿಸಿದಂತೆ ಪ್ರಾಥಮಿಕ ಪಠ್ಯಪುಸ್ತಕಗಳಿಂದ ಪ್ರೌಢಗ್ರಂಥಗಳವರೆಗೆ, ಉಪಯುಕ್ತ ಕೋಷ್ಟಕ ಕೈಪಿಡಿಗಳಿಂದ ಜನಪ್ರಿಯ ವಿಜ್ಞಾನ ಪುಸ್ತಕಗಳವರೆಗೆ ಇದುವರೆಗೆ ಅಚ್ಚಾಗಿರುವ ಎಲ್ಲ ಕನ್ನಡ ಗ್ರಂಥಗಳನ್ನೂ ಪಟ್ಟಿ ಮಾಡುವ ಯತ್ನ ನಡೆದಿದೆ. ಈಗ ಸಿಕ್ಕಿರುವ 1 ಪೈಯಿಂದ 1,000 ರೂಪಾಯಿವರೆಗೆ ಅಸಲಿಗೆ 1 ದಿವಸದಿಂದ 100 ವರ್ಷಪರ್ಯಂತ 100ಕ್ಕೆ 12ರ ಪ್ರಕಾರ ಆಗುವ ಬಡ್ಡಿಯ ಪಟ್ಟಿಗಳು (ಮಂಗಳೂರು ಜರ್ಮನ್ ಮಿಶನ್ ಪ್ರೆಸ್, 1858) ಎಂಬ ಮೊತ್ತಮೊದಲ ಪುಸ್ತಕದಿಂದ 1968ರ ವರೆಗೆ ಪ್ರಕಟವಾಗಿರುವ 1,449 ಮುದ್ರಿತ ಗ್ರಂಥಗಳ ವಿವರಗಳನ್ನು ಈ ಸಂಪುಟದಲ್ಲಿ ಕಾಣಬಹುದು (ಬಹಶಃ ಒಟ್ಟು ಸಂಖ್ಯೆಯ ಸೇ.20 ಪುಸ್ತಕಗಳು ಲೆಕ್ಕಕ್ಕೆ ಸಿಕ್ಕಿರದೆ ಹೋಗಿರಬಹುದುದೆಂದು ಇದರ ಸಂಪಾದಕ ಮಂಡಳಿಯ ಅಂದಾಜು). ಇದರಲ್ಲಿ ಹೆಸರಿರುವ 422 ಗಣಿತ ಗ್ರಂಥಗಳಲ್ಲಿ ಹತ್ತಿಪ್ಪತ್ತು ವಿನಾ ಉಳಿದ ಎಲ್ಲವೂ ಅಂಥ ಪಠ್ಯಪುಸ್ತಗಳೇ. ಭೌತವಿಜ್ಞಾನ, ರಸಾಯನ ವಿಜ್ಞಾನ, ಜೀವವಿಜ್ಞಾನಗಳ ಬಗ್ಗೆಯೂ ಇದೇ ಮಾತು ಹೇಳಬಹುದು.

ಕಾಲೇಜು ಮಟ್ಟದಲ್ಲಿ ಕನ್ನಡ ಮಾಧ್ಯಮ ಬಳಸಲು ಮೊತ್ತಮೊದಲು ಪ್ರಯತ್ನ ನಡೆದದ್ದು 1957ರಲ್ಲಿ. ವಿಶ್ವವಿದ್ಯಾನಿಲಯಗಳು ಕನ್ನಡದಲ್ಲಿ ಬೋಧನೆಗೆ ಏರ್ಪಾಡು ಮಾಡಿ ಕನ್ನಡದಲ್ಲಿ ಪಠ್ಯಪುಸ್ತಕ ರಚನೆಗೆ ಉತ್ತೇಜನ ನೀಡಿದುವು. ಒಂದೊಂದು ವಿಜ್ಞಾನ ವಿಭಾಗದಲ್ಲೂ ಹಲವಾರು ಪಠ್ಯಪುಸ್ತಕಗಳು ಪ್ರಕಟವಾಗಿವೆ. ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಉತ್ಕೃಷ್ಟ ಇಂಗ್ಲಿಷ್ ಪಠ್ಯಪುಸ್ತಕಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದೆ. ಸ್ವಂತವಾಗಿ ಸ್ನಾತಕಮಟ್ಟದ ಪಠ್ಯಪುಸ್ತಕಗಳನ್ನು ರಚಿಸುವವರಿಗೆ ಉತ್ತೇಜನ ನೀಡುವುದಕ್ಕಾಗಿ ಹಿಂದೆ ಒಂದು ಸ್ಪರ್ಧೆಯನ್ನೂ ಏರ್ಪಡಿಸಲಾಗಿತ್ತು. 1970ರಲ್ಲಿ ನಡೆದ ಈ ಸ್ಪರ್ಧೆಯಲ್ಲಿ ಬಹುಮಾನ ಗಳಿಸಿದ ಭೌತವಿಜ್ಞಾನ, ರಸಾಯನವಿಜ್ಞಾನ ಮತ್ತು ಮನಶ್ಶಾಸ್ತ್ರದ ಪುಸ್ತಕಗಳು ವಿಷಯ ನಿರೂಪಣೆ, ಆಧುನಿಕತೆ ಮತ್ತು ಪ್ರೌಢಿಮೆಗಳಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಪ್ರಕಟವಾಗಿರುವ ಆ ವಿಷಯಗಳನ್ನು ಕುರಿತ ಅತ್ಯುತ್ತಮ ಗ್ರಂಥಗಳಿಗೆ ಸರಿಸಮಾನವಾಗಿವೆಯೆಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಪಠ್ಯಪುಸ್ತಕಗಳ ತಯಾರಿಕೆಗೆ ಬೆಂಗಳೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳೂ ವಿಶೇಷ ಆದ್ಯತೆ ಕೊಟ್ಟು ಈಗಾಗಲೇ ಹಲವಾರು ಪುಸ್ತಕಗಳನ್ನು ಹೊರತಂದಿವೆ. ಸ್ನಾತಕಮಟ್ಟದ ವಿದ್ಯಾರ್ಥಿಗಳಿಗೆ ಬೇಕಾಗುವ ಎಲ್ಲ ವಿಜ್ಞಾನ ವಿಭಾಗಗಳ ಪಠ್ಯಪುಸ್ತಕಗಳು ಈಗ ದೊರೆಯುತ್ತವೆ.

ವಿಜ್ಞಾನ ಸಾಹಿತ್ಯದ ಇನ್ನೊಂದು ಪ್ರಕಾರ ಜನಪ್ರಿಯ ವಿಜ್ಞಾನ. ತಜ್ಞರಲ್ಲದ ಓದುಗರನ್ನು ಉದ್ದೇಶಿಸಿ ವಿಜ್ಞಾನದ ಸಾಧನೆಗಳನ್ನು ವಿವರಿಸುವುದು, ಜನತೆಯಲ್ಲಿ ವಿಜ್ಞಾನ ವಿಧಾನ ಮತ್ತು ವಿಜ್ಞಾನ ಮನೋಧರ್ಮವನ್ನು ಹರಡುವುದು ಈ ಬಗೆಯ ಸಾಹಿತ್ಯದ ಗುರಿ. ವಿಜ್ಞಾನ ಸಾಹಿತ್ಯದ ಈ ಒಂದು ಪ್ರಕಾರ ಕನ್ನಡದಲ್ಲಿ ಇಪ್ಪತ್ತನೆಯ ಶತಮಾನದಲ್ಲಿ ಹೇಗೆ ಬೆಳೆದು ಬಂದಿದೆ ಎಂಬುದನ್ನು ಸ್ಥೂಲವಾಗಿ ಸಮೀಕ್ಷಿಸಬಹುದು.

ಸಂಶೋಧನ ಕೃತಿಗಳಂತೆ ಮತ್ತು ಪಠ್ಯಪುಸ್ತಕಗಳಂತೆ ಜನಪ್ರಿಯ ವಿಜ್ಞಾನ ಸಾಹಿತ್ಯವೂ ಜನತೆಯ ಆವಶ್ಯಕತೆ ಮತ್ತು ಬೇಡಿಕೆಗಳನ್ನನುಸರಿಸಿ ತಾನೇ ತಾನಾಗಿ ಬೆಳೆಯುವುದೆಂದು ಹೇಳುವ ಹಾಗಿಲ್ಲ. ಜನತೆಗೆ ಏನು ಬೇಕು ಎಂಬ ಬಗ್ಗೆ ತಜ್ಞರಲ್ಲಿ ಮೂಡುವ ಪ್ರಜ್ಞೆ, ವಿಜ್ಞಾನದ ಪರಿಭಾಷೆಯನ್ನು ಆದಷ್ಟು ಕಡಿಮೆ ಮಾಡಿ ಜನಸಾಮಾನ್ಯರ ಭಾಷೆಯಲ್ಲಿ ಅದನ್ನು ಒದಗಿಸಬೇಕೆಂಬ ಪ್ರೇರಣೆ, ಅದಕ್ಕೆ ಬೇಕಾದ ಸಾಮರ್ಥ್ಯ - ಇವು ಬೆಳೆಯುವವರೆಗೂ ಜನಪ್ರಿಯ ವಿಜ್ಞಾನ ಸಾಹಿತ್ಯ ಬೆಳೆಯಲಾರದು.

ಪಾಶ್ಚಾತ್ಯ ಭಾಷೆಗಳಲ್ಲಿ, ಮುಖ್ಯವಾಗಿ ಇಂಗ್ಲಿಷ್ ಭಾಷೆಯಲ್ಲಿ ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದವರೆಗೆ, ಅಂದರೆ ಆಧುನಿಕ ವಿಜ್ಞಾನಕ್ಕೆ ಇಂದಿನ ರೂಪ ಕೊಟ್ಟವರಲ್ಲಿ ಮೊದಲಿಗರೆನ್ನಬಹುದಾದ ಗೆಲಿಲಿಯೊ, ನ್ಯೂಟನ್ ಮೊದಲಾದವರ ಸಂಶೋಧನೆಗಳ ಫಲವಾಗಿ ವಿಜ್ಞಾನ ಮನುಷ್ಯನ ಜ್ಞಾನಾನ್ವೇಷಣೆಯ ಒಂದು ವಿಶೇಷ ಶಾಖೆಯಾಗಿ ಬೆಳೆಯಲು ಪ್ರಾರಂಭಿಸಿದ ನೂರಿನ್ನೂರು ವರ್ಷಗಳವರೆಗೆ, ಜನಪ್ರಿಯ ವಿಜ್ಞಾನ ಎಂದು ಕರೆಯುಬಹುದಾದ ಸಾಹಿತ್ಯ ಪ್ರಕಾರ ಜನ್ಮತಾಳಲಿಲ್ಲ. ಡಾರ್ವಿನ್ನನ ಅನುಯಾಯಿಗಳಲ್ಲಿ ಪ್ರಮುಖನಾದ ಥಾಮಸ್ ಹಕ್ಸ್ಲಿಯನ್ನು ಜನಪ್ರಿಯ ವಿಜ್ಞಾನದ ಆದ್ಯಪ್ರವರ್ತಕ ಎನ್ನಬಹುದು. ಡಾರ್ವಿನ್ನನ ವಿಕಸನವಾದದ ಪರಿಣಾಮವಾಗಿ ಕ್ರೈಸ್ತಮತಾವಲಂಬಿಗಳ ಕೆಲವು ಮುಖ್ಯ ನಂಬಿಕೆಗಳಿಗೆ ಪೆಟ್ಟು ಬಿದ್ದ ಕಾರಣ ಯುರೋಪ್ ದೇಶಗಳಲ್ಲಿ ವಿಕಾಸವಾದವನ್ನು ಕುರಿತು ದೊಡ್ಡ ವಿವಾದವೆದ್ದಿತು. ಆಗ ವಿಜ್ಞಾನದ ಒಳ ವ್ಯವಹಾರಗಳು ಹೊರಗಿನವರ ಗಮನ ಸೆಳೆದುವು. ವಿಜ್ಞಾನದ ಬಗ್ಗೆ ಸಾಮಾನ್ಯ ಜನತೆಗೆ ತಿಳಿವಳಿಕೆ ಕೊಡಬೇಕಾದ ಅಗತ್ಯ ವಿಜ್ಞಾನಿಗಳಿಗೆ ಮನವರಿಕೆಯಾಯಿತು. ಆ ಕೆಲಸವನ್ನು ಹಕ್ಸ್ಲಿ ಅತ್ಯಂತ ಸಮರ್ಥವಾಗಿ ನೆರವೇರಿಸಿದ. ವಿಜ್ಞಾನದ ಇತಿಹಾಸವನ್ನು ಸ್ಥೂಲವಾಗಿ ಅವಲೋಕಿಸಿದರೆ ವಿಜ್ಞಾನದ ಬಗ್ಗೆ ನಿರ್ಲಿಪ್ತ ಭಾವನೆ ತಾಳಿದ್ದ ಸಾಮಾನ್ಯ ಜನತೆಯನ್ನು ಹೊಡೆದೆಬ್ಬಿಸಿದ ಇಂಥ ಹಲವಾರು ನಿದರ್ಶನಗಳನ್ನು ಕಾಣಬಹುದು. ಐನ್‌ಸ್ಟೈನನ ಸಾಪೇಕ್ಷತಾವಾದದ ಪ್ರಕಟಣೆ, ಹಿರೋಷಿಮದಲ್ಲಿ ಸಿಡಿದ ಪರಮಾಣು ಬಾಂಬು, ರಷ್ಯನರು ಹಾರಿಬಿಟ್ಟ ಮೊದಲನೆಯ ಸ್ಪೂತ್ನಿಕ್ ಮುಂತಾದ - ಈ ಘಟನೆಗಳಿಂದ ವಿಜ್ಞಾನದ ಬಗ್ಗೆ ಜನರ ಆಸಕ್ತಿ ಹೆಚ್ಚಾದಂತೆ ಜನಪ್ರಿಯ ವಿಜ್ಞಾನ ಸಾಹಿತ್ಯ ಪಾಶ್ಚಾತ್ಯ ಭಾಷೆಗಳಲ್ಲಿ ವಿಪುಲವಾಗಿ ಬೆಳೆಯಿತು.

ಭಾರತದಲ್ಲಿ ಆಧುನಿಕ ವಿಜ್ಞಾನದ ಅಧ್ಯಯನಕ್ಕೆ ಆಸ್ಪದ ದೊರೆತದ್ದು ಬಹಳ ತಡವಾಗಿ. ಪಾಶ್ಚಾತ್ಯ ಶಿಕ್ಷಣ ಪದ್ಧತಿಯನ್ನು ಭಾರತಕ್ಕೆ ತಂದ ಬ್ರಿಟಿಷರು ನಮಗೆ ವಿಜ್ಞಾನ ಶಿಕ್ಷಣವನ್ನು ಒದಗಿಸುವ ಬಗ್ಗೆ ಆಸಕ್ತಿ ತೋರಲಿಲ್ಲ. ಅವರು ನೀಡಿದ ಶಿಕ್ಷಣದ ಉದ್ದೇಶ ತಮಗೆ ಬೇಕಾದ ಗುಮಾಸ್ತರನ್ನೂ ಆಡಳಿತಗಾರರನ್ನೂ ತಯಾರುಮಾಡುವುದಕ್ಕಷ್ಟೇ ಆಗಿತ್ತು. ಆದರೆ ನಮ್ಮ ದೇಶದ ನೈಸರ್ಗಿಕ ಸಂಪತ್ತಿನ ಪೂರ್ಣ ಪ್ರಯೋಜನ ಪಡೆಯುವುದಕ್ಕಾಗಿ ಆಧುನಿಕ ವಿಧಾನಗಳನ್ನು ಬಳಸಬೇಕಾಗಿ ಬಂದು, ಅದಕ್ಕೆ ಅವಶ್ಯವೆನಿಸುವ ತಾಂತ್ರಿಕರನ್ನೂ ಇಲ್ಲಿಯೇ ತಯಾರುಮಾಡಬೇಕಾಗಿ ಬಂದುದರಿಂದ ಅಲ್ಪ ಪ್ರಮಾಣದಲ್ಲಿಯಾದರೂ ವಿಜ್ಞಾನ ಶಿಕ್ಷಣವನ್ನು ಪ್ರಾರಂಭಿಸಬೇಕಾಯಿತು. ಹೀಗಾಗಿ ನಮ್ಮ ಜನತೆಗೆ ಆಧುನಿಕ ವಿಜ್ಞಾನದ ಸಂಪರ್ಕ ಒದಗಿಬಂದದ್ದು ಬಹು ನಿಧಾನವಾಗಿ ಮತ್ತು ಬಹು ಕಡಿಮೆ ಪ್ರಮಾಣದಲ್ಲಿ. ಆದ್ದರಿಂದ ಇತ್ತೀಚಿನವರೆಗೂ ಜನಪ್ರಿಯ ವಿಜ್ಞಾನ ಸಾಹಿತ್ಯಕ್ಕೆ ಜನತೆಯಿಂದ ಬೇಡಿಕೆ ಬರುವ ಸಂಭವವೇ ಇರಲಿಲ್ಲ. ಅಂಥ ಸಾಹಿತ್ಯವೇನಾದರೂ ಸೃಷ್ಟಿಯಾಗುವುದಿದ್ದರೆ ಅದರ ಪ್ರಯೋಜನವನ್ನು ಮನಗಂಡ ದೂರದೃಷ್ಟಿಯುಳ್ಳ ಹಲಕೆಲವು ತಜ್ಞರ ಪ್ರಯತ್ನದಿಂದ ಮಾತ್ರ ಸಾಧ್ಯವಾಗಬಹುದಿತ್ತು.

ಈ ಹಿನ್ನೆಲೆಯಲ್ಲಿ ನೋಡಿದಾಗ ಕನ್ನಡದಲ್ಲಿ ಜನಪ್ರಿಯ ವಿಜ್ಞಾನ ಸಾಹಿತ್ಯ ರಚನೆಗೆ ತೊಡಗಿದವರಲ್ಲಿ ಮೊದಲಿಗರೆನ್ನಬಹುದಾದ ಬೆಳ್ಳಾವೆ ವೆಂಕಟನಾರಣಪ್ಪ ಮತ್ತು ನಂಗಪುರಂ ವೆಂಕಟೇಶ ಅಯ್ಯಂಗಾರ್ಯರ ದೂರದರ್ಶಿತ್ವದ ಬಗ್ಗೆ ವಿಸ್ಮಯ ಉಂಟಾಗುವುದು ಸಹಜ.

1917ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಸ್ಥಾಪಿತವಾಗಿ ಕೇವಲ ಒಂದು ವರ್ಷವಾಗಿತ್ತು. ಮೈಸೂರು ರಾಜ್ಯದಲ್ಲಿದ್ದ ಒಂದೇ ಒಂದು ಕಾಲೇಜಾದ ಸೆಂಟ್ರಲ್ ಕಾಲೇಜಿನಲ್ಲಿ ಬೆರಳೆಣಿಕೆಯಷ್ಟು ವಿದ್ಯಾರ್ಥಿಗಳಿದ್ದರು. ವಿದ್ಯಾವಂತರೆನಿಸಿಕೊಂಡವರು ಕನ್ನಡದಲ್ಲಿ ಮಾತನಾಡಿದರೆ ಅಥವಾ ಬರೆದರೆ ಅವಮಾನವೆಂಬ ಭಾವನೆಯಿದ್ದ ಆ ಕಾಲದಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಭೌತವಿಜ್ಞಾನ ಪ್ರಾಧ್ಯಾಪಕರಾಗಿದ್ದ ಬೆಳ್ಳಾವೆ ವೆಂಕಟನಾರಣಪ್ಪನವರೂ ಮೈಸೂರು ಸರ್ಕಾರದ ಪವನಶಾಸ್ತ್ರ ವೀಕ್ಷಣಾಲಯದ ಮುಖ್ಯಸ್ಥರಾಗಿದ್ದ ನಂಗಪುರಂ ವೆಂಕಟೇಶ ಅಯ್ಯಂಗಾರ್ಯರೂ ವಿಜ್ಞಾನವನ್ನು ಕನ್ನಡ ಭಾಷೆಯ ಮೂಲಕ ಜನತೆಯಲ್ಲಿ ಹರಡುವ ಆವಶ್ಯಕತೆಯನ್ನು ಮನಗಂಡರು. ಕರ್ನಾಟಕ ವಿಜ್ಞಾನ ಪ್ರಚಾರಿಣಿ ಸಮಿತಿ ಎಂಬ ಒಂದು ಸಂಸ್ಥೆಯನ್ನು ಕಟ್ಟಿ ಅದರ ವತಿಯಿಂದ ವಿಜ್ಞಾನ ಎಂಬ ಒಂದು ಮಾಸಪತ್ರಿಕೆಯನ್ನು ಹೊರಡಿಸುವ ಸಾಹಸ ಮಾಡಿದರು. ಅದರ ಸಂಪಾದಕತ್ವವನ್ನು ಅವರಿಬ್ಬರೂ ವಹಿಸಿಕೊಂಡರು. ಪತ್ರಿಕೆಯ ಧ್ಯೇಯೋದ್ದೇಶಗಳ ಬಗ್ಗೆ ಅವರಿಗೆ ಖಚಿತವಾದ ಮತ್ತು ಸ್ಪಷ್ಟವಾದ ಅಭಿಪ್ರಾಯವಿತ್ತೆಂಬುದು ಪತ್ರಿಕೆಯ ಮೊದಲ ಸಂಚಿಕೆಯಲ್ಲಿನ ಅವತರಣಿಕೆಯಿಂದ ವ್ಯಕ್ತವಾಗುತ್ತದೆ. ಈಗ ಸುಮಾರು ಅರವತ್ತು ಎಪ್ಪತ್ತು ವರ್ಷಗಳಿಂದಲೂ ಆಂಗ್ಲ ಭಾಷಾಭ್ಯಾಸ ನಮ್ಮ ದೇಶದಲ್ಲಿ ದಿನೇ ದಿನೇ ಅಭಿವೃದ್ಧಿಯಾಗುತ್ತಿದ್ದರೂ ವಿಜ್ಞಾನದ ವಿಷಯವಾಗಿ ಮಾತ್ರ ವಿಶೇಷ ಶ್ರದ್ಧೆ ತೋರಿಬಂದಿಲ್ಲ. ಆ ಭಾಗದಲ್ಲಿ ಈಗೀಗ ಕಣ್ಣು ಬಿಡುತ್ತಿದ್ದೇವೆ. ಜನ ಸಾಮಾನ್ಯರಲ್ಲೆಲ್ಲ ವಿಜ್ಞಾನವನ್ನು ಹರಡದ ಹೊರತು ದೇಶ ಅಭಿವೃದ್ಧಿ ಸ್ಥಿತಿಗೆ ಬರಲಾರದು. ಇದಕ್ಕಾಗಿ ಆಂಗ್ಲ ಭಾಷೆಯಲ್ಲಿ ವಿಜ್ಞಾನ ಪರಿಶ್ರಮವುಳ್ಳ ದೇಶಾಭಿಮಾನಿಗಳು ಸಾವಕಾಶ ಮಾಡದೆ ಈ ಕೆಲಸವನ್ನು ಮಾಡಲು ತೊಡಗಬೇಕೆಂದು ನಮ್ಮ ಪ್ರಾರ್ಥನೆ ಎಂದು ಅವರು ಕೇಳಿಕೊಂಡಿದ್ದಾರೆ.

ಅಂದಿನ ಪರಿಸ್ಥಿತಿಯಲ್ಲಿ ಅಂಥದೊಂದು ಪತ್ರಿಕೆಗೆ ಲೇಖನಗಳನ್ನೂ ಇತರ ಸಾಮಗ್ರಿಯನ್ನೂ ಒದಗಿಸುವುದು ಅತ್ಯಂತ ಪ್ರಯಾಸಕರ ವಾಗಿದ್ದಿರಬೇಕು. ಆದ್ದರಿಂದಲೇ ಅದರ ಜೀವಿತಕಾಲದಲ್ಲಿ ಹೊರಬಂದ ಎಲ್ಲ ಸಂಚಿಕೆಗಳಲ್ಲಿ ಪ್ರಕಟವಾದ ಒಟ್ಟು ಸುಮಾರು 40 ಲೇಖನಗಳಲ್ಲಿ ಅರ್ಧ ಭಾಗದಷ್ಟು ಲೇಖನಗಳಿಗೆ ವೆಂಕಟನಾರಣಪ್ಪನವರೇ ಲೇಖಕರು, ಇಲ್ಲವೇ ಸಹ ಲೇಖಕರು. ಉಳಿದವುಗಳಲ್ಲಿ ಆರೇಳು ಲೇಖನಗಳು ವೆಂಕಟೇಶ ಅಯ್ಯಂಗಾರ್ಯರು ಬರೆದವು. ಅವರಿಬ್ಬರಲ್ಲದೆ ಇತರ ಹತ್ತು ಹದಿನೈದು ಜನ ತಜ್ಞರನ್ನು ಅವರೇ ಪ್ರೇರೇಪಿಸಿ, ಅವರಿಂದಲೂ ಲೇಖನಗಳನ್ನು ಬರೆಸಿ ಪ್ರಕಟಿಸಿರುವುದು ಕಂಡುಬರುತ್ತದೆ. ವಿಜ್ಞಾನ ಲೇಖನಗಳಲ್ಲದೆ ವಿವಿಧ ವಿಜ್ಞಾನ ವಿಷಯ ಸಂಗ್ರಹ ಎಂಬ ಶೀರ್ಷಿಕೆಯಲ್ಲಿ ಹೊಸ ವೈಜ್ಞಾನಿಕ ಸಂಶೋಧನೆಗಳೇ ಮೊದಲಾದ ಸುದ್ದಿಗಳನ್ನು ನೇಚರ್, ಸೈಂಟಿಫಿಕ್ ಅಮೆರಿಕನ್ ಮುಂತಾದ ಪ್ರಸಿದ್ಧ ವಿಜ್ಞಾನ ಪತ್ರಿಕೆಗಳಿಂದ ಆಯ್ದು ಪತ್ರಿಕೆಯ ಸಂಚಿಕೆಗಳಲ್ಲಿ ಪ್ರಕಟಿಸುತ್ತಿದ್ದರು.

ಪತ್ರಿಕೆಗೆ ಸಾಮಗ್ರಿಯನ್ನೊದಗಿಸುವುದರಲ್ಲಿ ಎಷ್ಟೇ ಕಷ್ಟಗಳಿದ್ದರೂ ಅವುಗಳನ್ನೆದುರಿಸಿ ಮಾಸಪತ್ರಿಕೆಯನ್ನು ನಡೆಸಿಕೊಂಡು ಬರಲು ಅಗತ್ಯವಾದ ಶ್ರದ್ಧೆ ಉತ್ಸಾಹಗಳು ಸಂಪಾದಕರಲ್ಲಿದ್ದುವಾದರೂ ವಿಜ್ಞಾನಕ್ಕೇ ಮೀಸಲಾದ ಪತ್ರಿಕೆಯೊಂದು ಅಭಿವೃದ್ಧಿ ಹೊಂದಲು ಕಾಲವಿನ್ನೂ ಪಕ್ವವಾಗಿರಲಿಲ್ಲ. ಜನತೆಯಿಂದ ಅದಕ್ಕೆ ಆಸರೆ ದೊರೆಯಲಿಲ್ಲ. ಹನ್ನೆರಡು ಸಂಚಿಕೆಗಳ ಒಂದು ಸಂಪುಟ ಮುಗಿಸಿ ಪತ್ರಿಕೆಯನ್ನು ನಿಲ್ಲಿಸಬೇಕಾಯಿತು.

ಕರ್ನಾಟಕ ವಿಜ್ಞಾನ ಪ್ರಚಾರಿಣಿ ಸಮಿತಿಯ ಚಟುವಟಿಕೆ ವಿಜ್ಞಾನ ಪತ್ರಿಕೆಯ ನಿರ್ವಹಣೆಗೆ ಮಾತ್ರ ಮೀಸಲಾಗಿರಲಿಲ್ಲ. ಸಮಿತಿಯ ಆಶ್ರಯದಲ್ಲಿ ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ವಿಜ್ಞಾನ ವಿಷಯಗಳನ್ನು ಕುರಿತು ಕನ್ನಡದಲ್ಲಿ ಉಪನ್ಯಾಸ ಮಾಲೆಗಳು ನಡೆದುವೆಂದೂ ಅದಕ್ಕೆ ಮೈಸೂರು ಸರ್ಕಾರದ ನೆರವನ್ನು ಸಂಪಾದಿಸಿಕೊಳ್ಳಲಾಗಿತ್ತೆಂದೂ ಸಮಿತಿಯ ಗೌರವ ಕಾರ್ಯದರ್ಶಿಯಾಗಿದ್ದ ವೆಂಕಟನಾರಣಪ್ಪನವರೇ ನೀಡಿದ ಮೊದಲ ಉಪನ್ಯಾಸಕ್ಕೆ ಆಗಿನ ದಿವಾನರಾಗಿದ್ದ ಎಂ.ವಿಶ್ವೇಶ್ವರಯ್ಯನವರು ಬಂದು ಕನ್ನಡದಲ್ಲಿ ಉದ್ಘಾಟನ ಭಾಷಣ ಮಾಡಿದರೆಂದೂ ವಿಜ್ಞಾನದ ಸಂಚಿಕೆಯೊಂದರಿಂದ ತಿಳಿದುಬರುತ್ತದೆ.

ವಿಜ್ಞಾನ ಪ್ರಚಾರಿಣಿ ಸಮಿತಿ ಕೆಲಕಾಲದ ತರುವಾಯ ಅನಿವಾರ್ಯವಾಗಿ ತನ್ನ ಚಟುವಟಿಕೆಗಳನ್ನು ನಿಲ್ಲಿಸಿತ್ತೆಂದು ಕಾಣುತ್ತದೆ. ಆದರೆ

ಸಮಿತಿಯ ಪ್ರಮುಖ ಕಾರ್ಯಕರ್ತರಾಗಿದ್ದ ವೆಂಕಟನಾರಣಪ್ಪನವರೂ ವೆಂಕಟೇಶ ಅಯ್ಯಂಗಾರ್ಯರೂ ತಮ್ಮ ಗುರಿ ಸಾಧನೆಗಾಗಿ ಬೇರೆ ಮಾರ್ಗಗಳನ್ನವಲಂಬಿಸಿ ದುಡಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಮೈಸೂರು ಯುವರಾಜರೂ ಆಗಿದ್ದ ಕಂಠೀರವ ನರಸಿಂಹರಾಜ ಒಡೆಯರ್ ಅವರಿಂದ ಸಹಾಯದ್ರವ್ಯ ಪಡೆದು ಅವರ ಹೆಸರಿನಲ್ಲಿ ಒಂದು ವಿಜ್ಞಾನ ಗ್ರಂಥಮಾಲೆಯನ್ನು ಪ್ರಾರಂಭಿಸಿ, ಅದರ ಮೊದಲ ಕುಸುಮವಾಗಿ ನಂಗಪುರಂ ವೆಂಕಟೇಶ ಅಯ್ಯಂಗಾರ್ಯರ ಜ್ಯೋತಿರ್ವಿನೋದಿನಿ ಎಂಬ ಪುಸ್ತಕವನ್ನು 1931ರಲ್ಲಿ ಹೊರಡಿಸಿದರು. ಇದು ಫ್ರೆಂಚ್ ವಿಜ್ಞಾನ ಲೇಖಕ ಕೆಮಿಲ್ ಫ್ಲಮೇರಿಯೋನ ಅಸ್ಟ್ರಾನಮಿ ಫಾರ್ ವಿಮೆನ್ ಎಂಬ ಪುಸ್ತಕದ ಇಂಗ್ಲಿಷ್ ಅನುವಾದದ ಪುನರನುವಾದ. ಇದಕ್ಕೆ ಬೆಳ್ಳಾವೆ ವೆಂಕಟನಾರಣಪ್ಪನವರು ಮುನ್ನುಡಿ ಬರೆದಿದ್ದಾರೆ. ಅಲ್ಲಿಂದ ಎಂಟು ವರ್ಷಗಳ ತರುವಾಯ (1939) ವಿಶ್ವವಿದ್ಯಾನಿಲಯದಿಂದ ನಿವೃತ್ತರಾದ ಹಲವು ವರ್ಷಗಳ ಮೇಲೆ, ವೆಂಕಟನಾರಣಪ್ಪನವರು ಜೀವವಿಜ್ಞಾನವೆಂಬ 350ಪುಟಗಳ ಪುಸ್ತಕವನ್ನು ಬರೆದು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯಲ್ಲಿ ಪ್ರಕಟಿಸಿದರು. ಕನ್ನಡದಲ್ಲಿ ಜನಪ್ರಿಯ ವಿಜ್ಞಾನ ಸಾಹಿತ್ಯವನ್ನು ನಿರ್ಮಿಸುವುದರಲ್ಲಿ ಈ ಇಬ್ಬರು ಮಹನೀಯರು ತಳೆದ ಆಸ್ಥೆ, ಅದರ ಬೆಳೆವಣಿಗೆಯಲ್ಲಿ ಅವರು ವಹಿಸಿದ ಪಾತ್ರ ಬಹು ಹಿರಿದು ಮತ್ತು ಸ್ತುತ್ಯರ್ಹವಾದುದು.

ಕನ್ನಡ ವಿಜ್ಞಾನ ಸಾಹಿತ್ಯದ ಬೆಳೆವಣಿಗೆಯಲ್ಲಿ ಮಹತ್ತರ ಪಾತ್ರವಹಿಸಿದ ಇನ್ನೊಬ್ಬ ವ್ಯಕ್ತಿ ಶಿವರಾಮ ಕಾರಂತರು ಸ್ವತಃ ವಿಜ್ಞಾನಿಯಲ್ಲ, ಶಾಲಾ ಕಾಲೇಜುಗಳಲ್ಲಿ ಕ್ರಮಬದ್ಧವಾಗಿ ವಿಜ್ಞಾನವನ್ನು ವ್ಯಾಸಂಗ ಮಾಡಿದವರೂ ಅಲ್ಲ. ಆದರೆ ಅವರು ಆಸಕ್ತಿವಹಿಸದಿದ್ದ ವಿಷಯವಿಲ್ಲ. ಕಾರ್ಯಾಚರಣೆಗೆ ಕೈ ಹಾಕದ ಕ್ಷೇತ್ರವಿಲ್ಲ. ಬಹುಮುಖ ವ್ಯಕ್ತಿತ್ವದ ಈ ಮೇಧಾವಿ ಕನ್ನಡ ಜನತೆಯಲ್ಲಿ ತಾಯ್ನುಡಿಯ ಮೂಲಕವೇ ವೈಜ್ಞಾನಿಕ ಪ್ರಜ್ಞೆಯನ್ನು ಮೂಡಿಸುವ ಅಗತ್ಯವನ್ನು ಕಂಡುಕೊಂಡರು. ಆ ಕಾರ್ಯವನ್ನು ಕೈಗೊಳ್ಳಲು ಅವಶ್ಯವಾದ ವಿಜ್ಞಾನ ಶಿಕ್ಷಣವನ್ನು ಪಡೆದಿರದಿದ್ದರೂ ಸ್ವಂತ ಶ್ರಮದಿಂದ ಅದಕ್ಕೆ ಬೇಕಾದ ಸಿದ್ಧತೆಯನ್ನು ಮಾಡಿಕೊಂಡರು. ಇಂಗ್ಲಿಷ್ ಭಾಷೆಯಲ್ಲಿ ಹೇರಳವಾಗಿ ದೊರೆಯುವ ಜನಪ್ರಿಯ ವಿಜ್ಞಾನ ಸಾಹಿತ್ಯವನ್ನು ಆಳವಾಗಿ ಮತ್ತು ವಿಸ್ತಾರವಾಗಿ ಅಭ್ಯಾಸಮಾಡಿ ತಾವು ಪಡೆದ ಜ್ಞಾನವನ್ನು ಕನ್ನಡ ಭಾಷೆಯ ಮೂಲಕ ಕನ್ನಡಿಗರಿಗೆ ನೀಡುವ ಪ್ರಯತ್ನ ಮಾಡಿದರು. 1931ರಲ್ಲಿ ಅವರು ಹೊರತಂದ ಬಾಲ ಪ್ರಪಂಚ ಎಂಬ ಮೂರು ಸಂಪುಟಗಳ ವಿಶ್ವಕೋಶದಲ್ಲಿ ವಿಜ್ಞಾನವನ್ನು ಕುರಿತ ಲೇಖನಗಳಿಗೆ ಗಣನೀಯ ಸ್ಥಾನವನ್ನು ಕೊಟ್ಟಿದ್ದಾರೆ. ತರುವಾಯ 1959-64ರ ಅವಧಿಯಲ್ಲಿ ವಿಜ್ಞಾನಕ್ಕೆ ಮೀಸಲಾದ ನಾಲ್ಕು ಸಂಪುಟಗಳ ವಿಜ್ಞಾನ ಪ್ರಪಂಚ ಎಂಬ ವಿಜ್ಞಾನ ವಿಶ್ವಕೋಶವನ್ನು ಪ್ರಕಟಿಸಿದ್ದಾರೆ. ಅಲ್ಲದೆ ಒಳ್ಳೆಯ ಇಂಗ್ಲಿಷ್ ಪುಸ್ತಕಗಳನ್ನು ಆಯ್ದುಕಂಡು ಅನುವಾದ ಮಾಡಿ ಪ್ರಕಟಿಸಿದ್ದಾರೆ. ನುರಿತ ವಿಜ್ಞಾನಿಯ, ವಿಜ್ಞಾನ ಬೋಧಕನ ನಿಖರತೆ ನಿಷ್ಕೃಷ್ಟತೆಗಳು ಅವರ ಬರೆಹಗಳಲ್ಲಿ ಕಂಡುಬರದಿರಬಹುದು; ಆದರೆ ವಿಜ್ಞಾನವನ್ನು ಜನಪ್ರಿಯಗೊಳಿಸಬಲ್ಲ ಸಾಹಿತ್ಯವನ್ನು ಅವರಷ್ಟು ಅಗಾಧ ಪ್ರಮಾಣದಲ್ಲಿ ಸೃಷ್ಟಿಮಾಡಿ ಕನ್ನಡ ನಾಡಿನ ವಿವಿಧ ಪ್ರಾಂತ್ಯದ ಓದುಗರನ್ನು ತಲುಪಿಸಿರುವ ಬೇರೊಬ್ಬ ಲೇಖಕನಿಲ್ಲ.

ವಿಜ್ಞಾನ ಅತ್ಯಧಿಕ ವೇಗದಲ್ಲಿ ಬೆಳೆಯುತ್ತಿರುವ ಇಂದಿನ ಯುಗದಲ್ಲಿ ಹಿಂದೆ ಬೀಳದೆ ವಿಜ್ಞಾನದ ಪ್ರಗತಿಯನ್ನು ಗಮನದಲ್ಲಿರಿಸಿ ಕೊಂಡು ಅತ್ಯಾಧುನಿಕ ವಿಷಯಗಳೆಲ್ಲವನ್ನೂ ಕನ್ನಡ ಭಾಷೆಯ ಮೂಲಕ ನಿಷ್ಕೃಷ್ಟವಾಗಿ ತಿಳಿಯಹೇಳುವ ಪ್ರಯತ್ನ ಮಾಡಿ ಯಶಸ್ಸು ಗಳಿಸಿದ ಲೇಖಕರೆಂದರೆ ಆರ್.ಎಲ್.ನರಸಿಂಹಯ್ಯ. ಸೆಂಟ್ರಲ್ ಕಾಲೇಜಿನಲ್ಲಿ ಭೌತಶಾಸ್ತ್ರದ ಅಧ್ಯಾಪಕರಾಗಿದ್ದು ನಿವೃತ್ತರಾದ ಅನಂತರ ಬೆಂಗಳೂರಿನ ನ್ಯಾಷನಲ್ ಕಾಲೇಜು ಮತ್ತು ಆಚಾರ್ಯ ಪಾಠಶಾಲೆಯಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡಿದ ಇವರು ಕಾರ್ಯನಿರತ ವಿಜ್ಞಾನಿ ಮತ್ತು ವಿಜ್ಞಾನ ಬೋಧಕರಾಗಿದ್ದರು. ಶಕ್ತಿ, ಜಗತ್ತುಗಳ ಹುಟ್ಟು ಮತ್ತು ಸಾವು, ನಕ್ಷತ್ರ ದರ್ಶನ ಮುಂತಾದ ಉತ್ತಮ ಗ್ರಂಥಗಳನ್ನು ರಚಿಸಿದರು. ಎರಡು ಒಳ್ಳೆಯ ಜನಪ್ರಿಯ ವಿಜ್ಞಾನ ಪುಸ್ತಕಗಳನ್ನು ಅನುವಾದಿಸಿದರು. ಪ್ರಬುದ್ಧ ಕರ್ಣಾಟಕದಲ್ಲಿಯೂ ವಿವಿಧ ದಿನಪತ್ರಿಕೆ ವಾರಪತ್ರಿಕೆಗಳಲ್ಲಿಯೂ ನಲವತ್ತಕ್ಕೂ ಹೆಚ್ಚು ಲೇಖನಗಳನ್ನು ಬರೆದರು. ನರಸಿಂಹಯ್ಯನವರ ವಿಷಯ ನಿರೂಪಣೆ ನಿಖರ; ಭಾಷೆ ಮತ್ತು ಶೈಲಿ ಬಿಗಿ. ಪಾರಿಭಾಷಿಕ ಶಬ್ದಗಳ ವಿಷಯದಲ್ಲಿ ಇವರು ಒಂದು ನಿರ್ದಿಷ್ಟ ನಿಲುವನ್ನು ತಳೆದಿದ್ದರು. ಪದಾರ್ಥಗಳು, ಸಲಕರಣೆಗಳು ಮುಂತಾದವುಗಳ ಹೆಸರುಗಳನ್ನು ಇಂಗ್ಲಿಷ್ ಭಾಷೆಯಿಂದ ಎರವಲು ಪಡೆಯುವುದು ಮತ್ತು ತತ್ತ್ವನಿಯಮ, ಪರಿಣಾಮಗಳಿಗೆ ಸಂಬಂಧಿಸಿದ ಶಬ್ದಗಳಿಗೆ ಸಮಾನ ಪದಗಳನ್ನು ಸಂಸ್ಕೃತದ ಸಹಾಯದಿಂದ ಕನ್ನಡದಲ್ಲಿ ಟಂಕಿಸುವುದು ಸರಿಯಾದ ಮಾರ್ಗವೆಂಬ ಇವರ ಅಭಿಪ್ರಾಯಕ್ಕೆ ಅನುಸಾರವಾಗಿ ಅತ್ಯಂತ ಔಚಿತ್ಯಪೂರ್ಣವಾದ ಪದಗಳನ್ನು ಸೃಷ್ಟಿಮಾಡಿ ಇವರು ತಮ್ಮ ಬರೆವಣಿಗೆಯಲ್ಲಿ ಬಳಸುತ್ತಿದ್ದರು. ಆದರೆ ಅವು ಸಾಕಷ್ಟು ಚಲಾವಣೆಗೆ ಬರಲಿಲ್ಲವಾದ್ದರಿಂದ ಇವರ ಬರೆವಣಿಗೆ ಕೆಲವು ವೇಳೆ ಸ್ವಲ್ಪ ಭಾರವಾಗಿ ಕಾಣಿಸುತ್ತಿದ್ದುದ್ದು ನಿಜ. ಆದರೆ ಇವರು ಮಾಡುತ್ತಿದ್ದ ಉಪನ್ಯಾಸಗಳು ಅತ್ಯಂತ ಜನಾಕರ್ಷಣೀಯವಾಗಿದ್ದುವು.

ಜನಪ್ರಿಯ ವಿಜ್ಞಾನ ಸಾಹಿತ್ಯದ ಬೆಳೆವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ ಸಂಘಸಂಸ್ಥೆಗಳಲ್ಲಿ ಮೈಸೂರು ವಿಶ್ವವಿದ್ಯಾಯನಿಲಯವನ್ನೂ ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದ ಆಶ್ರಯದಲ್ಲಿ ಜನ್ಮವೆತ್ತಿ (1919) ಈಗ ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾಗುತ್ತಿರುವ ಪ್ರಬುದ್ಧ ಕರ್ಣಾಟಕ ಪತ್ರಿಕೆಯನ್ನೂ ಮೊದಲು ಹೆಸರಿಸಬೇಕು.

ಬಹುಶಃ ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿದ ಮೊತ್ತಮೊದಲ ಕನ್ನಡ ವಿಜ್ಞಾನ ಗ್ರಂಥವೆಂದರೆ 1924ರಲ್ಲಿ ಪ್ರಕಟವಾದ ಎಸ್.ಎನ್.ನರಸಿಂಹಯ್ಯನವರ ಖಗೋಳಶಾಸ್ತ್ರ. ಕೆಲಕಾಲದ ಮೇಲೆ ವಿಶ್ವವಿದ್ಯಾನಿಲಯದ ಪ್ರಕಟಣ ಶಾಖೆಯ ಚಟುವಟಿಕೆಗಳು ಬೆಳೆದು ವಿವಿಧ ಗ್ರಂಥಮಾಲೆಗಳಿಗೆ ಸೇರಿದಂತೆ ಅನೇಕ ವಿಜ್ಞಾನ ಪುಸ್ತಕಗಳು ಬೆಳಕು ಕಂಡಿವೆ. ಈ ಗ್ರಂಥಮಾಲೆಗಳ ಪೈಕಿ ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸಮಾಲೆ ನಡೆಸಿರುವ ಕೆಲಸ ಗಮನಾರ್ಹವಾದುದು. ಜಿ.ಹನುಮಂತರಾಯರ ನೇತೃತ್ವದಲ್ಲಿ ರೂಪುಗೊಂಡ ವಿಶ್ವವಿದ್ಯಾನಿಲಯದ ಅಧ್ಯಾಪಕರ ಸಂಘ ಗ್ರಾಮಾಂತರ ಪ್ರದೇಶಗಳಲ್ಲಿ ಸಂಘದ ಸದಸ್ಯರಿಂದ ಉಪನ್ಯಾಸಗಳನ್ನು ನಡೆಸುವುದು, ತರುವಾಯ ಈ ಉಪನ್ಯಾಸಗಳ ಸಾರಾಂಶವನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸುವುದು ಈ ಕಾರ್ಯವನ್ನು ನಡೆಸುತ್ತಿತ್ತು. ಈ ಕೆಲಸಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯ ಪ್ರಸಾರಾಂಗವೆಂಬ ಒಂದು ಸಂಸ್ಥೆಯನ್ನೇ ಸ್ಥಾಪಿಸಿದೆ. ಪ್ರಚಾರೋಪನ್ಯಾಸ ಮಾಲೆಯಲ್ಲಿ ಪ್ರಕಟವಾಗಿರುವ ವಿಜ್ಞಾನ ಪುಸ್ತಕಗಳು ಅತ್ಯಂತ ಜನಪ್ರಿಯತೆಯನ್ನು ಗಳಿಸಿವೆಯೆಂದು ಧಾರಾಳವಾಗಿ ಹೇಳಬಹುದು. ಅವುಗಳಲ್ಲಿ ಹಲವು ಮೂರು ನಾಲ್ಕು ಬಾರಿ ಅಚ್ಚಾಗಿ ಹೊರಬಿದ್ದಿರುವುದೂ ಬೆಂಗಳೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳು ಇದೇ ಮಾದರಿಯನ್ನನುಸರಿಸಿ ಕಿರುಹೊತ್ತಗೆಗಳನ್ನು ಹೊರತರುತ್ತಿರುವುದೂ ಅವುಗಳ ಜನಪ್ರಿಯತೆಗೆ ಸಾಕ್ಷಿ.

ಕನ್ನಡದಲ್ಲಿ ಉತ್ತಮ ಸಾಹಿತಿಗಳನ್ನು ಗುರುತಿಸಿ ಅಂಥ ಅನೇಕರಿಗೆ ಪ್ರೋತ್ಸಾಹ ನೀಡಿ ಅವರನ್ನು ಬೆಳಕಿಗೆ ತಂದ ಕೀರ್ತಿ ಪಡೆದಿರುವ ಪ್ರಬುದ್ಧ ಕರ್ಣಾಟಕ ಪತ್ರಿಕೆ ವಿಜ್ಞಾನ ಲೇಖಕರನ್ನು ತಯಾರಿಸುವುದರಲ್ಲಿಯೂ ಪ್ರಮುಖ ಪಾತ್ರ ವಹಿಸಿದೆ. ಪ್ರಾರಂಭದಲ್ಲಿ ಪ್ರಬುದ್ಧ ಕರ್ಣಾಟಕ ಕೇವಲ ಸಾಹಿತ್ಯಕ್ಕೆ ಮೀಸಲಾದ ಪತ್ರಿಕೆಯಾಗಿತ್ತು. ಆದರೆ ವಿಜ್ಞಾನ ಸಾಹಿತ್ಯ ಜೊತೆಯಲ್ಲಿಯೇ ಬೆಳೆಯದೆ ಹೋದಲ್ಲಿ ಭಾಷೆಯ ಮತ್ತು ಸಾಹಿತ್ಯದ ಸರ್ವತೋಮುಖ ಪ್ರಗತಿ ಸಾಧ್ಯವಿಲ್ಲ ಎಂಬುದನ್ನು ಬಹು ಬೇಗನೆ ಈ ಪತ್ರಿಕೆ ಅರಿತುಕೊಂಡು 1923ರಲ್ಲಿಯೇ ಅಂದರೆ ಅದರ ಐದನೆಯ ಸಂಪುಟದ ಮೊದಲ ಸಂಚಿಕೆಯಲ್ಲಿಯೇ ವಿಜ್ಞಾನ ಲೇಖನಗಳಿಗೆ ಅವಕಾಶ ಕಲ್ಪಿಸಿಕೊಟ್ಟಿತು. ಅಲ್ಲಿಂದ ಮುಂದೆ ಕ್ರಮೇಣ ವಿಜ್ಞಾನ ಲೇಖನಗಳು ಹೆಚ್ಚು ಹೆಚ್ಚಾಗಿ ಬರಲು ಪ್ರಾರಂಭಿಸಿದುದರಿಂದ 1963ರ ವೇಳೆಗೆ ಪ್ರಬುದ್ಧ ಕರ್ಣಾಟಕ ಆರು ತಿಂಗಳಿಗೊಮ್ಮೆ ಒಂದು ವಿಜ್ಞಾನ ವಿಶೇಷಾಂಕವನ್ನು ಪ್ರಕಟಿಸಬೇಕಾಯಿತು. ಇದುವರೆಗೆ ಈ ಪತ್ರಿಕೆಯ ಸಂಚಿಕೆಗಳಲ್ಲಿ ಪ್ರಕಟವಾಗಿರುವ ಲೇಖನಗಳ ಸಂಖ್ಯೆ ಸುಮಾರು 300ಕ್ಕೂ ಹೆಚ್ಚು. ಈ ಪತ್ರಿಕೆ ಹಲವಾರು ಹೊಸ ವಿಜ್ಞಾನ ಲೇಖಕರನ್ನು ಗುರುತಿಸಿ ಅವರಿಗೆ ಉತ್ತೇಜನ ನೀಡಿದೆ.

1969ರಲ್ಲಿ ಪ್ರಬುದ್ಧ ಕರ್ಣಾಟಕ ಅದರ ಚಿನ್ನದ ಹಬ್ಬವನ್ನಾಚರಿಸಿದ ಸಂದರ್ಭದಲ್ಲಿ ಹೊರತಂದ ಚಿನ್ನದ ಸಂಚಿಕೆಯ ವಿಜ್ಞಾನ ವಿಭಾಗ ಕನ್ನಡ ವಿಜ್ಞಾನ ಸಾಹಿತ್ಯದ ಬೆಳೆವಣಿಗೆಯ ಮಾರ್ಗದಲ್ಲಿ ಒಂದು ಪ್ರಮುಖ ಮೈಲುಗಲ್ಲು. 1600 ಪುಟಗಳ ಈ ಸಂಚಿಕೆ ಐವತ್ತೇಳು ಮಂದಿ ವಿಜ್ಞಾನ ಲೇಖಕರ ಸಹಕಾರದಿಂದ ರೂಪುಗೊಂಡಿತ್ತು. ವಿಜ್ಞಾನದ ಇತಿಹಾಸದ ಮುಖ್ಯ ಘಟ್ಟಗಳೆನ್ನಬಹುದಾದ ಮಹತ್ತರ ಸಂಶೋಧನೆಗಳನ್ನು ಮತ್ತು ಅವಕ್ಕೆ ಕಾರಣರಾದ ಮಹಾವಿಜ್ಞಾನಿಗಳನ್ನು ಕುರಿತ ಲೇಖನಗಳನ್ನು ಕಳೆದ ಇಪ್ಪತ್ತೈದು ವರ್ಷಗಳಲ್ಲಿ ವಿವಿಧ ವಿಜ್ಞಾನ ವಿಭಾಗಗಳಲ್ಲಿ ಆಗಿರುವ ಪ್ರಗತಿಯ ಸಮೀಕ್ಷೆಗಳು, ಇಂದು ಬಹುಪಾಲು ವಿಜ್ಞಾನಿಗಳ ಆಸಕ್ತಿಯನ್ನು ಕೆರಳಿಸಿರುವ ಸಂಶೋಧನ ಕ್ಷೇತ್ರಗಳು, ಭಾರತದಲ್ಲಿ ವಿಜ್ಞಾನದ ಪ್ರಗತಿ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಒಟ್ಟು ಐವತ್ತೇಳು ಲೇಖನಗಳಿಂದ ಕೂಡಿದ ಈ ದೊಡ್ಡ ಸಂಚಿಕೆ ಕನ್ನಡ ವಿಜ್ಞಾನ ಸಾಹಿತ್ಯ ಪ್ರಬುದ್ಧವಾಗಿದೆ ಎಂಬುದರ ಕುರುಹು. ಪ್ರಬುದ್ಧ ಕರ್ಣಾಟಕದ ಚಿನ್ನದ ಸಂಚಿಕೆಯ ಯಶಸ್ಸಿನಿಂದ ಪ್ರೇರಿತರಾಗಿ ಮೈಸೂರು ವಿಶ್ವವಿದ್ಯಾನಿಲಯ ವಿಜ್ಞಾನಕ್ಕೆ ಮೀಸಲಾದ ಪ್ರತ್ಯೇಕ ಪತ್ರಿಕೆ ವಿಜ್ಞಾನ ಕರ್ಣಾಟಕವನ್ನು ಪ್ರಾರಂಭಿಸಿತು (1969). ಇದು ನಿಯತಕಾಲಿಕವಾಗಿ ಪ್ರಕಟವಾಗುತ್ತಿದೆ. ನಾಲ್ಕು ದಶಕಗಳ ಹಿಂದಿನ ಪರಿಸ್ಥಿತಿಗೆ ಹೋಲಿಸಿ ನೋಡಿದರೆ ಈಗ ಕನ್ನಡದಲ್ಲಿ ವಿಜ್ಞಾನ ಸಾಹಿತ್ಯ ಗಾತ್ರದಲ್ಲಿ ಹಿರಿದಾಗಿ ಬೆಳೆದಿದೆ. ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಪ್ರಕಟವಾಗುತ್ತಿರುವ ವಿಜ್ಞಾನ ಕರ್ಣಾಟಕವಲ್ಲದೆ ದಕ್ಷಿಣ ಕನ್ನಡದ ಶ್ರೀನಿವಾಸ ನಗರದಿಂದ ವಿಜ್ಞಾನ ಸಂಘದವರು ವಿಜ್ಞಾನ ಲೋಕವೆಂಬ ಇನ್ನೊಂದು ಪತ್ರಿಕೆಯನ್ನು 1967 ಅಕ್ಟೋಬರದಿಂದ ಎರಡು ವರ್ಷಗಳ ಕಾಲ ತ್ರೈಮಾಸಿಕವಾಗಿಯೂ 1969ರ ನವೆಂಬರ್ ಅನಂತರ ಮಾಸಿಕವಾಗಿಯೂ ಪ್ರಕಟಿಸಿದ್ದಾರೆ. ವಿಜ್ಞಾನಕ್ಕೆ ಮೀಸಲಾದ ಖಾಸಗಿ ಪತ್ರಿಕೆಯೊಂದು ನಾಲ್ಕೈದು ವರ್ಷಗಳ ಕಾಲ ತ್ರೈಮಾಸಿಕವಾಗಿ ಜೀವಂತವಾಗಿ ಉಳಿದದ್ದು ಒಂದು ದೊಡ್ಡ ವಿಷಯ. ಸುಮಾರು 45 ವರ್ಷಗಳ ಕೆಳಗೆ ಬಿ.ವಿ.ಸುಬ್ಬರಾಯಪ್ಪನವರ ಸಂಪಾದಕತ್ವದಲ್ಲಿ ಪ್ರಾರಂಭವಾದ ವಿಜ್ಞಾನ ಯುಗ ಒಂದು ವರ್ಷ ತುಂಬುವುದರಲ್ಲಿ ಅಳಿದುಹೋದದ್ದನ್ನು ನೆನಸಿಕೊಂಡರೆ ವಾತಾವರಣ ವಿಶೇಷವಾಗಿ ಬದಲಾಯಿಸಿರುವುದು ಸ್ಪಷ್ಟವಾಗುತ್ತದೆ. ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ವಿಜ್ಞಾನ ಸಂಗಾತಿ ಎಂಬ ತ್ರೈಮಾಸಿಕ ಪ್ರಕಟವಾಗುತ್ತಿದೆ. ವಿಜ್ಞಾನಕ್ಕೆ ಮೀಸಲಾದ ಇನ್ನೊಂದು ಪತ್ರಿಕೆ ಮೈಸೂರಿನ ಕೇಂದ್ರ ಆಹಾರ ಸಂಶೋಧನಾಲಯದವರು ಪ್ರಕಟಿಸುತ್ತಿರುವ ಆಹಾರ ವಿಜ್ಞಾನ. ಈ ಪತ್ರಿಕೆಗಳಲ್ಲದೆ ವಾರಪತ್ರಿಕೆಗಳು, ಮಾಸಿಕಗಳು ಮತ್ತು ದಿನಪತ್ರಿಕೆಗಳ ಸಾಪ್ತಾಹಿಕ ಪುರವಣಿಗಳು ಸಾಮಾನ್ಯವಾಗಿ ಪ್ರತಿಯೊಂದು ಸಂಚಿಕೆಯಲ್ಲೂ ವಿಜ್ಞಾನ ಲೇಖನಗಳನ್ನು ಪ್ರಕಟಿಸುತ್ತಿರುವುದನ್ನು ಕಾಣಬಹುದು.

ಇದೆಲ್ಲದರಿಂದ ಒಂದು ವಿಷಯ ಸ್ಪಷ್ಟವಾಗುತ್ತದೆ. ವಿಜ್ಞಾನ ಜನಜೀವನಕ್ಕೆ ಸಂಬಂಧವಿಲ್ಲದ, ತಜ್ಞರಿಗೆ ಮಾತ್ರ ಸಂಬಂಧಪಟ್ಟ ಪ್ರತ್ಯೇಕ ವಿಷಯವೆಂಬ ಭಾವನೆ ಕ್ರಮೇಣ ಕಡಿಮೆಯಾಗುತ್ತಿದೆ. ವಿಜ್ಞಾನದಲ್ಲಿ ಪರಿಶ್ರಮ ಉಳ್ಳವರು ಕನ್ನಡದಲ್ಲಿ ಬರೆಯಲು ಮುಂದೆ ಬರುತ್ತಿದ್ದಾರೆ. ಆದರೆ ಗಾತ್ರದಲ್ಲಿ ಬೆಳೆಯುತ್ತಿರುವ ಈ ಸಾಹಿತ್ಯ ಗುಣದಲ್ಲಿಯೂ ಅದೇ ಪ್ರಮಾಣದಲ್ಲಿ ಬೆಳೆಯುತ್ತಿಲ್ಲವೆಂಬ ದೂರೂ ಕೇಳಿಬರುತ್ತಿದೆ. ಈಗ ಇದರಲ್ಲಿ ಹೆಚ್ಚಿನ ಸತ್ಯಾಂಶವಿಲ್ಲ. ಕನ್ನಡ ವಿಜ್ಞಾನ ಸಾಹಿತ್ಯ ನಿರ್ಮಾಣ ಅರ್ಥಪೂರ್ಣವಾದ ದಿಕ್ಕಿನಲ್ಲಿ ಸಾಗಿದೆ. (ಎ.ಕೆ.ಬಿ.)

**ಕನ್ನಡದಲ್ಲಿ ವಿಡಂಬನ ಸಾಹಿತ್ಯ :** ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿಡಂಬನಕ್ಕೇನೂ ಕೊರತೆಯಿಲ್ಲ. ಆದರೆ ವಿಡಂಬನವೆಂಬ ಸಾಹಿತ್ಯಪ್ರಕಾರ ಮೈ ತಳೆದು ಬೆಳೆದದ್ದು ಇಪ್ಪತ್ತನೆಯ ಶತಮಾನದಲ್ಲೇ. ಈ ಪ್ರಕಾರಕ್ಕೇ ಅಷ್ಟಾಗಿ ಪ್ರಾಮುಖ್ಯವಿಲ್ಲದಿದ್ದ ಹಿಂದಿನ ಕಾಲದಲ್ಲಿ ವಿಡಂಬನವನ್ನೆ ಮುಖ್ಯೋದ್ದೇಶವಾಗಿ ಕೈಕೊಂಡು ಕೃತಿರಚನೆ ಮಾಡಿದ ಕವಿಯಂತೂ ಯಾರೂ ಇಲ್ಲ. ಶೃಂಗಾರ, ವೀರ, ಕರುಣಾದಿ ರಸಗಳ ಮೇಲೆ ಕಣ್ಣಿಟ್ಟ ಕವಿಗಳು ಆಗಾಗ್ಗೆ ಶೃಂಗಾರಕ್ಕೊ, ವೀರಕ್ಕೊ, ಕರುಣಕ್ಕೊ ಹೆಚ್ಚಿನ ಪ್ರಾಧಾನ್ಯ ಕೊಟ್ಟದ್ದುಂಟು. ವಿಡಂಬನ ಸಾಹಿತ್ಯವೆಂಬ ವಿಶಿಷ್ಟ ಪ್ರಕಾರವಂತೂ ಅವರ ಯೋಚನೆಯ ಪರಿಧಿಯೊಳಕ್ಕೆ ಬಂದೇ ಇರಲಿಲ್ಲ. ಮಾತು ಎಷ್ಟು ಸಹಜವೋ ಅಷ್ಟೇ ಸಹಜವಾಗಿ ಅದರೊಂದಿಗೆ ಅಂಟಿಕೊಂಡ ವಿಡಂಬನದ ಮೆಟ್ಟಿಲುಗಳನ್ನು ಎಣಿಸಿ ಪಟ್ಟಿಮಾಡಲು ಯಾರೂ ಪ್ರಯತ್ನಿಸಲಿಲ್ಲ. ಆದರೆ ಪಾತ್ರಾಪಾತ್ರಗಳ ನಡುವಣ ಕಟಕಿ, ನಿಂದೆ, ಮೂದಲೆ, ಅಪಹಾಸ್ಯ, ವಕ್ರೋಕ್ತಿ,ಪರಿಹಾಸ ಮುಂತಾದವಕ್ಕೂ ಸಮಾಜ ಅಥವಾ ಸನ್ನಿವೇಶಜನ್ಯವಾದ ಜುಗುಪ್ಸೆ, ವಿನೋದ, ಕ್ರೋಧ, ಅಸಮಾಧಾನಗಳನ್ನು ನಗೆಯ ಉಬ್ಬು ಕನ್ನಡಿಯಿಂದ ಕಂಡಾಗ ಧ್ವನಿಯುಕ್ತವಾದ ಸಾಹಿತ್ಯಕ್ಕೆ ಕನ್ನಡದಲ್ಲಿ ಕೊರತೆಯಿಲ್ಲ ಎನ್ನಬಹುದು. ಶಾಸನದಿಂದ ಸರ್ವಜ್ಞನ ವರೆಗೆ ಹಳೆಯ ಸಾಹಿತ್ಯದಲ್ಲಿ ಎಲ್ಲೆಲ್ಲೂ ವಿಡಂಬನದ ನೂರಾರು ಉದಾಹರಣೆಗಳು ದೊರಕುತ್ತವೆ. ತುರುಗೋಳು ಗಡಿಕಾಳಗಗಳಲ್ಲಿ ಜೀವ ತೆತ್ತವರನ್ನು ಗೌರವಿಸಿ ನೆಟ್ಟ ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು ವಿಡಂಬನದ ತವರುಗಳು. ಕಟ್ಟಿದ ಸಿಂಘಮನ್ ಕೆಟ್ಟೊದೇನಮಗೆನ್ದು ಬಿಟ್ಟವೋಲ್ ಕಲಿಗೆ ವಿಪರೀತಂಗಹಿತರ್ಕ್ಕಳ್ ಕೆಟ್ಟರ್ ಮೇಣ್ ಸತ್ತರ ವಿಚಾರಂ - ಎಂಬುದಾಗಿ ಕಲಿಯುಗವಿಪರೀತನಾದ ಕಪ್ಪೆ ಅರಭಟ್ಟನ ಪ್ರತಾಪವನ್ನು ಕುರಿತ ಬಾದಾಮಿ ಶಾಸನದಲ್ಲಿ (ಸು.700) ಅವನನ್ನು ಕೆಣಕುವವರ ಬಗ್ಗೆ ಅಪಹಾಸ್ಯವಿದೆ. ಇಂಥ ಎಷ್ಟೋ ಉದಾಹರಣೆಗಳನ್ನು ಶಾಸನಗಳಲ್ಲಿ ಕಾಣಬಹುದು. ಹಿಂದಿನ ಕಾಲದ ಪ್ರತಿಯೊಬ್ಬ ಕವಿಯೂ ಸಾಮಾನ್ಯವಾಗಿ ಮಾಡುತ್ತಿದ್ದ ಪ್ರಶಂಸೆ, ಅನ್ಯಕವಿನಿಂದೆಗಳು ಈ ಬಗೆಯ ವಿಡಂಬನಕ್ಕೆ ಸೂಕ್ತ ಉದಾಹರಣೆಗಳು. ಗೂಡಾರದ ಕವಿಯಂತಿರೆ ಮುಚ್ಚಿಪೋದ ಕವಿಯುಂ ಕವಿಯೇ ಎಂದೋ ಹಟಿಗವಿಗಳ ಕಬ್ಬಂಗಳ ಹೊಱಗಳಿಯಕ್ಕರದ ಹೊಲಿಗೆ, ಬಿರ್ಚಿದೊಡೆಲ್ಲಂ ಬಱಿತಾಱಗ ಬೀಱಗವೆತ್ತತತ್ತರವೆಕ್ಕಸಕ್ಕಮಸ್ತವ್ಯಸ್ತಂ ಎಂದೋ ಅಪಹಾಸ್ಯ ಮಾಡಿದ್ದಾರೆ. ನೇರವಾಗಿ ಧಿಕ್ಕರಿಸುವುದೂ ಒಂದು ಮಾರ್ಗ. ಧರೆಯೊಳ್ ಮೇಣ್ ಪುಟ್ಟಿ ಪುಟ್ಟುತ್ತುರುರ್ವ ನರರ ಮೇಲುರ್ಬಿ ಕಬ್ಬಂಗಳಂ ಬಿತ್ತರಿಸುತ್ತುಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟುಪೋದರ್ ಎಂಬ ಪಾರಮಾರ್ಥಿಕವಾದ ಮರುಕ ದೃಷ್ಟಿ ಮತ್ತೊಂದು ಮಾರ್ಗ.

ಒಬ್ಬ ಒಂದು ಒಳ್ಳೆಯ ಕೃತಿ ಬರೆದಾಗ ಇತರರು ಅವನ ಶೈಲಿಯನ್ನೋ ಕಥೆಯನ್ನೋ ಅನುಕರಿಸಿ ಬರೆಯತೊಡಗುತ್ತಿದ್ದುದೂ ವಿಡಂಬನೆಗೆ ತುತ್ತಾಗದಿರಲಿಲ್ಲ. ರಾಮಾಯಣಗಳು ಅತಿಯಾದಾಗ ಮಿಡಿದ ಕುಮಾರವ್ಯಾಸ ಕವಿಯ ಹಾಸ್ಯದ ಮೊನೆ ತೀಕ್ಷ್ಣವಾದದ್ದು. ತಿಣಿಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ, ತಿಂತಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ ಎಂದು ಆತ ಬರೆದ. ಇದು ರಾಮಾಯಣಕ್ಕೆ ಮಾತ್ರ ಅನ್ವಯಿಸುವುದಿಲ್ಲ. ಮಹಾಭಾರತವನ್ನು ಹೊತ್ತು ಮುಲುಗಾಡಿದ ಅಳಿಗವಿಗಳಿಗೂ ಅನ್ವಯಿಸುತ್ತದೆ.

ಕವಿ-ವಾಚಕ-ವಿಮರ್ಶಕರ ಸಂಬಂಧವನ್ನು ಕುರಿತಾದ ವಿಡಂಬನೆಗೂ ಹಳಗನ್ನಡ ಸಾಹಿತ್ಯದಲ್ಲಿ ಕೊರತೆಯಿಲ್ಲ. ಇರುಮರುಳೆ ಶುಷ್ಕ ವೈಯಾಕರಣಂಗಂ ಶುಷ್ಕ ತಾರ್ಕಿಕಂಗಂ ಬೆಳ್ಳಕ್ಕರಿಗಂಗಂ ವಿಷಯಮೆ ಕಾವ್ಯರತ್ನಮತಿಚತುರಕವಿ-ಕದಂಬಕ ವಿಷಯಂ ಎನ್ನುತ್ತಾನೆ ಪಂಪ. ಆರಾರೇರರ್ ಶಾಸ್ತ್ರ ಶ್ರೀರೋಹಣಗಿರಿಯನಲ್ಲಿ ನವಕವಿತಾ ಚಿಂತಾರತ್ನಂ ದೊರೆಗುಮೇ ಮಾರಾರಿಯ ಕೃಪೆಯಿಲ್ಲದಂಗೆ ಧರಣೀ ತಳದೊಳ್ ಎಂಬುದು ಷಡಕ್ಷರಿಯ ಚಿರಂತನ ಪ್ರಶ್ನೆ. ಎನಿತನೊಱಲ್ದು ಪೇೞ್ವ ಕವಿಯೇವನ್? ಅದಂ ಪೆಸರಿಟ್ಟು ಮೆಚ್ಚಬಲ್ಲವನನಱಸಲ್ಕೆವೇೞ್ಪುದು, ಕಟ್ಟಿಯುಮೇನೊ ಮಾಲೆಗಾಱನ ಪೂಸ ಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೇ? ಎಂಬುದು ಜನ್ನನ ಅಳಲು. ಆದರೆ ಇದನ್ನರಿಯಲಾರದ ಅನೇಕರು ಎಲ್ಲ ಕಾಲಕ್ಕೂ ಇದ್ದಾರೆ. ಇಂಥವರನ್ನು ಅನೇಕ ಕವಿಗಳು ವಿಡಂಬಿಸಿದ್ದಾರೆ. ಕುಱಿಗಳೋಪಾದಿಯಲ್ಲಿ ಕಬ್ಬಿನ ಹೊಱಗಣೆಲೆಯನು ಮೇದಕ ಮೇಲುಕಿಱುವು ತಲ್ಪಸುಖಕ್ಕೆ ಸೋಲಬಾರದೆಂಬುದು ಚಾಮರಸನ ಚುಚ್ಚುನುಡಿ.

ಪ್ರಾಚೀನವಾದ ಕನ್ನಡ ಭಾಷೆಯ ಮೇಲೆ ಆದ ಸಂಸ್ಕೃತದ ಪ್ರಭಾವದಿಂದಾಗಿ ಕನ್ನಡದ ಶಬ್ದಭಂಡಾರ ಇನ್ನಷ್ಟು ಸಮೃದ್ಧವಾಗಿ ಬೆಳೆಯಿತೆಂಬುದು ನಿಜವಾದರೂ ಸಂಸ್ಕೃತದ ಬಗ್ಗೆ ಹಲವರು ತಳೆದ ಅತಿಯಾದ ಮೋಹವನ್ನೂ ಕನ್ನಡಕ್ಕಿಂತ ಸಂಸ್ಕೃತವೇ ಉತ್ತಮವಾದುದೆಂಬ ಅವರ ಮನೋಭಾವವನ್ನೂ ಅನೇಕ ಕವಿಗಳು ವಿಡಂಬನದ ಕತ್ತಿಯಿಂದ

ಕತ್ತರಿಸಲು ಯತ್ನಿಸಿದ್ದಾರೆ. ಪಱಗನ್ನಡದೆ ಪುದುಂಗೊಳೆ ಕೋಡಿಸಕ್ಕದಮಂ ತಗುಳ್ಚಿ ಜಾಣ್ ಕಿಡೆ ಮುತ್ತುಂ ಮೆಣಸುಂಗೋದಂತಿರೆ ಪೇೞ್ಬಿಱಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ ಎಂಬುದು ಈ ಬಗ್ಗೆ ಕವಿಯ ಉದ್ಗಾರ. ಸಂಸ್ಕೃತದಲ್ಲಿ ಹೇಳುವುದಾದರೆ ಸಂಸ್ಕೃತದಲ್ಲೇ ಹೇಳಿ, ಶುದ್ಧ ಕನ್ನಡದಲ್ಲಿ ಸಂಸ್ಕೃತವನ್ನು ತರುವುದೇಕೆ? ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ ಎಂಬ ನಯಸೇನನ ಮಾತಿನ ನಂಜು ಬಲು ತೀವ್ರ. ಆದರೂ ಇದು ಸಕ್ಕದದೊಂದು ಚೆಲ್ವು ಎಂದು ಸಂಸ್ಕೃತಕ್ಕೆ ಜೋತುಬಿದ್ದವರನೇಕರ ಮನೋಧರ್ಮವನ್ನು ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿದ್ದ ಮುದ್ದಣ ಕವಿ ಮನೋರಮೆಯ ಬಾಯಲ್ಲಿ ವಿಡಂಬಿಸಿದ್ದಾನೆ. ಸಂಸ್ಕೃತ ಕನ್ನಡಗಳು ಪರಸ್ಪರ ಪೂರಕವಾಗಿ ಬೆರೆಯಬೇಕೆಂಬುದಾಗಿ ಆತ ತೀರ್ಪು ನುಡಿದಿದ್ದಾನೆ.

**ಪಂಪಯುಗ :** 10ನೆಯ ಶತಮಾನದಲ್ಲಿದ್ದ ಪಂಪನ ಆದಿಪುರಾಣವಾಗಲಿ, ವಿಕ್ರಮಾರ್ಜುನವಿಜಯವಾಗಲಿ ವಿಡಂಬನಕಾವ್ಯಗಳಲ್ಲ. ಆದರೂ ವಿಡಂಬನದ ಹಲವು ಪ್ರಸಂಗಗಳು ಈ ಕಾವ್ಯಗಳಲ್ಲಿ ಕಂಡುಬರುತ್ತವೆ. ಒಂದು ಪಾತ್ರ ಇನ್ನೊಂದು ಪಾತ್ರವನ್ನು ಕುರಿತಾಡುವ ವಿಡಂಬನವೇ ಇಲ್ಲಿ ಹೆಚ್ಚು. ರಾಜಸೂಯಯಾಗದಲ್ಲಿ ಕೃಷ್ಣನಿಗೆ ಅಗ್ರಪೂಜೆಯ ಮರ್ಯಾದೆಯೆಂಬುದು ತಿಳಿದಾಗ ಶಿಶುಪಾಲ ಗಳಪುವ ನುಡಿ ಒಂದು ಉದಾಹರಣೆ. ತನ್ನಂಥ ದನುಜ ಪುಟ್ಟದ್ದರಿಂದ ಕೃಷ್ಣನಿಗೆ ದನುಜಾಂತಕನೆಂಬ ಬಿರುದು ಲಭ್ಯವಾಯಿತೆಂದು ಆತ ಮೂದಲಿಸುತ್ತಾನೆ. ಕೃಷ್ಣ ಸಂಧಾನಕ್ಕೆ ಬಂದಿದ್ದಾಗ, ದುರ್ಯೋಧನನಿಗೆ ಆತ ಬುದ್ಧಿವಾದವನ್ನು ಹೇಳಿದಾಗ ದುರ್ಯೋಧನ ಕೊಡುವ 'ನಾವೆಲ್ಲರು ಒಂದೆ ಗರುಡಿಯೊಳ್ ಓದಿದ ಮಾನಸರು. ನೀನು ಸುಮ್ಮನೆ ಬಳಲಬೇಡ, ಇರದೆ ಅಡಿ ಎತ್ತು' ಎಂದ ಮಾತು ವ್ಯಂಗ್ಯಕ್ಕೆ ಸುಂದರವಾದ ಉದಾಹರಣೆಯಾಗಿದೆ. ಭೀಷ್ಮನಿಗೆ ಸೇನಾಧಿಪತ್ಯ ದೊರಕಿದ ಸಂದರ್ಭದಲ್ಲಿ ಕರ್ಣನನ್ನು ಹೀನಕುಲಜನೆಂದು ದ್ರೋಣಾಚಾರ್ಯ ಹೇಳಿದಾಗ ಕರ್ಣ ನೀಡುವ ಉತ್ತರ ಸಮಾಜ ವಿಡಂಬನಕ್ಕೊಂದು ಉದಾಹರಣೆ. ಕುಲಮನೆ ಮುನ್ನಮುಗ್ಗಡಿಪಿರೆಂಗಳ ನಿಮ್ಮ ಕುಲಂಗಳಾಂತು ಮಾರ್ಮಲೆವನನಟ್ಟಿ ತಿಂಬುವೆ, ಕುಲಂ ಕುಲಮಲ್ತು ಚಲಂ ಕುಲಂ ಗುಣಂ ಕುಲಂ ಅಭಿಮಾನಂ ಕುಲಂ - ಎಂಬುದು ಕರ್ಣನ ಕಟಕಿ. ಇಲ್ಲಿ ಸಮಾಜದ ಕಟ್ಟಳೆಯ ಬಗ್ಗೆ ನಂಜುನಗೆಯಿದೆ. ಅಶ್ವತ್ಥಾಮನು ಕರ್ಣನನ್ನು ಬಯ್ದಾಗ ಕರ್ಣ ಅಶ್ವತ್ಥಾಮನನ್ನು ಕುರಿತು ಹೇಳುವ ನೆಟ್ಟನೆ ವಿಷಮೊಳ್ಳೆಗುಳ್ದೊಡಂ ಒಳ್ಳೆ ಒಳ್ಳೆಯೆ ಕಾಳಿಯನಾಗನಾಗದು ಎಂಬ ಮಾತಿನಲ್ಲಿ ಅಶ್ವತ್ಥಾಮನ ಶೌರ್ಯವನ್ನು ಕುರಿತ ವಿಡಂಬನೆ ಮೊನಚಾಗಿದೆ.

ರನ್ನನ ಗದಾಯುದ್ಧದಲ್ಲೂ ಕಟಕಿ ನಿಂದೆ ಅಪಹಾಸ್ಯ ಮೂದಲೆಗಳಿಗೆ ಕೊರತೆಯಿಲ್ಲ. ಇವಕ್ಕೆ ಕಾವು ಹೆಚ್ಚು. ಮೊನೆ ಅಧಿಕ. ಎಲ್ಲವನ್ನೂ ಸೋತು, ವೈಶಂಪಾಯನ ಸರೋವರವನ್ನು ಹೊಕ್ಕು ಕುಳಿತ ದುರ್ಯೋಧನನನ್ನು ಅರಸಿ ಹೊರಟಿದ್ದಾರೆ ಕೃಷ್ಣ, ಭೀಮ. ಆ ಸಂದರ್ಭದಲ್ಲಿ ಬರುವ ಕುರುಧರೆಯೊಳ್ ಕುರುಪತಿಯನಱಿಸಿದಂ ಪವನಸುತಂ, ಇದೊಂದು ಲಜ್ಜೆಯಾಯ್ತು ಭರತಕುಲಕ್ಕೆ, ರಾಜ್ಯಲಕ್ಷ್ಮಿ ಪೇಸಿ ಬಿಸುಟ್ಟವನು ದುರ್ಯೋಧನ, ನೀರೊಳಗೆಪಡಿರ್ಕುಂ ಮೀನಿರ್ಕುಂ ಇರ್ಪರೆ ಗಂಡರ್? ಎಂಬ ಮಾತುಗಳು ಕೌರವನ ಕಡೆಗೆ ಎಸೆದ ಮೂದಲಿಕೆಯ ಕೂರಂಬುಗಳು. ಆದರೆ ಪಾಂಡವರಿಗೂ ಈ ಬಗೆಯ ಬಿರುದುಗಳನ್ನು ಪಡೆಯಲು ಅರ್ಹತೆಯಿಲ್ಲವೆ ನಾಟ್ಕಿಡಿಗಳೆದುಱುಬೇರಂ ಬಿಟ್ಕಿಯುಮಂ ತಿಂದು ವನದೊಳಗಿದ್ದವರು ಪಾಂಡವರು. ಇನ್ನು ಭೀಮಸೇನನ ಕೆಚ್ಚನ್ನೇನೆಂದು ಹೇಳೋಣ ಸಟ್ಟುಗಂ ಬಿಸುಟ್ಟು ಗದೆಗೊಂಡೊಟ್ಟೆಸುವಂಥದು! ದುರ್ಯೋಧನ, ಧರ್ಮಜಂ ಕೃಪೆಯಿಂದೊಳ್ಪಿತಂ ಪೇಳ್ದಪಂ - ಈಗಳುಂ ಕೇಳ್ದು ಬರ್ದುಕು - ಎಂದು ಉಪದೇಶ ಮಾಡಿದರೆ ಅವನಿಗೆ ಎಷ್ಟು ಉರಿಯಾಗಬೇಡ? ಕೊನೆಗೆ ಆತ ತೊಡೆಯೊಡೆದು ಬಿದ್ದ. ಇಡೆ ತೊಡೆಯನುಡಿದು ನೆಟ್ಟಗೆ ಕಡೆಯತ್ತುಂ ಕರ್ಚಿ ನೆಲಸಾನದನೆಂತುಂ ಬಿಡೆನ್ -ಎಂದು ಹಟದಿಂದ ಭೂಮಿಯನ್ನಪ್ಪಿದ್ದಾನೆ. ಆತ ಈ ಸಂಗರಾಧ್ವರದಲ್ಲಿ ಅರಸನೇ ದೀಕ್ಷಿತ, ಉಳಿದ ನಾಲ್ವರು ಋತ್ವಿಜರು, ಮುರಹರನೇ ಉಪದೇಶಕ, ದ್ರೌಪದಿಯೇ ಗೃಹೀತವ್ರತಾಚರಣವ್ಯಾಪಿಕೆ, ಪರಿಭವವೇ ಸಂಚಾರಕ, ಕೌರವೇಶ್ವರನೇ ಪಶು. ವಿದೂಷಕನ ಈ ನಂಜು ಕೊರಳನ್ನು ಕೊಯ್ಯುವಂಥದು. ಭೀಮ, ದುರ್ಯೋಧನರ ಗದಾಯುದ್ಧ ಸಂದರ್ಭದಲ್ಲಿ ಬರುವ ಮಾತುಗಳು ವ್ಯಂಗ್ಯಕ್ಕೆ ಹಾಸ್ಯಕ್ಕೆ ವಿಡಂಬನೆಗೆ ಸಾಕ್ಷಿಗಳಾಗಿವೆ.

**ನಯಸೇನ, ಬ್ರಹ್ಮಶಿವ, ವೃತ್ತವಿಲಾಸ :** ಒಂದು ಪಾತ್ರದ ಮೇಲೆ ಪ್ರಯೋಗಿಸುತ್ತಿದ್ದ ವಿಡಂಬನಕ್ಕೆ ಸಮಾಜವೀಕ್ಷಣೆಯ ಕಣ್ಣು ದೊರೆತದ್ದೂ ಅನ್ಯ ಮತಗಳನ್ನೆ ಗುರಿಯಾಗಿಟ್ಟುಕೊಂಡು ಅವುಗಳನ್ನು ಪ್ರಹರಿಸುವ ಅಭ್ಯಾಸ ಬೆಳೆದದ್ದೂ ಮುಂದಿನ ಜೈನಕವಿಗಳ ಕಾವ್ಯಗಳಲ್ಲಿ. ನಯಸೇನ, ಬ್ರಹ್ಮಶಿವ, ವೃತ್ತವಿಲಾಸರು ಇದರಲ್ಲಿ ಅಗ್ರಗಣ್ಯರು. ಅನ್ಯಮತಾನುಯಾಯಿಗಳು ಜೈನರ ಉಪದೇಶದಿಂದ ಅವರ ಧರ್ಮಕ್ಕೆ ಪರಿವರ್ತನೆಗೊಳ್ಳುವ ಕಥೆಗಳೇ ಹಲವಾರು:

> ಕಡುಮೂರ್ಖರ್ ತಮ್ಮಿಚ್ಛೆಗೆ
> ಪಿಡಿದುದೆ ಪಿರಿದೆಂಬರಣ್ಣ ಜಿನಮಾರ್ಗದೊಳೇಂ
> ನಡೆಯಲ್ ಬರ್ಕುಮೆ ಬಾರದು
> ಕಡಲೆಗಳಂ ತಿಂಬ ಮೊಗ್ಗು ಕಲ್ಗಳೊಳುಂಟೇ

- ಎಂಬುದಾಗಿ ಜೈನಧರ್ಮದ ಹಿರಿಮೆಯನ್ನು ಇವು ಬೋಧಿಸುತ್ತವೆ.

> ಕಲಿತನದಿಂದಂ ಲೋಗರ್
> ಪುಲಿಯಂ ಪಿಡಿದೊಡಮದೇಂ ಬಿಡೆಂಬರ್ ತಾಮೊಂ
> ದಿಲಿಯಂ ಪಿಡಿದೊಡಮದು ಪೆ
> ರ್ಬುಲಿಯೆಂಬರ್ ದುರ್ಜನರ್ಗೆ ತಾನಿದು ಸಹಜಂ

- ಎಂಬುದು ಎಲ್ಲ ಕಾಲದಲ್ಲೂ ಕಾಣಬರುವ ಲೋಕರೂಢಿಯ ವಿಡಂಬನೆ.

> ಕನ್ನಡಿಯಂ ತೋಱಿದೊಡತ್ಯುನ್ನತ
> ಸಲ್ಲಕ್ಷಣಂಗೆ ಮುಳಿಸಾಗದು ಮ
> ತ್ತೆನ್ನದೆ ಮೂಕೊಱೆಯಂಗಾ
> ಕನ್ನಡಿಯಂ ತೋಱೆ ಬಡಿಗುಮಿರಿಗುಂ ಕೊಲ್ಗುಂ

- ಎಂಬ ಇನ್ನೊಂದು ಪದ್ಯದಲ್ಲಿ ವಿಡಂಬನಕ್ಕೆ ಒಳಗಾಗಿರುವ ಮಾನವ ಸ್ವಭಾವವಾದರೂ ಸಾರ್ವಕಾಲಿಕ, ಸಾರ್ವದೇಶಿಕ.

ಆಗಿನ ವೈದಿಕ ಮತದ ಅಂಧಾಚಾರವನ್ನು ಅಪಹಾಸ್ಯ ಮಾಡುವ ಪದ್ಯಗಳಿಗಂತೂ ಲೆಕ್ಕವೇ ಇಲ್ಲ. ಇದೊಂದು ಉದಾಹರಣೆ. ಹೋಮಮಂ ಮಾಡುವ ಬ್ರಾಹ್ಮಣಂ ನೊಣವು ಬೆನ್ನನೂಱಿದೊಡೆ ಸೈರಿಸಲಾಱದೆ ಬೆನ್ನಂ ಪೊಯ್ಯುಕೊಳ್ವುದುಂ ಕೆಲದೊಳಿರ್ದವರೆಲ್ಲಂ ಕೊಡನೆ ತುಪ್ಪದೊಳ್ ಕೈಯನದ್ದಿ ತಮ್ಮ ಬೆನ್ಗಳಂ ಪೊಯ್ದುಕೊಂಡರ್.

ಅಂಧಾನುಕರಣೆಯ ಶುಷ್ಕತೆ ಅಪಾಯಗಳನ್ನು ತೆಗಳಿ ಮಾಡಬಹುದಾದ ಹಲವಾರು ಉಪನ್ಯಾಸಗಳಿಗಿಂತ ಇಂಥ ಒಂದು ವಿಡಂಬನದ ತುಣುಕು ಹೆಚ್ಚು ಮಾರ್ಮಿಕ, ಸಾರ್ಥಕ. ನಯಸೇನನ ಧರ್ಮಾಮೃತದಲ್ಲಿಯ ಹಲವಾರು ಕಥೆಗಳು ವಿಡಂಬನ ಸಾಹಿತ್ಯಕೃತಿಗಳೆಂದೇ ಹೇಳಬಹುದು. ವಿಡಂಬನದ ವಿವಿಧ ಮೊಗವಾಡಗಳಾದ ಬಿಸಿನಗೆ ಹುಸಿನಗೆ ನಂಜುನಗೆ ರಸನಗೆಗಳ ಮೆರವಣಿಗೆಯೇ ಇಲ್ಲಿ ನಡೆದಿದೆ.

ಇದೇ ಪೀಳಿಗೆಯ ಇನ್ನೊಬ್ಬ ಸಮರ್ಥನೆಂದರೆ ಬ್ರಹ್ಮಶಿವ. ಇವನ ಸಮಯ ಪರೀಕ್ಷೆಯಲ್ಲಿಯ ವಿಡಂಬನದ ಸರಳುಗಳು ಬಲು ತೀಕ್ಷ್ಣ. ಇವನ ದೃಷ್ಟಿಯಲ್ಲಿ ವಿಷ್ಣು ಸರ್ವೋತ್ತಮ ಎನ್ನುವುದು ಹಾಸ್ಯಾಸ್ಪದ. ಧರೆಗೊಡೆಯಂ ಚಕ್ರೇಶಂ ತಿರಿವನೆ ಬಲಿಯಲ್ಲಿ ಬೇಡಿ ಮೂರಡಿ ನೆಲನಂ? ವಿಶ್ವವನ್ನೇ ಹೊಟ್ಟೆಯಲ್ಲಿಟ್ಟುಕೊಂಡು ರಕ್ಷಿಸುವ ಆತ, ಅದರೊಳಗೇ ಇದ್ದ ರಾಕ್ಷಸರನ್ನೇಕೆ ಕೊಂದ? ತರ್ಕಬದ್ಧವೆನಿಸುವ ಈ ಪ್ರಶ್ನೆಗಳಿಗೆ ಏನುತ್ತರ? ಆದರೆ ಸ್ವ ಮತಗಳ ಬಗ್ಗೆ ಈ ಕವಿ ಮತ್ತು ಇಂಥ ಕವಿಗಳು ಪಕ್ಷಪಾತಿಗಳು. ಇವರ ತರ್ಕವನ್ನೇ ಇತರರೂ ಅನ್ವಯಿಸುವರೆಂಬುದನ್ನು ಇವರು ಮರೆಯುತ್ತಾರೆ. ಇದು ಹೇಗಾದರೂ ಇರಲಿ, ಅನ್ಯಮತ ವಿಡಂಬನಕ್ಕೆಳಸಿದ ಎಲ್ಲ ಮತಗಳ ಕವಿಗಳಿಗೂ ಅನ್ವಯಿಸುವ ಮಾತು ಇದು. ಜಗಮಂ ಸುಡುವೊಡೆ ರುದ್ರಂ ಜನದೊಳಗಿರ್ದಾತ್ಮ ಭಕ್ತರೆಲ್ಲರುಮಂ ಮೆಲ್ಲಗೆ ತೆಗೆದು ಬೇಱೆ ಪೊಱ ಗಿಕ್ಕುಮೋ ಮೇಣ್ ಕೂಡೆ ಸುಟ್ಟು ಕಳೆಗುಮೊಪೇೞಿಂ? ಎಂದು ಆತ

ಪ್ರಶ್ನೆ ಹಾಕಿದಾಗ ಇಂಥ ಕಲ್ಪನೆಯ ಚಿನ್ನಗಳಿಗೆ ತರ್ಕಮಣಿ ತಾಕಿ ಅವು ಕಬ್ಬಿಣದ ತುಂಡುಗಳಾಗಿ ಮಾರ್ಪಡುವುದಂತೂ ನಿಜ. ಈ ಚಮತ್ಕಾರದಿಂದ ಯಾರಿಗೆ ತಾನೆ ನಗೆ ಹೊಮ್ಮುವುದಿಲ್ಲ? ನಗೆಯ ಬಾಂಬೆಸೆದ ಜನರ ನಂಬಿಕೆಗಳ ಹೆಬ್ಬಂಡೆಗಳನ್ನು ಛಳಾರನೇ ಸೀಳಿಸುವುದು ವಿಡಂಬನ ಕೃತಿಗಳ ಉದ್ದೇಶ.

> ಬಗೆವೊಡದೇನಾನುಂ ಬಾ
> ಟ್ತಿಗಲ್ಲವೆನಿಪರಳಿಗೊಲ್ದು ಪೊಡೆಮಡುವವನಾ
> ಚಿಗುರುಂ ಪೂವುಂ ಕಾಯುಂ
> ಸೊಗಯಿಪ ಮಾವಿಂಗೆ ಪುಣಿಸೆಗೆಱಿಗಲ್ವೇಡಾ

ಏನು ಉತ್ತರ ಹೇಳಬೇಕು ಇದಕ್ಕೆ? ನಯಸೇನ ಬ್ರಹ್ಮಶಿವರಂತೆಯೇ ಅನ್ಯಮತಗಳ ಅಂಧಸಂಪ್ರದಾಯಗಳನ್ನು ಗೇಲಿಗೆ ಗುರಿಪಡಿಸಿದವನು ವೃತ್ತವಿಲಾಸ. ಮನೋವೇಗ ಪವನವೇಗರೆಂಬ ರಾಜಕುಮಾರರು ಪಾಟಲೀಪುತ್ರಕ್ಕೆ ಹೋಗಿ ಜೈನಧರ್ಮವನ್ನು ಮೆರೆದದ್ದು ಧರ್ಮಪರೀಕ್ಷೆಯ ಕಥೆ. ಇಲ್ಲಿಯ ವಿಡಂಬನದ ಚುರುಕು ಮುಟ್ಟಿನೋಡಿಕೊಳ್ಳುವಂಥದು. ಪುರಾಣಗಳೆಲ್ಲ ಸುಳ್ಳಿನ ಕಂತೆ. ದೇವರುಗಳಿಗೇನೂ ಶಕ್ತಿಯಿಲ್ಲ. ಕುರುಡು ಭಕ್ತಿಯಲ್ಲಿ ಫಲವಿಲ್ಲ- ಹೀಗೆಂದೆಲ್ಲ- ಸ್ಥಾಪಿಸಲು ಈತ ಅವಲಂಬಿಸಿರುವುದೂ ಗೇಲಿಯ ವಿಧಾನವೇ! ಮುಂದಿನದೊಂದು ಉದಾಹರಣೆ:

ಅಜ್ಞಾನಿಗಳ್ ಇಟ್ಟಿವರುಂಗಳಂ ಒಟ್ಟಿದ ಕಲ್ಗಳಂ ದೈವಮೆಂದು ಪೆಸರಿಟ್ಟು ಕೊಂಡಾಡಿ ವರಮೀಗುಮೆಂಬಾಸೆಯಿಂ ತಮ್ಮೊಳರ್ಥವಂ ಬಱಸೊಳೆಗೈವರ್. ಆ ದೈವಂ ವರಮನೀವಂದಂ ಎಂತುಟೆಂದೊಡೆ, ಬಂಜೆಯ ಪೆರ್ಮಗಂ ಮೃಗತೃಷ್ಣಾಂಬುವಂ ಮಿಂದು, ಕಲ್ಲನಾರ ಸೀರೆಯನುಟ್ಟು ಆಗಸವೂದುಱುಂಬಿ, ಮೊಲದ ಕೋಡ ಬಿಲ್ವಿಡಿದು ಬರುತ್ತಿರ್ಪುದಂ ಪುಟ್ಟುಂಗುರುಡಂ ಅಂಧಕಾರದ ನಟ್ಟನಡುವಿರುಳೊಳ್ ಕಂಡನ್ ಎಂಬಂತೆ ನಿಷ್ಫಲಂ ಕ್ಲೇಶಂ ದುರ್ಗತಿ ದುಃಖವೇ ಅಕ್ಕುಂ. ಆ ದೈವಂ ಪೆಱರ್ಗೀವುದುಂ ಕಾವುದುಂ ಅಂತಿರ್ಕೆ. ತಮಗೆಂದು ಸಂಕಲ್ಪಿಸಿದ ವಸ್ತುವಂ ಕಾಯಲಾಱರ್.

ಈ ಮಾತಿನ ಚಮತ್ಕಾರ, ವಾದವೈಖರಿ, ಅಪಹಾಸ್ಯ - ಇವು ಅದ್ಭುತ. ಯಾವ ಮತಪ್ರಚಾರಕನೂ ಇದಕ್ಕಿಂತ ಚೆನ್ನಾಗಿ ಅನ್ಯಮತದ ವಿಡಂಬನೆ ಮಾಡಲಾರ.

ಈ ವಿಡಂಬನ ತ್ರಿಮೂರ್ತಿಗಳಿಗೂ ಮುಂಚೆ, ಎಂದರೆ ಸು.1031ರಲ್ಲಿ ಸಂಸ್ಕೃತದಿಂದ ಕನ್ನಡಕ್ಕೆ ಬಂದ ಗ್ರಂಥವೊಂದನ್ನು ಇಲ್ಲಿ ಉಲ್ಲೇಖಿಸುವುದು ಮುಖ್ಯವೆನಿಸುತ್ತದೆ. ಅದು ಪಂಚತಂತ್ರ, ಅನುವಾದಕ ದುರ್ಗಸಿಂಹ. ತನ್ನ ಮೂವರು ದಡ್ಡ ಮಕ್ಕಳಿಗೆ ವಿದ್ಯೆ ಕಲಿಸುವ ದಾರಿ ಕಾಣದೆ ನಿರಾಶೆಗೊಂಡಿದ್ದ ದೊರೆಯೊಬ್ಬನಿಗೆ ಸಿಕ್ಕ ಬ್ರಾಹ್ಮಣನು ಹೇಳಿದ ಪ್ರಾಣಿಕಥೆಗಳಿಂದ ಆ ಮಕ್ಕಳು ವಿವೇಕ ಪಡೆಯುತ್ತಾರೆ. ಅಡಕವಾಗಿ ನಾಟಕೀಯವಾಗಿ ಹಾಸ್ಯಬದ್ಧವಾಗಿರುವ ಈ ಕಥೆಗಳ ಪಾತ್ರಗಳಾದ ಪ್ರಾಣಿಗಳು, ಮಾನವರ ಸ್ವಭಾವಗಳ ಪ್ರತೀಕಗಳು. ವೇದ ಕೂಡ ಅವಕ್ಕೆ ಗೊತ್ತುಂಟು. ಪಂಚತಂತ್ರವೊಂದು ಅದ್ಭುತ ವಿಡಂಬನ ಗ್ರಂಥ. ಇದರ ಧ್ವನಿಶಕ್ತಿ ಅದ್ಭುತ ಪ್ರಚಂಡ ಪರಿಣಾಮಕಾರಿ.

**ವಚನಕಾರರು :** ಕನ್ನಡ ನಾಡಿನಲ್ಲಿ ಒಂದು ವ್ಯಾಪಕವಾದ ಧಾರ್ಮಿಕ ಸಾಮಾಜಿಕ ಕಾಂತ್ರಿಯನ್ನೇ ಪ್ರಾರಂಭಿಸಿದ ವೀರಶೈವ ವಚನಕಾರರು ಸಮಾಜ ವಿಮರ್ಶಕರು. ತಮ್ಮ ಸುತ್ತಮುತ್ತಣ ಜನರಲ್ಲಿದ್ದ ಹಲವೆಂಟು ಕುಂದುಗಳನ್ನೂ ಡಂಭಾಚಾರಗಳನ್ನೂ ಕಂಡು ಸಿಡಿಮಿಡಿಗೊಂಡು ವಿಂಡಬನದ ನೆರವಿನಿಂದ ಸಮಾಜವನ್ನು ಶುದ್ಧೀಕರಿಸಲು ಯತ್ನಿಸಿದರು. ವಚನಕಾರರಲ್ಲಿ ಹಿರಿಯರೆನಿಸಿಕೊಂಡವರಿಗಂತೂ ಪೂರ್ವಾಗ್ರಹವಿನಿತೂ ಇಲ್ಲ. ಅವರಿಗೆ ತಮ್ಮ ನಾಡವರಲ್ಲಿ ಪ್ರೀತಿ. ಅವರ ವಚನಗಳಲ್ಲಿ ಕಟಕಿ, ಮೂದಲೆ, ಅಪಹಾಸ್ಯಗಳಿಗಿಂತ ಪರಿಹಾಸ, ಚತುರೋಕ್ತಿಗಳಿಗೆ ಹೆಚ್ಚು ಮೌಲ್ಯ. ಆದರೆ ಸಾಂದರ್ಭಿಕವಾಗಿ ಮೂದಲೆ, ಕಟಕಿ, ನಿಂದೆಗಳಲ್ಲೂ ಅವರು ತೊಡಗದವರಲ್ಲ. ಬಸವಣ್ಣನವರಿಗಿಂತ ಮುಂಚೆ ಇದ್ದ ಸಕಲೇಶ ಮಾದರಸನ ಜನಮೆಚ್ಚಿ ಶುದ್ಧನಲ್ಲದೆ ಮನಮೆಚ್ಚಿ ಶುದ್ಧನಲ್ಲಯ್ಯಾ, ವೇಷ ಮೋಷದಲ್ಲಧಿಕನಲ್ಲದೆ ಭಾಷೆಯಲ್ಲಧಿಕನಲ್ಲಯ್ಯಾ, ನುಡಿಯ ಜಾಣನಲ್ಲದೆ ನಡೆಯ ಜಾಣನಲ್ಲಯ್ಯಾ, ಧನದೊರೆಯದಿರ್ದೊಡೆ ನಿಃಪ್ರಿಯನಲ್ಲದೆ ಧನ ದೊರೆತು ನಿಃಪ್ರಿಯನಲ್ಲಯ್ಯಾ, ಏಕಾಂತದ್ರೋಹಿ, ಗುಪ್ತಪಾತಕಿ, ಯುಕ್ತಿಹೀನರಿಗೆ ಸಕಲೇಶ್ವರದೇವ ಎಂತೊಲಿವ? ಎಂಬ ವಚನದಲ್ಲಿ ವಚನಕಾರರ ಸಮಾಜವೀಕ್ಷಣೆಯ ವಿಶಿಷ್ಟ ದೃಷ್ಟಿ ಆ ವೇಳೆಗಾಗಲೇ ಪ್ರಕಟವಾಗಿತ್ತು.

ಬಸವಣ್ಣನವರು ಕಲ್ಯಾಣದಲ್ಲಿ ನೆಲಸುವ ವೇಳೆಗೆ ಹಲವರು ಶಿವಶರಣರು ಅಲ್ಲಿಗೆ ಬಂದು ಸೇರಿದ್ದರು. ವೈರಾಗ್ಯ ಜ್ಞಾನನಿಧಿ ಅಲ್ಲಮ, ಯೋಗಿ ಚೆನ್ನಬಸವಣ್ಣ, ಕರ್ಮದ ನೆಲೆ ಸಿದ್ಧರಾಮ, ಶರಣೆ ಮಹಾದೇವಿಯಕ್ಕ- ಇಂಥವರೆಲ್ಲ ಒಂದೆಡೆ ಸೇರಿದಾಗ ನಿರ್ದಾಕ್ಷಿಣ್ಯವಾಗಿ ಟೀಕಿಸುವ ಹಾದಿ ಇವರದು. ಇವರ ಕ್ರೋಧ ಸಾತ್ವಿಕದಿಂದ ಕೂಡಿದ್ದು.

ಶಿವಶರಣರ ವಚನಗಳು ನಾನಾ ತೆರ. ತಮ್ಮ ಸಾಧನೆಯಲ್ಲಿ ಸಿದ್ಧಿ ದೊರಕದುದಕ್ಕಾಗಿ ದೇಹವನ್ನೇ ವಿಡಂಬಿಸುವ ವಚನಗಳದು ಒಂದು ಗುಂಪು. ಧರ್ಮದ ಹೆಸರಿನಲ್ಲಿ ಸಮಾಜದಲ್ಲಿ ಆಚರಣೆಯಲ್ಲಿದ್ದ ಮೂಢ ನಂಬಿಕೆಗಳನ್ನೂ ಅನ್ಯಾಯಗಳನ್ನೂ ಬಯಲಿಗೆಳೆದವು ಇನ್ನೊಂದು ಗುಂಪು. ಈ ಜೀವನ ನಿತ್ಯವಲ್ಲ - ಎಂಬುದು ಮೂರನೆಯ ಗುಂಪು. ಐಹಿಕ ಸುಖೋದ್ದೇಶದಿಂದ ವೀರಶೈವಮತ ಸ್ವೀಕಾರಮಾಡಿ, ಆ ಮತಕ್ಕೇ ಕಳಂಕ ತರುತ್ತಿದ್ದವರನ್ನು ಉದ್ದೇಶಿಸಿ ಆಡಿದ ವಚನಗಳದು ನಾಲ್ಕನೆಯ ಗುಂಪು. ವೀರಶೈವಮತದ ಮುನ್ನಡೆಯನ್ನು ಕಂಡು ಅಸೂಯೆಗೊಂಡು ಅವನ್ನು ತೆಗಳಿದವರಿಗೆ ಉತ್ತರ ರೂಪವಾಗಿ ಬಂದವು ಎಷ್ಟೋ ವಚನಗಳು. ಮತ, ಧರ್ಮ, ಭಕ್ತಿ, ಸಾಧನೆ - ಮುಂತಾದವುಗಳಿಗೆ ಸಂಬಂಧಿಸಿದ ವಚನಗಳೂ ಅಸಂಖ್ಯಾತವಾಗುಂಟು. ಕೊನೆಯವನ್ನು ಬಿಟ್ಟು ಉಳಿದೆಲ್ಲ ವಚನಗಳಲ್ಲೂ ವಿಡಂಬನೆಯ ನಾನಾ ಪ್ರಕಾರಗಳನ್ನು ಕಾಣಬಹುದು.

ಭಕ್ತನಾದಾತ ದೇವರ ಒಲುಮೆಯನ್ನು ಗುರಿಯಾಗಿಟ್ಟುಕೊಂಡು ಸಾಧನೆ ಮಾಡಿದಾಗ ಅವನನ್ನು ದೇವರು ನಾನಾ ವಿಧವಾಗಿ ಪರೀಕ್ಷಿಸುತ್ತಾನೆ. ಎಲ್ಲದರಲ್ಲೂ ಗೆದ್ದ ಮೇಲೆಯೇ ದೇವರ ಅನುಗ್ರಹ. ಆದರೆ ಭಕ್ತನಿಗೆ ಅಸಹನೆ, ದುಗುಡ, ದೇವರ ಒಳ್ಳೆಯತನದಲ್ಲೇ ಸಂದೇಹ. ಆಗ ಹೊರಡುತ್ತದೆ ಅವನ ಬಾಯಿಂದ ವಿಡಂಬನೆ - ಹುಟ್ಟೆಂದು ಲೋಕದಲ್ಲಿ ಹುಟ್ಟಿಸಿ ಇಳಿಯಬಿಟ್ಟರೆ ನಿಮ್ಮ ನಗುವರಯ್ಯ.

ಆದರೆ ದೇವರ ಒಲುಮೆಗಾಗಿ ದೃಢಚಿತ್ತದಿಂದ ಸಾಧನೆ ಮುಂದುವರಿಸುವವರಾದರೂ ಎಷ್ಟು ಮಂದಿ? ಅನೇಕರದು ಬರಿಯ ತೋರಿಕೆಯ ಭಕ್ತಿ. ಏತ ತಲೆವಾಗಿದರೇನು, ಗುರುಭಕ್ತನಾಗಬಲ್ಲುದೇ? ಇಕ್ಕುಳ ಕೈಮುಗಿದರೇನು, ಭೃತ್ಯಾಚಾರಿಯಾಗಬಲ್ಲುದೇ? ಗಿಳಿಯೋದಿದರೇನು, ಲಿಂಗವೇದಿಯಾಗಬಲ್ಲುದೇ? ಈ ರೀತಿ ಆಡಂಬರದ ಭಕ್ತಿ ತೋರಿ, ಇಹವನ್ನೇ ಶಾಶ್ವತವೆಂದು ನಂಬಿ ಫಲವೇನು? ನೀರ ಬೊಬ್ಬುಳಿಗೆ ಕಬ್ಬುನದ ಕಟ್ಟ ಕೊಟ್ಟು ಸುರಕ್ಷಿತ ಮಾಡುವ ಭರ ಇದು. ಅದಕ್ಕೇ ಒಬ್ಬ ವಚನಕಾರ 'ಭಕ್ತಿ ಎಂಬುದು ತೋರುಂಬ ಲಾಭ' ಎಂದು ಕರೆದದ್ದು.

ಆಗಿನ ಕಾಲದ ಮತವಾದರೂ ಅಷ್ಟೇ. ಆಡುವುದೊಂದು, ಮಾಡುವುದೊಂದು. ಕಲ್ಲ ನಾಗರಕ್ಕೆ ಹಾಲನೆರೆಯುವುದು, ದಿಟದ ನಾಗರ ಕಂಡರೆ ಕೊಲ್ಲೆಂಬುದು, ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರ ಮನೆಯಲು ಕಿಚ್ಚೆದ್ದು ಸುಡುವಾಗ ಬಚ್ಚಲ ನೀರ ಬೀದಿಯ ದೂಳವ ಹೊಯ್ದು ಬೊಬ್ಬಿಟ್ಟೆಲ್ಲರ ಕರೆಯುವುದು.

ಆದರೆ ವೀರಶೈವ ಧರ್ಮಾವಲಂಬಿಗಳೆಲ್ಲರೂ ಶಿವವಿಜ್ಞಾನಿಗಳಲ್ಲ. ಅವರಲ್ಲಿ ಜಳ್ಳೂ ಉಂಟು ಕಾಳೂ ಉಂಟು. ಕಷ್ಟಜೀವಿ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದರೆ ಮುಂದೆ ಭವದ ಬಳ್ಳಿಗೆ ಬೀಜವಿನ್ನೆಲ್ಲಿಹುದೊ.

ವಚನಕಾರರು ಎಲ್ಲರೂ ಒಂದೇ ತೆರನಲ್ಲ. ಒಬ್ಬೊಬ್ಬರ ವಚನ ಒಂದೊಂದು ರೀತಿಯದು. ಬಸವಣ್ಣನವರದು ತಿಳಿ ಮನಸ್ಸು. ಅವರಿಗೆ ಬೆಳ್ಳಗಿರುವುದೆಲ್ಲ ಹಾಲು. ಅಲ್ಲಮಪ್ರಭು ಬೇರೆ ತೆರ: ನಿರ್ದಾಕ್ಷಿಣ್ಯಪರ. ಲಿಂಗೈಕಶರಣರೆಂದು ತಿಳಿದಾಗ ಅವರಿಗೆ ಪ್ರಭುವಿನ ಪುರಸ್ಕಾರ. ಅಂಗಜೀವಿಗಳೆಲ್ಲ ಅಶನಕ್ಕೆ ನೆರೆದು ಲಿಂಗವಾರ್ತೆಯ ನುಡಿವರಯ್ಯ ಎಂದು ನೇರವಾಗಿ ಹೇಳುವುದವರ ಸ್ವಭಾವ, ಗುಹೇಶ್ವರಾ. ನೀನು ಕಲ್ಲಾದರೆ ನಾನೇನಪ್ಪೆನಯ್ಯಾ? ಎಂಬ ದಾಸಿಮಯ್ಯನ ವಚನದ ಧ್ವನಿ ಬಲು ಹರಿತ.

ಚೆನ್ನಬಸವಣ್ಣ ಮನೆವಾರ್ತೆಯ ಯಜಮಾನ, ಅಕ್ಕಮಹಾದೇವಿಯದು ಭಾವಾವೇಶ. ಅಂಬಿಗರ ಚೌಡಯ್ಯನದು ರಜೋದೃಷ್ಟಿ. ಇವರೆಲ್ಲ ಒಂದು ಕಡೆ ಸೇರಿ ಸಮಾಜದ ಮುಖಕ್ಕೆ ಉಬ್ಬುತಗ್ಗಿನ ಕನ್ನಡಿ ಹಿಡಿದು ಅದರ ವಕ್ರತೆಗಳನ್ನೆತ್ತಿ ತೋರಿದರು.

**ಹರಿಹರ ಯುಗ :** ಹರಿಹರ ವಿಡಂಬನಕ್ಕೂ ಕೈ ಎತ್ತಿದ ಕವಿ. ಇವನ ಹಲವು ರಗಳೆಗಳಲ್ಲಿ ಅನ್ಯಮತ ವಿಡಂಬನ ಧಾರಾಳವಾಗಿ ಹರಿದಿದೆ. ಜಯಸಿಂಹರಾಯನ ರಾಜಧಾನಿಯಲ್ಲಿದ್ದ ವಿಷ್ಣುಗೃಹ ಕೋಳಿಯ ಗೂಡಿನಂತೆ ಇತ್ತು, ಶಂಕರದಾಸಿಮಯ್ಯ ತನ್ನ ನೊಸಲ ಕಣ್ಣು ತೆರೆದೊಡನೆ ಬೆಂಕಿ ಘುಳು ಘುಳಿಸಿ ಸುಳಿದು, ಧಗಿಲ್‌ಭುಗಿಲೆಂದು ಭೋಂಕನೆ ನೆಗೆದು, ಮುಂಗಾಣಿಸಿ ಪರಿದು, ನೃಸಿಂಹ ಪ್ರತಿಮೆಯುಂ ನೆರೆದುರುಪಿತು. ಆಗ ಜಯಸಿಂಹರಾಯನುಂ ವೈಷ್ಣವರುಂ ವಾದಿಗಳುಂ ಉರಿದು ಮೊಗಂಗೆಡೆ ಪರಸಮಯಿಗಳ್ಮೊರೆಯಿಟ್ಟು ಹಲ್ಲು ಕಿರಿದು ಹುಲ್ಲು ಕರ್ಚಿದರು. ಪದ್ಮಾವತಿಯ ಪಿತನಾದ ಜೈನ ಪಾರಿಷ ಪಂಡಿತಂ ಮೇರೆಗೆಟ್ಟ ಮತಿಹೀನಂ ಕೋಪಣದಿಂ ಬಂದ ಹೊಸ ಋಷಿಯರು.... ನೀಚರುಂ.... ಬರಿಯ ಭಂಡರುಂ ಲೋಚಿನ ತಾಲ್ಯರುಂ ಬೆತ್ತಲೆಯ ಭ್ರಷ್ಟರುಂ ಕುಂಚದ ಖೂಳರುಂ ತಟ್ಟುಗಳ ಅಜ್ಞಾನಿಗಳುಂ ನಾಯುವಾಯ ನರಕಿಗಳುಂ ಸರ್ವಮಲ ಭಾಂಡರುಂ ಎಂದು ಮೊದಲಾಗಿ ಬರೆಯುತ್ತಾನೆ. ಹರಿಹರ ಹಿರಿಯ ಕವಿಯಾದರೂ ತನ್ನ ಧರ್ಮದ ಹಿರಿಮೆ ಸಾಧಿಸುವ ವಿಚಾರ ಬಂದಾಗ ಆತ ಹಿಂದೆ ಮುಂದೆ ನೋಡುವುದಿಲ್ಲ. ಅನ್ಯಮತಗಳ ನಿಂದೆಯನ್ನೇ ನೇಯುತ್ತಾನೆ. ಔಚಿತ್ಯಪ್ರಜ್ಞೆ ತಪ್ಪಿತೇನೋ ಎನಿಸಿದರೂ ಕಾವ್ಯಾವೇಶದ ದೃಷ್ಟಿಯಿಂದ ಆ ಕುಂದನ್ನು ಮರೆಯತಕ್ಕದ್ದು. ವಿಡಂಬನದ ಎಷ್ಟೊಂದು ಪ್ರಕಾರಗಳು ಎಷ್ಟೊಂದು ತೀವ್ರವಾಗಿ ಬಂದಿವೆಯೆಂಬುದು ಇಲ್ಲಿ ಗಮನಿಸಬೇಕಾದ ವಿಚಾರ. ಹರಿಹರನಿಂದೀಚೆಗೆ ಇತಿಹಾಸದಲ್ಲಿ ಬಹುದೂರ ಮುಂದೆ ಬಂದಿರುವ ಈ ಶತಮಾನದ ಜನಕ್ಕೆ ಆಗಿನ ವಾತಾವರಣದ ಇಣುಕು ನೋಟ ಪಡೆಯಲು ಇಂಥ ಪರಮತ ವಿಡಂಬನೆಗಳೂ ಒಂದು ಸಾಧನ. ಹರಿಹರನ ರಗಳೆಗಳ ಇನ್ನು ಕೆಲವು ಸಾಲುಗಳನ್ನೂ ನೋಡಬಹುದು. ಕರ್ಮಲತೆಯಂತಿದ್ದ ಜನ್ನಿವಾರಮಂ ಕಳೆದು ಬಿಸುಟು, ಹೋತಿನ ಗಂಟಲಂ ಬಿಗಿವಂತಿರ್ದ ಮೌಂಜಿಯಂ ಪಱಿದು ಬಿಸುಟು, ನವ್ಯ ದುಕೂಲವಂ ತೆಗೆದುಟ್ಟು, ಬಸವಣ್ಣನವರು ಬಾಗೇವಾಡಿಯಿಂದ ಕಪ್ಪಡಿಸಂಗಮಕ್ಕೆ ಹೋದರು. ಬಿಜ್ಜಳನ ಗುರುಗಳು ಕಾಗೆಗಳಂತಱಚಿ, ಗೂಗೆಗಳಂತೆ ಪಲುಂಬಿ, ಕತ್ತೆಗಳಂತೆ ತೊಟಲಿ, ಕೋಡಗಗಳಂತೆ ಪಲುಗಿರಿದು, ನರಿಗಳಂತೆ ಜಿನುಗಿ ಮಾತಾಡುವರು. ಶರಣರನ್ನು ನಿಂದಿಸುತ್ತಿದ್ದವರಂತೂ ಛಾಂದಸರು, ವೇದಜಡರು, ಬೈಟ್ಟಿಯ ಮರುಳ್ಗಳು, ಹೆಬ್ಬೇಳಿಗಳು, ದರ್ಭೆಯ ನಿರ್ಭಾಗ್ಯರು, ಹರಿಹರನ ಮುಗುಳದಲ್ಲೂ ಮಂತ್ರಶಕ್ತಿಯುಂಟು. ಅವನ ಶಬ್ದಗಳ ಆಯ್ಕೆ ಅಮೋಘ. ಹರಿಹರನ ಭರ್ತ್ಸನೆಗೆ ಈಡಾಗುವಂಥ ವ್ಯವಸ್ಥೆಯೊಂದಿದ್ದುದರಿಂದಲೆ ಈ ಎಲ್ಲ ವಾಕ್‌ಪ್ರವಾಹ, ನಿಂದೆ ಮೊದಲೆಗಳ ಚಂಡೆಮದ್ದಳೆ, ನಯಸೇನ 'ಬ್ರಹ್ಮಶಿವ' ವೃತ್ತವಿಲಾಸರ ಚತುರೋಕ್ತಿ ಇಲ್ಲಿ ಕಡಿಮೆಯಾದರೂ ಕಟಕಿಗೇನೂ ಕೊರತೆಯಿಲ್ಲ. ಚತುರತೆಯ ಅರಕೆಯನ್ನು ಇವನ ಆವೇಶ ಭರ್ತಿ ಮಾಡುತ್ತದೆ.

ಷಟ್ಪದಿಯ ಪಿತ ರಾಘವಾಂಕನ ಸೋಮನಾಥ ಚರಿತ್ರೆಯಲ್ಲಿ ಜೈನಮತ ಹೆಚ್ಚಾಗಿ ವಿಡಂಬನೆಗೆ ಈಡಾಗಿದೆ. ನರನೊಬ್ಬನ ಸತ್ಯವ್ರತವನ್ನು ಹೊಗಳಹೊರಟ ಹರಿಶ್ಚಂದ್ರಕಾವ್ಯದಲ್ಲಿ ಉದಾತ್ತ ವಿಡಂಬನೆಯನ್ನು ಎರಡು ಕಡೆಗಳಲ್ಲಿ ಕಾಣಬಹುದು. ವಸಿಷ್ಠ ವಿಶ್ವಾಮಿತ್ರರ ಸಂವಾದ ಮತ್ತು ಹರಿಶ್ಚಂದ್ರ ಗಾಯಕಿಯರ ಮಾತಿನ ಚಕಮಕಿಗಳು ಕಟಕಿ ಮೊದಲೆ ಅಪಹಾಸ್ಯ ಚತುರೋಕ್ತಿ ವಕ್ರನುಡಿಗಳ ಚಕ್ರಬಂಧವೆನಿಸುತ್ತದೆ.

ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಕಾಣುವುದು ನವುರಾದ ವಿಡಂಬನೆ, ಕವಿಯದು ವ್ಯಂಗ್ಯಾನುಭೂತಿ. ಈ ಕೃತಿ ಸತ್ತವರ ಕಥೆಯಲ್ಲ, ಜನನದ ಕುತ್ತದಲಿ ಕುದಿಕುದಿದು ಕರ್ಮದ ಕತ್ತಲೆಗೆ ಸಿಲುಕುವವರ ಸೀಮೆಯ ಮಾತು ತಾನಲ್ಲ, ಹೊತ್ತು ಹೋಗದ ಪುಂಡರಾಲಿಪ ಮತ್ತಮತಿಗಳ ಗೋಷ್ಠಿಯಲ್ಲ. ಈ ಕೃತಿಯಲ್ಲಿ ಕಾಣುವುದು ಪಾರಮಾರ್ಥಿಕ ವಿಡಂಬನೆ, ಮಾನವ ದೇವತ್ವಕ್ಕಡರಲು ಅಡ್ಡವಾಗಿ ಬರುವ ಕೊಳೆಯನ್ನು ಕಳೆಯಲು ವಿಡಂಬನವೊಂದು ಮೃದುವಾದ ಪೊರಕೆ. ಮಾಯೆ ಅರಣ್ಯವನ್ನು ಹೊಕ್ಕಾಗ ತಪಸ್ವಿಗಳು ಆಕೆಯನ್ನು ಕಂಡು ತಮ್ಮ ಕಂತೆ ಕಚ್ಚಟಗಳನ್ನೂ ವಿಭೂತಿಯ ಬುಟ್ಟಿಗಳನ್ನೂ ಎತ್ತಿಕೊಂಡು ಎದ್ದೋಡಿದರು ಹುಲಿಗ್ದಂಡ ಹುಲ್ಲೆಗಳಂತೆ ದಸೆದೆಸೆಗೆ. ಅಲ್ಲಮಪ್ರಭು ಕಂಡ ಸಿದ್ಧರಾಮನದು ಮೂಢಭಕ್ತಿ, ದೇವರನ್ನು ತನ್ನೊಳಗೇ ಕಂಡುಕೊಳ್ಳುವ ಬದಲು, ಸಕಲ ಕಲ್ಲನು ಕಡಿದು ಕಲ್ಲಿಗೆ ಶಿಖರ ದೇಗುಲವೆಂದು ಮಾಡಿಸಿ ಅಲ್ಲಿ ದೇವರನ್ನು ಹುಡುಕುತ್ತಿದ್ದಾನೆ. ಅವನ ಆಗಮ ಯುಕುತಿಯೆಲ್ಲ ಪಾಷಾಣಕ್ಕೆ ಬಂದುದು. ಗೋರಕ್ಷನ ಕಥೆಯಲ್ಲಿ ಉದ್ದಕ್ಕೂ ಧರ್ಮನೀತಿಗಳೊಡನೆ ವಿಡಂಬನದ ಅಂತರ್ಗತ ಪ್ರವಾಹ ಹರಿದಿದೆ.

ಕುಮಾರವ್ಯಾಸನ ಭಾರತ ವಿಡಂಬನ ಕಾವ್ಯವಲ್ಲ. ಈತನದು ವಿಡಂಬನ ಸಾಹಿತ್ಯವೂ ಅಲ್ಲ. ಆದರೆ ಕೆಲವು ಕಡೆ ಕಥೆಯ ಹಂದರದ ಮೇಲೆ ವಿಡಂಬನದ ನಾನಾ ಬಗೆಯ ಬಳ್ಳಿಗಳನ್ನೇ ಈತ ಹಬ್ಬಿಸಿದ್ದಾನೆ. ಬೇಂದ್ರೆಯವರೆಂದಿರುವಂತೆ ಕಟಕಿ, ಬಿರುನುಡಿ, ಕಿರುನುಡಿ, ವ್ಯಂಗ್ಯ ಸರಸ, ವಕ್ರೋಕ್ತಿ, ಜಾಣ್ನುಡಿ, ಪರಿಹಾಸ- ಎಲ್ಲವೂ ಅವನ ಬತ್ತಳಿಕೆಯಲ್ಲಿವೆ. ಯುದ್ಧಭೀರುವನ್ನು ಯುದ್ಧವೀರನ ಸೋಗಿನಲ್ಲಿ ಕುಣಿಸಿರುವ ಉತ್ತರನ ಪಾತ್ರವೊಂದು ಉದಾಹರಣೆ. ಧನು ತನಗೆ ನೆಗಹಲ್ಕೆ ಕೃಷ್ಣಾಜಿನವೊ ಸಾಲಗ್ರಾಮದೇವರೊ ವಿನುತ ತುಳಸಿಯೊ ಕುಶವೊ ದರ್ಭೆಯೊ ಸಮಿಧೆಗಳ ಹೊರೆಯೋ- ಎಂದು ಮುಂತಾಗಿ ದ್ರೌಪದೀ ಸ್ವಯಂವರ ಕಾಲದಲ್ಲಿ ಬ್ರಾಹ್ಮಣ ವೇಷದ ಅರ್ಜುನನ ಬಗ್ಗೆ ಆಡಿಸಿರುವ ಮಾತು ಅಪಹಾಸ್ಯದ ಹುಚ್ಚುಹೊಳೆ. ಪತಿಗಳೆನ್ನನು ಮಾರಿ ಧರ್ಮಸ್ಥಿತಿಯ ಕೊಂಡರು - ಎಂದು ದ್ರೌಪದಿಯಾಡುವ ಮಾತು ಕಟಕಿಯ ಕೂರ್ಗಣೆ. ಹಿರಿಯರಿಲ್ಲದ ಸಭೆ ನೆರವಿಯದು ಸಭೆಯಲ್ಲ- ಎಂಬುದರ ಅರ್ಥ ಆ ಶಬ್ದಗಳಿಗೂ ಮೀರಿದ್ದು. ಕವಿತಾಗೌರವಕ್ಕೆ ಕುಂದಿಲ್ಲದಂತೆ ಅಲ್ಲಲ್ಲಿ ವಿಡಂಬನದ ಹರಳುಗಳನ್ನು ತನ್ನ ಮಹಾಭಾರತದ ಕುಂದಣದಲ್ಲಿಟ್ಟಿದ್ದಾನೆ ಕುಮಾರವ್ಯಾಸ.

**ದಾಸಯುಗ :** ಭಕ್ತಿಪ್ರಧಾನವಾದ ದಾಸಸಾಹಿತ್ಯದಲ್ಲಿ ವಿಡಂಬನಕ್ಕೇನೂ ಕೊರತೆಯಿಲ್ಲ. ವಚನ ಸಾಹಿತ್ಯದ ಮನೋಧರ್ಮವನ್ನೇ ಇಲ್ಲೂ ಕಾಣಬಹುದು. ಸಮಯದಲ್ಲಿ ಕೈಕೊಡುತ್ತಿದ್ದ ದೇವರನ್ನು ಕುರಿತು - ಆರು ಬದುಕಿದರಯ್ಯಾ ಹರಿ ನಿನ್ನ ನಂಬಿ ತೋರು ಈ ಜಗದೊಳಗೆ ಒಬ್ಬರನ್ನು ಕಾಣೆ ಎನ್ನುತ್ತಾರೆ ದಾಸರು. ದೇವರನ್ನು ಬಿಟ್ಟು ಮಾನವರ ಬಳಿಗೆ ಬಂದರೂ ಅವರಲ್ಲೂ ಹಲವೊಮ್ಮೆ ಹೃದಯದ ಅಭಾವ. ಭಾರತ ರಾಮಾಯಣ ಪಂಚರಾತ್ರಾಗಮ ಸಾರತತ್ವದ ಬಿಂದು ಒಳಗೆ ಬಿದ್ದೀತೆಂದು ಗಯ್ಯಾಳಿ ಮೂಳೀ ಕದವನಿಕ್ಕಿದಳಿದಕೊ, ಪದುಮನಾಭನಲಿ ಲೇಶಭಕುತಿಯಿಲ್ಲ ಉದರವೈರಾಗ್ಯವಿದು, ಮಡಿಮಡಿಮಡಿಯೆಂದು ಮೂರು ಮಾರು ಹಾರುತಿ ಮಡಿಯೆಲ್ಲಿ ಬಂತೆ ಬಿಕನಾಶಿ? ಶಿವೋಹಂ ಎಂದು ಕಣ್ಣು ಮುಚ್ಚಿ ಕೂತ ಬೂಟಕರನ್ನೂ ದಾಸರು ಬಿಟ್ಟಿಲ್ಲ. ಶಿವ ನೀ ಹೇಗಾದೊ? ಶಿವ ನೀನಾದರೆ ಶಿವನರ್ಧಾಂಗಿಗೆ ಧವನಾದೆಯಲ್ಲೊ ಅವಿವೇಕಿ ಮೂಢ ಎನ್ನುತ್ತಾರೆ.

**ರಾಮಧಾನ್ಯಚರಿತೆ :** ಕನಕದಾಸರ ರಾಮಧಾನ್ಯಚರಿತೆ ಒಂದು ವಿಡಂಬನ ಕಾವ್ಯ. ಇದರಲ್ಲಿ ರಾಗಿ ಬತ್ತಗಳ ನಡುವೆ ತಂತಮ್ಮ ಹಿರಿಮೆಗಳ ಬಗ್ಗೆ ನಡೆದ ವಾಗ್ವಾದ ಮನೋಜ್ಞವಾಗಿದೆ. ಬುಧರು ಜರೆದು ನಿರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲ ಎಂದು ಬತ್ತದಿಂದ ರಾಗಿಯ ಬಗ್ಗೆ ತಿರಸ್ಕಾರ. ಕ್ಷಿತಿಯಮರ ರೂಪ ನಮನದಲಿ ಸುವ್ರತ ಸುಭೋಜನ ಪರಮ ಮಂತ್ರಾಕ್ಷತೆಗಳಲ್ಲಿ ......... ದೇವರಿಗತಿಶಯದ ನೈವೇದ್ಯ ತಾನಹೆನೆಂದು ಬತ್ತಕ್ಕೆ ಜಂಬ, ಹೆತ್ತ ಬಾಣಂತಿಯರು ರೋಗಿಗೆ ಪತ್ಯ ನೀನಹೆ; ಹೆಣದ ಬಾಯಿಗೆ ತುತ್ತು ನೀನಹೆ; ಎಳ್ಳು ದರ್ಭೆಗೆ ತೆತ್ತಿಗನು ನೀನಾದೆ ಎಂದು ರಾಗಿ ಅಕ್ಕಿಯನ್ನು ಹೀಯಾಳಿಸುತ್ತದೆ. ಶ್ರೀಮಂತರ ಮತ್ತು ಬಡವರ ನಡುವಿನ ಅಂತರದ ಚಿತ್ರ ಈ ಕಥೆಯಲ್ಲಿ ವಿಡಂಬನಾತ್ಮಕವಾಗಿ ಮೂಡಿಬಂದಿದೆ. ಬಿಂಕಗುಳಿಗಳ, ಮದಾಂಧರ ಮತ್ತು ಪಟ್ಟಭದ್ರ ಹಿತಾಸಕ್ತರ ಶಕ್ತರ ಮೂಗು ಕೆತ್ತಿ, ಅವರ ಓರೆಕೋರೆಗಳನ್ನು ತಿದ್ದಬೇಕೆಂಬುದೇ ಕವಿಯ ಪ್ರತಿಜ್ಞೆಯಾಗಿದೆ; ಜೊತೆಗೆ ಈ ಓರೆಕೋರೆಗಳು ಸಾಮಾನ್ಯರಿಗೆ ಗ್ರಹಿಕೆಯಾಗಿ ಅವರು ಎಚ್ಚೆತ್ತುಕೊಳ್ಳಬೇಕೆಂಬುದು ಅವನ ಆಶಯವಾಗಿದೆ. ಸತ್ಯಾಸತ್ಯಗಳ ನಡುವೆ ರಾಜಿಯ ಸೂತ್ರ ಸಲ್ಲದೆಂಬುದು ಕವಿಯ ದೃಢನಿಲುವಾಗಿದೆ. ಅವನ ಗ್ರಾಮೀಣ ಸ್ವಭಾವಕ್ಕೆ ಅವನ ರೂಕ್ಷ ಪ್ರತಿಜ್ಞೆಗೆ ಉಪಾಯ ಹುನ್ನಾರುಗಳಾಗಲೀ, ಮಂತ್ರ ತಂತ್ರಗಳಾಗಲೀ ಮರೆಮೋಸಗಳಾಗಲೀ ನುಣ್ಣನೆಯ ಬೆಣ್ಣೆ ಮಾತುಗಳಾಗಲೀ ಒಗ್ಗುವಂತಿಲ್ಲ. ಒರಟುತನ,

ನಿಷ್ಕಾಪಟ್ಯ, ತತ್ತ್ವನಿಷ್ಠೆ, ಶ್ರದ್ಧೋತ್ಸಾಹಗಳು ಅವನ ಪ್ರವೃತ್ತಿ ಜಾಯಮಾನಗಳಿಗೆ ಪೋಷಕವಾಗಿರುವ ದ್ರವ್ಯ ವಿಶೇಷಗಳು. ಆದ್ದರಿಂದ ಅವನ ವಿಡಂಬನೆಯಲ್ಲಿ ಕಹಿಯಿದೆ ವಿಷವಿಲ್ಲ. ಮೊನಚಿದೆ ನೋವಿಲ್ಲ. ಹಠವಿದೆ, ದ್ವೇಷವಿಲ್ಲ. ಕಾವಿದೆ, ತಾಪವಿಲ್ಲ. ಕೋಪವಿದೆ, ವೈರವಿಲ್ಲ. ಚುರುಕಿದೆ ಉರಿಯಿಲ್ಲ. ಎಲ್ಲಿಯೂ ಬ್ರಹ್ಮಶಿವ, ವೃತ್ತವಿಲಾಸರ ಮತಾಂಧತೆಯ ದೋಷಲೇಪವಿಲ್ಲ. ಕರ್ತವ್ಯಪ್ರಜ್ಞೆ, ಸತ್ಯನಿಷ್ಠೆ, ಲೋಕಕಾರುಣ್ಯ, ನೈತಿಕಶ್ರದ್ಧೆ ಮೇಲಾಗಿ ಧರ್ಮಕೋಪ - ಇವು ಈ ವಿಡಂಬನೆಯ ಹಿಂದಿರುವ ಮೂಲಭೂತವಾದ ಪ್ರೇರಕ ಪ್ರವೃತ್ತಿಗಳು - ಎಂದು ದೇಜಗೌ ಹೇಳಿರುವ ಮಾತುಗಳು ವಿಡಂಬನ ಕಾವ್ಯಕ್ಷೇತ್ರದಲ್ಲಿ ರಾಮಧಾನ್ಯ ಚರಿತ್ರೆಗಿರುವ ಭದ್ರಸ್ಥಾನದ ಬಗ್ಗೆ ನೀಡಲಾಗಿರುವ ನಿರ್ಣಯ.

**ಸರ್ವಜ್ಞ :** ಸರ್ವಜ್ಞ ವಿಡಂಬನದ ಸಾರ್ವಭೌಮ. ಆಡುಮುಟ್ಟದ ಸೊಪ್ಪಿಲ್ಲ. ಹಾಗೇ ದೈವನಂಬಿಕೆಯಿಂದ ರಾಜಕಾರಣದವರೆಗೆ ಎಲ್ಲ ವಿಷಯಗಳೂ ಇವನ ಸೊತ್ತೇ. ತ್ರಿಪದಿಗೆ ಹೊಸ ಬೆಡಗನ್ನೂ ಚುರುಕನ್ನೂ ನೀಡಿ ಸಾಸಿವೆಯ ಗಾತ್ರದಲ್ಲಿ ಬ್ರಹ್ಮಾಂಡದ ಶಕ್ತಿಯನ್ನು ತುಂಬಿರುವ ಸರ್ವಜ್ಞನ ವಚನಗಳಲ್ಲಿ ವಿಡಂಬನದ ಹಲವು ಶ್ರೇಣಿಗಳನ್ನು ಕಾಣಬಹುದು

ಒಂದಾಡ ತಿಂದಾತ ಹೊಂದಿದೆಡೆ ಸ್ವರ್ಗವನು
ಎಂದೆಂದು ಅಜನ ಕಡಿತಿಂಬ ಕಟುಕ ತಾ
ನಿಂದ್ರನೇಕಾಗ ಸರ್ವಜ್ಞ

ಎಂಬುದು ಈತನ ವಿಡಂಬನ ವಿಧಾನ. ವಿಪರ್ಯಯವೆನಿಸುವಂಥ ಎರಡು ಸನ್ನಿವೇಶಗಳನ್ನು ಮೂರೇ ಸಾಲಿನಲ್ಲಿ ಒಟ್ಟಿಗಿಟ್ಟು ಸಾಧಿಸಿರುವ ಪರಿಣಾಮ ಅದ್ಭುತ.

**ಇತರ ಕೃತಿಗಳು :** ಮುಪ್ಪಿನ ಷಡಕ್ಷರಿ ಬರೆದಿರುವ ಹಲವಾರು ಹಾಡುಗಳಲ್ಲಿ ವಿಡಂಬನವಿಲ್ಲದೆ ಇಲ್ಲ. ಇದರ ಉದ್ದೇಶವೂ ಸಾಮಾನ್ಯವಾಗಿ ಪಾರಮಾರ್ಥಿಕ. ಈತ ಬರೆದಿರುವ ತಿರುಕನ ಕನಸು ಒಂದು ಉತ್ತಮ ವಿಡಂಬನ ಕೃತಿ. ಕನ್ನಡ ಜನಪದ ಸಾಹಿತ್ಯದಲ್ಲೂ ಸಂಚಿಯ ಹೊನ್ನಮ್ಮನ ಹದಿಬದೆಯ ಧರ್ಮ ಮುಂತಾದ ಕಾವ್ಯಗಳಲ್ಲೂ ನೀತಿ, ನಗೆ, ಕನಸು, ನನಸುಗಳೊಂದಿಗೆ ವಿಡಂಬನವೂ ಬೆರೆತುಕೊಂಡಿದೆ. ಗಾದೆಗಳಂತೂ ವಿಡಂಬನದ ಹುತ್ತ. ದುಡ್ಡಿನ ಆಸೆಗೆ ಬೆಲ್ಲ ಮಾರಿ ಗೋಣೀಚೀಲ ನೆಕ್ಕಿದ, ಅಳ್ತಾ ಹೋದ ನಾಯಿ ಮೊಲ ಹಿಡ್ದಾತೇ, ಇತ್ತಿತ್ತ ಬಾ ಅಂದರೆ ಇದ್ದ ಗೋಡೇನೂ ಕಿತ್ತುಕೊಂಡು ಬಂದ, ಅಜ್ಜಿಗರಿವೆ ಕಾಟ ಮಗಳಿಗೆ ಮಿಂಡನ ಕಾಟ, ಯಾಕಳ್ತಿಯಾ ಮಗಳೆ ಅಂದ್ರೆ ಲೋಕ ಮೆಚ್ಚಾಕೆ ಮೊದಲಾದ ಸಾವಿರಾರು ಗಾದೆಗಳಲ್ಲಿ ವಿಡಂಬನೆಯ ವಿಶ್ವರೂಪದರ್ಶನವನ್ನು ಮಾಡಬಹುದು. ಒಂದೇ ಒಂದು ವಾಕ್ಯದಲ್ಲಿ ಅರ್ಥಶ್ರೀಮಂತಿಕೆಯನ್ನು ತುಂಬಿಕೊಂಡು ಹೊಳೆಯುವ ಈ ಗಾದೆಗಳು ವಿಡಂಬನ ಸಾಹಿತ್ಯದ ಭಂಡಾರಗಳು.

**ಇಪ್ಪತ್ತನೆಯ ಶತಮಾನ :** ಈ ಶತಮಾನದಲ್ಲಿ ವಿಡಂಬನ ಸಾಹಿತ್ಯ ಸಾಕಷ್ಟು ಬೆಳೆದಿದೆ. ಸಮಾಜಿಕ ವಿಡಂಬನ, ರಾಜಕೀಯ ವಿಡಂಬನ, ಸಾಹಿತ್ಯಕ ವಿಡಂಬನ ಮುಂತಾದ ನಾನಾ ಪ್ರಕಾರಗಳು ಹುಟ್ಟಿಕೊಂಡಿವೆ. ವಿಡಂಬನಾತ್ಮಕ ಸಣ್ಣಕಥೆ, ಕಾದಂಬರಿ, ಪದ್ಯ, ಚುಟುಕ, ಪ್ರಬಂಧಗಳಿಗೇನೂ ಕಡಿಮೆಯಿಲ್ಲ. ದಿನೇ ದಿನೇ ಬೆಳೆಯುತ್ತಿರುವ ಈ ಸಾಹಿತ್ಯದಲ್ಲಿ ಗಟ್ಟಿಯಾದ್ದನ್ನು ಆರಿಸಿ ಪಟ್ಟಿಮಾಡಿ ಪಠಿಸುವುದು ಇನ್ನೂ ಸ್ವಲ್ಪ ಕಾಲ ಸರಿದ ಮೇಲೆ. ಮುದ್ರೆಯೊತ್ತಿರುವ ಕೆಲವು ಲೇಖಕರ ಮತ್ತು ಕೃತಿಗಳ ಆನೆಹೆಜ್ಜೆಗಳನ್ನು ಇಲ್ಲಿ ಗುರುತಿಸಬಹುದಾಗಿದೆ.

ಕನ್ನಡಕ್ಕೊಬ್ಬರೇ ಎಂದು ಕೀರ್ತಿ ಗಳಿಸಿರುವ ಟಿ.ಪಿ.ಕೈಲಾಸಂ ಹಾಸ್ಯಚಕ್ರವರ್ತಿ, ವಿಡಂಬನ ಪ್ರವೀಣ. ನಡೆ, ನುಡಿ, ನಾಟಕ ಎಲ್ಲಕ್ಕೂ ಹಾಸ್ಯದ ಉಡುಪು, ಒಡ್ಯಾಣ. ಮೊನೆಮಾತು ಎಸೆದು ಚುಚ್ಚಿ ಕೊಲ್ಲುವುದಕ್ಕಿಂತ ಹಾಸ್ಯದ ಹೊಳೆ ಹರಿಸಿ ಕೊಚ್ಚಿ ಬಿಸಾಡುವುದು ಇವರ ವಿಧಾನ. ಬಂಡ್ವಾಳ್ವಿಲ್ಲದ್ಬಡಾಯಿ, ಹೋಂ ರೂಲು, ಅಮ್ಮಾವ್ರ ಗಂಡ, ನಮ್ಬ್ರಾಹ್ಮಣ್ಕೆ, ಗಂಡಸ್ಕತ್ರಿ ಮುಂತಾದ ನಾಟಕಗಳಲ್ಲಿ ಸಮಾಜದ ವಿಡಂಬನೆ ಸಮರ್ಥವಾಗಿ ಮೂಡಿಬಂದಿದೆ. ಪುಟ್ಟು, ಮಾಧು, ನಾಗತ್ತೆ ಥಳಕಿನ ಪುತ್ಥಳಿ ಪಾತೂ, ಮಗಳ ಮದುವೆಗಾಗಿ ಅಂಚೆಯವನಿಗೆ ಕೂಡಾ ಕಾಸು ಕೊಡದೆ ಹಣ ಕೂಡಿಡುತ್ತಿದ್ದ ಲಾಯರ್ ನರಸಿಂಹಯ್ಯ, ದೊಡ್ಡ ಮನುಷ್ಯನ ಸೋಗು ಹಾಕಿ ಸಮಾಜದ ರಕ್ತ ಹೀರುವ ಜಿಗಣೆ ರಂಗಣ್ಣ, ರಾಮಣ್ಣ, ವಿ.ಸಿ. (ವರಪೂಜೆ ಛಾಂಪಿಯನ್), ಬಂಡ್ವಾಳ್ವಿಲ್ಲದ್ಬಡಾಯಿಗಾರ ಬುಳ್ಳಾಪುರದ ಲಾಯರಿ ಅಹೋಬ್ಳು- ಇವರೆಲ್ಲ ನಮ್ಮ ಸಮಾಜದ ವ್ಯಕ್ತಿಗಳೇ. ಇವರೇ ವಿಡಂಬನಕ್ಕೆ ಇಲ್ಲಿ ಆಹಾರ. ಇಬ್ಸನ್‌ದು ಇನಿವಾತು, ಗ್ಯಾಲ್ಸ್‌ವರ್ದಿದು ಗೆಳೆವಾತು, ಷಾನದು ಸುಡೋ ಮಾತು, ಕೈಲಾಸಂದು ಕೊಡಲಿಪೆಟ್ಟು- ಇದು ಕೈಲಾಸಂ ಅಭಿಪ್ರಾಯ. ಟೊಳ್ಳುತನಕ್ಕೆ ಪೆಟ್ಟುಕೊಟ್ಟು ಉರುಳಿಸುವುದರಲ್ಲಿ ಕೈಲಾಸಂ ಪ್ರವೀಣ. ಪ್ರಾಸ, ಶ್ಲೇಷೆ, ವಕ್ರೋಕ್ತಿ, ಚತುರೋಕ್ತಿ, ವಿಕಟಹಾಸ್ಯ- ಇವೇ ಇವರ ಸೇನೆ. ಆದರೆ ಇದಕ್ಕೆ ದ್ವೇಷ ಅಥವಾ ಕ್ರೋಧ ಮೂಲವಲ್ಲ; ಸಹಾನುಭೂತಿಯೇ ಇದರ ಜೀವಾಳ. ಆದ್ದರಿಂದ ಇವರ ನಗುವಿನ ಹಿಂದೆಯೇ ಅಳು ಮಡುಗಟ್ಟಿ ನಿಂತೇ ಇರುತ್ತದೆ.

ಕಿರಿ ಆಳದ ನಗೆನೀರಿನ ಮೇಲೆ
ತಿರುಗುತ ಬಹು ವೇಳೆ
ಕಣ್ಣೀರಿನ ಕಡಲಿನ ಪಾಲು
ಹಾಸ್ಯದ ಹರಿಗೋಲು

ಎಂಬುದು ಅವರ ಮಾತು. ಬಂಡ್ವಾಳ್ವಿಲ್ಲದ್ಬಡಾಯಿಯ ಒಂದು ಪಾತ್ರವಾದ ಚೋರನನ್ನು ಕುರಿತು, ಬೀದೀಲೇನಾದ್ರೂ ಬಿಡಿಗಾಸು ಬಿದ್ದಿದೇಂತ ಬಗ್ನೋಡ್ತ ಬರ್‍ತಿದೀಯೇನೋ ಬಕ್ಕೇ ಎಂದು ಅಹೋಬ್ಳು ಆಡುವ ಪ್ರಾಸಬದ್ಧ ಕಿರಿಚಾಟದ ತಕ್ಷಣದ ಪ್ರತಿಕ್ರಿಯೆಯೆಂದರೆ ಕೇಕೆ ನಗು. ಆದರೆ ಅದರ ಹಿಂದೆಯೇ ಬಡತನದ ದಾರುಣ ಚಿತ್ರವನ್ನು ನೆನೆದು ಕಣ್ಣೀರು, ಅಹೋಬ್ಳುವಿನ ಟೊಳ್ಳು ಜಂಬದ ಬಗ್ಗೆ ಮರುಕ. ಇದು ಕೈಲಾಸಂ ವಿಡಂಬನದ ಪರಿಣಾಮ.

ನಾಟಕ ಪ್ರಪಂಚದ ಇನ್ನೊಬ್ಬ ವಿಡಂಬನಕಾರರು ಶ್ರೀರಂಗ. ಇವರ ಮಾತು ಹೆಚ್ಚು ಮಾರ್ಮಿಕ. ಎಂ.ವಿ.ಸೀತಾರಾಮ್ಯನವರು ಶ್ರೀರಂಗರ ಬಗ್ಗೆ ಬರೆಯುತ್ತ ಅವರ ಹರಿತವಾದ ಬುದ್ಧಿಶಕ್ತಿ, ವ್ಯಂಗ್ಯ, ಕಟುಹಾಸ್ಯ, ವಿಡಂಬನೆ, ಮಾರ್ಮಿಕವಾದ ಮಾತುಗಾರಿಕೆ, ಹದಿರುನುಡಿಯ ಹೆಕ್ಕಳ ಮತ್ತು ಅವರ ವಿಚಾರಸರಣಿ, ವ್ಯಕ್ತಿತ್ವ- ಇವುಗಳೆಲ್ಲ ಅವರ ನಾಟಕಗಳಲ್ಲಿ ಚೆನ್ನಾಗಿ ಹೊಮ್ಮಿವೆ. ಬರಿಯ ವಿನೋದಕ್ಕಾಗಿ ಇಲ್ಲ ಇವರ ನಾಟಕಗಳು, ಅವು ವಿಚಾರಕ್ಕಾಗಿ ವಿಕಾಸಕ್ಕಾಗಿ- ವಿಡಂಬನ ವಿನೋದಗಳ ಮೂಲಕ ಎಂದು ಹೇಳಿದ್ದಾರೆ. ಕಟ್ಟಿದ ಮನೆಯನ್ನು ರಿಪೇರಿ ಮಾಡುವುದು ಎಷ್ಟು ಮೂರ್ಖತನವೋ ಸಮಾಜವನ್ನು ಸುಧಾರಿಸುವುದೂ ಅಷ್ಟೇ ಮೂರ್ಖತನ. ಚಿರಕಾಲ ಬಾಳಬೇಕಾದರೆ ಹೊಸ ಸಮಾಜವನ್ನೇ ರೂಪಿಸಬೇಕು- ಎಂಬ ಭಾವನೆಯಿಂದ ಹೊರಟ ಇವರ ಈಗಿನ ಹಲವಾರು ಕೃತಿಗಳು ಭ್ರಮನಿರಸನದ ಪ್ರತೀಕಗಳಾಗಿವೆ. ನಮ್ಮ ಸ್ವರ್ಗೀಯ ಶತ್ರುಗಳು ಎಂಬ ಪ್ರಬಂಧಗಳಲ್ಲಿ ದೇವತೆಗಳನ್ನು ಕೋರ್ಟಿಗೆಳೆದಿರುವ ಶ್ರೀರಂಗರ ಕೃತಿಗಳಲ್ಲಿ ಭಾವದ ಕಾವಿಗಿಂತ ಕ್ರೋಧದ ನೋವು ಹೆಚ್ಚು. ಇವರ ನಗೆ ಬಲು ಹರಿತ. ವಿಶ್ವಾಮಿತ್ರನ ಸೃಷ್ಟಿ ಕಾದಂಬರಿಯಲ್ಲಿ ಬರುವ ಹೋಟಲು ಮಾಲಿಕನ ಚಿತ್ರವಿದು. 'ಕ್ಷೀರಸಾಗರದಲ್ಲಿ ಒರಗಿದ ವಿಷ್ಣುವಿಗೆ ಒಲಿದ ಲಕ್ಷ್ಮಿಯು ಚಹದಂಗಡಿಯವನಿಗೆ ಒಲಿಯುವುದು ಆಶ್ಚರ್ಯವೇ? ಇದ್ದಷ್ಟು ಕ್ಷೀರವನ್ನೇ ಸಾಗರವನ್ನಾಗಿ ಮಾಡುವ ಮಹಾಮಾಯಿಯಿವನು. ಲಕ್ಷ್ಮಿಯು ಅವನ ದಾಸಿಯಾಗಿದ್ದಾಳೆ; ಎರಡೂ ಕಿವಿಗಳಿಂದ ಜೋತುಬಿದ್ದಿದ್ದಾಳೆ; ಎರಡೂ ಕೈಗಳಲ್ಲಿ ಕುಣಿಯುತ್ತಿದ್ದಾಳೆ; ಬೆರಳುಗಳಲ್ಲಿ ಬಳುಕುತ್ತಲಿದ್ದಾಳೆ ಮಾಲಿಕನ ಲಕ್ಷ್ಮಿ'.

ಬೇಂದ್ರೆಯವರು ವಿಡಂಬನ ಕೃತಿಗಳನ್ನು ರಚಿಸದೆ ಇಲ್ಲ. ಇವರ ಅರ್ವಣನೀಯ, ಅರ್ವಾಚೀನ ಸೌಂದರ್ಯ, ಶೂನ್ಯ ಮುಂತಾದ ಹಲವು ಪದ್ಯಗಳಲ್ಲಿ ಕಾವ್ಯದ ಕಾವು ಕಡಿಮೆಯಾಗಿ ವಿಡಂಬನದ ಮೊನೆಯ ಅನುಭವವಾಗುತ್ತದೆ. ಬೇಂದ್ರೆಯವರು ರಾಜಕೀಯವನ್ನೂ ವಿಡಂಬನಕ್ಕೆ ತುತ್ತಾಗಿಸಿದ್ದಾರೆ. ಅವರ ಜಾತ್ರೆಯಿಂದ ಒಂದು ಉದಾಹರಣೆಯಿದು:

ಯಾರೆಂದರು ಪ್ಲೇಗೆಂದು? ಈ ಅರಮನೆಯಲ್ಲಿ
ನನ್ನ ಅಪ್ಪಣೆಯಿಲ್ಲದೆ ಪ್ಲೇಗೂ ಬರಕೂಡದು
ಯಾರೂ ಬರಕೂಡದು. ನಾನು ಪ್ಲೇಗಿದೆ ಎನ್ನುವ
ವರೆಗೆ ಯಾರೂ ಪ್ಲೇಗು ಎಂಬ ಮಾತೂ ಎತ್ತಕೂಡದು.

ಶಿವರಾಮ ಕಾರಂತರ ಕೃತಿಗಳಲ್ಲಿ ಕಂಡುಬರುವ ಮುಖ್ಯ ಸೂತ್ರಗಳಲ್ಲಿ ವಿಡಂಬನವೂ ಒಂದು. ಇದು ಒಮ್ಮೆ ಹಾಸ್ಯದ ಕಡೆಗೂ ಇನ್ನೊಮ್ಮೆ ಕ್ರೋಧದ ಕಡೆಗೂ ಮತ್ತೊಮ್ಮೆ ವಿಷಾದದ ಕಡೆಗೂ ಓಲುತ್ತದೆ. ಅವರ ಗ್ನಾನ, ದೇವದೂತರು, ಹಳ್ಳಿಯ ಹತ್ತು ಸಮಸ್ತರು, ಮೈಲಿಕಲ್ಲುಗಳೊಡನೆ ಮಾತುಕತೆ ಇವೇ ವಿಡಂಬನ ಕೃತಿಗಳು. ಅವರ ಅನೇಕ ಕಾದಂಬರಿಗಳಲ್ಲೂ ವಿಡಂಬನೆ ಮೂಡಿಬಂದಿದೆ.

ಕುವೆಂಪು ಅವರ ಶ್ರೀರಾಮಾಯಣದರ್ಶನದಲ್ಲಿ, ಶೂದ್ರ ತಪಸ್ವಿಯಲ್ಲಿ, ಬೆರಳ್‌ಗೆ ಕೊರಳ್ ನಾಟಕದಲ್ಲಿ, ಕಾನೂರು ಹೆಗ್ಗಡತಿಯಲ್ಲಿ, ಅವರು ಬರೆದಿರುವ ನೂರಾರು ಕವನಗಳಲ್ಲಿ ವಿಡಂಬನಕ್ಕೇನೂ ಕೊರತೆಯಿಲ್ಲ. ರಕ್ತಾಕ್ಷಿ ನಾಟಕದಲ್ಲಿ ಬರುವ ಸಾಮಾನ್ಯ ಪಾತ್ರಗಳಲ್ಲಿ ಹೊಮ್ಮುವ ಅಸಾಮಾನ್ಯ ವಿಡಂಬನವನ್ನು ಕಂಡಾಗ, ಅವರ ಕವನಗಳಲ್ಲಿ ಬರುವ ವಿಡಂಬನೆಗಳನ್ನು ನೋಡಿದಾಗ ವಿಡಂಬನ ಸಾಹಿತ್ಯದಲ್ಲಿಯೂ ಅವರು ಸಮರ್ಥರು ಎಂಬ ಅಂಶ ವ್ಯಕ್ತವಾಗದಿರದು.

ಪ್ರಬಂಧಕಾರರ ಪೈಕಿ ಗೊರೂರರದು ಸಕ್ಕರೆ ಹಚ್ಚಿದ ಕಹಿಗುಳಿಗೆಗಳ ರೀತಿ. ವಿಡಂಬನಕ್ಕೆ ತುತ್ತಾದ ವ್ಯಕ್ತಿಗಳ ಪೈಕಿ ಇವರಿಗೆ ಎಳ್ಳಷ್ಟೂ ಅಗೌರವವಿಲ್ಲ. ಇವರದು ವಿಡಂಬನದ ಸರಳಮಾರ್ಗ. ಇವರ ಶಾಲುಸಾಬಿ, ಜೋಡಿದಾರರು, ಶೀನಪ್ಪ, ರಂಗೇಗೌಡ- ಮುಂತಾದವರು ನಮಗೂ ಹತ್ತಿರದವರಾಗುತ್ತಾರೆ. ರಾಶಿಯವರ ತುಟಿಮೀರಿ ಹೊಮ್ಮುವ ಹಾಸ್ಯದ್ದು ವಿವಿಧ ಮುಖ. ಅದಕ್ಕೆ ನಗರದ ಸಂಸ್ಕಾರವಿದೆ; ಅದು ಸೌಮ್ಯವಾಗಿ ಕೆಲಸ ಮಾಡುವ ಅಗ್ನಿ ಪರ್ವತ. ರಾಶಿಯವರ ಗರಡಿಯಲ್ಲಿ ತಯಾರಾದವರ ಪೈಕಿ ಸುನಂದಮ್ಮ, ದಾಶರಥಿ ದೀಕ್ಷಿತ್ ಇವರ ಕೃತಿಗಳಲ್ಲಿ ನಗೆಯ ಅಂಶ ಹೆಚ್ಚು. ಅ.ರಾ.ಸೇ. ಬಲು ಚುರುಕು. ದೀಕ್ಷಿತರ ಕನ್ನಡದ ಗಾಡಿಯಲ್ಲಿ ಅವರ ವೈಶಿಷ್ಟ್ಯ ವ್ಯಕ್ತವಾಗುತ್ತದೆ. ಅವರ ಗಾಂಪರ ಗುಂಪು ನಗೆಗಡಲಿನ ತಮ್ಮ, ರಾಶಿಯವರ ಉರಿಗಾಳು, ಅರವಾಮೊದ್ದು, ಕೊರವ, ಹೆಬ್ಬಿ ಗುಬ್ಬಾಲೆಯ ಜನ- ಎಲ್ಲ ಚಿರಂಜೀವಿಗಳು. ಶ್ರೀರಂಗರ ಹಾದಿಯಲ್ಲಿ ನಡೆದ ಎನ್ಕೆ ಕುಲಕರ್ಣಿ ಇನ್ನೊಬ್ಬ ವಿಡಂಬನಕಾರ. ಶ್ರೀನಿವಾಸರನ್ನು ವಿಡಂಬನಕಾರರ ಪಟ್ಟಿಯಲ್ಲಿ ಸೇರಿಸುವುದಾಗುವುದಿಲ್ಲವಾದರೂ ಅವರ ಡೂಬಾಯಿ ಪಾದ್ರಿಯ ಪಾತ್ರದಂಥ ಹಲವು ಪ್ರಬಂಧಗಳಲ್ಲಿ ಮೃದುಮಧುರ ವಿಡಂಬನವಿದೆ.

ಬೀಚಿ ವಿಡಂಬನಬ್ರಹ್ಮ. ಅವರ ತಿಂಮನ ತಲೆ, ಚಿನ್ನದ ಕಸ ಕನ್ನಡದಲ್ಲಿ ಹಾಸ್ಯ ವಿಡಂಬನೆಯ ಉತ್ತಮ ಬರೆಹಗಳು. ಪ್ರತಿಯೊಂದು ಸನ್ನಿವೇಶದಲ್ಲೂ ಹಾಸ್ಯವನ್ನು ಕಾಣುವ ಕಣ್ಣು ಬೀಚಿಯವರಿಗಿದೆ. ನಾಡಿಗೇರರ ನಗೆಬರೆಹಗಳ ಹಿಂದೆಯೂ ವ್ಯಂಗ್ಯನೋಟದ ಕೊಂಡಿಯಿದೆ.

ಹಿಂದಿನ ತಲೆಮಾರಿನವರ ಪೈಕಿ ಹಾಸ್ಯವನ್ನೇ ತಮ್ಮ ಖಾಯಂ ಹವ್ಯಾಸವಾಗಿ ಮಾಡಿಕೊಂಡ ಕಸ್ತೂರಿ ಅವರ ನಗೆಪದ್ಯಗಳಲ್ಲೂ ಅಣಕವಾಡುಗಳಲ್ಲೂ ಲಘುಪ್ರಬಂಧಗಳಲ್ಲೂ ನಗರಜೀವಿಗಳ ಅಷ್ಟಾವಕ್ರದ ಹಾಸ್ಯನೋಟವಿದೆ. ಆಧುನಿಕ ಸಾಹಿತ್ಯದಲ್ಲಿ ಹಾಸ್ಯಕ್ಕೆಂದೇ ಹಲವು ಅಂತಸ್ತುಗಳ ಮಹಲ್ಲೊಂದನ್ನು ಕಟ್ಟಿದವರು ನಾ. ಕಸ್ತೂರಿ. ಉದಾಹರಣೆಗಾಗಿ ಅವರ 'ಅನರ್ಥ ಕೋಶ'ದ ಶಬ್ದಗಳ ಪೈಕಿ ಎರಡನ್ನಿಲ್ಲಿ ಕೊಟ್ಟಿದೆ:

ಕನ್ಯಾರ್ಥಿ - ಕಾಲೇಜು ವಿದ್ಯಾರ್ಥಿ. ತನಗಿಂತ ಹೆಚ್ಚು ಸೌಂದರ್ಯ, ಕಡಿಮೆ ವಿದ್ಯೆ ಇರುವ ಹೆಣ್ಣನ್ನೇ ಹುಡುಕುವವ.

ಮೂಗು - ಅನೇಕರ ನಶ್ಯದ ಡಬ್ಬಿ, ಕನ್ನಡಕ ಧರಿಸಲು ಅತ್ಯಾವಶ್ಯಕವಾದ ಅಂಗ. ಇದರ ನೇರಕ್ಕೆ ನಡೆವವರೇ ಹೆಚ್ಚು, ಧ್ಯಾನಕ್ಕೆ ಇದರ ತುದಿ ತುಂಬ ಅನುಕೂಲ. ಇದರ ಕೊಂಕನ್ನು ತಿದ್ದುವುದು ಬಲು ಕಷ್ಟ. ದೇವರಿಂದಲೂ ಅಸಾಧ್ಯ. ನಮಗೆ ಇದೊಂದು ಸಂಗೀತೋಪಕರಣ, ನೆಗಡಿಯ ನೆಲವೀಡು.

ಇತ್ತೀಚೆಗೆ ಈ ಕ್ಷೇತ್ರದಲ್ಲಿ ಅನೇಕರು ಕೃಷಿ ನಡೆಸಿದ್ದಾರೆ. ಸಿ.ಕೆ.ಎನ್.ರಾಜ, ಎಂ.ಪಿ.ಮನೋಹರ ಚಂದ್ರನ್, ಪಿ.ಎಸ್.ರಾಮಾನುಜಂ, ಎಸ್.ಎನ್.ಶಿವಸ್ವಾಮಿ, ಎಂ.ಎಸ್.ನರಸಿಂಹಮೂರ್ತಿ, ಟಿ.ಸುನಂದಮ್ಮ, ಪ್ರಭುಶಂಕರ, ಬಿ.ಜಿ.ಎಲ್.ಸ್ವಾಮಿ. ಎಚ್.ಎಲ್.ಕೇಶವಮೂರ್ತಿ, ಎಚ್.ಧುಂಡಿರಾಜ್, ಭುವನೇಶ್ವರಿ ಹೆಗಡೆ, ಬಿ.ಚಂದ್ರೇಗೌಡ, ಎಚ್.ಆನಂದರಾಯಮೂರ್ತಿ ಮುಂತಾದ ಅನೇಕ ಲೇಖಕರೂ ಸಾಕಷ್ಟು ವಿಡಂಬನ ಸಾಹಿತ್ಯವನ್ನು ಸೃಷ್ಟಿಸಿದ್ದಾರೆ.

ಪಾಶ್ಚಾತ್ಯರಲ್ಲಿ ಸಾಹಿತ್ಯ ವಿಡಂಬನವೆಂಬ ವಿಶಿಷ್ಟ ಪ್ರಕಾರವೊಂದು ಬೆಳೆದು ಬಂದಿದೆ. ಸಾಹಿತ್ಯದಲ್ಲಿ ಕಂಡುಬರುವ ನಾನಾ ವಿಚಾರಗಳನ್ನೂ ಅರ್ಥವಿಲ್ಲದ ಸಂಪ್ರದಾಯಗಳನ್ನೂ ಗೇಲಿ ಮಾಡುವುದು ಇದರ ಉದ್ದೇಶ. ಅಣಕವೇ ಇದರ ಅಸ್ತ್ರ. ವಿಡಂಬನಕ್ಕೆ ತುತ್ತಾದ ಕೃತಿಗಳಲ್ಲಿ ಎದ್ದು ಕಾಣುವ ಮಾತಿನ ಚಟಾಕಿಗಳನ್ನೇ ಎತ್ತಿ ಹಾಸ್ಯಕ್ಕೀಡು ಮಾಡುವುದು ಇದರ ವಿಧಾನ. ಆದರೆ ಅಣಕಿಸುವುದು ಅಷ್ಟೇನೂ ಸುಲಭವಲ್ಲ. ಅಣಕಿಸುವವನಿಗೆ ಮೂಲದ ಕೃತಿಯ ಲೇಖಕನಷ್ಟೇ, ಹಲವೇಳೆ ಅದಕ್ಕಿಂತ ಹೆಚ್ಚಾಗಿ ಶಕ್ತಿ ಇರಬೇಕು.

ಕನ್ನಡದಲ್ಲಿ ವಿಡಂಬನೆ ಒಂದು ಸಾಹಿತ್ಯ ಪ್ರಕಾರವಾಗಿ ಬೆಳೆದದ್ದು ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ, ಇಂಗ್ಲಿಷ್‌ನ ಸೆಟೈರ್ ಕನ್ನಡ ವಿಡಂಬನ ಸಾಹಿತ್ಯಕ್ಕೆ ಪ್ರೇರಣೆ ನೀಡಿತು. ಪದ್ಯ ಮತ್ತು ಗದ್ಯ ಈ ಎರಡೂ ರೂಪಗಳಲ್ಲಿ ಕನ್ನಡದಲ್ಲಿ ವಿಡಂಬನೆ ಕಾಣಿಸಿಕೊಂಡಿದೆ. ಕಾವ್ಯ ಕ್ಷೇತ್ರದಲ್ಲಿ ಹೆಚ್ಚಾಗಿ ಬಿಡಿ ಪದ್ಯಗಳು ರಚನೆಗೊಂಡಿವೆ. ನಮ್ಮಲ್ಲಿ ಪೂರ್ಣ ಪ್ರಮಾಣದ ವಿಡಂಬನ ಕಾವ್ಯಗಳು ಕಡಿಮೆ. ಕೆರೋಡಿ ಸುಬ್ಬರಾಯರ ಅನುಕೂಲಸಿಂಧು (1926) ಕನ್ನಡದ ಮೊದಲ ವಿಡಂಬನ ಕಾವ್ಯ. ಜಿ.ಪಿ.ರಾಜರತ್ನಂ ಅವರ ಮಹಾಕವಿ ಪುರುಷಸರಸ್ವತಿ (1940) ಇದೇ ಬಗೆಯ ಇನ್ನೊಂದು ಮಹತ್ವದ ಕೃತಿ. ಕರ್ನಾಟಕವೆಂಬ ಪದ ಸರಿಯೋ, ಕರ್ಣಾಟಕ ಸರಿಯೋ ಎಂಬ ವಾದದ ಬಿರುಗಾಳಿ ನಾಡಿನಲ್ಲಿ ಬೀಸಿದಾಗ ಪುರುಷಸರಸ್ವತಿ ಹುಟ್ಟಿಕೊಂಡದ್ದು. ಕನ್ನಡ ಕವಿಗಳಲ್ಲಿ ಪರಂಪರೆಯಾಗಿ ಬಂದ ಕುಕವಿನಿಂದೆ, ಸ್ವಪ್ರತಿಷ್ಠೆಯ ಸ್ಥಾಪನೆ, ಅಲಂಕಾರಪ್ರಿಯತೆ, ಪ್ರಾಸದ ಪೂಜೆ, ನಾಯಕನ ವರ್ಣನೆ, ನಾಯಕ ನಿವಾಸ ವರ್ಣನೆ, ನಿರ್ಜೀವ ವಸ್ತು ಸಂಭಾಷಣೆ, ಬಲವಂತದ ಉಪಮಾನ ಜೋಡಣೆ ಮುಂತಾದ ಇಡೀ ಕಾವ್ಯ ಪರಂಪರೆಯನ್ನೇ ರಾಜರತ್ನಂ ಇಲ್ಲಿ ಗೇಲಿ ಮಾಡಿದ್ದಾರೆ. ಮೇಲೆ ಹೇಳಿದ ಎರಡೂ ಕೃತಿಗಳಲ್ಲಿ ಕನ್ನಡಾಂಗ್ಲ ಭಾಷೆಯನ್ನು ಅತ್ಯಂತ ಸಮರ್ಥವಾಗಿ ಬಳಸಲಾಗಿದೆ. ಆಧುನಿಕ ವಿಡಂಬನ ಕಾವ್ಯ ಮಾದರಿಗೆ ಎರಡು ಪದ್ಯಗಳನ್ನು ಈ ಮುಂದೆ ಕೊಟ್ಟಿದೆ.

ಆಧುನಿಕ ವಿದ್ಯಾಭ್ಯಾಸದ, ವಿದ್ಯಾರ್ಥಿಯ ಆಡಂಬರದ ವಿಡಂಬನೆ ಹೀಗಿದೆ:

ಫೆಲ್ಟ್‌ಕ್ಯಾಪ್ ತೊಗಲಂ ತಲೆಯೊಳ್<br>
ಬೆಲ್ಟಿನ ಮೃದುತೊಗಲ ಟೊಂಕದೊಳ್ ಬಲಗೈಯೊಳ್<br>
ಗಿಲ್ಟೆಡ್ ವಾಚಿನ ತೊಗಲಂ<br>
ಚಾಲ್ತಿಯೊಳಳವಡುವುದೊಂದು ವಿದ್ಯಾಭ್ಯಾಸಂ (ಕೆರೋಡಿ ಸುಬ್ಬರಾವ್)

ಕಾವ್ಯಾರಂಭದಲ್ಲಿ ಗಣಪತಿಯನ್ನು ಸ್ಮರಿಸುವ ಸಂಪ್ರದಾಯವನ್ನೂ ಪ್ರಾಸಪ್ರಿಯತೆಯನ್ನೂ ವಿಡಂಬಿಸಿರುವ ನವೀನ ರೀತಿ ಹೀಗಿದೆ:

ಕಳ್ಳು ಕಾವ್ಯದ ಮಸಿಯ ಕುಡಿಕೆಯ<br>
ಟಿಳ್ಳು ಮಾಡುವ ಮೊದಲು ಹಾವಿನ<br>
ಬೆಲ್ಟು ಹಾಕಿದ ಗಣಪನನು ಹಾಡುವುದು ನಮ್ಮವರ<br>
ಫಾಳ್ಟು ಮೀರಿದರಿದನು ಸಿವಿಯರ್<br>
ಜೋಳ್ಟು ತಪ್ಪದು ಸತ್ಯ ಥಂಡರ್<br>
ಬೋಳ್ಟು ಬಿದ್ದಂತೆಂದು ದೇರ್ಫೋರ್ ಗಣಪತಿಯ ನೆನೆವೆ<br>
(ಜಿ.ಪಿ.ರಾಜರತ್ನಂ)

ಮಾತಿಗೆ ಅರ್ಥ ಹೇಗೋ ಹಾಗೆ ನಗೆಯೊಂದಿಗೆ ಸಾಮಾನ್ಯವಾಗಿ ಜನ್ಮವೆತ್ತುವ ವಿಡಂಬನದ್ದು ಸರ್ವಾಂತರ್ಯಾಮಿ ಗುಣ. ಕನ್ನಡ ಸಾಹಿತ್ಯದಲ್ಲೂ ಇದು ಓತಪ್ರೋತವಾಗಿ ಹರಿದಿರುವುದಷ್ಟೇ ಅಲ್ಲ, ಪೂರ್ತಿಯಾಗಿ ವಿಡಂಬನವೇ ಮೈಯಾಂತ ಕೃತಿಗಳು ಹೊರಬರುತ್ತಲೇ ಇವೆ. (ಎಚ್.ಎಸ್.ಕೆ.)

**ಕನ್ನಡದಲ್ಲಿ ವಿಮರ್ಶೆ :** ಸಾಹಿತ್ಯ ವಿಮರ್ಶೆ ಕನ್ನಡದಲ್ಲಿ ಒಂದು ಪ್ರತ್ಯೇಕವಾದ ಅಧ್ಯಯನ ಶಿಸ್ತಾಗಿ ಬೆಳೆದದ್ದು ಈ ಶತಮಾನದಲ್ಲಿಯೇ. ಇದರ ಉಗಮ ಮತ್ತು ಬೆಳೆವಣಿಗೆಗಳಿಗೆ ಕಾರಣ ಪಾಶ್ಚಾತ್ಯ ಸಾಹಿತ್ಯ ವಿಮರ್ಶೆ ಕನ್ನಡದ ಸಾಹಿತ್ಯಾಭ್ಯಾಸಿಗಳ ಮೇಲೆ ಬೀರಿದ ಪ್ರಭಾವ. ಪಶ್ಚಿಮದಲ್ಲಿ ತೀಕ್ಷ್ಣಮತಿಗಳೂ ಪ್ರಕಾಂಡ ಪಂಡಿತರೂ ಸೂಕ್ಷ್ಮ ಸಂವೇದನಾಶೀಲರೂ ಆದ ಅನೇಕ ವಿಮರ್ಶಕರೂ ಕವಿ ವಿಮರ್ಶಕರೂ ಈ ಕ್ಷೇತ್ರದಲ್ಲಿ ದುಡಿದು ನೂರಾರು ಆಚಾರ್ಯ ಕೃತಿಗಳನ್ನು ರಚಿಸಿದ್ದಾರೆ. ಇಂಗ್ಲಿಷ್ ಭಾಷೆ, ಸಾಹಿತ್ಯ, ವಿಮರ್ಶೆಗಳನ್ನು ಆಸ್ಥೆಯಿಂದ ಅಧ್ಯಯನ ಮಾಡಿದ ಕನ್ನಡದ ವಿದ್ವಾಂಸರು ಪಶ್ಚಿಮದ ವಿಮರ್ಶೆಯ ವೈಪುಲ್ಯವನ್ನೂ ಪ್ರಖರತೆಯನ್ನೂ ಕಂಡು ಬೆರಗಾಗಿ, ಅನಂತರ ಅದನ್ನು ಆಳವಾಗಿ ಅಧ್ಯಯನ ಮಾಡಿ, ಅದರ ಮೂಲತತ್ತ್ವಗಳನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟಿದ್ದಾರೆ. ಜೊತೆಗೆ ಆ ಮೂಲತತ್ತ್ವಗಳನ್ನು ಕನ್ನಡದಲ್ಲಿ ಸಾಹಿತ್ಯ ಕೃತಿಗಳಿಗೆ ಅನ್ವಯಮಾಡಿ ವಿಮರ್ಶೆ ನಡೆಸಿದ್ದಾರೆ. ಮುಂದೆ ಇಲ್ಲಿ ಸೃಷ್ಟಿಯಾಗಿರುವ ಕೃತಿಗಳಿಗೆ ಅನ್ವಯವಾಗಬೇಕಾದ ಮಾನದಂಡಗಳು ಯಾವುವು ಎಂಬುದನ್ನು ಕುರಿತು ಚರ್ಚೆ ನಡೆಸಿದ್ದಾರೆ. ಅಲ್ಲದೆ ನಮ್ಮಲ್ಲಿ ಮಹತ್ತಾದವು ಎಂದು ಪ್ರಖ್ಯಾತವಾಗಿರುವ ಕೃತಿಗಳನ್ನು ಜಗತ್ತಿನ ಇತರ ಮಹಾಕೃತಿಗಳೊಂದಿಗೆ ಹೋಲಿಸಿ ನೋಡಿದ್ದಾರೆ. ಇದೆಲ್ಲದರ ಫಲವಾಗಿ ಕನ್ನಡದಲ್ಲಿ ಸಾಹಿತ್ಯ ವಿಮರ್ಶೆ ವಿಸ್ತಾರವಾಗಿಯೂ ವಿಪುಲವಾಗಿಯೂ ಬೆಳೆದಿದೆ. ಅನೇಕ ವಿಮರ್ಶಕರು ಈ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದಾರೆ. ಹೆಚ್ಚಿನ ಸಂಖ್ಯೆಯಲ್ಲಿ ವಿಮರ್ಶೆಯ ಗ್ರಂಥಗಳು ಪ್ರಕಟವಾಗುತ್ತಿವೆ. ಸಾಹಿತ್ಯ ಸಂಪ್ರದಾಯಗಳು ಬದಲಾದಂತೆಲ್ಲ ಕನ್ನಡ ವಿಮರ್ಶೆಯೂ ಕಾಲಕ್ಕೆ ಅನುಗುಣವಾಗಿ ಹೊಸ ಹೊಸ ಮಾನದಂಡಗಳನ್ನು ರೂಪಿಸಿಕೊಳ್ಳುತ್ತ ಸಾಗಿದೆ.

ಮೊದಲಿಗೆ ನಮ್ಮಲ್ಲಿದ್ದ ವಿಮರ್ಶಾ ವಿಧಾನ ಯಾವ ರೀತಿಯದು ಎಂಬುದನ್ನು ಪರಿಶೀಲಿಸಬಹುದು. ಪ್ರಾಚೀನರು ಅಲಂಕಾರ ಗ್ರಂಥಗಳಲ್ಲಿ ಕಾವ್ಯದ ಗುಣಗಳಿಗೂ ದೋಷಗಳಿಗೂ ಉದಾಹರಣೆ ನೀಡುವಾಗ ಇದು ಒಳ್ಳೆಯ ಕಾವ್ಯ ಭಾಗ, ಇದು ಅಲ್ಲ ಎಂದು ಸೂಚಿಸುತ್ತಿದ್ದರಷ್ಟೆ. ಅದರಿಂದ ಅವರು ಇದು ಸಾಹಿತ್ಯ ವಿಮರ್ಶೆ ಎಂದು ಸ್ಪಷ್ಟವಾಗಿ ಹೇಳದೆ ಒಂದು ರೀತಿಯಲ್ಲಿ ವಿಮರ್ಶೆ ಮಾಡುತ್ತಿದ್ದರು ಎಂದು ಹೇಳಬಹುದು. ಎರಡನೆಯದಾಗಿ, ಕವಿಗಳು ಕಾವ್ಯದ ಮೊದಲಲ್ಲಿಯೋ ಕೊನೆಯಲ್ಲಿಯೋ ಸತ್ಕಾವ್ಯದ ಪ್ರಶಂಸೆಯನ್ನು, ಕೆಟ್ಟ ಕಾವ್ಯದ ನಿಂದೆಯನ್ನು ಮಾಡುವಲ್ಲಿ ಮತ್ತೊಂದು ರೀತಿಯಲ್ಲಿ ವಿಮರ್ಶೆಯ ಕಾರ್ಯ ನಡೆಯುತ್ತಿತ್ತು. ಆದರೆ ಇವು ಯಾವುವೂ ಕ್ರಮಬದ್ಧವಾದ ಶಾಸ್ತ್ರೀಯವಾದ ವಿಮರ್ಶೆ ಎನ್ನಿಸಿಕೊಳ್ಳುವುದಿಲ್ಲ.

ಕನ್ನಡ ವಿಮರ್ಶೆಯ ಉಗಮ ಸಂಸ್ಕೃತ ಕೃತಿಗಳು ಮತ್ತು ಪ್ರಾಚೀನ ಕನ್ನಡ ಗ್ರಂಥಗಳ ಪರಿಚಯದಲ್ಲಿ ಎನ್ನಬಹುದು. ಈ ದಿಕ್ಕಿನಲ್ಲಿ ಬಹುಶಃ ಮೊತ್ತಮೊದಲ ಕೃತಿ ಮಂ.ಆ.ರಾಮಾನುಜ ಅಯ್ಯಂಗಾರ್ ಅವರ ಕವಿ ಚಕ್ರವರ್ತಿ ಕವಿ ರನ್ನನ ಜೀವನ ಚರಿತ್ರೆ, ಗ್ರಂಥವಿಮರ್ಶೆ ಇತ್ಯಾದಿ (1895). ಈ ಗ್ರಂಥದಲ್ಲಿ ಲೇಖಕರು ರನ್ನನ ಜೀವನ ಚರಿತ್ರೆಯ ಜೊತೆಗೆ ಅವನ ಕೃತಿಗಳ ಪರಿಚಯಾತ್ಮಕ ವಿಮರ್ಶೆಯನ್ನೂ ಒದಗಿಸಿದ್ದಾರೆ. ಈ ಕೃತಿಯನ್ನು ಗಮನಕ್ಕೆ ತಂದುಕೊಂಡು ಹೇಳುವುದಾದರೆ ಕನ್ನಡ ವಿಮರ್ಶೆಯ ಉಗಮ ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲೇ ಎಂದು ಹೇಳಬಹುದು. ಐತಿಹಾಸಿಕ ದೃಷ್ಟಿಯಿಂದ ಮುಖ್ಯವಾದ ಇನ್ನೊಂದು ಕೃತಿ ಬಿ.ಕೃಷ್ಣಪ್ಪನವರ ರಾಮಚಂದ್ರಚರಿತಪುರಾಣ ವಿಮರ್ಶೆ (1923). ಮುಂದೆ ಜಿ.ಪಿ. ರಾಜರತ್ನಂ ಅವರು ಶ್ರೀ ಕವಿ ಪಂಪ (1931) ಎಂಬುದರಲ್ಲಿ ಪಂಪನನ್ನು ಕುರಿತು ತಕ್ಕ ಮಟ್ಟಿಗೆ ವಿಸ್ತಾರವಾದ ವಿಮರ್ಶೆಯನ್ನು ನೀಡಿದರು. ತೀ.ನಂ.ಶ್ರೀ ಅವರ ಪಂಪ (1939) ಎಂಬ ಕಿರು ಹೊತ್ತಗೆ ಮಹಾಕವಿಯೊಬ್ಬನನ್ನು ಅಚ್ಚುಕಟ್ಟಾದ ರೀತಿಯಲ್ಲಿ ಪರಿಚಯ ಮಾಡಿಕೊಡಲು ನಡೆದಿರುವ ಒಂದು ಸ್ತುತ್ಯ ಪ್ರಯತ್ನ. ಎಸ್.ವಿ.ರಂಗಣ್ಣನವರ ಕುಮಾರವ್ಯಾಸ (1962) ಕೂಡ ಇಂಥದೇ ಇನ್ನೊಂದು ಗ್ರಂಥ. ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳು ತಮ್ಮ ಪ್ರಚಾರ ಪುಸ್ತಕ ಮಾಲೆಗಳಲ್ಲಿ ಅನೇಕ ಕನ್ನಡ, ಸಂಸ್ಕೃತ, ತೆಲುಗು, ಹಿಂದಿ ಕವಿಗಳನ್ನು ಕುರಿತು ಕಿರು ಹೊತ್ತಗೆಗಳನ್ನು ತಂದಿವೆ. ಅವುಗಳಲ್ಲೆಲ್ಲ ಅಲ್ಲಲ್ಲಿ ಒಳ್ಳೆಯ ವಿಮರ್ಶೆ ಪ್ರತಿಬಿಂಬಗೊಂಡಿದೆ.

ಪ್ರಾಚೀನ ಕನ್ನಡ ಕವಿಗಳ ಕೃತಿಗಳನ್ನು ಸಹೃದಯರಿಗೆ ಪರಿಚಯ ಮಾಡಿಕೊಡುವ ಕೆಲವು ಗ್ರಂಥಗಳಲ್ಲಿ ವಿಮರ್ಶೆ ತನ್ನ ಬೆಳೆವಣಿಗೆಯನ್ನೂ ಕಂಡಿದೆ. ರಂ.ಶ್ರೀ.ಮುಗಳಿಯವರ ರನ್ನನ ಕೃತಿರತ್ನ (1946), ಜಿ.ಎಸ್.ಮುರಿಗಾರಾಧ್ಯರ ಷಡಕ್ಷರದೇವಂ (1906), ಡಿ.ವಿ.ಶೇಷಗಿರಿರಾಯರ ಪಂಪ ರಾಮಾಯಣ ಕಾವ್ಯ ಪರಿಚಯ (1950), ನಾಗಚಂದ್ರನ ಕಾವ್ಯಗಳು (1950), ವಿ.ಶಿವಾನಂದ ಅವರ ಸೀಮಾಪುರುಷ ಷಡಕ್ಷರದೇವ (1966), ಚನ್ನಬಸವಪ್ಪ ಕವಲಿ ಮತ್ತು ಸಂ.ಮರಿದೇವಸ್ವಾಮಿ ಅವರ (ದೇವಕವಿಯ ಮರುಳಸಿದ್ಧ ಕಾವ್ಯದ ವಿಮರ್ಶೆಯನ್ನುಳ್ಳ) ಮರುಳಸಿದ್ಧಾಂಕ (1949)- ಇವೆಲ್ಲ ಈ ಗುಂಪಿನವೇ. ಕಾಲದ ದೃಷ್ಟಿಯಿಂದ ಇವೆಲ್ಲಕ್ಕಿಂತ ಮೊದಲು ಪ್ರಕಟವಾದ ಮುಳಿಯ ತಿಮ್ಮಪ್ಪಯ್ಯನವರ ನಾಡೋಜ ಪಂಪ (1938) ಒಂದು ಅಸಾಮಾನ್ಯವಾದ ಕೃತಿ. ಹತ್ತಿರ ಹತ್ತಿರ ಆರು ನೂರು ಪುಟಗಳ ವಿಸ್ತಾರವಾದ ಹರವಿನಲ್ಲಿ ತಿಮ್ಮಪ್ಪಯ್ಯನವರು ಪಂಪನನ್ನು ಕುರಿತ ಆಳವಾದ ಅಧ್ಯಯನವನ್ನೂ ಅಂದಿಗೆ ಹೊಸತು ಎನಿಸುವ ಚಾರಿತ್ರಿಕ ದೃಷ್ಟಿಯನ್ನೂ ಅವನ ಕೃತಿಗಳನ್ನು ಕುರಿತಂತೆ ಹಿತಮಿತವಾದ ವಿಮರ್ಶೆಯನ್ನೂ ನೀಡಿದ್ದಾರೆ. ಪಂಪನನ್ನು ಕುರಿತು ವಿಸ್ತಾರವಾದ ಇಂಥ ಒಂದು ಅಧ್ಯಯನ, ಆದರೆ ಇನ್ನೂ ಹರಿತವಾದ, ಹೃದಯಂಗಮವಾದ, ವಿಚಾರಪೂರ್ಣವಾದ ವಿಮರ್ಶೆ ಕನ್ನಡ ವಾಚಕರಿಗೆ ದೊರೆತದ್ದು ವಿ.ಸೀತಾರಾಮಯ್ಯನವರ ಮಹಾಕವಿ ಪಂಪ (1975) ಎಂಬ ಕೃತಿಯಿಂದ. ಈ ಕೃತಿ ವಿ.ಸೀ.ಅವರ ಅರ್ಧ ಶತಮಾನದ ಅಧ್ಯಯನ, ಪೂರ್ವ ಪಶ್ಚಿಮಗಳ ಕಾವ್ಯತತ್ತ್ವಗಳ ನಿಕಟವಾದ ಪರಿಚಯ, ಪಕ್ವವಾದ ಜೀವನಾನುಭವ, ಹೃದಯಸ್ಪರ್ಶಿಯಾದ ರಸದೃಷ್ಟಿ, ನಮ್ಮ ಜೀವನ ಮಾರ್ಗಕ್ಕೆ ತೀರ ಪರಿಚಿತವಾದ ಜೀವನ ನೋಟ ಇವುಗಳೆಲ್ಲವನ್ನೂ ಒಳಗೊಂಡಿರುವ ತೂಕವಾದ ವಿಮರ್ಶೆಗೆ ಸಾರ್ವಕಾಲಿಕವಾದ ಆದರ್ಶವಾಗಿದೆ.

ತಮ್ಮ ಬರೆಹಗಳ ಬಾಹುಳ್ಯದಿಂದ ಜನಸಾಮಾನ್ಯರಿಗೆ ತುಂಬ ಪ್ರಿಯವಾಗುವ ಪದ್ಯಗಂಧಿಯಾದ ಶೈಲಿಯಿಂದ ಜನಪ್ರಿಯರಾಗಿರುವ ನಿಡುಮಾಮಿಡಿ ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ (ಜ.ಚ.ನಿ.) ಅವರು ತಮ್ಮ ಹೆಮ್ಮೆಗಳು (1948) ಎಂಬ ಕೃತಿಯಲ್ಲಿ ಮುಪ್ಪಿನ ಷಡಕ್ಷರಿಯ ಹಾಡುಗಳ ವಿವರಣೆ ವಿಮರ್ಶೆಗಳನ್ನೂ ಅಲ್ಲಯ್ಯನ ಬೆಳಕು (1950) ಎಂಬ ಕೃತಿಯಲ್ಲಿ ಅಲ್ಲಮ ಪ್ರಭುವಿನ ವಚನಗಳ ವಿಮರ್ಶೆಯನ್ನೂ ನೀಡಿದ್ದಾರೆ.

ಕನ್ನಡದ ಹಿಂದಿನ ಕವಿಗಳನ್ನು ಕುರಿತು ಪ್ರಕಟಿಸಿದ ಅನೇಕ ಸಂಭಾವನಾ ಗ್ರಂಥಗಳು ಸ್ತುತಿ ಪರವಾಗಿದ್ದು ಒಳ್ಳೆಯ ವಿಮರ್ಶೆಗೆ ನಿದರ್ಶನಗಳಲ್ಲವಾದರೂ ಆಯಾ ಕವಿಗಳನ್ನು ಸಹೃದಯರಿಗೆ ಪರಿಚಯ ಮಾಡಿಕೊಡುವ ಗ್ರಂಥಗಳಾಗಿ ಉಪಯುಕ್ತವಾದ ಕೆಲಸ ಮಾಡಿದವು. ಅವುಗಳಲ್ಲಿ ಮುದ್ದಣ (1926), ರನ್ನಕವಿ ಪ್ರಶಸ್ತಿ (1928), ಅಭಿನವ ಪಂಪ (1934), ಕುಮಾರವ್ಯಾಸ ಪ್ರಶಸ್ತಿ (1940), ಹರಿಹರದೇವ (1937), ಶ್ರೀ ಶಿವಯೋಗಿ ನಿಜಗುಣರ ಸ್ವರೂಪ ದರ್ಶನ (1954), ಕವಿ ಲಕ್ಮೀಶ (1933), ಮಹಾತ್ಮ ಕನಕದಾಸ ಪ್ರಶಸ್ತಿ (1965) ಮುಂತಾದವು ಇಂಥವು. ಇವುಗಳ ಜೊತೆಗೆ ಅನೇಕ ಲೇಖಕರು ತಮ್ಮ ಪ್ರಬಂಧ ಸಂಕಲನಗಳಲ್ಲಿ ಪ್ರಾಚೀನ ಕವಿಗಳನ್ನು ಕುರಿತು ತಮ್ಮ ದೃಷ್ಟಿಕೋನಗಳನ್ನು ಮುಂಡಿಸಿದ್ದಾರೆ. ಇವುಗಳಲ್ಲಿ ಹೆಸರಿಸಬೇಕಾದ ಕೃತಿಗಳು ಟಿ.ಎಸ್.ವೆಂಕಣ್ಣಯ್ಯನವರ ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು (1938), ತೀ.ನಂ.ಶ್ರೀಕಂಠಯ್ಯನವರ ಕಾವ್ಯಸಮೀಕ್ಷೆ (1947) ಮತ್ತು ಸಮಾಲೋಕನ (1958), ಜಿ.ಎಸ್.ಶಿವರುದ್ರಪ್ಪನವರ ಪರಿಶೀಲನ (1967) ಮತ್ತು ಗತಿಬಿಂಬ (1969), ಚೆನ್ನವೀರ ಕಣವಿಯವರ ಸಾಹಿತ್ಯ ಚಿಂತನ (1966). ಸುಜನಾ ಎಂಬ ಕಾವ್ಯನಾಮದಿಂದ ಬರೆಯುತ್ತಿರುವ ಎಸ್.ನಾರಾಯಣಶೆಟ್ಟರ ಹೃದಯ ಸಂವಾದ (1964) ನಮ್ಮ ವಿಮರ್ಶೆ ಏರಬಲ್ಲ ಎತ್ತರಗಳನ್ನೂ ವ್ಯಾಪಿಸಬಲ್ಲ ಹರಹನ್ನೂ ಸೂಚಿಸುತ್ತದೆ. ವಿಮರ್ಶೆಯ ಕ್ಷೇತ್ರದಲ್ಲಿ ದೇಜಗೌ ಅವರದು ಮುಖ್ಯ ಹೆಸರು. ಇವರು ಹಲವು ಗ್ರಂಥಗಳಿಗೆ ಬರೆದ ಅನೇಕ ಮುನ್ನುಡಿಗಳಲ್ಲಿ ತೂಕವಾದ ವಿಮರ್ಶೆ, ಕಸುವುಳ್ಳ ಭಾಷೆಯ ಬಳಕೆ ಕಂಡುಬರುತ್ತದೆ. ಇವರ ನಂಜುಂಡ ಕವಿ, ಷಡಕ್ಷರದೇವ ಆಯಾ ಕವಿಗಳನ್ನು ಕುರಿತ ವಿಮರ್ಶಾ ಗ್ರಂಥಗಳಾಗಿವೆ.

ಕನ್ನಡದಲ್ಲಿ ಸಾಹಿತ್ಯ ವಿಮರ್ಶೆಯ ದಿಕ್ಕುದೆಸೆಗಳನ್ನೇ ಬದಲಿಸಲು ಪ್ರಯತ್ನಿಸಿದ ಇಬ್ಬರು ಮಹನೀಯರು ಇಲ್ಲಿ ಪ್ರತ್ಯೇಕವಾಗಿ ಉಲ್ಲೇಖಾರ್ಹರು. ಮೊದಲನೆಯವರು ಎಸ್.ವಿ.ರಂಗಣ್ಣನವರು. ಇವರ 'ಶೈಲಿ' (1944) ಕನ್ನಡ ವಿಮರ್ಶೆಯ ಜಗತ್ತಿಗೆ ಹೊಸ ಆಯಾಮವನ್ನು ತಂದ ಮೊದಲ ಕೃತಿ. ಶೈಲಿಯ ಸ್ವರೂಪವನ್ನೂ ಮಧ್ಯಮ ಶೈಲಿ, ಸಾಧಾರಣ ಶೈಲಿ ಎಂದರೇನು ಎಂಬುದನ್ನೂ ಶೈಲಿಯಲ್ಲಿ ಮಹತ್ತ್ವ ಭವ್ಯತೆಗಳ ಸ್ವರೂಪವನ್ನೂ ನಮ್ಮ ಜನತೆಗೆ ಮೊದಲಬಾರಿಗೆ ಪರಿಚಯ ಮಾಡಿಕೊಟ್ಟವರು ಇವರು. ಪಂಪ, ರನ್ನ, ರಾಘವಾಂಕ, ಕುಮಾರವ್ಯಾಸ, ಜನ್ನ, ರತ್ನಾಕರವರ್ಣಿ, ರುದ್ರಭಟ್ಟ, ಹರಿಹರ, ಲಕ್ಮೀಶ, ನಾಗಚಂದ್ರ, ನಯಸೇನ, ಆಂಡಯ್ಯ, ಪುರಂದರದಾಸ, ಕನಕದಾಸ, ಕುಮಾರ ವಾಲ್ಮೀಕಿ, ಸರ್ವಜ್ಞ, ಹೊನ್ನಮ್ಮ, ಷಡಕ್ಷರದೇವ- ಈ ಕವಿಗಳ ಶೈಲಿಯಸ್ವರೂಪವನ್ನೂ ಅವರ ಏಳು ಬೀಳುಗಳನ್ನೂ ಧೀರ ರೀತಿಯಿಂದ ಚರ್ಚಿಸಿದ ಕೀರ್ತಿ ರಂಗಣ್ಣನವರದು. ಇಂಗ್ಲಿಷ್ ಭಾಷಾ ಸಾಹಿತ್ಯಗಳ ಪ್ರಕಾಂಡ ಪಾಂಡಿತ್ಯ, ಕನ್ನಡ ಕವಿಗಳ ಆಳವಾದ ಅಧ್ಯಯನ ಇವರ ವಾಣಿಗೆ ಅಧಿಕಾರವನ್ನೂ ದೃಷ್ಟಿಗೆ ತೀಕ್ಷ್ಣತೆಯನ್ನೂ ಒದಗಿಸಿದುವು. ಇವರ ಹೊನ್ನ ಶೂಲ (1959) ಅದುವರೆಗೆ ಅತಿ ಪ್ರಶಂಸೆಯಿಂದ ಬೀಗಿ ಬಿರಿಯುತ್ತಿದ್ದ ಅನೇಕ ಕವಿಗಳನ್ನು, ಅದರಲ್ಲೂ ಕನ್ನಡದ ಮುದ್ದಣ, ಸಂಸ್ಕೃತದ ಕಾಳಿದಾಸ- ಇವರನ್ನು ಅವರವರ ಸ್ಥಾನಗಳಿಗೆ ಕೂರಿಸಿತು.

ಎರಡನೆಯವರು ಈ ಯುಗದ ಮಹಾಕವಿಯಾದ ಕುವೆಂಪು ಅವರು. ಇವರು ಕವಿಯ ಕಣ್ಣು ಕಾವ್ಯದ ದರ್ಶನದಲ್ಲಿ ಎಂದು ಸಾರಿದರು. ವಿಮರ್ಶೆಯಲ್ಲಿ ಕಾವ್ಯ ಒಡಗೂಡುವಂತೆ ಮಾಡಿದರು. ಇವರ ಕಾವ್ಯವಿಹಾರ, ತಪೋನಂದನ (1950), ವಿಭೂತಿಪೂಜೆ (1953), ದ್ರೌಪದಿಯ ಶ್ರೀಮುಡಿ (1960), ರಸೋ ವೈ ಸಃ (1962)- ಇವು ಅಂತಃಸತ್ವದಲ್ಲಿ ಮಹಾಕವಿಯಾದವನು ಮಾತ್ರ ನಿರೂಪಿಸಬಲ್ಲ ಕಾವ್ಯ ತತ್ತ್ವಗಳನ್ನು, ನೂತನ ವಿಮರ್ಶೆಯನ್ನು ಒಳಗೊಂಡಿವೆ - ಸರೋವರದ ಸಿರಿಗನ್ನಡಿಯಲ್ಲಿ, ಪಂಪನಲ್ಲಿ ಭವ್ಯತೆ, ಕಾವ್ಯ ವಿಮರ್ಶೆಯಲ್ಲಿ ಪೂರ್ಣದೃಷ್ಟಿ - ಇವು ಜಗತ್ತಿನ ಇತರ ಸಾಹಿತ್ಯಗಳಿಗೂ ಕೊಡುಗೆಯಾಗಬಲ್ಲಂಥ ವಿಮರ್ಶಾ ಪ್ರಬಂಧಗಳು. ಇವರದು ದರ್ಶನ ವಿಮರ್ಶೆ ಎಂದರೆ, ಇತರರು ಕಾಣದ ಲಾಲಿತ್ಯ ಭವ್ಯತೆಗಳನ್ನೂ ಮಹಿಮೆ ಮಾರ್ದವತೆಗಳನ್ನೂ ಕಾವ್ಯಮಯವಾಗಿ ನಿರೂಪಿಸುವ ವಿಮರ್ಶೆ.

ಪ್ರಾಚೀನ ಕವಿಗಳನ್ನು ಕುರಿತ ವಿಮರ್ಶೆ ಹಲವು ಕಾವ್ಯ ಸಂಗ್ರಹಗಳ ಮುನ್ನುಡಿಗಳಲ್ಲಿ ಹಂಚಿಹೋಗಿದೆ. ಆದಿಪುರಾಣ ಸಂಗ್ರಹದಲ್ಲಿ ಎಲ್.ಗುಂಡಪ್ಪನವರು, ಪಂಪ ರಾಮಾಯಣ ಸಂಗ್ರಹದಲ್ಲಿ ಡಿ.ಎಲ್.ನರಸಿಂಹಾಚಾರ್ಯರು, ಹರಿಶ್ಚಂದ್ರಕಾವ್ಯಸಂಗ್ರಹದಲ್ಲಿ ಎ.ಆರ್.ಕೃಷ್ಣ ಶಾಸ್ತ್ರಿಗಳು, ಭರತೇಶವೈಭವ ಸಂಗ್ರಹದಲ್ಲಿ ತ.ಸು. ಶಾಮರಾಯರು ಆಯಾ ಕವಿಗಳ ಕಾವ್ಯಶಕ್ತಿಯನ್ನು ಅಳೆದು ತೂಗಿದ್ದಾರೆ. ಆಧುನಿಕರ ಕೃತಿಗಳಿಗೆ ಬರೆದ ಮುನ್ನುಡಿಗಳಲ್ಲಿಯೂ ಇಂಥ ವಿಮರ್ಶೆ ಅಡಗಿದ್ದು ಮಾಸ್ತಿಯವರ ಪೂಜನ, ಪು.ತಿ.ನ. ಅವರ ಕಾವ್ಯ ಕುತೂಹಲ ಸಂಕಲನಗಳಾಗಿ ಪ್ರಕಟಗೊಂಡಿವೆ. ಅಭಿನವಗುಪ್ತ, ಮಿಡ್ಲ್‌ಟನ್ ಮರ್ರಿ ಮುಂತಾದವರಂತೆ ಸ್ವತಂತ್ರವಾಗಿ ಪ್ರತಿಭಾ ಪೂರ್ಣವಾಗಿ ಕಾವ್ಯಮೀಮಾಂಸೆಯ ಮೂಲತತ್ತ್ವಗಳನ್ನು ನೂತನವಾಗಿ ನಿರೂಪಿಸಬಲ್ಲ ಪು.ತಿ.ನ. ಅವರ ಶಕ್ತಿ ಕಾವ್ಯಕುತೂಹಲದ ಪುಟಗಳಲ್ಲಿ ಮಡುಗಟ್ಟಿ ನಿಂತಿದೆ.

ಒಂದು ಕೃತಿಯನ್ನು ಕುರಿತು ಅಪೂರ್ವವಾದ ರೀತಿಯಲ್ಲಿ ಒಬ್ಬ ಲೇಖಕರು ವಿಚಾರ ನಡೆಸಿರುವ ಒಂದು ಮಹತ್ತ್ವದ ಕೃತಿ ಎಂದರೆ ಸಂ.ಶಿ.ಭೂಸನೂರಮಠ ಅವರ ಶೂನ್ಯಸಂಪಾದನೆಯ ಪರಾಮರ್ಶೆ (1969). ಇದು ಕನ್ನಡ ವಿಮರ್ಶೆಯ ಕ್ಷೇತ್ರದಲ್ಲಿ ಮೂಲವನ್ನು ಪ್ರವೇಶಿಸಿ, ಅದನ್ನು ಮತ್ತೆ ಹೊಸದಾಗಿ ಸೃಷ್ಟಿಸಿ, ರಸಾನುಭವವನ್ನು ಅನುಭಾವದ ಅನುಭೂತಿಯನ್ನು ಸಹೃದಯರಿಗೆ ಒದಗಿಸುವ ಕೃತಿ.

ವಿಮರ್ಶೆಯ ಕ್ಷೇತ್ರವನ್ನು ಶ್ರೀಮಂತಗೊಳಿಸುವುದರಲ್ಲಿ ನೆರವಾದ ಒಂದು ಉದ್ಯಮ ಎಂದರೆ ಸಂಸ್ಕೃತ ಕವಿಗಳನ್ನೂ ಅವರ ಕೃತಿಗಳನ್ನೂ ಪರಿಚಯ ಮಾಡಿಕೊಡಲು ನಡೆದ ಪ್ರಯತ್ನ. ಈ ಗುಂಪಿನಲ್ಲಿ ಆಚಾರ್ಯಕೃತಿ ಎ.ಆರ್.ಕೃಷ್ಣಶಾಸ್ತ್ರಿಗಳ ಸಂಸ್ಕೃತ ನಾಟಕ. ಸಂಸ್ಕೃತ ನಾಟಗಳನ್ನು ಕುರಿತು ಇಂಥ ಒಂದು ಕೃತಿ ಇಂಗ್ಲಿಷ್‌ನಲ್ಲಾಗಲೀ ಬೇರಾವುದೇ ದೇಶಭಾಷೆಗಳಲ್ಲಾಗಲಿ ಪ್ರಕಟವಾಗಿಲ್ಲ ಎಂಬುದು ಅನೇಕ ವಿದ್ವಾಂಸರ ಅಭಿಪ್ರಾಯ. ಅವರದೇ 'ಭಾಸಕವಿ' (1933) ಕೂಡ ಈ ಗುಂಪಿಗೆ ಸೇರುವಂಥದ್ದು. ಇತರ ಕೃತಿಗಳು ಸಿ.ಕೆ.ವೆಂಕಟರಾಮಯ್ಯನವರ ಕಾಳಿದಾಸ ಮಹಾಕವಿ (1966), ನಾರಾಯಣ ವೆಂಕಟೇಶ ಕುರಡಿಯವರ ಶ್ರೀಹರ್ಷನ ನಾಟಕಗಳು (1930), ಎಂ.ಸುಬ್ರಾಯನ್ ಅವರ ವಿಶ್ವಕವಿ ಕಾಳಿದಾಸ ಕೃತಿದರ್ಶನ, ಸಿ.ಆರ್.ಹೊಸಲಯ್ಯನವರ ಸಂಸ್ಕೃತಿ (1955), ಎಂ.ರಾಜಗೋಪಾಲ ಆಚಾರ್ಯ ಅವರ ಕಾಳಿದಾಸನ ಉಪಮೆಗಳು (1967). ವಿ.ಸೀ. ಅವರು ತಮ್ಮ ಅಭಿಜ್ಞಾನ ಶಾಕುಂತಲ (1943) ಗ್ರಂಥದಲ್ಲಿ ಕಾಳಿದಾಸನ ಶಾಕುಂತಲದ ಬಗ್ಗೆ ಸಮಗ್ರ ವಿಮರ್ಶೆಯನ್ನೂ ಕೆ.ಕೃಷ್ಣಮೂರ್ತಿಗಳು ಕಾಳಿದಾಸನ ನಾಟಕಗಳು ಮತ್ತು ಭವಭೂತಿ ಎಂಬ ಎರಡು ಪುಟ್ಟ ಪುಸ್ತಕಗಳಲ್ಲಿ ಆ ಕವಿಗಳ ಕೃತಿಗಳಿಗೆ ಪ್ರವೇಶವನ್ನೂ ದೊರಕಿಸಿಕೊಟ್ಟಿದ್ದಾರೆ.

ಮಾಸ್ತಿಯವರ 'ಆದಿಕವಿ ವಾಲ್ಮೀಕಿ' ಒಂದು ರಸಸೃಷ್ಟಿ, ಇಲ್ಲಿ ವಿಮರ್ಶೆ ಕಾವ್ಯವಾಗಿ ಹರಿದಿದೆ. ವಾಲ್ಮೀಕಿ ರಾಮಾಯಣದ ಶಿಖರಗಳನ್ನೂ ವಾಲ್ಮೀಕಿಯ ಪ್ರತಿಭೆಯ ನೂರಾರು ಮುಖಗಳನ್ನೂ ಆ ಮಹಾಕವಿಯ ಹೃದಯದ ನವಿರು ಕೋಮಲತೆಗಳನ್ನೂ ಮನೋಜ್ಞವಾದ ರೀತಿಯಲ್ಲಿ ಮಾಸ್ತಿಯವರು ಪರಿಚಯ ಮಾಡಿಕೊಟ್ಟಿದ್ದಾರೆ. ವಾಲ್ಮೀಕಿ ರಾಮಾಯಣವನ್ನು ಕುರಿತ ಇನ್ನೊಂದು ಕೃತಿ ವಿ.ಸೀತಾರಾಮಯ್ಯನವರದು.

ಎಸ್.ವಿ. ರಂಗಣ್ಣನವರು ಶಾಕುಂತಲ ನಾಟಕದ ವಿಮರ್ಶೆ ಮತ್ತು ವಿಕ್ರಮೋರ್ವಶೀಯ ನಾಟಕದ ವಿಮರ್ಶೆ (1960)- ಈ ಗ್ರಂಥ'ಗಳಲ್ಲಿ ಕವಿಕುಲಗುರು ಎಂಬ ಕಾಳಿದಾಸನ ಪ್ರಶಸ್ತಿಯನ್ನು ತರ್ಕಬದ್ಧವಾಗಿ ಪ್ರಶ್ನಿಸಿದ್ದಾರೆ. ಸೊಗಸಾದ ವಾದವೈಖರಿಯಿಂದಲೂ ಉದಾರವಾದರೂ ತೀಕ್ಷ್ಣವಾದ ವಿಮರ್ಶನ ಶಕ್ತಿಯಿಂದಲೂ ಕಾಳಿದಾಸನ ಮೌಲ್ಯಮಾಪನ ಮಾಡಿದ್ದಾರೆ. ವಿಮರ್ಶೆಯ ಮೇಲೆ ಹಿಡಿತವುಳ್ಳ ಇವರ ಬರೆವಣಿಗೆ ಮೆಚ್ಚುವಂಥದ್ದು.

ವಿಮರ್ಶೆಯ ಮೂಲತತ್ತ್ವಗಳನ್ನು ಕುರಿತು ಅತ್ಯಗತ್ಯವಾದ ಪರಿಚಯ ಕೃತಿಗಳನ್ನು ಕೆಲವರು ನೀಡಿದ್ದಾರೆ. ವಿಮರ್ಶೆ ಎಂದರೆ ಏನು ಎಂಬುದನ್ನು ಸರಳವಾದ ಮಾತುಗಳಲ್ಲಿ ನಮಗೆ ತಿಳಿಯಹೇಳಿದ ಮೊದಲಿಗರು ಮಾಸ್ತಿಯವರು. 1926ರಲ್ಲಿ ಪ್ರಕಟವಾದ ಇವರ ವಿಮರ್ಶೆ ಎಂಬ ಗ್ರಂಥದಲ್ಲಿ ಸಾಹಿತ್ಯ ವಿಮರ್ಶೆಯ ಕಾರ್ಯ ಎಂಬ ಲೇಖನವಿದೆ. ಪೂರ್ವ ಪಶ್ಚಿಮಗಳ ಸಾಹಿತ್ಯ ಮತ್ತು ವಿಮರ್ಶೆಯ ಆಳವಾದ ಪಾಂಡಿತ್ಯವುಳ್ಳ ಈ ಹಿರಿಯರು ತಮ್ಮ ಕವಿಸಹಜವಾದ ದೃಷ್ಟಿಯಿಂದ ಅನನುಕರಣೀಯವಾದ ಸರಳ ಶೈಲಿಯಲ್ಲಿ ವಿಮರ್ಶೆಯ ಮೂಲತತ್ತ್ವಗಳನ್ನು ಅಡಕವಾಗಿ ಆ ಪ್ರಬಂಧದಲ್ಲಿ ನಿರೂಪಿಸಿದ್ದಾರೆ. ಅನಂತರದ ವರ್ಷಗಳಲ್ಲಿ ಎಷ್ಟೋ ಬಗೆಯ ವಿಮರ್ಶೆಗಳು ಬೆಳೆದರೂ ವಿಮರ್ಶೆಯ ಮೂಲ ತತ್ತ್ವಗಳನ್ನು ಕುರಿತ ಗ್ರಂಥಗಳು ನಮ್ಮಲ್ಲಿ ಕಡಮೆ. ಇದುವರೆಗೆ ನಮ್ಮಲ್ಲಿ ಪ್ರಕಟವಾಗಿರುವ ವಿಮರ್ಶೆಯ ಮುಕ್ಕಾಲು ಮೂರು ವೀಸ ಪಾಲು ಆನ್ವಯಿಕ ವಿಮರ್ಶೆ. ವಿಮರ್ಶೆಯ ಸಿದ್ಧಾಂತಗಳನ್ನು ತಿಳಿಸುವುದಕ್ಕೆಂದು ಹೊರಟಿರುವ ಕೆಲವು ಪುಸ್ತಕಗಳು ಇವು - ವಿ.ಕೃ.ಗೋಕಾಕರ ಇಂದಿನ ಕನ್ನಡ ಕಾವ್ಯದ ಗೊತ್ತು ಗುರಿಗಳು (1946), ಸ.ಸ.ಮಾಳವಾಡರ ಪುಸ್ತಕ ಪ್ರಪಂಚ (1956), ಮಿರ್ಜಿ ಅಣ್ಣಾರಾಯರ ವಿಮರ್ಶೆಯ ಸ್ವರೂಪ (1959), ಜಿ.ಎಸ್.ಶಿವರುದ್ರಪ್ಪನವರ ವಿಮರ್ಶೆಯ ಪೂರ್ವಪಶ್ಚಿಮ (1961), ಎಚ್.ತಿಪ್ಪೇರುದ್ರಸ್ವಾಮಿಗಳ ಸಾಹಿತ್ಯ ವಿಮರ್ಶೆಯ ಮೂಲತತ್ತ್ವಗಳು (1970), ರಂ.ಶ್ರೀ.ಮುಗಳಿಯವರ ಸಾಹಿತ್ಯ ವಿಮರ್ಶೆಯ ಮಾರ್ಗದರ್ಶಕ ಸೂತ್ರಗಳು (1969).

ವಿಮರ್ಶೆಯ ಶಾಸ್ತ್ರೀಯವಾದ ವಿವೇಚನೆ ಮೊಟ್ಟಮೊದಲ ಬಾರಿಗೆ ಪ್ರಶಂಸನೀಯವಾದ ರೀತಿಯಲ್ಲಿ ಸಮಗ್ರವಾಗಿ ಪುಸ್ತಕರೂಪದಲ್ಲಿ ಪ್ರಕಟವಾದದ್ದು ಜಿ.ಎಸ್.ಶಿವರುದ್ರಪ್ಪನವರ ವಿಮರ್ಶೆಯ ಪೂರ್ವ ಪಶ್ಚಿಮದಲ್ಲಿ. ಈ ಲೇಖಕರಿಗೆ ಅನೇಕ ರೀತಿಯ ಅನುಕೂಲತೆಗಳು ದೊರೆತಿದ್ದುವು. ಮೊದಲನೆಯದು ಪಾಶ್ಚಾತ್ಯ ಮತ್ತು ಪೌರ್ವಾತ್ಯ ಕಾವ್ಯಮೀಮಾಂಸೆಗಳ ಶಾಸ್ತ್ರೀಯವಾದ ಅಧ್ಯಯನ, ಕುವೆಂಪು ಅವರಂಥ ಸಮರ್ಥ ಗುರುಗಳ ಬೋಧನ, ಮಾರ್ಗದರ್ಶನ; ಜೊತೆಗೆ ತಾವೇ ಕವಿಗಳಾದುದರಿಂದ ಕವಿಮನಸ್ಸು ಕೆಲಸ ಮಾಡುವ ರೀತಿಯ ನಿಕಟವಾದ

ಪರಿಚಯ, ಇವೆಲ್ಲದರ ಜೊತೆಗೆ ಆಕರ್ಷಕವಾದ ಶೈಲಿ - ಹೀಗಾಗಿ ಈ ಕೃತಿ ಕಾಲದಲ್ಲಿ ಹೇಗೋ ಹಾಗೆ ಗುಣದಲ್ಲೂ ವಿಮರ್ಶೆಯ ಮೂಲತತ್ತ್ವಗಳಿಗೆ ಅನುಗುಣವಾಗಿದೆ. ಭಾರತೀಯಕಾವ್ಯಮೀಮಾಂಸೆಯ ವಿಸ್ತಾರವಾದ ಹಿನ್ನೆಲೆಯಲ್ಲಿ ಪಾಶ್ಚಾತ್ಯ ವಿಮರ್ಶೆಯ ಮೂಲಭೂತ ಸಿದ್ಧಾಂತಗಳನ್ನು ತಿಪ್ಪೇರುದ್ರಸ್ವಾಮಿಯವರು ತಮ್ಮ ಗ್ರಂಥದಲ್ಲಿ ಸೊಗಸಾಗಿ ನಿರೂಪಿಸಿದ್ದಾರೆ. ಈ ಇಬ್ಬರ ಕೃತಿಗಳ ವೈಶಿಷ್ಟ್ಯವೆಂದರೆ ಇಬ್ಬರೂ ಆಧುನಿಕ ಮನಶ್ಶಾಸ್ತ್ರದ ಬೆಳಕಿನಲ್ಲಿ ವಿಮರ್ಶೆಯ ನಡೆಯನ್ನು ಗುರುತಿಸಿರುವುದು.

ವಿಮರ್ಶೆಯ ಮೂಲತತ್ತ್ವಗಳಿಗೆ ಸಂಬಂಧಿಸಿದಂತೆ ವಿಶೇಷವಾಗಿ ಉಲ್ಲೇಖಿಸಬೇಕಾದ ಇನ್ನೊಂದು ಕೃತಿ. ಬಿ.ಎಚ್.ಶ್ರೀಧರರ ಕಾವ್ಯಸೂತ್ರ (1968). ಪ್ಲೇಟೋ, ಲಾಂಜೈನಸ್, ಉಲ್ಫ್‌ಡೋವರ್ ವಿಲ್ಸನ್, ಹೊರೇಸ್, ಡೆಮಿಟ್ರಿಯಸ್, ಐ.ಎ.ರಿಚರ್ಡ್ಸ್ ಮುಂತಾದವರ ವಿಮರ್ಶೆಯ ಪ್ರಕ್ರಿಯೆಗಳಿಂದ ಹಿಡಿದು ಮಾರ್ಕ್ಸ್‌ವಾದೀಯ ವಿಮರ್ಶೆ, ಮನೋವಿಶ್ಲೇಷಣಾತ್ಮಕ ವಿಮರ್ಶೆ, ಭಾಷಾಶಾಸ್ತ್ರೀಯ ಶೈಲಿ, ವಿವೇಚನಾತ್ಮಕ ವಿಮರ್ಶೆ- ಇವೆಲ್ಲವನ್ನೂ ಅತ್ಯಾಧುನಿಕ ಪಾಶ್ಚಾತ್ಯ ವಿಮರ್ಶಕರ ವಾದಗಳನ್ನೂ ತಮ್ಮದೇ ಆದ ಶಾಸ್ತ್ರೀಯ ಶೈಲಿಯಲ್ಲಿ ಶ್ರೀಧರರು ಮಂಡಿಸಿದ್ದಾರೆ. ಇತರ ವಿಮರ್ಶಕರ ದೃಷ್ಟಿಗಳನ್ನು ನಿರೂಪಿಸಿ ಕೈಬಿಟ್ಟು ಬಿಡದೆ ಅವುಗಳನ್ನು ಅರಗಿಸಿಕೊಂಡು ಶ್ರೀಧರರು ಸ್ವತಂತ್ರವಾಗಿ ಆಲೋಚಿಸಬಲ್ಲ ಶಕ್ತಿಯನ್ನು ತೋರಿಸಿದ್ದಾರೆ. ಒಂದು ರೀತಿಯಿಂದ ಈ ಕೃತಿಯನ್ನು ವಿಮರ್ಶೆಯ ಸಿದ್ಧಾಂತಗಳ ಕಿರಿಯ ವಿಶ್ವಕೋಶ ಎನ್ನಬಹುದು.

ಸಾಹಿತ್ಯ ವಿಮರ್ಶೆ ಗಟ್ಟಿಯಾದ ತಳಹದಿಯ ಮೇಲೆ ನಿಂತು ಸರ್ವತೋಮುಖವಾಗಿ ಬೆಳೆಯಬೇಕಾದರೆ ಪ್ರಪಂಚದ ಪ್ರಬುದ್ಧ ಸಾಹಿತ್ಯಗಳನ್ನು ವಿಶ್ಲೇಷಣೆಗೆ ಗುರಿಪಡಿಸಿರುವ ಮೀಮಾಂಸಕಾರರು ನಿರೂಪಿಸಿದ ತತ್ತ್ವಗಳನ್ನು ಪರಿಚಯ ಮಾಡಿಕೊಳ್ಳಬೇಕಾದದ್ದು ಅಗತ್ಯ. ಈ ದೃಷ್ಟಿಯಿಂದ ಅರಿಸ್ಟಾಟಲನ ಕಾವ್ಯಮೀಮಾಂಸೆ (1959) ಮತ್ತು ಹೊರೇಸನ ಸಾಹಿತ್ಯ ವಿಮರ್ಶೆ (1969)- ಈ ಎರಡೂ ಎನ್.ಬಾಲಸುಬ್ರಹ್ಮಣ್ಯ ಅವರು ಕನ್ನಡಕ್ಕೆ ನೀಡಿದ ಅಪೂರ್ವ ಕಾಣಿಕೆಗಳು. ತಮ್ಮ ಪ್ರಕಾಂಡ ಪಾಂಡಿತ್ಯ, ನಿಷ್ಕೃಷ್ಟವಾದ ನಿರೂಪಣೆ, ಪ್ರಖರವಾದ ವಿಮರ್ಶನ ಶಕ್ತಿಗಳನ್ನು ಹಾಳತವಾಗಿ ಬೆರಸಿ, ಈ ಪ್ರಾಚೀನರ ಆಚಾರ್ಯಕೃತಿಗಳನ್ನು ಮೋಹಕವಾದ ಕನ್ನಡ ಶೈಲಿಯಲ್ಲಿ ನೀಡಿ ಬಾಲಸುಬ್ರಹ್ಮಣ್ಯ ಅವರು ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಹಾಗೆಯೇ ಅಬರಕ್ರಾಂಬಿಯ ಪ್ರಿನ್ಸಿಪಲ್ಸ್ ಆಫ್ ಲಿಟರರಿ ಕ್ರಿಟಿಸಿಸಂ ಗ್ರಂಥವನ್ನು ಸಿ.ಪಿ.ಕೃಷ್ಣಕುಮಾರ್ ಅವರು ಸಾಹಿತ್ಯ ವಿಮರ್ಶೆಯ ತತ್ತ್ವಗಳು (1964) ಎಂಬ ಹೆಸರಿನಿಂದಲೂ ವಿಲಿಯಂ ಹೆನ್ರಿ ಹಡ್ಸನನ ಇಂಟ್ರೋಡಕ್ಷನ್ ಟು ದಿ ಸ್ಟಡಿ ಆಫ್ ಲಿಟರೇಚರ್ ಎಂಬ ಕೃತಿಯನ್ನು ಸಾಹಿತ್ಯಪ್ರವೇಶ (1965) ಎಂಬ ಹೆಸರಿನಿಂದಲೂ ಅನುವಾದ ಮಾಡಿಕೊಟ್ಟಿದ್ದಾರೆ. ಇವರ ಪಾಶ್ಚಾತ್ಯ ಕಾವ್ಯಚಿಂತನ (1970) ಎಂಬ ಗ್ರಂಥದಲ್ಲಿ ಲೀ ಹಂಟ್, ಎಮರ್ಸನ್, ಜಾನ್ ಸ್ಟುಯರ್ಟ್ ಮಿಲ್, ಜೇಮ್ಸ್, ರಸೆಲ್ ಲೊವೆಲ್, ಮ್ಯಾಥ್ಯೂ ಆರ್ನಾಲ್ಡ್, ಜಾರ್ಜ್ ಸಂತಾಯನ ಮತ್ತು ಎ.ಸಿ.ಬ್ರಾಡ್ಲೆ ಅವರ ಕಾವ್ಯಚಿಂತನೆಗಳ ಅನುವಾದ ಇದೆ. ಈ ಅನುವಾದಗಳ ಸಾಲಿನಲ್ಲೇ ಹೆಸರಿಸಬೇಕಾದ ಇತರ ಕೃತಿಗಳು ಇನ್ನೂ ಕೆಲವಿವೆ. ಜಿ.ಗುಂಡಣ್ಣನವರು ವರ್ಡ್ಸ್‌ವರ್ತ್ ಕವಿಯ 'ಲಿರಿಕಲ್ ಬ್ಯಾಲೆಡ್ಸ್' ಮುನ್ನುಡಿಯನ್ನು ಕಾವ್ಯ ಮತ್ತು ಶಬ್ದದ ರೀತಿ (1961) ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರೆ. ಜಿ.ಗುಂಡಣ್ಣನವರು ಮತ್ತು ಸಿ.ಮಹಾದೇವಪ್ಪನವರು ಷೆಲ್ಲಿಯ ಡಿಫೆನ್ಸ್ ಆಫ್ ಪೊಯೆಟ್ರಿಯನ್ನು ಕಾವ್ಯ ಸಮರ್ಥನೆ (1956) ಎಂಬ ಹೆಸರಿನಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಅನುವಾದ ಮಾಡಿದ್ದಾರೆ (ಈ ಕೃತಿಯ ಸರಳಾನುವಾದವನ್ನು ಬಹಳ ಹಿಂದೆಯೇ 1930ರ ಸುಮಾರಿನಲ್ಲಿ ಕುವೆಂಪು ಅವರು ಮಾಡಿದ್ದರು). ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಷೋಪೆನ್ ಹೋವರನ ನಾಲ್ಕು ಸಾಹಿತ್ಯ ಪ್ರಬಂಧಗಳ ಅನುವಾದಗಳನ್ನು ಸಾಹಿತ್ಯದ ಜೀವಾಳ ಎಂಬ ಹೆಸರಿನಲ್ಲಿ ಪ್ರಕಟಿಸಿದರು (1942). ಎಸ್.ಬ್ರಾಡ್‌ಬ್ರೂಕನ ಟಿ.ಎಸ್.ಎಲಿಯಟ್ ಎಂಬ ಗ್ರಂಥವನ್ನು ಬಿ.ಎಚ್.ಶ್ರೀಧರ ಅವರು ಅನುವಾದ ಮಾಡಿದ್ದಾರೆ.

ವಿಮರ್ಶೆಯನ್ನು ಬೆಳೆಸುವುದರಲ್ಲಿ ನೆರವಾದ ಕೆಲವು ಡಾಕ್ಟೊರೇಟ್ ಪ್ರಬಂಧಗಳನ್ನು ಹೆಸರಿಸಬಹುದು. ಪ್ರಭುಶಂಕರರ ಕನ್ನಡದಲ್ಲಿ ಭಾವಗೀತೆ (1966), ಜಿ.ಎಸ್.ಶಿವರುದ್ರಪ್ಪನವರ ಸೌಂದರ್ಯ ಸಮೀಕ್ಷೆ (1965), ಎಚ್.ತಿಪ್ಪೇರುದ್ರಸ್ವಾಮಿಯವರ ಶರಣರ ಅನುಭಾವ ಸಾಹಿತ್ಯ (1963) ಇಂಥವು. ಪದವಿಗಾಗಿ ಬರೆದ ಮಹಾ ಪ್ರಬಂಧಗಳಲ್ಲಿ ತ.ಸು.ಶಾಮರಾಯರ ಕನ್ನಡನಾಟಕ (1961) ಒಂದು ಗಮನಾರ್ಹ ಕೃತಿ.

ಇದೇ ಗುಂಪಿನಲ್ಲಿ ಎದ್ದುನಿಲ್ಲುವ ಒಂದು ಉತ್ತಮ ಕೃತಿ ಎಸ್.ಅನಂತನಾರಾಯಣ ಅವರ ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ (1962). ಕನ್ನಡದ ವಿವಿಧ ಕಾವ್ಯಪ್ರಕಾರಗಳ ಮೇಲೆ ಇಂಗ್ಲಿಷ್ ಕಾವ್ಯ ಬೀರಿರುವ ಪ್ರಭಾವವನ್ನು ಅನಂತನಾರಾಯಣ ಅವರು ಅಭಿನಂದನೀಯವಾದ ರೀತಿಯಲ್ಲಿ ಚಿತ್ರಿಸಿದ್ದಾರೆ. ಅವರದ್ದೇ ಕಾರಂತರ ಕಾದಂಬರಿಗಳು (1948) ಮತ್ತು ಪ್ರಸಿದ್ಧ ವಿದ್ವಾಂಸರಾದ ಎಲ್.ಎಸ್.ಶೇಷಗಿರಿರಾಯರ ಕಾದಂಬರಿ - ಸಾಮಾನ್ಯ ಮನುಷ್ಯ (1952)- ಇವು ಒಂದು ಸಾಹಿತ್ಯ ರೂಪದ ಅಭ್ಯಾಸದ ದಾರಿಯನ್ನು ತೆರೆದ ಕೃತಿಗಳು.

ಹೊರಭಾಷೆಯ ಸಾಹಿತ್ಯಗಳ ವಿಮರ್ಶೆಗೆ ಸಂಬಂಧಿಸಿದಂತೆ ಅಭಿಮಾನ ಪಡಬಹುದಾದ ಎರಡು ಕೃತಿಗಳನ್ನು ಹೆಸರಿಸಬೇಕು. ಒಂದು ಎ.ಆರ್.ಕೃಷ್ಣಶಾಸ್ತ್ರಿಗಳ ಬಂಕಿಮಚಂದ್ರ (1960), ಬಂಗಾಲಿ ಭಾಷೆಯಲ್ಲೂ ಆ ಪ್ರಸಿದ್ಧ ಕಾದಂಬರಿಕಾರರನ್ನು ಕುರಿತು ಇಂಥ ವಿಸ್ತಾರವಾದ ಸಮರ್ಥ ವಿಮರ್ಶಾ ಗ್ರಂಥ ಪ್ರಕಟವಾಗಿಲ್ಲ ಎಂಬುದು ವಿದ್ವಾಂಸರ ಅಭಿಪ್ರಾಯ. ಎರಡನೆಯದು ಎ.ಎನ್.ಮೂರ್ತಿರಾಯರ ಷೇಕ್ಸ್‌ಪಿಯರ್ (ಅಪೂರ್ಣ), ಅಪೂರ್ವವಾದ ವಿದ್ವತ್ತು, ಅಭಿನಂದನೀಯವಾದ ಸಹೃದಯತೆಗಳು ಎಂಥ ತೂಕವಾದ ವಿಮರ್ಶೆಯನ್ನು ನೀಡಬಲ್ಲುವು ಎಂಬುದಕ್ಕೆ ಮೂರ್ತಿರಾಯರ ಕೃತಿ ನಿದರ್ಶನ. ವಿಮರ್ಶೆಯಲ್ಲಿ ಒಂದು ಮೇರುಕೃತಿ ಎಸ್.ವಿ.ರಂಗಣ್ಣನವರ ಪಾಶ್ಚಾತ್ಯಗಂಭೀರ ನಾಟಕಗಳು (1970). ಗಂಭೀರನಾಟಕಗಳ ಬೆಳವಣಿಗೆಯನ್ನು ಗ್ರೀಕ್ ಯುಗದಿಂದ ಇಂದಿನವರೆಗೆ ಸಾವಿರದ ಇನ್ನೂರು ಪುಟಗಳ ಹರವಿನಲ್ಲಿ ಚಿತ್ರಿಸಿರುವ ರಂಗಣ್ಣನವರು ತಮ್ಮ ಅರ್ಧಶತಮಾನದ ಅಧ್ಯಯನದ ಫಲವನ್ನೂ ಪರಿಣತ ವಿಮರ್ಶಾದೃಷ್ಟಿಯ ಸಾಧನೆಯನ್ನೂ ಈ ಗ್ರಂಥದಲ್ಲಿ ಏಕತ್ರ ಸಂಗಮಗೊಳಿಸಿದ್ದಾರೆ.

ಆಧುನಿಕ ಕನ್ನಡ ಸಾಹಿತ್ಯದ ವಿಮರ್ಶೆಯ ಇತಿಹಾಸದಲ್ಲಿ ಕೀರ್ತಿನಾಥ ಕುರ್ತಕೋಟಿಯವರಿಗೆ ಒಂದು ವಿಶಿಷ್ಟವಾದ ಸ್ಥಾನವಿದೆ. ಸಾಹಿತ್ಯದ ಮುಖ್ಯ ಪ್ರಕಾರಗಳನ್ನೆಲ್ಲ ಪರಿಶೀಲಿಸಿ ವಿಮರ್ಶಿಸ ಹೊರಟಿರುವ ಇವರ ಧೈರ್ಯ ಅಪಾರವಾದದ್ದು. ಇವರ ಅಧ್ಯಯನದ ವ್ಯಾಪ್ತಿ ಹಿರಿದು. ಇವರು ಹೇಳುವ ಎಲ್ಲ ಮಾತನ್ನೂ ಎಲ್ಲರೂ ಒಪ್ಪುವುದು ಸಾಧ್ಯವಿಲ್ಲ ಎಂಬುದು ಇವರ ವಿಮರ್ಶೆಗೆ ಮಾತ್ರವಲ್ಲದೆ ಎಲ್ಲ ವಿಮರ್ಶೆಗೂ ಅನ್ವಯಿಸುವಂಥ ಮಾತು. ಇವರ ಯುಗಧರ್ಮ ಹಾಗೂ ಸಾಹಿತ್ಯ (1963) ದರ್ಶನವಿಚಾರಕ್ಕೆ, ವಿಮರ್ಶೆಗೆ ವಿಶೇಷ ಆಸ್ಪದ ನೀಡಿರುವ ವಿಮರ್ಶಾಕೃತಿ.

ನವ್ಯ ಸಾಹಿತ್ಯ ಆರಂಭವಾದ ಮೇಲೆ ಹೊಸ ವಿಮರ್ಶೆಯ ರೀತಿಯೂ ಕನ್ನಡಕ್ಕೆ ಬಂತು. ಎಲ್.ಎಸ್.ಶೇಷಗಿರಿರಾಯರು ಹೇಳುತ್ತಾರೆ: ಈ ಸಾಹಿತ್ಯ ವಿಮರ್ಶೆಯಲ್ಲಿ ಕೃತಿಯೇ ಸರ್ವಸ್ವವಾದ್ದರಿಂದ ಕೃತಿಕಾರ ಏನನ್ನೇ ಹೇಳಬೇಕಾದರೂ ಭಾಷೆಯ ಮೂಲಕ ಮಾತ್ರ ಹೇಳಬಲ್ಲ ಎಂಬ ನಂಬಿಕೆ ಇರುವುದರಿಂದ ಕೃತಿಯ ವಿವರವಾದ, ಸೂಕ್ಷ್ಮವಾದ ಅಧ್ಯಯನ ಮುಖ್ಯವಾಯಿತು. ಒಂದು ಕವನ, ನಾಟಕ ಅಥವಾ ಕಾದಂಬರಿ ಸಾವಯವ ಶಿಲ್ಪ. ಹೇಗೆ ಮನುಷ್ಯನ ಅಂಗಾಂಗಗಳೆಲ್ಲ ಸೇರಿ ದೇಹವಾಗಿದೆಯೋ ಹಾಗೆ ವಸ್ತು, ಪಾತ್ರ, ಆವರಣ, ತಂತ್ರ ಎಲ್ಲ ಸೇರಿ ಕೃತಿ. ಮೊದಲು ಭಾವ, ಅನಂತರ ಭಾಷೆ, ತಂತ್ರಗಳ ಆಯ್ಕೆ ಎನ್ನುವುದಿಲ್ಲ. ಇದನ್ನು ಸದಾ ಲಕ್ಷ್ಯದಲ್ಲಿಟ್ಟುಕೊಂಡೇ ವಿಮರ್ಶಕ ಕೃತಿಯ ಅರ್ಥವನ್ನು ಗ್ರಹಿಸಲು ಪ್ರಯತ್ನಿಸುತ್ತಾನೆ. ನವ್ಯ ವಿಮರ್ಶೆಯ ಕೃತಿ ವಿಶ್ಲೇಷಣಾ ರೀತಿಯನ್ನು ಅದರ ವೈವಿಧ್ಯವನ್ನು ಜಿ.ಎಸ್.ಶಿವರುದ್ರಪ್ಪನವರೂ ಎನ್.ಎಸ್.ಲಕ್ಷ್ಮೀ ನಾರಾಯಣ ಭಟ್ಟರೂ ಸಂಪಾದಿಸಿರುವ ಪ್ರಾಯೋಗಿಕ ವಿಮರ್ಶೆ ಎಂಬ ಗ್ರಂಥದಿಂದ ಪರಿಚಯ ಮಾಡಿಕೊಳ್ಳಬಹುದು.

ಎಂ.ಗೋಪಾಲಕೃಷ್ಣ ಅಡಿಗರ ನಡೆದು ಬಂದ ದಾರಿ ಸಂಗ್ರಹಕ್ಕೆ ಬರೆದ ಮುನ್ನುಡಿಯಿಂದ ಪ್ರಾರಂಭವಾದ ನವ್ಯವಿಮರ್ಶೆ ಸಾಕ್ಷಿ, ಸಂಕ್ರಮಣ

ಪತ್ರಿಕೆಗಳ ನೆರವಿನಿಂದಲೂ ಅನೇಕ ವಿಮರ್ಶಕರಿಂದಲೂ ಬೆಳೆಯುತ್ತ ಬಂದಿದೆ. ಯು.ಆರ್.ಅನಂತಮೂರ್ತಿ, ಎಂ.ಜಿ.ಕೃಷ್ಣಮೂರ್ತಿ, ಪಿ.ಲಂಕೇಶ್, ಗಿರಡ್ಡಿ ಗೋವಿಂದರಾಜ, ಜಿ.ಎಚ್.ನಾಯಕ, ಎಚ್.ಎಂ.ಚನ್ನಯ್ಯ, ಬರಗೂರು ರಾಮಚಂದ್ರಪ್ಪ, ರಾಮಚಂದ್ರದೇವ, ಮಾಧವ ಕುಲಕರ್ಣಿ - ಇವರೆಲ್ಲ ಈ ಕ್ಷೇತ್ರದಲ್ಲಿ ಕೃಷಿ ಮಾಡಿದ ಅನೇಕ ವಿಮರ್ಶಕರಲ್ಲಿ ಕೆಲವರು. ಯು.ಆರ್.ಅನಂತಮೂರ್ತಿಯವರ ಪ್ರಜ್ಞೆ ಮತ್ತು ಪರಿಸರ (1971), ಎಂ.ಜಿ.ಕೃಷ್ಣಮೂರ್ತಿಯವರ ಆಧುನಿಕ ಭಾರತೀಯ ಸಾಹಿತ್ಯ (1970), ಜಿ.ಎಚ್.ನಾಯಕರ ಸಮಕಾಲೀನ (1974), ಎಚ್.ಎಂ.ಚನ್ನಯ್ಯನವರ ಜಿಜ್ಞಾಸೆ (1975), ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟರ ಹೊರಳು ದಾರಿಯಲ್ಲಿ ಕಾವ್ಯ, ಜಿ.ಎನ್.ರಂಗನಾಥರಾವ್ ಅವರ ಹೊಸ ತಿರುವು, ಗಿರಡ್ಡಿ ಗೋವಿಂದರಾಜರ ಸಣ್ಣಕತೆಯ ಹೊಸ ಒಲವುಗಳು- ಇವೆಲ್ಲ ಗಮನಿಸಬೇಕಾದ ವಿಮರ್ಶೆಯ ಕೃತಿಗಳು. ಗೋಪಾಲಕೃಷ್ಣ ಅಡಿಗರನ್ನು ಕುರಿತು ಬರೆದ ಸುಮತೀಂದ್ರ ನಾಡಿಗರ ಗೋಪಾಲಕೃಷ್ಣ ಅಡಿಗ ಒಂದು ಕಾವ್ಯಾಭ್ಯಾಸ ಅಡಿಗರ ಕಾವ್ಯಧೋರಣೆಯನ್ನು ಅರ್ಥಮಾಡಿಕೊಳ್ಳಲು ಉತ್ತಮ ಪ್ರವೇಶಿಕೆಯಾಗಿದೆ. ವಿಮರ್ಶಕರಾಗಿ ಪ್ರಖ್ಯಾತರಾಗಿರುವ ಸಿ.ಪಿ.ಕೃಷ್ಣಕುಮಾರ್ ಅವರು ಅನೇಕ ವಿಮರ್ಶಾ ಸಂಕಲನಗಳನ್ನು ಹೊರತಂದಿದ್ದಾರೆ. ಕನ್ನಡ ಚತುರ್ಮುಖ, ಪರಿಭಾವನೆ, ಆಲೋಚನ ಮುಂತಾದ ಕೃತಿಗಳಲ್ಲಿ ಇವರು ಉತ್ತಮ ವರ್ಣನಾತ್ಮಕ ವಿಮರ್ಶೆಯನ್ನು ನೀಡಿದ್ದಾರೆ.

ಬೆಂಗಳೂರು ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳ ಕನ್ನಡ ಅಧ್ಯಯನ ಸಂಸ್ಥೆಗಳು ವಿಸ್ತಾರವಾಗಿ ಪ್ರಕಟಿಸುತ್ತಿರುವ ಕನ್ನಡ ಸಾಹಿತ್ಯ ಚರಿತ್ರೆಯ ಪ್ರಕಟಿತ ಸಂಪುಟಗಳನ್ನು ನೋಡಿದರೆ ಕನ್ನಡದ ವಿಮರ್ಶೆ ವಿಪುಲವಾಗಿ ಬೆಳೆಯುವ ಶುಭಲಕ್ಷಣಗಳು ಕಾಣುತ್ತಿವೆ. ಅಲ್ಲದೆ ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸುತ್ತಿರುವ ಗೃಹಸರಸ್ವತೀ ಗ್ರಂಥಮಾಲೆಯಲ್ಲಿ ಪ್ರಭುಶಂಕರರ ಖಲೀಲ್ ಗಿಬ್ರಾನ್ (1970), ಎಚ್.ಕೆ.ರಾಮಚಂದ್ರ ಮೂರ್ತಿಯವರ ಮೋಲಿಯರ್ (1973), ಎಲ್.ಎಸ್.ಶೇಷಗಿರಿರಾಯರ ಆಲಿವರ್ ಗೋಲ್ಡ್ ಸ್ಮಿತ್ (1972)- ಇವು ಗಮನಿಸಬೇಕಾದ ಕೃತಿಗಳು. ಕೊನೆಯ ಎರಡರಲ್ಲಿ ಆಯಾ ಕವಿಗಳ ಕೃತಿಗಳ ಸೊಗಸಾದ ವಿಮರ್ಶೆಯಿದೆ.

ಮೈಸೂರು, ಬೆಂಗಳೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳು ವಿಚಾರ ಸಂಕಿರಣಗಳನ್ನು ಏರ್ಪಡಿಸಿ ಅವುಗಳಲ್ಲಿ ಓದಿದ ಪ್ರಬಂಧಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿವೆ. ಇವು ವಿಮರ್ಶೆಗೆ ಶ್ರೇಷ್ಠವಾದ ಕಾಣಿಕೆಗಳು. ಇವುಗಳಲ್ಲಿ ಕೆಲವು ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ ಸುವರ್ಣ ಸಂಚಯ (1967), ಚಿನ್ನದ ಗರಿ (1974), ಬೆಂಗಳೂರು ವಿಶ್ವವಿದ್ಯಾಲಯ ಪ್ರಕಟಿಸಿರುವ ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ,ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು, ಕನ್ನಡ ನಾಟಕ ಪರಂಪರೆ ಮತ್ತು ಪ್ರಯೋಗ, ಕನ್ನಡ ವಿಮರ್ಶೆಯ ನೆಲೆ ಬೆಲೆ, ಪಂಪ ಒಂದು ಅಧ್ಯಯನ; ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿರುವ ದಾಸ ಸಾಹಿತ್ಯ, ಕನ್ನಡ ರಂಗಭೂಮಿ ಅಂದು -ಇಂದು - ಇವೆಲ್ಲ ಮೌಲಿಕ ವಿಮರ್ಶೆಗಳನ್ನು ಒಳಗೊಂಡಿವೆ. ರಾಜ್ಯ ಸಾಹಿತ್ಯ ಅಕಾಡೆಮಿಯ ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಕೂಡ ಒಂದು ಉತ್ತಮ ಸಂಕಲನ. (ಪಿ.ಎಸ್.)

ಕರ್ನಾಟಕದಲ್ಲಿ ಕಳೆದ ನಾಲ್ಕು ದಶಕಗಳಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹಲವಾರು ಬದಲಾವಣೆಗಳಾದವು. ಕನ್ನಡ ಸಾಹಿತ್ಯಕ್ಕೆ ಇವುಗಳ ಪ್ರೇರಣೆಯೂ ಆಯಿತು. ನವೋದಯ ಸಾಹಿತ್ಯ (1920-45) ಚಳವಳಿಯಲ್ಲಿ ಪಾಶ್ಚಾತ್ಯ ಕಾವ್ಯದ ಅನುಸರಣೆಯೂ ಸೇರಿದಂತೆ ನಮ್ಮ ಸಂದರ್ಭದ ಆಸೆ ಆಕಾಂಕ್ಷೆಗಳು ಅಭಿವ್ಯಕ್ತಗೊಳ್ಳಲು ಕಾರಣವಾಯಿತು. ಅನಂತರ ವ್ಯಕ್ತಿ ಪ್ರಜ್ಞೆಯ ಕೇಂದ್ರ ನೆಲೆಯಾದ ನವ್ಯ ಸಾಹಿತ್ಯ (1950 ರಿಂದ) ರೂಪುಗೊಂಡರೆ ಪ್ರಗತಿಶೀಲ ಸಾಹಿತ್ಯಕ್ಕೆ (1945-50) ಮಾರ್ಕ್ಸ್‌ವಾದದ ನೆಲೆಗಟ್ಟು ಕಾರಣವಾಯಿತು. ಆಮೇಲೆ ಸ್ಥಗಿತ ಮೌಲ್ಯಗಳನ್ನು ಪ್ರಶ್ನಿಸಲೆಂದು ಶೂದ್ರ ಬರೆಹಗಾರರ ಒಕ್ಕೂಟ ಹುಟ್ಟಿಕೊಂಡಿತು. ದಲಿತರ ಮೇಲಿನ ಆಕ್ರಮಣವನ್ನು, ಶೋಷಣೆಯನ್ನು ತಪ್ಪಿಸಿ ಸಮಾನತೆ ಹಾಗೂ ಸ್ವಾಭಿಮಾನವನ್ನುಂಟುಮಾಡುವುದಕ್ಕಾಗಿ ದಲಿತ ಬಂಡಾಯ ಚಳವಳಿ (1979) ಹುಟ್ಟಿಕೊಂಡದ್ದಲ್ಲದೆ ಇವುಗಳ ಪ್ರತ್ಯುತ್ಪನ್ನವಾಗಿ ದಲಿತ ಬಂಡಾಯ ಸಾಹಿತ್ಯವು ರಚನೆಗೊಂಡಿತು. ಈ ಬಗೆಯ ಸಾಹಿತ್ಯದಲ್ಲಿ ಅಸಮಾನತೆಯ ನಿವಾರಣೆಗಾಗಿ, ತಮ್ಮ ಹಕ್ಕುಗಳ ಈಡೇರಿಕೆಗಾಗಿ ಜನಪರವಾದ ದನಿ ಸ್ಫೋಟವಾಯಿತು. ಸಾಹಿತ್ಯ ಕೃತಿಯನ್ನು ಕೇವಲ ಸಾಹಿತ್ಯ ಕೃತಿಯನ್ನಾಗಿ ನೋಡದೆ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ನೋಡುವ, ಮೌಲ್ಯಮಾಪನ ಮಾಡುವ ಪರಿಪಾಠ ಬೆಳೆದದ್ದರಿಂದ ಅದಕ್ಕೆ ಸಂಬಂಧಿಸಿದ ವಿಮರ್ಶನ ಮಾದರಿಗಳು, ಕ್ರಮಗಳು ರೂಢಿಗೆ ಬಂದವು. ಹಾಗಾಗಿ ಸಾಹಿತ್ಯದ ಮೂಲಕ ಸಂಸ್ಕೃತಿಯನ್ನು ವ್ಯಾಖ್ಯಾನಿಸುವ, ವಿಶ್ಲೇಷಿಸುವ ಕೆಲಸದಲ್ಲಿ ವಿಮರ್ಶಕರು ಮುಂದಾದರು. ವರ್ತಮಾನದಲ್ಲಿ ಇದ್ದು ಭೂತವನ್ನು ಅವಲೋಕಿಸುವ ಕೆಲಸದಲ್ಲಿ ತೊಡಗಿದರು. ಅಂದರೆ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಜನಪರ ಆಶಯಗಳನ್ನು, ದುಡಿಯುವ ವರ್ಗದ ದನಿಗಳನ್ನು, ದಲಿತ ಬಂಡಾಯದ ಆಶಯಗಳನ್ನು, ಅನ್ವೇಷಿಸುವ ಕೆಲಸದಲ್ಲಿ ವಿಮರ್ಶನ ಕಾರ್ಯ ಜರುಗಿತು. ಹೀಗಾಗಿ ನವೋದಯ ಮತ್ತು ನವ್ಯ ವಿಮರ್ಶೆಗಿಂತ ಭಿನ್ನವಾದ ಶೈಲಿ ವ್ಯಕ್ತವಾಯಿತು. ಕನ್ನಡ ಸಾಹಿತ್ಯ ಪರಂಪರೆಯ ಜೊತೆ ಜೊತೆಯಲ್ಲಿಯೇ ವಿಮರ್ಶೆಯೂ ಬೆಳೆಯುತ್ತಾ ಬಂದಿರುವಂತೆ, ಕಾಲಕಾಲಕ್ಕೂ ಅದರ ಪರಿಭಾಷೆಯಲ್ಲೂ ಅಲ್ಪಸ್ವಲ್ಪ ಬದಲಾವಣೆಗಳೂ ಉಂಟಾಗಿರುವುದನ್ನು ಗಮನಿಸಬಹುದು. ಬರಗೂರು ರಾಮಚಂದ್ರಪ್ಪನವರು ಹೇಳುವಂತೆ "ಸಾಹಿತ್ಯ ಮತ್ತು ವಿಮರ್ಶೆಗಳ ಮುಖಾಮುಖಿ ಒಂದು ಉತ್ತಮ ಅಂತರ್‌ಕ್ರಿಯೆಗೆ ಕಾರಣವಾದಾಗ ಆರೋಗ್ಯಕರ ಸಾಂಸ್ಕೃತಿಕ ಪರಿಸರದ ನಿರ್ಮಾಣವಾಗುತ್ತದೆ." ದಲಿತ ಬಂಡಾಯ ಸಂದರ್ಭದ ವಿಮರ್ಶೆ ಈ ಬಗೆಯದಾಗಿದೆ.

ಗಾಂಧಿ, ಲೋಹಿಯಾ, ಅಂಬೇಡ್ಕರ್, ಮಾರ್ಕ್ಸ್ ಸಿದ್ಧಾಂತಗಳು ಸಾಹಿತ್ಯ ವಿಮರ್ಶೆಯಲ್ಲಿ ಸಂವಾದದಲ್ಲಿ ಪ್ರಮುಖವಾದವು. ದಲಿತ ಬಂಡಾಯ ಸಾಹಿತ್ಯದ ಪ್ರಭಾವದಿಂದಾಗಿ ಈ ಬಗೆಯ ಸಂವೇದನೆಗಳ ಅಧ್ಯಯನಕ್ಕೆ ಕಾರಣವಾಯಿತು. ಈ ಸಂದರ್ಭದಲ್ಲಿ ಕನ್ನಡ ವಿಮರ್ಶೆ ಸಾಹಿತ್ಯವನ್ನು ರಾಜಕೀಯ ಸಿದ್ಧಾಂತ, ವರ್ಗ ಸಂಘರ್ಷಗಳ ಹಿನ್ನೆಲೆಯಲ್ಲಿ ಮೌಲ್ಯಮಾಪನ ಮಾಡತೊಡಗಿತು. ಜನಪರ ದನಿ ಪರಿಶೀಲನೆಗೆ ಬಳಸುವ ಸಾಮಾಜಿಕ ಮಾನದಂಡ, ಎಡಪಂಥೀಯ ಸೈದ್ಧಾಂತಿಕತೆ, ನಿರ್ದಿಷ್ಟವಾದ ಪರಿಭಾಷೆ ಇವೆಲ್ಲ ದಲಿತ ಬಂಡಾಯ ಸಾಹಿತ್ಯ ವಿಮರ್ಶೆಯ ಅಂತಃಸತ್ವಗಳಾದುವು. ಹಾಗಾಗಿ ವಿಮರ್ಶೆಯಲ್ಲಿ ಸಾಮಾಜಿಕ ಸಂದರ್ಭ ಮುಖ್ಯವಾಯಿತು. ಕನ್ನಡ ವಿಮರ್ಶೆ ಪರಂಪರೆಯೊಂದಿಗೆ ಅನುಸಂಧಾನದಲ್ಲಿ ತೊಡಗುತ್ತಲೇ ಬಂತು. ಈ ನಡುವೆ ವಿಮರ್ಶೆಯಲ್ಲಿ ಸಾಂಸ್ಕೃತಿಕ ಜವಾಬ್ದಾರಿ ಹೆಚ್ಚಿತು. ಅನ್ಯಜ್ಞಾನ ಶಿಸ್ತುಗಳ ಅಧ್ಯಯನ, ಪೂರಕ ಸಾಹಿತ್ಯದ ಬಗೆಗಿನ ಕಾಳಜಿಗಳು - ಇವು ನವ್ಯೋತ್ತರ ವಿಮರ್ಶೆಯಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡವು. ಸೂಕ್ಷ್ಮಗೊಂಡ ಈ ವಿಮರ್ಶೆ ಪ್ರಬುದ್ಧತೆಯತ್ತಲೂ ಸಾಗಿತು. ಅಲ್ಲದೆ ಪಾಶ್ಚಾತ್ಯ ವಿಮರ್ಶನ ಮಾದರಿಗಳ ಬಗ್ಗೆ ತಾತ್ಸಾರ ಹುಟ್ಟಿಸುತ್ತಲೇ ಕನ್ನಡ ಸಾಹಿತ್ಯ ಪರಂಪರೆ ಸಂಸ್ಕೃತಿಗಳಲ್ಲಿ ಅಂತರ್ಗಾಮಿಯಾಗಿರುವ ಸಾಂಸ್ಕೃತಿಕ ವಿನ್ಯಾಸಗಳನ್ನು, ದೇಸೀ ನೆಲೆಗಳನ್ನು ಅರಸತೊಡಗಿತು. ನವ್ಯವಿಮರ್ಶೆ ಓದುಗ ಸಂವೇದನೆಯನ್ನು ಕಡೆಗಣಿಸಿದರೂ ಬಂಡಾಯ ಸಾಹಿತ್ಯ ಆ ಕೃತಕ ಕಂದಕವನ್ನು ಮುಚ್ಚುವ ಕೆಲಸ ಮಾಡಿತು.

ಆದರೆ ನವ್ಯ ವಿಮರ್ಶೆಯಲ್ಲಿ ಸಾಂಸ್ಕೃತಿಕ ಕಾಳಜಿಗಳಿಲ್ಲದೆ ಶುಷ್ಕವಾಗತೊಡಗಿದಾಗಲೂ ಅನಂತಮೂರ್ತಿ, ಚನ್ನಯ್ಯನಂಥವರು ಸಮಾಜವಾದಿ ಹಿನ್ನೆಲೆಯಲ್ಲಿ ಬರೆಯತೊಡಗಿದ್ದರು. ನರಹಳ್ಳಿ ಬಾಲಸುಬ್ರಹ್ಮಣ್ಯ, ಎಚ್.ಎಸ್. ರಾಘವೇಂದ್ರರಾವ್, ಜಿ.ಎಚ್. ನಾಯಕ, ಕೆ.ವಿ.ತಿರುಮಲೇಶ ಮೊದಲಾದವರಂತೂ ನವ್ಯೋತ್ತರ ಸಾಹಿತ್ಯದ ಹೊಸಸಂವೇದನೆಗಳನ್ನು ಕುತೂಹಲದಿಂದ ಗಮನಿಸಿ ಪ್ರತಿಕ್ರಿಯಿಸತೊಡಗಿದ್ದು ಗಮನಾರ್ಹ ಸಂಗತಿ.

ಇನ್ನೂ ಕೆಲ ವಿಮರ್ಶಕರು ದಲಿತ ಬಂಡಾಯ ಕೃತಿಗಳನ್ನು ನವ್ಯ ವಿಮರ್ಶೆಯ ಮಾನದಂಡಗಳಿಂದಲೇ ಅಳೆಯತೊಡಗಿದ್ದರು. ಇದರ ಪರಿಣಾಮವಾಗಿ ಕೃತಿಯ ಮೌಲ್ಯಮಾಪನಕ್ಕಿಂತ ಅದನ್ನು ಸಾರಾಸಗಟಾಗಿ ತಳ್ಳಿಹಾಕುವ ನಿಲುವು ಬಹಿರಂಗವಾಯಿತು. ಆಕ್ರೋಶ, ಅಬ್ಬರ, ಸರಳತೆ, ಘೋಷಿತ ಬಂಡಾಯ - ಇವೆಲ್ಲಾ ಸಾಹಿತ್ಯಕ ಮೌಲ್ಯಗಳೇ ಅಲ್ಲ ಎಂಬ ನಿರ್ಧಾರಕ್ಕೆ ಬಂದದ್ದುಂಟು. ಅನಂತರ ಬಂದ ಬಂಡಾಯ ಸಾಹಿತ್ಯ ವಿಮರ್ಶಕರು ಇವುಗಳನ್ನೇ ನಿಜವಾದ ಸಾಹಿತ್ಯಕ ಮೌಲ್ಯಗಳೆಂದು ಪರಿಗಣಿಸಿ ಕೃತಿ ವಿಮರ್ಶೆಗೆ ತೊಡಗಿದರು. ಯಾರು ಬರೆದದ್ದು ದಲಿತ ಸಾಹಿತ್ಯ

ಎಂಬ ಪ್ರಶ್ನೆ ಹುಟ್ಟಿತು. ದಲಿತರು ಬರೆದದ್ದು ದಲಿತಸಾಹಿತ್ಯವೆಂದೂ ಅದು ಮಹತ್ವದ್ದೇ ಆಗಿರುತ್ತದೆಂದೂ ಭಾವಿಸಲಾಯಿತು. ದಲಿತ ವಿಮರ್ಶೆ ಎಂಬುದು ಪ್ರತ್ಯೇಕವಾಗಿ ಬೆಳೆದಿಲ್ಲವಾದರೂ ಪಿ.ಕೃಷ್ಣಪ್ಪ, ದೇವಯ್ಯಹರವೆ ಮುಂತಾದವರು ಆರಂಭದ ದಿನಗಳಲ್ಲಿ ವಿಮರ್ಶನ ವಲಯದಲ್ಲಿ ಭರವಸೆ ಮೂಡಿಸಿದ್ದರು. ಅನಂತರ ಮ.ನ. ಜವರಯ್ಯ, ಅರವಿಂದ ಮಾಲಗತ್ತಿ, ಸಿದ್ಧಲಿಂಗಯ್ಯ, ಮೊಗಳ್ಳಿಗಣೇಶ ಮುಂತಾದವರ ಬರೆಹಗಳು ಗಮನಾರ್ಹವೆನಿಸಿದುವು.

ಪ್ರಜಾವಾಣಿಯ ಸಾಹಿತ್ಯ ಸಂವಾದದಲ್ಲಿ ಪ್ರಕಟವಾದ ವಿ.ಮುನಿವೆಂಕಟಪ್ಪನವರ 'ದಲಿತ ಸಾಹಿತ್ಯ ಎತ್ತ ಸಾಗಿದೆ' ಮುಳ್ಳೂರು ನಾಗರಾಜರ 'ದಲಿತ ಸಾಹಿತಿಗಳ ಏಕಾಂತ ದಂತ ಗೋಪುರ' ಮುಂತಾದ ಬರೆಹಗಳು ಏಕಮುಖವಾದ ವಿಮರ್ಶೆಯ ಬಗ್ಗೆ ಕಿಡಿಕಾರಿದವು. ಅದಕ್ಕಾಗಿ ಸುಬ್ಬು ಹೊಲೆಯಾರ್ 'ದಲಿತ ಸಾಹಿತಿಗಳಿಗೆ ಅಸಹಾಯಕತೆ ಬೇಡ' ಎಂದು ಸಮಾಧಾನಪಡಿಸಿದ್ದೂ ಉಂಟು. ಹೀಗೆ ಕೆಲ ದಲಿತ ಸಾಹಿತಿಗಳು ವೈಯಕ್ತಿಕ ಕೊರಗನ್ನು ತೋಡಿಕೊಳ್ಳುತ್ತಲೇ ತಮ್ಮ ಹಾಗೂ ತಮ್ಮಂಥವರ ಕೃತಿಗಳಿಗೆ ವಿಮರ್ಶನ ಕ್ಷೇತ್ರದಲ್ಲಿ ಆಗುತ್ತಿರುವ ತಾರತಮ್ಯಗಳನ್ನು ಬಹಿರಂಗಗೊಳಿಸಿದರು. ಮುಸುಕಿನ ಗುದ್ದಾಟದಂತೆ ಸಂವಾದದಲ್ಲಿ ತೊಡಗಿದ್ದವರ ಚರ್ಚೆಯೂ ಒಂದು ರೀತಿಯಲ್ಲಿ ದಲಿತ ಸಾಹಿತ್ಯ ವಿಮರ್ಶೆಯ ಏರುಪೇರಿನ ಮೌಲ್ಯಮಾಪನವೂ ಆಗಿತ್ತು. ಇಂಥ ವಿಮರ್ಶೆಗೆ ಮುಖ್ಯಕಾರಣ ವಿಮರ್ಶಾವಲಯದಲ್ಲಿ ಬರೆಯುವವರೆಲ್ಲಾ ಶೈಕ್ಷಣಿಕ ವಲಯದಲ್ಲಿರುವ ದಲಿತ ಲೇಖಕರನ್ನು ಅವರ ಕೃತಿಗಳನ್ನು ವೈಭವೀಕರಿಸಿದ್ದು ಮತ್ತು ನಾನ್ ಅಕಾಡೆಮಿಕ್ ವಲಯದ ದಲಿತ ಲೇಖಕರ ಬಗ್ಗೆ ಅನಾದರ ತೋರಿಸಿದ್ದು. ಅಕಸ್ಮಾತ್ ಬರೆದರೂ 'ಈ ಸಾಲು ಸಪ್ಪೆಯಾಗಿದೆ ಈ ಪಂಕ್ತಿ ಖಾರವಾಗಿದೆ' ಎಂದು ಊಟದ ಪರಿಭಾಷೆಯಲ್ಲಿ ದಲಿತ ಸಾಹಿತ್ಯದ ಪರಿಶೀಲನಾಕಾರ್ಯ ನಡೆದುದ್ದುಂಟು. ಇದನ್ನೆಲ್ಲಾ ಗಮನಿಸಿದವರಿಗೆ ವಿಮರ್ಶೆಯಲ್ಲಿ ಸಾಮಾಜಿಕ ಪರಿಭಾಷೆ ರೂಪುಗೊಳ್ಳುವವರೆಗೆ ದಲಿತ ಸಾಹಿತ್ಯಕ್ಕೆ ನ್ಯಾಯದೊರಕುವುದಿಲ್ಲ ಎನಿಸಿತು. ಪಾಶ್ಚಾತ್ಯ ಸಾಹಿತ್ಯದ ಮಾನದಂಡಗಳನ್ನಿಟ್ಟುಕೊಂಡು ವಿಮರ್ಶಿಸುವದರಿಂದಾಗಾಲೀ, ಗತ ಇತಿಹಾಸದ ಅಥವಾ ಪರಂಪರೆಯನ್ನು ತಪ್ಪಾಗಿ ಗ್ರಹಿಸುವುದರಿಂದಾಗಲೀ ಕಾವ್ಯಕ್ಕೆ ರಸವೇ ಪ್ರಧಾನ ಎಂಬುದರಿಂದಾಗಲೀ, ವ್ಯಾಕರಣವೇ ಪ್ರಧಾನ ಎನ್ನುವವರಿಂದಾಗಲೀ ದಲಿತ ಸಾಹಿತ್ಯದ ವಿಮರ್ಶೆ ಸಾಧ್ಯವಾಗದು ಎಂಬುದು ಇದರ ಮೀಮಾಂಸಕರ ವಾದವಾಯಿತು. ದಲಿತ ಪ್ರಜ್ಞೆಯ ಆಂತರ್ಯಕ್ಕೆ ಸ್ಪಂದಿಸಿದವರಿಂದ ಮಾತ್ರ ಇದರ ವಸ್ತುನಿಷ್ಠ ವಿಮರ್ಶೆ ಸಾಧ್ಯ ಎಂಬ ತೀರ್ಮಾನಕ್ಕೆ ಬಂದು ಘೋಷಣಾಮೂಲವಾದ ಕಾವ್ಯವೂ ಶ್ರೇಷ್ಠವೆಂದು ಪ್ರಶಂಸೆ ಮಾಡುತ್ತಾಬಂದದ್ದರಿಂದ ಕಲಾತ್ಮಕವಲ್ಲದ ಕಾವ್ಯಸೃಷ್ಟಿಗೂ ಕಾರಣವಾಗಬೇಕಾಯಿತು.

ವಿಮರ್ಶೆಯ ಹೆಸರಿನಲ್ಲಿ ನಡೆಯುವ ಹಲ್ಲೆಯ ಬಗ್ಗೆ ಆಕ್ರೋಶ ವ್ಯಕ್ತಪಡಿಸಿದ ಬರಗೂರು ರಾಮಚಂದ್ರಪ್ಪನವರು ಬಂಡಾಯ ಸಾಹಿತ್ಯ ವಿಮರ್ಶೆಗೆ ಪ್ರತ್ಯೇಕವಾದ ಮಾನದಂಡಗಳ ಅಗತ್ಯವಿದೆ ಎಂದು ಹೇಳಿ ಬಂಡಾಯ ಸಾಹಿತ್ಯ ಮೀಮಾಂಸೆಯನ್ನು ಪ್ರಕಟಿಸಿದರು. ಆವರೆಗಿನ ವಿಮರ್ಶೆಯ ಪಕ್ಷಪಾತದ ಆರೋಪಕ್ಕೆ ಬದಲಾಗಿ ವಿಮರ್ಶೆಯ ಸ್ವರೂಪದ ವಿಮರ್ಶೆಗೆ ಹೆಚ್ಚು ಕಾಳಜಿ ವಹಿಸಿದರು. ವಿಮರ್ಶಕರಾಗಿ ಸಾಮಾಜಿಕ, ಸಾಂಸ್ಕೃತಿಕ ವಿಷಯಗಳಿಗೆ ಹೊಸ ತಿರುವು ನೀಡಿದರು. ಸಾಹಿತ್ಯದಲ್ಲಿ ರಾಜಕೀಯಪ್ರಜ್ಞೆಯ ಅಗತ್ಯವನ್ನು ಪ್ರತಿಪಾದಿಸಿದರು. ಸಾಹಿತ್ಯ ಮತ್ತು ರಾಜಕಾರಣದಲ್ಲಿ ಇಂಥ ಮಹತ್ವದ ವಿಚಾರಗಳ ಬಗ್ಗೆ ಚರ್ಚೆ ನಡೆಸಿದರು.

2001ರಲ್ಲಿ ಹೊರಬಂದ ಬರಗೂರರ ಆಯ್ದ ವಿಚಾರ ವಿಮರ್ಶಾ ಲೇಖನಗಳ ಸಂಕಲನ 'ಸಂಸ್ಕೃತಿ: ಶ್ರಮ ಮತ್ತು ಸೃಜನಶೀಲತೆ'ಯಲ್ಲಿ ಸಂಸ್ಕೃತಿಜನ್ಯದ ಹಿಂದಿರುವ ಶ್ರಮ ಹಾಗೂ ಸೃಜನಶೀಲತೆಯಲ್ಲಿ ಕಾರ್ಯವೈಖರಿಯನ್ನು ವಸ್ತುನಿಷ್ಠವಾಗಿ ವಿಮರ್ಶಿಸಲಾಗಿದೆ. ಬಂಡಾಯ ಸಾಹಿತ್ಯವನ್ನು ವಿಮರ್ಶಿಸಬೇಕಾದ ಮಾನದಂಡಗಳ ಚರ್ಚೆ ನಡೆಯುತ್ತಿರುವಾಗಲೇ ಆಯಾ ವರ್ಗದವರಿಂದ ಬಂದಂಥ ಬರೆಹಗಾರರಲ್ಲಿ ಮಾತ್ರ ಅವರವರ ಬದುಕಿನ ವಿವರಗಳಿರುತ್ತವೆಂಬ ಅಭಿಪ್ರಾಯ ಮೂಡಿತು ಹಾಗೂ ಆ ಸಂದರ್ಭದಲ್ಲಿ ಮೂರು ಮುಖ್ಯ ವಿಮರ್ಶನ ಪರಿಕಲ್ಪನೆಗಳನ್ನು ಗುರುತಿಸಲು ಸಾಧ್ಯವಾಯಿತು. ಅವೆಂದರೆ ದಲಿತ ಸಂವೇದನೆ, ಮುಸ್ಲಿಂ ಸಂವೇದನೆ ಮತ್ತು ಸ್ತ್ರೀ ಸಂವೇದನೆ.

ಈ ಮೊದಲು ಪ್ರಸ್ತಾಪಿಸಿದಂತೆ ಪ್ರಗತಿಶೀಲ ಲೇಖಕರು ತಮ್ಮ ಕೃತಿಗಳಲ್ಲಿ ಸಾಮಾಜಿಕವಾದ ವೈರುಧ್ಯಗಳನ್ನು ಎತ್ತಿಹಿಡಿದರು, ನಿಜ. ಆ ಕಾಲದ ವಿಮರ್ಶೆಯು ಇದನ್ನು ಗುರುತಿಸುತ್ತಾ ಸಮಾಜದ ವೈರುಧ್ಯಗಳಿಗೆ ಮುಖ ಮಾಡಿತು. ಪ್ರಗತಿಶೀಲ ವಿಮರ್ಶೆ ಸಂಸ್ಕೃತಿಯನ್ನು ಸ್ಪರ್ಶಿಸದೆ ಇದ್ದುದರಿಂದ ಶುಷ್ಕತೆಗೆ ಕಾರಣವಾಯಿತು. ಆದರೆ ದಲಿತ ಬಂಡಾಯದ ಸಂದರ್ಭದಲ್ಲಿ ಆ ಕೊರತೆ ನಿವಾರಣೆಯಾಯಿತು. ಆಯಾ ಜನವರ್ಗಗಳ ಹಿನ್ನೆಲೆಯಲ್ಲಿ ಕೃತಿವಿಮರ್ಶೆ ಮಾಡುವ ಧಾಟಿ ವ್ಯಕ್ತವಾಯಿತು. ಈ ದೃಷ್ಟಿಯಿಂದ ದಲಿತ ಲೇಖಕನ ಆತ್ಮಕಥನ ಆತನ ವಿವರಗಳನ್ನೆಲ್ಲ ಒದಗಿಸುತ್ತದೆಂದಾದ ಮೇಲೆ ಅದು ಆತನ ಬಗ್ಗೆ ಚರಿತ್ರೆಯೂ ಆಗುತ್ತದೆ. ಇತರ ಸಂಗತಿಗಳ ಬಗ್ಗೆ ವಿಮರ್ಶೆಯೂ ಆಗತೊಡಗಿತು. ಅಲ್ಲದೆ ಜಾತಿ ವ್ಯವಸ್ಥೆ, ಮಡಿವಂತಿಕೆ, ಆಹಾರ ಪದ್ಧತಿ, ಅಸಮಾನತೆ ಇತ್ಯಾದಿಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡುವುದರಿಂದ ಅದೊಂದು ವಿಮರ್ಶೆಯೂ ಆಗಿಬಿಟ್ಟಿತು. ಅರವಿಂದ ಮಾಲಗತ್ತಿಯವರ ಗೌರ್ಮೆಂಟ್ ಬ್ರಾಹ್ಮಣ, ಸಿದ್ಧಲಿಂಗಯ್ಯನವರ ಊರು ಕೇರಿ, ಗೋವಿಂದರಾಜು ಅವರ ಮನವಿಲ್ಲದವರ ಮಧ್ಯೆ, ರಾಮಯ್ಯನವರ ಮಣೆಗಾರ - ಇವು ಈ ದೃಷ್ಟಿಯಿಂದ ಮುಖ್ಯವೆನಿಸಿದ್ದವು. ಈ ಮಧ್ಯೆ ಮಹಿಳಾ ಬರೆಹಗಳ ಕುರಿತ ಅಧ್ಯಯನ ವಿಶೇಷವಾಗಿ ಜರುಗಿತ್ತು. ಸ್ತ್ರೀವಾದಿ ವಿಮರ್ಶೆಯಲ್ಲಿ ವಿಜಯಾದಬ್ಬೆ, ನೇಮಿಚಂದ್ರ, ವಿಜಯಶ್ರೀ, ಪ್ರತಿಭಾ ನಂದಕುಮಾರ್, ಎನ್.ಗಾಯತ್ರಿ, ತೇಜಸ್ವಿನಿ ನಿರಂಜನ, ಸುಮಿತ್ರಾಬಾಯಿ, ಬಿ.ಎಂ.ರೋಹಿಣಿ ಮುಂತಾದವರು ವಿಶೇಷವಾಗಿ ಕೆಲಸ ಮಾಡಿದರು.

ಸ್ತ್ರೀವಾದಿ ಸಾಹಿತ್ಯ ವಿಮರ್ಶೆ (1994) (ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ) 1995ರಲ್ಲಿ ಬಂದ ಸ್ತ್ರೀವಾದಿ ಪ್ರವೇಶಿಕೆ (ಬಿ.ಎನ್.ಸುಮಿತ್ರಾಬಾಯಿ, ಎನ್.ಗಾಯಿತ್ರಿ), 1993ರಲ್ಲಿ ಹೊರಬಂದ 'ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ಚಿಂತನೆ' (ಸಂ:ಬರಗೂರು ರಾಮಚಂದ್ರಪ್ಪ), 1992ರಲ್ಲಿ ಹೊರಬಂದ ಕೇಶವಶರ್ಮರ 'ಕ್ರಿಯೆ- ಪ್ರತಿಕ್ರಿಯೆ', ಡಿ.ಆರ್.ನಾಗರಾಜರ 'ಸಾಹಿತ್ಯ ಕಥನ', ರಹಮತ್ ತರೀಕೆರೆ ಅವರ 'ಮರದೊಳಗಣ ಕಿಚ್ಚು', ವಿಜಯಾದಬ್ಬೆ ಅವರ 'ಮಹಿಳೆ ಸಾಹಿತ್ಯ ಸಮಾಜ' (1989), ಗಾಯಿತ್ರಿ ನಾವಡ ಅವರ 'ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು' (1999), ಧರಣೀದೇವಿ ಅವರ ಭಾರತೀಯತೆ ಮತ್ತು ಸ್ತ್ರೀವಾದ ಮುಂತಾದ ಕೃತಿಗಳು ಸ್ತ್ರೀವಾದಿ ಚಿಂತನೆಯ ದೃಷ್ಟಿಯಿಂದ ಗಮನಾರ್ಹವೆನಿಸಿದವು. ಒಟ್ಟಾರೆ 70ರ ದಶಕದಿಂದೀಚಿನ ಕನ್ನಡ ವಿಮರ್ಶೆಯನ್ನು ಗಮನಿಸಿದರೆ ಹಿಂದಿಗಿಂತಲೂ ಸಾಕಷ್ಟು ಬೆಳೆವಣಿಗೆಯನ್ನು ಹೊಂದಿದೆ ಎಂದೇ ಹೇಳಬಹುದು. ಕೃತಿಕೇಂದ್ರಿತ ವಿಮರ್ಶೆ, ಸಮಾಜ ಕೇಂದ್ರಿತ ವಿಮರ್ಶೆ, ಕರ್ತೃ ಕೇಂದ್ರಿತ ವಿಮರ್ಶೆ, ವಾಚಕ ಕೇಂದ್ರಿತ ವಿಮರ್ಶೆ ಇತ್ಯಾದಿ ಪಾಶ್ಚಾತ್ಯ ಮಾರ್ಗಗಳ ಪ್ರಭಾವಗಳಿಗೆ ಆಂತರ್ಯದಲ್ಲಿ ಸಂಘರ್ಷವನ್ನು ಒಡ್ಡುತ್ತಲೇ ಇತ್ತೀಚಿನ ವಿಮರ್ಶೆ ಬೆಳೆಯ ತೊಡಗಿತು. ನವ್ಯ ಮತ್ತು ಬಂಡಾಯದ ವಿಭಿನ್ನ ನೆಲೆಗಳಲ್ಲಿ ಇತಿಮಿತಿಗಳನ್ನು ಅಭಿವ್ಯಕ್ತಿಸುತ್ತಲೇ ಆರೋಗ್ಯಕರ ನಿಲುವುಗಳನ್ನು ವಿಮರ್ಶನ ವಲಯದಲ್ಲಿ ಸಾದರಪಡಿಸುವ ಪ್ರಯತ್ನಗಳೂ ಜರುಗಿದವು. ಶಾಂತಿನಾಥ ದೇಸಾಯಿ, ಕೆ.ವಿ.ನಾರಾಯಣ, ರಾಜೇಂದ್ರ ಚೆನ್ನಿ, ಜಿ.ರಾಜಶೇಖರ, ಜಿ.ಎಚ್.ನಾಯಕ, ಸಿ.ಎನ್.ರಾಮಚಂದ್ರನ್ ಮುಂತಾದವರು ವಿಮರ್ಶೆಯಲ್ಲಿ ಅಗತ್ಯ ನೆಲೆಗಳನ್ನು ಒದಗಿಸಿದರು. ಅನ್ಯ ಶಿಸ್ತುಗಳ ಅಧ್ಯಯನದಿಂದಲೂ ಕನ್ನಡ ವಿಮರ್ಶೆ ಅನುಕೂಲ ಪಡೆಯಿತು. ಕನ್ನಡ ವಿಮರ್ಶೆಯಲ್ಲಿ ಗಮನಾರ್ಹ ಕೆಲಸ ಮಾಡಿದವರು ಡಿ.ಆರ್.ನಾಗರಾಜ್. ಚರಿತ್ರೆ, ಸಮಾಜ, ಕೃತಿ, ಕೃತಿಕಾರ ಮುಂತಾದ ಪರಿಕಲ್ಪನೆಗಳ ಮೂಲಕ ಸೈದ್ಧಾಂತಿಕ ಚರ್ಚೆಗೆ ತೊಡಗಿದ ಇವರು ಸಂಸ್ಕೃತಿ ಮತ್ತು ಸಾಹಿತ್ಯದ ಚಲನಶೀಲತೆಗೆ ಕಾರಣರಾದರು. ಅಮೃತ ಮತ್ತು ಗರುಡ (1983), ಶಕ್ತಿ ಶಾರದೆಯ ಮೇಳ (1987), ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ (1990) ಇವುಗಳಲ್ಲಿ ಇವರ ವಿಮರ್ಶಾ ಪ್ರತಿಭೆ ಮೆರೆದಿದೆ.

ಸಿ.ಎನ್.ರಾಮಚಂದ್ರನ್ ಅವರು ಪಾಶ್ಚಾತ್ಯ ವಿಮರ್ಶೆಯ ಸಂದರ್ಭದಲ್ಲಿ ಸಾಹಿತ್ಯಾಧ್ಯಯನದ ಬೇರೆ ಬೇರೆ ವಿಧಾನ ಪರಿಕಲ್ಪನೆಗಳನ್ನು ಕನ್ನಡ ವಿಮರ್ಶೆಗೆ ಒದಗಿಸಿದರು. 'ಸೀತಾಯಣ' ವಿಮರ್ಶಾ ಕೃತಿಯ ಮೂಲಕ ಪೋಲಂಕಿ ರಾಮಮೂರ್ತಿಯವರು ಚಿಂತನೆಯಲ್ಲಿ ಹೊಸ

ವಿವಾದ, ಎಚ್ಚರಗಳನ್ನು ಹುಟ್ಟು ಹಾಕಿದರು. ಅದರ ಮುಖಾಂತರ ದಲಿತ ಬಂಡಾಯದ ಪರ ನಿಲುವುಗಳನ್ನು ತಾಳಿದರು. ಸಾಹಿತ್ಯ ಸಂಪರ್ಕ (1986) ಮತ್ತು ಸಾಹಿತ್ಯ ಸಂದರ್ಭ (1991) ಗಳಲ್ಲಿ ಟಿ.ಪಿ.ಅಶೋಕ ಅವರು ಸಾಮಾಜಿಕ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಕೃತಿಯ ಸಾಧ್ಯಾಸಾಧ್ಯತೆಗಳನ್ನು ವಿಮರ್ಶಿಸಿದರು. ಹಾಗೆಯೇ ಎಚ್.ಎಸ್.ರಾಘವೇಂದ್ರರಾವ್ ಅವರ ನಿಲುವು (1989), ಹಾಡೆ ಹಾದಿಯ ತೋರಿತು (1998), ಅರವಿಂದ ಮಾಲಗತ್ತಿಯವರ 'ದಲಿತ ಯುಗ ಮತ್ತು ಕನ್ನಡ ಸಾಹಿತ್ಯ' (1999) ರಹಮತ್ ತರೀಕೆರೆ ಅವರ ಪ್ರತಿಸಂಸ್ಕೃತಿ, ಜಿ.ಎಸ್.ಆಮೂರರ ಸಮಕಾಲೀನ ಕತೆ ಕಾದಂಬರಿ- ಹೊಸ ಪ್ರಯೋಗಗಳು (1981), ಅರ್ಥಲೋಕ (1988), ಸಿ.ಪಿ.ಸಿದ್ಧಾಶ್ರಮ ಅವರ ಹೊಸ ಅಲೆ (1978), ನಿಕಷ (1987), ಕೆ.ವಿ.ನಾರಾಯಣರ ಬೇರು, ಕಾಂಡ, ಚಿಗುರು (1996), ಮಲ್ಲೇಪುರಂ ಜಿ.ವೆಂಕಟೇಶ್ ಅವರ ತಿಳಿವ ತೇಜದ ಮುಂದೆ (1996), ಬಿ.ದಾಮೋದರರಾವ್ ಅವರ ಆಯಾಮಗಳು (1992), ಓ.ಎಲ್.ನಾಗಭೂಷಣಸ್ವಾಮಿ ಅವರ ಇಂದಿನ ಹೆಜ್ಜೆ (1998), ಜಿ.ರಾಮಕೃಷ್ಣ ಅವರ ಆಯತನ (1984), ಸಿ.ಎನ್.ರಾಮಚಂದ್ರನ್ ಅವರ ವಸಾಹತೋತ್ತರ ಚಿಂತನೆ (1999), ತೌಲನಿಕ ಸಾಹಿತ್ಯ (1998), ಪುರುಷೋತ್ತಮ ಬಿಳಿಮಲೆಯವರ ಶಿಷ್ಟ ಪರಿಶಿಷ್ಟ, ಗಿರಡ್ಡಿ ಗೋವಿಂದರಾಜರ ವಚನ ವಿನ್ಯಾಸ (1997), ಜಿ.ಎಸ್.ಆಮೂರರ ಭುವನದ ಭಾಗ್ಯ (1991), ಜಿ.ಎಚ್.ನಾಯಕರ ನಿರಪೇಕ್ಷ (1984), ನಿಜದನಿ (1988), ಲಕ್ಷ್ಮೀಪತಿ ಕೋಲಾರ ಅವರ ಕಾಲುದಾರಿ (2001), ಚಂದ್ರಶೇಖರ ನಂಗಲಿ ಅವರ ನಾನಿಮ್ಮೊಳಗು (2001), ನಾ ನಿಲ್ಲುವಳಲ್ಲ, ಜಿ.ಆರ್.ತಿಪ್ಪೇಸ್ವಾಮಿ ಅವರ ಅಭಿಮುಖ (2000), ಕನ್ನಡ ದಲಿತ ಸಾಹಿತ್ಯದ ನೆಲೆ (2001), ಅರ್ಥ ಸುಗಂಧ (2003), ರಂಗಾರೆಡ್ಡಿ ಕೋಡಿರಾಂಪುರ ಅವರ 'ಬಂಡಾಯ ಜಾನಪದ', ಶಿವರಾಮಯ್ಯನವರ ಸಾಹಿತ್ಯ ಪರಿಸರ (1993), 'ಉರಿಯ ಉಯ್ಯಲೆ' (2002), ಆರ್.ಲಕ್ಷ್ಮೀನಾರಾಯಣರ ಆಹ್ಲಾದ (2002) ಮೊದಲಾದ ಕೃತಿಗಳು ಕನ್ನಡ ಸಾಹಿತ್ಯ ವಿಮರ್ಶೆ ತುಂಬ ಶಕ್ತಿಶಾಲಿಯಾಗಿ, ಬಹುಮುಖಿಯಾಗಿ ಮೂಡಿಬಂದಿದೆ ಎಂಬುದನ್ನು ಸಾಬೀತುಪಡಿಸುತ್ತವೆ.

ದಲಿತ ಬಂಡಾಯ ಸಾಹಿತ್ಯ ಚಳವಳಿಯ ಸೃಜನಶೀಲ ಕೃತಿಗಳಲ್ಲಿ ಸಾಮಾಜಿಕ ದೃಷ್ಟಿಕೋನ ಅಭಿವ್ಯಕ್ತವಾದರೆ, ಅದರ ವಿಮರ್ಶೆಯಲ್ಲಿ ಪ್ರತಿಸಂಸ್ಕೃತಿ ದೃಷ್ಟಿಕೋನ ಪ್ರಮುಖವಾಗಿ ಕೆಲಸ ಮಾಡಿತು. ಪ್ರಸ್ತುತ ಸಾಹಿತ್ಯವನ್ನು ಬಹುಶಿಸ್ತೀಯ ಅಧ್ಯಯನಕ್ಕೆ ಒಳಗುಮಾಡುವ ಕೆಲಸವೂ ನಡೆಯಿತು. ಸಾಹಿತ್ಯದ ಪುನರ್ ಮೌಲ್ಯೀಕರಣ ಪ್ರಕ್ರಿಯೆಗಳೂ ಜರುಗಿದಂತೆ ವಿಮರ್ಶೆ ಹೊಸ ಓದಿನತ್ತ ಮುಂದುವರಿದಿದೆ.

ಕರ್ನಾಟಕ ಸಾಹಿತ್ಯ ಅಕಾಡೆಮಿ ಹೊರತಂದ ಪುನರ್ ಮೌಲ್ಯೀಕರಣ ಯೋಜನೆಯ ಹನ್ನೆರಡು ಪುಸ್ತಕಗಳು ನಿರ್ದಿಷ್ಟ ಪರಿಕಲ್ಪನೆಗಳ ನೆಲೆಯಿಂದ ನಡೆಸುವ ಅನ್ವೇಷಣೆಗೆ ಮಾದರಿಗಳಾಗಿವೆ. ಈ ರೀತಿಯ ಪುನರ್ ಮೌಲ್ಯೀಕರಣ ಶೋಧ ನಿರಂತರವಾಗಿ ಸಾಗತೊಡಗಿದೆ.

ತಮ್ಮ ತಮ್ಮ ತಾತ್ವಿಕ ನಿಲುವುಗಳನ್ನು ಬಿಟ್ಟುಕೊಡದೆ ಸಾಹಿತ್ಯ ಪಂಥಗಳ ನಡುವೆ ವಾದ ವಿವಾದಗಳು ಜರುಗುತ್ತಲೇ ಇವೆ. ಆದರೆ ತಮ್ಮ ಪಂಥದ ಹೊರಗಿನ ಸಾಹಿತ್ಯದ ಬಗೆಗೂ ಚಿಂತನ ಮಂಥನ ಮಾಡುವ ಆರೋಗ್ಯಕರ ಬೆಳೆವಣಿಗೆಗಳೂ ಕಾಣಿಸಿಕೊಂಡವು. ನವೋದಯ, ನವ್ಯ ಬರೆಹಗಾರರನೇಕರ ಬಗೆಗೆ ಇತ್ತೀಚೆಗೆ ಅನೇಕ ವಿಮರ್ಶನ ಬರೆಹಗಳು ಪ್ರಕಟವಾಗಿವೆ. ಮಾಸ್ತಿ, ಬೇಂದ್ರೆ, ಕುವೆಂಪು, ನರಸಿಂಹಸ್ವಾಮಿ, ತರಾಸು, ನಿರಂಜನ, ಚದುರಂಗ, ಅಡಿಗ, ಅನಂತಮೂರ್ತಿ, ತೇಜಸ್ವಿ, ಶ್ರೀರಂಗ, ಸಿದ್ಧಲಿಂಗಯ್ಯ, ಕಾರ್ನಾಡ್, ಶಿವಪ್ರಕಾಶ್, ಗದ್ದರ್, ದೇವನೂರು, ಮಹಾದೇವ ಮುಂತಾದವರ ಸಾಹಿತ್ಯದ ಬಗೆಗೆ ವಿಮರ್ಶೆ ಹೆಚ್ಚಾಗಿ ನಡೆದಿದೆ. ಪ್ರಾಚೀನ ವಚನಕಾರರ ಬಗೆಗಿನ ಶೋಧವೂ ಗಮನಾರ್ಹವಾದುದು. ಕೆ.ಜಿ.ನಾಗರಾಜಪ್ಪನವರ 'ಮರುಚಿಂತನ' ದಲ್ಲಿ ತೊಡಗಿ ವೀರಶೈವಧರ್ಮ ಹಾಗೂ ಕನ್ನಡಸಾಹಿತ್ಯದ ಬಗೆಗೆ ಇದ್ದ ಪರಂಪರಾಗತವಾದ ಆಲೋಚನೆಗಳನ್ನು ನಿಕಷಕ್ಕೆ ಒಡ್ಡಿದರು. ಸಾಂಪ್ರದಾಯಿಕ ಆಲೋಚನೆಗಳನ್ನು ಬದಲಾಯಿಸಿದರು. ಬಸವರಾಜ ಕಲ್ಗುಡಿಯವರು ವಚನಕಾರರ ವಿಭಿನ್ನ ಆಶಯಗಳ ಹಿನ್ನೆಲೆಯಲ್ಲಿ ಮಧ್ಯಕಾಲೀನ ಸಾಹಿತ್ಯವನ್ನು ಶೋಧಿಸುವ ಗಮನಾರ್ಹ ಕೆಲಸ ಮಾಡಿದರು. ಅದರ ಫಲವಾಗಿ ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ (1985) ಎಂಬ ಮೌಲಿಕ ಗ್ರಂಥಗಳನ್ನು ಹೊರತಂದರು. ಈ ನಡುವೆ ಅಮೃತ ಮತ್ತು ಗರುಡ (ಡಿ.ಆರ್.ನಾಗರಾಜು), ಕಾಗೋಡು ಸತ್ಯಾಗ್ರಹ, ಬ್ರೆಕ್ಟ್ (ಜಿ.ರಾಜಶೇಖರ), ಮುನ್ನೋಟ (ಜಿ.ರಾಮಕೃಷ್ಣ), ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳೆವಣಿಗೆ, ಹನ್ನೆರಡನೆಯ ಶತಮಾನದ ಕಾಯಕ ಜೀವಿಗಳ ಚಳವಳಿ (ಸಿ.ವೀರಣ್ಣ), ಸಂಸ್ಕೃತಿ, ಉಪಸಂಸ್ಕೃತಿ (ಬರಗೂರು ರಾಮಚಂದ್ರಪ್ಪ), ಮಾರ್ಕ್ಸ್‌ವಾದದ ವಿಮರ್ಶೆ (ಚಂದ್ರಶೇಖರ ನಂಗಲಿ), ಅನ್ವೇಷಣೆ (ಆರ್ಕೆ ಮಣಿಪಾಲ) ಮುಂತಾದ ಮಾರ್ಕ್ಸ್‌ವಾದಿ ಧೋರಣೆಯ ವಿಮರ್ಶಾ ಸಂಕಲನಗಳೂ ಹೊರಬಂದವು.

ಆಧುನಿಕ ಕನ್ನಡಸಾಹಿತ್ಯದ ಎಲ್ಲ ಮಾದರಿಗಳೂ ಸೃಜನಶೀಲತೆಯಲ್ಲಿ ಗೋಚರವಾದಂತೆ ಆಯಾ ಕಾಲಘಟ್ಟದಲ್ಲಿ ಬಳಕೆಗೆ ಬಂದ ವಿಮರ್ಶನ ಪದ್ಧತಿಗಳೂ ಹೆಚ್ಚು ಕಡಿಮೆ ಬಳಕೆಯಲ್ಲಿವೆ. ತಾತ್ವಿಕ ವಿಮರ್ಶೆ, ರಸವಿಮರ್ಶೆ, ಆನ್ವಯಿಕ ವಿಮರ್ಶೆ, ವಿವರಣಾತ್ಮಕ ವಿಮರ್ಶೆ, ವಸ್ತುನಿಷ್ಠ ವಿಮರ್ಶೆ, ಚಾರಿತ್ರಿಕ ವಿಧಾನ ವಿಮರ್ಶೆ, ಸಾಮಾಜಿಕ ವಿಮರ್ಶೆ, ಮಾರ್ಕ್ಸ್‌ವಾದಿ ವಿಮರ್ಶೆ, ಸ್ತ್ರೀವಾದಿ ವಿಮರ್ಶೆ, ಪ್ರಾಯೋಗಿಕ ವಿಮರ್ಶೆ, ಮನಶ್ಶಾಸ್ತ್ರೀಯ ವಿಮರ್ಶೆ ಮುಂತಾದವುಗಳೆಲ್ಲವೂ ಕನ್ನಡ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಹೆಚ್ಚು ಕಡಿಮೆ ಬಳಕೆಯಾಗುತ್ತಲೇ ಇವೆ. ಕಾವ್ಯ ಮೀಮಾಂಸೆಯ ಮೂಲತತ್ತ್ವಗಳ ಬಗ್ಗೆಯೂ ಚರ್ಚೆ ನಡೆಯುತ್ತಿದೆ. ಪತ್ರಿಕಾ ವಿಮರ್ಶೆ, ಪ್ರೌಢ ಪ್ರಬಂಧದ ವಿಮರ್ಶೆಗಳೂ ಇಂದಿನ ಕನ್ನಡ ವಿಮರ್ಶೆಯಲ್ಲಿ ಅಡಕಗೊಳ್ಳುತ್ತಿವೆ.

ಹಿರಿಯ ಬರೆಹಗಾರರಿಗೆ ವಿಶೇಷ ಸಂದರ್ಭಗಳಲ್ಲಿ ಅಭಿನಂದನ ಗ್ರಂಥಗಳನ್ನು, ಸ್ಮರಣ ಗ್ರಂಥಗಳನ್ನು ಸಮರ್ಪಿಸುವ ಪದ್ಧತಿ ರೂಢಿಯಲ್ಲಿದೆ. ಸಂಬಂಧಿಸಿದವರ ಬದುಕು ಬರೆಹಗಳನ್ನು ಕುರಿತ ಬರೆಹಗಳು ಅದರಲ್ಲಿ ಅಡಕವಾಗಿರುತ್ತವೆ. ಬದುಕಿನ ವಿವರಗಳನ್ನು ಕುರಿತ ಬರೆಹಗಳಲ್ಲಿ ಪ್ರಶಂಸೆಯ, ಆರಾಧನೆಯ ಮನೋಧರ್ಮಗಳೇ ಅಧಿಕವಾಗಿರುತ್ತದೆ. ಲೇಖಕನ ಸಾಹಿತ್ಯ ಕೃತಿಗಳನ್ನು ಕುರಿತಂತೆ ಮೂಡಿ ಬಂದ ಬರೆಹಗಳಲ್ಲಿ ವಿಮರ್ಶೆಯ ಲಕ್ಷಣಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಬಿ.ಎಂ.ಶ್ರೀಕಂಠಯ್ಯನವರಿಗೆ ಸಮರ್ಪಿಸಿದ ಸಂಭಾವನೆ (1941) ಈ ಪಂಕ್ತಿಯಲ್ಲಿ ಮೊದಲನೆಯದು. ಎ.ಆರ್.ಕೃಷ್ಣಶಾಸ್ತ್ರೀ, ಪಂಜೆ ಮಂಗೇಶರಾಯ, ಡಿ.ಎಲ್.ನರಸಿಂಹಾಚಾರ್, ತ.ಸು.ಶಾಮರಾಯ, ಸ.ಸ.ಮಾಳವಾಡ, ಮಂಜಯ್ಯ ಹೆಗ್ಗಡೆ, ಕುವೆಂಪು, ಮಾಸ್ತಿ, ಬೇಂದ್ರೆ, ವಿ.ಸೀ., ಕೆ.ಎಸ್.ನರಸಿಂಹಸ್ವಾಮಿ, ಸಿದ್ಧವ್ವನಹಳ್ಳಿ ಕೃಷ್ಣಶರ್ಮ, ವಿ.ಕೃ.ಗೋಕಾಕ್, ಶಿವರಾಮಕಾರಂತ, ಎಸ್.ವಿ.ರಂಗಣ್ಣ, ಬೆಟಗೇರಿ ಕೃಷ್ಣಶರ್ಮ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ದಿನಕರ ದೇಸಾಯಿ, ತಿರುಮಲೆ ರಾಜಮ್ಮ, ಶಂ.ಬಾ.ಜೋಶಿ, ಎಂ.ಚಿದಾನಂದ ಮೂರ್ತಿ, ಹಂಪನಾ, ಜಿ.ಎಸ್.ಶಿವರುದ್ರಪ್ಪ, ದೇ.ಜ.ಗೌ., ಎಚ್.ತಿಪ್ಪೇರುದ್ರಸ್ವಾಮಿ, ಸಿದ್ಧಲಿಂಗಯ್ಯ, ಕೆ.ಆರ್.ಲಿಂಗಪ್ಪ, ಎಂ.ಎಸ್.ಸುಂಕಾಪುರ, ಸೋಮಶೇಖರ ಇಮ್ರಾಪೂರ, ಬಸವರಾಜ ಕಟ್ಟೀಮನಿ, ನಿರಂಜನ, ಹಾ.ಮಾ.ನಾಯಕ, ಎಸ್.ಎಲ್.ಭೈರಪ್ಪ, ಕಮಲಾ ಹಂಪನಾ ಮುಂತಾದವರಿಗೆ ಅಭಿನಂದನ ಗ್ರಂಥಗಳು ಸಮರ್ಪಿತವಾಗಿವೆ. ಪಂಜೆ ಮಂಗೇಶರಾಯ, ಎ.ಕೆ.ರಾಮಾನುಜನ್, ಶಾಂತಿನಾಥ ದೇಸಾಯಿ, ಮೂರ್ತಿರಾವ್ ಮೊದಲಾದವರಿಗೆ ಸ್ಮರಣ ಸಂಪುಟಗಳು ಹೊರಬಂದಿವೆ.

ವಿಮರ್ಶೆಯನ್ನು ಪ್ರಕಟಿಸುವಲ್ಲಿ ಸಂವಾದಗಳನ್ನು ಏರ್ಪಡಿಸುವಲ್ಲಿ ಕನ್ನಡ ಪತ್ರಿಕೆಗಳು ಸಕ್ರಿಯವಾಗಿ ಪಾತ್ರವಹಿಸುತ್ತಿವೆ. ಜೊತೆಗೆ ವಿಮರ್ಶೆಯನ್ನು ಬೆಳೆಸುವ ವಾತಾವರಣವೂ ವಿಸ್ತೃತವಾಗುತ್ತಿದೆ. ವಿವಿಧ ಅಕಾಡೆಮಿಗಳು, ವಿಶ್ವವಿದ್ಯಾಲಯಗಳು, ಕನ್ನಡ ಸಾಹಿತ್ಯ ಪರಿಷತ್ತು, ಮೊದಲಾದ ಸಂಸ್ಥೆಗಳು ಸಂವಾದಗಳಿಗೆ, ಸಂಶೋಧನೆಗೆ ಅವಕಾಶ ಮಾಡಿಕೊಡುತ್ತಿವೆ. ಮಂಡಿಸಲ್ಪಟ್ಟ ಪ್ರಬಂಧಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವ ಜವಾಬ್ದಾರಿಯನ್ನೂ ಹೊತ್ತಿವೆ. ಸಾಹಿತ್ಯ ಅಕಾಡೆಮಿ ಶತಮಾನದ ಸಾಹಿತ್ಯ ವಿಮರ್ಶೆ ಪ್ರಕಟಿಸಿದೆ. ಈ ನಿಟ್ಟಿನಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ ಸುವರ್ಣ ಸಂಚಯ, ಚಿನ್ನದ ಗರಿ, ಕನ್ನಡ ಸಾಹಿತ್ಯ ಚರಿತ್ರೆ ಸಂಪುಟಗಳು, ಬೆಂಗಳೂರು ವಿಶ್ವವಿದ್ಯಾಲಯ

ಪ್ರಕಟಿಸಿರುವ ಶ್ರೀ ಸಾಮಾನ್ಯನಿಗೆ ಕನ್ನಡ ಸಾಹಿತ್ಯ ಚರಿತ್ರೆ, ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ ಮೊದಲಾದ ಕೃತಿಗಳು ಗಮನಾರ್ಹವಾಗಿವೆ. ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು, ಕನ್ನಡ ನಾಟಕ ಪರಂಪರೆ ಮತ್ತು ಪ್ರಯೋಗ, ಕನ್ನಡ ವಿಮರ್ಶೆಯ ನೆಲೆ ಬೆಲೆ, ಕವಿ ಬೇಂದ್ರೆ, ಪ್ರಾಯೋಗಿಕ ವಿಮರ್ಶೆ ಮೊದಲಾದ ಕೃತಿಗಳು ಗಮನಾರ್ಹವಾಗಿವೆ.

ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿರುವ ದಾಸ ಸಾಹಿತ್ಯ, ಕನ್ನಡ ರಂಗಭೂಮಿ ಅಂದು - ಇಂದು, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ ಆಯಾ ವರ್ಷದ ಸಾಹಿತ್ಯ ವಿಮರ್ಶೆ ಸಂಕಲನಗಳು, ಪುನರ್ ಮೌಲ್ಯೀಕರಣ ಯೋಜನೆಯ ಸಂಪುಟಗಳು, ಕನ್ನಡ ಸಾಹಿತ್ಯ ಪರಿಷತ್ತಿನ ಚಿನ್ನದ ಬೆಳಸು, ಜೊತೆಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಪುಸ್ತಕ ಪ್ರಾಧಿಕಾರದ ಪ್ರಕಟಣೆಗಳಲ್ಲಿ ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದ ಅಮೂಲ್ಯ ಗ್ರಂಥಗಳಿವೆ.

ಸಾಮಾಜಿಕ ಬದಲಾವಣೆಯ ಸಂದರ್ಭದಲ್ಲಿ ನಿಜವಾದ ಬರೆಹಗಾರ ಎದುರಿಸುವ ಸಮಸ್ಯೆ ಸವಾಲುಗಳು ಹಲವಾರು. ಅಭಿವ್ಯಕ್ತಿ ವಿಧಾನದಲ್ಲೂ ಬದಲಾವಣೆ ಅನಿವಾರ್ಯ. ಸಾಹಿತ್ಯವನ್ನು ಬೇರೆ ಬೇರೆ ಶಾಸ್ತ್ರ ವಿಜ್ಞಾನ ವಿಚಾರಗಳ ಹಿನ್ನೆಲೆಯಲ್ಲಿ ನೋಡುವ ಪರಿಪಾಠವೂ ಬೆಳೆಯುತ್ತಿದೆ. 19ನೆಯ ಶತಮಾನದ ಕಡೆಯ ವೇಳೆಗೆ ಕನ್ನಡ ಸಾಹಿತ್ಯ ವಿಮರ್ಶೆ ಆರಂಭವಾಗಿ, 20ನೆಯ ಶತಮಾನದಲ್ಲಿ ಅನೇಕ ಪ್ರಭಾವಗಳಿಗೆ ಒಳಗಾಗುತ್ತಲೇ ಬಂದು, ಅದು 21ನೆಯ ಶತಮಾನದಲ್ಲೂ ಮುಂದುವರಿದಿದೆ. ವಿಮರ್ಶೆಯಲ್ಲಿ ಇನ್ನೂ ಹೊಸ ಮಟ್ಟದ ವೈಚಾರಿಕತೆಗೆ ಒತ್ತು ಬೀಳಬೇಕಾಗಿದೆ. (ಜಿ.ಆರ್.ಟಿ.)

**ಕನ್ನಡದಲ್ಲಿ ವಿಶ್ವಕೋಶಗಳು :** ಜ್ಞಾನದ ವಿವಿಧ ಶಾಖೆಗಳ ವ್ಯಾಪಕ ವಿವೇಚನೆಯನ್ನುಳ್ಳ ವಿಶ್ವಕೋಶಗಳ ರಚನೆ ಕರ್ನಾಟಕದಲ್ಲಿ ಹಿಂದಿನಿಂದ ಸಾಗಿ ಬಂದಿದೆ. ಪ್ರಬುದ್ಧ ಸಮಾಜಕ್ಕೆ ಅಗತ್ಯವೆನಿಸಿದ ಹಲವಾರು ಶಾಸ್ತ್ರಗಳ ಸಾರವನ್ನು ಒಂದೇ ಗ್ರಂಥವಾಗಿ ರಚಿಸುವ ಬಗೆಗಿನ ಇಂಥ ಪ್ರಯತ್ನ ಸು.800 ವರ್ಷಗಳಿಂದ ಒಂದಾದ ಮೇಲೊಂದು ನಡೆದಿದೆ. ಈ ವಿಷಯದಲ್ಲಿ ಕಲ್ಯಾಣದ ಚಾಳುಕ್ಯ ಚಕ್ರವರ್ತಿ 3ನೆಯ ಸೋಮೇಶ್ವರನ (1127-39) ಮಾನಸೋಲ್ಲಾಸ ಅಥವಾ ಅಭಿಲಷಿತಾರ್ಥಚಿಂತಾಮಣಿ, ಕೆಳದಿಯ ಒಂದನೆಯ ಬಸವಪ್ಪ ನಾಯಕನ (1697-1714) ಶಿವತತ್ತ್ವರತ್ನಾಕರ- ಇವು ಸಂಸ್ಕೃತದಲ್ಲಿ ರಚಿತವಾದ ವಿಶ್ವಕೋಶದಂಥ ಗ್ರಂಥಗಳು.

ನಿಜಗುಣಶಿವಯೋಗಿಯ ವಿವೇಕ ಚಿಂತಾಮಣಿ (ಸು.1500) ಕನ್ನಡದ ಮೊಟ್ಟಮೊದಲ ಜ್ಞಾನಕೋಶ. ಈ ಗ್ರಂಥವನ್ನು ಸಾತಾರಾ ಜಿಲ್ಲೆಯ ಸಿಂಘಣಾಪುರದ ಕಾಂತೇಶ್ವರ ಎಂಬ ಕವಿ 16ನೆಯ ಶತಮಾನದಲ್ಲಿ ಮರಾಠಿಗೂ ತಮಿಳುನಾಡಿನಲ್ಲಿ 17ನೆಯ ಶತಮಾನದಲ್ಲಿ ಪ್ರಸಿದ್ಧನಾಗಿದ್ದ ಶಿವಪ್ರಕಾಶನೆಂಬ ಕವಿ ತಮಿಳು ಭಾಷೆಗೂ 18ನೆಯ ಶತಮಾನದಲ್ಲಿ ಮೈಸೂರು ಭಾಗದ ಹರಪುರದ ಲಿಂಗರಾಜ ಸಂಸ್ಕೃತ ಭಾಷೆಗೂ ಭಾಷಾಂತರಿಸಿದರೆಂಬುದು ಈ ಗ್ರಂಥದ ಮಹತ್ವಕ್ಕೆ ನಿದರ್ಶನಗಳಾಗಿವೆ. ವೇದಪುರಾಣಶಾಸ್ತ್ರದೊಳ್ ನೇಮಿಸಿ ತೋರ್ಪ ವಿಶ್ವವಿಷಯಂಗಳ ಸಂಸ್ಥಿತಿಯಂ ವಿವೇಕಚಿಂತಾಮಣಿ ಎಂಬ ಪೆಸರಿಟ್ಟು ಪ್ರೇಮದಿ ಪೇಳ್ವೆಂ ಎಂಬುದಾಗಿ ಕವಿ ಗ್ರಂಥವನ್ನು ಪ್ರಾರಂಭಿಸಿದ್ದಾನೆ. ಈ ಗ್ರಂಥವನ್ನು 10 ಪರಿಚ್ಛೇದಗಳಾಗಿ ವಿಭಾಗಿಸಲಾಗಿದೆ. 535 ವಿವಿಧ ವಿಷಯಗಳನ್ನು ಕುರಿತು ಇಲ್ಲಿ ಹೇಳಲಾಗಿದೆ. ವೇದ, ವೇದಾಂಗ, ಉಪನಿಷತ್ತು, ಸ್ಮೃತಿಗಳು, ಕರ್ಮಗಳು, ವರ್ಣಧರ್ಮಗಳು, ಗಣಿತ, ತೂಕ, ಪ್ರಮಾಣ, ಪುರಾಣಗಳು, ಇತಿಹಾಸಗಳು, ಚಾರ್ವಾಕ, ಬೌದ್ಧ, ಕೌಳಯಾಮಲ, ಶಾಕ್ತೇಯ, ಪಾಂಚರಾತ್ರ, ವೈದಿಕ - ಲೌಕಿಕ ಶಾಸ್ತ್ರಗಳು, ಮೀಮಾಂಸೆ, ವೈಶೇಷಿಕ, ಸಾಂಖ್ಯ, ಪಾತಂಜಲ, ಮೋಕ್ಷಪ್ರತಿಪಾದನೆ, ಸೂತ್ರ, ಭಾಷ್ಯ, ವ್ಯಾಖ್ಯಾನ, ಲಕ್ಷಣಗಳು - ಇತ್ಯಾದಿ ವಿಷಯಗಳಿಂದ ಈ ಗ್ರಂಥ ಮುಂದುವರಿದಿದೆ. ಆಗಮಭೇದ, ಆಗಮಸಂಖ್ಯೆ, ಆಗಮಸಾರ, ಶೈವ ಭೇದಗಳು; ವಿಭೂತಿ, ರುದ್ರಾಕ್ಷಿ, ಲಿಂಗ, ಮಂತ್ರ ಸಾಧನೆಗಳು; ಸೃಷ್ಟಿಸ್ವರೂಪ, ಅಷ್ಟದಿಗ್ಗಜಗಳು, ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ, ಭೂಕೈಲಾಸ, ಹೇಮಕೂಟ, ಸಿದ್ಧವಟ, ಭರತವರ್ಷ, ರಾಜಲಕ್ಷಣ, ಛಂದಸ್ಸು, ಅಲಂಕಾರ, ಮಹಾಕಾವ್ಯ, ಗಮಕಿ, ವಾದಿ, ವಾಗ್ಮಿ, ಪುಣ್ಯಕ್ಷೇತ್ರಗಳು, ಅಹೋರಾತ್ರಿಗಳ ಕಲ್ಪನೆಗಳು, ನಕ್ಷತ್ರಮಂಡಲ, ಮರಣಸೂಚನೆ, ಉತ್ತಮಲೋಕ ಪ್ರಾಪ್ತಿ, ಪಾಪಿಷ್ಠರಿಗೆ ದುರ್ಗತಿ, ಚತುರ್ಯುಗಗಳು, ಶಾಸ್ತ್ರ ಪ್ರಯೋಜನ - ಇತ್ಯಾದಿ ವಿಷಯಗಳನ್ನು ಕುರಿತು ಗ್ರಂಥಕಾರ ಹೃದಯಂಗಮವಾಗಿ ವಿವೇಚಿಸಿದ್ದಾನೆ. ನಿಜವಾಗಿಯೂ ಇದು ಕನ್ನಡದ ಒಂದು ಜ್ಞಾನ ಭಂಡಾರವೆಂದು ಹೇಳಬಹುದು. ಮೊಟ್ಟಮೊದಲು ಸಂಗೀತಶಾಸ್ತ್ರವನ್ನು ಕುರಿತು ವಿಸ್ತಾರವಾಗಿ ಹೇಳಿರುವುದು ಈ ಗ್ರಂಥದಲ್ಲಿ ಮಾತ್ರ ಎಂಬುದು ಇಲ್ಲಿ ಸ್ಮರಣಾರ್ಹವಾಗಿದೆ.

ಇದಲ್ಲದೆ 2ನೆಯ ಚಾವುಂಡರಾಯನ ಲೋಕೋಪಕಾರ (ಸು.1150), ಲಕ್ಕಣ್ಣದಂಡೇಶನ ಶಿವತತ್ತ್ವಚಿಂತಾಮಣಿ (ಸು.1424), ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಪುರಾಣ (ಸು.1513), ಮೈಸೂರು ವೀರರಾಜನ ಸಕಲವೈದ್ಯ ಸಂಹಿತಾಸಾರಾರ್ಣವ (ಸು.1720) ಎಂಬ ಗ್ರಂಥಗಳು ವಿಶ್ವಕೋಶವನ್ನು ರಚಿಸುವವರಿಗೆ ಹೆಚ್ಚು ವಿಷಯಗಳನ್ನು ಒದಗಿಸಿಕೊಡುವ ಮಹತ್ವದ ಗ್ರಂಥಗಳಾಗಿವೆ.

ಜ್ಞಾನಭಂಡಾರಗಳೆನಿಸಿದ ಇಂಥ ಗ್ರಂಥಗಳ ರಚನೆ ಈಚಿನ ವಿಶ್ವಕೋಶಗಳಿಗೆ ತಳಹದಿಯಾಯಿತೆನ್ನಬಹುದು. ಶಾಸ್ತ್ರೀಯವಾದ ವಿಶ್ವಕೋಶ ರಚನೆ ಪ್ರಾರಂಭವಾದುದು ಈಚೆಗೆ - ಇಪ್ಪತ್ತನೆಯ ಶತಮಾನದ ಎರಡು ಮೂರು ದಶಕಗಳು ಕಳೆದಮೇಲೆ.

**ಬಾಲ ಪ್ರಪಂಚ :** ಶಿವರಾಮ ಕಾರಂತರಿಂದ ರಚಿತವಾದ ಮೂರು ಸಂಪುಟಗಳ ಮೊದಲ ವಿಶ್ವಕೋಶ (1931). ಸಚಿತ್ರವಾದ ಈ ಗ್ರಂಥ ಮಕ್ಕಳಿಗಾಗಿ ಸೃಷ್ಟಿಯಾದುದು. ಇಲ್ಲಿ ವಿಜ್ಞಾನ ವಿಷಯಗಳು ಬರುತ್ತವೆ. ನಡುನಡುವೆ ಕಥೆ, ಕವನ ಮುಂತಾದ ರಂಜಕ ವಿಷಯಗಳು ಬರುವುದರಿಂದ ಮಕ್ಕಳು ಆಸಕ್ತಿಯಿಂದ ಇವನ್ನು ಓದಲು ಅನುಕೂಲವೇರ್ಪಟ್ಟಿದೆ. ಇದು ಇಂಗ್ಲಿಷಿನಲ್ಲಿ ಆರ್ಥರ್ ಮೀ ಎಂಬಾತ ಮೊದಲು ಮಕ್ಕಳಿಗಾಗಿ ರಚಿಸಿದ ವಿಶ್ವಕೋಶದ ಮಾದರಿಯಲ್ಲಿದೆ.

**ವಿಜ್ಞಾನ ಪ್ರಪಂಚ :** ಶಿವರಾಮ ಕಾರಂತರಿಂದ ನಾಲ್ಕು ಸಂಪುಟಗಳಲ್ಲಿ ರಚಿತವಾದ (1959-1964) ವಿಜ್ಞಾನ ವಿಷಯ ವಿಶ್ವಕೋಶ. ಮೊದಲ ಭಾಗವಾದ 'ಈ ಜಗತ್ತು' ಎಂಬುದರಲ್ಲಿ ಖಗೋಳ, ಭೂಗೋಳ, ಸಾಗರ, ವಾತಾವರಣ ಮುಂತಾದ ವಿಷಯಗಳೂ ಎರಡನೆಯ ಭಾಗವಾದ 'ಜೀವ, ಜೀವನ'ದಲ್ಲಿ ಜೀವವಿಜ್ಞಾನ, ಸಸ್ಯ ವಿಜ್ಞಾನ, ಪ್ರಾಗ್‍ಜೀವ ವಿಜ್ಞಾನ, ಆರೋಗ್ಯ ಶಾಸ್ತ್ರ, ಮನೋವಿಜ್ಞಾನ, ಪ್ರಕೃತಿ ವಿಜ್ಞಾನಗಳೂ ಮೂರನೆಯ ಭಾಗವಾದ 'ವಸ್ತು ಚೈತನ್ಯ'ದಲ್ಲಿ ವಿಜ್ಞಾನದ ಇತಿಹಾಸ, ಪರಮಾಣುಚರಿತ್ರೆ, ರಸಾಯನ ವಿಜ್ಞಾನ, ಭೌತವಿಜ್ಞಾನ, ಸಾಪೇಕ್ಷ ಸಿದ್ಧಾಂತ ಮೊದಲಾದ ವಿಷಯಗಳೂ ನಾಲ್ಕನೆಯ ಭಾಗವಾದ ವಿಜ್ಞಾನ ಸಾಧನದಲ್ಲಿ ಎಲೆಕ್ಟ್ರಾನಿಕ್ಸ್, ಎಂಜಿನಿಯರಿಂಗ್, ಬದುಕಿನ ಸಮಸ್ಯೆಗಳು, ಸಾಹಸಗಳು, ವಿಜ್ಞಾನಿಗಳು- ಮುಂತಾದ ವಿಷಯಗಳೂ ಬಂದಿವೆ. ಪ್ರೌಢಶಾಲೆಯ ಕೊನೆಯ ಹಂತದಲ್ಲಿರುವ ವಿದ್ಯಾರ್ಥಿ ಶ್ರಮವಿಲ್ಲದೆ ನೇರವಾಗಿ ಕನ್ನಡದ ಮೂಲಕ ವಿಜ್ಞಾನ ವಿಷಯಗಳನ್ನು ತಿಳಿಯಲು ಈ ಗ್ರಂಥಗಳು ಉತ್ತಮ ಸಾಧನಗಳಾಗಿವೆ. ಪಾರಿಭಾಷಿಕ ಶಬ್ದಗಳನ್ನು ಆಯುವಲ್ಲಿ, ಶಾಸ್ತ್ರೀಯ ವಿಷಯವನ್ನು ಪ್ರತಿಪಾದಿಸುವಲ್ಲಿ ಉದ್ದಕ್ಕೂ ಲೇಖಕರೂ ತಮ್ಮ ಸಹಜ ಸರಳ ಮನೋಧರ್ಮವನ್ನು ಇಲ್ಲಿ ವ್ಯಕ್ತಪಡಿಸಿದ್ದಾರೆ. ಉದಾಹರಣೆಗಳು ಕೇವಲ ವಿದೇಶೀಯವಾಗಿಲ್ಲ. ಬೇಕಾದಷ್ಟು ದೇಶೀಯ ನಿದರ್ಶನಗಳೂ ಬರುತ್ತವೆ. ಹತ್ತು ಕಡೆಯಿಂದ ಸಂಗ್ರಹಿಸಿದ ವಿಷಯಗಳನ್ನು ವಿಚಾರದ ಒರೆಗಲ್ಲಿನಲ್ಲಿ ಸಾಣೆ ಹಿಡಿದು ನಿರೂಪಿಸಲಾಗಿದೆ. ಈ ಸಂಪುಟಗಳಲ್ಲಿ ವಿಜ್ಞಾನದ ಸಮಗ್ರವಾದ ಆದರೆ ಸಂಕ್ಷೇಪ ನಿರೂಪಣೆಯನ್ನು ಕಾಣಬಹುದಾಗಿದೆ. ವಿಷಯಕ್ಕೆ ಒಪ್ಪುವ ಹಲವಾರು ಚಿತ್ರಗಳಿವೆ. ಇದೆಲ್ಲವೂ ಒಬ್ಬ ವ್ಯಕ್ತಿಯ ಸಾಧನೆ ಎಂಬ ವಿಷಯವನ್ನು ನೆನೆದಾಗ ಹತ್ತು ಮುಖಗಳ ಕಾರಂತರ ಬಗ್ಗೆ ಓದುಗರ ಮನಸ್ಸಿನಲ್ಲಿ ಕೃತಜ್ಞತೆ ಮೂಡುತ್ತದೆ.

**ಅನುವಾದಿತ ವಿಶ್ವಕೋಶ :** ಕನ್ನಡ ವಿಶ್ವಕೋಶ ಚರಿತ್ರೆಯಲ್ಲಿ ಗಮನಾರ್ಹವಾದ ಒಂದು ಗ್ರಂಥ 1927ರಲ್ಲಿ ಪ್ರಕಟವಾಯಿತು. ಬೆಂಗಳೂರಿನ

ಟ್ರ್ಯಾಕ್ ಅಂಡ್ ಬುಕ್ ಸೊಸೈಟಿಯವರು ಪ್ರಕಟಿಸಿರುವ ಈ ಎರಡು ಸಂಪುಟಗಳ ಹೆಸರು 'ಹೊಸ ಒಡಂಬಡಿಕೆಯ ವೇದಕೋಶ' ಎಂದು. ಸಂಪಾದಕರು ಚಿಂತಾಮಣಿ ಕೀಲೆಬ್ ಮತ್ತು ಇ ಸ್ಟಾಂಲೆ ಎಡ್ವರ್ಡ್ಸ್. ಇದರಲ್ಲಿ ಕ್ರೈಸ್ತಧರ್ಮ, ಪುರಾಣ ಮತ್ತು ಆಚರಣೆಗಳಿಗೆ ಸಂಬಂಧಿಸಿದ ವಿಷಯಗಳನ್ನು ಅಕಾರಾದಿಯಾಗಿ ಕೊಡಲಾಗಿದೆ. ತಮಿಳಿನಲ್ಲಿ ಇದು ಮೊದಲು ಅಚ್ಚಾಗಿದ್ದು ಅನಂತರ ಹೆಚ್ಚಿನ ವಿವರಗಳೊಂದಿಗೆ ಕನ್ನಡಕ್ಕೆ ಅನುವಾದಗೊಂಡಿದೆ. ಇವನ್ನು ಬಾಲಪಾಠಗಳು ಎನ್ನಲಾಗಿದೆ. ಅಂದರೆ ಕ್ರೈಸ್ತಧರ್ಮಾದಿಗಳನ್ನು ತಿಳಿಯಬಯಸುವವರಿಗೆ ಇದು ಪ್ರವೇಶವಿದ್ದಂತೆ. ಇಲ್ಲಿಯ ಲೇಖನಗಳು ಅಧಿಕೃತವಾಗಿವೆ. ಭಾಷೆ ಲಲಿತವಾಗಿದೆ. ಪ್ರತಿವಿಷಯಕ್ಕೂ ವಿಪುಲವಾಗಿ ಆಧಾರಗಳನ್ನು ಕೊಡಲಾಗಿದೆ. ಭಾಷಾದೃಷ್ಟಿಯಿಂದಲೂ ಈ ಗ್ರಂಥ ವಿಚಾರಯೋಗ್ಯವಾಗಿದೆ.

**ಕನ್ನಡ ವಿಶ್ವಕೋಶ :** 14 ಸಂಪುಟಗಳ ಸಾಮಾನ್ಯ ವಿಶ್ವಕೋಶ. ಈ ಯೋಜನೆಯಂತೆ ಈಗ ಎಲ್ಲ ಸಂಪುಟಗಳೂ ಪ್ರಕಟವಾಗಿವೆ (2005). 1969ರ ನವೆಂಬರ್ 21ರಂದು ಮೊದಲ ಸಂಪುಟ ಬಿಡುಗಡೆಯಾಯಿತು. 20 ಮಾರ್ಚ್ 2005ರಂದು 14ನೆಯ ಸಂಪುಟ ಬಡುಗಡೆಯಾಯಿತು. ಇದರ ಸಂಕ್ಷಿಪ್ತ ಚರಿತ್ರೆ ಮತ್ತು ವಿವರಗಳು ಹೀಗಿವೆ:

1954ರಷ್ಟು ಹಿಂದೆಯೇ ಕೆ.ವಿ.ಪುಟ್ಟಪ್ಪನವರ ನೇತೃತ್ವದಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಈ ಬಗ್ಗೆ ಯೋಜನೆಯೊಂದನ್ನು ಸಿದ್ಧಪಡಿಸಿ ಮೈಸೂರು ಸರ್ಕಾರಕ್ಕೆ ಒಪ್ಪಿಸಿತು. ಈ ಯೋಜನೆಯ ಪೂರೈಕೆಗೆ ವಿದ್ಯಾಭ್ಯಾಸ ಇಲಾಖೆಯ ಅಂಗವಾಗಿ ಒಂದು ಪ್ರತ್ಯೇಕ ಭಾಗವನ್ನೆ ಸರ್ಕಾರ ತೆರೆಯಿತಾದರೂ ಈ ಕೆಲಸ ನಿಧಾನಗತಿಯಲ್ಲಿ ನಡೆದಿತ್ತು. ಹತ್ತು ವರ್ಷ ಕಳೆದ ಮೇಲೂ ಪ್ರಥಮ ಸಂಪುಟ ಬಿಡುಗಡೆಯಾಗುವ ಚಿಹ್ನೆಗಳೇ ಇರಲಿಲ್ಲ. ಯೋಜನೆಯನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ವರ್ಗಾಯಿಸಲಾದದ್ದು 1968ರಲ್ಲಿ.

ಅದೇ ವರ್ಷ ಮೇ ತಿಂಗಳಿನಲ್ಲಿ ದೇ.ಜವರೇಗೌಡರ ನೇತೃತ್ವದಲ್ಲಿ ಮಾನಸ ಗಂಗೋತ್ರಿಯ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಆಶ್ರಯದಲ್ಲಿ ಕನ್ನಡ ವಿಶ್ವಕೋಶದ ಕಾರ್ಯ ವ್ಯವಸ್ಥಿತವಾಗಿ ಆರಂಭವಾಯಿತು. ಮೊದಲ ಕೆಲವು ತಿಂಗಳುಗಳಲ್ಲಿ ಎದುರಾದ ವಿಘ್ನಗಳು ಅನೇಕ. ಕಾರ್ಯ ಕೈಗೊಳ್ಳಲು ಅಗತ್ಯವಾದ ಸೂಕ್ತ ಸಿಬ್ಬಂದಿಯ ಅಭಾವ, ವಿಷಯಗಳ ಮತ್ತು ಲೇಖಕರ ಆಯ್ಕೆ, ವಿಶ್ವಕೋಶದ ಸ್ವರೂಪ ನಿಷ್ಕರ್ಷೆ, ಚಿತ್ರರಚನೆ, ಲೇಖನಗಳ ಬೆರಳಚ್ಚು, ಮುದ್ರಣಕಾರ್ಯ ಇವು ಪರಿಹಾರವಾಗಬೇಕಾಗಿದ್ದ ಕೆಲವು ಸಮಸ್ಯೆಗಳು. ಒಟ್ಟಿನಲ್ಲಿ ವಿಶ್ವಕೋಶ ತನ್ನದೇ ಆದ ವಿಧಾನವೊಂದನ್ನು ರೂಪಿಸಿಕೊಳ್ಳುವುದು ಅವಶ್ಯವಾಗಿತ್ತು. ಆ ವರ್ಷ ಕಳೆಯುವುದರೊಳಗೆ ಕಾರ್ಯದ ಸಮಗ್ರ ಯೋಜನೆ ಸಿದ್ಧವಾಯಿತು. 1969 ಅಂತ್ಯವಾಗುವ ಮುನ್ನವೇ ವಿಶ್ವಕೋಶದ ಪ್ರಥಮ ಸಂಪುಟವನ್ನು ಜನತೆಯ ಕೈಯಲ್ಲಿಡಬಹುದೆಂಬ ಭರವಸೆ ಮೂಡಿದ್ದು ಆಗ.

ಕನ್ನಡ ವಿಶ್ವಕೋಶದ ಮೊದಲ ಸಂಪುಟದ ಪ್ರಕಟಣೆ ಕನ್ನಡ ಭಾಷೆಯ ಇತಿಹಾಸದಲ್ಲೊಂದು ಮಹೋಜ್ವಲ ಘಟನೆ ಈ ಕೋಶ ಮತ್ತೊಂದು ವಿಚಾರವನ್ನೂ ಸ್ಪಷ್ಟಪಡಿಸಿದೆ. ವೈಜ್ಞಾನಿಕ, ಮಾನವಿಕ, ತಾಂತ್ರಿಕ ಯಾವುದೇ ವಿಷಯವನ್ನಾದರೂ ಕನ್ನಡದಲ್ಲಿ ಸರಳವಾಗಿ, ಸುಲಭವಾಗಿ ಹೃದಯವೇದ್ಯವಾಗುವಂತೆ ಹೇಳಬಹುದೆಂಬುದಕ್ಕೆ ಈ ಸಂಪುಟ ಸಾಕ್ಷೀಭೂತವಾಗಿದೆ. ಕನ್ನಡ ವಿಜ್ಞಾನಭಾಷೆಯಾಗಿ ಬೆಳೆದಿಲ್ಲವೆಂಬ ಸೊಲ್ಲು ಎಷ್ಟು ನಿರರ್ಥಕವಾದುದೆಂಬುದನ್ನು ಈ ಸಂಪುಟ ಪ್ರಮಾಣೀಕರಿಸುತ್ತದೆ ಎಂದು ಆಗ ಪ್ರಧಾನ ಸಂಪಾದಕರಾಗಿದ್ದ ದೇ. ಜವರೇಗೌಡ ಅವರು ಪೀಠಿಕೆಯಲ್ಲಿ ಬರೆದಿದ್ದಾರೆ.

**ಸಂಪುಟಗಳ ಮುಖ್ಯ ಲಕ್ಷಣಗಳಿವು :** ಗ್ರಂಥದ ಆಕಾರ ಡೆಮಿ ಚತುರ್ಥಾಕಾರದ ಸು.1000 ಪುಟ, 10 ಪಾಯಿಂಟ್ ಅಕ್ಷರದಲ್ಲಿ ಆಕರ್ಷಕ ಮುದ್ರಣ. ಕನ್ನಡ ವರ್ಣಮಾಲೆಯ ಅಕಾರದಿಂದಾರಂಭವಾಗಿ ಳಕಾರದ ವರೆಗೆ ವಿವಿಧ ವಿಷಯಗಳ ಮೇಲೆ ಲೇಖನಗಳು. ಅವಶ್ಯವಿದ್ದೆಡೆಯಲ್ಲೆಲ್ಲ ಚಿತ್ರ. ಇವುಗಳಲ್ಲಿ ಹಲವು ಹೊಳಪು ಕಾಗದದ ಮೇಲೆ ಅಚ್ಚಾಗಿರುವುದಲ್ಲದೆ ಕೆಲವು ವರ್ಣರಂಜಿತ. ಇಂಗ್ಲಿಷಿನ ಬ್ರಿಟಾನಿಕ ವಿಶ್ವಕೋಶದ ಮಾದರಿಯಲ್ಲೆ ಇದರ ವಿನ್ಯಾಸ.

ಸಾಮಾನ್ಯ ವಿಶ್ವಕೋಶದಲ್ಲಿ ಈ ಶಾಸ್ತ್ರಗಳೆಲ್ಲ ಅಡಕವಾಗಿವೆ: ಸೌಂದರ್ಯ ತತ್ತ್ವ, ಪಾಶ್ಚಾತ್ಯಸಾಹಿತ್ಯ, ಪೌರಸ್ತ್ಯಸಾಹಿತ್ಯ, ಜನಪದಕಲೆ, ಜೀವನ, ಅರ್ಥಶಾಸ್ತ್ರ, ತತ್ತ್ವ ಮತ್ತು ಧರ್ಮ, ಸಮಾಜ ವಿಜ್ಞಾನ, ಪ್ರಾಕ್ತನಶಾಸ್ತ್ರ, ಇತಿಹಾಸ, ಭೂಗೋಳ, ರಾಜ್ಯಶಾಸ್ತ್ರ, ವಾಣಿಜ್ಯ, ವ್ಯಾಪಾರ, ಶಿಕ್ಷಣ, ಸಮರ ವಿಜ್ಞಾನ, ನ್ಯಾಯಶಾಸ್ತ್ರ, ಮನೋವಿಜ್ಞಾನ, ಲಲಿತಕಲೆ, ಉಪಯುಕ್ತ ಕಲೆ, ಸಂಸ್ಕೃತ ಭಾಷೆ, ಸಾಹಿತ್ಯ, ಕನ್ನಡ ಭಾಷೆ, ಸಾಹಿತ್ಯ, ಭಾಷಾ ವಿಜ್ಞಾನ, ಭೌತವಿಜ್ಞಾನ, ರಸಾಯನ ವಿಜ್ಞಾನ, ಗಣಿತ, ಸಸ್ಯ ವಿಜ್ಞಾನ, ಪ್ರಾಣಿ ವಿಜ್ಞಾನ, ಭೂವಿಜ್ಞಾನ, ವೈದ್ಯ, ಆಯುರ್ವೇದ, ಯುನಾನಿ, ಹೋಮಿಯೋಪತಿ, ಕೃಷಿ, ತೋಟಗಾರಿಕೆ, ಪಶುವೈದ್ಯ, ಶಿಲ್ಪ, ಕ್ರೀಡೆ, ಪತ್ರಿಕೋದ್ಯಮ, ಗ್ರಂಥಾಲಯ ವಿಜ್ಞಾನ, ಮುದ್ರಣ ವಿಜ್ಞಾನ, ಸಂಖ್ಯಾಶಾಸ್ತ್ರ, ಅರಣ್ಯ ವಿಜ್ಞಾನ ಇತ್ಯಾದಿ.

ಕನ್ನಡ ವಿಶ್ವಕೋಶ ಕಚೇರಿಯ ಕಾರ್ಯವಿಧಾನದ ಬಗ್ಗೆ ಕೆಲವು ಮಾತುಗಳನ್ನು ಇಲ್ಲಿಬರೆಯಬಹುದು. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರು ವಿಶ್ವಕೋಶದ ಅಧಿಕಾರ ಪ್ರಯುಕ್ತ (ಎಕ್ಸ್ - ಅಫಿಷಿಯೋ) ಪ್ರಧಾನ ಸಂಪಾದಕರು. ಈ ಕಾರ್ಯ ನಿರ್ವಹಣೆಯಲ್ಲಿ ಇವರಿಗೆ ನೆರವು ನೀಡುವವರು ನಾಲ್ವರು ಸಂಪಾದಕರು. ವಿಜ್ಞಾನಕ್ಕಾಗಿ ಒಬ್ಬರು, ಮಾನವಿಕ ವಿಭಾಗಕ್ಕೊಬ್ಬರು, ಇಡೀ ಸಂಪಾದನ ಕಾರ್ಯದ ಸಂಯೋಜನಕ್ಕಾಗಿ ಒಬ್ಬರು, ಯೋಜನೆಯ ಕಾರ್ಯನಿರ್ವಹಣೆಗಾಗಿ ಒಬ್ಬರು, ಸಹ ಸಂಪಾದಕರು ಒಬ್ಬರು, ಇವರ ಜೊತೆಗೆ ಮೂವರು ಸಹಾಯಕ ಸಂಪಾದಕರು ಮತ್ತು ಐವರು ಉಪಸಂಪಾದಕರು. ಈಗ ಈ ವ್ಯವಸ್ಥೆಯಲ್ಲಿ ಕಾಲಾನುಕ್ರಮದಲ್ಲಿ ಅನೇಕ ಬದಲಾವಣೆಗಳಾಗಿವೆ. ಲೇಖನಗಳನ್ನು ಬರೆಯುವ ಕಾರ್ಯವನ್ನು ವಿವಿಧ ಕ್ಷೇತ್ರಗಳಲ್ಲಿ ಸಮರ್ಥ ವಿದ್ವಾಂಸರಿಗೆ ಒಪ್ಪಿಸಲಾಗುತ್ತದೆ. ಈ ಲೇಖನಗಳನ್ನು ಅವರು ಕನ್ನಡದಲ್ಲೇ ಬರೆಯಬೇಕೆಂಬ ಕಡ್ಡಾಯವೇನೂ ಇಲ್ಲ. ಆಧುನಿಕ ವಿಷಯಗಳನ್ನು ಸರಳ ಶೈಲಿಯಲ್ಲಿ ನಿಷ್ಪಕ್ಷವಾಗಿ ನಿರೂಪಿಸಬೇಕೆಂಬುದು ವಿಶ್ವಕೋಶಗಳ ಮುಖ್ಯ ಉದ್ದೇಶ. ಹೀಗೆ ಸಿದ್ಧವಾದ ಲೇಖನಗಳನ್ನು ಸಂಪಾದಕರು, ಪರಿಶೀಲಿಸುವರಲ್ಲದೆ ಸಂಬಂಧಪಟ್ಟ ಕೆಲವನ್ನು ಗೌರವ ಸಮಾಲೋಚಕರ ಅವಗಾಹನೆಗಾಗಿಯೂ ಕಳುಹಿಸಲಾಗುವುದು. ವಿಷಯದ ಹೂರಣ, ಅಭಿವ್ಯಕ್ತಿ, ಚಿತ್ರಗಳು, ಆವಶ್ಯವಾದ ಹಾಗೂ ಲಭ್ಯವಿರುವ ಹೊಸ ವಿಚಾರಗಳ ಅಡಕ, ಶೈಲಿ ಮತ್ತು ತಾಂತ್ರಿಕ ಶಬ್ದಗಳ ಏಕರೂಪತೆ, ಸೂಕ್ತ ಸ್ವರೂಪ ಇವು ಸಂಪಾದಕರು ಮುಖ್ಯವಾಗಿ ಗಮನಿಸುವ ವಿಚಾರ. ಲೇಖಕರಿಂದ ತರಿಸಿದ ಲೇಖನಗಳೇ ಅಲ್ಲದೆ ಹೊಸ ಲೇಖನಗಳನ್ನೂ ಸಂಪಾದಕ ವರ್ಗದವರು ಬರೆಯುತ್ತಾರೆ. ಸದಾ ಕಣ್ಣಿಟ್ಟು ವಿಷಯ ವೈವಿಧ್ಯವನ್ನೂ ಅದರ ವಿಭಿನ್ನ ಮುಖಗಳನ್ನೂ ಒದಗಿಸುವುದು ಸಂಪಾದಕ ವರ್ಗದ ವಿಶಿಷ್ಟ ಕಾರ್ಯಭಾಗ.

ಹೀಗೆ ಶಾಸ್ತ್ರೀಯವಾಗಿ ವೈಜ್ಞಾನಿಕವಾಗಿ ಸಿದ್ಧವಾದ ವಿಶ್ವಕೋಶದ ಒಂದೊಂದು ಹೊಸ ಸಂಪುಟದ ಬಿಡುಗಡೆಯೊಂದಿಗೆ ಕನ್ನಡ ಭಾಷೆಗೆ ಒಂದೊಂದು ಹೊಸ ಆಯಾಮ ಲಭ್ಯವಾಗಿ ಭಾಷೆಗೆ ದೊರಕಿದ ಈ ಹೊಸ ಸತ್ತ್ವಸಂಪತ್ತಿಯಿಂದ ಕೋಶದ ಮುಂದಿನ ಸಂಪುಟಗಳು ಮತ್ತಷ್ಟು ಶ್ರೀಮಂತಗೊಂಡಿವೆ.

**ಕನ್ನಡ ವಿಷಯ ವಿಶ್ವಕೋಶ :** ಸಾಮಾನ್ಯ ವಿಶ್ವಕೋಶಗಳು ಗಳಿಸಿದ ಯಶಸ್ಸಿನ ದೃಷ್ಟಿಯಿಂದ ವಿಷಯ ವಿಶ್ವಕೋಶಗಳನ್ನು ಹೊರತರಲು ಬೃಹದ್ಯೋಜನೆಯೊಂದನ್ನು ತಯಾರಿಸಲಾಯಿತು. ಪ್ರಾಣಿವಿಜ್ಞಾನ, ಗಣಿತವಿಜ್ಞಾನ, ವೈದ್ಯವಿಜ್ಞಾನ ಮುಂತಾದ 16 ವಿಜ್ಞಾನ ವಿಷಯಗಳು; ಕರ್ನಾಟಕ, ಇತಿಹಾಸ, ತತ್ತ್ವಶಾಸ್ತ್ರ, ಭಾಷಾವಿಜ್ಞಾನ ಮುಂತಾದ 14 ಮಾನವಿಕ ಶಾಸ್ತ್ರ ವಿಷಯಗಳು - ಹೀಗೆ ಒಟ್ಟು 30 ಸ್ವತಂತ್ರ ಸಂಪುಟಗಳನ್ನು ಹೊರತರುವ ಯೋಜನೆ ಇದಾಗಿದೆ. ಇಡೀ ಯೋಜನೆಯ ವೆಚ್ಚ ಸು.90ಲಕ್ಷ ರೂಪಾಯಿಗಳು. ಕರ್ನಾಟಕ ಸರ್ಕಾರ ಈ ಯೋಜನೆಯನ್ನು ಸಂಪೂರ್ಣವಾಗಿ ಒಪ್ಪಿಕೊಂಡು ಈ ಹೊಣೆಯನ್ನೂ ಮೈಸೂರು ವಿಶ್ವವಿದ್ಯಾನಿಲಯಕ್ಕೇ ವಹಿಸಿಕೊಟ್ಟಿತ್ತು.

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಆಶ್ರಯದಲ್ಲಿ ಪ್ರಾರಂಭವಾದ ಈ ಕೆಲಸದಲ್ಲಿ ವಿಷಯ ವಿಶ್ವಕೋಶ ಯೋಜನೆಯ ಮೊದಲ ಸಂಪುಟವಾಗಿ ಕರ್ನಾಟಕ -ವಿಷಯ ವಿಶ್ವಕೋಶ ಪ್ರಕಟಿಸಲಾಯಿತು (1979). ಸುದೀರ್ಘ ಇತಿಹಾಸದ ಶ್ರೀಮಂತ ಸಂಸ್ಕೃತಿಯ ಬಹುಮುಖ

ಪ್ರಗತಿಯ ಕರ್ನಾಟಕವನ್ನು ತಿಳಿಯಲು ಈ ವಿಶ್ವಕೋಶವೊಂದು ಅಧಿಕೃತ ಆಕರವಾಗಿದೆ. ಈ ವಿಶ್ವಕೋಶ ವಿಷಯದ ಆಯ್ಕೆ, ನಿರೂಪಣೆ ಮತ್ತು ತಾಂತ್ರಿಕತೆಯ ದೃಷ್ಟಿಯಿಂದ ಸಾಮಾನ್ಯವಿಶ್ವಕೋಶಕ್ಕಿಂತ ಭಿನ್ನವಾಗಿದೆ. 1790 ಲೇಖನಗಳನ್ನೊಳಗೊಂಡ ಈ ಹೆಬ್ಬೊತ್ತಿಗೆ ಕನ್ನಡ ಪ್ರಕಟಣೆಯಲ್ಲಿ ಒಂದು ಮೈಲಿಗಲ್ಲು. ಕರ್ನಾಟಕ ವಿಷಯ ವಿಶ್ವಕೋಶದ ಪ್ರತಿಗಳೆಲ್ಲ ಮಾರಾಟವಾಗಿ ಅದರ ಪುನರ್‌ಮುದ್ರಣ ಮತ್ತು ಪರಿಷ್ಕರಣೆಗೆ ಬೇಡಿಕೆ ಹೆಚ್ಚಿರುವುದನ್ನು ಮನಗಂಡ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಈ ಸಂಪುಟದ ಪರಿಷ್ಕರಣೆ ಹಾಗೂ ಪುನರ್ ಮುದ್ರಣ ಕಾರ್ಯವನ್ನು ಕೈಗೆತ್ತಿಕೊಂಡಿದೆ. ಬೃಹತ್‌ಗಾತ್ರದ ಈ ಸಂಪುಟವನ್ನು ಎರಡು ಭಾಗಗಳಲ್ಲಿ ಪ್ರಕಟಿಸಲು ನಿರ್ಧರಿಸಲಾಗಿದ್ದು ಪ್ರಸ್ತುತ ಸಂಪುಟ ಕರ್ನಾಟಕ ವಿಷಯ ವಿಶ್ವಕೋಶದ ಮೊದಲ ಭಾಗವಾಗಿದೆ.

ಈಗ ಜಾನಪದ, ಪ್ರಾಣಿವಿಜ್ಞಾನ, ಇತಿಹಾಸ ಮತ್ತು ಪ್ರಾಕ್ತನ, ಸಸ್ಯವಿಜ್ಞಾನ ಎಂಬ ವಿಷಯ ವಿಶ್ವಕೋಶ ಸಂಪುಟಗಳ ಸಿದ್ಧತೆಯ ಕಾರ್ಯ ನಡೆದಿದೆ. ಇದರ ಜೊತೆಗೆ ಕನ್ನಡ ವಿಶ್ವಕೊಶದ 14 ಸಂಪುಗಳನ್ನು ಅಡಕತಟ್ಟೆಯಲ್ಲಿ (ಸಿಡಿ) ತರುವ ಹಾಗೂ ಪರಿಷ್ಕರಿಸಿ ಪುನರ್ ಮುದ್ರಿಸುವ ಕೆಲಸವೂ ನಿರಂತರವಾಗಿ ನಡೆದಿದೆ.

**ಜ್ಞಾನಗಂಗೋತ್ರಿ :** ಏಳು ಸಂಪುಟಗಳ ಕಿರಿಯರ ವಿಶ್ವಕೋಶ. ಕನ್ನಡ ವಿಶ್ವಕೋಶ ರಚನೆಯ ಹೊಣೆಯನ್ನು ಮೈಸೂರು ವಿಶ್ವವಿದ್ಯಾನಿಲಯ ವಹಿಸಿಕೊಂಡ ಸರಿಸುಮಾರಿನಲ್ಲೆ (1968) ಇದರ ಯೋಜನೆಯೂ ಆರಂಭವಾಯಿತು. ಬೆಂಗಳೂರಿನ ಕರ್ನಾಟಕ ಸಹಕಾರಿ ಪ್ರಕಾಶನದವರಿಗೆ ಈ ಯೋಜನೆಯನ್ನು ವಹಿಸಿಕೊಟ್ಟ ಸರ್ಕಾರ ಈ ಕಾರ್ಯಕ್ಕಾಗಿ 34 ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಿತ್ತು. ಜ್ಞಾನಗಂಗೋತ್ರಿಯ ಸಂಪಾದಕ ಮಂಡಳಿಗೆ ದೇಜಗೌ ಅಧ್ಯಕ್ಷರೂ ನಿರಂಜನರು ನಿಯಂತ್ರಕರೂ ಹಾಗೂ ಪ್ರಧಾನ ಸಂಪಾದಕರೂ ಆಗಿದ್ದರು. ಇವರಲ್ಲದೆ ಉಪಸಂಪಾದಕರೂ ವ್ಯವಸ್ಥಾಪಕ ಸಂಪಾದಕರೂ ಆಡಳಿತಾಧಿಕಾರಿಗಳೂ ಇದ್ದರು. ಮನುಕುಲದ ಕಥೆ; ಜೀವಜಗತ್ತು; ಭೌತಜಗತ್ತು; ಯಂತ್ರ ಜಗತ್ತು; ಕಲೆ, ಸಾಹಿತ್ಯ; ಕ್ರೀಡೆ, ಮನೋಲ್ಲಾಸ; ಭಾರತದ ಕಥೆ ಎಂಬ ಏಳು ಸಂಪುಟಗಳು ಪ್ರಕಟಗೊಂಡಿವೆ (1970-1974). ಒಂದೊಂದು ಸಂಪುಟದ ಬೆಲೆ ಐವತ್ತು ರೂಪಾಯಿ. ಏಳೂ ಸಂಪುಟಗಳ ಒಟ್ಟು ಬೆಲೆ 350 ರೂಪಾಯಿ. ಮನುಕುಲದ ಕಥೆಯಲ್ಲಿ ನವಜೀವನದಿಂದ ಚಂದ್ರಯಾನದ ತನಕ, ನಾಗರಿಕತೆಗಳು, ಧರ್ಮಗಳು, ತತ್ತ್ವಜ್ಞಾನಿಗಳು, ರಾಜ್ಯಗಳ ಉದಯ, ರಾಜಕೀಯ ವ್ಯವಸ್ಥೆಗಳು, ವ್ಯಾಪಾರ, ವಾಣಿಜ್ಯ, ಕೈಗಾರಿಕೆ, ಭೂಗೋಳ, ಇತಿಹಾಸ ಪ್ರಸಿದ್ಧ ಸ್ತ್ರೀ ಪುರುಷರು - ಈ ವಿಷಯಗಳಿಗೆ ಸಂಬಂಧಪಟ್ಟಂತೆ ಲೇಖನಗಳಿವೆ. ಜೀವಜಗತ್ತಿನಲ್ಲಿ ಸಸ್ಯವಿಜ್ಞಾನ, ಪ್ರಾಣಿವಿಜ್ಞಾನ, ಶರೀರವಿಜ್ಞಾನ, ಮನೋವಿಜ್ಞಾನ, ವೈದ್ಯಕೀಯ, ಶಸ್ತ್ರಚಿಕಿತ್ಸೆ, ಕೃಷಿ, ಮತ್ಸ್ಯೋದ್ಯಮ, ತೋಟಗಾರಿಕೆ, ವಿಖ್ಯಾತ ಜೀವವಿಜ್ಞಾನಿಗಳು - ಇವುಗಳ ವಿಷಯ ನಿರೂಪಿತವಾಗಿದೆ. ಭೌತಜಗತ್ತಿನಲ್ಲಿ ಭೌತವಿಜ್ಞಾನ, ರಸಾಯನ ವಿಜ್ಞಾನ, ಖಗೋಳ ವಿಜ್ಞಾನ, ಗಣಿತ, ಭೂವಿಜ್ಞಾನ, ಪವನ ವಿಜ್ಞಾನ, ವ್ಯೋಮಯಾನ, ಗ್ರಹಾಂತರ ಯಾನ, ಈ ಕ್ಷೇತ್ರದ ಪ್ರಸಿದ್ಧ ವಿಜ್ಞಾನಿಗಳು ಮೊದಲಾದ ವಿಷಯಗಳಿವೆ. ಯಂತ್ರಜಗತ್ತು ಇದರಲ್ಲಿ ಎಂಜಿನಿಯರಿಂಗ್, ಮಿಲಿಟರಿ, ಸಿವಿಲ್, ಮೆಕ್ಯಾನಿಕಲ್, ಎಲೆಕ್ಟ್ರಿಕಲ್, ತಾಂತ್ರಿಕತೆ, ಘನ, ಲಘು, ಬೃಹತ್ ಪ್ರಮಾಣದ ಕೈಗಾರಿಕೋದ್ಯಮಗಳು, ದೂರ ಸಂಪರ್ಕಸಾಧನ, ಎಲೆಕ್ಟ್ರಾನಿಕ್, ಈ ಕ್ಷೇತ್ರಗಳ ಕೀರ್ತಿಶಾಲಿಗಳು- ಈ ವಿಷಯಗಳಿವೆ. ಕಲೆ ಸಾಹಿತ್ಯದಲ್ಲಿ ನೃತ್ಯ, ಸಂಗೀತ, ನಾಟಕ ಕಲೆ, ಚಿತ್ರಕಲೆ, ಶಿಲ್ಪಕಲೆ, ವಾಸ್ತುಶಿಲ್ಪ, ಸಾಹಿತ್ಯ, ಆರಂಭದ ನಾಗರಿಕತೆಯಿಂದ ಆಧುನಿಕ ಅವಧಿಯತನಕ, ಭಾರತೀಯ ಮತ್ತು ಗ್ರೀಕ್ ಮಹಾಕಾವ್ಯಗಳು, ಕರ್ನಾಟಕದ, ಭಾರತದ, ವಿದೇಶಗಳ ಖ್ಯಾತ ಕಲಾವಿದರು, ಸಾಹಿತಿಗಳು ಈ ವಿವಿಧ ವಿಷಯಗಳು ತುಂಬ ಸೊಗಸಾಗಿ ಪ್ರತಿಪಾದಿತವಾಗಿವೆ. ಕ್ರೀಡೆ, ಮನಲ್ಲಾಸದಲ್ಲಿ ಜಗತ್ತಿನ ಕ್ರೀಡೆಗಳು, ಆಟಗಳು, ಶರೀರ ಶಿಕ್ಷಣ, ಪ್ರಸಿದ್ಧ ಕ್ರೀಡಾಪಟುಗಳು, ಒಲಿಂಪಿಕ್ ವೀರರು, ಹವ್ಯಾಸಗಳು, ಮನೋರಂಜನೆಯ ವಿಷಯಗಳು ಇವೆ. ಭಾರತದ ಕಥೆಯು ಚರಿತ್ರ ಪೂರ್ವ ಕಾಲಾವಧಿಯಿಂದ ಗಾಂಧೀ ಯುಗದ ತನಕ, ಪ್ರವಾಸಿಗರು ಕಂಡ ಭಾರತ, ಪ್ರಾಚೀನ ಭಾರತದಲ್ಲಿ ವಿಜ್ಞಾನ ಸಾಹಿತ್ಯ, ಪುರಾಣ ವ್ಯಕ್ತಿಗಳು, ಧರ್ಮೋಪದೇಶಕರು, ರಾಷ್ಟ್ರನಿರ್ಮಾಪಕರು, ಮಹಾನ್ ಆಡಳಿತಗಾರರು, ದಾಸ್ಯ-ಸ್ವಾತಂತ್ರ್ಯ, ಭಾರತದ ಭೂಗೋಳ, ಕೃಷಿ, ಕೈಗಾರಿಕೋದ್ಯಮ, ಭಾರತ ಮತ್ತು ವ್ಯೋಮಯುಗ, ವಿವಿಧತೆಯಲ್ಲಿ ಏಕತೆ - ಈ ಮೊದಲಾದ ವಿಷಯಗಳಿಂದ ತುಂಬಿದೆ. ಒಟ್ಟು ಏಳು ಸಂಪುಟಗಳಲ್ಲಿ 17 ಲಕ್ಷ ಪದಗಳೂ 3782 ಲೇಖನಗಳೂ 3800 ರೇಖಾಚಿತ್ರಗಳೂ 3750 ಛಾಯಾಚಿತ್ರಗಳೂ 291 ವರ್ಣಚಿತ್ರಗಳೂ ಸಂದರ್ಭಸೂಚಿಯ ಪದಗಳೂ ಇವೆ. ಈ ಸಂಪುಟಗಳನ್ನು ಸಿದ್ಧಪಡಿಸುವಾಗ ಕನ್ನಡ ನಾಡಿನ ಅನೇಕ ಪ್ರಸಿದ್ಧ ಲೇಖಕರಿಂದ ಮೂಲ ಸಾಹಿತ್ಯವನ್ನೂ ಸಿದ್ಧ ಲೇಖನಗಳನ್ನೂ ತರಿಸಿಕೊಳ್ಳಲಾಗಿದೆ. 11 ರಿಂದ 18 ವರ್ಷ ವಯಸ್ಸಿನವರನ್ನು ಉದ್ದೇಶದಲ್ಲಿಟ್ಟುಕೊಂಡು ಸಿದ್ಧಮಾಡಿದ ಈ ಗ್ರಂಥಗಳಲ್ಲಿ ವಿಷಯ ವೈವಿಧ್ಯ, ಅವುಗಳ ಆಯ್ಕೆ, ನಿರೂಪಣೆ, ವಿಶ್ಲೇಷಣೆ, ಸಂಯೋಜನೆ, ವಿವರಣೆ ಉತ್ಕೃಷ್ಟತೆಯಿಂದ ಕೂಡಿದೆ. ಕನ್ನಡ ಜ್ಞಾನ ಸಾಹಿತ್ಯದ ಇತಿಹಾಸದಲ್ಲಿ ಜ್ಞಾನಗಂಗೋತ್ರಿಗೆ ಒಂದು ಗಣನೀಯ ಸ್ಥಾನ ದೊರಕುತ್ತದೆ ಎಂಬುದನ್ನು ಈ ಸಂಪುಟಗಳು ಸಿದ್ಧಪಡಿಸಿ ತೋರುತ್ತವೆ.

**ಕನ್ನಡ ಜಾನಪದ ವಿಶ್ವಕೋಶ :** ಕನ್ನಡ ಸಾಹಿತ್ಯ ಪರಿಷತ್ತು ಹೆಸರಾಂತ ಜಾನಪದ ವಿದ್ವಾಂಸ ಚಂದ್ರಶೇಖರ ಕಂಬಾರ (ನೋಡಿ) ಅವರ ಸಂಪಾದಕತ್ವದಲ್ಲಿ ಕನ್ನಡ ಜಾನಪದ ವಿಶ್ವಕೋಶವನ್ನು ಎರಡು ಸಂಪುಟಗಳಲ್ಲಿ ಪ್ರಕಟಿಸಿದೆ (1985). ಕನ್ನಡ ನಾಡಿನ ನಂಬಿಕೆ, ಹಾಡು, ಸಂಪ್ರದಾಯ, ಕಥೆ, ಪುರಾಣ, ಗಾದೆ, ಬಯಲಾಟಗಳಂತಹ ಜಾನಪದ ಪ್ರಕಾರಗಳನ್ನು ಕುರಿತಂತೆ ಈ ಸಂಪುಟದಲ್ಲಿ ವಿಶ್ಲೇಷಿಸಲಾಗಿದೆ. ಜನಪದ ಆಚರಣೆಗಳು, ಆಟಗಳು, ಒಡಪುಗಳು, ಒಗಟುಗಳು, ಐತಿಹ್ಯಗಳು, ಶಕುನಗಳು, ಪ್ರಾಣಿಪಕ್ಷಿಗಳು, ಖನಿಜಗಳು, ಮಳೆ-ಗಾಳಿ, ನಕ್ಷತ್ರಗಳು, ಲಾವಣಿಗಳು, ಹಬ್ಬ-ಜಾತ್ರೆಗಳು, ಆಹಾರ ಸಂಪ್ರದಾಯಗಳು ವಿವಿಧ ಜನಾಂಗಗಳು, ಶವಸಂಸ್ಕಾರ ಪದ್ಧತಿಗಳು - ಮುಂತಾದ ಹತ್ತಾರು ವಿಷಯಗಳನ್ನು ಕುರಿತಂತೆ ಇದರಲ್ಲಿ ಲೇಖನಗಳಿವೆ. ಜಾನಪದ ವಿದ್ಯಾರ್ಥಿಗಳನ್ನಷ್ಟೇ ಅಲ್ಲದೆ ಈ ಕ್ಷೇತ್ರದಲ್ಲಿ ಆಸಕ್ತಿ ಇರುವ ಸಾಮಾನ್ಯರನ್ನೂ ಗಮನದಲ್ಲಿಟ್ಟುಕೊಂಡು ಜಾನಪದಕ್ಕೆ ಸಂಬಂಧಪಟ್ಟ ಲೇಖನ, ಕಲ್ಪನೆಗಳನ್ನು, ಸಿದ್ಧಾಂತಗಳನ್ನು, ವಿದೇಶಗಳ ಜಾನಪದ ಸ್ವರೂಪವನ್ನು ಅವುಗಳ ಅಧ್ಯಯನ ಸಾಧನೆಗಳನ್ನು ಇಲ್ಲಿ ವಿಶದವಾಗಿ ನಿರೂಪಿಸಲಾಗಿದೆ.

**ಹಂಪಿ ಕನ್ನಡ ವಿಶ್ವವಿದ್ಯಾಲಯದ ವಿಶ್ವಕೋಶಗಳು :** ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿವಿಧ ವಿಶ್ವಕೋಶಗಳು ಎಂಬ ಹನ್ನೆರಡು ಸಂಪುಟಗಳ ಯೋಜನೆಯೊಂದನ್ನು ಕೈಗೆತ್ತಿಕೊಂಡಿದೆ. ಈಗಾಗಲೆ 8 ವಿಷಯಗಳಿಗೆ ಸಂಬಂಧಿಸಿದಂತೆ ಕೃತಿಗಳನ್ನು ಪ್ರಕಟಿಸಿದೆ: ವೈದ್ಯ, ಜನಪದ ಕಲೆ, ಸಮಾಜಕಾರ್ಯ, ಭಾಷೆ, ಧರ್ಮ, ಕರಕುಶಲ ಕಲೆ. ಈ ವಿಶ್ವಕೋಶಗಳು ವಿಷಯ ವೈವಿಧ್ಯತೆಯಿಂದ ಕೂಡಿದ್ದು ನಾಡಿನ ಹೆಸರಾಂತ ವಿದ್ವಾಂಸರು ಲೇಖನಗಳನ್ನು ಬರೆದಿದ್ದಾರೆ.

**ಕಿರಿಯರ ಕರ್ನಾಟಕ ವಿಶ್ವಕೋಶ :** ಕನ್ನಡ ನಾಡು, ನುಡಿ ಮತ್ತು ಸಂಸ್ಕೃತಿಯ ಸಂಪೂರ್ಣ ಚಿತ್ರಣವನ್ನು ಕನ್ನಡ ನಾಡಿನ ಕಿರಿಯರಿಗೆ ನೀಡುವ ಉದ್ದೇಶದಿಂದ ಹಂಪಿ ಕನ್ನಡ ವಿಶ್ವವಿದ್ಯಾಲಯ ಕಿರಿಯರ ಕರ್ನಾಟಕ ವಿಶ್ವಕೋಶವನ್ನು ಪ್ರಕಟಿಸಿದೆ. 12 ರಿಂದ 17 ವರ್ಷದ ವಯೋಮಾನದವರನ್ನು ದೃಷ್ಟಿಯಲ್ಲಿರಿಸಿಕೊಂಡು ಈ ಸಚಿತ್ರ ಸಂಪುಟವನ್ನು ಸಿದ್ಧಪಡಿಸಲಾಗಿದೆ. ಇದರಲ್ಲಿ ಕರ್ನಾಟಕದ ಇತಿಹಾಸ, ಭಾಷೆ, ಸಾಹಿತ್ಯ, ಪತ್ರಿಕೋದ್ಯಮ, ಕೃಷಿ, ಕೈಗಾರಿಕೆ, ಉದ್ಯೋಗ, ಜಾನಪದ, ಶಿಕ್ಷಣ ಮೊದಲಾದ ವಿಷಯಗಳನ್ನು ಕುರಿತು ಸರಳ ನಿರೂಪಣೆ ಇದೆ. *

## ಕನ್ನಡದಲ್ಲಿ ವೈದ್ಯಕೀಯ ಸಾಹಿತ್ಯ :

ಕನ್ನಡ ವೈದ್ಯ ಸಾಹಿತ್ಯ ಪರಂಪರೆ ಅತ್ಯಂತ ಪ್ರಾಚೀನವಾದುದು. ಕನ್ನಡ ಜನಪದ ಸಾಹಿತ್ಯದಲ್ಲಿ ಇದರ ಉಗಮವನ್ನು ನಾವು ಕಾಣಬಹುದಾಗಿದೆ. ಎಲ್ಲ ವೈದ್ಯ ಪದ್ಧತಿಗೂ ಜನಪದ ವೈದ್ಯವೇ ಮೂಲವೆಂದು ಹೇಳಬಹುದು. ಕನ್ನಡ ಜನಪದ ಸಾಹಿತ್ಯದಲ್ಲಿ ವೈದ್ಯಕೀಯ ವಿಚಾರಗಳು ಸಾಕಷ್ಟು ಪ್ರಕಟವಾಗಿವೆ. ಮಗುವಿಗೆ ಎದೆಹಾಲು ಕೊಡುವುದರ ಶ್ರೇಷ್ಠತೆಯನ್ನು, ಅದರ ಮಹತ್ತ್ವವನ್ನು ಒಂದು ತ್ರಿಪದಿಯಲ್ಲಿ ಹಿಡಿದಿಟ್ಟ ರೀತಿಯಿದು:

ಹಣ್ಣುಹಾಲಿಗಿಂತ ಬೆಣ್ಣೆತುಪ್ಪಕ್ಕಿಂತ
ಚೆನ್ನಾಗಿ ಕಳಿತ ರಸಬಾಳೆ ಹಣ್ಣಿಂತ
ಶ್ರೇಷ್ಠ ತಾಯಿಯ ಎದೆಹಾಲು

ವ್ಯಭಿಚಾರದಿಂದ ಅನೇಕ ಗುಹ್ಯ ರೋಗಗಳು ಬರುತ್ತವೆ. ಸಂಸಾರ ಹಾಳಾಗುತ್ತದೆ ಎನ್ನುವ ವಿಚಾರವನ್ನು ಜನಪದರು ಬಹಳ ಮಾರ್ಮಿಕವಾಗಿ ವ್ಯಕ್ತಪಡಿಸಿದ್ದಾರೆ. ಅಂಗೀಮೇಲಂಗಿ ಚಂದೇನೋ ನನರಾಯ ಎಂಬ ಮಾತಾಗಲೀ ಸೂಳಿಗೋದವನ ಸುಡು ಅವನ ಜನುಮವ ನಾಳೆ ನೋಡವನ ಬರ್ವಣೀಯ ಎಂಬ ಮಾತಾಗಲೀ

ಸೂಳೇಗೆ ಹೋದಾತ ಏನಾದ ಎಂತಾದ
ಕಾಡುನಾಯಾದ ಕಪಿಯಾದ
ಎಲೆಮುರವ ಸೂಳೆಯ ಕಾಲಿಗೆ ಕೆರವಾದ

ಎಂಬ ತ್ರಿಪದಿಯಾಗಲಿ ವೇಶ್ಯಾಗಮನದ ಪರಾಕಾಷ್ಠತೆಯನ್ನು ಚಿತ್ರಿಸುತ್ತವೆ.

ನಮ್ಮ ಶರೀರದ ರಚನೆ, ಅದರ ವಿವಿಧ ಅಂಗಗಳು ಕೆಲಸ ಮಾಡುವ ರೀತಿ, ಅವು ರೋಗಗ್ರಸ್ತವಾಗಲು ಕಾರಣಗಳು, ಅವುಗಳ ನಿವಾರಣೆಯಲ್ಲಿ ವೈದ್ಯರ, ರೋಗಿಯ ಹಾಗೂ ಮನೆಯವರ ಪಾತ್ರ, ಯಾವ ಬಗೆಯ ಜೀವನಶೈಲಿಯನ್ನು ಅಳವಡಿಸಿಕೊಂಡರೆ, ಪರಿಸರ ಹೇಗಿದ್ದರೆ ಯಾವ ಚಟುವಟಿಕೆಗಳನ್ನು ಹಮ್ಮಿಕೊಂಡರೆ ವ್ಯಕ್ತಿಗಳ ಆರೋಗ್ಯ ವೃದ್ಧಿಸುತ್ತದೆ ಎಂಬುದರ ಬಗ್ಗೆಯೂ ತಿಳುವಳಿಕೆ ಇರಬೇಕು. ಈ ಎಲ್ಲ ಮಾಹಿತಿ ಜನರಿಗೆ ಅರ್ಥವಾಗುವ ಭಾಷೆಯಲ್ಲಿರಬೇಕು. ಇದೇ ವೈದ್ಯ ಸಾಹಿತ್ಯ. ಭಾರತೀಯ ವೈದ್ಯ ಶಾಸ್ತ್ರಜ್ಞರಾದ ಧನ್ವಂತರಿ, ಚರಕ, ಶುಶ್ರುತ ಮೊದಲಾದವರ ಗ್ರಂಥ'ಗಳು ಬಹು ಹಿಂದೆಯೇ ಕನ್ನಡಕ್ಕೆ ಭಾಷಾಂತರಗೊಂಡಿವೆ. ಈ ಬಗೆಯ ಸುಮಾರು ಮೂವತ್ತು ಗ್ರಂಥಗಳು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ದೊರೆತಿವೆ. 10ನೆಯ ಶತಮಾನದಲ್ಲಿದ್ದ ಪಂಪ ತನ್ನ ಆದಿಪುರಾಣದಲ್ಲಿ ವೈದ್ಯ ಸಾಹಿತ್ಯದ ತುಣುಕುಗಳನ್ನು ನಮಗೆ ಕಾಣಿಸಿದ್ದಾನೆ. ಗರ್ಭಧಾರಣೆಯ ಅದ್ಭುತ ಘಳಿಗೆಯನ್ನು ಗರ್ಭಾವಾಸದೊಳ್ ಶುಕ್ತಿ ಪ್ರಮೋದರ ವರ್ತಿಯಪ್ಪ ನಿರ್ಮಲೋದಕ ಬಿಂದುವಿನಂತೆ ಸಂಕ್ರಮಿಸೆ ಗರ್ಭಮಂ ತಾಳ್ದು ಎಂದು ಸುಂದರವಾಗಿ ವಿವರಿಸುತ್ತಾನೆ. ಗರ್ಭಸ್ಥ ಮಗುವಿನ ಬೆಳವಣಿಗೆಯನ್ನು ವರ್ಣಿಸಿದ ಮೇಲೆ ಗರ್ಭಿಣಿಯರ ಬಯಕೆಯನ್ನು ವರ್ಣಿಸುತ್ತಾನೆ. ಅವಳ ನಾನಾ ಬಯಕೆಗಳಲ್ಲಿ ಷಟ್ಖಂಡ ಕ್ಷೇತ್ರ ಮೃತ್ತಿಕೆಯನೆ ಸವಿನೋಡಲುಂ, ಎಂಬ ಮಾತಿನಲ್ಲಿ ಗರ್ಭಿಣಿ ಮಣ್ಣು ತಿನ್ನುವುದೂ ಸೇರಿದೆ. ಮುಪ್ಪು ಹೆದರುವ ಕಾಲವಲ್ಲ. ನಮ್ಮ ಜೀವನವನ್ನು ಸರಿಯುತ್ತಿರುವ ಕಾಲಕ್ಕೆ ಹೊಂದಿಸಿಕೊಳ್ಳುವ ಸಮಯ. ಅರಸನು ತನ್ನ ಕೂದಲಲ್ಲಿ ನೆರೆ ಕಂಡೊಡನೆಯೇ 'ಪೋದುದು ಜವ್ವನಂ, ಕ್ರಮದಿನಾದುದು ಮುಪ್ಪು' ಎಂದು ತಿಳಿದು ತನ್ನ ಜೀವನವನ್ನು ಅದಕ್ಕೆ ತಕ್ಕಂತೆ ಮಾರ್ಪಡಿಸಿಕೊಳ್ಳುತ್ತಾನೆ.

ಪಂಪ ಔಷಧಿಗುಣವುಳ್ಳ ಮೂಲಿಕೆಗಳ ಉದ್ದ ಪಟ್ಟಿಯನ್ನೇ ಕೊಟ್ಟು, ಅವು ವಿರಳವಾದಾಗ ಮಾನವರು ಆಧಿವ್ಯಾಧಿ ಬಾಧಿಪ ಶರೀರರಾದರು ಎನ್ನುತ್ತಾನೆ. ಪ್ರೀತಿಯಿಲ್ಲದೆ ಗಂಡಹೆಂಡಿರು ಕೂಡ ಬಾರದು ಎನ್ನುತ್ತ 'ರಾಗಮಿಲ್ಲದ ಸುಸಿಲ'ವನ್ನು ಖಂಡಿಸುತ್ತಾನೆ. ನಮ್ಮ ಸಮಗ್ರ ಆರೋಗ್ಯಕ್ಕೆ 'ಆಹಾರ ಅಭಯ, ಭೈಷಜ್ಯ, ಶಾಸ್ತ್ರ'ಗಳು ಅಡಿಪಾಯವೆನ್ನುತ್ತಾನೆ.

ಸು.1100ರಲ್ಲಿ ರಚಿತವಾದ ಕೀರ್ತಿವರ್ಮನ (ನೋಡಿ) 'ಗೋವೈದ್ಯ' ಕನ್ನಡದಲ್ಲಿ ರಚಿತವಾದ ಮೊತ್ತಮೊದಲ ವೈದ್ಯಗ್ರಂಥ. ಸು.1500ರಲ್ಲಿ ಬರೆಯಲಾದ ಶ್ರೀಧರದೇವನ 'ವೈದ್ಯಾಮೃತ', ಸು.1750ರಲ್ಲಿ ಹೊರಬಂದ ತಿಮ್ಮರಾಜನ 'ಸ್ತ್ರೀವೈದ್ಯ, ಬಾಲವೈದ್ಯ, ವ್ರಣವೈದ್ಯ', ವೈದ್ಯ ಸಾಹಿತ್ಯದ ಬೆಳವಣಿಗೆಯ ದಿಟ್ಟ ಹೆಜ್ಜೆಗಳು. ಸು.1360ರಷ್ಟು ಹಿಂದೆಯೇ ವೈದ್ಯ ಸಾಹಿತ್ಯದ ಅಗತ್ಯವನ್ನು ಒಂದನೆಯ ಮಂಗರಾಜ ಹೀಗೆ ಹೇಳಿದ್ದಾನೆ: "ಮರ, ಗಾಳಿ, ಸೂಳೆ, ಬೇಟೆ ಮುಂತಾದವುಗಳನ್ನು ಹೊಗಳಿ ಕಾವ್ಯ ಬರೆಯುವುದಕ್ಕಿಂತ, ಸರ್ವಜನೋಪಕಾರಿಯಾದ ವೈದ್ಯಶಾಸ್ತ್ರವನ್ನು ಹೇಳುವುದರಿಂದ ಜನರಿಗೆ ಹೆಚ್ಚು ಉಪಕಾರವಾಗುತ್ತದೆ". ರೋಗಿಗಳಿಗೆ ಚಿಕಿತ್ಸೆ ಮಾಡಿದಾಗ ಅವರಿಗಷ್ಟೇ ಉಪಕಾರ. ರೋಗಗಳ ಬಗ್ಗೆ, ಚಿಕಿತ್ಸೆಯ ಬಗ್ಗೆ ಬರೆದರೆ ಬಹಳಷ್ಟು ಜನರಿಗೆ ಉಪಕಾರವಾಗುತ್ತದೆ. ವಚನ ಸಾಹಿತ್ಯ, ದಾಸ ಸಾಹಿತ್ಯ ಮತ್ತು ಸರ್ವಜ್ಞನ ತ್ರಿಪದಿಗಳಲ್ಲಿ ಶರೀರ, ಮನಸ್ಸು, ಆಹಾರ ಸೇವನೆ, ಆರೋಗ್ಯಕರ ಜೀವನ ಶೈಲಿಯ ಬಗ್ಗೆ ಇಂದಿಗೂ ಪ್ರಸ್ತುತವಾದ ಮಾಹಿತಿಯನ್ನು ಕಾಣುತ್ತೇವೆ. ಆರೋಗ್ಯವಂತನ ಲಕ್ಷಣಗಳನ್ನು ವಿವರಿಸಿರುವ ಒಂದು ವಚನ ಹೀಗಿದೆ:

ಅಂತರಂಗದಲ್ಲಿ ಶಿವಾಚಾರಿ, ಬಹಿರಂಗದಲ್ಲಿ ಸದಾಚಾರಿಯಾಗಿರಬೇಕು;
ಸಕಲ ಜೀವಾತ್ಮರಿಗೆ ಲೇಸ ಬಯಸುತ್ತಾ ವಿಶ್ವಕಲ್ಯಾಣಕ್ಕೆ ಶ್ರಮಿಸಬೇಕು;
ಕ್ರೋಧ, ಕ್ಷುದ್ರ, ಕುಟಿಲ, ಕುಹಕ, ಹುಸಿ ವಿಷಯ ದೂರವಿರಬೇಕು;
ದುಡಿಮೆಯಲಿ ಬಂದ ಕೆಲ ಅಂಶವನ್ನು ಸತ್ಪಾತ್ರಕ್ಕೆ ಸಮರ್ಪಿಸಬೇಕು;
ಗುರು ಲಿಂಗ ಜಂಗಮ ಸಮಾಜ ಶರಣರು ಅಧಿಕವೆಂದು ಅರಿತು
ಶಿಷ್ಟಾಚಾರರಿಂದ ವರ್ತಿಸಬೇಕು, ಸೇವೆಯಲ್ಲಿ ತೊಡಗಬೇಕು ಮಾತಿನಲಿ
ಮೃದು, ಮನಸ್ಸಿನಲ್ಲಿ ಸದಾ ವಿನಯ ತುಂಬಿರಬೇಕು.

ಹಿರಿದಾದ ನಾಡಿನಲ್ಲಿ ಹಿಂಡನಗಲಿದ ಗಜದಂತೆ ತಿರುಗಿದ ಜನತಾ ಕವಿ ಸರ್ವಜ್ಞ ವೈದ್ಯಕೀಯ ವಿಚಾರಗಳನ್ನು ತ್ರಿಪದಿಗಳ ಮೂಲಕ ಹಸಿಗೋಡೆಯಲ್ಲಿ ಹರಳಿಟ್ಟಂತೆ ಸ್ಪಷ್ಟವಾಗಿ ಹೇಳಿದ್ದಾನೆ. ಆಹಾರದ ಬಗ್ಗೆ ಮೊಸರಿಲ್ಲದ ಊಟ ....... ಬೇಸಿಗೆಯ ಬಿಸಿಲು ಕಾದಂತೆ ಎಂದು ಹೇಳಿರುವುದು ಸಾರ್ವಕಾಲಿಕ ಸತ್ಯ. ಹಸಿವಾದಾಗ ನಮ್ಮ ಪರಿಸ್ಥಿತಿ ಹೇಗಿರುತ್ತದೆ ಎಂಬುದನ್ನು ಕಣ್ಣಿಗೆ ಕಟ್ಟುವಂತೆ ಹೇಳಿರುವ ರೀತಿಯಿದು.

ನೇತ್ರಗಳು ಕಾಣಿಸವು, ಶ್ರೋತೃಗಳು ಕೇಳಿಸವು
ಗಾತ್ರಗಳು ಎದ್ದು ಕುಣಿಯುವವು ಕೂಳು
ಒಪ್ಪತ್ತು ತಪ್ಪಿದರೆ ಸರ್ವಜ್ಞ

ನಾವು ಯಾವಾಗ ಉಣ್ಣಬೇಕು ಎಂಬುದನ್ನು ಬಹು ಮಾರ್ಮಿಕವಾಗಿ ಹೀಗೆ ಮನಮುಟ್ಟುವಂತೆ ಹೇಳಿದ್ದಾನೆ.

ಹಸಿವಿಲ್ಲದುಣಬೇಡ, ಹಸಿದು ಮತ್ತಿರಬೇಡ
ಬಿಸಿಗೂಡಿ ತಂಗಳುಣಬೇಡ ವೈದ್ಯನ
ಬೆಸಸಲೇಬೇಡ ಸರ್ವಜ್ಞ

ಅಲೋಪತಿ ವೈದ್ಯದ ಬಗ್ಗೆ ಮೈಸೂರು ಸಂಸ್ಥಾನದ ಸೇವೆಯಲ್ಲಿದ್ದ ಎಂ.ಗುರುರಾವ್ ಅವರು 1904ರಲ್ಲಿ ಆಂಗ್ಲೇಯ ವೈದ್ಯ ಶಾಸ್ತ್ರವನ್ನು ರಚಿಸಿದರು. ಅದೇ ವೇಳೆಯಲ್ಲಿ ಪ್ಲೇಗಿನ ಚರಿತ್ರೆ, ಸಚಿತ್ರ ಸಂಕ್ಷೇಪ ಕರ್ನಾಟಕ ಮನುಷ್ಯ ಶಾಸ್ತ್ರ, ಇಂದ್ರಿಯ ವಿಜ್ಞಾನ ಹಾಗೂ ಆರೋಗ್ಯ ಶಾಸ್ತ್ರ ಪ್ರಕಟವಾದವು. 1928ರಲ್ಲಿ ದಾಂಪತ್ಯ ವಿಜ್ಞಾನ, ಸಂತಾನ ವಿಜ್ಞಾನ ಮತ್ತು ಜನನ ನಿಯಂತ್ರಣ, ಆಹಾರ ವಿಜ್ಞಾನ ಎಂಬ ಪುಸ್ತಕಗಳನ್ನು ಬರೆದು ಜನಪ್ರಿಯರಾದ ಡಿ.ಕೆ.ಭಾರದ್ವಾಜರು ಈ ದಿಶೆಯಲ್ಲಿ ಯುಗಪ್ರವರ್ತಕರೆನ್ನಬಹುದು. ಇದೇ ಸಮಯದಲ್ಲಿ ಪ್ರಖ್ಯಾತ ಆಯುರ್ವೇದ ವೈದ್ಯರಾಗಿದ್ದ ಪಂಡಿತ ತಾರಾನಾಥರು ಪ್ರೇಮ ಎಂಬ ಮಾಸಪತ್ರಿಕೆಯಲ್ಲಿ ಲೇಖನಗಳನ್ನು ಬರೆಯುತ್ತಿದ್ದರು. ಅವರು ಬರೆದ ತಾಯಂದಿರಿಗಾಗಿ ಎಂಬ ಗ್ರಂಥ' ಉಲ್ಲೇಖನೀಯ. 1936ರಿಂದ1942ರ ಅವಧಿಯಲ್ಲಿ ಧಾರವಾಡದಲ್ಲಿದ್ದ ಎಂ.ಗೋಪಾಲಕೃಷ್ಣರಾಯರು ಪ್ರೇಮಕಲಾ, ಪೌರುಷ, ಗರ್ಭನಿರೋಧ, ಕಾಮದ ಗುಟ್ಟು, ಆಯುರ್ವೇದ, ಪ್ರಕೃತಿ ಚಿಕಿತ್ಸೆ ಎಂಬ ಹಲವಾರು ಪುಸ್ತಕಗಳನ್ನು ಪ್ರಕಟಿಸಿದರು. ಇದೇ ಅವಧಿಯಲ್ಲಿ ಉಡುಪಿಯ ಕಲಿಯುಗ ಎಂಬ ಮಾಸಪತ್ರಿಕೆ ಅನೇಕ ಆರೋಗ್ಯ ಲೇಖನಗಳನ್ನು ಪ್ರಕಟಿಸಿತು. ಆಧುನಿಕ ಕನ್ನಡ ವೈದ್ಯ ಸಾಹಿತ್ಯದ ಹಿರಿಯ ತಲೆಮಾರಿನ ಲೇಖಕರಾದ ದೊಡ್ಡೇರಿ ವೆಂಕಟಗಿರಿರಾವ್ ಅವರು 1943ರಲ್ಲಿ ಬರೆದ ವಿಕೃತಕಾಮ ಇದುವರೆಗೆ ಏಳು ಮುದ್ರಣಗಳನ್ನು ಕಂಡಿದೆ. ಮೇಲುಸ್ತರದಲ್ಲಿ ಅತ್ಯಂತ ಮಡಿವಂತಿಕೆ ತೋರಿಸುತ್ತಿದ್ದ ಅಂದಿನ ಸಾಮಾಜಿಕ ಪರಿಸರದಲ್ಲಿ ಲೈಂಗಿಕ ವೈದ್ಯ ವಿಜ್ಞಾನವನ್ನು ಜನಸಾಮಾನ್ಯರಿಗೆ ಮುಟ್ಟಿಸಿದ ಕೀರ್ತಿ ದೊಡ್ಡೇರಿ ಅವರಿಗೆ ಸಲ್ಲುತ್ತದೆ. ಕಾಮಶಿಕ್ಷಣ (1944), ಪ್ರಸವ ವಿಜ್ಞಾನ (1945), ಸಂತಾನ ನಿಯಮ (1946) ಎಂಬ ಪುಸ್ತಕಗಳನ್ನಲ್ಲದೇ 1951 ರಿಂದ ಐದು ವರ್ಷಗಳ ಕಾಲ ದಾಂಪತ್ಯ ಜೀವನ ಎಂಬ ಆರೋಗ್ಯ ಮಾಸಪತ್ರಿಕೆಯನ್ನೂ ಇವರು ಪ್ರಕಟಿಸಿದರು. ಇವರ 'ಪ್ರಸವ ವಿಜ್ಞಾನ' ದಾದಿಯರಿಗೆ ಉತ್ತಮ ಮಾರ್ಗದರ್ಶಕ ಕೈಪಿಡಿಯಾಗಿತ್ತು. ಇದಕ್ಕೆ ಮದರಾಸು ಕ್ರಿಶ್ಚಿಯನ್ ಲಿಟರೇಚರ್ ಸೊಸೈಟಿಯ ಪ್ರಶಸ್ತಿ ಲಭಿಸಿತ್ತು.

ಇದೇ ಅವಧಿಯಲ್ಲಿ ಪಾಂಡುರಂಗ ಕುಲಕರ್ಣಿಯವರು ಸಚಿತ್ರ ಇಂಜೆಕ್ಷನ್ ವಿಜ್ಞಾನ, ಅಲೋಪತಿಕ್ ಔಷಧಿ ಗುಣ ರಹಸ್ಯ, ಐಚ್ಛಿಕ ಸಂತಾನ, ರೋಗೋಪಚಾರ ಎಂಬ ಪುಸ್ತಕಗಳನ್ನು ರಚಿಸಿದರು. ಮದರಾಸ್ ಬುಕ್ ಅ್ಯಂಡ್ ಲಿಟರೇಚರ್ ಸೊಸೈಟಿಯಿಂದ ಬಹುಮಾನವನ್ನೂ ಪಡೆದರು. ಇವರ ಸಮಕಾಲೀನರಾಗಿ ವೈದ್ಯ ಸಾಹಿತ್ಯ ಸೃಷ್ಟಿಸಿದವರೆಂದರೆ ಕೆ.ಆರ್. ಉಡುಪ, ಎಸ್.ರಾಮರಾಜ್, ಎಚ್.ಟಿ.ದೇವರಾಜ್, ಶಾಮರಾವ್ ಚಿತ್ರಗಾರ, ಎನ್.ಟಿ.ಪುಟ್ಟಣ್ಣ, ರಾಮಸ್ವಾಮಿ ವೈದ್ಯ ಮೊದಲಾದವರು.

ವೈದ್ಯಕೀಯ ಸಾಹಿತ್ಯಕ್ಕೆ ಜನಪ್ರಿಯತೆಯನ್ನು, ಸಾಹಿತ್ಯ ಲೋಕದ ಮನ್ನಣೆಯನ್ನು ದೊರಕಿಸಿಕೊಟ್ಟವರೆಂದರೆ ಕೊರವಂಜಿ ಪತ್ರಿಕೆಯ ಜನಕ, ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯದ ಸ್ಥಾಪಕ ಸದಸ್ಯರಾದ ಎಂ.ಶಿವರಾಮ್ (ನೋಡಿ). ಅನಂತರ ತ್ರಿವೇಣಿ ಮತ್ತು ಸೃಜನಶೀಲ ಸಾಹಿತಿ ಜನಪ್ರಿಯ ವೈದ್ಯೆ ಅನುಪಮಾ ನಿರಂಜನ ಅವರು. ಪ್ರಜಾವಾಣಿ ಪತ್ರಿಕೆಯಲ್ಲಿ, ಸುಧಾ ವಾರಪತ್ರಿಕೆಯಲ್ಲಿ, ಆರೋಗ್ಯದ ಅಂಕಣವನ್ನು ಪ್ರಾರಂಭಿಸಿದ ಅನುಪಮಾ ನಿರಂಜನ (ನೋಡಿ) ಅವರು ಹತ್ತು ವೈದ್ಯಕೀಯ ಪುಸ್ತಕಗಳನ್ನು ಬರೆದರು. ಇವರ ಪುಸ್ತಕ 'ತಾಯಿ ಮತ್ತು ಮಗು' ಎಲ್ಲ ಸ್ತ್ರೀಯರ ಬೈಬಲ್ ಆಯಿತು. ದಾಂಪತ್ಯ ದೀಪಿಕೆ, ಕೇಳು ಕಿಶೋರಿ, ವಧುವಿಗೆ ಕಿವಿಮಾತು-ಇವು ನವದಂಪತಿಗಳಿಗೆ ಹದಿಹರೆಯದವರಿಗೆ ಕೈಪಿಡಿಯಾಗಿವೆ. ಒತ್ತಡದ ಬೇನೆಗಳು, ಕ್ಯಾನ್ಸರ್ ಜಗತ್ತು - ಇವು ಕನ್ನಡ ವೈದ್ಯ ಸಾಹಿತ್ಯಕ್ಕೆ ಮಾದರಿ ಕೊಡುಗೆಗಳಾಗಿವೆ. ತಮ್ಮ ಅಪೂರ್ವವಾದ ಹಾಸ್ಯ ಪ್ರಜ್ಞೆ ಮತ್ತು ಲಲಿತ ಶೈಲಿಯ ಬರೆಹದಿಂದ ಖ್ಯಾತರಾದ ಶಿವರಾಮ್ ಬರೆದ ಮನಮಂಥನ (1964) ಈ ಕ್ಷೇತ್ರದ ಅತ್ಯಂತ ಶ್ರೇಷ್ಠ ಕೃತಿ. ಈ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ದೊರೆತಿರುವುದು ಕನ್ನಡ ವೈದ್ಯ ಸಾಹಿತ್ಯದಲ್ಲಿ ಇಂದಿಗೂ ಮುರಿಯದ ದಾಖಲೆ. ಮನೋವೈದ್ಯಕೀಯ ವಿಷಯಗಳಲ್ಲಿ ಜನಪ್ರಿಯ ತಾರಾಮೌಲ್ಯವನ್ನು ಪಡೆದ ಕಾದಂಬರಿಗಳನ್ನು ಬರೆದ ತ್ರಿವೇಣಿ ಈ ಕ್ಷೇತ್ರಕ್ಕೆ ಬೆಲೆಯುಳ್ಳ ಕಾಣಿಕೆ ನೀಡಿದ್ದಾರೆ.

ವೈದ್ಯಕೀಯ ಸಾಹಿತ್ಯ ರಚನೆಯ ಸಂದರ್ಭದಲ್ಲಿ ಡಿ.ಎಸ್. ಶಿವಪ್ಪನವರದು ದೊಡ್ಡ ಹೆಸರು. ಇವರ ವೈದ್ಯಪದಕೋಶ ಒಂದು ಮಹತ್ತ್ವದ ಕೃತಿ. ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಪ್ರಕಟಿಸಿದ ಆರೋಗ್ಯ ಮಾಲೆಯ 16 ಪುಸ್ತಕಗಳ ಪ್ರಧಾನ ಸಂಪಾದಕರಾಗಿ, ವಿವಿಧ ವೈದ್ಯಕೀಯ ಪುಸ್ತಕಗಳನ್ನು ಇವರು ಹೊರತಂದಿದ್ದಾರೆ. ಇವರ 'ವೈದ್ಯಕ ಪದಗಳ ಗುಟ್ಟು ರಚನೆ' ಗ್ರಂಥ ಪ್ರತಿಯೊಬ್ಬ ವೈದ್ಯ ಮತ್ತು ವೈದ್ಯ ಲೇಖಕರು ಗಮನಿಸಬೇಕಾದ ಕೃತಿ. ವೈದ್ಯಕೀಯ ಸಾಹಿತ್ಯವನ್ನು ಕನ್ನಡಕ್ಕೆ ತರುವ ಇವರ ಕಳಕಳಿಯನ್ನು ಇವರ ಈ ಮಾತುಗಳಿಂದ ತಿಳಿಯಬಹುದು: ತಮ್ಮ ಆರೋಗ್ಯವನ್ನು ತಾವೇ ಕಾಪಾಡಿಕೊಳ್ಳುವಂತೆ ರೋಗಿಗಳಿಗೆ ಚೆನ್ನಾಗಿ ಹೇಳಿಕೊಡಬೇಕೆಂದು ಹಿಪೊಕ್ರೇಟಿಸ್ (ಕ್ರಿ.ಪೂ.430-360) ಶತಮಾನಗಳ ಹಿಂದೆಯೇ ಹೇಳಿರುವನು. ಆದರೂ ಈಚಿನ ತನಕ ರೋಗಿಗಳನ್ನು ಅವರ ರೋಗ, ಚಿಕಿತ್ಸೆಗಳ ವಿಚಾರದಲ್ಲಿ ಆದಷ್ಟೂ ಅಜ್ಞಾನಿಗಳಾಗಿ ಇರಿಸುವುದೇ ಸರಿಯೆಂಬ ಭಾವನೆ ಬಹುಪಾಲು ವೈದ್ಯರಲ್ಲಿತ್ತು.......ರೋಗವಿಲ್ಲದೇ ಆರೋಗ್ಯ ಎನ್ನುವ ಕಾಲ ಹೋಯಿತು. ಈಗ ಸಂಪೂರ್ಣ ದೈಹಿಕ, ಮಾನಸಿಕ ಇಲ್ಲವೇ ಸಾಮಾಜಿಕ ಹದುಳತೆಯೇ ಆರೋಗ್ಯ ಎನಿಸಿಕೊಂಡಿದೆ. ಇದರ ಸಾಧನೆಗೆ ರೋಗಿ ಮತ್ತು ವೈದ್ಯ ಇವರ ನಡುವೆ ನಿಕಟ ಸಂಪರ್ಕ ಇರಬೇಕಾಗುತ್ತದೆ. ಇದಕ್ಕಾಗಿ ಜನರಿಗೆ ಆರೋಗ್ಯ ಸಾಧನೆ ರೋಗ ಚಿಕಿತ್ಸೆಗಳ ವಿಷಯವಾಗಿ ಸಾಕಷ್ಟು ತಿಳುವಳಿಕೆಯನ್ನು ಕೊಟ್ಟರೆ ಮಾತ್ರ ಕೈಗೂಡುವುದು. ಇದನ್ನು ನೀಡಲು ಜನರ ತಾಯಿ ನುಡಿಗಿಂತಲೂ ಒಳ್ಳೆಯ ಮಾಧ್ಯಮ ಇನ್ನೊಂದಿರಲಾರದು.

ಪಿ.ಎಸ್.ಶಂಕರ್ ಅವರು ತಜ್ಞ ವೈದ್ಯರಾಗಿ, ವೈದ್ಯಕೀಯ ಕಾಲೇಜಿನ ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ ಸೇವೆ ಸಲ್ಲಿಸಿ 40ಕ್ಕೂ ಹೆಚ್ಚು ವೈದ್ಯಕೀಯ ಪುಸ್ತಕಗಳನ್ನು ಬರೆದಿದ್ದಾರೆ. ವೈದ್ಯರು ಹಾಗೂ ವೈದ್ಯ ಸಿಬ್ಬಂದಿಗೆ ತರಬೇತಿಯಲ್ಲಿ ಆಕರ ಗ್ರಂಥವಾಗಬಲ್ಲ ಮಾನವ ಶರೀರ ರಚನಾ ಶಾಸ್ತ್ರ ಮತ್ತು ಶರೀರ ಕ್ರಿಯಾಶಾಸ್ತ್ರ (ಅನುವಾದ) ಇವು ಉಲ್ಲೇಖನೀಯ. ಇವರ ಸಂಪಾದಕತ್ವದಲ್ಲಿ ಸಿದ್ಧವಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ 'ವೈದ್ಯ ವಿಶ್ವಕೋಶ' ಕನ್ನಡ ವೈದ್ಯ ಸಾಹಿತ್ಯ ಕ್ಷೇತ್ರಕ್ಕೆ ದೊಡ್ಡ ಕೊಡುಗೆ. ಇವರು 80ಕ್ಕೂ ಹೆಚ್ಚು ವೈದ್ಯಕೀಯ ಲೇಖನಗಳನ್ನು ಬರೆದಿರುವುದಲ್ಲದೇ 200ಕ್ಕೂ ಹೆಚ್ಚು ವೈದ್ಯಕೀಯ ವಿಚಾರಗಳ ರೇಡಿಯೋ ಭಾಷಣಗಳನ್ನು ಮಾಡಿ ವೈದ್ಯಕೀಯ ಮಾಹಿತಿಯನ್ನು ಜನಸಾಮಾನ್ಯರಿಗೆ ತಲುಪಿಸಿದ್ದಾರೆ.

ಕನ್ನಡದಲ್ಲಷ್ಟೇ ಅಲ್ಲ ಇಡೀ ಭಾರತದಲ್ಲಿ ಅತ್ಯಧಿಕ ಸಂಖ್ಯೆಯ ವೈದ್ಯಕೀಯ ಪುಸ್ತಕಗಳನ್ನು ಬರೆದವರು ಸಿ.ಆರ್.ಚಂದ್ರಶೇಖರ್. ಈ ಪ್ರಕಾರದ ಸಾಹಿತ್ಯಕ್ಕೆ ಇವರು ಅಪೂರ್ವ ಕೊಡುಗೆ ನೀಡಿದ್ದಾರೆ. ಇವರು ಇದುವರೆಗೆ 100 ಕನ್ನಡ ವೈದ್ಯಕೀಯ ಪುಸ್ತಕಗಳನ್ನೂ 720ಕ್ಕೂ ಹೆಚ್ಚಿನ ವೈದ್ಯಕೀಯ ಲೇಖನಗಳನ್ನೂ ನಾಲ್ಕು ವೈದ್ಯಕೀಯ ನಾಟಕಗಳನ್ನೂ ಬರೆದಿದ್ದಾರೆ. ಮನೋವೈದ್ಯ ವಿಷಯಗಳ ಬಗ್ಗೆ ಅನೇಕ ಉಪನ್ಯಾಸಗಳನ್ನೂ ರೇಡಿಯೋ, ದೂರದರ್ಶನ ಭಾಷಣಗಳನ್ನೂ ಮಾಡಿದ್ದಾರೆ.

ಕನ್ನಡ ವೈದ್ಯ ಸಾಹಿತ್ಯವನ್ನು ಶ್ರೀಮಂತಗೊಳಿಸಿದವರಲ್ಲಿ ಪ್ರಮುಖರಾದವರೆಂದರೆ ಸ.ಜ.ನಾಗಲೋಟಿಮಠ, ಎ.ನಾರಾಯಣಪ್ಪ, ಎಂ.ಬಸವರಾಜೇಅರಸ್, ಎಚ್.ಡಿ.ಚಂದ್ರಪ್ಪಗೌಡ, ಸಿ.ಅನ್ನಪೂರ್ಣಮ್ಮ, ಲೀಲಾವತಿದೇವದಾಸ, ಕರವೀರಪ್ರಭು ಕ್ಯಾಲಕೊಂಡ, ಎಚ್.ಎಸ್.ಮೋಹನ್, ಅಶೋಕ ಪೈ, ಎಸ್.ಪಿ.ಯೋಗಣ್ಣ, ಬಿ.ಎಂ.ಹೆಗಡೆ, ಡಿ.ಕೆ.ಮಹಾಬಲರಾಜು, ಟಿ.ಎಸ್.ಸತ್ಯನಾರಾಯಣರಾವ್, ಶಮಂತಕಮಣಿ, ಆರ್.ಸಿ.ಅಗಡಿ, ವಸಂತ ಕುಲಕರ್ಣಿ, ಕೆ.ಆರ್.ಶ್ರೀಧರ್, ಎಚ್.ಗಿರಿಜಮ್ಮ, ಸುನಂದಾ ಕುಲಕರ್ಣಿ, ವಸುಂಧರಾ ಭೂಪತಿ, ನಾ.ಸೋಮೇಶ್ವರ, ಎಸ್.ಎಸ್.ಪಾಟೀಲ, ಎನ್.ವಿಶ್ವರೂಪಾಚಾರ್, ರಮೇಶ ಉಪಾಧ್ಯಾಯ, ಮೀನಗುಂಡಿ ಸುಬ್ರಹ್ಮಣ್ಯಂ, ಶರತ್ ಕುಮಾರ್, ಎಂ.ವಿ.ನರಸಿಂಹಯ್ಯ, ಪದ್ಮಿನಿ ಪ್ರಸಾದ್, ಛಬ್ಬಿ ಮೊದಲಾದ ಅನೇಕ ವೈದ್ಯರನ್ನೂ ವೈದ್ಯೇತರ ಲೇಖಕರನ್ನೂ ಇಲ್ಲಿ ಉಲ್ಲೇಖಿಸಬಹುದು. ಇಂದು ಪುಸ್ತಕ ಮಾರುಕಟ್ಟೆಯಲ್ಲಿ ನೂರಾರು ವೈದ್ಯಕೀಯ ಪುಸ್ತಕಗಳು ಓದುಗರಿಗೆ ಲಭ್ಯವಿವೆ ಎನ್ನುವುದು ಸಮಾಧಾನದ ಸಂಗತಿ. ವೈದ್ಯ ಸಾಹಿತ್ಯ ಕ್ಷೇತ್ರದಲ್ಲಿ ಪ್ರತಿವರ್ಷ ಇಪ್ಪತ್ತರಿಂದ ಇಪ್ಪತ್ತೈದು ಪುಸ್ತಕಗಳು ಪ್ರಕಟಗೊಳ್ಳುತ್ತವೆ. ಜನಪ್ರಿಯ ಲೇಖಕರ ಕೃತಿಗಳು ಏಳು ಎಂಟು ಮರು ಮುದ್ರಣಗಳನ್ನು ಕಂಡಿವೆ. ವೈಚಾರಿಕ ಸಾಹಿತ್ಯದ ಮಾರಾಟದಲ್ಲಿ ಆರೋಗ್ಯ ಸಾಹಿತ್ಯದ್ದು ಸಿಂಹಪಾಲು. ಕಥೆ, ಕಾದಂಬರಿಗಳಷ್ಟೇ ವೇಗವಾಗಿ ವೈದ್ಯಕೀಯ ಪುಸ್ತಕಗಳು ಮಾರಾಟವಾಗುತ್ತಿರುವುದು ಗಮನಾರ್ಹ ಸಂಗತಿಯಾಗಿದೆ.

ಇತ್ತೀಚಿನ ವರ್ಷಗಳಲ್ಲಿ ವೈದ್ಯ ಸಾಹಿತ್ಯ ಸೃಷ್ಟಿಗೆ ಮತ್ತು ಅದನ್ನು ಜನರಿಗೆ ಮುಟ್ಟಿಸಲು ನಾಡಿನ ಬಹುತೇಕ ಪತ್ರಿಕೆಗಳು ನೆರವಾಗುತ್ತಿವೆ. ವೈದ್ಯ ಲೇಖನಗಳನ್ನಷ್ಟೇ ಅಲ್ಲದೆ, ಕ್ರಮವಾಗಿ ವೈದ್ಯಕೀಯ ಅಂಕಣಗಳನ್ನೇ ಪ್ರಕಟಿಸುತ್ತಿವೆ. ಅನೇಕ ಪತ್ರಿಕೆಗಳು ತಮ್ಮ ಈ ಅಂಕಣಗಳಿಂದ ಹೆಚ್ಚು ಜನಪ್ರಿಯವಾಗಿವೆ ಎಂಬುದು ಸ್ವಾಗತಾರ್ಹ ಸಂಗತಿ. ಪತ್ರಿಕೆಗಳಲ್ಲಿ ಆರೋಗ್ಯದ ಬಗ್ಗೆ ಲೇಖನಗಳು ಮತ್ತು ಅಂಕಣಗಳು ಜನಪ್ರಿಯವಾಗಿರುವುದನ್ನು ಕಂಡು ಕೆಲವು ವೈದ್ಯರು ಮತ್ತು ವೈದ್ಯೇತರರು ವೈದ್ಯಕೀಯ ಸಾಹಿತ್ಯಕ್ಕೆ ಮೀಸಲಾದ ಮಾಸಪತ್ರಿಕೆಗಳನ್ನು ಹೊರತಂದಿದ್ದಾರೆ. ಓರಿಯಂಟಲ್ ವಾಜ್‌ಮನ್ ಪಬ್ಲಿಷಿಂಗ್ ಹೌಸ್ (ಪುಣೆ) ಪ್ರಕಟಿಸುವ ಆರೋಗ್ಯವಾಣಿ, ಮೈಸೂರಿನ ಎಸ್.ಪಿ.ಯೋಗಣ್ಣ ಅವರು ಹೊರತಂದ ಆರೋಗ್ಯಯೋಗ, ಧಾರವಾಡದ ಆರ್.ಸಿ.ಅಗಡಿಯವರ ಆರೋಗ್ಯ ರಕ್ಷಕ, ಸೊರಬದಿಂದ ಹೊರಬರುತ್ತಿರುವ ಎಂ.ಕೆ.ಭಟ್ ಅವರ ಆರೋಗ್ಯ ಸಂಪತ್ತು, ಹುಬ್ಬಳ್ಳಿಯಿಂದ ಹೊರಡುವ ಸೌಂದರ್ಯ ಮತ್ತು ಆರೋಗ್ಯ ಭಾಗ್ಯ, ಎಲ್ಲರಿಗೂ ಆರೋಗ್ಯ, ಸವದತ್ತಿಯಿಂದ ಹೊರಡುವ ಆರೋಗ್ಯ ಭಾಗ್ಯ, ಬೆಂಗಳೂರಿನ ಜೀವನಾಡಿ, ಆರೋಗ್ಯ ತರಂಗ (ಈಗ ನಿಂತುಹೋಗಿದೆ), ಆರೋಗ್ಯ ಅನುರಾಗ, ಆದರ್ಶ ಗಂಡ ಹೆಂಡತಿ, ಕರ್ನಾಟಕ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಗೋಡೆ ಪತ್ರಿಕೆ ಕುಟುಂಬ - ಇವು ನಮ್ಮ ಗಮನ ಸೆಳೆಯುತ್ತವೆ. ಲೈಂಗಿಕ ವಿಜ್ಞಾನವನ್ನು ಜನರಿಗೆ ಮುಟ್ಟಿಸುತ್ತೇವೆಂದು ಪ್ರಾರಂಭದಲ್ಲಿ ವೈಜ್ಞಾನಿಕ ರೀತಿಯಲ್ಲಿ ಬಂದು, ಕ್ರಮೇಣ ಪ್ರಚೋದಕ ಸಾಹಿತ್ಯದಿಂದಾಗಿ ಜನರ ಮತ್ತು ಕಾನೂನಿನ ಕೆಂಗಣ್ಣಿಗೆ ಒಳಗಾಗಿ ಉಸಿರು ನಿಂತ ಪತ್ರಿಕೆಗಳು ಹಲವಾರು ಅದರಲ್ಲಿ ರತಿವಿಜ್ಞಾನವೂ ಒಂದು.

ಇತ್ತೀಚೆಗೆ ವೈದ್ಯಸಾಹಿತಿಗಳ ಸಂಖ್ಯೆ ಹೆಚ್ಚುತ್ತಿದೆ. ಆದರೆ ಬರೆವಣಿಗೆಯಲ್ಲಿ ಸಮತೋಲನ ಕಾಪಾಡಿಕೊಳ್ಳಬೇಕಾಗಿದೆ. ಓದುಗರಲ್ಲಿ

ಗೊಂದಲ ಮೂಡಿಸದೆ ಸ್ಪಷ್ಟತೆಗೆ ಆದ್ಯತೆ ನೀಡಬೇಕಾಗಿದೆ. ಭಯವೇ ಇಲ್ಲದವರಲ್ಲಿ ಸ್ವಲ್ಪ ಭಯ ಮೂಡಿಸಬೇಕು - ಭಯದಿಂದ ತತ್ತರಿಸುವವರಲ್ಲಿ ಧೈರ್ಯ ಮೂಡಿಸಬೇಕು - ಇದು ವೈದ್ಯ ಸಾಹಿತಿಗಳ ಮುಖ್ಯ ಕರ್ತವ್ಯ. ಜನಸಾಮಾನ್ಯರು ಆರಂಭದಲ್ಲಿಯೇ ತಜ್ಞರ ಬಳಿಗೆ ಬಂದು ತಮ್ಮ ತೊಂದರೆಗಳನ್ನು ಹೇಳಿಕೊಳ್ಳುವಂತೆ ಅವರಿಗೆ ಎಚ್ಚರಿಕೆ ನೀಡುವುದು, ಅವರ ದೇಹದ ಬಗ್ಗೆ, ದೈಹಿಕ ಕ್ರಿಯೆಗಳ ಬಗ್ಗೆ ಅವರಿಗೆ ಮಾಹಿತಿ ತಿಳಿಸುವುದು, ಅವರ ಮೂಢನಂಬಿಕೆಗಳನ್ನು ತೊಡೆದು ಹಾಕುವುದು ವೈದ್ಯ ಸಾಹಿತಿಗಳ ಹಾಗೂ ವೈದ್ಯಸಾಹಿತ್ಯದ ಪ್ರಮುಖ ಗುರಿಯಾಗಬೇಕು.

1986ರಲ್ಲಿ ಪ್ರಾರಂಭಗೊಂಡ ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು ಈ ಎಲ್ಲ ಸಮಸ್ಯೆಗಳನ್ನು ನಿಭಾಯಿಸಲು ಕಾರ್ಯೋನ್ಮುಖವಾಗಿದೆ. ರಾಜ್ಯ ಮಟ್ಟದಲ್ಲಿ ಪ್ರತಿವರ್ಷ ವೈದ್ಯ ಸಾಹಿತ್ಯ ಸಮ್ಮೇಳನವನ್ನು ನಡೆಸಿಕೊಂಡು ಬಂದಿದೆ. ಕುವೆಂಪು ಅವರ ಹೆಸರಿನಲ್ಲಿ ಪ್ರತಿವರ್ಷ ಉತ್ತಮ ಕೃತಿಗೆ ಪುರಸ್ಕಾರವನ್ನು ನೀಡಲಾಗುತ್ತಿದೆ. ಕೆ.ಎಚ್.ಕೃಷ್ಣಮೂರ್ತಿಯವರ ದೃಷ್ಟಿಪರಿಚಯ, ಎಚ್.ಡಿ. ಚಂದ್ರಪ್ಪಗೌಡರ ಕ್ಯಾನ್ಸರ್ ಲೋಕ, ವಸಂತ ಕುಲಕರ್ಣಿಅವರ ಅನ್ನಮಾರ್ಗದಲ್ಲಿ ಏಳು ದಿನಗಳ ಪಯಣ, ಸ.ಜ.ನಾಗಲೋಟಿಮಠ ಅವರ ಶ್ರೀಸಾಮಾನ್ಯ ಮತ್ತು ವೈದ್ಯ, ಕರವೀರಪ್ರಭು ಕ್ಯಾಲಕೊಂಡ ಅವರ ಮಕ್ಕಳ ಮಾರಕ ರೋಗಗಳು, ಕೆ.ಆರ್.ಶ್ರೀಧರ್ ಅವರ ಮಾನಸಿಕ ಒತ್ತಡ ಎಂಬ ಕೃತಿಗಳಿಗೆ ಈ ಪುರಸ್ಕಾರ ಸಂದಿದೆ. ಪರಿಷತ್ತು ಈವರೆಗೆ 15 ವೈದ್ಯ ಪುಸ್ತಕಗಳನ್ನು ಹೊರತಂದಿದೆ. ಹೊಸ ವೈದ್ಯ ಲೇಖಕರಿಗೆ ಕಮ್ಮಟಗಳನ್ನು ಏರ್ಪಡಿಸುತ್ತಿದೆ. ಬೆಂಗಳೂರು, ಕೋಲಾರ, ದಾವಣಗೆರೆ, ಬಿಜಾಪುರ, ಬಾಗಲಕೋಟೆಗಳಲ್ಲಿ ಕಮ್ಮಟಗಳನ್ನು ನಡೆಸಿದೆ. ಪರಿಷತ್ತಿನ ಜಿಲ್ಲಾ ಘಟಕಗಳೂ ವೈದ್ಯ ಸಾಹಿತ್ಯ ಚಟುವಟಿಕೆಗಳನ್ನು ನಡೆಸುತ್ತಿವೆ.

ಮಾಧ್ಯಮಗಳು ಕೂಡ ಈ ನಿಟ್ಟಿನಲ್ಲಿ ಸಾಕಷ್ಟು ಕೆಲಸ ಮಾಡುತ್ತಿವೆ. ಆಕಾಶವಾಣಿ ಜನರಿಗೆ ವೈದ್ಯಕೀಯ ಮಾಹಿತಿಗಳನ್ನು ಮುಟ್ಟಿಸುವ ನಿಟ್ಟಿನಲ್ಲಿ ಪ್ರಶಂಸನೀಯ ಸೇವೆ ಸಲ್ಲಿಸುತ್ತಿದೆ. ಆಕಾಶವಾಣಿಯ ಬೆಳಗಿನ ನಾಲ್ಕೇ ನಿಮಿಷದ ರೇಡಿಯೋ ಡಾಕ್ಟರ್, ಹತ್ತು ನಿಮಿಷಗಳ ಅವಧಿಯ ತಜ್ಞರನ್ನು ಭೇಟಿ ಮಾಡಿ ಕಾರ್ಯಕ್ರಮಗಳು ಜನಪ್ರಿಯವಾಗಿವೆ. ದೂರದರ್ಶನ ವಾಹಿನಿಗಳೂ ವಿವಿಧ ಮಾನಸಿಕ ಮತ್ತು ದೈಹಿಕ ರೋಗಗಳ ಬಗ್ಗೆ ವೈದ್ಯಕೀಯ ತಜ್ಞರಿಂದ ಸಲಹೆ - ಸೇವೆಯ ಪ್ರಸಾರ ಮಾಡುತ್ತಿವೆ. ಗರ್ಭಿಣಿಯರು, ಬಾಣಂತಿಯರು ಮತ್ತು ಮಕ್ಕಳ ಆರೋಗ್ಯದ ಬಗ್ಗೆ ಸಲಹೆ ನೀಡುವ ಕಾರ್ಯಕ್ರಮಗಳಲ್ಲಿ ಪರಿಣತ ವೈದ್ಯರು ಭಾಗವಹಿಸುತ್ತಿದ್ದಾರೆ. ಒಟ್ಟಾರೆ ಜನತೆಯಲ್ಲಿ ಮೂಡುತ್ತಿರುವ ವೈದ್ಯಕೀಯ ವಿಷಯಗಳನ್ನು ತಿಳಿದುಕೊಳ್ಳಬೇಕೆಂಬ ಹಸಿವು ಇನ್ನೂ ತಣಿಯಬೇಕಾಗಿದೆ. (ಕೆ.ಪಿ.ಕೆ.)

**ಕನ್ನಡದಲ್ಲಿ ಶತಕ ಸಾಹಿತ್ಯ :** ಕನ್ನಡದ ಚಂಪೂ, ಷಟ್ಪದಿ, ವಚನ, ತ್ರಿಪದಿ, ಸಾಂಗತ್ಯ ಮೊದಲಾದ ಸಾಹಿತ್ಯ ಪ್ರಕಾರಗಳಂತೆ ಶತಕ ಸಾಹಿತ್ಯವೂ ಒಂದು. ನೂರು ಪದ್ಯಗಳಿಂದ ಕೂಡಿದ ಗ್ರಂಥವನ್ನು ಶತಕ ಎಂಬ ಹೆಸರಿನಿಂದ ಕರೆಯುತ್ತಾರೆ. ಕಂದ, ವೃತ್ತ, ಷಟ್ಪದಿ, ಸಾಂಗತ್ಯ ಮೊದಲಾದ ಛಂದಸ್ಸಿನಲ್ಲಿ ರಚಿತವಾಗಿರುತ್ತವೆ. ಇದು ಆತ್ಮನಿಷ್ಠವಾದ, ಭಾವನಿಷ್ಠವಾದ ಒಂದು ಕಾವ್ಯ ಪ್ರಕಾರ. ಮಹಾಕಾವ್ಯ, ಖಂಡಕಾವ್ಯಗಳಂತೆ ವಸ್ತುನಿಷ್ಠವಲ್ಲ, ಕಥಾವಸ್ತುವನ್ನೊಳಗೊಂಡಿರುವುದಿಲ್ಲ. ಕವಿಯ ಮನೋಲಹರಿ ಹರಿದಂತೆ ಹಲವಾರು ಸಂದರ್ಭಗಳಲ್ಲಿ ರಚಿತವಾದ ಪದ್ಯಗಳು ಒಂದು ವಿಷಯದ ಏಕಸೂತ್ರಕ್ಕೆ ಒಳಗಾಗಿರುತ್ತವೆ. ಆದುದರಿಂದ ಶತಕಗಳನ್ನು ಪ್ರಾಚೀನ ಕಾಲದ ಭಾವಗೀತೆಗಳು ಎನ್ನಬಹುದು. ಭಕ್ತಿ, ಜ್ಞಾನ, ವೈರಾಗ್ಯ, ನೀತಿಗಳನ್ನು ಪ್ರತಿಪಾದಿಸುವುದು ಶತಕಗಳ ಸಾಮಾನ್ಯ ಲಕ್ಷಣ ಎನ್ನಬಹುದು. ನೂರು ಪದ್ಯಗಳಿಂದ ಕೂಡಿದ ಗ್ರಂಥವನ್ನು ಶತಕವೆಂದು ಕರೆವ ವಾಡಿಕೆ ಇದ್ದರೂ ಕನ್ನಡದಲ್ಲಿ 100 ರಿಂದ 128 ಪದ್ಯಗಳಿರುವ ಶತಕಗಳೂ ಕಂಡುಬರುತ್ತವೆ.

ಕನ್ನಡದ ಶತಕ ಸಾಹಿತ್ಯಪ್ರಕಾರ ಸಂಸ್ಕೃತ ಸಾಹಿತ್ಯದ ಪ್ರೇರಣೆಯಿಂದ ಬಂದದ್ದು. ಸಂಸ್ಕೃತದಲ್ಲಿ ನ್ಯಾಯಶತಕ, ಭರ್ತೃಹರಿಯ ಶತಕತ್ರಯ, ಮಯೂರನ ಸೂರ್ಯಶತಕ ಮೊದಲಾದವು ಪ್ರಸಿದ್ಧವಾಗಿವೆ. ಕನ್ನಡದಲ್ಲಿ ನಾನೂರಕ್ಕೂ ಹೆಚ್ಚು ಶತಕಗಳಿವೆಯೆಂದು ವಿದ್ವಾಂಸರು ಹೇಳುತ್ತಾರೆ. ಇವುಗಳಲ್ಲಿ ಕೆಲವು ಶತಕಗಳ ಕರ್ತೃಗಳು ಯಾರೆಂದು ತಿಳಿಯುವುದಿಲ್ಲ.

ನಾಗವರ್ಮಾಚಾರ್ಯನ (ಸು.1071) ಚಂದ್ರಚೂಡಾಮಣಿ ಶತಕ ಕನ್ನಡದ ಮೊತ್ತಮೊದಲನೆಯ ಶತಕ ಗ್ರಂಥ. ಇದಕ್ಕೆ ಜ್ಞಾನಸಾರ ಎಂಬ ಹೆಸರೂ ಇದೆ. ಕೃತಿಯ ವಸ್ತು ವೈರಾಗ್ಯ ಪ್ರತಿಪಾದನೆ. ಬಂಧ ಲಲಿತವಾಗಿಯೂ ಗಂಭೀರವಾಗಿಯೂ ಇದೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಅನಂತರ ಕೊಂಡುಗುಳಿ ಕೇಶಿರಾಜನ (ಸು.1160) ಷಡಕ್ಷರಕಂದ ಕಂಡುಬರುತ್ತದೆ. ಇದೇ ಕಾಲದಲ್ಲಿ ಕವಿಕಾಮ (ಸು.1200) ಸ್ತನಶತಕವೆಂಬ ಗ್ರಂಥವನ್ನು ರಚಿಸಿರುವುದಾಗಿ ಪಾರ್ಶ್ವನಾಥ ಪುರಾಣದಿಂದ ತಿಳಿದುಬರುತ್ತದೆ. ಆದರೆ ಗ್ರಂಥ ಉಪಲಬ್ಧವಿಲ್ಲ. ಇದು ಬಹುಶಃ ಸಂಸ್ಕೃತದ 'ವಕ್ಷೋಜಶತಕ'ದ ಹಾಗೆ ವರ್ಣನಾತ್ಮಕವಾಗಿರಬೇಕು.

ಕನ್ನಡದ ಶತಕ ಸಾಹಿತ್ಯದಲ್ಲಿ ಹರಿಹರನ ಪಾತ್ರ ಪ್ರಮುಖವಾದದ್ದು. ಇವನ ಪಂಪಾಶತಕ, ರಕ್ಷಾಶತಕಗಳು ಉನ್ನತ ಕಾವ್ಯಗುಣಗಳಿಂದ, ಭಾವಗೀತೆಯ ಲಕ್ಷಣಗಳಿಂದ ಕೂಡಿದ್ದು ಸಹೃದಯರ ಮನಸೆಳೆದಿವೆ. ಪಂಪಾಶತಕದಲ್ಲಿ ಈ ಕವಿಯ ಹೃದಯ ತುಡಿದಿರುವಷ್ಟು, ವಿರೂಪಾಕ್ಷನನ್ನು ಸ್ತುತಿಸಿರುವಷ್ಟು, ಆತ್ಮವನ್ನು ಅರ್ಪಿಸಿ ಹಿಗ್ಗಿರುವಷ್ಟು ಮತ್ತಾವ ಕವಿಯ ಹೃದಯವೂ ತುಡಿದಿಲ್ಲ, ಸ್ತುತಿಸಿಲ್ಲ, ಹಿಗ್ಗಿಲ್ಲ. ರಕ್ಷಾಶತಕದಲ್ಲಿ ಕವಿ ತನ್ನ ತಪ್ಪುಒಪ್ಪುಗಳನ್ನೆಲ್ಲ ತೋಡಿಕೊಂಡು ನಿರ್ಲಿಪ್ತನಾಗಿ, ಶಾಂತನಾಗಿ ತನ್ನ ಅಂತರಂಗವನ್ನೆಲ್ಲ ಶೋಧಿಸಿಕೊಂಡಿದ್ದಾನೆ. ಸಂಸಾರದ ಸುಳಿಗೆ ಸಿಕ್ಕ ಜೀವ ಅದರಿಂದ ಹೊರಬರಲು ನಡೆಸಿರುವ ಮನಸ್ಸಿನ ಹೋರಾಟ ಸೂಕ್ಷ್ಮವಾಗಿ ಇದರಲ್ಲಿ ಪ್ರಕಟಗೊಂಡಿದೆ.

ಸು.16ನೆಯ ಶತಮಾನಕ್ಕೆ ಸೇರಿದ ಪುಲಿಗೆರೆ ಸೋಮನ 'ಸೋಮೇಶ್ವರ ಶತಕ' ಕನ್ನಡ ನೀತಿಶತಕಗಳಲ್ಲಿ ಅಗ್ರಸ್ಥಾನವನ್ನು ಪಡೆದು ಜನಪ್ರಿಯವಾಗಿದೆ. ನೀತಿ ಪ್ರತಿಪಾದನೆ ಕೆಲವೆಡೆ ಕಾವ್ಯಾತ್ಮಕವಾಗಿ ನಿರೂಪಿತವಾಗಿರುವುದು ಈ ಶತಕದ ಹೆಗ್ಗಳಿಕೆಗೆ ಕಾರಣವಾಗಿದೆ. ಕೆಲವಂ ಬಲ್ಲವರಿಂದ ಕಲ್ತು, ರವಿಯಾಕಾಶಕೆ ಭೂಷಣಂ, ಚರಿಪಾರಣ್ಯದ ಪಕ್ಷಿಗೊಂದು ತರುಗೊಡ್ಡಾಗಲ್ ಮುಂತಾದ ಪದ್ಯಗಳು ಜನಮನದಲ್ಲಿ ನೆಲಸಿವೆ. ಶೈಲಿ ಅನುಭವದ ನುಡಿಗಳಿಂದ, ಗಾದೆ ಮಾತುಗಳಂಥ ಸೂಕ್ತಿಗಳಿಂದ, ಜನಸಾಮಾನ್ಯರ ಹೃದಯಕ್ಕೆ ನೇರವಾಗಿ ತಾಗುವಂತಿವೆ

ದೇಪರಾಜ (ಸು.1410) ಪರಿವರ್ಧಿನೀ ಷಟ್ಪದಿಯಲ್ಲಿ ಸಂಸ್ಕೃತ ಅಮರುಕವನ್ನು ಕನ್ನಡಿಸಿದ್ದಾನೆ. ಇದೇ ಅಮರುಕವನ್ನು ಚಿಕುಪಾಧ್ಯಾಯ (ಸು.1672) ಅನುವಾದ ಮಾಡಿದ್ದಾನೆ. ಚಂದ್ರಕವಿ (ಸು.1430) ಗುರುಮೂರ್ತಿ ಶಂಕರಶತಕವನ್ನು ರಚಿಸಿದ್ದಾನೆ. ಮಗ್ಗೆಯ ಮಾಯಿದೇವನ (ಸು.1430) ಶಿವಾಧವ, ಶಿವಾವಲ್ಲಭ, ಮಹದೈಪುರೀಶ್ವರ ಶತಕಗಳು ಕ್ರಮವಾಗಿ ಭಕ್ತಿ, ಜ್ಞಾನ, ವೈರಾಗ್ಯವನ್ನು ಪ್ರತಿಪಾದಿಸುತ್ತವೆ. ಈ ಶತಕತ್ರಯ ಜನಪ್ರಿಯವಾಗಿದ್ದರೂ ಶಾಸ್ತ್ರ ಮತ್ತು ಪಾಂಡಿತ್ಯ ಭಾರದಿಂದ ಕುಸಿಯುತ್ತವೆ. ಹರಿಹರನಲ್ಲಿ ಕಾಣುವಂತೆ ಭಾವತೀವ್ರತೆಯಾಗಲೀ ಕಲ್ಪನಾಶಕ್ತಿಯಾಗಲೀ ಸರಳವಾದ ರಮ್ಯಶೈಲಿಯಾಗಲೀ ಇವನಲ್ಲಿ ಕಂಡುಬರುವುದಿಲ್ಲ. ಆದರೆ ಜನತೆಯ ಆಚಾರವಿಚಾರ ಹೇಳುವೆಡೆ ಮಾತ್ರ ಸೊಗಸು ಕಂಡುಬರುತ್ತದೆ.

ಹತ್ತಕ್ಕೂ ಹೆಚ್ಚು ಶತಕಗಳು 16ನೆಯ ಶತಮಾನದಲ್ಲಿ ರಚಿತವಾಗಿವೆ. ಗುಮ್ಮಟಾರ್ಯ (ಸು.1500), ಸಿರಿನಾಮಧೇಯ (ಸು.1550), ಚೆನ್ನಮಲ್ಲಿಕಾರ್ಜುನ (ಸು1560) - ಇವರು ಒಂದೊಂದು ಶತಕವನ್ನೂ ವೀರಭದ್ರರಾಜ (ಸು.1530) ಐದು ಶತಕಗಳನ್ನೂ ರಚಿಸಿದ್ದಾರೆ. ರತ್ನಾಕರವರ್ಣಿ ಈ ಶತಮಾನದ ಪ್ರಮುಖ ಶತಕ ಕರ್ತೃ. ಇವನು ರತ್ನಾಕರ ಶತಕ, ಅಪರಾಜಿತೇಶ್ವರ ಶತಕ, ತ್ರಿಲೋಕ ಶತಕಗಳನ್ನು ರಚಿಸಿದ್ದಾನೆ. ರತ್ನಾಕರ ಶತಕದಲ್ಲಿ ನೀತಿಬೋಧೆಗಿಂತ ಹೆಚ್ಚು ವೈರಾಗ್ಯಬೋಧೆ ಕಂಡುಬರುತ್ತದೆ. ಕೆಲವು ವೃತ್ತಗಳ ಬಂಧ ಮಧುರವಾಗಿದೆ. ಅಪರಾಜಿತೇಶ್ವರ ಶತಕದಲ್ಲಿ ಜೈನದೃಷ್ಟಿ ಪ್ರಧಾನವಾಗಿದ್ದರೂ ಆರ್ತಭಕ್ತನ ವಾಣಿ ನುಡಿಯುತ್ತದೆ. ಅನುಭವ ಭಾವರೂಪಿಯಾಗಿ ತೀವ್ರತೆಯಿಂದ ಹೊಮ್ಮುತ್ತದೆ. ಈತನ ತ್ರಿಲೋಕ ಶತಕ ಜೈನಾಗಮದಲ್ಲಿ ಹೇಳಿರುವ ಭೂಗೋಳ ವಿವರಗಳಿಂದ ಕೂಡಿದೆ. ಕನಕದಾಸರ ಹರಿಭಕ್ತಿಸಾರ ವಿಷ್ಣುಸ್ತುತಿ ಪರವಾದ ಶತಕ. ಭಕ್ತಿ ಪ್ರತಿಪಾದನೆ ಈ ಶತಕದ ವಸ್ತು.

17ನೆಯ ಶತಮಾನದಲ್ಲಿ ಶಾಂತವೀರದೇಶಿಕ, ಶಂಕರದೇವ, ಹಿರಿಯೂರುರಂಗ, ತಿರುಮಲಾರ್ಯ ಮೊದಲಾದವರು ಶತಕಗಳನ್ನು ರಚಿಸಿದ್ದಾರೆ. ಸಮಾಧಿ ಸಿದ್ದೇಶ್ವರನೆಂಬುವನ ಶಿಷ್ಯ ಶಾಂತಾಚಾರ್ಯ (ಸು.1700) ಸ್ಕಾಂದಪುರಾಣದ ಆಧಾರದ ಮೇಲೆ ಮರಣಮಣಿದರ್ಪಣ ಶತಕ ಎಂಬ ಕೃತಿಯನ್ನು ರಚಿಸಿದ್ದಾನೆ. ಚಿಕುಪಾಧ್ಯಾಯನ ಶೃಂಗಾರಶತಕ ಸಾಂಗತ್ಯ, ರಂಗಧಾಮಶತಕ ಸಾಂಗತ್ಯಗಳು ಸಾಂಗತ್ಯ ಛಂದಸ್ಸಿನಲ್ಲಿರುವುದು ಗಮನಾರ್ಹ.

18 ಮತ್ತು 19ನೆಯ ಶತಮಾನಗಳಲ್ಲಿ ವೃತ್ತಕಂದಗಳಲ್ಲಿ ಮಾತ್ರವಲ್ಲದೆ ಬಗೆಬಗೆಯ ಷಟ್ಪದಿಗಳಲ್ಲೂ ಹೇರಳವಾಗಿ ಶತಕಗಳು ರಚಿತವಾದುವು. ಕೇಶವನು ತಿರುವೇಂಗಡಾಚಾರ್ಯಶತಕ ಎಂಬ ಪಂಚಶತಕವನ್ನು ಬರೆದಿದ್ದಾನೆ. ಇದರಲ್ಲಿ 597 ಪದ್ಯಗಳಿವೆ. ಶಾಲ್ಯದ ಕೃಷ್ಣರಾಜನು ಸದಾಶಿವಶತಕ, ಅಪ್ರಸ್ತುತಪ್ರಶಂಸಾಶತಕಗಳನ್ನು ರಚಿಸಿದ್ದಾನೆ. ದೇವಲಾಪುರದನಂಜುಂಡನು ಕೃಷ್ಣರಾಜಶೃಂಗಾರಶತಕ, ತಿಪ್ಪಾಂಬಿಕಾಶತಕಗಳನ್ನು ರಚಿಸಿದ್ದಾನೆ. ಅಳಿಯ ಲಿಂಗರಾಜನ ಮಹಾಲಿಂಗಶತಕ, ಮುಮ್ಮಡಿ ಕೃಷ್ಣಭೂಪಾಲನ ಸಿರಿನಂಜುಂಡಶತಕ ಸರಳಸುಂದರವಾಗಿವೆ. ಕಪ್ಪಿನಿಯ (ಸು.1800) ನಂಜುಂಡಶತಕ ಕಂದದಲ್ಲಿ ರಚಿತವಾಗಿದೆ. ಚಾಮಸೂನು ಶ್ರೀಕಂಠಕಲಕಂಠಶತಕವನ್ನೂ ಪರ್ವತಕವಿ ಚಂದ್ರಲೇಖಾವಸಂತಶತಕವನ್ನೂ ರಚಿಸಿದ್ದಾರೆ. 19 ಮತ್ತು 20ನೆಯ ಶತಮಾನದ ಆದಿಯಲ್ಲಿ ಗುರುಗಳ, ರಾಜರ ಜೀವನವನ್ನು ನಿರೂಪಿಸುವ ಇನ್ನೊಂದು ಬಗೆಯ ಶತಕಗಳನ್ನು ಕಾಣಬಹುದು. ಕೃಷ್ಣರಾಜವರ್ಧಂತಿಶತಕ, ಚಾಮರಾಜಶತಕ, ಮುಳಬಾಗಿಲರ ಚರಿತ್ರಶತಕ, ಶ್ರೀಮದ್ಯುವರಾಜ ಕಂಠೀರವ ಕಲ್ಯಾಣಶತಕಂ - ಇವು ಇಂಥ ಕೃತಿಗಳು. ಕೆ.ರಾಮಸ್ವಾಮಿ ಅಯ್ಯಂಗಾರ್ ಅವರ ದಾರಿದ್ರ್ಯಶತಕ, ಕೆರೋಡಿ ಸುಬ್ಬರಾಯರ ಗಂಭೀರ ಶೃಂಗಾರಶತಕ- ಇವು ಗಮನಾರ್ಹವಾದವು. ಭರ್ತೃಹರಿಯ ಶತಕತ್ರಯವನ್ನು ಬಸವಪ್ಪಶಾಸ್ತ್ರಿಗಳು ಕನ್ನಡದಲ್ಲಿ ಪ್ರೌಢವಾಗಿ ಭಾಷಾಂತರಿಸಿದ್ದಾರೆ. ಭರ್ತೃಹರಿಯನ್ನು ಎಸ್.ವಿ.ಪರಮೇಶ್ವರಭಟ್ಟ ಹಾಗೂ ಎ.ಕೆ.ಪುಟ್ಟರಾಮು ಕನ್ನಡಕ್ಕೆ ಅನುವಾದಿಸಿದ್ದಾರೆ. ಡಿ.ವಿ.ಜಿ. ಅವರ ಮಂಕುತಿಮ್ಮನ ಕಗ್ಗ, ಪರಮೇಶ್ವರ ಭಟ್ಟರ ಇಂದ್ರಚಾಪ ಮೊದಲಾದವು ನೂರರ ಮಿತಿಯುಳ್ಳ ಶತಕಗಳಲ್ಲದಿದ್ದರೂ ಸಪ್ತಶತಿಯಂತೆ ಶತಕಸಾಹಿತ್ಯದಲ್ಲಿ ಸೇರಿಸಬಹುದು.

ಶತಕಸಾಹಿತ್ಯ ಕನ್ನಡದಲ್ಲಿ ಒಂದು ಸಾವಿರ ವರ್ಷದ ಹರಹನ್ನು ಪಡೆದಿದೆ. ನಾನೂರಕ್ಕೂ ಹೆಚ್ಚು ಶತಕಗಳಿದ್ದರೂ ಜನಪ್ರಿಯವಾದವು, ಉತ್ತಮವಾದವು ಕೆಲವು ಮಾತ್ರ. ನೂರು ಪದ್ಯವಿದ್ದರೆ ಸಾಕು, ಏನು ಬರೆದರೂ ಸಲ್ಲುತ್ತದೆ ಎಂದು ಹೊರಟ ಕಾರಣ ಶತಕವೆಂದರೆ ಶುಷ್ಕ ಎಂಬ ಭಾವನೆ ಬೆಳೆದಿದೆ. ಶೃಂಗಾರ ಶತಕಗಳು ಒಂದೆರಡು ಮಾತ್ರ ಇವೆ. ಬಹುಪಾಲು ಕನ್ನಡ ಶತಕಗಳು ಸ್ತೋತ್ರ, ದೈವನಾಮಾವಳಿಗಳಿಂದ ತುಂಬಿ ಸಾಹಿತ್ಯವೆಂಬ ಹೆಸರಿಗೆ ಹೊರತಾಗಿವೆ. ಹರಿಹರ, ರತ್ನಾಕರವರ್ಣಿಯಂಥ ಒಬ್ಬಿಬ್ಬರು ಮಾತ್ರ ಸಂಸ್ಕೃತ ಶತಕಸಾಹಿತ್ಯಕ್ಕೆ ಹೆಗಲೆಣೆಯಾಗಿ ನಿಲ್ಲಬಲ್ಲ ಕವಿಗಳಾಗಿದ್ದಾರೆ. (ಎಂ.ಎಚ್.ಕೆ.)

**ಕನ್ನಡದಲ್ಲಿ ಶಾಸ್ತ್ರ ಸಾಹಿತ್ಯ :** ಸಂಸ್ಕೃತ ಆಲಂಕಾರಿಕ ರಾಜಶೇಖರ ಕಾವ್ಯಕವಿ, ಶಾಸ್ತ್ರಕವಿ, ಉಭಯಕವಿ ಎಂಬ ಮೂರು ಬಗೆಯ ಕೃತಿಕಾರರನ್ನು ಗುರುತಿಸುತ್ತಾನೆ: ಕಾವ್ಯಕವಿ ರಮಣೀಯವಾಗಿ ಬರೆಯಬಲ್ಲನೇ ಹೊರತು ಖಚಿತತೆ ಪ್ರಧಾನ ಲಕ್ಷಣವಾದ ಶಾಸ್ತ್ರಭಾಗಗಳನ್ನು ಬರೆಯುವಲ್ಲಿ ಅವನು ಸೋತುಬಿಡಬಹುದು. ಶಾಸ್ತ್ರಕವಿ ಶಾಸ್ತ್ರಭಾಗಗಳನ್ನು ತರ್ಕಬದ್ಧವಾಗಿ ನಿರೂಪಿಸಬಲ್ಲವನಾದರೂ ಕಾವ್ಯಭಾಗಗಳನ್ನು ಬರೆಯುವಾಗ ನೀರಸವಾಗಿಬಿಡಬಹುದು. ಉಭಯಕವಿ ಮಾತ್ರ ಕಾವ್ಯ ಶಾಸ್ತ್ರಗಳೆರಡನ್ನೂ ಅವುಗಳಿಗೆ ಅಪಚಾರವೆಸಗದಂತೆ ಬರೆಯುವ ಸಮರ್ಥ ಎಂದು ರಾಜಶೇಖರ ಅಂಥವನನ್ನು ಹೊಗಳಿದ್ದಾನೆ.

ಈ ರೀತಿಯ ವಿಶ್ಲೇಷಣೆಯಿಂದ ಧ್ವನಿತವಾಗುವ ಸಂಗತಿಗಳು ಎರಡು - ಒಂದು, ಕಾವ್ಯ ಮತ್ತು ಶಾಸ್ತ್ರಗಳೆರಡೂ ಬೇರೆ ಬೇರೆ. ಎರಡು; ಕಾವ್ಯ ಅನುಭವ ಪ್ರಪಂಚಕ್ಕೆ ಸೇರಿದ್ದು, ಶಾಸ್ತ್ರ ಆಲೋಚನಾ ಪ್ರಪಂಚಕ್ಕೆ ಸೇರಿದ್ದು. ಅನುಭವ ಮತ್ತು ಆಲೋಚನೆ ಇವು ಮನುಷ್ಯನ ಪ್ರವೃತ್ತಿಗಳು. ಆದ್ದರಿಂದಲೇ ಒಂದು ಪ್ರಧಾನವಾಗಿರುವ ಕಡೆಯಲ್ಲಿಯೂ ಇನ್ನೊಂದು ಕಾಣಿಸಿಕೊಳ್ಳುವ ಸಾಧ್ಯತೆ ಇರುತ್ತದೆ. ಪಂಪನ ಆದಿಪುರಾಣದಂಥ ಕಾವ್ಯದಲ್ಲಿ ಶಾಸ್ತ್ರ ಎಂದು ಕರೆಯಿಸಿಕೊಳ್ಳುವ ಎಷ್ಟೋ ಭಾಗಗಳಿವೆ. ಕೇಶಿರಾಜನ ಶಬ್ದಮಣಿದರ್ಪಣದಂಥ ವ್ಯಾಕರಣದಲ್ಲಿ ವ್ಯಾಕರಣ ಪ್ರಕ್ರಿಯೆಗಳನ್ನು ನಿರೂಪಿಸುವಾಗ, ಪ್ರಯೋಗಗಳನ್ನು ಕೊಡುವಾಗ ಕೃತಿಕಾರನ ರಸಪ್ರಜ್ಞೆ ವ್ಯಕ್ತವಾಗುತ್ತದೆ. ಹಾಗೆ ನೋಡಿದರೆ ಯಾವುದೇ ಉತ್ತಮ ಕೃತಿಯಲ್ಲಿ ಕಾವ್ಯಾಂಶವೂ ಶಾಸ್ತ್ರಾಂಶವೂ ಇರಬಹುದು. ಒಟ್ಟಿನ ದೃಷ್ಟಿಯಲ್ಲಿ ಒಂದು ಕೃತಿ ಕಾವ್ಯವೇ ಶಾಸ್ತ್ರವೇ ಎಂಬುದನ್ನು ನಿರ್ಣಯಿಸುವುದು ಅದರ ಮೂಲೋದ್ದೇಶವನ್ನು ಅವಲಂಬಿಸಿರುತ್ತದೆ.

ನಮ್ಮ ಹಿಂದಿನವರ ಪ್ರಕಾರ ಶಾಸ್ತ್ರ ಕಾವ್ಯಕ್ಕೆ ಬಿಗಿ, ತೂಕ, ಗಹನತೆಗಳನ್ನು ತಂದುಕೊಟ್ಟರೆ, ಕಾವ್ಯ ಶಾಸ್ತ್ರಕ್ಕೆ ಚೆಲುವನ್ನೂ ಓದಿಸಿಕೊಂಡು ಹೋಗುವ ಗುಣವನ್ನೂ ಮಾನವೀಯ ಸ್ಪರ್ಶವನ್ನೂ ತಂದುಕೊಡುತ್ತದೆ.

ಹಿಂದೆ ಕನ್ನಡದ ಕವಿಯಾಗಲಿ, ಶಾಸ್ತ್ರಕಾರನಾಗಲಿ ಸಾಧ್ಯವಾದಷ್ಟು ಕ್ಷೇತ್ರಗಳಲ್ಲಿ ಪಾಂಡಿತ್ಯವನ್ನು ಪಡೆಯಬೇಕಾಗಿತ್ತು. ಈ ದೃಷ್ಟಿಯಿಂದ ಪಂಪ ವರ್ಣಿಸುವ ಅರ್ಜುನನ(ಅರಿಕೇಸರಿ) ವಿದ್ಯಾಭ್ಯಾಸ ಹೀಗಿದೆ: ಅಂತು ಪಂಚಾಂಗ ವ್ಯಾಕರಣದ ವೃತ್ತಿಭೇದಮಪ್ಪ ಛಂದೋವೃತ್ತಿಯೊಳಂ ಶಬ್ದಾಲಂಕಾರನಿಷ್ಠಿತಮಪ್ಪಲಂಕಾರದೊಳಂ ವ್ಯಾಸ ವಾಲ್ಮೀಕಿ ಕಶ್ಯಪ ಪ್ರಭೃತಿ ವಿರಚಿತಂಗಳಪ್ಪ ಮಹಾಕಾವ್ಯಂಗಳೊಳಂ ನಾಂದೀ ಪ್ರರೋಚ[ನಾ]ಪ್ರಸ್ತಾವ [ನೇ]ತಿವೃ[ತ್ತ] ಸಂಧಿಪ್ರವೇಶ ವಿಷ್ಕಂಭ ಕಪೋತಿಕಾ ವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೊಳಂ ಪದಿನೆಂಟು ಧರ್ಮಶಾಸ್ತ್ರಂಗಳೊಳಂ ನಾಲ್ಕು ವೇದದೊಳಮಾಱಂಗದೊಳಮಯ್ದುತೆಱದ ಮಂತ್ರಂಗಳೊಳ[ಮಾ]ಱುಂ ದರ್ಶನದೊಳಂ ಪ್ರತ್ಯಕ್ಷಾನುಮಾನ ಪ್ರಮಾಣಂಗಳೊಳಂ ಭರತಪ್ರಣೀತ ನೃತ್ಯಶಾಸ್ತ್ರದೊಳಂ ನಾರದಾದಿ ಪ್ರಣೀತ ಗಾಂಧರ್ವ ವಿದ್ಯಾವಿಶೇಷಂಗಳೊಳಂ ಗಜಾಗಮಜ್ಞ ರಾಜಪುತ್ರ ಗೌತಮ ವಾದ್ಯಾಕಿ ಪಾಳಕಾಪ್ಯಪ ಸುಪತಿ ಶ್ರೀ ಹರ್ಷಾದಿ ಪುರಾಣಪುರುಷ ವಿರಚಿತಂಗಳಪ್ಪ ಹಸ್ತಿಶಾಸ್ತ್ರಂಗಳೊಳಂ ಚಿತ್ರಕರ್ಮ ಪತ್ರಚ್ಛೇದ ಗೃಹಗಣಿತ ರತ್ನಪರೀಕ್ಷೆಗಳೊಳಂ ದಾರುಕರ್ಮ ವಾಸ್ತುವಿದ್ಯಾಪೂರ್ವಯಂತ್ರಪ್ರಯೋಗ ವಿ[ಷಾ]ಪಹರಣ ಸರಭೇದ ರತಿತಂತ್ರೇಂದ್ರಜಾಲ ವಿವಿಧ ವಿದ್ಯೆಗಳೊಳಮನೇಕಾಕ್ಷರ ಸ್ವರೂಪಂಗಳೊಳಂ ಚಾಪ ಚಕ್ರ ಪರಶು ಕೃಪಾಳ ಶಕ್ತಿ ತೋಮರ ಮುಸಲ ಮುಸುಂಡಿ ಭಿಂಡಿವಾಳ ಮುದ್ಗರ ಗದಾದಿ ವಿವಿಧಾಯುಧಂಗಳೊಳಮತಿ ಪ್ರವೀಣ[ನು] ಮಾರೂಢಸರ್ವಜ್ಞ ಮಹೇಂದ್ರಜಾಣ[ನು]ಮಾಗಿ. ಇದು ಹತ್ತನೆಯ ಶತಮಾನದ ವಿದ್ಯಾಭ್ಯಾಸದ ಚಿತ್ರವೂ ಆಗಿರಬಹುದು. ಇಲ್ಲಿ ಕಾವ್ಯ, ಶಾಸ್ತ್ರಗಳ ಸಂಗಮವನ್ನು ಗುರುತಿಸಬೇಕು. ಕವಿಗೆ ಪ್ರತಿಭೆ ಎಷ್ಟು ಆವಶ್ಯಕವೋ ಕಾವ್ಯ ವಿದ್ಯಾಪ್ರಚಯ ಪರಿಚಯವೂ ಅಷ್ಟೇ ಅಗತ್ಯವಾಗಿದ್ದಿತು. ಶಾಸ್ತ್ರಕಾರರಂತೂ ತಮ್ಮ ತಮ್ಮ ಶಾಸ್ತ್ರ ವಿಷಯಗಳಲ್ಲಿ ನಿಪುಣರಾಗಿದ್ದಂತೆಯೇ ಉಳಿದ ಶಾಸ್ತ್ರಗಳಲ್ಲಿಯೂ ತಕ್ಕ ಪರಿಣತಿಯನ್ನು ಪಡೆದಿರುತ್ತಿದ್ದರು. ಕಾಮಶಾಸ್ತ್ರ ಸಂಬಂಧಿ ಗ್ರಂಥ ಬರೆದಿರುವ ಚಂದ್ರರಾಜ ತಾನು ಕಾಮಶಾಸ್ತ್ರದಲ್ಲಲ್ಲದೆ ವ್ಯಾಕರಣ ಅರ್ಥಶಾಸ್ತ್ರ ಗಣಿತ ಅಲಂಕಾರ ಕಾವ್ಯ ನಾಟಕ ಹಯಶಾಸ್ತ್ರ ಅದ್ವೈತ ಸಂಗೀತ ಇತ್ಯಾದಿ ವಿಷಯಗಳಲ್ಲಿ ನೈಪುಣ್ಯವನ್ನು ಪಡೆದಿರುವುದಾಗಿ ಹೇಳಿಕೊಂಡಿದ್ದಾನೆ.

ಕನ್ನಡದಲ್ಲಿ ಹುಟ್ಟಿರುವ ಶಾಸ್ತ್ರ ಗ್ರಂಥಗಳಲ್ಲಿ ಆಯಾ ಶಾಸ್ತ್ರಕ್ಕೆ ಸಂಬಂಧಿಸಿದ ಪ್ರಮುಖ ಗ್ರಂಥಗಳನ್ನು ಮಾತ್ರ ಕೆಳಗೆ ಲಕ್ಷಿಸಲಾಗಿದೆ.

**ಅಲಂಕಾರಶಾಸ್ತ್ರ :** ಶ್ರೀ ವಿಜಯನ (ಸು.850) ಕವಿರಾಜಮಾರ್ಗ ಕನ್ನಡದಲ್ಲಿ ಉಪಲಬ್ಧವಾದ ಅತ್ಯಂತ ಪ್ರಾಚೀನ ಅಲಂಕಾರ ಗ್ರಂಥ. ಇದು ದಂಡಿಯ ಕಾವ್ಯಾದರ್ಶದ ಮಾದರಿಯಲ್ಲಿ ರಚಿತವಾಗಿದೆ. ಇದರಲ್ಲಿ ಮೂರು ಅಧ್ಯಾಯವಿದೆ. ಕಾವ್ಯಕ್ಕೆ ಸೌಂದರ್ಯವನ್ನು ತಂದುಕೊಡುವ ಎಲ್ಲವೂ ಅಲಂಕಾರವೆಂದು ಇವನ ಅಭಿಪ್ರಾಯ. ರಸಗಳಲ್ಲಿ ಇವನು ಶಾಂತವನ್ನು ಹೇಳಿರುವುದು ಗಮನಾರ್ಹವಾಗಿದೆ. ಈ ಗ್ರಂಥದಲ್ಲಿ ಕನ್ನಡ ನಾಡು, ನುಡಿಗಳ ಬಗ್ಗೆ, 850ಕ್ಕಿಂತ ಹಿಂದಿನ ಕನ್ನಡ ಸಾಹಿತ್ಯದ ಬಗ್ಗೆ, ಅನೇಕ ಕಾವ್ಯ ಪ್ರಕಾರಗಳ ಬಗ್ಗೆ ಹಲವು ಸ್ವಾರಸ್ಯಕರವಾದ ಹೇಳಿಕೆಗಳಿವೆ. ಎರಡನೆಯ ನಾಗವರ್ಮನ ಕಾವ್ಯಾವಲೋಕನದಲ್ಲಿ (ಸು.1042) ಐದು ಪರಿಚ್ಛೇದಗಳಿದ್ದು ಕೊನೆಯ ನಾಲ್ಕು ಅಲಂಕಾರ ಶಾಸ್ತ್ರಕ್ಕೆ ಮೀಸಲಾಗಿವೆ. ಇವನು ವಾಮನ, ರುದ್ರಟ, ಭಾಮಹ, ದಂಡಿ ಮುಂತಾದ ಸಂಸ್ಕೃತ ಅಲಂಕಾರಿಕರಿಂದ ವಿಷಯ ಸಂಗ್ರಹಿಸಿದ್ದಾನೆ. ಕವಿಸಮಯದ ಭಾಗಕ್ಕೆ

ರಾಜಶೇಖರನಿಗೆ ಋಣಿಯಾಗಿರುವಂತೆ ತೋರುತ್ತದೆ. ಈತ ಧ್ವನಿಯು ಮಾತೆತ್ತಿದ್ದರೂ ಅದೂ ಒಂದು ಅಲಂಕಾರ ಎಂದಿದ್ದಾನೆ. ಕವಿಕಾಮನ ಶೃಂಗಾರರತ್ನಾಕರ (ಸು.1200) ರಸದ ವಿಷಯವನ್ನು ವಿಸ್ತಾರವಾಗಿ ಪ್ರತಿಪಾದಿಸುವ ಮೊದಲ ಕನ್ನಡ ಗ್ರಂಥ. ರಸಮೇ ಮೊದಲ್ ಕವಿತೆಗೆ ಎಂದೀತ ಹೇಳಿದ್ದಾನೆ. ಮಾಧವನ ಮಾಧವಾಲಂಕಾರ ಸಂಸ್ಕೃತ ಕಾವ್ಯಾದರ್ಶದ ಸರಳಾನುವಾದ. ಸಾಳ್ವನ ರಸರತ್ನಾಕರದಲ್ಲಿ (ಸು.1550) ವಿಸ್ತಾರವಾದ ರಸದ ಪ್ರತಿಪಾದನೆ ಇದೆ. ಇವನ ಇನ್ನೊಂದು ಗ್ರಂಥ ಶಾರದಾವಿಲಾಸದಲ್ಲಿ ಧ್ವನಿಯ ಬಗ್ಗೆ ಮೊತ್ತಮೊದಲು ವಿಸ್ತೃತ ಚರ್ಚೆ ದೊರೆಯುತ್ತದೆ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿದ್ದ ತಿರುಮಲಾರ್ಯ ತನ್ನ ಅಪ್ರತಿಮವೀರಚರಿತದಲ್ಲಿ ಶಬ್ದಾಲಂಕಾರ, ಅರ್ಥಾಲಂಕಾರಗಳ ವಿವರಣೆಗಳನ್ನಿತ್ತಿದ್ದಾನೆ. ಜಾಯೇಂದ್ರ (1734) ಅಪ್ಪಯ್ಯ ದೀಕ್ಷಿತನ ಸಂಸ್ಕೃತ ಕುವಲಯಾನಂದವನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾನೆ. ಇವನ ಇನ್ನೊಂದು ಸ್ವಕೃತಿ ರಸಮಂಜರಿಯಲ್ಲಿ ನಾಯಕ, ನಾಯಿಕೆಯರ ಪ್ರಭೇದಗಳನ್ನು ವಿವರಿಸಲಾಗಿದೆ. ತಿಮ್ಮ ತನ್ನ ನವರಸಾಲಂಕಾರದಲ್ಲಿ (ಸು.1600 ಗ್ರಂಥ ಪ್ರಕಟವಾಗಿಲ್ಲ) ಮುಖ್ಯವಾಗಿ ಪೂರ್ವಗ್ರಂಥಗಳಿಂದ, ಅದರಲ್ಲೂ ವಿಶೇಷವಾಗಿ ಸಾಳ್ವನ ರಸರತ್ನಾಕರ ಮತ್ತು ಕವಿಕಾಮನ ಶೃಂಗಾರ ರತ್ನಾಕರಗಳಿಂದ ರಸಲಕ್ಷಣಗಳನ್ನು ಇದ್ದಕ್ಕಿದ್ದಂತೆ ಎತ್ತಿಕೊಂಡು ಸಂಕಲನ ಗ್ರಂಥವೆನ್ನುವ ರೀತಿಯಲ್ಲಿ ಬರೆದಿದ್ದಾನೆ. ಇದರ ಒಂದು ಗಮನಾರ್ಹ ವೈಶಿಷ್ಟ್ಯವೆಂದರೆ ಕೇವಲ ಚಂಪೂಕಾವ್ಯದ ಉದಾಹರಣೆಗಳನ್ನು ಕೊಡದೆ ಎರಡು ಷಟ್ಪದಿ ಹಾಗೂ ಒಂದು ತ್ರಿಪದಿಯನ್ನು ಉದಾಹರಿಸಿರುವುದು. ಅಳಿಯ ಲಿಂಗರಾಜನ ನರಪತಿಚರಿತ (ಸು.1867) ಶಬ್ದಾಲಂಕಾರ, ಅರ್ಥಾಲಂಕಾರಗಳನ್ನು ಹೇಳುವಲ್ಲಿ ಸಂಸ್ಕೃತ ಕುವಲಯಾನಂದವನ್ನು ಅನುಸರಿಸಿದೆ. ಅದೇ ಶತಮಾನದ ಉತ್ತರಾರ್ಧದಲ್ಲಿದ್ದ ಚಾವಲಿರಾಮಸ್ವಾಮಿಶಾಸ್ತ್ರಿಗಳ 'ಕರ್ನಾಟಕ ಛಂದೋಲಂಕಾರ ಸಾಹಿತ್ಯ ಲಕ್ಷಣ ಸಂಗ್ರಹ' ಛಂದಸ್ಸು ಹಾಗೂ ಅಲಂಕಾರ ಶಾಸ್ತ್ರಗಳ ಕೈಪಿಡಿಯಾಗಿದೆ. ಕನ್ನಡ ಕೈಪಿಡಿ, ತೀ.ನಂ.ಶ್ರೀಕಂಠಯ್ಯ ನವರ ಭಾರತೀಯ ಕಾವ್ಯಮೀಮಾಂಸೆ, ಕೆ.ಕೃಷ್ಣಮೂರ್ತಿಯವರ ಕನ್ನಡದಲ್ಲಿ ಕಾವ್ಯತತ್ತ್ವ, ದ.ರಾ.ಬೇಂದ್ರೆಯವರ ಸಾಹಿತ್ಯ ಮತ್ತು ವಿಮರ್ಶೆ, ಕುವೆಂಪು ಅವರ ರಸೋ ವೈ ಸಃ, ಡಿ.ವಿ.ಜಿ. ಅವರ ಸಾಹಿತ್ಯಶಕ್ತಿ, ವಿ.ಸೀ. ಅವರ ಸಾಹಿತ್ಯ ಸಂಪ್ರದಾಯ ಮತ್ತು ಹೊಸ ಮಾರ್ಗ, ಬಿ.ಎಚ್.ಶ್ರೀಧರ ಅವರ ಕಾವ್ಯಸೂತ್ರ ಜಿ.ಎಸ್.ಶಿವರುದ್ರಪ್ಪ ಅವರ ಕಾವ್ಯಾರ್ಥಚಿಂತನೆ ಎಚ್.ತಿಪ್ಪೇರುದ್ರಸ್ವಾಮಿಯವರ ತೌಲನಿಕಕಾವ್ಯಮೀಮಾಂಸೆ ಮುಂತಾದ ಗ್ರಂಥಗಳಲ್ಲಿ ಕನ್ನಡ ಕಾವ್ಯಮೀಮಾಂಸೆಗೆ ಸಂಬಂಧಿಸಿದಂತೆ ಸಾಕಷ್ಟು ಸಾಮಗ್ರಿ ಚರ್ಚಿತವಾಗಿದೆ.

**ವ್ಯಾಕರಣ ಗ್ರಂಥಗಳು :** ಕವಿರಾಜಮಾರ್ಗ ಮುಖ್ಯವಾಗಿ ಅಲಂಕಾರ ಗ್ರಂಥವಾದರೂ ಕನ್ನಡ ಭಾಷೆ, ಉಪಭಾಷೆ, ವ್ಯಾಕರಣಕ್ಕೆ ಸಂಬಂಧಿಸಿದ ಅನೇಕ ಸ್ವಾರಸ್ಯವಾದ ಸಂಗತಿಗಳನ್ನು ಇದರಲ್ಲಿ ಹೇಳಿದೆ. ರನ್ನ (ಸು.993), ನಯಸೇನರು (ಸು.1112) ವ್ಯಾಕರಣಗಳನ್ನು ಬರೆದಿರುವರೆಂಬ ಊಹೆ ಇದ್ದರೂ ಅವರ ಕೃತಿಗಳು ನಮಗೆ ಉಪಲಬ್ಧವಿಲ್ಲ. ಎರಡನೆಯ ನಾಗವರ್ಮ (ಸು.1042) ಈಗ ತಿಳಿದಮಟ್ಟಿಗೆ ಮೊಟ್ಟ ಮೊದಲ ವ್ಯಾಕರಣಕಾರ. ಇವನ ಕಾವ್ಯಾವಲೋಕನ ಪ್ರಧಾನವಾಗಿ ಅಲಂಕಾರಶಾಸ್ತ್ರ ಗ್ರಂಥವಾಗಿದ್ದರೂ ಮೊದಲನೆಯ ಅಧ್ಯಾಯ ಶಬ್ದಸ್ಮೃತಿಯನ್ನು ವ್ಯಾಕರಣಕ್ಕೆ ಮೀಸಲಾಗಿಟ್ಟಿದ್ದಾನೆ. ಇವನ ಭಾಷಾಭೂಷಣ ಸಂಸ್ಕೃತ ಭಾಷೆಯಲ್ಲಿರುವ ಕನ್ನಡ ವ್ಯಾಕರಣ. ಸೂತ್ರ ವೃತ್ತಿಗಳು ಸಂಸ್ಕೃತದಲ್ಲಿವೆ. ಉದಾಹರಣೆಗಳನ್ನು ಪೂರ್ವಕವಿಗಳ ಕನ್ನಡ ಗ್ರಂಥಗಳಿಂದ ಕೊಟ್ಟಿದ್ದಾನೆ. ಕೇಶಿರಾಜನ (ಸು.1260) ಶಬ್ದಮಣಿದರ್ಪಣ ಹಳಗನ್ನಡದ ಶ್ರೇಷ್ಠ ಗ್ರಂಥಗಳಲ್ಲೊಂದು. ಇದರಲ್ಲಿ ಶಬ್ದಸ್ಮೃತಿಯಲ್ಲಿರುವಂತೆಯೇ ಸೂತ್ರಗಳು ಕಂದಪದ್ಯದಲ್ಲಿವೆ. ಆದರೆ ತನ್ನ ಸೂತ್ರಗಳಿಗೆ ತಾನೇ ಗದ್ಯದಲ್ಲಿ ವೃತ್ತಿಯನ್ನು ಬರೆದು, ಬೇರೆ ಕಡೆಗಳಿಂದ ಲಕ್ಷ್ಯಗಳನ್ನು ಉದಾಹರಿಸಿದ್ದಾನೆ. ಶಬ್ದಮಣಿದರ್ಪಣಕ್ಕೆ ಲಿಂಗಣಾರಾಧ್ಯ, ನಿಟ್ಟೂರು ನಂಜಯ್ಯ (ಸು.1725) ಇವರು ಟೀಕೆ ಬರೆದಿದ್ದಾರೆ. ಭಟ್ಟಾಕಳಂಕನ (ಸು.1604) ಶಬ್ದಾನುಶಾಸನ ಭಾಷಾಭೂಷಣದಂತೆಯೇ ಸಂಸ್ಕೃತದಲ್ಲಿರುವ ಕನ್ನಡ ಪ್ರೌಢವ್ಯಾಕರಣ. ಈತ ತನ್ನ ಕೃತಿಗೆ ಸಂಸ್ಕೃತದಲ್ಲಿ ಭಾಷಾಮಂಜರಿ ಎಂಬ ವೃತ್ತಿಯನ್ನೂ ಮಂಜರೀ ಮಕರಂದವೆಂಬ ವ್ಯಾಖ್ಯಾನವನ್ನೂ ಬರೆದಿದ್ದಾನೆ. 19ನೆಯ ಶತಮಾನದ ಅನೇಕ ಪಾದ್ರಿಗಳು, ಐರೋಪ್ಯ ಮತ್ತು ದೇಶೀಯ ವಿದ್ವಾಂಸರು ಕನ್ನಡ ಭಾಷೆಗೆ ವ್ಯಾಕರಣಗಳನ್ನು ಬರೆದರು. ರೆ.ಕೇರಿಯವರ ಎ ಗ್ರಾಮರ್ ಆಫ್ ದಿ ಕರ್ನಾಟಕ ಲ್ಯಾಂಗ್ವೇಜ್ (1817), ಜಿ.ಎಂ.ಮೆಕೆರಲ್ ಅವರ ಗ್ರಾಮರ್ ಆಫ್ ದಿ ಕರ್ನಾಟಕ ಲ್ಯಾಂಗ್ವೇಜ್ (1820), ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯರ ಹೊಸಗನ್ನಡ ನುಡಿಗನ್ನಡಿ (1838), ಥಾಮಸ್ ಹಡ್ಸನ್ ಅವರ ವ್ಯಾಕರಣ (1859), ಸಿ.ಕ್ಯಾಂಪ್‌ಬೆಲ್ ಅವರ ಕನ್ನಡ ವ್ಯಾಕರಣಸಾರ, ಧೋಂಡೊ ಮುಳಬಾಗಿಲ ಅವರ ನುಡಿಗಟ್ಟು (1842), ವೆಂಕಟರಂಗೋಕಟ್ಟಿಯವರ ಕನ್ನಡ ಲಘುವ್ಯಾಕರಣ (1880), ಆರ್.ರಘುನಾಥರಾಯರ ಕರ್ನಾಟಕ ಭಾಷಾ ವ್ಯಾಕರಣೋಪನ್ಯಾಸ ಮಂಜರಿ (1894), ಬಿ.ಮಲ್ಲಪ್ಪನವರ ಶಬ್ದಾದರ್ಶ (1894), ತೀ.ನಂ.ಶ್ರೀ. ಅವರ ಹೊಸಗನ್ನಡ ವ್ಯಾಕರಣ ಮುಂತಾದ ವ್ಯಾಕರಣ ಗ್ರಂಥಗಳು ಪ್ರಕಟವಾಗಿವೆ.

**ನಿಘಂಟುಗಳು :** ರನ್ನನ ರನ್ನಕಂದ ಈಗ ದೊರೆತಿರುವ ಮೊದಲ ನಿಘಂಟು. ಹಳಗನ್ನಡದ ಶಬ್ದಗಳಿಗೆ ಅರ್ಥ ಹೇಳುವ ಈ ಕೃತಿಯ 11 ಕಂದ ಪದ್ಯಗಳು ಮಾತ್ರ ದೊರಕಿವೆ. ಕೇಶಿರಾಜನ ಶಬ್ದಮಣಿದರ್ಪಣ ವ್ಯಾಕರಣ ಗ್ರಂಥವಾದರೂ ಅದರಲ್ಲಿ ಅನೇಕ ಅಪೂರ್ವ ಪದಗಳಿಗೆ ಅರ್ಥವನ್ನು ಕೊಡಲಾಗಿದೆ. ಸು.1400ರಲ್ಲಿ ರಚಿತವಾದ ಗದ್ಯರೂಪದ ಕರ್ನಾಟಕ ಶಬ್ದಸಾರ, ಸುಮಾರು ಅದೇ ಕಾಲದ ಕರ್ನಾಟಕ ನಿಘಂಟುವಿನಲ್ಲಿ ಕಂದ, ವೃತ್ತಗಳಲ್ಲಿ ಅನೇಕ ಕನ್ನಡ ಪದಗಳಿಗೆ ಅರ್ಥ ಹೇಳಿದೆ. ಲಿಂಗಮಂತ್ರಿಯ ಕಬ್ಬಿಗರ ಕೈಪಿಡಿ (ಸು.1530) ವಾರ್ಧಕ ಷಟ್ಪದಿ ರೂಪವಾದ ಪ್ರಸಿದ್ಧ ನಿಘಂಟು. ಶೃಂಗಾರ ಕವಿಯ (ಸು.1600) ಕರ್ನಾಟಕ ಸಂಜೀವನದಲ್ಲಿ ಕುಳಕ್ಷಳ ಶಬ್ದಗಳಿಗೆ, ಸೂರ್ಯಕವಿಯ (ಸು.1640) ಕವಿ ಕಂಠಾಹಾರದಲ್ಲಿ ಹಳಗನ್ನಡ ಪದಗಳಿಗೆ ಅರ್ಥವಿವರಣೆ ಬಂದಿದೆ. 2ನೆಯ ನಾಗವರ್ಮನ ಅಭಿಧಾನ ವಸ್ತುಕೋಶ, 2ನೆಯ ಮಂಗರಾಜನ ಅಭಿನವ ನಿಘಂಟು (ಸು.1398), ಕರ್ತೃ ಗೊತ್ತಿಲ್ಲದ ಶಬ್ದರತ್ನಾಕರ (ಸು.1600), ಚೆನ್ನಕವಿಯ ನಾನಾರ್ಥ ಕಂದ (ಸು.1600), ದೇವೋತ್ತಮನ ನಾನಾರ್ಥರತ್ನಾಕರ (ಸು.1600), ಏಕಾಕ್ಷರ ನಿಘಂಟು ಇತ್ಯಾದಿಗಳಲ್ಲಿ ಸಂಸ್ಕೃತ ಪದಗಳಿಗೆ ಅರ್ಥ ಹೇಳಿದೆ. ಹಲಾಯುಧನ ಸಂಸ್ಕೃತ ಅಭಿಧಾನ ರತ್ನಮಾಲಾ, ಅಮರಕೋಶ ಇವುಗಳಿಗೆ ಕನ್ನಡ ಟೀಕೆಗಳು ದೊರೆಯುತ್ತವೆ. ಅಮೃತನಂದಿಯ ಅಕಾರಾದಿ ವೈದ್ಯ ನಿಘಂಟು (ಸು.1300), ಕರ್ತೃ ಗೊತ್ತಿಲ್ಲದ ಧನ್ವಂತರೀಯ ನಿಘಂಟು (ಸು.1500), ಇಂದ್ರ ದೀಪಿಕಾ ನಿಘಂಟು, ಮದನಾರಿ ವೈದ್ಯ ನಿಘಂಟು - ಇವುಗಳಲ್ಲಿ ವೈದ್ಯಕ್ಕೆ ಸಂಬಂಧಿಸಿದ ಸಂಸ್ಕೃತ ಪದಗಳಿಗೆ ಅರ್ಥ ಹೇಳಿದೆ. ಚತುರಾಸ್ಯ ಬೊಮ್ಮರಸನ ಚತುರಾಸ್ಯ ನಿಘಂಟು (ಸು.1450), ವಿರಕ್ತ ತೋಂಟದಾರ್ಯನ ಕರ್ನಾಟಕ ಶಬ್ದಮಂಜರಿ (ಸು.1560) ಇವುಗಳಲ್ಲಿ ದೇಶ್ಯ, ತತ್ಸಮ, ತದ್ಭವ ಶಬ್ದಗಳಿಗೆ ಅರ್ಥ ಹೇಳಿದೆ. ಕರ್ನಾಟಕ ಶಬ್ದಮಂಜರಿಗೆ ನಾಲ್ಕು ಬೇರೆ ಬೇರೆ ಟೀಕೆಗಳು ದೊರೆಯುತ್ತವೆ. ಕರ್ತೃ ತಿಳಿಯದ ಭಾರತ ನಿಘಂಟು (ಸು.1600) ಎಂಬ ಕೃತಿಯಲ್ಲಿ ಕುಮಾರವ್ಯಾಸ ಭಾರತದಲ್ಲಿನ ದೇಶ್ಯ ಶಬ್ದಗಳಿಗೆ 67 ಕಂದಪದ್ಯಗಳಲ್ಲಿ ಅರ್ಥ ಹೇಳಿದೆ. ಮುಮ್ಮಡಿ ಕೃಷ್ಣರಾಜನ ಚಾಮುಂಡಿಕಾ ಲಘು ನಿಘಂಟು (ಸು.1848) ಎಂಬ ಕೃತಿಯಲ್ಲಿ ದೇವತೆಗಳು ಮೊದಲಾದವರು ಹಸ್ತದಲ್ಲಿ ಧರಿಸುವ ಆಯುಧಗಳು, ಹಸ್ತ ವಿಶೇಷಗಳು, ಮೃಗನಾಮಾವಳಿ ಇವುಗಳಿಗೆ ಸಂಬಂಧಿಸಿದ ಸಂಸ್ಕೃತ ಶಬ್ದಗಳಿಗೆ ಪ್ರತಿಪದ ಕನ್ನಡ ಟೀಕನ್ನು ಕೊಟ್ಟಿದೆ. 19ನೆಯ ಶತಮಾನದಿಂದೀಚೆಗೆ ಅನೇಕ ಪಾದ್ರಿಗಳು, ದೇಶೀಯ ವಿದ್ವಾಂಸರು ನಿಘಂಟುಗಳನ್ನು ಬರೆದಿದ್ದಾರೆ. ಅವುಗಳಲ್ಲಿ ರೆವರೆಂಡ್ ಎಫ್. ಕಿಟ್ಟೆಲರ ಕನ್ನಡ-ಇಂಗ್ಲಿಷ್ ನಿಘಂಟು (1894) ಅತ್ಯಂತ ಶ್ರೇಷ್ಠವಾದುದು. ಕನ್ನಡದ ಪ್ರೌಢ ವಿದ್ಯಾರ್ಥಿಗಳಿಗೆ ಪಂಡಿತರಿಗೆ ವಿದ್ವಾಂಸರಿಗೆ ಇದು ಇಂದಿಗೂ ಮಾರ್ಗದರ್ಶಿಯಾಗಿದೆ. ಇದರಲ್ಲಿ ಕನ್ನಡ ಪದಗಳಿಗೆ ಸಂವಾದಿಯಾದ ಇತರ ದ್ರಾವಿಡ ಭಾಷೆಯ ಪದಗಳನ್ನು ಕೊಟ್ಟಿರುವುದಲ್ಲದೆ, ಸಂಸ್ಕೃತ ಮತ್ತು ತದ್ಭವ ಪದಗಳಿಗೆ ಅರ್ಥವನ್ನು ಕೊಟ್ಟಿದೆ. ಸಾಧ್ಯವಾದಷ್ಟು ಕಡೆ ಪ್ರಯೋಗಗಳನ್ನು ಸೂಚಿಸಿದೆ. 20ನೆಯ ಶತಮಾನದಲ್ಲಿಯೂ ಅನೇಕ ನಿಘಂಟುಗಳು ರಚಿತವಾಗಿವೆ. ಶಿವರಾಮ ಕಾರಂತರ ಸಿರಿಗನ್ನಡ ಅರ್ಥಕೋಶ (ಸು.1940) ಚೆ.ಎ.ಕವಲಿಯವರ ಸಚಿತ್ರ ಕನ್ನಡ-ಕನ್ನಡ ಕಸ್ತೂರೀ ಕೋಶ (1957)- ಆರ್.ಎಸ್.ರಾಮರಾವ್ ಅವರ ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟು ಮುಂತಾದುವನ್ನು ಇಲ್ಲಿ ಹೆಸರಿಸಬಹುದು.

ಒಬ್ಬ ಕವಿಯನ್ನು ಕುರಿತಂತೆ ಅವನು ಉಪಯೋಗಿಸುವ ಪದಗಳಿಗೆ ಅರ್ಥ ವಿವರಣೆ ಕೊಡುವ ನಿಘಂಟುಗಳೂ ಕನ್ನಡದಲ್ಲಿ ರಚಿತವಾಗಿವೆ. ಅವುಗಳಲ್ಲಿ ಕುಮಾರವ್ಯಾಸ ನಿಘಂಟು ಹೆಸರಿಸಬಹುದಾದ್ದು.

ಈಗ ಪ್ರಕಟವಾಗಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು, ನಿಘಂಟು ಇತಿಹಾಸದಲ್ಲಿ ಒಂದು ಮೈಲಿಗಲ್ಲಾಗಿದೆ. ಕನ್ನಡ ಭಾಷೆಯಲ್ಲಿನ ಎಲ್ಲ ತೆರನ ಸಾಹಿತ್ಯವನ್ನು ಈ ನಿಘಂಟುವಿನಲ್ಲಿ ಬಳಸಿಕೊಳ್ಳಲಾಗಿದೆ. ಹಲ್ಮಿಡಿ ಶಾಸನದಿಂದ (ಸು.450) ಹಿಡಿದು 18ನೆಯ ಶತಮಾನದ ವರೆಗಿನ ಪ್ರಕಟಿತ, ಅಪ್ರಕಟಿತ ಶಾಸನಗಳ ಸಾಮಗ್ರಿಯನ್ನೂ ಕವಿರಾಜಮಾರ್ಗದಿಂದ ಶ್ರೀ ರಾಮಾಯಣದರ್ಶನಂ ವರೆಗಿನ, ಇನ್ನೂ ಇತ್ತೀಚಿನ ಸಾಹಿತ್ಯ ಸಾಮಗ್ರಿಯನ್ನೂ ಕನ್ನಡದಲ್ಲಿ ಬಳಕೆಯಾಗಿರುವ, ಬಳಕೆಯಾಗುತ್ತಿರುವ ಎಲ್ಲ ಪದಗಳಿಗೂ ಭಾಷಾ ವಿಜ್ಞಾನದ ನಿಯಮಗಳಿಗನುಸಾರವಾಗಿ ಚಾರಿತ್ರಿಕ ವಿವರಣೆಯೊಂದಿಗೆ ಅರ್ಥವನ್ನು ಕೊಡಲಾಗಿದೆ. ಇದು ಪ್ರಧಾನವಾಗಿ ಕನ್ನಡ ನಿಘಂಟಾದರೂ ಕನ್ನಡ ಭಾಷೆಯಲ್ಲಿ ಸೇರಿಹೋಗಿರುವ ದೇಶ್ಯ, ತದ್ಭವ, ತತ್ಸಮ, ಅನ್ಯದೇಶ್ಯ ಮುಂತಾದ ಶಬ್ದಗಳೂ ಧಾರ್ಮಿಕ, ಲೌಕಿಕ, ವ್ಯಾವಹಾರಿಕ, ಪಾರಿಭಾಷಿಕ ಮುಂತಾದ ಶಬ್ದಗಳೂ ಇಲ್ಲಿ ಸೇರಿವೆ. ಯಾವುದಾದರೂ ಒಂದು ಶಬ್ದ ಅಪೂರ್ವವಾಗಿದ್ದರೆ, ವಿಶೇಷಾರ್ಥವುಳ್ಳದ್ದಾಗಿದ್ದರೆ ಅಥವಾ ಶಾಸ್ತ್ರ ಪರಿಭಾಷೆಯಾಗಿದ್ದರೆ ಅದರ ಅರ್ಥವನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ ಉಚಿತವರಿತು ಪ್ರಯೋಗಗಳನ್ನು ಕೊಡಲಾಗುವುದು. ಪ್ರತಿಯೊಂದು ಶಬ್ದದ ಅರ್ಥ ನಿರ್ಣಯಕ್ಕೂ ಪ್ರಯೋಗಗಳನ್ನೇ ಮುಖ್ಯ ಆಧಾರವಾಗಿಟ್ಟುಕೊಳ್ಳಲಾಗಿದೆ. ಪ್ರತಿಯೊಂದು ಮುಖ್ಯ ಶಬ್ದಕ್ಕೂ ನಿಷ್ಪತ್ತಿಯನ್ನು ಸೂಚಿಸಲಾಗಿದೆ. ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಜೀವಂತ ಪ್ರತೀಕದಂತಿರುವ ಚಾರಿತ್ರಿಕ ಕ್ರಮದ ಎಂಟು ಸಂಪುಟಗಳ ಈ ನಿಘಂಟು ಇಷ್ಟು ದೊಡ್ಡ ಪ್ರಮಾಣದಲ್ಲಿ ಈ ವಿಧದಲ್ಲಿ ರಚಿತವಾಗಿ ಪ್ರಕಟವಾಗುತ್ತಿರುವುದು (1995) ಇದೇ ಮೊದಲು.

**ಛಂದೋಗ್ರಂಥಗಳು :** ಒಂದನೆಯ ನಾಗವರ್ಮನ (ಸು.990) ಛಂದೋಂಬುಧಿ ದೊರೆತ ಛಂದೋಗ್ರಂಥಗಳಲ್ಲಿ ಪ್ರಾಚೀನವಾದುದು. ಆದರೆ ಇದಕ್ಕಿಂತ ಹಿಂದೆ 9ನೆಯ ಶತಮಾನದಲ್ಲಿ ಗುಣಗಾಂಕೀಯ ಎಂಬ ಛಂದೋಗ್ರಂಥವಿದ್ದಿತೆಂದು ಊಹಿಸಲು ಅವಕಾಶವಿದೆ. ಕವಿರಾಜಮಾರ್ಗದಲ್ಲಿ ಛಂದಸ್ಸಿಗೆ ಸಂಬಂಧಿಸಿದ ಅನೇಕ ಮುಖ್ಯ ಸಂಗತಿಗಳಿವೆ. ಆದರೂ ಛಂದೋಂಬುಧಿ ಕನ್ನಡದ ಏಕೈಕ, ಅಧಿಕೃತ ಪ್ರಾಚೀನ ಲಕ್ಷಣಗ್ರಂಥ (ನೋಡಿ: ನಾಗವರ್ಮ I). ಜಯಕೀರ್ತಿಯ ಛಂದೋನುಶಾಸನ (ಏಳನೆಯ ಅಧ್ಯಾಯ), 3ನೆಯ ಸೋಮೇಶ್ವರನ ಮಾನಸೋಲ್ಲಾಸ, ಶಾರ್ಙ್ಗದೇವನ ಸಂಗೀತರತ್ನಾಕರ ಮುಂತಾದ ಸಂಸ್ಕೃತ ಗ್ರಂಥಗಳಲ್ಲಿ ಕನ್ನಡ ಛಂದಸ್ಸಿಗೆ ಸಂಬಂಧಿಸಿದ ಅನೇಕ ಸಂಗತಿಗಳು ಪ್ರತಿಪಾದಿತವಾಗಿವೆ. 2ನೆಯ ನಾಗವರ್ಮನ ಛಂದೋವಿಚಿತಿ ಎಂಬ ಗ್ರಂಥ ಉಪಲಬ್ಧವಿಲ್ಲ. ಈಶ್ವರಕವಿಯ (ಸು.1500) ಕವಿಜಿಹ್ವಾಬಂಧನ, ಗುಣಚಂದ್ರನ ಛಂದಸ್ಸಾರ (ಸು.1650), ಶಾಲ್ಯದ ಕೃಷ್ಣರಾಜನ ಷಟ್ಪ್ರತ್ಯಯ (1748), ವೀರಭದ್ರ ಕವಿಯ ನಂದಿ ಛಂದಸ್ಸು ಮುಂತಾದ ಛಂದೋಗ್ರಂಥಗಳಲ್ಲಿಯೂ ಕನ್ನಡ ಛಂದಸ್ಸಿನ ವಿಷಯಗಳು ಸ್ವಲ್ಪಮಟ್ಟಿಗೆ ನಿರೂಪಿತವಾಗಿವೆ.

**ವೈದ್ಯಶಾಸ್ತ್ರ :** ಜಗದ್ದಳ ಸೋಮನಾಥನ ಕರ್ನಾಟಕ ಕಲ್ಯಾಣಕಾರಕ (ಸು.1175) ಈಗ ದೊರೆತಿರುವ ಮೊದಲನೆಯ ಕನ್ನಡ ಆಯುರ್ವೇದ ಗ್ರಂಥ. ಇದು ಪೂಜ್ಯಪಾದನ ಸಂಸ್ಕೃತ ಕಲ್ಯಾಣಕಾರಕದ ಅನುವಾದ. ದೇವೇಂದ್ರಮುನಿ ಬಾಲಗ್ರಹ ಚಿಕಿತ್ಸೆ (ಸು.1200) ಎಂಬ ಗ್ರಂಥವನ್ನು ಬರೆದಿದ್ದಾನೆ. 1ನೆಯ ಮಂಗರಾಜನ ಖಗೇಂದ್ರಮಣಿದರ್ಪಣ (ಸು.1360) ಮುಖ್ಯವಾಗಿ ಒಂದು ವಿಷವೈದ್ಯಗ್ರಂಥ. ಇವನ ಗ್ರಂಥಕ್ಕೆ ಮೂಲ ಪೂಜ್ಯಪಾದನ ವೈದ್ಯಗ್ರಂಥದ ಸ್ಥಾವರವಿಷಪ್ರಕ್ರಿಯೆ. ಕನ್ನಡದ ಇತರ ವೈದ್ಯಗ್ರಂಥಗಳು ಹೀಗಿವೆ: ಶ್ರೀಧರದೇವನ ವೈದ್ಯಾಮೃತ (ಸು.1500), ಸಾಳ್ವನ ವೈದ್ಯಸಾಂಗತ್ಯ (ಸು.1500), ಚೆನ್ನರಾಜನ ವೈದ್ಯಸಾರ ಸಂಗ್ರಹ (ಸು.1570), ನಂಜನಾಥ ಭೂಪಾಲನ ವೈದ್ಯಸಾರ ಸಂಗ್ರಹ (ಸು.1700), ವೀರರಾಜನ ಸಕಲವೈದ್ಯಸಂಹಿತಾ ಸಾರಾರ್ಣವ (ಸು.1700), ಬ್ರಹ್ಮನ ವೈದ್ಯಕಂದ (ಸು.1750), ತಿಮ್ಮರಾಜಗೌಡನ ಸ್ತ್ರೀವೈದ್ಯ (ಸು.1750).

**ಪಶುವೈದ್ಯ :** ಕೀರ್ತಿವರ್ಮನ (ಸು.1100) ಗೋವೈದ್ಯ ಕನ್ನಡ ವೈದ್ಯ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದುದು. ಇದರಲ್ಲಿ ಗೋವುಗಳ ವ್ಯಾಧಿಗಳಿಗೆ ಔಷಧ, ಯಂತ್ರ ಕಟ್ಟುವುದು, ಬರೆಹಾಕುವುದು ಇತ್ಯಾದಿ ವಿಷಯಗಳನ್ನು ಹೇಳಿದೆ. ಅಭಿನವಚಂದ್ರ (ಸು.1400) ಅಶ್ವಶಾಸ್ತ್ರವನ್ನು ಬರೆದ ಮೊದಲ ಕನ್ನಡ ಕೃತಿಕಾರ. ಈ ಕೃತಿಯಲ್ಲಿ ಕುದುರೆಗಳ ಸರ್ವಾಂಗ ಪರೀಕ್ಷೆ, ವರ್ಣ, ಸುಳಿ, ಹಲ್ಲಿನಿಂದ ವಯಸ್ಸನ್ನು ನಿರ್ಣಯಿಸುವುದು, ಚಿಕಿತ್ಸೆ ಇತ್ಯಾದಿ ವಿಷಯಗಳಿವೆ. ಬಾಚರಸನ ಅಶ್ವವೈದ್ಯ (ಸು.1500) ಕುದುರೆಗಳ ಕಾಯಿಲೆಗಳಿಗೆ ಸಂಬಂಧಿಸಿದ್ದು. ರಾಮಚಂದ್ರ (ಸು.1625) ಶಾಲಿಹೋತ್ರನ ಅಶ್ವಶಾಸ್ತ್ರವನ್ನು ಗದ್ಯದಲ್ಲಿ ಕನ್ನಡಕ್ಕೆ ಅನುವಾದ ಮಾಡಿದ್ದಾನೆ. ಪದ್ಮಣಪಂಡಿತನು ಹಯಸಾರ ಸಮುಚ್ಚಯ (ಸು.1627) ಎಂಬ ಗ್ರಂಥವನ್ನು ಬರೆದಿದ್ದಾನೆ. ಗಂಗರ ದೊರೆ ಶಿವಮಾರನ ಗಜಾಷ್ಟಕ (8ನೆಯ ಶತಮಾನ) ಕನ್ನಡದ ಪ್ರಾಚೀನ ಗಜಶಾಸ್ತ್ರ ಗ್ರಂಥ. ಈ ಪುಟ್ಟಕೃತಿ (8 ಪದ್ಯ) ಉಪಲಬ್ಧವಾಗಿಲ್ಲದಿದ್ದರೂ ಒನಕೆವಾಡಾಗುವಷ್ಟು ಜನ ಪ್ರಿಯತೆಯನ್ನು ಪಡೆದಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ. ವೀರಭದ್ರರಾಜ (ಸು.1600) ಪಾಲಕಾಪ್ಯನ ಹಸ್ತ್ಯಾಯುರ್ವೇದಕ್ಕೆ ಕನ್ನಡ ಟೀಕೆಯನ್ನು ಬರೆದಿದ್ದಾನೆ.

**ಜ್ಯೋತಿಷ್ಯ, ಗಣಿತ, ಸೂಪ, ನೀತಿ, ವೃಷ್ಟಿ ಮತ್ತು ರತ್ನಶಾಸ್ತ್ರ :** ಶ್ರೀಧರಾಚಾರ್ಯನ ಜಾತಕತಿಲಕ (ಸು.1049) ಕನ್ನಡದ ಮೊದಲ ಜ್ಯೋತಿಷ್ಯ ಗ್ರಂಥ. ಇದರಲ್ಲಿ ಗ್ರಹಣಗಳು, ಮುಹೂರ್ತಗಳು, ಉತ್ಪಾತಗಳು ಮತ್ತು ಅವುಗಳ ಫಲಾಫಲಗಳು ಇತ್ಯಾದಿ ಸಂಗತಿಗಳು ನಿರೂಪಿತವಾಗಿವೆ. ಈತ ವರಾಹಮಿಹಿರನ ಬೃಹಜ್ಜಾತಕ ಮತ್ತು ಲಘುಜಾತಕಗಳು, ಕಲ್ಯಾಣವರ್ಮನ ಸಾರಾವಳಿ ಇತ್ಯಾದಿಗಳಿಂದ ವಿಷಯ ಸಂಗ್ರಹಸಿದ್ದಾನೆ. ಗಣಿತಶಾಸ್ತ್ರಕ್ಕೆ ಸಂಬಂಧಿಸಿದಂತೆ ರಾಜಾದಿತ್ಯ (ಸು.1190) ಕನ್ನಡದಲ್ಲಿ ವ್ಯವಹಾರಗಣಿತ, ಕ್ಷೇತ್ರಗಣಿತ, ವ್ಯವಹಾರರತ್ನ ಲೀಲಾವತಿ, ಚಿತ್ರಹಸುಗೆ, ಜೈನಗಣಿತ ಸೂತ್ರ ಟೀಕೋದಾಹರಣ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಆ ಕಾಲದ ಗಣಿತಶಾಸ್ತ್ರಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳನ್ನು ತನ್ನ ಗ್ರಂಥದಲ್ಲಿ ಈತ ತಿಳಿಸಿದ್ದಾನೆ. ಭಾಸ್ಕರ (ಸು.1650) ಬೇಹಾರಗಣಿತವೆಂಬ ಕೃತಿಯನ್ನು ರಚಿಸಿರುವನು. ತಿಮ್ಮರಸನ ಕ್ಷೇತ್ರಗಣಿತ (ಸು.1700) ಹೊಲಗಳನ್ನು ಅಳೆಯುವ ಬೇರೆ ಬೇರೆ ಮಾನಗಳ ವಿವರಗಳನ್ನು ಕೊಡುವುದರಿಂದ ಒಂದು ಸ್ವಾರಸ್ಯ ಗ್ರಂಥವಾಗಿದೆ. ದೈವಜ್ಞವಲ್ಲಭ (ಸು.1700) ಮಹಾವೀರಾಚಾರ್ಯನ ಗಣಿತಕ್ಕೆ ಕನ್ನಡ ವ್ಯಾಖ್ಯಾನವನ್ನು ರಚಿಸಿದ್ದಾನೆ. ಬಾಲವೈದ್ಯದ ಚೆಲುವನ (ಸು.1785) ಕನ್ನಡ ಲೀಲಾವತಿಯಲ್ಲಿ ಸಾಧಾರಣ ಮತ್ತು ಕ್ಷೇತ್ರಗಣಿತ ಎರಡನ್ನೂ ನಿರೂಪಿಸಲಾಗಿದೆ. ಕನ್ನಡದಲ್ಲಿ ಅನೇಕ ಶಕುನ ಗ್ರಂಥಗಳು ರಚಿತವಾಗಿವೆ. ಶುಭಚಂದ್ರನ ನರಪಿಂಗಳಿ (ಸು.1500), ಲಕ್ಷ್ಮಣಾಂಕನ ಶಕುನಸಾರ, ಚಾಕರಾಜನ ಶಕುನಪ್ರಪಂಚ, ಮಾಧವದೇವನ ನರಪಿಂಗಲಿ (ಸು.1650), ದೇವನ ಶಕುನಪ್ರಪಂಚ (ಸು.1725 ಉಪಲಬ್ಧವಿಲ್ಲ) - ಇವು ಶಕುನ ಗ್ರಂಥಗಳಲ್ಲಿ ಮುಖ್ಯವಾದವು. ಸೂಪಶಾಸ್ತ್ರ ಗ್ರಂಥಗಳಲ್ಲಿ 3ನೆಯ ಮಂಗರಸನ ಸೂಪಶಾಸ್ತ್ರ (ಸು.1508) ಅತ್ಯಂತ ಪ್ರಸಿದ್ಧವಾದುದು. ಇದರಲ್ಲಿ ಹಲವಾರು ರೀತಿಯ ಅಡುಗೆಗಳ ಸ್ವಾರಸ್ಯಕರವಾದ ನಿರೂಪಣೆಯಿದೆ. ಇವನ ಸಮ್ಯಕ್ತ್ವ ಕೌಮುದಿ ಎಂಬ ಕಾವ್ಯದಲ್ಲಿ ಒಂದು ಭೋಜನಸಮಾರಂಭದ ವಿನೋದ ವರ್ಣನೆ ಇದೆ. 2ನೆಯ ಚಾವುಂಡರಾಯನ (ಸು.1025) ಲೋಕೋಪಕಾರ ಎಂಬ ಗ್ರಂಥದಲ್ಲಿ ಸೂಪಶಾಸ್ತ್ರ ಎಂಬ ಒಂದು ಪ್ರತ್ಯೇಕ ಅಧ್ಯಾಯವಿದ್ದು ಈ ಅಧ್ಯಾಯಕ್ಕೆ ಕನ್ನಡದಲ್ಲಿ ಒಂದು ಟೀಕೂ ದೊರೆಯುತ್ತದೆ. ದುರ್ಗಸಿಂಹನ ಪಂಚತಂತ್ರ (ಸು.1031) ಕಾವ್ಯ, ನೀತಿ ಇವೆರಡರ ಸಾರಭೂತ ಕೃತಿ. ವಸುಭಾಗಭಟ್ಟನ ಸಂಸ್ಕೃತ ಮೂಲ ಕನ್ನಡ ಪಂಚತಂತ್ರಕ್ಕೆ ಆಕರವೆಂದು ತಿಳಿದುಬರುತ್ತದೆ. ಇದರಲ್ಲಿ ಪ್ರಾಣಿಗಳ ಕಥೆಯ ಮೂಲಕ ರಾಜನೀತಿ ನಿರೂಪಣೆಗೊಂಡಿದೆ. ಚಿಕುಪಾಧ್ಯಾಯ (ಸು.1672) ಸಂಸ್ಕೃತ ಕಾಮಂದಕ ನೀತಿಗೆ ಗದ್ಯರೂಪವಾದ ಟೀಕೆಯೊಂದನ್ನು ಬರೆದಿದ್ದಾನೆ. ರಟ್ಟಕವಿಯ ರಟ್ಟಮತ (ಸು.1300) ವೃಷ್ಟಿಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥ. ಇದರಲ್ಲಿ ಮಳೆಯ ಕುರುಹು, ಶಕುನಗಳು, ಬಿತ್ತುವುದು, ಭೂಜಲವನ್ನು ತೆಗೆಯುವುದು, ಕ್ಷಾಮ ಇತ್ಯಾದಿ ವಿಷಯಗಳಿವೆ. ಬಾಲವೈದ್ಯದ ಚೆಲುವನ ರತ್ನಶಾಸ್ತ್ರದಲ್ಲಿ ಬೇರೆ ಬೇರೆ ಜಾತಿಯ ರತ್ನಗಳು ಅವುಗಳ ಗುಣದೋಷಗಳು, ಕೃತ್ರಿಮರತ್ನದ ಲಕ್ಷಣ ಇತ್ಯಾದಿ ಸಂಗತಿಗಳಿವೆ.

**ಸಂಗೀತಶಾಸ್ತ್ರ ಇತ್ಯಾದಿ :** ಸಂಗೀತಶಾಸ್ತ್ರಕ್ಕೆ ಸಂಬಂಧಿಸಿದ ವಿಸ್ತಾರವಾದ ನಿರೂಪಣೆ ನಿಜಗುಣಶಿವಯೋಗಿಗಳ ವಿವೇಕಚಿಂತಾಮಣಿಯ ನಾಲ್ಕನೆಯ ಅಧ್ಯಾಯದಲ್ಲಿ ದೊರಕುತ್ತದೆ. ಸಂಗೀತಶಾಸ್ತ್ರಕ್ಕೆ ಸಂಬಂಧಿಸಿದಂತೆ ಸಂಗೀತ ರತ್ನಾಕರ ಎಂಬ ಒಂದು ಗ್ರಂಥವೂ ಪ್ರಕಟವಾಗಿದೆ (ಸಂಸ್ಕೃತ ಕೃತಿಯ ಅನುವಾದವಲ್ಲ). ಇದಲ್ಲದೆ ಕನ್ನಡದ ಅನೇಕ ಕಾವ್ಯಗಳಲ್ಲಿ ಸಂಗೀತ ಹಾಗೂ ನಾಟ್ಯಶಾಸ್ತ್ರಕ್ಕೆ ಸಂಬಂಧಿಸಿದ ವರ್ಣನೆಗಳು ವಿಪುಲವಾಗಿ ದೊರೆಯುತ್ತವೆ. ಸಿಂಹಭೂಪಾಲನ (16ನೆಯ ಶತಮಾನ) ಲಾಸ್ಯರಂಜನಂ ನಾಟ್ಯಶಾಸ್ತ್ರಕ್ಕೆ ಸಂಬಂಧಿಸಿದ ಒಂದು ದೊಡ್ಡ ಗ್ರಂಥ. (ನೋಡಿ: ಕರ್ನಾಟಕ ಸಂಗೀತ)

**ಕಾಮಶಾಸ್ತ್ರ :** 'ಮದನತಿಲಕ' ಚಂದ್ರರಾಜನಿಂದ (ಸು.1025) ರಚಿತವಾದ ಕನ್ನಡದ ಮೊತ್ತಮೊದಲ ಕಾಮಶಾಸ್ತ್ರಗ್ರಂಥ. ಪುರುಷಾರ್ಥಗಳಲ್ಲಿ ಕಾಮವೂ ಒಂದಾದ್ದರಿಂದ ಅದು ನಿಂದನೀಯವಾದುದಲ್ಲ ಎಂಬುದು ಕೃತಿಕಾರನ ಮತ. ಮದನತಿಲಕ ಕಾಮಶಾಸ್ತ್ರ ಗ್ರಂಥವಾದರೂ ಇದಕ್ಕೆ ಪ್ರಸಿದ್ಧಿ ದೊರೆತಿರುವುದು ಛಂದಸ್ಸಿನ ದೃಷ್ಟಿಯಿಂದ. ಇದರಲ್ಲಿ ಕನ್ನಡದ ಅನೇಕ ಅಪೂರ್ವ ವೃತ್ತಗಳು ಬಳಕೆಯಾಗಿವೆ. ಇವನು ವಾತ್ಸ್ಯಾಯನ, ವೈಶಿಕ, ಚಾರಾಯಣ, ಸ್ವರ್ಣನಾಭ ಮುಂತಾದ ಹಿಂದಿನ ಲೇಖಕರಿಂದ ವಿಷಯ ಸಂಗ್ರಹಿಸಿ ಕೃತಿರಚನೆ ಮಾಡಿದ್ದಾನೆ. ಜನ್ನನ 'ಅನುಭವಮುಕುರ' ಸುಂದರಿಯರು, ಅವರ ಸೌಂದರ್ಯ, ಪ್ರೇಮಗಳನ್ನು ಕುರಿತಾದ ಗ್ರಂಥ. ಕಲ್ಲರಸನ (ಸು.1430) ಜನವಶ್ಯದಲ್ಲಿ ವಾತ್ಸ್ಯಾಯನ ಮುಂತಾದವರ ಮತಗಳನ್ನು ಸಂಗ್ರಹಿಸಲಾಗಿದೆ. ಪಂಪ, ನೇಮಿಚಂದ್ರ, ಷಡಕ್ಷರಿ, ರತ್ನಾಕರವರ್ಣಿ, ಕವಿಲಿಂಗ ಮುಂತಾದ ಕವಿಗಳ ಕಾವ್ಯಗಳಲ್ಲಿ ಕಾಮಶಾಸ್ತ್ರಕ್ಕೆ ಸಂಬಂಧಪಟ್ಟ ಹಲವಾರು ಸಂಗತಿಗಳು ನಿರೂಪಿತವಾಗಿರುವುದು ಕಂಡುಬರುತ್ತದೆ.

**ಧಾರ್ಮಿಕಶಾಸ್ತ್ರ ಗ್ರಂಥಗಳು :** ಇಂತಹ ಗ್ರಂಥಗಳಲ್ಲಿ ಕಾವ್ಯಾಂಶವೂ ಶಾಸ್ತ್ರಾಂಶವೂ ಕೂಡಿರಬಹುದು. ಪಂಪನ ಆದಿಪುರಾಣದಂಥ ಜೈನಪುರಾಣಗಳಲ್ಲಿ ಕಾವ್ಯವೂ ಶಾಸ್ತ್ರವೂ (ಧರ್ಮ ಪ್ರಕ್ರಿಯೆಗಳೂ) ಕೂಡಿಯೇ ನಿರೂಪಿತವಾಗಿದೆ. ವೀರಶೈವ ಪುರಾಣಗಳಲ್ಲೂ ವಚನ ಸಾಹಿತ್ಯದಲ್ಲೂ ಹರಿದಾಸ ಸಾಹಿತ್ಯದ ಅನೇಕ ಭಾಗದಲ್ಲೂ ಕಾವ್ಯಾಂಶ ಶಾಸ್ತ್ರಾಂಶ ಬೆಸುಗೆಯಾಗಿರುವುದನ್ನು ಕಾಣಬಹುದು. ಆದರೂ ಇಂಥ ಕೃತಿಗಳನ್ನುಳಿದು ಕೇವಲ ವಿಷಯ ನಿರೂಪಣೆಯೇ ಮುಖ್ಯವಾಗಿರುವ ಗ್ರಂಥಗಳನ್ನು ಮಾತ್ರ ಇಲ್ಲಿ ವಿಚಾರ ಮಾಡಲಾಗಿದೆ.

ಅನೇಕ ಜೈನ ವಿದ್ವಾಂಸರು ಕನ್ನಡದಲ್ಲಿ ಹಲವಾರು ಸಂಸ್ಕೃತ, ಪ್ರಾಕೃತ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ದಿವಾಕರನಂದಿ (ಸು.1062) ಗೃಧ್ರಪಿಂಛಾಚಾರ್ಯನ ತತ್ತ್ವಾರ್ಥಸೂತ್ರಕ್ಕೆ ಕನ್ನಡ ವೃತ್ತಿ ಬರೆದಿದ್ದಾನೆ. ವೀರನಂದಿ (ಸು.1153) ತನ್ನದೇ ಆಚಾರಸಾರಕ್ಕೆ ಕನ್ನಡ ವ್ಯಾಖ್ಯಾನ ಬರೆದಿದ್ದಾನೆ. ಅಭಿನವಶ್ರುತಮುನಿ (ಸು.1365) ಮಲ್ಲಿಷೇಣನ ಸಜ್ಜನಚಿತ್ತವಲ್ಲಭಕ್ಕೂ ಕಮಲಪಂಡಿತ ಸಮಂತಭದ್ರನ ರತ್ನಕರಂಡಕಕ್ಕೂ ಟೀಕೆ ಬರೆದಿದ್ದಾರೆ. ಚಂದ್ರಕೀರ್ತಿಯ (ಸು.1400) ಪರಮಾಗಮಸಾರ ಜೈನಧರ್ಮದ ತಿರುಳನ್ನು ಹೇಳುತ್ತದೆ. ಇದಲ್ಲದೆ ಇನ್ನೂ ಅನೇಕ ಗ್ರಂಥಗಳು ಜೈನಧರ್ಮವನ್ನು ಕುರಿತು ರಚಿತವಾಗಿವೆ.

ವೀರಶೈವ ವಿದ್ವಾಂಸರೂ ತಮ್ಮ ಧರ್ಮಸಂಬಂಧಿಯಾದ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಅಂಥ ವ್ಯಾಖ್ಯಾನಗಳಲ್ಲಿ ಮಹಾಲಿಂಗದೇವನ ಏಕೋತ್ತರಶತಸ್ಥಲ (ಸು.1425) ಮತ್ತು ಪ್ರಭುದೇವರ ಷಟ್ಸ್ಥಲಜ್ಞಾನ ಚಾರಿತ್ರ ವಚನದ ಟೀಕೆಗಳು, ಕಲ್ಲಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ (ಸು.1430), ಜಕ್ಕಣಾರ್ಯನ ಏಕೋತ್ತರಶತಸ್ಥಲ (ಸು.1430) ಇವನ್ನು ಹೆಸರಿಸಬಹುದು. ಗುಬ್ಬಿಯ ಮಲ್ಲಣ್ಣ (ಸು.1475) ತನ್ನ ಗಣಭಾಷಿತ ರತ್ನಮಾಲೆಯಲ್ಲಿ ನೂರೊಂದು ಸ್ಥಲಗಳ ವಿವರಣೆಯನ್ನು ಕೊಟ್ಟಿದ್ದಾನೆ. ಅನೇಕ ಶೈವಾಗಮಗಳಿಗೆ ಮತ್ತು ಇತರ ಗ್ರಂಥಗಳಿಗೆ ವೀರಶೈವ ವಿದ್ವಾಂಸರು ಬರೆದ ಟೀಕೆಗಳು ದೊರೆಯುತ್ತವೆ. ವೀರಶೈವ ಸಿದ್ಧಾಂತವನ್ನು ಪ್ರತಿಪಾದನೆ ಮಾಡುವ ಕನ್ನಡ ಗ್ರಂಥಗಳಲ್ಲಿ ಮಗ್ಗೆಯ ಮಾಯಿದೇವನ ಅನುಭವಸೂತ್ರ, ಗುರುಬಸವನ ಸಪ್ತಕಾವ್ಯಗಳು, ನಿಜಗುಣಶಿವಯೋಗಿಯ ಕೃತಿಗಳು - ಇವುಗಳನ್ನು ಹೆಸರಿಸಬಹುದು.

ಪರಂಜ್ಯೋತಿಯ (ಸು.1450) ಅನುಭವಮುಕುರ, ರಂಗನಾಥನ (ಸು.1675) ಅನುಭವಾಮೃತ, ಚಿದಾನಂದನ (ಸು.1725) ಚಿದಖಂಡಾನುಭವಸಾರ, ಚಿದಾನಂದಾವಧೂತನ (ಸು.1750) ಜ್ಞಾನಸಿಂಧು ಇವು ಅದ್ವೈತವೇದಾಂತ ಪರವಾದ ಗ್ರಂಥಗಳು.

ಜಗನ್ನಾಥದಾಸರ ಹರಿಕಥಾಮೃತಸಾರ ದ್ವೈತವೇದಾಂತಬೋಧಕವಾಗಿದೆ. ಮಧ್ವಾಚಾರ್ಯರ ಮಹಾಭಾರತ ತಾತ್ಪರ್ಯನಿರ್ಣಯಕ್ಕೆ ವಾದಿರಾಜರು (ಸು.1570) ಕನ್ನಡದಲ್ಲಿ ಟೀಕೆ ಬರೆದಿದ್ದಾರೆ. ರಂಗರಾಜನ (ಸು.1660) ಸಾತ್ವಿಕ ಬ್ರಹ್ಮವಿದ್ಯಾವಿಲಾಸ ವಿಶಿಷ್ಟಾದ್ವೈತ ಸಿದ್ಧಾಂತವನ್ನು ನಿರೂಪಿಸುತ್ತದೆ. ಚಿಕ್ಕದೇವರಾಜ ಒಡೆಯರ (1673-1704) ಚಿಕದೇವರಾಜ ಬಿನ್ನಪದಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತದ ಸಾರವನ್ನು ಕೊಟ್ಟಿದೆ. ಚಿಕುಪಾಧ್ಯಾಯನ ತಿರುವಾಯ್ಮೊಳಿ ಟೀಕೆ ನಮ್ಮಾಳ್ವಾರರ ತಮಿಳು ಪ್ರಬಂಧಕ್ಕೆ ಬರೆದ ವ್ಯಾಖ್ಯಾನವಾಗಿದೆ.

**ಜ್ಞಾನಕೋಶಗಳು :** ಕನ್ನಡದಲ್ಲಿ ವಿಶ್ವಕೋಶಗಳಂಥ ಕೆಲವು ಗ್ರಂಥಗಳು ಹುಟ್ಟಿವೆ. ಅವು ಬೇರೆ ಬೇರೆ ವಿಷಯಗಳ ಸಂಗ್ರಹರೂಪಗಳಾಗಿವೆ. (ನೋಡಿ: ಕನ್ನಡದಲ್ಲಿ ವಿಶ್ವಕೋಶಗಳು). (ಎಂ.ಪಿ.,ಕೆ.ಕೆ.,ಎನ್.ಬಿ.)

## ಕನ್ನಡದಲ್ಲಿ ಷಟ್ಪದಿ ಕಾವ್ಯಗಳು :

ಷಟ್ಪದಿ ಎನ್ನುವುದು ಆರು ಸಾಲಿನ ಪದ್ಯಜಾತಿಯೊಂದನ್ನು ನಿರ್ದೇಶಿಸುತ್ತದೆ. ಅದರಲ್ಲಿ 1, 2, 4, 5ನೆಯ ಪಾದಗಳು ಒಂದು ರೀತಿಯಾಗಿಯೂ 3, 6ನೆಯ ಪಾದಗಳು ಒಂದು ರೀತಿಯಾಗಿಯೂ ಇರುತ್ತವೆ. ಷಟ್ಪದಿ ಆರು ಬಗೆಯಾಗಿದೆ. ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ ಮತ್ತು ವಾರ್ಧಕ. ಈ ಷಟ್ಪದಿಗಳು ಮಾತ್ರಾಗಣಗಳಿಂದ ಕೂಡಿದುವಾಗಿರುವುದರಿಂದ ಇವನ್ನು ಮಾತ್ರಾಷಟ್ಪದಿಗಳೆಂದು ಕರೆಯಬಹುದು. ಈ ಎಲ್ಲ ಮಾತ್ರಾಷಟ್ಪದಿಗಳಿಗೆ ಮೂಲವಾಗಿ ಒಂದು ಷಟ್ಪದಿಯಿತ್ತು. ಅದನ್ನು ಮೂಲಷಟ್ಪದಿ ಎಂದೋ ಅಂಶಷಟ್ಪದಿ ಎಂದೋ ಅಥವಾ ತೀ.ನಂ.ಶ್ರೀಕಂಠಯ್ಯನವರನ್ನನುಸರಿಸಿ ಷಟ್ಪದ ಎಂದೋ ನಿರ್ದೇಶಿಸಬಹುದು. ಈ ಮೂಲಷಟ್ಪದಿ ಅಥವಾ ಷಟ್ಪದ ಅಂಶಗಣಗಳಿಂದ ಕೂಡಿದ್ದು, ಈ ಲಕ್ಷಣವನ್ನು ಪಡೆದಿದ್ದಿತು (ವಿ- ವಿಷ್ಣುಗಣ : ರು- ರುದ್ರಗಣ).

ವಿ | ವಿ |
ವಿ | ವಿ |
ವಿ | ವಿ | ರು ||
ವಿ | ವಿ |
ವಿ | ವಿ |
ವಿ | ವಿ | ರು ||

ನಾಗವರ್ಮ, ಜಯಕೀರ್ತಿಗಳು ತಮ್ಮ ಲಕ್ಷಣಗ್ರಂಥಗಳಲ್ಲಿ ಷಟ್ಪದಿಯ ಗುಣ ಲಕ್ಷಣಗಳನ್ನು ವರ್ಣಿಸಿರುವರಲ್ಲದೆ ಅದು ಅನೇಕ ಶಾಸನಗಳಲ್ಲೂ (ಉದಾ: ಅಮ್ಮಿನಬಾವಿ ಶಾಸನ) ಅನೇಕ ಚಂಪೂ ಕಾವ್ಯಗಳಲ್ಲಿಯೂ (ಉದಾ: ಸುಕುಮಾರ ಚರಿತೆ) ಕಾಣಿಸಿಕೊಂಡಿದೆ. ಚಾಳುಕ್ಯ ಚಕ್ರವರ್ತಿ 3ನೆಯ ಸೋಮೇಶ್ವರನ ಮಾನಸೋಲ್ಲಾಸದಲ್ಲಿಯೂ (ಸು.1130) ಅಂಶಗಣ ಘಟಿತವಾದ ಷಟ್ಪದ ಕಾಣಿಸಿಕೊಳ್ಳುತ್ತದೆ. ಆ ಕಾಲಕ್ಕಾಗಲೇ ಷಟ್ಪದರೂಪವಾದ ಕಥೆಗಳು ಹುಟ್ಟಿದ್ದುವೆಂಬುದಕ್ಕೆ ಆ ಕೃತಿಯಲ್ಲಿಯೇ ಆಧಾರವಿರುವುದಾದರೂ ನಮಗೆ ಷಟ್ಪದರೂಪದ ಯಾವ ಕಾವ್ಯವೂ ದೊರಕಿಲ್ಲ. ಎಂದರೆ ಹನ್ನೆರಡನೆಯ ಶತಮಾನದ ಮಧ್ಯದವರೆಗೆ ದೊರಕಿರುವ ಷಟ್ಪದಗಳೆಲ್ಲವೂ ಶಾಸನಗಳಲ್ಲಿ, ಕಾವ್ಯಗಳಲ್ಲಿ ಕಾಣಿಸಿಕೊಳ್ಳುವ ಬಿಡಿಪದ್ಯಗಳಾಗಿವೆ.

ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ಅಂಶಗಣಗಳ ಸ್ಥಾನದಲ್ಲಿ ಮಾತ್ರಾಗಣಗಳನ್ನು ತರುವ ರೂಢಿ ಪ್ರಬಲವಾದ ಮೇಲೆ ಮೂಲಷಟ್ಪದಿ ಅಥವಾ ಷಟ್ಪದ ಆರು ರೀತಿಯ ಮಾತ್ರಾಷಟ್ಪದಿಗಳಾಗಿ ವಿಕಾಸ ಹೊಂದಿತು. ಅವನ್ನೇ ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ ಮತ್ತು ವಾರ್ಧಕಗಳೆಂದು ಕರೆದಿರುವುದು. ಆಯಾ ಷಟ್ಪದಿಗಳ ಮೊದಲ ಪಾದದ ಲಕ್ಷಣ ಹೀಗಿರುತ್ತದೆ (ಮೂರನೆಯ ಪಾದ ಅದರ ಒಂದೂವರೆಯಷ್ಟು + 1 ಗುರು ಆಗಿರುತ್ತದೆ).

ಶರ (4 + 4) = 8 ಮಾತ್ರೆಗಳು
ಕುಸುಮ (5 + 5) = 10 ಮಾತ್ರೆಗಳು
ಭೋಗ (3 + 3 + 3 + 3) = 12 ಮಾತ್ರೆಗಳು
ಭಾಮಿನಿ (3 + 4 + 3 + 4) = 14 ಮಾತ್ರೆಗಳು
ಪರಿವರ್ಧಿನಿ (4 + 4 + 4 + 4) = 16 ಮಾತ್ರೆಗಳು
ವಾರ್ಧಕ (5 + 5 + 5 + 5) = 20 ಮಾತ್ರೆಗಳು

ಇವುಗಳಲ್ಲಿ ಭಾಮಿನಿ, ವಾರ್ಧಕಗಳು ಹೆಚ್ಚು ಪ್ರಚಾರದಲ್ಲಿದ್ದು, ಕನ್ನಡದ ಕೆಲವು ಅತ್ಯಂತ ಶ್ರೇಷ್ಠ ಕಾವ್ಯಗಳು ರಚಿತವಾಗಿವೆ.

ಷಟ್ಪದಿ ಕಾವ್ಯಗಳ ಸಮಗ್ರ ಇತಿಹಾಸವನ್ನು ಕೊಡುವುದು ಇಲ್ಲಿ ಸಾಧ್ಯವಿಲ್ಲವಾದುದರಿಂದ ಕೆಲವು ಪ್ರಮುಖ ಕಾವ್ಯಗಳ ಪರಿಚಯವನ್ನು ಮಾತ್ರ ಕಾಲಾನುಕ್ರಮದಲ್ಲಿ ಕೊಡಲು ಪ್ರಯತ್ನಿಸಿದೆ.

1224ರ ಹರಿಹರದ ಶಾಸನದಲ್ಲಿ ಪೋಲಾಳ್ವದಂಡನಾಥನೆಂಬಾತ ಹರಿಚಾರಿತ್ರವೆಂಬ ಕಾವ್ಯವನ್ನು ಷಟ್ಪದಿರೂಪವಾಗಿ ರಚಿಸಿದನೆಂದು ಹೇಳಿದೆ. ಆ ಕಾವ್ಯ ದೊರೆತಿಲ್ಲವಾದ್ದರಿಂದ ಅದರ ಬಗ್ಗೆ ಇನ್ನೇನೂ ಹೇಳಲು ಸಾಧ್ಯವಿಲ್ಲ. ಆದಕಾರಣ ಅವನ ಸಮಕಾಲೀನನಾದ ರಾಘವಾಂಕನಿಂದ (ಸು.1230) ಷಟ್ಪದಿಕಾವ್ಯಗಳ ಇತಿಹಾಸವನ್ನು ಆರಂಭಿಸಬಹುದು.

ರಾಘವಾಂಕನ ಒಟ್ಟು ನಾಲ್ಕು ಕಾವ್ಯಗಳು ದೊರಕಿವೆ. ಹರಿಶ್ಚಂದ್ರಕಾವ್ಯ, ಸಿದ್ಧರಾಮಪುರಾಣ, ಸೋಮನಾಥ ಚಾರಿತ್ರ ಮತ್ತು ವೀರೇಶಚರಿತೆ (ಅವನ ಶರಭಚಾರಿತ್ರ ಮತ್ತು ಹರಿಹರ ಮಹತ್ತ್ವಗಳು ಅಲಭ್ಯ). ಇವುಗಳಲ್ಲಿ ಮೊದಲ ಮೂರು ವಾರ್ಧಕಷಟ್ಪದಿಯಲ್ಲಿದ್ದರೆ (5+5+5+5) ವೀರೇಶಚರಿತೆ ಉದ್ದಂಡ ಷಟ್ಪದಿಯಲ್ಲಿದೆ (4+4+4+4) ತನ್ನ ಬಹು ಶ್ರೇಷ್ಠ ಕೃತಿಗಳಿಂದಲೂ ನಮಗೆ ತಿಳಿದಮಟ್ಟಿಗೆ ಮೊದಲ ಷಟ್ಪದಿ ಕಾವ್ಯಗಳನ್ನು ಬರೆದ ಕವಿ ಆಗಿರುವುದರಿಂದಲೂ ರಾಘವಾಂಕ ಷಟ್ಪದಿ ಸಂಪ್ರದಾಯದ ಪ್ರವರ್ತಕನೆಂದು ಹೇಳಬಹುದು.

ರಾಘವಾಂಕನ ಅನಂತರ ಷಟ್ಪದಿ ಕಾವ್ಯಗಳು ಹೆಚ್ಚು ಸಂಖ್ಯೆಯಲ್ಲಿ ಕಾಣಿಸಿಕೊಳ್ಳಲಾರಂಭಿಸುತ್ತವೆ. ಸು.1250-60ರಲ್ಲಿದ್ದ ಕುಮಾರಪದ್ಮರಸ ರಾಘವಾಂಕನ ಸಮಕಾಲೀನನೂ ತನ್ನ ತಂದೆಯೂ ಆದ ಕೆರೆಯಪದ್ಮರಸನ ಸಂಸ್ಕೃತ ಕೃತಿ ಸಾನಂದಚರಿತೆಯನ್ನು ಕನ್ನಡಕ್ಕೆ ಅನುವಾದಿಸಿದ್ದಾನೆ. ಇದರಲ್ಲಿ ಅನೇಕ ಬಗೆಯ ಷಟ್ಪದಿಗಳಿದ್ದರೂ ಕುಸುಮಷಟ್ಪದಿಯ ಬಾಹುಳ್ಯವನ್ನು ಇಲ್ಲಿ ಕಾಣಬಹುದು. ಸು.1275ರಲ್ಲಿದ್ದ ಕುಮುದೇಂದುವಿನ ಕುಮುದೇಂದು ರಾಮಾಯಣದಲ್ಲಿ ಶರ, ಭೋಗಗಳನ್ನು ಬಿಟ್ಟರೆ ಉಳಿದೆಲ್ಲ ಷಟ್ಪದಿಗಳೂ ಬಳಕೆಯಾಗಿವೆ. ಜೈನ ಸಂಪ್ರದಾಯದ ರಾಮಾಯಣದ ಕಥೆ ಇಲ್ಲಿ ಬಂದಿದೆ. ಕವಿ ತನಗಿಂತ ಹಿಂದಿದ್ದ ನಾಗಚಂದ್ರನನ್ನು ಯಥೇಷ್ಟವಾಗಿ ಅನುಕರಿಸಿರುವುದು ಕಂಡುಬರುತ್ತದೆ. ಸು.1369ರಲ್ಲಿದ್ದ ಭೀಮಕವಿಯ ಬಸವಪುರಾಣ ಒಂದು ಪ್ರಮುಖ ಕೃತಿ. ಬಸವಣ್ಣನವರನ್ನು ಕುರಿತಾದ ಕನ್ನಡ ಕಾವ್ಯಗಳಲ್ಲಿ ಇದು ಅತ್ಯಂತ ಜನಪ್ರಿಯವಾದುದು. ವಾಸ್ತವವಾಗಿ ಇದು ಸ್ವತಂತ್ರ ಕೃತಿಯಲ್ಲ. ಪಾಲ್ಕುರಿಕೆ ಸೋಮನಾಥನ ತೆಲುಗು ಬಸವಪುರಾಣದ ಪ್ರಾಮಾಣಿಕವಾದ ಕನ್ನಡ ಅನುವಾದವಷ್ಟೆ. ಇದು ಭಾಮಿನಿ ಷಟ್ಪದಿಯಲ್ಲಿ ರಚಿತವಾದ ಮೊಟ್ಟಮೊದಲ ಸಮಗ್ರ ಗ್ರಂಥ. ಸು.1400ರಲ್ಲಿದ್ದ ಪದ್ಮಣಾಂಕನ ಪದ್ಮರಾಜ ಪುರಾಣವೂ ಒಂದು ಗಮನಾರ್ಹ ಕೃತಿ. ವಾರ್ಧಕಷಟ್ಪದಿಯ ಈ ಕಾವ್ಯಕ್ಕೆ ಕೆರೆಯಪದ್ಮರಸನೇ ಕಥಾವಸ್ತು. ಹೀಗೆ ತಮಗಿಂತ ಹಿಂದೆ ಮನುಷ್ಯರಂತೆಯೇ ಬದುಕಿ, ಶಿವನ ಕೃಪೆಯನ್ನು ಪಡೆದ ಭಕ್ತರ ಕಥೆಗಳನ್ನು ಆರಿಸಿಕೊಂಡು ಕಾವ್ಯಗಳನ್ನು ರಚಿಸುವ ಹರಿಹರನ ಸಂಪ್ರದಾಯ ವಿಶೇಷವಾಗಿ ವೀರಶೈವಕವಿಗಳಲ್ಲಿ ಬೆಳೆದುಕೊಂಡು ಬಂದಿರುವುದು ಒಂದು ಮುಖ್ಯ ಸಂಗತಿಯಾಗಿದೆ.

ಕುಮಾರವ್ಯಾಸ (ಸು.1400) ಕನ್ನಡದ ಅತ್ಯಂತ ಶ್ರೇಷ್ಠ ಕವಿಗಳಲ್ಲೊಬ್ಬ. ಇವನ ಕನ್ನಡ ಭಾರತ ಕನ್ನಡದ ಅತಿ ಜನಪ್ರಿಯ ಕಾವ್ಯಗಳಲ್ಲೊಂದು. ವ್ಯಾಸರ ಸಂಸ್ಕೃತ ಮಹಾಭಾರತವನ್ನು ಕನ್ನಡಕ್ಕೆ ಭಾಮಿನಿ ಷಟ್ಪದಿಗಳಲ್ಲಿ ಈತ ಯಶಸ್ವಿಯಾಗಿ ತಂದಿದ್ದಾನೆ. ಕುಮಾರವ್ಯಾಸನ ಪ್ರಭಾವ ಮುಂದಿನ ಕವಿಗಳ ಮೇಲೆ ಅಪರಿಮಿತವಾಗಿದೆ. ಉದಾಹರಣೆಗೆ 1424ರಲ್ಲಿದ್ದ ಭಾಸ್ಕರ ಎಂಬ ಜೈನಕವಿ ತನ್ನ ಜೀವಂಧರಚರಿತೆಯೆಂಬ ಭಾಮಿನಿ ಷಟ್ಪದಿ ಕಾವ್ಯದಲ್ಲಿ ಕುಮಾರವ್ಯಾಸನನ್ನು ಅನೇಕ ಕಡೆಗಳಲ್ಲಿ ಅನುಕರಿಸಿರುವುದು ಸುಸ್ಪಷ್ಟವಾಗಿದೆ.

ಚಾಮರಸನ (ಸು.1430) ಪ್ರಭುಲಿಂಗಲೀಲೆ ಅಲ್ಲಮಪ್ರಭುವನ್ನು ವಸ್ತುವಾಗಿ ಉಳ್ಳ ಶ್ರೇಷ್ಠ ಕಾವ್ಯ. ಇವನು ಭಾಮಿನಿಷಟ್ಪದಿಗಳನ್ನು ಬಳಸುವುದರಲ್ಲಿ, ಸೊಗಸಾದ ರೂಪಕಗಳನ್ನು ನಿರ್ಮಿಸುವುದರಲ್ಲಿ ಕುಮಾರವ್ಯಾಸನನ್ನು ಹೋಲುತ್ತಾನೆ. ಇವನ ಸಮಕಾಲೀನನಾಗಿದ್ದ ಲಕ್ಕಣ್ಣದಂಡೇಶ ಪ್ರೌಢದೇವರಾಯನ ಮಂತ್ರಿಯಾಗಿದ್ದು ಶಿವತತ್ತ್ವ ಚಿಂತಾಮಣಿಯೆಂಬ ವಾರ್ಧಕ ಷಟ್ಪದಿ ಕಾವ್ಯವನ್ನು ಬರೆದಿದ್ದಾನೆ. ಇದರಲ್ಲಿ ಅನೇಕ ಪುರಾತನ ಹಾಗೂ ನೂತನ ಶಿವಭಕ್ತರ ಕಥೆಗಳು ದೊರೆಯುತ್ತವೆ. ಇದೇ ಕಾಲದ ಗುರುಬಸವನ ಏಳುಕಾವ್ಯಗಳು ಸಪ್ತಕಾವ್ಯಗಳೆಂದು ಪ್ರಸಿದ್ಧವಾಗಿವೆ. ಅವುಗಳಲ್ಲಿ ಶಿವಯೋಗಾಂಗಭೂಷಣ ಪರಿವರ್ಧಿನಿಯಲ್ಲಿಯೂ ವೃಷಭಗೀತೆ ಭೋಗಷಟ್ಪದಿಯಲ್ಲಿಯೂ ಮನೋವಿಜಯಕಾವ್ಯ ಕುಸುಮಷಟ್ಪದಿಯಲ್ಲಿಯೂ ರಚಿತವಾಗಿವೆ. ಅದೇ ಕಾಲದ ಬತ್ತಲೇಶ್ವರ ಎಂಬ ವೀರಶೈವ ಕವಿ ಬತ್ತಲೇಶ್ವರ ರಾಮಾಯಣವನ್ನು ಬರೆದಿದ್ದಾನೆ. ಷಟ್ಪದಿ ಕಾವ್ಯಗಳನ್ನು ಬರೆದ ಈ ಶತಮಾನದ ಇತರ ವೀರಶೈವ ಕವಿಗಳು - ಬೊಮ್ಮರಸ (ಸು.1450, ಸೌಂದರ ಪುರಾಣ); ನೀಲಕಂಠಾಚಾರ್ಯ (ಸು.1485, ಆರಾಧ್ಯ ಚಾರಿತ್ರ); ಚತುರ್ಮುಖ ಬೊಮ್ಮರಸ (ಸು.1500, ರೇವಣಸಿದ್ಧೇಶ್ವರ ಕಾವ್ಯ); ಸಿಂಗಿರಾಜ (ಸು.1500, ಅಮಲಬಸವಚಾರಿತ್ರ ಅಥವಾ ಸಿಂಗಿರಾಜ ಪುರಾಣ. ಇದರಲ್ಲಿ ಬಸವಣ್ಣನವರ ಕತೆ ನಿರೂಪಿತವಾಗಿದೆ. ಇದು ಬಸವಣ್ಣನವರ ಪವಾಡಗಳ ಬಗ್ಗೆ ಹೆಚ್ಚು ಒಲವನ್ನು ತೋರಿರುವ ಕೃತಿಯಾಗಿದೆ).

ಹದಿನೈದನೆಯ ಶತಮಾನದ ಜೈನಕವಿಗಳಲ್ಲಿ ಕಲ್ಯಾಣಕೀರ್ತಿ (1439) ಮತ್ತು ತೆರಕಣಾಂಬಿ ಬೊಮ್ಮರಸ (ಸು.1485) ಉಲ್ಲೇಖಾರ್ಹರು. ಬೊಮ್ಮರಸನ ಸನತ್ಕುಮಾರಚರಿತೆ ಭಾಮಿನಿ ಷಟ್ಪದಿಯ ಕಾವ್ಯ. ವಡ್ಡಾರಾಧನೆಯಲ್ಲಿ ಗದ್ಯರೂಪವಾಗಿ ಕಾಣಿಸಿಕೊಂಡಿದ್ದ ಸನತ್ಕುಮಾರನ ಕಥೆಯನ್ನು ಇಲ್ಲಿ ಕಾವ್ಯರೂಪದಲ್ಲಿ ಸೊಗಸಾಗಿ ನಿರೂಪಿಸಲಾಗಿದೆ.

ಕುಮಾರವ್ಯಾಸನ ಸಂಪ್ರದಾಯದಲ್ಲಿ ರಾಮಾಯಣವನ್ನು ವಸ್ತುವನ್ನಾಗಿ ಮಾಡಿಕೊಂಡು ಕಾವ್ಯರಚನೆ ಮಾಡಿದ ನರಹರಿ ಅಥವಾ ಕುಮಾರವಾಲ್ಮೀಕಿಯ (ಸು.1500) ತೊರವೆ ರಾಮಾಯಣ ಅಂಥ ಉತ್ತಮ ಕಾವ್ಯವಲ್ಲದಿದ್ದರೂ ಕಥಾವಸ್ತುವಿನಿಂದಾಗಿ ಅತ್ಯಂತ ಜನಪ್ರಿಯ ಕೃತಿಗಳಲ್ಲೊಂದಾಗಿದ್ದಿತು.

ಮೂರನೆಯ ಮಂಗರಸನ (1508) ಜಯನೃಪಕಾವ್ಯ ಪರಿವರ್ಧಿನಿಯಲ್ಲಿದೆ. ಗುಬ್ಬಿಮಲ್ಲಣಾರ್ಯನ (1513) ಭಾವಚಿಂತಾರತ್ನ ಚಮತ್ಕಾರಗಳಿಂದ ಕೂಡಿದ ಪ್ರೌಢರಚನೆಯ ಕಾವ್ಯ. ಪಂಚಾಕ್ಷರೀ ಮಂತ್ರದ ಮಹಿಮೆಯನ್ನು ಸಾರುವ ಸುಪ್ರಸಿದ್ಧ ಸತ್ಯೇಂದ್ರಚೋಳನ ಕಥೆ ಇದರ ವಸ್ತು. ಇವನ ವೀರಶೈವಾಮೃತ ಮಹಾಪುರಾಣ ದೊಡ್ಡ ಗಾತ್ರದ ವಾರ್ಧಕ ಷಟ್ಪದಿ ಕಾವ್ಯ. ಸು.1550ರಲ್ಲಿದ್ದ ಗುರುಲಿಂಗವಿಭುವಿನ ಭಿಕ್ಷಾಟನ ಚರಿತೆಯಲ್ಲಿನ ಶಿವನ ಅದೇ ಹೆಸರಿನ ಲೀಲೆಯೊಂದನ್ನು ನಿರೂಪಿಸಿದೆ. ಅವನ ಸಮಕಾಲೀನನಾದ ಚನ್ನಬಸವಾಂಕನ ಮಹಾದೇವಿಯಕ್ಕನ ಪುರಾಣದಲ್ಲಿ ಅಕ್ಕಮಹಾದೇವಿಯ ಕಥೆ ಹಲವು ಬಗೆಯ ಷಟ್ಪದಿಗಳಲ್ಲಿ ವರ್ಣಿತವಾಗಿದೆ.

ಈ ಶತಮಾನದ ಪ್ರಮುಖ ಷಟ್ಪದಿ ಕವಿಗಳೆಂದರೆ ಲಕ್ಷ್ಮೀಶ (ಸು.1550), ಕನಕದಾಸ (ಸು.1550) ಮತ್ತು ವಿರೂಪಾಕ್ಷಪಂಡಿತ (1584). ಕುಮಾರವ್ಯಾಸ ಮಹಾಭಾರತದ ಮೊದಲ ಹತ್ತು ಪರ್ವಗಳನ್ನು ಕನ್ನಡಕ್ಕೆ ತಂದಿದ್ದರೆ, ತಿಮ್ಮಣ್ಣ (ಸು.1510) ಅದರ ಮುಂದಿನ ಎಂಟು ಪರ್ವಗಳನ್ನು ಕನ್ನಡದಲ್ಲಿ ನಿರೂಪಿಸಿದ. ಲಕ್ಷ್ಮೀಶನ ಜೈಮಿನಿಭಾರತ ಕೌರವನ ಸಾವಿನ ಬಳಿಕ ಪಾಂಡವರು ರಾಜ್ಯದಲ್ಲಿ ಪ್ರತಿಷ್ಠಿತರಾದ ಮೇಲಿನ ಕಥೆಯನ್ನು ವಸ್ತುವಾಗಿ ಪಡೆದ ಒಂದು ಅತ್ಯಂತ ಜನಪ್ರಿಯ ಕಾವ್ಯ. ಕನಕದಾಸ ಮನೋಹರವಾದ ಕೀರ್ತನೆಗಳನ್ನು ರಚಿಸಿದ ಭಕ್ತಶ್ರೇಷ್ಠ. ಇವನ ರಾಮಧಾನ್ಯಚರಿತೆ ರಾಗಿಯ ಶ್ರೇಷ್ಠತೆಯನ್ನು ಸ್ಥಾಪಿಸಲಿಕ್ಕಾಗಿ ಹುಟ್ಟಿದ ಕಾಲ್ಪನಿಕ ಕಥೆಯೊಂದನ್ನು ಹೇಳುತ್ತದೆ. ಇವನ ನಳಚರಿತ್ರೆ ಕನ್ನಡದ

ಜನಪ್ರಿಯ ಕಾವ್ಯಗಳಲ್ಲೊಂದು. ವಾರ್ಧಕ ಷಟ್ಪದಿಗಳನ್ನು ಬರೆಯುವುದರಲ್ಲಿ ಲಕ್ಷ್ಮೀಶನಿಗೆ ಹೆಗಲೆಣೆಯಾದ ಕವಿ ವಿರೂಪಾಕ್ಷಪಂಡಿತ. ಇವನ ಚನ್ನಬಸವಪುರಾಣ ನೆಪಕ್ಕೆ ಮಾತ್ರ ಚನ್ನಬಸವಣ್ಣನ ಕಥೆಯನ್ನು ಆಶ್ರಯಿಸಿದೆ. ಆದರೆ ಅದರ ತುಂಬ ಶಿವನ ಅನೇಕ ಲೀಲೆಗಳು, ವೀರಶೈವ ಧರ್ಮದ ತತ್ತ್ವಗಳು, ಕಾಲಜ್ಞಾನಗಳು ಸೇರಿಕೊಂಡು ಕಾವ್ಯವನ್ನು ಹಿಗ್ಗಿಲವೆ. ಇದೇ ಶತಮಾನದ ಇನ್ನೊಬ್ಬ ಉಲ್ಲೇಖಾರ್ಹನಾದ ಕವಿಯೆಂದರೆ ಕನ್ನಡ ಭಾಗವತವನ್ನು ಬರೆದ ಚಾಟುವಿಠ್ಠಲನಾಥ (ಸು.1530). ಈ ಕೃತಿ ತೊರವೆ ರಾಮಾಯಣದಂತೆಯೇ ಕೇವಲ ಕಥಾವಸ್ತುವಿನ ಕಾರಣದಿಂದಾಗಿ ಜನಪ್ರಿಯತ್ವವನ್ನು ಪಡೆದಿದ್ದ ಇನ್ನೊಂದು ಕಾವ್ಯ.

ಹದಿನಾರನೆಯ ಶತಮಾನಕ್ಕೆ ಉತ್ತಮ ಷಟ್ಪದಿ ಕಾವ್ಯಗಳ ಕಾಲ ಮುಗಿಯಿತೆಂದು ಭಾವಿಸಬಹುದು. ರಕ್ಕಸತಂಗಡಿ ಯುದ್ಧದಲ್ಲಿ (ಸು.1565) ವಿಜಯನಗರ ಸಾಮ್ರಾಜ್ಯ ಒಡೆದ ಮೇಲೆ ಸಾಹಿತ್ಯಕ್ಕಿದ್ದ ರಾಜಾಶ್ರಯ ತಪ್ಪಿತು. ಜನಜೀವನ ಅಸ್ತವ್ಯಸ್ತವಾಯಿತು. ಮುಂದೆ ಮೈಸೂರು, ಕೆಳದಿ ಮುಂತಾದ ಅರಸರು ಆಶ್ರಯವನ್ನು ಕೊಟ್ಟರೂ ಒಟ್ಟಿನಲ್ಲಿ ಯಾವುದೇ ರೀತಿಯ ಶ್ರೇಷ್ಠ ಕಾವ್ಯಗಳ ಕಾಲ ಅಲ್ಲಿಗೆ ಮುಗಿಯಿತೆಂದೂ ಅಲ್ಲಿಂದ ಏನಿದ್ದರೂ ಆಧುನಿಕ ಯುಗಕ್ಕೆ ಬಂದಾಗಲೇ ಉತ್ತಮ ಕೃತಿಗಳನ್ನು ಕಾಣಲು ಸಾಧ್ಯವೆಂದೂ ಹೇಳಬಹುದು. ಹದಿನೇಳನೆಯ ಶತಕದಿಂದೀಚೆಗೆ ಹುಟ್ಟಿದ ಕೆಲವು ಕೃತಿಗಳು ಹೀಗಿವೆ: ಸು.1606ರಲ್ಲಿದ್ದ ಎಳಂದೂರ ಹರೀಶರನು ಪ್ರಭುದೇವರ ಪುರಾಣವನ್ನು ಬರೆದಿದ್ದಾನೆ. ಇದರಲ್ಲಿ ಅಲ್ಲಮಪ್ರಭುವಿನ ಕಥೆಯ ಜೊತೆಗೆ ಬೇರೆ ಭಕ್ತರ ಕಥೆಗಳೂ ದೊರಕುತ್ತವೆ. ಸು.1650ರಲ್ಲಿದ್ದ ಸಿದ್ಧನಂಜೇಶ ಅಥವಾ ಚಿಕ್ಕ ನಂಜೇಶನ ಎರಡು ವಾರ್ಧಕ ಷಟ್ಪದಿ ರೂಪದ ಕೃತಿಗಳಿವೆ: ಗುರುರಾಜ ಚಾರಿತ್ರ ಮತ್ತು ರಾಘವಾಂಕ ಚರಿತೆ. ಕವಿ ರಾಘವಾಂಕನ ಬಗ್ಗೆ ನಮಗೆ ತಿಳಿದಿರುವ ಸಂಗತಿಗಳಿಗೆ ಇದು ಮುಖ್ಯ ಆಕರ. ಜೊತೆಗೆ, ಸಿದ್ಧನಂಜೇಶ ರಾಘವಾಂಕನ ಎಲ್ಲ ಕಾವ್ಯಗಳ ಸಾರಾಂಶವನ್ನು ಕೊಡುವಂತೆ ಹರಿಹರಮಹತ್ತ್ವ ಎಂಬ ಕೃತಿಯು ಸಾರಾಂಶವನ್ನೂ ಕೊಟ್ಟಿದ್ದಾನೆ. ರಾಘವಾಂಕನ ಈ ಕೃತಿ ಇಂದು ಅಲಭ್ಯವಾಗಿದೆಯಾದರೂ ಅದರ ಕಥಾ ಸಾರಾಂಶ ನಮಗೆ ದೊರಕು ವುದರಿಂದಾಗಿ, ಹರಿಹರನ ವೈಯಕ್ತಿಕ ಜೀವನದ ಕೆಲವಾದರೂ ಪ್ರಮುಖ ಘಟನೆಗಳು ತಿಳಿದುಬರುವುದು ಇದರಿಂದ ಸಾಧ್ಯವಾಗಿದೆ. ಗೋವಿಂದ (ಸು.1650, ನಂದಿ ಮಾಹಾತ್ಮ್ಯ), ಲಕ್ಷ್ಮಕವಿ(1723, ಭಾರತ), ಬಬ್ಬೂರುರಂಗ (1750, ಅಂಬಿಕಾವಿಜಯ), ಕೋನಯ್ಯ (ಸು.1750, ಗಯಚರಿತ್ರೆ)- ಇವರೆಲ್ಲರೂ ಕುಮಾರವ್ಯಾಸನಿಂದ ಪ್ರಭಾವಿತರಾದ ಕವಿಗಳು. ಸಹ್ಯಾದ್ರಿಖಂಡ ತೀರ್ಥಕ್ಷೇತ್ರಗಳ ಮಹಿಮೆಯನ್ನು ಭಾಮಿನಿಷಟ್ಪದಿಯಲ್ಲಿ ನಿರೂಪಿಸುವ ಒಂದು ಬೃಹತ್ಕಾವ್ಯ. ಮಹಲಿಂಗರಂಗನ (ಸು.1675) ಅನುಭವಾಮೃತ ಅದ್ವೈತ ತತ್ತ್ವಗಳನ್ನು ಸುಲಭಶೈಲಿಯಲ್ಲಿ ಬೋಧಿಸುವ ಒಂದು ಜನಪ್ರಿಯ ಕೃತಿ. ದ್ವೈತ ತತ್ತ್ವಗಳನ್ನು ಬೋಧಿಸುವ ಜಗನ್ನಾಥದಾಸರ (ಸು.1775) ಹರಿಕಥಾಮೃತಸಾರ ಇನ್ನೊಂದು ಜನಪ್ರಿಯ ಗ್ರಂಥವಾಗಿದೆ.

ಷಟ್ಪದಿ ಗ್ರಂಥಗಳ ಮಾಲಿಕೆಯಲ್ಲಿ ಕೊನೆಯದಾಗಿ ಮುದ್ದಣನ (1869-1901) ಹೆಸರನ್ನು ಹೇಳಬಹುದು. ಇವನು ಹಳೆಯ ಮತ್ತು ಹೊಸ ಸಾಹಿತ್ಯಗಳ ಸಂಧಿಕಾಲದಲ್ಲಿದ್ದ ಕವಿ. ಇವನ ಗದ್ಯಕೃತಿಗಳಾದ ರಾಮಾಶ್ವಮೇಧ ಮತ್ತು ಅದ್ಭುತರಾಮಾಯಣಗಳು ಪ್ರಖ್ಯಾತವಾಗಿವೆ. ಅಷ್ಟೊಂದು ಪ್ರಸಿದ್ಧವಲ್ಲದ ಇವನ ಕೃತಿ ಶ್ರೀರಾಮಪಟ್ಟಾಭಿಷೇಕ ವಾರ್ಧಕದಲ್ಲಿ ರಚಿತವಾಗಿರುವ ಸುಂದರ ಕಾವ್ಯ. ಮುದ್ದಣನಾದ ಮೇಲೂ ಹಲವರು ಷಟ್ಪದಿ ಕಾವ್ಯಗಳನ್ನು ಮುಂದುವರಿಸಿದ್ದುಂಟು. ಬಹು ಹಿಂದಿನಿಂದ ಷಟ್ಪದಿ ಕಾವ್ಯಗಳು ಅತ್ಯಂತ ಜನಪ್ರಿಯವಾಗಿವೆ. ರಾಘವಾಂಕನ ಹರಿಶ್ಚಂದ್ರಕಾವ್ಯ, ಕುಮಾರವ್ಯಾಸ ಮತ್ತು ಲಕ್ಷ್ಮೀಶರ ಭಾರತಗಳು, ಕನಕದಾಸರ ನಳಚರಿತ್ರೆ ಇವು ಇದಕ್ಕೆ ಉದಾಹರಣೆಗಳು. ಇವನ್ನು ಇಂದಿಗೂ ಗಮಕಿಗಳು ವಾಚನಮಾಡಿ ಶ್ರೋತೃಗಳನ್ನು ತಣಿಸುತ್ತಾರೆ. ಇವು ಕವಿತೆಯ ದೃಷ್ಟಿಯಿಂದಲೂ ಉನ್ನತಮಟ್ಟದವು ಎಂಬುದರಲ್ಲಿ ಸಂದೇಹವಿಲ್ಲ. ಇವುಗಳ ವಸ್ತು ಸುಪ್ರಸಿದ್ಧ; ಭಾಷೆ ಸರಳ, ಜೊತೆಗೆ ರಾಗವಾಗಿ ಹಾಡಲೂ ಅನುಕೂಲ. ಅನುಭವಾಮೃತದಂಥ ವೇದಾಂತ ಗ್ರಂಥವೂ ಷಟ್ಪದೀರೂಪವಾಗಿದೆಯೆಂಬುದನ್ನು ಇಲ್ಲಿ ಸ್ಮರಿಸಬಹುದು.

ಇಪ್ಪತ್ತನೆಯ ಶತಮಾನದಲ್ಲಿ ಷಟ್ಪದಿ ರಚನೆಯನ್ನು ಬಹುಯಶಸ್ವಿಯಾಗಿ ಬಳಸಿಕೊಂಡವರೆಂದರೆ ಜಿ.ಪಿ.ರಾಜರತ್ನಂ. ಇವರು ತಮ್ಮ ಮಹಾಕವಿ ಪುರುಷ ಸರಸ್ವತಿ ಎಂಬ ವಿಡಂಬನ ಗ್ರಂಥದಲ್ಲಿ ಹೊಸ ಮಾದರಿಯಲ್ಲಿ ಷಟ್ಪದಿ ರಚನೆಯನ್ನು ಕನ್ನಡಾಂಗ್ಲಭಾಷಾ ಮಿಶ್ರಣದಲ್ಲಿ ವಿಶಿಷ್ಟವಾಗಿ ಬಳಸಿಕೊಂಡಿದ್ದಾರೆ. ಮಹಾಕವಿ ಪುರುಷ ಸರಸ್ವತಿಯ ಗುಣಕಥನ ಮಾಡುವಾಗಲಾಗಲಿ, ಕುಕವಿನಿಂದೆ, ಸತ್ಕವಿಪ್ರಶಂಸೆ ಮಾಡುವಾಗಲಾಗಲಿ, ಹಾರ್ಮೋನಿಯಂ ಹರಣದಂತೆ ಕರ್ಣಕಥೆಯನ್ನು ಹೇಳುವಾಗಲಾಗಲಿ ತನಿಯಾದ ಹಾಸ್ಯ ವ್ಯಂಗ್ಯ ಬಹು ಸಹಜವಾಗಿ, ಅದ್ಭುತವಾಗಿ ಮೂಡಿನಿಂತಿದೆ.

*

**ಕನ್ನಡದಲ್ಲಿ ಸಂಕಲನ ಗ್ರಂಥಗಳು :** ಸಂಕಲನವೆಂದರೆ ಇತರರ ರಚನೆಗಳಿಂದ ಆಯ್ದ ಅವತರಣಿಕೆಗಳನ್ನು ಒಂದು ವ್ಯವಸ್ಥಿತ ರೀತಿಯಲ್ಲಿ ಅಳವಡಿಸಿಕೊಡುವ ಸಂದರ್ಭ ಗ್ರಂಥ. ಇದರಲ್ಲಿ ಆಯ್ಕೆ, ಸಂಯೋಜನೆಗಳು ಮಾತ್ರ ಸಂಕಲನಕಾರನ ಮುಖ್ಯ ಕೆಲಸ; ಟೀಕೆಟಿಪ್ಪಣಿಗಳನ್ನು ಯಥೋಚಿತವಾಗಿ ಸೇರಿಸಲು ಅವಕಾಶವಿರುವುದಾದರೂ ಕೇಂದ್ರಸ್ಥಾನವೆಲ್ಲ ಮೂಲ ಲೇಖಕರಿಗೆ. ಇಂಥ ಗ್ರಂಥಗಳನ್ನು ಒಂದು ಭಾಷಾಸಾಹಿತ್ಯದ ವೈಭವಗಳ ದಿಗ್ದರ್ಶಿಕೆಗಳೆನ್ನಬಹುದು.

ಮಲ್ಲಿಕಾರ್ಜುನನ (13ನೆಯ ಶತಮಾನ) ಸೂಕ್ತಿಸುಧಾರ್ಣವ (ಕಾವ್ಯಸಾರ) ಕನ್ನಡದ ಪ್ರಥಮ ಸಂಕಲನ ಗ್ರಂಥ. ಪಂಪ, ರನ್ನ, ಜನ್ನ, ಪೊನ್ನ ಮುಂತಾದ ಪ್ರಸಿದ್ಧ ಮಹಾಕವಿಗಳಿಂದಷ್ಟೇ ಅಲ್ಲದೆ, ಈಗ ಅನುಪಲಬ್ಧ ಕೃತಿಗಳ ಕರ್ತೃಗಳಾದ ಗುಣನಂದಿ, ಗುಣವರ್ಮ ಮುಂತಾದ ಪ್ರಾಚೀನರಿಂದಲೂ ಇವನು ಪದ್ಯಗಳನ್ನು ಆಯ್ದಿದ್ದಾನೆ ಎಂಬ ಕಾರಣದಿಂದ ಗ್ರಂಥದ ಮಹತ್ತ್ವ ಹೆಚ್ಚಿದೆ. ಇದರಲ್ಲಿ ಕಾವ್ಯದ ಹದಿನೆಂಟು ಅಂಗಗಳಿಗೂ ಒಂದೊಂದು ಆಶ್ವಾಸ ಮೀಸಲಾಗಿರಿಸಿದ್ದು ಪ್ರತಿಯೊಂದು ಆಶ್ವಾಸದಲ್ಲೂ ಪೂರ್ವ ಕವಿಗಳ ಉತ್ತಮ ವರ್ಣನಾಪದ್ಯಗಳ ಸಂಕಲನವಿದೆ. ಸಂಕಲನಕಾರ ಜೈನನಾದರೂ ಶಿವ, ವಿಷ್ಣು, ಗಣಪತಿ ಸ್ತೋತ್ರಗಳನ್ನು ಪೀಠಿಕಾ ಭಾಗದಲ್ಲಿ ಸೇರಿಸಿದ್ದಾನೆ. ತಾನು ಆಯ್ದ ಪದ್ಯಗಳನ್ನು ಬರೆದ ಕವಿಗಳ ಹೆಸರನ್ನು ಹೇಳದೆ ಇರುವುದು ಈ ಗ್ರಂಥದ ದೊಡ್ಡ ಕೊರತೆಯಾಗಿದೆ.

ಸೂಕ್ತಿ ಸುಧಾರ್ಣವದಂತೆಯೇ ಪ್ರಸಿದ್ಧವಾಗಿರುವ ಇನ್ನೊಂದು ಕೃತಿ ಅಭಿನವವಾದಿವಿದ್ಯಾನಂದನಿಂದ (16ನೆಯ ಶತಮಾನ) ಸಂಕಲಿತವಾದ ಕಾವ್ಯಸಾರ. ಇದರಲ್ಲಿ ಕವಿಗಳ ಹಾಗೂ ಉದಾಹೃತ ಕಾವ್ಯಗಳ ಹೆಸರಿರುವುದರಿಂದ ಗ್ರಂಥ ಹೆಚ್ಚು ಪ್ರಯೋಜನಕಾರಿಯಾಗಿದೆ. ಸೂಕ್ತಿಸುಧಾರ್ಣವದಲ್ಲಿ ಕಂಡುಬರದ ಮುಂದಿನ ಕವಿಗಳಿಗೂ ಅನೇಕ ಮುಕ್ತಕಗಳು ಹಾಗೂ ಚಾಟುಪದ್ಯಗಳಿಗೂ ಇಲ್ಲಿ ಸ್ಥಾನ ದೊರತಿದೆ.

ಇದೇ ಕಾಲದಲ್ಲಿ ವೀರಶೈವರು ತಮ್ಮ ಧಾರ್ಮಿಕ ಸಾಹಿತ್ಯದ ವಚನಗಳನ್ನು ಶ್ರದ್ಧೆಯಿಂದ ಸಂಕಲನ ಮಾಡುವ ಮಹಾಕಾರ್ಯ ನಡೆಯಿತು. ಜೈನರ (ಪದ್ಯ) ಸಂಕಲನಗಳು ಸಾಹಿತ್ಯ ದೃಷ್ಟಿಯಿಂದ ಹೆಚ್ಚು ಪ್ರೇರಿತವಾದಂತೆ ವೀರಶೈವರ (ಗದ್ಯ ವಚನ) ಸಂಕಲನಗಳು ಭಕ್ತಿಯಿಂದ ಪ್ರೇರಿತವಾದವು. ಜಕ್ಕಣಾರ್ಯನ ಏಕೋತ್ತರ ಶತಸ್ಥಲ, ಕಲ್ಲುಮಠದ ಪ್ರಭುದೇವರ ಲಿಂಗಲೀಲಾವಿಲಾಸಚಾರಿತ್ರ, ಚೆನ್ನಂಜೇದೇವನ ಬಸವಸ್ತೋತ್ರದ ವಚನ, ವೀರಶೈವ ಚಿಂತಾಮಣಿ, ವಿಶೇಷಾನುಭವ ಷಟ್ಸ್ಥಲ ಮುಂತಾದ ಎಷ್ಟೋ ವಚನ ಸಂಕಲನಗಳು ಹುಟ್ಟಿದ್ದುವು.

ಇವುಗಳಲ್ಲೆಲ್ಲ ಶೂನ್ಯಸಂಪಾದನೆ ಮುಖ್ಯವಾದುದೆನ್ನಬಹುದು. ಈಗ ಪ್ರಸಿದ್ಧವಾಗಿರುವ ಶೂನ್ಯಸಂಪಾದನೆ ಗೂಳೂರ ಸಿದ್ಧವೀರಣ್ಣೊಡೆಯನ ಸಂಕಲನ. ಆದರೆ ಇದಕ್ಕೂ ಮುಂಚೆಯೇ ಶಿವಗಣಪ್ರಸಾದಿ ಮಹದೇವಯ್ಯ, ಕೆಂಚವೀರಣ್ಣೊಡೆಯ, ಹಲಗೆಯ ದೇವರು, ಗುಮ್ಮಳಾಪುರದ ಸಿದ್ಧಲಿಂಗಯತಿ ಮುಂತಾದವರಿಂದ ಶೂನ್ಯಸಂಪಾದನೆ ಎಂಬ ಹೆಸರಿನಲ್ಲಿ ಬೇರೆ ಸಂಕಲನಗ್ರಂಥಗಳಿದ್ದುವೆಂದು ತಿಳಿದುಬರುತ್ತದೆ. ಇವುಗಳಲ್ಲಿ ಅಲ್ಲಮಪ್ರಭು, ಬಸವೇಶ್ವರ, ಅಕ್ಕಮಹಾದೇವಿ ಮುಂತಾದ ಶಿವಶರಣ ಶರಣೆಯರ ವಚನಗಳನ್ನು ನಾಟಕೀಯವಾಗಿ ಸಂವಾದರೂಪದಲ್ಲಿ ಅಳವಡಿಸಿರುವುದು ಸಂಕಲನಕಾರನ ವೈಶಿಷ್ಟ್ಯವಾಗಿದೆ. ಒಮ್ಮೊಮ್ಮೆ ವಚನಗಳ ವ್ಯಾಖ್ಯಾನವೂ ಈ ಗ್ರಂಥಗಳಲ್ಲಿ ಕಾಣಬರುತ್ತದೆ.

ಅನಂತರ ಇಪ್ಪತ್ತನೆಯ ಶತಮಾನದ ಆರಂಭದವರೆಗೂ ಸಂಕಲನ ಗ್ರಂಥಗಳ ಹುಟ್ಟು ಹೆಚ್ಚಾಗಿ ಕಾಣಿಸದು. ಮೊದಲಿಗೆ ಪ್ರೌಢಶಾಲಾ ಕಾಲೇಜುಗಳ ಪಾಠಕ್ಕೆ ಉಪಯೋಗವಾಗುವಂತೆ ಪದ್ಯಸಾರ ಮುಂತಾದ ಪ್ರಕಟನೆಗಳು ಬಂದುವು. ಆದರೆ ಹೊಸದಾಗಿ ಕನ್ನಡ ಭಾಷಾಭಿಮಾನ ಉಕ್ಕುವಂತೆ ಬಿ.ಎಂ.ಶ್ರೀಕಂಠಯ್ಯನವರಿಂದ ಸಂಕಲಿತವಾಗಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾದ ಕನ್ನಡ ಬಾವುಟ ಆಧುನಿಕ ಕನ್ನಡ ಸಂಕಲನ ಗ್ರಂಥಗಳಿಗೆ ನಾಂದಿ ಹಾಡಿತೆನ್ನಬಹುದು. ಹಾಗೆಯೇ ಇಂಗ್ಲಿಷ್‌ನಿಂದ ಅನುವಾದ ಮಾಡಲಾದ ಕನ್ನಡ ಕವಿತೆಗಳನ್ನೇ ಒಳಗೊಂಡಿದ್ದರೂ ಕನ್ನಡ ಕವಿತಾರಚನೆಗೆ ಛಂದಸ್ಸು, ತಂತ್ರಗಳ ನೂತನ ದೃಷ್ಟಿಯನ್ನೊದಗಿಸಿ, ವಿನೂತನ ಕಾವ್ಯ ಸಂಪ್ರದಾಯಕ್ಕೆ ನಾಂದಿ ಹಾಡಿದ ಶ್ರೀ ಅವರ ಇಂಗ್ಲಿಷ್ ಗೀತಗಳು ಕೂಡ ಇಲ್ಲಿ ಉಲ್ಲೇಖನೀಯ. ಮುಂದೆ ರೊಮ್ಯಾಂಟಿಕ್ ಸಂಪ್ರದಾಯದಲ್ಲಿ ಬರೆದ ಕವನ ಸಂಕಲನಗಳು ತಳಿರು ಮೊದಲಾದವು ಪ್ರಕಟವಾಗುವ ಪರಿಪಾಠ ಬೆಳೆದುದನ್ನು ಕಾಣುತ್ತೇವೆ. ಕೆ.ಡಿ.ಕುರ್ತಕೋಟಿ ಮತ್ತು ಜಿ.ಬಿ.ಜೋಶಿ ಅವರ ಸಂಪಾದಕತ್ವದಲ್ಲಿ ಪ್ರಕಟಗೊಂಡ (1959) ನಡೆದು ಬಂದ ದಾರಿ ವಿಶೇಷ ಮಹತ್ತ್ವಪಡೆದ ಒಂದು ಸಂಕಲನಗ್ರಂಥವಾಗಿದೆ. ಇದರಲ್ಲಿ ಹೊಸಗನ್ನಡ ಕಾವ್ಯ, ವಿಮರ್ಶೆ, ನಾಟಕ, ಕಾದಂಬರಿ, ಸಣ್ಣಕಥೆ ಈ ಸಾಹಿತ್ಯ ಪ್ರಕಾರಗಳ ವಿಷಯ ನಿರೂಪಿತವಾಗಿದೆ.

'ನವ್ಯ-ಧ್ವನಿ' ಒಂದು ವಿಶಿಷ್ಟ ಕಾವ್ಯಮಾರ್ಗದ ದಿಗ್ದರ್ಶನದ ದೃಷ್ಟಿಯಿಂದಲೇ ಹೊರಟ ಮೊದಲ ಕಾವ್ಯಸಂಕಲನ (ಧಾರವಾಡ 1956). ಇದರ ಸಂಪಾದಕರಾದ ವಿ.ಕೆ.ಗೋಕಾಕ ಮತ್ತು ಚೆನ್ನವೀರ ಕಣವಿ ಅವರು ರೊಮ್ಯಾಂಟಿಕ್ ಪರಂಪರೆಯ ಕವಿಗಳಿಗಿಂತ ಭಿನ್ನವಾದ ಕಾವ್ಯಸ್ವರೂಪವನ್ನು ಗುರುತಿಸಿ ಕನ್ನಡ ಕಾವ್ಯದ ನೂತನ ದಿಗಂತವನ್ನು ಕೈಮಾಡಿ ತೋರಿಸಲು ಯತ್ನಿಸಿದರು. ಇದರಲ್ಲಿ ಗೋಕಾಕ, ಅಡಿಗ, ಕಣವಿ, ರಾಮಚಂದ್ರಶರ್ಮ, ಶಂಕರಮೊಕಾಶಿಪುಣೇಕರ ಮೊದಲಾದವರ ಹೊಸ ಕಾವ್ಯ ಧೋರಣೆಯನ್ನು ಕಾಣುತ್ತೇವೆ. ಧಾರವಾಡದಿಂದ ಪ್ರಕಟವಾದ ಮತ್ತೊಂದು ಕವನ ಸಂಕಲನ - ಸಂಕ್ರಮಣ ಕಾವ್ಯ (1965). ಇದರ ಸಂಪಾದಕರು ಚಂದ್ರಶೇಖರ ಪಾಟೀಲ, ಗಿರಡ್ಡಿ ಗೋವಿಂದರಾಜ, ಸಿದ್ಧಲಿಂಗ ಪಟ್ಟಣ ಶೆಟ್ಟಿ. ಇದರಲ್ಲಿ ಹಿಂದಿನವರ ಜೊತೆಗೆ ಕೆ.ಎಸ್.ನರಸಿಂಹಸ್ವಾಮಿ, ಲಂಕೇಶ್, ರಾಮಾನುಜನ್ ಮುಂತಾದವರ ನೂತನ ರಚನೆಗಳೂ ಸೇರಿವೆ.

ಪಿ.ಲಂಕೇಶ್ ಅವರಿಂದ ಸಂಪಾದಿತವಾಗಿ ಪ್ರಕಟವಾದ ಅಕ್ಷರ ಹೊಸ ಕಾವ್ಯ (1970) ಕನ್ನಡ ನವ್ಯ ಸಾಹಿತ್ಯದ ಸಮಗ್ರ ಸ್ವರೂಪವನ್ನು ದಿಗ್ದರ್ಶಿಸುವ ಪ್ರಯತ್ನವುಳ್ಳ ಅತ್ಯಂತ ಗಮನಾರ್ಹ ಸಂಕಲನ ಗ್ರಂಥ. ಇಂಗ್ಲಿಷಿನಲ್ಲಿ ಪ್ರಕಟವಾದ ಫೇಬರ್ ಬುಕ್ ಆಫ್ ಮಾಡ್ರನ್ ವರ್ಸ್ ಈ ಗ್ರಂಥಕ್ಕೆ ಮಾದರಿ. ಅಕ್ಷರ ಹೊಸ ಕಾವ್ಯದಲ್ಲಿ ಸುಮಾರು 34 ಜನ ಕನ್ನಡದ ಪ್ರತಿಭಾವಂತ ಕವಿಗಳಿಗೆ ಎಡೆ ದೊರಕಿದೆ. 4000 ಪದ್ಯಗಳನ್ನು ಓದಿ ಆಯಾ ಕವಿಯ ಒಟ್ಟು ಜೀವನ ದೃಷ್ಟಿ, ಧೋರಣೆಗಳನ್ನು ಪ್ರತಿಬಿಂಬಿಸುವಂತೆ ಕವನಗಳನ್ನು ಆಯ್ಕೆ ಮಾಡಲಾಗಿದೆ. ನವ್ಯಕಾವ್ಯದ ಗಟ್ಟಿ ನೆಲವಾದ ಎಂ.ಗೋಪಾಲಕೃಷ್ಣ ಅಡಿಗರಿಂದ ಹಿಡಿದು ಬಿ.ಆರ್.ಲಕ್ಷ್ಮಣ ರಾವ್, ಶ್ರೀ ಕೃಷ್ಣ ಆಲನಹಳ್ಳಿ, ಕೆ.ವಿ.ತಿರುಮಲೇಶ್, ಎನ್.ಎಸ್.ಲಕ್ಷ್ಮೀ ನಾರಾಯಣ ಭಟ್ಟ ಮೊದಲಾದ ಕವಿಗಳ ಕವನಗಳು ಸಂಕಲನಗೊಂಡಿವೆ. ಹೊಸ ಜನಾಂಗದ ಕವಿತೆಗಳು (1971) ಅಕ್ಷರ ಹೊಸ ಕಾವ್ಯದ ಮಾದರಿಯಲ್ಲಿ ರಚಿತವಾದ ಇನ್ನೊಂದು ಸಂಕಲನ ಗ್ರಂಥ. ಬುದ್ದಣ್ಣ ಹಿಂಗಮಿರೆ ಇದರ ಸಂಪಾದಕರು. ಈ ಗ್ರಂಥದಲ್ಲಿ ಅಕ್ಷರ ಹೊಸ ಕಾವ್ಯದಲ್ಲಿ ಸೇರದೆ ಇರುವ ಕವಿಗಳ ಕವನಗಳು ಸಂಕಲನಗೊಂಡಿವೆ. ಸಂಪಾದಕರ ಪ್ರಶ್ನೆಗಳಿಗೆ ಕವಿಗಳಿಂದ ಬಂದ ಉತ್ತರಗಳು ಈ ಗ್ರಂಥದ ಪ್ರಮುಖ ಆಕರ್ಷಣೆ. ಈ ಪ್ರಶ್ನೋತ್ತರ ಸಂವಾದ ಆಯಾ ಕವಿಯ ಕಾವ್ಯವನ್ನು ಅರ್ಥಮಾಡಿಕೊಳ್ಳುವಲ್ಲಿ ಸಾಕಷ್ಟು ಸಹಾಯವನ್ನೊದಗಿಸುತ್ತದೆ.

ಹಳಗನ್ನಡದಿಂದ ಆರಂಭಿಸಿ ಆಧುನಿಕ ಕಾಲದ ವರೆಗೂ ಪ್ರಸಿದ್ಧ ಕವಿಗಳ ಕಾವ್ಯ ರಚನೆಗಳಿಂದ ಆಯ್ದು ಸಿದ್ಧಪಡಿಸಿದ ಸಂಕಲನ ಗ್ರಂಥಗಳಲ್ಲಿ ರಂ.ಶ್ರೀ.ಮುಗಳಿಯವರ ಸಂಪಾದಕತ್ವದಲ್ಲಿ ಹೊರಬಂದ ಕಾವ್ಯ ಸಂಚಯ ಬಹುಮುಖ್ಯವಾದುದು. ಇದು ಸಾಹಿತ್ಯ ಅಕಾಡೆಮಿಯಿಂದ ಪ್ರಕಟಗೊಂಡಿದೆ (1970).

ಬೆನ್ನಹಿಂದಿನ ಬೆಳಕು (1972) ಬಳ್ಳಾರಿ, ಗುಲ್ಬರ್ಗ, ರಾಯಚೂರು, ಬೀದರ್- ಈ ಭಾಗದ ಸುಮಾರು 27 ಜನ ಕವಿಗಳನ್ನೊಳಗೊಂಡ ಸಂಕಲನ ಗ್ರಂಥ. ಶಾಂತರಸ ಈ ಸಂಕಲನದ ಸಂಪಾದಕರು.

ಕವಿತಾ ಸಂಕಲನಗಳಂತೆಯೇ ಸಣ್ಣಕಥೆಗಳ, ಲಘುಪ್ರಬಂಧಗಳ, ಏಕಾಂಕ ನಾಟಕಗಳ ಕೆಲವು ಸಂಕಲನ ಗ್ರಂಥಗಳೂ ಈ ಕಾಲದಲ್ಲೇ ಪ್ರಕಟಗೊಂಡಿವೆ. ಇನ್ನಷ್ಟು ಹೊಸ ಕತೆಗಳು (ಮನೋಹರ ಗ್ರಂಥಮಾಲೆ) ಸಣ್ಣಕಥೆಗಳ ಒಂದು ಗಮನಾರ್ಹ ಸಂಕಲನ.

ವಿದ್ವತ್ಪೂರ್ಣವಾದ ಗಂಭೀರ ಪ್ರಬಂಧಗಳ ಹಾಗೂ ವ್ಯಕ್ತಿತ್ವದ್ಯೋತಕ ಪ್ರಬಂಧಗಳ ಸಂಕಲನವನ್ನು ಸುಂದರವಾದ ಬೃಹತ್ಸಂಪುಟಗಳಲ್ಲಿ ಮಾಡುವ ಒಂದು ನೂತನ ಕ್ರಮವನ್ನು ಇಲ್ಲಿ ನಿರ್ದೇಶಿಸದೆ ಕೈಬಿಡುವಂತಿಲ್ಲ. ಕನ್ನಡ ನಾಡು - ನುಡಿಗಳ ಉನ್ನತಿಗಾಗಿ ದುಡಿದ ಅನೇಕ ಮಹನೀಯರ ಹಾಗೂ ಸಂಸ್ಥೆಗಳ ಸಂಸ್ಮರಣಾರ್ಥವಾಗಿ ಕಾಲದಿಂದ ಕಾಲಕ್ಕೆ ಅಭಿನಂದನ ಗ್ರಂಥಗಳೆಂಬ ಹೆಬ್ಬೊತ್ತಿಗೆಗಳು ಈಗಾಗಲೆ ಗಣನೀಯ ಪ್ರಮಾಣದಲ್ಲಿ ಬಂದಿವೆ. ಇಲ್ಲಿ ಆತ್ಮೀಯರಿಂದ ಬರೆಯಲಾದ ವ್ಯಕ್ತಿ ಚಿತ್ರಣಗಳ ಜೊತೆಜೊತೆಗೆ ಕನ್ನಡ ಸಾಹಿತ್ಯ, ಸಂಸ್ಕೃತಿಗಳ ವಿಶಿಷ್ಟಾಂಶಗಳ ಬಗೆಗೆ ವಿಶೇಷಜ್ಞರಿಂದ ಬರೆಯಿಸಲಾದ ಸಂಶೋಧನ ಪ್ರಬಂಧಗಳೂ ಸೇರಿರುತ್ತವೆ. ಈ ಮಾಲಿಕೆಯಲ್ಲಿ ಬಿ.ಎಂ.ಶ್ರೀ. ಅವರಿಗೆ ಅರ್ಪಿಸಲಾದ ಸಂಭಾವನೆ ಮೊದಲನೆಯದೆನ್ನಬಹುದು. ಇದಾದ ಮೇಲೆ ಸುಮಾರು 100ಕ್ಕೂ ಮೇಲ್ಪಟ್ಟು ಅಭಿನಂದನ ಗ್ರಂಥಗಳು ಪ್ರಕಟಗೊಂಡಿವೆ. ಇವುಗಳಲ್ಲಿ ವಚನ ಪಿತಾಮಹ (ಫ.ಗು.ಹಳಕಟ್ಟಿ), ಜ್ಞಾನೋಪಾಸಕ ಮತ್ತು ಉಪಾಯನ (ಡಿ.ಎಲ್. ನರಸಿಂಹಾಚಾರ್), ಗಂಗೋತ್ರಿ ಮತ್ತು ಸಹ್ಯಾದ್ರಿ (ಕುವೆಂಪು), ದೀವಿಗೆ (ಗೋವಿಂದ ಪೈ), ಸವಿನೆನಪು (ಟಿ.ಎಸ್.ವೆಂಕಣ್ಣಯ್ಯ), ಶ್ರೀನಿವಾಸ (ಮಾಸ್ತಿ ವೆಂಕಟೇಶ ಅಯ್ಯಂಗಾರ್), ಚಂದನ (ಕೆ.ಎಸ್. ನರಸಿಂಹಸ್ವಾಮಿ), ಕಾದಂಬರೀ ದರ್ಶನ (ಕೃಷ್ಣಮೂರ್ತಿ ಪುರಾಣಿಕ), ದೇವಗಂಗೆ (ಬಿ.ಶಿವಮೂರ್ತಿಶಾಸ್ತ್ರೀ), ಅಂತಃಕರಣ, ನಮ್ಮ ನಾಡೋಜ (ದೇಜಗೌ), ಗೊರೂರು ಗೌರವಗ್ರಂಥ (ಗೊರೂರು ರಾಮಸ್ವಾಮಿ ಅಯ್ಯಂಗಾರ್), ರಸಚೇತನ (ಅ.ನ.ಕೃ.), ವಿನಾಯಕ ವಾಙ್ಮಯ (ವಿ.ಕೃ.ಗೋಕಾಕ), ವಿ.ಸೀ-75 (ವಿ.ಸೀತಾರಾಮಯ್ಯ), ಅಭಿನಂದನೆ (ಎ.ಆರ್.ಕೃಷ್ಣಶಾಸ್ತ್ರೀ), ಪೂರ್ಣಕುಂಭ (ಎಸ್.ವಿ.ಪರಮೇಶ್ವರ ಭಟ್ಟ), ಕಬ್ಬಿನ ಹಾಲು (ಕೆ.ವಿ.ಶಂಕರಗೌಡ), ಅಧ್ಯಯನ (ಶಂ.ಬಾ.ಜೋಶಿ), ಚೆಂಬೆಳಕು (ಚೆನ್ನವೀರಕಣವಿ), ಯದುಗಿರಿ (ಪು.ತಿ.ನ), ಕಾವ್ಯಾನಂದ (ಸಿದ್ಧಯ್ಯ ಪುರಾಣಿಕ), ಎಚ್ಚೆಸ್ಕೆಯವರ ಆಯ್ದ ಬರಹಗಳು (ಎಚ್ಚೆಸ್ಕೆ), ಸಿದ್ಧಗಂಗಾಶ್ರೀ (ಶಿವಕುಮಾರ ಮಹಾಸ್ವಾಮಿ), ಕಲಾಗೌರವ (ಆರ್.ಜಿ.ರಾಯಕರ), ತ.ರಾ.ಸು. ಬದುಕು ಬರಹ (ತ.ರಾ.ಸು), ಜಾನಪದ ಸಂಪದ (ಎಂ.ಎಸ್.ಸುಂಕಾಪುರ), ಬೆಳುವಲ (ಬೆಟಗೇರಿ ಕೃಷ್ಣಶರ್ಮ), ನಾಡಿಗರ ಬರಹಗಳು (ನಾಡಿಗ ಕೃಷ್ಣಮೂರ್ತಿ), ಗಮಕಶಾರದೆ (ಶಕುಂತಲಾಬಾಯಿ ಪಾಂಡುರಂಗರಾವ್), ರಸರಾಜ (ಚಿಟ್ಟಾಣಿ ರಾಮಚಂದ್ರ ಹೆಗಡೆ), ಸ್ವಸ್ತಿ (ತ.ಸು.ಶಾಮರಾಯ), ಮಾನ (ಹಾ.ಮಾ.ನಾಯಕ), (ಎಸ್.ಎಲ್.ಭೈರಪ್ಪ) ವ್ಯಾಸಂಗನೆ, ಪ್ರಶಾಂತ (ಶಾಂತಾದೇವಿ ಮಾಳವಾಡ), ನಾನೀಕಾಕಾ ಎನ್ಕೆ ಬದುಕು, (ಎನ್ಕೆ ಕುಲಕರ್ಣಿ), ಇಂಚರ (ಪಂಡಿತ ಬಸವರಾಜ ರಾಜಗುರು), ಜಿ.ನಾರಾಯಣ ವಿಚಾರ (ಜಿ.ನಾರಾಯಣ), ನಾಟಕ (ಬೇಲೂರು ಕೃಷ್ಣಮೂರ್ತಿ), ಅರವಿಂದ (ಪಂಡಿತ ಶೇಷಾದ್ರಿ ಗವಾಯಿ), ಕಟ್ಟೀಮನಿ, ಬದುಕ ಬರಹ (ಬಸವರಾಜ ಕಟ್ಟೀಮನಿ), ನಿರಂಜನ ಅಭಿನಂದನಾ ಗ್ರಂಥ (ನಿರಂಜನ), ಅನುಪಮಾ ಅಭಿನಂದನಾ (ಅನುಪಮಾ ನಿರಂಜನ), ಚದುರಂಗ ವ್ಯಕ್ತಿ ಅಭಿವ್ಯಕ್ತಿ (ಚದುರಂಗ), ಶಿವಚಿಂತನ (ಎಚ್.ತಿಪ್ಪೇರುದ್ರಸ್ವಾಮಿ), ಲೋಕಮಿತ್ರ (ಕು.ಶಿ.ಹರಿದಾಸ ಭಟ್ಟ), ಅಭಿನಂದನ (ರಾಮಚಂದ್ರ ಉಚ್ಚಿಲ), ಸಾರ್ಥಕ (ಸಿ.ಪಿ.ಕೆ.), ಜ್ಞಾನದೇಗುಲ (ಪುಟ್ಟರಾಜ ಗವಾಯಿ), ಶ್ರೀಮುಖ (ಟಿ.ವಿ.ವೆಂಕಟಾಚಲಶಾಸ್ತ್ರೀ), ಅಭಿಜ್ಞಾನ (ಕೆ.ಕೃಷ್ಣಮೂರ್ತಿ), ಸಂಶೋಧನೆ (ಚಿದಾನಂದಮೂರ್ತಿ), ಹೊನ್ನಹೊಂಬಾಳೆ (ಡಿ.ಕೆ.ರಾಜೇಂದ್ರ), ವಜ್ರಕುಸುಮ (ಬಿ.ಬಿ.ಸಾಸನೂರ), ಸಿರಸಂಪದ (ಬ.ವಿ.ಶಿರೂರ), ಉನ್ಮೀಲನ (ಆರ್ಯಾಂಬಪಟ್ಟಾಭಿ), ಅಕ್ಕಕೇಳವ್ವ (ಸರೋಜನಿ ಶಿಂತ್ರಿ), ವಾಙ್ಮಯತಪಸ್ವಿ (ಕಡೆಂಗೋಡ್ಲು ಶಂಕರಭಟ್ಟ), ತುಂಬಿದ ಕೊಡ (ಕಾಶಿವಿಶ್ವನಾಥ ಶೆಟ್ಟಿ), ಸಾರ್ಥಕ

(ಎಂ.ಮರಿಯಪ್ಪಭಟ್ಟ) (ಎಂ.ಎಂ.ಕಲಬುರ್ಗಿ) ಮಹಾಮಾರ್ಗ ಮೊದಲಾದವುಗಳನ್ನು ಹೆಸರಿಸಬಹುದು.

ಇತ್ತೀಚಿನ ದಿನಗಳಲ್ಲಿ ಒಬ್ಬ ಲೇಖಕನ ಸಮಗ್ರ ಕೃತಿಗಳನ್ನು ಒಂದೆಡೆ ಸಂಕಲಿಸಿ ಪ್ರಕಟಿಸುವ ಪರಿಪಾಠ ಆರಂಭವಾಗಿದೆ. ಸಮಗ್ರ ಗದ್ಯ, ಪದ್ಯ, ಕಾವ್ಯ, ಕಥೆಗಳು ಮೊದಲಾದ ಶೀರ್ಷಿಕೆಯಡಿಯಲ್ಲಿ ಕನ್ನಡದ ಅನೇಕ ಲೇಖಕರ ಕೃತಿಗಳು ಪ್ರಕಟವಾಗಿವೆ, ಪ್ರಕಟವಾಗುತ್ತಿವೆ. ಉತ್ತಮ ಮಕ್ಕಳ ಕವಿತೆಗಳನ್ನು ಒಂದೆಡೆ ಸಂಕಲಿಸಿ ಕೊಡುವ ಪ್ರಯತ್ನವನ್ನು ಬೋಳುವಾರು ಮಹಮದ್ ಕುಂಞ ರಚಿಸಿದ್ದು, 'ತಟ್ಟು ಚಪ್ಪಾಳೆ ಪುಟ್ಟ ಮಗು' ಒಂದು ಮಹತ್ವದ ಸಂಕಲನವಾಗಿದೆ. ಕನ್ನಡ ಸಣ್ಣಕಥೆಗಳು (ಜಿ.ಎಚ್. ನಾಯಕ) ಇನ್ನೊಂದು ಗಮನಾರ್ಹ ಸಣ್ಣಕಥೆಗಳ ಸಂಕಲನ. ಅಕಾಡೆಮಿಗಳು, ಅನೇಕ ಸಾಹಿತ್ಯಕ ಸಂಸ್ಥೆಗಳು ಸಂಕಲನ ಗ್ರಂಥಗಳನ್ನು ಪ್ರಕಟಿಸಿವೆ. ಕರ್ನಾಟಕ ಸಾಹಿತ್ಯ ಅಕಾಡೆಮಿ 2001ರಲ್ಲಿ ಪ್ರಕಟಿಸಿರುವ ಶತಮಾನದ ಕಾವ್ಯ (ಸಂ. ಎಚ್.ಎಸ್.ವೆಂಕಟೇಶಮೂರ್ತಿ), ಶತಮಾನದ ಸಣ್ಣಕತೆ (ಸಂ. ಬೋಳುವಾರು ಮಹಮದ್ ಕುಂಞ), ಶತಮಾನದ ಸಾಹಿತ್ಯ ವಿಮರ್ಶೆ (ಸಂ. ಎಚ್.ಎಸ್.ರಾಘುವೇಂದ್ರರಾವ್), ಶತಮಾನದ ಸಂಶೋಧನೆ (ಸಂ. ಎನ್.ಎಸ್.ತಾರಾನಾಥ್) ಶತಮಾನದ ಲಲಿತ ಪ್ರಬಂಧ (ಸಂ. ಗುರುಲಿಂಗ ಕಾಪಸೆ), ಶತಮಾನದ ಮಕ್ಕಳ ಸಾಹಿತ್ಯ (ಸಂ. ಎನ್.ಎಸ್.ರಘುನಾಥ್) ಇವು ಉಲ್ಲೇಖನೀಯ ಗ್ರಂಥಗಳು. (ಕೆ.ಕೆ.)

**ಕನ್ನಡದಲ್ಲಿ ಸಣ್ಣಕಥೆಗಳು :** ಕಾದಂಬರಿಯ ತರುವಾಯ ಸಣ್ಣ ಕಥೆಯೇ ಅತ್ಯಂತ ಜನಪ್ರಿಯವಾದ ಪ್ರಕಾರ. ಕನ್ನಡದಲ್ಲಿ ಸಣ್ಣಕಥೆ ಒಂದು ವಿಶಿಷ್ಟ ರೂಪವಾಗಿ ಜನ್ಮ ತಾಳಿದುದು ಸುಮಾರು ನೂರು ವರ್ಷಗಳ ಹಿಂದೆ. ಹೊಸಗನ್ನಡದಲ್ಲಿ ಈವರೆಗೆ ಬಂದಿರುವ ಕಥೆಗಾರರ ಸಣ್ಣಕಥೆಗಳ ಸಂಖ್ಯೆಯನ್ನು ಪಟ್ಟಿ ಮಾಡುವುದು ಪ್ರಯಾಸದ ಕೆಲಸ. ವಾರಪತ್ರಿಕೆ, ದಿನಪತ್ರಿಕೆ, ಮಾಸಪತ್ರಿಕೆಗಳಲ್ಲಿ ಹೊಸ ಹೊಸ ಕಥೆಗಳು ಪ್ರಕಟವಾಗುತ್ತಲೇ ಇವೆ. ಇದರ ತಂತ್ರ, ವ್ಯಾಪ್ತಿ, ಬರೆವಣಿಗೆಯ ರೀತಿ, ಒಟ್ಟಂದದ ಪರಿಣಾಮ, ರೂಪಗಳನ್ನು ಮಾತ್ರ ಇಲ್ಲಿ ಸ್ಥೂಲವಾಗಿ ಗಮನಿಸಿದೆ.

ಕನ್ನಡದಲ್ಲಿ ಸಣ್ಣಕಥೆಗೆ ವಿಶಿಷ್ಟ ರೂಪ ಕೊಟ್ಟವರು, ಚಾರಿತ್ರಿಕ ವಾಗಿ ಮೊಟ್ಟ ಮೊದಲು ಕಥೆಗಳನ್ನು ಬರೆದವರು ಯಾರು ಎಂಬ ಬಗ್ಗೆ ಜಿಜ್ಞಾಸೆಯಿದೆ. ಪಂಜೆ ಮಂಗೇಶರಾಯರು, ಕೆರೂರ ವಾಸುದೇವಾಚಾರ್ಯರು, ಎಂ.ಎನ್.ಕಾಮತರು ಇವರೆಲ್ಲ ಆರಂಭದಲ್ಲಿ ಸಣ್ಣ ಕಥೆಗಳನ್ನು ಬರೆದವರು. ಸುವಾಸಿನಿ ಪತ್ರಿಕೆಯಲ್ಲಿ ಪ್ರಕಟವಾದ ಪಂಜೆ ಮಂಗೇಶರಾಯರ ನನ್ನ ಚಿಕ್ಕತಾಯಿ (1900) ಕನ್ನಡದ ಮೊದಲ ಸಣ್ಣ ಕಥೆ ಎಂದು ಭಾವಿಸಲಾಗಿದೆ. ಅನಂತರದಲ್ಲಿ ಅವರು ನನ್ನ ಚಿಕ್ಕ ತಂದೆ (1902), ಭಾರತ ಶ್ರವಣ (1902), ಕಮಲಪುರದ ಹೋಟ್ಲಿನಲ್ಲಿ (1902) ಮೊದಲಾದ ಉತ್ತಮ ಕಥೆಗಳನ್ನು ಪ್ರಕಟಿಸಿದರು. ಆದರೆ ಇವರಾರೂ ಅದೊಂದು ಸಾಹಿತ್ಯ ಪ್ರಕಾರವೆಂಬ ಪ್ರಜ್ಞೆಯನ್ನು ಮೂಡಿಸಿರಲಿಲ್ಲ. ಆ ಪ್ರಜ್ಞೆಯನ್ನು ಮೂಡಿಸಿ ಅದನ್ನೇ ಮಾಧ್ಯಮವನ್ನಾಗಿ ಬಳಸಿದವರಲ್ಲಿ ಶ್ರೀನಿವಾಸರು (ಮಾಸ್ತಿ) ಮೊದಲಿಗರು. ಇವರು ಸಣ್ಣಕಥೆಯ ಜನಕರೆಂಬ ಹೆಸರಿಗೆ ಪಾತ್ರರಾದವರು. ಇವರ ವಸ್ತುವಿನ ಆಯ್ಕೆ, ದೃಷ್ಟಿ, ತಿಳಿಹಾಸ್ಯ, ಸರಳಶೈಲಿ - ಇವು ಕನ್ನಡ ಕಥಾಲೋಕಕ್ಕೆ ಮಾರ್ಗದರ್ಶಕವಾಗಿವೆ. ಇವರ ಕಥೆಗಳು ಅನೇಕ ಸಂಪುಟಗಳಲ್ಲಿವೆ. ರಂಗಪ್ಪನ ದೀಪಾವಳಿಯಿಂದ ಹಿಡಿದು ಇವರ ಎಲ್ಲ ಕಥೆಗಳಲ್ಲಿ ಕಾಣುವುದು ಸಾಮಾನ್ಯ ಘಟನೆಗಳನ್ನು ಉತ್ಪ್ರೇಕ್ಷೆಯಿಲ್ಲದೆ ಹೇಳುವ ಕಲೆ. ಇವರ ಕಥೆಗಳಲ್ಲಿ ಆವೇಶವಿಲ್ಲ, ಚಮತ್ಕಾರವಿಲ್ಲ, ವಿಸ್ಮಯವಿಲ್ಲ; ಉದಾತ್ತಗುಣಗಳಿಂದ ತುಂಬಿದ ಆತ್ಮದ ಒಂದು ಚೇತನವನ್ನು ಕಾಣುತ್ತೇವೆ. ಇವರ ಇಂದಿರೆಯೋ ಅಲ್ಲವೋ? ಬೀದಿಯಲ್ಲಿ ಹೋಗುವ ನಾರಿ, ನಮ್ಮ ಮೇಷ್ಟ್ರು, ರಂಗಸ್ವಾಮಿಯ ಅವಿವೇಕ ಇವುಗಳಲ್ಲಿ ಸಣ್ಣಕಥೆಯ ಎಲ್ಲ ಸಲ್ಲಕ್ಷಣಗಳನ್ನೂ ಕಾಣಬಹುದು. ಇವರಲ್ಲಿ ಸಾಮಾಜಿಕ, ಪೌರಾಣಿಕ, ಐತಿಹಾಸಿಕ ಎಲ್ಲ ಬಗೆಯ ಕಥೆಗಳೂ ಇವೆ. ಸಾಮಾಜಿಕ ಕಥೆಗಳಲ್ಲಿ ಜೀವನಶ್ರದ್ಧೆ ಕಂಡರೆ ಐತಿಹಾಸಿಕ, ಪೌರಾಣಿಕ ಕಥೆಗಳಲ್ಲಿ ಗುಪ್ತಗಾಮಿನಿಯಾಗಿ ಹರಿಯುವ ಸಂಸ್ಕೃತಿ ಪ್ರವಾಹವನ್ನು ಕಾಣಬಹುದು. ಬಾದಷಹನ ದಂಡನೆ, ಪಂಡಿತನ ಮರಣಶಾಸನ ಇವುಗಳಲ್ಲಿ ರಾಜಕೀಯ ಜೀವನ ಕಂಡರೆ ನಿಜಗಲ್ಲಿನ ರಾಣಿ, ಗೊಂಡೆಯ ಕೃಷ್ಣಮೂರ್ತಿ ಕಥೆಗಳಲ್ಲಿ ನಾಡಿನ ಹೆಣ್ಣುಮಕ್ಕಳ ಧೀರೋದಾತ್ತ ಚಿತ್ರಗಳನ್ನು ಕಾಣಬಹುದು. ಆಚಾರ್ಯರ ಪತ್ನಿ, ಹೇಮಕೂಟದಿಂದ ಬಂದಮೇಲೆ, ಮಸುಮತಿ, ಗೌತಮಿ ಹೇಳಿದ ಕಥೆ ಇವುಗಳಲ್ಲಿ ವಸ್ತುವಿನ ಆಯ್ಕೆಯ ಅನನ್ಯತೆಯನ್ನು ಕಾಣಬಹುದು.

ಶ್ರೀನಿವಾಸರ ಮಾರ್ಗದಲ್ಲಿ ಬೆಳೆದು ಬಂದ ಕೆಲವು ಕಥೆಗಾರರಲ್ಲಿ ಮುಖ್ಯರೆಂದರೆ ಆನಂದರು (ಎ.ಸೀತಾರಾಂ). ಭವತಿ ಭಿಕ್ಷಾಂ ದೇಹಿ ಇವರ ಮೊದಲ ಕಥೆ. ವಾರದ ಹುಡುಗನ ದುಃಖಮಯ ಜೀವನ ಇಲ್ಲಿ ಚಿತ್ರಿತವಾಗಿದೆ. ಆನಂದರು ಕಥೆಗಾರರೆಂದು ಹೆಸರಾದುದು ಶೃಂಗಾರ ಹಾಗೂ ಪ್ರಣಯ ಕಥೆಗಳಿಂದ. ಹೆಂಡತಿಯ ಕಾಗದ, ಪದ್ಮಪಾಕ, ರಾಧೆಯ ಕ್ಷಮೆ, ನಾವು ಹಾಗೆಯೇ - ಇವು ಪ್ರಣಯ ಜೀವನದ ನಯನಾಜೂಕುಗಳನ್ನು ಚಿತ್ರಿಸುತ್ತವೆ. ಗಂಡಹೆಂಡತಿಯರ ಸಂಭಾಷಣೆಯನ್ನು ಅತ್ಯಂತ ನವುರಾಗಿ ಮಾರ್ಮಿಕವಾಗಿ, ಯಥಾವತ್ತಾಗಿ ಇವರ ಕಥೆಗಳಲ್ಲಿ ಕಾಣಬಹುದು. ನಾನು ಕೊಂದ ಹುಡುಗಿ ಇವರ ಅತ್ಯುತ್ತಮ ಕೃತಿ. ಒಂದು ಸುಂದರ ಜಗತ್ತನ್ನೇ ಕಥೆಯ ಪ್ರಾರಂಭದಲ್ಲಿ ಸೃಷ್ಟಿಸಿಬಿಡುತ್ತಾರೆ. ಕಥೆಯ ಕೊನೆಯೂ ಅತಿ ರಮ್ಯವಾದುದು. ಇಲ್ಲಿ ಯಾವ ಭಾವಾತಿರೇಕಕ್ಕೂ ಎಡೆಗೊಟ್ಟಿಲ್ಲ. ಹೆಂಡತಿಯ ಕಾಗದ ಇವರ ಕಥಾರಚನಾ ಕೌಶಲ್ಯಕ್ಕೆ ಮತ್ತೊಂದು ಸಾಕ್ಷಿ. ಇವರ ಕಥೆಗಳು ಶೈಲಿಯ ದೃಷ್ಟಿಯಿಂದಲೂ ಕನ್ನಡ ಗದ್ಯ ಸಾಹಿತ್ಯಕ್ಕೆ ಮಹತ್ವದ ಕೊಡುಗೆಗಳಾಗಿವೆ.

ಶ್ರೀಸ್ವಾಮಿ ಹಾಗೂ ಕೆ.ಗೋಪಾಲಕೃಷ್ಣರಾಯರನ್ನೂ ಇದೇ ಗುಂಪಿಗೆ ಸೇರಿಸಬಹುದು. ಗೋಪಾಲಕೃಷ್ಣರಾಯರು ತಮ್ಮ ಕಥೆಗಳಲ್ಲಿ ವ್ಯಕ್ತಿಯ ಬಾಳಿನ ರೀತಿನೀತಿ, ಗುರಿಗಳತ್ತ ತಮ್ಮ ದೃಷ್ಟಿಹಾಯಿಸಿದ್ದಾರೆ. ಇವರ ಜಟಕಾ ಸಾಹೇಬು, ಮಾಗಡಿ ರಂಗ ಇವು ಮಾನವ ಸ್ವಭಾವದ ಸುಪ್ತ ಹಿರಿಮೆಯ ದ್ಯೋತಕಗಳಾಗಿವೆ. ಸುಶೀಲಾ ಸಂಕೇತ್ ಸೊಗಸಾದ ಕಥೆ; ಹೆಣೆದಿರುವ ರೀತಿ ಮನೋಹರವಾದುದು. ಶ್ರೀಸ್ವಾಮಿಯವರು ಸುಂದರ ಕಥೆಗಳನ್ನು ಬರೆಯಬಲ್ಲರು. ಪುಷ್ಪಮಾಲೆ, ನಂಜಮ್ಮ, ಗೋಧೂಳೀ ಲಗ್ನ ಕಥೆಗಳಲ್ಲಿ ಭಾವನೆಗಳಲ್ಲದೆ ಪಾತ್ರಸೃಷ್ಟಿಯೂ ಹಿತವಾಗಿದೆ. ಪತಿಪರಾಯಣೆ, ಬೀಬಿ ನಾಚ್ಚಿಯಾರ್ ಅಂಥ ಕಥೆಗಳನ್ನು ಆಸಕ್ತಿಯಿಂದ ಓದಬಹುದು.

ಎ.ಆರ್.ಕೃಷ್ಣಶಾಸ್ತ್ರಿಗಳ 'ಕಥೆಗಳು' ಸೊಗಸಾದ ಕಥಾಸಂಕಲನ. ಇವರ ಕಥೆಗಳಲ್ಲಿ ಜೀವನದ ಒಂದು ದರ್ಶನ, ಮೌಲ್ಯಗಳ ಸೂಚನೆ ಅಂತರ್ಗತವಾಗಿ ಬರುತ್ತದೆ. ಇತರರು ಹತ್ತು ಮಾತಿನಲ್ಲಿ ಹೇಳುವುದನ್ನು ಶಾಸ್ತ್ರಿಗಳು ಒಂದೇ ಮಾತಿನಲ್ಲಿ ಖಚಿತವಾಗಿ ಮರೆಯದಂತೆ ಹೇಳಬಲ್ಲರು. ಊಟದಲ್ಲಿ ಉಪಚಾರ, ಅಗ್ಗದ ಮನೆ ಇವುಗಳಲ್ಲಿ ಹಾಸ್ಯವಿದ್ದರೆ ಶ್ಯಾನುಭೋಗನ ಪುಣ್ಯದಲ್ಲಿ ಹಳ್ಳಿಯ ಕಲಕಿದ ರಾಜಕೀಯವಿದೆ. ಇವರ ಎಲ್ಲ ಕಥೆಗಳಲ್ಲೂ ಕನ್ನಡತನ ಎದ್ದು ಕಾಣುತ್ತದೆ.

ಎಸ್.ಜಿ.ಶಾಸ್ತ್ರಿಗಳ ಕಥೆಗಳನ್ನು (ಇದ್ದರೂ ಇರಬಹುದು) ಬೇರೊಂದು ಗುಂಪಿಗೆ ಸೇರಿಸಬಹುದು. ಮಧ್ಯಮ ವರ್ಗದವರ ಜೀವನದ ಹೊಳಪು ಇವರ ಕಥೆಗಳಲ್ಲಿ ಎದ್ದು ಕಾಣುತ್ತದೆ. ಕಥೆಗಳ ಸೊಗಸು, ಭಾವಗಳು ಚೆನ್ನಾಗಿ ಪ್ರಖರವಾಗಿವೆ. ಪರಪುರುಷದಲ್ಲಿ ರಚನಾವೈವಿಧ್ಯವನ್ನು ಕಾಣಬಹುದು. ತುಂಟಮರಿಯಲ್ಲಿ ಮನಕರಗಿಸುವ ಚಿತ್ರವಿದೆ, ನೈಸರ್ಗಿಕ ಕಲಾವಂತಿಕೆಯಿದೆ.

ನವರತ್ನ ರಾಮರಾಯರ ಕಥೆಗಳಲ್ಲಿ ಕುತೂಹಲಕ್ಕೆ ವಿಪುಲ ಆದ್ಯತೆಯಿದೆ. ಲಕ್ಷ್ಮಣರಾಯರ ಭಾಗ್ಯದಲ್ಲಿ ಲಕ್ಷ್ಮಣರಾಯ ದೇವಿಯ ಮಂದಿರಕ್ಕೆ ಸೇರಿ ಮಂಗಮಾರಿ ಸಾಹೇಬರನ್ನು ಕಂಡು ಬಹುಮಾನ ಪಡೆಯುವವರೆಗೆ ಪತ್ತೇದಾರಿ ಕಾದಂಬರಿಯಂತೆ ಕುತೂಹಲ ಕೆರಳುತ್ತಿರುತ್ತದೆ. ಹೆಣ್ಣು ಹೃದಯ ಉತ್ತಮ ಕಥೆ. ಮಾತಿನ ಧೋರಣೆಯಲ್ಲಿ ಸನ್ನಿವೇಶ ರಚನೆಯಲ್ಲಿ ಕಾಣುವ ಕಛೇರಿ ವಾತಾವರಣ ಇವರ ಕೃತಿಗಳಿಗೆ ವಿಶಿಷ್ಟ ಸೊಗಸು ತಂದಿದೆ.

ಉತ್ತರ ಕರ್ನಾಟಕದ ಭಾಗದಿಂದಲೂ ಸಣ್ಣಕಥಾಸಾಹಿತ್ಯ ವಿಪುಲವಾಗಿ ಬೆಳೆಯಿತು. ಆನಂದಕಂದರ ಕಥೆಗಳು ಇಂದಿಗೂ ತನ್ನ ವೈಶಿಷ್ಟ್ಯವನ್ನು ಕಾಯ್ದುಕೊಂಡಿವೆ. ಅಲ್ಲಿನ ಹಳ್ಳಿಗಳಲ್ಲಿಯ ಜೀವನವೇ ಇವರ ಕಥಾವಸ್ತು. ಇವರ ಕಥೆಗಳಲ್ಲಿ ಭಾವನಾಪರವಶತೆ ಮಾಯವಾಗಿ ವಾಸ್ತವ ದೃಷ್ಟಿ ಹರಿದಿದೆ. ಇಬ್ಬಣದ ದಿಬ್ಬಣದಲ್ಲಿ ಶುದ್ಧ ವಾಸ್ತವತೆಯನ್ನು ಕಾಣಬಹುದು. ಭಾಷೆಯ ಬಳಕೆಯಲ್ಲೂ ಆನಂದಕಂದರ ಕೈ ಮಿಗಿಲಾದುದು. ಸೀಮೆಯ

ಕಲ್ಲಿನ ಶಾಸನದ ಭಾಷೆ, ಜೋಗತಿಕಲ್ಲಿನಲ್ಲಿ ಧರಮಣ್ಣನ ಕೆಚ್ಚು ತುಂಬಿದ ಕನ್ನಡ, ಕಂಕಣದ ಕೈಯು ಐತಿಹಾಸಿಕತೆ ಹೊರಸೂಸುವ ಭಾಷೆ ಇವರ ಭಾಷಾಪ್ರಭುತ್ವವನ್ನು ಸಾರುತ್ತವೆ. ಇನ್ನೊಬ್ಬ ಪ್ರಮುಖ ಕಥೆಗಾರರೆಂದರೆ ಕೃಷ್ಣಕುಮಾರ ಕಲ್ಲೂರ. ಇವರ ಮೊದಲ ಸಂಗ್ರಹವಾದ ಬಿಸಿಲುಗುದುರೆಯಲ್ಲಿ ಭಾಷೆ ಕಾವ್ಯಮಯವಾಗಿದ್ದರೂ ಅನುಭವದ ದೃಷ್ಟಿಯಿಂದ ಇನ್ನೂ ಮಾಗಬೇಕಾದ ಕಥೆಗಳೆನಿಸಿದರೂ ಇವರ ಎರಡನೆಯ ಸಂಕಲನ ಜೀವನ ಎಂಬುದರಲ್ಲಿ ಉತ್ತಮ ಕಥೆಗಳಿವೆ. ಇವರ ಕಥೆಗಳಲ್ಲಿ ಗೆಳೆತನ ಹಾಗೂ ಆದರ್ಶಪ್ರಿಯತೆಗಳು ವೈಚಾರಿಕವಾಗಿ ಬಂದಿವೆ. ಜೀವನ ಎಂಬ ಕಥೆಯಲ್ಲಿನ ರಮಾಬಾಯಿಯ ಪಾತ್ರಸೃಷ್ಟಿ ಅದ್ಭುತವಾದುದು. ಇದು ಇವರ ಕಲಾವಂತಿಕೆಗೆ ಸಾಕ್ಷಿಯಾಗಿದೆ. ಇವರ ಕೆಲವು ಕಥೆಗಳನ್ನು ನೋಡಿದಾಗ ಕಥಾವಸ್ತುವಿನ ಆಯ್ಕೆಯಿಂದ ಹಿಡಿದು ಅದರ ನಿರ್ವಹಣೆಯವರೆಗೆ ಕಂಡು ಬರುವ ಕಲೆಗಾರಿಕೆ ಮೆಚ್ಚುವಂಥದು.

ಗಂಗೆಯ ಗುತ್ತಿಗೆಯನ್ನು ಬರೆದು ಪ್ರಸಿದ್ಧರಾದ ಟೇಂಗ್ಸೆ ಗೋವಿಂದರಾಯರ ಕೈಯಲ್ಲಿ ಸಣ್ಣಕಥೆ ಹೊಸ ರೂಪು ತಳೆಯಿತು. ಟೇಂಗ್ಸೆಯವರ ಗಂಗೆಯ ಗುತ್ತಿಗೆ ಹಾಗೂ ಛಪ್ಪರಬಂಧ ಪ್ರತಿಭೆಯ ಎರಡು ಮುಖಗಳು. ಮೊದಲನೆಯದರಲ್ಲಿ ವಿನೋದದ ಆವರಣವಿದ್ದರೆ ಎರಡನೆಯದರಲ್ಲಿ ಬಡತನದ ವಿಷಮತೆಯಿದೆ. ಪರಿಣಾಮದ ದೃಷ್ಟಿಯಿಂದ ಛಪ್ಪರಬಂಧ ಯಶಸ್ವೀ ಕಥೆ.

ರಂ.ಶ್ರೀ.ಮುಗಳಿಯವರ ಕನಸಿನ ಕೆಳದಿ ಸಂಕಲನದಲ್ಲಿ ಉತ್ತಮವಾದ ಕಥೆಗಳಿವೆ. ಸುಸಂಬದ್ಧವಾದ ಕಥಾರಚನೆ, ಗುರಿ ತಪ್ಪದ ಪರಿಣಾಮ ಇವರ ಕಥೆಗಳ ವೈಶಿಷ್ಟ್ಯ - ಮಧ್ಯಮವರ್ಗದ ಜನರ ಅನೇಕ ತೊಂದರೆ ತೊಡಕುಗಳು ಹೃದಯಂಗಮವಾಗಿ ಚಿತ್ರಿತವಾಗಿವೆ. ವಿತಂತು ವೇಶ್ಯೆಯಲ್ಲಿ ಉತ್ತಮ ಕಥೆಯ ಎಲ್ಲ ಗುಣಗಳೂ ಇವೆ. ದುರ್ದೈವಿ ಹೆಣ್ಣೊಬ್ಬಳ ಹೃದಯವಿದ್ರಾವಕ ಚಿತ್ರಣ ಈ ಕಥೆಯ ವಸ್ತು. ಇದರ ಶೈಲಿ ನಿರರ್ಗಳವಾಗಿ ಹರಿಯುತ್ತದೆ.

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಹಾಗೂ ಪಡುಕೋಣೆ ರಮಾನಂದರಾಯರ ಕಥೆಗಳನ್ನು ಪ್ರತ್ಯೇಕವಾಗಿಯೇ ನೋಡಬೇಕು. ಇಬ್ಬರೂ ಹೆಸರಾದ ನಗೆಗಾರರು. ಇವರ ಹಾಸ್ಯ, ವ್ಯಕ್ತಿಗಳ ವಿಕ್ಷಿಪ್ತತೆ ಹಾಗೂ ಘಟನೆಗಳ ಚಮತ್ಕಾರಗಳಿಂದಾಗಿ ಕಳೆಗೂಡಿ ನಿಲ್ಲುತ್ತದೆ. ತಾಂತ್ರಿಕವಾಗಿ ಇವರ ಬರೆಹಗಳಲ್ಲಿ ಸಣ್ಣಕಥೆಯ ಅಂಶಗಳು ಕಡಿಮೆಯಿದ್ದರೂ ಕಥನ ರೀತಿ ದೃಢವಾದುದು. ರಮಾನಂದರಾಯರ ಹುಚ್ಚು ಬೆಳುದಿಂಗಳಿನ ಹೂಬಾಣಗಳು ಎಂಬ ಆಧಾರಿತ ಸಂಗ್ರಹದಲ್ಲಿ ಸಣ್ಣಕಥೆಗಳೆನಿಸುವ ಕೃತಿಗಳಿದ್ದರೂ ಅವು ಚೆಲ್ಲುವ ಹಾಸ್ಯದಿಂದಾಗಿ ನಗೆಬರೆಹಗಳು ಎಂದೇ ಪ್ರಸಿದ್ಧವಾಗಿವೆ. ಗೊರೂರರ ಎಲ್ಲ ಬರೆಹಗಳಿಂದಲೂ ಕೆಲವು ಕಥೆಗಳನ್ನು ಆರಿಸಬಹುದು. ವೈಯಾರಿ, ಗರುಡಗಂಬದ ದಾಸಯ್ಯ, ಬೆಸ್ತರ ಕರಿಯ, ಶಿವರಾತ್ರಿ ಈ ಸಂಗ್ರಹಗಳಲ್ಲಿ ಹಲವು ಉತ್ತಮ ಕಥೆಗಳಿವೆ. ಆದರೆ ಗೊರೂರರ ಹಾಸ್ಯ ಪ್ರತಿಭೆಯಲ್ಲಿ ಕಥಾಂಶ ಮಸುಕಾಗುತ್ತದೆ. ಹಾಸ್ಯರಸ ಹೊನಲಾದಾಗ ಇವರ ಕಥೆಗಳು ಉಪಕಥೆಗಳ ಗೊಂಚಲಾಗುತ್ತವೆ. ಹಾರುವಯ್ಯ ಹಜಾಮನಾದದ್ದು, ಆಚಾರ ಕೆಟ್ಟರೂ ಆಕಾರ ಕೆಡಬಾರದು, ಬೂತಯ್ಯನ ಮಗ ಅಯ್ಯು, ಡೊಂಕು ಬಾಲ - ಇಂಥ ಉಜ್ವಲ ಕಥೆಗಳೂ ಈ ಸಂಕಲನಗಳಲ್ಲಿವೆ. ಗೊರೂರರ ಕಥೆಗಳು ಹೆಚ್ಚು ಚಿತ್ರಮಯವೂ ಆ ಚಿತ್ರಗಳು ಹಾಸ್ಯಮಯವೂ ಆಗಿವೆಯೆನ್ನಬಹುದು. ವಾಸ್ತವತೆಯ ಒಂದು ಕಾರ್ಯವಾದ ಜೀವನ ಚಿತ್ರಣದಲ್ಲಿ ಗೊರೂರರು ಯಶಸ್ವಿಯಾಗಿದ್ದಾರೆ ಎನ್ನಬಹುದು.

ಕೊಡಗಿನ ಗೌರಮ್ಮನವರ ಹೆಸರು ಸಣ್ಣಕಥೆಯೊಂದಿಗೆ ನಿಕಟಸಂಬಂಧವನ್ನು ಬೆಸೆದುಕೊಂಡಿದೆ. ಹೆಣ್ಣಿನ ಬಾಳಿನ ನೋವುನಲಿವುಗಳನ್ನು ತಮ್ಮ ಕಥೆಗಳ ಮೂಲಕ (ಕಂಬನಿ) ಇವರು ಚಿತ್ರಿಸಿದ್ದಾರೆ. ಮರದ ಬೊಂಬೆ ಕಥೆಯಲ್ಲಿ ಕಾಣುವ ಹೆಣ್ಣು ಜೀವನದ ದೃಷ್ಟಿಕೋನ ಇವರು ಒಳ್ಳೆಯ ಕಥೆಗಾರ್ತಿ ಎಂಬುದಕ್ಕೆ ಸಾಕ್ಷಿಯಾಗಿದೆ. ಇವರ ಜೊತೆಗೇ ಹೇಳಬೇಕಾದ ಇನ್ನೊಂದು ಹೆಸರೆಂದರೆ ಶ್ಯಾಮಲಾದೇವಿಯವರದು. ಇವರ ಹೂಬಿಸಿಲು, ಹೊಂಬಿಸಿಲು ಎಂಬ ಎರಡು ಕಥಾಸಂಗ್ರಹಗಳಲ್ಲೂ ಮಧ್ಯಮ ವರ್ಗದ ಕೌಟುಂಬಿಕ ಜೀವನ ಚಿತ್ರಿತವಾಗಿದೆ. ಹೀಗೆಯೇ ಸರಸ್ವತಿಬಾಯಿ ರಾಜವಾಡೆ (ಗಿರಿಬಾಲೆ) ಅವರ ಕಥನ ಪ್ರಪಂಚ ಸ್ತ್ರೀ ಕೇಂದ್ರಿತವಾದಂಥದ್ದು. ಇವರ ಕಥೆಗಳಲ್ಲಿ ಕೌಟುಂಬಿಕ ನೆಲೆ ಪ್ರಧಾನವಾಗಿದೆ. ಮಹಿಳೆಯರು ಒಳಗಿನಿಂದ ಕಾಣಬಹುದಾದ ಕೌಟುಂಬಿಕ ಸೂಕ್ಷ್ಮಗಳು, ವಿವರಗಳು, ವೈಪರೀತ್ಯಗಳು, ಸುಖದುಃಖಗಳು ಸಹಜವಾಗಿ ಇವರ ಕಥೆಗಳಲ್ಲಿ ಪಡಿಮೂಡಿವೆ.

ಸಣ್ಣಕಥೆಗಳಲ್ಲಿ ಹೆಸರಿಸಬೇಕಾದ ಇನ್ನೊಂದು ಹೆಸರು ದೇವುಡು. ಪಾತ್ರಗಳ ಕ್ರಮಬದ್ಧ ವಿಕಾಸ, ಕಥೆ ಪಡೆಯುವ ಏರಿಳಿತಗಳು, ಸನ್ನಿವೇಶಗಳ ಯಥಾರ್ಥತೆಗಳಿಂದಾಗಿ ದೇವುಡು ಅವರ ಕಥೆಗಳು ಮಹತ್ವದ್ದಾಗಿವೆ. ಕವಿಗಳಾದ ಬೇಂದ್ರೆ, ಕುವೆಂಪು, ಪುತಿನ ಇವರು ಕಥೆಗಳನ್ನು ಬರೆದಿದ್ದಾರೆ. ಸಣ್ಣಕಥೆ ತನ್ನ ಸ್ವಭಾವದಲ್ಲಿ ಭಾವಗೀತೆಗೆ ಸಮೀಪವಾಗಿರುವುದರಿಂದ ಇವರು ಬರೆದ ಕಥೆಗಳು ಪ್ರಮಾಣದಲ್ಲಿ ಅಲ್ಪವಾದರೂ ಹಿರಿಮೆಯಲ್ಲಿ ಮಹತ್ವಪೂರ್ಣವಾಗಿವೆ. ಬೇಂದ್ರೆಯವರ ಪಾಲಾ ಪೂ, ಹಿರಿದ ಕತ್ತಿ, ಏಕಾಕಿನಿ ಉತ್ತಮವಾದ ಕಥೆಗಳಾಗಿವೆ. ಇವರ ಶೈಲಿ ಈ ಕೃತಿಗಳಲ್ಲಿ ಸಂಗೀತದ ನಾದಲೋಲುಪತೆಯನ್ನು ಪಡೆದಿದೆ. ಆದರ್ಶವಾದ ಸಮಾಜವನ್ನು ತಿದ್ದುವ ಬಯಕೆ ಕುವೆಂಪು ಅವರಲ್ಲಿದ್ದರೂ ನಿಸರ್ಗಪ್ರಿಯರಾದ ಇವರ ಕಥೆಗಳಲ್ಲಿ ಸುಧಾರಣಾಮನೋಭಾವ ಹಿನ್ನೆಲೆಯಲ್ಲಿ ಉಳಿದಿದೆ. ನನ್ನ ದೇವರು, ಸನ್ಯಾಸಿ ಮುಂತಾದ ಕಥೆಗಳಲ್ಲಿ ಆದರ್ಶತ್ವವನ್ನು ಕಂಡರೆ, ಧನ್ವಂತರಿಯ ಚಿಕಿತ್ಸೆ ಎಂಬ ಕಥೆಯಲ್ಲಿ ಸಾಮಾಜಿಕ ಕ್ರಾಂತಿಯ ಒಲವನ್ನು ಕಾಣಬಹುದು. ಮೀನಾಕ್ಷಿಯ ಮನೆ ಮೇಷ್ಟ್ರು ಕಥೆಯಲ್ಲಿ ಕಥೆಗಾರರನ್ನು ಆಕರ್ಷಿಸುವ ವಸ್ತುವಿನ ವಿಶಿಷ್ಟ ನಿರೂಪಣೆಯನ್ನು ಕಾಣಬಹುದು. ಇಲ್ಲಿನ ವಸ್ತು ಚಿರಪರಿಚಿತ ಭಗ್ನ ಪ್ರಣಯ, ಸುಂದರವಾಗಿ ನಿರೂಪಿತವಾಗಿದೆ. ಯಾರೂ ಅರಿಯದ ವೀರ ಎಂಬ ಕಥೆಯಲ್ಲಿ ಉತ್ತಮ ಕಥೆಗಾರಿಕೆಯ ಮಟ್ಟವನ್ನು ಗುರುತಿಸಬಹುದು. ಇವರ ಶೈಲಿ ಭಾವಗೀತೆಯಂತಿದ್ದರೂ ಮಹಾಕಾವ್ಯದ ಸನ್ನಿವೇಶವೊಂದರ ಪ್ರಭಾವವನ್ನು ಬೀರುತ್ತದೆ. ಪುತಿನ ಅವರ ಧ್ವಜರಕ್ಷಣೆಯಲ್ಲಿ ಕೆಲವು ಸತ್ವಪೂರ್ಣ ಕಥೆಗಳಿವೆ. ಧ್ವಜರಕ್ಷಣೆಯ ವಸ್ತು ರಾಜಕೀಯಕ್ಕೆ ಸಂಬಂಧಿಸಿದ್ದರೂ ಆದರ್ಶಪ್ರಿಯ ಯುವಕನ ಅಂತರಂಗದ ತುಮುಲವನ್ನೂ ಚಿತ್ರಿಸುತ್ತದೆ.

ಇವರುಗಳಲ್ಲದೆ ಮೊದಲ ತಲೆಮಾರಿನ ಇನ್ನೂ ಅನೇಕರು ಕಥೆಗಳನ್ನು ಬರೆದರು. ಭಾರತೀಪ್ರಿಯರ ವೀಣೆ ಹಾಗೂ ಒಂದು ಹಳೆಯ ಕಥೆ ಕನ್ನಡದ ಜನ ಎಂದೂ ಮರೆಯಲಾರದಂಥ ಕೃತಿಗಳು. ಇವರ ಕಥೆಗಳಲ್ಲಿ ಸನ್ನಿವೇಶವನ್ನು ಮನಸ್ಸಿನಲ್ಲಿ ಕೆತ್ತಿ ನಿಲ್ಲಿಸುವಂತೆ ಮಾಡುವ ಮೋಡಿಯಿದೆ. ರಾಹೂ, ನಾದನಾಮಕ್ರಿಯಾ, ಸಾಧನೆ ಮೊದಲಾದ ಕಥೆಗಳಲ್ಲಿ ಹೊಳಪಿನ ಶೈಲಿಯನ್ನು ಕಂಡರೆ ಮೋಚಿಯಲ್ಲಿ ನಿರಾಡಂಬರವಾದ ಶೈಲಿಯಿದೆ. ಮೋಚಿ ಇವರ ಪ್ರಾತಿನಿಧಿಕ ಕಥೆಯಲ್ಲದಿದ್ದರೂ ಒಂದು ಉತ್ತಮ ಕಥೆ. ವೈನಾಡಿನ ಸ್ಥಾನಿಕ ಸೌಂದರ್ಯವನ್ನಲ್ಲದೆ ಅಲ್ಲಿಯ ಜನರ ವಿಚಿತ್ರ ನಡೆವಳಿಕೆಗಳನ್ನೂ ಇವರ ಕಥೆಗಳಲ್ಲಿ ಕಾಣಬಹುದು.

ಕ್ಷೀರಸಾಗರರ ನಮ್ಮೂರಿನ ಪಶ್ಚಿಮಕ್ಕೆ, ಭಾವಪೂರ್ಣತೆ ಹಾಗೂ ರಸೋತ್ಕರ್ಷಗಳಿಗೆ ಮಾದರಿಯಾದ ಕಥೆ. ಎಂ.ವಿ.ಸೀತಾರಾಮಯ್ಯನವರ ಹುಟ್ಟಿನ ಹಂಬಲು ಹೃದಯವೇದಕವಾದ ಕಥೆ. ಹೀಗೆಯೇ ಶಂಕರಭಟ್ಟರ ಅದ್ದಿಟ್ಟು, ಜಡಭರತರ ಡೊಗಜ್ಜನ ಬಹಿಷ್ಕಾರ ಮೊದಲಾದ ಕಥೆಗಳೂ ಉತ್ತಮ ಕಥೆಗಳಾಗಿವೆ. ಸೇಡಿಯಾಪು ಕೃಷ್ಣಭಟ್ಟರ ಕಥೆಗಳ ಸ್ವರೂಪ ವಡ್ಡಾರಾಧನೆಯ ಕಥೆಗಳನ್ನು ಕಸಿ ಮಾಡಿದಂತಿದೆ. ನಾಗರಬೆತ್ತ ಇವರ ಉತ್ತಮ ಕಥೆಗಳಲ್ಲೊಂದು. ಮೇವುಂಡಿಯವರೂ ಅಚ್ಚಗನ್ನಡದ ಬಿಗುವು ತೊಟ್ಟು ಹಲವು ಕಥೆಗಳನ್ನು ನೀಡಿದರು. ಕಾದಂಬರಿ ಕ್ಷೇತ್ರದಲ್ಲಿ ಹಸನಾದ ಕೆಲಸ ಮಾಡಿರುವ ಶಿವರಾಮ ಕಾರಂತರು ತಮ್ಮ ಹಸಿವು ಮತ್ತು ಹಾವು ಎಂಬ ಎರಡು ಸಂಕಲನಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬಡತನದ ಬಾಳನ್ನು ಮನಕರಗುವಂತೆ ಚಿತ್ರಿಸಿದ್ದಾರೆ. ಹಳ್ಳಿಯ ಹತ್ತು ಸಮಸ್ತರು ಒಂದು ರೀತಿಯ ಕಥಾಸಂಕಲನವೇ ಆಗಿದೆ. ಎಕ್ಕುಂಡಿಯವರು ತಮ್ಮ ಕಥೆಗಳಲ್ಲಿ ಪೌರಾಣಿಕ ಸನ್ನಿವೇಶಗಳನ್ನು ಉಜ್ವಲವಾಗಿ ಹಿಡಿದಿಟ್ಟಿದ್ದಾರೆ.

1920-40ರ ಅವಧಿಯ ಸಣ್ಣಕಥೆಯ ಮಜಲನ್ನು ಇಲ್ಲಿ ನೋಡಿದ್ದಾಯಿತು. ಆದರೂ ಸಣ್ಣಕಥಾಸಾಹಿತ್ಯ ನಿರೀಕ್ಷಿಸಿದಷ್ಟು ಬೆಳೆಯಲಿಲ್ಲ. ಹೊಸಗನ್ನಡದ ಓದುಗರು ಕಾದಂಬರಿಗೆ ಮನತೆತ್ತರು. ಕಥೆಗಳಿಗಾಗಿಯೇ

ಮೀಸಲಾದ ಪತ್ರಿಕೆಗಳು ಕ್ರಮೇಣ ನಿಂತುಹೋದುವು. ಮೊದಲಿಗೆ ಮಿಂಚಿನಬಳ್ಳಿ ಪ್ರಕಾಶನ ಸಂಸ್ಥೆ ಕನ್ನಡದಲ್ಲಿ ಸತ್ತ್ವಶಾಲಿಯಾದ ಕಥೆಗಳು ಹೊರಬರಲು ಕಾರಣವಾಯಿತು. ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಿಂದ ಆಗ ಹೊರಡುತ್ತಿದ್ದ ಪ್ರಬುದ್ಧ ಕರ್ಣಾಟಕ ತ್ರೈಮಾಸಿಕ ಸಣ್ಣಕಥೆಯ ಸಾಹಿತ್ಯ ಪ್ರಕಾರವನ್ನು ಕನ್ನಡಿಗರಿಗೆ ಕೊಡಲು ತುಂಬ ಆಸ್ಥೆ ವಹಿಸಿತು. ಅ.ನ.ಕೃಷ್ಣರಾಯರು ಹೊರಡಿಸುತ್ತಿದ್ದ ಕಥಾಂಜಲಿ ಅನೇಕ ತರುಣ ಕಥೆಗಾರರನ್ನೂ ಬೆಳಕಿಗೆ ತಂದಿತು. ಧಾರವಾಡದ ಜಯಂತಿ, ಜಯಕರ್ನಾಟಕ ವಿಪುಲವಾಗಿ ಸಣ್ಣಕಥೆಗಳನ್ನು ಪ್ರಕಟಿಸಿದುವು.

ಆಧುನಿಕ ಕನ್ನಡ ಸಾಹಿತ್ಯ ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಹೀಗೆ ಅವಸ್ಥಾಂತರಗಳನ್ನು ಕಂಡಂತೆ ಕನ್ನಡ ಸಣ್ಣ ಕಥಾಪ್ರಪಂಚವೂ ಇದಕ್ಕೆ ಹೊಂದಿಕೊಂಡಂತೆ ವಿಸ್ತರಿಸುತ್ತಾ ಹೋಯಿತು. ಆಯಾ ಕಾಲದ ಸ್ಪಂದನಕ್ಕೆ ಜೀವಂತವಾಗಿ ಉಳಿಯಿತು. ಕನ್ನಡ ಸಾಹಿತ್ಯದಲ್ಲಿ ಪ್ರಗತಿಶೀಲತೆಯ ಚಳವಳಿ ಸಣ್ಣಕಥೆಯಿಂದಲೇ ಆರಂಭವಾಯಿತು ಎನ್ನಬೇಕು. 1936-42ರವರೆಗೆ ನಡೆದ ರಾಜಕೀಯ ಆಂದೋಲನಗಳು, ಪತ್ರಿಕೆಗಳಲ್ಲಿ ನಡೆಯುತ್ತಿದ್ದ ಪ್ರಗತಿಶೀಲತೆಯ ಪ್ರಚಾರ, ರಷ್ಯದ ಹಾಗೂ ಹಿಂದಿ ಕಥೆಗಳ ಅನುವಾದ ಇವೆಲ್ಲ ಪ್ರಭಾವಗಳಿಂದ ಕನ್ನಡ ಸಾಹಿತ್ಯದಲ್ಲಿ ಹಲವು ಬದಲಾವಣೆಗಳುಂಟಾಗಿ ಬರೆಹಗಾರರು ಎಲ್ಲ ವಿಧದಲ್ಲೂ ಸತ್ತ್ವಯುತ ಸಾಹಿತ್ಯರಚನೆ ಮಾಡಿದರೆನ್ನುವ ಮಾತನ್ನು ಮರೆಯಲಾಗದು. ಅ.ನ.ಕೃ. ಅವರ ನೇತೃತ್ವದಲ್ಲಿ ತ.ರಾ.ಸು., ನಿರಂಜನ, ಬಸವರಾಜ ಕಟ್ಟೀಮನಿ, ಚದುರಂಗ ಮುಂತಾದ ಲೇಖಕರು ಸಣ್ಣಕಥೆಯಲ್ಲಿ ವಿಶೇಷವಾಗಿ ಪ್ರಗತಿಶೀಲತೆಯನ್ನು ತಂದರು. ದಲಿತವರ್ಗಗಳ ಬಗ್ಗೆ ಸಹಾನುಭೂತಿ, ಶೋಷಣೆಯ ವಿರುದ್ಧ ಆಕ್ರೋಶ, ಸಾಮಾಜಿಕ ವೈಷಮ್ಯಗಳ ಬಗ್ಗೆ ಅಸಮಾಧಾನ ಇವರ ಪ್ರಮುಖ ದೃಷ್ಟಿಕೋನಗಳಾದುವು. ನವೋದಯದ ಲೇಖಕರನ್ನು ಪ್ರತಿಗಾಮಿಗಳೆಂದು ಕರೆದು, ಸಮಾಜದ ಡಂಭಾಚಾರವನ್ನು ಎತ್ತಿ ತೋರಿಸಿದರು. ವಾಸ್ತವತಾವಾದ ಇವರ ಕೈಯಲ್ಲಿ ಅತೀರೇಕಕ್ಕೆ ಹೋಯಿತು. ಸಾಮ್ಯವಾದ ಈ ದೇಶಕ್ಕೆ ಅಕಾಲಿಕವಾಗಿದ್ದುದರಿಂದಲೋ ಅಥವಾ ವೈಚಾರಿಕತೆ ಪ್ರಗತಿಶೀಲರ ಮನೋಧರ್ಮದಲ್ಲೇ ಸರಿಯಾಗಿ ಆಗಿರಲಿಲ್ಲವೆಂದೋ ಈ ಪ್ರಗತಿಶೀಲ ಬಿರುಗಾಳಿ ಕ್ರಮೇಣ ಸ್ತಬ್ಧವಾಯಿತು. ಪರಸ್ಪರ ಕೊಳುಕೊಡುಗೆಗಳು ಹೆಚ್ಚಿದುದರಿಂದ ಪ್ರಗತಿಶೀಲರಿಗೂ ನವೋದಯ ಲೇಖಕರಿಗೂ ವಿಶೇಷ ಅಂತರವೇನೂ ಕಾಣಬರುವುದಿಲ್ಲ.

ಪ್ರಗತಿಶೀಲತೆಯಿಂದ ಕನ್ನಡ ಸಣ್ಣಕಥೆಯಲ್ಲಿ ಕೆಲವು ಬದಲಾವಣೆಗಳಾದವು. ವಸ್ತು ಸಮಾಜಸಮ್ಮುಖವಾಗಿ ವೈಯುಕ್ತಿಕ ತೀವ್ರತೆಯನ್ನು ಕಳೆದುಕೊಂಡಿತು. ವಸ್ತುವಿನ ಆಯ್ಕೆ ಸೀಮಿತವಾಯಿತು. ಆದರೆ ಬರೆವಣಿಗೆಗೆ ಹೆಚ್ಚು ವೇಗ, ಮೊನಚು ಬಂತು. ಒಂದು ಬಗೆಯ ಅತೃಪ್ತ ವಾತಾವರಣ ಹುಟ್ಟಿಕೊಂಡಿತು. ಸಂಭಾಷಣೆಗಳಲ್ಲಿ ಆಡುಮಾತಿನ ಬಳಕೆ ಹೆಚ್ಚಾಯಿತು. ಈ ಪ್ರಕಾರದಲ್ಲಿ ಅ.ನ.ಕೃ. ಸಿದ್ಧಹಸ್ತರು. ಅವರಿಗೆ ಕಥೆ ಹೇಳುವ ಕಲೆ ಅದ್ಭುತವಾಗಿ ಸಾಧಿಸಿದೆ. ಅವರ ಶೈಲಿ ತುಂಬಿ ಹರಿಯುವ ತೊರೆಯಂತೆ. ಕಥೆಗಳಲ್ಲಿ ಕಲಾವಂತಿಕೆ ಹಿಂದೆ ಬಿದ್ದರೂ ಶೈಲಿಯಿಂದ ಎಂಥ ಕಳಪೆಯ ವಿಷಯವನ್ನಾದರೂ ರಸಭರಿತವಾಗಿ ಮಾಡುವ ಮೋಡಿಯಿದೆ. ಮಣ್ಣಿನ ಮಗ ಒಂದು ಉತ್ತಮ ಕೃತಿ. ಅನ್ನವಿತ್ತ ನೆಲವನ್ನು ನಿರ್ಲಕ್ಷಿಸಿದವನಿಗೆ ಮೋಕ್ಷವಿಲ್ಲ ಎಂಬ ಆಶಯವನ್ನು ಹೊತ್ತ ನಾಯಕನ ಪ್ರತಿಬಿಂಬ ಆ ಕೃತಿ. ಇವರ ಅಗ್ನಿಕನ್ಯೆ ಸಂಕಲನದಲ್ಲಿ ಹಲವು ಪ್ರಗತಿಶೀಲ ಕಥೆಗಳಿವೆ. ಇವರ ಕೆಲವು ಕಥೆಗಳಲ್ಲಿ ಲೈಂಗಿಕ ಜೀವನದ ವಿಶ್ಲೇಷಣೆಯನ್ನೂ ಕಾಣಬಹುದು.

ಅ.ನ.ಕೃ. ಅವರ ಪ್ರಗತಿಶೀಲತೆಯ ವಾದ ಉಳಿದವರ ಮೇಲೆ ಹೆಚ್ಚು ಪರಿಣಾಮವನ್ನು ಉಂಟುಮಾಡಿತು. ಇವರ ಪ್ರಭಾವ ಎರಡು ಮೂರು ಪೀಳಿಗೆಗಳ ಲೇಖಕರ ಮೇಲೆ ಬಿದ್ದಿದೆ. ತ.ರಾ.ಸು., ನಿರಂಜನ, ಚದುರಂಗ, ಬಸವರಾಜ ಕಟ್ಟೀಮನಿ, ಅರ್ಚಕ ವೆಂಕಟೇಶ, ವೆಂಕಟರಾಜ ಪಾನಸೆ ಮೊದಲಾದವರು ಸಾಹಿತ್ಯವನ್ನು ಸಮಾಜದ ಕನ್ನಡಿಯಲ್ಲಿ ನೋಡಲು ಯತ್ನಿಸಿದರು. ತ.ರಾ.ಸು. ಅವರು ಕಾದಂಬರಿಗಳ ಜೊತೆಗೆ ಕೆಲವು ಅತ್ಯುತ್ತಮ ಸಣ್ಣಕಥೆಗಳನ್ನೂ ನೀಡಿದ್ದಾರೆ. 0-0-9 ಎಕ್ಸ್, ಇನ್ನೊಂದು ಮುಖ - ಇವು ತಂತ್ರದ ದೃಷ್ಟಿಯಿಂದ ಯಶಸ್ವಿಯಾದ ಕಥೆಗಳು. ಇವರ ಜೊತೆಯಲ್ಲಿಯೇ ನೆನೆಯಬೇಕಾದ ಇನ್ನೊಂದು ಹೆಸರೆಂದರೆ ನಿರಂಜನರದು. ನಿರಂಜನರು ಪರಿಣಾಮಕಾರಿಯಾಗಿ ಕಥೆ ಹೇಳುವಕಲೆ ಸಾಧಿಸಿಕೊಂಡಿದ್ದಾರೆ. ಜೀವನಾನುಭವದ ಆಳದಲ್ಲಿ ಮುಳುಗಿ ಅಲ್ಲಿಯ ನೋವು ನಲಿವುಗಳನ್ನು ಖಂಡತುಂಡವಾಗಿ ಇವರು ಚಿತ್ರಿಸಬಲ್ಲರು. ಇವರದು ಹರಿತವಾದ ಶೈಲಿ. ಕೊನೆಯ ಗಿರಾಕಿ ಇವರ ಅತ್ಯುತ್ತಮ ಪ್ರಾತಿನಿಧಿಕ ಕಥೆ. ಹೆಣ್ಣನ್ನು ಭೋಗದ ವಸ್ತುವಾಗಿ ಅಸಹ್ಯವಾಗಿ, ಕ್ರೂರವಾಗಿ ಬಳಸಲೆತ್ನಿಸುವ ಜಗತ್ತಿನ ರೌದ್ರ ವಾಸ್ತವಿಕತೆ ಕಥೆಯ ಪರಿಣಾಮಕ್ಕೆ ತೀವ್ರತೆಯನ್ನು ತಂದಿದೆ.

ಕನ್ನಡ ಕಥಾಪ್ರಪಂಚದಲ್ಲಿ ಮರೆಯಲಾಗದ ಇನ್ನೊಂದು ಹೆಸರು ಬಸವರಾಜ ಕಟ್ಟೀಮನಿ. ಇವರು ಕೊಳೆ ಇರುವ ಕಡೆ ಬೆಂಕಿಯನ್ನು ಉಗುಳುವ ಕನ್ನಡದ ಜೀವಂತ ಜ್ವಾಲಾಮುಖಿ. ಅನ್ಯಾಯಗಳ ವಿರುದ್ಧ ನಿಲ್ಲುವುದೇ ಇವರ ಸ್ವಭಾವ. ಮೊದಮೊದಲು ಇವರ ಕಥೆಗಳಲ್ಲಿ ರಾಜಕೀಯತನ ತುಂಬಿದ್ದರೂ ಅನಂತರದ ಕಥೆಗಳಲ್ಲಿ ಸಾಮಾಜಿಕತೆಯೇ ಹೆಚ್ಚು. ಗಿರಿಜಾ ಕಂಡ ಸಿನಿಮಾ, ಬೂಟ್ ಪಾಲಿಷ್, ರಕ್ತಧ್ವಜ, ನೀಲಗಂಗಾ, ನಾಗಪಂಚಮಿಗೆ ಬಂದದ್ದು, ಜೀವನ ಕಲೆ - ಇವು ಇವರ ಉತ್ತಮ ಕಥೆಗಳಲ್ಲಿ ಕೆಲವು. ಕಟ್ಟೀಮನಿಯವರಲ್ಲಿ ಕಥೆಗಾರನಿಗಿರಬೇಕಾದ ಎಲ್ಲ ನೈಜಗುಣಗಳೂ ಇವೆ. ಭಾಷೆಯನ್ನೂ ಸಜೀವವಾಗಿ ಇವರು ಉಪಯೋಗಿಸಬಲ್ಲರು.

ಕೋ. ಚೆನ್ನಬಸಪ್ಪನವರು ಕಟ್ಟೀಮನಿಯವರಂತೆ ಹಳ್ಳಿಯ ಜೀವನವನ್ನು ಚೆನ್ನಾಗಿ ಅರಿತವರು. ಇವರದು ಶಕ್ತಿಪೂರ್ಣ ಶೈಲಿ. ನಮ್ಮೂರಿನ ದೀಪ, ಉಂಗುರದ ಉರುಲು ಇವರ ಉತ್ತಮ ಕಥೆಗಳು. ಒಕ್ಕಲಿಗನ ಬಾಳಿನ ಪ್ರತಿ ಎಳೆಯನ್ನು ಬಿಡಿಸಿ ತೋರಿಸುವ ಆಸಕ್ತಿ ಇವರ ಕಥೆಗಳಲ್ಲಿ ಕಂಡುಬರುತ್ತದೆ.

ಸಂಪ್ರದಾಯ, ಪ್ರಗತಿಶೀಲ ಮನೋಭಾವಗಳ ಮಧ್ಯವರ್ತಿಯ ವಿಧಾನವನ್ನು ತುಳಿದ ಕಥೆಗಾರರ ಪಂಗಡವೊಂದುಂಟು. ಜೀವನದ ವೈವಿಧ್ಯವೇ ಇವರ ಪ್ರಥಮ ಆಕರ್ಷಣೆ. ಇವರಿಗೆ ಸಮಾಜ ಸುಧಾರಣೆಯ ಬಯಕೆಯುಂಟು. ಈ ಮಾರ್ಗದಲ್ಲಿ ನಡೆದ ಎಂ.ವಿ.ಸೀತಾರಾಮಯ್ಯ, ಅಶ್ವತ್ಥ, ಎಸ್.ಅನಂತನಾರಾಯಣ, ನರೇಂದ್ರಬಾಬು, ಎಚ್.ಪಿ.ಜೋಶಿ, ದ.ಬಾ.ಕುಲಕರ್ಣಿ, ರಾಮಚಂದ್ರ ಕೊಟ್ಟಲಗಿ, ವರದರಾಜ ಹುಯಿಲಗೋಳ, ಎಲ್.ಎಸ್.ಶೇಷಗಿರಿರಾವ್, ಹಿರೇಮಲ್ಲೂರ ಈಶ್ವರನ್, ವರಗಿರಿ, ಶ್ರೀಕಂಠ ಪುತ್ತೂರು, ಮಿರ್ಜಿ ಅಣ್ಣಾರಾಯ, ವಿ.ಜಿ.ಭಟ್ಟ, ರಾ.ವೆಂ.ಶ್ರೀನಿವಾಸ, ಕೊ.ಸು.ಸೀತಾರಾಮ್, ಜೀ.ಶಂ.ಪರಮಶಿವಯ್ಯ, ಸುಧಾಕರ, ನಂಜರಾಜೇ ಅರಸು, ಉಮಾಶಂಕರ, ಚಿದಂಬರಾನಂದ, ಬೆಸಗರಹಳ್ಳಿ ರಾಮಣ್ಣ, ಶೇಷನಾರಾಯಣ, ಜನಾರ್ದನ ಗುರ್ಕಾರ, ಶ್ರೀನಿವಾಸ ಉಡುಪ, ಶ್ರೀಕಾಂತ, ಕ.ವೆಂ. ರಾಜಗೋಪಾಲ್, ಶಾಂತರಸ, ನಾರಾಯಣ ಬಲ್ಲಾಳ, ಸೇವ ನಮಿರಾಜಮಲ್ಲ, ಆರ್.ಬಸವರಾಜ, ವೆಂ.ಮು.ಜೋಶಿ, ವೀರಭದ್ರ, ಎನ್.ಎಸ್.ಚಿದಂಬರರಾವ್, ಪ.ಸು.ಭಟ್ಟ, ಟಿ.ಕೆ.ರಾಮರಾವ್, ದಯಾನಂದ ತೊರ್ಕೆ, ಶಾಂತಾರಾಮ ಸೋಮಯಾಜಿ ಮುಂತಾದವರು ಉತ್ತಮ ಕಥೆಗಳನ್ನು ಸೃಷ್ಟಿಸಿದ್ದಾರೆ. ಸುಧಾಕರ (ಕಣ್ಣಿ ಕಿತ್ತ ಹಸು, ಗರಿಕೆ ಬೇರು), ಬೆಸಗರಹಳ್ಳಿ ರಾಮಣ್ಣ (ನೆಲದ ಒಡಲು, ಗರ್ಜನೆ), ಜೀಶಂಪ (ಕಾವಲುಗಾರ ಮತ್ತು ಇತರ ಕಥೆಗಳು, ಮಬ್ಬು ಜಾರಿದ ಕಣಿವೆಯಲ್ಲಿ) - ಇವರ ಕಥೆಗಳು ಹಳ್ಳಿಯ ಜೀವನವನ್ನು ದಟ್ಟವಾಗಿ ಮೈಗೂಡಿಸಿಕೊಂಡು, ಆಡುಭಾಷೆಯ ಒರಟುತನ, ನಯನಾಜೂಕು, ಸೊಗಡನ್ನು ಭಾಷೆಯ ಬಳಕೆಯಲ್ಲಿ ಹದಗೊಳಿಸಿ, ಅನುಭವದ ತೀವ್ರತೆಯಿಂದ ಬರೆದಂಥವು. ಗ್ರಾಮಜೀವನದ ವಿವಿಧ ಮುಖಗಳ ಚಿತ್ರಣ ಇವರ ಕಥೆಗಳಲ್ಲಿ ಜೀವಂತವಾಗಿ ಮೂಡಿಬಂದಿದೆ.

ಅನೇಕ ಲೇಖಕಿಯರು ಉತ್ತಮ ಕಥೆಗಳನ್ನು ರಚಿಸಿದ್ದಾರೆ. ತ್ರಿವೇಣಿ, ವಾಣಿ, ಅನುಪಮಾ ನಿರಂಜನ, ಆರ್ಯಾಂಬಾ ಪಟ್ಟಾಭಿ, ಗೀತಾ ಕುಲಕರ್ಣಿ, ವೀಣಾ ಶಾಂತೇಶ್ವರ, ಈಚನೂರು ಶಾಂತ, ಎಚ್.ವಿ.ಸಾವಿತ್ರಮ್ಮ, ಜಯಲಕ್ಷ್ಮಿ ಶ್ರೀನಿವಾಸನ್, ಎಂ.ಕೆ.ಜಯಲಕ್ಷ್ಮಿ, ಶಾಂತಾದೇವಿ ಕಣವಿ, ಆನಂದಿ ಸದಾಶಿವರಾವ್, ಎಚ್.ಎಸ್.ಕಾತ್ಯಾಯಿನಿ, ರಾಜಲಕ್ಷ್ಮಿ ಎನ್.ರಾವ್, ಶಾಂತಾದೇವಿ ಮಾಳವಾಡ, ಚಂಪಾ ಮಹಿಷಿ, ಸುಶೀಲಾ ಕೊಪ್ಪರ, ಎಚ್.ಎಸ್.ಪಾರ್ವತಿ, ಚಿತ್ರಲೇಖ, ನಿರುಪಮಾ,

ಮಲ್ಲಿಕಾ, ಎಚ್.ಆರ್.ಲೀಲಾವತಿ, ಲಲಿತಾಂಬ ಚಂದ್ರಶೇಖರ್, ಕುಸುಮಾ ಎಸ್. ಕುಲಗಾಣ, ವಿಶಾಲಾಕ್ಷಿ ಲಕ್ಷ್ಮಣಗೌಡ, ನೀಳಾದೇವಿ, ಪ್ರೇಮಾಭಟ್, ಎ.ಪಿ.ಮಾಲತಿ, ವೈದೇಹಿ, ಎಂ.ಎಸ್.ವೇದಾ, ಸಾರಾ ಅಬೂಬಕರ್, ಗೀತಾ ನಾಗಭೂಷಣ, ಬಾನು ಮುಷ್ತಾಕ್, ಭಾಗೀರಥಿ ಹೆಗಡೆ, ಹೇಮಾ ಪಟ್ಟಣಶೆಟ್ಟಿ, ಗಂಗಾ ಪಾದೇಕಲ್ ಮುಂತಾದವರು ಸೊಗಸಾದ ಕಥೆಗಳನ್ನು ರಚಿಸಿದ್ದಾರೆ.

ಸ್ವಾತಂತ್ರ್ಯ ಬಂದ ಕೆಲವೇ ವರ್ಷಗಳಲ್ಲಿ ಕನ್ನಡದಲ್ಲಿ ನವ್ಯ ಪಂಥವೊಂದು ಉದಯವಾಯಿತು. ನವೋದಯ ಹಾಗೂ ಅನಂತರ ಬಂದ ಪ್ರಗತಿಶೀಲ ಪಂಥಕ್ಕೆ ಇವರು ಸ್ವಲ್ಪ ಭಿನ್ನರಾದರು. ಮನಸ್ಸಿನ ಬೆನ್ನು ಹತ್ತಿ ಅದರ ಸಂಕೀರ್ಣತೆಗಳನ್ನು ಬಿಚ್ಚಿ ತೋರಿಸುವ ಸಾಹಸ ಮಾಡಿದರು. ಇದರಿಂದಾಗಿ ಹಲವು ಮನೋವೈಜ್ಞಾನಿಕ ಕಥೆಗಳು ಹುಟ್ಟಿಬಂದುವು. ಕಥಾ ಪ್ರಪಂಚದಲ್ಲೂ ನವ್ಯತೆ ಮೂಡಿತು. ಈ ದಿಶೆಯಲ್ಲಿ ರಾಮಚಂದ್ರ ಶರ್ಮರು ಸಂಗಮ, ಏಳನೆಯ ಜೀವ, ಸೆರಗಿನ ಕೆಂಡ ಇಂಥ ಕೆಲವು ಮಾದರಿಯ ನವ್ಯಕಥೆಗಳನ್ನು ಬರೆದರು. ಯು.ಆರ್.ಅನಂತಮೂರ್ತಿಯವರ ಎಂದೆಂದೂ ಮುಗಿಯದ ಕಥೆ ನವ್ಯ ಕಥೆಗಳ ಪ್ರಾತಿನಿಧಿಕ ಸಂಗ್ರಹ. ಅನಂತರ ಪ್ರಶ್ನೆ, ಮೌನಿ ಸಂಕಲನಗಳು ಪ್ರಕಟಗೊಂಡಿವೆ. ಶಾಂತಿನಾಥ ದೇಸಾಯಿ (ಮಂಜುಗಡ್ಡೆ, ಕ್ಷಿತಿಜ, ದಂಡೆ), ಯಶವಂತ ಚಿತ್ತಾಲ (ಸಂದರ್ಶನ, ಆಬೋಲಿನ, ಆಟ, ಕತೆಯಾದಳು ಹುಡುಗಿ), ಪಿ.ಲಂಕೇಶ್, (ನಾನಲ್ಲ, ಕೆರೆಯ ನೀರನು ಕೆರೆಗೆ ಚೆಲ್ಲಿ, ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ), ಕೆ.ಸದಾಶಿವ (ತುಣುಕುಗಳು, ನಲ್ಲಿಯಲ್ಲಿ ನೀರು ಬಂತು), ಟಿ.ಜಿ.ರಾಘವ (ಜ್ವಾಲೆ ಆರಿತು), ಕಾಮರೂಪಿ (ಒಂದು ತೊಲ ಪುನುಗು ಮತ್ತು ಇತರ ಕಥೆಗಳು), ಗಿರಡ್ಡಿ ಗೋವಿಂದರಾಜ (ಆ ಮುಖಾ ಈ ಮುಖಾ), ಪೂರ್ಣಚಂದ್ರ ತೇಜಸ್ವಿ (ಹುಲಿಯೂರಿನ ಸರಹದ್ದು, ಅಬಚೂರಿನ ಪೋಸ್ಟ್ ಆಫೀಸು) ಮುಂತಾದವರು ಹಲವಾರು ಉತ್ತಮ ನವ್ಯಕಥೆಗಳನ್ನು ನೀಡಿದ್ದಾರೆ.

80ರ ದಶಕ ಕನ್ನಡ ಕಥಾದಿಗಂತ ವಿಸ್ತರಿಸಿದ ಕಾಲವಾಗಿದ್ದು ಕನ್ನಡದ ಸಣ್ಣಕಥೆಗಳ ಸುಗ್ಗಿಯನ್ನೇ ಕಾಣಬಹುದಾಗಿದೆ. ಈ ಅವಧಿಯಲ್ಲಿ ಅನೇಕ ಉತ್ತಮ ಕಥೆಗಾರರು ಸೃಷ್ಟಿಯಾದರು. ನವ್ಯಕಥೆಯ ಮುಂದುವರಿದ ಕೊಂಡಿಯಾಗಿ, ಅದಕ್ಕಿಂತ ಭಿನ್ನವಾಗಿ ಸಣ್ಣಕಥೆ ರೂಪತಾಳತೊಡಗಿತು. ಶ್ರೀಕೃಷ್ಣ ಆಲನಹಳ್ಳಿ, (ತಪ್ತ, ಫೀನಿಕ್ಸ್), ಬರಗೂರು ರಾಮಚಂದ್ರಪ್ಪ (ಸುಂಟರಗಾಳಿ), ಟಿ.ಎಂ.ಸುಬ್ಬರಾಯ, ಹಿ.ಮ.ಬಸವಯ್ಯ, (ಗಂಟು), ಎಂ.ಜಿ.ಈಶ್ವರ್, ಲಕ್ಷ್ಮಣ ಕೊಡಸೆ, ರಾಮದಾಸ್ (ಸೇಡು), ಈಶ್ವರ ಚಂದ್ರ, ಜಯಂತ ಕಾಯ್ಕಿಣಿ, ಬಿ.ವಿ.ವೈಕುಂಠರಾಜು, ರಾಮಚಂದ್ರದೇವ (ದಂಗೆಯ ಪ್ರಕರಣ), ಜಿ.ಎಸ್.ಸದಾಶಿವ (ಮೀಸೆಯವರು) ಮೊದಲಾದವರು ಉತ್ತಮ ಕಥೆಗಳನ್ನು ನೀಡಿದರು. ನವ್ಯತೆ ಕನ್ನಡ ಸಣ್ಣಕಥೆಯ ವಸ್ತು, ಶೈಲಿಯಲ್ಲಿ ಬದಲಾವಣೆ ತಂದಿತು. ತಂತ್ರದಲ್ಲೂ ಅನೇಕ ಬದಲಾವಣೆಗಳನ್ನು ಮೂಡಿಸಿತು. ಭಾಷೆಯ ಬಳಕೆಯ ದೃಷ್ಟಿಯಿಂದ ಈ ಕಥೆಗಾರರು ಅಗಾಧವಾದ ಕೆಲಸ ಮಾಡಿದ್ದಾರೆ. ಇವರ ಕೃತಿಗಳಲ್ಲಿ ತಂತ್ರ, ಅಭಿವ್ಯಕ್ತಿ ಅನಿವಾರ್ಯವಾಗಿವೆ. ಅನುಭವವನ್ನು ಅರಗಿಸಿಕೊಂಡು ಅದರಿಂದ ದೂರ ನಿಂತು ತಾದಾತ್ಮ್ಯವನ್ನು ಸಾಧಿಸಿ ವಿಮರ್ಶಕಪ್ರಜ್ಞೆಯನ್ನು ಇಟ್ಟುಕೊಂಡು ಕೃತಿರಚನೆಗೆ ತೊಡಗಿದರು. ವೀರ್ಯವತ್ತಾದ ಶೈಲಿ ಇವರದು. ನವೋದಯ ಹಾಗೂ ಪ್ರಗತಿಶೀಲ ಕಥೆಗಾರರಿಗಿದ್ದಂತೆ ವಿರೋಧಿಸಲಿಕ್ಕೆ ನಿಶ್ಚಿತ ಮೌಲ್ಯಗಳಿರಲಿಲ್ಲ. ಜೀವನದಲ್ಲಿ ಮಾರ್ಗದರ್ಶಕವಾಗುವ ಸಾಮಾನ್ಯ ಮೌಲ್ಯಗಳು ಉಂಟೆ ಎಂಬುದೇ ಇವರ ಪ್ರಶ್ನೆ. ಆದ್ದರಿಂದ ಇಡಿಯ ಸಮಾಜದ ಸಮಸ್ಯೆಗಳಿಗಿಂತ ವೈಯಕ್ತಿಕ ಸಮಸ್ಯೆಗಳಿಗೇ ಇವರ ಕಥೆಗಳಲ್ಲಿ ಹೆಚ್ಚು ಒತ್ತು ಬಿತ್ತು. ಇಂಥ ವೈಯಕ್ತಿಕ ಆಲೋಚನೆಗಳು, ಅನುಭವದ ಉತ್ಕಟತೆಯ ಮೂಲಕ ಸಾರ್ವತ್ರಿಕವಾಗಬಲ್ಲುದೆಂಬುದು ಇವರ ಆಶಯವಾಗಿತ್ತು. ಸಾಮಾಜಿಕ ಬದಲಾವಣೆಗಳನ್ನು ಇವರು ವ್ಯಕ್ತಿಯ ಸಂವೇದನೆಯ ಮೇಲಾಗುವ ಪರಿಣಾಮಗಳಲ್ಲಿ ಗ್ರಹಿಸಿದರು. ವ್ಯಕ್ತಿಯ ಮನಸ್ಸಿನ ಹೊಯ್ದಾಟ ತುಯ್ದಾಟಗಳ ರಹಸ್ಯಗಳನ್ನು ಸಂಕೋಚವಿಲ್ಲದೆ ಚಿತ್ರಿಸಿದರು. ಪ್ರಜ್ಞೆಯ ಬೆಲೆಯುಳ್ಳ ಸ್ಥಿತಿಗಳನ್ನು ಹಿಡಿದಿಡುವುದು ಇವರ ಉದ್ದೇಶ. ಇಂಥ ಸೂಕ್ಷ್ಮ ಹಾಗೂ ಸಂಕೀರ್ಣ ಉದ್ದೇಶಗಳಿಗೆ ತೆತ್ತುಕೊಂಡ ಇವರ ಬರೆವಣಿಗೆಯೂ ಒಮ್ಮೊಮ್ಮೆ ಜಟಿಲತೆಯನ್ನು ಪಡೆದುಕೊಂಡಿತು. ಕುತೂಹಲ ಕೆರಳಿಸುವ ನಿರೂಪಣಾಕ್ರಮವನ್ನು ಬಿಟ್ಟು ಕೊಟ್ಟು ಘಟನೆಗಳ ಹಿಂದಿನ ಧ್ವನಿಯ ಮೇಲೆ, ಅನುಭವದ ಅರ್ಥವಿಶ್ಲೇಷಣೆಯ ಮೇಲೆ ಈ ಕಥೆಗಾರರು ತಮ್ಮ ಗಮನವನ್ನು ಕೇಂದ್ರೀಕರಿಸಿದರು. ಈ ಪ್ರಯತ್ನದಲ್ಲಿ ಘಟನೆಗಳ ತಾರ್ಕಿಕ ಹೊಂದಾಣಿಕೆಯನ್ನು ಉದ್ದೇಶಪೂರ್ವಕವಾಗಿ ನಿರಾಕರಿಸಿದ್ದರು. ಪ್ರಜ್ಞಾಪ್ರವಾಹ ತಂತ್ರದ ಮೂಲಕ ಘಟನೆ ಹಾಗೂ ಪರಿಸರದ ವಿವರಗಳನ್ನೆಲ್ಲ, ಸಾಂಕೇತಿಕವಾಗಿ ಬಳಸಿಕೊಂಡು ಅನುಭವ, ಅರ್ಥದ ಪದರುಗಳನ್ನು ವಿಸ್ತರಿಸಿದರು. ಹೀಗಾಗಿ ಸಣ್ಣಕಥೆ ಕವಿತೆಗೆ ತೀರಾ ಹತ್ತಿರವಾಯಿತು. ಭಾಷೆಯನ್ನು ಅತ್ಯಂತ ಕಾಳಜಿಯಿಂದ ಬಳಸತೊಡಗಿದರು. ಅನುಭವದ ದೃಷ್ಟಿಯಿಂದಲೂ ಸರಳಗೊಳಿಸದೆ ಅದರ ಪರ ವಿರೋಧಗಳನ್ನು ಕಥೆಯ ಹಾಸಿನಲ್ಲೇ ನಿರೀಕ್ಷಿಸಿ ವಿವೇಚಿಸಿದ್ದರು. ವಾಸ್ತವವಾದದ ನಿರ್ಬಂಧವನ್ನು ಮುರಿದು ಮಾನವಶಾಸ್ತ್ರ ಹಾಗೂ ಅಸ್ತಿತ್ವವಾದಗಳ ಪ್ರಭಾವವನ್ನು ಕಥೆಗಳಲ್ಲಿ ಮೂಡಿಸಿದರು. ನವ್ಯ ಕಥೆಗಾರರು ತಮ್ಮ ಅನುಭವ ಕ್ಷೇತ್ರಗಳನ್ನು ಸಂಕುಚಿತಗೊಳಿಸುತ್ತಿದ್ದಾರೆಂದೂ ಕಾಮಕ್ಕೆ ಅವಾಸ್ತವ ಮಹತ್ತ್ವ ಕೊಟ್ಟು ಅಶ್ಲೀಲವಾಗಿ ಬರೆಯುತ್ತಾರೆಂದೂ ಸಾಮಾನ್ಯ ಓದುಗರಿಗೆ ಇವರ ಕಥೆಗಳು ಅರ್ಥವಾಗುವುದಿಲ್ಲವೆಂದೂ ಟೀಕೆಗಳು ಬಂದವು. ಆದರೂ ನವ್ಯ ಕಥೆಗಳ ಬರೆವಣಿಗೆ ವಿಪುಲವಾಗಿ ಸಾಗಿಬಂತು. ಕನ್ನಡ ಗದ್ಯ ಅನನ್ಯತೆಯನ್ನು ಪಡೆದ ಸಂದರ್ಭವಿದು. ಗದ್ಯವೂ ಕಾವ್ಯಮಯವಾಗಬಲ್ಲದೆಂಬ ಸಂಗತಿಯನ್ನು ನವ್ಯಕಥೆಗಾರರು ತೋರಿಸಿಕೊಟ್ಟರು.

ದೇವನೂರು ಮಹಾದೇವ ಅವರ ದ್ಯಾವನೂರು ಕಥಾ ಸಂಕಲನದ ಪ್ರಕಟಣೆಯ ಅನಂತರ ದಲಿತ ಸಂವೇದನೆಗಳ ಹೊಸ ದನಿಯೊಂದು ಕನ್ನಡ ಸಣ್ಣಕಥಾವಾಹಿನಿಯನ್ನು ಸೇರಿಕೊಂಡಿತು. ಕನ್ನಡ ಸಾಹಿತ್ಯದಲ್ಲಿ ದಲಿತ ಪ್ರಜ್ಞೆಯು, ತುಳಿತಕ್ಕೊಳಗಾದವರ, ಅದುವರೆಗೂ ಅನಾವರಣವಾಗದಿದ್ದ ಬದುಕು, ಆ ಬದುಕಿನ ಸಂಕೀರ್ಣಗಳು ಕಥೆಯಲ್ಲಿ ಮೈಪಡೆಯತೊಡಗಿದವು. ಹೊಸ ಸಂವೇದನೆಗಳು, ಹೊಸ ಅನುಭವಗಳು, ವಿಶಿಷ್ಟವಾದ ದೇಸಿಯ ಅಭಿವ್ಯಕ್ತಿ, ಆಡುಭಾಷೆಯ ಬಳಕೆಯಿಂದಾಗಿ ಸಣ್ಣಕಥೆ ಹೊಸ ಆಯಾಮವನ್ನು ಪಡೆದುಕೊಂಡಿತು. ಕುಂ.ವೀರಭದ್ರಪ್ಪ, ಮೊಗಳ್ಳಿಗಣೇಶ್, ಅಮರೇಶ ನುಗಡೋಣಿ ಮೊದಲಾದವರು ಉತ್ತಮ ಕಥೆಗಳನ್ನು ನೀಡಿದರು. ದಲಿತಸಂವೇದನೆಯ ಇನ್ನೊಂದು ಮುಖವೇ ಆದ ಬಂಡಾಯ ಸಂವೇದನೆಯ ಕಥೆಗಳೂ ಅನಂತರದಲ್ಲಿ ಕನ್ನಡದಲ್ಲಿ ಪ್ರಕಟಗೊಂಡವು. ಕನ್ನಡದ ಸಂದರ್ಭದಲ್ಲಿ ಮುಸ್ಲಿಂ ಸಂವೇದನೆಯ ಅನೇಕ ಕಥೆಗಾರರೂ ಕನ್ನಡ ಸಣ್ಣಕಥೆಯ ಕ್ಷಿತಿಜವನ್ನು ಹಿಗ್ಗಿಸುವಲ್ಲಿ ತಮ್ಮ ಪಾಲಿನ ಕಾಣಿಕೆಯನ್ನು ಸಲ್ಲಿಸಿದರು. ಹೀಗೆ ಕನ್ನಡ ಸಣ್ಣಕಥಾ ಪ್ರಪಂಚ ಹೊಸ ಸಂವೇದನೆಗಳನ್ನು ಆಯಾ ಕಾಲ ಸಂದರ್ಭದ ಯುಗಧರ್ಮವನ್ನು ಒಳಗೊಳ್ಳುತ್ತ ಶ್ರೀಮಂತವಾಗುತ್ತ ಸಾಗಿದೆ.

ಸಣ್ಣಕಥೆಯ ಕ್ಷೇತ್ರದಲ್ಲಿ ಅನೇಕ ಕಥೆಗಾರರು ತಮ್ಮ ಸೃಜನಶೀಲತೆಯಿಂದ ಗಮನ ಸೆಳೆದಿದ್ದಾರೆ. ಅಂಥವರ ಹೆಸರುಗಳಲ್ಲಿ ಕೆಲವನ್ನು ಹೀಗೆ ಪಟ್ಟಿ ಮಾಡಬಹುದು: ಕಾಳೇಗೌಡ ನಾಗವಾರ, ರಾಜಶೇಖರ ನೀರಮಾನ್ವಿ, ಎಂ.ಎಸ್.ಕೆ.ಪ್ರಭು, ರಾಘವೇಂದ್ರ ಖಾಸನೀಸ, ಎಸ್.ದಿವಾಕರ, ಶಾಂತರಸ, ವೀರಭದ್ರ, ಕರೀಗೌಡ ಬೀಚನಹಳ್ಳಿ, ಕೆ.ಸತ್ಯನಾರಾಯಣ, ರಾಘವೇಂದ್ರ ಪಾಟೀಲ, ವಿವೇಕ ಶಾನಭಾಗ, ಕೆ.ವಿ.ತಿರುಮಲೇಶ್, ನಾ.ಡಿಸೋಜ, ಬಿ.ಶಾಮಸುಂದರ, ರಮೇಶ ಹುಲ್ಲುಕೆರೆ, ಕ್ಯಾತನಹಳ್ಳಿ ರಾಮಣ್ಣ, ಜವರನಹಳ್ಳಿ ಸಿದ್ದಪ್ಪ, ಕಾ.ತ.ಚಿಕ್ಕಣ್ಣ, ಬೊಳುವಾರು ಮಹಮದ್ ಕುಂಞ, ಫಕೀರ್ ಮಹಮ್ಮದ್ ಕಟ್ಪಾಡಿ, ಅಬ್ದುಲ್ ರಶೀದ್, ಬಿ.ಎಂ.ಬಷೀರ್, ರಫೀಕ್‌ಉಪ್ಪಿನಂಗಡಿ, ಕುಕ್ಕರಹಳ್ಳಿ ಬಸವರಾಜು, ಕೇಶವರೆಡ್ಡಿ ಹಂದ್ರಾಳ ಮೊದಲಾದವರು.

ಪಂಜೆಯವರು, ಶ್ರೀನಿವಾಸರಿಂದ ಹಿಡಿದು ಇಂದಿನವರೆಗೆ ಸುಮಾರು ನೂರು ವರುಷಗಳ ಕಥೆಗಾರರ ಕೃತಿಗಳು ಕನ್ನಡ ಸಣ್ಣಕಥೆ ಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿವೆ. ಹಾಗೆಂದ ಮಾತ್ರಕ್ಕೆ ಸಣ್ಣಕಥಾ ಪ್ರಪಂಚ ಪರಿಪೂರ್ಣವಾಗಿದೆ ಎಂದಲ್ಲ. ಇತ್ತೀಚೆಗೆ ಇತರ ಭಾಷೆಗಳಿಂದ ಅನೇಕ ಕಥೆಗಳು ಅನುವಾದವಾಗಿ ಬರುತ್ತಿರುವುದು ಒಂದು ಸಂತೋಷದಾಯಕ ಸಂಗತಿ. ನವಕರ್ನಾಟಕ ಪ್ರಕಾಶನ ನಿರಂಜನರ ಸಂಪಾದಕತ್ವದಲ್ಲಿ ವಿಶ್ವಕಥಾಕೋಶ ಮಾಲಿಕೆಯಲ್ಲಿ ಅನುವಾದಿತ ಕಥೆಗಳ 25 ಸಂಪುಟಗಳನ್ನು ಪ್ರಕಟಿಸಿರುವುದು ಭಾರತೀಯ ಭಾಷೆಗಳಲ್ಲಿಯೇ ಒಂದು ದಾಖಲೆ. ಹಾಗೆಯೇ

ಕನ್ನಡದ ಅನೇಕ ಉತ್ತಮ ಕಥೆಗಳು ಭಾರತೀಯ ಹಾಗೂ ಹೊರ ದೇಶಗಳ ಭಾಷೆಗೆ ಅನುವಾದವಾಗಿರುವುದು ಗಮನಿಸಬೇಕಾದ ಅಂಶ. ಇದೆಲ್ಲವನ್ನೂ ಗಮನಿಸಿದಾಗ ಕನ್ನಡ ಸಣ್ಣಕಥೆಗಳಿಗೆ ಉಜ್ವಲ ಭವಿಷ್ಯವಿದೆ ಎನ್ನಬಹುದು.

ಕನ್ನಡದಲ್ಲಿ ಸಣ್ಣಕಥೆಗಳು ಕೇವಲ ಪತ್ರಿಕೆಗಳಲ್ಲಿ ಕಾಣುತ್ತಿದ್ದ ಕಾಲವೊಂದಿತ್ತು. ಈಗ ಅವು ಹಲವಾರು ರೂಪದ ಸಂಗ್ರಹದಲ್ಲಿ ಕಾಣುತ್ತಿವೆ. ಲೇಖಕರು ಹೊರತರುವ ಸಂಗ್ರಹಗಳಲ್ಲದೆ ಪ್ರಸಿದ್ಧ ಲೇಖಕರ ಪ್ರಾತಿನಿಧಿಕ ಕಥೆಗಳ ಸಂಗ್ರಹಗಳೇ ಹೊರಬರುತ್ತಿವೆ. ಕನ್ನಡ ಸಾಹಿತ್ಯ ಪರಿಷತ್ತು ಉತ್ತಮ ಕಥೆಗಳನ್ನು ಆಯ್ದು ಪ್ರಕಟಿಸಿದೆ. ನ್ಯಾಷನಲ್ ಬುಕ್ ಟ್ರಸ್ಟ್, ಕೇಂದ್ರ ಸಾಹಿತ್ಯ ಅಕಾಡೆಮಿ ಉತ್ತಮ ಸಣ್ಣಕಥೆಗಳ ಸಂಗ್ರಹಗಳನ್ನು ತಂದಿವೆ. ಇತ್ತೀಚೆಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಶತಮಾನದ ಸಣ್ಣಕಥೆಗಳು ಎಂಬ ಸಂಕಲನ ಗ್ರಂಥವನ್ನು ಪ್ರಕಟಿಸಿದೆ (2001). ಸಾಲದ್ದಕ್ಕೆ ಒಬ್ಬನೇ ಲೇಖಕನ ಆಯ್ದ ಕಥೆಗಳ ಸಂಕಲನಗಳೂ ಬರುತ್ತಿವೆ. ವಿವಿಧ ಲೇಖಕರ ಕಥೆಗಳನ್ನೊಳಗೊಂಡ ಬೃಹತ್ ಕಥಾಸಂಕಲನಗಳೂ ಈಚೆಗೆ ಬೆಳಕು ಕಂಡಿವೆ. ಇದಲ್ಲದೆ ಕನ್ನಡ ನಾಡಿನ ವಿವಿಧ ಲೇಖಕಿಯರ ಕಥೆಗಳ ಸಂಕಲನಗಳೂ ಹೊರಬಂದಿವೆ.

ಪತ್ರಿಕೆಗಳ ಪ್ರೋತ್ಸಾಹವೂ ಮುಂದುವರಿದಿದೆ. ಇಂದು ಯಾವ ಪತ್ರಿಕೆಯೂ ಕಥೆಗಳನ್ನು ಪ್ರಕಟಿಸದೆ ಇಲ್ಲ. ಎಲ್ಲ ಪತ್ರಿಕೆಗಳಲ್ಲೂ ಸಣ್ಣ ಕಥಾ ವಿಭಾಗ ಇದ್ದೇ ಇದೆ. ಒಂದು ದೃಷ್ಟಿಯಿಂದ ಸಣ್ಣಕಥೆಗಳು ಇಷ್ಟೊಂದು ಸಂಖ್ಯೆಗಳಲ್ಲಿ ಹೊರಬರಲು ನಾಡಿನ ಪತ್ರಿಕೆಗಳು ಮಹತ್ತ್ವಪೂರ್ಣಪಾತ್ರ ವಹಿಸಿವೆ. ಕೆಲವು ಪತ್ರಿಕೆಗಳು ವಿಶೇಷ ಸಂದರ್ಭಗಳಲ್ಲಿ (ದೀಪಾವಳಿ ವಿಶೇಷಾಂಕ, ಯುಗಾದಿ ವಿಶೇಷಾಂಕ ಇತ್ಯಾದಿ) ಆಕರ್ಷಕ ಮೊತ್ತದ ಬಹುಮಾನಗಳನ್ನಿಟ್ಟು ಉತ್ತಮ ಸಣ್ಣಕಥೆಗಳನ್ನು ಆಹ್ವಾನಿಸುತ್ತಿವೆ. ಅಲ್ಲದೆ ಹಲವಾರು ಸಾಹಿತ್ಯಕ ಸಂಘಸಂಸ್ಥೆಗಳು ಆಗಾಗ್ಗೆ ಸ್ಪರ್ಧೆಯನ್ನು ಏರ್ಪಡಿಸಿ ಸಣ್ಣಕಥೆಗಳನ್ನು ಆಹ್ವಾನಿಸುತ್ತಿವೆ. ಈ ಎಲ್ಲ ಕಾರಣಗಳಿಂದ ಸಣ್ಣ ಕಥಾಪ್ರಪಂಚ ಸಮೃದ್ಧವಾಗುತ್ತ ಸಾಗಿದೆ. (ಟಿ.ಎಚ್.ಎಚ್.,ಜಿ.ಜಿ.)

**ಕನ್ನಡದಲ್ಲಿ ಸಾಂಗತ್ಯ ಕಾವ್ಯ :** ಕನ್ನಡದಲ್ಲಿ ಸಾಂಗತ್ಯಕೃತಿಗಳು ವಿಪುಲವಾಗಿವೆ. ಸಾಂಗತ್ಯದ ಪ್ರಾಚೀನತೆಯ ಬಗೆಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಕರ್ನಾಟಕ ಕವಿಚರಿತೆಕಾರರು ಸು.1233ರ ಶಿಶುಮಾಯಣನೇ ಪ್ರಥಮ ಸಾಂಗತ್ಯಕಾರನೆಂದು ಹೇಳಿದ್ದಾರೆ. ಆದರೆ ಈತನ ಕಾಲ ಹದಿನೈದನೆಯ ಶತಮಾನದ ಕಡೆಯ ಭಾಗ ಎಂದು ತರುವಾಯದ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಸದ್ಯದಲ್ಲಿ ಸು.1410ರಲ್ಲಿದ್ದ ದೇಪರಾಜನ ಸೊಬಗಿನ ಸೋನೆಯೇ ಪ್ರಥಮ ಸಾಂಗತ್ಯಕೃತಿ.

ಸಾಂಗತ್ಯ ಅಂಶಗಣಗಳಿಂದ ಸಂಘಟಿತವಾದುದು. ಇದರಲ್ಲಿ ಒಟ್ಟು ಹದಿನಾಲ್ಕು ಗಣಗಳಿರುತ್ತವೆ. ಅದರ ಒಂದು ಮತ್ತು ಮೂರನೆಯ ಪಾದಗಳು ಒಂದು ಸಮನಾಗಿಯೂ ಎರಡು ಮತ್ತು ನಾಲ್ಕನೆಯ ಪಾದಗಳು ಮತ್ತೊಂದು ಸಮನಾಗಿಯೂ ಇರುತ್ತವೆ. ಒಂದು ಮತ್ತು ಮೂರನೆಯ ಪಾದಗಳಲ್ಲಿ ನಾಲ್ಕು ನಾಲ್ಕು ವಿಷ್ಣುಗಣಗಳೂ ಎರಡು ಮತ್ತು ನಾಲ್ಕನೆಯ ಪಾದಗಳಲ್ಲಿ ಎರಡೆರಡು ವಿಷ್ಣುಗಣಗಳೂ ಕೊನೆಯಲ್ಲಿ ಒಂದು ಬ್ರಹ್ಮಗಣವೂ ಇರುತ್ತವೆ. ಮಾದರಿಗಾಗಿ ಒಂದು ಪದ್ಯವನ್ನು ನೋಡಬಹುದು.

ವಿ ವಿ ವಿ ವಿ
ಪರಮಪ | ರಂಜ್ಯೋತಿ | ಕೋಟಿಚಂ | ದ್ರಾದಿತ್ಯ
ವಿ ವಿ ಬ್ರ
ಕಿರಣಸು | ಜ್ಞಾನಪ್ರ | ಕಾಶ |
ವಿ ವಿ ವಿ ವಿ
ಸುರರಮ | ಕುಟಮಣಿ | ರಂಜಿತ | ಚರಣಾಬ್ಜ
ವಿ ವಿ ಬ್ರ
ಶರಣಾಗು | ಪ್ರಥಮಜಿ | ನೇಶ (ಭರತೇಶವೈಭವ)

ಸಾಂಗತ್ಯ ಹಾಡುಗಬ್ಬದ ಜಾತಿಗೆ ಸೇರಿದುದು. ಆದುದರಿಂದ ಅರ್ಥ ಸ್ವಾರಸ್ಯಕ್ಕಾಗಿ, ಹಾಡಿನ ಸೌಲಭ್ಯಕ್ಕಾಗಿ ವಿಷ್ಣುಗಣದ ಸ್ಥಾನದಲ್ಲಿ ಬ್ರಹ್ಮವೋ ರುದ್ರವೋ ಬ್ರಹ್ಮಗಣದ ಸ್ಥಾನದಲ್ಲಿ ವಿಷ್ಣುವೋ ರುದ್ರವೋ ಪರ್ಯಾಯವಾಗಿ ಬರುವುದುಂಟು. ಒಂದು ಉದಾಹರಣೆ:

ಬ್ರ ವಿ ರು ವಿ
ಕುರುರಾ | ಯನಮೈದು | ನನಕೊಲೆಗೆ | ಧರ್ಮಜ
ವಿ ವಿ ಬ್ರ
ನರನಕ | ಳುಪುವತೆ | ಐದೊಳು |
ವಿ ವಿ ವಿ ವಿ
ನರಪತಿ | ಯೊಡಬಟ್ಟು | ಕಳುಪಿದ | ರಾಮನ
ವಿ ವಿ ಬ್ರ
ಪರಬಲ | ಜಲನಿಧಿ | ಯೆಡೆಗೆ | (ರಾಮನಾಥಚರಿತೆ)

ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಆದಿಪ್ರಾಸ ಒಂದು ಅಪರಿಹಾರ್ಯವಾದ ಅಂಶ. ಸಾಂಗತ್ಯಕಾರರೂ ಈ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದಿದ್ದಾರೆ. ಆದರೆ ಕೆಲವು ಸಾಂಗತ್ಯಕೃತಿಗಳಲ್ಲಿ ಪ್ರಾಸೋಲ್ಲಂಘನೆಯಾಗಿರುವುದನ್ನು ಕಾಣಬಹುದು.

ಸಮಯ ಕಾಲವನರಿತು ಗೆಲಬೇಕು ವೈರಿಯ
ಮುಳುಗು ಮುಗ್ಗಿದ ಕಾಲದೊಳಗೆ
ನರಿ ಬಂದು ಗುಂಡಿಯ ಕೆಡೆದಾಗ ಜನಕೊಂದು
ಯಿಡಬೇಕು ಕಲ್ಲೆಂಬ ಗಾದೆ

(ಕುಮಾರರಾಮನ ಸಾಂಗತ್ಯಗಳು)

ಪ್ರಾಚೀನ ಕನ್ನಡ ಛಂದಃಕಾರರು ಸಾಂಗತ್ಯದ ಲಕ್ಷಣವನ್ನು ಹೇಳಿಲ್ಲ. ನಾಗವರ್ಮನ ಛಂದೋಂಬುಧಿಯಲ್ಲೂ ಜಯಕೀರ್ತಿಯ ಛಂದೋನುಶಾಸನದಲ್ಲೂ ಈಚಿನ ಇತರ ಕನ್ನಡ ಛಂದೋಗ್ರಂಥಗಳಲ್ಲಿಯೂ ಈಶ್ವರ ಕವಿಯ ಕವಿಜಿಹ್ವಾಬಂಧನದಲ್ಲೂ ನಂದಿಯ ನಂದಿಛಂದಸ್ಸಿನಲ್ಲೂ ಸಾಂಗತ್ಯದ ಉಲ್ಲೇಖವಿಲ್ಲ. ಕನ್ನಡ ಸಾಹಿತ್ಯದ ಪ್ರಥಮ ಸಾಂಗತ್ಯಕೃತಿಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿರುವ ದೇಪರಾಜನ ಸೊಬಗಿನ ಸೋನೆ ಒಂದು ವಿಶಿಷ್ಟ ರೀತಿಯದು. ಈ ಕೃತಿಯಲ್ಲಿನ ಪ್ರತಿಯೊಂದು ಪದ್ಯದಲ್ಲಿಯೂ ಬ್ರಹ್ಮಗಣಗಳಿಗೆ ಪರ್ಯಾಯವಾಗಿ ವಿಷ್ಣುಗಣಗಳನ್ನು ಬಳಸಲಾಗಿದೆ. ಕೆಲವು ವಿದ್ವಾಂಸರು ಇದನ್ನು ಬ್ರಹ್ಮಗಣ ಮತ್ತು ಒಂದು ಅಂಶ ಎಂದು ಅಭಿಪ್ರಾಯ ಪಡುತ್ತಾರೆ.

ಸೊಬಗಿನ | ಸೋನೆಯ | ನೋಲಿದಾ | ಲಿಸಿ ಕೇಳೆ
ಸೊಬಗಿನೀ | ಸೋನೆಯೆ | ನಿಪಂ ಪ್ರಿಯೆ
ಕಬರಿಯಿಂ | ದೆಸೆವಕಂ | ಜರಿಮಾಳ | ವನವರಿ
ಸಬಲೆ ನೀ | ನೆಂದ ವಿ | ಕ್ರಮನೆಂದು

(ಸೊಬಗಿನ ಸೋನೆ)

ಆಧುನಿಕ ವಿದ್ವಾಂಸರಲ್ಲಿ ಕೆಲವರು ಗೀತಿಕೆಯ ಎರಡು ಪದಗಳ ರೂಪಾಂತರವೆ ಸಾಂಗತ್ಯವಾಗಿ ತೋರುವುದು (ಕನ್ನಡ ಕೈಪಿಡಿ) ಎಂದೂ ಸಾಂಗತ್ಯ ತ್ರಿಪದಿಯಿಂದ ಹೊರಟ ಮಟ್ಟೆಂದೂ ತ್ರಿಪದಿಯ ಚರಣವನ್ನು ಆವೃತ್ತಿ ಮಾಡಿ ಹಾಡುವ ರೂಢಿ ಸಾಂಗತ್ಯದ ರೂಪನಿರ್ಮಾಣಕ್ಕೆ ದಾರಿಯನ್ನು ಮಾಡಿತು (ಕನ್ನಡ ಛಂದೋವಿಕಾಸ) ಎಂದೂ ಅಭಿಪ್ರಾಯ ಪಟ್ಟಿದ್ದಾರೆ. ಗೀತಿಕೆಯಿಂದಾಗಲಿ, ತ್ರಿಪದಿ ಅಥವಾ ಪಿರಿಯಕ್ಕರದಿಂದಾಗಲಿ ಸಾಂಗತ್ಯ ಆವಿರ್ಭವಿಸಿತೆಂದು ಹೇಳುವುದು ಅಷ್ಟು ಸಮಂಜಸವಾಗಿ ತೋರುವುದಿಲ್ಲ. ಏಕೆಂದರೆ ಅದನ್ನು ಸಾಧಿಸುವುದು ಕಷ್ಟ. ಸಾಂಗತ್ಯ ಶುದ್ಧ ದೇಶೀಯ ಮಟ್ಟು. ಅಂಶಗಣ ಘಟಿತವಾದ ಸಾಂಗತ್ಯಕ್ಕಿಂತಲೂ ಪ್ರಾಚೀನವಾದ ತ್ರಿಪದಿ, ಕಾಲಕ್ರಮದಲ್ಲಿ ಮಾತ್ರಾಗಣಕ್ಕೆ ತಿರುಗಿದ್ದರೂ ಸಾಂಗತ್ಯ ಇಂದಿಗೂ ಅಂಶಗಣಘಟಿತವಾಗಿಯೇ ಉಳಿದುಕೊಂಡು ಬಂದಿರುವುದರಿಂದ ಇದಕ್ಕೆ ಪ್ರತ್ಯೇಕ ಅಸ್ತಿತ್ವವಿದ್ದಿತೆಂದು ಭಾವಿಸುವುದಕ್ಕೆ ಅವಕಾಶವುಂಟು.

ಕನ್ನಡ ಸಾಹಿತ್ಯದ ಸಾಂಗತ್ಯಚರಿತ್ರೆಯಲ್ಲಿ ಬಸವೇಶ್ವರ ವಿರಚಿತ ಕಾಲಜ್ಞಾನವೇ ಪ್ರಥಮ ಕೃತಿಯೆಂದು ಹೇಳಿ ಕರ್ಕಿಯವರು ಕವಿಚರಿತ್ರೆಯಿಂದ ಒಂದು ಪದ್ಯವನ್ನು ಉದಾಹರಿಸಿದ್ದಾರೆ:

ಮಳೆಯಿಲ್ಲ ಬೆಳೆಯಿಲ್ಲ ಹೊಳೆಯಿಲ್ಲ ಕೆರೆಯಿಲ್ಲ
ನೆಳಲಿಲ್ಲ ಉದಕ ಮುನ್ನಿಲ್ಲ
ಮೊಳೆಯಿಲ್ಲ ಸೂರ್ಯನ ಕಳೆಯಿಲ್ಲ ಗೆಲವಿಲ್ಲ
ಉಳಿವಿಲ್ಲ ಆ ಪಾಪಿಗಳಿಗೆ

(ಕನ್ನಡ ಛಂದೋವಿಕಾಸ)

ಈ ಪದ್ಯದಲ್ಲಿ ಪ್ರಧಾನವಾಗಿ ಎದ್ದುಕಾಣುವ ಅಂಶವೆಂದರೆ ಅಂಶಗಣಗಳಿಗೆ ಬದಲಾಗಿ ಮಾತ್ರಾಗಣಗಳು ಬಂದಿರುವುದು. ಪ್ರಥಮ ಸಾಂಗತ್ಯಕೃತಿಯೆಂದು ಭಾವಿಸಲಾಗಿರುವ ಈ ಕಾಲಾಜ್ಞಾನವಚನ ಬಸವೇಶ್ವರರ ಹೆಸರಿಗೆ ಆರೋಪಿಸಲ್ಪಟ್ಟಿರುವ ಪ್ರಕ್ಷಿಪ್ತ ಕೃತಿಯಾಗಿರಬಹುದು. ತರುವಾಯ ಕಾಣಿಸಿಕೊಳ್ಳುವ ಸಾಂಗತ್ಯಕಾರ ಕಾಲದ ದೃಷ್ಟಿಯಿಂದ ಸಂದಿಗ್ಧತೆಗೊಳಗಾಗಿರುವ ಶಿಶುಮಾಯಣ. ಆತನ ಕೃತಿಗಳು ತ್ರಿಪುರದಹನಸಾಂಗತ್ಯ ಮತ್ತು ಅಂಜನಾಚರಿತ್ರೆ, ಗುಣದ ದೃಷ್ಟಿಯಿಂದಲೂ ಗಾತ್ರದ ದೃಷ್ಟಿಯಿಂದಲೂ ಇವು ಮಿಗಿಲಾಗಿವೆ. ಅಂಜನಾಚರಿತ್ರೆ ಸಾಹಿತ್ಯ ಮತ್ತು ಐತಿಹಾಸಿಕ ದೃಷ್ಟಿಗಳಿಂದ ಉಲ್ಲೇಖಾರ್ಹವಾಗಿದೆ.

ಹದಿನಾರನೆಯ ಶತಮಾನದಲ್ಲಿ ಶ್ರೇಷ್ಠ ಸಾಂಗತ್ಯಕೃತಿಗಳು ಸೃಷ್ಟಿಯಾದವು. ಈ ಶತಮಾನದಲ್ಲಿ ಸುಮಾರು ಇಪ್ಪತ್ತೆಂಟು ಸಾಂಗತ್ಯಕೃತಿಗಳು ಹುಟ್ಟಿಕೊಂಡಿವೆ. ಮೂರನೆಯ ಮಂಗರಸನ ನೇಮಿಜಿನೇಶ ಸಂಗತಿ, ಪ್ರಭಂಜನಚರಿತೆ, ಶ್ರೀಪಾಲ ಚರಿತೆಗಳು, ನಂಜುಂಡನ ರಾಮನಾಥಚರಿತೆ, ಕನಕದಾಸರ ಮೋಹನತರಂಗಿಣಿ, ರತ್ನಾಕರವರ್ಣಿಯ ಭರತೇಶವೈಭವ, ರಾಮರಸ ವಿರೂಪಾಕ್ಷ, ಬೊಂಬೆಯ ಲಕ್ಕ, ಹಲಗ, ಓದುವಗಿರಿಯ ಇವರ ಸಾಂಗತ್ಯಕೃತಿಗಳು ಹೆಸರಿಸತಕ್ಕವು. ಈ ಶತಮಾನದ ಮತ್ತೊಂದು ಕೃತಿ ಕಿಕ್ಕೇರಿಯಾರಾಧ್ಯ ನಂಜುಂಡ ವಿರಚಿತ ಭೈರವೇಶ್ವರಕಾವ್ಯ. ಇದು ಛಂದಸ್ಸಿನ ದೃಷ್ಟಿಯಿಂದ ವಿದ್ವಾಂಸರ ಗಮನವನ್ನು ಸೆಳೆದಿದೆ. ಇದರ ಸಂಪಾದಕರು ಈ ಕಾವ್ಯವನ್ನು ಷಟ್ಪದಿಯೆಂದು ನಿರ್ಧರಿಸಿ ಪ್ರತಿಪದ್ಯವನ್ನೂ ಆರು ಪಾದಗಳಾಗಿ ವಿಂಗಡಿಸಿ ಅಚ್ಚುಮಾಡಿದ್ದಾರೆ. ಅವರ ಅಭಿಪ್ರಾಯದಂತೆ ಪ್ರತಿ ಪದ್ಯದ ಒಂದು ಎರಡು ನಾಲ್ಕು ಮತ್ತು ಐದನೆಯ ಪಾದಗಳು ಶರಷಟ್ಪದಿಯಲ್ಲೂ ಮೂರು ಮತ್ತು ಆರನೆಯ ಪಾದಗಳು ಕುಸುಮಷಟ್ಪದಿಯಲ್ಲೂ ರಚಿತವಾಗಿವೆ. ಒಂದು ಪದ್ಯದ ಬೇರೆ ಬೇರೆ ಪಾದಗಳು ಬೇರೆ ಬೇರೆ ಛಂದಸ್ಸಿನಲ್ಲಿ ರಚಿತವಾಗಿರುವುದು ಕನ್ನಡ ಸಾಹಿತ್ಯದಲ್ಲಿ ಎಲ್ಲೂ ಕಂಡುಬರುವುದಿಲ್ಲ. ವಾಸ್ತವವಾಗಿ ಈ ಕಾವ್ಯದ ಛಂದಸ್ಸು ಸಾಂಗತ್ಯ, ಷಟ್ಪದಿಯಲ್ಲ. ಪ್ರತಿ ಪದ್ಯದಲ್ಲೂ ಖಂಡ ಪ್ರಾಸವಿರುವುದೇ ಈ ಭ್ರಾಂತಿಗೆ ಕಾರಣ. ಈ ರೀತಿ ಖಂಡಪ್ರಾಸವನ್ನು ಒಳಕೊಂಡಿರುವ ಕೃತಿಗಳು ಇನ್ನೂ ಕೆಲವು ಕಂಡುಬರುತ್ತವೆ.

ಹದಿನೇಳನೆಯ ಶತಮಾನದಲ್ಲಿ ಸುಮಾರು ಅರವತ್ತು ಸಾಂಗತ್ಯ ಕೃತಿಗಳು ಹುಟ್ಟಿಕೊಂಡಿವೆ. ಸಂಖ್ಯಾದೃಷ್ಟಿಯಿಂದ ಈ ಶತಮಾನದ ಕೃತಿಗಳು ವಿಪುಲವಾಗಿದ್ದರೂ ಕಾವ್ಯಗುಣದ ದೃಷ್ಟಿಯಿಂದ ಹೇಳಿಕೊಳ್ಳುವಂಥವು ಹೆಚ್ಚಾಗಿಲ್ಲ. ಪಂಚಬಾಣನ ಭುಜಬಲಿಚರಿತೆ, ಶಾಂತಮಲ್ಲನ ಅನುಭವಮುದ್ರೆ, ಶೇಷಕವಿಯ ರುಕ್ಮಾಂಗದ ಚರಿತೆ, ತಿರುಮಲಾರ್ಯನ ಕರ್ಣವೃತ್ತಾಂತ ಕಥೆ, ಚಿಕುಪಾಧ್ಯಾಯನ ಯಾದವಗಿರಿ ಮಹಾತ್ಮೆ, ಪಶ್ಚಿಮರಂಗ ಮಹಾತ್ಮೆ, ರಂಗಧಾಮಸ್ತುತಿ ಸಾಂಗತ್ಯ, ರಂಗಧಾಮ ಪುರುಷ ವಿರಹ ಸಾಂಗತ್ಯ, ಚಿತ್ರಶತಕ ಸಾಂಗತ್ಯ, ರಂಗನಾಯಕ ರಂಗನಾಯಕೀ ಸ್ತುತಿ ಸಾಂಗತ್ಯ, ನೇಮಿವ್ರತಿಯ ಸುವಿಚಾರಚರಿತೆ, ಧರಣಿಪಂಡಿತನ ಬಿಜ್ಜಳರಾಯಚರಿತೆ, ಚಂದ್ರಮನ ಕಾರ್ಕಳದ ಗೋಮ್ಮಟೇಶ್ವರಚರಿತೆ, ಪದ್ಮನಾಭನ ಪದ್ಮಾವತೀ ಚರಿತೆ, ಜಿನದತ್ತರಾಯನ ಚರಿತೆ, ಬಸವಕವಿಯ ರೇಣುಕಾಚಾರ್ಯಚರಿತೆ, ಚೆನ್ನಮಲ್ಲೇಶನ ದೀಪದಕಲಿಯರ ಕಾವ್ಯ, ಸಿದ್ಧಕವಿಯ ಸಿರುಮನ ಸಾಂಗತ್ಯ, ಚಾಮಯ್ಯನ ದೇವರಾಜೇಂದ್ರಸಾಂಗತ್ಯ ಇವು ಹೆಸರಿಸತಕ್ಕವು. ಗೋವಿಂದ ವೈದ್ಯನ ಕಂಠೀರವ ನರಸರಾಜವಿಜಯ ಒಂದು ಅಪೂರ್ವಕೃತಿ. ಈ ಕವಿ ವೀರರಸ ಪ್ರತಿಪಾದನೆಗೆ ಸಾಂಗತ್ಯವನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳುವುದು ಸಾಧ್ಯವೆಂಬುದನ್ನು ತೋರಿಸಿಕೊಟ್ಟಿದ್ದಾನೆ. ಈ ಶತಮಾನದ ವೈಶಿಷ್ಟ್ಯವೆಂದರೆ ಸ್ತ್ರೀಯರು ಸಾಂಗತ್ಯರಚನೆಗೆ ತೊಡಗಿದ್ದು. ಚಿಕ್ಕದೇವರಾಜನ ಆಸ್ಥಾನದಲ್ಲಿದ್ದ ಸಂಚಿಯ ಹೊನ್ನಮ್ಮನ ಹದಿಬದೆಯ ಧರ್ಮ ಒಂದು ಉತ್ಕೃಷ್ಟ ಕೃತಿ. ಶೃಂಗಾರಮ್ಮ ಪದ್ಮಿನೀ ಪರಿಣಯವನ್ನು ಬರೆದಿದ್ದಾಳೆ.

ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನಗಳಲ್ಲಿ ಸಾಂಗತ್ಯದ ಬೆಳಸು ಅಷ್ಟೊಂದು ಹುಲುಸಾಗಿದ್ದಂತೆ ಕಂಡುಬರುವುದಿಲ್ಲ. ಹದಿನೆಂಟನೆಯ ಶತಮಾನದಲ್ಲಿ ಕೇವಲ ಹದಿನೇಳು ಸಾಂಗತ್ಯಕೃತಿಗಳೂ ಹತ್ತೊಂಬತ್ತನೆಯ ಶತಮಾನದಲ್ಲಿ ಕೇವಲ ಎಂಟು ಸಾಂಗತ್ಯಕೃತಿಗಳೂ ಹೊರಬಂದಿವೆ. ಹದಿನೆಂಟನೆಯ ಶತಮಾನದಲ್ಲಿ ಗೋಪಾಲಾಚಾರ್ಯ ಶಿಷ್ಯನ ಜೀವೇಶ್ವರ ಸಾಂಗತ್ಯ, ತತ್ತ್ವದ ಸೊಬಗಿನ ಸೋನೆ, ಗುರುಸಿದ್ದಪ್ಪನ ಮಾದೇಶ್ವರ ಸಾಂಗತ್ಯ, ಚಲುವ ಕವಿಯ ಮಡಿವಾಳಯ್ಯನ ಚರಿತೆ, ದೇಪನ ದೇವಾಂಗಪುರಾಣ, ನೂರೊಂದಯ್ಯನ ಸೌಂದರಕಾವ್ಯ, ಪಾಯಣ್ಣನ ಅಹಿಂಸಾ ಚರಿತೆ, ಪದ್ಮನಾಭನ ರಾಮಚಂದ್ರಚರಿತೆ, ತರಳ ಚಲಪತಿಯ ಗಂಗೆಗೌರಿ ಸಂವಾದ -ಇವು ಮುಖ್ಯವಾದುದು. 1750ರಲ್ಲಿದ್ದ ಹೆಳವನಕಟ್ಟೆ ಗಿರಿಯಮ್ಮ ಚಂದ್ರಹಾಸನ ಕಥೆ, ಉದ್ದಾಳಿಕನಕಥೆ ಮೊದಲಾದ ಭಕ್ತಿ ಮತ್ತು ನೀತಿಪ್ರದವಾದ ಕೃತಿಗಳನ್ನು ರಚಿಸಿದ್ದಾಳೆ. ಮತ್ತೊಬ್ಬ ಕವಿಯಿತ್ರಿ ಚೆಲುವಾಂಬೆ ವರನಂದಿ ಕಲ್ಯಾಣ ಎಂಬ ಕೃತಿಯನ್ನು ರಚಿಸಿದ್ದಾಳೆ.

ಇಪ್ಪತ್ತನೆಯ ಶತಮಾನದಲ್ಲೂ ಸಾಂಗತ್ಯದ ರಚನೆ ಮುಂದುವರಿದುಕೊಂಡು ಬಂದಿದೆ. ಬಿ.ಎಂ.ಶ್ರೀಕಂಠಯ್ಯ, ಬೇಂದ್ರೆ, ಪು.ತಿ.ನರಸಿಂಹಾಚಾರ್, ಎಸ್.ವಿ.ಪರಮೇಶ್ವರಭಟ್ಟ ಮೊದಲಾದವರು ಸಾಂಗತ್ಯದಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಪರಮೇಶ್ವರಭಟ್ಟರು ನೀಳವಾದ ತಮ್ಮ ಆತ್ಮವೃತ್ತವನ್ನು ಹೇಳುವುದಕ್ಕೂ ಬಿಡಿ ಮುಕ್ತಕ ರಚನೆಗೂ ಸಾಂಗತ್ಯವನ್ನು ಬಳಸಿದ್ದಾರೆ. ಪರಿಮಾಣ ಮತ್ತು ಯೋಗ್ಯತೆ ಎರಡು ದೃಷ್ಟಿಯಿಂದಲೂ ಇವರ ಸಾಂಗತ್ಯ ಕೃತಿಗಳು ಗಮನಾರ್ಹವಾಗಿವೆ. ಉದಾಹರಣೆಗೆ ಎರಡು ಸಾಂಗತ್ಯ ಪದ್ಯಗಳು:

ಕಳೆವುದು ಸಾಬೂನು ಬಟ್ಟೆಯ ಕೊಳೆಯನು
ಕಳೆವುದು ಸೀಗೆ ಎಣ್ಣೆಯನು
ಪ್ರಾರ್ಥನೆ ತೊಡೆವುದು ಮನದ ಕಿಲ್ಬಿಷವನು
ಆ ಸೋಪು ಸೀಗೆಗಳಂತೆ

(ಚಂದ್ರವೀಧಿ)

ಸ್ಕೂಟರು ಹೆಳವನಿಗೇನುಪಯೋಗವು
ಬೋಳನಿಗೇಕೆ ಬಾಚಣಿಗೆ
ಅರಸಿಕನಿಗೆ ಏಕೆ ಕಾವ್ಯದ ಗಮಕವು
ಟ್ರಾನ್ಸಿಸ್ಟರೇಕೆ ಕೆಪ್ಪನಿಗೆ

(ಇಂದ್ರಚಾಪ)

ಪ್ರಾಚೀನ ಕಾವ್ಯಪರಂಪರೆಯಲ್ಲಿ ಪ್ರಮುಖವಾದ ಚಂಪೂ, ಷಟ್ಪದಿ, ತ್ರಿಪದಿ ಮುಂತಾದ ಛಂದೋಬಂಧಗಳಲ್ಲಿ ನಿರೂಪಿತವಾಗಿದ್ದ ಕಾವ್ಯ, ಶಾಸ್ತ್ರ ಧರ್ಮ ಪ್ರತಿಪಾದನೆ ಮೊದಲಾದ ನಿಗೂಢ ವಿಷಯಗಳು ಜನಸಾಮಾನ್ಯಕ್ಕೆ ಸುಲಭವಾಗಿ ನಿಲುಕುವಂತೆ ಶುದ್ಧ ದೇಶೀಯ ಛಂದಸ್ಸಿನಲ್ಲಿ ಹೊರಬರುವುದಕ್ಕೆ ವಾಹಕವಾದುದು ಎಂದರೆ ಒಂದು ಸಾಂಗತ್ಯ, ಇನ್ನೊಂದು ಷಟ್ಪದಿ (ನೋಡಿ: ಕನ್ನಡದಲ್ಲಿ ಷಟ್ಪದಿ ಕಾವ್ಯಗಳು). ಕನ್ನಡ ಛಂದಶ್ಶಾಸ್ತ್ರದ ಇತಿಹಾಸದಲ್ಲಿ ಬೇರಾವ ಛಂದೋಪ್ರಕಾರಕ್ಕೂ ಇಲ್ಲದ ವೈಶಿಷ್ಟ್ಯ ಸಾಂಗತ್ಯಕ್ಕಿದೆ. ಇದು ತನ್ನ ಗೇಯುತೆ ಮತ್ತು ಸೌಲಭ್ಯಗಳಿಂದ ಜನಪ್ರಿಯುತೆಯನ್ನು ಗಳಿಸಿರುವುದೇ ಅಲ್ಲದೆ ಕನ್ನಡ ಸಾಹಿತ್ಯಕ್ಕೆ ಮಕುಟಪ್ರಾಯವಾದ ಕೃತಿಗಳನ್ನು ಒದಗಿಸಿದೆ. *

**ಕನ್ನಡದಲ್ಲಿ ಹಾಸ್ಯ ಸಾಹಿತ್ಯ :** ಹಳಗನ್ನಡ ಸಾಹಿತ್ಯದಲ್ಲಿ ಹಾಸ್ಯವನ್ನೇ ಪ್ರಧಾನವಾಗಿ ವಸ್ತುವಾಗುಳ್ಳ ಕೃತಿರಚನೆಯ ಪ್ರಯತ್ನ ನಡೆದಿಲ್ಲವಾದರೂ ಹಾಸ್ಯದ ಸನ್ನಿವೇಶಗಳು ಕೃತಿಯ ಒಡಲಲ್ಲಿ ಬಂದಾಗ ಕವಿಗಳು ತಮ್ಮ ಹಾಸ್ಯ ಪ್ರೌಢಿಮೆಯನ್ನು ಮೆರೆದಿದ್ದಾರೆ. ಕಾವ್ಯದ ಪ್ರಸ್ತಾವನಾ ಭಾಗದಲ್ಲಿ ಬರುವ ಕುಕವಿನಿಂದೆಯಂಥ ಸಿದ್ಧ ಬರೆಹರೂಪಗಳಲ್ಲಿ, ಶೃಂಗಾರ ಸನ್ನಿವೇಶಗಳಲ್ಲಿ, ರಾಜರ ಸುಖಸಂಕಥಾವಿನೋದಗಳಲ್ಲಿ, ಸಾಮಯಿಕ ಚತುರೋಕ್ತಿಗಳಲ್ಲಿ, ಯುದ್ಧಪ್ರಸಂಗಗಳಲ್ಲಿ, ವೀರರ ಮೂದಲಿಕೆಯ ಮಾತುಗಳಲ್ಲಿ, ವಾಗ್ವಾದದ ಸಂದರ್ಭಗಳಲ್ಲಿ ಇಂಥ ಹತ್ತಾರು ಕಡೆ ಹಾಸ್ಯ ರಚನೆಗೆ ಅವರು ಅವಕಾಶ ಮಾಡಿಕೊಂಡಿದ್ದಾರೆ. ಕನ್ನಡದ ಅಸಂಖ್ಯಾತ ಶಾಸನಗಳಲ್ಲಿ ಹಾಸ್ಯ ಪ್ರಸಂಗಗಳು ಅಲ್ಲಲ್ಲಿ ಮಿಂಚುವುದನ್ನು ಕಾಣಬಹುದು. ಅಂಥ ಒಂದು ಶಾಸನದ ನಾಯಕ ವಿಕ್ರಮಸಾಂತ. ರಣರಂಗದಲ್ಲಿ ಇವನ

ಪ್ರತಾಪ ಅಷ್ಟಿಷ್ಟಲ್ಲ. ಈತ ಕೊಂದ ಶತ್ರುಗಳ ಹೆಣಗಳನ್ನುಂಡ ಮರುಳುಗಳಿಗೆ ಹಬ್ಬ, ಅಜೀರ್ಣ. ಅವು ವೈದ್ಯ ಮರುಳಿನ ಬಳಿಗೆ ಹೋದಾಗ ಆ ವೈದ್ಯ ಸೂಚಿಸಿದ ಔಷಧವಾದರೂ ಮರುಳುಗಳಿಗೆ ಮಾತ್ರವೇ ಉಚಿತ. ಅಜೀರ್ಣವಾದಾಗ ಆನೆ ನುಂಗುವುದೇ ಮದ್ದು. ಮರುಳುಗಳು ಹಾಗೆಯೇ ಮಾಡಿದುವು. ರೋಗ ವಾಸಿಯಾಯ್ತು. ವಿಸಂಗತ ವಿಚಾರದಿಂದ ಮಿನುಗುವ ಹಾಸ್ಯಕ್ಕೆ ಇದೊಂದು ಉತ್ತಮ ದೃಷ್ಟಾಂತ.

ಕನ್ನಡದ ಪ್ರಥಮ ಗ್ರಂಥ ಕವಿರಾಜಮಾರ್ಗದಲ್ಲಿ ವ್ಯಾಕರಣ, ಛಂದಸ್ಸು, ಭಾಷೆ ಮುಂತಾದವನ್ನು ಕುರಿತ ವಿವೇಚನೆಯ ನಡುನಡುವೆ ಉದಾಹರಣೆಗಾಗಿ ಕೊಟ್ಟಿರುವ ಪೂರ್ವಕವಿ ಕೃತಿ ಖಂಡಗಳಲ್ಲಿ ಅಲ್ಲಲ್ಲಿ ಬಗೆಬಗೆಯ ಹಾಸ್ಯ ಮಿನುಗುತ್ತದೆ. ಕವಿರಾಜಮಾರ್ಗಕಾರನಿಗೆ ಹಿಂದೆ ಇದ್ದ ಕವಿಗಳು ಹಾಸ್ಯವೇ ಪ್ರಧಾನವಾದ ಕೃತಿಗಳ ರಚನೆ ಮಾಡದಿದ್ದರೂ ಹಾಸ್ಯದ ನಾನಾ ಪ್ರಕಾರಗಳನ್ನವರು ಅರಿಯದವರಾಗಿರಲಿಲ್ಲವೆಂಬುದು ಇವುಗಳಿಂದ ವೇದ್ಯವಾಗುತ್ತದೆ. ಕವಿರಾಜಮಾರ್ಗಕಾರನಿಗೂ ಹಾಸ್ಯವನ್ನು ಗುರುತಿಸುವ ಶಕ್ತಿಯಿತ್ತು. ಅದನ್ನು ಸಾರಿಕೊಳ್ಳುವ ಉದ್ದೇಶವಿಲ್ಲದಿದ್ದರೂ ಅಂಥ ಹಾಸ್ಯ ಪ್ರಸಂಗಗಳ ಮೇಲೆ ಆತ ಬೆರಳಿಟ್ಟು ತೋರಿದ್ದಾನೆ ಎನ್ನಬಹುದು.

ಪಂಪಕವಿಯ ಎರಡೂ ಕಾವ್ಯಗಳಲ್ಲಿ ಹಾಸ್ಯದ ಹಲವಾರು ಪ್ರಸಂಗಗಳಿವೆ. ವಿಕ್ರಮಾರ್ಜುನವಿಜಯ ಕೌರವಪಾಂಡವರ ಕಥೆಯಾದ್ದರಿಂದ ಅಲ್ಲಿ ಬರುವ ಹಲವು ಸನ್ನಿವೇಶಗಳಲ್ಲಿ ಹಾಸ್ಯದ ನಾನಾ ಪ್ರಕಾರಗಳಿಗೆ ಧಾರಾಳವಾಗಿ ಅವಕಾಶವುಂಟು. ಹಾಸ್ಯ ಸನ್ನಿವೇಶಗಳನ್ನೊಳಗೊಂಡ ಇಡೀ ಭಾಗಗಳೂ ಹಾಸ್ಯ ಪಾತ್ರಗಳೂ ಅನೇಕ. ಬರಿಯ ಸರಸವೇ ಅಲ್ಲ, ಕಟಕಿ, ಮೂದಲೆ, ಅಪಹಾಸ್ಯ, ನಿಂದೆ, ಹೊಗೆಯ ನಗೆ - ಎಲ್ಲ ಉಂಟು. ಬಾಲ್ಯದಲ್ಲಿ ಕೌರವ ಪಾಂಡವರು ಮರಗೆರಸೆಯಾಡುತ್ತಿದ್ದಾಗ (ಮರಕೋತಿ) ಮರವೇರಿ ಕುಳಿತು ಹಂಗಿಸಿದ ಕೌರವರಿಗೆ ಬುದ್ಧಿ ಕಲಿಸುವ ಸಲುವಾಗಿ ಭೀಮಸೇನ ಆ ಮರವನ್ನೇ ಅಳ್ಳಾಡಿಸಿ ಅಷ್ಟು ಜನರನ್ನೂ ಕೆಳಗೆ ಉದುರಿಸಿದನಂತೆ. ಈ ಕೊರಚಾಟ ದಾಯಾದಿಮತ್ಸರವನ್ನೇ ಬೆಳೆಸಿದ ಚುಚ್ಚು ಹಾಸ್ಯ. ದ್ರುಪದನ ಮೇಲೆ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ ದ್ರೋಣಾಚಾರ್ಯ ತಮ್ಮ ಶಿಷ್ಯನಿಂದ ದ್ರುಪದನನ್ನು ಹಿಡಿತರಿಸಿ ಮಂಚದ ಕಾಲಿಗೆ ಕಟ್ಟಿಸಿ ಅವನ ತಲೆಯ ಮೇಲೆ ಕಾಲಿಟ್ಟಾಗಿನ ಸನ್ನಿವೇಶವೂ ರೋಚಕವಾಗಿದೆ. ಇಲ್ಲಿ ಒಂದು ಕಡೆ ದ್ರೋಣರ ಕೆಚ್ಚು ಇನ್ನೊಂದೆಡೆ ದ್ರುಪದನ ಅಸಹಾಯಕತೆ ಕಣ್ಣಿಗೆ ಕಟ್ಟುತ್ತದೆ. ಗೆದ್ದು ತಂದ ಭೀಷ್ಮ ತನ್ನನ್ನು ವರಿಸಲೊಲ್ಲದೆ ಹೋದಾಗ ಅಂಬೆಯೆಂಬುವಳು ಸಾಲ್ವನಲ್ಲಿಗೆ ಹೋಗಿ ತನ್ನನ್ನು ವರಿಸಬೇಕೆಂದು ಬೇಡಿದಾಗ ಅವನು ತುಂಟನಗೆ ನಕ್ಕು ಭೀಷ್ಮ ನನ್ನನ್ನು ಓಡಿಸಿ ನಿನ್ನನ್ನು ಕೊಂಡೊಯ್ದ, ಆದ್ದರಿಂದ ನಾನೂ ಅವನ ಹೆಂಡತಿಯೆ ಆದ ಹಾಗಾಯಿತು, ಪೆಂಡಿರ್ ಪೆಂಡಿರೊಳದೆಂತು ಬೆರೆಸುವರಬಲೇ ಎಂದನಂತೆ. ಇದು ನುಡಿಯ ಚಮತ್ಕಾರದಿಂದ ಉದಿಸುವ ಹಾಸ್ಯ. ಇಂಥ ನುಡಿಗಳಲ್ಲಿ ಪಂಪನ ನಿಶಿತ ಹಾಸ್ಯಪ್ರಜ್ಞೆಯನ್ನು ಗುರುತಿಸಬಹುದು. ದ್ರೌಪದೀಸ್ವಯಂವರದ ಸಂದರ್ಭದಲ್ಲಿ ಬರುವ ವಿವಿಧ ರಾಜಕುಮಾರರ ಹಾಸ್ಯಪೂರ್ಣವಾದ ನಡೆವಳಿಕೆಗಳು ಪಂಪನ ಹಾಸ್ಯಪ್ರಜ್ಞೆಗೆ ಸಾಕ್ಷಿಯಾಗಿವೆ. ಆದರೆ ದುರ್ಯೋಧನನನ್ನು ಹಂಗಿಸುವ ದ್ರೌಪದಿಯ ಹಲವಾರು ಮಾತುಗಳು ಶುದ್ಧ ಹಾಸ್ಯವಲ್ಲ. ಅದೂ ಇರಲಿ, ಸತ್ತವರನ್ನೂ ಪಂಪ ನಗಿಸದೆ ಬಿಟ್ಟಿಲ್ಲ. ಯುದ್ಧಭೂಮಿಯಲ್ಲಿ ಮರುಳುಗಳ ಆಟವನ್ನು ನೋಡಿ ವೀರಭಟರ ಪಂದಲೆಗಳು ಮುಗುಳ್ನಗೆ ನಕ್ಕುವಂತೆ.

ರನ್ನನ ಸಾಹಸಭೀಮವಿಜಯವೂ ಮಹಾಭಾರತವನ್ನೇ ಆಧರಿಸಿ ರಚಿಸಿದ ಕೃತಿಯಾದ್ದರಿಂದ ಇದರಲ್ಲಿ ಅಲ್ಲಲ್ಲಿ ಮಿಂಚುವ ಹಾಸ್ಯ ಕೂಡ ಸನ್ನಿವೇಶ ಮತ್ತು ಪಾತ್ರಗಳನ್ನೇ ಅವಲಂಬಿಸಿದ್ದು. ಇಲ್ಲಿಯ ಹಾಸ್ಯ ಗೌಣ. ಆದರೆ ಸಂಸ್ಕೃತ ನಾಟಕಗಳಲ್ಲಿರುವಂತೆ ವಿದೂಷಕನ ಪಾತ್ರವನ್ನು ನಿರ್ಮಿಸಿರುವುದು ರನ್ನನ ಕೃತಿಯ ವೈಶಿಷ್ಟ್ಯ. ಕೌರವ ಪಾಂಡವರ ನಡುವೆ ಸಂಧಾನ ಫಲಿಸಬಹುದೆಂಬ ಸೂಚನೆ ಬಂದಾಗ ಎಲ್ಲರಿಗಿಂತ ಆತಂಕಗೊಂಡವಳು ದ್ರೌಪದಿ. ಸಂಧಿ ಏರ್ಪಡಬಾರದು, ಹಾಗಾದರೆ ಪಾಂಡವರಿಗೆ ನೆಲೆ ತಪ್ಪುತ್ತದೆ, ತನಗೆ ಜೀವನ ಬೇಡವಾಗುತ್ತದೆ ಎಂದು ಆಕೆ ಭೀಮನಲ್ಲಿಗೆ ಬಂದು ಅಳುತ್ತಾಳೆ. ದುರ್ಯೋಧನನ ತೊಡೆ ಮುರಿಯುವುದಾಗಿ ಆಗ ಭೀಮ ಪ್ರತಿಜ್ಞೆ ಮಾಡಿದ. ಇಂಥ ಗಂಭೀರ ಪರಿಸ್ಥಿತಿಯಲ್ಲಿ ಬರುತ್ತವೆ ವಿದೂಷಕನ ನಗೆಮಾತು. ದೇವಾಸುರ ಯುದ್ಧಕ್ಕೆ ಕರಗಂಬೊತ್ತ ಡಾವರ ಡಾಕಿನಿಯೇ ಪಾಂಚಾಲಿ ಎಂಬುದು ಅವನ ವರ್ಣನೆ. ಅಲ್ಲದೆ

> ಕುರುಕುಲಮಂ ನುಂಗಿದೆಯಿನ್ನರೆಬರುಮಂ ನುಂಗಲಿರ್ಪೆ ಕುರುಪತಿಯುಮನಿ
> ನ್ನೆರಡನೆಯ ಹಿಡಂಬಿಯನೆಮ್ಮರಸಂ ರಕ್ಕಸಿಯನೆಲ್ಲಿ ತಂದನೊ ನಿನ್ನಂ
> ಮಾರುತಿ ನಿಜವೇಣೀಸಂಹಾರಂ ಮಾಡಿದೊಡೆ ಮಾಳ್ಪುದೆನಗಂ ನಿನಗಂ
> ಪೂರಣೆಗೆ ಜಠರ ಪಿಠರಕ ಪೂರಣೆಗೇಂ ಮಾಡದೆಂತು ಕರೆವೆಂ ನಿನ್ನಂ

ಎಂದು ಅಳುತ್ತ ಬಂದ ತನ್ನನ್ನು ನಗುತ್ತ ಹೋಗುವಂತೆ ವಿದೂಷಕ ಸಂತೋಷಪಡಿಸಿದುದಕ್ಕೆ ಒಡಂಬಟ್ಟು ಚಾರುಹಾಸಿನಿ (ದ್ರೌಪದಿ) ನಿಜನಿವಾಸಕ್ಕೆ ಹೋದಳು. ಇದು ರನ್ನನ ಹಾಸ್ಯವಿಧಾನ. ರೌದ್ರ, ವೀರ ರಸಗಳನ್ನು ಸಮರ್ಥವಾಗಿ ಪ್ರತಿಪಾದಿಸುವಂತೆ, ಹಾಸ್ಯರಸ ಪ್ರತಿಪಾದನೆಯಲ್ಲೂ ರನ್ನನದು ಮೇಲುಗೈ. ಅಭಿನವ ಪಂಪನ (ನಾಗಚಂದ್ರ) ಸಮಕಾಲೀನಳೆನ್ನಲಾದ ಕಂತಿಯೆಂಬ ಕವಯಿತ್ರಿಗೂ ಅಭಿನವಪಂಪನಿಗೂ ನಡೆದ ವಾಗ್ವಾದಗಳು, ಕಂತಿಹಂಪನ ಸಮಸ್ಯೆಗಳೆಂದು ಪ್ರಸಿದ್ಧವಾಗಿರುವ ಈ ಪದ್ಯಗಳಲ್ಲಿ ಸಂಸ್ಕೃತದ ಚತುರೋಕ್ತಿಗಳೂ ನೆನಪಿಗೆ ಬರುತ್ತವೆ. ಇವು ಶ್ಲೇಷೆ ವಿಚಿತ್ರ ಪದಜೋಡಣೆ ಮತ್ತು ಸರಸ ಹಾಸ್ಯಗಳಿಂದ ಕೂಡಿದ್ದು ಓದುಗರಿಗೆ ಹಾಸ್ಯರಂಜನೆಯನ್ನುಂಟುಮಾಡುವ ಗುಣಗಳನ್ನು ಪಡೆದಿವೆ.

ಮತೀಯ ವಿಕಾರ, ಪುರಾಣ ಕಲ್ಪನೆ, ತತ್ತ್ವಕ್ಕೂ ಆಚರಣೆಗೂ ನಡುವಣ ಭೇದ ಇವನ್ನು ಸ್ವಾರಸ್ಯವೂ ಹಾಸ್ಯಪೂರ್ಣವೂ ಆದ ಕಥನರೂಪದಲ್ಲಿ ವರ್ಣಿಸುವ ಕಲೆಯಲ್ಲಿ ಜೈನಕವಿಗಳಾದ ನಯಸೇನ, ಬ್ರಹ್ಮಶಿವ ಮತ್ತು ವೃತ್ತವಿಲಾಸ ಸಮರ್ಥರು. ಇವರ ಕಾವ್ಯಗಳಲ್ಲಿ ಬರುವುದು ಶುದ್ಧ ಹಾಸ್ಯವಲ್ಲ; ನಂಜುನಗೆ, ವಿಡಂಬನ, ವೈದಿಕಮತದ ಅಂಧಶ್ರದ್ಧೆಯನ್ನು ಅವಹೇಳನ ಮಾಡುವಾಗ ಈ ಬಗೆಯ ನಗೆ ಹೊಮ್ಮುತ್ತದೆ. ಅಲ್ಲಲ್ಲಿ ಲೋಕವೀಕ್ಷಣೆಯ ಫಲವಾದ ಸರಸ ಹಾಸ್ಯವೂ ಹರಿಯುವುದುಂಟು. ಒಬ್ಬ ಮುದುಕನ ಮದುವೆಯ ಹುಚ್ಚನ್ನು ವೃತ್ತವಿಲಾಸ ವರ್ಣಿಸಿರುವ ಪರಿಯಿದು:

> ನೆರೆದಲೆ ಜೋಲ್ದ ಪುರ್ಬು ಕುಟಿದಕ್ಷಿಯುಗಂ ತುಟಿಯರ್ತ ಬೋಡಬಾಯ್
> ತೆರೆಮಸಗಿರ್ದಮೋರೆಯುಡುಗಿರ್ದುರಮಕ್ಕುಳಿಸಿರ್ದ ಪೊಟ್ಟೆ ಮೇ
> ಲ್ಸೆರೆಮಸಗಿರ್ದ ಕಾಲ್ ಮುಱಿದ ಬೆನ್ನುಡೆ ಕಂಪಿಪ ಹಸ್ತಮಸ್ತಕಂ
> ಪರಿಕಿಸೆ ತಾಪಸಂಗೆನಗೆ ಪೇಸದೆ ಕನ್ನೆಯನ್ನೀಯಬಲ್ಲರೆ

ರುದ್ರಭಟ್ಟ ಕವಿಯು ಜಗನ್ನಾಥ ವಿಜಯದಲ್ಲಿ ಹಾಸ್ಯರಸ ಕೋಡಿವರಿದಿದೆ. ಕೃಷ್ಣನನ್ನು ರಮಿಸಲು ಅವನ ತಾಯಿ ಕಥೆ ಹೇಳಿದ ಪರಿಯಿದು

> ಕಥೆಯಂ ಕೇಳೆಲೆ ಕಂದ ಹುಂ ರಘುಜನೆಂಬಂ ಹುಂ ಸಕಾಂತಂ ವನ
> ಸ್ಥಿತನಾದಂ ಗುರು ಪೇಟಿ ಹುಂ ದಶಶಿರಂ ಕೊಂಡೊಯ್ದನಾ ರಾಮನಾ
> ಸತಿಯಂ ತಾನೆನೆ ಪೂರ್ವಮಂ ನೆನೆಯುತು ಹುಂಕೊಳ್ಳದುತ್ಕೋಪ ಹುಂ
> ಕೃತಿಯಂ ಮಾಡುತುಮೌಂಡುಗರ್ಚೆ ಕಿಸುಗಣ್ಮೆಟ್ಟಚ್ಯುತಂ ರಂಜಿಕುಂ

- ಈ ಮಾತುಗಳಲ್ಲಿ ಹಾಸ್ಯರಸದ ಛಾಯೆಯನ್ನು ಗುರುತಿಸಬಹುದು.

ಹನ್ನೆರಡನೆಯ ಶತಮಾನದ ಶಿವಶರಣರ ವಚನಗಳು ಮೃದುಹಾಸ್ಯ ಮತ್ತು ವಿಡಂಬನಗಳ ತವರು. ಸಾಮಾನ್ಯರ ಬಗೆಗೂ ನಿಲುಕುವಂತೆ ಚಮತ್ಕಾರದಿಂದ ಹೇಳುವುದರಲ್ಲಿ ವಚನಕಾರರು ಅಸಾಮಾನ್ಯರು. ಏತ ತಲೆವಾಗಿದರೇನು, ಭೃತ್ಯಾಚಾರಿಯಾಗಬಲ್ಲುದೇ ಅಯ್ಯ, ಇಕ್ಕುಳ ಕೈಮುಗಿದರೇನು, ಲಿಂಗವೇದಿಯಾಗಬಲ್ಲದೇ ಅಯ್ಯ ಎನ್ನುವುದು ಬಸವಣ್ಣನವರ ನಗೆಯ ರೀತಿ ನೀತಿ. ಗುಡಿ ಕೆರೆ ಕಟ್ಟಿಸಿ, ಪರಮಾರ್ಥದ ತೃಪ್ತಿ ಪಡೆದನೆನ್ನುತ್ತಿದ್ದ ಸಿದ್ಧರಾಮನನ್ನು ಹಿರಿಯ ಒಡ್ಡನೆಂದು ಪರಿಹಾಸ ಮಾಡಿದ ಅಲ್ಲಮಪ್ರಭುವಿನದು ನಿರ್ದಾಕ್ಷಿಣ್ಯ ದೃಷ್ಟಿ. ಕಲಿಕಂಭನೆಂಬ ಶರಣನಿಗೆ ಭಕ್ತರನ್ನು ನಗಿಸುವುದೇ ಕಾಯಕ. ವಿಕೃತ ವೇಷಭೂಷಣಗಳನ್ನು ನೋಡಿ ನಗೆಯಾಡುವುದು ಹಲವು ವಚನಕಾರರ ಸಹಜ ಪ್ರವೃತ್ತಿ. ಹೀಗೆ ವಚನಕಾರರ ಕೃತಿಗಳಲ್ಲಿ ನಗೆ, ಸಹಾನುಭೂತಿ, ಚುಚ್ಚು ನುಡಿಗಳು ಕೂಡಿ ಹರಿದಿವೆ.

ರಗಳೆಗಳನ್ನು ಪ್ರಚಾರಕ್ಕೆ ತಂದು ಹೊಸ ಕಾವ್ಯ ಪ್ರಕಾರವೊಂದರ ಪ್ರವರ್ತಕನಾದ ಹರಿಹರನ ಕೃತಿಗಳು ಭಕ್ತಿಪ್ರಧಾನವಾದರೂ ಅವುಗಳಲ್ಲೂ ಹಾಸ್ಯಕ್ಕೇನೂ ಕೊರತೆಯಿಲ್ಲ. ಬಸವರಾಜದೇವರ ರಗಳೆಯಲ್ಲಿ ಶಿವನ ಒಡ್ಡೋಲಗದ ರಸ ಸನ್ನಿವೇಶದಲ್ಲಿ ಬಂದಿರುವ ಭೃಂಗಿಯ ನಗೆಯ ನೃತ್ಯ ಒಂದು ಉದಾಹರಣೆಯಾಗಿದೆ. ಅವತಾರ ಪುರುಷನಾದ ನಂಬಿಯಣ್ಣನ ರಗಳೆಯಲ್ಲಿ ಅಲ್ಲಲ್ಲಿ ಮಿಂಚುವ ಹಾಸ್ಯ ಇನ್ನೊಂದು ಉದಾಹರಣೆ. ನಂಬಿಯಣ್ಣನಿಗೆ ಆಗಲಿದ್ದ ಮದುವೆಯನ್ನು ತಪ್ಪಿಸಿ, ಆತ ಇನ್ನೊಬ್ಬಳನ್ನು ಲಗ್ನವಾಗುವಂತೆ ಮಾಡಬೇಕೆಂಬ ಉದ್ದೇಶದಿಂದ ಶಿವನೇ ವೃದ್ಧ ಮಾಹೇಶ್ವರನ ವೇಷ ಧರಿಸಿ ಬಂದಾಗಿನ ಸನ್ನಿವೇಶದ ತುಂಬ ನಗೆಯೇ ಹಾಸು ಹೊಕ್ಕಾಗಿದೆ. ಕಯ್ಯ ಕೊಡೆಯಿಂ, ಮಯ್ಯ ತೆರೆಯಿಂ, ಜೋಲ್ವ ಪುರ್ವಿಂ, ನೇಲ್ವ ತೋಳ ತೊವಲಿಂ, ಇಟ್ಟ ವಿಭೂತಿಯಿಂ, ಊಱೆದ ಯಷ್ಟಿಯ ಕೋಲಿಂ, ಪಿಡಿದ ಕಮಂಡಲದಿಂದಿಳಿದ ಬೆಳುಗಡ್ಡದಿಂ, ನಡುಗುವ ನರೆದಲೆಯಿಂ, ನರೆತು ಸಡಿಲ್ವ ಸರ್ವಾಂಗದಿಂ, ಪುಣ್ಯಂ ಪಣ್ಣಾದಂತೆ ಒಮ್ಮೊಮ್ಮೆ ಕೆಮ್ಮುತೊಮ್ಮೊಮ್ಮೆ ಗೂಹೆ ಗೂಹೆಗುಟ್ಟುತುಂ, ಶಿಥಿಲಾಕ್ಷರಂಗಳಿಂ ನಮಃ ಶಿವಾಯಯೆನುತ್ತೆನಲಾಱದಂತೆ ನಡುಗುತ್ತುಂ ಬಂದ ಶಿವ ಹೆಂಗಸರ ನಡುವೆ ನಡೆದು, ವಿಪ್ರರ ಸಮೂಹವನ್ನು ಬಳಸಿ, ಮನಸ್ಸಿನಲ್ಲೇ ನಗುತ್ತ, ಕೋಲನೂಱುತೆ ಕೆಮ್ಮಿ ಕುಮ್ಮುತ್ತೆ ಸಾಲ್ಗೊಂಡಿರ್ದ ತುಪ್ಪದ ಕೊಡಂಗಳೊಳ್ ನಾಲ್ಕೆರಡನೆಡಹಿ ನಮಃಶಿವಾಯ ಎಂಬ ವೃದ್ಧ ಧ್ವನಿ ಪುಟ್ಟೆ ಕೊಡಂಗಳ ಮೇಲೊಡೆಬೀಳ್ದು ಕುಳ್ಳಿರ್ದರ ಮುಖದೊಳಂ, ಕಣ್ಣೊಳಂ ಮಯ್ಯೊಳಂ ತುಪ್ಪಂ ಚೆಲ್ಲೆ ಎಲ್ಲರೆದ್ದಾಮಲ್ಲಳಿಗೊಂಡು ಘೊಳ್ಳೆಂದು ಬಿಳ್ದ ವೃದ್ಧ ಮಾಹೇಶ್ವರನಂ ಮುತ್ತಿಕೊಂಡೆತ್ತಲನುವಾಗಿ ಮೆಲ್ಲನೆ ನೆಗಪಿ ಹೊರಗೆ ತಂದು ಬಿಡುತ್ತಾರೆ. ಈ ಸಂದರ್ಭದಲ್ಲಿ ಹಾಸ್ಯರಸ ಹೊನಲಾಗಿ ಹರಿದಿದೆ. ಹೀಗೆ ಮಧುರ ಹಾಸ್ಯಗಳಿಂದ ಹಿಡಿದು ಪರಸಮಯಿಗಳನ್ನು ಕೆರಳಿಸುವ ಚುಚ್ಚುನುಡಿಯವರೆಗೆ ಹಾಸ್ಯದ ನಾನಾ ಪ್ರಕಾರಗಳು ಹರಿಹರನ ಕೃತಿಗಳಲ್ಲಿ ಯಥೇಷ್ಟವಾಗಿವೆ.

ಅಹಿಂಸಾವ್ರತದ ಮಹಿಮೆಯನ್ನು ಸಾರುವುದೇ ಜನ್ನನ ಯಶೋಧರ ಚರಿತೆಯ ಮುಖ್ಯೋದ್ದೇಶವಾದರೂ ಈತ ಸರಸ ಹಾಸ್ಯಗಾರ ಕೂಡ. ವಿಸಂಗತ ಸನ್ನಿವೇಶಗಳನ್ನು ತಂದೊಡ್ಡಿ ಹಾಸ್ಯದ ಬುಗ್ಗೆ ಹೊಮ್ಮಿಸುವುದೇ ಈತ ಇಲ್ಲಿ ಅನುಸರಿಸಿರುವ ವಿಧಾನ. ಅರಮನೆಯ ಸಕಲ ಭೋಗಭಾಗ್ಯಗಳೂ ಅಮೃತಮತಿಗೆ ಇದ್ದರೂ ಆಕೆಗೆ ಪಱೆದಲೆ, ಕುಱಿ ನೊಸಲು, ಅಱೆಗಣ್ಣು, ಹಪ್ಪಳಿಕೆ ಮೂಗೂ ಟೊಂಕ ಮುಱೆದ ಕತ್ತೆಯ ಕಾಲಂ ಮಱೆಯಿಸುವ ಕಾಲೂ ಇದ್ದ ಬಧಿರನಲ್ಲಿ ಕಾಮ, ಅವನಿಗೋ ಇವಳೊಮ್ಮೆ ತಡವಾಗಿ ಹೋದಾಗ ಕ್ರೋಧಕೆರಳಿ ಹೊಡೆಯುತ್ತಾನೆ. ಆಗ ತಡವಾದುದುಂಟು ನಲ್ಲನೆ ಬಿಡು ಮುಳಿಯದಿರ್ ಎಂದು ಆಕೆ ಅಂಗಲಾಚುತ್ತಾಳೆ. ಇದು ಬೇರೆಲ್ಲೂ ಸಿಗದ ವಿಕೃತ ಹಾಸ್ಯ ಸನ್ನಿವೇಶ.

ಷಟ್ಪದಿಯನ್ನು ರಚಿಸಿದ ಕವಿಗಳ ಕೃತಿಗಳಲ್ಲೂ ಅಲ್ಲಲ್ಲಿ ಹಾಸ್ಯಕ್ಕೇನೂ ಕೊರತೆಯಿಲ್ಲ. ವಿಶ್ವಾಮಿತ್ರನ ವಿಚಿತ್ರ ಪ್ರತಿಜ್ಞೆಯಿಂದ ಆರಂಭವಾಗಿ ಹರಿಶ್ಚಂದ್ರನ ಸತ್ಯ ಸ್ಥಾಪನೆಯಲ್ಲಿ ಕೊನೆಗೊಳ್ಳುವ ಹರಿಶ್ಚಂದ್ರ ಕಾವ್ಯದ ಕರ್ತೃವಾದ ರಾಘವಾಂಕನ ಶಬ್ದಚಮತ್ಕೃತಿಯಲ್ಲಿ ಬರುವ ಹಾಸ್ಯ ವಿಶಿಷ್ಟವಾದದ್ದು. ಗರಳಗೊರಳವನರಳಸರಳಂಗೆ ಮುನಿವಂತೆ ಎಂಬ ಮಾತು ಒಂದು ಉದಾಹರಣೆ. ಮಕ್ಕಳು ಮಾಡುವ ಅಕ್ಷರಗಳ ದೊಂಬರಾಟವನ್ನಿಲ್ಲಿ ಕಾಣಬಹುದು. ಇಂಥ'ವನ್ನು ರಾಘವಾಂಕನೇ ಅಲ್ಲದೆ ಅನೇಕರು ಹೊಸೆದಿದ್ದಾರೆ. ಆದರೆ ಹಾಸ್ಯ ಖಂಡಗಳನ್ನೇ ಕಾವ್ಯದಲ್ಲಿ ನೆಯ್ದಿರುವ ಷಟ್ಪದಿಕಾರರಲ್ಲಿ ಕುಮಾರವ್ಯಾಸ ಅಗ್ರಗಣ್ಯ. ಬಕಾಸುರನ ಹೊಟ್ಟೆಬಾಕತನ, ದ್ರೌಪದೀ ಸ್ವಯಂವರದ ಕಾಲದಲ್ಲಿ ಹಾಜರಿದ್ದ ಅರ್ಜುನನ ಬ್ರಾಹ್ಮಣವೇಷ, ಉತ್ತರನ ಪೌರುಷ - ಇವೆಲ್ಲ ಕುಮಾರವ್ಯಾಸನ ಹಾಸ್ಯದೃಷ್ಟಿಯನ್ನು ಪ್ರತಿಪಾದಿಸುವ ಪ್ರಸಂಗಗಳು. ಕಟಕಿ 'ನಿಂದೆ' ಮೂದಲೆಗಳೇ ಮುಂತಾದ ವಿಡಂಬನೆಯ ನಾನಾ ಪ್ರಕಾರಗಳಿಗೂ ಕುಮಾರವ್ಯಾಸನ ಕೃತಿಯಲ್ಲಿ ಕೊರತೆಯಿಲ್ಲ. ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಕಾಣುವುದು ಸಹಾನುಭೂತಿ ಮಿಶ್ರಿತ ತಿಳಿಹಾಸ್ಯ. ಲಘು ವಿಡಂಬನೆ, ತೀವಿದ ಎಳನಗೆಯ ಬೆಳುದಿಂಗಳನ್ನು ಪಸರಿಸುವ ದೇವಪುರ ಲಕ್ಷ್ಮೀರಮಣನ ಆಸ್ಯ ಚಂದ್ರದ ಆನಂದದಲ್ಲಿ ಮಿಂದ ಲಕ್ಷ್ಮೀಶನ ಹಾಸ್ಯ ಅವನಿಗೇ ವಿಶಿಷ್ಟವಾದದ್ದು. ಧರ್ಮರಾಜ ಅಶ್ವಮೇಧ ಮಾಡುವ ಪ್ರಸ್ತಾಪ ಬಂದಾಗ ಭೀಮ-ಕೃಷ್ಣರ ನಡುವೆ ನಡೆಯುವ ಹುಸಿ ಜಗಳ, ಷಡ್ರಸಾನ್ನದ ಆರೋಗಣೆಯಲ್ಲಿರುವ ಕೃಷ್ಣನೊಂದಿಗೆ ಹೆಂಡತಿಯ ಸರಸ ವಿನೋದ, ಬೀಗರು ಪರಸ್ಪರವಾಗಿ ಮಾಡುವ ಹುಚ್ಚು ಹಾಸ್ಯ, ಚಂಡಿಯ ಕಥೆಯ ವಿಧಿಯ ವಿಕೃತ ಹಾಸ್ಯ, ಅಲ್ಲಲ್ಲಿ ಮೊಗದೋರುವ ವ್ಯಂಗ್ಯ, ಕಟಕಿ, ನಿಂದೆ, ಮೂದಲೆ - ಇವು ಲಕ್ಷ್ಮೀಶನನ್ನು ನಗೆಗಾರನನ್ನಾಗಿಮಾಡಿದೆ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಹೇಳಿರುವ ಹಾಗೆ, ಲಕ್ಷ್ಮೀಶ ಹಾಸ್ಯಕ್ಕಾಗಿಯೇ ಆಭಾಸಪೂರ್ಣವಾದ ಪದ್ಯಗಳನ್ನು ಹೆಣೆದು ಸೇರಿಸಿಲ್ಲ. ಅವನ ಕೃತಿಯಲ್ಲಿ ಕಾಣುವುದು ಬಲಾತ್ಕಾರದ ಕಚಕುಳಿಯ ನಗೆಯಲ್ಲ. ಔಚಿತ್ಯ, ಗಾಂಭೀರ್ಯ, ಹಿತಮಿತಗಳಿಂದ ಕೂಡಿದ ಸಹಜಹಾಸ್ಯ.

ಸಾಂಗತ್ಯಕಾರ ರತ್ನಾಕರವರ್ಣಿಯಲ್ಲಿ ಹಾಸ್ಯದ ಒರತೆಯನ್ನೇ ಕಾಣಬಹುದಾಗಿದೆ. ರಾಗರಸಿಕ ಮತ್ತು ವೀತರಾಗರಸಿಕನಾದ ರತ್ನಾಕರವರ್ಣಿ ಸರಸ ವಿನೋದಿ. ಬಿಸುನಗೆ ಯಾವುದು, ತಣ್ಣಗೆ ಯಾವುದು, ಹುಸಿನಗೆ ಮುಗುಳುನಗೆಗಳು, ರಸನಗೆಯೆಳನಗೆಯೆಂಬವೆಂತಿಹವು ಎಂದು ಈತ ಬಲ್ಲ. ಕುಸುಮಾಜಿಯ ತಂಗಿ ಮಕರಂದಾಜಿಗೂ ಭರತನಿಗೂ ನಡೆಯುವ ಸಂಭಾಷಣೆ, ಗಿಳಿನುಡಿಯ ಮಾತುಗಳು ಮೊದಲಾದ ಸಂದರ್ಭಗಳಲ್ಲಿ ಹಾಸ್ಯ ರಸ ತನಿಯಾಗಿದೆ. ಇನ್ನೊಂದು ಸನ್ನಿವೇಶ: ಭರತೇಶನೊಮ್ಮೆ ಬಾಹುಬಲಿಯ ಮೇಲೆ ಯುದ್ಧಕ್ಕೆ ಹೊರಟಿದ್ದ. ಅವನ ಸೈನಿಕರಲ್ಲಿ ಕೆಲವರು ಅವನನ್ನು ಹೊಗಳಿಯೂ ಇನ್ನು ಕೆಲವರು ಹಗುರವಾಗಿಯೂ ಮಾತಾಡಿಕೊಳ್ಳುತ್ತಿದ್ದರು. ಭರತನಿಗೆ ಈ ವಿಷಯ ಕಿವಿಗೆ ಬಿದ್ದು ಆತ ಕೋಪಗೊಳ್ಳಲಿಲ್ಲ. ಅವರಿಗೆ ತನ್ನ ಶಕ್ತಿಯ ಮನವರಿಕೆ ಮಾಡಲು ಒಂದು ಉಪಾಯ ಹೂಡಿದ. ಕಿರುಬೆರಳಿಗೆ ಬೇನೆ ಬಂದು ಅದು ಡೊಂಕಾದಂತೆ ನಟಿಸಿದ. ಯಾರ್‍ಯಾರು ಏನೇನು ತಂತ್ರಮಂತ್ರ ಮದ್ದು ಮಾಡಿದರೂ ವಾಸಿಯಾಗಲಿಲ್ಲ. ಜಟ್ಟಿಗಳು ಚಿನ್ನದ ಸರಪಳಿ ಕಟ್ಟಿ ಜಗ್ಗಿದರೂ ಬೆರಳು ನೆಟ್ಟಗಾಗಲಿಲ್ಲ. ಒಮ್ಮೆ ಹೀಗೆ ಜಗ್ಗುತ್ತಿದ್ದಾಗ ವಿನೋದಕ್ಕಾಗಿ ಭರತೇಶ ಬೆರಳು ಸಡಿಲಬಿಟ್ಟ. ಸರಪಳಿ ಹಿಡಿದೆಳೆಯುತ್ತಿದ್ದವರೆಲ್ಲ ದಿಂಡುರುಳಿ ಹೊರಳಿದರು. ಎಲ್ಲರಿಗೂ ನಗೆ. ಭರತೇಶನೆಂಥ ಪರಾಕ್ರಮಿಯೆಂದು ಎಲ್ಲರಿಗೂ ದಿಗ್ಭ್ರಮೆ. ಇದು ರತ್ನಾಕರನ ಹಾಸ್ಯದ ಒಂದು ತುಣುಕು.

ತ್ರಿಪದಿಯನ್ನು ಅಪ್ರತಿಮವಾದ ರೀತಿಯಲ್ಲಿ ಬಳಸಿರುವ ಸರ್ವಜ್ಞನ ಹಾಸ್ಯದ್ದು ನಿರ್ದಾಕ್ಷಿಣ್ಯದ ಬಣ್ಣ. ಬೊಮ್ಮವನು ಅರಿದಿಹರೆ ಸುಮ್ಮನಿದ್ದಿರಬೇಕು, ಬೊಮ್ಮವನರಿದು ಉಸುರಿದರೆ ಕಳಹೋಗಿ ಕೆಮ್ಮಿದಂತಕ್ಕು ಹೋಲಿಕೆಯು, ಸಹಜ ಹಾಸ್ಯವಿದೆ. ಗಣಿಕೆಯ ಮೂಗಿನಲಿ ಮೊಣಕಾಲು ಹುಟ್ಟಿಹುದು ಎಂಬಲ್ಲಿ ತೃಣನುಂಡು ನೀರಣುಣಲೊಲ್ಲದಂತದಕೆ ಎಣಿಕೆಯಿಲ್ಲ ಎಂಬುದರಲ್ಲಿ ಒಗಟೆಯ ಚಮತ್ಕಾರವನ್ನು ಕಾಣಬಹುದು. ಆಲದಾ ಬಿಳಲಂತೆ ಜೋಲು ಜಡೆಗಳ ಬಿಟ್ಟು ನಾಲಗೆ, ಕೌಪ ಶುದ್ಧಿಲ್ಲ ಮರಿನಾಯ ಬಾಲದಂತಕ್ಕು- ಎಂಬುದು ಬೂಟಾಟಿಕೆಯ ಜನರ ಬಗ್ಗೆ ಹಾಸ್ಯಬೆರೆತ ಭರ್ತ್ಸನೆ. ತೊಗೆಯಿಲ್ಲದೂಟ ಸಂಪಿಗೆಯಿಲ್ಲದೆಲೆತೋಟ ನಗೆಯಿಲ್ಲದವಳ ಒಡನಾಟ ಬೆರಣಿಯ ಹೊಗೆಯ ಕುಡಿದಂತೆ - ಎಂಬುದು ಸರ್ವಜ್ಞನ ನಿರ್ಣಯ. ನಗೆಯ ಎಲ್ಲ ಮೆಟ್ಟಿಲುಗಳನ್ನೂ ವಿಡಂಬನೆಯ ಎಲ್ಲ ಸೋಪಾನವನ್ನೂ ನಾವು ಸರ್ವಜ್ಞನಲ್ಲಿ ಕಾಣಬಹುದು.

ಹರಿದಾಸ ಸಾಹಿತ್ಯ ತರಂಗಿಣಿಯಲ್ಲಿ ಹಾಸ್ಯದ್ದೇ ಒಂದು ದೊಡ್ಡ ಕವಲು. ಹಾಸ್ಯ ವಿಡಂಬನಗಳ ಎಲ್ಲ ಪ್ರಕಾರಗಳೂ ಇಲ್ಲಿ ಮೈವೆತ್ತಿವೆ. ರಾಗಿ ತಂದೀರ್‍ಯಾ, ಭಿಕ್ಷಕ್ಕೆ ರಾಗಿ ತಂದೀರ್‍ಯಾ? ಯೋಗ್ಯರಾಗಿ ಭೋಗ್ಯರಾಗಿ ಭಾಗ್ಯವಂತರಾಗಿ ನೀವು ಎಂಬುದರಲ್ಲಿನ ಶ್ಲೇಷೆ ಅಸದೃಶ. ತುರುಕರು ಕರೆದರೆ ಉಣಬಹುದಣ್ಣಾ, ತುರುಕರು ಕರೆದರೆ ಅತಿ ಪುಣ್ಯವಣ್ಣಾ ಎಂಬುದರಲ್ಲಿ ಧ್ವನಿಯೂ ಉಂಟು. ನಿಂದಕರಿರಬೇಕು, ಹಂದಿಯಿದ್ದರೆ ಕೇರಿ ಹ್ಯಾಂಗೆ ಶುದ್ಧವೋ ಹಾಂಗೆ ಎನ್ನುವ ಮಾತಿನಲ್ಲಿ ಚುರುಕು ಹೆಚ್ಚು. ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲವೊಂದಿದ್ದರೆ ಸಾಕೋ ಎಂಬುದು ಸರಸ ಬೆರೆತ ಸವಾಲು. ದಾಸರ ಹಾಸ್ಯ ಬಲು ವಿಸ್ತಾರ.

ಕನ್ನಡದ ಹಳೆ-ಹೊಸ ಹುಟ್ಟುಗಳ ನಡುಗಡ್ಡೆಯ ಮೇಲೆ ನಿಂತಿರುವ ಮುದ್ದಣ ಹಾಸ್ಯಪ್ರಿಯ. ಬಾಳಿನ ನೋವನ್ನು ನುಂಗಿ ನಗುವುದು ಇವನ ಸ್ವಭಾವ. ರಾಮಾಶ್ವಮೇಧದ ಪುಟಪುಟದಲ್ಲೂ ಪುಟಿಯುವ ಮುದ್ದಣ ಮನೋರಮೆಯರ ಸರಸ ಸಂಭಾಷಣೆಯಲ್ಲಿ ಮೃದುಹಾಸ್ಯವನ್ನು ಯಥೇಷ್ಟವಾಗಿ ಸವಿಯಬಹುದು. ಅನ್ಯಥಾ ನೀರಸವೆನಿಸಬಹುದಾದ ಆ ಗದ್ಯಕಾವ್ಯಕ್ಕೆ

ಹೊಸತನದ ಮೆರುಗು ತಂದಿರುವುದು ಹಾಸ್ಯವೇ, ಅದರೊಳಗೂ ಭವತಿ ಭಿಕ್ಷಾಂದೇಹಿ ಎಂಬ ಸಪ್ತಾಕ್ಷರೀ ಮಂತ್ರದ ಪ್ರಸಂಗದಲ್ಲಿ ಬೆಡಗೂ ಚಮತ್ಕಾರವೂ ಇವೆ; ಆಧುನಿಕ ಸಣ್ಣಕಥೆಯಲ್ಲಿನಂತೆ ಕೊನೆಯ ವರೆಗೂ ಬೆಳೆಸುವ ಕುತೂಹಲದ ಮಾದರಿಯ ತಂತ್ರವಿದೆ. ಮುದ್ದಣ ತನ್ನ ಪ್ರಿಯತಮೆಯಾದ ಮನೋರಮೆಯನ್ನು ಕೊನೆಯ ತನಕವೂ ಕಾಡಿಸಿ ಯಥಾಸಾವಕಾಶವಾಗಿ ಆಕೆಯ ಕುತೂಹಲವನ್ನು ತಣಿಸುವ ಉತ್ತರ ನೀಡಿದಾಗ ಹುಸಿಗೋಪ ಬೆರೆತ ನಗುವಿನ ಅಲೆಗಳೇ ಅಪ್ಪಳಿಸುತ್ತವೆ. ಇಂಥ ಹಾಸ್ಯದಲ್ಲಿ ಮುದ್ದಣನಿಗೆ ಯಾರೂ ಸಾಟಿಯಿಲ್ಲ.

ಜನಪದ ಸಾಹಿತ್ಯಕ್ಕೂ ಸರಸಹಾಸ್ಯಕ್ಕೂ ನಿತ್ಯಗಂಟು. ದೇಹದ ವಿಕಾರ, ಸನ್ನಿವೇಶದ ವೈಪರೀತ್ಯ, ಲೋಕಾಚಾರ, ಸಂಸಾರದ ಸೊಬಗು ಮುಂತಾದ ನಾನಾ ಸಂದರ್ಭಗಳಿಗೊಪ್ಪುವ ಹಾಸ್ಯದ ಹಾಡುಗಳು ಇಲ್ಲಿ ಅಸಂಖ್ಯಾತ. ಗಾದೆಗಳಲ್ಲಂತೂ ನಗೆಯ ನಾನಾ ಪ್ರಕಾರಗಳನ್ನೇ ಕಾಣಬಹುದು. ಅಂಗೈಯಲ್ಲಿ ಕೈಲಾಸವನ್ನು ತೋರುವ ಸಾಹಸಪ್ರಯತ್ನಗಳಿವು.

ಹಿಂದಿನ ಕೃತಿಕಾರರಲ್ಲಿ ಹಾಸ್ಯ ಅಲ್ಲೊಮ್ಮೆ ಇಲ್ಲೊಮ್ಮೆ ಇಣುಕು ಹಾಕುತ್ತಿತ್ತು ಅಷ್ಟೆ. ನವರಸಗಳಲ್ಲಿ ಹಾಸ್ಯವೂ ಒಂದಾದ್ದರಿಂದ, ಜೀವನದಲ್ಲಿ ಹಾಸ್ಯವೂ ಬೆರೆತಿರುವುದರಿಂದ ಅದೂ ಪ್ರಕಟವಾಗಬೇಕಾದ್ದು ಅನಿವಾರ್ಯ. ಆದರೆ ಶೃಂಗಾರವೀರಕರುಣಾದ್ಭುತಗಳೇ ಮುಂತಾದ ರಸಗಳನ್ನು ಮುಖ್ಯೋದ್ದೇಶವಾಗಿಟ್ಟುಕೊಂಡು ರಚಿಸಿದ ಕೃತಿಗಳು ಇದ್ದಂತೆ ಹಾಸ್ಯ ಪ್ರಧಾನವಾದ ಕೃತಿಗಳು ಹಿಂದೆ ಇರಲಿಲ್ಲವೆಂದೇ ಹೇಳಬೇಕು. ಹಾಸ್ಯಭರಿತ ಸನ್ನಿವೇಶವನ್ನೋ ವ್ಯಕ್ತಿಯನ್ನೋ ಕಂಡು ಚಿತ್ರಿಸುತ್ತಿದ್ದುದುಂಟಾದರೂ ಪ್ರತಿಯೊಂದು ಸನ್ನಿವೇಶದಲ್ಲೂ ಹಾಸ್ಯವನ್ನು ಕಾಣುವ ದೃಷ್ಟಿಗೇ ಅಷ್ಟಾಗಿ ಪ್ರಾಧಾನ್ಯ ನೀಡಲಿಲ್ಲ. ಕಾದಂಬರಿ, ಕಥೆ, ಹರಟೆ, ಕವನಗಳೇ ಮುಂತಾದವು ಹಲವು ಪ್ರಕಟವಾಗಿವೆ. ದಿನ, ವಾರ, ಮಾಸಪತ್ರಿಕೆಗಳೂ ಹಲವು ಪ್ರಕಟನ ಸಂಸ್ಥೆಗಳೂ ಅಚ್ಚಿನ ಮನೆಯ ನೆರವಿನಿಂದ ಹಲವಾರು ಲೇಖಕರ ಕೃತಿಗಳನ್ನು ಹೊರತರುತ್ತಿರುವ ಈ ಕಾಲದಲ್ಲಿ ಇವನ್ನೆಲ್ಲ ವೈಜ್ಞಾನಿಕವಾಗಿ ವಿಂಗಡಿಸಿ, ವಿಶ್ಲೇಷಣೆ ಮಾಡಿ ವಿವೇಚನೆ ನಡೆಸುವುದು ಕಷ್ಟ ಸಾಧ್ಯವೇ ಸರಿ. ಇಲ್ಲಿ ಮುಖ್ಯವಾಗಿ ಪ್ರಮುಖ ಹಾಸ್ಯ ಲೇಖಕರನ್ನೂ ಅವರ ಹಾಸ್ಯ ಪ್ರವೃತ್ತಿಗಳನ್ನೂ ಗುರುತಿಸಬಹುದಾಗಿದೆ.

ಕನ್ನಡದಲ್ಲಿ ಮೊಟ್ಟ ಮೊದಲು ಸ್ವತಂತ್ರ ಕಾದಂಬರಿಯನ್ನು ಸೃಷ್ಟಿಸಿದವರಲ್ಲಿ ಎಂ.ಎಸ್. ಪುಟ್ಟಣ್ಣನವರೊಬ್ಬರು. ಇವರ ಮಾಡಿದ್ದುಣ್ಣೋ ಮಹಾರಾಯದಲ್ಲಿ ಲೇಖಕರಿಗೆ ಹಾಸ್ಯ ಹಸ್ತಗತವಾಗಿದೆ. ಸ್ವಭಾವ ವೈಚಿತ್ರ್ಯ, ಕುರೂಪ, ಅಸಂಬದ್ಧ ಸನ್ನಿವೇಶ ಇವುಗಳ ಸುತ್ತಲೂ ಹಾಸ್ಯದ ತರತಮಗಳೂ ವ್ಯಂಗ್ಯವೈವಿಧ್ಯಗಳೂ ಮಾಲೆಮಾಲೆಯಾಗಿ ಹಬ್ಬಿವೆ. ಈ ಕಾದಂಬರಿಯ ಒಂದು ಪಾತ್ರವಾದ ನಕಲಿ ನಾರಣಪ್ಪನಿಗೆ ನಗಿಸುವುದೇ ನಿರಂತರ ಹವ್ಯಾಸ. ಆತನ ಪಂಚಾಂಗ ವೀಕ್ಷಣೆಯ ಪ್ರಮಾದ ಒಂದು ಉದಾಹರಣೆ. ಪ್ರಮಾದ ಸಂವತ್ಸರವಾದ್ದರಿಂದ ಪ್ರಮಾದಗಳು ನಡೆಯುವಂಥಾದ್ದು; ಮಾರ್ಗಶಿರ ಬಹುಳ ಪಂಚಮಿಯಾದ್ದರಿಂದ ಮಾರ್ಗ ದಾರಿಯಲ್ಲಿ ಹೋಗತಕ್ಕವರ ತಲೆಯು ಬಹುಳ ಎಂದರೆ ವಿಶೇಷವಾಗಿ, ಪಂಚಮಿ ಎಂದರೆ ಪಂಚತ್ವ ಅಥವಾ ಮರಣವನ್ನು ಹೊಂದುವುದು. ಇಲ್ಲಿ ಶಬ್ದಗಳನ್ನೇ ಅರೆದು, ವಿಚಿತ್ರಾರ್ಥಗಳನ್ನು ಹೊರಡಿಸಿ, ಹಾಸ್ಯವನ್ನು ಹಿಂಡುವ ಪ್ರಯತ್ನವನ್ನು ಕಾಣಬಹುದು. ಆದರೂ ಆಧುನಿಕ ಕನ್ನಡ ಗದ್ಯಸಾಹಿತ್ಯದಲ್ಲಿ ಮೊಟ್ಟ ಮೊದಲಿಗೆ ಹಾಸ್ಯಕ್ಕೂ ಎತ್ತರದ ಸ್ಥಾನವನ್ನು ಕಲ್ಪಿಸಿಕೊಟ್ಟ ಕೀರ್ತಿ ಪುಟ್ಟಣನವರದು.

ಆರ್.ನರಸಿಂಹಾಚಾರ್ಯರು ಕರ್ಣಾಟಕ ಕವಿಚರಿತೆಗಷ್ಟೇ ಪ್ರಸಿದ್ಧರಲ್ಲ. ಅವರು ಬರೆದ ನಗೆಗಡಲಿನ ವಸ್ತುವೇನೆಂಬುದು ಅದರ ಹೆಸರಿನಲ್ಲೇ ವ್ಯಕ್ತವಾಗುತ್ತದೆ. ಗಾಂಪರೊಡೆಯರ ಮತ್ತು ಅವರ ಶಿಷ್ಯರ ಪ್ರತಾಪಗಳಲ್ಲಿ ಕಾಣುವುದು ಹುಚ್ಚು ಹಾಸ್ಯ, ಚುಚ್ಚು ಹಾಸ್ಯ, ಪೆದ್ದು ತನದ ಲೇವಡಿ. ಜನಪದ ಸಾಹಿತ್ಯದಲ್ಲಿಯ ಜಂತದಕ್ಕಯ್ಯ ಕಥೆ, ಮಂಕುಭಟ್ಟನ ಕಥೆ, ಕಪಿ ಹಾರಿದ ಕಥೆ, ಹೆಂಟೆಗೊದ್ದನ ಕಥೆ ಮುಂತಾದುವುಗಳ ಪರಂಪರೆಗೆ ಇದು ಸೇರಿದ್ದೆನ್ನಬಹುದು. ಅಂತೆಯೇ ತೆನಾಲಿ ರಾಮಕೃಷ್ಣ ಮತ್ತು ಬೀರಬಲ್ಲನದೆನ್ನಲಾದ ಹಲವಾರು ಕಥೆಗಳು ಇಂಥ ಹಾಸ್ಯವನ್ನು ಕನ್ನಡಿಸಿವೆ. ಇವು ಸಂಬಂಧಪಟ್ಟ ವ್ಯಕ್ತಿಗಳನ್ನು ಕುರಿತ ಚತುರೋಕ್ತಿ ಸನ್ನಿವೇಶಗಳು.

ಪಂಜೆ ಮಂಗೇಶರಾಯರು ಮಕ್ಕಳಿಗೆಂದು ಬರೆದ ಕಥೆಗಳಲ್ಲಿ ತಿಳಿಹಾಸ್ಯವನ್ನು ಕಾಣಬಹುದು. ಹಳೆಯ ಸಬ್ ಎಸಿಸ್ಟಾಂಟನ ಸುಳ್ಳು ಡೈರಿಯಿಂದ ಎಂಬ ಇವರ ಒಂದು ಕಥೆ ಅತ್ಯುತ್ತಮ ಹಾಸ್ಯಕಥೆಗೆ ನಿದರ್ಶನವಾಗಿದೆ. ಶ್ರೀನಿವಾಸಕೃತ ರಂಗಪ್ಪನ ಕಥೆಗಳಂಥ ಹಲವಾರು ಕಥಾ ಶ್ರೇಣಿಗಳು ತಿಳಿ ಹಾಸ್ಯದ ಹೊನಲುಗಳು. ಈ ಹಾಸ್ಯ ಹಲವು ವೇಳೆ ಕಣ್ಣೀರು ಬೆರೆತಿದ್ದೂ ಆಗಿರುವುದುಂಟು. ವಿಡಂಬನೆಗೂ ಇಲ್ಲಿ ಕೊರತೆಯಿಲ್ಲ. ಕಥನ ಕವನಗಳಲ್ಲೂ ಭಾವಗೀತೆಗಳಲ್ಲೂ ಮಿಂಚುವುದು ಲಲಿತ ಮಧುರ ಹಾಸ್ಯ, ಶೀಲವಂತ ಜೀವಿ ಕಾಣುವ ಚೊಕ್ಕನುಡಿ. ಸನ್ನಿವೇಶ ಸಂಭಾವಿತರಲ್ಲೂ ಸುಳಿಯುವ ದುಷ್ಟ ಆಲೋಚನೆಗಳಿಗೆ ಯಥೋಚಿತ ಮುಚ್ಚುಮರೆ. ತಡೆತಡೆದು ಪುಟ್ಟ ಕಂತುಗಳಲ್ಲಿ ಹೊರಬೀಳುವ ನಗೆಯಿಂದ ಅಜೀರ್ಣವೆಂದೂ ಸಾಧ್ಯವಿಲ್ಲ.

ಕುವೆಂಪು ಅವರ ವಿಪುಲ ಸಾಹಿತ್ಯದಲ್ಲಿ ಹಾಸ್ಯಕ್ಕೇನೂ ಕೊರತೆಯಿಲ್ಲ. ಇವರ ಕಥೆ, ಕವನ, ಕಾದಂಬರಿ, ಸಣ್ಣಕಥೆ, ಪ್ರಬಂಧ, ಮಹಾಕಾವ್ಯಗಳಲ್ಲಿ ಹಾಸ್ಯ ರಸ ಹೆಚ್ಚು ಕಾವ್ಯಾತ್ಮಕವಾಗಿ ಪ್ರತಿಪಾದಿತವಾಗಿದೆ. ಮಲೆನಾಡಿನ ಚಿತ್ರಗಳು ಹಾಸ್ಯ ಕುತೂಹಲಗಳನ್ನು ಕೊನೆಯವರೆಗೂ ಕಾದಿರಿಸುವ ಪ್ರಬಂಧ ಸಂಕಲನ. ಬೊಮ್ಮನಹಳ್ಳಿ ಕಿಂದರಿಜೋಗಿ, ಮಕ್ಕಳಿಗಷ್ಟೇ ಅಲ್ಲ ದೊಡ್ಡವರಿಗೂ ಹಾಸ್ಯರಸವನ್ನು ಉಣಬಡಿಸುತ್ತದೆ. ಹೆಂಡತಿ ಹೊಲಿಯುತ್ತಿರುವ ಅಂಗಿಯನ್ನು ಕಂಡಾಗ ಕವಿ ಆಡುವ ಮಾತುಗಳು ಈ ರೀತಿ ಇವೆ:

ಬರಲಿರುವ ಕಂದಂಗೊ  
ಬಂದ ಕಂದಂಗೊ  
ಹೊಲಿಯುತಿರುವೀ ಅಂಗೀ  
ಆರಿಗರ್ಧಾಂಗಿ

- ಈ ಮಾತುಗಳು ಕವಿಯ ಹಾಸ್ಯವಿಧಾನ ಯಾವ ಮಟ್ಟದ್ದು ಎಂಬುದಕ್ಕೆ ಹೆಗ್ಗುರುತಾಗಿದೆ. ಮಹಾಕಾವ್ಯವಾದ ಶ್ರೀ ರಾಮಾಯಣ ದರ್ಶನಂನಲ್ಲಿ ಹಾಸ್ಯಕ್ಕೆ ಮೀಸಲಾದ ಪುಟಗಳ ಸಂಖ್ಯೆಯಂತೂ ಲೆಕ್ಕವಿಲ್ಲ. ನೆಲದಂತರಾಳದಲ್ಲಿ ಹರಿಯುತ್ತಿರುವ ಹೊನಲು ಅಲ್ಲಲ್ಲಿ ಮೇಲೆದ್ದು ಬಂದಂತೆ ಈ ಕಾವ್ಯದುದ್ದಕ್ಕೂ ಕಂಗೊಳಿಸುವ ಹಾಸ್ಯ ಪ್ರಕಾಗಳನ್ನೆಲ್ಲ ಪಟ್ಟಿಮಾಡಿದರೆ, ಈ ಕ್ಷೇತ್ರದಲ್ಲೂ ಕವಿಯ ಪ್ರತಿಭೆ ಎಂಥ'ದೆಂದು ವೇದ್ಯವಾಗುತ್ತದೆ. ಆಗಸದ ಚಂದ್ರ ಬೇಕೆಂದು ಹಟ ಹಿಡಿದು ಅಳುತ್ತಿದ್ದ ಪುಟ್ಟ ರಾಮನ ಮುಖಕ್ಕೆ ಮುದುಕಿಯೊಬ್ಬಳು ಕನ್ನಡಿಯನ್ನು ಹಿಡಿದು ಚಂದ್ರನನ್ನು ತೋರಿಸಿದ ಪ್ರಸಂಗದ ತಿಳಿಹಾಸ್ಯ, ಆ ಕನ್ನಡಿಯಂತುಟಾಕೆಯುಂ ಪ್ರತಿಬಿಂಬರೀತಿಯಂ ಕೈಗೊಂಡಳಾ ಜನದ ಮನದ ವಿಕೃತಿಗೆ ತನ್ನ ಮೆಯ್ ವಿಡಂಬನಮಪ್ಪವೋಲ್ ಎಂಬುದಾಗಿ ಕವಿ ಹೇಳಿರುವ ಮಂಥರೆಯ ವಿಕೃತಿ ವಕ್ರತೆಯ ರೂಪಿನ ಬಣ್ಣನೆಯಿಂದ ಉದ್ಭವಿಸುವಂಥ' ವಿಕಟಹಾಸ್ಯ, ರಾಮಲಕ್ಷ್ಮಣಸೀತೆಯರು ಚಿತ್ರಕೂಟದಲ್ಲಿದ್ದಾಗ ಬರುವ ನಗೆಗೆ ಮೀರಿದುದಾ ಧೂಮದೃಶ್ಯಂ ಎಂಬ ಸನ್ನಿವೇಶ - ಇವೆಲ್ಲ ಹಾಸ್ಯರಂಜಕವಾಗಿವೆ. ಇನ್ನು ಅವರ ಸರಳರಗಳೆಗಳಲ್ಲೂ ಕಥನಕವನಗಳಲ್ಲೂ ಭಾವಗೀತೆಗಳಲ್ಲೂ ಹಾಸ್ಯ ತೊರೆಯಾಗಿ ಹರಿದಿದೆ, ಮಡುಗಟ್ಟಿ ನಿಂತಿದೆ.

ಬೇಂದ್ರೆಯವರ ಹಾಸ್ಯದ್ದು ಇನ್ನೊಂದು ಪೀಳಿಗೆ. ಅದರಲ್ಲಿ ಅವರ ವ್ಯಕ್ತಿತ್ವದ ಮುದ್ರೆ ಹೆಚ್ಚು ನಿಚ್ಚಳ. ಬಿಚ್ಚುಮನದಿಂದ ಹಾಸ್ಯ ಕೊಚ್ಚುವುದು ಅವರ ಸ್ವಭಾವ. ಹಲವೊಮ್ಮೆ ಅದು ವಾಚ್ಯವೂ ಹರಿತವೂ ಆದೀತು. ಜನಪದದ ಮೆರುಗು ಈ ಹಾಸ್ಯದ ಇನ್ನೊಂದು ವೈಶಿಷ್ಟ್ಯ. ಹುಬ್ಬಳ್ಳಿಯುವನಿನ್ನೂ ಬರಲಿಲ್ಲವೆಂದು ಕಾದು ಕುಳಿತ ಹೆಣ್ಣು, ಬಳಿಯಲ್ಲಿ ನಲ್ಲನಿಲ್ಲದಾಗ ಕೈ ಗಲ್ಲ ಹಚ್ಚಿ ಕೂತ ಕನ್ನೆ ಮುಂತಾದ ಕವನಗಳ ಕಾಮುಕಸ್ತೂರಿಯ ಸೊನೆ ಬೆರೆತ ನಗೆಯಂತಿರಲಿ, ಹರಟೆಗಳಲ್ಲೂ ಅಣಕ ವಾಡುಗಳಲ್ಲೂ ಹರಿದಿರುವ ಹಾಸ್ಯಕ್ಕೂ ತುಂಬುಹೊಳೆಯ ಆವೇಶ. ಅವರ ನಿರಾಭರಣ ಸುಂದರಿಯೆಂಬುದು ಬಹುತೇಕ ಹಾಸ್ಯ ಬರೆಹಗಳೇ ಇರುವ ಪುಸ್ತಕ. ಕುಯ್ಯುಗುಡುವ ಭಟ್ಟರ ನಾಯಿಯ ವರ್ಣನೆ, ಕೇರಿಗೊಂದು ಕೆಮ್ಮುವ ಮುದುಕಿ ಇರಲೇಬೇಕೆಂಬ ವಿಚಿತ್ರ ವಾದ, ಈ ಜಗದ ಶುದ್ಧೀಕರಣಕ್ಕೆಂದು ಧ್ವಜವೆತ್ತಿ ಮೇಲಕ್ಕೆ ಹೊರಟಿರುವ ಕಸಪೊರಕೆ, ಹಕ್ಕಿ ಹಾರುತಿದೆ ನೋಡಿದಿರಾ ಎಂಬ ಕವನವನ್ನು ತಾವೇ ಅಣಕಿಸಿ ಬೆಕ್ಕು ಹಾರುತಿದೆ ನೋಡಿದಿರಾ? ಎಂದು ಕಟ್ಟಿದ ಪದ್ಯದ ಅಪ್ಪಟ ಹಾಸ್ಯ

ಇವುಗಳದೊಂದು ತೂಕವಾದರೆ, ಅವರ ಹುಚ್ಚಾಟ ಮತ್ತು ನಗೆಯ ಹೊಗೆ ನಾಟಕಗಳ ನಂಜುನಗೆಯದು ಇನ್ನೊಂದು ತೂಕ. ವಿಡಂಬನದ ನಾನಾ ಪದರಗಳನ್ನಿಲ್ಲಿ ಕಾಣಬಹುದು. ಕಾರಂತರ ಹಲವಾರು ಕಾದಂಬರಿಗಳಲ್ಲಿ ಸನ್ನಿವೇಶಜನ್ಯವಾದ ಹಾಸ್ಯದ ನೆಲೆಯೇ ಇದೆ. ಆದರೆ ದೇವದೂತರು, ಗ್ನಾನ ಮುಂತಾದವುಗಳಲ್ಲಿ ಜನರ ನಡೆನುಡಿಗಳಿಗೆ ಅವರು ನಗೆಯ ರಾವುಗನ್ನಡಿಯನ್ನೇ ಹಿಡಿದಿದ್ದಾರೆ. ಇಲ್ಲಿ ಬರುವ ಹಾಸ್ಯ ಬಲು ಹರಿತ. ಈ ವಿಡಂಬನ ನಗೆಹಲ್ಲಿಗೆ ತಮ್ಮ ಕತ್ತನೇ ಒಡ್ಡಿಕೊಂಡಿದ್ದರೂ ನಗುನಗುತ್ತಲೇ ಬಲಿಯಾಗುತ್ತಾರೆ. ವಿಡಂಬನಕ್ಕೆ ಹಾಸ್ಯಕ್ಕೆ ಇನ್ನೊಂದು ಹೆಸರು ಶ್ರೀರಂಗ. ಇವರ ಕೃತಿಗಳಲ್ಲಿ ಮಾತಿನ ಮಸೆದಾಟದಿಂದ, ಚತುರೋಕ್ತಿಯಿಂದ, ಶ್ಲೇಷೆಯ ಬಲದಿಂದ ಉಕ್ಕಿಬರುವ ಹಾಸ್ಯವೂ ಉಂಟು.

ಇದುವರೆಗೆ ಕನ್ನಡದ ಕೆಲವು ಪ್ರಧಾನ ಲೇಖಕರ ಕೃತಿಗಳಲ್ಲಿಯ ಹಾಸ್ಯವನ್ನು ಕುರಿತ ವಿವೇಚನೆ ಮಾಡಲಾಯಿತು. ಆದರೆ ಹಾಸ್ಯವನ್ನೇ ಪ್ರಧಾನ ಉದ್ಯೋಗವಾಗಿ ಮಾಡಿಕೊಂಡ ಲೇಖಕರ ಸಂಖ್ಯೆಗೇನೂ ಕನ್ನಡದಲ್ಲಿ ಕೊರತೆಯಿಲ್ಲ. ಕೈಲಾಸಂ ಅಂಥ'ವರಿಗೆ ಆದ್ಯಪುರುಷ. ತಿಪ್ಪಾರಳ್ಳಿಯ ಬೋರ, ಕೋಳೀಕೆ ರಂಗ ಮುಂತಾದ ನಗೆವಾಡುಗಳ ದೊಗಲೆ ಬಗಲೆಯನ್ನೂ ಟೊಳ್ಳು ಗಟ್ಟಿ, ಅಮ್ಮಾವ್ರ ಗಂಡ, ನಂಬ್ರಾಹ್ಮಣ್ಕೇ, ಬಂಡ್ವಾಳ್ವಿಲ್ಲದ್ಬಡಾಯಿ, ಹುತ್ತದಲ್ಲಿ ಹುತ್ತ ಮುಂತಾದ ನಾಟಕಗಳಲ್ಲಿ ಮಧ್ಯಮ ವರ್ಗದ ಒಂದು ಪಂಗಡದ ಜನರ ಮೇಲೆ ಹರಿಸಿದ ಹಾಸ್ಯದ ದೃಷ್ಟಿಯನ್ನೂ ನೋಡಿದಾಗ ಕೈಲಾಸಂ ಎಂಬುದು ಹಾಸ್ಯಕ್ಕೆ ಪರ್ಯಾಯ ಪದವೆಂದೇ ಹೇಳಬೇಕು. ಆಗಿನ ಕಾಲದ ವಿದ್ಯಾವಂತರೆನಿಸಿಕೊಂಡವರ ವೃತ್ತಗಳಲ್ಲಿ ಅತಿಯಾಗಿ ಬೆಳೆದಿದ್ದ ಇಂಗ್ಲಿಷ್ ಮೋಹವನ್ನೂ ಡಾಂಭಿಕತನವನ್ನೂ ಸಂಪ್ರದಾಯ ಮೌಢ್ಯವನ್ನೂ ದಾಸ್ಯ ಮನೋವೃತ್ತಿಯನ್ನೂ ಇವರಂತೆ ಬಯಲಿಗೆಳೆದವರು ಇನ್ನೊಬ್ಬರಿಲ್ಲ. ತಾವರೆಕೆರೆ ಪ್ರಬಂಧ ಸಂಕಲನದಲ್ಲೂ ಹಾಸ್ಯದ ಮೆರವಣಿಗೆಯೇ ನಡೆದಿದೆ. ಇವರ ಅನೇಕ ಬಿಡಿನುಡಿಗಳೂ ಹಾಸ್ಯದ ಊಟೆಗಳೇ. ಎಕ್ಕಡದಂತೆ ಇದ್ದೂ ಬೂಟ್ಸಿನಂತೆ ಕಟ್ಟಬಹುದಾದ ಚಪ್ಪಲಿಗೆ ಎಕ್ಕಡದ ಎಲಿಗೆನ್ಸೂ ಬೂಟ್ಸಿನ ಬಡಾಯಿಯೂ ಇದೆಯೆಂದು ವರ್ಣಿಸಿರುವ ಕೈಲಾಸಂ ಅವರ ನಗೆಗೆ ತುತ್ತಾಗಿರುವುದೆಲ್ಲ ಬಹಳ ಮಟ್ಟಿಗೆ ಈ ಬಗೆಯ ಮನಃಪ್ರವೃತ್ತಿಯೇ. ಅಳು-ನಗುಗಳ ನಡುಗೆರೆ ಎಷ್ಟು ಸಪೂರವೆಂಬುದನ್ನೂ ಕೈಲಾಸಂ ಅರಿತಿದ್ದವರು. ಆದ್ದರಿಂದಲೆ ಇವರ ನಗೆಯಲ್ಲಿ ವ್ಯಂಗ್ಯದ್ದು ನೂರಕ್ಕೆ ನಲವತ್ತು ಪಾಲಾದರೆ ಸಹಾನುಭೂತಿಯದು ಅರವತ್ತು ಪಾಲು. ಓದುಗರು ಸ್ವಲ್ಪ ಹೆಚ್ಚು ಹೊತ್ತು ತಮ್ಮ ಮನಸ್ಸನ್ನು ತಂಗಿಸಿದರೆ ಕಾಣುವುದು ನಗೆಯಲ್ಲ, ಕವಿಯ ಕಣ್ಣೀರು. ಹಲವೊಮ್ಮೆ ಇವರ ಹಾಸ್ಯ ಒರಟಾಗುವುದೂ ಉಂಟು. ಅತಿಯಾದ ಪ್ರಾಸ ಪ್ರಯೋಗವೂ ತಿಣುಕೂ ಬೇಸರ ಬರಿಸಬಹುದು. ಆದರೂ ಕೈಲಾಸಂ ಕನ್ನಡದ ಹಾಸ್ಯಚಕ್ರವರ್ತಿ. ಹಿಂದಿನ ನಾಟಕಗಳಲ್ಲಿ ವಿದೂಷಕನ ಸೆರಗಿಗೆ ಕಟ್ಟಿದ್ದ ಹಾಸ್ಯವನ್ನು ಬಿಡಿಸಿ ಭದ್ರಾಸನದ ಮೇಲೆ ಕುಳ್ಳಿರಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ.

ಕೈಲಾಸಂ ಪೀಳಿಗೆ ಬಲು ದೊಡ್ಡದು. ಇವರ ಅನಂತರ ಬಂದ ಅನೇಕ ನಾಟಕಕಾರರು ಇವರ ಪ್ರಭಾವದಿಂದ ಬಿಡಿಸಿಕೊಳ್ಳಲಾಗಲಿಲ್ಲ. ಅತಿಯೆನಿಸುವ ಮಟ್ಟಿಗೆ ಇವರು ಹಳೆಯ ಪ್ರಯೋಗಗಳನ್ನೇ ಬೆಳೆಸಿದರು. ಆದರೂ ತಮ್ಮತನವನ್ನೂ ಉಳಿಸಿಕೊಂಡ ಕೆಲವರ ಹೆಸರನ್ನಾದರೂ ಇಲ್ಲಿ ಹೇಳಬಹುದು. ಕ್ಷೀರಸಾಗರ, ಪರ್ವತವಾಣಿ, ಎ.ಎಸ್.ಮೂರ್ತಿ - ಇವು ಮೂರು ಹೆಸರುಗಳು. ಇದೇ ರೀತಿ ಶ್ರೀರಂಗರಿಂದ ಪ್ರಭಾವಿತರಾದವರೆಂದರೆ ಎನ್ಕೆ.ಕುಲಕರ್ಣಿ ಮತ್ತು ಬೇಂದ್ರೆ ಲಕ್ಷ್ಮಣರಾವ್.

ನಗೆಯನ್ನೇ ತಮ್ಮ ಲೇಖನದ ಕಸಬನ್ನಾಗಿ ಮಾಡಿಕೊಂಡ ಇನ್ನೊಬ್ಬರು ನಾ.ಕಸ್ತೂರಿ. ಇವರು ಹರಟೆಗಳನ್ನು ಹೊಸೆದಿದ್ದಾರೆ. ನಾಟಕಗಳನ್ನು ಬರೆದಿದ್ದಾರೆ. ಕವನಗಳನ್ನು ಕಟ್ಟಿದ್ದಾರೆ. ಪಡಿನುಡಿಗಳನ್ನು ಎರಚಾಡಿದ್ದಾರೆ. ಇಂಗ್ಲಿಷ್ ಹಾಸ್ಯದ ವಿಶ್ವರೂಪವನ್ನು ಕಂಡು ಅನುಭವಿಸಿ ಅದನ್ನು ಕನ್ನಡಿಸಿದ್ದಲ್ಲದೆ ಕನ್ನಡದಲ್ಲಿಯ ಹಾಸ್ಯಜಾಯಮಾನವನ್ನು ಗುರುತಿಸಿ ಇದನ್ನೂ ಅದನ್ನೂ ಸೇರಿಸಿ ಕಸಿ ಮಾಡಿ ಹೊಸದೊಂದು ಜಾತಿಯನ್ನೇ ಸೃಷ್ಟಿಸಿದ್ದಾರೆ. ಇವರು ಬರೆದ ಅಣಕವಾಡುಗಳೂ ಹಾಸ್ಯ ಪದ್ಯಗಳೂ ಅನೇಕ. ಇವರ ಅನರ್ಥಕೋಶ ಅತ್ಯಂತ ಪ್ರಸಿದ್ಧವಾಗಿದೆ.

ಹಾಸ್ಯಕ್ಕೇ ತಮ್ಮ ಲೇಖನಿಯನ್ನು ಮುಡಿಪು ಮಾಡಿದ ರಾ.ಶಿ. ಅವರು ಸ್ವತಃ ಕೃತಿರಚನೆ ಮಾಡಿದ್ದಲ್ಲದೆ ಹಾಸ್ಯ ಬರೆಹಗಾರರ ದೊಡ್ಡ ಪಡೆಯನ್ನೇ ಕಟ್ಟಿದರು. ಇವರು ಇಪ್ಪತ್ತೈದು ವರ್ಷ ನಡೆಸಿದ ಪತ್ರಿಕೆ ಕೊರವಂಜಿ ಇಂಗ್ಲಿಷ್‌ನ ಪಂಚ್ ಮಾದರಿಯದು. ದಾಶರಥಿ ದೀಕ್ಷಿತ್, ಟಿ.ಸುನಂದಮ್ಮ, ಅ.ರಾ.ಸೇ., ಅಷ್ಟಾವಕ್ರ, ಹಾ.ರಾ.ಮುಂತಾದ ಹಲವರು ಕೊರವಂಜಿಯ ಗರಡಿಯಲ್ಲಿ ತಯಾರಾದವರು. ವಿಕಟ ವಿನೋದಿನಿ, ವಿನೋದ ಇವು ಹಾಸ್ಯಕ್ಕೆ ಮೀಸಲಾದ ಇನ್ನೆರಡು ಪತ್ರಿಕೆಗಳು.

ರಾಜರತ್ನಂ, ನಾಡಿಗೇರ ಕೃಷ್ಣರಾಯ, ಬೀಚಿ ಅವರ ಹೆಸರು ಹೇಳದೆ ಕನ್ನಡ ಹಾಸ್ಯಸಾಹಿತ್ಯದ ಅವಲೋಕನ ಸಂಪೂರ್ಣವಾಗುವುದಿಲ್ಲ. ರತ್ನನ ಪದಗಳಲ್ಲಿ ಅಲ್ಲಲ್ಲಿ ಹಾಸ್ಯದ ಹರಳುಗಳನ್ನು ಚೆಲ್ಲಿರುವ ರಾಜರತ್ನಂ ಅವರ ನರಕದ ನ್ಯಾಯವೆಂಬ ನಾಟಕ ಹಳ್ಳಿಗರ ಮಾತಿನಲ್ಲಿ ಹೆಣೆದು ನೀಡಿದ ಹುಚ್ಚುಹಾಸ್ಯ. ಸತ್ಯವಾನ್ ಸಾವಿತ್ರಿಯರ ಕಥೆಯನ್ನು ರಾಜರತ್ನಂ ಇಲ್ಲಿ ಹಾಸ್ಯಗನ್ನಡಿಯಿಂದ ನೋಡಿದ್ದಾರೆ. ಸಾಹಿತ್ಯದ ನಾನಾ ವಕ್ರ ಬೆಳವಣಿಗೆಗಳನ್ನೂ ಅರ್ಥವಿಲ್ಲದ ಸಂಪ್ರದಾಯಗಳನ್ನೂ ಗೇಲಿ ಮಾಡಿರುವ ಮಹಾಕವಿ ಪುರುಷ ಸರಸ್ವತಿಯೊಂದು ವಿಡಂಬನ ಕೃತಿ. ಅರುಣೋದಯದ ಆದ್ಯ ಲೇಖಕರಲ್ಲೊಬ್ಬರಾದ ಕೆರೋಡಿ ಸುಬ್ಬರಾಯರ ಅನುಕೂಲ ಸಿಂಧು (1926) ಇನ್ನೊಂದು ವಿಡಂಬನ ಕಾವ್ಯ. ಇವರು ಬರೆದ ನಾಟಕದಲ್ಲಿ ಕೈಲಾಸಂ ಅವರಿಗೂ ಮೊದಲು 'ಕನ್ನಡಾಂಗ್ಲ' ಹಾಸ್ಯ ಭಾಷೆಯನ್ನು ಅತ್ಯಂತ ಸಮರ್ಥವಾಗಿ ಬಳಸಿಕೊಂಡಿದ್ದಾರೆ. ನಾಡಿಗೇರರು ತಮ್ಮ ನಗೆಬರಹಗಳಲ್ಲಿ ತಮ್ಮನ್ನೇ ಆದರೂ ಹಾಸ್ಯಕ್ಕೆ ಒಡ್ಡಿಕೊಂಡು ಓದುಗರನ್ನು ನಗೆಯ ಅಲೆಯಡಿಯಲ್ಲಿ ಮುಳುಗಿಸಿ ತೇಲಿಸುವ ಹವ್ಯಾಸದಲ್ಲಿ ತೊಡಗಿದ್ದಾರೆ. ಬೀಚಿಯವರ ಹಾಸ್ಯ ಹಲವೊಮ್ಮೆ ಹೆಚ್ಚು ಮಾರ್ಮಿಕ. ಅವರು ಬಣ್ಣಿಸುವ ತಿಂಮನ ತಲೆ ಯಾರದಾದರೂ ಆಗಿರಬಹುದು. ಅವರು ಸಿಡಿಸಿರುವ ಹಲವಾರು ನಗೆಹನಿಗಳಲ್ಲೂ ಹಾಸ್ಯಚಟಾಕಿಗಳಲ್ಲೂ ಕುಹಕ ಕಟಕಿ ಬೆಡಗು ಚುರುಕು ಚತುರತೆಗಳು ತುಂಬಿವೆ. ದಿನಕರ ದೇಸಾಯಿ, ಜಿ.ಪಿ.ರಾಜರತ್ನಂ, ಪರಮೇಶ್ವರಭಟ್ಟ, ಅಕಬರ ಅಲಿ, ವಿ.ಜಿ.ಭಟ್ಟ, ಎಚ್.ಎಸ್.ಬಿಳಿಗಿರಿ, ಬಿ.ಆರ್.ಲಕ್ಷ್ಮಣರಾವ್, ಎಚ್.ದುಂಡಿರಾಜ್, ಜರಗನಹಳ್ಳಿ ಶಿವಶಂಕರ್, ಮುಂತಾದವರು ಬರೆದಿರುವ ಚುಟುಕುಗಳು ಹನಿಗವನಗಳು, ಮಿನಿಗವನಗಳು, ಪದ್ಯಗಳು ಸಂಸ್ಕೃತದ ಚಾಟೂಕ್ತಿಗಳಂತೆ ಸರ್ವಜ್ಞನ ವಚನಗಳಂತೆ, ಇಂಗ್ಲಿಷಿನ ಎಪಿಗ್ರಂಗಳಂತಿವೆ. ಇವರಲ್ಲದೆ ಇತ್ತೀಚೆಗೆ ಕನ್ನಡದಲ್ಲಿ ಹಲವಾರು ಸಮರ್ಥ ಹಾಸ್ಯ ಲೇಖಕರೂ ಲೇಖಕಿಯರೂ ಸೃಷ್ಟಿಗೊಳ್ಳುತ್ತಿದ್ದಾರೆ. ಹಾಸ್ಯ ಸಾಹಿತ್ಯ ಹೆಚ್ಚು ವಿಪುಲವಾಗಿ ವೈವಿಧ್ಯತೆಯನ್ನು ಹೊಂದಿ ಬೆಳೆಯುತ್ತಿದೆ ಎಂಬುದು ಸಮಾಧಾನ ತರುವ ಸಂಗತಿಯಾಗಿದೆ.

ಕನ್ನಡದ ನಾನಾ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ನಗೆಹನಿಗಳು, ಪ್ರಬಂಧಗಳು, ರಾಜಕೀಯ ಟೀಕೆ ಟಿಪ್ಪಣಿಗಳನ್ನೊಳಗೊಂಡ ಲಘು ಬರೆಹಗಳು, ಪ್ರಶ್ನೋತ್ತರಗಳು, ಕುಹಕಡಿಗಳು, ಉರಿಗಾಳುಗಳು - ಇವುಗಳಲ್ಲಿ ಹಾಸ್ಯದಂದು ವಿಸ್ತೃತ ಶಬ್ದ ಭಂಡಾರವೇ ದಿನದಿನವೂ ಸೃಷ್ಟಿಯಾಗುತ್ತಿದೆ. ಆಧುನಿಕ ಕನ್ನಡದ ಹಾಸ್ಯ ಸಾಹಿತ್ಯ ಬಲು ದೊಡ್ಡ ಕುಟುಂಬ ಎಂಬ ಅಂಶ ಈ ಸಂಗತಿಗಳಿಂದ ಮನದಟ್ಟಾಗದಿರದು. (ನೋಡಿ: ಕನ್ನಡದಲ್ಲಿ ವಿಡಂಬನ ಸಾಹಿತ್ಯ). (ಎ.ಆರ್.ಎಂ.,ಎಚ್.ಎಸ್.ಕೆ.)

**ಕನ್ನಡ ನುಡಿ** : ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸುತ್ತಿರುವ ಕನ್ನಡದ ಚಳವಳಿಗಾಗಿ ಮೀಸಲಾದ ಮಾಸ ಪತ್ರಿಕೆ.

ಬಿ.ಎಂ.ಶ್ರೀಯವರ ಅಪೇಕ್ಷೆಯಂತೆ 1938 ಅಕ್ಟೋಬರ್ ತಿಂಗಳಲ್ಲಿ ಅ.ನ.ಕೃ. ಅವರ ಸಂಪಾದಕತ್ವದಲ್ಲಿ ಕನ್ನಡ ನುಡಿ ವಾರಪತ್ರಿಕೆಯಾಗಿ ಜನ್ಮ ತಾಳಿತು. 1949ರಲ್ಲಿ ಪಕ್ಷಪತ್ರಿಕೆಯಾಯಿತು. 1950 ಆಗಸ್ಟ್‌ನಿಂದ ಮಾಸಪತ್ರಿಕೆಯಾಗಿ ಪರಿವರ್ತಿತವಾಯಿತು. 1969 ನವೆಂಬರಿನಿಂದ ಮತ್ತೆ ಪಕ್ಷಪತ್ರಿಕೆಯಾಯಿತು. 1991ರಿಂದ ಪುನಃ ಮಾಸಪತ್ರಿಕೆಯಾಗಿ ಪ್ರಕಟಗೊಳ್ಳುತ್ತಿದೆ. ಅ.ನ.ಕೃಷ್ಣರಾಯ, ಬಿ.ವೆಂಕೋಬ ರಾವ್, ಬಿ.ಎಂ.ಶ್ರೀ., ಎಂ.ಜಿ.ನಂಜುಂಡಾರಾಧ್ಯ, ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರಿ, ಎಸ್.ಕೃಷ್ಣಶರ್ಮ, ಡಿ.ಸಿ.ಸುಬ್ಬರಾಯಪ್ಪ, ವಿ.ಸೀ., ಸಿ.ಕೆ.ವೆಂಕಟರಾಮಯ್ಯ, ಎಂ.ಆರ್.ಶ್ರೀ., ಎಂ.ವಿ.ಸೀತಾರಾಮಯ್ಯ, ಬಿ.ಶಿವಮೂರ್ತಿಶಾಸ್ತ್ರೀ, ಡಿ.ಆರ್.ರಾಮಯ್ಯ, ಜಿ.ವೆಂಕಟಸುಬ್ಬಯ್ಯ, ಹಿ.ಮ.ನಾಗಯ್ಯ, ಅನಂತ ಪದ್ಮನಾಭರಾವ್, ರಾಮಣ್ಣ ಕೋಡಿಹೊಸಹಳ್ಳಿ, ಡಿ.ವಿ.ನಾಗರಾಜು, ಸಿ.ಸಿದ್ದಲಿಂಗಪ್ಪ, ಚಂದ್ರಕಾಂತ ಪಡೇಸೂರ,

ಜಿ.ವಿ.ಶಿವಸ್ವಾಮಿ, ಅ.ರಾ.ಚಂದ್ರಹಾಸಗುಪ್ತ, ಐ.ಎಂ.ವಿಠ್ಠಲಮೂರ್ತಿ, ಸಾ.ಶಿ.ಮರುಳಯ್ಯ, ವಿಜಯಾಸುಬ್ಬರಾಜ್, ನಲ್ಲೂರು ಪ್ರಸಾದ, ಅಗ್ರಹಾರ ಕೃಷ್ಣಮೂರ್ತಿ, ಟಿ.ಸಿ.ಪೂರ್ಣಿಮಾ, ಎಚ್.ಎಸ್.ಪಾರ್ವತಿ, ಸಿ.ಕೆ.ಪರಶು ರಾಮಯ್ಯ, ಎಚ್.ಪಿ.ಫಿಲೋಮಿನಾ, ವರದಾ ಶ್ರೀನಿವಾಸ್, ಎಸ್.ವಿ.ಶ್ರೀನಿವಾಸರಾವ್ ಮೊದಲಾದವರು ಕನ್ನಡ ನುಡಿಯ ಸಂಪಾದಕರಾಗಿದ್ದರು. ಮಹದೇವ ಪ್ರಕಾಶ್ ಈಗಿನ ಸಂಪಾದಕರು (2005).

ಕನ್ನಡ ನುಡಿಯಲ್ಲಿ ಕನ್ನಡ ಸಾಹಿತ್ಯ ಸಂಸ್ಕೃತಿಗಳಿಗೆ ಮತ್ತು ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ಸರ್ವಜನೋಪಯುಕ್ತ ಲೇಖನಗಳು ಬರುತ್ತವೆ. ಪರಿಷತ್ತು ನಡೆಸುವ ಸ್ಪರ್ಧೆಗಳಲ್ಲಿ ಬಹುಮಾನ ಪಡೆದ ಪ್ರಬಂಧಗಳೂ ಸಣ್ಣಕಥೆಗಳೂ ಏಕಾಂಕ ನಾಟಕಗಳೂ ಪ್ರಕಟವಾಗುತ್ತವೆ. ದತ್ತಿಗಳಿಂದಲೂ ವಿಶೇಷೋತ್ಸವಗಳಲ್ಲೂ ನಡೆಯುವ ಉಪನ್ಯಾಸಗಳ ಸಂಗ್ರಹವನ್ನು ಕೊಡಲಾಗುತ್ತದೆ. ಪ್ರಾಚೀನ ಸಾಹಿತ್ಯದ ಉದ್ಗ್ರಂಥಗಳ ಪರಿಚಯ, ಆಧುನಿಕ ಸಾಹಿತ್ಯದ ಉತ್ತಮ ಕೃತಿಗಳ ಪರಿಚಯ, ವೈಜ್ಞಾನಿಕ ವಿಚಾರ, ಕಾವ್ಯಾವಲೋಕನ, ಅಂಗಸಂಸ್ಥೆಗಳಾದ ಕರ್ನಾಟಕ ಸಂಘಗಳ ಕಾರ್ಯಕಲಾಪಗಳ ಸುದ್ದಿಗಳಿರುತ್ತವೆ. ಮಾಸ್ತಿಯವರು ಕನ್ನಡ ನುಡಿ ಪರಿಷತ್ತಿನ ತಕ್ಕುದೊಂದು ಮುಖವಾಗಬೇಕೆಂದೂ ಬಿ.ಎಂ.ಶ್ರೀಯವರು ಅದು ಕರ್ನಾಟಕದ ಗೆಸೆಟಿಯರ್ ಆಗಬೇಕೆಂದೂ ಆಶಿಸಿದ್ದರು. ಅದರಂತೆ ಕನ್ನಡ ನುಡಿಯ ಅನೇಕ ಸಂಪುಟಗಳು ಹೊರಬಂದಿವೆ.

ದ.ಕೃ. ಭಾರದ್ವಾಜ, ಸ.ಸ.ಮಾಳವಾಡ, ಬಿ.ಶಿವಮೂರ್ತಿಶಾಸ್ತ್ರೀ, ವೆಂಕಟೇಶ ಸಾಂಗಲಿ ಮೊದಲಾದವರು ಕೀರ್ತಿವಂತ ಕನ್ನಡಿಗರು, ಕನ್ನಡನುಡಿಯ ಭಕ್ತರು ಮುಂತಾದ ಶೀರ್ಷಿಕೆಗಳ ಅಡಿಯಲ್ಲಿ ಚಿತ್ರಿಸಿರುವ ವ್ಯಕ್ತಿಚಿತ್ರಗಳು, ಶಿಲಾಶಾಸನ, ಕನ್ನಡಿಗರ ಜೀವನ ಕುರಿತ ತಿ.ತಾ. ಶರ್ಮರ ಲೇಖನಗಳು, ಅ.ನ.ಕೃ. ಬರೆದ ಸಂಗೀತಗಾರರ ಮತ್ತು ಚಿತ್ರಕಲಾವಿದರ ನೆನಪುಗಳು, ರೋರಿಕ್ ಸಂದರ್ಶನಾರ್ಥ ಎಂಬ ಲೇಖನ ಮಾಲಿಕೆ, ನನ್ನ ಜೀವನ ದರ್ಶನ ಎಂಬ ಶೀರ್ಷಿಕೆಯಲ್ಲಿ ಜಿ.ಪಿ.ರಾಜರತ್ನಂ ಹಾಗೂ ಅಡಿಗರ ಲೇಖನಗಳು ವಿಚಾರಪೂರ್ಣವಾಗಿವೆ. ಭಾಷಾವಿಹಾರ, ಪದಶುದ್ಧಿ ಎಂಬ ಶಿರೋನಾಮೆಯ ಬರೆಹಗಳಲ್ಲಿ ಡಿ.ಎಲ್.ನರಸಿಂಹಾಚಾರ್, ಪಿ.ಬಿ.ದೇಸಾಯಿ, ಶಂ.ಬಾ.ಜೋಶಿ, ದ.ರಾ.ಬೇಂದ್ರೆ, ಎ.ಕೆ.ಪುಟ್ಟರಾಮು ಮೊದಲಾದವರು ಶಬ್ದಜಿಜ್ಞಾಸೆ ನಡೆಸಿದ್ದಾರೆ. ಮುದ್ರಣನಿಗೆ ಸಂಬಂಧಿಸಿದಂತೆ 1944ರಲ್ಲಿ ಪ್ರಕಟಗೊಂಡಿರುವ ಎರಡು ಹೇಳಿಕೆಗಳು, 1947ರಲ್ಲಿ ಕನ್ನಡ ಲಿಪಿ ಸುಧಾರಣೆಯ ವಿಷಯವಾಗಿ ಬಿ.ಎಂ.ಶ್ರೀ., ದೇವುಡು, ಕಾಶಿಯ ಜಂಗಮವಾಡಿ ಮಠದ ಶರ್ಮರು ನಡೆಸಿರುವ ಚರ್ಚೆ, ಹುಲ್ಲೂರು ಶ್ರೀನಿವಾಸ ಜೋಯಿಸರು ಬರೆದಿರುವ ಕನ್ನಡದ ಊರುಗಳು ಎಂಬ ಲೇಖನಗಳೂ ಸೀಬಯ್ಯ, ಬಿ.ಆರ್.ಶೇಷಾಚಾರ್ ಮೊದಲಾದವರ ವಿಜ್ಞಾನ ಲೇಖನಗಳೂ ಕನ್ನಡ ನುಡಿಯಲ್ಲಿ ಪ್ರಕಟವಾಗಿ ಜನಪ್ರಿಯತೆ ಗಳಿಸಿವೆ.




ಕನ್ನಡ ನುಡಿಯ ವಿಶೇಷ ಸಂಚಿಕೆಗಳಲ್ಲಿ 1957ರ ಸನ್ಮಾನೋತ್ಸವ ಸಂಚಿಕೆ ಮತ್ತು 1963ರಲ್ಲಿ ಪ್ರಕಟವಾದ ಒಂದು ನೂರು ಪುಟಗಳ ಬೆಳ್ಳಿ ಸಂಚಿಕೆ, ರವೀಂದ್ರ ಸಂಚಿಕೆ, ಕುವೆಂಪು ಲೇಖನಮಾಲೆ, ಎಂ.ಆರ್.ಶ್ರೀ ಬಾಷ್ಪಾಂಜಲಿ ಸಂಚಿಕೆ (1953), ತೀ.ನಂ.ಶ್ರೀ. ಸ್ಮರಣ ಸಂಚಿಕೆ (1966), ಡಿ.ಎಲ್.ಎನ್.ಸ್ಮರಣ ಸಂಚಿಕೆ (1971), ತಿ.ತಾ.ಶರ್ಮ ಮತ್ತು ಸಿದ್ಧವನಹಳ್ಳಿ ಕೃಷ್ಣಶರ್ಮರ ಸ್ಮರಣ ಸಂಚಿಕೆ (1974)- ಇವು ಮುಖ್ಯವಾದವು. ಸಾಹಿತ್ಯ ಸಮ್ಮೇಳನಗಳ ನೆನಪಿಗೆ ಪ್ರಕಟವಾಗುವ ಕನ್ನಡ ನುಡಿಯ ವಿಶೇಷಾಂಕಗಳು ವೈಶಿಷ್ಟ್ಯ ಪೂರ್ಣವಾಗಿವೆ. (ಎ.ಆರ್.ಎಂ.)

**ಕನ್ನಡ ಪುಸ್ತಕ ಪ್ರಾಧಿಕಾರ :** ಕರ್ನಾಟಕ ಸರ್ಕಾರದಿಂದ 1993 ಅಕ್ಟೋಬರ್ 20ರಂದು ಅಸ್ತಿತ್ವಕ್ಕೆ ಬಂದ ಸ್ವಾಯತ್ತ ಸಂಸ್ಥೆ. ಪುಸ್ತಕ ಸಂಸ್ಕೃತಿಯನ್ನು ಹುಟ್ಟುಹಾಕುವುದು, ಬೆಳೆಸುವುದು ಹಾಗೂ ಪರಿಚಲನೆಗೊಳಿಸುವುದು ಇದರ ಉದ್ದೇಶ. ವಿಶೇಷವಾಗಿ ಕನ್ನಡದಲ್ಲಿ ಲೇಖಕ, ಪ್ರಕಾಶಕ, ಮಾರಾಟಗಾರ ಹಾಗೂ ಓದುಗರ ನಡುವಿನ ಸಂಬಂಧವನ್ನು ಹೆಚ್ಚಿಸುವುದೂ ನಾಡಿನಾದ್ಯಂತ ವಾಚಕರಿಗೆ ಒಳ್ಳೆಯ ಗ್ರಂಥಗಳು ಸುಲಭ ಬೆಲೆಗೆ ದೊರೆಯುವಂತೆ ನೋಡಿಕೊಳ್ಳುವುದೂ ಈ ಮೂಲಕ ಕನ್ನಡ ಪುಸ್ತಕೋದ್ಯಮ ಪ್ರಪಂಚವನ್ನು ಜನಪರಗೊಳಿಸುವುದೂ ಇದರ ಆಶಯಗಳು. ಕನ್ನಡ ಪುಸ್ತಕ ಪ್ರಕಾಶಕರ ಆರ್ಥಿಕ ಹಾಗೂ ಬೌದ್ಧಿಕ ಶ್ರಮಕ್ಕೆ ನೆರವಾಗುವ ಸಲುವಾಗಿ ಆಯಾ ವರ್ಷ ಪ್ರಕಟಗೊಂಡ ಪುಸ್ತಕಗಳ ಸಗಟು ಖರೀದಿ ಮಾಡುವುದು, ಖರೀದಿಸಿದ ಕೃತಿಗಳನ್ನು ನಾಡಿನ ಸಾರ್ವಜನಿಕ ಗ್ರಂಥಾಲಯಗಳಿಗೂ ಶಾಲೆ-ಕಾಲೇಜು ಹಾಗೂ ಸಂಘ ಸಂಸ್ಥೆಗಳಿಗೂ ವಿತರಿಸುವುದು, ಭಾಷೆ, ಸಾಹಿತ್ಯ, ಸಂಸ್ಕೃತಿ, ಕಲೆ, ವಿಜ್ಞಾನ, ಮಾನವಿಕ ಮುಂತಾದ ವಿವಿಧ ಜ್ಞಾನ ಶಿಸ್ತುಗಳಲ್ಲಿ ಪರಿಣತರಾದ ವಿದ್ವಾಂಸರಿಂದ ಪುಸ್ತಕಗಳನ್ನು ಬರೆಸುವುದು, ಯುವ ಪ್ರತಿಭೆಗಳನ್ನು ಗುರುತಿಸಿ ಅವರ ಕೃತಿಗಳ ಪ್ರಕಟಣೆಗಾಗಿ ಧನಸಹಾಯ, ಸಾಲ, ಅನುದಾನ ಹಾಗೂ ಬಹುಮಾನಗಳನ್ನು ನೀಡಿ ಅವರಿಗೆ ಉತ್ತೇಜನ ನೀಡುವುದು, ಸರ್ಕಾರಿ, ಅರೆ ಸರ್ಕಾರಿ, ವಿಶ್ವವಿದ್ಯಾಲಯ ಹಾಗೂ ಖಾಸಗಿ ಸಂಘಸಂಸ್ಥೆಗಳ ಸಹಕಾರದೊಂದಿಗೆ ಪುಸ್ತಕೋದ್ಯಮದ ಆಂದೋಲನಕ್ಕೆ ಅಗತ್ಯವಾದ ಕಾರ್ಯಕ್ರಮಗಳನ್ನು ರೂಪಿಸಿ ಈ ಉದ್ಯಮವನ್ನು ವಿಸ್ತರಿಸುವುದೂ ಪ್ರಾಧಿಕಾರದ ಆಶಯವಾಗಿದೆ. ಈ ಹಿನ್ನೆಲೆಯಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರ ಕೆಲವು ಯೋಜನೆಗಳನ್ನು ರೂಪಿಸಿಕೊಂಡಿದೆ.

**1 ಪುಸ್ತಕ ಪ್ರಕಟಣೆ:** ವಿಷಯದ ಸಂವಹನದ ದೃಷ್ಟಿಯಿಂದ ಕೃತಿ ಸರಳವಾಗಿದ್ದು ಅದನ್ನು ಕೊಂಡು ಓದುವ ಹಾಗೆ ಮಾಡಬೇಕೆಂಬ ದೃಷ್ಟಿಯಿಂದ ಅಗ್ಗದ ಬೆಲೆಯಲ್ಲಿ ಸುಲಭವಾಗಿ ದೊರೆಯುವಂತೆ ಮಾಡುವ ಜನಪ್ರಿಯ ಪುಸ್ತಕ ಮಾಲೆ, ಎಲ್ಲರೂ ಕಡ್ಡಾಯವಾಗಿ ತಿಳಿದುಕೊಳ್ಳಲೇ ಬೇಕಾದ ವಿಷಯಗಳನ್ನೊಳಗೊಂಡ ಮೂಲಭೂತ ಶೈಕ್ಷಣಿಕ ಮಾಲೆ, ವೈಜ್ಞಾನಿಕ ವಿಚಾರಗಳನ್ನು ಒಳಗೊಂಡ ವಿಜ್ಞಾನ ದೀಪಮಾಲೆ, ವಿಶೇಷವಾಗಿ ಮಕ್ಕಳ ಮನಸ್ಸನ್ನು ಅರಳಿಸಬಲ್ಲ ಹಾಗೂ ಅವರ ಪ್ರತಿಭೆಯನ್ನು ಉದ್ದೀಪನಗೊಳಿಸಬಲ್ಲ ಮಕ್ಕಳ ಪುಸ್ತಕ ಮಾಲೆ, ಪಂಪ ಪ್ರಶಸ್ತಿ ಪುರಸ್ಕೃತ ಸಾಹಿತಿಗಳ ಕೃತಿಗಳನ್ನು ಪ್ರಕಟಿಸುವ ಪಂಪ ಪ್ರಶಸ್ತಿ ಕೃತಿ ಮಾಲೆ, ನೋಬೆಲ್ ಪುರಸ್ಕೃತ ಸಾಹಿತ್ಯಮಾಲೆ, ಜಾನಪದ ಸಂಸ್ಕೃತಿಯನ್ನು ಬಿಂಬಿಸುವ ಜಾನಪದ ಮಾಲೆಗಳು ಈ ನಿಟ್ಟಿನಲ್ಲಿ ಕೆಲವು ಮುಖ್ಯ ಪ್ರಯತ್ನಗಳು. ಗ್ರಾಮ ಸಂಸ್ಕೃತಿ ಮಾಲೆ, ಸಾಮಾನ್ಯರಿಗೆ ಕಾನೂನು ಮಾಲೆಗಳ ಅಡಿಯಲ್ಲಿ ಅನೇಕ ಕೃತಿಗಳನ್ನೂ ಅನುವಾದಗಳನ್ನೂ ಪ್ರಕಟಿಸಲಾಗುತ್ತಿದೆ.

**2 ಪುಸ್ತಕ ಸಗಟು ಖರೀದಿ ಮತ್ತು ಕೊಡುಗೆ:** ಕನ್ನಡದಲ್ಲಿ ಪ್ರಕಟವಾಗುವ ಎಲ್ಲ ಪ್ರಥಮಾವೃತ್ತಿ ಗ್ರಂಥಗಳನ್ನು ಸಗಟಾಗಿ ಖರೀದಿಸಿ ಲೇಖಕ ಪ್ರಕಾಶಕರಿಗೆ ನೆರವು ನೀಡುವುದು, ಹೀಗೆ ಖರೀದಿಸಿದ ಗ್ರಂಥಗಳನ್ನು ನಾಡಿನ ಸಾರ್ವಜನಿಕ ಗ್ರಂಥಾಲಯಗಳಿಗೂ ದಲಿತ ಮತ್ತು ಹಿಂದುಳಿದ ವರ್ಗಗಳು ಹಾಗೂ ಗ್ರಾಮೀಣ ಪ್ರದೇಶದ ಖಾಸಗಿ ಶಿಕ್ಷಣ ಸಂಸ್ಥೆಗಳಿಗೂ ಸಾಹಿತ್ಯ ಪರಿಷತ್ತಿನ ಗ್ರಂಥಾಲಯಕ್ಕೂ ಹೊರನಾಡಿನ ಕನ್ನಡ ಸಂಘ ಸಂಸ್ಥೆಗಳು ಸ್ಥಾಪಿಸಿದ ಗ್ರಂಥಾಲಯಗಳಿಗೂ ಉಚಿತವಾಗಿ ವಿತರಿಸುವುದು ಈ ಯೋಜನೆಯ ಮೂಲೋದ್ದೇಶ.

**3 ಪುಸ್ತಕ ಪ್ರಕಟಣೆ ಸಹಾಯ :** ಉದಯೋನ್ಮುಖ ಬರೆಹಗಾರರಿಗೆ ಮತ್ತು ಉತ್ತಮ ಲೇಖಕರಿಗೆ ಪ್ರೋತ್ಸಾಹ ನೀಡುವ ಸಲುವಾಗಿ ಲೇಖಕರ ಮೊದಲ ಪುಸ್ತಕ ಪ್ರಕಟಣೆಗಾಗಿ ಆರ್ಥಿಕ ನೆರವು ನೀಡಲಾಗುತ್ತದೆ. ಅಪರೂಪವೂ ಅಲಭ್ಯವೂ ಆದ ಗ್ರಂಥಗಳನ್ನೂ ಮಕ್ಕಳ ಕೃತಿಗಳನ್ನೂ ಪ್ರಾಧಿಕಾರವೇ ಪ್ರಕಟಿಸುವುದರ ಜೊತೆಗೆ ಖಾಸಗಿ ಪ್ರಕಾಶಕರಿಗೆ ವಿವಿಧ ರೂಪದ ಆರ್ಥಿಕ ಸಹಾಯ ನೀಡಲಾಗುತ್ತದೆ. ಹಾಗೆಯೇ ಸೃಜನೇತರ ಸಾಹಿತ್ಯ ಪ್ರಕಾರಗಳಾದ ಜಾನಪದ, ವಿಜ್ಞಾನ, ಇತಿಹಾಸ, ಸಂಶೋಧನಾತ್ಮಕ ಕೃತಿಗಳಿಗೆ ಸಹಾಯಧನ ನೀಡುವ ಯೋಜನೆಯೂ ರೂಪುಗೊಂಡಿದೆ.

**4 ಪುಸ್ತಕಗಳ ಪ್ರಚಾರ ಹಾಗೂ ಮೇಳ :** ವಿವಿಧ ಸಂಘ ಸಂಸ್ಥೆಗಳು ಹಾಗೂ ವಿಶ್ವವಿದ್ಯಾಲಯಗಳ ಸಹಯೋಗದೊಂದಿಗೆ ಪುಸ್ತಕ ಪ್ರದರ್ಶನ ಹಾಗೂ ಮಾರಾಟ ವ್ಯವಸ್ಥೆಯನ್ನು ಕೈಗೊಳ್ಳಲಾಗಿದೆ. ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಹಾಗೂ ಗಡಿಭಾಗಗಳಲ್ಲಿ ಪುಸ್ತಕ ಮಾರಾಟ ಆಂದೋಲನದ ಅಂಗವಾಗಿ ಒಂದುವಾರಕಾಲ ವಾರ್ಷಿಕ ಪುಸ್ತಕ ಮೇಳವನ್ನು ನಡೆಸಲಾಗುತ್ತದೆ. ಇದರಲ್ಲಿ ಎಲ್ಲ ಪುಸ್ತಕ ಪ್ರಕಾಶಕರನ್ನು ಬರಮಾಡಿಕೊಂಡು ಪುಸ್ತಕೋದ್ಯಮದ ಸಾಧಕ -ಬಾಧಕಗಳನ್ನು ಮನನ ಮಾಡಿಕೊಡುವುದೂ ಈ ಯೋಜನೆಯ ಉದ್ದೇಶವಾಗಿದೆ.

**5 ಸಂಚಾರಿ ಹಾಗೂ ಗ್ರಂಥ ಸರಸ್ವತಿ ಮಳಿಗೆಗಳು :** ರಾಜ್ಯದ ಪ್ರತಿ ಜಿಲ್ಲಾ ಕೇಂದ್ರದಲ್ಲೂ ಕನ್ನಡ ಪುಸ್ತಕಗಳ ಮಾರಾಟ ಹಾಗೂ ಪ್ರದರ್ಶನಕ್ಕಾಗಿ ಸಂಚಾರಿ ಪುಸ್ತಕ ಮಳಿಗೆಗಳನ್ನೂ ರಾಜ್ಯದ ಸರ್ಕಾರಿ ಬಸ್ ನಿಲ್ದಾಣಗಳಲ್ಲಿ ಗ್ರಂಥ ಸರಸ್ವತಿ ಹೆಸರಿನ ಮಳಿಗೆಗಳನ್ನೂ ಅನುಷ್ಠಾನಗೊಳಿಸಲಾಗಿದೆ. ಈಗಾಗಲೇ ದಾವಣಗೆರೆ ಬಸ್ ನಿಲ್ದಾಣದಲ್ಲಿ ಮಳಿಗೆ ಆರಂಭವಾಗಿದೆ. ಹಾಸನದಲ್ಲಿ ಸಂಸತ್ ಸದಸ್ಯರ ಅನುದಾನದಿಂದ ಮಳಿಗೆ ನಿರ್ಮಿಸುವ ಪ್ರಯತ್ನಗಳು ನಡೆಸಿವೆ. ಈ ಯೋಜನೆಯಿಂದ ಪುಸ್ತಕಗಳನ್ನು ವಾಚಕರಿಗೆ ಸುಲಭವಾಗಿ ಒದಗಿಸುವುದರ ಜೊತೆಗೆ ಕೆಲವರಿಗೆ ಸ್ವಾವಲಂಬಿ ಉದ್ಯೋಗಾವಕಾಶವನ್ನು ದೊರಕಿಸಿಕೊಡುತ್ತಿದೆ.

**6 ಪುಸ್ತಕ ಸಂಸ್ಕೃತಿ ಪ್ರಸಾರ ಪ್ರೋತ್ಸಾಹ :** ರಾಜ್ಯಾದ್ಯಂತ ವಿಚಾರ ಸಂಕಿರಣಗಳು, ಕಮ್ಮಟಗಳು, ಸಭೆಸಮಾರಂಭಗಳು ಹಾಗೂ ಸಂವಾದಗಳನ್ನು ಏರ್ಪಡಿಸುವುದರ ಮೂಲಕ ಪುಸ್ತಕ ಸಂಸ್ಕೃತಿಯ ಮಹತ್ವದ ಪರಿಚಯ ಮಾಡಿಕೊಡಲಾಗುತ್ತಿದೆ. ಸಗಟು ಹಾಗೂ ವಿಶೇಷ ಖರೀದಿ ಯೋಜನೆಯಡಿಯಲ್ಲಿ ಲೇಖಕ - ಪ್ರಕಾಶಕರಿಗೆ ಸಹಾಯ ಮಾಡುವುದು, ಅತ್ಯುತ್ತಮ ಪ್ರಕಾಶಕರನ್ನು ಗುರುತಿಸಿ 25 ಸಾವಿರ ರೂಪಾಯಿಗಳ ಮೊತ್ತ ಪ್ರಶಸ್ತಿ ನೀಡುವುದು - ಇವು ಕೂಡ ಪ್ರಾಧಿಕಾರದ ಕಾರ್ಯಭಾಗವಾಗಿದೆ. ಇದುವರೆಗೆ ಈ ಪ್ರಶಸ್ತಿಯನ್ನು ಬೆಂಗಳೂರಿನ ಕ್ರೈಸ್ಟ್ ಕಾಲೇಜು ಕನ್ನಡ ಸಂಘ (1998), ಮೈಸೂರಿನ ತಳುಕಿನ ವೆಂಕಣ್ಣಯ್ಯ ಸ್ಮಾರಕ ಪ್ರತಿಷ್ಠಾನ (1999), ಬೆಂಗಳೂರಿನ ಸಪ್ನಾ ಬುಕ್ ಹೌಸ್ (2000) ಮೈಸೂರಿನ ಸಂವಹನ ಮತ್ತು ಬಳ್ಳಾರಿಯ ಲೋಹಿಯಾ ಪ್ರಕಾಶನ ಸಂಸ್ಥೆಗಳು ಪಡೆದುಕೊಂಡಿವೆ (2003). ಅಚ್ಚುಕಟ್ಟಾಗಿ ಮುದ್ರಣಗೊಂಡ ಹಾಗೂ ಸೊಗಸಾದ ಮುಖಪುಟ ವಿನ್ಯಾಸವುಳ್ಳ ಕೃತಿಗಳಿಗೆ 15 ಸಾವಿರ ರೂಗಳ ಮೊದಲನೆಯ, 10 ಸಾವಿರ ರೂಗಳ ಎರಡನೆಯ ಹಾಗೂ 5 ಸಾವಿರ ರೂಗಳ ಮೂರನೆಯ ಬಹುಮಾನ ನೀಡಲಾಗುತ್ತಿದೆ. 5 ಸಾವಿರ ರೂಪಾಯಿಗಳ ಮೊತ್ತದ ಬಹುಮಾನವನ್ನು ವಿಶೇಷವಾಗಿ ಮಕ್ಕಳ ಪುಸ್ತಕಗಳಿಗಾಗಿಯೇ ಮೀಸಲಿರಿಸಲಾಗಿದೆ.

**7 ಪ್ರಾಧಿಕಾರದ ಪದಾಧಿಕಾರಿಗಳು :** ಒಬ್ಬರು ಅಧ್ಯಕ್ಷರು, ಹದಿಮೂರು ಮಂದಿ ಸದಸ್ಯರು ಮತ್ತು ಒಬ್ಬರು ಸಂಚಾಲಕರನ್ನು ಒಳಗೊಂಡಂತೆ ಪದಾಧಿಕಾರಿಗಳ ಸಮಿತಿಯ ರಚನೆಯಾಗಿರುತ್ತದೆ. ಪ್ರತಿ ಮೂರು ವರ್ಷಗಳ ಅವಧಿಗೆ ಅಧ್ಯಕ್ಷರು ಮತ್ತು ಸದಸ್ಯರನ್ನು ನೇಮಕಮಾಡಲಾಗುತ್ತದೆ. ಪುಸ್ತಕ ಚಿಂತಕರು, ಪುಸ್ತಕ ಪ್ರೇಮಿಗಳು ಹಾಗೂ ವಿದ್ವಾಂಸರನ್ನೊಳಗೊಂಡಂತೆ ಸರಕಾರದ ಆರ್ಥಿಕ ಇಲಾಖೆಯ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಮುದ್ರಣ ಮತ್ತು ಲೇಖನ ಸಾಮಗ್ರಿಗಳ ನಿರ್ದೇಶನಾಲಯದ ನಿರ್ದೇಶಕರು ಮತ್ತು ಕರ್ನಾಟಕ ಪುಸ್ತಕ ಪ್ರಕಾಶಕರ ಸಂಘ, ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರು ಈ ಸಮಿತಿಯ ಸದಸ್ಯರಾಗಿರುತ್ತಾರೆ. ಇದರ ಸಂಚಾಲಕತ್ವವನ್ನು ಪ್ರಾಧಿಕಾರದ ಆಡಳಿತಾಧಿಕಾರಿಗಳಿಗೆ ವಹಿಸಿಕೊಡಲಾಗಿರುತ್ತದೆ. *

**ಕನ್ನಡ ಪ್ರಭ :** ಬೆಂಗಳೂರಿನಿಂದ ಪ್ರಕಟವಾಗುತ್ತಿರುವ ದಿನಪತ್ರಿಕೆ. ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕಾ ಗುಂಪಿನ ಪ್ರದೇಶ ಭಾಷಾ ಪತ್ರಿಕೆ. 4 ನವೆಂಬರ್ 1967ರಂದು ಬೆಂಗಳೂರಿನಲ್ಲಿ ಆರಂಭವಾಯಿತು. ಎಸ್.ಎಸ್.ಸೀತಾರಾಮಶಾಸ್ತ್ರೀ ಮೊದಲ ಸಂಪಾದಕರು. ಅನಂತರ ಕ್ರಮವಾಗಿ ಕೆ.ಎಸ್.ರಾಮಕೃಷ್ಣಮೂರ್ತಿ, ಖಾದ್ರಿ ಶಾಮಣ್ಣ, ವೈ.ಎನ್.ಕೃಷ್ಣಮೂರ್ತಿ, ಕೆ.ಸತ್ಯನಾರಾಯಣ ಸಂಪಾದಕರಾಗಿದ್ದರು. ಕೆಲಕಾಲ ವಿ.ಎನ್.ಸುಬ್ಬರಾವ್ ಅವರು ಸಂಪಾದಕತ್ವ ನಿರ್ವಹಿಸಿದರು. ವೆಂಕಟನಾರಾಯಣ ಅವರು ಈಗಿನ ಸಂಪಾದಕರು (4 ನವೆಂಬರ್ 2001ರಿಂದ).

ಪತ್ರಿಕೆಯು ಪ್ರಥಮ ಸಂಚಿಕೆಯಲ್ಲಿ ತನ್ನ ಧ್ಯೇಯೋದ್ದೇಶಗಳನ್ನು ಕುರಿತು ಹೀಗೆ ಹೇಳಿದೆ: ನಾವು ಯಾವ ಪಕ್ಷಕ್ಕೂ ಸೇರಿದವರಲ್ಲ. ಜನಸಾಮಾನ್ಯರ ಬದುಕನ್ನು ಹಸನುಗೊಳಿಸಲು ಪ್ರಯತ್ನಪಡುವ ಎಲ್ಲರೊಡನೆ ನಾವು ಸಹಕರಿಸುತ್ತೇವೆ. ಜನಸಾಮಾನ್ಯರ ಯೋಗಕ್ಷೇಮ ಪಾಲನೆಯಲ್ಲಿ ನಿರತರಾಗುವವರೆಲ್ಲರ ಜತೆ ಶ್ರಮಿಸುತ್ತೇವೆ. ಇದಕ್ಕಿಂತ ಹಿರಿದಾದ, ಶ್ರೇಯಸ್ಕರವಾದ ಜನಸೇವೆಯಿಲ್ಲ, ನಾಡಸೇವೆಯಿಲ್ಲ, ಇದೇ ಪ್ರಜಾಧರ್ಮ. ಒಟ್ಟಿನ ಒಳಿತಿಗಾಗಿ ವ್ಯಕ್ತಿಯ ಹಿತವನ್ನಾಗಲಿ, ವ್ಯಕ್ತಿಯ ಹಿತಕ್ಕಾಗಿ ಒಟ್ಟಿನ ಒಳಿತನ್ನಾಗಲಿ ಕಡೆಗಣಿಸಲು ನಾವು ಒಪ್ಪೆವು. ಒಂದರಿಂದ ಮತ್ತೊಂದು ಸಾಧನೆಯಾಗಬೇಕು. ಒಂದು ಮತ್ತೊಂದಕ್ಕೆ ದಾರಿಯಾಗಬೇಕು. ಈ ಸಮಷ್ಟಿ ವ್ಯಷ್ಟಿಗಳ ಸಮರಸವನ್ನು ಎತ್ತಿ ಹಿಡಿಯಲು ನಾವು ಉದ್ಯುಕ್ತರಾಗುತ್ತೇವೆ.




'ಕನ್ನಡಪ್ರಭ'ಕ್ಕೆ ವಿಶ್ವದಾದ್ಯಂತ ವ್ಯಾಪಕವಾದ 'ಎಕ್ಸ್‌ಪ್ರೆಸ್ ನ್ಯೂಸ್ ಸರ್ವಿಸ್'ನ ವಿಶೇಷ ವ್ಯವಸ್ಥೆ ಹಾಗೂ ಅನುಕೂಲವಿದೆ. ದೈನಿಕ ಧಾರಾವಾಹಿ, ಕಾದಂಬರಿ, ವಿದ್ಯಾರ್ಥಿಗಳಿಗೆ ಉಪಯುಕ್ತವಾದ ವಿದ್ಯಾರ್ಥಿ ಮಾರ್ಗದರ್ಶಿಯನ್ನು ಪ್ರಾರಂಭಿಸಿದ ಮೊದಲ ಪತ್ರಿಕೆಯಿದು. ಕಿರಿಯರಿಗಾಗಿ ದೈನಿಕ 'ಜ್ಞಾನಪ್ರಭ', ಮಹಿಳೆಯರಿಗಾಗಿ 'ಮಹಿಳಾಪ್ರಭ' ಕೂಡ ಮೊದಲಿಗೆ ಪ್ರಾರಂಭಿಸಿದ್ದು 'ಕನ್ನಡಪ್ರಭ'ದ ಹೆಮ್ಮೆ. ಸುದ್ದಿಗೆ ಕೊಡುವಷ್ಟೇ ಪ್ರಾಮುಖ್ಯವನ್ನು ವಿಚಾರಕ್ಕೂ ಕೊಡುತ್ತ ಬಂದಿರುವುದು ಇದರ ವೈಶಿಷ್ಟ್ಯ.

ಸಿನಿಮಾ ರಂಗದ ವಿಚಾರಗಳಿಗಾಗಿಯೇ ವಿಶಿಷ್ಟ ಪುರವಣಿ 'ಚಿತ್ರಪ್ರಭ'ವನ್ನು ಕನ್ನಡ ಪತ್ರಿಕಾರಂಗದಲ್ಲಿ ಪ್ರಥಮವಾಗಿ ಕೊಟ್ಟಿದ್ದು ಕನ್ನಡ ಪ್ರಭವೇ. ಚಲನಚಿತ್ರೋದ್ಯಮದಲ್ಲಿ ಪ್ರಚಂಡ ಪರಿಣಾಮ ಬೀರಿದ ಪುರವಣಿ ಇದು. ಆರ್ಥಿಕ ಪುರವಣಿ, ವಿತ್ತಪ್ರಭ, ಜ್ಯೋತಿಷ್ಯವಿಚಾರ ಕುರಿತ ಜ್ಯೋತಿಷ್ಯಪ್ರಭ, ಕಾಲೇಜುರಂಗ, ಕರ್ನಾಟಕ ಕನ್ನಡಿ, ಉದ್ಯೋಗಪ್ರಭ, ಆರೋಗ್ಯ ವಿಶೇಷ ಪುಟಗಳು ಪ್ರಕಟವಾಗುತ್ತವೆ. ಸಾಪ್ತಾಹಿಕಪ್ರಭ ಅತ್ಯಂತ ಜನಪ್ರಿಯ ವಾರದ ಪುರವಣಿ. ಕನ್ನಡ ಪತ್ರಿಕಾರಂಗದಲ್ಲಿ ಪ್ರಥಮಬಾರಿಗೆ ಸಾಹಿತ್ಯ ವಿಮರ್ಶೆ ಕುರಿತ ಅಂಕಣ ಸಾಹಿತ್ಯಲೋಕ ಪ್ರಕಟಿಸಿದ ಕೀರ್ತಿ ಈ ಪತ್ರಿಕೆಯದು. ಧರ್ಮಜ್ಯೋತಿ, ಹತ್ತುದಿಕ್ಕು- ನೂರು ದನಿ, ನುಡಿ-ಕಿಡಿ, ಪತ್ರಕರ್ತರ ಡೈರಿ, ವರದಿಗಾರರ ಡೈರಿ, ಮುಖಾಬಿಲೆ, ಹಳ್ಳಿಕಟ್ಟೆ, ವಾರ್ಡ್ ವಾಚ್, ಬೆಳ್ಳಿತೆರೆ, ನೃತ್ಯ, ಸಮೀಪ ದರ್ಶನ, ಲೋಕ ಸಂಚಾರ, ಉತ್ತರ ದಿಕ್ಕು, ವಿಜ್ಞಾನ ವಿಹಾರ, ಗ್ರಾಹಕ ಜಾಗೃತಿ, ಸುದ್ದಿಮನೆ ಸಂವಾದ, ಸಮಕಾಲೀನ -ಇವು ಪ್ರಮುಖ ಅಂಕಣಗಳು. ಜನಸಾಮಾನ್ಯರಿಗಾಗಿ ನೀವು ಮತ್ತು ಕಾನೂನು ಅಂಕಣ ಆರಂಭಿಸಿದ ಮೊದಲ ಪತ್ರಿಕೆಯಿದು. ಇದೀಗ ಈ ಅಂಕಣಕ್ಕೆ 37 ವರ್ಷಗಳ ದೀರ್ಘ ಇತಿಹಾಸ. ಹೆಸರಾಂತ ನ್ಯಾಯವಾದಿ ಕೆ.ಪಿ.ರಾವ್ ಈ ಅಂಕಣಕಾರರು.

ಕಾಳಾವರ ನರಸಿಂಹಶೆಟ್ಟಿಯವರು ಬರೆಯುತ್ತಿದ್ದ ಓದು ಜನಮೇಜಯ, ಹಾ.ಮಾ.ನಾಯಕರ ಸಾಹಿತ್ಯಸಲ್ಲಾಪ, ವೈ.ಎನ್.ಕೆ. ಅವರ 'ವಂಡರ್ ಕಣ್ಣು', ಎನ್.ಎಸ್.ರಾಮಪ್ರಸಾದರ 'ದೆಹಲಿಯ ದಂತಗೋಪುರದಿಂದ', ಕೆ.ಸತ್ಯನಾರಾಯಣ ಅವರ 'ನಗರ ಪ್ರದಕ್ಷಿಣೆ' ಜನಪ್ರಿಯತೆ ಗಳಿಸಿದ್ದ ಇತರ ಅಂಕಣಗಳು. ವಿದ್ಯಾರ್ಥಿಗಳಿಗೆ ಉಪಯುಕ್ತವಾದ 'ವಿದ್ಯಾಕುಸುಮ', ಆರೋಗ್ಯ ಕುರಿತ ವಿಶೇಷ ಮಾಹಿತಿ ಒಳಗೊಂಡ 'ಆರೋಗ್ಯಭಾಗ್ಯ' ಹಾಗೂ ದೀಪಾವಳಿ ವಿಶೇಷಾಂಕಗಳು 'ಕನ್ನಡ ಪ್ರಭ'ದ ವಿಶೇಷ ಸಂಚಿಕೆಗಳು.

ಈ ಪತ್ರಿಕೆಯ ಪ್ರಸಾರ ಸಂಖ್ಯೆ ಸಾಮಾನ್ಯ ದಿನಗಳಲ್ಲಿ ಸು.82,000. ಭಾನುವಾರಗಳಂದು ಈ ಸಂಖ್ಯೆ 1,10,000 ದಾಟುತ್ತದೆ. ಈಗ ಬೆಳಗಾಂವಿ, ಶಿವಮೊಗ್ಗ ಹಾಗೂ ಮಂಗಳೂರು ಆವೃತ್ತಿಗಳು ಪ್ರಕಟವಾಗುತ್ತಿವೆ. (ಬಿಎಚ್ಎ.)

**ಕನ್ನಡ ಬೆರಳಚ್ಚು :** ಕನ್ನಡ ಬೆರಳಚ್ಚು ಯಂತ್ರವನ್ನು ರೂಪಿಸುವಲ್ಲಿ, ಇದರ ನಮೂನೆಯನ್ನು ತಯಾರಿಸಲು ಪ್ರಯತ್ನಪಟ್ಟವರಲ್ಲಿ ಬೆಂಗಳೂರಿನ ಮ.ನ.ಮೂರ್ತಿ, ಶಿವಮೊಗ್ಗದ ಕೆ.ಅನಂತಸುಬ್ಬರಾಯ, ಮೈಸೂರಿನ ನಾರಾಯಣಾಚಾರ್ಯ, ಕೇಶವ, ಚಿಕ್ಕಮಗಳೂರಿನ ಟಿ.ಎಲ್.ನಾರಾಯಣ ರಾಯ, ಚಿಟಗುಪ್ಪಿ, ಭದ್ರಾವತಿಯ ಎ.ನಾಗರಾಜರಾಯ, ಎಸ್.ಸುಬ್ಬರಾಯ ಮತ್ತು ಹೈದರಾಬಾದಿನ ತಿವಾರಿ ಎಂಬುವರ ಹೆಸರುಗಳನ್ನು ಉಲ್ಲೇಖಿಸಬಹುದು.



ಸು.1933ನೆಯ ಅಕ್ಟೋಬರ್‌ನಲ್ಲಿ ಮ.ನ.ಮೂರ್ತಿಯವರು ತಯಾರಿಸಿದ ಕನ್ನಡ ಬೆರಳಚ್ಚು ಯಂತ್ರ ಸರ್. ಎಂ.ವಿಶ್ವೇಶ್ವರಯ್ಯ ಮೊದಲಾದವರಿಂದ ಪ್ರಶಂಸೆಯನ್ನೂ ಬಹುಮಾನಗಳನ್ನೂ ಗಳಿಸಿತಾದರೂ ಅದರಲ್ಲಿ ಕೆಲವೊಂದು ದೋಷಗಳಿದ್ದುದರಿಂದ ಸುಧಾರಣೆ ಆವಶ್ಯವಿತ್ತು. ಆಗಲೇ ಎಸ್.ಸುಬ್ಬರಾಯರು, ಕೆ.ಅನಂತಸುಬ್ಬರಾಯರು, ಚಿಟಗುಪ್ಪಿಯವರು ಮತ್ತು ಎ.ನಾಗರಾಜರಾಯರು ಬೇರೆ ಬೇರೆಯಾಗಿ ಬೆರಳಚ್ಚು ಯಂತ್ರಗಳನ್ನು ತಯಾರಿಸಿದ್ದರು. ಈ ಮಧ್ಯೆ ದೋಷರಹಿತ ಪರಿಪೂರ್ಣ ಬೆರಳಚ್ಚು ಯಂತ್ರವನ್ನು ತಯಾರಿಸಲು ಲಿಪಿ ಸುಧಾರಣೆಯಾಗಬೇಕೆಂದು ತಜ್ಞರು ಅಭಿಪ್ರಾಯಪಟ್ಟರು. 1936ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಬಿ.ಎಂ.ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಲಿಪಿ ಸುಧಾರಣೆಯ ಬಗ್ಗೆ ಸಲಹೆ ನೀಡಲು ಒಂದು ಸಮಿತಿಯನ್ನು ರಚಿಸಿತ್ತು. ಆದರೆ ಕಾರಣಾಂತರದಿಂದ ಈ ದಿಕ್ಕಿನ ಕಾರ್ಯ ಮುಂದುವರಿಯಲಿಲ್ಲ.

ಸ್ವಾತಂತ್ರ್ಯ ಬಂದ ಅನಂತರ ರಾಜ್ಯ ಸರ್ಕಾರ ಬೆರಳಚ್ಚು ಯಂತ್ರ ನಿರ್ಮಾಣದಲ್ಲಿ ಆಸಕ್ತಿ ವಹಿಸಿತು. ಕೆ.ಹನುಮಂತಯ್ಯನವರು ಮುಖ್ಯಮಂತ್ರಿಗಳಾಗಿದ್ದ ಕಾಲದಲ್ಲಿ ತಿ.ತಾ.ಶರ್ಮರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿ ಸಲಹೆಗಳನ್ನು ಕೇಳಿತು. ಬೆರಳಚ್ಚು ಯಂತ್ರದ ತಯಾರಿಕೆಯ ವಿಷಯವನ್ನು ದೀರ್ಘವಾಗಿ ಚರ್ಚಿಸಿ, ಸಾರ್ವಜನಿಕರಿಂದ ಅಭಿಪ್ರಾಯಗಳನ್ನು ಸಮಿತಿ ಸಂಗ್ರಹಿಸಿತು. ಅನಂತರ ಸರ್ಕಾರಕ್ಕೆ ಸಲ್ಲಿಸಿದ ವರದಿಯಲ್ಲಿ ಲಿಪಿಸುಧಾರಣೆ ಇಲ್ಲದೆ ದೋಷರಹಿತವಾದ ಬೆರಳಚ್ಚು ಯಂತ್ರವನ್ನು ನಿರ್ಮಿಸುವುದು ಅಸಾಧ್ಯ ಎಂದು ಸಮಿತಿ ಅಭಿಪ್ರಾಯಪಟ್ಟಿತು. ಆದರೆ ಲಿಪಿ ಸುಧಾರಣೆ ಬಗ್ಗೆ ಸಾರ್ವಜನಿಕರಿಂದ ಪ್ರತಿಭಟನೆ ವ್ಯಕ್ತವಾದ್ದರಿಂದ ಸರ್ಕಾರ ಆ ಪ್ರಯತ್ನವನ್ನು ಕೈಬಿಟ್ಟಿತು. ಮುಂದೆ ಸರ್ಕಾರ ಕೆಲವೊಂದು ಕನ್ನಡ ಬೆರಳಚ್ಚುಗಳನ್ನು ಪರಿಶೀಲಿಸಿ 1958ರಲ್ಲಿ ಅನಂತಸುಬ್ಬರಾಯರು ನಿರ್ಮಿಸಿದ ಕನ್ನಡ ಬೆರಳಚ್ಚು ಮಾದರಿಯನ್ನು ಅಂಗೀಕರಿಸಿತು. ಸರ್ಕಾರದ ಕೋರಿಕೆಯ ಮೇರೆ ಸ್ವೀಡನ್ನಿನ ಹಾಲ್ಡಾ ಕಂಪನಿ ತಯಾರಿಸಿದ ಮೊದಲ ಕನ್ನಡ ಬೆರಳಚ್ಚು ಯಂತ್ರ 16 ಜೂನ್ 1961ರಂದು ಚಾಲನೆಗೆ ಬಂತು. ಇದರಲ್ಲಿ ಉಪಯೋಗಿಸಿದ ಕನ್ನಡ ಬೆರಳಚ್ಚಿನ ಫಲಕಕ್ಕೆ ಅನಂತ ಕೀ ಬೋರ್ಡ್ ಎಂದು ಹೆಸರಿಸಲಾಯಿತು. ಅನಂತ ಕೀ ಬೋರ್ಡ್ ಆಂಗ್ಲ ಬೆರಳಚ್ಚಿನ ಫಲಕದ ಆಧಾರದ ಮೇಲೆ ನಿರ್ಮಿಸಿರುವುದರಿಂದ ಮತ್ತು ಇದರಲ್ಲಿ 3 ಅಚಲಿತ ಕೀಗಳು ಮಾತ್ರ ಅಳವಡಿಸಿರುವುದರಿಂದ ಬಹಳ ಸುಲಭವಾಗಿ ಶೀಘ್ರವಾಗಿ ಕಲಿಯಲು ಅನುಕೂಲವಿದೆ.

ಸರ್ಕಾರ 1967ರಿಂದ ಕನ್ನಡ ಬೆರಳಚ್ಚಿನ ಪರೀಕ್ಷೆಗಳನ್ನು ನಡೆಸುತ್ತಿದೆ. ಇದಕ್ಕೆ ಪೂರಕವಾಗಿ ಕರ್ನಾಟಕದ ಅನೇಕ ವಾಣಿಜ್ಯ ಶಾಲೆಗಳಲ್ಲಿ ಸಾವಿರಾರು ವಿದ್ಯಾರ್ಥಿಗಳಿಗೆ ಇಂದು ಕನ್ನಡ ಬೆರಳಚ್ಚಿನ ತರಬೇತು ಲಭ್ಯವಾಗಿದೆ. ಹಾಲ್ಡಾ, ರೆಮಿಂಗ್‌ಟನ್ ಕಂಪನಿಯವರು ಈಗಾಗಲೇ ಅನೇಕ ಕನ್ನಡ ಬೆರಳಚ್ಚು ಯಂತ್ರಗಳನ್ನು ತಯಾರಿಸಿದ್ದು ಅವು ಉಪಯೋಗದಲ್ಲಿವೆ. ಗೋದ್ರೆಜ್ ಕಂಪನಿಯವರೂ ತಯಾರಿಕೆಯನ್ನು ಕೈಗೊಂಡಿದ್ದರು. ಆಡಳಿತದ ಎಲ್ಲ ಹಂತಗಳಲ್ಲೂ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ತರುವ ಉದ್ದೇಶದಿಂದ ಅದಕ್ಕೆ ಪೂರಕವಾಗಿ ರಾಜ್ಯದಲ್ಲೇ ಕನ್ನಡ ಬೆರಳಚ್ಚು ಯಂತ್ರವನ್ನು ತಯಾರಿಸುವತ್ತ ಕರ್ನಾಟಕ ಸರ್ಕಾರ ಕಾರ್ಯೋನ್ಮುಖವಾಗಿತ್ತು. ಆದರೆ ಡಿ.ಟಿ.ಪಿ. ಮುದ್ರಣ ವ್ಯವಸ್ಥೆ ಆವಿಷ್ಕಾರಗೊಂಡ ಮೇಲೆ, ಕಂಪ್ಯೂಟರ್ ಬಳಕೆಗೆ ಬಂದ ಮೇಲೆ ಬೆರಳಚ್ಚು ಯಂತ್ರಗಳ ಬಳಕೆ ಕ್ಷೀಣಿಸಿದೆ. (ಎಸ್.ಆರ್.ಎಸ್.)

**ಕನ್ನಡ ಭಾಷೆ :** ಭಾರತ ಸಂವಿಧಾನದ 8ನೆಯ ಅನುಚ್ಛೇದದಲ್ಲಿ ಮಾನ್ಯತೆ ಪಡೆದ 18 ಭಾಷೆಗಳಲ್ಲಿ (1992) ಒಂದಾಗಿಯೂ ಕರ್ನಾಟಕದ ಮನೆಮಾತಾಗಿಯೂ ಇರುವ ಕನ್ನಡ ಭಾಷೆ ದ್ರಾವಿಡ ಭಾಷಾ ಪರಿವಾರದ ನಾಲ್ಕು ಪ್ರಮುಖ ಭಾಷೆಗಳಲ್ಲೊಂದು. ಸುಮಾರು ಒಂದೂವರೆಸಾವಿರ ವರ್ಷಗಳ ಸಾಹಿತ್ಯ ಹಾಗೂ ಶಿಲಾಶಾಸನಗಳ ಚರಿತ್ರೆಯನ್ನು ಹೊಂದಿರುವ ಈ ಭಾಷೆ ಸುಸಂಸ್ಕೃತ ಜನಾಂಗವೊಂದರ ಆಡುನುಡಿಯಾಗಿಯೂ ಸಾಹಿತ್ಯ ರಚನೆಗೆ ಮಾಧ್ಯಮವಾಗಿಯೂ ವಿಕಾಸಗೊಂಡು ವಿಶ್ವಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆಗಳನ್ನು ಸಲ್ಲಿಸಿದೆ.

1991ರ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿ 2,97,75,374 ಜನರ ಮಾತೃಭಾಷೆ ಕನ್ನಡ. ಭಾರತದಲ್ಲಿ 3,25,90,177 ಜನರಿಗೆ ಇದು ಮಾತೃಭಾಷೆ. ಕರ್ನಾಟಕದಲ್ಲೇ ಅಲ್ಲದೆ ಕರ್ನಾಟಕದ ಗಡಿಯಾಚೆಗಿರುವ ಕಾಸರಗೋಡು, ಮಂಜೇಶ್ವರ, ಸೊಲ್ಲಾಪುರ, ಅಕ್ಕಲಕೋಟೆ, ಹೊಸೂರು, ತಾಳವಾಡಿ, ಆದವಾನಿ ಮುಂತಾದ ಪ್ರದೇಶಗಳಲ್ಲಿಯೂ ಮುಂಬಯಿ, ಚೆನ್ನೈ, ದೆಹಲಿ, ಕೋಲ್ಕತ, ಹೈದರಾಬಾದು ಮುಂತಾದ ಪ್ರಮುಖ ಪಟ್ಟಣಗಳಲ್ಲಿಯೂ ಕನ್ನಡವನ್ನು ಮಾತೃಭಾಷೆಯನ್ನಾಗುಳ್ಳವರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಇದಲ್ಲದೆ ಇತರ ಮಾತೃಭಾಷೆಗಳನ್ನಾಡುವ ಜನರಲ್ಲೂ ಸಾಕಷ್ಟು ಜನ ಕನ್ನಡವನ್ನು ತಮ್ಮ ಎರಡನೆಯ ಭಾಷೆಯಾಗಿ ಮಾತನಾಡುವವರಿದ್ದಾರೆ. ಈ ಲೇಖನದಲ್ಲಿ ಕನ್ನಡ ಭಾಷೆಯ ವೈಶಿಷ್ಟ್ಯವನ್ನೂ ಅದು ಚಾರಿತ್ರಿಕವಾಗಿ ಕಾಲಘಟ್ಟಗಳಲ್ಲಿ ಬೆಳೆದು ಬಂದ ಬಗೆಯನ್ನೂ ಸ್ಥೂಲವಾಗಿ ಸಮೀಕ್ಷಿಸಲಾಗಿದೆ.

ಕನ್ನಡ ಎಂಬ ಶಬ್ದ ಈ ಭಾಷೆಯ ಹೆಸರನ್ನು ಸೂಚಿಸುವಂತೆ ಈ ಭಾಷೆಯನ್ನಾಡುವ ಜನ ವಾಸಿಸುವ ಪ್ರದೇಶವನ್ನೂ ಸೂಚಿಸುತ್ತಿತ್ತೆಂದು ಹಲವು ಆಧಾರಗಳಿಂದ ತಿಳಿದುಬರುತ್ತದೆ. ಈ ಶಬ್ದದ ರೂಪನಿಷ್ಪತ್ತಿಯ ವಿಚಾರದ ಬಗ್ಗೆ ಸಾಕಷ್ಟು ಚರ್ಚೆ ನಡೆದಿದೆ (ನೋಡಿ: ಕರ್ನಾಟಕ, ಪದವ್ಯುತ್ಪತ್ತಿ). ಕನ್ನಡ ಭಾಷೆ ಮೂಲದ್ರಾವಿಡದಿಂದ ಕವಲೊಡೆದು ಯಾವ ಶತಮಾನದಿಂದ ಸ್ವತಂತ್ರಭಾಷೆಯಾಗಿ ಪರಿವರ್ತನೆಗೊಂಡಿತು ಎಂದು ನಿಶ್ಚಿತವಾಗಿ ಹೇಳುವುದು ಸಾಧ್ಯವಿಲ್ಲ. ವೇದಗಳ ಕಾಲದಿಂದಲೂ ಕನ್ನಡ ಭಾಷೆ ಪ್ರಚಾರದಲ್ಲಿತ್ತೆಂದು ಊಹಿಸಲು ಕೆಲವು ಆಧಾರಗಳುಂಟು. ಛಾಂದೋಗ್ಯ ಉಪನಿಷತ್ತಿನಲ್ಲಿರುವ ಚೆನ್ (ಚಂದ್ರ), ಮಟಚಿ (ಮಿಡತೆ) ಮೊದಲಾದ ಶಬ್ದಗಳು ಕನ್ನಡದವೆಂದು ಕೆಲವಿದ್ವಾಂಸರ ತಿಳಿವಳಿಕೆ. ಪದ್ಮ ಹಾಗೂ ಮಾರ್ಕಂಡೇಯ ಪುರಾಣಗಳಲ್ಲಿ ಕರ್ನಾಟಕದ ಪ್ರಸ್ತಾಪವಿದೆ. ಭಾರತದ ಪ್ರಾಚೀನ ಮಹಾಕಾವ್ಯಗಳಾದ ರಾಮಾಯಣ ಮಹಾಭಾರತಾದಿ ಗ್ರಂಥಗಳಲ್ಲಿ ಬರುವ ವಿವರಗಳಿಂದಲೂ ಕ್ರಿಸ್ತಶಕ ಎರಡನೆಯ ಶತಮಾನದ ಶಿಲಪ್ಪದಿಗಾರಂ ಎಂಬ ತಮಿಳು ಗ್ರಂಥದಲ್ಲಿ ಬರುವ ಕರುನಾಡರ್ ಎಂಬ ಪ್ರಯೋಗದಿಂದಲೂ ಕ್ರಿಸ್ತಶಕದ ಆರಂಭಕ್ಕಿಂತ ಮುಂಚೆಯೇ ಕನ್ನಡ ಭಾಷೆ ಈ ಪ್ರಾಂತ್ಯದ ಜನರ ಆಡುನುಡಿಯಾಗಿತ್ತೆಂದು ಊಹಿಸಬಹುದು. ಮೊಹೆಂಜೋದಾರೊ ಮತ್ತು ಹರಪ್ಪಗಳ ಅವಶೇಷಗಳ ಸಂಶೋಧನೆಯಿಂದ ಈ ಊಹೆಗೆ ಮತ್ತಷ್ಟು ಪುಷ್ಟಿ ದೊರಕಿದೆ. ಅಲ್ಲಿ ಕಾಣಬರುವ ಸಂಸ್ಕೃತಿ ಆರ್ಯರಿಗೂ ಹಿಂದಿದ್ದ ದ್ರಾವಿಡ ಸಂಸ್ಕೃತಿ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಕ್ರಿಸ್ತಶಕ ಎರಡನೆಯ ಶತಮಾನದ್ದೆನ್ನಲಾದ ಒಂದು ಗ್ರೀಕ್ ಪ್ರಹಸನದಲ್ಲಿ ಕನ್ನಡದ ಕೆಲವು ಮಾತುಗಳಿರುವುವೆಂದೂ ಆದ್ದರಿಂದ ಎರಡನೆಯ ಶತಮಾನಕ್ಕಿಂತ ಮುಂಚೆಯೇ ದಕ್ಷಿಣ ಕನ್ನಡದ ಸಮುದ್ರ ತೀರದಲ್ಲಿ ಕನ್ನಡ ವ್ಯವಹಾರದಲ್ಲಿತ್ತು ಎಂದೂ ಗೋವಿಂದ ಪೈ ಮುಂತಾದ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಅನಂತರ ಶಾಸನಗಳಿಗೆ ಬಂದರೆ ಬ್ರಾಹ್ಮೀಲಿಪಿಯಲ್ಲಿರುವ ಅಶೋಕನ (ಕ್ರಿ.ಪೂ. 3ನೆಯ ಶತಮಾನ) ಪ್ರಾಕೃತ ಶಾಸನಗಳು ಕರ್ನಾಟಕದ ಅತ್ಯಂತ ಪ್ರಾಚೀನ ಬರೆಹಗಳಾಗಿವೆ. ಈ ಶಾಸನಗಳಲ್ಲಿ ಬ್ರಹ್ಮಗಿರಿಯ ಶಾಸನವೊಂದರಲ್ಲಿ ಕಾಣಸಿಗುವ 'ಇಸಿಲ' ಎಂಬ ಪದ ತೇದಿಯುಳ್ಳ ಪ್ರಾಚೀನತಮ ಕನ್ನಡ ಪದವೆಂದೂ ಇನ್ನೂ ಕೆಲವು ಆಧಾರಗಳನ್ನು ಗಮನಿಸಿ ಕನ್ನಡ ಭಾಷೆ ಕ್ರಿ.ಪೂ.250 ರಿಂದಲೂ ಅಸ್ತಿತ್ವದಲ್ಲಿದ್ದಿತೆಂದೂ ಕ್ರಿ.ಪೂ.2-3ನೆಯ ಶತಮಾನಗಳಲ್ಲಿ ಇದಕ್ಕೆ ಲಿಪಿಯೊಂದು ಉಂಟಾಗಿ ಅದು ಗ್ರಂಥಸ್ಥವಾಗುವುದಕ್ಕೆ ಮೊದಲಿಟ್ಟಿತೆಂದೂ ಡಿ.ಎಲ್.ನರಸಿಂಹಾಚಾರ್ ಅಭಿಪ್ರಾಯಪಡುತ್ತಾರೆ.

450ರ ಹಲ್ಮಿಡಿ ಶಾಸನ ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ದಾಖಲೆ. ಈ ಶಾಸನದ ಭಾಷಾವೈಲಕ್ಷಣ್ಯಗಳನ್ನು ಗಮನಿಸಿದರೆ ಆ ಸಮಯಕ್ಕಾಗಲೇ ಕನ್ನಡದಲ್ಲಿ ಪ್ರೌಢವಾದ ಗದ್ಯದ ಬಳಕೆಯಿತ್ತೆಂದೂ ಸಂಸ್ಕೃತ ಭಾಷೆಯ ಪ್ರಭಾವ ಕನ್ನಡದ ಮೇಲೆ ಸಾಕಷ್ಟಾಗಿತ್ತೆಂದೂ ತಿಳಿಯಬಹುದು. ಆ ತರುವಾಯ ಒಂಬತ್ತನೆಯ ಶತಮಾನದಿಂದ ಮುಂದೆ ಸಿಕ್ಕುವ ಕವಿರಾಜಮಾರ್ಗ, ಪಂಪಭಾರತ, ಆದಿಪುರಾಣ, ಶಾಂತಿಪುರಾಣ, ಅನಂತನಾಥಪುರಾಣ, ಗದಾಯುದ್ಧ ಮುಂತಾದ ಗ್ರಂಥಗಳಲ್ಲಿ ಹಿಂದಿನ ಕವಿಗಳನ್ನು ಕಾವ್ಯ ಪ್ರಕಾರಗಳನ್ನು ಸ್ಮರಿಸಿರುವುದರಿಂದಲೂ ಕವಿರಾಜಮಾರ್ಗಕಾರ ತನಗಿಂತ ಹಿಂದಿದ್ದ ಕನ್ನಡವನ್ನು ಹಳಗನ್ನಡ ಎಂದು ಕರೆದಿರುವುದರಿಂದಲೂ ಈ ಕವಿಗಳಿಗಿಂತಲೂ ಎಷ್ಟೋ ಶತಮಾನಗಳ ಹಿಂದೆಯೇ ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ಕೃಷಿಯಾಗಿತ್ತೆಂದು ಹೇಳಬಹುದು. ಹೀಗಾಗಿ ಕ್ರಿಸ್ತಶಕದ ಆರಂಭಕಾಲದಿಂದಲೇ ಕನ್ನಡ ಭಾಷೆ ಸುಸಂಸ್ಕೃತರಾದ ಕನ್ನಡಿಗರ ಆಡುನುಡಿಯಾಗಿತ್ತೆಂದೂ ಅವರು ಅದನ್ನು ಸಾಹಿತ್ಯ ಶಾಸನಾದಿಗಳನ್ನು ಬರೆಯಲು ಬಳಕೆ ಮಾಡುತ್ತಿದ್ದರೆಂದೂ ಹೇಳಬಹುದು.

ಹೀಗೆ ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವಿರುವ ಆಡುನುಡಿಯಲ್ಲಿ ಅದರ ಇತಿಹಾಸದುದ್ದಕ್ಕೂ ನಡೆದ ಮಾರ್ಪಾಡುಗಳನ್ನು ಗುರುತಿಸಲು ಬೇರೆ ಬೇರೆ ಶತಮಾನಗಳ ಆಡುನುಡಿಯ ಸ್ವರೂಪಕ್ಕೆ ದಾಖಲೆಗಳಿಲ್ಲ. ಆದರೆ ಲಿಖಿತಭಾಷೆಯ ಸ್ವರೂಪವನ್ನು ತಿಳಿಯಲು ಕನ್ನಡ ಕವಿಗಳ ಶಾಸನಗಳೂ ಕಾವ್ಯಗಳೂ ನಾಗವರ್ಮ, ಕೇಶಿರಾಜ, ಭಟ್ಟಾಕಳಂಕರು ಬರೆದ ವ್ಯಾಕರಣ ಗ್ರಂಥಗಳೂ ಸಹಾಯಕವಾಗಿವೆ. ಭಾಷೆಯ ವಿಕಾಸದ ಆಧಾರದ ಮೇಲೆ ಕನ್ನಡ ಭಾಷೆಯಲ್ಲಿ ನಡೆದ ಪರಿವರ್ತನೆಯನ್ನು ಪ್ರಮುಖವಾಗಿ ನಾಲ್ಕು ಘಟ್ಟಗಳಲ್ಲಿ ಗುರುತಿಸಬಹುದು. ಆರಂಭದಿಂದ 9ನೆಯ ಶತಮಾನದವರೆಗಿನ ಶಾಸನದ ಭಾಷೆಯನ್ನು ಪೂರ್ವದ ಹಳಗನ್ನಡ ಎಂದೂ ಅಲ್ಲಿಂದ ಹನ್ನೆರಡನೆಯ ಶತಮಾನದವರೆಗಿನ ಕಾವ್ಯ ಹಾಗೂ ಶಾಸನಗಳ ಭಾಷೆಯನ್ನು ಹಳಗನ್ನಡ ಎಂದೂ ಅಲ್ಲಿಂದ ಹದಿನಾರು, ಹದಿನೇಳನೆಯ ಶತಮಾನಗಳವರೆಗಿನ ವೀರಶೈವ ಹಾಗೂ ವೈಷ್ಣವ ಸಾಹಿತ್ಯದ ಭಾಷೆಯನ್ನು ನಡುಗನ್ನಡವೆಂದೂ ಅಲ್ಲಿಂದೀಚೆಗಿನ ಸಾಹಿತ್ಯದ ಭಾಷೆಯನ್ನು ಹೊಸಗನ್ನಡ ಎಂದೂ ಹೇಳಬಹುದು. ಹೊಸಗನ್ನಡದ ಆಡುಮಾತನ್ನು ಭೌಗೋಳಿಕ ಹಾಗೂ ಸಾಮಾಜಿಕ ಪ್ರಭೇದಗಳಾಗಿ ವಿಂಗಡಿಸಿ ಅವುಗಳ ಸ್ವರೂಪವನ್ನು ತಿಳಿಯಲು ಸಾಧ್ಯ (ನೋಡಿ: ಕನ್ನಡದ ಉಪಭಾಷೆಗಳು). (ಯು.ಪಿ.ಯು.)

**ಪೂರ್ವದ ಹಳಗನ್ನಡ :** ಕವಿರಾಜಮಾರ್ಗಕ್ಕೂ ಹಿಂದಿನ ಶಾಸನಗಳ ಭಾಷೆಯನ್ನು ಗಮನಿಸಿದರೆ, ಈಗ ನಾವು ಹಳಗನ್ನಡವೆಂದು ಕರೆಯುವ ಭಾಷೆಯಲ್ಲಿಲ್ಲದ ಹಲವಾರು ವಿಶಿಷ್ಟ ಲಕ್ಷಣಗಳು ಕಾಣಬರುತ್ತಿದ್ದು ಹಳಗನ್ನಡಕ್ಕಿಂತ ಹಿಂದಿನ ಒಂದು ಅವಸ್ಥೆ ಕನ್ನಡಕ್ಕಿತ್ತು, ಅದು ರೂಪಾಂತರ ಹೊಂದುತ್ತ ಬಂದು ಹಳಗನ್ನಡವಾಗಿ ಮಾರ್ಪಡುತ್ತಿತ್ತು ಎನ್ನಲು ಅವಕಾಶವಿದೆ.

ಈ ಕಾಲದ ಭಾಷೆಯಲ್ಲಿ ಕಂಡುಬರುವ ಕೆಲವು ಪ್ರಯೋಗಗಳನ್ನು ಈ ಮುಂದಿನ ಉದಾಹರಣೆಗಳಲ್ಲಿ ಕಾಣಬಹುದು.

1 ವಿಭಕ್ತಿ ಪ್ರತ್ಯಯ, ಆಖ್ಯಾತ ವಿಭಕ್ತಿ ಪ್ರತ್ಯಯ, ನಿಷೇಧಾರ್ಥ ಪ್ರತ್ಯಯದ ಸ್ವರ ದೀರ್ಘವಾಗಿರುವುದು. ಉದಾ: ಮೂಱೆವಳ್ಳಿಉಂ ಕೊಟ್ಟಾರ್ (450, ಹಲ್ಮಿಡಿ ಶಾಸನ), ರಾಜಶ್ರಾವಿತಮಾಗೆ ಪ್ರಸಾದಂ ಕೆಯ್ದಾರ್ (685, ಶಿಕಾರಿಪುರ ಶಾಸನ), ಅವರ್ ಸ್ವರ್ಗಾಗ್ರಮನೇಱೆದಾರ್ (700, ಶ್ರವಣಬೆಳಗೊಳ ಶಾಸನ).

2 ಅನ್ ಪ್ರತ್ಯಯದ ಬದಲು ಆನ್,ಒನ್, ಓನ್‌ಗಳ ಬಳಕೆ. ಉದಾ: ಶೌರ್ಯೋದ್ಯಮಭರಿತೋನ್, ಕಳ್ದೋನ್ ಮಹಾಪಾತಕನ್ (450, ಹಲ್ಮಿಡಿ), ಪಟಂ ಸೂಡಿದೋರ್, ಇದಾನಟಿದೋನ್ (6ನೆಯ ಶತಮಾನ, ಸಿರಿಗುಂದ), ಎತ್ತಿ ಕೊಳ್ವೋನ್ ದೇಗುಲಮಾನ್ ಅೞಿದೋರ್, (700,ಕಿಗ್ಗ).

3 ಸಪ್ತಮೀ ವಿಭಕ್ತಿಯಲ್ಲಿ 'ಉಳ್' ಪ್ರತ್ಯಯದ ಪ್ರಯೋಗ. ಉದಾ: ನರಿದಾವಿ(ಳೆ)ನಾಡುಳ್ (450, ಹಲ್ಮಿಡಿ), (ಸಂ)ಕಟದುಳ್ (675, ಉದ್ಯಾವರ), ಕಟ್ವಪ್ಪಿನಾವೆಟ್ಟದುಳ್ (700, ಶ್ರವಣಬೆಳಗೊಳ).

4 ನಿಷೇಧಾರ್ಥಕ ಪದಗಳಲ್ಲಿ ಸ್ವರ ದೀರ್ಘವಾಗಿರುವುದು. ಉದಾ: ಆ ವಿತ್ತಿದಲ್ಲಿ ವೆಳೆಯಾದೆ ಕೆಡುಗ (685, ಶಿಕಾರಿಪುರ), ಸಿದ್ಧಸಮಯನ್ ತಪ್ಪಾದೆ ನೋಂತು (700, ಶ್ರವಣಬೆಳಗೊಳ), ಇದನ್ ವಕ್ರಮ್ ಇಲ್ಲಾದೆ ಕಾದು (730-50, ಉದ್ಯಾವರ).

5 ಬಿಂದುವಿನ ಸ್ಥಾನದಲ್ಲಿ ನಕಾರವನ್ನು ಬಳಸುವುದು. ಉದಾ: ಸುತನ್ಗೆ, ಸೇನ್ದ್ರಕ, ಕಳ್ದೋನ್ ಮಹಾಪಾತಕನ್ (450 ಹಲ್ಮಿಡಿ), ನಿರ್ವ್ವಿನೀತರಾ ಕಿಱಿಯಾ ಮಗನ್ದಿರ್ (6ನೆಯ ಶತಮಾನ, ಸಿರಿಗುಂದ), ಚಿತ್ರವಾಹನ ಪಿನ್ದುವ್ವಾಳೆ (675, ಕಿಗ್ಗ), ಒನ್ದು (709, ಐಹೊಳೆ).

6 ದ್ವಿತೀಯಾ ವಿಭಕ್ತಿ ಪ್ರತ್ಯಯ ದೀರ್ಘವಾಗುವುದು. ಉದಾ: ಅರ್ಧವೀಸದಿ ಇತ್ತೊದಾನ್ (578, ಬಾದಾಮಿ), ಈನಿತ್ತಧರ್ಮಮಾನ್ (675, ಕಿಗ್ಗ), ಇದಾನ್ ಕೊಳೆ (685, ಶಿಕಾರಿಪುರ), ಕೊಡಂಗೆಯನ್ (692, ಸೊರಬ), ಮಹಾದೇವಿಯರಾ ದೇಗುಲಮಾನ್ (733, ಪಟ್ಟದಕಲ್ಲು), ಕಂಚಿಯಾನ್, ಧನಮಾನ್, ಅಕ್ಷರಂಗಳುಮಾನ್ ಅೞಿವಾರ್ ........ಮಹಾಜನಮಾನ್ ಕೊಂದಾರ್ (733, ಕಂಚಿ), ಇದಾನ್ (793, ಲಕ್ಷ್ಮೇಶ್ವರ).

7 ಷಷ್ಠೀ ವಿಭಕ್ತಿ ಹಾಗೂ ಗುಣವಾಚಕಗಳನ್ನು ದೀರ್ಘಗೊಳಿಸಿರುವುದು. ಉದಾ: ಭಟರಿಯಾ ಪ್ರೇಮಾಲಯ ಸುತನ್ಗೆ (450, ಹಲ್ಮಿಡಿ), ಮಂಗಳೀಸನಾ ಕಲ್ಮನೆಗೆ, ಏೞನೆಯಾ ನರಕದಾ ಪುೞುಅಕುಮ್ (578, ಬಾದಾಮಿ), ಪೊರವೞ ಗೋಸಾಸಿಗರಾ ಮಾೞು (709, ಐಹೊಳೆ), ನವಿಲೂರಾ ಸಿರಿಸಂಗದಾಜಿಗಣದಾ ರಾಜೀಮತಿಗಂತಿಯಾರ್ (700, ಎ.ಕ. 11-97). ಗುರುವಡಿಗಳಾ ಶಿಷ್ಯರ್ (700, ಎ.ಕ.11-24)

8 ಇಂದು 'ಬ' ಕಾರ ಇರುವ ಸ್ಥಾನದಲ್ಲಿ 'ವ' ಕಾರ ಕಂಡುಬರುವುದು. ವಿಟ್ಟಾರ್ (450 ಹಲ್ಮಿಡಿ), ನನ್ದಿಯಾಲರಾ ವಿಟ್ಟದು (6ನೆಯ ಶತಮಾನ, ಸಿರಿಗುಂದ), ಆ ವಿತ್ತಿದಲ್ಲಿ ವೆಳೆಯಾದೆ ಕೆಡುಗ (685 ಶಿಕಾರಿಪುರ), ಕಟ್ವಪ್ಪಿನಾ ವೆಟ್ಟದುಳ್ (700 ಶ್ರವಣಬೆಳಗೊಳ).

9 ಈಗ 'ಇ' ಕಾರ ಬಳಕೆಯಾಗುವ ಸ್ಥಾನದಲ್ಲಿ 'ಎ' ಕಾರವನ್ನು ಬಳಸಿರುವುದು ಉದಾ: ಕೇಕಯಪಲ್ಲವರಂ ಕಾದೆಱೆದು (450, ಹಲ್ಮಿಡಿ), ಮುಡಿಯರಾ ಮಗನ್ ಪಲಿಪೞುಎೞುದು (675,ಉದ್ಯಾವರ).

10 ರೇಫದ ಹಿಂದೆ ವ್ಯಂಜನದ್ವಿತ್ವವನ್ನು ಬಳಸಿರುವುದು. ಉದಾ: ಶ್ರೀ ನಿರ್ವ್ವಿನೀತರಾ (6ನೆಯ ಶತಮಾನ, ಸಿರಿಗುಂದ), ಸಾಸಿರ್ವ್ವರ್ ಪ್ಪಾರ್ವರುಂ (709, ಐಹೊಳೆ), ಧರ್ಮ್ಮನಾಯಗನ್ ....... ಸ್ವರ್ಗ್ಗಾಲಯಕ್ಕೆ (780, ನರೇಗಲ್ಲ).

11 ವಿಧ್ಯರ್ಥದಲ್ಲಿ ಗ ಅಥವಾ ಕ ಪ್ರತ್ಯಯದ ಪ್ರಯೋಗ. ಉದಾ: ಕೊಳ್ಗ, ಕೆಡುಗ, ಪುಟ್ಟಲ್ಕ, ರಕ್ಷಿಕ ಇತ್ಯಾದಿ.

ಈ ಕಾಲದಲ್ಲಿ ಕಂಡುಬರುವ ಶಾಸನಗಳಲ್ಲಿ ತಮಿಳಿನ ಛಾಯೆಯನ್ನೂ ಸ್ಪಷ್ಟವಾಗಿ ಗುರುತಿಸಬಹುದು. ಉದಾ: ಮಕನ್, ನರಗ, ನಾಯಗನ್ (ಮಗನ್, ನರಕ, ನಾಯಕನ್) ಇತ್ಯಾದಿ.

ಪೂರ್ವದ ಹಳಗನ್ನಡದ ಕಾಲದಲ್ಲಿ ಱ, ೞ ಅಕ್ಷರಗಳ ಉಚ್ಚಾರಣೆ ಪ್ರಯೋಗದಲ್ಲಿತ್ತು. ಒಂಬತ್ತನೆಯ ಶತಮಾನದ ಹೊತ್ತಿಗೆ ೞ ಕಾರ ಬದಲಾಗಲು ಪ್ರಾರಂಭಿಸಿ ಬೇರೆ ಬೇರೆ ಧ್ವನಿಗಳಾಗಿ ಪರಿವರ್ತಿತವಾಗುತ್ತಿರುವುದು ಕಂಡುಬರುತ್ತದೆ. ಕ್ರಮೇಣ ಜನರ ಮಾತಿನಲ್ಲಿ, ಉಚ್ಚಾರಣೆಯಲ್ಲಿ ಬದಲಾವಣೆ ಕಾಣಿಸಿಕೊಳ್ಳಲು ಪ್ರಾರಂಭವಾಗಿತ್ತೆಂಬುದನ್ನು

ಹರಿಹರನ ಮಾತುಗಳಿಂದಲೂ ಉಚ್ಚಾರಣೆ ಹಾಗೂ ಪ್ರಯೋಗಗಳನ್ನು ಉಳಿಸಿಕೊಳ್ಳಲು ಕೇಶಿರಾಜ ಪಟ್ಟಿರುವ ಶ್ರಮದಿಂದಲೂ ಊಹಿಸ ಬಹುದಾಗಿದೆ. ಪ ಕಾರ ಹ ಕಾರವಾಗದೆ ಈ ಕಾಲಕ್ಕೆ ಹಾಗೆಯೇ ಉಳಿದುಕೊಂಡು ಬಂದಿರುವುದನ್ನು ಈ ಶಾಸನಗಳಲ್ಲಿ ಕಾಣಬಹುದು. ಪೂರ್ವದ ಹಳಗನ್ನಡದ ಕಾಲದಲ್ಲಿಯೇ ಪರಿವರ್ತನೆಗಳು ಪ್ರಾರಂಭವಾಗಿ, ಅದರ ಜೊತೆಯಲ್ಲಿಯೇ ಹಳಗನ್ನಡದ ವಿಶಿಷ್ಟ ಪ್ರಯೋಗಗಳೆನಿಸಿ ಕೊಳ್ಳಬಹುದಾದ ಉಚ್ಚಾರಣೆ ಪ್ರಯೋಗಗಳು 9ನೆಯ ಶತಮಾನದ ಹೊತ್ತಿಗೆ ಹಲವು ವೇಳೆ ಒಂದೇ ಶಾಸನದಲ್ಲೇ ಕಂಡುಬಂದು ಕ್ರಮೇಣ ಪೂರ್ವದ ಹಳಗನ್ನಡದ ಪ್ರಯೋಗಗಳು ವಿರಳವಾಗುತ್ತ ಬಂದು ಪೂರ್ಣವಾಗಿ ಹಳಗನ್ನಡದ ಅವಸ್ಥೆ ಕಾಣಿಸಿಕೊಂಡಿತು. (ಬಿ.ಎಸ್.ಪಿ.)

**ಹಳಗನ್ನಡ :** ಕನ್ನಡ ಭಾಷೆಯ ಚರಿತ್ರೆಯಲ್ಲಿ ಹತ್ತನೆಯ ಶತಮಾನ ಒಂದು ಮುಖ್ಯ ಘಟ್ಟ. ಈ ಕಾಲದಲ್ಲಿ ವಿಪುಲವಾಗಿದ್ದ ಕನ್ನಡದ ದೇಶಿ ಪ್ರಭೇದಗಳ ಕೆಲವು ವೈಲಕ್ಷಣ್ಯಗಳನ್ನು ಕಳೆದುಕೊಂಡು ಏಕರೂಪತೆಯನ್ನು ಪಡೆದಿದ್ದ ಕನ್ನಡ ಭಾಷೆ ಪಂಡಿತವರ್ಗದಲ್ಲಿ ಪ್ರಚಾರದಲ್ಲಿತ್ತು. ಪಂಡಿತ ಕವಿಗಳಿಂದ ಮಾನ್ಯವಾದ ಈ ಶಿಷ್ಟಭಾಷೆ ಸಾಹಿತ್ಯ ಮತ್ತು ಶಾಸ್ತ್ರಗಳ ಮಾಧ್ಯಮವಾಗಿತ್ತು. ಈ ಭಾಷೆಯನ್ನೇ ನಾವು ಇಂದು ಹಳಗನ್ನಡವೆಂದು ಕರೆಯುವುದು. 'ರಾಜದ್ರಾಜಕಮೆನಿಸಿದ ಸಾಜದ ಪುಲಿಗೆಱೆಯ ತಿರುಳ ಕನ್ನಡದೊಳ್' ಎಂಬುದಾಗಿ ಪಂಪನೂ ಕನ್ನಡಮೆರಡಱುನೂಱಱ ಕನ್ನಡ ಮಾತಿರುಳಕನ್ನಡಂ ಎಂದು ರನ್ನನೂ ಹೇಳಿದ್ದಾರೆ.

ಹಳಗನ್ನಡ ಭಾಷೆಯ ಕೆಲವು ವೈಶಿಷ್ಟ್ಯಗಳನ್ನು ಕೆಳಕಂಡಂತೆ ಗುರುತಿಸಬಹುದು.

1 ಪೂರ್ವದ ಹಳಗನ್ನಡದ ವಿಭಕ್ತಿ ಪ್ರತ್ಯಯ, ಆಖ್ಯಾತ ಪ್ರತ್ಯಯ, ನಿಷೇಧಾರ್ಥ ಪ್ರತ್ಯಯಗಳಲ್ಲಿ ಆದಿ 'ಆ' ಕಾರ ಹಳಗನ್ನಡದಲ್ಲಿ ಹ್ರಸ್ವವಾಗುತ್ತದೆ (ಆ>ಅ). ಉದಾ: ಇದಾನ್>ಇದನ್, ನರಕದಾ>ನರಕದ, ಸಂದಾನ್>ಸಂದನ್, ಏಱಿದಾರ್>ಏಱಿದರ್, ತಪ್ಪಾದೆ>ತಪ್ಪದೆ ಇತ್ಯಾದಿ.

2 ಪೂರ್ವದ ಹಳಗನ್ನಡದ ಸಪ್ತಮೀ ವಿಭಕ್ತಿ ಪ್ರತ್ಯಯ ಉಳ್ ಗೆ ಹಳಗನ್ನಡದಲ್ಲಿ ಒಳ್ ಎಂಬ ರೂಪ ಬಳಕೆಯಾಗಿದೆ. ಉದಾ: ಆಹವದುಳ್>ಆಹವದೊಳ್, ವೆಟ್ಟದುಳ್>ಬೆಟ್ಟದೊಳ್ ಇತ್ಯಾದಿ.

3 ಪೂರ್ವದ ಹಳಗನ್ನಡದ ಒನ್, ಒರ್, ಒಳ್ ಎಂಬ ಆಖ್ಯಾತ ಪ್ರತ್ಯಯಗಳಿಗೆ ಹಳಗನ್ನಡದಲ್ಲಿ ಅನುಕ್ರಮವಾಗಿ ಅನ್, ಅರ್, ಅಳ್ ರೂಪಗಳಿವೆ. ಉದಾ: ಬರ್ಪೊನ್>ಬರ್ಪನ್, ಅವೊನ್>ಅವನ್, ಮಾಡಿದೊರ್>ಮಾಡಿದರ್, ಎಂಬೊಳ್>ಎಂಬಳ್ ಇತ್ಯಾದಿ.

4 ಪೂರ್ವದ ಹಳಗನ್ನಡದ ಪದಾದಿಯ 'ವ' ಕಾರ ಹಳಗನ್ನಡದಲ್ಲಿ 'ಬ' ಆಯಿತು. ಉದಾ: ವೆಟ್ಟ>ಬೆಟ್ಟ, ವೆಳೆ>ಬೆಳೆ, ವಿತ್ತು>ಬಿತ್ತು ಇತ್ಯಾದಿ.

5 ಪೂರ್ವದ ಹಳಗನ್ನಡದ ಕೆಲವು ಧಾತುಗಳ ಮೊದಲ 'ಎ' ಮತ್ತು 'ಒ' ಸ್ವರಗಳು ಹಳಗನ್ನಡದಲ್ಲಿ ಅನುಕ್ರಮವಾಗಿ 'ಇ' ಮತ್ತು 'ಉ' ಗಳಾಗಿ ಮಾರ್ಪಟ್ಟಿವೆ (ಎ>ಇ, ಒ>ಉ). ಉದಾ: ಕೆಡು>ಕಿಡು, ಕೊಡು>ಕುಡು, ತೊಡು>ತುಡು ಇತ್ಯಾದಿ.

6 ಈ ಕಾಲದಲ್ಲಿ ಱ ಮತ್ತು ೞ ಕಾರಗಳು ಸ್ವತಂತ್ರ ವರ್ಣಗಳಾಗಿದ್ದುವು. ಉದಾ: ಅಱಿ=ತಿಳಿ, ಅರಿ=ಕತ್ತರಿಸು, ಬಾೞ್=ಜೀವನ, ಬಾಳ್=ಖಡ್ಗ ಇತ್ಯಾದಿ.

ಆದರೆ ೞ ವರ್ಣ ವ್ಯಂಜನಗಳ ಮುಂದೆ ರ ಕಾರವಾಗಿ ಮಾರ್ಪಟ್ಟಿದೆ. ಉದಾ: ಕೞ್ಚು=ಕರ್ಚು, ಗೞ್ದೆ = ಗರ್ದೆ ಇತ್ಯಾದಿ

7 ಒಂದು ಪೂರ್ಣ ಕ್ರಿಯಾಪದ ಒಂದು ವಾಕ್ಯವಾಗಿ ಪ್ರಯೋಗವಾಗುತ್ತದೆ. ಉದಾ: (ನೀನ್) ಬಾ; (ಆನ್) ಅಱಿವೆನ್, (ಅವಳ್) ಅಱಿವಳ್, (ಅವನ್) ಈಗೆ, (ನೀನ್) ಪೇೞ್ ಇತ್ಯಾದಿ.

8 ಒಂದು ಸರ್ವನಾಮ ಒಂದು ನಾಮಪದ ಸೇರಿ ಕ್ರಿಯಾಪದವಿಲ್ಲದೆ ವಾಕ್ಯವಾಗುತ್ತದೆ. ಉದಾ: ಇದು ಕೈಲಾಸಂ, ಇದು ಚಕ್ರವ್ಯೂಹಂ, ಅವನ್ ಕಲಿ, ಅದು ಬನಂ ಇತ್ಯಾದಿ.

9 ಸಮುಚ್ಚಯದ 'ಉಂ' 'ಅಂ' ಗಳ, ಎನ್ ಕ್ರಿಯಾಪದದ 'ಎಂದ' 'ಎಂಬ' 'ಎಂದುದು' 'ಎಂಬುದು' ಈ ರೂಪಗಳ ಮತ್ತು ಅಪೂರ್ಣ ಕ್ರಿಯಾಪದಗಳ ಸಹಾಯದಿಂದ ಹಳಗನ್ನಡದಲ್ಲಿ ಸಂಶ್ಲಿಷ್ಟ ವಾಕ್ಯಗಳನ್ನು ರಚಿಸಿಕೊಳ್ಳಲಾಗುತ್ತದೆ.

10 ಅಪೂರ್ಣ ಕ್ರಿಯಾಪದಗಳಲ್ಲಿ ಭೂತ ನ್ಯೂನ ರೂಪಗಳು (ತಿಂದು, ನೋಡಿ, ಕೊಟ್ಟು ಇತ್ಯಾದಿ), ವರ್ತಮಾನ ರೂಪಗಳು (ನೋಡುತ್ತೆ, ಬರುತ್ತೆ ಇತ್ಯಾದಿ), ನಿಷೇಧ ನ್ಯೂನ ರೂಪಗಳು (ತಿನ್ನದೆ, ಬಾರದೆ, ನೋಡದೆ ಇತ್ಯಾದಿ) ವಾಕ್ಯದಲ್ಲಿ ಕ್ರಿಯಾವಿಶೇಷಣಗಳ ಕಾರ್ಯವನ್ನು ನಿರ್ವಹಿಸುತ್ತವೆ. ತಿಂದ, ತಿಂಬ, ನುಡಿದ, ನುಡಿವ, ಮಾಡದ, ಅಱಿಯದ ಮೊದಲಾದ ಕೃದಂತ ರೂಪಗಳು ಮತ್ತು ನಾಮಪದಗಳ ಷಷ್ಠಿ ವಿಭಕ್ತಿ ರೂಪಗಳು ವಾಕ್ಯದಲ್ಲಿ ವಿಶೇಷಣಗಳ ಕಾರ್ಯವನ್ನು ನಿರ್ವಹಿಸುತ್ತವೆ. (ಬಿ.ಆರ್.)

**ನಡುಗನ್ನಡ** : ಹನ್ನೆರಡನೆಯ ಶತಮಾನದಿಂದ ಹದಿನಾರು, ಹದಿನೇಳನೆಯ ಶತಮಾನದವರೆಗಿನ ಅವಧಿಯನ್ನು ಸ್ಥೂಲವಾಗಿ ನಡುಗನ್ನಡದ ಕಾಲವೆಂದು ಹೇಳಬಹುದು. ಈ ಅವಧಿಯಲ್ಲಿ ಚಂಪೂ ಶೈಲಿ ತೆಳುವಾಗಿ, ವಚನ ಹಾಗೂ ಷಟ್ಪದಿ (ವಿರಳವಾಗಿ ಸಾಂಗತ್ಯ, ತ್ರಿಪದಿ) ಕನ್ನಡ ಬರೆಹದ ಆಧಾರವಾಗಿ ಒದಗುತ್ತವೆ. ಇಷ್ಟರ ಹೊರತು ನಡುಗನ್ನಡದ ಇತರ ಸಾಮಾಜಿಕ ಪ್ರಭೇದಗಳ ಹಾಗೂ ಅವುಗಳಲ್ಲಿನ ವ್ಯತ್ಯಾಸಗಳ ಸ್ವರೂಪ ಖಚಿತವಾಗಿ ತಿಳಿಯದು. ಇದರಿಂದಾಗಿ ನಡುಗನ್ನಡ ಭಾಷೆಯಲ್ಲಿನ ಎಲ್ಲ ಬದಲಾವಣೆಗಳನ್ನೂ ನಿಖರವಾಗಿ ಹೇಳಲು ಸಾಧ್ಯವಿಲ್ಲವಾಗಿದೆ.

ನಡುಗನ್ನಡಕ್ಕೆ ಒಂದು ಚಾರಿತ್ರಿಕ ಗಡುವನ್ನು ಕಲ್ಪಿಸಿ ಕೊಂಡಿರುವುದರಿಂದ ಅಂದು ರೂಢಿಯಲ್ಲಿದ್ದ ವ್ಯಾವಹಾರಿಕ ಕನ್ನಡದ ಪ್ರಭೇದಗಳಲ್ಲಿ ಬರೆಹದ ಭಾಷೆಯಾಗಿ ಮನ್ನಣೆಗಳಿಸಿಕೊಂಡು ಉಳಿದುಬಂದಿರುವ ಅವಶೇಷಗಳಿಗಷ್ಟೇ ಭಾಷಾನಿಯಮಗಳನ್ನು ಕಂಡು ಕೊಳ್ಳಬಹುದು. ಹಳಗನ್ನಡದ ಸ್ವರೂಪವೆಂದು ಸ್ಥೂಲವಾಗಿ ಗುರುತಿಸಲಾದ ಲಕ್ಷಣಗಳಿಂದ ಇದರ ಸ್ವರೂಪವನ್ನು ಕಲ್ಪಿಸಿಕೊಳ್ಳುವುದು ವಾಡಿಕೆ. ಮೂಲ ಕನ್ನಡವೆಂದು ಒಂದನ್ನು ಉಪಲಬ್ಧ ತೌಲನಿಕ ಆಧಾರದಿಂದ ಕಲ್ಪಿಸಿಕೊಂಡು ಇದರಿಂದ ಕೂಡ ನಡುಗನ್ನಡವನ್ನು ಸಾಧಿಸಬಹುದು.

ನಡುಗನ್ನಡ ಕಾಲಕ್ಕೆ ಹಿಂದೆಯೇ ಕನ್ನಡ ಭಾಷೆಯಲ್ಲಿ ಪಡುವಣ-ಮೂಡಣ ವಿಭಜನೆ ಘಟಿಸಿತು. ಕರಾವಳಿಯ ಕನ್ನಡ ಪಡುವಣ ಪ್ರಭೇದದ ಪ್ರತಿನಿಧಿ. ಬಡಗ ಕನ್ನಡ, ಹವ್ಯಕ ಕನ್ನಡ - ಈ ಹಂತದಲ್ಲಿ ನಿಂತ ಪ್ರಭೇದಗಳು. ಈ ಕಾಲದಲ್ಲಿ ಮೂಡಣ ಕಡೆಯ ಕನ್ನಡ ಪ್ರಭೇದದಲ್ಲಿ ಬಡಗಣ, ತೆಂಕಣ ಎಂಬ ಭೌಗೋಳಿಕವಾದ ಭಾಷಾ ಪ್ರಭೇದಗಳು ತಲೆದೋರಿದುವು. ತೆಂಕಣದ ಕನ್ನಡ ಪ್ರಭೇದ ಕನ್ನಡದ ಶಿಷ್ಟಭಾಷೆಯಾದದ್ದು ನಡುಗನ್ನಡಾನಂತರದ ಅವಧಿಯಲ್ಲಿ, ಮೈಸೂರು ರಾಜರ ಆಶ್ರಯ ದೊರೆತಾಗ. ಬಡಗಣ ಕನ್ನಡ ಪ್ರಭೇದ ನಡುಗನ್ನಡ ಕಾಲದಲ್ಲಿ ಹೆಚ್ಚು ಬರೆವಣಿಗೆಯ ಮನ್ನಣೆ ಪಡೆದಿತ್ತು. ಆದರೂ ವ್ಯಾಪಕಾರ್ಥದಲ್ಲಿ ನಡುಗನ್ನಡ ಎಂಬುದು ನಾಲ್ಕು ಶತಮಾನಗಳ ಕನ್ನಡ ಭಾಷೆಯ ಹಲವು ಪ್ರಭೇದಗಳನ್ನೊಳಗೊಂಡ ಒಂದು ಅವಸ್ಥೆ.

ನಡುಗನ್ನಡ ಭಾಷೆಯ ಲಕ್ಷಣಗಳೆಂದು ಹೇಳ ಬಹುದಾದಂಥವುಗಳಲ್ಲಿ ಕೆಲವನ್ನು ಸುಲಭವಾಗಿ ಗುರುತಿಸಬಹುದು. ಈ ಹಂತದಲ್ಲಿ ಕೆಲವು ಧ್ವನಿ ವ್ಯತ್ಯಾಸಗಳು ಘಟಿಸಿದ್ದುವು. ಇದರ ಫಲವಾಗಿ ಶಬ್ದಗಳ ಉಚ್ಚಾರಣೆಯಲ್ಲಿಯೂ ಬದಲಾವಣೆಗಳುಂಟಾಗಿದ್ದುವು. ಕೆಲವು ಶಬ್ದಗಳು ಬಳಕೆಯಿಂದ ಬಿದ್ದು ಹೋಗಿದ್ದುವು. ಮತ್ತೆ ಕೆಲವು ಶಬ್ದಗಳ ಅರ್ಥದಲ್ಲಿ ವ್ಯತ್ಯಾಸಗಳುಂಟಾಗಿದ್ದುವು. ನೆರೆಹೊರೆಯ ಭಾಷೆಗಳಿಂದ ಕೆಲವು ಶಬ್ದಗಳು ಹೊಸದಾಗಿ ಬಂದು ಸೇರಿದ್ದುವು (ಮರಾಠಿ ಭಾಷೆಯಿಂದ ಶಬ್ದಗಳ ಸ್ವೀಕರಣ ಆರಂಭವಾದದ್ದು ಈ ಕಾಲದಲ್ಲೇ. ಜನ್ನ ಮತ್ತು ಕುಮಾರವ್ಯಾಸರಲ್ಲಿ ಇದಕ್ಕೆ ಸ್ಪಷ್ಟ ದಾಖಲೆಗಳು ಸಿಗುತ್ತವೆ). ಇದೇ ಅವಧಿಯಲ್ಲಿ ಹೆಚ್ಚಾಗಿ ಅರಬ್ಬೀ ಪಾರಸೀ ಭಾಷೆಗಳ ಅನೇಕ ಶಬ್ದಗಳು ಸೇರಿದುವು. ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳಿಂದ ಶಬ್ದ ಸ್ವೀಕಾರ ಈ ಕಾಲದಲ್ಲಿ ಅಷ್ಟಾಗಿ ನಡೆಯಲಿಲ್ಲವೆನ್ನಬಹುದು.

ಇದೇ ಅವಧಿಯಲ್ಲಿ ಕೆಲವು ವ್ಯಾಕರಣ ವ್ಯತ್ಯಾಸಗಳೂ ಸಂಭವಿಸಿದ್ದುವು. ಉತ್ತಮ ಪುರುಷ ಬಹುವಚನ ಸರ್ವನಾಮ ವ್ಯವಸ್ಥೆಯಲ್ಲಿ ಹಳಗನ್ನಡದಲ್ಲಿದ್ದ ವ್ಯಾವರ್ತಕ ಹಾಗೂ ಅವ್ಯಾವರ್ತಕ ವ್ಯತ್ಯಾಸಗಳು ಮರೆಯಾದುವು. ಕ್ರಿಯಾಪದಗಳಲ್ಲಿ ಸೇರುವ ವರ್ತಮಾನ- ಭವಿಷ್ಯದ್ವಾಚಕ ಪ್ರತ್ಯಯ ಪ್ ಒಮ್ಮೊಮ್ಮೆ ಹ್ ಆಗುವುದೂ ಕಂಡುಬಂತು (ಬಂದಪನ್>ಬಂದಹನ್). ಬಹುವಚನ ಬದ್ಧಾಕೃತಿಯಲ್ಲಿನ- ನ್ಗಳ್ ಎಂಬಲ್ಲಿ ಅನುನಾಸಿಕತ್ವ ಮರೆಯಾಯಿತು (ಮರಂಗಳ್>ಮರಗಳು). ಹಳಗನ್ನಡ ಸಬಿಂದು ಶಬ್ದಗಳಲ್ಲಿ ಕೆಲವು ಅಬಿಂದುಗಳಾದುವು. ವ್ಯಂಜನಾಂತ ಶಬ್ದಗಳು ಸ್ವರಾಂತಗಳಾದುವು: ಕಾಣ್>ಕಾಣು, ಕೇಳ್>ಕೇಳು. ಲ ಕಾರಾಂತಗಳು ಳ ಕಾರಾಂತಗಳಾದುವು: ಬೆರಲ್>ಬೆರಳ್, ಕೊರಲ್>ಕೊರಳ್. ಸ್ತ್ರೀ ವಾಚಕ ಪ್ರತ್ಯಯ (ಸಂ.>ಸ್ತ್ರೀ ಪ್ರಾ. ಇತ್ಥೀ>ಕ. ಇತ್ತಿ>ಇತಿ)- ತಿ ಎಂದಾಗಿತ್ತು. ನಾಮಪದ, ಸಂಖ್ಯಾವಾಚಕ, ಸರ್ವನಾಮ, ಗುಣವಚನಗಳಿಗೆ ನೇರವಾಗಿ ಎನ್,ಎವು,ಎಯ್, ಇರ್ ಮೊದಲಾದ ಆಖ್ಯಾತ ವಿಭಕ್ತಿಗಳು ನೇರವಾಗಿ ಸೇರಿ ಕ್ರಿಯಾರ್ಥಕ ಶಬ್ದಗಳಾಗುತ್ತಿದ್ದುವು. ಹಳಗನ್ನಡದಲ್ಲಿದ್ದ ಕೇಶವನೆಂ, ಪೆಱುವು, ಒರ್ವರಿರ್, ಒಳ್ಳಿದರ್ ಎಂಬ ಈ ಬಗೆಯ ವ್ಯವಸ್ಥೆ ಈ ಕಾಲದಲ್ಲಿ ತಪ್ಪಿಹೋಯಿತು (ಈ ಅವಸ್ಥೆಯ ಆರಂಭದ ವೇಳೆಗೆ ಬಹುಶಃ ಕೊಡಗು ಭಾಷೆ ಉಪಭಾಷಾ ಪ್ರಭೇದವಾಗಿರದೆ ಕನ್ನಡದಿಂದ ಸ್ಪಷ್ಟವಾಗಿ ಬೇರ್ಪಟ್ಟು ಒಂದು ಸ್ವತಂತ್ರ ಭಾಷೆಯಾಗಿ ಪರಿಣಮಿಸಿತ್ತು ಎಂದು ಹೇಳಬಹುದು).

ನಡುಗನ್ನಡ ಕಾಲದ ಹರಹಿನಲ್ಲಿ ಘಟಿಸಿದ ಧ್ವನಿವ್ಯತ್ಯಾಸಗಳಲ್ಲಿ ಮೂರನ್ನು ಇಲ್ಲಿ ಉಲ್ಲೇಖಿಸಬಹುದು. ಅವುಗಳು ಱ್ ೞ್ ಮತ್ತು ಪ್, ಹಳಗನ್ನಡದಲ್ಲಿ ೞ ಳ ಱ ಪ ಮತ್ತು ಹ (ಸ್ವೀಕರಣ ಶಬ್ದಗಳಲ್ಲಿ) ಇವು ಧ್ವನಿಮಾಗಳಾಗಿದ್ದು, ಪ್ರಸಾರದ ದೃಷ್ಟಿಯಿಂದ ಪರಸ್ಪರ ಉಪಯುಕ್ತ (ಸಾರ್ಥಕ) ವ್ಯತ್ಯಾಸಗಳನ್ನು ಪಡೆದಿದ್ದುವು. ಈ ಅವಧಿಯಲ್ಲಿ ಈ ವೈದೃಶ್ಯ ಕಡಮೆಯಾಗುತ್ತ ಬಂದು ಕಡೆಗೆ ಅದೃಶ್ಯವಾಯಿತು. ೞ ಕಾರ ವ್ಯಂಜನ ವರ್ಣಗಳ ಪೂರ್ವದಲ್ಲಿದ್ದಾಗ ರೇಫವಾಯಿತು. ಉಳಿದ ಕಡೆಗಳಲ್ಲಿ, ಅಂದರೆ ಸ್ವರಮಧ್ಯದಲ್ಲಿ ಇಲ್ಲವೆ ಶಬ್ದಾಂತ್ಯದಲ್ಲಿ ಳ ಕಾರವಾಯಿತು (ಏಕೆಂದರೆ ಮೂಲದ್ರಾವಿಡ ಧ್ವನಿ ವ್ಯವಸ್ಥೆಯಂತೆ ಶಬ್ದದ ಪರಿಸರದೊಳಗೆ, ಶಬ್ದಾದಿಯಲ್ಲಿ ೞ್ ಧ್ವನಿಮಾ ಬರುವುದಿಲ್ಲ). ಈ ಎರಡೂ ಬಗೆಯ ವಿಲೀನ ಕಾರ್ಯ ಏಕಕಾಲಕ್ಕೆ ಹಾಗೂ ಒಂದು ಇನ್ನೊಂದಕ್ಕೆ ಪೂರಕವಾಗುವಂತೆ ಘಟಿಸಿದೆ. ಬಹುಶಃ ಈ ಧ್ವನಿ ಬದಲಾವಣೆ ಹಳಗನ್ನಡದ ಕಾಲಾವಧಿಯಲ್ಲೆ ಅಂಕುರಗೊಂಡು, ನಡುಗನ್ನಡದ ಅವಸ್ಥೆಯಲ್ಲಿ ಸ್ಥಾಯಿಯಾಯಿತೆಂದು ತಿಳಿಯಬಹುದು. ಇದರಂತೆ ಶಕಟರೇಫ ಕೂಡ ಸಾಮಾನ್ಯ ರೇಫದಲ್ಲಿ ಸೇರಿತು. ನಡುಗನ್ನಡದ ಅವಧಿ ಮುಗಿಯುವ ಹೊತ್ತಿಗೆ ಈ ವ್ಯತ್ಯಾಸ ಪೂರ್ಣವಾಗಿ ನಡೆದಿತ್ತು. ವ್ಯಂಜನ ಗುಚ್ಛಗಳಲ್ಲಿರುವ ಱ ೞ ಳ ಧ್ವನಿಗಳು ದೀರ್ಘಸ್ವರಗಳಿಗೆ ಪರವಾದಾಗ ಲೋಪವಾದುವು. ಕನ್ನಡದ ಪ್ರಭೇದಗಳಲ್ಲಿ ಒಂದಾದ ಸೋಲಿಗರ ಕನ್ನಡದಲ್ಲಿ ಮಾತ್ರ ಇಂದಿಗೂ ಇವು (ೞ್ ಮತ್ತು ಱ್) ತಮ್ಮ ಸಾರ್ಥಕ ವ್ಯತ್ಯಾಸವನ್ನು ಕಾಪಾಡಿಕೊಂಡಿವೆ. ಇಱು (ಇರುವೆ, ಚೀಮೆ), ಇರು (= ಇರುವುದು ಕ್ರಿಯಾಪದ). ಉಚ್ಚಾರದ ಱಳಕುಳಗಳಲ್ಲಿನ ಹಾಗೂ ಶಕಟರೇಫ ಮತ್ತು ಸಾಮಾನ್ಯ ರೇಫಗಳಲ್ಲಿನ ವ್ಯತ್ಯಾಸಗಳು ಕರಗಿದ್ದರೂ ಬರೆವಣಿಗೆಯಲ್ಲಿ ಮಾತ್ರ ಕೆಲವರು ನಡುಗನ್ನಡದುದ್ದಕ್ಕೂ ಉಳಿಸಿಕೊಂಡು ಬಂದಿರುವುದು ಗೋಚರಿಸುತ್ತದೆ.

ಶಬ್ದದ ಆದಿಯ ಪ ಕಾರ ಹ ಕಾರವಾಗುವ ವ್ಯತ್ಯಾಸ ಕೂಡ ಚಾರಿತ್ರಿಕವಾಗಿ ಒಂಬತ್ತು ಮತ್ತು ಹತ್ತನೆಯ ಶತಮಾನದ (ಹಳಗನ್ನಡದ) ಅವಧಿಯಲ್ಲೆ ಆರಂಭವಾಗಿ ಈ ಅವಧಿಯಲ್ಲಿ ಇದರ ಪರಿವರ್ತನೆ ಸಂಪೂರ್ಣವಾಗಿ ನಡೆಯಿತು. ದೇಶ್ಯದಂತೆ ಅನ್ಯದೇಶ್ಯ ಶಬ್ದಗಳಲ್ಲೂ ಇದು ಸಾರ್ವತ್ರಿಕವಾಗಿ ವ್ಯಾಪಿಸಿತು. ಕಾಕಲ್ಯಘರ್ಷಧ್ವನಿ ಹ್ ನಡುಗನ್ನಡದಲ್ಲಿ ಸ್ಥಾಯಿತ್ವ ಪಡೆಯಿತು. ಆದರೂ ಈ ಅವಧಿ ಮುಗಿಯುವ ವೇಳೆಗೆ ಕನ್ನಡದ ಕೆಲವು ಸಾಮಾಜಿಕ ಪ್ರಭೇದಗಳಲ್ಲಿ ವಿಶೇಷವಾಗಿ ಶಬ್ದಾದಿಯ ಹ್ ಲೋಪವಾಯಿತು. ಈ ವ್ಯತ್ಯಾಸ ಇಂದಿಗೂ ಒಂದು ಸಾಮಾಜಿಕ ಪ್ರಭೇದ ಸೂಚಕವಾಗಿದೆ. ಪ್>ಹ್ ಆಗುವ ಈ ವ್ಯತ್ಯಾಸ ಶಬ್ದಾದಿಯಲ್ಲಿ ಮೊದಲು ಆರಂಭವಾದರೂ ಶಬ್ದದ ನಡುವೆ ಕೂಡ ಘಟಿಸಿತು. (ಗೋಪುರ>ಗೋಹುರ). ಅನುನಾಸಿಕ ಧ್ವನ್ಯುಕ್ತ ಶಬ್ದಗಳಲ್ಲಿ ಪ್ ಅಬಾಧಿತದಂತೆ ಕಂಡುಬರುತ್ತದೆ: ಕಂಪು, ತಂಪು, ಸೊಂಪು, ಪೆಂಪು. ಆದರೆ ನೋಂಪಿ>ನೋಹಿ ಆಗಿರುವುದು ಕುತೂಹಲವನ್ನುಂಟುಮಾಡುತ್ತದೆ. ಪ್ ಸಜಾತೀಯ ವ್ಯಂಜನ ಗುಚ್ಛವಾಗಿ ನಿಂತಾಗ ಕಾಕಲ್ಯಘರ್ಷಕವಾಗುವುದಿಲ್ಲ: ಉಪ್ಪು, ಕಪ್ಪು, ಒಪ್ಪು ಇತ್ಯಾದಿ.

ನಡುಗನ್ನಡದ ಉತ್ತರ ಪ್ರಭೇದದಲ್ಲಿ ನಾಮಪದಗಳ ಕಡೆಯ ಸ್ವರ ಎ>ಇ ಆಯಿತು. ಉದಾ ತಲೆಮನೆ>ತಲಿಮನಿ, ಶಬ್ದಾಂತ್ಯದ ಉ ಅ ಆಯಿತು. ಉದಾ: ಆಳು>ಆಳ, ಎತ್ತು>ಎತ್ತ, ಕಾವಲು>ಕಾವಲ, ಕಾಳು>ಕಾಳ ಚ್ ಹಾಗೂ ಜ್ ಧ್ವನಿಗಳು ವತ್ಸ್ಯ ಮತ್ತು ತಾಲವ್ಯ ಎಂದು ಇರ್ತರನಾಗಿ ವಿಭಜಿತವಾದುವು. ಇವಲ್ಲದೆ ಇನ್ನಿತರ ಹಲವು ವ್ಯತ್ಯಾಸಗಳು ನಡುಗನ್ನಡದಲ್ಲೆ ಸಂಭವಿಸಿರುವುದನ್ನು ಕಾಣುವುದು ಸಾಧ್ಯವಿದೆ. ಹದಿನಾರನೆಯ ಶತಮಾನದ ಹರಿದಾಸರ ಕೀರ್ತನೆಗಳನ್ನೂ ಈ ವ್ಯಾಪ್ತಿಯ ತೆಕ್ಕೆಗೆ ತಂದುಕೊಂಡಾಗ ಈ ಕಾಲದ ಹರವು ದೊಡ್ಡದಾಗುವುದಲ್ಲದೆ ಇನ್ನೂ ಕೆಲವು ವ್ಯತ್ಯಾಸಗಳನ್ನು ಕನ್ನಡ ಭಾಷೆಯಲ್ಲಿ ಗುರುತಿಸುವುದು ಸಾಧ್ಯವಾಗುತ್ತದೆ. ಕೇಶಿರಾಜ ನಡುಗನ್ನಡ ಕಾಲದ ನಟ್ಟನಡುವೆ ನಿಂತೂ ತನ್ನ ಸಮಕಾಲೀನ ನಡುಗನ್ನಡ ಭಾಷೆಗೆ ವರ್ಣನಾತ್ಮಕ ವ್ಯಾಕರಣ ಬರೆಯದೆ ಗತ ಇತಿಹಾಸದತ್ತ (ಹಳಗನ್ನಡದತ್ತ) ನೋಟ ಹರಿಸಿ ಬರೆದರೂ ಶಬ್ದಮಣಿದರ್ಪಣದಲ್ಲಿ ನಡುಗನ್ನಡದ ಕೆಲವು ಲಕ್ಷಣಗಳಿಗೆ ಸುಳಿವುಗಳಿವೆ ಎಂಬ ಅಂಶ ಆ ಗ್ರಂಥದ ಅಧ್ಯಯನದಿಂದ ತಿಳಿಯುತ್ತದೆ. (ಎಚ್.ಪಿ.ಎನ್.)

**ಹೊಸಗನ್ನಡ :** ಈ ಭಾಷಾ ಘಟ್ಟ 14ನೆಯ ಶತಮಾನದಿಂದ ಆರಂಭವಾಯಿತೆಂದೂ 16, 17ನೆಯ ಶತಮಾನಗಳಿಂದ ಆರಂಭವಾಯಿತೆಂದೂ ಅಭಿಪ್ರಾಯಗಳಿವೆ. ಕೈಪಿಡಿಕಾರರು ಚಂಪೂಕಾವ್ಯಗಳ ಭಾಷೆ ಹಳಗನ್ನಡ, ಷಟ್ಪದಿ ಕಾವ್ಯಗಳ ಭಾಷೆ ನಡುಗನ್ನಡ ಮತ್ತು ಈಗಿನ ಗದ್ಯ ಬರೆವಣಿಗೆಯ ಭಾಷೆ ಹೊಸಗನ್ನಡವೆಂದು ವಿಂಗಡಿಸುತ್ತಾರೆ. ಆದರೆ ಕಾಲಮಾನದಿಂದ ನಿಖರವಾಗಿ ಇಂತಿಂಥ ಶತಮಾನಗಳಿಂದ ಇಂತಿಂಥ ಕನ್ನಡಗಳು ಎಂದು ಹೇಳುವುದು ಅಷ್ಟು ಸುಲಭವೂ ಅಲ್ಲ, ಸಮಂಜಸವೂ ಅಲ್ಲ. ಏಕೆಂದರೆ ಒಂದೇ ಕಾಲದಲ್ಲಿ ಹಳೆ-ನಡು-ಹೊಸಕನ್ನಡ ಪ್ರಭೇದಗಳ ಪ್ರಕ್ರಿಯೆಗಳು ಕಾಣಿಸಿಕೊಳ್ಳುವುದಿದೆ. ಸ್ಥೂಲವಾಗಿ 17ನೆಯ ಶತಮಾನದಿಂದ ಈಚೆಗಿನ ಭಾಷೆಯನ್ನು ಹೊಸಗನ್ನಡವೆಂದು ಇಲ್ಲಿ ಇಟ್ಟುಕೊಳ್ಳಬಹುದು.

ಹೊಸಗನ್ನಡ ಕಾಲದಲ್ಲಿ ಹಲವು ಪ್ರಾದೇಶಿಕ ಮತ್ತು ಸಾಮಾಜಿಕ ಪ್ರಭೇದಗಳು ಕನ್ನಡದಲ್ಲಿ ಕಂಡುಬರುತ್ತವೆ. ಪ್ರಾದೇಶಿಕವಾಗಿ ಇಂದು ಮಂಗಳೂರು, ಮೈಸೂರು, ಧಾರವಾಡ ಕನ್ನಡಗಳೆಂಬ ಪ್ರಭೇದಗಳಿರುವುದು ತಿಳಿದ ಸಂಗತಿ. ಕೆಲವೇಳೆ ಇವುಗಳೊಳಗೆ ತುಂಬ ಅಂತರ ಕಂಡುಬರುತ್ತದೆ. ಅರ್ಥಕ್ಲಿಷ್ಟತೆ, ಅಪಾರ್ಥಕ್ಕೆಡೆಯಾಗುವಿಕೆ ಹಾಗೂ ಒಬ್ಬರ ಮಾತು ಇನ್ನೊಬ್ಬರಿಗೆ ಹಾಸ್ಯಾಸ್ಪದವಾಗಿ ಕಾಣುವ ಸಂದರ್ಭಗಳು ಅಪರೂಪವಲ್ಲ. ಸಾಮಾಜಿಕವಾಗಿ ಕನ್ನಡದಲ್ಲಿ ಹವ್ಯಕ, ಗೌಡ, ಹಾಲಕ್ಕಿ, ಒಕ್ಕಲಿಗ, ಜೇನುಕುರುಬ, ಗುಲ್ಬರ್ಗ ಬ್ರಾಹ್ಮಣ, ಬಾರಕೂರು ಬ್ರಾಹ್ಮಣ ಮುಂತಾದ ಪ್ರಭೇದಗಳು ಪ್ರಚಲಿತವಾಗಿವೆ. ಇವು ಕೂಡ ಕಾಲಮಾನದ ದೃಷ್ಟಿಯಿಂದ ಹೇಳುವುದಾದರೆ ಹೊಸಗನ್ನಡವೆಂಬ ಹೆಸರಿಗೆ ಅರ್ಹವಾಗಿವೆ. ಆದರೆ ಇವು ಒಂದು ಸಮಾಜದ ಇಲ್ಲವೇ ಪ್ರದೇಶದ ಪರಿಮಿತಿಗೆ ಒಳಪಡುವುದರಿಂದ ಇವಕ್ಕೆ ಸಾರ್ವತ್ರಿಕತೆಯಿಲ್ಲ. ಆದುದರಿಂದ ಸಹಜವಾಗಿ ಯಾವುದೊಂದು ಪ್ರದೇಶದ ಅಥವಾ ವರ್ಗದ ಮಾತಾಗಿಯೂ ಇಲ್ಲದ ಆದರೆ ಎಲ್ಲ ಆಧುನಿಕ ಕನ್ನಡಿಗರ ವ್ಯವಹಾರೋಪಯುಕ್ತವಾಗಿರುವಂಥ ಪ್ರಭೇದವನ್ನು ಹೊಸಗನ್ನಡವೆಂದು ಕರೆಯಬಹುದು. ಈ ಪ್ರಭೇದದಲ್ಲಿ ಸಂಸ್ಕೃತ ಮಾತ್ರವಲ್ಲದೆ ಇತರ ಭಾಷೆಗಳಿಂದಲೂ ಶಬ್ದಗಳು ಎರವಲಾಗಿ ಬಂದಿವೆ. ಈ ದೃಷ್ಟಿಯಿಂದ ಪರೀಕ್ಷಿಸಿದಾಗ ಹೊಸಗನ್ನಡಕ್ಕೆ ಬೇಕಾದ ಧ್ವನಿಮಾಗಳ ಪಟ್ಟಿ ಹೀಗಿದೆ:

ಅ ಆ ಇ ಈ ಉ ಊ ಋ ಎ ಏ ಐ ಒ ಓ

ಕ ಖ ಗ ಘ

ಚ ಛ ಜ

ಟ ಠ ಡ ಢ ಣ

ತ ಥ ದ ಧ ನ

ಪ ಫ ಬ ಭ ಮ

ಅನುಸ್ವಾರ (ಂ)

ಯ ರ ಲ ವ ಶ ಷ ಸ ಹ ಳ

ಋ ಎಂಬುದು ಋಷಿ, ಕೃಷಿ, ಕೃತಿ, ಕರ್ತೃ ಮುಂತಾದ ಸಂಸ್ಕೃತದಿಂದ ಬಂದು ಕನ್ನಡದಲ್ಲಿ ಪ್ರಯೋಗವಾಗುವ ಪದಗಳಲ್ಲಿ ಬರುವ ಧ್ವನಿ. ಸಂಸ್ಕೃತ ವರ್ಣಮಾಲೆಯ ಪದ್ಧತಿಯಲ್ಲಿ ಇದು ಕನ್ನಡ ಸ್ವರ ಸಮುದಾಯದೊಡನೆ ಮೇಳಗೊಂಡಿದೆ. ಕನ್ನಡ ವರ್ಣಮಾಲೆಯಲ್ಲಿ ಙ, ಞ ಗಳಿಗೆ ಸಂಜ್ಞೆಯಿದ್ದರೂ ಅವು ನಿಗದಿತ ಸ್ಥಾನಗಳಲ್ಲಿ ಮಾತ್ರ ಧ್ವನಿಸುತ್ತವೆ ಹೊರತು ಅರ್ಥವ್ಯತ್ಯಾಸಕ್ಕೆ ಕಾರಣವಾಗುವ ಸ್ವತಂತ್ರ ಧ್ವನಿಮಾಗಳಾಗಿಲ್ಲವಾದುದರಿಂದ ಅವನ್ನು ಧ್ವನಿಮಾ ಪಟ್ಟಿಯಿಂದ ಬಿಡಬಹುದು. ೠ ಎಂಬುದು ಸಂಸ್ಕೃತದಿಂದ ಬಂದ ಕೆಲವು ಅಪೂರ್ವ ಪದಗಳಲ್ಲಿ ಬಳಕೆಯಾಗುತ್ತದೆ. ಅದು ಕನ್ನಡದಲ್ಲಿ ಉಳಿದ ಮಹಾಪ್ರಾಣಗಳಂತೆ ಸಹಜವಾಗಿಯೂ ಪ್ರಬಲವಾಗಿಯೂ ಇಲ್ಲ. ಹೀಗಾಗಿ ಅದನ್ನೂ ಧ್ವನಿಮಾ ಪಟ್ಟಿಯಿಂದ ತೆಗೆಯಬೇಕಾಗುತ್ತದೆ. ಆದರೆ ಇದರ ಬದಲಿಗೆ ಇಂಗ್ಲಿಷಿನ Zoo ಮತ್ತು presence ಗಳಲ್ಲಿನ Z ಮತ್ತು S ಗಳ ಉಚ್ಚಾರಣೆಯನ್ನು ಕನ್ನಡದಲ್ಲಿ ತರಲು ಸಕಾರದ ಕೆಳಗೆ ಎರಡು ಚುಕ್ಕಿ ಇಟ್ಟು ಅದನ್ನೇ ಬಳಸಬಹುದು (ಸ). ಇದೇ ರೀತಿ 'ಫ' ಕ್ಕೆ ತಳದಲ್ಲಿ ಎರಡು ಚುಕ್ಕೆ ಇಟ್ಟು (ಫ) ಇಂಗ್ಲಿಷಿನ F ಉಚ್ಚಾರಣೆಯನ್ನು ತಂದುಕೊಳ್ಳಬಹುದು. ತಾತ್ಪರ್ಯವಿಷ್ಟು: ಉಚ್ಚಾರಣಾ ಚಿಹ್ನೆಗಳ ಬಳಕೆಯಿಂದ ಯಾವ ಪದವನ್ನಾದರೂ ಕನ್ನಡದಲ್ಲಿ ಬರೆಯಲು ಸಾಧ್ಯ. ಪದಾಂತ್ಯದಲ್ಲಿ ಹಾಗೂ ಯ, ರ, ಲ, ವ, ಶ, ಸ, ಹ ಗಳ ಪೂರ್ವದಲ್ಲಿ ಮಾತ್ರ ಅನುಸ್ವಾರವೆಂದು ಕರೆಯಲಾದ ಬಿಂದು ಸಂಸ್ಕೃತದಲ್ಲಿ ಬಳಕೆಯಲ್ಲಿದ್ದಂತೆ ಕನ್ನಡಕ್ಕೂ ಬಂದುದು ಬರೆವಣಿಗೆಯ ಸೌಲಭ್ಯಕ್ಕೋ ಎಂಬಂತೆ ವರ್ಗವ್ಯಂಜನಗಳ ಪೂರ್ವಸ್ಥಾನದಲ್ಲಿ ಬರುವ ವರ್ಗಾನುನಾಸಿಕಗಳ ಸ್ಥಾನವನ್ನಾಕ್ರಮಿಸತೊಡಗಿ, ಆ ಐದು ಅನುನಾಸಿಕಗಳಿಗೂ ಏಕಚಿಹ್ನೆಯಾಗಿ ನಿಂತಿತು. ಇದರ ಆಕ್ರಮಣ ಹಳಗನ್ನಡ ಮತ್ತು ನಡುಗನ್ನಡ ಕಾಲದಲ್ಲಿ ಸತತವಾಗಿ ನಡೆದು ಹೊಸಗನ್ನಡದಲ್ಲಿ ಭದ್ರವಾಯಿತು. ಹೊಸಗನ್ನಡ ಕಾಲದಲ್ಲಿ ವರ್ಗವ್ಯಂಜನಪೂರ್ವದಲ್ಲಿ ವರ್ಗಾನುನಾಸಿಕವನ್ನು ಬರೆಯುವುದು ಇಲ್ಲವೇ ಇಲ್ಲ. ಕಿಟ್ಟೆಲರ ಕೋಶದಲ್ಲಿ ಮಾತ್ರ ಙ ಮತ್ತು ಞ ಗಳನ್ನು ಅನುಸ್ವಾರದೊಡನೆ ಸಮೀಕರಿಸಿ ಉಳಿದೆಡೆಯಲ್ಲೆಲ್ಲ ವರ್ಗಾನುನಾಸಿಕ + ವರ್ಗವ್ಯಂಜನದ ಸಂಯುಕ್ತ ರೂಪವನ್ನೇ ಕೊಡಲಾಗಿದೆ. ಪರಿಷ್ಕೃತ ದ್ವಿತೀಯ ಮುದ್ರಣದಲ್ಲೂ ಇದೇ ಕ್ರಮವನ್ನು ಅನುಸರಿಸಲಾಗಿದೆ. ನಡುಗನ್ನಡ ಕಾಲದಿಂದ ಅನುನಾಸಿಕ ದ್ವಿತ್ವಗಳನ್ನು ಬರೆಯುವಲ್ಲಿಯೂ ಅನುಸ್ವಾರವನ್ನು ಮೊದಲ ಅನುನಾಸಿಕ ಸ್ಥಾನದಲ್ಲಿ ಬರೆಯುವ ಕ್ರಮವಿದ್ದುದು- ಉದಾ: ಅಂಣ (= ಅಣ್ಣ), ಚೆಂನ (= ಚೆನ್ನ), ತಂಮ (= ತಮ್ಮ) ಈಗ ಆಯಾ ಅನುನಾಸಿಕಗಳಿಂದಲೇ (ಕಂಸದಲ್ಲಿ ಕೊಟ್ಟಂತೆ) ಬರೆಯಲಾಗುತ್ತದೆ.

ಮಹಾಪ್ರಾಣ ಸಾಧಾರಣವಾಗಿ ಬ್ರಾಹ್ಮಣರ ಹಾಗೂ ಕಲಿತವರ ಮಾತಿನಲ್ಲಿ ಮಾತ್ರ ಕಂಡುಬರುತ್ತದೆ. ಅಪ್ರಬುದ್ಧ ಬರೆವಣಿಗೆಯಲ್ಲಿ ಮಹಾಪ್ರಾಣ ಅಲ್ಪಪ್ರಾಣಗಳ ವ್ಯತ್ಯಯವಾಗುವುದೂ ಕಂಡುಬರುವುದಿದೆ. ಬರೆವಣಿಗೆಯಲ್ಲಿ ನಿರ್ದಿಷ್ಟ ಸ್ಥಾನದಲ್ಲಿ ಬರುವುದಾದರೂ ಉಚ್ಚಾರಣೆಯಲ್ಲಿ ವ್ಯತ್ಯಸ್ತವಾಗುವ ಧ್ವನಿಯುಗ್ಮ ಶ ಮತ್ತು ಷ. ಎರಡನೆಯದು ಮೂರ್ಧನ್ಯ ಧ್ವನಿಯಾದರೂ ಅಷ್ಟು ನಿಖರವಾಗಿ ಅದು ಮೂರ್ಧನ್ಯವಾಗದೆ ಮೊದಲನೆಯ ತಾಲವ್ಯ ಊಷ್ಮಕ್ಕೆ ಸಮೀಪವಾಗಿ ಕಾಣುತ್ತದೆ. ಪ>ಹ ಪರಿವರ್ತನೆ, ೞ>ಳ, ಱ>ರ ವಿಲೀನಕ್ರಿಯೆ ನಡುಗನ್ನಡದಲ್ಲಿಯೇ ಆಗಿಹೋಗಿದೆ.

ಹಳಗನ್ನಡದಲ್ಲಿ ವ್ಯಂಜನಾಂತಗಳಾಗಿದ್ದ ಪದಗಳೆಲ್ಲ ನಡುಗನ್ನಡ ಮತ್ತು ಹೊಸಗನ್ನಡದಲ್ಲಿ ಉಕಾರಾಂತವಾಗುತ್ತವೆ. ಕಾಲ್>ಕಾಲು; ಕಾಣ್>ಕಾಣು ಇತ್ಯಾದಿ ನಡುಗನ್ನಡದಲ್ಲಿ ಕಲು, ಹಲು, ಹುಲು, ಕಣು ಎಂಬಿತ್ಯಾದಿ ಸರಳ ವ್ಯಂಜನಯುಕ್ತ ಪದಗಳು ಹೊಸಗನ್ನಡದಲ್ಲಿ ದ್ವಿತ್ವ ವ್ಯಂಜನಯುಕ್ತವಾಗಿವೆ: ಕಲ್ಲು, ಹಲ್ಲು, ಹುಲ್ಲು, ಕಣ್ಣು ಇತ್ಯಾದಿ. ಸಂಯುಕ್ತ ವ್ಯಂಜನಗಳಾಗಿದ್ದ ಅನೇಕ ಪದಗಳು ಹೊಸಗನ್ನಡದಲ್ಲಿ ವಿರಳಗೊಂಡಿವೆ. ಆರ್ಗೆ>ಯಾರಿಗೆ, ಕಾಣ್ಕೆ>ಕಾಣಿಕೆ, ಊರ್ಗೆ>ಊರಿಗೆ ಇತ್ಯಾದಿ. ಆದರೆ ಮಾತಿನಲ್ಲಿ ಹಲವು ಪ್ರಭೇದಗಳಲ್ಲಿ ಪದದೊಳಗಣ ಸ್ವರ ಲೋಪಗೊಂಡು, ಹಲವು ಸಂಯುಕ್ತ ವ್ಯಂಜನಗಳು ಬರೆಹದಲ್ಲಿರುವದಕ್ಕಿಂತ ಹೆಚ್ಚಾಗಿವೆ. ಹೊರಟು>ಹೊರ್ಟು, ಬರಲಿಲ್ಲ>ಬರ್ಲಿಲ್ಲ, ಅಡಕೆ>ಅಡ್ಕೆ ಇತ್ಯಾದಿ

ಹಳಗನ್ನಡದ ದೀರ್ಘಸಮಾಸಗಳು ಹೊಸಗನ್ನಡದಲ್ಲಿ ಕಡಿಮೆ, ಮಾತಿನಲ್ಲಂತೂ ಪದಪದಗಳು ಬೇರೆ ಬೇರೆಯಾಗಿ ನಿಲ್ಲುತ್ತವೆ. ಉದಾ: ಕ್ರಮದಪ್ಪು > ಕ್ರಮ ತಪ್ಪು, ಕೌತುಕಂದಾಳ್ > ಕೌತುಕ ತಾಳು ಇತ್ಯಾದಿ. ಆದರೆ ಅಂಗಾಲು, ಕೊನೆಗಾಣು, ಗರಿಗೆದರು ಇತ್ಯಾದಿ ಕೆಲವು ಸಮಾಸ ಪದಗಳು ಹೊಸಗನ್ನಡದಲ್ಲಿ ಹಾಗೇ ಉಳಿದಿವೆ.

ಪ್ರಥಮಪುರುಷ ಸರ್ವನಾಮದಲ್ಲಿ ಪುಲ್ಲಿಂಗ ಪ್ರತ್ಯಯ ಅನು ಎಂಬುದು ಆ ಎಂದು ಹೊಸಗನ್ನಡದಲ್ಲಿ ಬರುವುದು ಸರ್ವ ಸಾಮಾನ್ಯವಾಗಿದೆ. ಉದಾ: ಅವನು>ಅವ, ಇವನು>ಇವ: ಕ್ರಿಯಾಪದದಲ್ಲೂ ಇದು ಕಂಡುಬರುತ್ತದೆ. ಬಂದನು>ಬಂದ, ತಿಂದನು>ತಿಂದ ಇತ್ಯಾದಿ. ಹಳಗನ್ನಡ ಮತ್ತು ನಡುಗನ್ನಡಗಳಲ್ಲಿ ಭೂತ ಮತ್ತು ಭವಿಷ್ಯತ್ಕಾಲ ಕ್ರಿಯಾರೂಪಗಳು ಮಾತ್ರವಿದ್ದುವು. ವರ್ತಮಾನ ಕಾಲದ ಕ್ರಿಯೆ ಭೂತ ಮತ್ತು ಭವಿಷ್ಯತ್ಕಾಲ ರೂಪಗಳ ಸಂಯುಕ್ತ ರೂಪದಿಂದ (ಉದಾ: ಬಂದು+ ಅಪೆನ್=ಬಂದಪೆನ್>ಬಂದಹೆನ್) ವ್ಯಕ್ತವಾಗುತ್ತಿತ್ತು. ಹೊಸಗನ್ನಡದಲ್ಲಿ ವರ್ತಮಾನ ಕ್ರಿಯೆಗೆ ಏನೆ, ಏವೆ, ಈ, ಈರಿ, ಆನೆ, ಆಳೆ, ಆರೆ, ಅದೆ, ಇದೆ ಅವೆ, ಇವೆ ಎಂಬ ಸರ್ವನಾಮ ಪ್ರತ್ಯಯಗಳೆಂದು ಈಗ ಪರಿಗಣಿತವಾಗಿರುವ ರೂಪಗಳು ಉತ್ತ ಎಂಬ ಕಾಲವಾಚಕ ಪ್ರತ್ಯಯದ ಅನಂತರ ಬಂದು ವರ್ತಮಾನ ಪೂರ್ಣಕ್ರಿಯಾಪದ ನಿರ್ದೇಶವಾಗುತ್ತದೆ. ಅಲ್ಲದೆ ಭವಿಷ್ಯತ್ಕಾಲ ಪೂರ್ಣ ಕ್ರಿಯಾಪದದ ಸ್ಥಾನವನ್ನು ಇದು ಪ್ರಬಲವಾಗಿ ಆಕ್ರಮಿಸುತ್ತಿದ್ದು, ಕಾಲಸೂಚಕ ಕ್ರಿಯಾವಿಶೇಷಣಗಳಾದ ನಾಳೆ, ನಾಡಿದ್ದು ಅಥವಾ ಬರಲಿರುವ ಕಾಲನಿರ್ದೇಶಕ ನಾಮಪದಗಳು ವಾಕ್ಯದಲ್ಲಿ ಪ್ರಯೋಗವಾಗಿ, ಭವಿಷ್ಯದರ್ಥದಲ್ಲಿ ಇದರ ವ್ಯಾಪ್ತಿ ಹೆಚ್ಚಾಗಿದೆ. ನಿಷೇಧ ಕ್ರಿಯೆ ಹಳಗನ್ನಡದಲ್ಲಿ ಪೂರ್ಣ ಕ್ರಿಯಾಪದಕ್ಕೆ ಇಲ್ಲ ಎಂಬುದು ಸೇರಿ ನಿರ್ದೇಶಿತವಾಗುತ್ತಿತ್ತು. ನಿಷೇಧ ಕ್ರಿಯೆಯಲ್ಲಿ ಕಾಲಸೂಚನೆ ಇಲ್ಲ ಎಂಬುದರ ಪೂರ್ವದಲ್ಲಿ ಬರುವ ಪೂರ್ಣ ಕ್ರಿಯಾಪದದ ಮೂಲಕ ನಡೆಯುತ್ತಿತ್ತು. ಕ್ರಿಯಾಧಾತು ಮತ್ತು ಸರ್ವನಾಮ ಪ್ರತ್ಯಯ ಸೇರಿದ, ಕಾಲ ಸೂಚನೆಯೇ ಇರದ ನಿಷೇಧ ಕ್ರಿಯೆಯೂ ಇರುತ್ತಿತ್ತು. ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ ಇದು ಬದಲಾಗಿ, ಎರಡನೆಯದು ಅಪೂರ್ವವಾಗಿ, ಕೊಡೆ, ಬಿಡೆ, ಮಾಡೆ ಎಂದು ಪ್ರಯೋಗವಾಗುತ್ತದಾದರೂ ಮೊದಲನೆಯದರ ರೀತಿಯಲ್ಲಿ (i) ನಪುಂಸಕ ಸರ್ವನಾಮ ಪ್ರತ್ಯಯವುಳ್ಳ ಪೂರ್ಣಕ್ರಿಯೆಗೆ 'ಇಲ್ಲ' ಎಂಬುದು ಸೇರಿ (ಬಂದುದು + ಇಲ್ಲ = ಬಂದುದಿಲ್ಲ. ಬರುವುದು + ಇಲ್ಲ = ಬರುವುದಿಲ್ಲ). (ii) ಸತಿ ಸಪ್ತಮಿಗೆ ಇಲ್ಲ ಎಂಬುದು ಸೇರಿ ಭೂತಕಾಲದ ಅರ್ಥದಲ್ಲಿ (ಬರಲ್ + ಇಲ್ಲ = ಬರಲಿಲ್ಲ, ಕೊಡಲ್ + ಇಲ್ಲ = ಕೊಡಲಿಲ್ಲ) ಅಥವಾ (iii) ಭೂತಕೃದ್ವಾಚಿ ರೂಪಕ್ಕೆ ಇಲ್ಲ ಎಂಬುದು ಸೇರಿ (ಬಂದು+ ಇಲ್ಲ= ಬಂದಿಲ್ಲ, ಕೊಟ್ಟು + ಇಲ್ಲ = ಕೊಟ್ಟಿಲ್ಲ) ನಿಷೇಧರೂಪದ ಕಾಲ ವ್ಯಕ್ತವಾಗುತ್ತದೆ.

ಸಂಖ್ಯಾನಾಮರೂಪಗಳಾದ ಓರ್ವನ್, ಇರ್ವರ್, ಮೂವರ್, ನಾಲ್ವರ್ ಎಂಬಿತ್ಯಾದಿ ಹಳಗನ್ನಡ ಮತ್ತು ನಡುಗನ್ನಡಗಳಲ್ಲಿದ್ದ ರೂಪಗಳು ನಡುಗನ್ನಡ ಕಾಲದಿಂದಾರಂಭಿಸಿ, ಹೊಸಗನ್ನಡದಲ್ಲಿ ಸಂಖ್ಯಾವಾಚಿ ಮಂದಿ ಅಥವಾ ಜನ ಎಂಬ ವರ್ಗವಾಚಿ ಪದಗಳು ಸೇರಿ ಸಂಖ್ಯೆ ಎರಡರ ಅನಂತರದವುಗಳಲ್ಲಿ ಪ್ರಯೋಗವಾಗುತ್ತದೆ (ಒಬ್ಬ, ಇಬ್ಬರು, ಮೂರು ಮಂದಿ, ಮೂರು ಜನ, ನಾಲ್ಕುಮಂದಿ, ನಾಲ್ಕುಜನ ಇತ್ಯಾದಿ). ಈ ವರ್ಗವಾಚಿ ಮಾಗಧಿ ಭಾಷೆಗಳಿಂದಾರಂಭಿಸಿ ಮರಾಠಿಗೆ ಹರಿದು, ಅಲ್ಲಿಂದ ದ್ರಾವಿಡ ಭಾಷೆಗಳಿಗೂ ಬಂದಿತೆಂದು ಭಾಷಾ ವಿಜ್ಞಾನಿಗಳು ಹೇಳುತ್ತಾರೆ. ತೋರಮಟ್ಟಿನ ಹೋಲಿಕೆಯಿಂದ ನೋಡಿದರೆ, ಹೊಸಗನ್ನಡವು ಹಳಗನ್ನಡದ ಸಂಶ್ಲಿಷ್ಟರೂಪದಿಂದ ಸರಳ ರೂಪಕ್ಕೆ ತಿರುಗಿದುದಾಗಿ ಕಾಣುತ್ತದೆ. (ಕೆ.ಕೆಯು.ಜಿ.)

**ವರ್ಣಮಾಲೆ :** ಕನ್ನಡ ವರ್ಣಮಾಲೆಯಲ್ಲಿ ಒಟ್ಟು 47 ಅಕ್ಷರಗಳಿವೆ. ಸಂಸ್ಕೃತ ವರ್ಣಮಾಲೆಯ 52 ಅಕ್ಷರಗಳಲ್ಲಿ ಋ, ೠ, ಎಂಬ ಸ್ವರಗಳು, ಶ, ಷ, ಳ (ಕ್ಷಳ) ಎಂಬ ವ್ಯಂಜನಗಳು, ಮೂರು ಯೋಗವಾಹಗಳು ಸೇರಿ ಹತ್ತು ಅಕ್ಷರಗಳು ಕನ್ನಡದಲ್ಲಿಲ್ಲ. ಅವಕ್ಕೆ ಬದಲಾಗಿ ಎ, ಒ, ಱ , ೞ, ಳ (ಕುಳ) ಎಂಬ ಐದು ದೇಶೀಯ ಅಕ್ಷರಗಳನ್ನು ಸೇರಿಸಿದರೆ 47 ಅಕ್ಷರಗಳಾಗುತ್ತವೆ. ಈ ನಲವತ್ತೇಳರಲ್ಲೂ ಹತ್ತು ಮಹಾಪ್ರಾಣಗಳು ಸಂಸ್ಕೃತ ತತ್ಸಮ ಪದಗಳಲ್ಲಿ ಮಾತ್ರ ಕಂಡುಬರುವುದರಿಂದ ಇವು ಕನ್ನಡದ ಜಾಯಮಾನಕ್ಕೆ ಸೇರಿದವುಗಳಲ್ಲ ಎನ್ನಬಹುದು. ಕನ್ನಡದ ಒಂದೆರಡು ಸಂಖ್ಯಾವಾಚಕ ಶಬ್ದಗಳಲ್ಲಿ ಹಾಗೂ ಅನುಕರಣ ವಾಚಕಗಳಲ್ಲಿ ಮಾತ್ರ

ಮಹಾಪ್ರಾಣಗಳು ಕಾರಣಾಂತರದಿಂದ ಸೇರಿ ಹೋಗಿವೆ. ಐ ಔ ಗಳೂ ಕನ್ನಡಕ್ಕೆ ಅವಶ್ಯವಿಲ್ಲ. ಅವುಗಳನ್ನು ಅಯ್, ಅವ್ ಎಂದೂ ಬರೆಯಬಹುದು. ಸಂಸ್ಕೃತ ಶಬ್ದಗಳನ್ನು ಬರೆಯಲು ಋ ಎಂಬ ಸ್ವರವನ್ನು ಶ,ಷ ವಿಸರ್ಗ ಮುಂತಾದ ವ್ಯಂಜನಗಳನ್ನು ಸೇರಿಸಬೇಕಾಗುತ್ತದೆ. ಆಧುನಿಕ ಕನ್ನಡದಲ್ಲಿ ಇಂಗ್ಲಿಷ್ ಮತ್ತು ಇತರ ಭಾಷೆಗಳಿಂದ ಅಪೂರ್ವ ಉಚ್ಚಾರಣೆಗಳನ್ನುಳ್ಳ ಅನೇಕ ಪದಗಳನ್ನು ಬಳಸುತ್ತಿರುವ ಕಾರಣ ಅವುಗಳ ಸ್ವರೂಪವನ್ನು ಧ್ವನಿಯನ್ನು ಸರಿಯಾಗಿ ಸೂಚಿಸಲು ಯುಕ್ತ ಉಚ್ಚಾರಣ ಚಿಹ್ನೆಗಳನ್ನು ಬಳಸಿಕೊಳ್ಳಬಹುದು. ಈ ವಿಷಯವನ್ನು ಈ ಲೇಖನದಲ್ಲಿ ಹಿಂದೆಯೇ ತಿಳಿಸಲಾಗಿದೆ.

**ವ್ಯಾಕರಣ ವ್ಯವಸ್ಥೆ :** ಕನ್ನಡದ ನಾಮಪದಗಳಲ್ಲಿ ಲಿಂಗ, ವಚನ, ವಿಭಕ್ತಿಗಳ ವಿವಕ್ಷೆಯಿದೆ. ನಾಮಪದಕ್ಕೆ ಲಿಂಗ, ವಚನಗಳನ್ನು ಸೂಚಿಸುವ ಪ್ರತ್ಯಯ ಮತ್ತು ವಿಭಕ್ತಿ ಪ್ರತ್ಯಯ ಸೇರುತ್ತವೆ. ಕನ್ನಡದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗಗಳೆಂಬ ಮೂರು ಲಿಂಗಗಳೂ ಏಕವಚನ, ಬಹುವಚನಗಳೆಂಬ ಎರಡು ವಚನಗಳೂ ಐದು ವಿಭಕ್ತಿಗಳೂ ಇವೆ. ಉತ್ತಮಪುರುಷ ಹಾಗೂ ಮಧ್ಯಮಪುರುಷ ಸರ್ವನಾಮಗಳಲ್ಲಿ ಲಿಂಗ ವಿವಕ್ಷೆ ಇಲ್ಲ. ಪ್ರಥಮಪುರುಷ ಸರ್ವನಾಮ ಹಾಗೂ ಇತರ ನಾಮಪದಗಳಲ್ಲಿ ಮಹತ್, ಅಮಹತ್ ಅಥವಾ ಮೇಲು ಜಾತಿ, ಕೀಳು ಜಾತಿ ಎಂಬ ಭೇದವನ್ನು ಕಾಣಬಹುದು. ಮನುಷ್ಯವಾಚಕ ಮತ್ತು ವಿವೇಚನಾಶಕ್ತಿಯುಳ್ಳ ಜೀವಿಗಳನ್ನು ಹೇಳುವ ಶಬ್ದಗಳನ್ನು ಮೇಲುಜಾತಿ ಎಂದೂ ಇತರ ಪ್ರಾಣಿವಾಚಕ ಹಾಗೂ ನಿರ್ಜೀವ ವಸ್ತುಗಳನ್ನು ದ್ಯೋತಿಸುವ ಶಬ್ದಗಳನ್ನು ಕೀಳುಜಾತಿ ಎಂದೂ ಕರೆಯಬಹುದು. ಮಹತ್ ಶಬ್ದಗಳಲ್ಲಿ ನೈಸರ್ಗಿಕ ಲಿಂಗಭೇದಕ್ಕನುಸಾರವಾಗಿ ಪುಲ್ಲಿಂಗ, ಸ್ತ್ರೀಲಿಂಗವೆಂಬ ಭೇದವಿದೆ. ಅಮಹತ್ ಶಬ್ದ ಯಾವಾಗಲೂ ನಪುಂಸಕಲಿಂಗವಾಗಿರುತ್ತದೆ. ಪುಂಸ್ತ್ರೀಭೇದವನ್ನು ಏಕವಚನದಲ್ಲಿ ಅನ್ ಅಳ್ ಪ್ರತ್ಯಯಗಳೂ ಬಹುವಚನದಲ್ಲಿ ಅರ್,ಇರ್, ದಿರ್,ವಿರ್ ಪ್ರತ್ಯಯಗಳೂ ಸೂಚಿಸುತ್ತವೆ. ನಪುಂಸಕಲಿಂಗಸೂಚಕವಾಗಿ ಕೆಲವೊಮ್ಮೆ ಅಮ್ ಪ್ರತ್ಯಯವೂ ಬಹುವಚನದಲ್ಲಿ ಗಳ್ ಪ್ರತ್ಯಯವೂ ಸೇರುತ್ತವೆ. ಸರ್ವನಾಮದಲ್ಲಿ ನಪುಂಸಕಲಿಂಗ ಪ್ರತ್ಯಯಗಳು ಏಕವಚನ ಬಹುವಚನಗಳಲ್ಲಿ ಅನುಕ್ರಮವಾಗಿದ್ದುವು ಎಂದಿರುತ್ತವೆ. ಆಧುನಿಕ ಕನ್ನಡ ನಾಮಪದಗಳಲ್ಲಿ ಏಕವಚನ ಪ್ರತ್ಯಯವೂ ನಪುಂಸಕಲಿಂಗದಲ್ಲಿ ಬಹುವಚನ ಪ್ರತ್ಯಯವೂ ಲೋಪವಾಗುತ್ತವೆ.

ಕನ್ನಡದಲ್ಲಿ ಐದು ವಿಭಕ್ತಿಗಳಿವೆ. ಸಂಸ್ಕೃತದ ಪ್ರಥಮಾ ಮತ್ತು ಪಂಚಮೀ ಕನ್ನಡದಲ್ಲಿಲ್ಲ ಎನ್ನಬಹುದು. ಪ್ರಥಮಾ ವಿಭಕ್ತಿಯ ಅರ್ಥದಲ್ಲಿ ಪ್ರತ್ಯಯವಾವುದೂ ಬರದೆ ಪ್ರಕೃತಿ ಮಾತ್ರವೇ ಪ್ರಯೋಗದಲ್ಲಿದೆ. ಪಂಚಮೀ ವಿಭಕ್ತಿಯ ಅರ್ಥದಲ್ಲಿ ಪ್ರತ್ಯೇಕವಾದ ವಿಭಕ್ತಿ ಪ್ರತ್ಯಯವಿರದೆ ದೆಸೆ, ಅತ್ತಣ್ ಎಂಬ ಶಬ್ದಗಳನ್ನು ಸೇರಿಸಿ ಅದರ ಮೇಲೆ ತೃತೀಯಾ ವಿಭಕ್ತಿ ಪ್ರತ್ಯಯವಾದ 'ಇಂದ' ವನ್ನು ಸೇರಿಸುವುದು ವಾಡಿಕೆ. ಹಳಗನ್ನಡದ ಮ್ ಎಂಬುದನ್ನು ಪ್ರಥಮಾ ವಿಭಕ್ತಿ ಪ್ರತ್ಯಯವೆಂದು ಪರಿಗಣಿಸಿದ್ದರೂ ಅದು ವಿಭಕ್ತಿ ಪ್ರತ್ಯಯವಲ್ಲವೆಂದೂ ಲಿಂಗಸೂಚಕವೆಂದೂ ಹೇಳಬಹುದು. ಹೊಸಗನ್ನಡದಲ್ಲಿ ಅದು ಕೂಡ ಲೋಪವಾಗಿದೆ. ದ್ವಿತೀಯಾವಿಭಕ್ತಿ ಪ್ರತ್ಯಯದ ರೂಪ ಹಳಗನ್ನಡದಲ್ಲಿ ಅಂ, ಅಂ ಎಂದೂ ನಡುಗನ್ನಡದಲ್ಲಿ ಅನ, ಅನು ಎಂದೂ ಆಗುತ್ತದೆ. ತೃತೀಯಾ ವಿಭಕ್ತಿ ಪ್ರತ್ಯಯವನ್ನು ಹಳಗನ್ನಡ ನಡುಗನ್ನಡದಲ್ಲಿ ಇಂ, ಇದು ಎಂದೂ ಹೊಸಗನ್ನಡದಲ್ಲಿ ಇಂದ ಎಂದೂ ಕಾಣುತ್ತೇವೆ. ಚತುರ್ಥೀ ವಿಭಕ್ತಿ ಪ್ರತ್ಯಯ ಕೆ ಅಥವಾ ಗೆ, ಷಷ್ಠೀ ವಿಭಕ್ತಿಪ್ರತ್ಯಯ ಅ, ಸಪ್ತಮೀ ವಿಭಕ್ತಿ ಪ್ರತ್ಯಯ ಒಳ್, ಒಳಗೆ ಅಥವಾ ಅಲ್ಲಿ - ಈ ವಿಭಕ್ತಿ ಪ್ರತ್ಯಯಗಳೆಲ್ಲ ಮೊದಲು ಸ್ವತಂತ್ರ ಶಬ್ದಗಳಾಗಿದ್ದುವೆಂದೂ ಕಾಲಕ್ರಮದಲ್ಲಿ ಪ್ರತ್ಯಯಗಳಾಗಿ ಮಾರ್ಪಟ್ಟುವೆಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಉತ್ತಮಪುರುಷ ಸರ್ವನಾಮಗಳು ಹಳಗನ್ನಡದಲ್ಲಿ ಆನ್, ಆಮ್ ಎಂದಿದ್ದು ನಡುಗನ್ನಡದ ಕಾಲಕ್ಕೆ ನಾನ್, ನಾವ್ ಎಂದೂ ಹೊಸಗನ್ನಡದಲ್ಲಿ ನಾನು, ನಾವು ಎಂದೂ ಆದುವು. ಮಧ್ಯಮ ಪುರುಷ ಸರ್ವನಾಮಗಳು ನೀನ್ ಮತ್ತು ನೀಮ್, ಪ್ರಥಮಪುರುಷ ಸರ್ವನಾಮಗಳು ಅ, ಇ, ಉ ಎಂಬ ಸ್ಥಾನ ನಿರ್ದೇಶಿಗಳಿಗೆ ಪುಲ್ಲಿಂಗ ಸ್ತ್ರೀಲಿಂಗ ನಪುಂಸಕಲಿಂಗ ಪ್ರತ್ಯಯಗಳು ಸೇರಿ ಅವನ್, ಇವನ್, ಉವನ್ ಇತ್ಯಾದಿ ರೂಪಗಳು ಸಿದ್ಧಿಸಿವೆ. ಅ ಎಂಬುದು ದೂರವನ್ನೂ ಇ ಎಂಬುದು ಸಮೀಪವನ್ನೂ ಉ ಎಂಬುದು ಎರಡಕ್ಕೂ ಮಧ್ಯವನ್ನೂ ನಿರ್ದೇಶಿಸುತ್ತವೆ. ಉಕಾರದಿಂದ ಪ್ರಾರಂಭವಾಗುವ ಸರ್ವನಾಮಗಳು ಹಳಗನ್ನಡದಲ್ಲಿ ಕೆಲವೆಡೆ ಮಾತ್ರ ಪ್ರಯೋಗದಲ್ಲಿದ್ದು ಆಮೇಲೆ ಕಾಣಬರುವುದಿಲ್ಲ. ಉದಾ: ಆತ, ಈತ, ಊತ; ಆಕೆ, ಈಕೆ ಊಕೆ; ಅದು, ಇದು, ಉದು; ಪ್ರಶ್ನಾರ್ಥಕ ಸರ್ವನಾಮಗಳು ಆವನ್, ಆವಳ್ ಇತ್ಯಾದಿಗಳಾಗಿದ್ದು ಹೊಸಗನ್ನಡದಲ್ಲಿ ಅವುಗಳ ಆದಿ ಆ ಕಾರದ ಮುಂದೆ ಯ ಕಾರ ಬಂದು ಯಾವನ್, ಯಾವಳ್ ಇತ್ಯಾದಿಗಳಾಗಿವೆ.

ಕನ್ನಡ ಭಾಷೆಯ ಕ್ರಿಯಾಪದಗಳು ಗುಣವಾಚಕ ವಿಶೇಷಣಗಳಾಗಿಯೂ ನಾಮಪದಗಳಾಗಿಯೂ ಉಪಯೋಗಿಸಲ್ಪಡುತ್ತವೆ. ಕ್ರಿಯಾಪದಕ್ಕೆ ಹತ್ತುವ ಪುರುಷ - ವಚನ ಸೂಚಕ ಪ್ರತ್ಯಯಗಳೂ ಸರ್ವನಾಮಗಳ ರೂಪಗಳೇ ಎಂಬುದನ್ನು ಗಮನಿಸಬಹುದು. ಉತ್ತಮಪುರುಷ ಏಕವಚನ ಎನ್, ಎನು ಮತ್ತು ಎ; ಬಹುವಚನ ಎವ್, ಎವು; ಮಧ್ಯಮಪುರುಷ ಏಕವಚನ ಅಯ್, ಎ; ಬಹುವಚನ ಇರ್, ಇರಿ; ಪ್ರಥಮ ಪುರುಷ ಏಕವಚನ ಅನ್, ಅಳ್; ಬಹುವಚನ ಅರ್; ನಪುಂಸಕಲಿಂಗ ಏಕವಚನ ಉದು, ಉತ್ತು; ಬಹುವಚನ ಉವು. ಈ ಎಲ್ಲ ಪ್ರತ್ಯಯಗಳೂ ಮೇಲೆ ಹೇಳಿದ ಸರ್ವನಾಮಗಳ ಸವೆದ ರೂಪಗಳೆಂದು ತೋರಿಸುವುದು ಕಷ್ಟವಲ್ಲ. ಈ ಪ್ರತ್ಯಯಗಳನ್ನು ಧಾತುವಿನ ಕೃದ್ವಾಚಿಗಳಿಗೆ ಸೇರಿಸಿ ಬೇರೆ ಬೇರೆ ಕ್ರಿಯಾ ರೂಪಗಳನ್ನು ಸಿದ್ಧಿಸಿಕೊಳ್ಳಬಹುದು. ಕನ್ನಡದ ಕ್ರಿಯಾಪದಗಳಲ್ಲಿ ಭೂತ ಮತ್ತು ಭವಿಷ್ಯದ್ವರ್ತಮಾನ ಎಂಬ ಎರಡೇ ಕಾಲಗಳಿವೆ. ಭೂತ ಕಾಲದಲ್ಲಿ ಧಾತುವಿಗೆ ದ ಪ್ರತ್ಯಯ ಮತ್ತು ಭವಿಷ್ಯತ್ಕಾಲದಲ್ಲಿ ಪ, ಬ, ಅಥವಾ ವ ಪ್ರತ್ಯಯ ಸೇರುತ್ತವೆ. ಹಳಗನ್ನಡದ ವರ್ತಮಾನ ಕಾಲ ಪ್ರತ್ಯಯದಲ್ಲಿ ಕಾಣಬರುವ ದಪ್ಪ ಅಥವಾ ದಪ ಪ್ರತ್ಯಯದಲ್ಲಿನ ಅಪ್ಪ, 'ಅಪ' ಎಂಬ ರೂಪ ಆಗು ಧಾತುವಿನ ಭವಿಷ್ಯದ್ರೂಪ. ಹೀಗೆ ಸಿದ್ಧಿಸಿದ ರೂಪ ವರ್ತಮಾನ ಹಾಗೂ ಭವಿಷ್ಯದರ್ಥವನ್ನೂ ಸಂದೇಹಾರ್ಥವನ್ನೂ ಸೂಚಿಸುತ್ತಿತ್ತು. ನಡುಗನ್ನಡದಲ್ಲಿ ಈ ದಪ್ಪ ದಹ ಆಯಿತು. ಹೊಸಗನ್ನಡದಲ್ಲಿ ಈ ರೀತಿಯ ವರ್ತಮಾನಕಾಲ ರೂಪ ಮಾಯವಾಗಿ ಉತ್ತ ಎನ್ನುವ ಕೃದ್ವಾಚಿಗೆ ಪುರುಷವಾಚಕ ಪ್ರತ್ಯಯಗಳನ್ನು ಸೇರಿಸಿ ಮಾಡಿದ ಹೊಸತೊಂದು ರೀತಿಯ ವರ್ತಮಾನಕಾಲ ರೂಪಗಳು ಪ್ರಚಾರಕ್ಕೆ ಬಂದುವು. ಆದರೆ ಈ ಉತ್ತ ಪ್ರತ್ಯಯಕ್ಕೆ ಸೇರುವ ಪುರುಷವಾಚಕ ಪ್ರತ್ಯಯಗಳಲ್ಲಿ ಹಲಕೆಲವು ಮಾರ್ಪಾಡುಗಳಾಗಿವೆ ಎಂಬುದನ್ನು ಗಮನಿಸಬಹುದು.

ಧಾತುವಿಗೆ ಅ ಅಥವಾ ಅದೆ ಪ್ರತ್ಯಯ ಸೇರುವುದರಿಂದಲೂ ಕ್ರಿಯಾಪದಕ್ಕೆ, ಅಲ್ಲ ಇಲ್ಲ ರೂಪಗಳನ್ನು ಸೇರಿಸುವುದರಿಂದಲೂ ನಿಷೇಧಕ್ರಿಯೆ ಸಿದ್ಧಿಸುತ್ತದೆ. ಧಾತುವಿನ ಮೂಲರೂಪ ವಿಧ್ಯರ್ಥಕ ಮಧ್ಯಮಪುರುಷ ಏಕವಚನವಾಗಿ ಬಳಸಲ್ಪಡುತ್ತದೆ. ಇದರ ಬಹುವಚನ ರೂಪ ಸಿದ್ಧಿಸಲು ಹಳಗನ್ನಡದಲ್ಲಿ ಇಮ್ ಪ್ರತ್ಯಯವೂ ನಡುಗನ್ನಡ ಹೊಸಗನ್ನಡಗಳಲ್ಲಿ ಇ, ಇರಿ ಪ್ರತ್ಯಯಗಳೂ ಸೇರುತ್ತವೆ. ವಿಧ್ಯರ್ಥಕ ಉತ್ತಮಪುರುಷ ಬಹುವಚನ ಸಿದ್ಧಿಸಲು ಹಳಗನ್ನಡದಲ್ಲಿ ವಮ್ ಅಥವಾ ಅಮ್ ಪ್ರತ್ಯಯವನ್ನೂ ಹೊಸಗನ್ನಡದಲ್ಲಿ ಓಣ ಪ್ರತ್ಯಯವನ್ನೂ ಸೇರಿಸುತ್ತಾರೆ. ಪ್ರಥಮಪುರುಷ ರೂಪ ಸಿದ್ಧಿಸಲು ಹಳಗನ್ನಡದಲ್ಲಿ ಕೆ,ಗೆ ಪ್ರತ್ಯಯವನ್ನೂ ಹೊಸಗನ್ನಡದಲ್ಲಿ ಅಲಿ ಪ್ರತ್ಯಯವನ್ನೂ ಸೇರಿಸುತ್ತಾರೆ. ವರ್ತಮಾನಕಾಲವಾಚಕ ಕೃದ್ವಾಚಿ ಅಥವಾ ಅಸಂಪೂರ್ಣ ಕ್ರಿಯಾಧಾತುವಿಗೆ ಉತ್ ಸೇರಿಸುವುದರಿಂದಲೂ ಭೂತಕಾಲವಾಚಕ ಅಸಂಪೂರ್ಣ ಕ್ರಿಯೆ ದು ಅಥವಾ ಮು ಸೇರುವುದರಿಂದಲೂ ಸಿದ್ಧಿಸುತ್ತವೆ. ಉಕಾರಾಂತ ಧಾತುಗಳಿಗೆ ಮಾತ್ರ ದು ಅಥವಾ ತು ಪ್ರತ್ಯಯ ಬರುವುದಿಲ್ಲ. ಅದಕ್ಕೆ ಬದಲಾಗಿ ಧಾತುವಿನ ಅಂತ್ಯ ಉಕಾರ ಲೋಪವಾಗಿ ಇ ಕಾರ ಸೇರುತ್ತದೆ (ಮಾಡಿ, ಹೋಗಿ ಇತ್ಯಾದಿ). (ಯು.ಪಿ.ಯು.)

**ಶಬ್ದರಚನೆ - ಅದರ ಇತಿಹಾಸ :** ಕನ್ನಡದ ಶಬ್ದರಚನೆಯನ್ನು ಶಾಸ್ತ್ರೀಯವಾಗಿ ವಿವೇಚಿಸುವ ಶಬ್ದಶಾಸ್ತ್ರ ಗ್ರಂಥಗಳು ಆರನೆಯ ಶತಮಾನದಿಂದಲೆ ಆರಂಭವಾಗಿರಬೇಕೆಂದು ಊಹಿಸಲು ಅವಕಾಶವಿದೆ. ಗಂಗರಾಜ ದುರ್ವಿನೀತನ (6ನೆಯ ಶತಮಾನ) ಶಬ್ದಾವತಾರ ಕನ್ನಡ ನುಡಿಗೆ ಬರೆದಿರುವ ವ್ಯಾಕರಣ ಗ್ರಂಥವಾಗಿದ್ದ ಪಕ್ಷದಲ್ಲಿ ಅದೇ ಶಬ್ದಶಾಸ್ತ್ರವನ್ನು ಪ್ರತಿಪಾದಿಸುವ ಮೊದಲನೆಯ ಗ್ರಂಥವಾಗುತ್ತದೆ. ಅನಂತರ ಕನ್ನಡ ನುಡಿಗಳ

ಪ್ರಸ್ತಾಪ ಕವಿರಾಜಮಾರ್ಗದಲ್ಲಿ ಬಂದಿದೆ. ಎರಡನೆಯ ನಾಗವರ್ಮನ ಕಾವ್ಯಾವಲೋಕನದಲ್ಲಿ ಮೊದಲನೆಯ ಅಧಿಕರಣವಾದ ಶಬ್ದಸ್ಮೃತ್ಯಧಿಕರಣದಲ್ಲಿ ಮತ್ತು ಅವನಿಂದಲೆ ರಚಿತವಾದ ಕರ್ಣಾಟಕ ಭಾಷಾಭೂಷಣದಲ್ಲಿ ಕನ್ನಡದ ಶಬ್ದ ರಚನೆಯನ್ನು ಕುರಿತು ವಿಸ್ತಾರವಾದ ವಿವೇಚನೆ ಇದೆ. ಕರ್ನಾಟಕ ಲಕ್ಷಣ ಶಬ್ದಶಾಸ್ತ್ರವಾದ ಕೇಶಿರಾಜನ ಶಬ್ದಮಣಿದರ್ಪಣ ಹಳಗನ್ನಡ ವ್ಯಾಕರಣ ಗ್ರಂಥಗಳಿಗೆ ತಿಲಕಪ್ರಾಯವಾದುದು. ಭಟ್ಟಾಕಳಂಕನ ಶಬ್ದಾನುಶಾಸನ ಸಂಸ್ಕೃತ ಸೂತ್ರ ಪದ್ಧತಿಯಲ್ಲಿ ಇನ್ನೂ ವಿಸ್ತಾರವಾಗಿ ಕರ್ನಾಟಕ ಶಬ್ದಶಾಸ್ತ್ರವನ್ನು ಪ್ರತಿಪಾದಿಸುವ ಗ್ರಂಥವಾಗಿದೆ.

ಸಾಮಾನ್ಯವಾಗಿ ಎಲ್ಲ ಭಾಷೆಗಳಲ್ಲೂ ಶಬ್ದಕ್ಕೆ ಸಮಾನಾರ್ಥಕವಾದ ಮಾತುಗಳಿರುತ್ತವೆ. ಕನ್ನಡದಲ್ಲಿ ಶಬ್ದಕ್ಕೆ ಪರ್ಯಾಯವಾಗಿ ಪದ, ನುಡಿ ಎಂಬ ಮಾತುಗಳು ಬಳಕೆಯಲ್ಲಿವೆ. ಧಾತು ಪ್ರಾತಿಪದಿಕ ಪ್ರತ್ಯಯಾದಿಗಳು ವೈಯಾಕರಣರ ಕಲ್ಪನೆ. ಕನ್ನಡದ ಶಬ್ದಗಳಲ್ಲಿ ಪ್ರಧಾನ ಅರ್ಥಬೋಧಕವಾದ ಒಂದು ಕೇಂದ್ರ ಇರುತ್ತದೆ. ಇದು ಪ್ರತ್ಯಯರಹಿತವಾಗಿರಬಹುದು ಇಲ್ಲವೆ ಒಂದು ಅಥವಾ ಹೆಚ್ಚು ಪ್ರತ್ಯಯಗಳಿಂದ ಕೂಡಿರಬಹುದು. ಪದರಚನಾ ಪ್ರಕ್ರಿಯೆಯಲ್ಲಿ ಭಾಗವಹಿಸುವ ಅರ್ಥವತ್ತಾದ ಅವಿಭಾಜ್ಯ ಅಂಶಗಳನ್ನು ಪದಾಂಗಗಳೆನ್ನಬಹುದು. ಇವುಗಳನ್ನು ಧಾತುಗಳೆಂದೂ ಪ್ರತ್ಯಯಗಳೆಂದೂ ಎರಡು ವರ್ಗಗಳಾಗಿ ವಿಂಗಡಿಸಬಹುದು. ಒಂದು ಶಬ್ದದ ಪ್ರಧಾನ ಅರ್ಥವಾಹಕ ಕೇಂದ್ರವಾಗಿ ಭಾಗವಹಿಸುವ ಏಕೈಕ ಪದಾಂಗವೇ ಧಾತು (ಪ್ರಕೃತಿ). ಕನ್ನಡದ ಧಾತುಗಳು ಯಾವಾಗಲೂ ಪದಾದಿಯಲ್ಲಿಯೇ ಇರುತ್ತವೆ. ಧಾತುಗಳಿಗೆ ಸ್ವತಂತ್ರ ಪ್ರಯೋಗಾರ್ಹತೆ ಇರಬಹುದು (ಉದಾ: ಮರ, ತಿನ್ನು, ಮಾಡು ಇತ್ಯಾದಿ) ಅಥವಾ ಇಲ್ಲದಿರಬಹುದು (ಉದಾ: ಬರಲ್, ಬೆಯಿ, ಕೆನ್ದಳಿರ್, ಒಳ್ನುಡಿ ಇತ್ಯಾದಿ ಪದಗಳಲ್ಲಿರುವ ಬರ್, -ಬೇ -ಕೆನ್, ಒಳ್ ಧಾತುಗಳು) - ಶಬ್ದದಲ್ಲಿ ಧಾತುವಿಗೆ ಅನುಬಂಧಗಳಾಗಿಯೇ ಸೇರುವ ಪದಾಂಗಗಳು ಪ್ರತ್ಯಯಗಳು. ಇವುಗಳಿಗೆ ಸ್ವತಂತ್ರ ಪ್ರಯೋಗಾರ್ಹತೆ ಇಲ್ಲ. ಇವು ಯಾವಾಗಲೂ ಬದ್ಧರೂಪಗಳಾಗಿಯೇ ಪ್ರಯೋಗವಾಗುತ್ತವೆ. ಅರ್ಥದಲ್ಲಿ ಯಾವ ಬದಲಾವಣೆಯೂ ಇಲ್ಲದೆ ಪರಿಸರಭೇದಗಳಿಗನುಗುಣವಾಗಿ ತೋರಿಬರುವ ಒಂದು ಪದಾಂಗದ ರೂಪಾಂತರಗಳನ್ನು ಸಪದಾಂಗಗಳೆನ್ನಬಹುದು. ಉದಾ: ಬರಲು, ಬನ್ದು, ಬಾ, ಬನ್ನಿ ಮೊದಲಾದ ಪದಗಳಲ್ಲಿ ಕಂಡುಬರುವ ಧಾತುವಿನ ಬರ್, ಬನ್, ಬಾ, ಬನ್ನಿ - ಎಂಬ ರೂಪಾಂತರಗಳೂ ಕಲ್ತು, ತಿನ್ದು, ಕಣ್ಡು ಎಂಬ ಪದಗಳಲ್ಲಿ ಕಂಡುಬರುವ ಭೂತಕಾಲ ಪ್ರತ್ಯಯದ ತ್,ದ್, ಡ್ ಎಂಬ ರೂಪಾಂತರಗಳೂ ಅನುಕ್ರಮವಾಗಿ ಬರ್ ಮತ್ತು ತ್ ಪದಾಂಗಗಳ ರೂಪಾಂತರಗಳಾಗಿವೆ.

ಶಬ್ದಗಳ ಪ್ರಧಾನ ಅರ್ಥವಾಹಕ ಕೇಂದ್ರ ಎರಡು ಅಥವಾ ಹೆಚ್ಚು ಧಾತುಗಳಿಂದ ಕೂಡಿಕೊಂಡಿದ್ದರೆ ಅಂಥವುಗಳನ್ನು ಸಮಸ್ತ ಪದಗಳೆನ್ನುತ್ತಾರೆ. ಉದಾ: ಮನೆಬಾಗಿಲಿಗೆ, ತಾಯಿತಂದೆಗಳನ್ನು, ಕೆಂದಳಿರ್ವಾಸಿನ, ಬೀಳ್ಕೊಂಡನು ಇತ್ಯಾದಿ.

ಪ್ರತ್ಯಯಗಳಲ್ಲಿ ಉತ್ಪಾದಕ ಪ್ರತ್ಯಯಗಳೆಂದೂ ನಿಷ್ಪಾದಕ ಪ್ರತ್ಯಯಗಳೆಂದೂ ಎರಡು ವಿಧ. ಉತ್ಪಾದಕ ಪ್ರತ್ಯಯಗಳು ಧಾತುಗಳಿಗೆ ಸೇರಿ ಹೊಸ ಹೊಸ ಅರ್ಥಗಳನ್ನು ಕೊಡುವ ಪದನಿರ್ಮಾಣ ಪ್ರಕ್ರಿಯೆಯಲ್ಲಿ ಭಾಗವಹಿಸುತ್ತವೆ. ತದ್ಧಿತ ಪ್ರತ್ಯಯಗಳು: ಉದಾ: ಅಲು (ಒಕ್ಕಲು), ಇಗ (ಒಕ್ಕಲಿಗ), ತನ (ಬಡತನ), ಮೆ (ಹಿರಿಮೆ) ಇತ್ಯಾದಿ; ಪ್ರೇರಣಾರ್ಥದಲ್ಲಿ ಬರುವ ಇಸು ಪ್ರತ್ಯಯ: ಉದಾ: ಮಾಡಿಸು, ಆನಂದಿಸು ಇತ್ಯಾದಿ. ಕ್ರಿಯಾವಿಶೇಷಣಗಳಲ್ಲಿ ಬರುವ ಆನೆ, ಆಗೆ ಪ್ರತ್ಯಯಗಳು. ಉದಾ: ಮೆಲ್ಲನೆ, ಮೆಲ್ಲಗೆ, ತಣ್ಣನೆ ಇತ್ಯಾದಿ. ವಿಶೇಷಣಗಳಲ್ಲಿ ಬರುವ ಯ ಪ್ರತ್ಯಯ- ಉದಾ: ಹಿರಿಯ, ಇನಿಯ ಇತ್ಯಾದಿ.

ಪದನಿಷ್ಪತ್ತಿ ಪ್ರಕ್ರಿಯೆಯಲ್ಲಿ ಭಾಗವಹಿಸುವ ಪ್ರತ್ಯಯಗಳೇ ನಿಷ್ಪಾದಕ ಪ್ರತ್ಯಯಗಳೆನಿಸುತ್ತವೆ. ನಾಮ ವಿಭಕ್ತಿ ಪ್ರತ್ಯಯಗಳು - ಉದಾ: ಅನ್ನು, ಇಂದ, ಗೆ, ಇತ್ಯಾದಿ; ಏಕವಚನ ನಾಮಪದಗಳಲ್ಲಿ ನಾಮವಿಭಕ್ತಿಗಳ ಪೂರ್ವದಲ್ಲಿ ಬರುವ ಆಗಮಗಳು - ಉದಾ: ಇನ್ (ಊರಿನ), ಅದ್ (ಮರದಿಂದ) ಇತ್ಯಾದಿ. ಆಖ್ಯಾತ ವಿಭಕ್ತಿ ಪ್ರತ್ಯಯಗಳು- ಉದಾ: ಎನ್,ಎವು, ಅಯ್, ಇರ್ ಇತ್ಯಾದಿ. ಕಾಲವಾಚಕ ಪ್ರತ್ಯಯಗಳು - ಉದಾ: ದ್,ವ್ ಇತ್ಯಾದಿ.

ಮನೆಯನ್ನು (ಮನೆ-ಯ್-ಅನ್ನು), ಕರುವನ್ನು (ಕರು-ವ್-ಅನ್ನು) ಎಂಬೀ ಪದಗಳಲ್ಲಿ ಬರುವ ಯ್ ಮತ್ತು ವ್ ಆಗಮಗಳನ್ನು ಅರ್ಥಶೂನ್ಯ ಪದಾಂಗಗಳೆಂದು ಪರಿಗಣಿಸಬಹುದು.

ಮಾಡನು (ಮಾಡ್-ಅ-ನು), ಮಾಡರು (ಮಾಡ್-ಅ-ರು), ಮಾಡದು (ಮಾಡ್-ಅ-ದು) ಈ ಮೊದಲಾದ ಪದಗಳಲ್ಲಿ ನಿಷೇಧಾರ್ಥವನ್ನು ಬೋಧಿಸುವ ಆ ಪ್ರತ್ಯಯಕ್ಕೆ ಅರಿಯೆನು (ಅರಿಯ್-೦-ಎನು), ಮಾಡೆವು (ಮಾಡ್-೦-ಎವು) ಎಂಬ ಪದಗಳಲ್ಲಿ ರೂಪಶೂನ್ಯ ಸಪದಾಂಗವನ್ನು ಗುರುತಿಸಬಹುದು.

ಒಂದೇ ಪದದಲ್ಲಿ ಉತ್ಪಾದಕ ಮತ್ತು ನಿಷ್ಪಾದಕ ಪ್ರತ್ಯಯಗಳು ಬಂದಾಗ ನಿಷ್ಪಾದಕ ಪ್ರತ್ಯಯ ಯಾವಾಗಲೂ ಉತ್ಪಾದಕ ಪ್ರತ್ಯಯದ ಪರದಲ್ಲಿಯೇ ಬರುತ್ತದೆ. ಉದಾ: ಬಡತನವನ್ನು, ಹಾಡಿಸಿದೆ ಎಂಬ ಪದಗಳಲ್ಲಿ ಬಡ, ಹಾಡು ಇವು ಧಾತುಗಳು. ತನ, ಇಸು ಇವು ಉತ್ಪಾದಕ ಪ್ರತ್ಯಯಗಳು; ಅನ್ನು, ಇದ್,ಎ ಗಳು ನಿಷ್ಪಾದಕ ಪ್ರತ್ಯಯಗಳು. ನಾಮ ವಿಭಕ್ತಿ ಮತ್ತು ಆಖ್ಯಾತ ವಿಭಕ್ತಿ ಪ್ರತ್ಯಯಗಳು ಪದವನ್ನು ಮುಕ್ತಾಯಗೊಳಿಸುತ್ತವೆ. ಅವುಗಳ ಪರದಲ್ಲಿ ಬೇರೆ ಪ್ರತ್ಯಯಗಳು ಸೇರುವುದಿಲ್ಲ.

ಚಾರಿತ್ರಿಕವಾಗಿ ಕನ್ನಡದ ಶಬ್ದರಚನೆಯಲ್ಲಿ ನಾವು ನಾಲ್ಕು ಅವಸ್ಥಾ ಭೇದಗಳನ್ನು ಗುರುತಿಸಬಹುದು.

| ಪೂರ್ವದ ಹಳಗನ್ನಡ | ಹಳಗನ್ನಡ | ನಡುಗನ್ನಡ | ಹೊಸಗನ್ನಡ |
|---|---|---|---|
| ಇದಾನ್ | ಇದನ್ | ಇದನು | ಇದನ್ನು |
| ಏೞನೆಯಾ | ಏೞನೆಯ | ಏಳನೆಯ | ಏಳನೆಯ |
| ಮಾಡಿದೊರ್ | ಮಾಡಿದರ್ | ಮಾಡಿದರು | ಮಾಡಿದರು |
| ವೆಟ್ಟದುಳ್ | ಬೆಟ್ಟದೊಳ್ | ಬೆಟ್ಟದೊಳು | ಬೆಟ್ಟದಲ್ಲಿ |
| ಎೞೆದು | ಇೞಿದು | ಇೞಿದು | ಇರಿದು |
| | ಇನಿತು | ಇನಿಸು(ಈಸು) | ಇಷ್ಟು |
| | ಅಪ್ಪುದು | ಅಹುದು | ಹಉದು(ಹೌದು) |
| | ಪೊಱಮಟ್ಟು | ಹೊರವಣ್ಟು | ಹೊರಟು(ಹೊಣ್ಟು) |

ಹಳಗನ್ನಡದಲ್ಲಿಲ್ಲದ ವರ್ತಮಾನ ಕ್ರಿಯೆಯನ್ನು ಸೂಚಿಸುವ ಒಂದು ಪೂರ್ಣ ಕ್ರಿಯಾಪದದ ರಚನೆ ಹೊಸಗನ್ನಡದಲ್ಲಿ ಏರ್ಪಟ್ಟಿದೆ. ಉದಾ: ಮಾಡುತ್ತೇನೆ, ಹೋಗುತ್ತಾನೆ, ಬರುತ್ತಾರೆ ಇತ್ಯಾದಿ.

**ಶಬ್ದಸಮೂಹ :** ಕನ್ನಡದ ಶಬ್ದಸಂಪತ್ತು ವಿಪುಲವಾದದ್ದು. ಈ ಭಾಷೆ ತನ್ನ ಬೆಳೆವಣಿಗೆಯ ನಾನಾ ಹಂತದಲ್ಲಿ ತನ್ನದೇ ಆದ ದೇಶ್ಯ ಶಬ್ದ ಸಾಮಗ್ರಿಯಿಂದ ಶಬ್ದಸಂಪತ್ತನ್ನು ಬೆಳೆಸಿಕೊಂಡಿರುವುದಲ್ಲದೆ ತನ್ನ ಬೆಳೆವಣಿಗೆಗೆ ಪೋಷಕವಾಗಿ ತನ್ನತನಕ್ಕೆ ಯಾವ ಭಂಗವೂ ಬಾರದಂತೆ ಅನ್ಯ ಭಾಷೆಗಳಿಂದ ಧಾರಾಳವಾಗಿ ಶಬ್ದಗಳನ್ನು ಸ್ವೀಕರಿಸಿಕೊಂಡು, ಅವುಗಳನ್ನು ತನ್ನದನ್ನಾಗಿಸಿಕೊಂಡಿದೆ.

ಉದಾಹರಣೆಗೆ ಉತ್ಪಾದಕ (ತದ್ಧಿತ) ಪ್ರತ್ಯಯಗಳ ಮೂಲಕ: ಹಣವಂತ, ಪುಣ್ಯವಂತ, ಕಲಿತನ, ಕಲಿಕೆ, ಕಲ್ಪಿ, ಹಡಪಿಗ, ಒಕ್ಕಲಿಗ, ಹಿರಿಮೆ, ಒಲುಮೆ, ಬಲ್ಮೆ, ಕಪ್ಪು, ಬೆಳ್ಪು, ತಣ್ಪು, ಬಿಣ್ಪು, ನುಣ್ಪು, ಬಲ್ಪು, ಮಡಿವಳ, ಪಡೆವಳ, ಉಡುಗೆ, ತುಡುಗೆ, ಬಿಸುಗೆ, ಬಲೆಗಾರ, ಸಾಲಗಾರ, ಕಮ್ಮಾರ, ಕುಂಬಾರ, ಸಂತೋಷಿಸು, ಭಾವಿಸು, ಶೋಭಿಸು, ಸೊಗಯಿಸು, ಪೂಡಿಸು, ಅಲಂಕರಿಸು ಇತ್ಯಾದಿ. ಸಮಾಸ ವಿಧಾನಗಳಿಂದ- ಉದಾ: ಪೂಗೊಳ, ಪೂಗಣೆ, ಕೆನ್ನೀರ್, ಬೆನ್ನೀರ್, ಪನ್ನೀರ್, ಮುನ್ನೀರ್, ತಣ್ಣೀರ್, ಅಲರ್ವಾಸು, ಕೆಂದಳಿರ್ವಾಸು, ಕಣ್ಬೇಟ, ಕಂಗೊಳಿಸು, ಕಂಗೆಡು, ಕೈಕೊಳ್, ಕಯ್‌ಗೆಯ್, ಕೈಕೊಡು ಇತ್ಯಾದಿ.

ವ್ಯವಸಾಯ, ನೇಯ್ಗೆ, ವಾಸ್ತುಶಿಲ್ಪ, ಮೀನುಗಾರಿಕೆ, ಬೇಟೆ, ಕೈಗಾರಿಕೆ ಮೊದಲಾದ ವೃತ್ತಿಗಳಿಗೆ ಸಂಬಂಧಿಸಿದ, ಜನಪದ ಕಲೆಗಳಿಗೆ ಸಂಬಂಧಿಸಿದ, ಸಾಮಾಜಿಕ ರೀತಿನೀತಿ, ಆಚಾರವ್ಯವಹಾರ, ಕಟ್ಟುಕಟ್ಟಳೆ, ಮದುವೆ ಮುಂಜಿ, ಹಬ್ಬಹುಣ್ಣಿಮೆಗಳಿಗೆ ಸಂಬಂಧಿಸಿದ, ಸಾಮಾಜಿಕ ಮತ್ತು ಪ್ರಾದೇಶಿಕ ಉಪಭಾಷೆಗಳಲ್ಲಿ ವಿಶಿಷ್ಟವಾಗಿರುವ ಎಷ್ಟೋ ಪದಗಳು ಇನ್ನೂ ನಿಘಂಟುಗಳಲ್ಲಿ ಸೇರದೆ ಹಾಗೆಯೇ ಉಳಿದಿರಬಹುದು ಅಥವಾ ಕೆಲವು ನಷ್ಟವಾಗಿಹೋಗಿರಲೂಬಹುದು.

ಕನ್ನಡ ಮತ್ತು ಸಂಸ್ಕೃತದ ಸಂಪರ್ಕ ಹಾಗೂ ಬಾಂಧವ್ಯ ಬಹಳ ಪ್ರಾಚೀನವಾದುದು. ಸಂಸ್ಕೃತ ಪದಗಳು ಕನ್ನಡದ ಧ್ವನಿವ್ಯವಸ್ಥೆಗನುಗುಣವಾಗಿ ಪ್ರಾಕೃತದ ಮೂಲಕ (ಉದಾ - ಸಂ. ಸ್ನೇಹ, ಪ್ರಾ. ನೇಹ, ಕ. ನೇಹ. ಸಂ. ಆಜ್ಞಾ, ಪ್ರಾ. ಆಣಾ, ಕ. ಆಣೆ ಇತ್ಯಾದಿ) ಅಥವಾ ನೇರವಾಗಿ ತದ್ಭವಗಳಾಗಿ (ಅಪಭ್ರಂಶ) ಕನ್ನಡದಲ್ಲಿ ದೇಶ್ಯಪದಗಳೊಡನೆ ಸೇರಿಕೊಂಡಿವೆ. ಶಬ್ದಶಾಸ್ತ್ರಜ್ಞರು ತಿಳಿಸದೆ ಹೋದರೆ ತದ್ಭವಗಳನ್ನು ಅನ್ಯಭಾಷೆಯಿಂದ ಬಂದಿರುವ ಪದಗಳೆಂಬುದಾಗಿ ಗುರುತಿಸುವುದಕ್ಕೂ ಕಷ್ಟವಾಗುತ್ತದೆ. ಉದಾ- ಸಂತೆ (ಸಂ. ಸಂಸ್ಥಾ), ದೋಣಿ (ಸಂ. ದ್ರೋಣಿ), ಹೋಳಿಗೆ (ಸಂ. ಸ್ಫೋಟಿಕ) ಇತ್ಯಾದಿ. ಕೇಶಿರಾಜ ಶಬ್ದಮಣಿದರ್ಪಣದಲ್ಲಿ ಇಂಥ ಸುಮಾರು 800 ಅಪಭ್ರಂಶ ಪದಗಳನ್ನು ಗುರುತಿಸಿದ್ದಾನೆ.

ಎಷ್ಟೋ ಸಂಸ್ಕೃತ ಪದಗಳು ಇದ್ದಕ್ಕಿದ್ದಂತೆಯೇ ಕನ್ನಡದಲ್ಲಿ ಸೇರಿಕೊಂಡಿವೆ. ಉದಾ: ಸ್ತ್ರೀ, ನದಿ, ಪರ್ವತ, ನಗರ, ದಾನ, ಧರ್ಮ, ಪಾಪ, ಪುಣ್ಯ ಇತ್ಯಾದಿ. ಇನ್ನು ಕೆಲವು ಸಂಸ್ಕೃತ ಪದಗಳು ಅರ್ಥವ್ಯತ್ಯಾಸ ಹೊಂದಿ ಸೇರಿವೆ. ಉದಾ: ವಿಪರೀತ, ಅವಸರ, ಅಪರೂಪ, ಭದ್ರ ಇತ್ಯಾದಿ.

ಹಲವಾರು ಸಂಸ್ಕೃತ ಪದಗಳು ತಮ್ಮ ಪದಾಂತ ಧ್ವನಿಗಳಲ್ಲಿ ಕನ್ನಡ ದೇಶ್ಯಪದಾಂತ್ಯಗಳಿಗೆ ಸರಿಹೋಗುವಂತೆ ಮಾರ್ಪಾಡು ಹೊಂದಿ, ಕನ್ನಡ ನಾಮವಿಭಕ್ತಿ ಪ್ರತ್ಯಯಗಳನ್ನು ಪಡೆದು ಕನ್ನಡದಲ್ಲಿ ರೂಪ ನಿಷ್ಪತ್ತಿಯನ್ನು ಪಡೆಯುತ್ತವೆ. ಮಾಲಾ(ಸಂ.) > ಮಾಲೆ(ಕ.), ಅಭಿಲಾಷಾ(ಸಂ.) > ಅಭಿಲಾಷೆ(ಕ.), ಗೌರೀ(ಸಂ.) > ಗೌರಿ(ಕ.), ಸರಯೂ(ಸಂ.) > ಸರಯು(ಕ.) ಇತ್ಯಾದಿ. ಇಂಥ ಪದಗಳನ್ನು ಕೇಶಿರಾಜ ಸಮಸಂಸ್ಕೃತವೆಂದು ಕರೆದಿದ್ದಾನೆ. ಇವುಗಳನ್ನು ತತ್ಸಮಗಳೆಂದು ಕರೆಯುವುದೂ ಉಂಟು. ಆದರೆ ಕೇಶಿರಾಜ ಮಾತ್ರ ಮಣಿ, ಮಂಚಂ, ಪಟ್ಟ, ತೋರಣ ಇತ್ಯಾದಿ 21 ಶಬ್ದಗಳನ್ನು ತತ್ಸಮಗಳೆಂದು ನಿರ್ದೇಶಿಸಿದ್ದಾನೆ. ಇವು ಅರಿಸಮಾಸ ದೋಷಕ್ಕೆ ಒಳಗಾಗದೆ ಕನ್ನಡ ಮತ್ತು ಸಂಸ್ಕೃತ ಪದಗಳ ಜತೆಯಲ್ಲಿ ಸಮಾಸಗಳಾಗುತ್ತವೆ. ಉದಾ: ದಿನಮಣಿ, ಉಡೆಮಣಿ, ಕಾಂಸ್ಯತೋರಣಂ, ತಳಿರ್ದೋರಣಂ ಇತ್ಯಾದಿ.

ಸಂಸ್ಕೃತವನ್ನು ಬಿಟ್ಟರೆ ಕನ್ನಡದ ಮೇಲೆ ವಿಶೇಷ ಪ್ರಭಾವವನ್ನು ಬೀರಿದ ಭಾಷೆ ಇಂಗ್ಲಿಷ್. ದಿನನಿತ್ಯದ ಬಳಕೆಯಲ್ಲಿರುವ ಎಷ್ಟೋ ಪದಗಳನ್ನು ಕನ್ನಡ ಈ ಭಾಷೆಯಿಂದ ಸ್ವೀಕರಿಸಿದೆ. ರೈಲು, ಬಸ್ಸು, ಕೋರ್ಟು, ರೋಡು, ಪೇಪರು, ಟಿಕೀಟು, ಬ್ಯಾಂಕು, ಕಾಲೇಜು, ಟೈಮು ಇತ್ಯಾದಿ.

ಸಂಸ್ಕೃತ, ಇಂಗ್ಲಿಷ್ ಭಾಷೆಗಳನ್ನು ಬಿಟ್ಟರೆ ಮಿಕ್ಕ ಅನ್ಯ ಭಾಷಾ ಶಬ್ದಗಳು ಕನ್ನಡದಲ್ಲಿ ಕಡಿಮೆ ಪ್ರಮಾಣದಲ್ಲಿ ಆಯಾ ಕಾಲದಲ್ಲಿ ಸೇರಿಕೊಂಡಿವೆ. ಉದಾ: ದ್ರಮ್ಮ(ಡ್ರಾಕ್ಮಾ), ದೀನಾರ (ಡಿನೇರಿಯಸ್) ಮೊದಲಾದ ನಾಣ್ಯಗಳನ್ನು ಸೂಚಿಸುವ ಗ್ರೀಕ್ ಶಬ್ದಗಳು; ಚೌ-ಚೌ ಎಂಬ ಚೀನೀ ಶಬ್ದ; ಅಂದಾಜು, ಅಬ್ಕಾರಿ, ಆಮದು, ಖಯಾಲು, ತರಕಾರಿ ಮೊದಲಾದ ಪಾರಸೀ ಪದಗಳು, ಅಮಲ್, ಅಸಲು, ಅಮೀನ, ಕದೀಮ ಗರೀಬ, ಖಜಾನೆ ಮೊದಲಾದ ಅರಬ್ಬೀ ಶಬ್ದಗಳು; ಚಮಚ, ತುಪಾಕಿ, ಬೇಗಮ್ ಮೊದಲಾದ ತುರ್ಕಿ ಶಬ್ದಗಳು; ಅನಾನಸು, ಜಂಗಲ್ಲು, ತಂಬಾಕು, ಬಟಾಟೆ, ಪಪ್ಪಾಯಿ, ಮೇಜು, ಸಾಬೂನು ಮೊದಲಾದ ಪೋರ್ಚುಗೀಸ್ ಶಬ್ದಗಳು; ಕರಾರು, ಗಿರಾಕಿ, ಸರಕಾರ, ಚಾಳೀಸು, ಖರೀದಿ, ಕಛೇರಿ ಮೊದಲಾದ ಹಿಂದುಸ್ಥಾನೀ ಶಬ್ದಗಳು; ಬತ್ತೀಸ್, ತೆತ್ತೀಸ್, ದೀಡ್, ಮಂಜರ, ಬೈಲ, ಜೇವಣಿ, ಸೂಠಿ ಮೊದಲಾದ ಮರಾಠಿ ಶಬ್ದಗಳು; ಇವಲ್ಲದೆ ಕಾಪುರ, ಪೆದ್ದ, ಸಪುರ, ಚೆದರು, ಅರಸು ಮೊದಲಾದ ಸೋದರ ದ್ರಾವಿಡ ಭಾಷಾ ಪದಗಳೂ ಕನ್ನಡದಲ್ಲಿ ಸೇರಿಕೊಂಡಿವೆ.

ಇದುವರೆಗೆ ಸೂಚಿಸಿದ ಪದಗಳಲ್ಲದೆ ವಿಕಾಸಪಥ'ದಲ್ಲಿ ಮುಂದುವರಿಯುವ ಜನ ಜೀವನದ ಸಾಂಸ್ಕೃತಿಕ ಆವಶ್ಯಕತೆಗಳಿಗನುಸಾರವಾಗಿ ಹೊಸಹೊಸ ಶಬ್ದಗಳನ್ನು ಕನ್ನಡ ಭಾಷೆ ಪೂರೈಸುತ್ತ ಇದೆ. ವಿದ್ಯುತ್, ಪರಮಾಣುಬಾಂಬು, ವಿಶ್ವವಿದ್ಯಾಲಯ, ಬಾನುಲಿ, ಆಕಾಶವಾಣಿ, ಅಂಚೆ, ತಂತಿ, ದೂರವಾಣಿ, ಕಲ್ಲೆಣ್ಣೆ, ವೃತ್ತಪತ್ರಿಕೆ, ಸಣ್ಣಕಥೆ, ಕಾದಂಬರಿ, ಕಲ್ಲಿದ್ದಲು, ಬೆಂಕಿಪೆಟ್ಟಿಗೆ ಇತ್ಯಾದಿ ಪದಗಳನ್ನು ಸೇರಿಸಿಕೊಂಡು ಕನ್ನಡ ಭಾಷೆ ತನ್ನ ಶಬ್ದಸಂಪತ್ತಿಯನ್ನು ಹೆಚ್ಚಿಸಿಕೊಳ್ಳುತ್ತಿದೆ. (ಬಿ.ಆರ್.)

**ಅರ್ಥಪರಿವರ್ತನೆ** : ಕಾಲ, ದೇಶ ಮತ್ತು ಪರಿಸ್ಥಿತಿಗಳಲ್ಲುಂಟಾಗುವ ವ್ಯತ್ಯಾಸಗಳಿಗನುಗುಣವಾಗಿ ಜನಬಳಕೆಯ ಭಾಷೆಯಲ್ಲಿ ಬದಲಾವಣೆ ಯುಂಟಾಗುವುದು ಸ್ವಾಭಾವಿಕ. ಯಾವುದೇ ಭಾಷೆಯ ಚರಿತ್ರೆಯಲ್ಲಿನ ಎರಡು ಭಿನ್ನ ಕಾಲಗಳಲ್ಲಿ ಆ ಭಾಷೆಯ ಸ್ವರೂಪವನ್ನು ಪರಸ್ಪರ ಹೋಲಿಸಿ ನೋಡಿದಾಗ ಆ ಭಾಷೆಯಲ್ಲಿ ಉಂಟಾಗಿರುವ ಮಾರ್ಪಾಡುಗಳು ಗೋಚರವಾಗುತ್ತವೆ. ಲಿಖಿತ ರೂಪಕ್ಕಳವಡಿಸಲ್ಪಡದ ಭಾಷೆಗಳಲ್ಲಿ ಕೇವಲ ಆಧುನಿಕ ರೂಪಗಳು ದೊರಕುವುದರಿಂದ ಅವುಗಳಲ್ಲುಂಟಾಗಿರುವ ಬದಲಾವಣೆಗಳು ತಿಳಿಯದೆ ಹೋಗುತ್ತವೆ. ಆದ್ದರಿಂದ ಮಾತನಾಡುವ ಇಂದಿನ ಭಾಷೆ ಮತ್ತು ಗ್ರಂಥಸ್ಥವಾಗಿರುವ ಹಿಂದಿನ ಭಾಷೆ - ಹೀಗೆ ಎರಡೂ ಸ್ವರೂಪಗಳು ಕಾಣಸಿಗುವ ಭಾಷೆಗಳಲ್ಲಿ ಮಾತ್ರ ಮೇಲೆ ಹೇಳಿದ ಪರಿವರ್ತನೆಗಳನ್ನು ಅಭ್ಯಸಿಸಲು ಅನುಕೂಲವಾಗುತ್ತದೆ. ಕನ್ನಡ ಭಾಷೆಯಲ್ಲಿ ಕಾಲದಿಂದ ಕಾಲಕ್ಕೆ ನಡೆದಿರುವ ಬದಲಾವಣೆಯನ್ನು ಗಮನಿಸಿದರೆ ಅರ್ಥ ಪರಿವರ್ತನೆ ಸ್ಪಷ್ಟವಾಗಿ ಗೋಚರವಾಗುತ್ತದೆ.

ಹಳಗನ್ನಡದ ತುಡು, ಕುಡು ಇತ್ಯಾದಿ ರೂಪದ ಪದಗಳು ಹೊಸಗನ್ನಡದಲ್ಲಿ ತೊಡು, ಕೊಡು ಎಂದಾಗಿರುವುದನ್ನು ನೋಡಿದರೆ ಪದಗಳ ಉಚ್ಚಾರಣೆಯಲ್ಲಿ ವ್ಯತ್ಯಾಸವಾಗಿರುವುದು ಕಂಡುಬರುತ್ತದೆ. ಒಂದು ಕುಲಕ್ಕೆ ಸೇರಿದ ಭಾಷೆಗಳನ್ನಾಗಲಿ ಅಥವಾ ಒಂದೇ ಭಾಷೆಯ ಉಪಭಾಷೆಗಳನ್ನಾಗಲಿ ಪರಸ್ಪರ ಹೋಲಿಸಿ ನೋಡಿದಾಗ ಕೂಡ ಈ ರೀತಿಯ ಬದಲಾವಣೆ ಗಳಾಗಿರುವುದನ್ನು ನೋಡಬಹುದು. ಕನ್ನಡದಲ್ಲಿನ ಮಗ ಎಂಬುದರ ಜ್ಞಾತಿರೂಪವಾದ ತೆಲುಗಿನ ಮಗುಡು ಎಂಬುದರ ಅರ್ಥ ಗಂಡ ಎಂದಿದೆ. ಅರ್ಥ ಪರಿವರ್ತನೆಯ ನಿಯಮವನ್ನನುಸರಿಸಿ ಕನ್ನಡದಲ್ಲಿ ಈ ಪದಕ್ಕಿರುವ ಅರ್ಥವೇ ಮೂಲಾರ್ಥವೆಂದೂ (ತಮಿಳಿನಲ್ಲಿ ಕೂಡ ಮಗನ್ ಎಂಬ ಜ್ಞಾತಿರೂಪಕ್ಕೆ ಇದೇ ಅರ್ಥವಿದೆ) ತೆಲುಗಿನಲ್ಲಿ ಈ ಅರ್ಥ ಮಾರ್ಪಾಡಾಗಿದೆ ಎಂದೂ ಹೇಳಲು ಸಾಧ್ಯವಿದೆ.

ಯಾವುದೆ ಭಾಷೆಯಲ್ಲಿನ ಪದಗಳ ಅರ್ಥದಲ್ಲಿ ತೋರಿಬರುವ ವ್ಯತ್ಯಾಸಗಳನ್ನು ಅರ್ಥಸಂಕೋಚ, ಅರ್ಥವಿಸ್ತಾರ ಮತ್ತು ಅರ್ಥಾಂತರವೆಂದು ಮೂರು ಪ್ರಭೇದಗಳಲ್ಲಿ ಪರಿಶೀಲಿಸಬಹುದು. ಮೊದಲಿಗೆ ಹೆಚ್ಚು ಪರಿಸರಗಳಲ್ಲಿ ಉಪಯೋಗವಾಗುತ್ತಿದ್ದ ಪದ ಕಾಲಕ್ರಮೇಣ ಸೀಮಿತ ಪರಿಸರಗಳಲ್ಲಿ ಉಪಯೋಗವಾಗುವಂತಾದಾಗ ಆ ಪದದ ಅರ್ಥವ್ಯಾಪ್ತಿಯಲ್ಲಿ ಸಂಕೋಚವಾಯಿತೆನ್ನಬಹುದು. ಶ್ರಾದ್ಧ ಎಂದರೆ ಶ್ರದ್ಧೆಯಿಂದ ಮಾಡುವ ಕೆಲಸ. ಆದರೆ ಈಗ ಈ ಪದದ ಅರ್ಥ ಪಿತೃದೇವತೆಗಳನ್ನು ಕುರಿತಾದ ಪೂಜಾಕರ್ಮ ಎಂದಷ್ಟೇ ಆಗಿದೆ. ಪ್ರಾಣ ಅಥವಾ ಜೀವದಿಂದಿರುವ ಯಾವುದನ್ನೂ ಪ್ರಾಣಿ ಎನ್ನಬಹುದಾಗಿತ್ತು. ಈಗ ಪ್ರಾಣಿ ಎಂಬ ಪದ ಮಾನವೇತರಜೀವಿಗಳಿಗೆ ಮಾತ್ರ ಅನ್ವಯವಾಗುತ್ತದೆ. ಅದನ್ನೆ ವಿಶದೀಕರಿಸುವಂತೆ ಮೂಕಪ್ರಾಣಿ ಎಂದೂ ಮನುಷ್ಯನಿಗನ್ವಯಿಸುವಾಗ ಹಸುವಿನಂಥ ಪ್ರಾಣಿ ಎಂದೂ ಉಪಯೋಗವಾಗುತ್ತಿರುವುದನ್ನು ಗಮನಿಸಬಹುದು. ನೆಯ್ ಎಂಬ ಪದದ ಅರ್ಥ ಮೊದಲಿಗೆ ಜಿಡ್ಡು ಎಂದಿತ್ತು. ಬೆಣ್ಣೆ, ಎಣ್ಣೆ ಇತ್ಯಾದಿ ರೂಪಗಳಲ್ಲಿ ಈ ಅರ್ಥ ಕಾಣಬರುತ್ತದೆ. ಇಂದಿನ ಆಡುಭಾಷೆಯಲ್ಲಿ ಈ ಪದದ ಅರ್ಥವ್ಯಾಪ್ತಿ ಸಂಕುಚಿತಗೊಂಡಿದೆ.

ಅರ್ಥಸಂಕೋಚದಲ್ಲಿ ಕಾಣಬರುವ ವ್ಯತ್ಯಾಸಕ್ಕೆ ವಿರುದ್ಧವಾದ ಬದಲಾವಣೆ ಅರ್ಥವಿಸ್ತಾರದಲ್ಲಿ ಕಂಡುಬರುತ್ತದೆ. ಮೊದಲಿಗೆ ನಿಯತ ಪರಿಸರದಲ್ಲಿ ಉಪಯೋಗದಲ್ಲಿದ್ದ ಪದಗಳು ಹೆಚ್ಚು ಪರಿಸರಗಳಲ್ಲಿ ಉಪಯೋಗವಾಗಲಾರಂಭಿಸಿದಾಗ ಅವುಗಳ ಅರ್ಥವ್ಯಾಪ್ತಿಯಲ್ಲಿ ವಿಸ್ತಾರವಾಯಿತೆನ್ನಬಹುದು. ಮೊದಲಿಗೆ ಚೆಂಬು ಎಂದರೆ ತಾಮ್ರದ ಪಾತ್ರೆ ಎಂದಿತ್ತು (ಚೆನ್+ಪೊನ್=ಚೆಂಬೊನ್>ಚೆಂಬು=ಕೆಂಪು ಲೋಹ). ಆಗ ವಿಶಿಷ್ಟ ಅರ್ಥದಲ್ಲಿ ಉಪಯೋಗವಾಗುತ್ತಿದ್ದ ಈ ಪದ ಈಗ ಬೆಳ್ಳಿಯ ಚೆಂಬು, ಹಿತ್ತಾಳೆ ಚೆಂಬು ಎಂದು ಸಮಾನಾರ್ಥ ಪಡೆದಿರುವುದನ್ನು ಗಮನಿಸಬಹುದು.

ಹೀಗೆಯೇ ಎಳ್ಳಿನಿಂದ ತೆಗೆದ ಜಿಡ್ಡಿಗೆ ಮಾತ್ರ ಎಣ್ಣೆ (ಎಳ್ + ನೆಯ್) ಎನ್ನುತ್ತಿದ್ದರು. ಈಗ ಹರಳೆಣ್ಣೆ, ಕೊಬ್ಬರಿ ಎಣ್ಣೆ, ಕಡಲೆಕಾಯಿ ಎಣ್ಣೆ ಮೊದಲಾದ ರೂಪಗಳಲ್ಲಿ ಈ ಪದವನ್ನು ಉಪಯೋಗಿಸಲಾರಂಭಿಸಿದ ಮೇಲೆ ಎಳ್ಳೆಣ್ಣೆ ಎನ್ನುವುದು ತನ್ನ ಮೊದಲಿನ ಅರ್ಥವನ್ನು ಕಳೆದುಕೊಂಡು ಯಾವುದೇ ಎಣ್ಣೆಯನ್ನು ಸೂಚಿಸುವ ಪದವಾಯಿತು. ಬಾಣಕವಿಯ ಸಂಸ್ಕೃತ ಗದ್ಯಕಾವ್ಯದ

ಹೆಸರು ಕಾದಂಬರಿ ಎಂದು, ಈಗ ಕನ್ನಡದಲ್ಲಿ 'ಕಾದಂಬರಿ' ಎಂಬ ಪದ ಒಂದು ಬಗೆಯ ಸಾಹಿತ್ಯ ಪ್ರಕಾರದ ಅರ್ಥವನ್ನು ಒಳಗೊಂಡಿದೆ.

ಅರ್ಥಸಂಕೋಚ ಮತ್ತು ಅರ್ಥವಿಸ್ತಾರಗಳಲ್ಲಿ ಪಾಕ್ಷಿಕ ಬದಲಾವಣೆಯಾಗುತ್ತದೆಯಾದರೆ ಅರ್ಥಾಂತರ ಪ್ರಭೇದದಲ್ಲಿ ಮೊದಲಿನ ಅರ್ಥಕ್ಕೆ ಭಿನ್ನವಾದ ಬೇರೊಂದು ಅರ್ಥ ಸ್ಫುರಿಸುವುದು ಕಂಡುಬರುತ್ತದೆ. ಬೇರೆ ಭಾಷೆಗಳಿಂದ ಕನ್ನಡಕ್ಕೆ ಬಂದಿರುವ ಪದಗಳಲ್ಲಿ ಈ ರೀತಿಯ ಅರ್ಥಬದಲಾವಣೆಯನ್ನು ಸುಲಭವಾಗಿ ಗಮನಿಸಲು ಸಾಧ್ಯ. ಸಮಯ ಎಂಬರ್ಥದಲ್ಲಿ ಸಂಸ್ಕೃತದಲ್ಲಿ ಬಳಕೆಯಾಗುತ್ತಿದ್ದ ಅವಸರ ಎಂಬ ಪದ ಕನ್ನಡದಲ್ಲಿ ಆತುರ ಎಂಬರ್ಥದಲ್ಲಿ ಉಪಯೋಗದಲ್ಲಿದೆ. ಹಳ್ಳಿಯವನು ಎಂಬರ್ಥದ ಗವಾರ್ ಎಂಬ ಆರ್ಯಭಾಷೆಯ ಪದಕ್ಕೆ ಕನ್ನಡದಲ್ಲಿ ಬುದ್ಧಿ ಕಡಿಮೆಯವನು ಎಂಬರ್ಥ ಕಲ್ಪಿತವಾಗಿದೆ. ಇದನ್ನೇ ಪುಷ್ಟೀಕರಿಸುವ ಅರ್ಥದಲ್ಲಿ ಹಳ್ಳಿಗವಾರ್ ಎಂಬ ಪ್ರಯೋಗ ಕೂಡ ಇದೆ. ದೆವ್ವ (ದೈವ, ಸಂಸ್ಕೃತ) ಎಂದರೆ ದೇವರು, ಈಗ ಪಿಶಾಚಿ ಎಂಬರ್ಥದಲ್ಲಿ ಬಳಕೆಯಾಗುತ್ತಿದೆ. ಹಾಗೆಯೇ ದೇವಾಲಯ ಎಂಬರ್ಥದಲ್ಲಿ ದೇಗುಲ ಎಂಬ ಪದ ಉಪಯೋಗದಲ್ಲಿತ್ತು. ಈಗ ಅದರ ಪ್ರಯೋಗ 'ಹಾಳಾಗಿರುವ ಪ್ರದೇಶ' ಎಂಬರ್ಥದಲ್ಲಿ ಬಳಕೆಯಲ್ಲಿದೆ.

ಕೆಲವು ಪದಗಳನ್ನು ಕೆಲವು ಪರಿಸರಗಳಲ್ಲಿ ಉಪಯೋಗಿಸಬಾರದೆಂಬ ಕಟ್ಟುಪಾಡಿನಿಂದಾಗಿ ಆ ಪದಗಳ ಅರ್ಥ ಸಂಕೋಚವಾಗಿರುವುದು ಕಂಡುಬರುತ್ತದೆ. ಕುಂಕುಮ ಇಲ್ಲ ಎಂದು ಹೇಳುವ ಸಂದರ್ಭದಲ್ಲಿ ಕುಂಕುಮ ಹೆಚ್ಚಿದೆ ಎನ್ನುವುದು, ದೀಪವನ್ನು ಆರಿಸು ಎಂದು ಹೇಳದೆ ದೀಪವನ್ನು ತುಂಬು ಎನ್ನುವುದು, ಬೀಳ್ಕೊಂಡು ಹೋಗುವಾಗ ಹೋಗುತ್ತೇನೆ ಎನ್ನುವ ಬದಲು ಹೋಗಿಬರುತ್ತೇನೆ ಎನ್ನುವುದು ವಾಡಿಕೆ. ಕೆಲವುಕಡೆ ಉಪ್ಪನ್ನು ಬಡಿಸು ಎಂದು ಹೇಳುವಲ್ಲಿ ಸಕ್ಕರೆ ಬಡಿಸು ಎನ್ನುವುದು, ನಾಗರಹಾವು ಎಂದು ಹೇಳದೆ ಯಜಮಾನ ಮತ್ತು ಹಾವು ಎನ್ನುವ ಸಾಮಾನ್ಯ ಪದಕ್ಕೆ ಹುಳು ಎಂದು ಹೇಳುವುದು ಕಂಡುಬರುತ್ತದೆ.

ಆಲಂಕಾರಿಕ ಪ್ರಯೋಗಗಳಿಂದಾಗಿ ಕೆಲವೊಮ್ಮೆ ಪದಗಳು ಉಪಯೋಗವಾಗುತ್ತಿದ್ದ ಪರಿಸರಗಳಲ್ಲಿ ಹೆಚ್ಚುವರಿ ಉಂಟಾಗಿ ಅರ್ಥವಿಸ್ತಾರವಾಗುತ್ತದೆ ಎನ್ನಬಹುದು. ಕುರ್ಚಿಯ ಕಾಲುಗಳು, ಸೂಜಿಯ ಕಣ್ಣು, ಗಡಿಯಾರದ ಕೈಗಳು ಎಂಬಲ್ಲಿ ಕಾಲು, ಕಣ್ಣು, ಕೈ ಎಂಬ ಪದಗಳ ಅರ್ಥದಲ್ಲಿ ವಿಸ್ತಾರವಾಗಿದೆ ಎನ್ನಲು ಸಾಧ್ಯ. ಹೀಗೆ ಭಾಷೆಯಲ್ಲಿ ಕಾಲದಿಂದ ಕಾಲಕ್ಕೆ ಬದಲಾವಣೆ ನಡೆಯುತ್ತಿರುವಂತೆಯೇ ಅರ್ಥದಲ್ಲಿಯೂ ಬದಲಾವಣೆ ಕಾಣಿಸಿಕೊಳ್ಳುತ್ತದೆ. ಇದೊಂದು ನಿರಂತರ ಪ್ರಕ್ರಿಯೆ. (ಎಚ್.ಎಸ್.ಎ.)

**ಕನ್ನಡ ಮತ್ತು ಮೂಲದ್ರಾವಿಡ :** ಕನ್ನಡ ಭಾಷೆಯ ವ್ಯಾಕರಣ ವ್ಯವಸ್ಥೆಯ ಸ್ಥೂಲವಾದ ಪರಿಚಯವನ್ನು ಮಾಡಿಕೊಂಡಮೇಲೆ ಈಗ ಈ ಭಾಷೆ ಮೂಲದ್ರಾವಿಡದಿಂದ ಬೇರ್ಪಟ್ಟಾಗ ಏನೇನು ಬದಲಾವಣೆಗಳು ನಡೆದಿವೆ ಎಂಬುದನ್ನು ಪರಿಶೀಲಿಸಬಹುದು. ಕನ್ನಡದಲ್ಲಿ ಮೂಲದ್ರಾವಿಡದಲ್ಲಿದ್ದಂತೆ ಅ ಇ ಉ ಎ ಒ ಎಂಬ ಐದು ಹ್ರಸ್ವಸ್ವರಗಳೂ ಅವುಗಳ ದೀರ್ಘರೂಪಗಳೂ ಇವೆ. ಆದರೆ ಅವು ಬರಬಹುದಾದ ಸನ್ನಿವೇಶಗಳಲ್ಲಿ ಕೆಲವು ವ್ಯತ್ಯಾಸಗಳನ್ನು ಕಾಣಬಹುದು. ಮೂಲದ್ರಾವಿಡದಲ್ಲಿ ಪದಾಂತ್ಯದಲ್ಲಿ ಅ ಇ ಉ ಗಳು ಮಾತ್ರ ಬರಬಲ್ಲವು. ಆದರೆ ಕನ್ನಡದಲ್ಲಿ ಪದಾಂತ್ಯದಲ್ಲಿ ಎ ಕೂಡ ಬರಬಹುದು. ಮೂಲ ದ್ರಾವಿಡದಲ್ಲಿ ಶಬ್ದದ ಆದ್ಯಕ್ಷರದಲ್ಲಿ ಬರುವ ಇ ಉ ಕಾರಗಳು ಕನ್ನಡದಲ್ಲಿ ಅವುಗಳ ಮುಂದೆ ಒಂದು ವ್ಯಂಜನವಿದ್ದು ಆಮೇಲೆ ಪ್ರಕೃತಿಸಾಧಕವಾದ ಮತ್ತು ಆ ಕಾರದಿಂದ ಪ್ರಾರಂಭವಾಗುವ ಪ್ರತ್ಯಯ ಪರವಾದಾಗ ಅನುಕ್ರಮವಾಗಿ ಎ ಒ ಕಾರಗಳಾಗುತ್ತವೆ. ಉದಾ: ಇರ್ ಎರಡು, ಸುಡು ಸೊಡರು ಇತ್ಯಾದಿ. ಇದೇ ರೀತಿ ಇಯಲ್ ಉಡಲ್ ಮುಂತಾದ ಶಬ್ದಗಳ ಆದಿ ಈ, ಉ ಕಾರಗಳು ಎ, ಒ ಕಾರಗಳಾಗಿ ಎಯಲು, ಒಡಲು ಎಂದಾಗಿರುವುದನ್ನು ಗಮನಿಸಬಹುದು. ಮೂಲ ದ್ರಾವಿಡದಲ್ಲಿ ಕ, ಚ, ಟ, ತ ಪ ಮತ್ತು ಱ (ವರ್ತ್ಸ್ಯಸ್ಪರ್ಶ) ಎಂಬ ಆರು ಸ್ಪರ್ಶ ವ್ಯಂಜನಗಳೂ ಞ, ಣ, ನ, ಮ ಎಂಬ ನಾಲ್ಕು ಅನುನಾಸಿಕಗಳೂ ರ ಎಂಬ ರೇಫವೂ ಲ, ಳ ಎಂಬ ಎರಡು ಪಾರ್ಶ್ವಿಕಗಳೂ ವ, ೞ, ಯ ಎಂಬ ಮೂರು ಅಂತಸ್ಥಗಳೂ ಸೇರಿ ಹದಿನಾರು ವ್ಯಂಜನಗಳಿದ್ದುವು (ಇದರ ಜೊತೆಗೆ ಆಯ್ದಂ ಎಂಬ ಮತ್ತೊಂದು ಧ್ವನಿಯೂ ಇತ್ತೆಂಬ ಕಲ್ಪನೆಗೂ ಅವಕಾಶವಿದೆ). ಕನ್ನಡದಲ್ಲಿ ಕ, ಚ, ಟ, ತ, ಪ ಎಂಬ ಐದು ಸ್ಪರ್ಶಗಳು ಘೋಷ ಮತ್ತು ಅಘೋಷಗಳಾಗಿ ಒಡೆದು ಹತ್ತು ಸ್ಪರ್ಶಗಳಾಗಿವೆ. ಮೂಲ ದ್ರಾವಿಡದಲ್ಲಿ ಈಗ ತಮಿಳಿನಲ್ಲಿರುವಂತೆ ಈ ಘೋಷ-ಅಘೋಷ ಭೇದ ಸನ್ನಿವೇಶಬದ್ಧ ಮಾತ್ರವಾಗಿತ್ತು. ಕನ್ನಡದಲ್ಲಿ ಕ, ಚ, ಟ, ತ, ಪ ಇವುಗಳಲ್ಲದೆ ಗ, ಜ, ಡ, ದ, ಬ ಇವುಗಳೂ ಪ್ರತ್ಯೇಕ ಧ್ವನಿಗಳಾದುವು. ವರ್ತ್ಸ್ಯಸ್ಪರ್ಶವೆನ್ನಲಾದ ಱ ಎಂಬ ವಿಶಿಷ್ಟ ಧ್ವನಿ ಸ್ವರಮಧ್ಯದಲ್ಲಿ ಶಕಟರೇಫವಾಗಿಯೂ ಉಳಿದೆಡೆಗಳಲ್ಲಿ ಮುಂದೆ ಬರುವ ಧ್ವನಿಗೆ ಅನುಸಾರವಾಗಿ ಕ, ದ ಅಥವಾ ರ ಆಗಿಯೂ ಬದಲಾವಣೆ ಹೊಂದಿದೆ. ಮೂಲ ದ್ರಾವಿಡದಲ್ಲಿ ಪದಮಧ್ಯದಲ್ಲಿ ಬರುವ ಸ್ಪರ್ಶಗಳು ಕನ್ನಡದಲ್ಲಿ ಘೋಷಸ್ಪರ್ಶಗಳಾಗಿಯೇ ಉಳಿದಿವೆ. ಆದರೆ ಪದಮಧ್ಯದ ಚ ಕಾರ ಸ ಕಾರವಾಗಿಯೂ ಪ ಕಾರ ವ ಕಾರವಾಗಿಯೂ ಪರಿಣಮಿಸಿವೆ ಎಂದು ಬೀಸು, ಕವುಚು ಮುಂತಾದ ಉದಾಹರಣೆಗಳಿಂದ ತಿಳಿಯಬಹುದು. ಅನುನಾಸಿಕಕ್ಕೆ ಪರವಾಗಿ ಬರುವ ಸ್ಪರ್ಶಗಳೂ ಮೂಲದ್ರಾವಿಡದಂತೆ ಕನ್ನಡದಲ್ಲಿಯೂ ಘೋಷವಾಗಿಯೇ ಉಳಿದಿವೆ. ಆದರೆ ಱ ಕಾರ ಮಾತ್ರ ಈ ಸನ್ನಿವೇಶದಲ್ಲಿ ದ ಕಾರವಾಗಿದೆ. ಒಸ್ ಎಂಬುದು ಒಂದು ಎಂದಾಗಿದೆ. ಮೂಲದ್ರಾವಿಡದ ಸ್ಪರ್ಶವ್ಯಂಜನಗಳಲ್ಲಿ ಪ, ತ, ಚ ಮತ್ತು ಕ ಗಳು ಮಾತ್ರ ಶಬ್ದದ ಆದಿಯಲ್ಲಿ ಬಂದು ಅಘೋಷಗಳಾಗಿ ಉಚ್ಚಾರವಾಗುತ್ತಿದ್ದವು. ಕನ್ನಡದಲ್ಲಿಯೂ ಇವುಗಳಲ್ಲಿ ಹೆಚ್ಚಿನವು ಅಘೋಷಗಳಾಗಿಯೇ ಉಳಿದರೂ ಕೆಲವು ಮಾತ್ರ ಘೋಷಗಳಾಗಿಯೂ ಬದಲಾವಣೆಗೊಂಡಿವೆ. ಉದಾಹರಣೆಗೆ ದಟ್ಟ, ಜಾರು, ಗಂಡು ಮುಂತಾದ ಶಬ್ದಗಳನ್ನು ಗಮನಿಸಬಹುದು. ಆದಿ ಚ ಕಾರ ಮಾತ್ರ ಕೆಲವೆಡೆ ಸ ಕಾರವಾಗಿಯೂ (ಸೂಡು, ಸಾಲು ಇತ್ಯಾದಿ) ಕೆಲವೆಡೆ ಲೋಪವಾಗಿಯೂ ಪರಿಣಾಮಹೊಂದಿದೆ (ಉಪ್ಪು, ಆರು ಇತ್ಯಾದಿ ಶಬ್ದಗಳಲ್ಲಿ ಆದಿ ಚ ಕಾರವಿತ್ತೆಂದು ವಿದ್ವಾಂಸರ ಅಭಿಪ್ರಾಯ). ಮೂಲದ ದ್ವಿಸ್ಪರ್ಶಗಳು ಕನ್ನಡದಲ್ಲಿ ದೀರ್ಘಸ್ವರಕ್ಕೆ ಪರವಾಗಿ ಬಂದಾಗ ದ್ವಿತ್ವವನ್ನು ಕಳೆದುಕೊಂಡಿವೆ. ಹೀಗಾಗಿ ಆಟ್ಟಂ ಇದ್ದುದು ಆಟ ಆಗಿದೆ. ವರ್ತ್ಸ್ಯಸ್ಪರ್ಶವಾದ ಱ ಮೂಲದಲ್ಲಿ ದ್ವಿತ್ವ ರೂಪದಲ್ಲಿದ್ದುದು ಕನ್ನಡಕ್ಕೆ ಬರುವಾಗ ಹ್ರಸ್ವಸ್ವರದ ಪದದಲ್ಲಿ ದ್ವಿತ್ವ ಕ ಕಾರವಾಗಿಯೂ ದೀರ್ಘಸ್ವರಕ್ಕೆ ಪರವಾದಾಗ ಏಕ ತ ಕಾರವಾಗಿಯೂ ಪರಿಣಮಿಸಿದೆ. ಎ ಱೆ ಎಂದಿದ್ದುದು ಎತ್ತು ಎಂದು ಏ ಱ್ಱ ಎಂದಿದ್ದುದು ಏತ ಎಂದೂ ಆಗಿವೆ. ಮೂಲ ಯ ಕಾರ ಶಬ್ದಾದಿಯಲ್ಲಿ ಲೋಪವಾಗಿದೆ. ಯಾನಯ್ ಇದ್ದುದು ಆನೆಯಾಗಿದೆ. ಈ ಉದಾಹರಣೆಯಿಂದಲೇ ಶಬ್ದಾಂತ್ಯದಲ್ಲಿರುವ ಯ ಕಾರ ಲೋಪವಾಗಿ ಅದಕ್ಕೆ ಹಿಂದಿನ ಆ ಕಾರ ಎ ಕಾರವಾಗಿದೆ ಎಂದೂ ತಿಳಿಯಬಹುದು.

ಮೂಲದ್ರಾವಿಡದ ಕ್ರಿಯಾಧಾತುಗಳು ಏಕಾಕ್ಷರಿಗಳಾಗಿದ್ದು ಕನ್ನಡದಲ್ಲಿ ಅವುಗಳಲ್ಲಿ ಕೆಲವು ಏಕಾಕ್ಷರಿಗಳಾಗಿಯೇ ಉಳಿದು ಇನ್ನು ಕೆಲವು ಉಚ್ಚಾರಣಾ ಸೌಕರ್ಯಕ್ಕಾಗಿ ಸೇರಿದ ಉ ಕಾರದಿಂದಾಗಿಯೂ ಕೆಲವು ಪ್ರಕೃತಿಸಾಧಕ ಪ್ರತ್ಯಯಗಳನ್ನು ಸೇರಿಸಿದ್ದರಿಂದಲೂ ಎರಡು ಅಥವಾ ಮೂರು ಅಕ್ಷರಗಳನ್ನು ಪಡೆದಿವೆ. ಏಕಾಕ್ಷರಿಗಳಿಗೆ ಉದಾಹರಣೆಯಾಗಿ ತಿನ್ ಆಳ್ ಎಂಬ ಧಾತುಗಳನ್ನೂ ದ್ವ್ಯಕ್ಷರಿಗೆ ಆಡು ಕಟ್ಟು ಇತ್ಯಾದಿಗಳನ್ನೂ ತ್ರ್ಯಕ್ಷರಿಗೆ ತಿರುಗು ತುೞುಕು ಇತ್ಯಾದಿಗಳನ್ನೂ ನೋಡಬಹುದು. ಮೂಲದ್ರಾವಿಡ ಕ್ರಿಯಾಧಾತುಗಳಲ್ಲಿ ಸಕರ್ಮಕ ಅಕರ್ಮಕದ ವಿವಕ್ಷೆ ಇತ್ತೆಂದೂ ಅಕರ್ಮಕ ಪ್ರಕೃತಿಯಲ್ಲಿರುವ ಅನುನಾಸಿಕಯುಕ್ತ ಸ್ಪರ್ಶವ್ಯಂಜನ ಸಕರ್ಮಕವಾದಾಗ ದ್ವಿಸ್ಪರ್ಶವಾಗುತ್ತದೆಯೆಂದೂ ಹೇಳಬಹುದು. ಈ ಪ್ರವೃತ್ತಿ ಕನ್ನಡದಲ್ಲಿ ಸುಂದು, ಸುತ್ತು ಮುಂತಾದ ಕೆಲವು ಧಾತುಗಳಲ್ಲಿ ಉಳಿದುಕೊಂಡಿದ್ದರೂ ಹೆಚ್ಚಿನಕಡೆ ಈ ಭೇದ ಕಂಡುಬರುವುದಿಲ್ಲ. ಕ್ರಿಯಾಧಾತುಗಳಿಗೆ ಮೂಲದ್ರಾವಿಡದಲ್ಲಿ ಭೂತ ಮತ್ತು ಭವಿಷ್ಯದರ್ಥವನ್ನು ಸೂಚಿಸುವ ಎರಡು ಪ್ರತ್ಯಯಗಳಿದ್ದಿರಬೇಕು. ಅವುಗಳಲ್ಲಿ ಭವಿಷ್ಯತ್‌ಸೂಚಕಪ್ರತ್ಯಯ ಕನ್ನಡದಲ್ಲಿ ವ, ಪ ಮತ್ತು ಬ ಎಂದು ಬೇರೆ ಬೇರೆ ರೂಪದಲ್ಲಿ ಬರುತ್ತದೆ. ಕನ್ನಡದಲ್ಲಿ ಪ್ರತ್ಯೇಕವಾದ ವರ್ತಮಾನ ಕಾಲ ಹುಟ್ಟಿಕೊಂಡ ಬಗೆಯನ್ನು ಆಗಲೇ ಸೂಚಿಸಿದೆ. ಉತ್ತಮಪುರುಷ ಬಹುವಚನ ಸರ್ವನಾಮದಲ್ಲಿ ವ್ಯಾವರ್ತಕ (ಯಾರೊಡನೆ ಮಾತನಾಡುತ್ತಿರುವೆವೋ ಅವರನ್ನು ಸೇರಿಸಿ) ಮತ್ತು ಅವ್ಯಾವರ್ತಕ (ಮಾತನಾಡುತ್ತಿರುವವರನ್ನು ಬಿಟ್ಟು) ಎಂಬ ರೂಪಗಳಿದ್ದು ಕನ್ನಡದಲ್ಲಿ ಈ ವ್ಯತ್ಯಾಸ ಲೋಪವಾಗಿದೆ. (ಯು.ಪಿ.ಯು.)

**ಕನ್ನಡ ಲಿಪಿ :** ಕನ್ನಡ ಲಿಪಿ ಭಾರತ ದೇಶದ ಇತರ ಲಿಪಿಗಳಂತೆ ಕ್ರಿ.ಪೂ.3ನೆಯ ಶತಮಾನದ ಅಶೋಕನ ಬ್ರಾಹ್ಮೀ ಲಿಪಿಯಿಂದ ಉದ್ಭವಿಸಿದೆ. ಈ ಬ್ರಾಹ್ಮೀ ಲಿಪಿ ಭಾರತದಲ್ಲಿ ಇದುವರೆಗೆ ಓದಿ ಗುರುತಿಸಲ್ಪಟ್ಟಿರುವ ಅತ್ಯಂತ ಪ್ರಾಚೀನ ಲಿಪಿಯಾಗಿದೆ. ಇದಕ್ಕಿಂತ ಪ್ರಾಚೀನವಾದ ಸಿಂಧುಕೊಳ್ಳದ ಮುದ್ರೆಗಳ ಲಿಪಿಯನ್ನು ಇದುವರೆಗೆ ವಿದ್ವಾಂಸರು ಸಮರ್ಪಕವಾಗಿ ಓದಿ ಅರ್ಥ ಮಾಡಿರುವುದಿಲ್ಲ. ಅಶೋಕನ ಬ್ರಾಹ್ಮೀಲಿಪಿ ಉತ್ತರಕ್ಕೆ ಕಾಲಸಿ ಮತ್ತು ಭಾರತ-ನೇಪಾಲ ಗಡಿಯಲ್ಲಿರುವ ರುಮ್ಮಿಂದ್ಯೈಯಿಂದ ದಕ್ಷಿಣಕ್ಕೆ ಕರ್ನಾಟಕದವರೆಗೂ ಪೂರ್ವಕ್ಕೆ ಒರಿಸ್ಸಾದಿಂದ ಪಶ್ಚಿಮಕ್ಕೆ ಜುನಾಗಡ ಮತ್ತು ಮುಂಬಯಿವರೆಗೂ ದೊರೆತ ಅಶೋಕನ ಧರ್ಮಶಾಸನಗಳಲ್ಲಿ ಕಂಡುಬರುತ್ತದೆ. ಕರ್ನಾಟಕದಲ್ಲಿ ಅಶೋಕನ ಬ್ರಾಹ್ಮೀಲಿಪಿಯ ಶಾಸನಗಳು ಬ್ರಹ್ಮಗಿರಿ (ಚಿತ್ರದುರ್ಗ ಜಿಲ್ಲೆ), ನಿಟ್ಟೂರು ಮತ್ತು ಉದೆಗೊಳ್ಳಂ (ಬಳ್ಳಾರಿಜಿಲ್ಲೆ), ಸನ್ನತಿ (ಗುಲ್ಬರ್ಗ ಜಿಲ್ಲೆ), ಮಸ್ಕಿ ಮತ್ತು ಕೊಪ್ಪಳ (ರಾಯಚೂರು ಜಿಲ್ಲೆ) ಈ ಸ್ಥಳಗಳಲ್ಲಿ ದೊರೆತಿವೆ. ಅಶೋಕನ ಶಾಸನಗಳ ಲಿಪಿ ಈ ಕಾಲಕ್ಕಾಗಲೇ ಪರಿಪೂರ್ಣತೆಯನ್ನು ಪಡೆದಿದ್ದು ಪ್ರಾಕೃತ ಭಾಷೆಯ ಪ್ರತಿಯೊಂದು ಶಬ್ದ ಅಥವಾ ಧ್ವನಿಗೆ ಪ್ರತ್ಯೇಕವಾದ ಅಕ್ಷರ ಅಥವಾ ಸಂಜ್ಞೆಯನ್ನು ಅದರಲ್ಲಿ ಕಲ್ಪಿಸಲಾಗಿದೆ. ಈ ಲಿಪಿ ಎಡದಿಂದ ಬಲಕ್ಕೆ ಬರೆಯಲ್ಪಟ್ಟಿದ್ದು ಅದರಲ್ಲಿಯ ಸರಳ, ಸುಂದರ ಅಕ್ಷರಗಳು ಸುಲಭವಾಗಿ ಗುರುತಿಸುವಂತಿವೆ. ಈ ಅಕ್ಷರಗಳಿಗೆ ತಲೆಕಟ್ಟು ಇರುವುದಿಲ್ಲ. ಥ, ಪ, ಮ, ವ, ಲ, ಹ ಮುಂತಾದ ಅಕ್ಷರಗಳ ಬುಡಕಟ್ಟು ದುಂಡಾಗಿರುತ್ತವೆ. ಸಂಸ್ಕೃತ ಭಾಷೆಯ ಋಕಾರ, ವಿಸರ್ಗ, ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯಗಳನ್ನು ನಿರ್ದೇಶಿಸುವ ಸಂಜ್ಞೆಗಳಿರುವುದಿಲ್ಲ. ಅದರಂತೆ ಪದಾದಿಯ ದೀರ್ಘ ಈ ಕಾರವಿಲ್ಲ.

ಅಶೋಕನ ಬ್ರಾಹ್ಮೀ ಲಿಪಿ ಮುಂದೆ 3ನೆಯ ಶತಮಾನದವರೆಗೆ ಶುಂಗ, ಕುಷಾಣ, ಕ್ಷತ್ರಪ, ಸಾತವಾಹನ ಮುಂತಾದ ಅರಸರ ಶಾಸನಗಳಲ್ಲಿ ಭಾರತದ ಬೇರೆ ಬೇರೆ ಭಾಗಗಳಲ್ಲಿ ವಿಕಾಸ ಹೊಂದಿರುತ್ತದೆ. ಕುಷಾಣ ಕಾಲದ ಲಿಪಿಯ ಅಕ್ಷರಗಳು ಕಡಿಮೆ ಎತ್ತರವಾಗಿಯೂ ಅಗಲವಾಗಿಯೂ ದಪ್ಪವಾಗಿಯೂ ಇರುತ್ತವೆ. ಕ್ಷತ್ರಪ ಹಾಗೂ ಸಾತವಾಹನರ ಕಾಲದ ಲಿಪಿಗಳೂ ಹೆಚ್ಚು ಕಡಿಮೆ ಇವೇ ವೈಶಿಷ್ಟ್ಯಗಳನ್ನೊಳಗೊಂಡಿವೆ.

ಕರ್ನಾಟಕದಲ್ಲಿ ಬ್ರಾಹ್ಮೀ ಲಿಪಿಯ ಮುಂದಿನ ಹಂತವನ್ನು 2-3ನೆಯ ಶತಮಾನದ ಮಳವಳ್ಳಿ ಮತ್ತು ಬನವಾಸಿಯ ಸಾತಕರ್ಣಿಯ ಶಾಸನಗಳಲ್ಲಿ ಹಾಗೂ ಮ್ಯಾಕದೋನಿಯಾ (ಬಳ್ಳಾರಿ ಜಿಲ್ಲೆ) ಪುಳುಮಾವಿಯ ಶಾಸನದಲ್ಲಿ ಕಾಣುತ್ತೇವೆ. ಇಲ್ಲಿಯೂ ಕೆಲವು ಅಕ್ಷರಗಳ ಎತ್ತರ ಕಡಿಮೆಯಾಗಿದ್ದು ಕೆಲವು ಅಕ್ಷರಗಳಿಗೆ ತ್ರಿಕೋಣಾಕೃತಿಯುಳ್ಳ ತಲೆಕಟ್ಟು ಇರುತ್ತದೆ. ಅಗಲವಾದ ತುದಿಯುಳ್ಳ ಲೇಖನಿಯನ್ನು ಉಪಯೋಗಿಸಿದ್ದರಿಂದ ಇಂಥ ತಲೆಕಟ್ಟುಗಳು ತಲೆದೋರಿವೆಯೆಂದು ಕೆಲವು ವಿದ್ವಾಂಸರು ಹೇಳುತ್ತಾರೆ. ಅ, ಕ, ರ ಮುಂತಾದ ಅಕ್ಷರಗಳ ಲಂಬ ರೇಖೆಯ ಕೆಳಭಾಗ ವೃತ್ತಾಕಾರವಾಗಿ ಎಡಗಡೆ ಹೊರಳಿದೆ. ಇತ್ತೀಚೆಗೆ ಗುಲ್ಬರ್ಗ ಜಿಲ್ಲೆಯ ಸನ್ನತಿ ಎಂಬ ಸ್ಥಳದಲ್ಲಿ ದೊರೆತ 3ನೆಯ ಶತಮಾನದ ಶಾಸನಗಳಲ್ಲಿಯ ಕೆಲವು ಅಕ್ಷರಗಳು ಆಂಧ್ರ ಪ್ರದೇಶದ ನಾಗಾರ್ಜುನಕೊಂಡದ ಇಕ್ಷ್ವಾಕು ಅರಸರ ಶಾಸನಗಳ ಅಕ್ಷರಗಳಂತೆ ಸುಂದರವಾಗಿಯೂ ಅಲಂಕಾರಯುತವಾಗಿಯೂ ಇವೆ.

4-5ನೆಯ ಶತಮಾನದ ಕದಂಬ ಅರಸರ ಶಾಸನಗಳಲ್ಲಿ ಕಂಡುಬರುವ ಕನ್ನಡ ಲಿಪಿ ಮುಂದಿನ ಬೆಳೆವಣಿಗೆಗೆ ತಳಹದಿಯಾಗಿದೆಯೆಂದು ಹೇಳಬಹುದು. ಈ ಕಾಲದಿಂದ ಕರ್ನಾಟಕದಲ್ಲಿ ಬಾಳಿ ಬೆಳಗಿದ ಗಂಗ, ಬಾದಾಮಿಯ ಚಳುಕ್ಯ, ರಾಷ್ಟ್ರಕೂಟ, ಕಲ್ಯಾಣದ ಚಾಳುಕ್ಯ, ಕಳಚುರಿ, ಯಾದವ, ಹೊಯ್ಸಳ ಮತ್ತು ವಿಜಯನಗರದ ಅರಸರ ಸಾವಿರಾರು ಶಾಸನಗಳು ದೊರೆತಿದ್ದರಿಂದ ಕನ್ನಡ ಲಿಪಿಯ ಅವಿಚ್ಛಿನ್ನವಾದ ಬೆಳೆವಣಿಗೆಯನ್ನು ತಿಳಿದುಕೊಳ್ಳಲು ಸಾಧ್ಯವಾಗಿದೆ. ಕದಂಬ ಕಾಲದ ಲಿಪಿಯ ಮುಖ್ಯವಾದ ವೈಶಿಷ್ಟ್ಯವೆಂದರೆ ಕೆಲವು ಶಾಸನಗಳ ಅಕ್ಷರಗಳಲ್ಲಿ ಕಂಡುಬರುವ ಚೌಕಾಕೃತಿಯ ತಲೆಕಟ್ಟು, ಇಂಥ ತಲೆಕಟ್ಟು ಇದೇ ಕಾಲದ ಗುಪ್ತ ಅರಸರ ಮಾಳವದಲ್ಲಿರುವ ಶಾಸನಗಳಲ್ಲೂ ವಾಕಾಟಕ ಅರಸರ ಮಧ್ಯಪ್ರದೇಶದಲ್ಲಿರುವ ಶಾಸನಗಳಲ್ಲೂ ಕಂಡುಬರುತ್ತದೆ. ಈ ತಲೆಕಟ್ಟು ಪೆಟ್ಟಿಗೆಯ ಆಕಾರದ್ದಿರುವುದರಿಂದ ಇಂಥ ಅಕ್ಷರಗಳಿಗೆ ಪೆಟ್ಟಿಗೆಯ ತಲೆಕಟ್ಟುಳ್ಳ ಅಕ್ಷರಗಳೆಂದು ಹೇಳುವುದುಂಟು. ಕದಂಬ ಲಿಪಿಯ ಅಕ್ಷರಗಳು ಎತ್ತರದಲ್ಲಿ ಕಡಿಮೆಯಿದ್ದು ಹೆಚ್ಚಿಗೆ ದುಂಡಾಗುವ ಪ್ರವೃತ್ತಿಯನ್ನು ಹೊಂದಿರುತ್ತವೆ. ಇದರಲ್ಲಿ ಸಂಸ್ಕೃತ ಭಾಷೆಯ ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯ ಮುಂತಾದುವನ್ನು ಸೂಚಿಸುವ ಸಂಜ್ಞೆಗಳನ್ನೂ ಕನ್ನಡ ಭಾಷೆಯ ೞ ಱ ಮುಂತಾದುವನ್ನು ಸೂಚಿಸುವ ಸಂಜ್ಞೆಗಳನ್ನೂ ಸೇರಿಸಲಾಗಿದೆ. 6-8ನೆಯ ಶತಮಾನದಲ್ಲಾಳಿದ ಬಾದಾಮಿ ಚಳುಕ್ಯರ ಶಾಸನಗಳಲ್ಲಿ ಕನ್ನಡ ಲಿಪಿಯ ಮುಂದಿನ ಬೆಳೆವಣಿಗೆಯನ್ನು ಕಾಣುತ್ತೇವೆ. ಈ ಲಿಪಿಯಲ್ಲಿ ಅಕ್ಷರಗಳ ತಲೆಕಟ್ಟು ಬಹು ಚಿಕ್ಕದಾದ ಸರಳರೇಖೆಯಿಂದೊಡಗೂಡಿರುತ್ತದೆ. ಕೆಲವು ಶಾಸನಗಳಲ್ಲಿ ಕ ಮತ್ತು ರ ಅಕ್ಷರಗಳ ಲಂಬರೇಖೆಯ ಎಡಭಾಗ ಮೇಲಕ್ಕೆ ಹೋಗಿ ಮೇಲ್ಭಾಗದ ಅಡ್ಡಗೆರೆಗೆ ಹೊಂದಿಕೊಂಡಿರುತ್ತದೆ. 8-10ನೆಯ ಶತಮಾನದ ರಾಷ್ಟ್ರಕೂಟರ ಶಾಸನಗಳಲ್ಲಿ ಪದಾದಿಯ ಅ ಮತ್ತು ಇ ಅಕ್ಷರಗಳು ಹೆಚ್ಚಿನ ಬೆಳೆವಣಿಗೆಯನ್ನು ವ್ಯಕ್ತಪಡಿಸುತ್ತವೆ.

ಕನ್ನಡ ಲಿಪಿ 10-12ನೆಯ ಶತಮಾನಗಳಲ್ಲಿ ಕಲ್ಯಾಣದ ಚಾಳುಕ್ಯರ ಶಾಸನಗಳಲ್ಲಿ ವಿಶೇಷ ಬದಲಾವಣೆಯನ್ನು ಹೊಂದಿತು. ಇದು ಲಿಪಿ ಬೆಳೆವಣಿಗೆಯ ಒಂದು ಮುಖ್ಯವಾದ ಹಂತ. ಈ ಕಾಲದ ಅಕ್ಷರಗಳು ಇನ್ನಷ್ಟು ದುಂಡಾಗಿದ್ದು ಆಧುನಿಕ ಕನ್ನಡ ಲಿಪಿಯ ಅಕ್ಷರಗಳ ಲಕ್ಷಣಗಳನ್ನು ವ್ಯಕ್ತಪಡಿಸುತ್ತವೆ. ಉದಾಹರಣೆಗಾಗಿ ಕ ರ ಯ ಮುಂತಾದ ಅಕ್ಷರಗಳ ಮೈಕಟ್ಟು ಹೆಚ್ಚುಕಡಿಮೆ ಈಗಿನಂತೆಯೇ ಇದೆ. ಕೆಲವು ಅಕ್ಷರಗಳ ತಲೆಕಟ್ಟು ಕೋನಾಕೃತಿಯುಳ್ಳದ್ದಾಗಿದೆ. ಚ ವ ಮ ಮುಂತಾದ ಅಕ್ಷರಗಳ ತಲೆಕಟ್ಟಿನ ಭಾಗ ಎರಡು ಭಾಗವಾಗಿ ಬೇರ್ಪಡೆಯಾಗಿದ್ದು ತಲೆಕಟ್ಟು ಬಲಭಾಗದ ರೇಖೆಗೆ ಹೊಂದಿಕೊಂಡಿರುತ್ತದೆ. ಅನೇಕ ಅಕ್ಷರಗಳ ತಲೆಕಟ್ಟು ಸ್ವಲ್ಪವಾಗಿ ಎದ್ದು ಕಾಣುವಂತಿದೆ.

ಮುಂದೆ 12-13ನೆಯ ಶತಮಾನಗಳಲ್ಲಿ ಹೊಯ್ಸಳ ಅರಸರ ಅನೇಕ ಶಾಸನಗಳನ್ನು ನುಣುಪಾದ ಕಲ್ಲಿನ ಹಲಗೆಗಳ ಮೇಲೆ ಅಲಂಕಾರಯುತವಾಗಿಯೂ ಕಲಾತ್ಮಕವಾಗಿಯೂ ಬರೆಯಲಾಗಿದ್ದು ಅಲ್ಲಿಯ ಅಕ್ಷರಗಳು ಬಹು ಸುಂದರವಾಗಿ ಕಾಣುತ್ತವೆ. ಈ ಅಕ್ಷರಗಳನ್ನು ಸ್ಪಷ್ಟವಾಗಿಯೂ ಹೆಚ್ಚು ದುಂಡಾಗಿಯೂ ಬರೆಯಲಾಗಿದೆ. ಇಲ್ಲಿ ಕನ್ನಡ ಲಿಪಿ ಊರ್ಜಿತಾವಸ್ಥೆಯನ್ನು ಹೊಂದಿದೆಯೆಂದು ಹೇಳಬಹುದು. ಆದರೆ ಮುಂದಿನ ಎರಡು ಮೂರು ಶತಮಾನಗಳ ಕಾಲದಲ್ಲಿ ಅಂದರೆ 14-16ನೆಯ ಶತಮಾನಗಳ ವಿಜಯನಗರ ಅರಸರ ಶಾಸನಗಳಲ್ಲಿ ಅಕ್ಷರಗಳನ್ನು ಡೊಂಕುಡೊಂಕಾಗಿ ಬರೆಯಲಾಗಿದ್ದು ಅವುಗಳ ಜೋಡಣೆಯ ವಿಷಯದಲ್ಲಿ ಅಷ್ಟು ಗಮನವನ್ನಿತ್ತಿಲ್ಲ. ಆದುದರಿಂದ ಕಲ್ಯಾಣದ ಚಾಳುಕ್ಯ ಹಾಗೂ ಹೊಯ್ಸಳರ ಕಾಲದ ಲಿಪಿಯ ಅಕ್ಷರಗಳಂತೆ ವಿಜಯನಗರ ಕಾಲದ ಲಿಪಿಯ ಅಕ್ಷರಗಳು ಅಂದವಾಗಿ ಕಾಣುವುದಿಲ್ಲ. ಆದರೂ ಈ ಕಾಲದ ಲಿಪಿಯ ಅಕ್ಷರಗಳು ಕನ್ನಡ ಲಿಪಿಯ ಬೆಳೆವಣಿಗೆಯ ದೃಷ್ಟಿಯಿಂದ ಗಮನಾರ್ಹವಾಗಿವೆ. ಅ ಇ ಣ ಷ ಳ ಮುಂತಾದ ಅಕ್ಷರಗಳು ಈಗಿನ ರೂಪುಗಳನ್ನು ಹೆಚ್ಚಾಗಿ ಹೋಲುತ್ತವೆ. ದ ಡ ಪ ಮುಂತಾದ ಅಲ್ಪಪ್ರಾಣದ ಅಕ್ಷರಗಳಿಗೆ ಕೆಳಗಡೆ ಒಂದು ರೇಖೆಯನ್ನು ಸೇರಿಸಿ ಧ ಢ ಫ ಮುಂತಾದ ಮಹಾಪ್ರಾಣಗಳ ಸಂಜ್ಞೆಗಳನ್ನು ಸೂಚಿಸಲಾಗಿದೆ. ಇದುವರೆಗೆ ಅಕ್ಷರಗಳ ಮೇಲ್ಭಾಗದಲ್ಲಿ ಒಂದು ಚುಕ್ಕೆ ಅಥವಾ ಚಿಕ್ಕ ಬಿಂದುವಿನಿಂದ ಸೂಚಿಸಲ್ಪಡುತ್ತಿದ್ದ ಅನುಸ್ವಾರವನ್ನು ಆಯಾ ಅಕ್ಷರಗಳ ಬಲಗಡೆಗೆ ಅಕ್ಷರಗಳಷ್ಟೇ ಗಾತ್ರದ ಸೊನ್ನೆಯಿಂದ ತೋರಿಸಲಾಗಿದೆ.

18ನೆಯ ಶತಮಾನದಲ್ಲಿ ಮೈಸೂರು ಅರಸರ ಕಾಲದಲ್ಲಿ ಕನ್ನಡ ಲಿಪಿ ವಿಜಯನಗರ ಕಾಲದ ಅಕ್ಷರಗಳ ಕೆಲವು ಲಕ್ಷಣಗಳನ್ನು ಉಳಿಸಿಕೊಂಡಿದ್ದರೂ ಆಧುನಿಕ ಕನ್ನಡ ಲಿಪಿಗೆ ಬಹಳ ಹತ್ತಿರವಾಗಿ ತೋರುತ್ತದೆ.

ಇತ್ತೀಚೆಗೆ ಮುದ್ರಣ ಬಂದ ಮೇಲೆ ಇತರ ಲಿಪಿಗಳಂತೆ ಕನ್ನಡ ಲಿಪಿಯೂ ಒಂದು ಸ್ಥಿರತೆಯನ್ನು ಹೊಂದಿದ್ದರಿಂದ ಹೆಚ್ಚಿನ ವಿಕಾಸಕ್ಕೆ ಆಸ್ಪದವಿಲ್ಲದಂತಾಗಿದೆ. ಆದರೂ ಮುದ್ರಣದ ಲಿಪಿಯಲ್ಲಿ ಸಹ ಕಾಲಕಾಲಕ್ಕೆ ಕೆಲವು ಸುಧಾರಣೆಗಳನ್ನು ಮಾಡಿಕೊಂಡು ಹೆಚ್ಚಿನ ಅಂದವಾದ ಅಕ್ಷರಗಳನ್ನು ಅಚ್ಚುಹಾಕುತ್ತಿರುವುದನ್ನು ನೋಡಬಹುದು.

ಕನ್ನಡ ಲಿಪಿಯ ಒಂದು ವೈಶಿಷ್ಟ್ಯವೆಂದರೆ ಪ್ರಾಚೀನ ಕಾಲದಿಂದಲೂ ಕಾಗುಣಿತಾಕ್ಷರದ ಹ್ರಸ್ವ ಮತ್ತು ದೀರ್ಘ ಎ ಮತ್ತು ಏಕಾರಗಳನ್ನು ಹಾಗೂ


ರಾಜವಂಶ ಕಾಲ
ಅ ಆ ಇ ಈ ಉ ಊ ಎ ಒ ಔ ಕ ಖ ಗ ಘ ಚ ಛ ಜ ಝ ಞ ಟ
1 ಕ್ರಿ.ಪೂ. ಸು. 450
2 ಮೌರ್ಯ ಕ್ರಿ.ಪೂ. 250
3 ಕ್ರಿ.ಪೂ. 200
4 ಕ್ಷತ್ರಪ ಕ್ರಿ.ಪೂ. 150
5 ಕಳಿಂಗ ಕ್ರಿ.ಪೂ. 150
6 ಕ್ರಿ.ಪೂ. 150
7 ಆಂಧ್ರ
8 ಕ್ಷತ್ರಪ 150
9 ಆಂಧ್ರ 150
10 ಕದಂಬ 1ನೆಯ ಶತಮಾನ
11 ಆಂಧ್ರ 150
12 ಕದಂಬ 250
13 ಗುಪ್ತ ಸು. 375
14 ಕದಂಬ 450
15 ಕದಂಬ ಸು. 450
16 ಗಂಗ ಸು. 550
17 ಚಳುಕ್ಯ 543
18 ಚಳುಕ್ಯ 578
19 ಚಳುಕ್ಯ 634
20 ಚಳುಕ್ಯ ಸು. 740
21 ಗಂಗ 726
22 ಗಂಗ 750
23 ರಾಷ್ಟ್ರಕೂಟ 812
24 ರಾಷ್ಟ್ರಕೂಟ 881
25 ಗಂಗ 921
26 ನೊಳಂಬ
27 ಚಾಳುಕ್ಯ 1094
28 ಹೊಯ್ಸಳ 1117
29 ಹೊಯ್ಸಳ 1224
30 ವಿಜಯನಗರ 1368
31 ವಿಜಯನಗರ 1538
32 ಪಾಳೇಗಾರ 1698
33 ಮೈಸೂರು 1724
34 ಮೈಸೂರು 1825

ಕನ್ನಡಲಿಪಿಯ ವಿಕಾಸ

ಒ ಮತ್ತು ಓ ಕಾರಗಳನ್ನು ಒಂದೇ ಸಂಜ್ಞೆಯಿಂದ ಸೂಚಿಸುತ್ತಿದ್ದು ಅವುಗಳಲ್ಲಿಯ ಹ್ರಸ್ವ ಮತ್ತು ದೀರ್ಘ ವರ್ಣಗಳ ಭೇದವನ್ನು ಸಂದರ್ಭಾನುಸಾರವಾಗಿ ತಿಳಿದುಕೊಳ್ಳಬೇಕಾಗಿತ್ತು. ಇತ್ತೀಚೆಗೆ ಅಂದರೆ 17-18ನೆಯ ಶತಮಾನದಿಂದೀಚೆಗೆ ಮಾತ್ರ ಕಾಗುಣಿತಾಕ್ಷರದ ದೀರ್ಘ ಏ ಕಾರ, ದೀರ್ಘ ಓ ಕಾರ ಮತ್ತು ದೀರ್ಘ ಈ ಕಾರಗಳನ್ನು ಆಯಾ ಅಕ್ಷರಗಳ ಬಲಗಡೆ ಕೊಂಡಿಯುಳ್ಳ ಒಂದು ರೇಖೆಯಿಂದ ಸೂಚಿಸಲಾಗಿದೆ.

4-5ನೆಯ ಶತಮಾನದಿಂದ 13-14ನೆಯ ಶತಮಾನದವರೆಗೆ ಕರ್ನಾಟಕ ಮತ್ತು ಆಂಧ್ರಪ್ರದೇಶದ ಶಾಸನಗಳಲ್ಲಿ ಸುಮಾರು ಒಂದೇ ಮಾದರಿಯ ಲಿಪಿಯನ್ನು ಉಪಯೋಗಿಸಿದ್ದುದರಿಂದ ಇವೆರಡೂ ಭಾಗದ ಲಿಪಿಗಳಿಗೆ ಕನ್ನಡ-ತೆಲುಗು ಲಿಪಿಯೆಂದು ಹೇಳುವುದುಂಟು. ಅದರಲ್ಲೂ ವಿಶೇಷವಾಗಿ ಬಾದಾಮಿಯ ಚಳುಕ್ಯ, ರಾಷ್ಟ್ರಕೂಟ ಮತ್ತು ಕಲ್ಯಾಣದ ಚಾಳುಕ್ಯರ ಕಾಲದ ಕನ್ನಡ-ತೆಲುಗು ಲಿಪಿ ಒಂದೇ ಸ್ವರೂಪದ್ದಾಗಿದೆಯೆಂದು ಹೇಳಬಹುದು. 14-15ನೆಯ ಶತಮಾನಗಳಲ್ಲಿ ಕನ್ನಡ ಮತ್ತು ತೆಲುಗು ಲಿಪಿಗಳಲ್ಲಿ ಕೆಲವು ವ್ಯತ್ಯಾಸಗಳು ತಲೆದೋರಿದ್ದು ಮುಂದಿನ ಎರಡು ಮೂರು ಶತಮಾನಗಳಲ್ಲಿ ಗಮನಾರ್ಹವಾದ ಭೇದಗಳು ಕಂಡುಬರುತ್ತವೆ. ಆದರೂ ಅಲ್ಪ ಪ್ರಯತ್ನದಿಂದ ಕನ್ನಡಿಗರು, ತೆಲುಗು ಲಿಪಿಯನ್ನೂ ಅದರಂತೆ ಆಂಧ್ರರು ಕನ್ನಡ ಲಿಪಿಯನ್ನೂ ಸುಲಭವಾಗಿ ತಿಳಿಯಬಹುದು. ಬಾದಾಮಿಯ ಚಳುಕ್ಯರ ಕಾಲದಲ್ಲಿ ಕನ್ನಡ ಲಿಪಿ ಮಹಾರಾಷ್ಟ್ರ ಮತ್ತು ಗುಜರಾತ್ ಪ್ರಾಂತ್ಯಗಳಲ್ಲಿಯೂ ಪ್ರಚಲಿತವಿದ್ದು ಮುಂದೆ ನಾಗರೀಲಿಪಿ ಅಲ್ಲಿ ಬಳಕೆಗೆ ಬಂತು.

ಕನ್ನಡ ಲಿಪಿ ಸುಮಾರು ಎರಡು ಸಾವಿರ ವರ್ಷಕ್ಕೂ ಹೆಚ್ಚಿನ ಪರಂಪರೆಯುಳ್ಳದ್ದು. ಒಂದು ಲಿಪಿಯ ಹುಟ್ಟು ಮತ್ತು ಬೆಳೆವಣಿಗೆ ಅದನ್ನು ಉಪಯೋಗಿಸುವ ಜನರ ಸಂಸ್ಕೃತಿಯ ಪ್ರತೀಕವಾಗಿರುತ್ತದೆ. ಒಂದು ಆದರ್ಶ ಲಿಪಿಯಲ್ಲಿ ಪ್ರತಿಯೊಂದು ಶಬ್ದದ ಉಚ್ಚಾರಣೆಗೆ ಅಸಂದಿಗ್ಧವಾದ ಸಂಜ್ಞೆಯಿರಬೇಕು. ಬರೆದಂತೆ ಓದುವಂತಿರಬೇಕು. ಓದಿದಂತೆ ಬರೆಯುವಂತೆಯೂ ಇರಬೇಕು. ಅಂದರೆ ಉಚ್ಚಾರಿತ ಅಕ್ಷರ ಹಾಗೂ ಲಿಖಿತ ವರ್ಣ ಇವುಗಳ ಸಂಬಂಧ ಸಂಪೂರ್ಣವಿರಬೇಕು. ಈ ದೃಷ್ಟಿಯಿಂದ ವಿಚಾರಿಸಿದರೆ ಕನ್ನಡ ಲಿಪಿ ಪರಿಪೂರ್ಣತೆಯನ್ನು ಪಡೆದಿದೆಯೆಂದು ಹೇಳಬಹುದು. ಈ ಲಿಪಿಯಲ್ಲಿ ಸ್ವರ ಮತ್ತು ವ್ಯಂಜನಗಳು ಪೂರ್ಣವಾಗಿದ್ದು ಆರ್ಯ ಮತ್ತು ದ್ರಾವಿಡ ಭಾಷೆಗಳ ಧ್ವನಿಗಳನ್ನು ಕೊರತೆಯಿಲ್ಲದೆ ಸೂಚಿಸಲಿಕ್ಕೆ ಉಪಯುಕ್ತವಾದ ಸಂಕೇತಗಳಿವೆ. ವ್ಯಂಜನಾಕ್ಷರಗಳೊಡನೆ ಸ್ವರಗಳ ಸುಂದರವಾದ ಸಂಯೋಗವಿದೆ. ಹೀಗೆ ಕನ್ನಡ ಲಿಪಿ ಅಶೋಕನ ಬ್ರಾಹ್ಮೀಲಿಪಿಯಿಂದ ಉದ್ಭವಿಸಿ ಕಾಲಕ್ರಮದಲ್ಲಿ ಅನೇಕ ಮಾರ್ಪಾಟುಗಳನ್ನು ಹೊಂದಿ ವೈವಿಧ್ಯಪೂರ್ಣವಾದ ವಿಕಾಸವನ್ನು ಪಡೆದು ಸಾಹಿತ್ಯ ಸಂಸ್ಕೃತಿಗಳ ಹಿರಿಮೆಯನ್ನು ವ್ಯಕ್ತಪಡಿಸುತ್ತದೆ. ಈಚೆಗೆ ಪರಭಾಷೆಯ ಪದಗಳನ್ನು ಎರವಲಾಗಿ ತೆಗೆದುಕೊಳ್ಳಬೇಕಾದ ಅಗತ್ಯ ಒದಗಿಬಂದುದರಿಂದ father, faisal, zoo ಮೊದಲಾದವನ್ನು ಬರೆಯಲು ವಿಶಿಷ್ಟ ಸಂಜ್ಞೆಗಳನ್ನು ಬಳಸಲಾಗುತ್ತಿದೆ. ಉದಾ: ಫಾದರ್, ಫೈಸಲ್, ಜೂ, ಹೀಗೆ. (ಜಿ.ಎಸ್.ಜಿ.)

**ಕನ್ನಡ ವಾಮನ :** ಸು.1870-1925. ಹೊಸಗನ್ನಡ ಸಾಹಿತ್ಯದ ಉದಯ ಕಾಲದ ಒಬ್ಬ ಕವಿ. ಪೂರ್ಣ ಹೆಸರು ಉಪೇಂದ್ರ ಹಣಮಂತ ಕುಲಕರ್ಣಿ. ಇವರು ಬಾಗಲಕೋಟೆಯ ಹತ್ತಿರದ ತೋಳಮಟ್ಟಿಯವರು. ಇವರ ಆರಾಧ್ಯದೈವ ಬಾಗಲಕೋಟೆಯ ಹತ್ತಿರದ ಯಲಗುಂದದ ಶ್ರೀ ಹಣಮಂತ ದೇವರು. ಆ ಕಾಲಕ್ಕೆ ಮರಾಠಿಯಲ್ಲಿ ಪ್ರಸಿದ್ಧವಾದ ಯಮಕ್ಯಾ ವಾಮನ ಎಂಬವನನ್ನು ಅನುಸರಿಸಿ ಇವರು ಕನ್ನಡ ವಾಮನ ಎಂದು ಹೆಸರಿಟ್ಟುಕೊಂಡಂತೆ ಕಾಣುತ್ತದೆ. ಇವರು ಧಾರವಾಡದ ಶಿಕ್ಷಣ ತರಬೇತಿ ಕಾಲೇಜಿನಲ್ಲಿ ಶಿಕ್ಷಣ ಪಡೆದು ಪ್ರಾಥಮಿಕ ಶಾಲಾ ಶಿಕ್ಷಕರಾದರು. ಕೆಲವು ಕಾಲ ಬಾಗಲಕೋಟೆಯ ಹತ್ತಿರದ ಮುರನಾಳದಲ್ಲಿ ಕನ್ನಡ ಶಾಲಾಶಿಕ್ಷಕರೂ ಅಲ್ಲಿಯ ಸಹಕಾರಿ ಸಂಘದ ಕಾರ್ಯದರ್ಶಿಗಳೂ ಆಗಿದ್ದರು. ಇವರು ಹಲವು ಗದ್ಯ ಪ್ರಬಂಧಗಳನ್ನೂ ಹೆಚ್ಚಾಗಿ ಬಿಡಿಕವನಗಳನ್ನೂ ಬರೆದರು. ಪ್ರಾಸರಹಿತವಾದ 1000 ಪದ್ಯಗಳನ್ನೂ ಪ್ರಾಸಸಹಿತವಾದ 2000 ಪದ್ಯಗಳನ್ನೂ ತಾವು ಬರೆದಿರುವುದಾಗಿ ಹೇಳಿಕೊಂಡಿದ್ದಾರೆ. ಇವರ ಕವನಗಳು ಹೆಚ್ಚಾಗಿ ಶುಭೋದಯ, ಸಚಿತ್ರ ಭಾರತ, ಕರ್ನಾಟಕ ವೈಭವ, ಶಾಲಾಪತ್ರಕ, ವಾಗ್ಭೂಷಣ, ಪ್ರಭಾತ, ಕರ್ನಾಟಕ ವೃತ್ತ, ಕರ್ನಾಟಕ ಧನಂಜಯಗಳಲ್ಲಿ ಪ್ರಕಟವಾಗಿವೆ.

ಇವರು ಕಾವ್ಯ ಪ್ರಪಂಚಕ್ಕೆ ಸಲ್ಲಿಸಿದಸೇವೆ ಮೂರು ವಿಧದಲ್ಲಿ ಮನನೀಯವಾಗಿದೆ. 1 ಪ್ರಾಸರಹಿತವಾಗಿ ಕಾವ್ಯವನ್ನು ಬರೆಯಲು ಬರುತ್ತದೆಂಬುದನ್ನು ಹಿಂದೆಯೇ ತೋರಿಸಿಕೊಟ್ಟಿದ್ದು. ಇವರು ಬರೆದ ಪೃಥ್ವೀರಾಜ ಎಂಬ ಖಂಡಕಾವ್ಯ ಪ್ರಾಸರಹಿತವಾಗಿದೆ. 2 ಕಾವ್ಯ ರಚನೆಗೆ ವಿಶಿಷ್ಟವಾದ ಕಾವ್ಯವಸ್ತುಗಳೇ ಬೇಕೆಂದೇನಿಲ್ಲ. ಇವರು ಕಲ್ಲಿಮೀಸೆ, ಪಂಚೆ, ಗ್ರಾಮೀಣ ಜನರಾದ ಗೌಡ ಕುಲಕರಣಿಯರ ಬಗ್ಗೆ ಕವನಗಳನ್ನು ರಚಿಸಿದ್ದಾರೆ. 3 ಪ್ರಾಯಶಃ ಹಳೆಯ ತಲೆಮಾರಿನಲ್ಲಿ ಪ್ರಾದೇಶಿಕ ಉಲ್ಲೇಖಗಳನ್ನು ತಂದವರೂ ಇವರೇ ಎಂದು ಕಾಣುತ್ತದೆ. ತೋಳಮಟ್ಟಿ, ಯಲಗುರ, ಬಾಗಲಕೋಟೆ ಮೊದಲಾದ ಸ್ಥಳಗಳ ವರ್ಣನೆಗಳೂ ಸೊಲಬಣ್ಣ ಮೊದಲಾದ ವ್ಯಾಪಾರಸ್ಥರ ಉಲ್ಲೇಖಗಳೂ ಇವರ ಕವನದಲ್ಲಿ ಬರುತ್ತವೆ. ಇವರು ಕೆರೂರ ವಾಸುದೇವಾಚಾರ್ಯರ ನಿಧನದ ಕಾಲಕ್ಕೆ ಬರೆದ ಒಂದು ಕವಿತೆ ಭಾವಪೂರ್ಣವಾಗಿದೆ. (ಆರ್.ವೈ.ಡಿ.)

**ಕನ್ನಡ ವಿಶ್ವವಿದ್ಯಾಲಯ :** ಕನ್ನಡ ನಾಡು, ನುಡಿ, ಸಂಸ್ಕೃತಿಗಳ ವಿಶೇಷ ಅಧ್ಯಯನಕ್ಕಾಗಿ 1991ರಲ್ಲಿ ಸ್ಥಾಪಿತವಾದ ಒಂದು ವಿಶ್ವವಿದ್ಯಾಲಯ. ಕನ್ನಡದ ಕೆಲಸಗಳು ವಿವಿಧ ವಿಶ್ವವಿದ್ಯಾಲಯಗಳ ಕನ್ನಡ ಅಧ್ಯಯನ ಕೇಂದ್ರಗಳು, ಕನ್ನಡ ಸಾಹಿತ್ಯ ಪರಿಷತ್ತು ಮತ್ತು ವಿವಿಧ ಅಕಾಡೆಮಿಗಳ ಮೂಲಕ ನಡೆಯುತ್ತಿದ್ದರೂ ಕನ್ನಡ ನಾಡುನುಡಿಯ ಬಗ್ಗೆ, ಕನ್ನಡ ಭಾಷಾ ಪುರೋಭಿವೃದ್ಧಿಯ ಬಗ್ಗೆ ಆಳವಾದ ಕೆಲಸ ಕಾರ್ಯಗಳು ನಡೆಯಬೇಕೆಂಬ ಮಹೋದ್ದೇಶದಿಂದ ಕರ್ನಾಟಕ ಸರ್ಕಾರ ಈ ವಿಶ್ವವಿದ್ಯಾಲಯವನ್ನು ಅಸ್ತಿತ್ವಕ್ಕೆ ತಂದಿತು. ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ಮಹತ್ತ್ವವುಳ್ಳ ಹಂಪೆಯ ಪರಿಸರದಲ್ಲಿ ಈ ವಿಶ್ವವಿದ್ಯಾಲಯ ನೆಲೆಗೊಂಡಿದೆ. ಹಂಪಿಯ ಹೊರವಲಯದಲ್ಲಿರುವ ಈ ವಿಶ್ವವಿದ್ಯಾಲಯದ ಆವರಣಕ್ಕೆ ವಿದ್ಯಾರಣ್ಯವೆಂದು ಹೆಸರಿದೆ. ವಿಜಯನಗರ ಕಾಲದ ವಿಶಿಷ್ಟ ವಾಸ್ತುಶೈಲಿಯಲ್ಲಿ ಕಟ್ಟಡಗಳನ್ನು ರೂಪಿಸಲಾಗಿದೆ. ಇಲ್ಲಿನ ಕಟ್ಟಡಗಳನ್ನು ರೂಪಿಸಿದವರು ವಾಸ್ತುಶಿಲ್ಪಿ ಲಾರಿ ಬೇಕರ್ ಅವರ ಶಿಷ್ಯ ಗೋವಾದ ಡಿಕುನ್ಹಾ ಮತ್ತು ಗುಲ್ಬರ್ಗದ 'ಆಕೃತಿ' ವಾಸ್ತುಶಿಲ್ಪಿಗಳು. ಇವರೊಂದಿಗೆ ನವದೆಹಲಿಯ ವಿನ್ಯಾಸ್ ಆರ್ಕಿಟೆಕ್ಟ್ಸ್‌ನ ಕಬೀರ್ ವಾಜಪೇಯಿ, ತಮಿಳುನಾಡಿನ ಸ್ಥಪತಿ ಗಣಪತಿಯವರ ಶಿಷ್ಯವರ್ಗದವರು ಕನ್ನಡ ವಿಶ್ವವಿದ್ಯಾಲಯದ ಬೇರೆ ಬೇರೆ ವಿನ್ಯಾಸ ರಚನೆಗೆ ಕಾರಣರಾಗಿದ್ದಾರೆ.



ಗಿರಿಸೀಮೆಯ ಚಾವಡಿ

ಸು.650 ಎಕರೆ ಪ್ರದೇಶವನ್ನೊಳಗೊಂಡ ವಿಸ್ತಾರವಾದ ಆವರಣವನ್ನು ಹೊಂದಿರುವ ಕನ್ನಡ ವಿಶ್ವವಿದ್ಯಾಲಯ ತಂಜಾವೂರಿನ ತಮಿಳು ವಿಶ್ವವಿದ್ಯಾಲಯ ಹಾಗೂ ಹೈದರಾಬಾದಿನ ತೆಲುಗು ವಿಶ್ವವಿದ್ಯಾಲಯಗಳ ಅಂತಃಪ್ರೇರಣೆಯಿಂದ ರೂಪಿತಗೊಂಡಿತು. ಕನ್ನಡದ ಅತ್ಯಂತ ಪ್ರಾಚೀನ ಶಾಸನವೆನಿಸಿರುವ ಹಲ್ಮಿಡಿ ಶಾಸನದ ಮೇಲ್ಭಾಗದ ಮಾದರಿಯ ಕೆತ್ತನೆಯನ್ನು ಬಳಸಿ ವಿಶ್ವವಿದ್ಯಾಲಯದ ಲಾಂಛನವನ್ನು ರೂಪಿಸಲಾಗಿದೆ. ಮಾತೆಂಬುದು ಜ್ಯೋತಿರ್ಲಿಂಗ ಈ ಲಾಂಛನದ ಧ್ಯೇಯ ವಾಕ್ಯ.

ಕರ್ನಾಟಕ ಸಂಸ್ಕೃತಿಯ ಶೋಧನೆ, ಪ್ರಸಾರ ಹಾಗೂ ಸಂರಕ್ಷಣೆ ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ. ಮೇಲ್ನೋಟಕ್ಕೆ ಇದು ಕರ್ನಾಟಕದ ಭೌಗೋಳಿಕ ವ್ಯಾಪ್ತಿಗೆ ಸೀಮಿತ ಅನ್ನಿಸಿದರೂ ಕನ್ನಡ ಭಾಷೆ ಮತ್ತು ಸಂಸ್ಕೃತಿ ಕುರಿತಾದ ಯಾವುದೇ ವಿಷಯವೂ ಈ ವಿಶ್ವವಿದ್ಯಾಲಯದ ಪರಿಧಿಯಲ್ಲಿ ಬರುತ್ತದೆ. ಸಮಗ್ರ ಕನ್ನಡ ಸಂಸ್ಕೃತಿಯ ಅಧ್ಯಯನ, ಸಂಶೋಧನೆ ಹಾಗೂ ಪ್ರಕಟಣೆ ವಿಶ್ವವಿದ್ಯಾಲಯದ ಮುಖ್ಯ ಗುರಿ. ಇಲ್ಲಿ ಇತರ ವಿಶ್ವವಿದ್ಯಾಲಯಗಳಲ್ಲಿರುವಂತೆ ಬೋಧನೆ ಇರುವುದಿಲ್ಲ. ಸಂಶೋಧನೆಯೇ ಪ್ರಧಾನ. ಸಂಶೋಧನೆಗೆ ಒತ್ತು ನೀಡಿರುವಂತೆಯೇ ಎಂ.ಫಿಲ್; ಡಿ.ಲಿಟ್ ಹಾಗೂ ಪಿಎಚ್.ಡಿ.; ಎಂ.ಎ.ಪಿಎಚ್.ಡಿ. ಗಳಂಥ ಸಂಶೋಧನ ಪದವಿಗಳನ್ನೂ ಪ್ರದಾನ ಮಾಡಲಾಗುತ್ತದೆ. ಕನ್ನಡ ನಾಡುನುಡಿಗೆ ವಿಶೇಷವಾಗಿ ಶ್ರಮಿಸಿದವರನ್ನು ಗುರುತಿಸಿ ನಾಡೋಜ ಗೌರವ ಪದವಿಯನ್ನೂ ನೀಡಲಾಗುತ್ತಿದೆ. ವಿಶ್ವವಿದ್ಯಾಲಯದ ಘಟಿಕೋತ್ಸವ ಕಾರ್ಯಕ್ರಮವನ್ನು ನುಡಿಹಬ್ಬ ಎಂದು ಕರೆಯಲಾಗುತ್ತದೆ. ಅಧ್ಯಯನ, ಸಂಶೋಧನೆ, ಆಡಳಿತ ಮುಂತಾದ ಉದ್ದೇಶಗಳಿಗೆ ಪ್ರತ್ಯೇಕ ಕಟ್ಟಡಗಳಿದ್ದು ಅವುಗಳನ್ನು ಪರಂಪರೆಯ ವಿಶಿಷ್ಟ ಹೆಸರುಗಳಿಂದ ಕರೆಯಲಾಗಿದೆ. 'ಕ್ರಿಯಾಶಕ್ತಿ' ಆಡಳಿತ ಕಟ್ಟಡವಾಗಿದ್ದರೆ, 'ಕೂಡಲ ಸಂಗಮ' ಭಾಷಾಂತರ ಹಾಗೂ ದ್ರಾವಿಡ ಸಂಸ್ಕೃತಿ ಅಧ್ಯಯನ ಕಟ್ಟಡ. ಕನ್ನಡ ಭಾಷಾಭಿವೃದ್ಧಿ, ಶಾಸನ ವಿಭಾಗಗಳು 'ತುಂಗಭದ್ರಾ'ದಲ್ಲಿದೆ. ಮಹಿಳಾ ಅಧ್ಯಯನ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಗಳು 'ತ್ರಿಪದಿ' ಕಟ್ಟಡದಲ್ಲಿವೆ. ಪುಸ್ತಕ ಪ್ರಕಟಣಾಲಯಕ್ಕೆ 'ಕಾರ್ಯಕ'ವೆನ್ನಲಾಗಿದೆ. ಗ್ರಂಥಾಲಯವನ್ನು 'ಅಕ್ಷರ'ವೆಂದೂ ಇತಿಹಾಸ, ಪುರಾತತ್ತ್ವ ವಿಭಾಗಗಳಿಗೆ 'ಘಟಿಕಾಲಯ'ವೆಂದೂ ವಿಚಾರ ಸಂಕಿರಣ, ಸಂಗೀತ, ನೃತ್ಯ ಪ್ರದರ್ಶನ ಸ್ಥಳಕ್ಕೆ 'ಭುವನ ವಿಜಯ'ವೆಂದೂ ನಾಟಕದ ಬಯಲು ರಂಗಭೂಮಿಗೆ 'ನವರಂಗ'ವೆಂದೂ ಅಧ್ಯಯನಾಂಗಕ್ಕೆ 'ಜಕ್ಕಣ ಮಂಟಪ'ವೆಂದೂ ಹೆಸರಿಸಿದೆ. 'ಮಾನಸೋಲ್ಲಾಸ' ಕುಲಪತಿಗಳ ನಿವಾಸದ ಹೆಸರಾಗಿದ್ದರೆ 'ನಿತ್ಯೋತ್ಸವ' ಅಧ್ಯಾಪಕರ ವಸತಿ ಸಂಕೀರ್ಣದ ಹೆಸರಾಗಿದೆ. ಅತಿಥಿ ಗೃಹಕ್ಕೆ 'ಶ್ರೀಶೈಲ' ವೆಂದು ಹೆಸರು. ವಿವಿಧ ಬುಡಕಟ್ಟುಗಳ ವಾಸ್ತುವಿನ್ಯಾಸವನ್ನು ಅಳವಡಿಸಿಕೊಂಡಿರುವ ಅಧ್ಯಯನ ವಿಭಾಗಗಳಿವೆ. ಗಿರಿಸೀಮೆ, ಚಾವಡಿ, ಹಾಲಕ್ಕಿ, ಒಕ್ಕಲಿಗರ ಮನೆ, ದೀವರ ಮನೆ, ಸಿದ್ದಿಯರ ಮನೆ, ಕುಣಬಿಯರ ಮನೆ, ಗೊಂಡರ ಮನೆ, ಸೋಲಿಗರ ಮನೆ, ಕಾಡು ಮತ್ತು ಜೇನು ಕುರುಬರ ಮನೆ, ಮಲೆಕುಡಿಯರ ಮನೆ ಮುಂತಾದವು ಆಯಾ ಬುಡಕಟ್ಟುಗಳ ವಿಶಿಷ್ಟ ಮನೆ ಮಾದರಿಗಳ ಪ್ರತಿರೂಪಗಳಾಗಿವೆ.

ವಿಶ್ವವಿದ್ಯಾಲಯದಲ್ಲಿ ದಾನಿಗಳಿಂದ ದತ್ತಿ ಪಡೆದು ವಿವಿಧ ವಿಷಯಗಳಲ್ಲಿ ಅಧ್ಯಯನ ನಡೆಸಲಾಗುತ್ತಿದೆ. ಇವುಗಳಲ್ಲಿ ಶಂಬಾ ಜೋಶಿ ಅಧ್ಯಯನ ಪೀಠ, ರಾಮಮನೋಹರ ಲೋಹಿಯಾ ಅಧ್ಯಯನ ಪೀಠ, ದಲಿತ ಸಂಸ್ಕೃತಿ ಅಧ್ಯಯನ ಪೀಠ, ಪುರಂದರದಾಸ ಅಧ್ಯಯನ ಪೀಠ, ಕೆ.ವಿ.ತಿರುಪಾಲಕ್ಷಪ್ಪ ದತ್ತಿ ಪೀಠ, ಶ್ರೀಮತಿ ಅಲ್ಲಂ ಸುಮಂಗಳಮ್ಮ ಮತ್ತು ಶ್ರೀ ಅಲ್ಲಂ ಕರಿಬಸಪ್ಪ ದತ್ತಿ ನಿಧಿ, ಕೆ.ಎಲ್.ಇ. ಸೊಸೈಟಿ, ದತ್ತಿ ನಿಧಿ, ಬೆಳಗಾಂವಿ, ಹಿರೇಹಾಳ್ ಇಬ್ರಾಹಿಂ ದತ್ತಿ ನಿಧಿ, ಶ್ರೀ ಬಸವೇಶ್ವರ ವಿದ್ಯಾವರ್ಧಕ ಸಂಘ ದತ್ತಿ ನಿಧಿ ಹಾಗೂ ಶ್ರೀಮತಿ ಉಮಾದೇವಿ ಕಲಬುರ್ಗಿ ಮಹಿಳಾ ಕ್ಷೇಮನಿಧಿ ಮುಖ್ಯವಾದವು. ಇವುಗಳ ಮೂಲಕ ದತ್ತಿ ಉಪನ್ಯಾಸಗಳು, ಪ್ರಕಟಣೆ, ಶೈಕ್ಷಣಿಕ, ಸಾಂಸ್ಕೃತಿಕ ವ್ಯಕ್ತಿಗಳಿಗೆ ಸನ್ಮಾನ ಮುಂತಾದವನ್ನು ನಡೆಸಲಾಗುತ್ತದೆ.

ದೂರಶಿಕ್ಷಣ ಕಾರ್ಯಕ್ರಮವನ್ನೂ ವಿಶ್ವವಿದ್ಯಾಲಯ ಹಮ್ಮಿಕೊಂಡಿದ್ದು ಇದರಲ್ಲಿ ಕರ್ನಾಟಕ ಅಧ್ಯಯನ, ಕ್ರಿಯಾತ್ಮಕ ಕನ್ನಡ, ದಲಿತ ಅಧ್ಯಯನ, ಪುರಾತತ್ತ್ವ ಸಂಸ್ಕೃತಿ ಮತ್ತು ಪ್ರವಾಸೋದ್ಯಮ ಮತ್ತು ಮಹಿಳಾ ಅಧ್ಯಯನಗಳನ್ನು ಸ್ನಾತಕೋತ್ತರ ಡಿಪ್ಲೊಮಾಗಳೆಂದೂ ಆಡಳಿತ ಕನ್ನಡ, ಜನಪದ ಕಲೆಗಳು ಇವನ್ನು ಮೆಟ್ರಿಕ್ ಅನಂತರದ ಡಿಪ್ಲೊಮಾಗಳೆಂದೂ ನಡೆಸಲಾಗುತ್ತಿದೆ.

ಕನ್ನಡ ನಾಡಿನ ಕಲೆ, ಸಾಹಿತ್ಯ, ಸಂಸ್ಕೃತಿ, ಚರಿತ್ರೆ, ಪುರಾತತ್ತ್ವ, ಜಾನಪದ, ಬುಡಕಟ್ಟು ಮುಂತಾದವನ್ನು ಪ್ರದರ್ಶಿಸುವ ಇಲ್ಲಿನ ವಸ್ತುಸಂಗ್ರಹಾಲಯವನ್ನು 1994ರಲ್ಲಿ ಆರಂಭಿಸಲಾಯಿತು. ಬಿತ್ತರ ಎಂಬ ಮಾಹಿತಿಕೇಂದ್ರ ಕನ್ನಡ ಪತ್ರಿಕೆಗಳಿಗೆ ಅಗತ್ಯ ಮಾಹಿತಿಗಳನ್ನು ಒದಗಿಸುವ ಕಾರ್ಯಕ್ರಮವನ್ನು ಹೊಂದಿದೆ. ವಿಶ್ವವಿದ್ಯಾಲಯದ ಪ್ರಸಾರಾಂಗ ಕಳೆದ ಹತ್ತು ವರ್ಷಗಳಲ್ಲಿ 550ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದೆ (2003). ಜೊತೆಗೆ ಪುಸ್ತಕ ಮಾಹಿತಿ, ಚೆಲುವ ಕನ್ನಡ, ವಿಜ್ಞಾನ ಸಂಗಾತಿ, ಕನ್ನಡ ಅಧ್ಯಯನ ಹಾಗೂ ಮಹಿಳಾ ಅಧ್ಯಯನ ಎಂಬ ನಿಯತಕಾಲಿಕೆಗಳನ್ನು ಪ್ರಕಟಿಸುತ್ತಿದೆ. ವಿಶ್ವವಿದ್ಯಾಲಯದ ಮುಖ್ಯ ಪ್ರಕಟಣೆಗಳಲ್ಲಿ ವೃತ್ತಿಪದಕೋಶ, ಬುಡಕಟ್ಟು ಹಾಗೂ ಜನಪದ ಮಹಾಕಾವ್ಯಗಳು, ಶಾಸನ ಸಂಪುಟಗಳು, ಬಿಡಿ ವಿಶ್ವಕೋಶಗಳು, ಕರ್ನಾಟಕ ಚರಿತ್ರೆಯ ಸಂಪುಟಗಳು, ದೇವಾಲಯ ಕೋಶಗಳು ಮುಖ್ಯವಾದವು.

ಜ್ಞಾನ ಪ್ರಸಾರ ಕಾರ್ಯಕ್ಕೆ ಅನುಕೂಲವಾಗುವಂತೆ ಮಂಟಪ ಮಾಲೆ, ವಿಶೇಷ ಉಪನ್ಯಾಸ ಮಾಲೆ, ಮೂಲಭೂತ ಉಪನ್ಯಾಸ ಮಾಲೆ ಹಾಗೂ ಉಪೇಕ್ಷಿತ ಸಾಹಿತ್ಯ ಮಾಲೆಗಳಂಥ ಉಪನ್ಯಾಸ ಕಾರ್ಯಕ್ರಮಗಳನ್ನು ಜನಸಾಮಾನ್ಯರಿಗಾಗಿ ವಿಶ್ವವಿದ್ಯಾಲಯ ಆಯೋಜಿಸಿದೆ. 'ನವಸಾಕ್ಷರ ಮಾಲೆ' ಅಕ್ಷರ ಕಲಿಸುವ ಪ್ರಯತ್ನವಾಗಿದೆ. ಪುಸ್ತಕ ಪ್ರೀತಿಯನ್ನು ಜನರಲ್ಲಿ ಹುಟ್ಟಿಸುವ ಕಾರಣದಿಂದ ಪುಸ್ತಕ ಸಂಸ್ಕೃತಿ ಯಾತ್ರೆಯನ್ನು ಕೈಗೊಳ್ಳುವ ವಿಶ್ವವಿದ್ಯಾಲಯ ಜನರ ಬಳಿಗೆ ವಿಚಾರ ಸಾಮಗ್ರಿಯನ್ನು ಒಯ್ಯುತ್ತದೆ. ಅಧ್ಯಯನ ಕಮ್ಮಟ, ಶಿಬಿರ, ವಿಶೇಷ ಉಪನ್ಯಾಸ, ವಿಚಾರ ಸಂಕಿರಣಗಳನ್ನು ಸಾಹಿತ್ಯ, ಸಂಸ್ಕೃತಿ, ವಿಜ್ಞಾನ ಮುಂತಾದ ಎಲ್ಲ ವಿಷಯಗಳಲ್ಲೂ ಹಮ್ಮಿಕೊಂಡು ಕರ್ನಾಟಕದ ವೈವಿಧ್ಯಮಯ ಸಮಾಜ, ಸಂಸ್ಕೃತಿ ಹಾಗೂ ಬಹುಮುಖ ಜ್ಞಾನವನ್ನು ಒಂದು ಸೂರಿನ ಅಡಿಯಲ್ಲಿ ಜಗತ್ತಿಗೆ ಪರಿಚಯಿಸುತ್ತಿದೆ. 2001ರಲ್ಲಿ ವಿಶ್ವವಿದ್ಯಾಲಯ ದಶಮಾನೋತ್ಸವವನ್ನು ಆಚರಿಸಿಕೊಂಡಿತು. ಗಡಿನಾಡ ಕನ್ನಡ, ನೆಲ ಜಲ ಸಂರಕ್ಷಣೆ, ಅಖಂಡ ಕರ್ನಾಟಕದ ಕಲ್ಪನೆ, ಪರಿಸರ ಜಾಗೃತಿ, ಕನ್ನಡ ಪ್ರಜ್ಞೆಯ ಜಾಗೃತಿ ಮುಂತಾದವುಗಳ ಬಗ್ಗೆ ಕನ್ನಡ ವಿಶ್ವವಿದ್ಯಾಲಯ ಗಂಭೀರ ಪ್ರಯತ್ನಗಳನ್ನು ನಡೆಸುತ್ತಿದೆ.

ಕನ್ನಡ ವಿಶ್ವವಿದ್ಯಾಲಯದ ಮೊದಲ ಕುಲಪತಿ ಚಂದ್ರಶೇಖರ ಕಂಬಾರ (1991-97). ಅನಂತರ ಎಂ.ಎಂ.ಕಲಬುರ್ಗಿ (1997-99), ಎಚ್.ಜೆ.ಲಕ್ಕಪ್ಪಗೌಡ ಕುಲಪತಿಗಳಾಗಿದ್ದರು (1999-03). ಬಿ.ಎ.ವಿವೇಕ ರೈ ಈಗಿನ ಕುಲಪತಿ (2004). (ಎಸ್.ಬಿಎಚ್.ಎ.)

**ಕನ್ನಡ ಶೀಘ್ರಲಿಪಿ :** ಕನ್ನಡ ಶೀಘ್ರಲಿಪಿ ಇಂಗ್ಲಿಷ್ ಶೀಘ್ರಲಿಪಿಯಂತೆಯೇ ಕನ್ನಡ ಬೆರಳಚ್ಚಿನ ಯಂತ್ರಗಳು ಬಳಕೆಗೆ ಬರುವುದಕ್ಕಿಂತ ಬಹಳ ಹಿಂದಿನಿಂದಲೇ ರೂಢಿಯಲ್ಲಿತ್ತು.




ಕನ್ನಡ ಶೀಘ್ರಲಿಪಿಯ ನಮೂನೆ

ಇದರ ಇತಿಹಾಸ ಸು.1906ರಿಂದ ಪ್ರಾರಂಭವಾಗುತ್ತದೆ. ಆ ವರ್ಷದಲ್ಲಿ ರೆವರೆಂಡ್ ಬಿ.ಲೂಥಿ ಎಂಬುವರು 'ಕನ್ನಡ ಹಿಡಿನುಡಿ' ಎಂಬ ಸಂಕ್ಷಿಪ್ತ ಲಿಪಿಕ್ರಮವನ್ನು ರೂಢಿಸಿ, ಮಂಗಳೂರಿನ ಬಾಸೆಲ್ ಮಿಷನ್ ಬುಕ್

ಮತ್ತು ಟ್ರಾಕ್ಟ್ ಡಿಪಾಸಿಟರಿ ಸಂಸ್ಥೆಯ ವತಿಯಿಂದ ಪ್ರಕಟಿಸಿದ್ದರೆಂದೂ ಆದರೆ ಪ್ರಯೋಗದಲ್ಲಿ ಅದರಿಂದ ಕನ್ನಡ ಭಾಷಣಗಳನ್ನು ಮಾತನಾಡುವ ವೇಗಕ್ಕನುಸಾರವಾಗಿ ಬರೆದುಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲವಾಗಿ ಅದು ಜನಪ್ರಿಯವಾಗಲಿಲ್ಲವೆಂದೂ ತಿಳಿದುಬರುತ್ತದೆ.

ಸು.1924ರಲ್ಲಿ ಚತುರ್ಭಾಷಾ ಶೀಘ್ರಲಿಪಿವಿಶಾರದರಾದ ವೆಲ್ಲೂರಿನ ರಾವ್ ಸಾಹೇಬ್ ಶ್ರೀನಿವಾಸರಾಯರು ಕ್ಯಾನರೀಸ್ ಶಾರ್ಟ್‌ಹ್ಯಾಂಡ್ ಮ್ಯಾನ್ಯುಯಲ್ ಎಂಬ ಪ್ರಥಮ ಪುಸ್ತಕವನ್ನು ಪ್ರಕಟಿಸಿದರು.

ಸ್ವಾತಂತ್ರ್ಯ ಸಂಗ್ರಾಮ ಪ್ರಖರವಾಗುತ್ತಿದ್ದ ಆ ಕಾಲದಲ್ಲಿ ಹಲವು ದೇಶಭಕ್ತರು ದೇಶಪ್ರೇಮದ ವಿಷಯದಲ್ಲಿ ಕೆಲವು ವೇಳೆ ಬ್ರಿಟಿಷರ ವಿರುದ್ಧ ಮಾಡುತ್ತಿದ್ದ ಭಾಷಣಗಳನ್ನು ವರದಿ ಮಾಡಬೇಕಾಗಿದ್ದುದರಿಂದ ಆಗಿನ ಮೈಸೂರು, ಹೈದರಾಬಾದು ಮತ್ತು ಬೊಂಬಾಯಿ ಸರ್ಕಾರದವರು, ಪೋಲೀಸ್ ಅಧಿಕಾರಿಗಳನ್ನು ವೆಲ್ಲೂರಿನ ಪೋಲೀಸ್ ತರಬೇತಿ ಶಾಲೆಗೆ ಕಳುಹಿಸುತ್ತಿದ್ದರು. ಅಲ್ಲಿ ಶ್ರೀನಿವಾಸರಾವ್ ಅವರಿಂದ ರಚಿತವಾದ ಕನ್ನಡ ಶೀಘ್ರಲಿಪಿಯನ್ನು ಬೋಧಿಸಲಾಗುತ್ತಿತ್ತು. ಅವರ ಶೀಘ್ರಲಿಪಿ ಕ್ರಮ ಇಂಗ್ಲಿಷ್ ಭಾಷೆಗೆ ಸೂಕ್ತವಾದ ಪಿಟ್‌ಮನ್‌ರ ಕ್ರಮದಂತೆಯೇ ಇತ್ತು. ಅಲ್ಲದೆ ಕನ್ನಡಕ್ಕೆ ಹೊಂದಿಸಲು ವಿಪುಲಸೂತ್ರಗಳನ್ನು ರೂಪಿಸಿ ಕೊಂಡಿದ್ದರೂ ಕೆಲವು ಪದಗಳ ಶೀಘ್ರಲಿಪಿಯ ವಿನ್ಯಾಸ ತೊಡಕಾಗಿದ್ದರಿಂದ ಕನ್ನಡ ಭಾಷಣಗಳನ್ನು ಪೂರ್ಣವಾಗಿ ಅಕ್ಷರಶಃ ಬರೆದುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ವೇಗ ಸಾಲುತ್ತಿರಲಿಲ್ಲ. ಈ ಕಾರಣದಿಂದ 1933ರಲ್ಲಿ ಮೈಸೂರು ನ್ಯಾಯವಿಧಾಯಕ ಸಭೆಯ ಮುಖ್ಯ ವರದಿಗಾರರಾಗಿದ್ದ ಎಸ್. ದೇವರಾವ್ ಅವರು ಪಿಟ್‌ಮನ್ ಪದ್ಧತಿಯಿಂದ ಭಿನ್ನವಾದ ತಮ್ಮದೆ ಆದ ಶೀಘ್ರಲಿಪಿಯನ್ನು ರಚಿಸಿ, ಕೆಲವರಿಗೆ ಬೋಧಿಸಿ, ತರಪೇತು ಕೊಟ್ಟರು. ಮೈಸೂರು ಮತ್ತು ಬೊಂಬಾಯಿ ಸರ್ಕಾರಗಳು ಇದಕ್ಕೆ ಮನ್ನಣೆ ಇತ್ತುವು. ದೇವರಾಯರು ರಚಿಸಿದ 'ಎ ಮ್ಯಾನ್ಯುಯಲ್ ಆಫ್ ಕನ್ನಡ ಶಾರ್ಟ್‌ಹ್ಯಾಂಡ್' ಪುಸ್ತಕವನ್ನು ಮೈಸೂರು ಸರ್ಕಾರ ಪ್ರಕಟಿಸಿತು. ಈ ಶೀಘ್ರಲಿಪಿ ಮೈಸೂರು ಪ್ರಜಾಪ್ರತಿನಿಧಿಸಭೆ ಮತ್ತು ನ್ಯಾಯವಿಧಾಯಕ ಸಭೆ ಮೊದಲಾದೆಡೆಗಳಲ್ಲಿ ಬಳಕೆಯಾಗುತ್ತಿತ್ತು.

ದೇವರಾಯರ ಶೀಘ್ರಲಿಪಿಯನ್ನು ಕಲಿತವರು ಇಂಗ್ಲಿಷ್ ಶೀಘ್ರಲಿಪಿಯನ್ನು ಕಲಿಯಲು ಸಾಧ್ಯವಾಗುತ್ತಿರಲಿಲ್ಲ. ಕಾರಣವೇನೆಂದರೆ ಪಿಟ್‌ಮನ್ನರ ಇಂಗ್ಲಿಷ್ ಶೀಘ್ರಲಿಪಿಯ ಅಕ್ಷರಗಳಿಗೂ ದೇವರಾಯರ ಕನ್ನಡ ಶೀಘ್ರಲಿಪಿಯ ಅಕ್ಷರಗಳಿಗೂ ಬಹಳ ವ್ಯತ್ಯಾಸವಿತ್ತು. ಇಂಗ್ಲಿಷ್ ಶೀಘ್ರಲಿಪಿಯ ಪ ಅಕ್ಷರ ದೇವರಾಯರ ಶೀಘ್ರಲಿಪಿಯ ಪ್ರಕಾರ ಷ ಕಾರವನ್ನು ಸೂಚಿಸುವುದು. ಹೀಗೆ ಅಕ್ಷರಗಳಲ್ಲಿಯೇ ಅನೇಕ ವ್ಯತ್ಯಾಸಗಳಿದ್ದವು. ಈ ನ್ಯೂನತೆಯನ್ನು ಮನಗಂಡು, ಬೈಟ್ ವಾಣಿಜ್ಯ ವಿದ್ಯಾ ಕಾಲೇಜಿನ ಪ್ರಿನ್ಸಿಪಾಲರಾದ ಕೆ.ಸೀತಾರಾಮರಾವ್ ಮತ್ತು ಅವರ ಸಹೋದರರಾದ ಎಸ್.ಸುಬ್ಬರಾವ್ ಅವರು ಇಂಗ್ಲಿಷ್ ಶೀಘ್ರಲಿಪಿಯಷ್ಟೇ ವೇಗವನ್ನು ಗಳಿಸಬಹುದಾದ ಒಂದು ಪದ್ಧತಿಯನ್ನು ರಚಿಸಲು ಉದ್ದೇಶಿಸಿದರು. ಸು.1944ರ ವೇಳೆಗೆ ಸೀತಾರಾಮರಾವ್ ಅವರು ಸುಪ್ರಸಿದ್ಧ ಪಿಟ್‌ಮನ್ ಪದ್ಧತಿಯನ್ನು ಮೂಲಾಧಾರವಾಗಿಟ್ಟುಕೊಂಡು ಇಂಗ್ಲಿಷ್ ಒಕ್ಕಣೆಯನ್ನೊಳಗೊಂಡ ಕನ್ನಡ ಶೀಘ್ರಲಿಪಿ ಪುಸ್ತಕವೊಂದನ್ನು ಪ್ರಕಟಿಸಿದರು. ಈ ಪದ್ಧತಿ ಆ ಕಾಲಕ್ಕೆ ಕೊರತೆಯಿಂದ ಮುಕ್ತವಾಗಿದ್ದರೂ ಹಲವರು ಅಭ್ಯಾಸಮಾಡಿ ಆಚರಣೆಗೆ ತಂದಿದ್ದರೂ ಪ್ರೋತ್ಸಾಹದ ಅಭಾವದಿಂದಾಗಿ ವ್ಯಾಪಕವಾಗಿರಲಿಲ್ಲ. ನಲವತ್ತರ ದಶಕದ ಅಂತ್ಯದ ಹೊತ್ತಿಗೆ ಅಂದಿನ ಮೈಸೂರು ಸರ್ಕಾರದ ಪ್ರಜಾಪ್ರತಿನಿಧಿಸಭೆ ಸೀತಾರಾಮರಾಯರ ಪದ್ಧತಿಯನ್ನು ಅನುಸರಿಸುವ ಕನ್ನಡ ಶೀಘ್ರಲಿಪಿಕಾರರನ್ನೂ ನೇಮಿಸಿಕೊಳ್ಳಬಹುದೆಂದು ಒಂದು ನಿರ್ಣಯವನ್ನು ಕೈಕೊಂಡಿತ್ತು. ಅಂದಿನಿಂದ ಸೀತಾರಾಮರಾಯರ ಕನ್ನಡ ಶೀಘ್ರಲಿಪಿ ದಿನೇ ದಿನೇ ಪ್ರಾಮುಖ್ಯಕ್ಕೆ ಬರಲು ಪ್ರಾರಂಭವಾಯಿತು. ತತ್ಪರಿಣಾಮವಾಗಿ ಕನ್ನಡ ಶೀಘ್ರಲಿಪಿಗೆ ಸಂಬಂಧಿಸಿದ ಪುಸ್ತಕಗಳು ಅಲ್ಲೊಂದು ಇಲ್ಲೊಂದರಂತೆ ಇಣುಕತೊಡಗಿದ್ದವು. 1969 ಮತ್ತು 1972ರ ವೇಳೆಗೆ ಬೆಂಗಳೂರಿನ ಸಿದ್ದರಾಜು ಮತ್ತು ಹೆಬ್ಬಾರ್ ಅವರು ತಮ್ಮ ಪುಸ್ತಕಗಳನ್ನು ಈ ದಿಶೆಯಲ್ಲಿ ಕ್ರಮವಾಗಿ ಹೊರತಂದರು.

1974ರಲ್ಲಿ ಸೀತಾರಾಮರಾಯರು ತಮ್ಮ ಕನ್ನಡ ಶೀಘ್ರಲಿಪಿಯ ಪುಸ್ತಕದ ಸರ್ವ ಹಕ್ಕನ್ನೂ ಕರ್ನಾಟಕ ವಾಣಿಜ್ಯ ವಿದ್ಯಾಶಾಲೆಗಳ ಸಂಘಕ್ಕೆ ಮಾರಿಬಿಟ್ಟರು. ಈ ಸಂಘ ಹೆಬ್ಬಾರ್ ಅವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ಏರ್ಪಡಿಸಿ, ಕನ್ನಡ ಶೀಘ್ರಲಿಪಿಯ ಪಠ್ಯಪುಸ್ತಕವನ್ನು ರಚಿಸಿ ಪ್ರಕಟಿಸಿತು. ರಾಜ್ಯದ ಹಲವು ವಾಣಿಜ್ಯ ಶಿಕ್ಷಣ ಸಂಸ್ಥೆಗಳು ಈ ಪದ್ಧತಿಯನ್ನು ಅನುಸರಿಸಿದವು. ವಿದ್ಯಾಇಲಾಖೆ ಪ್ರತಿವರ್ಷವೂ ಮೂರು ಹಂತಗಳಲ್ಲಿ ಪರೀಕ್ಷೆ ನಡೆಸುತ್ತಿದೆ. (ಎಸ್.ಆರ್.,ಬಿ.ಎಸ್.ಬಿ.)

**ಕನ್ನಡ ಸಂಶೋಧನ ಸಂಸ್ಥೆ :** ಹಿಂದಿನ ಬೊಂಬಾಯಿ ಪ್ರಾಂತ್ಯದ ಕನ್ನಡ ಜಿಲ್ಲೆಗಳಾಗಿದ್ದ ಬೆಳಗಾಂವಿ, ಬಿಜಾಪುರ, ಧಾರವಾಡ ಮತ್ತು ಉತ್ತರಕನ್ನಡ ಪ್ರದೇಶಗಳ ಇತಿಹಾಸ, ಸಂಸ್ಕೃತಿ, ಸಾಹಿತ್ಯಗಳ ಅಭ್ಯಾಸ ಮತ್ತು ಸಂಶೋಧನೆಯ ಕಾರ್ಯಗಳಿಗಾಗಿ 1939 ಏಪ್ರಿಲ್ 13ರಂದು ಧಾರವಾಡದಲ್ಲಿ ಸ್ಥಾಪಿತವಾದ ಸಂಸ್ಥೆ.

**ಇತಿಹಾಸ :** ಕನ್ನಡ ಸಂಶೋಧನ ಸಂಸ್ಥೆ ಸ್ಥಾಪಿತವಾಗುವ ವೇಳೆಗಾಗಲೇ ಕರ್ನಾಟಕ ವಿದ್ಯಾವರ್ಧಕ ಸಂಘ ಮತ್ತು ಕರ್ನಾಟಕ ಇತಿಹಾಸ ಸಂಶೋಧಕ ಮಂಡಳಿಗಳು (ಕರ್ನಾಟಕ ಹಿಸ್ಟಾರಿಕಲ್ ರಿಸರ್ಚ್ ಇನ್‌ಸ್ಟಿಟ್ಯೂಟ್) ಧಾರವಾಡದಲ್ಲಿದ್ದರೂ ಅವುಗಳ ಕಾರ್ಯಕ್ಷೇತ್ರ ಸೀಮಿತವಾಗಿತ್ತು. ಆದ್ದರಿಂದ ಇಂಥ ವ್ಯಾಪಕೋದ್ದೇಶವುಳ್ಳ ಸಂಸ್ಥೆಯೊಂದರ ಆವಶ್ಯಕತೆಯನ್ನು ಮನಗಂಡು ಜನತೆಯ ಆಶೋತ್ತರವನ್ನು ಪೂರೈಸುವ ಸಲುವಾಗಿ ಆಗಿನ ಮುಂಬಯಿ ಸರ್ಕಾರ 1938ರಲ್ಲಿ ಕರ್ನಾಟಕ ಕಾಲೇಜಿನ ಪ್ರಿನ್ಸಿಪಾಲ್ ಎ.ಸಿ.ಫ್ಯಾರನರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿತು. ಕನ್ನಡ ಸಂಶೋಧನ ಸಂಸ್ಥೆಯನ್ನು ಸ್ಥಾಪಿಸಬೇಕೆಂದೂ ಅದು ಕನ್ನಡ ಸಾಹಿತ್ಯ ಸಂಸ್ಕೃತಿಗಳ ಅಧ್ಯಯನಕ್ಕೆ ಸಹಾಯಕವಾದ ಮೂಲಸಾಮಗ್ರಿಗಳನ್ನು ಸಂಗ್ರಹಿಸಿ, ಅಭ್ಯಸಿಸುವ ಕಾರ್ಯದಲ್ಲಿ ತೊಡಗಬೇಕೆಂದೂ ಆ ಸಮಿತಿ ಸಲಹೆಮಾಡಿತು. ಈ ಸಲಹೆಗೆ ಅನುಗುಣವಾಗಿ ಅಸ್ತಿತ್ವಕ್ಕೆ ಬಂದ ಕನ್ನಡ ಸಂಶೋಧನ ಸಂಸ್ಥೆಗೆ ಆರ್.ಎಸ್.ಪಂಚಮುಖಿ ನಿರ್ದೇಶಕರಾಗಿ ನೇಮಕವಾದರು. ಬೊಂಬಾಯಿ ಸರ್ಕಾರದಿಂದ ಸಂಸ್ಥೆಗೆ ಮಂಜೂರಾದ ಸಹಾಯಧನ ವರ್ಷಕ್ಕೆ 12,000 ರೂಪಾಯಿಗಳು; ಜೊತೆಗೆ ಮೊದಲನೆಯ ವರ್ಷಕ್ಕೆ 8,000 ರೂ.ಗಳ ಅಧಿಕ ಧನವೂ ದೊರೆಯಿತು. ನಿರ್ದೇಶಕರಿಗೆ ಸೂಕ್ತಸಲಹೆಗಳನ್ನು ನೀಡಲು ಒಂದು ಸಲಹಾಸಮಿತಿಯನ್ನು ರಚಿಸಲಾಯಿತು. ಎಸ್.ಸಿ.ನಂದೀಮಠ, ಕೆ.ಜಿ.ಕುಂದಣಗಾರ, ಡಿ.ಪಿ.ಕರಮರ್‌ಕರ್, ದ.ರಾ.ಬೇಂದ್ರೆ, ವಿ.ಕೆ.ಗೋಕಾಕ್, ಎಸ್.ಎಸ್.ಮಾಳವಾಡ, ಎ.ಡಿ.ಧ್ಯೋಪೇಶ್ವರಕರ -ಇವರು ಈ ಮೊಟ್ಟಮೊದಲ ಸಮಿತಿಯಲ್ಲಿ ಸದಸ್ಯರು. ಈ ಸಂಸ್ಥೆ ಮೊದಲ ಎರಡೂ ವರ್ಷಗಳ ಕಾಲ ಕರ್ನಾಟಕ ಕಾಲೇಜಿನ ಕಟ್ಟಡದಲ್ಲೂ ಅನಂತರ ಸುಮಾರು 1947ರವರೆಗೆ ಸಾರಸ್ವತಪುರದಲ್ಲೂ 1947 ರಿಂದ 1959ರವರೆಗೆ ಮಾಳಮಡ್ಡಿಯ ಧಾರಾಮಹಲಿನಲ್ಲೂ ಇತ್ತು. 1953ರವರೆಗೂ ಪಂಚಮುಖಿ ನಿರ್ದೇಶಕರಾಗಿದ್ದರು. ತರುವಾಯ ಎಸ್.ಎಸ್.ಮಾಳವಾಡ, ಬಿ.ಎ.ಸಾಲೆತೊರೆ, ಪಿ.ಬಿ.ದೇಸಾಯಿ, ಶ್ರೀನಿವಾಸರಿತ್ತಿ, ಬಿ.ಎಸ್.ಕುಲಕರ್ಣಿ, ಎಸ್.ಎಂ.ವೃಷಭೇಂದ್ರಸ್ವಾಮಿ, ಎಂ.ಬಿ.ಕೊಟ್ರಶೆಟ್ಟಿ, ಎಂ.ಎಂ.ಕಲಬುರ್ಗಿ, ಎಚ್.ಆರ್.ರಘುನಾಥಭಟ್ ಮೊದಲಾದ ವಿದ್ವಾಂಸರು ಸಂಸ್ಥೆಯನ್ನು ಮುನ್ನಡೆಸಿದರು.

1956ರಲ್ಲಿ ವಿಶಾಲ ಮೈಸೂರು ರಾಜ್ಯವಾದಾಗ ಉತ್ತರ ಕರ್ನಾಟಕದ ಜಿಲ್ಲೆಗಳು ಮೈಸೂರಿಗೆ ಸೇರಿದುವು. ಅದುವರೆವಿಗೂ ಬೊಂಬಾಯಿ ಸರ್ಕಾರದ ಅಧೀನದಲ್ಲಿದ್ದ ಈ ಸಂಸ್ಥೆ ಮೈಸೂರು ಸರ್ಕಾರಕ್ಕೆ ಸೇರಿತು. ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಆರಂಭವಾಗಿ ಆರು ವರ್ಷಗಳಾಗಿದ್ದುವು. ಕರ್ನಾಟಕ ವಿಶ್ವವಿದ್ಯಾಲಯವೇ ಈ ಸಂಸ್ಥೆಯನ್ನು ನಡೆಸಿಕೊಂಡು ಹೋಗಲು ಮೈಸೂರು ಸರ್ಕಾರ ಒಪ್ಪಿ ಇದನ್ನು ವಿಶ್ವವಿದ್ಯಾಲಯಕ್ಕೆ ಒಪ್ಪಿಸಿತು. ಆ ವೇಳೆಗಾಗಲೇ ಸಂಸ್ಥೆ ಹಿರಿದಾಗಿ ಬೆಳೆದಿತ್ತು. ಅನೇಕ ಶಾಸನಗಳ ಪಡಿಯಚ್ಚುಗಳು, ಹಸ್ತಪ್ರತಿಗಳು, ಶಿಲಾ ಹಾಗೂ ತಾಮ್ರ ಶಾಸನಗಳು, ಪ್ರಾಚ್ಯವಸ್ತು ಶೋಧನದಲ್ಲಿ ಸಂಗ್ರಹಿಸಲಾದ ಇತರ ಅವಶೇಷಗಳು, ನಾಣ್ಯಗಳು, ಕಲ್ಲಿನಿಂದ ನಿರ್ಮಿತವಾದ ಸುಂದರ ಮೂರ್ತಿಗಳು ಮತ್ತು ವೀರಗಲ್ಲುಗಳು ಸಂಸ್ಥೆಯಲ್ಲಿ ಸಂಗ್ರಹವಾಗಿದ್ದು, ಅವನ್ನು ವ್ಯವಸ್ಥಿತ ರೀತಿಯಲ್ಲಿ ಪ್ರದರ್ಶಿಸಲು ಒಂದು ವಸ್ತುಸಂಗ್ರಹಾಲಯ ಆವಶ್ಯಕವಾಗಿತ್ತು. ಧಾರಾಮಹಲಿನ ಆವರಣದಲ್ಲಿ ಸಣ್ಣದಾದ ಒಂದು

ಸಂಗ್ರಹಾಲಯವನ್ನು ರೂಪಿಸಿದ್ದರೂ ಅದು ಸಾಕಾಗಿರಲಿಲ್ಲ. ಈ ಸಂಸ್ಥೆಗಾಗಿ ಸುಮಾರು 3 ಲಕ್ಷ ರೂ.ಗಳ ವೆಚ್ಚದಲ್ಲಿ ಒಂದು ಪ್ರತ್ಯೇಕ ಭವನವನ್ನು ಕಟ್ಟಿಸಲಾಯಿತು. ವಿಶ್ವವಿದ್ಯಾಲಯದ ಪ್ರಮುಖ ಕಟ್ಟಡಕ್ಕೆ ಹೊಂದಿದಂತೆ ನಿರ್ಮಿಸಲಾದ ತನ್ನದೇ ಆದ ಕಲೆ ಮತ್ತು ಪುರಾತತ್ತ್ವಶಾಸ್ತ್ರ ವಸ್ತು ಸಂಗ್ರಹಾಲಯದ (ಮ್ಯೂಸಿಯಮ್ ಆಫ್ ಆರ್ಟ್ ಅಂಡ್ ಆರ್ಕಿಯಾಲಜಿ) ಕಟ್ಟಡವನ್ನು ಈ ಸಂಸ್ಥೆ ಪ್ರವೇಶಿಸಿದ್ದು 1964ರಲ್ಲಿ. ವಿಶ್ವವಿದ್ಯಾಲಯ 1962ರಲ್ಲಿ ಪ್ರಾಚೀನ ಭಾರತೀಯ ಇತಿಹಾಸ ಮತ್ತು ಸಂಸ್ಕೃತಿಯ ಅಧ್ಯಯನ ವಿಭಾಗವನ್ನು ಆರಂಭಿಸಿತು. ಅದು ಕನ್ನಡ ಸಂಶೋಧನ ಸಂಸ್ಥೆಯೊಡನೆ ಕೂಡಿ ಕೆಲಸ ಮಾಡತೊಡಗಿತು. ಈಗ ಸಂಸ್ಥೆ ತನ್ನ ಕಾರ್ಯವ್ಯಾಪ್ತಿಯ ಆಯಾಮವನ್ನು ವಿಸ್ತರಿಸಿಕೊಂಡಿದೆ. ಶಾಸನ ವಿಜ್ಞಾನದಲ್ಲಿ ಸ್ನಾತಕೋತರ ಡಿಪ್ಲೊಮಾ ಶಿಕ್ಷಣ; ಎಂ.ಫಿಲ್ ಮತ್ತು ಪಿಎಚ್.ಡಿ. ಪದವಿಗಳನ್ನು ನೀಡುವ ಉನ್ನತ ಸಂಶೋಧನಾ ಶಿಕ್ಷಣ ನೀಡಲಾಗುತ್ತಿದೆ. ಕನ್ನಡ ಸಂಶೋಧನ ಸಂಸ್ಥೆಯ ಕಾರ್ಯಕ್ಷೇತ್ರ ವರ್ಷೇ ವರ್ಷೇ ವಿಸ್ತರಿಸುತ್ತಿದೆ. ವಿಶ್ವವಿದ್ಯಾಲಯದ ಅಂಗವಾಗಿ ಈ ಸಂಸ್ಥೆ ಕಾರ್ಯನಿರ್ವಹಣೆ ಮುಂದುವರಿಸಿದಾಗ ಇದರ ಕಾರ್ಯಕ್ಷೇತ್ರದಲ್ಲೂ ಬದಲಾವಣೆಗಳಾಗಿವೆ. ಆರಂಭದಲ್ಲಿ ಕರ್ನಾಟಕ ಇತಿಹಾಸವಲ್ಲದೆ ಸಾಹಿತ್ಯ, ಸಂಸ್ಕೃತಿ ಮತ್ತು ಜನಪದ ಸಾಹಿತ್ಯಗಳಲ್ಲೂ ಈ ಸಂಸ್ಥೆ ಆಸಕ್ತಿ ವಹಿಸಿತ್ತು. ಇತಿಹಾಸ, ಕನ್ನಡ ಮತ್ತು ಸಮಾಜಶಾಸ್ತ್ರಗಳ ಅಧ್ಯಯನ, ಅಧ್ಯಾಪನಗಳಿಗೆ ಇಲ್ಲಿ ಅನುಕೂಲ ಕಲ್ಪಿಸಲಾಗಿತ್ತು. ಈ ಸಂಸ್ಥೆ ವಿಶ್ವವಿದ್ಯಾಲಯ ಸೇರಿದ ಮೇಲೆ ಸಮಾಜಶಾಸ್ತ್ರ ಹಾಗೂ ಕನ್ನಡ ವಿಭಾಗಗಳು ಪ್ರತ್ಯೇಕವಾಗಿ ಕಾರ್ಯನಿರ್ವಹಿಸತೊಡಗಿದ್ದರಿಂದ ಕರ್ನಾಟಕದ ಮತ್ತು ಭಾರತದ ಇತಿಹಾಸ, ಸಂಸ್ಕೃತಿ, ಕಲೆ ಮತ್ತು ಪ್ರಾಕ್ತನಶಾಸ್ತ್ರಗಳಿಗೆ ಸಂಬಂಧಿಸಿದಂತೆ ಇದರ ಕಾರ್ಯಕ್ಷೇತ್ರ ಈಗ ಸೀಮಿತಗೊಂಡಿದೆ.



ವಸ್ತುಸಂಗ್ರಹಾಲಯದಲ್ಲಿರುವ ಅಡಕೆ ಕತ್ತರಿಸುವ ಕಲಾತ್ಮಕ ಕತ್ತರಿ (ಅಡಕೊತ್ತು)

**ಸಾಧನೆಗಳು :** ಈ ಸಂಸ್ಥೆ ನಾಡಿಗೆ ಬಹುಮುಖ ಸೇವೆ ಸಲ್ಲಿಸಿದೆ. ಕರ್ನಾಟಕದ ಈ ಭಾಗದಲ್ಲಿನ ಸಾವಿರಾರು ಶಾಸನಗಳ ಪ್ರತಿಗಳನ್ನು ಪಡೆದು, ಅವನ್ನು ಪ್ರಕಟಿಸುವುದು ಇದರ ಹೊಣೆಗಳಲ್ಲಿ ಒಂದು. 1500ಕ್ಕೂ ಹೆಚ್ಚು ಶಾಸನಗಳ ಪ್ರತಿಗಳು ಸಂಸ್ಥೆಯಲ್ಲಿದು. ಇದನ್ನು ಸಂಸ್ಥೆಯ ವಾರ್ಷಿಕ ವರದಿಗಳಲ್ಲಿ ಸೂಕ್ಷ್ಮವಾಗಿ ಅವಲೋಕಿಸಲಾಗಿದೆಯಲ್ಲದೆ ಶಾಸನಗಳ ಪಾಠ, ಸಾರಾಂಶ, ಮಹತ್ತ್ವದ ವಿವೇಚನೆ ಇವನ್ನು ಕರ್ನಾಟಿಕ್ ಇನ್‌ಸ್ಕ್ರಿಪ್ಷನ್ಸ್ ಎಂಬ ಸಂಪುಟಗಳಲ್ಲಿ ಪ್ರಕಟಿಸುತ್ತ ಬರಲಾಗಿದೆ. ಇದುವರೆಗೆ ಹೊರಬಿದ್ದಿರುವ ಇಂಥ ಸಂಪುಟಗಳು ಆರು. ಮೊದಲ ಮೂರಕ್ಕೆ ಪಂಚಮುಖಿಯವರೂ ನಾಲ್ಕನೆಯದಕ್ಕೆ ಎಂ.ಎಂ.ಅಣ್ಣಿಗೇರಿಯವರೂ ಐದು ಮತ್ತು ಆರನೆಯದಕ್ಕೆ ಬಿ.ಆರ್.ಗೋಪಾಲರೂ ಸಂಪಾದಕರು. ಉತ್ತರ ಕರ್ನಾಟಕಕ್ಕೆ ಸೇರಿದ ಗುಲ್ಬರ್ಗ, ಬೀದರ್, ರಾಯಚೂರು ಜಿಲ್ಲೆಗಳಲ್ಲಿ ಅನೇಕ ಶಾಸನಗಳಿವೆ. ಸಂಸ್ಥೆ ಅವನ್ನು ಪ್ರತಿಮಾಡಿ ಪ್ರಕಟಿಸುವ ಕಾರ್ಯದಲ್ಲಿ ತೊಡಗಿದೆ. ಒಟ್ಟು 6 ಸಂಪುಟಗಳನ್ನು ಪ್ರಕಟಿಸಿದೆ.

ಸಂಸ್ಥೆ ಕಂಡುಹಿಡಿದ ಶಾಸನಗಳಲ್ಲಿ ಅತಿ ಪ್ರಾಚೀನವಾದದ್ದು ವಡಗಾಂವ ಮಾಧವಪುರದಲ್ಲಿ ದೊರೆತ ಷಟ್ಕೋಣಾಕಾರದ ಸ್ತಂಭಶಿಲಾಲಿಪಿ. ಇದರದು ಪ್ರಾಕೃತ ಭಾಷೆ, ಬ್ರಾಹ್ಮೀಲಿಪಿ. ಶಾಸನದ ಕಾಲ ಕ್ರಿ.ಪೂ.1ನೆಯ ಶತಮಾನ. ಬಾದಾಮಿಯಲ್ಲಿ ಬಂಡೆಗಲ್ಲಿನ ಮೇಲೆ ಕೊರೆಯಲಾದ ಶಕವರ್ಷ 456ರ (543) ಮೊದಲನೆಯ ಪುಲಕೇಶಿಯ ಶಾಸನ ಇನ್ನೊಂದು ಮಹತ್ತ್ವದ ಶೋಧ. ಇತ್ತೀಚೆಗೆ ಗುಲ್ಬರ್ಗ ಜಿಲ್ಲೆಯ ಸನ್ನತಿ ಎಂಬ ಗ್ರಾಮದಲ್ಲಿ ಕೈಕೊಂಡ ಅನ್ವೇಷಣೆಯಲ್ಲಿ 2ನೆಯ ಶತಮಾನಕ್ಕೆ ಸೇರಿದ ಬೌದ್ಧ ಸಂಸ್ಕೃತಿಯ ಅವಶೇಷಗಳೂ ಕೆಲವು ಬ್ರಾಹ್ಮೀ ಲಿಪಿಯ ಶಾಸನಗಳೂ ದೊರೆತಿವೆ. ಚಾಳುಕ್ಯ ಮಂಗಳೇಶನ ಮತ್ತು ಗಂಗವಂಶದ ಮಾರಸಿಂಗನ ತಾಮ್ರಪಟಗಳು ಐತಿಹಾಸಿಕ ದೃಷ್ಟಿಯಲ್ಲಿ ಬಹಳ ಮುಖ್ಯವಾದವು. ಮಂಗಳೇಶನ ಶಾಸನದ ರಾಜಮುದ್ರೆಯಲ್ಲಿ ತನ್ನ ಮರಿಗೆ ಹಾಲು ಕುಡಿಸುತ್ತಿರುವ ಹೆಣ್ಣುಹುಲಿಯ ಆಕೃತಿ ಇದೆ. ಇದುವರೆಗೆ ದೊರೆತ ಎಲ್ಲ ತಾಮ್ರಶಾಸನಗಳಲ್ಲಿ ಇದು ಅಪೂರ್ವವಾದದ್ದು. 7ನೆಯ ಶತಮಾನದಲ್ಲಿ ಪಶ್ಚಿಮ ಕರಾವಳಿ ಪ್ರದೇಶದಲ್ಲಿ ಆಳಿದ ಸಾಮಂತ ಅರಸರಾದ ಮೌರ್ಯ ಮತ್ತು ಭೋಜಮನೆತನಗಳ ಅರಸರ ತಾಮ್ರಪಟಗಳನ್ನು ಸಂಗ್ರಹಿಸಿ ಪ್ರಕಟಿಸಲಾಗಿದೆ.

ಪುರಾತತ್ತ್ವ ಶೋಧನೆಯಲ್ಲಿ ಈ ಸಂಸ್ಥೆ ಸಾಕಷ್ಟು ಕೆಲಸಮಾಡಿದೆ. ಪ್ರಾಚೀನ ಶಿಲಾಯುಗ, ನವಶಿಲಾಯುಗ ಮತ್ತು ಬೃಹತ್ ಶಿಲಾಯುಗ (ಧಾತುಯುಗ)ಗಳಿಗೆ ಸೇರಿದ ಅನೇಕ ನಿವೇಶನಗಳನ್ನು ಗುರುತಿಸಲಾಗಿದೆ. ಮಲಪ್ರಭಾ, ಘಟಪ್ರಭಾ, ಮತ್ತು ಕೃಷ್ಣಾನದಿಗಳ ತೀರಗಳಲ್ಲಿ ದೊರೆತ ಅನೇಕ ಶಿಲಾಯುಧಗಳನ್ನು ಸಂಗ್ರಹಿಸಲಾಗಿದೆ. ಕೆಲವು ನಿವೇಶನಗಳಲ್ಲಿ ಉತ್ಖನನ ಕಾರ್ಯ ನಡೆದಿದೆ.

ಮಹಾರಾಷ್ಟ್ರದ ಕೊಲ್ಹಾಪುರದಲ್ಲಿನ ಮಹಾಲಕ್ಷ್ಮೀ ದೇವಾಲಯದ ಸಮೀಪದ ಬ್ರಹ್ಮಪುರಿ ಒಂದು ಪ್ರಾಚೀನ ನಿವೇಶನ. ಈ ಸ್ಥಳದಲ್ಲಿ ಮೊದಲ ಬಾರಿ ಕನ್ನಡ ಸಂಶೋಧನ ಸಂಸ್ಥೆ ಅನ್ವೇಷಣೆ ನಡೆಸಿ ಅನೇಕ ಮಹತ್ತ್ವದ ಐತಿಹಾಸಿಕ ವಿಷಯಗಳನ್ನು ಬೆಳಕಿಗೆ ತಂದಿತು. ಪುಣೆಯ ಡೆಕ್ಕನ್ ಕಾಲೇಜಿನಲ್ಲಿರುವ ಸಂಶೋಧನ ಸಂಸ್ಥೆಯೊಡನೆ ಕೂಡಿಕೊಂಡು ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟ ಗ್ರಾಮದಲ್ಲಿ ಉತ್ಖನನ ಕಾರ್ಯವನ್ನು ಕೈಗೊಳ್ಳಲಾಯಿತು. ಹಾಗೆಯೇ ಧಾರವಾಡ ಜಿಲ್ಲೆಯ ಹಳ್ಳೂರಿನಲ್ಲೂ ಒಂದು ನಿವೇಶನವನ್ನು ಉತ್ಖನ ಮಾಡಲಾಗಿದೆ. ಈ ಅಗೆತಗಳಿಂದ ಕರ್ನಾಟಕದ ನವಶಿಲಾಸಂಸ್ಕೃತಿಗೆ ಸಂಬಂಧಿಸಿದ ಅನೇಕ ಹೊಸ ವಿಷಯಗಳು ಗೋಚರವಾಗಿವೆ.

ಕರ್ನಾಟಕದ ಕಲೆ ವಾಸ್ತುಶಿಲ್ಪಗಳ ಅಭ್ಯಾಸಕ್ಕಾಗಿ ಅನೇಕ ವಿಗ್ರಹಗಳನ್ನೂ ವೀರಗಲ್ಲು, ಮಕರತೋರಣ ಮುಂತಾದವನ್ನೂ ಸಂಸ್ಥೆ ತನ್ನ ಸಂಗ್ರಹಾಲಯದಲ್ಲಿ ಪ್ರದರ್ಶಿಸಿದೆ. ಜೈನ ತೀರ್ಥಂಕರರ ವಿಗ್ರಹಗಳನ್ನು ಇಲ್ಲಿ ಕಾಣಬಹುದು. ಇವುಗಳಲ್ಲೆಲ್ಲ ಬಹಳ ಮುಖ್ಯವಾದುದು ಪಟ್ಟದಕಲ್ಲಿನಲ್ಲಿ ದೊರೆತ ನಟರಾಜನ ವಿಗ್ರಹ. ಕೆಂಪು ಶಿಲೆಯ ಈ ವಿಗ್ರಹ ಸಾಮಾನ್ಯವಾಗಿ ಕಾಣಬರುವ ಇಂಥ ಮೂರ್ತಿಗಳಿಗಿಂತ ಭಿನ್ನವಾದದ್ದು. ಅನೇಕ ಶಿಲಾಶಾಸನಗಳೂ ಇಲ್ಲಿವೆ. ಬಸವೇಶ್ವರರನ್ನು ಕುರಿತ ಖಚಿತವಾದ ಶಾಸನಾಧಾರವೆನಿಸಿದ ಅರ್ಜುನವಾಡದ ಶಿಲಾಶಾಸನ ಈಗ ಈ ಸಂಸ್ಥೆಯಲ್ಲುಂಟು. ಇಲ್ಲಿಯ ವಸ್ತುಸಂಗ್ರಹಾಲಯವನ್ನು ಇತ್ತೀಚೆಗೆ ಆಧುನಿಕ ರೀತಿಯಲ್ಲಿ ಪುನರ್ ರೂಪಿಸಲಾಗಿದೆ. ಹರಪ್ಪ, ಮೊಹೆಂಜೊದಾರೋಗಳಲ್ಲಿ ದೊರೆತ ಅವಶೇಷಗಳಲ್ಲಿ ಕೆಲವನ್ನೂ ಕೆಲವು ಪ್ರತಿಕೃತಿಗಳನ್ನು (ಪ್ಲ್ಯಾಸ್ಟರ್ ಕ್ಯಾಸ್ಟ್) ಕರ್ನಾಟಕದ ಪ್ರಾಗೈತಿಹಾಸಿಕ ಕಾಲದ ಶಿಲಾಯುಧಗಳು, ಮಡಕೆಗಳು, ಕಬ್ಬಿಣದ ಆಯುಧಗಳು ಮುಂತಾದುವನ್ನೂ ಇಲ್ಲಿ ಕಾಣಬಹುದು. ಕನ್ನಡಲಿಪಿಯ ಬೆಳವಣಿಗೆಯನ್ನು ತೋರಿಸುವ ಮೂಲಶಾಸನ ಪ್ರತಿಗಳನ್ನೂ ಚಿತ್ರಗಳನ್ನೂ ಅಲ್ಲದೆ ಕರ್ನಾಟಕದ ಕಲೆಯನ್ನು ರೂಪಿಸುವ ಚಿತ್ರಗಳನ್ನೂ ಇಲ್ಲಿ ಪ್ರದರ್ಶಿಸಲಾಗಿದೆ. ಇಲ್ಲಿನ ವಸ್ತು ಸಂಗ್ರಹಾಲಯ ಉತ್ತಮ ಗುಣ ಮೌಲ್ಯ ಹೊಂದಿದೆ ಎಂಬ ಕೀರ್ತಿಗೆ ಪಾತ್ರವಾಗಿದೆ.

ಸಂಸ್ಥೆಯಲ್ಲಿ ಅನೇಕ ವಿದ್ಯಾರ್ಥಿಗಳು ಸಂಶೋಧನ ಕಾರ್ಯದಲ್ಲಿ ತೊಡಗಿದ್ದಾರೆ. ಅವರಿಗೂ ಇತರರಿಗೂ ಸಹಾಯವಾಗುವಂತೆ ಪ್ರತಿವರ್ಷ

ಪಂಡಿತರಿಂದ ವಿವಿಧ ವಿಷಯಗಳ ಮೇಲೆ ಪಾಂಡಿತ್ಯಪೂರ್ಣ ಸಂಶೋಧನ ಉಪನ್ಯಾಸಗಳನ್ನೇರ್ಪಡಿಸಿ ಅನಂತರ ಅವನ್ನು ಪ್ರಕಟಿಸುವುದು ಈ ಸಂಸ್ಥೆಯ ಕಾರ್ಯಗಳಲ್ಲಿ ಒಂದು. ಈಗ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳ ತಲಾ 8 ಉಪನ್ಯಾಸಗಳು ಪ್ರಕಟವಾಗಿವೆ.

ಕರ್ನಾಟಕದಲ್ಲಿ ಅನೇಕ ಕಡೆ ಮಠಗಳಲ್ಲೂ ವಿದ್ವಾಂಸರ ಪುರಾತನ ಮನೆತನಗಳಲ್ಲೂ ಓಲೆಗರಿಯಲ್ಲಿ ಬರೆದ ಗ್ರಂಥಗಳು ಸಿಗುತ್ತವೆ. ಇವುಗಳಲ್ಲಿ ಪ್ರಾಚೀನ ಸಾಹಿತ್ಯಗ್ರಂಥಗಳನೇಕವಿವೆ. ಸರಿಯಾದ ರಕ್ಷಣೆಯಿಲ್ಲದೆ ನಾಶವಾಗುತ್ತಿರುವ ಈ ಗ್ರಂಥಗಳನ್ನು ಸಂಗ್ರಹಿಸಿ ಸುಸ್ಥಿತಿಯಲ್ಲಿ ಕಾಪಾಡುವ ಕಾರ್ಯವನ್ನು ಸಂಸ್ಥೆ ಕೈಕೊಂಡಿದೆ. ಈಗ ಸಂಸ್ಥೆಯಲ್ಲಿ ಇಂಥ ಸುಮಾರು 2000 ಗ್ರಂಥಗಳಿವೆ. ಇವನ್ನು ಪರೀಕ್ಷಿಸಿ ವ್ಯಾಕರಣ, ನಿಘಂಟು, ಪುರಾಣ ಮತ್ತು ಕಾವ್ಯ, ಜೀವನ ವೃತ್ತಾಂತ, ವೇದಾಂತ, ಧರ್ಮಶಾಸ್ತ್ರ, ತತ್ತ್ವಜ್ಞಾನ, ಲೌಕಿಕಶಾಸ್ತ್ರಗಳು, ಐತಿಹಾಸಿಕ ಹೀಗೆ ವಿಷಯಾನುಗುಣವಾಗಿ ವಿಂಗಡಿಸಿ ಈ ಗ್ರಂಥಗಳ ವಿವರಣಾತ್ಮಕ ಗ್ರಂಥಸೂಚಿಗಳನ್ನು (ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ಸ್) ಪ್ರಕಟಿಸಲಾಗುತ್ತಿದೆ. ಇಂಥ ಒಂಬತ್ತು ಸಂಪುಟಗಳು ಈಗಾಗಲೇ ಪ್ರಕಟವಾಗಿವೆ. ಐದು ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಲಾಗಿದೆ. ಕವಿಜಿಹ್ವಾಬಂಧನ, ಮದನತಿಲಕ, ಐರಾವತ, ವಿರೂಪಾಕ್ಷ ವಸಂತೋತ್ಸವ ಚಂಪೂ ಮತ್ತು ಸಮಯಪರೀಕ್ಷೆ ಇವೇ ಆ ಗ್ರಂಥಗಳು. ಕಲೆ, ಸಂಸ್ಕೃತಿಗಳಿಗೆ ಸಂಬಂಧಿಸಿದ ಸಂಶೋಧನಾತ್ಮಕವಾದ 11 ಪ್ರಬಂಧಗಳನ್ನೂ ಪ್ರಕಟಿಸಲಾಗಿದೆ.

ಕರ್ನಾಟಕದ ಇತಿಹಾಸವನ್ನು ಆಧಾರಭೂತವಾಗಿ ಸವಿಸ್ತಾರವಾಗಿ 12 ಸಂಪುಟಗಳಲ್ಲಿ ರಚಿಸಬೇಕೆಂಬುದು ಸಂಸ್ಥೆಯ ಯೋಜನೆ. ಈ ದಿಶೆಯಲ್ಲಿ ಮೊದಲ ಹೆಜ್ಜೆಯಾಗಿ, ಸಾಮಾನ್ಯ ಓದುಗರಿಗೂ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೂ ಅನುಕೂಲವಾಗುವಂತೆ ಸಮಗ್ರ ಇತಿಹಾಸಗ್ರಂಥವೊಂದನ್ನು ಹೊರತರಲಾಗಿದೆ. ಪಿ.ಬಿ.ದೇಸಾಯಿಯ ನಿರ್ದೇಶನದಲ್ಲಿ ಬಿ.ಆರ್.ಗೋಪಾಲ್ ಮತ್ತು ಶ್ರೀನಿವಾಸ ರಿತ್ತಿಯವರು ಕೂಡಿ ಈ ಗ್ರಂಥವನ್ನು ಬರೆದಿದ್ದಾರೆ.

ಕರ್ನಾಟಕದ ಪ್ರತಿ ಗ್ರಾಮದಲ್ಲೂ ಸಾಮಾನ್ಯವಾಗಿ ಒಂದೆರಡಾದರೂ ಶಿಲಾ ಶಾಸನಗಳು ಸಿಗುತ್ತವೆ. ಕನ್ನಡ ನಾಡಿನ ಇತಿಹಾಸ ಸಂಸ್ಕೃತಿಗಳನ್ನು ಅರಿಯಲು ಇವು ಮೂಲಾಧಾರ. ಸಂಶೋಧನೆಯಲ್ಲಿ ತೊಡಗಿರುವವರು ಮೂಲಶಾಸನಗಳನ್ನು ತಾವೇ ಓದಿಕೊಳ್ಳಬಹುದೆಂಬ ಆಶಯದಿಂದ 1965ರಲ್ಲಿ ಲಿಪಿಶಾಸ್ತ್ರಕ್ಕೆ ಸಂಬಂಧಿಸಿದಂತೆ ಒಂದು ಶಿಕ್ಷಣತರಗತಿಯನ್ನು (ಡಿಪ್ಲೊಮ ಕೋರ್ಸ್ ಇನ್ ಎಪಿಗ್ರಫಿ) ತೆರೆಯಲಾಯಿತು. ಅನೇಕ ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆಯುತ್ತಿದ್ದಾರೆ. ಇಲ್ಲಿನ ಗ್ರಂಥಾಲಯದಲ್ಲಿ ಇತಿಹಾಸ, ಕಲೆ, ಸಂಸ್ಕೃತಿ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಸುಮಾರು 10,000ಕ್ಕೂ ಹೆಚ್ಚು ಗ್ರಂಥಗಳಿವೆ. *

**ಕನ್ನಡ ಸಾಹಿತ್ಯ :** ಶ್ರೀಮಂತವೂ ವೈವಿಧ್ಯಪೂರ್ಣವೂ ಆದ ಕನ್ನಡ ಸಾಹಿತ್ಯಕ್ಕೆ ಸಾವಿರದೈನೂರು ವರ್ಷಗಳಿಗೂ ಮೇಲ್ಪಟ್ಟ ಸುದೀರ್ಘ ಇತಿಹಾಸವಿದೆ. ಅಧ್ಯಯನದ ದೃಷ್ಟಿಯಿಂದ ಕನ್ನಡ ಸಾಹಿತ್ಯವನ್ನು ಮತ ಪ್ರಾಬಲ್ಯ, ಭಾಷೆಯ ಅವಸ್ಥೆಗಳು, ಪ್ರಮುಖ ಕವಿಗಳು, ಸಾಹಿತ್ಯ ರೂಪಗಳು, ಆಯಾ ಯುಗಮನೋಧರ್ಮ, ಶತಮಾನಾನುಪೂರ್ವಿ - ಈ ಮೊದಲಾದ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಅನೇಕ ವಿಧದಲ್ಲಿ ವಿಭಾಗಿಸಿ ವಿಶ್ಲೇಷಿಸುವ ಕಾರ್ಯ ಇದುವರೆಗೆ ಸಾಕಷ್ಟು ನಡೆದಿದೆ. ಮತೀಯ ದೃಷ್ಟಿಯನ್ನನುಸರಿಸಿ ಜೈನಯುಗ, ವೀರಶೈವಯುಗ, ಬ್ರಾಹ್ಮಣಯುಗವೆಂದೂ ಪ್ರಮುಖ ಕವಿಗಳನ್ನಾಧರಿಸಿ ಪಂಪಯುಗ, ಬಸವಯುಗ, ಹರಿಹರಯುಗ, ಕುಮಾರವ್ಯಾಸಯುಗವೆಂದೂ ಸಾಹಿತ್ಯ ರೂಪಗಳನ್ನಾಧರಿಸಿ ಚಂಪೂ, ವಚನ, ರಗಳೆ, ತ್ರಿಪದಿ, ಸಾಂಗತ್ಯ ಯುಗಗಳೆಂದೂ ಭಾಷಾವಸ್ಥೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪೂರ್ವದ ಹಳಗನ್ನಡಕಾಲ, ಹಳಗನ್ನಡಕಾಲ, ನಡುಗನ್ನಡಕಾಲ, ಹೊಸಗನ್ನಡಕಾಲವೆಂದೂ ಆಯಾ ಯುಗಮನೋಧರ್ಮ ಮತ್ತು ಕವಿಕರ್ಮಕ್ಕೆ ಸಿಕ್ಕ ಮೂಲ ಪ್ರಚೋದನೆಯನ್ನು ಮುಖ್ಯವಾಗಿ ಆಧರಿಸಿ ಕ್ಷಾತ್ರಯುಗ, ಮತಪ್ರಚಾರಯುಗ, ಸಾರ್ವಜನಿಕಯುಗ, ಆಧುನಿಕಯುಗವೆಂದೂ ಶತಮಾನಾನುಪೂರ್ವಿಯನ್ನನುಸರಿಸಿ ಹತ್ತನೆಯ ಶತಮಾನದ ಸಾಹಿತ್ಯ, ಹನ್ನೊಂದನೆಯ ಶತಮಾನದ ಸಾಹಿತ್ಯ - ಇತ್ಯಾದಿಯಾಗಿಯೂ -ಹೀಗೆ ಒಬ್ಬೊಬ್ಬ ವಿದ್ವಾಂಸರು ಒಂದೊಂದು ಕ್ರಮವನ್ನನುಸರಿಸಿದ್ದಾರೆ. ಪ್ರಸ್ತುತ ಲೇಖನದಲ್ಲಿ ಕನ್ನಡ ಸಾಹಿತ್ಯದ ಪ್ರಾಚೀನತೆ, ಪಂಪಯುಗ, ವಚನಯುಗ, ಹರಿಹರಯುಗ, ಕುಮಾರವ್ಯಾಸಯುಗ, ಆಧುನಿಕಯುಗ ಎಂಬ ಶೀರ್ಷಿಕೆಗಳ ಅಡಿಯಲ್ಲಿ ಕನ್ನಡ ವಾಙ್ಮಯವನ್ನು ಸ್ಥೂಲವಾಗಿ ಸಮೀಕ್ಷಿಸಲಾಗಿದೆ.

ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಹೆಚ್ಚಿನ ವಿವರಗಳು ಮುಖ್ಯ ಕವಿಗಳನ್ನು ಕುರಿತ ಪ್ರತ್ಯೇಕ ಲೇಖನಗಳಲ್ಲಿ, ರಾಜವಂಶಗಳನ್ನು ಕುರಿತಾದ (ಉದಾ: ಚಾಳುಕ್ಯವಂಶ, ರಾಷ್ಟ್ರಕೂಟವಂಶ) ಸಮೀಕ್ಷಾ ಲೇಖನಗಳಲ್ಲಿ ಮತ್ತು ಈ ಕೆಳಕಂಡ ಸಮೀಕ್ಷಾ ಲೇಖನಗಳಲ್ಲಿ ನಿರೂಪಿತವಾಗಿವೆ. ಕನ್ನಡದಲ್ಲಿ ಕಾದಂಬರಿ ಸಾಹಿತ್ಯ; ಕನ್ನಡದಲ್ಲಿ ಗದ್ಯ ಸಾಹಿತ್ಯ; ಕನ್ನಡದಲ್ಲಿ ಗಾಂಧೀ ಸಾಹಿತ್ಯ; ಕನ್ನಡದಲ್ಲಿ ಗ್ರಂಥಸಂಪಾದನೆ; ಕನ್ನಡದಲ್ಲಿ ಜೀವನ ಚರಿತ್ರೆಗಳು; ಕನ್ನಡದಲ್ಲಿ ನವ್ಯಕಾವ್ಯ; ಕನ್ನಡದಲ್ಲಿ ನಾಟಕ ಸಾಹಿತ್ಯ; ಕನ್ನಡದಲ್ಲಿ ಪ್ರಬಂಧ ಸಾಹಿತ್ಯ; ಕನ್ನಡದಲ್ಲಿ ಪ್ರವಾಸ ಸಾಹಿತ್ಯ; ಕನ್ನಡದಲ್ಲಿ ಭಾವಗೀತೆ; ಕನ್ನಡದಲ್ಲಿ ಭಾಷಾಂತರಗಳು; ಕನ್ನಡದಲ್ಲಿ ಮಕ್ಕಳ ಸಾಹಿತ್ಯ; ಕನ್ನಡದಲ್ಲಿ ವಿಚಾರ ಸಾಹಿತ್ಯ; ಕನ್ನಡದಲ್ಲಿ ವಿಜ್ಞಾನ ಸಾಹಿತ್ಯ; ಕನ್ನಡದಲ್ಲಿ ವಿಡಂಬನ ಸಾಹಿತ್ಯ; ಕನ್ನಡದಲ್ಲಿ ವಿಮರ್ಶೆ; ಕನ್ನಡದಲ್ಲಿ ವಿಶ್ವಕೋಶಗಳು; ಕನ್ನಡದಲ್ಲಿ ಶತಕ ಸಾಹಿತ್ಯ; ಕನ್ನಡದಲ್ಲಿ ಶಾಸ್ತ್ರ ಸಾಹಿತ್ಯ; ಕನ್ನಡದಲ್ಲಿ ಸಂಕಲನ ಗ್ರಂಥಗಳು; ಕನ್ನಡದಲ್ಲಿ ಸಣ್ಣಕಥೆಗಳು; ಕನ್ನಡದಲ್ಲಿ ಹಾಸ್ಯ ಸಾಹಿತ್ಯ; ಕನ್ನಡ ಭಾಷೆ; ಕನ್ನಡ ಸಾಹಿತ್ಯ ಪರಿಷತ್ತು ಇತ್ಯಾದಿ.

**ಕನ್ನಡ ಸಾಹಿತ್ಯದ ಪ್ರಾಚೀನತೆ :** ಕನ್ನಡ ಸಾಹಿತ್ಯ ಕ್ರಿಸ್ತಶಕದಷ್ಟೇ ಪ್ರಾಚೀನವಾಗಿದ್ದಿರಬೇಕೆಂಬುದು ಹಲವು ವಿದ್ವಾಂಸರ ಅಭಿಮತ. ಬೌದ್ಧರು ಕನ್ನಡದ ಆದಿಕವಿಗಳೆಂದೂ ಬೌದ್ಧಧರ್ಮದ ನಾಶದೊಂದಿಗೇ ಬೌದ್ಧ ಗ್ರಂಥಗಳೂ ನಾಶವಾಗಿದ್ದಿರಬೇಕೆಂದೂ ವಿದ್ವಾಂಸರು ಊಹಿಸಿದ್ದಾರೆ. ಕನ್ನಡ ಭಾಷೆ ಸಾಹಿತ್ಯದ ಗದ್ದುಗೆಯೇರಿ ಬರೆಹ ರೂಪದಲ್ಲಿ ಪ್ರಪ್ರಥಮವಾಗಿ ಕಾಣಿಸಿಕೊಂಡಿರುವುದು ಸದ್ಯಕ್ಕೆ ತಿಳಿದಿರುವಂತೆ ಹಲ್ಮಿಡಿಯ ಶಾಸನದಲ್ಲಿ. ಇದರ ಮಂಗಳ ಶ್ಲೋಕ ಸಂಸ್ಕೃತದಲ್ಲಿದ್ದು, ಉಳಿದುದೆಲ್ಲ ಕನ್ನಡ ಲಿಪಿಯಲ್ಲಿ ಗದ್ಯ ರೂಪದಲ್ಲಿದೆ. ಭಾಷಾ ಶೈಲಿ ಸಂಸ್ಕೃತ ಪ್ರಚುರವಾಗಿ ಪ್ರೌಢವಾಗಿದೆ. ಇದನ್ನು ನೋಡಿದರೆ, ಇದಕ್ಕೂ ಪೂರ್ವದಲ್ಲಿಯೇ ಕನ್ನಡ ಸಾಹಿತ್ಯ ಸಾಕಷ್ಟು ಬೆಳೆದಿರಬೇಕೆಂದೂ ಈ ಶಾಸನ ಹುಟ್ಟುವ ವೇಳೆಗೆ ಕನ್ನಡದ ಮೇಲೆ ಸಂಸ್ಕೃತದ ಪ್ರಭಾವ ಗಾಢವಾಗಿದ್ದಿರಬೇಕೆಂದೂ ಊಹಿಸಲು ಅವಕಾಶವಿದೆ.

ಹಾಗೆಯೇ ಪ್ರಾಚೀನಕಾಲದ ಇತರ ಹಲವು ಶಾಸನಗಳೂ ಅತ್ಯಂತ ಕಾವ್ಯಮಯವಾಗಿವೆ. ಸು.7ನೆಯ ಶತಮಾನದ ಬಾದಾಮಿಯ ಶಾಸನ ಕಪ್ಪೆ ಅರಭಟ್ಟ ಎಂಬ ಕಲಿಯ ಶಕ್ತಿ ಸಾಹಸಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಅಚ್ಚಕನ್ನಡ ಛಂದಸ್ಸಾದ ತ್ರಿಪದಿಯಲ್ಲಿರುವ ಈ ಶಾಸನ ಭಾವಭಾಷೆಗಳ ವಿದ್ಯುದಾಲಿಂಗನದಿಂದ ಉದಿಸಿದ ಸುಂದರ ಭಾವಗೀತೆಯಂತಿದೆ. ಸುಮಾರು ಇದೇ ಕಾಲದಲ್ಲಿಯೇ ಹುಟ್ಟಿದ ಶ್ರವಣಬೆಳಗೊಳದ ಶಾಸನವೊಂದು ನಂದಿಸೇನನೆಂಬ ಜೈನಮುನಿಯ ವೈರಾಗ್ಯವನ್ನು ಹೃದಯಂಗಮವಾಗಿ ವರ್ಣಿಸುತ್ತದೆ. ಕವಿಹೃದಯವುಳ್ಳ ಇಂಥ ಶಾಸನಕರ್ತೃಗಳು ಕಾವ್ಯಕರ್ತೃಗಳಾಗಿಯೂ ಇದ್ದಿರಬಹುದು.

ಈಗ ದೊರಕಿರುವ ಕೆಲವು ಕನ್ನಡ ಗ್ರಂಥಗಳಲ್ಲಿ ಹಲವು ಕನ್ನಡ ಕೃತಿಕಾರರ ಪ್ರಸ್ತಾಪ ದೊರಕುತ್ತದೆ. ಅಂಥ ಕೆಲವು ಕೃತಿಕಾರರನ್ನು 7, 8, 9ನೆಯ ಶತಮಾನದವರೆಂದು ತೀರ್ಮಾನಿಸಬಹುದು. ಆದರೆ ಅವರ ಗ್ರಂಥಗಳು ಯಾವುವೂ ದೊರಕಿಲ್ಲ. ಈ ಸಂದರ್ಭದಲ್ಲಿ ತುಂಬಲೂರಾಚಾರ್ಯರು ಬರೆದ ಚೂಡಾಮಣಿ ಎಂಬ ತತ್ತ್ವಾರ್ಥ ಮಹಾಶಾಸ್ತ್ರದ ಮೇಲಿನ ವ್ಯಾಖ್ಯಾನ ಗ್ರಂಥವೂ ಗುಣಗಾಂಕಿಯಂ ಎಂಬ ಛಂದಶ್ಶಾಸ್ತ್ರದ ಗ್ರಂಥವೂ ಉಲ್ಲೇಖಾರ್ಹವಾದುವು. ತುಂಬಲೂರಾಚಾರ್ಯರ ಗ್ರಂಥ ತೊಂಬತ್ತಾರು ಸಹಸ್ರ ಗ್ರಂಥ ಪರಿಮಿತಿಯುಳ್ಳದ್ದೆಂದು ಭಟ್ಟಾಕಳಂಕನಿಂದ ತಿಳಿದುಬರುತ್ತದೆ. ಇಂಥ ಬೃಹತ್ತಾದ ಶಾಸ್ತ್ರಗ್ರಂಥವೊಂದು ಹುಟ್ಟಬೇಕಾದರೆ ಅದಕ್ಕೂ ಪೂರ್ವದಲ್ಲಿ ಸಾಹಿತ್ಯ ಸಮೃದ್ಧವಾಗಿ ಬೆಳೆದು ಬಂದಿರಬಹುದು. 'ಗುಣಗಾಂಕಿಯಂ' ಕವಿರಾಜಮಾರ್ಗದ ಸಮಕಾಲೀನ

ವಾದುದೆಂದೂ ನಾಗವರ್ಮನ ಛಂದೋಂಬುಧಿಗೆ ಮಾದರಿಯೆಂದೂ ತಿಳಿದುಬರುತ್ತದೆ. ಇದು ಶಾಸ್ತ್ರಗ್ರಂಥವಾದುದರಿಂದ ಇದಕ್ಕೂ ಪೂರ್ವದಲ್ಲಿ ಸಾಹಿತ್ಯ ಬೆಳೆದಿರಬೇಕು. ತುಂಬಲೂರಾಚಾರ್ಯನ ಸಮಕಾಲೀನನಾದ ಶ್ಯಾಮಕುಂದಾಚಾರ್ಯ ಕನ್ನಡದಲ್ಲಿ ಪ್ರಾಭೃತವನ್ನು ರಚಿಸಿದನೆಂದು ತಿಳಿದುಬಂದಿದೆ. ಗಂಗರಾಜನಾದ ಸೈಗೊಟ್ಟ ಶಿವಮಾರ (ಸು.788-812) ಗಜಾಷ್ಟಕವನ್ನು ಕನ್ನಡದಲ್ಲಿ ಬರೆದಿದ್ದನೆಂದೂ ಅದು ಓವನಿಗೆಯೂ ಒನಕೆವಾಡೂ ಆಗಿದ್ದು ಜನಪ್ರಿಯವಾಗಿತ್ತೆಂದೂ ತಿಳಿದುಬರುತ್ತದೆ. ಇದು ದಾಖಲೆಗೊಂಡಿರುವ ಮೊಟ್ಟಮೊದಲ ಕನ್ನಡ ಜನಪದ ಕಾವ್ಯ.

ಈಗ ನಮಗೆ ದೊರೆತಿರುವ ಕನ್ನಡ ಗ್ರಂಥಗಳಲ್ಲಿ ಕವಿರಾಜಮಾರ್ಗ ಮೊಟ್ಟಮೊದಲನೆಯದು. ನೃಪತುಂಗನ ಆಸ್ಥಾನಕವಿ ಶ್ರೀ ವಿಜಯ ಇದರ ಕರ್ತೃ. ಇದು ಕನ್ನಡ ಭಾಷೆ ವ್ಯಾಕರಣ ಅಲಂಕಾರಗಳನ್ನು ನಿರೂಪಿಸುವ ಬಹುಮುಖ್ಯವಾದ ಲಕ್ಷಣ ಗ್ರಂಥವಾಗಿದ್ದು ಕನ್ನಡಿಗರ ಕೈಪಿಡಿಯಂತಿದೆ. ಕನ್ನಡ ನಾಡು, ನುಡಿ, ಸಾಹಿತ್ಯ, ಸಂಸ್ಕೃತಿಗಳನ್ನು ಕುರಿತು ಇದರ ಕರ್ತೃ ಆಡಿರುವ ನುಡಿಗಳು ಅತ್ಯಮೂಲ್ಯವಾಗಿವೆ. ಕವಿರಾಜ ಮಾರ್ಗಕಾರ ಕೊಡುವ ಕೆಲವು ಉದಾಹರಣ ಪದ್ಯಗಳು ಕಾವ್ಯಮಯ ವಾಗಿವೆಯಾಗಿ ಶಾಸ್ತ್ರಗ್ರಂಥವೊಂದು ಆ ರೀತಿ ಇರಬೇಕಾದರೆ ಆ ವೇಳೆಗೆ ಸಾಹಿತ್ಯ ಸಾಕಷ್ಟು ಬೆಳೆದು, ಪಳಗಿ ಹದಗೊಂಡಿರಬೇಕೆಂಬುದು ಸ್ವಯಂವೇದ್ಯ ವಾಗುತ್ತದೆ. ಆದ್ದರಿಂದ ಕನ್ನಡ ಸಾಹಿತ್ಯ ಕವಿರಾಜಮಾರ್ಗಕ್ಕಿಂತಲೂ ನಾಲ್ಕೈದು ಶತಮಾನಗಳಷ್ಟಾದರೂ ಪ್ರಾಚೀನವಾಗಿರಬೇಕು. ಕವಿರಾಜಮಾರ್ಗಕಾರ ತನ್ನ ಗ್ರಂಥಗಳಲ್ಲಿ ತನಗಿಂತ ಹಿಂದಿನ ಅನೇಕ ಕವಿಗಳನ್ನು ಹೆಸರಿಸಿದ್ದಾನೆ. ವಿಮಳೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತ ಮೊದಲಾದವರೂ ಗದ್ಯಕವಿಗಳೆಂದೂ ಪರಮ ಶ್ರೀವಿಜಯ, ಕವೀಶ್ವರ, ಪಂಡಿತ, ಚಂದ್ರ, ಲೋಕಪಾಲ ಪದ್ಯಕವಿಗಳೆಂದೂ ಹೇಳಿದ್ದಾನೆ. ಇವನ ಮಾತಿನ ಧೋರಣೆಯನ್ನು ನೋಡಿದರೆ ಈತ ಹೆಸರಿಸಿರುವ ಕವಿಗಳೆಲ್ಲರೂ ಪ್ರಸಿದ್ಧ ಕವಿಗಳಾಗಿದ್ದಂತೆ ತೋರುತ್ತದೆ. ಆದರೆ ಅವರು ಬರೆದ ಕಾವ್ಯಗಳಾವುವೆಂಬುದನ್ನು ಈತ ಹೇಳಿಲ್ಲ; ಅವರ ಗ್ರಂಥಗಳಾವುವೂ ಈಗ ನಮಗೆ ಸಮಗ್ರವಾಗಿ ದೊರೆತಿಲ್ಲ. ಆದರೂ ಇವರಲ್ಲಿ ಕೆಲವರ ಹೆಸರು ನಮಗೆ ಪರಿಚಿತವಾಗಿದೆ. ಗದ್ಯಕವಿಗಳಲ್ಲಿ ಒಬ್ಬನಾದ ದುರ್ವಿನೀತ (ಸು.529-79) ಗಂಗವಂಶದ ದೊರೆಯೆಂದೂ ಈತ ಬಹುಶ್ರುತನೂ ಮೇಧಾವಿಯೂ ಆಗಿದ್ದನೆಂದೂ ಶಾಸನಗಳಿಂದ ತಿಳಿಯುತ್ತದೆ. ಕಿರಾತಾರ್ಜುನೀಯದ ಹದಿನೈದನೆಯ ಸರ್ಗಕ್ಕೆ ಇವನು ಕನ್ನಡ ಟೀಕನ್ನು ಬರೆದಿರುವಂತೆ ತಿಳಿದುಬರುತ್ತದೆ. ಪೈಶಾಚೀ ಭಾಷೆಯಲ್ಲಿದ್ದ ಬೃಹತ್ಕಥೆಯನ್ನು ವಡ್ಡಕಥಾ ಎಂಬ ಹೆಸರಿನಿಂದ ಈತ ಕನ್ನಡಕ್ಕೆ ತಂದಿದ್ದಾನೆಂದೂ ಊಹೆ. ಕವಿರಾಜಮಾರ್ಗದಲ್ಲಿ ಹೇಳಿರುವ ಪದ್ಯಕವಿಗಳಲ್ಲಿ ಚಂದ್ರನನ್ನು ಹಲವು ಕನ್ನಡ ಕವಿಗಳು ಸ್ತುತಿಸಿದ್ದಾರೆ. ಇಷ್ಟೇ ಅಲ್ಲ, ಕವಿರಾಜಮಾರ್ಗದಲ್ಲಿ ಉದಾಹರಿಸಿರುವ ಹಲವಾರು ಪದ್ಯಗಳು ಎಲ್ಲಿಂದ ಎತ್ತಿಕೊಂಡವುಗಳೆಂಬ ವಿಷಯ ಗೊತ್ತಾಗುವುದಿಲ್ಲ. ಇವುಗಳಲ್ಲಿ ಹತ್ತಾರು ಪದ್ಯಗಳು ರಾಮಾಯಣದ ಹಲವಾರು ಸನ್ನಿವೇಶಗಳನ್ನು ಸೂಚಿಸುವುದರಿಂದ, ಆ ಕಾಲಕ್ಕಾಗಲೇ ಒಂದು ರಾಮಾಯಣ ಕನ್ನಡದಲ್ಲಿ ಹುಟ್ಟಿದ್ದಿತೆಂದು ಊಹಿಸಲವಕಾಶವಿದೆ. ಇದೇ ಗ್ರಂಥದಲ್ಲಿ ಕನ್ನಡ ಕಾವ್ಯ ಪ್ರಕಾರಗಳಲ್ಲಿ ಉನ್ನತ ಗುಣವುಳ್ಳ ಗದ್ಯಪದ್ಯ ಸಂಮಿಶ್ರಣದ ಪ್ರಕಾರವನ್ನು 'ಗದ್ಯ ಕಥೆ' ಎಂಬ ಹೆಸರಿನಿಂದ ಪ್ರಾಚೀನ ಆಚಾರ್ಯರು ರಚಿಸಿದ್ದಾರೆ ಎಂದು ಹೇಳಿದೆ. ಅಲ್ಲದೆ ಕನ್ನಡಕ್ಕೇ ವಿಶಿಷ್ಟವಾದ ಚತ್ತಾಣ ಮತ್ತು ಬೆದಂಡೆಗಳಂಥ ಪದ್ಯಕಾವ್ಯಪ್ರಕಾರಗಳಿದ್ದುವೆಂದೂ ಇದರಲ್ಲಿ ಪ್ರಾಚೀನರಾದ ಕವಿಗಳು ಕೃತಿರಚನೆ ಮಾಡಿದ್ದರೆಂದೂ ತಿಳಿಯುತ್ತದೆ.

ಕವಿರಾಜಮಾರ್ಗ ಹುಟ್ಟಿದ ಹಿಂಚುಮುಂಚಿನಲ್ಲಿಯೇ ಅಸಗ, ಗುಣನಂದಿ ಮತ್ತು ಗುಣವರ್ಮ ಎಂಬ ಮೂವರು ಕವಿಗಳು ಕಾಣಬರುತ್ತಾರೆ. ಅಸಗನ ವರ್ಧಮಾನ ಚರಿತಂ ಎಂಬ ಸಂಸ್ಕೃತ ಗ್ರಂಥದಿಂದ ಈತ ಸು.853ರಲ್ಲಿ ಇದ್ದನೆಂಬುದು ಮಾತ್ರವಲ್ಲದೆ ಶ್ರೀ ಅಸಗಭೂಪಕೃತೇ ಎಂಬ ಅಲ್ಲಿನ ಹೇಳಿಕೆಯಿಂದ ಈತ ರಾಜನೂ ಆಗಿದ್ದಿರಬೇಕೆಂದು ಭಾವಿಸುವುದಕ್ಕೂ ಅವಕಾಶವಿದೆ. ಕನ್ನಡದ ಹಲವಾರು ಕವಿಗಳು ಈತನನ್ನು ಸ್ತುತಿಸಿದ್ದಾರೆ. ಈತನ 'ಕರ್ನಾಟ ಕುಮಾರಸಂಭವ' ಕನ್ನಡ ಕಾವ್ಯವೆಂದು ಜಯಕೀರ್ತಿಯ ಗ್ರಂಥದಿಂದ ತಿಳಿಯುತ್ತದೆ. ಗುಣನಂದಿಯನ್ನು ಭಟ್ಟಾಕಳಂಕ ಬಹು ಭಕ್ತಿಯಿಂದ ಭಗವಾನ್ ಗುಣನಂದಿ ಎಂದು ಕರೆದು ಗೌರವಿಸಿದ್ದಾನೆ. ಈತನ ಕಾವ್ಯದ ತುಣುಕೊಂದು ಕೇಶಿರಾಜನ ವ್ಯಾಕರಣದಲ್ಲಿದೆ. ಅದನ್ನು ನೋಡಿದರೆ ಈತ ಉತ್ತಮ ಕವಿಯೆಂದು ಭಾಸವಾಗುತ್ತದೆ. ಈತನ ಗ್ರಂಥವಾವುದೂ ಸಿಕ್ಕಿಲ್ಲ. ಗುಣವರ್ಮನು ಹರಿವಂಶ, ಶೂದ್ರಕ ಎಂಬ ಎರಡು ಉದ್ಗ್ರಂಥಗಳ ಕರ್ತೃವೆಂದು ಹೇಳುವುದಕ್ಕೆ ಅವಕಾಶವಿದೆ. ನಾಗವರ್ಮ, ಕೇಶಿರಾಜರು ಈತನ ಕಾವ್ಯಗಳನ್ನು ಹೆಸರಿಸಿದ್ದಾರೆ. ಮಲ್ಲಿಕಾರ್ಜುನ ಕವಿಯ ಸೂಕ್ತಿ ಸುಧಾರ್ಣವದಲ್ಲಿ ಗುಣವರ್ಮನ ಶೂದ್ರಕ ಕಾವ್ಯದ ಭಾಗಗಳು ದೊರೆಯುತ್ತವೆ. ಮೇಲಿನ ವಿವರಣೆಯಿಂದ ಕನ್ನಡ ಸಾಹಿತ್ಯ ಬಹುಶಃ ಕ್ರಿಸ್ತಶಕದ ಆರಂಭದಲ್ಲಿ ಪ್ರಾರಂಭವಾಗಿ ಐದು ಆರು ಶತಮಾನಗಳ ವೇಳೆಗಾಗಲೇ ಸಮೃದ್ಧಿಯಾಗಿ ಬೆಳೆದುಕೊಂಡು ಬಂದಿರಬಹುದೆಂದು ಹೇಳಬಹುದಾಗಿದೆ.

**ಪಂಪಯುಗ :** ಸು.900-1150. ಕನ್ನಡ ಸಾಹಿತ್ಯದ ಪ್ರಥಮ ಘಟ್ಟ ಪಂಪ ಯುಗ. ಪಂಪನಿಂದ ಬಸವಣ್ಣನವರೆಗೆ ಈ ಯುಗದ ವ್ಯಾಪ್ತಿಯಿದೆ. ಕನ್ನಡ ಸಾಹಿತ್ಯ ವಿಚ್ಛಿತ್ತಿಯಿಲ್ಲದೆ ಹರಿದುಕೊಂಡು ಹೋಗಿರುವುದು ಹತ್ತನೆಯ ಶತಮಾನದಿಂದ ಮುಂದೆ. ಈ ಯುಗದ ಪ್ರಮುಖ ಕೊಡುಗೆಯೆಂದರೆ ಚಂಪೂಕಾವ್ಯಗಳು. ಈ ಯುಗದಲ್ಲಿ ಪಂಪ, ರನ್ನ, ಪೊನ್ನ- ಈ ಮೂವರು ಮಹಾಕಾವ್ಯಗಳನ್ನು ರಚಿಸಿ ಮಹಾಕವಿಗಳು ಎಂಬ ಬಿರುದಿಗೆ ಪಾತ್ರರಾಗಿದ್ದಾರೆ. 10ನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಪಂಪ ಕನ್ನಡದ ಆದಿಕವಿಯೆಂದು ಪ್ರಸಿದ್ಧನಾಗಿದ್ದಾನೆ. ಚಾಳುಕ್ಯ ಅರಿಕೇಸರಿಯ ಆಸ್ಥಾನದಲ್ಲಿ ಕವಿಯೂ ಕಲಿಯೂ ಆಗಿದ್ದ ಈತ ಕಾಲದ ದೃಷ್ಟಿಯಿಂದ ಮಾತ್ರವಲ್ಲ, ಯೋಗ್ಯತೆಯ ದೃಷ್ಟಿಯಿಂದಲೂ ಕನ್ನಡದ ಆದಿಕವಿ. ಚಂಪೂ ಸಾಹಿತ್ಯಕ್ಕೆ ಭದ್ರವಾದ ಬುನಾದಿಯನ್ನು ಹಾಕಿ ಅದು ಸುಮಾರು ಎರಡು ಮೂರು ಶತಮಾನಗಳ ಕಾಲ ಪ್ರಭಾವೀ ಸಾಹಿತ್ಯ ಮಾಧ್ಯಮವಾಗಿ ಬಳಕೆಯಾಗುವಂತೆ ಮಾಡಿದವನು ಈತ. ಚಂಪೂ ಪರಂಪರೆಯಲ್ಲಿ ಲೌಕಿಕ ಧಾರ್ಮಿಕ ಎಂಬ ಎರಡು ರೀತಿಯ ಕಾವ್ಯಮಾರ್ಗಗಳಿಗೆ ಪಂಪನೇ ಸದ್ಯಕ್ಕೆ ಮೊದಲಿಗನೆನ್ನಬಹುದು. ಈತನ ಎರಡು ಕಾವ್ಯಗಳಾದ ವಿಕ್ರಮಾರ್ಜುನ ವಿಜಯ ಹಾಗೂ ಆದಿಪುರಾಣಗಳಿಗೆ ಕ್ರಮವಾಗಿ ವ್ಯಾಸರ ಮಹಾಭಾರತ ಮತ್ತು ಜಿನಸೇನಾಚಾರ್ಯರ ಪೂರ್ವಪುರಾಣ ಆಕರ ಗ್ರಂಥಗಳು. ವಿಕ್ರಮಾರ್ಜುನ ವಿಜಯದಲ್ಲಿ ತನ್ನ ಆಶ್ರಯದಾತ ಅರಿಕೇಸರಿಯನ್ನು ಮಹಾಭಾರತದ ಅರ್ಜುನನೊಂದಿಗೆ ಸಮೀಕರಿಸಿ ಪೌರಾಣಿಕ, ಐತಿಹಾಸಿಕ ಅಂಶಗಳನ್ನು ಸ್ವಾರಸ್ಯವಾಗಿ ಹೊಂದಿಸಿ ಮಹಾಭಾರತದ ಕಥೆಯನ್ನು ಮೊಟಕುಗೊಳಿಸದೆ ನಿರೂಪಿಸಿದ್ದಾನೆ. ಆದಿಪುರಾಣ ಪ್ರಥಮಜಿನನಾದ ವೃಷಭನಾಥನ ಕಥೆಯನ್ನೊಳಗೊಂಡ, ಕಾವ್ಯಧರ್ಮ ಹಾಗೂ ಧರ್ಮ ಎರಡೂ ಸಮರಸವಾಗಿ ಬೆರೆತಿರುವ ಧಾರ್ಮಿಕ ಕಾವ್ಯ. ವಸ್ತು, ಭಾಷೆ, ಭಾವ, ಶೈಲಿ ಈ ಎಲ್ಲ ರೀತಿಯಿಂದ ಪಂಪನ ಕಾವ್ಯಗಳು ಕನ್ನಡ ಭಾಷೆಗೆ ಕೊಟ್ಟ ಅದ್ವಿತೀಯ ಕೊಡುಗೆಗಳಾಗಿವೆ.

ಪಂಪನಿಂದ ಮುಂದೆ ಸುಮಾರು ಎರಡು ಶತಮಾನಗಳಷ್ಟು ಕಾಲ ಕಾವ್ಯಕರ್ಮಕ್ಕೆ ಕೈಹಾಕಿದವರೆಲ್ಲರೂ ವಸ್ತು ರೀತಿಗಳಲ್ಲಿ, ಭಾವ ಭಾಷೆಗಳಲ್ಲಿ ಪಂಪನನ್ನೇ ಅನುಕರಿಸಿದ್ದಾರೆ; ಅನುಸರಿಸಿದ್ದಾರೆ. ಆದ್ದರಿಂದ ಈ ಕಾಲಮಾನವನ್ನು ಪಂಪಯುಗವೆಂದೇ ಕರೆಯುತ್ತಾರೆ. ಈ ಕಾಲದ ಸಾಹಿತ್ಯ ಅತ್ಯಂತ ಪ್ರೌಢವಾಗಿ, ಸತ್ತ್ವಯುಕ್ತವಾಗಿ, ರಸವತ್ತಾಗಿ ಇರುವುದರಿಂದ ಇದನ್ನು ಕನ್ನಡ ಸಾಹಿತ್ಯದ ಸುವರ್ಣಯುಗ ಎಂದೂ ಕರೆಯುವುದುಂಟು. ಈ ಯುಗದಲ್ಲಿ ಚಂಪೂಕಾವ್ಯಗಳು ಪ್ರಚುರವಾಗಿರುವುದರಿಂದ ಚಂಪೂಯುಗವೆಂದೂ ಈ ಕಾವ್ಯಗಳಲ್ಲಿ ಸಾಮಾನ್ಯವಾಗಿ ವೀರರಸ ನೊರೆಗಟ್ಟಿ ಹರಿಯುತ್ತಿರುವುದರಿಂದ ವೀರಯುಗವೆಂದೂ ಹೆಸರಿಸುವ ವಾಡಿಕೆಯಿದೆ. ಈ ಯುಗದ ಕವಿಗಳೆಲ್ಲರೂ ಬಹುಮಟ್ಟಿಗೆ ರಾಜಾಶ್ರಿತರು.

ಪಂಪನಂತೆಯೇ ಜೈನಧರ್ಮಾನುಯಾಯಿಗಳಾದ ಮತ್ತಿಬ್ಬರು ಕವಿಗಳು ಪೊನ್ನ ಮತ್ತು ರನ್ನ. ಇಬ್ಬರೂ ರಾಜಪೂಜಿತರಾದ ಆಸ್ಥಾನಕವಿಗಳು. ಪಂಪನಂತೆಯೇ ತಮ್ಮ ಕಾವ್ಯಗಳಲ್ಲಿ ಒಂದನ್ನು ಧರ್ಮಕ್ಕೂ ಮತ್ತೊಂದನ್ನು ಲೌಕಿಕಕ್ಕೂ ಮೀಸಲು ಮಾಡಿದ್ದಾರೆ. ಲೌಕಿಕ ಕಾವ್ಯಗಳಲ್ಲಿ ಆಯಾ ಕವಿಗಳ ಪೋಷಕರು ಪುರಾಣಪುರುಷರ ವೇಷವನ್ನು ಧರಿಸಿ, ಆಯಾ ಕಾವ್ಯಗಳ ನಾಯಕರಾಗಿ ಮೆರೆದಿದ್ದಾರೆ. ರಾಷ್ಟ್ರಕೂಟ ಚಕ್ರವರ್ತಿ ಮುಮ್ಮಡಿ ಕೃಷ್ಣನ ಆಸ್ಥಾನಕವಿಯಾಗಿದ್ದ, ಕವಿಚಕ್ರವರ್ತಿ ಎಂಬ ಬಿರುದನ್ನು ಹೊಂದಿದ್ದ ಪೊನ್ನನ ಶಾಂತಿಪುರಾಣ ಜೈನ ಧಾರ್ಮಿಕ ಗ್ರಂಥ. ಈತನ

'ಭುವನೈಕರಾಮಾಭ್ಯುದಯ' ಈಗ ಉಪಲಬ್ಧವಿಲ್ಲ. ಇದು ರಾಮಾಯಣದ ಕಥೆಯನ್ನು ಆಧರಿಸಿ ರಚಿತವಾದ ಲೌಕಿಕ ಕಾವ್ಯವೆಂದು ಊಹಿಸಲು ಅವಕಾಶವಿದೆ.

ರನ್ನನೂ ಪಂಪನ ಮೇಲ್ಪಂಕ್ತಿಯಲ್ಲಿ ಕಾವ್ಯರಚನೆ ಮಾಡಿದವನಾದರೂ ತನ್ನ ಸ್ವಂತಿಕೆಯನ್ನು ಮೆರೆದಿದ್ದಾನೆ. ಈತನ ಸಾಹಸಭೀಮವಿಜಯಕ್ಕೆ (ಗದಾಯುದ್ಧ) ಪಂಪನ ಕೃತಿಯೇ ಪ್ರಮುಖ ಆಕರವಾದರೂ ರನ್ನನ ವ್ಯಕ್ತಿತ್ವದ ಅಚ್ಚು ಈ ಕಾವ್ಯದಲ್ಲಿ ಮೂಡಿಬಂದಿದೆ. ಕಥಾವಸ್ತು ಭೀಮ-ದುರ್ಯೋಧನರ ಗದಾಯುದ್ಧವಾದರೂ ಇಡೀ ಭಾರತದ ಕಥೆಯೇ ಸಿಂಹಾವಲೋಕನಕ್ರಮದಿಂದ ಇಲ್ಲಿ ದಿಗ್ದರ್ಶಿತವಾಗಿದೆ. ಇದಕ್ಕೆ ವಾಹಕವಾಗಿರುವ ನಾಟಕೀಯ ಶೈಲಿ ರನ್ನ ಕನ್ನಡಕ್ಕಿತ್ತಿರುವ ಕಾಣಿಕೆ. ಈತನ ಅಜಿತಪುರಾಣಕ್ಕೆ ಜೈನಧಾರ್ಮಿಕ ಕಾವ್ಯಗಳಲ್ಲಿ ಪಂಪನ ಆದಿಪುರಾಣವನ್ನು ಬಿಟ್ಟರೆ ಉನ್ನತಸ್ಥಾನ ದೊರಕಿದೆ.

ವಡ್ಡಾರಾಧನೆ ಇದೇ ಕಾಲದಲ್ಲಿ ರಚಿತವಾದ ಒಂದು ವಿಶಿಷ್ಟ ಕೃತಿ. ಶಿವಕೋಟ್ಯಾಚಾರ್ಯ (ಸು.920) ಇದರ ಕರ್ತೃ. ಗದ್ಯದಲ್ಲಿರುವ ಈ ಕೃತಿ ಈಗ್ಗೆ ಸಹಸ್ರ ವರ್ಷಗಳ ಹಿಂದಿನ ಭಾಷಾಸ್ವರೂಪಕ್ಕೂ ಜನಜೀವನಕ್ಕೂ ಕನ್ನಡಿ ಹಿಡಿಯುತ್ತದೆ. ಸರಳ ಸುಂದರ ಶೈಲಿ, ಪ್ರಾಸಾದಿಕ ಗುಣ, ಕಥನಕಲೆ- ಇವು ಈ ಕೃತಿಯ ವೈಶಿಷ್ಟ್ಯಗಳು. ಕನ್ನಡ ಗದ್ಯ ಇತಿಹಾಸದಲ್ಲಿ ವಡ್ಡಾರಾಧನೆ ಒಂದು ಮೈಲಿಗಲ್ಲು.

ಈ ಯುಗದ ಮತ್ತೊಬ್ಬ ಹಿರಿಯ ಕವಿ ಒಂದನೆಯ ನಾಗವರ್ಮ. ಕರ್ನಾಟಕ ಕಾದಂಬರಿ, ಛಂದೋಂಬುಧಿಗಳು ಈತನ ಗ್ರಂಥಗಳು. ಈತನೂ ಪಂಪನಂತೆಯೇ ತನ್ನ ಸ್ವಾಮಿ ಚಂದ್ರರಾಜನನ್ನು ಕಾವ್ಯದ ಕಥಾನಾಯಕನೊಡನೆ ಸಮೀಕರಿಸಿ, ತನ್ನ ಕರ್ನಾಟಕ ಕಾದಂಬರಿಯನ್ನು ರಚಿಸಿದನೆಂದು ತೋರುತ್ತದೆ. ಆದರೆ ಇದನ್ನು ಸ್ಪಷ್ಟಪಡಿಸುವಷ್ಟು ಸಾಧನಗಳಿಲ್ಲ. ಈತನ ಛಂದೋಂಬುಧಿ ಕನ್ನಡದ ಮೊಟ್ಟ ಮೊದಲ ಛಂದೋಗ್ರಂಥ. ಕರ್ನಾಟಕ ಕಾದಂಬರಿ ಬಾಣಭಟ್ಟನ ಸಂಸ್ಕೃತ ಕಾದಂಬರಿಯ ಅನುವಾದ. ಮೂಲವನ್ನು ಕವಿ ಕನ್ನಡ ಚಂಪೂರೂಪಕ್ಕೆ ತಿರುಗಿಸಿದ್ದಾನೆ. ಮೂಲದ ಪದಗಳು ಕನ್ನಡ ರೂಪಾಂತರದಲ್ಲಿ ಕಂಡುಬರುವುವಾದರೂ ನಾಗವರ್ಮ ಬರಿಯ ಭಾಷಾಂತರಕಾರನಲ್ಲ. ಸಂಸ್ಕೃತದ ಉತ್ತಮ ಕಾವ್ಯವೊಂದನ್ನು ಸ್ವತಂತ್ರ ಕೃತಿಯೆಂಬಂತೆ ಕನ್ನಡದಲ್ಲಿ ರಚಿಸಿ, ಅದೊಂದು ಸಂಪ್ರದಾಯವನ್ನು ಬೆಳೆಸಿದವರಲ್ಲಿ ಈತ ಮೊದಲಿಗ.

ಈ ಯುಗದಲ್ಲಿ ಹನ್ನೊಂದನೆಯ ಶತಮಾನದ ಕನ್ನಡ ಸಾಹಿತ್ಯ ಹಿಂದಿನದರಷ್ಟು ಉಜ್ಜ್ವಲವಾಗಿಲ್ಲ. ಆದರೆ ಹೆಚ್ಚು ವೈವಿಧ್ಯಮಯವಾಗಿದೆ. ಕಾವ್ಯಗಳ ಜೊತೆಯಲ್ಲಿ ಇಲ್ಲಿ ಹಲವು ಶಾಸ್ತ್ರ ಗ್ರಂಥಗಳೂ ಕಾಣಿಸಿಕೊಂಡಿವೆ. ಅನೇಕ ವೇಳೆ ಈ ಶಾಸ್ತ್ರಗ್ರಂಥಗಳು ಕಾವ್ಯಮಯವಾಗಿಯೂ ಇರುತ್ತವೆ. ಚಾವುಂಡರಾಯನ (ಸು.1025) ಲೋಕೋಪಕಾರ ಇಂಥ ಒಂದು ಗ್ರಂಥ. ಜೋತಿಷ್ಯದಿಂದ ವಿಷವೈದ್ಯದವರೆಗೆ ಹಲವಾರು ವಿಷಯಗಳನ್ನು ಒಳಗೊಂಡ ಈ ಗ್ರಂಥ ತನ್ನ ಹೆಸರನ್ನು ಸಾರ್ಥಕ ಪಡಿಸಿಕೊಂಡಿದೆ. ಚಂದ್ರರಾಜನ (ಸು.1025) ಮದನತಿಲಕ ಎಂಬ ಕಾಮಶಾಸ್ತ್ರವೂ ಶ್ರೀಧರಾಚಾರ್ಯನ (ಸು.1049) ಜಾತಕತಿಲಕವೆಂಬ ಜೋತಿಷ್ಯ ಗ್ರಂಥವೂ ಇದೇ ಜಾತಿಗೆ ಸೇರಿದ ಶಾಸ್ತ್ರಗ್ರಂಥಗಳು. ಇವೆಲ್ಲವೂ ಚಂಪೂ ಶೈಲಿಯಲ್ಲಿವೆ. ನಾಗವರ್ಮಾಚಾರ್ಯನ (ಸು.1071) ಚಂದ್ರಚೂಡಾಮಣಿಶತಕ ಕನ್ನಡದ ಮೊಟ್ಟಮೊದಲ ಶತಕ ಗ್ರಂಥವಾಗಿದೆ. ಮೇಲಿನ ಕವಿಗಳಲ್ಲಿ ಶ್ರೀಧರಾಚಾರ್ಯನನ್ನು (ಜೈನಕವಿ) ಬಿಟ್ಟರೆ ಉಳಿದವರೆಲ್ಲ ವೈದಿಕ ಕವಿಗಳೆಂಬುದು ಗಮನಾರ್ಹ.

ಒಂದನೆಯ ಜಗದೇಕಮಲ್ಲನಲ್ಲಿ ಸಂಧಿವಿಗ್ರಹಿಯಾಗಿದ್ದ ದುರ್ಗಸಿಂಹ (ಸು.1031) ಪಂಚತಂತ್ರವೆಂಬ ಕಾವ್ಯವನ್ನು ಬರೆದಿದ್ದಾನೆ. ಇದು ಸಂಸ್ಕೃತದಲ್ಲಿ ಬರೆದ ಪಂಚತಂತ್ರದ ಕನ್ನಡ ಅನುವಾದ, ಚಂಪೂರೂಪದಲ್ಲಿದೆ. ಹಲವು ಉಪಕಥೆಗಳು ಇಲ್ಲಿ ಗದ್ಯರೂಪದಲ್ಲಿ ಕಾಣಿಸಿಕೊಂಡಿವೆ. ಕನ್ನಡ ಗದ್ಯ ಸಾಹಿತ್ಯದ ಇತಿಹಾಸದಲ್ಲಿ ದುರ್ಗಸಿಂಹನಿಗೆ ಒಂದು ಪ್ರಮುಖ ಸ್ಥಾನ ಸಲ್ಲುತ್ತದೆ.

ಹೊಯ್ಸಳ ಒಂದನೆಯ ಬಲ್ಲಾಳನ ಆಸ್ಥಾನ ಕವಿಯಾಗಿದ್ದನೆನ್ನಲಾದ ನಾಗಚಂದ್ರ ಈ ಯುಗದಲ್ಲಿ ಕೃತಿರಚನೆ ಮಾಡಿದ ಇನ್ನೊಬ್ಬ ಅತ್ಯುತ್ತಮ ಕವಿ. ತನ್ನನ್ನು ಅಭಿನವಪಂಪನೆಂದು ಕರೆದುಕೊಂಡಿರುವ ಈತ ಮಲ್ಲಿನಾಥಪುರಾಣ, ರಾಮಚಂದ್ರಚರಿತಪುರಾಣ ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆ. ಎರಡೂ ಧರ್ಮಗ್ರಂಥಗಳೇ. ಮೊದಲನೆಯದು 19ನೆಯ ತೀರ್ಥಂಕರನ ಕಥೆಯನ್ನೂ ಎರಡನೆಯದು ಜೈನ ಪುರಾಣಾನುಸಾರಿಯಾದ ರಾಮಾಯಣ ಕಥೆಯನ್ನೂ ನಿರೂಪಿಸುತ್ತದೆ. ಇಲ್ಲಿನ ಧರ್ಮನಿರೂಪಣೆ ಅತ್ಯಂತ ಕಾವ್ಯಮಯವಾಗಿದ್ದು ಅಭಿನವಪಂಪನ ಆತ್ಮಸಾರ ಎಂಬ ಕೀರ್ತಿಗೆ ಪಾತ್ರವಾಗಿದೆ.

ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ಸಾಹಿತ್ಯದಲ್ಲಿ ಹೊಸ ತಿರುವು ಕಾಣಿಸಿಕೊಂಡಿತು. ನಯಸೇನ, ಬ್ರಹ್ಮಶಿವ ಮೊದಲಾದ ಜೈನಕವಿಗಳು ಸಂಸ್ಕೃತ ಭೂಯಿಷ್ಠವಾದ ಮಾರ್ಗೀ ಶೈಲಿಯನ್ನು ಪ್ರತಿಭಟಿಸಿ, ಸುಲಲಿತ ದೇಶೀ ಶೈಲಿಯಲ್ಲಿ ಕೃತಿರಚನೆ ಮಾಡತೊಡಗಿದರು. ನಯಸೇನನ ಧರ್ಮಾಮೃತ, ಬ್ರಹ್ಮಶಿವನ ಸಮಯ ಪರೀಕ್ಷೆ ಈ ಮಾದರಿಯಲ್ಲಿ ರಚಿತವಾದ ಮುಖ್ಯ ಗ್ರಂಥಗಳು. ಇವರ ಕಾವ್ಯಗಳಲ್ಲಿ ಪಂಪ ಹಾಕಿಕೊಟ್ಟ ಮಾರ್ಗದ ಪ್ರಭಾವವಿದ್ದರೂ ಇವರು ಭಾಷಾದೃಷ್ಟಿಯಿಂದ ಹೊಸದನ್ನು ಕಾವ್ಯದಲ್ಲಿ ತರಬೇಕೆಂದು ಹೊರಟು ಕಥೆಗಳ ಮೂಲಕ ತಮ್ಮ ಧರ್ಮಪ್ರಸಾರ ಮಾಡಿದರು. ಇವರ ಕಾವ್ಯಗಳಲ್ಲಿ ಪರಮತ ವಿಡಂಬನೆ ಎದ್ದು ಕಾಣುತ್ತದೆ. ಇದು ಬುದ್ಧಿಪೂರ್ವಕವಾದುದಾದರೂ ವಿವೇಚನಾ ರಹಿತವಾದುದಲ್ಲ.

ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿ ರಾಜಾದಿತ್ಯನ ವ್ಯವಹಾರ ಗಣಿತ, ಕೀರ್ತಿವರ್ಮನ ಗೋವೈದ್ಯ, ಜಗದ್ದಳ ಸೋಮನಾಥನ ಕಲ್ಯಾಣಕಾರಕ, ಉದಯಾದಿತ್ಯನ ಉದಯಾದಿತ್ಯಾಲಂಕಾರ, ಎರಡನೆಯ ನಾಗವರ್ಮನ ಕಾವ್ಯಾವಲೋಕನ, ಕರ್ನಾಟಕ ಭಾಷಾಭೂಷಣ, ವಸ್ತುಕೋಶ ಮೊದಲಾದ ಗಮನಾರ್ಹ ಶಾಸ್ತ್ರಗ್ರಂಥಗಳು ರಚಿತವಾದವು. ಎರಡನೆಯ ನಾಗವರ್ಮನ ವರ್ಧಮಾನಪುರಾಣ ಎಂಬ ಕಾವ್ಯ ಸಿಕ್ಕಿದೆ.

**ವಚನ ಯುಗ :** ಹನ್ನೆರಡನೆಯ ಶತಮಾನದ ಉತ್ತರಾರ್ಧ ಕನ್ನಡ ಸಾಹಿತ್ಯ ಜಗತ್ತಿನಲ್ಲಿ ನಡೆದ ದೊಡ್ಡದೊಂದು ವಿಪ್ಲವವನ್ನು ಒಳಗೊಂಡಿದೆ. ಇಲ್ಲಿಂದ ಮುಂದೆ ಕನ್ನಡ ಸಾಹಿತ್ಯ ಚರಿತ್ರೆಯು ನೂತನ ಯುಗವೊಂದು ಪ್ರಾರಂಭವಾಗುತ್ತದೆ. ಇಲ್ಲಿಯವರೆಗೆ ಕಾವ್ಯಕರ್ಮಕ್ಕೆ ಕೈಹಾಕಿದವರೆಲ್ಲರೂ ಬಹುಮಟ್ಟಿಗೆ ರಾಜಾಶ್ರಯದಲ್ಲಿದ್ದವರು. ಇವರ ಹೆಗ್ಗುರಿ ರಾಜಾನುಗ್ರಹ ಮತ್ತು ರಾಜಾಸ್ಥಾನ ಪಂಡಿತರ ಮೆಚ್ಚುಗೆ. ಇವರ ಕಾವ್ಯರಚನೆಗೆ ಸಂಸ್ಕೃತ ಕಾವ್ಯಗಳು ಆಧಾರ. ವಸ್ತುರೀತಿಗಳಲ್ಲಿ, ಭಾವ ಭಾಷೆಗಳಲ್ಲಿ ಇವರದು ಸಂಸ್ಕೃತ ಕಾವ್ಯಗಳ ಅನುಕರಣ. ಪಾಂಡಿತ್ಯ ಹೆಪ್ಪುಗಟ್ಟಿ ಕುಳಿತಿದ್ದ ಈ ಕಾವ್ಯಗಳು ಶ್ರೀಸಾಮಾನ್ಯನಿಗೆ ಎಟುಕುವಂತಿರಲಿಲ್ಲ. ಅವುಗಳ ಭಾಷಾಶೈಲಿಗಳಲ್ಲಿ ಪರಿಷ್ಕರಣವಾಗಬೇಕೆಂಬ ಕೂಗು ಕವಿರಾಜಮಾರ್ಗ ಕರ್ತೃವಿನ ಕಾಲದಿಂದಲೂ ಇತ್ತು. ಅದನ್ನು ಕಾರ್ಯತಃ ನೆರವೇರಿಸಿ, ಕನ್ನಡ ಸಾಹಿತ್ಯದಲ್ಲಿ ಕ್ರಾಂತಿಯನ್ನುಂಟುಮಾಡಿದ ಕೀರ್ತಿ ವೀರಶೈವ ಕವಿಗಳಿಗೆ ಸಲ್ಲಬೇಕು. ಈ ಕವಿಗಳಿಗೆ ಸ್ಫೂರ್ತಿಯನ್ನು ನೀಡಿದವರು ವೀರಶೈವ ವಚನಕಾರರು.

ವಚನವಾಙ್ಮಯದ ಹುಟ್ಟಿಗೆ ಅಂದಿನ ಕಾಲದ ಸಾಮಾಜಿಕ ಸ್ಥಿತಿಯೂ ಬಹುಮಟ್ಟಿಗೆ ಕಾರಣವಾಗಿದೆ. ಈ ವೇಳೆಗಾಗಲೇ ಕನ್ನಡ ನಾಡಿನಲ್ಲಿ ಜೈನಮತ ಅವನತಿ ಹೊಂದುತ್ತಿತ್ತು. ಅನಾದಿಕಾಲದಿಂದಲೂ ಹರಿದು ಬಂದಿದ್ದ ವೈದಿಕಮತ ತನ್ನ ಸತ್ತ್ವವನ್ನು ಕಳೆದುಕೊಂಡು ಮೂಢನಂಬಿಕೆ, ಅಂಧಶ್ರದ್ಧೆ, ಡಾಂಭಿಕತೆ, ಜಾತೀಯತೆ, ಮಡಿವಂತಿಕೆಗಳಲ್ಲಿ ಮುಳುಗಿಹೋಗಿತ್ತು. ಇದನ್ನು ಪ್ರತಿಭಟಿಸಿ ಸರ್ವಸಮಾನತೆ, ಮಾನವಪ್ರೇಮ, ದೈವಭಕ್ತಿ, ನೈತಿಕ ಜೀವನಗಳಿಗೆ ಸ್ಥಾನಕೊಡುವ ಹೊಸ ಸಮಾಜವೊಂದರ ಸೃಷ್ಟಿ ಅತ್ಯವಶ್ಯವಾಗಿತ್ತು. ಇದರ ಪೂರೈಕೆಯೋ ಎಂಬಂತೆ ಕರ್ನಾಟಕದಲ್ಲಿ ವೀರಶೈವ ಧರ್ಮ ಕಾಣಿಸಿಕೊಂಡಿತು. ಆಧ್ಯಾತ್ಮ ಜ್ಞಾನವೆಲ್ಲ ಸಂಸ್ಕೃತದಲ್ಲಿದ್ದುದರಿಂದ ಅದು ಶ್ರೀಸಾಮಾನ್ಯನ ಸ್ವತ್ತಾಗುವಂತೆ ಮಾಡಲು ವಚನವಾಙ್ಮಯ ಹುಟ್ಟಿಕೊಂಡಿತು.

ಅಧ್ಯಾತ್ಮ, ಧರ್ಮ, ನೀತಿಗಳ ನಿರೂಪಣೆ ವಚನಗಳ ತಿರುಳು. ಚಿಲುಮೆಯಿಂದ ನೀರು ಉಕ್ಕುವಂತೆ ಸಂತರ ಅನುಭವದಿಂದ ಅಭಿವ್ಯಕ್ತವಾಗುವ ಈ ವಾಙ್ಮಯಕ್ಕೆ ಪುರಸ್ಕಾರ ದೊರೆತಿರುವುದು ಇಲ್ಲಿನ

ಪಾಂಡಿತ್ಯದಿಂದಲ್ಲ. ಧರ್ಮ ದರ್ಶನದಿಂದ ಮಹಾತತ್ತ್ವಗಳು ತಿಳಿಯಾದ ಭಾಷೆಯಲ್ಲಿ ಕಾಣಿಸಿಕೊಂಡಿರುವ ವಚನ ವಾಙ್ಮಯಕ್ಕೆ ಕನ್ನಡದ ಉಪನಿಷತ್ತುಗಳೆಂಬ ಹೆಸರೂ ಬಂದಿದೆ. ಸರಳ ಹಾಗೂ ಶಕ್ತಿಯುತವಾದ ಈ ವಾಙ್ಮಯ ಕನ್ನಡಕ್ಕೇ ಮೀಸಲಾದ, ಕನ್ನಡಕ್ಕೆ ಹೆಗ್ಗಳಿಕೆಯನ್ನು ತಂದುಕೊಟ್ಟಿರುವ, ಕನ್ನಡಿಗರ ಹಿರಿಯ ಸ್ವತ್ತು. ಇದರ ವಸ್ತು ರೀತಿಗಳು ಭಾವಭಾಷೆಗಳು ಕನ್ನಡ ನೆಲದಲ್ಲಿ ಹುಟ್ಟಿ ಅಪ್ಪಟ ಕನ್ನಡತನದಿಂದ ತುಂಬಿವೆ. ಈ ಕಾಲವನ್ನು ಕನ್ನಡ ಸಾಹಿತ್ಯದ ಪ್ರಜಾಪ್ರಭುತ್ವದ ಕಾಲ ಎಂದು ಕರೆದರೆ ತಪ್ಪಾಗಲಾರದು. ಸರ್ವಸಮತೆಯನ್ನು ಸಾರಿದ ವೀರಶೈವಧರ್ಮ ಎಲ್ಲ ಜಾತಿ, ಮತ, ಪಂಥದ ಜನರಿಗೂ ತನ್ನ ಧರ್ಮಧ್ವಜದ ಅಡಿಯಲ್ಲಿ ಎಡೆಯಿತ್ತಿತು. ಗಂಡು ಹೆಣ್ಣುಗಳೆಂಬ ಭೇದಭಾವವಿಲ್ಲದೆ ಎಲ್ಲರೂ ಸತ್ಯ ಸಾಕ್ಷಾತ್ಕಾರಕ್ಕೆ ಅವಕಾಶ ಪಡೆದರು. ಬ್ರಾಹ್ಮಣನಿಂದ ಶೂದ್ರನವರೆಗೆ ಎಲ್ಲರೂ ಅನುಭಾವಿಗಳಾಗಿ ತಮಗೆ ಸ್ಫುರಿಸಿದುದನ್ನು ವಚನರೂಪದಲ್ಲಿ ಅಭಿವ್ಯಕ್ತಿಸಿದರು. ನೂರಾರು ಜನ ವಚನಕಾರರು ಏಕಕಾಲದಲ್ಲಿ ಕಾಣಿಸಿಕೊಂಡರು. ಇವರು ಕಾಯಕಕ್ಕೆ ಮನ್ನಣೆಯನ್ನು ಕೊಟ್ಟರೇ ಹೊರತು ಜಾತಿಗಲ್ಲ, ಐಶ್ವರ್ಯಕ್ಕಲ್ಲ, ಅಧಿಕಾರಕ್ಕಲ್ಲ. ಶೂನ್ಯಸಿಂಹಾಸನದ ಮೇಲೆ ಮಂಡಿಸಿದ್ದ ಪ್ರಭುದೇವನ ಅನುಭವಮಂಟಪದಲ್ಲಿ ಈ ವಚನಗಳು ಒಪ್ಪಿಗೆಯ ಮುದ್ರೆಯನ್ನು ಪಡೆದವು. ಈ ವಚನಕಾರರೆಲ್ಲರ ಆದರ್ಶ ಆಶೋತ್ತರಗಳು ಒಂದೇ ಆಗಿದ್ದರೂ ಅವರ ಬುದ್ಧಿ, ಜ್ಞಾನ, ಸಂಸ್ಕಾರ, ಸಂಸ್ಕೃತಿ, ಪ್ರತಿಭೆಗಳಲ್ಲಿ ಸಾಕಷ್ಟು ಏರುಪೇರುಗಳಿರುವುದು ಸಹಜವಾಗಿಯೆ ಇದೆ. ಆದ್ದರಿಂದ ವಚನವಾಙ್ಮಯದಲ್ಲಿ ಸಾಕಷ್ಟು ಭಾಗ ಸಂಪ್ರದಾಯಶೀಲವಾಗಿ, ಅನುಕರಣ ಲೋಲವಾಗಿ ಚರ್ವಿತಚರ್ವಣವಾಗಿದೆ.

ಮಾದಾರ ಚನ್ನಯ್ಯ, ಡೋಹರಕಕ್ಕಯ್ಯ ಕೊಂಡುಗುಳಿ ಕೇಶಿರಾಜ, ಕೆಂಭಾವಿ ಭೋಗಣ್ಣ ಇವರು ಆದ್ಯವಚನಕಾರರೆಂದು ಕೇಳಿಬರುತ್ತದೆ. ದೇವರ ದಾಸಿಮಯ್ಯನ ವಚನಗಳ ಮುಖ್ಯ ಲಕ್ಷಣ ಪ್ರಾಸಾದಿಕ ಗುಣ. ಬಸವಣ್ಣನ ಸಮಕಾಲೀನನಾದರೂ ಆತನಿಗಿಂತ ಹಿರಿಯನೆನಿಸಿದ ಸಕಲೇಶ ಮಾದರಸನ ವಚನಗಳು ಹೆಚ್ಚು ಸೂತ್ರಬದ್ಧವಾಗಿ ಮಾರ್ಮಿಕವಾಗಿವೆ. ವಚನಕಾರರ ಸಾಲಿನಲ್ಲಿ ಪ್ರಭುದೇವ ಅತ್ಯುನ್ನತ ಸ್ಥಾನವನ್ನು ಗಳಿಸಿದ್ದಾನೆ. ಈತನ ನುಡಿಗಳು ಪ್ರಾಮಾಣಿಕವಾದುವು, ಸತ್ಯನಿಷ್ಠವಾದುವು, ನಿರ್ದಾಕ್ಷಿಣ್ಯವಾದವು. ಬಸವಣ್ಣ ಈ ಯುಗದ ಮಹತ್ತ್ವದ ವಚನಕಾರ. ಈತ ಧಾರ್ಮಿಕ, ಸಾಂಸ್ಕೃತಿಕ, ಸಾಹಿತ್ಯಕ ಕ್ರಾಂತಿಯ ನೇತಾರನೂ ಹೌದು. ಪ್ರಭುದೇವನದು ಜ್ಞಾನಮಾರ್ಗವಾದರೆ ಬಸವಣ್ಣನದು ಭಕ್ತಿಮಾರ್ಗ. ಮಾನವ ಬಯಸಬಹುದಾದ ಅಧಿಕಾರ, ಐಶ್ವರ್ಯ, ಕಾಮಿನಿ, ಕೀರ್ತಿ, ರೂಪು, ಯೌವನ, ವೈಭವಗಳ ಮಧ್ಯದಲ್ಲಿಯೂ ಈತನ ಚೇತನ ಊರ್ಧ್ವಮುಖವಾಯಿತು. ಸಾಧನೆಯ ಹೆದ್ದಾರಿಯಲ್ಲಿ ಹೆಜ್ಜೆ ಹೆಜ್ಜೆಯಾಗಿ ಮುಂದುವರೆದು ಈತ ಹೇಗೆ ದೇವಮಾನವನಾದನೆಂಬುದು ಈತನ ವಚನಗಳಲ್ಲಿ ಒಡಮೂಡಿದೆ. ಸಮಾಜದ ಕೊಳೆಕಸಗಳನ್ನು, ಅಂಧಕಾರ ಅಜ್ಞಾನಗಳನ್ನು, ಓರೆಕೋರೆಗಳನ್ನು ಕಂಡು ಬಸವಣ್ಣ ಕನಿಕರಯುಕ್ತವಾದ ರೋಷ ಉಕ್ಕಿ ಅವುಗಳನ್ನು ಖಂಡಿಸಿದ್ದಾನೆ. ಈತನ ಬೋಧನಾವಿಧಾನ ಸುಂದರವಾದ ಸಾಹಿತ್ಯದ ರೂಪದಲ್ಲಿದೆ.

ವೀರಶೈವ ಧರ್ಮದ ಉದಾರ ತತ್ತ್ವದಿಂದ ಮೂಡಿಬಂದ ಹಲವು ವಚನಕಾರ್ತಿಯರಲ್ಲಿ ಮಹಾದೇವಿಯಕ್ಕ ಅಗ್ರಗಣ್ಯಳು. ಬಸವಣ್ಣನ ವಚನಗಳಂತೆ ಈಕೆಯ ವಚನಗಳೂ ಸತ್ತ್ವಯುಕ್ತವಾಗಿ ಸಾಹಿತ್ಯಮಯವಾಗಿ, ಭಾವಗೀತೆಯ ಮಾಧುರ್ಯದಿಂದ ತುಂಬಿವೆ. ಮುಕ್ತಾಯಕ್ಕ, ಮಹಾದೇವಿಯಮ್ಮ, ಲಕ್ಕಮ್ಮ ಮೊದಲಾದ ವಚನಕಾರ್ತಿಯರ ಹೆಸರುಗಳೂ ಇಲ್ಲಿ ಸ್ಮರಣಾರ್ಹವಾದುವು.

ಈ ಯುಗದಲ್ಲಿ ವಚನ ರಚನೆಗೆ ಕೈಹಾಕಿದ ವಚನಕಾರರ ಸಂಖ್ಯೆ ಅಪರಿಮಿತ. ಅವರಲ್ಲಿ ಚೆನ್ನಬಸವಣ್ಣ, ಆದಯ್ಯ, ಹಡಪದ ಅಪ್ಪಣ, ಮಡಿವಾಳ ಮಾಚಯ್ಯ, ಸೊಡ್ಡಳಬಾಚರಸ, ಅಂಬಿಗರ ಚೌಡಯ್ಯ, ಮೋಳಿಗೆ ಮಾರಯ್ಯ, ಮೇದರ ಕೇತಯ್ಯ, ಕೋಲ ಶಾಂತಯ್ಯ ಮೊದಲಾದ ಸಂತರು ತಮ್ಮ ವಚನ ರಚನೆಯಿಂದ ಕನ್ನಡದ ಆಧ್ಯಾತ್ಮಿಕ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

**ಹರಿಹರಯುಗ :** ಹನ್ನೆರಡನೆಯ ಶತಮಾನದ ಉತ್ತರಾರ್ಧದಿಂದ ಮುಂದಕ್ಕೆ ನಡೆದ ಸಾಹಿತ್ಯ ಸೃಷ್ಟಿಯಲ್ಲಿ ವಚನಕಾರರ ಪ್ರಭಾವ ನಿಚ್ಚಳವಾಗಿ ಕಂಡುಬರುತ್ತದೆ. ಇದೇ ಕಾಲದಲ್ಲಿ ಪಂಪ ಹರಿಯಬಿಟ್ಟ ಚಂಪುವಿನ ಚಕ್ರ ಮುಂದುವರಿಯುತ್ತ ಹೋಯಿತಾದರೂ ಶುದ್ಧ ಕನ್ನಡದ ದೇಶೀ ಶೈಲಿಯಲ್ಲಿ ಕನ್ನಡ ಕಾವ್ಯರಚನೆಯನ್ನು ಮಾಡುವ ಒಂದು ಹೊಸ ಹೆದ್ದಾರಿಯೂ ಆಗ ಹುಟ್ಟಿಕೊಂಡಿತು. ಭಾವ ಭಾಷೆ ವಸ್ತು ರೀತಿಗಳಲ್ಲಿ ಹಿಂದಿನ ಕಾವ್ಯಗಳಿಂದ ಭಿನ್ನವಾಗಿ ಸರ್ವತಂತ್ರಸ್ವತಂತ್ರವಾದ ಚಿರನೂತನತೆಯನ್ನು ಮೆರೆದು ಅದ್ಭುತ ಕ್ರಾಂತಿಯೊಂದನ್ನು ನಡೆಸಿ ಕನ್ನಡ ಸಾಹಿತ್ಯದ ಸ್ವತಂತ್ರಯುಗವೊಂದನ್ನು ಸ್ಥಾಪಿಸಿದ ಕೀರ್ತಿ ಹರಿಹರನಿಗೆ ಸಲ್ಲುತ್ತದೆ. ಪಂಪಾಶತಕ, ರಕ್ಷಾಶತಕ, ಮುಡಿಗೆಯ ಅಷ್ಟಕ, ಗಿರಿಜಾ ಕಲ್ಯಾಣ, ಶಿವಶರಣರ ರಗಳೆಗಳು ಇವು ಈತನ ಕಾವ್ಯಗಳು.

'ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಅಕ್ಕಟಾ ತನತನಗಿಂದ್ರಚಂದ್ರರವಿಕರ್ಣದಧೀಚಿಬಲೀಂದ್ರರೆಂದು ಮೇಣ್ ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ ನೆನೆ ಪೊಗಳರ್ಚಿಸೆಮ್ಮ ಕಡು ಸೊಂಪಿನ ಪೆಂಪಿನ ಹಂಪೆಯಾಳ್ದನಂ' ಎಂಬ ಮಾತುಗಳಲ್ಲಿ ಊಳಿಗದಲ್ಲಿ ಈತನಿಗಿದ್ದ ಜಿಹಾಸೆಯೊಡನೆ ಪಂಪಯುಗದ ಸಾಹಿತ್ಯ ಸ್ವರೂಪದ ಖಂಡನೆಯೂ ಕಂಡುಬರುತ್ತದೆ. ಈತನ ಸ್ವತಂತ್ರ ಮನೋವೃತ್ತಿ ಇಲ್ಲಿ ಸೂಚಿತವಾಗಿದೆ. ರಾಜಮಹಾರಾಜರನ್ನು ಕುರಿತು, ಮಹಾಕವಿಗಳನ್ನು ಕುರಿತು ನಡೆಯುತ್ತಿದ್ದ ಕಾವ್ಯರಚನೆ ಸಾಮಾನ್ಯವ್ಯಕ್ತಿಗಳನ್ನು ಕುರಿತು ನಡೆಯುವಂತಾದುದು ಹರಿಹರನಿಂದ. ಈತನ ಗಿರಿಜಾಕಲ್ಯಾಣದ ಕಥಾವಸ್ತು ಮತ್ತು ನಿರೂಪಣಾ ವಿಧಾನಗಳು ಹಳೆಯವಾದರೂ ಸಂಪ್ರದಾಯಕ್ಕೆ ವಿರುದ್ಧವಾಗಿ, ಸಿಡಿದೆದ್ದಿರುವ ಆತನ ಸ್ವತಂತ್ರ ಮನೋವೃತ್ತಿ ಇಲ್ಲಿ ಕಂಡುಬರುತ್ತದೆ. ಈತನ ಈ ಸ್ವತಂತ್ರ ಮನೋವೃತ್ತಿ ಸಂಪೂರ್ಣ ಅರಳಿರುವುದು ಇವನ ರಗಳೆಗಳಲ್ಲಿ.

ಹರಿಹರ ಬಳಸಿದ ರಗಳೆಯ ಛಂದಸ್ಸು ಒಂದು ರೀತಿಯಲ್ಲಿ ಅಚ್ಚ ಕನ್ನಡದ್ದು. ಸಾಹಿತ್ಯದಲ್ಲಿ ಕ್ವಚಿತ್ತಾಗಿ ಬಳಕೆಯಲ್ಲಿದ್ದ ಆ ಛಂದಸ್ಸನ್ನು ಸಮಗ್ರ ಗ್ರಂಥರಚನೆಗೆ ಬಳಸಿಕೊಂಡ ಕೀರ್ತಿ ಇವನಿಗೆ ಸಲ್ಲುತ್ತದೆ. ಇವನ ರಗಳೆಗಳನ್ನು ಸ್ಥೂಲವಾಗಿ ಭಾವಗೀತಾತ್ಮಕ ಮತ್ತು ಕಥನಾತ್ಮಕ ಎಂದು ವಿಭಾಗಿಸಬಹುದು. ಕವಿಯ ಭಾವಗೀತಾತ್ಮಕ ರಗಳೆಗಳಲ್ಲಿ ವಿಭೂತಿ, ರುದ್ರಾಕ್ಷಿ ಮೊದಲಾದವುಗಳ ಮಹಾತ್ಮೆಗಳು ವಸ್ತುನಿಷ್ಠ. ಪಿಂಡೋತ್ಪತ್ತಿ, ಪುಷ್ಪ ಇತ್ಯಾದಿ ಕೆಲವು ವ್ಯಕ್ತಿನಿಷ್ಠ. ಈ ವ್ಯಕ್ತಿನಿಷ್ಠವಾದವುಗಳಲ್ಲಿ ಹರಿಹರನ ಆತ್ಮಕಥೆ ಸ್ವಲ್ಪಮಟ್ಟಿಗೆ ಸೇರಿಕೊಂಡಿದೆ. ಕಥನಾತ್ಮಕವಾದ ರಗಳೆಗಳು ವೀರಶೈವ ಧರ್ಮದ ಅರುವತ್ತುಮೂವರು ಪುರಾತನರ ಕಥೆಗಳನ್ನೂ ಬಸವಾದಿ ಪ್ರಮಥರ ಕಥೆಗಳನ್ನೂ ಒಳಗೊಂಡಿದೆ. ಈತನ ಕಥನಾತ್ಮಕ ರಗಳೆಗಳಲ್ಲಿ ಕಾಣಬರುವ ಜಗತ್ತು ವಿಶಾಲವಾಗಿ, ವೈವಿಧ್ಯಮಯವಾಗಿದೆ. ಅಮಿತ ಉತ್ಸಾಹದಿಂದ ಹೊರಹೊಮ್ಮಿದ ಕಥಾಪ್ರವಾಹ ಉತ್ಸಾಹಶೈಲಿಯ ತುಂಬುನೆಲೆಯಲ್ಲಿ ಓದುಗರನ್ನು ಸೆಳೆದೊಯ್ಯುತ್ತದೆ. ಬಸವರಾಜದೇವರ ರಗಳೆ, ನಂಬಿಯಣ್ಣನ ರಗಳೆ ಮೊದಲಾದವುಗಳಲ್ಲಿ ಬರುವ ಭಕ್ತಿಯ ವರ್ಣನೆ ನಮ್ಮನ್ನು ಭವ್ಯತೆಗೆ ಒಯ್ಯುತ್ತದೆ. ಕಥೆ ದೀರ್ಘವಾದಾಗ ಅದನ್ನು ಸ್ಥಲಗಳಾಗಿ ವಿಂಗಡಿಸಿ ಒಂದು ಸ್ಥಲವನ್ನು ರಗಳೆಯಲ್ಲೂ ಮತ್ತೊಂದನ್ನು ಗದ್ಯದಲ್ಲೂ ಬರೆಯುತ್ತಾನೆ. ಈತನ ಗದ್ಯವೆಂದರೆ ಚಂಪೂ ಗದ್ಯವಲ್ಲ; ವಚನಕಾರರು ಬಳಸಿರುವ ಹೃದ್ಯವಾದ ಗದ್ಯ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಗದ್ಯ ಬಳಕೆಯಲ್ಲಿ ಈತನೊಂದು ಮೈಲಿಗಲ್ಲು.

ಸ್ವತಂತ್ರಯುಗಪ್ರವರ್ತಕನಾದ ಹರಿಹರನ ಕಾರ್ಯವನ್ನು ಅತ್ಯಂತ ಸಮರ್ಥವಾಗಿ ಮುಂದುವರಿಸಿದ ಕೀರ್ತಿ ಈತನ ಸೋದರಳಿಯನೂ ಶಿಷ್ಯನೂ ಆದ ರಾಘವಾಂಕನಿಗೆ (ಸು.1225) ಸಲ್ಲುತ್ತದೆ. ರಾಘವಾಂಕನಿಗಿಂತಲೂ ಮುಂಚೆಯೇ ಷಟ್ಪದಿ ಛಂದಸ್ಸಿನ ಬಳಕೆ ಕ್ವಚಿತ್ತಾಗಿ ಕಂಡುಬರುತ್ತಿದ್ದಿತಾದರೂ ಶುದ್ಧ ದೇಶೀಯ ಛಂದಸ್ಸಾದ ಇದರಲ್ಲಿ ಅಖಂಡ ಕಾವ್ಯಸೃಷ್ಟಿ ಮಾಡ ಹೊರಟವರಲ್ಲಿ ರಾಘವಾಂಕನೇ ಮೊದಲಿಗ. ಈತನ ಹರಿಶ್ಚಂದ್ರ ಕಾವ್ಯ ಈ ಯುಗದಲ್ಲಿ ಮೂಡಿಬಂದ ಒಂದು ಉತ್ಕೃಷ್ಟ ಕೃತಿ. ಈ ಕಾವ್ಯದಿಂದ ರಾಘವಾಂಕ ಷಟ್ಪದಿಯುಗಕ್ಕೆ ನಾಂದಿ ಹಾಡಿದನೆನ್ನಬಹುದು. ಮುಂದೆ ಬಂದ ಕವಿಗಳು ಈತನಿಂದ ಪ್ರಭಾವಿತರಾಗಿ ಇವನನ್ನು ಅನುಸರಿಸಿರುವುದು ಕಂಡುಬರುತ್ತದೆ.

ಹರಿಹರ ಹರಿಯಬಿಟ್ಟ ದೇಶೀಯ ಛಂದಸ್ಸು ಹದಿನೈದನೆಯ ಶತಮಾನದವರೆಗೆ ಹೆಚ್ಚು ವೇಗವನ್ನು ಪಡೆಯಲಿಲ್ಲ. ರಗಳೆಯ ಛಂದಸ್ಸಿನಲ್ಲಿ ಹರಿಹರ ಅದ್ವಿತೀಯನಾದಂತೆ ಮುಂದಿನ ಯಾವನೇ ಕವಿ ಆಗಲು ಸಾಧ್ಯವಾಗಲಿಲ್ಲ. ರಗಳೆ ಅಂದಿನ ಸಾಹಿತ್ಯ ಪ್ರಕಾರದಲ್ಲಿ ವಿಶಿಷ್ಟವಾಗಿಯೇ ಉಳಿಯಿತು. ಆದರೆ ಷಟ್ಪದಿಯಲ್ಲಿ ಹಲವಾರು ಗ್ರಂಥಗಳು ರಚನೆಗೊಂಡವು. ಕುಮಾರ ಪದ್ಮರಸ (ಸು.1180) ಸಾನಂದ ಚರಿತೆಯನ್ನು ಕುಸುಮ, ಭಾಮಿನೀಷಟ್ಪದಿಗಳಲ್ಲಿ ಬರೆದ. ಪಾಲ್ಕುರಿಕೆ ಸೋಮನಾಥ (ಸು.1200) ಹಲವು ಸ್ತೋತ್ರರೂಪದ ಪುಟ್ಟ ಕೈಹೊತ್ತಿಗೆಗಳನ್ನು ರಗಳೆಯಲ್ಲಿ ಬರೆದಿದ್ದಾನೆ. ಕುಮುದೇಂದು (ಸು.1275) ಎಂಬ ಜೈನಕವಿ ಮೊಟ್ಟಮೊದಲ ಬಾರಿಗೆ ತನ್ನ ರಾಮಾಯಣವನ್ನು ಷಟ್ಪದಿಯಲ್ಲಿ ಬರೆದ. ಈಗ ಉಪಲಬ್ಧವಾಗಿರುವ ಈ ಕಾವ್ಯದ ನಾಲ್ಕು ಸಂಧಿಗಳಲ್ಲಿ ಒಂದೊಂದೂ ಒಂದೊಂದು ಬಗೆಯಾದ ಷಟ್ಪದಿಯಲ್ಲಿವೆ. ಭೀಮಕವಿ (ಸು.1370) ಪಾಲ್ಕುರಿಕೆ ಸೋಮನಾಥನ ಬಸವಪುರಾಣವನ್ನು ಭಾಮಿನೀಷಟ್ಪದಿಯಲ್ಲಿ ಕನ್ನಡಕ್ಕೆ ತಂದುಕೊಟ್ಟ ಲಲಿತವಾದ ಶೈಲಿಯಲ್ಲಿರುವ ಈ ಗ್ರಂಥ ಮುಂದಿನ ವೀರಶೈವ ಪುರಾಣಕರ್ತೃಗಳಿಗೆ ಮಾರ್ಗದರ್ಶಕವಾಯಿತು. ಈತ ನೂರೆಂಟು ಚರಣಗಳ ಭೀಮೇಶ್ವರ ರಗಳೆಯನ್ನೂ ಬರೆದಿದ್ದಾನೆ. ಪದ್ಮಣಾಂಕನ (ಸು.1420) ಪದ್ಮರಾಜಪುರಾಣ ಕೆರೆಯ ಪದ್ಮರಸನ ಜೀವನಕಥೆಯನ್ನೊಳಗೊಂಡಿದ್ದು ವಾರ್ಧಕ ಷಟ್ಪದಿಯಲ್ಲಿದೆ. ಆದರೆ ದೇಶೀ ಛಂದಸ್ಸಿನಲ್ಲಿರುವ ಈ ಗ್ರಂಥದಲ್ಲಿ ಮಾರ್ಗೀಶೈಲಿಯ ಬಳಸಲಾಗಿದೆ.

ಈ ಯುಗದಲ್ಲಿ ಕಾಣಿಸಿಕೊಂಡ ಮತ್ತೊಂದು ಸಾಹಿತ್ಯ ಪ್ರಕಾರವಾದ ದಾಸವಾಙ್ಮಯ ಹಲವು ದೃಷ್ಟಿಯಿಂದ ಗಮನಾರ್ಹವಾದುದು. ಹನ್ನೆರಡನೆಯ ಶತಮಾನದ ಧಾರ್ಮಿಕ ಕ್ರಾಂತಿ ಸನಾತನವಾದ ವೈದಿಕಧರ್ಮವನ್ನು ಬುಡಮುಟ್ಟ ಅಲ್ಲಾಡಿಸಿದಾಗ ಜನ ಸಾಮಾನ್ಯರು ತಂಡತಂಡವಾಗಿ ವೀರಶೈವಧರ್ಮವನ್ನು ಅವಲಂಬಿಸಿದರು; ಅದನ್ನು ಕಂಡು ವೈದಿಕಮತ ಅಳಿದು ಹೋಗುವುದೆಂಬ ಭಯ ವೈದಿಕರಿಗೆ ಹುಟ್ಟಿರಬೇಕು. ವೀರಶೈವಧರ್ಮ ತನ್ನ ಅನುಭವಮಂಟಪ, ಶೂನ್ಯ ಸಿಂಹಾಸನಗಳ ಸ್ಥಾಪನೆಯಿಂದ ಸಂಘಟಿತವಾಗಿ ವಚನಗಳ ಪ್ರಚಾರ ಪ್ರಸಾರಗಳ ಮೂಲಕ ಜನಮನವನ್ನು ಆಕರ್ಷಿಸಿದುದನ್ನು ಕಂಡು, ಅಂಥದೆ ಒಂದು ಉಪಾಯದಿಂದ ಹರಿವ ಹೊಳೆಗೆ ಅಡ್ಡಗಟ್ಟೆ ಹಾಕುವ ಕಾರ್ಯ ವೈದಿಕರಿಗೆ ಅಗತ್ಯವೆನಿಸಿರಬೇಕು. ಇದರ ಫಲವೆ ದಾಸವಾಙ್ಮಯದ ಉದಯ. ವಚನಗಳಲ್ಲಿ ಹರಪಾರಮ್ಯ, ದಾಸರ ಹಾಡುಗಳಲ್ಲಿ ಹರಿಪಾರಮ್ಯ; ಅಲ್ಲಿನಂತೆ ಇಲ್ಲಿಯೂ ಭಕ್ತಿಗೆ ಪ್ರಥಮಸ್ಥಾನ; ಧರ್ಮಪ್ರಚಾರಕ್ಕೆ ಎರಡು ಕಡೆಯೂ ಜನರ ನುಡಿಯೇ ವಾಹಕ; ಅಲ್ಲಿ ಕಾವ್ಯಮಯವಾದ ಗದ್ಯದಲ್ಲಿ ವಚನಗಳನ್ನು ಹಾಡಿದರೆ, ಇಲ್ಲಿ ಕೀರ್ತನೆ ನರ್ತನಗಳು; ಶೂನ್ಯಸಿಂಹಾಸನ ಅನುಭವ ಮಂಟಪಗಳಿಗೆ ಬದಲು ವ್ಯಾಸಕೂಟ ದಾಸಕೂಟಗಳು ನಿರ್ಮಾಣಗೊಂಡವು. ವಚನಕಾರರಂತೆ ಹರಿದಾಸರೂ ತಮ್ಮ ಇಷ್ಟದೈವವನ್ನು ಕೃತಿಗಳಲ್ಲಿ ಅಂಕಿತವಾಗಿ ಬಳಸಿದರು; ಎರಡರ ಹೆಗ್ಗುರಿಯೂ ಮತತತ್ತ್ವ ಪ್ರತಿಪಾದನೆ ಮತ್ತು ಪ್ರಚಾರ; ಸಂಸ್ಕೃತದಲ್ಲಿದ್ದ ಆಧ್ಯಾತ್ಮಿಕ ತತ್ತ್ವಗಳನ್ನು ಜನರ ಮಾತಿನಲ್ಲಿ ಅಳವಡಿಸಿಕೊಂಡು ಮನೆ ಮನೆಗೂ ಕೊಂಡೊಯ್ದು ಹಂಚುವ ಸತ್ಕಾರ್ಯದಲ್ಲಿ ಈ ಎರಡೂ ಬಗೆಯ ವಾಙ್ಮಯಗಳಿಗೆ ಸಮಾನವಾದ ಪ್ರಶಸ್ತಿ ಸಲ್ಲುತ್ತದೆ. ದ್ವೈತಮತ ಸ್ಥಾಪಕರಾದ ಮಧ್ವಾಚಾರ್ಯರೆ ದಾಸಪಂಥಕ್ಕೆ ಮೂಲಪುರುಷರೆಂದು ಹೇಳಲಾಗುತ್ತದೆ. ಅವರು ಪಶ್ಚಿಮ ಸಮುದ್ರತೀರದಿಂದ ಚಂದನದ ಗೆಡ್ಡೆಗಳನ್ನು ಉಡುಪಿಗೆ ಹೊತ್ತು ತರುತ್ತ ಆನಂದ ಮುಕುಂದ ಅರವಿಂದ ನಯನ ಇತ್ಯಾದಿಯಾಗಿ ಹಾಡಿದ ದ್ವಾದಶಸ್ತೋತ್ರಗಳೇ ದಾಸವಾಙ್ಮಯದ ಮೂಲವೆಂಬ ಅಭಿಪ್ರಾಯವಿದೆ. ಕನ್ನಡದಲ್ಲಿ ಕೀರ್ತನೆಗಳನ್ನು ಮೊದಲು ಕಟ್ಟಿ ಹಾಡಿದವರು ನರಹರಿತೀರ್ಥರು (ಸು.1280). ಇವರ ಎರಡು ಕೃತಿಗಳು ಮಾತ್ರ ಈಗ ಉಪಲಬ್ಧವಾಗಿವೆ.

ಹರಿಹರ ದೇಶೀ ಶೈಲಿಯ ಹೊಸ ಹೆದ್ದಾರಿಯೊಂದನ್ನು ನಿರ್ಮಿಸುತ್ತಿರುವಾಗಲೇ ಹೆಚ್ಚು ಕಡಿಮೆ ಆತನ ಸಮಕಾಲೀನರೆನಿಸಿದ ನೇಮಿಚಂದ್ರ (12ನೆಯ ಶತಮಾನ), ರುದ್ರಭಟ್ಟ (ಸು.1185), ಅಗ್ಗಳ (12ನೆಯ ಶತಮಾನ), ಆಚಣ್ಣ (ಸು.1200), ಕವಿಕಾಮ (ಸು.1200), ಬಂಧುವರ್ಮ (ಸು.1200) ಮೊದಲಾದ ಕವಿಗಳು ಚಂಪೂ ಸಂಪ್ರದಾಯವನ್ನು ಮುಂದುವರಿಸುತ್ತಿದ್ದರು. ಇವರೆಲ್ಲರೂ ರಾಜಾಶ್ರಿತರೇ. ನೇಮಿಚಂದ್ರ ರಟ್ಟವಂಶದ ಲಕ್ಷ್ಮಣರಾಜನ ಆಶ್ರಯದಲ್ಲಿ ಲೀಲಾವತಿಯನ್ನೂ ಬಲ್ಲಾಳರಾಜನ ಪಡೆವಳ ಪದ್ಮನಾಭನ ಆಶ್ರಯದಲ್ಲಿ ನೇಮಿನಾಥ ಪುರಾಣವನ್ನೂ ಬರೆದ. ರುದ್ರಭಟ್ಟ ವೀರಬಲ್ಲಾಳನ ಮಂತ್ರಿ ಚಂದ್ರಮೌಳಿಯನ್ನು ಆಶ್ರಯಿಸಿ ಜಗನ್ನಾಥ ವಿಜಯವನ್ನು ಬರೆದಿದ್ದಾನೆ. ಶ್ರೀಕೃಷ್ಣನ ಜನನದಿಂದ ಬಾಣಾಸುರನ ವಧೆಯವರೆಗಿನ ಭಾಗವತ ಕಥೆ ಇಲ್ಲಿದೆ. ರುದ್ರಭಟ್ಟ ರಸಾಸ್ವಾದನೆಗಿಂತ ಪಾಂಡಿತ್ಯಾರ್ಜನೆಗೆ ಹೆಚ್ಚು ಗಮನ ನೀಡಿದ್ದಾನೆ. ನಿರ್ವಾಣ ಲಕ್ಷ್ಮೀಪತಿ ನಕ್ಷತ್ರಮಾಲಿಕೆ, ಗೊಮ್ಮಟಸ್ತುತಿ ಎಂಬ ಜಿನಸ್ತೋತ್ರಗಳನ್ನು ಬೊಪ್ಪಣಪಂಡಿತ ಬರೆದಿದ್ದಾನೆ. ಇವುಗಳಲ್ಲಿ ಅಸಾಧಾರಣವಾದ ಕವಿತಾಶಕ್ತಿ ಕಂಡುಬರುವುದರಿಂದ ಈತ ಉದ್ಗ್ರಂಥಗಳನ್ನೂ ಬರೆದಿರಬಹುದು. ಆದರೆ ಅವು ಉಪಲಬ್ಧವಾಗಿಲ್ಲ. ಅಗ್ಗಳ ಕವಿಯ ಚಂದ್ರಪ್ರಭಪುರಾಣ ಮತ್ತು ಆಚಣ್ಣನ ವರ್ಧಮಾನಪುರಾಣ ಇವೆರಡೂ ಸಂಸ್ಕೃತ ಭೂಯಿಷ್ಠವಾಗಿ ಪ್ರೌಢವಾಗಿವೆ. ಇವೆರಡೂ ತೀರ್ಥಂಕರರ ಕಥೆಗಳೆಂದು ಗೌರವಾರ್ಹವಾದವು. ಕವಿಕಾಮನ ಶೃಂಗಾರರತ್ನಾಕರ ಅಥವಾ ರಸವಿವೇಕ ರಸಪ್ರಕರಣವನ್ನು ವಿವರಿಸಹೊರಟ ಮೊದಲ ಗ್ರಂಥ'. ಹರಿವಂಶಾಭ್ಯುದಯ, ಜೀವಸಂಬೋಧನೆಗಳನ್ನು ಬಂಧುವರ್ಮ ಬರೆದಿದ್ದಾನೆ. ಹರಿವಂಶಾಭ್ಯುದಯ ಇಪ್ಪತ್ತೆರಡನೆಯ ತೀರ್ಥಂಕರನ ಕಥೆ'. ಕಥೆ ಹಳೆಯದಾದರೂ ನಿರೂಪಣೆ ನವೀನವಾಗಿದೆ. ಜೀವಸಂಬೋಧನೆ ದ್ವಾದಶಾನುಪ್ರೇಕ್ಷೆಗಳ ಕನ್ನಡ ನಿರೂಪಣೆ. ಇದು ವೈರಾಗ್ಯ ಬೋಧಕವಾದರೂ ಲಲಿತಸುಂದರವಾಗಿದೆ.

ಹದಿಮೂರನೆಯ ಶತಮಾನದ ಕವಿಗಳಲ್ಲಿ ಜನ್ನ (ಸು.1300) ಅಗ್ರಗಣ್ಯನಾದವನು. ಈತನ ಅನಂತನಾಥಪುರಾಣ ಜೈನಪುರಾಣಗಳ ಹಾದಿಯಲ್ಲೇ ಸಾಗುವ ಪ್ರೌಢಕಾವ್ಯವಾದರೂ ಗ್ರಂಥದ ಅಂತ್ಯದಲ್ಲಿ ಬರುವ ಸುನಂದೆ ಚಂಡಶಾಸನರ ಉಪಾಖ್ಯಾನ ಕಾವ್ಯದೃಷ್ಟಿಯಿಂದ ಅತ್ಯಂತ ರಮ್ಯವಾಗಿದೆ. ಈತನ ಮತ್ತೊಂದು ಕಾವ್ಯ ಯಶೋಧರಚರಿತೆ. ವಾದಿರಾಜನ ಸಂಸ್ಕೃತ ಯಶೋಧರಚರಿತೆ ಇದಕ್ಕೆ ಆಕರ. ಸಂಪೂರ್ಣವಾಗಿ ಕಂದದಲ್ಲಿ ರಚಿತವಾಗಿರುವ ಈ ಕೃತಿ ಜಿನಮತದ ಮುಖ್ಯ ತತ್ತ್ವವಾದ ಪ್ರಾಣಿದಯೆಯನ್ನು ಬೋಧಿಸುತ್ತದೆ. ಜನ್ನನ ವರ್ಣನಾ ಕೌಶಲ, ಸನ್ನಿವೇಶ ರಚನಾಸಾಮರ್ಥ್ಯ, ಪಾತ್ರಸೃಷ್ಟಿಯಲ್ಲಿ ಕಾಣಬರುವ ಕವಿಪ್ರತಿಭೆ ಇವನ ಕವಿಚಕ್ರವರ್ತಿಯೆಂಬ ಬಿರುದನ್ನು ಸಾರ್ಥಕಗೊಳಿಸಿವೆ. ಈ ಧರ್ಮಗ್ರಂಥಗಳೆರಡರಲ್ಲಿಯೂ ಪ್ರಣಯಜೀವನದ ಎರಡು ಮುಖಗಳು ಉಜ್ವಲವಾಗಿ ಚಿತ್ರಿತವಾಗಿವೆ. ಅಮೃತಮತಿ ಮನ್ಮಥನಂಥ ಗಂಡ ಯಶೋಧರನನ್ನು ಬಿಟ್ಟು ಅಷ್ಟಾವಂಕನಂಥ ಪರಮಕುರೂಪಿಯಲ್ಲಿ ಅನುರಕ್ತಳಾಗಿ ದುರಂತವನ್ನು ಅಪ್ಪಿದರೆ, ಚಂಡಶಾಸನ ತನ್ನ ಪ್ರಿಯಸ್ನೇಹಿತ ವಸುಷೇಣನ ಹೆಂಡತಿ ಸುನಂದೆಯಲ್ಲಿ ಮೋಹಗೊಂಡು ಅವಳನ್ನು ಕದ್ದೊಯ್ದು ದುರಂತಕ್ಕೀಡಾಗುತ್ತಾನೆ. ಈ ಎರಡೂ ಕಾವ್ಯಗಳಲ್ಲಿರುವ ಮೂಲತತ್ತ್ವ ಒಂದೇ 'ಮನಸಿಜನ ಮಾಯೆ ವಿಧಿವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ' ಎಂಬುದು. ಕಾವ್ಯಧರ್ಮ ಹಾಗೂ ಧರ್ಮದ ಪ್ರತಿಪಾದನೆಯಲ್ಲಿ ಯಶೋಧರ ಚರಿತೆ ಕನ್ನಡದ ಮಹತ್ತ್ವಪೂರ್ಣ ಕಾವ್ಯಗಳಲ್ಲೊಂದಾಗಿದೆ.

ಎರಡನೆಯ ಗುಣವರ್ಮನ (ಸು.1215) ಪುಷ್ಪದಂತ ಪುರಾಣ, ಕಮಲಭವನ (ಸು.1235) ಶಾಂತೀಶ್ವರ ಪುರಾಣ ಇದೇ ಕಾಲದಲ್ಲಿ ರಚಿತವಾದ ಪಾಂಡಿತ್ಯ ಪೂರ್ಣವಾದ ಉದ್ಧ್ರಕೃತಿಗಳು. ಎರಡರಲ್ಲಿಯೂ ಪರಂಪರಾಗತವಾದ ವಸ್ತುವಿನ ಚರ್ವಿತಚರ್ವಣವಿದೆ. ಇದರ ಬೇಸರವನ್ನು ನೀಗುವಂತೆ ಇದೇ ಕಾಲದಲ್ಲಿದ್ದ ಆಂಡಯ್ಯ ಕಬ್ಬಿಗರಕಾವವನ್ನು ಬರೆದಿದ್ದಾನೆ. ಕನ್ನಡ ಕವಿಗಳು ಸಂಸ್ಕೃತವನ್ನು ಬಳಸದೆ ಕಾವ್ಯಸೃಷ್ಟಿ ಮಾಡಲಾರರೆಂಬ ಅಪವಾದವನ್ನು ನಿವಾರಿಸುವುದಕ್ಕಾಗಿ ಹುಟ್ಟಿದ ಈ ಕಾವ್ಯಕ್ಕೆ ಕಬ್ಬಿಗರ ಕಾವ (ಕವಿಗಳ ರಕ್ಷಕ) ಎಂದು ನಾಮಕರಣ ಮಾಡಿರುವುದು ಅರ್ಥವತ್ತಾಗಿದೆ. ಇದರಲ್ಲಿ ಸಂಸ್ಕೃತ ಪದಗಳ ಬಳಕೆ ಇಲ್ಲ, ಆದರೆ ತದ್ಭವಗಳು ಹೇರಳವಾಗಿವೆ. ಕವಿಯ ಸ್ವಕಪೋಲಕಲ್ಪಿತವಾದ ಈ ಕಾವ್ಯಕಥೆಯಲ್ಲಿ ಕನ್ನಡ ಭಾಷೆಯ ಬಗ್ಗೆ ಕವಿ ತಾಳಿದ ಅಭಿಮಾನ ಕೆಚ್ಚು ಮೆಚ್ಚುವಂಥದ್ದು.

ವೀರಶೈವಕವಿಯೊಬ್ಬನು ಸ್ವತಂತ್ರ ಯುಗದಲ್ಲಿ ಚಂಪೂಕಾವ್ಯವನ್ನು ರಚಿಸಹೊರಟಿದ್ದು ಸಂಪ್ರದಾಯದ ಮಹತ್ತನ್ನು, ಪ್ರಭಾವವನ್ನು ಸೂಚಿಸುತ್ತದೆ. ಸೋಮರಾಜನ ಉದ್ಭಟದೇವನ ಕಥೆ ಇದಕ್ಕೆ ಉದಾಹರಣೆ. ಇದರ ಶೈಲಿ ಲಲಿತವಾಗಿದ್ದು ವರ್ಣನೆ ನವೀನವಾಗಿದೆ. ಅಲ್ಲಮಪ್ರಭುವನ್ನು

ಸ್ತೋತ್ರ ಮಾಡುವ ಸಮಯದಲ್ಲಿ ಕವಿ ಧರ್ಮಸಮನ್ವಯ ದೃಷ್ಟಿಯನ್ನು ಮರೆದಿದ್ದಾನೆ.

ಇದೇ ಅವಧಿಯಲ್ಲಿ ಜೀವಿಸಿದ್ದ ಮಲ್ಲಿಕಾರ್ಜುನ (ಸು.1240), ಕೇಶಿರಾಜ (ಸು.1260) ಈ ಇಬ್ಬರೂ ಕನ್ನಡಕ್ಕೆ ಸಲ್ಲಿಸಿರುವ ಸೇವೆ ಅಮೂಲ್ಯವಾದದ್ದು. ಮಲ್ಲಿಕಾರ್ಜುನಕವಿ ತನ್ನ ಕಾಲದವರೆಗೆ ಬೆಳೆದು ಬಂದಿದ್ದ ಕನ್ನಡ ಸಾಹಿತ್ಯದಿಂದ ಹದಿನೆಂಟು ಬಗೆಯಾದ ವರ್ಣನೆಗಳಿಗೆ ಸಂಬಂಧಿಸಿದ ಉತ್ತಮವಾದ ಪದ್ಯಗಳನ್ನು ಹದಿನೆಂಟು ಅಧ್ಯಾಯಗಳಲ್ಲಿ ಸೂಕ್ತಿಸುಧಾರ್ಣವ ಎಂಬ ಹೆಸರಿನಿಂದ ನೀಡಿದ್ದಾನೆ. ಇನ್ನೂ ಅಜ್ಞಾತವಾಗಿರಬಹುದಾದ ಎಷ್ಟೋ ಕವಿಗಳ ಕಾವ್ಯಭಾಗಗಳು ಇಲ್ಲಿ ದೊರೆಯುತ್ತವೆ. ಇದರಿಂದ ಕನ್ನಡ ಸಾಹಿತ್ಯ ಚರಿತ್ರೆಯ ನಿರ್ಮಾಣಕ್ಕೆ ಅಮೂಲ್ಯವಾದ ಸಾಧನಸಾಮಗ್ರಿ ದೊರೆತಂತಾಗಿದೆ. ಮಲ್ಲಿಕಾರ್ಜುನನಲ್ಲಿದ್ದ ಈ ಕವಿಕಾವ್ಯ ಸಂಪತ್ತನ್ನು ಸದುಪಯೋಗಪಡಿಸಿಕೊಂಡು ಕೇಶಿರಾಜ ಶಬ್ದಮಣಿದರ್ಪಣ ಎಂಬ ಸಪ್ರಮಾಣವಾದ ಹಳಗನ್ನಡ ವ್ಯಾಕರಣ ಗ್ರಂಥವನ್ನು ನೀಡಿದ್ದಾನೆ.

ಈ ಶತಮಾನದ ಕಡೆಯ ಭಾಗದಲ್ಲಿ ಕಾಣಬರುವ ಚೌಂಡರಸ (ಸು.13ನೆಯ ಶತಮಾನ) ಅಭಿನವದಶಕುಮಾರಚರಿತೆ, ನಳಚರಿತೆ ಎಂಬ ಕಾವ್ಯಗಳನ್ನು ಬರೆದಿದ್ದಾನೆ. ಇವನ ಕೃತಿಗಳಿಗೆ ಸಂಸ್ಕೃತ ಕೃತಿಗಳೆ ಮೂಲ. ದಶಕುಮಾರಚರಿತೆಯಲ್ಲಿ ಹತ್ತು ಜನ ರಾಜಕುಮಾರರ ಕಾಮರಾಜ್ಯ ವಿಹಾರ ವರ್ಣಿತವಾಗಿದೆ. ಮೂಲದಲ್ಲಿ ಸಂಕ್ಷೇಪವಾಗಿರುವುದನ್ನು ಚೌಂಡರಸ ಹಿಗ್ಗಲಿಸಿದ್ದಾನೆ. ಇಲ್ಲಿನ ಕಥೆಗಳು ಬಿಡಿಬಿಡಿಯಾಗಿ ರಮ್ಯವಾಗಿವೆ.

ಹದಿನಾಲ್ಕನೆಯ ಶತಮಾನದಲ್ಲಿ ಕಾಣಬರುವ ನಾಗರಾಜ (ಸು.1331) ತನ್ನ ಪುಣ್ಯಾಸ್ರವದಲ್ಲಿ ಸ್ವರ್ಗಾಪವರ್ಗವನ್ನು ಪಡೆದ ಹಲವು ಪುಣ್ಯಪುರುಷರ ಕಥೆಗಳನ್ನು ಚಿತ್ರಿಸಿದ್ದಾನೆ. ವಡ್ಡಾರಾಧನೆಯಲ್ಲಿ ಬರುವ ಕೆಲವು ಕಥೆಗಳೂ ಇಲ್ಲಿವೆ. ಲಲಿತವಾದ ಶೈಲಿ, ನೈಜವಾದ ವರ್ಣನೆ, ನಿರೂಪಣಾಕೌಶಲದಿಂದ ಈ ಗ್ರಂಥ ಆದರಣೀಯವಾಗಿದೆ. ಬಾಹುಬಲಿ ಪಂಡಿತ (ಸು.1352), ಮಧುರಕವಿ (ಸು.1385) ಈ ಇಬ್ಬರೂ ಹದಿನೈದನೆಯ ತೀರ್ಥಂಕರನಾದ ಧರ್ಮನಾಥನ ಪುರಾಣವನ್ನು ಬರೆದಿದ್ದಾರೆ. ಈ ಶತಮಾನದ ಕವಿಗಳಲ್ಲಿ ಖಗೇಂದ್ರಮಣಿದರ್ಪಣ ಎಂಬ ವಿಷವೈದ್ಯಗ್ರಂಥವನ್ನು ಬರೆದ ಒಂದನೆಯ ಮಂಗರಸ (ಸು.1350) ಕವಿ ಮಂಗಾಭಿದಾನವೆಂಬ ನಿಘಂಟನ್ನು ಬರೆದ ಎರಡನೆಯ ಮಂಗರಸ (ಸು.1398) - ಇವರೂ ಉಲ್ಲೇಖಾರ್ಹರು.

**ಕುಮಾರವ್ಯಾಸ ಯುಗ** : 15ನೆಯ ಶತಮಾನದಿಂದ 19ನೆಯ ಶತಮಾನದ ಅಂತ್ಯದವರೆಗೆ ಅಂದರೆ ಆಧುನಿಕ ಯುಗದ ಆರಂಭಕಾಲದವರೆಗೆ ಈ ಯುಗದ ವ್ಯಾಪ್ತಿಯಿದೆ.ಹರಿಹರ ಸಾಹಿತ್ಯಕ್ಷೇತ್ರದಲ್ಲಿ ಬಿತ್ತಿದ ಹೊಸ ಬೆಳೆ ಅತ್ಯಂತ ಹುಲುಸಾಗಿ ಬೆಳೆದು ಫಲಭರಿತವಾದುದು 15ನೆಯ ಶತಮಾನದಲ್ಲಿ. ಈ ಶತಮಾನದ ಪೂರ್ವಾರ್ಧದಲ್ಲಿ ಕಾಣಿಸಿಕೊಂಡ ಕುಮಾರವ್ಯಾಸನು ಮಹಾಕವಿ ಎಂಬ ಹೆಸರಿಗೆ ಪಾತ್ರನಾದವನು. ಈತನಿಂದ ಮುಂದೆ ಆಧುನಿಕ ಕನ್ನಡ ಸಾಹಿತ್ಯ ಉದಿಸುವವರೆಗೆ ಬಂದ ಎಲ್ಲ ಕವಿಗಳೂ ಈತನ ಪ್ರಭಾವಕ್ಕೆ ಒಳಗಾಗಿದ್ದಾರೆ. ಈ ಯುಗದಲ್ಲಿ ಎಲ್ಲ ಧರ್ಮದ ಕವಿಗಳೂ ಕಾಣಿಸಿಕೊಂಡಿರುವುದು ಇನ್ನೊಂದು ವೈಶಿಷ್ಟ್ಯ. ಹಾಗೆಯೇ ಷಟ್ಪದಿ, ಸಾಂಗತ್ಯ, ತ್ರಿಪದಿ - ಈ ಎಲ್ಲ ಬಗೆಯ ಛಂದಸ್ಸೂ ಬಳಕೆಯಾಗಿದೆ. ಆದ್ದರಿಂದ ಇದನ್ನು ಸಂಕೀರ್ಣಯುಗ ಎಂದೂ ಕರೆಯುವುದುಂಟು. ಈ ಯುಗದಲ್ಲಿ ದೇಶೀಯ ಛಂದಸ್ಸಾದ ಷಟ್ಪದಿಗೆ ಅಗ್ರಮಾನ್ಯತೆ ದೊರೆತಿರುವುದರಿಂದ ಇದನ್ನು ಷಟ್ಪದಿ ಯುಗವೆಂದೂ ಕರೆಯುವುದುಂಟು. ಷಟ್ಪದಿಯ ಜೊತೆಗೆ ಸಾಂಗತ್ಯವೂ ಈ ಯುಗದಲ್ಲಿ ಪ್ರಮುಖ ಕಾವ್ಯ ಮಾಧ್ಯಮವಾಗಿ ರತ್ನಾಕರವರ್ಣಿಯಲ್ಲಿ ತನ್ನ ಉನ್ನತಿಕೆಯನ್ನು ಕಂಡುಕೊಂಡಿತು.

ಕುಮಾರವ್ಯಾಸ (ಸು.1400) ಈ ಯುಗದ ಪ್ರತಿನಿಧಿ. ಈತ ಸಂಸ್ಕೃತ ಮಹಾಭಾರತವನ್ನು ಸಂಗ್ರಹಿಸಿ ಅದರ ಮೊದಲ ಹತ್ತು ಪರ್ವಗಳನ್ನು 'ಕರ್ಣಾಟ ಭಾರತ ಕಥಾಮಂಜರಿ' ಎಂಬ ಹೆಸರಿನಿಂದ ಕನ್ನಡಿಸಿದ್ದಾನೆ. ಪಂಪನ ಪ್ರಭಾವ ಇವನ ಮೇಲೆ ಆಗಿರುವಂತೆ ಕಂಡುಬಂದರೂ ಇಬ್ಬರ ದೃಷ್ಟಿಕೋನಗಳೂ ಜೀವನದ ಬಗ್ಗೆ ಅವರು ತಾಳುವ ಧೋರಣೆಗಳೂ ವಿಭಿನ್ನವಾಗಿವೆ. ಇವನು ಮಹಾಭಾರತದ ಕಥೆಯನ್ನು ಹೇಳಹೊರಟಿದ್ದರೂ ತನ್ನ ಕಾವ್ಯ ಕೃಷ್ಣಕಥೆ ಎಂದಿದ್ದಾನೆ. ಇವರ ಭಾಷಾಶೈಲಿಗಳು ಅದ್ವಿತೀಯವಾದುವು ಮತ್ತು ಅನನುಕರಣೀಯವಾದುವು. ಇವನ ಕಾವ್ಯದಿಂದ ಕನ್ನಡ ಸಾಹಿತ್ಯ ಶ್ರೀಮಂತವಾಗಿದೆ; ಭಾಮಿನೀಷಟ್ಪದಿ ಹೆಚ್ಚು ಜೀವಂತವಾಗಿದೆ.

ಈ ಯುಗದ ಕನ್ನಡ ಸಾಹಿತ್ಯ ಸಾಕಷ್ಟು ಹುಲುಸಾಗಿ ಬೆಳೆಯಲು ಕಾರಣರಾದವರು ಬಹುಮಟ್ಟಿಗೆ ವೀರಶೈವ ವಚನಕಾರರು ಮತ್ತು ಪುರಾಣಕರ್ತೃಗಳು. ಹನ್ನೆರಡನೆಯ ಶತಮಾನದ ಕೊನೆಯಲ್ಲಿ ಇದ್ದಕ್ಕಿದ್ದಂತೆಯೆ ಇಂಗಿಹೋಗಿದ್ದ ವಚನವಾಙ್ಮಯದ ಹೊಳೆ ವಿಜಯನಗರದ ಪ್ರೌಢದೇವರಾಯ (ಸು.1424-46) ಮತ್ತು ತೋಂಟದ ಸಿದ್ಧಲಿಂಗಯತಿ (ಸು.1530) ಇವರ ಅರಮನೆ ಗುರುಮನೆಗಳ ದಂಡೆಯನ್ನು ಆಶ್ರಯಿಸಿ ಮತ್ತೆ ಹರಿಯತೊಡಗಿತು. ಪ್ರೌಢದೇವರಾಯನ ದಂಡನಾಯಕನಾದ ಜಕ್ಕಣಾರ್ಯನೂ ರಾಜಕೃಪಾಪೋಷಿತರಾದ ನೂರೊಂದು ವಿರಕ್ತರೂ ವೀರಶೈವ ಧರ್ಮದ ಪ್ರಚಾರದಲ್ಲಿ ಪ್ರವೃತ್ತರಾಗಿ, ವಚನವಾಙ್ಮಯದ ಪುರುಜ್ಜೀವನಕ್ಕಾಗಿ ಶ್ರಮಿಸಿದರು. ಹೊಸ ವಚನಗಳ ಸೃಷ್ಟಿಗಿಂತಲೂ ಹಳೆಯ ವಚನಗಳ ಸಂಕಲನ ಸಂಪಾದನೆಗಳೂ ಅವುಗಳ ಟೀಕೆ ಟಿಪ್ಪಣಿ ವ್ಯಾಖ್ಯಾನಗಳೂ ಹುಟ್ಟಿಕೊಂಡಿದ್ದು ಈ ಕಾಲದ ವೈಶಿಷ್ಟ್ಯ. ಮಹಲಿಂಗದೇವ (ಸು.1425), ಕುಮಾರ ಬಂಕನಾಥ (ಸು.1430), ಕಲ್ಲುಮಠದ ಪ್ರಭುದೇವ (ಸು.1430), ಗುಬ್ಬಿಯ ಮಲ್ಲಣ್ಣ (ಸು.1475) ಇವರು ಪುರಾತನ ವಚನಗಳ ಸಂಗ್ರಹಕಾರರು ಅಥವಾ ಭಾಷ್ಯಕಾರರು, ಈ ಕಾಲದ ಕಿರೀಟಪ್ರಾಯ ಕೃತಿಯಾಗಿ ಶೂನ್ಯಸಂಪಾದನೆ ಕಾಣಿಸಿಕೊಂಡಿತು. ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ಶರಣರ ಗೋಷ್ಠಿ ನಡೆಯುತ್ತಿದ್ದ ಅನುಭವಮಂಟಪವನ್ನು ಮುನ್ನೂರು ವರ್ಷಗಳ ಆಚೆ ನಿಂತು ಛಾಯಾಚಿತ್ರ ತೆಗೆದುಕೊಳ್ಳುವ ಕಾರ್ಯ ಇಲ್ಲಿ ನಡೆದಿದೆ. ಶೂನ್ಯಸಿಂಹಾಸನದಲ್ಲಿ ಪ್ರಭುದೇವ, ಬಸವಣ್ಣ ಮೊದಲಾದ ಅಸಂಖ್ಯಾತ ಶಿವಶರಣರು, ಅವರ ವಿಚಾರದಲ್ಲಿ ಮೂಡಿರುವ ಸತ್ಯದ ನವನೀತ - ಇದು ಈ ಗ್ರಂಥದ ತಿರುಳು. ವೀರಶೈವ ಧರ್ಮಯಾತ್ರಿಕರಿಗೆ ಬೆಳಗುಗಂಬದಂತಿರುವ ಈ ಗ್ರಂಥವನ್ನು 15ನೆಯ ಶತಮಾನದಲ್ಲಿದ್ದ ಶಿವಗಣಪ್ರಸಾದಿ ಮಹಾದೇವಯ್ಯ ರಚಿಸಿದ. ಹಲವು ಹಿರಿಯ ಶರಣರ ವಚನಗಳನ್ನು ಸಂಕಲಿಸಿ ಈ ಕೃತಿ ರಚನೆಯಾಗಿದೆ. ತೋಂಟದ ಸಿದ್ಧಲಿಂಗಯತಿ ಹಾಗೂ ಆತನ ಶಿಷ್ಯರಲ್ಲಿ ಕೆಲವರು ಸ್ವತಂತ್ರವಾಗಿ ವಚನ ರಚನೆ ಮಾಡಿದ್ದಾರೆ. ಇವುಗಳಲ್ಲಿ ಭಕ್ತನ ನಿಷ್ಠೆ, ಶ್ರದ್ಧಾಭಾವಗಳಿಗೆ ಲೋಪವಿಲ್ಲವಾದರೂ ಪುರಾತನ ವಚನಗಳ ಸಾಹಿತ್ಯಗುಣ, ಕಾವು, ಸ್ವಾರಸ್ಯಗಳು ಅಷ್ಟಾಗಿ ಕಂಡುಬರುವುದಿಲ್ಲ.

ಈ ಶತಮಾನದಲ್ಲಿ ಹುಟ್ಟಿದ ವೀರಶೈವ ಗ್ರಂಥಗಳೆಲ್ಲವೂ ಬಹುಮಟ್ಟಿಗೆ ಪುರಾಣಗಳೆ. ಈ ನಿಯಮಕ್ಕೆ ಹೊರತಾದುದೆಂದರೆ ದೇಪರಾಜನ (ಸು.1410) ಸೊಬಗಿನ ಸೋನೆ. ಸಾಂಗತ್ಯದಲ್ಲಿ ರಚಿತವಾದ ಮೊಟ್ಟಮೊದಲನೆಯ ಗ್ರಂಥವೆಂಬ ದೃಷ್ಟಿಯಿಂದ ಇದಕ್ಕೆ ಪ್ರಾಮುಖ್ಯತೆ ದೊರಕಿದೆ. ಇದೇ ಕಾಲದಲ್ಲಿ ರಚಿತವಾದ ಷಟ್ಪದಿ ಕಾವ್ಯಗಳಲ್ಲಿ ಲಕ್ಕಣ್ಣದಂಡೇಶನ ಶಿವತತ್ತ್ವಚಿಂತಾಮಣಿ, ಚಾಮರಸನ ಪ್ರಭುಲಿಂಗಲೀಲೆ ಗಮನಾರ್ಹವಾದುವು. ಚಾಮರಸನಲ್ಲಿ ಅದ್ಭುತವಾದ ಕವಿತಾಶಕ್ತಿಯಿದೆ. ಪ್ರಭುಲಿಂಗಲೀಲೆ ಅಲ್ಲಮನ ಜೀವನಚರಿತ್ರೆಯನ್ನು ಆದರ್ಶಯುತವಾಗಿ ಚಿತ್ರಿಸಹೊರಟ ಮಹಾಗ್ರಂಥ. ಅತ್ಯಂತ ಜನಪ್ರಿಯವಾದ ಈ ಕಾವ್ಯ ತೆಲುಗು, ತಮಿಳು, ಮರಾಠಿ, ಸಂಸ್ಕೃತಗಳಿಗೆ ಭಾಷಾಂತರವಾಗಿದೆ. ಕಾವ್ಯ ಧರ್ಮ, ಧರ್ಮಗಳು ಸಮರಸವಾಗಿ ಬೆರೆತು ಸಾಗುವ ಈ ಕಥಾಪ್ರವಾಹ ಇತರ ಪುರಾಣಕರ್ತರ ಕಾವ್ಯಗಳಂತೆ ಕವಲೊಡೆದು ಕಥಾಕೋಶವಾಗದೆ, ನೇರವಾಗಿ ಹರಿದು ಹೆಗ್ಗುರಿಯನ್ನು ಮುಟ್ಟುತ್ತದೆ. ಹಿತಮಿತವಾದ ವರ್ಣನೆ, ಸಜೀವವಾದ ಪಾತ್ರರಚನೆ, ಸರಳವಾದರೂ ಶಿಥಿಲವಲ್ಲದ ಧೀರಗಂಭೀರ ಶೈಲಿ - ಇವುಗಳಿಂದ ಕೂಡಿದ ಈತನ ಭಾಮಿನೀಷಟ್ಪದಿ ಹಿತವಾಗಿದೆ, ಮನೋಹರವಾಗಿದೆ.

ಸೌಂದರಪುರಾಣವನ್ನು ಬರೆದ ಬೊಮ್ಮರಸ (ಸು.1450), ಆರಾಧ್ಯ ಚಾರಿತ್ರವನ್ನು ಬರೆದ ನೀಲಕಂಠಾಚಾರ್ಯ (ಸು.1488), ರೇವಣಸಿದ್ದೇಶ್ವರ ಪುರಾಣವನ್ನು ಬರೆದ ಚತುರ್ಮುಖ ಬೊಮ್ಮರಸ (ಸು.1500). ಅಮಲಬಸವಚಾರಿತ್ರ್ಯ ಅಥವಾ ಸಿಂಗಿಪುರಾಣವನ್ನು ಬರೆದ ಸಿಂಗಿರಾಜ (ಸು.1500), ಇವರು ಈ ಶತಮಾನದ ಪುರಾಣಕರ್ತರಲ್ಲಿ ಪ್ರಮುಖರಾದವರು. ಸುರಂಗನನ್ನು ಬಿಟ್ಟು ಉಳಿದವರೆಲ್ಲ ವಾರ್ಧಕಷಟ್ಪದಿಯ

ಛಂದಸ್ಸಿನಲ್ಲಿ ತಮ್ಮ ಕಾವ್ಯಗಳನ್ನು ಬರೆದಿದ್ದಾರೆ. ತ್ರಿಪಷ್ಟಿಪುರಾತನಚರಿತೆ ಚಂಪೂರೂಪದಲ್ಲಿದೆ, ಅರುವತ್ತುಮೂರು ಪುರಾತನರ ಕಥೆಗಳು ಅರುವತ್ತು ಮೂರು ಅಧ್ಯಾಯಗಳಲ್ಲಿ ಕಾಣಿಸಿಕೊಂಡಿವೆ. ಇಲ್ಲಿನ ಕಥೆಗಳು ರಮ್ಯವಾಗಿವೆ.

ಈ ಶತಮಾನದ ಉಳಿದ ವೀರಶೈವ ಕವಿಗಳಲ್ಲಿ ಮಗ್ಗೆಯ ಮಾಯಿದೇವ, ಗುರುಬಸವ, ನಿಜಗುಣಶಿವಯೋಗಿ ಇವರು ಮುಖ್ಯರು. ಮಗ್ಗೆಯ ಮಾಯಿದೇವ ನಾನಾ ಛಂದಸ್ಸಿನಲ್ಲಿ ಹಲವಾರು ಗ್ರಂಥಗಳನ್ನು ರಚಿಸಿರುವನೆಂದು ತಿಳಿದುಬಂದಿದೆಯಾದರೂ ಈಗ ಉಪಲಬ್ಧವಾಗಿರುವುದು ಮೂರು ಶತಕಗಳು ಮಾತ್ರ. ಗುರುಬಸವ (ಸು.1430) ಕವಿಯೂ ಗುರುಶಿಷ್ಯಸಂವಾದ ರೂಪದಲ್ಲಿರುವ ಕೆಲವು ವೇದಾಂತ ಗ್ರಂಥಗಳನ್ನು ಷಟ್ಪದಿಗಳಲ್ಲಿ ರಚಿಸಿದ್ದಾನೆ. ನಿಜಗುಣಶಿವಯೋಗಿಯ ಗ್ರಂಥಗಳು ವಸ್ತುರೀತಿಗಳಲ್ಲಿ ವೈವಿಧ್ಯಮಯವಾಗಿವೆ. ತ್ರಿಪದಿ, ಸಾಂಗತ್ಯ, ರಗಳೆ, ಹಾಡು, ಗದ್ಯಗಳಲ್ಲಿ ಈತನ ಅಧ್ಯಾತ್ಮಜ್ಞಾನ ಹೊರಹೊಮ್ಮಿದೆ. ಈತನ ಗ್ರಂಥಗಳಲ್ಲೆಲ್ಲ ವಿವೇಕಚಿಂತಾಮಣಿ ವಿಶ್ವಕೋಶದ ಮಾದರಿಯಲ್ಲಿರುವ ಅತ್ಯಮೂಲ್ಯವಾದ ಗ್ರಂಥ. ಈತನ ಸಮಕಾಲೀನನಾದ ಮುಪ್ಪಿನ ಷಡಕ್ಷರಿಯ (ಸು.1500) ಸಂಬೋಧನಸಾರದಲ್ಲಿರುವ ಹಾಡುಗಳು ಸುಂದರವಾದ ಭಾವಗೀತೆಗಳಾಗಿದ್ದು ಧರ್ಮಸಮನ್ವಯದಿಂದ ಕೂಡಿದವುಗಳಾಗಿವೆ. ಹದಿನಾರನೆಯ ಶತಮಾನದ ವೀರಶೈವ ಕವಿಗಳಲ್ಲಿ ಗುಬ್ಬಿಯ ಮಲ್ಲಣಾರ್ಯನ ಭಾವಚಿಂತಾರತ್ನ ಭಕ್ತಿರಸ ಭರಿತವಾಗಿದ್ದು ಪ್ರೌಢವಾಗಿದೆ.

ಈ ಕಾಲದಲ್ಲಿ ರಚಿತವಾದ ಸಾಂಗತ್ಯಗ್ರಂಥಗಳಲ್ಲಿ ನಂಜುಂಡಕವಿಯ (ಸು.1525) ರಾಮನಾಥ ಚರಿತೆ ಅಥವಾ ಕುಮಾರರಾಮನ ಸಾಂಗತ್ಯ ಒಂದು ವಿಶಿಷ್ಟ ಐತಿಹಾಸಿಕ ಕಾವ್ಯ. ದೆಹಲಿಯ ಸುಲ್ತಾನನಾದ ಮಹಮ್ಮದ್ ಬಿನ್ ತುಗಲಕನ ಸೈನ್ಯದೊಡನೆ ಹೋರಾಡಿ ಮಡಿದ ದುರಂತ ವೀರನೊಬ್ಬನ ಕಥೆ ಇದರ ವಸ್ತು. ಒಬ್ಬ ಸಾಮಾನ್ಯ ವ್ಯಕ್ತಿಯನ್ನು (ಐತಿಹಾಸಿಕ ವೀರನನ್ನು ಕುರಿತು) ಕಾವ್ಯರಚನೆಯಾದುದು ಇದೇ ಮೊದಲು. ಕವಿಯ ವರ್ಣನೆಗಳು ಮನೋಹರವಾಗಿದ್ದು ಅಂದಿನ ಇತಿಹಾಸದ ಮೇಲೂ ಜನಜೀವನದ ಮೇಲೂ ಬೆಳಕನ್ನು ಚೆಲ್ಲುತ್ತವೆ. ಪಾಂಚಾಳಗಂಗನ (ಸು.1650) ಚನ್ನರಾಮನ ಸಾಂಗತ್ಯ ನಂಜುಂಡನ ಕಾವ್ಯಕ್ಕಿಂತ ಐತಿಹಾಸಿಕ ದೃಷ್ಟಿಯಿಂದ ಹೆಚ್ಚು ವಾಸ್ತವಿಕವಾಗಿಯೂ ಆತ್ಮೀಯವಾಗಿಯೂ ಇದೆ. ಆದರೆ ಕಾವ್ಯಶಕ್ತಿಯಲ್ಲಿ ನಂಜುಂಡನದೇ ಮೇಲುಗೈ.

ಹದಿನಾರನೆಯ ಶತಮಾನದ ಕವಿಗಳಲ್ಲಿ ಚೇರಮಾಂಕ, ವೀರಭದ್ರ ಕವಿ, ಗುರುಲಿಂಗವಿಭು, ಕಿಕ್ಕೇರಿ ಆರಾಧ್ಯ ನಂಜುಂಡ, ಶಾಂತೀಶ, ಅದೃಶ್ಯಕವಿ, ವಿರೂಪಾಕ್ಷ ಪಂಡಿತ - ಇವರು ಮುಖ್ಯರು. ಕಿಕ್ಕೇರಿ ಆರಾಧ್ಯ ನಂಜುಂಡನ ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ ನೂರಿಪ್ಪತ್ತೇಳು ಸಾಂಗತ್ಯ ಪದ್ಯಗಳ ಚಿಕ್ಕ ಕಾವ್ಯ. ವೀರಶೈವ ಪುರಾಣವೊಂದನ್ನು ಸಾಂಗತ್ಯದಲ್ಲಿ ಬರೆದ ಕವಿಗಳಲ್ಲಿ ಈತ ಅಗ್ರಗಣ್ಯ. ಕಾವ್ಯದೃಷ್ಟಿಗಿಂತಲೂ ಪುರಾಣ ದೃಷ್ಟಿಯಿಂದ ಇದಕ್ಕೆ ಮಹತ್ತ್ವ ಹೆಚ್ಚು. ಶಾಂತೇಶ ಭಾಮಿನೀಷಟ್ಪದಿಯಲ್ಲಿ ಸಿದ್ಧೇಶ್ವರ ಪುರಾಣವನ್ನು ಬರೆದಿದ್ದಾನೆ. ಅದೃಶ್ಯಕವಿಯ ಪ್ರೌಢರಾಯನ ಕಾವ್ಯ ಹಲವು ಶಿವಶರಣರ ಕಥೆಗಳನ್ನು ಒಳಗೊಂಡಿದೆ. ಪ್ರೌಢರಾಯನ ಕಾಲದ ಸಾಹಿತ್ಯೇತಿಹಾಸದ ಮೇಲೆ ಇಲ್ಲಿ ಸಾಕಷ್ಟು ಬೆಳಕು ಬಿದ್ದಿದೆ. ಈ ಶತಮಾನದ ಕವಿಗಳಲ್ಲಿ ಕಡೆಯವನಾದ ವಿರೂಪಾಕ್ಷಪಂಡಿತ ವಾರ್ಧಕಷಟ್ಪದಿಯಲ್ಲಿ ರಚಿಸಿರುವ ಚೆನ್ನಬಸವಪುರಾಣ ಹಲವು ದೃಷ್ಟಿಗಳಿಂದ ಗಮನಾರ್ಹವಾದುದು. ಇದು ಬರಿಯ ಚೆನ್ನಬಸವಣ್ಣನ ಜೀವನ ಚರಿತ್ರೆಯನ್ನಲ್ಲದೆ, ಹಲವಾರು ಶರಣರ ಕಥೆಗಳನ್ನೂ ವೀರಶೈವಧರ್ಮದ ಆಚಾರಗಳನ್ನೂ ಒಳಗೊಂಡಿದೆ. ವೀರಶೈವ ಪುರಾತನರ ಮತ್ತು ಕವಿಗಳ ಕಾಲವನ್ನು ನಿರ್ಣಯಿಸುವುದಕ್ಕೆ ಈ ಗ್ರಂಥ ಬಹು ಉಪಯುಕ್ತವಾಗಿದೆ.

ಹದಿನೇಳನೆಯ ಶತಮಾನದಲ್ಲಿ ಸಿದ್ಧನಂಜೇಶ (ಸು.1650), ಷಡಕ್ಷರದೇವ (ಸು.1655), ಸರ್ವಜ್ಞ (ಸು.1700) ಎಂಬ ಮೂವರು ದೊಡ್ಡಕವಿಗಳು ಕಂಡುಬರುತ್ತಾರೆ. ಸಿದ್ಧನಂಜೇಶನ ರಾಘವಾಂಕಚಾರಿತ್ರ, ಗುರುರಾಜಚಾರಿತ್ರಗಳು ವಾರ್ಧಕಷಟ್ಪದಿಯಲ್ಲಿವೆ. ಇವುಗಳಲ್ಲಿ ಕಾವ್ಯಾಂಶಕ್ಕಿಂತ ವೀರಶೈವ ಧರ್ಮಬೋಧನೆಯೇ ಹೆಚ್ಚಾಗಿದೆ. ಕವಿಯ ಕಾವ್ಯಗಳೆರಡೂ ಸಾಹಿತ್ಯ ಚರಿತ್ರೆಗೆ ತುಂಬ ಸಹಾಯಕವಾಗಿವೆ. ಹಲವಾರು ಕವಿಗಳು ಇಲ್ಲಿ ಸ್ತುತ್ಯರಾಗಿರುವುದರಿಂದ ಕವಿಕಾಲ ನಿರ್ಧಾರಕ್ಕೆ ಈ ಕಾವ್ಯಗಳು ಒಂದು ಗಡಿಕಲ್ಲನ್ನು ಒದಗಿಸಿಕೊಟ್ಟಿವೆ.

ಷಡಕ್ಷರದೇವ ಬಳಕೆ ತಪ್ಪಿಹೋಗಿದ್ದ ಚಂಪೂವನ್ನು ಮತ್ತೆ ಬಳಕೆ ಮಾಡಿ ಅದಕ್ಕೆ ಹೊಸ ಶಕ್ತಿಯನ್ನು ತಂದುಕೊಟ್ಟವನು. ಈತ ಕನ್ನಡ ಸಂಸ್ಕೃತಗಳೆರಡರಲ್ಲಿಯೂ ಕಾವ್ಯರಚನೆ ಮಾಡಿದ್ದಾನೆ. ಈತನ ಕೃತಿಗಳಲ್ಲಿ ರಾಜಶೇಖರವಿಲಾಸ ಒಂದು ಉತ್ಕೃಷ್ಟಕೃತಿ.

ವಚನಸಾಹಿತ್ಯದ ಬಗ್ಗೆ ಹೇಳುವಾಗ ಸರ್ವಜ್ಞ ಅದ್ವಿತೀಯನಾಗಿ ನಿಲ್ಲುತ್ತಾನೆ. ಆಡುಭಾಷೆಯನ್ನು ಬಳಸಿಕೊಂಡು ವಚನ ರಚನೆ ಮಾಡಿ ತ್ರಿಪದಿ ಛಂದಸ್ಸಿಗೆ ಹೆಚ್ಚಿನ ಪ್ರಸಿದ್ಧಿ ದೊರಕೊಳ್ಳುವಂತಾದುದು ಈತನಿಂದ. ಈತನ ಪದ್ಯಗಳಲ್ಲಿ ಕಾಣಬರುವ ವಸ್ತುವಿಪುಲತೆ, ಸರಳತೆ, ಸೌಲಭ್ಯಗಳಂತೆಯೆ ಈತನ ವಾಗ್ದಾರೆ, ಅಪಾರ ಜ್ಞಾನ, ನಿಶಿತಮತಿಗಳು ಅದ್ವಿತೀಯವಾದುವು.

ಕುಮಾರವ್ಯಾಸಯುಗದ ವೀರಶೈವ ಕವಿಗಳಲ್ಲಿ ಬೊಂಬೆಯ ಲಕ್ಕನ ಹರಿಶ್ಚಂದ್ರ ಸಾಂಗತ್ಯ, ಓದುವಗಿರಿಯನ (ಸು.1525) ಸಾನಂದಗಣೇಶ ಸಾಂಗತ್ಯ, ಹರಿಶ್ಚಂದ್ರ ಸಾಂಗತ್ಯ, ಚನ್ನಬಸವಾಂಕನ ಮಹಾದೇವಿಯಕ್ಕನ ಪುರಾಣ, ಅಣ್ಣಾಜಿಯ (17ನೆಯ ಶತಮಾನ) ಸೌಂದರ್ಯವಿಳಾಸ, ಉತ್ತರದೇಶದ ಬಸವಲಿಂಗನ (ಸು.1600) ಬಸವೇಶ್ವರ ಪುರಾಣದ ಕಥಾಸಾಗರ, ಭೈರವೇಶ್ವರ ಕಾವ್ಯದ ಕಥಾಸಾಗರ ಮತ್ತು ಉಚಿತ ಕಥೆಗಳು, ಹರೀಶ್ವರ ಕವಿಯ (ಸು.1606) ಪ್ರಭುದೇವರ ಪುರಾಣ, ಚನ್ನಣ್ಣನ (ಸು.1650) ವೀರೇಶ್ವರ ಚರಿತೆ ಇವು ಗಮನಾರ್ಹವಾಗಿವೆ.

ನರಹರಿತೀರ್ಥರ ಅನಂತರ ಸುಮಾರು ಒಂದು ಶತಮಾನಕ್ಕೂ ಹೆಚ್ಚು ಕಾಲ ಸ್ಥಗಿತಗೊಂಡಿದ್ದ ದಾಸಪಂಥ ಹದಿನೈದನೆಯ ಶತಮಾನದಲ್ಲಿ ಮತ್ತೆ ಮೇಲೆದ್ದು ದಾಂಗುಡಿಯಿಟ್ಟು, ಹಬ್ಬಿ ಹರಡಿತು. ಅದನ್ನು ಮುಂದುವರಿಸಿದ ಕೀರ್ತಿ ಶ್ರೀಪಾದರಾಜರದು (ಸು.1450). ಇವರ ಕೀರ್ತನಾಭಿಮಾನ ಸ್ತುತ್ಯವಾದುದು. ಇವರು ಕನ್ನಡ ಗೀತೆಗಳಿಗೆ ಆಧ್ಯಾತ್ಮಿಕ ತತ್ತ್ವಗಳ ಸ್ಥಾನಮಾನಗಳನ್ನು ಕಲ್ಪಿಸಿದರು. ಹಾಡುವುದರ ಜೊತೆಗೆ ನರ್ತನವನ್ನೂ ಅಳವಡಿಸಿದವರು ಇವರೇ. ನರ್ತನಕ್ಕಾಗಿಯೆ ವಿಶಿಷ್ಟವಾದ ಕೃತಿಗಳನ್ನು ಸಹ ಇವರು ರಚಿಸಿದ್ದಾರೆ. ಇವರ ಶಿಷ್ಯ ವ್ಯಾಸರಾಯರು ಮಠದ ಸ್ವಾಮಿಯಾಗಿದ್ದು ರಾಜಗುರುವಾಗಿದ್ದು ಅನೇಕ ಸಂಸ್ಕೃತ ಗ್ರಂಥಗಳನ್ನೂ ನೂರಾರು ಕನ್ನಡ ಕೀರ್ತನೆಗಳನ್ನೂ ರಚಿಸಿದ್ದಾರೆ. ಕೊಳಲನೂದುವ ಚದುರನಾರೆ ಪೇಳಮ್ಮಯ್ಯ ಎಂಬ ಸುಪ್ರಸಿದ್ಧ ಕೀರ್ತನೆ ಇವರದೇ. ಮುಂದೆ 16ನೆಯ ಶತಮಾನದಲ್ಲಿ ವ್ಯಾಸರಾಯರ ನೇತೃತ್ವದಲ್ಲಿ ಪುರಂದರದಾಸರು, ಕನಕದಾಸರು, ವಾದಿರಾಜರು ಮೊದಲಾದವರು ದಾಸವಾಙ್ಮಯವನ್ನು ಉಳಿಸಿ ಬೆಳೆಸಿದರು. ಪುರಂದರದಾಸ ಕನಕದಾಸರಂತೂ ದಾಸವಾಙ್ಮಯದಲ್ಲಿ ಅದ್ವಿತೀಯರಾಗಿ ನಿಂತರು. ಪುರಂದರದಾಸರ ಲೋಕಾನುಭವ ಆಳವಾದುದು, ವಿಸ್ತಾರವಾದುದು. ಇವರ ಕೀರ್ತನೆಗಳಲ್ಲಿ ವೈವಿಧ್ಯವಿದ್ದು ಅವು ರಸಸ್ಯಂದಿಯಾಗಿವೆ. ಸಂಗೀತಶಾಸ್ತ್ರಕ್ಕೆ ಇವರು ನೀಡಿರುವ ಕೊಡುಗೆಯೂ ಅಸಾಮಾನ್ಯವಾದುದು. ಪಿಳ್ಳಾರಿಗೀತಗಳೆಂದು ಪ್ರಸಿದ್ಧವಾಗಿರುವ ಕೀರ್ತನೆಗಳು ಇವರವೇ. ಸಂಗೀತಕ್ಕೆ ಭಕ್ತಿಯುಕ್ತವಾದ ಸಾಹಿತ್ಯವನ್ನು ಒದಗಿಸಿದುದಲ್ಲದೆ ಅದಕ್ಕೆ ಕರ್ಣಾಟಕ ಸಂಗೀತ ಎಂಬ ಕೀರ್ತಿಯ ಕೋಡನ್ನೂ ಇವರು ಮೂಡಿಸಿದರು. ಅದ್ವಿತೀಯ ಕೀರ್ತನಕಾರರಾದ ತ್ಯಾಗರಾಜರಿಗೆ ಪ್ರೇರಣೆ ಪೋಷಣೆಗಳನ್ನು ನೀಡಿದ ಕೀರ್ತಿಯೂ ಇವರದೇ. ಇವರ ಸಮಕಾಲೀನರೇ ಆಗಿದ್ದ ಕನಕದಾಸರು ಹಲವು ಕೀರ್ತನೆಗಳನ್ನು ಮಾತ್ರವೇ ಅಲ್ಲದೆ, ಮೋಹನ ತರಂಗಿಣಿ (ಸಾಂಗತ್ಯ), ರಾಮಧಾನ್ಯ ಚರಿತ್ರೆ (ಭಾಮಿನೀಷಟ್ಪದಿ), ನಳಚರಿತ್ರೆ (ಭಾಮಿನೀಷಟ್ಪದಿ), ಹರಿಭಕ್ತಿಸಾರ (ಭಾಮಿನೀ ಷಟ್ಪದಿ) ಎಂಬ ಕಾವ್ಯಗಳನ್ನು ರಚಿಸಿದ್ದಾರೆ. ಇವರ ಕಾವ್ಯಗಳ ನಿರೂಪಣೆ ತಿಳಿಯಾಗಿ, ಸರಳವಾಗಿ, ಹೃದಯಸ್ಪರ್ಶಿಯಾಗಿದೆ; ಹಿತಮಿತವಾದ ವರ್ಣನೆಗಳಿಂದ ಕೂಡಿ ಸರಸವಾಗಿದೆ.

ವಾದಿರಾಜರು ಹಯವದನ ಎಂಬ ಅಂಕಿತದಿಂದ ಕೀರ್ತನೆಗಳನ್ನು ರಚಿಸಿರುವರಲ್ಲದೆ ವೈಕುಂಠವರ್ಣನೆ, ಸ್ವಪ್ನಗದ್ಯ, ಲಕ್ಷ್ಮಿಯ ಶೋಭಾನೆ, ಭಾರತತಾತ್ಪರ್ಯನಿರ್ಣಯಟೀಕೆ ಮೊದಲಾದ ಗ್ರಂಥಗಳನ್ನೂ ರಚಿಸಿದ್ದಾರೆ.

ಇವೆಲ್ಲದರ ಹೆಗ್ಗುರಿಯೂ ದ್ವೈತಮತ ತತ್ವನಿರೂಪಣೆಯೇ. ವಾದಿರಾಜರು ಮೇಧಾವಿಯಾದ ತಾರ್ಕಿಕರು. ಇವರ ಕವಿತೆಯೂ ತರ್ಕಬದ್ಧವಾದುದೇ ಇವರ ಸಮಕಾಲೀನರಾದ ವೈಕುಂಠದಾಸರು ಶ್ರೀವೈಷ್ಣವರಾದರೂ ದಾಸಪಂಥಕ್ಕೆ ಸೇರಿ ವೈಕುಂಠಕೇಶವ ಎಂಬ ಅಂಕಿತದಿಂದ ಹಲವು ಹಾಡುಗಳನ್ನು ಬರೆದಿದ್ದಾರೆ. ಇಲ್ಲಿಂದ ಮುಂದೆ ಅರ್ಧ ಶತಮಾನಕ್ಕೂ ಹೆಚ್ಚು ಕಾಲ ಪ್ರತಿಭಾಶಾಲಿಗಳಾಗಿ ಅಪರೋಕ್ಷ ಜ್ಞಾನಿಗಳಾದ ದಾಸರಾರೂ ಕಾಣಿಸಿಕೊಳ್ಳುವುದಿಲ್ಲ. ಮಂತ್ರಾಲಯದ ರಾಯರು ಎಂದು ಪ್ರಸಿದ್ಧರಾಗಿರುವ ರಾಘವೇಂದ್ರತೀರ್ಥರೂ ಪ್ರಸನ್ನ ವೆಂಕಟದಾಸ, ವಿಜಯದಾಸ, ಗೋಪಾಲದಾಸ ಮೊದಲಾದವರೂ ದಾಸಸಾಹಿತ್ಯದ ಹೊಳೆ ತಡೆಯಿಲ್ಲದೆ ಹರಿದುಕೊಂಡು ಹೋಗಲು ಸಹಾಯಕರಾದರು. ಈ ಹರಿದಾಸರ ಸಾಲಿನಲ್ಲಿ ಕಾಣಬರುವ ಕಡೆಯ ಹಿರಿಯ ಹೆಸರೆಂದರೆ ಜಗನ್ನಾಥದಾಸರದು (ಸು.1728-1809). ಇವರು ಕೀರ್ತನೆಗಳನ್ನಲ್ಲದೆ ಹರಿಕಥಾಮೃತಸಾರವೆಂಬ ಷಟ್ಪದಿ ಗ್ರಂಥವನ್ನು ಬರೆದಿದ್ದಾರೆ. ಹರಿದಾಸ ಕೀರ್ತನೆಯ ರಚನೆ ಅಂದಿನಿಂದ ಇಂದಿನವರೆಗೆ ಬಂದು ಇಂದು ಕೂಡ ವಿಚ್ಛಿತ್ತಿಯಿಲ್ಲದೆ ಹರಿದುಕೊಂಡು ಹೋಗುತ್ತಿದೆ.

ಕುಮಾರವ್ಯಾಸ ಯುಗದ ವೈದಿಕ ಕವಿಗಳಲ್ಲಿ ಕುಮಾರವ್ಯಾಸನನ್ನು ಬಿಟ್ಟರೆ ನಮಗೆ ಕಾಣಬರುವ ಪ್ರಮುಖ ಕವಿ ಕುಮಾರವಾಲ್ಮೀಕಿಯೊಬ್ಬನೆ. ಈತ ರಾಮಾಯಣ ಕಥೆಯನ್ನು ಸರಳವಾದ ಭಾಷೆಯಲ್ಲಿ ನಿರರ್ಗಳವಾಗಿ ನಿರೂಪಿಸಿದ್ದಾನೆ. ಈತ ಕುಮಾರವ್ಯಾಸನಿಂದ ಸಾಕಷ್ಟು ಪ್ರಭಾವಿತನಾಗಿದ್ದಾನೆ. ಆದರೆ ಕುಮಾರವ್ಯಾಸನ ದರ್ಶನ, ಧ್ವನಿಗಳು ಇವನಲ್ಲಿ ಕಂಡುಬರುವುದಿಲ್ಲ. ಭಾಸ್ಕರ ಕವಿ (ಸು.1424) ಜೀವಂಧರಚರಿತೆ ಎಂಬ ಗ್ರಂಥವನ್ನು ಬರೆದಿದ್ದಾನೆ. ಈತನ ಕಾವ್ಯದ ಮೇಲೆ ಕುಮಾರವ್ಯಾಸನ ಪ್ರಭಾವ ನಿಚ್ಚಳವಾಗಿ ಬಿದ್ದಿದೆ. ಕಲ್ಯಾಣಕೀರ್ತಿ (ಸು.1439) ಎಂಬುವನು ಜ್ಞಾನಚಂದ್ರಾಭ್ಯುದಯ, ಕಾಮನ ಕಥೆ ಮೊದಲಾದ ಗ್ರಂಥಗಳನ್ನು ದೇಶೀ ಛಂದಸ್ಸಿನಲ್ಲಿ ರಚಿಸಿದ್ದಾನೆ.

ವಿಜಯನಗರದ ಕೃಷ್ಣದೇವರಾಯನ ಆಶ್ರಯದಲ್ಲಿದ್ದ ತಿಮ್ಮಣ್ಣಕವಿ (ಸು.1550) ಕುಮಾರವ್ಯಾಸ ಬರೆಯದೇ ಬಿಟ್ಟ ವ್ಯಾಸಭಾರತದ ಭಾಗವನ್ನು ಕೃಷ್ಣರಾಯ ಭಾರತ ಕಥಾಮಂಜರೀ ಎಂಬ ಹೆಸರಿನಿಂದ ಬರೆದಿದ್ದಾನೆ. ಷಟ್ಪದಿಯಲ್ಲಿ ಬರೆದಿದ್ದರೂ ಕುಮಾರವ್ಯಾಸನ ಕಾವ್ಯದಲ್ಲಿ ಕಂಡುಬರುವ ಎತ್ತರ ಬಿತ್ತರಗಳು ಇವನಲ್ಲಿ ಕಂಡುಬರುವುದಿಲ್ಲ.

ಷಟ್ಪದಿ ಕಾವ್ಯಗಳಲ್ಲಿ ಲಕ್ಷ್ಮೀಶನ (ಸು.1550) ಜೈಮಿನಿ ಭಾರತಕ್ಕೆ ಒಂದು ಪ್ರಮುಖ ಸ್ಥಾನ ಸಂದಿದೆ. ಈತ ಸಂಸ್ಕೃತದ ಜೈಮಿನಿ ಭಾರತದ ಕಥೆಯನ್ನು ಕನ್ನಡದಲ್ಲಿ, ವಾರ್ಧಕ ಷಟ್ಪದಿಯಲ್ಲಿ ಸುಂದರವಾಗಿ ಬರೆದಿದ್ದಾನೆ. ಈತನ ಕಾವ್ಯ ನವರಸಭರಿತವಾಗಿದ್ದು ಕಥನಕಲೆಗೆ, ವಾರ್ಧಕ ಷಟ್ಪದಿಯ ಉತ್ಕೃಷ್ಟ ಶೈಲಿಗೆ ಉದಾಹರಣೆಯಾಗಿದೆ. ಈತನ ವರ್ಣನೆಗಳಲ್ಲಿ ಕಣ್ಣಿಗೆ ಕಟ್ಟಬಲ್ಲ ಚಿತ್ರಕಾರನ ಕಲಾಕುಶಲತೆಯ ಜೊತೆಗೆ ಕಿವಿಗೆ ಹಿತವನ್ನುತರುವ ಸಂಗೀತಗಾರನ ಸ್ವರಜ್ಞಾನವೂ ಸೇರಿದೆ. ಮನೋಜ್ಞನವಾದ ಉಪಮೆಗಳ ಬಳಕೆಯಿಂದ ಈತ ಉಪಮಾಲೋಲನೆಂಬ ಕೀರ್ತಿಗೆ ಪಾತ್ರನಾಗಿದ್ದಾನೆ.

ಹದಿನಾರನೆಯ ಶತಮಾನದ ಉಳಿದ ಕವಿಗಳೆಂದರೆ ಶ್ರೀರಂಗಮಹಾತ್ಮ್ಯವನ್ನು ಬರೆದ ರಂಗಾಚಾರ್ಯ (ಸು.1570), ನಂದಿಮಾಹಾತ್ಮ್ಯ ಮತ್ತು ಚಿತ್ರಭಾರತ ಎಂಬ ಎರಡು ಬೃಹದ್ಗ್ರಂಥಗಳನ್ನು ರಚಿಸಿರುವ ಗೋವಿಂದಕವಿ, ಶಿವಗೀತೆಯನ್ನು ವಾರ್ಧಕ ಷಟ್ಪದಿಯಲ್ಲಿ ಬರೆದ ತಿರುಮಲಭಟ್ಟ, ಅಕ್ರೂರಚರಿತೆಯನ್ನು ಭಾಮಿನೀಷಟ್ಪದಿಯಲ್ಲಿ ಬರೆದ ಸೋಮನಾಥಕವಿ (ಸು.1600). ರಂಗಾಚಾರ್ಯ ಕನ್ನಡದಲ್ಲಿ ಕಾವ್ಯರಚನೆ ಮಾಡಹೊರಟ ಶ್ರೀವೈಷ್ಣವರಲ್ಲಿ ಮೊದಲನೆಯವನು. ಗೋವಿಂದನ ಕಾವ್ಯಬಂಧ ಪ್ರೌಢ, ಬಿಗಿ, ಬಿರುಸು. ಈತನ ಚಿತ್ರಭಾರತ ದೈವಭಕ್ತಿಯಿಂದ ತುಂಬಿದೆ. ತಿರುಮಲಭಟ್ಟನ ಕವಿತೆ ಪ್ರಸಾದಗುಣದಿಂದ ತುಂಬಿದೆ. ಸೋಮನಾಥನ ಅಕ್ರೂರ ಚರಿತೆಯಲ್ಲಿ ಅಕ್ರೂರನ ಕಥೆಗಿಂತ ಶ್ರೀಕೃಷ್ಣನ ಕಥೆಯೇ ಪ್ರಮುಖವಾಗಿದೆ. ಕಾವ್ಯವನ್ನು ಮನೋಹರವಾಗಿ ಬರೆಯಲು ಸಾಕಷ್ಟು ರಸಸ್ಥಾನಗಳಿದ್ದರೂ ಅದಕ್ಕೆ ಅಗತ್ಯವಾದ ಪ್ರತಿಭೆ ಕಲ್ಪನಾ ಶಕ್ತಿಗಳು ಈ ಕವಿಗಳಲ್ಲಿ ಇಲ್ಲ.

ಹದಿನೇಳನೆಯ ಶತಮಾನದ ವೈದಿಕ ಕವಿಗಳಲ್ಲಿ ಭಾಮಿನೀ ಷಟ್ಪದಿಯಲ್ಲಿ ಪ್ರಹ್ಲಾದ ಚರಿತೆಯನ್ನು ಬರೆದ ನರಹರಿ (ಸು.1650), ವೆಂಕಟೇಶ್ವರ ಪ್ರಬಂಧವನ್ನು ಚಂಪೂವಿನಲ್ಲಿ ಬರೆದ ವೆಂಕಕವಿ (ಸು.1650), ಭಗವದ್ಗೀತೆಯನ್ನು ವಾಸುದೇವ ಕಥಾಮೃತ ಎಂಬ ಹೆಸರಿನಿಂದ ಭಾಮಿನೀ ಷಟ್ಪದಿಯಲ್ಲಿ ಬರೆದ ನಾಗರಸ ಮುಖ್ಯರು. ಮಹಲಿಂಗರಂಗ (ಸು.1675) ಇದೇ ಅವಧಿಯಲ್ಲಿ ಗ್ರಂಥರಚನೆ ಮಾಡಿದ ಇನ್ನೊಬ್ಬ ಪ್ರಮುಖ ಕವಿ. ಇವನ ಅನುಭವಾಮೃತ ಭಾಮಿನೀಷಟ್ಪದಿಯಲ್ಲಿದೆ. ಇದರಲ್ಲಿ ಅಖಿಲ ವೇದಾಂತಾರ್ಥವನ್ನು ಸಂಗ್ರಹಿಸಿಕೊಟ್ಟಿದ್ದಾನೆ. ಈತನ ಕನ್ನಡಾಭಿಮಾನ ಸ್ತೋತ್ರಾರ್ಹವಾದುದು. ಸುಲಿದ ಬಾಳೆಯ ಹಣ್ಣಿನಂದದಿ ಅತ್ಯಂತ ಸುಲಭವಾದ, ಮನೋಹರವಾದ ಕನ್ನಡದಲ್ಲಿ ಆತ್ಮಜ್ಞಾನವನ್ನು ಪಡೆದುಕೊಂಡರೆ ಸಾಲದೇನು ಸಂಸ್ಕೃತದಲ್ಲಿನ್ನೇನು ಎಂದು ಸವಾಲು ಹಾಕಿದ ಮಹಲಿಂಗರಂಗ ಒಳ್ಳೆಯ ಕವಿಹೃದಯವುಳ್ಳವನು. ವಸ್ತು ಮತ್ತು ನಿರೂಪಣೆ ಎರಡರಲ್ಲೂ ಕವಿಯು ಅಪೂರ್ವವಾದ ಪ್ರತಿಭೆಪಾಂಡಿತ್ಯಗಳನ್ನು ಮೆರೆದಿದ್ದಾನೆ. ಬಾಲಕೃಷ್ಣ ಬ್ರಹ್ಮಾನಂದ ಯೋಗಿ ಎಂಬುವರು ಈ ಕಾವ್ಯವನ್ನು ಸಂಸ್ಕೃತಕ್ಕೆ ಭಾಷಾಂತರಿಸಿದ್ದಾರೆ.

ಬೊಬ್ಬೂರು ರಂಗ (ಸು.1750) ಮತ್ತು ಚಿದಾನಂದಾವಧೂತ (ಸು.1750) ಹೆಸರಿಸಬೇಕಾದ ಮತ್ತಿಬ್ಬರು ಕವಿಗಳು. ಬೊಬ್ಬೂರು ರಂಗ ಭಾಮಿನೀಷಟ್ಪದಿಯಲ್ಲಿ ಅಂಬಿಕಾವಿಜಯವನ್ನೂ ವಾರ್ಧಕದಲ್ಲಿ ಪರಶುರಾಮ ರಾಮಾಯಣವನ್ನು ಬರೆದಿದ್ದಾನೆ. ಚಿದಾನಂದಾವಧೂತ ಜ್ಞಾನಸಿಂಧು ಎಂಬ ಗ್ರಂಥದಲ್ಲಿ ಅದ್ವೈತ ವೇದಾಂತವನ್ನು ಪ್ರತಿಪಾದಿಸಿದ್ದಾನೆ. ಈ ಗ್ರಂಥ ಮಹಲಿಂಗರಂಗನ ಅನುಭವಾಮೃತವನ್ನು ಬಹುಮಟ್ಟಿಗೆ ಅನುಸರಿಸಿರುವುದಲ್ಲದೆ ಅದರಂತೆಯೇ ಲಲಿತವಾಗಿದೆ. ಇದು ಭಾಮಿನೀ ಷಟ್ಪದಿಯಲ್ಲಿದೆ. ಈತ ಇನ್ನು ಅನೇಕ ಗ್ರಂಥಗಳನ್ನು ಬರೆದಿದ್ದಾನೆ. ಇದೇ ಅವಧಿಯಲ್ಲಿ ಲಿಂಗಣ್ಣ ಕವಿ (ಸು.1750) ಚಂಪೂ ರೂಪದಲ್ಲಿ ಕೆಳದಿ ನೃಪವಿಜಯವನ್ನು ಬರೆದಿದ್ದಾನೆ. ಇದರಲ್ಲಿ ಕಾವ್ಯಾಂಶಕ್ಕಿಂತ ಚರಿತ್ರಾಂಶವೆ ಹೆಚ್ಚು.

ವಿಜಯನಗರ ಪತನಾನಂತರ ಮೈಸೂರೊಡೆಯರ ಕಾಲದಲ್ಲಿ ಸಾಹಿತ್ಯ ರಚನೆಗೆ ಹೆಚ್ಚಿನ ಆಶ್ರಯ ದೊರಕಿತು. ಈ ಕಾಲದಲ್ಲಿ ಹಳೆಯ ಚಂಪೂಶೈಲಿಯನ್ನೂ ಹಳಗನ್ನಡ ಗದ್ಯವನ್ನೂ ಪುನರುಜ್ಜೀವಿಸುವ ಕಾರ್ಯ ನಡೆಯಿತು. ರಾಜಒಡೆಯರ ಕಾಲದಲ್ಲಿ ಅವರ ದಂಡನಾಯಕನಾದ ತಿರುಮಲಾರ್ಯ ಕರ್ಣವೃತ್ತಾಂತ ಕಥೆಯನ್ನು ಸಾಂಗತ್ಯದಲ್ಲಿ ಬರೆದ. ರಾಜ ಒಡೆಯರ ಅನಂತರ ಪಟ್ಟಕ್ಕೆ ಬಂದ ಚಾಮರಾಜ ಒಡೆಯರು (1617-37) ಸ್ವತಃ ಕವಿಯಾಗಿದ್ದು ಚಾಮರಾಜೋಕ್ತಿ ವಿಳಾಸ, ಮಣಿಪ್ರಕಾಶ ಎಂಬೆರಡು ಗ್ರಂಥಗಳನ್ನು ಬರೆದಂತೆ ಪ್ರತೀತಿ. ಈ ರಾಜನ ಆಸ್ಥಾನದಲ್ಲಿದ್ದ ರಾಮಚಂದ್ರನೆಂಬ ಕವಿ ಶಾಲಿಹೋತ್ರನ ಅಶ್ವಶಾಸ್ತ್ರವನ್ನು ಗದ್ಯರೂಪದಲ್ಲಿ ಕನ್ನಡಕ್ಕೆ ಭಾಷಾಂತರಿಸಿದ. ರಾಜನ ಮತ್ತೊಬ್ಬ ಆಶ್ರಿತನಾದ ಪದ್ಮಣಪಂಡಿತ ಚಾಮರಾಜೀಯ ಎಂಬ ಹೆಸರಿನಿಂದ ಹಯಸಾರ ಸಮುಚ್ಚಯವನ್ನು ಕಂದದಲ್ಲಿ ಬರೆದಿದ್ದಾನೆ. ಕಂಠೀರವ ನರಸರಾಜ (1638-1659) ಕವಿ, ಗಮಕಿ, ವಾದಿ, ವಾಗ್ಮಿಗಳಿಗೆ ಆಶ್ರಯದಾತನಾಗಿದ್ದ. ಈತನ ಆಸ್ಥಾನ ಕವಿಯಾದ ಭಾಸ್ಕರಕವಿ ಬೇಹಾರಗಣಿತವನ್ನು ರಚಿಸಿದ. ಮತ್ತೊಬ್ಬ ಕವಿ ಗೋವಿಂದವೈದ್ಯ ಕಂಠೀರವನರಸರಾಜವಿಜಯವನ್ನು ಸಾಂಗತ್ಯದಲ್ಲಿ ಬರೆದಿದ್ದಾನೆ. ಇದರಲ್ಲಿ ಕನ್ನಡ ಭಾಷೆಯ ಮೇಲೆ ಉರ್ದು ಭಾಷೆಯ ಪ್ರಭಾವ ಬಿದ್ದಿರುವುದನ್ನು ಕಾಣಬಹುದು.

ಚಿಕ್ಕದೇವರಾಜ ಒಡೆಯರ (1673-1704) ಕಾಲ ಮೈಸೂರಿನ ಇತಿಹಾಸದಲ್ಲಿ, ಒಡೆಯರ ಕಾಲದ ಸಾಹಿತ್ಯ ಚರಿತ್ರೆಯಲ್ಲಿ ಒಂದು ಸುವರ್ಣಯುಗ. ಸಂಗೀತ ಸಾಹಿತ್ಯಗಳೆರಡರಲ್ಲಿಯೂ ಅಪಾರವಾದ ಆದರ, ಅಭಿರುಚಿ, ಪರಿಶ್ರಮಗಳಿದ್ದ ಇವರು ಕನ್ನಡದಲ್ಲಿ ಚಿಕದೇವರಾಯ ಬಿನ್ನಪ, ಗೀತಗೋಪಾಲ, ಭಾರತ, ಭಾಗವತ, ಶೇಷಧರ್ಮ ಎಂಬ ಗ್ರಂಥಗಳನ್ನು ಬರೆದಿರುವರೆಂದು ಪ್ರತೀತಿ.

ಚಿಕ್ಕದೇವರಾಜ ಒಡೆಯರ ಆಶ್ರಯದಲ್ಲಿ ತಿರುಮಲಾರ್ಯ, ಚಿಕುಪಾಧ್ಯಾಯ, ಸಿಂಗರಾರ್ಯ, ತಿಮ್ಮಕವಿ, ಮಲ್ಲಿಕಾರ್ಜುನ, ವೇಣುಗೋಪಾಲ, ವರಪ್ರಸಾದ ಕವಿ, ಚಿದಾನಂದ, ಮಲ್ಲರಸ ಮೊದಲಾದವರು ಕಾವ್ಯರಚನೆ ಮಾಡಿದರು. ಇದೇ ಸಂದರ್ಭದಲ್ಲಿ ಹೊನ್ನಮ್ಮ, ಶೃಂಗಾರಮ್ಮ ಮೊದಲಾದ ಕಬ್ಬಿಗಿತ್ತಿಯರೂ ಸಾಹಿತ್ಯ

ರಚನೆಯಲ್ಲಿ ಕೈಹಾಕಿದ್ದು ಗಮನಾರ್ಹವಾದ ಸಂಗತಿ. ತಿರುಮಲಾರ್ಯನು ಚಿಕದೇವರಾಜವಿಜಯ, ಚಿಕದೇವರಾಜ ವಂಶಾವಳಿ, ಚಿಕದೇವರಾಜಶತಕ, ಅಪ್ರತಿಮವೀರ ಚರಿತೆ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಅಪ್ರತಿಮವೀರ ಚರಿತೆ ನಾಲ್ಕು ಪ್ರಕರಣಗಳನ್ನುಳ್ಳ ಒಂದು ಅಲಂಕಾರ ಗ್ರಂಥ. ಚಿಕುಪಾಧ್ಯಾಯ ಚಿಕ್ಕದೇವರಾಜನ ಕರಣಿಕಾಗ್ರೇಸರನೂ ಮಂತ್ರಿಯೂ ಆಗಿದ್ದವನು. ಈತ ಗದ್ಯ ಪದ್ಯಗಳಲ್ಲಿ ವಿಪುಲ ಗ್ರಂಥರಚನೆ ಮಾಡಿದ್ದಾನೆ. ಈತನ ಕಾವ್ಯವಸ್ತುವಿನಲ್ಲಿ, ಛಂದಸ್ಸಿನಲ್ಲಿ ವೈವಿಧ್ಯ ಕಂಡುಬರುತ್ತದೆ. ಇವನ ಕೃತಿಗಳು ವೈಷ್ಣವ ಧರ್ಮವನ್ನು ಕುರಿತವು. ಈತನ ಗದ್ಯ ಮನೋಹರವಾಗಿದೆ. ಕನ್ನಡ ಗದ್ಯಚರಿತ್ರೆಯಲ್ಲಿ ಈತನಿಗೆ ಒಂದು ಪ್ರಮುಖಸ್ಥಾನ ಸಲ್ಲುತ್ತದೆ.

ಸಿಂಗರಾರ್ಯ ಬರೆದಿರುವ ಮಿತ್ರವಿಂದಾಗೋವಿಂದ ಕನ್ನಡದ ಮೊಟ್ಟಮೊದಲ ನಾಟಕವೆಂಬ ಪ್ರಶಸ್ತಿಗೆ ಪಾತ್ರವಾಗಿದೆ. ರಾಜನ ಸಂಚಿಯ ಊಳಿಗದವಳಾಗಿದ್ದ ಹೊನ್ನಮ್ಮನ ಹದಿಬದೆಯ ಧರ್ಮ ಸರಳ ಸುಂದರವಾದ ಸಾಂಗತ್ಯಕಾವ್ಯ. ನೀತಿಬೋಧೆಯನ್ನು ಗುರಿಯಾಗಿಟ್ಟುಕೊಂಡು ಕಾವ್ಯರಚನೆಮಾಡಿದ ಕವಯಿತ್ರಿಯರಲ್ಲಿ ಈಕೆ ಅಗ್ರಗಣ್ಯಳಾಗಿದ್ದಾಳೆ. ಶೃಂಗಾರಮ್ಮನ ಪದ್ಮಿನೀಕಲ್ಯಾಣ ಸಾಂಗತ್ಯದಲ್ಲಿದೆ. ದೊಡ್ಡಕೃಷ್ಣರಾಜನ (1713-32) ಆಳಿಕೆಯಲ್ಲಿ ರಚಿತವಾದ ಶಾಸ್ತ್ರಗ್ರಂಥಗಳಲ್ಲಿ ಬಾಲವೈದ್ಯದ, ಚೆಲುವನ ಕನ್ನಡ ಲೀಲಾವತೀ ಎಂಬ ಗಣಿತಶಾಸ್ತ್ರ (ಕಂದ ಮತ್ತು ವಾರ್ಧಕ), ರತ್ನಶಾಸ್ತ್ರ ಷಟ್ಪದಿ ಪ್ರಮುಖವಾದವುಗಳು. ರಾಜನ ಪಟ್ಟಮಹಿಷಿಯಾದ ಚೆಲುವಾಂಬೆ ಎಂಬ ಕವಯಿತ್ರಿ ಇದೇ ಕಾಲದಲ್ಲಿ ವರನಂದೀ ಕಲ್ಯಾಣವನ್ನು ರಚಿಸಿದ್ದಾಳೆ. ಈಕೆಯ ಶೈಲಿ ಲಲಿತಮಧುರವಾಗಿದೆ.

ದೊಡ್ಡಕೃಷ್ಣರಾಜನ ಅನಂತರ ಕೆಲಕಾಲ ಮಂಕಾಗಿದ್ದ ಸಾಹಿತ್ಯರಚನೆ 19ನೆಯ ಶತಮಾನದ ಆದಿಭಾಗದಲ್ಲಿ ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ಮತ್ತೆ ಪ್ರಜ್ವಲಿಸಿತು. ಮುಮ್ಮಡಿ ಕೃಷ್ಣರಾಜ ಸ್ವತಃ ಕವಿಯಾಗಿದ್ದು ಅನೇಕ ಗ್ರಂಥಗಳನ್ನು ರಚಿಸಿದ್ದಾನೆ. ಈತನ ಆಶ್ರಯದಲ್ಲಿದ್ದ ಅನೇಕ ಕವಿಗಳು ಸಂಸ್ಕೃತ ಕನ್ನಡಗಳಲ್ಲಿ ನೂರಾರು ಗ್ರಂಥಗಳನ್ನು ಬರೆದಿದ್ದಾರೆ. ಅಂದಿನ ಕೃತಿಗಳಲ್ಲಿ ಕೆಂಪುನಾರಾಯಣನ ಮುದ್ರಾಮಂಜೂಷ ಎಂಬ ಗದ್ಯಕೃತಿ ಅತ್ಯಂತ ಜನಪ್ರಿಯವಾಗಿದ್ದು ಗಮನಾರ್ಹವಾದುದಾಗಿದೆ. ನಡುಗನ್ನಡ ಹೊಸಗನ್ನಡವಾಗಿ ಮಾರ್ಪಾಟಾಗುತ್ತಿದ್ದ ಸಂಕ್ರಮಣಕಾಲವನ್ನು ಈ ಕೃತಿ ಪ್ರತಿನಿಧಿಸುತ್ತದೆ. ಈ ಕೃತಿಯ ಗದ್ಯ ಪ್ರೌಢವಾದರೂ ಲಲಿತವಾಗಿ ಶಕ್ತಿಯುತವಾಗಿ ಸಾರವತ್ತಾಗಿದೆ. ಗದ್ಯಸಾಹಿತ್ಯದ ಬೆಳವಣಿಗೆಯಲ್ಲಿ ಆಧುನಿಕ ಸಾಹಿತ್ಯದ ಹಿಂದಿನ ಮಜಲೇ ಮುದ್ರಾಮಂಜೂಷವೆಂದು ಹೇಳಬಹುದು.

ಇದೇ ಕಾಲದಲ್ಲಿ ಅಳಿಯ ಲಿಂಗರಾಜ ಸುಮಾರು ಐವತ್ತು ಗ್ರಂಥಗಳನ್ನು ಬರೆದಿದ್ದಾನೆ. ವಿವಿಧ ಛಂದಸ್ಸಿನಲ್ಲಿರುವ ಈ ಗ್ರಂಥಗಳು ಕವಿಯ ಸರ್ವತೋಮುಖವಾದ ಪ್ರತಿಭೆಗೆ ಸಾಕ್ಷಿಯಾಗಿವೆ. ಈತನ ನರಪತಿಚರಿತೆ ಒಂದು ಅಲಂಕಾರ ಗ್ರಂಥ. ಮುಮ್ಮಡಿ ಕೃಷ್ಣರಾಜ ಒಡೆಯರ ಅನಂತರ ಪಟ್ಟಕ್ಕೆ ಬಂದ ಚಾಮರಾಜರ ಕಾಲದಲ್ಲಿ ಕನ್ನಡ ಸಾಹಿತ್ಯದ ಆಧುನಿಕ ಯುಗ ಪ್ರಾರಂಭವಾಯಿತು.

ಕುಮಾರವ್ಯಾಸ ಯುಗದ ಜೈನಕವಿಗಳು ಈ ಯುಗದಲ್ಲಿ ಯುಗಧರ್ಮಕ್ಕೆ ಶರಣಾಗಿ ದೇಶೀಯ ಛಂದಸ್ಸಿನಲ್ಲಿ ಕಾವ್ಯಸೃಷ್ಟಿಯನ್ನು ಕೈಕೊಂಡರು. ಪಾಂಡಿತ್ಯ ಪ್ರಚುರವಾಗಿ ರಾಜಸಭೆಯ ಮನ್ನಣೆ ಪಡೆಯುತ್ತಿದ್ದ ಅವರ ಕಾವ್ಯಶಕ್ತಿ ಅಂದು ಷಟ್ಪದಿ ಸಾಂಗತ್ಯಗಳ ಧಾಟಿಯನ್ನು ಪಡೆದು ಜನಸಾಮಾನ್ಯರ ಸ್ವತ್ತಾಯಿತು. ಈ ಯುಗದಲ್ಲಿ ಜೈನಕವಿಗಳ ಪ್ರಭಾವ ಇತರ ಕವಿಗಳ ಮೇಲಾಗುವುದಕ್ಕಿಂತ, ಇತರ ಕವಿಗಳ ಪ್ರಭಾವ ಇವರ ಮೇಲೆ ಬಿದ್ದಿದೆ. ಈ ಯುಗದಲ್ಲಿ ಜೈನಕವಿಗಳ ಸಂಖ್ಯೆ ಕಡಿಮೆ. ಅವರಲ್ಲಿಯೂ ಕೆಲವರನ್ನು ಬಿಟ್ಟರೆ ಉಳಿದವರೆಲ್ಲ ಕಾವ್ಯರಚನೆಯ ದೃಷ್ಟಿಯಿಂದ ಸಾಮಾನ್ಯರು.

ಈ ಯುಗದ ಜೈನಕವಿಗಳಲ್ಲಿ ರತ್ನಾಕರವರ್ಣಿ (16ನೆಯ ಶತಮಾನ) ಅದ್ವಿತೀಯನಾದವನು. ಈತನ ಭರತೇಶ ವೈಭವ ಸಾಂಗತ್ಯದಲ್ಲಿ ರಚಿತವಾದ ಕನ್ನಡದ ಮಹಾಕಾವ್ಯಗಳಲ್ಲೊಂದು. ಭೋಗಮೂಲವಾದ ಶೃಂಗಾರವೂ ಯೋಗಮೂಲವಾದ ತ್ಯಾಗವೂ ಇಲ್ಲಿ ಪರಸ್ಪರ ವಿರುದ್ಧವಾಗದೆ ಭೋಗಯೋಗಗಳ ಸಮನ್ವಯ ತತ್ತ್ವ ಈ ಕಾವ್ಯದಲ್ಲಿ ಪ್ರತಿಪಾದಿತವಾಗಿದೆ. ಇಲ್ಲಿ ಬರುವ ನಿರ್ದಿಷ್ಟ ಶೃಂಗಾರ ಚಿತ್ರಣವೂ ಸಂಗೀತ ನರ್ತನಗಳ ವರ್ಣನೆಯೂ ಕನ್ನಡದಲ್ಲಿಯೆ ಅದ್ವಿತೀಯವಾದುವು.

ಶಿಶುಮಾಯಣನ (ಸು.1472) ಅಂಜನಾಚರಿತ್ರೆ, ತ್ರಿಪುರದಹನ ಸಾಂಗತ್ಯಗಳೆರಡೂ ಸಾಂಗತ್ಯದಲ್ಲಿವೆ. ಸಾಂಗತ್ಯದ ಇತಿಹಾಸದಲ್ಲಿ ಈ ಕವಿಗೆ ಒಂದು ಉನ್ನತ ಸ್ಥಾನವಿದೆ. ತೆರಕಣಾಂಬಿಯ ಬೊಮ್ಮರಸ (ಸು.1485) ಸನತ್ಕುಮಾರ ಚರಿತೆ ಮತ್ತು ಜೀವಂಧರ ಚರಿತೆಗಳ ಕರ್ತೃ. ಮೊದಲನೆಯದು ಭಾಮಿನೀ ಷಟ್ಪದಿಯಲ್ಲೂ ಎರಡನೆಯದು ಸಾಂಗತ್ಯದಲ್ಲೂ ಇದೆ.

ಹದಿನಾರನೆಯ ಶತಮಾನದ ಆರಂಭದಲ್ಲಿ ಕಾಣಬರುವ ಮೂರನೆಯ ಮಂಗರಸ (ಸು.1508) ಜಯನೃಪಕಾವ್ಯ, ಸೂಪಶಾಸ್ತ್ರಗಳನ್ನು ವಾರ್ಧಕ ಷಟ್ಪದಿಯಲ್ಲಿ ಬರೆದಿದ್ದಾನೆ. ಇವನ ಉಳಿದಗ್ರಂಥಗಳು ಸಾಂಗತ್ಯದಲ್ಲಿವೆ. ಜಯನೃಪಕಾವ್ಯದಲ್ಲಿ ಕಥೆಗಿಂತಲೂ ವರ್ಣನೆ ಹೆಚ್ಚು.

ಅಭಿನವವಾದಿವಿದ್ಯಾನಂದನ (ಸು.1533) ಕಾವ್ಯಸಾರ, ಸಾಳ್ವಕವಿಯ (ಸು.1560) ಸಾಳ್ವ ಭಾರತ ಈ ಕಾಲದ ಪ್ರಮುಖ ಗ್ರಂಥಗಳು. ಸಾಳ್ವಭಾರತ ಭಾಮಿನೀಷಟ್ಪದಿಯಲ್ಲಿದೆ. ಸಾಳ್ವನು ರಸರತ್ನಾಕರ, ವೈದ್ಯಸಾಂಗತ್ಯ ಎಂಬ ಇನ್ನೆರಡು ಗ್ರಂಥಗಳನ್ನು ಬರೆದಿದ್ದಾನೆ. ರಸರತ್ನಾಕರ ರಸಪ್ರಕ್ರಿಯೆಯನ್ನು ಪ್ರತಿಪಾದಿಸುವ ಒಂದು ಅಲಂಕಾರ ಗ್ರಂಥ. ಈ ಗ್ರಂಥದಲ್ಲಿ ನವರಸಗಳ ಸ್ವರೂಪವನ್ನು ದಿಗ್ದರ್ಶಿಸಿದ್ದಾನೆ. ದೊಡ್ಡಯ್ಯ (ಸು.1550) ಮತ್ತು ಬಾಹುಬಲಿ (ಸು.1560) ಕ್ರಮವಾಗಿ ಚಂದ್ರಪ್ರಭಚರಿತೆ, ನಾಗರಕುಮಾರಚರಿತೆ ಎಂಬ ಗ್ರಂಥಗಳನ್ನು ಸಾಂಗತ್ಯದಲ್ಲಿ ಬರೆದಿದ್ದಾರೆ.

ಹದಿನೇಳನೆಯ ಶತಮಾನದಿಂದ ಮುಂದಕ್ಕೆ ಜೈನಕವಿಗಳು ಕಾವ್ಯಕರ್ಮಕ್ಕೆ ಕೈಹಾಕಿರುವುದು ವಿರಳವಾಗಿ ಕಂಡುಬರುತ್ತದೆ. ಇದೇ ಶತಮಾನದ ಜೈನಗ್ರಂಥಕರ್ತರಲ್ಲಿ ಶಬ್ದಾನುಶಾಸನವನ್ನು ಬರೆದ ಭಟ್ಟಾಕಳಂಕ ಬಹುಮುಖ್ಯನಾದವನು. ಮುಮ್ಮಡಿ ಕೃಷ್ಣರಾಜ ಒಡೆಯರ ಆಶ್ರಿತನಾಗಿದ್ದ ದೇವಚಂದ್ರ (ಸು.1770-1841) ರಾಜಾವಳೀ ಕಥೆಯನ್ನು ಬರೆದಿದ್ದಾನೆ. ಇದರಲ್ಲಿ ಜೈನಮತಕ್ಕೆ ಸಂಬಂಧಿಸಿದ ಹಲವು ಇತಿಹಾಸಗಳೂ ರಾಜರ ಮತ್ತು ಕವಿಗಳ ಚರಿತೆಗಳೂ ಇವೆ. ಮೈಸೂರು ರಾಜರ ವಂಶಾವಳಿಯೂ ಇಲ್ಲಿ ಸಂಗ್ರಹವಾಗಿ ಬಂದಿದೆ. ಕವಿ ಚರಿತ್ರೆಯ ದೃಷ್ಟಿಯಿಂದ ಇದು ಬಹುಮುಖ್ಯವಾದುದು.

**ಆಧುನಿಕ ಯುಗ :** ಕನ್ನಡ ಸಾಹಿತ್ಯವಾಹಿನಿ ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದ ಹೊತ್ತಿಗೆ ಬತ್ತಿಯೇ ಹೋಗುವುದೇನೊ ಎನ್ನುವಷ್ಟು ತೆಳುವಾಯಿತು. ಆ ವೇಳೆಗಾಗಲೇ ಕರ್ನಾಟಕ ಬ್ರಿಟಿಷರ ಆಳಿಕೆಗೆ ಸೇರಿಹೋಗಿತ್ತು. ಇಂಗ್ಲಿಷ್ ಶಿಕ್ಷಣದ ಮೂಲಕ ಕನ್ನಡ ಭಾಷೆಯ ಅಭ್ಯಾಸ ಕುಂಠಿತಗೊಂಡಿತು. ಬುದ್ಧಿಜೀವಿಗಳ ಮಾತೃಭಾಷಾಪ್ರೇಮ ಇಂಗ್ಲಿಷ್ ಭಾಷೆಯ ಮೋಹದಲ್ಲಿ ಮುಳುಗಿ ಹೋಯಿತು. ಆದರೆ ಅದೇ ಇಂಗ್ಲಿಷ್ ಭಾಷೆ ಸಾಹಿತ್ಯಗಳ ಅಧ್ಯಯನವೇ ಕನ್ನಡ ಜನರ ಆತ್ಮಾಭಿಮಾನವನ್ನು ಕೆರಳಿಸಿ, ದೇಶಭಾಷೆಗಳ ಅದ್ಭುತ ಕ್ರಾಂತಿಗೂ ಮೂಲವಾಯಿತು. ಇಂಗ್ಲಿಷ್ ಸಾಹಿತ್ಯದಲ್ಲಿನ ಸ್ವಾತಂತ್ರ್ಯ, ಸೌಲಭ್ಯ, ರೀತಿ, ರಸಪುಷ್ಟಿಗಳನ್ನು ಕಂಡು ಕನ್ನಡದಲ್ಲಿಯೂ ಅಂಥ ಸಾಹಿತ್ಯವನ್ನು ಸೃಷ್ಟಿಸಬೇಕೆಂಬ ಉತ್ಸಾಹ ಮೂಡಿತು. ಮೊದಲಿಗೆ ಈ ಕಾರ್ಯ ಅನುವಾದಗಳ ಮೂಲಕ ನಡೆಯಿತು. ಕಾಲಕ್ರಮದಲ್ಲಿ ಕನ್ನಡ ಸಾಹಿತ್ಯದೊಡನೆ ಅದನ್ನು ಸಮನ್ವಯಗೊಳಿಸಿಕೊಳ್ಳುವ ಶಕ್ತಿ ಪರಿಣತಗೊಂಡು, ಅರ್ಧ ಶತಮಾನದಿಂದ ಈಚೆಗೆ ಉತ್ತಮ ಕಾವ್ಯಗಳು ರಚನೆಗೊಳ್ಳುತ್ತ ಬಂದಿವೆ.

ಆಧುನಿಕ ಕನ್ನಡ ಸಾಹಿತ್ಯದ ಆರಂಭದೆಸೆಯಲ್ಲಿ ಪಾಶ್ಚಾತ್ಯ ವಿದ್ವಾಂಸರಿಂದ ಕನ್ನಡಕ್ಕೆ ದೊರೆತ ಪ್ರೇರಣೆ, ಪ್ರಯೋಜನಗಳು ಚಿರಸ್ಮರಣೀಯವಾದುವು. ಇವರು ಕರ್ನಾಟಕದ ಜನಜೀವನದಲ್ಲಿ ಸಮರಸವಾಗಿ ಬೆರೆತು, ಇಲ್ಲಿನ ಸಾಹಿತ್ಯ ಸಂಸ್ಕೃತಿಗಳನ್ನು ಆಳವಾಗಿ ಅಧ್ಯಯನ ಮಾಡಿ, ಹಲವು ಪ್ರಾಚೀನ ಗ್ರಂಥಗಳನ್ನು ಸಂಪಾದಿಸಿ

ಪ್ರಕಟಿಸಿದುದಲ್ಲದೆ, ಕನ್ನಡ ಭಾಷಾಸ್ವರೂಪವನ್ನು ದಿಗ್ದರ್ಶಿಸಬಲ್ಲ ವ್ಯಾಕರಣ, ಛಂದಸ್ಸು, ನಿಘಂಟು ಮೊದಲಾದ ಗ್ರಂಥಗಳ ರಚನೆಗೆ ಕೈಹಾಕಿದರು. ಜಾನ್‌ಹ್ಯಾಂಡ್, ವಿಲಿಯಂ ರೀವ್, ಕಿಟ್ಟೆಲ್, ಜೀಗ್ಲರ್, ಬಿ.ಎಲ್.ರೈಸ್, ಇ.ಪಿ.ರೈಸ್ ಮೊದಲಾದವರಿಂದ ಕನ್ನಡ ಭಾಷಾಸಾಹಿತ್ಯಗಳಿಗೆ ಆಗಿರುವ ಸೇವೆ ಅಪಾರ. ಪಾದ್ರಿಗಳು ಕನ್ನಡ ಸಾಹಿತ್ಯದ ಹಲವು ಹೊಸಮುಖಗಳಿಗೆ ಅಂಕುರಾರ್ಪಣೆ ಮಾಡಿದರು: ವಸ್ತುನಿಷ್ಠವಾದ ಆಧುನಿಕ ಸಾಹಿತ್ಯ ವಿಮರ್ಶೆಗೆ ತಳಹದಿ ಹಾಕಿದರು. ಮೊಟ್ಟಮೊದಲ ಕನ್ನಡ ಸಾಹಿತ್ಯ ಚರಿತ್ರೆ ಬರೆದ ಕೀರ್ತಿ ಇ.ಪಿ.ರೈಸ್ (ಮೊದಲ ಮುದ್ರಣ 1915), ಅವರಿಗೆ ಸಲ್ಲುತ್ತದೆ. ಕನ್ನಡ ಶಾಸನಗಳನ್ನು ಕಲೆಹಾಕಿದ ಕೀರ್ತಿ ಫ್ಲೀಟ್ (ಮೊದಲ ಮುದ್ರಣ 1878) ಅವರದಾದರೆ, ಮೈಸೂರು ಗೆಜೆಟಿಯರಿನ ಎರಡು ಸಂಪುಟಗಳನ್ನೂ ಎಪಿಗ್ರಾಫಿಯ ಕರ್ನಾಟಿಕದ ಹನ್ನೆರಡು ಸಂಪುಟಗಳನ್ನೂ ಹೊರತಂದ ಕೀರ್ತಿ ಬಿ.ಎಲ್.ರೈಸ್ ಅವರಿಗೆ ಸಲ್ಲುತ್ತದೆ. ದ್ರಾವಿಡ ಭಾಷೆಗಳ ತುಲನಾತ್ಮಕ ವ್ಯಾಕರಣ ನೀಡಿದ ಕಾಲ್ಡ್‌ವೆಲ್ಲರು ಹಲವು ದೃಷ್ಟಿಗಳಿಂದ ಚಿರಸ್ಮರಣೀಯರು.

ಆಧುನಿಕ ಸಾಹಿತ್ಯದ ಅಂಕುರಾರ್ಪಣೆಗೆ ಮೈಸೂರು ಅರಸರಿಂದ ದೊರೆತ ಸಹಾಯವೂ ಬಹುಮುಖ್ಯವಾದದ್ದು. ಚಾಮರಾಜ ಒಡೆಯರು ತಮ್ಮ ಆಶ್ರಯದಲ್ಲಿ ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾವನ್ನು ಸ್ಥಾಪಿಸಿ, ತಮ್ಮ ಆಸ್ಥಾನಪಂಡಿತರನ್ನು ನಾಟಕ ರಚನೆಗೆ ಕೈ ಹಾಕುವಂತೆ ಪ್ರೋತ್ಸಾಹಿಸಿದರು. ಅಭಿನವ ಕಾಳಿದಾಸರೆಂದು ಪ್ರಸಿದ್ಧರಾಗಿದ್ದ ಬಸವಪ್ಪಶಾಸ್ತ್ರಿಗಳು ಶಾಕುಂತಲ ಮೊದಲಾದ ಸಂಸ್ಕೃತ ನಾಟಕಗಳ ಭಾಷಾಂತರಗಳನ್ನೂ ಶೂರಸೇನಚರಿತೆ ಎಂಬ ಹೆಸರಿನಿಂದ ಒಥೆಲೊ ಎಂಬ ಇಂಗ್ಲಿಷ್ ನಾಟಕದ ಭಾಷಾಂತರವನ್ನೂ ಕನ್ನಡಕ್ಕೆ ಕೊಟ್ಟರು. ಆಸ್ಥಾನಕವಿಗಳಾದ ಜಯರಾಯಾಚಾರ್ಯ, ಸುಬ್ಬಾಶಾಸ್ತ್ರಿ, ಅನಂತನಾರಾಯಣ ಶಾಸ್ತ್ರಿ ಮೊದಲಾದವರೂ ಈ ಕಾರ್ಯರಂಗದಲ್ಲಿ ದುಡಿದು ಕೀರ್ತಿಶೇಷರಾದರು. ಚಾಮರಾಜರ ಅನಂತರ ಪಟ್ಟಕ್ಕೆ ಬಂದ ನಾಲ್ವಡಿ ಕೃಷ್ಣರಾಜರು ಆಧುನಿಕ ಕನ್ನಡದ ಸ್ವರ್ಣಯುಗಕ್ಕೆ ತಳಹದಿ ಹಾಕಿದವರೆಂದು ಹೇಳಬಹುದು. ಅವರ ಆಸ್ಥಾನಕವಿಗಳಾದ ಶ್ರೀಕಂಠಶಾಸ್ತ್ರಿಗಳೂ ನರಹರಿಶಾಸ್ತ್ರಿಗಳೂ ನೂರಾರು ಸ್ವತಂತ್ರ ನಾಟಕಗಳನ್ನು ರಚಿಸಿ ನಾಟಕ ರಂಗಸ್ಥಳಗಳ ದಿಗ್ವಿಜಯಕ್ಕೆ ಕಾರಣರಾದುದಲ್ಲದೆ ಹಲವು ಕಾವ್ಯಗಳ ಕರ್ತೃಗಳಾಗಿ ಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿದರು. ಅದರಲ್ಲಿಯೂ ಶ್ರೀಕಂಠಶಾಸ್ತ್ರಿಗಳ ಬಹುಮುಖ ಪ್ರತಿಭೆ ಅಚ್ಚರಿಯನ್ನುಂಟುಮಾಡುತ್ತದೆ. ಹಲವು ಕಾದಂಬರಿಗಳು, ವ್ಯಂಗ್ಯಚಿತ್ರಗಳು, ವಿಡಂಬನಾತ್ಮಕ ಪ್ರಬಂಧಗಳು;' ಸಂಸ್ಕೃತ, ತೆಲುಗು, ಗ್ರಂಥ'ಗಳ ಅನುವಾದಗಳು ಇವರಿಂದ ಮೂಡಿಬಂದವು. ಇದೇ ಸಂದರ್ಭದಲ್ಲಿ ಶ್ರೀಕೃಷ್ಣರಾಜ ಒಡೆಯರು ಕನ್ನಡ ನವೋದಯಕ್ಕಾಗಿ ನೀಡಿದ ಎರಡು ಮುಖ್ಯ ಕಾಣಿಕೆಗಳೆಂದರೆ ಕನ್ನಡ ಸಾಹಿತ್ಯ ಪರಿಷತ್ತು (1915) ಮತ್ತು ಮೈಸೂರು ವಿಶ್ವವಿದ್ಯಾನಿಲಯ (1916). ಈ ಎರಡು ಸಂಸ್ಥೆಗಳಿಂದ ಆಧುನಿಕ ಕನ್ನಡ ಸಾಹಿತ್ಯಕ್ಕೆ ಸಂದಿರುವ ಸೇವೆ ಅಪಾರ.

ಕನ್ನಡ ಸಾಹಿತ್ಯದಲ್ಲಾದ ನವೋದಯ ಕ್ರಾಂತಿ ನಮಗೆ ನಿಚ್ಚಳವಾಗಿ ಕಾಣುವುದು 20ನೆಯ ಶತಮಾನದ ಆದಿಭಾಗದಿಂದ. ಈ ಕ್ರಾಂತಿ 12ನೆಯ ಶತಮಾನದಲ್ಲಿ ಆದ ಕನ್ನಡಸಾಹಿತ್ಯದ ಕ್ರಾಂತಿಯಿಂದ ಸಂಪೂರ್ಣ ಭಿನ್ನವಾದುದು. ಅಂದಿನ ಕ್ರಾಂತಿ ಬಹುಮುಖ್ಯವಾದ ಧರ್ಮಮೂಲವಾದುದಾಗಿದ್ದರೆ ಇಂದಿನದು ವಿಶ್ವವಿಶಾಲವಾದ ಲೌಕಿಕ ಜ್ಞಾನ ಸಾಧನೆಯನ್ನು ಹೆಗ್ಗುರಿಯಾಗಿಟ್ಟುಕೊಂಡಿತು. ಇದರ ಮುಖ್ಯ ಲಕ್ಷಣ ವೈಜ್ಞಾನಿಕ ಮನೋಭಾವನೆ. ಈ ಮನೋಭಾವನೆಗೆ ಬೀಜಭೂತವಾದುದು ಸ್ವತಂತ್ರ ವಿವೇಚನೆ. ಬುದ್ಧಿಗೆ ಇಲ್ಲಿ ಪ್ರಾಧಾನ್ಯ. ಮತಸೂಚಕ ಭಾವನೆಗಳಿಗೆ ಪ್ರಾಧಾನ್ಯತೆ ತಗ್ಗಿ ವಿಶಾಲ ಭಾವನೆಗಳಿಗೆ ಇಂಬು ದೊರಕಿತು. ನಮ್ಮ ಪ್ರಾಚೀನ ಸಾಹಿತ್ಯದ ಸತ್ತ್ವದೊಡನೆ ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ಬಂದ ನೂತನ ಭಾವನೆಗಳನ್ನು ಅಳವಡಿಸಿಕೊಂಡು ಹೊಸತು ಹಳತು, ನಮ್ಮದು ಹೆರರದು ಎಲ್ಲವನ್ನೂ ಹೊಂದಿಸಿಕೊಂಡು, ಸಮನ್ವಯಗೊಳಿಸಿಕೊಂಡು ಆಧುನಿಕ ಸಾಹಿತ್ಯ ಶ್ರೀಮಂತವಾಯಿತು. ಹಿಂದೆಂದೂ ಕಾಣಬರದಷ್ಟು ಅಪಾರ ಸಂಖ್ಯೆಯ ಕವಿಗಳೂ ಗ್ರಂಥ'ಕರ್ತರೂ ಈ ಯುಗದಲ್ಲಿ ಕಾಣಿಸಿಕೊಂಡರು. ಇಲ್ಲಿನ ಸಾಹಿತ್ಯದ ವೈಪುಲ್ಯ 'ವೈವಿಧ್ಯ'. ವೈಶಾಲ್ಯಗಳು ಚಕಿತಗೊಳ್ಳುವಷ್ಟು ಅಪಾರವಾದುವು. ಈ ಸಾಹಿತ್ಯ ರಾಶಿಯನ್ನು ಪದ್ಯ ಮತ್ತು ಗದ್ಯ ಎಂದು ಎರಡು ವಿಧವಾಗಿ ವಿಂಗಡಿಸಬಹುದು. ಹೊಸ ಸಾಹಿತ್ಯ ಬೆಳೆಯುವುದರ ಜೊತೆ ಜೊತೆಯಲ್ಲೇ ಸಂಪ್ರದಾಯಬದ್ಧವಾದ ಕಾವ್ಯಪ್ರಕಾರ - ವಸ್ತು, ರೀತಿಗಳಲ್ಲಿ ಪ್ರಾಚೀನ ಸಾಹಿತ್ಯವನ್ನು ಅನುಸರಿಸುತ್ತಿರುವ ಕಾವ್ಯಗಳು ಬೆಳೆದುಕೊಂಡು ಬಂದುವು. ಸೋಸಲೆ ಅಯ್ಯಾಶಾಸ್ತ್ರಿ, ಹೊಸಕೆರೆ ಚಿದಂಬರಯ್ಯ, ನಂಜನಗೂಡು ಶ್ರೀಕಂಠಶಾಸ್ತ್ರಿ, ಬೆಳ್ಳಾವೆ ನರಹರಿಶಾಸ್ತ್ರಿ, ಶ್ರೀನಿವಾಸ ರಂಗಾಚಾರ್ಯ, ಡಿ.ವಿ.ಗುಂಡಪ್ಪ, ಹೆಮ್ಮಿಗೆ ದೇಶಿಕಾಚಾರ್ಯ, ಘನಪಾಠಿ ನಾರಾಯಣ ಮೊದಲಾದವರು ಚಂಪೂಕಾವ್ಯಗಳನ್ನು ರಚಿಸಿದ್ದಾರೆ. ಮುದ್ದಣನ ಶ್ರೀ ರಾಮಪಟ್ಟಾಭಿಷೇಕ, ವೆಂಕಟಸುಬ್ಬಯ್ಯನವರ ವಿನಾಯಕವಿಜಯ, ಸೋಸಲೆ ಅಯ್ಯಾಶಾಸ್ತ್ರಿಗಳ ಶೇಷರಾಮಾಯಣಂ, ಮುಳಿಯ ತಿಮ್ಮಪ್ಪಯ್ಯನವರ ಸೊಬಗಿನ ಬಳ್ಳಿ, ಸೇಡಿಯಾಪು ಕೃಷ್ಣಭಟ್ಟರ ಕೃಷ್ಣಾಕುಮಾರಿ, ಮೈ.ಶೇ.ಅನಂತ ಪದ್ಮನಾಭರಾಯರ ಶ್ರೀಕೃಷ್ಣಾಚರಿತಾಮೃತಂ, ಆಸೂರಿ ರಾಮಸ್ವಾಮಿ ಅಯ್ಯಂಗಾರ್ಯರ ಶ್ರೀನಿವಾಸ ಲೀಲಾವಾಸ ಇತ್ಯಾದಿ ಗ್ರಂಥಗಳು ವಿವಿಧ ಷಟ್ಪದಿಗಳಲ್ಲಿವೆ. ಜಯದೇವಿತಾಯಿ ಲಿಗಾಡೆಯವರು ಸಿದ್ಧರಾಮಪುರಾಣವನ್ನು ಸಾಂಗತ್ಯದಲ್ಲಿ ಬರೆದಿದ್ದಾರೆ. ಕಾವ್ಯಗುಣದ ದೃಷ್ಟಿಯಿಂದಲೂ ಇವು ಗಮನಾರ್ಹವಾಗಿವೆ. ಆಧುನಿಕ ಸಾಹಿತ್ಯಪ್ರಕಾರದಲ್ಲಿ ಬಹುಮಟ್ಟಿಗೆ ಭಾವಗೀತೆ ಪ್ರಮುಖವಾಯಿತು. ಖಂಡಕಾವ್ಯಗಳು, ಕಥ'ನಕವನಗಳು, ಗೀತನಾಟಕಗಳು ಇತ್ಯಾದಿ ಕಾವ್ಯಮುಖಗಳು ಕಾಣಿಸಿಕೊಂಡಿದ್ದರೂ ಅವುಗಳ ಸಂಖ್ಯೆ ಅಲ್ಪ. ವಸ್ತುರೀತಿಗಳಲ್ಲಿ ಹಿಂದಿನ ಕಾವ್ಯಗಳು ಅನುಸರಿಸಬೇಕಾಗಿದ್ದ ಕಠಿಣವಾದ ನಿಯಮಗಳ ಶೃಂಖಲೆಗಳನ್ನು ಈ ಸಾಹಿತ್ಯ ಪ್ರಕಾರ ಸಡಿಲಗೊಳಿಸಿತು. ಚ.ವಾಸುದೇವಯ್ಯ, ಶ್ರೀನಿವಾಸರಾವ್, ಎಸ್.ಜಿ.ನರಸಿಂಹಾಚಾರ್, ಪಂಜೆ ಮಂಗೇಶರಾವ್ ಮೊದಲಾದ ಕವಿಗಳು ಈ ಶತಮಾನದ ಆರಂಭ ಕಾಲದಲ್ಲಿಯೆ ಈ ಪ್ರಕಾರಕ್ಕೆ ಕೈಹಾಕಿದ್ದರೂ ಇವುಗಳ ಪ್ರಭಾವವನ್ನು ಜನರ ಮೇಲೆ ಅಚ್ಚೊತ್ತಿ, ಹೊಸ ಹೆದ್ದಾರಿಯೊಂದನ್ನು ನಿರ್ಮಿಸಿದ ಕೀರ್ತಿ ಬಿ.ಎಂ.ಶ್ರೀ ಅವರಿಗೆ ಸಲ್ಲುತ್ತದೆ. ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಕವನಗಳ ಭಾಷಾಂತರಗಳನ್ನು ಒಳಗೊಂಡ ಅವರ ಇಂಗ್ಲಿಷ್ ಗೀತಗಳು ಸ್ವಭಾವ ಸುಂದರವಾಗಿವೆ, ಲಲಿತ ರಮಣೀಯವಾಗಿವೆ. ಅಸಂಖ್ಯಾತ ಕವಿಗಳು ಈ ಪ್ರಕಾರಕ್ಕೆ ಕೈಹಾಕಿರುವರಾದರೂ ಕುವೆಂಪು, ಬೇಂದ್ರೆ ಇವರಿಬ್ಬರೂ ಆಧುನಿಕ ನವೋದಯ ಸಾಹಿತ್ಯಕ್ಕೆ ಒತ್ತುಕೊಟ್ಟ ಕವಿಗಳು. ಕುವೆಂಪು ಅವರು ಕನ್ನಡಕ್ಕೆ ನೀಡಿರುವ ಕೊಡುಗೆ ಅಸದೃಶವಾದುದು. ಅವರ ಶ್ರೀ ರಾಮಾಯಣದರ್ಶನಂ ಆಧುನಿಕ ಕನ್ನಡ ಸಾಹಿತ್ಯದ ಮೇರುಕೃತಿ. ಈ ಕಾವ್ಯದಲ್ಲಿ ಕುವೆಂಪು ಅವರ ಕಾವ್ಯಾಸಕ್ತಿ ಅಪೂರ್ವವಾದುದು. ಆಧುನಿಕ ಕನ್ನಡ ಕವಿಗಳಲ್ಲಿ ಅಗ್ರಗಣ್ಯರಾದ ಇವರ ಭಾವಗೀತೆಗಳನ್ನು ಕುರಿತು ವಿವೇಚಿಸುವಾಗ ಮಾತ್ರ ಇವರ ಕಾವ್ಯಶಕ್ತಿ ಇಂಗ್ಲಿಷ್‌ನಲ್ಲಿ ಮೊದಲು ಇಣಿಕಿ ಹಾಕಿ, ಆಮೇಲೆ ಕನ್ನಡದ ಭಾವಗೀತೆಗಳಲ್ಲಿ ಅಭಿವ್ಯಕ್ತವಾಗಿದೆ ಎನ್ನಬೇಕು. ಇವರ ಕವಿತೆಗಳಲ್ಲಿ ಸರ್ವತೋಮುಖವಾದ ಆಸಕ್ತಿ ಕಂಡುಬರುವುದಾದರೂ ಪ್ರಕೃತಿ ಪ್ರೇಮ, ಆಧ್ಯಾತ್ಮ, ಭಕ್ತಿ -ಇವು ಸ್ಥಾಯೀಭಾವವನ್ನು ಪಡೆದಿವೆ. ಇವರ ನಾಟಕಗಳು ಕೂಡ ಭಾವ ಗೀತಾತ್ಮಕವಾದುವು. ದ.ರಾ.ಬೇಂದ್ರೆಯವರು ಅಂಬಿಕಾತನಯದತ್ತ ಎಂಬ ಕಾವ್ಯನಾಮದಿಂದ ವಿಪುಲವಾಗಿ ಕವನಗಳನ್ನು ಬರೆದಿರುವರು. ಇವರ ಕವನಗಳಲ್ಲಿ ವಿಷಯ ಮತ್ತು ಅದರ ನಿರೂಪಣೆಯಲ್ಲಿ ಕಾಣಬರುವ ವೈವಿಧ್ಯ, ಮಾತಿನ ಚಮತ್ಕಾರ, ಆಧ್ಯಾತ್ಮ ವಿಚಾರ ಲಹರಿ, ಜನಪದ ಧಾಟಿ, ನಾದಮಾಧುರ್ಯಗಳು ಅತ್ಯಂತ ಹೃದ್ಯವಾಗಿವೆ. ಇವರಿಬ್ಬರೂ ಆಧುನಿಕ ಕನ್ನಡ ಸಾಹಿತ್ಯದ ಎರಡು ವಿಶಿಷ್ಟ ಪಂಥಗಳ ನಿರ್ಮಾತೃಗಳು. ಪು.ತಿ.ನ. ಅವರು ಪ್ರಕೃತಿವರ್ಣನೆಯಲ್ಲಿ, ಭಕ್ತಿಪಾರಮ್ಯದಲ್ಲಿ, ಭಾರತಸಂಸ್ಕೃತಿಯ ದಿಗ್ದರ್ಶನದಲ್ಲಿ, ಭಾವಭಾಷೆಗಳ ಕುಸುರಿಗೆಲಸ ಮಾಡುವುದರಲ್ಲಿ ಅಗ್ರಗಣ್ಯರು. ವಿ.ಸೀ., ಡಿ.ವಿ.ಜಿ., ಶ್ರೀನಿವಾಸ, ವಿನಾಯಕ, ರಾಜರತ್ನಂ. ಕೆ.ಎಸ್.ನರಸಿಂಹಸ್ವಾಮಿ, ಗೋಪಾಲಕೃಷ್ಣ ಅಡಿಗ, ಚೆನ್ನವೀರ ಕಣವಿ, ಜಿ.ಎಸ್.ಶಿವರುದ್ರಪ್ಪ, ನಿಸಾರ್ ಅಹಮದ್, ಚಂದ್ರಶೇಖರ ಕಂಬಾರ ಮೊದಲಾದ ಹಿರಿಯ ಕಿರಿಯ ಕವಿಗಳು ಒಬ್ಬೊಬ್ಬರೂ ತಮ್ಮ ವ್ಯಕ್ತಿತ್ವವನ್ನು ಸ್ಥಾಪಿಸಿಕೊಂಡಿರುವ ಶ್ರೇಷ್ಠ ಕವಿಗಳಾಗಿದ್ದಾರೆ.

ಸು.1950ರ ಸುಮಾರಿನಿಂದ ಈಚೆಗೆ ನವ್ಯಕಾವ್ಯ ಎಂಬ ಹೆಸರಿನಿಂದ ಹೊಸದೊಂದು ಶಾಖೆ ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡಿತು. ಟಿ.ಎಸ್.ಎಲಿಯೆಟ್, ಆಡೆನ್, ಸೆಸಿಲ್ ಡೆ ಲೂಯಿ ಮೊದಲಾದ ಸಮಕಾಲೀನ ಇಂಗ್ಲಿಷ್ ಕವಿಗಳಿಂದ ಸ್ಫೂರ್ತಿಗೊಂಡ ಹಲವು ಕವಿಗಳು

ಹೊಸರೀತಿಯ ಪ್ರಯೋಗಗಳ ಮೂಲಕ ಹೊಸ ಹಾದಿಯೊಂದನ್ನು ನಿರ್ಮಿಸಲು ಹೊರಟರು. ವ್ಯಕ್ತಿನಿಷ್ಠವಾಗಿ ಹೊಸ ವಸ್ತು, ಹೊಸ ಭಾಷೆ, ಹೊಸ ಶೈಲಿ, ಹೊಸ ಧೋರಣೆಗಳಿಂದ ಹೊರಟಿರುವ ಈ ಕವಿ ಕಾವ್ಯಗಳಲ್ಲಿ ಕವಿಮನದ ಸಂಕೀರ್ಣತೆಯನ್ನು ಅಭಿವ್ಯಕ್ತಗೊಳಿಸಲು ಬಳಸುವ ರೂಪಕಗಳೂ ಸಾಮತಿಗಳೂ ಅನೇಕ ವೇಳೆ ಓದುಗರನ್ನು ಚಕಿತಗೊಳಿಸುತ್ತವೆ. ಸಾಂಕೇತಿಕವಾಗಿರುವ ಹಲವು ಮಾತುಗಳು ಅವುಗಳ ಪರಿಚಯವಿಲ್ಲದವರಿಗೆ ಕ್ಲಿಷ್ಟವೆನಿಸಿವೆ. ಈ ಪರಂಪರೆಯನ್ನು ಪ್ರಾರಂಭಿಸಿದ ಕೀರ್ತಿ ವಿ.ಕೃ. ಗೋಕಾಕರಿಗೆ ಸಲ್ಲುತ್ತದೆ. ಆದರೆ ಇವರ ಕವನಗಳಲ್ಲಿ ಸಂಪ್ರದಾಯ, ನವ್ಯತೆಗಳು ಸಮರಸವಾಗಿ ಬೆರೆತಿವೆ. ನವ್ಯಮಾರ್ಗದಲ್ಲಿ ಗೋಪಾಲಕೃಷ್ಣ ಅಡಿಗರ ಹೆಸರು ಅತ್ಯಂತ ಗಣ್ಯವಾದುದು. ಇವರ ಕವಿತೆಗಳು ಇವರ ಪ್ರತಿಭೆ, ಕಲ್ಪನಾಶಕ್ತಿಗಳ ಮಹತ್ತಿಗೆ ಸಾಕ್ಷಿಗಳಾಗಿವೆ. ಗಂಗಾಧರ ಚಿತ್ತಾಲ, ಶಂಕರ ಮೊಕಾಶಿ, ಕೆ.ಎಸ್.ನ., ರಾಮಚಂದ್ರ ಶರ್ಮ, ಎ.ಕೆ.ರಾಮಾನುಜನ್, ಜಿ.ಎಸ್.ಸಿದ್ಧಲಿಂಗಯ್ಯ, ಅರವಿಂದನಾಡಕರ್ಣಿ, ಪಿ.ಲಂಕೇಶ್, ಎಚ್.ಎಂ.ಚನ್ನಯ್ಯ, ಸುಮತೀಂದ್ರ ನಾಡಿಗ, ಕೆ.ಎಸ್.ನಿಸಾರ್ ಅಹಮದ್, ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟ, ಶ್ರೀಕೃಷ್ಣ ಆಲನಹಳ್ಳಿ ಮೊದಲಾದವರು ನವ್ಯಕಾವ್ಯ ಜಗತ್ತಿನಲ್ಲಿ ಗಣ್ಯರಾದವರು. ನವ್ಯರೆಂದು ಮುದ್ರೆಯೊತ್ತದ ಕವಿ ಕುವೆಂಪು, ಬೇಂದ್ರೆ, ಪುತಿನ ಇವರಲ್ಲಿಯೂ ಈಚಿನ ಕೆಲವು ಕೃತಿಗಳಲ್ಲಿ ನವ್ಯತೆಯ ಸೊಗಡನ್ನು ಕಾಣಬಹುದು.

ಇಂಗ್ಲಿಷ್ ಶಿಕ್ಷಣದ ಪ್ರಭಾವದಿಂದ ನಮ್ಮಲ್ಲಿ ಜಾನಪದದತ್ತ ಆಸಕ್ತಿ ಮೂಡಿ ಜನಪದ ಸಾಹಿತ್ಯ ಸಂಗ್ರಹದ ಕೃಷಿ ಕಳೆದ ಏಳು ದಶಕಗಳ ಹಿಂದಿನಿಂದ ಪ್ರಾರಂಭವಾಯಿತು. ಹಲಸಂಗಿ ಸೋದರರಾದ ರೇವಪ್ಪ, ಮಧುರ ಚೆನ್ನ, ಸಿಂಪಿ ಲಿಂಗಣ್ಣ- ಈ ಮೂವರು ಹೊರತಂದ ಗರತಿಯ ಹಾಡು ಕನ್ನಡದ ಮೊಟ್ಟಮೊದಲ ಜನಪದ ಸಂಗ್ರಹ. ರೇವಪ್ಪನವರು ಹೊರತಂದ ಮಲ್ಲಿಗೆ ದಂಡೆ ಜನಪದ ಸಾಹಿತ್ಯದ ಎಲ್ಲ ಮುಖಗಳನ್ನೂ ಒಳಗೊಂಡ ಅಮೂಲ್ಯ ಸಂಗ್ರಹ. ಇವೆರಡೂ ತ್ರಿಪದಿಗಳಲ್ಲಿವೆ. ಸಿಂಪಿ ಲಿಂಗಣ್ಣ, ಅರ್ಚಕ ರಂಗಸ್ವಾಮಿ, ಗೊರೂರು ರಾಮಸ್ವಾಮಿಅಯ್ಯಂಗಾರ್, ಮತಿಘಟ್ಟ ಕೃಷ್ಣಮೂರ್ತಿ, ಗದ್ದಗಿಮಠ, ಕರಾಕೃ, ಜೀ.ಶಂ.ಪ., ರಾಗೌ, ಧವಳಶ್ರೀ, ಪಿ.ಕೆ.ರಾಜಶೇಖರ ಮೊದಲಾದ ನೂರಾರು ಜನ ತಮ್ಮ ಸಂಗ್ರಹಗಳಿಂದ ಈ ಸಾಹಿತ್ಯ ಪ್ರಕಾರವನ್ನು ಶ್ರೀಮಂತಗೊಳಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಜಾನಪದ ಅಧ್ಯಯನಕ್ಕೆ ಅವಕಾಶ ದೊರೆತು ಜಾನಪದ ವಸ್ತುಸಂಗ್ರಹಾಲಯವೂ ಸ್ಥಾಪನೆಯಾಗಿದ್ದು ಜಾನಪದದ ವೈಜ್ಞಾನಿಕ ಅಧ್ಯಯನ ನಡೆಯುತ್ತಿದೆ.

ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಯಿಂದ ಉದಿಸಿದ ಆಧುನಿಕ ಕನ್ನಡ ಸಾಹಿತ್ಯದ ಇನ್ನೊಂದು ವಿಶೇಷ ಪ್ರಕಾರವೆಂದರೆ ಗದ್ಯಸಾಹಿತ್ಯ. ಪಾಶ್ಚಾತ್ಯ ಸಾಹಿತ್ಯದಲ್ಲಿ ಕಾಣಬರುವ ಎಲ್ಲ ಗದ್ಯಪ್ರಕಾರಗಳೂ - ಕಾದಂಬರಿ, ಸಣ್ಣಕಥೆ, ಜೀವನಚರಿತ್ರೆ, ನಾಟಕ, ವ್ಯಕ್ತಿಚಿತ್ರ, ಪ್ರಬಂಧ - ಹರಟೆ, ಪ್ರವಾಸ ಸಾಹಿತ್ಯ, ಪತ್ರ ಸಾಹಿತ್ಯ, ವೈಜ್ಞಾನಿಕ ಸಾಹಿತ್ಯ, ಮಕ್ಕಳ ಸಾಹಿತ್ಯ, ವಿಮರ್ಶೆ, ಹಾಸ್ಯ ಪ್ರಬಂಧ ಇತ್ಯಾದಿ - ಆಧುನಿಕ ಕನ್ನಡ ಸಾಹಿತ್ಯದಲ್ಲಿಯೂ ಬೆಳೆದು ನಿಂತಿವೆ. ಹೊಸಗನ್ನಡ ಗದ್ಯ ಸಾಹಿತ್ಯಕ್ಕೆ ಕೆಂಪುನಾರಾಯಣ (ಸು.1823) ತನ್ನ ಮುದ್ರಾಮಂಜೂಷದಿಂದ ನಾಂದಿ ಹಾಡಿದನೆಂದು ಹೇಳಬಹುದು. ಇದೇ ಸಂದರ್ಭದಲ್ಲಿ ಸಂಪ್ರದಾಯಕ್ಕೂ ಆಧುನಿಕತೆಗೂ ಕಟ್ಟಿದ ರಸಸೇತುವೆಯಂತಿರುವ ಮುದ್ದಣನನ್ನು ಹೆಸರಿಸಬಹುದು. ಈತ ಅದ್ಭುತ ರಾಮಾಯಣ, ರಾಮಾಶ್ವಮೇಧ ಎಂಬ ಎರಡು ಗದ್ಯಗ್ರಂಥಗಳನ್ನು ಬರೆದಿದ್ದಾನೆ. ಹಳಗನ್ನಡ-ನಡುಗನ್ನಡ ಬೆರೆತ ಇವನ ಗದ್ಯಶೈಲಿ ಹೊಸಗನ್ನಡಕ್ಕೆ ನಾಂದಿ ಹಾಡಿತೆಂದು ಹೇಳಬಹುದು. ಭಾಷಾಶೈಲಿಯ ದೃಷ್ಟಿಯಿಂದ ಈತನ ಗದ್ಯ ವಿಶಿಷ್ಟವಾಗಿದೆ. ಇವೆರಡರ ವಸ್ತುವೂ ಹಳೆಯದು. ಬಳಸಿರುವ ಭಾಷೆ ಹಳಗನ್ನಡ, ಆದರೆ ಕವಿಯ ಮನೋಭಾವ ಆಧುನಿಕ. ರಾಮಾಶ್ವಮೇಧದ ಮುದ್ದಣ ಮನೋರಮೆಯರ ಸಂಭಾಷಣೆ ಸ್ವಾರಸ್ಯಪೂರ್ಣವಾಗಿದೆ.

ಆಧುನಿಕ ಕನ್ನಡ ಗದ್ಯ ಪ್ರಕಾರಗಳಲ್ಲಿ ಕಾದಂಬರಿ ಅತ್ಯಂತ ಜನಪ್ರಿಯವಾದುದು. ಈ ಪ್ರಕಾರ ಕನ್ನಡದಲ್ಲಿ ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿಯೆ ಕ್ವಚಿತ್ತಾಗಿ ಕಾಣಿಸಿಕೊಂಡಿತಾದರೂ ನಮ್ಮ ಜನರಲ್ಲಿ ಇದರ ವಾಚನಾಭಿರುಚಿಯನ್ನು ನೆಲೆಗೊಳಿಸಿದವರು ಬಿ.ವೆಂಕಟಾಚಾರ್ಯ ಮತ್ತು ಗಳಗನಾಥರು. ಗುಲ್ವಾಡಿ ವೆಂಕಟರಾಯ, ಬೋಳಾರ ಬಾಬುರಾಯ, ಕೆರೂರ ವಾಸುದೇವಾಚಾರ್ಯ ಮೊದಲಾದವರು ಸುಂದರವಾದ ಸ್ವತಂತ್ರ ಕಾದಂಬರಿಗಳನ್ನು ರಚಿಸಿದ್ದಾರೆ. ಅವು ಕೇವಲ ಒಂದೋ ಎರಡೋ ಅಷ್ಟೇ. ವಾಸ್ತವಿಕತೆಯನ್ನು ಕಾದಂಬರಿಯಲ್ಲಿ ತರುವ ಸಂಪ್ರದಾಯಕ್ಕೆ ಎಂ.ಎಸ್.ಪುಟ್ಟಣ್ಣನವರು ಆದ್ಯರಾದರು. 1930ರಿಂದ ಈಚೆಗೆ ಕಾದಂಬರಿಕಾರರ ಸಂಖ್ಯೆ ಅಪರಿಮಿತವಾಗಿದೆ. ಇವರ ಸಾಲಿನಲ್ಲಿ ಶಿವರಾಮ ಕಾರಂತ, ಕುವೆಂಪು, ರಾವಬಹಾದ್ದೂರ ಇವರ ಹೆಸರುಗಳು ಅಗ್ರಗಣ್ಯವಾದವು. ಆಧುನಿಕ ಕಾದಂಬರಿಕಾರರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಾದಂಬರಿಗಳನ್ನು ಬರೆದವರಲ್ಲಿ ಅ.ನ.ಕೃ. ಪ್ರಸಿದ್ಧರು. ಅ.ನ.ಕೃ. ಅವರ ಪರಂಪರೆಗೆ ಸೇರಿದವರು ತ.ರಾ.ಸು. ಚಿತ್ರದುರ್ಗದ ಇತಿಹಾಸವನ್ನು ಆಧರಿಸಿ ಬರೆದಿರುವ ಇವರ ಐತಿಹಾಸಿಕ ಕಾದಂಬರಿಗಳು ಸುಪ್ರಸಿದ್ಧವಾಗಿವೆ. ವಿನಾಯಕ, ಮಿರ್ಜಿ ಅಣ್ಣಾರಾಯ, ಶ್ರೀರಂಗ, ಶ್ರೀನಿವಾಸ, ಕೆ.ವಿ.ಅಯ್ಯರ್, ಬಿ.ಪುಟ್ಟಸ್ವಾಮಯ್ಯ, ಕೃಷ್ಣಮೂರ್ತಿ ಪುರಾಣಿಕ, ಎಸ್.ಎಲ್.ಭೈರಪ್ಪ, ತ್ರಿವೇಣಿ, ಎಂ.ಕೆ.ಇಂದಿರಾ ಮೊದಲಾದ ಕಾದಂಬರಿಕಾರರು ಈ ಸಾಹಿತ್ಯ ಪ್ರಕಾರವನ್ನು ಶ್ರೀಮಂತಗೊಳಿಸಿದ್ದಾರೆ.

ಹೊಸಗನ್ನಡ ಗದ್ಯಸಾಹಿತ್ಯದಲ್ಲಿ ಕಾದಂಬರಿಯನ್ನು ಬಿಟ್ಟರೆ ಎರಡನೆಯ ಸ್ಥಾನ ಸಣ್ಣಕಥೆಗೆ ಸಲ್ಲುತ್ತದೆ. ಈ ಪ್ರಕಾರದಲ್ಲಿ ಕೆಲಸ ಮಾಡಿರುವವರ ಸಂಖ್ಯೆಯೂ ಅಪಾರ. ಕನ್ನಡದಲ್ಲಿ ಸಣ್ಣಕಥೆಯನ್ನು ಆರಂಭಿಸಿದವರು ಯಾರೇ ಆಗಲಿ ಅದನ್ನು ಸ್ಥಾಯಿಯಾಗಿ ಮಾಡಿದವರು ಶ್ರೀನಿವಾಸರು. ಕೆರೂರ ವಾಸುದೇವಾಚಾರ್ಯ, ಎಂ.ಎನ್.ಕಾಮತ್, ಪಂಜೆಮಂಗೇಶರಾವ್ - ಇವರು ಶ್ರೀನಿವಾಸರ ಸಮಕಾಲೀನರು. ಈ ಪ್ರಕಾರವನ್ನು ಕುವೆಂಪು, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಚದುರಂಗ, ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ, ಅಶ್ವತ್ಥ, ಅ.ನ.ಕೃ. ಗೌರಮ್ಮ, ಯು.ಆರ್.ಅನಂತಮೂರ್ತಿ, ಪೂರ್ಣಚಂದ್ರ, ತೇಜಸ್ವಿ, ಸದಾಶಿವ, ದೇವನೂರು ಮಹಾದೇವ, ಮೊಗಳ್ಳಿಗಣೇಶ ಮೊದಲಾದವರು ಸಮರ್ಥವಾಗಿ ಮುಂದುವರಿಸಿದರು.

ಗದ್ಯಪ್ರಕಾರಗಳಲ್ಲಿ ಜೀವನಚರಿತ್ರೆ ಮತ್ತೊಂದು. ಕನ್ನಡದಲ್ಲಿ ಇದುವರೆಗೆ ಸುಮಾರು ಒಂದು ಸಾವಿರದಷ್ಟು ಜೀವನಚರಿತ್ರೆಗಳು ಪ್ರಕಟಗೊಂಡಿವೆ. ಈ ಸಾಹಿತ್ಯ ಪ್ರಕಾರ ಅತ್ಯಂತ ಹುಲುಸಾಗಿ ಬೆಳೆದಿದೆ. ಈ ಪ್ರಕಾರವನ್ನು ಜನಪ್ರಿಯವಾಗಿ ಮಾಡಿದವರು ಸುಬೋಧ ರಾಮರಾಯರು. ಡಿ.ವಿ.ಜಿ., ಕುವೆಂಪು, ಸಿ.ಕೆ.ವೆಂಕಟರಾಮಯ್ಯ, ದೇಜಗೌ. ಮೊದಲಾದ ಅನೇಕರು ಶ್ರೇಷ್ಠವಾದ ಜೀವನಚರಿತ್ರೆಗಳನ್ನು ಬರೆದಿದ್ದಾರೆ.

ಇಂಗ್ಲಿಷ್ ಸಾಹಿತ್ಯದ ಸಂಪರ್ಕದಿಂದ ಕನ್ನಡದಲ್ಲಿ ಕಾಣಿಸಿಕೊಂಡ ಸಾಹಿತ್ಯ ಪ್ರಕಾರಗಳಲ್ಲಿ ನಾಟಕ ಬಹುಮುಖ್ಯವಾದುದು. ಹತ್ತೊಂಬತ್ತನೆಯ ಶತಮಾನದ ಕಡೆಯ ಭಾಗದಿಂದ ಮುಂದೆ ಈ ಪ್ರಕಾರ ಅತ್ಯಂತ ಹುಲುಸಾಗಿ ಬೆಳೆಯುತ್ತಾ ಬಂದಿದೆ. ಮೊದಮೊದಲು ಸಂಸ್ಕೃತದಿಂದ ಭಾಷಾಂತರ ಮಾಡಿಕೊಳ್ಳುವ ಪರಿಪಾಠವಿದ್ದುದು ಈ ಶತಮಾನದ ಆರಂಭದಿಂದ ಸ್ವತಂತ್ರ ನಾಟಕ ರಚನೆಗೆ ಎಡೆಮಾಡಿಕೊಟ್ಟಿತು. ಶುದ್ಧ ಗದ್ಯದಲ್ಲಿ ಸಾಮಾಜಿಕ ನಾಟಕಗಳನ್ನು ರಚಿಸಿ, ಹೆದ್ದಾರಿಯೊಂದನ್ನು ನಿರ್ಮಿಸಿದ ಕೀರ್ತಿ ಕೈಲಾಸಂ ಅವರಿಗೆ ಸಲ್ಲುತ್ತದೆ. ನಾಟಕದ ಎಲ್ಲ ಪ್ರಕಾರಗಳಲ್ಲಿಯೂ ಗದ್ಯ ಬಳಕೆಯಾಗಿರುವ ನಾಟಕಗಳು ವಿಪುಲ ಸಂಖ್ಯೆಯಲ್ಲಿ ಈಗ ಕಾಣಿಸಿಕೊಂಡಿವೆ. ಶ್ರೀರಂಗ, ಕುವೆಂಪು, ಮಾಸ್ತಿ, ಶಿವರಾಮ ಕಾರಂತ, ಪರ್ವತವಾಣಿ, ಪು.ತಿ.ನ., ವಿ.ಸೀತಾರಾಮಯ್ಯ, ಎಚ್.ಕೆ.ರಂಗನಾಥ, ಗಿರೀಶಕಾರ್ನಾಡ ಮೊದಲಾದ ನಾಟಕ ಕರ್ತೃಗಳು ಪ್ರಸಿದ್ಧರಾಗಿದ್ದಾರೆ. (ಟಿ.ಎಸ್.ಎಸ್.)

**ಕನ್ನಡ ಸಾಹಿತ್ಯ ಪರಿಷತ್ತು :** ಕನ್ನಡ ಭಾಷೆ ಮತ್ತು ಸಾಹಿತ್ಯದ ಸರ್ವತೋಮುಖ ಬೆಳವಣಿಗೆ, ಕನ್ನಡದ ಸ್ಥಾನಮಾನ ಹಾಗೂ ಕನ್ನಡ ಏಕೀಕರಣ, ಕನ್ನಡ ಜನಜಾಗೃತಿ ಮೊದಲಾದ ಮಹತ್ಕಾರ್ಯಗಳನ್ನು ಕೈಗೊಂಡಿರುವ ಪ್ರಮುಖ ಸಂಸ್ಥೆ. ಸುಮಾರು 88 ವರ್ಷಗಳಿಂದಲೂ ಉದ್ದೇಶಿತ ಧ್ಯೇಯಸಾಧನೆಗೆ ಶ್ರಮಿಸುತ್ತಿರುವ ಈ ಸಂಸ್ಥೆ 1977ರಲ್ಲಿ ತನ್ನ ವಜ್ರಮಹೋತ್ಸವವನ್ನು ಆಚರಿಸಿಕೊಂಡಿತು. ಈ ಪರಿಷತ್ತಿನ ಹಿನ್ನೆಲೆ, ಕಾರ್ಯಕಲಾಪಗಳು ಮತ್ತು ಸಾಧನೆಗಳನ್ನು ಇಲ್ಲಿ ಪ್ರಸ್ತಾಪಿಸಿದೆ.

**ಸ್ಥಾಪನೆ :** ಮೈಸೂರಿನ ಆರ್ಥಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಗಾಗಿ ಏರ್ಪಟ್ಟಿದ್ದ ಸಂಪದಭ್ಯುದಯ ಸಮಾಜ ಕನ್ನಡದ ಏಳಿಗೆಯನ್ನು ಸಾಧಿಸುವ

ಉದ್ದೇಶದಿಂದ 1914ರಲ್ಲಿ ಕೂಡಿಸಿದ ವಾರ್ಷಿಕ ಸಮ್ಮೇಳನದಲ್ಲಿ ಭಾಷಾಸಂಸ್ಕರಣ ವಿಷಯವೂ ಕರ್ನಾಟಕ ಗ್ರಂಥಾವಳಿ ವೃದ್ಧಿ ವಿಷಯವೂ ಚರ್ಚಿತವಾದುವು. ಕರ್ನಾಟಕ ಭಾಷೆಯಲ್ಲಿ ವಿವಿಧ ಗ್ರಂಥಗಳನ್ನು ರಚಿಸುವವರ ಪ್ರೋತ್ಸಾಹಕ್ಕಾಗಿ ಸ್ವತಂತ್ರಾಧಿಕಾರವುಳ್ಳ ಪರಿಷತ್ತೊಂದು ಇರಬೇಕು ಮತ್ತು ಸರ್ಕಾರದವರು ಆ ಪರಿಷತ್ತನ್ನು ಅಂಗೀಕರಿಸಿ ಅದಕ್ಕೆ ಎಲ್ಲ ಬಗೆಯ ಸಹಾಯವನ್ನೂ ಮಾಡುವುದು ಉಚಿತವೆಂದು ಸಂಪದಭ್ಯುದಯ ಸಮಾಜ ಸರ್ಕಾರಕ್ಕೆ ಶಿಫಾರಸು ಮಾಡಬೇಕು ಎಂದು ತೀರ್ಮಾನವಾಯಿತು. ಈ ತೀರ್ಮಾನಕ್ಕೆ ಅನುಗುಣವಾಗಿ 1914 ಆಕ್ಟೋಬರ್ 31ರಂದು, ಕನ್ನಡ ನಾಡಿನ ಪ್ರಮುಖರನ್ನು ಬೆಂಗಳೂರಿಗೆ ಆಹ್ವಾನಿಸಿ ಕರ್ನಾಟಕ ಭಾಷಾ ಪರಿಷ್ಕರಣಕ್ಕೂ ಕರ್ನಾಟಕ ಗ್ರಂಥಾಭಿವೃದ್ಧಿಗೂ ಅನುಕೂಲವಾಗುವಂತೆ ಸಂಘವೊಂದನ್ನು ಏರ್ಪಡಿಸುವ ಕಾರ್ಯವನ್ನು ನಿರ್ವಹಿಸಲು ಒಂದು ಉಪಸಮಿತಿಯನ್ನು ಸಮಾಜದ ವಿದ್ಯಾವಿಷಯಕ ಮಂಡಲಿ ನೇಮಕಮಾಡಿತು. ಎಂ.ಶಾಮರಾವ್, ಕರ್ಪೂರ ಶ್ರೀನಿವಾಸರಾವ್, ಪಿ.ಎಸ್.ಅಚ್ಯುತರಾವ್ ಇವರು ಈ ಸಮಿತಿಯ ಸದಸ್ಯರು. ಉಪಸಮಿತಿಯ ಕೋರಿಕೆಯಂತೆ, ಮೇಲ್ಕಂಡ ಉದ್ದೇಶಸಾಧನೆಗೆ ಸಲಹೆಗಳನ್ನೊಳಗೊಂಡ 31 ಲೇಖನಗಳು ವಿದ್ವಾಂಸರಿಂದ ಬಂದುವು. ಉಪಸಮಿತಿಯ 22 ಮಾರ್ಚ್ 1915ರ ಸಭೆಯಲ್ಲಿ ಸಮ್ಮೇಳನ ಕಾರ್ಯ ಪ್ರಾರಂಭವಾಗಬೇಕೆಂದು ತೀರ್ಮಾನವಾಯಿತು. ಅದರಂತೆ 3 ಮೇ 1915ರಂದು ಬೆಂಗಳೂರು ಸರ್ಕಾರಿ ಪ್ರೌಢ ವಿದ್ಯಾಶಾಲೆಯಲ್ಲಿ ಸಮ್ಮೇಳನ ಪ್ರಾರಂಭವಾಯಿತು. ಧಾರವಾಡ, ಬಿಜಾಪುರ, ಬೆಳಗಾಂವಿ, ಉತ್ತರ ಕನ್ನಡ, ಮುಂಬಯಿ, ಬಳ್ಳಾರಿ, ದಕ್ಷಿಣ ಕನ್ನಡ, ಮೈಸೂರು ಸಂಸ್ಥಾನದ ಜಿಲ್ಲೆಗಳು, ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘ ಮತ್ತು ಕರ್ನಾಟಕ ವಿದ್ಯಾವ್ಯಾಸಂಗ ಸಮಾಜದ ಮುಂಬಯಿ ನಗರದ ಕಾಲೇಜು ಮತ್ತು ಹೈಸ್ಕೂಲುಗಳು -ಇವುಗಳ ಪ್ರತಿನಿಧಿಗಳೂ ಧಾರವಾಡದ ಕರ್ನಾಟಕ ವೃತ್ತ ಮತ್ತು ಕರ್ನಾಟಕ ಧನಂಜಯ, ಹುಬ್ಬಳ್ಳಿಯ ಸಚಿತ್ರ ಭಾರತ, ಮಂಗಳೂರಿನ ಸ್ವದೇಶಾಭಿಮಾನಿ, ಉಡುಪಿಯ ಶ್ರೀಕೃಷ್ಣಸೂಕ್ತಿ ಮತ್ತು ಮೈಸೂರು ಸಂಸ್ಥಾನದ ವೃತ್ತಾಂತ ಪತ್ರಿಕೆಗಳ ಸಂಪಾದಕರೂ ಹಾಜರಿದ್ದರು. ಆ ಪ್ರಥಮ ಸಮ್ಮೇಳನದ ಪ್ರಥಮ ಸಭೆಯ ಅಗ್ರಸ್ಥಾನಾಧಿಪತಿಯಾಗಿ ರಾಜಮಂತ್ರಪ್ರವೀಣ ಎಚ್.ವಿ. ನಂಜುಂಡಯ್ಯ ಅವರನ್ನು ಒಮ್ಮತದಿಂದ ಚುನಾಯಿಸಲಾಯಿತು. ಸಮ್ಮೇಳನ ನಾಲ್ಕು ದಿನ ನಡೆಯಿತು. ಮೂರನೆಯ ದಿನದ ಸಭೆಯಲ್ಲಿ ಪರಿಷತ್ತಿನ ರಚನಾಕ್ರಮ ಮತ್ತು ನಿಬಂಧನೆಗಳನ್ನು ಜಿಜ್ಞಾಸಾಪೂರ್ವಕವಾಗಿ ಹೀಗೆ ತೀರ್ಮಾನಿಸಲಾಯಿತು.

ಸಂಘಕ್ಕೆ ಕರ್ನಾಟಕ ಸಾಹಿತ್ಯ ಪರಿಷತ್ತು ಎಂದು ಹೆಸರಿಸ ತಕ್ಕದ್ದಲ್ಲದೆ ಪರಿಷತ್ತಿನ ಮುಖ್ಯ ಕಾರ್ಯಸ್ಥಾನ ಬೆಂಗಳೂರಿನಲ್ಲಿರತಕ್ಕದ್ದು. ಕರ್ನಾಟಕ ಭಾಷಾ ಪರಿಷ್ಕರಣ, ಭಾಷೋನ್ನತಿ, ಕರ್ನಾಟಕ ಗ್ರಂಥಾಭಿವೃದ್ಧಿ ಪರಿಷತ್ತಿನ ಮುಖ್ಯ ಉದ್ದೇಶಗಳು. ಈ ಮುಖ್ಯೋದ್ದೇಶಗಳನ್ನು ಸಾಧಿಸುವ ಮಾರ್ಗಗಳು: 1. ಕನ್ನಡ ವ್ಯಾಕರಣ, ಭಾಷಾಚರಿತ್ರೆ, ನಿಘಂಟುಗಳು- ಇವುಗಳ ರಚನೆ; ರಚನೆಗೆ ಸಹಾಯ. 2. ಕನ್ನಡ ಶಾಸ್ತ್ರಗ್ರಂಥಗಳ ಪಾರಿಭಾಷಿಕ ಶಬ್ದಕೋಶಗಳ ನಿರ್ಮಾಣ. 3. ತತ್ತ್ವವಿಚಾರ, ಭೌತಿಕಶಾಸ್ತ್ರ, ಚರಿತ್ರೆ, ಸಾಹಿತ್ಯಗ್ರಂಥಗಳ ಲೇಖನಕ್ಕೆ ಪ್ರೋತ್ಸಾಹ; ಅವುಗಳ ಪ್ರಕಟನೆ. 4. ಕನ್ನಡ ಭಾಷೆ, ಕನ್ನಡ ಗ್ರಂಥಗಳು - ಇವುಗಳ ವಿಷಯವಾಗಿ ಚರ್ಚೆ. ನಿರ್ಣಯಗಳ ಅಂಗೀಕಾರ. 5. ಇತರ ಭಾಷೆಗಳ ಉತ್ತಮ ಗ್ರಂಥಗಳ ಭಾಷಾಂತರಗಳ ಪ್ರಕಟಣೆ. 6. ಉತ್ಕೃಷ್ಟ ಪ್ರಾಚೀನ ಗ್ರಂಥಗಳ ಪ್ರಕಟನೆ, ಕನ್ನಡ ಸಂಸ್ಥಾನಗಳ ಚರಿತ್ರೆಗಳ ಸಂಗ್ರಹ, ಪ್ರಕಟನೆ, ಪ್ರಾಚೀನ ವಸ್ತು ಸಂಗ್ರಹಾಲಯ. 7. ಕರ್ನಾಟಕ ಭಾಷಾಸಂಸ್ಕರಣ, ಗ್ರಂಥಾಭಿವೃದ್ಧಿ ಈ ವಿಷಯಕ ಉಪನ್ಯಾಸಗಳನ್ನು ಒಳಗೊಂಡ ಪತ್ರಿಕೆಗಳ ಪ್ರಕಟನೆ, ಸ್ವಂತವಾಗಿ ಗ್ರಂಥ ಪ್ರಕಟನೆ. 8. ಗ್ರಂಥ ಪ್ರತಿಗಳನ್ನು ಅಥವಾ ಗ್ರಂಥ ಸ್ವಾಮ್ಯವನ್ನು ಕೊಳ್ಳುವ ಮೂಲಕ, ಸ್ವಂತವಾಗಿ ಗ್ರಂಥ ಪ್ರಕಟನೆಮಾಡುವ ಗ್ರಂಥಕರ್ತರಿಗೆ ಬಿರುದುಗಳನ್ನೋ ಸಂಭಾವನೆಯನ್ನೋ ಕೊಡುವ ಮೂಲಕ ಪ್ರೋತ್ಸಾಹ ನೀಡಿಕೆ. 9. ಕನ್ನಡ ಭಾಷಾಸಾಹಿತ್ಯ ಸಂಬಂಧವಾದ ಪರಿಶೋಧನ ಕಾರ್ಯನಿರತ ವಿದ್ವಾಂಸರಿಗೆ ಪಂಡಿತ ವೇತನ. 10. ಮೇಲ್ಕಂಡ ಮುಖ್ಯೋದ್ದೇಶ ಸಾಧನೆಗೆ ಆಯಾ ಸರ್ಕಾರದವರ ಸಹಾಯ ಸಂಪಾದನ. 11. ಕನ್ನಡ ಮಾತಾಡುವ ಪ್ರದೇಶಗಳಲ್ಲಿ ಕನ್ನಡ ವಾಚನಾಲಯ ಮತ್ತು ಪುಸ್ತಕ ಭಂಡಾರಗಳ ಏರ್ಪಾಡು. 12. ಕನ್ನಡ ನಾಡುಗಳ ಪ್ರಮುಖರ ಸಭೆಗಳನ್ನೂ ವಿದ್ವಾಂಸರ ಉಪನ್ಯಾಸಗಳನ್ನೂ ಏರ್ಪಡಿಸುವುದು. 13. ಉದ್ದೇಶಕ್ಕೆ ಸಾಧಕಗಳಾದ ಇತರ ಪ್ರಯತ್ನಗಳು.

**ಪರಿಷತ್ತಿನ ರಚನೆ :** ಪೋಷಕ, ಉಪಪೋಷಕ, ಪ್ರದಾತೃ, ಆಶ್ರಯದಾತ, ಆಜೀವ, ಸಾಮಾಜಿಕ, ಒಂದನೆಯ ಮತ್ತು ಎರಡನೆಯ ವರ್ಗದ ಸಾಮಾನ್ಯ ಸಾಮಾಜಿಕರು, ರಾಜ್ಯವನ್ನಾಳುವ ಉನ್ನತ ಪದವಿಯಲ್ಲಿರುವವರು, ಪ್ರಸಿದ್ಧ ವಂಶೀಯರು ಇವರು ಮಾತ್ರ ಪೋಷಕರೂ ಉಪಪೋಷಕರೂ ಆಗತಕ್ಕದ್ದು.

**ಕಾರ್ಯನಿರ್ವಾಹಕ ಮಂಡಲಿ:** ಒಟ್ಟು 30 ಮಂದಿ ಸದಸ್ಯರು : ಅಧ್ಯಕ್ಷರು, ಉಪಾಧ್ಯಕ್ಷರು, ಕೋಶಾಧ್ಯಕ್ಷರು, ಕಾರ್ಯದರ್ಶಿಗಳು. ಪ್ರಾತಿನಿಧ್ಯ: ಮೈಸೂರು ಸಂಸ್ಥಾನ (12 ಮಂದಿ); ಮುಂಬಯಿ ಅಧಿಪತ್ಯ (8); ಮದರಾಸು (5); ಹೈದರಾಬಾದು (2); ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳು (2); ಕೊಡಗು (1). ವಾರ್ಷಿಕ ಸಮ್ಮೇಳನ ಕಾಲದಲ್ಲಿ ವಿದ್ವಾಂಸರ ಉಪನ್ಯಾಸಗಳನ್ನೂ ಪ್ರೌಢ ಲೇಖನಗಳ ವಾಚನವನ್ನೂ ಕಾರ್ಯನಿರ್ವಾಹಕ ಮಂಡಲಿಯವರು ಏರ್ಪಡಿಸತಕ್ಕದ್ದು. ಪ್ರಸಿದ್ಧ ಪಂಡಿತರನ್ನು ಪರಿಷತ್ತಿಗೆ ಸನ್ಮಾನ್ಯ ಸಾಮಾಜಿಕರನ್ನಾಗಿ ಸೇರಿಸಿಕೊಳ್ಳಲು ಪರಿಷತ್ತಿನ ಸಾಮಾನ್ಯ ಸಭೆಗೆ ಶಿಫಾರಸು ಮಾಡುವುದಕ್ಕೆ ಕಾರ್ಯನಿರ್ವಾಹಕ ಮಂಡಲಿಗೆ ಸ್ವಾತಂತ್ರವಿರತಕ್ಕದ್ದು ಎಂಬಿವು ಇತರ ನಿಬಂಧನೆಗಳಲ್ಲಿ ಮುಖ್ಯವಾದುವು.

ಪ್ರಥಮ ಕಾರ್ಯನಿರ್ವಾಹಕ ಮಂಡಲಿಯ ಅಧಿಕಾರವರ್ಗ ಇದು: ಅಧ್ಯಕ್ಷ- ರಾಜಮಂತ್ರ ಪ್ರವೀಣ ಎಚ್.ವಿ.ನಂಜುಂಡಯ್ಯ, ಉಪಾಧ್ಯಕ್ಷ- ಎಂ.ಶಾಮರಾವ್, ಕಾರ್ಯದರ್ಶಿ ಬಿ.ಕೃಷ್ಣಪ್ಪ, ಕೋಶಾಧಿಕಾರಿ ಪಿ.ಎಸ್.ಅಚ್ಯುತರಾವ್. ಅದರ ಸದಸ್ಯರಲ್ಲಿ ಕೆಲವರನ್ನು ಹೆಸರಿಸಬಹುದು: ಸರ್ದಾರ್ ಎಂ.ಕಾಂತರಾಜ ಅರಸು, ಕೆ.ಪಿ.ಪುಟ್ಟಣ್ಣಚೆಟ್ಟರು, ಕರ್ಪೂರ ಶ್ರೀನಿವಾಸರಾಯ, ಎಂ.ವೆಂಕಟಕೃಷ್ಣಯ್ಯ, ಆರ್.ನರಸಿಂಹಾಚಾರ್, ಆರ್.ರಘುನಾಥರಾಯ, ಬಾಪು ಸುಬ್ಬರಾಯ, ಚ.ವಾಸುದೇವಯ್ಯ, ಕವಿತಿಲಕ ಸೋಸಲೆ ಅಯ್ಯಾಶಾಸ್ತ್ರಿ, ಪಿ.ಜಿ.ಹಳಕಟ್ಟಿ, ಆಲೂರ ವೆಂಕಟರಾಯ, ಬೆನಗಲ್ ರಾಮರಾಯ, ಕಡೇಕಾರು ರಾಜಗೋಪಾಲ ಕೃಷ್ಣರಾಯ, ಎಂ.ಡಿ.ಅಳಸಿಂಗರಾಚಾರ್ಯ, ಎ.ವೆಂಕಟರಾವ್, ಆರ್.ತಾತಾ, ರಾಜಕಾರ್ಯಪ್ರಸಕ್ತ ಎಂ.ಮುತ್ತಣ್ಣ.




ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ನಿಬಂಧನೆ ಅಂಗರಚನೆಗಳಲ್ಲಿ ಕಾಲಕಾಲಕ್ಕೆ ಕಾಲೋಚಿತವಾಗಿ ಮಾರ್ಪಾಡುಗಳಾಗಿವೆ. ಸಾಹಿತ್ಯ, ಸಂಗೀತ, ಗಮಕ ತರಗತಿಗಳ ಏರ್ಪಾಡು, ಕಲಾಪ್ರದರ್ಶನ, ಸಂಶೋಧನ ಶಾಖೆ (1987) ಫೆಬ್ರವರಿ 24ರ ಅನಂತರ ಮೊದಲಾದ ಹೆಚ್ಚಿನ ಅಂಶಗಳು ಸೇರಿವೆ.

**ಮಾರ್ಪಾಡುಗಳು :** ಅಂಗರಚನೆಯ ದೃಷ್ಟಿಯಿಂದ, ಕಾಲಾನುಗುಣವಾದ ಮಾರ್ಪಾಡುಗಳು ಆಗಿವೆ. ಇವು ಮುಖ್ಯವಾಗಿ ಪರಿಷತ್ತಿನ

ಕಾರ್ಯವ್ಯಾಪ್ತಿಯನ್ನು ಕಾರ್ಯಕಾರಿಯಾಗಿ ಅಖಿಲ ಕರ್ನಾಟಕಕ್ಕೆ ಅನ್ವಯಿಸುವುದಕ್ಕೆ ಸಂಬಂಧಿಸಿದವು. ಧಾರವಾಡದಲ್ಲಿ ಪರಿಷತ್ತಿನ ಶಾಖೆಯೊಂದು ಆಗಬೇಕೆಂಬ ಸೂಚನೆ 1934ರಲ್ಲಿ ರಾಯಚೂರು ಸಮ್ಮೇಳನದ ಕಾಲದಲ್ಲಿ ನಡೆದ ಸದಸ್ಯ ಸಭೆಯಲ್ಲಿ ಚರ್ಚೆಗೆ ಬಂತು. ಇದು ಆಗ ಕಾರ್ಯಸಾಧ್ಯವಾಗಿ ಕಂಡುಬರಲಿಲ್ಲ. ಶಾಖಾ ರಚನೆಯ ಉದ್ದೇಶವನ್ನು, ಎಂದರೆ ಪರಿಷತ್ತಿನ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿ ಪರಿಷತ್ತು ಕೇವಲ ಪಂಡಿತರ ಸಂಸ್ಥೆ ಎಂದೆನಿಸದೆ ಜನಸಾಮಾನ್ಯರಿಗೂ ಸೇರಿದ ಸಂಸ್ಥೆ ಎನಿಸುವ ಉದ್ದೇಶವನ್ನು ಕಾರ್ಯಗತ ಮಾಡಲು ಪ್ರಾಂತಸಮಿತಿಗಳನ್ನು ರಚಿಸಿ, ಸದಸ್ಯ ಸಂಪತ್ತನ್ನು ಹೆಚ್ಚಿಸುವ ಪ್ರಯತ್ನಗಳು ನಡೆದುವು.

ಇನ್ನೊಂದು ಮುಖ್ಯ ಮಾರ್ಪಾಡು, ಪರಿಷತ್ತಿನ ಹೆಸರಿನದು; ಕರ್ನಾಟಕ ಸಾಹಿತ್ಯ ಪರಿಷತ್ತು ಎಂದು ಇದ್ದದ್ದು ಬಳ್ಳಾರಿಯಲ್ಲಿ ನಡೆದ ಸದಸ್ಯ ಸಭೆಯಲ್ಲಿ ಬಹುಮತದಿಂದ ಕನ್ನಡ ಸಾಹಿತ್ಯ ಪರಿಷತ್ತು ಎಂದು ಮಾರ್ಪಾಡಾಯಿತು (1939).

**ಪರಿಷನ್ಮಂದಿರದ ನಿರ್ಮಾಣ :** ಪರಿಷತ್ತು ಸ್ಥಾಪಿತವಾದ ಮೇಲೆ ಹತ್ತಾರು ವರ್ಷಗಳ ವರೆಗೆ ಅದು ಬಾಡಿಗೆ ಕಟ್ಟಡಗಳಲ್ಲೇ ಕಾಲಕ್ಷೇಪ ಮಾಡಿತು. ಅಖಿಲ ಕರ್ನಾಟಕ ವ್ಯಾಪ್ತಿಯುಳ್ಳ ಪ್ರಮುಖ ಸಾಂಸ್ಕೃತಿಕ ಸಂಸ್ಥೆಯಾದ ಪರಿಷತ್ತಿಗೆ ಅದರ ಘನತೆಗನುಗುಣವಾದ ಸ್ವಂತ ಕಟ್ಟಡ ಇಲ್ಲದ್ದು ದೊಡ್ಡ ಕೊರತೆಯಾಗಿತ್ತು. ಈ ಅಂಶವನ್ನು ಮನಗಂಡು ಕಾರ್ಯೋನ್ಮುಖರಾದ ವರೆಂದರೆ, ಪರಿಷತ್ತಿನ ಸಂಸ್ಥಾಪಕ ಸದಸ್ಯರೂ 1920 ರಿಂದ ಹದಿಮೂರು ವರ್ಷಗಳ ಕಾಲ ಪರಿಷತ್ತಿನ ಉಪಾಧ್ಯಕ್ಷರೂ ಆಗಿದ್ದ ರಾಜ್ಯಸಭಾಭೂಷಣ ಕರ್ಪೂರ ಶ್ರೀನಿವಾಸರಾಯರು. ವೃತ್ತಿಯಲ್ಲಿ ಎಂಜಿನಿಯರ್ ಆಗಿದ್ದ ಇವರು ಕಟ್ಟಡ ವಿನ್ಯಾಸ, ರಚನೆ ಮುಂತಾದ ಹಲವಾರು ವಿವರಗಳಿಗೆ ಸ್ವತಃ ಗಮನಕೊಟ್ಟು ಅವನ್ನು ನಿರ್ಧರಿಸಿದರು. ಕಟ್ಟಡದ ನಿರ್ಮಾಣಕ್ಕೆ ಆವಶ್ಯಕವಾಗಿದ್ದ ನಿವೇಶನ ಮತ್ತು ಹಣವನ್ನು ಸಂಗ್ರಹಿಸಿದರು. ಈ ಮಹನೀಯರ ಪರಿಶ್ರಮದ ಫಲವಾಗಿ ಈಗ ಪರಿಷತ್ತಿನ ಕಟ್ಟಡವಿರುವ ನಿವೇಶನ ಉಚಿತವಾಗಿ ದೊರೆಯಿತು. ಕಟ್ಟಡದ ನಿಧಿಗಾಗಿ ಶ್ರೀಮನ್ಮಹಾರಾಜ ಕೃಷ್ಣರಾಜ ಒಡೆಯರವರು ಐದು ಸಾವಿರ ರೂಪಾಯಿಗಳನ್ನು ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರವರು ಮೂರು ಸಾವಿರ ರೂಪಾಯಿಗಳನ್ನು ಅಂದು ಪರಿಷತ್ತಿನ ಅಧ್ಯಕ್ಷರಾಗಿದ್ದ ರಾಜಸೇವಾಧುರೀಣ ಎಂ.ಕಾಂತರಾಜ ಅರಸು ಅವರು ಐದು ಸಾವಿರ ರೂಪಾಯಿಗಳನ್ನೂ ದಾನ ಮಾಡಿದರು. ಮೈಸೂರು ಸರ್ಕಾರ ಹದಿನಾರು ಸಾವಿರ ರೂಪಾಯಿಗಳನ್ನು ಸಹಾಯಧನವಾಗಿ ಕೊಟ್ಟಿತು. ಈ ನಿಧಿಗೆ ಪರಿಷತ್ತು ತನ್ನ ಸಂಪನ್ಮೂಲಗಳಿಂದ ಮೂರು ಸಾವಿರ ರೂಪಾಯಿಗಳನ್ನು ಸೇರಿಸಿ ಕಟ್ಟಡವನ್ನು ನಿರ್ಮಿಸಿತು. 1931ರಂದು 12 ಏಪ್ರಿಲ್ ಕರ್ಪೂರ ಶ್ರೀನಿವಾಸರಾಯರೇ ಕಟ್ಟಡದ ಶಂಕುಸ್ಥಾಪನೆ ಮಾಡಿದರು. ಸಿದ್ಧವಾದ ಈ ಕಟ್ಟಡಕ್ಕೆ ಶ್ರೀಕೃಷ್ಣರಾಜ ಪರಿಷನ್ಮಂದಿರ ಎಂದು ನಾಮಕರಣಮಾಡಿ ಬಾಡಿಗೆ ಕಟ್ಟಡದಲ್ಲಿದ್ದ ಪರಿಷತ್ತಿನ ಕಚೇರಿಯನ್ನು 1933ರಲ್ಲಿ ಪರಿಷನ್ಮಂದಿರಕ್ಕೆ ವರ್ಗಾಯಿಸಲಾಯಿತು.

**ಪರಿಷತ್ತಿನ ಏಳಿಗೆ, ವ್ಯಕ್ತಿಗಳ ಸೇವೆ :** ಪರಿಷತ್ತು ತನ್ನ ಮೂಲೋದ್ದೇಶಗಳಿಗೆ ಅನುಗುಣವಾಗಿ ಕಾರ್ಯಗಳನ್ನು ನಡೆಸಿಕೊಂಡು ಬರುತ್ತಿದೆಯಲ್ಲದೆ, ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿಕೊಂಡು ಬರುತ್ತಿದೆ. ಒಂದು ದೇಶದ ಏಳಿಗೆ ಅದರ ನಾಯಕರನ್ನೂ ವ್ಯಕ್ತಿಮಹಿಮೆಯನ್ನೂ ಅವಲಂಬಿಸಿರುವಂತೆ, ಸಂಸ್ಥೆಯ ಏಳಿಗೆಯೂ ವ್ಯಕ್ತಿಯ ಸಾಮರ್ಥ್ಯವನ್ನವಲಂಬಿಸಿರುತ್ತದೆ. ಆ ವ್ಯಕ್ತಿಯಾದರೂ ಕಾಲಧರ್ಮಕ್ಕೆ ತಕ್ಕಂತೆ ಕಾರ್ಯ ನಡೆಸಿಕೊಂಡು ಹೋಗುವುದು ಅನಿವಾರ್ಯವಾಗುತ್ತದೆ. ಪರಿಷತ್ತಿನ ಚರಿತ್ರೆಯಲ್ಲೂ ಈ ಅಂಶ ವ್ಯಕ್ತಪಟ್ಟಿದೆ. 1933ರ ವರೆಗೆ ಪರಿಷತ್ತಿನ ಅಧ್ಯಕ್ಷರುಗಳೂ ಉಪಾಧ್ಯಕ್ಷರುಗಳೂ (ಮೈಸೂರಿನ ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರು ಅಧ್ಯಕ್ಷರು; ಕರ್ಪೂರ ಶ್ರೀನಿವಾಸರಾಯರೂ ಎಂ.ಶಾಮರಾಯರೂ ಉಪಾಧ್ಯಕ್ಷರುಗಳು) ಕಾರ್ಯಚಟುವಟಿಕೆಯ ದೃಷ್ಟಿಯಿಂದ ಕೇವಲ ಸ್ಥಾನಗೌರವಕ್ಕೆ ಪಾತ್ರರಾಗಿದ್ದರು.

ಹತ್ತು ವರ್ಷಕ್ಕೆ ಮೇಲ್ಪಟ್ಟು ಉಪಾಧ್ಯಕ್ಷರಾಗಿದ್ದ ಕರ್ಪೂರ ಶ್ರೀನಿವಾಸರಾಯರು ಪರಿಷತ್ತಿನ ಭವನ ನಿರ್ಮಾಣ ಕಾರ್ಯದಲ್ಲಿ ಪ್ರಮುಖಪಾತ್ರ ವಹಿಸಿದ್ದರು. ಬೆಳ್ಳಾವೆ ವೆಂಕಟನಾರಣಪ್ಪನವರು ಒಂದೆರಡು ಸಲ ಕಾರ್ಯದರ್ಶಿಯಾಗಿದ್ದರಲ್ಲದೆ 1933ರ ವರೆಗೆ ಸತತವಾಗಿ ಗೌರವ ಕೋಶಾಧಿಕಾರಿಗಳಾಗಿದ್ದರು. ಮಾಸ್ತಿ ವೆಂಕಟೇಶ ಅಯ್ಯಂಗಾರರು ಹೇಳಿದಂತೆ, ಕಸ ಗುಡಿಸುವ ಕೆಲಸದಿಂದ ಹಿಡಿದು ಗ್ರಂಥ ಸಂಪಾದನಾಕಾರ್ಯದವರೆಗೆ ಪರಿಷತ್ತಿನ ಸಕಲ ಕಾರ್ಯಗಳನ್ನೂ ಬೆಳ್ಳಾವೆಯವರು ನಿರ್ವಹಿಸುತ್ತಿದ್ದರು. ಕಚೇರಿಯ ಕೆಲಸ, ಪರಿಷತ್ ಪತ್ರಿಕಾ ಸಂಪಾದನೆ, ಪ್ರಾಚೀನ ಗ್ರಂಥಗಳ ಸಂಪಾದನೆ, ವಾರ್ಷಿಕ ಸಮ್ಮೇಳನ ಸದಸ್ಯಾಧಿವೇಶನಗಳ ಸಿದ್ಧತೆ ಮುಂತಾದ ಸಕಲ ಕಾರ್ಯಗಳಿಗೂ ಅವರೇ ಹೃದಯ, ಮಿದುಳು, ಕೈಕಾಲು ಎಲ್ಲ. ಈ ಕಾಲದಲ್ಲಿ ಪಂಪಭಾರತ, ಪಂಪರಾಮಾಯಣ, ಚಾವುಂಡರಾಯಪುರಾಣ, ಸೋಮೇಶ್ವರ ಶತಕ, ಕುಸುಮಾವಳಿ ಕಾವ್ಯ ಇವುಗಳ ಸಂಪಾದನೆಯ ಕಾರ್ಯ ಅವರ ಸಂಪಾದಕತ್ವದಲ್ಲಿ ಮೇಲುಪಂಕ್ತಿಯಾಗುವಂತೆ ನಡೆಯಿತು. ಜ್ಯೋತಿರ್ವಿನೋದಿನಿ, ಜೇಮ್ಸ್ ಎಬ್ರಹಮ್ ಗಾರ್‌ಫೀಲ್ಡನ ಚರಿತ್ರೆ ಇವನ್ನು ಪ್ರಕಟಿಸಿ ಕಾವ್ಯೇತರ ಗದ್ಯ ಸಾಹಿತ್ಯ ಪ್ರಕಟನೆಗೆ ಮೇಲುಪಂಕ್ತಿ ಹಾಕಿದವರೂ ವೆಂಕಟನಾರಣಪ್ಪನವರೇ. ಇವರು ಬಹು ಶ್ರಮವಹಿಸಿ ಸಿದ್ಧಪಡಿಸಿದ ಷಟ್ಪದಿ ಕಾವ್ಯಗಳ ನಿಘಂಟು - ಒಂದು ವಿಧದಲ್ಲಿ ಪರಿಷತ್ತಿನ ನಿಘಂಟು ಕಾರ್ಯರಚನೆಗೆ ನಾಂದಿಯಾಯಿತೆನ್ನಬಹುದು. ಆ ಕಾಲದಲ್ಲಿ ಪರಿಷತ್ತಿನೊಂದಿಗೆ ಸಂಪರ್ಕವಿಟ್ಟುಕೊಂಡ ಜನ ಬಹುಮಟ್ಟಿಗೆ ಭಾಷಾ ಪಂಡಿತರು, ವಿದ್ವಾಂಸರು, ಸರ್ಕಾರದ ಉನ್ನತಾಧಿಕಾರಿಗಳು.

ಡಿ.ವಿ.ಗುಂಡಪ್ಪನವರು ಮೂರು ವರ್ಷ ಉಪಾಧ್ಯಕ್ಷರಾಗಿದ್ದರು (1934-37). ಇವರ ಕಾಲದಲ್ಲಿ ನೂತನ ಮಂದಿರದ ನೂತನ ಸಭಾಮಂಟಪದಲ್ಲಿ ಉಪನ್ಯಾಸ, ಕಾವ್ಯವಾಚನ, (ಗಮಕ), ಸಂಗೀತ, ನಾಟಕ, ನೃತ್ಯ ಇತ್ಯಾದಿ ಸಾಹಿತ್ಯ ಸಂಸ್ಕೃತಿ ಸಂಬಂಧವಾದ ಕಾರ್ಯಕಲಾಪಗಳೇ ಮೊದಲಾದವಲ್ಲಿ ಏನಾದರೊಂದು ಪ್ರತಿವಾರವೂ ನಡೆಯುತ್ತಿತ್ತು. ಪ್ರತಿವರ್ಷವೂ ಬೇಸಗೆಯ ರಜಾಕಾಲದಲ್ಲಿ ಆಧುನಿಕ ವಿಚಾರೋಪನ್ಯಾಸಗಳು ಹಾಗೂ ವಿವಿಧ ಮನರಂಜನೆಯ ಕಾರ್ಯಗಳನ್ನೊಳಗೊಂಡ ವಿಶೇಷ ಸಾಹಿತ್ಯೋತ್ಸವ ಎಂಬ ಜ್ಞಾನಪ್ರಸಾರ ಕಾರ್ಯಕ್ರಮ ಪ್ರಾರಂಭವಾಯಿತು. ಇದು ಈಗಲೂ (1936ರಿಂದ) ವಸಂತ ಸಾಹಿತ್ಯೋತ್ಸವ ಎಂಬ ಹೆಸರಿನಿಂದ ನಡೆದುಕೊಂಡು ಬರುತ್ತಿದೆ. ಗಮಕ ಕಲಾಶಿಕ್ಷಣ ತರಗತಿಗಳು ಪ್ರಾರಂಭವಾದದ್ದು ಇವರ ಕಾಲದಲ್ಲಿಯೇ. ಕರ್ನಾಟಕಕ್ಕೆ ವಿಶಿಷ್ಟವೆನ್ನಬಹುದಾದ ಗಮಕ ಕಲೆ ಪ್ರಾಚೀನ ಕನ್ನಡ ಕಾವ್ಯಗಳನ್ನು ಜನಪ್ರಿಯವಾಗಿ ಮಾಡಲು ಉತ್ತಮ ಸಾಧನ ಎಂಬುದನ್ನು ಮನಗಂಡ ಗುಂಡಪ್ಪನವರು ದೂರದೃಷ್ಟಿಯಿಂದ ಪ್ರಾರಂಭಿಸಿದ ಈ ಏರ್ಪಾಡು ಇಂದಿಗೂ ನಡೆದುಕೊಂಡು ಬರುತ್ತಿದ್ದು, ಉತ್ತಮ ಫಲವನ್ನು ಕೊಟ್ಟಿದೆ. ಗಮಕ ಶಿರೋಮಣಿ ಎಸ್.ಜಿ.ಬಿಂದೂರಾಯರು ಪ್ರಥಮ ಶಿಕ್ಷಕರಾಗಿ ನೇಮಕಗೊಂಡರು. ಈಗ ಜನಪ್ರಿಯರಾಗಿರುವ ಅನೇಕ ಮಂದಿ ಗಮಕಿಗಳು ಪರಿಷತ್ತಿನ ಗಮಕ ಪರೀಕ್ಷೆಗಳಲ್ಲಿ ತೇರ್ಗಡೆಯಾದವರು.

ಸಮ್ಮೇಳನಗಳಿಗೂ ಪರಿಷತ್ತಿನ ವಾರ್ಷಿಕ ಸಭೆಗಳಿಗೂ ಪರಿಷತ್ತಿನ ಕಾರ್ಯಾಲಯಕ್ಕೂ ಈ ಕಾಲದಲ್ಲಿ ಹೆಚ್ಚು ವ್ಯವಸ್ಥಿತ ರೂಪ ಬಂತು. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ವಿದ್ವತ್‌ಪೂರ್ಣವಾಗಿರುವುದರ ಜೊತೆಗೆ ವೈವಿಧ್ಯಪೂರ್ಣವೂ ಆಧುನಿಕ ವಿದ್ವತ್ ದೃಷ್ಟಿಯನ್ನು ಪ್ರತಿಬಿಂಬಿಸತಕ್ಕ ಮಾಧ್ಯಮವೂ ಆಗಿ ರೂಪುಗೊಂಡಿತು. ಇದರ ಶ್ರೇಯಸ್ಸು ಅದರ ಸಂಪಾದಕರಾಗಿದ್ದ ಎ.ಆರ್.ಕೃಷ್ಣಶಾಸ್ತ್ರಿಗಳಿಗೆ ಸಲ್ಲುತ್ತದೆ.

ಬಿ.ಎಂ.ಶ್ರೀಕಂಠಯ್ಯನವರು ಪರಿಷತ್ತಿನ ಉಪಾಧ್ಯಕ್ಷರಾದ ಮೇಲೆ ಪರಿಷತ್ತಿಗೂ ಸಾಮಾನ್ಯ ಪ್ರಜಾವರ್ಗಕ್ಕೂ ಸಂಪರ್ಕ ಇನ್ನಷ್ಟು ಬಲಪಟ್ಟಿತು; ವಿಸ್ತಾರಗೊಂಡಿತು. ಪರಿಷತ್ತಿನಲ್ಲಿ ಮಹಿಳೆಯರಿಗೆ ಸ್ಥಾನ ಕಲ್ಪಿಸಲು ಮಹಿಳಾ ಶಾಖೆ ಪ್ರಾರಂಭಿಸಿದರು (1938). ಬಿ.ಎಂ.ಶ್ರೀಯವರ ಗಮನಾರ್ಹ ಕೊಡುಗೆ ಎಂದರೆ ಕನ್ನಡ ಬಾವುಟದ ಕಲ್ಪನೆ. ಕನ್ನಡ ನಾಡಿನ ಭೂಪಟದ ಮುದ್ರಿಕೆಯ ಲಾಂಛನವೊಂದನ್ನು ಕಲ್ಪಿಸಿ, ಪರಿಷತ್ತಿನ ಪುಸ್ತಕ ಪ್ರಕಟನೆಗಳಲ್ಲಿ ಮುದ್ರಿಸುವ ಏರ್ಪಾಡು (ಈ ಲಾಂಛನವನ್ನು ಈಗ ಸ್ವಲ್ಪ ಮಾರ್ಪಡಿಸಿ ಮತ್ತೆ ಬಳಕೆಗೆ ತಂದಿದೆ). ಕನ್ನಡ ಬಾವುಟ ಎಂಬ ತಮ್ಮ ಕಲ್ಪನೆಗೆ ಅವರು ಜೀವ ತುಂಬಿ, ಆ ಹೆಸರಿನ ಕಾವ್ಯಸಂಕಲನವನ್ನು ಹೊರತಂದರು. ಕನ್ನಡ ನಾಡಿನ ಚರಿತ್ರೆಯನ್ನು ತಕ್ಕ ಲೇಖಕರಿಂದ ಬರೆಯಿಸಿ ಪ್ರಕಟಿಸಿದರು. ಕನ್ನಡ ನುಡಿ (ನೋಡಿ) ಎಂಬ ವಾರಪತ್ರಿಕೆಯನ್ನು 4 ಅಕ್ಟೋಬರ್ 1938ರ

ವಿಜಯದಶಮಿಯಂದು ಪ್ರಾರಂಭಿಸಿದರು. ಅ.ನ.ಕೃಷ್ಣರಾಯರು ಇದರ ಮೊದಲ ಸಂಪಾದಕರು. ಈ ಪತ್ರಿಕೆ ಈಗಲೂ ಪಕ್ಷಪತ್ರಿಕೆಯಾಗಿ ನಡೆದು ಬರುತ್ತಿದೆ. ಕನ್ನಡ ನುಡಿಯ ಪ್ರಕಟಣೆಗೆಂದೇ ಅವರು 6000 ರೂಪಾಯಿ ದಾನ ಮಾಡಿ ಸ್ಥಾಪಿಸಿದ ಅಚ್ಚುಕೂಟ ಈಗ ವಿಸ್ತಾರವಾಗಿ, ಪರಿಷತ್ತಿನ ಮುದ್ರಣಕಾರ್ಯವನ್ನು ನಿರ್ವಹಿಸುತ್ತಿದೆ. ಪರಿಷತ್ತಿನ ಅಖಿಲ ಕರ್ನಾಟಕ ಸ್ವರೂಪವನ್ನು ಪ್ರತಿಬಿಂಬಸಲೆಂದು ಪ್ರಾಂತ ಸಮಿತಿಗಳನ್ನು ಏರ್ಪಡಿಸಿ, ಪರಿಷತ್ತಿನ ಕಾರ್ಯವ್ಯಾಪ್ತಿಯನ್ನು ನಾಡಿಗೆಲ್ಲ ಶ್ರೀ ಅವರು ಹರಡಿದರು. ಕನ್ನಡ ಬಾವುಟವನ್ನು (ಸಾಂಕೇತಿಕವಾಗಿ) ಕೈಯಲ್ಲಿ ಹಿಡಿದು ನಾಡನ್ನೆಲ್ಲ ಸುತ್ತಾಡಿ, ಕನ್ನಡದ ಮತ್ತು ಪರಿಷತ್ತಿನ ಸಂದೇಶವನ್ನು ಎಲ್ಲೆಲ್ಲೂ ಹರಡಿ, ಕನ್ನಡಿಗರಿಗೆ ಕನ್ನಡ ತಾಯ ನೋಟವನ್ನು ಕಾಣಿಸಿದರು. ತಮ್ಮ ತನುಮನಧನವನ್ನರ್ಪಿಸಿ ಪರಿಷತ್ತಿನ ಸೇವೆ ಮಾಡಿದರು. ಪರಿಷತ್ತಿನ ಮೂಲೋದ್ದೇಶಗಳಲ್ಲಿ ಒಂದಾದ ಪಾಂಡಿತ್ಯಸಂವರ್ಧನೆಗಾಗಿ ಅವರು ಕೈಗೊಂಡ ಮುಖ್ಯ ಕಾರ್ಯಕ್ರಮ ಎಂದರೆ ಕನ್ನಡ ಸಾಹಿತ್ಯ ಪರೀಕ್ಷೆಗಳು (ಈ ಏರ್ಪಾಡು ಈಗಲೂ ಯಶಸ್ವಿಯಾಗಿ ನಡೆದುಕೊಂಡು ಬರುತ್ತಿದೆ). ಶ್ರೀಯವರು ಉಪಾಧ್ಯಕ್ಷರಾಗಿದ್ದಾಗ 30 ಜೂನ್ - 1 ಜುಲೈ 1940 ಪರಿಷತ್ತಿನ ಬೆಳ್ಳಿಯ ಹಬ್ಬ ವಿಜೃಂಭಣೆಯಿಂದ ನಡೆಯಿತು. ಆಗ ಮೈಸೂರಿನ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರು ಉತ್ಸವವನ್ನು ಉದ್ಘಾಟಿಸಿದರು.

ಶ್ರೀಯವರ ಅನಂತರ ಉಪಾಧ್ಯಕ್ಷರಾದವರು ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು (1943-47). ಹಿಂದಿನ ಇಬ್ಬರು ಉಪಾಧ್ಯಕ್ಷರುಗಳು ಏರ್ಪಾಡು ಮಾಡಿದ್ದ ಎಲ್ಲ ಕಾರ್ಯಕ್ರಮಗಳನ್ನೂ ಇವರು ನಿಷ್ಠೆಯಿಂದ ಮುಂದುವರಿಸಿಕೊಂಡು ಬಂದರು. ಈ ಕಾಲದಲ್ಲಿ ಪರಿಷತ್ತಿನ ಸದಸ್ಯಸಂಪತ್ತು ಗಮನಾರ್ಹವಾಗಿ ಬೆಳೆಯಿತು. ಅನೇಕ ದತ್ತಿಗಳನ್ನು ಸಂಪಾದಿಸಿ, ದತ್ತಿ ಉಪನ್ಯಾಸಗಳು ಸಾರೋದ್ಧಾರವಾಗಿ ನಡೆಯುವಂತೆ ಇವರು ಏರ್ಪಾಡು ಮಾಡಿದರು. 1941ರಲ್ಲಿಯೇ ಕನ್ನಡ-ಕನ್ನಡ ನಿಘಂಟು ನಿರ್ಮಾಣದ ಸಂಕಲ್ಪವನ್ನು ಪರಿಷತ್ತು ಕೈಗೊಂಡಿತು. ಅದು ಕಾರ್ಯರೂಪಕ್ಕೆ ಬಂದು, ಅದಕ್ಕಾಗಿ ಪ್ರತ್ಯೇಕ ಕಾರ್ಯಾಲಯ ಆರಂಭವಾದದ್ದು ಇವರ ಕಾಲದಲ್ಲಿ. ಶ್ರೀಯವರಂತೆ ಮಾಸ್ತಿಯವರೂ ಕನ್ನಡ ನಾಡನ್ನೆಲ್ಲ ಸುತ್ತಾಡಿ ಪರಿಷತ್ತಿನ ಅಖಿಲ ಕರ್ನಾಟಕ ಸ್ವರೂಪವನ್ನು ಬಲಪಡಿಸಿದರು. ಕರ್ನಾಟಕ ಏಕೀಕರಣ ಚಳವಳಿಗೆ ಪುಷ್ಟಿ ಕೊಟ್ಟರು.

**ಅಧ್ಯಕ್ಷರುಗಳು :** ರಾಜಮನೆತನದವರು ಅಥವಾ ಉನ್ನತ ಪದವಿಯಲ್ಲಿರುವವರು ಪರಿಷತ್ತಿನ ಅಧ್ಯಕ್ಷರಾಗಬೇಕೆಂಬ ನಿಬಂಧನೆಗೆ ಅನುಗುಣವಾಗಿ ಎಚ್.ವಿ.ನಂಜುಂಡಯ್ಯ (1915-20), ಸರ್.ಎಂ.ಕಾಂತರಾಜ ಅರಸು (1920-23), ಕಂಠೀರವ ನರಸಿಂಹರಾಜ ಒಡೆಯರ್ (1923-40), ಜಯಚಾಮರಾಜ ಒಡೆಯರ್ (1940), ಒಂಟಮುರಿಯ ರಾಜಾ ಲಖಮನಗೌಡ ಸರದೇಸಾಯಿ (1941-46), ಲೋಕೂರ ನಾರಾಯಣರಾವ್ ಸ್ವಾಮಿರಾವ್ (1947) -ಇವರು ಕ್ರಮವಾಗಿ ಪರಿಷತ್ತಿನ ಅಧ್ಯಕ್ಷರುಗಳಾದರು. 1947ರಲ್ಲಿ, ವಾರ್ಷಿಕ ಸಮ್ಮೇಳನದ ಅಧ್ಯಕ್ಷರೇ ಪರಿಷತ್ತಿನ ಅಧ್ಯಕ್ಷರೂ ಆಗಿರಬೇಕೆಂದು ನಿಬಂಧನೆ ಮಾರ್ಪಾಡಾಯಿತು. ಇದರ ಮೇರೆಗೆ ತಿರುಮಲೆ ತಾತಾಚಾರ್ಯ ಶರ್ಮರೂ ಚನ್ನಪ್ಪ ಉತ್ತಂಗಿಯವರೂ ಒಂದು ವರ್ಷದ ಅವಧಿಗೆ ಅಧ್ಯಕ್ಷರಾಗಿದ್ದರು. ಎಂ.ಆರ್.ಶ್ರೀನಿವಾಸಮೂರ್ತಿಯವರು (1950ರಲ್ಲಿ) ಅಧ್ಯಕ್ಷರಾದಾಗ ನಿಬಂಧನೆ ಮತ್ತೆ ಮಾರ್ಪಾಡಾಗಿ ಅಧ್ಯಕ್ಷ ಪದವಿಯ ಅವಧಿ ಮೂರು ವರ್ಷ ಎಂದಾಯಿತು. ಈ ಹೊಸ ನಿಯಮದಂತೆ ಅಧ್ಯಕ್ಷರುಗಳಾಗಿ ಈ ಮುಂದಿನವರು ಕಾರ್ಯನಿರ್ವಹಿಸುದರು: ಎ.ಎನ್.ಮೂರ್ತಿರಾಯ (1954-56), ಬಿ.ಶಿವಮೂರ್ತಿ ಶಾಸ್ತ್ರಿ (1956-64), ಜಿ.ವೆಂಕಟಸುಬ್ಬಯ್ಯ (1964-69), ಜಿ.ನಾರಾಯಣ (1969-78), ಹಂಪ ನಾಗರಾಜಯ್ಯ (1978-86), ಎಚ್.ಬಿ.ಜ್ವಾಲನಯ್ಯ (1986-87), ಜಿ.ಎಸ್.ಸಿದ್ದಲಿಂಗಯ್ಯ (1989-92), ಗೊ.ರು.ಚನ್ನಬಸಪ್ಪ (1992-95), ಸಾ.ಶಿ.ಮರುಳಯ್ಯ (1995-98), ಎನ್.ಬಸವಾರಾಧ್ಯ (1998-2001), ಹರಿಕೃಷ್ಣ ಪುನರೂರು (2001). ಚಂದ್ರಶೇಖರ ಪಾಟೀಲ ಈಗಿನ ಅಧ್ಯಕ್ಷರು (2004).

**ಕನ್ನಡ ನಿಘಂಟು ಮತ್ತು ಇತರ ಕಾರ್ಯಗಳು :** ಎಂ.ಆರ್.ಶ್ರೀನಿವಾಸ ಮೂರ್ತಿಯವರು ಅಧ್ಯಕ್ಷರಾಗಿದ್ದಾಗ ನಿಘಂಟುವಿನ ರಚನಾಕಾರ್ಯಕ್ಕೆ ವ್ಯವಸ್ಥಿತರೂಪ ಬಂತು. ಹಸ್ತಪ್ರತಿ ಸಿದ್ಧವಾಗತೊಡಗಿದ ಮೇಲೆ ಮುದ್ರಣ ಕಾರ್ಯಕ್ಕೆ ಸರ್ಕಾರದಿಂದ ವಿಶೇಷ ಧನಸಹಾಯ ದೊರಕಿಸಿಕೊಟ್ಟವರು ಬಿ.ಶಿವಮೂರ್ತಿಶಾಸ್ತ್ರಿಗಳು. ಏಪ್ರಿಲ್ 26, 1964ರಂದು ಇದರ ಮೊದಲ ಸಂಚಿಕೆ ಪ್ರಕಟವಾಯಿತು. ನಿಘಂಟು ರಚನೆಯ ಕಾರ್ಯದ ಸಂಪಾದಕ ಮಂಡಲಿ ಅಖಿಲ ಕರ್ನಾಟಕ ಪ್ರಾತಿನಿಧ್ಯವುಳ್ಳದ್ದಾಗಿತ್ತು. ಎ.ಆರ್.ಕೃಷ್ಣಶಾಸ್ತ್ರೀ, ತೀ.ನಂ.ಶ್ರೀಕಂಠಯ್ಯ, ಡಿ.ಎಲ್.ನರಸಿಂಹಾಚಾರ್ ಇವರು ಅನುಕ್ರಮವಾಗಿ ಸಂಪಾದಕ ಮಂಡಲಿಯ ಅಧ್ಯಕ್ಷರಾಗಿದ್ದರು. ಡಿ.ಎಲ್.ನರಸಿಂಹಾಚಾರ್, ಎಲ್.ಗುಂಡಪ್ಪ, ಸ್ವಲ್ಪಕಾಲ ಎನ್.ಬಸವಾರಾಧ್ಯ ಮತ್ತು ಎಂ.ಮರಿಯಪ್ಪ ಭಟ್ಟ, ಜಿ.ವೆಂಕಟಸುಬ್ಬಯ್ಯ ಸಂಪಾದಕರಾಗಿದ್ದರು. ಪರಿಷತ್ತಿನ ಸುವರ್ಣ ಮಹೋತ್ಸವ ಸಂದರ್ಭದಲ್ಲಿ (1970) 12 ಸಂಚಿಕೆಗಳುಳ್ಳ ಅದರ ಪ್ರಥಮ ಸಂಪುಟ ಪ್ರಕಟವಾಯಿತು. ನಿಘಂಟು ಆಧುನಿಕ ನಿಘಂಟುಶಾಸ್ತ್ರಕ್ಕೆ ಅನುಗುಣವಾಗಿ ಪ್ರಕಟವಾಗುತ್ತಿದೆ. 8 ಸಂಪುಟಗಳು. ಈ ಬಗೆಯ ಶಾಸ್ತ್ರೀಯವೂ ಸರ್ವಾಂಗ ಪರಿಪೂರ್ಣವೂ ಆದ ನಿಘಂಟು ಇತರ ಸಮಕಾಲೀನ ಭಾರತೀಯ ಭಾಷೆಗಳಲ್ಲಿ ಪ್ರಕಟವಾಗಿಲ್ಲ ಎಂಬುದು ವಿದ್ವಾಂಸರ ಅಭಿಪ್ರಾಯ. ಕೊನೆಯ ಸಂಪುಟ 1995ರಲ್ಲಿ ಪ್ರಕಟವಾಗಿದೆ.

1969ರಿಂದ ಪರಿಷತ್ತಿನ ಅಧ್ಯಕ್ಷರಾಗಿದ್ದ ಜಿ.ನಾರಾಯಣ ಅವರು ಒಂದು ತ್ರೈವಾರ್ಷಿಕ ಯೋಜನೆಯನ್ನು ರೂಪಿಸಿದರು. ಎಂದಿನಿಂದಲೂ ಪರಿಷತ್ತಿಗೆ ಉದಾರವಾಗಿ ಧನಸಹಾಯ ಮಾಡಿಕೊಂಡು ಬರುತ್ತಿರುವ ಕರ್ನಾಟಕ ಸರ್ಕಾರ ತನ್ನ ಸಹಾಯವನ್ನು ಬಹುಗುಣವಾಗಿ ಹೆಚ್ಚಿಸಿದೆ. ತ್ರೈವಾರ್ಷಿಕ ಯೋಜನೆಯಂತೆ 1970ರ ಡಿಸೆಂಬರ್ 26ರಂದು ಪರಿಷತ್ತಿನ ಸುವರ್ಣ ಮಹೋತ್ಸವ ನಡೆಯಿತು. ಇದರ ಸವಿನೆನಪಿಗಾಗಿ ಚಿನ್ನದ ಬೆಳಸು ಎಂಬ ಬೃಹತ್ ಸ್ಮರಣಸಂಪುಟ ಪ್ರಕಟವಾಯಿತು. ಪರಿಷತ್ತಿನ ಆ ವರೆಗಿನ ಜೀವಿತಾವಧಿಯ 55 ವರ್ಷಗಳಲ್ಲಿ ಕನ್ನಡ ಭಾಷಾಸಾಹಿತ್ಯಗಳಲ್ಲಿ ಆದ ಬಹುಮುಖವಾದ ಬೆಳವಣಿಗೆಯನ್ನು ಪ್ರತಿಬಿಂಬಿಸುವ ಈ ಸಂಪುಟಕ್ಕೆ ಎಂ.ವಿ.ಸೀತಾರಾಮಯ್ಯ ಸಂಪಾದಕರು. ಉತ್ಸವದ ಅಂಗವಾಗಿ, ರಂ.ಶ್ರೀ.ಮುಗಳಿಯವರ ಸಂಪಾದಕತ್ವದಲ್ಲಿ 25 ಗ್ರಂಥಗಳು ಏಕಕಾಲದಲ್ಲಿ ಪ್ರಕಟಗೊಂಡದ್ದು ಇನ್ನೊಂದು ವಿಶೇಷ. ಇವುಗಳಲ್ಲದೆ ಪರಿಷತ್ತು ಸಾಹಿತ್ಯಪ್ರಸಾರ ಯೋಜನೆ ಮತ್ತು ಮಹಿಳಾ ವರ್ಷದಲ್ಲಿ ಮಹಿಳೆಯರಿಗಾಗಿಯೇ ರೂಪಿಸಿದ ಕೆಲವು ಯೋಜನೆಗಳನ್ನು ಕೈಗೊಂಡು ಯಶಸ್ವಿಯಾಗಿ ನೆರವೇರಿಸಿದೆ. ಈ ಸಂದರ್ಭಕ್ಕನುಗುಣವಾಗಿ ಮಹಿಳೆಯರ ವಿವಿಧ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಮಹಿಳೆಯರೇ ಬರೆದ 21 ಗ್ರಂಥಗಳನ್ನು ಏಕಕಾಲದಲ್ಲಿ ಪ್ರಕಟಿಸಿದೆ (1975). ಪರಿಷತ್ತು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ 944 ಗ್ರಂಥಗಳನ್ನು ಪ್ರಕಟಿಸಿದೆ (2003).

ಕನ್ನಡ ಭಾಷೆ ಸಾಹಿತ್ಯಗಳ ಅಭಿವೃದ್ಧಿಯಲ್ಲೂ ಕರ್ನಾಟಕ ಏಕೀಕರಣ ಕಾರ್ಯದಲ್ಲೂ ಪರಿಷತ್ತು ಸ್ಫೂರ್ತಿಕೇಂದ್ರವಾಗಿದ್ದುಕೊಂಡು, ತನ್ನ ವಾರ್ಷಿಕ ಸಭೆ ಸಮ್ಮೇಳನಗಳ ಮೂಲಕವೂ ಪತ್ರಿಕೆ ಪ್ರಕಟನೆಗಳ ಮೂಲಕವೂ ಅಧಿಕಾರಿ ವರ್ಗದ ಪ್ರವಾಸ ಪ್ರಚಾರಕಾರ್ಯಗಳ ಮೂಲಕವೂ ಪ್ರಮುಖ ಪಾತ್ರವನ್ನು ವಹಿಸಿದೆ. ಪರಿಷತ್ತಿನ ಸದಸ್ಯ ಬಲ 45ಸಾವಿರ (2003).

ಕಾಲಕ್ಕನುಗುಣವಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಅಂಗರಚನೆಯಲ್ಲಿ, ಆಡಳಿತ ವ್ಯವಸ್ಥೆಯಲ್ಲಿ ಅನೇಕ ಬದಲಾವಣೆಗಳಾಗಿವೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿ 42 ಸದಸ್ಯರನ್ನೊಳಗೊಂಡಿತ್ತು (2003). ಕರ್ನಾಟಕದ ಎಲ್ಲ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಘಟಕಗಳ ಅಧ್ಯಕ್ಷರು, ಗಡಿರಾಜ್ಯ ಘಟಕಗಳ ಅಧ್ಯಕ್ಷರು, ಸಾಹಿತ್ಯ ಸಮ್ಮೇಳನಾಧ್ಯಕ್ಷರು, ಪರಿಷತ್ತಿನ ನಿಕಟಪೂರ್ವ ಅಧ್ಯಕ್ಷರು, ವಿಶ್ವವಿದ್ಯಾನಿಲಯದ ಪ್ರತಿನಿಧಿಗಳು, ಮಹಿಳಾ ಪ್ರತಿನಿಧಿಗಳು ಹಾಗೂ ಪರಿಶಿಷ್ಟ ಜಾತಿಯ ಪ್ರತಿನಿಧಿಗಳು ಆಡಳಿತ ಮಂಡಳಿಯಲ್ಲಿದ್ದಾರೆ.

**ವಜ್ರಮಹೋತ್ಸವ :** 1977 ಏಪ್ರಿಲ್ ತಿಂಗಳಿನಲ್ಲಿ ವಜ್ರಮಹೋತ್ಸವ ಸಮಾರಂಭ ಆರು ದಿನಗಳ ಕಾಲ ನಡೆಯಿತು. ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪ್ರಧಾನ ಸಮಾರಂಭವೂ ಈ ಸಂದರ್ಭದಲ್ಲಿ ನಡೆಯಿತು. ಮೊದಲ ಬಾರಿಗೆ ದೆಹಲಿಯಿಂದ ಹೊರಗೆ ಈ ಸಮಾರಂಭ

ನಡೆಯಲು ಪರಿಷತ್ತು ವೇದಿಕೆ ಕಲ್ಪಿಸಿತು. ವಜ್ರಮಹೋತ್ಸವದ ಸವಿನೆನಪಿಗಾಗಿ ಮೂರಂತಸ್ತಿನ ವಜ್ರಮಹೋತ್ಸವ ಕಟ್ಟಡ ನಿರ್ಮಿಸಲಾಯಿತು. ಕನ್ನಡ ಜಾನಪದ ವಿಶ್ವಕೋಶ, ಮಹಾಪುರಾಣ ಮೊದಲಾದ ಮಹತ್ವದ ಗ್ರಂಥಗಳಲ್ಲದೇ ನಲಿಯುವ ಮಕ್ಕಳ ಕಲಿಯುವ ಪುಸ್ತಕ ಮಾಲಿಕೆಯಲ್ಲಿ ವಿವಿಧ ವಿಷಯಗಳ ಬಗೆಗೆ 200 ಮಕ್ಕಳ ಪುಸ್ತಕಗಳು ಪ್ರಕಟವಾದುವು.

ಯುನೆಸ್ಕೋ ಘೋಷಿಸಿದ್ದ ಮಹಿಳಾ ವರ್ಷ, ಅಂತಾರಾಷ್ಟ್ರೀಯ ಮಕ್ಕಳ ವರ್ಷಗಳನ್ನು ಪರಿಷತ್ತು ಅರ್ಥಪೂರ್ಣವಾಗಿ ಆಚರಿಸಿತು. ಕನ್ನಡ ಬೆರಳಚ್ಚು ಶೀಘ್ರಲಿಪಿ ತರಗತಿಗಳು, ವಯಸ್ಕರ ಶಿಕ್ಷಣ ತರಗತಿಗಳು, ಕನ್ನಡ ಬಾರದವರಿಗಾಗಿ ಕನ್ನಡ ಕಲಿಕೆ ತರಗತಿಗಳು, ಕನ್ನಡ ಮಾಧ್ಯಮದ ಪತ್ರಿಕೋದ್ಯಮ ತರಗತಿಗಳು, ಜಾನಪದ ಹಾಗೂ ಶಾಸನ ತರಗತಿಗಳು - ಹೀಗೆ ಅನೇಕ ತರಗತಿಗಳನ್ನು ಪರಿಷತ್ತು ನಡೆಸಿದೆ. ಪ್ರಸ್ತುತ ಶಾಸನಶಾಸ್ತ್ರ ತರಗತಿಗಳು ಮಾತ್ರ ನಡೆಯುತ್ತಿವೆ.

**ಗೌರವ ಸದಸ್ಯತ್ವ :** ಕನ್ನಡ ನಾಡು, ನುಡಿಗೆ ದೀರ್ಘ ಕಾಲ ಶ್ರೇಷ್ಠ ಸೇವೆ ಸಲ್ಲಿಸಿರುವ ಗಣ್ಯರಿಗೆ ಗೌರವ ಸದಸ್ಯತ್ವ ಎಂಬ ಹೆಸರಿನಲ್ಲಿ ಫೆಲೋಷಿಪ್ ಮಾದರಿಯ ಶ್ರೇಷ್ಠ ಮನ್ನಣೆಯನ್ನು 1985ರಿಂದ ಪರಿಷತ್ತು ನೀಡುತ್ತಿದೆ.

**ಶಾಶ್ವತ ನಿಧಿ :** ಪರಿಷತ್ತಿನ ಕಾರ್ಯಕ್ರಮಗಳು ನಿರಂತರವಾಗಿ ನಡೆದುಕೊಂಡು ಹೋಗಲು ಅನುಕೂಲವಾಗುವಂತೆ ಅಮೃತನಿಧಿ, ಚೈತನ್ಯ ನಿಧಿ ಮೊದಲಾದ ಶಾಶ್ವತ ಆರ್ಥಿಕ ನಿಧಿಗಳನ್ನು ಸ್ಥಾಪಿಸಲಾಗಿದೆ. ಅದರ ಬಡ್ಡಿಯಿಂದ ನಿಗದಿತ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ.

**ಕನ್ನಡ ಪರೀಕ್ಷೆ :** ಈಗಾಗಲೇ ನಡೆಯುತ್ತಿರುವ ಕನ್ನಡ ಕಾವ, ಜಾಣ, ರತ್ನ ಪರೀಕ್ಷೆಗಳಿಗೆ ಪೂರಕವಾಗಿ ಕನ್ನಡ ಪ್ರವೇಶ ಎಂಬ ಪ್ರಾರಂಭಿಕ ಹಂತದ ಪರೀಕ್ಷೆಯನ್ನು (1990) ಪರಿಷತ್ತು ನಡೆಸುತ್ತಿದೆ. ಪರಿಷತ್ತಿನ ಸಾಹಿತ್ಯ ಪರೀಕ್ಷೆಗಳನ್ನು ಕರ್ನಾಟಕ ಸರ್ಕಾರ ಮಾನ್ಯ ಮಾಡಿದೆ. ಕನ್ನಡ ಕಾವ, ಜಾಣ, ರತ್ನ ಪರೀಕ್ಷೆಗಳಲ್ಲಿ ತೇರ್ಗಡೆಯಾದ ರಾಜ್ಯ ಸರ್ಕಾರಿ ನೌಕರರಿಗೆ ಇಲಾಖಾ ಭಾಷಾ ಪರೀಕ್ಷೆಯಿಂದ ವಿನಾಯಿತಿ ಇದೆ.

**ಬಾವುಟ :** ಕನ್ನಡ ಸಾಹಿತ್ಯ ಪರಿಷತ್ತಿಗೆ ಅದರದೇ ಆದ ಬಾವುಟ (ಧ್ವಜ)ವನ್ನು ರೂಪಿಸಲಾಗಿದೆ. ಪರಿಷತ್ತಿನ ಅಧಿಕೃತ ಕಾರ್ಯಕ್ರಮಗಳಲ್ಲಿ, ಸಾಹಿತ್ಯ ಸಮ್ಮೇಳನಗಳಲ್ಲಿ ಈ ಬಾವುಟವನ್ನು ಹಾರಿಸಲಾಗುತ್ತದೆ. ಹೊಸಗನ್ನಡ ಸಾಹಿತ್ಯದ ನಿರ್ಮಾಪಕರು ಮಾಲಿಕೆಯಲ್ಲಿ ವ್ಯಕ್ತಿಚಿತ್ರಣಗಳ ಪುಸ್ತಕಗಳು ಪ್ರಕಟವಾಗಿವೆ. ಕನ್ನಡದಲ್ಲಿ ಬಂದ ಅನೇಕ ಪಿಎಚ್.ಡಿ. ಗ್ರಂಥಗಳನ್ನು ಪರಿಷತ್ತು ಪ್ರಕಟಿಸಿದೆ. ಹೊಸದಾಗಿ ಓದುಕಲಿತ ವಯಸ್ಕರಿಗಾಗಿ ನವಸಾಕ್ಷರ ಮಾಲೆಯ ಅನೇಕ ಪುಸ್ತಕಗಳು ಪ್ರಕಟವಾಗಿವೆ.

ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಸಾಹಿತ್ಯ, ಸಂಸ್ಕೃತಿಗೆ ಸಂಬಂಧಿಸಿದಂತೆ ಕೈಗೊಳ್ಳಲಾದ ಹೊಸಶೋಧಗಳ ಬಗೆಗೆ ಪ್ರಬಂಧ ಮಂಡಿಸುವ ಹಾಗೂ ಸಮಕಾಲೀನ ವಿಷಯವೊಂದರ ಬಗೆಗೆ ಸಂಜೆ ಪ್ರತ್ಯೇಕ ವೇದಿಕೆಯಲ್ಲಿ ಸಾಹಿತ್ಯ ಸಂವಾದ ನಡೆಸುವ ಏರ್ಪಾಟು ಜಾರಿಗೆ ಬಂದಿದೆ.

**ಗೀತ ಸಂಗೀತ :** ಖ್ಯಾತ ಕವಿಗಳು ತಾವು ರಚಿಸಿದ ಹೊಸ ಕವನವನ್ನು ತಾವೇ ವಾಚಿಸುವುದು, ಅನಂತರ ಅದೇ ಕವನವನ್ನು ಸುಗಮ ಸಂಗೀತ ಹಾಡುಗಾರರು ಸಂಗೀತದೊಡನೆ ಹಾಡುವ ವೈಶಿಷ್ಟ್ಯಪೂರ್ಣವಾದ ಗೀತ ಸಂಗೀತ ಕಾರ್ಯಕ್ರಮ ಸಮ್ಮೇಳನದಲ್ಲಿ ಜನಪ್ರಿಯವಾಗಿದೆ.

**ಅಮೃತೋತ್ಸವ :** ಪರಿಷತ್ತಿಗೆ 75 ವರ್ಷ ಪೂರ್ಣಗೊಂಡ ನೆನಪಿಗೆ (1991) ಎಲ್ಲಾ ಜಿಲ್ಲಾ ಘಟಕಗಳೂ ಅಮೃತೋತ್ಸವ ಕಾರ್ಯಕ್ರಮಗಳನ್ನು ಆಚರಿಸಿವೆ.

ಪರಿಷತ್ತಿನ ನಿಯತಕಾಲಿಕೆ ಕನ್ನಡ ನುಡಿಗೆ 50 ವರ್ಷ ತುಂಬಿದ ನೆನಪಿಗಾಗಿ ಕನ್ನಡ ನುಡಿಯ ಸುವರ್ಣೋತ್ಸವ ಸಂಚಿಕೆಯನ್ನು ಪ್ರಕಟಿಸಲಾಗಿದೆ.

**ಅಮೃತನಿಧಿ ಚೀಟಿ :** ಒಬ್ಬ ಕನ್ನಡಿಗ ಒಂದು ರೂಪಾಯಿ ಘೋಷಣೆಯಡಿ ಶಾಶ್ವತನಿಧಿಗೆ ಹಣ ಸಂಗ್ರಹಿಸುವುದಕ್ಕಾಗಿ ಒಂದು ರೂಪಾಯಿ ಮುಖಬೆಲೆಯ ವರ್ಣಮಯ ಅಮೃತನಿಧಿ ಚೀಟಿಗಳನ್ನು ಮುದ್ರಿಸಿ ಮಾರಾಟಕ್ಕೆ ಬಿಡುಗಡೆ ಮಾಡಲಾಗಿದೆ.

ಸಾಹಿತ್ಯದ ಬೇರೆ ಬೇರೆ ಪ್ರಕಾರಗಳ ಬಗೆಗೆ ಚರ್ಚಿಸಲು, ವಿಚಾರ ವಿನಿಮಯ ಮಾಡಿಕೊಳ್ಳಲು ಅನುಕೂಲವಾಗುವಂತೆ ಪ್ರತ್ಯೇಕವಾಗಿ ಸಾಹಿತ್ಯ ಸಮಾವೇಶಗಳನ್ನು ಪರಿಷತ್ತು ಏರ್ಪಡಿಸಿದೆ.

**ಧ್ವನಿಸುರುಳಿ :** ಖ್ಯಾತ ಕವಿಗಳ ಭಾವಗೀತೆಗಳನ್ನೊಳಗೊಂಡ ಹಚ್ಚೇವು ಕನ್ನಡದ ದೀಪ ಎಂಬ ಧ್ವನಿಸುರುಳಿಯನ್ನು ಪರಿಷತ್ತು ಸಿದ್ಧಗೊಳಿಸಿ ಬಿಡುಗಡೆ ಮಾಡಿದೆ. ಇದೇ ರೀತಿ ಇನ್ನೆರಡು ಕ್ಯಾಸೆಟ್‌ಗಳು ಅನಂತರದಲ್ಲಿ ಬಂದಿವೆ.

**ಜಿಲ್ಲಾ ಸಾಹಿತ್ಯ ಭವನಗಳು :** ಪರಿಷತ್ತಿನ ಜಿಲ್ಲಾ ಘಟಕಗಳು ಸ್ವಂತ ನಿವೇಶನಗಳನ್ನು ಪಡೆದುಕೊಂಡು ಜಿಲ್ಲಾ ಸಾಹಿತ್ಯ ಭವನಗಳನ್ನು ನಿರ್ಮಿಸಿ ಸಾಹಿತ್ಯ ಚಟುವಟಿಕೆಗಳನ್ನು ನಡೆಸುತ್ತಿವೆ. ಅಲ್ಲದೇ ಉಪಯುಕ್ತ ಗ್ರಂಥಗಳನ್ನೂ ಪ್ರಕಟಿಸುತ್ತಿವೆ.

'ಱ,ೞ', ನಿಘಂಟು, ಪಡೆನುಡಿ ಕೋಶ ಎಂಬ ಮೌಲಿಕ ನಿಘಂಟುಗಳು ಪ್ರಕಟವಾಗಿವೆ.

ಕನ್ನಡ-ಕನ್ನಡ ಬೃಹತ್ ನಿಘಂಟು ಯೋಜನೆಯನ್ನು ಪೂರ್ಣಗೊಳಿಸಿ ಕೊನೆಯದಾದ 8ನೆಯ ಸಂಪುಟವನ್ನು ಪ್ರಕಟಿಸಲಾಗಿದೆ (1995). ಕನ್ನಡ-ಕನ್ನಡ-ಇಂಗ್ಲಿಷ್ ಬೃಹತ್ ನಿಘಂಟು ಯೋಜನೆ ಆರಂಭವಾಗಿದ್ದು ಮೊದಲನೆಯ ಸಂಪುಟ ಪ್ರಕಟವಾಗಿದೆ (2002). ಪುಸ್ತಕ ಯೋಜನೆಯಡಿ ದತ್ತಿನಿಧಿಗಳ ಆಶ್ರಯದಲ್ಲಿ ಪ್ರತಿವರ್ಷ ಒಂದೊಂದು ಪುಸ್ತಕವನ್ನು ಪ್ರಕಟಿಸಲಾಗುತ್ತಿದೆ.

ಆಧುನಿಕ ತಂತ್ರಜ್ಞಾನದ ಪ್ರಯೋಜನವನ್ನು ಪರಿಷತ್ತಿನ ಚಟುವಟಿಕೆಗಳಲ್ಲಿ ಪಡೆದುಕೊಳ್ಳಲು ಬಯಸಿ ಕಂಪ್ಯೂಟರ್‌ಗಳನ್ನು ಪರಿಷತ್ತಿನಲ್ಲಿ ಸ್ಥಾಪಿಸಲಾಗಿದೆ (1996). ಕನ್ನಡದ ಶ್ರೇಷ್ಠ ಗ್ರಂಥಗಳ ಸಿ.ಡಿ.ಯನ್ನು ಸಿದ್ಧಪಡಿಸಲಾಗುತ್ತಿದೆ. ಜೊತೆಗೆ ಪರಿಷತ್ತಿಗೆ ವೆಬ್‌ಸೈಟ್ (ಅಂತರ್ ಜಾಲ) ನಿರ್ಮಿಸಲಾಗಿದೆ.

ಇಪ್ಪತ್ತು ಸಾವಿರ ರೂಪಾಯಿ ನಗದು, ಪ್ರಶಸ್ತಿ ಫಲಕಗಳನ್ನೊಳಗೊಂಡ ಚಾವುಂಡರಾಯ ಪ್ರಶಸ್ತಿಯನ್ನು ಪರಿಷತ್ತು 1995-96ರಿಂದ ಪ್ರತಿವರ್ಷ ಕನ್ನಡದ ಶ್ರೇಷ್ಠ ಬರೆಹಗಾರರಿಗೆ ನೀಡುತ್ತಿದೆ. ಮಹಿಳೆಯರಿಗಾಗಿ ಹತ್ತುಸಾವಿರ ರೂಪಾಯಿ ನಗದು ಬಹುಮಾನವುಳ್ಳ 'ಪದ್ಮಭೂಷಣ ಬಿ.ಸರೋಜಾದೇವಿ ಸಾಹಿತ್ಯ ಪ್ರಶಸ್ತಿ'ಯನ್ನು 1997-98 ರಿಂದ ನೀಡಲಾಗುತ್ತಿದೆ.

ದತ್ತಿನಿಧಿ ಆಶ್ರಯದಲ್ಲಿ ಪ್ರತಿವರ್ಷ ಉತ್ತಮ ಸಾಹಿತ್ಯ ಕೃತಿಗಳಿಗೆ ಬಹುಮಾನಗಳನ್ನು ಕೊಡಲಾಗುತ್ತಿದೆ. ಕರ್ನಾಟಕ ಮಾತೆಯ ಸುಂದರ ತೈಲವರ್ಣ ಚಿತ್ರವನ್ನು ತಯಾರಿಸಲಾಗಿದೆ. ಅವುಗಳ ಪ್ರತಿಗಳನ್ನು ಮಾರಾಟ ಮಾಡಲಾಗುತ್ತಿದೆ. (ಎಂ.ವಿ.ಎಸ್.)

**ಕನ್ನಡ ಸಾಹಿತ್ಯ ಸಮ್ಮೇಳನಗಳು :** ಕರ್ನಾಟಕ ಸಾಹಿತ್ಯ ಪರಿಷತ್ತನ್ನು ಸ್ಥಾಪಿಸಬೇಕೆಂದು ತೀರ್ಮಾನಿಸಿದ, 1915ರ ಮೇ 9ರಂದು ಬೆಂಗಳೂರಿನಲ್ಲಿ ಸೇರಿದ ಸಮ್ಮೇಳನವೇ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ.

ಸಾಮಾನ್ಯವಾಗಿ ಪ್ರತಿವರ್ಷವೂ ಕನ್ನಡ ನಾಡಿನ ಒಂದೊಂದು ಮುಖ್ಯಪಟ್ಟಣಗಳಲ್ಲಿ ಕನ್ನಡ ಭಾಷಾಭಿಮಾನಿಗಳ ಸಮ್ಮೇಳನಗಳನ್ನು ನಡೆಸುತ್ತ ಬರುವುದು ಕನ್ನಡ ಸಾಹಿತ್ಯ ಪರಿಷತ್ತಿನ ಮುಖ್ಯ ಕಾರ್ಯಗಳಲ್ಲೊಂದು. 2003ರವರೆಗೆ 71 ಸಮ್ಮೇಳನಗಳು ನಡೆದಿವೆ. ಸಮ್ಮೇಳನಗಳ ಕಾರ್ಯವಿವರಣೆ ಸ್ಥೂಲವಾಗಿ ಈ ರೀತಿಯಿದೆ: ಈ ಸಮ್ಮೇಳನಗಳ ಅಧ್ಯಕ್ಷತೆಗೆ ಪ್ರಮುಖರಾದ ಕನ್ನಡ ಭಾಷಾಭಿಮಾನಿಗಳಲ್ಲೊಬ್ಬರನ್ನು ಆರಿಸಲಾಗುತ್ತದೆ. ಅಧ್ಯಕ್ಷರಾಗಿ ಆಯ್ಕೆಯಾದವರು ಸಾಮಾನ್ಯವಾಗಿ ತಮ್ಮ ಭಾಷಣದಲ್ಲಿ ಕನ್ನಡ ಭಾಷೆಯ ಸದ್ಯದ ಪರಿಸ್ಥಿತಿಯನ್ನು ವಿವರಿಸಿ ಕನ್ನಡ ಭಾಷೆಯ ಮತ್ತು ದೇಶದ ಅಭಿವೃದ್ಧಿ ಸ್ಥಿತಿಯನ್ನು ಕುರಿತು ಕರ್ನಾಟಕದ ನಾನಾ ಭಾಗಗಳಲ್ಲಿಯ ಕನ್ನಡಿಗರಲ್ಲಿ ಸೌಹಾರ್ದ ಹುಟ್ಟುವಂತೆ ಉಪನ್ಯಾಸ

ಮಾಡುವರು. ಇದಲ್ಲದೆ ನಾನಾ ಪ್ರಾಂತ್ಯಗಳಿಂದ ಸಮ್ಮೇಳನಕ್ಕೆ ಬಂದ ಕನ್ನಡಿಗರು ಕನ್ನಡ ಭಾಷೆಯ ಮತ್ತು ದೇಶದ ಏಳಿಗೆಗಾಗಿ ಆವಶ್ಯಕವೆಂದು ತೋರುವ ಅನೇಕ ಗೊತ್ತುವಳಿಗಳನ್ನು ಮಾಡುವರು. ಇದನ್ನು ಪರಿಷತ್ತು ಆಯಾ ಅಧಿಕಾರಿಗಳಿಗೆ ತಿಳಿಯಪಡಿಸಿ ಅವರಿಂದ ಬಂದ ಉತ್ತರಗಳನ್ನು ಮುಂದಿನ ಸಮ್ಮೇಳನದ ಮುಂದೆ ಇಡುತ್ತದೆ. ಈ ಮೂರು ದಿನಗಳ ಸಮ್ಮೇಳನದಲ್ಲಿ ನಾನಾ ಪ್ರಾಂತಗಳಿಂದ ವಿದ್ವಾಂಸರು ಕನ್ನಡ ಸಾಹಿತ್ಯದ ಹಲವು ಪ್ರಕಾರಗಳನ್ನು ಕುರಿತು ವಿದ್ವತ್ಪೂರಿತ ಪ್ರಬಂಧಗಳನ್ನು ಬರೆದೋದುವರು. ಇದರ ಜೊತೆಗೆ ಕನ್ನಡ ಲೇಖಕರ ಗೋಷ್ಠಿ, ನಾಟಕ, ಗೋಷ್ಠಿ, ಇತಿಹಾಸ ಗೋಷ್ಠಿ, ಮಹಿಳಾ ಗೋಷ್ಠಿ, ವೃತ್ತ ಪತ್ರಿಕಾಕರ್ತರ ಗೋಷ್ಠಿ, ವಿಜ್ಞಾನ ಗೋಷ್ಠಿ ಮುಂತಾದ ಹಲವಾರು ಗೋಷ್ಠಿಗಳು ನಡೆಯುತ್ತವೆ. ಈ ಎಲ್ಲ ಗೋಷ್ಠಿಗಳಲ್ಲೂ ಸಮ್ಮೇಳನಾಧ್ಯಕ್ಷರು ಅಗ್ರಸ್ಥಾನದಲ್ಲಿರುತ್ತಾರೆ. ಸಮ್ಮೇಳನದ ಅಂಗವಾಗಿ ಕನ್ನಡ ಲಾವಣಿ, ಸಂಗೀತ, ನಾಟಕ ಮೊದಲಾದ ಮನರಂಜನೆ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುತ್ತದೆ.

ಹಿಂದೆ ಸಮ್ಮೇಳನಾಧ್ಯಕ್ಷರಿಗೂ ಪರಿಷತ್ತಿನ ಕಾರ್ಯಕಾರಿ ಸಮಿತಿಗೂ ನಿಕಟ ಸಂಬಂಧವಿರಲಿಲ್ಲ. ಸಮ್ಮೇಳನದಲ್ಲಾದ ಗೊತ್ತುವಳಿಗಳನ್ನು ಆಚರಣೆಗೆ ತರುವುದರಲ್ಲಾಗಲಿ, ಪರಿಷತ್ತಿನ ಧೋರಣೆಯನ್ನು ರೂಪುಗೊಳಿಸುವುದರಲ್ಲಾಗಲಿ ಅಧ್ಯಕ್ಷರಿಗೆ ಸ್ಥಾನವಿರಲಿಲ್ಲ. ಈಚೆಗೆ ಈ ಸ್ಥಿತಿ ಮಾರ್ಪಟ್ಟಿದೆ. ಸಮ್ಮೇಳನದ ಅಧ್ಯಕ್ಷರು ಕಾರ್ಯಸಮಿತಿಯ ಸದಸ್ಯರಾಗಿರಬೇಕೆಂಬ ಒಂದು ತೀರ್ಮಾನವನ್ನು 1939ರಲ್ಲಿ ಅಂಗೀಕರಿಸಲಾಯಿತು. ಎರಡನೆಯದಾಗಿ ಪರಿಷತ್ತಿನ ಅಧ್ಯಕ್ಷರು ತಾವು ನಡೆಸುವ ಮುಖ್ಯ ಕಾರ್ಯಗಳ ವಿವರಗಳನ್ನು ಆಗಿಂದಾಗ್ಗೆ ಸಮ್ಮೇಳನಾಧ್ಯಕ್ಷರಿಗೆ ತಿಳಿಸಿ ಅವರ ಸಲಹೆ ಪಡೆಯುವುದು ರೂಢಿಗೆ ಬಂದಿದೆ. ಇವರು ಸ್ವತಂತ್ರವಾಗಿಯೋ ಅಧ್ಯಕ್ಷರ ಜೊತೆಯಲ್ಲಿಯೋ ನಾಡಿನಲ್ಲಿ ಪ್ರವಾಸ ಮಾಡಿ ಪರಿಷತ್ತಿನ ಧ್ಯೇಯಗಳನ್ನು ಜನಸಾಮಾನ್ಯರಲ್ಲಿ ಹರಡುತ್ತಿದ್ದಾರೆ.

ಸಮ್ಮೇಳನಗಳು ಕರ್ನಾಟಕದ ಎಲ್ಲ ಪ್ರಮುಖ ಸ್ಥಳಗಳಲ್ಲೂ ನಡೆದಿವೆ. ನಾಡಿನ ಸುಪ್ರಸಿದ್ಧ ಸಾಹಿತಿಗಳು ಅಧ್ಯಕ್ಷರಾಗಿದ್ದಾರೆ. ಸಹಸ್ರ ಸಂಖ್ಯೆಯಲ್ಲಿ ಜನ ಸೇರಿ ಸಮ್ಮೇಳನಗಳ ಕಾರ್ಯ ಕಲಾಪಗಳನ್ನು ವೀಕ್ಷಿಸಿದ್ದಾರೆ. ಜನತೆಯಲ್ಲಿ ಕನ್ನಡದ ಪ್ರಜ್ಞೆಯನ್ನು ಕುದುರಿಸುವಲ್ಲಿ ಈ ಸಮ್ಮೇಳನಗಳು ವಹಿಸಿದ ಪಾತ್ರ ಅಪೂರ್ವವಾದುದು. ಪ್ರತಿ ಸಮ್ಮೇಳನದಲ್ಲೂ ನಾಡು, ನುಡಿಗಳ ಏಳಿಗೆಯ ಬಗ್ಗೆ ಚರ್ಚೆ ನಡೆದು ಉಪಯುಕ್ತ ನಿರ್ಣಯಗಳಾಗಿವೆ. ಆದ ನಿರ್ಣಯಗಳಲ್ಲಿ ಬಹುಪಾಲು ಕಾರ್ಯರೂಪಕ್ಕೂ ಬಂದಿವೆ. ಮುಂದಿನ ಪಟ್ಟಿ ಅಧಿವೇಶನಗಳ ಬಗ್ಗೆ ಮಾಹಿತಿ ನೀಡುತ್ತದೆ.

**ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧಿವೇಶನಗಳು**

| ಕ್ರ.ಸಂ. | ಅಧಿವೇಶನಸ್ಥಳ | ಅಧ್ಯಕ್ಷರು | ವರ್ಷ |
|---|---|---|---|
| 1 | ಬೆಂಗಳೂರು | ಎಚ್.ವಿ.ನಂಜುಂಡಯ್ಯ | 1915 |
| 2 | ಬೆಂಗಳೂರು | ಎಚ್.ವಿ.ನಂಜುಂಡಯ್ಯ | 1916 |
| 3 | ಮೈಸೂರು | ಎಚ್.ವಿ.ನಂಜುಂಡಯ್ಯ | 1917 |
| 4 | ಧಾರವಾಡ | ಆರ್.ನರಸಿಂಹಾಚಾರ್ | 1918 |
| 5 | ಹಾಸನ | ಕರ್ಪೂರ ಶ್ರೀನಿವಾಸರಾವ್ | 1919 |
| 6 | ಹೊಸಪೇಟೆ | ರೊದ್ದ ಶ್ರೀನಿವಾಸರಾಯ | 1920 |
| 7 | ಚಿಕ್ಕಮಗಳೂರು | ಕೆ.ಪಿ.ಪುಟ್ಟಣಚೆಟ್ಟಿ | 1921 |
| 8 | ದಾವಣಗೆರೆ | ಎಂ.ವೆಂಕಟಕೃಷ್ಣಯ್ಯ | 1922 |
| 9 | ಬಿಜಾಪುರ | ಸಿದ್ಧಾಂತಿ ಶಿವಶಂಕರಶಾಸ್ತ್ರಿ | 1923 |
| 10 | ಕೋಲಾರ | ಹೊಸಕೋಟೆ ಕೃಷ್ಣಶಾಸ್ತ್ರಿ | 1924 |
| 11 | ಬೆಳಗಾವಿ | ಬೆನಗಲ್ ರಾಮರಾವ್ | 1925 |
| 12 | ಬಳ್ಳಾರಿ | ಫ.ಗು.ಹಳಕಟ್ಟಿ | 1926 |
| 13 | ಮಂಗಳೂರು | ಆರ್.ತಾತಾಚಾರ್ಯ | 1927 |
| 14 | ಗುಲ್ಬರ್ಗ | ಬಿ.ಎಂ.ಶ್ರೀಕಂಠಯ್ಯ | 1928 |
| 15 | ಬೆಳಗಾವಿ | ಮಾಸ್ತಿ ವೆಂಕಟೇಶಅಯ್ಯಂಗಾರ್ | 1929 |
| 16 | ಮೈಸೂರು | ಆಲೂರ ವೆಂಕಟರಾಯ | 1930 |
| 17 | ಕಾರವಾರ | ಮುಳಿಯ ತಿಮ್ಮಪ್ಪಯ್ಯ | 1931 |
| 18 | ಮಡಿಕೇರಿ | ಡಿ.ವಿ.ಗುಂಡಪ್ಪ | 1932 |
| 19 | ಹುಬ್ಬಳ್ಳಿ | ವೈ.ನಾಗೇಶಶಾಸ್ತ್ರಿ | 1933 |
| 20 | ರಾಯಚೂರು | ಪಂಜೆ ಮಂಗೇಶರಾಯ | 1934 |
| 21 | ಮುಂಬಯಿ | ಎನ್.ಎಸ್.ಸುಬ್ಬರಾಯ | 1935 |
| 22 | ಜಮಖಂಡಿ | ಬೆಳ್ಳಾವೆ ವೆಂಕಟನಾರಣಪ್ಪ | 1937 |
| 23 | ಬಳ್ಳಾರಿ | ರಂ.ರಾ.ದಿವಾಕರ | 1938 |
| 24 | ಬೆಳಗಾವಿ | ಮುದವೀಡು ಕೃಷ್ಣರಾಯ | 1939 |
| 25 | ಧಾರವಾಡ | ವೈ.ಚಂದ್ರಶೇಖರಶಾಸ್ತ್ರೀ | 1940 |
| 26 | ಹೈದರಾಬಾದ್ | ಎ.ಆರ್. ಕೃಷ್ಣಶಾಸ್ತ್ರೀ | 1941 |
| 27 | ಶಿವಮೊಗ್ಗ | ದ.ರಾ.ಬೇಂದ್ರೆ | 1943 |
| 28 | ರಬಕವಿ | ಎಸ್.ಎಸ್.ಬಸವನಾಳ | 1944 |
| 29 | ಮದರಾಸು (ಚೆನ್ನೈ) | ಟಿ.ಪಿ.ಕೈಲಾಸಂ | 1945 |
| 30 | ಹರಪನಹಳ್ಳಿ | ಸಿ.ಕೆ.ವೆಂಕಟರಾಮಯ್ಯ | 1947 |
| 31 | ಕಾಸರಗೋಡು | ತಿರುಮಲೆತಾತಾಚಾರ್ಯಶರ್ಮ | 1948 |
| 32 | ಗುಲ್ಬರ್ಗ | ಉತ್ತಂಗಿ ಚನ್ನಪ್ಪ | 1949 |
| 33 | ಸೊಲ್ಲಾಪುರ | ಎಂ.ಆರ್.ಶ್ರೀನಿವಾಸಮೂರ್ತಿ | 1950 |
| 34 | ಬೊಂಬಾಯಿ(ಮುಂಬಯಿ) | ಎಂ.ಗೋವಿಂದ ಪೈ | 1950 |
| 35 | ಬೇಲೂರು | ಎಸ್.ಸಿ.ನಂದೀಮಠ | 1952 |
| 36 | ಕುಮಟ | ವಿ.ಸೀತಾರಾಮಯ್ಯ | 1954 |
| 37 | ಮೈಸೂರು | ಶಿವರಾಮ ಕಾರಂತ | 1955 |
| 38 | ರಾಯಚೂರು | ಆದ್ಯ ರಂಗಾಚಾರ್ಯ | 1955 |
| 39 | ಧಾರವಾಡ | ಕೆ.ವಿ.ಪುಟ್ಟಪ್ಪ | 1957 |
| 40 | ಬಳ್ಳಾರಿ | ವಿ.ಕೃ.ಗೋಕಾಕ | 1958 |
| 41 | ಬಿದರೆ (ಬೀದರ್) | ಡಿ.ಎಲ್.ನರಸಿಂಹಾಚಾರ್ | 1960 |
| 42 | ಮಣಿಪಾಲ | ಅ.ನ.ಕೃಷ್ಣರಾಯ | 1960 |
| 43 | ಗದಗ | ಕೆ.ಜಿ.ಕುಂದಣಗಾರ | 1961 |
| 44 | ಸಿದ್ಧಗಂಗಾ | ರಂ.ಶ್ರೀ.ಮುಗಳಿ | 1963 |
| 45 | ಕಾರವಾರ | ಕಡೆಂಗೋಡ್ಲು ಶಂಕರಭಟ್ಟ | 1965 |
| 46 | ಶ್ರವಣಬೆಳಗೊಳ | ಆ.ನೇ.ಉಪಾಧ್ಯೆ | 1967 |
| 47 | ಬೆಂಗಳೂರು | ದೇ.ಜವರೇಗೌಡ | 1970 |
| 48 | ಮಂಡ್ಯ | ಜಯದೇವಿತಾಯಿ ಲಿಗಾಡೆ | 1974 |
| 49 | ಶಿವಮೊಗ್ಗ | ಎಸ್.ವಿ.ರಂಗಣ್ಣ | 1976 |
| 50 | ನವದೆಹಲಿ | ಜಿ.ಪಿ.ರಾಜರತ್ನಂ | 1978 |
| 51 | ಧರ್ಮಸ್ಥಳ | ಎಂ.ಗೋಪಾಲಕೃಷ್ಣ ಅಡಿಗ | 1979 |
| 52 | ಬೆಳಗಾವಿ | ಬಸವರಾಜ ಕಟ್ಟೀಮನಿ | 1980 |
| 53 | ಚಿಕ್ಕಮಗಳೂರು | ಪು.ತಿ.ನರಸಿಂಹಾಚಾರ್ | 1981 |
| 54 | ಮಡಿಕೇರಿ | ಶಂ.ಬಾ.ಜೋಶಿ | 1981 |
| 55 | ಶಿರಸಿ | ಗೊರೂರು ರಾಮಸ್ವಾಮಿ ಅಯ್ಯಂಗಾರ್ | 1982 |
| 56 | ಕೈವಾರ | ಎ.ಎನ್.ಮೂರ್ತಿರಾವ್ | 1984 |
| 57 | ಬೀದರ್ | ಹಾ.ಮಾ.ನಾಯಕ | 1985 |
| 58 | ಕಲಬುರ್ಗಿ | ಸಿದ್ಧಯ್ಯ ಪುರಾಣಿಕ | 1987 |
| 59 | ಹುಬ್ಬಳ್ಳಿ | ಆರ್.ಸಿ.ಹಿರೇಮಠ | 1990 |
| 60 | ಮೈಸೂರು | ಕೆ.ಎಸ್.ನರಸಿಂಹಸ್ವಾಮಿ | 1990 |
| 61 | ದಾವಣಗೆರೆ | ಜಿ.ಎಸ್.ಶಿವರುದ್ರಪ್ಪ | 1992 |
| 62 | ಕೊಪ್ಪಳ | ಸಿಂಪಿಲಿಂಗಣ್ಣ | 1992 |
| 63 | ಮಂಡ್ಯ | ಚದುರಂಗ | 1994 |
| 64 | ಮುಧೋಳ | ಎಚ್.ಎಲ್.ನಾಗೇಗೌಡ | 1995 |
| 65 | ಹಾಸನ | ಚೆನ್ನವೀರ ಕಣವಿ | 1996 |
| 66 | ಮಂಗಳೂರು | ಕಯ್ಯಾರ ಕಿಞ್ಞಣ್ಣ ರೈ | 1997 |
| 67 | ಕನಕಪುರ | ಎಸ್.ಎಲ್.ಭೈರಪ್ಪ | 1999 |
| 68 | ಬಾಗಲಕೋಟೆ | ಶಾಂತಾದೇವಿ ಮಾಳವಾಡ | 2000 |
| 69 | ತುಮಕೂರು | ಯು.ಆರ್.ಅನಂತಮೂರ್ತಿ | 2002 |
| 70 | ಬೆಳಗಾವಿ | ಪಾಟೀಲ ಪುಟ್ಟಪ್ಪ | 2003 |
| 71 | ಮೂಡಬಿದರೆ | ಕಮಲಾಹಂಪನ | 2003 |

*

**ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ :** ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಧಾನ ಮುಖಪತ್ರವಾಗಿ 1915ರಲ್ಲಿ ಸ್ಥಾಪಿತವಾಗಿ 1916ರ ಏಪ್ರಿಲ್‌ನಿಂದ ಪ್ರಕಟವಾಗುತ್ತಿದೆ. ಕನ್ನಡನಾಡು ನುಡಿ ಸಂಸ್ಕೃತಿಗಳ ಪುನರುಜ್ಜೀವನ, ಜ್ಞಾನಪ್ರಸಾರ, ಕನ್ನಡ ಏಕೀಕರಣದ ಪ್ರಸಾರ, ವಿದ್ವತ್ ಲೇಖನಗಳ ಪ್ರಕಟಣೆ - ಇವು ಪತ್ರಿಕೆಯ ಧ್ಯೇಯಗಳು. ಮೊದಲ ಹೆಸರು ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ. 1938ರಲ್ಲಿ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಎಂದು ಬದಲಾಯಿತು. ಕೆಲವು ಕಾಲ ಪತ್ರಿಕೆ ತ್ರೈಮಾಸಿಕವಾಗಿತ್ತು. ಷಾಣ್ಮಾಸಿಕವಾಗಿ ಪ್ರಕಟವಾಗುತ್ತಿತ್ತು. ಅನಂತರ ಈಗ ತ್ರೈವಾರ್ಷಿಕ ಪತ್ರಿಕೆಯಾಗಿ ಪ್ರಕಟವಾಗುತ್ತಿದೆ.




ಪ್ರಾರಂಭದಲ್ಲಿ ಪತ್ರಿಕೆಯನ್ನು ಒಂದು ಸಂಪಾದಕ ಮಂಡಲಿ ನಡೆಸುತ್ತಿದ್ದು ಅನಂತರ ಮಂಡಲಿಯ ಜೊತೆಗೆ ಪ್ರತ್ಯೇಕ ಸಂಪಾದಕರನ್ನು ನೇಮಿಸಲಾಯಿತು. ಬೆಳ್ಳಾವೆ ವೆಂಕಟನಾರಣಪ್ಪ, ಎಂ.ಆರ್.ಶ್ರೀನಿವಾಸಮೂರ್ತಿ, ಡಿ.ಎಲ್.ನರಸಿಂಹಾಚಾರ್, ಡಿ.ಸಿ.ಸುಬ್ಬರಾಯಪ್ಪ, ಬಿ.ಶಿವಮೂರ್ತಿಶಾಸ್ತ್ರಿ, ಎನ್.ಎಸ್.ಲಕ್ಷ್ಮೀನಾರಾಯಣಭಟ್ಟ, ಹಂಪನಾಗರಾಜಯ್ಯ, ಟಿ.ಕೇಶವಭಟ್ಟ, ಲಕ್ಷ್ಮಣಕೊಡಸೆ, ಗೊ.ರು.ಚನ್ನಬಸಪ್ಪ ಲಕ್ಷ್ಮಣ ತೆಲಗಾವಿ ಮೊದಲಾದವರು ಸಂಪಾದಕರಾಗಿದ್ದರು.

ಕವಿಚರಿತೆ, ವಡ್ಡಾರಾಧನೆ ಮುಂತಾದ ಅನೇಕ ಗ್ರಂಥಗಳು ಮೊದಲು ಈ ಪತ್ರಿಕೆಯಲ್ಲಿ ಲೇಖನ ರೂಪದಲ್ಲಿ ಬಿಡಿಯಾಗಿ ಬೆಳಕು ಕಂಡು ಅನಂತರ ಗ್ರಂಥರೂಪದಲ್ಲಿ ಪ್ರಕಟವಾಗಿವೆ. ಸಾಹಿತ್ಯದ ವಿವಿಧ ಪ್ರಕಾರ ಕುರಿತ ಬರೆಹಗಳು, ಟೀಕೆ ಟಿಪ್ಪಣಿ, ವಿಮರ್ಶೆ, ಸಾಹಿತ್ಯ ಸಮ್ಮೇಳನಗಳ ವರದಿ, ಭಾಷಣಗಳು, ನಿರ್ಣಯಗಳು ಮೊದಲಾದವು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ. ಕನ್ನಡ ನಾಡಿನ ಹೊರಗಿನ ಭಾಷಾಪಂಡಿತರಿಗೆ ಅನುಕೂಲವಾಗಲೆಂದು ಪತ್ರಿಕೆಯ ಪ್ರಕಟಿತ ಲೇಖನಗಳ ಸಂಕ್ಷಿಪ್ತ ಇಂಗ್ಲಿಷ್ ಅನುವಾದವನ್ನು ಕೊಡಲಾಗುತ್ತಿತ್ತು. ವಿದ್ವತ್ ಪ್ರಪಂಚಕ್ಕೆ, ಸಂಶೋಧನ ವಿಭಾಗಕ್ಕೆ, ವಿಮರ್ಶೆಯ ಕ್ಷೇತ್ರಕ್ಕೆ ಈ ಪತ್ರಿಕೆ ಅಪಾರ ಸೇವೆ ಸಲ್ಲಿಸುತ್ತಿದೆ. (ಎಚ್.ಪಿ.ಎನ್.)

**ಕನ್ನಡೇತರ ಭಾಷೆಗಳು ಮತ್ತು ಸಾಹಿತ್ಯ :** ಕರ್ನಾಟಕದಲ್ಲಿ ಕನ್ನಡ ವಲ್ಲದೆ ಇತರ 165 ಭಾಷೆಗಳು ಪ್ರಚಲಿತವಾಗಿವೆ. ಆದರೆ ಇವುಗಳಲ್ಲಿ ಹೆಚ್ಚಿನವು (ಉದಾ:ಆರ್ಮೇನಿಯನ್,ಇಂಡೊನೇಷ್ಯನ್) ಉದ್ಯೋಗ ಇತ್ಯಾದಿಗಳಿಗಾಗಿ ಬೇರೆ ದೇಶಗಳಿಂದ ಬಂದು ನೆಲಸಿದ ಕೆಲವೇ ವ್ಯಕ್ತಿ ಅಥವಾ ಕುಟುಂಬಗಳಿಗಷ್ಟೇ ಸೀಮಿತವಾಗಿವೆ. ಹೆಚ್ಚಿನ ಜನರ ಮಾತೃಭಾಷೆಯಾಗುಳ್ಳ ಕನ್ನಡೇತರ ಭಾಷೆಗಳಿವು: ತಮಿಳು, ಕೊಂಕಣಿ, ಮಲಯಾಳಂ, ಲಂಬಾಣಿ, ಹಿಂದಿ, ಉರ್ದು, ಕೊಡವ, ಬಂಜಾರಿ, ಗುಜಕ್ಷತ್ರಿಯ, ಇಂಗ್ಲಿಷ್, ಮಾರ್ವಾರಿ, ಎರವ, ತಿಬೆಟನ್, ಸಿಂಧಿ, ಬಂಗಾಲಿ, ಪಂಜಾಬಿ, ಅರಬ್ಬೀ, ಹಿಂದುಸ್ಥಾನೀ, ರಾಜಸ್ಥಾನೀ, ಕುರುಂಬ, ಕೊರಚ, ವಡರಿ, ಕೊರವ, ಕೊಂಗರ್, ವ್ರಜಭಾಷಾ, ನೇಪಾಲಿ.

ಬಹು ಹಿಂದಿನ ಕಾಲದಿಂದ ಸಂಸ್ಕೃತ, ಪ್ರಾಕೃತ ಮೊದಲಾದ ಭಾಷೆಗಳು ಕರ್ನಾಟಕದಲ್ಲಿ ಪ್ರಚಲಿತಗೊಂಡಿದ್ದುದಾಗಿ ಆಯಾ ಭಾಷೆಗಳ ಪ್ರಭಾವ ಕನ್ನಡದ ಮೇಲಾಗಿರುವುದಲ್ಲದೆ ಹಲವು ಸಂದರ್ಭಗಳಲ್ಲಿ ಕನ್ನಡದ ಪ್ರಭಾವ ಸಹ ಅವುಗಳ ಮೇಲಾಗಿದೆ. ಅಲ್ಲದೆ ಆ ಕನ್ನಡೇತರ ಭಾಷೆಗಳಲ್ಲಿ ಸಾಹಿತ್ಯಸೃಷ್ಟಿಯೂ ಸ್ವಲ್ಪಮಟ್ಟಿಗೆ ಕರ್ನಾಟಕದಲ್ಲಿ ಜರುಗಿದೆ. ಈ ವಿಷಯಕ್ಕೆ ಸಂಬಂಧಿಸಿದ ಸ್ಥೂಲ ಸಮೀಕ್ಷೆಯನ್ನು ಇಲ್ಲಿ ಕೊಡಲಾಗಿದೆ. *

**ಪ್ರಾಕೃತ :** ಕರ್ನಾಟಕಕ್ಕೆ ಮೌರ್ಯ ಚಕ್ರವರ್ತಿ ಚಂದ್ರಗುಪ್ತನೊಡನೆ ಭದ್ರಬಾಹು ಶ್ರುತಕೇವಲಿ ಉತ್ತರಾಪಥದಿಂದ ಬಂದ ಕಾರಣ ಜೈನ ಧರ್ಮವೂ ಪ್ರಾಕೃತಭಾಷೆಯೂ ಇಲ್ಲಿ ಹರಡುವಂತಾಗಿರಬೇಕು. ಮೌರ್ಯ, ಸಾತವಾಹನರ ಕಾಲದಲ್ಲಿ ಕನ್ನಡನಾಡಿನಲ್ಲಿ ಪ್ರಾಕೃತಭಾಷೆ ಕೆಲಮಟ್ಟಿಗೆ ವ್ಯವಹಾರದಲ್ಲಿದ್ದ ಭಾಷೆಯಾಗಿದ್ದು ಅದಕ್ಕೆ ತಕ್ಕ ಮನ್ನಣೆಯೂ ಇದ್ದಿರಬಹುದು. ಕರ್ನಾಟಕದ ಬ್ರಹ್ಮಗಿರಿ, ಮಸ್ಕಿ, ಕೊಪ್ಪಳ - ಈ ಸ್ಥಳಗಳಲ್ಲಿ ಅಶೋಕನ (ಕ್ರಿ.ಪೂ.272-232) ಶಾಸನಗಳು ದೊರಕಿವೆ. ಇವೇ ಕರ್ನಾಟಕದಲ್ಲಿ ದೊರಕುವ ಅತ್ಯಂತ ಪ್ರಾಚೀನ ಪ್ರಾಕೃತ ದಾಖಲೆಗಳು. ಆ ಕಾಲದಲ್ಲಿ ಈ ಶಾಸನಗಳನ್ನು ಓದಿ ಅರ್ಥೈಸುವ ಜನ ಕನ್ನಡ ನಾಡಿನಲ್ಲಿ ಕೆಲವರಾದರೂ ಇದ್ದಿರಬಹುದೆಂದು ತಿಳಿಯುವುದು ಸಂಭವನೀಯವೇ ಆಗಿದೆ. ಕ್ರಿ.ಪೂ.2 ರಿಂದ ಕ್ರಿ.ಶ.3ನೆಯ ಶತಮಾನ ದವರೆಗೂ ಆಳಿದ ಸಾತವಾಹನ ಅರಸರ ಕಾಲದಲ್ಲಿ ಅವರ ರಾಜ್ಯದಲ್ಲಿ ಪ್ರಾಕೃತಭಾಷೆ ವಿಶೇಷವಾಗಿ ಪ್ರಚಲಿತವಾಗಿತ್ತು. ಕರ್ನಾಟಕದ ಸನ್ನತಿ, ವಡಗಾಂವ್-ಮಾಧವಪುರ, ಮಳವಳ್ಳಿ, ಬನವಾಸಿ - ಈ ಸ್ಥಳಗಳಲ್ಲಿ ಆ ಕಾಲದ ಪ್ರಾಕೃತ ಶಾಸನಗಳಿವೆ. ಮುಂದೆ ಕರ್ನಾಟಕದಲ್ಲಿ ರಾಜ್ಯವಾಳಿದ ಕದಂಬವಂಶದ ಆದ್ಯ ಮಯೂರಶರ್ಮನ ಒಂದು ಶಾಸನ ಸಹ ಚಂದ್ರವಳ್ಳಿಯಲ್ಲಿ ದೊರಕಿದೆ. ಬಹುಶಃ ಪ್ರಾಕೃತ ಆ ಕಾಲದಲ್ಲಿ ಆಡಳಿತಭಾಷೆಯಾಗಿಯೂ ಶಿಷ್ಟಭಾಷೆಯಾಗಿಯೂ ಇಲ್ಲಿ ಪ್ರಚಲಿತ ವಾಗಿದ್ದಿರಬಹುದು.

ಕನ್ನಡನಾಡಿನಲ್ಲಿ ಜೈನಧರ್ಮ ಉನ್ನತಸ್ಥಿತಿಯಲ್ಲಿದ್ದಾಗ ಪ್ರಾಕೃತ ಸಾಹಿತ್ಯಕ್ಕೆ ಒಳ್ಳೆಯ ಪೋಷಣೆ ದೊರೆಯಿತು. ಅಖಿಲಭಾರತ ಪ್ರಾಮುಖ್ಯದ ಪ್ರಾಕೃತಗ್ರಂಥಗಳ ರಚನೆ ನಡೆಯಿತು. ಪ್ರಾಕೃತ ಪಕ್ಷಪಾತಿಗಳಾಗಿದ್ದ ಸಾತವಾಹನರ ಕಾಲದಲ್ಲಿಯೇ ಗುಣಾಢ್ಯ (1ನೆಯ ಶತಮಾನ) ಬೃಹತ್ಕಥೆಯನ್ನು ಪೈಶಾಚೀಪ್ರಾಕೃತದಲ್ಲಿಯೂ ಹಾಲ (1ನೆಯ ಶತಮಾನ) ಗಾಥಾಸಪ್ತಶತಿಯನ್ನು ಮಹಾರಾಷ್ಟ್ರೀ ಪ್ರಾಕೃತದಲ್ಲಿಯೂ ರಚಿಸಿದರೆಂದು ತಿಳಿಯುವುದು. ಪ್ರಾಭೃತತ್ರಯಾದಿ ಗ್ರಂಥಗಳನ್ನು ರಚಿಸಿದ ಕುಂದಕುಂದಾಚಾರ್ಯ, ಭಗವತಿ ಆರಾಧನದ ಶಿವಕೋಟ್ಯಾಚಾರ್ಯ (ಶಿವಾರ್ಯ), ಮೂಲಾಚಾರವೆಂಬ ಶೌರಸೇನೀ ಪ್ರಾಕೃತ ಗ್ರಂಥದ ಕರ್ತೃ ವಟ್ಟಕೇರ, ಕರಕುಂಡಚರಿ ಎಂಬ ಅಪಭ್ರಂಶ ಗ್ರಂಥದ ಕರ್ತೃ ಕನಕಾಮರಮುನಿ - ಈ ಮೊದಲಾದವರು ಪ್ರಾಚೀನ ಕರ್ನಾಟಕದಲ್ಲಿದ್ದು ಕೃತಿರಚನೆ ಮಾಡಿದ ಪ್ರಾಕೃತ ಕವಿಗಳೆಂಬುದಾಗಿ ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಕುಂದಕುಂದಾಚಾರ್ಯ, ವಟ್ಟಕೇರ, ಶಿವಾರ್ಯ ಮೊದಲಾದ ಕೆಲವರು ಪ್ರತ್ಯಕ್ಷವಾಗಿ ಕನ್ನಡನಾಡಿಗೆ ಸೇರಿದ್ದವರೆಂಬುದು ವಿವಾದಾಸ್ಪದವಾಗಿದ್ದರೂ ಅವರ ಕೃತಿಗಳು ಕನ್ನಡನಾಡಿನ ಜೈನಸಮುದಾಯಕ್ಕೆ ಪೂಜ್ಯವೂ ಪ್ರಿಯವೂ ಆಗಿದ್ದವೆಂಬುದರಲ್ಲಿ ಸಂದೇಹವಿಲ್ಲ.

ಸರ್ವನಂದಿಯ ಲೋಕ ವಿಭಾಗ ಮತ್ತು ಯತಿವೃಷಭನ ತಿಲೋಯಪಣ್ಣತ್ತಿ ಬಲುಮಟ್ಟಿಗೆ ಕನ್ನಡನಾಡಿನಲ್ಲಿಯೇ ರಚಿತವಾದವು. ಕುಂದುಕುಂದ, ಸಮಂತಭದ್ರ ಮತ್ತು ಬಪ್ಪದೇವರ ಸಂಸ್ಕೃತ ಪ್ರಾಕೃತ ವ್ಯಾಖ್ಯಾನ ಗ್ರಂಥಗಳೂ ಇಲ್ಲಿಯೇ ರಚನೆಗೊಂಡವು. ಕುಂದಕುಂದಾಚಾರ್ಯರ ಪ್ರಸಿದ್ಧ ಪ್ರಾಕೃತ ಗ್ರಂಥಗಳಿಗೆ ಸಂಸ್ಕೃತದಲ್ಲಿ ವ್ಯಾಖ್ಯೆಗಳನ್ನು ರಚಿಸಿರುವ ಬಾಲಚಂದ್ರ ಮತ್ತು ಪದ್ಮಪ್ರಭರು ಕರ್ನಾಟಕದವರು. ಯಾಪನೀಯಸಂಘಕ್ಕೆ ಸೇರಿದ್ದಂತೆ ತಿಳಿಯುವ ಅಪಭ್ರಂಶ ಕವಿ ಸ್ವಯಂಭುವಿಗೆ ಕರ್ನಾಟಕದೊಡನೆ ಸಂಬಂಧವಿತ್ತೆಂದು ತೋರುವುದು. ಆತನ ಬಂಧುಗಳ ಹೆಸರು ಇದನ್ನು ಎತ್ತಿ ತೋರಿಸುವಂತಿದೆ. ಸಿರಿಭೂವಲಯದ ಕರ್ತೃ ಕುಮುದೇಂದು (9ನೆಯ ಶತಮಾನ) ಕನ್ನಡನಾಡಿನ ಯಲವಳ್ಳಿಯೆಂಬ ಗ್ರಾಮದವನೆಂದು ಹೇಳಲಾಗಿದೆ. ಪ್ರಾಕೃತ ವೈಯಾಕರಣನಾದ ತ್ರಿವಿಕ್ರಮ (ಸು.1236) ಕೂಡ ಕನ್ನಡ ನಾಡಿನವನು. ಈತನ ವ್ಯಾಕರಣವಾದರೋ ದಾಕ್ಷಿಣಾತ್ಯ ಸಂಪ್ರದಾಯದ ಪ್ರಾಕೃತ ವ್ಯಾಕರಣಗಳಲ್ಲಿ ಆದ್ಯಕೃತಿ, ವರರುಚಿಯ ಪ್ರಾಕೃತ ಪ್ರಕಾಶದೊಡನೆ ಇಡೀ ದಕ್ಷಿಣದಲ್ಲಿ ಪ್ರಮಾಣಭೂತವಾದ ವ್ಯಾಕರಣವಾಗಿದೆ. ಅಪಭ್ರಂಶ ಭಾಷಾಕವಿ ಪುಷ್ಪದಂತ (ಸು.10ನೆಯ ಶತಮಾನ) ಮಾನ್ಯಖೇಟದಲ್ಲಿ ನಿಂತು ತನ್ನ ಮಹಾಪುರಾಣವನ್ನು ಬರೆದ. ಇದರಲ್ಲಿ ಹಲವು ಕನ್ನಡ ಶಬ್ದಗಳು ಬಳಕೆಯಾಗಿವೆಯೆಂದು ತಿಳಿಯುತ್ತದೆ.

ದಿಗಂಬರ ಜೈನಸಂಪ್ರದಾಯದ ಆಚಾರ್ಯರಾಗಿ ಪ್ರಸಿದ್ಧರಾಗಿರುವ ರಾಷ್ಟ್ರಕೂಟ ಚಕ್ರವರ್ತಿಗಳ ಆಳಿಕೆಯ ಕಾಲದಲ್ಲಿದ್ದ ವೀರಸೇನ, ಜಿನಸೇನ ಮತ್ತು ಗುಣಭದ್ರರೆಂಬ ಆಚಾರ್ಯರು ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ಕವಿಗಳೂ ವಿದ್ವಾಂಸರೂ ಆಗಿದ್ದವರು. ಸೇನಗಣದ ವೀರಸೇನ, ಜಿನಸೇನಾಚಾರ್ಯರು (9ನೆಯ ಶತಮಾನ) ದಿಗಂಬರರ ಮಹತ್ತ್ವಪೂರ್ಣ ಗ್ರಂಥವಾದ ಷಟ್ಖಂಡಾಗಮಕ್ಕೆ ಧವಲಾ (1816), ಜಯಧವಲಾ (837) ಮತ್ತು ಮಹಾಧವಲಾ ಎಂಬ ಪ್ರಖ್ಯಾತವಾದ ಟೀಕೆಗಳನ್ನು ಬರೆದಿದ್ದಾರೆ. ಇದರ ಸ್ವಲ್ಪಭಾಗ ಸಂಸ್ಕೃತದಲ್ಲಿಯೂ ಸ್ವಲ್ಪಭಾಗ ಪ್ರಾಕೃತದಲ್ಲಿಯೂ ರಚಿತವಾಗಿದೆ. ಈ ಟೀಕೆಗಳ ಅಭ್ಯಾಸದ ಮೂಲಕ ಕರ್ನಾಟಕ ದೇಶದ ಜೈನಯತಿಗಳಲ್ಲಿ ಪ್ರಾಕೃತ ಭಾಷೆ ರೂಢಿಯಲ್ಲಿತ್ತೆನ್ನಬಹುದು. ಎಷ್ಟೋ ಹಿಂದಿನಿಂದ ಜೈನಸೂತ್ರ ಗ್ರಂಥಗಳ ರಕ್ಷಣೆ ಮತ್ತು ಸಿದ್ಧಾಂತಗ್ರಂಥಗಳಿಗೆ ವ್ಯಾಖ್ಯಾನ ರಚನೆ ಕನ್ನಡನಾಡಿನಲ್ಲಿ ನಡೆದುಕೊಂಡು ಬಂದಿತ್ತೆನ್ನುವುದಕ್ಕೆ ಈ ಮಹಾಗ್ರಂಥಗಳೇ ಸಾಕ್ಷಿ. 12ನೆಯ ಶತಕದಷ್ಟು ಹಿಂದಿನದಾಗಿ ಹಳಗನ್ನಡ ಲಿಪಿಯಲ್ಲಿ ತಾಳೆಯೋಲೆಯ ಮೇಲೆ ಮಸಿಯಿಂದ ಬರೆಯಲ್ಪಟ್ಟಿರುವ ಈ ವ್ಯಾಖ್ಯಾನ ಗ್ರಂಥಗಳ ಹಸ್ತಪ್ರತಿಗಳು ಅನ್ಯತ್ರ ಅನುಪಲಬ್ಧವಾಗಿದ್ದಾಗ, ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದರೆಯ ಸಿದ್ಧಾಂತಬಸದಿಯಲ್ಲಿ ಮಾತ್ರವೇ ಸುರಕ್ಷಿತವಾಗಿ ನಿಕ್ಷಿಪ್ತವಾಗಿದ್ದುವು. ದಕ್ಷಿಣದಲ್ಲಿಯ ಜೈನಗ್ರಂಥಕಾರರು ಪ್ರಾಕೃತ ಭಾಷೆಯನ್ನು ಮುಖ್ಯವಾಗಿ ಧಾರ್ಮಿಕ ಗ್ರಂಥಗಳಲ್ಲಿಯೇ ಬಳಸಿದ್ದಾರೆ. ಭಾರತೀಯ ಜೈನ ಸಾಹಿತ್ಯಕ್ಕೆ ಈ ಕಾಲದಲ್ಲಿ ನಡೆದ ಕರ್ನಾಟಕದ ಸೇವೆ ಅಮೂಲ್ಯವಾದುದೆಂದು ಹೇಳಬಹುದಾಗಿದೆ.

ಒಂದನೆಯ ಚಾವುಂಡರಾಯನ ಗುರು ದೇಶಿಯಗಣದ ನೇಮಿಚಂದ್ರಯತಿ (10ನೆಯ ಶತಮಾನ) ಗೊಮ್ಮಟಸಾರ, ತ್ರಿಲೋಕಸಾರ ಮುಂತಾದ ಕೆಲವು ಪ್ರಾಕೃತ ಗ್ರಂಥಗಳನ್ನು ರಚಿಸಿ ಪ್ರಖ್ಯಾತನಾಗಿದ್ದಾನೆ. ಪ್ರಾಕೃತ ಸಾಹಿತ್ಯದಲ್ಲಿ ಈತನ ಗ್ರಂಥಗಳಿಗೆ ಮಹತ್ತ್ವದ ಸ್ಥಾನವಿದೆ. ಗೊಮ್ಮಟಸಾರದಲ್ಲಿಯ ಕರ್ಮಕಾಂಡದ ಕೆಲವು ಗಾದೆಗಳು ಚಾವುಂಡರಾಯನ ಚರಿತ್ರೆಯ ವಿಚಾರವಾಗಿ ಕೆಲವು ಉಪಯುಕ್ತ ಸಂಗತಿಗಳನ್ನು ತಿಳಿಸುತ್ತವೆ. ಚಾವುಂಡರಾಯನ ಪ್ರತಿಬೋಧನಾರ್ಥವಾಗಿ ರಚಿತವಾದಂತೆ ತಿಳಿಯುವ ಗೊಮ್ಮಟಸಾರಕ್ಕೆ ಚಾವುಂಡರಾಯ ಮತ್ತು ಕೇಶವವರ್ಣಿಗಳು ಕನ್ನಡದಲ್ಲಿ ಟೀಕೆಗಳನ್ನು ಬರೆದಿದ್ದಾರೆ. ಉಪಲಬ್ಧ ಟೀಕೆಗಳಲ್ಲಿ ಕೇಶವವರ್ಣಿಯದೇ ಪ್ರಾಚೀನವಾದುದು. ಈ ಕನ್ನಡ ಟೀಕೆಯನ್ನು ಸಾಳುವ ಮಲ್ಲಿರಾಯನ (16ನೆಯ ಶತಮಾನ) ಸಮಕಾಲೀನನಾದ ನೇಮಿಚಂದ್ರನೆಂಬೊಬ್ಬ ಕವಿ ಸಂಸ್ಕೃತಕ್ಕೆ ಪರಿವರ್ತಿಸಿದ್ದಾನೆ. ಚಾವುಂಡರಾಯನ ಗುರು ನೇಮಿಚಂದ್ರಯತಿಗೂ ದೇವಸೇನನೆಂಬೊಬ್ಬ ಪ್ರಾಕೃತ ಕವಿಗೂ ಮಾತೃಭಾಷೆ ಕನ್ನಡವಾಗಿದ್ದಿತೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಕನ್ನಡನಾಡಿನವರಾಗಿ ಕನ್ನಡದಲ್ಲಿ ಕೃತಿರಚನೆ ಮಾಡಿದವರಾಗಿ ತಿಳಿದುಬಂದಿರುವ ತುಂಬಲೂರಾಚಾರ್ಯ ಮತ್ತು ಶ್ಯಾಮಕುಂದಾಚಾರ್ಯ (ಸು.650) ಇವರು ಪ್ರಾಕೃತದಲ್ಲಿ ಸಿದ್ಧಾಂತ ಗ್ರಂಥಗಳನ್ನು ಬರೆದಿದ್ದರೆಂದು ಕೂಡ ತಿಳಿಯುತ್ತದೆ. ಉಭಯಭಾಷಾಕವಿ ಅಸಗನನ್ನು (ಸು.853) ಧವಲನೆಂಬ ಅಪಭ್ರಂಶ ಕವಿಯೊಬ್ಬ ತನ್ನ ಹರಿವಂಶಪುರಾಣದಲ್ಲಿ ಸ್ತುತಿಸಿರುವುದರಿಂದ ಅಸಗ ಪ್ರಾಕೃತಕವಿಗಳಿಂದಲೂ ಗಣ್ಯನಾಗಿದ್ದನೆಂಬ ವಿಷಯ ವಿಶದವಾಗುತ್ತದೆ. ಆತನ ಕೆಲವು ಕೃತಿಗಳು ಪ್ರಾಕೃತಕವಿಗಳಿಗೆ ಆಕರಗಳಾಗಿಯೋ ಮಾದರಿಗಳಾಗಿಯೋ ಇದ್ದಿರಬಹುದು.

ಅಂತೂ 10ನೆಯ ಶತಮಾನದವರೆಗಾದರೂ ಕನ್ನಡನಾಡು ಪ್ರಾಕೃತ ಸಾಹಿತ್ಯಕ್ಕೆ ಮಹತ್ತ್ವಪೂರ್ಣವಾದ ಕಾಣಿಕೆಯನ್ನು ಸಲ್ಲಿಸಿದೆಯೆಂಬುದು ಮೇಲಿನ ಕೆಲವಂಶಗಳಿಂದ ಸ್ಪಷ್ಟವಾಗುತ್ತದೆ.

ಇಂಥ ಹಿನ್ನೆಲೆಯಲ್ಲಿ ಕನ್ನಡನಾಡಿನಲ್ಲಿ ಪ್ರಾಕೃತಭಾಷೆ ಸಾಹಿತ್ಯಗಳಿಗೆ ದೊರೆತ ಸ್ಥಾನಮಾನಗಳಿಂದ ಕನ್ನಡಿಗರಾದ ಪ್ರಾಕೃತ ಕವಿಗಳ ಪರಿಶ್ರಮದಿಂದ ಪ್ರಾಕೃತ ಭಾಷೆಯ ಮರ್ಯಾದೆಗನುಸಾರವಾಗಿ ಕನ್ನಡ ಶಬ್ದಗಳು ಪ್ರಾಕೃತ ಭಾಷಾ ಸಾಹಿತ್ಯಗಳೊಳಗೆ ಕೆಲಮಟ್ಟಿಗೆ ಸೇರುವಂತಾಯಿತು. ಕೋಶಕಾರರು ಅವನ್ನು ದೇಶೀ ಶಬ್ದಗಳೆಂದು ನಿರ್ದೇಶಿಸಿದ್ದಾರೆ. ಹಾಲನ ಗಾಥಾಸಪ್ತಶತಿಯಲ್ಲಿ ಕಂಡುಬರುವ ಅತ್ತಾ, ತುಪ್ಪ, ಪೊಟ್ಟ, ಫಲಹಿ, ತೀರಇ ಎಂಬ ಪ್ರಾಕೃತ ಶಬ್ದಗಳು, ಅತ್ತೆ, ತುಪ್ಪ, ಪೊಟ್ಟೆ, ಪತ್ತಿ, ತೀರ ಎಂಬ ಕನ್ನಡ ಶಬ್ದಗಳ ಪ್ರತಿರೂಪಗಳೆಂದು ವಿದ್ವಾಂಸರು ಕಂಡುಹಿಡಿದಿದ್ದಾರೆ. ಹೇಮಚಂದ್ರನ ದೇಶೀನಾಮಮಾಲೆ ಮೊದಲಾದ ಕೋಶಗಳಲ್ಲಿ ಕಂಡುಬರುವ ಕೆಲವು ಕನ್ನಡ ಶಬ್ದಗಳನ್ನೂ ಹೀಗೆಯೇ ಗುರುತಿಸಲಾಗಿದೆ. ಒಂದು ಪಟ್ಟಿಯ ಪ್ರಕಾರ ಪ್ರಾಕೃತ ದೇಶೀಕೋಶಗಳಲ್ಲಿಯ ಅಕ್ಕಾ, ಉಡೂ, ಉಮ್ಮಲ್ಲೋ, ಉಲ್ಲೀ, ಊಲೋ, ಎತ್ತೊಪ್ಪಂ-ಇಲ್ತೊಪ್ಪಂ, ಒಕ್ಕಿಅ, ಒಪ್ಪಾ, ಕಲೀಂ, ಕುಂಡಿಓ-ಕೊಂಡಿಓ, ಕುರುಡ, ಕೋಲೋ-ಕುಲ್ಲ, ಖಡ್ಡಂ, ಚಿಕ್ಕ, ಣೇಸರೋ ತುಪ್ಪೋ, ಪಾವೋ, ಪಾಲೊ, ಪುಲ್ಲೀ, ಪೊಚ್ಚಂ, ಮರುಲೋ, ಸೂಲಾ - ಈ ಶಬ್ದಗಳು ಕ್ರಮವಾಗಿ ಪ್ರಾಯಃ ಅಕ್ಕ, ಉಡು, ಉಮ್ಮಳ, ಒಲೆ, ಉರುಳ್, ಎಂತಪ್ಪ ಇಂತಪ್ಪ, ಒಕ್ಕು, ಒಪ್ಪ, ಕಲಿ, ಗಾವುಂಡ - ಗೌಡ, ಕುರುಡ, ಕೊರಲ್, ಗಡ್ಡ, ಚಿಕ್ಕ, ನೇಸರ್, ತುಪ್ಪ, ಪಾವು, ಪಾವ್, ಪುಲಿ, ಪೊಚ್ಚ, ಮರುಳ್, ಸೂಳೆ -ಈ ಕನ್ನಡ ಶಬ್ದಗಳ ಪ್ರಾಕೃತ ರೂಪಗಳೆಂದು ತಿಳಿಯುತ್ತದೆ. ಇನ್ನೊಂದು ಪಟ್ಟಿಯ ಪ್ರಕಾರ (ಹೇಮಚಂದ್ರನ ದೇಶೀನಾಮಮಾಲೆ) ಕಂಡುಬರುವ ಆಲಂಬಂ (ನಾಯಿಕೊಡೆ), ಇಗ್ಗೋ, ಉಂಡಲಂ, (ಗಂಭೀರಮ್, ಉಬ್ಬುಕ್ಕುಂ, ಸಂಕಟಮ್), ಕಾಹಲ್ಲೀ, ಕುಣಾ (ವೃತ್ತಿ ವಿವರಮ್ ಗುಳಿ), ತುಂಬಿಲ್ಲೀ ಈ ಶಬ್ದಗಳು ಕ್ರಮವಾಗಿ ಪ್ರಾಯಃ ಅಣಂಬೆ, ಎಗ್ಗ, ಹೊಂಡ, ಉಬ್ಬಸ, ಕಾವಲಿ, ಕುಣಿ ಕುಟಿ, ತುಂಬಿಯ ಇಲ್ ಈ ಕನ್ನಡ ಶಬ್ದಗಳ ಪ್ರಾಕೃತ ರೂಪಗಳೆಂದು ಭಾವಿಸಲಾಗಿದೆ. ಹೀಗೆಯೇ ಓಲಗ, ಕಾವರ, ಪೋಟ (ಪೊಟ್ಟೆ) ಶಬ್ದಗಳು ಪ್ರಾಕೃತ ದೇಶೀಕೋಶಗಳಲ್ಲಿ ಸೇರಿಕೊಂಡಿರುವ ಶಬ್ದಗಳು ಕೆಲವೊಮ್ಮೆ ನೇರವಾಗಿ ಕನ್ನಡದಿಂದ ಹೋಗಿದ್ದಿರಬಹುದು. ಇಲ್ಲವೆ ಯಾವ ದ್ರಾವಿಡ ಭಾಷಾಮೂಲದಿಂದಾದರೂ ಹೋಗಿರಬಹುದು. ಎಷ್ಟೋ ಶಬ್ದಗಳು ಬೇರೆ ಬೇರೆ ದ್ರಾವಿಡ ಭಾಷಾ ಮೂಲಗಳಿಂದ ಪ್ರಾಕೃತಕ್ಕೆ ಹೋಗಿರಬಹುದಾದರೂ ಕನ್ನಡದಿಂದಲೇ ನೇರವಾಗಿ ಹೋಗಿರುವ ಸಾಧ್ಯತೆಯಂತೂ ಇದ್ದೇ ಇದೆ.

(ಟಿ.ವಿ.ವಿ.)

ಕನ್ನಡದ ಬಗ್ಗೆ ಹೇಳುವುದಾದರೆ ದಕ್ಷಿಣಕ್ಕೆ ಬಂದ ಪ್ರಾಕೃತ ಮಾತನಾಡುವವರಾಗಿದ್ದ ಜೈನಮುನಿಗಳ ಸಂಪರ್ಕ ಕನ್ನಡಿಗರೊಡನೆ ಆದ ಕೂಡಲೇ ಭಾಷಿಕ ಕೊಡುಕೊಳ್ಳುವ ವ್ಯವಹಾರ ನಡೆದಿರಬೇಕು. ಹೊಸ ನಾಡಿಗೆ ಬಂದ ಜೈನಯತಿಗಳಿಗೆ ತಮ್ಮ ಧರ್ಮವನ್ನು ಕರ್ನಾಟಕದ ಜನತೆಗೆ ಬೋಧಿಸುವ ಪ್ರಸಂಗ ಬಂದಾಗ ಅವರು ಕನ್ನಡವನ್ನು ಕಲಿತು, ಅದರಲ್ಲಿ ಪ್ರಾಕೃತ ಶಬ್ದಗಳನ್ನು ಬೆರೆಸಿ ಮಾತನಾಡಲೂ ಆರಂಭಿಸಿರಬೇಕು. ಕಾಲಾಂತರದಲ್ಲಿ ಇವರಲ್ಲಿ ಕೆಲವರು ಕನ್ನಡಭಾಷೆಯ ಮೇಲೆ ಪ್ರಭುತ್ವವನ್ನು ಪಡೆದು, ಕನ್ನಡದಲ್ಲಿ ಧಾರ್ಮಿಕ ಗ್ರಂಥಗಳನ್ನು ಬರೆಯುವ ಪ್ರಯತ್ನ ಮಾಡಿರಬಹುದು. ಕನ್ನಡದ ಆರಂಭದ ಕಾವ್ಯಗಳು ಈ ಮಾತಿಗೆ ನಿದರ್ಶನ. ಕನ್ನಡ ಭಾಷೆಯಲ್ಲಿ ಪ್ರಚಲಿತವಾದ ಮತ್ತು ಹೊಸದೆಂದೆನಿಸುವ ಆಂಡಯ್ಯನ ಭಾಷಾ ಪ್ರವೃತ್ತಿಯ ಮೂಲಕ ಪ್ರಾಕೃತ ಭಾಷೆಗಳ ಒಲವಿನಿಂದಾದುದೆನ್ನಬಹುದು. ಕನ್ನಡ ವ್ಯಾಕರಣಕಾರರ ಮೇಲೆ ಪ್ರಾಕೃತ ವ್ಯಾಕರಣಗಳ ಪ್ರಭಾವ ಆಗಿತ್ತೆಂಬುದು ಕೇಶಿರಾಜ, ಭಟ್ಟಾಕಳಂಕರ ಕೃತಿಗಳಿಂದ ಸ್ಪಷ್ಟವಾಗುತ್ತದೆ. ಪ್ರಾಕೃತ ವ್ಯಾಕರಣವನ್ನು ಓದಿದವರಿಗೆ, ಕನ್ನಡ ವ್ಯಾಕರಣಗಳ ತದ್ಭವ ಪ್ರಕರಣಗಳನ್ನೂ ಕೃತ್ಪ್ರತ್ಯಯ ಮತ್ತು ತದ್ಧಿತಪ್ರತ್ಯಯಗಳನ್ನು ಓದುವಾಗ ಪ್ರಾಕೃತ ಭಾಷೆ ಕನ್ನಡಕ್ಕೆ ಎಷ್ಟು ಕಾಣಿಕೆಯಿತ್ತಿದೆಯೆಂಬ ಸಂಗತಿ ತಿಳಿಯುತ್ತದೆ. ವಡ್ಡಾರಾಧನೆ ಮತ್ತು ಕನ್ನಡದ ಇತರ ಹಲವಾರು ಜೈನಗ್ರಂಥಗಳಿಗೆ ಪ್ರಾಕೃತ ಕೃತಿಗಳು ಆಕರವಾಗಿರಬಹುದು. ಪ್ರಾಕೃತ ಛಂದಸ್ಸಿನ ಕೆಲವು ಪ್ರಕಾರಗಳ ಉಪಯೋಗ ಕನ್ನಡದಲ್ಲಿ ತೋರುತ್ತದೆ. ಕನ್ನಡದ ಮಾತ್ರಾವೃತ್ತಗಳು ಸಂಸ್ಕೃತ ಪ್ರಾಕೃತದಿಂದ ಹುಟ್ಟಿದವುಗಳು. ಸಂಸ್ಕೃತದ ಆರ್ಯಾಗೀತೆ, ಪ್ರಾಕೃತದಲ್ಲಿ ಸ್ಕಂದವಾಗಿ ಕನ್ನಡದಲ್ಲಿ ಕಂದವಾಯಿತು. ಪ್ರಾಕೃತದ ರಘುಟಾ ಕನ್ನಡದ ರಗಳೆಯಾಯಿತು.

ಹಿಂದೆ ಪ್ರಾಕೃತ ಆಡಳಿತ ಭಾಷೆಯಾಗಿ ಪ್ರಚಲಿತವಾಗಿದ್ದ ಕಾಲದಿಂದಲೂ ಪ್ರಾಕೃತ ಶಬ್ದಗಳು ಕನ್ನಡಕ್ಕೆ ಸೇರ್ಪಡೆಯಾಗಿರಬೇಕು. ಕನ್ನಡದ ಪ್ರಾಚೀನ ಕಾವ್ಯಗಳನ್ನು ರಚಿಸಿದ ಪ್ರಾಕೃತ ಬಲ್ಲವರಾಗಿದ್ದ ಜೈನಕವಿಗಳ ಪರಿಶ್ರಮದಿಂದ ಹಾಗೂ ಆ ಕಾಲದಲ್ಲಿದ್ದ ಜೈನರ ಪ್ರಭಾವದಿಂದ ಪ್ರಾಕೃತ ಶಬ್ದಗಳ ಬಳಕೆ ಕನ್ನಡದಲ್ಲಿ ವಿಶೇಷವಾಗಿ ನಡೆದಿರಬೇಕು. ಹಲವು ಶಬ್ದಗಳು ಪ್ರಾಕೃತದಲ್ಲಿದ್ದಂತೆಯೇ ಕನ್ನಡಕ್ಕೆ ಬಂದಿವೆ. ಈ ಶಬ್ದಗಳು ಪ್ರಾಕೃತದಿಂದ ನೇರವಾಗಿ ಕನ್ನಡಕ್ಕೆ ಸೇರಿದುವೆಂಬ

ಮಾತು ಸ್ಪಷ್ಟವಾಗುತ್ತದೆ. ಉದಾ: ಅಜ್ಜ, ಅಯ್ಯ, ಸಮಣ, ಸರಿಸ, ಇಂಗಾಲ, ಕಸಾಯ, ನೇಹ, ರನ್ನ, ಜನ್ನ ಇತ್ಯಾದಿ. ಕನ್ನಡದಲ್ಲಿರುವ ತದ್ಭವ ಪದಗಳು ಸಂಸ್ಕೃತದಿಂದ ಬಂದವೆಂಬ ಕಲ್ಪನೆ ಇದೆಯಾದರೂ ಅವುಗಳಲ್ಲಿ ಸಾಕಷ್ಟು ಮಟ್ಟಿನ ಪದಗಳು ಪ್ರಾಕೃತ ಮೂಲದಿಂದಲೇ ರೂಪಾಂತರ ಹೊಂದಿ ಬಂದಿರಬಹುದೆಂದು ಅನೇಕ ವಿದ್ವಾಂಸರ ಊಹೆ. ಇದಲ್ಲದೆ ಆರಂಭ, ಪರಿಸಹ, ಪರಿಗ್ರಹ, ನಿಕ್ಖವಣ, ಭಿಕ್ಖು, ಆಚಾರ್ಯ, ಚಕ್ರವರ್ತಿ, ತೀರ್ಥಂಕರ, ತಿತ್ಥ ಇತ್ಯಾದಿ ಅನೇಕ ಜೈನ ಪಾರಿಭಾಷಿಕ ಶಬ್ದಗಳನ್ನೂ ಕನ್ನಡದ ಜೈನಕವಿಗಳು ತಮ್ಮ ಕಾವ್ಯಗಳಲ್ಲಿ ಬಳಸಿದ್ದಾರೆ.

ಪ್ರಾಕೃತ ವ್ಯಾಕರಣದೊಳಗಿನ ಧ್ವನಿಪರಿವರ್ತನೆಗೆ ಸಂಬಂಧಿಸಿದ ಕೆಲವು ನಿಯಮಗಳು ಕನ್ನಡ ವ್ಯಾಕರಣಗಳಲ್ಲಿ ಅಚ್ಚಳಿಯದೆ ಬಂದಿವೆ. ಈ ನಿಯಮಗಳು ಸ್ವರ, ವ್ಯಂಜನ, ಸಂಯುಕ್ತವ್ಯಂಜನ ಮೊದಲಾದುವುಗಳಿಗೆ ಅನ್ವಯಿಸುತ್ತವೆ. ಸಂಸ್ಕೃತದ ಋ ಸ್ವರ ಪ್ರಾಕೃತದಲ್ಲಿ ಅ,ಇ,ಉ ಮತ್ತು ರಿ ರೇಫಕ್ಕೆ ಬದಲಾಗುವಂತೆ ಕನ್ನಡದಲ್ಲಿಯೂ ಬದಲಾಗುವುದು. ಉದಾ: ತೃಣ > ತಿಣ, ಋಣ > ರಿಣ, ವೃಷಭ > ಬಸವ ಇತ್ಯಾದಿ. ಶಬ್ದದ ಆದಿ ಮತ್ತು ಅಂತ್ಯದ ಅ ಕಾರ ಅನುಕ್ರಮವಾಗಿ ಇ ಮತ್ತು ಎ ಅಥವಾ ಉ ಕಾರವಾಗುತ್ತದೆ. ಉದಾ: ಜೀರಕ > ಜೀರಿಗೆ, ಅಂಗಾರ > ಇಂಗಳ, ದಂಡ > ದಂಡು, ಐ ಮತ್ತು ಔ ಸಂಧ್ಯಕ್ಷರಗಳು ಎ ಮತ್ತು ಒ ಆಗುತ್ತವೆ. ಒಮ್ಮೊಮ್ಮೆ ಅ ಇ ಮತ್ತು ಅ ಉ ಆಗುವುದುಂಟು. ಉದಾ: ಸೈಂಧವ > ಸೆಂಧವ, ವೈದ್ಯ > ಬೆಜ್ಜ, ಕೌಂಗು > ಕವುಂಗು ಅಥವಾ ಕೊಂಗು, ಶ ಮತ್ತು ಷ ಗಳು ಸಕಾರವಾಗುತ್ತವೆ. ಶಶಿ > ಸಸಿ, ಶಂಕರ > ಸಂಕರ, ವಿಷಯ > ವಿಸಯ. ಆದಿ ಯಕಾರ ಜಕಾರವಾಗುತ್ತದೆ. ಉದಾ: ಯಮ > ಜಮ, ಯಜ್ಞ > ಜನ್ನ, ಯತ್ನ > ಜತನ ಇತ್ಯಾದಿ ಅನೇಕ ಉದಾಹರಣೆಗಳನ್ನು ಕೊಡಬಹುದು. ಸಮರೂಪಕರಣದ ಮುಖಾಂತರ ವಿಜಾತಿ ವ್ಯಂಜನಗಳಿಂದ ಉಂಟಾದ ಸಂಯುಕ್ತವ್ಯಂಜನಗಳು ಸಜಾತಿಯ ಸಂಯುಕ್ತ ವ್ಯಂಜನಗಳಾಗುವುದನ್ನು ಕನ್ನಡದಲ್ಲಿಯೂ ಕಾಣಬಹುದು. ಉದಾ: ಕಳ್ತೆ > ಕತ್ತೆ, ತರ್ಪು > ತಪ್ಪು, ರತ್ನ > ರನ್ನ ಇತ್ಯಾದಿ. ಕನ್ನಡದಲ್ಲಿ ಕಂಡುಬರುವ ಅನೇಕ ಪ್ರತ್ಯಯಗಳಲ್ಲಿ ಬಹಳಷ್ಟು ಪ್ರಾಕೃತದ ಪ್ರತ್ಯಯಗಳಾಗಿವೆ. ಉದಾ: - ತ, - ಗ, - ಇತ, - ಇಗ, - ತ್ತಾರ, - ತಾರ ಇತ್ಯಾದಿ. ಇವಲ್ಲದೆ ವಿಭಕ್ತಿಪ್ರತ್ಯಯಗಳಲ್ಲಿ - ಉ, - ಕ್ಕೆ, - ಗೆ, - ಎ ಇವು ಪ್ರಾಕೃತದಿಂದ ಕನ್ನಡಕ್ಕೆ ಬಂದಂತೆ ತೋರುತ್ತದೆ. (ಪಿ.ಬಿ.ಬಿ.)

**ಸಂಸ್ಕೃತ :** ಭಾರತದ ಪ್ರಾಚೀನ ಭಾಷೆಗಳಲ್ಲೊಂದಾದ ಸಂಸ್ಕೃತ ಕರ್ನಾಟಕದಲ್ಲಿ ಬಹು ಹಿಂದಿನಿಂದಲೂ ಪ್ರಚಾರದಲ್ಲಿದ್ದು ದೀರ್ಘವಾದ ಇತಿಹಾಸವನ್ನು ಹೊಂದಿದೆ. ಪ್ರತಿಷ್ಠಾನ ನಗರದಲ್ಲಿದ್ದ ಸಾತವಾಹನ ದೊರೆಗೆ ಸಂಬಂಧಿಸಿದ 'ಮೋದಕಂ ತಾಡಯ'ದ ಕಥೆ ಬಹುಶಃ ದಕ್ಷಿಣ ಭಾರತದಲ್ಲಿ ಸಂಸ್ಕೃತದ ಹರಡುವಿಕೆಯ ಪ್ರಾರಂಭವನ್ನು ಸೂಚಿಸುತ್ತದೆ. ಕರ್ನಾಟಕದ ಪ್ರಾಚೀನತಮ ಸಂಸ್ಕೃತ ಶಾಸನವೆಂದರೆ ಕುಬ್ಜ (ನೋಡಿ) ಬರೆದ ತಾಳಗುಂದ ಶಾಸನ (ಸು.450). ಇದರಲ್ಲಿರುವ ರಚನಾ ಪಾಂಡಿತ್ಯ ಆ ಕಾಲಕ್ಕಾಗಲೇ ಸಂಸ್ಕೃತ ಈ ನಾಡಿನಲ್ಲಿ ಚೆನ್ನಾಗಿ ಬೇರೂರಿರಬೇಕೆಂಬುದನ್ನು ತಿಳಿಸುವುದಲ್ಲದೆ, ಅದೇ ಕಾಲದ ಹಲ್ಮಿಡಿ ಶಾಸನದಿಂದ ಸಂಸ್ಕೃತ ಭಾಷೆ ಕನ್ನಡ ರಚನೆಗಳ ಮೇಲೂ ಪ್ರಭಾವ ಬೀರುವ ಸ್ಥಿತಿಯಲ್ಲಿದ್ದಿತೆಂಬುದನ್ನು ತೋರಿಸುತ್ತದೆ. ಇಲ್ಲಿಂದ ಮುಂದೆ ಸಂಸ್ಕೃತ ಶಿಷ್ಟಭಾಷೆಯಾಗಿ ಬೆಳೆದು ಉನ್ನತ ಸ್ಥಾನವನ್ನು ಗಳಿಸಿ ತತ್ಕಾಲದ ಉನ್ನತ ವರ್ಗಗಳಿಂದ ಪ್ರೋತ್ಸಾಹ ಗಳಿಸಿತು. ನೂರಾರು ಸಂಸ್ಕೃತ ಶಾಸನಗಳು ಕನ್ನಡದಲ್ಲಿ ರಚಿತವಾದವು. ಅನೇಕ ಕವಿಗಳು, ಶಾಸ್ತ್ರಕಾರರು ಈ ನಾಡಿನಲ್ಲಿ ಆಗಿಹೋದರು. ನೂರಾರು ಸಂಸ್ಕೃತ ಗ್ರಂಥಗಳ ರಚನೆಯಾಯಿತು. ಸಂಸ್ಕೃತ ಸಾಹಿತ್ಯಕ್ಕೆ ಕರ್ನಾಟಕದ ಕೊಡುಗೆ ಗಣ್ಯವಾದುದು. ಹಾಗೆಯೇ ಸಂಸ್ಕೃತದ ಶ್ರುತಿ ಸ್ಮೃತಿ ಪುರಾಣ ಇತಿಹಾಸಗಳು ಕರ್ನಾಟಕದಲ್ಲಿ ಹರಡಿ ಅವು ಹಾಗೂ ಇತರ ಸಂಸ್ಕೃತ ಕೃತಿಗಳು ಕನ್ನಡ ದೇಶದ ಸಂಸ್ಕೃತಿ ಹಾಗೂ ನುಡಿಯ ಮೇಲೆ ಅಗಾಧ ಪ್ರಭಾವವನ್ನು ಬೀರುತ್ತ ಬಂದಿವೆ.

ಕರ್ನಾಟಕದ ಭಾಗಗಳನ್ನು ಆಳುತ್ತಿದ್ದ ಸಾತವಾಹನರ ಆಸ್ಥಾನಭಾಷೆ ಪ್ರಾಕೃತವಾಗಿದ್ದರೂ ಅವರು ಸಂಸ್ಕೃತ ಭಾಷೆಯನ್ನು ಕೂಡ ಪ್ರೋತ್ಸಾಹಿಸುತ್ತಿದ್ದಿರಬಹುದು. ಇವರ ಕಾಲದಲ್ಲೇ ರಾಮಾಯಣ ಮಹಾಭಾರತಗಳಷ್ಟು ಕವಿಜನಪ್ರಿಯವಾದ ಬೃಹತ್ಕಥೆ ಪೈಶಾಚೀ ಪ್ರಾಕೃತದಲ್ಲಿ ಗುಣಾಢ್ಯನೆಂಬಾತನಿಂದ ರಚಿತವಾದಂತೆ, ಮಹಾರಾಷ್ಟ್ರೀ ಪ್ರಾಕೃತದಲ್ಲಿ ಏಳುನೂರು ಮುಕ್ತಕಗಳ ಸಂಗ್ರಹವಾದ ಸತ್ತಸ ರಾಜನಾದ ಹಾಲನಿಂದಲೇ ಸಂಗ್ರಹಿತವಾದಂತೆ, ಅವನ ಆಸ್ಥಾನಪಂಡಿತನಾದ ಶರ್ವವರ್ಮನಿಂದ ಕಾತಂತ್ರವೆಂಬ ನೂತನ ಸಂಸ್ಕೃತ ವ್ಯಾಕರಣವೂ ನಿರ್ಮಿತವಾಯಿತು. ಮುಂದೆ ಬೃಹತ್ಕಥೆ ಸಂಸ್ಕೃತಕ್ಕೂ ಮೂರುನಾಲ್ಕು ರೂಪಾಂತರಗಳನ್ನು ಉತ್ತರದ ಕವಿಗಳಿಂದ ಪಡೆದುದನ್ನು ನೋಡುತ್ತೇವೆ. ಆದರೆ ಮೂಲ ಬೃಹತ್ಕಥೆ ದಕ್ಷಿಣದ್ದೇ; ಇದರ ಒಂದು ಅಂಶದ ರೂಪಾಂತರವೇ ಸುಪ್ರಸಿದ್ಧವಾದ ಪಂಚತಂತ್ರ ಕೂಡ. ಈ ಪಂಚತಂತ್ರದ ಒಂದು ಆವೃತ್ತಿಯ ಪ್ರವರ್ತಕ ಕೂಡ ಕರ್ನಾಟಕದ ವಸುಭಾಗಭಟ್ಟ (ಈ ಕೃತಿ ಬೃಹತ್ತರ ಭಾರತದ ಲೇಯಾಸ್ ಹಾಗೂ ಜಾವ ದ್ವೀಪದ ಭಾಷೆಗಳಲ್ಲಿಯೂ ಭಾಷಾಂತರಗೊಂಡಿದೆ).

ಭಾಸನ (ಸು.2ನೆಯ ಶತಮಾನ) ದ್ವಿತೀಯಾಕ್ಷರ ಪ್ರಾಸಗಳನ್ನು ಅನುಲಕ್ಷಿಸಿ ಆತ ಕನ್ನಡಿಗನಿದ್ದಿರಬೇಕೆಂದು ಯು.ವೆಂಕಟಕೃಷ್ಣರಾವ್ ಊಹಿಸಿದ್ದಾರೆ (ಈ ಊಹೆಗೆ ಹೆಚ್ಚಿನ ಸಮರ್ಥನೆ ಬೇಕಾಗಿದೆ).

ಪೂಜ್ಯಪಾದ (ಅಥ’ವಾ ದೇವನಂದಿ 5 ಅಥ’ವಾ 6ನೆಯ ಶತಮಾನ) ಪಾಣಿನಿಯ ಸೂತ್ರಗಳಿಗೆ ಶಬ್ದಾವತಾರವೆಂಬ ವ್ಯಾಖ್ಯಾನ ರಚಿಸಿದ್ದನೆಂದು ಶಾಸನಗಳಲ್ಲಿ ಹೇಳಲಾಗಿದೆ. ಈತ ಜೈನೇಂದ್ರ ವ್ಯಾಕರಣವೆಂಬ ಹೊಸ ವ್ಯಾಕರಣ ಪಂಥವನ್ನು ನಿರ್ಮಾಣ ಮಾಡಿದ. ಇದರಲ್ಲಿ ಪ್ರಾಯೋಗಿಕ ದೃಷ್ಟಿಯಿಂದ ಪಾಣಿನಿಯ ಸೂತ್ರಗಳನ್ನು ಸಂಗ್ರಹಿಸಲಾಗಿದೆ.

ಗಂಗರಾಜನಾದ ದುರ್ವಿನೀತ (6ನೆಯ ಶತಮಾನ) ಬೃಹತ್ಕಥೆಯ ಸಂಸ್ಕೃತ ರೂಪಾಂತರಕಾರರಲ್ಲಿ ಒಬ್ಬನೆಂದು ಕೆಲವು ಶಾಸನಗಳು ಹೇಳುತ್ತವೆ. ದುರ್ವಿನೀತನ ಸಮಕಾಲೀನನೂ ಸಂಸ್ಕೃತದ ಪ್ರಸಿದ್ಧ ಮಹಾಕಾವ್ಯವಾದ ಕಿರಾತಾರ್ಜುನೀಯದ ಕರ್ತೃವೂ ಆದ ಭಾರವಿ ದುರ್ವಿನೀತನ ಆಸ್ಥಾನದಲ್ಲಿಯೂ ಕೆಲಕಾಲ ಇದ್ದನೆಂಬ ಐತಿಹ್ಯವನ್ನು ಈಚೆಗೆ ದೊರೆತ ದಂಡಿಯ ಅವಂತಿಸುಂದರೀ ಕಥಾ ಎಂಬ ಗದ್ಯಕೃತಿ ಒಳಗೊಂಡಿದೆ. ದಂಡಿ ಸಹ ಕೆಲವು ಕಾಲ ದುರ್ವಿನೀತನ ಆಸ್ಥಾನದಲ್ಲಿ ಇದ್ದಿರಬೇಕು. ನಾಟಕಕಾರರಲ್ಲಿ ಪ್ರಸಿದ್ಧನಾದ ಮೃಚ್ಛಕಟಿಕಕಾರ ಶೂದ್ರಕನು ಗಂಗರಾಜ ಶಿವಮಾರನಿರಬೇಕೆಂದು ಸಾಲೆತೊರೆ ಎಂಬ ವಿದ್ವಾಂಸರ ಊಹೆ.

ಭಾರವಿ ಮತ್ತು ಕಾಳಿದಾಸ ಮಹಾಕವಿಗಳ ಸ್ಪಷ್ಟ ಶಿಲಾಶಾಸನೋಲ್ಲೇಖ ದೊರೆಯುವುದು ಬಾದಾಮಿ ಚಳುಕ್ಯ ವಂಶದ ಇಮ್ಮಡಿ ಪುಲಕೇಶಿಯ ಕಾಲದ ಐಹೊಳೆಯ ಶಾಸನದಲ್ಲಿ (634). ಆ ಶಾಸನದ ಕರ್ತೃ ರವಿಕೀರ್ತಿ ತನ್ನನ್ನು ಆ ಇಬ್ಬರು ಮಹಾಕವಿಗಳಿಗೆ ಸಮನೆಂದು ಹೊಗಳಿಕೊಂಡಿದ್ದಾನೆ. ಈ ಪ್ರಶಸ್ತಿ ಶಾಸನ ಇಮ್ಮಡಿ ಪುಲಕೇಶಿಯ ಪರಾಕ್ರಮಾದಿಗಳನ್ನು ಕಾವ್ಯಮಯ ಶೈಲಿಯಲ್ಲಿ ವರ್ಣಿಸುತ್ತದೆ. ಇದರ ಭಾಷೆ ಸರಾಗವಾಗಿ ಹರಿಯುತ್ತದೆ. ನಾನಾ ಬಗೆಯ ವೃತ್ತಗಳಲ್ಲಿ ರಚಿತವಾದ ಇದರಲ್ಲಿ ಕಾವ್ಯದ ಹಲವು ಲಕ್ಷಣಗಳು ಕಾಣಬರುತ್ತವೆ. ಇದಕ್ಕೂ ಮುಂಚಿನ ಮಂಗಲೀಶನ ಶಾಸನದಲ್ಲಿ (ಸು.600) ಒಂದನೆಯ ಕೀರ್ತಿವರ್ಮನ ದಿಗ್ವಿಜಯವನ್ನು ವರ್ಣಿಸುವಲ್ಲಿ ಕಾಳಿದಾಸನ ರಘುವಂಶದ ರಘು ದಿಗ್ವಿಜಯವನ್ನೇ ಮಾದರಿಯಾಗಿಟ್ಟುಕೊಳ್ಳಲಾಗಿದೆ. ಇಮ್ಮಡಿ ಪುಲಕೇಶಿಯ ಸೊಸೆ, ಚಂದ್ರಾದಿತ್ಯನ ರಾಣಿ ವಿಜಯಾ ಅಥವಾ ಬಿಜ್ಜಾ ಅಥ’ವಾ ಬಿಜ್ಜಿಕಾ (ವಿಜ್ಜಿಕೆ) ಪ್ರೌಢ ಪಾಂಡಿತ್ಯ ಪಡೆದಿದ್ದಳೆಂದು ತಿಳಿದುಬರುತ್ತದೆ. ಕೌಮುದೀ ಮಹೋತ್ಸವವೆಂಬ ನಾಟಕ ಬರೆದವಳು ಇವಳೇ ಎಂದು ವಿದ್ವಾಂಸರ ಅಭಿಪ್ರಾಯ.

ಬಾದಾಮಿಯ ಚಳುಕ್ಯರ ಕಾಲದಲ್ಲಿಯೇ ಶಂಕರಾಚಾರ್ಯರ ವೇದಾಂತ ಭಾಷ್ಯಗಳೂ ಹುಟ್ಟಿಕೊಂಡಿರಬಹುದು. ಸಮಂತಭದ್ರನ ತತ್ತ್ವಾರ್ಥ ಸೂತ್ರ ಮಹಾಭಾಷ್ಯ, ಆಪ್ತಮೀಮಾಂಸಾ ಮುಂತಾದ ಉದ್ದಾಮ ಧರ್ಮ ಗ್ರಂಥಗಳೂ ಈ ಕಾಲದಲ್ಲಿ ಬಂದವು. ತತ್ತ್ವಾರ್ಥಸೂತ್ರಕ್ಕೆ ಸರ್ವಾರ್ಥಸಿದ್ಧಿ

ವ್ಯಾಖ್ಯೆಯನ್ನು ಪೂಜ್ಯಪಾದ ರಚಿಸಿದ. ಮತ್ತೊಬ್ಬ ಜೈನ ಪಂಡಿತ ಅಕಲಂಕ ತತ್ತ್ವಾರ್ಥ ರಾಜವಾರ್ತಿಕ, ಅಷ್ಟಶತೀ, ನ್ಯಾಯವಿನಿಶ್ಚಯ ಮೊದಲಾದುವನ್ನು ರಚಿಸಿದ್ದಾನೆ.

ರಾಷ್ಟ್ರಕೂಟರ ಕಾಲದಲ್ಲಿ ಸಂಸ್ಕೃತಕ್ಕೆ ವಿಶೇಷ ಪ್ರೋತ್ಸಾಹ ದೊರಕಿತು. ಒಂದನೆಯ ಅಮೋಘ ವರ್ಷ (814-78) ಸ್ವಯಂ ಗ್ರಂಥಕಾರನಾಗಿದ್ದುದಲ್ಲದೆ (ಪ್ರಶ್ನೋತ್ತರ-ರತ್ನಮಾಲಿಕಾ ಇವನ ಕೃತಿಯೆನ್ನುತ್ತಾರೆ) ಜಿನಸೇನಾಚಾರ್ಯರು ಮಹಾಪುರಾಣ, ಪಾರ್ಶ್ವಾಭ್ಯುದಯ ಗಳೆಂಬ ಉದ್ಗ್ರಂಥ'ಗಳನ್ನು ಬರೆಯಲು ನೆರವಾದ. ಶಾಕಟಾಯನ ವ್ಯಾಕರಣವೆಂಬ ನವೀನ ಪ್ರಸ್ಥಾನವೂ ಈಗಲೇ ಉದಿಸಿತು. ಅದರ ವೃತ್ತಿಗೆ ಅಮೋಘ ವೃತ್ತಿಯೆಂದೇ ಹೆಸರಿದೆ. ಮಹಾವೀರನೆಂಬ ಪಂಡಿತ ಜ್ಯೋತಿಶಾಸ್ತ್ರದ ಗಣಿತಸಾರಸಂಗ್ರಹವನ್ನು ಬರೆದಿದ್ದಾನೆ.

ಮುಮ್ಮಡಿ ಇಂದ್ರನ (914-29) ಆಸ್ಥಾನ ಕವಿಯಾಗಿದ್ದ ತ್ರಿವಿಕ್ರಮಭಟ್ಟ ನಳಚಂಪೂ ಮತ್ತು ಮದಾಲಸಾಚಂಪೂ ಎಂಬ ಎರಡು ಕೃತಿಗಳನ್ನು ರಚಿಸಿದ. ಇವೆರಡು ಸಂಸ್ಕೃತ ಸಾಹಿತ್ಯದ ಚಂಪೂ ಪ್ರಕಾರದ ಉಪಲಬ್ಧ ಪ್ರಾಚೀನತಮ ಕೃತಿಗಳು. ಇವನ ಚಂಪೂಶೈಲಿಯಲ್ಲಿ ಬಾಣನ ಗದ್ಯವೈಭವ ಹಾಗೂ ನಾಟಕಕಾರರ ಪದ್ಯ ಪ್ರಾಗಲ್ಭ್ಯಗಳೆರಡೂ ರಸಮಯವಾಗಿ ಜೊತೆಗೂಡಿವೆ. ಇವನಿಗೆ ಮೊದಲೇ ದಂಡಿ ಚಂಪೂ ಪ್ರಭೇದವನ್ನು ಹೇಳಿ, ಅದರ ಸ್ವರೂಪವನ್ನು ತಿಳಿಸಿದ್ದನಾದರೂ ತ್ರಿವಿಕ್ರಮನಿಗೆ ಮೊದಲು ಯಾವ ಚಂಪೂ ಕೃತಿಯೂ ದೊರೆತಿಲ್ಲ. ಮುಮ್ಮಡಿ ಕೃಷ್ಣನೂ (939-67) ಸ್ವತಃ ವಿದ್ವಾಂಸನಾಗಿದ್ದು ಪಿಂಗಲನ ಛಂದಸ್ಸೂತ್ರದ ಮೇಲೆ ವ್ಯಾಖ್ಯಾನ ಬರೆದ. ಇವನ ಆಶ್ರಯದಲ್ಲಿ ಹಲಾಯುಧ ಒಂದು ಕೋಶವನ್ನೂ ಕವಿಗಳಿಗೆ ಉಪಯುಕ್ತವಾದ ಕೃತಿಗಳನ್ನೂ ರಚಿಸಿದ.

ಅದ್ವೈತವೇದಾಂತ ದೃಷ್ಟಿಯಿಂದ ರಾಷ್ಟ್ರಕೂಟರ ಕಾಲವನ್ನು ಸುವರ್ಣಯುಗವೆಂದು ಕರೆಯಬಹುದು. ಶಂಕರಾಚಾರ್ಯರ ಶಿಷ್ಯರಾದ ಪದ್ಮಪಾದ ಮತ್ತು ಸುರೇಶ್ವರರು ವೇದಾಂತ ಪ್ರಚಾರದಲ್ಲಿ ನಿರತರಾಗಿದ್ದರು. ಸುರೇಶ್ವರರ ಶಿಷ್ಯ ಸರ್ವಜ್ಞಾತ್ಮನ್ 'ಸಂಕ್ಷೇಪ ಶಾರೀರಕ' ವನ್ನು ರಚಿಸಿದ. ಇದೇ ಯುಗದಲ್ಲಿ ಯಾಜ್ಞವಲ್ಕ್ಯಸ್ಮೃತಿಗೆ ವಿಶ್ವರೂಪ ಬರೆದ 'ಬಾಲಕ್ರೀಡಾ ವ್ಯಾಖ್ಯೆ' ಬಹಳ ಪ್ರಸಿದ್ಧವಾಯಿತು.

ಸಂಸ್ಕೃತ ಸಾಹಿತ್ಯಕ್ಕೆ ಕರ್ನಾಟಕದ ಜೈನರೂ ಅಮೋಘ ಕಾಣಿಕೆಯನ್ನಿತ್ತಿದ್ದಾರೆ. ವೀರಸೇನ ಮತ್ತು ಜಿನಸೇನರು 1,00,000 ಶ್ಲೋಕಗಳ ವಿಸ್ತಾರವಾದ ಧವಲಾ, ಜಯಧವಲಾ ಮತ್ತು ಮಹಾಧವಲಾ ಎಂಬ ಷಟ್ ಖಂಡಾಗಮ ವ್ಯಾಖ್ಯಾನವನ್ನು ಪೂರೈಸಿದರು. ಜಿನಸೇನರು ಆದಿಪುರಾಣ ಮತ್ತು ಪಾರ್ಶ್ವನಾಥಪುರಾಣಗಳನ್ನೂ ಬರೆದು ಪ್ರಸಿದ್ಧರಾದರು. ಅಸಗನಿಗೆ ಸಂಸ್ಕೃತ ಕನ್ನಡಗಳೆರಡರಲ್ಲಿಯೂ ಸಮಾನವಾದ ಕವಿತಾ ಸಾಮರ್ಥ್ಯವಿತ್ತು. ಸಂಸ್ಕೃತದಲ್ಲಿ ಈತ ವರ್ಧಮಾನಪುರಾಣವನ್ನು ರಚಿಸಿದ್ದಾನೆ. ವಿದ್ಯಾನಂದ ಎಂಬುವನು ಸಮಂತಭದ್ರನ ಆಪ್ತಮೀಮಾಂಸಾ, ಆಪ್ತಪರೀಕ್ಷಾ ಇತ್ಯಾದಿ ಗ್ರಂಥಗಳಿಗೆ ಅಷ್ಟಸಾಹಸ್ರೀ ಎಂಬ ಅದ್ಭುತವಾದ ವ್ಯಾಖ್ಯಾನ ರಚಿಸಿದ್ದಾನೆ.

ವೇಮುಲವಾಡದ ಚಾಳುಕ್ಯರ ಆಶ್ರಯದಲ್ಲಿದ್ದ ಸೋಮದೇವಸೂರಿ (ಸು.959) ಯಶಸ್ತಿಲಕಚಂಪೂ ಎಂಬ ಕೃತಿಯನ್ನೂ ನೀತಿವಾಕ್ಯಾಮೃತವೆಂಬ ಗ್ರಂಥವನ್ನೂ ರಚಿಸಿದ. ಯಶಸ್ತಿಲಕಚಂಪೂವಿನಲ್ಲಿ ಕವಿ ನಾನಾಶಾಸ್ತ್ರದಲ್ಲಿ, ತನಗಿದ್ದ ಪಾಂಡಿತ್ಯ ಹಾಗೂ ಜಾಣ್ಮೆಯನ್ನು ಪ್ರದರ್ಶಿಸಿಕೊಂಡಿದ್ದಾನೆ. ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ಈ ಕೃತಿ ಅಮೂಲ್ಯವಾದುದಾಗಿದೆ. ನೀತಿವಾಕ್ಯಾಮೃತ ರಾಜನೀತಿಶಾಸ್ತ್ರದ ಕೈಪಿಡಿಯಂತಿದೆ. ಇದರಲ್ಲಿ ರಾಜಕೀಯ ವ್ಯವಹಾರಗಳ ಸೂಕ್ಷ್ಮ ನಿರೂಪಣೆಯ ಜತೆಗೆ ಜನಸಾಮಾನ್ಯರಿಗೂ ಸಂಬಂಧಿಸಿದ ನೀತಿಗಳನ್ನು ಎಲ್ಲರಿಗೂ ಅರ್ಥವಾಗುವ ಕ್ರಮದಲ್ಲಿ ನಿರೂಪಿಸಿದ್ದಾನೆ. ಸೋಮದೇವಸೂರಿ ಕವಿಯಷ್ಟೇ ಅಲ್ಲ ತತ್ತ್ವಶಾಸ್ತ್ರದಲ್ಲಿಯೂ ನಿಷ್ಣಾತನಾಗಿದ್ದ 'ಷಣ್ಣವತಿ ಪ್ರಕರಣ' ಇವನ ಕೊಡುಗೆ.

ಕಲ್ಯಾಣದ ಚಾಳುಕ್ಯರ ಕಾಲಕ್ಕೆ ಬಂದರೆ ಎರಡನೆಯ ಜಯಸಿಂಹನ ಆಳಿಕೆಯಲ್ಲಿ (1015-1044) ವಾದಿರಾಜನ ಯಶೋಧರಚರಿತ ಮತ್ತು ಪಾರ್ಶ್ವನಾಥ ಚರಿತ ಎಂಬ ಸುಂದರ ಕಾವ್ಯಗಳು ಮೂಡಿಬಂದವು. ವಾದಿರಾಜನ ಪಾಂಡಿತ್ಯವನ್ನು ಅನೇಕ ಶಾಸನಗಳು ಕೊಂಡಾಡಿವೆ. ಅಕಲಂಕನ ಮಹಾಗ್ರಂಥವನ್ನು ಕುರಿತ ಸಮಗ್ರ ವ್ಯಾಖ್ಯಾನ 'ನ್ಯಾಯ ವಿನಿಶ್ಚಯ ಟೀಕೆ' ವಾದಿರಾಜನ ಮೇರು ಕೃತಿ. ಇವನು ಉತ್ತಮ ಬರೆಹಗಾರನಾಗಿದ್ದ, ಜೊತೆಗೆ ಸಮರ್ಥ ವಾಗ್ಮಿಯಾಗಿದ್ದನೆಂದು ತಿಳಿದುಬರುತ್ತದೆ. ಲಕುಲೀಶ ಪಂಡಿತ ಅಥವಾ ವಾದಿರುದ್ರಗುಣ ಮಹಾವಿದ್ವಾಂಸನೆಂದೂ ಜೈನ ವಾದಿರಾಜನನ್ನು ವಾದದಲ್ಲಿ ಸೋಲಿಸಿದನೆಂದೂ 1036ರ ಶಾಸನವೊಂದು ತಿಳಿಸುತ್ತದೆ. ವಾದಿರಾಜನ ಸಹಪಾಠಿ ಮತ್ತು ಮತಿಸಾಗರನ ಶಿಷ್ಯನಾದ ದಯಪಾಲ ಎಂಬುವನು ಶಾಕಟಾಯನ ವ್ಯಾಕರಣದ ಉಪಯುಕ್ತವಾದ ಪುನರ್ವಿಮರ್ಶಿತ ಕೈಪಿಡಿಯನ್ನು ಸಿದ್ಧಗೊಳಿಸಿದ. ರೂಪಸಿದ್ಧಿಯೆಂದು ಕರೆಯಲಾದ ಇದನ್ನು ಹಲವು ಶಾಸನಗಳಲ್ಲಿ ಹೊಗಳಲಾಗಿದೆ.

ಇದೇ ಕಾಲದಲ್ಲಿ ಕಾವ್ಯಾವಲೋಕನದ ಕರ್ತೃ ನಾಗವರ್ಮ ಸಂಸ್ಕೃತ ಕೋಶವೊಂದನ್ನು ರಚಿಸಿದ್ದನೆಂದು ತಿಳಿದುಬರುತ್ತದೆ. ಆದರೆ ಇದು ಉಪಲಬ್ಧವಿಲ್ಲ. ಈ ಕಾಲದಲ್ಲಿ ವಾದೀಭಸಿಂಹನ ಗದ್ಯಚಿಂತಾಮಣಿ, ಕ್ಷತ್ರಚೂಡಾಮಣಿ ಎಂಬ ಗದ್ಯಕಾವ್ಯಗಳು ಬಾಣನ ಮಾದರಿಯಲ್ಲಿ ನಿರ್ಮಿತವಾದವು. ಜಯಕೀರ್ತಿಯ ಛಂದೋನುಶಾಸನವೂ ಇದೇ ಕಾಲದ್ದು. ಚಾಳುಕ್ಯ ಆರನೆಯ ವಿಕ್ರಮಾದಿತ್ಯ (1076-1127), ಕರ್ಣ, ಭೋಜಾದಿಗಳ ಆಸ್ಥಾನಗಳನ್ನೆಲ್ಲ ಸುತ್ತಿ ಬಂದಿದ್ದ ಕಾಶ್ಮೀರದ ಬಿಲ್ಹಣ ಮಹಾಕವಿಗೆ ತನ್ನ ಆಸ್ಥಾನದಲ್ಲಿ ವಿದ್ಯಾಪತಿಯೆಂಬ ಪದವಿಯನ್ನಿತ್ತು ಅವನಿಂದ ವಿಕ್ರಮಾಂಕ ದೇವಚರಿತವೆಂಬ ಮನೋಹರ ಐತಿಹಾಸಿಕ ಕಾವ್ಯವನ್ನು ಬರೆಯಿಸಿದ. ಇದೇ ವಿಕ್ರಮಾದಿತ್ಯನ ಕಾಲದಲ್ಲಿ ವಿಜ್ಞಾನೇಶ್ವರ ಎಂಬ ಪಂಡಿತ ಧರ್ಮಶಾಸ್ತ್ರ ಸಾಹಿತ್ಯದಲ್ಲಿಯೇ ತುಂಬಾ ಮನ್ನಣೆಗಳಿಸಿರುವ ಮಿತಾಕ್ಷರಾ ವ್ಯಾಖ್ಯೆಯನ್ನು ಯಾಜ್ಞವಲ್ಕ್ಯಸ್ಮೃತಿಗೆ ಬರೆದ. ಚಾಳುಕ್ಯ ಅರಸ ಮೂರನೆಯ ಸೋಮೇಶ್ವರ ಭೂಲೋಕಮಲ್ಲ (1127-39) ಅಭಿಲಷಿತಾರ್ಥಚಿಂತಾಮಣಿ ಅಥವಾ ಮಾನಸೋಲ್ಲಾಸ ಎಂಬ ವಿಶ್ವಕೋಶವನ್ನು ರಚಿಸಿದ. ಇದರಲ್ಲಿ ಸಂಸ್ಕೃತ ಕಾವ್ಯ, ಶಾಸ್ತ್ರ, ಕಲೆ, ವಿಜ್ಞಾನ, ಧರ್ಮ ಮುಂತಾದ ಸಕಲ ವಿದ್ಯಾಪ್ರಕಾರಗಳೂ ಸಂಕ್ಷಿಪ್ತವಾಗಿ ಹಾಗೂ ಸಪ್ರಮಾಣವಾಗಿ ಅಂತರ್ಗತವಾಗಿವೆ. ವನಸ್ಪತಿಗಳು, ಪ್ರಾಣಿಗಳು, ಪುಷ್ಪರಚನೆ, ಶಕುನಗಳು, ಕಾಮಶಾಸ್ತ್ರ, ಚಿತ್ರ, ಸಂಗೀತ, ರಾಜನೀತಿ, ಭೂಗೋಳ, ಪಾಕಶಾಸ್ತ್ರ ಮುಂತಾದ ಲೌಕಿಕ ವಿದ್ಯೆಗಳಿಗೂ ಇಲ್ಲಿ ಸಮಾವೇಶ ದೊರೆತಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ. ಇಡೀ ಸಂಸ್ಕೃತ ಸಾಹಿತ್ಯದಲ್ಲೇ ಇಂಥ ಗ್ರಂಥ ಮತ್ತೊಂದಿಲ್ಲ. ಈ ದೊರೆಯ ಆಶ್ರಯದಲ್ಲೇ ಇದ್ದ ಪಾರ್ಶ್ವದೇವ ಸಂಗೀತ ಸಮಯಸಾರವನ್ನು ರಚಿಸಿದ್ದಾನೆ. ಇಮ್ಮಡಿ ಜಗದೇಕಮಲ್ಲ (1139-49) ಸಂಗೀತಕ್ಕೆ ಸಂಬಂಧಿಸಿದಂತೆ ಸಂಗೀತ ಚೂಡಾಮಣಿ ಎಂಬ ಗ್ರಂಥವನ್ನು ಬರೆದಿದ್ದಾನೆ.

ಹೊಯ್ಸಳರ ರಾಜ್ಯದಲ್ಲಿಯ ಎರಡನೆಯ ವೀರಬಲ್ಲಾಳನ ಆಸ್ಥಾನಕವಿ ವಿದ್ಯಾಚಕ್ರವರ್ತಿಯ ರುಕ್ಮಿಣೀಕಲ್ಯಾಣನಾಟಕ ಹಾಗೂ ಅಲಂಕಾರಸರ್ವಸ್ವ ಸಂಜೀವಿನೀ ಮತ್ತು ಕಾವ್ಯಪ್ರಕಾಶ ಸಂಪ್ರದಾಯಪ್ರಕಾಶಿನೀ ಎಂಬ ಅಲಂಕಾರ ಶಾಸ್ತ್ರಗ್ರಂಥಗಳು ಮಹತ್ತ್ವದ್ದಾಗಿದೆ. ಇವನ ಮಗನಾದ ಸಕಲವಿದ್ಯಾಚಕ್ರವರ್ತಿ ಗದ್ಯಕರ್ಣಾಮೃತ ಎಂಬ ಗ್ರಂಥವನ್ನು ಬರೆದಿದ್ದಾನೆ.

ಕರ್ನಾಟಕದಲ್ಲಿಯೇ ಹುಟ್ಟಿಬೆಳೆದ ಮಧ್ವಾಚಾರ್ಯರು ವೇದಾಂತ ಪಂಥವೊಂದನ್ನು ಸ್ಥಾಪಿಸಿ ಉಪನಿಷತ್ತು, ಭಗವದ್ಗೀತೆ, ಬ್ರಹ್ಮಸೂತ್ರಗಳಿಗೆ ಭಾಷ್ಯಗಳನ್ನೂ ರಾಮಾಯಣ, ಮಹಾಭಾರತ, ಭಾಗವತಗಳ ತಾತ್ಪರ್ಯ ನಿರ್ಣಯ ಮೊದಲಾದ 37 ಗ್ರಂಥಗಳನ್ನೂ ರಚಿಸಿದರು.

ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಸಂಸ್ಕೃತ ವಾಙ್ಮಯ ಉನ್ನತಿಗೆ ಹೆಚ್ಚಿನ ಪ್ರಚೋದನೆ ನೀಡಿತು. ಸಾಮ್ರಾಜ್ಯ ಸ್ಥಾಪಕರಾದ ಮಾಧವ ವಿದ್ಯಾರಣ್ಯರು ಅವರ ಗುರುಗಳಾದ ಭಾರತೀತೀರ್ಥರು ಹಾಗೂ ಅವರ ತಮ್ಮಂದಿರಾದ ಸಾಯಣ ಮತ್ತು ಭೋಗನಾಥ ಇವರಿಂದ ಸಂಸ್ಕೃತ ವಾಙ್ಮಯದ ಎಲ್ಲ ಪ್ರಕಾರಗಳು ಸಮೃದ್ಧವಾದುವು. ತೈತ್ತಿರೀಯ ಸಂಹಿತೆ ಮೊದಲಾದ ನಾಲ್ಕು ವೇದ ಸಂಹಿತೆಗಳು, ಅವುಗಳ ಬ್ರಾಹ್ಮಣಗಳು ಹೀಗೆ 18 ವೇದಗ್ರಂಥಗಳಿಗೆ ಮಾಧವಾಚಾರ್ಯ (ವಿದ್ಯಾರಣ್ಯರ) ನೇತೃತ್ವದಲ್ಲಿ ಅನೇಕರ ನೆರವಿನಿಂದ ಸಾಯಣಾಚಾರ್ಯರು ಭಾಷ್ಯ ರಚಿಸಿದರು. ಇವುಗಳಲ್ಲಿ ಒಂದೊಂದು ಸಂಹಿತೆಯ ಪ್ರಾರಂಭದಲ್ಲಿಯೂ ಪೀಠಿಕೆಯಲ್ಲಿ ವೇದಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನು ಪೂರ್ವಮೀಮಾಂಸಾ ಸೂತ್ರಗಳ

ಆಧಾರದ ಮೇಲೆ ವಿಸ್ತಾರವಾಗಿ ಚರ್ಚಿಸಲಾಗಿದೆ. ಸಾಯಣರ ಯಜ್ಞತಂತ್ರ ಸುಧಾನಿಧಿ ಮತ್ತು ಪ್ರಯೋಗ ರತ್ನಮಾಲಾ ಗ್ರಂಥಗಳು ಶ್ರೌತಯಜ್ಞಗಳ ಪ್ರಯೋಗವನ್ನು ಸ್ಪಷ್ಟಪಡಿಸುತ್ತವೆ.

ಸ್ಮೃತಿ ಕ್ಷೇತ್ರದಲ್ಲಿ ಪರಾಶರ ಸ್ಮೃತಿಗೆ ಮಾಧವೀಯ ವ್ಯಾಖ್ಯೆ ಮತ್ತು ವ್ಯವಹಾರದ ವಿಷಯದಲ್ಲಿ ಪರಾಶರಮಾಧವೀಯ ಗ್ರಂಥಗಳು ಹೊರಬಂದವು. ಪ್ರಾಯಶ್ಚಿತ್ತ ಸುಧಾನಿಧಿಯೂ ಇದೇ ವಿಭಾಗಕ್ಕೆ ಸೇರಿದ ಕೃತಿ. ದೇವಣ್ಣಭಟ್ಟ (ಸು.1145) ನಾನಾ ಸ್ಮೃತಿಗಳ ಆಧಾರದ ಮೇಲೆ ಸ್ಮೃತಿಚಂದ್ರಿಕೆಯನ್ನು ಮತ್ತು ನರಹರಿ ಎಂಬುವನು ಸ್ಮೃತಿಕೌಸ್ತುಭವನ್ನೂ ರಚಿಸಿದರು. ವ್ಯಾಕರಣದಲ್ಲಿ ಮಾಧವೀಯವಾದ ಧಾತುವೃತ್ತಿಯನ್ನು ಗಮನಿಸಬಹುದು.

ದರ್ಶನ ಪ್ರಪಂಚದಲ್ಲಿ ಮಾಧವ ವಿದ್ಯಾರಣ್ಯರ ಜೈಮಿನೀಯ ನ್ಯಾಯಮಾಲಾವಿಸ್ತರ ಮತ್ತು ವೈಯಾಸಿಕ ನ್ಯಾಯಮಾಲಾವಿಸ್ತರ ಮತ್ತು ಸಾಯಣಾಚಾರ್ಯರ ಸರ್ವದರ್ಶನಸಂಗ್ರಹ ಇವು ಮುಖ್ಯವಾದವು. ಪದ್ಮಪುರಾಣದ ಸೂತಸಂಹಿತೆಯ ವ್ಯಾಖ್ಯೆ ತಾತ್ಪರ್ಯ ದೀಪಿಕೆಯೂ ಇವರದು. ಅಲಂಕಾರಶಾಸ್ತ್ರಕ್ಕೆ ಸೇರಿದ ಅಲಂಕಾರಸುಧಾನಿಧಿಯೂ ಸಾಯಣರ ಹೆಸರಿನಲ್ಲಿದೆ. ಸಾಯಣರು ಸುಭಾಷಿತಸುಧಾನಿಧಿ ಎಂಬ ಸುಭಾಷಿತ ಸಂಗ್ರಹವನ್ನೂ ಸಿದ್ಧಪಡಿಸಿದರು. ಭೋಗನಾಥ ಉತ್ತಮ ಕವಿಯೆಂದೂ ಹಲವು ಕೃತಿಗಳನ್ನು ರಚಿಸಿದನೆಂದೂ ಉಲ್ಲೇಖವಿದೆ. ಆದರೆ ಆತನ ಕೃತಿಗಳು ಯಾವುವೂ ದೊರೆತಿಲ್ಲ.

ತನ್ನ ಪತಿ ಕಂಪಣ ಅಥವಾ ಕಂಪರಾಯ ಮಧುರೆಯನ್ನು ವಶಪಡಿಸಿಕೊಂಡುದನ್ನು ಕಣ್ಣಾರೆ ಕಂಡ ಗಂಗಾದೇವಿ, ಆ ವಿಜಯ ಯಾತ್ರೆಯನ್ನು ಮಧುರಾವಿಜಯ ಅಥವಾ ವೀರಕಂಪಣ ರಾಯಚರಿತವೆಂಬ ಹೆಸರಿನಲ್ಲಿ ಕಾವ್ಯವೊಂದನ್ನು ರಚಿಸಿದ್ದಾಳೆ (ಸು.1360). ವಿಜಯನಗರದ ವಿರೂಪಾಕ್ಷ ನರಕಾಸುರ ವಿಜಯವನ್ನು ರಚಿಸಿದ. ಈ ಕಾಲದಲ್ಲೇ ಮುಂದೆಯೂ ಸಾಲುವಾಭ್ಯುದಯ ಮೊದಲಾದ ಅನೇಕ ಕಾವ್ಯಗಳು ರಚಿತವಾದವು.

ವಿಜಯನಗರದ ಅನಂತರ ರಾಜಕೀಯ ಕೇಂದ್ರ ಹಂಚಿಹೋದಂತೆ ವಿದ್ಯಾಕೇಂದ್ರಗಳೂ ಹಂಚಿಹೋದವು. ಆದರೆ ಸಂಸ್ಕೃತಕ್ಕಿದ್ದ ಪ್ರೋತ್ಸಾಹ ಕುಂಠಿತವಾದರೂ ಅಳಿಸಿಹೋಗಲಿಲ್ಲ. ಕೆಳದಿಯ ದೊರೆ ಬಸವ ಭೂಪಾಲ ಸ್ವತಃ ಕವಿಯಾಗಿದ್ದ. ಸೋಮದೇವನ ಅಭಿಲಷಿತಾರ್ಥಚಿಂತಾಮಣಿಯ ಮಾದರಿಯನ್ನು ಅನುಸರಿಸಿ ಶಿವತತ್ತ್ವ ರತ್ನಾಕರ ಎಂಬ ಗ್ರಂಥವನ್ನು ಈತ ಸಿದ್ಧಪಡಿಸಿದ. ಇದು 108 ಅಧ್ಯಾಯಗಳುಳ್ಳ ಬೃಹದ್ಗ್ರಂಥ. ಇವನದೇ ಇನ್ನೊಂದು ಉದ್ಗ್ರಂಥ ಸುಭಾಷಿತ ಸುರದ್ರುಮ ಎಂಬ ಸೂಕ್ತಿಕೋಶ. ಶ್ರೀರಂಗಪಟ್ಟಣದ ದಳವಾಯಿ ನಂಜರಾಜ ನಂಜರಾಜಯಶೋಭೂಷಣ ಎಂಬ ಅಲಂಕಾರ ಗ್ರಂಥವನ್ನು ಬರೆದ. ಅಲ್ಲಿಯೇ ಪ್ರಧಾನಿಯಾಗಿದ್ದ ವೆಂಕಟಪ್ಪಯ್ಯ ಭೂಪತಿ ಅಥವಾ ವೆಂಕಾಮಾತ್ಯ ಹಲವಾರು ಗ್ರಂಥಗಳನ್ನು ರಚಿಸಿದ. ಇವನ ಅಲಂಕಾರಮಣಿದರ್ಪಣದಲ್ಲಿ ಅದುವರೆಗೆ ಅಲಂಕಾರ ಶಾಸ್ತ್ರದಲ್ಲಿ ನಡೆದ ಚರ್ಚೆಗಳನ್ನು ಸುಲಲಿತವಾಗಿ ಸಂಗ್ರಹಿಸಲಾಗಿದೆ. ಇವನ ಕುಶಲವವಿಜಯಚಂಪೂ ಭಟ್ಟಿಕಾವ್ಯದ ಮಾದರಿಯಲ್ಲಿ ವ್ಯಾಕರಣ ನಿಯಮಗಳಿಗೆ ಉದಾಹರಣೆಯಾಗಿರುವಂತೆ ರಚಿಸಲಾದ ಶಾಸ್ತ್ರಕಾವ್ಯ. ಈತ ಇವಲ್ಲದೆ ಹತ್ತು ಬಗೆಯ ರೂಪಕಗಳಿಗೂ ಒಂದೊಂದು ಉದಾಹರಣೆಯಾಗುವಂತೆ ಹತ್ತು ರೂಪಕಗಳನ್ನು ಬರೆದಿದ್ದಾನೆ.

19ನೆಯ ಶತಮಾನದಲ್ಲಿ ಹುಟ್ಟಿದ ಮುಮ್ಮಡಿ ಕೃಷ್ಣರಾಜ ಒಡೆಯರ ಶ್ರೀತತ್ತ್ವನಿಧಿ ಒಂದು ಸಚಿತ್ರ ಗ್ರಂಥ. ಇದರಲ್ಲಿ ಸಂವತ್ಸರಾಭಿಮಾನಿ ದೇವತೆಗಳು ರಾಗಾಭಿಮಾನಿ ದೇವತೆಗಳೇ ಮೊದಲಾಗಿ ನಾನಾ ದೇವತೆಗಳ, ಶಿವವಿಷ್ಣುವಿನ ನಾನಾ ರೂಪಗಳ ಸಂಸ್ಕೃತದ ಧ್ಯಾನ ಶ್ಲೋಕಗಳೊಡನೆ ಅದಕ್ಕೆ ಅನುಗುಣವಾದ ವರ್ಣರಂಜಿತ ಚಿತ್ರಗಳನ್ನು ಕೊಡಲಾಗಿದೆ. ಸಂಖ್ಯಾರತ್ನಮಾಲಾ ಒಂದು ಬಗೆಯ ಕೋಶ. ಪ್ರಪಂಚದಲ್ಲಿ ಕೆಲವೊಂದು ಪದಾರ್ಥಗಳು ಒಂಟಿಯಾಗಿರಬಹುದು, ಜೊತೆಜೊತೆಯಾಗಿರಬಹುದು. ಇಲ್ಲವೇ ಮೂರು ಅಥವಾ ಅದಕ್ಕೆ ಹೆಚ್ಚಿನ ಸಂಖ್ಯೆಯಲ್ಲಿನ ಗುಂಪುಗಳಲ್ಲಿರಬಹುದು. ಅಂಥ ಒಂಟಿ ಪದಾರ್ಥಗಳನ್ನೂ ಎರಡು ಅಥವಾ ಹೆಚ್ಚಿನ ಸಂಖ್ಯೆಯ ಗುಂಪುಗಳಲ್ಲಿ ಸೇರಿದ ವಸ್ತುಗಳ ಹೆಸರುಗಳನ್ನೂ ಆಯಾ ಸಂಖ್ಯೆಯ ಕ್ರಮದಲ್ಲಿ ಕೊಡಲಾಗಿದೆ. ಹೀಗೆ 127 ಕೊನೆಯ ಸಂಖ್ಯೆ 'ಗ್ರಹಣದರ್ಪಣ' 1841 ರಿಂದ 1902ರ ವರೆಗಿನ ಅವಧಿಯಲ್ಲಿನ ಗ್ರಹಣದ ಬಗ್ಗೆ ಮಾಹಿತಿ ನೀಡುವ ಗ್ರಂಥ.

19ನೆಯ ಶತಮಾನದಲ್ಲಿ ನಡೆದ ಸಾಹಿತ್ಯ ಚಟುವಟಿಕೆಯಲ್ಲಿ ಇನ್ನೂ ಕೆಲವು ಹೆಸರುಗಳನ್ನು ಸೂಚಿಸಬಹುದು. ಯಾದವ ರಾಘವ ಪಾಂಡವೀಯ (1817) ಎಂಬ ತ್ರಿಸಂಧಾನ ಕಾವ್ಯವನ್ನು ಮೈಸೂರು ಅನಂತಾಚಾರ್ಯ ರಚಿಸಿದ್ದಾರೆ. ಭಾಗವತ, ರಾಮಾಯಣ ಹಾಗೂ ಮಹಾಭಾರತ ಕಥೆಗಳನ್ನು ಒಂದೇ ಬಾರಿಗೆ ಹೇಳುವ ಸಾಹಸ ಈ ಕಾವ್ಯದಲ್ಲಿ ನಡೆದಿದೆ. ಏಕಾಂಬರಶಾಸ್ತ್ರಿ ಎಂಬವರು ವೀರಭದ್ರವಿಜಯಚಂಪೂ ಎಂಬ ಕಾವ್ಯದಲ್ಲಿ ಬೆಂಗಳೂರು ಕೆಂಪೇಗೌಡನ ವಂಶದ ಚರಿತ್ರೆ ಹೇಳಲು ಅವಕಾಶ ಮಾಡಿಕೊಂಡಿದ್ದಾರೆ. ಮಲ್ಲಾರಿ ಆರಾಧ್ಯರು ಶಿವಲಿಂಗ, ಸೂರ್ಯೋದಯ ಎಂಬ ನಾಟಕವನ್ನು ಪ್ರಬೋಧ ಚಂದ್ರೋದಯದ ಮಾದರಿಯಲ್ಲಿ ರಚಿಸಿದ್ದರೆ, ಲಿಂಗಭಟ್ಟರು ಅಮರಕೋಶಕ್ಕೆ ಸಂಸ್ಕೃತ ಹಾಗೂ ಕನ್ನಡ ವಿವೃತ್ತಿಯನ್ನು ಬರೆದಿದ್ದಾರೆ. ಮಂಡಿಕಲ್ಲು ರಾಮಶಾಸ್ತ್ರೀ 'ಮೇಘ ಪ್ರತಿಸಂದೇಶ' ಎಂಬ ಗ್ರಂಥವನ್ನು ರಚಿಸಿದ್ದಾರೆ. ಸತ್ಯಪ್ರಿಯತೀರ್ಥರು ವ್ಯಾಕರಣ ಮಹಾಭಾಷ್ಯಕ್ಕೆ ವ್ಯಾಖ್ಯಾನ ರಚಿಸಿದ್ದಾರೆ. ಇದರ ಭಾಗಗಳು ಮಾತ್ರ ದೊರೆತಿವೆ.

ಮೇಲುಕೋಟೆಯ ಜಗ್ಗೂಆಳ್ವಾರರು ನಿರ್ಮಿಸಿದ ಪ್ರತಿಜ್ಞಾಕೌಟಿಲ್ಯಂ, ಪ್ರಸನ್ನರಾಘವಂ, ಮಹೀಹರಣಂ ಮೊದಲಾದ ಅನೇಕ ಕಾವ್ಯಗಳು ಗಮನಾರ್ಹವಾಗಿವೆ. ಸಂಸ್ಕೃತ ಸಾಹಿತ್ಯ ಕೃತಿಗಳನ್ನು ಇಂಗ್ಲಿಷ್, ಕನ್ನಡ, ಹಿಂದಿಗಳಿಗೆ ಅನುವಾದಿಸಿ ಸಂಸ್ಕೃತ ಸಾಹಿತ್ಯವನ್ನು ಅನ್ಯರಿಗೆ ಪರಿಚಯ ಮಾಡಿಕೊಡುವಲ್ಲಿ ವಿದ್ವಾಂಸರಾದ ಕೆ. ಕೃಷ್ಣಮೂರ್ತಿ, ಎನ್. ರಂಗನಾಥಶರ್ಮ ತುಂಬಾ ಶ್ರಮಿಸಿದ್ದಾರೆ. ಇವರಂತೆಯೇ ಅನೇಕ ಆಧುನಿಕ ವಿದ್ವಾಂಸರು ತಮ್ಮದೇ ಆದ ಕೊಡುಗೆಯನ್ನು ಮೂಲ ಸಾಹಿತ್ಯಕ್ಕಾಗಲಿ ಅಥವಾ ಅನುವಾದ ಸಾಹಿತ್ಯಕ್ಕಾಗಲಿ ಅರ್ಪಿಸುತ್ತ ಬಂದಿದ್ದಾರೆ. ಅವುಗಳಲ್ಲಿ ಅನೇಕ ಕೃತಿಗಳು ಮಹತ್ಕೃತಿಗಳಾಗಿವೆ. ಇತ್ತೀಚಿನ ದಿನಗಳಲ್ಲಿ ಹಿಂದು ಸೇವಾ ಪ್ರತಿಷ್ಠಾನದ ಸಂಸ್ಕೃತ ಶಾಖೆ ಸಂಸ್ಕೃತದ ಬೆಳೆವಣಿಗೆಗಾಗಿ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡು ಶ್ರಮಿಸುತ್ತಿದೆ.

ವಿಜಯನಗರ ಕಾಲದಾರಭ್ಯ ಆಧುನಿಕ ಕಾಲದ ತನಕ ಸಂಸ್ಕೃತದಲ್ಲಿ ಸೃಜನಾತ್ಮಕ ಕಾರ್ಯ ಎಷ್ಟೊಂದು ಅಗಾಧವಾಗಿ ಸಾಗಿದೆಯೆಂದರೆ ದೊರೆಯುವ ಸಂಸ್ಕೃತ ಹಸ್ತಪ್ರತಿಗಳ ಸಂಖ್ಯೆ ಹತ್ತುಸಾವಿರಕ್ಕೂ ಹೆಚ್ಚಾಗುತ್ತದೆ. ಈ ಗ್ರಂಥಗಳೆಲ್ಲ ಹೆಚ್ಚಾಗಿ ಪೂರ್ವ ಮಹಾಕವಿಗಳ, ಸ್ತೋತ್ರಕಾರರ ಮಾದರಿಯಲ್ಲಿ ಬರೆದ ನೂತನ ರಚನೆಗಳು, ಇಲ್ಲವೆ ನಾನಾ ಶಾಸ್ತ್ರಗ್ರಂಥಗಳಿಗೆ ಟೀಕೆಟಿಪ್ಪಣಿಗಳು, ಇಲ್ಲವೆ ಧರ್ಮಶ್ರದ್ಧೆಯಿಂದ ಬರೆದ ಆಚಾರ್ಯ ಪುರುಷರ ದಿಗ್ವಿಜಯಗಳು, ಬಾಲೋಪಯೋಗಿ ಕಥಾನಕಗಳು ಮತ್ತು ಧರ್ಮಾಚರಣೆಗೆ ಉಪಯುಕ್ತವಾದ ಕೈಪಿಡಿಗಳು, ಮಂತ್ರ-ತಂತ್ರ ಪರಿಷ್ಕಾರಗಳು.

20ನೆಯ ಶತಮಾನದಲ್ಲಿಯೂ ಹಲವು ಕೃತಿಗಳು ಸಂಸ್ಕೃತದಲ್ಲಿ ರಚನೆಗೊಂಡವು. ಸುಂದರವಲ್ಲಿಯ (1900) ರಾಮಾಯಣ ಚಂಪೂ ಒಂದು ಗಮನಾರ್ಹ ಕೃತಿ. ಚಾಮರಾಜನಗರದ ಶ್ರೀಕಂಠಶಾಸ್ತ್ರೀ ಅವರು ಧಾತುರೂಪ ಪ್ರಕಾಶಿಕೆ ಎಂಬ ಗ್ರಂಥವನ್ನು ಬರೆದರಲ್ಲದೆ, ಯವನಯಾಮಿನೀವಿನೋದ ಕಥಾ ಎಂಬ ಹೆಸರಿನಲ್ಲಿ ಅರೇಬಿಯನ್ ನೈಟ್ಸ್ ಕಥೆಗಳನ್ನು ಸಂಸ್ಕೃತಕ್ಕೆ ಅನುವಾದ ಮಾಡಿದ್ದಾರೆ. ಶ್ರೀ ಕೃಷ್ಣಬ್ರಹ್ಮತಂತ್ರ ಪರಕಾಲ ಸ್ವಾಮಿಗಳು ಅಲಂಕಾರಮಣಿಹಾರ ಎಂಬ ಗ್ರಂಥವನ್ನು ರಚಿಸಿದ್ದಾರೆ. ಇದು ಅಲಂಕಾರಗಳನ್ನು ವಿವರಿಸುವ ಗ್ರಂಥ. ಇದರ ಉದಾಹರಣೆಗಳೆಲ್ಲವೂ ಶ್ರೀನಿವಾಸ ದೇವರನ್ನು ಕುರಿತವು. ವೇದಾಂತಾಚಾರ್ಯರು ರಚಿಸಿದ ಕೃತಿ ರಸಾಸ್ವಾದನೆ. ಇದು ಹಂಸಸಂದೇಶದ ವ್ಯಾಖ್ಯೆ.

ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರು ಭಗವದ್ಗೀತಾ ಪ್ರಬಂಧ ಮೀಮಾಂಸಾ (1902), ಮೀಮಾಂಸಾ ಭಾಷಾಭೂಷಣ (1928) ಮೊದಲಾದ ಹಲವು ಕೃತಿಗಳನ್ನು ರಚಿಸಿದ್ದಾರೆ. ಮೀಮಾಂಸಾ ಭಾಷಾಭೂಷಣ ಕುಮಾರಿಲಭಟ್ಟನ ತತ್ತ್ವಗಳನ್ನು ಪ್ರತಿಪಾದಿಸುವ ಗ್ರಂಥ. ದರ್ಶನೋದಯ (1933) ನಾನಾದರ್ಶನ ಪದ್ಧತಿಗಳ ವಿಷಯದೃಷ್ಟಿ ಮತ್ತು ವಿಮರ್ಶೆಯಿಂದ ಕೂಡಿದ ಲಲಿತ ಹಾಗೂ ಸ್ಪಷ್ಟ ನಿರೂಪಣೆಗಳನ್ನೊಳಗೊಂಡಿದೆ.

ಮೇಲುಕೋಟೆಯ ಜಗ್ಗು ವೆಂಕಟಾಚಾರ್ಯರ ಹೆಸರಿನಲ್ಲಿ ಹತ್ತಾರು ಕೃತಿಗಳಿವೆ. ಕಾರ್ಕಳದ ಪಂಡಿತೆ ರಮಾಬಾಯಿ ಅವರು ಸುಲಲಿತ ಸಂಸ್ಕೃತದಲ್ಲಿ ಗ್ರಂಥರಚಿಸಿ ಖ್ಯಾತಿಪಡೆದಿದ್ದಾರೆ.

ಮುತ್ತಯ್ಯ ಭಾಗವತರ್ ಹುಟ್ಟುಕನ್ನಡಿಗರಲ್ಲದಿದ್ದರೂ ಅವರ ಸಂಗೀತ ಕೃತಿಗಳ ರಚನೆ ಬಹುತೇಕವಾಗಿ ಮೈಸೂರಿನಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ನಡೆಯಿತು. ಇಲ್ಲೇ ಮೈಸೂರಿನ ಪ್ರಸಿದ್ಧ ವಾಗ್ಗೇಯಕಾರರಾದ ವಾಸುದೇವಾಚಾರ್ಯರ ಹೆಸರನ್ನು ಹೇಳಬಹುದು. ಇವರಿಬ್ಬರ ಕೃತಿಗಳೂ ಜನಪ್ರಿಯತೆಯನ್ನೂ ಗಳಿಸಿವೆ.

ಮೈಸೂರು ಮಹಾರಾಜರಾಗಿದ್ದ ಜಯಚಾಮರಾಜ ಒಡೆಯರ್ ಅವರ ಆಳ್ವಿಕೆಯಲ್ಲೂ ಸಂಸ್ಕೃತಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆಯಿತು. ಇವರೇ ಸ್ವತಃ ಹಲವು ಶ್ರೇಷ್ಠ ಕೃತಿಗಳನ್ನು ರಚಿಸಿದ್ದಾರೆ. ಇವರು ನಿಯೋಜಿಸಿದ ಪುರಾಣ, ವೇದ, ವೇದಾಂತ ಗ್ರಂಥಗಳನ್ನು ಮೂಲ ಮತ್ತು ಕನ್ನಡ ಅನುವಾದದೊಡನೆ ಪ್ರಕಟಿಸುವ ಮಹಾಯೋಜನೆಯಂತೆ 12 ಮಹಾ ಪುರಾಣಗಳು, 12 ಉಪಪುರಾಣಗಳು, 6 ಆಧ್ಯಾತ್ಮಿಕ ಗ್ರಂಥಗಳು (ಆನಂದ ಅಧ್ಯಾತ್ಮ ರಾಮಾಯಣಗಳು, ಯೋಗವಾಸಿಷ್ಠ, ಪ್ರಸ್ಥಾನತ್ರಯ ಭಾಷ್ಯಗಳು), ಒಂದೆರಡು ತಂತ್ರ ಗ್ರಂಥಗಳ ಋಕ್ಸಂಹಿತೆ, ಐತರೇಯ ಬ್ರಾಹ್ಮಣ ಮತ್ತು ಆರಣ್ಯಕ ಮತ್ತು ನಿರುಕ್ತ-ಈ ಗ್ರಂಥಗಳು ಸುಮಾರು 350 ಸಂಪುಟಗಳಲ್ಲಿ ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲೆಯಲ್ಲಿ ಪ್ರಕಾಶಿತವಾಗಿವೆ. ಪುರಾಣಗಳ, ವೇದಾಂತ ಗ್ರಂಥಗಳ ಮೂಲ ಮತ್ತು ಅನುವಾದ ಪ್ರಕಟವಾಗಿದ್ದರೆ, ಸಂಹಿತೆ, ಬ್ರಾಹ್ಮಣ ಗ್ರಂಥಗಳು ಸಾಯಣ ಭಾಷ್ಯ ವಿಸ್ತಾರವಾದ ಕನ್ನಡ ವಿವರಣೆಯೊಂದಿಗೆ ಹೊರಬಂದಿವೆ. ನಿರುಕ್ತಕ್ಕೂ ವಿಸ್ತಾರವಾದ ವಿವರಣೆಯಿದೆ. ವೇದಗ್ರಂಥಗಳಿಗೆ ಇಂಗ್ಲಿಷ್ ಅನುವಾದವನ್ನು ಕೊಡಲಾಗಿದೆ. ಈ ಮಾಲೆಯ ಮೂಲಕ ಕನ್ನಡ ಸಾಹಿತ್ಯಕ್ಕೆ, ಸಂಸ್ಕೃತಿ ಪ್ರಚಾರಕ್ಕೆ, ಸಂಸ್ಕೃತ ಭಾಷಾಧ್ಯಯನಕ್ಕೆ ಒಡೆಯರ್ ಅವರು ಇತ್ತ ನೆರವು ಅಪಾರವಾದುದು. ಇತ್ತೀಚೆಗೆ ಜಯಚಾಮರಾಜೇಂದ್ರರ ಕೃತಿಗಳಾದ ಶ್ರೀತತ್ತ್ವನಿಧಿ ಮೊದಲಾದ ಒಂಬತ್ತು ಕೃತಿಗಳು ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದಿಂದ ಕನ್ನಡ ಇಂಗ್ಲಿಷ್ ಅನುವಾದಗಳೊಂದಿಗೆ ಪ್ರಕಟವಾಗಿವೆ.

ವಿದ್ಯಾಭ್ಯಾಸ ಹಾಗೂ ಸಂಸ್ಕೃತ ಪ್ರಚಾರ ಕ್ಷೇತ್ರದಲ್ಲಿಯೂ ಸಾಕಷ್ಟು ಕಾರ್ಯ ಕಳೆದ ಶತಮಾನದ ಕೊನೆಯಿಂದ ನಡೆದು ಬಂದಿದೆ. ಎಚ್. ಸುಬ್ಬರಾವ್ ರಚಿಸಿದ, 'ವಿದ್ಯಾಭ್ಯಾಸ ಪದ್ಧತಿ' ಹರ್ಬರ್ಟ್ ಸ್ಪೆನ್ಸರನ ಗ್ರಂಥದ ಅನುವಾದ. ಪೆರಿಸ್ವಾಮಿ ತಿರುಮಲಾಚಾರ್ ಸದ್ವಿದ್ಯಾ ಆಂಗ್ಲೋ-ಸಂಸ್ಕೃತ ಪಾಠಶಾಲೆಯ ಸ್ಥಾಪಕರಲ್ಲೊಬ್ಬರಾಗಿದ್ದು, ಬಾಲಬೋಧಗಳನ್ನು ಸಿದ್ಧಪಡಿಸಿದರು.

ಹಿಂದಿನಿಂದಲೂ ಉಡುಪಿ, ಶೃಂಗೇರಿ, ಕೂಡ್ಲಿ, ಸಂಕೇಶ್ವರಗಳಲ್ಲಿಯೂ ದಕ್ಷಿಣ ಕನ್ನಡ ಜಿಲ್ಲೆಯ ಹಲವು ಕಡೆಗಳಲ್ಲೂ ಸಂಸ್ಕೃತ ಪಾಠಶಾಲೆಗಳಿದ್ದವು. ಪರ್ದಲ, ಕಾರ್ಕಳಗಳಲ್ಲಿ ಮಹಾ ಪಾಠಶಾಲೆಗಳಿದ್ದವು (ಓರಿಯಂಟಲ್ ಕಾಲೇಜು). ಈಚೆಗೆ ಆಧುನಿಕ ವಿದ್ಯಾಭ್ಯಾಸದ ಏರ್ಪಾಡುಗಳಾದಂತೆ ಸಂಸ್ಕೃತ ವಿದ್ಯಾಭ್ಯಾಸ ಪ್ರಗತಿ ಸಾಧಿಸಿದೆ. ಶೃಂಗೇರಿ, ಉಡುಪಿ, ಕಾರ್ಕಳಗಳಲ್ಲಿದ್ದ ಪಾಠಶಾಲೆಗಳು ಸುವ್ಯವಸ್ಥಿತವಾಗಿವೆ. ಮೈಸೂರು, ಬೆಂಗಳೂರುಗಳಲ್ಲಿ ಪ್ರೌಢ ವಿದ್ಯಾಭ್ಯಾಸಕ್ಕೆ ಉನ್ನತ ಮಟ್ಟದ ಸಂಸ್ಕೃತ ಪಾಠಶಾಲೆಗಳನ್ನು ಸ್ಥಾಪಿಸಲಾಗಿದೆ. ಶಾಲೆ, ಕಾಲೇಜು ಮತ್ತು ಸ್ನಾತಕೋತ್ತರ ಪದವಿ ಮಟ್ಟದಲ್ಲಿ ಸಂಸ್ಕೃತ ಶಿಕ್ಷಣಕ್ಕೆ ಅವಕಾಶವಿದೆ.

ಸಂಸ್ಕೃತದಲ್ಲಿ ಪತ್ರಿಕೆ, ನಿಯತಕಾಲಿಕೆಗಳು ಪ್ರಕಟವಾಗುತ್ತಿವೆ. ಬೆಳಗಾಂವಿಯಿಂದ ಪ್ರಕಟವಾಗುತ್ತಿದ್ದ ಸಂಸ್ಕೃತ ಚಂದ್ರಿಕಾ ಮತ್ತು ಮಧುರವಾಣೀ ನಿಯತಕಾಲಿಕೆಗಳು ಬಹಳ ಪ್ರಭಾವವನ್ನು ಬೀರಿವೆ. ಇದರ ಏಳ್ಗೆಗಾಗಿ ಪಂಡರೀನಾಥ ಗಲಗಲಿಯವರು ಬಹಳ ಶ್ರಮವಹಿಸಿ ದುಡಿದಿದ್ದಾರೆ. ಅಮರ ಭಾರತೀ ನಿಯತಕಾಲಿಕೆ ವಾರಾಣಸಿಯಲ್ಲಿ ಪ್ರಕಾಶಿತವಾದರೂ ಅದರ ಸಂಪಾದಕರಾದ ನರಸಿಂಹಾಚಾರ್ ಕರ್ನಾಟಕದವರು. ಏಕಮಾತ್ರ ದೈನಿಕವಾದ ಸುಧರ್ಮಾ ಮೈಸೂರಿನಲ್ಲಿ ಕೆ.ಎಸ್.ವರದರಾಜ ಅಯ್ಯಂಗಾರ್ ಅವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿತ್ತು.

ಸಂಸ್ಕೃತ-ಕನ್ನಡ ಭಾಷೆಗಳೆರಡೂ ಸು.2000 ವರ್ಷಗಳಿಂದ ಜೊತೆಯಲ್ಲಿಯೇ ಬೆಳೆಯುತ್ತ ಬಂದಿವೆ; ಪರಸ್ಪರ ಪ್ರಭಾವಿತವಾಗಿವೆ. ಕನ್ನಡ ಭಾಷೆಯ ಪ್ರಭಾವವೂ ಸಂಸ್ಕೃತದ ಮೇಲೆ ಆಗಿದೆ ಎಂಬುದಕ್ಕೆ ಸಂಸ್ಕೃತ ಕನ್ನಡದಿಂದ ಎರವಲು ಪಡೆದಿರಬಹುದಾದ ಒಂದೆರಡು ಪದಗಳನ್ನು ಇಲ್ಲಿ ಉದಾಹರಣೆಗಾಗಿ ಹೇಳಬಹುದು. ಆರ್ಬಟ-ಆರ್ಭಟ, ಗುದ್ದಲಿ-ಕುದ್ದಾಲ, ಗೊಟರು-ಕೋಟಕ. ಹೆಂಟೆ-ಹೆಂಡೆ, ಪಿಂಡು-ಪಿಂಡ ಇತ್ಯಾದಿ. ಸಂಸ್ಕೃತ ಪದಗಳು ಕನ್ನಡದಲ್ಲಿ ಧಾರಾಳವಾಗಿ ಬಳಕೆಯಾಗುತ್ತಾ ಬಂದಿವೆ. ಇಂದಿನ ಪಾರಿಭಾಷಿಕ ಪದಗಳನ್ನು ರೂಪಿಸುವುದರಲ್ಲಿಯೂ ಸಂಸ್ಕೃತದ ಉಪಯೋಗ ಬಹಳಷ್ಟಿದೆ. ಆದರೆ ಸಂಸ್ಕೃತದಿಂದ ಕನ್ನಡಕ್ಕೆ ಬಂದಿರುವುದು ಹೆಚ್ಚು. ಸಂಸ್ಕೃತದಲ್ಲಿದ್ದ ವಿಜ್ಞಾನ, ಕಲೆ ಮತ್ತು ತತ್ತ್ವಶಾಸ್ತ್ರ ಮೊದಲಾದ ವಾಙ್ಮಯ ವಿಭಾಗಗಳ ಬಗೆಗಿನ ಗ್ರಂಥಗಳೆಲ್ಲವನ್ನೂ ಕ್ರಮೇಣ ಕನ್ನಡದಲ್ಲಿಯೂ ಬರೆಯಲಾಯಿತು. ಮೊದಮೊದಲಿಗೆ ವಿಷಯ ನಿರೂಪಣೆಯಲ್ಲಿ ಸಂಸ್ಕೃತ ಗ್ರಂಥಗಳ ಜಾಡನ್ನೇ ಕನ್ನಡ ಅನುಸರಿಸಿಕೊಂಡು ಬಂತು. (ಆರ್‌ಎಸ್‌ಎಸ್.;ಕೆ.ಕೆ.)

**ಉರ್ದು:** ಪಾರಸಿ ಭಾಷೆಯನ್ನು ಆಡುವವರ ಪ್ರಭುತ್ವ ಮತ್ತು ಸಂಪರ್ಕ ಉಂಟಾಯಿತು. ಸೈನಿಕರು, ವರ್ತಕರು ಪಾರಿಸಿ ಹಾಗೂ ಅರಬ್ಬೀ ಭಾಷೆಗಳನ್ನು ಸ್ಥಳೀಯ ಪ್ರಭಾವದಿಂದ ರೂಪಿಸಿದರು. ಅದು ದಖನೀ ಭಾಷೆಯ ಹುಟ್ಟಿಗೆ ಕಾರಣವಾಯಿತು. ಕನ್ನಡ ಮತ್ತು ಮರಾಠಿ ಪದಗಳೂ ಇದರಲ್ಲಿ ನುಸುಳಿದವು. ಈ ಸಂವಹನದಿಂದ ರೇಖ್ತಾ ಎಂಬ ಭಾಷೆ ಹುಟ್ಟಿತು. ಇದೇ ಮುಂದೆ ದಖ್ಖನೀ ಆಯ್ತು. ಈ ಭಾಷೆ ದಕ್ಷಿಣದಲ್ಲಿ ಪ್ರಸಿದ್ಧಿ ಪಡೆದುದರಿಂದ ಅದನ್ನು ದಖನೀಭಾಷೆಯೆಂದು ಕರೆದರು. ಇದು ಉರ್ದುಭಾಷೆಗೆ ಬೇರು.

ಉರ್ದು ಭಾಷೆಯ ವಿಶಿಷ್ಟತೆ ಎಂದರೆ ಅದು ಯಾವುದೇ ಮತ, ಜಾತಿ, ಪಂಥ ಪಂಗಡಗಳಿಗೆ ಸೇರಿದುದಲ್ಲ. ಈ ಭಾಷೆಯಲ್ಲಿ ಅರಬ್ಬೀ ಗಾಂಭೀರ್ಯ, ಪಾರಸಿ ಮಾಧುರ್ಯ, ಸಂಸ್ಕೃತದ ಹಿರಿತನ ಸಮ್ಮಿಲಿತವಾಗಿದೆ. ಈ ಭಾಷೆಯ ಲಿಪಿಯನ್ನು ಬಲದಿಂದ ಎಡಕ್ಕೆ ಬರೆಯುವುದು ರೂಢಿ.

ಕರ್ನಾಟಕದಲ್ಲಿ 14ನೆಯ ಶತಮಾನದಿಂದ ಇಲ್ಲಿಯವರೆಗೂ ಉರ್ದು ಸಾಹಿತ್ಯವ್ಯವಸಾಯ ನಡೆಯುತ್ತ ಬಂದಿದೆ. ಬಹಮನೀಸುಲ್ತಾನರು, ಮೊಗಲರು, ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನ್, ಮೈಸೂರು ಒಡೆಯರು, ಅನಂತರ ಆಧುನಿಕ ಲೇಖಕರು, ಅನುವಾದಕರು ಉರ್ದು ಸಾಹಿತ್ಯವನ್ನು ಬೆಳೆಸಿ ಪುಷ್ಟಿಗೊಳಿಸಿದ್ದಾರೆ.

14ನೆಯ ಶತಮಾನದಲ್ಲಿ ಗುಲ್ಬರ್ಗದ ಖ್ವಾಜಾಬಂದೇನವಾಜ್ ಅವರು ಅರಬ್ಬಿ, ಪಾರಸಿ ಹಾಗೂ ಸಂಸ್ಕೃತ ಭಾಷೆಯಲ್ಲಿ ದೊಡ್ಡ ವಿದ್ವಾಂಸರಾಗಿದ್ದರು. ಇವರು ಅರಬ್ಬಿ, ಪಾರಸಿಭಾಷೆ ತಿಳಿಯದ ಸಾಮಾನ್ಯ ಜನರಿಗೆ ಅವರಾಡುವ ಸರಳ ದಖನೀಭಾಷೆಯಲ್ಲಿ ಮಿರಾಜುಲ್ ಅಷಕೀನ್, ಹಿದಾಯತ್ ನಾಮಾ, ಷಿಕಾರನಾಮಾ ರಿಸಾಲಾ ಸೇಬಾರಾ ಮೊದಲಾದ ಗ್ರಂಥಗಳನ್ನು ರಚಿಸಿದರು. ಇವರೇ ದಖನೀ ಉರ್ದುವಿನ ಮೊದಲನೆಯ ಗದ್ಯ ಮತ್ತು ಪದ್ಯ ಲೇಖಕರು. ಇವರ ಕೃತಿಗಳೆಲ್ಲ ಸೂಫಿಪಂಥಕ್ಕೆ ಸಂಬಂಧಪಟ್ಟಿವೆ. ಇವರ ಮಗ ಸಯ್ಯದ್ ಮೊಹಮದ್ ಅಕ್ಬರ್ ಹುಸೇನಿ ಧರ್ಮಬೋಧನೆಗಾಗಿ ಸೂಫಿ ನೀತಿ ತತ್ತ್ವಗಳಿಗಾಗಿ ದಖ್ಖನೀ ಉರ್ದುವನ್ನೇ ಬಳಸಿದ. ಬಂದೇನವಾಜರ ಶಿಷ್ಯ ಹಫ್ತ್‌ಅಸ್ಲೂಕ್ ತನ್ನ ಗುರುವಿನ ಉಕ್ತಿಗಳನ್ನು ಟೀಕಾಸಹಿತ ಸಂಗ್ರಹಿಸಿದ. ಇದು ಬಂದೇನವಾಜರ ಮೊಮ್ಮಗ ಅಬ್ದುಲ್ಲಾಹುಸೇನಿಯ ಅರಬ್ಬಿ ಗ್ರಂಥ ನಿಷಾತಉಲ್ಲಇಷ್ಕ್ ಎಂಬ ಕೃತಿಯ ಭಾಷಾಂತರ (ನೋಡಿ: ಬಂದೇನವಾಜ್‌ಖ್ವಾಜಾ).

ಬಿಜಾಪುರದ ಷಾಮಿರಾನ್ಜಿಷಮುಷುಲ್‌ಉಷ್ಷಾಕ್ ಹಾಗೂ ಅವನ ಪುತ್ರ ಬುರಹಾನುದ್ದೀನ್ ಖಾನಂ ಅನೇಕ ಗ್ರಂಥಗಳನ್ನು ರಚಿಸಿದರು. ಅವುಗಳಲ್ಲಿ ಜಲತರಂಗ, ಗುಲ್‌ದಾಸ್ ಮುಖ್ಯವಾದವು. ಮೀರಾನ್‌ಜೀಯ ಮಗಜೆ ಮರಗೂಬ್, ಚಹಾರ್ ಷಹಾದತ್ ಕೃತಿಗಳು ಪ್ರಸಿದ್ಧವಾಗಿವೆ. ಈ ಗ್ರಂಥಗಳನ್ನು ಇತ್ತೀಚೆಗೆ ಮೊಹಮದ್ ಹಾಷಿಮ್ ಅಲಿಯವರು ಸಂಪಾದಿಸಿ

ಕೊಟ್ಟಿದ್ದಾರೆ. ಮೀರಾನ್‌ಜೀಯ ಮಗ ಬುರಹಾನುದ್ದೀನ್ ಖಾನಂ ರಚಿಸಿದ 'ಕಲಮತ್ ಉಲ್ಲ ಹಿಕಾಯತ್' ಉರ್ದು ಸಾಹಿತ್ಯದ ಮೊಟ್ಟ ಮೊದಲನೆಯ ಅಧಿಕೃತ ಗದ್ಯಗ್ರಂಥ. ಇವನು ಇರಷಾದ್ ನಾಮಾ, ಸುಖ ಸಹೇಲಾ ಎಂಬ ಮಸ್ನವಿಗಳನ್ನು ಬರೆದಿದ್ದಾನೆ.

ಬಹಮನೀ ಸುಲ್ತಾನರಲ್ಲಿ ಕೆಲವರು ಸ್ವತಃ ಕವಿಗಳಲ್ಲದೆ ಕವಿಪೋಷಕರೂ ಆಗಿದ್ದರು. ಆದಿಲ್‌ಶಾಹೀ ಮನೆತನದ ಆರನೆಯ ಸುಲ್ತಾನ ಎರಡನೆಯ ಇಬ್ರಾಹಿಂ ಆದಿಲ್‌ಷಾ (1580-1627) ಉರ್ದು ಸಾಹಿತ್ಯದ ಮಹಾನ್ ಪೋಷಕನಾಗಿದ್ದ. ಇವನಿಗೆ ಸಾಹಿತ್ಯದಲ್ಲಿ ತುಂಬಾ ಆಸಕ್ತಿಯಿತ್ತು. ಕಾವ್ಯ ಮತ್ತು ಸಂಗೀತವೆಂದರೆ ಇವನಿಗೆ ಪಂಚಪ್ರಾಣ. ಇವನು ದೊಡ್ಡ ಕವಿ ಹಾಗೂ ಸಂಗೀತ ವಿದ್ವಾಂಸ. ಈತ ನೌರಸ್‌ನಾಮಾ (ಕಿತಾಬೆ ನವರಸ್) ಎಂಬ ಉರ್ದುಗ್ರಂಥ'ವನ್ನು ಸಂಗೀತದ ಬಗ್ಗೆ ರಚಿಸಿ ಲೋಕಪ್ರಖ್ಯಾತನಾದ (ನೋಡಿ: ಇಬ್ರಾಹೀಂ ಆದಿಲ್ ಷಾ II). ಇವನ ಕಾಲದಲ್ಲಿ ರುಸ್ತುಮ್ ಎಂಬ ಕವಿ ದ್ವಿಪದಿ ಕಾವ್ಯವನ್ನು ಬರೆದ. ಮೊಹಮದ್ ನುಸರತ್ ಎಂಬಾತ ಆದಿಲ್‌ಷಾನ ಆಸ್ಥಾನಕವಿ. ಇವನ ಕಾವ್ಯನಾಮ 'ನುಸರತಿ'. ಇವನು ಮೂರು ದ್ವಿಪದಿ ಕಾವ್ಯಗಳನ್ನು ರಚಿಸಿದ. ಇವನ ಗುಲ್ಷನೆ ಇಷ್ಕ್ ಎಂಬ ಗ್ರಂಥದಲ್ಲಿ 8000 ಬೈತ್‌ಗಳಿವೆ. ಕನವರ ಮನೋಹರ್ ಮತ್ತು ಮಧುಮಾಲತಿಯ ಪ್ರಣಯ ಪ್ರಸಂಗವನ್ನು ಹೃದಯಂಗಮವಾಗಿ ವಿವರಿಸಿದ ಕಥೆಯಿದು. ನುಸರತಿಯ ಕಸೀದಾ ಅಂದರೆ ಜೀವಂತ ವ್ಯಕ್ತಿಗಳ ವರ್ಣನೆಗಳು ನಿರರ್ಗಳವಾಗಿ ಓದಿಸಿಕೊಂಡು ಹೋಗುವಂಥ' ಗ್ರಂಥ'. ಇವನು ರಚಿಸಿದ ಎರಡು ಪ್ರೇಮಕಥಾ ಸಂಕಲನಗಳಿವೆ. ಮಿರಾಜ್‌ನಾಮಾ ಇವನ ಮತ್ತೊಂದು ಪ್ರಸಿದ್ಧ ಕಾವ್ಯ. ಅಲಿನಾಮಾ ಇವನ ಇನ್ನೊಂದು ಕೃತಿ. ಆಗಿನ ಕಾಲದ ಸುಲ್ತಾನರ ಯುದ್ಧದ ವಿವರಣೆಯನ್ನು ತಿಳಿಸುವ ಚಾರಿತ್ರಿಕ ಗ್ರಂಥವಿದು. ಇದರಲ್ಲಿ 7000 ಮಸ್ನವಿ ಪದ್ಯಗಳಿವೆ. ಸುಲ್ತಾನರ ಕಾಲದಲ್ಲಿ ಮರಸಿಮಾ ಎಂಬ ಶೋಕಗೀತೆಗಳನ್ನು ಬರೆಯುವುದಕ್ಕೆ ಪ್ರಾರಂಭವಾಯಿತು. ನಿಜಾಮಿ, ಮುಷ್ತಾಕ್, ಲುತ್‌ಫಿ, ಅಜುರಿ, ವಜಹಿ, ಗವಾಸಿ, ಕುತುಬಿ, ಇಬ್ನೆನಿಷಾತಿ ಮೊದಲಾದ ಕವಿಗಳೂ ಉರ್ದು ಸಾಹಿತ್ಯ ಸೇವೆಯನ್ನು ಮಾಡಿದರು.

ಸುಲ್ತಾನರ ಆಸ್ಥಾನದಲ್ಲಿದ್ದ ಮುನ್ಷಿಗಳು ಪಾರಸಿ, ಉರ್ದು, ಕನ್ನಡ ಭಾಷೆಗಳನ್ನು ಚೆನ್ನಾಗಿ ಬಲ್ಲವರಾಗಿದ್ದರು. ಪತ್ರ ವ್ಯವಹಾರ ಆಯಾ ಭಾಷೆಯಲ್ಲಿ ನಡೆಯುತ್ತಿತ್ತು. ರಾಜರಿಗೂ ಸುಲ್ತಾನರಿಗೂ ಮೆಚ್ಚುಗೆಯಾದ ಭಾಷೆಯನ್ನು ಅಧಿಕಾರಿಗಳು, ಸಾಮಾನ್ಯ ಜನರು ಕಲಿಯುತ್ತ ಬಂದರು.ಹೀಗೆ ಉರ್ದು ಭಾಷೆ ಜನ ಸಾಮಾನ್ಯರ ಭಾಷೆಯಾಯಿತು.

ಔರಂಗಜೇಬನ ಆಶ್ರಯದಲ್ಲಿದ್ದ ಬಿಜಾಪುರದ ಜಸವಂತರಾಯ ಮುನ್ಷಿ ಎಂಬ ಅಧಿಕಾರಿ ಪಾರಸಿ ಮತ್ತು ಉರ್ದುವಿನಲ್ಲಿ ಶ್ರೇಷ್ಠಕವಿ. ಇವನಂತೆ ಅನೇಕ ಹಿಂದು ಜನರು ಉರ್ದು ಪಾರಸಿ ಭಾಷೆಗಳಲ್ಲಿ ಅಮೋಘ ಸೇವೆ ಸಲ್ಲಿಸಿದರು. ಈ ಕಾಲದಲ್ಲಿ ದಖ್ಖನೀ ಸಾಹಿತ್ಯಕ್ಕಿಂತ ಉರ್ದು ಸಾಹಿತ್ಯಕ್ಕೆ ಹೆಚ್ಚಿನ ಪ್ರಾಧಾನ್ಯ ದೊರೆಯಿತು. ಅದು ದಕ್ಷಿಣಕ್ಕಿಂತ ಉತ್ತರದಲ್ಲಿ ಹೆಚ್ಚು ಉನ್ನತಿ ಪಡೆಯಿತು. ರಾಯಚೂರಿನ ನೂರ್‌ದರ್ಯಾ ವಂಶಕ್ಕೆ ಸಂಬಂಧಪಟ್ಟ ಮೊಹಮದ್ ಖಾದರಿ ಎಂಬಾತ ಅನೇಕ ಧಾರ್ಮಿಕ ಗ್ರಂಥಗಳನ್ನು ಉರ್ದುವಿನಲ್ಲಿ ರಚಿಸಿದ. 18ನೆಯ ಶತಮಾನದ ಆದಿಯಲ್ಲಿ ಉರ್ದು ಗದ್ಯ ಉತ್ತರ ಭಾರತದಲ್ಲಿ ಪ್ರಾರಂಭವಾಯಿತು. 1803ರಲ್ಲಿ ಷರೀಫ್ ಎಂಬಾತ ಪ್ರಥಮ ಬಾರಿಗೆ ಕುರಾನನ್ನು ಉರ್ದುವಿಗೆ ಅನುವಾದಿಸಿದ. ಇದರ ಭಾಷೆ ಸರಳ, ಸುಲಭ. ಹೈದರಾಬಾದ್, ಔರಂಗಾಬಾದ್, ಗುಲ್ಬರ್ಗ ಮೊದಲಾದ ಎಡೆಗಳಲ್ಲಿ ಉರ್ದು ಸಾಹಿತ್ಯಕ ಚಟುವಟಿಕೆಗಳು ತೀವ್ರಗೊಂಡವು. ಹೈದರಾಬಾದಿನ ನಿಜಾಮರ ಕಾಲದಲ್ಲೂ ಉರ್ದುಭಾಷೆಗೆ ರಾಜಾಶ್ರಯ ದೊರೆತು ಉರ್ದು ಸಾಹಿತ್ಯ ಉಚ್ಛ್ರಾಯ ಸ್ಥಿತಿಗೇರಿತು.

18ನೆಯ ಶತಮಾನದ ಉತ್ತರಾರ್ಧದಲ್ಲಿ ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನರು ಉರ್ದು ಸಾಹಿತ್ಯ ಹಾಗೂ ಕಲೆಗಳಿಗೆ ಹೆಚ್ಚಿನ ಪ್ರೋತ್ಸಾಹವನ್ನಿತ್ತರು. ಹೈದರ್‌ಅಲಿ ವಿದ್ಯಾವಂತನಾಗಿರದಿದ್ದರೂ ಇವನ ಮಗ ಟಿಪ್ಪುಸುಲ್ತಾನ್ ಸ್ವತಃ ವಿದ್ವಾಂಸನಾಗಿದ್ದ. ಇವನ ಆಶ್ರಯದಲ್ಲಿ ಅನೇಕ ಪಾರಸಿ ಹಾಗೂ ಉರ್ದು ಕವಿಗಳಿದ್ದರು. ಹೈದರ್‌ಅಲಿಯ ಕಾಲದಲ್ಲಿದ್ದ ಲೇಖಕ ಷಾಮೊಹಮದ್‌ಸದರುದ್ದೀನ್ ಎಂಬಾತ ನೆಲಮಂಗಲದವನು. ಮನ್‌ಲಗನ್, ಮಿರಾತುಜಕರ್, ಮಸ್ಬಹುಲ್ನೂರ್ ಇವನ ಕೃತಿಗಳು. ಮನ್‌ಲಗನ್ ಮಸ್ನಿವಿ ಛಂದಸ್ಸಿನಲ್ಲಿದೆ. ಲಾಲಾ ಮೆಹ್ತಾಬ್‌ರಾಯ್ ಮೈಸೂರು ನಿವಾಸಿ. ಇವನ ಕೃತಿ ಮೆಹ್ತಾಬೆಸುಖುನ್. ಇದರಲ್ಲಿ ಪ್ರೇಮ ಗೀತೆಗಳಿವೆ. ಇದು ಗಜಲ್. ನಜಮ್, ರುಬಾಯತ್, ಖಿತಾತ್ ಮೊದಲಾದವು ಪದ್ಯ ಸಂಕಲನಗಳು. ಖಾದಿಮ್ ಫಕೀರ್, ಷಹಬಾಜ್, ಷೀರಾನಿ, ಷಾಕಿರ್, ಕಮಲ್ ಮೊದಲಾದ ಇತರ ಪ್ರಸಿದ್ಧ ಕವಿಗಳೂ ಈ ಕಾಲದಲ್ಲಿದ್ದರು.

ಟಿಪ್ಪುವಿನ ಮುನ್ಷಿಯಾಗಿದ್ದ ಮೀರ್ ಜೈನುಲ್ ಆಬದೀನ್ ಷೋಸ್ತ್ರೀಯು ಫತಹುಲ್ ಮುಜಾಹಿದೀನ್, ಖುತ್ಬಾತೆ ಜುಮಾ, ಮೋಬಿದುಲ್ ಉಜಾಹಿದೀನ್ ಎಂಬ ಕೃತಿಗಳನ್ನು ಬರೆದಿದ್ದಾನೆ. ಫತಹುಲ್ ಮುಜಾಹಿದೀನ್ ಎಂಬ ಗ್ರಂಥ' ಗದ್ಯದಲ್ಲಿದೆ. ಇದರಲ್ಲಿ ಟಿಪ್ಪುವಿನ ರಾಜ್ಯ ವ್ಯವಸ್ಥೆಯನ್ನು ಹೇಳಲಾಗಿದೆ. ಹೈದರ್ ನಾಮಾ, ಬಹದ್ದೂರ್ ನಾಮಾ, ಫತೆ ನಾಮಾ ಎಂಬ ಗ್ರಂಥ'ಗಳು ಇದೇ ಕಾಲದಲ್ಲಿ ರಚನೆಗೊಂಡ ಐತಿಹಾಸಿಕ ಕೃತಿಗಳು. ಹುಸೇನ್ ಅಲಿ ಕಿರ್ಮಾನಿ ಈ ಕಾಲದ ಶ್ರೇಷ್ಠ ಚರಿತ್ರೆಕಾರ. ನಿಷಾನೆ ಹೈದರಿ ಎಂಬ ಪಾರಸಿ ಕೃತಿ ಉರ್ದುವಿಗೆ ತರ್ಜುಮೆಯಾಗಿದೆ. ಇದು ಐತಿಹಾಸಿಕ ವಿಷಯಗಳಿಂದ ಕೂಡಿದ ಗ್ರಂಥ. ತರಬ್ ಎಂಬಾತ ಬರೆದ ಫತೇನಾಮಾ ಎಂಬ ಕೃತಿಯಲ್ಲಿ ಮರಾಠರಿಗೂ ಟಿಪ್ಪುವಿಗೂ ನಡೆದ ಯುದ್ಧದ ಸಾಹಸ ಕಾರ್ಯಗಳನ್ನು ವರ್ಣಿಸಲಾಗಿದೆ. ಹಸನ್ ಅಲಿ ಇಜ್ಜತ್‌ನ ಮಫರುಲ್ಲ ಕಲೂಬ್, ಗಂಜಾಮಿನ ಷೇರ್‌ಮಿಯ್ಯಾ ಫಜಲ್‌ನ ಚಹಾರ್ ಕುರ್ಸಿ ತರೀಕತ್, ಅಬ್ದುಲ್ ಹಕ್‌ನ ಚೋಟಿ ಚಹಾರ್ ಕುರ್ಸಿ ಎಂಬ ಕೃತಿಗಳು ಪ್ರಸಿದ್ಧವಿದೆ. ಷಹರ್ ಬಾನು ಷಾಕಿರಾ 'ಬಯಾಜ್ ಷಾಕಿರಾ' ರಚಿಸಿದ ಮೈಸೂರಿನ ಮೊದಲ ಮಹಿಳೆ.

ಹೈದರ್ ಅಲಿ ಮತ್ತು ಟಿಪ್ಪುವಿನ ಕಾಲದಲ್ಲಿ ಕನ್ನಡ, ಮರಾಠಿ ಪಾರಸಿ ಭಾಷೆಗಳಲ್ಲಿ ಲೆಕ್ಕಪತ್ರಗಳನ್ನು ಇಡುತ್ತಿದ್ದರು. ಕನ್ನಡ ಗ್ರಂಥಗಳಲ್ಲಿ ನಿತ್ಯವ್ಯವಹಾರದ ಭಾಷೆಯಲ್ಲಿ ಅನೇಕ ಉರ್ದು ಪಾರಸಿ ಪದಗಳು ತಲೆದೋರಿದವು. ಈ ಭಾಷೆ ಚಂದ್ರಸಾಗರವರ್ಣಿ (ಸು.1810) ಎಂಬ ಜೈನಕವಿಗೆ ಮುಲ್ಲಾಶಾಸ್ತ್ರವನ್ನು ಬರೆಯಲು ಪ್ರೇರಣೆಯನ್ನಿತ್ತಿತು. ಮುಲ್ಲಾಶಾಸ್ತ್ರ ಭಾಮಿನಿ ಷಟ್ಪದಿಯಲ್ಲಿದೆ.

ಮೈಸೂರು ಒಡೆಯರ ಕಾಲದಲ್ಲಿ ಉರ್ದು ಸಾಹಿತ್ಯಕ್ಕೆ ಪ್ರೋತ್ಸಾಹ ದೊರಕಿತು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಸನ್ನದುಗಳಲ್ಲಿ ಪಾರಸಿ ಮತ್ತು ಉರ್ದು ಶಬ್ದಗಳು ಹೇರಳವಾಗಿವೆ. ಬೆಂಗಳೂರು, ಮೈಸೂರು, ಕೋಲಾರ, ಬಳ್ಳಾರಿ, ರಾಯಚೂರು ಜಿಲ್ಲೆಗಳಲ್ಲಿ ಅನೇಕ ಉರ್ದು ಕವಿಗಳು, ಕವಯಿತ್ರಿಯರು ಆಗಿ ಹೋಗಿದ್ದಾರೆ. ಕೋಲಾರದ ಅಸಿಮ್ (ಸು.1831) ಪ್ರಸಿದ್ಧ ಕವಿಯಾಗಿದ್ದ. ಷಾ ಅಬ್ದುಲ್ ಹೈ (ಸು.1884) ಪ್ರವಾದಿ ಪೈಗಂಬರರನ್ನು ಕುರಿತು ಫಿನಾನಸ್‌ಸಿಯರ್ ಎಂಬ ಗ್ರಂಥ ಬರೆದಿದ್ದಾನೆ. ಇದಲ್ಲದೆ ಇವನು ನೂರಾರು ಪದ್ಯಗದ್ಯ ಕೃತಿಗಳನ್ನು ರಚಿಸಿದ್ದಾನೆ. ಹೈದರ್, ಟಿಪ್ಪುವಿನ ಬಗ್ಗೆ ಮಹಮೂದ್‌ಖಾನ್ ಹನ್ನೆರಡು ಐತಿಹಾಸಿಕ ಕೃತಿಗಳನ್ನು ಬರೆದಿದ್ದಾನೆ.

ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ರಾಜಾಜ್ಞೆಗಳನ್ನು ಉರ್ದು ಹಾಗೂ ಕನ್ನಡದಲ್ಲಿ ಹೊರಡಿಸುತ್ತಿದ್ದರು. ಕೃಷ್ಣರಾಜ ಒಡೆಯರು ಕೆಲವೊಮ್ಮೆ ಉರ್ದುವಿನಲ್ಲೂ ಭಾಷಣ ಮಾಡುತ್ತಿದ್ದರಂತೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಉರ್ದು ಹಾಗೂ ಪರ್ಶಿಯನ್ ವಿಭಾಗಗಳನ್ನು ತೆರೆದ ಕೀರ್ತಿ ಇವರಿಗೆ ಸಲ್ಲುತ್ತದೆ.

ಕರ್ನಾಟಕದ ಹಳೆಯ ಮೈಸೂರು ವಿಭಾಗದಲ್ಲಿ ಉರ್ದು ಸಾಹಿತ್ಯ ಸೇವೆಗೈದ ಮೊಹಮದ್ ಸಯೀದ ಮೆಹಕಲಿ, ಮೊಹಮದ್ ಮಖದೂಮ್ ಬಿಜಾಪುರಿ, ಸಯ್ಯದ್ ಮೊಹಮದ್ ಮಾರೂಫ್, ಅಹಮದ್ ಖಾನ್ ಷೀರಾನಿ, ಮೊಹಮದ್ ಇಸಹಾಕ್ ಬಿಜಾಪುರಿ, ಮೀರ್ ಹುಸೇನ್ ಅಲಿ ಕಿರಮಾನಿ, ಕಾಜಿ ಗುಲಾಮ ಅಹಮದ್, ಖೈರುಲ್ಲಾಷಾ ಕಾದರಿ, ಹುಸೇನ್ ಬಿನ್ ಖಾದಿರ್, ಸೈಯದ್ ಆರಿಫ್ ಷಾ ಕಾದರಿ, ಅಬ್ದಲ್ ಹೈವಾಜ್, ಮೊಹಮದ್ ಕಾಸಿಮ್ ಷಾಗೋಗಮ್, ಮೊಹಮದ್ ಹುಸೇನ್ ಅಲಿ ಸುಲ್ತಾನ ಬೆಂಕಿನವಾಬ್, ನಸೀಮ್,ಮುನ್ಷಿ ಕಲಂದರ ಹುಸೇನ್, ಮೊಹಮದ್ ಅಬ್ದುಲ್ ರಹಮಾನ್ ದಿಲ್, ಮೊಹಮದ್ ಬಾಕರ್

ಡೆಲ್ವಿ, ಆಯಿಷಾ ಬೇಗಂ, ರಕಿಯಾ ಬೇಗಂ ಮೊದಲಾದ ಸಾಹಿತಿಗಳನ್ನು ಇಲ್ಲಿ ಸ್ಮರಿಸಬಹುದು.

1956ರಲ್ಲಿ ಮೈಸೂರು ರಾಜ್ಯದ ಪುನರ್ ವ್ಯವಸ್ಥೆಯಾದಾಗ ಹಳೆಯ ಹೈದರಾಬಾದ್ ಸಂಸ್ಥಾನದಿಂದ ಕರ್ನಾಟಕಕ್ಕೆ ಬಂದು ಸೇರಿದ ರಾಯಚೂರು, ಗುಲ್ಬರ್ಗ, ಬೀದರ್ ಜಿಲ್ಲೆಗಳ ಸರ್ಕಾರಿ ಕಛೇರಿಗಳಲ್ಲಿ ಆರಂಭದಲ್ಲಿ ಎಲ್ಲ ಕೆಲಸ ಕಾರ್ಯಗಳೂ ಆಡಳಿತವೂ ಉರ್ದುವಿನಲ್ಲೇ ನಡೆಯುತ್ತಿತ್ತು. ಉರ್ದು ಭಾಷೆಯೇ ಶಿಕ್ಷಣ ಮಾಧ್ಯಮವಾಗಿತ್ತು. ಸಿದ್ದಯ್ಯ ಪುರಾಣಿಕ, ಸೇತುಮಾಧವರಾವ್ ಪಗಡಿ, ಜಗನ್ನಾಥರಾವ್ ಚಂಡ್ರಿಕಿ ಮೊದಲಾದವರು ಉರ್ದುವನ್ನು ಪ್ರಧಾನವಾಗಿ ಕಲಿತಿದ್ದರು. ರಾಯಚೂರಿನ ನ್ಯಾಯಾಧೀಶರಾಗಿದ್ದ ರಾಘವೇಂದ್ರ ರಾವ್ (1894-1974) ಅವರು ಮಾಡಿದ ಉರ್ದು ಸೇವೆಗಾಗಿ ಅವರಿಗೆ ಖಯಾಮ ಐ ಆಂಧ್ರಾ ಎಂಬ ಬಿರುದು ಬಂದಿತ್ತು.

ಕರ್ನಾಟಕದಲ್ಲಿ ಈಗ ಉರ್ದು ಭಾಷೆಯ ಬೆಳವಣಿಗೆ ಹಾಗೂ ಅಭಿವೃದ್ಧಿ ಸಾಕಷ್ಟಾಗಿದ್ದು ಸಾಹಿತ್ಯ, ವೃತ್ತಪತ್ರಿಕೆ, ಭಾಷಾಂತರ, ಕರ್ನಾಟಕ ಉರ್ದು ಅಕಾಡೆಮಿಯ ಸ್ಥಾಪನೆ, ನಿಘಂಟುಗಳ ಸಂಪಾದನೆ ಮುಂತಾದ ಕಾರ್ಯಗಳ ಮೂಲಕ ಕನ್ನಡದೊಡನೆ ಉರ್ದು ಹಿತಮಿತವಾಗಿ ಬೆರೆಯುತ್ತ ನಡೆದಿದೆ. ಇಬ್ರಾಹಿಂ ಜಲೀಸ್ ಅವರ ಭೂಕಾ ಬಂಗಾಲ, ಜರದ್ ಚೆಹರಾ ಎಂಬ ಉರ್ದು ಗ್ರಂಥಗಳು, ಚಿಂಚೋಳಿಯ ಮುಜ್ತಾಬಾ ಹುಸೇನರ ಕಿಸ್ಸಾ ಮುಖ್ತಸಿರ್, ಆಖಿರ್‌ಕಾರ್ (1997) 'ಮೇರಾ ಕಾಲಂ' (1999) ಎಂಬ ಹಾಸ್ಯ ಪ್ರಬಂಧಗಳು, ಅಬ್ದುಲ್ ಕಾದಿರ್ ಅದೀಬ್‌ರ ನಕ್ಕಾರ ಖಾನೆ ಮೆ ತೋತೆ ಎಂಬ ವಿಡಂಬನಾತ್ಮಕ ಸಂಕಲನ, ಹುಬ್ಬಳ್ಳಿಯ ಅನಿಲ್ ಠಕ್ಕರ್ ಅವರ ಮೋಸಮಿ ಪರಿಂದೆ (1998) ಕಥಾಸಂಕಲನ, ಓಸ್ ಕಿ ಝಿಲ್ (2002) ಎಂಬ ಕಾದಂಬರಿ ಕರ್ನಾಟಕದಲ್ಲಿ ಉರ್ದು ಸಾಹಿತ್ಯಕ್ಕೆ ಮೆರುಗನ್ನು ನೀಡಿವೆ.

ಸುಲೇಮಾನ್ ಖತೀಬ್, ಮಹಮೂದ್ ಅಯಾಜ್, ಹಮೀದ್ ಅಲ್ಮಾಸ್, ಮುದ್ದಣ್ಣ ಮಂಜರ್, ಷಾ ಅಬ್‌ಲ್ ಹುಸೇನ್ ಅದೀಬ್, ನಸೀಮ ಮೈಸೂರಿ, ನಫೀಸ್ ಬೆಂಗಳೂರಿ, ಹಜರತ್ ಫೋತ್, ಹುಸನಾ ಸರ್ವರ್, ಜಮೀರ ಆಕಿಲ್‌ಷಾಹಿ, ಷಾಹಿದ್ ಮೈಸೂರಿ, ಜೋಹರ್ ಮೈಸೂರಿ, ಗೋಹರ್ ತರಿಕೇರವಿ, ರಾಹಿಲ್, ರಫಲಾಕ್ ಅಫಸರ್, ಸಲೀಮ ತಮನ್ನಾಯಿ ಮೊದಲಾದ ಸಾಹಿತಿಗಳು ತಮ್ಮ ಸಾಹಿತ್ಯ ಕೃತಿಗಳಿಂದ ಉರ್ದು ಬೆಳೆಯನ್ನು ಇನ್ನಷ್ಟು ಹೆಚ್ಚಿಸಿದ್ದಾರೆ.

ಉರ್ದು ಭಾಷೆಯ ವಿದ್ವತ್ತಿನ ಕ್ಷೇತ್ರದಲ್ಲಿ ವಹಾಬ್ ಅಂದಲೀಬ್, ಖಾಲಿದ್ ಸಯೀದ್, ತಯ್ಯಬ್ ಅನ್ಸಾರಿ, ಮಹಮದ್ ಹಾಷಿಮ್ ಅಲಿ, ಮಸೂದ ಸಿರಾಜ್, ಹೈದರ್‌ಅಲಿ ಕರಮಡಿ, ಇಕ್ಬಾಲ್ ಹಾಷಿಮಿ, ಖಲೀಲ್ ಮಾಮೂನ್, ಅಬ್ದುಲ್ ಅಹಮದ್ ಮೊದಲಾದವರು ಗಮನಾರ್ಹ ಕೆಲಸಮಾಡಿದ್ದಾರೆ. ಉರ್ದು ಗದ್ಯ ಸಾಹಿತ್ಯಕ್ಕೆ ಕರ್ನಾಟಕದ ಮಹಿಳೆಯರಲ್ಲಿ ಹಬೀಬುನ್ನಿಸಾ, ಅಮೀನಾಖಾನ್, ಫಹಮೀದಾ ಬೇಗಂ, ಜಮೀಲಾ ಬೇಗಂ, ಜಹಾನ್ ಅರಾಬೇಗಂ, ನೀಲೋಫರ ಸಮೀನಾ, ಸುಹಾನಾ ಷಬ್ನಮ್, ಮಹಮೂದಾ ಖಾನಂ, ಮಾಹೆಜಬೀನ್, ವಹೀದಾ ಖಾತೂನ್, ಮುಮತಾಜ್ ಜರೀನಾ ಮೊದಲಾದವರು ವಿಶೇಷ ಸೇವೆ ಸಲ್ಲಿಸಿದ್ದಾರೆ.

ವೃತ್ತಪತ್ರಿಕಾ ಕ್ಷೇತ್ರದಲ್ಲಿಯೂ ಉರ್ದು ಮುಂಚೂಣಿಯಲ್ಲಿದೆ. ಕರ್ನಾಟಕದ ಮಹಬೂಬ್‌ಹುಸೇನ್ ಜಿಗರ್, ಅಬುಲ್ ಹಕ್ ತಹರೀನ್, ಹಾಮಿದ್ ಅಕಮಲ್, ಉಸ್ಮಾನ್ ಸಹರಾಯಿ, ಹಕೀಮ ಲೇಕ, ಅಹಮದ್ ನೇಮಾನಿ, ಮಹಮೂದ್ ಅಯಾಜ್‌ಜಿಯಾಮೀರ್, ಮಕ್ದೂಮ್ ಅಲಿ ಖಾನ್, ಷಫಿ ಅಹಮದ್ ಷರೀಫ್, ಇಸ್ಮಾಯಿಲ್ ತಾಬುಷ್, ಅಬ್ದುಲ್‌ಹಾದಿ, ರಫ ಅತ್ ಮೊದಲಾದವರು ಪತ್ರಿಕಾ ಸಂಪಾದಕರುಗಳಾಗಿ ವೃತ್ತಪತ್ರಿಕಾ ವ್ಯವಸಾಯದಲ್ಲಿ ಅಗ್ರಗಣ್ಯರಾಗಿದ್ದಾರೆ.

ಕಾಸಿಮುಲ್ ಅಖ್ತಾರ್, ಮಹಾಫಿಜ್, ಷಮಾಯ ಸುಖನ್, ಷಾಹ್‌ರಾಹೆ ತರಕ್ಕಿ, ಮೈಸೂರ್ ಅಖ್ಬಾರ್, ಸಾಲಾರ್ (1964-2004), ಪಾಸ್ಬಾನ್, ಸಿಯಾಸತ್, ನಷೇಮನ್, ತರಜುಮಾನ್ ಜುನೂಬ್, ರಹನುಮಾಯೆ ಕರ್ನಾಟಕ ಮೊದಲಾದ ಪತ್ರಿಕೆಗಳು ಹೊರಬಂದವು. ಸಾಲಾರ್ ಪತ್ರಿಕೆ ಈಗಲೂ ಭಾರತಾದ್ಯಂತ ಪ್ರಸಾರದಲ್ಲಿದೆ.

ಉತ್ತಮ ಕೃತಿಗಳನ್ನು ಉರ್ದುವಿನಿಂದ ಕನ್ನಡಕ್ಕೆ, ಕನ್ನಡದಿಂದ ಉರ್ದುವಿಗೆ ಅನುವಾದಿಸುವ ಕಾರ್ಯ ಬಹಳ ಹಿಂದಿನಿಂದ ಸಾಗಿಬಂದಿದೆ. ರಾಜೇಂದ್ರಸಿಂಗ್ ಅವರ ಏಕ್ ಚಾದರ್ ಮೈಲೀಸಿ ಎಂಬ ಕಾದಂಬರಿಯನ್ನು ಲಿಂಗಸೂರ ವಿಠಲರಾಯರು ಅನುವಾದಿಸಿದ್ದಾರೆ. ರಫಿಯಾ ಮಂಜೂರುಲ್ ಅಮೀನರ ಆಲಮ್ ಪನಾಹ್ ಎಂಬ ಕಾದಂಬರಿಯನ್ನು (1987) ಶ್ಯಾಮಲಾ ಮಾಧವರು ಕನ್ನಡಕ್ಕೆ ಅನುವಾದಿಸಿದ್ದಾರೆ (1994). ಈ ಕೃತಿ ಫರಮಾನ್ ಎಂಬ ಹೆಸರಿನಲ್ಲಿ ಧಾರಾವಾಹಿಯಾಗಿ ದೂರದರ್ಶನದಲ್ಲೂ ಪ್ರಸಾರವಾಗಿದೆ (1992). ಇದಲ್ಲದೆ ರಜಾವುಜಬ್ಬಾರ್, ಫಿಕರ ತೌನ್‌ಸವಿ, ಕೇವಲ್ ಧೀರ್, ಮಸರೂರ್ ಜಹಾನ್, ಅತೀಯಾ ಪರವೀನ್, ನಯೀಮಾಜಾಫರಿ, ಬಾನು ಸರತಾಜ್, ಷಾಕಿರ್ ಕರೀಮಿ, ಎಂ.ಎಚ್. ಖಾನ್, ಬಲವಂತ್ ಸಿಂಗ್, ಜಫರ್ ಅಹಮದ್ ನಿಜಾಮಿ, ಅಜೀಜ್ ಕೈಸಿ, ಇಫತ್ತ ಮೋಹಾನಿ, ಬಷೇಷರ ಪ್ರದೀಪ್, ಜಗದೀಶ್ ಬಿಮಲ್, ಮುಜ್ತಬಾ ಹುಸೇನ್, ಮೀಮ್‌ಕಾಫ್ ಮೆಹ್ತಾಬ್, ರಫೀಯಾ ಮಂಜೂರುಲ್ಲ ಅಮೀನ್, ಅನ್ವರ್ ಇನಾಯತ್‌ಉಲ್ಲಾ, ಅನ್ವರ್‌ನುಜಹತ್, ಅನಿಲ್ ಠಕ್ಕರ್ ಮೊದಲಾದವರ ಉರ್ದುಕಥೆಗಳನ್ನು ಮಾಧವರಾವ್ ಮುಧೋಳ್ ಅವರು ಕನ್ನಡಕ್ಕೆ ಅನುವಾದಿಸಿದ್ದಾರೆ (1962-2004). ಸಂಯುಕ್ತ ಕರ್ನಾಟಕ, ಪ್ರಜಾಮತ, ಪ್ರಪಂಚ, ಕಸ್ತೂರಿ, ಕರ್ಮವೀರ, ಸುಧಾ, ಮಯೂರ, ಸಂಕೇತ, ಪುಸ್ತಕ ಪ್ರಪಂಚ, ತರಂಗ ಮೊದಲಾದ ವಿವಿಧ ಪತ್ರಿಕೆಗಳಲ್ಲಿ ಈ ಕಥೆಗಳು ಪ್ರಕಟವಾಗಿವೆ. ಮೌಲಾನಾ ಮೊಹಮ್ಮದ್ ಸಿರಾಜುಲ್ ಹಸನ್‌ರ ಮಾರ್ಗದರ್ಶನದಲ್ಲಿ ಕರ್ನಾಟಕ ಇಸ್ಲಾಮಿ ಸಾಹಿತ್ಯ ಪ್ರಕಾಶನ ಅನೇಕ ಉರ್ದು ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದೆ.

ಕನ್ನಡದಿಂದ ಉರ್ದು ಭಾಷೆಗೂ ಹಲವು ಪುಸ್ತಕಗಳು ಭಾಷಾಂತರಗೊಂಡಿವೆ. ಎಸ್.ಎಲ್.ಭೈರಪ್ಪನವರ ವಂಶವೃಕ್ಷ ಕಾದಂಬರಿಯನ್ನು ಸಯ್ಯದ್ ಷಹಾಬುದ್ದೀನ್ ರೋಷನ್ (1992), ಯು.ಆರ್. ಅನಂತಮೂರ್ತಿಯವರ ಸಂಸ್ಕಾರ ಕಾದಂಬರಿಯನ್ನು ಷಫಿ ಅಹಮ್ಮದ್ ಷರೀಫ್ (1993), ಸರ್ವಜ್ಞನ ನೂರು ವಚನಗಳನ್ನು ಅಕಮಲ್ ಅಲ್ದೂರಿ (2000), ಶಿವರಾಮ ಕಾರಂತರ ಚೋಮನದುಡಿ ಕಾದಂಬರಿಯನ್ನು ಮಾಹಿರ್ ಮನ್ಸೂರ್ (2003) ಉರ್ದುವಿಗೆ ಅನುವಾದಿಸಿದ್ದಾರೆ.

ಕರ್ನಾಟಕದಲ್ಲಿ ಉರ್ದು ಸೇವೆ ಮತ್ತು ಕನ್ನಡ ಉರ್ದು ಮೈತ್ರಿ ಬೆಳೆಸಲು ಉರ್ದು ಅಕಾಡೆಮಿ ಬೆಂಗಳೂರಿನಲ್ಲಿ ಸ್ಥಾಪನೆಯಾಗಿ (1977) ಉರ್ದು ಸಾಹಿತ್ಯವನ್ನು ಬೆಳೆಸುವುದರಲ್ಲಿ ನೆರವಾಗಿದೆ. ಅನೇಕ ಕವಿಗಳಿಗೆ, ಗದ್ಯ ಲೇಖಕರಿಗೆ, ಭಾಷಾಂತರಕಾರರಿಗೆ ಪ್ರೋತ್ಸಾಹವಿತ್ತಿದೆ. ಉರ್ದು ಅಕಾಡೆಮಿಯ ವತಿಯಿಂದ ನಡೆದಿರುವ ಉರ್ದು ಕನ್ನಡ ಹಾಗೂ ಕನ್ನಡ ಉರ್ದು ನಿಘಂಟು ಒಂದು ಮಹತ್ತ್ವದ ಕೆಲಸವಾಗಿದೆ. ಉರ್ದು ಕನ್ನಡ ನಿಘಂಟು 1986ರಲ್ಲಿ ಪ್ರಕಟವಾಯಿತು. 1994ರಲ್ಲಿ ಪರಿಷ್ಕಾರ ಹಾಗೂ ಪುನರ್ ಮುದ್ರಣಗೊಂಡಿದೆ. ಈ ನಿಘಂಟಿನ ರಚನೆಯಲ್ಲಿ ಮೌಲಾನಾ ಅಬ್ದುಲ್ ಗಫಾರ್ (ಸಂಪಾದಕ), ಇಬ್ರಾಹಿಂ ಸಯೀದ್, ಎಂ.ಸಾದುಲ್ಲಾ ಅವರು ದುಡಿದಿದ್ದಾರೆ.

ಕನ್ನಡ - ಉರ್ದು ನಿಘಂಟಿನ ಪ್ರಕಟಣೆಯ (1994) ಕೆಲಸ ಅತ್ಯಂತ ಮಹತ್ತ್ವದ್ದು. ಇದು ಭಾರತದ ಇತಿಹಾಸದಲ್ಲೇ ಪ್ರಪ್ರಥಮವಾಗಿ ಸಿದ್ಧವಾದಂಥದ್ದು. ಇದರ ರಚನೆಯಲ್ಲಿ ನಜಿಮುಸ್ಸಾಕಿಬಂ ಷಹನಾ (ಸಂಪಾದಕ), ಮಾಧವರಾವ್ ಮುಧೋಳ್ (ಸಹಸಂಪಾದಕ), ವೆಂಕಟರಾವ್ ಗಂಗಾವತಿ (ಸಹಾಯಕ ಸಂಪಾದಕ) ದುಡಿದ್ದಾರೆ. ಈ ನಿಘಂಟು 1997ರಲ್ಲಿ ಪುನರ್ ಮುದ್ರಣಗೊಂಡಿದೆ (ನೋಡಿ: ಅಕಾಡೆಮಿಗಳು). (ಎಂ.ಎಂಯು.)

**ತಮಿಳು :** ಕನ್ನಡದ ಸೋದರ ಭಾಷೆಯಾದ ತಮಿಳು ಕನ್ನಡಕ್ಕಿಂತ ಪ್ರಾಚೀನ ಇತಿಹಾಸವನ್ನು ಹೊಂದಿದೆ. ಸಾಹಿತ್ಯಕವಾಗಿ ತೆಲುಗಿನೊಂದಿಗೆ ಹೆಚ್ಚು ಬಾಂಧವ್ಯವನ್ನು ಹೊಂದಿರುವ ಕನ್ನಡ ಭಾಷಾವಿಷಯದಲ್ಲಿ ತಮಿಳಿಗೆ ಸಮೀಪವಾಗಿದೆ. ಆದರೆ ಕನ್ನಡ ಸಾಹಿತ್ಯ ಚರಿತ್ರೆಯನ್ನು ತಮಿಳು ಸಾಹಿತ್ಯದೊಂದಿಗೆ ತೌಲನಿಕವಾಗಿ ಪರಿಶೀಲಿಸಿದಾಗ ಈ ಎರಡು ಸೋದರ

ಭಾಷೆಗಳಿಗಿರುವ ಸಂಬಂಧ ಬಾಂಧವ್ಯಗಳು ಸಾಹಿತ್ಯಕವಾಗಿಯೂ ಬೆಳೆದುಬಂದಿವೆ ಎಂಬ ವಿಷಯ ವ್ಯಕ್ತವಾಗುತ್ತದೆ.

ಹತ್ತನೆಯ ಶತಮಾನಕ್ಕೆ ಮುಂಚೆ ಕನ್ನಡ ಮತ್ತು ತಮಿಳು ಭಾಷಾ ಸಾಹಿತ್ಯಗಳ ನಡುವೆ ಇದ್ದ ಸಂಬಂಧವನ್ನು ನಿರೂಪಿಸುವ ಮಾಹಿತಿಗಳು ಹೆಚ್ಚಾಗಿ ದೊರಕುವುದಿಲ್ಲ. ಪೂರ್ವದ ಹಳಗನ್ನಡದ ಶಾಸನಗಳ ಭಾಷೆ ತಮಿಳು ಶಾಸನಗಳ ಭಾಷೆಯನ್ನು ಹೋಲುತ್ತದೆ ಎಂದು ಹೇಳಬಹುದು. ಹಲ್ಮಿಡಿ ಶಾಸನದ ಕಾಲಕ್ಕೇ ತಮಿಳಿನಲ್ಲಿ ಸಮೃದ್ಧವಾದ ಸಾಹಿತ್ಯವಿತ್ತು. 4-5ನೆಯ ಶತಮಾನಗಳಲ್ಲಿ ಪ್ರಾಚೀನ ತಮಿಳು ಗೀತೆಗಳನ್ನು ಸಂಗ್ರಹಿಸಿ ಕ್ರಮಬದ್ಧವಾದ ಸಂಕಲನಗಳಾಗಿ ವಿಂಗಡಿಸುವ ಕಾರ್ಯ ನಡೆಯಿತು. ಸುಮಾರು ಇದೇ ಕಾಲದಲ್ಲಿ ತೊಲ್‌ಕಾಪ್ಪಿಯರ್ ರಚಿಸಿದ ತೊಲ್‌ಕಾಪ್ಪಿಯಮ್ ಎಂಬ ಲಕ್ಷಣ ಗ್ರಂಥ ಬೆಳಕು ಕಂಡಿತು. ಈ ಕಾಲದಲ್ಲಿ ಕನ್ನಡ ಸಾಹಿತ್ಯದ ಸ್ಥಿತಿಗತಿಗಳು ಹೇಗಿದ್ದವು ಎಂಬುದನ್ನು ತಿಳಿಯಲು ಸರಿಯಾದ ಆಧಾರಗಳಿಲ್ಲ.

ಪ್ರಾಚೀನ ತಮಿಳು ಗ್ರಂಥಗಳಲ್ಲಿ ಅತ್ಯಂತ ಪ್ರಸಿದ್ಧವಾದುದು ತಿರುಕ್ಕುರಳ್. ಇದನ್ನು ಬರೆದವನು ತಿರುವಳ್ಳುವರ್. ಇವನ ಕಾಲ ಸು.200. ತಿರುಕ್ಕುರಳ್‌ನಲ್ಲಿ ವೆಣ್ಬಾ ಛಂದಸ್ಸಿಗೆ ಸೇರಿದ 1330 ಗೀತೆಗಳಿವೆ. ಈ ಕಾವ್ಯ ಕನ್ನಡವೂ ಸೇರಿದಂತೆ ಪ್ರಪಂಚದ ಅನೇಕ ಭಾಷೆಗಳಿಗೆ ಭಾಷಾಂತರವಾಗಿದೆ. ಆರ್.ನರಸಿಂಹಾಚಾರ್ಯ, ಬಿ.ಎಂ.ಶ್ರೀ., ಎಲ್.ಗುಂಡಪ್ಪ ಮೊದಲಾದವರು ತಿರುಕ್ಕುರಳ್‌ಅನ್ನು ಕನ್ನಡಕ್ಕೆ ಅನುವಾದ ಮಾಡಿದವರಲ್ಲಿ ಕೆಲವರು.

ಸು.2ನೆಯ ಶತಮಾನದಲ್ಲಿ ರಚಿತವಾದ ಶಿಲಪ್ಪದಿಕಾರಂ ತಮಿಳಿನ ಪಂಚಮಹಾಕಾವ್ಯಗಳಲ್ಲಿ ಒಂದು. ಇದರಲ್ಲಿ ನೀಲಗಿರಿಯ ಕನ್ನಡತಿಯರ ಕುಣಿತದ ಹಾಡಿನ ಪ್ರಸ್ತಾಪ ಬರುತ್ತದೆ. ಇದೇ ಕಾಲದ ಪೆರಿಂದೇವನಾರ್ ವೆಣ್ಬಾ ಛಂದಸ್ಸಿನಲ್ಲಿ ಭಾರತವನ್ನು ಬರೆದಿದ್ದಾನೆ. ಪಂಪ ಈ ತಮಿಳು ಭಾರತವನ್ನು ನೋಡಿರಬಹುದು.

7ನೆಯ ಶತಮಾನದಿಂದ ಸುಮಾರು ಎರಡು ಶತಮಾನಗಳ ಕಾಲ ತಮಿಳಿನಲ್ಲಿ ಭಕ್ತಿ ಪಂಥದ ಸಾಹಿತ್ಯ ಬೆಳೆಯಿತು. ನಾಯನ್ಮಾರರು ಶೈವಪಂಥಕ್ಕೂ ಆಳ್ವಾರರು ವೈಷ್ಣವ ಪಂಥಕ್ಕೂ ಸೇರಿದವರು. ತೇವಾರಮ್ ಎಂಬ ಹೆಸರಿನ ಶೈವಗೀತೆಗಳೂ ದಿವ್ಯಪ್ರಬಂಧಗಳೆಂದು ಹೆಸರು ಪಡೆದ ವೈಷ್ಣವ ಗೀತೆಗಳೂ ದಕ್ಷಿಣ ದೇಶದ ಅನೇಕ ಭಕ್ತಿಕಾವ್ಯಗಳ ಮೇಲೆ ಪ್ರಭಾವ ಬೀರಿವೆ. ನಂಬಿ ಆಂಡಾರ್ ನಂಬಿ ಎಂಬುವನು ಶೈವ ಗೀತೆಗಳನ್ನೂ ನಾದಮುನಿ ಎಂಬುವನು ವೈಷ್ಣವ ಗೀತೆಗಳನ್ನೂ ಸಂಗ್ರಹಿಸಿ ಸಂಕಲನ ಮಾಡಿದ್ದಾನೆ.

ತಮಿಳಿನಲ್ಲಿ ಬೌದ್ಧ ಜೈನ ಸಾಹಿತ್ಯಗಳು, ಆಮೇಲೆ ಶೈವ ವೈಷ್ಣವ ಸಾಹಿತ್ಯಗಳು ಬೆಳೆಯುತ್ತಿದ್ದ ಕಾಲದಲ್ಲಿ ಕನ್ನಡ ಸಾಹಿತ್ಯದ ಸ್ಥಿತಿಯನ್ನು ಸರಿಯಾಗಿ ನಿರ್ಧರಿಸುವ ಆಧಾರಗಳು ಕಡಿಮೆ. ಆದರೆ ಆ ಕಾಲದ ಶಾಸನಗಳ ಅಧ್ಯಯನದಿಂದ ತಮಿಳಿಗೂ ಇತರ ದ್ರಾವಿಡ ಭಾಷೆಗಳಿಗೂ ಸಮಾನವಾದ ಛಂದಸ್ಸುಗಳು ಕನ್ನಡದಲ್ಲಿ ಪ್ರಚಲಿತವಾಗಿದ್ದುವೆಂದು ಹೇಳಬಹುದು. ತಮಿಳಿನ ಕುಱಳ್, ವೆಣ್ಬಾ ಛಂದಸ್ಸುಗಳು ಕನ್ನಡದ ಏಳೆ, ತ್ರಿಪದಿ ಮುಂತಾದ ದೇಸೀ ಛಂದಸ್ಸುಗಳನ್ನು ಹೋಲುತ್ತವೆ.

10ನೆಯ ಶತಮಾನಕ್ಕೆ ಮುಂಚೆ ಗುಣಗಾಂಕಿಯಂ ಎಂಬ ಕನ್ನಡ ಲಕ್ಷಣ ಗ್ರಂಥ ತಮಿಳಿನ ಯಾಪ್ಪರುಂಗಲಮ್ ಎಂಬ ಛಂದೋಗ್ರಂಥದ ಆಧಾರ ಗ್ರಂಥಗಳಲ್ಲಿ ಒಂದಾಗಿತ್ತು ಎಂಬುದು ಗಮನಾರ್ಹ ಸಂಗತಿ. ಕನ್ನಡದ ಶಿವಶರಣರ ಮೇಲೆ ನಾಯನ್ಮಾರರ ಪ್ರಭಾವವಿತ್ತು ಎಂಬುದರಲ್ಲಿ ಸಂದೇಹವಿಲ್ಲ. 11ನೆಯ ಶತಮಾನದ ಕೊನೆಯ ವೇಳೆಗೆ ತಮಿಳುನಾಡಿನ ಶೈವಧರ್ಮ ಕನ್ನಡನಾಡಿಗೆ ಹರಡತೊಡಗಿತು. ಕನ್ನಡ ನಾಡಿನಲ್ಲಿ ಅದುವರೆಗೂ ಇದ್ದ ಜೈನಧರ್ಮಕ್ಕೆ ಶೈವರಾದ ಚೋಳರಿಂದ ರಾಜಕೀಯ ಆಘಾತಗಳೊಂದಿಗೆ ಧಾರ್ಮಿಕವಾದ ಒತ್ತಡಗಳೂ ಹೆಚ್ಚಿದುವು. ಚೋಳರ ನಾಡಿನಿಂದ ರಾಮಾನುಜಮತದ ಭಕ್ತಿರೀತಿ ಕರ್ನಾಟಕದಲ್ಲೂ ಹರಡಿತು.

12ನೆಯ ಶತಮಾನದಿಂದ 14ನೆಯ ಶತಮಾನದವರೆಗಿನ ಕಾಲದಲ್ಲಿ ಕನ್ನಡದ ಮೇಲೆ ತಮಿಳಿನ ಪ್ರಭಾವವನ್ನು ಕಾಣಬಹುದು. ಬಸವೇಶ್ವರರ ಧಾರ್ಮಿಕ ಕ್ರಾಂತಿಗೆ ತಮಿಳುನಾಡಿನ ಶೈವ ಕೊಡುಗೆಯೂ ತಕ್ಕಮಟ್ಟಿಗೆ ಇದೆ ಎಂದು ಹೇಳಬಹುದು. ಬಸವಣ್ಣನವರು ಬಾಳಿದ ಯುಗದಲ್ಲಿ ಸಾಹಿತ್ಯ 'ಮಾರ್ಗ'ದಿಂದ 'ದೇಸಿ'ಗೆ ಬದಲಾಗುತ್ತಿದ್ದ ಸಂಕ್ರಮಣ ಕಾಲವಾಗಿತ್ತು. ವಚನ ಸಾಹಿತ್ಯ ತಮಿಳು ಶೈವ ಸಂಪ್ರದಾಯದ ತೇವಾರಮ್ ಎಂಬ ಭಕ್ತಿಗೀತೆಗಳ ಪ್ರಭಾವದಿಂದ ಹುಟ್ಟಿತೆಂಬ ಅಭಿಪ್ರಾಯವೂ ಇದೆ. ತಮಿಳುನಾಡಿನ ಶೈವಸಿದ್ಧಾಂತಗಳನ್ನೂ ಶಿವಶರಣರ ಚರಿತ್ರೆಗಳನ್ನೂ ತಕ್ಕಮಟ್ಟಿಗೆ ಉಪಯೋಗಿಸಿಕೊಂಡವರಲ್ಲಿ ಹರಿಹರನನ್ನು ಪ್ರಮುಖವಾಗಿ ಗುರುತಿಸಬೇಕು. ಅರವತ್ತುಮೂವರು ಪುರಾತನರು ಎಂದು ಹೆಸರು ಪಡೆದಿರುವ ತಮಿಳುನಾಡಿನ ಶಿವಶರಣರನ್ನು ಬಸವಣ್ಣನವರು ಸ್ಮರಿಸಿದ್ದಾರೆ. ಶೇಕ್ಕಿಳಾರ್ ರಚಿತ 'ಪೆರಿಯಪುರಾಣಂ' ಅರವತ್ತುಮೂವರ ಚರಿತ್ರವನ್ನು ಕೀರ್ತಿಸುವ ಗ್ರಂಥ. ಈ ಗ್ರಂಥವನ್ನು ಹರಿಹರ ನೋಡಿ ತನ್ನ ಕೆಲವು ರಗಳೆಗಳಿಗೆ ಕಥಾಭಾಗವನ್ನು ಆರಿಸಿಕೊಂಡಿರಬೇಕು. ಹರಿಹರನ ರಗಳೆಗಳಲ್ಲಿ ಕಂಡುಬರುವ ಕೆಲವು ತಮಿಳು ಪದಗಳನ್ನು ನೋಡಿದರೆ ಅವನಿಗೆ ತಮಿಳು ಭಾಷೆಯ ಪರಿಚಯವಿತ್ತೆಂದು ತೋರುತ್ತದೆ. ಹೀಗೆಯೇ ಆಂಡಯ್ಯ ಕಬ್ಬಿಗರಕಾವವನ್ನು ಬರೆಯಲು ಶೆಂದಮಿೞ್ ಕಾವ್ಯಗಳು ಪ್ರೇರಕವಾಗಿದ್ದುವೇನೋ ಎಂಬುದೊಂದು ಊಹೆ.

ರಾಮಾನುಜಾಚಾರ್ಯರ ಸ್ತೋತ್ರಗಳ ಪ್ರಭಾವ ದಾಸರ ಪದಗಳ ಮೇಲೆ ಇದ್ದಿತೆಂದು ಹೇಳಬಹುದು. ದಾಸರ ಪದಗಳ ರಚನೆಯ ಕಾಲಕ್ಕೆ ಸ್ವಲ್ಪ ಮುಂಚೆ ಹೊರಬಂದ ಸಾಹಿತ್ಯದಲ್ಲಿ ತಮಿಳು ಭಾಷಾಸಾಹಿತ್ಯಗಳ ಸಂಪರ್ಕ ಕಂಡುಬರುತ್ತದೆ. ಚಾಮರಸನ ಪ್ರಭುಲಿಂಗಲೀಲೆ (ಸು.1430) ತಮಿಳಿಗೆ ಅನುವಾದವಾಗಿದೆ. ಶಿವಪ್ರಕಾಶಸ್ವಾಮಿ (17ನೆಯ ಶತಮಾನ) ಎಂಬುವನು ಈ ಕೃತಿಯ ಅನುವಾದಕ. ನಿಜಗುಣಶಿವಯೋಗಿ ತನ್ನ ಅರವತ್ತುಮೂವರ ತ್ರಿಪದಿಯಲ್ಲಿ ಶಿವಭಕ್ತರಾದ ತಮಿಳುನಾಡಿನ ಅರವತ್ತುಮೂವರನ್ನು ಸ್ತುತಿಸಿದ್ದಾನೆ. ತ್ರಿಷಷ್ಟಿ ಪುರಾತನರ ಚರಿತ್ರೆ ಎಂಬ ಹೆಸರಿನಲ್ಲಿ ಇಂಥದನ್ನೇ ಸುರಂಗಕವಿಯೂ ಬರೆದಿದ್ದಾನೆ. ಗುಬ್ಬಿಯ ಮಲ್ಲಣಾರ್ಯನ ಭಾವಚಿಂತಾರತ್ನಕ್ಕೆ ತಮಿಳು ಗ್ರಂಥವೇ ಆಧಾರವೆಂದು ತಿಳಿದುಬಂದಿದೆ.

ಚಿಕ್ಕದೇವರಾಯನ ಕಾಲದ ಅನೇಕ ಕವಿಗಳು ತಮಿಳು ಬಲ್ಲವರಾಗಿದ್ದರು. ಗೀತಗೋಪಾಲ ಮುಂತಾದ ಗ್ರಂಥಗಳ ಅಚ್ಚಕನ್ನಡ ಹೊಸಕಳೆಗೆ ಶೆಂದಮಿೞ್ ಪ್ರಭಾವ ಸ್ವಲ್ಪಮಟ್ಟಿಗೆ ಕಾರಣವಾಗಿರಬಹುದು. ಶ್ರೀವೈಷ್ಣವರಾದ ಸಿಂಗರಾರ್ಯ, ತಿರುಮಲಾರ್ಯ ಮೊದಲಾದವರಿಗೆ ತಮಿಳಿನ ಪರಿಚಯ ಇದ್ದಿರಬೇಕು. ಚಿಕುಪಾಧ್ಯಾಯನ ಗ್ರಂಥಗಳಲ್ಲಿ ಬಹುಪಾಲು ವೈಷ್ಣವ ಗ್ರಂಥಗಳಾಗಿವೆ.

ಹೊಸಗನ್ನಡ ಯುಗದ ಮೊದಲನೆಯ ಹಂತದಲ್ಲಿ ತಮಿಳು ಗ್ರಂಥಗಳಿಂದ ಅನುವಾದವಾದ ಅನೇಕ ಗ್ರಂಥಗಳು ಕನ್ನಡದಲ್ಲಿ ಪ್ರಕಟವಾಗಿವೆ. ಕ್ರೈಸ್ತ ಮಿಷನರಿಗಳು ಧಾರ್ಮಿಕ ಗ್ರಂಥಗಳನ್ನೂ ತಮಿಳಿನಿಂದ ಭಾಷಾಂತರ ಮಾಡಿರುತ್ತಾರೆ. ಜಾನ್ ರೀಡ್, ಕೆ.ವಿ.ಜೋಸಿಯಾ, ಇ.ಎಲ್.ಚಾರ್ಬಾ ಮೊದಲಾದವರು ತಮಿಳಿನಲ್ಲಿದ್ದ ಧಾರ್ಮಿಕ ಗ್ರಂಥಗಳನ್ನು ಕ್ರೈಸ್ತಧರ್ಮದ ಪ್ರಚಾರಕ್ಕಾಗಿ ಕನ್ನಡಕ್ಕೆ ಅನುವಾದ ಮಾಡಿದ್ದಾರೆ.

ಕ್ರೈಸ್ತಮಿಷನರಿಗಳೇ ಅಲ್ಲದೆ ದೇಶೀಯ ಪಂಡಿತರೂ ತಮಿಳಿನಿಂದ ಕೆಲವು ಪುಸ್ತಕಗಳನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಆರ್.ನರಸಿಂಹಾಚಾರ್ಯರು ಕರ್ನಾಟಕಕ್ಕೆ ಸಂಬಂಧಿಸಿದ ತಮಿಳು ಶಾಸನಗಳನ್ನೂ ಅವ್ವೈಯಾರ್‌ನಿಂದ ಹಿಡಿದು ತಿರುವಳ್ಳುವರ್‌ವರೆಗಿನ ನೀತಿಪದ್ಯಗಳನ್ನು ಅನುವಾದ ಮಾಡಿ ಕನ್ನಡಿಗರಿಗೆ ನೀಡಿದ್ದಾರೆ. ಕನ್ನಡ ಸಾಹಿತ್ಯದ ನವೋದಯ ಕಾಲದಲ್ಲಿ ಮತ್ತೆ ತಮಿಳಿನ ಪ್ರಭಾವ ಕನ್ನಡದ ಮೇಲೆ ಕಾಣಿಸಿಕೊಂಡಿದೆ. ಬಿ.ಎಂ.ಶ್ರೀ. ಅವರ ಸಿರಿಗನ್ನಡಂ ಗೆಲ್ಗೆ ಎಂಬ ಘೋಷಣೆಗೆ ಸ್ಫೂರ್ತಿ ಶೆಂದಮಿೞ್ ಎನ್ನುವ ಅಭಿಪ್ರಾಯವಿದೆ. ಭಾಷಿಕವಾಗಿ ಕಾಲ್ಡ್‌ವೆಲ್ ತಮಿಳು ಕನ್ನಡದ ತೌಲನಿಕ ವಿವೇಚನೆ ಮಾಡಿದ್ದಾನೆ. (ಆರ್.ವಿ.ಎಸ್.ಎಸ್.)

ಇವರಲ್ಲದೆ ಟಿ.ಬರೊ, ಬಿ.ಎಚ್.ಕೃಷ್ಣಮೂರ್ತಿ, ಎಂ.ಬಿ.ಎಮಿನೊ ಮೊದಲಾದ ಭಾಷಾತಜ್ಞರು ತಮಿಳು-ಕನ್ನಡ ಮತ್ತು ಇತರ ಭಾಷೆಗಳ ಬಾಂಧವ್ಯ ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಇತರ ಭಾಷೆಯ ಸಾಹಿತ್ಯ ಕ್ಷೇತ್ರಗಳಲ್ಲಿ ಆದಂತೆ ತಮಿಳಿನಲ್ಲಿ ಕೂಡ ಆಧುನಿಕ ಸಾಹಿತ್ಯದ ರಚನೆಗೆ ಪಾಶ್ಚಾತ್ಯ ಭಾಷೆ ಮತ್ತು ಸಾಹಿತ್ಯಗಳ ಪ್ರಭಾವವೇ ಪ್ರಧಾನವಾಗಿ

ಕಂಡುಬರುತ್ತವೆ. 1950ರ ಅನಂತರದ ಕಾಲದಲ್ಲಿ ರಚಿತವಾದ ಸಾಹಿತ್ಯ ಪ್ರಕಾರಗಳಲ್ಲಿ ಸಣ್ಣಕಥೆ, ಕಾದಂಬರಿ, ನಾಟಕ, ಕಾವ್ಯ ಹಾಗೂ ದಲಿತ ಸಾಹಿತ್ಯ, ಸ್ತ್ರೀವಾದಿ ಸಾಹಿತ್ಯ ಮುಖ್ಯವಾದವು.

ಕರ್ನಾಟಕದಲ್ಲಿ ದಲಿತ ಸಾಹಿತ್ಯದ ಉಗಮಕ್ಕೆ ಮಹಾರಾಷ್ಟ್ರದ ದಲಿತ ಪ್ಯಾಂಥರ್‍ಸ್ ಚಳವಳಿ, ಅಂಬೇಡ್ಕರ್‌ವಾದ, ಲೋಹಿಯಾವಾದ, ಆಫ್ರಿಕನ್ ಕಪ್ಪು ಸಾಹಿತ್ಯ ಮುಂತಾದವು ಕಾರಣವಾದರೆ ತಮಿಳುನಾಡಿನ ದಲಿತ ಸಾಹಿತ್ಯಕ್ಕೆ ಪೆರಿಯಾರ್ ಮತ್ತು ಅಂಬೇಡ್ಕರ್ ಮೊದಲಾದವರ ಚಿಂತನೆಗಳು ಪ್ರೇರಣೆ ನೀಡಿದವು.

ಸ್ತ್ರೀ ಸಮಾನತೆಯನ್ನು ಎತ್ತಿ ಹಿಡಿಯುವ ಸಾಹಿತ್ಯ ತಮಿಳು ಮತ್ತು ಕನ್ನಡ ಭಾಷೆಗಳಲ್ಲಿ ರಚಿತವಾಗಿರುವುದು ಪಾಶ್ಚಾತ್ಯ ಸಾಹಿತ್ಯ ಪ್ರಭಾವದಿಂದಲೇ ಎಂಬ ಸಂಗತಿ ಗಮನಾರ್ಹವಾಗಿದೆ. ವಿಶ್ವಸಂಸ್ಥೆಯು 1975ನೆಯ ವರ್ಷವನ್ನು ಅಂತಾರಾಷ್ಟ್ರೀಯ ಮಹಿಳಾ ವರ್ಷವೆಂದು ಘೋಷಿಸಿತು. ಅನಂತರ ರೂಪುಗೊಂಡ ಈ ಸಾಹಿತ್ಯಕ್ಕೆ ಪರಂಪರೆಯ ಕೆಲವು ಪ್ರೇರಣೆಗಳಿದ್ದರೂ ಅಂತಾರಾಷ್ಟ್ರೀಯ ಮಹಿಳಾ ವರ್ಷದ ಘೋಷಣೆ ಮತ್ತು 1985ರಲ್ಲಿ ನಡೆದ ಮಹಿಳಾ ದಶಮಾನೋತ್ಸವದ ಆಚರಣೆ ಮುಖ್ಯ ಕಾರಣವಾದವು. ತಮಿಳುನಾಡಿನಲ್ಲಿ ಸ್ತ್ರೀವಾದ ಸಾಹಿತ್ಯ ಅಂಕುರಿಸಲು ಸುಬ್ರಹ್ಮಣ್ಯ ಭಾರತಿ ಮತ್ತು ಪೆರಿಯಾರ್‌ರವರ ಸ್ತ್ರೀಪರ ಹೋರಾಟಗಳು ಪ್ರೇರಣೆ ನೀಡಿದವು.

ಆಧುನಿಕ ಸಾಹಿತ್ಯದಲ್ಲಿ ಸಣ್ಣಕಥೆ, ಕಾದಂಬರಿ, ನಾಟಕ, ಕಾವ್ಯ ಮುಂತಾದ ಪ್ರಕಾರಗಳಲ್ಲಿ ತಮಿಳು ಮತ್ತು ಕನ್ನಡ ಭಾಷೆಗಳ ನಡುವೆ ನಿಕಟವಾದ ಸಂಬಂಧವನ್ನು ಕಲ್ಪಿಸಿ ಕೊಟ್ಟ ಕ್ಷೇತ್ರವೆಂದರೆ ಅನುವಾದ ಕ್ಷೇತ್ರ. ಅನುವಾದಗಳ ಮೂಲಕ ಈ ಎರಡೂ ಭಾಷೆಗಳಲ್ಲಿ ಸಾಹಿತ್ಯಕ ಕೊಳುಕೊಡುಗೆಗಳು ನಡೆದವು. ಜಯಕಾಂತನ್ ಅವರ ಸಣ್ಣಕತೆಗಳನ್ನು ನ್ಯಾಷನಲ್ ಬುಕ್ ಟ್ರಸ್ಟ್ ಸಂಸ್ಥೆ ಕನ್ನಡಕ್ಕೆ ಅನುವಾದ ಮಾಡಿಸಿದೆ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ತಮಿಳಿನ ಅನೇಕ ಸಣ್ಣಕಥೆಗಳನ್ನು ಅನುವಾದ ಮಾಡಿಸಿ ತಮಿಳು ಕಥಾಸಂಕಲನ ಎಂಬ ಹೆಸರಿನಲ್ಲಿ ಹೊರತಂದಿದೆ. ಅಖಿಳನ್ ಅವರು ಸಂಕಲಿಸಿದ ತಮಿಳು ಸಣ್ಣಕಥೆಗಳ ಸಂಕಲನವನ್ನು ಕೇಂದ್ರ ಸಾಹಿತ್ಯ ಅಕಾಡೆಮಿ ತಮಿಳು ಕಥಾ ಸೌರಭ ಎಂಬ ಶೀರ್ಷಿಕೆಯಲ್ಲಿ ಅನುವಾದ ಮಾಡಿಸಿ ಪ್ರಕಟಿಸಿದೆ. ರಾಷ್ಟ್ರಕವಿ ಕುವೆಂಪು ಅವರ ಸಣ್ಣಕಥೆಗಳನ್ನು ಕುವೆಂಪುವಿನ್ ಸಿರುಗಥೈಗಳ್ ಎಂಬ ಹೆಸರಿನಲ್ಲಿ ನಟರಾಜನ್ ಅವರು ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ ಅನುವಾದಿಸಿದ್ದಾರೆ. ಮಾಸ್ತಿಯವರ ಸಣ್ಣಕಥೆಗಳನ್ನು ಶೇಷನಾರಾಯಣ ಅವರೂ ಪಿ.ಲಂಕೇಶ್ ಅವರ ಸಣ್ಣ ಕಥೆಗಳನ್ನು ಪಾವಣ್ಣನ್ ಅವರೂ ಕ್ರಮವಾಗಿ ಮಾಸ್ತಿ ಸಿರುಗಥೈಗಳ್, ಕಲ್‌ಕರೈಯುಂ ನೇರಂ ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರೆ. ಯಶವಂತ ಚಿತ್ತಾಲರ ಕಥೆಯಾದಳು ಹುಡುಗಿ ಎಂಬ 'ಸಣ್ಣಕಥಾ ಸಂಕಲನ'ವನ್ನು ಸಿದ್ದಲಿಂಗಯ್ಯನವರು ಒರು ಪೆಣ್ ಗತೈಯಾಗಿರಾಳ್ ಎಂದು ಅನುವಾದಿಸಿದ್ದಾರೆ.

ವೇದನಾಯಗಂ ಪಿಳ್ಳೈ ಎಂಬುವರು ರಚಿಸಿದ (1879) ಪ್ರತಾಪ ಮೊದಲಿಯಾರ್ ಚರಿತಿರಂ ಎಂಬ ತಮಿಳಿನ ಮೊಟ್ಟಮೊದಲ ಕಾದಂಬರಿಯನ್ನು ಮತ್ತೂರು ಕೃಷ್ಣಮೂರ್ತಿಯವರು ಅನುವಾದಿಸಿದ್ದಾರೆ. ರಾಜಮಯ್ಯರ್ ರಚಿಸಿದ (1896) ಕಮಲಾಂಬಾಳ್ ಚರಿತಿರಂ ಎಂಬ ಕಾದಂಬರಿಯನ್ನು ಸಂಪತ್ ಗಿರಿರಾಜು ಅವರು, ಕಲ್ಕಿಯವರ ಅಲೈಯೋಸೈ, ಅಖಿಳನ್ ಅವರ ಪಾವೈ ವಿಳಕ್ಕು ಎಂಬ ಕಾದಂಬರಿಗಳನ್ನು ಮತ್ತೂರು ಕೃಷ್ಣಮೂರ್ತಿಯವರು ಕನ್ನಡಕ್ಕೆ ತಂದಿದ್ದಾರೆ. ಅಖಿಳನ್ ಅವರ ಚಿತ್ತಿರಪ್ಪಾವೈ ಎಂಬ ಮತ್ತೊಂದು ಕಾದಂಬರಿಯನ್ನು ಚಿತ್ರಕನ್ಯೆ ಎಂಬ ಹೆಸರಿನಲ್ಲಿ ಅನುವಾದ ಮಾಡಿಸಿ ನ್ಯಾಷನಲ್ ಬುಕ್ ಟ್ರಸ್ಟ್ ಪ್ರಕಟಿಸಿದೆ. ವರದರಾಜನ್ ಅವರ ಅಗಳ್‌ವಿಳಕ್ಕು ಎಂಬ ಕಾದಂಬರಿಯನ್ನು ಶೇಷನಾರಾಯಣ ಅವರು ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ.

ಮಾಸ್ತಿಯವರ ಚಿಕ್ಕವೀರರಾಜೇಂದ್ರ ಎಂಬ ಕಾದಂಬರಿಯನ್ನು ಹೇಮಾ ಆನಂದತೀರ್ಥನ್ ಅವರು ತಮಿಳಿಗೆ ಅನುವಾದಿಸಿದ್ದಾರೆ. ನ್ಯಾಷನಲ್ ಬುಕ್ ಟ್ರಸ್ಟ್ ಈ ಕೃತಿಯನ್ನು ಪ್ರಕಟಿಸಿದೆ. ಪೂರ್ಣಚಂದ್ರ ತೇಜಸ್ವಿಯವರ ಚಿದಂಬರ ರಹಸ್ಯ ಎಂಬ ಕಾದಂಬರಿಯನ್ನು ಚಿದಂಬರ ರಹಸಿಯಂ ಎಂದೂ ಚದುರಂಗರ ವೈಶಾಖ ಎಂಬ ಕಾದಂಬರಿಯನ್ನು ಮೌನ ಓಲಂ ಎಂದೂ ಎಂ.ಕೆ.ಇಂದಿರಾ ಅವರ ಗೆಜ್ಜೆಪೂಜೆ ಎಂಬ ಕಾದಂಬರಿಯನ್ನು ಸಲಂಗೈ ಚಡಂಗು ಎಂದೂ ಶಿವರಾಮ ಕಾರಂತರ ಜೋಮನದುಡಿ ಎಂಬ ಕಾದಂಬರಿಯನ್ನು ಮಣ್ಣೂಮನುಷ್ಯರೂ ಎಂದೂ ಕೆ.ವಿ. ಅಯ್ಯರ್ ಅವರ ಶಾಂತಲೆ ಎಂಬ ಕಾದಂಬರಿಯನ್ನು ಶಾಂತಲೈ ಎಂದೂ ತಮಿಳಿಗೆ ಅನುವಾದಿಸಲಾಗಿದೆ.

ಕೋಮಲಸ್ವಾಮಿನಾಥನ್ ಅವರ ತಣ್ಣೀರ್ ತಣ್ಣೀರ್ ಎಂಬ ಪ್ರಸಿದ್ಧ ನಾಟಕವನ್ನು ಸುಬ್ರಹ್ಮಣ್ಯಂ ಎನ್ನುವವರು ಕನ್ನಡಕ್ಕೆ ತಂದಿದ್ದಾರೆ. ಚಂದ್ರಶೇಖರ ಕಂಬಾರ ಅವರ ಸಿರಿ ಸಂಪಿಗೆ ಎಂಬ ನಾಟಕವನ್ನು ಸದಾಶಿವಂ ಎನ್ನುವವರು ತಿರುಸಂಪಿಗೈ ಎಂದು ತಮಿಳಿಗೆ ಅನುವಾದಿಸಿದ್ದಾರೆ.

ಸುಬ್ರಹ್ಮಣ್ಯ ಭಾರತಿ ಮತ್ತು ಭಾರತಿದಾಸನ್ ಅವರ ಆಯ್ದ ಕವನಗಳನ್ನು ಪಶುಮಲೈ ಅರಸು ಕನ್ನಡಕ್ಕೆ ತಂದಿದ್ದಾರೆ. ಇದಲ್ಲದೆ ಶ್ರೀಲಂಕಾದ ತಮಿಳು ಕವನಗಳು ಎಂಬ ಕವನ ಸಂಕಲನವನ್ನು ಕಾರ್ಲೋಸ್ ಎನ್ನುವವರು ಕನ್ನಡದಲ್ಲಿ ಸಂಪಾದಿಸಿದ್ದಾರೆ. ಸ.ಸ.ಮಾಳವಾಡ ಅವರು ಸಂಕಲಿಸಿದ ಬಸವಣ್ಣನವರ ವಚನಗಳನ್ನು ವಸವಣ್ಣರ್ ವಾಕ್ಕಮುದು ಎಂಬ ಹೆಸರಿನಲ್ಲಿ ಸಿದ್ಧಲಿಂಗಯ್ಯನವರು ಅನುವಾದಿಸಿದ್ದಾರೆ. ಇರೈಯಡಿಯಾನ್ ಎನ್ನುವವರು ಸರ್ವಜ್ಞನ ವಚನಗಳನ್ನು ವಿಶ್ವ ತಮಿಳು ಅಧ್ಯಯನ ಸಂಸ್ಥೆಯ ಪರವಾಗಿ ಅನುವಾದಿಸಿ ಪ್ರಕಟಿಸಿದ್ದಾರೆ. ತಮಿಳಿನ ನನ್ನೂಲ್ ಎಂಬ ವ್ಯಾಕರಣ ಗ್ರಂಥವನ್ನು ಬಿ.ನಂ. ಚಂದ್ರಯ್ಯನವರು ಕನ್ನಡಕ್ಕೆ ತಂದಿದ್ದಾರೆ. ಕನ್ನಡದ ಕವಿರಾಜಮಾರ್ಗವನ್ನು ವೆಂಕಟಾಚಲಂ ಎಂಬುವರು ತಮಿಳು ವಿಶ್ವವಿದ್ಯಾನಿಲಯದ ಪರವಾಗಿ ಅನುವಾದಿಸಿದ್ದಾರೆ. ಅರವಿಂದ ಮಾಲಗತ್ತಿಯವರ ಗೌರ್ನಮೆಂಟ್ ಬ್ರಾಹ್ಮಣ ಎಂಬ ಆತ್ಮಕಥೆಯನ್ನು ಪಾವಣ್ಣನ್‌ರವರು ತಮಿಳಿಗೆ ಅನುವಾದಿಸಿದ್ದಾರೆ. ಹಾಗೆಯೇ ಊ.ವೇ.ಸ್ವಾಮಿನಾಥ ಅಯ್ಯರ್ ಅವರ ಎನ್‌ಚರಿತ್ತಿರಂ ಎಂಬ ಆತ್ಮ ಚರಿತ್ರೆಯನ್ನು ಕನ್ನಡಕ್ಕೆ ತರಲಾಗಿದೆ.

ಹೀಗೆ ತಮಿಳು ಮತ್ತು ಕನ್ನಡ ಭಾಷೆಗಳ ಬಾಂಧವ್ಯ ಒಂದಲ್ಲಾ ಒಂದು ರೀತಿಯಲ್ಲಿ ನಿರಂತರವಾಗಿ ಮುಂದುವರಿದಿದೆ. (ಎಂ.ಟಿ.)

**ತೆಲುಗು :** ಕನ್ನಡ ಮತ್ತು ತೆಲುಗು ಭಾಷೆಗಳ ಬಾಂಧವ್ಯ ಬಹಳ ಹಿಂದಿನಿಂದಲೂ ಅಂದರೆ ಸಾತವಾಹನರು, ಚಾಳುಕ್ಯರು, ಚೋಳರು, ಕಾಕತೀಯರು, ವಿಜಯನಗರದ ಅರಸರು, ಕೊನೆಗೆ ಮೊನ್ನೆಮೊನ್ನೆಯ ಬ್ರಿಟಿಷರ ಕಾಲದಿಂದ ಈಗಿನವರೆಗೂ ನಡೆದುಕೊಂಡು ಬಂದಿದೆ. ಸಾಂಸ್ಕೃತಿಕವಾಗಿ, ಭೌಗೋಳಿಕವಾಗಿ ಭಾಷಿಕವಾಗಿ ನಾನಾಮುಖಗಳಿಂದ ಬೆಳೆದು ಬರುತ್ತಿರುವ ಈ ಬಾಂಧವ್ಯದ ಗುರುತುಗಳನ್ನು ಈ ಎರಡು ಭಾಷೆಗಳ ಸಾಹಿತ್ಯಕ ಕೃತಿಗಳಲ್ಲಿಯೂ ನಾವು ಕಾಣಬಹುದು. ತೆಲುಗರು ಆಂಧ್ರಪ್ರದೇಶದ ಗಡಿಪ್ರದೇಶಗಳಲ್ಲಿ ಮಾತ್ರವಲ್ಲದೆ ಕರ್ನಾಟಕದ ಎಲ್ಲ ಕಡೆಗಳಲ್ಲಿಯೂ ಕಂಡುಬರುತ್ತಾರೆ. ಮುಖ್ಯವಾಗಿ ಕೋಲಾರ ಮತ್ತು ಬಳ್ಳಾರಿ ಜಿಲ್ಲೆ, ಬೆಂಗಳೂರು ನಗರ ಮುಂತಾದ ಪ್ರದೇಶಗಳಲ್ಲಿ ಇವರು ಬಹುಸಂಖ್ಯೆಯಲ್ಲಿ ನೆಲೆಸಿದ್ದಾರೆ.

ಕರ್ನಾಟಕದಲ್ಲಿ ತೆಲುಗು ಭಾಷೆ ಮಾತ್ರವಲ್ಲದೆ ತೆಲುಗು ಸಾಹಿತ್ಯವೂ ಆಶ್ರಯ ಪಡೆಯಿತು. ಕನ್ನಡದ ಆದಿಮಹಾಕವಿಯಾದ ಪಂಪ ತೆಲುಗಿನಲ್ಲಿ ಜಿನೇಂದ್ರ ಪುರಾಣವನ್ನು ಬರೆದಿದ್ದಾನೆ ಎಂಬ ಒಂದು ಅಭಿಪ್ರಾಯವಿದೆ. ಪೊನ್ನನೂ ತೆಲುಗಿನಲ್ಲಿ ಆದಿಪುರಾಣವನ್ನು ಬರೆದಿದ್ದಾನೆಂದು ಕೆಲವರ ಅಭಿಪ್ರಾಯ. ಆದರೆ ಈ ಅಭಿಪ್ರಾಯಗಳು ಸತ್ಯವಾದುವೆಂದು ಅಂಗೀಕರಿಸಲು ದೃಢ ಆಧಾರಗಳು ದೊರೆತಿಲ್ಲ.

ತೆಲುಗಿನ ಕವಿಯಾದ ಪಾಲ್ಕುರಿಕೆ ಸೋಮನಾಥನ ಜನ್ಮಸ್ಥಳದ ಬಗೆಗೆ ಭಿನ್ನಾಭಿಪ್ರಾಯಗಳಿದ್ದರೂ ಕೆಲವರ ಪ್ರಕಾರ ಈತ ಕನ್ನಡ ದೇಶದವನು. ಈತ ಅತ್ಯಂತ ವಿಶಿಷ್ಟವಾದ ತೆಲುಗುಕಾವ್ಯಗಳನ್ನು ಕರ್ನಾಟಕದಲ್ಲಿ ಸೃಷ್ಟಿಸಿದ್ದಾನೆ ಎಂದು ಹೇಳಬಹುದು. ಪ್ರೌಢದೇವರಾಯನ ಆಸ್ಥಾನದಲ್ಲಿ ಗೌಡ ಡಿಂಡಿಮಭಟ್ಟನನ್ನು ತನ್ನ ಪಾಂಡಿತ್ಯದಿಂದ ಸೋಲಿಸಿ ಶ್ರೀನಾಥನೆಂಬ ತೆಲುಗು ಕವಿ ಕನಕಾಭಿಷೇಕ ಸನ್ಮಾನವನ್ನು ಪಡೆದನೆಂದು ತಿಳಿಯುತ್ತದೆ. ಈತ ಕನ್ನಡ ದೇಶದಲ್ಲೂ ಸಂಚಾರ ಮಾಡಿ ಸನ್ಮಾನಗಳನ್ನು

ಪಡೆದನೆಂದು ತಿಳಿಯುತ್ತದೆ. ಕನ್ನಡ ಮತ್ತು ತೆಲುಗು ಭಾಷೆಗಳ ಬಾಂಧವ್ಯ ಕೃಷ್ಣದೇವರಾಯನ ಕಾಲದಲ್ಲಿ ಅತ್ಯಂತ ಉನ್ನತಮಟ್ಟಕ್ಕೆ ಏರಿತು. ಕೃಷ್ಣದೇವರಾಯನ ಆಸ್ಥಾನದಲ್ಲಿ ಅಷ್ಟದಿಗ್ಗಜಗಳೆಂಬ ಕವಿಗಳಿದ್ದರು. ಅವರಲ್ಲಿ ಬಹುಪಾಲು ತೆಲುಗು ಕವಿಗಳೇ ಆಗಿದ್ದರು. ಆ ಕಾಲದ ತೆಲುಗು ಕವಿಗಳಿಗೆ ಕನ್ನಡದ ಪರಿಚಯವೂ ಇತ್ತು. ಅವರಲ್ಲಿ ಒಬ್ಬನಾದ ನಂದಿತಿಮ್ಮನ ಎಂಬುವನು ಪಾರಿಜಾತಾಪಹರಣಮು ಎಂಬ ಕಾವ್ಯವನ್ನು ತೆಲುಗಿನಲ್ಲಿ ಬರೆದು ಕೃಷ್ಣದೇವರಾಯನಿಗೆ ಅರ್ಪಿಸಿದ. ಕೃಷ್ಣದೇವರಾಯನ ಆಶ್ರಯದಲ್ಲಿದ್ದ ತಿಮ್ಮಣ್ಣ ತನ್ನ ಭಾರತವನ್ನು ಬರೆಯುವಾಗ ತೆಲುಗಿನ ಮಹಾಕವಿ ತಿಕ್ಕನನನ್ನು (13ನೆಯ ಶತಮಾನ) ಅನುಸರಿಸಿದ್ದಾನೆ. ಕೃಷ್ಣದೇವರಾಯ ಕನ್ನಡ ರಾಜ್ಯ ರಮಾರಮಣನಾದರೂ ಸಾಹಿತ್ಯದ ಮಟ್ಟಿಗೆ 'ಆಂಧ್ರಭೋಜ' ಎನಿಸಿಕೊಂಡಿದ್ದಾನೆ. ಅಮುಕ್ತಮಾಲ್ಯದ ಎಂಬ ಹೆಸರಿನ ಉದ್ಗ್ರಂಥವೊಂದನ್ನು ಬರೆದು ಕೃಷ್ಣದೇವರಾಯ ತೆಲುಗು ಕವಿಗಳಿಗೆ ಸ್ಫೂರ್ತಿ ನೀಡಿದ್ದಾನೆ.

ತೆಲುಗು ಸಾಹಿತ್ಯ ಚರಿತ್ರೆಯಲ್ಲಿ 'ಮೈಸೂರು ತೆಲುಗು' ಸಾಹಿತ್ಯ ಒಂದು ಪ್ರಧಾನ ಘಟ್ಟ. ಈ ಕಾಲಾವಧಿಯಲ್ಲಿ (1700-50) ಕನ್ನಡ ದೇಶದಲ್ಲಿ ತೆಲುಗು ಕವಿಗಳೇ ಅಲ್ಲದೆ, ಕನ್ನಡಿಗರೂ ತೆಲುಗು ಕಾವ್ಯಗಳನ್ನು ರಚಿಸಿದ್ದಾರೆ. ಚಿಕ್ಕದೇವರಾಯನ ಕಾಲದಿಂದ ಮೈಸೂರು ತೆಲುಗು ಸಾಹಿತ್ಯ ಪ್ರಾರಂಭವಾದರೂ ಅದಕ್ಕಿಂತ ಮುಂಚೆಯೇ ಹೆಸರಿಸಬೇಕಾದ ಕೆಲವು ಕಾವ್ಯಗಳಿವೆ. ಬೆಂಗಳೂರು ನಿರ್ಮಾಪಕ ಹಿರಿಯ ಕೆಂಪೇಗೌಡ (1513-69) ತೆಲುಗಿನವನೆಂದು ಕೆಲವರ ಅಭಿಪ್ರಾಯ. ಅವನ ಹೆಸರಿನಲ್ಲಿ ಗಂಗಾಗೌರೀ ವಿಲಾಸಮು ಎಂಬ ಒಂದು ತೆಲುಗು ಯಕ್ಷಗಾನವಿದೆ. ಇದನ್ನು ಕೆಲವರು ಕೆಂಪೇಗೌಡನ ಮೊಮ್ಮಗ ಬರೆದನೆಂದು ಅಭಿಪ್ರಾಯಪಡುತ್ತಾರೆ. ಚನ್ನಪಟ್ಟಣದ ನಿರ್ಮಾಪಕನಾದ ಇಮ್ಮಡಿ ಜಗದೇವರಾಯ ತೆಲುಗಿನಲ್ಲಿ ಅಧ್ಯಾತ್ಮ ರಾಮಾಯಣವನ್ನು ಬರೆದಿದ್ದಾನೆಂದು ಅವನ ಆಸ್ಥಾನಕವಿಯಾಗಿದ್ದ ಪೊನ್ನತೋಟ ಔಬಲಕವಿ ತನ್ನ ವಾಮನಪುರಾಣದಲ್ಲಿ ಹೇಳಿದ್ದಾನೆ. ಸುಗುಟೂರಿನ ಮುಮ್ಮಡಿ ತಮ್ಮಭೂಪಾಲ (17ನೆಯ ಶತಮಾನ) ಸಂಸ್ಕೃತ ಕರ್ನಾಟ ಆಂಧ್ರ ಭಾಷೆಗಳಲ್ಲಿ ಪಂಡಿತನೆಂದೂ ತೆಲುಗಿನಲ್ಲಿ ಅವನು ರಾಜೇಂದ್ರಚೋಳ ಚರಿತ್ರ, ಕುಮಾರಾರ್ಜುನೀಯಮು, ಸೌಂದರೇಶ ಚರಿತ್ರ ಎಂಬ ಮೂರು ಗ್ರಂಥಗಳನ್ನು ಬರೆದಿರುವನೆಂದೂ ತಿಳಿಯುತ್ತದೆ.

ಚಿಕ್ಕದೇವರಾಯನ ಕಾಲದಿಂದ ಕರ್ನಾಟಕದಲ್ಲಿ ತೆಲುಗು ಭಾಷಾ ಸಾಹಿತ್ಯಗಳಿಗೆ ಸಾಕಷ್ಟು ಪ್ರಾಧಾನ್ಯತೆ ದೊರೆಯಿತು. ಚಿಕ್ಕದೇವರಾಯನ ಅಂಕಿತದಲ್ಲಿರುವ ಕೆಲವು ಪದಗಳ ಕರ್ತೃಗಳು ಯಾರೋ ತಿಳಿಯದು. ಚಿಕ್ಕದೇವರಾಯನ ಪುತ್ರ ಕಂಠೀರವ ನರಸರಾಜನ (1704-13) ಹೆಸರಿನಲ್ಲಿ ಅನೇಕ ತೆಲುಗು ಗ್ರಂಥಗಳಿವೆ. ಈ ಅರಸ ಸಂಸ್ಕೃತ, ಪ್ರಾಕೃತ, ಕರ್ನಾಟಕ, ಆಂಧ್ರ, ದ್ರಾವಿಡ ಭಾಷೆಗಳಲ್ಲಿ ಕವಿ, ಪಂಡಿತನೆಂದು ಹೇಳಲಾಗಿದೆ. ಇವನು ತೆಲುಗಿನಲ್ಲಿ ಆಂಧ್ರ ಕೊಱವಂಜಿ, ಪಂಚಾಯುಧ ಕಟ್ಲೆ, ಲಕ್ಷ್ಮೀವಿಲಾಸಮು, ಕಲವಾಣೀ ವಿಲಾಸಮು, ನಾಟ್ಯವಿದ್ಯಾವಿಲಾಸಮು, ವಸಂತೋತ್ಸವ ವಿಲಾಸಮು, ವಿಭಕ್ತಿ ಕಾಂತಾ ವಿಲಾಸಮು, ಅಷ್ಟದಿಕ್ಪಾಲಕ ವಿಲಾಸಮು, ಪಾವಕಿ ನಾಟಕಮು, ವೈವಸ್ವತ ನಾಟಕಮು, ನೈರುತಿ ನಾಟಕಮು, ವಾರುಣಿ ನಾಟಕಮು, ವಾಯವಿ ನಾಟಕಮು, ಕೌಬೇರಿ ನಾಟಕಮು ಎಂಬ ಗ್ರಂಥಗಳನ್ನು ರಚಿಸಿದ್ದಾನೆ.

ಕರ್ನಾಟಕದಲ್ಲಿ ಚಿಕ್ಕದೇವರಾಯನ ಕಾಲದಲ್ಲಿ ಹೆಸರಿಸಬೇಕಾದ ಇನ್ನೊಬ್ಬ ತೆಲುಗು ಕವಿ ಕಳಲೆ ವೀರರಾಜ. ಇವನು ಸೇನಾಪತಿ ಯಾಗಿದ್ದುದು ಮಾತ್ರವಲ್ಲದೆ ಬಹುಭಾಷಾಕೋವಿದನೂ ಸಾಹಿತ್ಯಜ್ಞನೂ ಆಗಿದ್ದ. ಈತ ಮಹಾಭಾರತವನ್ನು ತೆಲುಗು ವಚನರೂಪದಲ್ಲಿ ಬರೆದಿದ್ದಾನೆ. ಆದಿ, ಸಭಾ, ಭೀಷ್ಮಪರ್ವಗಳು ಮಾತ್ರ ಈಗ ಲಭ್ಯವಾಗಿವೆ. ಇವನ ಮಗ ನಂಜರಾಜನೂ (ಸು.1739-73) ತೆಲುಗಿನಲ್ಲಿ ಪಂಡಿತನಾಗಿದ್ದ. ಇವನು ತೆಲುಗಿನಲ್ಲಿ ಕಾಶೀಮಹಿಮಾರ್ಥ ದರ್ಪಣ, ಬ್ರಹ್ಮೋತ್ತರ ಖಂಡ, ಶಿವಭಕ್ತಿವಿಲಾಸ, ಗರಳಪುರಿ ಮಾಹಾತ್ಮ್ಯ, ಹಾಲಾಸ್ಯಮಾಹಾತ್ಮ್ಯ ಎಂಬ ಐದು ಕೃತಿಗಳನ್ನು ರಚಿಸಿದ್ದಾನೆ. ಇವೆಲ್ಲ ವಚನ ಗ್ರಂಥಗಳಾಗಿವೆ. ಇವನು ಪದ್ಯ ರಚನೆಯನ್ನು ಮಾಡಬಲ್ಲನೆಂಬುದಕ್ಕೆ ಪೀಠಿಕಾ ಪದ್ಯಗಳು, ಗ್ರಂಥಾಂತ್ಯ ಪದ್ಯಗಳು ಸಾಕ್ಷಿಯಾಗಿವೆ. ನಂಜರಾಜ ಕನ್ನಡದಲ್ಲೂ ಹಲವು ಗ್ರಂಥಗಳನ್ನು ಬರೆದಿದ್ದಾನೆ. ಮೂಕರಸು ಎಂದು ಖ್ಯಾತನಾಗಿದ್ದ ಕಂಠೀರವ ನರಸರಾಜ ಸ್ವತಃ ಕೆಲವು ತೆಲುಗು ಯಕ್ಷಗಾನಗಳನ್ನು ರಚಿಸಿದ್ದಾನೆ. ಮುಮ್ಮಡಿ ಕೃಷ್ಣರಾಜ ಒಡೆಯರ ಆಶ್ರಯದಲ್ಲಿದ್ದ ಕೋಲಾರ ಜಿಲ್ಲೆಯ ಕುಂದಲಕುರ್ತಿ ಚಂದ್ರಕವಿ ಎಂಬ ತೆಲುಗು ಕವಿ ನನ್ನಯ್ಯನ 'ಆಂಧ್ರಶಬ್ದಚಿಂತಾಮಣಿ'ಯನ್ನು ಕೃಷ್ಣಭೂಪಾಲೀಯಮು ಎಂಬ ಹೆಸರಿನಲ್ಲಿ ಕಾವ್ಯರೂಪದಲ್ಲಿ ರಚಿಸಿದಂತೆ ತಿಳಿಯುತ್ತದೆ.

ಕರ್ನಾಟಕದಲ್ಲಿ ತೆಲುಗು ಭಾಷಾ ಸಾಹಿತ್ಯಗಳಿಗೆ ಪ್ರೋತ್ಸಾಹ ದೊರೆಯುತ್ತಿರುವುದರ ಜೊತೆಗೆ ಸುಮಾರು ಸಾವಿರ ವರ್ಷಗಳಿಂದ ಬೆಳೆದು ಬರುತ್ತಿರುವ ಸಾಹಿತ್ಯ ಬಾಂಧವ್ಯವೂ ಗಮನಾರ್ಹವಾಗಿದೆ. ಪಂಪ, ಪೊನ್ನ ಮುಂತಾದವರು ತೆಲುಗಿನೊಡನೆ ಅಷ್ಟೋ ಇಷ್ಟೋ ಸಂಬಂಧ ವಿದ್ದವರೆಂಬುದರಲ್ಲಿ ಸಂದೇಹವಿಲ್ಲ. ಪಂಪನ ತಮ್ಮನಾದ ಜಿನವಲ್ಲಭನ ಶಾಸನದಲ್ಲಿ ಕನ್ನಡ ಪದ್ಯಗಳ ಜೊತೆಯಲ್ಲಿ ತೆಲುಗು ಪದ್ಯಗಳೂ ಇರುವುದನ್ನು ಗಮನಿಸಬೇಕು. ಅವು ತೆಲುಗಿನಲ್ಲಿ ಲಭ್ಯವಾದ ಮೊದಲ ಕಂದಪದ್ಯಗಳೆಂಬುದೂ ಗಮನಾರ್ಹ ಸಂಗತಿಯಾಗಿದೆ.

ಆಧುನಿಕ ಕಾಲದಲ್ಲಿ ಕರ್ನಾಟಕದ ಅನೇಕರು ತೆಲುಗು ಸಾಹಿತ್ಯಕ್ಕೆ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ಉಲಚನಾಡು ವೆಂಕಟರಮಣಕವಿ 1850 ಕನ್ನಡದಲ್ಲಿ ಮಾತ್ರವಲ್ಲದೆ ತೆಲುಗಿನಲ್ಲಿ ವಾಸಿಷ್ಠ ರಾಮಾಯಣಮು, ಆಧ್ಯಾತ್ಮ ರಾಮಾಯಣಮು ಎಂಬ ಎರಡು ಕಾವ್ಯಗಳನ್ನು ಬರೆದಿದ್ದಾನೆ. ನ್ಯಾಪತಿ ಲಕ್ಷ್ಮೀನರಸಿಂಹಕವಿಗಳು ತೆಲುಗು ಪದ್ಯಗಳನ್ನು ಬರೆಯುವ ಸಾಮರ್ಥ್ಯವುಳ್ಳವರಾಗಿದ್ದರು. ಸಾಧುಪಲ್ಲಿ ಚಂದ್ರಶೇಖರಶಾಸ್ತ್ರಿ (1890) ಅಮರುಕ ಕಾವ್ಯವನ್ನು ತೆಲುಗಿಗೆ ಅನುವಾದ ಮಾಡಿದ್ದಾರೆ.

ಇತ್ತೀಚಿನ ಕಾಲದಲ್ಲಿ ಆಲೂರು ರಾಮಕವಿ, ಜೋಳದರಾಶಿ ದೊಡ್ಡನಗೌಡ ಮೊದಲಾದವರು ಕನ್ನಡದಲ್ಲಿ ಮಾತ್ರವಲ್ಲದೆ ತೆಲುಗಿನಲ್ಲೂ ಕೃತಿಗಳನ್ನು ಬರೆದು ಕರ್ನಾಟಕದ ತೆಲುಗು ಸಾಹಿತ್ಯಕ್ಕೆ ಕೊಡುಗೆಯನ್ನು ನೀಡಿದ್ದಾರೆ. ಬೆಂಗಳೂರು, ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳು ತೆಲುಗು ಭಾಷಾಸಾಹಿತ್ಯಗಳಿಗೆ ಪ್ರೋತ್ಸಾಹ ನೀಡುತ್ತಿವೆ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ತೆಲುಗಿನ ವೇಮನ ಕವಿಯ ಹೆಸರಿನಲ್ಲಿ ಪೀಠವೊಂದು ಸ್ಥಾಪನೆಯಾಗಿದೆ.

ತೆಲುಗಿನ ಆದಿಕವಿ ಎಂದು ಹೆಸರು ಪಡೆದಿರುವ ನನ್ನಯ (11ನೆಯ ಶತಮಾನ) ತನ್ನ ಆಂಧ್ರ ಮಹಾಭಾರತದಲ್ಲಿ ಪಂಪನನ್ನು ಅನುಸರಿಸಿದ್ದಾನೆಂಬುದು ಅನೇಕ ವಿದ್ವಾಂಸರ ಮಾತು. ನನ್ನಯನ ಸಹಾಧ್ಯಾಯಿ ನಾರಾಯಣಭಟ್ಟ ಕನ್ನಡದಲ್ಲಿಯೂ ಪಂಡಿತನಾಗಿದ್ದ.

ತೆಲುಗಿನ ಶೈವಕವಿಗಳು ಕನ್ನಡದಿಂದ ಬಹಳಷ್ಟು ನೆರವು ಪಡೆದಿದ್ದಾರೆ. ಬಸವಣ್ಣ ಅವರಿಗೆ ಸ್ಫೂರ್ತಿಯ ನೆಲೆಯಾಗಿದ್ದ. ಪಾಲ್ಕುರಿಕೆ ಸೋಮನಾಥ ತೆಲುಗಿನ ಮಹಾಕವಿಯಾಗಿದ್ದು ಕನ್ನಡದಲ್ಲಿಯೂ ಗ್ರಂಥ ರಚನೆ ಮಾಡಿದ್ದಾನೆ. ತೆಲುಗು ಕವಿ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿವತತ್ತ್ವಸಾರಮು ಕನ್ನಡಕ್ಕೂ ಭಾಷಾಂತರವಾಗಿದೆ. ತೆಲುಗಿನ ಮತ್ತೊಬ್ಬ ಶೈವಕವಿಯಾಗಿದ್ದ ನನ್ನೆಚೋಡದೇವ ಕನ್ನಡದ ಅನೇಕ ಕಾವ್ಯ ಸಂಪ್ರದಾಯಗಳನ್ನು ಅನುಸರಿಸಿದ್ದಾನೆ. ಪಾಲ್ಕುರಿಕೆ ಸೋಮನಾಥ'ನ ಬಸವಪುರಾಣ ಭೀಮಕವಿಯಿಂದ ಕನ್ನಡಕ್ಕೆ ರೂಪಾಂತರವಾಗಿದೆ. ಪಾಲ್ಕುರಿಕೆ ಸೋಮನಾಥನದೇ ಆದ ಪಂಡಿತಾರಾಧ್ಯ ಚರಿತ್ರೆಯನ್ನು ನೀಲಕಂಠಾಚಾರ್ಯ ಕನ್ನಡಿಸಿದ್ದಾನೆ.

ಕನ್ನಡದಲ್ಲಿ ವೀರಶೈವ ತತ್ತ್ವವನ್ನು ವಿವರಿಸುವ ಕೆರೆಯ ಪದ್ಮರಸನ ದೀಕ್ಷಾಬೋಧೆಯನ್ನು ಪಿಡುಪರ್ತಿ ಬಸವನ ಎಂಬ ತೆಲುಗು ಕವಿ ಆಂಧ್ರೀಕರಿಸಿದ್ದಾನೆ. ಚಾಮರಸನ ಪ್ರಭುಲಿಂಗಲೀಲೆ ಪಿಡುಪರ್ತಿ ಸೋಮನಾಥ ಕವಿಯಿಂದ ತೆಲುಗಿಗೆ ಭಾಷಾಂತರವಾಗಿದೆ.

ಸರ್ವಜ್ಞ ಮತ್ತು ವೇಮನರ ಬಗ್ಗೆ ಪ್ರತ್ಯೇಕವಾಗಿ ಹೇಳಬೇಕಾಗಿದೆ. ಸರ್ವಜ್ಞ ವೇಮನ ಸಂವಾದ ಎಂಬ ಪುಸ್ತಕವೊಂದು ಪ್ರಕಟವಾಗಿದೆ. ಅದರಲ್ಲಿ ಸಮಾನ ಭಾವವಿರುವ ನೂರಾರು ಪದ್ಯಗಳಿವೆ. ಈ ಇಬ್ಬರು ಸಂತಕವಿಗಳು ಒಂದೇ ಕಾಲದವರೆಂದಾಗಲಿ, ಒಬ್ಬರನ್ನೊಬ್ಬರು ಅನುಸರಿಸಿದರೆಂದಾಗಲಿ ಹೇಳಲು ಆಧಾರಗಳಿಲ್ಲದಿದ್ದರೂ ಇಬ್ಬರೂ ಪ್ರಾಯಶಃ ಸಮಾನದೃಷ್ಟಿಯಿಂದ ತಮ್ಮ ಪದ್ಯಗಳಲ್ಲಿ ಕೆಲವನ್ನಾದರೂ ಬರೆದಿದ್ದಾರೆಂಬುದು ಖಚಿತ.

ಈ ಎರಡು ಭಾಷೆಗಳ ಲಿಪಿಯಲ್ಲಿ ಅತ್ಯಂತ ನಿಕಟವಾದ ಸಂಬಂಧವಿದೆ. ಇವುಗಳಿಗೆ ಏಕಲಿಪಿಯನ್ನು ರೂಪಿಸುವ ಪ್ರಯತ್ನಗಳೂ ನಡೆದಿವೆ. ಕನ್ನಡ ತೆಲುಗುಗಳೆರಡೂ ಸಂಸ್ಕೃತ ಭಾಷಾಸಂಪ್ರದಾಯಗಳನ್ನು ಬಹುಮಟ್ಟಿಗೆ ಸ್ವೀಕರಿಸಿರುವುದರಿಂದ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಅನೇಕ ಸಾಮ್ಯಗಳು ಕಂಡುಬರುತ್ತವೆ. ಪದನಿರ್ಮಾಣ, ವಾಕ್ಯನಿರ್ಮಾಣದಿಂದ ಹಿಡಿದು ಕಾವ್ಯರಚನಾ ಸಂಪ್ರದಾಯಗಳವರೆಗೂ ಈ ಎರಡು ಭಾಷೆಗಳ ನಡುವೆ ಬಾಂಧವ್ಯ ಕಂಡುಬರುತ್ತದೆ. ಕೇತನ ಎಂಬ ತೆಲುಗು ವ್ಯಾಕರಣಕಾರ ಆಂಧ್ರ ಭಾಷಾಭೂಷಣವನ್ನು ಬರೆಯುವಾಗ ನಾಗವರ್ಮನ ಕರ್ಣಾಟಕ ಭಾಷಾಭೂಷಣ ಅವನಿಗೆ ನೆರವು ನೀಡಿತು. ಛಂದಸ್ಸಿನಲ್ಲಿ ಈ ಎರಡು ಭಾಷೆಗಳಿಗೂ ಇರುವ ಹೋಲಿಕೆ ಬಹಳ ಹತ್ತಿರವಾದುದು. ಸಂಸ್ಕೃತ ವೃತ್ತಗಳನ್ನು ಕನ್ನಡದವರು ತೆಗೆದುಕೊಂಡಿರುವಂತೆಯೇ ತೆಲುಗರೂ ತೆಗೆದುಕೊಂಡಿದ್ದಾರೆ. ಅಂಶಗಣಗಳಲ್ಲಿ ಕನ್ನಡ ತೆಲುಗುಗಳಿಗೆ ಹತ್ತಿರದ ಸಂಬಂಧವಿದೆ. ಅನೇಕ ಛಂದೋಗ್ರಂಥಗಳು ಪರಸ್ಪರ ಪ್ರಭಾವಕ್ಕೆ ಒಳಗಾಗಿವೆ. ಕನ್ನಡದಲ್ಲಿ ಅತ್ಯಂತ ಪ್ರಚುರವಾಗಿದ್ದ ಚಂಪೂಕಾವ್ಯ ತೆಲುಗಿನಲ್ಲಿಯೂ ಇನ್ನೂ ಹೆಚ್ಚಾಗಿ ಬಳಕೆಯಲ್ಲಿದೆ. ಹೀಗೆ ಈ ಒಂದೇ ಕುಟುಂಬದ ಎರಡು ಭಾಷೆಗಳೂ ತೌಲನಿಕ ಅಧ್ಯಯನಕ್ಕೆ ವಿಷಯವನ್ನು ವಿಸ್ತಾರವಾಗಿ ಒದಗಿಸುವಂಥವಾಗಿವೆ.

ಇಪ್ಪತ್ತನೆಯ ಶತಮಾನದ ಪ್ರಾರಂಭಕಾಲದಿಂದಲೇ ಕನ್ನಡದ ಹಲವು ಕೃತಿಗಳು ತೆಲುಗಿಗೆ ಮತ್ತು ತೆಲುಗಿನ ಕೃತಿಗಳು ಕನ್ನಡಕ್ಕೆ ಭಾಷಾಂತರಗೊಂಡಿವೆ. ಕನ್ನಡದ ಮಾಸ್ತಿ, ಡಿವಿಜಿ, ದೇವುಡು, ಶಿವರಾಮ ಕಾರಂತ, ತ್ರಿವೇಣಿ, ಯು.ಆರ್. ಅನಂತಮೂರ್ತಿ, ಆಲನಹಳ್ಳಿ ಕೃಷ್ಣ, ಪೂರ್ಣಚಂದ್ರ ತೇಜಸ್ವಿ ಮೊದಲಾದವರ ಕೃತಿಗಳು ತೆಲುಗಿಗೆ ಭಾಷಾಂತರಗೊಂಡು ಪ್ರಕಟವಾಗಿವೆ. ತೆಲುಗಿನ ಕಂದುಕೂರಿ ವೀರೇಶಲಿಂಗಂ, ಗುರಜಾಡ ಅಪ್ಪಾರಾವ್, ವಿಶ್ವನಾಥ ಸತ್ಯನಾರಾಯಣ, ಚಲಂ, ಶ್ರೀ.ಶ್ರೀ., ಸಿ. ನಾರಾಯಣರೆಡ್ಡಿ, ದಿಗಂಬರ ಕವಿಗಳು, ಯಂಡಮೂರಿ ವೀರೇಂದ್ರನಾಥ್ ಮೊದಲಾದವರ ರಚನೆಗಳು ಕನ್ನಡಕ್ಕೆ ಭಾಷಾಂತರಗೊಂಡಿವೆ. ಕೇಂದ್ರ ಸಾಹಿತ್ಯ ಅಕಾಡೆಮಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ವಿಶ್ವವಿದ್ಯಾಲಯ, ಎಂ.ಶೇಷಾಚಲಂ ಅಂಡ್ ಕಂಪನಿ ಮುಂತಾದ ಸಂಸ್ಥೆಗಳು ಇಂಥ ಕೃತಿಗಳ ಪ್ರಕಟಣೆಯನ್ನು ಕೈಗೊಂಡು ಎರಡು ಭಾಷೆಗಳ ನಡುವಿನ ಸಾಹಿತ್ಯ ಬಾಂಧವ್ಯವನ್ನು ಬೆಳೆಸಲು ನೆರವಾಗಿವೆ. (ಆರ್.ವಿ.ಎಸ್.ಎಸ್.)

**ಹಿಂದಿ :** ಆಧುನಿಕ ಯುಗದಲ್ಲಿ ಹಿಂದಿ ಭಾಷೆಯನ್ನು ಅಖಿಲ ಭಾರತ ಮಟ್ಟದಲ್ಲಿ ನೆಲೆಗೊಳಿಸಲು ಹಾಗೂ ಹಿಂದಿಯನ್ನು ಇಡೀ ರಾಷ್ಟ್ರದ ವಾಣಿಯಾಗಿ ಪ್ರಚುರಪಡಿಸಲು ಮಹಾತ್ಮ ಗಾಂಧೀಜಿಯವರು ಹಿಂದಿಯನ್ನು ಒಂದು ಆಂದೋಲನದಂತೆ ತಮ್ಮ ಕೈಗೆತ್ತಿಕೊಂಡರು. ಗಾಂಧೀಜಿ ತಮ್ಮ ಸಮಗ್ರ ಭಾರತ ಯಾತ್ರೆಯ ಸಂದರ್ಭದಲ್ಲಿ ಭಾರತದಂಥ ಬಹುಭಾಷೀಯ ಹಾಗೂ ಬಹು ಸಂಸ್ಕೃತಿಗಳ ದೇಶದಲ್ಲಿ ಭಾವೈಕ್ಯತೆ ಮತ್ತು ವಿಭಿನ್ನ ಭಾಷೀಯರ ನಡುವೆ ಸಂವಾದಗಳನ್ನು ಏರ್ಪಡಿಸಲು ಸಾಧ್ಯವಾಗುವುದು ಹಿಂದಿಯಿಂದ ಮಾತ್ರವೆಂದು ಭಾವಿಸಿದ್ದರು. ಹೀಗಾಗಿ ದೇಶದ ಪ್ರಾಂತೀಯ ಭಾಷೆಗಳ ವಿಕಾಸಕ್ಕೆ ಪೂರ್ಣ ಒತ್ತು ಕೊಟ್ಟು, ಇಂಗ್ಲಿಷ್‌ನ ಸ್ಥಾನದಲ್ಲಿ ಹಿಂದಿಯನ್ನು, ವ್ಯಾಪಕವಾಗಿ ಉಪಯೋಗಿಸಲು ಕಳಕಳಿ ಹಾಗೂ ಒತ್ತಾಸೆಯಿಂದ ಜನರಲ್ಲಿ ನಿವೇದಿಸಿಕೊಂಡರು.

ಗಾಂಧೀಜಿ ತಮ್ಮ ರಚನಾತ್ಮಕ ಕಾರ್ಯಗಳಲ್ಲಿ ಹಿಂದಿ ಪ್ರಚಾರ ಕಾರ್ಯವನ್ನೂ ಒಂದೆಂದು ಸ್ವೀಕರಿಸಿ ಇದರ ವ್ಯಾಪಕ ಪ್ರಯೋಗಕ್ಕೆ ನಾಂದಿ ಹಾಡಿದರು. ಇಂದೂರಿನಲ್ಲಿ 1918ರಲ್ಲಿ ನಡೆದ ಹಿಂದಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ, ಅವರ ಉದ್ಬೋಧಕ ವಿಚಾರಗಳನ್ನೊಳಗೊಂಡ ಭಾಷಣ ದೇಶದ ಏಕತೆಗೆ ಹಿಂದಿಯನ್ನು ಒಂದು ಪ್ರಬಲ ಶಕ್ತಿಯನ್ನಾಗಿ ಪ್ರತಿಪಾದಿಸುವಲ್ಲಿ ಯಶಸ್ವಿಯಾಯಿತು. ಅವರ ಪ್ರೇರಣೆ ಮತ್ತು ಪ್ರಭಾವದಿಂದಾಗಿ 1918 ಮಾರ್ಚ್ 30ರಂದು ಹಿಂದಿ ಸಾಹಿತ್ಯ ಸಮ್ಮೇಳನ ದಕ್ಷಿಣದ ಹಿಂದಿಯೇತರ ಪ್ರದೇಶಗಳಲ್ಲಿ ಹಿಂದಿ ಪ್ರಚಾರಕ್ಕಾಗಿ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾವನ್ನು ಸ್ಥಾಪಿಸಬೇಕೆಂಬ ನಿರ್ಣಯವನ್ನು ಅಂಗೀಕರಿಸಿತು. ಅದೇ ವರ್ಷ ಮದರಾಸಿನಲ್ಲಿ ಸ್ಥಾಪಿತವಾದ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ ದಕ್ಷಿಣದ ಎಲ್ಲ ಭಾಷಾ ಪ್ರದೇಶಗಳ ಮಾತೃ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತ ಬಂದಿದೆ.

ಹಿಂದಿಯನ್ನು ಕುರಿತ ಗಾಂಧೀಜಿಯವರ ವಿಚಾರಗಳು ಕರ್ನಾಟಕದ ಅಂದಿನ ಯುವಕರನ್ನು ಎಷ್ಟರ ಮಟ್ಟಿಗೆ ಆಕರ್ಷಿಸಿದವೆಂದರೆ ಕರ್ನಾಟಕದ ಉದ್ದಗಲಕ್ಕೂ ಹಿಂದಿ ಪ್ರಚಾರಕರು ಹಿಂದಿಯನ್ನು ಭಾವೈಕ್ಯತೆಯನ್ನು ಸಾಧಿಸುವ ಅನನ್ಯ ಶಕ್ತಿಯೆಂದು ಪರಿಭಾವಿಸಿ ಸಮರ್ಪಣ ಭಾವನೆಯಿಂದ ಹಿಂದಿ ಕಲಿತರು. ಕಲಿತ ಹಿಂದಿಯನ್ನು ಸಹಸ್ರಾರು ಮಂದಿಗೆ ಕಲಿಸಿದರು. ಮದರಾಸಿನ ಸಭಾದ ವಿವಿಧ ಪರೀಕ್ಷೆಗಳಿಗೆ ವಿದ್ಯಾರ್ಥಿಗಳನ್ನು ತಯಾರು ಮಾಡುವುದರ ಮೂಲಕ ಅಧಿಕೃತ ಪ್ರಮಾಣ ಪತ್ರಗಳನ್ನು ಪಡೆಯುವಂತೆ ಪ್ರೋತ್ಸಾಹಿಸಿದರು. ಮದರಾಸು ಸಭಾವನ್ನು ಕಟ್ಟಿ ಬೆಳೆಸಲು ಉತ್ತರದಿಂದ ಬಂದ ಭಾಷಾಪ್ರಚಾರಕರಲ್ಲಿ ಗಾಂಧೀಜಿಯವರ ಪುತ್ರ ದೇವದಾಸ್ ಗಾಂಧೀ, ಸ್ವಾಮಿ ಸತ್ಯದೇವ ಪರಿವ್ರಾಜಕ, ಪ್ರತಾಪ್ ನಾರಾಯಣ್, ವಾಜಪೇಯಿ, ಹೃಷಿಕೇಶ್ ಶರ್ಮರಂಥವರು ಉಲ್ಲೇಖನೀಯರಾಗಿದ್ದಾರೆ. ಹಿಂದಿ ಪ್ರಚಾರಕ್ಕೆ ಇವರೆಲ್ಲ ಹಾಕಿದ ಭದ್ರ ಬುನಾದಿಯ ಮೇಲೆ ದಕ್ಷಿಣದ ರಾಜ್ಯಗಳಲ್ಲಿ ಹಿಂದಿ ವಿಕಾಸಗೊಂಡಿದೆ.

ಕರ್ನಾಟಕದಲ್ಲಿ ಹಿಂದಿ ಪ್ರಚಾರಾಂದೋಲನದ ಮೂಲಕೇಂದ್ರ ಮದರಾಸಿನ ಸಭಾವೇ ಆಗಿದೆ. 1925ರಲ್ಲಿ ಶಿವರಾಮಶಾಸ್ತ್ರಿ, ಟಿ.ಕೃಷ್ಣಸ್ವಾಮಿ, ಜಮುನಾ ಪ್ರಸಾದ್, ಸಿದ್ಧನಾಥಪಂತ್, ಸಿದ್ಧಗೋಪಾಲ್ ಮುಂತಾದವರು ಕರ್ನಾಟಕದ ನಾನಾ ಭಾಗಗಳಲ್ಲಿ ಹಿಂದಿ ಪ್ರಚಾರ ಕಾರ್ಯವನ್ನು ಆರಂಭಿಸಿದರು. ಮುಂದೆ 1927ರಲ್ಲಿ ಗಾಂಧೀಜಿ ಕರ್ನಾಟಕಕ್ಕೆ ಬಂದಿದ್ದಾಗ ಬೆಂಗಳೂರಿನಲ್ಲಿ ಹಿಂದಿ ಪ್ರಚಾರಕರ ಸಮಾವೇಶ ನಡೆದು ಇದರ ಅಧ್ಯಕ್ಷತೆಯನ್ನು ಗಾಂಧೀಜಿ ವಹಿಸಿದ್ದರು. ಸಮಾವೇಶವನ್ನು ಪಂಡಿತ ಮದನ ಮೋಹನ ಮಾಳವೀಯರು ಉದ್ಘಾಟಿಸಿದರು. ಈ ಅಧಿವೇಶನದಲ್ಲಿ ಗಾಂಧೀಜಿಯವರ ಭಾಷಾ ವಿಷಯಕ ವಿಚಾರಗಳು ಪ್ರಚಾರಕರ ಉತ್ಸಾಹವನ್ನು ಇಮ್ಮಡಿಗೊಳಿಸಿದವು. ಈ ಹಿಂದೆಯೇ ಉಲ್ಲೇಖಿಸಿದ ವ್ಯಕ್ತಿಗಳ ಜೊತೆಗೆ ವೆಂಕಟಾಚಲಶರ್ಮಾ, ಟಿ.ಕೆ.ಸುಬ್ಬರಾವ್, ಎಂ.ವಿ.ಜಂಬುನಾಥ್‌ನ್, ವೆಂಕಟಾಚಲಯ್ಯ, ರಾಘವಾಚಾರ್ಯ, ಡಿ.ಕೆ.ಭಾರದ್ವಾಜ್, ಎ.ಟಿ.ಶ್ರೀನಿವಾಸ ರಾಘವಾಚಾರ್ಯ ಮೊದಲಾದವರು ಕರ್ನಾಟಕದಲ್ಲಿ ಮೊದಲ ಪೀಳಿಗೆಯ ಹಿಂದಿ ಕಾರ್ಯಕರ್ತರಾಗಿ ದುಡಿದರು. ಈ ಸಂದರ್ಭದಲ್ಲಿ ಉಲ್ಲೇಖಿಸಲೇಬೇಕಾದ ಅಂಶವೆಂದರೆ ಹಿಂದಿ ಪ್ರಚಾರಕರಷ್ಟೇ ಅಲ್ಲ, ಸಾರ್ವಜನಿಕ ಬದುಕಿನ ಗಣ್ಯ ವ್ಯಕ್ತಿಗಳಾದ ಎನ್.ಎಸ್.ಹರ್ಡೀಕರ್, ಗಂಗಾಧರ್‌ರಾವ್ ದೇಶಪಾಂಡೆ, ತಾತಯ್ಯ ಎಂದೇ ಪ್ರಸಿದ್ಧರಾದ ಮೈಸೂರಿನ ವೆಂಕಟಕೃಷ್ಣಯ್ಯ, ಬೆಂಗಳೂರಿನ ಕೆ.ಪಿ.ಪುಟ್ಟಣ್ಣಚೆಟ್ಟಿ, ಸಿ.ಬಿ.ರಾಮರಾವ್, ಸಂಪದ್ಗಿರಿರಾವ್ ಮೊದಲಾದವರು ರಾಷ್ಟ್ರೀಯ ಬದುಕಿನಲ್ಲಿ ಹಿಂದಿನ ಮಹತ್ತ್ವವನ್ನು ಮನಗಂಡು ಹಿಂದಿಯ ಪ್ರಚಾರ ಕಾರ್ಯಕ್ಕೆ ಬೆಂಗಾವಲಾಗಿ ನಿಂತರು. ಈ ಪರಂಪರೆಯಲ್ಲಿ ಇಂದಿಗೂ ಅನೇಕ ಮಹನೀಯರು ಹಿಂದಿ ಪ್ರಚಾರ ಕಾರ್ಯದಲ್ಲಿ ತೊಡಗಿಕೊಂಡಿದ್ದಾರೆ.

ಹಿಂದಿ ಪ್ರಚಾರ ಕಾರ್ಯದಲ್ಲಿ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿ ತೊಡಗಿಕೊಂಡಲ್ಲಿ ಹಿಂದಿ ಪ್ರಚಾರಕ್ಕೆ ತೀವ್ರತೆ ಮತ್ತು ಗತಿಶೀಲತೆ ಬರುವುದೆಂದು ಗಾಂಧೀಜಿ ಹೇಳಿದ್ದರು. ಗಾಂಧೀಜಿಯವರ ಆಶಯದಂತೆ ಕರ್ನಾಟಕದ ಮಹಿಳೆಯರು ಹಿಂದಿ ಪ್ರಚಾರದ ಮೂಲಕ ಸಮಾಜದಲ್ಲಿ ರಾಷ್ಟ್ರೀಯ ಜಾಗೃತಿಯನ್ನು ಹುರಿದುಂಬಿಸುವಲ್ಲಿ ನೆರವಾದರು. ಕರ್ನಾಟಕದಲ್ಲಿ ಹಿಂದಿ ಪ್ರಚಾರಾಂದೋಲನದ ಆರಂಭದ ವರ್ಷಗಳಲ್ಲಿ ಕೆಲಸ ಮಾಡಿದ ಸುಶೀಲಾ ಬಾಯಿ, ರುಕ್ಮಿಣಿದೇವಿ, ಕಾಮಾಕ್ಷಿದೇವಿ, ಉಮಾಬಾಯಿ ಕುಂದಾಪುರಕರ್, ಇಂದಿರಾ ಕೃಷ್ಣಮೂರ್ತಿ ಮುಂತಾದವರ ಸೇವೆ ಉಲ್ಲೇಖನೀಯವಾದುದು.

ಈ ಅವಧಿಯಲ್ಲಿಯೇ ಕರ್ನಾಟಕದ ಯುವಕರು ಹಿಂದಿ ಸಾಹಿತ್ಯದಲ್ಲಿ ಉಚ್ಚ ಶಿಕ್ಷಣ ಪಡೆಯಲು ಉತ್ತರ ಭಾರತದ ವಿಶ್ವವಿದ್ಯಾಲಯಗಳಿಗೆ ಹೋದದ್ದು ಮಹತ್ವದ ಸಂಗತಿಯಾಗಿದೆ. ನಾ.ನಾಗಪ್ಪ, ಹಿರಣ್ಮಯ, ಮೇ.ರಾಜೇಶ್ವರಯ್ಯ - ಇವರು ಬನಾರಸ್ ಹಿಂದು ವಿಶ್ವವಿದ್ಯಾಲಯದಲ್ಲಿ ಪ್ರವೇಶ ಪಡೆದು ಹಿಂದಿ ಎಂ.ಎ. ಪದವಿ ಪಡೆದರು. ನಾ.ನಾಗಪ್ಪನವರು ಆಗ ದಕ್ಷಿಣ ಭಾರತದಲ್ಲಿ ಹಿಂದಿ ಎಂ.ಎ. ಮಾಡಿದ ಮೊದಲ ವಿದ್ಯಾರ್ಥಿ ಎಂಬ ಹೆಗ್ಗಳಿಕೆಗೆ ಪಾತ್ರರಾದರೆ, ಹಿರಣ್ಮಯ ಅವರು ಹಜಾರಿ ಪ್ರಸಾದ ದ್ವಿವೇದಿಯವರ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿ ಪಡೆದ ಕರ್ನಾಟಕದ ಮೊದಲ ವಿದ್ಯಾರ್ಥಿ ಎಂಬ ಗೌರವಕ್ಕೆ ಪಾತ್ರರಾದರು.

ಹಿಂದಿ ಸಾಹಿತ್ಯದತ್ತ ಜನರ ಚಿತ್ತವನ್ನು ಸೆಳೆಯಲು ಅಂದಿನ ಹಿರಿಯರು ಸೃಜನಾತ್ಮಕ ಹಾಗೂ ರಚನಾತ್ಮಕವಾದ ಎಷ್ಟೋ ಪ್ರಯೋಗಗಳನ್ನು ನಡೆಸಿದರು. ಬಹುಭಾಷಾವಿದರೂ ಪ್ರಸಿದ್ಧ ವೈದ್ಯರೂ ಆಗಿದ್ದ ಪಂಡಿತ ತಾರಾನಾಥರು ಹಿಂದಿ ಪ್ರೇಮಿಗಳೂ ಲೇಖಕರೂ ಆಗಿದ್ದರು. ಇವರು ಸ್ವಾತಂತ್ರ್ಯ ಪೂರ್ವದ ದಿನಗಳಲ್ಲಿ ಕನ್ನಡ ಲಿಪಿಯಲ್ಲಿ ಬರೆದ ದೀನಬಂಧು ಕಬೀರ್ ಎಂಬ ಹಿಂದಿ ನಾಟಕವನ್ನು ಬೆಂಗಳೂರಿನಲ್ಲಿ ಗಾಂಧೀಜಿಯವರ ಸಮ್ಮುಖದಲ್ಲಿ ಅಭಿನಯಿಸಿದಾಗ ಅವರು ತುಂಬಾ ಪ್ರಭಾವಿತರಾದರು. ಅಂತೆಯೇ ಪಂಡಿತ ತಾರಾನಾಥರ ಈ ಪ್ರಯತ್ನವನ್ನು ಶ್ಲಾಘಿಸಿದರು. ಈ ನಿಟ್ಟಿನಲ್ಲಿ ಹಿಂದಿಯ ಪ್ರಸಿದ್ಧ ನಾಟಕಗಳಾದ ಮೇವಾಡ್ ಪತನ್, ವೀರ್ ಅಭಿಮನ್ಯು ಮುಂತಾದ ಹಿಂದಿ ನಾಟಕಗಳನ್ನು ಮೈಸೂರು, ಬೆಂಗಳೂರು, ಮದರಾಸು ಮುಂತಾದ ಸ್ಥಳಗಳಲ್ಲಿ ಅಭಿನಯಿಸುವಲ್ಲಿ ಆಕಾಶವಾಣಿಯ ನಟೇಶ್ ಮೊದಲಿಯಾರ್, ಚಲನಚಿತ್ರ ಸಾಹಿತಿ ಚಿ.ಸದಾಶಿವಯ್ಯ ಹಾಗೂ ಸಿ.ಕೆ.ನಾಗರಾಜರಾವ್ ಮುಂತಾದವರು ಅನನ್ಯ ಸಹಕಾರ ನೀಡಿದರು. ಜೊತೆಗೆ ಹಿಂದಿ ಕಲಿಯುವವರ ಅನುಕೂಲಕ್ಕಾಗಿ ಅನಿವಾರ್ಯವಾಗಿ ಬೇಕಾದ ಪುಸ್ತಕಗಳ ರಚನೆಯಾದದ್ದು ಮಹತ್ತ್ವದ ಕಾರ್ಯವಾಗಿದೆ. ಈ ನಿಟ್ಟಿನಲ್ಲಿ ಪಂಡಿತ ಸಿದ್ಧನಾಥ ಪಂತರ ಹಿಂದಿ - ಕನ್ನಡ ಸ್ವಯಂಬೋಧಿನಿ, ಜಂಬುನಾಥನ್‌ರ ಹಿಂದಿ ವ್ಯಾಕರಣ, ಹಿಂದಿ - ಕನ್ನಡ ಶಬ್ದಕೋಶ ಮುಂತಾದ ಇತರೆ ಉಪಯೋಗಿ ಕೃತಿಗಳು, ಡಿ.ಕೆ.ಭಾರದ್ವಾಜರ ಹಿಂದಿ ಪ್ರಚಾರಕ್ಕೆ ಪೂರಕವಾದ ಗ್ರಂಥಗಳನ್ನು ಇಲ್ಲಿ ನೆನೆಯಬಹುದು.

1935 ರಿಂದ 1947ರ ಮಧ್ಯೆ ಕರ್ನಾಟಕದಲ್ಲಿ ಹಿಂದಿ ಪ್ರಚಾರ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಲು ಬೆಂಗಳೂರ್ ಹಿಂದಿ ಪ್ರಚಾರಕ್ ಗಿಲ್ಡ್, ಹಿಂದಿ ಪ್ರಚಾರ್ ಸಮ್ಮೇಲನ ಸ್ಥಾಯಿ ಸಮಿತಿ ಹಾಗೂ ಹಿಂದಿ ಸಾಹಿತ್ಯ ಪರಿಷತ್‌ಗಳು ಕ್ರಿಯಾಶೀಲವಾಗಿದ್ದುವು. ಜೊತೆಗೆ ಕರ್ನಾಟಕದಲ್ಲಿನ ಹಿಂದಿ ಪ್ರೇಮಿಗಳು ಈ ರಾಜ್ಯದಲ್ಲಿ ಹಿಂದಿ ಪ್ರಚಾರವನ್ನು ಸಂಘಟನಾತ್ಮಕವಾಗಿ ಮಾಡಲು ಒಂದು ಸಂಸ್ಥೆಯನ್ನು ಸ್ಥಾಪಿಸಲು ನಿರ್ಧರಿಸಿದರು. 1936ರಲ್ಲಿ ಕರ್ನಾಟಕ ಪ್ರಾಂತೀಯ ಹಿಂದಿ ಪ್ರಚಾರ ಸಭಾ ಎಂಬ ಸಂಸ್ಥೆಯನ್ನು ಬೆಂಗಳೂರಿನಲ್ಲಿ ಆರಂಭಿಸಿದರು. ಮೊದಲ ಹಂತದಲ್ಲಿ ಕೆ.ಪಿ.ಪುಟ್ಟಣಚೆಟ್ಟಿಯವರು ಗೌರವಾಧ್ಯಕ್ಷರಾಗಿ, ಸಿ.ಬಿ.ರಾಮರಾವ್ ಅವರು ಅಧ್ಯಕ್ಷರಾಗಿ, ಕೆ.ಸಂಪದ್ಗಿರಿರಾವ್, ನಾರಾಯಣ್‌ನಾಯಕ್ ಮತ್ತು ಸಿದ್ಧನಾಥ ಪಂತ್‌ರು ಕೋಶಾಧ್ಯಕ್ಷರೂ ಸಂಚಾಲಕರೂ ಆಗಿ ಆಯ್ಕೆಯಾದರು. 1937ರಲ್ಲಿ ಈ ಸಭಾವನ್ನು ಧಾರವಾಡಕ್ಕೆ ವರ್ಗಾಯಿಸಲಾಯಿತು. ಸುಮಾರು ಎಪ್ಪತ್ತು ವರ್ಷಗಳಿಂದ ಈ ಪ್ರಾಂತೀಯ ಸಭಾ ಹಿಂದಿ ಪ್ರಚಾರ ಕಾರ್ಯದಲ್ಲಿ ತೊಡಗಿಸಿಕೊಂಡಿದೆ. ಈ ಮಧ್ಯೆ ಇದು ಕರ್ನಾಟಕದ ಸ್ವತಂತ್ರ ಸಂಸ್ಥೆಯೋ ಅಥವಾ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭೆಯ ಅಂಗಸಂಸ್ಥೆಯೋ ಎಂಬ ವಿವಾದ ತಲೆಎತ್ತಿ ಈಗ ಇದು ಮದರಾಸು ಸಭಾದ ಅಂಗಸಂಸ್ಥೆಯೆಂದೇ ತೀರ್ಮಾನವಾಗಿದೆ.

ಕರ್ನಾಟಕದ ಪ್ರಾಂತೀಯ ಹಿಂದಿ ಪ್ರಚಾರ ಸಭಾದ (1936) ಸ್ಥಾಪನೆಯೊಂದಿಗೆ ಕರ್ನಾಟಕದಲ್ಲಿ ಹಿಂದಿ ಪ್ರಚಾರ-ಪ್ರಸಾರಕ್ಕೆ ಹೊಸ ಆಯಾಮಗಳು ತೆರೆದುಕೊಂಡವು. ಅಂದಿನ ಅನುಭವಿ ಪ್ರಚಾರಕ ಕಾರ್ಯಕರ್ತರು ತಮ್ಮದೇ ಆದ ಸಂಸ್ಥೆಗಳನ್ನು ಸ್ಥಾಪಿಸಿದರು. ಇವೆಂದರೆ ಮೈಸೂರು ರಿಯಾಸತ್ ಹಿಂದಿ ಪ್ರಚಾರ್ ಸಮಿತಿ (1938), ಮೈಸೂರು ಹಿಂದಿ ಪ್ರಚಾರ್ ಪರಿಷದ್ (1942), ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ (1943). ಗುಲ್ಬರ್ಗದಲ್ಲಿ ಸಹ ಹಿಂದಿ ಪ್ರಚಾರ ಸಮಿತಿ ಆರಂಭವಾಗಿದೆ. ಹೀಗೆ ಈ ಐದು ಸಂಸ್ಥೆಗಳು ಇಡೀ ಕರ್ನಾಟಕವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ನಿರಂತರವಾಗಿ ಹಿಂದಿ ಪ್ರಚಾರ ಕಾರ್ಯದಲ್ಲಿ ತೊಡಗಿಕೊಂಡಿವೆ.

ಕರ್ನಾಟಕದಲ್ಲಿ ಹಿಂದಿಯನ್ನು ಶಾಲಾ ಮಟ್ಟದಲ್ಲಿ ಕಲಿಸಲು ಅವಕಾಶ ಕಲ್ಪಿಸಿಕೊಡುವುದರ ಮೂಲಕ ರಾಜ್ಯದ ಸಾರ್ವಜನಿಕ ಶಿಕ್ಷಣ ಇಲಾಖೆ ಹಿಂದಿ ಭಾಷೆ ಮತ್ತು ಸಾಹಿತ್ಯ ಪ್ರಸಾರ ಕಾರ್ಯದಲ್ಲಿ ಅತ್ಯಮೂಲ್ಯ ಕೊಡುಗೆಯನ್ನಿತ್ತಿದೆ. 1930ರಲ್ಲಿ ಹಿಂದಿ ಸಾರ್ವಜನಿಕ ಶಿಕ್ಷಣ ಇಲಾಖೆಯನ್ನು ಪ್ರವೇಶಿಸಿತು. ಆ ದಿನಗಳಲ್ಲಿ ಶಾಲಾ ಹಂತದಲ್ಲಿ ಸ್ವಂತ ಅಭ್ಯಾಸ ಮಾಡಿ ಪರೀಕ್ಷೆಗಳನ್ನು ಬರೆಯುವ ಅವಕಾಶವಿತ್ತು. ಆದರೆ ಆರಂಭದ ವರ್ಷಗಳಲ್ಲಿ ಎಸ್.ಎಸ್.ಎಲ್.ಸಿ.ಯಲ್ಲಿ ದ್ವಿತೀಯ ಭಾಷೆಯ ರೂಪದಲ್ಲಿ ಹಿಂದಿಯನ್ನು ಅಭ್ಯಾಸ ಮಾಡಲು ಅನುಕೂಲ ಕಲ್ಪಿಸಲಾಯಿತು. ಈ ಅನುಕೂಲ ಬಹಳ ದಿನಗಳ ಕಾಲ ಇರಲಿಲ್ಲ. ಹಿಂದಿಯಿಂದ ಮಾತೃಭಾಷೆಯ ಅಧ್ಯಯನಕ್ಕೆ ಧಕ್ಕೆಯಾಗಬಹುದೆಂಬ ಆತಂಕದಿಂದ ಹಿಂದಿಯನ್ನು ಐಚ್ಛಿಕ ವಿಷಯದ ಪಟ್ಟಿಗೆ ಸೇರಿಸಲಾಯಿತು. 1935ರಲ್ಲಿ ಮಾಧ್ಯಮಿಕ ಶಾಲಾ ಹಂತದಲ್ಲಿ ಹಿಂದಿಕಲಿಸುವಿಕೆಗೆ ವ್ಯವಸ್ಥೆ ಮಾಡಲಾಯಿತು. ಕಾಲ ಬದಲಾದಂತೆ ಹಿಂದಿಯ ಬಗೆಗಿನ ಸರ್ಕಾರದ ದೃಷ್ಟಿಯೂ ಬದಲಾಗುತ್ತ ಬಂದು 1946ರಲ್ಲಿ ಹಿಂದಿಯನ್ನು ಪ್ರೌಢಶಾಲಾ ಹಂತದಲ್ಲಿ ಅನಿವಾರ್ಯ ವಿಷಯವನ್ನಾಗಿ ಮಾಡಿದರಾದರೂ ಪರೀಕ್ಷೆಯ ವಿಷಯವನ್ನಾಗಿ ಮಾಡಲಿಲ್ಲ. 1955ರಲ್ಲಿ ಹಿಂದಿ ವಿದ್ವಾನ್ ಕೋರ್ಸ್‌ನ್ನು ಸರ್ಕಾರ ಮೈಸೂರಿನಲ್ಲಿ ಆರಂಭಿಸಿತು. ಈ ಕೋರ್ಸ್ ನಾಲ್ಕು ವರ್ಷಗಳ ಅವಧಿಯದಾಗಿದ್ದು ಹಿಂದಿಯಲ್ಲಿ ಉನ್ನತ ಶಿಕ್ಷಣವನ್ನು ನೀಡುವ ಉತ್ತಮ ಪಠ್ಯಕ್ರಮವನ್ನು ಹೊಂದಿತ್ತು. ಈಚಿನ ವಿಷಯಗಳಲ್ಲಿ ಈ ಕೋರ್ಸನ್ನು ಸರ್ಕಾರ ಸ್ಥಗಿತಗೊಳಿಸಿತು. ಇದೇ ರೀತಿಯಾಗಿ ಹಿಂದಿ ಶಿಕ್ಷಕರ ಟ್ರೈನಿಂಗ್ ಕಾಲೇಜನ್ನು ಸಹ ಸರ್ಕಾರ ಮೊದಲ ಹಂತದಲ್ಲಿ ಮೈಸೂರಿನಲ್ಲಿ ಸ್ಥಾಪಿಸಿ, ಅನಂತರದ ವರ್ಷಗಳಲ್ಲಿ ಗುಲ್ಬರ್ಗ ಮತ್ತು ಬಾಗಲಕೋಟೆಗಳಲ್ಲೂ ಈ ಬಗೆಯ ಕಾಲೇಜುಗಳನ್ನು ಸ್ಥಾಪಿಸಿ ಸಾವಿರಾರು ಹಿಂದಿ ಶಿಕ್ಷಕರಿಗೆ ತರಬೇತನ್ನು ನೀಡಿತು. ಈಗ ಈ ಮೂರೂ ಕಾಲೇಜುಗಳೂ ಕಾರ್ಯನಿರ್ವಹಿಸುತ್ತಿಲ್ಲ. ಕರ್ನಾಟಕದಲ್ಲಿ ಈಚಿನ ವರ್ಷಗಳಲ್ಲಿ ಸಮಿತಿ ಸಭಾಗಳು ಸರ್ಕಾರದ ಅನುಮತಿ ಮಾನ್ಯತೆ ಪಡೆದು ತರಬೇತಿ ಕಾಲೇಜುಗಳನ್ನು ನಡೆಸುತ್ತಿವೆ.

ಕರ್ನಾಟಕ ಸರ್ಕಾರ 1959ರಲ್ಲಿ ಹಿಂದಿ ಪ್ರಚಾರ-ಪ್ರಸಾರದಲ್ಲಿ ತೀವ್ರತೆಯನ್ನು ತರಲು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಹಿಂದಿ ಅಧಿಕಾರಿ ಹುದ್ದೆಯನ್ನು ಸೃಷ್ಟಿಸಿತು. ಈ ವಿಭಾಗ ಕರ್ನಾಟಕದಲ್ಲಿ ಹಿಂದಿ ಶಿಕ್ಷಣದ ಸರ್ವತೋಮುಖ ಪ್ರಗತಿಗೆ ಆರಂಭದ ವರ್ಷಗಳಲ್ಲಿ ನೀಡಿರುವ ಯೋಜನೆಗಳು ಮಹತ್ತ್ವದ್ದಾಗಿವೆ. ಕರ್ನಾಟಕದ ಹಿಂದಿ ಲೇಖಕರನ್ನು ಹಾಗೂ ಅನುವಾದಕರನ್ನು ಪ್ರೋತ್ಸಾಹಿಸಲು ರೂಪಿಸಿದ್ದ ಬಹುಮಾನ ಯೋಜನೆ ಈಚಿನ ವರ್ಷಗಳಲ್ಲಿ ಸ್ಥಗಿತಗೊಂಡಿದೆ.

ಕರ್ನಾಟಕದಲ್ಲಿ ಹಿಂದಿ ಭಾಷೆ ಮತ್ತು ಸಾಹಿತ್ಯದ ಅಧ್ಯಯನ ಮತ್ತು ಅಧ್ಯಾಪನಕ್ಕೆ ಹೊಸ ಆಯಾಮ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಹಿಂದಿ ಪ್ರವೇಶದ ಐತಿಹಾಸಿಕ ಘಟನೆಯಿಂದ ಆರಂಭವಾಗುತ್ತದೆ. ಸಿ.ವೈ. ಚಿಂತಾಮಣಿಯವರು 1937ರಲ್ಲಿ ಹಿಂದಿಗೆ ವಿಶ್ವವಿದ್ಯಾನಿಲಯದಲ್ಲಿ ಸ್ಥಾನ ಸಿಗಬೇಕೆಂದು ಪ್ರತಿಪಾದಿಸಿದ ಹಿನ್ನೆಲೆಯಲ್ಲಿ 1938ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಹಿಂದಿಯ ಪ್ರವೇಶ ದೊರೆಯಿತು. ವಿಶ್ವವಿದ್ಯಾನಿಲಯದಲ್ಲಿ ಮೊದಲ ಹಿಂದಿ ಅಧ್ಯಾಪಕರಾಗಿ ಸೇವೆ ಆರಂಭಿಸಿದ ನಾ.ನಾಗಪ್ಪನವರು ಹಿಂದಿ ಶಿಕ್ಷಣವನ್ನು ಕಾಲೇಜು ಹಾಗೂ ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಹಂತದಲ್ಲಿ ಪ್ರಾರಂಭಿಸಲು ಕಾರಣಪುರುಷರಾದರು. 1959ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಹಿಂದಿ ಎಂ.ಎ. ತರಗತಿಗಳು ಆರಂಭವಾದವು. ಮುಂದೆ 1981ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯ ಮೂಲಕ ಹಿಂದಿ ಎಂ.ಎ. ತರಗತಿಗಳನ್ನು ಆರಂಭಿಸಿತು. ಮೇ. ರಾಜೇಶ್ವರಯ್ಯನವರ ನೇತೃತ್ವದಲ್ಲಿ ಆರಂಭಗೊಂಡ ಹಿಂದಿ ಎಂ.ಎ., ಕೋರ್ಸ್ ಇಡೀ ದೇಶದಲ್ಲೇ ಜನಪ್ರಿಯವಾಯಿತು. ಹಿಂದಿ ಭಾಷೀಯ ರಾಜ್ಯಗಳ ವಿದ್ಯಾರ್ಥಿಗಳೂ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಹಿಂದಿ ಕಲಿಯಲು ಬಂದದ್ದು ಒಂದು ದಾಖಲೆಯೆಂದೇ ಹೇಳಬೇಕು. ಕರ್ನಾಟಕದಲ್ಲಿ ಇತರ ವಿಶ್ವವಿದ್ಯಾಲಯಗಳು ಸ್ಥಾಪಿತಗೊಂಡಾಗ ಅಲ್ಲೂ ಹಿಂದಿ ವಿಭಾಗಗಳು ಆರಂಭವಾದುವು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ 1971ರಲ್ಲಿ ಗುಲ್ಬರ್ಗದ ಹಿಂದಿ ಸ್ನಾತಕೋತ್ತರ ಕೇಂದ್ರ (1976) (ಮುಂದೆ ಗುಲ್ಬರ್ಗ ವಿಶ್ವವಿದ್ಯಾಲಯದಲ್ಲಿ ಈ ಕೇಂದ್ರ ಸ್ವತಂತ್ರ ವಿಭಾಗವಾಗಿ ಕಾರ್ಯ ನಿರ್ವಹಿಸಲಾರಂಭಿಸಿತು), ಬೆಂಗಳೂರು ವಿಶ್ವವಿದ್ಯಾಲಯದಲ್ಲಿ 1972ರಲ್ಲಿ, ಈಚೆಗೆ ಕುವೆಂಪು ವಿಶ್ವವಿದ್ಯಾಲಯದಲ್ಲಿ ಹಿಂದಿ ಸ್ನಾತಕೋತ್ತರ ವಿಭಾಗಗಳು ಪ್ರಾರಂಭಗೊಂಡು ಕಾರ್ಯನಿರತವಾಗಿವೆ.

ಇಲ್ಲೆಲ್ಲ ಹಿಂದಿಯಲ್ಲಿ ಸ್ನಾತಕೋತ್ತರ ಶಿಕ್ಷಣ ಹಾಗೂ ಸಂಶೋಧನೆಗಳು ಯಶಸ್ವಿಯಾಗಿ ಸಾಗಿವೆ. ಈ ಮಧ್ಯೆ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ ಧಾರವಾಡದಲ್ಲಿ ಸ್ನಾತಕೋತ್ತರ ಹಿಂದಿ ಶಿಕ್ಷಣವನ್ನು ಆರಂಭಿಸಿದ್ದು ಇಲ್ಲೂ ಹಿಂದಿಯಲ್ಲಿ ಸಂಶೋಧನೆ ನಡೆಯುತ್ತಿದೆ. ಹೀಗೆ ಕರ್ನಾಟಕದಲ್ಲಿನ ಸಂಶೋಧನೆಗಳು ವಿಶ್ವವಿದ್ಯಾಲಯಗಳಲ್ಲಿ ಹಿಂದಿಗೆ ಸಾಕಷ್ಟು ಪ್ರಮಾಣದಲ್ಲಿ ಉತ್ತೇಜನ ನೀಡಿವೆ. ವಿಶ್ವವಿದ್ಯಾಲಯಗಳ ಹಂತದಲ್ಲಿ ಹಿಂದಿಯನ್ನು ಪ್ರತಿಷ್ಠಾಪಿಸುವುದರಲ್ಲಿ ನಾಗಪ್ಪ, ಮೇ. ರಾಜೇಶ್ವರಯ್ಯ, ರಾಧಾಕೃಷ್ಣ ಮೊದಲಿಯಾರ್, ಹಿರಣ್ಮಯಿ, ಶಂಕರರಾವ್ ಕೊಪ್ಪೀಕೇರಿ, ಸರಗೂ ಕೃಷ್ಣಮೂರ್ತಿ ಮುಂತಾದವರ ಕೊಡುಗೆ ಮಹತ್ತ್ವದ್ದಾಗಿದೆ.

ಕರ್ನಾಟಕ ಹಿಂದಿಯೇತರ ಭಾಷಿಕ ರಾಜ್ಯವಾದರೂ ಇಲ್ಲಿ ಹಿಂದಿ ಭಾಷೆಯಲ್ಲಿ ಮೌಲಿಕ ಸಾಹಿತ್ಯವನ್ನು ಸೃಜಿಸಿರುವ ಒಂದು ಪರಂಪರೆಯನ್ನೇ ಕಾಣಬಹುದು. ದಖನೀ ಭಾಷೆ ಗುಲಬರ್ಗ, ಬೀದರ್ ಹಾಗೂ ಬಿಜಾಪುರಗಳಲ್ಲಿ ಮುಸ್ಲಿಂ ದೊರೆಗಳ ಕಾಲದಲ್ಲಿ ಬಳಕೆಯಲ್ಲಿದ್ದು ವಿಪುಲವಾಗಿ ಸಾಹಿತ್ಯ ಸೃಷ್ಟಿಯಾಯಿತು.

ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಹಿಂದಿಯಲ್ಲಿ ಸೃಜನಾತ್ಮಕ ಬರವಣಿಗೆ ಸಾಕಷ್ಟು ಪ್ರಮಾಣದಲ್ಲಿ ಆಗಿದೆ. ಹಿಂದಿಯನ್ನು ಕಲಿತ ಕನ್ನಡಿಗರು ಆ ಭಾಷೆಯಲ್ಲಿ ಅಭಿವ್ಯಕ್ತಿ ಮಾಡುವಷ್ಟು ಪ್ರೌಢಿಮೆಯನ್ನು ಸಾಧಿಸಿದ್ದು ಹೆಮ್ಮೆಯ ವಿಷಯವೇ ಸರಿ. ಕರ್ನಾಟಕದ ಹಿಂದಿ ಕವಿಗಳಲ್ಲಿ ಮುಖ್ಯರಾದವರೆಂದರೆ ಸರಗೂ ಕೃಷ್ಣಮೂರ್ತಿ, ಅಪ್ಪಾಸಾಹೇಬ್ (ಶೈಲ್), ಸಿದ್ಧಲಿಂಗಪಟ್ಟಣಶೆಟ್ಟಿ (ಸಾಗರ್), ಕೆ.ಹನುಮಂತರಾವ್ (ರವಿ), ವಜ್ರಮಟ್ಟಿ (ಮೇಘಮಿತ್ರ್), ಟಿ.ಜಿ.ಪ್ರಭಾಶಂಕರ್ (ಪ್ರೇಮಿ). ಕರ್ನಾಟಕದ ಹಿಂದಿ ಕಾದಂಬರಿಕಾರರಲ್ಲಿ ಮ.ಸು.ಕೃಷ್ಣಮೂರ್ತಿ ಅವರ ಕೊಡುಗೆ ದೊಡ್ಡದು. ಇವರು ಹಿಂದಿಯಲ್ಲಿ ನಾಲ್ಕು ಕಾದಂಬರಿಗಳನ್ನು (ಅಪರಾಜಿತ್, ರಾಗ್ ಕಾನಡಾ, ಪರಶುರಾಮ್, ಕೀ ಬಹನೇಂ ಹಾಗೂ ಜ್ಯೋತಿಕಳಶ್) ಪ್ರಕಟಿಸಿ ಮನ್ನಣೆಗಳಿಸಿದ್ದಾರೆ. ಚಂದ್ರಕಾಂತ ಕುಸನೂರ್, ಅಪ್ಪಾ ಸಾಹೇಬ್, ಮ.ಸು.ಕೃಷ್ಣಮೂರ್ತಿ, ಕೇಶವ ಮಳಗಾಂವಕರ್ ಹಿಂದಿ ಕಥಾಸಂಗ್ರಹಗಳನ್ನು ಪ್ರಕಟಿಸಿದ್ದಾರೆ. ಹಿಂದಿ ನಾಟಕ ಕ್ಷೇತ್ರದಲ್ಲಿ ಜಿ.ಜೆ.ಹರಿಜಿತ್ ವಿಶೇಷ ಉಲ್ಲೇಖಕ್ಕೆ ಅರ್ಹರಾಗಿದ್ದಾರೆ. ಅನೇಕ ಏಕಾಂಕಗಳನ್ನೂ ನಾಟಕಗಳನ್ನೂ ಪ್ರಕಟಿಸಿ ಹಿಂದಿ ಭಾಷೀಯರ ಮೆಚ್ಚುಗೆ ಹಾಗೂ ಪ್ರಶಂಸೆಯನ್ನು ಪಡೆದಿರುವ ಇವರ ಹುಮಾಯೂನ್, ಸಂಭವಾಮಿ ಯುಗೇ ಯುಗೆ, ಉತ್ತರ ಮೃಚ್ಛಕಟಿಕ, ಯೂನಿವರ್ಸಿಟಿ ನಾಟಕಗಳು ಉಲ್ಲೇಖಯೋಗ್ಯವಾಗಿವೆ. ನಾಟಕ ಕ್ಷೇತ್ರದಲ್ಲಿ ಕೆಲಸ ಮಾಡಿರುವ ಇತರರೆಂದರೆ ಪಂಡಿತ ತಾರಾನಾಥ್, ಎಂ.ವಿ.ಜಂಬುನಾಥನ್, ಆರ್.ಸಿ.ಭೂಸನೂರ್‌ಮಠ, ಚಂದ್ರಕಾಂತ ಕುಸನೂರ್, ಎನ್.ಎಸ್.ದಕ್ಷಿಣಾಮೂರ್ತಿ ಮುಖ್ಯರಾಗಿದ್ದಾರೆ. ಲಲಿತ ಪ್ರಬಂಧದ ಕ್ಷೇತ್ರದಲ್ಲಿ ಸರೋಜಿನಿ ಮಹಿಷಿಯವರು ಪ್ರಕಟಿಸಿರುವ ಅತಿಥಿ ಸತ್ಕಾರ್ ಹಾಗೂ ಯೇ ಹಮಾರೇ ಸಂಗ್ರಹಗಳು, ನಾ.ನಾಗಪ್ಪನವರ ಬುವಾಜಿ ಸಂಗ್ರಹದ ಬರೆಹಗಳು ಗಮನ ಸೆಳೆಯುತ್ತವೆ.

ವ್ಯಾಕರಣ-ಶಬ್ದಕೋಶರಚನಾ ಕ್ಷೇತ್ರದಲ್ಲಿ ಕರ್ನಾಟಕದ ವಿದ್ವಾಂಸರು ಮಾಡಿರುವ ಕೆಲಸ ಬೆರಗುಗೊಳಿಸುವಂಥಾದ್ದಾಗಿದೆ. ಎಂ.ವಿ.ಜಂಬುನಾಥನ್‌ರ ಹಿಂದಿ-ಕನ್ನಡ ಕೋಶ, ಉರ್ದು-ಹಿಂದಿ ಕೋಶ, ಹಿಂದಿ ಮುಹಾವರಾ ಕೋಶ್, ಸರಳ ಹಿಂದಿ ವ್ಯಾಕರಣ, ಗುರುನಾಥ್ ಜೋಶಿಯವರ ಕನ್ನಡ-ಹಿಂದಿ ಕೋಶ, ಮೈಸಾಳೆಯವರ ಕನ್ನಡ-ಹಿಂದಿ ಕೋಶ, ದಕ್ಷಿಣಾಮೂರ್ತಿಯವರ ಕನ್ನಡ-ಹಿಂದಿ ಕೋಶ, ನಾಗಪ್ಪನವರ ಅಭಿನವ್ ಹಿಂದಿ ವ್ಯಾಕರಣ ಇತ್ಯಾದಿ ಗ್ರಂಥಗಳು ಉಲ್ಲೇಖಾರ್ಹವಾಗಿವೆ.

ಕರ್ನಾಟಕದಲ್ಲಿ ಹಿಂದಿ ಪತ್ರಿಕೆಗಳು ಹಿಂದಿ ಪ್ರಚಾರ ಸಭಾ ಸಮಿತಿಗಳ ಮೂಲಕ ಪ್ರಕಟವಾಗುತ್ತಿದ್ದು ಇವು ಆಯಾಯ ಸಂಸ್ಥೆಗಳ ಚಟುವಟಿಕೆಗಳನ್ನೂ ಪರೀಕ್ಷೋಪಯೋಗಿ ಲೇಖನಗಳನ್ನೂ ಪ್ರಕಟಿಸುವ ವೇದಿಕೆಗಳಾಗಿದ್ದರೂ ಕರ್ನಾಟಕದ ಹಿಂದಿ ಲೇಖಕರನ್ನು ಪ್ರೋತ್ಸಾಹಿಸುತ್ತಲೂ ಬಂದಿವೆ. ಭಾರತ್‌ವಾಣಿ, ಹಿಂದಿ ಪ್ರಚಾರ ಪತ್ರಿಕಾ, ಹಿಂದಿ ಪ್ರಚಾರ ವಾಣಿ, ಭಾಷಾ ಪೀಯೂಷ್ - ಇವು ಕರ್ನಾಟಕದ ಪ್ರಮುಖ ಹಿಂದಿ ಪತ್ರಿಕೆಗಳಾಗಿವೆ. ಮೈಸೂರು ವಿಶ್ವವಿದ್ಯಾನಿಲಯದ ಹಿಂದಿ ವಿಭಾಗದಿಂದ ಪ್ರಕಟವಾಗಿರುವ ಮಾನಸಿ ಹಾಗೂ ಬೆಂಗಳೂರು ವಿಶ್ವವಿದ್ಯಾಲಯದ ಹಿಂದಿ ವಿಭಾಗದಿಂದ ಪ್ರಕಟವಾಗಿರುವ 'ಕುಂತಲ್ ಭಾರತಿ'ಯ ಕೆಲವು ಸಂಚಿಕೆಗಳು ವಿದ್ವತ್ಪೂರ್ಣವಾಗಿವೆ. ಈಚಿನ ವರ್ಷಗಳಲ್ಲಿ ಇವುಗಳ ಪ್ರಕಟಣೆ ನಿಂತಿದೆ. ವಿಮರ್ಶೆ ಮತ್ತು ಸಂಶೋಧನ ಕ್ಷೇತ್ರಗಳಲ್ಲಿಯೂ ಕರ್ನಾಟಕ ಹಿಂದಿ ಲೇಖಕರ ಕೊಡುಗೆ ಗಣನೀಯವಾಗಿದೆ. ಕರ್ನಾಟಕದ ನಾಲ್ಕು ವಿಶ್ವವಿದ್ಯಾಲಯಗಳಲ್ಲಿರುವ ಹಿಂದಿ ಅಧ್ಯಯನ ವಿಭಾಗಗಳು ಅನೇಕ ಸಂಶೋಧನ ಕಾರ್ಯವನ್ನು ನಡೆಸುತ್ತಿವೆ.

ಕರ್ನಾಟಕದಲ್ಲಿ ಕನ್ನಡ ಮತ್ತು ಹಿಂದಿ ಭಾಷೆಗಳ ಮಧ್ಯೆ ಆಗಿರುವ ಅನುವಾದಕಾರ್ಯ ಸಮೃದ್ಧವಾಗಿದೆ. ಅದರಲ್ಲೂ ಹಿಂದಿಯಿಂದ ಕನ್ನಡಕ್ಕೆ ನೂರಾರು ಕೃತಿಗಳು ಅನುವಾದವಾಗಿದ್ದು ಕನ್ನಡವನ್ನು ಇವು ಪುಷ್ಟಿಗೊಳಿಸಿವೆ. ಪ್ರಾಚೀನ ಹಿಂದಿ ಸಾಹಿತ್ಯದ ಪ್ರಮುಖ ಕೃತಿಗಳ ಅನುವಾದಗಳಿಂದ ಈಚಿನವರೆಗೆ ಬಹುತೇಕ ಎಲ್ಲ ಪ್ರಮುಖರ ಕೃತಿಗಳು ಕನ್ನಡದಲ್ಲಿ ಬಂದಿವೆ. ಹಿಂದಿಯಿಂದ ಕನ್ನಡಕ್ಕೆ ಅನುವಾದಿಸಿದವರ ಹಾಗೂ ಅನುವಾದಿಸುತ್ತಿರುವವರ ಸಂಖ್ಯೆ ಅಪಾರವಾದುದು. ಪ್ರಾತಿನಿಧಿಕವಾಗಿ ಹೇಳುವುದಾದರೆ ಡಿ.ಕೆ.ಭಾರದ್ವಾಜ, ಗುರುನಾಥ ಜೋಶಿ, ಎಂ.ಎಸ್.ಕೃಷ್ಣಮೂರ್ತಿ, ಪ್ರತಾಪ್ ಸುಧಾಕರ್, ಪ್ರಧಾನ್ ಗುರುದತ್ತ, ಸಿದ್ಧಲಿಂಗ ಪಟ್ಟಣಶೆಟ್ಟಿ, ಎಚ್.ಎಸ್.ಪಾರ್ವತಿ, ಎಚ್.ವಿ.ರಾಮಚಂದ್ರರಾವ್, ಎಂ.ವಿ.ನಾರಾಯಣರಾವ್, ತಿಪ್ಪೇಸ್ವಾಮಿ, ಕುಮುದಪ್ರಿಯ, ಬಿ.ನಂ.ಚಂದ್ರಯ್ಯ, ಎಸ್.ಎಂ.ರಾಮಚಂದ್ರ ಸ್ವಾಮಿ, ಪಿ.ವಿ.ನಂಜರಾಜ ಅರಸು, ತೇಜಸ್ವಿ ಕಟ್ಟೀಮನಿ, ಭಾಸ್ಕರ್ ಮಯ್ಯ, ಡಿ.ಎನ್.ಶ್ರೀನಾಥ್, ಕಾಶೀನಾಥ್ ಅಂಬಲಗೆ, ಪಂಚಾಕ್ಷರಿ ಹಿರೇಮಠ್, ಶಶಿಕಲಾ ಸುಬ್ಬಣ್ಣ ಗಮನಾರ್ಹ ಕನ್ನಡ ಅನುವಾದಗಳನ್ನು ಮಾಡಿದ್ದಾರೆ.

ಕನ್ನಡದಿಂದ ಹಿಂದಿಗೆ ಅನುವಾದಿಸುತ್ತಿರುವವರ ಹಾಗೂ ಅನುವಾದಿಸಿರುವವರ ಪಟ್ಟಿಯೂ ದೊಡ್ಡದೇ. ಆದರೆ ಕನ್ನಡದಿಂದ ಹಿಂದಿಗೆ ಅನುವಾದಗೊಂಡಿರುವ ಕೃತಿಗಳ ಸಂಖ್ಯೆ ಕಡಿಮೆ ಎಂದೇ ಹೇಳಬೇಕು. ಕನ್ನಡದಿಂದ ಹಿಂದಿಗೆ ಅನುವಾದಿಸಿ ಕನ್ನಡ ಸಾಹಿತ್ಯ - ಸಂಸ್ಕೃತಿಯ ನಿಜವಾದ ರಾಯಭಾರಿಯಾಗಿದ್ದ ಪ್ರಮುಖ ಅನುವಾದಕರೆಂದರೆ ಬಿ.ಆರ್.ನಾರಾಯಣ್, ಇವರು ಕನ್ನಡದ ನಲ್ವತ್ತಕ್ಕೂ ಹೆಚ್ಚು ಕೃತಿಗಳನ್ನು ಹಿಂದಿಗೆ ಅನುವಾದಿಸಿದ್ದಾರೆ. ಕನ್ನಡದಿಂದ ಹಿಂದಿಗೆ ಅನುವಾದ ಮಾಡಿರುವ ಇತರೆ ಕೆಲವು ಪ್ರಮುಖ ಅನುವಾದಕರೆಂದರೆ ಬಾಲಚಂದ್ರ ಜಯಶೆಟ್ಟಿ, ವಾಸು, ಬಿ.ಪುತ್ರನ್, ಬಾಬುರಾವ್ ಕುಮಠೇಕರ್, ಚಂದ್ರಕಾಂತ ಕುಸನೂರ, ಎಸ್.ಎಂ.ರಾಮಚಂದ್ರಸ್ವಾಮಿ, ಬಿ.ವಿ.ಕಾರಂತ, ಎಸ್.ರಾಮಚಂದ್ರ, ತಿಪ್ಪೇಸ್ವಾಮಿ, ಹಿರಣ್ಣಯ್ಯ, ರಸಿಕಪುತ್ತಿಗೆ, ಎಂ.ರಾಜೇಶ್ವರಯ್ಯ, ಆರಂ.ಸಿ.ಭೂಸನೂರಮಠ, ನಂದಿನಿ ಗುಂಡೂರಾವ್, ಬಿ.ವೈ.ಲಲಿತಾಂಬ, ಪ್ರಧಾನ ಗುರುದತ್ತ, ಎಂ.ಎಸ್.ಕೃಷ್ಣಮೂರ್ತಿ, ಸರೋಜಿನಿ ಮಹಿಷಿ, ಡಿ.ಎನ್.ಶ್ರೀನಾಥ್, ಟಿ.ಆರ್.ಭಟ್, ಜಿ.ಎಂ.ಉಮಾಪತಿ ಶಾಸ್ತ್ರಿ ಮೊದಲಾದವರು. ಪ್ರಧಾನ ಗುರುದತ್ತ ಅವರು ಕುವೆಂಪು ಅವರ ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯವನ್ನು ಹಿಂದಿಗೆ ಅನುವಾದಿಸಿದ್ದಾರೆ.

ಕೇಂದ್ರ ಸಾಹಿತ್ಯ ಅಕಾಡೆಮಿ, ನ್ಯಾಷನಲ್ ಬುಕ್ ಟ್ರಸ್ಟ್ ಮುಂತಾದ ಸಂಸ್ಥೆಗಳು ಈಚಿನ ವರ್ಷಗಳಲ್ಲಿ ಅನುವಾದಗಳನ್ನು ಪ್ರಕಟಿಸುವುದರಲ್ಲಿ ಅಪಾರ ಆಸಕ್ತಿಯನ್ನು ತೋರುತ್ತಿವೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಉತ್ತರ ಪ್ರದೇಶ ಸರ್ಕಾರ ಸ್ಥಾಪಿಸಿರುವ ದತ್ತಿ ನಿಧಿಯಿಂದ ಹಿಂದಿ ಮತ್ತು ಕನ್ನಡ ಅನುವಾದಗಳನ್ನು ಪ್ರಕಟಿಸುತ್ತಿರುವುದು ವಿಶೇಷವಾಗಿ ನಮೂದಿಸಬೇಕಾಗಿರುವ ಅಂಶವಾಗಿದೆ. (ಟಿ.)

**ಮರಾಠಿ:** ಭೌಗೋಳಿಕವಾಗಿ ನೆರೆಯ ರಾಜ್ಯಗಳಾಗಿರುವ ಕರ್ನಾಟಕ ಮತ್ತು ಮಹಾರಾಷ್ಟ್ರಗಳ ಸಾಮರಸ್ಯ ಶತಮಾನಗಳಿಂದ ಕ್ರಮವಾಗಿ ನಡೆದುಕೊಂಡು ಬಂದಿದೆ. ಮಹಾರಾಷ್ಟ್ರದ ಬಹುಭಾಗ ಕವಿರಾಜಮಾರ್ಗದ ಕಾಲಕ್ಕೆ ಕರ್ನಾಟಕದಲ್ಲಿ ಐಕ್ಯವಾಗಿತ್ತೆಂದು ತಿಳಿಯುತ್ತದೆ. ಮಹಾರಾಷ್ಟ್ರದಲ್ಲಿ ಇಂದಿಗೂ ಇರುವ ಕೆಲವು ಊರುಗಳ ಹೆಸರುಗಳು ಕನ್ನಡ ಹೆಸರಿನ ರೂಪಾಂತರವಾಗಿವೆ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಉದಾಹರಣೆಗೆ: ಖಾಂಡಿವ್ಲಿ (<ಖಂಡವಳ್ಳಿ), ಬೋರಿವ್ಲಿ (<ಬೋರಿಹಳ್ಳಿ), ಲೋಣಾವ್ಲಾ (<ಲೋಳವಳ್ಳಿ), ಮಲವ್ಲಿ (<ಮಳವಳ್ಳಿ), ಮಲಪಹಳ್ಳಿ, ಪೂನಾ (<ಪುಣಕ), ಫಲಟನ್ (<ಪಳೆಯಠಾಣ), ಮೀರಜ್ (<ಮಿರಿಂಜೆ), ಕುರಂದವಾಡ್ (<ಕುಡಲದಾಮವಾಡ) ಇತ್ಯಾದಿ. ಸಿದ್ಧರಾಮನ ಸೊನ್ನಲಪುರ, ಬಿಜ್ಜಳನ ಮಂಗಳವೇಡ, ಅಕ್ಕಲಕೋಟೆ ಮುಂತಾದ ಊರುಗಳೂ ಮಹಾರಾಷ್ಟ್ರದಲ್ಲಿಯೇ

ಉಳಿದಿವೆ. ಕನ್ನಡ ಎನ್ನುವ ಹೆಸರಿನ ಒಂದು ತಾಲ್ಲೂಕು ಇಂದಿಗೂ ಔರಂಗಾಬಾದ್ ಜಿಲ್ಲೆಯಲ್ಲಿ ಗೋದಾವರಿಯ ಆಚೆಗಿದೆ.

ವಿಜಯನಗರದ ಪತನಾನಂತರ ಮಹಮ್ಮದೀಯರ ದಕ್ಷಿಣ ಭಾರತ ದಾಳಿಯ ಜೊತೆ ಜೊತೆಯಲ್ಲಿಯೇ ಮಹಾರಾಷ್ಟ್ರೀಯರು ಇನ್ನೂ ದಕ್ಷಿಣವನ್ನು ಆಕ್ರಮಿಸತೊಡಗಿದರು. ಬೆಂಗಳೂರು ಜಹಗೀರಿಯಾಗಿ ದೊರೆತಮೇಲಂತೂ ಶಿವಾಜಿಯ ತಂದೆ ಶಹಾಜಿ ಕೋಲಾರ ಮತ್ತು ದೊಡ್ಡಬಳ್ಳಾಪುರಗಳಲ್ಲಿ ನಿಂತು ಪ್ರಾಬಲ್ಯ ಹೊಂದಿ ಮರಾಠಿ ಭಾಷೆ, ಕಂದಾಯ ಪದ್ಧತಿ ಮತ್ತು ಲೆಕ್ಕಪತ್ರಗಳ ರೀತಿಯನ್ನು ಕರ್ನಾಟಕದಲ್ಲಿ ಅಳವಡಿಸಿದನೆಂದು ತಿಳಿಯುತ್ತದೆ. (ನೋಡಿ: ಮರಾಠರ ಆಳಿಕೆ). 1640ರ ಸುಮಾರಿನಲ್ಲಿ ಶಿವಾಜಿ ಬೆಂಗಳೂರಿನಲ್ಲಿಯೇ ನೆಲಸಿದ್ದ. ಇಂದಿಗೂ ಶಹಾಜಿಯ ಸಮಾಧಿ ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನಲ್ಲಿದೆ ಎನ್ನಲಾಗಿದೆ. ಮುಗಲ್ ಚಕ್ರವರ್ತಿ ಔರಂಗಜೇಬನ ಬೆದರಿಕೆಯನ್ನು ಅಲಕ್ಷಿಸಿ ಶಿವಾಜಿಯ ಮಗ ರಾಜಾರಾಮನಿಗೆ ಕೆಳದಿಯ ಚೆನ್ನಮ್ಮ ರಕ್ಷಣೆಯನ್ನು ಒದಗಿಸಿದಳು. ಪೇಶ್ವೆಗಳ ಆಡಳಿತ ಬಂದಮೇಲೆಯೂ ಕರ್ನಾಟಕದ ಮೇಲೆ ಮರಾಠಿಯ ಪ್ರಭಾವ ಗಾಢವಾಗಿಯೇ ಇದ್ದಿತು. ಬ್ರಿಟಿಷರು ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿದ ಮೇಲೆ ಸ್ವಉಪಯೋಗಕ್ಕಾಗಿ ಕರ್ನಾಟಕದ ಹಲವು ಭಾಗಗಳನ್ನು ಮುಂಬಯಿ ಪ್ರಾಂತಕ್ಕೆ ಸೇರಿಸಿದರು.

ಕರ್ನಾಟಕದಲ್ಲಿ ಮರಾಠಿ ಜನವೂ ಮಹಾರಾಷ್ಟ್ರದಲ್ಲಿ ಕನ್ನಡಿಗರೂ ರಾಜನೀತಿಕ ಸಾಮಾಜಿಕ ಸಾಂಸ್ಕೃತಿಕ ಹೀಗೆ ಒಂದಲ್ಲ ಒಂದು ಕಾರಣಕ್ಕಾಗಿ ನೆಲಸಿದ್ದಾರೆ. ಸಿಂಪಿಗ ವೃತ್ತಿಯನ್ನು ಜೀವನವನ್ನಾಗಿ ಮಾಡಿಕೊಂಡ ಮರಾಠಿ ಮನೆಮಾತಿನ ಜನ ಕರ್ನಾಟಕದ ಹಳ್ಳಿಗಳಲ್ಲಿ ನೆಲಸಿದ್ದಾರೆ. ವ್ಯಾವಹಾರಿಕವಾಗಿ ಅವರು ಕನ್ನಡವನ್ನು ಹೊರಗೆ ಬಳಸುತ್ತಾರೆ. ಇಲ್ಲಿಯ ಮಾಧ್ವಪಂಥದ ಅನೇಕ ದೇಶಸ್ಥಮಾಧ್ವರು ಮರಾಠಿ ಮಾತೃಭಾಷೆಯವರು. ಮಹಾರಾಷ್ಟ್ರದಲ್ಲಿರುವ ಕನ್ನಡಿಗರಲ್ಲಿ ಬಹುಪಾಲು ಜನ ಜೈನರು ಮತ್ತು ವೀರಶೈವರು. ಮಹಾರಾಷ್ಟ್ರದಲ್ಲಿನ ಕನ್ನಡ ಶಾಸನಗಳನ್ನು ಕೊಲ್ಲಾಪುರ ಜಿಲ್ಲೆಯ ಶಾಸನಗಳು ಮತ್ತು ನಾಂದೇಡ್ ಜಿಲ್ಲೆಯ ಶಾಸನಗಳು ಎನ್ನುವ ಸಂಪುಟಗಳಲ್ಲಿ ಸಂಗ್ರಹಿಸಿ ಪ್ರಕಟಿಸಲಾಗಿದೆ. ಮಹಾರಾಷ್ಟ್ರದಲ್ಲಿ ಕನ್ನಡ ಸಾಹಿತ್ಯದ ಹಸ್ತಪ್ರತಿಗಳೂ ಕರ್ನಾಟಕದಲ್ಲಿ ಮರಾಠಿ ಸಾಹಿತ್ಯದ ಹಸ್ತಪ್ರತಿಗಳೂ ದೊರೆತಿವೆ. ಅವುಗಳಲ್ಲಿ ಒಂದು ಹಾತಕಣಗಿಲೆ (ಕೊಲ್ಲಾಪುರ ಜಿಲ್ಲೆ) ತಾಲ್ಲೂಕಿನ ಅಲತಗಿಯ ಪಾರ್ಶ್ವನಾಥ ತೀರ್ಥಂಕರ ಮಂದಿರದಲ್ಲಿ ಬರೆಯಲಾದ ಕನ್ನಡ ಪಂಪರಾಮಾಯಣದ ಹಸ್ತಪ್ರತಿ. ಸಮಡೊಳ್ಳಿ, (ಸಾತಾರಾ ಜಿಲ್ಲೆ)ಯಲ್ಲಿ ಉಪಾಧ್ಯಾಯರ ಜಿನ್ನಪ್ಪನ ಮಗ ಆದಪ್ಪನು ಬರೆದ ಪಂಚತಂತ್ರದ ಹಸ್ತಪ್ರತಿ ದೊರೆತಿದೆ. ಕನ್ನಡಿಗರಾದ ಮಹಿಪತಿದಾಸರ ಸಾಹಿತ್ಯಕ್ಕೆ ಮೂಲ ಆಕರವಾಗಿರುವ ಹಸ್ತಪ್ರತಿ ಮರಾಠಿ ಲಿಪಿಯಲ್ಲಿ ಲಿಖಿತವಾಗಿದೆ.

ಕರ್ನಾಟಕದ ಗಡಿಪ್ರಾಂತಗಳಲ್ಲಿ ಮರಾಠಿ ಸು. 10ನೆಯ ಶತಕದಿಂದ ಆಡುಮಾತಾಗಿ ರೂಢಿಯಲ್ಲಿರುವಂತೆ ತೋರುವುದಾಗಿಯೂ ದೇವಗಿರಿಯ ಯಾದವರ ಆಳಿಕೆಯ ಕಾಲದಲ್ಲಿ ಮರಾಠಿ ಭಾಷೆ, ಸಾಹಿತ್ಯಗಳು ಏರ್ಪಟ್ಟಂತೆ ತೋರುವುದಾಗಿಯೂ ಅಭಿಪ್ರಾಯಪಡಲಾಗಿದೆ. ಇಂದಿಗೂ ಕೊಲ್ಲಾಪುರದ ಜನ ಆಡುವ ಮಾತುಗಳಲ್ಲಿ ಹೆಂಟ್ಯಾ, ಕೊಯಿಂಡ್ಯಾ, ಅಳಸುಂದಾ, ಕಾಕವಿ ಮೊದಲಾದವು ಹೆಂಡ, ಕೊಂಡೆ, ಅಲಸಂದಿ, ಕಾಕಂಬಿ ಮೊದಲಾದ ಕನ್ನಡ ಪದಗಳ ಪ್ರತಿರೂಪಗಳಾಗಿವೆ. ಜೆಜೂರಿ ಖಂಡೋಬನ ಪೂಜಾವೇಳೆಯಲ್ಲಿ ಹೇಳುವ ಉಧೋ ಶಬ್ದವೂ ಏಲ್ಕೋಟ್ ಮಲ್ಹಾರ್ (ಏಳುಕೋಟಿ ಮಲ್ಹಾರಿ) ಎಂಬ ಮಾತೂ ಕನ್ನಡದವು. ಜೆಜೂರಿಯಲ್ಲಿಯ ಹೆಗಡೆ ಅಥವಾ ಹೇಗಪಾ ಕನ್ನಡ ಹೆಗ್ಗಡೆಯೇ ಆಗಿದೆ. ಅಕ್ಕ, ಅತ್ಯಾ ಇತ್ಯಾದಿ ಸಂಬಂಧಸೂಚಕ ಶಬ್ದಗಳು, ಕನ್ನಡದ ಅಕ್ಕ, ಅತ್ತೆ ಎಂಬವೇ ಆಗಿವೆ. ಮುದಲ್-ಮುದಲ, ಮುದ್ದಲ; ಬಂಬಲ್ ಬಂಬಾಳು, ಬಂಭಾಳ; ಹಡಪ-ಹಡಪಾ, ಹಡಪು ಇತ್ಯಾದಿ ಪದಗಳೂ ಕನ್ನಡದವೇ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಮರಾಠಿಯಲ್ಲಿ ಕನ್ನಡ ಶಬ್ದಗಳು ಬೆರೆತಿರುವಂತೆಯೇ ಕನ್ನಡದಲ್ಲಿಯೂ ಮರಾಠಿ ಶಬ್ದಗಳು ಬೆರೆತಿವೆ. ಶಬ್ದಮಣಿದರ್ಪಣದಲ್ಲಿ ಕೇಶಿರಾಜ ಕನ್ನಡದಲ್ಲಿ ಸಹಜವಾಗಿ ಮಹಾಪ್ರಾಣಾಕ್ಷರಗಳಿವೆಯೆಂದು ಹೇಳಿ ಕೊಟ್ಟಿರುವ ಮಹಾಪ್ರಾಣ ಘಟಿತವಾದ ಕೆಲವು ಶಬ್ದಗಳು ಮರಾಠಿಗೆ ತದ್ಭವಗೊಂಡು ಕನ್ನಡವನ್ನು ಹೊಕ್ಕಿರುವ ಸಂಸ್ಕೃತ ಶಬ್ದಗಳೇ ಆಗಿವೆ. ಗಡಿನಾಡಿನ ಕನ್ನಡಿಗರು ಮರಾಠಿ ಶಬ್ದಗಳನ್ನು ಬಳಸಿದರೂ ಅವುಗಳಿಗೆ ಕನ್ನಡ ಪ್ರತ್ಯಯಗಳನ್ನು ಸೇರಿಸುತ್ತಾರೆ. ಉದಾಹರಣೆಗೆ: ನಾ ವಾಚುಸತ್ಯಾನ-ನಾನು ಓದುತ್ತೇನೆ; ಅವಳ ಲಾಜಾಸ್ತಾಳ -ಅವಳು ನಾಚುತ್ತಾಳೆ; ಬೈಲನ ಸಿಂಗ ಮೊಡಸ್ತ -ಎತ್ತಿನ ಕೋಡು ಮುರಿಯಿತು; ಬೈಲಗಾಡಿ ಮ್ಯಾಲಿ ಖುಂಡಿಸಿದ್ರು -ಎತ್ತಿನ ಗಾಡಿಯ ಮೇಲೆ ಕೂಡಿಸಿದರು; ಧಾಬೆ (ಕೊಟ್ಟಿಗೆ)ದಾಗ ದನಾ ಕಟ್ಟು; ವೈನಿ (ಅಣ್ಣನ ಹೆಂಡತಿ) ಬಂದಳು; ನಮ್ಮ ಅಬಚಿ (ಅಪ್ಪನ ಅಕ್ಕ ಅಥವಾ ತಂಗಿ) ಬಯಿಂದಾಳ - ನಮ್ಮ ಅಪ್ಪನ ಅಕ್ಕ ಬಂದಿದ್ದಾಳೆ ಇತ್ಯಾದಿ ಅನೇಕ ಉದಾಹರಣೆಗಳಲ್ಲಿ ಮರಾಠಿ ಶಬ್ದಗಳು ಕನ್ನಡ ವಾಕ್ಯಗಳೊಳಗೆ ಸೇರಿಕೊಂಡಿವೆ.

ಮರಾಠಿ ಸಾಹಿತ್ಯದ ಮತ್ತು ಮಹಾರಾಷ್ಟ್ರದ ಉಲ್ಲೇಖ ಪಂಪಪೂರ್ವ ಮತ್ತು ಪಂಪನ ಕಾಲದಲ್ಲಿ ದೊರೆಯುತ್ತದೆ. ಸೈಗೊಟ್ಟ ಶಿವಮಾರನ ಗಜಾಷ್ಟಕ ಓವನಿಗೆಯೂ ಒನಕೆವಾಡೂ ಆಗಿದ್ದಿತೆಂದು ತಿಳಿದುಬರುತ್ತದೆ. ಓವನಿಗೆ ಎಂಬ ಶಬ್ದಕ್ಕೂ ಮರಾಠಿಯ ಓವಿ ಶಬ್ದಕ್ಕೂ ಸಂಬಂಧವಿರಬಹುದೆಂದು ಭಾವಿಸಲಾಗಿದೆ. ಸೋಮೇಶ್ವರನ ಅಭಿಲಷಿತಾರ್ಥಚಿಂತಾಮಣಿಯಲ್ಲಿ ಮರಾಠಿ ಜನಪದ ಗೀತೆಗಳ ತುಣುಕುಗಳು ಅಲ್ಲಲ್ಲಿ ಉದಾಹರಣೆಗಳಾಗಿ ಬಂದಿವೆ ಎಂದು ಅಭಿಪ್ರಾಯಪಡಲಾಗಿದೆ. ಪಂಪನ ಆದಿಪುರಾಣದಲ್ಲಿ ಮಹಾನಾಟಕರೆಂಬುದಾಗಿ ಮಹಾರಾಷ್ಟ್ರದ ಸೈನಿಕರ ವಿವರಣೆ ದೊರೆಯುತ್ತದೆ. ಹೊಯ್ಸಳ 2ನೆಯ ವೀರನರಸಿಂಹನ ಕಾಲದ ದಾವಣಗೆರೆ 25ನೆಯ ಶಾಸನದಲ್ಲಿ (1223-24) ಆ ಕಾಲಕ್ಕೆ ಸುಮಾರು 32-33 ವರ್ಷಗಳ ಹಿಂದೆ ಆಗಿಹೋದ ಸೊರಟೂರಿನ ಕಾಳಗದಲ್ಲಿ ಹೊಯ್ಸಳರ ಸೇನೆ ಸೇಉಣರ ದಂಡನ್ನು ಸೋಲಿಸಿತು ಎನ್ನುವಾಗ ಮರಾಠಿ ಪ್ರತ್ಯಯಗಳನ್ನುಳ್ಳ ಕನ್ನಡ ವೃತ್ತವೊಂದಿದೆ ಎಂದು ವಿದ್ವಾಂಸರು ಗುರುತಿಸಿದ್ದಾರೆ.

ಮಹಾರಾಷ್ಟ್ರದಲ್ಲಿ 13ನೆಯ ಶತಮಾನದಲ್ಲಿ ಪ್ರಬಲಿಸಿದ ಮಹಾನುಭಾವ ಪಂಥಕ್ಕೂ ಕರ್ನಾಟಕದ ವೀರಶೈವ ಧರ್ಮಕ್ಕೂ ಅನೇಕ ಸಾಮ್ಯಗಳಿವೆ. ಎರಡರಲ್ಲಿಯೂ ವರ್ಣಭೇದವಿಲ್ಲ. ಸ್ತ್ರೀಯರಿಗೆ ಮಹತ್ತ್ವವಿದೆ. ಮಹಾನುಭಾವ ಪಂಥದಲ್ಲಿ ಎಷ್ಟೋ ಜನ ಸ್ತ್ರೀಯರು ಸಂನ್ಯಾಸಿನಿಯರಾಗಿದ್ದಾರೆ. ವೀರಶೈವ ಧರ್ಮದಲ್ಲಿಯೂ ಎಷ್ಟೋ ಜನ ಸ್ತ್ರೀಯರು ವಿರಕ್ತೆಯರಾಗಿದ್ದಾರೆ. ಎರಡು ಧರ್ಮದವರೂ ತಾವಾಡುವ ಮಾತಿನಲ್ಲಿ ಧರ್ಮಗ್ರಂಥಗಳನ್ನು ಬರೆದಿದ್ದಾರೆ. ವೀರಶೈವರು ವೇದಕ್ಕೆ ಪ್ರಾಧಾನ್ಯವನ್ನು ಕೊಡುವುದಿಲ್ಲ; ಮಹಾನುಭಾವ ಪಂಥದವರು ವೇದಗಳನ್ನೂ ಉಪನಿಷತ್ತುಗಳನ್ನೂ ಒಪ್ಪುತ್ತಾರೆ. ವೀರಶೈವರು ಶಿವನೊಬ್ಬನನ್ನೇ ಪೂಜಿಸುವರು. ಮಹಾನುಭಾವಪಂಥದವರು ಕೃಷ್ಣನೊಬ್ಬನನ್ನೇ ಪೂಜಿಸುವರು. ವೀರಶೈವರು ರುದ್ರಾಕ್ಷಿಮಾಲೆ, ವಿಭೂತಿಗಳನ್ನು ಧರಿಸಿದರೆ ಮಹಾನುಭಾವ ಪಂಥದವರು ತುಳಸೀಮಾಲೆ ಚಂದನಗಳನ್ನು ಧರಿಸುತ್ತಾರೆ. ಮಹಾನುಭಾವ ಪಂಥದ ಮೂಲಪುರುಷ ಚಕ್ರಧರನ ಜೀವನಕ್ಕೂ ಬಸವಣ್ಣನವರ ಜೀವನಕ್ಕೂ ಹಲವು ಹೋಲಿಕೆಗಳಿವೆ. ಬಸವಣ್ಣನ ಉಪದೇಶವನ್ನು ವಚನ ಎನ್ನುವಂತೆಯೇ ಚಕ್ರಧರನ ಉಪದೇಶವನ್ನೂ ವಚನ ಎನ್ನುತ್ತಾರೆ. ಬಸವಣ್ಣ ವಿಷಯಪುಷ್ಟಿಗೆ ದೃಷ್ಟಾಂತ ಉಪಮೆಗಳನ್ನು ಕೊಟ್ಟರೆ, ಚಕ್ರಧರ ಬರಿಯ ಸೂತ್ರಗಳನ್ನು ಹೇಳುತ್ತಾನೆ. ಬಸವಣ್ಣನ ವಚನಗಳಿಗೆ ಹೇಗೋ ಹಾಗೆಯೇ ಚಕ್ರಧರನ ಉಪದೇಶಗಳಿಗೂ ದೃಷ್ಟಾಂತಗಳ ಮೂಲಕವಾದ ಸೂತ್ರಾರ್ಥ ವಿವರಣೆಯಿದೆ.

ಚಕ್ರಧರನ ಶಿಷ್ಯ ಭಾಸ್ಕರಭಟ್ಟ ಬೋರಿಕರನ ಶಿಶುಪಾಲವಧ ಮತ್ತು ಉದ್ಧವಗೀತೆಯಲ್ಲಿ ಗುಡಿ, ಗುಂಡಿ, ಹಡಪ, ಗುಡಾರ, ತೋಮ, ಹೇವ, ಅರಲ, ಅಡಣ ಮುಂತಾದ ಶಬ್ದಗಳೂ ಆ ಶಬ್ದಗಳ ರೂಪಾಂತರಗಳೂ ಇವೆ. ಮಹದಾಂಬಾ ಎನ್ನುವ ಚಕ್ರಧರನ ಶಿಷ್ಯೆ ಶ್ರೀಕೃಷ್ಣ ವಿವಾಹ ವಸ್ತುವನ್ನುಳ್ಳ ಧವಳೆ ಎಂಬ ಹೆಸರಿನ ಹಾಡುಗಳನ್ನು ರಚಿಸಿದ್ದಾಳೆ. ಕನ್ನಡದಲ್ಲಿ ವಿವಾಹ ಮುಂತಾದ ಶುಭ ಶೋಭನಗಳಲ್ಲಿ ಹಾಡುವ ಧವಳ ಎಂಬ ಹಾಡುಗಳು ಕೆಲವಿರುವುದನ್ನು ಇಲ್ಲಿ ನೆನೆಯಬಹುದು. ಇವುಗಳಿಗೆ ಇಲ್ಲಿ ಪ್ರಾಚೀನತೆಯೂ ಇರುವಂತೆ ತೋರುವುದರಿಂದ ಈ ಪದ್ಯಪ್ರಕಾರಸಾಮ್ಯ ಪರಿಶೀಲನಾರ್ಹ.

ಮಹಾರಾಷ್ಟ್ರದಲ್ಲಿ ಮಹಾನುಭಾವ ಪಂಥ' ಪ್ರಬಲವಾಗಿದ್ದ ಕಾಲದಲ್ಲಿಯೇ ನಾಥ ಸಂಪ್ರದಾಯವೂ ಪ್ರಬಲವಾಗಿದ್ದಿತು. ಮತ್ಸ್ಯೇಂದ್ರ ಸ್ತ್ರೀರಾಜ್ಯದಲ್ಲಿ ನೆಲೆಸಿದ್ದುದಕ್ಕೆ ಸಮಾನವಾಗಿದೆ ಅಲ್ಲಮಪ್ರಭು ಮತ್ತು ಮಾಯಾದೇವಿಯರ ಪ್ರಸಂಗ. ಮತ್ಸ್ಯೇಂದ್ರನಿಗೆ ಮಾಯಾಮತ್ಸ್ಯೇಂದ್ರ ಎನ್ನುವ ಬಿರುದಿರುವಂತೆಯೇ ಅಲ್ಲಮಪ್ರಭುವಿಗೆ ಮಾಯಾಕೋಲಾಹಲ ಎನ್ನುವ ಬಿರುದಿದೆ. ಪ್ರಭುಲಿಂಗಲೀಲೆಯಲ್ಲಿ ಬರುವ ಗೋರಕ್ಷ ಅಲ್ಲಮರ ಸಂವಾದ ಈ ದೃಷ್ಟಿಯಿಂದ ಗಮನಾರ್ಹವಾದುದು. ಶೂನ್ಯಸಂಪಾದನೆಯಲ್ಲಿ ದೊರೆಯುವ ಗೋರಕ್ಷ ಅಂಕಿತದ ವಚನಗಳು ಅವನಿಗೆ ಕನ್ನಡ ಬರುತ್ತಿದ್ದಿರಬಹುದೆಂದು ಸೂಚಿಸುತ್ತದೆ. ಅಲ್ಲದೆ ಮರಾಠಿಯಲ್ಲಿ ಗೋರಕ್ಷನದೆನ್ನಲಾದ ಈ ಮಾತುಗಳು ದೊರೆಯುತ್ತವೆ - ನ್ಯಾ ಹಾಳುನಿ ಸಂಸಾರದಿಲೆ ಪಾಣಿ ನಿಜಲಿಂಗವ ನಿಟ್ಟಿಸಿ ಸಂಸಾರಕ್ಕೆ ನೀರುಕೊಟ್ಟೆ. ಹೀಗೆ ನಾಥ' ಸಂಪ್ರದಾಯಕ್ಕೂ ವೀರಶೈವ ಧರ್ಮದ ಪ್ರಮುಖ ವ್ಯಕ್ತಿ ಅಲ್ಲಮಪ್ರಭುವಿಗೂ ಸಂಬಂಧವಿರುವುದನ್ನು ಗಮನಿಸಬಹುದು. ಇದೇ ಕಾಲದ ಚೆನ್ನಬಸವಣ್ಣನ ಕರಣಹಸುಗೆಯನ್ನು 17ನೆಯ ಶತಮಾನದ ಶಾಂತಲಿಂಗಶಿವಯೋಗಿ ಮರಾಠಿಗೆ ಅನುವಾದ ಮಾಡಿದ್ದಾನೆ. ಶಂಕರಾಚಾರ್ಯರ ಅದ್ವೈತ ವೇದಾಂತವನ್ನು ವಿವೇಕ ಸಿಂಧು ಮೊದಲಾದ ತನ್ನ ಕೃತಿಗಳಲ್ಲಿ ತಾನು ನೃಸಿಂಹ ಬಲ್ಲಾಳನ ಮಗ ಜಯಂತಪಾಳನ ಅನುಮತಿಯಂತೆ ರಚಿಸಿದುದಾಗಿ ಹೇಳಿಕೊಂಡಿದ್ದಾನೆ. ಆದರೆ ಈ ನೃಸಿಂಹ ಬಲ್ಲಾಳ ಮತ್ತು ಹೊಯ್ಸಳ ನರಸಿಂಹ ಬಲ್ಲಾಳ ಬೇರೆ ಬೇರೆಯವರೆಂದು ಕೆಲವರ ಅಭಿಪ್ರಾಯ.

ಮುಕುಂದರಾಜನ ವಿವೇಕಸಿಂಧುವನ್ನು ಮಹಲಿಂಗರಂಗ (17ನೆಯ ಶತಮಾನ) ಅನುಭವಾಮೃತ ಎನ್ನುವ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾನೆ. ಕನ್ನಡ ಕವಿ ನಾಥಪಂಥದವನೆಂದೂ ಆತನ ಕನ್ನಡ ಪ್ರೇಮಕ್ಕೆ ಮುಕುಂದರಾಜನೇ ಪ್ರೇರಣೆಯೆಂದೂ ವಿದ್ವಾಂಸರ ಅಭಿಪ್ರಾಯ. ಮುಕುಂದರಾಜನ ಕಾವ್ಯದ ಕೆಲವು ಪದ್ಯಗಳ ಛಾಯಾನುವಾದವನ್ನು ಅನುಭವಾಮೃತದಲ್ಲಿ ಕಾಣಬಹುದು.

ಮರಾಠಿಯ ಶ್ರೇಷ್ಠಕೃತಿ ಜ್ಞಾನೇಶ್ವರಿಯನ್ನೂ ಅಮೃತಾನುಭವ, ಸ್ವಾತ್ಮಾನುಭವ ಎಂಬ ಕೃತಿಗಳನ್ನೂ ಅನೇಕ ಪದಗಳನ್ನೂ ಅಭಂಗಗಳನ್ನೂ ಬರೆದ ಜ್ಞಾನದೇವ ದೇವಗಿರಿಯ ರಾಮರಾಜದೇವನ ಸಮಕಾಲೀನ. ಈಗಿನ ಜ್ಞಾನೇಶ್ವರಿಯಲ್ಲಿ ಅಕ್ಕಸಾಲಿ, ಅಡತರ, ಅಂಟಿ (ಅಂಟು), ಆಗಲೇ (ಅಗಲು), ಅಡವಾರಾ (ಅಡ್ಡಬರು), ಆರ್ಡಿ (ಆರಡಿ), ಕೀಳವಣಿ, ತೂಕ, ಪಡಗಾ (ಪಡಗ), ಉಗಾಳು (ಉಗುಳು), ಉಳಿಗ (ಊಳಿಗ), ಆರೋಗಿಣಿ (ಆರೋಗಣೆ), ಪೌಳೆ (ಪೌಳಿ), ಭಾಂಗಾರ, ಮದವಿ, ಮಾತು (ಶಬ್ದ), ಮಿರವಣೆ (ಮೆರವಣಿಗೆ), ಸೂಡ, ಹರಳು - ಹೀಗೆ ನೂರಾರು ಕನ್ನಡ ಶಬ್ದಗಳು ದೊರೆಯುತ್ತವೆ ಎಂಬುದು ಕುತೂಹಲಕರವಾಗಿದೆ. ಜ್ಞಾನದೇವನಿಗೆ ಕನ್ನಡದ ಪರಿಚಯವಿದ್ದು ಕನ್ನಡದಲ್ಲಿಯೂ ಒಂದೆರಡು ಅಭಂಗಗಳನ್ನು ರಚಿಸಿದ್ದಾನೆ.

ಅವನ ಅಭಂಗಗಳಲ್ಲಿ ಒಂದು ಈ ರೀತಿ ಇದೆ:

ಆ ಆ ನೀ ಕೇಳೆ ಚಿಕನ ಮಾತು ಕೋಳುಲೆ ಘನಿಗೆ ಮರುಳಾದನೆ<br>
ಚಲುವಾನೆ ಚಲುವಾನೆ ಫಂಡರಿರಾಯ ಚಲುವಾನೆ<br>
ಯಲ್ಲೆ ದೊರೆಕನ್ನೇ ಯಲ್ಲೆ ಬಾರನ್ನೆ (ಧ್ರುಪದ)<br>
ಪುಂಡಲೀಕನೆ ಭಕ್ತಿಗೆ ಬಂದಾ<br>
ರಖುಮಾದೇವೀ ವರ ವಿಟ್ಠಲುನೇ<br>
(ಜ್ಞಾನದೇವ ಆಭಂಗ ಹೊಸ ಪ್ರತಿ, ನಂ.345)

ಇದೇ ಅಭಂಗವನ್ನು ಬೇರೊಂದು ಪಾಠಕ್ಕೆ ಅನುಗುಣವಾಗಿ ನಾ.ಶ್ರೀ.ರಾಜಪುರೋಹಿತರು ಹೀಗೆ ಕೊಟ್ಟಿದ್ದಾರೆ:

ಅಕ್ಕಾ ನೀ ಕೇಳೇ ಚಿಕ್ಕನ ಮಾತು<br>
ಕಾರಲೇದಾಸೀಗೆ ಮರುಳಾದನೇ |<br>
ಚೆಲುವಾನೆ ಚೆಲುವಾನೆ ಪಂಢರಿರಾಯಾ<br>
ಚೆಲುವಾನೆ ಎಲ್ಲಿ ದೊರಕುವನೇ ||<br>
ಪುಂಡಲೀಕನ ಭಕ್ತಿಗೆ ಬಂದಾ<br>
ರುಖಮಾದೇವೀ | ವರವಿಟ್ಠಲನೇ ||

ಹೀಗೆ ಮರಾಠಿಯಲ್ಲಿ ಕನ್ನಡ ಪದಗಳೂ ಪದ್ಯಗಳೂ ಜ್ಞಾನೇಶ್ವರಿಯ ಕಾಲಕ್ಕಾಗಲೇ ಸೇರಿದ್ದುವು. ಅದಕ್ಕೆ ಕಾರಣ ಬಹುಶಃ ಸ್ವತಂತ್ರವಾಗಿ ಈಚೆಗೆ ಬೆಳೆಯುತ್ತಿದ್ದ ಮರಾಠಿ ಭಾಷೆ ಆ ಹೊತ್ತಿಗಾಗಲೇ ಪ್ರಬುದ್ಧವಾಗಿದ್ದ ಕನ್ನಡದಿಂದ ಶಬ್ದಗಳನ್ನು ಸ್ವೀಕರಿಸಿದುದು.

ಮಹಾನುಭಾವ ಪಂಥ ಮತ್ತು ನಾಥಸಂಪ್ರದಾಯಗಳಂತೆಯೇ ವಿಟ್ಠಲ ಭಕ್ತಿಯೂ ಮಹಾರಾಷ್ಟ್ರದ ಕೊಡುಗೆ. ಜ್ಞಾನದೇವನು ಕಾನಡಾ ಹೋ ವಿಟ್ಠಲೂ ಕರ್ನಾಟಕೂ ಎಂದು ಪಂಢರಪುರದ ವಿಟ್ಠಲನನ್ನು ಕರೆಯುತ್ತಾನೆ. ಕೆಲವರು ವಿಠೋಬಾ ಶಬ್ದದ ನಿಷ್ಪತ್ತಿಯನ್ನು ಕನ್ನಡದಿಂದ ಮಾಡುತ್ತಾರೆ. ಪಂಢರಪುರದ ವಿಟ್ಠಲಭಕ್ತಿ ಮತ್ತು ಸಂಪ್ರದಾಯ 13ನೆಯ ಶತಮಾನಕ್ಕಾಗಲೀ ಕರ್ನಾಟಕದಲ್ಲಿ ನೆಲಸಿದ್ದಿತು. ಇದಕ್ಕೆ ನಿದರ್ಶನ ಚೌಂಡರಸ ತನ್ನ ಅಭಿನವದಶಕುಮಾರಚರಿತೆಯಲ್ಲಿ ವಿಟ್ಠಲಸ್ತುತಿ ಮಾಡಿರುವುದು. ಸಂಸ್ಕೃತ ಮೂಲದಲ್ಲಿಲ್ಲದ ಈ ಭಾಗವನ್ನು ಆತ ಸ್ವತಃ ಸೇರಿಸಿದ್ದಾನೆ. ಅಭಿನವದಶಕುಮಾರಚರಿತೆಯ ವಿಟ್ಠಲಾಷ್ಟಕ ಕನ್ನಡದಲ್ಲಿ ದೊರೆಯುವ ವಿಟ್ಠಲಭಕ್ತಿಯ ಮೊದಲ ಸಾಹಿತ್ಯಕೃತಿ.

ವಿಟ್ಠಲನ ಪರಮಭಕ್ತ ಸಂತ ತುಕಾರಾಮನಾದರೋ ಬಸವಣ್ಣನವರನ್ನು ತನ್ನ ಗುರುವೆಂದು ಭಾವಿಸಿದ್ದವ. ತುಕಾರಾಮನ ಗೀತೆಗಳಲ್ಲಿಯ ಬಸವಂತ ಶಬ್ದ ಬಸವಣ್ಣನವರನ್ನು ಕುರಿತದ್ದೆಂಬುದಾಗಿ ಗ್ರಹಿಸಲಾಗಿದೆ. ತ್ರಿಭಂಗೀ ದೇಹುಡೇ ಉಭೇ ವೃಂದಾವನೀ ವೇಣೂ ಚಕ್ರಪಾಣಿ ವಾಜವಿತ ಎನ್ನುವ ನಾಮದೇವನ ಅಭಂಗ ಕೊಳಲನೂದುವ ಚದುರನ್ಯಾರೆ ಪೇಳಮ್ಮಯ್ಯ ಎನ್ನುವ ವ್ಯಾಸರಾಯರ ಪದವನ್ನು ನೆನಪಿಗೆ ತರುತ್ತದೆ.

ಭಾಗವತ ಸಂಪ್ರದಾಯಕ್ಕೆ ಸೇರಿದ ಕುಮಾರವ್ಯಾಸನ ಭಾರತದಲ್ಲಿ ಪೈಕ, ಪಾರುಖಾಣೆ ಮುಂತಾದ ಮರಾಠಿ ಶಬ್ದಗಳು ದೊರೆಯುತ್ತವೆ. ವೀರಪಣ, ಜಾಣಪಣ, ಶೌರ್ಯಪಣ, ಸಾಮರ್ಥ್ಯಪಣ, ವಿಸ್ತಾರಪಣ ಮುಂತಾದ ಮರಾಠಿಯ ಭಾವನಾಮ ಸೂಚಕ ಪ್ರತ್ಯಯಾಂತ ಪದಗಳೂ ಬಳಕೆಯಾಗಿವೆ. ಪರಭಾಷೆಯ ಪ್ರತ್ಯಯವೊಂದನ್ನು ಕನ್ನಡಕ್ಕೆ ಸೇರಿಸುವ ಪ್ರಯೋಗವೊಂದನ್ನು ಕುಮಾರವ್ಯಾಸ ಮಾಡಿದ್ದಾನೆ. ಇದು ಆತನ ಸ್ವಸ್ಥಳಕ್ಕೆ ನೆರೆಯಲ್ಲಿದ್ದ ಮರಾಠಿ ಭಾಷೆಯ ಗಾಢವಾದ ಪ್ರಭಾವವನ್ನು ತೋರಿಸುತ್ತದೆ. ಕನ್ನಡದ ಅತ್ಯಂತ ಸಮರ್ಥ' ಕವಿಯಾದ ಈತನ ಭಾರತವನ್ನು ಮರಾಠಿಯಲ್ಲಿ ಇಬ್ಬರು ಅನುಸರಿಸಿದ್ದಾರೆ. ಇದರಲ್ಲಿ ಮುಕ್ತೇಶ್ವರನ ಕೃತಿ ಮುಖ್ಯವಾದುದು. ಕುಮಾರವ್ಯಾಸ ಭಾರತದ 'ಅರಸುಗಳಿಗಿದು ವೀರ' (ಆದಿಪರ್ವ 1-19) ಪದ್ಯವನ್ನು ಹೋಲುವ ಅನೇಕ ಪದ್ಯಗಳು ಮುಕ್ತೇಶ್ವರನಲ್ಲಿವೆ. ಇನ್ನೊಬ್ಬ ಭಾರತ ಕರ್ತೃವಾದ ಚಂದ್ರಾತ್ಮಜನೆಂಬ ಮರಾಠಿ ಕವಿ ಕೂಡ ಕುಮಾರವ್ಯಾಸನನ್ನು ಅನುಸರಿಸಿರುವುದು ಮಾತ್ರವಲ್ಲದೆ ಮಜಸಂಸ್ಕೃತಿ ನಾಹೀ ಅಭ್ಯಾಸ, ಕರ್ನಾಟಕ ಕವಿ ಕುಮಾರವ್ಯಾಸ ತ್ಯಾಚೇನೀ ಆಧಾರೇ ಗ್ರಂಥ ವಿಲಾಸ ಪಾರಂಭಿಲಾಯಾ ಹೇತು ಎಂದು ಸ್ಪಷ್ಟವಾಗಿ ತನ್ನ ಗ್ರಂಥಋಣವನ್ನು ಹೇಳಿದ್ದಾನೆ. ಹೀಗೆ ಷಟ್ಪದಿ ಕಾವ್ಯಗಳ ಮರಾಠಿ ಅನುವಾದ ಕಾರ್ಯ ಮುಂದುವರಿದು ಚಾಮರಸನ ಪ್ರಭುಲಿಂಗಲೀಲೆಯನ್ನು ಬ್ರಹ್ಮದಾಸನೆಂಬ 18ನೆಯ ಶತಮಾನದ ಕವಿ ವಿಶ್ವಂಭರಲೀಲ ಎನ್ನುವ ಹೆಸರಿನಿಂದ ಪರಿವರ್ತಿಸಿದ್ದಾನೆ. 1581ರಲ್ಲಿ ಚಿತ್ರಭಾರತವನ್ನು ಕನ್ನಡದಲ್ಲಿ ರಚಿಸಿದ ಗೋಪ ಕವಿ ಕೃತಿಯ ಅರ್ಧಭಾಗದಲ್ಲಿ ಭಾರತ ಕಥಾಂಶವನ್ನೂ ಉಳಿದರ್ಧದಲ್ಲಿ ವತ್ಸಲಾ ಹರಣದ ಪ್ರಸಂಗವನ್ನೂ ನಿರೂಪಿಸಿದ್ದು, ಮರಾಠಿಯಲ್ಲಿ ಪ್ರಚಲಿತವಾಗಿದ್ದ ಕಥೆಯನ್ನು ಕನ್ನಡದಲ್ಲಿ ಬರೆದುದಾಗಿ ಹೇಳಿಕೊಂಡಿದ್ದಾನೆ. ಜಗನ್ನಾಥದಾಸರ ಹರಿಕಥಾಮೃತಸಾರ (ಸು. 1755) ಮತ್ತು ಲಕ್ಷ್ಮೀಶನ ಜೈಮಿನಿಭಾರತ (ಸು.1550) ಶೇಷಗಿರಿರಾಯ (1868) ಮತ್ತು ಯಶವಂತ ಭಾಸ್ಕರ ಜಠಾರ (19ನೆಯ ಶತಮಾನ) ಇವರಿಂದ ಮರಾಠಿಗೆ ಅನುವಾದಿತವಾಗಿವೆ.

ಕನ್ನಡದ ಅನುಭಾವ ಕವಿಗಳಲ್ಲಿ ಒಬ್ಬನಾದ ನಿಜಗುಣ ಶಿವಯೋಗಿ ಮತ್ತು ಕಾಡಸಿದ್ದೇಶ್ವರರ ಪ್ರಭಾವ ಮಹಾರಾಷ್ಟ್ರದಲ್ಲಿ ದಟ್ಟವಾಗಿ ಹರಡಿದೆ. ನಿಜಗುಣ ಶಿವಯೋಗಿ ಮತ್ತು ಶ್ರೇಷ್ಠ ಮರಾಠೀ ಸಂತ ರಾಮದಾಸರನ್ನು ಚಿತ್ರಮಾಲಿಕೆಯೊಂದರಲ್ಲಿ ಒಟ್ಟಿಗೆ ಚಿತ್ರಿಸಲಾಗಿದೆ. ನಿಜಗುಣಶಿವಯೋಗಿಯ ವಿವೇಕ ಚಿಂತಾಮಣಿಯನ್ನು ಸಾತಾರಾ ಜಿಲ್ಲೆಯ ಸಿಂಗಣಾಪುರದ ಶಾಂತಲಿಂಗ ಶಿವಯೋಗಿ ಅನುವಾದಿಸಿದ್ದಾನೆ (ಸು.1604).

ನಾಮದೇವನಾದ ಮೇಲೆ ಏಕನಾಥನವರೆಗೆ ಮರಾಠಿ ಸಾಹಿತ್ಯದಲ್ಲಿ ಶ್ರೇಷ್ಠ ಕವಿಗಳು ಬರಲಿಲ್ಲ. ಆದರೂ ಈ ಕಾಲದಲ್ಲಿ ದತ್ತ ಸಂಪ್ರದಾಯದ ನೃಸಿಂಹಸರಸ್ವತಿಯ ಶಿಷ್ಯನಾದ ಕಡಗಂಚಿಯ ಸರಸ್ವತಿ ಗಂಗಾಧರ ಬರೆದ ಮರಾಠಿ ಗುರುಚರಿತ್ರೆಯ ಕೊನೆಗೆ ಕನ್ನಡದ ಆರತಿ ಪದ್ಯವಿದೆ. ಗುರುಚರಿತ್ರೆ ದತ್ತಾತ್ರೇಯನ ಭಕ್ತರಿಗೆ ಪೂಜ್ಯ ಗ್ರಂಥವಾಗಿ ಮಹಾನುಭಾವ ಮತ್ತು ವಾರ್ಕರಿ ಪಂಥ'ಗಳ ಅನುಯಾಯಿಗಳಿಂದ ಸಮಾನವಾಗಿ ಗೌರವಿಸಲ್ಪಟ್ಟಿದೆ. ಈ ಕೃತಿಯ ಹಲವಾರು ಕನ್ನಡ ಅನುವಾದಗಳು ಹೊರಬಂದಿವೆ. ಮಹಾರಾಷ್ಟ್ರದ ಪ್ರಸಿದ್ಧ ಸಂತರಲ್ಲೊಬ್ಬನಾದ ಏಕನಾಥನ ಮೇಲೆ ಪುರಂದರದಾಸರ ಪ್ರಭಾವ ಆಗಿರುವಂತೆ ತೋರುತ್ತದೆ. ಉದಾಹರಣೆಗೆ 'ಹ್ಯಾಗೆ ಇರಬೇಕು ಸಂಸಾರದಲ್ಲಿ ಹ್ಯಾಗೆ ಬರೆದಿದೆ ಪ್ರಾಚೀನದಲ್ಲಿ' ಎನ್ನುವ ಮಾತಿಗೆ ಸದೃಶವಾದ್ದು 'ಐಸೇ ಅಸಾವೀ ಸಂಸಾರೀ ಜೋವರಿ ಪ್ರಾಚೀ ವಾಚೀ ದೊರಿ' ಎನ್ನುವ ಮಾತು ಮೇಲಿನ ಊಹೆಗೆ ಅವಕಾಶ ಕಲ್ಪಿಸುತ್ತದೆ. ಏಕನಾಥ ಮರಾಠಿಯಲ್ಲಿ ಮೈರಾವಣ ಕಾಳಗವನ್ನು ಬರೆದ ಕಾಲಕ್ಕೇ ಕುಮಾರ ವಾಲ್ಮೀಕಿಯೂ ಮೈರಾವಣನ ಕಾಳಗವನ್ನು ಬರೆದಿದ್ದಾನೆ. ಏಕನಾಥನ ಮತ್ತು ಅವನ ಸೋದರಿಯ ಮಗ ಹಾಗೂ ಶಿಷ್ಯನಾದ ಮುಕ್ತೇಶ್ವರ (ರಾಮಾಯಣ ಭಾರತಗಳ ಕರ್ತೃ) ಈ ಇಬ್ಬರ ಜೋಡಿ ಕನ್ನಡದ ಹರಿಹರ - ರಾಘವಾಂಕರ ಜೋಡಿಯನ್ನು ನೆನಪಿಗೆ ತರುತ್ತದೆ.

1615ರಲ್ಲಿ ಬಿಜಾಪುರದಲ್ಲಿ ಹುಟ್ಟಿದ ವಾಮನಪಂಡಿತ ಎಂಬುವನು ರಾಮದಾಸನ ಪ್ರೇರಣೆಯ ಪ್ರಕಾರ ಸಮಶ್ಲೋಕಿ ಗೀತಾ ಎನ್ನುವ ಭಗವದ್ಗೀತೆಯ ನೇರ ಅನುವಾದದ ಜೊತೆಗೆ ಯಥಾರ್ಥದೀಪಿಕೆ ಎನ್ನುವ ಗೀತಾವ್ಯಾಖ್ಯಾನವನ್ನು ರಚಿಸಿದ್ದಾನೆ.

ಮಹಾರಾಷ್ಟ್ರದ ಅತ್ಯಂತ ಉನ್ನತಿಯ ಕಾಲದಲ್ಲಿದ್ದ ಪ್ರಸಿದ್ಧ ಕವಿ ಮೋರೋಪಂತ ಕೊಲ್ಹಾಪುರದ ಸಮೀಪದಲ್ಲಿರುವ ಪಣ್ಹಾಳದಲ್ಲಿ 1729ರಲ್ಲಿ ಜನಿಸಿದವನು. ಈತ ಭಾರತವನ್ನು ಬರೆದಿದ್ದಾನೆ. ಇವನ ಕಾವ್ಯಶೈಲಿ ಕುಮಾರವ್ಯಾಸನ ಕಾವ್ಯಶೈಲಿಯನ್ನು ನೆನಪಿಗೆ ತರುತ್ತದೆ.

ಸುಮಾರು ಇದೇ ಅವಧಿಯಲ್ಲಿ ಕರ್ನಾಟಕದ ಮೂಡಲಗಿ, ಗುರ್ಲಹೊಸೂರು ಮತ್ತು ಬಿಜಾಪುರಗಳಲ್ಲಿ ಮರಾಠಿ ಸಾಹಿತ್ಯ ಬೆಳೆದಿದೆ. ಗೋಕಾಕ ತಾಲ್ಲೂಕಿನ ಮೂಡಲಗಿಯಲ್ಲಿ 16ನೆಯ ಶತಮಾನದಲ್ಲಿ ರಂಗಬೋಧ'ಸ್ವಾಮಿಯೂ 17ನೆಯ ಶತಮಾನದಲ್ಲಿ ಅಧ್ಯಾಯ ಬೋಧಸ್ವಾಮಿಯೂ ನೆಲಸಿದ್ದರು. ಮುಕುಂದರಾಜನ ಸಂಪ್ರದಾಯಕ್ಕೆ ಸೇರಿದ ಇವರು ಮರಾಠಿಯಲ್ಲಿ ಗ್ರಂಥರಚನೆ ಮಾಡಿರುವುದಲ್ಲದೆ ಕನ್ನಡದಲ್ಲಿಯೂ ಹಾಡುಗಳನ್ನು ಬರೆದಿದ್ದಾರೆ. ಗುರ್ಲಹೊಸೂರಿನಲ್ಲಿ 18ನೆಯ ಶತಮಾನದಲ್ಲಿ ಚಿದಂಬರ ದೀಕ್ಷಿತರೆಂಬುವರು ನೆಲಸಿದ್ದರು. ಅವರನ್ನು ಸಮಕಾಲೀನ ಮರಾಠಾ ಸರದಾರರು ಗೌರವಿಸುತ್ತಿದ್ದರು. ಬಿಜಾಪುರದ ರುಕ್ಮಾಂಗದ ಸ್ವಾಮಿ ಮತ್ತು ಕಾಖಂಡಕಿ ಮಹಿಪತಿಸ್ವಾಮಿಗಳ ಜೀವನ ಚರಿತ್ರೆಯನ್ನು 18ನೆಯ ಶತಮಾನದಲ್ಲಿ ರುಕ್ಮಜದಾಸ ತನ್ನ ಗುರುಮಾಲಿಕಾ ಕೃತಿಯಲ್ಲಿ ಸೇರಿಸಿದ್ದಾನೆ. ಮಹಿಪತಿದಾಸರ ಕೀರ್ತನೆಗಳ ಹಸ್ತಪ್ರತಿಯೊಂದು ಮರಾಠಿ ಭಾಷೆಯಲ್ಲಿಯೇ ಲಿಖಿತವಾಗಿದೆ (ಇದುವರೆಗೆ ಅಚ್ಚಾಗಿರುವ ಮಹೀಪತಿದಾಸರ ಕೃತಿಗಳಿಗೆ ಅದೇ ಆಧಾರ). ವಾಮನ ಪಂಡಿತನ ಶಿಷ್ಯ ಹರಿದೀಕ್ಷಿತ ನರಗುಂದದಲ್ಲಿ ನೆಲಸಿ ಸಾಹಿತ್ಯ ರಚಿಸಿದ್ದಾನೆ. ಹೀಗೆ ಮರಾಠಿ ಸಾಹಿತ್ಯ ರಚನೆಗೆ ಕರ್ನಾಟಕ ಕೆಲಕಾಲ ಆಶ್ರಯಸ್ಥಾನವೂ ಸ್ಫೂರ್ತಿಕೇಂದ್ರವೂ ಆಗಿದ್ದುದು ತಿಳಿಯುತ್ತದೆ.

ಮಹಾರಾಷ್ಟ್ರದ ರಾಜಕೀಯ ಪ್ರಾಬಲ್ಯ ಇಳಿಯುವ ಹೊತ್ತಿಗೆ ಕ್ರೈಸ್ತ ಮಿಷನರಿಗಳು ಭಾರತದಲ್ಲಿ ಪದಾರ್ಪಣ ಮಾಡಿ ಮರಾಠಿ ಭಾಷೆಯ ಏಳ್ಗೆಗೆ ಪ್ರೋತ್ಸಾಹ ಕೊಟ್ಟರು. ಅದರ ಫಲವಾಗಿ ಬಾಲಶಾಸ್ತ್ರಿ ಜಾಂಭೇಕರ್ ಪಾಶ್ಚಾತ್ಯ ವಿದ್ಯೆಯ ಪರಿಚಯ ಮತ್ತು ಪ್ರಭಾವ ಪಡೆದು 1840ರ ಸುಮಾರಿನಲ್ಲಿ ದರ್ಪಣ್ ಮತ್ತು ದಿಗ್ದರ್ಶನ್ ಪತ್ರಿಕೆಗಳನ್ನು ಪ್ರಾರಂಭಿಸಿದರು. ಆ ಕಾಲದಲ್ಲಿನ ಪತ್ರಿಕಾ ಪ್ರಪಂಚವೆಂದರೆ ಮರಾಠೀ ಪತ್ರಿಕಾ ಪ್ರಪಂಚವೆಂದೇ ಹೇಳಬಹುದು. ಕನ್ನಡ ನಾಡಿನಲ್ಲಿ ಕನ್ನಡಿಗರಿಗಾಗಿ ಕನ್ನಡಿಗರೇ ನಡೆಸುತ್ತಿದ್ದ ಪತ್ರಿಕೆಗಳು ಕೂಡ ಮರಾಠಿಯವಾಗಿದ್ದುವು. ಧಾರವಾಡದಿಂದ ಹೊರಡುತ್ತಿದ್ದ ಭಾವಾ (1883), ಜ್ಞಾನ ಬೋಧಕ (1871), ಧಾರವಾಡ ವೃತ್ತ (1873), ಹುಬ್ಬಳ್ಳಿ ವೈಭವ, ಕರ್ನಾಟಕ ವಾರ್ತಿಕ, ಬೆಳಗಾಂವ ಸಮಾಚಾರ (1864), ಹಿತೇಚ್ಛು (1870) ಪತ್ರಿಕೆಗಳಲ್ಲಿ ಕೆಲವು ಮರಾಠಿ ಮತ್ತು ಕೆಲವು ದ್ವಿಭಾಷಾಪತ್ರಿಕೆಗಳಾಗಿದ್ದುವು. ಆಗಿನ ಸಾರ್ವಜನಿಕ ಜೀವನವೆಲ್ಲ ಮರಾಠಿಮಯವಾಗಿದ್ದಿತು. ಇಂಥ ಪರಿಸ್ಥಿತಿಯಿಂದ ಉತ್ತರ ಕರ್ನಾಟಕವನ್ನು ಮರಾಠಿಯ ಪ್ರಭಾವದಿಂದ ಸ್ವಲ್ಪ ಬಿಡಿಸಿದವ ಡಬ್ಲ್ಯು.ಎಚ್.ರೈಡ್ಸ್ ಮಹಾಶಯ. ಆತ ಉತ್ತರ ಕರ್ನಾಟಕದ ಭಾಷೆ ಮರಾಠಿಯಲ್ಲವೆಂದೂ ಕನ್ನಡವೆಂದೂ ಮುಂಬಯಿ ಸರ್ಕಾರಕ್ಕೆ ಮನವಿ ಮಾಡಿಕೊಟ್ಟ. ಆ ಪ್ರಯತ್ನದ ಫಲವಾಗಿ ಡೆಪ್ಯುಟಿ ಚನ್ನಬಸಪ್ಪ, ರಾ.ಹ.ದೇಶಪಾಂಡೆ, ಗಳಗನಾಥ, ಶಾಂತಕವಿ, ಮುದವೀಡು ಕೃಷ್ಣರಾಯ, ರಾಜಪುರೋಹಿತ ನಾರಾಯಣರಾಯ, ಆಲೂರ ವೆಂಕಟರಾಯ ಮುಂತಾದ ಮಹನೀಯರು ಉತ್ತರ ಕರ್ನಾಟಕದಲ್ಲಿ ಕರ್ನಾಟಕತ್ವದ ವಿಕಾಸವನ್ನು ನಡೆಸಿದರು. ಈ ಸಂದರ್ಭದಲ್ಲಿ ಧಾರವಾಡದ ಟ್ರೇನಿಂಗ್ ಕಾಲೇಜು ಮತ್ತು ವಿದ್ಯಾವರ್ಧಕ ಸಂಘ ವಹಿಸಿದ ಪಾತ್ರ ದೊಡ್ಡದು.

ಇದರ ಪರಿಣಾಮವಾಗಿ ಕನ್ನಡದಲ್ಲಿ ಪಠ್ಯಪುಸ್ತಕ ಮತ್ತು ಕೃತಿರಚನೆ ನಡೆಯಿತು. ರಾ.ಹ.ದೇಶಪಾಂಡೆಯವರು ಚಲತೊಟ್ಟು ಕನ್ನಡದ ಏಳಿಗೆಗಾಗಿ ದುಡಿದರು. ಗಳಗನಾಥ'ರ ಕೃತಿರಚನೆಗೆ ಪ್ರೇರಕರಾಗಿದ್ದರು. ಅನೇಕ ಪಠ್ಯಪುಸ್ತಕಗಳನ್ನು ಸ್ವತಂತ್ರವಾಗಿ ರಚಿಸುವುದರ ಜೊತೆಗೆ ಬಾಯಿಲೆಕ್ಕದ ಮೊದಲನೆಯ ಪುಸ್ತಕ (1896) ಮತ್ತು ಬೀಜಗಣಿತದ ಮೂಲತತ್ತ್ವಗಳು (1897) ಇವನ್ನು ಅನುವಾದಿಸಿದರು. ವಿಧವಾವಪನ ಅನಾಚಾರವನ್ನು ವೆಂಕಟರಂಗೋ ಕಟ್ಟಿ ಮರಾಠಿ ಮತ್ತು ಕನ್ನಡಗಳಲ್ಲಿ ರಚಿಸಿದ್ದಾರೆ. ಪಂಡಿತ ರಮಾಬಾಯಿಯ ಮರಾಠಿ ಸ್ತ್ರೀಧರ್ಮನೀತಿ ಕನ್ನಡಕ್ಕೆ ಅನುವಾದವಾಗಿದೆ.

ಇದೇ ಸಮಯದಲ್ಲಿ ಉತ್ತರ ಕರ್ನಾಟಕದಲ್ಲಿ ನಾಟಕ ಕಲೆ ಸ್ವತಂತ್ರವಾಗಿ ಬೆಳೆಯಿತು. ಕನ್ನಡ ಜಿಲ್ಲೆಗಳಿಂದ ನಾಟಕ ಕಂಪೆನಿಗಳು ಸಾಂಗಲಿಯವರೆಗೆ ಪ್ರಯಾಣ ಬೆಳೆಸಿದ್ದುವು. ಮರಾಠಿ ನಾಟಕಕಾರರಲ್ಲಿ ಪ್ರಸಿದ್ಧರಾದ ಕಿರ್ಲೋಸ್ಕರ್ ಮುಂತಾದವರು ಪೌರಾಣಿಕ ನಾಟಕಗಳನ್ನು ಅಭಿನಯಿಸುತ್ತಿದ್ದರು. ಕನ್ನಡದ ಶ್ರೀ ಕೃಷ್ಣಪಾರಿಜಾತ ಕೃತಿ ಮುಂತಾದುವು 19ನೆಯ ಶತಮಾನದ ಮರಾಠಿ ನಾಟಕ ಸಾಹಿತ್ಯದ ಮೇಲೆ ಪ್ರಭಾವ ಬೀರಿದವೆಂದು ತಿಳಿದುಬರುತ್ತದೆ.

ಕಿರ್ಲೋಸ್ಕರನ ಮರಾಠಿ 'ಶಾಕುಂತಲ ನಾಟಕ' ಹುಟ್ಟಿದ ಸರಿಸುಮಾರಿನಲ್ಲೇ ಉತ್ತರ ಕರ್ನಾಟಕದಲ್ಲಿ ಚುರಮುರಿ ಶೇಷಗಿರಿರಾಯರ ಕನ್ನಡ ಶಾಕುಂತಲ ದೇಸೀ ಸೊಬಗನ್ನು ತುಂಬಿಕೊಂಡು ರೂಪುಗೊಂಡಿತು. ಮೈಸೂರಿನಲ್ಲಿ ಬಸವಪ್ಪಶಾಸ್ತ್ರಿಗಳ ಶಾಕುಂತಲ ನಾಟಕ ಸಿದ್ಧವಾಯಿತು. ಮಹಾರಾಷ್ಟ್ರದಿಂದ ಬಂದ ಪಾರಸೀಯವರ ಬಾಲೀವಾಲಾ ಕಂಪನಿ ಮೈಸೂರು ಅರಮನೆಯಲ್ಲಿ ನಾಟಕಗಳನ್ನು ಆಡಿತು. ಅದರ ಪ್ರಭಾವದಿಂದ ಮೈಸೂರಿನಲ್ಲಿ ವೃತ್ತಿರಂಗಭೂಮಿ ಬೆಳೆಯಿತು. ಬಾಲೀವಾಲಾ ಕಂಪನಿಯ ಅದ್ಭುತ ರಂಗವೈಭವ, ಸಂಗೀತ ಮತ್ತು ಅಭಿನಯ ಮೈಸೂರಿನ ಜನತೆಯನ್ನು ಬೆರಗುಗೊಳಿಸಿತು. ರಾಜಾಸ್ಥಾನದಲ್ಲಿದ್ದ ಮಂಡ್ಯಂ ರಂಗಾಚಾರ್ಯ ಮರಾಠಿಯ ಬಾಣಾಸುರೋಪಾಖ್ಯಾನವನ್ನೂ ಬಾಲಗಂಧರ್ವ ಖಾಡಿಲ್ಕರರ ಮರಾಠಿ ನಾಟಕಗಳನ್ನೂ ಪ್ರದರ್ಶಿಸಿದರು. ಮೂಲ್ಕಿಯ ನಾರಾಯಣ ರಾಮಪ್ಪ ಕಾಮತ ತನ್ನ ನಾಟಕ ಕಂಪನಿಯಲ್ಲಿ ಕನ್ನಡ ಮರಾಠಿ ನಾಟಕಗಳೆರಡನ್ನೂ ಆಡಿಸಿದ. ಶಾಂತಕವಿಗಳ 'ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕ ಕೀರ್ತಿ' ಎನ್ನುವ ಪದ್ಯವೊಂದರಲ್ಲಿ ಆ ಕಾಲದಲ್ಲಿ ಕರ್ನಾಟಕದ ಜನತೆಯ ಮೇಲೆ ಮರಾಠಿ ನಾಟಕಗಳು ಬೀರಿದ ಪರಿಣಾಮದ ಅರಿವಾಗುತ್ತದೆ. ಜನತೆ ಮರಾಠಿ ನಾಟಕಗಳಿಗೆ ಕೊಡುತ್ತಿದ್ದ ಪ್ರೋತ್ಸಾಹವನ್ನು ಕಂಡು ಶಾಂತಕವಿಗಳು ಗದಗಿನ ನಾಟ್ಯ ವಿಲಾಸಿಗಳ ಸಹಕಾರದಿಂದ ಉಷಾಹರಣವೆಂಬ ನಾಟಕವನ್ನು ರಚಿಸಿ ಆಡಿಸಿದರು. ಪುಣೆಯ ಕಾಲೇಜಿನಲ್ಲಿ ಕಲಿತ ಕನ್ನಡಿಗ ವೆಂಕಟರಂಗೋ ಕಟ್ಟಿ 'ಸವಾಯಿ ಮಾಧವ ರಾಯಾಂಚೆ ನಾಟಕ' ಎನ್ನುವ ಸ್ವತಂತ್ರ ಮರಾಠಿ ಐತಿಹಾಸಿಕ ನಾಟಕವನ್ನು ಬರೆದಿದ್ದಾರೆ. ಇತ್ತೀಚೆಗೆ ಮುಕ್ತಾಬಾಯಿ ದೀಕ್ಷಿತ್ ಮುಂತಾದ ಹಲವರ ಮರಾಠಿ ನಾಟಕಗಳು ಕನ್ನಡಕ್ಕೆ ಅನುವಾದಗೊಂಡಿವೆ. ಕೀರ್ತನಕಾರರು ಕೀರ್ತನೆಗಳನ್ನು ಮಾಡುವಾಗ ಮರಾಠಿ ಅಭಂಗಗಳನ್ನೂ ಕಟಾವ್‌ಗಳನ್ನೂ ಹೇಳಿ ಅರ್ಥ ವಿವರಿಸುತ್ತಿದ್ದರು. ಅದರಿಂದ ಉಂಟಾಗುತ್ತಿದ್ದ ರಸಾಭಾಸವನ್ನು ಕಂಡು ಶಾಂತಕವಿ ಹರಿಕೀರ್ತನೆ ಎನ್ನುವ ಕೃತಿಯನ್ನು ರಚಿಸಿದರು.

ಕನ್ನಡದಲ್ಲಿ ಕಾದಂಬರಿಗಳ ರಚನೆಗೆ ಮರಾಠಿ (ಮತ್ತು ಬಂಗಾಲಿ) ಕಾದಂಬರಿಗಳಿಂದ ಮಾರ್ಗದರ್ಶನ ದೊರೆಯಿತು. ಲಕ್ಷ್ಮಣರಾವ್ ಗದಗಕರನ

ಸೂರ್ಯಕಾಂತ (1892) ಎನ್ನುವ ಕೃತಿ ಕನ್ನಡದ ಮೊದಲ ಕಾದಂಬರಿ ಎಂದು ಕೆಲವರ ಅಭಿಪ್ರಾಯ. ಇಲ್ಲಿ ಮೊದಲ ಬಾರಿಗೆ ಕಾದಂಬರಿ ಎನ್ನುವ ಮಾತನ್ನು ಬಳಸಿದೆ. ಇದು ಬಹುಶಃ ಮರಾಠಿಯ ಪರಿಚಯದ ಪ್ರಭಾವವಿರಬಹುದು. ಮುಂದೆ ಗಳಗನಾಥರು ಹರಿನಾರಾಯಣ ಆಪ್ಟೆಯವರ ಮಹಾರಾಷ್ಟ್ರ ಮತ್ತು ರಾಜಸ್ಥಾನದ ಇತಿಹಾಸವನ್ನೊಳಗೊಂಡ ಕೃತಿಗಳನ್ನು ಆಧರಿಸಿ ಕೃತಿರಚನೆ ಮಾಡಿದರಲ್ಲದೆ ವಿಜಯನಗರ ಮತ್ತು ಮೈಸೂರು ಇತಿಹಾಸದ ವಸ್ತುವಿನ ಕೃತಿಗಳನ್ನು ರಚಿಸಿದ್ದಾರೆ.

ಹೀಗೆಯೇ ಕೆರೂರ ವಾಸುದೇವಾಚಾರ್ಯರು ಮರಾಠಿ ಕಥೆಗಳನ್ನು ಆಧರಿಸಿ ತಮ್ಮ ಕೆಲವು ಕಥೆಗಳನ್ನು ಬರೆದಿದ್ದಾರೆ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಶಿವರಾಮ ಕಾರಂತ ಮತ್ತು ಅ.ನ.ಕೃಷ್ಣರಾಯರ ಕಥೆಗಳು ಮರಾಠಿಗೆ ಅನುವಾದವಾಗಿವೆ. ಅಲ್ಲದೆ ವಿನೋಬಾ, ಸಾವರ್‌ಕರ್, ಸಾನೆ ಗುರೂಜಿ ಮೊದಲಾದವರ ಬರೆಹಗಳೂ ಈಗಾಗಲೇ ಕನ್ನಡಕ್ಕೆ ಬಂದಿವೆ.

ಶತಮಾನಗಳಿಂದ ಬೆಳೆದುಬಂದ ಕನ್ನಡ ಮರಾಠಿ ಸಾಹಿತ್ಯದ ಕೊಳುಕೊಡೆ ಇಂದು ಇನ್ನೂ ದಟ್ಟವಾಗಿದೆ. ಕನ್ನಡ ಮರಾಠಿ ಕಾವ್ಯಪ್ರಪಂಚದಲ್ಲಿ ಪ್ರಸಿದ್ಧರಾದ ಬೇಂದ್ರೆಯವರ ಮಾತೃಭಾಷೆ ಮರಾಠಿ. ಮರಾಠಿ ಕಾವ್ಯ ಪ್ರಪಂಚದ ಉನ್ನತಿಗೆ ಕಾರಣರಾದ ಕೇಶವಸುತರು ಕರ್ನಾಟಕದಲ್ಲಿದ್ದವರು (ಧಾರವಾಡದಲ್ಲಿ ಶಿಕ್ಷಕರಾಗಿದ್ದು ಹುಬ್ಬಳ್ಳಿಯಲ್ಲಿ ದಿವಂಗತರಾದರು). ಅವರ ಮರಾಠಿ ಕವನ ಒಂದನ್ನು (ತುತಾರಿ) ಗೋವಿಂದ ಪೈ ಅನುವಾದಿಸಿದ್ದಾರೆ.

ಕೆ.ಜಿ.ಕುಂದಣಗಾರ, ಪಿ.ಬಿ.ದೇಸಾಯಿ, ಶಂ.ಬಾ.ಜೋಶಿ, ಆ.ನೇ.ಉಪಾಧ್ಯೆ, ವಿ.ಕೃ.ಗೋಕಾಕ, ರಂ.ಶ್ರೀ.ಮುಗಳಿ, ಶ್ರೀರಂಗ ಮುಂತಾದ ಸಾಹಿತಿಗಳು ಈ ಉಭಯ ಸಂಸ್ಕೃತಿಗಳ ಹಾಗೂ ಭಾಷೆ ಮತ್ತು ಸಾಹಿತ್ಯಗಳ ಬಾಂಧವ್ಯವನ್ನು ಹಲವು ವಿಧದಲ್ಲಿ ಬೆಳೆಸಿದ್ದಾರೆ. (ಜಿ.ಜಿ.ಎಂ.)

**ಕೊಂಕಣಿ** : ಕೊಂಕಣಿ ಭಾಷೆ ಕರ್ನಾಟಕಕ್ಕೆ ಹಿಂದಿನಿಂದ ಪರಿಚಿತವಾಗಿದೆ. ಉತ್ತರ ಭಾರತದಲ್ಲಿ ಹುಟ್ಟಿದ ಈ ಭಾಷೆ ಪಶ್ಚಿಮ ಕರಾವಳಿಯ ದಾರಿಯಾಗಿ ಇಳಿದು ಉತ್ತರ ಕನ್ನಡದ ಗಂಗಾವತಿ ನದಿಯವರೆಗೆ ಬಂತು. ಕೊಂಕಣಿ ಭಾಷೆಯಲ್ಲಿ ಅನೇಕ ಸುಧಾರಣೆಗಳನ್ನು ತಂದ ಸಾರಸ್ವತರು ಗೋವೆಗೆ ಬಂದು ನೆಲೆನಿಂತಾಗ ಅದು ಗೋವ ಕದಂಬರ ಆಳಿಕೆಗೆ ಒಳಪಟ್ಟಿತ್ತು. ಅವರ ಆಡಳಿತ ಭಾಷೆ ಕನ್ನಡವಾಗಿದ್ದುದರಿಂದ ಕನ್ನಡಕ್ಕೂ ಕೊಂಕಣಿಗೂ ಸಂಬಂಧ ಏರ್ಪಟ್ಟಿತು. ಇದರಿಂದಾಗಿ ಈ ಶೆಣ್ವೈ (ಸಾರಸ್ವತ ವರ್ತಕರು) ವ್ಯಾಪಾರಿಗಳು ಹಾಗೂ ದಲಾಲರು ಕನ್ನಡ ಲಿಪಿಯನ್ನು ಬಳಸಿಕೊಂಡು ಕೊಂಕಣಿ ಭಾಷೆಯಲ್ಲಿ ತಮ್ಮ ಅಂಗಡಿಯ ಲೆಕ್ಕಪತ್ರಗಳನ್ನು ಬರೆದರು. ಹೀಗೆ ಆರಂಭವಾದ ಕನ್ನಡ-ಕೊಂಕಣಿ ಸಂಬಂಧ ಕನಿಷ್ಠ ಪಕ್ಷ ಲಿಪಿಯ ಮಟ್ಟದಲ್ಲಾದರೂ ಪೋರ್ಚುಗೀಸರ, ಡಚ್ಚರ ಕಾಲದಲ್ಲಿ ಉಳಿದಿತ್ತು.

ಗೋವೆಯ ಕೊಂಕಣಿ ಜನ ಭಾರೀ ಪ್ರಮಾಣದಲ್ಲಿ ಕರ್ನಾಟಕಕ್ಕೆ ವಲಸೆ ಬಂದ ಮೇಲೆ ಕನ್ನಡದ ಪ್ರಭಾವ ಕೊಂಕಣಿಯ ಮೇಲೆ ಇನ್ನಷ್ಟು ಹೆಚ್ಚಾಯಿತು. 16-17ನೆಯ ಶತಮಾನಗಳಲ್ಲಿ ಬಿದನೂರು ಮತ್ತು ಸೋದೆ ರಾಜ್ಯಗಳ ವಿವಿಧ ಭಾಗಗಳಲ್ಲಿ ಕೊಂಕಣಿ ಹಿಂದು ಜನ ಭಾರಿ ಪ್ರಮಾಣದಲ್ಲಿ ಬಂದು ನೆಲೆನಿಂತರು. ಅನಂತರ ಕೊಂಕಣಿ ಮರಾಠರೆಂದು ಕರೆಯಲಾಗುವ ಗಾಂವಕರರು ಬಹುಪಾಲು ಕಾರವಾರ ತಾಲ್ಲೂಕಿನಲ್ಲಿ ನೆಲೆಸಿದರು. ಇವರ ಜೊತೆಗೆ ಭಂಡಾರಿಗಳು, ಪಟ್ಟಿಗಳು, ಕುಮಾರ ಪಂಥದವರು ಅಕ್ಕಸಾಲಿಗರು ಬಂದರು. ಕ್ರೈಸ್ತರು ಬಿದನೂರು, ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡದ ಕುಮಟ, ಹೊನ್ನಾವರ ತಾಲ್ಲೂಕುಗಳಲ್ಲಿ ನೆಲೆನಿಂತರು.

ಕರ್ನಾಟಕಕ್ಕೆ ಬಂದ ಮೇಲೆ ಶೆಣ್ವೈಗಳು ಕನ್ನಡ ಲಿಪಿಯನ್ನು ಉಪಯೋಗಿಸುವುದನ್ನು ಮುಂದುವರಿಸಿದರು. ಈ ನಡವಳಿಕೆ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡದಲ್ಲೂ ಕಂಡುಬಂತು. ಇದೆಲ್ಲವೂ ಕನ್ನಡವೆಂದು ಭಾವಿಸಿದ್ದ ಆಂಗ್ಲ ಆಡಳಿತಗಾರರು ಕನ್ನಡ ಜಿಲ್ಲೆಗಳಲ್ಲಿ ಕನ್ನಡವನ್ನೇ ಆಡಳಿತ ಭಾಷೆಯಾಗಿ ಮಾಡಿದರು. ಕನ್ನಡವನ್ನು ಶಾಲೆಗಳಲ್ಲಿ ಜಾರಿಗೆ ತರುವವರೆಗೆ, ಶೆಣ್ವೈಗಳು ತಮ್ಮ ಈ ಪದ್ಧತಿಯನ್ನು ಮುಂದುವರಿಸಿದರು. ಆದರೆ ಕ್ರೈಸ್ತರು ಇಂದಿಗೂ ಇದೇ ಪದ್ಧತಿಯನ್ನು ಮುಂದುವರಿಸುತ್ತಾರೆ. ಅವರ ಎಲ್ಲಾ ಧಾರ್ಮಿಕ ಬರೆವಣಿಗೆಗಳೂ ಅವರ ಪತ್ರಿಕೆಗಳೂ ಕನ್ನಡ ಲಿಪಿಯನ್ನೊಳಗೊಂಡಿದ್ದು ಕೊಂಕಣಿ ಭಾಷೆಯಲ್ಲಿವೆ. ಇದೇ ಕಾಲದಲ್ಲಿ ಕೊಂಕಣಿ ಭಾಷೆಗೆ ಬೇಕಾದ ಲಿಪಿಯೆಂದು ಕನ್ನಡ ಲಿಪಿಯ ಅಚ್ಚಿನ ಮೊಳೆಗಳನ್ನು ಸಿದ್ಧಪಡಿಸಲು ಜೆಸುಯಿಟರೆಂಬ ಕ್ರೈಸ್ತ ಧಾರ್ಮಿಕ ಸಂಸ್ಥೆಯವರು ಮುಂದೆ ಬಂದರು. ಇವರ ಪ್ರಥಮ ಪ್ರಯತ್ನ ಗುರಿಮುಟ್ಟಿದಂತೆ ಕಾಣುವುದಿಲ್ಲ. ಒಂದು ವೇಳೆ ಗುರಿ ಮುಟ್ಟಿದ್ದರೆ ಭಾರತದ ಮುದ್ರಣದ ಇತಿಹಾಸದಲ್ಲಿ ಕನ್ನಡಕ್ಕೆ ಲಿಪಿಯ ಮಟ್ಟದಲ್ಲಾದರೂ ಪ್ರಪ್ರಥಮ ಸ್ಥಾನ ಸಲ್ಲುತ್ತಿತ್ತು. ಮಂಗಳೂರಿನ ಕೊಡಿಯಾಲಬೈಲ ಮುದ್ರಣಾಲಯ ಕೊಂಕಣಿಯನ್ನು ಕನ್ನಡ ಲಿಪಿಯಲ್ಲಿ ಮುದ್ರಿಸತೊಡಗಿತು. ಕರ್ನಾಟಕದಲ್ಲಿ ಈ ಲಿಪಿಗಳನ್ನು ಮೊದಲಿಗೆ ರೂಢಿಸಿದವರು ಇವರೆ ಇದ್ದಿರಬೇಕು.

ಕೊಂಕಣಿಯನ್ನು ಈಗಲೂ ದಕ್ಷಿಣ ಕನ್ನಡದಲ್ಲಿ ಕನ್ನಡ ಲಿಪಿಯಲ್ಲಿಯೇ ಬರೆಯುತ್ತಾರೆ. ಹೀಗೆ ಬರೆಯುವಾಗ ಅಲ್ಪಪ್ರಾಣ ಮಹಾಪ್ರಾಣಗಳು, ಹ್ರಸ್ವ ದೀರ್ಘ ಸ್ವರಗಳು ಎಷ್ಟೋ ವೇಳೆ ಕನ್ನಡ ಲಿಪಿ ವ್ಯವಸ್ಥೆಯಲ್ಲಿ ಇದ್ದ ಹಾಗೆಯೇ ಇರುವುದುಂಟು. ಆಡುನುಡಿಯಲ್ಲಿರುವ ಮಹಾಪ್ರಾಣಗಳು ಬರೆಹದಲ್ಲಿ ಬಂದ ಉದಾಹರಣೆಗಳಿವೆ. ಇದರ ಪರಿಣಾಮವಾಗಿ ಶಿಷ್ಟರೆಂದೆನ್ನಿಸಿಕೊಳ್ಳುವವರು ಬರೆಹದ ಉಚ್ಚಾರ ಕ್ರಮವನ್ನೇ ಪ್ರಮಾಣವಾಗಿ ಇಟ್ಟುಕೊಂಡು ಆಡುನುಡಿಯ ರೀತಿಯನ್ನೇ ವ್ಯತ್ಯಾಸಗೊಳಿಸುತ್ತಿದ್ದಾರೆ. ಹೀಗೆ ವ್ಯತ್ಯಸ್ತವಾದ ಭಾಷೆ ಆಧುನಿಕರ ಪೈಕಿ ಕೆಲವರಲ್ಲಿ ರೂಢಿಗೆ ಬರುತ್ತಿದೆ.

ಮಂಗಳೂರಿನ ಕೊಂಕಣಿ ಜನರ ಮೇಲೆ, ಹೆಚ್ಚಾಗಿ ಕ್ರೈಸ್ತರ ಮೇಲೆ ಇಂಗ್ಲಿಷ್ ಪ್ರಭಾವ ದಟ್ಟವಾಗಿದ್ದಾಗ, ಈಗ್ಗೆ ಸುಮಾರು ಇಪ್ಪತ್ತು ಮೂವತ್ತು ವರ್ಷಗಳ ಹಿಂದೆ, ಇಂಗ್ಲಿಷ್ ಹೆಸರುಗಳನ್ನು ಬರೆಯುವಲ್ಲಿ ಒಂದು ವಿಶಿಷ್ಟತೆ ಇರುತ್ತಿತ್ತು. ಉದಾ. ಜೊನ್ಸನ್, ಈಗ ಕನ್ನಡದ ಪ್ರಭಾವ ಬೆಳೆದಂತೆ ಜಾನ್ಸನ್ ಎಂದು ಬರೆಯುವ ರೂಢಿ ಬಂದಿದೆ. ಕನ್ನಡದ ಪ್ರಭಾವ ಕೊಂಕಣಿಯ ಲಿಪಿ ವ್ಯವಸ್ಥೆಯನ್ನು ಮಾರ್ಪಡಿಸಿದೆ ಎನ್ನುವುದಕ್ಕೆ ಇದೊಂದು ನಿದರ್ಶನ.

ಕನ್ನಡ-ಕೊಂಕಣಿ ಸಂಬಂಧ ಲಿಪಿಯೊಂದಕ್ಕೆ ಸೀಮಿತವಾಗಿಲ್ಲ. ವ್ಯಾಕರಣ ಪದಕೋಶಗಳ ಮೇಲಾದ ಪರಸ್ಪರ ಪ್ರಭಾವಗಳನ್ನು ಗುರುತಿಸುವ ಪ್ರಯತ್ನಗಳೂ ನಡೆದಿವೆ. ಕೊಂಕಣಿಯಲ್ಲಿ ಸೇರಿದ ಕನ್ನಡ ಪದಗಳು, ಗಾದೆಗಳು ಮತ್ತು ಲಾಲಿ ಹಾಡುಗಳು ಮುಂತಾದವನ್ನು ಸಂಗ್ರಹಿಸುವ ಪ್ರಯತ್ನವೂ ಕೆಲಮಟ್ಟಿಗೆ ನಡೆದಿದೆ.

ಕೊಂಕಣಿ ಗಾದೆ ಒಗಟುಗಳ ಒಂದು ಸಂಗ್ರಹದಲ್ಲಿ 136 ಕನ್ನಡ ಗಾದೆಗಳಿವೆ. ಇವುಗಳಲ್ಲಿ ಎಷ್ಟೋ ಗಾದೆಗಳು ಇಂದು ಕನ್ನಡದಲ್ಲಿ ಅಷ್ಟಾಗಿ ಪ್ರಚುರವಾಗಿರದೆ ಕೊಂಕಣಿಯಲ್ಲಿಯೇ ಇದ್ದ ಹಾಗೆ ಕಾಣುತ್ತದೆ. ಉದಾ. ಅಂಬಲಿ ಕುಡಿಯುವವನಿಗೆ ಮೀಸೆ ತಿಕ್ಕುವವನೊಬ್ಬ; ಮೂವರ ಕಿವಿಗೆ ಮುಟ್ಟಿದ್ದು ಮೂರು ಲೋಕಕ್ಕೆ; ಯಾವ ದೇವರ ಗುಡಿಯಾದರೇನು ನಿದ್ದೆ ಬಿದ್ದರೆ ಲೆಕ್ಕ ಇತ್ಯಾದಿ. ಬರಗಾಲಾಂಕ ಬುತ್ತಿ ಮೇಕಳ್ಳಿ; ನೋಟಕ ನಾ ನುಡಿಯಾಕ ನಾ: ಆಶಾ ಆಶಿಲ್ಯಾ ಸಾಧುಕ, ಮಿಶೋ ಆಶಿಲ್ಯಾ ಸನ್ಯಾಶಾಕ ನಂಬುನಯೇ - ಇತ್ಯಾದಿ ಕೊಂಕಣಿ ಗಾದೆಗಳಲ್ಲಿ ಕನ್ನಡ ಮಾತುಗಳು ಬೆರೆತಿರುವುದು ಸ್ಪಷ್ಟವಾಗಿದೆ. ಹೀಗೆಯೇ ಬಾವಲಿ, ಬಾವಲಕ್ಕಿ, ಮಣಗಟ್ಟು, ಬೇಗಡಿ, ಭಾಂಗಾರ್, ಬ್ರಹ್ಮಗುಡಿ, ತಲವಾರ, ದುಡ್ಡು, ಹೂವ, ನತ್ತು, ಬಡ್ಡಿ, ಕೊಪ್ಪರು, ಗುಪಚೀ (ಗುಬ್ಬಚ್ಚಿ), ಬಾಗಿಲು, ಅಂಗಡಿ, ಕಬ್ಬು - ಈ ಮುಂತಾದ ಕನ್ನಡ ಮಾತುಗಳು ಕೊಂಕಣಿಯ ಪದಕೋಶವನ್ನು ಪ್ರವೇಶಿಸಿರುವುದು ಕಾಣುತ್ತದೆ.

ವ್ಯಾಕರಣದ ದೃಷ್ಟಿಯಿಂದ ಕನ್ನಡ ಕೊಂಕಣಿಯ ಮೇಲೆ ಪ್ರಭಾವವನ್ನು ಬೀರಿದೆ. ಕನ್ನಡದ ಪದಗಳನ್ನು ಸ್ವೀಕರಿಸಿದಾಗ ಕೊಂಕಣಿ ತನ್ನಲ್ಲಿಯ ದೀರ್ಘ ಏ ಓ ಗಳನ್ನು ಹ್ರಸ್ವಗೊಳಿಸುತ್ತದೆ. ಕೊಂಕಣಿ ಶಬ್ದಗಳು ಮರಾಠಿಯಂತೆ ವ್ಯಂಜನಾಂತವಾಗಿರದೆ ಸ್ವರಾಂತವಾಗಿರುವುದು ಹೆಚ್ಚು. ಕೊಂಕಣಿ ಸಪ್ತಮೀ ವಿಭಕ್ತಿಯಾದ ಆ ಕಾರಾಂತವು ಉ ಕಾರಾಂತವಾಗುತ್ತದೆ. ಉದಾ: ಪಾನಾಂತು, ಝಾಡಾಂತು. ಮರಾಠಿಯ ಕ್ರಿಯಾಪದಗಳು ಓ ಕಾರಾಂತರವಾಗಿದ್ದರೆ, ಕೊಂಕಣಿಯಲ್ಲಿ ಆ, ಆಂ ಗಳು ಬರುತ್ತವೆ. ಉದಾ: ಧಾವತೊ (ಮರಾಠಿ) ಧಾವತಾಂ (ಕೊಂಕಣಿ). ಇದು

ಹಳಗನ್ನಡದಲ್ಲಿ ಪ್ರಾಚೀನ ಕ್ರಿಯಾರೂಪಗಳಲ್ಲಿ ಸೇರುವ ಒನ್, ಆನ್ ಆಖ್ಯಾತ ಪ್ರತ್ಯಯಗಳ ಪ್ರಭಾವದ ಫಲವಿರಬಹುದು. ಮರಾಠಿಯ ಚತುರ್ಥಿ ವಿಭಕ್ತಿಯ ಲಾ ಪ್ರತ್ಯಯದ ಪ್ರತಿಯಾಗಿ, ಕೊಂಕಣಿಯಲ್ಲಿ ಕ ಬರುತ್ತದೆ. ಇದು ಕನ್ನಡದ 'ಕೆ' ಪ್ರತ್ಯಯಕ್ಕೆ ಸಮೀಪತರ. ಕೆಲವರು ಭಾವಿಸುವಂತೆ ಹಿಂದಿ 'ಕೊ' ಪ್ರಭಾವವಿರುವುದು ಇಲ್ಲಿ. ಕೊಂಕಣಿಯ ವಾಕ್ಯಗಳ ಧ್ವನಿಯೂ ಇದನ್ನು ಸೂಚಿಸುತ್ತದೆ. ದವಡಿ, ಮಾಲಾಕ, ದುಗಾಣೀ (ದುಗ್ಗಾಣಿ), ದಲಾಲಿ ಇತ್ಯಾದಿ. ಪಂಚಮೀ ವಿಭಕ್ತಿಯಲ್ಲಿ ಮರಾಠಿ ಹೂನ್ ಪ್ರತ್ಯಯ ಕೊಂಕಣಿಯಲ್ಲಿಲ್ಲ. 'ಥಾಮುನ್', 'ಥಾವೂನ್' ಇದೆ. ಅಂತ್ ಮತ್ತು ಹೂನ್ ಇವುಗಳ ಸೇರಿಕೆಯನ್ನು ಕೆಲವರು ಇಲ್ಲಿ ಭಾವಿಸುತ್ತಾರೆ. ಕನ್ನಡ ಪಂಚಮಿಯ ಅತ್ತಣ ಇಲ್ಲಿ ಪ್ರತ್ಯಯದ ಮೂಲವಿರಬಹುದೆ ಎಂಬ ಸಂದೇಹವಿದೆ.

ಈ ವಿಚಾರದ ಮಂಡನೆಯಲ್ಲಿ ಕೊಂಕಣಿ ಮರಾಠಿಯಿಂದ ಕೆಲವೆಡೆ ಭಿನ್ನವಾಗಿದೆಯೆಂದೂ ಈ ಭಿನ್ನತೆಗಳಿಗೆ ಕನ್ನಡದ ಪ್ರಭಾವವೇ ಕಾರಣವೆಂದೂ ತರ್ಕಿಸಲಾಗಿದೆ. ಕೊಂಕಣಿ ಮರಾಠಿಯಿಂದ ಬಂದಿದೆ, ಆದುದರಿಂದ ಇದರಲ್ಲಿ ಭಿನ್ನತೆಗಳಿರಬಾರದು ಎಂಬುದು ಪೂರ್ವಪಕ್ಷ. ಆದರೆ ಕೊಂಕಣಿಯ ಉಗಮದ ಬಗೆಗಿನ ಈ ಹೇಳಿಕೆ ಇನ್ನೂ ವಾದಗ್ರಸ್ತವಾಗಿದೆ. ಕನ್ನಡ ಪ್ರಭಾವದ ಪರಿಣಾಮಗಳು ಎಂದು ಹೇಳಲಾದ ಮಾರ್ಪಾಟುಗಳು ಕೂಡ ಕೊಂಕಣಿಯ ಸ್ವಾಭಾವಿಕ ಲಕ್ಷಣಗಳೇ ಆಗಿರುವುದು ಅಸಾಧ್ಯವೇ ಎಂದು ವಿಚಾರ ಮಾಡಬೇಕು. ಕೊಂಕಣಿಯ ಕೆಲವು ಪ್ರಭೇದಗಳ ಮೇಲೆ ಕನ್ನಡದ ಪ್ರಭಾವ ಹೆಚ್ಚಾಗಿ ಬಿದ್ದಿದೆ ಎಂದು ಪ್ರಾಯಃ ಹೇಳಬಹುದು. ಸ್ವರಾಂತ ಕೊಂಕಣಿ ಶಬ್ದಗಳು ಮಂಗಳೂರಿನ ಕ್ರೈಸ್ತೇತರ ಕೊಂಕಣಿಯಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಈ ಜನರಿಗೆ ಕನ್ನಡದೊಡನೆ ಸಂಪರ್ಕ ಹೆಚ್ಚಿದ್ದು ಅಷ್ಟು ಸಂಪರ್ಕವಿರದ ಅವರ ಕ್ರೈಸ್ತ ಭಾಷಾಬಾಂಧವರ ಮಾತುಗಳು ವ್ಯಂಜನಾಂತವಾಗಿಯೇ ಉಳಿದಿವೆ ಎಂಬುದನ್ನೂ ಗಮನಿಸಬೇಕು. ಉದಾ: ದೇವ್, ದೀಸ್, ಮನಿಸ್ ಇತ್ಯಾದಿ.

ಹಿಂದೆ ಬಳಕೆಯಲ್ಲಿದ್ದ ಕೆಲವು ಕೊಂಕಣಿ ಪದಗಳು ತಮ್ಮ ಸ್ಥಾನವನ್ನು ಈಗ ಕನ್ನಡ ಪದಗಳಿಗೆ ಬಿಟ್ಟುಕೊಟ್ಟಿವೆ. ಬಾಗಿಲ್ (ಬಾಗಿಲು-ಕನ್ನಡ)-ದಾರ್ (ಕೊಂಕಣಿ), ಗುಡೊ (ಗುಡ್ಡ-ಕ) - ದೊಂಗೊರ್ (ಕೊಂ) ಗಾದೊ (ಗದ್ದೆ-ಕ) - ಶೆತ್ (ಕೊಂ), ಶಾಯಿ (ಕಾಯಿ-ಕ) - ತೀಂತ್ (ಕೆಲಾಂ), ಪಾತ (ಪಾತ-ಕ) - ಲಿಸಾಂವ್ (ಕೊಂ), ತರ್ಕಾರಿ (ತರಕಾರಿ-ಕಂ) - ರಾಂದ್ವೊಯ್ (ಕೊಂ), ಮುಕ್ಕಾಲ್ (ಮುಕ್ಕಾಲು-ಕ) - ಡೆಕ್ಕಿ (ಕೊಂ), ಕೊಂಕಣಿ ಪದಗಳನ್ನು ಬಹಳ ಅಪೂರ್ವವಾಗಿ ಮಾತ್ರ ಕೇಳುತ್ತೇವೆ. ಹೀಗೆಯೇ ಕನ್ನಡದ ಮೇಲಾದ ಕೊಂಕಣಿಯ ಪ್ರಭಾವ ಸಿಗರೇಟ್ ಎಳೆ ಸಿಗರೇಟ್ ವೋಡ್, ನಿದ್ದೆತೆಗಿ-ನೀದ್‌ಕಾಡ್ (ಕೊಂ) ಮುಂತಾದ ನುಡಿಗಟ್ಟುಗಳಲ್ಲಿ ಹೊಳಹು ತೋರಿದೆ. (ಇ.ಎನ್.)

**ಇಂಗ್ಲಿಷ್ :** ಬ್ರಿಟಿಷರು ಭಾರತವನ್ನು ಆಕ್ರಮಿಸಿಕೊಂಡ ಮೇಲೆ ಇಂಗ್ಲಿಷ್ ಭಾಷೆ ಭಾರತದಲ್ಲಿ ಪ್ರಚಾರಕ್ಕೆ ಬಂತು. ಭಾಷೆಯೊಂದಿಗೆ ಆ ಭಾಷೆಯ ಸಾಹಿತ್ಯವೂ ಭಾರತೀಯರಿಗೆ ಪರಿಚಿತವಾಯಿತು. ಕರ್ನಾಟಕ ಇದಕ್ಕೆ ಹೊರತಾಗಿಲ್ಲ. ಶ್ರೀಮಂತವೂ ಸಂಕೀರ್ಣವೂ ಆದ ಇಂಗ್ಲಿಷ್ ಸಾಹಿತ್ಯ ಆಧುನಿಕ ಕನ್ನಡ ಸಾಹಿತ್ಯಕ್ಕೆ ನೀಡಿದ ಸ್ಫೂರ್ತಿ ಅಪಾರ. ಕನ್ನಡ ವಾಙ್ಮಯದಲ್ಲಿ ಇಂಗ್ಲಿಷಿನ ಪ್ರಭಾವ ಪ್ರತ್ಯೇಕಿಸಿ ತೋರಿಸುವುದು ಕಠಿಣ ಎನ್ನುವಷ್ಟರಮಟ್ಟಿಗೆ ಹಾಸುಹೊಕ್ಕಾಗಿದೆ. ಇಂದಿನ ಅನೇಕ ಸಾಹಿತ್ಯ ಪ್ರಕಾರಗಳು ನೇರವಾಗಿ ಇಂಗ್ಲಿಷಿನಿಂದ ಬಂದವು ಅಥವಾ ಅದರ ಸಂಪರ್ಕದಿಂದ ಸಿದ್ಧವಾದವು. ಪ್ರಭಾವದ ಜೊತೆಗೆ ಅನುಕರಣ ಅನುವಾದಗಳನ್ನೂ ಲೆಕ್ಕಿಸಿದರೆ ಇಂಗ್ಲಿಷ್ ಸಾಹಿತ್ಯ ಕನ್ನಡವನ್ನು ಶ್ರೀಮಂತಗೊಳಿಸಿರುವುದು ತಿಳಿಯುತ್ತದೆ.

ಇಂಗ್ಲಿಷ್ ಸಾಹಿತ್ಯದ ಮೂಲಕ ಕನ್ನಡಕ್ಕೆ ಐರೋಪ್ಯಸಾಹಿತ್ಯದ ಪರಿಚಯವಾಯಿತು. ಕನ್ನಡ ಸಾಹಿತ್ಯದ ಮೇಲೆ ಇಂಗ್ಲಿಷ್ ಸಾಹಿತ್ಯದ ಪ್ರಭಾವವೆಂದರೆ ಪಾಶ್ಚಾತ್ಯ ಸಾಹಿತ್ಯದ ಪ್ರಭಾವವೆಂದೇ ಅರ್ಥ. ಗ್ರೀಕ್, ಲ್ಯಾಟಿನ್, ಫ್ರೆಂಚ್, ಜರ್ಮನ್, ಇಟಾಲಿಯನ್, ರಷ್ಯನ್ ಮುಂತಾದ ಸಾಹಿತ್ಯಗಳೆಲ್ಲ ಇಂಗ್ಲಿಷಿನ ಮೂಲಕ ಆಧುನಿಕ ಕನ್ನಡ ಸಾಹಿತ್ಯವನ್ನು ಪ್ರಭಾವಿಸಿವೆ. ಪೂರ್ವ-ಪಶ್ಚಿಮಗಳ ಸಂಗಮವೇ ಕನ್ನಡದ ಹೊಸ ಸಾಹಿತ್ಯಕ್ಕೆ ಹೇತುವೂ ಮೂಲಧಾತುವೂ ಆಯಿತು.

19ನೆಯ ಶತಮಾನದಲ್ಲಿ ಪಾಶ್ಚಾತ್ಯ ಸಂಸರ್ಗದ ಹೊಸ ಪ್ರವಾಹ ಬಂದು ಸೇರಿದ ಮೇಲೆ ಕನ್ನಡ ಸಾಹಿತ್ಯವಾಹಿನಿ ನವೋನವವಾಗಿ ಜೀವಂತವಾಗಿ ಹರಿಯತೊಡಗಿತು. ಆಧುನಿಕ ಕನ್ನಡ ಸಾಹಿತ್ಯ ತಲೆ ಎತ್ತಿತು. 19ನೆಯ ಶತಮಾನದ ಉತ್ತರಾರ್ಧದಲ್ಲಿ ಬ್ರಿಟಿಷರು ಬಗೆಬಗೆಯ ಪಾಶ್ಚಾತ್ಯ ನಾಗರಿಕ ಸೌಲಭ್ಯಗಳನ್ನು ಭರತಖಂಡಕ್ಕೆ ಒದಗಿಸತೊಡಗಿದರು. ಈ ಪಾಶ್ಚಾತ್ಯ ಸಂಪರ್ಕ ನಾಲ್ಕು ರೀತಿಯಲ್ಲಿ ಉಂಟಾಯಿತೆಂದು ಹೇಳಲಾಗಿದೆ: ಆಡಳಿತ-ವ್ಯವಹಾರ, ಮುದ್ರಣ ಯಂತ್ರ, ಕ್ರೈಸ್ತಮತ ಪ್ರಚಾರ, ಹೊಸ ಶಿಕ್ಷಣ ಪದ್ಧತಿ-ಹೊಸ ವಿಚಾರಸರಣಿ. ಪಾಶ್ಚಾತ್ಯ ನಾಗರಿಕತೆಯ ಪ್ರಭಾವದಿಂದ ಭಾರತೀಯರ ಜೀವನದೃಷ್ಟಿ ಹಾಗೂ ಮೌಲ್ಯಗಳು ಬದಲಾದುವು; ಪಾಶ್ಚಾತ್ಯರ ವೈಚಾರಿಕ ಪ್ರವೃತ್ತಿ, ವ್ಯಾವಹಾರಿಕ ಲೌಕಿಕ ಮನೋಧರ್ಮ ಭಾರತೀಯರಲ್ಲಿ ಹರಡತೊಡಗಿದುವು. ಬ್ರಿಟಿಷರು ಜಾರಿಗೆ ತಂದ ಹೊಸ ಶಿಕ್ಷಣ ಪದ್ಧತಿ ದೊಡ್ಡ ಕ್ರಾಂತಿಯನ್ನೇ ಉಂಟುಮಾಡಿತು. ಅದರಿಂದ ಭಾರತೀಯರ ಪಾಲಿಗೆ ನವದಿಗಂತಗಳು ತೆರೆದುಕೊಂಡವು. ಹೊಸದೊಂದು ಪ್ರಪಂಚದ ಪರಿಚಯವಾಯಿತು. ವಿಜ್ಞಾನ, ಇಂಗ್ಲಿಷ್ ಸಾಹಿತ್ಯ ಪ್ರಪಂಚದ ಪರಿಜ್ಞಾನ ಅವರಿಗೆ ಹಿಂದಿಲ್ಲದ ಅನುಭವಗಳನ್ನೂ ಸಂವೇದನೆಗಳನ್ನೂ ತಂದುಕೊಟ್ಟವು. ಬದುಕಿನ ರೀತಿನೀತಿಗಳನ್ನು ಮಾರ್ಪಡಿಸಿದುವು. ಇದುವರೆಗೆ ಮತಧರ್ಮದ ಆವರಣದಲ್ಲಿ ಬೆಳೆದುಬಂದಿದ್ದ ಭಾರತೀಯರ ಸಮಷ್ಟಿಪ್ರಜ್ಞೆ ಲೌಕಿಕವಾದ ವ್ಯಷ್ಟಿಪ್ರಜ್ಞೆಯಾಗಿ ಸಂಕ್ರಮಣಗೊಂಡು, ಸ್ವತಂತ್ರ ವಿಚಾರಶಕ್ತಿ ಕುದುರತೊಡಗಿತು. ಭಾರತೀಯರಲ್ಲಿ ಸ್ವಾತಂತ್ರ್ಯಪ್ರೇಮ, ರಾಷ್ಟ್ರೀಯ ಭಾವನೆ, ಸ್ವಾಭಿಮಾನ, ಸ್ವತಂತ್ರ ವಿಚಾರಸರಣಿಗಳು ಬೆಳೆಯಲು ಅದು ಕಾರಣವಾಯಿತು. ಇಂಗ್ಲಿಷ್ ಶಿಕ್ಷಣವೆಂತೊ ಅಂತೆ ಕ್ರೈಸ್ತ ಮಿಷನರಿಗಳು ತಂದ ಮುದ್ರಣಯಂತ್ರವೂ ಒಂದು ಕ್ರಾಂತಿ ಸಾಧನವಾಯಿತು, ವಾಚಕವರ್ಗವನ್ನು ಸೃಜಿಸಿ, ಬರೆಹಗಾರರಿಗೆ ಸ್ಫೂರ್ತಿ ಸಾಧನವಾಯಿತು.

ಈ ಎಲ್ಲ ಸಂಕ್ರಾಂತಿ ಭರತಖಂಡದ ಇತರ ಭಾಗಗಳನ್ನು ಹೇಗೋ ಹಾಗೆಯೇ ಕರ್ನಾಟಕವನ್ನೂ ವ್ಯಾಪಿಸಿ ಹೊಸ ಸಾಹಿತ್ಯ ಸೃಷ್ಟಿಗೆ ಪ್ರಚೋದಕವಾಯಿತು. ನಾಡು ನುಡಿಗಳ ಪ್ರೇಮ ಕನ್ನಡಿಗರಲ್ಲೂ ಜಾಗೃತವಾಯಿತು. ಇಂಗ್ಲಿಷ್ ಶಿಕ್ಷಣ ಪಡೆದ ಹೊಸ ಪೀಳಿಗೆಯ ಸಾಮಾನ್ಯ ಜನ ನವೀನ ಸಾಹಿತ್ಯದ ಹರಿಕಾರರಾದರು. ರೂಪ ವಸ್ತು ಭಾವ ಭಾಷೆಗಳಲ್ಲಿ ಸಾಹಿತ್ಯ ಹೊಸತನವನ್ನು ತಾಳಿತು.

ಹೊಸಗನ್ನಡದ ಅರುಣೋದಯವಾದುದು ಕ್ರೈಸ್ತ ಮಿಷನರಿಗಳಿಂದ. ಈ ಅರುಣೋದಯ ಕಾಲದಲ್ಲಿ ಮೂರು ಘಟ್ಟಗಳನ್ನು ಗುರುತಿಸಬಹುದು. ಸು.1810 ರಿಂದ ಸು.1850 ನಡುವಿನ ಕಾಲ. ಈ ಅವಧಿಯಲ್ಲಿ ಪಾಶ್ಚಾತ್ಯ ಶಿಕ್ಷಣ ಪದ್ಧತಿ ಇನ್ನೂ ನೆಲೆಗೊಂಡಿರಲಿಲ್ಲ. ಕ್ರೈಸ್ತ ಮಿಷನರಿಗಳು ಮಾತ್ರ ಗ್ರಂಥ ರಚನೆಯಲ್ಲಿ ತೊಡಗಿದ್ದರು. ದೇಶೀಯರು ಆ ಕಡೆ ಗಮನ ಹರಿಸಿರಲಿಲ್ಲ. 1851 ರಿಂದ 1880ರವರೆಗಿನ ಕಾಲವನ್ನು ಮುಂಬೆಳಗಿನ ಕಾಲವೆನ್ನಬಹುದು. ಆ ಅವಧಿಯಲ್ಲಿ ದೇಶೀಯರೂ ಗ್ರಂಥರಚನೆಯ ಕಡೆಗೆ ಮನಸ್ಸು ಕೊಟ್ಟು, ಅನುವಾದ ಕಾರ್ಯದಲ್ಲಿ ಮತ್ತು ಹಳೆಯ ಗ್ರಂಥಗಳ ಪರಿಷ್ಕರಣದಲ್ಲಿ ತೊಡಗಿದರು. 1881 ರಿಂದ 1899ರವರೆಗಿನ ಕಾಲವನ್ನು ಹೊಂಬೆಳಗಿನ ಕಾಲ ಅಥವಾ ನವೋದಯ ಕಾಲವೆನ್ನಬಹುದು. ಈ ಅವಧಿಯಲ್ಲಿ ಮತ್ತು ಅನಂತರ ಅನುವಾದ ಕೃತಿಗಳ ಜೊತೆಗೆ ಸ್ವತಂತ್ರ ಕೃತಿಗಳೂ ಕಾಣಿಸಿಕೊಂಡುವು. ಇಂಗ್ಲಿಷ್ ಶಿಕ್ಷಣ ಕ್ರಮ ಎಲ್ಲೆಲ್ಲೂ ರೂಢವಾಗಿ, ನವೀನ ಶಿಕ್ಷಣ ಪಡೆದವರ ಸಂಖ್ಯೆ ಹೆಚ್ಚಿದ ಕಾಲಾವಧಿಯಿದು. ಈ ಶಿಕ್ಷಣದ ಫಲವಾಗಿ ಹೊಸ ಧೋರಣೆಯುಂಟಾಗಿ, ಸಮಾಜ ಸುಧಾರಣೆಯೇ ಮೊದಲಾದ ಸ್ವತಂತ್ರ ವಿಚಾರಗಳು ಸ್ಫುರಿಸಿ ಅಭಿವ್ಯಕ್ತಿಗಾಗಿ ಹಾತೊರೆದುವು. ಇಂಥ ಅಭಿವ್ಯಕ್ತಿಯಲ್ಲಿ ವೈಯಕ್ತಿಕ ವಿಚಾರಧಾರೆ, ಲೌಕಿಕ ದೃಷ್ಟಿ, ವಾಸ್ತವಿಕತೆಯ ಪ್ರಜ್ಞೆ ತಲೆದೋರಿದುವು.

ಕ್ರೈಸ್ತಮಿಷನರಿಗಳ ಸಾಹಿತ್ಯಕಾರ್ಯ ಭಾಷಾಭ್ಯಾಸದ ಸಾಧನಗಳ ಮೂಲಕ ಪ್ರಾರಂಭವಾಯಿತು. ಕನ್ನಡ ವ್ಯಾಕರಣ, ನಿಘಂಟು, ಛಂದಸ್ಸುಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಅವರು ಹೊರತಂದರು. ಈ ದಿಶೆಯಲ್ಲಿ ವಿಲಿಯಂ ಕೇರಿಯ ವ್ಯಾಕರಣ (1817) ಆದ್ಯಕೃತಿ. ಮಿಷನರಿಗಳು ಕ್ರೈಸ್ತ ಸಾಹಿತ್ಯವನ್ನು ಕನ್ನಡಕ್ಕೆ ತಂದುದು ಮುಖ್ಯವಾದ ಕಾರ್ಯ. 19ನೆಯ ಶತಮಾನದ ಪೂರ್ವಾರ್ಧದಲ್ಲಿ ಇವೇ ಹೊಸಗನ್ನಡದ ಮುಖ್ಯ ಬರೆಹಗಳು.

ಪಠ್ಯಪುಸ್ತಕ ರಚನೆ, ಪ್ರಾಚೀನ ಕೃತಿಗಳ ಶಾಸ್ತ್ರೀಯ ಸಂಪಾದನೆ ಹಾಗೂ ಮುದ್ರಣಾಲಯ ಸ್ಥಾಪನೆ ಮಿಷನರಿಗಳ ಮತ್ತು ಬ್ರಿಟಿಷ್ ಅಧಿಕಾರಿಗಳ ಇತರ ಕಾರ್ಯಗಳು.

ವಿದೇಶೀಯರು ಹೀಗೆ ಕನ್ನಡ ಸಾಹಿತ್ಯ ಸೇವೆಯನ್ನು ಹಿಂದೆಯೇ ಪ್ರಾರಂಭಿಸಿದ್ದರೂ ದೇಶೀಯರು ಆ ಬಗ್ಗೆ ಮೊದಮೊದಲು ನಿರ್ಲಿಪ್ತರಾಗಿದ್ದರು. ಇದಕ್ಕೆ ಮುಖ್ಯ ಕಾರಣವೇನೆಂದರೆ, ನಾಡು ಆಡಳಿತ ದೃಷ್ಟಿಯಿಂದ ವಿಭಜಿತವಾಗಿದ್ದು, ಶೈಕ್ಷಣಿಕವಾಗಿ ಹಿಂದೆ ಬಿದ್ದಿತ್ತು. ಅಲ್ಲದೆ, ಮೈಸೂರಿನಲ್ಲಿ ರಾಜಾಸ್ಥಾನದಲ್ಲಿದ್ದವರು ಹೊಸತನವನ್ನು ಅಷ್ಟಾಗಿ ಸ್ವಾಗತಿಸದೆ ಸಂಪ್ರದಾಯದ ಜಾಡಿನಲ್ಲೆ ಸಾಗಿದ್ದರು. ಕರ್ನಾಟಕದ ಉಳಿದ ಭಾಗಗಳಲ್ಲೂ ನವೋದಯಕ್ಕೆ ಅವಕಾಶ ಸಿಗುವುದು ತಡವಾಯಿತು. ಆದ್ದರಿಂದ ಬಂಗಾಲಿ, ಮರಾಠಿ ಮುಂತಾದ ಸಾಹಿತ್ಯಗಳಲ್ಲಿ ಬೇಗ ಕಾಣಿಸಿಕೊಂಡ ದೇಶಾಭಿಮಾನ, ಸಮಾಜ ಸುಧಾರಣೆಯ ಪ್ರವೃತ್ತಿ, ಪ್ರಗತಿಪರ ವಿಚಾರ ಧೋರಣೆಗಳು ಕನ್ನಡದಲ್ಲಿ ವಿಲಂಬಿತವಾಗಿ ಕಾಣಿಸಿಕೊಂಡುವು. ಏನಿದ್ದರೂ 1890ನೆಯ ದಶಕದಲ್ಲಿ ಸ್ವತಂತ್ರ ಕಾದಂಬರಿ ನಾಟಕಗಳು ಕನ್ನಡದಲ್ಲಿ ಹೊಮ್ಮಿದುವು. 1899ರಲ್ಲಿ ಪ್ರಥಮ ಸಾಮಾಜಿಕ ಕಾದಂಬರಿ ಹೊರಬಂತು. ಈ ನಡುವಣ ಅವಧಿ ಹೊಸಗನ್ನಡದ ಇತಿಹಾಸದಲ್ಲಿ ಮಹತ್ತ್ವದ ಶಕವೆನ್ನಲಾಗಿದೆ. ಹೊಸತು ನಿಚ್ಚಳವಾಗಿ, ಉಜ್ವಲವಾಗಿ ಕಾಣಿಸಿಕೊಂಡ ಕಾಲವದು.

ಹೊಸಗನ್ನಡ ಗದ್ಯದಲ್ಲಿ ಬೈಬಲ್ಲನ್ನು ಅನುವಾದಿಸಿದ (1812) ಜಾನ್ ಹ್ಯಾಂಡ್ಸ್ ಕರ್ನಾಟಕಕ್ಕೆ ಬಂದುದು 1810ರಲ್ಲಿ. ಆ ವರ್ಷವನ್ನು ಪಾಶ್ಚಾತ್ಯ ಪ್ರಭಾವದ ದೃಷ್ಟಿಯಿಂದ ಹೊಸಗನ್ನಡ ಸಾಹಿತ್ಯದ ಆರಂಭವರ್ಷವೆನ್ನಬಹುದು. ಲಿಯೊನಾರ್ಡೊ ಸಿನ್ನಾಮಿ ಎಂಬ ಮಿಷನರಿ ಹದಿನೇಳನೆಯ ಶತಮಾನದಲ್ಲೆ ಕರ್ನಾಟಕಕ್ಕೆ ಬಂದಿದ್ದ; ಅವನೇ ಹೊಸಗನ್ನಡದ ಪ್ರಪ್ರಥಮ ಗ್ರಂಥಕರ್ತ ಎನ್ನಲಾಗಿದೆ. ಆದರೆ ಅವನ ಕೃತಿಗಳು ದೊರೆತಿಲ್ಲ. ಜಾನ್ ಹ್ಯಾಂಡ್ಸ್ ಬೈಬಲ್ಲಿನ ಹೊಸ ಒಡಂಬಡಿಕೆಯ ನಾಲ್ಕು ಸುವಾರ್ತೆಗಳನ್ನು 1820ರಲ್ಲಿ ಹೊರತಂದ. ಅನಂತರ ಹೊಸ ಒಡಂಬಡಿಕೆಯ ಮುಂದಿನ ಭಾಗವನ್ನೂ ಹಳೆಯ ಒಡಂಬಡಿಕೆಯ ಅನುವಾದವನ್ನೂ ಸಿದ್ಧಗೊಳಿಸಿದ. ಸಮಗ್ರ ಬೈಬಲನ್ನು ಮೊದಲ ಬಾರಿಗೆ ಕನ್ನಡದಲ್ಲಿ ಹೊರತಂದವನು ಹ್ಯಾಂಡ್ಸ್. ಅವನಿಗಿಂತ ಮೊದಲೇ ವಿಲಿಯಂ ಕೇರಿ 1809ರಲ್ಲಿ ಬೈಬಲನ್ನು ಕನ್ನಡಕ್ಕೆ ತಂದಿದ್ದ. ಆದರೆ ಅದರ ಹಸ್ತಪ್ರತಿ 1812ರಲ್ಲಿ ಸುಟ್ಟು ಹೋಯಿತು. ಕೇರಿ ಮತ್ತೆ ಅದನ್ನು ಪ್ರತಿಮಾಡಿ 1823ರಲ್ಲಿ ಪ್ರಕಟಿಸಿದ. ಇದೇ ಹೊಸಗನ್ನಡದ ಮೊದಲ ಗದ್ಯಗ್ರಂಥವೆನ್ನಲಾಗಿದೆ. ಎ.ಬೌಥೆಲೊ ಬೈಬಲ್ಲಿನ ಸಂಕ್ಷಿಪ್ತ ರೂಪವನ್ನು ಕನ್ನಡದಲ್ಲಿ ಪ್ರಕಟಿಸಿದ. ರೀವ್ ಎಂಬಾತ ಯೇಸುಕ್ರಿಸ್ತನ ಅವತಾರ ಎಂಬ ಅನುವಾದವನ್ನೂ ಹಳೆಯ ಒಡಂಬಡಿಕೆಯ ಅನೇಕ ಪರ್ವಗಳನ್ನೂ ಕನ್ನಡದಲ್ಲಿ ಹೊರತಂದ (1820). ಜಾನ್ ಬುನ್ಯನ್ 'ಪಿಲ್ಗ್ರಿಮ್ಸ್ ಪ್ರೋಗ್ರೆಸ್' ಕೃತಿಯನ್ನು ದೇಶಾಂತ್ರಿಯ ಪಯಣ ಎಂಬ ಹೆಸರಿನಲ್ಲಿ ಅನುವಾದಿಸಿದ. ಬಿ.ಎಚ್.ರೈಸ್ ತನ್ನ ಸಹೋದ್ಯೋಗಿ ಸಿವೆಲ್‌ನೊಡನೆ ಬೈಬಲ್ಲಿನ ನೂರು ಮುಖ್ಯಾಂಶಗಳನ್ನು ಟಿಪ್ಪಣಿ ಸಹಿತ ಪ್ರಕಟಿಸಿದ (ವೇದ ಸಂಗ್ರಹ, 1844). ಸ್ಯಾಂಡರ್ಸನ್ 'ಕಂ ಟು ಜೀಸಸ್' ಎಂಬ ಕೃತಿಯನ್ನು (ಮೂಲ: ಸಿ.ಎನ್.ಹಾಲ್) ಅನುವಾದಿಸಿದ (1862). ಹೀಗೆಯೇ ಚಾರ್ಬೋನಾ ಎಂಬಾತ ದೈವಪರೀಕ್ಷೆ (1863), ಸತ್ಯವೇದ ಪರೀಕ್ಷೆ (1852), ದಿವ್ಯಮಾತೃಕೆ (1862), ಸುಕೃತ ಮಂತ್ರಗಳು (1866) ಇತ್ಯಾದಿಗಳನ್ನು ಅನುವಾದಿಸಿದ. ಹೆನ್ರಿ ಹೇಗ್ ಜಿಗ್ಲರನೊಡನೆ ಹೊಸ ಒಡಂಬಡಿಕೆಯ ಲ್ಯೂಕ್ ಮತ್ತು ಮಾರ್ಕರ ಸುವಾರ್ತೆಗಳನ್ನು ಭಾಷಾಂತರಿಸಿದ. ಮೊಗ್ಲಿಂಗನ ಜಾತಿ (ಮತ) ವಿಚಾರಣೆ (1845), ದೇವ ವಿಚಾರಣೆ (1852) ಇವು ಸ್ವತಂತ್ರ ಕೃತಿಗಳು. ಇವು ಹೊಸಗನ್ನಡದ ಆದ್ಯ ಪ್ರಬಂಧಗಳು. 'ಪಿಲ್ಗ್ರಿಮ್ಸನು ಪ್ರೋಗ್ರೇಸ್'ನ ಅನುವಾದವಾದ ಯಾತ್ರಿಕನ ಸಂಚಾರವನ್ನು ಮೊಗ್ಲಿಂಗನು ವೈಗಲ್‌ನೊಡನೆ 1849ರಲ್ಲಿ ಹೊರತಂದ. 'ಸುದೀರ್ಘ ಕಥೆ ಅಥವಾ ಕಾದಂಬರಿಯಾಗಿ ಕನ್ನಡದಲ್ಲಿ ಇದೇ ಮೊದಲನೆಯದು. 1838ರಲ್ಲಿ ಲಿಟ್ಲ್ ವಿಲಿಯಂ ಎಂಬ ಕ್ರೈಸ್ತ ಕಥನದ ಅನುವಾದ ಪ್ರಕಟವಾಗಿತ್ತು. ಪ್ರವಚನಕ್ಕೆ ಬೇಕಾದ ಕ್ರೈಸ್ತ ಗೀತೆಗಳನ್ನು ಅನುವಾದಿಸಿದ ಆರಂಭಕಾರರಲ್ಲೊಬ್ಬ ವೈಗಲ್. ಮೊಗ್ಲಿಂಗನೊಡನೆ ಹಾಕ್ ಅನೇಕ ಪ್ರಾರ್ಥನಾಗೀತೆಗಳನ್ನು ರಚಿಸಿದ. ಎಫ್. ಕಿಟ್ಟೆಲ್ ಕಥಾಮಾಲೆ (1862) ಎಂಬ ಹೆಸರಿನಲ್ಲಿ ಬೈಬಲ್ಲಿನ ಹೊಸ ಒಡಂಬಡಿಕೆಯನ್ನು ಕಥ'ನ ರೂಪಕ್ಕೆ ತಿರುಗಿಸಿದ. ಇದರಲ್ಲಿ ಭಾಮಿನಿ, ವಾರ್ಧಕ ಮುಂತಾದ ಛಂದೋರೂಪಗಳನ್ನು ಬಳಸಲಾಗಿದೆ. ಬೇರಾವ ಮಿಷನರಿಯೂ ಇಷ್ಟೊಂದು ಕನ್ನಡ ಪದ್ಯಗಳನ್ನು ರಚಿಸಿಲ್ಲವಂತೆ. ಮಿಷನರಿಗಳು ಬರಿಯ ಮತೀಯ ಸಾಹಿತ್ಯವನ್ನೆ ರಚಿಸಲಿಲ್ಲ. ಮಹಾಪುರುಷರ ಜೀವನಚರಿತ್ರೆಗಳು ಮುಂತಾಗಿ ಜೀವನೋಪಯೋಗಿ ಗ್ರಂಥಗಳನ್ನೂ ರಚಿಸಿದ್ದರು.

ಉಳಿದವರಿಗಿಂತ ಬಾಸೆಲ್ ಮಿಷನ್‌ಗೆ ಸೇರಿದ ಮಿಷನರಿಗಳು ಕನ್ನಡಕ್ಕಿತ್ತ ಕೊಡುಗೆ ಮಿಗಿಲಾದುದು. ಅವರು ತಮ್ಮ 60 ವರ್ಷಗಳ ಕಾಲಾವಧಿಯಲ್ಲಿ ಅನೇಕ ಹೊಸ ವಿಚಾರಗಳನ್ನೂ ನವೀನ ರೂಪಗಳನ್ನೂ ಸಾಹಿತ್ಯ ರಂಗದಲ್ಲಿ ಪ್ರತಿಷ್ಠಾಪಿಸಿದ್ದಾರೆ. ಕನ್ನಡಕ್ಕೆ ಮ್ಯಾಕೆರಲ್, ಕಾಲ್ಡ್‌ವೆಲ್, ಬಿ.ಎಲ್.ರೈಸ್, ರೀಡ್ ಮುಂತಾದವರ ಸೇವೆಯೂ ಗಮನಾರ್ಹವಾದುದು. ಒಂದು ಕಡೆ ಪ್ರಾಚೀನ ನಿಕ್ಷೇಪದ ಅನಾವರಣ, ಇನ್ನೊಂದು ಕಡೆ ಹೊಸ ಸಾಹಿತ್ಯಕ್ಕೆ ಪ್ರೇರಣೆ ಈ ಎರಡೂ ಪರಸ್ಪರ ಪೂರಕವಾದ ಕೆಲಸಗಳನ್ನು ವಿದೇಶೀಯರು ಮಾಡಿದರು.

19ನೆಯ ಶತಮಾನದ ಉತ್ತರಾರ್ಧದಲ್ಲಿ, ಪಾಶ್ಚಾತ್ಯ ಶಿಕ್ಷಣಪಡೆದ ಹೊಸ ತಲೆಮಾರೊಂದು ಸಾಹಿತ್ಯ ರಚನೆಯಲ್ಲಿ ತೊಡಗಿ ನವ ಮನ್ವಂತರವನ್ನು ಆರಂಭಿಸಿತು. ಮೊದಮೊದಲು ಇಂಗ್ಲಿಷ್ ಕೃತಿಗಳ ಅನುವಾದಗಳು, ಅನುಕರಣಗಳು ಮತ್ತು ರೂಪಾಂತರಗಳು ಅನಂತರ ಸ್ವತಂತ್ರ ಕೃತಿಗಳು ಹೊರಬಂದುವು. ಚಾಮರಾಜ ಒಡೆಯರು ಚಾಮರಾಜೇಂದ್ರ ಕರ್ನಾಟಕ ನಾಟಕ ಸಭೆಯನ್ನು ಸ್ಥಾಪಿಸಿ ನಾಟಕಗಳ ಹುಟ್ಟಿಗೆ ಅನುವು ಮಾಡಿಕೊಟ್ಟದ್ದು ಒಂದು ಮಹತ್ವದ ಸಂಗತಿ. ಆಗ ಕೆಲವರು ಸಂಸ್ಕೃತದಿಂದ, ಕೆಲವರು ಇಂಗ್ಲಿಷಿನಿಂದ ನಾಟಕಗಳನ್ನು ಕನ್ನಡಿಸಿದರು. ಇಂಗ್ಲಿಷಿನಿಂದ ವಿಶೇಷವಾಗಿ ಷೇಕ್ಸ್‌ಪಿಯರರ ನಾಟಕಗಳನ್ನು ಭಾಷಾಂತರ ಅಥವಾ ರೂಪಾಂತರದ ಮೂಲಕ ತರಲಾಯಿತು. ಕನ್ನಡದಲ್ಲಿ ಐತಿಹಾಸಿಕ ನಾಟಕ ನಿರ್ಮಾಣಕ್ಕೆ ಅದೇ ಬುನಾದಿ. ಷೇಕ್ಸ್‌ಪಿಯರರನ್ನು ಕನ್ನಡಿಗರಿಗೆ ಮೊತ್ತಮೊದಲು ಪರಿಚಯಿಸಿದವರು ಚನ್ನಬಸಪ್ಪ ಎಂಬುವರೆಂದು ಹೇಳಲಾಗಿದೆ. ಅವರು 1821ರಷ್ಟು ಹಿಂದೆಯೇ ಕಾಮಿಡಿ ಆಫ್ ಎರರ್ಸ್, ಮ್ಯಾಕ್‌ಬೆತ್ ನಾಟಕಗಳ ಕಥೆಗಳನ್ನು ಪ್ರಕಟಿಸಿದ್ದರಂತೆ.

ಈ ದಿಕ್ಕಿನಲ್ಲಿ ಎಂ.ಎಲ್.ಶ್ರೀಕಂಠೇಶಗೌಡರ ಹೆಸರೂ ಮುಖ್ಯವಾದುದು. ಅವರು ಮ್ಯಾಕ್‌ಬೆತ್ ನಾಟಕವನ್ನು ಪ್ರತಾಪರುದ್ರದೇವ (1895) ಎಂದು ರೂಪಾಂತರಿಸಿದರು. ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್ ನಾಟಕವನ್ನು ಪ್ರಮೀಳಾರ್ಜುನೀಯ ಎಂದೂ ರೂಪಾಂತರಿಸಿದರು. ಅಲ್ಲದೆ ಹೆನ್ರಿ ಫೀಲ್ಡಿಂಗನ ಎ ಸಿಲಿಕನ್ ಸಮ್ಮರ್ (ಕನ್ಯಾವಿತಂತು), ಮೇರಿಯಾ ಎಜ್‌ವರ್ತಳ ಲಿಟಲ್ ಮರ್ಚೆಂಟ್ಸ್ (ಚಿಕ್ಕ ಬಣಜಿಗರು) ಕೃತಿಗಳನ್ನು ಕನ್ನಡಿಸಿದರು. ಎ.ಆನಂದರಾಯರು ರೋಮಿಯೋ ಜೂಲಿಯಟ್ ನಾಟಕವನ್ನು ರಾಮವರ್ಮ ಲೀಲಾವತಿ ಎಂದೂ ಮರ್ಚೆಂಟ್ ಆಫ್ ವೆನಿಸ್ ನಾಟಕವನ್ನು ಪಾಂಚಾಲೀ ಪರಿಣಯ ಎಂದೂ ರೂಪಾಂತರಿಸಿದರು. ಬಸವಪ್ಪಶಾಸ್ತ್ರಿಗಳಿಗೆ ಸ್ವತಃ ಇಂಗ್ಲಿಷ್ ಬರದಿದ್ದರೂ ಅನ್ಯರ ನೆರವಿನಿಂದ ಒಥೆಲೋ ನಾಟಕವನ್ನು ಶೂರಸೇನಚರಿತ ಎಂದು ಕನ್ನಡಕ್ಕೆ ತಂದರು. ಎಂ.ಎಸ್.ಪುಟ್ಟಣ್ಣನವರ ಹೇಮಚಂದ್ರ ರಾಮವಿಲಾಸ ಕಿಂಗ್ ಲಿಯರ್ ನಾಟಕದ ಗದ್ಯ ರೂಪಾಂತರ, ಆರ್. ಅಣ್ಣಾಜಿರಾಯರು, ಚುರಮುರಿ ಶೇಷಗಿರಿರಾಯರು, ಗುಂಡೋ ಕೃಷ್ಣ ಚುರಮುರಿಯವರು, ವೆಂಕಟಾದ್ರಿ ಶಾಮರಾಯರು ಮೊದಲಾದವರೂ ಹಲವಾರು ಇಂಗ್ಲಿಷ್ ನಾಟಕಗಳನ್ನು ಕನ್ನಡೀಕರಿಸಿದರು.

ಇಂಗ್ಲಿಷಿನಿಂದ ಕನ್ನಡಕ್ಕೆ ಬಂದ ಮೊದಲ ಕಾದಂಬರಿಯೆಂದರೆ ಎಸ್.ವಿ.ಕೃಷ್ಣಸ್ವಾಮಿ ಅಯ್ಯಂಗಾರ್ ಭಾಷಾಂತರಿಸಿದ ರಾಬಿನ್‌ಸನ್ ಕ್ರೂಸೋ (1858). ಬಾಪು ಸುಬ್ಬರಾಯರ ನಿರ್ಭಾಗ್ಯ ಮರಾದ ಅಂಥದೇ ಮತ್ತೊಂದು ಕಾದಂಬರಿ. ಥಾಮಸ್ ಡೇಯ 'ದಿ ಹಿಸ್ಟರಿ ಆಫ್ ಸ್ಯಾಂಡ್‌ಫೋರ್ಡ್ ಅಂಡ್ ಮಾರ್ಟನ್' ಎಂಬ ಕೃತಿಯನ್ನು ಎಂ.ಎಸ್.ಪುಟ್ಟಣ್ಣನವರು ಸುಮತಿ ಹಾಗೂ ಮದನಕುಮಾರರ ಚರಿತ್ರೆ ಎಂಬುದಾಗಿ ಕನ್ನಡಿಸಿದರು.

ಸ್ಥೂಲವಾಗಿ 19ನೆಯ ಶತಮಾನದ ಮೂರನೆಯ ದಶಕದಲ್ಲಿ ನಸುಕಾಗಿ, ಮಧ್ಯದಪ್ಪರ ಹೊತ್ತಿಗೆ ಬೆಳಕಾಗಿ ಹೊಸಗನ್ನಡ ಸಾಹಿತ್ಯ ತನ್ನ ವಿವಿಧ ಪ್ರಕಾರಗಳೊಡನೆ ಉದಯವಾಯಿತೆಂದು ಹೇಳಬಹುದು. ಆದರೆ

ಅದರ ಸ್ಪಷ್ಟ ರೂಪ ಕಾಣಿಸಿಕೊಂಡದ್ದು ಇಪ್ಪತ್ತನೆಯ ಶತಮಾನದಲ್ಲಿಯೇ ಎನ್ನಬೇಕು. ಭಾವಗೀತೆ, ನಾಟಕ, ಕಾದಂಬರಿ, ಕಥೆ, ವಿಮರ್ಶೆ, ಪ್ರಬಂಧ ಮುಂತಾದ ಪ್ರಕಾರಗಳೆಲ್ಲ ಕನ್ನಡದಲ್ಲಿ ಸುಪ್ರತಿಷ್ಠಿತವಾದುದು ಪ್ರಚಲಿತ ಶತಮಾನದಲ್ಲಿಯೇ. ಈ ಪ್ರತಿಷ್ಠಾಪನಾ ಕಾರ್ಯದಲ್ಲಿ ಇಂಗ್ಲಿಷ್ ವಾಙ್ಮಯದ ಕೊಡುಗೆ ಅಪರಿಮಿತವಾದುದು.

1820 ರಿಂದ 1920ರವರೆಗಿನ ಕಾಲವನ್ನು ಹೊಸಗನ್ನಡದ ಮೊದಲ ಹಂತವೆಂದಿಟ್ಟುಕೊಂಡರೆ, 1921ರ ಮುಂದಿನ ಕಾಲವನ್ನು ಎರಡನೆಯ ಹಂತವೆಂದು ಭಾವಿಸಬಹುದು. ಈ ಎರಡನೆಯ ಹಂತ ದೇಶಾದ್ಯಂತ ಅಪೂರ್ವ ಜಾಗೃತಿಯನ್ನು ಕಂಡ ಕಾಲ. ಆಗ ದೇಶದ ಸ್ವಾತಂತ್ರ್ಯಕ್ಕಾಗಿ ಪರಕೀಯ ಸತ್ತೆಯೊಡನೆ ಅಸಹಕಾರ ಮಾಡಿದಂತೆ ಸ್ವಭಾಷೆಯ ಮತ್ತು ಅಭಿವ್ಯಕ್ತಿಯ ಸ್ವಾತಂತ್ರ್ಯಕ್ಕಾಗಿ ಲೇಖಕರು ಹಳೆಯ ಸಂಪ್ರದಾಯದ ಸತ್ತೆಯೊಡನೆ ಅಸಹಕಾರ ಹೂಡಿದರು. ಸಾಹಿತ್ಯ ಕ್ಷೇತ್ರದಲ್ಲಿ ಸಹ ಇಂಗ್ಲಿಷ್ ವಾಙ್ಮಯದ ನಿತಾಂತಪ್ರಭಾವ ಭಾರತೀಯ ಸಾಹಿತ್ಯದ ಹೊಸ ಸ್ವರೂಪಕ್ಕೆ ಕಾರಣವಾಯಿತು. ಮೆಕಾಲೆ ಪ್ರಾರಂಭ ಮಾಡಿದ ವಿದ್ಯಾಭ್ಯಾಸ ಪದ್ಧತಿಯ ಮೂಲಕ ನಮ್ಮ ನಾಡಿನ ವಿದ್ಯಾವಂತರಿಗೆ ಷೇಕ್ಸ್‌ಪಿಯರ್ ಮತ್ತು ಮಿಲ್ಟನ್ ಇವರ ಮಹಾಕೃತಿಗಳೂ ವರ್ಡ್ಸ್‌ವರ್ತ್, ಷೆಲ್ಲಿ, ಕೀಟ್ಸ್ ಮುಂತಾದ ಕವಿಗಳ ಭಾವಗೀತೆಗಳೂ ಪರಿಚಿತವಾದವು. ಇವುಗಳ ಜೊತೆಗೆ ಮಿಲ್, ಮಾರ್ಲೆಯವರಂಥ ವಿಚಾರವಂತರ ವಿಚಾರ -ವಿವೇಕದಿಂದ ಪರಿಪುಷ್ಟರಾದರು. ಸ್ಕಾಟ್, ಡಿಕನ್ಸ್ ಅವರ ಕಾದಂಬರಿಗಳಿಂದ ಸ್ಫುರಣ ಹೊಂದಿದರು. ಅವರ ಮನೋಲೋಕ ಇಂಗ್ಲಿಷ್ ಸಾಹಿತ್ಯದ ಚಿತ್ರಗಳಿಂದಲೂ ಕಿಕ್ಕಿರಿಯಿತು. ಕೆಲವು ಕಾಲದ ಮೇಲೆ ಇದಕ್ಕೆ ಪ್ರತಿಕ್ರಿಯೆಯಾಗಿ ಪ್ರಾಚೀನ ಭಾರತೀಯ ಸಂಸ್ಕೃತಿಯ ಪರಿಚಯಕ್ಕಾಗಿ ಮನಸ್ಸು ಹಾತೊರೆಯಿತು. ವೇದೋಪನಿಷತ್ತುಗಳ ವ್ಯಾಸಂಗದಿಂದ ಇನ್ನೊಂದು ಆಳವಾದ ದೃಷ್ಟಿ ತೆರೆಯಿತು. ಪೌರ್ವಾತ್ಯ -ಪಾಶ್ಚಿಮಾತ್ಯ ದೃಷ್ಟಿಗಳ ಸಮನ್ವಯದತ್ತ ಹಲವರ ಮನಸ್ಸು ಹೊರಳಿತು. ಸಮಗ್ರ ದೇಶದಲ್ಲಿ ಪ್ರಕಟವಾದ ನೂತನಶಕ್ತಿ ಕರ್ನಾಟಕದಲ್ಲಿಯೂ ಸಂಚರಿಸಿತು.

1916ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಸ್ಥಾಪಿತವಾದುದೂ ಹೊಸ ಸಾಹಿತ್ಯದ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ನವೀನ ಸಾಹಿತ್ಯದ ಪ್ರಧಾನ ಅಧ್ವರ್ಯುವಾಗಿ ನಿಂತವರು ಬಿ.ಎಂ.ಶ್ರೀಕಂಠಯ್ಯನವರು; ಅವರಿಗೆ ಬೆಂಬಲವಾಗಿ ಕೆಲಸ ಮಾಡಿದವರು ತ.ಸು.ವೆಂಕಣ್ಣಯ್ಯ ಮತ್ತು ಎ.ಆರ್.ಕೃಷ್ಣಶಾಸ್ತ್ರೀ. ಮೈಸೂರಿನ ಕಡೆ ಶ್ರೀಯವರ ನಾಯಕತ್ವದಲ್ಲಿ ತಳಿರು ತಂಡ, ಮಂಗಳೂರು ಕಡೆ ಪಂಜೆಯವರ ನೇತೃತ್ವದಲ್ಲಿ ಮಿತ್ರಮಂಡಳಿ, ಧಾರವಾಡದ ಕಡೆ ಬೇಂದ್ರೆಯವರ ನೇತೃತ್ವದಲ್ಲಿ ಗೆಳೆಯರ ಗುಂಪು ತಲೆಯೆತ್ತಿದುವು.

ಕಾವ್ಯಪ್ರಕಾರದಲ್ಲಿ 1921ರಲ್ಲಿ ಹೊರಬಂದ ಶ್ರೀಯವರ ಇಂಗ್ಲಿಷ್ ಗೀತಗಳು ಹೊಸಗನ್ನಡ ಕಾವ್ಯದ ಚರಿತ್ರೆಯಲ್ಲಿ ಒಂದು ಪ್ರಮುಖವಾದ ಮಜಲು. ಆದರೆ ಶ್ರೀಯವರಿಗಿಂತಲೂ ಹಿಂದೆಯೇ ಕೆಲಸ ಮಾಡಿದವರಿದ್ದರು ಎಂಬುದನ್ನು ಮರೆಯುವಂತಿಲ್ಲ. ಹೊಸಗನ್ನಡ ಕವಿತೆಗೆ ಕಳೆದ ಶತಮಾನದಲ್ಲೇ ನಾಂದಿ ಹಾಡಿದವರು ಕ್ರೈಸ್ತ ಮಿಷನರಿಗಳು. 1845ರಲ್ಲಿ ಪ್ರಕಟವಾದ ಬಾಸೆಲ್ ಮಿಶನ್ನಿನ ಪದ್ಯ ಸಂಕಲನದಲ್ಲಿ 68 ಕನ್ನಡ ಗೀತೆಗಳಿವೆ. 1847ರಲ್ಲಿ ಪ್ರಕಟವಾದ ಯಾತ್ರಿಕನ ಸಂಚಾರದಲ್ಲಿ ವೈಗಲ್ ಅನುವಾದಿಸಿದ ಅನೇಕ ಪದ್ಯಗಳಿವೆ. ಕೆಲವು ಭಾಮಿನಿ ಷಟ್ಪದಿಯಲ್ಲಿದ್ದರೆ, ಕೆಲವು ಚೌಪದಿಯ ರೂಪದಲ್ಲಿವೆ. ಸುಮಾರು ಇದೇ ಕಾಲದಲ್ಲಿ ಬೆಳಕಿಗೆ ಬಂದ ಗೀತ ಪುಸ್ತಕಗಳು ಎಂಬ ಮಿಷನರಿ ಕೃತಿಯಲ್ಲಿ ಇಂಗ್ಲಿಷ್, ಜರ್ಮನ್ ಗೀತಗಳ ಕನ್ನಡಾನುವಾದವಿದ್ದು ಅವುಗಳಲ್ಲಿ ಕೆಲವೆಡೆ ಆದಿ ಅಂತ್ಯಪ್ರಾಸಗಳನ್ನೂ ಕೆಲವೆಡೆ ಅಂತ್ಯಪ್ರಾಸವನ್ನೂ ಕಾಣಬಹುದು. ಮಿಷನರಿಗಳ ಈ ಪ್ರಾರ್ಥನಾ ಪದ್ಯಗಳು ಹಳೆಯ ಧಾಟಿಯಿಂದ ಮುಕ್ತವಾಗಿವೆ. ಕೆಲವು ಕಡೆ ಅಂತ್ಯಪ್ರಾಸ ಅನಿಯತವಾಗಿ ಬಂದಿರುವುದುಂಟು. ವಾಸ್ತವವಾಗಿ ಅಂತ್ಯಪ್ರಾಸ ಆಂಗ್ಲ ಕಾವ್ಯದ ವೈಶಿಷ್ಟ್ಯ. ಅದು ಹೊಸಗನ್ನಡ ಕವಿತೆಗೆ ಇಂಗ್ಲಿಷಿನಿಂದ ಬಂದು ಸೇರಿಕೊಂಡಿತು.

ಕ್ರೈಸ್ತಗೀತೆಗಳಲ್ಲೂ ಎರಡು ವರ್ಗಗಳನ್ನು ಕಾಣಬಹುದು. ಹಳೆಯ ಧಾಟಿಯಲ್ಲಿರತಕ್ಕವು ಮತ್ತು ಪಾಶ್ಚಾತ್ಯ ಗೀತಗಳ ಧಾಟಿಯಲ್ಲಿರತಕ್ಕವು. ಎರಡನೆಯ ವರ್ಗದಲ್ಲಿ ಹೊಸ ಛಂದಸ್ಸು ಕಾಣದೊರೆಯುತ್ತದೆ. ಮಿಷನರಿಗಳು ವಿರಳವಾಗಿ ಸ್ವತಂತ್ರ ಕವಿತೆಯನ್ನೂ ಬರೆದುದುಂಟು. ಹೀಗೆ ಕ್ರೈಸ್ತ ಮಿಷನರಿಗಳ ರಚನೆಗಳಲ್ಲಿ ಹೊಸಗನ್ನಡ ಕಾವ್ಯ ಪರಿಮಿತವಾಗಿ ಮೈದೋರಿತ್ತು. ಅದು ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಮತ್ತು ಇಪ್ಪತ್ತನೆಯ ಶತಮಾನದ ಮೊದಲೆರಡು ದಶಕಗಳಲ್ಲಿ ಹೆಚ್ಚಾಗಿ ಅನುವಾದರೂಪದಲ್ಲಿ ಮುಂದುವರಿಯಿತು. ಇಂಗ್ಲಿಷ್ ಕವಿತೆಗಳ ಭಾಷಾಂತರಕ್ಕೆ ಪಠ್ಯಪುಸ್ತಕಗಳೂ ನಿಮಿತ್ತವಾದುವು. ಹಾಗೆಯೇ ಕನ್ನಡದಲ್ಲಿ ಆಧುನಿಕ ಕಾವ್ಯ ಸ್ವತಂತ್ರವಾಗಿ ತಲೆಯೆತ್ತಿದ್ದು ಈ ಶತಮಾನದ ಆರಂಭದಲ್ಲಿ; ಇಂಗ್ಲಿಷ್ ಕಾವ್ಯವಿತ್ತ ಸ್ಫೂರ್ತಿಯಿಂದ.

ಶ್ರೀಯವರು ಹೊಸಗನ್ನಡವನ್ನು ಉದ್ಘಾಟಿಸಿದ ಕ್ರಾಂತಿ ಪುರುಷರಾದರೂ ಅವರಿಗಿಂತ ಹಿಂದೆಯೇ ಮುಂಬೆಳಗಿನ ಮೊದಲಿಗರಿದ್ದರು. ಈ ಮುಂಬೆಳಗಿನ ಕವಿಗಳೆಲ್ಲ ಬಹುಮಟ್ಟಿಗೆ ಹಳೆಯ ಛಂದೋರೂಪಗಳಲ್ಲಿ ಕಾವ್ಯರಚನೆ ಮಾಡಿದರೇ ಹೊರತು ಹೊಸ ಛಂದಸ್ಸನ್ನು ಸೃಷ್ಟಿಸಲಿಲ್ಲ. ಎಸ್.ಜಿ.ನರಸಿಂಹಾಚಾರ್, ಪಂಜೆಮಂಗೇಶರಾಯ, ಗೋವಿಂದಪೈ, ಹಟ್ಟಿಯಂಗಡಿ ನಾರಾಯಣರಾಯ, ಜಯರಾಯಾಚಾರ್ಯ, ಶಾಂತಕವಿ ಮೊದಲಾದವರು ಹೊಸ ಕವಿತೆಗೆ ಹಳೆಯ ಛಂದೋರೂಪಗಳನ್ನೇ ಬಳಸಿಕೊಂಡರು. ಸ್ವಂತ ರಚನೆಗಳಲ್ಲಾಗಲಿ ಅನುವಾದಗಳಲ್ಲಾಗಲಿ ಹೊಸತನ ಹೆಚ್ಚಾಗಿರಲಿಲ್ಲ. ಗೋವಿಂದ ಪೈಯವರು ಆದಿಪ್ರಾಸತ್ಯಾಗದ ನಿರ್ಧಾರ ಕೈಕೊಂಡದ್ದು ಒಂದು ಮಹತ್ವದ ಹೆಜ್ಜೆ.

ಹಟ್ಟಿಯಂಗಡಿ ನಾರಾಯಣರಾಯರು ಇಂಗ್ಲಿಷಿನಿಂದ ಕನ್ನಡಕ್ಕೆ ಕವಿತೆಗಳನ್ನು ಭಾಷಾಂತರಿಸಿದವರಲ್ಲಿ ಮೊದಲಿಗರು. ಅವರ ಆಂಗ್ಲಕವಿತಾವಳಿ ಅನುವಾದಿತ ಕವನಗಳ ಸಂಕಲನ (1919). ಇಂಗ್ಲಿಷ್ ಕಾವ್ಯದ ಪ್ರೇರಣೆಯಿಂದ ಹೇಗೆ ಕನ್ನಡ ಕಾವ್ಯಕ್ಕೆ ನಾವೀನ್ಯವುಂಟಾಗುವುದೆಂಬುದನ್ನು ನಾರಾಯಣರಾಯರು ಕನ್ನಡ ಕವಿತೆಯ ಭವಿತವ್ಯ ಎಂಬ ತಮ್ಮೊಂದು ಭಾಷಣದಲ್ಲಿ ಸೂಚಿಸಿದ್ದಾರೆ. 'ಇಂಗ್ಲಿಷ್ ಮಾರ್ಗಗಳ ಅನುಸರಣದಿಂದ ........................ ಕವಿಗಳು ಪಾರಮಾರ್ಥಿಕ ವಿಷಯಗಳಿಗಿಂತ ರಾಷ್ಟ್ರೀಯ, ಸಾಮಾಜಿಕ, ಚಾರಿತ್ರಿಕ ಮುಂತಾದ ಲೌಕಿಕ ಪ್ರಮೇಯಗಳಿಗೆ ಹೆಚ್ಚು ಗಮನ ಕೊಡುವರೆಂದೂ ದೀರ್ಘ ಪುರಾಣಗಳ ಬದಲಾಗಿ ಲಘುಕೃತಿಗಳನ್ನು ರಚಿಸುವರೆಂದೂ ಛಂದಸ್ಸಿನಲ್ಲಿ ಹೊಸ ಮಾದರಿಗಳನ್ನು ಕಲ್ಪಿಸಬಹುದೆಂದೂ ಅಲಂಕಾರದಲ್ಲಿ ಅಚೇತನ ಪದಾರ್ಥಗಳಿಗೆ ವಾಕ್‌ಶಕ್ತಿಯನ್ನೂ ಮಾನಸಿಕ ಭಾವಗಳಿಗೆ ಮೂರ್ತಿತ್ವವನ್ನೂ ಆರೋಪಿಸುವ ಉತ್ಪ್ರೇಕ್ಷೆಯು ರೂಢಿಯಾಗಬಹುದೆಂದೂ ಹಳಗನ್ನಡಕ್ಕಿಂತ ನಡುಗನ್ನಡವನ್ನೆ ಹೆಚ್ಚಾಗಿ ಪ್ರಯೋಗಿಸುವರೆಂದೂ' ಅವರ ನಿರೀಕ್ಷೆಯಾಗಿತ್ತು. ಅದು ಮುಂದೆ ನಿಜವಾಯಿತು. ಕನ್ನಡ ಕಾವ್ಯವು ಛಂದಸ್ಸು, ರೂಪ, ವಸ್ತು, ಶೈಲಿ, ಭಾಷೆಗಳಲ್ಲಿ ಹೊಸತನವನ್ನು ತಳೆಯಿತು. ಎಸ್.ಜಿ.ನರಸಿಂಹಾಚಾರ್ಯರೂ ಇಂಗ್ಲಿಷಿನಿಂದ ಕವನಗಳನ್ನು ಅನುವಾದಿಸಿದ್ದಲ್ಲದೆ ಪಠ್ಯಪುಸ್ತಕಗಳಿಗಾಗಿ ಸ್ವತಂತ್ರ ಕವಿತೆಗಳನ್ನೂ ರಚಿಸಿದರು. ಆದರೆ ಅವರ ಕವಿತೆಗಳ ವಸ್ತುಭಾವಗಳೂ ಹೊಸವಾದರೂ ಛಂದೋರೂಪಗಳು ಮಾತ್ರ ಹಳೆಯವೇ. ಪಂಜೆಯವರೂ ತಮ್ಮ ಅನುವಾದಗಳಲ್ಲಿ ಮತ್ತು ಸ್ವತಂತ್ರ ಕವನಗಳಲ್ಲಿ ಹಳೆಯ ಛಂದೋರೂಪಗಳನ್ನೇ ಅವಲಂಬಿಸಿದರು. ಆದಿಪ್ರಾಸವನ್ನು ಬಿಡಲಿಲ್ಲ. ಇಂಗ್ಲಿಷ್ ಕವನಗಳ ವರ್ಚಸ್ಸು ಕನ್ನಡಕ್ಕೆ ಬರುವಂತೆ ಮಾಡಿದವರಲ್ಲಿ ಅವರು ಮೊದಲಿಗರು. ಗೋವಿಂದ ಪೈಯವರು ಪಂಜೆಯವರಿಗಿಂತ ಮುಂದೆ ಹೋಗಿ ಕೆಲವು ಹೊಸ ರೂಪಗಳನ್ನು ಸೃಷ್ಟಿಸಿಕೊಂಡರು. ಮೊಟ್ಟಮೊದಲು ಸಾನೆಟ್ ಬರೆದವರು ಪೈ ಅವರೇ. ಇಂಗ್ಲಿಷಿನಿಂದ ಗ್ರಂಥಗಳನ್ನು ಕನ್ನಡಿಸುವುದು ಲಾಭದಾಯಕವೆಂದು ನಂಬಿದ್ದವರಲ್ಲಿ ಶಾಂತಕವಿಗಳೂ ಒಬ್ಬರಾಗಿದ್ದರು. ಹೀಗೆ ಹಿಂದಿನವರ ಈ ಎಲ್ಲ ಪ್ರಯತ್ನಗಳು ಶ್ರೀಯವರ ಇಂಗ್ಲಿಷ್ ಗೀತಗಳಿಗೆ ಸಮರ್ಥವಾದ ಮುನ್ನುಡಿಯಾದುದು ನಿಶ್ಚಿತ.

ಶ್ರೀ ಅವರ ಇಂಗ್ಲಿಷ್ ಗೀತಗಳಲ್ಲಿ ಹೊಸತನ ಸಮಗ್ರವಾಗಿ ಆವಿರ್ಭವಿಸಿತು. ವಸ್ತು, ಭಾವ, ಭಾಷೆ, ಛಂದಸ್ಸು ಎಲ್ಲದರಲ್ಲೂ ಈ ಹೊಸತನವನ್ನು ಸ್ಫುಟವಾಗಿ ಗುರುತಿಸಬಹುದು. ಅವರು ಹಳೆಯ ಮಾತ್ರಾಗಣಗಳನ್ನೇ ಇಟ್ಟುಕೊಂಡು ಹೊಸ ಛಂದಃಪ್ರಕಾರಗಳನ್ನು ಮೊದಲ ಬಾರಿಗೆ ಕಲ್ಪಿಸಿದರು. ಮುಂದಿನ ಕವಿಗಳಿಗೆ ಇದು ಹೆದ್ದಾರಿಯಾಗಿ ಪರಿಣಮಿಸಿತು; ಕನ್ನಡದಲ್ಲಿ ಸ್ವತಂತ್ರ ಭಾವಗೀತೆಗಳ ಸುಗ್ಗಿಗೆ

ಕಾರಣವಾಯಿತು. ಇಂಗ್ಲಿಷ್ ಕಾವ್ಯದಲ್ಲಿ 19ನೆಯ ಶತಮಾನದ ಆರಂಭದಲ್ಲಿ ಎಂಥ ನವೋದಯವುಂಟಾಯಿತೊ ಅಂಥದೇ ನವೋದಯವನ್ನು ತಮ್ಮ ಕೃತಿಯ ಮೂಲಕ ಕನ್ನಡ ಕಾವ್ಯದಲ್ಲಿ ಶ್ರೀಯವರು ಉಂಟುಮಾಡಿದರು. ವರ್ಡ್ಸ್‌ವರ್ತ್, ಷೆಲ್ಲಿ, ಕೀಟ್ಸ್, ಕೋಲ್‌ರಿಜ್, ಬೈರನ್, ಬ್ರೌನಿಂಗ್, ಟೆನಿಸನ್, ಬರ್ನ್ಸ್ ಮುಂತಾದ ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಕವಿತೆಗಳನ್ನು ಕನ್ನಡಿಸಿ, ಕನ್ನಡದಲ್ಲಿ ರೊಮ್ಯಾಂಟಿಕ್ ಕಾವ್ಯದ ಬೆಳೆಗೆ ಪ್ರೇರಕಶಕ್ತಿಯಾದರು. ಹೊಸಗನ್ನಡದಲ್ಲಿ ಇಂದು ಹೆಸರಾಗಿರುವ ಕವಿಗಳಲ್ಲಿ ಬಹುಮಂದಿ ಇಂಗ್ಲಿಷ್‌ಗೀತಗಳ ನೆರಳಲ್ಲಿ ಬೆಳೆದವರು. 1930ರವರೆಗೆ ಶ್ರೀಯವರೂ ಅವರ ಮಿತ್ರರೂ ನಡೆಸಿದ ಸಾಧನೆಯಿಂದ ಕನ್ನಡದಲ್ಲಿ ಹೊಸ ಕಾವ್ಯ ಬೇರೂರಿ ನಿಂತಿತು. ಇಂಗ್ಲೆಂಡಿನಲ್ಲಿ ವರ್ಡ್ಸ್‌ವರ್ತ್, ಕೋಲ್‌ರಿಜ್ ಮುಂತಾದ ರೊಮ್ಯಾಂಟಿಕ್ ಕವಿಗಳಿಗೆ ಜನಪದ ಸಾಹಿತ್ಯ ಸ್ಫೂರ್ತಿ ಕೊಟ್ಟಂತೆ, ಅಲ್ಲಿಯ ರೊಮ್ಯಾಂಟಿಕ್ ಕಾವ್ಯ ಜನಪದ ಸಾಹಿತ್ಯದಿಂದ ಪ್ರೇರಣೆ ಪಡೆದಂತೆ ಕನ್ನಡದಲ್ಲೂ ಇಂಥ ಪ್ರಕ್ರಿಯೆ ನಡೆಯಿತು. ಉತ್ತರ ಕರ್ನಾಟಕದಲ್ಲಿ ಗೆಳೆಯರ ಗುಂಪಿನವರು ಜನಪದ ಗೀತೆಗಳ ಧಾಟಿಯನ್ನು ತಮ್ಮ ಕವಿತೆಗಳಲ್ಲಿ ಬಳಸಿಕೊಂಡರು. ಗೆಳೆಯರ ಗುಂಪಿಗೆ ಸೇರಿದ ಮಧುರಚೆನ್ನರ ಅನುಭಾವ ಸಾಹಿತ್ಯ ಎ.ಇ.ಏಟ್ಸ್ ಮುಂತಾದ ಆಂಗ್ಲ ಅನುಭಾವ ಕವಿಗಳ ವ್ಯಾಸಂಗದಿಂದ ಪ್ರಭಾವಗೊಂಡದ್ದೆಂಬುದನ್ನು ಇಲ್ಲಿ ಗಮನಿಸಬಹುದು. ಆಶಯ ಮುಕ್ತ ಅಭಿವ್ಯಕ್ತಿಯಲ್ಲಿ ಸ್ವಾತಂತ್ರ್ಯ, ನಾವೀನ್ಯ, ವೈವಿಧ್ಯ ಹೊಸಗನ್ನಡ ಭಾವಗೀತೆಗಳ ಪ್ರಧಾನ ಲಕ್ಷಣಗಳು. ಇದು ಬಂದುದು ನಿಸ್ಸಂದೇಹವಾಗಿ ಇಂಗ್ಲಿಷ್ ಕಾವ್ಯದಿಂದ; ಇಂಗ್ಲಿಷ್ ಗೀತಗಳ ಮೂಲಕ. ಈ ಸಂದರ್ಭದಲ್ಲಿ ಭಾವಗೀತೆಯ ಪ್ರಕಾರಗಳೆಲ್ಲ ಇಂಗ್ಲಿಷಿನಿಂದ ಕನ್ನಡಕ್ಕೆ ಬಂದುವು. ಜೊತೆಗೆ ಕಥನಕಾವ್ಯ, ತಾತ್ತ್ವಿಕ ಕಾವ್ಯ, ವಿಡಂಬನ ಕಾವ್ಯಗಳೂ ನೆಲೆಗೊಂಡುವು. ಸರಳ ರಗಳೆ, ಮುಕ್ತ ಛಂದಗಳಂಥ ರೂಪಗಳೂ ಇಂಗ್ಲಿಷಿನ ಪ್ರಭಾವದಿಂದಲೆ ಸೃಜನಗೊಂಡುವು.

ಸಾನೆಟ್ ಭಾವಗೀತೆಯ ಮುಖ್ಯ ಪ್ರಕಾರಗಳಲ್ಲೊಂದು. ಮೂಲತಃ ಇದು ಇಟಲಿಯಲ್ಲಿ ಹುಟ್ಟಿ ಬೆಳೆದದ್ದು; 16ನೆಯ ಶತಮಾನದಲ್ಲಿ ಇಂಗ್ಲಿಷಿಗೆ ಬಂದು, ಅಲ್ಲಿಂದ ಕನ್ನಡಕ್ಕೆ ಬಂದು, ಅಲ್ಲಿ ಒಗ್ಗಿಹೋಯಿತು. ಸಾನೆಟ್ಟಿನಲ್ಲಿ ಎರಡು ಬಗೆ ಪೆಟ್ರಾರ್ಕನ್ ಸಾನೆಟ್ ಮತ್ತು ಷೇಕ್ಸ್‌ಪೀರಿಯನ್ ಸಾನೆಟ್, ಕನ್ನಡದಲ್ಲಿ ಈ ಎರಡೂ ಬಗೆಗಳು ಪ್ರಚುರವಾಗಿವೆ. ಬೇರೆ ರೀತಿಯ ಸಾನೆಟ್ಟುಗಳೂ ಉಂಟು. ಕನ್ನಡ ಪ್ರಗಾಥಗಳು ಇಂಗ್ಲಿಷಿನ ಓಡ್‌ಗಳಿಂದ ಸ್ಫೂರ್ತವಾದವು. ಕನ್ನಡಕ್ಕೆ ಈ ಪ್ರಕಾರವನ್ನು ವಿಶೇಷವಾಗಿ ತಂದವರು ಶ್ರೀಯವರೇ.

ಪಾಮರರ ಮನಸ್ಸಿಗೆ ಒಪ್ಪುವ ಕಥೆಗಳನ್ನು ಬರೆಯುವ ಕ್ರಾಂತಿ ಇಂಗ್ಲಿಷ್ ಕಥನ ಕವನಗಳ ಅಭ್ಯಾಸದಿಂದ ಅಂತೆಯೇ ಕನ್ನಡಕ್ಕೆ ಕಥನ ಕವನಗಳನ್ನು ಕೊಡಬೇಕು ಎನ್ನುವ ಸ್ಫೂರ್ತಿಯಿಂದ ಬಂದಿತೆಂದು ಹೇಳಿದರೆ ತಪ್ಪಾಗಲಾರದು. ಮಾಸ್ತಿಯವರ 'ನವರಾತ್ರಿ'ಯ ಕಥನಕವನಗಳಿಗೆ ಮಾದರಿ ಛಾಸರನ ಕ್ಯಾಂಟರ್ಬರಿ ಕಥೆಗಳು. ಎಲ್.ಗುಂಪಡಪ್ಪನವರ ಸೋಹ್ರಾಬ್-ರುಸ್ತುಂ (ಮೂಲ: ಮ್ಯಾಥ್ಯು ಅರ್ನಾಲ್ಡ್) ಪಾಶ್ಚಾತ್ಯರ ಮಹೋಪಮೆಗಳನ್ನು ಕನ್ನಡಕ್ಕೆ ಪರಿಚಯ ಮಾಡಿಕೊಟ್ಟಿತು. ಕುವೆಂಪು ಅವರ ಚಿತ್ರಾಂಗದಾ ಹಾಗೂ ಶ್ರೀರಾಮಾಯಣ ದರ್ಶನಂನಲ್ಲೂ ಮಹೋಪಮೆಗಳಿವೆ. ಇವು ಬಂದುದು ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ.

ಸರಳ ರಗಳೆಗೆ ಮೂಲ ಕನ್ನಡದ ಲಲಿತರಗಳೆಯೇ ಆದರೂ ಅದು ರೂಪುಗೊಂಡುದು ಇಂಗ್ಲಿಷ್ ಕಾವ್ಯದ ಪ್ರಭಾವದಿಂದ. ಬ್ಲಾಂಕ್‌ವರ್ಸ್‌ಗೆ ಸಂವಾದಿಯಾಗಿ ಲಲಿತರಗಳೆಯ ಆದ್ಯಂತ ಪ್ರಾಸಗಳನ್ನು ತೆಗೆದುಹಾಕಿ ಚರಣಗಳನ್ನು ತಡೆಯಿಲ್ಲದೆ ಹರಿಯಬಿಡುವುದರಿಂದ ಹುಟ್ಟುತ್ತದೆ ಸರಳರಗಳೆ. 1924ರಲ್ಲಿ ಇದು ರೂಪುಗೊಂಡಿತು. ಮಾಸ್ತಿಯವರು ಇದನ್ನು ಮೊದಲು ಬಳಸಿದರು. ಈ ಸರಳ ರಗಳೆ ಕಥನಕವನಗಳಲ್ಲಿ, ವರ್ಣನಾತ್ಮಕ ಕವಿತೆಯಲ್ಲಿ, ಪದ್ಯನಾಟಕಗಳಲ್ಲಿ ಯಶಸ್ವಿಯಾಗಿ ಬಳಕೆಗೊಂಡಿತು. ಮಹಾಛಂದಸ್ಸಿಗೆ ತಳಹದಿ ಈ ಸರಳ ರಗಳೆಯೇ. ಇಂಗ್ಲಿಷ್ ಬ್ಲಾಂಕ್‌ವರ್ಸಿನ ಪ್ರಯೋಗಗಳಿಂದ ಮಿಲ್ಟನ್ ಕವಿ ಹೇಗೆ ತನ್ನ ಮಹಾಕಾವ್ಯಕ್ಕೆ ಸರಿಯಾದ ಛಂದೋರೂಪವನ್ನು ಹೊಂದಿಸಿಕೊಂಡನೋ ಅದೇ ಬಗೆಯಲ್ಲಿಯೆ ಇಂಗ್ಲಿಷ್ ಬ್ಲಾಂಕ್‌ವರ್ಸಿನ ನೂತನ ಪ್ರಯೋಗಗಳಂತೆಯೇ ಸರಳ ರಗಳೆಯಲ್ಲಿಯೂ ಹೊಸ ಪ್ರಯೋಗಗಳನ್ನು ನಡೆಸಿ ಕುವೆಂಪು ಅವರು ತಮ್ಮ ಮಹಾಕಾವ್ಯಕ್ಕೆ ಸರಿಹೋಗುವ ಮಹಾಛಂದಸ್ಸನ್ನು ರೂಪಿಸಿಕೊಂಡರು. ಮಿಲ್ಟನ್ನನ ಛಂದಸ್ಸನ್ನು ಗ್ರಾಂಡ್‌ಸ್ಟೈಲ್ ಎನ್ನಲಾಗಿದೆ; ಅದಕ್ಕೆ ಸಂವಾದಿಯಾಗಿ ತಮ್ಮ ಛಂದಸ್ಸನ್ನು ಕುವೆಂಪು ಮಹಾಛಂದಸ್ಸು ಎಂದು ಕರೆದರು.

ಕುವೆಂಪು ತಮ್ಮ ಶ್ರೀರಾಮಾಯಣ ದರ್ಶನಂ ಮಹಾಕಾವ್ಯದಲ್ಲಿ ಹೋಮರ್, ವರ್ಜಿಲ್, ಡಾಂಟೆ, ಮಿಲ್ಟನ್ ಮುಂತಾದವರನ್ನು ಸ್ಮರಿಸಿದ್ದಾರೆ. ಇವರೆಲ್ಲರ ಪ್ರಭಾವ ಕುವೆಂಪು ಅವರ ಮೇಲಾಗಿದೆ; ಮುಖ್ಯವಾಗಿ ಮಿಲ್ಟನ್ನನಿಂದ ಅವರು ಪ್ರಭಾವಗೊಂಡಿದ್ದಾರೆ. ಕುವೆಂಪು ಅವರ ಶೈಲಿಗೂ ಮಿಲ್ಟನ್ನನ ಶೈಲಿಗೂ ಸಾದೃಶ್ಯವುಂಟು; ತಾಂತ್ರಿಕ ಸಿದ್ಧಿಯಲ್ಲೂ ಸಾಮ್ಯವಿದೆ. ಅವರು ಪಾಶ್ಚಾತ್ಯ ಮಹಾಕಾವ್ಯಗಳ ಗುಣಗಳನ್ನು ಶ್ರೀರಾಮಯಣ ದರ್ಶನಂನಲ್ಲಿ ಗ್ರಹಿಸಿದ್ದಾರೆ. ಉದಾಹರಣೆಗೆ, ಪಾಶ್ಚಾತ್ಯ ಕಾವ್ಯಗಳಲ್ಲಿ ಹೇಗೋ ಹಾಗೆ ಅವರ ಮಹಾಕಾವ್ಯದಲ್ಲಿ ದೇವತಾಪ್ರಾರ್ಥನೆ ಅಲ್ಲಲ್ಲಿ ನಡುನಡುವೆ ಕಂಡುಬರುತ್ತದೆ. ಹಾಗೆಯೇ ಮಹೋಪಮೆಗಳನ್ನೂ ನಾವು ಪರಿಗಣಿಸಬಹುದು.

ರೊಮ್ಯಾಂಟಿಕ್ ಕಾವ್ಯಕ್ಕೆ ಪ್ರತಿಕ್ರಿಯೆಯಾಗಿ ಪ್ರಗತಿಶೀಲ ಚಳವಳಿಯೊಂದು ಕನ್ನಡದಲ್ಲಿ 1944ರ ಹೊತ್ತಿಗೆ ತಲೆಯೆತ್ತಿತು. ರೈತರ, ಕಾರ್ಮಿಕರ ಬಾಳನ್ನು ಚಿತ್ರಿಸುವ ಕವಿತೆ, ಕಥೆ, ಕಾದಂಬರಿಗಳು ರಚಿತವಾದುವು. ಕಾರ್ಮಿಕರ ಮತ್ತು ದೀನದಲಿತರ ಉದ್ಧಾರ, ಬಂಡವಾಳಶಾಹಿಯ ವಿರೋಧ - ಇದು ಪ್ರಗತಿಶೀಲ ಲೇಖಕರ ಧೋರಣೆ. ಸಾಮಾಜಿಕ ಪ್ರಜ್ಞೆ, ವಾಸ್ತವಿಕತೆಗಳನ್ನು ಸಾಹಿತ್ಯದಲ್ಲಿ ಮೂಡಿಸುವಲ್ಲಿ ಪ್ರಗತಿಶೀಲಧೋರಣೆ ಸಾಕಷ್ಟು ಯಶಸ್ವಿಯಾದರೂ ಅದರ ಉದ್ದೇಶಗಳು ಸೀಮಿತವಾಗಿದ್ದುವು.

ದೇಶಕ್ಕೆ ಸ್ವಾತಂತ್ರ್ಯ ಬಂದಮೇಲೆ 1947ರಿಂದ ಮುಂದಕ್ಕೆ ಕನ್ನಡದಲ್ಲಿ ನವ್ಯಕಾವ್ಯದ ಉಗಮ, ಬೆಳೆವಣಿಗೆಗಳನ್ನು ಕಾಣುತ್ತೇವೆ. ವಸ್ತು, ಶೈಲಿ, ಜೀವನ ಮೌಲ್ಯಗಳು, ಸಾಹಿತ್ಯದ ಮೇಲೆ ಮನಶ್ಶಾಸ್ತ್ರ ಮತ್ತು ಲೈಂಗಿಕ ಶಾಸ್ತ್ರ ಬೀರಿದ ಪ್ರಭಾವಗಳು - ಈ ಎಲ್ಲ ದೃಷ್ಟಿಗಳಿಂದ 1950ರಿಂದ ಈಚಿನ ಕಾವ್ಯಮಾರ್ಗ ನವ್ಯವಾಗಿದೆ. ವಿ.ಕೃ.ಗೋಕಾಕರು 1950ರಲ್ಲಿ ನವ್ಯ ಎಂಬ ಮಾತನ್ನು ಮೊದಲು ಬಳಸಿದರು. ನವ್ಯತೆಯ ಪರಂಪರೆಯನ್ನು ಆರಂಭಿಸಿದವರು ಪೇಜಾವರ ಸದಾಶಿವರಾಯರು ಮತ್ತು ಗೋಕಾಕರು. ಮುಂದೆ ಅಡಿಗರು ಮುಂತಾದವರು ಅದನ್ನು ಬೆಳೆಸಿದರು. ಎರಡನೆಯ ಮಹಾಯುದ್ಧಾನಂತರದ ಪ್ರಮುಖ ಇಂಗ್ಲಿಷ್ ಕವಿಗಳಾದ ಟಿ.ಎಸ್.ಎಲಿಯಟ್, ಆಡೆನ್, ಸೀಡೇ ಲೂಯಿ, ಮೆಕ್ನೀಸ್, ಡೈಲಾನ್ ಥಾಮಸ್ ಮುಂತಾದವರಿಂದ ಪ್ರಭಾವಿತವಾದುದು ಕನ್ನಡ ನವ್ಯಕಾವ್ಯ. ಅಮೆರಿಕನ್ ಕವಿ ಎಜ್ರಾಪೌಂಡನಿಗೂ ಅದು ಋಣಿಯಾಗಿದೆ. ಅದರ ಪ್ರೇರಣೆ ಅರ್ಧ ದೇಶೀಯವಾದರೆ ಅರ್ಧ ವಿದೇಶೀಯವೆನ್ನಬಹುದು. ನವ್ಯಕಾವ್ಯ ಬಹುಮಟ್ಟಿಗೆ ವ್ಯಕ್ತಿನಿಷ್ಠ. ಕವಿಯ ಅನುಭವದ ಸಂಕೀರ್ಣತೆಗೇ ಅದರಲ್ಲಿ ಪ್ರಾಧಾನ್ಯ, ಸುಪ್ತಚಿತ್ತದ ಜಟಿಲತೆಯ ಆವಿಷ್ಕಾರ, ಆಡುಮಾತಿನ ವಿನ್ಯಾಸ, ಮುಕ್ತಛಂದ ಅದರ ಲಕ್ಷಣಗಳು. ಅದರ ತಂತ್ರ, ಶೈಲಿ ಮುಂತಾದುವೆಲ್ಲಾ ಬಹುಮಟ್ಟಿಗೆ ಇಂಗ್ಲಿಷ್ ನವ್ಯಕಾವ್ಯದ ಅನುಕರಣವೆಂದರೂ ತಪ್ಪಲ್ಲ.

ಕನ್ನಡದಲ್ಲಿ ಮೊದಮೊದಲು ಬಂದ ನಾಟಕಗಳೆಲ್ಲ ಅನುವಾದ ಅಥವಾ ರೂಪಾಂತರಗಳೇ ಆಗಿದ್ದು ಸ್ವತಂತ್ರ ನಾಟಕಗಳು ಹುಟ್ಟಿದುದು ತಡವಾಗಿ, ಶ್ರೀಯವರು ಇಂಗ್ಲಿಷ್ ಗೀತಗಳು ಸಂಕಲನದಿಂದ ಹೊಸ ಕಾವ್ಯಕ್ಕೆ ಸ್ಫೂರ್ತಿಕೊಟ್ಟಂತೆ ಗದಾಯುದ್ಧ ನಾಟಕ, ಅಶ್ವತ್ಥಾಮನ್, ಪಾರಸಿಕರು ನಾಟಕಗಳ ರಚನೆಯಿಂದ ಪದ್ಯ ನಾಟಕಗಳ ನಿರ್ಮಿತಿಗೆ ಅಡಿಪಾಯ ಹಾಕಿದರು. ಅವರ ಗದಾಯುದ್ಧ ನಾಟಕ ಗ್ರೀಕ್ ರುದ್ರನಾಟಕದ ಸ್ವರೂಪವನ್ನು ಮೊದಲ ಬಾರಿಗೆ ಪರಿಚಯಿಸಿತು. ಷೇಕ್ಸ್‌ಪಿಯರನ ರುದ್ರನಾಟಕಗಳ ಪರಿಚಯ ಈ ಹಿಂದೆಯೇ ಆಗಿತ್ತು.

ಕನ್ನಡ ನಾಟಕಗಳಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಮೂಡಿಸಿ ಹೊಸ ಯುಗವನ್ನೇ ಆರಂಭಿಸಿದ ಶ್ರೇಯಸ್ಸು ಕೈಲಾಸಂ ಹಾಗೂ ಶ್ರೀರಂಗರದು.

ಇಬ್ಬರೂ ಪ್ರೌಢಶಿಕ್ಷಣಕ್ಕಾಗಿ ಪಶ್ಚಿಮಕ್ಕೆ ಹೋಗಿ ಅಲ್ಲಿ ಪ್ರವಾಸ ಮಾಡಿದ್ದರಿಂದ ಪಾಶ್ಚಾತ್ಯ ರಂಗಭೂಮಿಯ ಪ್ರಭಾವ ಅವರ ಮೇಲುಂಟಾಯಿತು; ಹೊಸ ಜೀವನದ ದರ್ಶನವೂ ಲಭಿಸಿತು. ಅದರ ಲಾಭವನ್ನು ಇಬ್ಬರೂ ಕನ್ನಡಕ್ಕೆ ತಮ್ಮ ನಾಟಕಗಳ ಮೂಲಕ ದೊರಕಿಸಿ ಕೊಟ್ಟರು. ಇಂಗ್ಲೆಂಡಿನಲ್ಲಿ ಇಬ್ಸನ್ನನ ನಾಟಕಗಳಿಂದ ಪ್ರೇರಿತರಾಗಿದ್ದ ಷಾ, ಗಾಲ್ಸ್‌ವರ್ದಿ ಮುಂತಾದವರು ಕೈಲಾಸಂ, ಶ್ರೀರಂಗರ ಮೇಲೆ ಪ್ರಭಾವ ಬೀರಿದರು. ಈ ಪ್ರಭಾವ ಕನ್ನಡ ನಾಟಕ ಸಾಹಿತ್ಯದಲ್ಲಿ ಹೊಸ ಹುಟ್ಟಿಗೆ ಹೇತುವಾಯಿತು. ಏಕಾಂಕ ನಾಟಕ, ಗೀತನಾಟಕ, ರೇಡಿಯೊ ನಾಟಕ ಮೊದಲಾದ ಪ್ರಕಾರಗಳೆಲ್ಲ ಪಾಶ್ಚಿಮಾತ್ಯ ಪ್ರಭಾವದಿಂದಲೇ ಕನ್ನಡದಲ್ಲಿ ನೆಲೆಗೊಂಡುವು.

ಈಚೆಗೆ ಅಸಂಗತ (ಅಬ್ಸರ್ಡ್) ನಾಟಕಗಳನ್ನು ಕನ್ನಡ ಸಾಹಿತ್ಯದಲ್ಲಿ ಕಾಣುತ್ತಿದ್ದೇವೆ. ಇಂಗ್ಲಿಷ್ ಹಾಗೂ ಫ್ರೆಂಚ್ ನಾಟಕಕಾರರಾದ ಆಸ್ಬರ್ನ್, ಪಿಂಟರ್, ಅಯನೆಸ್ಕೊ, ಆಲ್ಬರ್ಟ್‌ಕಾಮು ಮುಂತಾದವರು ಇವುಗಳ ಹಿಂದಿದ್ದಾರೆ.

ಅಸ್ತಿತ್ವವಾದ ನಾಟಕಗಳನ್ನು ಬರೆದಿರುವ ಫ್ರೆಂಚ್ ನಾಟಕಕಾರ ಬೆಕೆಟ್, ಇಟಲಿಯ ನಾಟಕಕಾರ ಪಿರಾಂಡೆಲೊ ಮುಂತಾದವರ ಪ್ರಭಾವ ಇಂದಿನ ಕನ್ನಡ ನಾಟಕಗಳ ಮೇಲಿದೆ. ಪ್ರಬಂಧ, ಲಲಿತ ಪ್ರಬಂಧ ಅಥವಾ ಆತ್ಮೀಯ ಪ್ರಬಂಧ - ಕನ್ನಡಕ್ಕೆ ಸಂಪೂರ್ಣವಾಗಿ ಹೊಸದು; ಇದೂ ಕೂಡ ಪಶ್ಚಿಮದ ಕೊಡುಗೆ. ಭಾವಗೀತೆ, ಕಥೆ ಮುಂತಾದುವುಗಳಿಗಿದ್ದಂತೆ ಇದಕ್ಕೆ ನಮ್ಮಲ್ಲಿ ಪೂರ್ವಪರಂಪರೆ ಇರಲಿಲ್ಲ. ಪ್ರಬಂಧ ಪ್ರಕಾರದ ತೌರುಮನೆ ಫ್ರಾನ್ಸ್; ಮಾಂಟೇನ್ ಇದರ ಜನಕ. ಅವನನ್ನು ಅನುಸರಿಸಿದವರು ಇಂಗ್ಲಿಷ್ ಪ್ರಬಂಧಕಾರರು; ಬೇಕನ್, ಅಡಿಸನ್, ಸ್ಟೀಲ್, ಜಾನ್ಸನ್, ಗೋಲ್ಡ್‌ಸ್ಮಿತ್, ಲ್ಯಾಂಬ್, ಲ್ಯೂಕಾಸ್, ಚೆಸ್ಟರ್‌ಟನ್, ರಾಬರ್ಟ್ ಲಿಂಡ್, ಎ.ಜಿ.ಗಾರ್ಡಿನರ್ ಇತ್ಯಾದಿ. ಇವರೆಲ್ಲರ ಪ್ರಭಾವ ಕನ್ನಡ ಪ್ರಬಂಧಗಳ ಮೇಲಿದೆ. ಅನೇಕ ಪ್ರಂಬಧಗಳು ಕನ್ನಡಕ್ಕೆ ಅನುವಾದಗೊಂಡಿರುವುದೂ ಉಂಟು.

ಕಥೆ-ಕಾದಂಬರಿ ಪಶ್ಚಿಮದ ಸಂಸರ್ಗದಿಂದ ನಮ್ಮಲ್ಲಿ ರೂಪುಗೊಂಡ ಪ್ರಕಾರಗಳು. ಇವುಗಳ ಚರಿತ್ರೆಯಲ್ಲಿ ನವೋದಯ, ಪ್ರಗತಿಶೀಲ ಮತ್ತು ನವ್ಯ ಎಂದು ಮೂರು ಹಂತಗಳನ್ನು ಗುರುತಿಸಬಹುದು.

ನವೋದಯ ಕಾಲದ ಕಥೆಗಾರರು ಮತ್ತು ಕಾದಂಬರಿಕಾರರು ಪರಂಪರಾಗತ ಮೌಲ್ಯಗಳನ್ನು ತಮ್ಮ ಕೃತಿಗಳಲ್ಲಿ ಅನ್ವೇಷಿಸಿದರು. ನವೋದಯ ಸಾಹಿತ್ಯಕ್ಕೆ ಪ್ರತಿಭಟನೆಯಾಗಿ ಪ್ರಗತಿಶೀಲ ಸಾಹಿತ್ಯ ಹುಟ್ಟಿಕೊಂಡಿತು. ಎರಡನೆಯ ಮಹಾಯುದ್ಧ ಕಾಲಕ್ಕೆ ಆರಂಭವಾಗಿ, ಮಾರ್ಕ್ಸ್‌ವಾದವನ್ನು ಆಧರಿಸಿದ ಪ್ರಗತಿಶೀಲ ಚಳವಳಿ ರಷ್ಯನ್ ಸಾಹಿತ್ಯದಿಂದ ಹಿಂದಿಯ ಮೂಲಕ ಕನ್ನಡಕ್ಕೆ ಅವತರಿಸಿತು. ಅದು ಮೊದಲು ಕಾಣಿಸಿಕೊಂಡಿದ್ದು ಸಣ್ಣಕಥೆಗಳಲ್ಲಿ. 1936 ರಿಂದ 42ರವರೆಗೆ ನಡೆದ ರಾಜಕೀಯ ಕ್ರಾಂತಿಗಳು, ಪತ್ರಿಕೆಗಳಲ್ಲಿ ನಡೆಯುತ್ತಿದ್ದ ಪ್ರಗತಿಶೀಲತೆಯ ಪ್ರಚಾರ, ರಷ್ಯನ್ ಹಾಗೂ ಹಿಂದಿ ಕಥೆಗಳ ಅನುವಾದ -ಇವುಗಳ ಫಲಿತಾಂಶವೇ ಪ್ರಗತಿಶೀಲಪಂಥ.

ಇಂದಿನ ಸಣ್ಣಕಥೆ ಕವಿತೆಗೆ ಹತ್ತಿರವಾದುದು. ನವ್ಯಕಾವ್ಯ ಹಾಗೂ ನವ್ಯಕಥೆ ಒಂದೇ ಪ್ರಜ್ಞೆಯ ಮೂಲದಿಂದ ಹೊರಟವೆಂದು ಹೇಳಲಾಗಿದೆ. ಇದನ್ನು ಒಂದೇ ಮಾತಿನಲ್ಲಿ ಅನಾಥಪ್ರಜ್ಞೆ ಎಂದು ಕರೆಯಬಹುದು. ಇದು ತಕ್ಕಮಟ್ಟಿಗೆ ಪಶ್ಚಿಮದ ಬಳುವಳಿಯೇ. ಪಶ್ಚಿಮದಿಂದ ಬಂದಿರುವ ಸಾಹಿತ್ಯಕ, ವೈಜ್ಞಾನಿಕ, ಸಾಮಾಜಿಕ, ಮನೋವೈಜ್ಞಾನಿಕ ವಿಚಾರಗಳೆಲ್ಲ ಇಂದಿನ ಲೇಖಕನ ಮೇಲೆ ಪ್ರಭಾವಬೀರಿವೆ. ಹೊಸ ಮೌಲ್ಯಗಳ ಶೋಧ ಅವನ ಗುರಿ. ಇಂದಿನ ಕಥೆಗಾರ ಫ್ರಾಯ್ಡ್, ಯೂಂಗ್, ಆ್ಯಡ್ಲರ್ ಮೊದಲಾದವರ ಸಂಶೋಧನೆಯ ಫಲಗಳನ್ನು ಪಡೆದುಕೊಂಡು ಮಾನಸಿಕ ವಿಶ್ಲೇಷಣೆಯಲ್ಲಿ ತೊಡಗುತ್ತಾನೆ; ಅಂತರಂಗ ಸಂಬಂಧವಾದ ವಾಸ್ತವಿಕತೆಗೆ ಮಹತ್ತ್ವ ಕೊಡುತ್ತಾನೆ. ಅನುಭವದ ಸಂಕೀರ್ಣತೆಯನ್ನು ಹೊರಗೆಡಹುವ ಪ್ರಜ್ಞಾಪ್ರವಾಹ ತಂತ್ರವನ್ನು ಬಳಸಿಕೊಳ್ಳುತ್ತಾನೆ. ಈ ತಂತ್ರ ವರ್ಜೀನಿಯವುಲ್ಫ್, ಜೇಮ್ಸ್‌ಜಾಯ್ಸ್ ಮುಂತಾದವರಿಂದ ಪ್ರಚುರವಾದುದು. ನವ್ಯಕಾವ್ಯದಲ್ಲಿ ಹೇಗೋ ಹಾಗೆ ನವ್ಯಕಥೆಯಲ್ಲೂ ಪ್ರತಿಮೆ ಪ್ರತೀಕ ಸಂಕೇತಗಳು ತುಂಬಿರುತ್ತವೆ.

ಕನ್ನಡದಲ್ಲಿ ನವ್ಯಸಾಹಿತ್ಯ ಸಂದರ್ಭದಲ್ಲಿ ಬಂದ ಕಥೆಕಾದಂಬರಿಗಳ ಮೇಲೆ ಪಾಶ್ಚಾತ್ಯ ಅಸ್ತಿತ್ವವಾದದ ಪ್ರಭಾವ ದಟ್ಟವಾಗಿದೆ. ಫ್ರೆಂಚ್ ಲೇಖಕ ಜೀನ್‌ಪಾಲ್ ಸಾರ್ತ್ರೆ ಅಸ್ತಿತ್ವವಾದದ ಮೂಲಪುರುಷ. ಅಂತೆಯೇ ಫ್ರೆಂಚ್ ಲೇಖಕ ಆಲ್ಬರ್ಟ್ ಕಾಮು, ಜರ್ಮನ್ ಲೇಖಕ ಕಾಫ್ಕಾ, ಐರಿಷ್ ಲೇಖಕ ಜೇಮ್ಸ್ ಜಾಯ್ಸ್, ಜರ್ಮನ್ ಲೇಖಕ ಬ್ರೆಕ್ಟ್, ಸ್ವೀಡಿಷ್ ಲೇಖಕ ಸ್ಟ್ರಿಂಡ್‌ಬರ್ಗ್ ಮುಂತಾದವರ ಕೃತಿಗಳೆಲ್ಲ ಕನ್ನಡ ಕಥನ ಲೇಖಕರನ್ನು ಸೆಳೆದಿವೆ.

ಹೊಸಗನ್ನಡದ ಇತರ ಪ್ರಕಾರಗಳು ಹೇಗೋ ಹಾಗೆ ವಿಮರ್ಶೆಯೂ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದಲೇ ರೂಢವಾದದ್ದು. ಆಂಗ್ಲ ವಿಮರ್ಶೆ ಕನ್ನಡ ವಿಮರ್ಶೆಯ ಮೇಲೆ ಮಾತ್ರವಲ್ಲದೆ ಸೃಷ್ಟಿ ಸಾಹಿತ್ಯದ ಮೇಲೂ ಪ್ರಭಾವ ಬೀರಿದೆ. ಪಾಶ್ಚಾತ್ಯ ಕಾವ್ಯತತ್ತ್ವಗಳ ಅಭ್ಯಾಸ, ಪ್ರಾಚೀನ ಗ್ರಂಥಗಳ ಸಂಶೋಧನೆ ಪರಿಷ್ಕಾರ ಮತ್ತು ವಿಮರ್ಶಾತ್ಮಕವಾಗಿ ಬೆಲೆ ಕಟ್ಟುವುದು, ಸಂಸ್ಕೃತ ಕಾವ್ಯಮೀಮಾಂಸೆಯ ವ್ಯವಸ್ಥಿತ ಅಭ್ಯಾಸ, ಕನ್ನಡಕ್ಕೆ ಆ ವಿಷಯಕವಾದ ಗ್ರಂಥಗಳನ್ನು ತರುವುದು ಇಂಥವುಗಳಿಗೆ ಕಾರಣವಾಯಿತು.

ಚಾರಿತ್ರಿಕವಾಗಿ ನೋಡಿದರೆ ಕನ್ನಡದಲ್ಲಿ ವಿಮರ್ಶೆಗೆ ತಳಹದಿ ಹಾಕಿದವರು ವಿದೇಶೀಯರು, ಕ್ರೈಸ್ತಮಿಷನರಿಗಳು ಎನ್ನಬಹುದು. ಕಳೆದ ಶತಮಾನದಲ್ಲಿಯೇ ಕಿಟ್ಟೆಲ್ ಕನ್ನಡ ಸಾಹಿತ್ಯದ ಸಂಕ್ಷಿಪ್ತ ಸಮೀಕ್ಷೆಯನ್ನು ಛಂದೋಂಬುಧಿಯ ಪೀಠಿಕೆಯ ಭಾಗವಾಗಿ ಇಂಗ್ಲಿಷಿನಲ್ಲಿ ಪ್ರಕಟಿಸಿದ. ಅನಂತರ ಬೆನಗಲ್ ರಾಮರಾಯರ ರೆನೇಸಾನ್ಸ್ ಇನ್ ಮಾಡರ್ನ್ ಕನ್ನಡ ಹೊಸಗನ್ನಡದ ಮೊದಲ ಸಮೀಕ್ಷೆಯೆನ್ನಲಾಗಿದೆ.

ಹೊಸಗನ್ನಡ ಸಾಹಿತ್ಯಕ್ಕೆ ಶ್ರೀಯವರು ಆಚಾರ್ಯಪುರುಷರಾದಂತೆ ಆಧುನಿಕ ವಿಮರ್ಶೆಗೂ ಅವರೇ ಆದ್ಯರೆನ್ನಬೇಕು. ನವೋದಯ ಕಾಲದ ಕನ್ನಡ ಕವಿಗಳಿಗೂ ಆಂಗ್ಲ ರೊಮ್ಯಾಂಟಿಕ್ ಕವಿಗಳಿಗೂ ಸ್ಫೂರ್ತಿಯಲ್ಲಿ ಮತ್ತು ಕಾವ್ಯ ತತ್ತ್ವಗಳಲ್ಲಿ ಸಾಮ್ಯವಿದೆ. ನವೋದಯ ಕಾಲದಲ್ಲಿ ಸಾಹಿತ್ಯದ ಸಿದ್ಧಾಂತಗಳಿಗೆ ಒಂದು ರೂಪವನ್ನು ಕೊಡಲು ಪ್ರಯತ್ನಿಸಿದ ಮಾಸ್ತಿಯವರ ಸಾಹಿತ್ಯ ಗ್ರಂಥವನ್ನು ನೋಡಿದರೆ ಸಾಮ್ಯ ಸ್ಪಷ್ಟವಾಗುತ್ತದೆ. ಈ ಕೃತಿಯ ಮೇಲೆ ವರ್ಡ್ಸ್‌ವರ್ತನ ವಿಚಾರಗಳ ಪ್ರಭಾವವುಂಟು.

ಡಿ.ವಿ.ಜಿ., ಕುವೆಂಪು ಮೊದಲಾದವರ ವಿಮರ್ಶೆಗಳಲ್ಲಿ ಶೆಲ್ಲಿ, ವರ್ಡ್ಸ್‌ವರ್ತ್, ಅರ್ನಾಲ್ಡ್, ಅರಿಸ್ಟಾಟಲ್ ಮೊದಲಾದವರ ವಿಚಾರಗಳು ಒಂದು ಕಡೆ ಭಾರತೀಯ ಕಾವ್ಯತತ್ತ್ವಗಳು ಇನ್ನೊಂದು ಕಡೆ ಸಮ್ಮಿಲಿತವಾಗಿವೆ. ಎಸ್.ವಿ.ರಂಗಣ್ಣನವರ ಶೈಲಿಯಲ್ಲಿ ಹರ್ಬರ್ಟ್ ರೀಡ್, ಮಿಡ್ಲ್‌ಟನ್ ಮರ್ರಿ, ಎಫ್.ಎಲ್.ಲ್ಯೂಕಾಸರ ಶೈಲಿ ಸಿದ್ಧಾಂತಗಳ ಅಳವಡಿಕೆಯಿದೆ. ಕುವೆಂಪು ಅವರ ಕಾವ್ಯಮೀಮಾಂಸೆಯ ಮೇಲೆ ಇಂಗ್ಲಿಷ್ ವಿಮರ್ಶಕರಾದ ಐ.ಎ.ರಿಚರ್ಡ್ಸ್, ಎ.ಸಿ.ಬ್ರಾಡ್ಲೆ ಮುಂತಾದವರು ಮಾತ್ರವಲ್ಲದೆ ಸ್ವೀಡಿಷ್ ಮನೋವಿಜ್ಞಾನಿ ಯೂಂಗ್ ಪ್ರಭಾವ ಬೀರಿದ್ದಾರೆ. ಕುವೆಂಪು ಅವರ ಭವ್ಯತಾ ಮೀಮಾಂಸೆ ಪಾಶ್ಚಾತ್ಯ ವಿಮರ್ಶೆಯಿಂದ ಪ್ರೇರಿತವಾದುದು.

ಇದುವರೆಗೆ ಕನ್ನಡ ಸಾಹಿತ್ಯದಲ್ಲಿ ಮೂಡಿರುವ ಕಾವ್ಯಮೀಮಾಂಸೆ ಏನಿದ್ದರೂ ಅದೆಲ್ಲ ಸಂಸ್ಕೃತದ ಪಡಿನೆಳಲಂತಿದೆ. ನಮ್ಮ ಮುಂದಿನ ಕಾವ್ಯಮೀಮಾಂಸೆ ಮತ್ತು ಸಾಹಿತ್ಯ ವಿಮರ್ಶೆಗಳು ಪಾಶ್ಚಾತ್ಯ ಮತ್ತು ಭಾರತೀಯ ಕಾವ್ಯ ಮೀಮಾಂಸೆಗಳಿಂದ ಮಾತ್ರವಲ್ಲದೆ ತತ್ತ್ವಶಾಸ್ತ್ರ, ಯೋಗವಿಜ್ಞಾನ, ಸೌಂದರ್ಯ ಮೀಮಾಂಸೆ ಮತ್ತು ಮನಶ್ಶಾಸ್ತ್ರ ಇವುಗಳಿಂದಲೂ ಬೆಳಕು ಪಡೆದು ಧೀರವಾಗಿ ಸ್ವತಂತ್ರವಾಗಿ ಪೂರ್ಣದೃಷ್ಟಿಯ ಕಡೆಗೆ ಮುನ್ನಡೆಯಬೇಕಾಗುತ್ತದೆ ಎಂದು ಕುವೆಂಪು ಅವರು ವ್ಯಕ್ತಪಡಿಸಿದ ನಿರೀಕ್ಷೆ ತಕ್ಕಮಟ್ಟಿಗೆ ಫಲಿಸಿದೆ.

ಕನ್ನಡದಲ್ಲಿ ಪ್ರವಾಸ ಸಾಹಿತ್ಯ, ಜೀವನಚರಿತ್ರೆ, ಆತ್ಮಕಥೆ, ಹಾಸ್ಯಸಾಹಿತ್ಯ ಮುಂತಾದ ಪ್ರಕಾರಗಳೂ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದಲೇ ಮೂಡಿದುವು.

ಒಟ್ಟಿನಲ್ಲಿ ಹೇಳುವುದಾದರೆ ಈ ಹೊತ್ತು ಆಧುನಿಕ ಕನ್ನಡ ಸಾಹಿತ್ಯ ಏನಾಗಿದೆಯೊ ಅದಕ್ಕೆ ಪಾಶ್ಚಾತ್ಯ ಸಾಹಿತ್ಯ - ಅರ್ಥಾತ್ ಇಂಗ್ಲಿಷ್ ಸಾಹಿತ್ಯ -ವಿಶೇಷವಾಗಿ ಕಾರಣವಾಗಿದೆ. ಇಂಗ್ಲಿಷಿನ ಪ್ರಭಾವವನ್ನು ಕನ್ನಡ ಅರಗಿಸಿಕೊಂಡು ರಕ್ತಗತ ಮಾಡಿಕೊಂಡಿದೆ. (ಸಿ.ಪಿ.ಕೆ.)

**ಕನ್ನರ :** ಸೇವುಣ ವಂಶದ ಅರಸ (1247-61). ಜೈತುಗಿಯ ಮಗ. ಎರಡನೆಯ ಸಿಂಘಣನ ಮೊಮ್ಮಗ ಮತ್ತು ಉತ್ತರಾಧಿಕಾರಿ. ಇವನ ಹೆಸರು ಕೃಷ್ಣ, ಕನ್ಹ, ಕನ್ಹಪ, ಕಂದಾರ, ಕನ್ನಾರ ಎಂಬ ರೂಪಗಳಲ್ಲೂ ಕಂಡುಬರುತ್ತದೆ.

ಪಟ್ಟಕ್ಕೆ ಬಂದ ಕೆಲವೇ ವರ್ಷಗಳಲ್ಲಿ (ಸು.1250) ಇವನು ಮಾಳವ ಮತ್ತು ಗುಜರಾತಿನ ಮೇಲೆ ದಂಡೆತ್ತಿ ಹೋಗಿ ಆ ರಾಜ್ಯಗಳ ರಾಜರನ್ನು ಸೋಲಿಸಿ ಹಿಂದಿರುಗಿದನೆಂದು ಶಾಸನಗಳಲ್ಲಿ ಹೇಳಿಕೆಗಳಿವೆ. ಈ ಹೇಳಿಕೆಗಳು ಸಾಂಪ್ರದಾಯಿಕ ಉದ್ಗಾರ ಮಾತ್ರವೆಂಬ ಅಭಿಪ್ರಾಯವೂ ಇದೆ. ಕನ್ನರ ಹೊಯ್ಸಳ ಸೋಮೇಶ್ವರನ ಮೇಲೆ ಆಗಾಗ್ಗೆ ಯುದ್ಧ ಮಾಡುತ್ತಿದ್ದು, ಸೋಮೇಶ್ವರ ಬಹುತೇಕ ತಮಿಳುನಾಡಿನ ರಾಜಕೀಯದಲ್ಲಿ ಮಗ್ನನಾಗಿದ್ದನಾಗಿ ಹೊಯ್ಸಳ ರಾಜ್ಯದ ಉತ್ತರ ಭಾಗವನ್ನು ಆಕ್ರಮಿಸಲು ಇವನಿಗೆ ಅನುಕೂಲವಾಯಿತು. ಚೌಡಿಸೆಟ್ಟಿ ಎಂಬ ಕನ್ನರನ ದಂಡನಾಯಕ ಹೊಯ್ಸಳ ಚಕ್ರವರ್ತಿ ಸೋಮೇಶ್ವರ 'ಮದನಿವಾರಣ' ಎಂಬ ಬಿರುದನ್ನು ಧರಿಸಿದ್ದು, ಆತ ಈ ಹೊಯ್ಸಳರ ವಿರುದ್ಧದ ಕಾರ್ಯಾಚರಣೆಗಳಲ್ಲಿ ಮುಖ್ಯ ಪಾತ್ರ ವಹಿಸಿದ್ದಂತೆ ತೋರುತ್ತದೆ. ಕನ್ನರ ಕೊಂಕಣದ ಶಿಲಾಹಾರರ ಮೇಲೂ ಜಯಗಳಿಸಿದ. ಗೋಪಕಪಾಲಕನ ಮೇಲೆ ಇವನು ಗಳಿಸಿದ ವಿಜಯ ಕೆಲವೆಡೆ ವರ್ಣಿತವಾಗಿದೆ. ಈ ಗೋಪಕಪಾಲಕ ಗೋವ ಪ್ರದೇಶದಲ್ಲಿ ಆಳುತ್ತಿದ್ದ ಕದಂಬ ರಾಜನಿರಬೇಕೆಂಬ ಊಹೆ ಇದೆ. ರಾಮಚಂದ್ರನ ಪುರುಷೋತ್ತಮಪುರಿ ಶಾಸನದಲ್ಲಿ ಕನ್ನರ ದೇವನು ಕಾಮಪಾಲನೆಂಬ ರಾಜನನ್ನು ಸೋಲಿಸಿ, ಗೋಪಾಲಕರಿಗೆ ಬಹುಸಂತೋಷವನ್ನುಂಟುಮಾಡಿದನೆಂದು ವರ್ಣಿಸಲಾಗಿದೆ. ಕೃಷ್ಣನ ಶಾಸನಗಳು ಆಭೀರರ ಮುಖ್ಯ ಕೇಂದ್ರವಾದ ಖಾನ್ ದೇಶ ಜಿಲ್ಲೆಯಲ್ಲಿ ದೊರಕಿರುವುದರಿಂದ ಕಾಮಪಾಲ ಆಭೀರನಾಗಿರಬಹುದೆಂದು ಊಹಿಸಬಹುದು. ಸಿಂಘಣನ ಕಾಲದ ಘಟನೆಗಳೊಡನೆ ಹೋಲಿಸಿದಾಗ ಕನ್ನರನ ಕಾಲ ಅಷ್ಟೇನು ಮಹತ್ತ್ವಪೂರ್ಣವಾದುದಾಗಿರಲಿಲ್ಲ. ಇವನು ನೆರೆರಾಜ್ಯಗಳ ಮೇಲೆ ಅನೇಕ ಯುದ್ಧಗಳನ್ನು ಕೈಗೊಂಡರೂ ಅವುಗಳಿಂದ ಸೇವುಣರ ರಾಜ್ಯ ವಿಸ್ತರಣೆ ಆಗಲಿಲ್ಲ.

ಕನ್ನರ ಧರ್ಮಿಷ್ಠ, ಪರಮತಸಹಿಷ್ಣುವಾಗಿದ್ದು ಜೈನ, ಬ್ರಾಹ್ಮಣ, ವೀರಶೈವ ಮೊದಲಾದ ಮತಗಳ ಅನುಯಾಯಿಗಳಿಗೆ ದತ್ತಿಗಳನ್ನು ನೀಡಿದ. ಶಾಸನಗಳು ಇವನನ್ನು ವೇದೋದ್ಧಾರ ಎಂದು ವರ್ಣಿಸುತ್ತವೆ. ಹೇಮಾದ್ರಿಯ ಹೇಳಿಕೆಯ ಪ್ರಕಾರ ಈತ ಅನೇಕ ಯಜ್ಞಗಳನ್ನು ಮಾಡಿ ಕ್ಷೀಣಿಸಿದ್ದ ವೇದಧರ್ಮದ ಪುನರುಜ್ಜೀವನ ಮಾಡಿದ. ಇವನು ಮಹಾನುಭಾವ ಪಂಥದ ಅಭಿಮಾನಿಯೂ ಆಗಿದ್ದನೆಂದು ಲೀಲಾಚರಿತ್ರವೆಂಬ ಗ್ರಂಥದಿಂದ ತಿಳಿಯುತ್ತದೆ. ತನ್ನ ತಮ್ಮ ಮಹಾದೇವನ ಜೊತೆಯಲ್ಲಿ ಲೋನರ್‌ಗೆ ಹೋಗಿ ಆ ಪಂಥದ ಚಕ್ರಧರಸ್ವಾಮಿಗೆ ಗೌರವವನ್ನು ಅರ್ಪಿಸಿದನೆಂದು ಹೇಳಲಾಗಿದೆ.

ಇವನ ದಂಡನಾಯಕ ಜಲ್ಹಣನ ಸೂಕ್ತಿಮುಕ್ತಾವಳಿ, ಅಮಲಾನಂದನ ವೇದಾಂತಕಲ್ಪತರು ಇವನ ಕಾಲದಲ್ಲಿ ಹುಟ್ಟಿದ ಗ್ರಂಥಗಳು. (ಎಸ್.)

**ಕಪಿಲಾ :** ಕಪಿನಿ, ಕಬಿನಿ ಎಂಬ ಹೆಸರುಗಳೂ ಇರುವ ಈ ನದಿ ಕಾವೇರಿ ನದಿಯ ಪ್ರಧಾನ ಉಪನದಿಗಳಲ್ಲಿ ಒಂದು. ನದಿಯ ಉಗಮಸ್ಥಾನ ಕೇರಳದ ವೈನಾಡು ತಾಲ್ಲೂಕಿನ ಪಶ್ಚಿಮ ಘಟ್ಟಗಳ ಸಾಲಿನಲ್ಲಿ 2,100ಮೀ.ಗಳಿಗಿಂತಲೂ ಎತ್ತರ ಪ್ರದೇಶದಲ್ಲಿದೆ. ಅಲ್ಲಿಂದ ಅಲ್ಪ ದೂರ ವೈನಾಡಿನಲ್ಲಿ ಪ್ರವಹಿಸಿ ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆಯ ನೈಋತ್ಯ ಮೂಲೆಯಲ್ಲಿ ಬಾವಲಿಯ ಬಳಿ ಕರ್ನಾಟಕ ರಾಜ್ಯವನ್ನು ಪ್ರವೇಶಿಸುತ್ತದೆ. ನದಿಯ ಹರಿವಿನ ಹೆಚ್ಚು ಭಾಗ ಮೈಸೂರು ಜಿಲ್ಲೆಯಲ್ಲಿದೆ. ಹೆಗ್ಗಡದೇವನಕೋಟೆ ತಾಲ್ಲೂಕಿನಲ್ಲಿ ಮೊದಲು ಮಗ್ಗೆ, ನಿಸನ ಗ್ರಾಮಗಳ ಮೂಲಕ ಸರಗೂರಿನವರೆಗೆ ಈಶಾನ್ಯಾಭಿಮುಖವಾಗಿ ಹರಿದು ಅಲ್ಲಿಂದ ಉತ್ತರಕ್ಕೆ ಚಕ್ಕೂರಿನವರೆಗೆ ಸಾಗಿ ಅನಂತರ ಪೂರ್ವಾಭಿಮುಖವಾಗಿ ಹರಿಯುತ್ತ ನಂಜನಗೂಡು ತಾಲ್ಲೂಕನ್ನು ಪ್ರವೇಶಿಸುತ್ತದೆ. ಇಲ್ಲಿ ಹುಲ್ಲಹಳ್ಳಿಯ ಮುಖಾಂತರ ನಂಜನಗೂಡಿನವರೆಗೆ ಬಂದು ಮತ್ತೆ ಈಶಾನ್ಯಕ್ಕೆ ತಿರುಗಿ ತಿರುಮಕೂಡಲು ನರಸೀಪುರದಲ್ಲಿ ಕಾವೇರಿಯನ್ನು ಸಂಧಿಸುತ್ತದೆ. ಹರಿವಿನ ಅಂತ್ಯದ ಸ್ವಲ್ಪ ಭಾಗ ಮಾತ್ರ ತಿರುಮಕೂಡಲು ನರಸೀಪುರ ತಾಲ್ಲೂಕಿನಲ್ಲಿದೆ. ನದಿಯ ಹರಿವಿನ ಒಟ್ಟು ಉದ್ದ ಸು.214ಕಿಮೀ.

ನದಿಯ ಪಾತ್ರದ ಅಗಲ ಸಾಮಾನ್ಯವಾಗಿ 150ರಿಂದ 200ಮೀಗಳಿದ್ದು ಪಕ್ಕದಲ್ಲಿ ಎತ್ತರದ ದಂಡೆಗಳಿರುವುದು ಸಾಮಾನ್ಯ. ನದಿಯಲ್ಲಿ ವರ್ಷಪೂರ್ತ ನೀರಿರುತ್ತದೆ. ಮಳೆಗಾಲದಲ್ಲಿ ತುಂಬಿ ಹರಿಯುತ್ತದೆ. ಬೇಸಗೆಯಲ್ಲೂ ಇದರಲ್ಲಿ ಸಾಗುವ ನೀರಿನ ಪ್ರಮಾಣ ಕಾವೇರಿಯದಕ್ಕಿಂತಲೂ ಕಡಿಮೆಯಿರುವುದಿಲ್ಲ. ತಾರಕಾ, ನುಗು ಮತ್ತು ಗುಂಡ್ಲುಹೊಳೆ ಕಪಿಲಾ ನದಿಯ ಮುಖ್ಯ ಉಪನದಿಗಳು. ತಾರಕಾ ಹೆಗ್ಗಡದೇವನಕೋಟೆಯ ಮೂಲಕ ಹರಿದು ಬಂದು ಹಂಪಾಪುರದ ಪಶ್ಚಿಮಕ್ಕೆ ಸು.12ಕಿಮೀ ದೂರದಲ್ಲಿ ಮಟಕೆರೆಯ ಬಳಿ ಸೇರುತ್ತದೆ. ಮಿಕ್ಕೆರಡೂ ದಕ್ಷಿಣ ದಂಡೆಯಿಂದ ಬಂದು ಸೇರುವುವು. ನುಗುನದಿ ಹುಲ್ಲಹಳ್ಳಿಯಿಂದ ಸು.8ಕಿಮೀ ಪಶ್ಚಿಮದಲ್ಲಿರುವ ಮಲಾರದ ಹುಂಡಿ ಬಳಿಯೂ ಗುಂಡ್ಲುಹೊಳೆ ನಂಜನಗೂಡಿನ ಬಳಿಯೂ ಸೇರುತ್ತದೆ. ನಂಜನಗೂಡು ತಾಲ್ಲೂಕಿನ ಹುಲ್ಲಹಳ್ಳಿ (ಹತ್ವಾಳ) ಅಣೆಕಟ್ಟಿನಿಂದ ಹೊರಡುವ ಎರಡು ನಾಲೆಗಳು ನದಿಯ ಎಡ ಮತ್ತು ಬಲದಂಡೆಯಲ್ಲಿ ಸಾಗಿ ತಾಲ್ಲೂಕಿನ ಬಹುಭಾಗಕ್ಕೆ ನೀರಾವರಿ ಸೌಕರ್ಯವನ್ನು ಒದಗಿಸುತ್ತವೆ. ಹೆಗ್ಗಡದೇವಕೋಟೆ ತಾಲ್ಲೂಕಿನ ತುಮ್ಮಸೋಗೆ, ಮಾದಾಪುರ, ಹೊಮ್ಮರಗಳ್ಳಿ - ಈ ಸ್ಥಳಗಳಲ್ಲೂ ಮುಂದೆ ಹುಲ್ಲಹಳ್ಳಿ, ನಂಜನಗೂಡು ಮತ್ತು ತಿರುಮಕೂಡಲು ನರಸೀಪುರಗಳ ಬಳಿಯೂ ಈ ನದಿಗೆ ಸೇತುವೆಗಳಿವೆ. ನದಿಯ ದಕ್ಷಿಣ ದಂಡೆಯಲ್ಲಿರುವ ನಂಜನಗೂಡು ಮತ್ತು ಕಾವೇರಿ ಸಂಗಮದ ಬಳಿ ಇರುವ ತಿರುಮಕೂಡಲು ನರಸೀಪುರ ದೊಡ ಊರುಗಳು ಹಾಗೂ ಪುಣ್ಯಕ್ಷೇತ್ರಗಳು. *

**ಕಪಿಲಾ ಯೋಜನೆ :** ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ತಾಲ್ಲೂಕಿನ ಬಿದರಹಳ್ಳಿಯ ಬೀಚನಹಳ್ಳಿ ಸಮೀಪದಲ್ಲಿ ಕಪಿಲಾ ನದಿಗೆ ಅಡ್ಡವಾಗಿ ನಿರ್ಮಿಸಿರುವ ಜಲಾಶಯ ಮತ್ತು ನೀರಾವರಿ ಯೋಜನೆ. 1959ರಲ್ಲೇ ಈ ಯೋಜನೆ ಅಧಿಕೃತವಾಗಿ ಅಸ್ತಿತ್ವಕ್ಕೆ ಬಂದಿತು. ಈಗಿನ ಮೈಸೂರು ಜಿಲ್ಲೆಯ ಮೈಸೂರು, ಹೆಗ್ಗಡದೆವನಕೋಟೆ, ನಂಜನಗೂಡು ಮತ್ತು ತಿರುಮಕೂಡಲು ನರಸೀಪುರ ತಾಲ್ಲೂಕುಗಳಿಗೂ ಚಾಮರಾಜನಗರ ಜಿಲ್ಲೆಯ ಚಾಮರಾಜನಗರ, ಕೊಳ್ಳೇಗಾಲ ಮತ್ತು ಯಳಂದೂರು ತಾಲ್ಲೂಕುಗಳಿಗೂ ನೀರಾವರಿ ಸೌಲಭ್ಯ ಕಲ್ಪಿಸುವುದು ಈ ಯೋಜನೆಯ ಪ್ರಧಾನ ಉದ್ದೇಶ. ಜೊತೆಗೆ 32 ಮೆಗಾವಾಟ್ ಜಲವಿದ್ಯುತ್ ಉತ್ಪಾದಿಸುವ ಮತ್ತು ಬೆಂಗಳೂರು ನಗರಕ್ಕೆ ಕುಡಿಯುವ ನೀರು ಸರಬರಾಜು ಮಾಡುವ ಉಪ ಉದ್ದೇಶಗಳು ಈ ಯೋಜನೆಯಲ್ಲಿ ಅಡಕವಾಗಿವೆ.

1959ರಲ್ಲೇ ಜಲಾಶಯದ ಕಾರ್ಯ ಪ್ರಾರಂಭವಾದರೂ ಅದು ಬಿರುಸು ಪಡೆದದ್ದು 1967ರ ಅನಂತರವೇ. 1974ರ ಹೊತ್ತಿಗೆ ಜಲಾಶಯದ ಕಾರ್ಯ ಪೂರ್ಣಗೊಂಡು 1975 ರಿಂದ ನೀರನ್ನು ಸಂಗ್ರಹಿಸಲು ಪ್ರಾರಂಭಿಸಲಾಯಿತು. ಈ ಜಲಾಶಯ 552.7 ಮಿಲಿಯನ್ ಕ್ಯೂಬಿಕ್ ಮೀಟರ್ ನೀರನ್ನು ಸಂಗ್ರಹಿಸುವ ಸಾಮರ್ಥ್ಯ ಹೊಂದಿದೆ. ಜಲಾಶಯದ ಘನ ಗಾತ್ರ 19,200 ಘನ ಅಡಿಗಳು. ಈ ಜಲಾಶಯದ ನಿರ್ಮಾಣದಿಂದ 22 ಗ್ರಾಮಗಳೂ 14 ಉಪ ಗ್ರಾಮಗಳೂ ಮುಳುಗಡೆಯಾಗಿವೆ. ಮೈಸೂರು - ಮಾನಂದವಾಡಿ ರಸ್ತೆಯ 15ಕಿಮೀ ಉದ್ದದ ರಸ್ತೆ ಮುಳುಗಡೆಯಾಗಿದೆ. ಕಟ್ಟೆಯ ಒಟ್ಟು ಉದ್ದ 2,733 ಮೀ, ಎತ್ತರ 28.95ಮೀ. ಕಟ್ಟೆಯ ಮೂಲಕ ಒಂದು ಸೆಕೆಂಡಿಗೆ ಪ್ರವಹಿಸಬಹುದಾದ ನೀರಿನ ಗರಿಷ್ಠ ಪ್ರಮಾಣ 19,400 ಕ್ಯೂಸೆಕ್ಸ್‌ಗಳು. ಕಟ್ಟೆಯ ಮೇಲಣ ರಸ್ತೆಯ ಅಗಲ 24 ಅಡಿಗಳು.

ಪೂರ್ಣಕಾಲಿಕ ನೀರಾವರಿ ಬೆಳೆ ಮತ್ತು ಮಿಶ್ರ ಬೆಳೆಗಳು ಅಂದರೆ ಕಾಲಿಕ ನೀರಾವರಿ ಬೆಳೆಗಳಿಗೆ ಅನುಕೂಲವಾಗುವಂತೆ ಈ ಯೋಜನೆಯನ್ನು

ರೂಪಿಸಲಾಗಿದೆ. ಬತ್ತ, ಕಬ್ಬು, ಹಿಪ್ಪುನೇರಳೆ, ತೆಂಗು ಇತ್ಯಾದಿ ಬೆಳೆಗಳಿಗೆ ಹೆಚ್ಚು ಸಹಾಯಕವಾಗಿದೆ. ಪರಿಷ್ಕೃತ ಯೋಜನೆಯಂತೆ 87,900 ಹೆಕ್ಟೇರ್‌ಗಳಿಗೆ ಅಂತಿಮವಾಗಿ ನೀರುಣಿಸುವ ಗುರಿ ಇಟ್ಟುಕೊಳ್ಳಲಾಗಿದೆ. 2000 ಮಾರ್ಚ್ ಹೊತ್ತಿಗೆ 41,083 ಹೆಕ್ಟೇರ್ ಜಮೀನಿಗೆ ನೀರೊದಗಿಸಲಾಯಿತು. ಯೋಜನೆಯ ಅಂದಾಜು ವೆಚ್ಚ 480 ಕೋಟಿ. 2000 ಮಾರ್ಚ್ ವೇಳೆಗೆ 356.24 ಕೋಟಿ ಹಣವನ್ನು ವ್ಯಯಿಸಲಾಗಿದೆ.



ಕಬಿನಿ ಜಲಾಶಯ

ಜಲಾಶಯದ ಎರಡು ದೊಡ್ಡ ಕಾಲುವೆಗಳಲ್ಲಿ ಕಪಿನಿ ಬಲದಂಡೆ ಕಾಲುವೆ ಪ್ರಮುಖವಾದುದು. ಇದರ ಉದ್ದ 210 ಕಿಮೀ. ನಂಜನಗೂಡು ತಾಲ್ಲೂಕಿನ ಮೂಲಕ ಕೊಳ್ಳೇಗಾಲ ತಾಲ್ಲೂಕಿನ ಸತ್ತೇಗಾಲದವರೆಗೂ ಸಾಗುವ ಈ ನಾಲೆ ಬಂಡಿಗುಡ್ಡ ಹಳ್ಳ ಮತ್ತು ನುಗು ನದಿಗಳನ್ನು ಸಾಗರ ಮತ್ತು ನುಗು ಹಾಯಿಗಾಲುವೆಗಳ ಮೂಲಕ ದಾಟಿ ಹೋಗುತ್ತದೆ. ಕೃಷ್ಣರಾಜಸಾಗರದ ಮೇಲ್ಮಟ್ಟ ನಾಲಾ ಯೋಜನೆಗೂ ಈ ಯೋಜನೆಯೊಂದಿಗೆ ಸಂಪರ್ಕ ಕಲ್ಪಿಸುವುದರಿಂದ ಶ್ರೀರಂಗಪಟ್ಟಣ ತಾಲ್ಲೂಕಿಗೂ ಈ ಯೋಜನೆಯ ಪ್ರಯೋಜನ ಆಗಲಿದೆ. ಎಡದಂಡೆ ನಾಲೆಯ ಉದ್ದ ಸು.32ಕಿಮೀ. ಇದು ತಾರಕ ಕಣಿವೆಗೆ ಸಂಪರ್ಕ ಕಲ್ಪಿಸುತ್ತದೆ. ಹೆಚ್ಚು ಜಲಸಂಪನ್ಮೂಲವಿರುವ ಕಪಿಲಾ ನದಿ ಈ ನೀರಾವರಿ ಯೋಜನೆಗೆ ವರವಾಗಿ ಪರಿಣಿಸಿದೆ. ಸಾಮಾನ್ಯವಾಗಿ ಮಳೆಯ ಕೊರತೆಯಿಂದ ನಲುಗುವ ಈ ಪ್ರದೇಶದ ಅಭಿವೃದ್ಧಿಗೆ ಕಪಿಲಾ ಯೋಜನೆ ಜೀವ ತುಂಬಿದೆ. *

**ಕಬ್ಬನ್, ಮಾರ್ಕ್ :** 1785-1861. ಮೈಸೂರು ಸಂಸ್ಥಾನದ ಆಡಳಿತವನ್ನು ನಡೆಸುತ್ತಿದ್ದ ಬ್ರಿಟಿಷ್ ಕಮಿಷನರ್ (1834-61). ಐರಿಷ್ ಸಮುದ್ರದಲ್ಲಿರುವ ಐಲ್ ಆಫ್ ಮ್ಯಾನ್ ದ್ವೀಪದ ಮ್ಯಾಂಕ್ಸ್‌ನಲ್ಲಿ ಪಾದ್ರಿಯೊಬ್ಬನ ಮಗನಾಗಿ 1785 ಸೆಪ್ಟೆಂಬರಿನಲ್ಲಿ ಜನಿಸಿದ. 1800ರಲ್ಲಿ ಭಾರತಕ್ಕೆ ಬಂದ ಕರ್ನಲ್ ವಿಲ್ಕ್ಸನ ಸೋದರಸಂಬಂಧಿಯಾದ ಈತ ಮದ್ರಾಸ್ ಇನ್‌ಫೆಂಟ್ರಿಯನ್ನು ಸೇರಿ 1816ರಲ್ಲಿ ಕ್ಯಾಪ್ಟನ್ ಪದವಿಗೇರಿದ. 1817-18ರಲ್ಲಿ ಪಿಂಡಾರಿಗಳ ವಿರುದ್ಧ ನಡೆದ ಕಾರ್ಯಾಚರಣೆಯಲ್ಲಿ ಪಾತ್ರವಹಿಸಿ 1818ರಲ್ಲಿ ಲೆಫ್ಟಿನೆಂಟ್ ಕರ್ನಲ್ ಆದ.

ಮೈಸೂರಿನ ವಿದ್ಯಮಾನಗಳ ಬಗ್ಗೆ ವಿಚಾರಣೆ ನಡೆಸಲು ಲಾರ್ಡ್ ವಿಲಿಯಮ್ ಬೆಂಟಿಂಕ್ ಏರ್ಪಡಿಸಿದ್ದ ಸಮಿತಿಯಲ್ಲಿ (1831) ಈತನೂ ಒಬ್ಬ ಸದಸ್ಯನಾಗಿದ್ದ. ಅದೇ ವರ್ಷ ಮುಮ್ಮಡಿ ಕೃಷ್ಣರಾಜ ಒಡೆಯರಿಂದ ವಶಪಡಿಸಿಕೊಂಡ ಸಂಸ್ಥಾನಾಡಳಿತವನ್ನು ನಿರ್ವಹಿಸುವುದಕ್ಕಾಗಿ ಈತ ಕಿರಿಯ ಕಮಿಷನರ್ ಅಧಿಕಾರಿ ಹುದ್ದೆಯನ್ನು ಪಡೆದ. 1834ರಲ್ಲಿ ಅದರ ಏಕೈಕ ಕಮಿಷನರ್ ಆಗಿ ನೇಕಮವಾದ, 27 ವರ್ಷಗಳ ಕಾಲ ಈ ಹುದ್ದೆಯಲ್ಲಿದ್ದ. ಈತ ಸಂಸ್ಥಾನದ ಆಡಳಿತ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಬಹಳ ಮಟ್ಟಿಗೆ ಸುಧಾರಿಸಿದ. ಸಂಸ್ಥಾನವನ್ನು ಬೆಂಗಳೂರು, ಚಿತ್ರದುರ್ಗ, ಅಷ್ಟಗ್ರಾಮ ಮತ್ತು ನಗರಗಳೆಂಬ ನಾಲ್ಕು ವಿಭಾಗಗಳನ್ನಾಗಿ ಮಾಡಿ ಅದಕ್ಕೆ ಮೇಲಧಿಕಾರಿಗಳನ್ನು ನೇಮಿಸಿದ. ಪ್ರತಿಯೊಂದು ತಾಲ್ಲೂಕಿಗೂ ಒಬ್ಬ ಅಮಲ್ದಾರನನ್ನೂ ಪ್ರತಿ ಹೋಬಳಿಗೂ ಒಬ್ಬ ಶೇಕದಾರನನ್ನೂ ನೇಮಿಸಲಾಯಿತು. ತನ್ನ ಆಪ್ತಕಾರ್ಯದರ್ಶಿಯನ್ನೇ ಪ್ರಮುಖ ಕಾರ್ಯದರ್ಶಿಯನ್ನಾಗಿ ನೇಮಿಸಿ ಆಡಳಿತವನ್ನು ಬಿಗಿಗೊಳಿಸಿದ್ದಲ್ಲದೆ ಸರ್ಕಾರದ ಚಟುವಟಿಕೆಗಳನ್ನು ಜನರಿಗೆ ತಿಳಿಯಪಡಿಸುವ ವ್ಯವಸ್ಥೆಯನ್ನು ವಿಸ್ತರಿಸಿದ. 85 ತಾಲ್ಲೂಕು ನ್ಯಾಯಾಲಯಗಳು, 8 ಪ್ರಧಾನ ಸದರ್ ಮುನ್ಸಿಫ್ ನ್ಯಾಯಾಲಯಗಳು, 3 ಸೂಪರಿಂಟೆಂಡೆಂಟ್ ನ್ಯಾಯಾಲಯಗಳು ಮತ್ತು ಮೂವರು ನ್ಯಾಯಾಧೀಶರಿರುವ ಒಂದು ಹುಜೂರ್ ಅದಾಲತ್ ನ್ಯಾಯಾಲಯವಿರುವಂತೆ ನ್ಯಾಯಾಂಗವನ್ನು ಪುನರ್ವ್ಯವಸ್ಥೆಗೊಳಿಸಿ ದೃಢಗೊಳಿಸಿದ. ಒಟ್ಟು 1,600 ಮೈಲಿ ಉದ್ದದ ರಸ್ತೆಗಳೂ ಅನೇಕ ಸೇತುವೆಗಳೂ ಈತನ ಕಾಲದಲ್ಲಿ ರಚಿತವಾಗಿ ಬೆಂಗಳೂರಿಗೂ ಜಿಲ್ಲಾ ಕೇಂದ್ರಗಳಿಗೂ ಸಂಪರ್ಕ ಸುಲಭವಾಯಿತು. ಜಾಲಾರ್‌ಪೇಟೆ -ಬೆಂಗಳೂರು ರೈಲುಮಾರ್ಗ ನಿರ್ಮಾಣವಾದ್ದು ಈತನ ಕಾಲದಲ್ಲೇ (1859). ಇವನ ಆಡಳಿತ ಅವಧಿಯಲ್ಲಿ ಸಂಸ್ಥಾನದ ಆದಾಯವೂ ಹೆಚ್ಚಿತು. 1834ರಲ್ಲಿ 68ಲಕ್ಷರೂ. ಇದ್ದ ವಾರ್ಷಿಕ ಆದಾಯ 1855-56ರಲ್ಲಿ 85ಲಕ್ಷರೂ.ಗಳಿಗೆ ಏರಿತು. ಸರ್ಕಾರದ ಎಲ್ಲ ಸಾಲಗಳನ್ನೂ ತೀರಿಸಲು ಸಾಧ್ಯವಾಗಿ, ಹಣಕಾಸಿನ ಸ್ಥಿತಿ ಸುಧಾರಿಸಲು ಸಾಧ್ಯವಾದದ್ದು ಈತನ ದಕ್ಷ ಆಡಳಿತದಿಂದ.

ಕಬ್ಬನ್ ಕೊನೆಯ ತನಕವೂ ಅವಿವಾಹಿತನಾಗಿಯೇ ಉಳಿದ. 60 ವರ್ಷಗಳ ಕಾಲ ಭಾರತದಲ್ಲಿ ಸೇವೆ ಸಲ್ಲಿಸಿದ್ದ ಈತ ಈ ಅವಧಿಯಲ್ಲಿ ಒಮ್ಮೆಯೂ ಭಾರತವನ್ನು ಬಿಟ್ಟು ಹೋಗಲಿಲ್ಲ. 1861ರಲ್ಲಿ ಅನಾರೋಗ್ಯದ ನಿಮಿತ್ತ ಕೆಲಸಕ್ಕೆ ರಾಜೀನಾಮೆ ನೀಡಿ ಸ್ವದೇಶಕ್ಕೆ ಹಿಂದಿರುಗುತ್ತಿದ್ದಾಗ ಹಾದಿಯಲ್ಲಿ ಸೂಯೆಜ್‌ನಲ್ಲಿ ತೀರಿಕೊಂಡ. ಇವನ ಪಾರ್ಥಿವ ಶರೀರವನ್ನು ಐಲ್ ಆಫ್ ಮ್ಯಾನ್‌ಗೆ ಕೊಂಡೊಯ್ದು ಅಲ್ಲಿ ಸಮಾಧಿ ಮಾಡಲಾಯಿತು. ಹಲವು ಶತಮಾನಗಳಲ್ಲಿ ಆ ದ್ವೀಪದಲ್ಲಿ ಹುಟ್ಟಿದವರ ಪೈಕಿ ಈತ ಅತಿ ದೊಡ್ಡ ವ್ಯಕ್ತಿ ಎಂದು ಅಲ್ಲಿಯ ಜನ ಘೋಷಿಸಿದರು.



ಬೆಂಗಳೂರಿನ ಕಬ್ಬನ್‌ಪಾರ್ಕ್‌ನಲ್ಲಿರುವ ಮಾರ್ಕ್ ಕಬ್ಬನ್‌ನ ಪ್ರತಿಮೆ

ಕಮಿಷನರ್ ಆಗಿ ಕೆಲಸ ಮಾಡುತ್ತಿದ್ದಾಗ 1852ರಲ್ಲಿ ಈತನಿಗೆ ಸೈನ್ಯದ ಹುದ್ದೆಯಲ್ಲಿ ಲೆಫ್ಟಿನೆಂಟ್ ಜನರಲ್ ಆಗಿ ಬಡ್ತಿ ಸಿಕ್ಕಿತು. ಬ್ರಿಟಿಷ್ ರಾಣಿ ಈತನಿಗೆ 1856ರಲ್ಲಿ ಸಿ.ಬಿ.ಪ್ರಶಸ್ತಿಯನ್ನೂ 1859ರಲ್ಲಿ

ಕೆ.ಸಿ.ಬಿ.ಪ್ರಶಸ್ತಿಯನ್ನೂ ನೀಡಿದಳು. ಬೆಂಗಳೂರಿನ ಕಬ್ಬನ್ ಪಾರ್ಕ್ ಇವನ ನೆನಪಿಗಾಗಿ ರಚಿತವಾದ್ದು. ಅಲ್ಲಿ ಈತನ ಅಶ್ವಾರೋಹಿ ಪ್ರತಿಮೆ ಇದೆ. (ಎಸ್.ಕೆ.)

**ಕಬ್ಬಾಳದುರ್ಗ :** ಮಂಡ್ಯ ಜಿಲ್ಲೆ ಮಳವಳ್ಳಿ ತಾಲ್ಲೂಕಿನಲ್ಲಿರುವ ಒಂದು ಬೆಟ್ಟ. ಸಮುದ್ರಮಟ್ಟದಿಂದ 1069ಮೀ ಎತ್ತರವಿದ್ದು ಶಂಕುವಿನಾಕಾರದಲ್ಲಿದೆ. ಕಡಿದಾದ ಪಕ್ಕಗಳಿಂದ ಕೂಡಿದ ಈ ಬೆಟ್ಟದ ಮೇಲೆ ಒಂದು ಕೋಟೆ ಇದೆ. ಈ ಕೋಟೆಯನ್ನು ಕಟ್ಟಿಸಿದವ ಗಾಥೆಕ್ ರಾಜ ಎಂಬ ಹೆಸರಿನ ಪಾಳೆಯಗಾರನೆಂದು ಪ್ರತೀತಿ. ಒಂದು ಕಡೆಯಿಂದ ಮಾತ್ರ ಈ ಬೆಟ್ಟದ ಮೇಲೇರಿಹೋಗುವುದು ಸಾಧ್ಯ. ಅಲ್ಲೂ ಮೆಟ್ಟಿಲುಗಳು ಬಲು ಕಡಿದು; ಅವನ್ನು ಬಂಡೆಯಲ್ಲೇ ಕೊರೆಯಲಾಗಿದೆ. ಕೆಲವು ಕಡೆಗಳಲ್ಲಿ ಮೆಟ್ಟಿಲುಗಳು ಆರು ಅಂಗುಲಗಳಿಗೂ ಕಿರಿದಾಗಿವೆ. ಆದ್ದರಿಂದ ಇದನ್ನು ಹತ್ತುವುದು ಬಲು ಕಷ್ಟ. ಸಾಕಷ್ಟು ಆಹಾರ ನೀರುಗಳನ್ನೊದಗಿಸಿಕೊಂಡು ಇಲ್ಲಿ ಉಳಿದರೆ ಶತ್ರುವಿನ ಆಕ್ರಮಣದ ಭಯವಿಲ್ಲದೆ ಇರುವುದು ಸಾಧ್ಯವಿತ್ತು. ಈ ಪ್ರದೇಶವನ್ನಾಳುತ್ತಿದ್ದ ವಿವಿಧ ಕಾಲದ ಆಡಳಿತಗಾರರೂ ಮುಮ್ಮಡಿ ಕೃಷ್ಣರಾಜ ಒಡೆಯರ ಸರ್ಕಾರದವರೂ ಅಪಾಯಕಾರಿಗಳಾದ ರಾಜದ್ರೋಹಿಗಳನ್ನು ಇಲ್ಲಿ ಇಡುತ್ತಿದ್ದರು. ಇಲ್ಲಿಯ ನೀರು ಕೂಡ ವಿಷವೆಂದು ಪರಿಗಣಿತವಾಗಿತ್ತು. ಅಹಿತಕರ ವಾತಾವರಣವೂ ಅತೃಪ್ತಿಕರ ಆಹಾರವೂ ಖೈದಿಯ ಬಂಧನದ ನೋವಿನ ಅವಧಿಯನ್ನು ಮೊಟಕುಮಾಡಿ ಬೇಗ ಅವನನ್ನು ಪರಲೋಕಕ್ಕೆ ಅಟ್ಟುತ್ತಿತ್ತೆಂದು ಕರ್ನಲ್ ವಿಲ್ಕ್ಸ್ ಬರೆದಿದ್ದಾನೆ. ಆರನೆಯ ಚಾಮರಾಜ ಒಡೆಯರನ್ನೂ ಅವರ ಪತ್ನಿಯನ್ನೂ ದಳವಾಯಿ ದೇವರಾಜ ಸೆರೆಯಲ್ಲಿಟ್ಟಿದ್ದದ್ದು ಈ ದುರ್ಗದಲ್ಲೇ. ಅವರು ಇಲ್ಲಿ ಬಹುಕಾಲ ಬದುಕಲಿಲ್ಲ. ಹೈದರ್ ಅಲಿ ಇಲ್ಲಿಯ ಕೋಟೆಯನ್ನು ದುರಸ್ತುಗೊಳಿಸಿ ಇದಕ್ಕೆ ಜಾಫರಾಬಾದ್ ಎಂದು ಹೆಸರಿಟ್ಟ. ಆದರೆ ಇಂದು ಯಾರೂ ಇದನ್ನು ಆ ಹೆಸರಿನಿಂದ ಕರೆಯುವುದಿಲ್ಲ. 1864ರಲ್ಲಿ ಇಲ್ಲಿಯ ಫಿರಂಗಿಗಳನ್ನೂ ಮದ್ದನ್ನೂ ನಾಶಗೊಳಿಸಲಾಯಿತಲ್ಲದೆ ಇಲ್ಲಿದ್ದ ಸಿಬ್ಬಂದಿಯನ್ನು ಸ್ಥಳಾಂತರಗೊಳಿಸಲಾಯಿತು. ಇಂದು ಈ ಸ್ಥಳ ಬೇಚಿರಾಕಾಗಿದೆ. (ಕೆ.ಆರ್.ಆರ್)

**ಕಬ್ಬಿಣದ ಉದ್ಯಮ :** ಕರ್ನಾಟಕದಲ್ಲಿ ಕಬ್ಬಿಣದ ಉದ್ಯಮ ಸು.3000 ವರ್ಷಗಳಷ್ಟು ಪ್ರಾಚೀನವಾದುದು. ಜನ ಕಬ್ಬಿಣವನ್ನು ಉಪಯೋಗಿಸುತ್ತಿದ್ದ ಬಗ್ಗೆ ಅತಿ ಹಳೆಯ ಮಾಹಿತಿ ಧಾರವಾಡ ಜಿಲ್ಲೆಯ ಹಳ್ಳೂರು ಎಂಬಲ್ಲಿನ ಉತ್ಖನನದಿಂದ ದೊರಕಿದೆ. ಅಲ್ಲಿ ಕಬ್ಬಿಣ ದೊರಕುವ ಮೊದಲ ಸ್ತರದ ಕಾಲವನ್ನು ಕ್ರಿ.ಪೂ.1000 ಎಂದು ವೈಜ್ಞಾನಿಕ ವಿಧಾನಗಳಿಂದ ಗುರುತಿಸಲಾಗಿದೆ. ಆ ಕಾಲದಾರಭ್ಯ ಕ್ರಿ.ಪೂ.ಸು.3ನೆಯ ಶತಮಾನದವರೆಗಾದರೂ ಪ್ರಚಲಿತವಾಗಿದ್ದ ಬೃಹತ್ ಶಿಲಾಸಮಾಧಿ ಸಂಸ್ಕೃತಿಗಳ ಕಾಲದ ಒಂದು ವೈಶಿಷ್ಟ್ಯವೆಂದರೆ ಕಬ್ಬಿಣದ ಉಪಕರಣಗಳ ವಿಶೇಷ ಬಳಕೆಯೇ. ಕರ್ನಾಟಕದ ವಿವಿಧ ಭಾಗಗಳಲ್ಲಿರುವ ಕಬ್ಬಿಣದ ನಿಕ್ಷೇಪವನ್ನು ಅಂದಿನ ಜನ ಬಳಸಿಕೊಂಡು ಕಬ್ಬಿಣದ ಉದ್ಯಮವನ್ನು ವ್ಯಾಪಕವಾಗಿ ಬೆಳೆಸಿದ್ದರು. ತತ್ಕಾಲದ ಸಮಾಧಿಗಳಲ್ಲಿ ಹುದುಗಿದ್ದ ಕಬ್ಬಿಣದ ಆಯುಧಗಳು ಮತ್ತು ಇತರ ಉಪಕರಣಗಳು ಇಂದಿಗೂ ಬಹುಸಂಖ್ಯೆಯಲ್ಲಿ ಉಳಿದುಬಂದಿವೆ. ಆ ಕಾಲದ ಬ್ರಹ್ಮಗಿರಿ, ಮಸ್ಕಿ, ತಿರುಮಕೂಡಲು ನರಸೀಪುರ ಮೊದಲಾದ ಹಲವು ನೆಲೆಗಳಲ್ಲಿ ಕಬ್ಬಿಣ ತಯಾರಿಕೆಯ ಉಳಿಕೆಯ ಕಿಟ್ಟದ ಗುಡ್ಡೆಗಳು ಕಂಡುಬಂದಿವೆ. ಆ ಕಾಲದಲ್ಲಿ ಮುಚ್ಚಿದ ಆವೆಗಳಲ್ಲಿ ಸುಣ್ಣಕಲ್ಲನ್ನು ಉಷ್ಣೋತ್ತೇಜಕವಾಗಿ ಉಪಯೋಗಿಸಿ ಅದಿರನ್ನು ಕರಗಿಸುತ್ತಿದ್ದರೆಂಬುದಕ್ಕೆ ಸೂಚನೆಗಳು ದೊರಕಿವೆ.

ಹೀಗೆ ಉಪಸ್ಥಿತವಾಗಿದ್ದ ಈ ದೇಶೀ ಉದ್ಯಮ ಇತ್ತೀಚಿನವರೆಗೂ ಮುಂದುವರೆದುಕೊಂಡು ಬಂದಿತ್ತು. ಕಬ್ಬಿಣದ ವಸ್ತುಗಳ ತಯಾರಿಕೆ ಚಾರಿತ್ರಿಕ ಕಾಲದಲ್ಲೂ ಚೆನ್ನಾಗಿ ಬೆಳೆದಿತ್ತೆಂಬುದಕ್ಕೆ ಇಂದಿಗೂ ಉಳಿದುಬಂದಿರುವ ವಿಜಯನಗರದ ಅರಸರು, ಬಹಮನೀ ಸುಲ್ತಾನರು, ಹೈದರ್ ಅಲಿ, ಟಿಪ್ಪು ಸುಲ್ತಾನ್ ಇವರ ಕಾಲದ ನೂರಾರು ಉಕ್ಕಿನ ಫಿರಂಗಿಗಳು ಸೂಚಕವಾಗಿವೆ. ಇಂದು ಕಾಡು ಬೆಳೆದು ಮುಚ್ಚಿಹೋಗಿರುವಂಥ ಅನೇಕ ಸ್ಥಳಗಳಲ್ಲೂ ಕಬ್ಬಿಣದ ಕಿಟ್ಟದ ದೊಡ್ಡ ಗುಡ್ಡೆಗಳನ್ನು ಗುರುತಿಸಬಹುದಾಗಿದ್ದು ಅವು ಪ್ರಾಚೀನ ಕಬ್ಬಿಣ ಉದ್ಯಮದ ಕುರುಹಾಗಿವೆ. ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳಲ್ಲಿ, ಅದರಲ್ಲೂ ಸಂಡೂರು ಬೆಟ್ಟಗಳ ಪ್ರದೇಶದಲ್ಲಿ ಕಬ್ಬಿಣದ ಉದ್ಯಮ ವಿಶೇಷವಾಗಿತ್ತು. ಅಲ್ಲಿ ದೊರೆಯುವ ಅದಿರು ಉತ್ತಮ ದರ್ಜೆಯದಾಗಿತ್ತು. ಸಮೀಪದಲ್ಲೇ ಇದ್ದ ಕಾಡುಗಳಿಂದ ಇದ್ದಿಲನ್ನು ಸುಲಭವಾಗಿ ಪಡೆಯಬಹುದಾಗಿತ್ತು. ಇವುಗಳನ್ನು ಉಪಯೋಗಿಸಿ ಕಬ್ಬಿಣದ ತಯಾರಿಕೆ ನಡೆಯುತ್ತಿತ್ತು. ಬೆಂಗಳೂರು ಜಿಲ್ಲೆಯ ಕನಕಪುರ ತಾಲ್ಲೂಕಿನ ಹಲಗೂರು ಕಬ್ಬಿಣ ತಯಾರಿಕೆಯ ಇನ್ನೊಂದು ಮುಖ್ಯ ಕೇಂದ್ರವಾಗಿತ್ತು. ಇಲ್ಲಿಯ ಕಬ್ಬಿಣ 'ಹಲಗೂರು ಚಿನ್ನ' ಎಂದೇ ಪ್ರಸಿದ್ಧವಾಗಿತ್ತು. ಚಿತ್ರದುರ್ಗ ಜಿಲ್ಲೆಯ ಗಟ್ಟಿ ಸೋಮನಹಳ್ಳಿಯಲ್ಲಿ ಉಕ್ಕಿನ ತಯಾರಿಕೆಯೂ ಇತ್ತು. ಇಲ್ಲಿ ಬೀಡು ಕಬ್ಬಿಣದ ತುಣುಕುಗಳನ್ನು ಮರದ ತೊಗಟೆ, ಎಲೆ ಮೊದಲಾದವುಗಳೊಡನೆ ಬೆರೆಸಿ ಇದ್ದಿಲಿನ ಕೆಂಡದಿಂದ ಕಾಯಿಸಿ ಉಕ್ಕು ತಯಾರಿಸಲಾಗುತ್ತಿತ್ತು ಎನ್ನಲಾಗಿದೆ.

ಆದರೆ ಬ್ರಿಟಿಷರ ಆಳಿಕೆ ಪ್ರಾರಂಭವಾದಾಗಿನಿಂದ ಈ ದೇಶೀ ಉದ್ಯಮ ಹಿಂದಕ್ಕೆ ಸರಿಯಿತು. ಬ್ರಿಟಿಷರು ಈ ನಾಡಿನ ಉದ್ಯಮಗಳಿಗೆ ಉತ್ತೇಜನ ಕೊಡದಿದ್ದುದೂ ವಿದೇಶದಿಂದ ಆಮದು ಮಾಡಿಕೊಳ್ಳಲಾಗುತ್ತಿದ್ದ ಕಬ್ಬಿಣದ ಪದಾರ್ಥಗಳು ಇಲ್ಲಿ ತಯಾರಾಗುತ್ತಿದ್ದವಕ್ಕಿಂತ ಅಗ್ಗವಾಗಿದ್ದುದೂ ಸ್ಥಳೀಯ ಕಬ್ಬಿಣದ ಉದ್ಯಮದ ಅವನತಿಗೆ ಕಾರಣವಾಯಿತು. *

ಈ ಉದ್ಯಮ ಮತ್ತೆ ತಲೆಯೆತ್ತಿದ್ದು ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ. ಮೈಸೂರು ಸಂಸ್ಥಾನದ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಬೇಸಗೆಯ ದಿನಗಳನ್ನು ಬಾಬಾಬುಡನ್‌ಗಿರಿಯಲ್ಲಿರುವ ಗಿರಿಧಾಮಗಳಲ್ಲಿ ಕಳೆಯುತ್ತಿದ್ದರು. ಅವರು ಕುದುರೆ ಸವಾರಿ ಮಾಡುತ್ತಿದ್ದ ಮತ್ತು ಸಂಜೆಯ ವೇಳೆ ವಾಯು ವಿಹಾರಕ್ಕಾಗಿ ಹೋಗುತ್ತಿದ್ದ ಸ್ಥಳಗಳಲ್ಲೆಲ್ಲಾ ಕಬ್ಬಿಣದ ಅದಿರು ಇರುವುದನ್ನು ಕಂಡು ಆಗಿನ ದಿವಾನರಾಗಿದ್ದ ವಿಶ್ವೇಶ್ವರಯ್ಯನವರಿಗೆ ಇದರ ಉಪಯೋಗದ ಅಧ್ಯಯನವನ್ನು ಮಾಡಿಸಲು ಆದೇಶ ನೀಡಿದರು.

ಮಹಾರಾಜರ ಆದೇಶದಂತೆ ರಾಜ್ಯದ ಭೂ ವಿಜ್ಞಾನ ಇಲಾಖೆ ಶೋಧನೆಯನ್ನು ಮಾಡಿ ಬಾಬಾಬುಡನ್‌ಗಿರಿಯ ಬೇರೆ ಬೇರೆ ಸ್ಥಳಗಳಲ್ಲಿ ಉತ್ತಮವರ್ಗದ ಕಬ್ಬಿಣದ ಅದಿರಿನ ನಿಕ್ಷೇಪವನ್ನು 1915ರಲ್ಲಿ ಪತ್ತೆ ಹಚ್ಚಿತು; ಅದೇ ಸುಮಾರಿಗೆ ಟಾಟಾ ಕಬ್ಬಿಣ ಮತ್ತು ಉಕ್ಕಿನ ಕಂಪನಿಗೆ ಪ್ರವೀಣ ಸಲಹೆಗಾರರಾಗಿದ್ದ ಅಮೆರಿಕ ಸಂಯುಕ್ತ ಸಂಸ್ಥಾನದ ಸಿ.ಪಿ.ಪೆರಿನ್‌ರವರು ಭಾರತಕ್ಕೆ ಟಾಟಾ ಕಂಪನಿಯ ಉಕ್ಕಿನ ಕಾರ್ಖಾನೆಯ ವಿಸ್ತರಣೆಗೋಸ್ಕರ ಅಧ್ಯಯನ ಮಾಡಲು ಬಂದರು. ರಾಜ್ಯ ಸರ್ಕಾರ ಆ ಸಂದರ್ಭವನ್ನು ಉಪಯೋಗಿಸಿಕೊಂಡು ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರುಗಳ ನಿಕ್ಷೇಪಗಳನ್ನು ಲೋಹ ಕಾರ್ಖಾನೆಗಳಲ್ಲಿ ವಾಣಿಜ್ಯ ಮಟ್ಟದಲ್ಲಿ ಬಳಸುವ ಸಾಧ್ಯತೆಯನ್ನು ತಿಳಿಸಲು ಪೆರಿನ್‌ರನ್ನು ಆಹ್ವಾನಿಸಿತು.

ಪೆರಿನ್ ಅವರು ಬಾಬಾಬುಡನ್ ಗಿರಿಯಲ್ಲಿದ್ದ ಕಬ್ಬಿಣದ ಅದಿರಿನ ನಿಕ್ಷೇಪಗಳನ್ನು ಮತ್ತು ಸಮೀಪದಲ್ಲೇ ಇದ್ದ ಮಲೆನಾಡಿನ ದಟ್ಟವಾದ ಮತ್ತು ವಿಶಾಲವಾದ ಅರಣ್ಯಗಳನ್ನು ಪರಾಮರ್ಶಿಸಿ, ಬೃಹತ್ ಕಬ್ಬಿಣದ ಕಾರ್ಖಾನೆಗೆ ಅವಶ್ಯವಾದ ಕಲ್ಲಿದ್ದಲಿನ ನಿಕ್ಷೇಪ ದಕ್ಷಿಣ ಭಾರತದಲ್ಲಿ ಇಲ್ಲದ ಕಾರಣ ಸಮೀಪದ ದಟ್ಟವಾದ ಮತ್ತು ವಿಶಾಲವಾದ ಅರಣ್ಯಗಳ ಸೌದೆಯಿಂದ ಇದ್ದಿಲನ್ನು ತಯಾರಿಸಿ ಅದನ್ನು ಉಪಯೋಗಿಸಿ ಕಬ್ಬಿಣದ ಅದಿರಿನಿಂದ ಇದ್ದಿಲಿನ ಬೀಡುಕಬ್ಬಿಣ ತಯಾರಿಸುವ ಒಂದು ಕಾರ್ಖಾನೆಯನ್ನು ಸ್ಥಾಪಿಸಬಹುದೆಂದು 1916ರಲ್ಲಿ ರಾಜ್ಯ ಸರ್ಕಾರಕ್ಕೆ ವರದಿ ಸಲ್ಲಿಸಿದರು. ಅವರ ಸಲಹೆಯಂತೆ ಮಲೆನಾಡಿನ ಕಾಡುಗಳಿಂದ ದೊರಕಬಹುದಾದ ಸೌದೆಯ ಪರಿಮಾಣಕ್ಕೆ ಸರಿಹೊಂದುವ ಹಾಗೆ ಸುಮಾರು 18,250 ಟನ್ ಚಾರ್‌ಕೋಲ್ ಪಿಗ್ ಐರನ್ ವಾರ್ಷಿಕ ಉತ್ಪಾದನ ಸಾಮರ್ಥ್ಯದ ಒಂದು ಕಬ್ಬಿಣದ ಕಾರ್ಖಾನೆಯ ಸ್ಥಾಪನೆಗೆ ಅನುಕೂಲಗಳಿವೆ ಎಂದು ದೃಢಪಟ್ಟಿತು. ಅವರು ಸಲಹೆ ಮಾಡಿದ ಯೋಜನೆಯಲ್ಲಿ ಮುಖ್ಯ ಉತ್ಪಾದನೆ ಕಬ್ಬಿಣವಾದರೂ ಅದರ ಉತ್ಪಾದನಾ ವೆಚ್ಚವನ್ನು ಕಡಿಮೆ ಮಾಡಲು ಉಪೋತ್ಪನ್ನಗಳ ಪುನರ್ಲಭ್ಯ ಘಟಕಗಳನ್ನು ಸೇರಿಸಿದ್ದರು. ವರ್ಷಕ್ಕೆ 73,000 ಟನ್ ಸೌದೆಯನ್ನು ಬಟ್ಟಿ ಪಾತ್ರೆಗಳಲ್ಲಿ ಇದ್ದಿಲಾಗಿ ಪರಿವರ್ತಿಸುವುದಲ್ಲದೆ ಉಪೋತ್ಪನಗಳನ್ನು ಪಡೆಯುವುದು, ಮೇಲಿನ ಇದ್ದಿಲನ್ನು ಮತ್ತು 30,000 ಟನ್ ಕಬ್ಬಿಣದ ಅದಿರನ್ನು ಉಪಯೋಗಿಸಿ ವರ್ಷಕ್ಕೆ 18,250 ಟನ್ ಇದ್ದಲಿನ ಬೀಡು ಕಬ್ಬಿಣವನ್ನು ಊದು ಕುಲುಮೆಯಲ್ಲಿ ಉತ್ಪಾದಿಸುವುದು. ಇವು ಪೆರಿನ್‌ರ ಸಲಹೆ. ಈ

ಸಲಹೆಯ ಮೇರೆಗೆ ಸ್ಥಾಪಿಸಬಹುದಾದ ಕಾರ್ಖಾನೆ ಒಂದು ದೊಡ್ಡ ಕಾರ್ಖಾನೆಯಾಗುವ ಸಾಧ್ಯತೆ ಇರಲಿಲ್ಲ. ಮೇಲ್ಕಂಡ ವಿಧಾನದಲ್ಲಿ ಉಪಯುಕ್ತವಲ್ಲದ ಇದ್ದಲ್ಲಿನ ಪುಡಿಯನ್ನು ಮತ್ತು ಊದು ಕುಲುಮೆಯಲ್ಲಿ ಉತ್ಪತ್ತಿಯಾಗುವ ಅನಿಲವನ್ನು ಉಪಯೋಗಿಸಿ ಉತ್ಪಾದಿಸಬಹುದುದಾದ ವಿದ್ಯುಚ್ಛಕ್ತಿಯನ್ನು ಬಳಸಿ ಕ್ಯಾಲ್ಸಿಯಂ ಕಾರ್ಬೈಡ್ ಸಹ ತಯಾರಿಸಬಹುದು. ಇಂಥ ಒಂದು ಕಾರ್ಖಾನೆಗೆ ದಿನ ಒಂದಕ್ಕೆ 30 ಲಕ್ಷ ಗ್ಯಾಲನ್ ನೀರು ಅವಶ್ಯವಿರುವುದರಿಂದ, ಕಾರ್ಖಾನೆಯನ್ನು ಭದ್ರಾ ನದಿ ದಂಡೆಯ ಮೇಲಿರುವ ಭದ್ರಾವತಿಯಲ್ಲಿ (ಆಗಿನ ಬೆಂಕಿಪುರ) ಸ್ಥಾಪಿಸಿವುದು ಸೂಕ್ತ ಎಂದು ಪೆರೀನ್ ಅಭಿಪ್ರಾಯಪಟ್ಟಿದ್ದರು.

1916ರಲ್ಲಿ ಪೆರೀನ್ ಭಾರತಕ್ಕೆ ಪುನಃ ಬಂದಾಗ ರಾಜ್ಯದ ದಿವಾನರಿಗೆ ಟಾಟಾ ಕಬ್ಬಿಣ ಕಾರ್ಖಾನೆಯವರು ಒಂದು ಪ್ರಸ್ತಾವವನ್ನು ಸಲ್ಲಿಸಿದರು. ಟಾಟಾ ಕಬ್ಬಿಣ ಮತ್ತು ಉಕ್ಕಿನ ಕಂಪನಿ ಕೆಲವು ನಿಯಮಗಳ ಮೇಲೆ ರಾಜ್ಯದಲ್ಲಿ ಕಬ್ಬಿಣದ ಕಾರ್ಖಾನೆಯನ್ನು ನಿರ್ಮಿಸಿ ಅದರ ನಿರ್ವಾಹಕ ಸಂಸ್ಥೆಯಾಗಿ ಕೆಲಸ ಮಾಡುವುದು ಆ ಸಲಹೆಯಾಗಿತ್ತು. ದಿವಾನರೂ ಮಹಾರಾಜರೂ ಈ ಸಲಹೆಯನ್ನು ಒಪ್ಪಿ, ಕಬ್ಬಿಣದ ಕಾರ್ಖಾನೆಯನ್ನು ಸ್ಥಾಪಿಸಲು ಲಕ್ಕವಳ್ಳಿ, ಬೆಂಕಿಪುರ ಮತ್ತು ಶಿವಮೊಗ್ಗ ಈ ಸ್ಥಳಗಳನ್ನು ಪರಿಶೀಲಿಸಿ ಪೆರೀನ್ ಸಲಹೆಯ ಮೇರೆಗೆ ಕಾರ್ಖಾನೆಗೆ ಅಗತ್ಯವಾದ ಎಲ್ಲ ಅನುಕೂಲಗಳಿದ್ದ ಬೆಂಕಿಪುರದಲ್ಲಿ ನಿರ್ಮಿಸಲು ತೀರ್ಮಾನಿಸಿದರು.

ಕಾರ್ಖಾನೆಯ ನಿರ್ಮಾಣ ಕಾರ್ಯದಲ್ಲಿ ಎದುರಾದ ಎಡರು ತೊಡರುಗಳನ್ನೆಲ್ಲ ನಿವಾರಿಸಿಕೊಂಡು 1918ರಲ್ಲಿ ಪ್ರಾರಂಭವಾಗಿ 1922ರ ಹೊತ್ತಿಗೆ ಒಂದು ಘಟ್ಟವನ್ನು ಮುಟ್ಟಿತು. ಆ ಅವಧಿಯಲ್ಲಿ ಅಮೆರಿಕ ಸಂಯುಕ್ತಸಂಸ್ಥಾನದಿಂದ ಕಳುಹಿಸಿದ ಕೆಲವು ಯಂತ್ರಗಳು ಉತ್ತರ ಭಾರತದಲ್ಲಿರುವ ಬೆಂಕಿಪುರಕ್ಕೆ ಹೋದುದರಿಂದ ಈ ಕಾರ್ಖಾನೆ ಇದ್ದ ಊರಿನ ಹೆಸರನ್ನು ಬೆಂಕಿಪುರದಿಂದ ಭದ್ರಾವತಿ ಎಂದು ಬದಲಾಯಿಸಲಾಯಿತು.

ಕಾರ್ಖಾನೆಯ ಕೆಲವು ಘಟಕಗಳ ನಿರ್ಮಾಣ ಮುಗಿಯುತ್ತಿದ್ದಂತೆಯೇ 1922ರಲ್ಲಿ ಪೆರೀನ್ ಆ ಘಟಕಗಳಲ್ಲಿ ಉತ್ಪಾದನೆಯನ್ನು ಪ್ರಾರಂಭಿಸಲು ತರಪೇತಾದ ಚಾಲ್ತಿ ಸಿಬ್ಬಂದಿಯನ್ನು ಕರೆತಂದರು. 1923ರ ಜನವರಿ 18ರಂದು ಆಗಿನ ದಿವಾನ್ ಸರ್ ಆಲ್ಬಿಯನ್ ಬ್ಯಾನರ್ಜಿಯವರು ಊದು ಕುಲುಮೆಗೆ ಅಗ್ನಿಯನ್ನು ಸ್ಪರ್ಶಿಸಿದರು. ಇದಾದ ಎರಡು ತಿಂಗಳಿನಲ್ಲಿ ಇದ್ದಲಿನ ಭಟ್ಟಿಯಲ್ಲಿ ಉತ್ಪಾದನೆಯಾಗುವ 'ಹೊಗೆ ಎಣ್ಣೆ' (ಲಿಕ್ಕರ್) ಯಿಂದ ಟಾರು ಮತ್ತು ಸಿ.ಪಿ. ಮಿತೆನಾಲ್ ಅನ್ನು ಉಪೋತ್ಪನ್ನಗಳಾಗಿ ರೂಢಿಸುವ ಶಾಖೆಗಳಿಂದ ಉತ್ಪತ್ತಿಯನ್ನು ಪ್ರಾರಂಭಿಸಲಾಯಿತು. ಈ ಘಟಕಗಳಲ್ಲಿ 1923 ಮಾರ್ಚ್ 31ರ ವೇಳೆಗೆ 176 ಲಕ್ಷ ರೂಪಾಯಿಗಳ ಬಂಡವಾಳ ಹೂಡಲಾಗಿತ್ತು. ಇದರಲ್ಲಿ ಸ್ವಲ್ಪ ಭಾಗ ವಸತಿಸೌಕರ್ಯಕ್ಕಾಗಿಯೂ ನಗರ ನಿರ್ಮಾಣಕ್ಕಾಗಿಯೂ ವೆಚ್ಚವಾಗಿತ್ತು.

1923ರ ಏಪ್ರಿಲ್‌ವರೆಗೆ ಕೇಂದ್ರ ಕಾರ್ಖಾನೆ ಏಜೆಂಟರಿಂದ ಆಡಳಿತ ಮಂಡಳಿಯ ಹತೋಟಿಯಲ್ಲಿ ನಡೆಯಿತು. ಕಬ್ಬಿಣದ ಅದಿರು, ಸುಣ್ಣಕಲ್ಲು, ಸೌದೆ ಇತ್ಯಾದಿ ಕಚ್ಚಾ ಸಾಮಾಗ್ರಿಗಳ ಸರಬರಾಜು ಮತ್ತು ಸಾಗಾಣಿಕೆಗೆ ಸಂಬಂಧಪಟ್ಟ ಇಲಾಖೆಗಳು ಸರ್ಕಾರದ ನೇರ ಆಡಳಿತಕ್ಕೆ ಸೇರಿದ್ದವು. 1923ರ ಏಪ್ರಿಲ್‌ನಲ್ಲಿ ರಾಜ್ಯ ಸರ್ಕಾರ ಏಜೆಂಟರೊಡನೆ ಸಮಾಲೋಚಿಸಿ ಉದ್ಯಮಕ್ಕೆ ಸಂಬಂಧಪಟ್ಟ ಎಲ್ಲ ಇಲಾಖೆಗಳ ಪೂರ್ಣ ಸಹಕಾರ ಪಡೆಯುವುದಕ್ಕೆ ತಕ್ಕ ಆಡಳಿತ ಮಂಡಳಿಯನ್ನು ಪುನರ್ ರಚಿಸಿ ಅದರ ಅಧ್ಯಕ್ಷರಿಗೆ ಸಂಬಂಧಪಟ್ಟ ಇಲಾಖೆಗಳ ಮೇಲೆ ಪೂರ್ಣ ಹತೋಟಿಯ ಅಧಿಕಾರ ಕೊಟ್ಟಿತು. ಸರ್ಕಾರದ ಆಹ್ವಾನದ ಮೇರೆಗೆ ಸರ್.ಎಂ.ವಿಶ್ವೇಶ್ವರಯ್ಯನವರು ಆಡಳಿತ ಮಂಡಳಿಯ ಅಧ್ಯಕ್ಷ ಸ್ಥಾನ ಸ್ವೀಕರಿಸಿದರು. ಸರ್.ಕೆ.ಪಿ.ಪುಟ್ಟಣ್ಣಚೆಟ್ಟಿಯವರು ಮಂಡಳಿಯ ಕಾರ್ಯದರ್ಶಿ ಹಾಗೂ ನಿರ್ದೇಶಕರಾಗಿಯೂ ಏಜೆಂಟ್ ಪರವಾಗಿ ಸರ್ ಖವಾಸಜೀ ರೆಡಿಮನಿ ಮತ್ತು ಸಿ.ಜೆ.ಡಿ. ಗಾಂಧಿ ಮಂಡಳಿಯಲ್ಲಿದ್ದರು.

ಮಂಡಳಿಯ ಹತೋಟಿಯನ್ನು ಪರಿಣಾಮಕಾರಿಯಾಗಿ ಮಾಡಲು ಸ್ವತಂತ್ರವಾಗಿ ನಡೆಸುತ್ತಿದ್ದ ವೆಚ್ಚ ಮತ್ತು ಕೆಲಸಗಾರರ ನೇಮಕಗಳನ್ನು ತಕ್ಷಣ ನಿಲ್ಲಿಸತಕ್ಕದ್ದು ಮತ್ತು ಯಾವ ಹೊಸ ಕಾರ್ಯಗಳನ್ನೂ ಪ್ರಾರಂಭಿಸಕೂಡದು ಅಥವಾ ಉದ್ಯಮದಲ್ಲಿನ ಉತ್ಪಾದನೆಗಳಲ್ಲದೆ ಬೇರೆ ಯಾವುದಕ್ಕೂ ವೆಚ್ಚ ನಡೆಯಕೂಡದು ಎಂದು ವಿಶ್ವೇಶ್ವರಯ್ಯನವರು ಸೂಚಿಸಿದರು. ಉದ್ಯಮದ ಆಸ್ತಿಗಳನ್ನು ಪರಿಶೀಲಿಸಿ ಬೇರೆ ಬೇರೆ ಆಡಳಿತಗಳನ್ನು ತಮ್ಮ ಅಧೀನಕ್ಕೆ ತೆಗೆದುಕೊಳ್ಳಲು, ಪರಿಣಾಮಕಾರಿಯಾಗಿ ನಿರ್ವಹಣೆ ವೆಚ್ಚವನ್ನು ಹತೋಟಿಗೊಳಪಡಿಸಲು, ಮಾರಾಟ ಹೆಚ್ಚಿಸಲು ಮತ್ತು ಉದ್ಯಮವನ್ನು ವಾಣಿಜ್ಯ ದೃಷ್ಟಿಯಲ್ಲಿ ಅಭಿವೃದ್ಧಿಪಡಿಸಲು ಅವಶ್ಯವಾದ ಕಾರ್ಯಗಳನ್ನು ಮಾಡಲು ಒಂದು ಕಾರ್ಯಕ್ರಮದ ಪಟ್ಟಿಯನ್ನು ತಯಾರು ಮಾಡಿಸಲಾಯಿತು. ಆ ಶಿಫಾರಸುಗಳನ್ನು ರಾಜ್ಯ ಸರ್ಕಾರ ಮತ್ತು ಮಂಡಳಿ 1923ರ ಮೇ ತಿಂಗಳಿನಲ್ಲಿ ಅನುಮೋದಿಸಿದವು. ಈ ರೀತಿಯಲ್ಲಿ ಹಂಚಿಹೋಗಿದ್ದ ಜವಾಬ್ದಾರಿಯಿಂದ ಉಂಟಾಗಿದ್ದ, ಹತೋಟಿಗೆ ಮೀರಿದ, ವೆಚ್ಚ ಮತ್ತು ಕಾರ್ಯನಿರ್ವಹಣೆಯಲ್ಲಿ ಆಗುತ್ತಿದ್ದ ತಡೆಗಳನ್ನು ಹೊಸ ಮಂಡಳಿ ನೇಮಕವಾದ ಕೂಡಲೇ ನಿವಾರಿಸಿತು. ವೈಜ್ಞಾನಿಕ ಕಾರ್ಯ ನಿರ್ವಹಣೆಯನ್ನು ವೈಜ್ಞಾನಿಕವಾಗಿ ಹೊಸದಾಗಿಯೇ ನಿರ್ಮಿಸಬೇಕಾಗಿತ್ತು. ಪರಿಣಾಮಕಾರಿ ಲೆಕ್ಕಪತ್ರಗಳ ವಿಧಾನವಿರಲಿಲ್ಲ. ಎಲ್ಲ ಇಲಾಖೆಗಳಲ್ಲಿಯೂ ಕೆಲಸಗಳು ಸರಿಯಾದ ಹಿಡಿತವಿಲ್ಲದೆ ಅವ್ಯವಸ್ಥೆಯಲ್ಲಿ ನಡೆಯುತ್ತಿತ್ತು.

ವಿಶ್ವೇಶ್ವರಯ್ಯನವರು ಹಾಕಿಕೊಟ್ಟ ದಾರಿಯಲ್ಲಿ ಕಾರ್ಖಾನೆ ದಿನದಿನಕ್ಕೂ ತನ್ನ ಪ್ರಾರಂಭಿಕ ತೊಂದರೆಗಳನ್ನು ನಿವಾರಿಸುವುದರಲ್ಲಿ ದೃಢ ಹೆಜ್ಜೆಗಳನ್ನಿಡುತ್ತಿತ್ತು. ಇಷ್ಟಾದರೂ ಅದು ತನ್ನ ಕಾಲ ಮೇಲೆ ನಿಲ್ಲುವ ಶಕ್ತಿ ಹೊಂದಿರಲಿಲ್ಲ. ಕಾರ್ಖಾನೆಯ ಉತ್ಪಾದನೆಗಳಿಗೆ ಬೇಡಿಕೆಯಿಲ್ಲದೆ ಕಾರ್ಖಾನೆಯ ಆರ್ಥಿಕ ಸ್ಥಿತಿ ಬಹಳ ಶೋಚನೀಯ ಸ್ಥಿತಿಯಲ್ಲಿತ್ತು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಈ ಕಾರ್ಖಾನೆಯನ್ನು ಮುಚ್ಚದೆ ನಡೆಸುವುದು ಸರ್ಕಾರದ ಹಣಕಾಸಿನ ಪರಿಸ್ಥಿತಿಯ ಮೇಲೆ ದುಷ್ಪರಿಣಾಮವಾಗುವುದು ಮತ್ತು ಈ ಕಾರ್ಖಾನೆ ಚಿನ್ನದ ಗಣಿಯಾಗುವ ಬದಲು ಒಂದು ಬಿಳಿ ಆನೆಯಾಗಿ ಪರಿಣಮಿಸಿದೆ ಎಂದು ಅಂದಿನ ಪ್ರಜಾಪ್ರತಿನಿದಿ ಸಭೆಯಲ್ಲಿ ಹಲವಾರು ಪ್ರಮುಖ ವ್ಯಕ್ತಿಗಳು ಟೀಕೆಗಳನ್ನು ಮಾಡಿದರು. ಈ ಟೀಕೆಗಳ ಪರಿಣಾಮವಾಗಿ ಸರ್ಕಾರ ಈ ಕಾರ್ಖಾನೆಯನ್ನು ಲಾಭದಾಯಕವಾಗಿ ಮಾಡುವ ದಿಶೆಯಲ್ಲಿ ಮತ್ತೆ ವಿಶ್ವೇಶ್ವರಯ್ಯನವರ ಸೇವೆಯನ್ನು ಪಡೆಯಿತು.

ಅವರು ಕಾರ್ಖಾನೆಯ ಉತ್ಪಾದನೆಗಳಿಗೆ ಸರಿಯಾದ ಮಾರುಕಟ್ಟೆಯನ್ನು ಕಂಡು ಹಿಡಿಯುವುದರಲ್ಲಿ ಯಶಸ್ವಿಯಾದರು. ಅದೇ ರೀತಿ ಒಂದು ಕಬ್ಬಿಣದ ಎರಕದ ಕೊಳವೆ ಘಟಕವನ್ನು ಸಹ ಸ್ಥಾಪಿಸಿದರು. ಇದರಿಂದಾಗಿ ಕಾರ್ಖಾನೆ ತನ್ನ ಕಾಲಮೇಲೆ ನಿಲ್ಲುವ ಸ್ಥಿತಿಯನ್ನು ತಲುಪಿತು ಮತ್ತು ಸರ್ಕಾರಕ್ಕೆ ಲಾಭವನ್ನೂ ತರುವಂತಾಯಿತು. ಇದಾದನಂತರ ಕಾರ್ಖಾನೆ ಹಿನ್ನಡೆಯಲಿಲ್ಲ, ಉತ್ತರೋತ್ತರ ಬೆಳೆಯತೊಡಗಿತು.

ಕಾರ್ಖಾನೆಯ ಬೆಳೆವಣಿಗೆಯಲ್ಲಿ ಮತ್ತೊಂದು ಮೈಲಿಗಲ್ಲು -ಉಕ್ಕಿನ ಉತ್ಪಾದನೆ. ಇದಕ್ಕಾಗಿ 1936ರಲ್ಲಿ 25 ಟನ್ ತೆರೆದ ಕುಲುಮೆಯನ್ನೂ ಇದಕ್ಕೆ ಪೂರಕವಾಗಿ ಉಕ್ಕಿನ ಸರಳುಗಳನ್ನು ತಯಾರಿಸುವ ರೋಲಿಂಗ್ ಮಿಲ್ಲನ್ನು ಸ್ಥಾಪಿಸಲಾಯಿತು. ಇದೇ ವರ್ಷ ಕಾರ್ಖಾನೆಯ ಹೆಸರನ್ನು ಮೈಸೂರು ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಎಂದು ಬದಲಾಯಿಸಲಾಯಿತು.

ಕಾರ್ಖಾನೆಯ ಆರ್ಥಿಕ ಸ್ಥಿತಿಯನ್ನು ವಿಶಾಲ ತಳಹದಿಯ ಮೇಲೆ ನಿಲ್ಲಿಸಲು 1938ರಲ್ಲಿ ಸಿಮೆಂಟ್ ಉತ್ಪಾದನೆ ಘಟಕವನ್ನು ಸ್ಥಾಪಿಸಲಾಯಿತು. 1942ರಲ್ಲಿ ಫೆರೋಸಿಲಿಕಾನ್ ಉತ್ಪಾದನಾ ಆರಂಭವಾಯಿತು. ಇದು ಒಂದು ದೊಡ್ಡ ಸಾಧನೆಯೇ ಎನ್ನಬೇಕು. ಏಕೆಂದರೆ ಇಂಥ ಒಂದು ಘಟಕ ಏಷ್ಯದಲ್ಲೇ ಪ್ರಪ್ರಥಮ. 1942ರಲ್ಲಿ ರಾಜ್ಯದ ಆವಶ್ಯಕತೆಯನ್ನು ಪೂರೈಸಲು ಒಂದು ಉಕ್ಕಿನ ಎರಕದ ಘಟಕವನ್ನು ಸ್ಥಾಪಿಸಲಾಯಿತು.

ಎರಡನೆಯ ಮಹಾಯುದ್ಧದ ದೆಸೆಯಿಂದ ರಾಜ್ಯದ ಉಕ್ಕಿನ ಉದ್ಯಮ ಆರ್ಥಿಕವಾಗಿ ದೃಢವಾಯಿತು. ಸ್ವಾತಂತ್ರ್ಯದ ಅನಂತರ ಕೇಂದ್ರ ಸರ್ಕಾರದ ರಾಷ್ಟ್ರೀಯ ಕೈಗಾರಿಕಾ ನೀತಿಯಂತೆ ಮೈಸೂರು ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ರಾಷ್ಟ್ರದ ಕಬ್ಬಿಣ ಮತ್ತು ಉಕ್ಕಿನ ಉದ್ಯಮದ ಬೆಳೆವಣಿಗೆಗೆ ಸಹಾಯಕವಾಗುವಂತೆ ಯೋಜನೆಗಳನ್ನು ರೂಪಿಸಿತು. ಇದರ ಅಂಗವಾಗಿ ಏಷ್ಯದಲ್ಲೇ ಪ್ರಪ್ರಥಮವಾಗಿ ವಿದ್ಯುತ್ ಕುಲುಮೆಯಿಂದ ಬೀಡು ಕಬ್ಬಿಣವನ್ನು ತಯಾರು ಮಾಡುವ ಘಟಕವನ್ನು 1951ರಲ್ಲಿ

ಸ್ಥಾಪಿಸಲಾಯಿತು. ಇದು ಕಾರ್ಖಾನೆಯ ಇತಿಹಾಸದಲ್ಲಿ ಮತ್ತೊಂದು ಮೈಲಿಗಲ್ಲು. 1957ರಲ್ಲಿ ತಿರುಗಣಿ ಕೊಳಾಯಿಯ ಘಟಕ ಸ್ಥಾಪಿತವಾಯಿತು.

1962ರಲ್ಲಿ ಈ ಕಾರ್ಖಾನೆ ಮೈಸೂರು ಕಬ್ಬಿಣ ಮತ್ತು ಉಕ್ಕಿನ ಕಂಪನಿ ಎಂಬ ಹೆಸರಿನಲ್ಲಿ ಒಂದು ಸ್ವಾಯತ್ತ ಸಂಸ್ಥೆಯಾಯಿತು. ಇದೇ ಸಮಯಕ್ಕೆ ಮೆದು ಉಕ್ಕಿನ ಉತ್ಪಾದನೆಯನ್ನು ವಿಸ್ತರಿಸಲು ನಿರ್ಧರಿಸಲಾಯಿತು. ಇದಕ್ಕೆ ಬೇಕಾದ ಯಂತ್ರೋಪಕರಣಗಳನ್ನು ಪೂರೈಸಲು ಪಶ್ಚಿಮ ಜರ್ಮನಿಯ ಮೂರು ಸಂಸ್ಥೆಗಳೊಡನೆ ಒಪ್ಪಂದವಾಯಿತು. ಇದರಿಂದ 80,000 ಟನ್ ಮೆದು ಉಕ್ಕನ್ನು ತಯಾರಿಸುವ ಸಾಮರ್ಥ್ಯವನ್ನು ಕಾರ್ಖಾನೆ ಹೊಂದಲು ಸಜ್ಜಾಯಿತು. ಇದನ್ನು ಸಾಧಿಸಲು 20 ಟನ್ ವಿದ್ಯುತ್ ಉಕ್ಕಿನ ಕುಲುಮೆ ಮತ್ತು ಬ್ಲೂಮಿಂಗ್ ಮಿಲ್ ಘಟಕಗಳನ್ನು ಸ್ಥಾಪಿಸಲಾಯಿತು. ಈ ಯೋಜನೆ ಕಾರ್ಯಗತವಾಗುತ್ತಿದ್ದ ಕಾಲದಲ್ಲಿ ಕೇಂದ್ರ ಸರ್ಕಾರ ಬೃಹತ್ ಉಕ್ಕಿನ ಕಾರ್ಖಾನೆಗಳನ್ನು ರೂರ್ಕೆಲ, ಭಿಲೈ ಮತ್ತು ದುರ್ಗಾಪುರದಲ್ಲಿ ಸ್ಥಾಪಿಸಲು ನಿರ್ಧರಿಸಿತು. ಬೃಹತ್ ಕಾರ್ಖಾನೆಗಳೊಡನೆ ಮೆದು ಉಕ್ಕಿನ ಮಾರುಕಟ್ಟೆಯಲ್ಲಿ ಈ ಸಣ್ಣ ಕಾರ್ಖಾನೆ ಲಾಭದಾಯಕವಾಗಿ ಮೆದು ಉಕ್ಕನ್ನು ಸರಬರಾಜು ಮಾಡಲು ಅಶಕ್ತವಾಯಿತು. ಈ ಸಂದರ್ಭ ರಾಜ್ಯದ ಉದ್ಯಮಕ್ಕೆ ವರವಾಗಿ ಪರಿಣಮಿಸಿತು. ಮೈಸೂರು ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯನ್ನು ರಾಷ್ಟ್ರದ ಮಿಶ್ರ ಮತ್ತು ವಿಶೇಷ ಉಕ್ಕಿನ ಬೇಡಿಕೆಯನ್ನು ಪೂರೈಸಲು ಸಹಾಯಕವಾಗುವಂತೆ ಒಂದು ಮಿಶ್ರ ಮತ್ತು ವಿಶೇಷ ಉಕ್ಕಿನ ಘಟಕವನ್ನಾಗಿ ಪರಿವರ್ತಿಸುವ ನಿರ್ಧಾರವಾಯಿತು. ಈ ನಿರ್ಧಾರದಂತೆ ವರ್ಷ ಒಂದಕ್ಕೆ 77,000 ಟನ್ ಮಿಶ್ರ ಮತ್ತು ವಿಶೇಷ ಉಕ್ಕನ್ನು ತಯಾರಿಸುವ ಯೋಜನೆ ಸಿದ್ಧವಾಯಿತು. ಈ ಪರಿವರ್ತನೆಗಾಗಿ ಮತ್ತೆರಡು ವಿದ್ಯುತ್ ಉಕ್ಕಿನ ಕುಲುಮೆ, ಸರಳುಗಳನ್ನು ತಯಾರಿಸುವ ಘಟಕ ಮತ್ತು ಹದ ಮಾಡುವ ಘಟಕ - ಈ ಸ್ಥಾವರಗಳನ್ನು ಸ್ಥಾಪಿಸಲಾಯಿತು. ಈ ಎಲ್ಲ ಘಟಕಗಳಿಂದ 1965 ರಿಂದ ಉತ್ಪಾದನೆ ಪ್ರಾರಂಭವಾಯಿತು. ಮೇಲಿನ ಯೋಜನೆಯಿಂದಾಗಿ ಹೆಚ್ಚಿನ ಬೀಡು ಕಬ್ಬಿಣದ ಆವಶ್ಯಕತೆಯನ್ನು ಪೂರೈಸಲು 1972ರಲ್ಲಿ ಮತ್ತೆರಡು ವಿದ್ಯುತ್ ಬೀಡು ಕಬ್ಬಿಣ ಕುಲುಮೆಗಳು ಆರಂಭವಾದುವು. ಕೆಲವು ಬಗೆಯ ಮಿಶ್ರ ಮತ್ತು ವಿಶೇಷ ಉಕ್ಕನ್ನು ಫೋರ್ಜ್ ಮಾಡಬೇಕಾಗಿರುವುದರಿಂದ ಒಂದು ಫೋರ್ಜ್ ಪ್ಲಾಂಟನ್ನು ಸ್ಥಾಪಿಸಲು ನಿರ್ಧರಿಸಲಾಯಿತು. ಈ ಘಟಕ 1978ರ ಸುಮಾರಿಗೆ ಉತ್ಪಾದನೆಯನ್ನು ಆರಂಭಿಸಿತು. ಇದು ಸ್ಥೂಲವಾಗಿ ನಮ್ಮ ರಾಜ್ಯದಲ್ಲಿನ ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಯ ಬೆಳವಣಿಗೆಯೆಂದೇ ಹೇಳಬಹುದು. ಏಕೆಂದರೆ ಈ ಶತಮಾನದ ಸುಮಾರು 7ನೆಯ ದಶಕದವರೆಗೂ ಮೈಸೂರು ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ (ಈಗ ಇದಕ್ಕೆ ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆ ಎಂದು ನಾಮಕರಣ ಮಾಡಲಾಗಿದೆ, 1976) ಮತ್ತು ರಾಷ್ಟ್ರದಲ್ಲಿನ ಸಾರಿಗೆ ಉದ್ಯಮದ ಸ್ಪ್ರಿಂಗ್ ಸ್ಟೀಲ್ ಆವಶ್ಯಕತೆಗಳನ್ನು ಪೂರೈಸಲು ಮಂಗಳೂರಿನಲ್ಲಿ ಖಾಸಗಿ ಸಂಸ್ಥೆಯ ಒಂದು ಸಣ್ಣ ಸ್ಪ್ರಿಂಗ್ ಕಾರ್ಖಾನೆಯನ್ನು ಬಿಟ್ಟರೆ ರಾಜ್ಯದಲ್ಲಿ ಈ ಬಗೆಯ ಉಕ್ಕನ್ನು ತಯಾರಿಸುವ ಬೇರಾವ ಸಂಸ್ಥೆಗಳಿರಲಿಲ್ಲ.

1970ರ ದಶಕದಲ್ಲಿ ಬಳ್ಳಾರಿ ಜಿಲ್ಲೆಯ ಸಂಡೂರಿನಲ್ಲಿ ಬೀಡು ಕಬ್ಬಿಣ ತಯಾರಿಸುವ ಘಟಕವನ್ನು ಖಾಸಗಿ ಸಂಸ್ಥೆಯೊಂದು ಸ್ಥಾಪಿಸಿತು. ಈಗ ರಾಷ್ಟ್ರದ ಹೆಚ್ಚುವರಿ ಉಕ್ಕಿನ ಬೇಡಿಕೆಯನ್ನು ಪೂರೈಸಲು ಕೇಂದ್ರ ಸರ್ಕಾರ ಮಿನಿ ಸ್ಟೀಲ್ ಪ್ಲಾಂಟ್‌ಗಳನ್ನು ಸ್ಥಾಪಿಸಲು ಖಾಸಗಿ ಸಂಸ್ಥೆಗಳಿಗೆ ಅನುಮತಿಯನ್ನಿತ್ತಿದೆ. ಇದಕ್ಕನುಗುಣವಾಗಿ ಬೆಂಗಳೂರಿನಲ್ಲಿ ಇಂಥ ಎರಡು ಸಂಸ್ಥೆಗಳು ಉಕ್ಕನ್ನು ಉತ್ಪಾದಿಸುತ್ತಿವೆ. ಇದೇ ರೀತಿ ಇನ್ನೂ ಒಂದೆರಡು ಘಟಕಗಳು ನಿರ್ಮಾಣವಾಗುತ್ತಿವೆ. ಈ ಘಟಕಗಳಲ್ಲಿ ಹಳೆಯ ಕಬ್ಬಿಣದ ಚೂರುಗಳನ್ನು ಕರಗಿಸಿ ಎರಕ ಹೊಯ್ದು ಸರಳುಗಳನ್ನಾಗಿ ಪರಿವರ್ತಿಸಲಾಗುತ್ತದೆ. ಕೆಲವು ಸಣ್ಣ ರಿರೋಲಿಂಗ್ ಮಿಲ್‌ಗಳೂ ಸ್ಥಾಪಿಸಲ್ಪಟ್ಟಿವೆ. ರಾಜ್ಯದ ಕಬ್ಬಿಣ ಉದ್ಯಮದ ಇತಿಹಾಸದಲ್ಲಿ ಕುದರೆಮುಖ (ನೋಡಿ) ಕಬ್ಬಿಣ ಮತ್ತು ಉಕ್ಕು ಉತ್ಪಾದನೆ ಯೋಜನೆ ಮಹತ್ತರವಾದುದು. 1970ರ ದಶಕದಲ್ಲಿ ವಿಶೇಷವಾಗಿ ರಫ್ತು ಉದ್ದೇಶದಿಂದ ಈ ಯೋಜನೆಯನ್ನು ಕೈಗೊಳ್ಳಲಾಯಿತು. ಇದು ಏಷ್ಯಾದಲ್ಲೇ ಅತಿ ದೊಡ್ಡ ಯೋಜನೆಯೆಂದು ಪ್ರಸಿದ್ಧವಾಗಿದೆ. (ಕೆ.ಬಿ.ಜಿ.)

**ಕಬ್ಬು :** ಕರ್ನಾಟಕದಲ್ಲಿ ಕಬ್ಬನ್ನು ಎಲ್ಲ ಜಿಲ್ಲೆಗಳಲ್ಲೂ ಬೆಳೆಸಲಾಗುತ್ತಿದೆ. ಬೆಳೆಯು ಪ್ರದೇಶದ ವಿಸ್ತೀರ್ಣ ಜಿಲ್ಲೆಯಲ್ಲಿನ ವಾತಾವರಣ ಮತ್ತು ಅನುಕೂಲತೆಗಳನ್ನನುಸರಿಸುತ್ತದೆ. ರಾಜ್ಯದಲ್ಲಿ ಕಬ್ಬಿನ ಬೆಳೆಸು ನೀರಿನ ಸೌಲಭ್ಯವಿದ್ದೆಡೆ ಮಾತ್ರ ಸಾಧ್ಯ. ವಾಯುಗುಣ ಮತ್ತು ಮಣ್ಣಿನ ವೈವಿಧ್ಯ ಹೆಚ್ಚಾಗಿರುವುದರಿಂದ ಕೆಲವೆಡೆಗಳಲ್ಲಿ ಕಬ್ಬು ಹೆಚ್ಚಾಗಿ ಬೆಳೆಸಲಾಗುವುದಿಲ್ಲ. ಮಂಡ್ಯ, ರಾಯಚೂರು, ಬಳ್ಳಾರಿ, ಬೆಂಗಳೂರು ಗ್ರಾಮಾಂತರ, ದಾವಣಗೆರೆ, ಬಿಜಾಪುರ, ಬಾಗಲಕೋಟೆ, ಧಾರವಾಡ, ಉತ್ತರ ಕನ್ನಡ, ಕೊಪ್ಪಳ, ಚಿಕ್ಕಮಗಳೂರು, ಹಾಸನ, ಚಾಮರಾಜನಗರ, ಬೆಳಗಾಂವಿ, ಬೀದರ್, ಶಿವಮೊಗ್ಗ, ಕೋಲಾರ, ಮತ್ತು ದಕ್ಷಿಣ ಕನ್ನಡ ಉಡುಪಿ ಜಿಲ್ಲೆಗಳಲ್ಲಿ ಕಬ್ಬಿನ ಬೆಳೆಸು ಹೆಚ್ಚು. ಬೆಳೆಗಾಂವಿ ಜಿಲ್ಲೆ ವಿಸ್ತೀಣದಲ್ಲಿ ಸುಮಾರು ಸೇ.22 ಭಾಗ ಹೊಂದಿ ಪ್ರಥಮ ಸ್ಥಾನವನ್ನೂ ಬಳ್ಳಾರಿ ಮತ್ತು ಮಂಡ್ಯ ದ್ವಿತೀಯ ಮತ್ತು ತೃತೀಯ ಸ್ಥಾನಗಳನ್ನೂ ಗಳಿಸಿವೆ. ಕೊಡಗು ಜಿಲ್ಲೆಯ ಕಬ್ಬು ಬೆಳೆಯುವ ಪ್ರದೇಶ ಅತಿ ಕಡಿಮೆ.

ಈಗ ಸು.338761ಹೇ.ಗಳಲ್ಲಿ 34,770,919 ಟನ್ ಕಬ್ಬು ಬೆಳೆಯಲಾಗುತ್ತಿದೆ. ಕರ್ನಾಟಕದ ಎಕರೆವಾರು ಇಳುವರಿ ಭಾರತದಲ್ಲೇ ಅತ್ಯಧಿಕವಾಗಿದ್ದು ಸುಮಾರು 33 ರಿಂದ 36 ಟನ್ನುಗಳಷ್ಟಿದೆ. ಆದರೆ ಸಕ್ಕರೆ ಇಳುವರಿಯಲ್ಲಿ ಮಹಾರಾಷ್ಟ್ರ ಪ್ರಥಮ ಸ್ಥಾನಗಳಿಸಿ, ಕರ್ನಾಟಕಕ್ಕೆ ದ್ವಿತೀಯ ಸ್ಥಾನ ದೊರೆತಿದೆ. ಕರ್ನಾಟಕದಲ್ಲಿ ಒಟ್ಟು 35 ಕಾರ್ಖಾನೆಗಳಿವೆ.

ಕರ್ನಾಟಕದಲ್ಲಿ ಕಬ್ಬನ್ನು ಮೂರು ಗಿಣ್ಣುಗಳಿರುವ ಕಬ್ಬಿನ ಜಿಲ್ಲೆಯ ತುಂಡುಗಳನ್ನು ಕುರಿಕೆ ನೆಡುವುದರಿಂದ ಬೆಳೆಸಲಾಗುತ್ತಿದೆ. ಇದಕ್ಕೆ ಬಿತ್ತನೆ ಎಂದು ಹೆಸರು. ಕಬ್ಬಿಗೆ ಬೀಜವೂ ಇದೆ. ನವೆಂಬರ್-ಜನವರಿ ವೇಳೆಯಲ್ಲಿ ಆಕರ್ಷಕ ಹೂ ಗೊಂಚಲು ಹೊರಬೀಳುತ್ತದೆ. ಇದನ್ನು ಸೂಲಂಗಿ ಎಂದು ಕರೆಯುತ್ತಾರೆ. ಇದರಲ್ಲಿ ಸೂಕ್ಷ್ಮಗಾತ್ರದ ಬೀಜ ಉತ್ಪನ್ನವಾಗುತ್ತದೆ. ಈ ಬೀಜವನ್ನು ನೆಟ್ಟು, ಸಸಿ ಉತ್ಪನ್ನಮಾಡಿ ನೆಡಬಹುದು. ಆದರೆ ಅದರಲ್ಲಿ ವೈವಿಧ್ಯ ಹೆಚ್ಚು. ಪ್ರತಿ ಸಸಿಯೂ ಬೇರೆ ರೀತಿಯಾಗಬಹುದು. ಯಾವುದೂ ತಾಯಿಯನ್ನು ಹೋಲದಿರಬಹುದು. ಆದ್ದರಿಂದ ಹೊಸ ತಳಿಗಳ ಉತ್ಪಾದನೆಯಲ್ಲಿ ಮಾತ್ರ ಈ ಕ್ರಮವನ್ನನುಸರಿಸಿ ಸಾಮಾನ್ಯ ಬೆಳೆಯನ್ನು ನಿರ್ಲಿಂಗ ರೀತಿಯಲ್ಲಿ ಕಬ್ಬಿನ ತುಂಡನ್ನು ನೆಟ್ಟು ಬೆಳೆಸಲಾಗುತ್ತದೆ. ಇದರಿಂದ ಜಾತಿಯ ವ್ಯತ್ಯಾಸವಿಲ್ಲದೆ ಗೊತ್ತಾದ ನಿರ್ದಿಷ್ಟ ಮಿತಿಯಲ್ಲೇ ಬೆಳೆ ಕೈಸೇರುತ್ತದೆ.

ಕಬ್ಬನ್ನು ವರ್ಷದ ಯಾವ ಕಾಲದಲ್ಲಾದರೂ ನೆಟ್ಟು ಬೆಳೆಸಬಹುದು. ಚಳಿಗಾಲದಲ್ಲಿ ಮಾತ್ರ ಮೊಳಕೆ ಹೊರಡುವುದು ನಿಧಾನ. ಇದಕ್ಕೆ ಫಲವತ್ತಾದ ಭೂಮಿ ಉತ್ತಮ. ಆಳವಾಗಿ ಉತ್ತು, ಹದಮಾಡಿ, 3-4 ಅಡಿಗಳಿಗೊಂದರಂತೆ ಸಾಲು ತೆಗೆದು ಸಿದ್ಧಪಡಿಸಿದ ಅನಂತರ ನೀರು ಬಸಿಯುವ ಕಡಗುಗಳನ್ನೂ ನೀರು ಕಟ್ಟಲು ಅನುಕೂಲವಾಗುವಂತೆ ಅಲ್ಲಲ್ಲಿ ನೀರು ಕಾಲುವೆಗಳನ್ನು ತೆಗೆದು ಕಾಲುವೆಗಳಲ್ಲಿ ನೀರು ಹರಿಸಿ, ಬಿತ್ತನೆಗಳನ್ನೂ ಒತ್ತಾಗಿ ಹರಡಿ, ಮಣ್ಣಿನೊಳಗೆ ಪೂರ್ಣವಾಗಿ ಮುಚ್ಚಿಕೊಳ್ಳುವಂತೆ ಹೂತು ನಾಟಿ ಮಾಡುವುದುಂಟು. ಕೆಲವೆಡೆ ಪೂರ್ಣ ಕಬ್ಬನ್ನೇ ನೆಡುವುದೂ ಇತರೆಡೆ 3"-4" ಅಗಲದ ಪಾತಿಮಾಡಿ, ಮೂರು ಅಡಿ ಅಂತರದಲ್ಲಿ ಗುಳಿ ಮಾಡಿ ಅಲ್ಲಿ ಬಿತ್ತನೆ ನೆಡುವುದು ಮೊದಲಾದವು ಸ್ಥಳಕ್ಕೆ ತಕ್ಕ ಅನುಕೂಲ ವಿಧಾನಗಳು ರೂಢಿಯಲ್ಲಿವೆ. ಕಬ್ಬು ಪೂರ್ಣ ಬೆಳೆಯಲು ಸಾಧಾರಣವಾಗಿ 12-14 ತಿಂಗಳ ಅವಧಿ ಅಗತ್ಯ.

ಕರ್ನಾಟಕ ರಾಜ್ಯದ ವಿವಿಧ ಜಿಲ್ಲೆಗಳಲ್ಲಿನ ಕಬ್ಬಿನ ಬೆಳೆಯ ವಿಸ್ತೀರ್ಣ ಮತ್ತು ಉತ್ಪತ್ತಿ (1998-99)

| ಕ್ರ.ಸಂ. | ಜಿಲ್ಲೆಯ ಹೆಸರು | ವಿಸ್ತೀರ್ಣ ಹೆಕ್ಟೇರುಗಳಲ್ಲಿ | ಅಳತೆ ಮೆ.ಟನ್ನುಗಳಲ್ಲಿ |
|---|---|---|---|
| 1 | ಬೆಂಗಳೂರು | 67 | 6,874 |
| 2 | ಬೆಂಗಳೂರು ಗ್ರಾ. | 1,018 | 1,04,447 |
| 3 | ಚಿತ್ರದುರ್ಗ | 772 | 54,272 |
| 4 | ದಾವಣಗೆರೆ | 12,519 | 8,80,086 |
| 5 | ಕೋಲಾರ | 3,803 | 2,67,351 |

| | | | |
|---|---|---|---|
| 6 | ಶಿವಮೊಗ್ಗ | 11,233 | 1,248,548 |
| 7 | ತುಮಕೂರು | 1,017 | 133,329 |
| | **ಬೆಂಗಳೂರು ವಿಭಾಗ** | **30,429** | **2,694,907** |
| 8 | ಬೆಳಗಾಂವಿ | 1,24,020 | 1,23,70,995 |
| 9 | ಬಿಜಾಪುರ | 13,456 | 15,72,234 |
| 10 | ಬಾಗಲಕೋಟೆ | 49,449 | 57,78,116 |
| 11 | ಧಾರವಾಡ | 3,628 | 3,10,194 |
| 12 | ಗದಗ | 77 | 7,900 |
| 13 | ಹಾವೇರಿ | 6,078 | 5,19,669 |
| 14 | ಉತ್ತರ ಕನ್ನಡ | 1,775 | 1,97,291 |
| | **ಬೆಳಗಾಂವಿ ವಿಭಾಗ** | **198,483** | **20,756,499** |
| 15 | ಬಳ್ಳಾರಿ | 7,834 | 6,54,922 |
| 16 | ಬೀದರ್ | 24,518 | 17,70,200 |
| 17 | ಗುಲ್ಬರ್ಗ | 8,658 | 8,22,510 |
| 18 | ರಾಯಚೂರು | 134 | 13,748 |
| 19 | ಕೊಪ್ಪಳ | 1,956 | 2,00,686 |
| | **ಗುಲ್ಬರ್ಗ ವಿಭಾಗ** | **43,100** | **3,462,066** |
| 20 | ಚಿಕ್ಕಮಗಳೂರು | 1,560 | 1,24,488 |
| 21 | ದಕ್ಷಿಣ ಕನ್ನಡ | 565 | 45,087 |
| 22 | ಉಡುಪಿ | 1,729 | 1,37,974 |
| 23 | ಹಾಸನ | 5,327 | 4,70,640 |
| 24 | ಕೊಡಗು | 7 | 718 |
| 25 | ಮಂಡ್ಯ | 30,630 | 40,15,593 |
| 26 | ಮೈಸೂರು | 9,441 | 7,53,392 |
| 27 | ಚಾಮರಾಜನಗರ | 17,490 | 23,09,555 |
| | **ಮೈಸೂರು ವಿಭಾಗ** | **66,749** | **78,57,447** |
| | **ರಾಜ್ಯ** | **3,38,761** | **3,47,70,919** |

ಆಧಾರ: ಕರ್ನಾಟಕ ಅಂಕಿಅಂಶಗಳ ನೋಟ 2000-2001

ಕಬ್ಬಿನಲ್ಲಿ ಕಾರ್ಬೋ ಹೈಡ್ರೈಟ್ ಶೇ.22.5, ನೀರು ಶೇ.77.0, ಪ್ರೋಟೀನ್ ಶೇ.0.2 ಕಾಣುತ್ತಿದೆ. 100ಗ್ರಾಂ ತಾಜಾ ಕಬ್ಬಿನ ಹಾಲಿನಲ್ಲಿ ಕ್ಯಾಲ್ಸಿಯಂ 7.4ಮಿ.ಗ್ರಾಂ, ರಂಜಕ 0.12ಮಿ.ಗ್ರಾಂ, ಕಬ್ಬಿಣ 6.4ಮಿ.ಗ್ರಾಂ, ಪೊಟ್ಯಾಸಿಯಂ 3.6ಮಿ.ಗ್ರಾಂ ಇದೆ. 100ಗ್ರಾಂ. ಕಬ್ಬಿನ ರಸದಲ್ಲಿ 210 ಕ್ಯಾಲರಿ ಶಕ್ತಿ ದೊರೆಯುವುದು. ಹೃದಯದ ತೊಂದರೆ ಇರುವವರು ಕಬ್ಬಿನ ಹಾಲನ್ನು ನಿಯಮಿತವಾಗಿ ಸೇವಿಸುವುದರಿಂದ ಹೃದಯ ಉತ್ತಮವಾಗಿ ಕಾರ್ಯನಿರ್ವಹಿಸುವುದು. ಹಾಲುಣಿಸುವ ತಾಯಂದಿರು ಕಬ್ಬಿನ ಹಾಲು ಸೇವಿಸುವುದರಿಂದ ಎದೆಹಾಲು ಹೆಚ್ಚುವುದು. ಇದು ಪಿತ್ತ ಶಮನಕಾರಿಯೂ ಹೌದು. ಕಾಮಾಲೆ ಆದವರಿಗೆ ಕಬ್ಬಿನ ಹಾಲು ರಾಮಬಾಣ. ಪ್ರತಿದಿನ ಸೇವಿಸುವುದರಿಂದ ಯಕೃತ್ತಿನ ಕಾರ್ಯಕ್ಷಮತೆ ಹೆಚ್ಚುವುದು. ಮೂತ್ರ ಕೋಶದಲ್ಲಿ ಹರಳು ಉಳ್ಳವರಿಗೂ ಕಬ್ಬಿನ ಹಾಲು ಸೇವನೆ ಪ್ರಯೋಜನ ಕಾರಿ.

ಭಾರತದಲ್ಲಿ ಕಬ್ಬಿಗೆ ಉಪದ್ರವಕಾರಿಗಳಾದ ಕೀಟಗಳಲ್ಲಿ ಕಾಂಡ ಕೊರೆಯುವ ಹುಳ, ಪೈರಿಲ ಮತ್ತು ಸುಳಿ ಅಥವಾ ತುದಿ ಕೊರೆಯುವ ಹುಳು ಮುಖ್ಯವಾದುವು. ಕಾಂಡ ಕೊರೆಯುವ ಕೀಟಗಳು ಹಲವಾರು. ಅವು ಮೃದುಕಾಂಡ ಕೊರೆದು ತಿಂದು ಸುಳಿ ಒಣಗಿಸುತ್ತವೆ. ಒಂದು ಸುಳಿ ಸತ್ತಲ್ಲಿ ಒಂದು ಕಬ್ಬು ಹೋದಂತೆ. ಸುಳಿ ಕೊರೆಯುವ ಹುಳುಗಳ ಹಾವಳಿಯಿಂದ ತುದಿಯಲ್ಲಿನ ಎಲೆಗಳು ನಾಶವಾಗಿ, ಮಧ್ಯೆ ಎಲೆಗಳಲ್ಲಿ ತೂತುಗಳು ಮಾಡಿ, ಅಂಚೆಲ್ಲ ಕಚ್ಚುಕಚ್ಚಾಗುತ್ತದೆ. ಕಬ್ಬಿನ ತುದಿಯಲ್ಲಿನ ಮೊಗ್ಗುಗಳು ಬೆಳೆದು ತುದಿ ಕುಚ್ಚು ಕುಚ್ಚಾಗುತ್ತದೆ. ಪೈರಿಲ ಕೀಟಗಳು ಮರಿಗಳ ಸಮೇತ ಎಲೆಗಳ ತಳಭಾಗದಲ್ಲಿ ತಂಗಿದ್ದು, ರಸಹೀರಿ ಎಲೆ ಹಳದಿಯಾಗಿ ಸುಕ್ಕುಗಟ್ಟುವಂತೆ ಮಾಡುತ್ತವೆ. ಅವುಗಳ ಮೈಯಿಂದ ಸಿಹಿ ಅಂಟು ರಸ ಜಿನುಗುವುದರಿಂದ ಅಲ್ಲೆಲ್ಲಾ ಕಪ್ಪು ಬೂಷ್ಟು ಬೆಳೆದು ಹರಡುತ್ತದೆ. ಅಲ್ಲದೆ ಆ ಸಿಹಿ ರಸ ಹೀರಲು ಸಹಸ್ರಾರು ಇರುವೆಗಳು ಸೇರಿ, ಮರಿಗಳನ್ನು ಎಲೆಯಿಂದ ಎಲೆಗೆ ವರ್ಗಾಯಿಸಿ ಹರಡುತ್ತವೆ. ಕಬ್ಬಿಗೆ ಗೆದ್ದಲಿನ ಕಾಟವೂ ಹೆಚ್ಚು. ಅಲ್ಲದೆ ಇಲಿ, ನರಿ, ಆನೆ, ಹಂದಿ ಮುಂತಾದುವುಗಳಿಂದಲೂ ಇದಕ್ಕೆ ಹಾನಿಯುಂಟು.

ಕಬ್ಬಿಗೆ ಅನೇಕ ರೋಗಗಳೂ ತಗಲುತ್ತವೆ. ತುಕ್ಕುರೋಗ, ಕಾಡಿಗೆ ರೋಗ, ಕೆಂಪುಕೊಳೆ ರೋಗ, ಬಾಡುವ ರೋಗ, ಕಂದುಚುಕ್ಕೆ ರೋಗ, ಕಪ್ಪುಕೊಳೆ ರೋಗ ಇವುಗಳಲ್ಲಿ ಮುಖ್ಯವಾದವು. ತುಕ್ಕು ರೋಗದ ಮಚ್ಚೆಗಳು ಎಲೆಗಳ ಎರಡೂ ಕಡೆಯೂ ಹರಡಿ ಎದ್ದು ಕಾಣುತ್ತವೆ. ಕಾಡಿಗೆ ರೋಗದ ಕಬ್ಬಿನ ತುದಿ ನೀಳ ಕಪ್ಪು ಚಾಟಿಯಂತೆ ಬೆಳೆದು, ಅದನ್ನು ಆವರಿಸಿರುವ ತೆಳುಪೊರೆ ಮುಂದೆ ಸೀಳಿ ಅತಿ ಸೂಕ್ಷ್ಮಗಾತ್ರದ ಪುಡಿ ಬೀಜಾಣುಗಳು ಹೊರಬೀಳುತ್ತವೆ. ಕೆಂಪು ಕೊಳೆ ರೋಗದಿಂದ ತುದಿಯಲ್ಲಿನ 3 ಅಥವಾ 4ನೆಯ ಎಲೆ ಇದ್ದಕ್ಕಿದ್ದಂತೆ ಮಾಸಲು ಹಳದಿ ಬಣ್ಣಕ್ಕೆ ತಿರುಗಿ ಬಾಡುತ್ತದೆ. ಕಬ್ಬನ್ನು ಸೀಳಿದಲ್ಲಿ ತಳಭಾಗದಲ್ಲಿ ಕೆಂಪು ಬಣ್ಣವಿದ್ದು ಕೊಳೆತ ವಾಸನೆ ಬರುತ್ತದೆ. ಬಾಡುವ ರೋಗದಲ್ಲೂ ಕಬ್ಬಿನ ಮಧ್ಯಭಾಗವೆಲ್ಲ ಪೂರ್ಣ ಕೆಂಪಾಗಿ ಟೊಳ್ಳಾಗುತ್ತದೆ. ಕಂದು ಚುಕ್ಕೆ ರೋಗ ಎಲೆಯ ಅಲಗುಗಳಲ್ಲಿ ಮಾತ್ರ ಕಂಡುಬರುತ್ತದೆ. ಕೆಂಪು ನೀಳಪಟ್ಟೆಗಳು ಅಗಲವಾಗಿ ಬೆಳೆದು, ಮಧ್ಯ ಭಾಗ ಕಂದು ಬಣ್ಣವಾಗಿ ಸುತ್ತಲೂ ಹಳದಿಯಾಗುತ್ತದೆ. ಕಂದು ಭಾಗ ಪೂರ್ಣ ಒಣಗುತ್ತದೆ. ಕಪ್ಪು ಕೊಳೆರೋಗ ಗಾಯದ ಮೂಲಕ ಹರಡುತ್ತದೆ. ಗೋಂದು ರೋಗ ಮತ್ತು ಕೆಂಪು ಪಟ್ಟೆ ರೋಗ ಇತರ ಸಾಮಾನ್ಯ ರೋಗಗಳು. ಈಗ ನಂಜುರೋಗವೂ ಪ್ರಾರಂಭವಾಗಿದೆ. ಎಲೆಗಳ ಮೇಲೆಲ್ಲಾ ತಿಳಿಹಸಿರು ಅಥವಾ ಹಳದಿ ಮಚ್ಚೆಗಳಿರುತ್ತವೆ. ರೋಗ ಕಬ್ಬು ತೆಳುವಾಗಿ, ಗಿಡ್ಡವಾಗಿ ನುಲಿದುಕೊಂಡಂತಿರುತ್ತದೆ. ತುದಿಯ ಬೆಳವಣಿಗೆ ನಿಂತು ಮೊಗ್ಗುಗಳು ಅರಳಿ, ಅಡ್ಡ ಬೆಳೆಯುತ್ತದೆ.

ಕರ್ನಾಟಕದಲ್ಲಿ ಕಬ್ಬಿನಿಂದ ಬೆಲ್ಲ ತಯಾರಿಸುವುದು ಸಕ್ಕರೆಯಂತೆಯೇ ದೊಡ್ಡ ಉದ್ಯಮ. ಬೆಲ್ಲ ಬೆಳೆಯುಳ್ಳ ಖನಿಜಪದಾರ್ಥ. ಇದು ಜೀವಸತ್ವ ಪೌಷ್ಟಿಕಾಂಶಗಳನ್ನು ಹೊಂದಿದೆ. ಕಾಕಂಬಿ, ಕಲ್ಲುಸಕ್ಕರೆ ಮಾಡುವುದೂ ಉಂಟು. ಬೆವರು, ಕೆಮ್ಮು, ಬಾಯಿಹುಣ್ಣು, ನೀರಡಿಕೆಯಲ್ಲಿ ಕೆಂಪು ಕಲ್ಲುಸಕ್ಕರೆ, ಕಬ್ಬಿನ ಹಾಲು, ಯಾಲಕ್ಕಿ ಸೇರಿಸಿ ಸೇವಿಸಬೇಕು. ತರಗಿನಿಂದ ಉತ್ತಮ ಗೊಬ್ಬರವನ್ನೂ ಸಿಪ್ಪೆಯಿಂದ ಕಾಗದ ಮತ್ತು ಮೇಣವನ್ನೂ ಕಾಕಂಬಿಯಿಂದ ಮದ್ಯವನ್ನೂ ಉಳಿಕೆಗಳಿಂದ ಮೇವನ್ನೂ ತಯಾರಿಸಿ ಬಳಸಲಾಗುತ್ತಿದೆ. (ಜಿ.ವಿ.ಬಿ.ಎನ್.)

**ಕಮಡೋಳಿ, ಅಮೀನ್ ಸಾಹೇಬ** : 1900-95. ಚಿತ್ರ ಕಲಾವಿದ. ಇಂದಿನ ಗದಗ ಜಿಲ್ಲೆ ಲಕ್ಷ್ಮೇಶ್ವರದಲ್ಲಿ 1900ರಲ್ಲಿ ಜನಿಸಿದರು. ತಂದೆ ತಾಯಿಯನ್ನು ಕಳೆದುಕೊಂಡ ಬಳಿಕ ಕಲಾಭ್ಯಾಸಕ್ಕಾಗಿ ಮುಂಬೈಗೆ ತೆರಳಿದರು (1918). ಇದಕ್ಕೆ ಅಣ್ಣನ ಪ್ರೋತ್ಸಾಹವೂ ದೊರೆಯಿತು. ಮುಂಬೈಯಲ್ಲಿ ಜೆ.ಜೆ.ಕಲಾ ಶಾಲೆಯನ್ನು ಸೇರಿದರು. ಚಿತ್ರಕಲೆಯ ಅಭ್ಯಾಸ ನಡೆಸುತ್ತಿದ್ದಾಗ ಭಿತ್ತಿರಚನಾ ಕಲೆಯನ್ನೂ ಅಧ್ಯಯನ ಮಾಡಿದರು. ಅಲ್ಲಿಯೇ ಫೆಲೋ ಆಗಿ ನೇಮಕಗೊಂಡರು; ಹತ್ತು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಇವರು ರಚಿಸಿದ ಸ್ಕೆಚ್ ಇನ್ ಲ ಗಾರ್ಡನ್, ತಾಜ್ ಆಟ್ ಆಗ್ರಾ, ಜುಮ್ಮಾಮಸೀದಿ, ಬಾಂಬ್ ಪ್ರುವ್ ಮಲ್‌ಬಾರ್ ಹಿಲ್ಸ್ ಈ - ಕೃತಿಗಳು ಚಿತ್ರಕಲಾಪ್ರದರ್ಶನಗಳಲ್ಲಿ ಜನಮೆಚ್ಚುಗೆ ಗಳಿಸಿದುವು. ಇವರ ಪ್ರೀತಿಯ ಕ್ಷೇತ್ರ ಜಲವರ್ಣ ಮಾಧ್ಯಮ. ತಮ್ಮ ಕುಂಚದ ಮೂಲಕ ಈ ಮಾಧ್ಯಮದಲ್ಲಿ ಅನೇಕ ಅಪೂರ್ವ ನಿಸರ್ಗ ಚಿತ್ರಗಳನ್ನು ಸೆರೆಹಿಡಿದಿದ್ದಾರೆ.



ಹಳ್ಳಿಯ ಸಂತೆ, ಟಿಪ್ಪು ಸಮಾಧಿ, ರಸ್ತೆ ಬದಿಯ ಸರ್ಕಸ್ ಮೊದಲಾದ ತೈಲವರ್ಣದ ಕೃತಿಗಳು ಇವರ ಕಲಾ ಕೌಶಲ್ಯಕ್ಕೆ ಸಾಕ್ಷಿಯಾಗಿವೆ. ಇವರು ರಚಿಸಿದ ರಾವಣ-ಜಟಾಯು ಕೃತಿ ರವಿವರ್ಮನ ಕೃತಿಗಿಂತ ಭಿನ್ನವಾಗಿದೆ. ಇವರೊಬ್ಬ ಛಾಯಾ ಚಿತ್ರಕಾರರೂ ಆಗಿದ್ದರು. ಧಾರವಾಡದ ಶಿಕ್ಷಕರ ತರಬೇತಿ ಕೇಂದ್ರದಲ್ಲಿ ಕಲೆಯನ್ನು ಕಲಿಸುತ್ತಿದ್ದರು. ಆ ಸಂದರ್ಭದಲ್ಲಿ ಮಾಡಲಿಂಗ್ ತರಬೇತಿಯನ್ನು ತೆಗೆದುಕೊಳ್ಳುತ್ತಿದ್ದರು. ಇವರ ಕೃತಿಗಳು ಮುಂಬಯಿಯ ಆರ್ಟ್ ಸೊಸೈಟಿ, ಆಲ್ ಇಂಡಿಯ ಫೈನ್ ಆರ್ಟ್ ಸೊಸೈಟಿ, ಸಿಮ್ಲಾ ಫೈನ್ ಆರ್ಟ್ ಸೊಸೈಟಿ ಹಾಗೂ ಮೈಸೂರು ದಸರಾ ಪ್ರದರ್ಶನಗಳಲ್ಲಿ ಪ್ರದರ್ಶನಗೊಂಡಿದ್ದವು. ಇವರು ಅನೇಕ ಗೌರವ-ಪುರಸ್ಕಾರಗಳಿಗೆ ಪಾತ್ರರಾಗಿದ್ದರು. *

**ಕಮಲಭವ :** ಸು.1235. ಜೈನಕವಿ. ಶಾಂತೀಶ್ವರಪುರಾಣ ಎಂಬ ಚಂಪೂಕಾವ್ಯದ ಕರ್ತೃ. ಕೊಂಡಕುಂದಾನ್ವಯದ ದೇಶಿಯಗಣ ಪುಸ್ತಕಗುಚ್ಛದ ಮಾಘಣಂದಿ ಪಂಡಿತ ಮುನೀಶ್ವರ ಈತನ ಗುರು. ಕವಿ ಯಾದವ ಸಿಂಘಣನ ಕಾಲದಲ್ಲಿ (ಸು.1200-47) ಇದ್ದನೆಂದು ಇವನ ಸಿಂಹಣೋರ್ವೀಶ್ವರ ವಿನಮನ್ಮಸ್ತಕನಾದಂ ಎಂಬ ಉಕ್ತಿಯಿಂದ ಊಹಿಸಬಹುದಾಗಿದೆ. ಪೂರ್ವಕವಿಗಳಲ್ಲಿ ಪಂಪ, ಪೊನ್ನ, ರನ್ನ, ನಾಗಚಂದ್ರ, ನೇಮಿಚಂದ್ರ, ಬಂಧುವರ್ಮ, ಜನ್ನ ಇವರನ್ನು ಸ್ತುತಿಸಿದ್ದಾನೆ. ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ (ಸು.1240) ಇವನ ಗ್ರಂಥದಿಂದ ಪದ್ಯಗಳು ಉದ್ಧೃತವಾಗಿರುವುದರಿಂದ, ಇವನಿಗೂ ಮುಂಚಿನವನೆಂದು ಊಹಿಸಬಹುದಾಗಿದೆ. ಕುಸುಮಾವಳಿ ಎಂಬ ಶೃಂಗಾರಕಾವ್ಯವನ್ನು ಬರೆದ ದೇವಕವಿಯ 'ಕವಿಕಮಳಜ ಸೂಕ್ತಿಸುಧಾರ್ಣವ ಸೋಮ' ಎಂಬ ಉಕ್ತಿಯಿಂದ ದೇವಕವಿಯಿಂದ ಈತ ಪ್ರೋತ್ಸಾಹಪಡೆದವನೆಂದು ಊಹಿಸಲಾಗಿದೆ. ಈತನಿಗೆ ಕವಿಕಂಜಗರ್ಭ, ಸೂಕ್ತಿ ಸಂದರ್ಭಗರ್ಭ ಎಂಬ ಬಿರುದುಗಳು ಇದ್ದಂತೆ ಕಾಣುತ್ತದೆ.

ಶಾಂತೀಶ್ವರಪುರಾಣ ಹದಿನಾರು ಆಶ್ವಾಸಗಳುಳ್ಳ ಕಾವ್ಯ. 16ನೆಯ ತೀರ್ಥಂಕರ ಶಾಂತಿನಾಥಸ್ವಾಮಿಯ ಚರಿತೆ ಈ ಪುರಾಣಕಾವ್ಯದ ವಸ್ತು. ಇದು ಪಂಪ ಪೊನ್ನ ರನ್ನರ ಜೈನಪುರಾಣಗಳ ಮಾದರಿಯಲ್ಲಿದೆ. ಕಾವ್ಯಾರಂಭದಲ್ಲಿ ತೀರ್ಥಂಕರರ ಸ್ತುತಿಯಿದೆ. ಅನಂತರ ಸಿದ್ಧರು, ಕೇವಲಿಗಳು, ಅನುಬದ್ಧ ಕೇವಲಿಗಳು, ಶ್ರುತ ಕೇವಲಿಗಳು, ಗಣಧರರು, ಯಕ್ಷಯಕ್ಷಿಯರು, ಸರಸ್ವತಿ, ಜೈನಗುರು ಪರಂಪರೆ-ಇವುಗಳ ಸ್ತುತಿಯಿದೆ.

ಪಂಪ ಪೊನ್ನಾದಿ ಪೂರ್ವಕವಿಗಳಿಂದ ಈತ ಸಾಕಷ್ಟು ಪ್ರಭಾವಿತನಾಗಿದ್ದರೂ ಇವನ ಸ್ವಪ್ರತಿಭೆ, ಕಲ್ಪನಾ ವಿಲಾಸ, ಭಾವ ಶ್ರೀಮಂತಿಕೆ, ನಿರೂಪಣಾ ವೈಖರಿ ಕುಂಠಿತವಾಗಿಲ್ಲ. ಇವನ ಶೈಲಿಯಲ್ಲಿ ಲಾಲಿತ್ಯ, ಸರಳತೆ, ನಿರರ್ಗಳತೆಗಳಿವೆ. ವರ್ಣನೆಗಳು ಪಾಂಡಿತ್ಯಪೂರ್ಣವಾಗಿವೆ. ಶಾಂತೀಶ್ವರಪುರಾಣವನ್ನು ರಚಿಸಿದ ಕನ್ನಡ ಕವಿಗಳಲ್ಲಿ ಈತ ಎರಡನೆಯವನಾದ್ದರಿಂದ ಈತನ ಕೃತಿಗೆ ಪ್ರಾಶಸ್ತ್ಯದೊರಕಿದೆ. (ಕೆ.ಎಚ್.)

**ಕಮಲಾ, ಹಂಪನ :** 1935-. ಕನ್ನಡ ಲೇಖಕಿ. ಬೆಂಗಳೂರು ಜಿಲ್ಲೆ ದೇವನಹಳ್ಳಿಯಲ್ಲಿ 1935 ಅಕ್ಟೋಬರ್ 28ರಂದು ಜನಿಸಿದರು. ತಂದೆ ಸಿ.ರಂಗಧಾಮ ನಾಯಕ್, ತಾಯಿ ಲಕ್ಷ್ಮಮ್ಮ. ಮೈಸೂರು ವಿಶ್ವವಿದ್ಯಾನಿಲಯದಿಂದ ಬಿ.ಎ.ಆನರ್ಸ್ (ಕನ್ನಡ) ಮತ್ತು ಎಂ.ಎ.ಪದವಿ (ಕನ್ನಡ) ಪಡೆದರು. ತುರಂಗ ಭಾರತವನ್ನು ಕುರಿತ ಅಧ್ಯಯನಕ್ಕೆ ಪಿಎಚ್.ಡಿ.ಪದವಿ ಗಳಿಸಿದರು. 1961ರಲ್ಲಿ ತಮ್ಮ ಸಹಪಾಠಿ ಹಂಪ ನಾಗರಾಜಯ್ಯ (ಹಂಪನಾ) ಅವರನ್ನು ವಿವಾಹವಾದರು. ಬೆಂಗಳೂರು ಮತ್ತು ಮೈಸೂರಿನ ಮಹಾರಾಣಿ ಕಾಲೇಜು ಹಾಗೂ ಬೆಂಗಳೂರು ಸರ್ಕಾರಿ ವಿಜ್ಞಾನ ಕಾಲೇಜುಗಳಲ್ಲಿ ಕನ್ನಡ ಅಧ್ಯಾಪಕರಾಗಿ, ರೀಡರ್ ಆಗಿ, ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು (1959-96). ಅನಂತರ ಬೆಂಗಳೂರಿನ ವಿಜಯ ನಗರದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸಿದರು. ಸರ್ಕಾರಿ ಸೇವೆಯಿಂದ ನಿವೃತ್ತರಾದ ಅನಂತರ ಮೈಸೂರು ವಿಶ್ವವಿದ್ಯಾನಿಲಯದ ಜೈನಶಾಸ್ತ್ರ ಪ್ರಾಕೃತ ಅಧ್ಯಯನ ವಿಭಾಗದ ಪ್ರಾಧ್ಯಾಪಕರೂ ಅಧ್ಯಕ್ಷರೂ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಂದರ್ಶನ ಪ್ರಾಧ್ಯಾಪಕರೂ ಆಗಿದ್ದರು.

ದಲಿತರ ಹಾಗೂ ಮಹಿಳೆಯರ ಪರವಾದ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತ ಹತ್ತಾರು ಸಂಘ ಸಂಸ್ಥೆಗಳಲ್ಲಿ ಇವರು ದುಡಿದರೂ ಹಳಗನ್ನಡ ಮತ್ತು ನಡುಗನ್ನಡ ಸಾಹಿತ್ಯವನ್ನು ಶ್ರದ್ಧೆಯಿಂದ ಅಭ್ಯಾಸ ಮಾಡಿ ಅನೇಕ ಕೃತಿಗಳನ್ನು ರಚಿಸಿದರು. ಇವರು ರಚಿಸಿದ ಕೃತಿಗಳು 48ಕ್ಕೂ ಹೆಚ್ಚು. ಶಾಂತಿನಾಥ, ಆದರ್ಶ ಜೈನ ಮಹಿಳೆಯರು, ಮಹಾವೀರರ ಜೀವನ ಸಂದೇಶ, ಜೈನ ಸಾಹಿತ್ಯ ಪರಿಸರ, ಅನೇಕಾಂತವಾದ, ತುರಂಗ ಭಾರತ: ಒಂದು ಅಧ್ಯಯನ ಮೊದಲಾದವು ಇವರ ಕೃತಿಗಳು. ಸುಕುಮಾರ ಚರಿತೆಯ ಸಂಗ್ರಹ, 'ಭರತೇಶ ವೈಭವ',



ಚಾವುಂಡರಾಯ ಪುರಾಣ, ಡಿ.ಎಲ್.ಎನ್. ಆಯ್ದ ಲೇಖನಗಳು, ಜೈನ ಧರ್ಮ ಮೊದಲಾದವು ಸಂಪಾದಿತ ಕೃತಿಗಳು. ಬಾಸಿಂಗ, ಬಾಂದಳ, ಬಡಬಾಗ್ನಿ- ಇವು ವೈಚಾರಿಕ ಕೃತಿಗಳು. ಬೀಜಾಕ್ಷರ ಮಾಲೆ, ಜಾತಿ ನಿರ್ಮೂಲನೆ, ಭಾರತದಲ್ಲಿ ಜಾತಿಗಳು, ಏಷಿಯಾದ ಹಣತೆಗಳು - ಇವು ಅನುವಾದಗಳು. ನಕ್ಕಿತು ಹಾಲಿನ ಬಟ್ಟಲು, ರೆಕ್ಕೆ ಮುರಿದಿತ್ತು, ಬಣವೆ, ಚಂದನಾ- ಇವು ಕಥಾ ಸಂಕಲನಗಳು. ಬಿಂದಲಿ, ಬುಗುಡಿ ಇವು ಆಧುನಿಕ ವಚನ ಸಂಕಲನಗಳು. ಶಿಶು ಸಾಹಿತ್ಯಕ್ಕೆ ಸಂಬಂಧಿಸಿದಂತೆಯೂ ಇವರು ಅನೇಕ ಕೃತಿಗಳನ್ನು ರಚಿಸಿದ್ದಾರೆ.

ನಿರಂತರ ಅಧ್ಯಾಪನ, ಲೇಖನ, ಭಾಷಣಗಳ ಮೂಲಕ ಸಾಹಿತ್ಯ ಮತ್ತು ಸಾಮಾಜಿಕ ಕ್ಷೇತ್ರಗಳೆರಡರಲ್ಲೂ ಸಮಾನ ದುಡಿಮೆ ಮಾಡಿರುವ ಇವರಿಗೆ ಅನೇಕ ಗೌರವ, ಪ್ರಶಸ್ತಿಗಳು ದೊರೆತಿವೆ. ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಬಾಬಾ ಆಮ್ಟೆ ರಾಷ್ಟ್ರೀಯ ಪ್ರಶಸ್ತಿ, ಸಾವಿತ್ರಮ್ಮ ದೇಜಗೌ ಪ್ರಶಸ್ತಿ, ರನ್ನಕವಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ, ಐಐಟಿ ಮದರಾಸು ಕನ್ನಡ ಸಂಘದ ರಜತೋತ್ಸವ ಪುರಸ್ಕಾರ, ಶ್ರವಣಬೆಳಗೊಳ ಮಹಾಮಸ್ತಕಾಭಿಷೇಕದ ರಾಷ್ಟ್ರೀಯ ಪುರಸ್ಕಾರ -ಇವುಗಳನ್ನು ಹೆಸರಿಸಬಹುದು. ಇವರು ಮೂಡಬಿದಿರೆಯಲ್ಲಿ ನಡೆದ 71ನೆಯ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು (2003). (ಕೆ.ಆರ್.ಎಸ್.ಆರ್)

**ಕಮಲಾದೇವಿ, ಚಟ್ಟೋಪಾಧ್ಯಾಯ :** 1903-88. ಭಾರತ ಸ್ವಾತಂತ್ರ್ಯಹೋರಾಟಗಾರ್ತಿಯರಲ್ಲೊಬ್ಬರು. ಕಲಾಭಿಜ್ಞೆ, ಸಾಮಾಜಿಕ ಕಾರ್ಯಕರ್ತೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 1903 ಏಪ್ರಿಲ್ 3ರಂದು ಜನಿಸಿದರು. ಇವರ ತಂದೆ ಮದರಾಸು ಸಿವಿಲ್ ಸರ್ವಿಸಿನಲ್ಲಿ ಉನ್ನತ ದರ್ಜೆಯ ಅಧಿಕಾರಿಯಾಗಿದ್ದರು. ಕಮಲಾದೇವಿ ಮಂಗಳೂರಿನ ಕೆಥೊಲಿಕ್ ಕಾನ್ವೆಂಟ್ ಮತ್ತು ಸೇಂಟ್ ಮೇರೀಸ್ ಕಾಲೇಜಿನಲ್ಲೂ ಆಮೇಲೆ ಲಂಡನ್ನಿನ ಬೆಡ್‌ಫರ್ಡ್ ಕಾಲೇಜು ಮತ್ತು ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್‌ನಲ್ಲೂ ವಿದ್ಯಾಭ್ಯಾಸ ಮಾಡಿದರು. ಬಾಲ್ಯದಲ್ಲೆ ಇವರ ವಿವಾಹವಾಗಿದ್ದೂ, ಶಾಲಾ ವಿದ್ಯಾರ್ಥಿನಿ ಯಾಗಿದ್ದಾಗಲೇ ಇವರಿಗೆ ವೈಧವ್ಯ ಪ್ರಾಪ್ತವಾಯಿತು. ಆಗ ಇವರು ಹಳೆಯ ಕಂದಾಚಾರವನ್ನು ಮುರಿದು, ತಾವು ಒಪ್ಪಿದ ಹರೀಂದ್ರನಾಥ ಚಟ್ಟೋಪಾಧ್ಯಾಯರನ್ನು ಮದುವೆಯಾದರು. ಪತಿಯೊಂದಿಗೆ ಯುರೋಪಿನಲ್ಲಿ ಪ್ರವಾಸಮಾಡಿ ಕಲಾವಿದರನ್ನು ಸಂದರ್ಶಿಸುತ್ತ ರಂಗಭೂಮಿಯ ಅಧ್ಯಯನ ಮಾಡಿದರು. ಅದರ ಪ್ರಯೋಗತಂತ್ರವನ್ನು ಕಲಿತರು. ಭಾರತಕ್ಕೆ ಮರಳಿದ ಮೇಲೆ ತಾವೇ ಮುಖ್ಯಪಾತ್ರಗಳನ್ನು ವಹಿಸಿ, ಕಲಾತ್ಮಕ ನಾಟಕಗಳನ್ನು ರಂಗಭೂಮಿಯ ಮೇಲೆ ತರಲು ತಮ್ಮ ಪತಿಯೊಂದಿಗೆ ಶ್ರಮಿಸಿದರು.

ಗಾಂಧೀಜಿ, ಜವಹರಲಾಲ್ ನೆಹರೂ, ಸರೋಜಿನಿ ನಾಯ್ಡು, ಕಸ್ತೂರ ಬಾ -ಇವರ ಪ್ರಭಾವ ಕಮಲಾದೇವಿಯ ಮೇಲೆ ವಿಶೇಷವಾಗಿ ಆಯಿತು. ಓದುತ್ತಿದ್ದಾಗಲೇ ಇವರು ಕಾಲೇಜು ವಿದ್ಯಾಭ್ಯಾಸ ತೊರೆದು ಅಸಹಕಾರ ಚಳವಳಿಯಲ್ಲಿ ದುಮುಕಿದರು. ಯರವಾಡಾ, ಬೆಳಗಾಂವಿ ಮತ್ತು ವೆಲ್ಲೂರುಗಳಲ್ಲಿ ಜೈಲು ಶಿಕ್ಷೆ ಅನುಭವಿಸಿದರು. ಅನಂತರವೂ ಅನೇಕ ಸಾರಿ ಸೆರೆಮನೆ ಶಿಕ್ಷೆಗೆ ಗುರಿಯಾದರು. ಕರ್ನಾಟಕದ ಯುವಕರಲ್ಲಿ ರಾಷ್ಟ್ರಸೇವೆಯ ಜಾಗೃತಿ ಉಂಟುಮಾಡುವುದರಲ್ಲಿ ಇವರ ಪಾತ್ರ ಹಿರಿದು. ಕೃಷಿಕರ ಸಮಸ್ಯೆಗಳ ಪರಿಹಾರದಿಂದಲೇ ಜನತೆಯ ಉದ್ಧಾರ ಸಾಧ್ಯವೆಂದು ನಂಬಿ ಇವರು ಕೃಷಿ ಕ್ಷೇತ್ರದಲ್ಲಿ ತೀವ್ರ ಆಸಕ್ತಿ ತಳೆದರು. ಜಮೀನುದಾರಿ ಪದ್ಧತಿ ರದ್ದಾಗಿ ಭೂಮಿ ಸಮಾನವಾಗಿ, ನ್ಯಾಯಸಮ್ಮತವಾಗಿ ಹಂಚಿಕೆಯಾಗಬೇಕೆಂಬುದು ಇವರ ಆಶಯವಾಗಿತ್ತು. ಕಾಂಗ್ರೆಸ್ಸಿನ ಭೂ ಸುಧಾರಣೆಯ ಕ್ರಮಗಳು ಇವರಿಗೆ ಸಮರ್ಪಕವೆನಿಸಲಿಲ್ಲ.

ಕಮಲಾದೇವಿಯವರು 1948ರಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷವನ್ನು ಸೇರಿದರು. ಬಡತನದ ವಿರುದ್ಧ ಘೋಷಣೆಗಳನ್ನು ಕೂಗುವುದಕ್ಕಿಂತ ಸುಖಮಯ ಮಾನವ ಸಂಬಂಧಗಳಿಗಾಗಿ ಕ್ರಿಯಾ ಶೀಲವಾದ ಕಳಕಳಿಯೇ ಸಮಾಜವಾದದ ಸತ್ತ್ವವೆಂಬುದು ಇವರ ನಂಬಿಕೆ. ಬ್ರಿಟಿಷ್‌ಸಾಮ್ರಾಜ್ಯ ಶಾಹಿಯ ವಿರುದ್ಧಹೋರಾಡು ವುದಕ್ಕಾಗಿ ಕಾಂಗ್ರೆಸ್ಸನ್ನು ಬಲಪಡಿಸುವ ಕರೆ ಕೊಟ್ಟ ಇವರು ಸಮಾಜವಾದದ ಧ್ಯೇಯ ನಿರೂಪಣೆಯಿಂದ ಒಮ್ಮೆಲೆ ಭಾರತದ ಮುಂಚೂಣಿ ನಾಯಕರ ಮಟ್ಟಕ್ಕೇರಿದರು. ಕಾರ್ಮಿಕರ ಹಿತರಕ್ಷಣೆಗಾಗಿ ಕಾರ್ಮಿಕ ಸಂಸ್ಥೆಗಳಲ್ಲಿ ಸಂಘಟನೆಗೂ ಚಳವಳಿಗೂ ನಾಯಕತ್ವ ನೀಡಿ ಉತ್ತೇಜನ ನೀಡಿದರು.



ಭಾರತದ ಮಹಿಳಾ ಆಂದೋಲನದ ಪ್ರಮುಖ ಮುಂದಾಳಾಗಿ ದೇಶಾದ್ಯಂತ ಸಂಚರಿಸಿ, ಭಾಷಣಗಳಿಂದ, ಸಂದರ್ಶನಗಳಿಂದ ಸ್ಫೂರ್ತಿ ನೀಡಿ, ಅಖಿಲ ಭಾರತ ಮಹಿಳಾ ಸಮ್ಮೇಳನವನ್ನು ಬೆಳೆಸಿದರು. ಬಿಳಿಯ ಒರಟು ಖಾದಿಗೆ ಕಲಾತ್ಮಕತೆ ತಂದುಕೊಟ್ಟು, ಅರಿವೆಗೆ ಬಣ್ಣ ಹಾಕುವ ಭಾರತೀಯ ಕಲೆಗೆ ಸ್ಫೂರ್ತಿ ನೀಡಿದರು. ಅಖಿಲ ಭಾರತ ಕಾಂಗ್ರೆಸ್ ಸಮಿತಿ ಹಾಗೂ ಕಾರ್ಯಕಾರಿ ಸಮಿತಿಯ, ಅಖಿಲ ಭಾರತ ಮಹಿಳಾ ಸಮ್ಮೇಳನದ ಸಂಘಟನಾ ಕಾರ್ಯದರ್ಶಿತ್ವ, ಉಪಾಧ್ಯಕ್ಷತೆ ಮತ್ತು ಅಧ್ಯಕ್ಷತೆ, ಭಾರತೀಯ ಸಹಕಾರ ಯೂನಿಯನ್ನಿನ ಅಧ್ಯಕ್ಷತೆ, ವರ್ಲ್ಡ್ ಕ್ರಾಫ್ಟ್ ಕೌನ್ಸಿಲ್‌ನ ಉಪಾಧ್ಯಕ್ಷತೆ, ಅಖಿಲ ಭಾರತ ಕರಕುಶಲ ಮಂಡಳಿಯ ಅಧ್ಯಕ್ಷತೆ, ಅಖಿಲ ಭಾರತ ಡಿಸೈನ್ ಸೆಂಟರಿನ ಅಧ್ಯಕ್ಷತೆ-ಇವು ಕಮಲಾದೇವಿಯವರು ನಿರ್ವಹಿಸಿದ ಕೆಲವು ಅಧಿಕಾರಗಳು. ಇವರು ಅಂತಾರಾಷ್ಟ್ರೀಯ ರಂಗಭೂಮಿ ಸಂಸ್ಥೆಯ ವತಿಯಿಂದ ಭಾರತ ರಾಷ್ಟ್ರೀಯ ರಂಗಭೂಮಿ ಕೇಂದ್ರದ ಸಂಸ್ಥಾಪಕರಾಗಿದ್ದರು.

ಇವರು ಇಂಗ್ಲಿಷಿನಲ್ಲಿ ಹತ್ತು ಪುಸ್ತಕಗಳನ್ನು ಬರೆದಿದ್ದಾರೆ: ಭಾರತೀಯ ಕರ ಕುಶಲ ಕೈಗಾರಿಕೆಗಳು, ಭಾರತೀಯ ಕಂಬಳಿಗಳು ಮತ್ತು ನೆಲಾವರಣಗಳು, ಸಮಾಜವಾದ ಮತ್ತು ಸಮಾಜ, ಭಾರತೀಯ ಮಹಿಳಾ ಜಾಗೃತಿ, ರಾಷ್ಟ್ರೀಯ ರಂಗಭೂಮಿ ಮುಂತಾದವು ಇವರ ವೈವಿಧ್ಯಪೂರ್ಣ ಆಸಕ್ತಿಯನ್ನು ಪ್ರತಿ ಫಲಿಸುತ್ತವೆ. ಸಾಮಾಜಿಕ ಧುರೀಣತ್ವಕ್ಕಾಗಿ ವಾಟ್ಟುಮಲ್ (1962) ಮತ್ತು ಮ್ಯಾಗ್ಸೇಸೇ (1966) ಪ್ರಶಸ್ತಿಗಳನ್ನುಗಳಿಸಿದರು. 1970ರಲ್ಲಿ ಶಾಂತಿ ನಿಕೇತನದ ವಿಶ್ವಭಾರತಿ ವಿಶ್ವವಿದ್ಯಾಲಯದಿಂದ ಇವರಿಗೆ ದೇಶಿಕೋತ್ತಮಾ ಎಂಬ ಪ್ರಶಸ್ತಿ ದತ್ತವಾಯಿತು. ಭಾರತ ಸರ್ಕಾರ ಇವರಿಗೆ ಪದ್ಮ ವಿಭೂಷಣ ಪ್ರಶಸ್ತಿ ನೀಡಿ ಗೌರವಿಸಿತು. ಇವರು 1988ರಲ್ಲಿ ನಿಧನರಾದರು. (ಜೆ.ಆರ್.ಪಿ.)

**ಕಯ್ಯಾರ ಕಿಞ್ಞಣ್ಣ ರೈ :** 1915-. ಕಾಸರಗೋಡಿನಲ್ಲಿ ನೆಲೆಸಿರುವ ಕನ್ನಡ ಲೇಖಕರು. ಈಗ ಕೇರಳ ರಾಜ್ಯದಲ್ಲಿರುವ ಕಾಸರಗೋಡು ಜಿಲ್ಲೆಯ ಪೈವಳಿಕೆಯಲ್ಲಿ 1915 ಜೂನ್ 8ರಂದು ಜನಿಸಿದರು. ತಂದೆ ದುಗ್ಗಪ್ಪರೈ, ತಾಯಿ ದೆಯ್ಯಕ್ಕ. ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲಾ ಶಿಕ್ಷಣವನ್ನು ಪೆರಡಾಲದಲ್ಲಿ ಪಡೆದ ಇವರು ರಾಮಾಯಣ, ಭಾರತ, ಯಕ್ಷಗಾನ, ತಾಳಮದ್ದಲೆಗಳ ಪರಿಸರದಲ್ಲಿ ಬೆಳೆದರು.

ಇವರಿಗೆ ಇಂಗ್ಲಿಷ್ ಶಿಕ್ಷಣ ಪಡೆಯಬೇಕೆಂಬ ಆಸೆಯಿತ್ತು. ಆದರೆ ತಂದೆ ತೀರಿಕೊಂಡಿದ್ದರಿಂದ ಅದಕ್ಕೆ ಅಡಚಣೆಯಾಯಿತು. ಸಂಸ್ಕೃತ ಶಾಲೆ ಸೇರಿದರು. ಸಂಸ್ಕೃತ ಕನ್ನಡಗಳೆರಡನ್ನೂ ಚೆನ್ನಾಗಿ ಕಲಿತರು. ವಿದ್ವಾನ್ ಪದವಿ ಗಳಿಸಿದರು. ಇವರು ಮೊತ್ತಮೊದಲು ಪತ್ರಿಕೋದ್ಯಮದಿಂದ ಆಕರ್ಷಿತರಾದರು. ಮಂಗಳೂರಿನ 'ಸ್ವದೇಶಾಭಿಮಾನಿ' ಪತ್ರಿಕೆಯ ಮೂಲಕ ದುಡಿದರು. ಈ ನಡುವೆ ಇವರು ಬಿ.ಎ. ಮತ್ತು ಎಂ.ಎ. ಪದವಿಗಳನ್ನು ಪಡೆದರಲ್ಲದೆ ಅಧ್ಯಾಪಕ ತರಬೇತಿ ಪದವಿಯನ್ನೂ ಗಳಿಸಿದರು. ಅನಂತರ ಪೆರಡಾಲದ ನವಜೀವನ ಪ್ರೌಢಶಾಲೆಯಲ್ಲಿ ಅಧ್ಯಾಪಕರಾದರು. 1969ರಲ್ಲಿ ಇವರಿಗೆ ಶ್ರೇಷ್ಠ ಅಧ್ಯಾಪಕ ಎಂಬ ರಾಷ್ಟ್ರಪ್ರಶಸ್ತಿ ಲಭ್ಯವಾಯಿತು.

ಸಾಹಿತ್ಯ ಕ್ಷೇತ್ರಕ್ಕೆ ಇವರ ಕಾಣಿಕೆ ಮಹತ್ತ್ವಪೂರ್ಣವಾದದ್ದು. ಶ್ರೀಮುಖ, ಐಕ್ಯಗಾನ, ಪುನರ್ನವ, ಚೇತನ, ಪಂಚಮೀ (5 ಉಪನಿಷತ್ ಕಾವ್ಯಗಳು), ಮಹಾಕವಿ ಕುಮಾರನ್ ಆಶಾನರ ಮೂರು ಖಂಡಕಾವ್ಯಗಳು (ಮಲಯಾಳಂನಿಂದ ಅನುವಾದ), ಕೊರಗ ಮತ್ತು ಕೆಲವು ಕವನಗಳು, ಶತಮಾನದ ಗಾನ, ಗಂಧವತೀ, ಪ್ರತಿಭಾ ಪಯಸ್ವಿನಿ (ಕವನಗಳ ಬೃಹತ್ ಸಂಪುಟ) ಮತ್ತು ಎನ್ನಪ್ಪೆ ತುಳುವಪ್ಪೆ (ತುಳು) ಮೊದಲಾದ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ರತ್ನರಾಶಿ (ಜೀವನ ಚರಿತ್ರೆ), ಲಕ್ಷ್ಮೀಶನ ಕಥೆಗಳು, ಅನ್ನದೇವರು ಮತ್ತು ಇತರ ಕಥೆಗಳು, ಪರಶುರಾಮ, ಎಂ.ಬಿ.ಶೆಟ್ಟಿ (ಜೀವನಚರಿತ್ರೆ), ಕನ್ನಡದ ಶಕ್ತಿ (ಸಂಪಾದನೆ), ಕಾರ್ನಾಡು ಸದಾಶಿವರಾವ್ (ಜೀವನ ಚರಿತ್ರೆ), ಗಡಿನಾಡ ಕಿಡಿ (ಸಂಪಾದನೆ) ಮೊದಲಾದವು ಇವರ ಗದ್ಯ ಕೃತಿಗಳು. ವಿರಾಗಿಣಿ ಎಂಬುದು ನಾಟಕ. ನಾಲ್ಕು ಭಾಗಗಳಲ್ಲಿ ಇವರು ಬರೆದಿರುವ ವ್ಯಾಕರಣ ಮತ್ತು ಪ್ರಬಂಧ ವಿದ್ಯಾರ್ಥಿಗಳಿಗೆ ಉಪಯುಕ್ತವಾಗಿದೆ. ನವೋದಯ ವಾಚನಮಾಲೆ (ಎಂಟು ಭಾಗಗಳು) ಮಕ್ಕಳಿಗಾಗಿ ರಚಿಸಿದ ಸಾಹಿತ್ಯ. ದುಡಿತವೆ ನನ್ನ ದೇವರು ಎಂಬ ಆತ್ಮ ಕಥನವನ್ನೂ ಇವರು ಬರೆದಿದ್ದಾರೆ.



ದೇಶಕ್ಕಾಗಿ ಮತ್ತು ನಾಡಿಗಾಗಿ ಹೋರಾಡಿದ, ಹೋರಾಡುತ್ತಿರುವ ನಿಷ್ಠಾವಂತ ಹೋರಾಟಗಾರರಾದ ಇವರು ಗಾಂಧೀಜಿಯವರ ಕಟ್ಟಾ ಅಭಿಮಾನಿ. ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು. ಮೊದಲು ಭರತಮಾತೆ, ಅನಂತರ ಕನ್ನಡತಾಯಿ, ತರುವಾಯ ತೌಳವಮಾತೆ ಎಂಬುದು ಇವರ ನಿಲುವು. ಕನ್ನಡಾಂತರ್ಗತಂ ತುಳುನಾಡು ನನ್ನದಿದು, ಭಾರತಾಂತರ್ಗತಂ ಕನ್ನಡದ ಬದುಕು ಎಂಬುದು ಇವರ ಧ್ಯೇಯ.

ಇವರು ಕವಿಯಷ್ಟೇ ಅಲ್ಲ, ವಿಮರ್ಶಕರೂ ಹೌದು. ರಾಷ್ಟ್ರಕವಿ ಗೋವಿಂದ ಪೈ, ಗೋವಿಂದ ಪೈ ಸ್ಮೃತಿ ಕೃತಿ, ಸಾಹಿತ್ಯದೃಷ್ಟಿ, ಮಲಯಾಳಂ ಸಾಹಿತ್ಯ ಚರಿತ್ರಂ, ಮಹಾಕವಿ ಗೋವಿಂದ ಪೈ, ಸಂಸ್ಕೃತಿಯ ಹೆಗ್ಗುರುತು ಮೊದಲಾದ ಕೃತಿಗಳಲ್ಲಿ ಇವರ ವಿಮರ್ಶನ ಪ್ರಜ್ಞೆ ವ್ಯಕ್ತವಾಗಿದೆ.

ಐವತ್ತು ವರ್ಷಗಳಿಂದ ಹಳ್ಳಿಯಲ್ಲೇ ನೆಲಸಿರುವ ಇವರಿಗೆ ಹಳ್ಳಿಯ ನಿರುಮ್ಮಳತೆ ತುಂಬ ಇಷ್ಟ. ನೇಗಿಲಿನ ಸಮಕ್ಕೆ ಲೇಖನಿ ಹಿಡಿದ ಇವರು

ಕೃಷಿಯಲ್ಲೂ ಪಳಗಿದವರು. ಸದಾ ಖಾದೀಧಾರಿಯಾದ ಇವರದು ಆರಡಿ ಎತ್ತರದ ಧೀಮಂತ ನಿಲುವು, ಕಂಚಿನ ಕಂಠ. ಇವರೊಬ್ಬ ಶ್ರೇಷ್ಠ ವಾಗ್ಮಿ. ಇವರದು ತುಂಬು ಸಂಸಾರದ ಬದುಕು. ಇವರ ಪತ್ನಿಯು ಹೆಸರು ಉಣ್ಣಕ್ಕೆ. ಆರು ಮಂದಿ ಪುತ್ರರು ಮತ್ತು ಇಬ್ಬರು ಪುತ್ರಿಯರು.

ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಕಯ್ಯಾರರು ಮಹತ್ತ್ವದ ಪಾತ್ರ ವಹಿಸಿದ್ದರು. ಕಾಸರಗೋಡು ಕರ್ನಾಟಕ ಪ್ರಾಂತೀಕರಣ ಸಮಿತಿಯ ಕಾರ್ಯದರ್ಶಿಯಾಗಿಯೂ ಇವರು ನಿಷ್ಠೆಯ ಸೇವೆ ಸಲ್ಲಿಸಿದ್ದಾರೆ. ಇವರು 1997ರಲ್ಲಿ ಮಂಗಳೂರಿನಲ್ಲಿ ಜರುಗಿದ 66ನೇಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

ಕನ್ನಡದ ಹಿರಿಯಣ್ಣ ಎಂಬ ಅಭಿಧಾನಕ್ಕೆ ಪಾತ್ರರಾಗಿರುವ ಕಯ್ಯಾರರಿಗೆ ಅನೇಕ ಪ್ರಶಸ್ತಿ ಗೌರವಗಳು ದೊರೆತಿವೆ. ಶ್ರೇಷ್ಠ ಅಧ್ಯಾಪಕ ರಾಷ್ಟ್ರಪ್ರಶಸ್ತಿಯಲ್ಲದೆ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಸ್ವಾತಂತ್ರ್ಯ ಯೋಧ ಪ್ರಶಸ್ತಿ -ಇವು ಕೆಲವು ಮುಖ್ಯ ಪ್ರಶಸ್ತಿಗಳು. (ಪೀ.ಇ.ವಿ.)

**ಕರಗ** : ಜನಪದ ಧಾರ್ಮಿಕ ನೃತ್ಯ. ತಮಿಳುನಾಡಿನಲ್ಲಿ ವಿಶೇಷವಾಗಿ ಪ್ರಾಚುರ್ಯದಲ್ಲಿರುವ ಈ ನೃತ್ಯ ತಮಿಳುನಾಡಿನ ಪ್ರಭಾವ ಸ್ವಲ್ಪ ಮಟ್ಟಿಗೆ ಕಂಡುಬರುವ ಕರ್ನಾಟಕದ ಆಗ್ನೇಯ ಭಾಗದಲ್ಲಿ ಅದರಲ್ಲೂ ಕೋಲಾರ, ಬೆಂಗಳೂರು, ತುಮಕೂರು ಮತ್ತು ಮೈಸೂರು, ಚಾಮರಾಜನಗರ ಜಿಲ್ಲೆಗಳಲ್ಲಿ ಕಂಡುಬರುತ್ತದೆ.



ಕರಗ ಹೊತ್ತು ನಡೆದಿರುವ ಕಲಾವಿದ

ಸಾಮಾನ್ಯವಾಗಿ ಹಿತ್ತಾಳೆಯ ಕೊಡವನ್ನು ಸುಂದರವಾಗಿ ಕಿರೀಟದಂತೆ ಅಲಂಕರಿಸಿ ತಲೆಯ ಮೇಲೆ ಹೊತ್ತು ಕೈಬಿಟ್ಟು ಮಾಡುವ ನೃತ್ಯವಿದು. ಡೋಲು ವಾದ್ಯಗಳ ತಾಳಗತಿಯೊಂದಿಗೆ ಪಾದವಿನ್ಯಾಸ, ಹಸ್ತಮುದ್ರೆ, ಮುಖಭಂಗಿಗಳನ್ನು ಪ್ರದರ್ಶಿಸುತ್ತ ನೃತ್ಯ ನಡೆಯುತ್ತದೆ. ನೃತ್ಯ ಮಾಡುತ್ತ ನೆಲದಲ್ಲಿಟ್ಟ ಸೂಜಿಯನ್ನು ಕೈಯಲ್ಲಿ ಮುಟ್ಟದೆ ಕಣ್ಣುರೆಪ್ಪೆಯಲ್ಲಿ ತೆಗೆದು ಅದರಿಂದ ಬಾಯಲ್ಲಿನ ನಿಂಬೆಹಣ್ಣನ್ನು ಚುಚ್ಚಿ ದಾರದಿಂದ ಮಾಲೆ ಮಾಡುವುದು, ಹಾಸಿದ ಸೀರೆಯ ಮೇಲೆ ಹೊರಳಿ, ಅದನ್ನುಡುವುದು ಮತ್ತು ಹಾಗೆಯೇ ಬಿಡಿಸುವುದು, ಕರಗನೃತ್ಯದವನ ಕಣ್ಣಿಗೆ ಬಟ್ಟೆ ಕಟ್ಟಿರಲು ಆತ ಹರಿತವಾದ ಕತ್ತಿಯಿಂದ ಬೇರೊಬ್ಬನ ತಲೆಯ ಮೇಲೆ ಇಟ್ಟ ತೆಂಗಿನ ಕಾಯಿಯನ್ನು ಒಂದೇ ಏಟಿಗೆ ಒಡೆಯುವುದು ಮುಂತಾದ ಅದ್ಭುತ ಪ್ರದರ್ಶನ ಅಚ್ಚರಿಯನ್ನುಂಟುಮಾಡುತ್ತದೆ. ದೈವಿಕ ಶಕ್ತಿಯಿಂದ ಈ ಕರಗನೃತ್ಯ ಯಶಸ್ವಿಯಾಗಿ ನಡೆಯುತ್ತದೆಂದು ಅವರ ನಂಬಿಕೆ.

ಕರ್ನಾಟಕದಲ್ಲಿ ಹೊಸಕೋಟೆ, ಕೋಲಾರ ಮುಂತಾದ ಕಡೆಗಳಲ್ಲಿನ ಕರಗ ಉತ್ಸವಗಳು ಪ್ರಸಿದ್ಧವಾದುವಾದರೂ ಬೆಂಗಳೂರಿನ ಕರಗ ಅತ್ಯಂತ ವಿಜೃಂಭಣೆಯದು. ಬೆಂಗಳೂರು ನಗರದ ಧರ್ಮರಾಯ ದೇವಸ್ಥಾನದಲ್ಲಿ ಚೈತ್ರ ಶುದ್ಧ ಸಪ್ತಮಿಯ ರಾತ್ರಿ ಧ್ವಜಾರೋಹಣ, ದ್ವಾದಶಿಯ ರಾತ್ರಿ ದೀಪಾರತಿ, ತ್ರಯೋದಶಿ ರಾತ್ರಿ ಹಸಿ ಕರಗದ ದೇವತಾರಾಧನೆ, ಹುಣ್ಣಿಮೆಯ ರಾತ್ರಿ ಕರಗ ಮಹೋತ್ಸವ ರಥೋತ್ಸವಗಳು, ಚೈತ್ರ ಬಹುಳ ಪಾಡ್ಯದ ರಾತ್ರಿ ಪುರಾಣ ನಿರೂಪಣೆ, ಬಿದಿಗೆಯ ಸಾಯಂಕಾಲ ವಸಂತೋತ್ಸವ ಮತ್ತು ರಾತ್ರಿ ಧ್ವಜಾವತರಣ - ಇವು ಕರಗ ಮಹೋತ್ಸವದ ಒಂಬತ್ತು ದಿನಗಳ ಕಾರ್ಯಕ್ರಮಗಳು. ತ್ರಯೋದಶಿಯ ರಾತ್ರಿ ಸುಮಾರು ಇನ್ನೂರ ಐವತ್ತು ವೀರಕುಮಾರರು, ಕರಗದ ಭಕ್ತ ತಿಗುಳರು ಬಿಳಿ ಚಲ್ಲಣ ತೊಟ್ಟು, ಕೆಂಪು ರೇಷ್ಮೆ ವಸ್ತ್ರವನ್ನು ಸೊಂಟಕ್ಕೆ ಬಿಗಿದು, ಕಲಾಬತ್ತಿನ ಪೇಟಾಧರಿಸಿ ಸೇವೆಗೆ ಅಣಿಯಾಗುತ್ತಾರೆ. ಇವರು ಜಯ ಘೋಷದೊಡನೆ ಅಲಗು ಸೇವೆ ನಡೆಸುತ್ತಾರೆ. ಅರ್ಚಕ ಇವರ ಮೆರವಣಿಗೆಯಲ್ಲಿ ಹಸಿ ಕರಗವನ್ನು (ಹಸಿ ಮಣ್ಣಿನ ಮಡಕೆ) ದೇವಾಲಯದೊಳಕ್ಕೆ ಒಯ್ಯುತ್ತಾನೆ. ಹುಣ್ಣಿಮೆಯ ರಾತ್ರಿ ಸುಮಾರು ಹನ್ನೆರಡು ಗಂಟೆಗೆ ಕರಗದ ಮೆರವಣಿಗೆ ದೇವಾಲಯದಿಂದ ಹೊರಟು ಪಟ್ಟಣದ ಬೀದಿಗಳಲ್ಲಿ ಸಾಗಿ ಬೆಳಗಾಗುವುದರೊಳಗೆ ದೇವಾಲಯದೊಳಗೆ ಬರುತ್ತದೆ. ಧ್ವಜಾರೋಹಣದ ದಿನ ಕರಗವನ್ನು ಜಲದಲ್ಲಿ ವಿಸರ್ಜಿಸಲಾಗುತ್ತದೆ.

ಇದನ್ನು ಆಚರಿಸುವವರು ವಹ್ನಿಕುಲದ ತಿಗುಳರಾದರೂ ಎಲ್ಲಾ ಜನಾಂಗದವರೂ ಕರಗದಲ್ಲಿ ಪಾಲುಗೊಂಡು ಪೂಜೆ ಸಲ್ಲಿಸುತ್ತಾರೆ. ಜುಮ್ಮಮಸೀದಿ ಬಳಿಗೆ ಕರಗ ಬಂದಾಗ ಮಹಮ್ಮದೀಯರೂ ಈ ಕರಗ ದೇವತೆಗೆ ಪೂಜೆ ಸಲ್ಲಿಸುವುದು ಸಂಪ್ರದಾಯವಾಗಿಯೇ ಬಂದಿದೆ. ವಹ್ನಿಕುಲದ ತಿಗುಳರು ವಹ್ನಿಜೆಯಾದ ದ್ರೌಪದಿಯ ಭಕ್ತವರ್ಗ ದವರು. ಪಾಂಡವರು ದ್ರೌಪದೀ ಸಮೇತ ಸ್ವರ್ಗಾರೋಹಣ ಮಾಡುತ್ತಿದ್ದಾಗ, ಹಿಂದೆ ಉಳಿದ ದ್ರೌಪದಿ ದಿಕ್ಕುಗಾಣದೆ ದೇವತೆಗಳನ್ನು ಪ್ರಾರ್ಥಿಸಿದಳು. ಆಕೆಯ ಸುತ್ತಲು ವೀರಕುಮಾರರು ಭೂಮಿಯಿಂದ ಉದ್ಭವಿಸಿ ಕತ್ತಿ, ಡಮರು, ತ್ರಿಶೂಲ, ಗಂಟೆ ಮುಂತಾದವನ್ನು ಹಿಡಿದು ನೃತ್ಯದೊಂದಿಗೆ ಆಕೆಯ ಭಜನೆಯಲ್ಲಿ ಸೇರಿಕೊಂಡರು. ದ್ರೌಪದಿ ಅವರಿಗೆ ಕರಗ ಉತ್ಸವವನ್ನು ನಾಡಿನಲ್ಲಿ ಪ್ರಚುರಗೊಳಿಸುವಂತೆ ಅನುಗ್ರಹಿಸಿದಳೆಂದು ಹೇಳಿಕೆಯಿದೆ. ಈ ವೀರಕುಮಾರರಿಂದ ಪಾಂಡವ ದೇವಾಲಯಗಳಾದವು. ಇವರಿಗೆ ದ್ರೌಪದಿ ಶಕ್ತಿದೇವತೆ. (ಟಿ.ಕೆ.ಬಿ.)

ಇನ್ನೊಂದು ಐತಿಹ್ಯದ ಪ್ರಕಾರ ಸ್ವರ್ಗಾರೋಹಣ ಸಂದರ್ಭದಲ್ಲಿ ದ್ರೌಪದಿ ಮೂರ್ಛಿತಳಾದಳು. ಎಚ್ಚರಗೊಂಡ ಮೇಲೆ ತನ್ನ ಪತಿಗಳು ಇಲ್ಲದಿರುವುದನ್ನು ಕಂಡು ರೋದಿಸುತ್ತಿದ್ದಾಗ ತಿಮಿರಾಸುರನೆಂಬ ರಾಕ್ಷಸ ಆಕೆಯನ್ನು ಪೀಡಿಸಲು ಅವನನ್ನು ನಿಗ್ರಹಿಸುವ ಸಲುವಾಗಿ ವಿರಾಟರೂಪ ತಾಳಿ ತಲೆಯ ಮೇಲೆ ಕುಂಭವನ್ನು ಧರಿಸಿದಳು. ಇದೇ ಇಂದು ಆರಾಧನೆಗೊಳ್ಳುತ್ತಿರುವ ಕರಗ ಎಂದು ಒಂದು ಹೇಳಿಕೆ. ದ್ರೌಪದಿ ಮಂಗಳ ಕಲಶವನ್ನು ಹಿಡಿದು ಸ್ವಯಂವರ ಮಂಟಪಕ್ಕೆ ಹೋಗಿ ಮತ್ಸ್ಯಯಂತ್ರವನ್ನು ಭೇದಿಸಿದ ಅರ್ಜುನನನ್ನೂ ಉಳಿದ ನಾಲ್ವರು ಪಾಂಡವ ಸೋದರರನ್ನೂ ವಿವಾಹವಾದಳೆಂದು ಕಥೆ. ಆ ಸಂದರ್ಭದಲ್ಲಿ ಆಕೆ ಆನಂದದಿಂದ ಕೈಯಲ್ಲಿದ್ದ ಕಲಶವನ್ನು ಶಿರದಲ್ಲಿ ಧರಿಸಿದಳು. ಇದೇ ಕರಗ ಎಂದು ಹೇಳಲಾಗಿದೆ.

ಕರಗದ ಮೂಲ ಅಸ್ಪಷ್ಟವಾದರೂ ಇದು ಆದಿಶಕ್ತಿಯನ್ನು ಆರಾಧಿಸುವ ಒಂದು ಸಂಪ್ರದಾಯ ಎಂದು ಹೇಳಬಹುದು. ನೀರಿನ ಕಲಶ ಎಂಬುದು ಕರಗ ಎಂಬುದರ ಮುಖ್ಯವಾದ ಅರ್ಥ. ಉತ್ತರ ಕರ್ನಾಟಕದ

ಹಲವೆಡೆ ಎಲ್ಲಮ್ಮನ ಭಕ್ತರೇ ಮೊದಲಾದವರು ಉದಕಕುಂಭವನ್ನು ತಲೆಯ ಮೇಲಿಟ್ಟುಕೊಂಡು ತರುವ ಧಾರ್ಮಿಕ ಸಂಪ್ರದಾಯವೂ ಇದೆ. ಪಂಪ, ರನ್ನರ ಕಾವ್ಯಗಳಲ್ಲಿ ಕರಗದ ಪ್ರಸ್ತಾಪವಿದೆ. ಪ್ರಾಯಶಃ ಇವು ಕರಗ ನೃತ್ಯಕ್ಕಿಂತಲೂ ನೀರಿನ ಕುಂಭವನ್ನು ಈ ರೀತಿ ತರುವ ಸಂಪ್ರದಾಯಕ್ಕೆ ಅನ್ವಯಿಸುತ್ತದೆಂದು ತೋರುತ್ತದೆ. *

**ಕರಡೆ ಮಜಲು :** ಉತ್ತರ ಕರ್ನಾಟಕದಲ್ಲಿ ಜನಪ್ರಿಯವಾಗಿರುವ ಒಂದು ಜನಪದ ಮೇಳಗಾನ. ಇದರಲ್ಲಿ ಸಾಮಾನ್ಯವಾಗಿ ಏಳು ಜನ ವಾದ್ಯಗಾರರಿರುತ್ತಾರೆ. ಇವರಲ್ಲಿ ಕರಡೆಯವನು ಪ್ರಧಾನ. ಇವನು ಕರಡೆಯನ್ನು ಸೊಂಟಕ್ಕೆ ಕಟ್ಟಿಕೊಂಡು ಮಧ್ಯದಲ್ಲಿ ನಿಂತಿರುತ್ತಾನೆ. ಇನ್ನಿಬ್ಬರು ಡೊಳ್ಳನ್ನು ಕೊರಳಿಗೆ ನೇತು ಹಾಕಿಕೊಂಡು ಎಡಬಲಗಳಲ್ಲಿ ನಿಲ್ಲುತ್ತಾರೆ. ಈ ಮೂವರೂ ವಿಶಿಷ್ಟವಾದ ಸಮವಸ್ತ್ರ ಧರಿಸಿರುತ್ತಾರೆ. ಚೆಳ್ಳಮ್ಮ (ಕಂಚಿನ ಎರಡು ತಾಳಗಳು) ಹಿಡಿದು ತಾಳ ಬಾರಿಸುವಾತ ಇವರ ಪಕ್ಕದಲ್ಲಿರುತ್ತಾನೆ. ಕರಡೆಯವನಿಗೆ ಆಹ್ವಾನ ಕೊಡುವಂತೆ ರಾಗಾಲಾಪನೆ ಮಾಡುವ ಜೋಡು ಸನಾದಿ (ಊದು ವಾದ್ಯ) ಯವರಿಬ್ಬರು ಎದುರಿಗೆ ಇರುತ್ತಾರೆ. ಇವರ ಜೊತೆಗೆ ಉದ್ದವಾದ ಸನಾದಿಯನ್ನು ಹಿಡಿದು (ಶ್ರುತಿ) ಬಾಂವ್ ಎಂದು ಪ್ರಾರಂಭದಿಂದ ಕೊನೆಯ ತನಕ ಊದುವ ಇನ್ನೊಬ್ಬನೂ ಇರುತ್ತಾನೆ. ಒಬ್ಬ ಲಾವಣಿಕಾರನೂ ಇರುವುದುಂಟು. ಇವನು ಪ್ರಣಯದ ಹಾಗೂ ದೇವರಿಗೆ ಸಂಬಂಧಿಸಿದ ಜನಪದ ಗೀತೆಗಳನ್ನು ಸಖೀ ಹಾಡುತ್ತಾ ಮಧ್ಯೆ ಮಧ್ಯೆ ಕರಡೆ ಮಜಲಿನವರಿಗೆ ದಮ್ಮು ಆರಿಸಲು ಅವಕಾಶ ಮಾಡಿ ಕೊಡುತ್ತಾನೆ. ಕಾಲಲ್ಲಿ ಗೆಜ್ಜೆ, ಕೈಯಲ್ಲಿ ಜೋಡು ಗುಣಿಗಳು ಇಲ್ಲವೆ ಸಣ್ಣದೊಂದು ದಮಡಿ - ಇವು ಸಖೀ ಹಾಡುವವನ ತಾಳ ಮೇಳ. ತಾಳಮೇಳಗಳಲ್ಲಿ ಪೂರ್ಣ ತಯಾರಿ ನಡೆಸಿರುವ ಈ ಮಜಲಿನವರು ಕೆಲವೊಮ್ಮೆ ಸ್ಫೂರ್ತಿಹೊಂದಿ ಕುಣಿಯುವುದೂ ಉಂಟು. ಬಯಲಗತ್ತು ಒಂದು ವಿಶೇಷ ರೀತಿಯ ಕರಡೆ ಬಾರಿಸುವಿಕೆ. ಇದನ್ನು ಗ್ರಾಮದ ಆಯಕಟ್ಟಿನ ಸ್ಥಳದಲ್ಲಿ ಬಾರಿಸುವುದುಂಟು. ಇಂಥ ಸಂದರ್ಭದಲ್ಲಿ ಕರಡೆ ಮಜಲಿನವರ ಕುಣಿತ ದೊಡ್ಡದಾಗಿರುತ್ತದೆ.



ಕರಡೆ ಡೊಳ್ಳಿನಾಕಾರದ ಚಿಗರೆ ಅಥವಾ ಆಡಿನ ಚರ್ಮದಿಂದ ಮಾಡಿದ ಅವನದ್ಧ ವಾದ್ಯ. ಇದರ ಧ್ವನಿ ಚೀರುದನಿಯಾದರೂ ಕೇಳಲು ಇಂಪಾಗಿರುತ್ತದೆ. ಇದನ್ನು ಎರಡೂ ಕೈಗಳಲ್ಲಿ ಎರಡು ಗುಣಿಗೋಲು ಹಿಡಿದು ಬಾರಿಸುತ್ತಾರೆ. ಗುಣಿಕೋಲುಗಳು ಗಟ್ಟಿ ಕಟ್ಟಿಗೆಯಿಂದ ಗೇಣುದ್ದ ಚೂಪಾಗಿ ನುಣುಪಾಗಿ ಕೆತ್ತಲಾಗಿರುತ್ತವೆ. ಕರಡೆ ಬಹುಪ್ರಾಚೀನ ವಾದ್ಯ. ಕವಿರಾಜಮಾರ್ಗದಲ್ಲಿ ಇದರ ಉಲ್ಲೇಖವಿದೆ. 8ನೆಯ ಶತಮಾನದ ಪಟ್ಟದಕಲ್ಲಿನ ದೇವಾಲಯಗಳಲ್ಲಿ ಇದು ಶಿಲ್ಪಿತವಾಗಿದೆ. ಶಿವಶರಣರ ಕಾಲದಲ್ಲಿ ಈ ವಾದ್ಯಕ್ಕೆ ಹೆಚ್ಚು ಮಹತ್ತ್ವ ಪ್ರಾಪ್ತವಾಯಿತು. ವಚನಗಳನ್ನು ಹಾಡುವಾಗ ಕರಡೆಯನ್ನು ಬಾರಿಸುತ್ತ ಹಾಡುವ ವಾಡಿಕೆ ಆ ಕಾಲದಲ್ಲಿ ಬೆಳೆದು ಬಂದಂತೆ ತೋರುತ್ತದೆ. ವೀರಶೈವ ಸಮಾಜದಲ್ಲಿ ಕರಡಿ ಎಂಬ ಅಡ್ಡ ಹೆಸರಿನ ಮನೆತನಗಳು ಉತ್ತರ ಕರ್ನಾಟಕದಲ್ಲಿವೆ. ಪ್ರಾಯಶಃ ಕರಡೆ ಬಾರಿಸುವುದು ಇವರ ಮೂಲವೃತ್ತಿಯಾಗಿರಬಹುದು. (ಇ.ಪಿ.ಪಿ.)

**ಕರನಿರಾಕರಣ ಚಳವಳಿ :** ಪ್ರಭುತ್ವದ ರೀತಿನೀತಿಗಳು ಪ್ರಜೆಗಳಿಗೆ ಸರಿಯೆನಿಸದಾಗ, ಅವರ ಹಿತಗಳಿಗೆ ವಿರೋಧವಾಗಿ ಸರ್ಕಾರ ವರ್ತಿಸುತ್ತಿದ್ದಾಗ, ಪ್ರಜೆಗಳ ನ್ಯಾಯವಾದ ಆಶೋತ್ತರಗಳನ್ನು ಈಡೇರಿಸಲಿಕ್ಕೂ ಆಳರಸರು ಒಡಂಬಡದಿದ್ದಾಗ, ತಮ್ಮ ಹಕ್ಕಿನ ಸ್ಥಾಪನೆಗಾಗಿ, ಹಿತರಕ್ಷಣೆಗಾಗಿ, ನ್ಯಾಯದ ಪೂರೈಕೆಗಾಗಿ ಅಥವಾ ಆಶೋತ್ತರಗಳ ಈಡೇರಿಕೆಗಾಗಿ ಪ್ರಜೆಗಳು ಕೈಕೊಳ್ಳುವ ತೀವ್ರವಾದ ಮತ್ತು ಸಾಮಾನ್ಯವಾಗಿ ಕೊಟ್ಟಕೊನೆಯ ಅಹಿಂಸಾತ್ಮಕ ಅಸ್ತ್ರ; ಸರ್ಕಾರಕ್ಕೆ ಕೊಡಬೇಕಾದ ಕಂದಾಯವನ್ನು ಕೊಡಲು ನಿರಾಕರಿಸುವ ಸಾಮೂಹಿಕ ಕ್ರಮ. ಮಹಾತ್ಮ ಗಾಂಧಿಯವರ ಸತ್ಯಾಗ್ರಹಸಮರ ಕಾಲದಲ್ಲಿ ರೂಪಿತವಾಗಿ ಪ್ರಯೋಗವಾದ ಒಂದು ಮುಖ್ಯ ಅಸ್ತ್ರ. ಎಂದಿನಿಂದಲೋ ಪ್ರಜೆ ಪ್ರಭುತ್ವಗಳ ಮಧ್ಯೆ ಒಂದು ಬಗೆಯ ಒಪ್ಪಂದವಾಗಿದೆ. ಜನರ ಪ್ರಾಣ, ಮಾನ, ಆಸ್ತಿ ಪಾಸ್ತಿಗಳ ಸಂರಕ್ಷಣೆ ಮಾಡುವುದೂ ಶಾಂತಿ ಸಮಾಧಾನಗಳನ್ನು ನೆಲೆಗೊಳಿಸುವುದೂ ನಿತ್ಯ ಜೀವನ ನೆಮ್ಮದಿಯಾಗಿರಲು ಅವಶ್ಯವಾದದ್ದನ್ನೆಲ್ಲ ಮಾಡುವುದೂ ಪ್ರಭುತ್ವದ ಹೊಣೆ. ಈ ಭರವಸೆಗೆ ಪ್ರತಿಯಾಗಿ, ಸರ್ಕಾರದ ಕರ್ತವ್ಯ ನಿರ್ವಹಣೆಗಾಗಿ, ಸಮಾಜದಲ್ಲಿ ಸಮಸ್ಥಿತಿ ಸ್ಥಾಪನೆಗಾಗಿ, ಪ್ರಜೆಗಳು ಪ್ರಭುತ್ವಕ್ಕೆ ನಿಗದಿಯಾದ ಶುಲ್ಕ ಅಥವಾ ತೆರಿಗೆಯನ್ನು ವಸ್ತುರೂಪದಲ್ಲೊ, ಹಣದ ರೂಪದಲ್ಲೊ ಸಲ್ಲಿಸಬೇಕಾಗುತ್ತದೆ. ಕೃಷಿಕೈಗಾರಿಕೆ, ವ್ಯಾಪಾರ ಮುಂತಾದ ನಾನಾ ವೃತ್ತಿಗಳಲ್ಲಿ ತೊಡಗಿರುವವರು ತಮ್ಮ ವೃತ್ತಿಸೌಕರ್ಯ ಮತ್ತು ಸಂರಕ್ಷಣೆಗೆ ಪ್ರತಿಯಾಗಿ ಪ್ರಭುತ್ವಕ್ಕೆ ತಾವು ಗಳಿಸಿದ್ದರಲ್ಲೊಂದು ಭಾಗವನ್ನು ಕೊಡುತ್ತಾರೆ. ರೈತ ಪ್ರಭುತ್ವಕ್ಕೆ ಪ್ರತಿವರ್ಷ ಕೊಡುವ ಕಂದಾಯವನ್ನು ಕರವೆಂದು ಕರೆಯುವುದು ರೂಢಿ. ಕಂದಾಯವನ್ನು ಒಳಗೊಂಡು ಎಲ್ಲ ಬಗೆಯ ತೆರಿಗೆಗಳನ್ನೂ ಕರವೆನ್ನುವುದೂ ಉಂಟು.

ರಾಜ ಪ್ರಜಾಪ್ರಿಯನಾಗದೆ, ಪ್ರಜೆಯ ಹಿತಸಾಧಕನಾಗದೆ ಇದ್ದರೆ, ಪ್ರಜಾಹಿಂಸಕನಾದರೆ ಪ್ರಜೆ ಪ್ರತಿಭಟಿಸಬಹುದು. ಇದು ಅವನ ಮೂಲಭೂತಹಕ್ಕು. ರಾಜ ದುಷ್ಟನಾದರೆ, ಪ್ರಜಾಪೀಡಕನಾದರೆ ಪ್ರಜೆಗಳು ಅವನನ್ನು ಹುಚ್ಚುನಾಯಿಯಂತೆ ಭಾವಿಸಿ, ಬೇಟೆಯಾಡಿ ಕೊಲ್ಲಬಹುದೆಂದು ಪ್ರತಿಪಾದಿಸುವವರೆಗೂ ಭಾರತದ ರಾಜನೀತಿಶಾಸ್ತ್ರಜ್ಞರು ಹೋಗಿದ್ದಾರೆ. ನ್ಯಾಯವಾದ ಕಾರಣಗಳಿಗಾಗಿ ರೈತರು ಕಂದಾಯ ಸಲ್ಲಿಸದೆ ನಿರಾಕರಿಸಲು ಸಹ ಅಧಿಕಾರ ಉಳ್ಳವರಾಗಿದ್ದಾರೆ. ಅಷ್ಟು ಮಾತ್ರವಲ್ಲ, ಪ್ರಜೆಗಳಿಗೂ ಪ್ರಭುತ್ವಕ್ಕೂ ಘರ್ಷಣೆ ಉಂಟಾದಾಗ ಪ್ರಜೆಗಳು ಪ್ರಭುತ್ವದ ರೀತಿನೀತಿಗಳನ್ನು ಪ್ರತಿಭಟಿಸಿದ್ದಾರೆ. ಸಾಮೂಹಿಕವಾಗಿ ಹಳ್ಳಿಹಳ್ಳಿಗಳನ್ನೇ ಬರಿದುಮಾಡಿ, ದೇಶ ಬಿಟ್ಟುಹೋದ ಉದಾಹರಣೆಗಳಿವೆ. ಅಂಥ ಸಂದರ್ಭಗಳಲ್ಲಿ ಪ್ರಭುತ್ವದವರು ಪ್ರಜೆಗಳನ್ನು ಬರಮಾಡಿಕೊಂಡು, ಮಾತುಕತೆ ನಡೆಸಿ, ಅವರಿಗಾದ ಅನ್ಯಾಯಗಳನ್ನು ಸರಿಪಡಿಸಿ, ಪರಸ್ಪರ ಬಾಂಧವ್ಯವನ್ನು ಸುಗಮಗೊಳಿಸಿದ್ದಾರೆ.

ಸ್ವಾತಂತ್ರ್ಯಸಾಧನೆಗಾಗಿ ಭಾರತ ಬ್ರಿಟಿಷ್ ಸಾಮ್ರಾಜ್ಯದೊಂದಿಗೆ ಹೋರಾಟ ನಡೆಸಿದ್ದ ಕಾಲದಲ್ಲಿ ಮಹಾತ್ಮಗಾಂಧಿಯವರು ಈ ಸಂಗ್ರಾಮದ ನಾಯಕತ್ವ ವಹಿಸಿಕೊಂಡ ಮೇಲೆ ಅವರು ಇದಕ್ಕೆ ರೂಪ ಕೊಟ್ಟರು. ಶಸ್ತ್ರಾಸ್ತ್ರಗಳನ್ನು ನಿರಾಕರಿಸಿ, ಅಹಿಂಸೆಯ ಮಾರ್ಗವನ್ನು ಅನುಸರಿಸಿ, ಸತ್ಯವನ್ನಾಶ್ರಯಿಸಿ ನಡೆಸಿದ ಮಹಾಸಂಗ್ರಾಮವದು. ಒಂದು ಜನಾಂಗ ಶಾಂತಿಯಿಂದ, ತ್ಯಾಗದಿಂದ, ಪ್ರೇಮದಿಂದ ಪರಶತ್ರುವನ್ನು ಗೆಲ್ಲಬಹುದೆಂಬುದನ್ನು ಮಾನವಕುಲದ ಅನುಭವಕ್ಕೆ ಗಾಂಧಿಯವರು ತಂದುಕೊಟ್ಟರು. ಸತ್ಯ, ತ್ಯಾಗ, ಅಹಿಂಸೆಗಳೆಂಬ ತ್ರಿಮುಖ ಅಸ್ತ್ರಕ್ಕೆ ಅವರು ಸತ್ಯಾಗ್ರಹವೆಂದು ಹೆಸರಿಟ್ಟರು. ಈ ಅಸ್ತ್ರ ಪ್ರಯೋಗಾರ್ಹತೆ ಪಡೆಯುವುದೂ ಗಾಂಧಿಯವರಿಂದ ಪ್ರಶಸ್ತಿ ಪಡೆಯುವುದೂ ಸಾಮಾನ್ಯವಾಗಿರಲಿಲ್ಲ. ಇಂಥ ಅಸ್ತ್ರಪ್ರಯೋಗ ಸಾಧನೆಯಲ್ಲಿ ಗಾಂಧಿಯವರು ಅನೇಕ ಭಾರತೀಯರನ್ನು ನಿಪುಣರನ್ನಾಗಿ ಮಾಡಿದರು. ಅವರಿಗೊಂದು ನವೀನ ಸಂಸ್ಕಾರವನ್ನೇ ಗಳಿಸಿಕೊಟ್ಟರು. ದುಷ್ಕರ್ಮದಲ್ಲಿ ತೊಡಗುವ ಸರ್ಕಾರದೊಂದಿಗೆ, ತಮಗೆ ಬೇಡವೆನಿಸಿದ ಸರ್ಕಾರದೊಂದಿಗೆ, ಅಸಹಕಾರಮಾಡುವುದು ಪ್ರತಿಯೊಬ್ಬ ಪ್ರಜೆಯ ಈಶ್ವರದತ್ತವಾದ ಹಕ್ಕೆಂದರು. ದುಷ್ಕರ್ಮದೊಂದಿಗೆ ಸಹಕಾರ ಮಾಡಬಾರದೆಂಬ ತತ್ತ್ವದ ಪ್ರತಿಪಾದನೆ ಮಾಡಿದರು.

ಗಾಂಧೀಜಿಯವರ ಸತ್ಯಾಗ್ರಹ ಪ್ರಯೋಗಾವಸರದಲ್ಲಿ ನಾನಾ ಘಟ್ಟಗಳುಂಟು. ಕಟ್ಟಕಡೆಯ ಘಟ್ಟ ಕರನಿರಾಕರಣ. ಗಾಂಧಿಯವರು ನಡೆಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ, ಅವರ ಒಪ್ಪಿಗೆ ಪಡೆದು, ಒಂದೆರಡು ಪ್ರಾಂತ್ಯಗಳಲ್ಲಿ ಮಾತ್ರ ಸತ್ಯಾಗ್ರಹಿಗಳು ಕರನಿರಾಕರಣವನ್ನಾರಂಭಿಸಿದರು. ಗುಜರಾತಿನಲ್ಲೂ ಕರ್ನಾಟಕ ಪ್ರಾಂತ್ಯದ ಕೆಲವು ತಾಲ್ಲೂಕುಗಳಲ್ಲೂ ಮಾತ್ರವೇ ತೃಪ್ತಿಕರವಾಗಿ ಈ ಆಂದೋಲನ ಸಾಗಿತು.

ಕರ್ನಾಟಕದ ಶಿರಸಿ, ಸಿದ್ದಾಪುರ, ಅಂಕೋಲ ಮತ್ತು ಹಿರೇಕೆರೂರು ಈ ನಾಲ್ಕು ತಾಲ್ಲೂಕುಗಳ ಜನ ಗಾಂಧೀಜಿಯವರ ನಿರ್ಮಲ ಕಲ್ಪನೆ ಮತ್ತು ಪವಿತ್ರಭಾವನೆಗೆ ಲೇಶವೂ ಊನ ಬಾರದಂತೆ ಉಪ್ಪಿನ ಸತ್ಯಾಗ್ರಹ, ಅರಣ್ಯ ಸತ್ಯಾಗ್ರಹ, ಹುಲ್ಲುಬನಿ ಕರನಿರಾಕರಣ ಮೊದಲಾದುವುಗಳನ್ನು ನಡೆಸಿದರು. ಅಂಕೋಲದ್ದು ಒಂದು ಧ್ಯೇಯಕ್ಕಾಗಿ ನಡೆದ (1930 ಏಪ್ರಿಲ್) ಸತ್ಯಾಗ್ರಹವೆನ್ನಬಹುದಾದರೂ ಉಳಿದ ತಾಲ್ಲೂಕುಗಳಲ್ಲಿ ನಡೆದದ್ದು ಒಂದು ಅನಿವಾರ್ಯ ಸನ್ನಿವೇಶದಿಂದಲೂ ಪ್ರಭಾವಿತವಾದದ್ದು ಎಂಬುದನ್ನು ಮರೆಯುವಂತಿಲ್ಲ.

1931ರಲ್ಲಿ ಶಿರಸಿ, ಸಿದ್ದಾಪುರ, ಹಿರೇಕೆರೂರು - ಈ ಮೂರು ತಾಲ್ಲೂಕುಗಳಲ್ಲೂ ಕ್ಷಾಮ ಆವರಿಸಿತು. ದವಸ ಧಾನ್ಯಗಳ ಧಾರಣೆಗಳು ಬಿದ್ದುವು. ಶಿರಸಿ, ಸಿದ್ದಾಪುರಗಳ ಸುವರ್ಣಾದಾಯದ ಬೆಳೆಯೆಂದರೆ ಅಡಿಕೆ. ಏನೋ ಕಾರಣದಿಂದ ಆ ಬೆಳೆ ಹಾಳಾಯಿತು. ರೂಪಾಯಿಗೆ ನಾಲ್ಕಾಣೆ (ಕಾಲುಭಾಗ) ಬೆಳೆ ಕೂಡ ರೈತರ ಕೈ ಹತ್ತಲಿಲ್ಲ. ಆ ವರ್ಷ ಕಂದಾಯ ವಸೂಲು ಮಾಡಬಾರದೆಂದು ರೈತರು ಸರ್ಕಾರದಲ್ಲಿ ಮೊರೆ ಇಟ್ಟರು. ಅದು ಬರಿಯ ಅರಣ್ಯರೋದನವಾಯಿತು. ಸರ್ಕಾರ ಆ ಮೊರೆಗೆ ಕಿವಿಗೊಡಲಿಲ್ಲ. ಕ್ಷಾಮ ಸಂಭವಿಸಿಲ್ಲವೆಂದೂ ಬೆಳೆಯಾಗಿಲ್ಲವೆಂಬ ಮಾತು ಸುಳ್ಳೆಂದೂ ಇದು ಕರನಿರಾಕರಣ ಚಳವಳಿಯೆಂದೂ ಸರ್ಕಾರ ವಾದಿಸಿತು. ಆದರೆ ಕ್ಷಾಮ ಪ್ರಾಪ್ತಿಯಾಗಿದ್ದುದು ನಿಜ. ರೈತರೂ ಕಂಗಾಲಾಗಿದ್ದುದೂ ನಿಜ. ಚಳವಳಿಯ ನಾಯಕತ್ವವನ್ನು ರಾಜಕಾರಣಿಗಳು (ಹಾಗೆಂದು ಸರ್ಕಾರದವರು ಅವರನ್ನು ಕರೆದರು) ವಹಿಸಿದ್ದರೆಂಬುದೂ ನಿಜ. ಆದರೆ ಕ್ಷಾಮವೇ ಚಳವಳಿಗೆ ಮೂಲ ಕಾರಣವೆಂಬ, ಚಳವಳಿಯ ನಾಯಕರು ರಾಜಕಾರಣಿಗಳೇ ಆದರೂ ರೈತರ ನ್ಯಾಯವಾದ ಬೇಡಿಕೆಯನ್ನು ಈಡೇರಿಸಬೇಕೆಂಬ ವಾದಕ್ಕೆ ಸರ್ಕಾರ ವಿಮುಖವಾಗಿತ್ತು.

ಮೂರೂ ತಾಲ್ಲೂಕುಗಳ ರೈತರೂ ಶಾಸನಬದ್ಧವಾಗಿ, ಶಾಂತರೀತಿಯಿಂದ ನಡೆದುಕೊಂಡರು. ಇದು ಸಂಪೂರ್ಣವಾಗಿ ಆರ್ಥಿಕ ದುಃಸ್ಥಿತಿಯ ಹೋರಾಟ, ರಾಜಕೀಯ ಹೋರಾಟವಲ್ಲ ಎಂಬುದನ್ನು ಸ್ಥಾಪಿಸಿದರು. ಅರ್ಜಿಗಳನ್ನು ಹಾಕಿದರು. ಸಭೆಗಳನ್ನು ನಡೆಸಿದರು, ನಿರ್ಣಯಗಳನ್ನು ಮಾಡಿದರು, ಜಿಲ್ಲೆಯ ಅಧಿಕಾರಿಗಳನ್ನು ಕಂಡರು, ತಮ್ಮ ಕಷ್ಟಗಳನ್ನು ವಿವರಿಸಿದರು, ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ಬೇರೆ ದಾರಿಕಾಣದೆ ರೈತರು ಸಾಂಗವಾಗಿ ಕರನಿರಾಕರಣ ಸತ್ಯಾಗ್ರಹವನ್ನಾರಂಭಿಸಿದರು. ಸರ್ಕಾರ ದಂಡಧಾರಿಯಾಯಿತು. ರೈತರನ್ನು ಹಿಂಸಿಸಲಾರಂಭಿಸಿತು.

ಶಿರಸಿ, ಸಿದ್ದಾಪುರಗಳ ರೈತರ ವ್ಯವಹಾರ 1923 ರಿಂದ ಹಿರಿಯ ರೆವೆನ್ಯೂ ಅಧಿಕಾರಿ ಕಾಲ್ವೆನನ ಪರಿಶೀಲನೆಯಲ್ಲಿತ್ತು. ಇವೆರಡೂ ತಾಲ್ಲೂಕುಗಳಲ್ಲೂ ಈತ ಸಂಚಾರ ಮಾಡಿ, ಆರ್ಥಿಕ ಪರಿಶೀಲನೆ ನಡೆಸಿದ. ಕಂದಾಯದ ಮೊತ್ತವನ್ನು ಶಾಶ್ವತವಾಗಿ ಕಡಿಮೆಮಾಡಬೇಕೆಂದು ಸರ್ಕಾರಕ್ಕೆ ಸಲಹೆ ಮಾಡಿದ. ಆದರೆ ಸರ್ಕಾರ ಈ ಸಲಹೆಗಳನ್ನು ಪುರಸ್ಕರಿಸಲಿಲ್ಲ.

ಮೂರೂ ತಾಲ್ಲೂಕುಗಳ ರೈತರೂ ದೃಢಸಂಕಲ್ಪರಾದರು. ಕಂದಾಯವನ್ನು ಕೊಡುವುದಿಲ್ಲವೆಂದು ಹೇಳಿದರು. ಅಧಿಕಾರಿಗಳು ಜಮೀನುಗಳನ್ನು ಜಪ್ತಿ ಮಾಡಿದರು, ರೈತರಿಗೆ ಕೊಡಬಾರದ ಹಿಂಸೆ ಕೊಟ್ಟರು. ಜಮೀನುಗಳನ್ನು ಮುಟ್ಟುಗೋಲು ಹಾಕಿಕೊಂಡರು. ಯಾವ ರೈತರೂ ಪ್ರತಿಭಟಿಸಲಿಲ್ಲ. ಜಮೀನು ಹರಾಜಿನಲ್ಲಿ ಸವಾಲು ಕೂಗುವವರೇ ಇರಲಿಲ್ಲ. ಎಂಟುನೂರಕ್ಕೂ ಮೀರಿ ಜಪ್ತಿಗಳಾದುವು. ಇನ್ನೂರು ಮಂದಿಗೆ ಮುಟ್ಟುಗೋಲು ನೋಟೀಸ್ ಕೊಡಲಾಯಿತು. ಉಭಯ ಪಕ್ಷಗಳ ಮಧ್ಯೆ ಹೀಗೆ ಹೋರಾಟವಾಗುತ್ತಿದ್ದಾಗ 1931 ಮಾರ್ಚ್ 4ರಂದು, ಗಾಂಧಿ - ಇರ್ವಿನ್ ಒಡಂಬಡಿಕೆಯಾಯಿತು. ಚಳವಳಿ ನಿಂತಿತು.

ಜಮೀನುಗಳು ಹರಾಜಾಗುತ್ತಿದ್ದ ಕಾಲದಲ್ಲಿ ಸ್ವಯಂ ಸೇವಕರನೇಕರು ಪಿಕೆಟ್‌ಮಾಡುತ್ತಿದ್ದರು. ಸರ್ಕಾರದವರು ಇವರ ಮೇಲೆಲ್ಲ ನಾನಾ ಆಪಾದನೆಗಳನ್ನು ಹೊರಿಸಿ ಮೊಕದ್ದಮೆಗಳನ್ನು ಹೂಡಿ, ವಿಚಾರಣೆಗೊಳಪಡಿಸಿ, ಇವರಿಗೆಲ್ಲ ಶಿಕ್ಷೆ ಕೊಡಿಸಿದ್ದರು. ಸ್ವಯಂಸೇವಕರ ನೇಕರಿಗೆ ಈ ತಾಲ್ಲೂಕು ಬಿಟ್ಟು ಹೊರಡಬೇಕೆಂದು ತಿಳಿವಳಿಕೆ ಕೊಟ್ಟಿದ್ದರು. ಧಾರವಾಡ, ಬೆಳಗಾಂವಿ ಕಡೆಗಳಲ್ಲಿ ಮನೆಗಳ ಶೋಧನೆ ನಡೆಸಿ, ಪಿತೂರಿ ಮತ್ತು ರಾಜದ್ರೋಹ ಆಪಾದನೆಗಳಿಗಾಗಿ ಹಲವರ ಮೇಲೆ ಮೊಕದ್ದಮೆಗಳನ್ನು ಹೂಡುವ ಸಿದ್ಧತೆ ನಡೆದಿತ್ತು. ಆದರೆ ಒಡಂಬಡಿಕೆಯಿಂದಾಗಿ ಅದನ್ನೆಲ್ಲ ಕೈಬಿಡಬೇಕಾಯಿತು.

ಕಟ್ಟಕಡೆಗೆ ರೈತರ ಮೊರೆ ಸಾಧುವಾದದ್ದು ಎಂಬುದು ಸರ್ಕಾರದವರ ಮನಸ್ಸಿಗೆ ಬಂತು. ನಿಜವಾಗಿಯೂ ಇದು ಆರ್ಥಿಕ ದುಃಸ್ಥಿತಿಯ ಚಳವಳಿ ಎಂಬುದನ್ನು ಅಧಿಕಾರಿಗಳು ಗ್ರಹಿಸಿದರು. ಈ ಅಂಶವನ್ನು ಗಾಂಧೀಜಿಯವರು ಲಾರ್ಡ್ ಇರ್ವಿನ್ನನ ಗಮನಕ್ಕೆ ತಂದು ಅವನನ್ನೊಪ್ಪಿಸಿದರು. 1931 ಮೇ ತಿಂಗಳಿನಲ್ಲಿ ರೆವಿನ್ಯೂ ಕಮೀಷನರೊಂದಿಗೆ ಆದ ಒಡಂಬಡಿಕೆಯ ಫಲವಾಗಿ ಹಿರೇಕೆರೂರು ತಾಲ್ಲೂಕಿನ ರೈತರಿಗೆ ತೃಪ್ತಿಕರ ಪರಿಹಾರ ಸಿಕ್ಕಿತು. ಆ ವರ್ಷದ ಕಂದಾಯವನ್ನು ರದ್ದುಮಾಡಲಾಯಿತು.

ಆದರೆ ಶಿರಸಿ ಸಿದ್ದಾಪುರಗಳ ರೈತರ ವಿಚಾರದಲ್ಲಿ ಹೀಗಾಗಲಿಲ್ಲ. ರೈತರೊಬ್ಬೊಬ್ಬರೂ ಅರ್ಜಿಹಾಕಿಕೊಂಡರೆ ವಿಚಾರಮಾಡಿ ಸಂದರ್ಭಾನುಸಾರ ಕಂದಾಯಪರಿಹಾರ ಕೊಡುವುದಾಗಿ ಸರ್ಕಾರಿ ಅಧಿಕಾರಿಗಳು ಕೊಸರಾಟ ಮಾಡಿದರಲ್ಲದೆ ರೈತರಿಗೆ ಕಿರುಕುಳ ಕೊಟ್ಟರು. ಸ್ಥಳೀಯ ಅಧಿಕಾರಿಗಳು ಸರ್ಕಾರದ ಆಜ್ಞೆಗಳಿಗೆ ತಮ್ಮದೇ ಆದ ಭಾಷ್ಯ ಮಾಡಿದ್ದರಿಂದ ಬಡರೈತರಿಗೆ ಸಹಿಸಲಾಗದಷ್ಟು ಹಿಂಸೆ ಉಂಟಾಯಿತು. ಕಡೆಗೆ ಇಲ್ಲೂ ರೈತರಿಗೆ ಗೆಲವು ಸಿಕ್ಕಿತು. ಬಂಧನದಲ್ಲಿದ್ದವರೆಲ್ಲರ ಬಿಡುಗಡೆಯಾಯಿತು. ನ್ಯಾಯಾಸ್ಥಾನಗಳಲ್ಲಿ ಹೂಡಿದ್ದ ಮೊಕದ್ದಮೆಗಳನ್ನೆಲ್ಲ ಅಧಿಕಾರಿಗಳು ಹಿಂದಕ್ಕೆ ತೆಗೆದುಕೊಂಡರು. ಕಡೆಗೂ ಕರನಿರಾಕರಣ ಸತ್ಯಾಗ್ರಹ ರೈತರ ಜಯದಲ್ಲಿ ಮುಕ್ತಾಯವಾಯಿತು.

1931-1932ರ ಕರ ನಿರಾಕರಣ ಸತ್ಯಾಗ್ರಹದ ಮಾತು ಬಂದಾಗ, ಉತ್ತರ ಕನ್ನಡ ಜಿಲ್ಲೆಯ ರೈತರ ಸತ್ತ್ವ ಮತ್ತು ಕ್ಷಾತ್ರಗುಣಗಳನ್ನು ಗಣನೆಗೆ ತೆಗೆದುಕೊಂಡಾಗ ಯಾರಿಗಾದರೂ ಹೆಮ್ಮೆಯಾಗುತ್ತದೆ. ಆ ಅಪೂರ್ವ ಸಂಗ್ರಾಮದಲ್ಲಿ ಗಂಡಸರೂ ಹೆಂಗಸರೂ ಸಾಮಾನ್ಯ ಕಲ್ಪನೆಗೆ ಮೀರಿದ ತ್ಯಾಗ ತೋರಿಸಿದರು. ಬೀಳಗಿಯ ಶ್ರೀ ಕೃಷ್ಣ, ಬಾಲಕೃಷ್ಣ ಪುರಾಣಿಕರು ಕರನಿರಾಕರಿಸಿದ ಕಾರಣ ಬಂಧನಕ್ಕೊಳಗಾದರು. ಅವರನ್ನು ಜನ ಮೆರವಣಿಗೆ ಮಾಡಿ ಪೊಲೀಸ್ ಠಾಣೆಗೆ ಕರೆದೊಯ್ದರು. ಪುರಾಣಿಕರಾಗ ತಮ್ಮ ಹೆಂಡತಿಗೆ ಹೇಳಿದ ಮಾತಿದು 'ನಮ್ಮ ಹೊಲ, ಮನೆ ಆಸ್ತಿಗಳೆಲ್ಲವನ್ನೂ ಈ ಧರ್ಮಯುದ್ಧದಲ್ಲಿ ನಾವು ಕಳೆದುಕೊಂಡರೂ ಹೆದರಬೇಕಿಲ್ಲ. ಪಾದಚಾರಿಗಳಾಗಿ ನಾವು ಊರಿಂದೂರಿಗೆ ಭಿಕ್ಷಾಟನೆ ಮಾಡುತ್ತ ಕಾಶೀಯಾತ್ರೆಗೆ ಹೋಗೋಣ. ಸರ್ಕಾರಕ್ಕೆ ಒಂದು ಕಾಸೂ ಕೊಡಬೇಡ. ತೀರ್ವೆ ಕೊಟ್ಟು ಪಾಪ ಕಟ್ಟಿಕೊಳ್ಳಬೇಡ. ಒಂದು ವೇಳೆ ಸರ್ಕಾರದವರು ಒತ್ತಾಯಮಾಡಿ ವಸೂಲುಮಾಡಲು ಪ್ರಯತ್ನಿಸಿದ್ದಾದರೆ ನಮ್ಮ ಕಾಳು ಕಡ್ಡಿ, ಮನೆ ಮಾರು, ಅವರ ಕೈಗೆ ಸಿಗದಂತೆ ಅವುಗಳನ್ನು ಅಗ್ನಿನಾರಾಯಣನಿಗೆ ಆಹುತಿ ಮಾಡಿಬಿಡು', ಇದಕ್ಕೆ ವ್ಯಾಖ್ಯಾನ ಬೇಕಿಲ್ಲ. ಕರನಿರಾಕರಣ ಸತ್ಯಾಗ್ರಹಿಗಳ ಸ್ವರೂಪ ನಿದರ್ಶನಕ್ಕೆ ಇದೊಂದು ಉದಾಹರಣೆ.

ಊರು ಬಿಟ್ಟು ಶಿಬಿರ ಸೇರಿದ್ದ ಗಂಡಸರ ಸುಳಿವನ್ನು ಪತ್ತೆ ಹಚ್ಚಲು ಪೊಲೀಸರು ಕೈಕೊಂಡ ನಾನಾ ಬೆದರಿಕೆಯ ಕ್ರಮಗಳಿಗೆ ಸ್ತ್ರೀಯರು ಬಗ್ಗದೆ ಸ್ಥೈರ್ಯದಿಂದ ನಿಂತು ಎದುರಿಸಿದ್ದು ಇತಿಹಾಸದ ಪುಟಗಳಲ್ಲಿ ಸೇರಿಹೋಗಿದೆ.

ತಮಗಾಗಲಿ, ತಮ್ಮ ಹೆಂಡಿರುಮಕ್ಕಳಿಗಾಗಲಿ ಸ್ವಲ್ಪಮಾತ್ರ ಅಪಮಾನವಾದರೆ ಸಹಿಸಲಾರದ ನಾಡಜನರು ಈ ಎಲ್ಲ ಕ್ರಮಗಳ ಎದುರಿನಲ್ಲೂ ತಾಳ್ಮೆ ವಹಿಸಿ ಅಹಿಂಸಾವ್ರತವನ್ನು ಪಾಲಿಸಿದರು. ಇದು ಅವರ ಸತ್ತ್ವಪರೀಕ್ಷೆಯ ಪ್ರಸಂಗವಾಗಿ ಪರಿಣಮಿಸಿತು. ಗಾಂಧೀಜಿಯವರಲ್ಲಿ, ಅವರ ಅಹಿಂಸಾತತ್ತ್ವದಲ್ಲಿ ಆಗ ನಾಡವರಿಗಿದ್ದ ನಿಷ್ಠೆಯ

ಪರಾಕಾಷ್ಠತೆಯಿಂದಾಗಿಯೇ ಅವರು ಇಂಥ ಉದ್ವೇಗಜನಕ ಸನ್ನಿವೇಶದಲ್ಲಿ ತಾಳ್ಮೆ ವಹಿಸುವುದು ಸಾಧ್ಯವಾಯಿತೆನ್ನಬಹುದು.

*

**ಕರಪಾಲ ಮೇಳ :** ಉತ್ತರ ಕರ್ನಾಟಕದಿಂದ ದಕ್ಷಿಣ ಕರ್ನಾಟಕಕ್ಕೆ ಬಂದ ಒಂದು ಜನಪದ ಕಲೆ. ದಕ್ಷಿಣ ಕರ್ನಾಟಕದ ತುಮಕೂರು, ಹಾಸನ, ಚಿತ್ರದುರ್ಗ, ಶಿವಮೊಗ್ಗ ಜಿಲ್ಲೆಗಳಲ್ಲಿ ಅಲ್ಲಲ್ಲಿ ಇನ್ನೂ ಉಳಿದಿದೆ. ಕರಪಾಲ ಎಂಬ ಶಬ್ದ ಕರಪಲ್ಲ, ಕರಪಲ್ಲವ, ಕರತಾಲ ಎಂಬ ಶಬ್ದಗಳ ರೂಪಾಂತರವಿರಬೇಕೆಂದು ಊಹಿಸಲಾಗಿದೆ. ಬೆರಳುಗಳ ಸಂಜ್ಞೆಯ ಮೂಲಕ ಪ್ರೇಕ್ಷಕರ ಹೆಸರನ್ನು ಹೇಳುವ ಒಂದು ಸಂಪ್ರದಾಯ ಕರಪಾಲ ಮೇಳದಲ್ಲಿದ್ದಂತೆ ತೋರುತ್ತದೆ. ಗುರು ನಿರ್ದಿಷ್ಟ ವ್ಯಕ್ತಿಯ ಹೆಸರನ್ನು ತಿಳಿದು ಜನರ ನಡುವೆ ನಿಂತ ತನ್ನ ಶಿಷ್ಯನಿಗೆ ಬೆರಳುಗಳ ಮೂಲಕ ಕೆಲವು ಸಂಜ್ಞೆಗಳನ್ನು ತೋರುತ್ತಾನೆ. ಅದರ ಮೂಲಕ ಶಿಷ್ಯ ಸಂಬಂಧಪಟ್ಟ ವ್ಯಕ್ತಿಯ ಹೆಸರನ್ನು ಊಹಿಸಿ ಹೇಳುತ್ತಾನೆ. ಹೀಗೆ ಈ ಹೆಸರು ಹೇಳುವ ಸಂಪ್ರದಾಯವೂ ಹಾಡಿನಲ್ಲಿಯೇ ಬೆರೆತು ಬರುತ್ತದೆ. ಗುರು ಸೂಚಿಸಿದ ಹೆಸರು ಕಲ್ಲಪ್ಪ ಆಗಿದ್ದರೆ

ಕಲ್ಲಪ್ಪ ಹೌದೇನ್ರಿ
ಮತ್ತೀನ್ಯಾರ ಹೇಳಯ್ಯಾ
ಸುವ್ವಿ ಬಾ ಚೆನ್ನಬಸವಯ್ಯ ಸುವ್ವಿ

ಎಂಬ ಹಾಡಿನೊಂದಿಗೆ ಮುಂದುವರಿಯುತ್ತದೆ. ಈಗ ಕೈ ಬೆರಳಿನ ಸಂಜ್ಞೆಗಳ ಮೂಲಕ ಹೆಸರನ್ನು ಹಾಕುವ ಈ ಪದ್ಧತಿ ದೂರವಾಗುತ್ತಿದ್ದು ಮೇಳ ನಡೆಸುವ ಸಂಪ್ರದಾಯ ಮಾತ್ರ ಉಳಿದಿದೆ.

ಕರಪಾಲ ಮೇಳ ನಡೆಸುವುದು ಹೆಚ್ಚಾಗಿ ಹಬ್ಬಹರಿದಿನಗಳಲ್ಲಿ ಮತ್ತು ಪುಣ್ಯ ದಿನಗಳಲ್ಲಿ. ಮೇಳ ನಡೆಸುವವರು ಸಾಮಾನ್ಯವಾಗಿ ವೀರಶೈವ ಧರ್ಮದ ಅಯ್ಯಗಳು. ಅಲ್ಲಲ್ಲಿ ಬೇರೆ ಧರ್ಮೀಯರು ಭಾಗವಹಿಸಿದ ನಿದರ್ಶನಗಳೂ ಇವೆ. ಮಹಮ್ಮದೀಯ ಮತದವರೂ ಈ ಮೇಳವನ್ನು ಅತ್ಯಂತ ಆಕರ್ಷಕ ರೀತಿಯಲ್ಲಿ ನಡೆಸಿದ ಸಂದರ್ಭಗಳು ತುಮಕೂರು ಜಿಲ್ಲೆಯಲ್ಲಿ ಕಂಡುಬಂದಿದೆ. ಕರಪಾಲ ಮೇಳದಲ್ಲಿ ಯಕ್ಷಗಾನ ಬಯಲಾಟಗಳ ವರ್ಣವೈಭವ, ವೇಷಭೂಷಣಗಳ ವೈಖರಿ ಕಂಡುಬರುವುದಿಲ್ಲ. ಹೆಚ್ಚು ಸಂಖ್ಯೆಯ ಕಲಾವಿದರೂ ಇಲ್ಲಿ ಭಾಗವಹಿಸುವುದಿಲ್ಲ. ಮುಖ್ಯ ಕಥೆಗಾರ ಇಬ್ಬರು ಸಹನೃತ್ಯದವರೊಡನೆ ಜನಪ್ರಿಯ ಕಥೆಯೊಂದನ್ನು ನಾಟಕೀಯವಾಗಿ ಅಭಿನಯಿಸಿ, ನಿರೂಪಿಸಿ, ಗ್ರಾಮಾಂತರ ಜನತೆಗೆ ಮನರಂಜನೆಯನ್ನೊದಗಿಸುವನು. ಅತ್ಯಂತ ಸರಳ ರೀತಿಯಲ್ಲಿ ನೃತ್ಯ, ಸಂಗೀತ, ವೇಷಭೂಷಣಗಳನ್ನು ಒದಗಿಸಿಕೊಂಡು ತನ್ನ ಕಲೆ ಕಳೆಗಟ್ಟುವಂತೆ ಮಾಡಿಕೊಳ್ಳುವುದು ಇಲ್ಲಿನ ವೈಶಿಷ್ಟ್ಯ. ಎಲ್ಲ ದೃಷ್ಟಿಯಿಂದಲೂ ಕರಪಾಲ ಮೇಳದಲ್ಲಿ ಎದ್ದುತೋರುವ ಮುಖ್ಯ ಅಂಶ ಸರಳತೆ. ಕಥೆಯಲ್ಲಿ, ಹಾಡಿನಲ್ಲಿ, ಕುಣಿತದಲ್ಲಿ ಇತರ ಸಾಧನ ಸಲಕರಣೆಗಳಲ್ಲಿ ಈ ಅಂಶವನ್ನು ಗುರುತಿಸಬಹುದು. ಮೇಳ ನಡೆಸಲು ಸಾಕಷ್ಟು ಪ್ರೇಕ್ಷಕರು ಕೂರಲು ಅನುಕೂಲವಿರುವ ಬಯಲು ಪ್ರದೇಶ ಬೇಕು. ಊರ ಚಾವಡಿಯ ಮುಂದೊ ಗುಡಿಯ ಅಥವಾ ರಾಮ ಮಂದಿರದ ಮುಂದೊ ಬಯಲಾಟದಂತೆಯೇ ಚಪ್ಪರವನ್ನು ಹಾಕಬೇಕು. ಬಯಲಾಟದಂತೆ ವಿಡಂಗುಗಳು ಇಲ್ಲಿ ಬರುವುದಿಲ್ಲವಾದ್ದರಿಂದ ಇಲ್ಲಿನ ಚಪ್ಪರ ಬಹಳ ಚಿಕ್ಕದಾಗಿದ್ದು, ಎತ್ತರ ಏಳು ಅಥವಾ ಎಂಟು ಅಡಿ, ಉದ್ದ ಹತ್ತು ಅಡಿ, ಅಗಲ ಹತ್ತು ಅಡಿ ಇದ್ದು ಮೂರು ಮಂದಿ ಒಂದು ಸಾಲಿನಲ್ಲಿ ನಿಂತು ಹಿಂದೆ ಮುಂದೆ ಸರಿಯುತ್ತ ಕುಣಿಯಲು ಅನುಕೂಲವಾಗುವಂತಿರುತ್ತದೆ. ಯಾವ ರುದ್ರನೃತ್ಯವೂ ಇಲ್ಲಿ ಬರುವುದಿಲ್ಲವಾದ್ದರಿಂದ ರಂಗವ್ಯವಸ್ಥೆ ಸರಳವಾಗಿರುತ್ತದೆ.

ಕರಪಾಲ ಮೇಳಕ್ಕೆ ವಾದ್ಯಗಳನ್ನು ನುಡಿಸುವವರು, ಹಿಮ್ಮೇಳ ಹಾಡುವವರು ಚಪ್ಪರದ ಮುಂಭಾಗದಲ್ಲಿ ಹೊರಗೆ ಕುಳಿತಿರುತ್ತಾರೆ. ಚಪ್ಪರದ ಒಳಗೆ ಕರಪಾಲದ ಕಥೆಯನ್ನು ಅಭಿನಯಿಸುವ ಮುಖ್ಯ ನಿರೂಪಕ ಮತ್ತು ಅವನ ಎರಡು ಬದಿಯಲ್ಲಿ ಇಬ್ಬರು ನೃತ್ಯದವರು ನಿಂತಿರುತ್ತಾರೆ. ಮುಖ್ಯ ನಿರೂಪಕ ತಲೆಗೆ ಕೋಡಂಗಿಯ ಕುಲಾವಿಯ ಆಕಾರದ ವಸ್ತ್ರದ ಸಾಧನವನ್ನು ತೊಡುವನು. ಈ ಸಾಧನ ಮತ್ತು ಗಾಜಿನ ಕೊಳವೆ ಬಣ್ಣದ ವಸ್ತ್ರಗಳಿಂದ ಅಲಂಕೃತವಾಗಿದ್ದು ಕಿರೀಟದಂತಿರುತ್ತದೆ. ಅದರ ಬಲಬದಿಯಲ್ಲಿ ತುರಾಯಿ ಇಳಿಬಿದ್ದಿರುತ್ತದೆ. ಕತ್ತಿನಲ್ಲಿ ರುದ್ರಾಕ್ಷಿಯ ಸರ, ಮೈಮೇಲೆ ಕಾವಿಯ ನಿಲುವಂಗಿ, ನಡುವಿಗೆ ಮುತ್ತಿನ ಅಂಚಿನಿಂದ ಹೊಳೆಯುವ ಕಾಸೆ, ಶುಭ್ರವಸ್ತ್ರದ ಕಚ್ಚೆಯ ಪಂಚೆ, ಕಿವಿಗಳಿಗೆ ಒಂದು ಬಗೆಯ ಕುಂಡಲ, ಕಾಲಿಗೆ ಗೆಜ್ಜೆ, ಕೈಯಲ್ಲಿ ತಾಳ, ಮುಖಕ್ಕೆಲ್ಲ ಬಳಿದ ವಿಭೂತಿ, ಸೊಂಟಕ್ಕೆ ಸಿಕ್ಕಿಸಿದ-ಕರವಸ್ತ್ರ ಹೀಗೆ ಅಲಂಕೃತವಾದ ಕರಪಾಲದ ಅಯ್ಯ ನಾಟಕದ ಪಾತ್ರಧಾರಿಯಂತೆ ಸಿದ್ಧನಾಗಿ ನಿಲ್ಲುತ್ತಾನೆ. ಇವನ ಬಲಬದಿಯಲ್ಲಿ ನಿಂತ ಸಹನೃತ್ಯದವ ವೀರಗಾಸೆ ಹಾಕಿ, ಬಿಳಿ ನಿಲುವಂಗಿ ಧರಿಸಿ, ನಡುವಿಗೆ ಒಂದು ಶುಭ್ರವಸ್ತ್ರ ಬಿಗಿದು, ತಲೆಗೆ ಸವಾರನಂತೆ ಪೇಟ ಕಟ್ಟಿ ಕಾಲಿಗೆ ಗೆಜ್ಜೆಯ ಸರ ಸುತ್ತಿರುತ್ತಾನೆ. ಇವನ ನಡುವಿನಲ್ಲಿ ಮಣ್ಣಿನ ಅಚ್ಚಿನ ಢುಮಿಕಿ ಇರುತ್ತದೆ. ಇದರ ಗತ್ತನ್ನು ಅನುಸರಿಸಿ ಹಾಡು ಮತ್ತು ನೃತ್ಯ ಸಾಗುತ್ತದೆ.



ಮೇಳದಲ್ಲಿ ಹಾಡುಗಾರಿಕೆ ಮತ್ತು ಕುಣಿತ

ಕರಪಾಲದ ಅಯ್ಯನ ಎಡಬದಿಯಲ್ಲೂ ಇಂಥದೇ ವೇಷದ ಮತ್ತೊಬ್ಬ ನೃತ್ಯದವನಿದ್ದು ಆತ ಕೈಯಲ್ಲಿ ತಾಳವನ್ನು ಮಾತ್ರ ಹಿಡಿದಿರುತ್ತಾನೆ.

ಚಪ್ಪರದ ಮುಂದೆ ಕುಳಿತವರಲ್ಲಿ ಮೃದಂಗ ಮತ್ತು ಹಾರ್ಮೋನಿಯಂ ನುಡಿಸುವ ಮುಖ್ಯ ಕಲಾವಿದರು,ಇವರ ಜೊತೆ ಕೆಲವು ಮಂದಿ ಹಿಮ್ಮೇಳ ಹಾಡುವವರೂ ಇರಬಹುದು. ಚಪ್ಪರದ ಒಂದು ಕಡೆ ಬಯಲಾಟದಲ್ಲಿನಂತೆಯೇ ದೇವರ ಪಟ ಇಟ್ಟು ಪೂಜಿಸುತ್ತಾರೆ.

ಆರಂಭದಲ್ಲಿ ಮುಖ್ಯ ಕಥೆಗಾರ ತನ್ನ ಕಲಾಜ್ಞಾನದ ಬಗ್ಗೆ ನಮ್ರವಾಗಿ ಮೃದು ಮಧುರ ನುಡಿಗಳಲ್ಲಿ ಸಭಿಕರಿಗೆ ವಿನಂತಿ ಮಾಡಿಕೊಳ್ಳುತ್ತಾನೆ:

ನಾವು ಬಲ್ಲವರಲ್ಲ, ನಾವು ತಿಳಿದವರಲ್ಲ
ಯಾವ ತಪ್ಪಿದ್ದರೂ ತಿದ್ದಿಕೊಳ್ಳಬೇಕು

ದೇವತಾಸ್ತುತಿಯೊಡನೆ ತಿದ್ದಿಕೊಳ್ಳಬೇಕು ಕಥೆ ಆರಂಭವಾಗುತ್ತದೆ:

ತಪ್ಪುಗಳಿದ್ದರೆ ಒಪ್ಪಿಕೊಳ್ಳಯ್ಯ ದೇವ
ಸಾವಿರದ ಒಂದು ಶರಣಾರ್ಥಿ ನಿನಗೆ

ಹೀಗೆ ತಮ್ಮ ಆರಾಧ್ಯದೈವದ ಪಾದಮೂಲಕ್ಕೆ ಶರಣಾರ್ಥಿಯನ್ನು ಅರ್ಪಿಸಿ ತಾಳಮೇಳಗಳೊಡನೆ ಮುಖ್ಯ ನಿರೂಪಕ ಕಥಾರಂಭ ಮಾಡುತ್ತಾನೆ. ವಿಶಿಷ್ಟ ಭಂಗಿಯಲ್ಲಿ ಹೆಜ್ಜೆಯನ್ನು ಹಾಕುತ್ತ ತಾಳದ ನಾದಕ್ಕೆ ತಕ್ಕಂತೆ ಬಾಗುತ್ತ ಬಳುಕುತ್ತ ಹಿಂದೆ ನಾಲ್ಕು ಗಜ ಸರಿಯುತ್ತ ಮತ್ತೆ ಮುಂದೆ ಚಪ್ಪರದ ಅಂಚನ್ನು ಮುಟ್ಟುತ್ತ ಕುಣಿಯತೊಡಗುತ್ತಾನೆ:

ಮುಂದಣ ಕತೆಯ ಅದರಂದವ ಪೇಳುವೆ
ಚಂದ್ರಶೇಖರ ನಮಗೆ ವರಕೊಡೆಲೊ ದೇವ

ಕರಪಾಲದ ಹಾಡುಗಳಲ್ಲಿ ಅನೇಕ ವರ್ಣನೆಗಳು ಬರುತ್ತವೆ. ಆದರೂ ಎಲ್ಲಿಯೂ ಅನಗತ್ಯವಾಗಿ ವಿಸ್ತರಿಸುವ ಬಗೆ ಕಾಣುವುದಿಲ್ಲ. ತನ್ನ ಅನುಭವಕ್ಕೆ ಮಾತ್ರ ನಿಲುಕುವ ವರ್ಣನೆಗಳನ್ನು ಕಥೆಗಾರ ತರುತ್ತಾನೆ. ನಗರ ವರ್ಣನೆಯ ವೈಖರಿಯಿದು:

ಹಾಲು ಮಾರುವ ಬೀದಿ ನೂಲು ಮಾರುವ ಬೀದಿ
ಶಾಲು ಸಕಲಾತಿಗಳ ಮಾರುವ ಬೀದಿ

ಪ್ರಕೃತಿವರ್ಣನೆಯೂ ಕಥಾಸೂತ್ರದೊಡನೆ ಬೆಸೆದುಕೊಂಡೇ ಬರುತ್ತದೆ:

ಘೋರ ಕಾನನದೊಳಗೆ ನೀರಿಲ್ಲ ನೆರಳಿಲ್ಲ
ಹಾರುವ ಪಕ್ಷಿಗಳ ಸುಳಿವಿಲ್ಲ ದೇವ
ಅಡವಿಗಿಡಮರದಲ್ಲಿ ಎಡವಿ ಮುಗ್ಗರಿಸುತ್ತ
ತಡವರಿಸಿ ಹೊರಟಳು ಅರಣ್ಯದೊಳಗೆ
ಎನ್ನ ಮನೆಗೆ ಬಾರೊ ಹೊನ್ನ ಪುತ್ಥಳಿಗೊಂಬೆ
ಬಾರಯ್ಯ ನನ ಮಗನೆ ಮುದ್ದು ಮಗನೆ ಬಾರೊ

ಇಂಥ ಎಷ್ಟೋ ಹಾಡುಗಳು ಕಥೆಯ ಮಧ್ಯೆ ಮಧ್ಯೆ ಬರುತ್ತವೆ. ಯಾವುದೋ ಘಟ್ಟದಲ್ಲಿ ಮುಖ್ಯ ಕಥೆಯನ್ನು ನಿಲ್ಲಿಸಿ ಶೋಕಭಾವದಿಂದ ತಣಿದ ಪ್ರೇಕ್ಷಕರನ್ನು ನಗೆಯಲ್ಲಿ ತೇಲಿಸುವ ಉಪಕಥೆ ಮುಗಿದಮೇಲೆ ಮತ್ತೆ ಕಥೆಗಾರ ಮುಖ್ಯ ಕಥೆಗೆ ಬರುವ ಬಗೆ ಸುಂದರವಾಗಿರುತ್ತದೆ:

ಅಲ್ಲಿಗಲ್ಲಿಗೆ ಕಥೆಯು ಮಲ್ಲಿಗೆ ವಾಸನೆಯು
ಬಲ್ಲಂಥ ಜಾಣರಿಗೆ ಇದು ಮಧುರವಯ್ಯಾ ಅತಿಮಧುರವಯ್ಯಾ
ಮುಂದಲ ಕಥೆಯ ಅದರಂದವ ಪೇಳುವೆನು
ಚಂದ್ರಶೇಖರ ನಮಗೆ ವರ ಕೊಡೆಲೊ ದೇವ ವರ ಕೊಡೆಲೋ ದೇವ

ಕಥೆ ಗುರುಶಿಷ್ಯರ ಸಂಭಾಷಣೆಯಲ್ಲಿ ಸಾಗುತ್ತದೆ. ಮುಖ್ಯ ಕಥೆಗಾರ ಗುರು. ಆತ ತನ್ನ ಪಕ್ಕದ ನೃತ್ಯಗಾರನನ್ನು ಕುರಿತು ಹೀಗೆ ಹೇಳುತ್ತಾನೆ-

ಅಯ್ಯ ಮಗು ಕೇಳಬೇಕಯ್ಯ
ಆಗಲಿ ಗುರುವೇ .........
ಶುಭದಿನ, ಶುಭಲಗ್ನ, ಶುಭತಿಥಿಯಲ್ಲಿ
ಚದುರಂಗರಾಯರು ಹೇಗೆ ಹೊರಟಿದ್ದಾರಯ್ಯಾ ........
ಹೇಗೆ ಹೊರಟಿದ್ದಾರೆ ಗುರುವೇ .........

ಹೀಗೆ ಸಂಭಾಷಣೆಯಿಂದ ತಟ್ಟನೆ ಹಾಡಿಗೆ ಜಿಗಿಯುತ್ತಾನೆ:

ಕುದುರೆಯ ಕುಣಿಸುತ ಹುರಿಮೀಸೆ ತಿರುವುತ
ಹೊರಟನೇ ರಾಯ ಚದುರಂಗರಾಯ

ಹಾಡನ್ನು ಮುಗಿಸಿ ಮತ್ತೆ ಮನೋಜ್ಞವಾದ ಗದ್ಯಕಥನಕ್ಕೆ ತೊಡಗುತ್ತಾನೆ.

ಆ ಪರಮಾತ್ಮನ ಲೀಲಾಮಯದಿಂದ ಚದುರಂಗರಾಯರು ಹೋಗುತ್ತಿರಬೇಕಾದರೆ,

ಮುಂದೆ ಏನಾಯಿತಪ್ಪಾ?
ಏನಾಯಿತು ಗುರುವೆ?

ಪಂಚವರ್ಣದ ಗಿಳಿಯೊಂದು ಕಾಣಿಸಿಕೊಂಡಿದೆ. ಆ ಕಾಡಾರಣ್ಯದಲ್ಲಿ ಚದುರಂಗರಾಯರು ಆ ಗಿಳಿಯನ್ನು ಹಿಂಬಾಲಿಸಿ ಹೋಗಿದ್ದಾರೆ - ಹೀಗೆ ಕರಪಾಲ ಮೇಳದ ವಚನ ಭಾಗವೂ ಒಂದು ರೀತಿಯಲ್ಲಿ ಪದ್ಯಗಂಧಿಯಾಗಿಯೇ ಇದ್ದು ತನ್ನದೇ ಆದ ಗತ್ತಿನಲ್ಲಿ ನಿರೂಪಿಸುವುದರ ಮೂಲಕ ಆಕರ್ಷಕವಾಗಿರುತ್ತದೆ.

ಕರಪಾಲ ಮೇಳ ಬಹುಮಟ್ಟಿಗೆ ಬಯಲಾಟ ಸಂಪ್ರದಾಯವನ್ನು ಹೋಲುತ್ತದೆ. ಬಯಲಾಟದ ಭಾಗವತರು ಹಾಡುಗಾರಿಕೆಯಲ್ಲಿ ಮುಂದಿನ ಸೊಲ್ಲನ್ನು ಎತ್ತಿಕೊಟ್ಟರೆ ಹಿಮ್ಮೇಳದವರು ಪೂರ್ಣಗೊಳಿಸುವ ಅದೇ ಕ್ರಮ ಇಲ್ಲಿಯೂ ಕಂಡುಬರುತ್ತದೆ. ಅಲ್ಲಿ ಭಾಗವತರ ಹಾಡಿಗೆ ಅನುಸಾರವಾಗಿ ಪಾತ್ರಧಾರಿಗಳು ಕುಣಿದರೆ ಇಲ್ಲಿ ಕುಣಿತವೂ ನಿರೂಪಕನ ಪಾಲಿಗೆ ಬರುತ್ತದೆ. ಮಾತುಗಾರಿಕೆಯೂ ಇವನದೇ ಆಗುತ್ತದೆ. ಮೇಳದಲ್ಲಿ ಕಥೆಗಿಂತ ಕುಣಿತ, ಕುಣಿತಕ್ಕಿಂತ ಹಾಡು, ಹಾಡಿಗಿಂತ ಅಭಿನಯ ಮುಖ್ಯವಾದುವು. ಇಲ್ಲಿಯೂ ಉಪಕಥೆಗಳುಂಟು. ಅವೆಲ್ಲವೂ ಬಹುಮಟ್ಟಿಗೆ ಗ್ರಾಮಜೀವನದಿಂದಲೇ ಆಯ್ದುವುಗಳಾಗಿರುತ್ತವೆ. ಭಾಷೆ ಆಡುಭಾಷೆಯ ಸತ್ವದಿಂದ ಕೂಡಿದ್ದು ಹಾಸ್ಯ ನೈಜವಾಗಿರುತ್ತದೆ. ಅಲ್ಲಿ ಬರುವ ಪಾತ್ರಗಳು ಗ್ರಾಮದ ಪ್ರತಿನಿಧಿಗಳೋ ಎನ್ನುವಂತೆ ಸಹಜವಾಗಿರುತ್ತವೆ.

ಕರಪಾಲ ಮೇಳದ ಪ್ರಧಾನ ಕಥೆ ಮಾತ್ರ ಸಾಹಿತ್ಯಕ ಶೈಲಿಯಲ್ಲಿ ನಿರೂಪಣೆಗೊಳ್ಳುತ್ತದೆ. ಇಲ್ಲಿ ಶಿಷ್ಟ ಪುರಾಣಮೂಲದ ಕಥೆಗಳು ವಿರಳ. ಜನಪ್ರಿಯ ಮೂಲದ ಕಥೆಗಳೇ ಹೆಚ್ಚು. ಸಾಮಾನ್ಯ ಜನಪದ ಕತೆಯೊಂದನ್ನು ಆರಿಸಿಕೊಂಡು ಅದಕ್ಕೆ ಜೀವಭಾವಗಳನ್ನು ತುಂಬಿ, ಸಾಕಷ್ಟು ವಿಸ್ತರಿಸಿಕೊಂಡು ನಿರೂಪಿಸಲಾಗುತ್ತದೆ. ಪ್ರಾಣಿ ಕಥೆಗಳು, ಹಾಸ್ಯಕಥೆಗಳು ಮುಂತಾದ ಸರಳ ಕಥೆಗಳನ್ನು ಕೈಬಿಟ್ಟು ಸಂಕೀರ್ಣ ಕಥೆಗಳನ್ನು ಕಥೆಗಾರ ಆರಿಸಿಕೊಂಡು ಮೇಳಕ್ಕೆ ಅಳವಡಿಸಿಕೊಂಡಿರುತ್ತಾನೆ. ನಾಯಕ ಅಥವಾ ನಾಯಕಿ ವಿರೋಧಿಗಳಿಂದ ಅನೇಕ ಸಂಕಷ್ಟಗಳಿಗೆ ಒಳಗಾಗಿ ಕ್ರಮೇಣ ಯಾವುದೋ ಅತಿಮಾನುಷ ಶಕ್ತಿಯ ನೆರವಿನಿಂದಲೋ ಇತರ ವ್ಯಕ್ತಿಗಳ ಆಶ್ರಯದಿಂದಲೋ ಚೇತರಿಸಿಕೊಂಡು ಅಡಚಣೆಗಳನ್ನೆಲ್ಲ ದಾಟಿ ಮತ್ತೆ ತಮ್ಮ ಪ್ರಿಯ ವ್ಯಕ್ತಿಗಳನ್ನು ಕೂಡುವರು. ಅಧರ್ಮಕ್ಕೆ ಸೋಲಾಗಿ,ಧರ್ಮಕ್ಕೆ ಜಯವಾಗುವುದು, ಶಿಷ್ಟರಕ್ಷಣೆಯಾಗಿ ದುಷ್ಟರಿಗೆ ಶಿಕ್ಷೆಯೊದಗುವುದು - ಹೀಗೆ ಕಥೆ ಶೋಕಸ್ಥಾಯಿಯ ಹಿನ್ನೆಲೆಯಲ್ಲಿ ಜನಸಾಮಾನ್ಯರ ಮನಸ್ಸನ್ನು ಕಲಕುವಂತಿರುತ್ತದೆ. ಕಾಡಸಿದ್ದಮ್ಮ, ನೀಲಕಂಠ ರೂಪಾವತಿ, ಬಸವಕುಮಾರ, ಲೋಹಿತಕುಮಾರ, ಶಿವಯೋಗಿ ಪರಯೋಗಿ- ಇಂಥ ಜನಪದ ಕಥೆಗಳು ಕರಪಾಲದ ಅಯ್ಯನವರ ಬಾಯಲ್ಲಿ ಅಪೂರ್ವ ಕಲಾಕೃತಿಗಳಾಗಿ ರಂಜಿಸುತ್ತವೆ; ಸೊಟಗಕ್ಕೆ ಅಣ್ಣ ತಮ್ಮ ಎಂಬ ಮೂಲದ ಸಾಧಾರಣ ಹೆಸರುಗಳನ್ನು ಕಳೆದುಕೊಂಡು ಆಕರ್ಷಕ ಶೀರ್ಷಿಕೆಗಳನ್ನು ಪಡೆದುಕೊಂಡು ಪ್ರೌಢ ಕಥೆಗಳಾಗುತ್ತವೆ. ಕಥೆಯಲ್ಲಿನ ಪಾತ್ರಗಳಿಗೆಲ್ಲ ಒಳ್ಳೆಯ ಹೆಸರುಗಳು ಪ್ರಾಪ್ತವಾಗುತ್ತವೆ. ಹಳೆಯ ಹಂದರವೇ ಇದ್ದರೂ ಅನೇಕ ಹೊಸ ಘಟನೆಗಳು ಮೈತುಂಬಿ ಬರುತ್ತವೆ.

ಕರಪಾಲ ಮೇಳದಲ್ಲಿ ಬಯಲಾಟದ ಸಂಸ್ಕೃತಭೂಯಿಷ್ಠ ಸಂಭಾಷಣೆಯಾಗಲಿ,ಹಾಡುಗಳಾಗಲಿ ಇಲ್ಲ. ಆದರೂ ಕೆಲವು ಪ್ರಾರ್ಥನಾ ಗೀತೆಗಳಲ್ಲಿ, ಮಂಗಳಾರತಿ ಗೀತೆಗಳಲ್ಲಿ ಆ ಹಾಡುಗಳ ಪ್ರಭಾವ ಇರುವುದನ್ನು ಕಾಣಬಹುದು.

ಶ್ರೀ ಗುರುವರನೆ ಜಯತು
ಯೋಗಿ ವಿಭೂಷಣ ಭೋಗಿವರನೆ ಜಯತು

ಇಂಥ ಹಾಡುಗಳು ಬಯಲಾಟದಿಂದ ಕರಪಾಲ ಮೇಳಕ್ಕೆ ಬಂದವು. ಕೆಲವು ವೇಳೆ ಶಿವಶರಣರ ತತ್ತ್ವಗಳಿಂದ ಆಯ್ದ ಹಾಡುಗಳೂ ಬರುತ್ತವೆ.

ಭಿಕ್ಷವ ನೀಡಿರಮ್ಮ ಜಂಗಮರಿಗೆ
ಭಿಕ್ಷವ ನೀಡಿರಮ್ಮ
ಭಿಕ್ಷವ ನೀಡಿರಿ ಮೋಕ್ಷವ ಪಡೆಯಿರಿ
ಭಿಕ್ಷವ ನೀಡಿರಮ್ಮ

ಇಂಥ ಕೆಲವು ಪದಗಳಲ್ಲದೆ ಸಂದರ್ಭಾನುಸಾರವಾಗಿ ರಚಿಸಿಕೊಂಡ ಕೆಲವು ಸ್ವತಂತ್ರ ಗೀತೆಗಳೂ ಇರುತ್ತವೆ.

ನಾನೊಲ್ಲೆ ನಾನೊಲ್ಲೆನೆ
ನೀ ನೀಡುವ ಭಿಕ್ಷವ
ನಾನೊಲ್ಲೆ ನಾನೊಲ್ಲೆನೆ
ಬಂಜೆಕೈಯೊಳ ಭಿಕ್ಷ
ಮಂಜುಳ ದಾನವ ನಾನೊಲ್ಲೆ ನಾನೊಲ್ಲೆನೆ

ಈ ಬಗೆಯ ಕೆಲವು ಹಾಡುಗಳನ್ನು ಬಿಟ್ಟರೆ ಕರಪಾಲ ಮೇಳಕ್ಕೆ ಮೀಸಲಾದ ವಿಶಿಷ್ಟ ವರ್ಗದ ದ್ವಿಪದಿಗಳನ್ನು ಹಾಡಲಾಗುತ್ತದೆ. ಕರಪಾಲದ ಮುಖ್ಯ ಆಕರ್ಷಣೆಯೆಲ್ಲ ಬಹುಮಟ್ಟಿಗೆ ಮೇಳದ ಮೇಲೆಯೇ ನಿಂತಿರುತ್ತದೆ. ಕಥೆಯ ಆರಂಭ, ಬೆಳೆವಣಿಗೆ, ಮುಕ್ತಾಯ- ಹೀಗೆ ಎಲ್ಲ ಘಟ್ಟಗಳಲ್ಲಿಯೂ ಆಯಾ ಸನ್ನಿವೇಶಕ್ಕೆ ತಕ್ಕಂತೆ ಈ ಹಾಡುಗಳನ್ನು ಬಳಸಿಕೊಳ್ಳಲಾಗುತ್ತದೆ. ಈ ಹಾಡುಗಳು ಅತ್ಯಂತ ಸರಳವಾಗಿ ಕಂಡರೂ ಉತ್ತಮ ಕಾವ್ಯಾಂಶದಿಂದ ಕೂಡಿರದಿದ್ದರೂ ಆಯಾ ಸನ್ನಿವೇಶದ ಹಿನ್ನೆಲೆಯಲ್ಲಿ ಅಪೂರ್ವ ಮಟ್ಟಿನಲ್ಲಿ ಹಾಡುವುದರಿಂದ, ಮೃದು ನೃತ್ಯವೂ ಅಲ್ಲಿ ಬೆರೆಯುವುದರಿಂದ, ಅತ್ಯಂತ ಸ್ವಾರಸ್ಯಪೂರ್ಣವಾಗಿ ತೋರಿಬರುವುದರ ಜೊತೆಗೆ ನೇರವಾಗಿ ಅರ್ಥವಾಗುವುದರಿಂದ ಜನರ ಆಸಕ್ತಿಯನ್ನು ಸೆಳೆದುಕೊಳ್ಳುತ್ತವೆ. ಆತ್ಮೀಯವಾದ ಶೈಲಿಯಲ್ಲಿ ಅಭಿನಯದೊಂದಿಗೆ ಕಥೆಗಾರ ಹಾಡುಗಳನ್ನು ಎತ್ತಿಕೊಳ್ಳುವ ರೀತಿ ಆಕರ್ಷಕವಾಗಿರುತ್ತದೆ, ನೆರೆದವರ ಹೃದಯವನ್ನು ಕರಗಿಸುವಂತಿರುತ್ತದೆ. (ಜೆ.ಎಸ್.ಪಿ.)

**ಕರಸ್ಥಲದ ನಾಗಲಿಂಗ :** ಸು.1430. ಶಿವಶರಣ ಹಾಗೂ ಕವಿ. 101 ವಿರಕ್ತರಲ್ಲಿ ಮೊದಲಿಗ. ಕರಸ್ಥಲ ನಾಗದೇವನ ತ್ರಿವಿಧಿ ಎಂಬ ಗ್ರಂಥದ ಕರ್ತೃ. ಈತ ವಿಜಯನಗರದ ಎರಡನೆಯ ಪ್ರೌಢದೇವರಾಯನ (1424-46) ಕಾಲದಲ್ಲಿದ್ದನೆಂದು ವಿರೂಪಾಕ್ಷಪಂಡಿತನ ಚೆನ್ನಬಸವ ಪುರಾಣದಲ್ಲಿ (1584) ಹೇಳಿದೆ. ಶ್ರೀರಂಗಪಟ್ಟಣಕ್ಕೆ 9ಕಿಮೀ ದೂರದಲ್ಲಿರುವ ಬೊಮ್ಮೂರು ಇವನ ಜನ್ಮಸ್ಥಳವಿರಬೇಕೆಂದು ಊಹಿಸಲಾಗಿದೆ. ಚೆನ್ನಗೆಲಸ ಇವನ ಕಾಯಕ. ಚೆನ್ನಬಸವ ಪುರಾಣದ ಪ್ರಕಾರ ಇವನ ಗುರು ಕರಸ್ಥಲದ ವೀರಣ್ಣೊಡೆಯ. ಪತ್ನಿ ನಾಗಕನ್ಯೆ, ಗುರುಶಾಂತ ಇವನ ದೀಕ್ಷಾಗುರು.

ಜಕ್ಕಣಾರ್ಯ, ಕಲ್ಲುಮಠದ ಪ್ರಭುದೇವ, ಚಾಮರಸ, ವೀರಣ್ಣೊಡೆಯ, ಕುಮಾರ ಬಂಕನಾಥ ಇವರು ಕರಸ್ಥಲ ನಾಗಲಿಂಗನ ಸಮಕಾಲೀನರಾಗಿದ್ದಂತೆ ತಿಳಿಯುತ್ತದೆ. ಗಣವಚನರತ್ನಾವಳಿ, ಪ್ರೌಢ ರಾಯನಕಾವ್ಯ, ಚೆನ್ನಬಸವಪುರಾಣ, ಗುರುರಾಜ ಚಾರಿತ್ರ, ರಾಘವಾಂಕ ಚಾರಿತ್ರ - ಈ ಕೃತಿಗಳಲ್ಲಿ ಇವನ ಹೆಸರಿನ ಉಲ್ಲೇಖವಿದೆ. ಚೆನ್ನಬಸವ ಪುರಾಣದಲ್ಲಿ ಇವನ ಚರಿತ್ರೆ ಪ್ರಾಸಂಗಿಕವಾಗಿ ನಿರೂಪಿತವಾಗಿದೆ. ಶಿವಾಣುಗ ಅಥವಾ ರುದ್ರ (ಸು.1650) ರಚಿಸಿರುವ ಕರಸ್ಥಲದ ನಾಗಲಿಂಗ ಚರಿತ್ರೆ ಈತನ ಜೀವನವನ್ನೂ ಪವಾಡಗಳ ಮೂಲಕ ಈತನ ಮಹಿಮೆಯನ್ನೂ ವಿವರಿಸುವ ಸ್ವತಂತ್ರ ಕೃತಿ.

ಮಡಿವಾಳಯ್ಯಗಳ ತಾರಾವಳಿ, ಅಕ್ಷರ ಚೌಪದ, ಮೂರೇಳು ದೀಕ್ಷೆಯಪದ, ವಚನಗಳು, ಕರಸ್ಥಲದೇವರು ನಿರೂಪಿಸಿದ ಲಿಂಗನಿಜಸ್ಥಲದ ವಚನ (ಷಟ್ಸ್ಥಲ ಮಾರ್ಗ-98 ತ್ರಿವಿಧಿಗಳು), ಪರಮವಿರಕ್ತನ ಐಕ್ಯಸ್ಥಲ ಕಾಲಜ್ಞಾನ ಮತ್ತು ಗುರುಶಾಂತ ಶತಕ ಇವು ಈತನ ಇತರ ಕೃತಿಗಳು.

ಕರಸ್ಥಲ ನಾಗದೇವನ ತ್ರಿವಿಧಿ ಗೂಢಾರ್ಥವುಳ್ಳ, ವೀರಶೈವ ಸಿದ್ಧಾಂತವನ್ನು ಬೋಧಿಸುವ, ತ್ರಿಪದಿಯಲ್ಲಿ ರಚಿತವಾದ ಗ್ರಂಥ. ಇದರಲ್ಲಿ 31 ಪದ್ಯಗಳಿವೆ. ಈ ಕೃತಿಯನ್ನು ಕುರಿತು ವೀರ ಮಾಹೇಶ್ವರ ಪರ್ವತ ಶಿವಯೋಗಿ (ಸು.1650) ಮತ್ತು ಸಿದ್ಧಮಲ್ಲದೇವರು ಕನ್ನಡದಲ್ಲಿ ವ್ಯಾಖ್ಯಾನ ರಚಿಸಿದ್ದಾರೆ. ಕರಸ್ಥಲದ ನಾಗಲಿಂಗನ ಇತರ ಕೃತಿಗಳೂ ವೀರಶೈವ ಸಿದ್ಧಾಂತವನ್ನೇ ನಿರೂಪಿಸುತ್ತವೆ. ಈತ ಒಬ್ಬ ಮಹಾಪುರುಷ ಮತ್ತು ಶ್ರೇಷ್ಠಜ್ಞಾನಿ ಎಂಬ ಹೊಗಳಿಕೆಗೆ ಪಾತ್ರನಾಗಿದ್ದ. ಇಂದಿಗೂ ಇವನ ಹೆಸರಿನೊಂದಿಗೆ ಸಂಬಂಧ ಹೊಂದಿರುವ ಕರ್ನಾಟಕದ ಅನೇಕ ಮಹಾಕ್ಷೇತ್ರಗಳು ಇದಕ್ಕೆ ಸಾಕ್ಷಿಯಾಗಿವೆ. (ಜಿ.ಜಿ.ಎಂ.)

**ಕರಿಗಿರಿರಾಯ :** 1853-1927. ಚಾಮರಾಜ ಒಡೆಯರ ಆಸ್ಥಾನದಲ್ಲಿದ್ದ ಪ್ರಸಿದ್ಧ ಸಂಗೀತಗಾರರು ಮತ್ತು ವಿದ್ವಾಂಸರು. ವೀಣೆ ಸುಬ್ಬಣ್ಣ, ವೀಣೆ ಶೇಷಣ್ಣನವರ ಸಮಕಾಲೀನರು. ಇವರ ಸ್ಥಳ ಶ್ರೀರಂಗಪಟ್ಟಣ, ಇವರ ತಂದೆ ಆಸ್ಥಾನ ಪಂಡಿತರಾಗಿದ್ದ ವೇದಾಂತ ಲಕ್ಷ್ಮೀನರಸಿಂಹಾಚಾರ್ಯರು. ವೈದಿಕ ಮನೆತನದವರಾಗಿದ್ದ ಇವರು ತಂದೆಯ ಇಷ್ಟಕ್ಕೆ ವಿರುದ್ಧವಾಗಿ ಸಂಗೀತ ಸುಬ್ಬರಾಯರಲ್ಲಿ ಸಂಗೀತಾಭ್ಯಾಸ ಮಾಡಿ ಲಕ್ಷ್ಯ ಲಕ್ಷಣಗಳಲ್ಲಿ ವಿಶೇಷವಾದ ಪಾಂಡಿತ್ಯಗಳಿಸಿದರು. ಇದರಿಂದ ತಂದೆಯೊಡನೆ ಮನಸ್ತಾಪ ವುಂಟಾಗಿ ಗೃಹತ್ಯಾಗ ಮಾಡಿ ಹೈದರಾಬಾದಿಗೆ ಹೋಗಿ ಸ್ವಲ್ಪಕಾಲವಿದ್ದು ಅನಂತರ ಮೈಸೂರಿಗೆ ಬಂದು ನೆಲೆಸಿದರು. ದೇಶ ಸಂಚಾರ ಮಾಡಿ ತಮ್ಮ ಗಾಯನ ಪ್ರತಿಭೆಯಿಂದ ಪ್ರಸಿದ್ಧಿಗೆ ಬಂದರು.

ಸಂಸ್ಕೃತದಲ್ಲಿ ಒಳ್ಳೆಯ ಪಾಂಡಿತ್ಯವನ್ನು ಗಳಿಸಿದ್ದ ಇವರು ಸಂಗೀತ ಶಾಸ್ತ್ರದ ಮೂಲಗ್ರಂಥಗಳನ್ನು ಚೆನ್ನಾಗಿ ಅಧ್ಯಯನ ಮಾಡಿ ಆ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡಬಲ್ಲವರಾಗಿದ್ದರು. ಸಂಗೀತ ಸಂಬೋಧಿನಿ ಮತ್ತು ಗಾನವಿದ್ಯಾರಹಸ್ಯ ಪ್ರಕಾಶಿನಿ ಎಂಬ ಎರಡು ಸಂಗೀತ ಗ್ರಂಥಗಳನ್ನು ಇವರು ಕನ್ನಡದಲ್ಲಿ ರಚಿಸಿದ್ದಾರೆ. ಆದರೆ ಅವು ಪ್ರಕಟವಾಗಿಲ್ಲ. ಇವರ ವರ್ಣಗಳು, ಕೃತಿಗಳು ಮತ್ತು ದೇವರ ನಾಮಗಳು ಲಕ್ಷ್ಯ ಲಕ್ಷಣಗಳ ದೃಷ್ಟಿಯಿಂದ ಶ್ರೇಷ್ಠಮಟ್ಟದ ರಚನೆಗಳಾಗಿವೆ. ಗಾನವಿಶಾರದ ಬಿಡಾರಂ ಕೃಷ್ಣಪ್ಪನವರು, ಸಂಗೀತರತ್ನ ಚಿಕ್ಕರಾಮರಾಯರು ಇವರ ಪ್ರಮುಖ ಶಿಷ್ಯರು. ವೀಣಾ ವಿದ್ವಾನ್ ಟಿ.ವೆಂಕಟರಾಯರು ಇವರ ಮೊಮ್ಮಗ.

ಆಗಿನ ಮೈಸೂರು ಮಹಾರಾಜರು ಇವರಿಗೆ ಗಾನಕಲಾಧುರಂಧರ ಎಂಬ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿದ್ದರು. ಕಾಶಿ ವಿದ್ಯಾಪೀಠದಿಂದ ಗೀತಭೂಷಣ ಎಂಬ ಪ್ರಶಸ್ತಿಯೂ ಇವರಿಗೆ ಪ್ರಾಪ್ತವಾಗಿತ್ತು. (ಆರ್.ಎನ್.ಡಿ.)

**ಕರಿಬಂಟ :** ಕನ್ನಡ ಜನಪದ ಗದ್ಯ ಕಥೆಗಳಲ್ಲಿ, ಲಾವಣಿಗಳಲ್ಲಿ ಮತ್ತು ಬಯಲಾಟಗಳಲ್ಲಿ ಅತ್ಯಂತ ಜನಪ್ರಿಯವಾಗಿರುವ ಒಂದು ಕಥೆ. ಯಕ್ಷಗಾನಗಳಲ್ಲಿ ಸಾಮಾನ್ಯವಾಗಿ ರಾಮಾಯಣ, ಮಹಾಭಾರತ ಮತ್ತು ಭಾಗವತಗಳಿಂದ ಆರಿಸಿದ ಪೌರಾಣಿಕ ಕಥೆಗಳೇ ಹೆಚ್ಚಾಗಿದ್ದರೂ ನಾಡಿನ ವೀರರ ಕಥೆಗಳೂ ಇವೆ. ಇಂಥ ಕಥೆಗಳಲ್ಲಿ ಕರಿಬಂಟನ ಕಾಳಗ ಪ್ರಖ್ಯಾತವಾಗಿದೆ. ಕರಿರಾಜ ಒಬ್ಬ ಸುಂದರ, ಸಾಹಸಿ, ಮೇಲಾಗಿ ವೀರ. ದುರ್ಗಮ ಪ್ರದೇಶವೊಂದರಲ್ಲಿ ವಾಸವಾಗಿದ್ದ ಮಾವ,ಹೆಣ್ಣು ಕೊಡುತ್ತೇನೆಂದು ಆಹ್ವಾನಿಸಿದಾಗ ಇದು ಅವನಿಗೆ ತನ್ನ ಪರಾಕ್ರಮವನ್ನು ಪ್ರಶ್ನಿಸುವ ಆಹ್ವಾನವಾಗುತ್ತದೆ. ಕರಿರಾಜ ಹೆಣ್ಣು ವರಿಸಲು ಪ್ರಯಾಣ ಹೊರಡುತ್ತಾನೆ. ಬಹಳ ದೂರ ಹೋದ ಅನಂತರ ಒಂದು ಕೆರೆಯ ಏರಿಯ ಮೇಲೆ ಆಯಾಸ ಪರಿಹಾರಕ್ಕಾಗಿ ಕೂತಿದ್ದಾಗ ಅವನ ಸೌಂದರ್ಯವನ್ನು ಕಂಡು ತೊಂಡನೂರು (ತೊಣ್ಣೂರು) ರಾಕ್ಷಸಿಯ ಮಗಳಾದ ಪುಂಡರೀಕಾಕ್ಷಿಯ ಗೌಡೀರು (ಸೇವಕಿಯರು) ಮೂರ್ಛೆ ಹೋಗುವರು. ಅನಂತರ ಚೇತರಿಸಿಕೊಂಡು ಬಂದು ತಮ್ಮ ಒಡತಿಗೆ ತಾವು ಕಂಡ ಸುಂದರನ ಸುದ್ದಿ ಮುಟ್ಟಿಸುವರು. ಕರಿರಾಜನನ್ನು ನೋಡಲು ಬಂದ ಪುಂಡರೀಕಾಕ್ಷಿ ಅವನ ರೂಪಿಗೆ ಮನಸೋತು ಮೂರ್ಛೆ ಹೋಗುವಳು. ಅನಂತರ ಚೇತರಿಸಿಕೊಂಡು ಕರಿರಾಜನನ್ನು ಒಲಿಸಿ ಮನೆಗೆ ಕರೆದೊಯ್ಯುವಳು. ತಾಯಿ ರಕ್ಕಸಿಯಿಂದ ತನ್ನ ಪ್ರಿಯತಮನನ್ನು ಪಾರು ಮಾಡಲು ಪ್ರಯತ್ನಿಸುವಳು. ತನ್ನ ತಮ್ಮ ಬೊಮ್ಮಣ್ಣ ರಾಕ್ಷಸನಿಗೆ ಮಗಳನ್ನು ಕೊಟ್ಟು ಮದುವೆ ಮಾಡುವ ಹಂಚಿಕೆಯಲ್ಲಿದ್ದ ತೊಂಡನೂರು ರಾಕ್ಷಸಿ ಕೋಪವನ್ನು ತಾಳಿ ಮಗಳನ್ನು ವಂಚಿಸಿ ಕರಿಬಂಟನನ್ನು ಕೊಲ್ಲಲು ಪ್ರಯತ್ನಿಸುವಳು. ಆದರೆ ಪುಂಡರೀಕಾಕ್ಷಿಯ ತಂತ್ರದಿಂದ ರಾಕ್ಷಸಿಯ ತಮ್ಮ ಬೊಮ್ಮಣ್ಣ ತನ್ನ ಅಕ್ಕನಿಂದಲೇ ಹತನಾಗುವನು.

ತಮ್ಮನನ್ನು ತನ್ನ ಕೈಯಿಂದಲೇ ಕೊಂದ ರಾಕ್ಷಸಿ ತಲೆ ಮರೆಸಿಕೊಂಡು ಹೊರ ಬಿದ್ದ ಕರಿಬಂಟನನ್ನು ಅಟ್ಟಿಸಿಕೊಂಡು ಹೋಗುವಳು. ತನ್ನ ಕತ್ತಿಯನ್ನು ಬಾವಿಯ ಕಟ್ಟೆಯ ಮೇಲಿಟ್ಟು ನೀರು ಕುಡಿಯಲು ಇಳಿದಿದ್ದ ಕರಿಬಂಟ ರಾಕ್ಷಸಿ ಬೆನ್ನಟ್ಟಿ ಬರುವುದನ್ನು ಕಂಡು ಕತ್ತಿಯನ್ನು ಬಿಟ್ಟು ಓಡಿಹೋಗುವನು. ರಾಕ್ಷಸಿ ಕತ್ತಿಯನ್ನು ತೆಗೆದುಕೊಂಡು ಅದನ್ನು ಒಂದು ಮಗುವನ್ನಾಗಿ ಮಾಡಿಕೊಂಡು ಬಾಣಂತಿಯಂತೆ ಕರಿಬಂಟನನ್ನು ಹಿಂಬಾಲಿಸಿ ಒಂದೆಡೆ ಸೇರಿದ್ದ ಏಳೂರ ಗೌಡರಿಗೆ ತನ್ನ ಗಂಡ

ಬಾಣಂತಿಯನ್ನು ಬಿಟ್ಟು ಹೋಗುತ್ತಿದ್ದಾನೆಂದು ನ್ಯಾಯವನ್ನು ಒಪ್ಪಿಸುವಳು. ಕರಿಬಂಟ ನ್ಯಾಯದವರಿಗೆ ತನ್ನ ನಿಜಸ್ಥಿತಿಯನ್ನು ಹೇಳಿ, ಪರಿಪರಿಯಾಗಿ ಬೇಡಿಕೊಂಡರೂ ಅವನ ಮಾತನ್ನು ನಂಬದ ಗೌಡರು ಅವರಿಬ್ಬರನ್ನೂ ಆ ರಾತ್ರಿ ಊರ ಚಾವಡಿಯಲ್ಲಿ ಕೂಡುವರು. ನಡುರಾತ್ರಿಯಲ್ಲಿ ರಾಕ್ಷಸಿ ಕರಿಬಂಟನನ್ನು ಕೊಂದು ಓಡಿಹೋಗುವಳು. ಹೀಗೆ ಮಡಿದ ಕರಿಬಂಟನಿಗಾಗಿ ಪುಂಡರೀಕಾಕ್ಷಿ ಮತ್ತು ಏಳೂರ ಗೌಡರು ವ್ಯಥೆಪಟ್ಟು ಅಗ್ನಿಕುಂಡದಲ್ಲಿ ಬಿದ್ದು ಪ್ರಾಣ ಕಳೆದುಕೊಳ್ಳಲು ನಿರ್ಧರಿಸಿದಾಗ ಶಿವಪಾರ್ವತಿಯರು ಪ್ರತ್ಯಕ್ಷರಾಗಿ ಸತ್ತವನನ್ನು ಬದುಕಿಸಿ ಹರಸುವರು. ಕೊನೆಗೆ ಕರಿಬಂಟ ತನ್ನ ಮಾವನ ಊರಿಗೆ ಹೋಗಿ ಮಾವನ ಮಗಳನ್ನು ಮದುವೆಯಾಗುವನು. ಕಥೆಯ ಬಹುಭಾಗ ಒಂದೆಡೆ ರಾಕ್ಷಸಿ ಹಾಗೂ ಅವಳ ತಮ್ಮ ಬೊಮ್ಮ, ಇನ್ನೊಂದೆಡೆ ಕರಿಬಂಟ ಮತ್ತು ರಾಕ್ಷಸಿಯ ಮಗಳಾದ ಪುಂಡರೀಕಾಕ್ಷಿ - ಈ ಎರಡು ಪಕ್ಷಗಳಿಗೂ ನಡೆಯುವ ವಾದ, ಜಗಳ, ಹೋರಾಟವೇ ಆಗಿದೆ. ಒಂದು ಸಾಮಾನ್ಯ ಕಥೆ ಯಕ್ಷಗಾನವಾಗಿರುವುದು ಇಲ್ಲಿಯ ವೈಶಿಷ್ಟ್ಯ.

ಕರಿಬಂಟನ ಕಥೆಯನ್ನು ಹೇಳುವ ಯಕ್ಷಗಾನಗಳು ಅನೇಕವಿದ್ದು ಇವುಗಳಲ್ಲಿ ಈ ಕಥೆಯನ್ನು ಶಿವ ಪಾರ್ವತಿಗೆ ಹೇಳಿದಂತೆ ಹೇಳಿದೆ. ಅತಿಮಾನುಷ ಘಟನೆಗಳು ಬಂದರೂ ಕಥೆಯ ಓಟ ಕುಂಟದೆ ಮುಂದುವರಿಯುತ್ತದೆ. ಯಕ್ಷಗಾನ ಪ್ರೇಮಿಗಳು ಇದನ್ನು ಮೆಚ್ಚುವುದು ಬಹಳ. ಯಕ್ಷಗಾನಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳು ಕಂಡುಬರುತ್ತವೆ. ವೀರನಗೆರೆ ಪುಟ್ಟಣ್ಣ ವಿರಚಿತ ಕೃತಿಯಲ್ಲಿ ಹಳೆಯಬೀಡಿನ ರಾಜಕುಮಾರಿ ಭುವನಮೋಹಿನಿಯನ್ನು ಸುಮತಿ ನಗರದ ರಾಜನ ಮಗ ಕರಿಬಂಟ ಮದುವೆಯಾಗುತ್ತಾನೆ. ಭಾಳಾಕ್ಷ ವಿರಚಿತ ಯಕ್ಷಗಾನದಲ್ಲಿ ವೀರಬಲ್ಲಾಳನ ಮಗಳನ್ನು ಕರಿಬಂಟ ಮದುವೆಯಾಗುತ್ತಾನೆ. ಇವನ ತಂದೆತಾಯಿಗಳು ಮಾರಭೂಪ, ಬಲವಂತಾದೇವಿ. ಜೀಶಂಪ ಅವರು ಪ್ರಕಟಿಸಿರುವ ಹೆಳವರ ಕಾವ್ಯಗಳು ಎಂಬ ಸಂಕಲನದಲ್ಲಿ ಬರುವ ಮಲ್ಲರಾಜ ಎಂಬ ಲಾವಣಿ ಕರಿಬಂಟನ ಕಥೆಯೇ ಆಗಿದೆ. ಇಲ್ಲಿ ಕರಿಬಂಟನ ತಂದೆ ಮಲ್ಲರಾಜ; ಇವನಿಗೆ ದುಂಡೋಜಿ, ಮಲ್ಲೋಜಿ ಎಂಬ ಇಬ್ಬರು ಹೆಂಡತಿಯರು. ಇವರಲ್ಲಿ ದುಂಡೋಜಿಯ ಮಗ ಕರಿಬಂಟ. ಇಲ್ಲಿಯೂ ಈತ ಒಬ್ಬ ರಾಜಕುಮಾರಿಯನ್ನು ಮದುವೆಯಾಗುತ್ತಾನೆ. ಕಾಳೇಗೌಡ ನಾಗವಾರ ಅವರ ಬಯಲು ಸೀಮೆಯ ಲಾವಣಿಗಳು ಎಂಬ ಸಂಕಲನದಲ್ಲಿ ಕರಿರಾಯಬಂಟ 1 ಎಂಬ ಲಾವಣಿಯಲ್ಲಿ ಕರಿಬಂಟನ ತಂದೆ ತಾಯಿಗಳ ಹೆಸರಿಲ್ಲ, ಆದರೆ ಮಾವ ತಿಮ್ಮರಾಜು ಹೆಣ್ಣು ಕೊಡುವ ಪ್ರಸ್ತಾಪವಿದೆ. ಕರಿರಾಯಬಂಟ 2 ಎಂಬ ಲಾವಣಿಯಲ್ಲಿ ಕರಿಬಂಟನ ತಂದೆ ತಾಯಿಗಳು ಬಾಲರಾಯ ಮತ್ತು ಮಾರ್ಬಲ ದೇವಿ. ಸೋದರಮಾವ ಹೆಣ್ಣು ಕೊಡುವ ಸುದ್ದಿ ಇದೆ.

ಈ ಮೇಲ್ಕಂಡ ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ಬಿಟ್ಟರೆ ಮೂಲಕಥೆಯ ವಸ್ತು ಮತ್ತು ಆಶಯ ಯಕ್ಷಗಾನಗಳಲ್ಲೂ ಲಾವಣಿಗಳಲ್ಲೂ ಒಂದೇ ಆಗಿರುವುದು ಕಂಡುಬರುತ್ತದೆ. ರಾಕ್ಷಸಿ ಮತ್ತು ಅವಳ ಮಗಳ ಹೆಸರು ಪುಂಡುಲಕ್ಷ್ಮಿ, ಪುಂಡಲಕಾಂತೆ ಎಂದು ಬಯಲುಸೀಮೆ ಲಾವಣಿಗಳಲ್ಲಿಯೂ ಪುಂಡರೀಕಾಕ್ಷಿ ಎಂದು ಹೆಳವರ ಕಾವ್ಯ ಹಾಗೂ ಯಕ್ಷಗಾನ ಕೃತಿಗಳಲ್ಲಿಯೂ ಕಂಡುಬರುತ್ತದೆ. ಸಿದ್ಧೇಶನ ಯಕ್ಷಗಾನದಲ್ಲಿ ಕರಿರಾಜ ಕಾಶ್ಮೀರ ದೇಶದ, ಧಾರಾಪುರದ ರಾಜ ಮಾರಭೂಪನ ಮಗ ಎಂದು ಹೇಳಿದೆ. (ಟಿ.ಎಸ್.ಆರ್.)

**ಕರಿಬಸವಶಾಸ್ತ್ರೀ, ಎನ್.ಆರ್. :** 1872-1923. ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ವಿದ್ವಾಂಸರಾಗಿದ್ದವರು ನಾಲ್ವಡಿ ಕೃಷ್ಣರಾಜ ಒಡೆಯರ ಆಸ್ಥಾನಪಂಡಿತರಾಗಿದ್ದರು. ನಂಜನಗೂಡಿನ ಪಂಡಿತ ರುದ್ರಶಾಸ್ತ್ರಿಗಳ ಮಕ್ಕಳಾದ ಇವರು, ಮೈಸೂರಿಗೆ ಬಂದು ಆಸ್ಥಾನ ವಿದ್ವಾನ್ ಪಂಡಿತ ಕರಿಬಸವಶಾಸ್ತ್ರಿಯವರಲ್ಲಿ ವಿದ್ಯಾಭ್ಯಾಸ ಮಾಡಿ, ಕನ್ನಡ ಸಂಸ್ಕೃತ ಭಾಷೆಗಳನ್ನೂ ಸಾಹಿತ್ಯ ಮತ್ತು ವೇದಾಂತ ಶಾಸ್ತ್ರಗಳನ್ನೂ ಕಲಿತು ಪಾಂಡಿತ್ಯವನ್ನು ಸಂಪಾದಿಸಿದರು. ಯಜಮಾನ್ ವೀರಸಂಗಪ್ಪನವರ ಉದಾರ ಆಶ್ರಯದಿಂದ ಅಭಿವೃದ್ಧಿಗೆ ಬಂದರು. ವೀರಸಂಗಪ್ಪನವರೇ ಹೊರಡಿಸುತ್ತಿದ್ದ ಮೈಸೂರು ಸ್ಟಾರ್ (1888) ಎಂಬ ಪತ್ರಿಕೆಯ ಲೇಖಕರೂ ಅನಂತರ ಆ ಪತ್ರಿಕೆಯ ಉಪಸಂಪಾದಕರೂ ಆಗಿ ಕೆಲವು ವರ್ಷಗಳ ಕಾಲ ಕೆಲಸ ಮಾಡಿದರು. ಅನಂತರ ವೀರಶೈವಗ್ರಂಥ' ಪ್ರಕಾಶಿಕೆ ಎಂಬ ಮಾಸಪತ್ರಿಕೆಯನ್ನು ಪ್ರಾರಂಭಿಸಿ ಹಲವಾರು ಪ್ರಾಚೀನ ಗ್ರಂಥಗಳನ್ನು ಬೆಳಕಿಗೆ ತಂದರು. ಇವರು ಸಂಪಾದಿಸಿ ಪ್ರಕಟಿಸಿರುವ ಕೆಲವು ಮುಖ್ಯ ಗ್ರಂಥಗಳಿವು: ಸಿದ್ಧಾಂತ ಶಿಖಾಮಣಿ, ಪಂಡಿತಾರಾಧ್ಯ ಚರಿತ್ರೆ, ಸೌಂದರಪುರಾಣ, ರೇವಣಸಿದ್ಧೇಶ್ವರ ಪುರಾಣ, ಶಿವಯೋಗಪ್ರದೀಪಿಕಾ, ವಿರೂಪಾಕ್ಷಪಂಡಿತನ ಚೆನ್ನಬಸವ ಪುರಾಣವನ್ನು ಚೆನ್ನ ಬಸವೇಶವಿಜಯಂ ಎಂಬ ಹೆಸರಿನಿಂದ ಗದ್ಯಕ್ಕೆ ಅನುವಾದಿಸಿದ್ದಾರೆ. ಬಸವರಾಜ ವಿಜಯಂ, ಸ್ತುತಿ ಮುಕ್ತಾವಳಿ ಮುಂತಾದುವು ಇವರ ಇತರ ಗ್ರಂಥಗಳು. ಸಮಕಾಲೀನ ವಿದ್ವಾಂಸರಲ್ಲಿ ಗಣ್ಯರಾಗಿದ್ದ ಇವರು 1923 ಮೇ 9ರಂದು ನಿಧನರಾದರು. (ಬಿ.ಎಸ್.)

**ಕರಿಬಸವಶಾಸ್ತ್ರೀ, ಪಿ.ಆರ್. :** 1846-1931. ಹಿಂದಿನ ಮೈಸೂರು ಪ್ರಾಂತ್ಯದಲ್ಲಿ ಆಗಿಹೋದ ಹಿರಿಯ ವಿದ್ವಾಂಸರು. 1846ರಲ್ಲಿ ಜನಿಸಿದರು. ತಂದೆ ಪಂಡಿತ ರುದ್ರಪ್ಪ. ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಹಾಗೂ ವೀರಶೈವ ಧರ್ಮದಲ್ಲಿ ಮಹಾಪಂಡಿತರಾಗಿದ್ದ ಇವರು ಮೈಸೂರಿನ ವೆಸ್ಲಿಯನ್ ಮಿಷನ್ ಹೈಸ್ಕೂಲ್ ಮತ್ತು ಮೈಸೂರು ಮಹಾರಾಜ ಕಾಲೇಜುಗಳಲ್ಲಿ ಕನ್ನಡ ಪಂಡಿತರಾಗಿ ಸು.45 ವರ್ಷಗಳ ಕಾಲ ಕೆಲಸ ಮಾಡಿದರು. ಬೈಬಲ್ ಸಮಿತಿಯ ಸದಸ್ಯರಾಗಿದ್ದ ರೆವರೆಂಡ್ ಗ್ರೀನ್ ಹುಡ್, ಹಾಕಿನ್, ಹೆಗ್, ಕಾಸ್ಟಿಕ್, ಗಲಿಫರ್ಡ್, ಥಾಮ್ಸನ್ ಮೊದಲಾದವರಿಗೆ ಕನ್ನಡವನ್ನು ಹೇಳಿಕೊಟ್ಟರು. ಇವರ ಶಿಷ್ಯಪರಂಪರೆ ಬಹಳ ದೊಡ್ಡದು. ಕರ್ನಾಟಕ ಕವಿಚರಿತೆಯ ರಚನೆಯ ಕಾಲದಲ್ಲಿ ಇವರು ಆರ್.ನರಸಿಂಹಾಚಾರ್ಯರಿಗೆ ನೆರವಾಗಿದ್ದರು.

ಇವರು ವೀರಶೈವ ಮತ ಪ್ರಕಾಶಕ ಎಂಬ ಮಾಸಪತ್ರಿಕೆಯನ್ನು ಪ್ರಾರಂಭಿಸಿ ಹಲವಾರು ಕನ್ನಡ ಸಂಸ್ಕೃತ ಗ್ರಂಥಗಳನ್ನು ಪ್ರಕಟಿಸಿದರು. ಜೈಮಿನಿ ಭಾರತ, ಪ್ರಹ್ಲಾದ ಚರಿತ್ರೆ, ಕನ್ನಡ ಭಾರತ, ರಾಜಶೇಖರವಿಳಾಸ, ಶಬರಶಂಕರ ವಿಳಾಸ - ಹೀಗೆ ಹಲವು ಪ್ರಾಚೀನ ಕನ್ನಡ ಗ್ರಂಥಗಳು ಮೊದಲ ಬಾರಿಗೆ ಇವರಿಂದ ಸಂಶೋಧಿಸಲ್ಪಟ್ಟು ಪ್ರಕಟವಾದುವು. ಸ್ವತಂತ್ರವಾಗಿ ಕನ್ನಡ ಬಸವೇಶ ವಿಜಯ, ನಯಶತಕ ಎಂಬ ಗ್ರಂಥಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ. ನಿಜಗುಣ ಶಿವಯೋಗಿಯ ಅನುಭವಸಾರಕ್ಕೆ ಟಿಪ್ಪಣಿಯನ್ನು ಬರೆದಿದ್ದಾರೆ. ವೀರಶೈವೋತ್ಕರ್ಷ ಪ್ರದೀಪಿಕಾ ಇವರ ಸ್ವತಂತ್ರ ಸಂಸ್ಕೃತ ಕೃತಿ. ಕ್ರಿಯಾಸಾರ, ಸಿದ್ಧಾಂತಶಿಖಾಮಣಿ, ದೀಕ್ಷಾವಿಧಿ, ಮಾಚದೇವ, ಮನೋವಿಲಾಸ, ಲಿಂಗಧಾರಣ ಚಂದ್ರಿಕಾ, ಅನುಭವಸೂತ್ರ, ವಿವಾಹ ವಿಧಿ, ವೀರಶೈವೋತ್ಕರ್ಷ ಸಂಗ್ರಹ, ಸಂಸ್ಕೃತ ಬಸವೇಶವಿಜಯ ಈ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಭಕ್ತಾಧಿಕ್ಯ ರತ್ನಾವಳಿ, ಅನುಭವಸಾರ, ವ್ಯಾಸೋಕ್ತ ಬಸವಪುರಾಣ, ಶೈವಾದ್ವೈತಮಂಜರಿ, ಸಿದ್ಧೇಶ್ವರಪುರಾಣ, ನಳಚರಿತ್ರೆ, ವೀರಶೈವಪ್ರದೀಪಿಕಾ, ಶಿವಭಕ್ತಿಸಾರ, ತ್ರಿಕಾಂಡ ಅಮರಕೋಶ, ಕರ್ನಾಟಕ ಬಾಲಬೋಧೆ, ಶಬ್ದರೂಪಾವಳಿ ಮೊದಲಾದವು ಇವರ ಇತರ ಗ್ರಂಥಗಳು. ಮೈಸೂರು ಮಹಾರಾಜರ ಆಸ್ಥಾನ ವಿದ್ವಾಂಸರಾಗಿದ್ದ ಇವರಿಗೆ 1918ರಲ್ಲಿ ಕರ್ನಾಟಕ ಭಾಷಾರತ್ನ ಎಂಬ ಬಿರುದು ಲಭಿಸಿತ್ತು. ಇವರು 1931 ಆಗಸ್ಟ್ 30ರಂದು ಮೈಸೂರಿನಲ್ಲಿ ನಿಧನರಾದರು. (ಬಿ.ಎಸ್.)

**ಕರೀಂಖಾನ್, ಎಸ್.ಕೆ. :** ಹಿರಿಯ ತಲೆಮಾರಿನ ಜಾನಪದ ವಿದ್ವಾಂಸ, ಗೀತರಚನಕಾರ. ಹುಟ್ಟಿದ್ದು ಬೆಳೆದದ್ದು ಹಾಸನಜಿಲ್ಲೆಯ ಸಕಲೇಶಪುರದಲ್ಲಿ. ತಾಯಿ ಜೈನಬ್ಬಿ ಅರಬ್ ಮೂಲದವರು. ತಂದೆ ಅಬ್ದುಲ್ ರಹಮಾನ್ ಖಾನ್, ಆಫ್ಘನ್ ಯೋಧ. ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡ ಇವರು ಅಣ್ಣನ ಆಶ್ರಯದಲ್ಲಿ ಬೆಳೆದರು. ಹಾಸನದಲ್ಲಿ ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣ ಪಡೆದರು. ಆಚಂಗಿ ನಾರಾಯಣಶಾಸ್ತ್ರಿ ಇವರ ಗುರುಗಳು.

ಉರ್ದು ಮನೆಮಾತಾಗಿದ್ದರೂ ಕರೀಂಖಾನರು ವಿಶೇಷವಾಗಿ ಕನ್ನಡ ಮತ್ತು ಸಂಸ್ಕೃತವನ್ನು ಅಧ್ಯಯನ ಮಾಡಿದರು. ಇವರು ಹೆಚ್ಚು ವಿದ್ಯಾಭ್ಯಾಸ ಮಾಡದಿದ್ದರೂ ಇತಿಹಾಸ, ಜಾನಪದ, ಪುರಾಣ, ಮಹಾಕಾವ್ಯಗಳ ಬಗ್ಗೆ ಅಪಾರವಾದ ಪಾಂಡಿತ್ಯ ಗಳಿಸಿದವರಾಗಿದ್ದಾರೆ. ಚಾರಿತ್ರಿಕ ಸಂಗತಿಗಳನ್ನು ಕುರಿತಂತೆ ನಿಂತಲ್ಲಿಯೇ ಮಾಹಿತಿ ನೀಡುವ ಪ್ರತಿಭಾವಂತರು. ಮೂಲತಃ ಇಸ್ಲಾಂ ಧರ್ಮದವರಾದರೂ ಭಗವದ್ಗೀತೆ, ಭಾಗವತ, ಶಿವಪುರಾಣ, ವಿಷ್ಣುಪುರಾಣಗಳನ್ನು ಬಲ್ಲವರಾಗಿದ್ದಾರೆ. ತೆಲುಗಿನ

ಪೋತನನ ಭಾಗವತವನ್ನು ನಾಟಕರೂಪಕ್ಕೆ ತರುವ ಪ್ರಯತ್ನದಲ್ಲೂ ಇವರು ತೊಡಗಿದ್ದರು. ಉರ್ದು ಸಾಹಿತ್ಯದ ಘಾಲಿಬ್, ಇಕ್ಬಾಲ್‌ರಂತಹ ಕವಿಗಳ ಪ್ರಭಾವಕ್ಕೂ ಒಳಗಾಗಿದ್ದ ಇವರು ಹಿಂದು ಮುಸ್ಲಿಂ ಏಕತೆಗೆ ಸಾಕಷ್ಟು ಕಥೆಗಳನ್ನು ರಚಿಸಿದ್ದುಂಟು. (ನಿವಾರ ಉರ್ದುವಿನಿಂದ ಅನುವಾದಿತ ಕಥೆಗಳು), ನೀಹಾರ (ಚಾರಿತ್ರಿಕ ಕಥಾಸಂಕಲನ) ಬಲಿದಾನಿ ಹುಸೇನ್ ಎಂಬುದು ಚಾರಿತ್ರಿಕ ಕಾದಂಬರಿ, ಮಾತೃಶಾಪ ಪೌರಾಣಿಕ ಕಾದಂಬರಿ. ಇವಲ್ಲದೆ ಇವರು ನಿರ್ದೋಷಿ, ಶ್ರೀ ಕೃಷ್ಣಲೀಲೆ, ಹುಮಾಯುನ್, ಅಂಬರನಾಥ, ಮಹಾಪ್ರಭು ಮಾಗಡಿ ಕೆಂಪೇಗೌಡ ಮೊದಲಾದ ಐತಿಹಾಸಿಕ ಹಾಗೂ ಪೌರಾಣಿಕ ನಾಟಕಗಳನ್ನು ರಚಿಸಿದ್ದಾರೆ.

ಪ್ರೌಢಶಾಲಾ ವ್ಯಾಸಂಗದ ಸಮಯದಲ್ಲಿಯೇ ಇವರು ಜಾನಪದದತ್ತ ಆಕರ್ಷಿತರಾದರು. ಹಳ್ಳಿಯ ಸಂಸ್ಕೃತಿ ಮತ್ತು ಸಾಹಿತ್ಯ



ಇವರನ್ನು ಕೈ ಬೀಸಿ ಕರೆದುದರಿಂದ ಅವನ್ನು ಸಂಗ್ರಹಿಸುತ್ತಾ ಹಾಡುತ್ತಾ, ಹಳ್ಳಿ ಹಳ್ಳಿ ಸುತ್ತಿದರು. ಜೀವನ ಕಷ್ಟಕರವಾದಾಗ ಜನಪದ ಗೀತೆಗಳನ್ನು ಸಂಗ್ರಹಿಸಿ, ಪ್ರಕಟಿಸಿ ಮಾರಾಟ ಮಾಡಿದರು. ರಂಗಭೂಮಿಯತ್ತಲೂ ಆಕರ್ಷಿತರಾಗಿ ಕಥೆ, ಸಂಭಾಷಣೆ, ಹಾಡು ಬರೆಯತೊಡಗಿದರು. ರಾಯಲ್ ಇಂಡಿಯನ್ ನೇವಿ ಸಂಸ್ಥೆಯಲ್ಲಿ ಕೆಲಸ ಮಾಡಲು ಮುಂಬೈಗೂ ಹೋಗಿ ಬಂದರು. ಸೇವಾದಳದ ಚಳವಳಿಗೆಯಲ್ಲೂ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡರು. ಕೆಂಗಲ್ ಹನುಮಂತಯ್ಯನವರು ಮುಖ್ಯಮಂತ್ರಿ ಗಳಾಗಿದ್ದಾಗ ಭಾರತೀಯ ಸೇವಾದಳದ ಸಂಘಟಕರಾಗಿ ಇವರು ಪ್ರವಾಸ ಕೈಗೊಂಡರು.

ಭಾರತ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಕರೀಂಖಾನರಂಥ ಕಂಚಿನ ಕಂಠದ ಗಾಯಕರೊಬ್ಬರು ಹೋರಾಟಗಾರರಿಗೆ ಬೇಕಾಗಿದ್ದರು. ತಮ್ಮ ಅದ್ಭುತ ಕಂಠದಿಂದ ಹಾಡುತ್ತಾ ನಿರರ್ಗಳವಾಗಿ ಹರಿಯುವ ತಮ್ಮ ವಾಗ್ಝರಿಯಿಂದ ಜನರನ್ನು ಹುರಿದುಂಬಿಸಿದರು. ಸ್ವಾತಂತ್ರ್ಯ ಹೋರಾಟದಲ್ಲಿ ದುಮುಕಿದ್ದರಿಂದಾಗಿ ಸತತ ಏಳು ಸಲ ಜೈಲುವಾಸ ಅನುಭವಿಸಿದರು. ಸ್ವಾತಂತ್ರ್ಯಾನಂತರ ಇವರು ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಆಗಲೂ ಸೆರೆವಾಸ ಅನುಭವಿಸಿದರು. ಗಾಂಧೀಜಿಯವರು ವಿಶ್ರಾಂತಿಗೆಂದು ನಂದಿಬೆಟ್ಟಕ್ಕೆ ಬಂದಾಗ ಅವರನ್ನು ಭೇಟಿಯಾಗಿದ್ದರು.

ಏಕಾಂಗಿಯಾಗಿಯೂ ಸ್ವಾಭಿಮಾನಿಯಾಗಿದ್ದ ಕರೀಂಖಾನ್ ಮದರಾಸಿನ ಸಿನಿಮಾ ಜಗತ್ತಿನಲ್ಲಿ ಅದೃಷ್ಟವನ್ನು ಅರಸಿ ತೆರಳಿದರು. ಪ್ರಸಾದ್ ಮೂವೀಸ್‌ನ ಆರ್. ನಾಯ್ಡು ಅವರು ಕರೀಂಖಾನರನ್ನು ಮದರಾಸಿಗೆ ಬರಮಾಡಿಕೊಂಡರು. ಅಲ್ಲಿ ಸುಮಾರು ಹತ್ತು ವರ್ಷಗಳ ಕಾಲ ಇದ್ದು ಹಲವಾರು ಚಿತ್ರಗಳಿಗೆ ಕಥೆ, ಸಂಭಾಷಣೆ, ಹಾಡುಗಳನ್ನು ಬರೆದರು. ಮುನ್ನೂರಕ್ಕೂ ಹೆಚ್ಚು ಗೀತೆಗಳನ್ನು ರಚಿಸಿದರು. ಸ್ವರ್ಣಗೌರಿ, ಜೀವನ ತರಂಗ, ಬೇವು ಬೆಲ್ಲ, ಚಂದ್ರಕುಮಾರ, ದೇವಮಾನವ, ದೊಂಬರಕೃಷ್ಣ, ರಾಜೇಶ್ವರಿ, ಪತಿತಪಾವನಿ, ಸೂಪರ್ ನೋವ 445 ಮೊದಲಾದ ಹದಿನೈದು ಚಿತ್ರಗಳಿಗೆ ಇವರು ಸಾಹಿತ್ಯ ನೀಡಿದ್ದಾರೆ. ಸ್ವರ್ಣಗೌರಿ ಚಿತ್ರಕ್ಕೆ ಬರೆದ ಹಾಡುಗಳಿಂದಾಗಿ ಇವರ ಜನಪ್ರಿಯತೆ ಹೆಚ್ಚಿತು. ರಂಭಾಪುರಿ, ಕೂಡ್ಲಿ, ಶೃಂಗೇರಿ, ಉಡುಪಿ, ಧರ್ಮಸ್ಥಳ, ಆದಮಾರು ಸ್ವಾಮಿಗಳನ್ನು ಕುರಿತಂತೆ ಸ್ವಾಗತ ಗೀತೆಗಳನ್ನು ಇವರು ರಚಿಸಿದ್ದಾರೆ. ಮಂದಾರ ಧರ್ಮಸ್ಥಳ (ಧರ್ಮಸ್ಥಳ ಮಂಜುನಾಥ'ನ ಬಗ್ಗೆ) ಎಂಬ ಧ್ವನಿ ಸುರಳಿಯನ್ನು ಬಿಡುಗಡೆ ಮಾಡಿದ್ದಾರೆ. ನಾಡುನುಡಿಗಳ ಬಗ್ಗೆಯೂ ಹಾಡು ರಚಿಸಿದ್ದಾರೆ. ನಟವರ ಗಾಂಗಾಧರ ಉಮಾಶಂಕರದಂಥ' ಭಕ್ತಿಪ್ರಧಾನ ಗೀತೆಗಳಿಂದ ಹಿಡಿದು ಬಾರೇ ನೀ ಚೆಲುವೆಯಂಥ' ಶೃಂಗಾರ ರಸದ ಹಾಡುಗಳವರೆಗೆ ಮಧುರ ಮತ್ತು ಜನಪ್ರಿಯ ಗೀತೆಗಳನ್ನು ರಚಿಸಿದರು.

ಇವರ ಸೇವೆಯನ್ನು ಗುರುತಿಸಿ ಇವರನ್ನು ಕರ್ನಾಟಕ ಸರ್ಕಾರ ಕರ್ನಾಟಕ ರಾಜ್ಯ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಅಧ್ಯಕ್ಷರನ್ನಾಗಿ ನೇಮಿಸಿತು. ಆಗ ಹಲವರು ಸರ್ಕಾರದ ಕ್ರಮವನ್ನು ಟೀಕಿಸಿದಾಗ ಮನನೊಂದ ಕರೀಂಖಾನ್ ನೇಮಕಾದೇಶ ಕೈ ಸೇರುವ ಮೊದಲೇ ರಾಜೀನಾಮೆ ಪ್ರಕಟಿಸಿಬಿಟ್ಟರು (1990). ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಇವರದು ಅಪರೂಪದ ವ್ಯಕ್ತಿತ್ವ. ಅನಂತರ ಸರ್ಕಾರ ಇವರ ಮನ ಒಲಿಸಿ ಅಧಿಕಾರ ಸ್ವೀಕರಿಸುವಂತೆ ಮಾಡಿತು. ಜಾನಪದ ಕ್ಷೇತ್ರದ ಬೆಳವಣಿಗೆಗೆ ಇವರು ಅಪಾರವಾಗಿ ದುಡಿದರು. ಗಿರಿಜನ ಮತ್ತು ಬುಡಕಟ್ಟು ಜನಾಂಗದ ಸಮಗ್ರ ವೀಡಿಯೋ ಚಿತ್ರೀಕರಣ ಕಾರ್ಯವನ್ನು ಕೈಗೆತ್ತಿಕೊಂಡರು. ಇದರಿಂದ ಕಣ್ಮರೆಯಾಗುವಂತಿದ್ದ ಸಂಸ್ಕೃತಿಯೊಂದು ಉಳಿಯುವಂತಾಯಿತು. ಚಲನಚಿತ್ರರಂಗದ ನಿಕಟ ಪರಿಚಯವಿದ್ದುದರಿಂದ ಮತ್ತು ಸ್ವತಃ ಜನಪದ ಗಾಯಕರಾಗಿದ್ದುದರಿಂದ ತಮ್ಮ ಅಧ್ಯಕ್ಷಾವಧಿಯಲ್ಲಿ ಪ್ರದರ್ಶನ ಕಲೆಗಳ ವಿಷಯದಲ್ಲಿ ವಿಶೇಷ ಗಮನ ಹರಿಸಿದರು. ನಾಡಿನಾದ್ಯಂತ ಜನಪದ ಕಲಾ ಪ್ರದರ್ಶನಗಳನ್ನೇರ್ಪಡಿಸಿ ಕಲಾವಿದರಲ್ಲಿ ಆತ್ಮವಿಶ್ವಾಸ ಮೂಡಿಸಿದರು. ಶಿವಮೊಗ್ಗ ಜಿಲ್ಲೆಯ ಮೇಘಾನೆ ಎಂಬ ಬೆಟ್ಟದ ತುದಿಯಲ್ಲಿ ವಾಸಿಸುತ್ತಿರುವ ಕುಣುಬಿಗೊಂಡ ಎಂಬ ಬುಡಕಟ್ಟು ಜನಾಂಗದ ಅಧ್ಯಯನ ಮಾಡಲು ಕಾಲ್ನಡಿಗೆಯ ಕಾರ್ಯಕ್ರಮ ಹಮ್ಮಿಕೊಂಡರು. ಹಸಲರು, ಹಾಲಕ್ಕಿಗಳು, ಸಿದ್ದಿಗಳು, ಎರವರು, ಕಾಡುಕುರುಬರು, ಸೋಲಿಗರು ಮುಂತಾದ ಬುಡಕಟ್ಟು ಜನಾಂಗಗಳ ಸಮಗ್ರ ಜೀವನ ಕಲೆಯ ವೈವಿಧ್ಯಗಳನ್ನು ಇವರ ಕಾಲದಲ್ಲಿ ವೀಡಿಯೋ ಟೇಪ್‌ಗಳಲ್ಲಿ ಸೆರೆ ಹಿಡಿಯಲಾಯಿತು. ಸಾಂಸ್ಕೃತಿಕವಾಗಿ ಮಹತ್ವ ಹೊಂದಿದ ಹಿರಿಯಡ್ಕದ ಸಿರಿ ಜಾತ್ರೆ, ಮಾಸ್ಕಾಳದ ಚೌಡೇಶ್ವರಿ ಜಾತ್ರೆ, ಮೈಲಾರಲಿಂಗದ ಜಾತ್ರೆಗಳನ್ನು ಚಿತ್ರೀಕರಣಗೊಳಿಸಲಾಯಿತು. ಕಲಾವಿದರನ್ನು ಪೋಷಿಸುವ ಸಲುವಾಗಿ ಕರೀಂಖಾನರು ವಿಶೇಷ ಗಿರಿಜನರ ಪ್ರಶಸ್ತಿಯನ್ನು ರೂಪಿಸಿದರು.

ಬೆಂಗಳೂರಿನ ಬಸವನಗುಡಿಯ ಚಿಕ್ಕ ಹೋಟೆಲೊಂದರ ಸಣ್ಣ ಕೋಣೆಯಲ್ಲಿದ್ದ ಇವರು ಈಗ ಬಂಧುಗಳ ಮನೆಯಲ್ಲಿದ್ದು ಸಂತರಂತೆ ಜೀವನ ಸಾಗಿಸುತ್ತಿದ್ದಾರೆ. ಇವರು ಸಾಹಿತ್ಯ, ಸಂಸ್ಕೃತಿ, ಜಾನಪದ ಮತ್ತು ಚಲನಚಿತ್ರ ರಂಗಕ್ಕೆ ಕೊಟ್ಟಕೊಡುಗೆ ಅಪಾರ. ಜನಪದ ಗೀತೆಗಳನ್ನು ಸಂಗ್ರಹಿಸಿ ಒಂಬತ್ತು ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ. ಜನಪದಗೀತೆ ಅನುಭವ ದರ್ಶನ ಇವರ ಇನ್ನೊಂದು ಕೃತಿ. ಇವರು ಸಲ್ಲಿಸಿದ ಸೇವೆಯನ್ನು ಗಮನಿಸಿ ಕರ್ನಾಟಕ ಸರ್ಕಾರ ಜಾನಪದಶ್ರೀ (1995) ಪ್ರಶಸ್ತಿಯನ್ನೂ ಕನ್ನಡ ವಿಶ್ವವಿದ್ಯಾಲಯ ನಾಡೋಜ (1997) ಪ್ರಶಸ್ತಿಯನ್ನೂ ಗುಲ್ಬರ್ಗಾ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟನ್ನೂ ನೀಡಿ ಗೌರವಿಸಿವೆ. ಹುಬ್ಬಳ್ಳಿಯ ಮೂರುಸಾವಿರ ಜಂಗಮ ಮಠದ ಜಾನಪದ ಜಂಗಮ ಪ್ರಶಸ್ತಿ, ಮಂಡ್ಯದ ಜೀಶಂಪ ಪ್ರಶಸ್ತಿ (1995), ಹಂಸಜ್ಯೋತಿ ಸಂಸ್ಥೆಯ ಹಂಸರತ್ನ (1998) ಪ್ರಶಸ್ತಿ -ಇವು ಇವರಿಗೆ ದೊರೆತ ಇನ್ನಿತರ ಪ್ರಶಸ್ತಿಗಳು. (ಜಿ.ಆರ್.ಟಿ.)

**ಕರ್ಕ II :** ರಾಷ್ಟ್ರಕೂಟ ವಂಶದ ಕೊನೆಯ ರಾಜ (972-73). ನಾಲ್ಕನೆಯ ಗೋವಿಂದನ ಮೊಮ್ಮಗ. ಮೂರನೆಯ ನಿರುಪಮನ ಮಗ. ಖೊಟ್ಟಿಗ ಸತ್ತಮೇಲೆ ಕರ್ಕ ಸಿಂಹಾಸನವನ್ನೇರಿದ. ಈತನಿಗೆ ಅಮೋಘವರ್ಷ, ನೃಪತುಂಗ, ವೀರನಾರಾಯಣ, ರಾಜ ತ್ರಿನೇತ್ರ ಎಂಬ ಬಿರುದುಗಳಿದ್ದುವು.

ಖೊಟ್ಟಿಗನ ಕಾಲದಲ್ಲಿ ನಡೆದ ಸೀಯಕನ ದಾಳಿಯಿಂದ ರಾಷ್ಟ್ರಕೂಟರ ಗೌರವದ ಅಧಃಪಾತವಾಗಿತ್ತು. ಇಂಥ ಸಮಯದಲ್ಲಿ ಅಧಿಕಾರಕ್ಕೆ ಬಂದ ಕಕ್ಕನೂ ದಕ್ಷನಾಗಿರಲಿಲ್ಲ. ಇವನು ದುಷ್ಟ ಮಂತ್ರಿಗಳಿಬ್ಬರ ಕೈಗೊಂಬೆಯಾಗಿದ್ದ. ಪ್ರಜೆಗಳು ರಾಜನನ್ನೂ ಅವನ ಪರಿವಾರವನ್ನೂ ದ್ವೇಷಿಸುತ್ತಿದ್ದರು. ಈ ದೌರ್ಬಲ್ಯದಿಂದಾಗಿ ಇವನ ಸಾಮಂತ ರಾಜರಲ್ಲಿ ದುರಾಸೆ ಬೆಳೆಯಿತು.

ಚಾಳುಕ್ಯ ವಂಶದ ಎರಡನೆಯ ತೈಲಪ ಮೂರನೆಯ ಗೋವಿಂದನಿಂದ ತರ್ದವಾಡಿ ಪ್ರಾಂತ್ಯದಲ್ಲಿ ಮಾಂಡಲಿಕನಾದಾಗಿನಿಂದಲೂ ರಾಷ್ಟ್ರಕೂಟರನ್ನು ನಾಶಮಾಡುವ ಹಂಚಿಕೆ ಹೂಡಿದ್ದ. ಬಾದಾಮಿಯ ಚಳುಕ್ಯರ ವಂಶಜನೆಂದು ಭಾವಿಸಿದ್ದ ತೈಲಪನಿಗೆ ತನ್ನ ಹಿರಿಯರಿಂದ ರಾಷ್ಟ್ರಕೂಟರು ಕಿತ್ತುಕೊಂಡಿದ್ದ ಸಾಮ್ರಾಜ್ಯವನ್ನು ಮತ್ತೆ ಸಂಪಾದಿಸಬೇಕೆಂಬ ಆಕಾಂಕ್ಷೆಯಿತ್ತು. ಎರಡನೆಯ ಕರ್ಕನ ಕಾಲದಲ್ಲಿ ಆತನಿಗೆ ಈ ಅವಕಾಶ ದೊರೆಯಿತು. ತನ್ನ ವಿರುದ್ಧ ಎದ್ದ ತೈಲಪನನ್ನು ಅಡಗಿಸುವ ಉದ್ದೇಶದಿಂದ ದಂಡೆತ್ತಿಹೋದ ಕರ್ಕ ಸೋತ (973). ಚಾಳುಕ್ಯ ತೈಲಪ ಮಾನ್ಯಖೇಟವನ್ನು ಹಿಡಿದ. ಕರ್ಕನ ಮಂತ್ರಿಗಳು ಕಾಳಗದಲ್ಲಿ ಕೊನೆಗೊಂಡರು. ಕರ್ಕ ಮಾತ್ರ ಹೇಗೋ ತಲೆತಪ್ಪಿಸಿಕೊಂಡು ಹೋಗಿ, ಈಗಿನ ಕರ್ನಾಟಕ ರಾಜ್ಯದಲ್ಲಿರುವ ಸೊರಬ ತಾಲ್ಲೂಕಿನಲ್ಲಿ ಒಂದಿಷ್ಟು ನೆಲ ಗಿಟ್ಟಿಸಿಕೊಂಡು ಅಲ್ಲಿ 991ರವರೆಗೂ ಆಳಿಕೆ ನಡೆಸಿದ. ರಾಷ್ಟ್ರಕೂಟ ಸಾಮ್ರಾಜ್ಯವನ್ನು ಮತ್ತೆ ಸಂಪಾದಿಸುವ ಆಸೆಯನ್ನು ಕರ್ಕ ಕೈಬಿಟ್ಟನಾದರೂ ಮೂರನೆಯ ಕೃಷ್ಣನ ಮಗನಾದ ನಾಲ್ಕನೆಯ ಇಂದ್ರನನ್ನು ಸಿಂಹಾಸನಕ್ಕೆ ತರಲು ಗಂಗವಂಶದ ದೊರೆ ಎರಡನೆಯ ಮಾರಸಿಂಹ ಪ್ರಯತ್ನಪಟ್ಟ. ಆದರೆ ಅದು ಫಲಿಸಲಿಲ್ಲ. ಕೇವಲ 6 ವರ್ಷಗಳ ಹಿಂದೆ (967) ಕೃಷ್ಣನ ಕಾಲದಲ್ಲಿ ಇಡೀ ದಕ್ಷಿಣ ಭಾರತವನ್ನು ಆವರಿಸಿದ್ದ ರಾಷ್ಟ್ರಕೂಟ ಸಾಮ್ರಾಜ್ಯ ಇವನ ಕಾಲದಲ್ಲಿ ಕೊನೆಗೊಂಡಿತು. (ಕೆ.ಎಸ್.ಎಸ್.)

**ಕರ್ಕ್‌ಪ್ಯಾಟ್ರಿಕ್, ವಿಲಿಯಂ :** 1754-1812. ಈಸ್ಟ್ ಇಂಡಿಯ ಕಂಪನಿಯ ಸೇವೆಯಲ್ಲಿದ್ದ ಯೋಧ, ಆಡಳಿತಗಾರ. ಮದರಾಸ್ ಅಶ್ವದಳದಲ್ಲಿ ಕರ್ನಲ್ ಆಗಿದ್ದ ಜೇಮ್ಸ್ ಅವರ ಮಗನಾದ ಈತ 1773ರಲ್ಲಿ ಬಂಗಾಲ ಕಾಲ್ದಳದಲ್ಲಿ ಸೇನೆಗೆ ಸೇರಿ, ಲೆಫ್ಟಿನೆಂಟ್ ಕರ್ನಲ್ ಹುದ್ದೆಯವರೆಗೆ ಏರಿದ. ಪಾರಸೀ ಭಾಷೆ ಬಲ್ಲವನಾಗಿ ಮೂರನೆಯ ಮೈಸೂರು ಯುದ್ಧದ ಕಾಲದಲ್ಲಿ ಲಾರ್ಡ್ ಕಾರ್ನ್‌ವಾಲೀಸನ ದುಭಾಷಿಯಾಗಿ ಕೆಲಸ ಮಾಡಿದ. ಲಾರ್ಡ್ ಮಾರ್ನಿಂಗ್‌ಟನ್‌ನ ಸೇನಾ ಕಾರ್ಯದರ್ಶಿ (1798) ಹಾಗೂ ಆಪ್ತ ಕಾರ್ಯದರ್ಶಿ (1799) ಹುದ್ದೆ ನಿರ್ವಹಿಸಿದ. ಟಿಪ್ಪುವಿನ ಪತನಾನಂತರ ಮೈಸೂರು ವಿಭಜನೆಯ ಒಪ್ಪಂದವನ್ನು ರೂಪಿಸಲು ಜನರಲ್ ಹ್ಯಾರಿಸ್, ಕರ್ನಲ್ ಆರ್ಥರ್ ವೆಲ್ಲೆಸ್ಲಿ, ಹೆನ್ರಿ ವೆಲ್ಲೆಸ್ಲಿ, ಬ್ಯಾರಿ ಕ್ಲೋಸ್ ಮತ್ತು ಈತನನ್ನು ಒಳಗೊಂಡ ಕಮಿಷನ್ ನೇಮಿಸಿದ್ದು, ಅದಕ್ಕೆ ಸಹಿ ಹಾಕಿದ್ದ ಕಂಪನಿಯ ಪ್ರತಿನಿಧಿಗಳಲ್ಲಿ ಈತನೂ ಒಬ್ಬ. ಮುಂದೆ ಈತನನ್ನು ಪುಣೆಯ ರೆಸಿಡೆಂಟನಾಗಿ ನೇಮಿಸಲಾಗಿತ್ತು. ಭಾರತೀಯ ಭಾಷೆ ಮತ್ತು ಸಾಹಿತ್ಯಗಳನ್ನು ಚೆನ್ನಾಗಿ ಬಲ್ಲವನಾದ ಈತ ಟಿಪ್ಪುವಿನ 1786ರವರೆಗಿನ ಪಾರಸೀ ಪತ್ರಗಳನ್ನು ಭಾಷಾಂತರಿಸಿ, 1811ರಲ್ಲಿ ಲಂಡನಿನಿಂದ ಸೆಲೆಕ್ಟ್ ಲೆಟರ್ಸ್ ಆಫ್ ಟಿಪ್ಪುಸುಲ್ತಾನ್ ಎಂಬ ಹೆಸರಿನಲ್ಲಿ ಪ್ರಕಟಿಸಿದ.

ಈತನ ಸೋದರ ಜೇಮ್ಸ್ ಅಕಿಲಿಸ್ ಕರ್ಕ್‌ಪ್ಯಾಟ್ರಿಕ್ (1764-1805) 1791-92ರ ಮೈಸೂರು ಯುದ್ಧದಲ್ಲಿ ಪಾಲುಗೊಂಡಿದ್ದ. 1799ರ ಯುದ್ಧದಲ್ಲಿ ಟಿಪ್ಪುವಿನ ವಿರುದ್ಧ ನಿಜಾಮನ ಸೇನೆಯನ್ನು ತಂದು ಭಾಗವಹಿಸಿದ್ದ. (ಎಸ್.ಕೆ.)

**ಕರ್ಕಿ, ಡಿ.ಎಸ್. :** 1907-84. ಕನ್ನಡ ನವೋದಯ ಮಾರ್ಗದ ಕವಿ. ದುಂಡಪ್ಪ ಸಿದ್ದಪ್ಪ ಕರ್ಕಿ ಎಂಬುದು ಇವರ ಪೂರ್ಣ ನಾಮ. ಬೆಳಗಾಂವಿ ಜಿಲ್ಲೆಯ ಭಾಗೋಜಿ ಕೊಪ್ಪದಲ್ಲಿ ಜನಿಸಿದರು. ಇವರು ಮೂರು ವರ್ಷದವರಿರುವಾಗಲೇ ತಾಯಿಯನ್ನು ಕಳೆದುಕೊಂಡರು. ಅನಂತರ ಇವರು ಬೆಳೆದದ್ದು ಸೋದರಮಾವನ ಮನೆಯಲ್ಲಿ. ಬೆಲ್ಲದ ಬಾಗೇವಾಡಿಯಲ್ಲಿ ಪ್ರಾಥಮಿಕ ಶಿಕ್ಷಣ, ಬೆಳಗಾಂವಿಯ ಜಿ.ಎ.ಹೈಸ್ಕೂಲಿನಲ್ಲಿ ಪ್ರೌಢಶಿಕ್ಷಣ ಪಡೆದರು. ಕೊಲ್ಹಾಪುರದ ರಾಜಾರಾಮ ಕಾಲೇಜು, ಪುಣೆಯ ಫರ್ಗ್ಯುಸನ್ ಕಾಲೇಜು, ಧಾರವಾಡದ ಕರ್ನಾಟಕ ಕಾಲೇಜುಗಳಲ್ಲಿ ಓದಿದರು. ಕನ್ನಡದಲ್ಲಿ ಸ್ನಾತಕೋತ್ತರ ಪದವಿ ಪಡೆದರು. ಕಾರವಾರದ ಸರ್ಕಾರಿ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿ ಜೀವನ ಆರಂಭಿಸಿದರು. ಕೆಲಕಾಲದಲ್ಲಿ ಕೆ.ಎಲ್.ಇ. ಸೊಸೈಟಿ ಸೇರಿದರು. ಜಿ.ಎ. ಪ್ರೌಢ ಶಾಲೆಯಲ್ಲಿ ಅಧ್ಯಾಪಕರಾದರು. ಅನಂತರ ಬೆಳಗಾಂವಿಯ ಲಿಂಗರಾಜ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ, ಕೆ.ಎಲ್.ಇ. ಸೊಸೈಟಿಯ ಹುಬ್ಬಳ್ಳಿಯ ಆರ್ಟ್ಸ್ ಕಾಲೇಜಿನ ಉಪಪ್ರಾಚಾರ್ಯರಾಗಿ, ಪ್ರಾಂಶುಪಾಲರಾಗಿ, ಕೆಲಕಾಲ ನರೇಗಲ್ ಕಾಲೇಜಿನ ಪ್ರಾಂಶುಪಾಲರಾಗಿ ಸೇವೆಸಲ್ಲಿಸಿ ಹುಬ್ಬಳ್ಳಿಗೆ ಹಿಂದಿರುಗಿದರು. ದಕ್ಷ ಆಡಳಿತಗಾರರೆಂದೂ ಇವರು ಹೆಸರುಗಳಿಸಿದರು. ವಿದ್ಯಾರ್ಥಿಗಳನ್ನು ಸ್ನೇಹಿತರಂತೆ ಕಾಣುತ್ತಿದ್ದರು. ಕರ್ಕಿಯವರು ಸಹಜವಾದುರ್ಯದ ಸಂವೇದನಾಶೀಲ ಮತ್ತು ಭಾವನಿಷ್ಠ ರಮ್ಯ ಕವನಗಳ ಮೂಲಕ ಕನ್ನಡ ನಾಡು ನುಡಿ ಸಂಸ್ಕೃತಿಯ ಉನ್ನತಮೌಲ್ಯಗಳನ್ನು ಉದಾತ್ತ ಆದರ್ಶಗಳನ್ನು ಹೃದ್ಯವಾಗಿ ಹಾಡಿದ ಭಾವಗೀತೆಯ ಕವಿ ಎಂದೇ ಪ್ರಸಿದ್ಧರಾಗಿದ್ದರು. ಪ್ರಕೃತಿ ಮತ್ತು ಜೀವನದ ಸಾತ್ವಿಕ ಸತ್ವ ಸೌಂದರ್ಯದಿಂದ ಅಗಾಧವಾಗಿ ಪ್ರಭಾವಿತರಾದ ಇವರು ಗದ್ಯಪದ್ಯವೆರಡರಲ್ಲೂ ತಮ್ಮ ವ್ಯಕ್ತಿ ವಿಶಿಷ್ಟ ಪ್ರತಿಭೆಯನ್ನು ಪ್ರದರ್ಶಿಸಿದರು. ಕಾವ್ಯ, ಪ್ರಬಂಧ, ಮಕ್ಕಳಸಾಹಿತ್ಯ ಮತ್ತು ಸಂಪಾದನೆ, ಸಂಶೋಧನೆಗೆ ಸಂಬಂಧಿಸಿದ ಒಟ್ಟು ಹನ್ನೊಂದು ಕೃತಿಗಳನ್ನು ಪ್ರಕಟಿಸಿದ್ದಾರೆ. ಆಧ್ಯಾತ್ಮಿಕ ಚಿಂತನೆಗಳನ್ನು ಸೌಂದರ್ಯಪ್ರಜ್ಞೆ ಮತ್ತು ಜೀವನಸಂಸ್ಕೃತಿ ಕುರಿತಾದ ಆರೋಗ್ಯಪೂರ್ಣ ವಿಚಾರಗಳನ್ನು ಬದುಕಿನ ಶುಚಿ ರುಚಿ ಮತ್ತು ಒಲವು ಚೆಲವನ್ನು ಕಲಾತ್ಮಕ ವಿನ್ಯಾಸದಲ್ಲಿ ಸುಕುಮಾರ ಶೈಲಿಯಲ್ಲಿ ಪಡಿಮೂಡಿಸಿರುವ ಇವರ ಕಾವ್ಯಪ್ರತಿಭೆ ಅನನ್ಯವಾದುದು.



ನಕ್ಷತ್ರಗಾನ (1949), ಭಾವತೀರ್ಥ (1953), ಗೀತಗೌರವ (1968), ಕರಿಕೆ ಕಣಗಿಲು (1976), ನಮನ (1977) - ಇವು ಇವರ ಕವನ ಸಂಕಲನಗಳು. ಹಚ್ಚೇವು ಕನ್ನಡದ ದೀಪ, ಕರುನಾಡದೀಪ ಸಿರಿನುಡಿಯದೀಪ ಒಲವೆತ್ತಿ ತೋರುವ ದೀಪ ಎಂದು ಕನ್ನಡಿಗರ ಎದೆಯಾಳದ ಮಿಡಿತವನ್ನು ಕಾವ್ಯದ ಕೊರಳಲ್ಲಿ ಮಿಡಿದ ನಾಡಕವಿ ಇವರು. ಕವಿಯ ಜೀವನ ಪ್ರೀತಿ, ಪ್ರಕೃತಿ, ಕಲೆ ಮತ್ತು ಸಾಹಿತ್ಯ ಚಿಂತನೆಯ ಚತುರ್ಮುಖ ದರ್ಶನ ನೀಡುವ ಗದ್ಯಕೃತಿ ನಾಲ್ದೆಸೆಯನೋಟ (1952), ಸಾಹಿತ್ಯ ಸಂಸ್ಕೃತಿ ಶೃತಿ (1974) ಇವರ ಗದ್ಯಶೈಲಿಯ ಸೊಗಸು ಪ್ರಬಂಧ ಪ್ರತಿಭೆ ಮತ್ತು ಅನುವಾದ ಸಾಮರ್ಥ್ಯಕ್ಕೆ ಉತ್ತಮ ಉದಾಹರಣೆ. ಮಕ್ಕಳ ಶಿಕ್ಷಣ (1956) ಶಿಕ್ಷಣತಜ್ಞನೊಬ್ಬನ ಶೈಕ್ಷಣಿಕ ಕಾಳಜಿಗಳನ್ನು ಪ್ರಕಟಿಸಿರುವ ಕೃತಿ. ಬಣ್ಣದ ಚೆಂಡು, ತನನತೋಂನಂ ಶಿಶುಗೀತೆಗಳ ಸಂಕಲನಗಳು. ಕರ್ನಾಟಕದ ಅನುಭಾವಿ ಕವಿ ಶಿಶುನಾಳ ಶರೀಫರ ತತ್ತ್ವಪದಗಳ ಸಂಗ್ರಹ ಜನಪ್ರಿಯ ಪದಗಳು. ಇದು ಶರೀಫರ ಗೀತೆಗಳ ಆನುಭಾವಿಕ ಸಾಮಾಜಿಕ, ತಾತ್ತ್ವಿಕ ನೆಲೆಗಳ ಗಂಭೀರ ಪ್ರತಿಪಾದನೆಯನ್ನೊಳಗೊಂಡಿದೆ.

ಕನ್ನಡ ಛಂದೋವಿಕಾಸ (1956) ಕನ್ನಡ ಛಂದಸ್ಸಿನ ಚರಿತ್ರೆ ಮತ್ತು ಸ್ವರೂಪವನ್ನು ಪ್ರಾಚೀನ ಮತ್ತು ಆಧುನಿಕ ಕಾವ್ಯಭಾಗಗಳ ಮೂಲಕ ವಿಶ್ಲೇಷಿಸುವ ಸಂಶೋಧನ ಮಹಾ ಪ್ರಬಂಧ. ಛಂದಶ್ಶಾಸ್ತ್ರದ ಗಂಭೀರ ಅಧ್ಯಯನಗಳು ವಿರಳವಾಗಿದ್ದ ಸಂದರ್ಭದಲ್ಲಿ ಛಂದಶ್ಶಾಸ್ತ್ರದ ಅಧ್ಯಯನಕ್ಕೆ ಅಧಿಕೃತ ಆಕರ ಗ್ರಂಥವಾಗಿದ್ದ ಕನ್ನಡ ಛಂದೋವಿಕಾಸ ಅಚ್ಚಗನ್ನಡದ ದೇಸಿ ಛಂದಸ್ಸನ್ನು ಕುರಿತು ನಡೆಸಿರುವ ವಿವೇಚನೆ ಮೌಲಿಕವಾದುದಾಗಿದೆ. ತ್ರಿಪದಿ, ಕಂದ, ರಗಳೆ, ಸಾಂಗತ್ಯ, ಷಟ್ಪದಿ, ಅಕ್ಕರ, ಚೌಪದಿ, ಏಳೆ ಇತ್ಯಾದಿ ಅಚ್ಚಗನ್ನಡ ಛಂದೋಲಯಗಳ, ಚಾರಿತ್ರಿಕ ಮತ್ತು ಕಲಾತ್ಮಕ ನೆಲೆಯ ಚರ್ಚೆ ಕರ್ಕಿಯವರ ವಿದ್ವತ್ ಪರಿಶ್ರಮ ಮತ್ತು ಸದಭಿರುಚಿಯ ಪ್ರತೀಕವಾಗಿದೆ. ಇವರ ಸಾಹಿತ್ಯಕ ಸಾಧನೆಗೆ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ (1972). ಕಾವ್ಯಗೌರವ ಎಂಬ ಸಂಭಾವನಾ ಗ್ರಂಥವನ್ನು ಇವರಿಗೆ ಅರ್ಪಿಸಲಾಗಿದೆ (1991). (ಎಸ್‌ಎಚ್‌ಎ.ಐ.)

**ಕರ್ಕಿ ವೆಂಕಟರಮಣಶಾಸ್ತ್ರಿಸೂರಿ :** ಹೊಸಗನ್ನಡ ಅರುಣೋದಯದ (19ನೆಯ ಶತಮಾನ) ಆದ್ಯಲೇಖಕರು. ಹೊಸಗನ್ನಡದ ಪ್ರಪ್ರಥಮ ಸಾಮಾಜಿಕ ನಾಟಕ 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ' ಎಂಬ ನಾಟಕದ ಕರ್ತೃ. ಇವರು ಮೂಲತಃ ಉತ್ತರ ಕನ್ನಡ ಜಿಲ್ಲೆಯ ಕರ್ಕಿಯವರು. ಸೂರಿ ಎಂಬ ಬಿರುದು ವೈದಿಕ ಕರ್ಮಕಾಂಡಗಳಲ್ಲಿ ಪ್ರಸಿದ್ಧಿಯನ್ನು ಪಡೆದ ಇವರ ಮನೆತನಕ್ಕೆ ಶ್ರೀ ಗುರುಪೀಠದಿಂದ ದೊರೆತದ್ದು. ಇವರ ತಂದೆ ವಿಘ್ನೇಶ್ವರ ಶಾಸ್ತ್ರಿಗಳೂ ದೊಡ್ಡ ಪಂಡಿತರು. ವೆಂಕಟರಮಣಶಾಸ್ತ್ರಿಯವರು ತಮ್ಮ ಬಾಲ್ಯದ ವಿದ್ಯಾಭ್ಯಾಸವನ್ನು ಕರ್ಕಿಯಲ್ಲಿ ಮುಗಿಸಿ, ಹೊಸನಗರದ ಬಳಿ ಇರುವ ಶ್ರೀ ರಾಮಚಂದ್ರಾಪುರ ಮಠದಲ್ಲಿ ಸಂಸ್ಕೃತ ವಿದ್ಯಾಭ್ಯಾಸ ಪಡೆದರು. ಅಲ್ಲಿ ಕಾವ್ಯ, ವ್ಯಾಕರಣ, ಅಲಂಕಾರ, ವೇದಾಂತಗಳನ್ನು ಅಧ್ಯಯನ ಮಾಡಿ ಶ್ರೀಗಳ ಪ್ರೀತಿಗೆ ಪಾತ್ರರಾದರು. ಇವರು ಕೆಲವು ಕಾಲ ಮಠದ ಪಾರುಪತ್ಯಗಾರರಾಗಿಯೂ ಕೆಲಸ ಮಾಡಿದರು. ಮೈಸೂರು ಸಂಸ್ಥಾನದಲ್ಲಿ ಫೌಜುದಾರರಾಗಿ ಅನುಭವ ಪಡೆದ ಇವರು ಯಾವ ಹುದ್ದೆಯಲ್ಲಿಯೂ ಬಹುಕಾಲ ಮುಂದುವರೆಯಲಿಲ್ಲ. ಗೆಳೆಯ ಬೂದಿ ಮಹಾಬಲಭಟ್ಟರೊಂದಿಗೆ ಸೇರಿ 'ಶಾಸ್ತ್ರೀ ಕಂಪನಿ' ಮಾಡಿಕೊಂಡು ಊರೂರು ತಿರುಗಿ ಹವ್ಯಕ ಬಾಂಧವರಿಂದ ನಿಧಿ ಸಂಗ್ರಹಿಸಿಕೊಂಡು ಮುಂಬಯಿಯಲ್ಲಿ ಭಾರತೀ ಛಾಪಖಾನೆಯನ್ನು ಸ್ಥಾಪಿಸಿದರು. ಕನ್ನಡದಲ್ಲಿ ಗ್ರಂಥರಚನೆ, ಗ್ರಂಥ ಸಂಪಾದನೆ ಮತ್ತು ಪ್ರಕಟಣೆ ಅಂದಿನ ಇವರ ಗುರಿಯಾಗಿತ್ತು. ಕರಾವಳಿಯ ಅಕ್ಕಸಾಲಿಗರಿಂದ ಕನ್ನಡ ಅಕ್ಷರಗಳನ್ನು ಕೆತ್ತಿಸಿ ಅನೇಕ ಶಾಸ್ತ್ರ ಗ್ರಂಥಗಳನ್ನೂ ಕಾವ್ಯಗಳನ್ನೂ ಅಚ್ಚು ಹಾಕಿಸಿದರು. ಶಂಕರಸಂಹಿತೆ, ಮನುಸ್ಮೃತಿ, ಯೋಗವಾಸಿಷ್ಠ, ದುರ್ಗಾಸಪ್ತಶತಿ, ಸಹಸ್ರನಾಮಾವಳಿ, ಪೂಜಾಸಮುಚ್ಚಯ, ತುರಂಗಭಾರತ ಮುಂತಾದವು ಕೆಲವು ಮುಖ್ಯಕೃತಿಗಳು.

ಹವ್ಯಕರ ಇತಿಹಾಸ, ಧರ್ಮ ಮತ್ತು ಮಠಗಳಿಗೆ ಸಂಬಂಧಿಸಿದ ಗ್ರಂಥಗಳನ್ನೂ ಅನೇಕ ಯಕ್ಷಗಾನ ಕೃತಿಗಳನ್ನೂ ಇವರು ಮುದ್ರಿಸಿ ಪ್ರಕಟಿಸಿದರು. ಸ್ವತಃ ಕೆಲವು ಕೃತಿಗಳನ್ನು ರಚಿಸಿದರು. ದಕ್ಷಿಣಯಾತ್ರಾ ಚರಿತ್ರೆ, ಪ್ರಾಚೀನ ನಾಟ್ಯ ಕಥಾರ್ಣವ, ಅನಾರ್ಯವಿವರ (1887) ಇವು ಮುಖ್ಯವಾದವು. 'ದಕ್ಷಿಣ ಯಾತ್ರಾ ಚರಿತ್ರೆ' ಹದಿಮೂರು ಪುಟಗಳ ಒಂದು ಚಿಕ್ಕ ಗ್ರಂಥವಾದರೂ ಐತಿಹಾಸಿಕವಾಗಿ ಕನ್ನಡದ ಪ್ರಥಮ ಪ್ರವಾಸಸಾಹಿತ್ಯ ಕೃತಿಯಾಗಿದೆ. ಹೀಗೆಯೇ ಇವರು ಪ್ರಕಟಿಸಿದ ಕಿಬ್ಬಚ್ಚಲು ಮಂಜಮ್ಮನ ವೇದಾಂತ ತತ್ತ್ವಸರಸಾ ಕನ್ನಡದಲ್ಲಿ ಮುದ್ರಣಗೊಂಡ ಮೊದಲ ಮಹಿಳಾಕೃತಿ.

ಕನ್ನಡ ಪತ್ರಿಕೋದ್ಯಮದಲ್ಲಿಯೂ ಇವರದು ಮಹತ್ತ್ವದ ಹೆಸರು. ಇವರು ಹವ್ಯಕ ಸುಬೋಧ ಎಂಬ ವಾರ ಪತ್ರಿಕೆಯನ್ನೂ (1885) ಹಿತೋಪದೇಶ (1888) ಎಂಬ ಮಕ್ಕಳ ಮಾಸಪತ್ರಿಕೆಯನ್ನೂ ಪ್ರಾರಂಭಿಸಿದರು. ಇವು ಆ ಕಾಲಕ್ಕೆ ಬಹಳ ಜನಪ್ರಿಯ ಪತ್ರಿಕೆಗಳೆನ್ನಿಸಿ ಕೊಂಡಿದ್ದವು. ನಿರ್ಭಿಡೆ ವ್ಯಕ್ತಿತ್ವದ ವೆಂಕಟರಮಣಶಾಸ್ತ್ರಿಯವರಿಂದ ಅಂದಿನ ಬ್ರಿಟಿಷರ ಆಡಳಿತ ನೀತಿ ಮತ್ತು ಅಧಿಕಾರಿಗಳ ದುರ್ವರ್ತನೆಗಳು ಕಟುಟೀಕೆಗೆ ಒಳಗಾದವು. ಅರಣ್ಯ ಇಲಾಖೆಯ ಅವ್ಯವಹಾರಗಳನ್ನೆಲ್ಲ ಬಯಲಿಗೆಳೆದಿದ್ದರಿಂದಾಗಿ ಪ್ರಾಯಶಃ ಇವರ ಮೇಲೆ ಖಟ್ಲೆ ಜರುಗಿ ಪತ್ರಿಕೆಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಯಿತು. ಇವರಿಗೆ ಜೈಲು ಶಿಕ್ಷೆ ವಿಧಿಸಲ್ಪಟ್ಟಿತು. ಹೀಗೆ ರಾಜಕೀಯ ಕಾರಣಕ್ಕಾಗಿ ಶಿಕ್ಷೆಗೊಳಗಾದ ಕನ್ನಡ ಲೇಖಕರಲ್ಲಿ ವೆಂಕಟರಮಣಶಾಸ್ತ್ರಿಯವರೇ ಮೊದಲಿಗರು. ಕನ್ನಡ ಪತ್ರಿಕೆಗಳಲ್ಲಿ ವ್ಯಂಗ್ಯಚಿತ್ರಗಳನ್ನು ಮೊದಲು ಬಳಸಿದವರು ಇವರು. ತಮ್ಮ ಜೀವಿತದ ಕೊನೆಯ ಕೆಲವು ಕಾಲ ಪುಣೆಯಲ್ಲಿ ವೈದ್ಯಕೀಯ ವೃತ್ತಿ ನಡೆಸಿ, ಹುಟ್ಟೂರಿಗೆ ಮರಳಿ ಅನಂತರ ಅಲ್ಲಿಯೇ ನಿಧನರಾದರು. (ನೋಡಿ: ಇಗ್ಗಪ್ಪ ಹೆಗಡೇ ವಿವಾಹ ಪ್ರಹಸನ). (ಎಸ್.ಆರ್.ಎಸ್.)

**ಕರ್ಣ [1] (ಕಳಚುರಿ) :** ಕರ್ನಾಟಕದಲ್ಲಿ ಚಾಳುಕ್ಯರ ಆಶ್ರಯದಲ್ಲಿ ಆಳುತ್ತಿದ್ದ ಕಳಚುರಿ ದೊರೆಗಳಲ್ಲೊಬ್ಬ. ಒಂದನೆಯ ಬಿಜ್ಜಳನ (ಬಿಜ್ಜ) ಮಗ. ಕನ್ನಮ, ಕೃಷ್ಣರಾಜ ಎಂದೂ ಈತನನ್ನು ಸಂಬೋಧಿಸಲಾಗಿದೆ. 1067ರಲ್ಲಿ ಈತನ ಆಳಿಕೆ ಪ್ರಾರಂಭವಾಯಿತೆಂದು ತಿಳಿದುಬರುತ್ತದೆ. ಮಂಗಳಿವೇಡದಿಂದ (ಈಗಿನ ಮಂಗಳವೇಡೆ) ಷೋಲಾಪುರ ಜಿಲ್ಲೆ ಅದರ ಸುತ್ತಮುತ್ತಣ ಪ್ರದೇಶಗಳನ್ನು ಈತ ಆಳುತ್ತಿದ್ದ. ಐವತ್ತು ಕದನಗಳಲ್ಲಿ ಕಾದಾಡಿ ಗೆದ್ದನೆಂದೂ ಹನ್ನೆರಡು ಮಂದಿ ದೊರೆಗಳನ್ನು ಕೊಂದು ತನ್ನ ರಾಜಧಾನಿಯನ್ನು ಶತ್ರುಗಳಿಂದ ರಕ್ಷಿಸಿದನೆಂದೂ ಇವನನ್ನು ಹೊಗಳಲಾಗಿದೆ. ಪರಮಾರರು, ಪೂರ್ವ ಚಾಳುಕ್ಯರು, ಚೋಳರು ಮುಂತಾದವರೊಂದಿಗೆ ಈತನ ಪ್ರಭುವಾದ ಒಂದನೆಯ ಸೋಮೇಶ್ವರ ಮಾಡಿದ ಕದನಗಳಲ್ಲಿ ಇವನೂ ಭಾಗವಹಿಸಿರಬೇಕೆಂದು ತೋರುತ್ತದೆ. ಈತ 1080ರವರೆಗೂ ರಾಜ್ಯವಾಳಿದ. (ನೋಡಿ: ಕಳಚುರಿವಂಶ). *

**ಕರ್ಣ [2] (ಸೇವುಣ) :** ದೇವಗಿರಿಯ ಸೇವುಣ ರಾಜವಂಶದ ಐದನೆಯ ಭಿಲ್ಲಮನ (1173-92) ತಂದೆಯೆಂದು ಹೇಳಲಾಗಿದೆ. ಇವನ ವಿಷಯವಾಗಿ ಹೆಚ್ಚಿನ ವಿವರಗಳೇನೂ ತಿಳಿದುಬಂದಿಲ್ಲ. ಹೇಮಾದ್ರಿಯ ಚತುರ್ವರ್ಗ ಚಿಂತಾಮಣಿ ಗ್ರಂಥದಲ್ಲಿರುವ ಸೇವುಣರ ರಾಜಪ್ರಶಸ್ತಿಯಲ್ಲಿ ಇವನ ಹೆಸರು ಕಾಣಬರುವುದಿಲ್ಲ. ಆದರೆ ಐದನೆಯ ಭಿಲ್ಲಮನಿಂದಲೇ ಹೊರಡಿಸಲಾದ ಗದಗ ಶಾಸನದಲ್ಲಿ ಈತ ಭಿಲ್ಲಮನ ತಂದೆಯೆಂದು ಹೇಳಿದೆ. ಮೇತಿ ಮತ್ತಿತ್ತರ ಶಾಸನಗಳಲ್ಲಿ ಇವನ ಹೆಸರು ಕೃಷ್ಣ ಎಂದಿದೆ. ಈ ಎಲ್ಲ ಅಂಶಗಳನ್ನೂ ಗಮನಿಸಿ ಕೆಲವು ಚರಿತ್ರಕಾರರು ಕರ್ಣನನ್ನು ಸೇವುಣರ ವಂಶವೃಕ್ಷದಲ್ಲಿ ಕೈಬಿಟ್ಟಿದ್ದಾರೆ. ಕರ್ಣ ರಾಜ್ಯಭಾರ ಮಾಡಿದಂತೆ ಕಾಣುವುದಿಲ್ಲ. ಎರಡನೆಯ ಮಲ್ಲುಗಿಯ ಅನಂತರ ಐದನೆಯ ಭಿಲ್ಲಮ ರಾಜ್ಯಭಾರ ಮಾಡಿದನೆಂದು ಸ್ಪಷ್ಟವಾಗುತ್ತದೆ. ಭಿಲ್ಲಮ ಮಲ್ಲುಗಿಯ ಮಗನೆಂದೇ ಪಿ.ಬಿ.ದೇಸಾಯಿ ಸಂಪಾದಿತ ಎ ಹಿಸ್ಟರಿ ಆಫ್ ಕರ್ನಾಟಕದಲ್ಲೂ ಹೇಳಲಾಗಿದೆ. ಕರ್ಣ ರಾಜ್ಯಭಾರವನ್ನು ವಹಿಸಿಕೊಳ್ಳುವ ಮೊದಲೇ ಮರಣ ಹೊಂದಿರಬೇಕು ಎಂಬುದೂ ಒಂದು ಊಹೆ (ನೋಡಿ: ಸೇವುಣ ವಂಶ). *

**ಕರ್ಣಪಾರ್ಯ :** ಹನ್ನೆರಡನೆಯ ಶತಮಾನದ ಜೈನಕವಿ. ನೇಮಿನಾಥ ಪುರಾಣ (ಸು.1160-70), ವೀರೇಶಚರಿತೆ ಎಂಬ ಗ್ರಂಥಗಳ ಕರ್ತೃ. ಕೊನೆಯದು ಉಪಲಬ್ಧವಿಲ್ಲ. ಕವಿಗೆ ಕರ್ಣಪ, ಕಣ್ಣಪ, ಕಣ್ಣಮಯ್ಯ, ಕನ್ನಮಯ್ಯ, ಕಣ್ಣಮ ಎಂಬ ಹೆಸರುಗಳೂ ಇದ್ದಂತೆ ತಿಳಿದುಬರುತ್ತದೆ. ಕೊಲ್ಲಾಪುರದ ಶಿಲಾಹಾರರಾಜ ವಿಜಯಾದಿತ್ಯನ (1140-1175) ಕರಣಾಗ್ರಣಿಯೂ ಅಮಾತ್ಯನೂ ಆಗಿದ್ದ ಲಕ್ಷ್ಮೀಧರ ಈತನ ಆಶ್ರಯದಾತ. ಮಲಧಾರಿದೇವರ ಶಿಷ್ಯ ಕಲ್ಯಾಣಕೀರ್ತಿ ಇವನ ಗುರು. ಭವ್ಯವನಜವನ ಮಾರ್ತಾಂಡ, ಪರಮಜಿನಮತ ಕ್ಷೀರವಾರಾಶಿಚಂದ್ರ, ಸಹಜಕವಿತಾರಸೋದಯ ಎಂಬುವು ಇವನ ಬಿರುದುಗಳು. ಪೂರ್ವ ಕವಿಗಳಲ್ಲಿ ಪಂಪ, ಪೊನ್ನ, ರನ್ನ, ನಾಗಚಂದ್ರರನ್ನು ಸ್ತುತಿಸಿದ್ದಾನೆ. ಈತನನ್ನು ರುದ್ರಭಟ್ಟ, ಆಂಡಯ್ಯ, ಮಂಗರಸ, ದೊಡ್ಡಯ್ಯ ಹೆಸರಿಸಿದ್ದಾರೆ. ಕವಿಯ ಕಾಲನಿರ್ಣಯದ ಬಗೆಗೆ ವಿದ್ವಾಂಸರಲ್ಲಿ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ.

ನೇಮಿನಾಥಪುರಾಣ 14 ಆಶ್ವಾಸ ಹಾಗೂ 2,242 ಪದ್ಯಗಳುಳ್ಳ ಚಂಪೂ ಗ್ರಂಥ. ದೊರೆತಿರುವ ಕನ್ನಡ ನೇಮಿನಾಥಪುರಾಣಗಳಲ್ಲಿ ಇದೇ ಮೊದಲನೆಯದು ಹಾಗೂ ಸಮಗ್ರ ಸ್ವರೂಪದ್ದು. 22ನೆಯ ತೀರ್ಥಂಕರ ನೇಮಿನಾಥನ ಚರಿತೆ ಕಾವ್ಯವಸ್ತು. ಜೊತೆಗೆ ಹರಿವಂಶ ಕುರುವಂಶಗಳ ಕಥೆಯೂ ತನ್ನದೇ ಆದ ಹರಹಿನಲ್ಲಿ ನಿರೂಪಿತವಾಗಿದ್ದು ಸಹೃದಯರನ್ನು ಆಕರ್ಷಿಸುತ್ತದೆ. ಕೃತಿಯ ಆರಂಭದಲ್ಲಿ ಜೈನಯತಿಗಳ ಸ್ತವನ, ಪಂಪಾದಿ ಪೂರ್ವಕವಿಗಳ ಸ್ಮರಣೆ, ವಿಜಯಾದಿತ್ಯನ ಪ್ರಸ್ತಾಪ ಮುಂತಾದುವಿದ್ದರೆ, ಕೊನೆಯ ಭಾಗದಲ್ಲಿ ಆಶ್ರಯದಾತ ಲಕ್ಷ್ಮೀಧರಾಮಾತ್ಯ ಮತ್ತು ಅವನ ಹೆಂಡತಿಯ ಪ್ರಸ್ತಾಪವಿದೆ.

ಸಾಂಪ್ರದಾಯಿಕ ಶೈಲಿಯ ರೂಢಿ ರಿವಾಜುಗಳಲ್ಲಿಯೇ ತನ್ನ ಕೃತಿಯನ್ನಾರಂಭಿಸಿರುವ ಕರ್ಣಪಾರ್ಯ ತನಗೆ ಮೊದಲಿನ ಸಂಸ್ಕೃತ ಮತ್ತು ಪ್ರಾಕೃತ ನೇಮಿನಾಥ' ಪುರಾಣಗಳನ್ನೂ ಕನ್ನಡ ಜೈನಕವಿಗಳ ನೇಮಿಕಥಾಮೂಲಗಳಲ್ಲಿ ಕೆಲವನ್ನೂ ಅಧ್ಯಯನ ಮಾಡಿ, ಅವನ್ನು ಸಂದರ್ಭೋಚಿತವಾಗಿ ತಕ್ಕ ಪರಿಕರಗಳೊಡನೆ ಬಳಸಿಕೊಂಡಿದ್ದಾನೆ. ಹಾಗಾಗಿ ಕವಿ ಯಾವುದೇ ಒಂದು ನೇಮಿಕಥೆಯನ್ನು ವಿಧೇಯ ರೀತಿಯಲ್ಲಿ ಅನುಸರಿಸುವ ಪರಿಪಾಠಕ್ಕೆ ಹೋಗದೆ ಈ ಮೂಲಾಂಶಗಳನ್ನು ಉಪಯೋಗಿಸಿಕೊಂಡು ತನ್ನದೇ ಆದ ಕಾವ್ಯವನ್ನು ರಚಿಸಿದ್ದಾನೆ ಎನ್ನಬಹುದು. ಜಿನಸೇನರ ಹರಿವಂಶಪುರಾಣ ಮತ್ತು ಚಾವುಂಡರಾಯನ ತ್ರಿಷಷ್ಟಿಶಲಾಕಪುರಾಣ ಇವನ್ನು ಹೆಚ್ಚಾಗಿ ಬಳಸಿಕೊಂಡಿರುವುದು ಕಾವ್ಯದಲ್ಲಿ

ಪರಿಸ್ಫುಟವಾಗಿ ಗೋಚರವಾಗುತ್ತದೆ. ಆದರೂ ಇವನದು ಸಮ್ಮಿಶ್ರ ಕಥಾರೀತಿ ಎಂದು ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ ನಡೆಸಿರುವ ಟಿ.ವಿ.ವೆಂಕಟಾಚಲಶಾಸ್ತ್ರೀ ಅವರು ಅಭಿಪ್ರಾಯಪಡುತ್ತಾರೆ. ಕವಿ ಜೈನಸಂಪ್ರದಾಯದ ಮೂಲಗಳನ್ನು ಹೆಚ್ಚಾಗಿ ಬಳಸಿಕೊಂಡಿದ್ದರೂ ವೈದಿಕ ಕಥಾಮಾರ್ಗದ ಹಲವಾರು ಆಕರ್ಷಕ ಅಂಶಗಳನ್ನೆಳವಡಿಸಿಕೊಂಡು ಕೃತಿಗೆ ಕಳೆ ಮತ್ತು ಕಥನಕಲೆಗೆ ಸ್ವಾರಸ್ಯವನ್ನು ದೊರಕಿಸಿಕೊಟ್ಟಿದ್ದಾನೆ. ಮೂಲ ಕಥೆಗಳಲ್ಲಿನ ಮತೀಯ ಹಾಗೂ ಧಾರ್ಮಿಕ ವಿವರಗಳನ್ನು ದೂರೀಕರಿಸಿ ಕಥೆಯನ್ನು ಆಕರ್ಷಕವಾಗಿ ಹೇಳುವುದಕ್ಕೆ ಹೆಚ್ಚು ಗಮನ ನೀಡಿರುವುದರಿಂದ ಇವನ ಕಥನ ಕಲೆ ತನ್ನದೇ ಆದ ಧಾಟಿ ಧೋರಣೆಗಳನ್ನು ರೂಢಿಸಿಕೊಂಡಿದೆ. ವರ್ಣನೆಗಳ ಲೋಲುಪತೆಗೆ ಒಳಗಾಗಿ ಅವನ್ನು ಸೇರಿಸುವ ಹೊಲಬಿಗೆ ಹೋಗದೆ, ಕಥೆಯ ಅಂಗೋಪಾಂಗಗಳನ್ನು ಮಾತ್ರ ಹದವರಿತು ವಿಸ್ತರಿಸುತ್ತ ಮುಂಬರಿಯುವುದರಿಂದ ಕೃತಿ ಕೇವಲ ಮೂಲಾನುಸರಣವಾಗದೆ ಗುಣದಲ್ಲಿ ಮೂಲವನ್ನೂ ಮೀರಿಸಿದೆ. ಚಾರುದತ್ತನ ವೃತ್ತಾಂತ, ಅಂಧಕವೃಷ್ಣಿಯ ಪೂರ್ವಜನ್ಮದ ವೃತ್ತಾಂತ, ವಿಂಧ್ಯಕ ವಾಗುರೆಯರ ಕಥೆ, ಸುಮುಖ ವೀರದತ್ತಶ್ರೇಷ್ಠಿಗಳ ಕಥೆ, ಪ್ರದ್ಯುಮ್ನ, ವಿದರ್ಭೆಯರ ವಿವಾಹ ಪ್ರಸಂಗ ಮುಂತಾದವುಗಳಲ್ಲಿ ಕವಿಯ ಕಥನ ಕೌಶಲ, ಸನ್ನಿವೇಶ ನಿರ್ಮಾಣ ಚಾತುರ್ಯ, ವಸ್ತುವಿನ್ಯಾಸ ಮತ್ತು ಪಾತ್ರಪರಿಕಲ್ಪನೆಗಳಲ್ಲಿ ತೋರುವ ಎಚ್ಚರ ಸುವಿದಿತವಾಗುತ್ತದೆ. ಇಂಥ ಪ್ರಸಂಗಗಳು ಕಥೆಗಳಾಗಿಯೇ ಅಚ್ಚುಕಟ್ಟಾಗಿ ಹರಳುಗಟ್ಟಿರುವುದರಿಂದ ನೇಮಿನಾಥಪುರಾಣ ಒಂದು ಕಥಾಗುಚ್ಛವೆನಿಸಿಕೊಂಡಿದೆ. ಪಾತ್ರರಚನೆಯಲ್ಲಿ ಕವಿ ತೋರುವ ಕುಸುರಿ ಕೆಲಸಕ್ಕೆ ನೇಮಿನಾಥನ ಪಾತ್ರ ಸೋಜ್ವಲ ಉದಾಹರಣೆಯಾಗಿದೆ. ಸರಳ ಶೈಲಿ, ಕಥೆಗಾರಿಕೆಯ ಕೌಶಲ, ಸನ್ನಿವೇಶ ರಚನೆ ಮುಂತಾದ ಗುಣಗಳನ್ನು ಮೈಗೂಡಿಸಿಕೊಂಡಿರುವ ನೇಮಿನಾಥಪುರಾಣ ಜೈನ ಚಂಪೂ ಕಾವ್ಯಗಳಲ್ಲಿ ಮಹತ್ತ್ವದ ಸ್ಥಾನ ಪಡೆದಿದೆ. (ಎನ್.ಎಸ್.ಟಿ.)

**ಕರ್ನಾಟಕ :** ಡಿ.ವಿ.ಗುಂಡಪ್ಪನವರು ಬೆಂಗಳೂರಿನಲ್ಲಿ ನಡೆಸುತ್ತಿದ್ದ ಇಂಗ್ಲಿಷ್ ದ್ವಿಸಾಪ್ತಾಹಿಕ. 1913ರಲ್ಲಿ ಪ್ರಾರಂಭವಾಯಿತು.ಆಗಿನ ಮೈಸೂರು ಸರ್ಕಾರದ ರೀತಿ ನೀತಿಗಳನ್ನು ಈ ಪತ್ರಿಕೆ ಧೈರ್ಯವಾಗಿ ಟೀಕಿಸುತ್ತಿತ್ತು. ಸರ್ಕಾರಕ್ಕೆ ಮತ್ತು ಪತ್ರಿಕೆಗೆ ಆಗಾಗ ಘರ್ಷಣೆಯಾಗುತ್ತಿದ್ದುದೂ ಉಂಟು.

ಕಾಬ್ ಎಂಬ ಬ್ರಿಟಿಷ್ ರೆಸಿಡೆಂಟ್ ಬೆಂಗಳೂರಿನ ಕಬ್ಬನ್ ಪಾರ್ಕಿನಲ್ಲಿರುವ ಸಾರ್ವಜನಿಕ ಗ್ರಂಥಾಲಯದಲ್ಲಿ ಬಾಂಬೇಕ್ರಾನಿಕಲ್, ಇಂಡಿಯನ್ ಪೇಟ್ರಿಯಟ್ ಮೊದಲಾದ ಪತ್ರಿಕೆಗಳ ಜೊತೆಗೆ ಕರ್ನಾಟಕ ಪತ್ರಿಕೆಯೂ ಇದ್ದುದನ್ನು ನೋಡಿ ಕಿಡಿಕಿಡಿಯಾದನೆಂದು ಹೇಳಲಾಗಿದೆ. ಇದೊಂದು ವಿಷಪೂರಿತ ಪತ್ರಿಕೆಯೆಂದೂ ಇದನ್ನು ತರಿಸಕೂಡದೆಂದೂ ಆತನು ಸೂಚನೆ ನೀಡಿದ. ಪತ್ರಿಕೆ ಆ ಅವಮಾನವನ್ನು ಧೈರ್ಯವಾಗಿ ಎದುರಿಸಿತು. ಪರಕೀಯ ರೆಸಿಡೆಂಟನಿಗೆ ಸಂಸ್ಥಾನದ ವಿಷಯಗಳಲ್ಲಿ ಬಾಯಿಹಾಕಲು ಅಧಿಕಾರವಿಲ್ಲವೆಂದು ಅದು ಟೀಕಿಸಿತು. ರಾಜವಿರೋಧಿಯಾಗಿ ಬರೆಯುತ್ತಿದ್ದರಿಂದ ಅದು ದಿವಾನರ ಪತ್ರಿಕೆಯೆಂದು ಅರಮನೆಯವರು ಶಂಕಿಸಿದ್ದೂ ಉಂಟು. ಕರ್ನಾಟಕ ಪತ್ರಿಕೆ ತನಗೆ ತೋರಿದ್ದನ್ನು ನಿರ್ಭಯವಾಗಿ ಬರೆಯಿತು. ಇದರಿಂದ ಆಗಿನ ದಿವಾನರು ಪತ್ರಿಕೆಯ ಸಂಪಾದಕರನ್ನು ಆಗಾಗ್ಗೆ ಕರೆಸಿಕೊಂಡು ಸಲಹೆ ಕೇಳುತ್ತಿದ್ದರು. ಬಿಗಿಯಾದ ವೃತ್ತಪತ್ರಿಕಾ ಕಾನೂನು ಜಾರಿಯಲ್ಲಿದ್ದ ಕಾಲವದು. ಈ ಪತ್ರಿಕೆಯನ್ನು ಮುಟ್ಟುಗೋಲು ಹಾಕಬೇಕೆಂದು ಹಲವು ಕಡೆಯಿಂದ ಒತ್ತಾಯ ಬಂದಿತ್ತಾದರೂ ಆಗಿನ ದಿವಾನರು ಪತ್ರಿಕೆಯನ್ನು ಸಹಾನುಭೂತಿಯಿಂದ ನೋಡುತ್ತಿದ್ದರು.ಕರ್ನಾಟಕ ಪತ್ರಿಕೆಯ ಪ್ರಕಟಣೆ ನಿಂತದ್ದು 1922-23ರ ಸುಮಾರಿನಲ್ಲಿ. ಆಗ ಅದಕ್ಕೆ ಚಂದಾದಾರರಿಂದ ಬರಬೇಕಾದ್ದ ಬಾಕಿಯ ಮೊತ್ತ ಸು.8000ರೂಪಾಯಿ *

**ಕರ್ನಾಟಕ ಕೇಸರಿ :** ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನಿಂದ ಪ್ರಕಟವಾಗುತ್ತಿದ್ದ ಮಾಸಪತ್ರಿಕೆ. 1928ರ ಜುಲೈ ತಿಂಗಳಿನಲ್ಲಿ ಪ್ರಾರಂಭವಾಗಿ ಎರಡು ವರ್ಷ ನಡೆಯಿತು.ಸಂಪಾದಕರು ಮಂಜೇಶ್ವರ ಅನಂತರಾವ್. ಇದರಲ್ಲಿ ಕಥೆ, ಕವನ, ಪ್ರಬಂಧ, ನಾಟಕ, ಲೇಖನ, ಸಂಶೋಧನೆ, ಇತಿಹಾಸ ಮುಂತಾದ ವಿವಿಧ ಪ್ರಕಾರಗಳ ಲೇಖನಗಳಿದ್ದು, ಪತ್ರಿಕೆಯಲ್ಲಿ 24 ಪುಟಗಳಿರುತ್ತಿದ್ದುವು.ಬಿಡಿ ಸಂಚಿಕೆಯ ಬೆಲೆ ನಾಲ್ಕಾಣೆ; ವಾರ್ಷಿಕ ಚಂದಾ ಎರಡೂವರೆ ರೂಪಾಯಿ.ಮೊದಲ ಪುಟದಲ್ಲಿಸಾಮಾನ್ಯವಾಗಿ ಕವಿತೆಯೊಂದು ಪ್ರಕಟವಾಗುತ್ತಿತ್ತು. ಅದರ ಬದಿಯ ಪುಟ ಪ್ರಾಚೀನ ದೇವಾಲಯಗಳ ಚಿತ್ರಗಳಿಗೆ ಮೀಸಲು.



ಎಂ.ಗೋವಿಂದ ಪೈ ಅವರ ಲಕ್ಷ್ಮೀಶನ ಕಾಲ ವಿಚಾರ, ಶಿವರಾಮ ಕಾರಂತರ ವಿಜಯನಗರಕ್ಕೆ ಸಂಬಂಧಿಸಿದ ಲೇಖನಮಾಲೆ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ನಿಜಗಲ್ಲಿನ ರಾಣಿ ಮೊದಲಾದ ಹಲವಾರು ಸಂಶೋಧಕ ಚಾರಿತ್ರಿಕ ಲೇಖನಗಳು ಈ ಪತ್ರಿಕೆಯಲ್ಲಿ ಬೆಳಕು ಕಂಡವು. ಐರೋಡಿ ಶಿವರಾಮಯ್ಯ, ಹೊಸಕೆರೆ ಚಿದಂಬರಯ್ಯ, ಉಗ್ರಾಣ ಮಂಗೇಶರಾವ್, ಪಾಂಡೇಶ್ವರ ಗಣಪತಿರಾವ್, ಕಡೆಂಗೋಡ್ಲು ಶಂಕರಭಟ್ಟ, ಮುಚ್ಚಿಮನೆ ಶಂಕರನಾರಾಯಣರಾವ್, ಬೆಳ್ಳೆ ರಾಮಚಂದ್ರರಾವ್ ಮೊದಲಾದವರ ಲೇಖನಗಳಿರುತ್ತಿದ್ದುವು. ಪುತ್ತೂರಿನ ಹರಿಹರ ಪ್ರೆಸ್ಸಿನಲ್ಲಿ ಅಚ್ಚಾಗುತ್ತಿದ್ದ ಈ ಮಾಸಪತ್ರಿಕೆಯ ಪ್ರಸಾರ ದಕ್ಷಿಣ ಕನ್ನಡ ಜಿಲ್ಲೆಗೆ ಸೀಮಿತವಾಗಿದ್ದು ಆ ಭಾಗದ ಜನಪ್ರಿಯ ಪತ್ರಿಕೆಯೆನಿಸಿತ್ತು. (ಎಸ್.ವಿ.ಪಿ.)

**ಕರ್ನಾಟಕ ಭಾಷೋಜ್ಜೀವಿನಿ ಸಭಾ :** 18ನೆಯ ಶತಮಾನದ ಕೊನೆಯ ಭಾಗದಲ್ಲಿ ಮೈಸೂರಿನಲ್ಲಿ ಕನ್ನಡದ ಅಭಿವೃದ್ಧಿಗೆಂದೇ ಸ್ಥಾಪಿತವಾದ (1887) ಒಂದು ಸಂಘ. ಚಾಮರಾಜ ಒಡೆಯರ್ ಇದರ ಸ್ಥಾಪಕರು. ಇವರ ರಾಜ್ಯಾಭಿಷೇಕ 1881 ಮಾರ್ಚ್ 1ರಂದು ಜರುಗಿತು. ಆ ಬಳಿಕ ಇವರು ಹಲವು ಸಾಂಸ್ಕೃತಿಕ, ಸಾರ್ವಜನಿಕ ಹಾಗೂ ಶೈಕ್ಷಣಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಮಹಾರಾಜ ಕಾಲೇಜಿನ ಪ್ರಗತಿ, ಸ್ತ್ರೀ ವಿದ್ಯಾಭ್ಯಾಸ, ಸಂಸ್ಕೃತ-ಕನ್ನಡಗಳ ಪೋಷಣೆ ಇವರ ಉದ್ದೇಶವಾಗಿತ್ತು. ಸಂಸ್ಕೃತ ಭಾಷೆ-ವಿದ್ಯಾಭ್ಯಾಸಗಳ ಪುನರುಜ್ಜೀವನಕ್ಕೆ ಸರಸ್ವತೀ ಪ್ರಾಸಾದವೆಂಬ ಸಂಸ್ಕೃತ ಮಹಾಪಾಠಶಾಲೆಯನ್ನು ಸ್ಥಾಪಿಸಿದರು. ಯುವಕರ, ವಿದ್ಯಾರ್ಥಿಗಳ ಜ್ಞಾನವಿಕಾಸಕ್ಕೆ ಇಂಗ್ಲಿಷ್ ವಿದ್ಯೆಯೊಂದೇ ಸಾಲದು, ಭಾರತೀಯ ಭಾಷೆ ಸಂಸ್ಕೃತಿಗಳ ತಿಳಿವಳಿಕೆಯೂ ಅಗತ್ಯವೆಂಬುದು ಒಡೆಯರ ಅಭಿಪ್ರಾಯವಾಗಿತ್ತು. ಪಾಶ್ಚಾತ್ಯ ವಿದ್ಯೆ ಕನ್ನಡದ ಮೂಲಕ ದೊರೆಯಬೇಕು ಪಾಶ್ಚಾತ್ಯ ಜ್ಞಾನಶಾಖೆಗಳ ಅಧ್ಯಯನ-ಬೋಧನೆ ಕನ್ನಡದಲ್ಲಿ ನಡೆಯಬೇಕು ಎಂಬ ಉದ್ದೇಶದಿಂದ ಇವರು ಕರ್ನಾಟಕ ಭಾಷೋಜ್ಜೀವಿನಿ ಸಭಾದ ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸಿದರು. ಈ ಸಭೆ ಕರ್ನಾಟಕ ವಿದ್ಯಾವರ್ಧಕ ಸಂಘ, ಕನ್ನಡ ಸಾಹಿತ್ಯ ಪರಿಷತ್ತುಗಳಿಗಿಂತ ಹಳೆಯದು. ಇದರ ಚಟುವಟಿಕೆಗಳಲ್ಲಿ ಎಂ.ಶಾಮರಾವ್ ಮುಂತಾದ ಮಹನೀಯರು ಪಾಲ್ಗೊಂಡಿದ್ದರು. (ಎನ್.ಎಸ್.ಟಿ.)

**ಕರ್ನಾಟಕ ಸಂಗೀತ :** ದಕ್ಷಿಣಾದಿ ಸಂಗೀತ ಎಂದೂ ಹೆಸರಿರುವ ಈ ಪದ್ಧತಿ ಭಾರತೀಯ ಸಂಗೀತದ ಎರಡು ಮುಖ್ಯ ಪ್ರಕಾರಗಳಲ್ಲಿ ಒಂದು. ಇನ್ನೊಂದು ಉತ್ತರಾದಿ (ಹಿಂದುಸ್ತಾನಿ). ಕರ್ನಾಟಕ ಸಂಗೀತ ಈಗ ದಕ್ಷಿಣ ಕರ್ನಾಟಕ ಮತ್ತು ಪಕ್ಕದ ತಮಿಳುನಾಡು, ಆಂಧ್ರಪ್ರದೇಶ ಮತ್ತು ಕೇರಳಗಳಲ್ಲಿ ವಿಶೇಷವಾಗಿ ಪ್ರಚಾರದಲ್ಲಿದೆ. ಕನ್ನಡ, ಸಂಸ್ಕೃತ, ತೆಲುಗು, ತಮಿಳು ಮುಂತಾದ ಎಲ್ಲ ಭಾಷೆಗಳ ಸೇವೆಯನ್ನೂ ಪಡೆದು, ಗಾಯನ, ವಾದನ, ನಾಟ್ಯ, ನರ್ತನ, ರಸಭಾವ, ಅಲಂಕಾರ, ಛಂದಸ್ಸು, ಧ್ರುವಗಾನ ಮೊದಲಾದ ಎಲ್ಲಾ ಅಂಗಗಳೊಡನೆ ಬೆಳೆದಿರುವ ಈ ಸಂಗೀತ

ಪದ್ಧತಿಗೆ ಕನ್ನಡಿಗರ ಕೊಡುಗೆ ಪ್ರಮುಖವಾದುದು. ಕರ್ನಾಟಕ ಸಂಗೀತ ಶಾಸ್ತ್ರಜ್ಞರ ಕಾಣಿಕೆ, ಪ್ರಾಚೀನ ಕಾಲದಿಂದ ಈ ನಾಡಿನಲ್ಲಿ ದೊರೆತ ವಿಶೇಷ ಪ್ರೋತ್ಸಾಹ ಇವು ಕರ್ನಾಟಕ ಸಂಗೀತ ರೂಪುಗೊಳ್ಳಲು ಮುಖ್ಯ ಕಾರಣ. ಇದರಿಂದಲೇ ಈ ಪ್ರಕಾರಕ್ಕೆ ಕರ್ನಾಟಕದ ಹೆಸರು ಜೊತೆಗೂಡಿಕೊಂಡಿದೆ.

**ಉಗಮ-ವಿಕಾಸ :** ಸಾಮವೇದದಿಂದ ಆರಂಭವಾಗಿ ದತ್ತಿಲ, ಕೋಹಿಲ, ಭರತ ಮೊದಲಾದವರ ಗ್ರಂಥಗಳಲ್ಲಿ ಶಾಸ್ತ್ರೀಯವಾಗಿ ನಿರೂಪಿತವಾಗಿರುವ ಸಂಗೀತ ಪದ್ಧತಿ; ಭಾರತೀಯ ಸಂಗೀತ ಪದ್ಧತಿಗಳಿಗೆ ಆಧಾರವಾಗಿದೆ. ಬಹುಶಃ ದಕ್ಷಿಣ ಭಾರತದಲ್ಲಿಯೂ ಸ್ಥಳೀಯ ಸಂಗೀತ ರೀತಿಯೊಂದು ಬಳಕೆಯಲ್ಲಿದ್ದು ಇದನ್ನೂ ಒಳಗೊಂಡು ಮುಂದಿನ ಭಾರತೀಯ ಸಂಗೀತ ಮಾರ್ಗ ಬೆಳೆದಂತೆ ತೋರುತ್ತದೆ. ಉದಾಹರಣೆಗೆ ಭರತನ ನಾಟ್ಯಶಾಸ್ತ್ರದಲ್ಲಿ ಕ್ರಿ.ಶ. ಸು.4ನೆಯ ಶತಮಾನ ಗಾಯನ ವಾದನ ರಸ ಅಲಂಕಾರ ಮುಂತಾದ ಎಲ್ಲ ಸಂಗೀತಗಳಿಗೂ ಸಾಮಾನ್ಯವಾದ ವಿಷಯಗಳಿದ್ದರೆ ಸು.4-5ನೆಯ ಶತಮಾನದಲ್ಲಿದ್ದ ಮತಂಗನ ಬೃಹದ್ದೇಶೀ ಎಂಬ ಪ್ರಮಾಣ ಗ್ರಂಥ ದಕ್ಷಿಣ ಭಾರತದ ಸಂಗೀತವನ್ನು ವಸ್ತುವಾಗಿ ಗ್ರಹಿಸಿ, ಭರತ ಹೇಳುವ ಸಂಗೀತ ಜಾತಿಗಳ ಬದಲು ರಾಗ ಸಂಗೀತದ ವಿಷಯವನ್ನು ಮೊಟ್ಟಮೊದಲಿಗೆ ಪ್ರತಿಪಾದಿಸುತ್ತದೆ. ರಾಗಗಳನ್ನು ಶುದ್ಧ, ಸಂಕೀರ್ಣವೆಂದು ವಿಭಾಗ ಮಾಡಿ ಶ್ರುತಿ, ಸ್ವರ, ವರ್ಣ, ಅಲಂಕಾರ ಮುಂತಾದ ಹಲವು ವಿವರಗಳನ್ನು ಮತಂಗ ನಿರೂಪಿಸಿದ್ದಾನೆ. ಅನೇಕ ವಾದ್ಯಗಳ ವಿಚಾರವಾಗಿ ತುಂಬ ಸ್ವಾರಸ್ಯವಾದ ವಿವರಗಳನ್ನು ನೀಡುತ್ತಾನೆ. ಬಹುಶಃ ಇವನು ಕನ್ನಡ ನಾಡಿನವನು. ಇವನ ಗ್ರಂಥದಲ್ಲಿ ಕನ್ನಡ ಪ್ರಬಂಧಗಳನ್ನೂ ಹೇಳಿದೆ.

ಕರ್ನಾಟಕದಲ್ಲಿ ಬಹು ಹಿಂದಿನಿಂದಲೂ ಸಂಗೀತಕ್ಕೆ ವಿಶೇಷವಾದ ಮನ್ನಣೆಯಿತ್ತೆಂಬುದು ಹಲವು ಶಾಸನ ಸಾಹಿತ್ಯ ಉಲ್ಲೇಖಗಳಿಂದ ತಿಳಿಯುತ್ತದೆ. ತಾಳಗುಂದ ಶಾಸನದಲ್ಲಿ ಕದಂಬ ಶಾಂತಿವರ್ಮನ ವೈಭವವನ್ನು ವರ್ಣಿಸುತ್ತಾ ಅವನ ಮನೆ ಸಂಗೀತದ ಧ್ವನಿಯಿಂದ ತುಂಬಿಹೋಗಿದ್ದಿತೆಂದು ಹೇಳಿದೆ (ನಾನಾ ವಿಧ ದ್ರವಿಣಸಾರಸಮುಚ್ಚಯೇಷು ದ್ವಿಪೇಂದ್ರಮದವಾಸಿಕಗೋಪುರೇಷು ಸಂಗೀತವಲ್ಗು ನಿನದೇಷು ಗೃಹೇಷು). ಪಟ್ಟದಕಲ್ಲಿನ ದೇವಸ್ಥಾನದ ಕಂಬದ ಮೇಲಿನ ಸು.850ರ ಶಾಸನವೊಂದರಲ್ಲಿ ಒಬ್ಬ ಶ್ರೇಷ್ಠ ನಟನ ಪ್ರಶಂಸೆ ಇದೆ. ಸ್ತ್ರೀಯರ ವಿದ್ಯಾಭ್ಯಾಸದಲ್ಲಿ ಸಂಗೀತ, ನರ್ತನ ಮುಂತಾದ ಕಲೆಗೆ ಹೆಚ್ಚು ಪ್ರಾಧ್ಯಾನವಿದ್ದುದು ತಿಳಿಯಬರುತ್ತದೆ. ಉದಯಸಿಂಹ ಎಂಬವನು ಕದಂಬ ಗೀತ ವಾದ್ಯ ನೃತ್ಯ ವೇಣು ವೀಣಾರವ ಸಂಗತ ಪಾಟಕ ವಿಜೃಂಭಿತ ಆಸ್ಥಾನ ಕಾವ್ಯನಾಟಕ ವಿಚಾರ ಪ್ರಸಂಗನಾಗಿದ್ದನೆಂದು 1017ರ ಒಂದು ಶಾಸನ ಹೊಗಳಿದೆ. ಹೊಯ್ಸಳ ವಿಷ್ಣುವರ್ಧನನ ಪತ್ನಿ ಶಾಂತಲೆಯನ್ನು ಅನೇಕ ಶಾಸನಗಳು ಸಂಗೀತವಿದ್ಯಾಸರಸ್ವತಿ, ವಿಚಿತ್ರನರ್ತನ ಪಾತ್ರ ಶಿಖಾಮಣಿ, ಸಕಳಕಳಾಗಮಾನೂನೆ, ಗೀತವಾದ್ಯನೃತ್ಯಸೂತ್ರಧಾರೆ ಎಂದು ವರ್ಣಿಸಿವೆ. ಹಲವು ಅಗ್ರಹಾರಗಳ ಮಹಾಜನರು ಸಂಗೀತಕಲಾ ನಿಪುಣರಾಗಿದ್ದುದನ್ನೂ ದೇವಾಲಯಗಳಲ್ಲಿ ಗೀತವಾದ್ಯ ನೃತ್ಯದವರಿಗಾಗಿ ದತ್ತಿಗಳನ್ನು ಕೊಟ್ಟದ್ದನ್ನೂ ಶಾಸನಗಳಲ್ಲಿ ಹೇಳಿದೆ.

ಪಂಪ, ಪೊನ್ನ, ರನ್ನ,ಜನ್ನ ಮೊದಲಾದವರು ರಚಿಸಿರುವ ಕನ್ನಡ ಸಾಹಿತ್ಯ ಗ್ರಂಥಗಳಲ್ಲಿ ಸಂಗೀತ ಮತ್ತು ನೃತ್ಯಗಳ ವರ್ಣನೆಗಳು ಹೇರಳವಾಗಿ ದೊರಕುತ್ತವೆ. ಪಂಪನ ಆದಿಪುರಾಣದಲ್ಲಿ ವಾದ್ಯಗಳ ವರ್ಣನೆ, ನೃತ್ಯದ ವರ್ಣನೆಗಳು ಸುಂದರವಾಗಿವೆ. ಪೊನ್ನನ ಶಾಂತಿಪುರಾಣದಲ್ಲಿ ಅಮರಿಯರ ನರ್ತನ ಅಪೂರ್ವ ಸಂಗೀತದಿಂದ ಕೂಡಿತ್ತೆಂಬ ಹೇಳಿಕೆಯಿದೆ. ರನ್ನನ ಅಜಿತಪುರಾಣದಲ್ಲಿ ಇಂದ್ರಜಿನಶಿಶುವಿನ ಪರಮೋತ್ಸವವನ್ನು ಮಾಡಿದ ಸಂದರ್ಭದಲ್ಲಿ ನಡೆದ ನೃತ್ಯ ನಾನಾವಿಧ ಗೀತವಾದ್ಯಗಳೊಡನೆ ಶೃಂಗಾರಾದಿ ನವರಸಗಳಿಂದ ಕೂಡಿದ್ದು ಸಪ್ತ ಸ್ವರಗಳನ್ನು ನಾನಾ ಭೇದಗಳಿಂದ ಧ್ವನಿತವಾಗುವಂತೆ ಮಾಡಿ ದಿಶಾವನಿತೆಯರು ಶೋಭಿಸುತ್ತಿದ್ದರೆಂದು ವರ್ಣಿಸಿದೆ. ಅಭಿನವಪಂಪನ ಮಲ್ಲಿನಾಥ'ಪುರಾಣದಲ್ಲಿ ಶರತ್ಸಮಯ ವರ್ಣನೆಯಲ್ಲಿ ವೇಣುಗಾನಲೋಲನು ತ್ರಿಸ್ಥಾನಶುದ್ಧಿಯಿಂದ ಹಾಡಿದಾಗ ಸಭಿಕರು ಮೈ ಮರೆತು ರಾಗರಸದಲ್ಲಿ ತಲ್ಲೀನರಾದಂತೆ ವರ್ಣಿಸಿದೆ. ಕಣ್ಣಪ್ಪ ಹಾಡುತ್ತ, ಕುಣಿಯುತ್ತ ಈಶ್ವರನನ್ನು ಕೂಗಿದಂತೆ ಹರಿಹರ ವರ್ಣಿಸಿದ್ದಾನೆ. ನೇಮಿಚಂದ್ರನ ಲೀಲಾವತೀಪ್ರಬಂಧದಲ್ಲಿ ಓರ್ವ ಪ್ರೌಢೆ ತಾಳಲಯ ಗಳಿಗನುಗುಣವಾಗಿ ಮನೋಹರವಾಗಿ ವೀಣೆಯನ್ನು ನುಡಿಸಿದಳೆಂದು ವರ್ಣಿಸಿದೆ. ಅಗ್ಗಳನ ಚಂದ್ರಪ್ರಭಪುರಾಣದಲ್ಲಿ ಗಾನವಿದ್ಯಾವಿಶಾರದನೊಬ್ಬ ತಾಳಸ್ವರಲಯಗಳಿಗನುಗುಣವಾಗಿ ವೀಣೆಯ ನಾದಕ್ಕನುಸಾರವಾಗಿ ಕರ್ಣಾನಂದಕರವಾಗಿ ಹಾಡಿದನೆಂದೂ ಸಂಗೀತದ ಗಂಧವನ್ನೇ ಅರಿಯದವರೂ ಸಂಗೀತ ಕಚೇರಿಯನ್ನು ಪ್ರವೇಶಿಸಿದ ಕೂಡಲೇ ತಮಗೂ ಹಾಡುವ ಮನೋಭಾವವನ್ನುಂಟುಮಾಡುವಂತೆ ಅಲ್ಲಿಯ ಸಂಗೀತವಿತ್ತೆಂದೂ ವಿವರಿಸಿದೆ. ಜನ್ನನ ಅನಂತನಾಥ' ಪುರಾಣದಲ್ಲೂ ಸಂಗೀತದ ಬಗ್ಗೆ ಹೇಳಿಕೆಯಿದೆ. ಸೋಮರಾಜ ತನ್ನ ಉದ್ಭಟಕಾವ್ಯದಲ್ಲಿ ಗಾನವಿಶಾರದೆಯರು ಗಾನ ಮಾಡಿದುದನ್ನು ವರ್ಣಿಸಿದ್ದಾನೆ. ಗಾಯಕಿಯರು ಮನೋಹರವಾಗಿ ಹಾಡಲುದ್ಯುಕ್ತರಾಗಿ ನಾಟಿ, ಗೌಳ, ಸಾಳಗ, ಶ್ರೀ ಮೊದಲಾದ ನಾನಾವಿಧ ರಾಗ ಸಮೂಹದಿಂದ ಹಾಡಿ ಅಲ್ಲಿ ನೆರೆದಿದ್ದವರ ಮನ ಮೆಚ್ಚಿಸಿದರೆಂದು ಹೇಳಿದೆ.

ಪ್ರಾಚೀನ ಕರ್ನಾಟಕದಲ್ಲಿ ಸಂಗೀತ ಜನಪ್ರಿಯವಾಗಿದ್ದು ವಿಶೇಷ ಪ್ರೋತ್ಸಾಹವನ್ನು ಗಳಿಸಿತ್ತೆಂಬುದನ್ನು ಶಾಸನಗಳು ಮತ್ತು ಸಾಹಿತ್ಯದ ಉಲ್ಲೇಖಗಳು ಸೂಚಿಸುತ್ತವೆ. ಇಂಥ' ವಾತಾವರಣದಲ್ಲಿ ಅಂದಿನ ಸಂಗೀತದ ಶಾಸ್ತ್ರೀಯ ನಿರೂಪಣೆ ಮತ್ತು ವ್ಯವಸ್ಥೆ ಅನೇಕ ವಿದ್ವಾಂಸರಿಂದ ನೆರವೇರಿತು. ಸೋಮೇಶ್ವರ ಮಾನಸೋಲ್ಲಾಸದಲ್ಲಿ ಆ ಕಾಲದಲ್ಲಿ ಈ ದೇಶದಲ್ಲಿ ಪ್ರಚಲಿತವಾಗಿದ್ದ ಸಂಗೀತದ ಪ್ರಸ್ತಾಪವಿದೆ. ಇದರಲ್ಲಿ ವಿನೋದವಿಂಶತಿಯಮೂರು ಅಧ್ಯಾಯಗಳಲ್ಲಿ ಸಂಗೀತಶಾಸ್ತ್ರದ ವಿವರಣೆಗಳಿವೆ. ಪ್ರಾದೇಶಿಕ ರಾಗಗಳು, ಅವುಗಳ ಲಕ್ಷಣಗಳು ಮತ್ತು ಅನೇಕ ಪ್ರಬಂಧಗಳನ್ನು ದೃಷ್ಟಾಂತಗಳೊಡನೆ ವಿವರಿಸಿಲಾಗಿದೆ. ಸೋಮೇಶ್ವರನ ಮಗ ಎರಡನೆಯ ಜಗದೇಕಮಲ್ಲ ತನ್ನ ಸಂಗೀತಚೂಡಾಮಣಿ ಎಂಬ ಗ್ರಂಥದಲ್ಲಿ ನೂರಕ್ಕೂ ಮಿಗಿಲಾಗಿ ರಚನಾರೂಪಗಳನ್ನು ವಿವರಿಸಿದ್ದಾನೆ. ಮತ್ತೊಂದು ಮೇರುಕೃತಿ ಶಾರ್ಙ್ಗದೇವನ ಸಂಗೀತ ರತ್ನಾಕರ. ಈತ ದೇವಗಿರಿಯ ಸೇವುಣ ದೊರೆ ಸಿಂಘಣನ (1199-1247) ಆಶ್ರಯದಲ್ಲಿ ಶ್ರೀಕರಣಿಕಾಗ್ರಣಿಯಾಗಿದ್ದ. ಈ ಗ್ರಂಥದಲ್ಲಿ ಸಂಗೀತದ ನಿಯಮಗಳನ್ನು ರೂಪಿಸಿದ್ದಾನೆ. ಈ ಗ್ರಂಥ ಹಿಂದಿನ ಕಾಲದ ಸಂಗೀತದ ಸ್ವರೂಪವನ್ನು ತಿಳಿಸುತ್ತದೆ. 74 ಪ್ರಬಂಧಗಳನ್ನು ವಿವರಿಸುವ ಈ ಸಂಗೀತ ರತ್ನಾಕರ ಭಾರತೀಯ ಪ್ರಾಚೀನ ಪ್ರಮಾಣಗ್ರಂಥಗಳಲ್ಲಿ ಅತಿ ಮುಖ್ಯವಾದುದು. ಈ ಕೃತಿ ಸಂಗೀತ ಶಾಸ್ತ್ರಕ್ಕೆ ಭದ್ರವಾದ ಬುನಾದಿ ಹಾಕಿತೆಂದರೆ ತಪ್ಪಾಗದು. ಶಾರ್ಙ್ಗದೇವನ ಸಂಗೀತ ರತ್ನಾಕರಕ್ಕೆ ಸುಧಾಕರವೆಂಬ ಟೀಕೆಯನ್ನು 1330ರ ಸುಮಾರಿಗಿದ್ದ ಸಿಂಹಭೂಪಾಲ ಬರೆದಿದ್ದಾನೆ. ಈ ದೇಶದಲ್ಲಿ ಸಂಗೀತಕ್ಕೆ ಇದ್ದ ವಿಶೇಷ ಪ್ರೋತ್ಸಾಹ ಹಾಗೂ ಜಗದೇಕಮಲ್ಲನಂಥ ಚಕ್ರವರ್ತಿಯೂ ಒಳಗೊಂಡಂತೆ ಹಲವು ಶಾಸ್ತ್ರಕಾರರ ಪರಿಶ್ರಮದಿಂದ ಕರ್ನಾಟಕ ದೇಶದಲ್ಲಿ ಒಂದು ವಿಶಿಷ್ಟ ಸಂಗೀತ ಪದ್ಧತಿ ಬೆಳೆಯಲು ಆರಂಭಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಈ ಸಂಗೀತ ಪದ್ಧತಿಯನ್ನೇ ಕರ್ನಾಟಕ ಸಂಗೀತ ಎಂದು ಕರೆದಿರುವುದು ಸಹಜ. ಹದಿನಾಲ್ಕನೆಯ ಶತಮಾನದಲ್ಲಿ ಕರ್ನಾಟಕದಲ್ಲಿದ್ದ ಒಬ್ಬ ಲಕ್ಷಣಕಾರ ಹರಿಪಾಲದೇವ (1309-80) 'ತದಪಿ ದ್ವಿವಿಧಂ ಪ್ರೋಕ್ತಂ ದಕ್ಷಿಣೋತ್ತರಭೇದತಃ | ಕರ್ನಾಟಕಂ ದಕ್ಷಿಣೇ ಸ್ಯಾದ್ಧಿಂದುಸ್ತಾನೀ ತಥೋತ್ತರೇ' ಎಂದು ಸ್ಪಷ್ಟವಾಗಿ ಅಂದಿಗೆ ಕರ್ನಾಟಕ ಸಂಗೀತ ಎಂಬ ಪದ್ಧತಿ ರೂಢಿತವಾಗಿತ್ತೆಂದು ಹೇಳಿದ್ದಾನೆ.

ವಿಜಯನಗರದ ಅರಸರ ಕಾಲದಲ್ಲಿ ಕರ್ನಾಟಕ ಸಂಗೀತ ಸ್ಪಷ್ಟ ರೂಪುರೇಖೆಗಳೊಡನೆ ವಿಶಿಷ್ಟ ಆವಿಷ್ಕಾರಗಳೊಡನೆ ರೂಪು ತಳೆಯಿತು. ಹಿಂದಿನ ಕಾಲದಲ್ಲಿದ್ದ ಜನಮನ್ನಣೆ ಅದೇ ಧಾಟಿಯಲ್ಲಿ ಮುಂದುವರಿದಿದ್ದು ಮತ್ತು ಅಂದಿನ ದೊರೆಗಳ ವಿಶೇಷ ಪ್ರೋತ್ಸಾಹ ಈ ಮುನ್ನಡೆಗೆ ಕಾರಣ. ತತ್ಕಾಲೀನ ಸಾಹಿತ್ಯ ಗ್ರಂಥಗಳಲ್ಲಿ ಬರುವ ಹಲವು ಉಲ್ಲೇಖಗಳು ಸಂಗೀತ ಅಂದು ಜನಪ್ರಿಯವಾಗಿತ್ತೆಂಬುದನ್ನೂ ಶಾಸ್ತ್ರಬದ್ಧವಾಗಿತ್ತೆಂಬುದನ್ನೂ ಸೂಚಿಸುತ್ತವೆ. ಚಂದ್ರಶೇಖರ ಕವಿಯಿಂದ ರಚಿತವಾದ ಪಂಪಾಸ್ಥಾನವರ್ಣನಂ ಕಾವ್ಯದಲ್ಲಿ ಗಾಯಕರು ದಂಡಿಗೆಯನ್ನು ತೆಗೆದುಕೊಂಡು ಶಾರೀರಕ್ಕೆ ತಕ್ಕಂತೆ ಮೇಳೈಸಿ ಗ್ರಾಮ ಮೂರ್ಛನೆ ಪಂಚವಿಧಗಮಕಗಳನ್ನು ತ್ರಿಸ್ಥಾಯಿದಲ್ಲೂ ನೆಲೆಗೊಳಿಸಿ ರಂಜಿಸುವಂತೆ ರಾಗಾಲಾಪವನ್ನೂ ಅನೇಕ ತಾಳಗಳಿಗನು ಗುಣವಾಗಿ, ದೋಷ ರಹಿತವಾದ ರಾಗಗಳನ್ನೂ ಹಾಡಿದರೆಂಬುದರ ವರ್ಣನೆ,

ಪಕ್ಕವಾದ್ಯಗಳ ವರ್ಣನೆ, ಮದ್ದಳೆಯನ್ನು ನುಡಿಸುವ ಚಿತ್ರ ಮನೋಜ್ಞವಾಗಿ ನಿರೂಪಿತವಾಗಿದೆ. ಅನೇಕ ವಾದ್ಯಗಳ ವಾದನಕ್ರಮವನ್ನು ಈ ಗ್ರಂಥದಲ್ಲಿ ಮನನಾಟುವಂತೆ ವರ್ಣಿಸಿದೆ. ಸು.1500ರಲ್ಲಿ ನಿಜಗುಣಶಿವಯೋಗಿಯಿಂದ ರಚಿತವಾದ ವಿವೇಕ ಚಿಂತಾಮಣಿಯಲ್ಲಿ ಸ್ವರೋತ್ಪತ್ತಿಕ್ರಮ, ರಾಗೋತ್ಪತ್ತಿಲಕ್ಷಣ, ವಿಪಂಚಿ ಮೊದಲಾದ ವಿವಿಧ ವೀಣೆಗಳು, ಪ್ರಸಿದ್ಧ ರಾಗಗಳು ಮೊದಲಾದವುಗಳನ್ನು ಕುರಿತ ವಿವರಣೆಯಿದೆ. ನಾರದ ವೀಣೆಯಲ್ಲಿ ಹಲವಾರು ರಾಗಗಳನ್ನು ನುಡಿಸಿ ವಿಶ್ವೇಶ್ವರನನ್ನು ಕುರಿತು ಹಾಡಿದಂತೆ ವೀರಭದ್ರ ಕವಿಯ ವೀರಭದ್ರವಿಜಯದಲ್ಲಿ ವರ್ಣಿಸಿದೆ. ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣದಲ್ಲಿ ಶಂಭು ಅಂಧಕಾಸುರನ ಸ್ತೋತ್ರಕ್ಕೆ ಮೆಚ್ಚಿ ಅವನ ಬೇಡಿಕೆಯನ್ನು ಮನ್ನಿಸಿ ತಾಂಡವನೃತ್ಯವನ್ನಾಡಿದಾಗ ನಂದಿ ಬ್ರಹ್ಮಾದಿಗಳು ಮೃದಂಗ ತಾಳಗಳನ್ನೂ ನಾರದ ತುಂಬುರರು ವೀಣೆ ದಂಡಿಗಳನ್ನೂ ನುಡಿಸಿದರೆಂಬ ಸುಂದರ ವರ್ಣನೆಯಿದೆ. ರತ್ನಾಕರವರ್ಣಿಯ ಭರತೇಶವೈಭವದಲ್ಲಿ ಪೂರ್ವನಾಟಕ ಸಂಧಿಯಲ್ಲಿ ಬರುವ ನಾಟ್ಯದವರ್ಣನೆ, ಉತ್ತರನಾಟಕ ಸಂಧಿಯಲ್ಲಿ ಬರುವ ಹಂಸಮಂಡಳೆ ಎಂಬ ನರ್ತನ, ತಾಂಡವವಿನಯ ಸಂಧಿಯಲ್ಲಿ ಬರುವ ವಿವಿಧ ವೇಷಗಳಿಂದ ಕೂಡಿದ ನೃತ್ಯಗಳ ವರ್ಣನೆಗಳು ಬಹು ಮನೋಜ್ಞವಾಗಿದ್ದು ಕರ್ನಾಟಕ ಸಂಗೀತ ಮತ್ತು ನಾಟ್ಯಗಳ ಪ್ರೌಢಾವಸ್ಥೆಯನ್ನು ತಿಳಿಸುತ್ತವೆ. (ವಿ.ಎಸ್.ಎಸ್.)

ಕರ್ನಾಟಕ ಸಿಂಹಾಸನಾಧೀಶ್ವರರಾದ ವಿಜಯನಗರದ ಅರಸರ ಕಾಲದಲ್ಲಿ ಅವರ ಪ್ರೋತ್ಸಾಹದ ನೆರಳಿನಲ್ಲಿ ಈ ನಾಡಿನ ಸಂಗೀತದ ಶಾಸ್ತ್ರೀಯ ನಿರೂಪಣೆ ಹೆಚ್ಚಿನ ಮಟ್ಟಿಗೆ ಸಾಗಿತಾಗಿ ಇದೇ ಈ ಸಂಗೀತ ಪ್ರಕಾರಕ್ಕೆ ಕರ್ನಾಟಕ ಸಂಗೀತ ಎಂಬ ಹೆಸರು ಬರಲು ಕಾರಣವಾಯಿತು ಎಂಬ ಊಹೆ ಇದೆ. ಅದರಲ್ಲೂ ಕರ್ನಾಟಕ ಸಾಮ್ರಾಜ್ಯದ ಸ್ಥಾಪನೆಗೆ ಕಾರಣರಾದ ವಿದ್ಯಾರಣ್ಯರು ದಕ್ಷಿಣಾದಿ ಸಂಗೀತವನ್ನು ಪುನರುತ್ಥಾನ ಮಾಡಿದ ಮಹಾಮಹಿಮರು ಸಂಗೀತಸಾರವೆಂಬ ಗ್ರಂಥ ಬರೆದು ಈಗ ಅನುಪಲಬ್ಧ ಕರ್ನಾಟಕ ಸಂಗೀತವೆಂದು ದಕ್ಷಿಣಾದಿ ಸಂಗೀತ ನೆಲೆಗೊಳ್ಳಲು ಅಂಕುರಾರ್ಪಣ ಮಾಡಿದವರು. ಇವರು ಆರಂಭಿಸಿದ ಅಥವಾ ಸ್ಫುಟಪಡಿಸಿದ ಸಂಗೀತ ಪದ್ಧತಿಯನ್ನು ಕರ್ನಾಟಕ ಸಂಗೀತವೆಂದು ಜನ ಕರೆದಿದ್ದಿರಬಹುದು ಎಂಬ ಹೇಳಿಕೆಯೂ ಇದೆ.

ವಿದ್ಯಾರಣ್ಯರು ತಮ್ಮ ಸಂಗೀತಸಾರದಲ್ಲಿ ಹದಿನೈದು ಮೇಳ ರಾಗಗಳನ್ನು ಹೇಳಿ ಐವತ್ತು ಪ್ರಚುರ ಪ್ರಯೋಗಗಳುಳ್ಳ ರಾಗಗಳನ್ನ ಳವಡಿಸಿದ್ದಾರೆಂದು ಗೋವಿಂದ ದೀಕ್ಷಿತ ತನ್ನ ಸಂಗೀತಸುಧೆಯಲ್ಲಿ (1614) ಹೇಳುತ್ತಾನೆ. ಕರ್ನಾಟಕ ಭಾಗ್ಯ ವಿದ್ಯಾರಣ್ಯ ಶ್ರೀಚರಣಾಗ್ರಣೇಭ್ಯಃ ಆರಭ್ಯರಾಗಾನ್ ಪ್ರಚುರ ಪ್ರಯೋಗಾನ್ ಪಂಚಾಶತಂ ಚ ಕಲಯೇ ಷಡಂಗಾನ್ - ಎಂಬುದು ಅವನ ಮಾತು. ರಾಗವಿಬೋಧದಲ್ಲಿ (1609) 960 ಮೇಳರಾಗಗಳ ಪದ್ಧತಿಯನ್ನು ನಿರೂಪಿಸಿರುವ ಸೋಮನಾಥನಿಂದ ಈ ಮೇಳ ಪದ್ಧತಿ ಆರಂಭವಾಯಿತೆಂದು ಇತ್ತೀಚಿನ ವರೆಗೂ ಎಣಿಕೆಯಿದ್ದಿತು. ಆದರೆ ಮೇಳರಾಗಗಳ ನಿರ್ದೇಶ ಮಾತ್ರವಲ್ಲದೆ ವಿದ್ಯಾರಣ್ಯರು ತಮ್ಮ ಗ್ರಂಥದಲ್ಲಿ ರಾಗಾಲಾಪನೆಯ ವಿಧಿಗಳನ್ನೂ ನಿರೂಪಿಸಿದ್ದಾರೆಂದು ದೀಕ್ಷಿತನಿಂದ ತಿಳಿದುಬರುತ್ತದೆ.

ದೇವರಾಯನ ಆಳಿಕೆಯ (ಸು.1446-65) ಕಾಲದಲ್ಲಿದ್ದು, ಅಭಿನವಭರತಾಚಾರ್ಯ, ರಾಯವಾಗ್ಗೇಯಕಾರ ಮುಂತಾದ ಪ್ರಶಸ್ತಿಗಳನ್ನು ಪಡೆದಿದ್ದ ಕಲ್ಲಿನಾಥನೆಂಬ ವಿದ್ವಾಂಸ ಶಾರ್ಙ್ಗದೇವನ ಕೃತಿಗೆ ಕಲಾನಿಧಿಯೆಂಬ ಟೀಕೆಯನ್ನು ಬರೆದ. ಈತ ತುಂಬ ಪ್ರತಿಭಾಶಾಲಿ, ಪ್ರಭಾವಶಾಲಿ. ಒಂದು ಕಾಲಕ್ಕೆ ಸಂಗೀತ ಪ್ರಪಂಚದಲ್ಲಿ ಹನೂಮನ್ಮತ, ನಾರದಮತ, ಸೋಮೇಶ್ವರಮತಗಳಿದ್ದಂತೆ ಕಲ್ಲಿನಾಥಮತವೆಂಬ ವಿಶಿಷ್ಟವಾದ ಸಂಪ್ರದಾಯವೇ ಇತ್ತು. ತಾಳದೀಪಿಕೆಯನ್ನು ಬರೆದ ಗೋಪೇಂದ್ರ ತಿಪ್ಪಭೂಪಾಲ (ಸು.1423-46) ಸಂಗೀತ ಶಾಸ್ತ್ರವನ್ನು ಸ್ಫುಟಗೊಳಿಸಲು ಯತ್ನಿಸಿದ. ಇವನ ವ್ಯಾಖ್ಯೆಯಿಂದ ಆ ಕಾಲಕ್ಕೆ ವಿಜಯನಗರದಲ್ಲಿ ಶಾಸ್ತ್ರೀಯ ಸಂಗೀತ ವಿಶೇಷವಾಗಿ ಜನಪ್ರಿಯವಾಗಿದ್ದಿತೆಂದು ತಿಳಿದುಬರುತ್ತದೆ. ಕೃಷ್ಣದೇವರಾಯನ ಕಾಲದಲ್ಲಿ ಸಂಗೀತ ಸೂರ್ಯೋದಯ ಎಂಬ ಸಂಸ್ಕೃತ ಸಂಗೀತ ಶಾಸ್ತ್ರಗ್ರಂಥ ಬೆಳಕು ಕಂಡಿತು. ರಾಣಿವಾಸದವರಿಗೆ ನಾಟ್ಯಾಚಾರ್ಯನಾಗಿದ್ದ ಬಂಧಂ ಲಕ್ಷ್ಮೀನಾರಾಯಣ ಈ ಗ್ರಂಥದ ಕರ್ತೃ.

ದಕ್ಷಿಣಾದಿ ಸಂಗೀತದ ಸ್ವರೂಪವನ್ನು ಚಿತ್ರಿಸುವ ಮತ್ತೊಂದು ಗ್ರಂಥ ಸ್ವರ ಮೇಳಕಳಾನಿಧಿ. ವಿಜಯನಗರದ ರಾಮರಾಯನಿಗೆ ಅಮಾತ್ಯನಾಗಿದ್ದ ರಾಮಾಮಾತ್ಯ ಈ ಗ್ರಂಥದ ಕರ್ತೃ. ತನ್ನ ಗ್ರಂಥದಲ್ಲಿ (ಸು.1550) ಇಪ್ಪತ್ತು ಮೇಳಗಳನ್ನು ನಮೂದಿಸಿ, ರಾಗಗಳನ್ನು ಉತ್ತಮ, ಮಧ್ಯಮ ಮತ್ತು ಅಧಮಗಳೆಂದು ವರ್ಗೀಕರಿಸಿದ್ದಾನೆ. ವೀಣಾವಾದ್ಯದ ವಿವರಣೆಗೆ ಒಂದು ಅಧ್ಯಾಯವನ್ನೇ ಬರೆದಿದ್ದಾನೆ. ಸ್ವರಮೇಳಕಳಾನಿಧಿ ಕರ್ನಾಟಕ ಸಂಗೀತದಲ್ಲಿ ಕ್ರಾಂತಿಯನ್ನು ತಂದ ಗ್ರಂಥ. ಆ ಕಾಲಕ್ಕೆ ಸಂಗೀತಶಾಸ್ತ್ರದಲ್ಲಿ ಲಕ್ಷ್ಯ, ಲಕ್ಷಣಗಳ ವಿಷಯದಲ್ಲಿ ವಿಶೇಷವಾದ ಗೊಂದಲವಿದ್ದುದರಿಂದ ಇವುಗಳನ್ನು ಸಮೀಕರಿಸಿ ಗ್ರಂಥರಚನೆ ಮಾಡಿರುವುದಾಗಿ ಹೇಳಿಕೊಂಡಿದ್ದಾನೆ. ಇವನು ಪ್ರಯೋಗದ ದೃಷ್ಟಿಯನ್ನೇ ಹಿಡಿದು ಪ್ರಚುರವಾಗಿದ್ದ ಎಲ್ಲ ದೇಶೀ ರಾಗಗಳನ್ನೂ ಇಪ್ಪತ್ತು ಮೇಳಗಳಲ್ಲಿ ಅಡಕಮಾಡಲು ಯತ್ನಿಸಿದ. ಹಿಂದಿನ ಕಾಲದಿಂದ ಬಂದಿದ್ದ ಗ್ರಾಮಮೂರ್ಛನ ಪದ್ಧತಿಯಿಂದ ರಾಗಗಳನ್ನು ಹಿಡಿಯುವ, ಹೆಸರಿಸುವ ಹುಟ್ಟಿಸುವ ಪದ್ಧತಿಯನ್ನು ಧೈರ್ಯದಿಂದ ಬದಿಗಿಟ್ಟಾತ ರಾಮಾಮಾತ್ಯ ಈ ಪದ್ಧತಿ ಲಕ್ಷಣಪ್ರಧಾನವಾದದ್ದು. ಮೇಳವೆಂಬ ಮಾತಿಗೆ ಹಿರಿಮೆ ಕೊಟ್ಟವರಲ್ಲಿ ರಾಮಾಮಾತ್ಯ ಮೊದಲಿಗ. ಇವನ ಗ್ರಂಥದಲ್ಲಿ ಮೇಳ ಪ್ರಕರಣವೆಂಬ ಪ್ರತ್ಯೇಕವಾದ ಪರಿಚ್ಛೇದವೇ ಇದೆ. ಆದರೆ ಇವನ ಗಮನವೆಲ್ಲ ಲಕ್ಷ್ಯದ ಕಡೆಗೇ ಇತ್ತು.

ಇದೇ ಕಾಲದಲ್ಲಿದ್ದ ನಿಜಗುಣಶಿವಯೋಗಿ ತನ್ನ ವಿವೇಕಚಿಂತಾಮಣಿಯಲ್ಲಿ ನಾಲ್ಕನೆಯ ಅಧ್ಯಾಯವನ್ನು ಸಂಗೀತಶಾಸ್ತ್ರದ ನಿರೂಪಣೆಗೆ ವಿನಿಯೋಗಿಸಿರುವುದಲ್ಲದೆ ಪಲ್ಲವಿ ಮತ್ತು ಚರಣಗಳನ್ನುಳ್ಳ ಸಹಸ್ರಾರು ಶೈವಪರ ಕೀರ್ತನೆಗಳನ್ನು ಕನ್ನಡದಲ್ಲಿ ರಚಿಸಿದ್ದಾನೆ. ಈ ಕೀರ್ತನೆಗಳೊಂದರಿಂದ ಆ ಕಾಲದ ವೀಣೆಗೆ ಹದಿನಾರು ಮೆಟ್ಟಲುಗಳು ಇದ್ದವೆಂದು ತಿಳಿಯುತ್ತದೆ. ವಿವೇಕಚಿಂತಾಮಣಿ ದಕ್ಷಿಣಾದಿ ಸಂಗೀತಶಾಸ್ತ್ರವನ್ನು ಕನ್ನಡದಲ್ಲಿ ತಿಳಿಸುವ ಮೊತ್ತಮೊದಲ ಗ್ರಂಥ.

ವಿಜಯನಗರದ ಪತನಾನಂತರ ತಮಿಳುನಾಡಿನ ಕೊಡುಗೆ ಹೆಚ್ಚಾಗಿ ಕಂಡುಬರುತ್ತದೆ. ಆದರೆ ದಕ್ಷಿಣ ಕರ್ನಾಟಕದ ಹಲವು ಸಂಸ್ಥಾನಗಳು ಸಂಗೀತ ಪ್ರೋತ್ಸಾಹವನ್ನು ಮುಂದುವರಿಸಿದವು. ಮಾಗಡಿ ಕೆಂಪೇಗೌಡ ಸಂಗೀತಪ್ರಿಯನಾಗಿದ್ದಂತೆ ತೋರುತ್ತದೆ. ವಿಜಯನಗರದ ಸಂಪ್ರದಾಯಗಳನ್ನು ಮೈಸೂರಿನ ಒಡೆಯರು ಪೋಷಿಸಿ ಮುಂದುವರಿಸಿದರು. ಐದನೆಯ ಚಾಮರಾಜ ಒಡೆಯರು ಚತುಷ್ಷಷ್ಠಿ ಕಲಾಪರಿಣತರಾಗಿದ್ದರು. ಕಂಠೀರವ ನರಸಿಂಹರಾಜ ಒಡೆಯರ ನಿತ್ಯದೋಲಗದಲ್ಲಿ ನಾಟ್ಯ,ತಂಬೂರ, ವೀಣಾದಿ ಸಂಗೀತ ಕಾರ್ಯಕ್ರಮ ನಡೆಯುತ್ತಿದ್ದಿತು. ಅವರ ಆಸ್ಥಾನದಲ್ಲಿ ಸಂಗೀತಕೋವಿದೆಯರಿದ್ದರು. ಅವರು ಸ್ವತಃ ಸಂಗೀತಸಾಹಿತ್ಯಶಾಸ್ತ್ರ ವಿಶಾರದರು. ಚಿಕ್ಕದೇವರಾಜ ಒಡೆಯರ ಆಸ್ಥಾನದಲ್ಲಿ ಸಂಗೀತ ಗಾನ ವಾದ್ಯ ನಾಟ್ಯಗಳು ಪ್ರೋತ್ಸಾಹಿತವಾಗಿದ್ದುವು. ಇಲ್ಲಿ ವೀಣಾವಾದನ ತತ್ವಲಯಜ್ಞಾನಕುಶಲ ಕಲಾವಿದರಿದ್ದರು. ಇವರು ಸಂಗೀತಸಾರಜ್ಞರೇ ಆಗಿದ್ದರು. ಚಿಕ್ಕದೇವರಾಜ ಒಡೆಯರು ವೈಣಿಕರೊಳು ಪ್ರವೀಣರಾಗಿದ್ದರು. ಮುಮ್ಮಡಿ ಕೃಷ್ಣರಾಜ ಒಡೆಯರು ಸಂಗೀತಶಾಸ್ತ್ರ ಸಂಪ್ರದಾಯಗಳಲ್ಲಿ ನಿಶ್ಚಿತ ಯೋಗ್ಯತೆಯನ್ನು ಪಡೆದಿದ್ದ ವಿದ್ವಾಂಸರಾಗಿದ್ದು ಸ್ವತಃ ಕೆಲವು ಗೇಯ ಕೃತಿಗಳನ್ನು ರಚಿಸಿದ್ದಲ್ಲದೆ ಬಹುಮಂದಿ ಸಂಗೀತ ವಿದ್ವಾಂಸರಿಗೆ ಉದಾರ ಆಶ್ರಯ ಕೊಟ್ಟಿದ್ದರು. ಹಾಗೆಯೇ 9ನೆಯ ಚಾಮರಾಜ ಒಡೆಯರವರೂ ಕಲಾಪ್ರೇಮಿಯಾಗಿದ್ದು ಕಲೆಯನ್ನು ಪೋಷಿಸುತ್ತಾ ಬಂದರು. ಅನಂತರ ಆಳಿದ ನಾಲ್ವಡಿ ಕೃಷ್ಣರಾಜ ಒಡೆಯರು (1895-1940) ರಸಾಭಿಜ್ಞರಾಗಿದ್ದು ಸಂಗೀತಾದಿ ಕಲೆಗಳಿಗೆ ಉದಾರ ಪೋಷಣೆ ನೀಡಿ ಮೈಸೂರನ್ನು ತಂಜಾವೂರಿಗೆ ಸಮನಾಗಿ ಮಾಡಿದರು. ಇವರ ಆಸ್ಥಾನ ಅನೇಕ ವೈಣಿಕರು, ಗಾಯಕರು, ನಾಟ್ಯಕಲಾಪ್ರವೀಣರಿಂದ ಶೋಭಿಸುತ್ತಿತ್ತು. ಜಯಚಾಮರಾಜರೂ ಸಂಗೀತ ಪೋಷಕರಾಗಿದ್ದರು.

ಈ ಕಾಲದ ಶಾಸ್ತ್ರಗ್ರಂಥಕರ್ತರಲ್ಲಿ ಬೆಂಗಳೂರು ಜಿಲ್ಲೆಯ ಶಿವಗಂಗೆಯ ಸಮೀಪದ ಸಾತನೂರಿನ ಪುಂಡರೀಕವಿಠಲ (ಸು.1562-91) ಮುಖ್ಯನಾದವನು. ಬುರ್ಹಾನ್ ಖಾನನ ಆಹ್ವಾನದ ಮೇಲೆ ಖಾನ್‌ದೇಶಕ್ಕೆ ಹೋಗಿ ಷಡ್ರಾಗ ಚಂದ್ರೋದಯ, ರಾಗಮಾಲಾ, ರಾಗಮಂಜರಿ, ನರ್ತನನಿರ್ಣಯ ಎಂಬ ನಾಲ್ಕೂ ಸಂಗೀತ ಗ್ರಂಥಗಳನ್ನು ರಚಿಸಿದ್ದಾನೆ. ಪುಂಡರೀಕವಿಠಲ ಉತ್ತರಾದಿ ದಕ್ಷಿಣಾದಿ ಸಂಗೀತಗಳೆರಡರಲ್ಲೂ ನಿಷ್ಣಾತನಾಗಿದ್ದ.

ತಂಜಾವೂರಿನ ಅರಸು ರಘುನಾಥನಾಯಕನ ಆಳ್ವಿಕೆಯಲ್ಲಿ (ಸು.1614-28) ಮಂತ್ರಿಯಾಗಿದ್ದು ಸಂಗೀತಸುಧೆ ಎಂಬ ಪ್ರಖ್ಯಾತ ಗ್ರಂಥವನ್ನು ಬರೆದ ಗೋವಿಂದ ದೀಕ್ಷಿತನೂ ಕನ್ನಡದವನೇ, ಕರ್ನಾಟಕ ಸ್ಮಾರ್ತ ಬ್ರಾಹ್ಮಣ. ಈಗ ಪ್ರಚುರವಾಗಿರುವ ವೀಣೆಯ ಸ್ವರೂಪವನ್ನು ಸಿದ್ಧಮಾಡಿಕೊಟ್ಟವ ಇವನೇ. (ಈ ಕೆಲಸ ತಂಜಾವೂರಿನಲ್ಲಿ ನಡೆದಿದ್ದು ಆದ್ದರಿಂದ ವೀಣೆಗೆ ತಂಜಾವೂರು ವೀಣೆಯೆಂದು ಹೆಸರಾಯಿತು). ಇವನ ಮಗ ವೆಂಕಟಮಖಿ (ವೆಂಕಟೇಶ್ವರ ದೀಕ್ಷಿತ) ಮೇಳ ಪದ್ಧತಿಯನ್ನು ಮುಂದುವರಿಸಿ ತನ್ನ ಚತುರ್ದಂಡಿ ಪ್ರಕಾಶಿಕೆಯಲ್ಲಿ (ಸು.1620) ಎಪ್ಪತ್ತೆರಡು ಮೇಳಕರ್ತ ರಾಗಗಳ (ಮೂಲಪದ ಮೇಳಕರ್ತೃ ಎಂದು) ವಿಭಜನೆಯನ್ನು ಮಾಡಿಕೊಟ್ಟಿದ್ದಾನೆ. ತಂಜಾವೂರಿನ ವಿಜಯರಾಘವ ನಾಯಕನ ಆದೇಶದ ಮೇಲೆ ಬರೆದ ಈ ಪ್ರಸಿದ್ಧ ಗ್ರಂಥ' ಕರ್ನಾಟಕ ಸಂಗೀತಕ್ಕೆ ಸ್ಪಷ್ಟವಾದ ಕಟ್ಟಡವನ್ನು ಕಟ್ಟಿಕೊಟ್ಟಿತು. ಎಲ್ಲ ರಾಗಗಳನ್ನು ನುಡಿಸಲು ಅನುಕೂಲವಾಗುವಂತೆ ಮೇಳದ ಮೆಟ್ಟಲುಗಳನ್ನು ಮೇಣದಲ್ಲಿ ಸ್ಥಿರವಾಗಿರಿಸಿದ ಇಂದಿನ ವೀಣೆ ಈತನ ಕಲ್ಪನೆಯಂತೆ. ಇವನ ಗ್ರಂಥದ ಹೆಸರಿನಲ್ಲಿ ಬರುವ ಚತುರ್ದಂಡಿಯೆಂದರೆ ಗೀತ, ಆಲಾಪ, ಲಯ ಮತ್ತು ಪ್ರಬಂಧ - ಇವು ರಾಗ ಹರಿಯುವ ನಾಲ್ಕು ದಾರಿಗಳು. ಈ ಗ್ರಂಥದಲ್ಲಿ ವೀಣೆ, ಶ್ರುತಿ, ಸ್ವರ, ಮೇಳ, ರಾಗ, ಆಲಾಪ, ಠಾಯ,ಗೀತ ಪ್ರಬಂಧಗಳನ್ನು ವಿವರಿಸುವ ಪರಿಚ್ಛೇದಗಳಿವೆ. ತಾಳ ಪ್ರಕರಣ ಉಪಲಬ್ಧವಿಲ್ಲ. ಈತ ರಾಗಾಂಗ ಉಪಾಂಗ ಭಾಷಾಂಗ ರಾಗಗಳಿಗೆ ಶ್ಲೋಕರೂಪದಲ್ಲಿ ಲಕ್ಷಣವನ್ನು ಗೀತ ರೂಪದಲ್ಲಿ ಲಕ್ಷ್ಯವನ್ನು ನಿರೂಪಿಸಿದ್ದಾನೆ. ಅನಂತರದಲ್ಲಿ ಉಲ್ಲೇಖನೀಯ ಶಾಸ್ತ್ರ ಗ್ರಂಥಗಳಾವುವೂ ಹುಟ್ಟಲಿಲ್ಲವೆಂದು ತೋರುತ್ತದೆ. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ತಚ್ಚೂರು ಶಿಂಗರಾಚಾರ್ಯರೆಂಬುವರು ತಮ್ಮ ಸಹೋದರ ಹಿರಿಯ ಶಿಂಗರಾಚಾರ್ಯರೊಡನೆ ಸೇರಿಕೊಂಡು ಸ್ವರಮಂಜರಿ, ಗಾಯಕಪಾರಿಜಾತಂ, ಸಂಗೀತಕಲಾನಿಧಿ, ಗಾಯಕ ಲೋಚನಂ, ಗಾಯಕ ಸಿದ್ಧಾಂಜನಂ, ಗಾನೇಂದು ಶೇಖರಂ, ಭಾಗವತ ಸಾರಾಮೃತಂ ಎಂಬ ಶಾಸ್ತ್ರಗ್ರಂಥಗಳನ್ನು ರಚಿಸಿ ಪ್ರಕಟಿಸಿದ್ದಾರೆ.

**ಗೇಯ ಕೃತಿಗಳು :** ಸಂಗೀತ ಲಕ್ಷಣದ ಬಗ್ಗೆ ಹುಟ್ಟಿರುವ ಹಲವಾರು ಗ್ರಂಥಗಳು ಶಾಸ್ತ್ರದ ಪ್ರಾಗಲ್ಭ್ಯತೆಯನ್ನು ಸೂಚಿಸುತ್ತಿರುವಂತೆ ಗೇಯಕೃತಿಗಳ ರಚನೆಯೂ ವ್ಯಾಪಕವಾಗಿ ಆಗಿರಬೇಕು. ಇದರ ಬಗ್ಗೆಯೂ ಹಿಂದೆ ತಿಳಿಸಿರುವ ಹಲವಾರು ಶಾಸನ ಮತ್ತು ಸಾಹಿತ್ಯ ಉಲ್ಲೇಖಗಳು ಉತ್ತಮ ಸಾಕ್ಷಿಗಳಾಗಿವೆ. ಗ್ರಂಥ'ಗಳಲ್ಲಿ ಲಕ್ಷಣದ ಜೊತೆಗೆ ಲಕ್ಷ್ಯಗಳನ್ನೂ ಬರೆಯುತ್ತಿದ್ದುದು ರೂಢಿ. ಹೀಗೆ ಸಂಗೀತರೂಪಗಳ ರಚನೆಯಲ್ಲೂ ಕರ್ನಾಟಕದ ಕೊಡುಗೆ ಹೇರಳವಾಗಿ ವೈವಿಧ್ಯದಿಂದ ಕೂಡಿದೆ. ಕರ್ನಾಟಕದಲ್ಲಿ ರೂಪಗೊಂಡ ರಚನೆಗಳ ಬಗ್ಗೆ ಸುಮಾರು ಐವತ್ತು ಪ್ರಬಂಧಗಳ ವಿವರಣೆ ಮತಂಗನ ಬೃಹದ್ದೇಶೀಯಲ್ಲೇ ಉಕ್ತವಾಗಿದೆ. ಇವುಗಳಲ್ಲದೆ ಬೆದಂಡೆ, ಮೆಲ್ವಾಡು, ಪಾಡುಗಬ್ಬ, ಪಾಡು, ಬಾಜನೆಗಬ್ಬ, ಚತ್ತಾಣ, ಸುವ್ವಿ, ಚೌಪದಿ, ಅಡ್ಡತನ, ಒನಕೆವಾಡು, ಓವಿ, ಧವಳ, ಮಂಗಳಾಚಾರ, ಏಲಾ ಎಂಬ ರಚನೆಗಳೂ ರೂಢಿಯಲ್ಲಿದ್ದುವೆಂದು ತಿಳಿದುಬರುತ್ತದೆ. ವಚನ ಸಾಹಿತ್ಯದಲ್ಲಿ ಸಂಗೀತ ಉಲ್ಲೇಖನ ಅನೇಕ ಕಡೆ ಬಂದಿದೆ. ಶರಣರು ವಚನಗಳಲ್ಲದೆ, ಹಾಡುಗಳನ್ನೂ ಬರೆದಿದ್ದರು. ಎನ್ನ ಕಾಯವ ದಂಡಿಗೆಯ ಮಾಡಯ್ಯ, ಬತ್ತೀಸರಾಗವ ಹಾಡಯ್ಯ, ಉರದಲೊತ್ತಿ ಬಾರಿಸುಕೂಡಲಸಂಗಮದೇವಯ್ಯ ಎಂಬ ಬಸವಣ್ಣನವರ ವಚನದಿಂದ 32 ರಾಗಗಳು ಕರ್ನಾಟಕದಲ್ಲಿ ಮುಖ್ಯವಾಗಿದ್ದುವೆಂದು ಕಾಣುತ್ತದೆ. ಹರಿಹರ ತನ್ನ ಕಾವ್ಯದಲ್ಲಿ ಒಂದು ಕಡೆ ಗೀತಗಳಂ ಪಾಡುತಂ ಎಂದು ಹೇಳಿದ್ದಾನೆ. ಶರಣರು ವಚನಗಳನ್ನು ಹಾಡುತ್ತಿದ್ದರೆನ್ನಬಹುದು. ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಬತ್ತಲೇಶ್ವರ ಮುಂತಾದ ಶರಣಶರಣೆಯರೂ ಪ್ರೌಢದೇವರಾಯನ ಕಾಲದಲ್ಲಿದ್ದ 101 ವಿರಕ್ತರಲ್ಲಿ ಅನೇಕರು ಗುರುಬಸವ, ಕರಸ್ಥಲದ ನಾಗಿದೇವ, ನಿರ್ವಾಣಬೋಳೇಶ ಮುಂತಾದವರೂ ವಿಚಾರಪ್ರಧಾನವಾದ ಸಂಗೀತ ಕೃತಿಗಳನ್ನು ರಚಿಸಿದರು. ಅನಂತರದ ಯುಗದಲ್ಲಿ ರಚಿತವಾದ ಮುಖ್ಯ ಕೃತಿ ನಿಜಗುಣಶಿವಯೋಗಿಯದು. ಇವನು ತ್ರಿಪದಿ, ಸಾಂಗತ್ಯ ಮುಂತಾದ ಹಾಡುಗಳಲ್ಲಿ ತನ್ನ ಷಟ್ ಶಾಸ್ತ್ರಗಳನ್ನೆಲ್ಲಾ ರಚಿಸಿದ. ಕೈವಲ್ಯಪದ್ಧತಿಯ ಹಾಡುಗಳು ರಾಗ ತಾಳ ಸಮನ್ವಿತವಾದ ಸಂಗೀತ ಕೃತಿಗಳು, ನಾದನಾಮಕ್ರಿಯೆ, ಧನ್ಯಾಸಿ, ಶಂಕರಾಭರಣ, ಲಲಿತೆ, ದೇಶಿ ಸಾರಗ, ಸುವ್ವಾಲೆ, ಭೈರವ, ತೋಡಿ, ಕಾಂಬೋಧಿ, ಭವುಳಿ, ಕುರಂಜಿ, ಮಧು ಮಾಧವಿ, ಸೌರಾಷ್ಟ್ರ, ಸಾವಂತ,ಕಲ್ಯಾಣಿ ಮೊದಲಾದ ರಾಗಗಳಲ್ಲಿರುವ ಭಾವಪ್ರಧಾನವಾದ ನಾದಮಾಧುರ್ಯ ಮತ್ತು ಪದವಿನ್ಯಾಸದಿಂದ ಕೂಡಿದ ಸಂಗೀತ ಸಾಹಿತ್ಯಗಳ ಸಮನ್ವಯವುಳ್ಳ ಶ್ರೇಷ್ಠ ಕೃತಿಗಳು ಇದರಲ್ಲಿವೆ.

ಅಲ್ಲಿಂದ ಮುಂದೆ ದಾಸಸಾಹಿತ್ಯ ಒಂದು ಹೊಸ ಶಕೆಯನ್ನು ಆರಂಭಿಸಿತು. ಹರಿದಾಸ ಸಾಹಿತ್ಯದ ಆದ್ಯಾಚಾರ್ಯರಾದ ನರಹರಿತೀರ್ಥರು ರಘುಪತಿ ಎಂಬ ಅಂಕಿತದಲ್ಲಿ ಕನ್ನಡದ ಹಾಡುಗಳನ್ನು ರಚಿಸಿದರು. ಶ್ರೀಪಾದರಾಯರು ಕನ್ನಡದಲ್ಲಿ ಅನೇಕ ಸುಳಾದಿಗಳನ್ನೂ ದೇವರ ನಾಮಗಳನ್ನೂ ರಂಗವಿಠಲ ಮುದ್ರಿಕೆಯಿಂದ ರಚಿಸಿದ್ದಾರೆ. ಇವರು ಸುಳಾದಿಗಳ ಆದ್ಯಪ್ರವರ್ತಕರು. ಇವರ ಶಿಷ್ಯರಾದ ವ್ಯಾಸರಾಯರು ಹೇರಳವಾಗಿ ದೇವರ ನಾಮಗಳನ್ನೂ ಸುಳಾದಿಗಳನ್ನೂ ಶ್ರೀ ಕೃಷ್ಣ ಮುದ್ರಿಕೆಯಿಂದ ರಚಿಸಿ, ತಮ್ಮ ಶಿಷ್ಯರುಗಳಾದ ಪುರಂದರದಾಸ, ಕನಕದಾಸ, ವಾದಿರಾಜ ಇವರಿಗೆ ಸಂಗೀತ ಕೃತಿಗಳ ರಚನೆಯಲ್ಲಿ ಮಾರ್ಗ ದರ್ಶಕರಾದರು. ಅನಂತರಕಾಲದಲ್ಲಿ ವಿಜಯದಾಸರು, ಗೋಪಾಲದಾಸರು, ರಾಘವೇಂದ್ರ ಸ್ವಾಮಿಗಳು, ಮೋಹನದಾಸರು ಮತ್ತು ಜಗನ್ನಾಥದಾಸರೇ ಮುಂತಾದವರು ದಾಸಸಾಹಿತ್ಯವನ್ನು ಬೆಳೆಸಿದರು. ಈ ಕಾಲಕ್ಕೆ ಅನೇಕ ರಾಗಗಳನ್ನು ಬಳಸಿಕೊಂಡು ವೈವಿಧ್ಯಮಯವೂ ಶಾಸ್ತ್ರೀಯವೂ ಆದ ಮಾರ್ಗದಲ್ಲಿ ಬೆಳೆದು ಬಂದ ಸಂಗೀತವನ್ನು ಅತ್ಯಂತ ಜನಪ್ರಿಯವಾಗಿ ಈ ಹರಿದಾಸರು ಪರಿವರ್ತಿಸಿದರು.

ಹರಿದಾಸರಲ್ಲಿ ಬಹು ಮುಖ್ಯರಾದವರು ಅಪಾರ ಸಂಖ್ಯೆಯ ಕೀರ್ತನೆಗಳನ್ನು ರಚಿಸಿರುವ ಪುರಂದರದಾಸರು. ಇವರು ಸಂಗೀತದ ಅಭ್ಯಾಸಕ್ಕೆ ಒಂದು ಹೊಸ ಹಾದಿಯನ್ನು ಹಾಕಿಕೊಟ್ಟು, ಕರ್ನಾಟಕ ಸಂಗೀತವನ್ನು ಕಲಿಯಲು ವೈಜ್ಞಾನಿಕವೂ ವ್ಯವಸ್ಥಿತವೂ ಆದ ಪದ್ಧತಿಯನ್ನು ರೂಪಿಸಿದರು. ಸರಳೆ, ಜಂಟಿವರಸೆ, ಅಲಂಕಾರಗಳನ್ನು ಮಾಯಾಮಾಳವಗೌಳ ರಾಗದಲ್ಲೂ ಸುಳಾದಿ ಸಪ್ತ ತಾಳಗಳನ್ನು ಅಳವಡಿಸಿ ಮಲಹರಿ ರಾಗದಲ್ಲಿ ಪಿಳ್ಳಾರಿ ಗೀತಗಳನ್ನೂ ರಚಿಸಿದರು. ಅನೇಕ ಜನಪದ ಸಂಗೀತದ ಮಟ್ಟುಗಳಿಗೆ ಶಾಸ್ತ್ರೀಯವಾದ ರಾಗಗಳ ಸ್ವರೂಪ ಕೊಟ್ಟರು. ತುತ್ತುರುತುರೆಂದು, ನಳಿನಜಾಂಡ - ಎಂಬ ಕೀರ್ತನೆಗಳಿಂದ 12ನೆಯ ಶತಮಾನದಿಂದಲೂ ಬೆಳೆದುಬಂದಿದ್ದ ಬತ್ತೀಸ ರಾಗಗಳಲ್ಲಿ ಹಾಡಿದ್ದಾರೆಂದು ತಿಳಿದುಬರುತ್ತದೆ. ಅಲ್ಲದೆ ಅನೇಕ ಸುಳಾದಿ ಉಗಾಭೋಗಗಳನ್ನೂ ರಚಿಸಿದರು.

ಮಾಯಾಮಾಳವಗೌಳವನ್ನು ಶುದ್ಧಮೇಳವೆಂದು ಗ್ರಹಿಸಿದುದೇ ಕರ್ನಾಟಕ ಸಂಗೀತದ ಇತಿಹಾಸದಲ್ಲಿ ದೊಡ್ಡದೊಂದು ಕ್ರಾಂತಿಯಾಗಿ ಪರಿಣಮಿಸಿತು ಎನ್ನಬಹುದು. ಸಮಾನಾಂತರ ಶ್ರುತಿಯು ಈ ರಾಗದ ಹಿರಿಮೆಯನ್ನು ಅರ್ಥಮಾಡಿಕೊಂಡವರಲ್ಲಿ ಪುರಂದರದಾಸರು ಮೊದಲಿಗರು. ಅಭ್ಯಾಸಿಗಳ ಅನುಕೂಲಕ್ಕೆಂದು ಇವರು ಮಾಯಾಮಾಳವಗೌಳ ಮೇಳದಿಂದ ಜನ್ಯವಾದ ಮಲಹರಿಯಲ್ಲಿ ಗೀತಗಳನ್ನು ರಚಿಸಿದ್ದಾರೆ. ಈ ರಾಗದಲ್ಲಿ ಪುರಂದರದಾಸರು ರಚಿಸಿದ ಲಕ್ಷ್ಯಗೀತಗಳಲ್ಲಿ ಶ್ರೀಗಣನಾಥ ಸಿಂಧುರ ವರ್ಣ, ಕುಂದಗೌರ ಗೌರೀವರ, ಕೆರೆಯ ನೀರನು ಕೆರೆಗೆ ಚೆಲ್ಲಿ ಇವು ಇಂದಿಗೂ ಉಳಿದುಬಂದಿವೆಯಲ್ಲದೆ ಎಳೆಯರಿಗೆ ಸಂಗೀತಾಭ್ಯಾಸವನ್ನು ಮಾಡಿಸುವಲ್ಲಿ ಇವುಗಳಿಂದ ಪ್ರಾರಂಭ ಮಾಡುವ ರೂಢಿ ಇದೆ. ಪುರಂದರ ಕೊಡುಗೆ ದಕ್ಷಿಣಾದಿ ಸಂಗೀತದ ಭದ್ರ ಬುನಾದಿಯಾಯಿತು. ಇವರು ಕರ್ನಾಟಕ ಸಂಗೀತ ಪಿತಾಮಹರಾದರು.

ಹರಿದಾಸರೆಲ್ಲರೂ ಜನರ ಭಾಷೆಗೆ ಹೊಂದುವಂತೆ ವಾಕ್ಯರಚನೆ ಮತ್ತು ಪದಗಳನ್ನು ಮಾರ್ಪಡಿಸಿ ಒಂದು ಹೊಸ ಶೈಲಿಯನ್ನೇ ಸೃಷ್ಟಿಸಿದರು. ಪ್ರಾಸ, ಅನುಪ್ರಾಸ, ಯಮಕ, ಅಲಂಕಾರಗಳು, ದ್ವಿತೀಯಾಕ್ಷರ ಮತ್ತು ಅಂತ್ಯಪ್ರಾಸ, ಉಪಮಾನ, ರೂಪಕ, ಸ್ವಭಾವೋಕ್ತಿ, ನಿಂದಾಸ್ತುತಿ, ಜನಜೀವನಕ್ಕೆ ಸಂಬಂಧಿಸಿದ ಅನುಭವಸಿದ್ಧವಾದ ಉಪಮಾನಗಳನ್ನು ಬಳಸಿ ಕೃತಿಗಳನ್ನು ರಚಿಸಿದ್ದಾರೆ. ಇವರೆಲ್ಲರೂ ಗೀತ, ವಾದ್ಯ, ನೃತ್ಯ ಈ ಮೂರರಲ್ಲೂ ಪರಿಣತರಾಗಿದ್ದರು. ಹರಿದಾಸರ ಕೀರ್ತನೆಗಳೆಲ್ಲವೂ ಸುಂದರವಾಗಿ ಲಯಬದ್ಧವಾಗಿವೆ; ವೈರಾಗ್ಯ, ಶಾಂತಿ, ಭಕ್ತಿರಸಗಳಿಂದ ತುಂಬಿದ ರಚನೆಗಳಾಗಿವೆ. ಈ ರೀತಿ ದಾಸರ ಕಾಲದಿಂದ ಈಚೆಗೆ ಕರ್ನಾಟಕ ಸಂಗೀತ ಒಂದು ಖಚಿತ ರೂಪವನ್ನು ಪಡೆಯಿತು. ಪುರಂದರದಾಸರು ಮುಂದಿನ ವಾಗ್ಗೇಯಕಾರರಿಗೆ ಗುರುಗಳಾಗಿ ಪರಿಣಮಿಸಿದರು. ಕರ್ನಾಟಕ ಸಂಗೀತದ ರತ್ನಪ್ರಾಯರಾದ ತ್ಯಾಗರಾಜ ಸ್ವಾಮಿಗಳು ಇವರನ್ನು ಗುರುಗಳೆಂದು ಅಂಗೀಕರಿಸಿ ಸ್ತುತಿಸಿರುವುದಲ್ಲದೆ ಇವರ ಕೃತಿಗಳಿಂದ ಪ್ರಭಾವಿತರಾಗಿ ಕೃತಿಗಳನ್ನು ರಚಿಸಿದರು.

ನಿಜಗುಣಶಿವಯೋಗಿ, ಮಾಗಡಿ ಕೆಂಪೇಗೌಡ ಇಂತಹ ಕೆಲವರು ದಾಸಪರಂಪರೆಯ ಹೊರಗಿದ್ದು ಕೃತಿಗಳನ್ನು ರಚಿಸಿರುವುದು ಕಂಡುಬರುತ್ತದೆ.

ಸಂಗೀತ-ಸಾಹಿತ್ಯ ರಚನೆ 18ನೆಯ ಶತಮಾನದಿಂದ ಮುಂದಿನ ಶತಮಾನಗಳಲ್ಲೂ ಅನೇಕ ಹರಿದಾಸರಿಂದ ವಿಪುಲವಾಗಿ ನಡೆಯಿತು. ಅಂಥ ವಾಗ್ಗೇಯಕಾರರಲ್ಲಿ ಪ್ರತಿಯೊಬ್ಬರ ರಚನೆಯಲ್ಲೂ ಸಂಗೀತ ದೃಷ್ಟಿಯಿಂದ ಅವರದೇ ಆದ ವೈಶಿಷ್ಟ್ಯವಿದೆ. ವಿಜಯದಾಸರ (18ನೆಯ ಶತಮಾನ) ಸಮಕಾಲೀನರಾದ ಪ್ರಸನ್ನವೆಂಕಟದಾಸರು ಭಾಗವತ ಮತ್ತು ಜೋಗುಳ ಪದಗಳನ್ನು ರಚಿಸಿದರು. ಅವರ ಸೋದರರು ಹಯವದನವಿಠಲ ಎಂಬ ಅಂಕಿತದಲ್ಲಿ ಕೃತಿಗಳನ್ನು ರಚಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರ ಸಮಕಾಲೀನರೆಂದು ಹೇಳಲಾದ ಸುರಪುರದ ಆನಂದದಾಸರು ಸಂಗೀತಮಾಧುರ್ಯ, ಸಾಹಿತ್ಯ ಸೌಂದರ್ಯಗಳ ಮಧುರ ಮಿಲನವಿರುವ ಕೃತಿಗಳನ್ನು ರಚಿಸಿ ಸುರಪುರದ ಶೈಲಿಯನ್ನು ಸ್ಥಾಪಿಸಿದರು. ಮಹಿಪತಿದಾಸರು ಮತ್ತು ಅಣ್ಣಾವಧೂತರು ಹಲವು ಸುಂದರವಾದ ಕೃತಿಗಳನ್ನು ರಚಿಸಿದರು. ಮಹಿಪತಿದಾಸರ ಮಗ ಕೃಷ್ಣರಾಯರೂ ಅನೇಕ ಕೃತಿಗಳನ್ನು ರಚಿಸಿದ್ದಾರೆ. 20ನೆಯ ಶತಮಾನದ ವರೆಗಿನ ಹರಿದಾಸ ಕೃತಿಗಳ ಸಂಪತ್ತನ್ನು ಹೆಚ್ಚಿಸಿದವರಲ್ಲಿ ವೆಂಕಟವಿಠಲ, ವೈಕುಂಠಕೇಶವ, ಅಚ್ಯುತವಿಠಲ, ವಾಸುದೇವ ವಿಠಲ, ಕಮಲೇಶವಿಠಲ, ಭೀಮೇಶವಿಠಲ, ಜನಾರ್ದನವಿಠಲ, ಶ್ರೀಪತಿವಿಠಲ, ರಘುನಾಥವಿಠಲ, ಪ್ರಾಣೇಶವಿಠಲ, ಶ್ರೀವಿಠಲ ಪ್ರಸನ್ನವೆಂಕಟಪತಿ, ಅನಂತಾದ್ರೀಶ, ಅಭಿನವಜನಾರ್ದನವಿಠಲ, ಅಚಲಾನಂದವಿಠಲ ಮತ್ತು ವೆಂಕಟೇಶ್ವರ ಎಂಬ ಹರಿದಾಸರು ಮುಖ್ಯರು. ಹಾಗೆಯೇ ವ್ಯಾಸರಾಯರ ಶಿಷ್ಯಪರಂಪರೆಗೆ ಸೇರಿದ ವಿದ್ಯಾಕಾಂತರು ಭಾವರಾಗಯುಕ್ತವಾದ ದೇವರನಾಮಗಳನ್ನು ರಚಿಸಿದ್ದಾರೆ. ಮಂಗಳೂರಿನ ತುಪಾಕಿ ವೆಂಕಟರಮಣಾಚಾರ್ಯ, ಸುಬ್ಬಣ್ಣಾಚಾರ್ಯ ಮತ್ತು ರಾಮಾಚಾರ್ಯರ ದೇವರನಾಮಗಳು, ಬಾಗೇಪಲ್ಲಿಯ ಗುರುರಾಮವಿಠಲರ ಕೃತಿಗಳು, ಸೋಸಲೆ ವಿದ್ಯಾರತ್ನಾಕರ (ನರಹರಿವಿಠಲ) ಮತ್ತುವ್ಯಾಸರಾಯರ ಮಠಾಧೀಶ ಶ್ರೀ ವಿದ್ಯಾಪ್ರಸನ್ನತೀರ್ಥರ ದೇವರನಾಮಗಳೂ ಸುಂದರವಾದುವು. ಬೆಂಗಳೂರಿನ ಸರ್ಪಭೂಷಣ ಶಿವಯೋಗಿಗಳು ರಾಗಭಾವದಿಂದ ಕೃತಿಗಳನ್ನು ರಚಿಸಿದ್ದಾರೆ.

19 ಮತ್ತು 20ನೆಯ ಶತಮಾನಗಳಲ್ಲಿ ಮೈಸೂರು ರಾಜಮನೆತನದ ವಿಶೇಷ ಪ್ರೋತ್ಸಾಹ, ಪೋಷಣೆಗಳಿಂದ ಅನೇಕ ವಾಗ್ಗೇಯಕಾರರು ಸಂಗೀತಸಂಪತ್ತನ್ನು ಹೆಚ್ಚಿಸಿದ್ದಾರೆ. ಮೈಸೂರು ಸದಾಶಿವರಾಯರು, ವೀಣೆ ಶೇಷಣ್ಣನವರು, ಮೂಗೂರು ಸುಬ್ಬಣ್ಣನವರು, ವೀಣೆ ಸುಬ್ಬಣ್ಣನವರು, ಕರಿಗಿರಿರಾಯರು, ಬಿಡಾರಂ ಕೃಷ್ಣಪ್ಪನವರು ಅನೇಕ ಬಗೆಯ ಸಂಗೀತ ಕೃತಿಗಳನ್ನು ರಚಿಸಿದ್ದಾರೆ. ಮೈಸೂರು ವಾಸುದೇವಾ ಚಾರ್ಯರು 300ಕ್ಕಿಂತಲೂ ಹೆಚ್ಚು ಕೃತಿಗಳನ್ನು ವಾಸುದೇವ ಎಂಬ ಅಂಕಿತದಲ್ಲಿ ರಚಿಸಿದ್ದಾರೆ. ಮುತ್ತಯ್ಯ ಭಾಗವತರು 108 ರಾಗಗಳಲ್ಲಿ ಚಾಮುಂಡೇಶ್ವರಿಯ ಮೇಲೆ ಸಾಮಾನ್ಯವಾಗಿ ಬಳಕೆಯಲ್ಲಿಲ್ಲದ ಅನೇಕ ಜನ್ಯರಾಗಗಳಲ್ಲಿ 108 ಕನ್ನಡದ ಕೀರ್ತನೆಗಳನ್ನು ಹರಿಕೇಶ ಎಂಬ ಅಂಕಿತದಲ್ಲಿ ರಚಿಸಿದ್ದಾರೆ. ದೇವೋತ್ತಮ ಜೋಯಿಸರು ಕನ್ನಡ ಹಾಡುಗಳನ್ನು ರಚಿಸಿದವರಲ್ಲಿ ಮುಖ್ಯರು. ಟಿ.ಚೌಡಯ್ಯನವರು ಅನೇಕ ತಿಲ್ಲಾನಗಳನ್ನೂ ಕೃತಿಗಳನ್ನೂ ತ್ರಿಮಕುಟ ಎಂಬ ಅಂಕಿತದಲ್ಲಿ ರಚಿಸಿದ್ದಾರೆ. ಜಯಚಾಮರಾಜ ಒಡೆಯರು ಸ್ವಯಂ ಸಂಗೀತರಸಿಕರು ಮತ್ತು ವಾಗ್ಗೇಯಕಾರರು. ಶ್ರೀವಿದ್ಯಾ ಎಂಬ ಅಂಕಿತದಲ್ಲಿ ಹಲವು ಶ್ರೇಷ್ಠವಾದ ಕೃತಿಗಳನ್ನು ರಚಿಸಿದ್ದಾರೆ. ಇಲ್ಲಿಯವರೆಗೆ ಕರ್ನಾಟಕದಲ್ಲಿ ಹಲವಾರು ಕೃತಿಗಳ ರಚನೆಯಿಂದ ಕರ್ನಾಟಕ ಸಂಗೀತ ಸಾಹಿತ್ಯ ವಿಪುಲವಾಗಿ ವೈಶಿಷ್ಟ್ಯಪೂರ್ಣವಾಗಿ ಬೆಳೆದುಬಂದಿದೆ.

**ಕಲಾವಿದರು :** ಹಿಂದೆಯೇ ವಿವರಿಸಿರುವ ಅನೇಕ ಸಾಹಿತ್ಯ ಮತ್ತು ಶಾಸನಗಳ ಉಲ್ಲೇಖದಿಂದ ಕಾಲಕಾಲದಲ್ಲಿ ಅನೇಕ ಗಾಯನ ನಿಪುಣರಿದ್ದಿರಬೇಕೆಂಬುದು ಸ್ಪಷ್ಟವೇ ಇದೆ. ಕರ್ನಾಟಕದ ಸಂಗೀತಗಾರರಲ್ಲಿ ವಿಶೇಷ ಉಲ್ಲೇಖಕ್ಕೆ ಅರ್ಹನಾದವನು ಗೋಪಾಲನಾಯಕ. ಸ್ವತಃ ಶಾಸ್ತ್ರಜ್ಞನಷ್ಟೇ ಅಲ್ಲದೆ ಗಾಯನ ಚತುರನೂ ಆಗಿದ್ದ ಈತ ಉತ್ತರ ಭಾರತದಲ್ಲೂ ತನ್ನ ಕಲಾಚಾತುರ್ಯವನ್ನು ಮೆರೆಸಿ ಅಲ್ಲಿ ರಾಜಪೋಷಣೆಯನ್ನೂ ಪ್ರಸಿದ್ಧ ಗಾಯಕನಾಗಿದ್ದ ಅಮೀರ್ ಖುಸ್ರುವಿನಿಂದ ಹೊಗಳಿಕೆಯನ್ನೂ ಗಳಿಸಿದ್ದ. ಪುರಂದರದಾಸರೇ ಮೊದಲಾದ ದಾಸಕೂಟದವರು ಉತ್ತಮ ಗಾಯಕರೂ ಆಗಿದ್ದರು. ಅರಸರಿಂದ ದೊರೆತ ಪ್ರೋತ್ಸಾಹದಿಂದಾಗಿ ಅನೇಕ ಸಂಗೀತ ವಿದ್ವಾಂಸರು ಮೈಸೂರು ಆಸ್ಥಾನದಲ್ಲಿದ್ದರು. ಸುಪ್ರಸಿದ್ಧ ವೀಣೆ ಕುಪ್ಪಯ್ಯನವರ ಮೊಮ್ಮಕ್ಕಳಾದ ವೀಣೆ ವೆಂಕಟಸುಬ್ಬಯ್ಯನವರನ್ನು ದಿವಾನ್ ಪೂರ್ಣಯ್ಯನವರು ಮೈಸೂರಿಗೆ ಆಹ್ವಾನಿಸಿದರೆಂದೂ ಮುಮ್ಮಡಿ ಕೃಷ್ಣರಾಜ ಒಡೆಯರು ಅವರ ಸಂಗೀತ ಸಾಮರ್ಥ್ಯಕ್ಕೆ ಮೆಚ್ಚಿ ಬಹುಮಾನಿಸಿದರೆಂದೂ ತಿಳಿದುಬರುತ್ತದೆ.

19ನೆಯ ಶತಮಾನದ ಅಂತ್ಯ ಮತ್ತು 20ನೆಯ ಶತಮಾನದ ಮೊದಲ ಭಾಗದಲ್ಲಿದ್ದ ಕರ್ನಾಟಕ ಸಂಗೀತ ವಿದ್ವಾಂಸರಲ್ಲಿ ಬಿಡಾರಂ ಕೃಷ್ಣಪ್ಪ ಸಂಗೀತರಂಗದಲ್ಲಿ ಪ್ರಖ್ಯಾತಿಪಡೆದವರು. ನಾಲ್ವಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿದ್ದ ಇವರು ಕನ್ನಡ ದೇವರನಾಮಗಳಲ್ಲೆ ಸಂಗೀತ ಕಛೇರಿಯನ್ನು ಮಾಡುವ ಪದ್ಧತಿಯನ್ನು ಪ್ರಪ್ರಥಮವಾಗಿ ಪ್ರಾರಂಭಿಸಿದರು. ಇವರಿಗೆ ತ್ರಿಸ್ಥಾಯಿಯಲ್ಲಿ ನುಡಿಯುವ ಅದ್ಭುತ ಶಾರೀರ ಸಂಪತ್ತಿದ್ದಿತು. ಇವರ ಸಂಗೀತ ಪ್ರಮುಖವಾಗಿ ಮನೋಭಾವದ, ಸ್ವಾನುಭವದ ಸಂಗೀತವಾಗಿತ್ತು. ಕಾಲಕ್ರಮದಲ್ಲಿ ಇವರ ಗಾನಕೀರ್ತಿ ದಕ್ಷಿಣ ದೇಶದಲ್ಲೆಲ್ಲಾ ಹರಡಿತು. ಮೈಸೂರು ವಾಸುದೇವಾಚಾರ್ಯರು ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿದ್ದ ಮತ್ತೊಬ್ಬ ವಿದ್ವನ್ಮಣಿಗಳು. ಸಂಸ್ಕೃತ ಶ್ಲೋಕಗಳನ್ನು ಹಾಡುವುದರಲ್ಲಿ ತಾನ, ಪಲ್ಲವಿಗಳನ್ನು ಹಾಡುವುದರಲ್ಲಿ ಅದ್ವಿತೀಯರು. ಇವರ ಶಿಷ್ಯರಾದ ವಿದ್ವಾನ್ ಚನ್ನಕೇಶವಯ್ಯನವರು ಆಸ್ಥಾನ ವಿದ್ವಾಂಸರಾಗಿದ್ದರು. ಇದೇ ಆಸ್ಥಾನ ವಿದ್ವಾಂಸರಾಗಿದ್ದು ಮೈಸೂರಿನ ಕೀರ್ತಿಯನ್ನು ದೇಶಾದ್ಯಂತ ಹರಡಿದ ಮತ್ತೊಬ್ಬ ವಿದ್ವಾಂಸರು ಟಿ.ಚೌಡಯ್ಯನವರು. (ವಿ.ಎಸ್.ಎಸ್.;ಎಸ್.ಕೆ.ಆರ್.;ಎಲ್.ಆರ್.)

**ಸ್ವರೂಪ ವಿಧಾನ** : ಕರ್ನಾಟಕ ಸಂಗೀತ ದೈವಿಕ ಹಿನ್ನೆಲೆಯಲ್ಲಿ ಸುಪುಷ್ಟವಾಗಿ ಬೆಳೆದು ಬಂದಿದೆ. ನಾದಬ್ರಹ್ಮೋಪಾಸನೆಯೇ ಇದರ ಅಂತಿಮ ಗುರಿ. ಕರ್ನಾಟಕ ಸಂಗೀತಶಾಸ್ತ್ರಜ್ಞರ ಪ್ರಕಾರ ಸಂಗೀತದ ಸರ್ವಸ್ವವೂ ನಾದವೇ. ಸಂಗೀತರತ್ನಾಕರದ ಪ್ರಕಾರ ನಾದದ ವಿಶ್ಲೇಷಣೆ ಹೀಗಿದೆ: ನ ಎಂದರೆ ಪ್ರಾಣ, ದ ಎಂದರೆ ಅನಲ ಅಥವಾ ಅಗ್ನಿ; ಈ ಎರಡರ ಸಂಯೋಗದಿಂದ ಆದದ್ದು ನಾದ. ಮನುಷ್ಯನಲ್ಲಿ ನಾಭಿಯಿಂದ ಅತಿ ಸೂಕ್ಷ್ಮ, ಹೃದಯದಿಂದ ಸೂಕ್ಷ್ಮ, ಕಂಠದಿಂದಪುಷ್ಟ, ಮೂರ್ಧನ್ಯದಿಂದ ಅಪುಷ್ಟ, ಮುಖದಿಂದ ಕೃತ್ರಿಮ ಎಂಬ ನಾದಗಳು ಉತ್ಪತ್ತಿಯಾಗುತ್ತವೆ. ವ್ಯವಹಾರದಲ್ಲಿ ಹೃದಯದಿಂದೆದ್ದ ಮಂದ್ರ,ಮಧ್ಯ, ತಾರ ಇವನ್ನು ಮಾತ್ರ ಪರಿಗಣಿಸುತ್ತಾರೆ. ಇವೇ ಸ್ಥಾಯಿಗಳು, ಸ್ಥಾಯಿಗಳಲ್ಲಿ ಶ್ರುತಿಗಳಿವೆ. ಇಂಥ ಶ್ರುತಿಗಳ ಸಂಖ್ಯೆ ಇಪ್ಪತ್ತೆರಡು. ಇವನ್ನು ಐದು ಭಾಗಗಳಲ್ಲಿ ಅಳವಡಿಸಲಾಗಿದೆ. (ಶಾರ್ಙ್ಗದೇವ), ತೀವ್ರಾ, ರೌದ್ರೀ, ವಜ್ರಿಕಾ, ಉಗ್ರಾ- ಈ ನಾಲ್ಕು ದೀಪ್ತಾ ಎಂಬ ಜಾತಿಗೆ ಸೇರಿದವು. ಕುಮುದ್ವತೀ, ಕ್ರೋಧೀ, ಪ್ರಸಾರಿಣೀ, ಸಂದೀಪಿನೀ, ರೋಹಿಣೀ- ಈ ಐದು ಆಯತಾ ಜಾತಿ, ದಯಾವತೀ, ಆಲಾಪಿನೀ, ಮದಂತೀ- ಈ ಮೂರು ಕರುಣಾ ಎಂಬ ಜಾತಿ; ಮಂದಾ, ರತಿಕಾ, ಪ್ರೀತಿ, ಕ್ಷಿತಿ- ಈ ನಾಲ್ಕು ಮೃದು ಎಂಬ ಜಾತಿ; ಛಂದೋವತಿ, ರಂಜಿನೀ, ಮಾರ್ಜಿನಿ, ರಕ್ತಾ,ರಮ್ಯಾ, ಕ್ಷೋಭಿಣೀ ಈ ಆರು ಮಧ್ಯಾ ಎಂಬ ಜಾತಿ.

ಈ ಶ್ರುತಿಗಳ ನಡುವೆ ಅನುರಣನದಿಂದ ಯುಕ್ತವಾದ, ಸ್ಫುಟವಾದ, ನಿರ್ದಿಷ್ಟವಾದ ಏಳು ಸ್ವರಗಳನ್ನು ನಿಲ್ಲಿಸುತ್ತಾರೆ. ಇವುಗಳ ನಡುವೆ ಇರುವ ವ್ಯತ್ಯಾಸ (ರೇಷ್ಯೋ) ಸ್ಪಂದನ ಪರಿಮಾಣದಲ್ಲಿ. ಇವನ್ನು ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಾದ ಎನ್ನುತ್ತಾರೆ. ಇಪ್ಪತ್ತೆರಡು ಶ್ರುತಿಗಳ ನಡುವೆ ಈ ಏಳು ಸ್ವರಗಳ ಸ್ಥಾನ ಈ ರೀತಿ - 1, 2, 3, 4 ಷಡ್ಜ; 5, 6, 7 ಋಷಭ; 8, 9 ಗಾಂಧಾರ; 10, 11, 12, 13 ಮಧ್ಯಮ; 14, 15, 16, 17 ಪಂಚಮ; 18, 19, 20 ಧೈವತ; 21, 22 ನಿಷಾದ. ಆಯಾ ಸ್ವರದ ಸಂಗಡಲೇ ಬಂದ ಶ್ರುತಿಗೆ ನಿಯತಶ್ರುತಿ ಎಂದು ಹೆಸರು.

ಈ ಏಳು ಸ್ವರಗಳು ಶುದ್ಧ ಮತ್ತು ಪ್ರಕೃತಿ ಸ್ವರಗಳು. ಸ, ರಿ, ಗ, ಮ, ಪ, ಧ, ನಿ ಎಂದು ಇವುಗಳ ನಿರ್ದೇಶ. ನಿಯತಶ್ರುತಿಯೇ ಶುದ್ಧಸ್ವರದ ಉಗಮಸ್ಥಾನ. ಈ ಶುದ್ಧಸ್ವರಗಳಲ್ಲದೆ ವಿಕೃತಸ್ವರಗಳೂ ಇವೆ. ಶಾರ್ಙ್ಗದೇವನ ಪ್ರಕಾರ ವಿಕೃತ ಸ್ವರಗಳ ಸಂಖ್ಯೆ 12, ಸಂಗೀತಪಾರಿಜಾತದ ಪ್ರಕಾರ 22, ಸೋಮನಾಥನ ರಾಗವಿಬೋಧದ ಪ್ರಕಾರ 10, ರಾಮಾಮಾತ್ಯನ ಸ್ವರ ಮೇಳಕಳಾನಿಧಿಯ ಪ್ರಕಾರ 11, ವೆಂಕಟಮಖಿಯ

ಚತುರ್ದಂಡಿ ಪ್ರಕಾಶಿಕೆಯ ಪ್ರಕಾರ 9, ಕಡೆಯ ಸಂಖ್ಯೆಯೇ ಇಂದು ವಾಡಿಕೆಯಲ್ಲಿದೆ. ಈ ವಿಕೃತ ಸ್ವರಗಳು ಶ್ರುತಿಯ ಹೆಚ್ಚಳ ಅಥವಾ ತಗ್ಗುಗಳಿಂದಾದವು. ಅವುಗಳು ಯಾವುವೆಂದರೆ - ಕೋಮಲ ಅಥವಾ ಚತುಃ ಶ್ರುತಿ ಋಷಭ, ಷಟ್ಶ್ರುತಿ ಋಷಭ, ಸಾಧಾರಣ ಗಾಂಧಾರ, ಅಂತರ ಗಾಂಧಾರ, ಪ್ರತಿ ಮಧ್ಯಮ, ಚತುಃಶ್ರುತಿ ಧೈವತ, ಷಟ್ಶ್ರುತಿಧೈವತ, ಕೈಶಿಕೀ ನಿಷಾದ, ಕಾಕಲೀ ನಿಷಾದ. ಏಳು ಸ್ವರಗಳನ್ನು ಸೇರಿಸಿ ನಿರ್ದೇಶಿಸಬೇಕಾದರೆ ಸ,ರ,ರಿ, ರು, ಗ, ಗಿ, ಗು,ಮ, ಮಿ, ಪ, ಧ, ಧಿ, ಧು, ನ, ನಿ, ನು ಎನ್ನುತ್ತಾರೆ. ಸ ಮತ್ತು ಪ ಗಳಲ್ಲಿ ವಿಕಾರವೇ ಇಲ್ಲ; ಇವು ಇನಿತ್ಯ ಶುದ್ಧ. ರಿ ಯಲ್ಲಿ ಮೂರು, ಗ ದಲ್ಲಿ ಮೂರು, ಮ ದಲ್ಲಿ ಎರಡು,ಧದಲ್ಲಿ ಮೂರು, ನಿ ಯಲ್ಲಿ ಮೂರು - ಹೀಗೆ ವಿಕಾರಗಳಿವೆ.

ಈ ಸ್ವರಗಳ ಸಮೂಹ ಗ್ರಾಮ. ಇವು ಮೂರು ವಿಧ ಷಡ್ಜಗ್ರಾಮ, ಮಧ್ಯಮ ಗ್ರಾಮ, ಗಾಂಧಾರ ಗ್ರಾಮ. ಪ್ರತಿ ಗ್ರಾಮದಲ್ಲೂ 7 ಮೂರ್ಛನೆಗಳಿರುತ್ತವೆ. ಮೂರ್ಛನೆಯೆಂದರೆ ಅನುಕ್ರಮವಾಗಿ ಏಳು ಸ್ವರಗಳ ಆರೋಹಣ ಮತ್ತು ಅವರೋಹಣ. ಗಾಂಧಾರ ಗ್ರಾಮದ ಏಳುಮೂರ್ಛನೆಗಳಿಗೆ ನಂದ, ವಿಲಾಸ, ಸುಮುಖೀ, ಚಿತ್ರ, ಚಿತ್ರವತೀ, ಸುಖ, ಆಲಾಪ ಎಂದು ಹೆಸರುಗಳು. ಷಡ್ಜಗ್ರಾಮದ ಮೊದಲ ಮೂರ್ಛನೆಯಲ್ಲಿ ತಾರಸ್ಥಾಯಿಯ ಒಂದು ಸ್ವರ ಮುಟ್ಟುತ್ತೇವೆ, ಎರಡನೆಯ ಮೂರ್ಛನೆಯಲ್ಲಿ ಎರಡು ಇತ್ಯಾದಿ. ಮಧ್ಯಮ ಗ್ರಾಮದ ಮೊದಲ ಮೂರ್ಛನೆಯಲ್ಲಿ ಅತಿತಾರದ ಒಂದು ಸ್ವರ, ಎರಡನೆಯ ಮೂರ್ಛನೆಯಲ್ಲಿ ಎರಡು ಹೀಗೆ ಮುಟ್ಟುತ್ತೇವೆ. ಹಾಗೆಯೇ ಗಾಂಧಾರ ಗ್ರಾಮದಲ್ಲಿ ಅತಿ ತಾರಕ್ಕಿಂತ ತಾರತರವಾದ ಸ್ವರ ಮುಟ್ಟಬೇಕು. ಆದರೆ ಇದು ಮಾನವ ಕಂಠಕ್ಕೆ ಅಸಾಧ್ಯವಾದುದರಿಂದ ದೇವಗಾನವೆಂದು ಇದನ್ನು ಬಿಟ್ಟಿದ್ದಾರೆ. ಅಂತೂ ಮೂರು ಗ್ರಾಮಗಳಿಂದ ಒಟ್ಟು 21 ಮೂರ್ಛನೆಗಳು. ಈ ಸಪ್ತಸ್ವರಗಳು, ಏಕವಿಂಶತಿ ಮೂರ್ಛನೆಗಳು, ಅಷ್ಟಾದಶ ಶ್ರುತಿಗಳು -ಇವಕ್ಕೆ ಒಟ್ಟಾರೆಯಾಗಿ ಸ್ವರಮಂಡಲ ಎಂಬ ಹೆಸರಿದೆ.

ಸ್ವರಗಳನ್ನು ಹಾಡುವುದಕ್ಕೆ ವರ್ಣ ಎಂದು ಹೆಸರು. ಸ್ವರಗಳನ್ನು ನಾಲ್ಕು ಬಗೆಯಾಗಿ ಹಾಡಬಹುದು. ಒಂದೇ ಸ್ವರವನ್ನು ವಿಳಂಬಕಾಲದಲ್ಲಿ ಮೂರಾವರ್ತಿ ಉಚ್ಚರಿಸುವುದು ಸ್ಥಾಯೀ (ಸಾ-ಸಾ-ಸಾ). ಕ್ರಮ ಹಿಡಿದು ಒಂದು ಸ್ವರದಿಂದ ಮೇಲಿನ ಸ್ವರಗಳನ್ನು ಹತ್ತಿದರೆ ಆರೋಹಿ (ರಿ ಗ ಮ ಪ). ಹಾಗೆಯೇ ಕ್ರಮ ಹಿಡಿದು ಇಳಿದರೆ ಅವರೋಹಿ (ನಿ ಧ ಮ ಪ). ಈ ಆರೋಹಿ ಅವರೋಹಿಗಳು ಕಲಿಸಿದಂತೆ ಸ್ವರಗಳನ್ನು ಹಾಡಿದರೆ ಅದು ಸಂಚಾರಿ (ರಿ ಮ ಗ ಮ ಗ ರಿ ಸಾ).

ಇಂಥ ವರ್ಣಗಳನ್ನು ಕ್ರಮವರಿತು ಸೇರಿಸಿದರೆ ಅಲಂಕಾರವಾಗುತ್ತದೆ. ಅಲಂಕಾರವೂ ವರ್ಣದಂತೆ ಸ್ಥಾಯೀ, ಆರೋಹಿ, ಅವರೋಹಿ, ಸಂಚಾರಿ ಎಂದು ನಾಲ್ಕು ವಿಧ. ಸ್ಥಾಯ್ಯಲಂಕಾರದಲ್ಲಿ ಪ್ರಸನ್ನಾದಿ (ಸ ಸ ಸ), ಪ್ರಸನ್ನಾಂತ (ಸ ಸ ಸ), ಪ್ರಸನ್ನಾದ್ಯಂತ (ಸ ಸ ಸ), ಪ್ರಸನ್ನಮಧ್ಯ (ಸ ಸ ಸ), ಕ್ರಮರೇಚಿತ (ಸ ರಿ ಸ ಸ ಗ ಮ ಸ) ಎಂದು ಐದು ವಿಧಗಳು. ಆರೋಹ್ಯಲಂಕಾರದಲ್ಲಿ ವಿಸ್ತೀರ್ಣ (ಸಾ-ರೀ-ಗಾ-ಮಾ), ನಿಷ್ಕರ್ಷ (ಸಸ-ರಿರಿ-ಗಗ), ಪ್ರೇಂಖಿತ (ಸರೀ-ರಿಗಾ-ಗಮಾ), ಬಿಂದು (ಸಸಸರಿ-ಗಗಗಮ-ಮಮಮಪ), ಹಸಿತ (ಸಾ-ರಿರೀ-ಗಗಗಗಾ-ಮಮಮಮಮಾ), ಸಂಧಿಪ್ರಚ್ಛಾದನ (ಸರಿಗಾ-ಗಮಪಾ-ಪಧನೀ), ಅಕ್ಷಿಪ್ತ (ಸಗಾ-ಗಪಾ-ಪನೀ) ಎಂದೂ ಏಳು ಉಪವಿಧಗಳು. ಅವರೋಹ್ಯಾಲಂಕಾರದಲ್ಲೂ ಇದೇ ಏಳು ವಿಧಗಳು. ಆದರೆ ಸ್ವರಗಳ ಕ್ರಮ ಹಿಂದು ಮುಂದಾಗಿರುತ್ತದೆ. ಸಂಚಾರಿ ಅಲಂಕಾರದಲ್ಲಿ ಪ್ರಸಾದ (ಸರಿಸ-ರಿಗರಿ-ಗಮಗ), ಪ್ರೇಂಖ (ಸರಿರಿಸ- ರಿಗಗರಿ-ಗಮಮಗ), ರಂಜಿತ (ಸಗರಿ, ಸಗರಿಸ-ರಿಮಗ, ರಿಮಗರಿ-ಗಪಮ, ಗಪಮಗ), ಆಕ್ಷೇಪ (ಸರಿಗಾ-ರಿಗಮಾ-ಗಮಪಾ), ಪರಿವರ್ತ (ಸಗಮಾ-ರಿಮಪಾ-ಗಪಧಾ), ಕೂತಜಿ (ಸರಿ, ಸಗಸ-ರಿಗ, ರಿಮರಿ-ಗಮ, ಗಪಗ), ಉದ್ಘಾಹಿತ (ಸರಿಗರಿ-ರಿಗಮಗ-ಗಮಪಮ), ಉದ್ಘಟ್ಟಿತ (ಸರಿ,ಪಮಗರಿ-ರಿಗ, ಧಪಮಗ-ಗಮ), ನಿಧಪಮ, ಹುಂಕಾರ (ಸರಿಸ-ಸರಿಗರಿಸ -ಸರಿಗಮರಿಗಸ-ಸರಿಮಪಮಗರಿಸ), ಸ್ಖಲಿತ (ಸಗರಿಮ, ಮರಿಗಸ-ರಿಮಗಪ, ಪಮಗರಿ), ಕ್ರಮ (ಸರಿ-ಸರಿಗ, ಸರಿಗಮ-ರಿಗ, ರಿಗಮ, ರಿಗಮಪ), ಶ್ಯೇನ (ಸಪಾ-ರಿಧಾ-ಗನೀ-ಮಸಾ), ಹ್ರಾದಮಾನ (ಸಗರಿಸ-ರಿಮಗರಿ-ಗಪಮಗ) ಎಂದು ಹದಿಮೂರು ಉಪವಿಧಗಳು, ಭರತ ಕಲ್ಪಲತಾ ಮಂಜರಿಯಲ್ಲಿ ತಾಲ ಮಂದ್ರ ಪ್ರಸನ್ನ (ಸರಿಗಮಗರಿ-ಸರಿಗರಿ-ಸರಿಗಮ), ಮಂದ್ರ ತಾಲಪ್ರಸನ್ನ (ಸರಿಗರಿ-ಸರಿ-ಸರಿಗಮ), ಆವರ್ತಕ (ಸರಿ-ಸರಿಗಮ-ರಿಗ-ರಿಗಮಪ), ಸಂವಿಧಾನ (ಸರಿಗಸರಿಸರಿ-ಗ-ಮಾ-ರಿಗಮರಿಗರಿಗ-ಮ-ಪಾ), ವಿಧೃತ (ಸರಿಗ-ಸರಿಗಮ-ರಿಗಮ-ರಿಗಮಪ), ವ್ಯವಲೋಪ (ಸರಿಗಾ-ಸಾರಿಗಾ-ಮಾ-ಮಾ- ರಿಗಾಮ-ರೀಗಮಾ-ಪಾ-ಪಾ), ಧಿಲ್ಲಾಸಿತ (ಸರಿಗ-ಸರಿಗಮ-ರಿಗಮ-ರಿಗಮಪ) ಎಂದು ಸಪ್ತಾಲಂಕಾರಗಳನ್ನು ಹೇಳಿದೆ.

ಕೇಳುವವರಿಗೆ ಹಿತವೆನಿಸುವಂತೆ ಸ್ವರವನ್ನು ಕಂಪಿಸುವುದಕ್ಕೆ ಗಮಕ ಎಂದು ಹೆಸರು. ಒಂದು ಸ್ವರವನ್ನು ಅರ್ಧಾಕ್ಷರ ಕಾಲ ಹಿಡಿದು ಒತ್ತುವುದು ತಿರಿಪ ಎನಿಸಿಕೊಳ್ಳುತ್ತದೆ. ಒಂದು ಸ್ವರವನ್ನು ಒಂದಕ್ಷರ ಕಾಲ ಅಲುಗಿಸುವುದು ಕಂಪಿತ (ಟ್ರಿಲ್), ಎರಡಕ್ಷರ ಕಾಲ ಅಲುಗಿಸುವುದು ಲೀನ, ನಾಲ್ಕಕ್ಷರ ಕಾಲ ಆಂದೋಲಿತ, ಹನ್ನೆರಡಕ್ಷರ ಕಾಲ ಪ್ಲಾವಿತ. ಸಸ, ರಿರಿ ಇತ್ಯಾದಿ ಜಂಟಿಸ್ವರಗಳಲ್ಲಿ ಎರಡನೆಯ ಸ್ವರವನ್ನು ಒತ್ತಿ ಬಿಡುವುದು ಆರೋಹಣದಲ್ಲಿ ಸ್ಫುರಿತ (ಡಿಫ್ಲೆಕ್ಟ್), ಅವರೋಹಣದಲ್ಲಿ ಪ್ರತ್ಯಾಘಾತ. ಒಂದು ಸ್ವರದಿಂದ ಹಿಂದಿನ ಸ್ವರಕ್ಕೆ ಸ್ವರ ಛಾಯೆಯಲ್ಲಿ ಇಳಿಯುವುದು (ಪಮ=ಪಪಮ) ಆಹತ; ವೀಣೆಯಲ್ಲಿ ಮೀಟುಹಾಕಿ ಗ ಸ್ವರವನ್ನು ಎಬ್ಬಿಸಿ, ಮೀಟು ಹಾಕದೆಯೇ ಮ ಸ್ವರವನ್ನು ಉತ್ಪತ್ತಿ ಮಾಡುವುದು ಆಹತವೆನಿಸಿಕೊಳ್ಳುತ್ತದೆ. ಒಂದು ಸ್ವರದಿಂದ ಕೆಳಗಿನ ಇನ್ನೊಂದು ಸ್ವರಕ್ಕೆ ಇಳಿಯುವಾಗ ನಡುವೆ ಇರುವ ಸ್ವರವನ್ನು ಶಬ್ದಿಸಿ ದಾಟುವುದು ಖಂಡಿಂಪು [ಮರಿ=ಮ(ಗ)ರಿ]. ಉಲ್ಲಸಿತ ಎಂಬುದಿನ್ನೊಂದು ಬಗೆಯ ಗಮಕ. ಒಂದು ಸ್ವರದಿಂದ ಮತ್ತೊಂದು ಸ್ವರಕ್ಕೆ ಜಾರುವುದು ಆರೋಹಣದಲ್ಲಿ ಎಕ್ಕುಜಾರು, ಅವರೋಹಣದಲ್ಲಿ ದಿಗುಜಾರು. ಒಂದೇ ಸ್ವರಸ್ಥಾನದಲ್ಲಿ ಪಕ್ಕದ ಸ್ವರವನ್ನೂ ಲಘುವಾಗಿ ಪ್ರದರ್ಶಿಸುವುದು ಓರಿಕ (ಸನಿಧಪ=ಸರಿನಿಸಧನಿಪ). ಇಂಥ ಗಮಕಗಳ ಒಟ್ಟು ಸಂಖ್ಯೆ ಹತ್ತೊಂಬತ್ತು. ಆದರೆ ಸಾಮಾನ್ಯವಾಗಿ ಬಳಕೆಯಲ್ಲಿರುವುದು ಹತ್ತು ಮಾತ್ರ.

ಸ್ವರಗಳಲ್ಲಿ ನಾಲ್ಕು ವಿಧ ವಾದಿ,ಸಂವಾದಿ,ಅನುವಾದಿ, ವಿವಾದಿ. ವಾದಿ (ಸೊನ್ಯಾಂಟ್) ಎನ್ನುವುದು ಮುಖ್ಯಸ್ವರ. ರಾಗದಲ್ಲಿ ಬಹುವೇಳೆ ಬರುವ ಸ್ವರ (ಸರಿಗಮಪಧನಿಸ-ರಿಗಮಪಧನಿಸ-ಗಮಪಧನಿಸ-ಮಪಧನಿಸ-ಪಧನಿಸ-ಧನಿಸ-ನಿಸ-ಸ) ಸಂವಾದಿ (ಕಾನ್ಸೊನೆಂಟ್) ಸ್ವರ ವಾದಿಯೊಂದಿಗೆ ಸುಸಂಗತವಾಗಿ ಸೇರಿ ಹೊಂದಿಕೊಂಡು ಹೋಗುವ ಸ್ವರ. ಸಂವಾದಿ ಸ್ವರಗಳ ನಡುವೆ ಎಂಟು ಇಲ್ಲವೆ ಹನ್ನೆರಡು ಶ್ರುತಿಗಳ ಅಂತರ ಇರಬೇಕು. ಸ-ಪ, ಸ-ಮ, ರ-ಧ, ಗ-ನ, ಗಿ-ನಿ, ಗು-ನು, ರ-ಮಿ ಗಳು ಸಂವಾದಿ ಸ್ವರಗಳು. ವಿವಾದಿಗೆ (ಡಿಸ್ಸೊನೆಂಟ್) ವೈರಿ ಸ್ವರ ಎಂದೂ ಹೆಸರು; ಎರಡು ಸ್ವರಗಳ ನಡುವೆ ಒಂದೇ ಶ್ರುತಿಯ ಅಂತರ ಇದ್ದರೆ ಸಂವಾದಿ, ವಾದಿಗೆ ವಿರುದ್ಧ (ಸಮ್ಮಗರಿಸ-ರಿಗಮ-ರಿಪ್ಪಮರಿಗ-ಗಮಪ-ಗದ್ದಪಮಗ-ಮಪಧ). ಕಡೆಯದಾಗಿ ಅನುವಾದಿ (ಅಸ್ಸೊನೆಂಟ್). ವಾದಿಯೊಂದಿಗೆ ಯಾವೊಂದು ಸಂಬಂಧವನ್ನೂ ಇಟ್ಟುಕೊಂಡಿರದೆ, ಅದಕ್ಕೆ ವಿರೋಧವಾಗಿಯೂ ಇರದೆ ರಾಗದ ಸೌಂದರ್ಯ ಹೆಚ್ಚಿಸಲು ತನ್ನ ಮಟ್ಟಿಗೆ ತಾನು ಯತ್ನಿಸುತ್ತದೆ (ಸರಿಗ-ರಿಪಮ-ಗಮಪ). ಇದೂ ಒಂದು ಬಗೆಯಲ್ಲಿ ಸಂವಾದಿತ್ವವೇ ಆದರೂ ಸಂವಾದಿಗಿಂತ ಇದರ ಸಂವಾದಿತ್ವ ಕಡಿಮೆ.

**ರಾಗ :** ದಕ್ಷಿಣಾದಿ ಸಂಗೀತದ ವೈಶಿಷ್ಟ್ಯವೆಂದರೆ ರಾಗ ಪದ್ಧತಿ. ರಾಗ ಎಂದರೆ ಸಂತೋಷಪಡಿಸುವುದು ಎಂದರ್ಥ (ರಂಜಕತ್ವಾತ್). ಇಂಗ್ಲಿಷಿನಲ್ಲಿ ಇದಕ್ಕೆ ಮೆಲೊಡಿ-ಟೈಪ್, ಮೆಲೊಡಿ-ಮೌಲ್ಡ್, ಟ್ಯೂನ್ ಎನ್ನಬಹುದು. ಶುದ್ಧವಿಕೃತ ಸ್ವರಗಳ ಸಂಖ್ಯೆ ಹನ್ನೆರಡು. ಅವುಗಳಲ್ಲಿ (ಸಪ್ತಸ್ವರಭೇದಗಳಲ್ಲಿ) ಐದಕ್ಕೆ ಕಡಿಮೆ ಇಲ್ಲದಂತೆ ಸ್ವರಗಳನ್ನಾಯ್ದು ಅವನ್ನು ಆಧಾರಷಡ್ಜಕ್ಕೆ ಸಂಬಂಧಿಸಿದಂತೆ ಒಂದು ಕ್ರಮದಲ್ಲಿ ಸೇರಿಸಿದರೆ ರಾಗವಾಗುತ್ತದೆ. ಐದೇ ಸ್ವರಗಳಿದ್ದರೆ ಅದಕ್ಕೆ ಔಡವ (ಪೆಂಟಾಟೋನಿಕ್) ರಾಗ ಎಂದು ಹೆಸರು. ದೃಷ್ಟಾಂತ ಬೇಕೆಂದರೆ ಮೋಹನ ರಾಗದಲ್ಲಿ ಸರಿಗುಪಧಿಸ ಎಂಬಷ್ಟೇ ಸ್ವರಗಳು. ಆರು ಸ್ವರಗಳಿದ್ದರೆ ಅದು ಷಾಡವ ರಾಗ (ಹೆಕ್ಸೋಟೋನಿಕ್) ಎನಿಸಿಕೊಳ್ಳುತ್ತದೆ. ಶ್ರೀರಂಜನೀ ರಾಗದಲ್ಲಿ ಸರಿಗಮಧನಿ ಎಂಬಷ್ಟೇ ಸ್ವರಗಳು. ಏಳೂ ಸ್ವರಗಳಿದ್ದರೆ ಸಂಪೂರ್ಣ ರಾಗ. ಆರೋಹಣದಲ್ಲಿ ಅವರೋಹಣದಲ್ಲಿ ಎರಡರಲ್ಲೂ ಸಂಪೂರ್ಣವಾಗಿದ್ದರೆ ಅಂಥ ರಾಗಕ್ಕೆ ಮೇಳಕರ್ತ ಅಥವಾ ಜನಕರಾಗ ಅಥವಾ ಸಂಪೂರ್ಣ ರಾಗ ಎಂದು

ಹೆಸರು. ಇಂಥ ಮೇಳಕರ್ತಗಳನ್ನು ಎಪ್ಪತ್ತೆರಡಾಗಿ ವೆಂಕಟಮುಖಿ ತನ್ನ ಚತುರ್ದಂಡಿ ಪ್ರಕಾಶಿಕೆಯಲ್ಲಿ ವಿಭಾಗ ಮಾಡಿದ್ದಾನೆ. ನಿತ್ಯ ಶುದ್ಧ ಸ್ವರಗಳಾದ ಸ ಮತ್ತು ಪ - ಈ 72 ರಾಗಗಳಲ್ಲೂ ಏಕರೀತಿಯಾಗಿರುತ್ತವೆ. ಮಧ್ಯಮದ ವಿಕಾರಗಳಾದ ಶುದ್ಧ ಮತ್ತು ಪ್ರತಿಮಧ್ಯಮಗಳು ಬರುವ ದೃಷ್ಟಿಯಿಂದ ಮೇಳಕರ್ತಗಳನ್ನು ಪೂರ್ವ, ಉತ್ತರ ಎಂದು ವಿಗಂಡಿಸಿದ್ದಾರೆ -ಪೂರ್ವ ಮೇಳದಲ್ಲಿ 1 ರಿಂದ 36 ರಾಗಗಳಿದ್ದು ಅವುಗಳೆಲ್ಲೆಲ್ಲ ಶುದ್ಧ ಮಧ್ಯಮ ಇರುತ್ತದೆ. ಉತ್ತರ ಮೇಳದಲ್ಲಿ 37 ರಿಂದ 72 ರಾಗಗಳಿದ್ದು ಅವುಗಳಲ್ಲಿ ಪ್ರತಿ ಮಧ್ಯಮ ಇರುತ್ತದೆ. ಉಳಿದ ಋಷಭ, ಗಾಂಧಾರ, ಧೈವತ, ನಿಷಾದಗಳು ರಾಗರಾಗಕ್ಕೆ ವ್ಯತ್ಯಾಸವಾಗುತ್ತ ಹೋಗುತ್ತವೆ.

ಇಲ್ಲೂ ಒಂದು ಕ್ರಮಹಿಡಿದು ಒಂದೇ ಜಾತಿಯ ಈ ಸ್ವರಗಳು ಬರುವ ಆರಾರು ರಾಗಗಳನ್ನು ಒಂದೊಂದು ಚಕ್ರ ಮಾಡಿ ಇಂಥ ಹನ್ನೆರಡು ಚಕ್ರಗಳಲ್ಲಿ 72 ರಾಗಗಳನ್ನೂ ಅಡಕ ಮಾಡಿದ್ದಾರೆ. ಪೂರ್ವಮೇಳದ ಮೊದಲ ಚಕ್ರವಾದ ಇಂದುವಿನಲ್ಲಿ ಸ, ಪ, ಮ ಗಳ ಜೊತೆಗೆ ರ, ಗ ಇದ್ದು ಇದರ ಆರು ರಾಗಗಳಲ್ಲಿ ಧ, ನ ಗಳ ವಿಕಾರಗಳು ಇರುತ್ತವೆ ಇತ್ಯಾದಿ.

ಸ್ವರಜಾತಿ ವೈವಿಧ್ಯದಿಂದ ರಾಗವೈವಿಧ್ಯ. ಏಳು ಸ್ವರಗಳೂ ಕ್ರಮ ಹಿಡಿದು ಬಂದು ಆರೋಹಣಾವರೋಹಣಗಳಲ್ಲೂ ಒಂದೇ ಜಾತಿಯ ಸ್ವರಗಳಾಗಿರುವುದು ಮೇಳಕರ್ತರಾಗದ ಲಕ್ಷಣ. ಉಳಿದ ರಾಗಗಳಲ್ಲಿ ಹೀಗೆ ಸಪ್ತಸ್ವರಗಳೂ ಇರುವುದಿಲ್ಲ. ಸ್ವರಗಳ ಆರೋಹಣಾವರೋಹಣ ಹೀಗೆ ಪೂರ್ಣ ಕ್ರಮಯುಕ್ತವೂ ಅಲ್ಲ. ಏಳು ಸ್ವರಗಳೂ ಇಲ್ಲದಿರುವುದರಿಂದ ಇವುಗಳಿಗೆ ವರ್ಜ್ಯರಾಗಗಳೆನ್ನುತ್ತಾರೆ.

ಇಂಥ ರಾಗಗಳ ಸಂಖ್ಯೆ ಅನಂತವಾದರೂ ಸುಮಾರು 800 ಬಳಕೆಯಲ್ಲಿವೆ. ಸ್ವರಗಳ ಸಂಖ್ಯೆಯ ದೃಷ್ಟಿಯಿಂದ ವರ್ಜ್ಯರಾಗಗಳಲ್ಲಿ ಎಂಟು ವಿಧಗಳಾಗುತ್ತವೆ. ಆರೋಹಣದಲ್ಲೂ ಐದು, ಅವರೋಹಣದಲ್ಲೂ ಐದು ಸ್ವರಗಳು ಬಂದರೆ ಅದು ಔಡವ-ಔಡವ; ಮೋಹನ ರಾಗದಲ್ಲಿ ಸರಿಪಧಗ ಇಷ್ಟು ಮಾತ್ರ ಸ್ವರಗಳು (ಹರಿಕಾಂಭೋದಿ ಮೇಳದ ಜನ್ಯ ಇದು). ಆರೋಹಣದಲ್ಲಿ ಆರು, ಅವರೋಹಣದಲ್ಲಿ ಐದು ಸ್ವಧಗಳಿದ್ದರೆ ಷಾಡವ-ಔಡವ; ನಾಟಕುರಂಜಿ ರಾಗದಲ್ಲಿ ಸರಿಗಮಧನಿಸ-ಸನಿಮಧಧಸ ಬರುತ್ತವೆ (ಇದೂ ಹರಿಕಾಂಭೋದಿ ಜನ್ಯ). ಆರೋಹಣದಲ್ಲಿ ಐದು ಅವರೋಹಣದಲ್ಲಿ ಆರು ಇದ್ದರೆ ಔಡವ-ಷಾಡವ; ಶ್ರೀಮಣಿ ರಾಗದಲ್ಲಿ ಸರಗಪಧಸ-ಸನಿಧಪಗರಸ (ಇದು ರತ್ನಾಂಗಿ ಮೇಳಜನ್ಯ). ಆರೋಹಣದಲ್ಲಿ ಐದು ಅವರೋಹಣದಲ್ಲಿ ಏಳು ಸ್ವರಗಳಿದ್ದರೆ ಔಡವ-ಸಂಪೂರ್ಣ; ಕೀರ್ತಿಪ್ರಿಯ ರಾಗದಲ್ಲಿ ಸರಮಪಧಸ-ಸನಧಪಮಗರಸ (ಇದು ಕನಕಾಂಗಿ ಮೇಳ ಜನ್ಯ). ಆರೋಹಣದಲ್ಲಿ ಆರು, ಅವರೋಹಣದಲ್ಲಿ ಆರು ಸ್ವರಗಳಿದ್ದರೆ ಷಾಡವ-ಷಾಡವ; ಶ್ರೀ ರಂಜಿನೀ ರಾಗದ ಸ್ವರಗಳು ಸರಿಗಮಧನಿಸ-ಸನಿಧಮಗರಿಸ (ಖರಹರಪ್ರಿಯಜನ್ಯ). ಆರೋಹಣದಲ್ಲಿ ಆರು ಅವರೋಹಣದಲ್ಲಿ ಏಳು ಸ್ವರಗಳಿದ್ದರೆ ಷಾಡವ-ಸಂಪೂರ್ಣ; ಕಾಂಭೋದಿ ರಾಗದಲ್ಲಿ ಸರಿಗಮಪಧಸ ಸನಿಧಪಮಗರಿಸ (ಹರಿಕಾಂಭೋದಿ ಜನ್ಯ). ಆರೋಹಣದಲ್ಲಿ ಏಳು ಅವರೋಹಣದಲ್ಲಿ ಆರು ಸ್ವರಗಳಿದ್ದರೆ ಸಂಪೂರ್ಣ-ಷಾಡವ; ಸೇನಾಜಯಂತೀ ರಾಗದಲ್ಲಿ ಸರುರಿಗಪಧಮಸ-ಸಧಪನಿಮಗಸ (ಸುಚರಿತ್ರ ಮೇಳಜನ್ಯ). ಕಡೆಯದಾಗಿ ಆರೋಹಣದಲ್ಲಿ ಏಳು; ಅವರೋಹಣದಲ್ಲಿ ಐದು ಸ್ವರಗಳಿದ್ದರೆ ಸಂಪೂರ್ಣ-ಔಡವ ಗೌರೀಸೀಮಂತಿನೀ ರಾಗದಲ್ಲಿ ಸಗಮಮಪಧನಿಸ-ಸನಿಪಗರಿಸ (ನಾಸಿಕಾಭೂಷಣೀಜನ್ಯ). ಇದು ಸ್ವರಸಂಖ್ಯಾ ದೃಷ್ಟಿಯಿಂದ ಮಾಡಿದ ವಿಭಾಗ.

ಮತ್ತೊಂದು ದೃಷ್ಟಿಯೆಂದರೆ ಸ್ವರಗಳು ಕ್ರಮವಾಗಿ ಬಂದಿವೆಯೋ ಇಲ್ಲವೋ ಎಂಬುದು. ಅವರೋಹಣದಲ್ಲಿ ಆಧಾರ ಷಡ್ಜದಿಂದ ಶುರುಮಾಡಿ ಋಷಭ, ಅನಂತರ ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಾದ, ತಾರಷಡ್ಜ, ಅವರೋಹಣದಲ್ಲಿ ತಾರಷಡ್ಜದಿಂದ ಶುರುಮಾಡಿ ನಿಷಾದ, ಧೈವತ, ಪಂಚಮ, ಮಧ್ಯಮ, ಗಾಂಧಾರ, ಋಷಭ ಮಧ್ಯಸ್ಥಾಯಿಷಡ್ಜ ಮುಟ್ಟುವ ರಾಗಗಳು ಕ್ರಮರಾಗಗಳು. ಈ ಕ್ರಮ ತಪ್ಪಿ ಸ್ವರಗಳು ಬಂದರೆ ಅಂಥ ರಾಗಕ್ಕೆ ವಕ್ರರಾಗ ಎಂದು ಹೆಸರು. ಈ ವಕ್ರತ್ವ ಆರೋಹಣದಲ್ಲಿರಬಹುದು. ಚಕ್ರವಾಕಜನ್ಯವಾದ ವೇಗವಾಹಿನೀ ಸ ರ ಗು ಮ ಪ ಧಿ ನಿ ಸ - ಸ ನಿ ಧಿ ಪ ಮ ಗು ರ ಸ ಎಂಬ ಸ್ವರಗಳನ್ನೂ ನಟಭೈರವೀಜನ್ಯವಾದ ಆನಂದಭೈರವಿ ಸ ಗಿ ರಿ ಗಿ ಮ ಪ ಧ ಪ ನಿ ಸ - ಸ ನಿ ಧ ಪ ಮ ಗ ರಿ ಸ ಎಂಬ ಸ್ವರಗಳನ್ನೂ ಹೊಂದಿವೆ. ಇಲ್ಲವೇ ಅವರೋಹಣ ವಕ್ರವಾಗಿರಬಹುದು. ಹರಿಕಾಂಭೋದಿಜನ್ಯವಾದ ಸುರುಟಿ ರಾಗದಲ್ಲಿ ಸ ರಿ ಮ ಪ ನಿ ಸ - ಸ ನಿ ಧಿ ಪ ಮ ಗು ಪ ಮ ರೀ ಸ ಎಂಬ ಸ್ವರಗಳೂ ಗಾಂಗೇಯಭೂಷಣೀಜನ್ಯವಾದ ಗಂಗಾತರಂಗಿಣಿ ರಾಗದಲ್ಲಿ ಸ ರು ಗು ಮ ಪ ಸ - ಸ ನು ಧ ಪ ಸ ಗು ಮ ರು ಸ ಎಂಬ ಸ್ವರಗಳೂ ಬರುತ್ತವೆ. ಅಥವಾ ಎರಡೂ ವಕ್ರವಾಗಿರಬಹುದು. ನಟಭೈರವೀಜನ್ಯವಾದ ಹಿಂದೋಳ ವಸಂತ ರಾಗದಲ್ಲಿ ಸ ಗಿ ಮ ಪ ಧ ನಿ ಧ ಸ - ಸ ನಿ ಧ ಪ ಮ ಧ ಮ ಗಿ ಸ ಎಂಬ ಸ್ವರಗಳು ಬರುತ್ತವೆ.

ತಂತಮ್ಮ ಮೇಳಕರ್ತಗಳಲ್ಲಿ ಬಂದಂಥದೇ ಜಾತಿಯ ಸ್ವರಗಳನ್ನು ಮಾತ್ರ ಜನ್ಯರಾಗಗಳು ಹೊಂದಿದ್ದರೆ ಅಂಥವಕ್ಕೆ ಉಪಾಂಗರಾಗಗಳೆನ್ನುತ್ತಾರೆ; ಶುದ್ಧ ಸಾವೇರಿ, ಮೋಹನ ಮುಂತಾದ ಹಲವು ರಾಗಗಳು ಈ ಜಾತಿಗೆ ಸೇರಿದವು. ತಂತಮ್ಮ ಮೇಳಗಳ ಸ್ವರಗಳ ಜೊತೆಗೆ ವಿಜಾತೀಯ ಸ್ವರಗಳೂ ಜನ್ಯರಾಗದಲ್ಲಿದ್ದರೆ ಅದು ಭಾಷಾಂಗರಾಗ; ಈ ಅನ್ಯಸ್ವರಗಳು ಕೆಲವು ಸಂಚಾರಗಳಲ್ಲಿ ಮಾತ್ರ ಬರುತ್ತವೆ. ನಟಭೈರವಿಯ ಧೈವತ ಶುದ್ಧವಾದರೂ ಭೈರವಿಯ ಕೆಲವೆಡೆ ಚತುಃಶ್ರುತಿ ಧೈವತ ಬರುತ್ತದೆ; ಇದರಿಂದ ರಾಗದ ಮಾಧುರ್ಯ ಹೆಚ್ಚುತ್ತದೆ. ನೀಲಾಂಬರಿ, ಮಾಂಜೆ, ಬಿಲಹರಿ ಮುಂತಾದ ಭಾಷಾಂಗ ರಾಗಗಳಲ್ಲಿ ಒಂದೇ ಒಂದು ಅನ್ಯಸ್ವರ ಇರುತ್ತದೆ. ಆನಂದಭೈರವಿ, ಹಿಂದುಸ್ತಾನೀ, ಬೇಹಾಗ್ ಮುಂತಾದ ಭಾಷಾಂಗರಾಗಗಳಲ್ಲಿ ಎರಡು ಅನ್ಯಸ್ವರಗಳು ಇರುತ್ತವೆ. ಹಿಂದುಸ್ತಾನೀ ಕಾಪಿಯಲ್ಲಿ ಮೂರು ಅನ್ಯಸ್ವರಗಳಿರುತ್ತವೆ. ಈ ಅನ್ಯಸ್ವರಗಳಿಂದ ರಾಗ ಲಕ್ಷಣಕ್ಕೆ ಧಕ್ಕೆ ಬರುವುದಿಲ್ಲ. ರಾಗದ ಸ್ವರೂಪ ಇನ್ನೂ ಹೆಚ್ಚು ಸ್ಫುಟವಾಗಲೆಂದೇ ಅನ್ಯಸ್ವರ ಪ್ರವೇಶದ ಆಶಯ.

ಸಾಮಾನ್ಯವಾಗಿ ಆರೋಹಣ ಆಧಾರಷಡ್ಜದಿಂದ ಮೊದಲಾಗಿ ತಾರಷಡ್ಜದಲ್ಲಿ ಮುಗಿಯುತ್ತದೆ. ಆದರೆ ಕೆಲವು ರಾಗಗಳಲ್ಲಿ ಆರೋಹಣ ತಾರಷಡ್ಜವನ್ನು ಮುಟ್ಟುವುದೇ ಇಲ್ಲ. ನಿಷಾದಕ್ಕೊ ಧೈವತಕ್ಕೊ ಪಂಚಮಕ್ಕೊ ಬಂದು ಹಿಂದಿರುಗುತ್ತದೆ. ಷಣ್ಮುಖಪ್ರಿಯ ಮೇಳದ ದೇಶಮಾಳವಿಯ ಕೈಶಿಕೀ ನಿಷಾದಕ್ಕಿಂತ ಮುಂದೆ ಹೋಗುವುದಿಲ್ಲ; ಇಂಥ ರಾಗಗಳಿಗೆ ನಿಷಾದಾಂತ ರಾಗಗಳೆನ್ನುತ್ತಾರೆ. ಸರಸಾಂಗೀ ಮೇಳದ ಮಣಿಮಯ ರಾಗ, ಧೀರ ಶಂಕರಾಭರಣ ಮೇಳದ ಕುರಂಜೀ ರಾಗ, ಶುದ್ಧ ಧೈವತದಲ್ಲೇ ಆರೋಹಣ ಮುಗಿಸುತ್ತವೆ. ಇಂಥವಕ್ಕೆ ಧೈವತಾಂತ ರಾಗಗಳೆಂದು ಹೆಸರು. ಧೀರಶಂಕರಾಭರಣ ಮೇಳದ ನವರೋಸ್ ಮತ್ತು ಜುಲಾವ್ ರಾಗಗಳು ಪಂಚಮದಲ್ಲೆ ಮುಗಿಯುವುದರಿಂದ ಅಂಥ ರಾಗಗಳಿಗೆ ಪಂಚಮಾಂತಗಳೆನ್ನುತ್ತಾರೆ. ಇವು ಜನ್ಯರಾಗದ ವಿವಿಧ ಜಾತಿಗಳು.

ಮೇಳಕರ್ತರಾಗ ಗೊತ್ತಾಗಿದ್ದರೆ ಅದರ ಮೇಳಸಂಖ್ಯೆ ಇದೇ ಎಂದು ಹೇಳುವ ಬಗೆ ಹೇಗೆ ಎಂಬುದನ್ನು ನಿರ್ಧರಿಸಲು ಈ ಕೆಳಗಿನ ಕಟಪಯಾದಿ ಸಂಖ್ಯಾಯಂತ್ರವನ್ನುಪಯೋಗಿಸುತ್ತಾರೆ.

| | 1 | 2 | 3 | 4 | 5 | 6 | 7 | 8 | 9 | 0 |
|---|---|---|---|---|---|---|---|---|---|---|
| ಕಾದಿನವ | ಕ | ಖ | ಗ | ಘ | ಙ | ಚ | ಛ | ಜ | ಝ | ಞ |
| ಟಾದಿನವ | ಟ | ಠ | ಡ | ಢ | ಣ | ತ | ಥ | ದ | ಧ | ನ |
| ಪಾದಿಪಂಚ | ಪ | ಫ | ಬ | ಭ | ಮ | | | | | |
| ಯಾದ್ಯಷ್ಟ | ಯ | ರ | ಲ | ವ | ಶ | ಷ | ಸ | ಹ | | |

ಮೇಳ ಪತ್ತೆ ಮಾಡಬೇಕಾಗಿರುವ ರಾಗದ ಹೆಸರಿನ ಮೊದಲ ಎರಡು ಅಕ್ಷರಗಳನ್ನು ತೆಗೆದುಕೊಂಡು, ಆ ಅಕ್ಷರಗಳಿಗೆ ತಕ್ಕ ಸಂಖ್ಯೆಯನ್ನು ಈ ಪದಕದಿಂದ ನಿರ್ಧರಿಸಬೇಕು; ಅನಂತರ ಆ ಎರಡು ಸಂಖ್ಯೆಯನ್ನು ತಿರುಗುಮುರುಗು ಮಾಡಿದರೆ ಮೇಳರಾಗದ ಸಂಖ್ಯೆ ಬರುತ್ತದೆ. ದೃಷ್ಟಾಂತಕ್ಕೆ, ಚಾರುಕೇಶೀ ರಾಗದ ಮೇಳ ತಿಳಿಯಬೇಕೆಂದರೆ- ಚ ದ ಸಂಖ್ಯೆ ಪದಕದಲ್ಲಿ 6, ರು ದ ಸಂಖ್ಯೆ 2 ಅಂದರೆ 62 ಆಯಿತು. ಅದನ್ನು ಹಿಂದುಮುಂದು ಮಾಡಿದರೆ 26 - ಅದೇ ಚಾರುಕೇಶಿಯ ಮೇಳ ಸಂಖ್ಯೆ; ಹಾಗೆಯೇ ಖರಹರಪ್ರಿಯ ಖ 2 ರ 2; 22 ಹಿಂದು ಮುಂದು ಮಾಡಿದರೂ ಅಷ್ಟೇ ಅದರ ಮೇಳ.

ಧಾತುವರ್ಧಿನಿ -ಧ 9, ತು 6; 96; 69ನೆಯ ಮೇಳ. ರಸಿಕಪ್ರಿಯ - ರ 2 ಸಿ 7; 27; 72ನೆಯ ಮೇಳ ಇತ್ಯಾದಿ. ಈ ಪದಕ ಜನ್ಯರಾಗಗಳಿಗೆ ಅನ್ವಯಿಸುವುದಿಲ್ಲ.

ರಾಗಗಳನ್ನು (ಜನಕ-ಜನ್ಯ ಎರಡೂ) ಮತ್ತೊಂದು ಬಗೆಯಲ್ಲಿ ವಿಂಗಡಿಸುತ್ತಾರೆ. ಮಾಯಾಮಾಳವಗೌಳ, ಕಲ್ಯಾಣಿಯಂಥ ರಾಗಗಳು ತಂತಮ್ಮ ವೈಶಿಷ್ಟ್ಯವನ್ನು ತಮ್ಮಲ್ಲಿಯೇ ಉಳಿಸಿಕೊಂಡು, ಅದರಿಂದ ಮಾತ್ರ ತೃಪ್ತವಾಗಿ, ಲಕ್ಷಣಕಾರರ ಆದೇಶಗಳಿಗೆ ತಲೆಬಾಗಿ ಪಾತಿವ್ರತ್ಯ ನಿಯಮ ಪಾಲಿಸುವ ರಾಗಗಳು, ಇವುಗಳಿಗೆ ಶುದ್ಧರಾಗಗಳೆಂದು ಹೆಸರು. ಸಾರಂಗ, ಸೌರಾಷ್ಟ್ರದಂಥ ಮತ್ತೆ ಕೆಲವು ರಾಗಗಳು ಬೇರೆ ರಾಗಗಳ ಲಕ್ಷಣವನ್ನೂ ಪ್ರದರ್ಶಿಸುತ್ತವೆ; ಇಂಥವಕ್ಕೆ ಛಾಯಾಲಗ ಅಥವಾ ಸಾಳಗ ಎನ್ನುತ್ತಾರೆ. ಉದಾ: ಕುರಂಜಿ, ಶಂಕರಾಭರಣ ಇತ್ಯಾದಿ.

ಹೀಗೆ ಬೇರೆ ರಾಗದ ಛಾಯೆ ತನ್ನ ವೈಶಿಷ್ಟ್ಯಕ್ಕೆ ಪೈಪೋಟಿ ಮಾಡುವಷ್ಟು ಹಿರಿದಾಗಿದ್ದರೆ ಅದು ಸಂಕೀರ್ಣ ಅಥವಾ ಮಿಶ್ರರಾಗ; ಘಂಟಾ, ಆಹಿರಿ ಮುಂತಾದವು ಇಂಥವು.

ಭಾವಸ್ಫುರಣದ ದೃಷ್ಟಿಯಿಂದ ರಾಗವನ್ನು ಘನ ಇಲ್ಲವೆ ನಯ ಎನ್ನಬಹುದು. ಚಲನಾಟ ರಾಗ ದಿಟ್ಟತನವನ್ನು ಸೂಚಿಸುತ್ತದೆ; ಶುದ್ಧನಾಟ ಶಕ್ತಿ, ವೈಭವಗಳ ಪ್ರದರ್ಶಕ. ಶ್ರೀರಾಗದಲ್ಲಿ ಶೋಕದ ವಾಸನೆ ಇದ್ದರೂ ಅದರಲ್ಲಿ ಒಂದು ಠೀವಿ, ಗತ್ತು ಇದೆ. ಹೀಗೆಯೇ ಗೌಳ ಆರಭಿ ವರಾಳಿ ಕೇದಾರ ರೀತಿಗೌಳ ಮುಂತಾದವು ಪ್ರತಿಷ್ಠೆಯನ್ನಾಗಲಿ ಪರಾಕ್ರಮವನ್ನಾಗಲೀ ವ್ಯಕ್ತಪಡಿಸುವುದರಿಂದ ಇವಕ್ಕೆ ಘನರಾಗಗಳೆನ್ನುತ್ತಾರೆ. ಈ ರಾಗಗಳಿಗೆ ತಾನ (ಮಧ್ಯಮ ಕಾಲ) ತುಂಬ ಸೊಗಸು. ದುಃಖಪ್ರದರ್ಶಕವಾದ ತೋಡಿ. ಅಂಗಲಾಚಿ ಬೇಡುವ ಕಾಂಬೋದಿ, ಗೋಳು ಕರೆಯುವ ಭೈರವಿ, ಶೃಂಗಾರರಸಭರಿತವಾದ ಕಲ್ಯಾಣಿ ಇಂಥ ಹೃದಯ ಮುಟ್ಟುವ ರಾಗಗಳನ್ನು ನಯ ಅಥವಾ ರಕ್ತಿರಾಗಗಳೆನ್ನುತ್ತಾರೆ. ಇವುಗಳ ಆಲಾಪನೆಯೇ ತುಂಬ ಹಿತ. ಈ ಎರಡೂ ಬಗೆಯ ಭಾವಗಳನ್ನು ಕೊಂಚಮಟ್ಟಿಗೆ ವ್ಯಕ್ತಪಡಿಸುತ್ತ ಆಲಾಪನೆಯಲ್ಲಿ ಮಾತ್ರವೇ ತನ್ನ ವೈಶಿಷ್ಟ್ಯ ಹೊರಸೂಸುವ ಕಾನಡ, ಬೇಹಾಗ್, ಜಂಝೂಟಿ ಮುಂತಾದ ದೇಶ್ಯ ರಾಗಗಳು ಉತ್ತರದಿಂದ ಕರ್ನಾಟಕ ಸಂಗೀತದಲ್ಲಿ ಬಂದು ಸೇರಿಕೊಂಡು ಕರ್ನಾಟಕದವೇ ಆಗಿವೆ. ನವರೋಸ್, ಖಮಾಸ್, ಜಲಾವ್, ಕಾಪಿ ಇವೂ ಈ ರೀತಿಯವು. ಕರ್ನಾಟಕ ಸಂಗೀತದವೇ ಪೂರ್ಣವಾಗಿ ಆದ ರಾಗಗಳು ಭೈರವಿ, ಕೇದಾರಗೌಳ, ಶಂಕರಾಭರಣ ಇತ್ಯಾದಿ. ರಾಗಗಳ ಹೆಸರುಗಳಲ್ಲೂ ಕರ್ನಾಟಕದ ಶಂಕರಾಭರಣ ಹಿಂದುಸ್ತಾನಿಯ ಬಿಲಾವಲ್, ಕರ್ನಾಟಕದ ಹನುಮತೋಡಿ, ಹಿಂದುಸ್ತಾನಿಯ ಭೈರವಿ, ಕರ್ನಾಟಕದ ಮಾಯಾ ಮಾಳವಗೌಳ, ಹಿಂದುಸ್ತಾನಿಯ ಭೈರವ್, ಕರ್ನಾಟಕದ ಶುಭಪಂತುವರಾಳಿ, ಹಿಂದುಸ್ತಾನಿಯ ತೋಡಿ ಇತ್ಯಾದಿ ವ್ಯತ್ಯಾಸಗಳಿವೆ.

ರಾಗಭಾವಗಳ ವಿಷಯ ಪ್ರಸ್ತಾಪ ಮಾಡುತ್ತ ಸಂಗೀತನಿಧಿ ತಿರುವನಂತಪುರಂ ಲಕ್ಷ್ಮಣ ಪಿಳ್ಳೆ ಅವರ ಅಭಿಪ್ರಾಯವನ್ನಿಲ್ಲಿ ಸೂಚಿಸುವುದು ಉಚಿತವೆನ್ನಿಸುತ್ತದೆ. ಅವರ ಪ್ರಕಾರ ತೋಡಿ, ಭೈರವಿಗಳು ವೈಭವ, ಠೀವಿಯ ರಾಗಗಳು; ಪುನ್ನಾಗ ವರಾಳಿ ಶೋಕಪೂರಿತ; ಮೋಹನ ಪೂರ್ವಿಕಲ್ಯಾಣಿ ರಾಗಗಳು ಶೃಂಗಾರರಸ ಪ್ರಧಾನ, ಬೇಗಡೆ ವಾದವಿವಾದಕ್ಕೆ ತಕ್ಕ ರಾಗ. ಅದರಲ್ಲಿ ಕೋಪ ಪ್ರದರ್ಶನ ಸುಲಭ. ನಾದನಾಮ ಕ್ರಿಯವಾದರೆ ಶಾಂತ, ಯೋಚನಾಭರಿತ; ನೀಲಾಂಬರಿ, ಯದುಕುಲ ಕಾಂಬೋದಿ ತಗ್ಗಿ ನಡೆಯುವ ರಾಗಗಳು. ಅವುಗಳದ್ದು ಬೇಡುವ ಸ್ವಭಾವ; ಕೀರ್‍ವಾಣಿ, ವಸಂತ ರಾಗಗಳು ಗಾಂಭೀರ್ಯವಿಶಿಷ್ಟ ಇತ್ಯಾದಿ. ಮಾಯಾಮಾಳವಗೌಳ ಗೌರವಸೂಚಕ, ಚಕ್ರವಾಕ ಪ್ರಣಯಸಂಬಂಧಿ, ಶಂಕರಾಭರಣ ಶಾಂತ, ಶುಭಪಂತುವರಾಳಿ ಮರ್ಯಾದೆಯ ರಾಗ, ಗಮನಪ್ರಿಯ ಉದ್ವಿಗ್ನ, ಮಧ್ಯಮಾವತಿ ಮತ್ತು ಆರಭಿ ಸ್ತೋತ್ರಕ್ಕೆ ಅನುರೂಪವಾದ ರಾಗಗಳು, ಧನ್ಯಾಸಿ ಗೋಗರೆಯುವ ರಾಗ, ಹಂಸಧ್ವನಿ ಭಕ್ತಿ ಹಾಗೂ ಶೃಂಗಾರರಸಯುಕ್ತ, ಬಿಲಹರಿ ಸಂತೋಷಪ್ರದರ್ಶಕ, ಶ್ರೀರಾಗ ದುಃಖಸೂಚಕ, ನಾದನಾಮಕ್ರಿಯ ಜನಪದ ಭಜನೆ ಮುಂತಾದವಕ್ಕೆ ಸರಿಹೋಗುವ ರಾಗ, ಆನಂದಭೈರವಿ ಭಕ್ತಿರಸಪ್ರಧಾನ ಎಂದು ಮುಂತಾಗಿ ಕೆಲವರು ಹೇಳುತ್ತಾರೆ.

ಕೆಲವು ರಾಗಗಳನ್ನು ನಿರ್ದಿಷ್ಟ ಕಾಲದಲ್ಲಿ ಹಾಡಿದರೇ ಇಂಪು, ಸೊಗಸು ಇರುವುದೆಂದು ನಮ್ಮಲ್ಲಿ ಒಂದು ಮತ. ಈ ದೃಷ್ಟಿಯಿಂದ ರಾಗಗಳನ್ನು ಬೆಳಗಿನ ರಾಗಗಳು, ಮಧ್ಯಾಹ್ನದ ರಾಗಗಳು ಎಂದು ಮುಂತಾಗಿ ವಿಂಗಡಿಸಬಹುದು. ಶಂಕರಾಭರಣ, ಬಿಲಹರಿ, ಹನುಮತೋಡಿ ಮುಂತಾದವು ಬೆಳಗಿನ ರಾಗಗಳು, ಮಾಯಾಮಾಳವಗೌಳವಂತೂ ಅರುಣೋದಯದ ರಾಗ. ಖರಹರಪ್ರಿಯ ಮಧ್ಯಾಹ್ನದ ರಾಗ. ಶುಭ ಪಂತುವರಾಳಿ, ಮೇಚಕಲ್ಯಾಣಿ ಮುಂತಾದವು ಸಾಯಂಕಾಲ ಹಾಡಲು ಯೋಗ್ಯ. ಹರಿಕಾಂಭೋದಿ, ನಟಭೈರವಿ, ಚಲನಾಟ ಮುಂತಾದವು ರಾತ್ರಿಯ ರಾಗಗಳು. ಚಕ್ರವಾಕ, ಆನಂದಭೈರವಿಯಂಥ ರಾಗಗಳು ಸಾರ್ವಕಾಲಿಕ.

ಭರತಕಲ್ಪಲತಾ ಮಂಜರಿಯಲ್ಲಿ ಭೈರವಿ, ಭೂಪಾಲ ಮುಂತಾದವು ಪುರುಷ ರಾಗಗಳೆಂದೂ ಅವುಗಳಿಗೆ ಕೆಲವು ಸ್ತ್ರೀರಾಗಗಳಿವೆಯೆಂದೂ ಹೇಳಿದೆ. ಭೈರವ ರಾಗಕ್ಕೆ ಮೇಘರಂಜೀ, ಕುರಂಜೀ, ದೇವಕ್ರಿಯಾ; ಭೂಪಾಲಕ್ಕೆ ಮಲಹರಿ, ಬೌಳಿ, ವೇಳಾವತಿ; ಬಂಗಾಳಕ್ಕೆ ಧನ್ಯಾಸಿ, ಕರ್ನಾಟ, ಗೌಳ; ಶ್ರೀರಾಗಕ್ಕೆ ಹಿಂದೋಳಿ, ಆಹಿರಿ; ವಸಂತ ರಾಗಕ್ಕೆ ರಾಮಕ್ರಿಯಾ, ವರಾಳಿ; ಸಾರಂಗಕ್ಕೆ ದೇಶಾಕ್ಷಿ, ರೀತಿಗೌಳ; ಪಂಚಮಕ್ಕೆ ದೇಶಿ, ಲಲಿತಾ,ತೋಡಿ ಇತ್ಯಾದಿ ಒಟ್ಟು ಎಂಟು ಪುರುಷ ರಾಗಗಳಿಗೆ ಇಪ್ಪತ್ತನಾಲ್ಕು ಸ್ತ್ರೀರಾಗಗಳನ್ನು ಭರತ ಹೇಳಿದ್ದಾನೆ.

ಲಕ್ಷಣಗ್ರಂಥಗಳಲ್ಲಿ ರಾಗಕ್ಕೆ 13 ಲಕ್ಷಣಗಳನ್ನು ಹೇಳಿದ್ದಾರೆ- ಗ್ರಹ, ಅಂಶ, ತಾರ, ಮಂದ್ರ, ನ್ಯಾಸ, ಅಪನ್ಯಾಸ, ಸನ್ಯಾಸ, ವಿನ್ಯಾಸ, ಬಹುತ್ವ, ಅಲ್ಪತ್ವ, ಅಂತರ, ಮಾರ್ಗ, ಷಾಡವ, ಔಡವ (ಸಂಗೀತರತ್ನಾಕರ). ಇವುಗಳಲ್ಲಿ ಗ್ರಹ, ಅಂಶ, ನ್ಯಾಸ ಮೂರು ಮಾತ್ರ ಮುಖ್ಯ. ಉಳಿದವು ಇಂದು ಅಷ್ಟಾಗಿ ವ್ಯವಹಾರದಲ್ಲಿಲ್ಲ. ಗ್ರಹವೆಂದರೆ ರಾಗ ಶುರುವಾಗುವ ಸ್ವರ (ತಮಿಳು ಎಡುಪ್ಪು). ನ್ಯಾಸ ರಾಗ ಮುಗಿಯುವ ಸ್ವರ ಅಂಶವೆಂದರೆ ರಾಗದಲ್ಲಿ ಅತಿ ಮುಖ್ಯವಾಗಿ ಪ್ರಯೋಗ ಬಾಹುಳ್ಯದಿಂದ ವಿಶಿಷ್ಟವಾದ ಸ್ವರ. ಇದಕ್ಕೆ ಜೀವಸ್ವರ, ರಾಗ ಛಾಯಾಸ್ವರ ಎಂತಲೂ ಕರೆಯುತ್ತಾರೆ. ಹನುಮತೋಡಿಯಲ್ಲಿ ಧೈವತ, ನಟಭೈರವಿಯಲ್ಲಿ ಋಷಭ, ಹರಿಕಾಂಭೋದಿಯಲ್ಲಿ ಗಾಂಧಾರ, ಖರಹರಪ್ರಿಯದಲ್ಲಿ ಪಂಚಮ, ಆರಭಿಯಲ್ಲಿ ಮಧ್ಯಮ, ಧನ್ಯಾಸಿಯಲ್ಲಿ ನಿಷಾದ ಇವು ಅಂಶಸ್ವರಗಳು.

ಒಂದು ರಾಗದ ಲಕ್ಷಣ ಹೇಳಬೇಕೆಂದರೆ ಮೊದಲು ಅದು ಮೇಳಕರ್ತವೊ ಜನ್ಯವೊ ಎಂಬುದನ್ನು ನಿರ್ಧರಿಸಬೇಕು. ಅದರ ಸ್ವರಜಾತಿಗಳನ್ನೂ ಗಮನಿಸಬೇಕು. ಜನ್ಯವಾದರೆ ಅದು ಯಾವ ಮೇಳ, ವರ್ಜ್ಯವೊ ಸಂಪೂರ್ಣವೊ ವಕ್ರವೊ ಕ್ರಮವೊ, ಅದರ ಮೂರ್ಛನೆಗಳು ಯಾವುವು, ಷಾಡವವೊ, ಔಡವವೊ, ಸಂಪೂರ್ಣವೊ, ಉಪಾಂಗವೊ, ಭಾಷಾಂಗವೋ, ಯಾವ ಸ್ವರಾಂತ,ಅದರ ಸಂಚಾರಗಳು ಯಾವುವು, ಅದರ ಜೀವ ಹಾಗೂ ನ್ಯಾಸ ಸ್ವರಗಳು ಯಾವುವು. ಶುದ್ಧವೊ ಛಾಯಾಲಗವೊ, ಘನರಾಗವೊ, ರಕ್ತಿರಾಗವೊ, ಅದರ ವಿಶಿಷ್ಟ ಗಮಕಗಳು ಯಾವುವು, ವಿಶೇಷ ಸಂಚಾರಗಳು ಯಾವುವು, ಜಂಟಿಸ್ವರ ದಾಟುಸ್ವರ ಪ್ರಯೋಗಗಳುಂಟೆ - ಎಂಬೆಲ್ಲ ವಿಷಯಗಳನ್ನೂ ಗಮನದಲ್ಲಿ ಇಟ್ಟುಕೊಂಡು ರಾಗಲಕ್ಷಣ ನಿರ್ಧರಿಸಬೇಕು.

**ತಾಳ :** ಕರ್ನಾಟಕ ಸಂಗೀತದಲ್ಲಿ ರಾಗ ಎಷ್ಟು ಮುಖ್ಯವೋ ತಾಳ ಅಷ್ಟೇ ಮುಖ್ಯ; ತಾಳವೆಂದರೆ ಕಾಲನಿಯತಿ (ಟೈಮ್-ಮೆಷರ್). ಎಲ್ಲ ಸಂಗೀತದಲ್ಲೂ ತಾಳ ಅವಶ್ಯಾಂಗವಾದರೂ ಈ ಸಂಗೀತದಲ್ಲಿ ಅದಕ್ಕೆ ಪ್ರಮುಖಪಟ್ಟ; ತಾಳ ಎಂದರೆ ಕಾಲಪ್ರಮಾಣ. ಈ ಕಾಲದ ಗಣನೆ ಹೀಗಿದೆ. ಒಂದರಮೇಲೊಂದರಂತೆ ನೂರು ತಾವರೆ ಎಲೆಗಳನ್ನಿಟ್ಟು ಒಂದು ಸೂಜಿಯಿಂದ ಎಲ್ಲವನ್ನೂ ಒಮ್ಮೆಲೆ ಚುಚ್ಚಲು ಎಷ್ಟು ಕಾಲ ಬೇಕೋ ಅದು ಒಂದು ಕ್ಷಣ; ಎಂಟು ಕ್ಷಣಗಳಾದರೆ ಒಂದು ಲವ; ಎಂಟು ಲವಗಳಾದರೆ ಒಂದು ಕಾಷ್ಠ; ಎಂಟು ಕಾಷ್ಠಗಳಾದರೆ ಒಂದು ನಿಮಿಷ; ಎಂಟು ನಿಮಿಷಗಳು ಒಂದು ಕಲಾ; ಎರಡು ಕಲಾ ಒಂದು ಚತುರ್ಭಾಗ; ಎರಡು ಚತುರ್ಭಾಗ ಒಂದು ಅನುದ್ರುತ; ಎರಡು ಅನುದ್ರುತ ಒಂದು ದ್ರುತ; ಎರಡು ದ್ರುತ ಒಂದು (ಚತುರಶ್ರ) ಲಘು; ಎರಡು ಲಘು ಒಂದು ಗುರು; ಮೂರು ಲಘು ಒಂದು ಪ್ಲುತ; ನಾಲ್ಕು ಪ್ಲುತ ಒಂದು ಕಾಕಪಾದ. ವ್ಯವಹಾರದಲ್ಲಿ ಆರು ಮುಖ್ಯ ಕಾಲವಿಭಾಗಗಳನ್ನು ಪರಿಗಣಿಸುತ್ತಾರೆ.

| ಕಾಲವಿಭಾಗ | ಸಂಜ್ಞೆ | ಅಕ್ಷರಕಾಲ | ಮಾತ್ರಾಕಾಲ | ಕ್ರಿಯೆ |
|---|---|---|---|---|
| ಅನುದ್ರುತ | 0 | 1 | 1/4 | ಪೆಟ್ಟು |
| ದ್ರುತ | 0 | 2 | 1/2 | ಪೆಟ್ಟು, ಹುಸಿ |
| ಲಘು | 1 | 4 | 1 | ಪೆಟ್ಟು, ಎಣಿಕೆ |
| ಗುರು | S | 8 | 2 | ------ |
| ಪ್ಲುತ | 3 | 12 | 3 | ------ |
| ಕಾಕಪಾದ | x | 16 | 4 | ------ |

ಈ ಆರು ತಾಳದ ಷಡಂಗಗಳೆಂದು ಕರೆಸಿಕೊಳ್ಳುತ್ತವೆ. ಲಕ್ಷಣ ಗ್ರಂಥಗಳಲ್ಲಿ ಹೇಳಿರುವ ತಾಳಗಳಲ್ಲಿ ಈ ಆರೂ ಅಂಗಗಳು ಇರುತ್ತವೆ. ಆದರೆ ಸಾಮಾನ್ಯವಾಗಿ ವ್ಯವಹಾರದಲ್ಲಿರುವ ಸುಳಾದಿ ಸಪ್ತತಾಳಗಳಲ್ಲಿ ಅನುದ್ರುತ, ದ್ರುತ, ಲಘು ಇಷ್ಟೇ ಇರುತ್ತವೆ. ಒಂದು ಪೆಟ್ಟು (ಘಾತ) ಹಾಕುವಷ್ಟು ಕಾಲ ಅಥ'ವಾ ಒಂದಕ್ಷರ ಉಚ್ಚರಿಸುವಷ್ಟು ಕಾಲ ಅನುದ್ರುತವೆನಿಸಿಕೊಳ್ಳುತ್ತದೆ; ಒಂದು ಪೆಟ್ಟು ಹಾಕಿ ಕೈ ಎತ್ತಿ ಪಕ್ಕಕ್ಕೆ ಬಿಡುವಷ್ಟು (ವಿಸರ್ಜ) ಕಾಲ ಅಥವಾ ಎರಡಕ್ಷರ ಉಚ್ಚರಿಸುವಷ್ಟು ಕಾಲ ದ್ರುತ. ಲಘುವಿನಲ್ಲಿ ಐದು ಜಾತಿಗಳುಂಟು. ತ್ರಿಶ್ರ ಲಘುವೆಂದರೆ ಒಂದು ಪೆಟ್ಟು ಹಾಕಿ ಬೆರಳಲ್ಲಿ ಎರಡು ಎಣಿಸುವಷ್ಟು ಕಾಲ, ಅಂದರೆ ಮೂರು ಅಕ್ಷರ ಕಾಲವಾಯಿತು. ಚತುರಶ್ರ ಲಘುವಿನಲ್ಲಿ ಒಂದು ಪೆಟ್ಟು ಹಾಕಿ ಮೂರು ಎಣಿಕೆ ಅಂದರೆ ನಾಲ್ಕಕ್ಷರ ಕಾಲ. ಖಂಡ ಲಘುವೆಂದರೆ ಒಂದು ಪೆಟ್ಟು, ನಾಲ್ಕು ಎಣಿಕೆ ಎಂದರೆ ಐದಕ್ಷರ ಕಾಲ. ಮಿಶ್ರ ಲಘುವಿನಲ್ಲಿ ಒಂದು ಪೆಟ್ಟು ಆರು ಎಣಿಕೆ ಏಳಕ್ಷರ ಕಾಲ. ಕಡೆಯದಾಗಿ ಸಂಕೀರ್ಣ ಲಘುವಿನಲ್ಲಿ ಒಂದು ಪೆಟ್ಟು ಎಂಟು ಎಣಿಕೆ, 9 ಒಟ್ಟು ಒಂಬತ್ತು ಅಕ್ಷರ ಕಾಲ. ಈ ಐದು ಲಘುವಿನ ಜಾತಿ ಭೇದಗಳು ಸಪ್ತ ಸುಳಾದಿ ತಾಳಗಳಲ್ಲಿ ಸೇರಿದರೆ ಒಟ್ಟು 35 ತಾಳಗಳಾಗುತ್ತವೆ. ಒಂದೊಂದು ತಾಳದಲ್ಲೂ ಐದೈದು ಜಾತಿಗಳು.

ಈ ಏಳು ಸುಳಾದಿ ತಾಳಗಳಲ್ಲೂ ಪುರಂದರದಾಸರು ಅನೇಕ ಅಲಂಕಾರಗಳನ್ನು ಹೆಣೆದಿದ್ದಾರೆ. ಉದಾಹರಣೆಗೆ - ತ್ರಿಶ್ರ ಧ್ರುವ ಸರಿಗ, ಸಗ, ರಿಗಮ, ಗಮಪ; ರಿಗಮ, ರಿಮ, ಗಮಪ, ಮಪಧ ಇತ್ಯಾದಿ. ಚತುರಶ್ರ ಮಠ್ಯ - ಸರಿಗರಿ, ಸರಿ, ಸರಿಗಮ, ರಿಗಮಗ, ರಿಗ, ರಿಗಮಪ ಇತ್ಯಾದಿ. ಖಂಡರೂಪಕ ಸರಿ, ಸರಿಗಮಪ; ರಿಗ, ರಿಗಮಪಧ ಇತ್ಯಾದಿ. ಮಿಶ್ರ ಝಂಪ - ಸರಿಗಸರಸರಿ, ಗ, ಮಾರಿಗಮರಿಗರಿಗ, ಮ, ಪಾ ಇತ್ಯಾದಿ. ಸಂಕೀರ್ಣ ತ್ರಿಪುಟ - ಸಾರೀಗಾಮಪಧ, ಮಪ, ಧ, ನಿ, ರೀಗಾಮಾಪಧನಿ, ಪನಿಧಸ ಇತ್ಯಾದಿ. ತ್ರ್ಯಶ್ರ ಅಟ - ಸರಿಗ, ರಿಗಮ, ಪಾ, ಪಾ, ರಿಗಮ, ಗಮಪ, ಧಾ, ಧಾ ಇತ್ಯಾದಿ. ಚತುರಶ್ರ ಏಕ - ಸರಿಗಮ; ರಿಗಮಪ ಇತ್ಯಾದಿ. ಇವಕ್ಕೆ ತಾಳಾಲಂಕಾರಗಳು ಎಂದು ಹೆಸರು. ಮೇಲೆ ಹೇಳಿದ ಮೂವತ್ತೈದು ತಾಳಗಳಲ್ಲಿ ಒಂದೊಂದು ಗತಿಭೇದದಿಂದ ಐದೈದು ಉಪವಿಭಾಗಗಳಾಗಿ ಒಡೆಯುತ್ತವೆ; ಎಂದರೆ ಒಟ್ಟು 175 ತಾಳಗಳಾದಂತಾಯಿತು. ಐದು ಜಾತಿಗಳೂ ಐದು ಗತಿಭೇದಗಳೂ ಒಂದೊಂದು ತಾಳದಲ್ಲೂ ಬಂದು ಸಪ್ತತಾಳಗಳಲ್ಲಿ ಪ್ರತಿಯೊಂದರಲ್ಲೂ 25 ವಿಧಗಳಾಗುತ್ತವೆ. ಜಾತಿಭೇದ ಲಘುವಿಗೆ ಮಾತ್ರವಾದರೆ ಗತಿಭೇದ ಇತರ ತಾಳಾಂಗಗಳಿಗೂ ಉಂಟು. ಚಾಪು ತಾಳ ಎಂಬ ಒಂದು ತಾಳ ವಿಶೇಷ ನಮ್ಮಲ್ಲಿ ತೀರ ಹಿಂದಿನಿಂದಲೂ ವ್ಯವಹಾರದಲ್ಲಿದೆ; ಅದರ ಕ್ರಿಯೆ ಎರಡೂ ಘಾತಗಳು ಅಥವಾ ಒಂದು ಘಾತ ಒಂದು ವಿಸರ್ಜಿತ.

ತಾಳದ ಪ್ರಾಣಗಳಲ್ಲಿ ಗ್ರಹ ಒಂದು ಎಂದು ಲಕ್ಷಣ ಗ್ರಂಥಗಳಲ್ಲಿ ಹೇಳಿದೆ. ಇಲ್ಲಿ ಗ್ರಹವೆಂದರೆ ತಾಳಾವರ್ತದಲ್ಲಿ ಸಂಗೀತದ ಸಾಹಿತ್ಯವನ್ನು ಪ್ರಾರಂಭಿಸುವುದೆಂದರ್ಥ. ಗ್ರಹದಲ್ಲಿ ಎರಡು ವಿಧ - ಸಮ, ವಿಷಮ ಎಂದು. ಸಮಗ್ರಹವೆಂದರೆ ತಾಳ ಶುರುವಾಗುತ್ತಿದ್ದಂತೆಯೇ ಸಂಗತಿಯೂ ಶುರುವಾಗುವುದು; ಎರಡಕ್ಕೂ ವ್ಯತ್ಯಾಸ ಬಂದರೆ ಅದು ವಿಷಮ. ತಾಳಕ್ಕೆ ಮುಂಚೆಯೇ ಗಾನಶುರುವಾದರೆ ಅದು ಅತೀತ ವಿಷಮಗ್ರಹ; ತಾಳವೇ ಮುಂಚೆ ಶುರುವಾಗಿ ಆಮೇಲೆ ಗಾನ ಆರಂಭವಾದರೆ ಅದು ಅನಾಗತ ವಿಷಮ ಗ್ರಹ. ತಾಳದ ಮತ್ತೊಂದು ಪ್ರಾಣ ಲಯ, ಎಂದರೆ ಗಾನ ವೇಗ (ಟೆಂಪೋ), ಇದರಲ್ಲಿ ಮೂರು ವಿಧ; ಓಟ ಜೋರಾಗಿದ್ದರೆ ಅದು ದ್ರುತ, ನಿಧಾನವಾದರೆ ವಿಳಂಬಿತ; ಎರಡೂ ಅಲ್ಲದಿದ್ದರೆ ಮಧ್ಯ. ಇದಕ್ಕೇ ಸಾಮಾನ್ಯವಾಗಿ ಕಾಲ ಎಂದು ವ್ಯವಹರಿಸುವುದುಂಟು. ಇನ್ನೊಂದು ತಾಳ ಪ್ರಾಣವಾದ ಕಳಾ ಎನ್ನುವುದು ತಾಳಾಕ್ಷರದಲ್ಲಿ ಅಂಗೀಭೂತವಾದ ಕಾಲವಿಭಾಗ. ಏಕಕಳಾ ಎಂದರೆ ಒಂದು ತಾಳಾಕ್ಷರದಲ್ಲಿ ಒಂದೇ ಉಪವಿಭಾಗ ಇರುವುದು. ಅಂದರೆ ಒಂದು ತಾಳಕ್ರಿಯೆಗೆ ಒಂದು ಸ್ವರ ಪ್ರಮಾಣ; ದ್ವಿಕಳಾ ಎಂದರೆ ಒಂದು ತಾಳಕ್ರಿಯೆಗೆ ಎರಡಕ್ಷರಗಳು ಇತ್ಯಾದಿ.

ಯತಿ ಎನ್ನುವುದು ಇನ್ನೊಂದು ತಾಳಪ್ರಾಣ (ರಿದಮ್). ತಾಳಾಂಗಗಳಲ್ಲಿ ಸಮ, ಗೋಪುಚ್ಛ, ಸ್ರೋತೋವಹ, ಡಮರು, ಮೃದಂಗ, ವಿಷಮ ಎಂದು ಷಡ್ವಿಧ. ಏರದೇ ಕುಗ್ಗದೇ ಇರುವೆಯ ಸಾಲಿನಂತೆ ಒಂದೇ ಸಾಲಿನಲ್ಲಿ ಹೋಗುವುದು ಸಮಯತಿ. ಎಲ್ಲ ತಾಳಾಂಗಗಳೂ ಒಂದೇ ಅಕ್ಷರ ಪ್ರಮಾಣದ್ದೋ ಇಲ್ಲವೆ ಎರಡೇ ಅಕ್ಷರ ಪ್ರಮಾಣದ್ದೋ ಇರಬಹುದು. ಗೋಪುಚ್ಛ ಯತಿಯಲ್ಲಾದರೋ ಹಸುವಿನ ಬಾಲದಂತೆ ತಾಳಾಂಗಗಳು ಮೊದಲು ದೊಡ್ಡವಾಗಿದ್ದು ಬರುಬರುತ್ತ ಕ್ರಮವಾಗಿ ಸಣ್ಣಗಾಗುವುವು. ಮೊದಲೊಂದು ಕಾಕಪಾದ. ಅನಂತರ ಒಂದು ಪ್ಲುತ, ಅನಂತರ ಲಘು, ದ್ರುತ, ಅನುದ್ರುತ - ಹೀಗೆ ತಾಳಾಂಗಗಳು ಬರುತ್ತವೆ. ಈ ಕ್ರಮ ಹಿಂದುಮುಂದಾದರೆ ಅದು ಸ್ರೋತೋವಹ; ನದಿ ಸಣ್ಣದಾಗಿ ಶುರುವಾಗಿ ಕ್ರಮೇಣ ದೊಡ್ಡದಾಗುವುದೇ ಉಪಮಾನ. ಡಮರು ಯತಿಯಲ್ಲಿ ಗೋಪುಚ್ಛ ಹಾಗೂ ಸ್ರೋತೋವಹಗಳು ಸಮವಾಗಿ ಸೇರುತ್ತವೆ. ಅರ್ಧದ ವರೆಗೆ ಸಣ್ಣದಾಗುತ್ತ ಬಂದು ಅನಂತರ ದೊಡ್ಡದಾಗಲಾರಂಭಿಸಿ ಮೊದಲ ಪ್ರಮಾಣಕ್ಕೆ ಬರುವುದು ಡಮರು. ಇದಕ್ಕೆ ವಿರುದ್ಧ ಮೃದಂಗ ಯತಿ. ಮೊದಲು ಸ್ರೋತೋವಹ ಅರ್ಧದ ವರೆಗೆ ಬಂದು ಅನಂತರ ಗೋಪುಚ್ಛ ಆರಂಭವಾಗಿ ಆದ್ಯಂತ ಪ್ರಮಾಣ ಒಂದೇ ಆಗುತ್ತದೆ. ಇಂಥ ಯಾವ ಕ್ರಮವೂ ಇಲ್ಲದಿರುವುದು ವಿಷಮ ಯತಿ.

ಮಾರ್ಗ ಎಂಬ ತಾಳಪ್ರಾಣ ಕೃತಿರಚನೆಯಲ್ಲಿ ಕಾಲ ಲಯ ನಿಯಂತ್ರಣದ ಸಾಧನ. ಇದರಲ್ಲಿ ಆರು ವಿಧ. ಒಂದು ತಾಳಾಕ್ಷರಕ್ಕೆ ಎಂಟು ಮಾತ್ರಾಕಾಲಗಳಿದ್ದರೆ ದಕ್ಷಿಣ ಸಂಜ್ಞೆ. ನಾಲ್ಕು ಮಾತ್ರಾ ಕಾಲಗಳಿದ್ದರೆ ವರ್ತಿಕ. ಎರಡಿದ್ದರೆ ಚಿತ್ರ, ಒಂದಿದ್ದರೆ ಚಿತ್ರತರ, ಅರ್ಧ ಇದ್ದರೆ ಚಿತ್ರತಮ (ದ್ರುತ), ನಾಲ್ಕನೆಯ ಒಂದು ಭಾಗ ಇದ್ದರೆ ಅತಿಚಿತ್ರತಮ (ಅನುದ್ರುತ). ಕಡೆಯದಾಗಿ ಪ್ರಸ್ತಾರ ಎಂದರೆ ತಾಳದ ವಿವಿಧ ಅಂಗಗಳನ್ನು ಉಪಾಂಗಗಳಾಗಿ ವಿಭಜಿಸಿ ಅವುಗಳ ವೈವಿಧ್ಯವನ್ನೆಲ್ಲ ಕ್ರಮ ಹಿಡಿದು ಪ್ರದರ್ಶಿಸುವುದು ಎಂದರ್ಥ.

ಈ ಹತ್ತು- ಅಂಗ (ದ್ರುತ, ಲಘು ಇತ್ಯಾದಿ), ಜಾತಿ (ತ್ರಿಶ್ರ ಇತ್ಯಾದಿ), ಕಾಲ (ಕ್ಷಣ, ಲವ ಇತ್ಯಾದಿ), ಗ್ರಹ, ಲಯ, ಯತಿ, ಮಾರ್ಗ, ಪ್ರಸ್ತಾರ, ಕ್ರಿಯೆ (ಘಾತ ಇತ್ಯಾದಿ), ಕಳಾ ತಾಳದ ದಶಪ್ರಾಣಗಳೆಂದು ಲಕ್ಷಣಕಾರರು ಹೇಳಿದ್ದಾರೆ. ಅವುಗಳಲ್ಲಿ ಮುಖ್ಯವಾದುವೆಂದರೆ ಅಂಗ, ಗ್ರಹ, ಜಾತಿ, ಕ್ರಿಯೆ, ಲಯಗಳು. ಶಾಸ್ತ್ರೋಕ್ತವಾಗಿ 108 ತಾಳಗಳಿದ್ದರೂ ವ್ಯವಹಾರದಲ್ಲಿರುವುದು ಮೇಲೆ ಹೇಳಿದ 35 ಮಾತ್ರ.

**ಕಲಿಕೆ ಪ್ರಯೋಗ :** ಕರ್ಣಾಟಕ ಸಂಗೀತ ಕಲಿಯಲಾರಂಭಿಸುವವರು ಮೊದಲು ಸ್ವರಜ್ಞಾನಕೋಸ್ಕರ ಸ್ವರಾವಳಿ (ಸರಳೆ), ಜಂಟಿವರಸೆ, ಅಲಂಕಾರಗಳನ್ನು ಕಲಿತು ಗೀತಗಳಿಗೆ ಕೈ ಹಾಕುತ್ತಾರೆ. ಗೀತ ತುಂಬ ಸರಳವಾದ ಕೃತಿ; ಅದರಲ್ಲಿ ಪಲ್ಲವಿ, ಅನುಪಲ್ಲವಿ, ಚರಣ ಮುಂತಾದ ಗೊಂದಲಗಳಿಲ್ಲ; ತಾಳವೂ ತುಂಬ ಸುಲಭ. ಆಯಾ ರಾಗ ಲಕ್ಷಣ ಪ್ರದರ್ಶಿಸಲು ಎಷ್ಟು ಬೇಕೋ ಅಷ್ಟು ಮಾತ್ರ ಸಂಚಾರ ಇರುತ್ತದೆ. ಪ್ರತಿ ಸ್ವರಕ್ಕೂ ಸಾಹಿತ್ಯದಲ್ಲೊಂದು ಅಕ್ಷರ ಇರುತ್ತದೆ. ಪುರಂದರದಾಸ, ಪೈದಾಳ ಗುರುಮೂರ್ತಿಶಾಸ್ತ್ರಿ, ವೆಂಕಟಮುಖಿ ಮುಂತಾದವರು ಗೀತರಚನೆಯಲ್ಲಿ ಪ್ರಸಿದ್ಧರು. ಗೀತದ ಅನಂತರ ಅಭ್ಯಾಸ ಮಾಡುವುದು ಸ್ವರಜತಿ. ಇದರಲ್ಲಿ ಪಲ್ಲವಿ ಇದ್ದು (ಕೆಲವು ವೇಳೆ ಅನುಪಲ್ಲವಿಯೂ ಇದ್ದು) ನಾಲ್ಕೈದು ಚರಣಗಳಿರುತ್ತವೆ. ಪ್ರತಿ ಚರಣ ಮುಗಿದೊಡನೆ ಪಲ್ಲವಿ ಬರುತ್ತದೆ. ಇದರಲ್ಲಿ ಭಕ್ತಿರಸ ಅಥವಾ ಶೃಂಗಾರರಸ ಇರುತ್ತದೆ. ಶ್ಯಾಮಶಾಸ್ತ್ರಿಗಳ ಕಾಮಾಕ್ಷಿ ಎಂಬ ಭೈರವೀ ಸ್ವರಜತಿ, ನೀಟು ಗಲ ಮಿಠಾರಿ ಎಂಬ ಕಲ್ಯಾಣಿ ಸ್ವರಜತಿ, ಸಾಮೀ ದಯಮೀರಾ ಎಂಬ ಮೋಹನ ಸ್ವರಜತಿ, ರಾರ ವೇಣು ಗೋಪಬಾಲ ಎಂಬ ಬಿಲಹರಿಯ ಸ್ವರಜತಿ ಮುಂತಾದವು ಪ್ರಸಿದ್ಧ. ಸ್ವರಜತಿಯ ಹಂತ ದಾಟಿದರೆ ವರ್ಣ. ವರ್ಣಗಳು ವಿದ್ವತ್ಪೂರ್ಣ ರಾಗಭಾವದಿಂದ ಪಕ್ವವಾಗಿರುತ್ತವೆ. ಇದರಲ್ಲಿ

ಒಂದು ಸಣ್ಣ ಪಲ್ಲವಿ, ಅನುಪಲ್ಲವಿ, ಮುಕ್ತಾಯ ಸ್ವರ (ಇವುಗಳು ಸೇರಿ ಪೂರ್ವಾಂಗ) ಒಂದು ಚರಣ ಮತ್ತು ಚರಣ ಸ್ವರಗಳು (ಇವು ಉತ್ತರಾಂಗ) ಇರುತ್ತವೆ. ಪಲ್ಲವಿ, ಅನುಪಲ್ಲವಿ, ಚರಣಗಳಿಗೆ ಮಾತ್ರ ಸಾಹಿತ್ಯ ಇದ್ದು ಉಳಿದ ಭಾಗಗಳು ಸ್ವರ ಮಾತ್ರವಾಗಿದ್ದರೆ ಅದು ತಾನ ವರ್ಣ; ವರ್ಣದ ಪೂರಾ ಸಾಹಿತ್ಯ ಇದ್ದರೆ ಅದು ಪದವರ್ಣ. ರಾಗಮಾಲಿಕಾ ವರ್ಣಗಳಲ್ಲಿ ಒಂದಕ್ಕಿಂತ ಹೆಚ್ಚು ರಾಗಗಳಿರುತ್ತವೆ. ಪಲ್ಲವಿ ಒಂದು ರಾಗ, ಅನುಪಲ್ಲವಿ ಇನ್ನೊಂದು. ಹೀಗೆ ಪಟ್ಟಣಂ ಸುಬ್ರಹ್ಮಣ್ಯ ಅಯ್ಯರ್, ರಾಮನಾಥಪುರಂ ಶ್ರೀನಿವಾಸಯ್ಯಂಗಾರ್, ಶ್ಯಾಮಾಶಾಸ್ತ್ರಿ, ವೀಣಾ ಕುಪ್ಪಯ್ಯರ್, ಆದಿಯಪ್ಪಯ್ಯ, ವೀಣೆ ಶೇಷಣ್ಣ ಮುಂತಾದವರ ವರ್ಣಗಳು ಇಂದಿಗೂ ವ್ಯವಹಾರದಲ್ಲಿವೆ.

ವರ್ಣಗಳಾದ ಮೇಲೆ ಕೃತಿ; ರಾಗಭಾವ ಸಂಪೂರ್ಣವಾಗಿ ಹೊರಸೂಸುವ ಸಾಧನ ಇದು. ಇಲ್ಲಿ ಮಾತಿನ ಜಂಜಾಟ ಅಷ್ಟಾಗಿ ಇಲ್ಲ. ಇದರಲ್ಲಿ ಪಲ್ಲವಿ, ಅನುಪಲ್ಲವಿ, ಚರಣಗಳು, ಕೆಲವೆಡೆ ಚಿಟ್ಟೆಸ್ವರ ಇರುತ್ತವೆ. ಕೃತಿಯೇ ಸಂಗೀತ ಸಾಹಿತ್ಯ ರಚನೆಯ ಪರಾಕಾಷ್ಠತೆ. ಕೃತಿಯ ನಡುವೆ ಮಧ್ಯಮ ಕಾಲ ಸಾಹಿತ್ಯ ಇರಬಹುದು; ಕೃತಿಯ ಸಾಹಿತ್ಯದ ಕೆಲವು ಕಡೆ ಸಂಗತಿಗಳಿರಬಹುದು. ಇವೆಲ್ಲ ಮಾಧುರ್ಯವರ್ಧಕ ಸಾಧನಗಳು. ಕೃತಿಕಾರರಲ್ಲಿ ತ್ಯಾಗರಾಜ, ಮುತ್ತುಸ್ವಾಮಿ ದೀಕ್ಷಿತ, ಶ್ಯಾಮಾಶಾಸ್ತ್ರಿ, ಪಟ್ಟಣಂ ಸುಬ್ರಹ್ಮಣ್ಯ ಅಯ್ಯರ್, ವೀಣಾ ಕುಪ್ಪಯ್ಯರ್, ತಿರುವಟ್ಟಿಯೂರು ತ್ಯಾಗಯ್ಯರ್, ಮೈಸೂರು ಸದಾಶಿವರಾಯ, ಸ್ವಾತಿ ತಿರುನಾಳ್, ರಾಮಸ್ವಾಮಿ ದೀಕ್ಷಿತ, ಪಲ್ಲವಿ ಗೋಪಾಲಯ್ಯ, ಮೈಸೂರು ವಾಸುದೇವಾಚಾರ್ಯ ಮುಂತಾದವರು ಪ್ರಖ್ಯಾತರು. ರಾಗಮಾಲಿಕೆ ಎಂಬುದು ಕೃತಿಯಂತೆಯೆ ಪಲ್ಲವಿ, ಅನುಪಲ್ಲವಿ, ಚರಣಗಳಿಂದ ಕೂಡಿ ವಿವಿಧ ರಾಗಗಳಲ್ಲಿರುತ್ತದೆ. ಪನ್ನಗೇಂದ್ರಶಯನ ಎಂಬ ಸ್ವಾತಿ ತಿರುನಾಳ್ ರಾಗಮಾಲಿಕೆ, ನಿತ್ಯಕಲ್ಯಾಣೀ ಎಂಬ ತೋಡಿ, ಸೀತಾರಾಮಯ್ಯನ ರಾಗಮಾಲಿಕೆ, ಲೀಲಾಶುಕನ ಶ್ಯಾಮಲಾದಂಡಕ, ಕೃಷ್ಣಕರ್ಣಾಮೃತದ ಹಲವು ಶ್ಲೋಕಗಳು - ಇವೆಲ್ಲ ತುಂಬ ಸೊಗಸಾದ ದೃಷ್ಟಾಂತಗಳು.

ಇವುಗಳಲ್ಲಿ ಧಾತು (ಸ್ವರ) ಮತ್ತು ಮಾತು (ಸಾಹಿತ್ಯ) ಎರಡೂ ಇರುತ್ತವೆ; ಇವು ಮೊದಲೆ ಸಿದ್ಧವಾಗಿರುವುದರಿಂದ ಸಂಗೀತಗಾರನ ಪ್ರತಿಭೆಗೆ ಇಲ್ಲಿ ಅಷ್ಟಾಗಿ ಅವಕಾಶವಿಲ್ಲ. ಆದರೆ ಕೃತಿಯ ಮೊದಲು ಹಾಡುವ ಆಲಾಪನೆ ತಾನ ಇವುಗಳೂ ಕೃತಿಯಲ್ಲಿ ಪಲ್ಲವಿಗೆ ಸಂಗತಿಗಳನ್ನು ಹಾಕಿ ಹಾಡುವುದೂ ಸಂಗೀತಸಾಧನೆಯ ಕಳಶ; ಇದಕ್ಕೆ ಮನೋಧರ್ಮ ಸಂಗೀತ ಎನ್ನುತ್ತಾರೆ. ಇದನ್ನು ಸಂಗೀತಗಾರ ಅಲ್ಲಿಯೇ ಆಗಲೇ ಕಲ್ಪಿಸಿಕೊಂಡು ಹಾಡುತ್ತಾನೆ. ರಾಗಾಲಾಪನೆಯಲ್ಲಿ ಆಯಾರಾಗದ ಸ್ವರಗಳ ಕ್ರಮಯುಕ್ತ ಸಂಚಾರಗಳು ತಾಳನಿಯಮವಿಲ್ಲದೆ ತೇಲಿಸಿಕೊಂಡು ಬರುತ್ತವೆ. ಬಾಯಲ್ಲಿ ಸ್ವರಗಳನ್ನು ಹೇಳದೆ ಆಯಾ ಸ್ವರಸ್ಥಾನಕ್ಕೆ ಸಹಜವಾದ ತದರಿನ್ನತಂ ನಂ ಎಂಬ ಶಬ್ದಗಳನ್ನು ಮಾತ್ರ ಮಾಧುರ್ಯ ದೃಷ್ಟಿಯಲ್ಲಿಟ್ಟುಕೊಂಡು ಜೋಡಿಸುವುದು ಆ ರಾಗಲಕ್ಷಣವನ್ನು ಸ್ಫುಟವಾಗಿ ಪ್ರದರ್ಶಿಸುವುದು ಇವು ಆಲಾಪನೆಯ ಮುಖ್ಯ ವಿಷಯಗಳು. ಆಲಾಪನೆಯಲ್ಲಿ ಆಕ್ಷಿಪ್ತಿಕಾ (ಅಥವಾ ಅಯತ್ತ) ಅಂದರೆ ಸಣ್ಣದರಲ್ಲಿ ರಾಗಲಕ್ಷಣ ಪೂರ್ತಿ ಸಂಗ್ರಹಿಸುವುದು. ಒಂದು ಬಗೆಯಲ್ಲಿ ಮುನ್ನುಡಿಯಂತೆ; ರಾಗವರ್ಧಿನೀ, ಆಲಾಪನೆಯ ಮುಖ್ಯಾಂಗ. ಇದರಲ್ಲಿ ನಾಲ್ಕು ಹಂತಗಳು - ಮೊದಲದರಲ್ಲಿ ಮಂದ್ರ, ಎರಡನೆಯದರಲ್ಲಿ ಮಧ್ಯ, ಮೂರನೆಯದರಲ್ಲಿ ತಾರಸ್ಥಾಯಿಗಳಲ್ಲಿ ವಿಳಂಬ ಕಾಲದಿಂದ ಸಂಚಾರ, ನಾಲ್ಕನೆಯದರಲ್ಲಿ ದ್ರುತ ಕಾಲದ ಸಂಚಾರ ಅಥವಾ ಮೂರ್ಛನಾ ಪ್ರಸ್ತಾರ, ಅನಂತರ ಸ್ಥಾಯಿ, ಸಂಚಾರದಲ್ಲಿ ಒಂದೇ ಸ್ವರದಿಂದ ಆರಂಭಮಾಡಿ ಆ ಸ್ವರದಲ್ಲಿಯೇ ಮುಗಿಸಿದರೆ ಆ ಸ್ವರಕ್ಕೆ ಸ್ಥಾಯೀ ಎಂದು ಹೆಸರು. ಕಡೆಯದಾಗಿ ಮಕರಿಣೀ ಅಥವಾ ತಾನ. ಪಾಂಡ್ಯ ರಾಜನ ಪ್ರಶಸ್ತಿಯಾದ ದಕ್ಷಿಣ ರಾಷ್ಟ್ರಾಧಿಪಾ ಎಂಬರ್ಥವನ್ನು ಸೂಚಿಸುವ ತೆನ್ನಾ ಎಂಬ ದ್ರಾವಿಡ ಪದದ ಸಂಸ್ಕೃತದ ರೂಪವೇ ತಾನ. ತಾನದ ಕಾಲ ಮಧ್ಯಮ, ಇದರಲ್ಲಿ ಪ್ರಯೋಗ ತಾನಾಂತ, ತಾನಂ,ತಾನಂನ ಇತ್ಯಾದಿ. ಇಲ್ಲಿ ಯತಿ ಸ್ಫುಟವಾಗಿ ಎದ್ದು ಕಾಣುತ್ತದೆ. ತಾಳ ದ್ರುತವಾದರೆ ಅದು ಘನ ಎನಿಸಿಕೊಳ್ಳುತ್ತದೆ. ಆಲಾಪನೆ ಮುಗಿದಮೇಲೆ ಪಲ್ಲವಿ ಶುರುವಾಗುತ್ತದೆ; ಇದರ ಜೀವಾಳ ಸಂಗತಿ - ಅಂದರೆ ಬಾರಿಬಾರಿಗೂ ಪಲ್ಲವಿಯ ಸ್ವರ ಸಾಹಿತ್ಯ ಹಿಗ್ಗಿಸುವುದೆಂದರ್ಥ. ದೃಷ್ಟಾಂತಕ್ಕೆ ಖಮಾಸ್ ರಾಗದ ಈ ತ್ಯಾಗರಾಜ ಕೃತಿ ನೋಡಬಹುದು.

1. ಸುಜನ ಜೀವ | ನಾ - ರ ಅಮಾ
2. ಸು ಉ ಜ ಅ ನಾ - ಜೀವ | ನ ಅ ಅ ಅ ಅ -ರ ಅ ಮಾ
3. ಸುಜನ ಜೀವ | ನ ಅ ಅ - ಅ ಅ ಅ -ರ ಅ ಅ ಅ ಅ ಮ
4. ಸುಜನ ಜೀವ | ನಾ ಅ ಅ ಅ ರ ಮ ಅ -ಸುಗುಣಭೂಷ ಣಾ ಅ ..

ಪಲ್ಲವಿ ಹಾಡಿ ಮುಗಿದಮೇಲೆ ಹಾಕುವ ಕಲ್ಪನಾ ಸ್ವರವೂ ಮನೋಧರ್ಮ ಸಂಗೀತ.

ಗಾಯಕರನ್ನು ಐದು ವಿಧವಾಗಿ ವಿಂಗಡಿಸುತ್ತಾರೆ ಶಿಕ್ಷಾಕಾರ, ಅಂದರೆ ಪಾಠ ಹೇಳಿ ಕೊಡುವುದರಲ್ಲಿ ಮಾತ್ರ ನಿಪುಣ; ಅನುಕಾರ, ಅಂದರೆ ಬೇರೆಯವರು ಹಾಡಿದಂತೆ ಅನುಕರಿಸಿ ಹಾಡುವವನು; ರಸಿಕ ಅಂದರೆ ರಸವತ್ತಾಗಿ ಹೃದಯ ಮುಟ್ಟುವಂತೆ ಹಾಡುವವನು; ರಂಜಕ ಅಂದರೆ ಶ್ರೋತೃಗಳ ಮನೋಲ್ಲಾಸವನ್ನೇ ಆದರ್ಶವಾಗುಳ್ಳವನು; ಕಡೆಯದಾಗಿ ಭಾವುಕ ಅಂದರೆ ಭಾವಗಳನ್ನು ಹಿಡಿದು ಅವುಗಳಿಗೆ ಮೆರುಗು ಕೊಟ್ಟು ಮನಮುಟ್ಟುವಂತೆ ಹಾಡುವವನು.

ಸಂಗೀತಗಾರನಿಗೆ ಶಾರೀರ ತುಂಬ ಮುಖ್ಯ. ಒಳ್ಳೆಯ ಶಾರೀರದ ಲಕ್ಷಣಗಳೆಂದರೆ ರಕ್ತಿ, ಗಾಂಭೀರ್ಯ, ಮಾರ್ದವ, ಘನತೆ, ಸ್ನಿಗ್ಧತೆ, ಧ್ವನಿಮಾಧುರ್ಯ ಮುಂತಾದವು. ಅಭ್ಯಾಸವಿಲ್ಲದಿದ್ದರೂ ರಾಗವನ್ನು ಸ್ಫುಟವಾಗಿ ಕಾಣಿಸುವ ಸಾಮರ್ಥ್ಯ ಶಾರೀರವೆನಿಸಿಕೊಳ್ಳುತ್ತದೆ. (ಎಸ್.ಕೆ.ಆರ್.)

ಕರ್ಣಾಟಕ ಸಂಗೀತದ ಪ್ರಯೋಗದಲ್ಲಿ ಗಾಯಕ ಮುಖ್ಯ. ಈಗ ಪಿಟೀಲು, ಮೃದಂಗ, ಕಂಜರಿ ಮುಂತಾದ ಪಕ್ಕವಾದ್ಯಗಳೊಡನೆ ಕಚೇರಿಗಳಲ್ಲಿ ಹಾಡುವುದು ರೂಢಿಯಲ್ಲಿದೆ. ವೀಣೆ, ನಾಗಸ್ವರ, ಪಿಟೀಲು ಮುಂತಾದವುಗಳನ್ನೇ ಪ್ರಧಾನವಾಗಿಯೂ ಉಪಯೋಗಿಸಬಹುದು. ಹಿಂದಿನಿಂದಲೂ ಈ ಪದ್ಧತಿಗಳು ಇದ್ದಂತೆ ತೋರುತ್ತದೆ. 17-18ನೆಯ ಶತಮಾನದವರೆಗಿನ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಸಂಗೀತ ಕಚೇರಿಗಳು ಸಂಗಾತವಾದ್ಯಗಳ ಉಲ್ಲೇಖಗಳೂ ದೊರೆಯುತ್ತವೆ. ನಗರಗಳಲ್ಲಿ ಸಂಗೀತ ಮತ್ತು ನೃತ್ಯಕ್ಕಾಗಿ ಪ್ರತ್ಯೇಕ ರಂಗಮಂಟಪಗಳಿದ್ದುವು. ವಾದ್ಯಸಂಗೀತದ ತನಿಕಚೇರಿಗಳು ವೀಣೆ ಮತ್ತು ಕೊಳಲು ವಾದ್ಯಗಳಲ್ಲಿ ಮದ್ದಳೆ ವಾದನದೊಡನೆ ನಡೆಯುತ್ತಿದ್ದುವು. ಹಾಡುಗಾರಿಕೆಯಲ್ಲಿ ಒಬ್ಬನೇ ಗಾಯಕ ಅಥವಾ ಯುಗ್ಮ ಜೊತೆ ಅಥವಾ ಗೋಷ್ಠಿಗಳು ಇರುತ್ತಿದುವು. ಇವು ಪಕ್ಕವಾದ್ಯಗಳೊಡನೆ ನಡೆಯುತ್ತಿದ್ದುವು. ಮುಖ್ಯ ಗಾಯಕನಿಗೆ ಮುಖರಿ ಎಂದು ಹೆಸರಿತ್ತು. ಇವನ ಜೊತೆಯಲ್ಲಿ ಇತರ ಗಾಯಕರು ಅನುಸರಿಸುತ್ತಿದ್ದರು. ರಾಜಾಸ್ಥಾನದಲ್ಲಿ ಗಾಯನವು ವೀಣೆ ಅಥವಾ ಕೊಳಲು ಮತ್ತು ಅವನದ್ಧ, ತತ ಮತ್ತು ಸುಷಿರ ವಾದ್ಯಗಳೊಡನೆ ನಡೆಯುತ್ತಿತ್ತು. ಅವನದ್ಧ ವಾದ್ಯಗಳಲ್ಲಿ ಹಲವು ರೀತಿಯ ಪಟಹ, ಭೇರಿ ಮುಂತಾದವು ಇದ್ದವು. ಕೊಂಬು, ಕಹಳೆ ಮುಂತಾದವು ಸುಷಿರ ವಾದ್ಯಗಳು. ಪಂಚಮುಖವಾದ್ಯವೆಂಬ ವಾದ್ಯ ರೂಢಿಯಲ್ಲಿತ್ತು. ಕಥಾಪ್ರಸಂಗದ ಪದ್ಯಗಳನ್ನು ಓದುವಾಗ ಸಂಗೀತವನ್ನು ಬಳಸಿಕೊಳ್ಳುತ್ತಿದ್ದರು. ವಾದ್ಯಗಳಲ್ಲಿ ಕಿನ್ನರಿ, ವಲ್ಲಕಿ, ವಿಪಂಚಿ, ರಾವಣಹಸ್ತ, ದಂಡಿಕಾ, ತ್ರಿಸರಿ, ಚಂತ್ರ, ಸ್ವರಮಂಡಲ ಮತ್ತು ಪರಿವಾದಿನಿ ಎಂಬ ತಂತೀವಾದ್ಯಗಳು ಶಂಖ, ಶೃಂಗ, ವಂಶ, ತಿತ್ತಿರಿ, ಬಂಬುಲಿ, ಕಹಳೆ ಮುಂತಾದ ಸುಷಿರ ವಾದ್ಯಗಳು ಒತ್ತು ಕರಡೆ, ಮೃದಂಗ, ಢಕ್ಕೆ, ಪಟಹ, ಆವುಜ, ದುಂದುಭಿ, ಪಣವ, ಭೇರಿ, ಡಿಂಡಿಮ, ತ್ರಿವಳಿ, ನಿಸ್ಸಾಳ, ಡಮರು, ಚಿಂಬಕ, ದಂಡೆ, ರುಂಜ, ಟೋಲುಗ, ಮುಕುಂದ, ರವಲಿ, ಕಂಠೀರವ, ಗಜಢಕ್ಕೆ, ಸಿಂಹಘಂಟೆ, ಪವಲ, ಚಿಂಕಿರು ಮುಂತಾದ ತಾಳ ವಾದ್ಯಗಳು ಘಂಟೆ, ಜಯಘಂಟೆ, ಕಿಂಕಣಿ, ಝಲ್ಲರಿ, ತಾಳ, ಕಂಸಾಲವೆಂಬ ಘನವಾದ್ಯಗಳ ಹೆಸರು ಉಕ್ತವಾಗಿವೆ. ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯಚರಿತ್ರೆ ಎಂಬ ತೆಲುಗು ಗ್ರಂಥದ ಪರ್ವತಪ್ರಕರಣದಲ್ಲಿ 32 ಬಗೆಯ ವೀಣೆಗಳು ಮತ್ತು 18 ಬಗೆಯ ಕೊಳಲುಗಳನ್ನು ಮತ್ತು ಸಂಗೀತ ವಾದ್ಯಗಳನ್ನು ಕುರಿತು ಹೇಳಿದೆ. ಇವುಗಳಲ್ಲಿ ಹಲವು ವಾದ್ಯಗಳ ಬಳಕೆ ಬಿಟ್ಟುಹೋಗಿದೆ. ಕೆಲವು ಕೇವಲ ಜನಪದ ವಾದ್ಯಗಳಾಗಿ ಬಳಕೆಯಲ್ಲಿವೆ. ಪಿಟೀಲು, ಹಾರ್ಮೋನಿಯಂ, ಮೋರ್ಚಿಂಗ್ ಮೊದಲಾದ ಪಾಶ್ಚಾತ್ಯ ಮೂಲದ ವಾದ್ಯಗಳು ಈಚೆಗೆ ಬಳಕೆಗೆ ಬಂದಿವೆ. (ವಿ.ಎಸ್.ಎಸ್.)

**ಕರ್ನಾಟಕ (ರಾಜ್ಯ) :** ಭಾರತಾಂತರ್ಗತವೂ ಪುರಾತನವೂ ವಿಶಿಷ್ಟ ಸಂಸ್ಕೃತಿಯುಕ್ತವೂ ಆಗಿದ್ದು, ಕನ್ನಡ ಪ್ರಧಾನ ಭಾಷೆಯಾಗಿ ಪ್ರಚಲಿತವಾಗಿರುವ ರಾಜ್ಯ. ದಕ್ಷಿಣ ಭಾರತದ ಮಧ್ಯವರ್ತಿ ಪ್ರದೇಶದಲ್ಲಿ ಸ್ವಲ್ಪ ಪಶ್ಚಿಮಕ್ಕೆ, ಅರಬ್ಬೀ ಸಮುದ್ರಕ್ಕೆ ಹೊಂದಿಕೊಂಡಂತಿರುವ ಕರ್ನಾಟಕ ಉತ್ತರ ಅಕ್ಷಾಂಶ $11^0$ 30' ನಿಂದ $18^0$ 45' ವರೆಗೂ ಪೂರ್ವ ರೇಖಾಂಶ $74^0$ 12' ನಿಂದ $78^0$ 30' ವರೆಗೂ ಹಬ್ಬಿದೆ. ಪೂರ್ವಪಶ್ಚಿಮವಾಗಿ ಸು.400ಕಿಮೀ ಮತ್ತು ಉತ್ತರ ದಕ್ಷಿಣವಾಗಿ 770ಕಿಮೀ ಇದೆ. ರಾಜ್ಯದ ಮೇರೆಗಳು - ವಾಯುವ್ಯ ಮತ್ತು ಉತ್ತರ ದಿಕ್ಕುಗಳಲ್ಲಿ ಮಹಾರಾಷ್ಟ್ರ, ಪೂರ್ವದಲ್ಲಿ ಆಂಧ್ರ ಪ್ರದೇಶ, ಆಗ್ನೇಯ ದಕ್ಷಿಣಗಳಲ್ಲಿ ತಮಿಳುನಾಡು, ನೈಋತ್ಯದಲ್ಲಿ ಕೇರಳ, ಪಶ್ಚಿಮದಲ್ಲಿ ಅರಬ್ಬೀ ಸಮುದ್ರ.

ಪ್ರಾಚೀನ ಕಾಲದಲ್ಲಿ ಕನ್ನಡ ಆಡುಭಾಷೆಯಾಗಿದ್ದ ನಾಡಿನ ವಿಸ್ತೀರ್ಣ ಎಷ್ಟು ಇತ್ತು ಎಂಬುದು ಸರಿಯಾಗಿ ತಿಳಿಯುವುದಿಲ್ಲ. ಕೆಲವು ಕಾಲಘಟ್ಟಗಳಲ್ಲಾದರೂ ಉತ್ತರದಲ್ಲಿ ಔರಂಗಾಬಾದ್, ಮುಂಬಯಿ ಭಾಗದಿಂದ ದಕ್ಷಿಣದಲ್ಲಿ ನೀಲಗಿರಿಯವರೆಗೂ ಪೂರ್ವದಲ್ಲಿ ಅನಂತಪುರ, ಕರ್ನೂಲುಗಳ ವರೆಗೂ ಕನ್ನಡ ಭಾಷೆ ಪ್ರಚಾರದಲ್ಲಿತ್ತು ಎಂಬುದಕ್ಕೆ ಸೂಚನೆಗಳು ದೊರಕುತ್ತವೆ. ಕನ್ನಾಡು, ಕನ್ನಡ ನಾಡು, ಕರ್ಣಾಟಕ ಎಂಬ ಹೆಸರುಗಳಿಂದ ಪ್ರಖ್ಯಾತವಾಗಿದ್ದ ಈ ನಾಡಿನ ಭಾಗಗಳು ಪ್ರಾಚೀನ ಕಾಲದಲ್ಲಿ ಗಂಗವಾಡಿ, ನೊಳಂಬವಾಡಿ, ಕುಂತಳ, ಎಡೆನಾಡು, ತೊರೆನಾಡು, ಮರುಕರೆ ವಿಷಯ ಇತ್ಯಾದಿ ನೂರಾರು ವಿಭಾಗಗಳಾಗಿ ವಿಂಗಡವಾಗಿತ್ತಲ್ಲದೆ, ಐತಿಹಾಸಿಕ ಕಾರಣಗಳಿಂದಾಗಿ ಹಲವು ರಾಜವಂಶಗಳ ಕಕ್ಷೆಯೊಳಗೆ ಹಂಚಿಹೋಗುತ್ತಿತ್ತು.

19ನೆಯ ಶತಮಾನದಲ್ಲಿ ಮೈಸೂರು ಸಂಸ್ಥಾನ ಮತ್ತು ಕೊಡಗು ರಾಜ್ಯಗಳು ಮಾತ್ರ ಪೂರ್ಣ ಕನ್ನಡ ಪ್ರದೇಶವಾಗಿದ್ದು, ಕನ್ನಡನಾಡಿನ ಹೆಚ್ಚಿನ ಭಾಗಗಳು ಮದರಾಸು ಪ್ರಾಂತ್ಯ, ಮುಂಬಯಿ ಪ್ರಾಂತ್ಯ ಮತ್ತು ಹೈದರಾಬಾದು ಸಂಸ್ಥಾನಗಳಲ್ಲಿ ಸೇರಿಹೋಗಿದ್ದುವು. ಕನ್ನಡದ ನೆಲವೆಲ್ಲ ಒಟ್ಟುಗೂಡಿ ವಿಸ್ತೃತ ರಾಜ್ಯ ಉದಯವಾದದ್ದು 1956ರ ನವೆಂಬರ್ 1ರಂದು. ಅಂದು ಭಾರತ ಸರ್ಕಾರದ ರಾಜ್ಯ ಪುನರ್ಘಟನೆಯ ಅಧಿನಿಯಮದ ಪ್ರಕಾರ 1956ಕ್ಕೆ ಹಿಂದೆ ಇದ್ದ, ಹಳೆಯ ಮೈಸೂರು ಸಂಸ್ಥಾನದ ಎಲ್ಲ ಜಿಲ್ಲೆಗಳು, ಈ ಹಿಂದೆಯೇ 1953ರಲ್ಲಿ ಆಂಧ್ರ ರಾಜ್ಯ ನಿರ್ಮಾಣ ಶಾಸನದನ್ವಯ ಮದರಾಸ್ ರಾಜ್ಯದಿಂದ ಮೈಸೂರು ರಾಜ್ಯಕ್ಕೆ ಸೇರಿಸಿದ್ದ ಬಳ್ಳಾರಿ ಜಿಲ್ಲೆ, ಮುಂಬಯಿ ರಾಜ್ಯದಲ್ಲಿದ್ದ ಧಾರವಾಡ, ಉತ್ತರ ಕನ್ನಡ, ಬೆಳಗಾಂವಿ (ಚಂದಗಡ ತಾಲ್ಲೂಕನ್ನು ಬಿಟ್ಟು) ಮತ್ತು ಬಿಜಾಪುರ ಜಿಲ್ಲೆಗಳು, ಹೈದರಾಬಾದ್ ಸಂಸ್ಥಾನದಲ್ಲಿದ್ದ ಗುಲ್ಬರ್ಗ (ಕೋಡಂಗಲ್ ಮತ್ತು ತಾಂಡೂರು ತಾಲ್ಲೂಕುಗಳನ್ನು ಬಿಟ್ಟು), ರಾಯಚೂರು (ಆಲಂಪುರ ಮತ್ತು ಗದ್ವಾಲ ತಾಲ್ಲೂಕುಗಳು ವಿನಾ), ಬೀದರ್ (ಬೀದರ್, ಹುಮ್ನಾಬಾದ, ಭಾಲ್ಕಿ ಮತ್ತು ಔರಾದ ತಾಲ್ಲೂಕುಗಳು ಮಾತ್ರ) ಈ ಜಿಲ್ಲೆಗಳು, ಮದರಾಸು ಪ್ರಾಂತ್ಯದಲ್ಲಿದ ದಕ್ಷಿಣ ಕನ್ನಡ ಜಿಲ್ಲೆ ಕಾಸರಗೋಡು ತಾಲ್ಲೂಕು ಮತ್ತು ಅಮೀನ್‌ದೀವಿ ದ್ವೀಪಗಳ ವಿನಾ ಮತ್ತು ಕೊಯಮತ್ತೂರು ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕು ಹಾಗೂ ಹಿಂದಿನ ಕೊಡಗು ಸಂಸ್ಥಾನ ಈ ಭಾಗಗಳು ಸೇರಿದ ವಿಶಾಲ ಕರ್ನಾಟಕ ಮೈಸೂರು ರಾಜ್ಯ ಎಂಬ ಹೆಸರಿನಿಂದ ರಚಿತವಾಯಿತು. ಹೀಗೆ ಉದಯವಾದ ಕನ್ನಡ ನಾಡು ಹದಿನಾರು ವರ್ಷಗಳ ಅನಂತರ 1973 ನವೆಂಬರ್ 1ರಂದು ಕರ್ನಾಟಕ ಎಂಬ ಅಭಿಧಾನವನ್ನು ಪಡೆಯಿತು.

ಕರ್ನಾಟಕ ರಾಜ್ಯದ ವಿಸ್ತೀರ್ಣ 1,91,791ಚ.ಕಿಮೀ. ಜನಸಂಖ್ಯೆ 5,27,33,958. ರಾಜ್ಯದಲ್ಲಿ ಪಟ್ಟಣಗಳೂ ಗ್ರಾಮಗಳೂ ಸೇರಿದಂತೆ ಒಟ್ಟು 27,066 ಜನವಸತಿ ಘಟಕಗಳಿವೆ. ಪಟ್ಟಣಗಳ ಸಂಖ್ಯೆ 209. ಇವುಗಳಲ್ಲಿ ಬೆಂಗಳೂರು, ಮೈಸೂರು ಮತ್ತು ಹುಬ್ಬಳ್ಳಿ, ಧಾರವಾಡ, ಮಂಗಳೂರು, ಬೆಳಗಾಂವಿ ಬೃಹನ್ನಗರಗಳು. ಲಕ್ಷಕ್ಕೂ ಮೀರಿದ ಜನಸಂಖ್ಯೆಯುಳ್ಳ ಇತರ ನಗರಗಳ ಸಂಖ್ಯೆ 124.50, ಸಾವಿರದಿಂದ ಲಕ್ಷದವರೆಗಿನ ಜನಸಂಖ್ಯೆಯುಳ್ಳ ನಗರಗಳು ಒಟ್ಟು 127.20, ಸಾವಿರದಿಂದ 50 ಸಾವಿರದವರೆಗೆ ಪ್ರಜಾಸಂಖ್ಯೆಯುಳ್ಳ 101 ಪಟ್ಟಣಗಳಿವೆ.

ಭಾರತದ ಒಟ್ಟು ವಿಸ್ತೀರ್ಣದಲ್ಲಿ ಕರ್ನಾಟಕ ರಾಜ್ಯ (32,80,433) ಶೇ.5.85 ವಿಸ್ತೀರ್ಣವುಳ್ಳದ್ದೂ. ಭಾರತದ 28 ರಾಜ್ಯಗಳು ಮತ್ತು ಏಳು ಕೇಂದ್ರಾಡಳಿತ ಪ್ರದೇಶಗಳಿಗೆ ಹೋಲಿಸಿದರೆ ವಿಸ್ತೀರ್ಣ ಹಾಗೂ ಜನಸಂಖ್ಯೆಯಲ್ಲಿ ಕರ್ನಾಟಕ ಒಂಬತ್ತನೆಯ ಸ್ಥಾನವನ್ನು ಪಡೆದಿದೆ.

ಆಡಳಿತ ಉದ್ದೇಶಗಳಿಗಾಗಿ ರಾಜ್ಯವನ್ನು ನಾಲ್ಕು ಕಂದಾಯ ವಿಭಾಗಗಳಾಗಿಯೂ 27 ಜಿಲ್ಲೆಗಳಾಗಿಯೂ ವಿಂಗಡಿಸಲಾಗಿದೆ. ಈ ಜಿಲ್ಲೆಗಳಲ್ಲಿ ಒಟ್ಟು 175 ತಾಲ್ಲೂಕುಗಳಿವೆ. ರಾಜ್ಯದ ರಾಜಧಾನಿ ಬೆಂಗಳೂರು. ವಿಭಾಗಗಳು ಜಿಲ್ಲೆಗಳು, ಅವುಗಳಲ್ಲಿರುವ ತಾಲ್ಲೂಕುಗಳ ಸಂಖ್ಯೆ, ವಿಸ್ತೀರ್ಣ ಮತ್ತು ಜನಸಂಖ್ಯೆ ಇವುಗಳ ವಿವರಗಳನ್ನು 457-58ನೆಯ ಪುಟ ಸಂಖ್ಯೆಯಿಂದ ತಿಳಿಯಬಹುದು. *

**ಕರ್ನಾಟಕ (ಪದವ್ಯುತ್ಪತ್ತಿ) :** ಕರ್ನಾಟಕ ಮತ್ತು ಕನ್ನಡ ಶಬ್ದಗಳು ದೇಶ, ಭಾಷೆ, ಜನ ಮತ್ತು ಕುಲಗಳನ್ನು ನಿರ್ದೇಶಿಸುತ್ತವೆ. ಕವಿರಾಜಮಾರ್ಗದಲ್ಲಿಯೂ ಆಂಡಯ್ಯನ ಕಬ್ಬಿಗರಕಾವದಲ್ಲಿಯೂ ಕನ್ನಡ ದೇಶವಾಚಕವಾಗಿದೆ. ಚೆನ್ನಬಸವೇಶ್ವರ ಮತ್ತು ನಿಜಗುಣಶಿವಯೋಗಿಗಳ ಉಲ್ಲೇಖಗಳಲ್ಲಿ ಅದು ಕುಲವಾಚಕವಾಗಿ ಬಂದಿರುವಂತೆ ತೋರುತ್ತದೆ. ಮುಖ್ಯವಾಗಿ ಆ ಶಬ್ದಗಳು ದೇಶ ಮತ್ತು ಭಾಷಾವಾಚಕಗಳಾಗಿಯೇ ಪ್ರಯೋಗವಾಗುತ್ತವೆ. ಈ ಲೇಖನದಲ್ಲಿ ಕರ್ನಾಟಕ ಶಬ್ದದ ವ್ಯುತ್ಪತ್ತಿ ಅರ್ಥವ್ಯಾಪ್ತಿಯನ್ನು ಕುರಿತು ವಿವೇಚಿಸಲಾಗಿದೆ.

ಕರ್ನಾಟಕ ಶಬ್ದದ ಪೂರ್ವಪ್ರಯೋಗಗಳು ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲಿ ಅಲ್ಲಲ್ಲಿ ಕಂಡುಬರುತ್ತದೆ. ಸಂಸ್ಕೃತ ಮಹಾಭಾರತದಲ್ಲಿ (ಕ್ರಿ.ಪೂ.3ನೆಯ) ಶತಮಾನ ಜನಪದಗಳನ್ನು ಕುರಿತು ಹೇಳುವಾಗ ಸಭಾಪರ್ವದಲ್ಲಿ ಕರ್ಣಾಟಾಃ ಎಂದೂ (78-98) ಭೀಷ್ಮಪರ್ವದಲ್ಲಿ ಕರ್ಣಾಟಕಾಃ ಎಂದೂ (9-50) ಎರಡು ಮಾತುಗಳು ಬಂದಿವೆ. ಶೂದ್ರಕ ಕವಿಯ (ಸು.400) ಮೃಚ್ಛಕಟಿಕ ನಾಟಕದ ಒಂದು ಸಂವಾದದಲ್ಲಿ, ವರಾಹಮಿಹಿರನ (ಸು.6ನೆಯ ಶತಮಾನದ ಆದಿಭಾಗ) ಬೃಹತ್ಸಂಹಿತೆಯಲ್ಲಿ, ಮಾರ್ಕಂಡೇಯಪುರಾಣ (ಸು.8ನೆಯ ಶತಮಾನ) ಮತ್ತು ಸೋಮದೇವನ ಕಥಾಸರಿತ್ಸಾಗರಗಳಲ್ಲಿ ಕರ್ಣಾಟ ಶಬ್ದವನ್ನು ಕಾಣಬಹುದು. ಗುಣಾಢ್ಯನ ಬೃಹತ್ಕಥೆಯಿಂದ ಆ ಪದವನ್ನು ಸೋಮದೇವ ಎತ್ತಿಕೊಂಡಿದ್ದ ಪಕ್ಷಕ್ಕೆ ಆ ಶಬ್ದದ ಬಳಕೆ 1-2ನೆಯ ಶತಮಾನದಷ್ಟು ಹಿಂದಕ್ಕೆ ಹೋಗುತ್ತದೆನ್ನಬಹುದು. ಈಚೆಗೆ ರಾಜಶೇಖರನ (10ನೆಯ ಶತಮಾನ) ಕಾವ್ಯಮೀಮಾಂಸಾ ಗ್ರಂಥದಲ್ಲಿ ಕನ್ನಡಿಗರ ಪಠನರೀತಿಯನ್ನು ಕುರಿತು ಹೇಳುವಾಗ ರಸಃ ಕೋಪ್ಯಸ್ತು ಕಾಪ್ಯಸ್ತು ರೀತಿಃ ಸಗರ್ವಂ ಸರ್ವ ಕರ್ಣಾಟಕಾಃ ಟಂಕಾರೋತ್ತರಪಾಠಿನಃ ಎಂಬ ಸ್ವಾರಸ್ಯಕರವಾದ ಮಾತು ಬಂದಿದೆ.

ಶಿಲಪ್ಪದಿಗಾರಂ ಎಂಬ ಪ್ರಾಚೀನ ತಮಿಳು ಸಾಹಿತ್ಯ ಕೃತಿಯಲ್ಲಿ (ಸು.2-5ನೆಯ ಶತಮಾನ) ಕರುನಾಡರ್ ಎಂಬ ಶಬ್ದವೂ ಪಾಂಡ್ಯ ದೊರೆ ಶಡೈಯನ್ ಪರಾಂತಕನ ವೇಳ್ವಿಕುಡಿ ತಾಮ್ರಶಾಸನದಲ್ಲಿ (ಸು.770) ಕರುನಾಡಗನ್ ಎಂಬ ಶಬ್ದವೂ ದೊರೆಯುತ್ತವೆ. ಹಾಗೆಯೇ ಕನ್ನಾಡಗರುಂ, ಕನ್ನಾಟ, ಕನ್ನಾಟಕ ಎಂಬ ರೂಪಗಳು ತಮಿಳು ಶಾಸನಗಳಲ್ಲಿ ಕಂಡುಬಂದಿವೆ. ಅಪಭ್ರಂಶ ಪ್ರಾಕೃತದಲ್ಲಿ ಕನ್ನಾಡ, ಪಾಲಿಯಲ್ಲಿ ಕರ್ನಾಟ, ಗುಜರಾತಿ ಮೊದಲಾದವುಗಳಲ್ಲಿ ಕನಡಿ, ಮರಾಠಿಯಲ್ಲಿ ಕಾನಡಿ ಎಂಬ ರೂಪಗಳುಂಟು. ಬಿ.ಎ. ಸಾಲೆತೊರೆ ಅವರ ಪ್ರಕಾರ ಪಾಶ್ಚಾತ್ಯರು ಕನ್ನಡ ಭಾಷೆಯ ಹೆಸರನ್ನು 1516ರಲ್ಲಿ Canari, 1520ರಲ್ಲಿ Canarim, 1552ರಲ್ಲಿ Canarij, 1615ರಲ್ಲಿ Canarin, 1654ರಲ್ಲಿ Canary ಎಂದೂ ನಡುನಡುವೆ ಎಷ್ಟೋ ಬಾರಿ Carnatic, Carnate, Karnat ಎಂದೂ ಮುಂತಾಗಿ ಬರೆಯುತ್ತಿದ್ದರೆಂದೂ ತಿಳಿಯುತ್ತದೆ.

ಕನ್ನಡ ಭಾಷೆಯಲ್ಲಿಯೇ ಬಹುಸಂಖ್ಯೆಯ ಪ್ರಾಚೀನ ಶಾಸನಗಳಲ್ಲಿ ಹಾಗೂ ಗ್ರಂಥಗಳಲ್ಲಿ ಕರ್ನಾಟಕ ಮತ್ತು ಸದೃಶ ಶಬ್ದಗಳಾದ ಕರ್ನಾಟ, ಕರ್ಣಾಟಕ, ಕರ್ಣಾಟ, ಕನ್ನಡ ಮುಂತಾದವು ಬಳಕೆಯಾಗಿವೆ. ಉತ್ತರ ಕರ್ನಾಟಕದಲ್ಲಿ ವ್ಯವಹಾರದಲ್ಲಿ ಕನ್ನಡು ಎಂಬ ಮಾತುಂಟು. ಸುಮಾರು 7-8ನೆಯ ಶತಮಾನದಿಂದ ಶಾಸನಗಳಲ್ಲಿ ಈ ಶಬ್ದಗಳ ರೂಪಗಳು ಬಳಕೆಯಾಗಿರುವಂತೆ ತೋರುತ್ತವೆ. 90ಕ್ಕೆ ಮೇಲ್ಪಟ್ಟ ಅಂಥ ಶಾಸನಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಇವುಗಳ ಆಧಾರದಿಂದ ಕನ್ನಡನಾಡು ಬಹು ಹಿಂದಿನ ಕಾಲದಿಂದಲೂ ಕರ್ಣಾಟ, ಕರುನಾಡು ಮುಂತಾದ ಹೆಸರುಗಳಲ್ಲಿ ಅಸ್ತಿತ್ವದಲ್ಲಿದೆಯೆಂಬುದಾಗಿ ತಿಳಿಯುತ್ತದೆ.

ಕಾಲ್ಡ್‌ವೆಲ್ ಅವರು ಕರ್ಣಾಟಕ ಎಂಬ ಪದ ಈಚೆಗೆ ವಿಪರೀತವಾದ ಅರ್ಥವನ್ನು ಪಡೆಯಿತೆಂದು ಹೇಳಿದ್ದಾರೆ. ಈ ಮೊದಲು


ಕ ರ್ನಾ ಟ ಕ
ಮಹಾರಾಷ್ಟ್ರ
ಆಂಧ್ರ ಪ್ರದೇಶ
ತಮಿಳುನಾಡು
ಕೇರಳ
ಅರಬ್ಬೀ ಸಮುದ್ರ
ಗೋವ
ಔರಾದ
ಭಾಲ್ಕಿ
ಬೀದರ್
ಬಸವಕಲ್ಯಾಣ
ಹುಮನಾಬಾದ್
ಆಳಂದ
ಚಿಂಚೋಳಿ
ಅಫಜಲಪುರ
ಗುಲ್ಬರ್ಗ
ಇಂಡಿ
ಚಿತ್ತಾಪುರ
ಸೇಡಂ
ಸಿಂಧಗಿ
ಜೇವರ್ಗಿ
ಯಾದಗಿರಿ
ಅಥಣಿ
ಬಿಜಾಪುರ
ಶಹಾಪುರ
ಜಮಖಂಡಿ
ಬಸವನ ಬಾಗೇವಾಡಿ
ಸೊರಾಪುರ
ಚಿಕ್ಕೋಡಿ
ರಾಯಬಾಗ
ಬೀಳಗಿ
ಮುದ್ದೇಬಿಹಾಳ
ದೇವದುರ್ಗ
ಮುಧೋಳ
ಲಿಂಗಸುಗೂರು
ರಾಯಚೂರು
ಹುಕ್ಕೇರಿ
ಗೋಕಾಕ
ಬಾಗಲಕೋಟೆ
ಹುನಗುಂದ
ಮಾನ್ವಿ
ರಾಮದುರ್ಗ
ಬಾದಾಮಿ
ಬೆಳಗಾಂವಿ
ಸವದತ್ತಿ
ಕುಷ್ಟಗಿ
ಸಿಂಧನೂರು
ಬೈಲಹೊಂಗಲ
ನರಗುಂದ
ರೋಣ
ಖಾನಾಪುರ
ನವಲಗುಂದ
ಯಲಬುರ್ಗ
ಗಂಗಾವತಿ
ಸಿರುಗುಪ್ಪ
ಧಾರವಾಡ
ಗದಗ
ಕೊಪ್ಪಳ
ಹಳಿಯಾಳ
ಹುಬ್ಬಳ್ಳಿ
ಕುಂದಗೋಳ
ಮುಂಡರಗಿ
ಹೊಸಪೇಟೆ
ಬಳ್ಳಾರಿ
ಜೋಯಿಡ
ಕಲಘಟಗಿ
ಶಿರಹಟ್ಟಿ
ಹಗರಿಬೊಮ್ಮನಹಳ್ಳಿ
ಸಂಡೂರು
ಯಲ್ಲಾಪುರ
ಶಿಗ್ಗಾಂವಿ
ಸವಣೂರ
ಕಡಗಲಿ
ಉತ್ತರ ಕನ್ನಡ
ಕಾರವಾರ
ಮುಂಡಗೋಡ
ಹಾವೇರಿ
ಹರಪನಹಳ್ಳಿ
ಕೂಡ್ಲಗಿ
ಮೊಳಕಾಲ್ಮೂರು
ಬ್ಯಾಡಗಿ
ಹಾನಗಲ್
ಅಂಕೋಲ
ಶಿರಸಿ
ರಾಣೆಬೆನ್ನೂರು
ಹರಿಹರ
ಜಗಳೂರು
ಕುಮಟ
ಹಿರೇಕೆರೂರು
ಸೊರಬ
ದಾವಣಗೆರೆ
ಸಿದ್ದಾಪುರ
ಚಿತ್ರದುರ್ಗ
ಚಳ್ಳಕೆರೆ
ಪಾವಗಡ
ಶಿಕಾರಿಪುರ
ಹೊನ್ನಾವರ
ಹೊನ್ನಾಳಿ
ಚನ್ನಗಿರಿ
ಸಾಗರ
ಹೊಳಲ್ಕೆರೆ
ಹಿರಿಯೂರು
ಶಿವಮೊಗ್ಗ
ಭಟ್ಕಳ
ಭದ್ರಾವತಿ
ಬಾಗೇಪಲ್ಲಿ
ಹೊಸನಗರ
ಹೊಸದುರ್ಗ
ಶಿರಾ
ಮಧುಗಿರಿ
ಗುಡಿಬಂಡೆ
ತೀರ್ಥಹಳ್ಳಿ
ನರಸಿಂಹರಾಜಪುರ
ತರೀಕೆರೆ
ಗೌರಿಬಿದನೂರು
ಶಿಡ್ಲಘಟ್ಟ
ಕುಂದಾಪುರ
ಚಿಕ್ಕನಾಯಕನಹಳ್ಳಿ
ಕೊರಟಗೆರೆ
ಚಿಕ್ಕಬಳ್ಳಾಪುರ
ಚಿಂತಾಮಣಿ
ಕಡೂರು
ಕೊಪ್ಪ
ಶ್ರೀನಿವಾಸಪುರ
ಉಡುಪಿ
ಶೃಂಗೇರಿ
ಚಿಕ್ಕಮಗಳೂರು
ಅರಸೀಕೆರೆ
ತಿಪಟೂರು
ಗುಬ್ಬಿ
ತುಮಕೂರು
ದೊಡ್ಡಬಳ್ಳಾಪುರ
ದೇವನಹಳ್ಳಿ
ಕಾರ್ಕಳ
ಮೂಡಿಗೆರೆ
ಬೇಲೂರು
ನೆಲಮಂಗಲ
ಹೊಸಕೋಟೆ
ಕೋಲಾರ
ಮುಳಬಾಗಿಲು
ದಕ್ಷಿಣಕನ್ನಡ
ಹಾಸನ
ತುರುವೇಕೆರೆ
ಮಂಗಳೂರು
ಬೆಳ್ತಂಗಡಿ
ಆಲೂರು
ಚನ್ನರಾಯಪಟ್ಟಣ
ಕುಣಿಗಲು
ಮಾಗಡಿ
ಬೆಂಗಳೂರು
ಮಾಲೂರು
ಬಂಗಾರಪೇಟೆ
ಬಂಟ್ವಾಳ
ಪುತ್ತೂರು
ಸಕಲೇಶಪುರ
ಹೊಳೆನರಸೀಪುರ
ನಾಗಮಂಗಲ
ರಾಮನಗರ
ಬೆಂಗಳೂರು (ನಗರ)
ಅರಕಲಗೂಡು
ಕೃಷ್ಣರಾಜಪೇಟೆ
ಮಂಡ್ಯ
ಚನ್ನಪಟ್ಟಣ
ಆನೇಕಲ್ಲು
ಕನಕಪುರ
ಸುಳ್ಯ
ಸೋಮವಾರಪೇಟೆ
ಕೃಷ್ಣರಾಜನಗರ
ಪಾಂಡವಪುರ
ಮದ್ದೂರು
ಬೆಂಗಳೂರು (ಗ್ರಾಮಾಂತರ)
ಮಡಿಕೇರಿ
ಪಿರಿಯಾಪಟ್ಟಣ
ಶ್ರೀರಂಗಪಟ್ಟಣ
ಮಳವಳ್ಳಿ
ತಿರುಮಕೂಡಲು ನರಸೀಪುರ
ಕೊಡಗು
ಹುಣಸೂರು
ಮೈಸೂರು
ಕೊಳ್ಳೇಗಾಲ
ವಿರಾಜಪೇಟೆ
ಹೆಗ್ಗಡದೇವನಕೋಟೆ
ನಂಜನಗೂಡು
ಯಳಂದೂರು
ಚಾಮರಾಜನಗರ
ಗುಂಡ್ಲುಪೇಟೆ
ಆಡಳಿತ ವಿಭಾಗಗಳು
ಜಿಲ್ಲಾ ಗಡಿ
ತಾಲ್ಲೂಕು ಗಡಿ
ರಾಜಧಾನಿ
ವಿಭಾಗಕೇಂದ್ರ
ಜಿಲ್ಲಾಕೇಂದ್ರ
ತಾಲ್ಲೂಕು ಕೇಂದ್ರ
0 25 50 75
ಕಿಲೋಮೀಟರುಗಳು

ವಿಸ್ತೀರ್ಣ ಮತ್ತು ಜನಸಂಖ್ಯೆ

| ಕ್ರ. ಸಂ. | ಜಿಲ್ಲೆಯ ಹೆಸರು | ವಿಸ್ತೀರ್ಣ ಚ.ಕಿಮೀ. | ಜನಸಂಖ್ಯೆ (2001) ಒಟ್ಟು | ಗಂಡಸರು | ಹೆಂಗಸರು | ಗ್ರಾಮೀಣ | ನಗರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಬೆಂಗಳೂರು | 2,190 | 6,523,110 | 3,422,797 | 3,100,313 | 777,693 | 5,745,417 |
| 2 | ಬೆಂಗಳೂರು ಗ್ರಾಮಾಂತರ | 5,815 | 1,877,416 | 961,335 | 961,081 | 1,470,542 | 4,06,874 |
| 3 | ಚಿತ್ರದುರ್ಗ | 8,388 | 1,510,227 | 772,64 | 737, 578 | 1,236, 148 | 2,74,079 |
| 4 | ದಾವಣಗೆರೆ | 6,018 | 1,789,693 | 917,320 | 872,373 | 1,247,443 | 542,250 |
| 5 | ಕೋಲಾರ | 8,223 | 2,523,406 | 1,281,153 | 1,242,253 | 1,898,771 | 624,635 |
| 6 | ಶಿವಮೊಗ್ಗ | 8,465 | 1,639,595 | 829,365 | 810,230 | 1,069,132 | 570,463 |
| 7 | ತುಮಕೂರು | 10,598 | 2,579,516 | 1,311,941 | 1,267,575 | 2,072,836 | 506,680 |
| **I** | ಬೆಂಗಳೂರು ವಿಭಾಗ | **49,697** | **18,442,963** | **9,496,560** | **8,946,403** | **9,772,565** | **8,670,398** |
| 8 | ಬೆಳಗಾಂವಿ | 13,415 | 4,207,264 | 2,147,746 | 2,059,518 | 3,194,848 | 1,012,416 |
| 9 | ಬಿಜಾಪುರ | 10,475 | 1,808,863 | 928,550 | 880,313 | 1,413,290 | 395,573 |
| 10 | ಬಾಗಲಕೋಟೆ | 6,594 | 1,652,232 | 835,684 | 816,548 | 1,1 73,058 | 479,174 |
| 11 | ಧಾರವಾಡ | 4,230 | 1,603,794 | 823,415 | 780,379 | 722.068 | 881,726 |
| 12 | ಗದಗ | 4,657 | 971,955 | 493,795 | 478,160 | 629,994 | 341,961 |
| 13 | ಹಾವೇರಿ | 4,851 | 1,437,860 | 740,307 | 697,553 | 1,138,954 | 298,906 |
| 14 | ಉತ್ತರ ಕನ್ನಡ | 10,291 | 1,353,299 | 687,026 | 66,273 | 965,345 | 38 7,954 |
| **II** | ಬೆಳಗಾಂವಿ ವಿಭಾಗ | **54,513** | **13,035,267** | **656,523** | **6,378,744** | **9,237,557** | **3797,710** |
| 15 | ಬಳ್ಳಾರಿ | 8,419 | 2,025,242 | 1,028,481 | 996,761 | 1,319,239 | 706,003 |
| 16 | ಬೀದರ್ | 5,448 | 1,501,374 | 770,679 | 730,695 | 1,156,920 | 344,454 |
| 17 | ಗುಲ್ಬರ್ಗ | 16,224 | 3,124,858 | 1,591,379 | 1,533,479 | 2,276,935 | 847,923 |
| 18 | ರಾಯಚೂರು | 5,559 | 1,648,212 | 832,352 | 815,860 | 1,229,203 | 419,009 |
| 19 | ಕೊಪ್ಪಳ | 8,458 | 1,193,496 | 602,026 | 591,470 | 995,224 | 198,272 |
| **III** | ಗುಲ್ಬರ್ಗ ವಿಭಾಗ | **44,108** | **9,493,182** | **4,824,917** | **4,668,265** | **6,977,521** | **2,515,661** |
| 20 | ಚಿಕ್ಕಮಗಳೂರು | 7,201 | 1,139,104 | 5734,275 | 564,275 | 916,740 | 222,364 |
| 21 | ದಕ್ಷಿಣ ಕನ್ನಡ | 4,843 | 1.896,403 | 937,651 | 958,752 | 1,167,958 | 728,445 |
| 22 | ಉಡುಪಿ | 3,598 | 1,109,494 | 521,541 | 587,953 | 903,173 | 206,321 |
| 23 | ಹಾಸನ | 6,814 | 1,721,319 | 858,623 | 862,696 | 1,416,579 | 304,740 |
| 24 | ಕೊಡಗು | 4,102 | 545,322 | 273,210 | 272,112 | 470,099 | 75,223 |
| 25 | ಮಂಡ್ಯ | 4,961 | 1,761,718 | 887,307 | 874,411 | 1,479,534 | 282,184 |
| 26 | ಮೈಸೂರು | 6,269 | 2,624,911 | 1,335,841 | 1,289,070 | 1,656,310 | 968,601 |
| 27 | ಚಾಮರಾಜನಗರ | 5,685 | 964,275 | 489,895 | 474,380 | 816,064 | 148,211 |
| **IV** | ಮೈಸೂರು ವಿಭಾಗ | **43,473** | **11,762,546** | **5,878,343** | **5,884,203** | **8,826,457** | **2,936,089** |
|  | ರಾಜ್ಯ | **191,791** | **52,733,958** | **26,856,343** | **25,877,615** | **34,814,100** | **17,919,858** |

ವಿಸ್ತೀರ್ಣ ಮತ್ತು ಜನಸಂಖ್ಯೆ

| ಕ್ರ. ಸಂ. | ವಿಭಾಗಗಳು ಮತ್ತು ಜಿಲ್ಲೆಗಳು | ತಾಲ್ಲೂಕುಗಳು | ಹೋಬಳಿಗಳು | ಗ್ರಾಮಗಳು (2001ರ ಜನಗಣತಿ) | |
|---|---|---|---|---|---|
| | | | | ಜನವಸತಿ ಇರುವ | ಜನವಸತಿ ಇಲ್ಲದ |
| 1 | 2 | 3 | 4 | 5 | 6 |
| 1 | ಬೆಂಗಳೂರು | 3 | 17 | 681 | 47 |
| 2 | ಬೆಂಗಳೂರು ಗ್ರಾಮಾಂತರ | 8 | 35 | 1,713 | 170 |
| 3 | ಚಿತ್ರದುರ್ಗ | 6 | 22 | 932 | 127 |
| 4 | ದಾವಣಗೆರೆ | 6 | 24 | 786 | 132 |
| 5 | ಕೋಲಾರ | 11 | 53 | 2,889 | 432 |
| 6 | ಶಿವಮೊಗ್ಗ | 7 | 40 | 1,430 | 103 |
| 7 | ತುಮಕೂರು | 10 | 50 | 2,537 | 181 |
| **I** | ಬೆಂಗಳೂರು ವಿಭಾಗ | **51** | **241** | **10,968** | **1,192** |
| 8 | ಬೆಳಗಾಂವಿ | 10 | 35 | 1,138 | 26 |
| 9 | ಬಿಜಾಪುರ | 5 | 18 | 639 | 4 |
| 10 | ಬಾಗಲಕೋಟೆ | 6 | 18 | 608 | 2 |
| 11 | ಧಾರವಾಡ | 5 | 14 | 362 | 10 |
| 12 | ಗದಗ | 5 | 11 | 307 | 5 |
| 13 | ಹಾವೇರಿ | 7 | 19 | 675 | 7 |
| 14 | ಉತ್ತರ ಕನ್ನಡ | 11 | 35 | 1,264 | 53 |
| **II** | ಬೆಳಗಾಂವಿ ವಿಭಾಗ | **49** | **150** | **4,993** | **107** |
| 15 | ಬಳ್ಳಾರಿ | 7 | 27 | 517 | 25 |
| 16 | ಬೀದರ್ | 5 | 30 | 587 | 22 |
| 17 | ಗುಲ್ಬರ್ಗ | 10 | 48 | 1,295 | 83 |
| 18 | ರಾಯಚೂರು | 5 | 37 | 808 | 70 |
| 19 | ಕೊಪ್ಪಳ | 4 | 20 | 588 | 40 |
| **III** | ಗುಲ್ಬರ್ಗ ವಿಭಾಗ | **31** | **162** | **3,795** | **240** |
| 20 | ಚಿಕ್ಕಮಗಳೂರು | 7 | 32 | 1,021 | 92 |
| 21 | ದಕ್ಷಿಣ ಕನ್ನಡ | 5 | 17 | 371 | - |
| 22 | ಉಡುಪಿ | 3 | 9 | 244 | - |
| 23 | ಹಾಸನ | 8 | 38 | 2,369 | 183 |
| 24 | ಕೊಡಗು | 3 | 16 | 291 | 5 |
| 25 | ಮಂಡ್ಯ | 7 | 31 | 1,365 | 113 |
| 26 | ಮೈಸೂರು | 7 | 33 | 1,203 | 129 |
| 27 | ಚಾಮರಾಜನಗರ | 4 | 16 | 446 | 66 |
| **IV** | ಮೈಸೂರು ವಿಭಾಗ | **44** | **192** | **7,310** | **588** |
| | ರಾಜ್ಯ | **175** | **745** | **27,066** | **2,127** |

ಕರ್ನಾಟಕ ಎಂಬುದು ದಕ್ಷಿಣ ಹಿಂದುಸ್ಥಾನದ ಎತ್ತರವಾದ ಪ್ರಾಂತ್ಯಕ್ಕೆ ಕೊಟ್ಟ ಹೆಸರಾಗಿತ್ತು. ಈಚೆಗೆ ವಿದೇಶೀಯರ ಕೈಯಲ್ಲಿ ಅದಕ್ಕೆ ವಿಪರೀತವಾದ ಅರ್ಥ ಬಂತು. ಮಹಮ್ಮದೀಯರು ದಕ್ಷಿಣ ಭಾರತಕ್ಕೆ ಬಂದ ಮೊದಲಲ್ಲಿ ತಮಗೆ ಮೊದಲು ಪರಿಚಿತವಾದ ಮೈಸೂರು ಮತ್ತು ತೆಲಂಗಾಣದ ಭಾಗಗಳನ್ನೊಳಗೊಂಡ ಘಟ್ಟಗಳ ಮೇಲಿನ ಪ್ರದೇಶವನ್ನು ಕರ್ನಾಟಕ ದೇಶವೆಂದು ಕರೆದರು. ಕಾಲಕ್ರಮದಲ್ಲಿ ಅವರು ಆ ಹೆಸರನ್ನು ಘಟ್ಟಗಳ ಕೆಳಗಿನ ಪ್ರದೇಶಕ್ಕೂ ಕೊಟ್ಟರು. ಅನಂತರದಲ್ಲಿ ಇಂಗ್ಲಿಷರು ವಾಸ್ತವವಾಗಿ ಆ ಹೆಸರಿಗೆ ಏನೂ ಸಂಬಂಧವೇ ಇಲ್ಲದ ಘಟ್ಟದ ಕೆಳಗಿನ ಪ್ರದೇಶಕ್ಕೆ ಮಾತ್ರ ಹೆಸರನ್ನು ಸೀಮಿತಗೊಳಿಸಿದರು. ಈ ಕಾರಣವಾಗಿ ನಿಜವಾಗಿ ಕರ್ನಾಟಕ ಎಂಬ ಶಬ್ದ ಯಾವ ಪ್ರದೇಶವನ್ನು ಸೂಚಿಸಬೇಕಾಗಿತ್ತೋ ಅದು ಹೋಗಿ ಕರ್ನಾಟಿಕ್ ಎಂಬುದು ತಮಿಳು ದೇಶವನ್ನೂ ತೆಲುಗು ದೇಶದ ನೆಲ್ಲೂರು ಜಿಲ್ಲೆಯನ್ನೂ ಒಳಗೊಂಡ ಪೂರ್ವ ಸಮುದ್ರತೀರದಲ್ಲಿರುವ ಘಟ್ಟದ ಕೆಳಗಿನ ಪ್ರಾಂತ್ಯಕ್ಕೆ ಮಾತ್ರ ಅನ್ವಯಿಸುವಂತಾಯಿತು.

ಕವಿರಾಜಮಾರ್ಗದ ಉಲ್ಲೇಖದ ಪ್ರಕಾರ ಕನ್ನಡನಾಡು ಎಂಬುದು ದಕ್ಷಿಣದ ಕಾವೇರಿಯಿಂದ ಗೋದಾವರಿಯವರೆಗಿದ್ದ ನಾಡು. ನಂಜುಂಡ ಕವಿಯ (ಸು.1525) ರಾಮನಾಥ'ಚರಿತದಲ್ಲಿಯ ಉಲ್ಲೇಖವೂ ಈ ವಿಷಯವನ್ನು ಘೋಷಿಸುತ್ತದೆ. ಕವಿರಾಜಮಾರ್ಗಕರ್ತೃ ಹೇಳುವ ಪ್ರಕಾರ ಬಿಜಾಪುರ ಜಿಲ್ಲೆಯ ಪಟ್ಟದಕಲ್ಲು, ರಾಯಚೂರು ಜಿಲ್ಲೆಯ ಕೊಪ್ಪಳ, ಧಾರವಾಡ ಜಿಲ್ಲೆಯ ಲಕ್ಷ್ಮೇಶ್ವರ ಹಾಗೂ ಬೆಳಗಾಂವಿ ಜಿಲ್ಲೆಯ ಒಂಕುಂದ - ಇವುಗಳ ನಡುವೆಯಿದ್ದ ಪ್ರದೇಶ ಕನ್ನಡನಾಡಿನ ತಿರುಳು. ಶಾಸನಗಳು, ಸಾಹಿತ್ಯ, ಸ್ಥಳನಾಮಗಳು ಮೊದಲಾದವುಗಳ ಆಧಾರದ ಮೇಲೆ ಹಿಂದಿನ ಹೈದರಾಬಾದು ಸಂಸ್ಥಾನದ ಅತಿ ಪಡುವಲ ಸ್ಥಾನದಿಂದ ಹಿಡಿದು ಅತಿ ಮೂಡಲಸ್ಥಾನದ ವರೆಗಿನ ಪ್ರದೇಶವೂ ಹಿಂದಿನ ಮದರಾಸು ಪ್ರಾಂತ್ಯದ ವೆಂಗಿಮಂಡಲ ಮತ್ತು ಗೋದಾವರಿ-ಕೃಷ್ಣಾ ನದಿಗಳ ನೀರು ಹರಿಯುವ ಜಿಲ್ಲೆಗಳೂ ಹಿಂದಿನ ಮಹಾರಾಷ್ಟ್ರದ ಭಾಗಗಳೂ ಇನ್ನೂ ದಕ್ಷಿಣದಲ್ಲಿ ನೀಲಗಿರಿ, ಕೊಯಮತ್ತೂರು, ಸೇಲಂ ಜಿಲ್ಲೆಗಳೂ ಕನ್ನಡ ಭೂಮಿಯಾಗಿತ್ತೆಂದು ಕೆಲವು ಚರಿತ್ರಕಾರರು ಹೇಳಿದ್ದಾರೆ. ರಾಜಕೀಯ ಕಾರಣಗಳಿಂದಾಗಿ ಕಾಲಕಾಲಕ್ಕೆ ಕನ್ನಡನಾಡಿನ ಸೀಮಾರೇಖೆಗಳು ಸಂಕೋಚಗೊಂಡಿವೆ.

ಕರ್ನಾಟ(ಕ) ಎಂಬ ಪದದ ಸರಿಯಾದ ರೂಪ ಯಾವುದು, ಅರ್ಥವೇನು, ನಿಷ್ಪತ್ತಿ ಹೇಗೆ ಎಂಬ ವಿಷಯದಲ್ಲಿ ಚರಿತ್ರಕಾರರೂ ಸಾಹಿತ್ಯಜ್ಞರೂ ತುಂಬ ಜಿಜ್ಞಾಸೆ ಮಾಡಿರುವುದು ಕಾಣುತ್ತದೆ. ಆ ಪದದ ಸಂಬಂಧವಾಗಿಯೇ ಕನ್ನಡ ಪದವೂ ವಿಚಾರಕ್ಕೆ ಸೇರಿಕೊಂಡಿದೆ. ಕೆಲವು ಅಭಿಪ್ರಾಯಗಳನ್ನು ಇಲ್ಲಿ ಸಂಕ್ಷೇಪವಾಗಿ ಸೂಚಿಸಬಹುದು.

(ಅ) ಕರ್ನಾಟ(ಕ) ಎಂಬ ಪದಕ್ಕೆ ಸಂಸ್ಕೃತ ಮೂಲವಾಗಿ ನಿಷ್ಪತ್ತಿಯನ್ನು ಕೊಡುವ ಹಳೆಯ ಉಲ್ಲೇಖಗಳಲ್ಲಿ ಇವು ಪ್ರಸಿದ್ಧವಾಗಿವೆ. ಕರ್ಣೇಷು ಅಟತಿ ಪ್ರಭೂತ ಯಶಸ್ವಿನ ಏತದ್ದೇಶಸ್ಯ ರಾಜ್ಞೋ ಗುಣಾದಿಕೀರ್ತನೇನ ಸರ್ವೇಷಾಂ ಕರ್ಣೇಷು ಭ್ರಮತೀತಿ, ಕರ್ಣ+ಅಟ್+ಅಚ್ (ಯಾವ ದೇಶದ ರಾಜನ ಕೀರ್ತಿ ಎಲ್ಲರ ಕಿವಿಯಲ್ಲಿಯೂ ಮೊಳಗುತ್ತಿರುವುದೋ ಆ ದೇಶ). ಇದು ಶಬ್ದರತ್ನಾವಲಿಯಲ್ಲಿ ಸಿಗುವ ಆಧಾರ. ಕೇಶವವರ್ಣಿಯೆಂಬ (1356) ಜೈನ ಪಂಡಿತನ ಪ್ರಕಾರ ಭೇದನಾರ್ಥಕವಾದ ಕರ್ಣ ಧಾತುವಿನಿಂದ ಕರ್ಣಾಟಕ ಪದವಾಯಿತು. ದಿವ್ಯಭಾಷೆಯಿಂದ ಬೇರೆಯಾಗಿ ವ್ಯವಹಾರದಲ್ಲಿರುವ ಭಾಷೆಯೆಂದು ಆ ಪದದ ಅರ್ಥ. ವೆಂಕಟಾಧ್ವರಿಯ (ಸು.1700) ವಿಶ್ವಗುಣಾದರ್ಶದಲ್ಲಿ ಕರ್ಣಾಟದೇಶೋ ಯಃ ಪೂರ್ವಂ ಕರ್ಣದೇಶಮಭೂಷಯಾತ್ ಸ ಏಷ ಸಾಂಪ್ರತಂ ಪಶ್ಯ ಚಕ್ಷುಷೋರ್ಭೂಷಣಾಯತೇ ಎಂದೂ ಕರ್ಣಯೋಃ ಅಟತೀತಿ ಕರ್ಣಾಟಃ ಅಟ ಗತೌ ಇತಿ ಧಾತೋಃ ನಿಷ್ಪನ್ನಶ್ಶಬ್ದಃ ಎಂದೂ ನಿರೂಪಣೆಯಿದೆ. ಸ್ಕಾಂದಪುರಾಣದ ಪ್ರಕಾರ ಕರ್ಣಾಟನೆಂಬ ರಾಕ್ಷಸನಿಂದ ನಾಡಿಗೆ ಈ ಹೆಸರಾಯಿತಂತೆ.

ಕವಿಕಲ್ಪಿತಗಳೆಂದು ಹೇಳಿ ಈ ಅರ್ಥ ಮತ್ತು ನಿಷ್ಪತ್ತಿಗಳನ್ನು ರಾ.ನರಸಿಂಹಾಚಾರ್ ಮೊದಲಾದ ಮಹನೀಯರು ಗ್ರಾಹ್ಯ ಮಾಡಿಲ್ಲ. ರಾಜವಾಡೆಯವರು ಕರಣ+ನಟ-ಕರ್ಣಾಟ ಎಂದು ನಿಷ್ಪತ್ತಿ ಹೇಳಿದ್ದಾರೆ. ಮನು ತನ್ನ ಕಾಲದ ವ್ರಾತ್ಯಕ್ಷತ್ರಿಯರ ಪಂಗಡಗಳನ್ನು ನಟಶ್ಚ ಕರಣಶ್ಚೈವ ಎಂಬುದಾಗಿ ಎರಡು ಬಗೆಗಳನ್ನು ಕೂಡ ಹೇಳಿದ್ದಾನೆ ಎಂಬ ಆಧಾರವನ್ನು ಹಿಡಿದು ಕರಣ ಮತ್ತು ನಟರ ಸಮ್ಮಿಶ್ರ ಪಂಗಡವೇ ಕರ್ಣಾಟವೆಂದು ಗ್ರಹಿಸಿದ್ದಾರೆ. ಇದನ್ನು ವಿಮರ್ಶಿಸುತ್ತ ಶಂ.ಬಾ.ಜೋಶಿಯವರು ಬೇರೆ ಸ್ಮೃತಿಗಳಲ್ಲಿಯೂ ನಟರ ಉಲ್ಲೇಖಗಳನ್ನು ಗುರುತಿಸಿ ಮತ್ಸ್ಯಪುರಾಣದಲ್ಲಿ ಕರ್ಣ ಎಂದಿರುವ ಜನಪದ ವಾಚಕವನ್ನು ಕರಣ ಎಂಬುದರೊಡನೆ ಅಭಿನ್ನವಾಗಿ ಗ್ರಹಿಸಿ, ಕರಣ+ನಟ-ಕರ್ಣಾಟ, ಕರ್ಣಾಟ ಎಂದೋ ಕರ್ಣ+ನಟ-ಕರ್ಣಾಟ ಎಂದೋ ಆಗಬಹುದೆಂದು ಸೂಚಿಸಿ, ಆ ಶಬ್ದಗಳ ಮೂಲವನ್ನು ಮಾತ್ರ ದೇಶೀಯವೆಂದು, ಕನ್ನಡವೆಂದು ಹೇಳಿದ್ದಾರೆ. ಆದರೆ ಈ ಸಮೀಕರಣಗಳನ್ನು ಪುಷ್ಟೀಕರಿಸುವ ಬೇರೆ ಪ್ರಮಾಣಗಳಿಲ್ಲ.

(ಆ) ಕನ್ನಡ ಎಂಬ ದೇಶ್ಯ ಶಬ್ದವೇ ಕರ್ಣಾಟ(ಕ) ಎಂಬ ಸಂಸ್ಕೃತ ರೂಪವನ್ನು ಅನಂತರದಲ್ಲಿ ಪಡೆಯಿತು ಎನ್ನುವ ಆಧುನಿಕ ಭಾಷಾವಿದ್ವಾಂಸರ ಕೆಲವು ಅಭಿಪ್ರಾಯಗಳು ಹೀಗಿವೆ:

1. ಗುಂಡರ್ಟನ ಪ್ರಕಾರ ದಕ್ಷಿಣ ದಖನ್ನಿನ ನೆಲ ಕಪ್ಪುಮಣ್ಣಿನ ಭೂಮಿಯಾಗಿದೆ, ಆದ್ದರಿಂದ ಕರ್ ನಾಡು (ಕಪ್ಪುನಾಡು) ಎಂಬುದು ಕರ್ನಾಟಕದ ಮೂಲ ರೂಪ. ಕರ+ನಾಟ್+ಆಗಂ ಎಂದರೆ ಕಪ್ಪುನಾಡಿನ ಒಳಭಾಗ (ಪ್ರದೇಶ) - ಎಂಬುದು ಕೂಡ ಅವರ ಇನ್ನೊಂದು ಸೂಚನೆ. ಮೊದಲನೆಯದನ್ನು ಕಾಲ್ಡ್‌ವೆಲ್ ಮತ್ತು ಆರ್.ರಘುನಾಥ'ರಾಯರು ಒಪ್ಪಿದ್ದಾರೆ. ಎರಡನೆಯದನ್ನು ಉದ್ಧರಿಸಿದ್ದಾರೆ.

2. ಕನ್ನಡನಾಡು ಸಮುದ್ರಮಟ್ಟಕ್ಕಿಂತ ಎತ್ತರವಾಗಿ ಘಟ್ಟದ ಮೇಲಿದೆ. ಕರುನಾಡು ಎಂಬುದು ಕರುಮಾಡ ಎಂಬಂತೆ ಮೇಲಣ ಸೀಮೆ (ಕಣಿವೆ ಮೇಲಣ ಸೀಮೆ) ಆದ್ದರಿಂದ ಕರು-ನಾಡು (ಎತ್ತರವಾದ ನಾಡು) ಎಂಬುದು ದ್ರಾವಿಡ ಭಾಷೆಗಳಲ್ಲಿ ಮುಂದೆ ಕನ್ನಡ ಎಂಬುದಾಗಿಯೂ ಸಂಸ್ಕೃತದಲ್ಲಿ ಕರ್ಣಾಟಕ ಎಂಬುದಾಗಿಯೂ ಪರಿವರ್ತಿಸಿರಬಹುದು. ಇದು ಹಟ್ಟಿಯಂಗಡಿ ನಾರಾಯಣರಾಯರ ಅಭಿಪ್ರಾಯ.

3. ಕರುನಡಂ (=ಕನ್ನಡ): ಕರ್ಣಾಟ,ಕರುನಡಂ ಎಂಬುದೂ ಕನ್ನಡಂ ಎಂಬುದೂ ತಮಿಳು ಲಕ್ಷಣ ಗ್ರಂಥಗಳ ವೃತ್ತಿಗಳಲ್ಲಿ ಉಕ್ತವಾಗಿವೆ. ತಮಿಳಿನಲ್ಲಿ ಕರು ಎಂದರೆ ಬೆಟ್ಟ ಎಂದರ್ಥ. ಕೀಳ್ನಾಡಿನವರಾದ ತಮಿಳರು ಮೇಲ್ನಾಡನ್ನು ಕರುನಾಡು-ಕರುನಡ ಎಂದು ಕರೆದಿರಬಹುದು. ಕಮ್ಮಿತು+ನಡೆ (ಕಂ+ನಡೆ>ಕನ್ನಡ) ಇದು ಆರ್.ತಾತಾಚಾರ್ಯರ ಅಭಿಮತ.

4. ಕರಂ, ಕರು, ಕಡು ಎಂಬುವು ದೊಡ್ಡ, ವಿಸ್ತಾರವಾದ ಮಹಾ ಎಂಬ ಅರ್ಥದ ಪದಗಳು. ಆದ್ದರಿಂದ ಕರುನಾಡು ಎಂದರೆ ಮಹಾರಾಷ್ಟ್ರ. ಕರು+ನಾಡು>ಕರ್+ನಾಡು>ಕರ್ನಾಡು (ದೊಡ್ಡದೇಶ) ಎಂಬ ಕನ್ನಡ ಸಮಾಸಪದವೇ ಸಂಸ್ಕೃತದಲ್ಲಿ ಕರ್ಣಾಟಕ ಎಂದು ಆಗಿರಬೇಕು. ಇದು ಎಂ.ಗೋವಿಂದ ಪೈಗಳ ಮತ. ರಾ.ಹ.ದೇಶಪಾಂಡೆಯವರ ಅಭಿಪ್ರಾಯವೂ ಒಟ್ಟಿನಲ್ಲಿ ಇದೇ ಆಗಿದೆ.

5. (ಪರಿಮಳವಾಚಿಯಾದ) ಕಮ್ಮಿತು+ನಾಡು=ಕನ್ನಾಡು>ಕನ್ನಡು >ಕನ್ನಡ. ಕನ್ನಡ ಎಂಬ ಪದಕ್ಕೆ ಪರಿಮಳ ವಿಶಿಷ್ಟವಾದ ದೇಶದ ಭಾಷೆ ಎಂದು ಅರ್ಥ. ಕನ್ನಡ ದೇಶ ಗಂಧದ ಮರದ ಕಾಡುಗಳಿಗೂ ತಾವರೆ ಕೊಳಗಳಿಗೂ ಪ್ರಸಿದ್ಧಿ ಪಡೆದಿರುವುದರಿಂದ ಕಮ್ಮಿತು ಎಂಬ ವಿಶೇಷಣ ಅನುರೂಪವಾದುದು - ಎಂದು ರಾ.ನರಸಿಂಹಾಚಾರ್ಯರು ಹೇಳುತ್ತಾರೆ. ಆರ್.ತಾತಾಚಾರ್ಯರು ಈ ಅಭಿಪ್ರಾಯವನ್ನು ಒಪ್ಪಿಕೊಂಡಿರುವಂತೆ ತೋರುತ್ತದೆ.

6. ಕನ್ (ಎಂದರೆ ಕಾಣು ಅಥ'ವಾ ಒಡಮೂಡು) ಎಂಬ ಧಾತುವಿನಿಂದ ಕನ್ನಡ ಹುಟ್ಟಿದೆ. ಕನ್+ಅಳ್+ಕನ್ನಳ್ ,ಕನ್ನಡ, ಕನ್ನಡ, ಕನ್-ಅಳ=ಒಡಮೂಡುವುದನ್ನು ಉಳ್ಳದ್ದು; ಭಾವಗಳನ್ನು ಒಡಮೂಡಿಸುವುದು - ಕನ್ನಡ. ಹೀಗೆಂದು ದ.ರಾ.ಬೇಂದ್ರೆ ಮತ್ತು ಬೆಟಗೇರಿ ಕೃಷ್ಣಶರ್ಮರ ಮತ.

7. ಕರ್-ನಾಟ್-ಅಗಂ ಎಂದರೆ ಕರಿಯ ನಾಡನ್ನು ಒಳಗೊಂಡ ಪ್ರದೇಶ. ಆದರೆ ಶಬ್ದರೂಪ ಕರ್ಣಾಟಕವೇ ಹೊರತು ಕರ್ನಾಟಕ ಅಲ್ಲ. ಇದು ಬಿ.ಎಂ.ಶ್ರೀ ಅವರ ಧೋರಣೆ. ಒಟ್ಟಿನಲ್ಲಿ ಇದು ಗುಂಡರ್ಟ್ ಅವರ ಅಭಿಪ್ರಾಯವನ್ನು ಪೋಷಿಸುತ್ತದೆ.

8. ಮೊಹೆಂಜೊದಾರೋ ಚಿತ್ರಲಿಪಿಯ ಸಂಕೇತವನ್ನು ಗಮನಿಸಿದರೆ ಕಣ್ ನೀರ್ ಪದದ ಸಂಸ್ಕೃತ ರೂಪ ಕರ್ಣಾಟಕ ಆಗಿರಬಹುದು ಎಂದು ಫಾದರ್ ಹೆರಾಸರ ಮತ.

9. ಅಡಿಯಲ್ಲಿ ಕಣ್ಣುಳ್ಳವರು ಯಾರೋ ಅವರು ಕನ್ (ಣ್)+ ಅಡಿಗರ್ ಅರ್ಥಾತ್ ಕನ್ನಡಿಗರು-ಎಂಬುದು ರೆ.ಚನ್ನಪ್ಪ ಉತ್ತಂಗಿಯವರ ಮತ.

10. ಕನ್ನಡದ ರಾಜಕುಲಕ್ಕೆ ಕದಂಬ ಅಥವಾ ಕರಂಬ ಎಂಬ ಹೆಸರಿದೆ. ಆ ಕರ್ ಅಲ್ಲವೆ ಕನ್ ಎಂಬ ದಸ್ಯುವರ್ಗದಿಂದ ಕನ್ನಡ ಎಂಬ ಹೆಸರಾಗಿರಬಹುದು. ಕರು ಪದಕ್ಕೆ ಎತ್ತರ, ಶಿಖರ, ಮಹತ್ತು ಎಂಬ ಅರ್ಥಗಳಿರುವುದು ತಿಳಿದಿದೆ. ಕನ್ ಮತ್ತು ಕರ್ ಎಂಬ ರೂಪಗಳು ಅಭಿನ್ನ. ಅದರಿಂದ ಕನ್+ನಾಡು=ಕನ್ನಾಡು (ಕನ್ನಡ); ಕರ್+ನಾಡು=ಕರುನಾಡು (ಕರುನಾಡಿಗ, ಸಂ. ಕರ್ಣಾಟಕ); ಕಱು ತಳದ ನಾಟರೇ ಕನ್ನಡಿಗರು. ಆದಿಜನಾಂಗದೊಳಗಿನವರಾದ ಕನ್ ಮತ್ತು ನಾಟರು ಬೆರೆದು ಕನ್ನಡಿಗರೆನ್ನಿಸಿರಬಹುದು. ಇದು ಮುಳಿಯ ತಿಮ್ಮಪ್ಪಯ್ಯನವರ ವಾದ.

11. ಶ್ರೀಶೈಲ ಪರ್ವತದ ತಪ್ಪಲಿನಲ್ಲಿ ಹಿಂದಿನ ಕಾಲದಲ್ಲಿ ಕಣ್ಣವಿಷಯ (ಕರ್ಣಾಟ ಸೀಮಾ), ಕನ್ನಾಡು ಎಂಬ ಚಿಕ್ಕ ಜಿಲ್ಲೆಯಿತ್ತು. ಆ ಮೂಲಕವಾಗಿಯೇ ತಮ್ಮ ನಾಡಿಗೆ, ನುಡಿಗೆ ಕನ್ನಡಿಗರು ಆ ಹೆಸರನ್ನು ಪಡೆದುಕೊಂಡರು ಎಂದು ತೋರುತ್ತದೆಂದು ಹೇಳಿದ್ದಾರೆ ಎನ್.ವೆಂಕಟರಮಣಯ್ಯನವರು.

12. ಳ-ಣ-ನ ಗಳಲ್ಲಿ ಪರಸ್ಪರವಾಗಿ ಪಲ್ಲಟವುಂಟು. ಕಳವರು (ಕಳ್ವರು ಅಥವಾ ಕಳ್ಳರು ಅಥವಾ ಕಳಭ್ರರು) ಎಂಬ ದ್ರಾವಿಡ ವರ್ಗದ ಬಹುಪ್ರಾಚೀನ ಶಾಖೆಯು ಜನಾಂಗವೇ ಕಣ್ಣರು ಅಥವಾ ಕನ್ನರು. ಕನ್ನರ ನಾಡು ಕನ್ನಾಡು (ಕನ್ನಡ). ಇದು ಕನ್ನಾಡು > ಕನ್ನಾಟ > ಕರ್ಣಾಟ - ಈ ಕ್ರಮದಿಂದ ಸಂಸ್ಕೃತದಲ್ಲಿ ಸೇರಿಕೊಂಡಿದೆ. ಕರ್ಣಾಟಕದಲ್ಲಿರುವ ದ್ವಿರುಕ್ತಿದೋಷ ಕನ್ನಾಡ (ಕನ್ನಡ)ದಲ್ಲಿ ಸ್ವಲ್ಪವೂ ಇಲ್ಲ. ಇದು ಶಂ.ಬಾ.ಜೋಶಿಯವರ ಮತ.

13. ಕನ್ನಾಡು ಅಥವಾ ಕರ್ನಾಡು ಎಂಬ ಪದದ ಮೂಲ ಅರ್ಥ ಒಂದು ಮಹಾನಾಡು ಅಥವಾ ಒಂದು ಎತ್ತರವಾದ ನಾಡು ಎಂದಿದ್ದು, ಇವನ್ನು ಸಂಸ್ಕೃತರೂಪಕ್ಕೆ ತಿರುಗಿಸಿದಾಗ, ಕರ್ನಾಟ, ಕರ್ನಾಟಕ, ಮಹಾರಾಷ್ಟ್ರ ಆಗಿರಬೇಕು ಎಂದು ಬಿ.ಎ. ಸಾಲೆತೊರೆಯವರ ವಾದ.

14. ಕಣಾ(ನಾ)ಟ, ಕಣಾ(ನಾ)ಟಕ ಶಬ್ದಗಳು ಮೂಲತಃ ಸಂಸ್ಕೃತ ಶಬ್ದಗಳಲ್ಲ. ಪುನ್ನಾಡು ಸಂಸ್ಕೃತಕ್ಕೆ ಬರುವಾಗ ಪುನ್ನಾಟ ಆದಂತೆ ಕರ್ನಾಡು ಎಂಬ ದೇಶ್ಯಶಬ್ದ ಸಂಸ್ಕೃತಜ್ಞರ ಉಚ್ಚಾರಣೆಯಲ್ಲಿ ಕಣಾ(ರ್ನಾ)ಟ ಎಂಬ ರೂಪವನ್ನು ತಾಳಿರಬೇಕು. ಕಣಾ(ರ್ನಾ)ಟ+ಕ=ಕಣಾ(ನಾ)ಟಕ. ಇದು ತೀ.ನಂ.ಶ್ರೀಕಂಠಯ್ಯನವರ ಹೇಳಿಕೆ.

15. ಕರ್‌ನಾಡುವಿನಿಂದ ಕರ್‌ನಾಟ ಹುಟ್ಟಿ ಸ್ವಾರ್ಥದಲ್ಲಿ ಕ ಪ್ರತ್ಯಯ ಬಂದು ಕರ್ನಾಟಕ ಆಗಿರುವುದು ಸಾಧ್ಯ. ಕರ್ನಾಟ, ಕರ್ನಾಟಕ ರೂಪಗಳು ಅಪಾಣಿನೀಯವೆಂದು ಅವನ್ನು ಕರ್ಣಾಟ, ಕರ್ಣಾಟಕ ಎಂದು ಮಾಡಿಕೊಂಡಿರಬೇಕು. ಆಗ ಮೂಲ ಪದದ ಅರ್ಥ ಮರೆಯಾಗಿಯೋ ಗೊತ್ತಾಗದೆಯೋ ಪುನ್‌ನಾಟವನ್ನು ಪುಂರಾಷ್ಟ್ರಯೆಂದು ಮಾಡಿಕೊಂಡಂತೆ ಕರ್ಣಾಟಕ ನಿಷ್ಪತ್ತಿಯನ್ನು ಕರ್ಣೇಷು ಅಟತಿ ಇತಿ ಕರ್ಣಾಟಃ ಎಂದು ವಿವರಿಸಲು ಸ್ವಾಭಾವಿಕವಾಗಿ ಯತ್ನಿಸಿರಬಹುದು. ಪ್ರಯೋಗಗಳನ್ನು ನೋಡಿದರೆ ನಕಾರಯುಕ್ತ ಕರ್ನಾಟಕವೂ ಣಕಾರಯುಕ್ತ ಕರ್ಣಾಟಕವೂ ಬಹುಕಾಲದಿಂದ ವಿಕಲ್ಪವಾಗಿ ಪ್ರಯೋಗವಾಗಿರುವುದಕ್ಕೆ ಶಾಸನೋಕ್ತವಾದ ಉದಾಹರಣೆ ಗಳಿರುವುದರಿಂದ ಎರಡೂ ಗ್ರಾಹ್ಯವೇ. ಕರ್‌ನಾಡು ಪ್ರಾಯಃ ಪ್ರಾಕೃತ ಪ್ರಭಾವದಿಂದ, ಪ್ರಾಚೀನವಾದ ಪುನ್ನಾಡು ಪುನ್ನಾಟ ಆದಂತೆ ಕರ್‌ನಾಡು ಕರ್ನಾಟ ಆಗಿರಬೇಕು - ಇದು ಜಿ.ಪಿ.ರಾಜರತ್ನಂ ಅವರ ಮಂಡನೆ.

ಮೇಲೆ ಕಾಣಿಸಿದ ಕೆಲವು ಅಭಿಪ್ರಾಯಗಳನ್ನು ಪರಿಶೀಲಿಸಿದರೆ ಕನ್ನಡ ದೇಶ ಮತ್ತು ಭಾಷೆಗಳಿಗೆ ಆ ಹೆಸರುಗಳು ಎಲ್ಲಿಂದ ಹೇಗೆ ಬಂದುವು ಎನ್ನುವ ವಿಷಯವನ್ನು ಖಚಿತವಾಗಿ ಗೊತ್ತುಮಾಡುವುದು ಇನ್ನೂ ಸಾಧ್ಯವಾಗಿಲ್ಲ ಎನ್ನುವ ಸಂಗತಿ ವಿಶದವಾಗುತ್ತದೆ. ಕರ್ನಾ(ರ್ಣಾ)ಟ(ಕ) ಎಂಬ ಸಂಸ್ಕೃತ ಪದದ ಮೂಲ ದೇಶೀಯವಾದುದು. ದೇಶೀಯವಾದುದೊಂದು ಪದದಿಂದ ಸಂಸ್ಕೃತ ರೂಪ ಹುಟ್ಟಿತಲ್ಲದೆ ಸಂಸ್ಕೃತ ರೂಪದ ತದ್ಭವವಾಗಿ ದೇಶೀಯ ಪದ ಹುಟ್ಟಲಿಲ್ಲ. ಅದು ಒಂದು ಸಮಾಸಪದ. ಅದರ ಉತ್ತರ ಪದ ನಾಡು ಮತ್ತು ಅದರ ಜನ್ಯ ರೂಪಗಳು. ಇನ್ನು ಪೂರ್ವಪದದ ರೂಪ ಎತ್ತರ, ದೊಡ್ಡ, ಮಹಾ ಎಂಬರ್ಥಗಳಿರುವ ಕರು ಎಂಬುದಾಗಿದ್ದಿರಬೇಕೆಂಬುದು ಹಲವರಿಗೆ ಒಪ್ಪಿಗೆಯಾಗಿರುವಂತೆ ತೋರುತ್ತದೆ. ಕಪ್ಪು ಎಂಬರ್ಥದ ಕರ್‌ಎಂಬುದನ್ನೂ ಕೆಲವರು ಒಪ್ಪಿದ್ದಾರೆ. ಜನಾಂಗಸೂಚಕವಾದ ಕಳ್, ಕಣ್, ಕರ್, ಕನ್ ಎಂಬುವನ್ನು ಪೂರ್ವಪದವಾಗಿ ತೋರಿಸಲು ಶಂ.ಬಾ.ಜೋಶಿ ಮೊದಲಾದ ವಿದ್ವಾಂಸರು ತುಂಬ ಶ್ರಮಿಸಿದರೂ ಒದಗಿಸಿರುವ ಪ್ರಮಾಣಗಳು ಪ್ರಾಯಃ ಗಟ್ಟಿಯಾದವಲ್ಲವಾಗಿ ಅವು ಸಾರ್ವತ್ರಿಕವಾದ ಮಾನ್ಯತೆ ಪಡೆದು ಕೊಂಡಿರುವಂತೆ ತೋರುವುದಿಲ್ಲ. ಉಳಿದ ಕೆಲವು ಸೂಚನೆಗಳು ಹೆಚ್ಚಾಗಿ ಊಹಾಜನ್ಯವಾಗಿಯೇ ಕಾಣುತ್ತವೆ. ಬಹುಜನಸಮ್ಮತವಾಗಿ ತೋರುವ ವ್ಯುತ್ಪತ್ತಿಗಳ ವಿಷಯದಲ್ಲೂ ಕೆಲವರು ಸಯುಕ್ತಿಕವಾದ ಆಕ್ಷೇಪಣೆಗಳನ್ನು ಒಡ್ಡಿರುವುದು ಕಾಣುತ್ತದೆ. ಕರು ಪದಕ್ಕೆ ವಿಸ್ತಾರವಾದ, ಎತ್ತರವಾದ ಮೊದಲಾದ ಅರ್ಥಗಳು ಇಲ್ಲವೆಂದೂ ತಮಿಳು ಉಲ್ಲೇಖಗಳಲ್ಲಿ ಅಲ್ಲದೆ ಕರುನಾಡು ಎಂಬ ಮಾತು ಕನ್ನಡದಲ್ಲಿ ಎಲ್ಲೂ ಬಳಕೆಯಾಗಿಲ್ಲವೆಂದೂ ಎತ್ತರವಲ್ಲದ ಬಯಲುಸೀಮೆಯೂ ಕನ್ನಡ ನಾಡಿನಲ್ಲಿ ಉಂಟೆಂದೂ ಮುಂತಾಗಿ ವಾದಿಸಿದ್ದಾರೆ. ಹೀಗೆಯೇ ಕನ್ನಡದ ನೆಲದಲ್ಲಿ ಕಪ್ಪುಮಣ್ಣಿನ ನೆಲವಲ್ಲದ ಭಾಗಗಳೂ ಬಹುವಾಗಿರುವುದರಿಂದ ಕರ್ (ಕರಿದು) ನಾಡು ಕನ್ನಾಡು ಆಯಿತೆಂದು ಒಪ್ಪುವುದಕ್ಕೆ ಆಗದೆಂದಿದ್ದಾರೆ. ಪ್ರಾಚೀನ ಕಾಲದಲ್ಲಿ ಚಾಳುಕ್ಯ, ರಾಷ್ಟ್ರಕೂಟ ಸಾಮ್ರಾಜ್ಯಗಳು ಉತ್ತರಭಾಗದ ಕಪ್ಪು ಮಣ್ಣಿನ ಪ್ರದೇಶ ಹೆಚ್ಚಾಗಿರುವ ಪ್ರಾಂತದಲ್ಲಿ ರಾಜಧಾನಿಗಳನ್ನು ಹೊಂದಿದ್ದು ಆ ಪ್ರದೇಶಕ್ಕೆ ಬಂದ ಹೆಸರು ಕ್ರಮೇಣ ಕನ್ನಡ ಭಾಷೆ, ಸಂಸ್ಕೃತಿ ಇರುವ ಎಲ್ಲ ಇತರ ಭಾಗಗಳಿಗೂ ಅನ್ವಯಿಸುವಂತಾಗಿರಬಹುದೆಂಬ ಅಭಿಪ್ರಾಯವೂ ಇದೆ. ಉತ್ತರ ಕರ್ನಾಟಕದ ಒಳನಾಡು ಕಪ್ಪುಮಣ್ಣಿನಿಂದ ಕೂಡಿದ್ದು ಆ ಭಾಗಕ್ಕೆ ಕುಂತಳ, ಕರ್ನಾಟಕ ಎಂಬ ಪದಗಳನ್ನು ಹೆಚ್ಚಾಗಿ ಬಳಸಿರುವುದರಿಂದ ಇದೇ ಭಾವ ಛಾಯೆಯಿಂದ ಪದ ನಿಷ್ಪತ್ತಿಗೊಂಡಿದೆ ಎಂಬ ಅಭಿಪ್ರಾಯ ಹೆಚ್ಚು ತೂಕ ಪಡೆಯುತ್ತದೆ. ಈಚೆಗೆ ಈ ವಿಷಯದಲ್ಲಿ ಹೆಚ್ಚಿನ ವಿಚಾರ ವಿಮರ್ಶೆಗಳೇನೂ ಆಗಿಲ್ಲ. ಪೂರ್ವೋಕ್ತವಾದ ಎರಡು ನಿಷ್ಪತ್ತಿಗಳಲ್ಲಿ ವಿಮರ್ಶಕರು ಯಾವುದಾದರೊಂದರ ಕಡೆಗೆ ಒಲವನ್ನು ತೋರುವಂತೆ ಕಾಣುತ್ತದೆ.

ಶಬ್ದಾರ್ಥದ ವಿಚಾರದಲ್ಲಿ ವಿವಿಧಾಭಿಪ್ರಾಯಗಳು ವ್ಯಕ್ತ ವಾಗಿರುವಂತೆಯೇ ಶಬ್ದರೂಪದ - ಮುಖ್ಯವಾಗಿ ಕರ್ನಾಟ(ಕ) - ಕರ್ಣಾಟ(ಕ) ಎಂಬ ರೂಪಗಳ ವಿಚಾರದಲ್ಲಿಯೂ ಬಹುವಾಗಿ ಚರ್ಚೆ ನಡೆದಿರುವುದು ಕಾಣುತ್ತದೆ. ಈ ಚರ್ಚೆಯಲ್ಲಿ ಶ್ರೀಯುತರಾದ ತೋಗೆರೆ ನಂಜುಂಡಶಾಸ್ತ್ರಿ, ಎಚ್.ನಾರಾಯಣರಾವ್, ಆರ್.ತಾತಾಚಾರ್ಯ, ರಾ.ಹ.ದೇಶಪಾಂಡೆ, ತೀ.ನಂ.ಶ್ರೀಕಂಠಯ್ಯ, ಜಿ.ಪಿ.ರಾಜರತ್ನಂ ಮೊದಲಾದ ವಿದ್ವಾಂಸರು ಪಾಲ್ಗೊಂಡಿದ್ದಾರೆ. ಕರ್ಣಾಟ(ಕ) ಶುದ್ಧ ಸಂಸ್ಕೃತ ಪದವೆಂದೂ ಅದಕ್ಕೆ ಸಂಸ್ಕೃತದಲ್ಲಿ ವ್ಯುತ್ಪತ್ತಿ ಕೊಡಬಹುದೆಂದೂ ಕನ್ನಡ ಅದರ ತದ್ಭವವೆಂದೂ ಆದ್ದರಿಂದ ಕರ್ಣಾಟ(ಕ)ವೇ ಸಾಧುವೆಂದು ಎನ್ನುವವರು ಸಾಮಾನ್ಯವಾಗಿ ಶಬ್ದರತ್ನಾವಲಿಯಲ್ಲಿ ಉಕ್ತವಾದ ವ್ಯುತ್ಪತ್ತಿಯನ್ನೂ ಕೇಶಿರಾಜ ಅಪಭ್ರಂಶ ಪ್ರಕರಣದಲ್ಲಿ ಕರ್ಣಾಟದ ತದ್ಭವ ಕನ್ನಡ ಎಂದು ಹೇಳಿರುವುದನ್ನೂ ಸಂಸ್ಕೃತ - ಕನ್ನಡ ಗ್ರಂಥಗಳಲ್ಲಿ ಕರ್ಣಾಟ(ಕ) ಪದದ ಪ್ರಾಚುರ್ಯವನ್ನೂ ಆಧಾರವಾಗಿ ತೋರಿಸುತ್ತಾರೆ. ಪೂರ್ವೋಕ್ತವಾದ ಸಂಸ್ಕೃತ ಗ್ರಂಥದ ವ್ಯುತ್ಪತ್ತಿಯನ್ನು ಯಾವ ದೇಶಕ್ಕಾಗಲಿ ಭಾಷೆಗಾಗಲಿ ಅನ್ವಯಿಸಬಹುದೆಂದೂ ಕೇಶಿರಾಜ ಕೆಲವು ದ್ರಾವಿಡ ಶಬ್ದಗಳನ್ನೂ ಸಂಸ್ಕೃತದ ತದ್ಭವವಾಗಿ ಹೇಳಿರುವುದರಿಂದ ಆತನ ಸೂಚನೆ ಪ್ರಮಾಣವಾಗದೆಂದೂ ಮುಂತಾಗಿ ಇದಕ್ಕೆ ಆಕ್ಷೇಪವಿದೆ. ಎರಡನೆಯ ಪಂಥದವರು ಕರ್ಣಾಟ(ಕ)ಕ್ಕೆ ಮೂಲ ಕನ್ನಡ ಅಥವಾ ಕರ್ನಾಟ(ಕ) ಯಾವುದೇ ಇರಲಿ, ರಕಾರ ಸಂಪರ್ಕವಿರುವ ನ ಕಾರ ಣ ಕಾರವಾಗಿ ಮಾರ್ಪಡಬೇಕಾದ್ದು ಸಂಸ್ಕೃತ ವ್ಯಾಕರಣದ ಮರ್ಯಾದೆಯಾದ್ದರಿಂದ ಕರ್ಣಾಟ(ಕ) ಎಂಬ ಶಬ್ದರೂಪವೇ ಸಾಧು ಎನ್ನುತ್ತಾರೆ. ಇದನ್ನು ಆಕ್ಷೇಪಿಸುವವರು, ದುರ್ನಯ ದುರ್ನೀತಿ ಇತ್ಯಾದಿ ಸಂಸ್ಕೃತ ಪದಗಳಲ್ಲಿ ರಕಾರ ಸಂಪರ್ಕದ ನ ಕಾರ ಣ ಕಾರವಾಗದಿರುವುದನ್ನು ತೋರಿಸಿ, ಕರ್ನಾಟ(ಕ) ತಪ್ಪೆಂದು ಹೇಳುವುದಕ್ಕಾಗುವುದಿಲ್ಲ ಎನ್ನುತ್ತಾರೆ. ಕರ್ನಾಟ(ಕ) ಅಚ್ಚಕನ್ನಡ ಶಬ್ದ ಅದಕ್ಕೆ ಕನ್ನಡದಲ್ಲಿಯೇ ವ್ಯುತ್ಪತ್ತಿಯುಂಟು. ಸಂಸ್ಕೃತಜ್ಞರು ಭಾಷಾ ಮರ್ಯಾದೆಗೆ ಅನುಸಾರವಾಗಿ ಅದನ್ನು ಕರ್ಣಾಟ(ಕ) ವೆಂದು ಮಾಡಿದ್ದಾರೆ ಎನ್ನುವುದು ಇನ್ನೊಂದು ಪಂಥ. ಕರ್ನಾಟಕ ಅಚ್ಚಕನ್ನಡ ಎನ್ನುವವರ ವಾದವನ್ನು ಆಧುನಿಕ ಭಾಷಾಶಾಸ್ತ್ರಜ್ಞರ ಮತ್ತು ಇತರರ ನಿರೂಪಣೆಯಲ್ಲಿ ಕಾಣುತ್ತೇವೆ. ಈ ಜಿಜ್ಞಾಸೆ ಪ್ರಬಲವಾಗಿದ್ದ ಕಾಲದಲ್ಲೆ ಕನ್ನಡ ಸಾಹಿತ್ಯ ಪರಿಷತ್ತು ತನ್ನ ಹೆಸರನ್ನು

ಕರ್ನಾಟಕ ಸಾಹಿತ್ಯ ಪರಿಷತ್ತು ಎಂಬುದರಿಂದ ಕನ್ನಡ ಸಾಹಿತ್ಯ ಪರಿಷತ್ತು ಎಂದು ಬದಲಿಸಿಕೊಂಡಿತೆಂಬುದನ್ನು ಇಲ್ಲಿ ನೆನೆಯಬಹುದು.

ಶಬ್ದರೂಪದ ಬಗ್ಗೆ ವಿದ್ವಾಂಸರ ಚರ್ಚೆಗಳು ಏನೇ ಇದ್ದರೂ ಕನ್ನಡ ನಾಡಿಗೆ ಕರ್ನಾಟಕ ಎಂಬ ಹೆಸರು ಇರಬೇಕೆಂದು ವಿಧಾನ ಮಂಡಲಗಳಲ್ಲಿ ತೀರ್ಮಾನವಾಗಿ (1973) ಈಗ ಈ ರೂಪವೇ ಮಾನ್ಯವಾಗಿದೆ. (ಟಿ.ವಿ.ವಿ.)

**ಕರ್ನಾಟಕ ಏಕೀಕರಣ :** ಎರಡು ಸಾವಿರ ವರ್ಷಗಳಿಗೂ ದೀರ್ಘವಾದ ಇತಿಹಾಸ ಹೊಂದಿರುವ ಕರ್ನಾಟಕದ ಪ್ರದೇಶ ಪ್ರಾಕೃತಿಕವಾಗಿಯೂ ಸಾಂಸ್ಕೃತಿಕವಾಗಿಯೂ ಮಾತ್ರವೇ ಅಲ್ಲದೆ ರಾಜಕೀಯವಾಗಿಯೂ ಅಖಂಡವಾದದ್ದು. ಇತಿಹಾಸಕಾಲದಲ್ಲಿ ಕರ್ನಾಟಕ ದೇಶ ವಿವಿಧ ರಾಜವಂಶಗಳ ಆಳಿಕೆಗೆ ಒಳಪಟ್ಟಿದ್ದರೂ ನಾಡಿನ ಸಾಂಸ್ಕೃತಿಕ ಏಕತೆಯ ಭಾವನೆ ಸ್ಫುಟವಾಗಿತ್ತು. ಆದರೆ ಉತ್ತರದಲ್ಲಿ ಬಹುಮನೀ ರಾಜ್ಯ ಮತ್ತು ದಕ್ಷಿಣದಲ್ಲಿ ವಿಜಯನಗರ ರಾಜ್ಯ ಸ್ಥಾಪನೆಯಾದಾಗ ಸ್ವಲ್ಪಮಟ್ಟಿನ ವಿಭಿನ್ನತೆ ಕಾಣಿಸಿಕೊಂಡು, ಮುಂದೆ ಟಿಪ್ಪುವಿನ ಪತನವಾಗಿ ಭಾರತದಲ್ಲಿ ಬ್ರಿಟಿಷರ ಆಡಳಿತ ಸ್ಥಿರಗೊಂಡಾಗ ಕರ್ನಾಟಕ ಮತ್ತಷ್ಟು ಛಿದ್ರವಾಯಿತು. 22 ಆಡಳಿತಗಳ ಅಡಿಯಲ್ಲಿ ಹಂಚಿಹೋಯಿತು.

1858ರಲ್ಲಿ ಕಂಪನಿ ಸರ್ಕಾರವನ್ನು ಕೊನೆಗಾಣಿಸುವ ಸಲುವಾಗಿ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಭಾರತ ಸರ್ಕಾರ ವಿಧೇಯಕದ ಚರ್ಚೆಯಾಯಿತು. ಆಗ ಜಾನ್ ಬ್ರೈಟ್ ಭಾಷಣ ಮಾಡುತ್ತ, ಭಾರತದ ಪ್ರಾಂತ್ಯಗಳ ರಚನೆಗೆ ಭಾಷೆಗಳು ಆಧಾರವಾಗಬೇಕೆಂದೂ ಅದರಂತೆ ಐದು ಪ್ರಾಂತ್ಯಗಳ ನಿರ್ಮಾಣವಾಗಬೇಕೆಂದೂ ಸ್ಪಷ್ಟವಾಗಿ ಸೂಚನೆ ಮಾಡಿದ್ದ. 19ನೆಯ ಶತಮಾನದ ಕಡೆಯ ಪಾದದಲ್ಲಿ ಬ್ರಿಟಿಷರು ಆಡಳಿತ ವಿಚಕ್ಷಣೆಗಾಗಿ ಪ್ರಾಂತ್ಯಗಳನ್ನು ಮರುವಿಂಗಡಣೆ ಮಾಡುವ ಆಲೋಚನೆ ಮಾಡಲಾರಂಭಿಸಿದ್ದು, ಬಿಹಾರ, ಒರಿಸ್ಸ, ಸಿಂಧ್ ಪ್ರಾಂತ್ಯಗಳು ಬಹುಶಃ ಭಾಷೆಯ ಆಧಾರದ ಮೇಲೆ ನಿರ್ಮಾಣವಾದರೂ ಕನ್ನಡ ನಾಡಿನ ಬಗ್ಗೆ ಆಡಳಿತಗಾರರಿಂದ ಈ ರೀತಿಯ ಪ್ರಯತ್ನವೇನೂ ನಡೆಯಲಿಲ್ಲ.

ಬ್ರಿಟಿಷರ ಆಡಳಿತದಲ್ಲಿ ಕರ್ನಾಟಕದಂತೆ ಭಾರತದ ಇತರ ಭಾಷಾ ಪ್ರದೇಶಗಳೂ ಛಿದ್ರವಾಗಿದ್ದವಾದ್ದರಿಂದ ಭಾಷಾವಾರು ಪ್ರಾಂತ್ಯಗಳ ರಚನೆಯ ಭಾವನೆ ಸುಮಾರು ಎಲ್ಲೆಡೆಯಲ್ಲೂ ತಲೆಯೆತ್ತಲು ಅವಕಾಶವಾಯಿತು. 1874ರ ಸುಮಾರಿನಿಂದಲೇ ಬಂಗಾಲ, ಅಸ್ಸಾಂಗಳಲ್ಲೂ 1876ರಿಂದ ಒರಿಸ್ಸದಲ್ಲೂ ಭಾಷಾನುಗುಣವಾಗಿ ಪ್ರಾಂತ್ಯಗಳ ಪುನರ್ವಿಭಾಗವಾಗಬೇಕೆಂಬ ಚಳವಳಿ ಮೊದಲಾಯಿತು. ಉತ್ಕಲ ಪರಿಷತ್ತಿನ ಸ್ಥಾಪನೆಯಾದದ್ದು 1903ರಲ್ಲಿ. ಉತ್ಕಲ ಪ್ರಾಂತ್ಯ ರಚನೆಯ ಚಳವಳಿಯನ್ನು ಬಲಪಡಿಸಲು ಅಂಕಿ ಅಂಶಗಳಿಂದ ಕೂಡಿದ ಸಣ್ಣ ಗ್ರಂಥವೊಂದು ಪ್ರಕಟವಾಯಿತು. ಭಾಷೆಗಳ ಆಧಾರದ ಮೇಲೆ ಪ್ರಾಂತ್ಯಗಳ ರಚನೆಯಾಗಬೇಕೆಂಬ ತತ್ತ್ವಪ್ರತಿಪಾದನೆ ಮಾಡುವ ಸಾಹಿತ್ಯದ ಮೊದಲನೆಯ ಪ್ರಕಟಣೆ ಇದೆಂದು ಕಂಡುಬರುತ್ತದೆ. ಭಾರತದ ವೈಸ್‌ರಾಯಿಯಾಗಿದ್ದ ಲಾರ್ಡ್ ಕರ್ಜನ್ ಬಂಗಾಲವನ್ನು ವಿಭಜಿಸಲು ಕೈಕೊಂಡ ತೀರ್ಮಾನದ ಫಲವಾಗಿ ಭಾರತಾದ್ಯಂತ ಕ್ರಾಂತಿ ವಾತಾವರಣ ತಲೆಹಾಕಿತು. ಆ ನಿಮಿತ್ತದಿಂದ ಜನರಲ್ಲಿ ಸ್ವಾತಂತ್ರ್ಯದ ಹಂಬಲ ಪ್ರಬಲವಾಯಿತಲ್ಲದೆ ಅದರ ಅಂಗವಾಗಿ ಒಂದೊಂದು ಭಾಷಾ ವರ್ಗದವರೂ ಪ್ರತ್ಯೇಕ ಪ್ರಾಂತ್ಯ ನಿರ್ಮಾಣದ ಕನಸನ್ನು ಕಾಣಲು ಆರಂಭಿಸಿದರು.

ಇದಕ್ಕೂ ಹಿಂದಿನಿಂದಲೇ ಕರ್ನಾಟಕದಲ್ಲಿ ಏಕೀಕರಣದ ಕಲ್ಪನೆ ಮೂಡುತ್ತಿತ್ತು. 1856ರಷ್ಟು ಹಿಂದೆಯೇ ಡೆಪ್ಯುಟಿ ಚೆನ್ನಬಸಪ್ಪನವರು ಧಾರವಾಡ, ಬಿಜಾಪುರ, ಉತ್ತರ ಕನ್ನಡ ಮತ್ತು ಬೆಳಗಾಂವಿ ಜಿಲ್ಲೆಗಳಲ್ಲಿ ಈ ಚಳವಳಿ ಘೋಷಿಸಿದರೆನ್ನಬಹುದು. 1890ರಲ್ಲಿ ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ ಪ್ರಾರಂಭವಾದಾಗ ಈ ಕನಸಿಗೆ ಮೊತ್ತಮೊದಲನೆಯ ಬಾರಿಗೆ ಸಂಘಟನೆಯ ಬೆಂಬಲ ದೊರಕಿತೆನ್ನಬಹುದು. 1903ರಲ್ಲಿ ಬೆನಗಲ್ ರಾಮರಾಯರು ಕರ್ನಾಟಕ ಏಕೀಕರಣವನ್ನು ಕುರಿತು ಧಾರವಾಡದಲ್ಲಿ ಭಾಷಣ ಮಾಡಿದರು. ಆಲೂರ ವೆಂಕಟರಾಯರು ವಾಗ್ಭೂಷಣ ಪತ್ರಿಕೆಯಲ್ಲಿ 1907ರಲ್ಲಿ ಕರ್ನಾಟಕ ಏಕೀಕರಣದ ಬಗ್ಗೆ ಲೇಖನವೊಂದನ್ನು ಬರೆದರು. ಕರ್ನಾಟಕ ಏಕೀಕರಣದ ಬಗ್ಗೆ ಆಗಲೇ ಜನರಲ್ಲಿ ಜಾಗೃತಿಯುಂಟಾಗುತ್ತಿತ್ತು. ವಿಕೇಂದ್ರೀಕರಣದ ಬಗ್ಗೆ 1908ರಲ್ಲಿ ನೇಮಕವಾಗಿದ್ದ ರಾಯಲ್ ಕಮಿಷನ್ನಿನ ಮುಂದೆ ಲೋಕಮಾನ್ಯ ಬಾಲ ಗಂಗಾಧರ ಟಿಳಕರು ಸಾಕ್ಷ್ಯ ನೀಡುತ್ತ, ಕುಲಭಾಷಾ ಸಾದೃಶ್ಯಗಳ ದೃಷ್ಟಿಯಿಂದ ಪ್ರಾಂತ್ಯಗಳನ್ನು ಪುನಾರಚಿಸಬೇಕೆಂದು ಒತ್ತಿ ಹೇಳಿದರು.

1915ರಲ್ಲಿ ಬೆಂಗಳೂರು ನಗರದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯಾಯಿತು. ಇದು ಅಖಿಲ ಕರ್ನಾಟಕ ಸಂಸ್ಥೆಯಾಗಿ, ಇದರ ಸದಸ್ಯ ವರ್ಗದಲ್ಲಿ ಮುಂಬಯಿ, ಮದರಾಸು, ಕೊಡಗು ಪ್ರಾಂತ್ಯಗಳಿಗೂ ಮೈಸೂರು, ಹೈದರಾಬಾದ್ ಮತ್ತು ಉತ್ತರ ಕರ್ನಾಟಕದ ಸಣ್ಣ ಪುಟ್ಟ ಸಂಸ್ಥಾನಗಳಿಗೂ ಪ್ರಾತಿನಿಧ್ಯವಿದ್ದು, ಕರ್ನಾಟಕ ಏಕೀಕರಣದ ಭಾವನೆಗೆ ಒಂದು ಸಾಂಸ್ಕೃತಿಕ ಸ್ವರೂಪ ಬಂತು. ಪರಿಷತ್ತಿನ ಆಶ್ರಯದಲ್ಲಿ ನಡೆದ ಪ್ರಥಮ ಸಮ್ಮೇಳನದಲ್ಲೇ ಸಂಯುಕ್ತ ಕರ್ನಾಟಕ ಪ್ರಾಂತ್ಯ ರಚನೆಯ ಬೇಡಿಕೆಯ ವಾಣಿ ಬಲವಾಗಿ ಕೇಳಿಬಂತು. ಕನ್ನಡ ಸಾಹಿತ್ಯ ಪರಿಷತ್ತಿನ ಅಂತಿಮ ಗುರಿಯಾದರೂ ಕರ್ನಾಟಕ ಏಕೀಕರಣವೇ ಆಗಿತ್ತು.

ಕರ್ನಾಟಕದ ರಾಜಕೀಯ ಏಕೀಕರಣ ಸಾಧಿಸುವ ಉದ್ದೇಶದಿಂದ 1917ರಲ್ಲಿ ಕಡಪ ರಾಘವೇಂದ್ರರಾವ್, ಮುದವೀಡು ಕೃಷ್ಣರಾವ್, ಗದಿಗಯ್ಯ ಹೊನ್ನಾಪುರಮಠ ಮೊದಲಾದವರ ಪ್ರಯತ್ನದಿಂದ ಕರ್ನಾಟಕ ಸಭೆಯ ಸ್ಥಾಪನೆಯಾಯಿತು. ಭಾರತದ ಕಾರ್ಯದರ್ಶಿ ಮಾಂಟೆಗ್ಯೂಗೆ ಕನ್ನಡ ನಾಡಿನ ಮೂಲೆ ಮೂಲೆಗಳಿಂದ ಕರ್ನಾಟಕ ಪ್ರಾಂತ್ಯ ರಚನೆಯಾಗಬೇಕು ಎಂಬ ಬಿನ್ನಹ ಪತ್ರಗಳನ್ನು ಕಳುಹಿಸಲಾಯಿತು. 1918ರಿಂದ ಕರ್ನಾಟಕ ಸಭೆಗೂ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿಗೂ ನಿಕಟ ಸಂಪರ್ಕವುಂಟಾಯಿತು. ಕಾಂಗ್ರೆಸ್ ಅಧಿವೇಶನಗಳಿಗೆ ಹೋದ ಕನ್ನಡ ಪ್ರತಿನಿಧಿಗಳೆಲ್ಲ ಕರ್ನಾಟಕ ಪ್ರಾಂತ್ಯ ನಿರ್ಮಾಣದ ಪಲ್ಲವಿಯನ್ನು ಹಾಡುತ್ತ ಬಂದರು. ಕಾಂಗ್ರೆಸ್ಸಿನಲ್ಲೇ ಆಡಳಿತ ಸೌಲಭ್ಯಕ್ಕಾಗಿ ಭಾಷಾನುಗುಣ ಪ್ರಾಂತ್ಯಗಳು ರೂಪುಗೊಳ್ಳಬೇಕೆಂದು ವಾದಿಸುತ್ತ ಬಂದರು.

1920ರಲ್ಲಿ ಮೈಸೂರಿನ ದಿವಾನರಾಗಿದ್ದ ವಿ.ಪಿ.ಮಾಧವರಾಯರ ಅಧ್ಯಕ್ಷತೆಯಲ್ಲಿ ಧಾರವಾಡದಲ್ಲಿ ಮೊತ್ತ ಮೊದಲನೆಯ ಕರ್ನಾಟಕ ರಾಜಕೀಯ ಸಮ್ಮೇಳನ ನಡೆದು, ಕರ್ನಾಟಕ ಪ್ರಾಂತ್ಯ ನಿರ್ಮಾಣ ವಾಗಬೇಕೆಂಬ ನಿರ್ಣಯವಾಯಿತು. ನಾಗಪುರದ ಕಾಂಗ್ರೆಸ್ ಅಧಿವೇಶನದಲ್ಲಿ ಈ ತತ್ತ್ವವನ್ನು ಅಂಗೀಕರಿಸಲಾಯಿತು. ಕಾಂಗ್ರೆಸ್ಸಿನ ಆಡಳಿತದಲ್ಲಿ 21 ಭಾಷಾಪ್ರಾಂತ್ಯಗಳು ರೂಪುಗೊಂಡುವು. ಸಿದ್ದಪ್ಪ ಕಂಬಳಿಯವರು 1923ರಲ್ಲಿ ಮುಂಬಯಿಯ ಶಾಸನ ಸಭೆಯಲ್ಲಿ ಏಕೀಕರಣವನ್ನು ಸಮರ್ಥಿಸಿದರು.

1924ರಲ್ಲಿ ಬೆಳಗಾಂವಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ಮಹಾತ್ಮ ಗಾಂಧಿಯವರು ಅಧ್ಯಕ್ಷರಾಗಿದ್ದರು. ಕರ್ನಾಟಕ ಏಕೀಕರಣವಾಗ ಬೇಕೆಂಬ ಜನರ ಬೇಡಿಕೆ ನ್ಯಾಯವಾದುದು, ಸಹಜವಾದುದು ಎಂಬುದು ಭಾರತದ ನಾನಾಭಾಗಗಳ ಪ್ರತಿನಿಧಿಗಳಿಗೆ ಅರಿವಾಗಲು ಈ ಅಧಿವೇಶನ ಬಹಳಮಟ್ಟಿಗೆ ಸಹಾಯಕವಾಯಿತು.

ಅದೇ ಕಾಲದಲ್ಲಿ ಬೆಳಗಾಂವಿಯಲ್ಲಿ ಕರ್ನಾಟಕ ಏಕೀಕರಣ ಸಮ್ಮೇಳನ ನಡೆಯಿತು. ಅಂದಿನಿಂದ ಕರ್ನಾಟಕ ಏಕೀಕರಣ ಸಭೆ ಎರಡೆರಡು ವರ್ಷಕ್ಕೊಮ್ಮೆ ಸಮ್ಮೇಳನ ನಡೆಸುತ್ತ ಬಂತು. 1926ರ ಅಧಿವೇಶನ ಬಳ್ಳಾರಿಯಲ್ಲೂ 1947ರಂದು ಕಾಸರಗೋಡಿನಲ್ಲೂ ನಡೆದುವು. ಈ ಸಮ್ಮೇಳನಗಳ ಬೇಡಿಕೆಗಳ ಫಲವಾಗಿ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಮುಂಬಯಿ ಅಧಿವೇಶನದಲ್ಲಿ (1927), ಭಾಷಾನುಗುಣವಾಗಿ ಪ್ರಾಂತ್ಯಗಳನ್ನು ಪುನರ್ವಿಭಾಗ ಮಾಡುವ ಕೆಲಸವನ್ನು ಕೈಕೊಳ್ಳತಕ್ಕದ್ದೆಂದೂ ಆಂಧ್ರ, ಸಿಂಧ್, ಕರ್ನಾಟಕಗಳನ್ನು ಪ್ರತ್ಯೇಕ ಪ್ರಾಂತ್ಯಗಳನ್ನಾಗಿ ರಚಿಸುವ ಕಾರ್ಯವನ್ನಾರಂಭಿಸತಕ್ಕದ್ದೆಂದೂ ನಿರ್ಣಯವಾಯಿತು.

1928ರಲ್ಲಿ ಯು. ರಾಮರಾಯರು ಕೇಂದ್ರ ಶಾಸನ ಮಂಡಲಿಯ ಮುಂದೆ ಕರ್ನಾಟಕ ಏಕೀಕರಣದ ಬಗ್ಗೆ ಒಂದು ಗೊತ್ತುವಳಿ ತಂದರು. ಮುಂಬಯಿ ಶಾಸನಸಭೆಯಲ್ಲೂ ಈ ಬಗ್ಗೆ ಗೊತ್ತುವಳಿ ಬಂದದ್ದು 1929ರಲ್ಲಿ ವಿಶ್ವನಾಥರಾವ್ ಜೋಗರಿಂದ.

1931ರಲ್ಲಿ ಲಂಡನ್ನಿನಲ್ಲಿ ನಡೆದ ದುಂಡುಮೇಜಿನ ಪರಿಷತ್ತಿನಲ್ಲಿ ಬೆನಗಲ್ ರಾಮರಾವ್, ಬೆನಗಲ್ ಶಿವರಾವ್, ಮಿರ್ಜಾ ಇಸ್ಮಾಯಿಲ್ ಇವರು ಕರ್ನಾಟಕ ಏಕೀಕರಣದ ಬಗ್ಗೆ ಪ್ರಸ್ತಾಪ ಮಾಡಿದರು.

1928ರಲ್ಲಿ ಕರ್ನಾಟಕ ಏಕೀಕರಣ ಸಮಿತಿಯೂ ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿಯೂ ಕೂಡಿ ನೆಹರು ಸಮಿತಿಯ ಮುಂದೆ

ಅರಿಕೆಯೊಂದನ್ನಿಟ್ಟವು. ಆ ಸಮಿತಿಯವರು ಕರ್ನಾಟಕ ಪ್ರಾಂತ್ಯ ರಚನೆಯ ವಾದವನ್ನೊಪ್ಪಿದ್ದರು. ಈ ಅಭಿಪ್ರಾಯವನ್ನು ಲಖನೌದಲ್ಲಿ ನಡೆದ ಸಕಲ ಪಕ್ಷಗಳ ಸಮ್ಮೇಳನ ಅಂಗೀಕರಿಸಿತು.

1928-29ರಲ್ಲಿ ಸೈಮನ್ ಸಮಿತಿಯ ಮುಂದೆಯೂ ಕರ್ನಾಟಕ ಏಕೀಕರಣ ಬೇಡಿಕೆಯನ್ನಿಡಲಾಯಿತು. ಆ ಸಮಿತಿಯವರು ಭಾಷೆಗಳ ಆಧಾರದ ಮೇಲೆ ಪ್ರಾಂತ್ಯಗಳನ್ನು ನಿರ್ಮಿಸಬೇಕೆಂಬ ತತ್ತ್ವವನ್ನು ಮಾನ್ಯಮಾಡಿದರಲ್ಲದೆ ಆದಷ್ಟು ಬೇಗ ಈ ತತ್ತ್ವಕ್ಕನುಸಾರವಾಗಿ ಪ್ರಾಂತ್ಯಗಳನ್ನು ರೂಪುಗೊಳಿಸಬೇಕೆಂದು ಸೂಚಿಸಿದರು. ಕನ್ನಡ ನಾಡಿನ ಐತಿಹಾಸಿಕ ಹಿನ್ನೆಲೆ, ಸಾಂಸ್ಕೃತಿಕ ಸಂಪದ್ವೈಭವ ಮತ್ತು ಅರ್ಥಸಾಧನೆಯ ಅವಕಾಶಗಳ ದೃಷ್ಟಿಯಿಂದ ಅದರ ಬೇಡಿಕೆ ಪುರಸ್ಕಾರ ಯೋಗ್ಯವಾದುದೆಂಬುದು ಅವರ ಅಭಿಪ್ರಾಯವಾಗಿತ್ತು.

ಮುಂದಿನ ಒಂದೆರಡು ವರ್ಷಗಳಲ್ಲೇ ಕರ್ನಾಟಕ ಏಕೀಕರಣದ ಬಗ್ಗೆ ಜನರಲ್ಲಿ ಸಾಕಷ್ಟು ಜಾಗೃತಿಯುಂಟಾಗಿತ್ತು. ಬಿ.ಎಂ.ಶ್ರೀ., ಕುವೆಂಪು ಮುಂತಾದ ಅನೇಕರು ರಚಿಸಿದ ಕವಿತೆಗಳ ಏಕೀಕೃತ ಕನ್ನಡನಾಡಿನ ಭವ್ಯ ಚಿತ್ರ ಮೂಡಿತು. ಸ್ವತಂತ್ರ ಕರ್ನಾಟಕ, ಸಂಯುಕ್ತ ಕರ್ನಾಟಕ ಮುಂತಾದ ಅನೇಕ ಪತ್ರಿಕೆಗಳ ಹೆಸರುಗಳು ಕರ್ನಾಟಕದ ಕನಸನ್ನು ಕಟ್ಟುತ್ತಿದ್ದುವು. ಆದರೆ ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯ ಲಭ್ಯವಾಗುವವರೆಗೆ ಕನ್ನಡ ನಾಡನ್ನು ಒಂದು ಆಡಳಿತದೊಳಕ್ಕೆ ತರುವುದು ಸಾಧ್ಯವಿಲ್ಲವೆಂಬುದೂ ಖಚಿತವಾಯಿತು. ಭಾರತದ ಸ್ವಾತಂತ್ರ್ಯ ಚಳವಳಿ ಬಿರುಸಾಯಿತು. ಕಾಂಗ್ರೆಸ್ ಅಧಿಕಾರ ವಹಿಸಿಕೊಂಡ ಮೇಲೆ ಭಾಷಾನುಗುಣ ಪ್ರಾಂತ್ಯಗಳ ನಿರ್ಮಾಣ ಕಾರ್ಯವನ್ನು ಕೈಗೊಳ್ಳಲಾಗುವುದೆಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿ 1938ರಲ್ಲಿ ನಿರ್ಣಯ ಮಾಡಿತು. ಹಳೆಯ ಮೈಸೂರು ಸಂಸ್ಥಾನ ಪ್ರದೇಶದಲ್ಲಿ ಏಕೀಕರಣ ಚಳವಳಿಯನ್ನು ಬಲಪಡಿಸಲು ಬೆನಗಲ್ ರಾಮರಾವ್ ಅಧ್ಯಕ್ಷರಾಗಿಯೂ ಬಿ.ಶಿವಮೂರ್ತಿ ಶಾಸ್ತ್ರಿಗಳು ಕಾರ್ಯದರ್ಶಿಗಳಾಗಿಯೂ ಉಳ್ಳ ಏಕೀಕರಣ ಸಮಿತಿ ಅದೇ ವರ್ಷ ಬೆಂಗಳೂರಿನಲ್ಲಿ ಸ್ಥಾಪಿತವಾಯಿತು. ಕರ್ನಾಟಕವನ್ನು ಪ್ರತ್ಯೇಕ ಪ್ರಾಂತ್ಯವಾಗಿ ರಚಿಸುವ ಕ್ರಮವನ್ನು ವಿರೋಧಿಸುವುದು ಸಾಧ್ಯವಿಲ್ಲ ಮತ್ತು ಕರ್ನಾಟಕ ಪ್ರಾಂತ್ಯ ನಿರ್ಮಾಣ ವಿಚಾರ ನನಗೆ ಪ್ರಿಯವಾದ್ದು-ಎಂಬುದಾಗಿ ಗಾಂಧೀಜಿ ಹೇಳಿದರು. 1946ರಲ್ಲಿ ಕರ್ನಾಟಕ ಏಕೀಕರಣ ಸಭೆಯ ಹತ್ತನೆಯ ಅಧಿವೇಶನದ ಆರಂಭೋತ್ಸವವನ್ನು ಸರ್ದಾರ್ ಪಟೇಲರು ನೆರವೇರಿಸುತ್ತ, ಛಿದ್ರ ಕರ್ನಾಟಕ ಒಂದಾದ ರಾಜ್ಯವಾಗಿ ಬಹು ಬೇಗ ರೂಪುಗೊಳ್ಳಲಿದೆ. ಕನ್ನಡ ನಾಡಿನ ಜನ ಇನ್ನು ಬಹಳ ಕಾಲ ಕಾಯಬೇಕಾಗಿಲ್ಲ. ಕರ್ನಾಟಕ ರಾಜ್ಯದೊಂದಿಗೆ ಒಂದು ಪ್ರಾಂತ್ಯಾಧಿಕಾರ, ಒಂದು ವಿಶ್ವವಿದ್ಯಾನಿಲಯ ಮತ್ತು ಕರ್ನಾಟಕ ರಾಜ್ಯದ ಸ್ವತಂತ್ರ ಜೀವನ ಭಾಗ್ಯಗಳು ಕರಗತವಾಗಲಿವೆ. ತಮ್ಮ ಉದ್ದೇಶಸಾಧನೆಗಾಗಿ ಬ್ರಿಟಿಷರು ಭಾಷಾನುಗುಣ ಪ್ರಾಂತ್ಯಗಳನ್ನು ಮಣ್ಣುಗೂಡಿಸಿ, ಆ ರಾಜ್ಯಗಳನ್ನೆಲ್ಲ ದುರ್ಬಲಗೊಳಿಸಿದರು. ಭಾರತ ಸ್ವತಂತ್ರವಾದ ಕೂಡಲೆ ಈ ದೋಷ ದೌರ್ಭಾಗ್ಯಗಳು ಕೊನೆಗಾಣುತ್ತವೆ ಎಂದು ಭರವಸೆ ನೀಡಿದರು.

1946ರ ಆಗಸ್ಟ್ ತಿಂಗಳಲ್ಲಿ ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿಯೂ ಕರ್ನಾಟಕ ಏಕೀಕರಣ ಸಭೆಯೂ ಒಂದಾಗಿ, ದಾವಣಗೆರೆಯಲ್ಲಿ ಅಖಿಲ ಕರ್ನಾಟಕ ಮಹಾಸಮ್ಮೇಳನವನ್ನು ನಡೆಸಿದುವು. ಮುಂಬಯಿ, ಮದರಾಸು ಮತ್ತು ಮೈಸೂರು ಶಾಸನ ಸಭೆಗಳ ಕನ್ನಡ ಪ್ರತಿನಿಧಿಗಳೂ ಸಣ್ಣಪುಟ್ಟ ಸಂಸ್ಥಾನಗಳ ಪ್ರಜೆಗಳ ಪ್ರತಿನಿಧಿಗಳೂ ಸಂಸ್ಥಾನ ಪ್ರಜಾ ಪರಿಷತ್ ಅಧಿಕಾರ ವರ್ಗದವರೂ ಸಾಂಸ್ಕೃತಿಕ ಸಂಸ್ಥೆಗಳ ಪ್ರತಿನಿಧಿಗಳೂ ರಾಜಕೀಯ ಪಕ್ಷಗಳ ಪ್ರತಿನಿಧಿಗಳೂ ಇದರ ಕಾರ್ಯ ಕಲಾಪಗಳಲ್ಲಿ ಭಾಗವಹಿಸಿದರು.

ಭಾರತ ಸಂವಿಧಾನವನ್ನು ರಚಿಸಲು ಸೇರಿರುವ ಸಂವಿಧಾನ ರಚನಾಸಭೆ ಸಾವಕಾಶಮಾಡದೆ ಭಾಷಾನುಗುಣವಾಗಿ ಪ್ರಾಂತ್ಯಗಳ ನಿರ್ಮಾಣ ಮಾಡುವ ಕಾರ್ಯಕೈಗೊಳ್ಳಬೇಕು ಮತ್ತು ಪ್ರತ್ಯೇಕವಾಗಿ ಕರ್ನಾಟಕ ಪ್ರಾಂತ್ಯ ನಿರ್ಮಿಸಲು ಬೇಕಾದ ಎಲ್ಲ ಕಾರ್ಯಕ್ರಮಗಳನ್ನೂ ಕೈಕೊಳ್ಳಬೇಕು ಎಂದು ಈ ಸಮ್ಮೇಳನದಲ್ಲಿ ಸರ್ವಾನುಮತದ ನಿರ್ಣಯವಾಯಿತು.

ಈ ನಿರ್ಣಯದ ಸೂಚನೆಗೆ ಅನುಗುಣವಾಗಿ ಸಂವಿಧಾನ ರಚನಾ ಸಭೆ ಭಿನ್ನಾಭಿಪ್ರಾಯಕ್ಕೆ ಅವಕಾಶ ಕೊಡದೆ ಭಾಷೆ, ಸಂಸ್ಕೃತಿ, ಭೂಗೋಳ ಇವುಗಳನ್ನಾಧಾರಮಾಡಿಕೊಂಡು ಪ್ರಾಂತ್ಯಗಳನ್ನು ರಚಿಸಬೇಕೆಂದು 1946 ಡಿಸೆಂಬರ್ 8ರಂದು ನಿರ್ಣಯಮಾಡಿತು.

ದಾವಣಗೆರೆಯಲ್ಲಾದ ಮಹಾ ಸಮ್ಮೇಳನದಲ್ಲಿ ಒಂದು ಸಮಸ್ಯೆ ತಲೆಹಾಕಿತು. ಆಗಿನ ಮೈಸೂರು ಸಂಸ್ಥಾನ ಮಹಾರಾಜರ ಪ್ರಭುತ್ವಕ್ಕೊಳಗಾಗಿತ್ತು. ಮೈಸೂರು ಜವಾಬ್ದಾರಿ ಸರ್ಕಾರ ಸ್ಥಾಪಿಸಿದ ಮೇಲೆ ಅದು ಕರ್ನಾಟಕ ರಾಜ್ಯದೊಳಗೆ ಐಕ್ಯವಾಗಬಹುದು. ಅದುವರೆಗೆ ಬ್ರಿಟಿಷ್ ಪ್ರಾಂತ್ಯಗಳ ಕನ್ನಡ ಭಾಗಗಳೆಲ್ಲ ಒಂದಾಗಿ ಒಂದು ರಾಜ್ಯ ರೂಪುಗೊಳ್ಳಲಿ ಎಂದು ಮೈಸೂರೇತರ ಕನ್ನಡಿಗರು ವಾದಿಸಲಾರಂಭಿಸಿದರು. ಮೈಸೂರನ್ನು ಬಿಟ್ಟು ಕರ್ನಾಟಕ ರಾಜ್ಯವನ್ನು ಊಹಿಸುವುದು ಸಾಧ್ಯವಿಲ್ಲ; ಇದು ನ್ಯಾಯವಲ್ಲ ಎಂಬುದು ಮೈಸೂರಿನವರ ವಾದವಾಗಿತ್ತು. ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿಯವರು ಯಾವ ಕಾರಣದಿಂದಲೂ ಕರ್ನಾಟಕ ಪ್ರಾಂತ್ಯ ರಚನೆಯ ಕೆಲಸವನ್ನು ತಡಮಾಡಬಾರದೆಂದು ಹೇಳಲಾರಂಭಿಸಿದರು. ದೇಶೀಯ ರಾಜರ ಕರ್ನಾಟಕವೊಂದು ಕಡೆ, ಬ್ರಿಟಿಷ್ ಕರ್ನಾಟಕವಿನ್ನೊಂದು ಕಡೆ ಮುಖಮಾಡುವ ಸೂಚನೆಗಳು ಕಂಡುಬಂದುವು. ಕಾಸರಗೋಡಿನ ಕರ್ನಾಟಕ ಏಕೀಕರಣ ಸಮ್ಮೇಳನ ಸಹ ತಡಮಾಡದೆ ಕರ್ನಾಟಕ ಪ್ರಾಂತ್ಯ ನಿರ್ಮಿಸಬೇಕೆಂದು ನಿರ್ಣಯ ಮಾಡಿತು. 1947ರಲ್ಲಿ ಭಾರತ ಸ್ವತಂತ್ರವಾದ ಕೆಲವು ತಿಂಗಳುಗಳಲ್ಲೇ ಹಳೆಯ ಮೈಸೂರಿನಲ್ಲೂ ಜವಾಬ್ದಾರಿ ಸರ್ಕಾರದ ಸ್ಥಾಪನೆಯಾಯಿತು. ಕರ್ನಾಟಕ ಏಕೀಕರಣಕ್ಕಿದ್ದ ಆಡಳಿತದ ತೊಡಕು ಇದರಿಂದ ಪರಿಹಾರವಾಯಿತೆನ್ನಬಹುದು.

ಭಾರತ ಸರ್ಕಾರ ಆಂಧ್ರ ಪ್ರಾಂತ್ಯದ ನಿರ್ಮಾಣ ಮಾಡುವ ನಿರ್ಧಾರ ಮಾಡಿ, ಪ್ರಕಟಿಸಿತು. ಸಂವಿಧಾನ ರಚನಾ ಸಮಿತಿ ಭಾಷಾನುಗುಣ ರಾಜ್ಯ ನಿರ್ಮಾಣ ತತ್ತ್ವವನ್ನು ಅನುಮೋದಿಸಿ, ಈ ಉದ್ದೇಶದ ಸಾಧನೆಗಾಗಿ ಒಂದು ಆಯೋಗದ ನೇಮಕವಾಗಬೇಕೆಂದು ಸೂಚನೆ ಮಾಡಿತು. ಇದರ ಫಲವಾಗಿ 1948 ಜೂನ್ 17ರಂದು ಧಾರ್ ಸಮಿತಿ ಅಸ್ತಿತ್ವಕ್ಕೆ ಬಂತು. ಈ ಸಮಿತಿಯ ವರದಿ ಹೊರಬಿದ್ದುದು ಆ ವರ್ಷದ ಡಿಸೆಂಬರ್ ತಿಂಗಳ 10ರಂದು. ಒಕ್ಕೂಟ ಸೇರಲು ಮೈಸೂರು ಇಚ್ಛಿಸಿದ್ದ ಪಕ್ಷದಲ್ಲಿ ಮೈಸೂರನ್ನೇ ನಾಭಿಯನ್ನಾಗಿ ಸುಲಭವಾಗಿ ಇಟ್ಟುಕೊಂಡು ಅದರ ಸುತ್ತ ಮದರಾಸ್, ಮುಂಬಯಿಗಳ ಕನ್ನಡ ಮಾತಾಡುವವರ ಜಿಲ್ಲೆಗಳನ್ನು ಒಟ್ಟಿಗೆ ತಂದು, ಆಡಳಿತದೃಷ್ಟಿಯಿಂದ ಅನುಕೂಲಕರವಾದ ಒಂದು ಪ್ರಾಂತ್ಯವನ್ನಾಗಿ ಬೆಳೆಸಲು ಸಾಧ್ಯಾವಾಗುವಂತೆ ಮಾಡಬಹುದಾಗಿತ್ತು. ಆದರೆ ಕರ್ನಾಟಕ ಪ್ರಾಂತ್ಯದಲ್ಲಿ ವಿಲೀನಗೊಳ್ಳಲು ಮೈಸೂರು ಸಂಸ್ಥಾನ ಇನ್ನೂ ಸಿದ್ಧವಾಗಿರುವಂತೆ ಕಾಣುವುದಿಲ್ಲ. ಭಾರತ ಒಕ್ಕೂಟದ ಪ್ರದೇಶವನ್ನು ದೇಶೀಯ ಸಂಸ್ಥಾನಗಳಲ್ಲಿ ವಿಲೀನಗೊಳಿಸಲು ಜನಾಭಿಪ್ರಾಯವಾಗಲಿ ಸರ್ಕಾರದ ನೀತಿಯಾಗಲಿ ಸಿದ್ಧವಾಗಿದೆಯೆ ಎಂಬುದನ್ನು ನಾವು ಹೇಳಲಾರೆವು ಎಂಬ ಧಾರ್ ಸಮಿತಿಯ ಹೇಳಿಕೆಯಿಂದ ಭಾರತದ ನಾನಾ ಭಾಷೆಗಳನ್ನಾಡುವ ಜನರಿಗೆ ಅಸಮಾಧಾನವಾಯಿತು. ಈ ಅಸಮಾಧಾನ ಬೆಳೆದು ವಕ್ರರೂಪ ತಾಳದಂತೆ ಕಾಂಗ್ರೆಸ್ ನಾಯಕರು ಸಮಸ್ಯೆಯನ್ನು ಜವಾಹರಲಾಲ್ ನೆಹರೂ, ಸರ್ದಾರ್ ಪಟೇಲ್, ಪಟ್ಟಾಭಿ ಸೀತಾರಾಮಯ್ಯ - ಈ ಮೂವರಿಗೆ ಅವರ ಸಲಹೆಗಾಗಿ ಒಪ್ಪಿಸಿದರು. ಈ ಬಗ್ಗೆ ಆತುರ ಬೇಡವೆಂಬುದೂ ಸಕಾಲದಲ್ಲಿ ಅಗತ್ಯವಾದ್ದನ್ನು ಮಾಡಬಹುದೆಂಬುದೂ ಅವರ ಅಭಿಪ್ರಾಯವಾಗಿತ್ತು. ಇದರಿಂದ ಅಸಮಾಧಾನ ಅತೃಪ್ತಿಗಳು ಬೆಳೆದುವು. ಮೈಸೂರು ಕಾಂಗ್ರೆಸ್ ಕಾರ್ಯ ಸಮಿತಿ 1949 ನವೆಂಬರ್ 5ರಂದು ಸಭೆ ಸೇರಿ ಈ ವಿಚಾರವನ್ನು ವಿಮರ್ಶಿಸಿ ಸ್ವೀಕರಿಸಿದ ನಿರ್ಣಯದಲ್ಲಿ ಕರ್ನಾಟಕ ರಾಜ್ಯ ನಿರ್ಮಾಣದ ಅಗತ್ಯವನ್ನು ಮತ್ತೊಮ್ಮೆ ಎತ್ತಿ ಹೇಳಿತಲ್ಲದೆ ಕರ್ನಾಟಕ ರಾಜ್ಯಕ್ಕೆ ಮೈಸೂರು ಮಹಾರಾಜರು ಶಾಸನಬದ್ಧ ರಾಜರಾಗಿರುವುದು ವಿಹಿತವಾಗಿದೆಯೆಂದು ಅಭಿಪ್ರಾಯಪಟ್ಟಿತು. ಆದಕಾರಣ ಭಾರತ ಸಂವಿಧಾನದಲ್ಲಿ ಯಾವ ಕಾರ್ಯವಿಧಾನ ಸೂಚಿಸಲಾಗಿದೆಯೋ ಅದರಂತೆ ಕರ್ನಾಟಕ ರಾಜ್ಯ ನಿರ್ಮಾಣವಾಗಬೇಕೆಂದು ನಿರ್ಣಯಿಸಿತು. ಮೈಸೂರು ಸಂಸ್ಥಾನದ ಮತ್ತು ಹಿಂದಿನ ಬ್ರಿಟಿಷ್ ಕರ್ನಾಟಕ ಭಾಗಗಳ ಆರ್ಥಿಕ ಹಿತಗಳು ಸಮಾನವಾಗಿವೆಯಾದ್ದರಿಂದ ಸಮಸ್ತ ಕರ್ನಾಟಕವೂ ಸರ್ವತೋಮುಖ ಪ್ರಗತಿ ಸಾಧಿಸುವ ಸಲುವಾಗಿ ಸಂಯುಕ್ತ ಕರ್ನಾಟಕ ರಾಜ್ಯ ನಿರ್ಮಾಣವಾಗಬೇಕೆಂದೂ ಅದಕ್ಕೆ ಮೈಸೂರು ಮಹಾರಾಜರೇ ಶಾಸನಬದ್ಧ ರಾಜರಾಗಬೇಕೆಂದೂ ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿಯೂ ಜನವರಿ 19ರಂದು ನಿರ್ಣಯಿಸಿತು.

ಧಾರ್ ಸಮಿತಿಯು ನಿರ್ಧಾರದಿಂದ, ತ್ರಿಮೂರ್ತಿಗಳ ಸೂಚನೆಯಿಂದ ಕರ್ನಾಟಕದಲ್ಲೆಲ್ಲ ಅಸಮಾಧಾನ ಹಬ್ಬಿತು. ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿ ಅಸಹಕಾರ ಚಳವಳಿಯನ್ನಾರಂಭಿಸಲು ಸಹ ಸಿದ್ಧವಾಯಿತು. ಕೇಂದ್ರ ಮತ್ತು ಪ್ರಾಂತ್ಯಗಳ ಶಾಸನಸಭಾ ಸ್ಥಾನಗಳಿಗೆ ಕನ್ನಡ

ಭಾಗಗಳ ಶಾಸಕರು ರಾಜೀನಾಮೆ ಕೊಡಲು ಒಪ್ಪಿಗೆ ಕೊಡಬೇಕೆಂದು ಅವುಗಳ ಕನ್ನಡ ಶಾಸಕರು ಸಮಿತಿಯನ್ನು ಕೇಳಿದರು. ಆಂಧ್ರ ಪ್ರಾಂತ್ಯ ನಿರ್ಮಾಣದೊಂದಿಗೆ ಕರ್ನಾಟಕ ಪ್ರಾಂತ್ಯ ನಿರ್ಮಾಣವೂ ಆಗಬೇಕೆಂದು ಅವರ ನಿಲವು. ಪರಿಸ್ಥಿತಿ ವಿಷಮಿಸುತ್ತ ಬಂತು. 1950 ಜನವರಿ 19ರಂದು ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿಯ ಮಂಡಲ ಸಭೆ ಸೇರಿ ಪರಿಸ್ಥಿತಿಯನ್ನು ಪರಿಶೀಲಿಸಿತು. ಕರ್ನಾಟಕ ಏಕೀಕರಣವಾಗದೆ ರಾಷ್ಟ್ರೀಯ ಪುರ್ನನಿರ್ಮಾಣ ಕಾರ್ಯದಲ್ಲಿ ಛಿದ್ರ ಕನ್ನಡ ನಾಡು ಏನನ್ನೂ ಮಾಡಲಾರದು. ಕರ್ನಾಟಕ ಪ್ರಾಂತ್ಯ ನಿರ್ಮಾಣ ಕಾರ್ಯವನ್ನು ತಡಮಾಡಿದಷ್ಟೂ ಕನ್ನಡ ನಾಡಿನ ಸಾರ್ವಜನಿಕ ಜೀವನ ಶಿಥಿಲವಾಗುತ್ತ ಬರುತ್ತದೆ. ಆದಕಾರಣ ತತ್‍ಕ್ಷಣ ಕರ್ನಾಟಕ ಪ್ರಾಂತ್ಯ ನಿರ್ಮಾಣಕ್ಕೆ ಏನೇನು ಪರಿಣಾಮಕಾರಿ ಕ್ರಮಗಳನ್ನು ಕೈಕೊಳ್ಳಬೇಕೋ ಅವುಗಳನ್ನೆಲ್ಲ ತೆಗೆದುಕೊಳ್ಳಬೇಕು. ಕೂಡಲೆ ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿಯ ಅಧಿವೇಶನವನ್ನು ಕರೆಯಬೇಕು ಎಂದು ಅದು ತೀರ್ಮಾನಿಸಿತು.

1951 ಜೂನ್ ತಿಂಗಳಲ್ಲಿ ಬೆಂಗಳೂರಿನಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಮಿತಿ ಸಮಾವೇಶಗೊಂಡಿದ್ದ ಸಮಯದಲ್ಲಿ ಅದರ ಮುಂದಿಡಲಾದ ಕಾಂಗ್ರೆಸ್ ಚುನಾವಣಾ ಪ್ರಣಾಳಿಕೆಯಲ್ಲಿ ಭಾಷಾನುಗುಣ ರಾಜ್ಯ ರಚನೆಯ ಬಗ್ಗೆ ಆ ಸಂಸ್ಥೆಯ ನಿಲುವೇನೆಂಬುದು ಸ್ಪಷ್ಟವಾಗಿತ್ತು. ಅಲ್ಲಿ ಈ ವಿಚಾರವಾಗಿ ಹೀಗೆ ಹೇಳಲಾಗಿತ್ತು; ಭಾಷೆಗಳ ಆಧಾರದ ಮೇಲೆ ಪ್ರಾಂತ್ಯಗಳ ಪುನರ್ವಿಭಾಗ ಮಾಡಬೇಕೆಂದು ದಕ್ಷಿಣ ಭಾರತದಲ್ಲೂ ಪಶ್ಚಿಮ ಭಾರತದಲ್ಲೂ ಜನ ಮೇಲಿಂದ ಮೇಲೆ ಒತ್ತಾಯ ಮಾಡುತ್ತಿದ್ದಾರೆ. ಎಷ್ಟೋ ವರ್ಷಗಳ ಹಿಂದೆಯೇ ಕಾಂಗ್ರೆಸ್ ಭಾಷಾನುಗುಣ ಪ್ರಾಂತ್ಯರಚನಾತತ್ತ್ವವನ್ನಂಗೀಕರಿಸಿತು. ಕಟ್ಟಕಡೆಯ ನಿರ್ಣಯವಾದರೋ ಸಂಬಂಧಪಟ್ಟ ಜನರ ಅಪೇಕ್ಷೆಯನ್ನೇ ಅವಲಂಬಿಸಿದೆ. ಭಾಷೆಗಳ ಆಧಾರದ ಮೇಲೆ ನಿರ್ಮಾಣವಾಗುವ ಪ್ರಾಂತ್ಯಗಳ ವಾದಕ್ಕೆ ಸಾಂಸ್ಕೃತಿಕವಾಗಿ ಅಮೂಲ್ಯ ಬೆಲೆ ಇದೆ. ಆದರೂ ಆರ್ಥಿಕ, ಆಡಳಿತ, ಹಣಕಾಸಿನ ವಿಚಾರಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಎಲ್ಲಿ ಜನ ಏಕಾಭಿಪ್ರಾಯದಿಂದ ಕೂಡಿ, ಇಂಥ ಪ್ರಾಂತ್ಯಬೇಕೆಂದು ಬೇಡುವರೋ ಅಲ್ಲೆಲ್ಲ ತಕ್ಕ ಕಾರ್ಯಕ್ರಮವನ್ನು ಕೈಕೊಳ್ಳಲಾಗುತ್ತದೆ. ಸಂವಿಧಾನಬದ್ಧವಾಗಿ ಕಾರ್ಯಸಾಧನೆ ಮಾಡಲಾಗುತ್ತದೆ. ಪ್ರಾಂತ್ಯಗಳ ಚತುಸ್ಸೀಮೆಗಳನ್ನು ನಿಶ್ಚಯಮಾಡಲು ಗಡಿ ಸಮಿತಿಗಳನ್ನು ನೇಮಿಸಲಾಗುತ್ತದೆ.

ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧಿವೇಶನ ಕಾಲದಲ್ಲೇ ಬೆಂಗಳೂರಿನಲ್ಲಿ ಕರ್ನಾಟಕ ಏಕೀಕರಣ ಸಮ್ಮೇಳನ ನಡೆಯಿತು. ಮೈಸೂರನ್ನೊಳಗೊಂಡ ಕರ್ನಾಟಕ ರಾಜ್ಯ ಸ್ಥಾಪನೆಯಾಗಬೇಕು, ಮೈಸೂರು ಮಹಾರಾಜರೇ ಕರ್ನಾಟಕದ ರಾಜಪ್ರಮುಖರಾಗಬೇಕು ಎಂಬುದಾಗಿ ಅಲ್ಲಿ ಸರ್ವಾನುಮತದಿಂದ ನಿರ್ಣಯಿಸಲಾಯಿತು. ಅದೇ ವಾರದಲ್ಲೇ ಬೆಂಗಳೂರಿನಲ್ಲಿ ಮಹಾರಾಷ್ಟ್ರ, ವಿದರ್ಭ, ಕರ್ನಾಟಕ, ತಮಿಳುನಾಡು, ಕೇರಳ, ಆಂಧ್ರ, ನಾಗಪುರಗಳ ಪ್ರತಿನಿಧಿಗಳು ಸಭೆ ಸೇರಿ ದಕ್ಷಿಣ ಮತ್ತು ಪಶ್ಚಿಮ ಭಾರತಗಳಲ್ಲಿ ಕೂಡಲೆ ಭಾಷಾನುಗುಣ ಪ್ರಾಂತ್ಯ ನಿರ್ಮಾಣವಾಗಬೇಕೆಂದು ಸರ್ವಾನುಮತದಿಂದ ನಿರ್ಣಯ ಮಾಡಿದರು. ಕಾಂಗ್ರೆಸ್ ಮಹಾ ಚುನಾವಣೆಗಳ ಘೋಷಣೆ ಪತ್ರದಲ್ಲಿ ಭಾಷಾನುಗುಣ ಪ್ರಾಂತ್ಯ ರಚನೆಯ ವಿಚಾರ ಸೇರಿಸಿದ್ದನ್ನು ಸ್ವಾಗತಿಸಿದರು. 1951ರಲ್ಲಿ ರಾಷ್ಟ್ರಪತಿ ರಾಜೇಂದ್ರ ಪ್ರಸಾದರು ಬೆಂಗಳೂರಿಗೆ ಬಂದಿದ್ದಾಗ ಬಿ.ಶಿವಮೂರ್ತಿಶಾಸ್ತ್ರಿಗಳ ನೇತೃತ್ವದಲ್ಲಿ ನಿಯೋಗವೊಂದು ಅವರಿಗೆ ಕರ್ನಾಟಕ ಏಕೀಕರಣದ ಬಗ್ಗೆ ಒಂದು ಮನವಿ ಸಲ್ಲಿಸಿತು.

1952ರಲ್ಲಿ ನಡೆದ ಪ್ರಥಮ ಮಹಾಚುನಾವಣೆಗಳಲ್ಲಿ ಭಾರತದ ಕೇಂದ್ರ ರಾಜ್ಯಗಳ ಸಭೆಗಳಿಗೆ ಕಾಂಗ್ರೆಸ್ ಅಭ್ಯರ್ಥಿಗಳೇ ಬಹು ಸಂಖ್ಯೆಯಲ್ಲಿ ಗೆದ್ದು ಬಂದರು. ಕಾಂಗ್ರೆಸ್ ಸರ್ಕಾರಗಳ ಸ್ಥಾಪನೆಯಾಯಿತು. ಆದರೆ ಆಂಧ್ರ ನಿರ್ಮಾಣವನ್ನಲ್ಲದೆ ಸದ್ಯಕ್ಕೆ ಮತ್ತೆ ಯಾವ ಪ್ರಾಂತ್ಯ ನಿರ್ಮಾಣ ಕಾರ್ಯವನ್ನೂ ಆರಂಭಿಸಲಾಗದೆಂದೂ ಭಾಷಾನುಗುಣವಾಗಿ ಪ್ರಾಂತ್ಯಗಳ ಪುನರ್ನಿರ್ಮಾಣವಾಗಬೇಕೆಂಬ ತತ್ತ್ವವನ್ನು ಕಾಂಗ್ರೆಸ್ ಅಂಗೀಕರಿಸುತ್ತದೆ ಯಾದರೂ ಸದ್ಯಕ್ಕೆ ಅಂಥ ಪ್ರಾಂತ್ಯಗಳ ನಿರ್ಮಾಣ ಪ್ರಯತ್ನಗಳನ್ನು ನಿಲ್ಲಿಸತಕ್ಕದ್ದೆಂದೂ 1953ರಲ್ಲಿ ಹೈದರಾಬಾದಿನಲ್ಲಿ ಸೇರಿದ್ದ ಕಾಂಗ್ರೆಸ್ ಅಧಿವೇಶನದಲ್ಲಿ ನಿರ್ಣಯವಾಯಿತು. ಇದು ಜನಕ್ಕೆ ತೃಪ್ತಿ ನೀಡಲಿಲ್ಲ. ಆಂಧ್ರದ ನಿರ್ಮಾಣವಾದಾಗ ಬಳ್ಳಾರಿ ಜಿಲ್ಲೆಯ ಏಳು ತಾಲ್ಲೂಕುಗಳನ್ನು ಮೈಸೂರಿಗೆ ಸೇರಿಸಿದಾಗ ಅದನ್ನು ಸ್ವಾಗತಿಸಿದ ಮೈಸೂರು ಅಖಂಡ ಕರ್ನಾಟಕ ನಿರ್ಮಾಣಕ್ಕೆ ಅಡ್ಡಿಯಾಗದೆಂದು ಅನೇಕ ಮುಖಂಡರು ಅಭಿಪ್ರಾಯ ಪಟ್ಟರಾದರೂ ಏನೂ ಪ್ರಯೋಜನವಾಗಲಿಲ್ಲ. ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿ ಮತ್ತೆ ಸಭೆ ಸೇರಿ (1953) ಈ ಬಗ್ಗೆ ನಿರ್ಣಯ ಮಾಡಿ, ಜನರಲ್ಲಿ ಅಧಿಕವಾಗುತ್ತಿದ್ದ ಅಸಮಾಧಾನದ ಕಡೆಗೆ ಸರ್ಕಾರದ ಗಮನ ಸೆಳೆಯಿತಲ್ಲದೆ, 1954ರ ಅಂತ್ಯದೊಳಗಾಗಿ ಕರ್ನಾಟಕ ರಾಜ್ಯ ನಿರ್ಮಾಣವಾಗಬೇಕೆಂದೂ ಕೇಂದ್ರ ಸರ್ಕಾರ ಯಾವ ಸಂದೇಹಕ್ಕೂ ಆಸ್ಪದ ಕೊಡದೆ, ಸ್ಪಷ್ಟವಾಗಿ 1953 ಅಕ್ಟೋಬರ್ ತಿಂಗಳೊಳಗಾಗಿ ಈ ಬಗ್ಗೆ ತನ್ನ ನಿಶ್ಚಯವನ್ನು ಪ್ರಕಟಿಸಬೇಕೆಂದೂ ಈ ಎರಡು ಬೇಡಿಕೆಗಳನ್ನೂ ಮಾನ್ಯಮಾಡುವಂತೆ ಅಖಿಲ ಭಾರತ ಕಾಂಗ್ರೆಸ್ ಸಮಿತಿ ಸರ್ಕಾರದ ಮೇಲೆ ಒತ್ತಾಯ ತರಬೇಕೆಂದೂ ಅಭಿಪ್ರಾಯಪಟ್ಟಿತು. ಅಖಿಲ ಭಾರತ ಕಾಂಗ್ರೆಸ್ ಸಮಿತಿಯೂ ಕೇಂದ್ರ ಸರ್ಕಾರವೂ ಸೂಚಿಸಿರುವ ಕಾಲಾವಧಿಯೊಳಗೆ ಬೇಡಿಕೆಗಳನ್ನು ಪೂರೈಸದೆ ಹೋದರೆ ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿಯ ಸದಸ್ಯರೂ ಕೇಂದ್ರ ಮತ್ತು ರಾಜ್ಯ ಶಾಸನ ಸಭೆಗಳ ಕನ್ನಡ ನಾಡಿನ ಸದಸ್ಯರೂ ತಂತಮ್ಮ ಸದಸ್ಯತ್ವಗಳಿಗೆ ರಾಜೀನಾಮೆ ಕೊಡತಕ್ಕದ್ದೆಂದು ತೀರ್ಮಾನಿಸಿತು.

ದಾವಣಗೆರೆಯಲ್ಲಿ ಸೇರಿದ್ದ ಅಖಿಲ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತೂ ಈ ಬಗ್ಗೆ ನಿರ್ಣಯ ಮಾಡಿ ಕರ್ನಾಟಕ ರಾಜ್ಯ ನಿರ್ಮಾಣಕಾರ್ಯ ಆರಂಭವಾಗದಿದ್ದರೆ ಶಾಂತಿಯುತ ಸಂಗ್ರಾಮವನ್ನಾರಂಭಿಸುವುದು ಖಂಡಿತವೆಂದು ಎಚ್ಚರಿಸಿತು.

1953 ಸೆಪ್ಟೆಂಬರ್ ಮಧ್ಯದವರೆಗೆ ಕೇಂದ್ರ ಸರ್ಕಾರ ಈ ಬಗ್ಗೆ ಕಾರ್ಯಪ್ರವೃತ್ತವಾಗುವ ಸೂಚನೆಗಳು ಕಂಡುಬರಲಿಲ್ಲ. ಆಗ ಈ ಬಗ್ಗೆ ಸರ್ಕಾರಕ್ಕೆ ಮನವರಿಕೆ ಮಾಡಿಕೊಡಲು ದೆಹಲಿಗೆ ಹೋಗಿದ್ದ ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿಯ ನಿಯೋಗಕ್ಕೆ ಪ್ರಧಾನಿಯಿಂದ ಭರವಸೆ ದೊರಕಿತ್ತು. ಅಧಿಕಾರ ನಿಯುಕ್ತ ಸಮಿತಿಗೆ ರಾಜ್ಯಗಳ ಪುನರ್ನಿರ್ಮಾಣ ಕುರಿತು ಸೂಕ್ತ ಸಲಹೆಗಳನ್ನು ನೀಡುವಂತೆ ಹೇಳಲಾಗುವುದೆಂದೂ 1953 ರೊಳಗಾಗಿ ಸಮಿತಿಯನ್ನು ನೇಮಿಸುವುದಾಗಿಯೂ ಆಶ್ವಾಸನೆ ಬಂತು.

1953 ಡಿಸೆಂಬರ್ 29ರಂದು ಸರ್ಕಾರ ಎಸ್.ಫಜಲ್ ಅಲಿ ಅಧ್ಯಕ್ಷ ಮತ್ತು ಎಚ್.ಎನ್.ಕುಂಜ್ರು, ಕೆ.ಎಂ.ಪಣಿಕ್ಕರ್ ಸದಸ್ಯರನ್ನೊಳಗೊಂಡ ಸಮಿತಿಯೊಂದನ್ನು ನೇಮಿಸಿತು. ಸಾರ್ವಜನಿಕರಿಂದ ಟಿಪ್ಪಣಿಗಳು, ಹೇಳಿಕೆಗಳು, ಲೇಖನಗಳು, ಅಂಕಿ ಅಂಶಗಳು ಮತ್ತು ನಕ್ಷೆಗಳನ್ನು ಈ ಸಮಿತಿ ಪಡೆಯಿತು. ಇದಕ್ಕೆ ಬಂದ ಲೇಖನಗಳು 1,52,250, ವಿಶಿಷ್ಟ ಪ್ರಬಂಧಗಳು 2,000. ಸದಸ್ಯರು 1954 ಏಪ್ರಿಲ್ ತಿಂಗಳಲ್ಲಿ 8 ದಿನಗಳ ಕಾಲ ಅಖಿಲ ಭಾರತ ಪ್ರವಾಸ ಕೈಕೊಂಡು 38,000 ಮೈಲಿಗಳ ಪ್ರಯಾಣ ಮಾಡಿ 104 ಸ್ಥಳಗಳನ್ನು ಸಂದರ್ಶಿಸಿ, 9,000ಕ್ಕೂ ಹೆಚ್ಚು ಜನರನ್ನು ಭೇಟಿ ಮಾಡಿದರು. 1955 ಸೆಪ್ಟೆಂಬರ್ 30ರಂದು ಸಮಿತಿ ವರದಿಯೊಪ್ಪಿಸಿತು.

ಕರ್ನಾಟಕ ರಾಜ್ಯ ನಿರ್ಮಾಣವಾಗಬೇಕೆಂದು ಫಜಲ್ ಅಲಿ ಸಮಿತಿ ಸಲಹೆ ಮಾಡಿ, ಈ ರಾಜ್ಯದಲ್ಲಿ ಕೆಳಗೆ ಹೆಸರಿಸಿರುವ ಪ್ರದೇಶಗಳಿರತಕ್ಕದ್ದೆಂದು ಸೂಚಿಸಿತು: 1 ಆಗ ನಿರ್ಮಾಣವಾಗಿದ್ದ ಬಳ್ಳಾರಿ ಜಿಲ್ಲೆಯ ಸಿರಗುಪ್ಪ, ಬಳ್ಳಾರಿ, ಹೊಸಪೇಟೆ ತಾಲ್ಲೂಕುಗಳು ಮತ್ತು ಕಟ್ಟೆ ಮತ್ತು ತುಂಗಭದ್ರಾ ಯೋಜನೆಯ ಮೂಲ ಕಾಮಗಾರಿಗಳು ಇರುವ ಮಲ್ಲಾಪುರಂ ಉಪ ತಾಲ್ಲೂಕಿನ ಸಣ್ಣ ಪ್ರದೇಶಗಳು -ಇವುಗಳನ್ನು ಬಿಟ್ಟು ಮೈಸೂರು ರಾಜ್ಯ; 2 ಮುಂಬಯಿ ರಾಜ್ಯದ ದಕ್ಷಿಣ ಭಾಗದ ಕನ್ನಡ ಭಾಷೆಯನ್ನಾಡುವ ನಾಲ್ಕು ಜಿಲ್ಲೆಗಳು, ಎಂದರೆ ಚಂದಗಡ ತಾಲ್ಲೂಕಿನ ವಿನಾ ಬೆಳಗಾಂವಿ, ಬಿಜಾಪುರ, ಧಾರವಾಡ, ಉತ್ತರ ಕನ್ನಡ; 3 ಹೈದರಾಬಾದ್ ಪ್ರಾಂತ್ಯದ ಬೀದರ್, ರಾಯಚೂರು ಮತ್ತು ಗುಲ್ಬರ್ಗ ಜಿಲ್ಲೆಗಳು; 4 ಕಾಸರಗೋಡು ತಾಲ್ಲೂಕಿನ ಹೊರತು ದಕ್ಷಿಣ ಕನ್ನಡ ಜಿಲ್ಲೆ; 5 ಮದರಾಸಿನ ಕೊಯಮತ್ತೂರು ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕು; ಮತ್ತು 6 ಕೊಡಗು.

ಮುಂದೆ ಏರ್ಪಡಲಿರುವ ಕರ್ನಾಟಕ ರಾಜ್ಯದ ಅಂಚಿನಲ್ಲಿರುವ ಕೆಲವು ಪ್ರದೇಶಗಳನ್ನು ಅಂದರೆ ಕೊಯಮತ್ತೂರು, ನೀಲಗಿರಿ, ಸೇಲಂ, ಚಿತ್ತೂರು, ಅನಂತಪುರ, ಕರ್ನೂಲು, ಕೊಲ್ಲಾಪುರ, ದಕ್ಷಿಣ ಸಾತಾರಾ

ಮತ್ತು ಸೊಲ್ಲಾಪುರ ಜಿಲ್ಲೆಗಳ ಕೆಲವು ಪ್ರದೇಶಗಳನ್ನು ಕರ್ನಾಟಕ ರಾಜ್ಯಕ್ಕೆ ವರ್ಗಾಯಿಸಬೇಕೆಂದು ಕೆಲವರು ಸಲಹೆ ಮಾಡಿದ್ದಾರೆ. ಆದರೆ ಆ ಪ್ರದೇಶಗಳನ್ನು ಕರ್ನಾಟಕ ರಾಜ್ಯಕ್ಕೆ ಸೇರಿಸುವುದಕ್ಕೆ ಎಲ್ಲ ಜನರ ಒಪ್ಪಿಗೆಯೂ ದೊರೆಯುವುದೆಂದು ನಿರೀಕ್ಷಿಸುವುದು ಅಸಾಧ್ಯ. ಜಿಲ್ಲೆಗಳನ್ನು ಒಡೆಯಬೇಕೆಂದು ಯಾವ ಸಲಹೆಯನ್ನೇ ಮಾಡಲಿ ಅದರಿಂದ ಬಹಳ ಹೆಚ್ಚಿನ ವಾದವಿವಾದಗಳು ಉದ್ಭವಿಸುತ್ತವೆ. ಇದನ್ನು ಎದುರಿಸಿ ಆ ಗಡಿಪ್ರದೇಶಗಳನ್ನು ಸರಿಪಡಿಸುವುದು ಬಹಳ ಕಷ್ಟವಾಗುತ್ತದೆ. ಇಷ್ಟೊಂದು ಕಷ್ಟಪಟ್ಟು ಆ ಪ್ರದೇಶಗಳನ್ನು ಕರ್ನಾಟಕ ರಾಜ್ಯಕ್ಕೆ ವರ್ಗಾಯಿಸುವುದು ಸಾಧುವೆಂದು ಹೇಳುವುದಕ್ಕಾಗುವುದಿಲ್ಲ ಎಂಬುದಾಗಿ ಫಜಲ್ ಅಲಿ ಆಯೋಗ ಅಭಿಪ್ರಾಯಪಟ್ಟಿತು. ನೂತನ ರಾಜ್ಯವನ್ನು ಕರ್ನಾಟಕವೆಂದೇ ಕರೆಯುವುದು ಸೂಕ್ತವೆಂಬುದು ಅದರ ಸಲಹೆ. ಫಜಲ್ ಅಲಿ ಆಯೋಗದ ವರದಿ ಪ್ರಕಟವಾದಾಗ ಕನ್ನಡ ನಾಡಿನ ಎಲ್ಲ ಪಕ್ಷಗಳೂ ಸಾಮಾನ್ಯವಾಗಿ ಅದರ ಸಲಹೆಗಳನ್ನು ಮಾನ್ಯ ಮಾಡಿದುವು. ಒಟ್ಟಿನಲ್ಲಿ ಜನರಿಗೆಲ್ಲ ಸಂತೋಷವಾಯಿತು. ಆದರೆ ಸಮಿತಿಯವರು ಕಾಸರಗೋಡನ್ನು ದಕ್ಷಿಣ ಕನ್ನಡ ಜಿಲ್ಲೆಯಿಂದ ಕಿತ್ತು ನೂತನ ಕೇರಳ ರಾಜ್ಯಕ್ಕೆ ಜೋಡಿಸಿದ್ದನ್ನೂ ಬಳ್ಳಾರಿ ಜಿಲ್ಲೆ ಕುರಿತು ಮಾಡಿದ ಸಲಹೆಗಳನ್ನೂ ಕನ್ನಡ ನಾಡಿನ ಜನ ಏಕಕಂಠದಿಂದ ಪ್ರತಿಭಟಿಸಿದರು.

1955 ನವೆಂಬರ್ 29, 30 ಮತ್ತು ಡಿಸೆಂಬರ್ 1ರಂದು ಮೈಸೂರು ವಿಧಾನ ಸಭೆ ಫಜಲ್ ಅಲಿ ಸಮಿತಿಯ ಶಿಫಾರಸುಗಳ ವಿಚಾರ ಮಾಡಿ ಬಳ್ಳಾರಿಯನ್ನು ಮೈಸೂರಿನಿಂದ ಪ್ರತ್ಯೇಕಗೊಳಿಸಬಾರದೆಂದೂ ನೂತನ ರಾಜ್ಯಕ್ಕೆ ಮೈಸೂರು ರಾಜ್ಯವೆಂದು ಹೆಸರಿಡಬೇಕೆಂದೂ ತೀರ್ಮಾನಕ್ಕೆ ಬಂತು. ಇದರಿಂದ ಕರ್ನಾಟಕ ರಾಜ್ಯಸ್ಥಾಪನೆ ಸ್ಥಿರಪಟ್ಟಿತು. ಎರಡು ಕರ್ನಾಟಕ ರಾಜ್ಯಗಳಾಗಲಿ ಎಂಬ ಕೂಗಿನ ಸದ್ದಡಗಿತು.

ಭಾರತ ಸರ್ಕಾರ ಫಜಲ್ ಅಲಿ ಸಮಿತಿಯ ವರದಿಯನ್ನು ಸಾರ್ವಜನಿಕರ ಅವಗಾಹನೆಗಾಗಿ 1955 ಅಕ್ಟೋಬರ್ 10ರಂದು ಪ್ರಕಟಿಸಿತು. ಅದಾದ ಮೇಲೆ 1956 ಜನವರಿ 16ರಂದು ರಾಜ್ಯ ಪುನರ್ನಿರ್ಮಾಣ ಕುರಿತು ಭಾರತ ಸರ್ಕಾರ ನಿರ್ಣಯಿಸಿ ವಿಧೇಯಕ ಸಿದ್ಧಗೊಳಿಸಿತು. ಆ ವಿಧೇಯಕವನ್ನು ವಿಧ್ಯುಕ್ತವಾಗಿ 1956 ಮಾರ್ಚ್ 16ರಂದು ಪ್ರಕಟಿಸಿ ಭಾರತ ಸರ್ಕಾರ ಅದನ್ನು ಲೋಕಸಭೆ ರಾಜ್ಯ ಸಭೆಗಳ ಮುಂದಿಟ್ಟಿತು. ಫಜಲ್ ಅಲಿ ಸಮಿತಿ 15 ರಾಜ್ಯಗಳನ್ನೂ 7 ಕೇಂದ್ರಾಡಳಿತ ಕ್ಷೇತ್ರಗಳನ್ನೂ ರಚಿಸಲು ಶಿಫಾರಸು ಮಾಡಿತ್ತು. ಎಲ್ಲ ರಾಜ್ಯಗಳ ವಿಧಾನಸಭೆಗಳಿಗೂ ವಿಧೇಯಕದ ಪ್ರತಿ ಕಳುಹಿಸಿ ಒಂದು ತಿಂಗಳೊಳಗೆ ಅವುಗಳ ಅಭಿಪ್ರಾಯವನ್ನು ಕೇಳಲಾಯಿತು.

ಕೇಂದ್ರ ಸರ್ಕಾರ ಬಳ್ಳಾರಿ ಕುರಿತು ಮೈಸೂರು ರಾಜ್ಯದ ಅಭಿಪ್ರಾಯವನ್ನು ಗಣನೆಗೆ ತೆಗೆದುಕೊಂಡು ಒಂದು ತಿರ್ಮಾನಕ್ಕೆ ಬಂತು. ಆ ತೀರ್ಮಾನವನ್ನು ವಿಧೇಯಕದ ಪ್ರಸ್ತಾವನೆಯಲ್ಲೇ ಪ್ರಕಟಿಸಿತು. ಕೇಂದ್ರ ಸರ್ಕಾರದ ನಿರ್ಣಯವಿದು: ತುಂಗಭದ್ರಾ ಯೋಜನೆಯ ಕಾರ್ಯದಕ್ಷತೆಯಿಂದ ಮತ್ತು ಅದು ನಿರಾಂತಕವಾಗಿ ನಡೆಯುವಂತೆ ಮಾಡಲು ಬಳ್ಳಾರಿ ಜಿಲ್ಲೆಯ ಕೆಲವು ಭಾಗಗಳನ್ನು ಆಂಧ್ರಪ್ರದೇಶಕ್ಕೆ ವರ್ಗಾಯಿಸಬೇಕೆಂದು ರಾಜ್ಯ ಪುನರ್ನಿರ್ಮಾಣ ಸಮಿತಿ ಸೂಚಿಸಿತ್ತಷ್ಟೆ. ಈ ಯೋಜನೆಯಲ್ಲಿ ರಾಯಲಸೀಮೆಯ ಜನರಿಗೆ ಅತ್ಯಂತ ಆಸ್ಥೆ ಇದೆಯೆಂಬುದನ್ನು ಭಾರತ ಸರ್ಕಾರ ಮಾನ್ಯ ಮಾಡುತ್ತದೆ. ಆದರೆ ಈ ಧ್ಯೇಯಸಾಧನೆಗೆ ಸಮಿತಿ ಸೂಚಿಸಿರುವಂತೆ ಕೆಲವು ಪ್ರದೇಶಗಳನ್ನು ವರ್ಗಾಯಿಸುವುದು ಅನಾವಶ್ಯಕವೆಂಬ ಅಭಿಪ್ರಾಯಕ್ಕೆ ಭಾರತ ಸರ್ಕಾರ ಬಂದಿದೆ. ಆಂಧ್ರ ಸರ್ಕಾರ ಮಹತ್ವ ಕೊಡುತ್ತಿರುವ ತುಂಗಭದ್ರಾ ಮೇಲ್ಮಟ್ಟದ ಕಾಲುವೆ ಯೋಜನೆಯಾದರೂ ಸರಿಯೆಂದು ಸರ್ಕಾರಕ್ಕೆ ಕಂಡುಬಂದಿದೆ. ಈ ಯೋಜನೆ ತ್ವರಿತವಾಗಿ ಮತ್ತು ಸಮಾಧಾನಕರವಾಗಿ ಆಚರಣೆಗೆ ಬರುವಂತೆ ಮಾಡಲು ಅವಶ್ಯ ಕ್ರಮಗಳನ್ನು ಕೈಕೊಳ್ಳುವುದೇ ಭಾರತ ಸರ್ಕಾರದ ಉದ್ದೇಶವಾಗಿದೆ. ಆದ್ದರಿಂದ ಸಮಿತಿ ತನ್ನ ಸೂಚನೆಮಾಡುವಾಗ ಯಾವ ಉದ್ದೇಶವನ್ನಿಟ್ಟುಕೊಂಡಿತ್ತೋ ಅದನ್ನು, ಪ್ರದೇಶಗಳನ್ನು ವರ್ಗಾಯಿಸದೆ ಅಥವಾ ಈ ಮೊದಲು ವಿವರವಾದ ವಿಚಾರಣೆಗಳ ಅನಂತರ ಬಗೆಹರಿದಿರುವ ಬಳ್ಳಾರಿ ಪ್ರಶ್ನೆಯನ್ನು ಪುನಃ ಎತ್ತದೆ, ಸಾಧಿಸಲಾಗುವುದು. ಹೆಸರನ್ನು ಕುರಿತು ಹೆಚ್ಚು ವಿವಾದ ಬೇಡವೆಂದೂ ರಾಜ್ಯಕ್ಕೆ ಮೈಸೂರು ರಾಜ್ಯವೆಂದೇ ಅಭಿಧಾನವಿರಲೆಂದೂ ಭಾರತ ಸರ್ಕಾರ ಅಭಿಪ್ರಾಯಪಟ್ಟಿತು. ಭಾರತ ಸರ್ಕಾರ ಸಿದ್ಧಗೊಳಿಸಿ ವಿಧಾನ ಸಭೆಗಳ ಮುಂದಿಟ್ಟ ವಿಧೇಯಕದ ಪ್ರಕಾರ ಮೈಸೂರು ರಾಜ್ಯದಲ್ಲಿ ಈ ಭಾಗಗಳು ಸೇರಿದುವು: 1. ಆಗಿನ ಮೈಸೂರು ರಾಜ್ಯ; 2. ಮುಂಬಯಿ ರಾಜ್ಯ (ಚಂದಗಡ ತಾಲ್ಲೂಕನ್ನು ಬಿಟ್ಟು) ಬೆಳಗಾಂವಿ ಜಿಲ್ಲೆ, ಧಾರವಾಡ, ಬಿಜಾಪುರ ಮತ್ತು ಉತ್ತರ ಕನ್ನಡ ಜಿಲ್ಲೆಗಳು; 3. ಹೈದರಾಬಾದ್ ರಾಜ್ಯದ ಗುಲ್ಬರ್ಗ ಜಿಲ್ಲೆ (ಕೋಡಂಗಲ್, ತಾಂಡೂರು ತಾಲ್ಲೂಕುಗಳನ್ನು ಬಿಟ್ಟು), ರಾಯಚೂರು ಜಿಲ್ಲೆ (ಆಲಂಪುರ, ಗದ್ವಾಲ್ ತಾಲ್ಲೂಕುಗಳನ್ನು ಬಿಟ್ಟು), ಮತ್ತು ಬಿದರೆ ಜಿಲ್ಲೆಯ ಬಿದರೆ, ಭಾಲ್ಕಿ, ಸಂತಪುರ, ಹುಮ್ನಾಬಾದ್ ತಾಲ್ಲೂಕುಗಳು; 4. ಮದರಾಸು ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆ (ಕಾಸರಗೋಡು ತಾಲ್ಲೂಕು, ಅಮೀನ್ ದೀವಿ ದ್ವೀಪಗಳನ್ನು ಬಿಟ್ಟು), ಮತ್ತು ಕೊಯಮತ್ತೂರು ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕು; 5. ಕೊಡಗು, ವಿಧೇಯಕ ವಿಧ್ಯುಕ್ತವಾಗಿ ಸಂಸತ್ತಿನ ಮುಂದೆ ಬಂತು. ಈ ಬಗ್ಗೆ ಪುನರ್ವಿಮರ್ಶಿತ ವಿಧೇಯಕವನ್ನು ಲೋಕಸಭೆ 1956 ಜೂನ್ 10ರಂದು ಅಂಗೀಕರಿಸಿತು. ರಾಜ್ಯಸಭೆ ಆಗಸ್ಟ್ 25ರಂದು ತನ್ನ ಒಪ್ಪಿಗೆ ಕೊಟ್ಟಿತು. ಆಗಸ್ಟ್ 31ರಂದು ವಿಧೇಯಕಕ್ಕೆ ರಾಷ್ಟ್ರಪತಿಗಳ ಸಹಿಯಾಯಿತು. ಅಂದಿನಿಂದ ಅದು ಅಧಿನಿಯಮವಾಯಿತು. ನವೆಂಬರ್ 1ರಂದು ಹೊಸ ಮೈಸೂರು ರಾಜ್ಯ ಉದಯವಾಯಿತು. ಕನ್ನಡ ನಾಡಿನ ಜನರ ಸುಮಾರು 65 ವರ್ಷಗಳ ಅವಿಶ್ರಾಂತ ಚಳವಳಿಯ ಫಲವಾಗಿ ಛಿದ್ರವಾಗಿದ್ದ ಕನ್ನಡ ಪ್ರದೇಶಗಳು ಒಂದು ಆಡಳಿತದ ಅಡಿಗೆ ಬಂದವು. ಅನಂತರದಲ್ಲಿ ರಾಜ್ಯಕ್ಕೆ ಕರ್ನಾಟಕ ಎಂದು ಹೆಸರಿಡಲಾಯಿತು (1973).

ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ ಮತ್ತು ಆಡಳಿತದ ಕಾರಣಗಳಿಂದ ಕರ್ನಾಟಕಕ್ಕೆ ಸೇರಬೇಕಾಗಿದ್ದ ಕೆಲವು ಭಾಗಗಳು ಬಿಟ್ಟು ಹೋಗಿವೆಯೆಂಬುದಾಗಿಯೂ ಭಾವಿಸಲಾಗಿದೆ. ಕಾಸರಗೋಡು, ನೀಲಗಿರಿ, ಹೊಸೂರು, ತಾಳವಾಡಿ, ಮಡಕಶಿರ, ಆಲೂರು, ಆದವಾನಿ, ರಾಯದುರ್ಗ, ದೇಗಲೂರು, ಸೊಲ್ಲಾಪುರ, ಅಕ್ಕಲಕೋಟೆ, ಜತ್ತ, ಗಡಹಿಂಗ್ಲಜ ಇವು ಈ ಭಾಗಗಳು. ಮಹಾರಾಷ್ಟ್ರ ಮೈಸೂರು ಗಡಿ ವಿವಾದವನ್ನು ಪುನರ್ವಿಮರ್ಶಿಸಿ ಇತ್ಯರ್ಥಪಡಿಸಲು ನೇಮಕವಾಗಿದ್ದ ಮಹಾಜನ ಆಯೋಗ ಅಕ್ಕಲಕೋಟೆ, ಜತ್ತ ಮತ್ತು ಕಾಸರಗೋಡುಗಳು ಕರ್ನಾಟಕಕ್ಕೂ ನಿಪ್ಪಾಣಿ, ಖಾನಾಪುರ, ಹಳಿಯಾಳ ಮೊದಲಾದುವು ಮಹಾರಾಷ್ಟ್ರಕ್ಕೂ ಸೇರಬೇಕೆಂದೂ ಬೆಳಗಾಂವಿ ಕರ್ನಾಟಕ ರಾಜ್ಯದಲ್ಲೇ ಉಳಿಯಬೇಕೆಂದೂ ತೀರ್ಪುನೀಡಿತು. ಈ ಗಡಿ ಹೊಂದಾಣಿಕೆಗಳ ಬಗ್ಗೆ ಇನ್ನೂ ತೀರ್ಮಾನವಾಗಿಲ್ಲ. (ಟಿ.ಟಿ.ಎಸ್.)

**ಕರ್ನಾಟಕ ಗ್ಯಾಸೆಟಿಯರ್** : ಒಂದು ಪ್ರದೇಶದ ಅಥವಾ ಜಿಲ್ಲೆಯ ನಿಖರವಾದ ಸಮಗ್ರವಾದ ಸ್ಥಳೀಯ ಮಾಹಿತಿ ಒದಗಿಸುವ ಆಕರ ಗ್ರಂಥವೇ ಗ್ಯಾಸೆಟಿಯರ್ (ದೇಶ ವಿಷಯಕೋಶ.)

ಗ್ಯಾಸೆಟಿಯರ್ ಎಂಬುದು ಆಧುನಿಕ ನಮೂನೆಯ ಮಾಹಿತಿಕೋಶ. ಇದೇ ಬಗೆಯ ಕಲ್ಪನೆ ಮತ್ತು ಉದ್ದೇಶಗಳನ್ನೊಳಗೊಂಡ ಗ್ರಂಥಗಳು ಪ್ರಾಚೀನ ಭಾರತೀಯರಲ್ಲಿದ್ದವು. ವಾಯುಪುರಾಣದಲ್ಲಿರುವ ಭೌಗೋಳಿಕ ವಿವರಣೆ, ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಬರುವ ಭೂಮಿ, ಹವಾಮಾನ, ಸಂಪನ್ಮೂಲ ಆಡಳಿತ ವಿಭಾಗಗಳು, ತೆರಿಗೆಗಳ ವಿವರ, ಸಂಸ್ಕೃತದಲ್ಲಿರುವ ವರಾಹಮಿಹಿರನ ಬೃಹತ್ ಸಂಹಿತೆ, ಸೋಮೇಶ್ವರನ ಮಾನಸೋಲ್ಲಾಸ ಮೊದಲಾದ ಕೃತಿಗಳಲ್ಲಿರುವ ಸಂಕ್ಷಿಪ್ತ ಮಾಹಿತಿಗಳೂ ಗ್ಯಾಸೆಟಿಯರ್‌ನಲ್ಲಿ ಕಂಡುಬರುವ ವಿವರಗಳನ್ನು ತಕ್ಕಮಟ್ಟಿಗೆ ಹೋಲುತ್ತವೆ. ಸ್ಥಳ ಪುರಾಣಗಳು ಮತ್ತು ಪಾಶ್ಚಾತ್ಯ ಪ್ರವಾಸಿಗಳು ಒದಗಿಸಿರುವ ಕಥನಗಳು ಇದೇ ಗುಂಪಿಗೆ ಸೇರುತ್ತವೆ. ಅಬುಲ್ ಫಜಲನ ಡಿನ್-ಇ-ಅಕ್ಬರಿ ಗ್ಯಾಸೆಟಿಯರ್ ಮಾದರಿಯ ಗ್ರಂಥ.

ಕೈಗಾರಿಕಾ ಕ್ರಾಂತಿ, ಆಧುನಿಕ ಗ್ಯಾಸೆಟಿಯರ್‌ಗಳ ಪ್ರಕಟಣೆಗೆ ದಾರಿ ಮಾಡಿಕೊಟ್ಟಿತು. ಭಾರತದ ಅತ್ಯಂತ ಹಳೆಯ ಗ್ಯಾಸೆಟಿಯರ್‌ಗಳೆಂದರೆ ಈಸ್ಟ್ ಇಂಡಿಯ ಕಂಪನಿಯವು. ಆಂಗ್ಲರ ಆಡಳಿತದ ಅಂಗವಾಗಿ ಬಂದ ಗ್ಯಾಸೆಟಿಯರ್‌ಗಳು ಪ್ರಾರಂಭದಲ್ಲಿ ಆಂಗ್ಲ ಭಾಷೆಯಲ್ಲಿ ಪ್ರಕಟಗೊಂಡವು.

ಆಂಗ್ಲ ಅಧಿಕಾರಿಗಳ ಆಡಳಿತಾನುಕೂಲಕ್ಕಾಗಿ ವಾಲ್ಟರ್ ಹ್ಯಾಮಿಲ್ಟನ್ ಮತ್ತು ಎಡ್ವರ್ಡ್ ಥಾರ್ನಟನ್ 1815ರಲ್ಲಿ ಸಿದ್ಧಪಡಿಸಿದ ಈಸ್ಟ್ ಇಂಡಿಯಾ ಗ್ಯಾಸೆಟಿಯರ್, ಅನಂತರ 1854ರಲ್ಲಿ ಗ್ಯಾಸೆಟಿಯರ್ ಆಫ್ ದಿ ಟೆರಿಟರಿಸ್ ಅಂಡರ್ ದಿ ಈಸ್ಟ್ ಇಂಡಿಯ ಕಂಪನಿ ಎಂಬ ಕೃತಿಗಳು ಭಾರತದಲ್ಲಿ ಬೆಳಕು ಕಂಡ ತೀರಾ ಮೊದಲಿನ ಗ್ಯಾಸೆಟಿಯರ್‌ಗಳು. 1874-84ರ ಅವಧಿಯಲ್ಲಿ ಮುಂಬಯಿ ಪ್ರಾಂತ್ಯದ

ಜಿಲ್ಲೆಗಳ ಬಗ್ಗೆ ಅತ್ಯಂತ ಮಹತ್ವದ ಮಾಹಿತಿಗಳನ್ನೊಳಗೊಂಡ ಜಿಲ್ಲಾ ಗ್ಯಾಸೆಟಿಯರ್‌ಗಳನ್ನು ಜೇಮ್ಸ್ ಕ್ಯಾಂಪಬೆಲ್ ಪ್ರಕಟಿಸಿದ. ಅನಂತರ ಬಿ.ಎಲ್.ರೈಸ್ ಅವರು 1877-78ರಲ್ಲಿ ಹಳೆಯ ಮೈಸೂರು ರಾಜ್ಯದ ಕೊಡಗು ಸೇರಿದಂತೆ ಮೂರು ಸಂಪುಟಗಳಲ್ಲಿ ಗ್ಯಾಸೆಟಿಯರ್ ಪ್ರಕಟಿಸಿದರು. ಇವುಗಳನ್ನು ಪುನಃ 1907ರಲ್ಲಿ ಪರಿಷ್ಕರಿಸಲಾಯಿತು. 1881ರಲ್ಲಿ ಸರ್ ವಿಲಿಯಂ ಹಂಟರ್ ಅವರ ನೇತೃತ್ವದಲ್ಲಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯದ ಒಂಬತ್ತು ಸಂಪುಟಗಳು ಪ್ರಕಟಗೊಂಡವು. ಹೈದರಾಬಾದ್ ಸರ್ಕಾರ 1921ರಲ್ಲಿ ಈ ಪ್ರಕಟಣೆಗಳನ್ನು ಬಳಕೆಗೆ ತಂದಿತು.

ಹಳೆಯ ಮೈಸೂರು ರಾಜ್ಯಕ್ಕೆ (ಈಗ ಕರ್ನಾಟಕ) ಸಂಬಂಧಿಸಿದಂತೆ ಸಿ.ಹಯವದನರಾವ್ ಅವರು 20ನೆಯ ಶತಮಾನದ ಮೂರನೆಯ ದಶಕದಲ್ಲಿ ಮೈಸೂರು ಗ್ಯಾಸೆಟಿಯರ್‌ಗಳನ್ನು ಎಂಟು ಭಾಗಗಳಲ್ಲಿ ಹೊರತಂದರು. ಸ್ವಾತಂತ್ರ್ಯಾನಂತರ ಕೇಂದ್ರ ಸರ್ಕಾರ ನೇಮಿಸಿದ ತಜ್ಞರ ಸಮಿತಿಯ ಶಿಫಾರಸ್ಸಿನಂತೆ ಪ್ರತಿರಾಜ್ಯವೂ ಗ್ಯಾಸೆಟಿಯರ್ ಪ್ರಕಟಣಾ ಕಾರ್ಯ ಕೈಗೊಂಡವು (1955). ಸಮಿತಿಯ ಮಾರ್ಗ ಸೂಚಿಯಂತೆ ಹಿಂದಿನ ಗ್ಯಾಸೆಟಿಯರ್‌ಗಳ ಪರಿಷ್ಕರಣ ಹಾಗೂ ಪುನರ್ ಮುದ್ರಣ ಕಾರ್ಯ ಪ್ರಾರಂಭವಾಯಿತು. ರಾಜ್ಯಗಳ ಗ್ಯಾಸೆಟಿಯರ್‌ಗಳನ್ನು ಪ್ರಕಟಿಸುವ ಕಾರ್ಯವು ಚಾಲನೆಗೊಂಡಿತು. ರಾಜ್ಯ ಗ್ಯಾಸೆಟಿಯರನ್ನು ಪ್ರಕಟಿಸಿದ ಮೊದಲನೆಯ ರಾಜ್ಯ ಕರ್ನಾಟಕ. ಪ್ರಾದೇಶಿಕ ಭಾಷೆಯಲ್ಲಿ ಪ್ರಕಟಿಸುವಲ್ಲಿಯೂ ಪ್ರಥಮ ದಾಖಲೆ ಸ್ಥಾಪಿಸಿದ್ದೂ ಕರ್ನಾಟಕವೇ.

ಕರ್ನಾಟಕ ರಾಜ್ಯ ಸರ್ಕಾರ 1958ರಲ್ಲಿ ಗ್ಯಾಸೆಟಿಯರ್ ಘಟಕ ಪ್ರಾರಂಭಿಸಿತು. ರಾಜ್ಯದ ಆಯಾ ಜಿಲ್ಲೆಗೆ ಸಂಬಂಧಿಸಿದ ಸಮಕಾಲೀನ ಮತ್ತು ಪ್ರಾಚೀನ ವಿಷಯಗಳನ್ನು ಒಳಗೊಂಡಿರುವ ಅತ್ಯಂತ ಮೌಲಿಕ ಹಾಗೂ ಬಹೂಪಯೋಗಿ ಆಕರ ಗ್ರಂಥ ಗ್ಯಾಸೆಟಿಯರ್. ಕರ್ನಾಟಕ ರಾಜ್ಯದ ರಜತ ಮಹೋತ್ಸವದ ಸವಿ ನೆನಪಿಗಾಗಿ 1984ರಲ್ಲಿ ಮೊದಲ ಬಾರಿ ಕನ್ನಡದಲ್ಲಿ ಗ್ಯಾಸೆಟಿಯರ್ ಪ್ರಕಟಿಸಲಾಯಿತು.

ಬಹುಕಾಲ ನಿಲ್ಲಬಹುದಾದ ವಿಶ್ವಕೋಶ ಮಾದರಿಯ ಸರ್ಕಾರದ ಅಧಿಕೃತ ಪ್ರಕಟಣೆಯ ಆಕರ ಗ್ರಂಥಗಳಾದ ಇವು ಒಂದು ಪ್ರದೇಶದ ಸಮಗ್ರ ಕೈಪಿಡಿಯಾಗಿ ಅಧ್ಯಯನಶೀಲರಿಗೆ, ವೃತ್ತಿನಿರತರಿಗೆ, ಆಡಳಿತಗಾರರಿಗೆ ಉಪಯುಕ್ತ ಮಾಹಿತಿ ನೀಡಬಲ್ಲ ಗ್ರಂಥಗಳಾಗಿವೆ.

ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಜನಗಣತಿ ಇಲಾಖೆ ಸರ್ಕಾರದ ಇತರೆ ಇಲಾಖೆಗಳ ವಿವಿಧ ಆಕರ ಗ್ರಂಥಗಳ ಹಾಗೂ ಸ್ಥಳೀಯ ಸಂಪನ್ಮೂಲ ವ್ಯಕ್ತಿಗಳಿಂದ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸುವ ಮಾಹಿತಿಗಳನ್ನು ಆಧರಿಸಿ ಮುಖ್ಯ ಸಂಪಾದಕರ ಮಾರ್ಗದರ್ಶನದಲ್ಲಿ ಸಂಪಾದಕರು ಸಿದ್ಧಪಡಿಸುವ ಗ್ಯಾಸೆಟಿಯರ್‌ಗಳನ್ನು ಪರಿಶೀಲಿಸಲು ಸರ್ಕಾರ ತಜ್ಞರ ಸಮಿತಿ ನೇಮಿಸಿದೆ. ಈ ಸಮಿತಿಯಲ್ಲಿ ಆಯಾ ಜಿಲ್ಲೆಗೆ ಸಂಬಂಧಿಸಿದ ವಿಷಯತಜ್ಞರೂ ಭಾಷಾಕೋವಿದರೂ ಸದಸ್ಯರಾಗಿರುತ್ತಾರೆ. ರಾಜ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿಯವರು ಅಧ್ಯಕ್ಷರಾಗಿರುತ್ತಾರೆ. ಗ್ಯಾಸೆಟಿಯರ್ ಇಲಾಖೆಯ ಮುಖ್ಯ ಸಂಪಾದಕರು ಸದಸ್ಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಾರೆ.

ಸಂಪಾದಕ ವರ್ಗ, ಅನ್ವೇಷಕರು ಮತ್ತು ಅಗತ್ಯ ಕಛೇರಿ ಸಿಬ್ಬಂದಿಯನ್ನು ಹೊಂದಿರುವ ಈ ಇಲಾಖೆ ಬೆಂಗಳೂರಿನಲ್ಲಿದ್ದು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಡಳಿತಕ್ಕೊಳಪಟ್ಟ ಸರ್ಕಾರಿ ಕಛೇರಿ ಇದಾಗಿದೆ.

ಗ್ಯಾಸೆಟಿಯರ್ ಸ್ವರೂಪ ಕೇಂದ್ರ ಸರ್ಕಾರದ ಗ್ಯಾಸೆಟಿಯರ್ ಮಾದರಿಯಲ್ಲಿ ಸ್ಥಳೀಯ ಅಗತ್ಯಕ್ಕೆ ಸೂಕ್ತವೆನಿಸಿದ ಮಾರ್ಪಾಡಿನೊಂದಿಗೆ ರಚನೆಯಾಗುತ್ತದೆ. ಸಾಮಾನ್ಯವಾಗಿ ಪ್ರತಿ ಗ್ಯಾಸೆಟಿಯರ್ ಈ ಕೆಳಕಂಡ 17 ಅಧ್ಯಾಯಗಳಲ್ಲಿ ವಿವಿಧ ಮಾಹಿತಿಗಳನ್ನು ನೀಡುವಂತಿರುತ್ತದೆ.

1.ಪ್ರಾಸ್ತಾವಿಕ, 2.ಇತಿಹಾಸ, 3.ಜನತೆ, 4.ಕೃಷಿ ಮತ್ತು ನೀರಾವರಿ, 5.ಕೈಗಾರಿಕೆ, 6.ಬ್ಯಾಂಕಿಂಗ್ ಹಣಕಾಸು ವ್ಯವಹಾರ ಮತ್ತು ವಾಣಿಜ್ಯ, 7.ಸಾರಿಗೆ ಮತ್ತು ಸಂಪರ್ಕ, 8.ಆರ್ಥಿಕ ಪ್ರವೃತ್ತಿಗಳು, 9.ಆಡಳಿತ ಮತ್ತು ರಾಜಸ್ವ, 10.ನ್ಯಾಯಾಡಳಿತ ಮತ್ತು ಶಾಂತಿ ಪಾಲನೆ, 11.ಇತರೆ ಇಲಾಖೆಗಳು, 12.ಸ್ಥಳೀಯ ಸ್ವಯಂ ಸೇವಾ ಆಡಳಿತ ಸಂಸ್ಥೆಗಳು, 13.ಶಿಕ್ಷಣ ಮತ್ತು ಕ್ರೀಡೆ, 14.ಸಾಹಿತ್ಯ ಮತ್ತು ಸಂಸ್ಕೃತಿ, 15.ಆರೋಗ್ಯ ಮತ್ತು ವೈದ್ಯಕೀಯ ಸೇವೆಗಳು, 16.ಇತರ ಸೇವಾ ಸೌಲಭ್ಯಗಳು 17.ಐತಿಹಾಸಿಕ ಮತ್ತು ಪ್ರೇಕ್ಷಣೀಯ ಸ್ಥಳಗಳು ಹಾಗೂ ವಿವಿಧ ಜಾತಿಗಳ ಆಚಾರ ವಿಚಾರ ಸಂಪ್ರದಾಯಗಳ ಸಂಕ್ಷಿಪ್ತ ಮಾಹಿತಿಗಳು. ಕಳೆದ 50 ವರ್ಷಗಳ ಹಿಂದಿನ ಮಳೆಯ ಪ್ರಮಾಣ, 100 ವರ್ಷಗಳಿಂದ ಜನಸಂಖ್ಯೆ ಬೆಳವಣಿಗೆ, ಜಿಲ್ಲೆಯ ನಕ್ಷೆ, ಗ್ರಾಮಗಳ ಪಟ್ಟಿ ಈ ಮುಂತಾದ ಉಪಯುಕ್ತ ಮಾಹಿತಿಯನ್ನು ಇತಿಹಾಸ ಪೂರ್ವಕಾಲದಿಂದ ಇತ್ತೀಚಿನವರೆಗೆ ಕಾಲಕ್ರಮದ ಅನ್ವಯ ವಿವರದ ವೈವಿಧ್ಯಗಳನ್ನು ಇಲ್ಲಿ ಕಾಣುತ್ತೇವೆ. ಪೂರಕವಾಗಿ ವಿವಿಧ ಅಂಕಿ ಅಂಶಗಳ ಪಟ್ಟಿ, ನಕಾಶೆ, ಚಿತ್ರಗಳು, ಶಬ್ದಸೂಚಿ ಮೊದಲಾದ ಉಪಯುಕ್ತ ಮಾಹಿತಿಗಳು ಗ್ಯಾಸೆಟಿಯರ್‌ನಲ್ಲಿರುತ್ತವೆ.

ಜಿಲ್ಲಾ ಗ್ಯಾಸೆಟಿಯರ್‌ಗಳಲ್ಲದೆ ರಾಜ್ಯಕ್ಕೆ ಅನ್ವಯವಾಗುವ ರಾಜ್ಯ ಗ್ಯಾಸೆಟಿಯರ್ ಸಂಪುಟಗಳನ್ನು (1982-83) ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಪ್ರಕಟಿಸಲಾಗಿದೆ. ಇಲಾಖೆಯ ವಿಶೇಷ ಪ್ರಕಟಣೆಯಾಗಿ ಸಮಗ್ರ ಕರ್ನಾಟಕವನ್ನು ಸಂಕ್ಷಿಪ್ತವಾಗಿ ಪರಿಚಯಿಸುವ ಇಂಗ್ಲಿಷ್ ಭಾಷೆಯಲ್ಲಿ ಎ ಹ್ಯಾಂಡ್ ಬುಕ್ ಆಫ್ ಕರ್ನಾಟಕ ಮತ್ತು ಕನ್ನಡದಲ್ಲಿ ಕರ್ನಾಟಕ ಕೈಪಿಡಿಗಳನ್ನು ಪ್ರಕಟಿಸಲಾಗಿದೆ (1996-97). ಕರ್ನಾಟಕದ ಗ್ಯಾಸೆಟಿಯರ್ ಇಲಾಖೆಯ ಮುಖ್ಯ ಸಂಪಾದಕರಾಗಿ ಬಿ.ಎಲ್.ರೈಸ್, ಹಯವದನರಾವ್, ಬಿ.ಎನ್.ಶ್ರೀಸತ್ಯನ್, ಕೆ.ಅಭಿಶಂಕರ, ಸೂರ್ಯನಾಥ್ ಕಾಮತ್ ಮೊದಲಾದವರು ಸ್ಮರಣೀಯರು. ಟಿ.ಎ.ಪಾರ್ಥಸಾರಥಿ ಈಗಿನ ಮುಖ್ಯ ಸಂಪಾದಕರು.

ಸರ್ಕಾರದ ಆಡಳಿತ ನೀತಿಯಂತೆ ಇ-ಗವರ್ನೆನ್ಸ್ ಯೋಜನೆಯ ಅಡಿಯಲ್ಲಿ ಗ್ಯಾಸೆಟಿಯರ್‌ಗಳ ಇಲಾಖೆಯ ಎಲ್ಲಾ ಪ್ರಕಟಣೆಗಳನ್ನು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಗಣಕೀಕೃತಗೊಳಿಸುವ, ಈವರೆಗೆ ಪ್ರಕಟವಾದ ಗ್ಯಾಸೆಟಿಯರ್‌ಗಳನ್ನು ಸಿ.ಡಿ.ರೂಪದಲ್ಲಿ ಹೊರತರುವ ಹಾಗೂ ವೆಬ್‌ಸೈಟ್‌ನಲ್ಲಿ ಪ್ರಕಟಿಸುವ ಮಹತ್ತರ ಯೋಜನೆಯನ್ನು ಇಲಾಖೆ ಹಮ್ಮಿಕೊಂಡಿದೆ. (ಎಂ.ವಿ.ಎನ್.)

**ಕರ್ನಾಟಕ ಗ್ರಂಥಮಾಲೆ :** ಹತ್ತೊಂಬತ್ತನೆಯ ಶತಮಾನದ ಕೊನೆಯಭಾಗದಲ್ಲಿ 1893ರ ಹೊತ್ತಿಗೆ ಪ್ರಕಟಣೆ ಪ್ರಾರಂಭಿಸಿ ಇಪ್ಪತ್ತನೆಯ ಶತಮಾನದ ಮೂರನೆಯ ದಶಕದ ಮಧ್ಯದವರೆಗೆ ನಡೆದು ಸುಮಾರು ಮೂರು ದಶಕಗಳ ಕಾಲ ಕನ್ನಡ ಸಾಹಿತ್ಯ ಸೇವೆ ಸಲ್ಲಿಸಿದ ಮೈಸೂರಿನ ಒಂದು ಮಾಸಪತ್ರಿಕೆ. ಹೆಸರೇ ಹೇಳುವಂತೆ ಇದು ಗ್ರಂಥಗಳ ಮಾಲೆ. ಪ್ರತಿಯೊಂದು ಸಂಚಿಕೆಯಲ್ಲೂ ನಾಟಕ, ಕಾದಂಬರಿಗಳ ಒಂದೊಂದು ಭಾಗವನ್ನೂ ಸಾಮಾಜಿಕ ಆಧ್ಯಾತ್ಮಿಕ ಗ್ರಂಥಗಳ ಭಾಗಗಳನ್ನೂ ಪ್ರತಿ ತಿಂಗಳೂ ಕ್ರಮವಾಗಿ ಪ್ರಕಟಿಸಲಾಗುತ್ತಿತ್ತು. ಅಲ್ಲದೆ ಅನೇಕ ಸಂಸ್ಕೃತ ಗ್ರಂಥಗಳ ಅನುವಾದಗಳನ್ನು ಟಿಪ್ಪಣಿಗಳೊಂದಿಗೆ ಅನುಕ್ರಮವಾಗಿ ಕೊಡಲಾಗುತ್ತಿತ್ತು. ಕಾಂದಬರಿಗಳಿಗೂ ಅವಶ್ಯವಾದ ಅಡಿಟಿಪ್ಪಣಿ ಒದಗಿಸುವ ಪದ್ಧತಿ ಇಲ್ಲಿ ಕಂಡುಬರುತ್ತದೆ. ಸಂಚಿಕೆಯಲ್ಲಿ ಆಯಾ ಗ್ರಂಥಗಳ ಕ್ರಮವಾದ ಪುಟಸಂಖ್ಯೆ ಹಾಕುವ ಏರ್ಪಾಡಿತ್ತು. ಬಿಡಿಬಿಡಿಯಾಗಿ ಸಂಚಿಕೆಗಳಲ್ಲಿ ಬಂದ ಗ್ರಂಥ ಭಾಗಗಳನ್ನೆಲ್ಲಾ ಕೂಡಿಸಿ ಒಟ್ಟು ಗೊಳಿಸುವುದಕ್ಕೆ ಓದುಗರಿಗೆ ಸೌಲಭ್ಯ ಕಲ್ಪಿಸುವುದು ಈ ಕ್ರಮದ ಉದ್ದೇಶ. ಪ್ರಕಟವಾದ ಲೇಖನ ಮತ್ತು ಗ್ರಂಥಗಳನ್ನು ಗಮನಿಸಿದಾಗ ವಿದ್ವಾಂಸರಿಗೆ ಪ್ರಾಧಾನ್ಯವಿದ್ದುದು ಕಂಡುಬರುತ್ತದೆ. ಪ್ರತಿ ಸಂಚಿಕೆಯಲ್ಲೂ ರಾಯಲ್ ಆಕಾರದ 92 ಪುಟಗಳಿರುತ್ತಿದ್ದವು. ಬಿಡಿ ಸಂಚಿಕೆಯ ಬೆಲೆ ಅಂದಿನ 4 ಆಣೆ. ವಾರ್ಷಿಕ ಚಂದಾ ಅಂಚೆ ವೆಚ್ಚ ಸೇರಿ ರೂ.2.80. ಈ ಪತ್ರಿಕೆಯ ಸಂಪಾದಕರು, ಪ್ರಕಾಶಕರು ಮತ್ತು ವ್ಯವಸ್ಥಾಪಕರು ಬಿ.ಸುಬ್ಬರಾವ್. ಮೈಸೂರಿನ ಜಿ.ಟಿ.ಎ.ಪ್ರೆಸ್ಸಿನಲ್ಲಿ ಇದು ಮುದ್ರಣ ವಾಗುತ್ತಿತ್ತು. ಅನೇಕ ಉತ್ತಮ ಗ್ರಂಥಗಳನ್ನು ಪ್ರಕಟಗೊಳಿಸಿದ ಕೀರ್ತಿ ಈ ಪತ್ರಿಕೆಗೆ ಸೇರಿದೆ. (ಎಸ್.ವಿ.ಪಿ.)

**ಕರ್ನಾಟಕ ಚಿತ್ರಕಲಾ ಪರಿಷತ್ತು :** ಬೆಂಗಳೂರಿನ ಪ್ರತಿಷ್ಠಿತ ಕಲಾ ಶಾಲೆ. ಚಿತ್ರಕಲಾ ಪ್ರದರ್ಶನ, ಪ್ರಚಾರ, ಶಿಕ್ಷಣ, ಕಲಾವಿದರ ಸಂಘಟನೆಯಲ್ಲಿ ತೊಡಗಿರುವ ಈ ಸಂಸ್ಥೆ 1964ರಲ್ಲಿ ಮಲ್ಲೇಶ್ವರದ ಗಾಂಧಿ ಸಾಹಿತ್ಯ ಸಂಘದಲ್ಲಿ ಪೂರ್ಣಪ್ರಮಾಣದಲ್ಲಿ ಆರಂಭವಾಯಿತು. ಇದರ ಫಲವಾಗಿ ಎಂ.ಎಸ್. ನಂಜುಂಡರಾವ್ ಅವರು ಕರ್ನಾಟಕದ ಕಲಾವಿದರಿಗೆ ತಮ್ಮ ಪ್ರತಿಭಾ ಪ್ರದರ್ಶನಕ್ಕೆ ಒಂದು ಸಂಘಟನೆಯ ಆವಶ್ಯಕತೆಯನ್ನು ಅರಿತು ಅಂದಿನ ಮುಖ್ಯಮಂತ್ರಿ ಕೆ.ಹನುಮಂತಯ್ಯ ಅವರ ಪ್ರೇರಣೆ ಪ್ರೋತ್ಸಾಹದಿಂದ ಎಂ.ಆರ್ಯಮೂರ್ತಿ, ಎಸ್.ಎಸ್.ಕುಕ್ಕೆ ಯವರೊಂದಿಗೆ ಸೇರಿ 1960ರಲ್ಲಿ ಮೈಸೂರು ಪ್ರದೇಶ ಚಿತ್ರಕಲಾ ಪರಿಷತ್ತು ಎಂಬ ಸಂಸ್ಥೆಯನ್ನು ಹುಟ್ಟುಹಾಕಿದರು. ಈ ಸಂಸ್ಥೆಯ ಪ್ರಥಮ ಅಧ್ಯಕ್ಷರಾಗಿ ಆರ್ಯಮೂರ್ತಿಯವರೂ ಕಾರ್ಯದರ್ಶಿಯಾಗಿ ನಂಜುಂಡರಾವ್ ಅವರೂ ಖಜಾಂಚಿಯಾಗಿ ಇನಾಮತಿಯವರೂ ಆಯ್ಕೆಯಾಗಿದ್ದರು. ಕುಕ್ಕೆಯವರು ಉಪಾಧ್ಯಕ್ಷರಾಗಿದ್ದರು.



ಚಿತ್ರಕಲಾ ಪರಿಷತ್ತಿನ ಕಟ್ಟಡ

ಈ ಸಂಸ್ಥೆಯ ಪ್ರಮುಖ ಉದ್ದೇಶಗಳು ಇವು: 1 ಭಾರತೀಯ ಚಿತ್ರಕಲೆಯ ರಕ್ಷಣೆ, ಪ್ರೋತ್ಸಾಹ ಮತ್ತು ಅಭಿವೃದ್ಧಿಗೆ ಅವಕಾಶಗಳನ್ನು ಕಲ್ಪಿಸುವುದು 2 ಭಾರತೀಯ ಚಿತ್ರಕಲೆಯ ರಕ್ಷಣೆಗಾಗಿ ಕಲಾಸಂಸ್ಥೆಗಳು, ಕಲಾಕೃತಿ ಸಂಗ್ರಹಾಲಯ, ಸಾಂಸ್ಕೃತಿಕ, ಸಾಮಾಜಿಕ ಸಂಸ್ಥೆಗಳ ಸಹಕಾರದಿಂದ ಭಾರತ ಮತ್ತು ವಿದೇಶಗಳಲ್ಲಿ ಉಪನ್ಯಾಸ, ಪ್ರಾತ್ಯಕ್ಷಿಕೆ, ವಿಚಾರಸಂಕಿರಣ, ಸಮೂಹಚರ್ಚೆ ಮತ್ತು ಪ್ರದರ್ಶನಗಳನ್ನು ಏರ್ಪಡಿಸುವುದು, ಕಲಾಕ್ಷೇತ್ರದ ನಾಮಾಂಕಿತ ಹಿರಿಯರನ್ನು ಗೌರವಿಸುವುದು. 3 ಕಲೆಗೆ ಸಂಬಂಧಿಸಿದಂತೆ ಶಾಲೆ, ಕಾಲೇಜುಗಳನ್ನು ಬೆಂಗಳೂರು ಮತ್ತು ಕರ್ನಾಟಕದ ಇತರೆಡೆಗಳಲ್ಲಿ ತೆರೆಯುವುದು. 4 ಪುಸ್ತಕ, ನಿಯತಕಾಲಿಕೆ, ಪತ್ರಿಕೆ, ವಿಶ್ವಕೋಶ, ಡೈರೆಕ್ಟರಿ ಮುಂತಾದವುಗಳ ಪ್ರಕಟಣೆ. 5 ಬೆಂಗಳೂರು ಮತ್ತು ಕರ್ನಾಟಕದ ಇತರ ಸ್ಥಳಗಳಲ್ಲಿ ಇಂದಿನ ಮತ್ತು ಹಿಂದಿನ ಹೆಸರಾಂತ ಕಲಾವಿದರ ಚಿತ್ರಗಳ ಪ್ರದರ್ಶನಕ್ಕೆ ಶಾಶ್ವತ ಕಲಾಗ್ಯಾಲರಿಗಳನ್ನು ತೆರೆಯಲು ಪ್ರೋತ್ಸಾಹಿಸುವುದು. 6 ಕರ್ನಾಟಕದಲ್ಲಿರುವ ಕಲಾವಿದರು ಮತ್ತು ಕಲಾವಿದರ ಗುಂಪುಗಳನ್ನು ಪ್ರೋತ್ಸಾಹಿಸುವುದು. ಕಲಾವಿದರ ಕಾಲೋನಿ ನಿರ್ಮಿಸಲು, ಮನೆ ಕಟ್ಟಲು ಸರ್ಕಾರ ಮತ್ತು ಗೃಹಮಂಡಳಿಯವರು ನೀಡುವ ಸವಲತ್ತುಗಳನ್ನೂ ಸಹಾಯವನ್ನೂ ಉಪಯೋಗಿಸಿಕೊಳ್ಳುವುದು.

ಹೀಗೆ ಕಲಾವಿದರ ಸರ್ವಾಂಗೀಣ ಉನ್ನತಿಗೆ ಕಾರಣವಾಗುವ ಉದ್ದೇಶ ಇಟ್ಟುಕೊಂಡ ಈ ಸಂಸ್ಥೆಯ ಕರ್ಣಧಾರತ್ವವನ್ನು ಎಂ. ಎಸ್. ನಂಜುಂಡರಾವ್ ವಹಿಸಿದ್ದರು. ಮೊಟ್ಟಮೊದಲಾಗಿ ಕರ್ನಾಟಕ ಕಲಾವಿದರ ಸಮ್ಮೇಳನ ವಿಧಾನಸೌಧದ ಔತಣ ಸಭಾಂಗಣದಲ್ಲಿ ಏರ್ಪಾಡಾಯಿತು. ಈ ಸಂಸ್ಥೆ 1962ರಿಂದ ಪ್ರತಿವರ್ಷವೂ ಒಂದರಂತೆ ಸಮ್ಮೇಳನಗಳನ್ನೂ ಕಲಾಪ್ರದರ್ಶನಗಳನ್ನೂ ಏರ್ಪಡಿಸಿ ಕರ್ನಾಟಕದ ಕಲೆ ಹಾಗೂ ಕಲಾವಿದರ ಪ್ರಮುಖ ಕೇಂದ್ರವಾಗಿ ಬೆಳೆಯಿತು. ಕರ್ನಾಟಕದ, ಭಾರತದ ಮತ್ತು ವಿದೇಶೀಯ ಕಲಾವಿದರನ್ನು ಸಂಪರ್ಕಿಸಿ ಅವರ ಕಲಾಪ್ರದರ್ಶನ, ಪ್ರಾತ್ಯಕ್ಷಿಕೆ, ಚರ್ಚಾಗೋಷ್ಠಿ, ಉಪನ್ಯಾಸಗಳಿಗೆ ಅವಕಾಶ ದೊರಕಿತು.

ಈ ಕಲಾಶಾಲೆಯಲ್ಲಿ ಈಗ ಪ್ರತಿವರ್ಷ ನೂರು ಕಲಾವಿದರು ರೂಪುಗೊಳ್ಳುತ್ತಾರೆ. ಇಲ್ಲಿ ಸ್ನಾತಕೋತ್ತರ ಮಟ್ಟದ ಶಿಕ್ಷಣ ಸೌಲಭ್ಯವೂ ಇದೆ. ಕಲಾವಿದ್ವಾಂಸರು ಸಂಶೋಧನೆ ಕೈಗೊಳ್ಳಲು, ಸಂಪ್ರಬಂಧ ಮಂಡಿಸಿ ಪಿಎಚ್.ಡಿ. ಪದವಿ ಪಡೆಯಲು ಅವಕಾಶವಿದೆ. ಹೆಸರಾಂತ ಕಲಾವಿದರೂ ಶಿಕ್ಷಕರೂ ಸಮರ್ಥ ಮಾರ್ಗದರ್ಶನ ನೀಡುತ್ತಿದ್ದಾರೆ. ಇದುವರೆಗೆ ಈ ಸಂಸ್ಥೆಯಿಂದ 1200 ಕ್ಕೂ ಹೆಚ್ಚು ಪದವೀಧರರು ಶಿಕ್ಷಣ ಪಡೆದು ದೇಶ ವಿದೇಶಗಳಲ್ಲಿ ಕಲಾ ಸೇವೆಯಲ್ಲಿದ್ದಾರೆ.

ಶಿಲ್ಪಕಲೆ ಮತ್ತು ನಿಸರ್ಗ ಅಧ್ಯಯನಕ್ಕಾಗಿ ಬೆಂಗಳೂರಿನಿಂದ ಅಜಂತಾವರೆಗೆ 50 ಕಲಾವಿದರ ತಂಡದ ಅಧ್ಯಯನ ಪ್ರವಾಸ (1967), ದಕ್ಷಿಣ ಭಾರತದ ಜನಪದ ಕಲೆಯನ್ನು ಪ್ರೋತ್ಸಾಹಿಸುವುದಕ್ಕಾಗಿ ಮಲ್ಲೇಶ್ವರದ ಮೈದಾನದಲ್ಲಿ ಒಂದು ತಿಂಗಳ ಕಾಲ ನಡೆದ ಜನಪದ ವಸ್ತು - ಕಲಾಪ್ರದರ್ಶನ (1971), ಅಖಿಲಭಾರತ ಮಟ್ಟದ ಜನಪದ ಕಲಾವಿದರನ್ನು ಆಹ್ವಾನಿಸಿ ಜನಪದ ಕಲೆಯ ವಿವಿಧ ಮುಖಗಳ ಅಧ್ಯಯನಕ್ಕೆ ಅವಕಾಶ (1971) - ಇವು ಈ ಸಂಸ್ಥೆಯ ಕೆಲವು ಸಾಧನೆಗಳು. ಸಂಸ್ಥೆಯ ಕಲಾ ಮಹಾವಿದ್ಯಾಲಯದಲ್ಲಿ ಚಿತ್ರಕಲೆಗೆ ಸಂಬಂಧಿಸಿದ ವಿವಿಧ ವಿಭಾಗಗಳ ಅಧ್ಯಯನಕ್ಕೆ ಅವಕಾಶವಿದೆ. ಶಿಲ್ಪಕಲೆಯ ಅಧ್ಯಯನಕ್ಕೂ ಸೌಲಭ್ಯಗಳಿವೆ.

ವಿದೇಶದಿಂದ ಬಂದು ಕರ್ನಾಟಕದಲ್ಲಿ ನೆಲೆಸಿದ್ದ ಪ್ರಸಿದ್ಧ ಕಲಾವಿದ ಸ್ವೆತಾಸ್ಲಾವ್ ರೋರಿಕ್ ಅವರ 117 ಚಿತ್ರಕಲಾ ಕೃತಿಗಳನ್ನು ಪರಿಷತ್ತಿನಲ್ಲಿ ಶಾಶ್ವತವಾಗಿ ಪ್ರದರ್ಶಿಸಲಾಗಿದೆ. ಈ ಅಪರೂಪದ ಕೃತಿಗಳು ಕಲೆಯ ಅಧ್ಯಯನಕ್ಕೆ ಅಪಾರ ಅವಕಾಶ ಒದಗಿಸುತ್ತಿವೆ. ರೋರಿಕ್ ಗ್ಯಾಲರಿಯಲ್ಲಿ ಹಿಮಾಲಯದ ವೈವಿಧ್ಯಮಯ ಚಿತ್ರಗಳಿವೆ. ರೋರಿಕ್ ಅವರ ಹೆಸರಿನಲ್ಲಿ ಆರಂಭಿಸಲಾಗಿರುವ ಸಂಸ್ಥೆಯಲ್ಲಿ (ರೋರಿಕ್ ಇನ್‌ಸ್ಟಿಟ್ಯೂಟ್ ಆಫ್ ಫೈನ್ ಆರ್ಟ್ಸ್) ಚಿತ್ರಕಲೆಯ ಮೂಲಭೂತ ಅಧ್ಯಯನದ ಸೌಲಭ್ಯವೂ ಉಂಟು.

ಎಚ್.ಕೆ.ಕೆಜ್ರಿವಾಲಾ ಎಂಬುವರು ತಮ್ಮ ತಂದೆ ಸಂಗ್ರಹಿಸಿದ ಅಮೂಲ್ಯ ಕಲಾಕೃತಿಗಳೊಂದಿಗೆ ತಾವು ಸಂಗ್ರಹಿಸಿದ ಕಲಾಕೃತಿಗಳನ್ನು ಪರಿಷತ್ತಿನ ಎಚ್.ಕೆ.ಕೆಜ್ರಿವಾಲಾ ಶಾಶ್ವತ ಗ್ಯಾಲರಿಯಲ್ಲಿ ಪ್ರದರ್ಶನ ಕ್ಕಿಡಲಾಗಿದೆ. ಇದರಲ್ಲಿ 350 ಕಲಾಕೃತಿಗಳಿವೆ. ಕವಿ ರವೀಂದ್ರನಾಥ ಠಾಕೂರರ ಚಿತ್ರಗಳಿಂದ ಇತ್ತೀಚಿನ ಭಾರತೀಯ ಕಲಾವಿದರವರೆಗಿನ ಹಲವಾರು ಅಮೂಲ್ಯ ಚಿತ್ರಗಳನ್ನು ಪ್ರದರ್ಶನಕ್ಕಿಡಲಾಗಿದೆ. ಕಲಾಸಾಧನೆಯಲ್ಲಿ ತೊಡಗಿದ ವಿದ್ಯಾರ್ಥಿಗಳಿಗೆ 1998 ರಿಂದ ಎಚ್.ಕೆ.ಕೆಜ್ರಿವಾಲಾ ಪ್ರಶಸ್ತಿ ನೀಡಲಾಗುತ್ತಿದೆ. ಇದಲ್ಲದೆ ಅಂತಾರಾಷ್ಟ್ರೀಯ ಗ್ರಾಫಿಕ್ ಕಲಾವಿದ ಕೃಷ್ಣಾರೆಡ್ಡಿ (ನ್ಯೂಯಾರ್ಕ್) ಅವರ ಗ್ರಾಫಿಕ್ ಚಿತ್ರಗಳೂ ಎಸ್.ಎನ್.ಕುಕ್ಕೆಯವರ ಕಲಾಕೃತಿಗಳೂ ಇಲ್ಲಿ ಪ್ರದರ್ಶಿತವಾಗಿವೆ. ಮೈಸೂರಿನ ಸಾಂಪ್ರದಾಯಿಕ ಚಿತ್ರಕಲೆಯ ಕೃತಿಗಳನ್ನು ವೈ.ಸುಬ್ರಹ್ಮಣ್ಯರಾಜು ಅವರ ಮಾರ್ಗದರ್ಶನದಲ್ಲಿ ಪುನರುಜ್ಜೀವನಗೊಳಿಸಿ ಪ್ರದರ್ಶನಕ್ಕಿಡಲಾಗಿದೆ. ಕರ್ನಾಟಕದ ವಿವಿಧ ಭಾಗಗಳಲ್ಲಿ ಹಿಂದೆ ಪ್ರಚಲಿತವಿದ್ದ ತೊಗಲುಗೊಂಬೆಗಳನ್ನು ಸಂಗ್ರಹಿಸಿ, ರಕ್ಷಿಸಿ ಪ್ರದರ್ಶಿಸಲಾಗುತ್ತಿದೆ. ಸಮಕಾಲೀನ ಶಿಲ್ಪಕಲೆಗೆ ಉತ್ತೇಜನ ನೀಡುವ ದೃಷ್ಟಿಯಿಂದ ಮೂರು ಗ್ಯಾಲರಿಗಳಲ್ಲಿ ಖಾಯಂ ಶಿಲ್ಪಕಲಾ ಪ್ರದರ್ಶನ ಏರ್ಪಡಿಸಿದೆ. ಕರ್ನಾಟಕ, ಭಾರತೀಯ, ವಿದೇಶೀಯ ಕಲಾವಿದರ ಚಿತ್ರಗಳನ್ನು ಪ್ರದರ್ಶಿಸಲು ನಿರ್ದಿಷ್ಟ ಕಾಲಾವಧಿಯ ಪ್ರದರ್ಶನಕ್ಕೂ ಗ್ಯಾಲರಿಗಳ ಸೌಲಭ್ಯವಿದೆ. ಇಲ್ಲಿ ಪ್ರತಿನಿತ್ಯ ಬೇರೆ ಬೇರೆ ಕಲಾವಿದರ ಕಲಾ ಪ್ರದರ್ಶನಗಳು ನಡೆಯುತ್ತಲೇ ಇರುತ್ತವೆ.

ಇಲ್ಲಿ ಚಿತ್ರಕಲೆ-ಶಿಲ್ಪ-ಇತಿಹಾಸಗಳಿಗೆ ಸಂಬಂಧಿಸಿದ ಹತ್ತುಸಾವಿರಕ್ಕೂ ಹೆಚ್ಚು ಅಮೂಲ್ಯ ಪುಸ್ತಕಗಳ ಸಂಗ್ರಹವುಂಟು. ಭಾರತದ ಮತ್ತು ವಿದೇಶದ ತಜ್ಞರು ಬರೆದ ಅಮೂಲ್ಯ ಗ್ರಂಥ ಭಂಡಾರ ವಿದ್ಯಾರ್ಥಿಗಳ ಸಂಶೋಧನೆ, ಅಧ್ಯಯನಗಳಿಗೆ ಉಪಯುಕ್ತವೆನಿಸಿದೆ.

ಚಿತ್ರಕಲಾ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್‌ಡ್ ಸ್ಟಡೀಸ್ ವಿಭಾಗ ಲಘು ಅವಧಿ ಹಾಗೂ ದೀರ್ಘ ಅವಧಿಗಳ ಸಂಶೋಧನ ಪರಿಯೋಜನೆಗಳನ್ನು ಆರಂಭಿಸಿ ಉಪನ್ಯಾಸ, ಚರ್ಚಾಗೋಷ್ಠಿ, ಕಾರ್ಯಾಗಾರ, ವಿಚಾರಸಂಕಿರಣಗಳ ಮೂಲಕ ಹೊಸ ಹೊಸ ಸಂಶೋಧನೆಗೆ ಪ್ರೋತ್ಸಾಹ

ನೀಡುತ್ತಿದೆ. ತುಂಬ ಹಳೆಯ, ಮಾಸಿ ಹೋದ, ಬಣ್ಣಗೆಟ್ಟ ಕಲಾಕೃತಿಗಳನ್ನು ಪುನರುಜ್ಜೀವನಗೊಳಿಸುವ ವಿಭಾಗವೂ ಇಲ್ಲುಂಟು.

ತರುಣ ಕಲಾವಿದರಿಂದ ಹಿರಿಯ ಕಲಾವಿದರವರೆಗೆ ಎಲ್ಲರನ್ನೂ ಪ್ರೋತ್ಸಾಹಿಸಲು, ಅವರ ಕಲಾಪ್ರದರ್ಶನಕ್ಕೆ ಅನುವು ಮಾಡಿಕೊಡಲು ಇಲ್ಲಿ ಐದು ಗ್ಯಾಲರಿಗಳನ್ನು ಕಾದಿರಿಸಲಾಗಿದೆ. ಪರಿಷತ್ತಿನ ಖಾಯಂ ಪ್ರದರ್ಶನ ಗ್ಯಾಲರಿಯಲ್ಲಿ ಪ್ರಸಿದ್ಧ ಚಿತ್ರಕಾರರಾದ ಜೆಮಿನಿ ರಾಯ್, ಅವನೀಂದ್ರನಾಥ ಠಾಕೂರ್, ಗಣನೇಂದ್ರ ಠಾಕೂರ್, ನಂದಲಾಲಬೋಸ್, ರಾಯ್ ಚೌಧರಿ, ಅಬ್ದುಲ್ ರೆಹಮಾನ್, ಕೆ.ಕೆ.ಹೆಬ್ಬಾರ್, ಚುಗತ್ತಾಯ, ಅಮೃತಾ ಶೇರ್‌ಗಿಲ್, ಜಿ.ಎಸ್.ಶೆಣೈ, ಖಂಡೇರಾವ್, ರಮೇಶ್‌ರಾವ್, ಎಂ.ಎಸ್.ಚಂದ್ರಶೇಖರ್, ಸುಬ್ರಹ್ಮಣ್ಯರಾಜು, ಕೇಶವಯ್ಯ, ಎಸ್.ಎನ್.ಸ್ವಾಮಿ, ಪಿ.ಆರ್.ತಿಪ್ಪೇಸ್ವಾಮಿ ಮೊದಲಾದವರ ಚಿತ್ರಗಳಿವೆ.

ಮುಂದಿನ ಯೋಜನೆಗಳಲ್ಲಿ ಅಂತಾರಾಷ್ಟ್ರೀಯ ಮಟ್ಟದ ಕಲಾವಿದರ ಚಿತ್ರಪ್ರದರ್ಶನದ ಗ್ಯಾಲರಿಗಳನ್ನೂ ಕರ್ನಾಟಕದವರದೇ ಒಂದು ಗ್ಯಾಲರಿಯನ್ನೂ ನಿರ್ಮಿಸುವ ವಿಚಾರವಿದೆ. ಅದಕ್ಕಾಗಿ ಚಿತ್ರಗಳ ಸಂಗ್ರಹಕಾರ್ಯ ನಡೆದಿದೆ. ಪರಿಷತ್ತಿನ ಕಟ್ಟಡ 1988ರಲ್ಲಿ ಕಟ್ಟಿ ಮುಗಿದ ಅನಂತರ ಅದರ ಎರಡನೆಯ ಹಂತದ ಕಟ್ಟಡ ವಿಸ್ತರಣೆಯ ಕಾರ್ಯ ಮುಗಿದು ಮೂರನೆಯ ಹಂತದ ಕಾರ್ಯ ಮುಂದುವರಿದಿದೆ. ಯಲಹಂಕದಲ್ಲಿ ಇಪ್ಪತ್ತು ಎಕರೆ ಸ್ಥಳದಲ್ಲಿ ಲಲಿತಕಲೆಗಳ ಕಾಲೇಜನ್ನೂ ವಿದ್ಯಾರ್ಥಿನಿಲಯವನ್ನೂ ಅಧ್ಯಾಪಕರಿಗಾಗಿ ವಸತಿಗೃಹಗಳನ್ನೂ ನಿರ್ಮಿಸುವ ಯೋಜನೆಯಿದೆ. ಪರಿಷತ್ತಿನಲ್ಲಿ ಕಂಪ್ಯೂಟರ್‌ಗಳನ್ನು ಅಳವಡಿಸಲಾಗಿದೆ. ಇವುಗಳ ನೆರವಿನಿಂದ ಗ್ರಾಫಿಕ್ ವಿಭಾಗ ಬೆಳೆಸಬೇಕೆಂಬ ಉದ್ದೇಶವಿದೆ.

ಪ್ರಸಿದ್ಧ ಕಲಾವಿದರಾದ ಕೆ.ಕೆ.ಹೆಬ್ಬಾರ್, ರೋರಿಕ್, ಶಂಭು ಚೌಧರಿ, ಬಿ.ಸಿ.ಸನ್ಯಾಲ, ಕೃಷ್ಣಾರೆಡ್ಡಿ, ರುಮಾಲೆ ಚನ್ನಬಸಪ್ಪ, ಎಸ್.ಎಸ್.ಸ್ವಾಮಿ, ಎಂ.ವೀರಪ್ಪ, ನಾರಾಯಣ ಸಂಗಮ, ಎಂ.ಎ.ಚೆಟ್ಟಿ, ಟಿ.ಪಿ.ಅಕ್ಕಿ, ಶಂಕರರಾವ್ ಆಳಂದಕರ್, ಕೆ.ಸಿ.ಎನ್. ಪಣಿಕ್ಕರ್, ಎಸ್.ಧನಪಾಲ, ಕೊರಂಚಿ, ಕುಟ್ಟಿ, ನಾಡಕರ್ಣಿ (ಮುಂಬಯಿ), ಆರ್.ಸಂತೋಷ್ (ಜಮ್ಮು), ಬಿಕಾಶ ಭಟ್ಟಾಚಾರ್ಯ (ಕೋಲ್ಕತ), ಪಿ.ಟಿ.ರೆಡ್ಡಿ (ಆಂಧ್ರಪ್ರದೇಶ) ಮೊದಲಾದವರು ಈ ಸಂಸ್ಥೆಯ ಬೆಳವಣಿಗೆಗೆ ಸಹಕಾರ ನೀಡಿದ್ದಾರೆ.

1975ರಲ್ಲಿ ಕರ್ನಾಟಕ ಚಿತ್ರಕಲಾ ಪರಿಷತ್ ಟ್ರಸ್ಟ್ ಆರಂಭವಾಯಿತು. ಇದು ಪರಿಷತ್ತಿಗೆ ಸಂಬಂಧಿಸಿದ ಆಸ್ತಿ ಪಾಸ್ತಿಗಳ ರಕ್ಷಣೆ ಹಾಗೂ ಬೆಳವಣಿಗೆಯ ಕಾರ್ಯವನ್ನು ನೋಡಿಕೊಳ್ಳುತ್ತಿದೆ. (ಎಸ್.ಎಂ.ಕೆ.)

**ಕರ್ನಾಟಕದಲ್ಲಿ ವೈದ್ಯ** (ಆಯುರ್ವೇದ) **:** ಕರ್ನಾಟಕದ ವೈದ್ಯಕೀಯ ಇತಿಹಾಸವನ್ನು ಮೂರು ಯುಗಗಳಾಗಿ ವಿಂಗಡಿಸಬಹುದು. 1 ಆದಿಯುಗ ಕ್ರಿ.ಪೂ.260.- ಕ್ರಿ.ಶ.1300, 2 ಮಧ್ಯಯುಗ 1300-1800, 3 ಆಧುನಿಕ ಯುಗ 1800 ರಿಂದೀಚೆಗೆ.

**ಆದಿಯುಗ :** ಕರ್ನಾಟಕದ ಉತ್ತರ ಭಾಗ ಅಶೋಕನ ರಾಜ್ಯದಲ್ಲಿದ್ದುದರಿಂದ ಆತ ಸ್ಥಾಪಿಸಿದ ಮನುಷ್ಯರ ಮತ್ತು ಪಶುಗಳ ಔಷಧಾಲಯಗಳು ಈ ಪ್ರದೇಶದಲ್ಲಿ ಇದ್ದಿರಬಹುದೆಂದು ಊಹಿಸಿ ಕರ್ನಾಟಕದ ವೈದ್ಯ ಇತಿಹಾಸವನ್ನು ಕ್ರಿ.ಪೂ.260 ರಿಂದ ಪ್ರಾರಂಭಿಸಬಹುದು. ರಸಾಯನ ಮತ್ತು ಲೋಹಶಾಸ್ತ್ರಗಳ ಪಿತಾಮಹನೆಂಬ ಗೌರವಕ್ಕೆ ಪಾತ್ರನಾಗಿದ್ದ, ಸಾತವಾಹನರ ಕಾಲದ ಬೌದ್ಧಭಿಕ್ಷು ನಾಗಾರ್ಜುನ ಶ್ರೀಶೈಲ ಪರ್ವತದಲ್ಲಿ ವಾಸವಾಗಿದ್ದು ರಸಾಯನ ಪ್ರಯೋಗಗಳಲ್ಲಿ ತೊಡಗಿದ್ದ. ರಸರತ್ನಾಕರ, ಲೋಹಶಾಸ್ತ್ರ ಮುಂತಾದ ವೈದ್ಯ ಗ್ರಂಥಗಳನ್ನು ಬರೆದ ಈತನನ್ನು ಕರ್ನಾಟಕದ ಪ್ರಥಮ ವೈದ್ಯವ್ಯಕ್ತಿ ಎನ್ನಬಹುದಾಗಿದೆ. ಸಾತವಾಹನರ ಅನಂತರ ರಾಜ್ಯವಾಳಿದವರಲ್ಲಿ ಗಂಗರು ಜೈನಧರ್ಮಾವಲಂಬಿಗಳಾಗಿದ್ದರು. ಗಂಗರಸ ದುರ್ವಿನೀತನ ಗುರುವಾಗಿದ್ದ ದಿಗಂಬರ ಜೈನಯತಿ ಪೂಜ್ಯಪಾದ ವೈದ್ಯಶಾಸ್ತ್ರದಲ್ಲಿಯೂ ಪಂಡಿತನಾಗಿದ್ದ. ಇವನು ಬರೆದ ಕಲ್ಯಾಣಕಾರಕ ಎಂಬ ಸಂಸ್ಕೃತ ವೈದ್ಯಗ್ರಂಥವನ್ನು ಮುಂದಿನ ಎಲ್ಲ ವಿದ್ವಾಂಸರೂ ಗೌರವದಿಂದ ಸ್ಮರಿಸಿದ್ದಾರೆ. ಈತನ ಸೋದರಳಿಯ ಸಿದ್ಧ ನಾಗಾರ್ಜುನ (ಸು.690) ರಸಾಯನ ಮತ್ತು ಲೋಹವಿದ್ಯೆಗಳಲ್ಲಿ ಖ್ಯಾತಿಯನ್ನು ಪಡೆದಿದ್ದ. ರಸೇಂದ್ರ ಮಂಗಳ, ಕಕ್ಷಪುಟತಂತ್ರ, ನಾಗಾರ್ಜುನತಂತ್ರ ಮುಂತಾದವು ಈತನ ಕೃತಿಗಳು. ಗಂಗರಾಜ ಶ್ರೀಪುರುಷ (ಸು.775) ಗಜಶಾಸ್ತ್ರವನ್ನೂ ಆತನ ಮಗನಾದ ಸೈಗೊಟ್ಟ ಶಿವಮಾರ ಗಜಾಷ್ಟಕವನ್ನೂ ಬರೆದಿದ್ದಾರೆ (800). ಶಿವಮಾರನ ಗಜಾಷ್ಟಕ ಕನ್ನಡಭಾಷೆಯ ಪ್ರಥಮಶಾಸ್ತ್ರಗ್ರಂಥ. ರಾಷ್ಟ್ರಕೂಟ ದೊರೆ ನೃಪತುಂಗನ (814-78) ಆಸ್ಥಾನದಲ್ಲಿದ್ದ ಉಗ್ರಾದಿತ್ಯನೆಂಬ ಜೈನವೈದ್ಯ ಕಲ್ಯಾಣಕಾರಕ ಎಂಬ ಗ್ರಂಥವನ್ನು ಬರೆದಿದ್ದಾನೆ. ಜೈನಧರ್ಮದ ನಿಷ್ಠೆಯನ್ನು ಪಾಲಿಸಿರುವ ಈ ಗ್ರಂಥದಲ್ಲಿ ಮದ್ಯ, ಮಾಂಸ ಮತ್ತು ಮಧುಗಳನ್ನು ಔಷಧಾರ್ಥವಾಗಿಯೂ ವರ್ಜಿಸಿರುವುದು ಒಂದು ವೈಶಿಷ್ಟ್ಯ. ಚಾಳುಕ್ಯ ದೊರೆ ಇಮ್ಮಡಿ ಜಯಸಿಂಹನ (1015-44) ಆಸ್ಥಾನದಲ್ಲಿದ್ದ 2ನೆಯ ಚಾವುಂಡರಾಯ ತನ್ನ ಕನ್ನಡ ಗ್ರಂಥವಾದ ಲೋಕೋಪಕಾರದಲ್ಲಿ ಆಯುರ್ವೇದ ಶಾಸ್ತ್ರವನ್ನು ವಿಸ್ತಾರವಾಗಿ ವಿವರಿಸಿದ್ದಾನೆ.

ಚಂದ್ರರಾಜನ (1079) ಮದನತಿಲಕ, ಕೀರ್ತಿವರ್ಮನ (1125) ಗೋವೈದ್ಯ, ಚಾಳುಕ್ಯ ಚಕ್ರವರ್ತಿ ಸೋಮೇಶ್ವರನ (1126-38) ಮಾನಸೋಲ್ಲಾಸದಲ್ಲಿನ ಆಯುರ್ವೇದದ ವಿವರಣೆ ಮತ್ತು ಜೈನವೈದ್ಯ ಜಗದ್ದಳ ಸೋಮನಾಥನ (1150) ಕರ್ನಾಟಕ ಕಲ್ಯಾಣಕಾರಕ, ದೇವೇಂದ್ರ ಮುನಿಯ (1200) ಬಾಲಗ್ರಹ ಚಿಕಿತ್ಸೆ, ಕೇಶವ ಪಂಡಿತನ (1240) ಸಿದ್ಧಮಂತ್ರ, ಬೋಪದೇವನ (1263) ಸಿದ್ಧಮಂತ್ರ ಪ್ರಕಾಶ, ವೈದ್ಯಶತಕ, ಹೃದಯ ದೀಪಿಕ ನಿಘಂಟು, ಯಾದವರಾಜ ಮಹಾದೇವನ ಮುಖ್ಯ ಮಂತ್ರಿಯಾಗಿದ್ದ ಹೇಮಾದ್ರಿಯ (1260-1309) ಆಯುರ್ವೇದ ರಸಾಯನ ಎಂಬ ಅಷ್ಟಾಂಗ ಹೃದಯದ ಮೇಲಿನ ವ್ಯಾಖ್ಯಾನ, ಅಮೃತನಂದಿಯ ಅಕಾರಾದಿ ನಿಘಂಟು - ಇವು ಈ ಯುಗದ ಕೆಲವು ಮುಖ್ಯ ವೈದ್ಯಗ್ರಂಥಗಳು.

ಆಯುರ್ವೇದದ ಅಧ್ಯಯನ ಅಧ್ಯಾಪನಗಳು ದೇವಾಲಯಗಳಲ್ಲಿ ಇರುತ್ತಿದ್ದ ಪಾಠಶಾಲೆಗಳಲ್ಲಿ ನಡೆಯುತ್ತಿದ್ದುವು. ಅವುಗಳ ನಿರ್ವಹಣೆಗಾಗಿ ರಾಜರು ಭೂಮಿ ಮತ್ತು ಗ್ರಾಮಗಳನ್ನು ದೇವಾಲಯಗಳ ಹೆಸರಿನಲ್ಲಿ ದಾನ ಮಾಡುತ್ತಿದ್ದರು. ಶಾಸ್ತ್ರಜ್ಞರಾದ ವೈದ್ಯರನ್ನು ರಾಜಾಸ್ಥಾನದಲ್ಲಿ ನೇಮಕ ಮಾಡಲಾಗುತ್ತಿತ್ತು. ವೈದ್ಯರು ತಾವೇ ಗಿಡ ಮೂಲಿಕೆಗಳಿಂದ ಔಷಧಗಳನ್ನು ಬೇಕಾದಾಗ ತಯಾರಿಸಿ ಉಚಿತವಾಗಿ ರೋಗಿಗಳಿಗೆ ಕೊಡುತ್ತಿದ್ದರು. ಕಾಷ್ಠೌಷಧಿಗಳು ಅದರಲ್ಲೂ ಏಕಮೂಲಿಕಾ ಪ್ರಯೋಗಗಳೇ ಪ್ರಾಮುಖ್ಯ ಪಡೆದಿದ್ದುವು. ಕೆಲವು ದೇವಾಲಯಗಳಲ್ಲಿ ಔಷಧಿಗಳನ್ನು ಜನರಿಗೆ ಉಚಿತವಾಗಿ ನೀಡಲಾಗುತ್ತಿತ್ತು. ವೈದ್ಯರಿಗೆ ಸಮಾಜದಲ್ಲಿ ಗೌರವಾದರಗಳು ದೊರಕುತ್ತಿದ್ದುವು. ವಸ್ತುರೂಪವಾದ ಸಂಭಾವನೆಯೇ ಹೆಚ್ಚಾಗಿದ್ದರೂ ಕೆಲವು ವೇಳೆ ಧನರೂಪ ಸಂಭಾವನೆಯೂ ವೈದ್ಯರಿಗೆ ದೊರಕುತ್ತಿತ್ತು. ಗ್ರಾಮಾಂತರ ಪ್ರದೇಶಗಳಲ್ಲಿ ಶಾಸ್ತ್ರಜ್ಞರಿಗಿಂತ ಅರ್ಚಕರು, ಜ್ಯೋತಿಷ್ಕರು, ವೈದ್ಯವೃತ್ತಿಯನ್ನು ನಡೆಸುತ್ತಿದ್ದರು.

**ಮಧ್ಯಯುಗ :** ವಿಜಯನಗರ ಸಾಮ್ರಾಜ್ಯದ ದಕ್ಷ ಆಡಳಿತ ಈ ಯುಗದ ಪ್ರಮುಖ ಘಟನೆ. ಈ ಅರಸರು ಹಿಂದೂಧರ್ಮದ ಪುನರುಜ್ಜೀವನಕ್ಕಾಗಿ ಮಾಡಿದ ಕಾರ್ಯಗಳಿಂದ ಪ್ರಾಚೀನ ವಿದ್ಯೆಗಳು ಪುನರುಜ್ಜೀವನಗೊಂಡವು. ವಿದ್ಯಾರಣ್ಯರ ತತ್ತ್ವಶಾಸ್ತ್ರ ಗ್ರಂಥಗಳು, ಸಾಯಣರ ಚತುರ್ವೇದ ಭಾಷ್ಯಗಳು ಸಮಾಜದಲ್ಲಿ ಹಿಂದುಧರ್ಮವನ್ನು ಸ್ಥಿರಗೊಳಿಸಿದುವು. ಪರಧರ್ಮ ಸಹಿಷ್ಣುಗಳಾಗಿದ್ದ ರಾಯರು ಇತರ ಧರ್ಮಗಳನ್ನೂ ಪೋಷಿಸಿದರು. ವಿಜಯನಗರದ ಅಧಿರಾಜನಾಗಿದ್ದ ಮುಗಳೀಪುರದ ಅರಸ ಮಂಗರಾಜ (1360) ವಿಷಚಿಕಿತ್ಸೆಯಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದ. ಈತನ ಖಗೇಂದ್ರ ಮಣಿದರ್ಪಣ ಕನ್ನಡ ಶಾಸ್ತ್ರ ಸಾಹಿತ್ಯದಲ್ಲಿ ಶ್ರೇಷ್ಠ ಗ್ರಂಥ. ಒಂದನೆಯ ಬುಕ್ಕರಾಯನ (1356-76) ಆಸ್ಥಾನ ವೈದ್ಯ ವಿಷ್ಣುದೇವನ ರಸರಾಜಲಕ್ಷ್ಮಿ, ಇಮ್ಮಡಿ ಬುಕ್ಕರಾಯನ (1404-24) ಆಸ್ಥಾನ ವೈದ್ಯ ಲಕ್ಷ್ಮಣಪಂಡಿತನ ವೈದ್ಯರಾಜ ವಲ್ಲಭ, ಅಭಿನವ ಚಂದ್ರನ (1400) ಅಶ್ವಶಾಸ್ತ್ರ, ವಲ್ಲಭೇಂದ್ರನ ವೈದ್ಯ ಚಿಂತಾಮಣಿ, ಕಲ್ಲರಸನ (1450) ಜನವಶ್ಯವೆಂಬ ಕಾಮಶಾಸ್ತ್ರ ಗ್ರಂಥ, ಕವಿಲಿಂಗನ (1490) ಕಾಮಶಾಸ್ತ್ರದ ಪದಗಳು, ದಾಮೋದರ ಪಂಡಿತನ ಆರೋಗ್ಯ ಚಿಂತಾಮಣಿ, ಭಟ್ಟನರಹರಿಯ ವಾಗ್ಭಟ ಮಂಡನ,

ಶ್ರೀಧರದೇವನ (1500) ವೈದ್ಯಾಮೃತ, ಬಾಚರಸನ (1500) ಅಶ್ವವೈದ್ಯ, ಮೂರನೆಯ ಮಂಗರಸನ (1508) ಸೂಪಶಾಸ್ತ್ರ, ಸಾಳ್ವನ (1550) ವೈದ್ಯ ಸಾಂಗತ್ಯ, ರಘುನಾಥ ಸೂರಿಯ ಭೋಜನ ಕುತೂಹಲ, ಯಳಂದೂರು ಚನ್ನರಾಜನ (1570) ವೈದ್ಯಸಾರ ಸಂಗ್ರಹ, ವೀರಭದ್ರರಾಜನ (1600) ಹಸ್ತ್ಯಾಯುರ್ವೇದ ಟೀಕೆ, ರಾಮಚಂದ್ರ ಪಂಡಿತನ (1625) ಅಶ್ವಶಾಸ್ತ್ರ, ಪದ್ಮಣ ಪಂಡಿತನ (1627) ಹಯಸಾರ ಸಮುಚ್ಚಯ. ಬಿಜಾಪುರದ ಸುಲ್ತಾನ್ ಇಮ್ಮಡಿ ಆದಿಲ್‌ಷಾನ ಆಸ್ಥಾನದಲ್ಲಿದ್ದ ಲೋಲಂಬರಾಜನ ಸದ್ವೈದ್ಯ ಜೀವನ ಮತ್ತು ವೈದ್ಯಾವತಂಸಗಳು, ಕೊಟ್ಟೂರು ಬಸವರಾಜನ (1670) ಶಿವತತ್ತ್ವ ರತ್ನಾಕರದಲ್ಲಿ ಆಯುರ್ವೇದದ ವಿವರಣೆ, ಶ್ರೀಕಂಠ ನಂದಿಯ ಪರ್ಯಾಯ ಮಂಜರಿ, ಶ್ರೀಕಂಠ ಪಂಡಿತನ ವೈದ್ಯಸಾರ ಸಂಗ್ರಹ, ಶ್ರೀಪಂಡಿತನ ಯೋಗಶತಕ, ಕೃಷ್ಣಾರ್ಯನ ಸಿದ್ಧಯೋಗ ಸಮುಚ್ಚಯ, ಸಲಾದು ಮಾಧವಾಚಾರ್ಯನ ಚಿಕಿತ್ಸಾಸಾರ ಸಂಗ್ರಹ, ಗಂಗಾಧರನ ಭೇಷಜ ಕಲ್ಪ, ಕಳಲೆಯ ವೀರರಾಜನ (1720) ಸಕಲ ವೈದ್ಯ ಸಂಹಿತಾ ಸಾರಾರ್ಣವ, ನಂಜರಾಜನ (1749) ವೈದ್ಯಸಾರಸಂಗ್ರಹ, ತಿಮ್ಮರಾಜಗೌಡನ (1750) ಸ್ತ್ರೀವೈದ್ಯ, ಇಮ್ಮಡಿ ಕೃಷ್ಣರಾಜ ಒಡೆಯನ (1759) ಬಾಹಟ ಟೀಕೆ, ಲಕ್ಷ್ಮಣಪಂಡಿತನ (1775) ಅಕಾರಾದಿ ನಿಘಂಟು ಈ ಯುಗದ ಮುಖ್ಯ ವೈದ್ಯಗ್ರಂಥಗಳು.

ಹದಿನೈದನೆಯ ಶತಮಾನದವರೆಗೆ ದಕ್ಷಿಣ ಭಾರತದಲ್ಲಿ ಏಕೈಕ ವೈದ್ಯ ಪದ್ಧತಿಯಾಗಿದ್ದ ಆಯುರ್ವೇದಕ್ಕೆ ಪ್ರತಿಸ್ಪರ್ಧಿಯಾಗಿ ಯುನಾನಿ ಪದ್ಧತಿ ಹದಿನಾರನೆಯ ಶತಮಾನದಲ್ಲೂ ಐರೋಪ್ಯ ಪದ್ಧತಿ ಹದಿನೇಳನೆಯ ಶತಮಾನದಲ್ಲೂ ಕ್ರಮೇಣ ನೆಲೆಯೂರಿದುವು. ಮುಸ್ಲಿಂ ಸುಲ್ತಾನರ ಕಾಲದಲ್ಲಿ ಯುನಾನಿ ಹಕೀಮರು ರಾಜಾಸ್ಥಾನ ಮತ್ತು ಸಮಾಜದಲ್ಲಿ ವೈದ್ಯವೃತ್ತಿಯನ್ನಾರಂಭಿಸಿದರು. ಹಿಂದುಶಾಸ್ತ್ರಜ್ಞರು ಮುಸ್ಲಿಂ ದಾಳಿಕಾರರ ಹೆದರಿಕೆಯಿಂದ ತಮ್ಮಲ್ಲಿದ್ದ ಗ್ರಂಥಗಳನ್ನು ತೆಗೆದುಕೊಂಡು ಗ್ರಾಮಾಂತರ ಪ್ರದೇಶಗಳಿಗೆ ವಲಸೆ ಹೋದರು. ತತ್ಪರಿಣಾಮವಾಗಿ ಶಾಸ್ತ್ರೀಯ ಅಧ್ಯಯನವಿಲ್ಲದೆ ಖೋಟಾವೈದ್ಯರು ಸಮಾಜದಲ್ಲಿ ಹೆಚ್ಚಿ ಜನರ ನಿಂದೆಗೆ ಗುರಿಯಾದರು. ಸುಲಭವಾದ ಮೂಲಿಕಾವೈದ್ಯಕ್ಕೆ ಬದಲಾಗಿ ರಸಾಯನ ಪ್ರಯೋಗಗಳಿಂದ ಔಷಧಿಗಳನ್ನು ತಯಾರಿಸುವ ಕ್ರಮ ಹೆಚ್ಚು ರೂಢಿಗೆ ಬಂದುದು ಈ ಯುಗದ ಮತ್ತೊಂದು ಪ್ರಮುಖ ಘಟನೆ.

**ಆಧುನಿಕ ಯುಗ :** ಬ್ರಿಟಿಷ್ ಆಡಳಿತ ಭಾರತದಾದ್ಯಂತ ಕ್ರಮ ಕ್ರಮವಾಗಿ ಹರಡಿದ ಪರಿಣಾಮವಾಗಿ ಯುರೋಪಿನ ವೈದ್ಯಪದ್ಧತಿ ರಾಜಮಾನ್ಯತೆಯನ್ನು ಪಡೆಯಿತು. ಜನಾರೋಗ್ಯ ರಕ್ಷಣಾಕ್ಷೇತ್ರದಲ್ಲಿ ಪ್ರಥಮವಾಗಿ ಕಾರ್ಯನಿರತವಾದ ಈ ಪದ್ಧತಿ ದಿನೇ ದಿನೇ ಬೆಳೆಯುತ್ತ ಇಂದು ಎಲ್ಲೆಡೆ ವ್ಯಾಪಿಸಿದೆ. ಪ್ರಾಚೀನ ಆಯುರ್ವೇದಕ್ಕೆ ಇದರಿಂದ ಬಹುಮಟ್ಟಿನ ಧಕ್ಕೆ ತಗುಲಿತಾದರೂ ತನ್ನ ಅಂತಃಸತ್ತ್ವದಿಂದ ಅದು ಇಂದಿಗೂ ಉಳಿದು ತನ್ನ ವೈಶಿಷ್ಟ್ಯದಿಂದ ಜನತಾಸೇವೆಯನ್ನು ಯಥಾಶಕ್ತಿ ಸಲ್ಲಿಸುತ್ತಿದೆ. ಪ್ರಾಚೀನ ಸಂಸ್ಕೃತಿವತ್ಸಲರಾದ ಮೈಸೂರು ರಾಜಮನೆತನದ ಒಡೆಯರು ಇದರ ಏಳಿಗೆಗಾಗಿ ಪ್ರಯತ್ನಗಳನ್ನು ಮಾಡಿದ್ದಾರೆ. ಆಯುರ್ವೇದಾಧ್ಯಯನವನ್ನು ವ್ಯವಸ್ಥೆಗೊಳಿಸುವ ಉದ್ದೇಶದಿಂದ ಮಹಾರಾಜ ಚಾಮರಾಜ ಒಡೆಯರು ಮೈಸೂರು ನಗರದ ಸಂಸ್ಕೃತ ಮಹಾಪಾಠ ಶಾಲೆಯಲ್ಲಿ 1908ರಲ್ಲಿ ಆಯುರ್ವೇದ ವಿಭಾಗವೊಂದನ್ನು ಸ್ಥಾಪಿಸಿದರು. 1930ರಲ್ಲಿ ಪ್ರತ್ಯೇಕವಾದ ವಿದ್ಯಾಶಾಲೆಯೊಂದು ಏರ್ಪಟ್ಟು ಇಂದಿನವರೆಗೆ ಸಾವಿರಾರು ವಿದ್ಯಾರ್ಥಿಗಳು ವೈದ್ಯವಿದ್ಯೆ ಪಡೆದಿದ್ದಾರೆ. ಇತ್ತೀಚೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಆಯುರ್ವೇದಾಭಿವೃದ್ಧಿಗಾಗಿ ಅನೇಕ ಯೋಜನೆಗಳನ್ನು ಕೈಗೊಂಡಿವೆ. *

**ಕರ್ನಾಟಕ ನಂದಿನಿ :** ಮಹಿಳೆಯರ ಶಿಕ್ಷಣ ಅವರಲ್ಲಿ ಧರ್ಮ ನೀತಿಗಳ ಬೆಳೆವಣಿಗೆ, ಸೌಜನ್ಯಾಭಿವೃದ್ಧಿ ಇವುಗಳಿಗಾಗಿಯೇ ಮೀಸಲಾಗಿದ್ದು, ಮಹಿಳೆಯೊಬ್ಬರಿಂದ ಸಂಪಾದಿತವಾಗಿ ಮೈಸೂರಿನಿಂದ ಪ್ರಕಟವಾಗುತ್ತಿದ್ದ ಪತ್ರಿಕೆ. ಪತ್ರಿಕಾ ಪ್ರಪಂಚದಲ್ಲಿ ಸಾಹಿತ್ಯ ಲೋಕದಲ್ಲಿ ಮಹಿಳೆಯರ ಸಾಹಸದ ಗುರುತಾಗಿ ಅದು ಕಂಗೊಳಿಸಿತು. ಮೂರು ವರ್ಷಗಳ ಕಾಲ ಈ ಪತ್ರಿಕೆ ಪ್ರಕಟವಾಗುತ್ತಿದ್ದು ಅನಂತರ ನಿಂತರೂ ಪತ್ರಿಕಾ ಪ್ರಪಂಚದಲ್ಲೂ ಸಾಹಿತ್ಯ ಸಂವರ್ಧನೆಯಲ್ಲೂ ಅದು ತಕ್ಕಮಟ್ಟಿಗೆ ಸೇವೆ ಸಲ್ಲಿಸಿತು.

ಮೈಸೂರಿನ ಬಳಿಯ ನಂಜನಗೂಡಿನಲ್ಲಿ ಸತೀ ಹಿತೈಷಿಣೀ ಗ್ರಂಥಮಾಲೆಯು ತಿರುಮಲಾಂಬಾ 1916ರ ಅಕ್ಟೋಬರಿನಲ್ಲಿ ಈ ಪತ್ರಿಕೆಯನ್ನು ಪ್ರಾರಂಭಿಸಿದರು. ಅವರು 1913ರಲ್ಲಿ ಪ್ರಾರಂಭಿಸಿದ ಸತೀ ಹಿತೈಷಿಣೀ ಗ್ರಂಥಮಾಲೆಯಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳಿಗೆ ದೊರೆತ ಪ್ರೋತ್ಸಾಹವೇ ಇದಕ್ಕೆ ಪ್ರೇರಣೆ. ಆದರೆ ಆರ್ಥಿಕ ತೊಂದರೆಯಿಂದಾಗಿ ಅವರು ಈ ಪತ್ರಿಕೆಯನ್ನು ನಿಲ್ಲಿಸಬೇಕಾಯಿತು. ಇದರ ಚಂದಾದಾರರ ಸಂಖ್ಯೆ ಸುಮಾರು 300. ಆದರೆ ಕರ್ನಾಟಕದ ಹೊರಗಿನ ಮುಂಬಯಿ, ಕೋಲ್ಕತ, ಆಗ್ರ ಮೊದಲಾದ ಸ್ಥಳಗಳಲ್ಲೂ ಇದರ ಪ್ರಸಾರ ಸಾಕಷ್ಟಿತ್ತು. ಮಂಗಳೂರಿನಲ್ಲಿ ವಿಶೇಷವಾದ ಪ್ರಸಾರವಿತ್ತು.

ಪತ್ರಿಕೆ ನಂಜನಗೂಡಿನಿಂದ ಪ್ರಕಟವಾಗುತ್ತಿದ್ದರೂ ಧಾರವಾಡದ ಕೃಷ್ಣ ಮುದ್ರಣಾಲಯದಲ್ಲಿ ಮುದ್ರಣವಾಗುತ್ತಿತ್ತು. ಈ ಮುದ್ರಣಾಲಯ ದೊಂದಿಗೆ ಲೋಕಮಾನ್ಯ ತಿಲಕರ ಸಂಬಂಧವಿದ್ದುದರಿಂದ ಪತ್ರಿಕೆಯ ಮುದ್ರಣಕ್ಕೆ ಸರ್ಕಾರ ಪ್ರತಿಬಂಧಕ ಹೇರಬಯಸಿದಾಗ, ತಮ್ಮ ಪತ್ರಿಕೆಯಲ್ಲಿ ರಾಜಕೀಯ ವಿಚಾರಗಳನ್ನು ಪ್ರಕಟಿಸುವುದಿಲ್ಲವೆಂದು ಬರೆದುಕೊಟ್ಟು ಪ್ರಕಟಣೆಗೆ ಅನುಮತಿ ಪಡೆಯಬೇಕಾಯಿತು.

ಮೊದಲ ಪುಟ ಕವನದಿಂದ ಪ್ರಾರಂಭವಾಗುತ್ತಿತ್ತು. ಸಾಮಾನ್ಯವಾಗಿ ಇದು ದೇವತಾ ಪ್ರಾರ್ಥನೆಯಾಗಿರುತ್ತಿತ್ತು. ಶ್ರೀಪಾದರೇಣು ಅವರ ಕವಿತೆಗಳೇ ಹೆಚ್ಚು. ಮೊದಲ ಪುಟದ ಪಕ್ಕದಲ್ಲಿ ರನ್ನಗನ್ನಡಿಯಲ್ಲಿ ಪರಿಚಯ ಮಾಡಿಸುತ್ತಿದ್ದ ಪ್ರಸಿದ್ಧ ವ್ಯಕ್ತಿಗಳ ಚಿತ್ರ ಪ್ರಕಟಿಸುತ್ತಿದ್ದರು. ಮುಖಪುಟದಲ್ಲಿ ವಂದೇ ತ್ವಾ ಭೂದೇವಿ ಆರ್ಯ ಮಾತರಂ ಎಂಬ ವಾಕ್ಯವಿರುತ್ತಿತ್ತು. ಕ್ರೌನ್ ಅಷ್ಟಪತ್ರದ 53 ಪುಟಗಳಿಂದ ಕೂಡಿದ್ದ ಪತ್ರಿಕೆಯ ಬಿಡಿ ಪ್ರತಿಯ ಬೆಲೆ 2½ ಆಣೆ, ವಾರ್ಷಿಕ ಚಂದಾ ರೂ.1½

ಸ್ತ್ರೀ ಶಿಕ್ಷಣ, ಸ್ತ್ರೀ ಸುಧಾರಣೆ, ಸ್ತ್ರೀ ನೀತಿ, ಭಕ್ತಿ ಮುಂತಾದ ಸ್ತ್ರೀಯರಿಗೆ ಸಂಬಂಧಿಸಿದ ಅನೇಕ ಲೇಖನಗಳೂ ಧಾರಾವಾಹಿಯಾಗಿ ಐತಿಹಾಸಿಕ ಕಾದಂಬರಿಗಳೂ ಪ್ರಬಂಧಗಳೂ ಆಧ್ಯಾತ್ಮಿಕ ಲೇಖನಗಳೂ ಪ್ರಕಟವಾಗುತ್ತಿದ್ದವು. ವಿವಾಹ ವಯಸ್ಸನ್ನು ಏರಿಸುವುದರ ಆವಶ್ಯಕತೆಯನ್ನು ಕುರಿತು ಪ್ರಕಟವಾದ ಒಂದು ಲೇಖನ ಉತ್ತಮವಾದದ್ದು. ಈ ಪತ್ರಿಕೆಯಲ್ಲಿ ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಲಾಗುತ್ತಿತ್ತು.

ಹೆಂಗಸರು ಪತ್ರಿಕೆ ಹೊರಡಿಸಬಾರದು ಎಂದು ಹೇಳಿ ಹಲವರು ಈ ಪತ್ರಿಕೆಯನ್ನು ನಿಲ್ಲಿಸಲು ಯತ್ನಿಸಿದಾಗ ಶುಭೋದಯದಲ್ಲಿ ಇವರ ಪರವಾಗಿ ಶ್ರೀ ಶೇಷ ಪಾರಿಶ್ವಾಡರು ಲೇಖನ ಬರೆದು ಬೆಂಬಲ ನೀಡಿದರು. ಈ ಪತ್ರಿಕೆಯ ಲೇಖಕರಿಗೆ ಅಲ್ಪಸ್ವಲ್ಪವಾದರೂ ಗೌರವಧನ ನೀಡುವ ಪರಿಪಾಟ ಇತ್ತು. ಪತ್ರಿಕೆಗಳಿಂದ ಒಳ್ಳೆಯ ಸಾಹಿತ್ಯ ಸೇವೆ ಸಲ್ಲುವುದೆಂಬುದಕ್ಕೆ ಇದೊಂದು ಉತ್ತಮ ನಿದರ್ಶನ. *

**ಕರ್ನಾಟಕ ಬಂಧು :** ಗದಗ ಜಿಲ್ಲೆ ಗದಗಿನಿಂದ ಪ್ರಕಟ ವಾಗುತ್ತಿರುವ, ಮುಖ್ಯವಾಗಿ ಪ್ರಾದೇಶಿಕ ಸ್ವರೂಪದ ವಾರಪತ್ರಿಕೆ. ಸ್ಥಾನಿಕ ಸಮಸ್ಯೆಗಳ ಮತ್ತು ಸ್ಥಾನಿಕ ಸಮಾಜಗಳ ಪರಿಚಯ, ಕಥೆ, ಕವನ, ಪ್ರಬಂಧಗಳನ್ನು ಒಳಗೊಂಡಿರುತ್ತದೆ. ಇದು 1930ರ ಅಕ್ಟೋಬರಿನಲ್ಲಿ ಆರಂಭವಾಯಿತು.

ಚೆನ್ನಬಸವಸ್ವಾಮಿ ವಿರೂಪಾಕ್ಷಯ್ಯಸ್ವಾಮಿ ಹಿರೇಮಠ ಅವರು ಪತ್ರಿಕೆಯ ಒಡೆಯರು, ಸಂಪಾದಕರು ಮತ್ತು ಪ್ರಕಾಶಕರು. ಪ್ರಾರಂಭದಲ್ಲಿ ಪತ್ರಿಕೆಯಲ್ಲಿ ಕಿರೀಟ ಅರ್ಧ ಆಕಾರದ 16 ಪುಟಗಳಿದ್ದುವು. 1934ರಲ್ಲಿ ಇದನ್ನು 28ಕ್ಕೆ ಹೆಚ್ಚಿಸಲಾಯಿತು. ಅಲ್ಲದೆ ಲೇಖನಗಳೊಂದಿಗೆ ಚಿತ್ರಗಳನ್ನು ಪ್ರಕಟಿಸಲು ಉಪಕ್ರಮಿಸಿ ಪತ್ರಿಕೆಯ ಸ್ವರೂಪವನ್ನು ಆಕರ್ಷಕವಾಗಿಸಿ ಸಚಿತ್ರ ಗೊಳಿಸಲಾಯಿತು.

ಪತ್ರಿಕೆಯ ಪ್ರಸಾರ ಪ್ರಾರಂಭದಲ್ಲಿ 700-800. ಆದರೆ ಪುಟಗಳ ಸಂಖ್ಯೆಯನ್ನು ಹೆಚ್ಚಿಸಿದಾಗ ಬೆಲೆ ಒಂದೇ ಆಣೆ ಇದ್ದುದ ರಿಂದ ಪತ್ರಿಕೆಯ ಪ್ರಸಾರ ಮೊದಲಿದ್ದ ರಿಂದ ಸು.5,000-6,000ಕ್ಕೆ ಏರಿತ್ತು. ಈಗ ಇದರ ಪ್ರಸಾರ ಸಂಖ್ಯೆಯೂ ಪುಟಗಳ ಸಂಖ್ಯೆಯೂ ಕಡಿಮೆಯಾಗಿದೆ. ಡಿಮ್ಮೈ ಅರ್ಧ ಆಕಾರದ 12 ಪುಟಗಳಿವೆ. *

**ಕರ್ನಾಟಕ ಭಾರತಿ :** ಸೃಜನ, ವಿಮರ್ಶನ, ಸಂಶೋಧನ ಮತ್ತು ವಿಜ್ಞಾನ ಸಾಹಿತ್ಯದ ಅಭಿವೃದ್ಧಿಗಾಗಿ ಮೀಸಲಾದ, ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾಗುತ್ತಿರುವ ತ್ರೈಮಾಸಿಕ. ಸ್ವಾತಂತ್ರ್ಯೋತ್ಸವ ದಿನ, ಕನ್ನಡ ರಾಜ್ಯೋದಯ ದಿನ, ಸಂಕ್ರಮಣ ಮತ್ತು ಅಕ್ಷಯತೃತೀಯಗಳ ಸಮಯಗಳಲ್ಲಿ ಕ್ರಮವಾಗಿ ಪ್ರಕಟವಾಗುತ್ತದೆ. ಬಿಡಿ ಸಂಚಿಕೆಯ ಬೆಲೆ ರೂ.2.50, ವಾರ್ಷಿಕ ಚಂದಾ ರೂ.8.

ಕರ್ನಾಟಕ ವಿಶ್ವವಿದ್ಯಾಲಯದಿಂದ ಇಂಗ್ಲಿಷಿನಲ್ಲಿ ಸೈನ್ಸ್ (1956), ಹ್ಯುಮಾನಿಟೀಸ್ (1957) ಮತ್ತು ಸೋಷಿಯಲ್ ಸೈನ್ಸಸ್ (1965) ಪತ್ರಿಕೆಗಳು ಪ್ರಕಟವಾಗುತ್ತಿವೆ. ಹ್ಯುಮಾನಿಟೀಸ್ ಪತ್ರಿಕೆ ಇಂಗ್ಲಿಷ್ ಲೇಖನಗಳ ಜೊತೆಗೆ ಕೆಲವು ಕನ್ನಡ ಲೇಖನಗಳನ್ನೂ ಒಳಗೊಂಡಿರುತ್ತಿತ್ತು. ಆದರೆ ಪ್ರಕಟಣೆಗೆ ಬರುತ್ತಿದ್ದ ಕನ್ನಡ ಲೇಖನಗಳ ಸಂಖ್ಯೆ ಹೆಚ್ಚಾದಂತೆ ಆ ಪತ್ರಿಕೆಯಲ್ಲಿ ಅವಕ್ಕೆ ಸ್ಥಳ ಸಾಲದಾಯಿತು. ಅಲ್ಲದೆ, ಅದೇ ಹೊತ್ತಿಗೆ ಉತ್ತರ ಕರ್ನಾಟಕದ ಓದುಗರ ಹಾಗೂ ಲೇಖಕರ ಬಳಗಕ್ಕೆ ಆ ಭಾಗದಲ್ಲಿ ಪ್ರೌಢವಾದ ಸಂಶೋಧನ ಹಾಗೂ ಸೃಜನಾತ್ಮಕ ಲೇಖನಗಳನ್ನು ಪ್ರಕಟಿಸಬಲ್ಲ ಉನ್ನತಮಟ್ಟದ ನಿಯತಕಾಲಿಕೆಯೊಂದರ ಆವಶ್ಯಕತೆಯಿತ್ತು. ಸಾಹಿತ್ಯದಂತೆಯೇ ವಿಜ್ಞಾನದ ವಿವಿಧ ಶಾಖೆಗಳ ಹಾಗೂ ನಾನಾ ಶಾಸ್ತ್ರಗಳ ಜ್ಞಾನವನ್ನು ಕನ್ನಡ ಮಾಧ್ಯಮದ ಮೂಲಕ ಜನತೆಯಲ್ಲಿ ಹರಡುವ ಮತ್ತು ಭಾಷೆಯನ್ನು ಅದಕ್ಕೆ ಒಗ್ಗಿಸಿ ಪುಷ್ಟಿಗೊಳಿಸುವ ಕಾರ್ಯ ತೀವ್ರಗತಿಯಿಂದ ನಡೆಯಬೇಕಾಗಿತ್ತು. ಕರ್ನಾಟಕ ವಿಶ್ವವಿದ್ಯಾಲಯ ಈ ಪರಿಸ್ಥಿತಿಯನ್ನು ಮನಗಂಡು, ಕರ್ನಾಟಕ ಭಾರತಿ ಎಂಬ ಹೆಸರಿನಲ್ಲಿ ಷಾಣ್ಮಾಸಿಕ ಪತ್ರಿಕೆಯೊಂದನ್ನು ಪ್ರಕಟಿಸಲು ನಿಶ್ಚಯಿಸಿ 1968 ನವೆಂಬರ್ 1ರಂದು ಅದರ ಪ್ರಥಮ ಸಂಚಿಕೆಯನ್ನು ಬಿಡುಗಡೆಗೊಳಿಸಿತು. ಡೆಮ್ಮಿ ಅಷ್ಟಪತ್ರಾಕಾರದಲ್ಲಿ 200ಕ್ಕೂ ಹೆಚ್ಚು ಪುಟಗಳನ್ನೊಳಗೊಂಡಿದ್ದ ಆ ಪತ್ರಿಕೆಯ ಬಿಡಿಸಂಚಿಕೆಯ ಬೆಲೆ ರೂ.3 ವಾರ್ಷಿಕ ಚಂದಾ ರೂ.5. ಮೊದಲ ಎರಡು ಸಂಪುಟಗಳ ನಾಲ್ಕು ಸಂಚಿಕೆಗಳು ಪ್ರಕಟವಾದ ಮೇಲೆ 1970 ಆಗಸ್ಟ್ 15ರ ಸಂಚಿಕೆಯಿಂದ ತ್ರೈಮಾಸಿಕವಾಯಿತು. ಲೇಖನಗಳ ಜೊತೆಗೆ ಗ್ರಂಥಾವಲೋಕನ, ಸಂಪಾದಕೀಯ, ಲೇಖಕರ ಪರಿಚಯ ಹಾಗೂ ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾಗಿರುವ ಗ್ರಂಥಗಳ ಕ್ರಯಪಟ್ಟಿ ಇವನ್ನು ಪ್ರತಿಸಂಚಿಕೆಯೂ ಒಳಗೊಂಡಿರುತ್ತದೆ. ಸಂಪಾದಕ ಮಂಡಲಿಯ ಸದಸ್ಯರು ಬೇರೆ ಬೇರೆ ವ್ಯಾಸಂಗ ವಿಭಾಗಗಳನ್ನು ಪ್ರತಿನಿಧಿಸುತ್ತಾರೆ. ಲೇಖಕರಿಗೆ ಅವರ ಲೇಖನ ಪ್ರಕಟವಾದ ಸಂಚಿಕೆಯೊಂದಿಗೆ ಆ ಲೇಖನದ ಮೇಲಚ್ಚಿನ ಇಪ್ಪತ್ತೈದು ಪ್ರತಿಗಳನ್ನು ಉಚಿತವಾಗಿ ಕೊಡಲಾಗುತ್ತದೆ. *




**ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ :** ಮೈಸೂರು ನಗರದ ಮಾನಸಗಂಗೋತ್ರಿ ಆವರಣದಲ್ಲಿರುವ ಒಂದು ದೂರಶಿಕ್ಷಣ ವಿಶ್ವವಿದ್ಯಾಲಯ. ಮೈಸೂರು ವಿಶ್ವವಿದ್ಯಾನಿಲಯದ ಅಂಗಸಂಸ್ಥೆಯಾಗಿದ್ದ ಹಿಂದಿನ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯನ್ನು (1969-96) ಉನ್ನತೀಕರಿಸಿ ಸ್ಥಾಪಿಸಲಾಗಿದೆ. ಆರಂಭದಲ್ಲಿ ಅಂಚೆ ಬೋಧನೆ ಮೂಲಕ ಬಿ.ಎ., ಬಿ.ಕಾಂ., ಎಂ.ಎ., ಎಂ.ಕಾಂ., ಮತ್ತು ಇತರ ಶಿಕ್ಷಣಗಳನ್ನು ನೀಡುತ್ತಿತ್ತು. ನವದೆಹಲಿಯಲ್ಲಿ ಇಂದಿರಾಗಾಂಧಿ ರಾಷ್ಟ್ರೀಯ ಮುಕ್ತ ವಿಶ್ವವಿದ್ಯಾಲಯ ಸ್ಥಾಪಿತವಾದ (1985) ಮೇಲೆ ದೂರಶಿಕ್ಷಣ ಕ್ಷೇತ್ರದಲ್ಲಿ ಅನೇಕ ಬದಲಾವಣೆಗಳಾದುವು. ಇದರ ಫಲವಾಗಿ ಅಂಚೆ ಬೋಧನೆ ವಿಧಾನದಿಂದ ದೂರ ಶಿಕ್ಷಣ ವಿಧಾನಕ್ಕೆ ಬೋಧನೆಯನ್ನು ಬದಲಾಯಿಸಿಕೊಳ್ಳಲಾಯಿತು. ಕರ್ನಾಟಕದ ಶೈಕ್ಷಣಿಕ ಅಗತ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು 1996 ಜೂನ್ 26ರಂದು ಈ ವಿಶ್ವವಿದ್ಯಾನಿಲಯ ಸ್ಥಾಪಿತವಾಯಿತು.

ಮುಕ್ತ ವಿಶ್ವವಿದ್ಯಾನಿಲಯದ ಪ್ರಮುಖ ಧ್ಯೇಯಗಳಿವು: ವಿದ್ಯಾರ್ಥಿಗಳಿಗೆ ಅವರ ಕಲಿಕಾ ವೇಗಕ್ಕೆ ಅನುಗುಣವಾಗಿ ಮನೆ ಬಾಗಿಲಿಗೆ ಉನ್ನತ ಶಿಕ್ಷಣವನ್ನು ನೀಡುವುದು, ವಯೋಮಾನದ ಆಧಾರದ ಮೇಲೆ ಪ್ರತಿಯೊಬ್ಬರಿಗೂ ಶಿಕ್ಷಣವನ್ನು ನೀಡುವುದು, ವೃತ್ತಿಪರತೆ ಮತ್ತು ವೃತ್ತಿ ನೈಪುಣ್ಯ ತಂದುಕೊಡುವ ರೀತಿಯಲ್ಲಿ ಅಗತ್ಯವಾದ ಶೈಕ್ಷಣಿಕ ಕಾರ್ಯಕ್ರಮಗಳನ್ನು ಪ್ರಸ್ತುತಪಡಿಸುವುದು, ಸರಳ ಪ್ರವೇಶ ನಿಬಂಧನೆಗಳು, ವಿದ್ಯಾರ್ಥಿ ಆಸಕ್ತಿ ಹಾಗೂ ಅನುಕೂಲಕ್ಕೆ ಅನುಗುಣವಾಗಿ ಅಧ್ಯಯನ ಮಾಡುವ ಅವಕಾಶ ಒದಗಿಸುವುದು, ಪೂರ್ಣಕಾಲಿಕ ವಿದ್ಯಾರ್ಥಿಗಳಂತೆ ಅಧ್ಯಯನ ಮುಂದುವರಿಸಲು ಸಾಧ್ಯವಾಗದ ಉದ್ಯೋಗಸ್ಥರಿಗೆ, ಗ್ರಾಮಾಂತರ ಪ್ರದೇಶದ ಜನರಿಗೆ ಶಿಕ್ಷಣನೀಡುವುದು, ಪುರುಷರಿಗೆ ಹಾಗೂ ಮಹಿಳೆಯರಿಗೆ ಶಿಕ್ಷಣ ನೀಡುವುದು, ಆಧುನಿಕ ಮಾಹಿತಿ ತಂತ್ರಜ್ಞಾನದ ಬೆಳವಣಿಗೆಗಳನ್ನು ಅನುಸರಿಸಿ ಹೊಸ ಶಿಕ್ಷಣಗಳನ್ನು ತೆರೆಯುವುದು.

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ ನೀಡುವ ವಿವಿಧ ಶಿಕ್ಷಣ ಕ್ರಮಗಳು ಹೀಗಿವೆ: ಪದವಿ ಶಿಕ್ಷಣಗಳು: ಬಿ.ಎ., ಬಿ.ಕಾಂ., ಬಿ.ಎಡ್., ಬಿ.ಎಲ್.ಐ.ಎಸ್.ಸಿ., ಬಿ.ಎಸ್‌ಸಿ. (ಐ.ಟಿ.). ಸ್ನಾತಕೋತರ ಶಿಕ್ಷಣ ಕ್ರಮಗಳು: ಕನ್ನಡ, ಇಂಗ್ಲಿಷ್, ಹಿಂದಿ, ಉರ್ದು, ಸಂಸ್ಕೃತ, ಇತಿಹಾಸ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಸಮಾಜಶಾಸ್ತ್ರ, ಜೊತೆಗೆ ಎಂ.ಕಾಂ., ಎ.ಎಡ್., ಎಂ.ಎಸ್‌ಸಿ. (ಐ.ಟಿ). ಡಿಪ್ಲೊಮ ಶಿಕ್ಷಣ ಕ್ರಮಗಳು: ಪ್ರಿ-ಯೂನಿವರ್ಸಿಟಿ ಅನಂತರದ ಕನ್ನಡ ಡಿಪ್ಲೊಮ, ಪತ್ರಿಕೋದ್ಯಮ ಡಿಪ್ಲೊಮ, ನಿರ್ವಹಣಾಶಾಸ್ತ್ರ ಡಿಪ್ಲೊಮ, ಆಹಾರ ಪೋಷಣೆ ಮತ್ತು ಆರೋಗ್ಯ ಶಿಕ್ಷಣ ಡಿಪ್ಲೊಮ ಗ್ರಾಮೀಣ ಅಭಿವೃದ್ಧಿ ಡಿಪ್ಲೊಮ, ಇಂಗ್ಲಿಷಿನಲ್ಲಿ ಸ್ನಾತಕೋತ್ತರ ಡಿಪ್ಲೊಮ, ಮಾನವ ಸಂಪನ್ಮೂಲ ನಿರ್ವಹಣೆ, ಸ್ನಾತಕೋತ್ತರ ಡಿಪ್ಲೊಮ, ಉನ್ನತ ಶಿಕ್ಷಣ ಸ್ನಾತಕೋತ್ತರ ಡಿಪ್ಲೊಮ, ಕ್ರಿಯಾತ್ಮಕ ಇಂಗ್ಲಿಷ್ ಡಿಪ್ಲೊಮ. ಸರ್ಟಿಫಿಕೇಟ್ ಶಿಕ್ಷಣಗಳು: ಕನ್ನಡ ಸರ್ಟಿಫಿಕೇಟ್ ಶಿಕ್ಷಣಕ್ರಮ, ಇಂಗ್ಲಿಷ್ ಬೋಧನೆ ಸರ್ಟಿಫಿಕೇಟ್ ಶಿಕ್ಷಣಕ್ರಮ, ಆಹಾರ ಮತ್ತು ಪೋಷಣೆ ಸರ್ಟಿಫಿಕೇಟ್ ಶಿಕ್ಷಣಕ್ರಮ (ಸಿ.ಎಫ್.ಎನ್.), ಗಣಕೀಕರಣ ಸರ್ಟಿಫಿಕೇಟ್ ಶಿಕ್ಷಣ ಕ್ರಮ (ಸಿ.ಐ.ಸಿ). ಇವುಗಳ ಜೊತೆಗೆ ಇಂಗ್ಲಿಷ್ ಸಾಹಿತ್ಯದಲ್ಲಿ ಎಂ.ಫಿಲ್. ಪದವಿ ಶಿಕ್ಷಣಕ್ರಮವಿದೆ.



ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಆಡಳಿತ ಕಚೇರಿ

ಈಗಾಗಲೇ ಕರ್ನಾಟಕದ ಹಲವು ಜಿಲ್ಲೆ ಮತ್ತು ತಾಲ್ಲೂಕುಗಳಲ್ಲಿ 57 ಅಧ್ಯಯನ ಕೇಂದ್ರಗಳು ಸ್ಥಾಪಿತವಾಗಿದ್ದು ಕಾರ್ಯನಿರತವಾಗಿವೆ. ಹೊರ ರಾಜ್ಯಗಳಲ್ಲಿ 4 ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಶಿಕ್ಷಣ ವಿಭಾಗಕ್ಕೆ ಸಂಬಂಧಿಸಿದಂತೆ ಬಿ.ಎಡ್.ಶಿಕ್ಷಣಕ್ರಮಕ್ಕೆ 5 ಅಧ್ಯಯನ ಕೇಂದ್ರಗಳನ್ನೂ ಎಂ.ಎಡ್.ಶಿಕ್ಷಣ ಕ್ರಮಕ್ಕೆ 8 ಅಧ್ಯಯನ ಕೇಂದ್ರಗಳನ್ನೂ ಸ್ಥಾಪಿಸಲಾಗಿದೆ. ವಿವಿಧ ಶಿಕ್ಷಣಗಳಿಗೆ ಅಧ್ಯಾಪಕ ವಿದ್ಯಾರ್ಥಿ ಸಂಪರ್ಕ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುತ್ತದೆ. ಪ್ರಸ್ತುತ ಇರುವ ವಿದ್ಯಾರ್ಥಿಗಳ ಸಂಖ್ಯೆ 36,000 (2003).

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದಲ್ಲಿ 50 ಮಂದಿ ಪೂರ್ಣಾವಧಿ ಅಧ್ಯಾಪಕರೂ 22 ಮಂದಿ ಅತಿಥಿ ಅಧ್ಯಾಪಕರೂ ಇದ್ದಾರೆ. ಕೇಂದ್ರ ಕಾರ್ಯಾಲಯದಲ್ಲಿನ ಈ ಅಧ್ಯಾಪಕ ವೃಂದದ ಜೊತೆಗೆ ವಿವಿಧ ಅಧ್ಯಯನ ಕೇಂದ್ರಗಳಲ್ಲಿ 700 ಮಂದಿ ಶೈಕ್ಷಣಿಕ ಸಮಾಲೋಚಕರಿದ್ದಾರೆ. ಬೋಧಕೇತರ ಸಿಬ್ಬಂದಿ ಸಂಖ್ಯೆ 109. ವಿದ್ಯಾರ್ಥಿಗಳಿಗೆ ಮಾಧ್ಯಮಗಳ ಬಳಕೆ-ರೇಡಿಯೋ ಸಮಾಲೋಚನೆ (ಆಕಾಶವಾಣಿ ಹಾಗೂ ಎಫ್.ಎಂ.) ಕಾರ್ಯಕ್ರಮಗಳನ್ನು ನಡೆಸುತ್ತಿದೆ. ಈ ವಿಶ್ವವಿದ್ಯಾನಿಲಯ ಅಂತಾರಾಷ್ಟ್ರೀಯ ಮಟ್ಟದಲ್ಲಿ ಕಾಮನ್‌ವೆಲ್ತ್ ಆಫ್ ಲರ್ನಿಂಗ್ (ಸಿ.ಒ.ಎಲ್.), ಕೆನಡ ಸಂಸ್ಥೆಯೊಡನೆ ಸಹಯೋಗವನ್ನು ಪಡೆದುಕೊಂಡಿದೆ.

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ಪ್ರಥಮ ಕುಲಪತಿ ಸಿ.ಅಂಜನಾಮೂರ್ತಿ (1996-99), ಎನ್.ಎಸ್.ರಾಮೇಗೌಡ (1999-2003) ದ್ವಿತೀಯ ಕುಲಪತಿ. ಕೆ.ಸುಧಾರಾವ್ ಈಗಿನ ಕುಲಪತಿ (2003 ಜೂನ್ 25ರಿಂದ) (ಎನ್.ಎಲ್.)

**ಕರ್ನಾಟಕ ವಿದ್ಯಾವರ್ಧಕ ಸಂಘ :** ನಾಡು ನುಡಿಗಳ ಸೇವೆಯನ್ನೇ ಉದ್ದೇಶವಾಗಿಟ್ಟುಕೊಂಡು ಧಾರವಾಡದಲ್ಲಿ 1890ರ ಜುಲೈ 20ರಂದು ಪ್ರಾರಂಭವಾದ ಒಂದು ಸಾಂಸ್ಕೃತಿಕ ಸಂಸ್ಥೆ. ಅಖಿಲ ಕರ್ನಾಟಕದ ವ್ಯಾಪ್ತಿಯುಳ್ಳ ಸಂಸ್ಥೆಗಳಲ್ಲಿ ಮೊಟ್ಟ ಮೊದಲನೆಯದೆನಿಸಿದ ಈ ಸಾಂಸ್ಕೃತಿಕ ಸಂಸ್ಥೆಯ ಪ್ರಥಮ ಅಧ್ಯಕ್ಷ ಶಾಮರಾವ್ ಕೈಕಿಣಿ, ಪ್ರಥಮ ಕಾರ್ಯದರ್ಶಿ ರಾ.ಹ.ದೇಶಪಾಂಡೆ.



ಕರ್ನಾಟಕ ವಿದ್ಯಾವರ್ಧಕ ಸಂಘದ ಮುಖ್ಯಕಟ್ಟಡ

ಮುಂಬಯಿ, ಮದರಾಸು, ಪುಣೆ, ಅಹಮ್ಮದ್‌ನಗರ, ಹೈದರಾಬಾದ್, ಕಾರವಾರ, ಮಂಗಳೂರು, ಮೈಸೂರು, ಚಿತ್ರದುರ್ಗ,ಬಳ್ಳಾರಿ, ರಾಯಚೂರು, ಮಡಿಕೇರಿ ಇತ್ಯಾದಿ ಕರ್ನಾಟಕದ ಒಳ ಹಾಗೂ ಹೊರಗಿನ ಪಟ್ಟಣಗಳ ಕನ್ನಡಿಗರು, ಕನ್ನಡಾಭಿಮಾನಿಗಳು ಇದರ ಆಜೀವ ಸದಸ್ಯರಾಗಿ ಅಂದಿಗೆ ಈ ಸಂಸ್ಥೆಯನ್ನು ಇಡೀ ಕರ್ನಾಟಕದ ಪ್ರಾತಿನಿಧಿಕ ಸಂಸ್ಥೆಯನ್ನಾಗಿ ಮಾಡಿದರು. ಎಂಥ ಹಿರಿಯರ ಮಾರ್ಗದರ್ಶನ ಈ ಸಂಸ್ಥೆಗೆ ಇತ್ತೆಂಬುದಕ್ಕೆ ಮುಂದಿನ ಪಟ್ಟಿಯೇ ನಿದರ್ಶನವಾಗಿದೆ. ಶಾಮರಾವ್ ಕೈಕಿಣಿ, ಸಿ.ಸಿ. ಹುಲಕೋಟಿ ಮುಂತಾದವರು ಅಧ್ಯಕ್ಷರು, ಬಿ.ಎಲ್. ರೈಸ್, ಕಿಟ್ಟೆಲ್, ಫ್ಲೀಟ್, ಭಂಡಾರಕರರಂಥ ಎತ್ತರದ ವ್ಯಕ್ತಿಗಳು ಗೌರವ ಸದಸ್ಯರು, ಬೆಳವಿ ವಕೀಲರು, ಬಿ.ಎಂ.ಶ್ರೀ. ಮೊದಲಾದವರು ಉದ್ಧಾರಕರು. ರಾಮಚಂದ್ರರಾವ್ ದೇಶಪಾಂಡೆ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮುಂತಾದವರು ಪ್ರದಾತೃಗಳು, ಆಲೂರ ವೆಂಕಟರಾವ್, ಮುದವೀಡು ಕೃಷ್ಣರಾವ್, ಎಸ್.ಸಿ.ನಂದೀಮಠ, ಟಿ.ಕೆ.ತುಕೋಳ್, ಕೆ.ಜಿ.ಕುಂದಣಗಾರ, ಎ.ಆರ್.ಕೃಷ್ಣಶಾಸ್ತ್ರೀ, ಎಂ.ಎಚ್.ಕೃಷ್ಣ, ಕಡೆಂಗೋಡ್ಲು ಶಂಕರಭಟ್ಟ, ಮಧುರಚೆನ್ನ, ಬಿ.ವೆಂಕಟಾಚಾರ್ಯರಂಥ ಕೀರ್ತಿವಂತ ಕನ್ನಡಿಗರು ಸದಸ್ಯರು. ಈ ಸಂಘ ಮೈಸೂರು ಅರಸರು, ವಂಟಮುರಿ ಸಿರಿಸಿಂಗಿ ದೇಸಾಯಿಗಳು ಮೊದಲುಗೊಂಡು, ಶ್ರೀ ಸಾಮಾನ್ಯರವರೆಗಿನ ಅನೇಕಾನೇಕ ವ್ಯಕ್ತಿಗಳ ಉದಾರಾಶ್ರಯದಲ್ಲಿ ಬೆಳೆಯಿತು. ಪ್ರತಿವರ್ಷದ ವಾರ್ಷಿಕ ಸಭೆಗೆ ಮೈಸೂರಿನಿಂದ ಪ್ರತಿನಿಧಿಗಳನ್ನು ಕರೆಸಿಕೊಂಡುದುಂಟು. 1900 ಮಾರ್ಚ್ 11ರ ಸಭೆಗೆ ಮೈಸೂರು ಸರ್ಕಾರದವರು ಬಿ.ಎಂ.ಶ್ರೀ.ಅವರನ್ನು ಕಳಿಸಿದ್ದರು. ಕಟ್ಟಡದ ಉಪಸಭೆಗೆ ಬೆಳಗಾಂವಿ, ಬಿಜಾಪುರ, ರಾಯಚೂರು, ಗುಲ್ಬರ್ಗ, ಬಳ್ಳಾರಿಗಳಿಂದ ಗಣ್ಯ ವ್ಯಕ್ತಿಗಳನ್ನು ಬರಮಾಡಿಕೊಳ್ಳಲಾಗಿತ್ತು. ಹೀಗೆ ಎಲ್ಲ ಪ್ರದೇಶಗಳ ಎಲ್ಲ ವರ್ಗದ ಪ್ರಜಾಸ್ತೋಮಕ್ಕೆ ಮುಕ್ತ ದ್ವಾರವಾಗಿ ನಿಂತು ಅಖಿಲ ಕರ್ನಾಟಕವನ್ನೇ ಪ್ರತಿನಿಧಿಸುವ ಸಂಸ್ಥೆಯಾಗಿ ಇದು ಬೆಳೆದು ಬಂತು.

ಈ ಸಂಘ ಹುಟ್ಟಿದ 25 ವರ್ಷಗಳ ತರುವಾಯ ಇದರ ದುಡಿಮೆ, ಬಯಕೆಗಳ ಫಲವಾಗಿ ಕರ್ನಾಟಕದಲ್ಲಿ ಮಿಕ್ಕ ಸಂಸ್ಥೆಗಳು ಹುಟ್ಟಿದುವು, ಅನೇಕ ಕಡೆಗೆ ಕನ್ನಡ ಸಂಘಗಳು ಉದಿಸತೊಡಗಿದುವು. ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಬೇರೂರಿತು. ಒಟ್ಟಾರೆ ವಿದ್ಯಾವರ್ಧಕ ಸಂಘದ 25 ವರ್ಷಗಳ ಕನಸು ಒಂದೊಂದೇ ನಿಜಸ್ವರೂಪ ತಾಳತೊಡಗಿದುವು. ಪ್ರಾರಂಭದಲ್ಲಿ ಈ ಸಂಘದ ಶಾಖೆಯೊಂದು ವಿಜಾಪುರದಲ್ಲಿದ್ದು ಮುಂದೆ ಕಾರವಾರಕ್ಕೆ ಸ್ಥಳಾಂತರಿಸಲ್ಪಟ್ಟಿತು.

**ಕನ್ನಡ ಭಾಷೆಯ ಪುನರುಜ್ಜೀವನ :** ಮುಂಬಯಿ ಕರ್ನಾಟಕದಲ್ಲಿ ಮರಾಠಿ, ನಿಜಾಮ ಕರ್ನಾಟಕದಲ್ಲಿ ಉರ್ದು ಹಾದೂ ತೆಲುಗು, ಮದರಾಸು ಕರ್ನಾಟಕದಲ್ಲಿ ತಮಿಳು ಭಾಷೆಗಳ ಪ್ರಾಬಲ್ಯದಿಂದ ಕನ್ನಡ ಕಡೆಗಣಿಸಲ್ಪಟ್ಟ ಸಮಯದಲ್ಲಿ ಈ ಸಂಘ ಕನ್ನಡದ ಪುನರುಜ್ಜೀವನಕ್ಕೆ ಅಹೋರಾತ್ರಿ ದುಡಿಯಿತು. ಕನ್ನಡ ಭಾಗಗಳಲ್ಲಿನ ಶಾಲೆಗಳಲ್ಲಿ ಕಲಿಸುತ್ತಿದ್ದ ಮರಾಠಿಯನ್ನು ವ್ಯವಸ್ಥಿತವಾಗಿ ನಿಲ್ಲಿಸಿತು. ಮುಂಬೈ ವಿಶ್ವವಿದ್ಯಾಲಯದಲ್ಲಿ ಮರಾಠಿ, ಗುಜರಾತಿಗಳ ಜೊತೆ ಕನ್ನಡವನ್ನೂ ಎಂ.ಎ.ಪರೀಕ್ಷೆಗೆ ಅಂಗೀಕರಿಸಲು ಒತ್ತಾಯಿಸಿತು. ಸಂಘಕ್ಕೆ ಕನ್ನಡದ ಬಗ್ಗೆ ಇರುವ ಆಸ್ಥೆಯನ್ನು ಕಂಡು ಹರ್ಷಪಟ್ಟ ಜೆ.ಎಫ್.ಫ್ಲೀಟ್‌ರು 1959ರಲ್ಲಿ ಒಂದು ಪತ್ರ ಬರೆದು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದ್ದಾರೆ.

**ಉಪನ್ಯಾಸ ಮಾಲೆ :** ವ್ಯವಹಾರದಿಂದ ದೂರವಾಗುತ್ತಿದ್ದ ಕನ್ನಡವನ್ನು ಉಪನ್ಯಾಸಕ್ಕೆ ಯೋಗ್ಯವಾಗುವಂತೆ ಪಳಗಿಸಲು ಸಂಸ್ಥೆ 1891ರಿಂದ ಮುಂದೆ ಪ್ರತಿವರ್ಷವೂ ವಾಕ್ ಸ್ಪರ್ಧೆಗಳನ್ನು ಏರ್ಪಡಿಸಿತು. ವಿದ್ಯಾರ್ಥಿಗಳಿಗಾಗಿ 1929ರಿಂದ ಲೋಕಮಾನ್ಯ ವಕ್ತೃತ್ವ ಸ್ಪರ್ಧೆ, 1945ರಿಂದ ತಾರಾನಾಥ ವಕ್ತೃತ್ವ ಸ್ಪರ್ಧೆಗಳನ್ನು ನಡೆಸಿಕೊಂಡು ಬರುವುದರ ಜೊತೆಗೆ ವಿದ್ವಾಂಸರಿಗಾಗಿ 1936ರಿಂದ ಸಾಸನೂರ ವ್ಯಾಖ್ಯಾನ ಮಾಲೆಯನ್ನು ಕೆಲವು ವರ್ಷ ನಡೆಸಿಕೊಂಡು ಬಂತು.

**ಸಾಹಿತ್ಯ ಪರೀಕ್ಷೆಗಳು :** ಹಳಗನ್ನಡ ಅಭ್ಯಾಸದ ಅಗತ್ಯವನ್ನು ಮನಗಂಡು ಪ್ರಾಚೀನ ಕಾವ್ಯ ಭಾಗಗಳನ್ನು ಪಠ್ಯವೆಂದು ನಿರ್ದಿಷ್ಟಪಡಿಸಿ ಪ್ರತಿವರ್ಷ ಸಂಘದಿಂದ ಪರೀಕ್ಷೆಗಳನ್ನು ಜರುಗಿಸಲಾಯಿತು. ಇವಕ್ಕೆ ಪರೀಕ್ಷಕರಾಗಿ ಹೊರಗಿನಿಂದ ಅನೇಕ ವಿದ್ವಾಂಸರು ಬರುತ್ತಿದ್ದರು.

**ಗ್ರಂಥಕರ್ತರ ಸಮ್ಮೇಳನ :** ಗ್ರಂಥಪ್ರಚಾರ, ಗ್ರಂಥಸ್ಥ ಭಾಷೆಯ ಏಕ ರೂಪತೆ, ಸಾಹಿತಿಗಳ ಪರಸ್ಪರ ಪರಿಚಯಗಳಿಗಾಗಿ ಧಾರವಾಡದಲ್ಲಿ 1907 ಜೂನ್ 2 ಮತ್ತು 3ರಂದು ಅಖಿಲ ಕರ್ನಾಟಕ ಗ್ರಂಥಕರ್ತರ ಮೊದಲ ಸಮ್ಮೇಳನವನ್ನು ಕರೆಯಲಾಯಿತು. ಎಸ್.ಜಿ.ನರಸಿಂಹಾಚಾರ್ ಅವರು ಈ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. ದೇಶದ ಎಲ್ಲ ಭಾಗಗಳಿಂದ ಪ್ರತಿನಿಧಿಗಳು ಆಗಮಿಸಿದ್ದರು. ಇದರ ಫಲವಾಗಿ ಪಠ್ಯಪುಸ್ತಕ, ಪಾರಿಭಾಷಿಕ ಪದ, ರಂಗಭೂಮಿ, ನಾಟಕ, ಇತಿಹಾಸ, ಸಾಹಿತ್ಯಗಳಿಗೆ ಸಂಬಂಧಪಟ್ಟ ಹಲವಾರು ಯೋಜನೆಗಳು ರೂಪುಗೊಂಡುವು.

**ಜಿಲ್ಲಾ ಸಾಹಿತ್ಯ ಸಮ್ಮೇಳನ :** 1939ರಲ್ಲಿ ಜಿಲ್ಲಾ ಸಾಹಿತ್ಯ ಸಮ್ಮೇಳನ ವನ್ನು ಪ್ರಾರಂಭ ಮಾಡಲಾಯಿತು. ಧಾರವಾಡದಲ್ಲಿ ಜರುಗಿದ ಪ್ರಥಮ ಸಮ್ಮೇಳನಕ್ಕೆ ಅಧ್ಯಕ್ಷರಾಗಿದ್ದರು. ಕಡೆಂಗೋಡ್ಲು ಶಂಕರಭಟ್ಟರು. ತರುವಾಯ ಗದಗ, ಹಾವೇರಿ, ನವಿಲಗುಂದ, ರಾಣೆಬೆನ್ನೂರ, ಹುಬ್ಬಳ್ಳಿ ಮೊದಲಾದ ಸ್ಥಳಗಳಲ್ಲಿ ಸಮ್ಮೇಳನಗಳು ಜರುಗಿದುವು. ಮೂರು ದಿನ ನಡೆದ ಹುಬ್ಬಳ್ಳಿ ಸಮ್ಮೇಳನದ ಕವಿಗೋಷ್ಠಿ, ನಾಟ್ಯಗೋಷ್ಠಿ, ವಿಜ್ಞಾನಗೋಷ್ಠಿ, ಕರ್ನಾಟಕ

ವಿಶ್ವವಿದ್ಯಾಲಯ ಗೋಷ್ಠಿಗಳು ಈ ಜಿಲ್ಲಾ ಸಾಹಿತ್ಯ ಸಮ್ಮೇಳನಗಳ ಕಾರ್ಯಸ್ವರೂಪವನ್ನು ವ್ಯಕ್ತಪಡಿಸುತ್ತವೆ.

**ವಾಗ್ಭೂಷಣ ಪತ್ರಿಕೆ :** ಸಂಸ್ಥೆಯ ಮುಖಪತ್ರವಾಗಿ 1896ರಲ್ಲಿ ಈ ಮಾಸ ಪತ್ರಿಕೆಯನ್ನು ಹೊರತರಲಾಯಿತು. ಕರ್ನಾಟಕ ಹಾಗೂ ಮೈಸೂರು ಸೀಮೆಯ ಗ್ರಂಥಸ್ಥ ಭಾಷೆ ಸಾಧ್ಯವಿದ್ದ ಮಟ್ಟಿಗೆ ಒಂದೇ ಆಗುವಂತೆ ಮಾಡುವುದೇ ಈ ಮಾಸಪತ್ರಿಕೆಯ ಉದ್ದೇಶ. ಹಳಗನ್ನಡ ಗ್ರಂಥಸಂಶೋಧನ, ಪರಿಷ್ಕರಣ, ಹೊಸಗನ್ನಡದ ಹೊಸ ಸಾಹಿತ್ಯ ನಿರ್ಮಾಣಗಳಿಗೆ ಈ ಪತ್ರಿಕೆ ಪ್ರೋತ್ಸಾಹ ಕೊಟ್ಟಿತು. 23 ವರ್ಷಗಳಲ್ಲಿ ಧರ್ಮ, ಇತಿಹಾಸ, ಸಂಶೋಧನೆ, ವಿಜ್ಞಾನ, ಸಂಸ್ಕೃತಿ ಮತ್ತು ಸಾಹಿತ್ಯ ಕ್ಷೇತ್ರಗಳಿಗೆ ಸಂಬಂಧಿಸಿ 85 ಗ್ರಂಥಗಳು ಪ್ರಕಟವಾದುವು. ಇವುಗಳಲ್ಲಿ ಧಾರವಾಡದ ಕುರಡಿ ಅವರು ಬರೆದ ಆರ್.ನರಸಿಂಹಾಚಾರ್ ಚರಿತ್ರೆ, ಮೈಸೂರಿನ ಬಿ.ವೆಂಕಟಾಚಾರ್ಯರು ಬರೆದ ಅಮೃತಪುಲಿನಗಳು ಪರಸ್ಪರ ಬಾಂಧವ್ಯದ ಪ್ರತೀಕಗಳಾಗಿವೆ.

**ಗ್ರಂಥ ಪ್ರಕಟನೆ :** ಉನ್ನತಮಟ್ಟದ ಗ್ರಂಥಗಳನ್ನು ಹೊರತರಲು ಬಯಸಿದ ಸಂಸ್ಥೆ ಮಾಲವಿಕಾಗ್ನಿಮಿತ್ರ, ಉತ್ತರರಾಮಚರಿತ, ವೇಣೀಸಂಹಾರ, ಕನ್ನಡ ತಮಿಳು ಮೊದಲನೆಯ ಪುಸ್ತಕ, ಬಾಣಕಾದಂಬರಿ, ಕನ್ನಡದ ನೆಲೆ, ಕರ್ನಾಟಕ ಜನಜೀವನ, ಕರ್ನಾಟಕ ಸಾಹಿತ್ಯ ಸಂಸ್ಕೃತಿ ದರ್ಶನ, ಕಾವ್ಯಾವಲೋಕನ, ಶಬ್ದಾನುಶಾಸನ, ದಿ ಹರಿದಾಸಾಸ್ ಆಫ್ ಕರ್ನಾಟಕ ಮೊದಲಾದ ಗ್ರಂಥಗಳನ್ನು ಪ್ರಕಟಿಸಿದೆ.

**ಕನ್ನಡ ಬರೆಹಗಾರರಿಗೆ ಪ್ರೋತ್ಸಾಹ :** 1900-1940ರ ಅವಧಿಯಲ್ಲಿ ಈ ಸಂಘ 175 ಗ್ರಂಥಕಾರರಿಗೆ 18,990 ರೂಪಾಯಿಗಳ ಸಂಭಾವನೆಯನ್ನು ನೀಡಿದೆ. ಪ್ರತಿಯೊಂದು ವಿಷಯಕ್ಕೆ ಸಂಬಂಧಪಟ್ಟಂತೆ ಸಂಶೋಧನೆ 44, ಶಿಕ್ಷಣ 7, ಪ್ರಬಂಧ 9, ಪೌರಾಣಿಕ 33, ವೇದಾಂತ 23, ಸಾಹಿತ್ಯ ವಿಮರ್ಶೆ 11, ಕಾವ್ಯ 31, ಗಣಿತ 1, ಶಾಸ್ತ್ರೀಯ ವಿಷಯ 10, ಇತರ 32, ಚರಿತ್ರೆ 60, ಇತಿಹಾಸ 28, ಕಾದಂಬರಿ 95, ನಾಟಕ 30, ಒಕ್ಕಲುತನ 9- ಹೀಗೆ 423 ಪುಸ್ತಕಗಳಿಗೆ ಸಂಭಾವನೆ ನೀಡಿದೆ. ಈ ಸಂಘವು ಆಯಾ ವರ್ಷ ಪ್ರಕಟವಾದ ಉತ್ತಮ ಕೃತಿಗಳಿಗೆ ಪ್ರಶಸ್ತಿಗಳನ್ನು ನೀಡುವ ಯೋಜನೆ ಹೊಂದಿದೆ. ಉತ್ತಮ ಸಂಶೋಧನಾ ಗ್ರಂಥಗಳಿಗಾಗಿ ಅಮೀನಬಾವಿ ತಮ್ಮಣ್ಣರಾವ್ ಪ್ರಶಸ್ತಿ ನೀಡಿದರೆ, ಲೇಖಕಿಯರಿಗೆ ಅಮೀನಾಬಾವಿ ರತ್ನಮ್ಮ ಪ್ರಶಸ್ತಿ ನೀಡಲಾಗುತ್ತದೆ.

**ವಾಚನಾಲಯ :** ಸಂಘಕ್ಕೆ ಸಾವಿರ ರೂಪಾಯಿ ಸಂಗ್ರಹವಾದ ಕೂಡಲೇ ರೂ.300 ಗಳನ್ನು ವಾಚನಾಲಯಕ್ಕೆ ವಿನಿಯೋಗಿಸಬೇಕೆಂದು ತನ್ನ ಮೊದಲ ಸಭೆ (20-7-1890) ಯಲ್ಲಿಯೇ ನಿರ್ಧರಿಸಿ ಅಂದೇ ಗ್ರಂಥ ಸಂಗ್ರಹಕ್ಕೆ ಮೊದಲು ಮಾಡಲಾಯಿತು. 1940ರಲ್ಲಿ ಶಾಂತೇಶ ವಾಚನಾಲಯವನ್ನು ಒಳಗುಮಾಡಿಕೊಂಡು ಗ್ರಂಥ' ಭಂಡಾರವನ್ನು ವಿಸ್ತರಿಸಿಕೊಂಡಿತು. ಅಹಮ್ಮದಾಬಾದ್, ಪುಣೆ, ಧಾರವಾಡಗಳಲ್ಲಿ ಕ್ರಮವಾಗಿ ಗುಜರಾತಿ, ಮರಾಠಿ ಕನ್ನಡ ಗ್ರಂಥಗಳ ಪ್ರಾದೇಶಿಕ ಗ್ರಂಥಾಲಯಗಳನ್ನು ಪ್ರಾರಂಭಿಸಲು ಬೊಂಬಾಯಿ ಸರಕಾರ ಬಯಸಿದಾಗ ಕರ್ನಾಟಕದ ಎಲ್ಲ ಸಂಸ್ಥೆಗಳೂ ಪತ್ರಿಕೆಗಳೂ ಆ ಹೊಣೆಗೆ ವಿದ್ಯಾವರ್ಧಕ ಸಂಘವೇ ಯೋಗ್ಯ ಎಂದು ಸೂಚಿಸಿದುವು. ಈ ಸೂಚನೆ ಆ ಕಾಲದಲ್ಲಿ ಸಂಘ ಸಾಧಿಸಿದ್ದ ಗೌರವ, ಪ್ರತಿಷ್ಠೆಯನ್ನು ವ್ಯಕ್ತಪಡಿಸುತ್ತದೆ. ಹತ್ತು ಸಾವಿರ ರೂಪಾಯಿಗಳ ಈ ಹೊಣೆಯನ್ನು ಸಂಘ ಹೊತ್ತು ವಾಚನಾಲಯಗಳನ್ನು ನಡೆಸಿತು.

**ಕನ್ನಡ ಸಂಶೋಧನ ಕೇಂದ್ರ :** ಬೊಂಬಾಯಿ ಸರ್ಕಾರ ಕನ್ನಡ ಸಂಶೋಧನ ಕೇಂದ್ರವನ್ನು ಸ್ಥಾಪಿಸುವ ಯೋಚನೆ ನಡೆಸಿದಾಗ ಈ ಸಂಘ ಮುಂದೆ ಬಂದು ಯೋಜನೆಯನ್ನು ಸಿದ್ಧಪಡಿಸಿ ಹೊಣೆ ಹೊರಲು ಮುಂದಾಗಿ ಅದರ ಯಶಸ್ಸಿಗೆ ದುಡಿಯಿತು.

**ನಾಡಹಬ್ಬ :** 1926ರಲ್ಲಿ ಬೆಟಗೇರಿ ಕೃಷ್ಣಶರ್ಮ ಮತ್ತು ದ.ರಾ.ಬೇಂದ್ರೆಯವರಿಂದ ಪ್ರಾರಂಭವಾದ ನಾಡಹಬ್ಬ ಕಾರ್ಯಕ್ರಮವನ್ನು ಸಂಘ ಪ್ರತಿವರ್ಷ ತಪ್ಪದೇ ಆಚರಿಸುತ್ತ ಬಂದಿದೆ. ಈ ಸಮಾರಂಭದಲ್ಲಿ ಉಪನ್ಯಾಸ, ಗೋಷ್ಠಿ, ಸಂಗೀತ, ಕಲಾ ಪ್ರದರ್ಶನ, ವ್ಯಾಯಾಮ ಸ್ಪರ್ಧೆ, ನಾಟಕ ಮೊದಲಾದ ಕಾರ್ಯಕ್ರಮಗಳು ಈವರೆಗೆ ನಡೆಯುತ್ತಲಿವೆ. ಇದಕ್ಕೆ ನಾಡಹಬ್ಬವೆಂಬ ಮನ್ನಣೆ ಲಭಿಸಲು ಮೂಲಕಾರಣ ಈ ಸಂಘವೇ.

**ಪಠ್ಯಪುಸ್ತಕ, ಆಕಾಶವಾಣಿ :** ಸಂಘದಂಥ ಸಂಸ್ಥೆಗೆ ವರ್ನ್ಯಾಕ್ಯುಲರ ಟೆಕ್ಸ್ಟ್‌ಬುಕ್ ಕಮಿಟಿಯಲ್ಲಿ ಪ್ರಾತಿನಿಧ್ಯ ಅವಶ್ಯ (10-2-1931), ಪಠ್ಯ ಪುಸ್ತಕಗಳ ಭಾಷೆಯಲ್ಲಿ ಏಕರೂಪ ಅವಶ್ಯ (2-3 ಜೂನ್ 1907), ಅಖಿಲ ಭಾರತ ಆಕಾಶವಾಣಿಯಲ್ಲಿ ಕನ್ನಡಕ್ಕೆ ಮಿಕ್ಕ ಭಾಷೆಗಳ ಕಾರ್ಯಕ್ರಮದಷ್ಟೇ ಸ್ಥಾನ ಬೇಕು (12-9-1939) - ಇವೇ ಮೊದಲಾದ ಗೊತ್ತುವಳಿಗಳನ್ನು ಅಂಗೀಕರಿಸಿ ಅವನ್ನು ಕಾರ್ಯರೂಪಕ್ಕೆ ತರಲು ಸಂಘ ಮಾಡಿದ ಪ್ರಯತ್ನಗಳು ಸ್ಮರಣೀಯವಾಗಿವೆ.

**ಸಾಹಿತ್ಯ ಸಮ್ಮೇಳನಕ್ಕೆ ಆಮಂತ್ರಣ :** ಸಾಹಿತ್ಯ ಸಮ್ಮೇಳನವನ್ನು ಧಾರವಾಡದಲ್ಲಿ ನಡೆಸಲು ಬೆಂಗಳೂರು ಪರಿಷತ್ತು ಯೋಚಿಸಿದಾಗ ಸಂಘ ಎರಡು ಸಲ ಮುಂದೆ ಬಂದು ಹೊಣೆ ಹೊತ್ತಿತ್ತು. ಆರ್. ನರಸಿಂಹಾಚಾರ್ಯರ ಅಧ್ಯಕ್ಷತೆಯಲ್ಲಿ ನಡೆದ 4ನೆಯ ಸಮ್ಮೇಳನ, ಚಂದ್ರಶೇಖರ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ 25ನೆಯ ಸಮ್ಮೇಳನಗಳ ಹೊಣೆಯನ್ನು ತ್ರಿಕರಣಪೂರ್ವಕವಾಗಿ ನಿರ್ವಹಿಸಿತು.

**ಕರ್ನಾಟಕ ವಿಶ್ವವಿದ್ಯಾಲಯ :** 'ಬೊಂಬಾಯಿ ವಿಶ್ವವಿದ್ಯಾಲಯದ ಕಾರ್ಯಕ್ಷೇತ್ರ ಮಿತಿಮೀರಿ ಬೆಳೆದು ಕನ್ನಡವು ಕಡೆಗಣಿಸಲ್ಪಟ್ಟಿದೆ; ಈ ಪ್ರದೇಶಕ್ಕೆ ಒಂದು ಸ್ವತಂತ್ರ ವಿಶ್ವವಿದ್ಯಾನಿಲಯ ಬೇಕು' (25-3-1942). ಇಂಥ ಗೊತ್ತುವಳಿಗಳನ್ನು ಸ್ವೀಕರಿಸಿ, ಕ್ರಿಯಾತ್ಮಕ ಪ್ರಯತ್ನ ನಡೆಸಿ 1950ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಸ್ಥಾಪನೆಗೊಳ್ಳುವಲ್ಲಿ ಸಂಘ ತನ್ನ ಪಾಲಿನ ಕರ್ತವ್ಯವನ್ನು ಪೂರೈಸಿತು.

**ಕರ್ನಾಟಕ ಏಕೀಕರಣ :** ಇಪ್ಪತ್ತು ಕಡೆ ಹಂಚಿಹೋದ ಕನ್ನಡ ನಾಡು ಒಂದಾಗಬೇಕು. ಇದರಿಂದ ಕನ್ನಡಿಗರ ಐಕ್ಯಕ್ಕೂ ಹಿತಕ್ಕೂ ಬೆಳವಣಿಗೆಗೂ ಅನುಕೂಲವಾಗುವುದು (7-10-1917) ಎಂಬುದು ಕರ್ನಾಟಕ ಏಕೀಕರಣದ ಇತಿಹಾಸದಲ್ಲಿ ಸಂಘ ಸಾರಿದ ಪ್ರಥಮ ಗೊತ್ತುವಳಿಯಾಗಿದೆ. ಇದನ್ನು ಕಾರ್ಯರೂಪಕ್ಕೆ ತರಲು ಹಲವು ಸಲ ಹಲವಂದದಿಂದ ಸಂಸ್ಥೆ ಪ್ರಯತ್ನಿಸಿತು. ಭಾರತದ ರಾಜಕೀಯ ಸುಧಾರಣೆಗಳ ವಿಚಾರಗೋಷ್ಠಿ ನಡೆದ ಸಮಯದಲ್ಲಿ ಕನ್ನಡ ಜನತೆಯ ತೀವ್ರ ಆಕಾಂಕ್ಷೆಗಳನ್ನು ತಂತಿಯ ಮೂಲಕ ವೈಸ್‌ರಾಯರಿಗೂ ಕೇಂದ್ರ ಶಾಸನಸಭೆಯ ಕರ್ನಾಟಕದ ಸದಸ್ಯರಿಗೂ ಮುಟ್ಟಿಸಿದ ಸಂಗತಿಯನ್ನು ಇಲ್ಲಿ ಗಮನಿಸಬೇಕು.

**ಸ್ಮರಣೆ, ಸನ್ಮಾನ :** ಕನ್ನಡವನ್ನುದ್ಧರಿಸಿದ ಪುಣ್ಯಪುರುಷರ ಸ್ಮರಣೆಗೆಯ್ದು ಕೃತಜ್ಞತೆಯನ್ನರ್ಪಿಸುವ ಸಂದರ್ಭಗಳನ್ನು ಸಂಘ ತಪ್ಪಿಸಿಕೊಂಡಿಲ್ಲ. ಬಹುದಿನಗಳಿಂದ ಶಾಂತಕವಿಗಳ ಉತ್ಸವ ಮಾಡುತ್ತ ಬಂದಿದೆ, ಗೌರವಪ್ರಶಸ್ತಿ ಪಡೆದ ಕನ್ನಡ ವಿದ್ವಾಂಸರನ್ನು ಸತ್ಕರಿಸುತ್ತ ಬಂದಿದೆ.

**ಭಾಷೆಯ ಸಂಸ್ಕಾರ, ಸಾಹಿತ್ಯದ ಉದ್ಧಾರ :** ಆಡುಭಾಷೆಯಲ್ಲಿ ಮಾತ್ರ ವ್ಯವಹರಣಗೊಳ್ಳುತ್ತಿದ್ದ ಕನ್ನಡವನ್ನು ಗ್ರಂಥಸ್ಥ ಭಾಷೆಯ ಅಂತಸ್ತಿಗೇರಿಸುವುದು ಆವಶ್ಯಕವೆನಿಸಿದ್ದ ಕಾಲವದು. ಉತ್ತರ ಕರ್ನಾಟಕ ಹಾಗೂ ಮೈಸೂರು ಸೀಮೆಯ ಗ್ರಂಥಸ್ಥ ಭಾಷೆ ಸಾಧ್ಯವಿದ್ದಮಟ್ಟಿಗೆ ಒಂದೇ ಆಗುವಂತೆ ಮಾಡುವುದೇ ಈ ಸಂಘದ ಮತ್ತು ಮಾಸಪತ್ರಿಕೆಯ ಉದ್ದೇಶವಾಗಿತ್ತು. ಹೊಸಗನ್ನಡ ಗದ್ಯವನ್ನು ಹದಗೊಳಿಸಲು ಸಂಘ ತಾಳಿದ ನವೀನ ಧೋರಣೆಗಳ ಫಲವಾಗಿ ಗಳಗನಾಥರ ಸರಸ ಗದ್ಯ ತುರಮರಿಯವರ ಶ್ರೀಮಂತ ಗದ್ಯ, ಮುಳಬಾಗಿಲರ ನಾಟಕ ಗದ್ಯಗಳು ಈ ಸಂಘದಲ್ಲಿ ರಸಪಾಕಗೊಂಡುವು.

ಕನ್ನಡವನ್ನುದ್ಧರಿಸಿದ ಮುಳಬಾಗಿಲ, ತುರಮರಿ, ಕಟ್ಟಿ, ಪೂಜಾರ, ಜೀಗ್ಲರ್, ಗಳಗನಾಥರನ್ನು ಮೊದಲುಗೊಂಡು ಬೇಂದ್ರೆ, ಬೆಟಗೇರಿ, ಬಸವನಾಳ, ಶ್ರೀರಂಗ,ಗೋಕಾಕ್, ಮಾಳವಾಡ, ಆರ್.ಸಿ.ಹಿರೇಮಠ, ಈಶ್ವರನ್, ಮುಗಳಿ, ಪಾಟೀಲಪುಟ್ಟಪ್ಪನವರನ್ನೊಳಗೊಂಡು ಕಣವಿ, ಕಟ್ಟೀಮನಿಯವರವರೆಗೆ ಸಾಲುಗಟ್ಟಿ ನಿಂತ ಸಾಹಿತಿಗಳೆಲ್ಲ ಈ ಸಂಘದ ಕಮ್ಮಟದಲ್ಲಿ ಸಿದ್ಧರಾದವರು.

ಹೀಗೆ ಬಹುಮುಖ ಕಾರ್ಯಗಳನ್ನು ಕೈಕೊಂಡು ವಿದ್ಯಾವರ್ಧಕ ಸಂಘ ನಾಡಿನುದ್ದಗಲಕ್ಕೂ ಭಾವೈಕ್ಯವನ್ನು ಸಾಧಿಸಲು ಪ್ರಯತ್ನಿಸಿತು; ಭಾಷೆ,

ಸಾಹಿತ್ಯಗಳನ್ನು ಕವಿ, ವಾಗ್ಮಿಗಳನ್ನು ತನ್ನ ಗರಡಿಯಲ್ಲಿ ಪಳಗಿಸಿತು; ಕನ್ನಡ ಬೆಳವಣಿಗೆಯ ಇತಿಹಾಸವೆಂದರೆ ತನ್ನ ಬೆಳವಣಿಗೆಯ ಇತಿಹಾಸವೆಂಬ ಕೀರ್ತಿಗಳಿಸಿತು. *

**ಕರ್ನಾಟಕ ವಿಶ್ವವಿದ್ಯಾಲಯ :** ಕರ್ನಾಟಕ ರಾಜ್ಯದ ವಿಶ್ವವಿದ್ಯಾಲಯಗಳಲ್ಲೊಂದು. ಧಾರವಾಡದಲ್ಲಿ ಆಡಳಿತ ಕೇಂದ್ರ ಮತ್ತು ಮುಖ್ಯ ಕಾಲೇಜುಗಳನ್ನು ಹೊಂದಿದೆ. ಧಾರವಾಡ, ಗದಗ, ಹಾವೇರಿ, ಬಾಗಲಕೋಟೆ, ಬೆಳಗಾಂವಿ, ಬಿಜಾಪುರ, ಉತ್ತರ ಕನ್ನಡ ಇದರ ಪ್ರಾದೇಶಿಕ ವ್ಯಾಪ್ತಿಯಲ್ಲಿವೆ. ಈ ವಿಶ್ವವಿದ್ಯಾಲಯ ಮುಂಬಯಿ ರಾಜ್ಯದ 1949ನೆಯ ಕರ್ನಾಟಕ ವಿಶ್ವವಿದ್ಯಾಲಯ ಕಾಯಿದೆ ಪ್ರಕಾರ 1950 ಮಾರ್ಚ್ 1ರಂದು ಧಾರವಾಡದಲ್ಲಿ ಸ್ಥಾಪಿತವಾಯಿತು. 1956ರಲ್ಲಿ ನೂತನ ಮೈಸೂರು ರಾಜ್ಯದ ಆಡಳಿತದಲ್ಲಿ ಸಮಾವೇಶಗೊಂಡಿತು. ಧಾರವಾಡ, ಬೆಳಗಾಂವಿ, ಬಿಜಾಪುರ ಹಾಗೂ ಉತ್ತರ ಕನ್ನಡ ಜಿಲ್ಲೆಗಳಿಗೆ ಸೀಮಿತವಾಗಿದ್ದ ವಿಶ್ವವಿದ್ಯಾಲಯದ ಕಕ್ಷೆ 1957ರಲ್ಲಿ ಬಿದರೆ, ಗುಲ್ಬರ್ಗ, ರಾಯಚೂರು ಜಿಲ್ಲೆಗಳಿಗೂ 1965ರಲ್ಲಿ ಬಳ್ಳಾರಿ ಜಿಲ್ಲೆಗೂ ವಿಸ್ತರಿಸಿತು. ಪ್ರಾರಂಭವಾದಾಗ ಕೇವಲ ಹನ್ನೊಂದು ಕಾಲೇಜುಗಳನ್ನು ಪಡೆದಿದ್ದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಇಂದು 19 ಸರ್ಕಾರಿ ಕಾಲೇಜುಗಳು, 100 ಸರ್ಕಾರಿ ಅನುದಾನಿತ ಕಾಲೇಜುಗಳು, 100 ಅನುದಾನ ರಹಿತ ಕಾಲೇಜುಗಳಿವೆ. ಇದಲ್ಲದೆ 18 ಕಾನೂನು ಕಾಲೇಜುಗಳು ಹೆಚ್ಚಿನ ವಿದ್ಯಾರ್ಥಿಗಳನ್ನೂ ಪಡೆದಿವೆ.



ವಿದ್ಯಾಸೌಧ, ಕರ್ನಾಟಕ ವಿಶ್ವವಿದ್ಯಾಲಯದ ಆಡಳಿತ ಕಛೇರಿ

ಧಾರವಾಡದಲ್ಲಿ 365 ಎಕರೆಗಳ ವಿಸ್ತಾರವಾದ ರಮಣೀಯ ನಿವೇಶನ, ಸುವ್ಯವಸ್ಥಿತವಾದ ರಸ್ತೆಗಳು, ಉದ್ಯಾನಗಳು, ಭವ್ಯವಾದ ಶೈಕ್ಷಣಿಕಸೌಧ, ಆಡಳಿತ ಭವನ, ವಿಶ್ವಚೇತನ, ವಿದ್ಯಾರ್ಥಿನಿಲಯಗಳು, ಅತಿಥಿಭವನ, ಗಾಂಧೀಭವನ ಮುಂತಾದ ಕಟ್ಟಡಗಳು, ಪ್ರಾಧ್ಯಾಪಕರ ಹಾಗೂ ಅಧಿಕಾರಿಗಳ ವಸತಿಗಳು, ಬಾಲೋದ್ಯಾನ, ಕ್ರೀಡಾಂಗಣ, ಈಜುಕೊಳ, ಜಂಖಾನ ಮುಂತಾದವುಗಳಿಂದ ತುಂಬಿದ ವಿಶ್ವವಿದ್ಯಾಲಯದ ಆವರಣ ಅತ್ಯಂತ ಸುಂದರವಾದುದೆಂದು ಪ್ರಸಿದ್ಧವಾಗಿದೆ. ಎತ್ತರದ ಗುಡ್ಡದ ತಪ್ಪಲಿನಲ್ಲಿರುವುದರಿಂದ ಸಮಶೀತೋಷ್ಣ ಹವೆಯನ್ನು ಪಡೆದಿದ್ದು, ಈ ಬಡಾವಣೆಗೆ ಛೋಟಾ ಮಹಾಬಲೇಶ್ವರ ಎಂಬ ಹೆಸರು ಬಂದಿದೆ.

ಸ್ನಾತಕೋತ್ತರ ಶಿಕ್ಷಣ ಹಾಗೂ ಸಂಶೋಧನೆ, ಪೂರಕ ಹಾಗೂ ಸಂಯೋಜಿತ ಕಾಲೇಜುಗಳ ಅಂಗೀಕಾರ ಹಾಗೂ ಶಿಕ್ಷಣ ಆಡಳಿತ, ಪರೀಕ್ಷೆಗಳ ಮೇಲ್ವಿಚಾರಣೆಯ ಕಾರ್ಯ, ಜನಸಾಮಾನ್ಯರಿಗೆ ಜ್ಞಾನಪ್ರಸಾರಮಾಡುವ ವ್ಯಾಸಂಗ ವಿಸ್ತರಣಯೋಜನೆ ಹಾಗೂ ವಿಶೇಷ ತರಬೇತಿ ಕಾರ್ಯಕ್ರಮಗಳ ಮೂಲಕ ಕರ್ನಾಟಕ ವಿಶ್ವವಿದ್ಯಾಲಯ ಈ ಭಾಗದ ಜನತೆಯ ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಚಟುವಟಿಕೆಗಳ ಮಾತೃಸಂಸ್ಥೆಯಾಗಿದೆ.

ಸ್ನಾತಕೋತ್ತರ ಶಿಕ್ಷಣಕ್ಕಾಗಿ ಧಾರವಾಡ, ಬಿಜಾಪುರ ಮತ್ತು ಕಾರವಾರಗಳಲ್ಲಿ ಕೇಂದ್ರಗಳಿವೆ. ಅಲ್ಲದೆ ಇದರ ಪ್ರಾದೇಶಿಕ ವ್ಯಾಪ್ತಿಗೊಳಪಡುವ ಹಲವು ಕಾಲೇಜುಗಳು ಪದವಿ ಪೂರ್ವ ಶಿಕ್ಷಣವನ್ನು ನೀಡುತ್ತಿದ್ದು ವಿಶ್ವವಿದ್ಯಾಲಯ ಪದವಿ ಪರೀಕ್ಷೆಗಳನ್ನೂ ನಡೆಸುತ್ತದೆ. ಕರ್ನಾಟಕ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜು, ವಿಶ್ವವಿದ್ಯಾಲಯದ ಲಾ ಕಾಲೇಜು, ವಿಶ್ವವಿದ್ಯಾಲಯದ ಶಿಕ್ಷಣ ಕಾಲೇಜು - ಇವು ವಿಶ್ವವಿದ್ಯಾಲಯದ ಆಂಗಿಕ ಸಂಸ್ಥೆಗಳಾಗಿ ಕಾರ್ಯನಿರ್ವಹಿಸುತ್ತವೆ. ಸ್ನಾತಕೋತ್ತರ ಶಿಕ್ಷಣವನ್ನು ನೆರವೇರಿಸಲು ಕನ್ನಡ,ಇಂಗ್ಲಿಷ್, ಸಂಸ್ಕೃತ, ಭೌತವಿಜ್ಞಾನ, ರಸಾಯನವಿಜ್ಞಾನ, ಭೂಗರ್ಭಶಾಸ್ತ್ರ, ಪ್ರಾಣಿವಿಜ್ಞಾನ, ಸಸ್ಯವಿಜ್ಞಾನ, ರಾಜ್ಯಶಾಸ್ತ್ರ, ಸಮಾಜಶಾಸ್ತ್ರ, ತತ್ತ್ವಶಾಸ್ತ್ರ, ವಾಣಿಜ್ಯಶಾಸ್ತ್ರ ಮುಂತಾದ ವಿಭಾಗಗಳನ್ನು ತೆರೆಯಲಾಗಿದೆ. ಈ ಎಲ್ಲ ವಿಭಾಗಗಳಲ್ಲಿ ಎಂ.ಎ. ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವುದರ ಜೊತೆಗೆ, ಸಂಶೋಧನ ಕಾರ್ಯ ವ್ಯವಸ್ಥಿತವಾಗಿ ಸಾಗುತ್ತಿದೆ. ವಿದೇಶೀಯ ಭಾಷಾಭ್ಯಾಸ ವಿಭಾಗದಲ್ಲಿ ಫ್ರೆಂಚ್, ಜರ್ಮನ್ ಮತ್ತು ರಷ್ಯನ್ ಭಾಷೆಗಳ ಅಭ್ಯಾಸಕ್ಕೆ ಅವಕಾಶ ಒದಗಿಸಿದೆ. ಈ ಭಾಷೆಗಳಲ್ಲಿ ಡಿಪ್ಲೊಮ, ಹಾಗೂ ಪದವಿ ಮಟ್ಟದ ಅಭ್ಯಾಸಕ್ಕೆ ವ್ಯವಸ್ಥೆಯಿದೆ. ಪ್ರಾಚೀನ ಭಾರತದ ಇತಿಹಾಸ ಮತ್ತು ಸಂಸ್ಕೃತಿ ವಿಭಾಗದಲ್ಲಿ ಲಿಪಿಶಾಸ್ತ್ರದ ಬಗ್ಗೆ ಒಂದು ಸರ್ಟಿಫಿಕೇಟ್ ಕೋರ್ಸ್ ನಡೆಸಲಾಗುತ್ತಿದೆ. ಕನ್ನಡ ವಿಭಾಗದಲ್ಲಿ ಭಾಷಾಶಾಸ್ತ್ರ, ಭಾಷಾಂತರ ವಿಷಯಗಳಲ್ಲಿ ಡಿಪ್ಲೊಮ ತರಗತಿಗಳನ್ನು ತೆರೆಯಲಾಗಿದೆ. ಪದವಿ ಹಾಗೂ ಪದವಿಪೂರ್ವ ಶಿಕ್ಷಣಮಟ್ಟದಲ್ಲಿ ಅಪರಾಧಶಾಸ್ತ್ರ ಮತ್ತು ಫೋರೆನ್ಸಿಕ್ ಸೈನ್ಸ್ ಅಭ್ಯಾಸದ ವ್ಯವಸ್ಥೆ ಮಾಡಲಾಗಿದೆ.

1970ರಿಂದ ಗುಲ್ಬರ್ಗದಲ್ಲಿ ಸ್ನಾತಕೋತ್ತರ ಶಿಕ್ಷಣ ಕೇಂದ್ರವನ್ನು ತೆರೆಯಲಾಯಿತು. ಈ ಕೇಂದ್ರ 1980ರಲ್ಲಿ ಪ್ರತ್ಯೇಕ ವಿಶ್ವವಿದ್ಯಾಲಯವಾಗಿ ರೂಪುಗೊಂಡಿತು (ನೋಡಿ: ಗುಲ್ಬರ್ಗ ವಿಶ್ವವಿದ್ಯಾಲಯ).

ಅಖಿಲ ಭಾರತ ಸ್ಪರ್ಧಾತ್ಮಕ ಪರೀಕ್ಷೆಗಳಾದ ಐ.ಎ.ಎಸ್., ಐ.ಪಿ.ಎಸ್., ಐ.ಎಫ್.ಎಸ್.ಗಳಿಗೆ ವಿದ್ಯಾರ್ಥಿಗಳನ್ನು ಸಿದ್ಧಗೊಳಿಸುವ ವ್ಯವಸ್ಥೆ ಸಹ ಧಾರವಾಡದಲ್ಲಿ ಇದೆ. ಅಭ್ಯಾಸ, ಸಂಶೋಧನೆಗಳಿಗಾಗಿ ದೇಶವಿದೇಶದ ವಿಶ್ವವಿದ್ಯಾಲಯಗಳಲ್ಲಿ ಅಧ್ಯಾಪಕ ಹಾಗೂ ಸಂಶೋಧಕರ ವಿನಿಮಯಕ್ಕೆ ವಿಶೇಷ ಅವಕಾಶಗಳಿವೆ. ಶಿಕ್ಷಣವೇತನ, ವಿದ್ಯಾರ್ಥಿವೇತನ ಹಾಗೂ ಪಾರಿತೋಷಿಕಗಳ ವಿಶಿಷ್ಟ ಸೌಕರ್ಯಗಳೂ ಉಂಟು.

ಸ್ನಾತಕೋತ್ತರ ವಿಭಾಗಗಳು ಸಂಶೋಧನೆಯನ್ನೂ ಕೈಗೊಳ್ಳುತ್ತವೆ. ಅಲ್ಲದೆ, ಇತರ ಸಂಸ್ಥೆಗಳು ಮತ್ತು ವಿಶೇಷ ಯೋಜನೆಗಳು ಸಹ ಇವೆ. ಪ್ರಾಚೀನ ಇತಿಹಾಸ, ಭೂಗರ್ಭ ಸಂಶೋಧನೆ ಹಾಗೂ ಗ್ರಂಥ ಪ್ರಕಟನೆಯ ಕಾರ್ಯವನ್ನು ನೆರವೇರಿಸುತ್ತಿರುವ ಕನ್ನಡ ಸಂಶೋಧನ ಸಂಸ್ಥೆ (ನೋಡಿ) ಇಲ್ಲಿನ ಒಂದು ವಿಶೇಷ. ಈ ಸಂಸ್ಥೆಯಲ್ಲಿ ಒಂದು ವಸ್ತು ಸಂಗ್ರಹಾಲಯವೂ ಇದ್ದು ಬೆಲೆಯುಳ್ಳ ಹಾಗೂ ಮಹತ್ತ್ವದ ಶಿಲ್ಪಕೃತಿಗಳೂ ವರ್ಣಚಿತ್ರಗಳೂ ಹಸ್ತಪ್ರತಿಗಳೂ ಪುರಾತನ ಸಂಸ್ಕೃತಿಯ ಅವಶೇಷಗಳೂ ನಾಣ್ಯಗಳೂ ಇವೆ. ಅಲ್ಲದೆ, ಚಾರಿತ್ರಿಕ ಸ್ಥಳಗಳ ಉತ್ಖನನ ಈ ವಿಭಾಗದ ಒಂದು ವಿಶೇಷ ಕಾರ್ಯಕ್ರಮ. ಇತ್ತೀಚಿನ ಉತ್ಖನನಗಳಿಂದ ಕರ್ನಾಟಕ ಹಾಗೂ ಭಾರತದ ಗತ ಇತಿಹಾಸದ ಮೇಲೆ ವಿಶೇಷ ಬೆಳಕು ಬಿದ್ದಿದೆ. ಅನೇಕ ಶಾಸನ ಸಂಪುಟಗಳನ್ನೂ ಇತಿಹಾಸದ ಗ್ರಂಥಗಳನ್ನೂ ಈ ಸಂಸ್ಥೆ ಪ್ರಕಟಿಸಿದೆ.

ಸಮಗ್ರ ವಚನ ವಾಙ್ಮಯ ಸಂಶೋಧನ ಹಾಗೂ ಪ್ರಕಟನೆಯ ಯೋಜನೆಯನ್ನು ಕನ್ನಡ ವಿಭಾಗ ಕೈಗೊಂಡು. ಸಾವಿರಾರು ಓಲೆಗ್ರಂಥಗಳನ್ನು ಸಂಗ್ರಹಿಸಿ ಪರಿಷ್ಕರಿಸಿ ಈಗಾಗಲೇ ಗ್ರಂಥಗಳನ್ನು ಪ್ರಕಟಿಸಲಾಗಿದೆ. ಶೂನ್ಯ ಸಂಪಾದನೆ ಎಂಬ ಆಧ್ಯಾತ್ಮಿಕ ಗ್ರಂಥವನ್ನು ಆರು ಸಂಪುಟಗಳಲ್ಲಿ ಇಂಗ್ಲಿಷಿಗೆ ಭಾಷಾಂತರಿಸುವ ಯೋಜನೆ ಮುಕ್ತಾಯ ಘಟ್ಟ ತಲುಪಿದೆ. ಇಷ್ಟಲ್ಲದೆ ಜೈನ ಹಾಗೂ ಬ್ರಾಹ್ಮಣ ಸಾಹಿತ್ಯ ಸಂಶೋಧನ ಕಾರ್ಯವೂ ಕನ್ನಡ ವಿಭಾಗದಲ್ಲಿ ನಡೆಯುತ್ತಿದೆ. ಭಾಷಾಶಾಸ್ತ್ರ, ಜಾನಪದ, ತೌಲನಿಕ ತತ್ತ್ವಶಾಸ್ತ್ರಗಳ ಅಧ್ಯಯನ ಈ ವಿಭಾಗದ ಒಂದು ವಿಶೇಷ ಅಂಶವಾಗಿದೆ. ಕನ್ನಡ ವಿಭಾಗವನ್ನು ಆರ್.ಸಿ.ಹಿರೇಮಠ ಕನ್ನಡ ಅಧ್ಯಯನ ಪೀಠವೆಂದು ಕರೆಯಲಾಗಿದೆ.

ವಿಶ್ವವಿದ್ಯಾಲಯ ಸಂಗ್ರಹಿಸಿದ ಹಾಗೂ ಸಂಶೋಧಿಸಿದ ವಿಶೇಷ ಜ್ಞಾನವನ್ನು ಜನಸಾಮಾನ್ಯರಿಗೆ ಮುಟ್ಟಿಸುವ ಕಾರ್ಯ ನೆರವೇರಿಸಲು ವ್ಯಾಸಂಗ ವಿಸ್ತರಣ ವಿಭಾಗವನ್ನು ತೆರೆಯಲಾಗಿದೆ. ಹಳ್ಳಿಗಳಲ್ಲಿ ಉಪನ್ಯಾಸಗಳನ್ನು ಏರ್ಪಡಿಸಿ ಆ ಉಪನ್ಯಾಸಗಳನ್ನು ಕಿರುಹೊತ್ತಗೆಗಳಾಗಿ ಪ್ರಕಟಿಸಲಾಗುತ್ತಿದೆ. ಲಕ್ಷಾಂತರ ಪ್ರತಿಗಳು ಮಾರಾಟವಾಗಿರುವುದು ಈ ಯೋಜನೆಯ

ಜನಪ್ರಿಯತೆಯನ್ನು ಸೂಚಿಸುತ್ತದೆ. ಪ್ರೌಢ ವ್ಯಾಸಂಗ ಹಾಗೂ ಸಂಶೋಧನೆಗೆ ನೆರವಾಗಲು ಸಂಶೋಧನ ಗ್ರಂಥಮಾಲೆ, ವಿಶೇಷೋಪನ್ಯಾಸ ಗ್ರಂಥಮಾಲೆ, ಕನ್ನಡ ಕಾವ್ಯಮಾಲೆ, ಅರ್ಥಶಾಸ್ತ್ರ ಗ್ರಂಥಮಾಲೆ ಮುಂತಾದುವುಗಳ ಮೂಲಕ ಕನ್ನಡದಲ್ಲಿ, ಇಂಗ್ಲಿಷಿನಲ್ಲಿ ನೂರಾರು ಸಂಶೋಧನ ಗ್ರಂಥಗಳೂ ಈ ವಿಭಾಗದ ಪ್ರಕಟಣೆಗಳಾಗಿವೆ. ವಿಜ್ಞಾನ, ಮಾನವಿಕ ವಿಜ್ಞಾನ ಹಾಗೂ ಸಾಮಾಜಿಕ ವಿಜ್ಞಾನ ಕ್ಷೇತ್ರದ ಸಂಶೋಧನೆಗಳನ್ನು ಬೆಳಕಿಗೆ ತರುವ ನಿಯತಕಾಲಿಕಗಳನ್ನು ನಡೆಸಿಕೊಂಡು ಬರಲಾಗಿದೆ. ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗೆ ಮೀಸಲಾದ ಕರ್ನಾಟಕ ಭಾರತಿ (ನೋಡಿ) ಎಂಬ ತ್ರೈಮಾಸಿಕವೂ ವಿಶ್ವವಿದ್ಯಾಲಯದ ಬುಲೆಟಿನ್ ಎಂಬ ಮಾಸಿಕ ಪತ್ರಿಕೆಯೂ ಪ್ರಕಟವಾಗುತ್ತಿವೆ.

ದೇಶೀಯ ಭಾಷೆಗಳು ಉನ್ನತ ವ್ಯಾಸಂಗದ ಶಿಕ್ಷಣ ಮಾಧ್ಯಮವಾಗಲು ಬೇಕಾದ ಎಲ್ಲ ಪಠ್ಯ ಹಾಗೂ ಪೂರಕ ಗ್ರಂಥಗಳ ರಚನೆ ಹಾಗೂ ಪ್ರಕಟನ ಕಾರ್ಯ ವಿಶ್ವವಿದ್ಯಾಲಯದ ಪಠ್ಯಪುಸ್ತಕ ಡೈರಕ್ಟೊರೇಟಿನಿಂದ ನೆರವೇರುತ್ತಿದೆ. ಪದವಿ ಹಾಗೂ ಸ್ನಾತಕೋತ್ತರ ತರಗತಿಗಳಿಗೆ ಬೇಕಾಗುವ ಪಠ್ಯಪುಸ್ತಕ, ಪೂರಕ ಗ್ರಂಥ, ಭಾಷಾಂತರ ಕೃತಿಗಳನ್ನು ಪ್ರಕಟಿಸುವ ಯೋಜನೆಯ ಕಾರ್ಯ ಮುಂದುವರಿದಿದೆ. ತಜ್ಞ ಪ್ರಾಧ್ಯಾಪಕರಿಂದ ವಿವಿಧ ವಿಷಯಗಳಲ್ಲಿ ಮೂಲಗ್ರಂಥ ರಚನೆಯ ಹಾಗೂ ತಾಂತ್ರಿಕ ಶಬ್ದಕೋಶಗಳ ರಚನೆಯ ಕಾರ್ಯ ಸಾಗುತ್ತಿದೆ. ಎಂಜಿನಿಯರಿಂಗ್, ಕಾಯಿದೆ ಹಾಗೂ ವೈದ್ಯವಿಷಯಗಳನ್ನು ಜನಪ್ರಿಯಗೊಳಿಸುವ ಸಲುವಾಗಿ ಜನಪ್ರಿಯವಿಜ್ಞಾನ ಗ್ರಂಥಮಾಲೆಯನ್ನು ತೆರೆಯಲಾಗಿದೆ. ಸಂಶೋಧನೆ ಮತ್ತು ಅಧ್ಯಯನಕ್ಕೆ ಸಹಕಾರಿಯಾಗಿ ವಿಶ್ವವಿದ್ಯಾಲಯದ ಗ್ರಂಥಾಲಯವಿದೆ. ಇಲ್ಲಿ ಲಿಂಗ್ವಾಫೋನ್, ಮೈಕ್ರೋ ಫಿಲ್ಮ್, ಮೈಕ್ರೋ ಕಾರ್ಡುಗಳ ವ್ಯವಸ್ಥೆಯಂಥ ವಿಶೇಷ ಸೌಕರ್ಯಗಳಿವೆ.

ಚುನಾಯಿತ ಹಾಗೂ ನೇಮಿತ ಸದಸ್ಯರನ್ನುಳ್ಳ ಸೆನೆಟ್ ಮತ್ತು ಅಕೆಡೆಮಿಕ್ ಕೌನ್ಸಿಲ್‌ಗಳ ನಿರ್ದೇಶನದ ಮೇರೆಗೆ, ಈ ಎರಡು ಅಂಗಗಳಿಂದ ಆರಿಸಲ್ಪಟ್ಟ ವಿಶ್ವವಿದ್ಯಾಲಯದ ಪರಮಾಧಿಕಾರಿ ಸಂಸ್ಥೆಯಾದ ಸಿಂಡಿಕೇಟ್ ವ್ಯವಹಾರ ನಡೆಸುತ್ತಿತ್ತು. ಕರ್ನಾಟಕ ವಿಶ್ವವಿದ್ಯಾಲಯ ಅಧಿನಿಯಮಕ್ಕೆ ತಿದ್ದುಪಡಿ ಮಾಡಿರುವುದರಿಂದ ಸೆನೆಟ್ ರದ್ದಾಗಿದೆ. ಶಿಕ್ಷಣ ಮಂಡಳಿಯ ಸ್ವರೂಪ ಬದಲಾಗಿದೆ. ಸಿಂಡಿಕೇಟ್ ಪ್ರಮುಖ ಕಾರ್ಯನೀತಿ ನಿರ್ದೇಶನ ಸಮಿತಿಯಾಗಿದೆ. ಕುಲಾಧಿಪತಿಗಳಿಂದ ನೇಮಕವಾಗುವ ಕುಲಪತಿ, ವಿಶ್ವವಿದ್ಯಾಲಯದ ಸರ್ವೋಚ್ಚ ಕಾರ್ಯ ನಿರ್ವಹಣಾಧಿಕಾರಿ. ವಿಶ್ವವಿದ್ಯಾಲಯದ ಆಡಳಿತದ ಮುಖ್ಯಾಧಿಕಾರಿಯಾದ ಕುಲಸಚಿವರು ತಮ್ಮ ಅಧಿಕಾರದಲ್ಲಿರುವ ಸಹಾಯಕ ಕುಲಸಚಿವರುಗಳ, ಲೆಕ್ಕಪತ್ರಾಧಿಕಾರಿಗಳ, ಆಡಳಿತ ವಿಭಾಗಾಧಿಕಾರಿಗಳ ಸಹಕಾರದಿಂದ ವಿಶ್ವವಿದ್ಯಾಲಯದ ಎಲ್ಲ ಆಡಳಿತವನ್ನೂ ನಿರ್ವಹಿಸುವರು. ಪರೀಕ್ಷಾ ವಿಭಾಗದ ಕಾರ್ಯಗಳನ್ನು ಪರೀಕ್ಷಾ ನಿಯಂತ್ರಣಾಧಿಕಾರಿಗಳು, ತಮ್ಮ ಸಹಾಯಕ ಅಧಿಕಾರಿಗಳ ನೆರವಿನಿಂದ ನೆರವೇರಿಸುವರು. ಸ್ಥಾನಿಕ ಎಂಜಿನಿಯರನ್ನೊಳಗೊಂಡ ಕಟ್ಟಡ ವಿಭಾಗದವರು ವಿಶ್ವವಿದ್ಯಾಲಯದ ಕಟ್ಟಡಗಳ, ರಸ್ತೆಗಳ ನಿರ್ಮಾಣ ಹಾಗೂ ರಕ್ಷಣೆಯ ಕೆಲಸವನ್ನು ನಿರ್ವಹಿಸುವರು. ಉದ್ಯಾನವನ, ಸಸ್ಯಶಾಸ್ತ್ರಕ ಉದ್ಯಾನಗಳ ರಕ್ಷಣೆಯನ್ನು ಉದ್ಯಾನಾಧಿಕಾರಿಗಳೂ ಸಂಶೋಧನ ಸಲಕರಣೆಗಳನ್ನು ಸಿದ್ಧಗೊಳಿಸುವ ಹಾಗೂ ರಿಪೇರಿ ಮಾಡುವ ಕಾರ್ಯಗಳನ್ನು ಕಾರ್ಯಾಗಾರದ ಅಧಿಕಾರಿಗಳೂ ನೋಡಿಕೊಳ್ಳುತ್ತಾರೆ. ವಿದ್ಯಾರ್ಥಿವಿದ್ಯಾರ್ಥಿನಿಯರ ವಸತಿ ಗೃಹಗಳ ಆಡಳಿತ ಹಾಗೂ ಮೇಲ್ವಿಚಾರಣೆಗೆ ವಿಶೇಷಾಧಿಕಾರಿಗಳು ನಿಯಮಿತರಾಗಿದ್ದಾರೆ. ವಿವಿಧ ಕ್ರೀಡೆಗಳು ಹಾಗೂ ಯುವಜನ ಕಾರ್ಯಕ್ರಮ ಹಾಗೂ ಯೋಜನಾಕಾರ್ಯಗಳ ಮೇಲ್ವಿಚಾರಣೆಗೂ ವಿಶೇಷಾಧಿಕಾರಿಗಳು ಇದ್ದಾರೆ.

ಆರ್.ಎ.ಜಹಗೀರ್‌ದಾರ್, ಸಿ.ಸಿ.ಹುಲಕೋಟಿ, ಡಿ.ಸಿ.ಪಾವಟೆ, ಎ.ಎಸ್.ಅಡಕೆ, ಎಂ.ಜಯಲಕ್ಷ್ಮಮ್ಮಣ್ಣಿ, ಆರ್.ಸಿ.ಹಿರೇಮಠ, ಡಿ.ಎಂ.ನಂಜುಂಡಪ್ಪ, ಎಸ್.ಎಸ್.ಒಡೆಯರ್, ಎ.ಎಂ.ಪಠಾಣ್, ಎಸ್.ರಾಮೇಗೌಡ, ಎಸ್.ಜಿ.ದೇಸಾಯಿ, ಜಿ.ಕೆ.ನಾರಾಯಣರೆಡ್ಡಿ, ಇವರು ಕ್ರಮವಾಗಿ ಇದರ ಕುಲಪತಿಗಳಾಗಿದ್ದರು. ಎಂ.ಖಾಜಿಪೀರ ಇಂದಿನ ಕುಲಪತಿಗಳು (2004). *

**ಕರ್ನಾಟಕ ವೃತ್ತ** : ಮುದವೀಡು ಕೃಷ್ಣರಾಯರ ಸಂಪಾದಕತ್ವದಲ್ಲಿ ಧಾರವಾಡದಿಂದ ಪ್ರಕಟವಾಗುತ್ತಿದ್ದ ವಾರಪತ್ರಿಕೆ. 1892ರಲ್ಲಿ ಪ್ರಾರಂಭವಾದ ಈ ಪತ್ರಿಕೆಯಲ್ಲಿ ಅನಂತರ ಧನಂಜಯವೂ ಸಮಾವೇಶವಾಗಿ ಕರ್ನಾಟಕ ವೃತ್ತ ಮತ್ತು ಧನಂಜಯ ಎಂಬ ಹೆಸರಿನಿಂದ ಇದು 1936ರ ವರೆಗೂ ನಡೆಯಿತು. 1924ರಲ್ಲಿ ಕೆಲ ಕಾಲ ದಿನಪತ್ರಿಕೆಯಾಗಿತ್ತು. ರಾಷ್ಟ್ರೀಯ ಚಟುವಟಿಕೆಗಳನ್ನು ಪ್ರೋತ್ಸಾಹಿಸುವುದಕ್ಕೆ ಪತ್ರಿಕೆ ಮಹತ್ವ ಕೊಟ್ಟರೂ ಬರೆವಣಿಗೆಯನ್ನು ಸಾಧ್ಯವಿದ್ದಷ್ಟು ಮಟ್ಟಿಗೆ ಕಾನೂನಿನ ಮಿತಿಯೊಳಗೆ ಇರಿಸಿಕೊಂಡಿತ್ತು. ಸಂಪಾದಕರಾದ ಮುದವೀಡು ಅವರು ತಮ್ಮ ಉಗ್ರ ವಿಚಾರಗಳಿಗಾಗಿ ಹಾಗೂ ಭಾಷಣಗಳಿಗಾಗಿ ಕಾರಾಗೃಹ ಸೇರಿದ್ದರೂ ಪತ್ರಿಕೆಯ ಮೇಲೆ ಸರ್ಕಾರ ತೀರ್ವಕ್ರಮ ಕೈಗೊಂಡಿರಲಿಲ್ಲ. ಜಲಿಯನ್‌ವಾಲಾಬಾಗ್ ದುರಂತ ಪ್ರಕರಣದಲ್ಲಿ ಗೋಲೀಬಾರು ಆಜ್ಞೆಗೆ ಕಾರಣನಾದ ಜನರಲ್ ಡಯರ್‌ನನ್ನೂ ಧಾರವಾಡದ ಕಲೆಕ್ಟರಾದ ಪೇಂಟರನ್ನೂ ಹೋಲಿಸಿ 1920 ರಲ್ಲಿ ಬರೆದ ವ್ಯಂಗ ಲೇಖನಕ್ಕಾಗಿ ಸರ್ಕಾರ ಈ ಪತ್ರಿಕೆಯ ಮೇಲೆ ಮೊಕದ್ದಮೆ ಹೂಡಿದ್ದರೂ ಅದು ವಿಫಲವಾಯಿತು.

ಕರ್ನಾಟಕ ವೃತ್ತದಲ್ಲಿ ರಾಜಕೀಯ ಸುದ್ದಿಗಳಲ್ಲದೇ ಸ್ವದೇಶಿ ಪ್ರಚಾರ, ಕನ್ನಡ ಭಾಷೆಯ ಪುನರುಜ್ಜೀವನ, ಕರ್ನಾಟಕದ ಏಕೀಕರಣ ಮೊದಲಾದ ವಿಷಯಗಳಿಗೆ ಸಂಬಂಧಿಸಿದ ಸುದ್ದಿಗಳೂ ಅಭಿಪ್ರಾಯಗಳೂ ಪ್ರಕಟವಾಗುತ್ತಿದ್ದವು. ಪ್ರತಿ ಸಂಚಿಕೆಯೂ ಡಿಮೈ ಪೂರ್ಣಾಕಾರದ 3-8 ಪುಟಗಳನ್ನೊಳಗೊಂಡಿರುತ್ತಿತ್ತು. (ಪಿ.ವಿ.ಎ.)

**ಕರ್ನಾಟಕ ವೈಭವ** : ಬಿಜಾಪುರದಿಂದ ಪ್ರಕಟವಾಗುತ್ತಿರುವ ಕನ್ನಡ ದ್ವಿಸಾಪ್ತಾಹಿಕ ಪತ್ರಿಕೆ. ರಾಷ್ಟ್ರೀಯ ಜಾಗೃತಿಗೆ, ಕನ್ನಡದ ಅರಿವಿಗೆ 1892ರಲ್ಲಿ ಸವಣೂರು ಗುಂಡುರಾಯರು ಬಿಜಾಪುರದಲ್ಲಿ ವಾರಪತ್ರಿಕೆಯಾಗಿ ಇದನ್ನು ಪ್ರಾರಂಭಿಸಿದರು. 1904 ರಿಂದ 1908ರವರೆಗೆ ಬಂಗಾಲ ವಿಭಜನೆಯ ಆಂದೋಲನದ ಕಾಲದಲ್ಲಿ ಈ ಪತ್ರಿಕೆಯಲ್ಲಿ ಪ್ರಕಟವಾದ ಉಗ್ರಲೇಖನಗಳನ್ನು ಕಂಡು ಆಗ ಭಾರತಕ್ಕೆ ಬಂದಿದ್ದ ಲಂಡನ್ ಟೈಮ್ಸ್ ಪತ್ರಿಕಾ ವರದಿಗಾರ ವ್ಯಾಲಂಟೈನ್ ಚಿರೋಲ್ ತನ್ನ ಇಂಡಿಯನ್ ಅನ್‌ರೆಸ್ಟ್ ಗ್ರಂಥ'ದಲ್ಲಿ ಕರ್ನಾಟಕ ವೈಭವ ಉಗ್ರ ಕ್ರಾಂತಿಕಾರಿ ಪತ್ರಿಕೆಯೆಂದು ಬರೆದಿದ್ದ.

1920ರಲ್ಲಿ ಜಯರಾವ್ ದೇಶಪಾಂಡೆಯವರು ಇದರ ಸಂಪಾದಕರಾದರು. ಅಸಹಕಾರ ಚಳವಳಿಯ ಕಾಲದಲ್ಲಿ ಪತ್ರಿಕೆಯ ಪ್ರಸಾರ ಹೆಚ್ಚಿತು. ಮೊಹರೆ ಹಣಮಂತರಾಯರು ಈ ಕಾಲದಲ್ಲಿ ಬರೆದ ಒಂದು ಅಗ್ರಲೇಖನಕ್ಕಾಗಿ, ಸಂಪಾದಕರು 1923ರಲ್ಲಿ ಬರೆದ ಕರ್ನಾಟಕವೀರರು ಎಂಬ ಅಗ್ರಲೇಖನಕ್ಕಾಗಿ ಸೆರೆಮನೆ ಸೇರಬೇಕಾಯಿತು. ಆಗ ಎರಡು ವರ್ಷಗಳ ವರೆಗೆ ಮೊಹರೆ ಹಣಮಂತರಾಯರು ಬಿಡುಗಡೆಯಾಗಿ ಬರುವವರೆಗೂ ಕೌಜಲಗಿ ಹಣಮಂತರಾಯರು ಸಂಪಾದಕರಾಗಿದ್ದರು. ಮೊಹರೆ ಹಣಮಂತರಾಯರು ಸಂಯುಕ್ತ ಕರ್ನಾಟಕ ಪತ್ರಿಕೆಗೆ ಸಂಪಾದಕರಾಗಿದ್ದಾಗ ನಾಯಕ ವೆಂಕಟರಾಯರೂ ಎನ್.ಎಚ್.ನಾಯಕರೂ ಸಂಪಾದಕರಾಗಿ ಸೇವೆ ಸಲ್ಲಿಸಿದರು. ಪತ್ರಿಕೆಯಲ್ಲಿ ಪ್ರಾರಂಭದಲ್ಲಿ ಕನ್ನಡ, ಮರಾಠಿ ಮತ್ತು ಇಂಗ್ಲಿಷ್ ಲೇಖನಗಳಿರುತ್ತಿದ್ದವು. (ಎಸ್.ವಿ.ಪಿ.)

**ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗಗಳು** : ಹಿಂದುಳಿದ ವರ್ಗಗಳೆಂದು ಪರಿಗಣಿತವಾದ ಜಾತಿಗಳು ಮತ್ತು ಸಮುದಾಯಗಳ ಉನ್ನತಿಗಾಗಿ ಕರ್ನಾಟಕ ಸರ್ಕಾರ ಕಾಲದಿಂದ ಕಾಲಕ್ಕೆ ಅನೇಕ ಆಯೋಗಗಳನ್ನು ರಚಿಸಿದೆ. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಹಿಂದುಳಿದ ವರ್ಗಗಳೆಂಬ ಪರಿಕಲ್ಪನೆ ಸಾರ್ವಜನಿಕ ವಲಯದಲ್ಲಿ ಕೇಳಿ ಬಂತು. ಅದುವರೆಗೂ ಬ್ರಿಟಿಷರ ನೇರ ಅಧೀನದ ಪ್ರಾಂತಗಳಲ್ಲಿ ಮತ್ತು ಸಂಸ್ಥಾನಗಳಲ್ಲಿ ಸರ್ಕಾರಿ ನೌಕರಿಗಳನ್ನು ವಿವೇಚನೆಯ ಮತ್ತು ಅರ್ಹತೆಯ ಆಧಾರದ ಮೇಲೆ ಭರ್ತಿ ಮಾಡಲಾಗುತ್ತಿತ್ತು. ಇದರಲ್ಲಿ ಸೇಕಡ ಸು.75ರಷ್ಟು ಭಾಗ ಬ್ರಾಹ್ಮಣರೇ ಇರುತ್ತಿದ್ದರು. ಈ ಸಮುದಾಯ ವಿದ್ಯೆಯಲ್ಲಿ ಅದರಲ್ಲೂ ಇಂಗ್ಲಿಷ್ ವಿದ್ಯಾಭ್ಯಾಸದಲ್ಲಿ ಮುಂದಿರುತ್ತಿತ್ತು. ಉಳಿದಂತೆ ಐರೋಪ್ಯ ಅಧಿಕಾರಿಗಳು ಮತ್ತು ಅರಸು ಮನೆತನ ಮೂಲದವರು ಆಡಳಿತದಲ್ಲಿದ್ದರು. ಬ್ರಾಹ್ಮಣ ವರ್ಗ ಆಡಳಿತದ ಎಲ್ಲ

ಶಾಖೆಗಳಲ್ಲಿ ಬೇರೂರಿದ್ದಲ್ಲದೆ ರಾಜಕೀಯವಾಗಿಯೂ ಮುಂಚೂಣಿಗೆ ಬಂದಿತು. ಕಾಂಗ್ರೆಸ್ ಪಕ್ಷದ ಸಂಘಟನೆಯಲ್ಲೂ ಬ್ರಾಹ್ಮಣರು ಮುಂದಾಳುಗಳಾಗಿದ್ದರು. ಇದನ್ನು ಗಮನಿಸಿದ ಬ್ರಿಟಿಷ್ ಪ್ರಭುತ್ವ ಸಮಾಜವನ್ನು ಹಿಂದು-ಮುಸ್ಲಿಮ್ ಎಂದು ಬೇರ್ಪಡಿಸಿದ್ದಂತೆ ಬ್ರಿಟಿಷರ ಆಳಿಕೆಯನ್ನು ಪ್ರಶ್ನಿಸುವ ಬ್ರಾಹ್ಮಣರನ್ನು ಇತರ ಬಹುಸಂಖ್ಯಾತ ಸಮುದಾಯಗಳಿಂದ ಬೇರ್ಪಡಿಸಿದರೆ ಸ್ವಾತಂತ್ರ್ಯ ಚಳವಳಿಯನ್ನು ಸಮರ್ಥವಾಗಿ ಹತ್ತಿಕ್ಕಬಹುದೆಂಬ ಚಿಂತನೆ ಮಾಡಿತು. ಜೊತೆಗೆ ಆಗತಾನೇ ಇಂಗ್ಲಿಷ್ ವಿದ್ಯಾಭ್ಯಾಸ ಮಾಡುತ್ತಿದ್ದ ಮುಸ್ಲಿಮರೂ ಸೇರಿದಂತೆ ಹಲವಾರು ಹಿಂದುಳಿದ ವರ್ಗಗಳ ವಿದ್ಯಾವಂತ ಯುವಕರು ಬ್ರಾಹ್ಮಣರನ್ನು ಸ್ಪರ್ಧೆಯಲ್ಲಿ ಸರಿಗಟ್ಟಲು ಸಾಧ್ಯವಾಗದೆ ಚಡಪಡಿಸುತ್ತಿದ್ದರು. ಈ ಅತೃಪ್ತಿ ಪತ್ರಿಕೆಗಳಲ್ಲಿ ಸಾರ್ವಜನಿಕ ಹಾಗೂ ಖಾಸಗೀ ಸಭೆಗಳ ಮೂಲಕ ಪ್ರಕಟವಾಗತೊಡಗಿತು. ಮಹಾರಾಷ್ಟ್ರದಲ್ಲಿ ಜ್ಯೋತಿಭಾಫುಲೆ ಈ ಚಳವಳಿಗೆ ಒಂದು ರೂಪುಕೊಟ್ಟರೆ, ಮದರಾಸಿನಲ್ಲಿ ಪೆರಿಯಾರ್ ಅವರು ಇದನ್ನು ಸಂಘಟಿಸಿದರು. ಅಲ್ಲಿ ಜಸ್ಟೀಸ್ ಪಾರ್ಟಿ ಎಂಬ ಒಂದು ರಾಜಕೀಯ ಸಂಘಟನೆ ಪ್ರಾರಂಭವಾಗಿ ಅದು ಬ್ರಾಹ್ಮಣೇತರ ಹಿಂದುಳಿದವರಿಗೆ ರಾಜಕೀಯ, ಉದ್ಯೋಗ ಮತ್ತು ಶಿಕ್ಷಣದಲ್ಲಿ ಮೀಸಲಾತಿ ನೀಡುವಂತೆ ಒತ್ತಾಯಿಸಿತು. ಅಲ್ಲಿ ಕೆಲಸ ಮಾಡಿ ಮೈಸೂರು ಸಂಸ್ಥಾನದ ಸೇವೆಗೆ ಸೇರಿದ ಸಿ.ಆರ್.ರೆಡ್ಡಿ ಮೊದಲಾದ ಹಿಂದುಳಿದ ವರ್ಗದ ಅಧಿಕಾರಿಗಳು ಮೈಸೂರಿನಲ್ಲಿ ಅದಕ್ಕೊಂದು ಸಂಸ್ಥಾರೂಪವನ್ನು ನೀಡಲು ಶ್ರಮಿಸಿದರು. ಒಕ್ಕಲಿಗ ಜನಾಂಗದ ಕೆ.ಎಚ್.ರಾಮಯ್ಯನವರು ಇದೇ ಕಾಲದಲ್ಲಿ ಹಿಂದುಳಿದ ವರ್ಗಗಳ ಅಭಿವೃದ್ಧಿಯ ಬಗ್ಗೆ ಕಾಳಜಿ ವಹಿಸಿದ್ದರು. ಎಂ.ಬಸವಯ್ಯ, ಎಚ್.ಚನ್ನಯ್ಯ, ಗುಲಾಮ್ ಅಹಮ್ಮದ್, ಕಲಾಮಿ ಮೊದಲಾದವರು ಪ್ರಜಾಮಿತ್ರ ಮಂಡಳಿ ಎಂಬ ಪ್ರಥಮ ಹಿಂದುಳಿದವರ ರಾಜಕೀಯ ಸಂಘಟನೆ ಅಸ್ತಿತ್ವಕ್ಕೆ ಬರಲು ಕಾರಣರಾದರು. 1918ರ ಫೆಬ್ರವರಿಯಲ್ಲಿ ಈ ನಿಯೋಗ ಮಹಾರಾಜರನ್ನು ಭೇಟಿ ಮಾಡಿ ತಮ್ಮ ಅಹವಾಲನ್ನು ಸಲ್ಲಿಸಿತು.

**ಲೆಸ್ಲಿ ಮಿಲ್ಲರ್ ಸಮಿತಿ :** ಹಿಂದುಳಿದ ವರ್ಗದ ಪ್ರತಿನಿಧಿಗಳು ಸರ್ಕಾರಿ ಉದ್ಯೋಗಗಳು, ಶಿಕ್ಷಣ ಪ್ರವೇಶ ಮತ್ತು ಸ್ಥಳೀಯ ಸಂಸ್ಥೆಗಳಲ್ಲಿ ತಮ್ಮ ತಮ್ಮ ಸಮುದಾಯಗಳಿಗೆ ಮೀಸಲಾತಿ ಇರಬೇಕೆಂದು ಕೋರಿ ಒತ್ತಾಯಿಸಿದ್ದರು. ಯುವರಾಜ ನರಸಿಂಹರಾಜ ಒಡೆಯರ್ ಈ ಬೇಡಿಕೆ ಬಗ್ಗೆ ಸಹಾನುಭೂತಿ ಉಳ್ಳವರಾಗಿದ್ದರು. ಇದರ ಫಲವಾಗಿ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರು ಮುಖ್ಯ ನ್ಯಾಯಾಧೀಶರಾಗಿದ್ದ ಲೆಸ್ಲಿ ಮಿಲ್ಲರ್ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿ ಬ್ರಾಹ್ಮಣೇತರ ಹಿಂದುಳಿದ ವರ್ಗಗಳ ಸ್ಥಿತಿಗತಿಗಳನ್ನು ಪರಿಶೀಲಿಸಿ ಅವರ ಏಳಿಗೆಗೆ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಸಲಹೆಗಳನ್ನು ನೀಡುವಂತೆ ಸೂಚಿಸಿದರು. ಈ ಅವಧಿಯಲ್ಲಿ ಎಂ.ವಿಶ್ವೇಶ್ವರಯ್ಯನವರು (ನೋಡಿ) ದಿವಾನರಾಗಿದ್ದರು. ಅವರು ಮೈಸೂರು ರಾಜ್ಯ ಸರ್ವತೋಮುಖ ಪ್ರಗತಿ ಸಾಧಿಸಬೇಕೆಂದು ಶಿಕ್ಷಣ, ವ್ಯವಸಾಯ, ಕೈಗಾರಿಕೆ - ಈ ಎಲ್ಲ ಕ್ಷೇತ್ರಗಳಲ್ಲೂ ಅಭಿವೃದ್ಧಿ ಯೋಜನೆಗಳನ್ನು ಹಾಕಿಕೊಂಡು ಮುಂದುವರಿಯುತ್ತಿದ್ದರು. ಮೀಸಲಾತಿಯ ಬಗ್ಗೆ ತಮ್ಮದೇ ಆದ ನಿಲುವು ಹೊಂದಿದ್ದರು. ಹಿಂದುಳಿದ ವರ್ಗದವರನ್ನು ಉತ್ತಮ ಶಿಕ್ಷಣದ ಮೂಲಕ ಹೆಚ್ಚು ಅರ್ಹರನ್ನಾಗಿ ಮಾಡಿ ಸರ್ಕಾರಿ ಸೇವೆಗಳಲ್ಲಿ ನೇಮಿಸುವುದರಿಂದ ಆಡಳಿತದಲ್ಲಿ ದಕ್ಷತೆ ಹೆಚ್ಚುತ್ತದೆ ಹಾಗೂ ಮಿತವಾದ ಮೀಸಲಾತಿಯ ಮೂಲಕ ಹಂತಹಂತವಾಗಿ ಇದನ್ನು ಸಾಧಿಸಿದರೆ ಇತರರಲ್ಲಿ ಅತೃಪ್ತಿ ಕಡಿಮೆ ಪ್ರಮಾಣದಲ್ಲುಳಿದು ಸಾಮರಸ್ಯ ಸಾಧನೆಯೂ ಆಗುತ್ತದೆ ಎಂಬುದು ಅವರ ಖಚಿತ ನಿಲುವಾಗಿತ್ತು. ಆದರೆ ಮಹಾರಾಜರು ಬಹು ಜನಾಭಿಪ್ರಾಯದಂತೆ ಮಿಲ್ಲರ್ ಸಮಿತಿ ನೇಮಿಸಿದ್ದು, ಆ ಸಮಿತಿಗೆ ವಹಿಸಲಾದ ಕಾರ್ಯಸೂಚಿಗಳೂ ಮೊದಲಾದವುಗಳ ಬಗ್ಗೆ ವಿಶ್ವೇಶ್ವರಯ್ಯನವರಿಗೆ ಸಮಾಧಾನವಿರಲಿಲ್ಲ. ವಿಶ್ವೇಶ್ವರಯ್ಯನವರು ಈ ಕಾರಣಕ್ಕಾಗಿ ರಾಜೀನಾಮೆ ಕೊಟ್ಟರು ಎಂಬ ಮಾತು ಅಂದಿನ ದಿನಗಳಲ್ಲಿ ಹೆಚ್ಚಾಗಿ ಕೇಳಿಬಂದರೂ ಅವರಿಗೆ ರಾಜೀನಾಮೆ ನೀಡಲು ಇನ್ನೂ ಹಲವಾರು ರಾಜಕೀಯ ಒತ್ತಡಗಳು ಕಾರಣವಾಗಿದ್ದವು. 1918ರಲ್ಲಿ ರಚಿತವಾದ ಈ ಸಮಿತಿ 1919ರಲ್ಲಿ ತನ್ನ ಕಾರ್ಯವನ್ನು ಪೂರ್ಣಗೊಳಿಸಿ ಸರ್ಕಾರಕ್ಕೆ ವರದಿ ಸಲ್ಲಿಸಿತು.

ಲೆಸ್ಲಿ ಮಿಲ್ಲರ್ ಸಮಿತಿ ನೀಡಿದ ವರದಿಯಲ್ಲಿ ಮುಂದಿನ 7 ವರ್ಷಗಳಲ್ಲಿ ಸರ್ಕಾರದ ಸೇಕಡ 50 ರಷ್ಟು ಉನ್ನತ ಹುದ್ದೆಗಳು ಮತ್ತು ಮೂರನೆಯ ಎರಡು ಭಾಗ ಕೆಳದರ್ಜೆಯ ಹುದ್ದೆಗಳು ಹಿಂದುಳಿದ ವರ್ಗಗಳಿಗೆ ಪ್ರಾಪ್ತವಾಗಬೇಕೆಂಬ ಅಂಶ ಅಡಕವಾಗಿತ್ತು. ಶಿಕ್ಷಣದಲ್ಲಿ ಪ್ರವೇಶ ಮೀಸಲಾತಿ ಮತ್ತು ವಿಶೇಷ ವಿದ್ಯಾರ್ಥಿವೇತನಗಳು ಈ ವರ್ಗಕ್ಕೆ ಲಭ್ಯವಾಗಬೇಕೆಂಬ ಸಲಹೆಗಳಿದ್ದವು. ಈ ವರದಿಯ ಕೆಲವು ಶಿಫಾರಸುಗಳು 1921ರಲ್ಲಿ ಸರ್ಕಾರಿ ಆದೇಶದ ಮೂಲಕ ಅನುಷ್ಠಾನಕ್ಕೆ ಬಂದವು. ಅಂದಿನಿಂದ ಇಂದಿನವರೆಗೂ ಹಿಂದುಳಿದ ವರ್ಗಗಳ ಏಳಿಗೆಗಾಗಿ ಆಯೋಗಗಳು ರಚನೆಯಾಗುತ್ತಲೇ ಬಂದಿವೆ.

1920ರ ದಶಕದ ಕೊನೆಯ ಹೊತ್ತಿಗೆ ಬ್ರಾಹ್ಮಣರನ್ನು ಬಿಟ್ಟು ಇತರ ಎಲ್ಲ ವರ್ಗಗಳಿಗೂ ನೀಡಿದ್ದ ಮೀಸಲಾತಿಯ ಅನುಷ್ಠಾನದಲ್ಲಿ ಪಕ್ಷಪಾತವಾಗಿರುವುದನ್ನು ಗುರುತಿಸಲಾಯಿತು. ಮುಸ್ಲಿಮರು, ವೀರಶೈವರು, ಜೈನರು ಮೊದಲಾದ, ಆಗ ಶಿಕ್ಷಣದಲ್ಲಿ ಸ್ವಲ್ಪ ಹೆಚ್ಚು ಮುಂದಿದ್ದ ಜಾತಿ ವರ್ಗಗಳು ಈ ಸೌಲಭ್ಯದ ಗರಿಷ್ಠ ಲಾಭ ಪಡೆದವೆಂಬ ದೂರು ಕೇಳಿಬರತೊಡಗಿತು. ಇದರ ಪರಿಣಾಮ ಎಷ್ಟಿತ್ತೆಂದರೆ 'ಪ್ರಜಾಮಿತ್ರ ಮಂಡಳಿಯಿಂದ ಸಿಡಿದುಹೋದ ಒಂದು ಗುಂಪು' ಪ್ರಜಾಪಕ್ಷವೆಂಬ ಹೊಸ ಪಕ್ಷವನ್ನೇ ಕಟ್ಟಿಕೊಂಡಿತು. ಆದರೆ ರಾಜಕೀಯ ಸಂಘಟನೆಗಾಗಿ ಅವೆರಡೂ 1935ರಲ್ಲಿ ಒಂದಾಗಿ 'ಪ್ರಜಾಸಂಯುಕ್ತ ಪಕ್ಷ' ಅಸ್ತಿತ್ವಕ್ಕೆ ಬಂದಿತು.

ಮೀಸಲಾತಿ ಕುರಿತ ವಾದವಿವಾದಗಳು ಮುಂದುವರಿಯುತ್ತಲೇ ಇದ್ದವು. ಆದರೆ ಸಮಾಜದಲ್ಲಿ ಹೊಸ ರಾಜಕೀಯ ಬೆಳೆವಣಿಗೆ ಕಾಣಿಸಿಕೊಂಡಿತು. ರಾಷ್ಟ್ರೀಯ ಕಾಂಗ್ರೆಸ್‌ನಲ್ಲಿ ಬ್ರಾಹ್ಮಣರು ಉತ್ಸಾಹದಿಂದ ಭಾಗವಹಿಸುತ್ತಿದ್ದು ತಮಗಾದ ನಷ್ಟವನ್ನು ಮರೆತು ಇತರರೊಂದಿಗೆ ಬೆರೆಯತೊಡಗಿದರು. ಸ್ವಾತಂತ್ರ್ಯ ಚಳವಳಿ ಎಲ್ಲ ವರ್ಗದ ಜನರನ್ನೂ ಆಕರ್ಷಿಸಿತು. 1937ರಲ್ಲಿ 'ಪ್ರಜಾಸಂಯುಕ್ತ ಪಕ್ಷ' ಕಾಂಗ್ರೆಸ್ ಪಕ್ಷದಲ್ಲಿ ವಿಲೀನವಾಯಿತು. ಮುಂದೆ ಸ್ವಾತಂತ್ರ್ಯ ಚಳವಳಿಗೆ ಧುಮುಕಿದ ಎಲ್ಲ ವರ್ಗದ ಮುಖಂಡರು ಈ ಮೀಸಲಾತಿಯ ಅಸಮಾಧಾನಗಳನ್ನು ಮರೆತು ಭಾವೈಕ್ಯ ತೋರಿದರು. ಬಹುಕಾಲದವರೆಗೆ ಮಿಲ್ಲರ್ ಸಮಿತಿಯ ವರದಿಯ ಶಿಫಾರಸುಗಳೇ ಪ್ರಮುಖ ಮಾರ್ಗದರ್ಶಿ ಸೂತ್ರಗಳಾಗಿ ಮೀಸಲಾತಿ ವ್ಯವಸ್ಥೆ ಅನುಷ್ಠಾನದಲ್ಲಿತ್ತು.

**ನಾಗನಗೌಡ ಸಮಿತಿ :** ಸ್ವಾತಂತ್ರ್ಯಾನಂತರದ ಒಂದು ದಶಕ ಸಂವಿಧಾನದ ಅಳವಡಿಕೆ, ಪ್ರಜಾಪ್ರಭುತ್ವ ವ್ಯವಸ್ಥೆಯ ಅನುಷ್ಠಾನ ಮತ್ತು ರಾಜ್ಯಗಳ ಪುನರ್ವಿಂಗಡಣೆಯ ಪ್ರಕ್ರಿಯೆಯಲ್ಲಿ ಕಳೆದುಹೋಯಿತು. ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ವರ್ಗಗಳಿಗೆ ಸಂವಿಧಾನ ನೀಡಿದ ವಿಶೇಷ ಮೀಸಲಾತಿಯಿಂದ ಆ ವರ್ಗಗಳು ಮೀಸಲಾತಿ ದೃಷ್ಟಿಯಿಂದ ಹಿಂದುಳಿದ ವರ್ಗಗಳಿಂದ ಬೇರೆಯಾದವು. ಸರ್ಕಾರ ಕೈಗೊಂಡ ವಿವಿಧ ಅಭಿವೃದ್ಧಿ ಯೋಜನೆಗಳ ಫಲ ಎಲ್ಲ ಸಮುದಾಯಗಳಿಗೂ ಸಮಾನವಾಗಿ ಸಿಕ್ಕಲಿಲ್ಲ. ಭೂರಹಿತ ಕಾರ್ಮಿಕರು ಮತ್ತು ಚಿಕ್ಕ ಪುಟ್ಟ ಉಪಕಸಬುಗಳನ್ನು ಮಾಡುತ್ತಿದ್ದ ಜನರಿಗೆ ಸೂಕ್ತ ಪ್ರಾತಿನಿಧ್ಯವಿಲ್ಲವೆಂಬ ಕೂಗು ಕೇಳಿಬಂತು. ಈ ಹಿನ್ನೆಲೆಯಲ್ಲಿ 1960ರಲ್ಲಿ ಸರ್ಕಾರ ಡಾ.ನಾಗನಗೌಡರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿ ಅದಕ್ಕೆ ಹಿಂದುಳಿದ ವರ್ಗಗಳ ವಿಂಗಡಣೆ ಮತ್ತು ಮೀಸಲಾತಿಯ ಪ್ರಮಾಣವನ್ನು ನಿರ್ಧರಿಸಿ ವರದಿ ಸಲ್ಲಿಸುವಂತೆ ಕೋರಿತು.

ಈ ಸಮಿತಿ ಅಧ್ಯಯನ ಕೈಗೊಂಡು ಒಂದು ವರದಿಯನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಸಲ್ಲಿಸಿತು. ಅದು ಒಟ್ಟು 399 ಜಾತಿಗಳನ್ನು ಮೀಸಲಾತಿಗೆ ಅರ್ಹವೆಂದು ಪರಿಗಣಿಸಿತ್ತು. ಈ ಜಾತಿಗಳಿಗೆ ಸರ್ಕಾರಿ ಉದ್ಯೋಗದಲ್ಲಿ ಸೇಕಡ 45ರಷ್ಟು ಮತ್ತು ಶಿಕ್ಷಣ ಪ್ರವೇಶದಲ್ಲಿ ಸೇಕಡ 50ರಷ್ಟು ಮೀಸಲಾತಿ ಇರಬೇಕೆಂದು ಸಲಹೆಮಾಡಿತ್ತು. ಈ ಸಮಿತಿ ಲಿಂಗಾಯತ ಸಮುದಾಯವನ್ನು ಮೀಸಲಾತಿ ಪಟ್ಟಿಯಿಂದ ಕೈ ಬಿಟ್ಟಿತ್ತು. ವ್ಯವಸಾಯ ಮತ್ತು ಕೈಗಾರಿಕೆ ಅಭಿವೃದ್ಧಿ ಹಾಗೂ ಗೃಹಕೈಗಾರಿಕೆಗಳಿಗಾಗಿ ಹಿಂದುಳಿದ ವರ್ಗಗಳಿಗೆ ವಿಶೇಷ ಹಣಕಾಸು ನೆರವು ನೀಡಲೂ ಈ ಸಮಿತಿ ಶಿಫಾರಸು ಮಾಡಿತ್ತು. ಆದರೆ ಸರ್ಕಾರ ಈ ವರದಿಯಲ್ಲಿ ಕೆಲವೊಂದು ಮಾರ್ಪಾಡುಗಳನ್ನು ಮಾಡಿ 1962ರಲ್ಲಿ ಒಂದು ಆದೇಶ ಹೊರಡಿಸಿತು.

ಅದರಲ್ಲಿ ಹಿಂದುಳಿದ ವರ್ಗಗಳು ಮತ್ತು ಅತಿ ಹಿಂದುಳಿದ ವರ್ಗಗಳು ಎಂಬ ಎರಡು ಗುಂಪುಗಳನ್ನು ಮಾಡಲಾಗಿತ್ತು. ಈ ವರ್ಗಗಳಿಗೆ ಅನುಕ್ರಮವಾಗಿ ಶೇಕಡ 28ರಷ್ಟು ಮತ್ತು ಸೇಕಡ 22ರಷ್ಟು ಮೀಸಲಾತಿ ನೀಡಲಾಗಿತ್ತು. ಈ ಆದೇಶವನ್ನು ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಲಾಗಿ ಅದು ಅನೂರ್ಜಿತಗೊಳಿಸಲ್ಪಟ್ಟಿತು. ಈ ತೀರ್ಪಿನ ಹಿನ್ನೆಲೆಯಲ್ಲಿ 1963ರಲ್ಲಿ ಹಾಗೂ 1968ರಲ್ಲಿ ಮಾರ್ಪಾಡಾದ ಸರ್ಕಾರಿ ಆದೇಶಗಳು ಹೊರಟವು. ಎಲ್ಲ ಹಿಂದುಳಿದ ವರ್ಗಗಳು ಸೇರಿದಂತೆ ಸೇಕಡ 30ರಷ್ಟು ಮೀಸಲಾತಿ ನೀಡಲಾಯಿತು. ಆದಾಯ ಮಿತಿಯನ್ನು 2400 ರೂಪಾಯಿಗಳೆಂದು ನಿಗದಿಗೊಳಿಸಲಾಯಿತು. ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಒಟ್ಟು ಸೇಕಡ 18ರಷ್ಟು ಮೀಸಲಾತಿ ಪ್ರತ್ಯೇಕವಾಗಿ ಮುಂದುವರಿಯಿತು. ಇದಕ್ಕೆ ಆದಾಯ ಮಿತಿ ಇರಲಿಲ್ಲ.

**ಹಾವನೂರ್ ಆಯೋಗ :** 1970ರ ದಶಕದ ಪ್ರಾರಂಭದ ಹೊತ್ತಿಗೆ ಕರ್ನಾಟಕದ ರಾಜಕೀಯ ವಿದ್ಯಮಾನಗಳು ಹೊಸ ತಿರುವನ್ನು ಪಡೆದವು. ಬಡವರ ಏಳ್ಗೆಗಾಗಿ ಶ್ರಮಿಸುವುದು ಸರ್ಕಾರದ ಮುಖ್ಯ ಹೊಣೆ ಎಂಬ ವಿಚಾರ ಪ್ರಚಲಿತ ಮೌಲ್ಯ ಪಡೆಯಿತು. ಆಗಿನ ಮುಖ್ಯ ಮಂತ್ರಿ ಡಿ.ದೇವರಾಜ ಅರಸು (ನೋಡಿ) ಅವರು ಹಿಂದುಳಿದ ವರ್ಗಗಳ ನಾಯಕರಾಗಿ ಪ್ರತಿಬಿಂಬಿಸಲ್ಪಟ್ಟರು. ಅವರು ಈ ವರ್ಗಗಳ ಬಗ್ಗೆ ವಿಶೇಷ ಕಾಳಜಿ ಹೊಂದಿ ಗೇಣಿ ಶಾಸನ, ಲೇವಾದೇವಿ ರದ್ದಾಯಿತಿ ಶಾಸನ, ಬಾಡಿಗೆ ನಿಯಂತ್ರಣ ಕಾಯಿದೆ ಮೊದಲಾದವನ್ನು ಜಾರಿಗೆ ತಂದರು. ಬಡವರಿಗೆ ಮನೆ, ನಿವೇಶನ ನೀಡುವ ಮತ್ತು ಉಪ ಕಸಬುಗಳಿಗೆ ಉತ್ತೇಜನ ನೀಡುವ ಹಲವಾರು ಯೋಜನೆಗಳು ಜಾರಿಗೆ ಬಂದವು. ಹಿಂದುಳಿದ ವರ್ಗಗಳ ಮೀಸಲಾತಿ ಮತ್ತಿತರ ವಿಚಾರಗಳನ್ನು ಪರಿಶೀಲಿಸಿ ಸಲಹೆ ಮಾಡಲು ನ್ಯಾಯವಾದಿ ಎಲ್.ಜಿ. ಹಾವನೂರ್ ಅವರ ಅಧ್ಯಕ್ಷತೆಯಲ್ಲಿ 1972ರಲ್ಲಿ ಒಂದು ಸಮಿತಿ ರಚಿಸಲಾಯಿತು. ಈ ಸಮಿತಿ 1975ರಲ್ಲಿ ಸರ್ಕಾರಕ್ಕೆ ವರದಿ ಸಲ್ಲಿಸಿತು.

ಈ ವರದಿಯಲ್ಲಿ ವಿವಿಧ ಬ್ರಾಹ್ಮಣೇತರ ವರ್ಗಗಳನ್ನು ಮೀಸಲಾತಿಯಿಂದ ಕೈಬಿಡಲಾಗಿತ್ತು. ಅವುಗಳಲ್ಲಿ ಲಿಂಗಾಯತ ಅಥವಾ ವೀರಶೈವ, ಜೈನ, ಬಂಟ, ಕ್ರೈಸ್ತ, ಅರಸು ಮತ್ತಿತರ ಸಮುದಾಯಗಳು ಮುಖ್ಯವಾಗಿದ್ದವು. ಈ ವರ್ಗಗಳಿಂದ ಬರಬಹುದಾದ ಪ್ರತಿಭಟನೆಯ ಬಗ್ಗೆ ಆತಂಕಗೊಂಡ ಸರ್ಕಾರ ವರದಿಯ ಅನುಷ್ಠಾನವನ್ನು ಸ್ವಲ್ಪಕಾಲ ಮುಂದೂಡಿತು. ಮುಂದೆ ರಾಷ್ಟ್ರದಲ್ಲಿ ತುರ್ತುಸ್ಥಿತಿ ಜಾರಿಗೆ ಬಂದು ಸರ್ಕಾರ ಹೆಚ್ಚು ಪ್ರಬಲವಾದಾಗ ದೇವರಾಜ ಅರಸು ಅವರು ಈ ವರದಿಯ ಅನುಷ್ಠಾನಕ್ಕೆ ಧೈರ್ಯ ತೋರಿದರು. ಸರ್ಕಾರ 1977 ಫೆಬ್ರವರಿ 22ರಂದು ಈ ವರದಿಯನ್ನು ಅಂಗೀಕರಿಸಿ ಆದೇಶ ಹೊರಡಿಸಿತು. ಅದರಲ್ಲಿ ವಿವಿಧ ಹಿಂದುಳಿದ ವರ್ಗಗಳನ್ನು ಮೂರು ಗುಂಪುಗಳಲ್ಲಿ ವಿಂಗಡಿಸಲಾಗಿತ್ತು. (1) ಹಿಂದುಳಿದ ಸಮುದಾಯಗಳು (ಸೇ.20); (2) ಹಿಂದುಳಿದ ಜಾತಿಗಳು (ಸೇ.10); (3) ಹಿಂದುಳಿದ ಪಂಗಡಗಳು (ಸೇ.5). ಇವುಗಳ ಜೊತೆಗೆ ಮುಂದುವರಿದವೆಂದು ಪರಿಗಣಿತವಾದ ವಿವಿಧ ಸಮುದಾಯಗಳ ಬಡವರನ್ನು ವಿಶೇಷ ಗುಂಪೆಂದು ಪರಿಗಣಿಸಿ ಅವುಗಳಿಗೆ ಸೇ.5ರಷ್ಟು ಮೀಸಲಾತಿಯನ್ನು ನೀಡಲಾಯಿತು. ಈ ಎಲ್ಲ ವರ್ಗಗಳ ಹಿಂದುಳಿದ ಜಾತಿ ಮತ್ತು ಸಮುದಾಯಗಳ ವ್ಯಕ್ತಿಗಳಿಗೆ ಮೀಸಲಾತಿ ಸೌಲಭ್ಯ ಪಡೆಯಲು ವಾರ್ಷಿಕ 10,000 ರೂಪಾಯಿಗಳ ಆದಾಯ ಮಿತಿಯನ್ನು ವಿಧಿಸಲಾಯಿತು. ಈ ವರದಿ ಹಿಂದುಳಿದ ವರ್ಗಗಳ ಆಯೋಗಗಳಲ್ಲಿ ಮಾತೃಸ್ಥಾನ ಪಡೆದಿದೆ. ಈ ಆಯೋಗದ ಮಾರ್ಗದರ್ಶಿ ಸಲಹೆಗಳ ಆಧಾರಗಳು ವೈಜ್ಞಾನಿಕವಾದ ಭದ್ರ ಅಂಕಿ-ಅಂಶಗಳಿಂದ ಕೂಡಿದ್ದವು. ಈ ಸಂದರ್ಭದಲ್ಲಿ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರರು ಎಂಬ ವಿಚಾರ ಪ್ರಶ್ನೆಯಾಗುಳಿಯದೆ ಹಿಂದುಳಿದ ವರ್ಗಗಳಲ್ಲಿ ಯಾರನ್ನು ಮೀಸಲಾತಿಯಿಂದ ಕೈಬಿಡಬೇಕು ಮತ್ತು ಯಾರನ್ನು ಸೇರಿಸಬೇಕು ಎಂಬ ಪ್ರಶ್ನೆ ಬೃಹದಾಕಾರ ಪಡೆಯಿತು. ಯಾವುದೇ ಮಾನದಂಡದಿಂದ ನೋಡಿದರೂ ಒಂದು ಸಮುದಾಯದಲ್ಲಿ ಹಿಂದುಳಿದ ವ್ಯಕ್ತಿಗಳ ಸಮೂಹ ಇದ್ದೇ ಇರುತ್ತಿತ್ತು. ಮುಖ್ಯಮಂತ್ರಿ ದೇವರಾಜ ಅರಸರಿಗೆ ತಮ್ಮ ಅರಸು ಸಮುದಾಯವನ್ನು ಹಿಂದುಳಿದ ಪಟ್ಟಿಯಿಂದ ಹಾವನೂರ್ ಆಯೋಗ ಕೈಬಿಟ್ಟಿದ್ದು ಸರಿಕಾಣಲಿಲ್ಲ. ಕೆಲವು ಕೈ ಬಿಟ್ಟ ಜನಾಂಗಗಳೊಡನೆ ಅರಸು ಸಮುದಾಯವನ್ನು ಸೇರಿಸಿ ಅರಸು ಸರ್ಕಾರ ಮೀಸಲಾತಿ ಆದೇಶ ಹೊರಡಿಸಿತು.

ಯಥಾಪ್ರಕಾರ ಹಾವನೂರು ಆಯೋಗದ ವರದಿಯನ್ನು ಆಧರಿಸಿದ ಸರ್ಕಾರಿ ಆದೇಶವೂ ನ್ಯಾಯಾಲಯದಲ್ಲಿ ಪ್ರಶ್ನಿಸಲ್ಪಟ್ಟಿತ್ತು. ನ್ಯಾಯಾಲಯ ಹೊಸದಾಗಿ ಸರ್ಕಾರದಿಂದ ಸೇರಿಸಲಾದ ಸಮುದಾಯಗಳನ್ನು ಅನೂರ್ಜಿತಗೊಳಿಸಿತು. 1979ರಲ್ಲಿ ಈ ಸಂಬಂಧವಾದ ಮರು ಆದೇಶವನ್ನು ಸರ್ಕಾರ ಹೊರಡಿಸಿತು. ಇಡೀ ಹಿಂದುಳಿದ ವರ್ಗಗಳಿಗೆ ಸೇ.50ರಷ್ಟಕ್ಕೆ ಮೀರದಂತೆ ಮೀಸಲಾತಿಯನ್ನು ನಿಗದಿಪಡಿಸಲಾಯಿತು. ಅದರಲ್ಲಿ ಸೇ.5ರಷ್ಟು ಮೀಸಲಾತಿ ಪಡೆದಿದ್ದ ವಿಶೇಷ ಗುಂಪಿಗೆ ಮೀಸಲಾತಿಯನ್ನು ಸೇ.15ಕ್ಕೆ ಹೆಚ್ಚಿಸಲಾಯಿತು.

**ವೆಂಕಟಸ್ವಾಮಿ ಆಯೋಗ :** ಹಿಂದುಳಿದ ವರ್ಗಗಳ ಮೀಸಲಾತಿ ಪ್ರಶ್ನೆ ಸರ್ವೋಚ್ಚ ನ್ಯಾಯಾಲಯದ ಮೆಟ್ಟಿಲು ಹತ್ತಿತ್ತು. ಅಲ್ಲಿ ತೋರಿಬಂದ ಕೆಲವು ನ್ಯೂನತೆಗಳ ಸಂಬಂಧವಾಗಿ ಕರ್ನಾಟಕ ಸರ್ಕಾರ ನ್ಯಾಯಾಲಯಕ್ಕೆ ಒಂದು ದೃಢೀಕರಣ ಪತ್ರ ನೀಡಿ ಇನ್ನೊಂದು ಹಿಂದುಳಿದ ವರ್ಗಗಳ ಆಯೋಗವನ್ನು ರಚಿಸಲು ತಾನು ಬದ್ಧವಿರುವುದಾಗಿ ತಿಳಿಸಿತು. 1983ರಲ್ಲಿ ರಾಮಕೃಷ್ಣಹೆಗ್ಗಡೆಯವರ ನೇತೃತ್ವದ ಜನತಾ ಸರ್ಕಾರ ಅಧಿಕಾರಕ್ಕೆ ಬಂದಾಗ ವೆಂಕಟಸ್ವಾಮಿ ಅವರ ಅಧ್ಯಕ್ಷತೆಯ ಎರಡನೆಯ ಹಿಂದುಳಿದ ಆಯೋಗ ಅಸ್ತಿತ್ವಕ್ಕೆ ಬಂದಿತು. ಅದು 17 ವಿವಿಧ ಸೂಚಕಗಳನ್ನು ಪರಿಶೀಲಿಸಿ ವಿವಿಧ ಹಿಂದುಳಿದ ವರ್ಗಗಳಿಗೆ ಸಲ್ಲಬೇಕಾದ ಮೀಸಲಾತಿಯ ಪ್ರಮಾಣವನ್ನು ನಿರ್ಧರಿಸಿ 1986ರಲ್ಲಿ ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು. ಈ ವರದಿಯಲ್ಲಿ ಕೆಲವು ಸಮುದಾಯಗಳನ್ನು ಮೀಸಲಾತಿಯಿಂದ ಕೈಬಿಟ್ಟಿದ್ದರಿಂದ ಉಂಟಾದ ರಾಜಕೀಯ ಒತ್ತಡಕ್ಕೆ ಮಣಿದ ಸರ್ಕಾರ ಕೆಲವು ಕಾರಣಗಳನ್ನು ನೀಡಿ ಈ ಆಯೋಗದ ವರದಿಯನ್ನು ತಿರಸ್ಕರಿಸಿತು.

ಈ ನಡುವೆ ಸರ್ಕಾರ 1986ರ ಅಕ್ಟೋಬರ್ ತಿಂಗಳಲ್ಲಿ ಮೀಸಲಾತಿಗೆ ಸಂಬಂಧಿಸಿದಂತೆ ಒಂದು ಮಧ್ಯಂತರ ಆಜ್ಞೆಯನ್ನು ಹೊರಡಿಸಿತು. ಅದರ ಪ್ರಕಾರ 'ಎ', 'ಬಿ', 'ಸಿ', 'ಡಿ' ಮತ್ತು 'ಈ' ಗುಂಪುಗಳಾಗಿ ಹಿಂದುಳಿದವರನ್ನು ವಿಂಗಡಿಸಲಾಯಿತು. ಕೊನೆಯದು ಹಿಂದಿನಂತೆ ವಿಶೇಷ ಗುಂಪಾಗಿ ಪರಿಗಣಿತವಾಯಿತು. ಹಾವನೂರು ಆಯೋಗದಲ್ಲಿ ಅವಕಾಶ ಪಡೆಯದಿದ್ದ ಲಿಂಗಾಯತರು ಅಥವಾ ವೀರಶೈವರು ಮತ್ತಿತರರೂ ಇದರಲ್ಲಿ ಅವಕಾಶ ಪಡೆದದ್ದು ಗಮನಾರ್ಹವಾಗಿತ್ತು. 'ಎ' ಗುಂಪಿಗೆ ಆದಾಯ ಮಿತಿಯ ನಿರ್ಬಂಧ ತೆಗೆದು ಹಾಕಲಾಯಿತು.

**ಚಿನ್ನಪ್ಪರೆಡ್ಡಿ ಆಯೋಗ :** ಹಿಂದುಳಿದ ವರ್ಗಗಳ ಮೀಸಲಾತಿಯ ಬಗ್ಗೆ ಎಷ್ಟೇ ಭಿನ್ನಾಭಿಪ್ರಾಯಗಳು ಉದ್ಭವಿಸಿದರೂ ಆಯೋಗಗಳಿಗೆ ಪುನರಪಿ ಮರಣ ಪುನರಪಿ ಜನನದ ಅವಸ್ಥೆ ತಪ್ಪಲಿಲ್ಲ. ಮತ್ತೆ ಕರ್ನಾಟಕ ಸರ್ಕಾರ ಚಿನ್ನಪ್ಪರೆಡ್ಡಿಯವರ ನೇತೃತ್ವದಲ್ಲಿ ಮೂರನೆಯ ಹಿಂದುಳಿದ ವರ್ಗಗಳ ಆಯೋಗವನ್ನು ರಚಿಸಿತು. ಈ ಆಯೋಗ ಹಿಂದುಳಿದ ವರ್ಗಗಳನ್ನು ಕುರಿತು ಸಮಗ್ರ ಅಭಿವೃದ್ಧಿಯನ್ನು ದೃಷ್ಟಿಯಲ್ಲಿರಿಸಿಕೊಂಡು ಪರಿಶೀಲನೆ ನಡೆಸಿತು. ಈ ಆಯೋಗ 1960ರ ದಶಕದಲ್ಲಿದ್ದಂತೆ ಅತ್ಯಂತ ಹಿಂದುಳಿದವರು, ಅತಿ ಹಿಂದುಳಿದವರು ಮತ್ತು ಹಿಂದುಳಿದವರು ಎಂಬ ದೃಷ್ಟಿಕೋನವನ್ನು ಇಟ್ಟುಕೊಂಡು ಈ ವರ್ಗಗಳನ್ನು ವಿಭಜಿಸಿ ಪ್ರಮಾಣಾನುಗುಣವಾಗಿ ಮೀಸಲಾತಿಯನ್ನು ನಿಗದಿಪಡಿಸಿತು. ಆ ಪ್ರಕಾರ ಇಡೀ ವರ್ಗವನ್ನು ಒಟ್ಟು ನಾಲ್ಕು ಗುಂಪುಗಳಾಗಿ ವಿಂಗಡಿಸಿತು. ಗರಿಷ್ಠ ಸೇ.50ರಷ್ಟು ಮೀಸಲಾತಿ ನಿಗದಿಪಡಿಸಿತು. ಜೊತೆಗೆ ವಿವಿಧ ಕ್ಷೇತ್ರಗಳಲ್ಲಿ ವೃತ್ತಿ ನಡೆಸುವ ಹಿಂದುಳಿದವರಿಗೆ ಹೇಗೆ ಸರ್ಕಾರ ನೆರವಾಗಬೇಕೆಂಬ ಬಗ್ಗೆಯೂ ಯೋಜನೆ ಹಾಕಿಕೊಟ್ಟಿತು. ಹಿಂದುಳಿದ ವರ್ಗಗಳ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಬೇಕಾದದ್ದು ಸರ್ಕಾರದ ಆದ್ಯ ಕರ್ತವ್ಯವೆಂದು ಸಲಹೆ ಮಾಡಿತು.

ಈ ಆಯೋಗದ ವರದಿಯನ್ನು 1990ರ ಏಪ್ರಿಲ್‌ನಲ್ಲಿ ಸರ್ಕಾರಕ್ಕೆ ಸಲ್ಲಿಸಲಾಯಿತು. 1992ರಲ್ಲಿ ಕೇಂದ್ರ ಸರ್ಕಾರ ಹಿಂದುಳಿದ ವರ್ಗಗಳನ್ನು ಕುರಿತು ವರದಿ ಸಲ್ಲಿಸಲು ನೇಮಿಸಿದ್ದ ಮಂಡಲ್ ಆಯೋಗದ ವರದಿಗೆ ಸಂಬಂಧಿಸಿದಂತೆ ಸರ್ವೋಚ್ಚ ನ್ಯಾಯಾಲಯ ಒಂದು ತೀರ್ಪು ನೀಡಿತು. ಅದನ್ನು ಅನುಸರಿಸಿ 1993ರಲ್ಲಿ ಕೇಂದ್ರ ಸರ್ಕಾರ ಒಂದು ಪರಿಷ್ಕೃತ ಆದೇಶ ಹೊರಡಿಸಿತು. ಅನುಸೂಚಿತ ಜಾತಿ ಮತ್ತು ಪಂಗಡಗಳಿಗೆ ನೀಡುವ ಮೀಸಲಾತಿಯೂ ಸೇರಿದಂತೆ ಯಾವುದೇ ಮೀಸಲಾತಿಯೂ ಸೇ.50ಕ್ಕೆ

ಮೀರಬಾರದೆಂಬುದು ನ್ಯಾಯಾಲಯದ ನಿರ್ದೇಶನವಾಗಿತ್ತು. ಜೊತೆಗೆ ರಾಜ್ಯ ಸರ್ಕಾರದ ಚಿನ್ನಪ್ಪರೆಡ್ಡಿ ಆಯೋಗ ಹಿಂದುಳಿದವರ ಪಟ್ಟಿಯಿಂದ ಕೈಬಿಟ್ಟಿದ್ದ ಕೆಲವು ಸಮುದಾಯಗಳನ್ನು ಮಂಡಲ್ ಆಯೋಗ ಹಿಂದುಳಿದದ್ದೆಂದು ಪರಿಗಣಿಸಿತ್ತು. ಉದಾಹರಣೆಗೆ, ಕರ್ನಾಟಕದ ಒಕ್ಕಲಿಗ ಸಮುದಾಯ. ಚಿನ್ನಪ್ಪರೆಡ್ಡಿ ಆಯೋಗದ ಅನುಷ್ಠಾನಕ್ಕೆ ಆದೇಶ ಹೊರಟಾಗ ರಾಜ್ಯದಲ್ಲಿ ವ್ಯಾಪಕ ಪ್ರತಿಭಟನೆಗಳು ಪ್ರಕಟವಾದವು. ಇದರಿಂದ ವಿಚಲಿತವಾದ ರಾಜ್ಯಸರ್ಕಾರ ಈ ವರದಿಯ ಅನುಷ್ಠಾನವನ್ನು ಹಿಂದಕ್ಕೆ ತೆಗೆದುಕೊಂಡಿತು. ಅನಂತರದಲ್ಲಿ ಮಧ್ಯಂತರ ಆದೇಶವೇ ಅಧಿಕೃತವಾಯಿತು. ಮಧ್ಯಂತರ ಆದೇಶದ ಕಲಂಗಳಿಗೆ ೨ಎ, ೨ಬಿ, ೩ಎ, ೩ಬಿ ಎಂಬ ಉಪವಿಂಗಡನೆಗಳನ್ನೂ ಮಾಡುವ ಮೂಲಕ ಕೆಲವು ಸುದಾಯಗಳಿಗೆ ನಿರ್ದಿಷ್ಟ ಪ್ರಮಾಣದ ಮೀಸಲಾತಿ ನಿಗದಿಪಡಿಸಲಾಗಿದೆ. ಪ್ರತಿಯೊಂದು ಸಮುದಾಯಕ್ಕೂ ಮೀಸಲಾತಿಯ ಸೌಲಭ್ಯ ಒದಗಿಸುವುದೇ ಈ ಒಳವಿಂಗಡನೆಯ ಉದ್ದೇಶ. ಆದರೆ ಹಿಂದುಳಿದ ವರ್ಗಗಳ ವಿಷಯ ಮತ್ತು ವಿಚಾರ ಸದಾ ಪರಿಶೀಲನೆಗೆ ಅರ್ಹವಾದುವೆಂದೂ ಅವುಗಳಿಗೆ ನೀಡಬೇಕಾದ ಸೌಲಭ್ಯಗಳು ಸದಾ ವೀಕ್ಷಣೆಗೆ ಒಳಪಡಬೇಕೆಂದೂ ಸಾರ್ವಜನಿಕ ಅಭಿಪ್ರಾಯ ರೂಪಿತವಾಯಿತು. ಇದನ್ನನುಸರಿಸಿ ಸರ್ಕಾರ 1994ರಲ್ಲಿ ಹಿಂದುಳಿದ ವರ್ಗಗಳ ಖಾಯಂ ಆಯೋಗ ರಚನೆಗೆ ಕ್ರಮಕೈಗೊಂಡಿತು. ಹೀಗೆ ರಚಿತವಾದ ಖಾಯಂ ಆಯೋಗದ ಮೊದಲ ಅಧ್ಯಕ್ಷರು ನಿವೃತ್ತ ನ್ಯಾಯಾಧೀಶರಾಗಿದ್ದ ಕುದೂರು ನಾರಾಯಣಪೈಗಳು.

ಇಪ್ಪತ್ತನೆಯ ಶತಮಾನ ಹಿಂದುಳಿದ ವರ್ಗಗಳ ಜಾಗೃತಿಯ ಶತಮಾನ. ದೀರ್ಘ ಕಾಲದ ಹೋರಾಟ ಮತ್ತು ಪ್ರಜಾಪ್ರಭುತ್ವ ಸರ್ಕಾರಗಳ ಕಾಳಜಿಯ ಫಲವಾಗಿ ಹಿಂದುಳಿದ ವರ್ಗಗಳಿಗೆ ಮೀಸಲಾತಿಯೂ ಸೇರಿದಂತೆ ವಿವಿಧ ಅಭಿವೃದ್ಧಿ ಸವಲತ್ತುಗಳು ಜಾರಿಗೆ ಬಂದಿವೆ. ಸರ್ಕಾರ ಹಿಂದುಳಿದ ವರ್ಗಗಳ ಕುಂದುಕೊರತೆಗಳನ್ನು ಗಮನಿಸಿ ಸೌಲಭ್ಯ ಕಲ್ಪಿಸಲು ಒಂದು ಇಲಾಖೆಯನ್ನೇ ತೆರೆದಿದೆ. ಈ ವರ್ಗಗಳ ಹಣಕಾಸು ನೆರವಿಗಾಗಿ ಹಣಕಾಸು ಕಾರ್ಪೋರೇಷನ್ ರಚಿತವಾಗಿದೆ. ಸಾಮಾಜಿಕ ನ್ಯಾಯದ ಪರಿಕಲ್ಪನೆಯಲ್ಲಿ ಈ ಮೇಲಿನ ಆಯೋಗಗಳ ಕೊಡುಗೆ ಅಪಾರವಾದದ್ದೂ ಬೆಲೆಯುಳ್ಳದ್ದೂ ಆಗಿರುವುದು ಗಮನಾರ್ಹ ವಿಚಾರವಾಗಿದೆ. (ಡಿ.ಎಸ್.ಜೆ.)

**ಕರ್ಪೂರ ಶ್ರೀನಿವಾಸರಾವ್ :** 1863-1932. ವೃತ್ತಿಯಲ್ಲಿ ಎಂಜಿನಿಯರ್ ಆಗಿದ್ದರೂ ಪ್ರವೃತ್ತಿಯಲ್ಲಿ ಸಾಹಿತ್ಯ ಪ್ರೇಮಿಗಳಾಗಿ ಕನ್ನಡ ನುಡಿಯ ಅಭಿವೃದ್ಧಿಗಾಗಿ ಶ್ರಮಿಸಿದವರು. ಕನ್ನಡ ಸಾಹಿತ್ಯ ಪರಿಷತ್ತಿನ ನಿರ್ಮಾಣಕಾರ್ಯದಲ್ಲಿ ಇವರು ವಹಿಸಿದ ಆಸಕ್ತಿ ಸ್ಮರಣೀಯ. ಜನನ 1863. ಇವರ ತಂದೆ ಕರ್ಪೂರ ಸುಬ್ಬರಾವ್. ಇವರ ಪೂರ್ವಿಕರು ತಿರುಪತಿಯ ತಿಮ್ಮಪ್ಪನ ದರ್ಶನಕ್ಕೆ ಮೊದಲು ಹೋದಾಗ, ಬೆಟ್ಟದ ಅಡಿಯಿಂದ ಮುಡಿಯವರೆಗೂ ಉಂಡುಂಡೆ ಕರ್ಪೂರವನ್ನು ಉರಿಸಿದ್ದರಿಂದ ಇವರ ವಂಶಕ್ಕೆ ಕರ್ಪೂರ ಎಂಬ ಹೆಸರು ಬಂತಂತೆ. ಇವರದು ಶ್ರೀಮಂತ ಮನೆತನವಾಗಿದ್ದರೂ ಇವರ ತಂದೆಯವರ ಕಾಲಕ್ಕೆ ಬಹಳ ಬಡತನದಲ್ಲಿಯೇ ಇವರ ವ್ಯಾಸಂಗ ನಡೆಯಿತು. ಬೆಂಗಳೂರಿನಲ್ಲಿ ವ್ಯಾಸಂಗ ಮಾಡಿ, ಇಂಟರ್ ಪರೀಕ್ಷೆಯಲ್ಲಿ ತೇರ್ಗಡೆಯಾಗುವಷ್ಟರಲ್ಲಿ ಇವರ ತಂದೆಯವರು ತೀರಿಕೊಂಡರು. ಹೀಗಾಗಿ ಇವರು ಮುಂದಿನ ವ್ಯಾಸಂಗದ ಆಸೆಯನ್ನು ಬಿಟ್ಟು, ಪುಣೆಗೆ ಹೋಗಿ ಉದ್ಯೋಗಕ್ಕಾಗಿ ಪ್ರಯತ್ನಿಸಿದರು. ಈ ಸಮಯದಲ್ಲಿ ವಕೀಲರೊಬ್ಬರ ಪರಿಚಯವಾಯಿತು. ಆ ವಕೀಲರು ಇವರ ಪ್ರತಿಭೆಯನ್ನು ಗುರುತಿಸಿ, ಇವರ ಮುಂದಿನ ವ್ಯಾಸಂಗಕ್ಕೆ ಅನುಕೂಲ ಮಾಡಿಕೊಟ್ಟರು. ಪ್ರೋತ್ಸಾಹಗೊಂಡ ಶ್ರೀನಿವಾಸರಾಯರು ಪುಣೆಯಲ್ಲಿದ್ದು ಕೊಂಡು ಬಿ.ಎಸ್‌ಸಿ., ಎಲ್.ಸಿ.ಇ. ಪದವಿಗಳನ್ನು ಗಳಿಸಿದರು. ಮುಂಬಯಿ ಪ್ರಾಂತ್ಯದ ಮರಾಮತ್ ಇಲಾಖೆಯಲ್ಲಿ ಎಂಜಿನಿಯರ್ ಆಗಿ ಕೆಲಸಕ್ಕೆ ಸೇರಿದ ಇವರು, ಆ ಇಲಾಖೆಯಲ್ಲಿ 25 ವರ್ಷಗಳ ಕಾಲ ಸೇವೆ ಸಲ್ಲಿಸಿ, ಮುಖ್ಯ ಎಂಜಿನಿಯರ್ ಪದವಿಗೇರಿ ನಿವೃತ್ತರಾದರು. ಇವರ ವೈಜ್ಞಾನಿಕ ಪ್ರತಿಭೆ ಕಾರ್ಯದಕ್ಷತೆಗಳನ್ನು ಗುರುತಿಸಿದ ಆಗಿನ ಮೈಸೂರು ಸರ್ಕಾರ ಇವರನ್ನು ಪ್ರಧಾನ ಎಂಜಿನಿಯರ್ ಹುದ್ದೆಗೆ ನೇಮಿಸಿಕೊಂಡಿತು.



ಕರ್ಪೂರ ಶ್ರೀನಿವಾಸರಾಯರು ಧಾರ್ಮಿಕ ಸಂಪ್ರದಾಯ ಶೀಲರಾಗಿದ್ದರು. ಕನ್ನಡದ ಜೊತೆಗೆ ಸಂಸ್ಕೃತ, ಇಂಗ್ಲಿಷ್ ಮತ್ತು ಮರಾಠಿ ಭಾಷೆಗಳನ್ನು ಕಲಿತಿದ್ದರು. ಅನೇಕ ಸಾರ್ವಜನಿಕ ಸಂಘ ಸಂಸ್ಥೆಗಳೊಂದಿಗೆ ಸಂಪರ್ಕವನ್ನು ಹೊಂದಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಸು.13 ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಹಲವಾರು ಕನ್ನಡ ಸಂಘ ಸಂಸ್ಥೆಗಳಿಗೆ ಮತ್ತು ಕನ್ನಡ ಲೇಖಕರಿಗೆ ಇವರು ಆರ್ಥಿಕ ನೆರವನ್ನು ನೀಡಿದ್ದರು.

ಗಾಂಧೀಜಿ ಅವರ ಸ್ವಾತಂತ್ರ್ಯ ಚಳವಳಿಯಿಂದ ಪ್ರಭಾವಿತರಾಗಿದ್ದ ಶ್ರೀನಿವಾಸರಾಯರು ಖಾದಿ ಭಕ್ತರಾಗಿದ್ದರು. ಸ್ವಾತಂತ್ರ್ಯ ಚಳವಳಿಯಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸದಿದ್ದರೂ ಪರೋಕ್ಷವಾಗಿ ಬೆಂಬಲ ಕೊಟ್ಟಿದ್ದರು. ಇವರ ಸಾರ್ವಜನಿಕ ಸೇವೆಯನ್ನು ಗಮನಿಸಿ ಆಗಿನ ಮೈಸೂರು ಮಹಾರಾಜರು ರಾಜಸಭಾಭೂಷಣ ಎಂಬ ಬಿರುದನ್ನು ಕೊಟ್ಟು ಗೌರವಿಸಿದ್ದರು. ಹಾಸನದಲ್ಲಿ 1919ರಲ್ಲಿ ನಡೆದ 5ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಇವರನ್ನು ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಲಾಯಿತು. ಬೇರೆ ಬೇರೆ ಭಾಷೆಗಳ ಅಭ್ಯಾಸದಿಂದ ಕನ್ನಡವನ್ನು ಶ್ರೀಮಂತಗೊಳಿಸಬೇಕು; ಕನ್ನಡದಲ್ಲಿ ಉತ್ತಮ ಗ್ರಂಥಗಳು ಹೆಚ್ಚಿನ ಸಂಖ್ಯೆಯಲ್ಲಿ ಪ್ರಕಟವಾಗಬೇಕು- ಎಂಬುದು ಇವರ ಹೆಬ್ಬಯಕೆಯಾಗಿತ್ತು.

ಇವರು ನಿಧನರಾದ (1932 ಜೂನ್ 2) ತರುವಾಯ ಕಾವ್ಯ ಸಂಬಂಧವಾದ ಶಾಸ್ತ್ರೀಯ ವಿಚಾರಗಳನ್ನು ಕುರಿತು ಇವರು ಬರೆದಿದ್ದ ಲೇಖನಗಳನ್ನು ಸಂಪಾದಿಸಿ ಸಾಹಿತ್ಯ ಶಾಸ್ತ್ರ (1971) ಎಂಬ ಹೆಸರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಪುಸ್ತಕರೂಪದಲ್ಲಿ ಪ್ರಕಟಿಸಿದೆ. *

**ಕರ್ಮವೀರ :** ಹುಬ್ಬಳ್ಳಿಯಿಂದ ಪ್ರಕಟವಾಗುತ್ತಿರುವ ಸಚಿತ್ರ ವಾರ ಪತ್ರಿಕೆ. ರಾಷ್ಟ್ರದ ಸ್ವಾತಂತ್ರ್ಯ ಮತ್ತು ಕರ್ನಾಟಕ ಏಕೀಕರಣಗಳನ್ನು ಗುರಿಯಾಗಿಟ್ಟುಕೊಂಡು 1929 ಫೆಬ್ರವರಿ 11ರಂದು ಪ್ರಾರಂಭ ವಾಯಿತು. ರಂಗನಾಥರಾಮ ಚಂದ್ರದಿವಾಕರ, ರಾಮರಾವ್ ಹುಕ್ಕೇರಿಕರ ಮತ್ತು ಕಬ್ಬೂರ ಮಧ್ವರಾಯರು ಪತ್ರಿಕೆಯ ಸಂಸ್ಥಾಪಕರು. ಪ್ರಾರಂಭದಲ್ಲಿ ದಿವಾಕರರು ಸಂಪಾದಕ ರಾಗಿಯೂ ಹುಕ್ಕೇರಿಕರರು ಪ್ರಕಾಶಕರಾಗಿಯೂ ಮಧ್ವ ರಾಯರು ಮುದ್ರಕರಾಗಿಯೂ ಕೆಲಸ ನಿರ್ವಹಿಸುತ್ತಿದ್ದರು. ದಿವಾಕರರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ಬಂಧನಕ್ಕೊಳಗಾದಾಗ ಹುಕ್ಕೇರಿಕರ ರಾಮರಾಯರೂ ಆಲೂರು ವೆಂಕಟರಾಯರೂ ಸಂಪಾದಕರಾಗಿದ್ದರು. ಆಲೂರು ವೆಂಕಟರಾಯರು ಬರೆದ ಭೂರಕ್ಕಸಾಯ ಸ್ವಾಹಾ ಎಂಬ ಅಗ್ರ ಲೇಖನ ಆಗಿನ ಸರ್ಕಾರವನ್ನು ಕೆರಳಿಸಿತು. ಲಾವಣಿಯೊಂದನ್ನು ಮುದ್ರಿಸಿದ್ದಕ್ಕೆ ದಿವಾಕರರು ಶಿಕ್ಷೆ ಅನುಭವಿಸಿದರು. 1932ರಲ್ಲಿ ಪತ್ರಿಕೆಯನ್ನು ನಿಲ್ಲಿಸಿ ಮತ್ತೆ 1935ರಲ್ಲಿ ಪ್ರಾರಂಭಿಸಿದರೂ ಕೆಲವೇ ತಿಂಗಳಲ್ಲಿ ಸರ್ಕಾರದ ಆಗ್ರಹಕ್ಕೆ ತುತ್ತಾಗಿ ಪ್ರಕಟಣೆ ನಿಂತಿತು.



ಹ.ರಾ.ಪುರೋಹಿತರ ಸಂಪಾದಕತ್ವದಲ್ಲಿ ಪತ್ರಿಕೆ 1940ರಲ್ಲಿ ಮತ್ತೆ ಪ್ರಾರಂಭವಾಗಿ ಅಭಿವೃದ್ಧಿ ಹೊಂದಿತು. 1968ರಲ್ಲಿ ದಿವಾಕರರು ಮತ್ತೆ ಸಂಪಾದಕತ್ವ ವಹಿಸಿಕೊಂಡರು. ಮೊಹರೆ ಹಣಮಂತರಾಯರು ಮುದ್ರಕ ಪ್ರಕಾಶಕರಾಗಿ,ಲೇಖಕರಾಗಿ ಪತ್ರಿಕೆಯ ಬೆಳವಣಿಗೆಗೆ ದುಡಿದರು. ಈ ಪತ್ರಿಕೆಯಲ್ಲಿ ಅನೇಕ ಹಿರಿಯ ಸಾಹಿತಿಗಳ, ವಿದ್ವಾಂಸರ ಮತ್ತು ಲೇಖಕರ ಲೇಖನಗಳು ಪ್ರಕಟವಾಗಿ ರಾಷ್ಟ್ರಾಭಿಮಾನದ ಪ್ರಜ್ಞೆಗೆ ಸಹಕಾರಿಯಾದವು. ಸ್ವಲ್ಪ ಕಾಲ ಗಾಂಧಿಯವರ ಹರಿಜನದ ಪುರವಣಿಯನ್ನು ಕನ್ನಡದಲ್ಲಿ ಪ್ರಕಟಿಸುತ್ತಿತ್ತು.ಎಳೆಯರ ಬಳಗ, ಮಹಿಳಾ ಪ್ರಪಂಚ ವಿಭಾಗಗಳನ್ನು ಪ್ರಥಮವಾಗಿ ಈ ಪತ್ರಿಕೆ ತೆರೆಯಿತು. ದೀಪಾವಳಿ ವಿಶೇಷ ಸಂಚಿಕೆಗಳನ್ನು ತರುತ್ತಿದೆ. ಧರ್ಮ, ರಾಜಕೀಯ, ಅರ್ಥಶಾಸ್ತ್ರ, ವಿಜ್ಞಾನ, ಕಥೆ, ಸಾಹಿತ್ಯ ವಿಮರ್ಶೆ, ಪ್ರಶ್ನೋತ್ತರ ವಿಭಾಗ, ಚಲನಚಿತ್ರ, ಕ್ರೀಡಾ ವಿಭಾಗಗಳಿಂದ ಪತ್ರಿಕೆ ಆಕರ್ಷಣೀಯವಾಗಿದೆ. (ಎಸ್.ವಿ.ಪಿ.)

**ಕಲಘಟಗಿ :** ಧಾರವಾಡ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಧಾರವಾಡ ಉಪವಿಭಾಗಕ್ಕೆ ಸೇರಿದ ಒಂದು ತಾಲ್ಲೂಕು, ಅದರ ಮುಖ್ಯ ಸ್ಥಳ. ಪಶ್ಚಿಮ ಮತ್ತು ದಕ್ಷಿಣದಲ್ಲಿ ಉತ್ತರ ಕನ್ನಡ ಜಿಲ್ಲೆ, ಉತ್ತರದಲ್ಲಿ ಧಾರವಾಡ ತಾಲ್ಲೂಕು, ಪೂರ್ವದಲ್ಲಿ ಹುಬ್ಬಳ್ಳಿ ಮತ್ತು ಹಾವೇರಿ ಜಿಲ್ಲೆಯ ಶಿಗ್ಗಾಂವಿ ತಾಲ್ಲೂಕುಗಳು ಈ ತಾಲ್ಲೂಕನ್ನು ಬಳಸಿವೆ. ತಾಲ್ಲೂಕಿನ ವಿಸ್ತೀರ್ಣ 670ಚ.ಕಿಮೀ, ಜನಸಂಖ್ಯೆ 1,36,978. ಕಲಘಟಗಿ, ಧುಮ್ಮವಾಡ, ತಬಕದ ಹೊನ್ನಳ್ಳಿ-ಇವು ಹೋಬಳಿಗಳು. ಒಟ್ಟು ಗ್ರಾಮಗಳು 127.



ಮರದಿಂದ ತಯಾರಿಸಿದ ಆಕರ್ಷಕ ಕಲಘಟಗಿ ಬಣ್ಣದ ತೊಟ್ಟಿಲು

ತಾಲ್ಲೂಕಿನ ಬಹುಭಾಗ ಹೆಚ್ಚು ಎತ್ತರವಲ್ಲದ ಅನೇಕ ಗಿರಿ ಪಂಕ್ತಿಗಳಿಂದ ಕೂಡಿದೆ. ಧಾರವಾಡದಿಂದ ಕಲಘಟಗಿಯತ್ತ ಹಬ್ಬಿರುವ ಬೂದನಗುಡ್ಡ ಶ್ರೇಣಿ ಇಂತಹ ಪಂಕ್ತಿಗಳಲ್ಲೊಂದು. ಧಾರವಾಡಶಿಲಾ ಪ್ರಕಾರದ ಶಿಲೆಗಳು ಮತ್ತು ಹಲವು ಉತ್ಕರ್ಷಿತ ಅಗ್ನಿಶಿಲೆಗಳು ಈ ಭಾಗದ ಮೂಲ ಅರೆಗಳಾಗಿವೆ. ಅಲ್ಲಲ್ಲಿ ಜಂಬಿಟ್ಟಿಗೆ ಕಲ್ಲು ಇದೆ. ಗಿರಿಶ್ರೇಣಿಗಳ ನಡುವೆ ಸ್ವಲ್ಪಮಟ್ಟಿನ ಮಟ್ಟಸ ಕಣಿವೆಗಳಿವೆ. ಭೂಮಿ ಆಗ್ನೇಯದತ್ತ ಇಳಿಜಾರಾಗಿದೆ. ತಾಲ್ಲೂಕಿನ ಪಶ್ಚಿಮದಂಚಿನಲ್ಲಿರುವ ತಟ್ಟಿಹಳ್ಳ ಮತ್ತು ಸುಮಾರು ಮಧ್ಯಭಾಗದಲ್ಲಿರುವ ಬೇಡ್ತಿ ಹೊಳೆ ನೈಋತ್ಯಾಭಿಮುಖವಾಗಿ ಹರಿಯುತ್ತವೆ.

ಇದು ಮಲೆನಾಡಿನ ಅಂಚಿನಲ್ಲಿರುವುದರಿಂದ ಈ ಜಿಲ್ಲೆಯ ಇತರ ಭಾಗಕ್ಕಿಂತ ಇಲ್ಲಿ ಸಾಮಾನ್ಯವಾಗಿ ಮಳೆ ಹೆಚ್ಚು. ವಾರ್ಷಿಕ ಸರಾಸರಿ 95ಮಿಮೀ. ಇಲ್ಲಿಯದು ಕಂದು ಬಣ್ಣ ಮಿಶ್ರವಾದ ಮಸಾರಿ ಭೂಮಿ. ಕೃಷಿ ಇಲ್ಲಿಯ ಮುಖ್ಯ ಕಸಬು. ಬತ್ತ ಮುಖ್ಯ ಬೆಳೆ. ಇತರ ಕಸಬುಗಳಲ್ಲೂ ಕೈಗಾರಿಕೆಗಳಲ್ಲೂ ತೊಡಗಿದವರು ಕಡಿಮೆ. *

ಕಲಘಟಗಿ ಈ ತಾಲ್ಲೂಕಿನ ಆಡಳಿತ ಕೇಂದ್ರ. ಹುಬ್ಬಳ್ಳಿಯಿಂದ 27ಕಿಮೀ ಅಂತರದಲ್ಲಿ ಹುಬ್ಬಳ್ಳಿ ಧಾರವಾಡಗಳಿಂದ ಕಾರವಾರಕ್ಕೆ ಹೋಗುವ ಹೆದ್ದಾರಿಯ ಮೇಲೆ ಇದೆ. ಜನಸಂಖ್ಯೆ 14,676. ಅಕ್ಕಿ ಗಿರಣಿ ಇಲ್ಲಿಯ ಒಂದು ಮುಖ್ಯ ಉದ್ಯಮ. ಕಲಘಟಗಿಯ ಅಕ್ಕಿ ರುಚಿಗೆ ಬಲು ಹೆಸರುವಾಸಿ. ಆದ್ದರಿಂದ ಅದಕ್ಕೆ ಬಹಳ ಬೇಡಿಕೆ ಇದೆ. ಹಿಂದೆ ಅಕ್ಕಿಯನ್ನು ಬಹಳ ದೂರದ ಪ್ರದೇಶಗಳಿಗೆ ರವಾನಿಸಲಾಗುತ್ತಿತ್ತು. ಈಗ ಅವಲಕ್ಕಿ, ಚುರಮುರಿಗಳನ್ನು ತಯಾರಿಸುವರು. ಅರಣ್ಯ ಸಮೀಪವಾಗಿರುವುದರಿಂದ ಮರದ, ಬಿದಿರಿನ ಸರಕುಗಳನ್ನು ಇಲ್ಲಿ ತಯಾರಿಸುವರು. ಕಲಘಟಗಿಯ ಬಣ್ಣದ ಮರದ ತೊಟ್ಟಿಲುಗಳು ಒಂದು ಕಾಲಕ್ಕೆ ತುಂಬ ಪ್ರಸಿದ್ಧವಾಗಿದ್ದವು. ಆದರೆ ಈಗ ಈ ಕೈಗಾರಿಕೆ ಅಷ್ಟಾಗಿ ನಡೆಯದಿದ್ದರೂ ಮೊದಲಿನ ಹೆಸರನ್ನು ಉಳಿಸಿಕೊಂಡಿದೆ. ಗುರುವಾರ ಸ್ಥಾನಿಕ ಸಂತೆ ಜರಗುತ್ತದೆ.

ಇದೊಂದು ಇತಿಹಾಸ ಪ್ರಸಿದ್ಧಸ್ಥಳ. ಇಲ್ಲಿ ಐದು ಶಿಲಾಶಾಸನಗಳು ದೊರೆತಿವೆ. ಅವುಗಳಲ್ಲಿ ಅತ್ಯಂತ ಪ್ರಾಚೀನವಾದದ್ದು ಆರನೆಯ ವಿಕ್ರಮಾದಿತ್ಯನಿಗೆ (1077-1127) ಸೇರಿದ್ದು. ಮರಾಠರ ಕಾಲದಲ್ಲಿ ಇದು ಸಾಮಂತರ ಕೇಂದ್ರವಾಗಿತ್ತು. ಕಲಘಟಗಿಯಲ್ಲಿ 18ನೆಯ ಶತಮಾನದ ಮುಸ್ಲಿಂ ಸಂತ ರುಸ್ತುಂ ಶಹೀದನ ಗೋರಿಯಿದೆ. ಪ್ರತಿ ವರ್ಷ ಯುಗಾದಿಯ ಅನಂತರ ಇಲ್ಲಿ ಉರುಸು ನಡೆಯುತ್ತದೆ.

ಕಲಘಟಗಿಯಿಂದ ಸು.10ಕಿಮೀ ವಾಯವ್ಯಕ್ಕಿರುವ ಕಾಮಧೇನು ಎಂಬ ಗ್ರಾಮದಲ್ಲಿ ಹಲವು ಪೌರಾಣಿಕ ಶಿಲ್ಪಗಳಿರುವ, ಕರಿ ಕಣಶಿಲೆಯಲ್ಲಿ ಕಟ್ಟಿದ ಕಲಮೇಶ್ವರ ದೇವಾಲಯವಿದೆ. ಈ ದೇವಾಲಯದಲ್ಲಿ 1130 ಮತ್ತು 1172ರ ಶಾಸನಗಳು ದೊರಕಿವೆ. ಹುಬ್ಬಳ್ಳಿ-ಕಲಘಟಗಿ ರಸ್ತೆಯಲ್ಲಿ 13ಕಿಮೀ ವಾಯವ್ಯಕ್ಕಿರುವ ಮಿಶ್ರಿ ಕೋಟೆ 1838ರವರೆಗೆ ಒಂದು ದೊಡ್ಡ ಆಡಳಿತ ವಿಭಾಗಕ್ಕೆ ಹಾಗೂ 1862ರ ವರೆಗೆ ಚಿಕ್ಕದಾದ ವಿಭಾಗಕ್ಕೆ ಕೇಂದ್ರವಾಗಿತ್ತು. ಇಲ್ಲಿ ಒಂದು ದೊಡ್ಡ ಕೋಟೆ, ಪ್ರಾಚೀನ ರಾಮೇಶ್ವರ ದೇವಾಲಯ ಇವೆ. 1136ರ ಇಲ್ಲಿನ ಒಂದು ಶಾಸನ ಕದಂಬ ಇಮ್ಮಡಿ ಜಯಕೇಶಿಯ ಹೆಂಡತಿ ಮೈಳಲದೇವಿಯನ್ನು ಹೆಸರಿಸುತ್ತದೆ. *

**ಕಲಬಾವಿ :** ಬೆಳಗಾಂವಿ ಜಿಲ್ಲೆ ಸಂಪಗಾಂವ ತಾಲ್ಲೂಕಿನ ಒಂದು ಗ್ರಾಮ. ಬೈಲಹೊಂಗಲದಿಂದ 18ಕಿಮೀ ದೂರದಲ್ಲಿದೆ. ಇದು ಪ್ರಾಚೀನ ಕುಮ್ಮುದವಾಡ ಎಂದು ಫ್ಲೀಟರು ಗುರುತಿಸಿದ್ದಾರೆ. ಇಲ್ಲಿರುವ ಬಸದಿ ಆದಿನಾಥ ತೀರ್ಥಂಕರನದು. ಇದೊಂದು ಸಾಮಾನ್ಯ ಕಟ್ಟಡ. ಕಲ್ಯಾಣಿ ಚಾಳುಕ್ಯ ಶೈಲಿಯಲ್ಲಿರುವ ಆದಿನಾಥನ ಮೂರ್ತಿ ಕುಳಿತ ಭಂಗಿಯಲ್ಲಿದ್ದು ಎರಡು ಮೀಟರ್ ಎತ್ತರವಾಗಿದೆ. ಇಲ್ಲಿರುವ 814ರ ಗಂಗರ ಕಾಲದ ಶಾಸನವೊಂದು ಗಂಗರ ಶಿವಮಾರನು ಒಂದನೆಯ ಅಮೋಘವರ್ಷನ ಕಾಲದಲ್ಲಿ ಕಾದರವಳ್ಳಿ - 30ರಲ್ಲಿರುವ ಕುಮ್ಮುದವಾಡ ಜಿನಾಲಯಕ್ಕೆ ಕೊಟ್ಟ ದಾನ - ದತ್ತಿಯನ್ನು ಹೇಳುತ್ತದೆ. ರಾಮಲಿಂಗ, ಕಲ್ಮೇಶ್ವರ, ದ್ಯಾಮವ್ವ, ಮಾರುತಿ ಮತ್ತು ಇತ್ತೀಚೆಗೆ ನಿರ್ಮಿಸಿದ ವಿಠಲ ದೇವಾಲಯ ಇಲ್ಲಿನ ಇತರ ದೇವಾಲಯಗಳು. ರಾಮಲಿಂಗ ದೇವಾಲಯವನ್ನು ಜೀರ್ಣೋದ್ಧಾರ ಗೊಳಿಸಲಾಗಿದೆ. ಇಲ್ಲಿರುವ ಇನ್ನೊಂದು ಶಾಸನ 300 ಕಮ್ಮ ಭೂಮಿಯನ್ನು ಕುಮ್ಮುದವಾಡದ ದೇವಾಲಯಕ್ಕೆ ದಾನ ಕೊಟ್ಟ ವಿಚಾರವನ್ನು ದಾಖಲಿಸಿದೆ. ಕಲ್ಮೇಶ್ವರ ದೇವಾಲಯವೂ ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದ್ದು ಶಿವ-ಪಾರ್ವತಿಯರ ಮೂರ್ತಿಗಳನ್ನೊಳಗೊಂಡಿದೆ. ಇಲ್ಲಿರುವ ಮತ್ತೊಂದು ಶಾಸನ 12ನೆಯ ಶತಮಾನದ ಮತಿಮಾಳಪಂಡಿತ, ಅವನ ಶಿಷ್ಯ ತೇಜೋರಸಿ ಪಂಡಿತ, ನಾಗೇಶ್ವರ ದೇವರು ಮತ್ತು ಅಣ್ಣಿಗೇರಿಗಳ ಬಗ್ಗೆ ಮಾಹಿತಿ ಒದಗಿಸುವುದು. ಈ ದೇವಾಲಯದ ಎದುರು 4 ವೀರಗಲ್ಲುಗಳಿವೆ.



(ಆರ್.ಐ.)

**ಕಲಾ :** ಲಲಿತಕಲೆಗಳಿಗೆ ಮೀಸಲಾಗಿದ್ದ ಕನ್ನಡ ಪತ್ರಿಕೆ. 1930ರ ಮಾರ್ಚ್ ತಿಂಗಳಿನಲ್ಲಿ ಆರಂಭವಾಗಿ ಸುಮಾರು ನಾಲ್ಕು ವರ್ಷಗಳ ಕಾಲ ನಡೆಯಿತು. ಸಂಪಾದಕರು ಎ.ಎನ್.(ಅ.ನ.)ಸುಬ್ಬರಾವ್.

"ಕಲೆಯ ಖನಿಯಂತಿದ್ದ ಕರ್ನಾಟಕದಲ್ಲಿ ಕಲೆಗಳು ಗಳಿತಾವಸ್ಥೆಯಲ್ಲಿದ್ದು, ತಕ್ಕ ವ್ಯವಸಾಯವಿಲ್ಲದೆ ಸೊರಗುತ್ತಿವೆ ........ ಜನಸಾಮಾನ್ಯರಲ್ಲಿ ಕಲಾಭಿಮಾನವೂ ಉದ್ಯೋಗ ತತ್ಪರತೆಯೂ ಅಳಿಸಿಹೋಗಿರುವುದು ......... ಇಂಥ ಪರಿಸ್ಥಿತಿಯಿಂದ ಪಾರಾಗಿ ಕರ್ನಾಟಕದ ಕೀರ್ತಿಯನ್ನುಳಿಸಲು ವಿದ್ಯಾವಂತರೂ ಕಲಾಭಿಮಾನಿಗಳೂ ನಡೆಸಬೇಕಾದ ಕಾರ್ಯಗಳು ಅನೇಕವಿವೆ", ಎಂಬ ಅಂಶವನ್ನು ಮನಗಂಡ ಸಂಪಾದಕರು ಕಲಾಕ್ಷೇತ್ರದ ಅಭಿವೃದ್ಧಿಗಾಗಿ ಈ ಪತ್ರಿಕೆಯನ್ನು ಸ್ಥಾಪಿಸಿದರು.



ಪತ್ರಿಕೆಯನ್ನು ವಿದ್ಯಾ, ಲಲಿತಕಲೆ, ರಂಗಭೂಮಿ ಮತ್ತು ಕುಶಲ ವಿದ್ಯೆಗಳ ಮಾಸಪತ್ರಿಕೆ ಎಂದು ವಿವರಿಸಲಾಗಿತ್ತಾದರೂ ಇದರ ಒಲವು ಪ್ರಧಾನವಾಗಿ ಚಿತ್ರಕಲೆಯ ಕಡೆಗೆ ಇತ್ತು. ಕಥೆ, ಕವನಗಳೂ ಕಲಾವಿಮರ್ಶೆ ಮತ್ತು ವಿವಿಧ ಕಲೆಗಳನ್ನು ಕುರಿತ ವಿವರಣಾತ್ಮಕ ಲೇಖನಗಳೂ ಇದರಲ್ಲಿ ಪ್ರಕಟವಾಗುತ್ತಿದ್ದವು. ದೇವುಡು ನರಸಿಂಹಶಾಸ್ತ್ರೀ, ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರೀ, ಬೆಳ್ಳಾವೆ ನರಹರಿಶಾಸ್ತ್ರೀ, ಆಸ್ಥಾನ ವಿದ್ವಾನ್ ಜಯರಾಮ ವೆಂಕಟಾಚಾರ್ಯ, ಶಿವರಾಮ ಕಾರಂತ, ಅ.ನ.ಕೃಷ್ಣರಾಯ, ವಿ.ಕೃ.ಗೋಕಾಕ್, ತಿ.ತಾ.ಶರ್ಮ ಮೊದಲಾದ ವಿದ್ವಾಂಸರು ಈ ಪತ್ರಿಕೆಯ ಲೇಖನ ಬಳಗಕ್ಕೆ ಸೇರಿದ್ದರು.

*

**ಕಲಾದಗಿ :** ಬಾಗಲಕೋಟೆ ಜಿಲ್ಲೆ ಬಾಗಲಕೋಟೆ ತಾಲ್ಲೂಕಿನಲ್ಲಿ ಕಸಬೆಯಿಂದ 24ಕಿಮೀ ಪಶ್ಚಿಮಕ್ಕೆ ಘಟಪ್ರಭಾ ನದಿಯ ಬಲದಂಡೆಯಲ್ಲಿರುವ ಗ್ರಾಮ. 1858ಕ್ಕೆ ಮುಂಚೆ ಇದು ದಕ್ಷಿಣ ಮಹಾರಾಷ್ಟ್ರದ ಕುದುರೆ ಹಾಗೂ ಕಾಲಾಳು ಸೈನ್ಯದ ಶಿಬಿರವಾಗಿತ್ತು. ಮೊದಲನೆಯ ಸ್ವಾತಂತ್ರ್ಯ ಸಮರದ (1857) ಕಾಲದಲ್ಲಿ ಸೈನ್ಯದ ಪಡೆಗಳು ತಿರುಗಾಡಲು ಅನುಕೂಲವಾದ ಮಧ್ಯಸ್ಥಳವೂ ಆಗಿತ್ತು. ಆ ಯುದ್ಧ ಮುಗಿದ ಅನಂತರ ಸಿವಿಲ್ ಅಧಿಕಾರಿಗಳಿಗೆ ಆಡಳಿತೆಯನ್ನು ಹಸ್ತಾಂತರಗೊಳಿಸಲು ಅದು ಆಗಿನ ಜಿಲ್ಲೆಯ ಆಡಳಿತ ಕೇಂದ್ರದ ಮುಖ್ಯಸ್ಥಳವೂ ಆಯಿತು. ಆಗ ಅಲ್ಲಿ ಒಂದು ದೊಡ್ಡ ಆಸ್ಪತ್ರೆ, ಖಜಾನೆ, ಕಾರಾಗೃಹ ಮತ್ತು ಪ್ರವಾಸಿಮಂದಿರ ಇದ್ದುವು. ಇಂದಿಗೂ ಉಳಿದಿರುವ ಆ ಕಾಲದ ಒಂದು ಐತಿಹಾಸಿಕ ಅವಶೇಷವಾದ ಸಿ.ಜೆ.ಮ್ಯಾನ್ಸನ್ ಎಂಬ ಬ್ರಿಟಿಷ್ ಅಧಿಕಾರಿಯ, ಗೋರಿಯ ಮೇಲೆ ಈತನನ್ನು ನರಗುಂದದ ಬ್ರಾಹ್ಮಣ ಕೊಲೆ ಮಾಡಿದ ಎಂದು ಸಾರುವ ಶಾಸನವಿದೆ. 1884ರಲ್ಲಿ ಬಿಜಾಪುರವನ್ನು ಆಗಿನ ಬಿಜಾಪುರ ಜಿಲ್ಲೆಯ ಮುಖ್ಯಸ್ಥಳವಾಗಿ ಮಾಡಿ ಕಲಾದಗಿಯಲ್ಲಿದ್ದ ಕಾರ್ಯಾಲಯಗಳನ್ನು ಸ್ಥಳಾಂತರಗೊಳಿಸಲಾಯಿತು. ಇದರಿಂದ ಪಟ್ಟಣ ತನ್ನ ಪ್ರಾಮುಖ್ಯವನ್ನು ಕಳೆದುಕೊಂಡಿತು. ಈಗ ಇದೊಂದು ಚಿಕ್ಕ ಗ್ರಾಮ.

ದಕ್ಷಿಣ ಭಾರತದಲ್ಲಿ ಪ್ರಥಮವಾಗಿ ಭೂವೈಜ್ಞಾನಿಕ ಸರ್ವೇಕ್ಷಣೆ ನಡೆಸಿದ ರಾಬರ್ಟ್ ಬ್ರೂಸ್‌ಫುಟ್‌ಗೆ ಬಿಜಾಪುರ ಜಿಲ್ಲೆಯಲ್ಲಿ ಪ್ರೀಕೇಂಬ್ರಿಯನ್ ಯುಗದ ಶಿಲಾಶ್ರೇಣಿಯ ಅತ್ಯುತ್ತಮ ರೀತಿಯ ವಿನ್ಯಾಸ ಕಲಾದಗಿಯ ಬಳಿಯಲ್ಲೇ ಕಂಡುಬಂದುದರಿಂದ ಆತ ಆ ಶ್ರೇಣಿಗೆ ಕಲಾದಗಿ ಶ್ರೇಣಿಯೆಂದೇ ಹೆಸರಿಟ್ಟ. ಅಂದಿನಿಂದ ಭೂವಿಜ್ಞಾನ ಕ್ಷೇತ್ರದಲ್ಲಿ ಕಲಾದಗಿಯ ಹೆಸರು ಪ್ರಸಿದ್ಧವಾಗಿದೆ. (ಎಸ್.ಜೆಎ.)

**ಕಲೆ :** ಒಂದು ಜನಾಂಗದ ಸಂಸ್ಕೃತಿಯ ಮಟ್ಟವನ್ನು, ಅದರ ಬೆಳೆವಣಿಗೆಯನ್ನು ತಿಳಿಯಬೇಕಾದರೆ ಅಲ್ಲಿ ಬೆಳೆದು ಬಂದ ಹಲವು ಬಗೆಯ ಕಲೆಗಳನ್ನು ಪರಾಮರ್ಶಿಸಬೇಕಾಗುತ್ತದೆ. ಕರ್ನಾಟಕ ಜನತೆ, ಸಂಸ್ಕೃತಿಯ ಕೈಗನ್ನಡಿಯಾದ ಕಲೆಯ ಹಲವು ಪ್ರಕಾರಗಳನ್ನು ಅತ್ಯಂತ ಪ್ರಾಚೀನ ಕಾಲದಿಂದಲೂ ತನ್ನದೇ ಆದ ರೀತಿಯಲ್ಲಿ ಬೆಳೆಸಿಕೊಂಡು ಬಂದಿದೆ.

ವಿಶಾಲವೂ ವೈವಿಧ್ಯಮಯವೂ ಆದ ಕಲೆಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಈ ಸಂಪುಟದಲ್ಲಿ ಚಿತ್ರಕಲೆ, ನೃತ್ಯ, ವಾಸ್ತು, ಶಿಲ್ಪ, ಸಂಗೀತ, ರಂಗಭೂಮಿ ಮೊದಲಾದವುಗಳ ಹಾಗೂ ಕರ್ನಾಟಕ ಸಂಗೀತ, ಯಕ್ಷಗಾನ ಇತ್ಯಾದಿ ಅನೇಕ ಪ್ರಕಾರಗಳ ಬಗ್ಗೆ ಪ್ರತ್ಯೇಕ ಲೇಖನಗಳಿವೆ. ವಿವಿಧ ರಾಜಮನೆತನಗಳ ಬಗ್ಗೆ ಇರುವ ಲೇಖನಗಳಲ್ಲಿ ತತ್ಕಾಲದ ಲಲಿತಕಲೆಗಳನ್ನೂ ಚರ್ಚಿಸಲಾಗಿರುತ್ತದೆ. ಈ ಲೇಖನಗಳಲ್ಲಿ ಬರುವ ವಿವರಗಳನ್ನು ಹೊರತುಪಡಿಸಿ ಕರ್ನಾಟಕದ ಕಲಾ ರಂಗದ ಸ್ವರೂಪದ ಸ್ಥೂಲ ನೋಟವನ್ನು ಮಾತ್ರ ಇಲ್ಲಿ ಕೊಡಲಾಗಿದೆ.

ಮಾನವ ನಿತ್ಯ ಜೀವನದಲ್ಲಿ ಅನುಭವಿಸುವ ಸುಖ ಸಂತೃಪ್ತಿ ಆನಂದಗಳೇ ಕಲೆಗೆ ಮೂಲ. ಶಾಂತಿ, ಸಮೃದ್ಧಿಗಳು ಕಲೆಯನ್ನು ಬೆಳೆಸಿಕೊಂಡು ಬರುವ ಮುಖ್ಯ ಅಂಶಗಳು. ತನಗುಂಟಾದ ಸಂತೋಷದ ಕುರುಹಾಗಿ ಮಾನವ ಹಲವು ಬಗೆಯಲ್ಲಿ ಹಾವಭಾವಗಳನ್ನು ವ್ಯಕ್ತಪಡಿಸುತ್ತಾನೆ. ಸುಗ್ಗಿಯ ಕಾಲದಲ್ಲಿ ಸಂತೋಷದಿಂದ ಗುಂಪುಗುಂಪಾಗಿ ಕುಣಿಯುವುದು, ಹಾಡುವುದು, ಅನೂಚಾನವಾಗಿ ನಡೆದುಬಂದ ಪದ್ಧತಿ. ಒಕ್ಕುವಾಗ, ಬೀಸುವಾಗ, ಕುಟ್ಟುವಾಗ ಲೀಲಾಜಾಲವಾಗಿ ಹಾಡಿಕೊಳ್ಳುವುದೂ ಇದೇ ರೀತಿಯದು. ಅತ್ಯಂತ ಪ್ರಾಚೀನ ಕಾಲದ ಮಾನವನೂ ಹೀಗೆ ಒಂದು ಬೇಟೆ ಸಿಕ್ಕಾಗಲೋ ಒಂದು ಗೆಲುವು ಸಾಧಿಸಿದಾಗಲೋ ತನ್ನ ಸಂತೋಷಕ್ಕಾಗಿ ಕುಣಿದು ಕುಪ್ಪಳಿಸಿ ಕೇಕೆ ಹಾಕುತ್ತಿದ್ದಿರಬೇಕು; ಅದರ ಮಧುರ ಭಾವಗಳನ್ನು ನೆನಪುಗಳನ್ನು ಚಿತ್ರಿಸಿಕೊಂಡಿರಬೇಕು; ಕರ್ನಾಟಕದಲ್ಲಿ ಮಾನವ ಒಂದು ಕಡೆ ನೆಲೆ ನಿಲ್ಲಲಾರಂಭಿಸಿದ ನವಶಿಲಾಯುಗದ ಕಾಲದಲ್ಲಿ ಕ್ರಿ.ಪೂ.3ನೆಯ ಸಹಸ್ರಮಾನದಿಂದ ಕಲೆಯ ಆರಂಭವನ್ನು ಗುರುತಿಸಬಹುದು. ಆ ಕಾಲದ ಜನ ಗವಿಗಳಲ್ಲಿಯೋ ಚಾಚುಬಂಡೆಗಳ ಕೆಳಗೋ ಬಿಳಿಯ ಬಣ್ಣ ಅಥವಾ ಕೆಮ್ಮಣ್ಣಿನಿಂದ ರೇಖಾಚಿತ್ರಗಳನ್ನು ರಚಿಸಿದ್ದಾರೆ. ಅವುಗಳಿಗೆ ಬಣ್ಣ ತುಂಬಿಸಿದ್ದಾರೆ. ಮಾನವರ ಸಾಲು, ಜಿಂಕೆ, ಗೂಳಿ, ಹುಲಿ, ನವಿಲು ಮೊದಲಾದ ಪ್ರಾಣಿಪಕ್ಷಿಗಳನ್ನು ಚಿತ್ರಿಸಿದ್ದಾರೆ. ಮಾನವಾಕೃತಿಗಳು ಸಾಲುಗಟ್ಟಿ, ಕೈಕೈ ಹಿಡಿದು ಕುಣಿಯುತ್ತಿರುವುದನ್ನೂ ಕಾಣಬಹುದು.

ಹೀಗೆ ಪ್ರಾಚೀನ ಕಾಲದಲ್ಲಿ ಹುಟ್ಟಿದ ಕಲಾಪ್ರಕಾರ ಮುಂದೆ ಎರಡು ಧಾಟಿಗಳಲ್ಲಿ ಮುಂದುವರೆದುದನ್ನು ಕಾಣಬಹುದು. ಜನಸಾಮಾನ್ಯರಲ್ಲಿ ಜನಪದ ಕಲೆಗಳು ತಮ್ಮದೇ ಆದ ರೀತಿಯಲ್ಲಿ ಉಳಿದು ಬಂದಿದೆ. ಆದರೆ ಜನ ಸಂಸ್ಕೃತರಾಗುತ್ತ ಬಂದ ಹಾಗೆ ಕಲೆಗಳನ್ನು ವೈವಿಧ್ಯಮಯವಾಗಿ ಬೆಳೆಸಿಕೊಂಡು ಬಂದಿದ್ದಾರೆ. ಕೇವಲ ಆತ್ಮಸಂತೋಷಕ್ಕೆ ಬೆಳೆಸಿಕೊಂಡು ಬಂದ ಈ ಕೆಲವು ಕಲೆಗಳು ಇತರರಿಗೂ ಸಂತೋಷವನ್ನುಂಟುಮಾಡುವ ಸಾಧನಗಳಾದುವು. ಮೊದಲು ಸ್ವತಂತ್ರವಾಗಿ ಬೆಳೆದು ಬಂದ ಕಲೆಗಳು ಕಾಲಕ್ರಮೇಣ ಕೆಲವು ಕಟ್ಟುಪಾಡುಗಳಿಗೊಳಗಾಗಿ ಅವಕ್ಕೆ ನಿರ್ದಿಷ್ಟ ರೂಪ ಆಕಾರಗಳು ಬಂದುವು; ಪ್ರೌಢತೆಯನ್ನು ಸಾಧಿಸಿದುವು. ಶಿಷ್ಟ ಮತ್ತು ಜನಪದ ಸಂಪ್ರದಾಯಗಳು ವಿಭಿನ್ನತೆಯನ್ನು ಸ್ಪಷ್ಟವಾಗಿ ತೋರಿಸಿಕೊಳ್ಳಲಾರಂಭಿಸಿದುವು. ಎರಡರಲ್ಲೂ ಬೆಳೆವಣಿಗೆಯ ಘಟ್ಟಗಳು ಇವೆಯಾದರೂ ಜನಪದ ಕಲೆಗಳಲ್ಲಿ ಉದ್ಭವವಾಗಿರುವ ಪ್ರಾದೇಶಿಕ ವೈವಿಧ್ಯವನ್ನು ಮತ್ತು ಕೆಲವೊಮ್ಮೆ ಸಂಭವಿಸಿದ ಶಿಷ್ಟಸಂಪ್ರದಾಯದ ಪ್ರಭಾವವನ್ನು ಬಿಟ್ಟರೆ ಅದರ ಮೂಲಸ್ವರೂಪದಲ್ಲಿ ಮತ್ತು ಅವು ಉಪಯೋಗಿಸುವ ಆಶಯಗಳಲ್ಲಿ, ಗುರುತಿಸಬಹುದಾದ ಬದಲಾವಣೆಗಳೇನೂ ನಡೆದಿಲ್ಲ. ಶಿಷ್ಟ ಕಲೆಗಳಲ್ಲಾದರೋ ಕಾಲಕ್ರಮೇಣ ವೈವಿಧ್ಯ ಹೆಚ್ಚಿತು. ಪ್ರಾದೇಶಿಕ ವಿಭಿನ್ನತೆಗಳೂ ತೋರಿದುವು.

ಎಲ್ಲ ದೇಶಗಳಲ್ಲೂ ಕಂಡುಬರುವಂತೆ, ಕರ್ನಾಟಕದಲ್ಲೂ ಕಲೆಗಳ ಬೆಳೆವಣಿಗೆಯಲ್ಲಿ ಪಾತ್ರವಹಿಸುವ ಭೌಗೋಳಿಕ, ಚಾರಿತ್ರಿಕ, ಸಾಮಾಜಿಕ ಪರಿಸರಗಳ ಪ್ರಭಾವವನ್ನು ಗುರುತಿಸಬಹುದು.

ವಾಸ್ತುಶಿಲ್ಪದಂಥ ಕಲೆಗಳು ಪ್ರಾಕೃತಿಕ ಸನ್ನಿವೇಶಗಳನ್ನು ಅವಲಂಬಿಸಬೇಕಾದುದು ಸ್ವಾಭಾವಿಕ. ಭಾರತದಲ್ಲಿ ಕರ್ನಾಟಕವು ಆಯಕಟ್ಟಾದ ನೆಲೆಯಲ್ಲಿರುವುದರಿಂದ ಇಲ್ಲಿ ಔತ್ತರೇಯ ಮತ್ತು ದಾಕ್ಷಿಣಾತ್ಯ ಶೈಲಿಗಳು ಸಂಗಮಿಸಿ ಬೆಳೆದುದಲ್ಲದೆ ಕಾಲಕ್ರಮದಲ್ಲಿ ಆ ಸಮ್ಮಿಳನದಿಂದ ಕೆಲವು ವಿಶಿಷ್ಟ ಶೈಲಿಗಳೂ ಹುಟ್ಟಿಬೆಳೆದುದನ್ನು ಗಮನಿಸಬಹುದು.

ರಾಜಕೀಯ ಭದ್ರತೆ ಕಲೆಗಳ ಬೆಳವಣಿಗೆಯ ಮೇಲೆ ತಕ್ಕಷ್ಟು ಪ್ರಭಾವ ಬೀರುತ್ತದೆ. ಕದಂಬ, ಗಂಗ, ನೊಳಂಬ, ಚಾಳುಕ್ಯ, ಹೊಯ್ಸಳ, ವಿಜಯನಗರಗಳಂಥ ಪ್ರಸಿದ್ಧ ರಾಜಮನೆತನಗಳು ಸುಭದ್ರವಾದ ಸಾಮ್ರಾಜ್ಯಗಳನ್ನು ಕಟ್ಟಿ, ಕಲೆಗೆ ಹೆಚ್ಚು ಪ್ರೋತ್ಸಾಹ ಕೊಟ್ಟಿದ್ದರಿಂದ, ತಾವು ಗಳಿಸಿದ ಅಪಾರ ಐಶ್ವರ್ಯವನ್ನು ದೇವಾಲಯ, ಬಸದಿ ಮೊದಲಾದುವನ್ನು ಕಟ್ಟಿಸುವುದಕ್ಕಾಗಿ ವಿನಿಯೋಗಿಸಿದುದರಿಂದ ವಿವಿಧ ಶೈಲಿಗಳ ಬೆಳವಣಿಗೆ ಸಾಧ್ಯವಾಯಿತು. ರಾಜರ ಆಸ್ಥಾನಗಳು, ಒಡ್ಡೋಲಗಗಳು ಆರಂಭವಾಗುತ್ತಿದ್ದುದು ಕವಿ ಗಮಕಿ ವಾದಿವಾಗ್ಮಿಗಳ ಪ್ರತಿಭಾಪ್ರದರ್ಶನದಿಂದ, ನಾಟ್ಯಗೀತ ವಾದ್ಯಗಳ ಮಧುರ ಸನ್ನಿವೇಶಗಳಿಂದ. ಕಲೆಗಾರರಿಗೆ ಇಲ್ಲಿ ಅತಿ ಹೆಚ್ಚಿನ ಗೌರವವಿರುತ್ತಿತ್ತು. ರಾಜರು ಈ ಕಲೆಗಳಿಗೆ ಪ್ರೋತ್ಸಾಹ ಕೊಡುತ್ತಿದ್ದುದು ಮಾತ್ರವಲ್ಲ ತಾವೇ ಇಂಥ ಹಲವು ಕಲೆಗಳಲ್ಲಿ ನಿಷ್ಣಾತರಾಗಿರುತ್ತಿದ್ದರು.

ಕನ್ನಡ ನಾಡಿನ ರಾಜರು ಕೊಟ್ಟ ಪ್ರೋತ್ಸಾಹ ಇಲ್ಲಿನ ಕಲಾವಿದರ ನೈಪುಣ್ಯವನ್ನು ಉಚ್ಚಮಟ್ಟಕ್ಕೆ ಒಯ್ದುದ್ದಷ್ಟೇ ಅಲ್ಲ, ಹೊರಗಿನ ಅನೇಕ ಕಲಾವಿದರನ್ನಾಕರ್ಷಿಸಿತು. ಉದಾಹರಣೆಗೆ ಬಾದಾಮಿಯ ಚಳುಕ್ಯರ ಕಾಲದಲ್ಲಿ ಸುಂದರ ದೇವಾಲಯಗಳನ್ನು ನಿರ್ಮಿಸಿದವರಲ್ಲಿ ತ್ರಿಭುವನಾಚಾರಿ ಎಂಬ ಬಿರುದುಳ್ಳ ಗುಂಡನ್ ಒಬ್ಬ. ಇವನು ಪಲ್ಲವನಾಡಿನಿಂದ ಬಂದಂತೆ ತೋರುತ್ತದೆ. ಬೇರೆ ಬೇರೆ ದೇಶಗಳಲ್ಲಿ ಬೆಳೆದ ಕಲಾಸಂಪ್ರದಾಯಗಳು ಕರ್ನಾಟಕದಲ್ಲಿ ಹರಡುವುದಕ್ಕೆ ಅಥವಾ ಕರ್ನಾಟಕದ ಸಂಪ್ರದಾಯಗಳಲ್ಲಿ ಹೊಸ ತಿರುವುಗಳು ಮೂಡುವುದಕ್ಕೆ ಇಂಥ' ಸನ್ನಿವೇಶಗಳು ಕಾರಣವಾಗಿರುತ್ತಿದ್ದುವು.

ಕರ್ನಾಟಕದಲ್ಲಿ ಭಾರತದ ಇತರೆಡೆಗಳಂತೆ ಎಲ್ಲ ಕಲೆಗಳೂ ಧರ್ಮದ ಅಡಿಗಲ್ಲು ಮತ್ತು ಮತದ ನೆಲಗಟ್ಟುಗಳ ಮೇಲೆ ಬೆಳೆದು ಬಂದಿವೆ. ಹಲವು ಮತಧರ್ಮಗಳಿಗೆ ತವರೂ ಆಶ್ರಯಸ್ಥಾನವೂ ಆಗಿದ್ದ ಕರ್ನಾಟಕದಲ್ಲಿ ಆಯಾ ಮತಗಳಿಗೆ ಸಂಬಂಧಿಸಿದಂತೆ ಕೆಲವು ವಿಶಿಷ್ಟವಾದ ಶೈಲಿಗಳು ಬೆಳೆದುಬಂದಿವೆ. ಬೌದ್ಧ, ಜೈನ, ಶೈವ, ವೈಷ್ಣವ ಮತ್ತು ಇಸ್ಲಾಂ ಮತಗಳನ್ನಾಧರಿಸಿ ಹುಟ್ಟಿದ ಕಲಾ ಸಂಪ್ರದಾಯಗಳು ಕರ್ನಾಟಕದಲ್ಲಿ ಹರಡಿದ್ದುದನ್ನು ಸುಲಭವಾಗಿ ಗುರುತಿಸಬಹುದು. ಒಂದು ದೃಷ್ಟಿಯಿಂದ ಪ್ರಾಚೀನ ಕರ್ನಾಟಕದ ಕಲಾಪ್ರಕಾರಗಳನ್ನೆಲ್ಲಾ ಧಾರ್ಮಿಕ ಕಲೆಗಳು ಎಂದೇ ಹೇಳಬಹುದು.

ಕಲೆಗಳನ್ನು ಲಲಿತಕಲೆಗಳು, ಉಪಯೋಗಿ ಕಲೆಗಳು ಎಂದು ಎರಡು ರೀತಿಯಾಗಿ ವಿಭಾಗಿಸಬಹುದಾದರೂ ಇಂಥ ಸ್ಪಷ್ಟ ವಿಭಜನೆಯ ಕಲ್ಪನೆ ಪ್ರಾಚೀನ ಕರ್ನಾಟಕದಲ್ಲಿ ಇದ್ದಂತೆ ತೋರುವುದಿಲ್ಲ. ಹೆಚ್ಚಿನ ಕಲೆಗಳು ಧರ್ಮಸಂಬಂಧದಲ್ಲಿ ಪ್ರವರ್ಧಿಸಿದ್ದು ಅವೆಲ್ಲ ಉಪಯೋಗೀ ಕಲೆಗಳೇ ಆಗುತ್ತಿದ್ದುದು ಈ ಸ್ಥಿತಿಗೆ ಕಾರಣ ಎಂದು ತೋರುತ್ತದೆ. ಅನೇಕ ಗ್ರಂಥಗಳು ಮತ್ತು ಶಾಸನಗಳಲ್ಲಿ 64 ಕಲೆಗಳ ಪ್ರಸ್ತಾಪ ಕಂಡುಬರುತ್ತದೆ. ಆದರೆ ಈ ಕಲೆಗಳ ಪಟ್ಟಿಯಲ್ಲಿ ಲಲಿತ ಹಾಗೂ ಉಪಯೋಗೀ ಕಲೆಗಳು ಜೊತೆಜೊತೆಯಾಗೇ ಬಂದಿರುತ್ತವೆ.

ಈ ಎಲ್ಲ ಕಲೆಗಳ ಬೆಳವಣಿಗೆಯನ್ನು ಸ್ಪಷ್ಟವಾಗಿ ಗುರುತಿಸುವುದು ಕಷ್ಟದ ಕೆಲಸ. ಪ್ರಾಚೀನ ಕಾಲದ ಚಿತ್ರ, ಶಿಲ್ಪ, ವಾಸ್ತುಕೃತಿಗಳು ಅಲ್ಲಲ್ಲಿ ಉಳಿದು ಬಂದಿವೆಯಾದರೆ ಸಂಗೀತ, ನೃತ್ಯ ಮೊದಲಾದುವಕ್ಕೆ ಗ್ರಂಥಸ್ಥ ಆಧಾರಗಳನ್ನು ಅವಲಂಬಿಸಬೇಕಾಗುತ್ತದೆ. ಜನಪದ ಕಲೆಗಳಿಗಾದರೋ ಇಂದು ಉಳಿದು ಬಂದಿರುವ ರೀತಿಗಳೇ ಮುಖ್ಯ ಆಧಾರಗಳು.

ಕರ್ನಾಟಕದಲ್ಲಿ ಕಲೆಯ ಬಗ್ಗೆ ಅತ್ಯಂತ ಪ್ರಾಚೀನ ದಾಖಲೆ ದೊರಕುವುದು ಚಿತ್ರಕಲೆಯ ಬಗ್ಗೆ. ಉತ್ತರ ಕರ್ನಾಟಕದ ಹಲವು ಸ್ಥಳಗಳಲ್ಲಿ ಬಂಡೆಗಳ ಮೇಲೆ ಗೀಚಿರುವ ಅಥವಾ ರೇಖಿಸಿರುವ ಕ್ರಿ.ಪೂ. 3-2ನೆಯ ಸಹಸ್ರಮಾನದ ಚಿತ್ರಗಳೇ ಅತ್ಯಂತ ಪ್ರಾಚೀನವಾದವು. ಅಲ್ಲಿಂದ ಮುಂದೆ ಬಾದಾಮಿಯ ಗುಹಾಚಿತ್ರಗಳು, ಹೊಯ್ಸಳ ಕಾಲದ ಗ್ರಂಥಸ್ಥ ಚಿತ್ರಗಳು, ವಿಜಯನಗರದ ಕಾಲದ ದೇವಾಲಯದ ಭಿತ್ತಿಚಿತ್ರಗಳು, ಆದಿಲ್‌ಶಾಹೀ ಮತ್ತು ಮೈಸೂರು ಅರಸರ ಕಾಲದ ಚಿತ್ರಪಟಗಳು, ಮೈಸೂರು ಅರಸರ ಮತ್ತು ಪಾಳೆಗಾರರ ಕಾಲದ ಕೆಲವು ಭಿತ್ತಿಚಿತ್ರಗಳು ಪ್ರಾಚೀನ ಚಿತ್ರಕಲೆಯ ಸ್ವರೂಪವನ್ನು ಪರಿಚಯ ಮಾಡಿಕೊಡುತ್ತವೆ.

ವಾಸ್ತುಕೃತಿಗಳೂ ನವಶಿಲಾಯುಗದ ಕಾಲದಲ್ಲಿ ಆರಂಭವಾದರೂ ಅದು ಕಲೆಯ ಸ್ವರೂಪವನ್ನು ಸ್ಪಷ್ಟವಾಗಿ ಕಾಣುವುದು ಚಾರಿತ್ರಿಕ ಕಾಲದಲ್ಲಿ, ದೇವಾಲಯಗಳ ನಿರ್ಮಾಣ ಪ್ರಾರಂಭವಾದಾಗಿನಿಂದ. ಈ ಕಲಾಪ್ರಕಾರದ ಬಗ್ಗೆ ಬಾದಾಮಿಯ ಚಳುಕ್ಯರ ಕಾಲದಾರಭ್ಯ ಮುಂದೆ ಕರ್ನಾಟಕದಲ್ಲಿ ಆಳಿಕೆ ನಡೆಸಿದ ಎಲ್ಲ ಹಿಂದು ರಾಜವಂಶಗಳ ಕಾಲದಲ್ಲೂ ದೇವಾಲಯ ರಚನೆ ವಿವಿಧ ಶೈಲಿಗಳಲ್ಲಿ ಮುಂದುವರೆದು ಬಂದಿದೆ. ಇದೇ ರೀತಿ ಬಹಮನೀ, ಆದಿಲ್‌ಶಾಹಿ ಮೊದಲಾದ ಇಸ್ಲಾಮಿ ರಾಜವಂಶಗಳಿಂದ ಅದ್ಭುತವಾದ ಕಲಾಕೃತಿಗಳೆನಿಸಬಹುದಾದ ಮಸೀದಿ ಮತ್ತು ಗೋರಿಗಳು ನಿರ್ಮಾಣವಾಗಿವೆ. ಜೊತೆಗೆ ಇಸ್ಲಾಮೀ ಆಳಿಕೆಯ ಆರಂಭ ಕಾಲದಿಂದ ಲೌಕಿಕ ವಾಸ್ತುವೂ ಕಲೆಯಾಗಿ ಬೆಳೆದಿದ್ದುದಕ್ಕೆ ಆ ಕಾಲದ ಅನೇಕ ಅರಮನೆಗಳು, ಶ್ರೀಮಂತರ ಗೃಹಗಳು, ಕೊಳ, ಬಾವಿ ಇತ್ಯಾದಿಗಳು ಸಾಕ್ಷ್ಯಗಳಾಗಿ ನಿಂತಿವೆ.

ಶಿಲ್ಪಕ್ಕೆ ಸಂಬಂಧಿಸಿದ ಬಹುಪ್ರಾಚೀನ ಕೃತಿಗಳು ಕ್ರಿಸ್ತಶಕಾರಂಭದ ಪರಿಸರದಿಂದ ದೊರಕುತ್ತವೆ. ಈ ಶಿಷ್ಟ ಶಿಲ್ಪಕಲೆಯೂ ಧಾರ್ಮಿಕ ಅಂಗವಾಗಿಯೇ ಬೆಳೆದಿದ್ದರಿಂದ ದೇವಾಲಯ ಶಿಲ್ಪಗಳೇ ವಿಶೇಷವಾಗಿ ದೊರಕಿವೆ. ಹೆಚ್ಚಿನವೆಲ್ಲಾ ಹಿಂದು ಶಿಲ್ಪಗಳು. ಇಸ್ಲಾಮೀ ಸಂಸ್ಕೃತಿಯಲ್ಲಿ ಶಿಲ್ಪಕಲೆಗೆ ಪ್ರೋತ್ಸಾಹವಿರಲಿಲ್ಲವಾಗಿ ಆ ಅರಸರ ಆಳಿಕೆಯ ಕಾಲಘಟ್ಟಗಳಲ್ಲಿ ಶಿಲ್ಪಕಲೆ ಅಷ್ಟಾಗಿ ಪ್ರಚಾರದಲ್ಲಿರಲಿಲ್ಲವೆಂದು ಹೇಳಬಹುದು. ಶಿಲ್ಪಗಳಲ್ಲೂ ಶಿಲಾಶಿಲ್ಪಗಳೇ ಹೆಚ್ಚಾಗಿ ದೊರಕುತ್ತವೆ. ಕಲ್ಯಾಣದ ಚಾಳುಕ್ಯರ ಕಾಲದ್ದೆನ್ನುವ ಕೆಲವು ತಾಮ್ರದ ಶಿಲ್ಪಗಳು ದೊರಕಿದ್ದರೂ ಅವುಗಳ ಸಂಖ್ಯೆ ಚೋಳ ಕಾಲದಿಂದ ಹೆಚ್ಚಾಗುತ್ತದೆ. ದೊರಕಿರುವುದರಲ್ಲಿ ವಿಜಯನಗರ ಕಾಲದವೇ ಹೆಚ್ಚು.

ಸಂಗೀತ, ನೃತ್ಯಗಳು ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದ ಬೆಳೆದು ಬಂದ ಕಲೆಗಳು. ಒಂದು ನೆಲೆಯಾಗಿ ನಿಲ್ಲಬಲ್ಲ ಸಾಮಗ್ರಿ ಈ ಎರಡೂ ಕಲೆಗಳಿಗಿಲ್ಲದಿರುವುದರಿಂದ ಇವುಗಳ ಹುಟ್ಟು ಬೆಳವಣಿಗೆಯನ್ನು ಗುರುತಿಸಲಾಗುವುದಿಲ್ಲ. ತಲತಲಾಂತರದಿಂದ ಜನಜೀವನದಲ್ಲಿ ಹರಿದುಕೊಂಡು ಬಂದು ಇಂದಿಗೂ ಹಲವು ರೂಪಗಳಲ್ಲಿ ಉಳಿದು ಬಂದಿರುವ ಈ ಕಲೆಗಳಲ್ಲಿ ಪ್ರಾದೇಶಿಕ ವಿಭಿನ್ನತೆಗಳನ್ನು ಗುರುತಿಸಬಹುದು. ಬೆದಂಡೆ, ಪದ, ಮೇಲ್ವಾಡು, ಪಾಡುಗಬ್ಬ, ಒನಕೆವಾಡು ಮುಂತಾದುವನ್ನು ಲಾಕ್ಷಣಿಕರು ಹೆಸರಿಸಿದ್ದರೂ ಅವುಗಳ ಸ್ವರೂಪ ಎಂಥದು ಎಂದು ತಿಳಿಯಲು ಈಗ ಆಧಾರಗಳಿಲ್ಲ. ಬಾದಾಮಿಯ ಚಳುಕ್ಯರ ಕಾಲದಾರಭ್ಯ ವಿವಿಧ ದೇವಾಲಯ ಶಿಲ್ಪಗಳಲ್ಲಿ ಸಂಗೀತಗಾರರ ಮೇಳ, ನೃತ್ಯಭಂಗಿಗಳು ಬಗೆಬಗೆಯ ವಾದ್ಯಗಳನ್ನು ನುಡಿಸುತ್ತಿರುವ ಶಿಲ್ಪಮಾದರಿಗಳನ್ನು ದೇವಾಲಯಗಳ ಗೋಡೆಗಳ ಮೇಲೆ ಅಸಂಖ್ಯಾತವಾಗಿ ನೋಡಬಹುದು. ಸಂಗೀತದ ವೈವಿಧ್ಯಮಯವಾದ ಬೆಳವಣಿಗೆಗೆ ಕರ್ನಾಟಕವೇ ಮೂಲವೆಂದು ಅನೇಕ ಪ್ರಾಚೀನ ಸಂಗೀತ ಶಾಸ್ತ್ರಗ್ರಂಥಗಳಿಂದ ವ್ಯಕ್ತವಾಗುತ್ತದೆ. (ಎಂ.ಎಚ್.)

ಪ್ರಾಚೀನ ಕರ್ನಾಟಕದಲ್ಲಿ ಪ್ರಚಲಿತವಾಗಿದ್ದ ವಿವಿಧ ಉಪಯೋಗೀ ಕಲೆಗಳ ಬಗ್ಗೆ ಸಾಕಷ್ಟು ಆಧಾರಗಳು ಉಳಿದು ಬಂದಿಲ್ಲ. ದೇವಾಲಯ ಶಿಲ್ಪಗಳಲ್ಲಿ ಕಂಡುಬರುವ ಆಭರಣಗಳು, ಕೆಲವು ಗ್ರಾಂಥಿಕ ವಿವರಣೆಗಳು, ಚಿನ್ನಗಾರಿಕೆಯ ಬಗ್ಗೆ ಸ್ವಲ್ಪ ಮಟ್ಟಿಗೆ ಮಾಹಿತಿ ಒದಗಿಸುತ್ತವೆ. ಈ ಎಲ್ಲ ಮಾಹಿತಿಗಳೂ ದೊರಕಿಸುವ ಒಂದು ಮುಖ್ಯಾಂಶವೆಂದರೆ ಪ್ರಾಚೀನ ಕಾಲದಲ್ಲಿ ರಾಜಮನೆತನದವರು ಮತ್ತು ಶ್ರೀಮಂತರ ಉದಾರ ಪ್ರೋತ್ಸಾಹದಿಂದಲೇ ವಿವಿಧ ಶಿಷ್ಟಕಲೆಗಳು ಬೆಳೆದಿವೆ ಎಂಬುದು. ಚತುರ ಕಲೆಗಾರರಿಗೆ ಈ ಜನ ಪ್ರೋತ್ಸಾಹ ನೀಡುತ್ತಿದ್ದರು. ಆದರೂ ಈ ಯಾವ ಕಲೆಯೂ ವ್ಯಕ್ತಿಗತ ಪ್ರತಿಭಾಸೃಷ್ಟಿಯಾಗಿ ವೈಯಕ್ತಿಕ ವೈವಿಧ್ಯವನ್ನು ಪ್ರದರ್ಶಿಸುವುದಿಲ್ಲವೆಂದೇ ಹೇಳಬಹುದು. ಪ್ರಾಚೀನ ಕಲೆ ಸಂಪ್ರದಾಯತ್ಮಕವಾಗಿಯೇ ಹೆಚ್ಚುಕಡಿಮೆ ಬೆಳೆದುಬಂದಿವೆ. ಕಲೆಗಿಂತಲೂ ಕಲೆಯ ಬೆಳವಣಿಗೆಯಲ್ಲಿ ಶಾಸ್ತ್ರ ಪ್ರಧಾನ ಪಾತ್ರ ವಹಿಸಿದೆ.

ಆದರೂ ವೈಯಕ್ತಿಕವಾಗಿಲ್ಲವಾದರೂ ಒಟ್ಟಾರೆಯಾಗೀ ಈ ಸಂಪ್ರದಾಯಗಳ ಬೆಳೆವಣಿಗೆಯಲ್ಲಿ ಕರ್ನಾಟಕದ ಪಾತ್ರ ವಿಶೇಷವಾದುದು. ಕರ್ನಾಟಕದ ಕಲೆಗಳು ಸಾಮಾನ್ಯತಃ ಭಾರತೀಯ ಸಂಪ್ರದಾಯದ ಭಾಗವಾಗಿ ಕಂಡುಬಂದರೂ ವಾಸ್ತು ಮತ್ತು ಸಂಗೀತ ಕಲೆಗಳಲ್ಲಿ ಕರ್ನಾಟಕ ಸಾಧನೆ ವಿಶಿಷ್ಟವಾಗಿದೆ. ದೇವಾಲಯದ ರಚನಾಸಂಪ್ರದಾಯ ಉತ್ತರ ಭಾರತದಲ್ಲಿ ಮೊದಲು ಕಾಣಿಸಿಕೊಂಡಿತಾದರೂ ಆ ಸಂಬಂಧದಲ್ಲಿ ಹೊಸ ಹೊಸ ಪ್ರಯೋಗಗಳು ನಡೆದು ದೇವಾಲಯ ಸ್ವರೂಪವನ್ನು ನಿರ್ದಿಷ್ಟಗೊಳಿಸಿದುದಲ್ಲದೆ, ದ್ರಾವಿಡ, ನಾಗರ, ವೇಸರ ಪ್ರಕಾರಗಳೂ ರೂಪುಗೊಂಡುದು ಕರ್ನಾಟಕದಲ್ಲಿ, ಬಾದಾಮಿಯ ಚಳುಕ್ಯರ ಕಾಲದಲ್ಲಿ. ಇಲ್ಲಿ ಬೆಳೆದ ದೇವಾಲಯದ ರೀತಿಗಳು ಇಡೀ ಭಾರತವೇ ಅಲ್ಲದೆ ಆಗ್ನೇಯ ಏಷ್ಯದ ಹಲವು ಪ್ರದೇಶಗಳಲ್ಲೂ ಬೆಳೆದ ವಾಸ್ತು ಸಂಪ್ರದಾಯಗಳಿಗೆ ಮೂಲಮಾದರಿಯನ್ನು ಒದಗಿಸಿದುವು. ಸಂಗೀತರಂಗದಲ್ಲಿ ಕರ್ನಾಟಕದ ಮತಂಗ, ಶಾರ್ಙ್ಗದೇವ, ವಿದ್ಯಾರಣ್ಯ, ಕಲ್ಲರಸ, ಪುರಂದರದಾಸ, ಕನಕದಾಸ ಮೊದಲಾದವರು ಬೆಳೆಸಿದ ಶಾಸ್ತ್ರೀಯ ಸಂಗೀತ ರೀತಿ ಮುಂದೆ ಕರ್ಣಾಟಕ ಸಂಗೀತ ಎಂಬ ವಿಶೇಷ ಪ್ರಕಾರವಾಗಿ ಬೆಳೆದು ಇಂದು ಇಡೀ ದಕ್ಷಿಣ ಭಾರತದ ಶಾಸ್ತ್ರೀಯ ಸಂಪ್ರದಾಯವಾಗಿದೆ. ಈ ವಾಸ್ತು ಮತ್ತು ಸಂಗೀತದ ಸಂಪ್ರದಾಯಗಳು ಭಾರತೀಯ ಕಲೆಗೆ ಕನ್ನಡಿಗರು ಇತ್ತ ವಿಶೇಷ ಕೊಡುಗೆಗಳು.

ಪಾಶ್ಚಾತ್ಯರ ಪ್ರಭಾವ ಪ್ರಾರಂಭವಾದ ಕಾಲದಿಂದ ಈ ನಾಡಿನ ಶಿಷ್ಟಕಲೆಗಳ ಸ್ವರೂಪವೂ ಬದಲಾವಣೆಯಾಗಲಾರಂಭಿಸಿತು. ಧಾರ್ಮಿಕ ಚೌಕಟ್ಟಿನಲ್ಲಿ ನಿರ್ಮಾಣವಾಗುತ್ತಿದ್ದ ಹಾಗೂ ಅರಸರ ಅನಿಸಿಕೆಯಂತೆ ಅಪೇಕ್ಷೆಯಂತೆ ಮೈ ತಾಳುತ್ತಿದ್ದ ಕಲೆ, ಮೊಟ್ಟಮೊದಲ ಬಾರಿಗೆ ಸ್ವತಂತ್ರವಾಯಿತು. ಅಂದರೆ ಕಲೆಗಾರ ಸ್ವತಂತ್ರ ಕಲೆಗಾರನಾದ, ಸ್ವತಂತ್ರ ವ್ಯಕ್ತಿತ್ವ ಹೊಂದಿದವನಾದ, ಕಲೆ ಅರ್ಧ ಭಾವನಾತ್ಮಕ ಅರ್ಧ ವ್ಯಾವಹಾರಿಕ ಕಸಬಾಯಿತು. ಕೆಲವೊಮ್ಮೆ ಕಲಾಕೃತಿಗಳು ಸರಕಾಗಿ ಅದನ್ನು ಉತ್ಪಾದಿಸುವ ಕಲೆಗಾರ ಸರಕಿನ ತಯಾರಕನೂ ಆದ. ಹಿಂದೆ ಕಲೆ ಬಹುಮಟ್ಟಿಗೆ ಧಾರ್ಮಿಕ ಜೀವನದ ಪೋಷಣೆಗೆ ಸಾಧಕವಾಗಿ ಪಾರಮಾರ್ಥಿಕ ಗುರಿಯನ್ನು ಹೊಂದಿದ್ದರೆ, ಈಗ ಸಮಾಜದ ಸಾಂಸ್ಕೃತಿಕ ಚಟುವಟಿಕೆಯಾಗಿ ಮನರಂಜನೆಯಾಗಿ ಮುಖ್ಯಕಸಬಾಗಿ ಬೆಳೆಯುತ್ತಿವೆ. ಅರಮನೆ ಮತ್ತು ದೇವಾಲಯಗಳು ಹಿಂದೆ ಕಲಾವಿದರನ್ನು ಕಾಪಾಡಿ ಒಂದೊಂದು ಕಾಲದಲ್ಲಿಯೂ ಒಂದೊಂದು ಸಂಪ್ರದಾಯವನ್ನು ಉಳಿಸಿ, ಬೆಳೆದು ಬರುವಂತೆ ಮಾಡಿದ್ದರೆ, ಈಗ ಕಲಾವಿದರು ಸ್ವತಂತ್ರರಾಗಿ ಸ್ವಪ್ರತಿಭೆಯನ್ನೇ ಬಂಡವಾಳವನ್ನಾಗಿಟ್ಟುಕೊಂಡು ಒಬ್ಬೊಬ್ಬ ವ್ಯಕ್ತಿಗಳನ್ನು ಆಶ್ರಯಕ್ಕಾಗಿ ಅವಲಂಬಿಸದೆ, ಒಟ್ಟಾರೆ ಸಮಾಜದ ಆಸರೆಯ ಕಲಾಸೃಷ್ಟಿ ಮಾಡುತ್ತಿದ್ದಾರೆ. ಪಾಶ್ಚಿಮಾತ್ಯ ದೇಶಗಳಲ್ಲಿ ಬಳಕೆಗೆ ಬಂದಿರುವ ಕಲಾತಂತ್ರ ಮತ್ತು ರೂಪಗಳನ್ನು ಅವಲಂಬಿಸುತ್ತಿದ್ದಾರೆ. ಹಿಂದೆ ಕಲೆ ಕೆಲವೇ ಕಸಬುದಾರರ ಮನೆತನಗಳ ಸ್ವತ್ತಾಗಿದ್ದರೆ ಇಂದು ಕಲಾಬೋಧನೆಗೆ ಸಾಕಷ್ಟು ಸಂಸ್ಥೆಗಳು ಇದ್ದು ಕಲಾಭ್ಯಾಸ ಎಲ್ಲರಿಗೂ ತೆರೆದಿದೆ. ಇವೆಲ್ಲ ವ್ಯತ್ಯಾಸಗಳಿಂದ ಪ್ರಾಚೀನ ಮತ್ತುಆಧುನಿಕ ಕಲಾರೀತಿಗಳಲ್ಲಿ ಗಮನಾರ್ಹ ವ್ಯತ್ಯಾಸಗಳು ಕಂಡುಬರುತ್ತಿವೆ. ಆದರೂ ಕೆಲವೊಮ್ಮೆ ಹಳೆಯ ಸಂಪ್ರದಾಯಗಳನ್ನು ಉಳಿಸಿಕೊಳ್ಳುವುದೂ ಉಂಟು. ನಾಡಿನ ಕಲಾರಂಗ ಈ ದೇಶೀ ಮತ್ತು ಪಾಶ್ಚಿಮಾತ್ಯ ಸಂಪ್ರದಾಯ ಪ್ರಭಾವಗಳ ಮಧ್ಯೆ ಸಿಲುಕಿದ್ದು ಇನ್ನೂ ಸ್ವಂತತನವನ್ನು ಸಾಧಿಸಿಕೊಳ್ಳಬೇಕಾಗಿದೆ. ಉದಾಹರಣೆಗೆ ಸಂಗೀತವನ್ನು ತೆಗೆದುಕೊಂಡರೆ, ಕರ್ಣಾಟಕ ಸಂಗೀತ ತನ್ನ ಹಿಂದಿನ ಸಂಪ್ರದಾಯದ ಮುದ್ರೆಯನ್ನು ಮೀರಿ ಹೆಚ್ಚೇನೂ ಬದಲಾಗಿಲ್ಲ. ಆದರೂ ಬದಲಾವಣೆಯತ್ತ ಪ್ರಯೋಗಗಳು ನಡೆಯುತ್ತಿವೆ. ಈಗಾಗಲೇ, ಆಧುನಿಕ ಕವಿಗಳ ಕವನಗಳಿಗೆ ಶಾಸ್ತ್ರೀಯ ರಾಗದ ಮಟ್ಟುಗಳನ್ನು ಹಾಕುವ ಪ್ರಯತ್ನಗಳು ನಡೆದಿವೆ. ಲಘುಗೀತೆಗಳ ಪ್ರಕಾರ ಹೆಚ್ಚು ಜನಪ್ರಿಯತೆ ಗಳಿಸುತ್ತಿದೆ. ಸ್ಯಾಕ್ಸೊಫೋನ್, ಕ್ಲಾರಿಯೋನೆಟ್, ಸಿತಾರ್ ಮೊದಲಾದ ಹೊಸ ವಾದ್ಯಗಳನ್ನು ಕೆಲವು ವಿದ್ವಾಂಸರು ಈಗ ಉಪಯೋಗಿಸುತ್ತಿದ್ದಾರೆ. ಕರ್ಣಾಟಕ ಸಂಗೀತದ ಬೆಳೆವಣಿಗೆಗೆ ಸಹಾಯಕವಾದ ಭಜನೆ ಹರಿಕಥೆ ಗೋಷ್ಠಿ ಇವು ಬಳಕೆಯಲ್ಲಿದ್ದರೂ ಸಂಗೀತಪ್ರಸಾರದ ಒಂದು ಮಾಧ್ಯಮವಾಗಿ ರೇಡಿಯೋ ಮುಖ್ಯ ಸ್ಥಾನವನ್ನು ಆಕ್ರಮಿಸಿದೆ. ಇತ್ತೀಚೆಗೆ ಪಾಶ್ಚಾತ್ಯಸಂಗೀತದ ಬಳಕೆಯೂ ಆಗುತ್ತಿದೆ. ಅದರ ವ್ಯಾಮೋಹವೂ ಯುವಜನಾಂಗದಲ್ಲಿ ಹೆಚ್ಚುತ್ತಿದೆ. ವಿವಿಧ ಸಂಗೀತ ಸಂಪ್ರದಾಯಗಳ ಬಗ್ಗೆ ಜನರ ಆಸಕ್ತಿ ಕೆರಳಿಸಲು ಸಂಸ್ಥೆಗಳೂ ಶ್ರಮಿಸುತ್ತವೆ. ಉದಾಹರಣೆಗೆ: ಮೈಸೂರು ವಿಶ್ವವಿದ್ಯಾನಿಲಯ ಹಿಂದುಸ್ಥಾನಿ ಸಂಗೀತ ಮತ್ತು ಕರ್ಣಾಟಕ ಸಂಗೀತದ ಬಗ್ಗೆ ವಿದ್ಯಾರ್ಥಿಗಳಲ್ಲಿ ಹೆಚ್ಚಿನ ಅಭಿರುಚಿ ಬೆಳೆಸಲು ಕಲಾವಿದರಿಂದ ಸಂಗೀತ ಕಚೇರಿಗಳನ್ನು ಏರ್ಪಡಿಸುತ್ತಿದೆ. ಇದೇ ರೀತಿಯ ಬೆಳೆವಣಿಗೆಯ ಧಾಟಿಯನ್ನು ಇತರ ಕಲೆಗಳಲ್ಲೂ ನೋಡಬಹುದು.

ದೇಶಕ್ಕೆ ಸ್ವಾತಂತ್ರ್ಯ ಬಂದ ಅನಂತರ ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರ ಕಲೆಯ ಅಭಿವೃದ್ಧಿಯಲ್ಲಿ ಆಸಕ್ತಿ ತೋರಿಸುತ್ತವೆ. ಅದಕ್ಕಾಗಿ ಕಲಾ ಶಿಕ್ಷಣ ಒದಗಿಸಲು ರಾಜ್ಯದ ಹಲವಾರು ಕಡೆ ಕಲಾಶಾಲೆಗಳನ್ನು ತೆರೆಯಲಾಗಿದೆ. ಸಾಮಾನ್ಯ ಶಾಲೆಗಳಲ್ಲೂ ಕಲಾಬೋಧನೆಗೆ ಅವಕಾಶ ಕಲ್ಪಿಸಲಾಗಿದೆ. ರಾಜ್ಯದಲ್ಲೇ ಮೊದಲನೆಯದಾಗಿ (ಭಾರತದಲ್ಲಿ ಎರಡನೆಯದಾಗಿ) ಮೈಸೂರು ವಿಶ್ವವಿದ್ಯಾನಿಲಯ ಲಲಿತ ಕಲೆಗಳ ಕಾಲೇಜನ್ನೂ ಸ್ಥಾಪಿಸಿದೆ. ಈಗ ಬೆಂಗಳೂರು ವಿಶ್ವವಿದ್ಯಾಲಯವೂ ಒಂದು ಕಾಲೇಜನ್ನು ಆರಂಭಿಸಿದೆ. ಸದ್ಯದ ಪರಿಸ್ಥಿತಿಯಲ್ಲಿ ಸಂಗೀತ, ನೃತ್ಯ ಮತ್ತು ನಾಟಕಕ್ಕೆ ಇಲ್ಲಿ ಹೆಚ್ಚಿನ ಪ್ರಾಮುಖ್ಯತೆಯಿದೆ. ಕ್ರಮೇಣ ಚಿತ್ರಕಲೆ ಮತ್ತಿತರ ಲಲಿತಕಲೆಗಳ ವಿಭಾಗವನ್ನೂ ಈ ಕಾಲೇಜುಗಳಲ್ಲಿ ತೆಗೆಯುವ ಸಂಭವವಿದೆ. ರಾಜ್ಯ ಸಂಗೀತ ನಾಟಕ ಅಕಾಡೆಮಿ, ಲಲಿತಕಲಾ ಅಕಾಡೆಮಿ, ಇತ್ಯಾದಿ ರಾಜ್ಯ ಕಲಾ ಸಂಸ್ಥೆಗಳು ಕಲಾಭ್ಯುದಯಕ್ಕೆ ಅನೇಕ ಯೋಜನೆ ಹಾಕಿಕೊಂಡು ಕೆಲಸಗಳನ್ನು ಮಾಡುತ್ತವೆ ಮತ್ತು ಅಶಕ್ತ ಕಲಾವಿದರಿಗೆ ನಿಧಿ ಅರ್ಪಿಸುವ ಹಾಗೂ ಮಾಸಾಶನ ನೀಡುವ ವ್ಯವಸ್ಥೆ ಇದೆ. ಕಲಾಪ್ರಸಾರಕ್ಕೆ ಗೋಷ್ಠಿಗಳನ್ನು ಏರ್ಪಡಿಸುವದು, ಪ್ರದರ್ಶನಗಳನ್ನು ಏರ್ಪಾಡುಮಾಡುವದು, ಉತ್ತಮ ಕಲಾವಿದರಿಗೆ ಮತ್ತು ಕಲಾಕೃತಿಗಳಿಗೆ ಬಹುಮಾನ ನೀಡುವುದು, ಮೊದಲಾದ ಕಾರ್ಯಕ್ರಮಗಳನ್ನು ಇಟ್ಟುಕೊಂಡಿವೆ. ಹಿಂದೆ ರಾಜರಾಶ್ರಯದಲ್ಲಿ ಬೆಳೆಯುತ್ತಿದ್ದ ಕಲೆಗಳು ಇಂದು ರಾಜ್ಯಾಶ್ರಯದಲ್ಲಿ, ಕಲಾಭಿಮಾನೀ ಸಂಘ ಮತ್ತು ಸಂಸ್ಥೆಗಳ ಆಶ್ರಯದಲ್ಲಿ ಬೆಳೆದು ತಮ್ಮ ಪ್ರತಿಷ್ಠೆಯ ಸ್ಥಾನ ಉಳಿಸಿಕೊಳ್ಳುತ್ತಿವೆ; ಬೆಳೆಸಿಕೊಳ್ಳುತ್ತಿವೆ. (ಸಿ.ಎಸ್.)

**ಕಲ್ಕಿ ತುರಾಯಿ :** ಉತ್ತರ ಕರ್ನಾಟಕದಲ್ಲಿ ಪ್ರಚಲಿತವಾಗಿರುವ ಒಂದು ಪ್ರಸಿದ್ಧ ಲಾವಣಿ ಸಂಪ್ರದಾಯ. ದಕ್ಷಿಣ ಕರ್ನಾಟಕದಲ್ಲಿಯೂ ಈ ಸಂಪ್ರದಾಯದ ಹಾಡುಗಳಿದ್ದವು ಎಂಬುದಕ್ಕೆ ಅಲ್ಲಲ್ಲಿ ನಿದರ್ಶನಗಳು ಲಭ್ಯವಾದರೂ ಇತ್ತೀಚೆಗೆ ಸಂಪೂರ್ಣವಾಗಿ ಅವು ಕಣ್ಮರೆಯಾಗಿ ಹೋಗಿವೆ. ಮೈಸೂರು ಮತ್ತು ಕಡೂರುಗಳಲ್ಲಿ ಕಲ್ಕಿ ತುರಾಯಿ ಲಾವಣಿಗಳನ್ನು ಹಾಡುವವರು ತೀರ ಇತ್ತೀಚಿನವರೆಗೆ ಕಾಣಬರುತ್ತಿದ್ದರು.

ಕಲ್ಕಿ ಮತ್ತು ತುರಾಯಿಗಳು ಲಾವಣಿಕಾರರ ಎರಡು ವರ್ಗಗಳು. ನಾಗೇಸಿ ಮತ್ತು ಹರದೇಸಿ ಎಂದೂ ಇವರನ್ನು ಕರೆಯುವುದಿದೆ. ಈ ಎರಡು ವರ್ಗದ ಲಾವಣಿಕಾರರೂ ಎದಿರುಬದಿರಾಗಿ ನಿಂತು ಸ್ಪರ್ಧೆಯಿಂದ ಹಾಡುತ್ತಾರೆ. ಹರದೇಸಿಯವರು ಗಂಡಿನ ಪಕ್ಷವನ್ನೂ ನಾಗೇಸಿಯವರು ಹೆಣ್ಣಿನ ಪಕ್ಷವನ್ನೂ ವಹಿಸಿ ಅಪೂರ್ವ ಲಾವಣಿಗಳನ್ನು ಹೇಳುತ್ತಾರೆ. ತಮ್ಮ ತಮ್ಮ ಪಕ್ಷಗಳನ್ನು ಎತ್ತಿಹಿಡಿದು ಹಾಡುವುದು ಇಲ್ಲಿನ ಸಂಪ್ರದಾಯ. ಉದಾಹರಣೆಗೆ ಕೆಲವನ್ನು ಇಲ್ಲಿ ಗಮನಿಸಬಹುದು. ಬೀಜ ಮೊದಲೋ ಗಿಡ ಮೊದಲೋ ಎಂಬ ಸಮಸ್ಯೆಯನ್ನು ಎತ್ತಿಕೊಂಡು ಎರಡು ಪಕ್ಷಗಳಲ್ಲಿ ಒಂದು ಬೀಜವೆಂದರೆ ಇನ್ನೊಂದು ವೃಕ್ಷ ಎಂದು ವಾದಮಾಡುತ್ತದೆ. ಕೆಲವೊಮ್ಮೆ ಕಪ್ಪು ಬಣ್ಣ ಕಲ್ಕಿಯ ಪ್ರತೀಕವಾದರೆ ಕೆಂಪು ಬಣ್ಣ ತುರಾಯಿಯ ಪ್ರತೀಕವಾಗುತ್ತದೆ. ಕರಿ ಹೆಚ್ಚೆಂದು ಕಲ್ಕಿಯ ಪಕ್ಷ ವಾದಿಸಿದರೆ ಕೆಂಪು ಹೆಚ್ಚೆಂದು ತುರಾಯಿ ಪಕ್ಷ ವಾದಿಸುತ್ತದೆ. ಯುದ್ಧದಲ್ಲಿ ಕಪ್ಪುಮದ್ದು, ಕರಿ ಕಬ್ಬಿಣದ ಕತ್ತಿ, ಕೋವಿಗಳಿಂದಲೇ ಗೆಲ್ಲಲು ಸಾಧ್ಯವೆಂದು ಕಲ್ಕಿ ಪಕ್ಷ ವಾದಿಸಿದರೆ ಕಪ್ಪುಮದ್ದು ಸಿಡಿಯಲು ಕೆಂಪುಬಣ್ಣದ ಬೆಂಕಿಯೇ ಬೇಕಾಗುವುದೆಂದೂ ಆದ್ದರಿಂದ ಕೆಂಪು ಮೇಲೆಂದೂ ತುರಾಯಿ ವಾದಿಸುತ್ತದೆ. ಇವರ

ತರ್ಕಸರಣಿ ಕುತೂಹಲಕಾರಿಯಾಗಿರುತ್ತದೆ. ದೇವರ ಘನತೆ ಕುರಿತಾದಂತಹ ಸಂವಾದಗಳೂ ಉಂಟು. ಒಂದು ಪಕ್ಷ ಗಣಪತಿಯ ಘನತೆಯನ್ನು ಎತ್ತಿ ಹಾಡಿದರೆ ಇನ್ನೊಂದು ಪಕ್ಷ ವೀರಭದ್ರ ದೇವರ ಘನತೆಯನ್ನು ಎತ್ತಿಹಿಡಿದು ವಾದ ಮಾಡುತ್ತದೆ. ಹೀಗೆ ಕೆಲವು ಸಮಸ್ಯೆಗಳಿಗೆ ಚಾತುರ್ಯಯುಕ್ತವಾಗಿ ಪ್ರಶ್ನೆ-ಉತ್ತರದ ಚಕಮಕಿ ನಡೆಯುತ್ತದೆ. ಈ ವಾದ ಒಮ್ಮೆ ಮುಗಿದರೆ ಇನ್ನೊಮ್ಮೆ ಮುಗಿಯದಿರುವುದೂ ಉಂಟು. ಒಂದು ಇನ್ನೊಂದಕ್ಕಿಂತ ಮೇಲು ಎಂದು ಸ್ಥಾಪಿಸುವ ಭರದಲ್ಲಿ ಲಾವಣಿಯ ಲಾವಣ್ಯಕ್ಕೆ ಭಂಗವನ್ನುಂಟುಮಾಡುವ ಸಂದರ್ಭಗಳೂ ಉಂಟು.

ಲಾವಣಿಗಳಲ್ಲಿ ವಿಸ್ತಾರವಾದ ಲಾವಣಿಗಳೂ ಉಪಲಾವಣಿಗಳೂ ಇವೆ. ಪೌರಾಣಿಕ, ಸಾಮಾಜಿಕ, ಐತಿಹಾಸಿಕ ವಿಷಯಗಳು ಸಾಮಾನ್ಯವಾಗಿ ಈ ಲಾವಣಿಯ ಮುಖ್ಯ ವಸ್ತುಗಳಾಗಿ ಕಂಡುಬರುತ್ತವೆ. ಶೃಂಗಾರ ಹಾಗೂ ಹಾಸ್ಯಪ್ರಧಾನ ಲಾವಣಿಗಳ ಪ್ರಾಚುರ್ಯ ಹೆಚ್ಚು. ಹಳೆಯ ಸಂಪ್ರದಾಯದ ಲಾವಣಿಗಳು, ಹೊಸ ಸಂಪ್ರದಾಯದ ಲಾವಣಿಗಳು ಎಂದು ಇವುಗಳ ಬಗೆಗಳನ್ನು ವಿಭಜಿಸಲಾಗಿದೆ. ಹಳೆಯ ಲಾವಣಿಗಳು ರಚನಾರೀತಿ ಮತ್ತು ಕಲ್ಪನಾರಮ್ಯತೆಯ ದೃಷ್ಟಿಯಿಂದ ವಿಶಿಷ್ಟ ಸ್ಥಾನಕ್ಕೆ ಅರ್ಹವಾದವು.

ಸಾಮಾನ್ಯವಾಗಿ ಲಾವಣಿಕಾರರು ಪ್ರತಿ ಲಾವಣಿಯನ್ನು ಹಾಡುವಾಗಲೂ ಮೊದಲಿಗೊಂದು ಉಪೋದ್ಘಾತ ಸ್ವರೂಪದ ಚಿಕ್ಕಹಾಡನ್ನೂ ಕೊನೆಗೊಂದು ಉಪಸಂಹಾರ ಸ್ವರೂಪದ ಹಾಡನ್ನೂ ಹೇಳುವುದು ವಾಡಿಕೆ. ಸೂಚನಾ ಪಲ್ಲವಿಯನ್ನು ಸಖಿ ಎಂದೂ ಕೊನೆಯದನ್ನು ಖ್ಯಾಲಿ ಎಂದೂ ಹೆಸರಿಸುತ್ತಾರೆ. ಪ್ರತಿ ಲಾವಣಿಯಲ್ಲೂ ಚೌಕ ಎಂಬ ವಿಭಾಗವನ್ನು ಕಲ್ಪಿಸಿ, ಅದರಲ್ಲಿ ಕೆಲವು ನುಡಿಗಳು ಸೇರಿರಬೇಕೆಂದು ಇಟ್ಟುಕೊಂಡಿದ್ದಾರೆ. ಅಂಥ ನಾಲ್ಕೋ ಆರೋ ಚೌಕ ಸೇರಿದರೆ ಒಂದು ಇಡೀ ಲಾವಣಿ ಆಗುತ್ತದೆ.

ಲಾವಣಿ ಹಾಡುವಾಗ ಸಾಮಾನ್ಯವಾಗಿ ಇಬ್ಬರು ಜೊತೆಯಾಗುತ್ತಾರೆ. ಅವರು ಎಡಗೈಯಲ್ಲಿ ಕೈತಾಳ, ಬಲಗೈಯಲ್ಲಿ ಡಪ್ಪು ಹಿಡಿದು ಗೆಜ್ಜೆ ಕಟ್ಟಿಕೊಂಡು ಹಾಡಲು ಸಿದ್ಧವಾಗುತ್ತಾರೆ. ಅವರ ಹಿಂದೆ ತಿಂತಿಣಿ ಎಂಬ ವಾದ್ಯವನ್ನು ಹಿಡಿದ ಸೂರಿನವ ನಿಂತಿರುತ್ತಾನೆ.

ಲಾವಣಿಕಾರ ಲಾವಣಿಯ ಕೊನೆಯಲ್ಲಿ ತನ್ನ ಊರು, ಅಧಿದೈವ, ಗುರು ಪರಂಪರೆ, ಹಾಡುವ ಜೊತೆಗಾರರು ಮುಂತಾದ ವಿಷಯಗಳನ್ನೂ ತನ್ನ ಹಾಡು ಎಂಥ ಪ್ರಭಾವಶಾಲಿಯಾದುದು, ಪ್ರತಿಪಕ್ಷದವರನ್ನು ಹೇಗೆ ಆಕರ್ಷಿಸಬಲ್ಲುದು ಎಂಬ ಅಂಶವನ್ನೂ ಸೂಚಿಸುತ್ತಾನೆ:

ಮನ ಸಂತೋಷವಾಯ್ತು ಬೆಳದಿಂಗಳ ಮಳಿಕುಟ್ಟಿ | ಮಳಿಕುಟ್ಟಿ |
ಸುತ್ತ ರಾಜ್ಯದಾಗ ಹಲಸಂಗಿ ಊರ ಕರಿಕೋಟೀ | ಕರಿಕೋಟೀ|
ಗಂಡು ಬಾಳು ವಸ್ತಾದರ ಆ ಕಡಿ ನಡಗಟ್ಟಿ | ನಡಗಟ್ಟಿ |
ಕರನಾಟಕ ಹಲಸಂಗಿ ಊರ | ಮೆರಿಯತಾವ ತೂರ |
ಮಲಿಕ ಮೈತರ | ಹಚ್ಚಿ ವರಗಿ |
ಖಾಜ್ಯಾನ ಕವೀ ಸವಿ ಸಕ್ಕರಿ ಎಲ್ಲರಿಗಿ |
ಖಂಡೂನ ಸೂರ ಕೇಳಿ ಕಲ್ಲ ಮನಸು ಕರಗಿ |

ಕಲ್ಕಿ-ತುರಾಯಿ ಸಂಪ್ರದಾಯ ಹಾಗೂ ಆ ಸಂಬಂಧವಾದ ಲಾವಣಿಗಳು ಕರ್ನಾಟಕ ಜಾನಪದದ ಒಂದು ಪ್ರಮುಖ ಅಂಗ. ಅತ್ಯುತ್ಕೃಷ್ಟ ಲಾವಣಿಗಳು ಈ ಪರಂಪರೆಯಲ್ಲಿ ಲಭ್ಯವಾಗಿ ಕನ್ನಡ ಜನಪದ ಕಾವ್ಯಸಂಪತ್ತಿನ ಹಿರಿಮೆಯನ್ನು ಸಾರುತ್ತಿವೆ. (ಎಸ್.ಎಲ್.)

**ಕಲ್ಲತ್ತಗಿರಿ :** ಚಿಕ್ಕಮಗಳೂರು ಜಿಲ್ಲೆ ತರೀಕೆರೆ ತಾಲ್ಲೂಕಿನಲ್ಲಿರುವ ಒಂದು ಪರ್ವತ. ತರೀಕೆರೆಯಿಂದ ದಕ್ಷಿಣಕ್ಕೆ 20ಕಿಮೀ ದೂರದಲ್ಲಿದೆ. ಕಲ್ಲತ್ತಗಿರಿ, ಕಲ್ಲತ್ತಿಗಿರಿ ಎಂದೂ ಕರೆಯಲಾಗುತ್ತದೆ. ಗಿರಿಪರ್ವತ ಶ್ರೇಣಿಗೆ ಸೇರಿದ ಈ ಪರ್ವತ ಸಮುದ್ರಮಟ್ಟದಿಂದ 1876ಮೀ ಎತ್ತರವಾಗಿದೆ. ಮನಮೋಹಕ ಪ್ರಕೃತಿ ಸೌಂದರ್ಯದಿಂದಲೂ ಆಹ್ಲಾದಮಯ ಹವಾಗುಣದಿಂದಲೂ ಕೂಡಿರುವ ಗಿರಿಯ ನೆತ್ತಿಯ ಮೇಲೆ ಕಟ್ಟಿನ ಚೌಡೇಶ್ವರಿ ದೇವಾಲಯವೊಂದಿದೆ.

ಕಲ್ಲತ್ತಗಿರಿಯ ಸಮೀಪದಲ್ಲಿಯೇ ಕಲ್ಲತ್ತಿಪುರ ಎಂಬ ಊರಿದೆ. ಇದು ಕೆಮ್ಮಣ್ಣುಗುಂಡಿಯಿಂದ 10ಕಿಮೀ ದೂರದಲ್ಲಿದ್ದು ನಿಸರ್ಗ ರಮಣೀಯತೆಯಿಂದ ಕೂಡಿದೆ. ಈ ಪ್ರದೇಶದಲ್ಲಿರುವ ಕಲ್ಲತ್ತ ಜಲಪಾತ ಜಿಲ್ಲೆಯ ಸುಂದರ ಜಲಪಾತಗಳಲ್ಲಿ ಒಂದು. ಇದು ಸು.130ಮೀಟರ್ (ಸು.400ಅಡಿ) ಆಳಕ್ಕೆ ಧುಮುಕುತ್ತಿದ್ದು ತನ್ನ ಪ್ರಕೃತಿ ಸಹಜ ದೃಶ್ಯದಿಂದ ನೋಡುಗರನ್ನು ಮಂತ್ರ ಮುಗ್ಧರನ್ನಾಗಿಸುತ್ತದೆ.

ಪೂರ್ವದಲ್ಲಿ ಕಲ್ಲತ್ತಗಿರಿ ಪ್ರದೇಶ ಅಗಸ್ತ್ಯ ಋಷಿಯ ಆಶ್ರಮಗಳಲ್ಲಿ ಒಂದಾಗಿತ್ತೆಂದು ಪ್ರತೀತಿ. ಇಲ್ಲಿ ಎರಡು ಬಂಡೆಗಳ ನಡುವೆ ವೀರಭದ್ರನ ದೇವಾಲಯವಿದೆ. ಇದನ್ನು ವಿಜಯನಗರದ ಅರಸರ ಕಾಲದಲ್ಲಿ ನಿರ್ಮಿಸಲಾಗಿದೆ ಎಂದು ತಿಳಿದುಬರುತ್ತದೆ. ಹೊರಗಿನಿಂದ ಇದೊಂದು ಗುಹಾದೇವಾಲಯದಂತಿದ್ದು ಇದರ ಮುಂಭಾಗದಲ್ಲಿ ಕಲ್ಲಿನಲ್ಲಿ ಕೆತ್ತಿದ ಮೂರು ಆನೆಗಳ ಚಿತ್ರಗಳಿವೆ. ಇವುಗಳ ನೆತ್ತಿಯ ಮೇಲಿನಿಂದ ಜಲಪಾತದ ನೀರು ಕೆಳಕ್ಕೆ ಧುಮ್ಮಿಕ್ಕುತ್ತದೆ. ಭಕ್ತಾದಿಗಳು ಈ ನೀರಿನಲ್ಲಿ ಮಿಂದು ದೇವರ ದರ್ಶನ ಮಾಡುತ್ತಾರೆ. ಇಲ್ಲಿ ಪ್ರತಿ ವರ್ಷ ಏಪ್ರಿಲ್ - ಮೇ ತಿಂಗಳಿನಲ್ಲಿ ಮೂರು ದಿನಗಳ ಕಾಲ ವೀರಭದ್ರನ ಜಾತ್ರೆ ನಡೆಯುತ್ತದೆ. ಇಲ್ಲಿಂದ ಸುಮಾರು ಒಂದು ಕಿಮೀ ದೂರದಲ್ಲಿ ಜಕ್ಕರಿಪುದಿ ಎಂಬ ಸ್ಥಳವಿದೆ. ಅಲ್ಲಿ ಗಂಗಾತೀರ್ಥ ಎಂಬ ಹೆಸರಿನ ಒಂದು ಕೊಳವಿದೆ. ಅದರ ಸುತ್ತಲೂ ಜೇನುಗೂಡುಗಳಿರುವುದೊಂದು ವಿಶೇಷ. ಈ ಸ್ಥಳದಲ್ಲಿ ಭದ್ರಾವತಿಯ ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕುಕಾರ್ಖಾನೆಗೆ ಸೇರಿದ ಒಂದು ಪ್ರವಾಸಿ ಮಂದಿರವಿದೆ (ನೋಡಿ: ಚಿಕ್ಕಮಗಳೂರು). (ಎಂ.ಪಿ.ಎಂ.)

**ಕಲ್ಪನಾ :** -1979. ಕನ್ನಡ ಚಲನಚಿತ್ರ ಅಭಿನೇತ್ರಿ. ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರಿನಲ್ಲಿ ಜನಿಸಿದರು. ಕಾನ್ವೆಂಟಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗಲೇ ಅಭಿನಯದ ಕಲೆಯನ್ನೂ ರೂಢಿಸಿಕೊಂಡು ಬಂದ ಕಲಾವಿದೆ. ಹದಿನಾರರ ಹರೆಯದಲ್ಲಿ ವಿದ್ಯಾಭ್ಯಾಸ ನಿಲ್ಲಿಸಿ



ರಂಗಭೂಮಿಯತ್ತ ನಡೆದರು. ಒಮ್ಮೆ ದಾವಣಗೆರೆಯಲ್ಲಿ ಹವ್ಯಾಸಿ ರಂಗಭೂಮಿಯ ನಾಟಕದಲ್ಲಿ ಅಭಿನಯಿಸುತ್ತಿದ್ದಾಗ ಕನ್ನಡ ಚಿತ್ರರಂಗದ ನರಸಿಂಹರಾಜು ಅವರ ಪರಿಚಯವಾಯಿತು. ಇಲ್ಲಿಂದ ಮದರಾಸಿಗೆ ಪ್ರಯಾಣ. ಎಂ.ವಿ.ರಾಜಮ್ಮ ನವರ 'ಸಾಕುಮಗಳು' ಚಿತ್ರದ ಮೂಲಕ ಕಲ್ಪನಾ ರಜತರಂಗ ಪ್ರವೇಶಿಸಿ, ಪದ್ಮಿನಿ ಚಿತ್ರ ಸಂಸ್ಥೆಯ ಖಾಯಂನಟಿಯಾಗಿ ನಾಲ್ಕಾರು ಚಿತ್ರಗಳಲ್ಲಿ ಅಭಿನಯಿಸಿದರು. ಮುಂದೆ ತ್ರಿವೇಣಿಯವರ ಕಾದಂಬರಿ ಬೆಳ್ಳಿಮೋಡ ಚಿತ್ರ, ಅನಂತರ ನಾಂದಿ ಚಿತ್ರದಲ್ಲಿ ಅಭಿನಯ. ಬಂಗಾರದ ಹೂವಿನಲ್ಲಿ ಕುಷ್ಠರೋಗಿಯಾಗಿ, ಗೆಜ್ಜೆಪೂಜೆಯಲ್ಲಿ ವೇಶ್ಯೆಯ ಪುತ್ರಿ ಚಂದ್ರಳಾಗಿ, ಶರಪಂಜರದ ಬುದ್ಧಿಭ್ರಮಣೆಯ ಕಾವೇರಿಯಾಗಿ, ಉಯ್ಯಾಲೆಯ ರಾಧ, ಸರ್ವಮಂಗಳದ ಮಂಗಳೆ, ಕಪ್ಪು ಬಿಳುಪಿನ ವತ್ಸಲಾ, ಚಂದ್ರ (ದ್ವಿಪಾತ್ರ)- ಹೀಗೆ ಒಂದೊಂದು ಚಿತ್ರವೂ ಕಲ್ಪನಾರ ಅಭಿನಯಕ್ಷೇತ್ರದ ಮೈಲಿಗಲ್ಲುಗಳಾಗಿ ಇವರಿಗೆ ಶ್ರೇಷ್ಠ ನಟಿಯ ಬಿರುದು ಗಳಿಸಿಕೊಟ್ಟಿವೆ. ತ್ರಿವೇಣಿಯವರ ಮತ್ತೊಂದು ಕೃತಿ ಹಣ್ಣೆಲೆ ಚಿಗುರಿದಾಗ ಚಿತ್ರದ ವಿಧವೆಯ ಪಾತ್ರದಲ್ಲಿ ಕಲ್ಪನಾ ನೀಡಿದ ಪ್ರೌಢಾಭಿನಯ ಆ ಪಾತ್ರವನ್ನೇ ಸಜೀವಗೊಳಿಸಿತು. ಇದಲ್ಲದೆ ಶರಪಂಜರ, ನಾ ಮೆಚ್ಚಿದ ಹುಡುಗಿ, ಗಂಧದ ಗುಡಿ, ಬಯಲುದಾರಿ, ನಾರಿ ಮುನಿದರೆ ಮಾರಿ, ಒಂದೇ ಕುಲ ಒಂದೇ ದೈವ, ಕರುಳಿನ ಕರೆ, ಮುಕ್ತಿ, ಪ್ರೇಮಕ್ಕೂ ಪರ್ಮಿಟ್ಟೇ ಚಿತ್ರಗಳಲ್ಲೂ ವೈವಿಧ್ಯಮಯ ಅಭಿನಯ ನೀಡಿದರು. ಎರಡು ಕನಸು ಚಿತ್ರದ ಅಭಿನಯ ಪ್ರೇಕ್ಷಕರ ಮೆಚ್ಚುಗೆಗಳಿಸಿತು. ಅಪಾರಶ್ರದ್ಧೆ ವಹಿಸಿ ಪಾತ್ರದೊಡನೆಯೇ ಏಕೀಕೃತವಾಗಿರುವಂತೆ ಅಭಿನಯಿಸುವುದು ಇವರ ವೈಶಿಷ್ಟ್ಯ.

ಇವರು ಉತ್ತಮ ವಾಗ್ಮಿಗಳೂ ಸಾಹಿತ್ಯಪ್ರಿಯರೂ ಆಗಿದ್ದರು. ಪ್ರಕೃತಿ ಸೌಂದರ್ಯ, ಕಲೆ-ಸಂಗೀತಗಳ ಬಗ್ಗೆ ಆಸಕ್ತರು. ಇವರ ಮಾತೃ ಭಾಷೆ ತುಳುವಾದರೂ ಕನ್ನಡದ ಬಗ್ಗೆ ಹೆಚ್ಚಿನ ಆಸಕ್ತಿ. ತುಳು, ಕನ್ನಡ, ಮಲೆಯಾಳಂ, ತೆಲುಗು ಹಾಗೂ ತಮಿಳು ಚಿತ್ರಗಳೂ ಸೇರಿದಂತೆ ಸುಮಾರು 73ಚಿತ್ರಗಳ ನಾಯಕಿಯಾಗಿ ಅಭಿನಯಿಸಿದರು. ತಮ್ಮ ಉತ್ತಮ ಅಭಿನಯಕ್ಕಾಗಿ ಕರ್ನಾಟಕ ಸರ್ಕಾರದಿಂದ ಪ್ರಶಸ್ತಿ ಗಳಿಸಿದರು. ಮಾಸ್ಕೋದಲ್ಲಿ ನಡೆದ ಚಿತ್ರೋತ್ಸವಕ್ಕೆ ಆಹ್ವಾನಿತರಾಗಿ ಹೋಗಿದ್ದ ಕಲ್ಪನಾ ಅಲ್ಲಿನ ಕಲಾವಿದರಲ್ಲಿ ಮತ್ತು ಚಿತ್ರರಸಿಕರಲ್ಲಿ ಕನ್ನಡ ಚಿತ್ರದ ಬಗ್ಗೆ ಆಸಕ್ತಿ ಮೂಡಿಸಿ ಬಂದುದು ಒಂದು ವಿಶೇಷ ಸಂಗತಿ. ದುರಂತ ಪಾತ್ರಗಳಲ್ಲಿ ನಟಿಸುತ್ತಿದ್ದ ಕಲ್ಪನಾರ ಜೀವನವೂ ದುರಂತಮಯವಾಗಿ ಕೊನೆಗೊಂಡಿತು. ಆತ್ಮಹತ್ಯೆ ಮಾಡಿಕೊಂಡು ತಮ್ಮ ಜೀವನ ಕೊನೆಗೊಳಿಸಿದರು (1979). (ಬಿ.ಎಸ್.ಎಸ್.ಆರ್)

**ಕಲಬುರ್ಗಿ, ಎಂ.ಎಂ. :** 1938-. ಕನ್ನಡದ ಪ್ರಸಿದ್ಧ ಸಂಶೋಧಕರು, ವಿಶ್ರಾಂತ ಕುಲಪತಿಗಳು. ಬಿಜಾಪುರ ಜಿಲ್ಲೆ ಸಿಂದಗಿ ತಾಲ್ಲೂಕಿನ ಗುಬ್ಬೇವಾಡದಲ್ಲಿ 1938 ನವೆಂಬರ್ 29ರಂದು ಜನಿಸಿದರು. ತಂದೆ ಮಡಿವಾಳಪ್ಪ, ತಾಯಿ ಗುರವ್ವ. ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದ ಇವರು ಬಿ.ಎ. ಮತ್ತು ಎಂ.ಎ. ಪದವಿಗಳನ್ನು ಪ್ರಶಸ್ತಿಯೊಂದಿಗೆ ಉನ್ನತಶ್ರೇಣಿಯಲ್ಲಿ ಪಡೆದರು. ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ ಎಂಬ ಮಹಾಪ್ರಬಂಧಕ್ಕೆ ಪಿಎಚ್.ಡಿ. ಪದವಿ ಗಳಿಸಿದರು.



ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಅಧ್ಯಾಪಕರಾಗಿ ವೃತ್ತಿಜೀವನ ಆರಂಭಿಸಿದ (1962) ಇವರು ಅನಂತರ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠವನ್ನು ಸೇರಿ (1966) ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ 32 ವರ್ಷಗಳ ಸುದೀರ್ಘ ಸೇವೆ ಸಲ್ಲಿಸಿದರು. ಬಳಿಕ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿ ನೇಮಕಗೊಂಡು (1998) ಮೂರು ವರ್ಷ ಕ್ರಿಯಾಶೀಲರಾಗಿ ದುಡಿದರು.

ಕಲಬುರ್ಗಿಯವರು ಸಂಶೋಧನೆಗಾಗಿ ತಮ್ಮನ್ನು ಅರ್ಪಿಸಿಕೊಂಡು ಈ ಕಾರ್ಯವನ್ನು ನಿರಂತರವಾಗಿ ನಡೆಸಿಕೊಂಡು ಬಂದವರು. ಇವರ ಸಂಶೋಧನೆ ಎರಡು ಬಗೆಯದು. ಒಂದು, ವೈಯಕ್ತಿಕ ನೆಲೆಯಲ್ಲಿ ಕೈಗೊಂಡ ಸಂಶೋಧನೆ; ಮತ್ತೊಂದು ಸಾಂಸ್ಥಿಕ ನೆಲೆಯಲ್ಲಿ ಮಾಡಿದ ಸಂಶೋಧನೆ. ಹಳಗನ್ನಡ ಸಾಹಿತ್ಯ, ಸಂಸ್ಕೃತಿ, ಇತಿಹಾಸ, ಜಾನಪದ, ಶಾಸನ, ಭಾಷಾವಿಜ್ಞಾನ (ನಾಮವಿಜ್ಞಾನ) ಹೀಗೆ ಇವರ ಸಂಶೋಧನೆಯ ವ್ಯಾಪ್ತಿ ದೊಡ್ಡದು. ಇವರು 46ಕ್ಕೂ ಹೆಚ್ಚು ಗ್ರಂಥಗಳನ್ನೂ 200 ಸಂಶೋಧನ ಲೇಖನಗಳನ್ನೂ ಬರೆದಿದ್ದಾರೆ; ಅನೇಕ ಕೃತಿಗಳನ್ನು ಸಂಪಾದಿಸಿದ್ದಾರೆ.

ಸಂಶೋಧನೆ ಸತ್ಯನಿಷ್ಠವಾಗಿರಬೇಕೆಂಬ ಸಿದ್ಧಾಂತದಲ್ಲಿ ನಂಬಿಕೆಯುಳ್ಳ ಇವರು "ಸಂಶೋಧನೆ ಎನ್ನುವುದು ಸತ್ಯವನ್ನು ಶೋಧಿಸಲು ಮಾಡಿಕೊಂಡ ಪ್ರತಿಜ್ಞೆ, ಸತ್ಯ ಕಹಿಯಾಗಿರುವುದೇ ಹೆಚ್ಚು" ಎಂಬುದನ್ನು ಮನಗಂಡವರು. ಸಂಶೋಧನೆಯಲ್ಲಿ ಕ್ಷೇತ್ರಕಾರ್ಯದ ಅನುಭವಗಳಿಗೂ ಹೆಚ್ಚು ಒತ್ತುಕೊಟ್ಟವರು. ಈ ಕಾರಣಕ್ಕಾಗಿ ಇವರು ನಾಡಿನಾದ್ಯಂತ ಹಾಗೂ ನಾಡಿನ ಹೊರಗೂ ಸಂಚರಿಸಿದ್ದಾರೆ. ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ, ನಿಂಬಸಾಮಂತ ಚರಿತೆ, ಸಿರುಮಣನಾಯಕನ ಸಾಂಗತ್ಯ, ಸಿರುಮನ ಚರಿತೆ, ಗೊಲ್ಲಸಿರುಮನ ಚರಿತೆ, ಕೊಂಡಗುಳಿ ಕೇಶಿರಾಜನ ಕೃತಿಗಳು, ವಿಜಾಪುರ - ಧಾರವಾಡ ಜಿಲ್ಲೆಯ ಶಾಸನಗಳು (1976), ಕರ್ನಾಟಕ ಕೈಫಿಯತ್ತುಗಳು (1994) ಮೊದಲಾದ ಸಂಪಾದಿತ ಕೃತಿಗಳು ಕರ್ನಾಟಕದ ಇತಿಹಾಸ ರಚನೆಯಲ್ಲಿ ಅಪೂರ್ವ ಆಕರ ಗ್ರಂಥಗಳಾಗಿವೆ.

ಹಳಗನ್ನಡ ಸಾಹಿತ್ಯವನ್ನು ಆಳವಾಗಿ ಅಭ್ಯಾಸಮಾಡಿ ವಿದ್ವತ್ತು ಗಳಿಸಿರುವ ಇವರಿಗೆ ಪಂಪ, ವಚನಕಾರರು, ಹರಿಹರ ಅಚ್ಚುಮೆಚ್ಚು. ಹಾಗಾಗಿ ಪ್ರಾಚೀನ ಗ್ರಂಥಗಳ ಪರಿಷ್ಕರಣ ವಿಚಾರದಲ್ಲಿ ಆಸ್ಥೆ ಬೆಳೆಸಿಕೊಂಡರು. ಚೆನ್ನಬಸವಣ್ಣನವರ ಷಟ್ಸ್ಥಲವಚನ, ಮಹಾಸಂಪುಟ (1990) ಬಸವಣ್ಣನವರ ಟೀಕಿನ ವಚನಗಳು, ಹರಿಹರನ ರಗಳೆಗಳು, ಕುಮಾರರಾಮ ಸಾಂಗತ್ಯಗಳ ಸಂಪಾದನೆ ಮೂಲಕ ಆಕರ ಸಂಶೋಧನೆಗೆ ಕೊಡುಗೆ ನೀಡಿದರು. ಇವರು ರಚಿಸಿದ 'ಕನ್ನಡ ಗ್ರಂಥಸಂಪಾದನ ಶಾಸ್ತ್ರ' (1972) ಈ ಕ್ಷೇತ್ರದ ಒಂದು ಮಹತ್ವದ ಕೃತಿ. 'ಕನ್ನಡ ಸಂಶೋಧನ ಶಾಸ್ತ್ರ', (1992) ಹಸ್ತಪ್ರತಿ ಶಾಸ್ತ್ರ ಕನ್ನಡ ನಾಮ ವಿಜ್ಞಾನ ಶಾಸ್ತ್ರ -ಇವು ಆಯಾ ಕ್ಷೇತ್ರದ ಅಮೂಲ್ಯ ಕೃತಿಗಳೆನಿಸಿವೆ.

ಕಲಬುರ್ಗಿಯವರ ಸಮಗ್ರ ಸಂಶೋಧನ ಬರೆಹಗಳು 'ಮಾರ್ಗ' ಎಂಬ ಹೆಸರಿನಲ್ಲಿ ಪುಸ್ತಕ ರೂಪದಲ್ಲಿ ನಾಲ್ಕು ಸಂಪುಟಗಳಲ್ಲಿ ಪ್ರಕಟವಾಗಿವೆ. ಈ ಎಲ್ಲ ರಚನೆಗಳು ಸಾಹಿತ್ಯ, ಸಂಸ್ಕೃತಿ, ಶಾಸನ, ಜಾನಪದ ಕ್ಷೇತ್ರದಲ್ಲಿ ನಡೆಸಿದ ಬಹುಮುಖೀ ಸಂಶೋಧನೆಗೆ ಹಿಡಿದ ಕನ್ನಡಿಯಾಗಿದೆ. ವ್ಯಾಖ್ಯಾನ ಮತ್ತು ವಿಶ್ಲೇಷಣೆಗಳನ್ನು ಮೇಳೈಸಿ ಕೊಂಡಿರುವುದೇ ಇಲ್ಲಿನ ಸಂಶೋಧನೆಯ ವೈಶಿಷ್ಟ್ಯ. ಸಂಶೋಧನ ಪ್ರತಿಭೆಯ ಬಹುಶ್ರುತತೆಯನ್ನು ನಾವು ಈ ಲೇಖನಗಳಲ್ಲಿ ಕಾಣಬಹುದಾಗಿದೆ. ಈ ಸರಣಿಯ ನಾಲ್ಕನೆಯ ಸಂಪುಟ 2004ರಲ್ಲಿ ಬೆಳಕುಕಂಡಿದೆ.

ಕನ್ನಡ ಸಂಶೋಧನೆಗೆ ಸಂಬಂಧಿಸಿದಂತೆ ಹಲವಾರು ಉತ್ತಮ ಯೋಜನೆಗಳನ್ನು ಇವರು ರೂಪಿಸಿ, ಅದರಲ್ಲಿ ಸಂಸ್ಥೆಗಳನ್ನು ತೊಡಗಿಸಿಕೊಂಡು ಸಾಕಾರಗೊಳಿಸಿದ್ದಾರೆ. ಈ ಪೈಕಿ ಕನ್ನಡ ಹಸ್ತಪ್ರತಿಗಳ ಸಂಗ್ರಹಣೆ, ಪರಿವೀಕ್ಷಣೆ, ಸಮಗ್ರ ವಚನ ಸಾಹಿತ್ಯ ಪ್ರಕಟಣೆ, ಕರ್ನಾಟಕದ ನೆರೆಯ ರಾಜ್ಯಗಳ ಹಸ್ತಪ್ರತಿ ಸಂಗ್ರಹ, ಮಾನಸೋಲ್ಲಾಸ ಅನುವಾದ, ಅಪ್ರಕಟಿತ ವೀರಶೈವ ಗ್ರಂಥಗಳ ಪ್ರಕಟಣಾ ಯೋಜನೆ ಬೆಲೆಯುಳ್ಳವಾಗಿವೆ.

ಇವರು ತಮ್ಮ ಸಾಹಿತ್ಯಕ ಸಾಧನೆಗಾಗಿ ಅನೇಕ ಗೌರವ, ಪುರಸ್ಕಾರಗಳಿಗೆ ಪಾತ್ರರಾಗಿದ್ದಾರೆ. ಶಾಸನಗಳಲ್ಲಿ ಶಿವಶರಣರು (1970), ಶಾಸನ ವ್ಯಾಸಂಗ (1974) ಮೊದಲಾದ ಐದು ಗ್ರಂಥಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ವರ್ಷದ ಶ್ರೇಷ್ಠ ಪುಸ್ತಕ ಬಹುಮಾನ ಲಭ್ಯವಾಗಿದೆ. ವಿಶ್ವಮಾನವ ಪ್ರಶಸ್ತಿ (1990), ರಾಜ್ಯೋತ್ಸವ ಪ್ರಶಸ್ತಿ (1991), ವರ್ಧಮಾನ ಪ್ರಶಸ್ತಿ (1994) ಇವರಿಗೆ ಸಂದಿವೆ. ಇವರಿಗೆ 1996ರಲ್ಲಿ ಕರ್ನಾಟಕ ಸರ್ಕಾರ ಪಂಪ ಪ್ರಶಸ್ತಿ ನೀಡಿ ಗೌರವಿಸಿದೆ. ಪಂಪ ಪ್ರಶಸ್ತಿಯಿಂದ ಬಂದ ಒಂದು ಲಕ್ಷರೂಪಾಯಿಗಳನ್ನು ಇವರು ಅಣ್ಣಿಗೇರಿಯಲ್ಲಿ ಪಂಪನ ಹೆಸರಿನ ಸಂಶೋಧನ ಕೇಂದ್ರ ತೆರೆಯಲು ಕೊಡುಗೆಯಾಗಿ ನೀಡಿದರು. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಇವರಿಗೆ ಜಾನಪದ ತಜ್ಞ ಪ್ರಶಸ್ತಿ ನೀಡಿದೆ. ಇವರಿಗೆ ಮಹಾಮಾರ್ಗ ಎಂಬ ಗೌರವ ಗ್ರಂಥವನ್ನು ಸಮರ್ಪಿಸಲಾಗಿದೆ. (ವೈ.ಸಿ.ಬಿ.)

**ಕಲ್ಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ ತಾಲ್ಲೂಕಿನಲ್ಲಿ ಕಸಬೆಯಿಂದ ವಾಯುವ್ಯಕ್ಕೆ 5ಕಿಮೀ ದೂರದಲ್ಲಿರುವ ಗ್ರಾಮ. ಐತಿಹಾಸಿಕ ಸ್ಥಳ. ಶಾಸನ ಹಾಗೂ ಕಾವ್ಯಗಳಲ್ಲಿ ಇದನ್ನು ಕಲ್ದೆಹ ಎಂದು ಕರೆಯಲಾಗಿದೆ. ಇದು ಜೈನ ಹಾಗೂ ವೀರಶೈವರ ಪವಿತ್ರ ಸ್ಥಳವಾಗಿತ್ತು. ಬಸದಿಯ ಮತ್ತು ಇತರ ಜೈನ ಅವಶೇಷಗಳೂ ಅನೇಕ ಶಿಲಾಶಾಸನಗಳೂ ಇಲ್ಲಿವೆ. 1368ರ ಒಂದು ಶಾಸನದಲ್ಲಿ 1ನೆಯ ಬುಕ್ಕರಾಯ ಜೈನರು ಮತ್ತು ವೈಷ್ಣವರಲ್ಲಿ ರಾಜಿ ಮಾಡಿಸಿದ ಪ್ರಸ್ತಾಪವಿದೆ. ಗ್ರಾಮದ ಪಶ್ಚಿಮಕ್ಕಿರುವ ಸಣ್ಣ ಬೆಟ್ಟದ ಮೇಲೆ ವೀರಶೈವರ ಒಂದು ಮಠವೂ ಕಲ್ಲೇಶ್ವರ ದೇವಸ್ಥಾನವೂ ಇವೆ. ಮಠ ವಿಶಾಲವಾದ ಪ್ರಾಂಗಣ ಮತ್ತು ಒಂದು ಗುಹಾ ಕೋಣೆ ಇರುವ ಕಟ್ಟಡ. ಮಠದ ಹೊರಗೆ ಗದ್ದುಗೆಗಳಿರುವ ಮೂರು ನಾಲ್ಕು ಮಂಟಪಗಳಿವೆ. ಒಂದರ ಮೇಲೆ ಬಸವನ ಪ್ರತಿಮೆಯಿದೆ. ಆ ಗದ್ದುಗೆ ಪಾಲ್ಕುರಿಕೆ ಸೋಮನಾಥನದೆಂದು ಪ್ರಸಿದ್ಧವಾಗಿದೆ. ಚೆನ್ನಬಸವಪುರಾಣದ ಪ್ರಕಾರ ಸೋಮನಾಥ ಸತ್ತದ್ದು

ಇಲ್ಲೇ. ವೀರಶೈವರು ವರ್ಷಕ್ಕೊಮ್ಮೆ ಇಲ್ಲಿ ಸೋಮನಾಥನ ಪರ್ವವನ್ನು ಆಚರಿಸುತ್ತಾರೆ. 13ನೆಯ ಶತಮಾನದ ಕಡೆಯಲ್ಲಿ ಸರ್ವಶೀಲೆ ಚನ್ನಮ್ಮ ಎಂಬ ಶರಣೆ ಇಲ್ಲಿ ಆಗಿಹೋಗಿದ್ದಳೆಂದು ಪಾಲ್ಕುರಿಕೆ ಸೋಮೇಶ್ವರ ಪುರಾಣದಿಂದಲೂ 12ನೆಯ ಶತಮಾನದಲ್ಲಿದ್ದ ಜ್ಞಾನಿ ಚೆನ್ನಬಸವಣ್ಣ ಇಲ್ಲಿ ಸಾಯುಜ್ಯ ಹೊಂದಿದನೆಂದು ಚೆನ್ನಬಸವಪುರಾಣದಿಂದಲೂ ತಿಳಿದುಬರುತ್ತವೆ. ಇಲ್ಲಿರುವ ಕಲ್ಲೇಶ್ವರ ಗುಡಿ ಒಂದು ಗುಹಾದೇವಾಲಯ. ಕಲ್ಯದಲ್ಲಿ ಶ್ರೀವೈಷ್ಣವರ ದೇವಾಲಯಗಳೂ ಇದ್ದ ಬಗ್ಗೆ ಕೆಲವು ಸುಳಿವುಗಳಿವೆ. ಹಿಂದೆ ಇಲ್ಲಿ ಒಂದು ವರದರಾಜ ದೇವಾಲಯವಿತ್ತು. ಈಗ ಅದರ ಮುಂದಿನ ಗರುಡಗಂಬ ಮಾತ್ರ ನಿಂತಿದೆ. ಆಂಜನೇಯ ದೇವಾಲಯದಲ್ಲಿ ಕೆಲವು ಆಳ್ವಾರರುಗಳ ವಿಗ್ರಹಗಳಿವೆ.

ಕಲ್ಲೇಶ್ವರ ಗುಡಿಯ ಬಳಿಯ ಒಂದು ಕಂಬದ ಮೇಲೆ ಕುಂಬಳಕಾಯಜ್ಜಿಯದು ಎನ್ನುವ ಸ್ತ್ರೀಯ ತಲೆಯೊಂದನ್ನು ಕೆತ್ತಿರುವ ಶಿಲ್ಪವಿದೆ. ಹಿಂದೆ ಈ ಊರು ಕಲಾವತಿ ಎಂಬ ಪಟ್ಟಣವಾಗಿತ್ತು. ಈಕೆ ಒಮ್ಮೆ ಕುಂಬಳಕಾಯಿಗಳನ್ನು ಮಾರಲು ತಂದಾಗ ಅದನ್ನು ಕೊಳ್ಳುವ ವಿಷಯದಲ್ಲಿ ಜೈನರು ಮತ್ತು ಇತರರಲ್ಲಿ ವಿರಸ ಉಂಟಾಗಿ ಕೊನೆಗೆ ಈ ಊರು ಹಾಳಾಯಿತೆಂದು ಪ್ರತೀತಿ. 1533ರ ಒಂದು ಶಾಸನದಲ್ಲಿ ಕಲಾವತಿ ಎಂಬ ಒಂದು ಪಟ್ಟಣದಲ್ಲಿ ಬೌದ್ಧಧರ್ಮೀಯರು ವಾಸವಾಗಿದ್ದ ಪ್ರಸ್ತಾಪವಿದೆ. ಈ ಕಲಾವತಿಯೇ ಕಲ್ಯ ಎಂಬ ಅಭಿಪ್ರಾಯವಿದೆ. *

**ಕಲ್ಯಾಡಿ :** ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕಿನಲ್ಲಿ ಕಸಬೆಯ ನೈಋತ್ಯಕ್ಕೆ 17ಕಿಮೀ ದೂರದಲ್ಲಿ ತಾಮ್ರದ ಗಣಿಗಳಿರುವ ಗ್ರಾಮ. ಇಲ್ಲಿ ಪ್ರಾಚೀನ ಮೂಸೆಗಳ ಹಾಗೂ ಕುಲುಮೆಗಳ ಅವಶೇಷಗಳು ಹೇರಳವಾಗಿ ದೊರಕಿವೆ. ಬಹಳ ಹಿಂದಿನಿಂದಲೂ ತಾಮ್ರದ ಗಣಿ ಉದ್ಯಮ ಈ ಗ್ರಾಮದಲ್ಲಿತ್ತು ಎಂಬುದಕ್ಕೆ ಇದು ಕುರುಹಾಗಿದೆ. ಹಳೆಯ ಮೈಸೂರು ಸರ್ಕಾರದ ಭೂವೈಜ್ಞಾನಿಕ ವಿಭಾಗದ ಪ್ರಥಮ ಭಾರತೀಯ ನಿರ್ದೇಶಕರಾದ ಜಯರಾಂ (1917) ಕಲ್ಯಾಡಿಯ ಭೂವೈಜ್ಞಾನಿಕ ಸಮೀಕ್ಷೆಯನ್ನು ನಡೆಸಿದರು. 1937ರಲ್ಲಿ ಡಾ.ರಾಧಾಕೃಷ್ಣ ಅವರು ತಾಮ್ರನಿಕ್ಷೇಪದ ಮಾಹಿತಿ ನೀಡಿದರು. ಎನ್.ಜಿ.ಕೆ.ಮೂರ್ತಿ 1964ರಲ್ಲಿ ಈ ಪ್ರದೇಶದ ವಿವರವಾದ ಭೂ ವೈಜ್ಞಾನಿಕ ಸಮೀಕ್ಷೆ ನಡೆಸಿ ತಾಮ್ರ ನಿಕ್ಷೇಪದ ಆಕೃತಿ, ಉದ್ದ, ಅಗಲ, ಆಳಗಳ ಪರಿಮಿತಿಯ ವಿವರವಾದ ಮಾಹಿತಿಯನ್ನು ಪ್ರಕಟಪಡಿಸಿದರು. ಅನಂತರ ಮೈಸೂರು ಸರ್ಕಾರದ ಭೂವೈಜ್ಞಾನಿಕ ವಿಭಾಗ ಅನೇಕ ಕೊರೆಗಳನ್ನು ಹಾಕುವುದರ ಮೂಲಕ ಪರೀಕ್ಷಾರ್ಥ ಪರಿಶೋಧನೆಗಳನ್ನು ನಡೆಸಿತು.

ನೀಣಿಕಲ್ಲು, ಕಣಶಿಲೆ, ಪದರಶಿಲೆ ರೂಪಾಂತರ ಹೊಂದಿದ ಮರಳು ಶಿಲೆ, ಅಂಫಿ ಬೊಲೈಟ್ ಇವು ಕಲ್ಯಾಡಿಯ ಸುತ್ತುಮುತ್ತು ಇರುವ ಪ್ರಮುಖ ಶಿಲೆಗಳು. ಅನೇಕ ಮಡಿಕೆಗಳಾಗಿ ಮಾರ್ಪಟ್ಟಿರುವ ಮರಳುಶಿಲೆಗಳಿಗೆ ತಾಮ್ರಯುಕ್ತ ಖನಿಜಗಳು ಸೀಮಿತವಾಗಿವೆ. ತಾಮ್ರದ ನಿಕ್ಷೇಪಗಳನ್ನು ಹೊಂದಿದ ಮರಳುಶಿಲೆ 1000ಮೀಟರ್ ಉದ್ದ, 8 ರಿಂದ 50ಮೀಟರ್ ಅಗಲವಿದ್ದು, 100 ರಿಂದ 280ಮೀಟರ್ ಆಳದವರೆಗೆ ದೊರೆಯುತ್ತದೆ. ಇದರಲ್ಲಿ ತಾಮ್ರದ ಅಂಶ ಸೇ.7; ತಾಮ್ರನಿಕ್ಷೇಪದ ಮೊತ್ತ 1ಕೋಟಿ ಟನ್‌ಗಳೆಂದು ಅಂದಾಜು ಮಾಡಲಾಗಿದೆ. ಈಗ ಕಲ್ಯಾಡಿ ತಾಮ್ರದ ಗಣಿಗಳು ಕರ್ನಾಟಕ ತಾಮ್ರ ಕಾರ್ಪೊರೇಷನ್‌ನ ನಿರ್ವಹಣೆಯಲ್ಲಿವೆ. (ಟಿ.ಆರ್.ಎಸ್.)

**ಕಲ್ಯಾಣಕೀರ್ತಿ :** ಸು.1439 ಜೈನಕವಿ. ಜ್ಞಾನಚಂದ್ರಾಭ್ಯುದಯ, ನಾಗಕುಮಾರಚರಿತೆ, ಕಾಮನಕಥೆ, ಚಿನ್ಮಯಚಿಂತಾಮಣಿ, ಅನುಪ್ರೇಕ್ಷೆ, ಜಿನಸ್ತುತಿ ತತ್ತ್ವಭೇದಾಷ್ಟಕ ಎಂಬ ಕನ್ನಡ ಕೃತಿಗಳ ಹಾಗೂ ಜಿನಯಜ್ಞಫಲೋದಯ, ಯಶೋಧರಚರಿತೆ ಎಂಬ ಸಂಸ್ಕೃತ ಗ್ರಂಥಗಳ ಕರ್ತೃ. ಸಿದ್ಧರಾಶಿ ಎಂಬ ಗ್ರಂಥವನ್ನೂ ಈತ ಬರೆದಿರುವಂತೆ ತೋರುತ್ತದೆ ಎಂದು ಕವಿಚರಿತೆಕಾರರು ಹೇಳಿದ್ದಾರೆ. ಆದರೆ ಇದು ಬೇರೊಂದು ಗ್ರಂಥವಾಗಿರದೆ ಮೇಲೆ ಹೇಳಿದ ಅನುಪ್ರೇಕ್ಷೆಗೆ ಇರುವ ಮತ್ತೊಂದು ಹೆಸರಾಗಿದೆ. ಈತ ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳದ ಮಠಾಧೀಶರಾಗಿದ್ದ ಲಲಿತಕೀರ್ತಿಗಳ ಶಿಷ್ಯನೆಂದು ತಿಳಿದುಬರುತ್ತದೆ.

ಜ್ಞಾನಚಂದ್ರಾಭ್ಯುದಯಕ್ಕೆ ಜ್ಞಾನಚಂದ್ರೋದಯ ಎಂಬ ಹೆಸರೂ ಕಂಡುಬರುತ್ತದೆ. ಇದನ್ನು ಶಕನೃಪದ ರತಿಲೋಕ (1362) ಸಂಖ್ಯೆಯಿಂ ವಿಧಿತ ಸಿದ್ಧಾರ್ಥಿ ವರ್ಷದಲ್ಲಿ ಎಂದರೆ 1439ರಲ್ಲಿ ಬರೆದಂತೆ ತಿಳಿಯುತ್ತದೆ. ವಿವಿಧ ಷಟ್ಪದಿಗಳನ್ನೊಳಗೊಂಡ, 908 ಪದ್ಯಗಳನ್ನುಳ್ಳ ಈ ಕಾವ್ಯ ಜ್ಞಾನಚಂದ್ರನೆಂಬ ರಾಜ ತಪಸ್ಸು ಮಾಡಿ ಮುಕ್ತಿಯನ್ನು ಪಡೆದ ಕಥೆಯಿಂದ ಕೂಡಿದೆ.

ನಾಗಕುಮಾರ ಚರಿತೆ ಮುಖ್ಯವಾಗಿ ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿದೆ (1442), ಜೊತೆಗೆ ಕಂದವೃತ್ತಗಳೂ ಬಳಕೆಯಾಗಿವೆ. ಇದಕ್ಕೆ ಫಣಿಕುಮಾರಚರಿತೆಯೆಂದೂ ಹೆಸರಿದೆ. ಇದು 5 ಸಂಧಿಗಳನ್ನೂ 5 ಪದ್ಯಗಳನ್ನೂ ಒಳಗೊಂಡಿದೆ.

ಕಾಮನಕಥೆ ಸಾಂಗತ್ಯದಲ್ಲಿ ರಚಿತವಾಗಿದೆ. ಇದರಲ್ಲಿ 4 ಸಂಧಿಗಳೂ 331 ಪದ್ಯಗಳೂ ಇವೆ. ಅಲ್ಲಲ್ಲಿ ಕಂದ, ಷಟ್ಪದಿ, ವಚನಗಳೂ ಬರುವುದುಂಟು. ಇದನ್ನು ಲಲಿತಕೀರ್ತಿಯ ಶಿಷ್ಯನಾದ ತುಳುವ ದೇಶದ ದೊರೆ ಭೈರವಸುತ ಪಾಂಡರಾಯನ ಇಷ್ಟಾನುಸಾರವಾಗಿ ಬರೆದಂತೆ ಕವಿ ಹೇಳಿಕೊಂಡಿದ್ದಾನೆ. ಕೃತಿ ಜೈನಮತಾನುಸಾರವಾಗಿ ಮನ್ಮಥಕಥಾ ನಿರೂಪಣೆಯನ್ನೊಳಗೊಂಡಿದೆ.

ಚಿನ್ಮಯಚಿಂತಾಮಣಿ ಮಾತ್ರಾವಿನ್ಯಾಸದ ಛಂದಸ್ಸಿನಿಂದ ಕೂಡಿದ್ದು ಒಟ್ಟು 105 ಪದ್ಯಗಳನ್ನೊಳಗೊಂಡಿದೆ. ಇದರಲ್ಲಿ ತತ್ತ್ವನಿರೂಪಣೆ ಅಡಕವಾಗಿದೆ. ಗ್ರಂಥದ ಕೊನೆಯಲ್ಲಿ ಪ್ರಣಿಹಿತ ಚಿನ್ಮಯಚಿಂತಾಮಣಿಯಿದು ಕಲ್ಯಾಣಕೀರ್ತಿ ಸೌಖ್ಯಾಸ್ಪದಮಂ ಮಣಿಯದೆ ಜಯಿಸಲಿ ಜಗದೊಳು ಗುಣಿಜನಗಳಿಗಿತ್ತು ಚಾರುಮುಕ್ತಿ ಶ್ರೀಯಂ ಎಂಬ ಒಂದು ಕಂದಪದ್ಯವಿದೆ.

ಅನುಪ್ರೇಕ್ಷೆ ಅಥವಾ ಸಿದ್ಧರಾಶಿಯಲ್ಲಿ 74 ಪದ್ಯಗಳಿವೆ. ಇದರಲ್ಲಿ ಕೊಂಡಕುಂದಾಚಾರ್ಯರ ಗಾಹೆಯ ಅರ್ಥವನ್ನು ವರ್ಣಿಸುವುದಾಗಿಯೂ ಪನ್ನೆರಡನುಪ್ರೇಕ್ಷೆ ಚೆನ್ನಕನ್ನಡದಿಂದವೆ ಬಾಲಕರಿಗೆ ತಿಳಿಯುವಂತೆ ಹೇಳುವುದಾಗಿಯೂ ಕವಿ ಹೇಳಿಕೊಂಡಿದ್ದಾನೆ.

ಜಿನಸ್ತುತಿ 27 ಕಂದ ಪದ್ಯಗಳನ್ನುಳ್ಳ ಚಿಕ್ಕ ಕೃತಿ. ಜಿನ ಮಹಿಮೆಯ ವರ್ಣನೆಯಿಂದ ಕೂಡಿದೆ.

ತತ್ತ್ವಭೇದಾಷ್ಟಕ 9 ಮಲ್ಲಿಕಾಮಾಲಾವೃತ್ತಗಳಲ್ಲಿ ಜೈನತತ್ತ್ವವನ್ನು ನಿರೂಪಿಸುವ ಒಂದು ಅಷ್ಟಕ ಗ್ರಂಥ. (ಬಿ.ಎಸ್.ಎಸ್.)

**ಕಲ್ಯಾಣಕುಮಾರ್ :** 1936-99. ಕನ್ನಡ ಜನಪ್ರಿಯ ಚಲನಚಿತ್ರ ನಟ, ನಿರ್ಮಾಪಕ, ನಿರ್ದೇಶಕ, ರಂಗಭೂಮಿ ಕಲಾವಿದ. 1936 ಜೂನ್ 7ರಂದು ಬೆಂಗಳೂರಿನಲ್ಲಿ ಜನಿಸಿದರು. ತಂದೆ ರಾಘವಾಚಾರ್ಯ, ತಾಯಿ ಕಲ್ಯಾಣಮ್ಮ. ಈ ದಂಪತಿಗಳಿಗೆ ಇವರು ಹನ್ನೊಂದನೆಯ ಮಗು. ವೆಂಕಟರಂಗನ್ ಇವರ ಹುಟ್ಟು ಹೆಸರು. ಎಲ್ಲರೂ ಕರೆಯುತ್ತಿದ್ದ ಹೆಸರು ಚೊಕ್ಕಣ್ಣ. ಚಿತ್ರರಂಗಕ್ಕೆ ಪ್ರವೇಶಿಸಿದಾಗ ತಾಯಿಯ ಮೇಲಿನ ಪ್ರೀತಿಯಿಂದ ತಮ್ಮ ಹೆಸರನ್ನು ಕಲ್ಯಾಣಕುಮಾರ್ ಎಂದು ಬದಲಾಯಿಸಿಕೊಂಡರು. ನ್ಯಾಷನಲ್ ಹೈಸ್ಕೂಲಿನಲ್ಲಿ ಎಸ್.ಎಸ್.ಎಲ್.ಸಿ.ವರೆಗೆ ಅಭ್ಯಾಸ ಮಾಡಿದರು.



ಅನಂತರ ಎಸ್.ಜೆ.ಎಂ. ಪಾಲಿಟೆಕ್ನಿಕ್ ಸೇರಿದರಾದರೂ ಓದನ್ನು ಮುಂದುವರಿಸಲಿಲ್ಲ. ತಂದೆ ಬಯಸಿದ್ದು ಮಗ ವೈದ್ಯ ಆಗಬೇಕೆಂದು, ಆದರೆ ಕಲ್ಯಾಣಕುಮಾರ್ ಆಯ್ಕೆ ಮಾಡಿಕೊಂಡದ್ದು ಸಿನಿಮಾರಂಗ.

ಬಾಲ್ಯದಿಂದಲೂ ಇವರಿಗೆ ಸಂಗೀತ, ನೃತ್ಯ, ಅಭಿನಯಗಳ ಕಡೆ ಆಸಕ್ತಿ. ಮೂರನೆಯ ವಯಸ್ಸಿನಲ್ಲಿಯೇ ಇವರು ರಂಗಪ್ರವೇಶಿಸಿದರು.

ಅಣ್ಣಂದಿರೆಲ್ಲರೂ ವಿದ್ಯಾವಂತರಾಗಿ ಒಳ್ಳೆಯ ಕೆಲಸದಲ್ಲಿದ್ದರೂ ಕಲ್ಯಾಣ ಕುಮಾರ್ ಬೆಂಗಳೂರಿನಿಂದ ಮುಂಬಯಿಗೆ ರೈಲು ಹತ್ತಿ ತಮ್ಮ ಭವಿಷ್ಯವನ್ನು ಅರಸುತ್ತ ಹೊರಟರು. ಅಲ್ಲಿ ಏನೊಂದೂ ಪ್ರಯೋಜನ ವಾಗದಿದ್ದಾಗ ಮದರಾಸಿಗೆ ತೆರಳಿದರು (1953). ನಿರ್ದೇಶಕ ಸಿ.ವಿ.ರಾಜು ಇವರ ಪ್ರತಿಭೆಯನ್ನು ಗುರುತಿಸಿ ನಟಶೇಖರ ಚಿತ್ರದ ನಾಯಕ ನಟನನ್ನಾಗಿಸುವ ಮೂಲಕ ಚಿತ್ರರಂಗಕ್ಕೆ ತಂದರು (1954). ರಾಜಕುಮಾರ್ ಅವರೊಂದಿಗೆ ಅಭಿನಯಿಸಿದ ಮೊದಲ ಚಿತ್ರ ಓಹಿಲೇಶ್ವರ (1956). ಅನಂತರ ರಾಯರ ಸೊಸೆ, ದೇವಸುಂದರಿ, ಭೂಕೈಲಾಸ, ಅನ್ನಪೂರ್ಣ, ಗಾಳಿಗೋಪುರ, ಭೂದಾನ ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದರು. ಸದಾರಮೆ ಚಿತ್ರದ ಕಳ್ಳನ ಪಾತ್ರ ಇವರಿಗೆ ಜನಪ್ರಿಯತೆ ತಂದುಕೊಟ್ಟಿತು. ಕನ್ನಡದ ಮೊದಲ ವರ್ಣಚಿತ್ರ ಅಮರಶಿಲ್ಪಿ ಜಕಣಾಚಾರಿಯಲ್ಲಿ ಇವರು ನಾಯಕಪಾತ್ರ ವಹಿಸಿದರು. ಇವರು ಕೆಲವು ಚಿತ್ರಗಳನ್ನು ನಿರ್ಮಿಸಿ, ನಿರ್ದೇಶಿಸಿದರು. ಎಂದೂ ನಿನ್ನವನೇ (1964), ಕಲ್ಲುಸಕ್ಕರೆ (1966) ಚಿತ್ರ ತಯಾರಿಸಿದರು. ಆ ಕಾಲದಲ್ಲಿ ಸ್ಟುಡಿಯೋ ಇಲ್ಲದೆ ತಯಾರಿಸಿದ ಚಿತ್ರ ಪ್ರವಾಸಿ ಮಂದಿರ (1967). ಇವರು 1975-76ರಲ್ಲಿ ಮನೆಮುಡದಿಮಕ್ಕಳು ಚಿತ್ರ ತಯಾರಿಸಿದರು. ಇವರು ಅಭಿನಯಿಸಿದ ಮುತ್ತೈದೆ ಭಾಗ್ಯ, ಪ್ರೇಮದ ಪುತ್ರಿ, ವಿಜಯನಗರದ ವೀರಪುತ್ರ, ಅತಿಥಿ, ತಾಯಿಕರಳು, ಲಾಯರ ಮಗಳು, ಬಂಗಾರಿ -ಇವು ತುಂಬ ಯಶಸ್ಸು ಕಂಡ ಚಿತ್ರಗಳು. ದೈವಲೀಲೆ ಚಿತ್ರದಲ್ಲಿ ದ್ವಿಪಾತ್ರದಲ್ಲಿ ಅಭಿನಯಿಸಿದರು; ಪಾಪಪುಣ್ಯ (1971) ಚಿತ್ರದ ಬಳಿಕ ಕೆಲ ಕಾಲ ಚಿತ್ರರಂಗದಿಂದ ದೂರವಾಗಿದ್ದರು. ಪುಟ್ಟಣ್ಣ ಕಣಗಾಲ್ ಅವರ ಕಥಾಸಂಗಮ, ಕಾಲೇಜುರಂಗ; ರವಿ ಅವರ ತುಳಸಿ ಚಿತ್ರಗಳ ಮೂಲಕ ಮತ್ತೆ ಚಿತ್ರರಂಗಕ್ಕೆ ಹಿಂದಿರುಗಿದರು. ಲವ್ ಇನ್ ಬೆಂಗಳೂರು ಚಿತ್ರದ ಮೂಲಕ ನಾಯಕಿ ನಟಿ ಭಾರತಿಯವರನ್ನು ಚಿತ್ರರಂಗಕ್ಕೆ (1966) ಪರಿಚಯಿಸಿದರು. ಗಾಳಿಗೋಪುರ, ಮನೆ ಅಳಿಯ, ಮಾವನ ಮಗಳು, ಚಿನ್ನದ ಗೊಂಬೆ, ಬೆಳ್ಳಿಮೋಡ, ಬೆರೆತ ಜೀವ -ಇವು ಇವರ ಅಭಿನಯದ ಯಶಸ್ವಿ ಚಿತ್ರಗಳು. ಜಯಲಲಿತ, ಬಿ.ಸರೋಜದೇವಿ, ಕಲ್ಪನಾ - ಇವರೊಡನೆ ಅಭಿನಯಿಸಿದ ಜನಪ್ರಿಯ ಯಶಸ್ವಿ ನಾಯಕಿಯರು. ಇವರು ತಮಿಳು,ತೆಲುಗು, ಮಲೆಯಾಳಂ ಚಿತ್ರಗಳಲ್ಲಿಯೂ ಅಭಿನಯಿಸಿದ್ದಾರೆ. ಇವರು ಅಭಿನಯಿಸಿದ ತಮಿಳು ಚಿತ್ರ ನೆಂಜಿಲ್ ಓರು ಆಲಯಂ ಅಪಾರ ಜನಮನ್ನಣೆ ಗಳಿಸಿತು. ಸರ್ಕಾರದಿಂದ ಪ್ರಶಸ್ತಿಯನ್ನೂ ಗಳಿಸಿತು. ಇವರು ಅಭಿನಯಿಸಿದ ಒಟ್ಟು ಚಿತ್ರಗಳು 150ಕ್ಕೂ ಹೆಚ್ಚು.

ತಮ್ಮದೇ ಆದ ಕಲ್ಯಾಣ್ ಥಿಯೇಟರ್ಸ್ ಎಂಬ ನಾಟಕ ಸಂಸ್ಥೆ ಕಟ್ಟಿಕೊಂಡು ಇಡೀ ಕರ್ನಾಟಕದಲ್ಲಿ ಹಲವು ನಾಟಕಗಳನ್ನು ಪ್ರದರ್ಶಿಸಿದರು. ಸದಾರಮೆ, ಚಿಕ್ಕಮ್ಮ, ಚನ್ನ ನನ್ನ ಅಣ್ಣ, ರಾಮು ನನ್ನ ತಮ್ಮ, ರಾಮ್ ರಹೀಂ, ಮಂಗಳೂರು ಮಾವ- ಮುಂತಾದವು ಕೆಲವು ಉಲ್ಲೇಖನೀಯ ನಾಟಕಗಳು. ಇವಲ್ಲದೆ ಕೆಲವು ವೃತ್ತಿ ನಾಟಕ ಕಂಪನಿಗಳಿಂದ ಆಹ್ವಾನ ಬಂದಾಗ ಹೋಗಿ ಅಭಿನಯಿಸಿದ್ದೂ ಉಂಟು. ಕೆಲವು ಕಿರುತೆರೆ ಧಾರವಾಹಿಗಳನ್ನು ನಿರ್ಮಿಸಿ, ನಿರ್ದೇಶಿಸಿದರು ಹಾಗೂ ಅವುಗಳಲ್ಲಿ ನಟಿಸಿದರು. ಚಿತ್ರ ಕಲಾವಿದರ ಬದುಕಿಗೆ ನೆರವಾಗಬೇಕೆಂಬ ಉದ್ದೇಶದಿಂದ ಅಶಕ್ತ ಕಲಾವಿದರ ಕಲ್ಯಾಣ ಸಮಿತಿ ಸ್ಥಾಪಿಸಿ ಅದರ ಅಧ್ಯಕ್ಷರಾಗಿ ಮೂರುವರ್ಷ ಕಾಲ ದುಡಿದರು (1967-70).

ಇವರಿಗೆ ಹಲವಾರು ಪ್ರಶಸ್ತಿಗಳು, ಗೌರವಗಳು ದೊರಕಿವೆ. ಅರುಣೋದಯ ಚಿತ್ರಕ್ಕೆ ಮದರಾಸು ಫಿಲಂಫ್ಯಾನ್ ಪ್ರಶಸ್ತಿ ಲಭಿಸಿದೆ. ಮನೆ ಅಳಿಯ ಮತ್ತು ತಮಿಳಿನ ನೆಂಜಲ್ ಓರು ಆಲಯಂ ಚಿತ್ರಗಳಿಗೆ ರಾಷ್ಟ್ರ ಪ್ರಶಸ್ತಿ ದೊರೆತಿದೆ. ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ, (1992-93), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗಳೂ ಇವರಿಗೆ ಬಂದಿವೆ. ಲಾವಣ್ಯ ಚಲನಚಿತ್ರ ಪತ್ರಿಕೆಯವರ ಲಾವಣ್ಯ ಪ್ರಶಸ್ತಿ ಲಭಿಸಿದೆ (1976). ಬೆಂಗಳೂರಿನ ಚಿತ್ರರಸಿಕರ ಸಂಘ ಪ್ರಶಸ್ತಿ ನೀಡಿ ಗೌರವಿಸಿದೆ. ವಿಜಯ ಕಲಾ ಮಂದಿರದವರು ಕಲಾರತ್ನ ಎಂಬ ಬಿರುದು ನೀಡಿ ಇವರನ್ನು ಗೌರವಿಸಿದ್ದಾರೆ. (1963-64). ಇವರಿಗೆ ಆರ್.ಎನ್.ಜಯಗೋಪಾಲ್ ಸಂಸ್ಥೆ 'ಕಲಾಪ್ರಪೂರ್ಣ' (1965), ಉದಯ ಟಿ.ವಿ. 'ಕಲಾಭೀಷ್ಮ' (1998) ಎಂಬ ಬಿರುದು ನೀಡಿವೆ.

ಇವರು ಅಂದಿನ ಪ್ರಸಿದ್ಧ ತಾರೆ ರೇವತಿಯವರನ್ನು ಪ್ರೇಮಿಸಿ ವಿವಾಹವಾಗಿದ್ದರು. ಇವರಿಗೆ ಇಬ್ಬರು ಗಂಡುಮಕ್ಕಳು. ಇವರು 1999 ಆಗಸ್ಟ್ 1ರಂದು ನಿಧನರಾದರು. (ಎಸ್.ಜಿ.ಪಿ.)

**ಕಲ್ಯಾಣಪುರ** : ಉಡುಪಿ ಜಿಲ್ಲೆ ಉಡುಪಿಯಿಂದ 4ಕಿಮೀ ಉತ್ತರಕ್ಕೆ ಅರಬ್ಬೀ ಸಮುದ್ರದಿಂದ 4ಕಿಮೀ ಪೂರ್ವಕ್ಕೆ ಕಲ್ಯಾಣಪುರ ನದಿಯ (ಸ್ವರ್ಣನದಿ) ದಕ್ಷಿಣ ದಂಡೆಯ ಮೇಲಿರುವ ಸ್ಥಳ. ಪೂರ್ವದ ತೋನ್ಸೆ ಗ್ರಾಮದ ಉಪಗ್ರಾಮ. ಇಲ್ಲಿ ವಿಜಯನಗರದ ಅರಸರ ಕಾಲದ ಕೋಟೆಯ ಅವಶೇಷಗಳು, ಅದೇ ಕಾಲದ ಕೆಂಚಮ್ಮ, ವೀರಭದ್ರ, ಮಹಾಲಿಂಗೇಶ್ವರ, ಗಣಪತಿ ಮತ್ತು ವೆಂಕಟರಮಣ ದೇವಾಲಯಗಳು ಇವೆ. ಇದರ ಸಮೀಪದಲ್ಲಿರುವ ಅರಕಲಬೆಟ್ಟ ಮತ್ತು ಉಪ್ಪೂರು ಎಂಬಲ್ಲಿ ವಿಜಯನಗರದ ಕಾಲದ ಹಲವು ಮೂರ್ತಿಗಳು ದೊರಕಿವೆ. ಕೆಳದಿ ನಾಯಕರ ಕಾಲದಲ್ಲಿ ಕಲ್ಯಾಣಪುರ ಉಚ್ಛ್ರಾಯಸ್ಥಿತಿಯಲ್ಲಿತ್ತು. ಇಲ್ಲಿ ಡಿಸೆಂಬರ್ ತಿಂಗಳಲ್ಲಿ ಪೂರ್ಣಿಮೆಯ ದಿನ ಢಕ್ಕೆ ಬಲಿ ಎಂಬ ಉತ್ಸವ ಬಹಳ ವಿಜೃಂಭಣೆಯಿಂದ ಜರುಗುವುದು. ಮಿಲಾಗ್ರಿಸ್ ಮತ್ತು ಮೌಂಟ್ ರೋಸರಿ ಎಂಬ ಎರಡು ಇಗರ್ಜಿಗಳು ಇಲ್ಲಿವೆ. ಮಿಲಾಗ್ರಿಸ್ ಇಗರ್ಜಿ ಅವರ್ ಲೇಡಿ ಆಫ್ ಮಿರೆಕಲ್ಸ್‌ರ ಹೆಸರಿನಲ್ಲಿ 17ನೆಯ ಶತಮಾನದ ಉತ್ತರ ಭಾಗದಲ್ಲಿ ಸ್ಥಾಪಿಸಿದ್ದು. ಈಗಿರುವ ಕಟ್ಟಡ 1941ರ ಪುನರ್ನಿರ್ಮಾಣ. ಮೌಂಟ್ ರೋಸರಿ ಇಗರ್ಜಿ ಕೂಡ ಕ್ಯಾತೊಲಿಕರದು. ಇದು 1837ರ ಸ್ಥಾಪನೆ.

ಕಲ್ಯಾಣಪುರದಲ್ಲಿ ಮಿಲಾಗ್ರಿಸ್ ಹೈಸ್ಕೂಲ್ ಮತ್ತು ಮಿಲಾಗ್ರಿಸ್ ಕಾಲೇಜುಗಳಿವೆ. ಕ್ಯಾತೊಲಿಕರಿಂದ ನಡೆಸಲ್ಪಡುವ ಒಂದು ಅನಾಥಾಲಯ ಇದೆ. ಕಲ್ಯಾಣಪುರ ಕೈಗಾರಿಕಾ ಕೇಂದ್ರವಾಗಿ ಬೆಳೆಯುತ್ತಿದೆ. (ಟಿ.ಪಿ.ಎಸ್.ಆರ್.)

**ಕಲ್ಯಾಣಮ್ಮ, ಆರ್.** : 1894-1965. ಸ್ತ್ರೀ ಸಮಾಜದ ಮತ್ತು ಮಕ್ಕಳ ಕಲ್ಯಾಣಕ್ಕಾಗಿ ಶ್ರಮಿಸಿದ ಲೇಖಕಿ. ಬೆಂಗಳೂರಿನಲ್ಲಿ ಜನನ. ಇವರ



ತಂದೆ ರಾಮಸ್ವಾಮಿ ಅಯ್ಯಂಗಾರ್, ತಾಯಿ ಜಾನಕಮ್ಮ. ಕಲ್ಯಾಣಮ್ಮನವರು ಮೈಸೂರು ಸೆಕೆಂಡರಿ ಪರೀಕ್ಷೆಯನ್ನು 1906ರಲ್ಲಿ ಪಾಸುಮಾಡಿದರು. ಆಗಿನ ಪದ್ಧತಿಯಂತೆ ಹತ್ತುವರ್ಷ ವಯಸ್ಸಿನಲ್ಲಿಯೇ ಇವರ ವಿವಾಹ ವಾಯಿತು. ಮುಂದೆ ಮೂರೇ ತಿಂಗಳಿನಲ್ಲಿ ಇವರು ವಿಧವೆಯಾದರು. ತಂದೆಯ ಪ್ರಭಾವದಿಂದ ಚಿಕ್ಕಂದಿನಲ್ಲಿಯೇ ಸಾಹಿತ್ಯದಲ್ಲಿ ಆಸಕ್ತಿ ತಳೆದು ಇವರು, ತಮಗೆ ಬಂದ ದುಸ್ಥಿತಿಗಾಗಿ ಅಳುಕದೆ, ಸಾಹಿತ್ಯ ಮತ್ತು ಸಾಮಾಜಿಕ ಚಟುವಟಿಕೆಗಳನ್ನು ನಡೆಸಿ ಪ್ರಸಿದ್ಧರಾದರು.

ಬೆಂಗಳೂರನ್ನು ತಮ್ಮ ಕಾರ್ಯಕ್ಷೇತ್ರವಾಗಿ ಮಾಡಿಕೊಂಡಿದ್ದ ಕಲ್ಯಾಣಮ್ಮನವರು ಸರಸ್ವತಿ (ನೋಡಿ) ಎಂಬ ಮಾಸಪತ್ರಿಕೆಯನ್ನು ಮೂರು ದಶಕಗಳ ಕಾಲ ನಡೆಸಿ, ಆ ಮೂಲಕ ಸಾಹಿತ್ಯ ಸೇವೆ ಮಾಡಿದರು. ಶಾರದಾ ಸ್ತ್ರೀ ಸಮಾಜವನ್ನು ಸ್ಥಾಪಿಸಿ (1913) ಮಹಿಳಾ ಸೇವೆಯನ್ನು, ಅಖಿಲ ಕರ್ನಾಟಕ ಮಕ್ಕಳ ಕೂಟವನ್ನು ಸ್ಥಾಪಿಸಿ (1938) ಮಕ್ಕಳ ಸೇವೆಯನ್ನು ಮಾಡಿದರು. ಬೆಂಗಳೂರು ನಗರಸಭೆಯ ಪ್ರಥಮ ಮಹಿಳಾ ಸದಸ್ಯೆಯಾಗಿದ್ದ ಇವರು ಅನಂತರ ಸಭೆಯ ಉಪಾಧ್ಯಕ್ಷಿಣಿಯೂ ಆಗಿದ್ದರು. ಮೈಸೂರು ಪ್ರಜಾಪ್ರತಿನಿಧಿ ಸಭೆ, ಕನ್ನಡ ಸಾಹಿತ್ಯ ಪರಿಷತ್ತು, ಥಿಯೊಸಾಫಿಕಲ್ ಸೊಸೈಟಿ ಮುಂತಾದ ಹಲವು ಸಂಘಸಂಸ್ಥೆಗಳಲ್ಲೂ ದುಡಿದರು.

ಕಲ್ಯಾಣಮ್ಮನವರ ಸಾಹಿತ್ಯ ಸೃಷ್ಟಿ ವೈವಿಧ್ಯಮಯವಾದುದು. ಇವರು ಬರೆದ ಮೊದಲ ಕಾದಂಬರಿ ಪ್ರಿಯಂವದೆ. ನಿರ್ಭಾಗ್ಯವನಿತೆ, ಸುಖಲತ, ಭಕ್ತೆ ಮೀರಾ, ಮಾಧವಿ, ನಿರ್ಮಲಾ, ಸತೀ ಪದ್ಮಿನಿ, ರಣಕೇಸರಿ, ಷಹಜಹಾನ್ - ಇವು ಇತರ ಕಾದಂಬರಿಗಳು. ಯದುರಾಯ, ಬ್ಯಾರಿಸ್ಟರ್ ರಾಮಚಂದ್ರನ್, ವರದಕ್ಷಿಣೆ, ದರಿದ್ರ ನಾರಾಯಣ - ಇವು ಇವರ ನಾಟಕಗಳು. ಸ್ತ್ರೀ ಸಮಸ್ಯೆಗಳೇ ಇವರ ಕೃತಿಗಳ ವಸ್ತು. ಮಕ್ಕಳಿಗಾಗಿ ಇವರು ರಚಿಸಿರುವ ಕೃತಿಗಳಿವು: ಪಂಚಕಜ್ಜಾಯ, ಪುಟಾಣಿ ಕಥೆಗಳು, ನಮ್ಮ ಹಿಂದುಸ್ಥಾನ ವಿಕಟ ಕವಿ.

ಹೀಗೆ ನಾಡುನುಡಿಗಳ ಅಭಿಮಾನಿಯಾಗಿ ಸೇವೆ ಮಾಡಿದ ಕಲ್ಯಾಣಮ್ಮನವರಿಗೆ ಮೈಸೂರು ಮಹಾರಾಜರು ಸಾರ್ವಜನಿಕ ಸೇವಾ ಪದಕವನ್ನು ನೀಡಿ ಗೌರವಿಸಿದರು (1938). ಸರಸ್ವತಿ ಪತ್ರಿಕೆಯ ರಜತೋತ್ಸವ ಸಂದರ್ಭದಲ್ಲಿ (1949) ಸಾರ್ವಜನಿಕರ ಪರವಾಗಿ ಇವರಿಗೆ ಒಂದು ನಿಧಿಯನ್ನು ಅರ್ಪಿಸಲಾಯಿತು.

ಕಲ್ಯಾಣಮ್ಮನವರು ತಮ್ಮ 71ನೆಯ ವಯಸ್ಸಿನಲ್ಲಿ 1965 ಫೆಬ್ರವರಿ 24ರಂದು ನಿಧನರಾದರು. ಇವರ ಜ್ಞಾಪಕಾರ್ಥ ಅಖಿಲ ಕರ್ನಾಟಕ ಮಕ್ಕಳ ಕೂಟ ಒಂದು ಸ್ಮಾರಕ ನಿಧಿಯನ್ನು ಸ್ಥಾಪಿಸಿದೆ. *

**ಕಲ್ಯಾಣಸ್ವಾಮಿ :** 1837ರಲ್ಲಿ ಕೊಡಗಿನ ಸಿಂಹಾಸನಕ್ಕೆ ಉತ್ತರಾಧಿಕಾರಿಗಳೆಂದು ಸಾರಿಕೊಂಡು ಬ್ರಿಟಿಷರ ವಿರುದ್ಧ ಹೋರಾಡಿದ ಕಲ್ಯಾಣಪ್ಪ ಅಥವಾ ಕಲ್ಯಾಣಸ್ವಾಮಿ ಎಂಬ ಹೆಸರಿನ, ಒಬ್ಬರ ಅನಂತರ ಇನ್ನೊಬ್ಬರಂತೆ ಬಂದ ಇಬ್ಬರು ವ್ಯಕ್ತಿಗಳು. ಇವರು ಕಲ್ಯಾಣಬಸವ ಮತ್ತು ಪುಟ್ಟಬಸವ ಎಂಬಿಬ್ಬರು ಜಂಗಮರು. ಇಬ್ಬರೂ 1835ರಲ್ಲಿ ಮೊದಲು ತಾನು ಕೊಡಗು ಸಿಂಹಾಸನಕ್ಕೆ ಹಕ್ಕುದಾರನೆಂದು ಘೋಷಿಸಿ ಕೊನೆಗೆ ಬ್ರಿಟಿಷರಿಗೆ ಸೆರೆಯಾಳಾದ ಅಪರಂಪಾರನ ಆಪ್ತ ಅನುಯಾಯಿಗಳು. ಅಪರಂಪಾರ ಬ್ರಿಟಿಷರಿಂದ ತಪ್ಪಿಸಿಕೊಂಡು ಕಡಬದಿಂದ ಮಂಜರಾಬಾದಿಗೆ ಹೊರಟಾಗ ಇವರಿಬ್ಬರೂ ವೇಷ ಮರೆಸಿಕೊಂಡು ಕೊಡ್ಲಿಪೇಟೆಗೆ ಹೋದರು.

1835ರ ಅಂತ್ಯದಲ್ಲಿ ಕೊಡಗು ರಾಜ್ಯದಲ್ಲಿದ್ದ ಪುತ್ತೂರು ಮತ್ತು ಸುಳ್ಯ ತಾಲ್ಲೂಕುಗಳು ದಕ್ಷಿಣ ಕನ್ನಡ ಜಿಲ್ಲೆಯ ಕಲೆಕ್ಟರನ ಅಧಿಕಾರಕ್ಕೆ ವರ್ಗಾಯಿಸಲ್ಪಟ್ಟಾಗ ಅಲ್ಲಿನ ಜನರಲ್ಲಿ ಬೆಳೆದ ಅತೃಪ್ತಿಯನ್ನು ಬಂಡವಾಳ ಮಾಡಿಕೊಂಡು ಕಲ್ಯಾಣಬಸವ ತಾನು ಕೊಡಗಿನ ಪದಚ್ಯುತ ರಾಜ ಚಿಕ್ಕವೀರರಾಜೇಂದ್ರನ ದೊಡ್ಡತಂದೆ ಅಪ್ಪಾಜಿರಾಜನ ಎರಡನೆಯ ಮಗ ನಂಜುಂಡರಸನೆಂದು ಹೇಳಿಕೊಂಡ. ಆಗ ಇವನ ಅನುಯಾಯಿಗಳು ಇವನನ್ನು ಕಲ್ಯಾಣಸ್ವಾಮಿಯೆಂದು ಕರೆದರು. 1836ನೆಯ ಡಿಸೆಂಬರಿನಲ್ಲಿ ಕಲ್ಯಾಣಸ್ವಾಮಿ ಸೋಮವಾರಪೇಟೆ ತಾಲ್ಲೂಕಿನ ಗಡಿನಾಡು ಉಮ್ಮತ್ತು ನಾಡುಗಳಿಗೆ ಬಂದ. ಆದರೂ ಕೊಡಗಿನ ಇತರ ಭಾಗಗಳಲ್ಲಿ ತನಗೆ ಸಹಾಯ ಸಿಗಲಾರದೆಂದು ತಿಳಿದು ಅಲ್ಲಿಂದ ದಕ್ಷಿಣಕನ್ನಡ ಜಿಲ್ಲೆಗೆ ಹೋಗಲುದ್ಯುಕ್ತನಾದ. ಇವನು ನೆಟ್ಟಗೆ ಅಲ್ಲಿಗೆ ಹೋದರೆ ಬ್ರಿಟಿಷ್ ಸೈನಿಕರ ಕೈಗೆ ಬೀಳಬಹುದೆಂಬ ಹೆದರಿಕೆಯಿಂದ ಗಡಿನಾಡು ಉಮ್ಮತ್ತುನಾಡಿನ ಜನರು ಇವನನ್ನು ಗುಟ್ಟಾಗಿ ಮಲಬಾರಿನ ವೈನಾಡಿಗೆ ತಲಪಿಸಿದರು. ಆದರೆ ಅಷ್ಟರಲ್ಲಿ ಕ್ಯಾಪ್ಟನ್ ಲೀ ಹಾರ್ಡಿಗೆ ತಿಳಿದು ಇವನನ್ನು ಸೆರೆಹಿಡಿಯಲು ತನ್ನ ಸೈನಿಕರನ್ನು ಕಳುಹಿಸಿದ. ಈ ಮಧ್ಯೆ ವೈನಾಡಿಗೆ ಹೋಗಿದ್ದ ಕಲ್ಯಾಣ ಸ್ವಾಮಿ ವೇಷ ಬದಲಾಯಿಸಿ ಉತ್ತರ ಮಲಬಾರಿನ ಬೈತೂರನ್ನು ತಲಪಿದ್ದ. ಲೀ ಹಾರ್ಡಿಯ ಸೈನಿಕರು 1837ನೆಯ ಜನವರಿ ಆದಿಭಾಗದಲ್ಲಿ ಇವನನ್ನು ಸೆರೆಹಿಡಿದರು. ಮೈಸೂರಿನಲ್ಲಿ ವಿಚಾರಣೆಯಾಯಿತು. ಕಲ್ಯಾಣಸ್ವಾಮಿಗೆ ಯಾವ ಶಿಕ್ಷೆ ವಿಧಿಸಲ್ಪಟ್ಟಿತು ಎಂದು ತಿಳಿದಿಲ್ಲ. ಮೊದಲನೆಯ ಕಲ್ಯಾಣಸ್ವಾಮಿಯ ಕಥೆ ಇಲ್ಲಿಗೆ ಮುಗಿಯಿತು.

ಈ ಕಲ್ಯಾಣಸ್ವಾಮಿ ಸೆರೆಹಿಡಿಯಲ್ಪಟ್ಟರೂ ದಕ್ಷಿಣ ಕನ್ನಡದ ಅಮರಸುಳ್ಯ ಮಾಗಣೆಗಳ ಜನರು ಬ್ರಿಟಿಷರ ವಿರೋಧವಾದ ಯುದ್ಧದ ಯೋಜನೆಯನ್ನು ಬಿಡಲಿಲ್ಲ. ಇವನು ಸೆರೆಯಾದ ವಿಷಯ ಹೆಚ್ಚಿನ ಜನರಿಗೆ ಗೊತ್ತಿರಲಿಲ್ಲ. ಆದುದರಿಂದ ಕಲ್ಯಾಣಸ್ವಾಮಿಯ ಅನುಯಾಯಿಗಳು ಕೊಡಗಿನ ಸಿಂಹಾಸನಕ್ಕೆ ಅಪ್ಪಾಜಿ ಅರಸನ ಎರಡನೆಯ ಮಗನ ಹಕ್ಕನ್ನು ಬಹಿರಂಗವಾಗಿ ಸ್ಥಾಪಿಸುವುದಕ್ಕೆ ಕೊಡಗಿನಲ್ಲಿ 1837ರ ಮಾರ್ಚ್ 5ನೆಯ ತಾರೀಖು ಶಿವರಾತ್ರಿಯ ದಿವಸದಲ್ಲೂ ಅಮರಸುಳ್ಯದ ಸೀಮೆಗಳಲ್ಲಿ ಏಪ್ರಿಲ್ 6ನೆಯ ತಾರೀಖು ಯುಗಾದಿ ದಿವಸದಲ್ಲೂ ದಂಗೆಯೇಳುವುದೆಂದು ನಿಶ್ಚಯಿಸಿದರು. ಇದಕ್ಕೆ ಕಲ್ಯಾಣಸ್ವಾಮಿಯ ಬದಲು ಇನ್ನೊಬ್ಬ ವ್ಯಕ್ತಿಯನ್ನು ಅಪ್ಪಾಜಿ ಅರಸನ ಮಗನೆಂದು ಜನರ ಮುಂದಿಡಬೇಕಾಗಿದ್ದಿತು.

ಅಮರಸುಳ್ಯ ಸೀಮೆಗಳಲ್ಲಿ ಬ್ರಿಟಿಷರ ವಿರೋಧ ಚಳವಳಿಯಲ್ಲಿ ಮುಖ್ಯಸ್ಥನಾಗಿದ್ದ ಕೆದಂಪಾಡಿ ರಾಮೇಗೌಡನೆಂಬವನು ಮೊದಲು ಕಲ್ಯಾಣಸ್ವಾಮಿಯ ಜತೆಯಲ್ಲಿದ್ದ ಕೊಡಗಿನ ಏಳುಸಾವಿರ ಸೀಮೆಯ ಪುಟ್ಟಬಸವನೆಂಬವನನ್ನು ಇದಕ್ಕೆ ಆರಿಸಿ ಬೆಳ್ಳಾರೆ ಕೋಟೆಗೆ ಕರೆದುಕೊಂಡು ಹೋಗಿ ಅಲ್ಲಿ ಹಾಕಿದ್ದ ಚಪ್ಪರದ ಅಡಿಯಲ್ಲಿ ಸಿಂಹಾಸನದ ಮೇಲೆ ಕುಳ್ಳಿರಿಸಿದ. ಇವನೇ ಕಲ್ಯಾಣಸ್ವಾಮಿ ಅಥವಾ ನಂಜುಂಡರಸ, ಕೊಡಗು ಅಮರಸುಳ್ಯಗಳ ರಾಜ ಎಂದು ಸೀಮೆಯವರಿಗೆಲ್ಲ ತಿಳುಹಿಸಿದ. ಎರಡು ಮೂರು ಸಾವಿರ ಸಶಸ್ತ್ರಜನ ಇವನನ್ನು ಕೂಡಿಕೊಂಡರು. ಮರುದಿವಸ ಕಲ್ಯಾಣಸ್ವಾಮಿಯ ಹೆಸರಿನಲ್ಲಿ ನಿರೂಪಗಳನ್ನು ಬರೆಯಿಸಿ ಅವುಗಳ ಪ್ರತಿಗಳನ್ನು ಚೆಂಬು ಪೆರಾಜೆಗಳ ಪಾರ್ಪತಿಗಾರರಿಗೂ ಮಂಜುರಾಬಾದು ಸೀಮೆಯ ಪಟೇಲರಿಗೂ ತಾವುನಾಡು, ಚೇಂಗುನಾಡು, ಗಡಿನಾಡುಗಳ ಪಾರ್ಪತಿಗಾರರಿಗೂ ದಿವಾನ್ ಪೊನ್ನಪ್ಪನಿಗೂ ಕಳುಹಿಸಿದರು. 1837ನೆಯ ಮಾರ್ಚ್ 31ರಲ್ಲಿ ಈ ನಿರೂಪದ ಒಂದು ಪ್ರತಿ ಕೊಡಗಿನ ಸೂಪರಿಂಟೆಂಡೆಂಟನಿಗೂ ತಲಪಿ ಅವನಿಗೆ ಬಂಡಾಯದ ಸುಳುಹು ಸಿಕ್ಕಿತು.

ಒಂದೆರಡು ದಿನಗಳಲ್ಲೆ ಕೆದಂಪಾಡಿ ರಾಮೇಗೌಡ ಅಲ್ಲಿದ್ದ ಇತರ ಮುಖಂಡರನ್ನು ಸುಬೇದಾರರನ್ನಾಗಿ ನೇಮಿಸಿ ಅವರನ್ನು ಕೆಲವು ಜನರೊಡನೆ ಆ ಸೀಮೆಯ ಬೇರೆ ಬೇರೆ ಸ್ಥಳಗಳಿಗೆ ಕಳುಹಿಸಿದ. ತಾನು ಕಲ್ಯಾಣಸ್ವಾಮಿಯನ್ನೂ ಸೈನಿಕರನ್ನೂ ಕರೆದುಕೊಂಡು ಪುತ್ತೂರಿಗೆ ಹೊರಟ. ದಾರಿಯಲ್ಲಿ ಇವನ ಸಂಗಡಿಗರು ಒಬ್ಬ ಬ್ರಿಟಿಷ್ ಅಧಿಕಾರಿಗೆ ಸೇರಿದ್ದ ಏಳೆಂಟು ಕುದುರೆಗಳನ್ನು ಹಿಡಿದರು. ಧರ್ಮಸ್ಥಳದ ಮಂಜಯ್ಯಹೆಗ್ಗಡೆ ತನ್ನಲ್ಲಿದ್ದ ಎರಡು ಫಿರಂಗಿಗಳನ್ನು ಕೊಟ್ಟರು. ಇತರ ಅನೇಕರು ವಿವಿಧ ರೀತಿಯಲ್ಲಿ ಸಹಾಯ ನೀಡಿದರು.

ಕಲ್ಯಾಣಸ್ವಾಮಿ ಮತ್ತು ಸಂಗಡಿಗರು ಪುತ್ತೂರನ್ನು ತಲಪಿದಾಗ ಸಣ್ಣ ತುಕಡಿಯೊಡನೆ ಅಲ್ಲಿಗೆ ಬಂದಿದ್ದ ಮಂಗಳೂರಿನ ಕಲೆಕ್ಟರ್ ಮೇಲೆ ಹಲ್ಲೆ ಮಾಡಲು ಪ್ರಯತ್ನಿಸಿದರು. ಆದರೆ ಸುದ್ದಿ ತಿಳಿದ ಕಲೆಕ್ಟರ್ ಓಡಿಹೋದ.

ಕಲ್ಯಾಣಸ್ವಾಮಿ ಪುತ್ತೂರನ್ನು ಸುಲಿಗೆ ಮಾಡಿ ಪಾಣೆಮಂಗಳೂರಿಗೆ ಹೋದ. ಅಲ್ಲಿ ನಂದಾವರದ ಲಕ್ಕಪ್ಪ ಬಂಗರಸ ಇವನ ಜೊತೆ ಸೇರಿಕೊಂಡ. ಆ ಹೊತ್ತಿಗೆ ದೊಡ್ಡದಾಗಿ ಬೆಳೆದಿದ್ದ ಸಮೂಹದೊಡನೆ ಕಲ್ಯಾಣಸ್ವಾಮಿ ಬಂಟ್ವಾಳಕ್ಕೆ ತೆರಳಿ ಪೇಟೆಯನ್ನು ಸುಲಿಗೆ ಮಾಡಿ ಮಂಗಳೂರಿಗೆ ಹೋದ. ಇವನು ಮಂಗಳೂರನ್ನು ತಲಪುವಷ್ಟರಲ್ಲಿ ಅಲ್ಲಿದ್ದ ಇಂಗ್ಲಿಷ್ ಅಧಿಕಾರಿಗಳು ಕಣ್ಣಾನೂರಿಗೆ ಓಡಿಹೋಗುವುದಕ್ಕೆ ಹಡಗನ್ನು ಕಾಯುತ್ತಿದ್ದರು. ಕಲ್ಯಾಣಸ್ವಾಮಿ ಅಲ್ಲಿ ಸೆರೆಮನೆಯ ಖೈದಿಗಳನ್ನು ಬಿಡಿಸಿ ತಾಲ್ಲೂಕು ಖಜಾನೆಯನ್ನು ಒಡೆದು ಹಣವನ್ನು ದೋಚಿದ. ಅಲ್ಲಿದ್ದ ಇಂಗ್ಲಿಷ್ ಉದ್ಯೋಗಸ್ಥರ ಮನೆಗಳಿಗೆ ಬೆಂಕಿ ಕೊಡಿಸಿದ. ಮಂಗಳೂರಿನಲ್ಲಿ ತನ್ನ ಬಾವುಟವನ್ನೇರಿಸಿ ಹದಿಮೂರು ದಿವಸಗಳಿದ್ದ. ಆದರೆ ಅಷ್ಟರಲ್ಲಿ ತಲಚೇರಿ, ಕಣ್ಣಾನೂರುಗಳಿಂದ ಇಂಗ್ಲಿಷರ ಸೈನ್ಯಗಳು ಮಂಗಳೂರನ್ನು ತಲಪಿದವು. ಸರಿಯಾದ ಆಯುಧಗಳಿಲ್ಲದ ಕಲ್ಯಾಣಸ್ವಾಮಿಯ ಜನ ಹೆದರಿ ಓಡಿ ಹೋದರು. ಕಲ್ಯಾಣಸ್ವಾಮಿಯೂ ಸುಳ್ಯಕ್ಕೆ ಓಡಿಬಂದ.

ಕಲ್ಯಾಣಸ್ವಾಮಿ ಮಂಗಳೂರಿಗೆ ಹೋದಾಗ ಇವನ ಸಂಗಡಿಗರು ಕೊಡಗನ್ನು ಹಿಡಿಯಬೇಕೆಂದು ಸನ್ನಾಹಮಾಡಿದ್ದರೂ ಕೊಡಗಿನಲ್ಲಿ ದಿವಾನರುಗಳಾಗಿದ್ದ ಚಪ್ಪುದಿರ ಪೊನ್ನಪ್ಪ ಮತ್ತು ಅಪ್ಪಾರಂಡ ಬೋಪು ಬ್ರಿಟಿಷರ ಆಳಿಕೆಗೆ ಬೆಂಬಲ ಕೊಟ್ಟಿದ್ದರಿಂದ ಸಾಧ್ಯವಾಗಲಿಲ್ಲ. ಪ್ರತಿಯಾಗಿ ಅವರು ಈ ದಂಗೆಯನ್ನು ಅಡಗಿಸಲು ಅಮರಸುಳ್ಯ ಸೀಮೆಗಳಿಗೆ ಬಂದು ಸುಳ್ಯದ ಕೋಟೆಪೇಟೆಗಳನ್ನು ಹಿಡಿದುಕೊಂಡು ಕಲ್ಯಾಣಸ್ವಾಮಿ ಬೆಳ್ಳಾರೆಯಲ್ಲಿರುವನೆಂಬ ವರ್ತಮಾನವನ್ನು ಕೇಳಿ ಬೆಳ್ಳಾರೆಗೆ ಹೋದರು. ಅಷ್ಟರಲ್ಲಿ ಕಲ್ಯಾಣಸ್ವಾಮಿ ದಕ್ಷಿಣ ಕನ್ನಡ ಜಿಲ್ಲೆಯ ಕಡಬ ತಲಪಿದ್ದ. ಅಲ್ಲಿದ್ದ ಇಂಗ್ಲಿಷ್ ಸೈನ್ಯದ ಕಣ್ಣು ತಪ್ಪಿಸಿ ಮರೆಯಾದ. ಈ ವರ್ತಮಾನವನ್ನು ತಿಳಿದು ಈಸ್ಟ್ ಇಂಡಿಯ ಕಂಪನಿ ಸರ್ಕಾರ

ಕಲ್ಯಾಣಸ್ವಾಮಿಯನ್ನು ಹಿಡಿದುಕೊಟ್ಟವರಿಗೆ ಹತ್ತು ಸಾವಿರ ರೂಪಾಯಿಗಳ ಬಹುಮಾನವನ್ನು, ಇವನ ಸಂಗಡಿಗರನ್ನು ಹಿಡಿದುಕೊಟ್ಟವರಿಗೆ ಐದು ಸಾವಿರ ರೂಪಾಯಿಗಳ ಬಹುಮಾನಗಳನ್ನು ಕೊಡುವುದಾಗಿ ಪ್ರಕಟಿಸಿತು. ಕಲ್ಯಾಣಸ್ವಾಮಿ ವೇಷ ಮರೆಸಿಕೊಂಡು ತನ್ನ ಊರನ್ನು ತಲುಪಿದ್ದ. ಇದನ್ನು ಅರಿತ ಅಲ್ಲಿನ ಕೆಲವು ಜನ ಹಣದ ಆಸೆಗಾಗಿ ಬ್ರಿಟಿಷರಿಗೆ ಸುದ್ದಿ ನೀಡಿದರು. ಕಲ್ಯಾಣಸ್ವಾಮಿ ಸೆರೆಸಿಕ್ಕಿದ.

ಆಗ ಕಲ್ಯಾಣಸ್ವಾಮಿ ತಾನು ಶನಿವಾರಸಂತೆಯ ಹತ್ತಿರದ ಹೆಮ್ಮನಿ ಗ್ರಾಮದ ಬೇಸಾಯಗಾರ, ಅಲ್ಲಿಗೆ ಕೆದಂಪಾಡಿ ರಾಮೇಗೌಡನ ಜನ ಬಂದು ತನ್ನನ್ನು ಅಮರಸುಳ್ಯಕ್ಕೆ ಕರೆದುಕೊಂಡು ಹೋಗಿ ಅಲ್ಲಿ ತನ್ನನ್ನು ಕೊಡಗಿನ ದೊರೆಯೆಂದು ಇತರರಿಗೆ ಹೇಳಿ ದಂಗೆಯೆಬ್ಬಿಸಿದರು, ತನ್ನ ಹುಟ್ಟು ಹೆಸರು ಬಸಪ್ಪ, ದೊಡ್ಡವನಾದಮೇಲೆ ತನ್ನನ್ನು ಪುಟ್ಟಬಸವ ಅಥವಾ ಮರಿಬಸವ ಎಂದು ಊರಿನವರು ಕರೆಯುತ್ತಿದ್ದರು ಎಂದು ಹೇಳಿಕೆ ನೀಡಿದನೆಂದು ಬ್ರಿಟಿಷ್ ದಾಖಲೆಗಳು ತಿಳಿಸುತ್ತವೆ.

ಮಂಗಳೂರಿನಲ್ಲಿ ಬ್ರಿಟಿಷ್ ಸೈನ್ಯಾಧಿಕಾರಿಗಳು ವಿಚಾರಣೆ ನಡೆಸಿ ಮರಣದಂಡನೆ ವಿಧಿಸಿದರು. ಕಲ್ಯಾಣಸ್ವಾಮಿ, ಲಕ್ಕಪ್ಪ ಬಂಗರಸು ಮತ್ತು ಇನ್ನು ಕೆಲವು ಮುಖಂಡರೊಡನೆ ಮಂಗಳೂರಿನ ಬಿಕ್ರಾನಕಟ್ಟೆ ಪದವಿನ ಹತ್ತಿರ ಗಲ್ಲಿಗೇರಿಸಲ್ಪಟ್ಟ. (ಡಿ.ಎನ್.ಕೆ.)

**ಕಲ್ಲಮಠದ ಪ್ರಭುದೇವ :** ಸು.1430. ವೀರಶೈವ ಕವಿ, ಲಿಂಗ ಲೀಲಾವಿಲಾಸಚಾರಿತ್ರ, ಪ್ರಭುದೇವರ ಮಂತ್ರಗೋಪ್ಯದ ಟೀಕೆ ಎಂಬ ಕೃತಿಗಳನ್ನು ರಚಿಸಿದ್ದಾನೆ. ಈತ ವಿಜಯನಗರದ ಪ್ರೌಢದೇವರಾಯನ ಆಳಿಕೆಯ ಕಾಲದಲ್ಲಿ ಆಗಿಹೋದ ನೂರೊಂದು ಜನ ವಿರಕ್ತರಲ್ಲಿ ಒಬ್ಬ. ಜಕ್ಕಣಾರ್ಯ, ಚಾಮರಸ ಇವರ ಸಮಕಾಲೀನ. ಅದೃಶ್ಯಕವಿ (ಸು.1580) ತನ್ನ ಪ್ರೌಢರಾಯನಕಾವ್ಯದಲ್ಲಿ, ಸಿದ್ಧನಂಜೇಶ (ಸು.1650) ತನ್ನ ರಾಘವಾಂಕಚಾರಿತ್ರದಲ್ಲಿ, ಶಾಂತಲಿಂಗದೇಶಿಕ (ಸು.1672) ತನ್ನ ಭೈರವೇಶ್ವರಕಾವ್ಯದ ಕಥಾಮಣಿಸೂತ್ರರತ್ನಾಕರದಲ್ಲಿ ಈತನನ್ನು ಹೆಸರಿಸಿದ್ದಾರೆ.

ಲಿಂಗಲೀಲಾವಿಲಾಸಚಾರಿತ್ರ ಷಟ್ಸ್ಥಲವನ್ನು ಬೋಧಿಸುವ ವಚನ ಗ್ರಂಥ. ಇದರಲ್ಲಿ 16 ಸ್ಥಲಗಳೂ ಸುಮಾರು ಮೂವತ್ತಾರು ವಚನಕಾರರಿಂದ ಆಯ್ದುಕೊಂಡ 729 ವಚನಗಳೂ ಇವೆ. ಇವಲ್ಲದೆ 135 ಸಂಸ್ಕೃತ ಶ್ಲೋಕಗಳೂ ಅವುಗಳ ವ್ಯಾಖ್ಯಾನವೂ ಈ ಕೃತಿಯಲ್ಲಿ ಸೇರಿವೆ. ಸ್ಥಲಾನುಗುಣವಾಗಿ ಬಸವ, ಚೆನ್ನಬಸವ, ಮಹಾದೇವಿಯಕ್ಕ ಮುಂತಾದ ಪುರಾತನರ ವಚನಗಳನ್ನು ಆಯ್ದುಕೊಂಡು ಷೋಡಶಸ್ಥಲ ಪರಿಕ್ರಮದಿಂದ ಅವನ್ನು ಸೇರಿಸಿ ವ್ಯಾಖ್ಯಾನ ಮಾಡಿದ್ದಾನೆ. ಭಕ್ತಿಕಾಂಡವೆ ಷಟ್‌ಸ್ಥಲ ಮಾರ್ಗ. ಈ ಮಾರ್ಗವೇ ಲಿಂಗಲೀಲಾವಿಲಾಸಚಾರಿತ್ರ ಎಂದು ಕವಿ ಗ್ರಂಥಾರಂಭದಲ್ಲಿ ಹೇಳಿದ್ದಾನೆ.

ಪ್ರಭುದೇವರ ಮಂತ್ರಗೋಪ್ಯದ ಟೀಕೆಯಲ್ಲಿ ಸೀಸಪದ್ಯದಂತಿರುವ 27 ಪದ್ಯಗಳಿವೆ. ಒಂದೊಂದು ಪದ್ಯಕ್ಕೂ ವಿಸ್ತಾರವಾದ ಟೀಕೆ ಇದೆ. ಈ ಟೀಕೆಗಳು ರಸವತ್ತಾಗಿವೆ; ಜ್ಞಾನಬೋಧಕವಾಗಿವೆ. ಈ ಮೇಲಿನ ಗ್ರಂಥಗಳು ಪುರಾತನರ ವಚನಗಳಲ್ಲಿ ಹುದುಗಿರಬಹುದಾದ ಗೂಢಾರ್ಥವನ್ನು ತಿಳಿಯಲು ಸಹಾಯಕವಾಗಿವೆ. (ಜೆ.ಎಸ್.ಪಿ.ಎಂ.)

**ಕಲ್ಲರಸ :** ಸು.1450. ಜನವಶ್ಯ ಎಂಬ ಕಾಮಶಾಸ್ತ್ರಗಂಥದ ಕರ್ತೃ. ಇವನ ಸ್ಥಳ ಹಂಪೆ. ಕ್ರಿಯಾಶಕ್ತಿಮುನಿ ಇವನ ಕುಲಗುರು. ಹೇಮಕೂಟಗಿರಿ ನಿವಾಸಿ ಮಲ್ಲಿಕಾರ್ಜುನ ಆರಾಧ್ಯದೈವ. ಪೂರ್ವಕವಿಗಳಲ್ಲಿ ಭೋಜನನ್ನು ಸ್ಮರಿಸಿದ್ದಾನೆ.

ಜನವಶ್ಯಕ್ಕೆ ಮದನತಿಲಕ, ಮಲ್ಲಿಕಾರ್ಜುನವಿಜಯ ಎಂಬ ಹೆಸರುಗಳೂ ಇವೆ. 13 ಸಂಧಿ, 685 ಶರ, ಕುಸುಮ, ಭೋಗ ಷಟ್ಪದಿಗಳನ್ನೊಳಗೊಂಡಿರುವ ಈ ಕೃತಿ ರತಿರಹಸ್ಯದ ನೇರವಾದ ಅನುವಾದ. ಕಕೋಕ ಸಂಸ್ಕೃತದಲ್ಲಿ ಸೂತ್ರಬದ್ಧವಾಗಿ ಹೇಳುವುದನ್ನು ಅಷ್ಟೇ ಸೂತ್ರಬದ್ಧವಾಗಿ ಸಮರ್ಥವಾಗಿ ಕಲ್ಲರಸ ಕನ್ನಡದಲ್ಲಿ ಅನುವಾದ ಮಾಡಿದ್ದಾನೆ. ಆದರೆ ತನ್ನ ಕೃತಿಗೆ ಆಕರವನ್ನು ಹೇಳುವಾಗ ಇಂದುಶೇಖರ ಕೃಷ್ಣ ನಂದೀಶ ಗೋಣಿಕಾನಂದನಂ ಮೊದಲಾದವರ್ ಪೇಳಿದ ಕಂದರ್ಪಶಾಸ್ತ್ರಮಂ ಮಂದಸ್ಮಿತಾಸ್ಯೆ ನಿನಗಂದವೊದವಿರ್ದ ಕನ್ನಡದಿನೊರೆದೆ ಎಂದು ಹೇಳಿ ಕಕೋಕನ ಹೆಸರನ್ನು ಗ್ರಂಥದಲ್ಲಿ ಎಲ್ಲಿಯೂ ಹೇಳುವುದಿಲ್ಲ. ಹಾಗೆಯೇ ಮಲ್ಲಿಕಾರ್ಜುನ ನೃಪಾಲ ತನ್ನ ಹೆಂಡತಿಗೆ ಹೇಳಿದ ಜನವಶ್ಯವನ್ನು ತಾನು ಕನ್ನಡದಲ್ಲಿ ವಿಸ್ತರಿಸಿ ಹೇಳುತ್ತಿರುವುದಾಗಿ, ಮಲ್ಲಿಕಾರ್ಜುನ ಧರಾವಲ್ಲಭನೊಸೆದು ತನ್ನ ನಲ್ಲಳಿಚೆವಂತೊರೆದ ಜನವಶ್ಯಮಂ ಸಲ್ಲಲಿತವಾಣಿ ಕವಿ ಕಲ್ಲರಸನಖುವವರ ಮೆಲ್ಲೆರ್ದೆಯನಿಂಬುಗೊಳ್ವಂತೆ ಬರೆದು ಎಂಬ ಪದ್ಯದಲ್ಲಿ ಹೇಳಿಕೊಂಡಿದ್ದಾನೆ. ಮೇಲಿನ ಪದ್ಯದಲ್ಲಿ ಉಲ್ಲೇಖಿತನಾಗಿರುವ ಮಲ್ಲಿಕಾರ್ಜುನ 1446 ರಿಂದ 1465ರವರೆಗೆ ಆಳಿದ ವಿಜಯನಗರದ ದೊರೆಯೆಂದು ತಿಳಿದುಬರುತ್ತದೆ.

ಜನವಶ್ಯದ ರಚನೆಯಲ್ಲಿ ಕಂಡುಬರುವ ಕಲ್ಲರಸನ ಕವಿತಾಶಕ್ತಿ ಮತ್ತು ಪ್ರತಿಭೆ ಮೆಚ್ಚುವಂತಹುದು. ಕಾಮಶಾಸ್ತ್ರದ ನಿರೂಪಣೆಗೆ ಬೇಕಾದ ಲಲಿತಶೈಲಿಯನ್ನು ಈತ ಸಾಧಿಸಿಕೊಂಡಿದ್ದಾನೆ. ಈತನೇ ಹೇಳುವ ಅಜೆ ಯದರ್ಗುಪದೇಶವಜೆದರ್ಗೆ ಜೀವಕಳೆಯಜಿದಜಿಯದವರಿಗಜಿವೆನಿಸಿರ್ಪುದು ಮಜೆಯಿಲ್ಲದೆಲ್ಲರ್ಗೆ ನೆಜೆವೆಜೆಯವೊಲ್ ಕಲೆಯನುಜೆಬೀರ್ಪುದೆನ್ನಕೃತಿ ಸತತಮಬಲೆ -ಎಂಬ ಮಾತು ಉತ್ಪ್ರೇಕ್ಷೆಯಲ್ಲ. ಸತಿಪತಿಯರ ಸರಸ ಸಂಭಾಷಣೆಯ ಚೌಕಟ್ಟಿನಲ್ಲಿ ಸಾಗುವ ಈ ಕೃತಿ ಓದುಗನ ಮನಮುಟ್ಟುವಲ್ಲಿ ತನ್ನ ಸಾರ್ಥಕತೆಯನ್ನು ಕಂಡುಕೊಂಡಿದೆ.

ಕನ್ನಡದಲ್ಲಿ ಕಾಮಶಾಸ್ತ್ರವನ್ನು ಕುರಿತು ಮೋಹಾನುಭವಮುಕುರ, ಮದನ ತಿಲಕ, ಮನ್ಮಥವಿಜಯ ಮೊದಲಾದ ಕೃತಿಗಳು ಬಂದಿದ್ದು, ಜನವಶ್ಯ ಅವುಗಳಲ್ಲೆಲ್ಲ ಸಮಗ್ರವೂ ಸಮರ್ಪಕವೂ ಆದ ಕೃತಿಯಾಗಿದೆ ಎಂದು ಹೇಳಬಹುದು. (ಜಿ.ಜಿ.ಎಂ.)

**ಕಲ್ಲೂರು :** ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನಲ್ಲಿ ರಾಯಚೂರು ಮಾನ್ವಿ ಮಾರ್ಗದಲ್ಲಿ ರಾಯಚೂರಿನಿಂದ 20ಕಿಮೀ ದೂರದಲ್ಲಿರುವ ಗ್ರಾಮ. ಅನೇಕ ಐತಿಹಾಸಿಕ ಮತ್ತು ಪ್ರಾಗೈತಿಹಾಸಿಕ ಅವಶೇಷಗಳು ಇಲ್ಲಿವೆ. ಸುತ್ತಲೂ ಕಲ್ಲುಗುಡ್ಡಗಳಿರುವುದರಿಂದ ಈ ಊರಿಗೆ ಈ ಹೆಸರು ಬಂದಿರಬೇಕು.

ಈಗಿನ ಹಳ್ಳಿಯ ಸುತ್ತ ಸು.13-14ನೆಯ ಶತಮಾನಗಳಲ್ಲಿ ಕಟ್ಟಿರಬಹುದಾದ ಕೋಟೆ ಇದೆ. ಕೋಟೆಗೆ ಮಾನ್ವಿ ದರ್ವಾಜಾ, ಕಲ್ಮಲ ದರ್ವಾಜಾ, ರಾಯಚೂರು ದರ್ವಾಜಾ ಮುಂತಾದ ಐದು ದ್ವಾರಗಳಿವೆ. ಇವು ಮುಸಲ್ಮಾನರ ಆಳ್ವಿಕೆಯ ಕಾಲದವು. ರಾಯಚೂರು ದರ್ವಾಜಾದಲ್ಲಿ ಮರದ ತೊಲೆಯ ಮೇಲಿದ್ದ ಕನ್ನಡ ಶಾಸನವೊಂದು ಆದಿಲ್‌ಶಾಹೀ ಕಾಲದ ಪ್ರಮುಖನೊಬ್ಬನಾದ ಆಘಾಖುಸ್ರು ಇದನ್ನು ಕಟ್ಟಿಸಿದನೆಂದು ತಿಳಿಸುತ್ತದೆ. ಈ ಊರಿನಲ್ಲಿ ಮತ್ತು ಪರಿಸರದಲ್ಲಿ 6 ದೇವಾಲಯಗಳಿವೆ. ಅವುಗಳಲ್ಲಿ ಮಾರ್ಕಂಡೇಶ್ವರ ದೇವಾಲಯ ಬಹು ಹಳೆಯದು. ಕಲ್ಯಾಣದ ಚಾಳುಕ್ಯ ಶೈಲಿಯ ಕಂಬಗಳು ಈ ದೇವಾಲಯದಲ್ಲಿವೆ. ಗ್ರಾಮದಲ್ಲಿ ಹಲವು ಕಲ್ಯಾಣ ಚಾಳುಕ್ಯ ಶಾಸನಗಳೂ ದೊರಕಿವೆ. ಇಲ್ಲಿರುವ ಮಾರುತೀಶ್ವರ ದೇವಾಲಯವೂ ಪುರಾತನವಾದದ್ದೇ. ದೇವಾಲಯದ ಗರುಡಗಂಬವನ್ನು ಸಿಂಘಣನೆಂಬವ ನಿಲ್ಲಿಸಿದನೆಂದೂ ಈ ಗ್ರಾಮ ಹಿಂದೆ ಒಂದು ಅಗ್ರಹಾರವಾಗಿತ್ತೆಂದೂ ಇಲ್ಲಿಯ ಒಂದು ಶಾಸನದಿಂದ ತಿಳಿದುಬರುತ್ತದೆ.

ಕಲ್ಲೂರಿನ ಸಮೀಪದ ಬೆಟ್ಟ ಪ್ರದೇಶಗಳಲ್ಲಿ ಮತ್ತು ಕಣಿವೆಗಳಲ್ಲಿ ನವಶಿಲಾಯುಗ ಮತ್ತು ಶಿಲಾ - ತಾಮ್ರಯುಗ ಕಾಲಗಳಿಗೆ ಸೇರಿದ ಶಿಲಾಯುಧಗಳು, ಮಡಕೆ ಚೂರುಗಳು, ಕಲ್ಲಿನ ಕೂರಲಗು ಫಲಕಗಳು (ಬ್ಲೇಡ್ಸ್) ದೊರಕುತ್ತವೆ. ಇಲ್ಲಿನ ಎಮ್ಮಿಗುಡ್ಡ ಎಂಬ ಚಿಕ್ಕ ಬೆಟ್ಟವೊಂದರ ಗುಹೆಯಲ್ಲಿ ಹಿಂದಿನ ಹೈದರಾಬಾದು ಸರ್ಕಾರದವರು ಉತ್ಖನನ ನಡೆಸಿದಾಗ ಅನೇಕ ತಾಮ್ರದ ವಸ್ತುಗಳು ದೊರಕಿದುವು. ಅಲ್ಲದೆ ತಾಮ್ರವನ್ನು ಕರಗಿಸಿ, ಎರಕ ಹುಯ್ಯುವ ಉದ್ಯಮ ಇಲ್ಲಿತ್ತೆಂದು ಸೂಚಿಸುವ ಮೂಸೆಗಳು, ಒಲೆಗಳು ಸಹ ಬೆಳಕಿಗೆ ಬಂದುವು. ಇದೇ ಪ್ರದೇಶದಲ್ಲಿ ಹಿಂದೆ ಕತ್ತಿ ಮೊದಲಾದ ತಾಮ್ರದ ವಸ್ತುಗಳು ಸಹ ದೊರಕಿದ್ದುವು. ಇವುಗಳನ್ನು ಅಧ್ಯಯನ ಮಾಡಿರುವ ಪ್ರಾಗಿತಿಹಾಸಜ್ಞರು ಈ ವಸ್ತುಗಳು ಉತ್ತರ ಭಾರತದಲ್ಲಿ ದೊರೆಯುವ ತಾಮ್ರಯುಗದ ವಸ್ತುಗಳ ವರ್ಗದವೇ ಎಂದು ಊಹಿಸಿದ್ದಾರೆ. ಶಿಲಾ - ತಾಮ್ರಯುಗದ ಕಾಲದಲ್ಲಿ ಈ ಊರು ತಾಮ್ರ ಕೈಗಾರಿಕಾ ಕೇಂದ್ರವಾಗಿರಬಹುದು. ಎಮ್ಮಿಗುಡ್ಡದಲ್ಲಿ

ಎಮ್ಮೆ ಮತ್ತು ದನದ ಚಿತ್ರಗಳನ್ನು ಬಂಡೆಗಳಲ್ಲಿ ಕೊರೆದಿರುವುದೂ ಬೆಳಕಿಗೆ ಬಂದಿದೆ. ಇವೂ ಪ್ರಾಗಿತಿಹಾಸ ಕಾಲದವೇ. ಇವು ಪ್ರಾಯಶಃ ಕರ್ನಾಟಕದ ಕಲೆಯ ಬಹು ಪ್ರಾಚೀನ ಉದಾಹರಣೆಗಳು. *

**ಕಲ್ಲೋಳಿ :** ಬೆಳಗಾಂವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಒಂದು ಗ್ರಾಮ. ಗೋಕಾಕದಿಂದ 11ಕಿಮೀ ದೂರದಲ್ಲಿದೆ. ಸೌಂದತ್ತಿ ರಟ್ಟರ ಶಾಸನದಲ್ಲಿ ಇದನ್ನು ಸಿಂಧನಕಲ್ಲೋಳೆ ಎಂದು ಕರೆಯಲಾಗಿದೆ. ಇಲ್ಲಿ ಮುಖ್ಯವಾಗಿ ವಡ್ಡಸಮಾಜಕ್ಕೆ ಸೇರಿದ ಕಲ್ಲೋಳಪ್ಪನ ಗುಡಿ ಸುಪ್ರಸಿದ್ಧವಾಗಿದೆ. ಈ ಗ್ರಾಮದಲ್ಲಿ ರಾಮಲಿಂಗೇಶ್ವರ, ಕಲ್ಮೇಶ್ವರ, ಮಲ್ಲಮ್ಮ, ದ್ಯಾಮವ್ವ, ದುರ್ಗವ್ವ, ಬೀರಪ್ಪ ಸಿದ್ಧಾರೂಢ ಮತ್ತು ಸದಾಶಿವ ದೇವಾಲಯಗಳಿವೆ. ಕಲ್ಲೋಳಪ್ಪನ ಭವ್ಯ ಗುಡಿ ವಿಶೇಷವಾಗಿದೆ. ಈ ದೇವಾಲಯದ ಎದುರಿಗಿನ ಆವರಣದಲ್ಲಿ ಎರಡು ಕೈ ಜೋಡಿಸಿ ನಿಂತ ಕಾಟಮುತ್ತಪ್ಪನ ಮೂರ್ತಿಗಳಿವೆ. ಇಲ್ಲಿನ ಪಾರ್ಶ್ವನಾಥ ಜಿನಾಲಯವನ್ನು ಸು.1200ರಲ್ಲಿ ಹಗರ್ತಗೆ ನಾಡಿನ ರಟ್ಟ ಅರಸರ ಸಂಬಂಧಿ ಕಟ್ಟಿಸಿದ ಬಗ್ಗೆ ಶಾಸನವಿದೆ.

ರಾಮಲಿಂಗೇಶ್ವರ ದೇವಾಲಯ ಕಲ್ಯಾಣ ಚಾಳುಕ್ಯರ ಶೈಲಿಯಲ್ಲಿದ್ದು ಗರ್ಭಗೃಹ, ಅರ್ಧಮಂಟಪ, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದ ಮೇಲೆ ಕದಂಬನಾಗರ ಶೈಲಿಯ ಶಿಖರವಿದ್ದು, ಇದನ್ನು ಭಾಗಶಃ ಜೀರ್ಣೋದ್ಧಾರ ಮಾಡಲಾಗಿದೆ. ನವರಂಗದಲ್ಲಿಯ ಕಂಬಗಳ ಕೆತ್ತನೆಯಲ್ಲಿ ನಯಗಾರಿಕೆಯಿದೆ. ಸುಖನಾಸಿಯನ್ನು ಜೀರ್ಣೋದ್ಧಾರದ ಕಾಲಕ್ಕೆ ಮೇಲ್ಛಾವಣಿಯಲ್ಲಿ ಇರಿಸಲಾಗಿದೆ. ಅದರ ಮೇಲೆ ಕುಳಿತ ಭಂಗಿಯಲ್ಲಿರುವ ಶಿವನ ಮೂರ್ತಿಯನ್ನು ಕೆತ್ತಲಾಗಿದೆ. ಮುಖ್ಯ ಮಂಟಪ ವಿಸ್ತಾರವಾದ ಪ್ರಾಂಗಣವನ್ನು ಹೊಂದಿದೆ. ಅದರ ಸುತ್ತ ಕಕ್ಷಾಸನವಿದೆ. ವಿಜಯನಗರ ಶೈಲಿಯಲ್ಲಿರುವ ಕಲ್ಮೇಶ್ವರ ದೇವಾಲಯದಲ್ಲಿ ಗರ್ಭಗೃಹ ಮತ್ತು ನವರಂಗಗಳಿವೆ. ನವರಂಗದ ಛಾವಣಿ ಭಾಗಶಃ ಬಿದ್ದುಹೋಗಿದೆ. ಹೊಸ್ತಿಲು ಹುಣ್ಣಿಮೆಯಲ್ಲಿ ಮಾರುತಿಯ (ಕಲ್ಲೋಳಪ್ಪನ) ಜಾತ್ರೆ ಎರಡು ವಾರಗಳವರೆಗೆ ನಡೆಯುತ್ತದೆ.

ತ್ರಿಕೂಟಾಚಲ ಇಲ್ಲಿನ ಇನ್ನೊಂದು ಸ್ಮಾರಕ. ಮಧ್ಯದ ಗರ್ಭಗೃಹದಲ್ಲಿ ಶಾಂತಿನಾಥನ ಮೂರ್ತಿ, ಎಡಗಡೆಯ ಗರ್ಭಗೃಹದಲ್ಲಿ ಚಂದ್ರನಾಥ ಮತ್ತು ಬಲಗಡೆಯ ಗರ್ಭಗೃಹದಲ್ಲಿ ಸುಪಾರ್ಶ್ವನಾಥನ ಮೂರ್ತಿಗಳಿವೆ. ಈ ಮೂರೂ ಗರ್ಭಗೃಹಗಳು ನಕ್ಷತ್ರಾಕಾರದ ಜಗಲಿ ಹೊಂದಿದ್ದು ಮಧ್ಯದ ಗರ್ಭಗೃಹದ ಮೇಲಿನ ಶಿಖರವು ಕದಂಬ ನಾಗರ ಶೈಲಿಯನ್ನು ಹೊಂದಿದೆ. ನವರಂಗದ ಕಂಬಗಳು ನುಣುಪಾದ ಕೆತ್ತನೆಯಿಂದ ಕೂಡಿದೆ. ನವರಂಗದ ಛಾವಣಿಯಲ್ಲಿ ಕೆಳಮುಖ ಮಾಡಿದ ಕಮಲವು ಲೋಲಕದಂತಿದ್ದು ಅದರಲ್ಲಿ ಹಲವಾರು ಸಸ್ಯ ನಕ್ಷೆಗಳನ್ನು ಕೆತ್ತಲಾಗಿದೆ. ಇಲ್ಲಿ ಜೈನ ಸರಸ್ವತಿಮೂರ್ತಿ ಮತ್ತು ನೇಮಿನಾಥನ ಮೂರ್ತಿಗಳಿವೆ. ಮುಖಮಂಟಪ ಕಕ್ಷಾಸನವನ್ನು ಹೊಂದಿದ್ದು, ಹೊರಬದಿಯ ಗೋಡೆಯ ಮೇಲೆ ಸಸ್ಯಾಲಂಕಾರ ಮತ್ತು ಹೊರಬದಿಗೆ ಭೂಮಿತಿ ನಕ್ಷೆಗಳನ್ನು ಕೆತ್ತಲಾಗಿದೆ. ಮುಖಮಂಟಪದ ಗೋಡೆಯ ಮೇಲಿರುವ ಶಿಲಾಶಾಸನದಲ್ಲಿ ಈ ಗ್ರಾಮವು ಕೊರುಂಬೆಟ್ಟ ಕಂಪಣದಲ್ಲಿರುವ ಸಿಂಧನ ಕಲ್ಲೋಳೆ ಎಂದೂ ಪಾರ್ಶ್ವಜಿನಾಲಯವನ್ನು ಕಟ್ಟಿಸಿದವನು ಹಗರಟಗೆ ನಾಡಿನ ಚಂದ್ರಿಕಾದೇವಿಯ ಸೋದರನ ಮಗನೆಂದೂ ಹೇಳಿದೆ. ಈ ಚಂದ್ರಿಕಾದೇವಿ ರಟ್ಟದೊರೆ ಲಕ್ಷ್ಮೀದೇವನ ಹೆಂಡತಿ, 4ನೆಯ ಕಾರ್ತವೀರ್ಯನ ತಾಯಿ. ಕಾರ್ತವೀರ್ಯ 1204ರಲ್ಲಿ 2000 ಕಮ್ಮ ಭೂಮಿಯನ್ನು ಈ ದೇವಾಲಯಕ್ಕೆ ದಾನ ನೀಡಿದ. ಈ ಪ್ರದೇಶ ವಾಣಿಜ್ಯ ಕೇಂದ್ರವಾಗಿತ್ತೆಂದು ಶಾಸನದಲ್ಲಿ ಹೇಳಿದೆ. ಪಾರ್ಶ್ವನಾಥ ಪುರಾಣವನ್ನು ಬರೆದ ಕವಿ ಪಾರ್ಶ್ವಪಂಡಿತ ಈ ಶಾಸನದ ಕರ್ತೃ. (ಆರ್.ಐ.)

**ಕವಲೆದುರ್ಗ :** ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ಕಸಬೆಯಿಂದ 21ಕಿಮೀ ದೂರದಲ್ಲಿ ಸಮುದ್ರಮಟ್ಟಕ್ಕಿಂತ 932ಮೀ ಎತ್ತರದಲ್ಲಿರುವ ಒಂದು ದುರ್ಗಮವಾದ ಬೆಟ್ಟ. ಐತಿಹಾಸಿಕ ಸ್ಥಳ.

ದ್ವಾಪರಯುಗದಲ್ಲಿ ಕಾಮ್ಯಕವನವೆಂದು ಹೆಸರಿದ್ದ ಇಲ್ಲಿ ಪಾಂಡವರು ತಮ್ಮ ವನವಾಸಕಾಲದಲ್ಲಿ ತಂಗಿದ್ದರೆಂದೂ ಮತ್ತು ಆ ಸಮಯದಲ್ಲಿ ಈ ದುರ್ಗದಲ್ಲಿ ಪುರಾತನವಾದ ದೊಡ್ಡ ಪ್ರಮಾಣದ ಮತ್ತು ಭದ್ರವಾದ ಕೋಟೆಕೊತ್ತಲಗಳನ್ನು ಕಟ್ಟಿದರೆಂದೂ ಪ್ರತೀತಿ. ಪಾಂಡವರು ಈ ದುರ್ಗದಲ್ಲಿದ್ದಾಗ ಭೀಮ ಈ ಸ್ಥಳದ ಬಳಿ ತುಂಗಭದ್ರಾ ನದಿಗೆ ಅಡ್ಡಲಾಗಿ ಭೀಮನಕಟ್ಟೆಯನ್ನು ಕಟ್ಟಿದ್ದ. ಇದರಿಂದ ಋಷಿಗಳಿಗೆ ತೊಂದರೆಯಾಯಿತು. ಧರ್ಮರಾಯನ ಆಣತಿಯ ಪ್ರಕಾರ ಭೀಮ ಅಣೆಕಟ್ಟೆಗೆ ಈಗಿರುವ ಮೂರು ರಂಧ್ರಗಳನ್ನು ಮಾಡಿ ನೀರನ್ನು ಬಿಟ್ಟ ಎಂದೂ ಕಥೆ ಇದೆ.

ಐತಿಹಾಸಿಕ ಕಾಲದಲ್ಲಿ ಈ ದುರ್ಗ ಬಿದನೂರು ನಾಯಕರ ಭದ್ರಕೋಟೆ. ಇದಕ್ಕೆ ಭುವನಗಿರಿ ಎಂದು ಹೆಸರಿತ್ತು. ಕೋಟೆಯೊಳಗೆ ಕೆಳದಿ ವೆಂಕಟಪ್ಪನಾಯಕ ಕೆಲವು ಕಟ್ಟಡಗಳನ್ನು ಕಟ್ಟಿಸಿದ್ದನೆಂದು ಕೆಳದಿನೃಪ ವಿಜಯದಲ್ಲಿ ಹೇಳಿದೆ. ದುರ್ಗದ ಮೇಲೆ ಮತ್ತು ಗ್ರಾಮದಲ್ಲಿ ಶಿಖರೇಶ್ವರ, ಲಕ್ಷ್ಮೀನಾರಾಯಣ, ಮೈಲಾರೇಶ್ವರ ಗುಡಿಗಳೂ ಅರಮನೆ, ಮದ್ದುಗುಂಡು ಶೇಖರಣಾ ಕೋಣೆ, ಕಮಂಡಲತೀರ್ಥ ಮುಂತಾದವೂ ಇವೆ. ದುರ್ಗದ ಮೇಲಿರುವ ಶ್ರೀಕಂಠೇಶ್ವರ ದೇವಸ್ಥಾನದ ದ್ವಾರ ಪಶ್ಚಿಮಕ್ಕಿರುವುದು ಒಂದು ವೈಶಿಷ್ಟ್ಯವಾಗಿದೆ.

ಮುಂದೆ ಹೈದರ್ 1761ರಲ್ಲಿ ಬಿದನೂರಿನ ಕೆಳದಿ ರಾಜರನ್ನು ಸೋಲಿಸಿ ತನ್ನ ರಾಜ್ಯಕ್ಕೆ ಈ ಪ್ರಾಂತ್ಯವನ್ನು ಸೇರಿಸಿಕೊಂಡು ಈ ದುರ್ಗಕ್ಕೆ ಕಾವಲುದುರ್ಗವೆಂದು ಹೆಸರಿಟ್ಟ. ಕ್ರಮೇಣ ಅದು ಕವಲೆದುರ್ಗವಾಯಿತು. 1882ರ ವರೆಗೆ ಕವಲೆದುರ್ಗ ಅದೇ ಹೆಸರಿನ ತಾಲ್ಲೂಕಿನ ಮುಖ್ಯಸ್ಥಳವಾಗಿತ್ತು. ಈ ಹಳೆಯ ಊರು ದುರ್ಗದ ಪಶ್ಚಿಮಕ್ಕಿದೆ. ಇಲ್ಲಿ ಹಿಂದಿನ ಕೆಳದಿ ರಾಜರ ಗುರುಗಳ ಪರಂಪರೆಗೆ ಸೇರಿದ ಲಿಂಗಾಯತ ಮಠವೊಂದಿದೆ. ಊರಿನಲ್ಲಿ ವೆಂಕಟಪ್ಪನಾಯಕ ಪ್ರತಿಷ್ಠಾಪಿಸಿದನೆನ್ನಲಾದ ವಿನಾಯಕ, ವಿರೂಪಾಕ್ಷ, ವಿಜಯವಿಠಲ, ವೀರಭದ್ರ, ನರಸಿಂಹ, ಗುರುನಾಥ, ಭುವನೇಶ್ವರಿ ಮುಂತಾದ ದೇವಮಂದಿರಗಳಿವೆ. ಮಹಾನವಮಿ ಮೈದಾನ ಮತ್ತು ಅನೇಕ ಮಾಸ್ತಿಕಲ್ಲುಗಳಿವೆ. ಒಂದು ಮಸೀದಿಯೂ ಇದೆ. ಕಲ್ಯಾಣಮಂಟಪ, ಟಂಕಶಾಲೆ, ಶಿವಗಂಗಾ ಜಲಕ್ರೀಡಾ ಕೊಳಗಳು ಇವೆ. ಕೆಳದಿ ಪಾಳೆಗಾರರು ಕಟ್ಟಿಸಿದ ಕೆರೆಗಳಿವೆ. ಸಮುದ್ರದ ವಿಹಂಗಮ ನೋಟವನ್ನು ದುರ್ಗದ ಪಶ್ಚಿಮ ಭಾಗದಿಂದ ಕಾಣಬಹುದು. (ಟಿ.ಡಿ.ಪಿ.)

**ಕವಳೆ ಗವಿಗಳು :** ಉತ್ತರ ಕನ್ನಡ ಜಿಲ್ಲೆ ಹಳಿಯಾಳ ತಾಲ್ಲೂಕಿನಲ್ಲಿ ಹಳಿಯಾಳದಿಂದ 30ಕಿಮೀ ದೂರದಲ್ಲಿ ಅಂಬಿಕಾನಗರದ ಬಳಿ ಇರುವ ನಾಗಝರಿ ವಿದ್ಯುದುತ್ಪಾದನಾ ಕೇಂದ್ರದ ಎದುರಿಗಿನ ಗವಿಗಳನ್ನು ಈ ಹೆಸರಿನಿಂದ ಕರೆಯಲಾಗುತ್ತದೆ. ಎತ್ತರದ ಬೆಟ್ಟದ ಮಣಿನಲ್ಲಿರುವ ಈ ಗುಹೆಗಳು ಪ್ರಕೃತಿರಮ್ಯ ದೃಶ್ಯಗಳ ನಡುವೆ ಅಡಗಿವೆ. ಇಲ್ಲಿಗೆ ತಲುಪಲು ಎರಡು ಮಾರ್ಗಗಳಿವೆ. ಒಂದು, ನಾಗಝರಿ ತೊರೆಹಾಯ್ದು ಮೆಟ್ಟಿಲುಗಳನ್ನು ಹತ್ತಿ ಬರುವ ಮಾರ್ಗ. ಇನ್ನೊಂದು, ಪಣಸೊಳ್ಳಿ ಮಾರ್ಗದಲ್ಲಿ ದಾಂಡೇಲಿ ಮೃಗಧಾಮವನ್ನು ದಾಟಿ ಬರುವ ಮಾರ್ಗ. ಈ ಮಾರ್ಗದಲ್ಲಿ ಬಂದರೆ 12ಕಿಮೀ ದೂರ ಕ್ರಮಿಸಬೇಕು ಹಾಗೂ ಮೆಟ್ಟಿಲುಗಳನ್ನು ಹತ್ತಬೇಕು. ಕಡಿದಾದ ಬಂಡೆಯ ಮಧ್ಯದಲ್ಲಿ ಸುಂದರ ಗವಿಗಳ ಸಮೂಹ ಗೋಚರಿಸುತ್ತದೆ. ಇದರ ಪ್ರವೇಶದ್ವಾರ 4ಮೀ ಎತ್ತರ ಮತ್ತು ಅಷ್ಟೇ ಸುತ್ತಳತೆ ಹೊಂದಿದೆ. ಆದರೆ ನಿಜವಾದ ಕಿಂಡಿ ಕೇವಲ 90ಸೆಂಮೀನಷ್ಟು ಎತ್ತರದ್ದಾಗಿದ್ದು, ಇದರ ಮೂಲಕ ಎಚ್ಚರಿಕೆಯಿಂದ ಸು.9ಮೀನಷ್ಟು ತೆವಳಿಕೊಂಡು ಕ್ರಮಿಸಿದರೆ ಒಂದು ಹಜಾರದಂತಹ ಜಾಗಕ್ಕೆ ತಲುಪಬಹುದು. ಅಲ್ಲಿ ಮಧ್ಯದಲ್ಲಿ ಒಂದು ದೊಡ್ಡ ಶಿವಲಿಂಗವಿದೆ. ಇದು ಸುಮಾರು ಒಂದು ಮೀಟರ್‌ನಷ್ಟು ಎತ್ತರವಾಗಿದೆ. ಇದನ್ನು ಸ್ಥಳೀಯರು ಕವಳೆಲಿಂಗ ಎಂದು ಕರೆಯುತ್ತಾರೆ. ಇದಕ್ಕೆ ನಿತ್ಯ ಪೂಜೆ ನಡೆಯುತ್ತದೆ. ಶಿವಲಿಂಗದ ಹಿಂಭಾಗದಲ್ಲಿ ಒಂದು ಪ್ರತ್ಯೇಕ ಗವಿಯಿದ್ದು ಇಲ್ಲಿಂದ ಹೊರಗೆ ಹೋಗಬಹುದು. ಈಗ ಗವಿಯೊಳಗೆ ಬೆಳಕಿನ ವ್ಯವಸ್ಥೆ ಮಾಡಲಾಗಿದೆ.

ಈ ಸ್ಥಳಕ್ಕೆ ಪುರಾಣ, ಐತಿಹ್ಯಗಳೂ ಇವೆ. ಒಮ್ಮೆ ಶಿವ ಶನಿಯಿಂದ ಪೀಡಿಸಲ್ಪಟ್ಟಾಗ ಇಲ್ಲಿಗೆ ಬಂದು ಅಡಗಿದ್ದನಂತೆ. ಪಾಂಡವರು

ವನವಾಸದ ಸಂದರ್ಭದಲ್ಲಿ ಇಲ್ಲಿಗೆ ಬಂದಿದ್ದು ಈ ಶಿವಲಿಂಗವನ್ನು ಪೂಜಿಸಿದ್ದರೆಂದು ಐತಿಹ್ಯ. ಇತ್ತೀಚೆಗೆ ಗವಿಯ ಹೊರಗಡೆ ಗಣಪತಿ ಹಾಗೂ ಕಾರ್ತಿಕೇಯನ ಮೂರ್ತಿಗಳನ್ನು ಸ್ಥಾಪಿಸಿದ್ದಾರೆ. ಶಿವರಾತ್ರಿಯ ಸಂದರ್ಭದಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ. (ಎಸ್.ಎಚ್‌ಇ.)

**ಕವಿಕಾಮ :** ಸು.1200. ಶೈವ ಬ್ರಾಹ್ಮಣಕವಿ. ಶೃಂಗಾರರತ್ನಾಕರ ಎಂಬ ಅಲಂಕಾರಶಾಸ್ತ್ರಗ್ರಂಥ'ದ ಕರ್ತೃ. ಈತನಿಗೆ ಶೃಂಗಾರರತ್ನಾಕರ, ಕವಿಮುಖ ಮುಕುರ ಎಂಬ ಬಿರುದುಗಳಿದ್ದಂತೆ ತಿಳಿದುಬರುತ್ತದೆ. ತನ್ನ ಗ್ರಂಥದಲ್ಲಿ ಅಮರಸಿಂಹ, ಚಂದ್ರದತ್ತ ಮೊದಲಾದ ಸಂಸ್ಕೃತ ಕವಿಗಳನ್ನು ಸ್ಮರಿಸಿದ್ದಾನೆ. ವಿವಿಧ ಭೂಭೃದ್‌ಭೂರಿಸಂಭಾವಿತಾಸ್ಪದದಿಂ ಎಂದು ಹೇಳಿಕೊಂಡಿರುವುದರಿಂದ ಈತ ರಾಜಾಸ್ಥಾನಗಳಲ್ಲಿ ಪ್ರಸಿದ್ಧ ಕವಿಯಾಗಿದ್ದಿರಬಹುದು. ಕವಿಪಾರ್ಶ್ವನೂ (ಸು.1205) ಸೂಕ್ತಿ ಸುಧಾರ್ಣವದ ಕರ್ತೃ ಮಲ್ಲಿಕಾರ್ಜುನನೂ (ಸು.1240) ಈತನನ್ನು ಸ್ಮರಿಸಿದ್ದಾರೆ.

ಶೃಂಗಾರರತ್ನಾಕರ ಕನ್ನಡದಲ್ಲಿ ರಸಪ್ರಕ್ರಿಯೆಯನ್ನು ಸವಿಸ್ತಾರವಾಗಿ ಪ್ರತಿಪಾದಿಸಿದ ಮೊಟ್ಟಮೊದಲ ಗ್ರಂಥ'. ಇದಕ್ಕೆ ರಸವಿವೇಕ ಎಂಬ ಹೆಸರೂ ಇದೆ. ಇದರಲ್ಲಿ ನವರಸ ವ್ಯಾವರ್ಣನ, ಭಾವಭೇದ ನಿರ್ಣಯ, ನಾಯಕನಾಯಿಕಾ ವಿಕಲ್ಪವಿಸ್ತರ, ಸಖಿಸಖೀ ಸಂಭೋಗ ವಿಪ್ರಲಂಭ ಪ್ರಮಾವಸ್ಥಾವಿಸ್ತರ ಎಂಬ ನಾಲ್ಕು ಪರಿಚ್ಛೇದಗಳಿವೆ. ಸಂಸ್ಕೃತ ರಸಶಾಸ್ತ್ರದ ನಿಕಟ ಪ್ರಭಾವದಿಂದ ಭಾವರಸ ಪ್ರಪಂಚ, ವಿಶೇಷವಾಗಿ ಶೃಂಗಾರರಸ ಇವುಗಳಲ್ಲಿ ನಿರೂಪಿಸಲಾಗಿದೆ. ರಸವೇ ಮೊದಲ್ ಕವಿತೆಗೆ ಎಂದು ಕಾವ್ಯಕ್ಕೆ ಮುಖ್ಯವಾಗಿ ಬೇಕಾದ ಅಂಶವನ್ನು ಹೇಳುತ್ತಾನೆ. ಶಾಸ್ತ್ರ ದೃಷ್ಟಿಯಿಂದ ಈ ಗ್ರಂಥ' ಬಹುಮಟ್ಟಿಗೆ ಪರತಂತ್ರವೇ ಆದರೂ ಯಾವೊಂದು ಕೃತಿಯ ತದ್ರೂಪವಾದ ಅನುವಾದವಲ್ಲ. ಕೆಲವು ಹೊಸ ಸಂಗತಿಗಳನ್ನು ರಸದ ಬಗ್ಗೆ ಹೇಳಿದ್ದಾನೆ. ಇವನ ಲಕ್ಷ್ಯಲಕ್ಷಣ ಪದ್ಯಗಳಲ್ಲಿ ಸಹಜ ಕವಿತ್ವ, ಲಲಿತ ಶೈಲಿ, ಶಾಸ್ತ್ರಜ್ಞಾನ ಕಂಡುಬರುತ್ತದೆ.

ಶೃಂಗಾರರತ್ನಾಕರದಿಂದ ಲಕ್ಷಣ ಪದ್ಯಗಳನ್ನು ಸಾಳ್ವ ತನ್ನ ರಸರತ್ನಾಕರದಲ್ಲಿಯೂ ತಿಪ್ಪರಸ ತನ್ನ ನವರಸಾಲಂಕಾರದಲ್ಲಿಯೂ ಮಲ್ಲಿಕಾರ್ಜುನ ತನ್ನ ಸೂಕ್ತಿಸುಧಾರ್ಣವದಲ್ಲಿಯೂ ಉದ್ಧರಿಸಿದ್ದಾರೆ.

ಪಾರ್ಶ್ವಕವಿಯ ಹೇಳಿಕೆಯನ್ನು ಆಧರಿಸಿ ಈತ ಸ್ತನಶತಕವೆಂಬ ಗ್ರಂಥ'ವನ್ನು ಬರೆದಿರಬಹುದೆಂಬ ಊಹೆ ಇದೆ. ಆದರೆ ಈ ಗ್ರಂಥ' ಉಪಲಬ್ಧವಿಲ್ಲ. (ಸಿ.ಜಿ.ಪಿ.)

**ಕವಿತಾ ಲಂಕೇಶ್ :** 1964 ಹೊಸತಲೆಮಾರಿನ ಚಲನಚಿತ್ರ ನಿರ್ದೇಶಕಿ ಮತ್ತು ನಿರ್ಮಾಪಕಿ. ಇವರ ತಂದೆ ಕನ್ನಡದ ಹೆಸರಾಂತ ಲೇಖಕ ಪಿ.ಲಂಕೇಶ್, ತಾಯಿ ಇಂದಿರಾ. 1964 ಡಿಸೆಂಬರ್ 13ರಂದು ಜನಿಸಿದ ಕವಿತಾ ಅವರು ಜಾಹೀರಾತು ವಿಷಯದಲ್ಲಿ ಡಿಪ್ಲೋಮಾ, ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಗಳಿಸಿದ್ದಾರೆ. ಸಿನಿಮಾ ಕಲೆಯ ಬಗ್ಗೆ ಇವರಿಗೆ ವಿಶೇಷ ಆಸಕ್ತಿ. ಇವರು ಆಪ್ಟಾಜ್ ಫಿಲ್ಮ್ಸ್ ಪ್ರಾರಂಭಿಸಿ ಅದರ ಮೂಲಕ 30ಕ್ಕೂ ಹೆಚ್ಚು ಕಾರ್ಪೋರೇಟ್ ಸಂಸ್ಥೆಗಳಿಗಾಗಿ ಹಾಗೂ ಕರ್ನಾಟಕ ಸರ್ಕಾರದ ಹಲವು ಇಲಾಖೆಗಳಿಗಾಗಿ ಸಾಕ್ಷ್ಯಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಯಕ್ಷಗಾನ ಕುರಿತಂತೆ 'ದಿ ಸಾಂಗ್ಸ್ ಆಫ್ ಏಂಜಲ್ಸ್' ಎಂಬುದು ಅವುಗಳಲ್ಲೊಂದು. ವಿಭಿನ್ನ ಕ್ಷೇತ್ರಗಳಲ್ಲಿ ಸಾಧನೆ ಮಾಡಿರುವ ಮಹಿಳೆಯರನ್ನು ಕುರಿತಂತೆ ಇವರು ನಿರ್ದೇಶಿಸಿದ ಸಾಕ್ಷ್ಯ ಚಿತ್ರಗಳು ಇವರನ್ನು ಪ್ರಯೋಗಶೀಲ ನಿರ್ದೇಶಕಿ ಎಂಬುದನ್ನು ಋಜುವಾತುಪಡಿಸಿವೆ. ಮೊಟ್ಟ ಮೊದಲಬಾರಿಗೆ ಪಿ.ಲಂಕೇಶರ ಅಕ್ಕ ಕಾದಂಬರಿ ಆಧರಿಸಿ ಇವರು ನಿರ್ದೇಶಿಸಿದ ದೇವೀರಿ ಎಳೆಯ ವಯಸ್ಸಿನ ಹುಡುಗನೊಬ್ಬನ ಭಾವನೆಗಳನ್ನು ಹಿಡಿದಿಟ್ಟಿರುವ ಚಿತ್ರ. ಇದು ಅತಿ ಹೆಚ್ಚು ಅಂತಾರಾಷ್ಟ್ರೀಯ ಚಲನಚಿತ್ರೋತ್ಸವಗಳಲ್ಲಿ ಭಾಗವಹಿಸಿದ ಕನ್ನಡ ಚಲನಚಿತ್ರವೆನಿಸಿದೆ. ಪ್ರಥಮ ಅತ್ಯುತ್ತಮ ಚಿತ್ರವೆಂದು ಇದು ಕರ್ನಾಟಕ ಸರ್ಕಾರದಿಂದ ಪ್ರಶಸ್ತಿ ಗಳಿಸಿತು. (1999-2000).

ಈ ಚಲನಚಿತ್ರಕ್ಕೆ ಹಲವಾರು ಪ್ರಶಸ್ತಿಗಳು ಲಭಿಸಿವೆ. ಅವುಗಳಲ್ಲಿ ಮುಖ್ಯವಾದುವುದಗಳೆಂದರೆ ಅರವಿಂದನ್ ಪುರಸ್ಕಾರದ ರಾಷ್ಟ್ರೀಯ ಉತ್ತಮ ನಿರ್ದೇಶನ ಪ್ರಶಸ್ತಿ (1999), ವಿಶೇಷ ರಾಷ್ಟ್ರೀಯ ಪ್ರಶಸ್ತಿ (1999), ಶ್ರೇಷ್ಠ ಬಾಲಾಭಿನಯ ಪ್ರಶಸ್ತಿ (2000), ಸುಪ್ರಭಾತ ಟೆಲಿವಿಷನ್‌ನ ಶ್ರೇಷ್ಠ ನಿರ್ದೇಶನ ಪ್ರಶಸ್ತಿ (2001), ಕಾವೇರಿ ಏಷ್ಯಾನೆಟ್ ಟೆಲಿವಿಷನ್‌ನ ಉತ್ತಮ ಕಥಾ ಪ್ರಶಸ್ತಿ (2001). ಈ ಚಿತ್ರ ಭಾರತದ ಪ್ರಮುಖ ನಗರಗಳಲ್ಲಷ್ಟೇ ಅಲ್ಲದೆ ಲಂಡನ್, ದರ್ಬಾನ್, ಬ್ಯಾಂಕಾಕ್, ಸಿಡ್ನಿ ಮುಂತಾದೆಡೆಗಳಲ್ಲಿ ನಡೆದ ಚಲನಚಿತ್ರೋತ್ಸವಗಳಲ್ಲಿ ಪ್ರದರ್ಶನಗೊಂಡು ವಿದೇಶೀಯರ ಗಮನವನ್ನು ಸೆಳೆಯಿತು.



ಇವರು ಅಲೆಮಾರಿ, ಬಿಂಬ ಎಂಬ ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಪ್ರೀತಿ ಪ್ರೇಮ ಪ್ರಣಯ ಇವರು ನಿರ್ದೇಶಿಸಿದ ಚಿತ್ರ(2003). ತಾವೊಬ್ಬ ಸಮರ್ಥ ನಿರ್ದೇಶಕಿ ಎಂಬುದನ್ನು ಇವರು ತೋರಿಸಿ ಕೊಟ್ಟಿದ್ದಾರೆ. ಪರಿಸರತಜ್ಞೆ ತುಳಸಿಯವರ ಬಗ್ಗೆ ಇವರು ತಯಾರಿಸಿದ ಕಿರುಚಿತ್ರ ಗಂಭೀರ ಪ್ರಯತ್ನದಲ್ಲಿ ಮೂಡಿ ಬಂದಿದೆ. ಸಾಮಾಜಿಕ ಕಳಕಳಿಯನ್ನೊಳಗೊಂಡ ಚಿತ್ರವೆಂದು ಇದಕ್ಕೆ ಇಂದಿರಾ ಪ್ರಿಯದರ್ಶಿನಿ ಪ್ರಶಸ್ತಿ ಲಭಿಸಿದೆ. ಕರ್ನಾಟಕದ ಸಿದ್ಧಿಜನಾಂಗದ ಸ್ಥಿತಿಗತಿಗಳ ಬಗ್ಗೆ ತಯಾರಿಸಿರುವ ಇನ್ನೊಂದು ಸಾಕ್ಷ್ಯಚಿತ್ರ ಗಮನಾರ್ಹವಾದದ್ದು. 'ಹಸೆಕಲೆ' ಅವನತಿ ಹೊಂದುತ್ತಿರುವ ಒಂದು ಗ್ರಾಮೀಣ ಕಲೆ. ಈ ಕಲೆ ಕುರಿತಂತೆ ಕೂಡ ಇವರು ಸಾಕ್ಷ್ಯಚಿತ್ರ ನಿರ್ಮಿಸಿದ್ದಾರೆ. ರಂಗಭೂಮಿ ಕಲಾವಿದೆ ಬಿ.ಜಯಶ್ರೀ, ಚಿತ್ರಕಲಾವಿದೆ ಪುಷ್ಪಮಾಲ, ನಿರ್ದೇಶಕಿ ಪ್ರೇಮಾಕಾರಂತ, ಚಿತ್ರನಟಿ ಜಯಂತಿ, ಬರೆಹಗಾರ್ತಿ ವೈದೇಹಿ ಹಾಗೂ ಸಮಕಾಲೀನ ನೃತ್ಯಗಾರ್ತಿ ತ್ರಿಪುರಾ ಕಶ್ಯಪ್ ಮುಂತಾದವರ ಬಗೆಗಿನ ಸಾಕ್ಷ್ಯಚಿತ್ರಗಳು ರಾಜ್ಯದೆಲ್ಲೆಡೆ ಪ್ರದರ್ಶಿತಗೊಂಡು ಪ್ರಶಂಸೆ ಗಳಿಸಿವೆ.

ಯುವ ನಿರ್ದೇಶಕ ಹಾಗೂ ಲೇಖಕ ಪಿ.ಎಲ್.ಇಂದ್ರಜಿತ್ ಇವರ ಸೋದರ, ಲಂಕೇಶ್ ಪತ್ರಿಕೆ (ಈಗ ಲಂಕೇಶ್) ಸಂಪಾದಕಿ ಗೌರಿಲಂಕೇಶ್ ಇವರ ಸೋದರಿ. (ಜಿ.ಎಸ್.ಎಲ್.)

**ಕವಿತಾಳ :** ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನಲ್ಲಿ ರಾಯಚೂರು ಲಿಂಗಸುಗೂರು ರಸ್ತೆಯಲ್ಲಿ ಲಿಂಗಸುಗೂರಿನಿಂದ 28ಕಿಮೀ ದೂರದಲ್ಲಿರುವ ಒಂದು ಗ್ರಾಮ. ಇದರ ಪುರಾತತ್ವ ಪ್ರಾಗೈತಿಹಾಸಿಕ ಕಾಲದಷ್ಟು. ಊರಿನಿಂದ ಆಗ್ನೇಯದಲ್ಲಿರುವ ಗುಡ್ಡದಲ್ಲಿ ಅನೇಕ ನೈಸರ್ಗಿಕ ಗುಹೆಗಳಿದ್ದು ಅಲ್ಲಿ ಪುರಾತನ ಶಿಲಾಯುಗ ಕಾಲದಿಂದ ಆಗಾಗ ಜನವಸತಿ ಇದ್ದಿತೆಂದು ತಿಳಿದುಬರುತ್ತದೆ. ಬೆಟ್ಟದ ತಪ್ಪಲಲ್ಲಿ ಕಬ್ಬಿಣದ ಕಿಟ್ಟಗಳೂ ಮಣ್ಣಿನ ಪಾತ್ರೆಗಳೂ ಕುಶಲವಸ್ತುಗಳೂ ದೊರಕಿವೆ. ಊರಿನ ಪಶ್ಚಿಮದಲ್ಲಿ ಒಂದು ಬೂದಿತಿಟ್ಟು ಸಹ ಇದೆ. ಈ ಊರ ಬಳಿಯಲ್ಲಿನ ತುಪ್ಪಲ ದೊಡ್ಡಿಯ ಬಳಿಯಲ್ಲಿ ಪುರಾತನ ಅವಶೇಷಗಳ ಜೊತೆಗೆ ಬಂಗಾರದ ಗಣಿಯೂ ಇದ್ದು ಅದನ್ನು ಪುರಾತನಕಾಲದಲ್ಲಿ ಶೋಧಿಸಿದುದರ ಕುರುಹುಗಳೂ ದೊರೆತಿವೆ.

ಈ ಊರಿನ ತ್ರ್ಯಂಬಕೇಶ್ವರ ದೇವಸ್ಥಾನ ಬಹು ಪ್ರಸಿದ್ಧವಾದುದು. ಇದನ್ನು ದ್ರಾವಿಡ ಶೈಲಿಯಲ್ಲಿ ಕಟ್ಟಿದೆ. ದೇವಸ್ಥಾನದಲ್ಲಿ ಮೂರು ಗರ್ಭಗೃಹಗಳಿದ್ದು ಮಧ್ಯದಲ್ಲಿ ನವರಂಗವಿದೆ. ಮೂರೂ ಗರ್ಭಗೃಹಗಳಿಗೂ ನವರಂಗಕ್ಕೂ ಮಧ್ಯೆ ಸುಕನಾಸಿಗಳಿವೆ. ಪ್ರಾಕಾರ ಸರಳವಾಗಿದ್ದರೂ ಕಂಬಗಳು ಒಳ್ಳೆಯ ಪ್ರಭಾವಯುತವಾಗಿವೆ. ದೇವಸ್ಥಾನದ ಶಿಖರಗಳು ಸುಂದರವಾಗಿವೆ. ಇವುಗಳಲ್ಲಿ $^{2}/_{3}$ ಭಾಗ ಕಲ್ಲಿನಲ್ಲಿಯೂ ಮಿಕ್ಕ ಭಾಗವನ್ನು ಇಟ್ಟಿಗೆ ಹಾಗೂ ಗಾರೆಯಲ್ಲಿಯೂ ಕಟ್ಟಲಾಗಿದೆ. ಇಲ್ಲಿನ ಮೂರು ಭಿತ್ತಿಮಂಟಪಗಳಲ್ಲಿ ಒಂದೊಮ್ಮೆ (ಮೂರರಲ್ಲೂ) ಪ್ರಾಯಃ ಲಿಂಗಗಳೂ ಇದ್ದುವೆಂದು

ತೋರುತ್ತದೆ. ಈಗ ಎರಡರಲ್ಲಿ ಇವೆ. ಇಲ್ಲಿನ ಒಂದು ಮಹಿಷಾಸುರ ಮರ್ದಿನಿಯ ಮೂರ್ತಿ ಕೂಡ ತುಂಬ ಸೊಗಸಾಗಿದೆ. ಈ ದೇವಸ್ಥಾನದಲ್ಲಿನ ಗೋಡೆಗಳನ್ನು ದೊಡ್ಡ ದೊಡ್ಡ ನಸುಗೆಂಪಿನ ಕಗ್ಗಲ್ಲುಗಳಲ್ಲಿ (ಖೊಂಡಾಸನ್ ಕಲ್ಲುಗಳು) ಕಟ್ಟಿದೆ; ಅಲ್ಲಲ್ಲಿ ಯಾಳಿಗಳನ್ನೂ ಬಿಡಿಸಲಾಗಿದೆ. ಇಲ್ಲಿ ಕೆಲವೆಡೆ ಗಜಯುದ್ಧ ಇತ್ಯಾದಿಗಳನ್ನು ಕೆತ್ತಲಾಗಿದೆ. ಈ ದೇವಸ್ಥಾನದಲ್ಲಿ ಸೇವುಣ ಸಿಂಘಣನ ಮಾಂಡಲಿಕನಾದ ಮಲ್ಲಿದೇವರಸ ಬರೆಯಿಸಿದ ಎರಡು ಕನ್ನಡ ಶಾಸನಗಳಿವೆ. (ಎಸ್.ಜೆ.ಎ.)

**ಕವಿಪರಮೇಷ್ಠಿ :** ಸು.551. ಒಬ್ಬ ಪ್ರಾಚೀನ ಕವಿ. ಪಂಪನಿಂದ (ಸು.941) ಕಮಲಭವನ (ಸು.1235) ವರೆಗೆ ಹಲವು ಕನ್ನಡ ಕವಿಗಳು ಈತನನ್ನು ಆದರದಿಂದ ಸ್ತುತಿಸಿದ್ದಾರೆ. ಪಂಪನಂತೂ ಇವನನ್ನು ಜಗತ್ಪ್ರಸಿದ್ಧನೆಂದು ಕರೆದಿದ್ದಾನೆ. ಗುಣವರ್ಮ ಇವನ ವಾಕ್‌ಚಾತುರ್ಯವನ್ನು ಹೊಗಳಿ ಇವನನ್ನು ಪರಬ್ರಹ್ಮ ಎಂದು ಕರೆದಿದ್ದಾನೆ. ಕವಿಪರಮೇಷ್ಠಿ ಇಪ್ಪತ್ನಾಲ್ಕು ತೀರ್ಥಂಕರರ ಪುರಾಣವನ್ನು (ಚರಿತ್ರೆ) ಬರೆದಿದ್ದಾನೆಂದು ನೇಮಿಚಂದ್ರ (12ನೆಯ ಶತಮಾನ) ಹೇಳಿದ್ದಾನೆ. ಈ ಮಾತಿನ ಉಲ್ಲೇಖ ಚಾವುಂಡರಾಯನ (ಸು.978) ತ್ರಿಷಷ್ಟಿಶಲಾಕಪುರಾಣದಲ್ಲೂ ದೊರೆಯುತ್ತದೆ. ಗುಣಭದ್ರರು ತಮ್ಮ ಗುರು ಜಿನಸೇನರ ಆದಿಪುರಾಣ ಕವಿ ಪರಮೇಷ್ಠಿಯ ಗದ್ಯಕಥಾ ಎಂಬ ಕೃತಿಯನ್ನು ಅನುಸರಿಸಿದೆ ಎಂದು ಹೇಳಿದ್ದಾರೆ. ಕವಿಪರಮೇಷ್ಠಿ ಪೂರ್ವಪುರಾಣದ ಸಂಗ್ರಹಕಾರನೆಂದು ಹೇಳಿ ಜಿನಸೇನರು ಈತನ ವಾಗರ್ಥಸಂಗ್ರಹವನ್ನು ನಿರ್ದೇಶಿಸಿದ್ದಾರೆ. ಇವೆಲ್ಲ ಸಂದರ್ಭಗಳಿಂದ ಕವಿ ಪರಮೇಷ್ಠಿ 9ನೆಯ ಶತಮಾನಕ್ಕಿಂತ ಮುಂಚಿನವನೆಂದು ಹೇಳಬಹುದು. ರಾ.ನರಸಿಂಹಾಚಾರ್ಯರು ಇವನ ಕಾಲ ಸು.551 ಎಂದು ಊಹಿಸಿದ್ದಾರೆ. ಕವಿ ಪರಮೇಷ್ಠಿಯ ಕೃತಿಗಳು ಬೆಳಕಿಗೆ ಬಂದಿಲ್ಲ; ಆದರೂ ಚಾವುಂಡರಾಯಪುರಾಣ, ಶಾಂತಿಪುರಾಣಗಳಲ್ಲಿ ಕವಿಪರಮೇಷ್ಠಿಯ ಕೆಲವು ಪದ್ಯಗಳು ಕವಿಯ ನಾಮ ನಿರ್ದೇಶಪೂರ್ವಕ ಉದಾಹರಿತವಾಗಿದೆ. ಇವೆಲ್ಲ ಸಂಸ್ಕೃತ ಭಾಷೆಯಲ್ಲಿ ವೃತ್ತ ರೂಪದಲ್ಲಿವೆ. ಗುಣಭದ್ರರು ಹೇಳುವುದನ್ನು ನೆನಪಿನಲ್ಲಿಟ್ಟುಕೊಂಡು ಈ ಪದ್ಯಗಳನ್ನು ನೋಡಿದರೆ ಕವಿಪರಮೇಷ್ಠಿಯ ಗ್ರಂಥ ಪುರಾಣಶೈಲಿಯ ಚಂಪೂಕಾವ್ಯವಾಗಿರಬಹುದೆಂದು ತೋರುತ್ತದೆ. (ಎ.ಎನ್.ಯು.)

**ಕವಿಮಲ್ಲ :** ಸು.1400. ಬ್ರಾಹ್ಮಣಕವಿ. ಮನ್ಮಥವಿಜಯ ಎಂಬ ಗ್ರಂಥದ ಕರ್ತೃ. ತಾನು ಕವಿ ಪುಟ್ಟಣಾಂಕಪಂಡಿತನಿಂದ (ಸು.1380) ವಿದ್ಯೆಯನ್ನು ಕಲಿತಂತೆ ಹೇಳಿಕೊಂಡಿದ್ದಾನೆ. ಇವನಿಗೆ ಲಕ್ಷಣಕವಿ ಎಂಬ ಬಿರುದಿದ್ದಂತೆ ತಿಳಿದುಬರುತ್ತದೆ. ಪೂರ್ವಕವಿಗಳಲ್ಲಿ ಕವಿಕಾಮ, ಅಗ್ಗಳ, ನೇಮಿಚಂದ್ರ, ಮನಸಿಜ, ಸುಜನೋತ್ತಂಸ, ರುದ್ರಾಂಕ, ಪೊನ್ನ, ನಾಗವರ್ಮ, ಕೇಶಿರಾಜ, ಇವರನ್ನು ಸ್ತುತಿಸಿದ್ದಾನೆ.

ಮನ್ಮಥವಿಜಯ ಚಂಪೂರೂಪದಲ್ಲಿದೆ. ಚಂದ್ರರಾಜನ ಮದನತಿಲಕವನ್ನು ಬಿಟ್ಟರೆ, ಇದು ಕಾಮಶಾಸ್ತ್ರಕ್ಕೆ ಸಂಬಂಧಿಸಿದ ಎರಡನೆಯ ಕನ್ನಡ ಗ್ರಂಥ. ಸ್ಮರವಿಜಯ ಕೃತಿಯ ಹೆಸರೆಂದೂ ಶೃಂಗಾರರಸಕೋವಿದರು ಇದನ್ನು ಆದರಿಸುವರೆಂದೂ ಕವಿ ಹೇಳಿಕೊಂಡಿದ್ದಾನೆ. (ಬಿ.ಎಸ್.ಎಸ್.)

**ಕವಿರಾಜಮಾರ್ಗ :** ದೊರೆತಿರುವ ಕನ್ನಡ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದುದು. ಇದರ ರಚನೆಯ ಕಾಲಾವಧಿ 815-77. ಈ ಗ್ರಂಥದ ಕರ್ತೃ ಯಾರು ಎಂಬ ಬಗೆಗೆ ಗ್ರಂಥ ಪ್ರಕಟಗೊಂಡಂದಿನಿಂದ (1898) ಇಂದಿನ ವರೆಗೆ ವಿಪುಲವಾದ ಚರ್ಚೆ ನಡೆದಿದೆ. ಆದರೆ ಒಮ್ಮತದ ತೀರ್ಮಾನಕ್ಕೆ ಬರಲಾಗಿಲ್ಲ (ನೋಡಿ : ಶ್ರೀವಿಜಯ).

ವಿದ್ವಾಂಸರು ಮುಖ್ಯವಾಗಿ ಕೃತಿಯ ಬಾಹ್ಯಾಭ್ಯಂತರ ಪ್ರಮಾಣವನ್ನು ಗಮನಿಸಿ ಕವಿರಾಜಮಾರ್ಗದ ಕರ್ತೃವಿನ ಬಗ್ಗೆ ತಾಳಿರುವ ಅಭಿಪ್ರಾಯಗಳನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು:

1.ಪ್ರತಿ ಪರಿಚ್ಛೇದಾಂತ ಗದ್ಯದಲ್ಲಿ 'ಪರಮಶ್ರೀನೃಪತುಂಗ ದೇವಾನುಮತಮಪ್ಪ ಕವಿರಾಜಮಾರ್ಗ' ಎಂದಿರುವುದರಿಂದಲೂ ಗ್ರಂಥದಲ್ಲಿ ಅಲ್ಲಲ್ಲಿ ಭಾವಿಸಿ ಬೆಸಸಿದನ್ ಅಮೋಘವರ್ಷ ನೃಪೇಂದ್ರಂ, ಎಂದನ್ ಅತಿಶಯ ಧವಳಂ, ಅತಿಶಯಧವಳೋಕ್ತ ಕ್ರಮದೆ ಎಂಬಿವೇ ಮುಂತಾದ ಉಕ್ತಿಗಳು ಹೇರಳವಾಗಿ ದೊರೆಯುವುದರಿಂದಲೂ ಭಟ್ಟಾಕಳಂಕ (ಸು.1604) ನೃಪತುಂಗಗ್ರಂಥ ಎಂದು ಸ್ಪಷ್ಟವಾಗಿ ಹೇಳಿರುವುದರಿಂದಲೂ ನೃಪತುಂಗ ಗ್ರಂಥಕರ್ತನೆಂದು ಊಹಿಸಲು ಅವಕಾಶವಿದೆ.

2.ಪ್ರತಿ ಪರಿಚ್ಛೇದಾಂತ ಪದ್ಯದಲ್ಲಿ 'ಶ್ರೀ ವಿಜಯ ಪ್ರಭೂತಮಂ ಇದಂ ಕೈಕೊಳ್ವುದೀಮಾಱ್ಕೆಯಿಂ', ಇತ್ಯಾದಿಯಾಗಿ ಸ್ಪಷ್ಟವಾಗಿ ಶ್ರೀವಿಜಯನ ಉಲ್ಲೇಖವಿರುವುದರಿಂದಲೂ ಆಶ್ರಿತಮಹಾನೃಪತುಂಗಸಭಾಸದಂ ಕೊಡೆ ಪೇಳ್ದನುತಕಾವ್ಯಂ ಎಂಬ ಸ್ಪಷ್ಟೋಕ್ತಿ ಇರುವುದರಿಂದಲೂ ಕೇಶಿರಾಜ ತನ್ನ ಶಬ್ದಮಣಿದರ್ಪಣದಲ್ಲಿ ಸ್ಮರಿಸಿದ ಕವಿವೃಂದದಲ್ಲಿ ನೃಪತುಂಗನನ್ನು ಬಿಟ್ಟು ಶ್ರೀವಿಜಯನನ್ನು ಹೆಸರಿಸಿರುವುದಲ್ಲದೆ ಕವಿರಾಜಮಾರ್ಗದಿಂದ ಕೆಲವು ಪದ್ಯಗಳನ್ನು ಉದ್ಧರಿಸಿರುವುದರಿಂದಲೂ ದುರ್ಗಸಿಂಹ (ಸು.1031) ತನ್ನ ಪಂಚತಂತ್ರದಲ್ಲಿ 'ಶ್ರೀ ವಿಜಯರ ಕವಿಮಾರ್ಗ' ಎಂದು ಗೌರವದಿಂದ ನೆನೆದಿರುವುದರಿಂದಲೂ ಶ್ರೀವಿಜಯ ಗ್ರಂಥಕರ್ತನೆಂದು ಊಹಿಸಲು ಪ್ರಬಲ ಸಾಧನಗಳಿವೆ.

3.ಗ್ರಂಥದಲ್ಲಿ ಕವೀಶ್ವರ ಎಂಬ ಹೆಸರೂ ಉಕ್ತವಾಗಿದ್ದು ಎರಡನೆಯ ಪರಿಚ್ಛೇದದ ಕೊನೆಯಲ್ಲಿಯ ಶ್ರೀವಿಜಯಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ ಎಂಬ ವಾಕ್ಯದಿಂದ ಕವೀಶ್ವರನೆಂಬವನು ಶ್ರೀವಿಜಯಕರ್ತೃಕವಾದ ಈ ಗ್ರಂಥವನ್ನು (ಕವಿಮಾರ್ಗವನ್ನು) ತನ್ನ ಪ್ರಯೋಜನಕ್ಕಾಗಿ ಉಪಯೋಗಿಸಿಕೊಂಡನೆಂದು ಹೇಳಬಹುದಾಗಿರು ವುದರಿಂದಲೂ ಕವಿರಾಜಮಾರ್ಗ ಎಂಬ ಹೆಸರು ಕೂಡ ಕವೀಶ್ವರಮಾರ್ಗ ಎಂಬುದಕ್ಕೆ ಸಂವಾದಿಯಾಗಿರುವುದರಿಂದಲೂ ಈ ಗ್ರಂಥವನ್ನು ಕವೀಶ್ವರನೇ ಬರೆದನೆಂದು ಸೂಚಿತವಾಗುವುದು. ಇದು ಕವೀಶ್ವರ ಪಕ್ಷದವರ ಅಭಿಪ್ರಾಯ.

ಕೊನೆಯದಾಗಿ, ಗ್ರಂಥದಲ್ಲಿ ವೈದಿಕಮತಾನುಯಾಯಿಯಾದ ನೃಪತುಂಗನ ವ್ಯಕ್ತಿತ್ವವೂ ಜೈನಮತಾನುಯಾಯಿಯಾದ ನೃಪತುಂಗಸಭಾಸದನ ವ್ಯಕ್ತಿತ್ವವೂ ಸರಿಜೋಡಿಯಾಗಿ ಚಿತ್ರಿತವಾಗಿರುವುದರಿಂದಲೂ ಜೈನಪರವಾದ ಅನೇಕ ಸಂಗತಿಗಳನ್ನು ವೈದಿಕ ಮತಾನುಯಾಯಿಯಾದ ನೃಪತುಂಗನಿಗಿಂತ ಜೈನಮತಾನುಯಾಯಿಯಾದ ಸಭಾಸದನೆ ಉಲ್ಲೇಖಿಸುವ ಸಂಭವ ಹೆಚ್ಚಾಗಿರುವುದರಿಂದಲೂ ಗ್ರಂಥದಲ್ಲಿಯೇ ಶ್ರೀ ವಿಜಯನ ಹೆಸರಿದ್ದು, ದುರ್ಗಸಿಂಹನ ಹೇಳಿಕೆ ಇದಕ್ಕೆ ಬೆಂಬಲವಾಗಿರುವುದರಿಂದಲೂ ಶ್ರೀವಿಜಯನು ನೃಪತುಂಗನ ಅನುಜ್ಞೆಯ ಮೇರೆಗೆ ಅಲ್ಲಲ್ಲಿ ಅವನ ಅಭಿಪ್ರಾಯಗಳಿಗೆ ಮನ್ನಣೆ ಕೊಟ್ಟು ಗ್ರಂಥ ರಚನೆ ಮಾಡಿರುವಂತೆ ತೋರಿಬರುವುದರಿಂದಲೂ ಶ್ರೀ ವಿಜಯನೇ ಕವಿರಾಜಮಾರ್ಗಕಾರ ಎಂಬ ನಿಲುವಿಗೆ ಹೆಚ್ಚು ಮನ್ನಣೆ ದೊರಕಿದೆ.

ಕವಿರಾಜಮಾರ್ಗ ಪ್ರಮುಖವಾಗಿ ಲಕ್ಷಣಗ್ರಂಥ. ದಂಡಿಯ ಕಾವ್ಯಾದರ್ಶ ಈ ಕೃತಿಗೆ ಆಕರ. ಇದರಲ್ಲಿ ದೋಷಾನುವರ್ಣನನಿರ್ಣಯ, ಶಬ್ದಾಲಂಕಾರ ವರ್ಣನನಿರ್ಣಯ, ಅರ್ಥಾಲಂಕಾರ ವರ್ಣನನಿರ್ಣಯ ಎಂಬ ಮೂರು ಪರಿಚ್ಛೇದಗಳಿವೆ. ಮೊದಲನೆಯ ಪರಿಚ್ಛೇದದಲ್ಲಿ ಕಾವ್ಯದೋಷಗಳನ್ನು ವಿವರಿಸಿರುವುದರ ಜೊತೆಗೆ ಕವಿ ನಿರೂಪಿಸಿರುವ ಕೆಲವು ಬಹುಬೆಲೆಯುಳ್ಳ ಸಂಗತಿಗಳು ಕನ್ನಡ ಸಾಹಿತ್ಯಚರಿತ್ರೆಯ ದೃಷ್ಟಿಯಿಂದ ಗಮನಾರ್ಹವಾಗಿವೆ. ಗದ್ಯಪದ್ಯ ಸಂಮಿಶ್ರಿತವಾದ ಗದ್ಯಕಥೆಯನ್ನು ಚಿರಂತನಾಚಾರ್ಯರು ನಿಗದಿಸುತ್ತಿದ್ದರು (1-27); ವಿಮಲೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತಾದಿಗಳು ಗದ್ಯಾಶ್ರಮಪದ ಗುರುತಾಪ್ರತೀತಿಯಂ ಕೈಗೊಂಡಿದ್ದರು (1-29); ಶ್ರೀವಿಜಯ, ಕವೀಶ್ವರ, ಪಂಡಿತ, ಚಂದ್ರ, ಲೋಕಪಾಲ ಮೊದಲಾದವರ ಕೃತಿರಚನೆ ಲಕ್ಷ್ಯಂ ತದಾದ್ಯಕಾವ್ಯಕ್ಕೆ ಎಂದುಂ (1-32); ಪುರಾತನ ಕವಿಗಳು ನುಡಿಗೆಲ್ಲಂ ಸಲ್ಲದ ಚತ್ತಾಣ ಮತ್ತು ಬೆದಂಡೆ ಎಂಬ ಕಾವ್ಯಪ್ರಕಾರಗಳನ್ನು ಕಾವ್ಯರಚನೆಯಲ್ಲಿ ಒಡಂಬಡಂ ಮಾಡಿದ್ದರು; ಇವುಗಳಲ್ಲಿ ಕಂದವೃತ್ತಗಳಲ್ಲದೆ ಚೌಪದಿ, ತ್ರಿಪದಿ, ಗೀತಿಕೆ - ಈ ಕನ್ನಡ ಛಂದಸ್ಸುಗಳು ಪ್ರಧಾನವಾಗಿ ಬಳಕೆಯಾಗುತ್ತಿದ್ದವು (1-33, 34, 35) - ಎಂಬ ಈ ಸಂಗತಿಗಳು ಕವಿರಾಜಮಾರ್ಗಪೂರ್ವದ ಕನ್ನಡ ಸಾಹಿತ್ಯ ಸ್ವರೂಪದ ಮೇಲೆ ಬೆಳಕು ಚೆಲ್ಲುತ್ತವೆ. ಇದೇ ಪರಿಚ್ಛೇದದಲ್ಲಿ ಕವಿರಾಜಮಾರ್ಗಕಾರ ಮಾಡಿರುವ ಕನ್ನಡನಾಡಿನ ಮತ್ತು ನಾಡವರ ವರ್ಣನೆ ಕನ್ನಡಿಗರಿಗೆ ಅಭಿಮಾನಾಸ್ಪದ ವಿಷಯವಾಗಿರುವುದಲ್ಲದೆ, ಚಾರಿತ್ರಿಕ ಮಹತ್ತ್ವವುಳ್ಳದ್ದೂ ಆಗಿದೆ. ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್

ಭಾವಿಸಿದ ಜನಪದಂ (1-36), ಚದುರರ್ ನಿಜದಿಂ ಕುಱಿತೋದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್ (1-38), ಸುಭಟರ್ಕಳ್ ಕವಿಗಳ್ ಸುಪ್ರಭುಗಳ್ ಚೆಲ್ವರ್ಕಳ್ ಅಭಿಜನರ್ಕಳ್ ಗುಣಿಗಳ್ ಅಭಿಮಾನಿಗಳ್ ಅತ್ಯುಗ್ರರ್ ಗಭೀರಚಿತ್ತರ್ ವಿವೇಕಿಗಳ್ ಆ ನಾಡವರ್ಗಳ್ ಮುಂತಾಗಿ ಹೇಳುವ ಈ ಮಾತುಗಳಲ್ಲಿ ಕನ್ನಡ ಜನರ ಸಂಸ್ಕೃತಿ ಪ್ರತಿಬಿಂಬಿತವಾಗಿದೆ. ಇಲ್ಲಿ ಇದರ ಜೊತೆಗೆ ಯತಿ, ಕಾರಕ, ಸಮಸಂಸ್ಕೃತ ಮುಂತಾದ ವಿಷಯಗಳ ಬಗ್ಗೆಯೂ ಚರ್ಚೆ ಕಂಡುಬರುತ್ತದೆ. ಎರಡನೆಯ ಪರಿಚ್ಛೇದದಲ್ಲಿ ಶಬ್ದಾಲಂಕಾರಗಳ ವಿಷಯ ನಿರೂಪಿತವಾಗಿದೆ. ಮೂರನೆಯ ಪರಿಚ್ಛೇದದಲ್ಲಿ ಅರ್ಥಾಲಂಕಾರ ವಿಷಯ ಸಂಬಂಧಿಯಾದ ನಿರೂಪಣೆಯಿದೆ. ಪುರಾಣಶಾಸ್ತ್ರಗಳಲ್ಲಿ ಹೇಳಿರುವ ಮೇರೆಗೆ ಅರ್ಥಾಲಂಕಾರಗಳನ್ನು ತಾನು ವಿವರಿಸಿರುವುದಾಗಿ ಗ್ರಂಥಕರ್ತನ ಮಾತಿನಿಂದಲೇ (3-5) ಸ್ಪಷ್ಟವಾಗುತ್ತದೆ. ಆದರೆ ಆ ಪುರಾಣಶಾಸ್ತ್ರಕಾರರ ಹೆಸರನ್ನು ಮಾತ್ರ ಸ್ಮರಿಸಿಲ್ಲ. ಅಲಂಕಾರ ಪ್ರಕರಣದ ಅನೇಕ ಪದ್ಯಗಳು ದಂಡಿಯ ಕಾವ್ಯಾದರ್ಶದ ಹಾಗೂ ಭಾಮಹನ ಕಾವ್ಯಾಲಂಕಾರದ ಶ್ಲೋಕಗಳ ಅನುವಾದಗಳು. ಆದರೆ ಕಾವ್ಯದೋಷ ಪ್ರಕರಣದಲ್ಲಿ ಭಾಮಹನನ್ನು ಅನುಸರಿಸಿದ್ದರೂ ಕನ್ನಡ ಭಾಷೆಗೆ ಸಂಬಂಧಪಟ್ಟಂತೆ ವ್ಯಾಕರಣದೋಷ, ಛಂದೋದೋಷ ಮುಂತಾದ ದೋಷಗಳ ವಿವೇಚನೆ ಮಾಡಿರುವುದು ಕವಿರಾಜಮಾರ್ಗಕಾರನ ಸ್ವತಂತ್ರ ವಿಚಾರಪರತೆಗೆ ನಿದರ್ಶನಗಳಾಗಿವೆ. ಕೃತಿಯಲ್ಲಿ ಮೊದಲ ಬಾರಿಗೆ ರಸ, ಧ್ವನಿಗಳ ಚರ್ಚೆಯೂ ಬಂದಿದ್ದು ರಸವನ್ನು ರಸವದಲಂಕಾರವೆಂದೂ ಧ್ವನಿಯನ್ನು ಧ್ವನ್ಯಾಲಂಕಾರವೆಂದೂ ಕರೆಯಲಾಗಿದೆ. ಹಾಗೆಯೇ ಲಕ್ಷ್ಯಪದ್ಯಗಳಲ್ಲಿ ಹಲವು ಸ್ವತಂತ್ರ ರಚನೆಗಳಿವೆ ಎಂಬುದೂ ಗಮನಾರ್ಹವಾದ ಸಂಗತಿ. ಕಾವ್ಯರಚನಾಕ್ರಮದ ಬಗೆಗೆ, ಕನ್ನಡ ಕವೀಶ್ವರರಾಗ ಬಯಸುವವರಿಗೆ ಇವನು ನೀಡಿರುವ ಕೆಲವು ಸಲಹೆಸೂಚನೆಗಳು ಇವನ ಸ್ವತಂತ್ರ ಕಾವ್ಯಶಾಸ್ತ್ರಪ್ರಜ್ಞೆಗೆ ಸಾಕ್ಷ್ಯಗಳಾಗಿವೆ. ಅಲ್ಲದೆ, ಇವುಗಳನ್ನು ಹೇಳಿರುವ ರೀತಿಯು ಲಕ್ಷ್ಯಪದ್ಯಗಳ ಸೊಬಗೂ ಕವಿರಾಜಮಾರ್ಗಕಾರ ಶಾಸ್ತ್ರಕಾರ ಮಾತ್ರವಲ್ಲದೆ ಮೇಲುಮಟ್ಟದ ಕವಿಯೂ ಆಗಿದ್ದನೆಂಬುದಕ್ಕೆ ನಿದರ್ಶನಗಳಾಗಿವೆ. (ಎಂ.ವಿ.ಎಸ್.)

**ಕಸ್ತೂರಿ :** ಹುಬ್ಬಳ್ಳಿಯಿಂದ ಪ್ರಕಟವಾಗುತ್ತಿರುವ ಮಾಸಪತ್ರಿಕೆ. 1956ರ ಸೆಪ್ಟಂಬರಿನಲ್ಲಿ ಪ್ರಾರಂಭವಾಯಿತು. ಅದು ಲೋಕಶಿಕ್ಷಣ ಟ್ರಸ್ಟಿನ ಪ್ರಕಟಣೆ ಯಾಗಿತ್ತು. 1958ರ ಆಗಸ್ಟ್‌ವರೆಗೆ ಮೊಹರೆ ಹಣಮಂತರಾಯರು ಸಂಪಾದಕರಾಗಿದ್ದರು. ಅನಂತರ ರಂಗನಾಥ ದಿವಾಕರರು ಪ್ರಧಾನಸಂಪಾದಕರಾಗಿ, ಪಾ.ವೆಂ.ಆಚಾರ್ಯರು ಸಹಸಂಪಾದಕರಾದರು. ಖಾದ್ರಿ ಶಾಮಣ್ಣ, ಮಾಧವ ನಾ.ಮಹಿಷಿ, ಚಿರಂಜೀವಿ, ರವಿ ಬೆಳಗೆರೆ, ಗರುಡನಗಿರಿ ನಾಗರಾಜ್, ಕೆ.ಶ್ಯಾಮರಾವ್ ಸಂಪಾದಕರಾಗಿ ಸೇವೆಸಲ್ಲಿಸಿದ ಪ್ರಮುಖರು.




ಇದು ವಸ್ತುವಿನ್ಯಾಸದಲ್ಲಿ ಇಂಗ್ಲಿಷಿನ ರೀಡರ್ಸ್ ಡೈಜೆಸ್ಟ್ ಮಾದರಿಯನ್ನು ಅನುಸರಿಸಿರುವ ಸಾರಸಂಗ್ರಹ ಪತ್ರಿಕೆ. ಪ್ರತಿ ಸಂಚಿಕೆಯಲ್ಲೂ 25-30 ವಿಷಯಗಳಿದ್ದು 3-4 ಕಥೆಗಳಿರುತ್ತವೆ. ಗಂಭೀರ ವಿಷಯಗಳ ಲೇಖನಗಳಿದ್ದು, ಕೊನೆಯ ಸುಮಾರು 20ಪುಟಗಳಲ್ಲಿ ಯಾವುದಾದರೂ ಒಂದು ಪ್ರಸಿದ್ಧ ಪುಸ್ತಕದ ಸಂಗ್ರಹವಿರುತ್ತದೆ. ಇದಲ್ಲದೆ ಜೀವನಚರಿತ್ರೆ, ವಿಜ್ಞಾನ, ಸಾಮಾಜಿಕ, ರಾಜಕೀಯ, ಭೌಗೋಳಿಕ ವಿಷಯಗಳನ್ನೊಳಗೊಂಡ ಲೇಖನಗಳಿರುವುದು ಇದರ ವೈಶಿಷ್ಟ್ಯ. ಪತ್ರಿಕೆಯ ಇಂದಿನ ಪ್ರಸಾರ 5,000 (2003) (ಪಿ.ವಿ.ಎ.)

**ಕಸ್ತೂರಿ, ನಾ :** 1897-1987. ಹಾಸ್ಯಸಾಹಿತಿ, ನಾಟಕಕಾರ, ವಾಗ್ಮಿ, ಅಧ್ಯಾಪಕ, ಸಮಾಜಸೇವಾಸಕ್ತ. ಇವರ ಪೂರ್ತಿ ಹೆಸರು ಕಸ್ತೂರಿ ನಾರಾಯಣ ರಂಗನಾಥ ಶರ್ಮ. ನಾ. ಕಸ್ತೂರಿ ಎಂಬ ಹೆಸರಿನಲ್ಲೇ ಪ್ರಸಿದ್ಧರು. ಕನ್ನಡದಲ್ಲಿ ಹಾಸ್ಯ ಸಾಹಿತ್ಯ ಸೃಷ್ಟಿಗಾಗಿಯೇ ತಮ್ಮ ಜೀವನದ ಬಹುಭಾಗವನ್ನು ಮುಡಿಪಾಗಿಟ್ಟವರು. ಕೇರಳ ರಾಜ್ಯದ ತ್ರಿಪುನಿತ್ತೂರ್ ಗ್ರಾಮದಲ್ಲಿ 1887 ಡಿಸೆಂಬರ್ 25ರಂದು ಜನಿಸಿದರು. ಎರ್ನಾಕುಲಂ, ತಿರುವನಂತಪುರಂಗಳಲ್ಲಿ ವಿದ್ಯಾಭ್ಯಾಸಮಾಡಿ ಬಿ.ಎ. (ಆನರ್ಸ್) ಇತಿಹಾಸ ಮತ್ತು ಬಿ.ಎಲ್.ಪದವಿ ಗಳಿಸುವುದರೊಂದಿಗೆ ತಿರುವನಂತಪುರ ಪ್ರೌಢಶಾಲೆಯಲ್ಲಿ ಅಧ್ಯಾಪಕರಾಗಿ ಎಂ.ಎ.ಯನ್ನೂ ಮುಗಿಸಿದರು.

ಉತ್ತಮ ಭವಿಷ್ಯವನ್ನರಸುತ್ತ ಮೈಸೂರಿಗೆ ಬಂದರು. ಮೈಸೂರಿನ ಬನುಮಯ್ಯ ಪ್ರೌಢಶಾಲೆಯಲ್ಲಿ ಉಪಾಧ್ಯಾಯರಾದರು. ಇವರ ಮನೆಮಾತು ತಮಿಳು, ಕೇರಳದಲ್ಲಿದ್ದುದ್ದರಿಂದ ಮಲಯಾಳಂ ಅಭ್ಯಾಸ ಮಾಡಿದ್ದರು. ಮೈಸೂರಿಗೆ ಬಂದಾಗ ಇವರಿಗೆ ಕನ್ನಡ ಕಲಿಯುವುದು ಅನಿವಾರ್ಯವಾಯಿತು. ಇಲ್ಲಿಯ ಜನಜೀವನದಲ್ಲಿ ಬೆರೆತರು. ಇವರಿಗೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇತಿಹಾಸ ಅಧ್ಯಾಪಕರ ಹುದ್ದೆ ದೊರಕಿತು. ಅಲ್ಲಿಯ ಇಂಟರ್‌ಮೀಡಿಯಟ್ ಮತ್ತು ಮಹಾರಾಜ ಕಾಲೇಜುಗಳಲ್ಲಿ ಹಲವು ವರ್ಷ ಅಧ್ಯಾಪಕರಾಗಿದ್ದರು. ಅನಂತರ ಬೆಂಗಳೂರಿನ ಇಂಟರ್‌ಮೀಡಿಯಟ್ ಕಾಲೇಜಿನಲ್ಲೂ ದಾವಣಗೆರೆಯಲ್ಲೂ ಉದ್ಯೋಗನಿರತರಾಗಿದ್ದರು. ದಾವಣಗೆರೆ ಕಾಲೇಜಿನ ಸೂಪರಿಂಟೆಂಡೆಂಟರಾಗಿದ್ದರು. ನಿವೃತ್ತಿಯ ವೇಳೆಗೆ ಇವರಿಗೆ ಉಪಪ್ರಾಧ್ಯಾಪಕರಾಗಿ ಬಡ್ತಿ ದೊರಕಿತ್ತು. ಅನಂತರ ಕೆಲಕಾಲ ಮೈಸೂರು ಆಕಾಶವಾಣಿಯ ಸಹಾಯಕ ನಿರ್ದೇಶಕರಾಗಿಯೂ ಬೆಂಗಳೂರು ಆಕಾಶವಾಣಿಯಲ್ಲಿ ಗ್ರಾಮಸ್ಥರ ಕಾರ್ಯಕ್ರಮವೇ ಮುಂತಾದ ವಿಭಾಗಗಳ ಕಾರ್ಯಕ್ರಮನಿರ್ವಾಹಕರಾಗಿಯೂ ಸೇವೆಸಲ್ಲಿಸಿದರು.

ಕನ್ನಡದ ಗಂಧವೇ ಇರದಿದ್ದ ಕಸ್ತೂರಿಯವರು ಕನ್ನಡವನ್ನು ಚೆನ್ನಾಗಿ ಕಲಿತು, ಸಾಹಿತ್ಯವನ್ನು ಆಳವಾಗಿ ಅಭ್ಯಾಸಮಾಡಿ, ಕನ್ನಡದ ಸತ್ತ್ವವನ್ನರಿತುಕೊಂಡು ಕನ್ನಡ ಭಾಷೆಯ ಮರ್ಜಿಯನ್ನು ಹಿಡಿದರು. ಕನ್ನಡದ ಆಡುಭಾಷೆಯ ಬನಿಯನ್ನು ಸಂಪೂರ್ಣ ಸಾಕ್ಷಾತ್ಕರಿಸಿಕೊಂಡರು. ಅತ್ಯಂತ ಜೀವಂತ ಎನಿಸುವ ಶೈಲಿಯಲ್ಲಿ ಹಾಸ್ಯಕೃತಿಗಳನ್ನೂ ಇತರ ಪ್ರಕಾರಗಳ ಸಾಹಿತ್ಯವನ್ನೂ ಇವರು ರಚಿಸಿದ್ದು ಆಶ್ಚರ್ಯಕರ ಸಂಗತಿ. ಹರಟೆ, ಪ್ರಬಂಧ, ಪ್ರಹಸನ, ನಾಟಕ, ಕಾದಂಬರಿ, ಇತಿಹಾಸ, ಮಕ್ಕಳ ಸಾಹಿತ್ಯ, ಕಾವ್ಯ, ಅನುವಾದ - ಹೀಗೆ ನಾನಾ ಕ್ಷೇತ್ರಗಳಲ್ಲಿ ಇವರು ಕೈಯಾಡಿಸಿ ಅನನ್ಯ ಎನಿಸುವಂಥ ಶ್ರೇಷ್ಠಕೃತಿಗಳನ್ನು ರಚಿಸಿದರು. ಕನ್ನಡದ ಕಸ್ತೂರಿ ಎಂದರೆ ಇವರೇ ಎನಿಸುವಂಥ ಸಾಧನೆಗೈದರು.

ಇವರ ಮೊತ್ತಮೊದಲ ಪ್ರಕಟಿತ ಕೃತಿ ಪಾತಾಳದಲ್ಲಿ ಪಾಪಚ್ಚಿ (1943). ಇಂಗ್ಲಿಷಿನಲ್ಲಿ ಚಾರ್ಲ್ಸ್ ಲುಡ್ವಿಗ್ ರಚಿಸಿದ ಆಲಿಸ್ ಇನ್ ವಂಡರ್‌ಲ್ಯಾಂಡ್ ಎಂಬ ಕೃತಿಯ ರೂಪಾಂತರ. ಈ ಕೃತಿ ಸ್ವತಂತ್ರ ಎಂಬಷ್ಟು ಮನೋಜ್ಞವಾಗಿದೆ. ಇದು ಮಕ್ಕಳ ಸಾಹಿತ್ಯ ಎನಿಸಿಕೊಂಡರೂ ಎಲ್ಲ ವಯಸ್ಸಿನವರನ್ನೂ ರಂಜಿಸುವಂಥದು. ಇದಕ್ಕೆ ಒಂದು ವರ್ಷ ಮುಂಚೆ ಇವರು ಮೈಸೂರು ವಿಶ್ವವಿದ್ಯಾನಿಲಯ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಿಸಿದ 'ಕಾಡಾನೆ' ಪಿ.ಜಿ.ವುಡ್‌ಹೌಸ್‌ನ ಇಂಗ್ಲಿಷ್ ಕೃತಿಯಿಂದ ಪ್ರೇರಿತವಾದ ಪ್ರಹಸನ. ಷಹಜಹಾನ್ ಎಂಬುದು ಮಲಯಾಳಂ ಭಾಷೆಯ ನಾಟಕ. ಇವರು ಕೇರಳದಲ್ಲಿ ಅಧ್ಯಾಪಕರಾಗಿದ್ದಾಗ ಬರೆದು ಆಡಿಸಿದ್ದ ಹೆಡ್‌ಮಾಸ್ಟರ್ಸ್ ಡಾಟರ್ ಎಂಬುದು ಇಂಗ್ಲಿಷ್ ನಾಟಕ. ಕನ್ನಡದಲ್ಲಿ ಇವರ ಪ್ರಸಿದ್ಧ ನಾಟಕಗಳಿವು: ಗಗ್ಗಯ್ಯನ ಗಡಿಬಿಡಿ, ವರಪರೀಕ್ಷೆ, ತಾಪತ್ರಯ ತಪ್ಪಿತು, ಬ್ಯಾಂಕಿನ ದಿವಾಳಿ, ರಾಮಕೃಷ್ಣಯ್ಯನ ದರ್ಬಾರು ಮತ್ತು ಚಿತ್ರವಿಚಿತ್ರ. ಗಗ್ಗಯ್ಯನ ಗಡಿಬಿಡಿ ಅತ್ಯಂತ ಹೆಚ್ಚಿನ ಜನಪ್ರಿಯತೆ ಗಳಿಸಿದ ನಾಟಕ.

ಕಸ್ತೂರಿಯವರ ಹರಟೆಗಳೂ ಪ್ರಬಂಧಗಳೂ ಇತರ ಬಗೆಯ ನಗೆರಬಹಗಳೂ ಲೆಕ್ಕವಿಲ್ಲದಷ್ಟು. ಯದ್ವಾತದ್ವಾ, ಅಲ್ಲೋಲ್ಲ ಕಲ್ಲೋಲ, ಉಪಾಯವೇದಾಂತ, ಡೊಂಕುಬಾಲ, ಕೆಂಪ ಮೈಸೂರಿಗೆ ಹೋದದ್ದು - ಇವು ಸಂಕಲನಗಳು. ಇವುಗಳಲ್ಲಿ ಕೊನೆಯದು ನವಸಾಕ್ಷರರಿಗಾಗಿ ಹಾಗೂ ಮಕ್ಕಳಿಗಾಗಿ ರಚಿಸಿದ್ದು.

ಕಾದಂಬರಿ ಹಾಗೂ ಜೀವನಚರಿತ್ರೆಗಳ ಕ್ಷೇತ್ರಗಳಲ್ಲೂ ಇವರು ಹಲವು ಪುಸ್ತಕಗಳನ್ನು ರಚಿಸಿದ್ದಾರೆ. ಗಾಳಿಗೋಪುರ, ಶಂಖವಾದ್ಯ, ಗೃಹದಾರಣ್ಯಕ, ರಂಗನಾಯಕಿ, ಚೆಂಗೂಲಿ ಚೆಲುವೆ, ಚಕ್ರದೃಷ್ಟಿ-ಇವು ಕಾದಂಬರಿಗಳು. ದಿ ಲಿವಿಂಗ್ ಗಾಡ್ ಎಂಬುದು ಇಂಗ್ಲಿಷಿನಲ್ಲಿ ರಚಿಸಿದ ಜೀವನಚರಿತ್ರೆ. ಇದರಲ್ಲಿ ಸತ್ಯಸಾಯಿಬಾಬಾ ಅವರ ಹಾಗೂ ಮುಪ್ಪಿನಲ್ಲಿ ಬಾಬಾ ಅವರ ಆಶ್ರಮದಲ್ಲಿ ನೆಮ್ಮದಿಯನ್ನು ಕಂಡುಕೊಳ್ಳಲು ಯತ್ನಿಸಿದ ಕಸ್ತೂರಿ ಅವರ ಜೀವನದ ಎಳೆಗಳಿವೆ. ಇದು ಕನ್ನಡಕ್ಕೂ ಅನುವಾದಗೊಂಡಿದೆ. ಕೇರಳ ಇನ್ ಕರ್ನಾಟಕ ಎಂಬುದು ಇವರು ಇಂಗ್ಲಿಷಿನಲ್ಲಿ ರಚಿಸಿದ ಸಂಶೋಧನ ಪ್ರಬಂಧ. ದಿ ಲಾಸ್ಟ್ ರಾಜಾಸ್ ಆಫ್ ಕೂರ್ಗ್ ಇನ್ನೊಂದು ಸಂಶೋಧನಾತ್ಮಕ ಕೃತಿ. ಅಶೋಕ ಎಂಬುದು ಅಶೋಕ ಚಕ್ರವರ್ತಿಯ ಜೀವನಚರಿತ್ರೆ. ಅಣಕುಮಿಣುಕು ಇವರ ಕವನ ಸಂಕಲನ. ಅನರ್ಥಕೋಶ ಎಂಬುದರಲ್ಲಿ ಕನ್ನಡದ ಹಲವು ಶಬ್ದಗಳಿಗೆ ಇವರು ತಿರುಚಿದ ಅರ್ಥ ನೀಡಿ ನಗೆಯ ಹೊಗೆಯಾಡಿಸಿದ್ದಾರೆ. ಹಾಸ್ಯರಸವನ್ನು ಹಿಂಡಿದ್ದಾರೆ. ವ್ಯಂಗ್ಯ, ಕಟಕಿ, ಹಾಸ್ಯಗಳನ್ನು ಎರಚಾಡಿದ್ದಾರೆ, ನುಡಿಯ ಲಾಸ್ಯವನ್ನು ಮಿಂಚಿಸಿದ್ದಾರೆ. ಈ ಅನರ್ಥಕೋಶ ಪ್ರಕಾರವನ್ನು ಫಿಕ್ಷನರಿ ಎಂದು ಕರೆದಿದ್ದಾರೆ. ಗಂಭೀರವಾದ ಡಿಕ್ಷನರಿಗೆ (ನಿಘಂಟು) ಇದಿರಾಗಿ ಇವರು ರಚಿಸಿದ ಕಲ್ಪನಾ ಲಹರಿಯಿದು. ಲಗುಬಗೆಯ ಬಗೆಬಗೆಯ ನಗೆಯ ಗುಂಫನವಿದು.

ಕಸ್ತೂರಿಯವರು ಕನ್ನಡಕ್ಕೆ ಅನುವಾದ ಮಾಡಿದ ಅಥವಾ ರೂಪಾಂತರಿಸಿದ ಕೃತಿಗಳೂ ಹಲವಾರಿವೆ. ದಿಲ್ಲೀಶ್ವರನ ದಿನಚರಿ, ಬಾಬರನ ದಿನಚರಿ, ಚೇರ್ಮನ್ ಪೆರುಮಾಳ್ (ಕಾದಂಬರಿ), ಕೃಷ್ಣ ಮೆನನ್, ಚೈನಾ ಜಪಾನ್ ಕಥೆಗಳು, ನೊಂದಜೀವಿ (ವಿಕ್ಟರ್ ಹ್ಯೂಗೋನ ಲೇ ಮಿಸರಬೆಲ್ ಕಾದಂಬರಿ) ಮತ್ತು ಕೋಹಂ ಸೋದರಿ- ಈ ಕೆಲವನ್ನು ಹೆಸರಿಸಬಹುದು. ಇವರು ರಾ.ಶಿ.ಯವರ ಕೊರವಂಜಿ ಎಂಬ ಹಾಸ್ಯ ಪ್ರಧಾನ ಮಾಸಪತ್ರಿಕೆಗಾಗಿಯೂ ಹಲವು ವರ್ಷಗಳ ಕಾಲ ಬೇರೆ ಬೇರೆ ಹೆಸರುಗಳಲ್ಲಿ ನಗೆಬರೆಹಗಳನ್ನು ಬರೆದರು.

ಇವರ ಕೃತಿಗಳ ಪ್ರಧಾನ ಲಕ್ಷಣವೆಂದರೆ ನಗೆ. ಅದು ಬಹುತೇಕ ಪರಿಶುದ್ಧವಾದದ್ದು, ಇವರ ಹಾಸ್ಯದಲ್ಲಿ ನಂಜು ಸುಳಿವಿಲ್ಲ. ಹಗುರವಾದ ವಿಡಂಬನೆಯ ಛಾಯೆ ಕಂಡುಬಂದದೂ ಅದು ಅನುಕಂಪದಿಂದ ಕೂಡಿರುತ್ತದೆ. ಇವರಂತೆ ಹಾಸ್ಯದಲ್ಲಿ ಸಿದ್ಧಿ ಪಡೆದ ಲೇಖಕರು ಬಲು ವಿರಳ. ಇವರು ಹಲವಾರು ಪ್ರಯೋಗಗಳನ್ನೂ ಮಾಡಿದರು. ಚಕ್ರದೃಷ್ಟಿ ಕಾದಂಬರಿಯ ತಂತ್ರ ವಿಶಿಷ್ಟವಾದ್ದು. ಕಾದಂಬರಿಯ ನಾಯಕನ ವ್ಯಕ್ತಿತ್ವವನ್ನು ಬೇರೆ ಬೇರೆ ಪಾತ್ರಗಳ ದೃಷ್ಟಿಯಿಂದ ಕಾಣಿಸಲು ಇಲ್ಲಿ ಇವರು ಯತ್ನಿಸಿದ್ದಾರೆ. ಹಳೆಯ ಸಂಪ್ರದಾಯವನ್ನು ಲೇವಡಿ ಮಾಡುವ, ಮೂರ್ಖತನವನ್ನು ಬಯಲಿಗೆಳೆಯುವ ಪ್ರಯತ್ನ ಅಲ್ಲಲ್ಲಿ ಕಂಡುಬಂದರೂ, ಯಾರ ಮನಸ್ಸನ್ನೂ ನೋಯಿಸದ ರೀತಿಯಲ್ಲಿ ಪರಿಸ್ಥಿತಿಯನ್ನೋ ವ್ಯಕ್ತಿಯನ್ನೋ ಟೀಕೆಗೆ ಒಳಪಡಿಸುವ ಇವರ ಬರೆಹದಲ್ಲಿ ಬಾಣದ ತೀಕ್ಷ್ಣತೆಯ ಜೊತೆಗೆ ಡೊಂಕನ್ನು ತಿದ್ದುವ ನಯಗಾರಿಕೆಯೂ ಸಮ್ಮೋಹಕ ಗುಣವೂ ಇರುವುದರಿಂದ ಎಲ್ಲರಿಗೂ ಇದು ಆಪ್ಯಾಯಮಾನವಾಗಿರುತ್ತದೆ.

ಇವರು ಸಮಾಜಸೇವೆಯಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದರು. ಮೈಸೂರಿನಲ್ಲಿ ವಯಸ್ಕರಿಗೆ ರಾತ್ರಿ ಶಾಲೆ ನಡೆಸಿದರು. ವಿದ್ಯಾರ್ಥಿಗಳೊಂದಿಗೂ ಸಹೋದ್ಯೋಗಿಗಳೊಂದಿಗೂ ಹತ್ತಿರದ ಗ್ರಾಮಗಳಿಗೆ ಹೋಗಿ ಅಲ್ಲಿಯ ಜನಕ್ಕೆ ಶುಚಿತ್ವ ಹಾಗೂ ಉತ್ತಮ ಜೀವನದ ಬಗ್ಗೆ ತಿಳಿವಳಿಕೆ ನೀಡಿದರು. ಜೊತೆಯವರೊಂದಿಗೆ ಗ್ರಾಮಸೇವೆಯಲ್ಲಿ ತೊಡಗಿದರು. ಇವರೊಬ್ಬ ಶ್ರೇಷ್ಠ ವಾಗ್ಮಿಗಳಾಗಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಹಲವಾರು ಸ್ಥಳಗಳಲ್ಲಿ ವಿವಿಧ ಜ್ಞಾನ ಕ್ಷೇತ್ರಗಳ ವಿಷಯಗಳನ್ನು ಕುರಿತಂತೆ ಪ್ರಚಾರೋಪನ್ಯಾಸಗಳನ್ನು ನೀಡಿದರು. ಹರಿಜನರ ಶ್ರೇಯಸ್ಸಿಗಾಗಿ ದುಡಿದರು. ಮೈಸೂರಿನಲ್ಲಿ ಶ್ರೀರಾಮಕೃಷ್ಣಾಶ್ರಮದ ಕಾರ್ಯದರ್ಶಿಯಾಗಿಯೂ ಕೆಲಸ ಮಾಡಿದರು. ರೋವರ್ಸ್ ಚಟುವಟಿಕೆಗಳಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದರು.

ಇವರು ಜೀವನದಲ್ಲಿ ಹಲವಾರು ಕಷ್ಟಗಳನ್ನು ಎದುರಿಸಿದವರು. ಆರು ವರ್ಷದವರಾಗಿದ್ದಾಗ ತಂದೆ ತೀರಿಕೊಂಡರು. ಇವರು ಜನಿಸಿದಾಗ ಕೈಕಾಲುಗಳಲ್ಲಿ ತಲಾ ಆರು ಬೆರಳುಗಳಿದ್ದುವಂತೆ. ನಾಲ್ಕು ಹೆಚ್ಚಿನ ಬೆರಳುಗಳು ಅನಿಷ್ಟಕಾರಕ ಎನಿಸಿ ಅವರ ಅಜ್ಜಿ ಆ ಬೆರಳುಗಳನ್ನು ಕತ್ತರಿಸಿ ಹಾಕಿದರಂತೆ. ಇದರಿಂದ ಇವರು ತೊಂದರೆ ಅನುಭವಿಸಬೇಕಾಗಿ ಬಂತು. ಕೊನೆಗೂ ಪ್ರಾಣಾಪಾಯದಿಂದ ಪಾರಾದರು. 1947ರಲ್ಲಿ ಇವರ ಒಬ್ಬ ಪುತ್ರ ತೀರಿಕೊಂಡ. ಆ ವೇಳೆಗೆ ಕಸ್ತೂರಿಯವರ ಮನಸ್ಸು ಆಧ್ಯಾತ್ಮಿಕದ ಕಡೆಗೆ ಒಲಿಯತೊಡಗಿತ್ತು. 1948ರಲ್ಲಿ ಇವರು ಪುಟ್ಟಪರ್ತಿಯಲ್ಲಿ ಸಾಯಿಬಾಬಾ ಆಶ್ರಮ ಸೇರಿ ತಮ್ಮ ಜೀವನದ ಕೊನೆಯವರೆಗೂ ಅಲ್ಲೇ ಇದ್ದರು. ಬಾಬಾ ಅವರ ಉಪನ್ಯಾಸಗಳನ್ನೂ ಪ್ರವಚನಗಳನ್ನೂ ಸಂಗ್ರಹಿಸಿ, ಇಂಗ್ಲಿಷಿಗೂ ಕನ್ನಡಕ್ಕೂ ಅನುವಾದಿಸಿದರು. ಇವರು 1987 ಆಗಸ್ಟ್ 14ರಂದು ನಿಧನರಾದರು. (ಎಚ್.ಎಸ್.ಕೆ.)

**ಕಳಚುರಿ ವಂಶ :** 12ನೆಯ ಶತಮಾನದಲ್ಲಿ ಉತ್ತರ ಕರ್ನಾಟಕದಲ್ಲಿ ಆಳಿಕೆ ನಡೆಸಿದ ರಾಜವಂಶ.

ಪ್ರಾಚೀನ ಐತಿಹ್ಯಗಳ ಪ್ರಕಾರ ಕಳಚುರಿಗಳು ಚಂದ್ರ ವಂಶೀಯರು, ಯದು, ಹೈಹಯ, ಕಾರ್ತವೀರ್ಯಾರ್ಜುನ ಇವರ ವಂಶಪೂರ್ವಜರು. ಹೈಹಯ ಕುಲದ ಒಂದು ಶಾಖೆಯೇ ಕಳಚುರಿ ಎಂದು ಇತಿಹಾಸ ತಿಳಿಸುತ್ತದೆ. 6ನೆಯ ಶತಮಾನದಲ್ಲಿ ಕಟಚ್ಚುರಿ ಎಂದು ಕರೆಯಿಸಿಕೊಂಡ ರಾಜರು ಮಧ್ಯ ಮತ್ತು ಪಶ್ಚಿಮ ಭಾರತ ಪ್ರದೇಶದಲ್ಲಿ ಸಾಮ್ರಾಜ್ಯವನ್ನು ಕಟ್ಟಿದ್ದರು. 601ರಲ್ಲಿ ಕಟಚ್ಚುರಿ ಬುದ್ಧರಾಜ ಚಳುಕ್ಯ ಮಂಗಲೀಶನ ಪ್ರಹಾರದಿಂದ ಪರಾಜಯ ಹೊಂದಿದ್ದರಿಂದ ಈ ಕಟಚ್ಚುರಿ ಸಾಮ್ರಾಜ್ಯ ಅಸ್ತಂಗತವಾಯಿತು. ಅನಂತರ ಸುಮಾರು ಅರ್ಧಶತಮಾನ ಈಚೆಗೆ ಬುದ್ಧರಾಜನ ವಂಶಿಕನಾದ ವಾಮರಾಜ ಮಧ್ಯಭಾರತದ ಬುಂದೇಲಖಂಡ ಪ್ರದೇಶಕ್ಕೆ ಬಂದು ಕಾಲಂಜರ ಎಂಬ ದುರ್ಗವನ್ನು ಗೆದ್ದುಕೊಂಡ. ಮುಂದೆ ಈತನ ಸಂತತಿಯವರು ತ್ರಿಪುರಿಯಿಂದ, ಜಬ್ಬಲಪುರದ ಪಶ್ಚಿಮಕ್ಕೆ ಸು.9ಕಿಮೀ ದೂರದಲ್ಲಿರುವ ಇಂದಿನ ತೆವರ್‌ಗೆ ಬಂದು ರಾಜ್ಯಭಾರ ಮಾಡಲಾರಂಭಿಸಿದರು. ಈ ವಂಶದ ಕಟಚ್ಚುರಿ ಎಂಬ ಹೆಸರು ಕಳಚುರಿ ಎಂದು ಮಾರ್ಪಟ್ಟಿತು. ಕಳಚುರಿಗಳ ಬೇರೆ ಶಾಖೆಗಳೂ ಹುಟ್ಟಿಕೊಂಡವು. ಮಧ್ಯಭಾರತದ ಕಳಚುರಿಗಳು ಬಾದಾಮಿಯ ಚಳುಕ್ಯ, ರಾಷ್ಟ್ರಕೂಟ, ಕಲ್ಯಾಣದ ಚಾಳುಕ್ಯ ಈ ಅರಸುಮನೆತನಗಳೊಡನೆ ವಿವಾಹಸಂಬಂಧಗಳನ್ನು ಬೆಳೆಸಿ ಕರ್ನಾಟಕದೊಂದಿಗೆ ನಿಕಟಸಂಪರ್ಕ ಹೊಂದಿದ್ದರು. ಕಾಲಕ್ರಮದಲ್ಲಿ ಪ್ರಬಲಿಸಿದ ಪ್ರತೀಹಾರರು ಕಳಚುರಿಗಳ ಭದ್ರಸ್ಥಳವಾದ ಕಾಲಂಜರ ಕೋಟೆಯನ್ನು ಹಿಡಿದುಕೊಂಡರು. ಮುಂದೆ ಇದು ರಾಷ್ಟ್ರಕೂಟರ ವಶಕ್ಕೆ ಹೋಯಿತು. ಹೀಗೆ ಶತ್ರುಗಳ ಬಾಧೆಗೆ ಸಿಲುಕಿದ ಕಳಚುರಿ ಕುಟುಂಬದ ಕೆಲವ್ಯಕ್ತಿಗಳು ಕುಂತಲ ದೇಶಕ್ಕೆ (ಕರ್ನಾಟಕ) ಬಂದು, ತರಿಕಾಡು ನಾಡಿನ ಮುಖ್ಯಸ್ಥಳವಾದ ಮಂಗಳವೇಡದಲ್ಲಿ (ಇಂದಿನ ಮಂಗಳವೇಡೆ, ಮಹಾರಾಷ್ಟ್ರದ ಸೊಲ್ಲಾಪುರಡ ಜಿಲ್ಲೆ) ನೆಲಸಿದರು.

ಈ ಕರ್ನಾಟಕ ಶಾಖೆಯ ಪ್ರಮುಖ ಉಚಿತ (ಸು. ಹತ್ತನೆಯ ಶತಕದ ಪ್ರಥಮ ಪಾದ). ಉಚಿತನ ವಂಶಾನುಕ್ರಮ ಅಸಗ, ಕನ್ನಮ, ಕಿರಿಯ ಅಸಗ ಇವರಿಂದ ಮುಂದುವರಿಯಿತು. ಕಿರಿಯ ಅಸಗನ ಮಕ್ಕಳು ರಾಜ (ರಾಜಲ) ಮತ್ತು ಒಂದನೆಯ ಬಿಜ್ಜ (ಬಿಜ್ಜಲ, ಬಿಜ್ಜಳ). ಈ ಬಿಜ್ಜಳ ಕಲ್ಯಾಣದ ಒಂದನೆಯ ಸೋಮೇಶ್ವರನ ಮಹಾಮಂಡಳೇಶ್ವರನಾಗಿದ್ದ (ಸು.1057). ಡಾಹಳಬೆಡಂಗ ಎಂಬ ಈತನ ಬಿರುದು ಮಧ್ಯಭಾರತದ ಕಳಚುರಿಗಳೊಂದಿಗೆ ಈ ಮನೆತನ ಹೊಂದಿದ ಸಂಬಂಧವನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಈ ಬಿಜ್ಜಳನ ಮಗ ಮಹಾಮಂಡಲೇಶ್ವರ ಕನ್ನಮ (1067). ಕೃಷ್ಣ, ಕರ್ಣ, ಕನ್ನರ ಇವು ಈತನ ಹೆಸರಿನ ಪರ್ಯಾಯ ರೂಪಗಳು. ಕನ್ನಮನ ಮಗ ಜೋಗಮನ ಕಾಲದಲ್ಲಿ (ಸು.1080-1118) ಈ ವಂಶ ಉನ್ನತ ಸ್ಥಾನವನ್ನು ಪಡೆಯಿತು. ಇವನು ಕಲ್ಯಾಣದ ಚಾಳುಕ್ಯ ವಂಶದ ಆರನೆಯ ವಿಕ್ರಮಾದಿತ್ಯನ ವಿಶ್ವಸ್ತ ಅಧಿಕಾರಿ. ಈತನ ಪುತ್ರಿ ಸಾವಳದೇವಿಯನ್ನು ವಿಕ್ರಮಾದಿತ್ಯ ವಿವಾಹವಾಗಿದ್ದ. ಜೋಗಮನ ಮಗ ಪೆರ್ಮಾಡಿ (ಸು.1118-30) ಅದೇ ವಿಕ್ರಮಾದಿತ್ಯನಿಗೆ ಚಂದಲದೇವಿಯಲ್ಲಿ ಜನಿಸಿದ ರಾಜಕುಮಾರಿ ನಾಗಲದೇವಿಯ ಪಾಣಿಗ್ರಹಣ ಮಾಡಿದ್ದ. ಈ ಮೇರೆಗೆ ಈ ಚಾಳುಕ್ಯ-ಕಳಚುರಿವಂಶಗಳು ಪರಸ್ಪರ ವಿವಾಹಗಳಿಂದ ನಿಕಟ ಬಾಂಧವ್ಯವನ್ನು ಹೊಂದಿದ್ದವು. ಮಹಾಮಂಡಲೇಶ್ವರ ಒಂದನೆಯ ಬಿಜ್ಜಳ ಕಾಲಂಜರಪುರ ವರಾಧೀಶ್ವರ, ಸುವರ್ಣವೃಷಭಧ್ವಜ, ಡಮರುಗತೂರ್ಯ

**ಕಳಚುರಿ ವಂಶಾವಳಿ:**




ನಿರ್ಘೋಷಣ ಮುಂತಾದ ಬಿರುದುಗಳಿಂದ ತನ್ನ ವಂಶದ ಪ್ರಶಸ್ತಿಯನ್ನು ಘೋಷಿಸಿದ. ಈ ಪ್ರಶಸ್ತಿಯನ್ನು ಮುಂದಿನ ಸಂತತಿಯವರು ತಮ್ಮ ರಾಜಶಾಸನಗಳಲ್ಲಿ ಬಳಸಿಕೊಂಡರು. ಈ ಬಿರುದುಗಳಿಂದ ಈ ವಂಶದವರ ಮೂಲಸ್ಥಳ ಮಧ್ಯ ಭಾರತದ ಕಾಲಂಜರಪುರ, ಇವರು ಶೈವಮತಾನುಯಾಯಿಗಳು, ಇವರ ಧ್ವಜಚಿಹ್ನೆ ವೃಷಭ ಎಂದು ತಿಳಿಯುತ್ತದೆ.

ಪೆರ್ಮಾಡಿಯ ಮಗ ಇಮ್ಮಡಿ ಬಿಜ್ಜಳ. ಇವರಿಬ್ಬರೂ ಆಪ್ತತ್ವದ ಮೂಲಕ ಚಾಳುಕ್ಯ ರಾಜ್ಯದಲ್ಲಿ ಮತ್ತು ರಾಜಭವನದಲ್ಲಿ ಆದರಣೀಯರಾಗಿ ಪ್ರಾಮುಖ್ಯತೆಯ ಸ್ಥಾನವನ್ನು ಪಡೆದರು. ಪೆರ್ಮಾಡಿ ತಾನು ಸ್ವತಂತ್ರ ರಾಜನಂತೆ ವರ್ತಿಸಿ, ತನ್ನ ಆಳಿಕೆಯ ವರ್ಷದ ಗಣನೆಯನ್ನು ಪ್ರಾರಂಭಿಸಿದ. ಆರನೆಯ ವಿಕ್ರಮಾದಿತ್ಯನ ಪುತ್ರ ಭೂಲೋಕಮಲ್ಲ ಮುಮ್ಮಡಿ ಸೋಮೇಶ್ವರ (1127-39) ಮತ್ತು ಪೆರ್ಮಾಡಿ ಓರಗೆಯವರಾಗಿದ್ದರು. ಆದ್ದರಿಂದ ಈತನಿಗೆ ತನ್ನ ಸಮವಯಸ್ಕ ಸಂಬಂಧಿತನಾದ ಅಧಿರಾಜನನ್ನು ಅಲಕ್ಷಿಸುವುದು ಸುಲಭವಾಯಿತು. ಚಾಳುಕ್ಯ ವಂಶದ ರಾಜಪುತ್ರರಿಗೆ ಸಲ್ಲತಕ್ಕ ಮಾನಮರ್ಯಾದೆಗಳು ತಂದೆಯ ತರುವಾಯ ಬಿಜ್ಜಳನಿಗೆ ಸಲ್ಲತೊಡಗಿದವು. ಕುಮಾರ ರಾಜಕುಮಾರ ಎಂಬ ಗೌರವದ ಬಿರುದನ್ನು ಈತ ಪಡೆದ. ಪೆರ್ಮಾಡಿ ಇನ್ನೂ ಜೀವಿಸಿರುವಾಗಲೇ ಬಿಜ್ಜಳನಿಗೂ ವಿಕ್ರಮಾದಿತ್ಯ ಮಹಾಮಂಡಲೇಶ್ವರ ಪದವಿಯನ್ನು ದಯಪಾಲಿಸಿದ (ಸು.1126). ಇದರಿಂದ ಮಹಾತ್ವಾಕಾಂಕ್ಷಿಯಾದ ಬಿಜ್ಜಳನಿಗೆ ರಾಜ್ಯತಂತ್ರದಲ್ಲಿ ಪ್ರೋತ್ಸಾಹ ದೊರೆತು, ಸಾಮ್ರಾಜ್ಯದ ಅಧಿಪತಿಯಾಗುವ ಉದ್ದೇಶದ ಸಾಧನೆಯಲ್ಲಿ ತೊಡಗಿದ. ಈ ನಡುವೆ ಚಾಳುಕ್ಯ ಸಿಂಹಾಸನವೇರಿದ ಭೂಲೋಕಮಲ್ಲನ ಮಕ್ಕಳು ಇಮ್ಮಡಿ ಜಗದೇಕಮಲ್ಲ ಮತ್ತು ಮುಮ್ಮಡಿ ತೈಲಪ ರಾಜಕೀಯ ಬಲವನ್ನು ಸಂವರ್ಧಿಸಿಕೊಳ್ಳುತ್ತಿದ್ದ ಬಿಜ್ಜಳನನ್ನು ಹತ್ತಿಕ್ಕಲು ಅಸಮರ್ಥರಾಗಿದ್ದರು. ಬಿಜ್ಜಳ ಮುಮ್ಮಡಿ ತೈಲಪನ ಆಳಿಕೆಯಲ್ಲಿ ರಾಜ್ಯಕ್ರಾಂತಿಯನ್ನು ಸಾಧಿಸಿ ಚಾಳುಕ್ಯ ಸಾಮ್ರಾಜ್ಯವನ್ನು ಅಪಹರಿಸಿದ (1162).

ಬಿಜ್ಜಳ ಸ್ವತಂತ್ರ ರಾಜನೆನಿಸಿ ಆಳಿದುದು ಆರು ವರ್ಷ ಮಾತ್ರ (1162-67). ಈ ಅವಧಿಯಲ್ಲಿ ರಾಜಶಾಸನದಲ್ಲಿ ಅದಕ್ಷತೆ, ರಾಜಪುತ್ರರಲ್ಲಿ ರಾಜ್ಯಾಧಿಕಾರಿಗಳ ಅವಿಶ್ವಾಸ, ಬಸವೇಶ್ವರ ಮತ್ತು ಆತನ ಅನುಯಾಯಿಗಳ ಆತಂಕ ಇತ್ಯಾದಿ ಘಟನೆಗಳಿಂದ ಬಿಜ್ಜಳನ ರಾಜ್ಯಭಾರ ವಿಫಲವಾಯಿತು. ಕೊನೆಗೆ ತನ್ನ ಮಗ ರಾಯಮುರಾರಿ ಸೋವಿದೇವನಿಗೆ (ಸೋಮೇಶ್ವರ) 1167ರಲ್ಲಿ ಅಧಿಕಾರ ವಹಿಸಿ 1168ರಲ್ಲಿ ಮೃತನಾದ. ಆದರೆ ಬಿಜ್ಜಳನ ತಮ್ಮ ಮೈಳುಗಿ, ಬಿಜ್ಜಳನ ಜೇಷ್ಠಪುತ್ರ ವಜ್ರದೇವನ ಮಗ ಕರ್ಣದೇವ ಇವರು ರಾಯಮುರಾರಿ ಸೋವಿದೇವನೊಡನೆ ಸಿಂಹಾಸನಕ್ಕಾಗಿ ಸ್ಪರ್ಧಿಸಿದರು. ಸೋವಿದೇವ ಜಯಶೀಲನಾದ. ಈ ಕದನದಲ್ಲಿ ಕಸಪಯ್ಯ ನಾಯಕನೆಂಬ ಅಧಿಕಾರಿ ಪ್ರಮುಖ ಪಾತ್ರ ವಹಿಸಿದ. ಸೋವಿದೇವನ (1167-76) ಆಳ್ವಿಕೆಯ ಕಡೆಯ ವರ್ಷಗಳಲ್ಲಿ ತಮ್ಮಂದಿರಾದ ಮಲ್ಲಿಕಾರ್ಜುನ (1175-76) ಮತ್ತು ಸಂಕಮ II ರಾಜ್ಯದ ಕೆಲವು ಭಾಗಗಳಲ್ಲಿ ಸ್ವತಂತ್ರರಾಗಿ ಆಳಲಾರಂಭಿಸಿದರು. ಸೋವಿದೇವನ ಮರಣಾನಂತರ ಸಂಕಮ II (1175-80) ಮತ್ತು ಆಹವಮಲ್ಲ (1180-83) ಅರಸುಗೈದರು. ಈ ಸಮಯಕ್ಕೆ ಕಳಚುರಿಗಳ ಆಳಿಕೆ ದುರ್ಬಲವಾಗುತ್ತ ಹೋಯಿತು. ಚಾಳುಕ್ಯ ಮುಮ್ಮಡಿ ತೈಲಪನ ಮಗ ನಾಲ್ವಡಿ ಸೋಮೇಶ್ವರ ಚೇತರಿಸಿಕೊಂಡು ಚಾಳುಕ್ಯ ಪ್ರಭುತ್ವದ ಪುನಃಸ್ಥಾಪನೆ ಮಾಡಿದ (1183). ಬಿಜ್ಜಳನ ಕೊನೆಯ ಮಗ ಸಿಂಘಣ ಸೋತು ಸೋಮೇಶ್ವರನಿಗೆ ಶರಣಾಗತನಾಗಿ ಆತನ ಆಧಿಪತ್ಯವನ್ನು ಅಂಗೀಕರಿಸಿದ.

ಹೀಗೆ ಕಳಚುರಿಗಳ ಸ್ವತಂತ್ರ ಆಳಿಕೆ ಸಂಕಟಮಯ ಸಂದಿಗ್ಧ ಸ್ಥಿತಿಯಲ್ಲಿ ಸುಮಾರು 21 ವರ್ಷ ಹೇಗೋ ಬದುಕಿ ಕೊನೆಗೆ ಕುಂಠಿತವಾಯಿತು. ಕಳಚುರಿ ಆಳಿಕೆ ಮುಗಿದ ಬಳಿಕ ಈ ವಂಶದ ಕೆಲವು ವ್ಯಕ್ತಿಗಳು ಚಿಕ್ಕನಾಯಕರಾಗಿ ಉಳಿದುಕೊಂಡರು. ಅವರಲ್ಲಿ ರಾಯಮುರಾರಿ ಸೋವಿದೇವನ ಸಂತತಿಯವರಾದ ಮುಮ್ಮಡಿ ವೀರಬಿಜ್ಜಳ, ರಾಯಮುರಾರಿ, ಜನ್ನುಗಿ, ನಾಲ್ವಡಿ ಬಿಜ್ಜಳ ಇವರನ್ನು ಹೆಸರಿಸಬಹುದು.

ಕಳಚುರಿಗಳ ಮೊದಲ ಮುಖ್ಯ ವಾಸಸ್ಥಳ ಮಂಗಳವೇಡ (ಮಂಗಳಿವೇಡ ಅಥವಾ ಮಂಗಳವಾಡ). ಬಿಜ್ಜಳ ಚಾಳುಕ್ಯ ಸಿಂಹಾಸನವನ್ನು ಆಕ್ರಮಿಸಿದ ಬಳಿಕ ಕಲ್ಯಾಣ ರಾಜಧಾನಿಯಿಂದ ರಾಜ್ಯಭಾರ ಮಾಡಿದ. ಬಿಜ್ಜಳನ ಸಾವಿನ ಅನಂತರ ಈ ಅರಸರು ಮೊದೆಗನೂರು (ಕೊಪ್ಪಳದ ಬಳಿ ಮಾದನೂರು) ಮತ್ತು ಸೆಲೆಯಹಳ್ಳಿ ಮುಂತಾದ ಸ್ಥಳಗಳಿಂದ ತಮ್ಮ ರಾಜ್ಯಾಧಿಕಾರವನ್ನು ಮುಂದುವರಿಸಿದರು. ಆದರೆ ಈ ಕಾಲದ ಪೂರ್ತ ಮಂಗಳವೇಢೆ ರಾಜ್ಯದ ಪ್ರಮುಖ ಸ್ಥಳವಾಗಿತ್ತು. (ಪಿ.ಬಿ.ಡಿ.)

ಕಳಚುರಿಗಳ ಹ್ರಸ್ವ ಆಳಿಕೆಯ ಕಾಲದಲ್ಲಿ ಆರ್ಥಿಕ, ಆಡಳಿತ ಹಾಗೂ ಇತರ ರಂಗಗಳಲ್ಲಿ ಕಲ್ಯಾಣದ ಚಾಳುಕ್ಯರ ಕಾಲದ ಸ್ಥಿತಿಗತಿಗಳೇ ಮುಂದುವರಿದು ಈ ಕಾಲದಲ್ಲಿ ವಿಶೇಷವಾದ ಹೊಸ ಸಾಧನೆಗಳೇನೂ ಕಂಡುಬರುವುದಿಲ್ಲ. ಆದರೆ ಇವರ ಕಾಲದಲ್ಲಿ ನಡೆದ ಮಹತ್ವದ ಘಟನೆಯೆಂದರೆ ಬಸವಣ್ಣನವರ ವೀರಶೈವ ಕ್ರಾಂತಿ. ಇದರಿಂದ ನಾಡಿನ ಧಾರ್ಮಿಕ ಮತ್ತು ಸಾಮಾಜಿಕ ಪರಂಪರೆಯಲ್ಲಿ ಹೊಸ ಧೋರಣೆ ಮತ್ತು ಮಾರ್ಗಗಳು ಮೂಡಿದುವು.

**ನಾಣ್ಯಗಳು :** ಈ ಮನೆತನದ ಅರಸುಗಳ ನಾಣ್ಯಗಳು ಬಹು ವಿರಳ. ಸಾತಾರಾ ಜಿಲ್ಲೆಯಲ್ಲಿ ದೊರಕಿದ ಒಂದು ಚಿನ್ನದ ನಾಣ್ಯ ರಾಯಮುರಾರಿ ಸೋವಿದೇವನದು. ಇದರ ತೂಕ 54.5 ಗ್ರೇನ್‌ಗಳು. ಈ ನಾಣ್ಯದ ಮುಮ್ಮುಖದಲ್ಲಿ ಬಲಭಾಗಕ್ಕೆ ಸರಿಯುತ್ತಿರುವ ಮನುಷ್ಯನ ಚಿತ್ರವಿದೆ. ಹಿಮ್ಮುಖದಲ್ಲಿ 12ನೆಯ ಶತಮಾನಕ್ಕೆ ಸೇರಬಹುದಾದ ಕನ್ನಡ ಲಿಪಿಯ ಮೂರು ಸಾಲಿನ ಬರೆವಣಿಗೆಯಿದೆ. ಈ ಬರೆವಣಿಗೆಯ ಮಧ್ಯದ ಸಾಲಿನಲ್ಲಿ ಮುರಾರಿ ಎಂಬುದು ಸ್ಪಷ್ಟವಾಗಿದೆ. ಆದುದರಿಂದ ಈ ನಾಣ್ಯವನ್ನು ರಾಯಮುರಾರಿ ಸೋವಿದೇವನದು ಎಂದು ಭಾವಿಸಲಾಗಿದೆ. ಕಲ್ಯಾಣದ ಚಾಳುಕ್ಯರ ನಾಣ್ಯಗಳನ್ನೇ ವಿಶೇಷವಾಗಿ ಹೋಲುವ ಮುದ್ರಾಂಕಿತ ನಮೂನೆಗೆ ಸೇರಿದ ನಾಣ್ಯವೊಂದು ಬೆಳಕಿಗೆ ಬಂದಿದೆ. ಈ ನಾಣ್ಯದಲ್ಲಿ ಒಂಬತ್ತು ಮುದ್ರೆಗಳಿದ್ದು ಅವುಗಳಲ್ಲಿ ಕಳಚುರಿ ಎಂಬ ಬರೆಹವಿದೆ. ಇದು ಇಮ್ಮಡಿ ಬಿಜ್ಜಳನ ನಾಣ್ಯವಿರಬಹುದೆಂದು ಭಾವಿಸಲಾಗಿದೆ. ಆದರೆ ಇದರಲ್ಲಿ ಖಚಿತತೆಯಿಲ್ಲ. (ಎ.ವಿ.ಎನ್.)

**ಕಳಬುರ್ಗಿ :** ಕೋಲಾರ ಜಿಲ್ಲೆ ಬಂಗಾರಪೇಟೆ ತಾಲ್ಲೂಕಿನ ಒಂದು ಗ್ರಾಮ. ಬಂಗಾರಪೇಟೆಯಿಂದ 3ಕಿಮೀ ದೂರದಲ್ಲಿದೆ. ಇಲ್ಲಿಯ ವೆಂಕಟರಮಣ ದೇವಾಲಯ ಅತ್ಯಂತ ಪ್ರಾಚೀನವಾಗಿದ್ದು, ವಾಸ್ತುಶಿಲ್ಪದ ದೃಷ್ಟಿಯಿಂದ ವಿಶಿಷ್ಟವಾಗಿದೆ. ಈ ದೇವಾಲಯದ ಮೇಲ್ಭಾಗದಲ್ಲಿ ಚಿಕ್ಕಗೋಪುರವಿದೆ. ಗರ್ಭಗುಡಿಯಲ್ಲಿ ವೆಂಕಟರಮಣನ ಸು.3 ಅಡಿ ಎತ್ತರದ ವಿಗ್ರಹವಿದ್ದು, ಅಕ್ಕಪಕ್ಕದಲ್ಲಿ ಪದ್ಮಾವತಿ, ಲಕ್ಷ್ಮಿಯರ ವಿಗ್ರಹಗಳಿವೆ. ನವರಂಗದಲ್ಲಿ ನಾಲ್ಕು ಕಂಬಗಳಿದ್ದು, ಆ ಕಂಬಗಳ ಎಲ್ಲ ಭಾಗಗಳಲ್ಲಿಯೂ ಸುಂದರ ಕೆತ್ತನೆಗಳಿವೆ. ವಿಷ್ಣುವಿನ ದಶಾವತಾರಗಳನ್ನೂ ಕೆತ್ತಲಾಗಿದೆ. ವೆಂಕಟರಮಣ ವಿಗ್ರಹ ಉತ್ತರಕ್ಕೆ ಮುಖಮಾಡಿಕೊಂಡಿರುವಂಥ'ದ್ದು ವಿರಳವೆಂದೇ ಹೇಳಬೇಕು. ನವರಾತ್ರಿ ಸಂದರ್ಭದಲ್ಲಿ 9 ದಿನಗಳ ವಿಶೇಷ ಪೂಜೆ ನಡೆಯುತ್ತದೆ. ಇಲ್ಲಿ ಆಂಜನೇಯ ಹಾಗೂ ಮಾಯಮ್ಮನ ನವೀನ ದೇವಾಲಯಗಳಿವೆ. (ಎ.ಬಿ.ಬಿ.)

**ಕಳ'ಲೆ :** ಮೈಸೂರು ಜಿಲ್ಲೆ ನಂಜನಗೂಡು ತಾಲ್ಲೂಕಿನಲ್ಲಿ ನಂಜನಗೂಡಿನಿಂದ 8ಕಿಮೀ ದೂರದಲ್ಲಿ ನೀಲಗಿರಿ ರಸ್ತೆಯ ಪಕ್ಕದಲ್ಲಿರುವ ಗ್ರಾಮ. ಇದು ಕಳಲೆ ಅರಸರ ಕೇಂದ್ರಸ್ಥಾನವಾಗಿತ್ತು. ಊರಿನ ಮಧ್ಯದಲ್ಲಿರುವ ಪಟ್ಟದ ಚಾವಡಿಯೆಂಬ ಪುರಾತನ ಕಟ್ಟಡ ಅವರ ಪಟ್ಟಾಭಿಷೇಕ ನಡೆಯುತ್ತಿದ್ದ ಸ್ಥಳವೆಂದೂ ಅದರ ಮುಂದಿರುವ ಬಯಲಿನಲ್ಲಿ ಅವರ ಅರಮನೆಯಿತ್ತೆಂದೂ ಪ್ರತೀತಿ. ಪಟ್ಟದ ಚಾವಡಿಯ ಮುಂಭಾಗದಲ್ಲಿ ಕಳಲೆಯ ಪ್ರಭು ಲಕ್ಷ್ಮೀಕಾಂತ ಒಡೆಯ ಸಾವಿಗೆ ಈಡಾದಾಗ ಸಹಗಮನ ಮಾಡಿದ ಆತನ ಪತ್ನಿಯ ನೆನಪಿಗಾಗಿ ಕಟ್ಟಿದ ಸತೀ ಗುಡಿಯೊಂದು ಇದೆ. ಇದೊಂದು ಇಟ್ಟಿಗೆ ಗಾರೆಯಲ್ಲಿ ಕಟ್ಟಿದ ಚಿಕ್ಕ ಕಟ್ಟಡ. ಆ ಸತಿ ಇಟ್ಟಿಗೆಮಾಳಿಗಮ್ಮ ಎಂದೇ ಸ್ಥಳದಲ್ಲಿ ಪ್ರಸಿದ್ಧಳಾಗಿದ್ದಾಳೆ. ಆಕೆ ತನ್ನ ಪತಿಯನ್ನು ಆಲಂಗಿಸಿಕೊಂಡು ಮುದ್ದಿಸುತ್ತಿರುವಂತೆ ಇರುವ 3' ಎತ್ತರದ ಶಿಲ್ಪಗಳನ್ನು ಆ ಗುಡಿಯ ಮರದ ಬಾಗಿಲಿನ ಮೇಲೆ ಕಡೆಯಲಾಗಿದೆ.



ಲಕ್ಷ್ಮೀಕಾಂತದೇವಾಲಯದಲ್ಲಿರುವ ರಾಜಮನ್ನಾರ್ ವಿಗ್ರಹ

ಇಲ್ಲಿರುವ ಲಕ್ಷ್ಮೀಕಾಂತ ದೇವಾಲಯ ದ್ರಾವಿಡಶೈಲಿಗೆ ಸೇರಿದ್ದು. ದೊಡ್ಡ ಪ್ರಾಕಾರದ ಮಧ್ಯೆ ಗರ್ಭಗೃಹ ನವರಂಗ ಮುಖಮಂಟಪ ಇರುವ ಮೂಲಗುಡಿ ಮತ್ತು ಮುಂದಗಡೆ ಪಾತಾಲಾಂಕಣ ಇವೆ. ಪ್ರಾಕಾರಕ್ಕೆ ಹೊಂದಿಕೊಂಡಂತೆ ಒಳಗಡೆ ಕೈಸಾಲೆ ಮತ್ತು ಅನೇಕ ಉಪದೇವತೆಗಳು ಹಾಗೂ ಆಳ್ವಾರುಗಳ ಗುಡಿಗಳಿವೆ. ಮಹಾದ್ವಾರದ ಮೇಲೆ ದೊಡ್ಡ ಗೋಪುರವಿದೆ. ಪ್ರಾಕಾರದ ಹೊರಭಾಗದಲ್ಲಿರುವ ದೇವಕೋಷ್ಠಗಳಲ್ಲಿ ಉತ್ತಮವಾದ ಗಾರೆಯ ಪ್ರತಿಮೆಗಳಿವೆ. ನಂಬಿನಾರಾಯಣನ ರೂಪದಲ್ಲಿರುವ ಲಕ್ಷ್ಮೀಕಾಂತಸ್ವಾಮಿ ವಿಗ್ರಹ $3^1/_2$' ಎತ್ತರದ ಸುಂದರ ಶಿಲ್ಪ. ದಳವಾಯಿ ದೇವರಾಜಯ್ಯನ ಮನೆದೇವರಾದ ರಾಮವಿಗ್ರಹವನ್ನು ಅವನ ಮರಣಾನಂತರ ದೇವಾಲಯಕ್ಕೆ ಕೊಡಲಾಯಿತು. ಈ ಸುಂದರ ವಿಗ್ರಹದ ಪ್ರಭಾವಳಿಯ ಮೇಲೆ ದಶಾವತಾರಗಳ ಚಿತ್ರಗಳಿವೆ. ಮೈಸೂರು ರಾಜಮನೆತನದ ಚಿಹ್ನೆಗಳಾದ ಶಂಖ, ಚಕ್ರ, ಮತ್ಸ್ಯ ಮತ್ತು ಯಾಳಿಗಳ ಶಿಲ್ಪಗಳು ಇಲ್ಲಿರುವುದು ಗಮನಾರ್ಹ. ಕಳಲೆಯ ನಂಜರಾಜ ಇವನ್ನು ಕೊಟ್ಟುದಾಗಿ ಇವುಗಳ ಮೇಲಿನ ಶಾಸನಗಳಿಂದ ತಿಳಿದುಬರುತ್ತದೆ. ದಳವಾಯಿ ನಂಜರಾಜ, ಲಕ್ಷ್ಮಮ್ಮಣ್ಣಿ, ಚೆಲುವೇ ಅರಸು ಮತ್ತು ಟಿಪ್ಪುಸುಲ್ತಾನ್ ಇವರು ಹಲವು ಬೆಳ್ಳಿಯ ಪಾತ್ರೆಗಳನ್ನು ಈ ಮಂದಿರಕ್ಕೆ ಕೊಟ್ಟರೆಂದು ಅವುಗಳ ಮೇಲಿನ ಶಾಸನಗಳಿಂದ ಗೊತ್ತಾಗುತ್ತದೆ. ದೇವಾಲಯದ ಹೊರಗಡೆ ಎತ್ತರವಾದ ಮಂಟಪವೊಂದಿದೆ.

ಗ್ರಾಮದ ಬಳಿ ದೊಡ್ಡ ಕೆರೆಯೊಂದಿದೆ. ಕಳಲೆ ಅರಸರ ಕಾಲದ ಕೆಲವು ಸಣ್ಣ ಗುಡಿಗಳು ಮತ್ತು ವೀರಗಲ್ಲುಗಳು ಗ್ರಾಮದಲ್ಲಿ ಮತ್ತು ಗ್ರಾಮದ ಸುತ್ತಮುತ್ತ ಇವೆ. *

**ಕಳಲೆ ಅರಸರು :** 17-18ನೆಯ ಶತಮಾನಗಳಲ್ಲಿ ನಂಜನಗೂಡು ತಾಲ್ಲೂಕಿನ ಭಾಗವೊಂದನ್ನು ಕಳಲೆಯಿಂದ ಆಳಿದ ಒಂದು ಅರಸುಮನೆತನ. ಮೈಸೂರಿನ ರಾಜಒಡೆಯ 33 ಹಳ್ಳಿಗಳ ಒಡೆಯನಾಗಿ 25,000 ಗದ್ಯಾಣಗಳ ಉತ್ಪತ್ತಿಯನ್ನು ಹೊಂದಿದ್ದಾಗ ಕಳಲೆ ಅರಸರಿಗೆ 40,000 ಗದ್ಯಾಣಗಳ ಆದಾಯವಿದ್ದಂತೆ ತಿಳಿದುಬರುತ್ತದೆ. ಈ ಎರಡು ಅರಸುಮನೆತನಗಳೂ ಒಂದೇ

ಅಂತಸ್ತಿನವರಾಗಿದ್ದೂ ಹೆಣ್ಣು ಕೊಟ್ಟು ತಂದು ಬಾಂಧವ್ಯ ಬೆಳೆಸಿಕೊಂಡಿದ್ದರು. ಮೈಸೂರು ರಾಜ್ಯವು ವಿಸ್ತಾರವಾಗಿ ಕಳಲೆಯನ್ನು ಒಳಗೊಂಡಾಗ ಈ ಅರಸರು ಮೈಸೂರು ರಾಜ್ಯದ ದಳವಾಯಿಗಳಾಗಿ ಪ್ರಸಿದ್ಧರಾದರು.

ಶಾಸನಗಳು 17ನೆಯ ಶತಮಾನದ ಮೊದಲಲ್ಲಿದ್ದ ಕರಿಕಾಲ ಮಲ್ಲರಾಜನಿಂದ ಈ ರಾಜರ ವಂಶಾವಳಿಯನ್ನಾರಂಭಿಸಿದರೂ ಕೆಲವು ಗ್ರಂಥಗಳು 16ನೆಯ ಶತಮಾನದ ಆರಂಭದಿಂದ ಇವರ ವಂಶಾವಳಿಯನ್ನು ಗುರುತಿಸುತ್ತವೆ. ಕರಿಕಾಲ ಮಲ್ಲರಾಜ ಒಡೆಯನಿಗಿಂತ ಹಿಂದೆ ಕ್ರಮವಾಗಿ ಕಾಂತ ಒಡೆಯ ಅವನ ಮೊಮ್ಮಗ ತಿಮ್ಮರಾಜ ಒಡೆಯ, ಅವನ ಮಕ್ಕಳು ನಂದಿನಾಥ ಒಡೆಯ, ಇಮ್ಮಡಿಕಾಂತ ಒಡೆಯ ಮತ್ತು ಚಂದ್ರಶೇಖರ ಒಡೆಯ ಇವರು ಆಳಿದಂತೆ ಕಳಲೆ ಅರಸರ ವಂಶಾವಳಿ ಎಂಬ ಗ್ರಂಥ ತಿಳಿಸುತ್ತದೆ. ಈ ಕಾಲದಲ್ಲಿ ಉಮ್ಮತ್ತೂರಿನ ಅರಸನೊಬ್ಬ ಕಳಲೆಯ ರಾಜಮನೆತನಕ್ಕೆ ಸೇರಿದ್ದ ಎಲ್ಲರನ್ನೂ ವಂಚನೆಯಿಂದ ಕಗ್ಗೊಲೆ ಮಾಡಿದನೆಂದೂ ಆದರೆ ಆ ವಂಶದ ಮಗುವೊಂದು ಬದುಕಿ ಉಳಿದು ಮುಂದೆ ತನ್ನ ವಂಶದ ಸ್ಥಾನಮಾನವನ್ನು ಉಳಿಸಿದುದಾಗಿಯೂ ಅವನೇ ಕರಿಕಾಲ ಮಲ್ಲರಾಜನೆಂದೂ ಹೇಳಲಾಗಿದೆ. ಕಳಲೆ ಅರಸರಂತೆ ಮೈಸೂರಿನ ಒಡೆಯರೂ ಉಮ್ಮತ್ತೂರಿನ ರಾಜರಿಗೆ ವಿರೋಧಿಗಳಾಗಿದ್ದುದರಿಂದ ಈ ಎರಡು ಮನೆತನಗಳೂ ಅವರಿಗೆದರಾಗಿ ಒಂದುಗೂಡಿದುವು. ಮೈಸೂರಿನ ರಾಜ ಒಡೆಯನಿಗೂ ಕಳಲೆಯ ಕರಿಕಾಲ ಮಲ್ಲರಾಜ ಒಡೆಯನಿಗೂ ಆದ ಒಪ್ಪಂದದಂತೆ ಮಲ್ಲರಾಜನ ವಂಶದವರೇ ಮೈಸೂರು ರಾಜ್ಯಕ್ಕೆ ವಂಶಪಾರಂಪರ್ಯವಾಗಿ ದಳವಾಯಿಗಳಾಗಿ ನೇಮಿತರಾದರೆಂದು ಹೇಳಿದ್ದರೂ 1637ರವರೆಗೂ ಬೇರೆ ಬೇರೆ ದಳವಾಯಿಗಳು ಮೈಸೂರಿನಲ್ಲಿದ್ದುದ್ದು ಸ್ಪಷ್ಟವಿದೆ.

ಕರಿಕಾಲ ಮಲ್ಲರಾಜನ ಅನಂತರ ಅವನ ಮಗ ಇಮ್ಮಡಿ ತಿಮ್ಮರಾಜ ಒಡೆಯನೂ ಅನಂತರ ಅವನ ಮೊಮ್ಮಕ್ಕಳಾದ ಕುಮಾರ ಮಲ್ಲರಾಜ ಒಡೆಯ, ನಂದಿನಾಥಯ್ಯ ಮತ್ತು ಕುಮಾರಯ್ಯ ಇವರು ಕ್ರಮವಾಗಿ 1644 ರಿಂದ 1682ರವರೆಗೆ ಆಳಿದರು. ಮೈಸೂರು ರಾಜ್ಯಕ್ಕೆ ಮುತ್ತಿಗೆ ಹಾಕಿದ ಬಿಜಾಪುರದ ರಣದುಲ್ಲಾ ಖಾನನೊಡನೆ ಆಗ ದಳವಾಯಿಯಾಗಿದ್ದ ಕುಮಾರಯ್ಯ ಯುದ್ಧ ಮಾಡಿದುದಲ್ಲದೆ ಪಿರಿಯಾಪಟ್ಟಣಕ್ಕೆ ಮುತ್ತಿಗೆ ಹಾಕಿದುದಾಗಿಯೂ ಮತ್ತು ಮಧುರೆಯ ವೀರಪ್ಪ ನಾಯಕನನ್ನು ಸೋಲಿಸಿದುದಾಗಿಯೂ ತಿಳಿದುಬರುತ್ತದೆ. ಇದರಿಂದ ಕಂಠೀರವ ನರಸರಾಜ ಒಡೆಯ ಅವನಿಗೆ ಪರರಾಜಹರಿಣಶಾರ್ದೂಲ ಎಂಬ ಬಿರುದನ್ನಿತ್ತು ಸನ್ಮಾನಿಸಿದ. ದಳವಾಯಿ ಕುಮಾರಯ್ಯ ಯಲಹಂಕ ಮತ್ತು ಮಾಗಡಿನಾಯಕರನ್ನೂ ಸೋಲಿಸಿ ಮೈಸೂರು ರಾಜ್ಯವನ್ನು ವಿಸ್ತರಿಸಿದುದಾಗಿ ಕೆಲವು ಗ್ರಂಥಗಳು ಸೂಚಿಸುತ್ತವೆ. ಕುಮಾರಯ್ಯನ ಅನಂತರ ಇಮ್ಮಡಿ ತಿಮ್ಮರಾಜ ಒಡೆಯನ ಮೊಮ್ಮಗನೂ ಮುಪ್ಪಿನ ಕಾಂತೇಅರಸು ಅಥವಾ ಶ್ರೀಕಾಂತನ ಮಗನೂ ಆಗಿದ್ದ ದೊಡ್ಡಯ್ಯ ದಳವಾಯಿಯಾಗಿ ಮರಾಠರ ಸೈನ್ಯವನ್ನು ಸೋಲಿಸಿ ಓಡಿಸಿದ. ಔರಂಗಜೇಬ್ ಚಿಕ್ಕದೇವರಾಯನಿಗೆ ರಾಜಾಜಗದೇವನೆಂಬ ಬಿರುದನ್ನಿತ್ತುದು ಇದೇ ಸಂದರ್ಭದಲ್ಲಿ. ದೊಡ್ಡಯ್ಯ ಶಿಂಕಗಿರಿ, ನಾಮಕಲ್, ಪರಮತಿ ಮುಂತಾದ ಪಾಳೆಯಪಟ್ಟುಗಳನ್ನು ಸೋಲಿಸಿ ಮೈಸೂರು ರಾಜ್ಯ ವಿಸ್ತಾರವಾಗಲು ಕಾರಣನಾದ. ದೊಡ್ಡಯ್ಯನ ಅಣ್ಣ ದಳವಾಯಿ ನಂಜರಾಜಯ್ಯನ ಮಗ ಕಾಂತಯ್ಯ ಚಿಕ್ಕಬಳ್ಳಾಪುರದ ಮುತ್ತಿಗೆಯಲ್ಲಿ ಹತನಾದ. ಅನಂತರ ಅವನ ತಮ್ಮ ದಳವಾಯಿ ಬಸವರಾಜ, ಅವನ ಅನಂತರ ಅವನ ಚಿಕ್ಕಪ್ಪನಾದ ದಳವಾಯಿ ಮಲ್ಲರಾಜಯ್ಯ ಕ್ರಮವಾಗಿ ದಳವಾಯಿಗಳಾಗಿದ್ದರು.

ಮಲ್ಲರಾಜಯ್ಯನ ಅನಂತರ ಬಂದವನು ದೊಡ್ಡಯ್ಯನ ಮೊಮ್ಮಗ ದಳವಾಯಿ ದೇವರಾಜಯ್ಯ (ನೋಡಿ). ಇಮ್ಮಡಿ ಕೃಷ್ಣರಾಜನ ದಳವಾಯಿಯಾಗಿದ್ದ ಈತ ಮಿಡಿಗೇಶಿ, ಮಾಗಡಿ, ಸಾವನದುರ್ಗ ಮುಂತಾದ ಹಲವು ರಾಜ್ಯಗಳನ್ನು ಗೆದ್ದ. ಇದೇ ಕಾಲದಲ್ಲಿಯೇ ಬಸವರಾಜನ ಮಗ ನಂಜರಾಜನೂ ಸರ್ವಾಧಿಕಾರಿಯಾದ. ದೇವರಾಜನ ತಮ್ಮ ಕರಾಚೂರಿ ನಂಜರಾಜನೂ ಪ್ರಭಾವಶಾಲಿಯಾದ ದಂಡನಾಯಕನಾದ. ಮೈಸೂರು ರಾಜ್ಯದಲ್ಲಿ ಈ ದಳವಾಯಿಗಳು ಅತ್ಯಂತ ಪ್ರಬಲರಾಗಿ ತಮಗೆ ಇಷ್ಟ ಬಂದವರನ್ನು ರಾಜ್ಯದ ಸಿಂಹಾಸನದ ಮೇಲೆ ಕೂಡಿಸುವಷ್ಟು ಶಕ್ತರಾಗಿದ್ದರು. ಕರಾಚೂರಿ ನಂಜರಾಜ ದೇವನಹಳ್ಳಿಯನ್ನು ಮುತ್ತಿ ಗೆದ್ದಾಗ ಹೈದರ್ ಅಲಿಯನ್ನು ಸೈನ್ಯಕ್ಕೆ ಸೇರಿಸಿಕೊಂಡ. ಮುಂದೆ ದೇವರಾಜ-ನಂಜರಾಜರ ನೆರವಿನಿಂದಲೇ ಅಧಿಕಾರದಲ್ಲಿ ಮೇಲೇರಿದ ಹೈದರ್ ಕೊನೆಗೆ ಸರ್ವಾಧಿಕಾರಿಯಾಗಿ ಅವರನ್ನು ಮೂಲೆಗೊತ್ತರಿಸಿದಾಗ ನಂಜರಾಜಯ್ಯ ಅವನನ್ನು ದಮನ ಮಾಡಲು ಯತ್ನಿಸಿ ಕಡೆಗೆ ಅವನ ಬಂದಿಯಾಗಿ 1773 ರಲ್ಲಿ ತೀರಿಕೊಂಡ (ನೋಡಿ: ಕಳಲೆ ನಂಜರಾಜಯ್ಯ). ನಂಜರಾಜಯ್ಯನಿಗೆ ಸೇರಿದ್ದ ಕಳಲೆ ಜಹಗೀರನ್ನೂ ಈ ಸಮಯದಲ್ಲಿ ಹೈದರ್ ಮುಟ್ಟುಗೋಲು ಹಾಕಿಕೊಂಡು ನಂಜರಾಜಯ್ಯನ ಮಗ ವೀರರಾಜಯ್ಯನನ್ನು ಸೆರೆಮನೆಗೆ ಅಟ್ಟಿದ. ಹೀಗೆ ಮೈಸೂರು ರಾಜ್ಯದ ದಳವಾಯಿಗಳೆಂದು ಪ್ರಸಿದ್ಧರಾಗಿದ್ದ ಕಳಲೆ ಅರಸರ ಪ್ರಾಮುಖ್ಯತೆ ಅಡಗಿಹೋಯಿತು. ಶಾಸನಗಳಲ್ಲಿ ಬರುವ ಇವರ ವಂಶಾವಳಿ ಹೀಗಿದೆ:

- ತಿಮ್ಮರಾಜ
  - ಶ್ರೀಕಾಂತ ಅಥವಾ ಕಾಂತ
    - ನಂಜರಾಜ
      - ಬಸವರಾಜ
        - ನಂಜರಾಜ
    - ದೊಡ್ಡಯ್ಯ
      - ವೀರರಾಜ
        - ದೇವರಾಜ
        - ನಂಜರಾಜ
    - ಮಲ್ಲರಾಜ

(ಎಂ.ಎಚ್.)

**ಕಳಲೆ ನಂಜರಾಜಯ್ಯ :** ಮೈಸೂರು ರಾಜಮನೆತನದ ಸೇವೆಯಲ್ಲಿದ್ದ ಪ್ರಭಾವಿ ದಳವಾಯಿ. ಸರ್ವಾಧಿಕಾರಿ (1739-59). ಕರಾಚೂರಿ ನಂಜರಾಜಯ್ಯ ಎಂದೂ ಪ್ರಸಿದ್ಧ. ಬ್ರಿಟಿಷರ ದಾಖಲೆಗಳಲ್ಲಿ ಇವನನ್ನು ನಂದಿರಾಜ ಎಂದು ಹೆಸರಿಸಲಾಗಿದೆ. ಈತ ಕಳಲೆಯ ಅರಸು ವೀರರಾಜಯ್ಯನ ಮಗ. ಮೊದಲಿನಿಂದಲೂ ತನ್ನ ಅಣ್ಣನಾದ ದಳವಾಯಿ ದೇವರಾಜಯ್ಯನ ಸಹಕಾರಿಯಾಗಿದ್ದ. ಸರ್ವಾಧಿಕಾರಿ ನಂಜರಾಜಯ್ಯನ ಮರಣಾನಂತರ ದೇವರಾಜಯ್ಯ ಇವನನ್ನೇ ಸರ್ವಾಧಿಕಾರಿಯಾಗಿ ನೇಮಿಸಿದ. (1739). ಅಲ್ಲದೆ ಇವನ ಮಗಳನ್ನು ಮಹಾರಾಜ ಇಮ್ಮಡಿ ಕೃಷ್ಣರಾಜ ಒಡೆಯರಿಗೆ ಕೊಟ್ಟು ಮದುವೆ ಮಾಡಿಸಿ, ಕಳಲೆ ಮತ್ತು ಮೈಸೂರು ರಾಜಮನೆತನಗಳ ಬಾಂಧವ್ಯವನ್ನು ಭದ್ರಗೊಳಿಸಿದ.

ಉತ್ಸಾಹಿಯಾಗಿದ್ದ ನಂಜರಾಜಯ್ಯ 1749ರಲ್ಲಿ ದೇವನ ಹಳ್ಳಿಯನ್ನು ವಶಪಡಿಸಿಕೊಂಡ (ಹೈದರ್ ಅಲಿ ಮೈಸೂರು ಸೇವೆ ಸೇರಿದ್ದು ಆಗಲೇ). ಅನಂತರ ತನ್ನ ಅಣ್ಣನ ಮಾತಿಗೆ ವಿರುದ್ಧವಾಗಿ ತಿರುಚಿನಾಪಳ್ಳಿ ವಿವಾದದಲ್ಲಿ ಸಿಲುಕಿಕೊಂಡ (1751). ಇದಕ್ಕೆ ಮುಖ್ಯ ಕಾರಣ ಆರ್ಕಾಟಿನ ನವಾಬ ಮಹಮ್ಮದ್ ಆಲಿ ಇಂಗ್ಲಿಷರ ಮತ್ತು ನಂಜರಾಜಯ್ಯನ ಬೆಂಬಲ ಪಡೆದು ಚಂದಾಸಾಹೇಬ ಮತ್ತು ಅವನ ಬೆಂಬಲಿಗರಾಗಿದ್ದ ಫ್ರೆಂಚರನ್ನು ಸೋಲಿಸಿದ. ಆದರೆ ಮುಂದಿನ ಷರತ್ತಿನಂತೆ ಮಹಮ್ಮದ್ ಅಲಿ ತಿರುಚಿನಾಪಳ್ಳಿಯನ್ನು ನಂಜರಾಜಯ್ಯನಿಗೆ ಕೊಡಲಿಲ್ಲ. ಆದ್ದರಿಂದ ರೊಚ್ಚಿಗೆದ್ದ ದಳವಾಯಿ ಫ್ರೆಂಚರ ಬೆಂಬಲ ಪಡೆದು ತಿರುಚಿನಾಪಳ್ಳಿಯನ್ನು ಪಡೆಯಲು ಶ್ರಮಿಸಿದ. ಇದೇ ಸಂದರ್ಭದಲ್ಲಿ ದಖನ್ನಿನ ಸುಬೇದಾರಿ ಸಲಾಬತ್‌ಜಂಗ್‌ನು ಮೈಸೂರಿನ ಮೇಲೆ ದಾಳಿ ಮಾಡಿದ್ದರಿಂದ 1755ರ ಏಪ್ರಿಲ್‌ನಲ್ಲಿ ರಾಜಧಾನಿಯ ಕಡೆಗೆ ಹಿಂತಿರುಗಿದ.

ತಿರುಚಿನಾಪಳ್ಳಿ ವಿವಾದದಲ್ಲಿ ಇಂಗ್ಲಿಷರ ಕುತ್ಸಿತ ಮನೋಭಾವವನ್ನು ಕಂಡ ನಂಜರಾಜಯ್ಯ ಅವರಿಗೆ ವಿರುದ್ಧವಾಗಿ ಹೈದರ್ ಅಲಿಯನ್ನು ದಿಂಡಿಗಲ್ಲಿನ ಫೌಜುದಾರರನ್ನಾಗಿ ನೇಮಿಸಿದ. ಈ ಕೊಡುಗೆ ರಾಜನೀತಿ ಚತುರನಾಗಿದ್ದ ಹೈದರನ ಪ್ರಾಬಲ್ಯಕ್ಕೆ ಅಡಿಗಲ್ಲಾಯಿತು. ಇದೇ ವೇಳೆಗೆ ರಾಜಧಾನಿಯಲ್ಲಿನ ಆಗು ಹೋಗುಗಳಲ್ಲಿ ಬದಲಾವಣೆಯುಂಟಾಗತೊಡಗಿತು. ರಾಜಕೀಯ ಕೈಗೊಂಬೆಯಾಗಿದ್ದ ಇಮ್ಮಡಿ ಕೃಷ್ಣರಾಜ ತನ್ನ ಸ್ಥಿತಿಗೆ ನೊಂದು ದಳವಾಯಿ ಸೋದರರ ವಿರುದ್ಧ ತನ್ನದೇ ಆದ ಗುಂಪು ಕಟ್ಟಲಾರಂಭಿಸಿದ. ಇದರಿಂದ ರೊಚ್ಚಿಗೆದ್ದ ನಂಜರಾಜಯ್ಯ ಮಹಾರಾಜನನ್ನು ಬಲತ್ಕಾರದಿಂದ ಅರಮನೆಯ ಸಭಾಂಗಣದಲ್ಲಿ ಕೂರಿಸಿ, ಅವನ ಎದುರಿನಲ್ಲೆ ಅವನ ಬೆಂಬಲಿಗರಿಗೆ ಚಿತ್ರಹಿಂಸೆ ಕೊಟ್ಟು, ರಾಜನನ್ನು ಅವಮಾನಿಸಿದ.

ಇದರಿಂದ ಬೇಸರಗೊಂಡ ದೇವರಾಜಯ್ಯ 1757ರಲ್ಲಿ ಸತ್ಯಮಂಗಲಕ್ಕೆ ಹೋಗಿ ನೆಲಸಿದ. ನಂಜರಾಜಯ್ಯ ಪೂರ್ಣ ಸ್ವತಂತ್ರನಾದ.

ಇದೇ ಸಮಯದಲ್ಲಿ ಪೇಶ್ವೆ ಬಾಲಾಜಿರಾವ್ ಮೈಸೂರಿನ ಮೇಲೆ ದಾಳಿಯಿಟ್ಟ. ದೇವರಾಜಯ್ಯನ ಮಾರ್ಗದರ್ಶನವಿಲ್ಲದೆ ಆರ್ಥಿಕ ಮುಗ್ಗಟ್ಟಿನಿಂದ ತೊಳಲುತ್ತಿದ್ದ ನಂಜರಾಜಯ್ಯ ಮರಾಠರೊಡನೆ ಒಪ್ಪಂದ ಮಾಡಿಕೊಳ್ಳಬೇಕಾಯಿತು. ಒಪ್ಪಂದದ ಪ್ರಕಾರ 32ಲಕ್ಷ ರೂಪಾಯಿಗಳನ್ನು ಒಟ್ಟಾಗಿ ಕೊಡಲಾಗದಿದ್ದುದರಿಂದ ರಾಜ್ಯದ ಕೆಲವು ತಾಲ್ಲೂಕುಗಳನ್ನು ಅಡವಾಗಿಟ್ಟ. ಅನಂತರ ಹೈದರ್ ಅಲಿಯ ಪ್ರೋತ್ಸಾಹದಿಂದ ಒಪ್ಪಂದದ ಕರಾರುಗಳನ್ನು ನಿರಾಕರಿಸಿದ. ಕ್ರಮೇಣ ನಂಜರಾಜಯ್ಯನ ವ್ಯಕ್ತಿತ್ವ ಅಧೋಮುಖವಾಗತೊಡಗಿತ್ತು. ಸಂಬಳದ ಬಾಕಿಗಾಗಿ ಸೈನಿಕರು ನಂಜರಾಜಯ್ಯನ ಮನೆಮುಂದೆ ಧರಣಿ ಹೂಡಿದರು. ಸೈನಿಕರ ಅಶಿಸ್ತಿನ ಆಂದೋಳನಕ್ಕೆ ಹೆದರಿದ ಹೈದರ್ ಪರಿಸ್ಥಿತಿಯನ್ನು ಸರಿಪಡಿಸಲು ದಳವಾಯಿ ಸೋದರರು ಮತ್ತು ಮಹಾರಾಜರ ಮಧ್ಯೆಯಿದ್ದ ವೈಮನಸ್ಯವನ್ನು ಹೋಗಲಾಡಿಸಿದ. ಆಗ ನಂಜರಾಜಯ್ಯ ಸೈನಿಕರನ್ನು ತಹಬದಿಗೆ ತರಲು ಹೈದರ್ ಅಲಿಯನ್ನೇ ನಿಯಮಿಸಿದ. ಈ ಸಮಯದ ಸದುಪಯೋಗಪಡೆದ ಹೈದರ್ ಮತ್ತಷ್ಟು ಪ್ರಬಲನಾದ. ಅಲ್ಲದೆ 1759ರಲ್ಲಿ ನಡೆದ ಮರಾಠರ ದಾಳಿಯನ್ನು ಧೈರ್ಯವಾಗಿ ಎದುರಿಸಿ ಮೈಸೂರಿಗೆ ಅನುಕೂಲಕರವಾಗಿ ಒಪ್ಪಂದ ಮಾಡಿಕೊಂಡ. ಈ ಹೊತ್ತಿಗೆ ಅಧಿಕಾರದ ಔನ್ನತ್ಯಕ್ಕೆ ಏರಿದ್ದ ಹೈದರನು ಖಂಡೇರಾವ್, ಮಹಾರಾಜ ಮತ್ತು ದೇವರಾಜಮ್ಮಣ್ಣಿ ಇವರ ಸಹಕಾರದಿಂದ ಒಳಸಂಚುಮಾಡಿ ನಂಜರಾಜಯ್ಯನನ್ನು ಕುಗ್ಗಿಸಿದ. ನಂಜರಾಜಯ್ಯ ಅಧಿಕಾರಕ್ಕೆ ರಾಜೀನಾಮೆ ಕೊಟ್ಟು ಹೈದರ್ ತನಗೆ ಒದಗಿಸಿದ ಕೊಣನೂರು ಜಹಗೀರಿನಲ್ಲಿ 1773ರಲ್ಲಿ ಕೊನೆಯುಸಿರೆಳೆದ. ನಂಜರಾಜಯ್ಯನ ಪತನ ಮೈಸೂರನ್ನು ಹೈದರ್ ಅಲಿಯ ಹಿಡಿತಕ್ಕೆ ಒಳಪಡಿಸಿತು. (ಕೆ.ಜಿ.)

ನಂಜರಾಜಯ್ಯ ಇತಿಹಾಸದಲ್ಲಿ ವಿವಾದಾಸ್ಪದ ವ್ಯಕ್ತಿಯಾಗಿದ್ದಾನೆ. ಹಲವು ಕಡೆ ಈತ ಸ್ವಾರ್ಥಿ, ಲಂಚಕೋರ, ಸ್ವಾಮಿದ್ರೋಹಿ ಇತ್ಯಾದಿಯಾಗಿ ವರ್ಣಿತನಾಗಿದ್ದಾನೆ; ತನ್ನ ಜೀವಮಾನಪರ್ಯಂತ ಸಿಂಹಾಸನದ ಮೇಲೆ ಅಬಲ ಅಥವಾ ಬಾಲಕ ರಾಜರಿದ್ದಾಗಲೂ ಮೈಸೂರು ರಾಜ್ಯದ ಭದ್ರತೆಗಾಗಿ ಹೊಡೆದಾಡಿದ್ದಲ್ಲದೆ, ಆ ರಾಜ್ಯದ ವಿಸ್ತಾರ ಮತ್ತು ಬಲವನ್ನು ವರ್ಧಿಸಲು ನಿರತನಾಗಿದ್ದನೆಂದೂ ದಕ್ಷಿಣ ಭಾರತದಲ್ಲಿ ಬ್ರಿಟಿಷರು, ಫ್ರೆಂಚರು, ಡಚ್ಚರು ತಳ ಊರಲು ಪ್ರಯತ್ನಿಸುತ್ತಿದ್ದ ಸಂದರ್ಭದಲ್ಲಿ ಅವರನ್ನು ತಡೆಗಟ್ಟಿದ ಏಕೈಕ ದೇಶೀ ಶಕ್ತಿಯಾಗಿ ಮೈಸೂರನ್ನು ರೂಪಿಸಿದ ಕೀರ್ತಿ ಈತನಿಗೆ ಸಲ್ಲಬೇಕೆಂದೂ ಒಬ್ಬ ಇಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ.

ನಂಜರಾಜಯ್ಯ ಯುದ್ಧದಲ್ಲಿ ಸಮರ್ಥನಾಗಿದ್ದಂತೆ ಅತ್ಯಂತ ದೈವಭಕ್ತನೂ ವಿದ್ವಾಂಸನೂ ಸ್ವತಃ ಕವಿಯೂ ಕವಿಪೋಷಕನೂ ಆಗಿದ್ದ. ಈತ ಶಿವಪೂಜಾದುರಂಧರನಾಗಿದ್ದು ನಂಜನಗೂಡಿನ ನಂಜುಂಡೇಶ್ವರನ ಭಕ್ತನಾಗಿದ್ದ. ತನ್ನ ಮುದ್ರೆಯಲ್ಲಿ ಸಹ ಈತ 'ಶಿವಶಂಭೋಮಹಾದೇವ', 'ಶ್ರೀನಂಜುಂಡ', ಎಂದು ಕೆತ್ತಿಸಿಕೊಂಡಿದ್ದ. ಕನ್ನಂಬಾಡಿಯ ಬಳಿ ನಂಜರಾಜಪುರ ಅಗ್ರಹಾರವನ್ನು ನಿರ್ಮಿಸಿದ. ಮೈಸೂರಿನ ತ್ರಿನಯನೇಶ್ವರ ಗುಡಿಯ ಗೋಪುರವನ್ನು ಕಟ್ಟಿಸಿದ. ಚೆಟ್ಟಿದಪುರ, ಶ್ರೀರಂಗಪಟ್ಟಣ, ತಿರುಮಕೂಡಲು, ಹರದನಹಳ್ಳಿ, ನಂಜನಗೂಡು ಮೊದಲಾದ ದೇವಾಲಯಗಳಿಗೆ ನಟರಾಜ, ಅರವತ್ತುಮೂರು ಪುರಾತನರು ಮೊದಲಾದ ಅನೇಕ ಕಂಚಿನ ವಿಗ್ರಹಗಳನ್ನು ಮಾಡಿಸಿಕೊಟ್ಟಿದ್ದಾನೆ.

ಸಂಸ್ಕೃತದ ಶೈವಪುರಾಣಗಳು, ಧರ್ಮ ಮತ್ತು ತತ್ತ್ವಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳನ್ನು ಸರ್ವಜನ ಉಪಯೋಗಿಯಾಗುವಂತೆ ನಂಜರಾಜ ವಾಣೀ ವಿಲಾಸವೆಂಬ ಮಾಲೆಯಲ್ಲಿ ಸುಲಭಕನ್ನಡಲ್ಲಿ ರಚಿಸಿದ (1734-42). ಅವುಗಳಲ್ಲಿ ಸ್ಕಾಂದಪುರಾಣದ ಆಧಾರದಿಂದ ರಚಿಸಿದ ಶಿವಭಕ್ತಮಹಾತ್ಮ್ಯ, ಹಾಲಾಸ್ಯ ಮಹಾತ್ಮ್ಯ, ಕಾಶೀಮಹಿಮಾರ್ಥದರ್ಪಣ, ಶಿವಧರ್ಮೋತ್ತರ ವಚನ, ಪುರಾಣ ಸೇತುಮಹಿಮಾದರ್ಶ, ಪದ್ಮಪುರಾಣದಿಂದ ಶಿವಗೀತೆ, ಲಿಂಗಪುರಾಣ ಮತ್ತು ಮಾರ್ಕಂಡೇಯಪುರಾಣ, ಬ್ರಹ್ಮಾಂಡಪುರಾಣದಿಂದ ಭದ್ರಗಿರಿ ಮಾಹಾತ್ಮ್ಯ, ಭವಿಷ್ಯೋತ್ತರಪುರಾಣದಿಂದ ಹರದತ್ತಾಚಾರ್ಯ ಮಹಾತ್ಮ್ಯ, ವಿಘ್ನೇಶ್ವರ ವ್ರತಕಲ್ಪ, ಸ್ಯಮಂತಕೋಪಾಖ್ಯಾನ, ಸಂಕಷ್ಟಹರ ಗಣಪತಿ ವ್ರತ, ಧುಂಡಿವಿನಾಯಕ ಚರಿತ್ರೆ ಈ ಗ್ರಂಥಗಳಿವೆ. 1742-51ರ ಅವಧಿಯಲ್ಲಿ ಕನ್ನಡ ಗದ್ಯದಲ್ಲಿ ಮಹಾಭಾರತ (ಮಹಾಭಾರತ ಟೀಕು. ಈಗ 7 ಪರ್ವಗಳು ಮಾತ್ರ ಉಳಿದಿವೆ), ಕಕುದ್ಗಿರಿ ಮಹಾತ್ಮ್ಯವನ್ನು (ಶಿವಗಂಗೆಯ ಸ್ಥಳಪುರಾಣ) ಬರೆದ. ಈತ ಸಂಗೀತಗಂಗಾಧರ ಮೊದಲಾದ ಸಂಸ್ಕೃತ ಗ್ರಂಥಗಳನ್ನೂ ರಚಿಸಿದನೆಂದು ತಿಳಿಯುತ್ತದೆ. ಸು.1763-65ರಲ್ಲಿ ರಚಿಸಿದ 'ಗರಳಪುರಿ ಮಹಾತ್ಮ್ಯ, (ನಂಜನಗೂಡಿನ ಸ್ಥಳಪುರಾಣ) ಈತನ ಕೊನೆಯ ಕೃತಿ.

ಈ ಗ್ರಂಥಗಳಲ್ಲಿ ಶಿವತತ್ತ್ವಪರವಾದ ವಿಷಯಗಳೇ ಹೆಚ್ಚಾಗಿದ್ದು ಅಲ್ಲಲ್ಲಿ ಪರಮತ ಖಂಡನೆಯನ್ನೂ ಮಾಡಿದ್ದಾನೆ. ಆದರೂ ಶಿವವಿಶಿಷ್ಟಾದ್ವೈತವು ವ್ಯಾಸರ ಪೌರಾಣಿಕ ಸಂಪ್ರದಾಯಕ್ಕೂ ಹೊಂದಿಕೊಳ್ಳುತ್ತದೆ ಎಂದು ತನ್ನ ಗ್ರಂಥಗಳಲ್ಲಿ ತೋರಿಸಿದ್ದಾನೆ. ತನ್ನ ಗ್ರಂಥಗಳ ಆದಿ ಮತ್ತು ಅಂತ್ಯಗಳಲ್ಲಿ ಸ್ವವಿಷಯಕ ಹಾಗೂ ದೈವಸ್ತುತಿಪರ ಅಂಶಗಳನ್ನು ಹೇಳುವಲ್ಲಿ ಭಾಮಿನಿಷಟ್ಪದಿ, ಕಂದ ಮುಂತಾದ ಪದ್ಯಸರಣಿಯನ್ನು ಅನುಸರಿಸಿದ್ದರೂ ಕೃತಿಯ ವಸ್ತುನಿರೂಪಣಾ ಭಾಗ ಮಾತ್ರ ಗದ್ಯದಲ್ಲಿರುತ್ತದೆ. ಈತನ ಗದ್ಯ ಶೈಲಿ ಉತ್ತಮವಾಗಿದೆ.

ಈತನ ಸಂಗೀತಗಂಗಾಧರಕ್ಕೆ ಶ್ರವಣನಂದಿನೀ ಎಂಬ ಟೀಕನ್ನು ಬರೆದಿರುವ ಕಾಶೀಪತಿ ಪಂಡಿತ್ತ, ನಂಜರಾಜಯಶೋಭೂಷಣವೆಂಬ ಅಲಂಕಾರಗ್ರಂಥವನ್ನು ಸಂಸ್ಕೃತದಲ್ಲಿ ಬರೆದ ನರಸಿಂಹಕವಿ, ನಂಜರಾಜನನ್ನು ಹೊಗಳುವ ಸಂಸ್ಕೃತ ಗ್ರಂಥ ನಂಜರಾಜಯಶಸ್ಸಮೊಲ್ಲಾಸಚಂಪೂವನ್ನು ಬರೆದ ನೀಲಕಂಠಕವಿ, ಕನ್ನಡದಲ್ಲಿ ಹಾಲಾಸ್ಯಮಹಾತ್ಮ್ಯವನ್ನು ಬರೆದ ವೆಂಕಟೇಶ ಮುಂತಾದ ಕವಿಗಳು ನಂಜರಾಜನಿಂದ ಪೋಷಿತರಾಗಿದ್ದರು. (ಎನ್.ಬಿ.ಎಲ್.)

**ಕಳವರದುರ್ಗ** : ಕೋಲಾರ ಜಿಲ್ಲೆ ಚಿಕ್ಕಬಳ್ಳಾಪುರ ತಾಲ್ಲೂಕಿನಲ್ಲಿ ನಂದಿದುರ್ಗದಿಂದ ಉತ್ತರಕ್ಕೆ ಪೆನುಗೊಂಡ ಮತ್ತು ಧರ್ಮಾವರಂವರೆಗೆ ಹಬ್ಬಿರುವ ಪರ್ವತ ಸಾಲಿನಲ್ಲಿರುವ ಒಂದು ಕಗ್ಗಲ್ಲು ದುರ್ಗ. ನಂದಿದುರ್ಗದ ಉತ್ತರಕ್ಕೆ 8ಕಿಮೀ ಅಂತರದಲ್ಲಿಯೂ ಚಿಕ್ಕಬಳ್ಳಾಪುರದಿಂದ ಪಶ್ಚಿಮಕ್ಕೆ 6ಕಿಮೀ ಅಂತರದಲ್ಲಿಯೂ ಇದೆ. ಸಮುದ್ರಮಟ್ಟದಿಂದ 1447ಮೀ ಎತ್ತರವಿದೆ. ನಂದಿದುರ್ಗವನ್ನು ಬಿಟ್ಟರೆ ಈ ಪ್ರದೇಶದಲ್ಲಿ ಇದೆ ಅತಿ ಎತ್ತರವಾದುದು. ಈ ಬೆಟ್ಟದ ಇರುವಿಕೆಯಿಂದ ಇದರ ಪಶ್ಚಿಮಕ್ಕಿರುವ ಪ್ರದೇಶದಲ್ಲಿ ಒಳ್ಳೆಯ ಹಿಂಗಾರು ಮಳೆ ಆಗುತ್ತದೆ.

ಕಳವರದುರ್ಗದ ಮೇಲ್ಭಾಗದಲ್ಲಿ ವಿಶಾಲವಾದ ಬಯಲು ಪ್ರದೇಶವಿದ್ದು ಆ ಬಯಲಿನಲ್ಲಿ ಪಾಂಡವರ ಗುಡಿಗಳು ಎಂದು ಹೆಸರಿಸುವ ಬೃಹತ್ ಶಿಲಾಯುಗದ ಸಮಾಧಿಗಳಿವೆ. ಈ ಸಮಾಧಿಗಳು ದೂರದ ನೋಟಕ್ಕೆ ಚಿಕ್ಕ ಚಿಕ್ಕ ಸ್ತೂಪಗಳಂತೆ ಗೋಚರಿಸುತ್ತವೆ. ಬೆಟ್ಟದ ಮೇಲೆ ಒಂದು ಕೋಟೆಯ ಅವಶೇಷಗಳು ಇವೆ. ಇದು ಬಹುಶಃ ಚಿಕ್ಕಬಳ್ಳಾಪುರದ ನಾಯಕರ ಕಾಲದಲ್ಲಿ ಕಟ್ಟಿದ್ದು. ಅಲ್ಲಿಂದ ಚಿಕ್ಕಬಳ್ಳಾಪುರದ ಆಧಿಪತ್ಯವನ್ನು ನೋಡಿಕೊಳ್ಳಲಾಗುತ್ತಿತ್ತೆಂದು ಹೇಳಲಾಗುತ್ತದೆ. 1791ರಲ್ಲಿ ಬ್ರಿಟಿಷರು ಈ ಪ್ರದೇಶವನ್ನು ಆಕ್ರಮಿಸಿ ಕೋಟೆಯನ್ನು ಕೆಡವಿಸಿದರು. ಬೆಟ್ಟದ ನೆತ್ತಿಯಿಂದ ಸುತ್ತಲ ಪ್ರದೇಶದ ರಮ್ಯದೃಶ್ಯವನ್ನು ಕಾಣಬಹುದು. ಈ ಬೆಟ್ಟದ ತಪ್ಪಲಿನಲ್ಲಿ ಭಾರತರತ್ನ ಎಂ. ವಿಶ್ವೇಶ್ವರಯ್ಯನವರು ಜನಿಸಿದ ಮುದ್ದೇನಹಳ್ಳಿ ಇದೆ. (ಸಿ.ಕೆ.)

**ಕಳಸ** : ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕಿನಲ್ಲಿರುವ ಒಂದು ಗ್ರಾಮ. ಮೂಡಿಗೆರೆಯ ವಾಯುವ್ಯಕ್ಕೆ 53ಕಿಮೀ ದೂರದಲ್ಲಿ ಭದ್ರಾನದಿಯ ಬಲದಂಡೆಯ ಬಳಿ ಸಹ್ಯಾದ್ರಿಯ ಉತ್ತುಂಗಶ್ರೇಣಿಗಳ ನಡುವಣ ಕಣಿವೆಯಲ್ಲಿದೆ.

ಇದು ಕಾರ್ಕಳದ ಭೈರರಸರ (ನೋಡಿ) ಆಳಿಕೆಯಲ್ಲಿ ಒಂದು ಮುಖ್ಯ ಸ್ಥಳವಾಗಿತ್ತು. ಆ ಕಾಲದಲ್ಲಿ ಕಟ್ಟಿದ ಇಲ್ಲಿಯ ಕಳಸೇಶ್ವರ ದೇವಾಲಯ ದೊಡ್ಡದು. ಅದರ ಸುತ್ತಲೂ ಭೈರರಸರ ಅನೇಕ ಶಾಸನಗಳಿವೆ. ಉತ್ತರದಿಂದ ಬಂದ ಶ್ರುತಬಿಂದುವೆಂಬ ರಾಜ ತಾನು ಬೇಟೆಯಲ್ಲಿ ಪ್ರಾಣಿಗಳನ್ನು ಕೊಂದ ಪಾಪದ ಪ್ರಾಯಶ್ಚಿತವಾಗಿ ಈ ಮಂದಿರವನ್ನು ಕಟ್ಟಿಸಿದನೆಂಬ ಐತಿಹ್ಯವಿರುವುದರಿಂದ ಇದು ಮೊದಲಿಗೆ ಜೈನಮಂದಿರವಾಗಿತ್ತೆಂಬ ಊಹೆ ಇದೆ.

ಗರ್ಭಗುಡಿ, ನವರಂಗ ಮತ್ತು ಮುಖಮಂಟಪಗಳಿಂದ ಕೂಡಿರುವ ಈ ದೇವಾಲಯದ ಗರ್ಭಗುಡಿಯಲ್ಲಿರುವ 9 ಅಡಿ ಎತ್ತರದ ಲಿಂಗ

ಉತ್ತರಕ್ಕೆ ಬಾಗಿದೆ. ಗರ್ಭಗುಡಿಯ ಮೇಲಿನ ಶಿಖರಕ್ಕೆ ಲೋಹದ ಹೊದಿಕೆ ಇದೆ. ನವರಂಗದಲ್ಲಿ 16 ಕಲ್ಲಿನ ಕಂಬಗಳಿವೆ. ಅದಕ್ಕೆ ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ದ್ವಾರಗಳಿವೆ. ಮುಖ ಮಂಟಪದ ಒಳಪಕ್ಕದಲ್ಲಿ ನಾಲ್ಕು ಕಂಬಗಳೂ ಮುಂಭಾಗದಲ್ಲಿ ದ್ರಾವಿಡಶೈಲಿಯ ಅಡಿಯಲ್ಲಿ ಸಿಂಹಗಳಿರುವ ಎರಡು ಕಂಬಗಳೂ ಇವೆ. ಈ ಕಳಸೇಶ್ವರ ಅಥವಾ ಕಳಸನಾಥ' ದೇವಾಲಯ ಈಗಿರುವ ಸ್ಥಿತಿಯಲ್ಲಿ ಸು.17-18ನೆಯ ಶತಮಾನದ್ದಿರಬಹುದು. ಆದರೆ ಅಕ್ಕಪಕ್ಕಗಳಲ್ಲಿ ದೊರಕುವ ವಾಸ್ತು ಅವಶೇಷಗಳು ಮತ್ತು ಕೆಲವು ಶಿಲ್ಪಗಳು ನಿರ್ದಿಷ್ಟವಾಗಿ ಹೊಯ್ಸಳ ಶೈಲಿಗೆ ಸೇರಿದುವಾದ್ದರಿಂದ, ಇಲ್ಲಿ ಮೊದಲಿಗೆ ಹೊಯ್ಸಳ ದೇವಾಲಯವಿದ್ದು, ಅದು ಪಾಳುಬಿದ್ದಮೇಲೆ ನಾಯಕರ ಕಾಲದಲ್ಲಿ ಈಗಿನ ಕಟ್ಟಡಗಳನ್ನು ಕಟ್ಟಿದರೆಂದು ಕಾಣುತ್ತದೆ.

ಪಕ್ಕದಲ್ಲಿರುವ ದೇವೀಮಂದಿರವೂ ನಾಯಕರ ಕಾಲಕ್ಕೆ ಸೇರಿದುದು. ಇದರ ಮಹಾದ್ವಾರದ ಇಕ್ಕೆಲಗಳಲ್ಲಿ ಸಿಂಹವಾಹಿನಿಯರಾದ ದ್ವಾರಪಾಲಕಿಯರಿದ್ದಾರೆ. ಗಜಪತಿಯ, ತುಗಲಕನ ಹಾಗೂ ವಿಜಯನಗರದ ಅರಸರ ಕೆಲವು ನಾಣ್ಯಗಳು ಇಲ್ಲಿ ಸಿಕ್ಕಿವೆ.

ಕಳಸದಲ್ಲಿ ಪ್ರಾಚೀನ ಅವಶೇಷಗಳನ್ನು ಮುಚ್ಚಿನಿಂತಿರುವ ದಿಬ್ಬಗಳನ್ನು ಗಮನಿಸಿದರೆ ಮುಂಚೆ ಇಲ್ಲಿ ಒಂದು ದೊಡ್ಡ ಊರಿತ್ತೆಂದು ತಿಳಿಯುತ್ತದೆ. ಮೊದಲಿಗೆ ಹುಮುಚದವರ, ಅನಂತರ ಭೈರರಸರ, ಅನಂತರ ಐಗೂರು ನಾಯಕರ ಆಳಿಕೆಗೆ ಇದು ಒಳಪಟ್ಟಿತ್ತು.

ನದಿಯ ದಂಡೆಯಲ್ಲಿ ಪವಿತ್ರ ಸ್ಥಳವೆನಿಸಿರುವ ಅಂಬುತೀರ್ಥದಲ್ಲಿ ಒಂದು ಚಾಕನಾದ ಬಂಡೆಯಿದ್ದು, ಅದರ ಮೇಲಿರುವ ಸಂಸ್ಕೃತ ಶಾಸನ ಆ ಬಂಡೆಯನ್ನು ಮಧ್ವಾಚಾರ್ಯರು ಒಂದೇ ಕೈಯಲ್ಲಿ ತಂದು ಅಲ್ಲಿಟ್ಟಂತೆ ತಿಳಿಸುವುದು. ಈ ಸಂಗತಿಯ ಪ್ರಸ್ತಾಪ, ಮಧ್ವವಿಜಯವೆಂಬ ಗ್ರಂಥದಲ್ಲಿಯೂ ಬಂದಿದೆ.

ಕಳಸದ ಸುತ್ತಮುತ್ತ ಬೆಳೆಯುವ ಅಡಕೆ ಉತ್ತಮ ಗುಣಮಟ್ಟದ್ದು. ಕಳಸದಿಂದ ಒಂದು ರಸ್ತೆ ಬಂದ್‍ಘಾಟ್‍ಗೆ ಹೋಗುತ್ತದೆ. ಮತ್ತೊಂದು ಉತ್ತರಕ್ಕೆ ಬುಗ್ಗುಂಜಿ ಮೂಲಕ ಆಗುಂಬೆ ಘಾಟನ್ನು ಸೇರುತ್ತದೆ. (ಎಸ್.ಜಿ.)

**ಕಾಂತರಾಜ ಅರಸು :** 1870-1923. ಹಿಂದಿನ ಮೈಸೂರು ಸಂಸ್ಥಾನದ ದಿವಾನರು (1919-22). ನಾಲ್ವಡಿ ಕೃಷ್ಣರಾಜ ಒಡೆಯರ ಸೋದರಮಾವಂದಿರು ಮತ್ತು ಅವರ ಸೋದರಿ ಜಯಲಕ್ಷ್ಮಮ್ಮಣ್ಣಿ



ಯವರ ಪತಿ. ಮದರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಶಿಕ್ಷಣ ಮುಗಿಸಿದ ಇವರು 1894ರಲ್ಲಿ ಪ್ರೊಬೇಷನರಿ ಅಸಿಸ್ಟೆಂಟ್ ಕಮಿಷನರಾಗಿ ನಿಯುಕ್ತರಾದರು. 1895-99ರಲ್ಲಿ ರಾಜ ಪ್ರತಿನಿಧಿಗಳಾಗಿದ್ದ ಮಹಾರಾಣಿಯವರ ಆಪ್ತ ಕಾರ್ಯದರ್ಶಿಗಳಾಗಿದ್ದರು. 1899-1900ರಲ್ಲಿ ಸ್ಪೆಷಲ್ ಅಸಿಸ್ಟೆಂಟ್ ಕಮಿಷನರ್ ಪದವಿ ಪಡೆದು 1901-04ರಲ್ಲಿ ಸ್ಪೆಷಲ್ ಸಬ್ ಡಿವಿಶನ್ ಆಫೀಸರರಾಗಿ 1904ರಲ್ಲಿ ಡೆಪ್ಯುಟಿಕಮಿಷನರಾಗಿ ನಿಯುಕ್ತ ರಾದರು. 1913ರಲ್ಲಿ ಕೌನ್ಸಿಲ್ ಸದಸ್ಯರಾದರು. 1914ರಲ್ಲಿ ಬ್ರಿಟಿಷ್ ಸರ್ಕಾರದಿಂದ ಸಿ.ಎಸ್.ಐ. ಪ್ರಶಸ್ತಿ ಪಡೆದರು. 1917ರಲ್ಲಿ ಜಪಾನಿಗೆ ತೆರಳಿ ಅಲ್ಲಿಯ ಆಡಳಿತ, ಉದ್ಯಮ ವ್ಯವಸ್ಥೆ, ಸಂಸ್ಕೃತಿ ವೈಶಿಷ್ಟ್ಯ ಮುಂತಾದ ಅಂಶಗಳನ್ನು ತಿಳಿದುಕೊಂಡು ಬಂದರು.

ವಿಶ್ವೇಶ್ವರಯ್ಯನವರ ಅನಂತರ ಇವರು ದಿವಾನರಾದರು (1918). ಒಂದನೆಯ ಮಹಾಯುದ್ಧ ಆಗ ತಾನೆ ಮುಗಿದು ದೇಶದ ಆರ್ಥಿಕ ಸ್ಥಿತಿ ಅಸ್ತವ್ಯಸ್ತವಾಗಿದ್ದರೂ ಇವರು ಸಂಸ್ಥಾನದಲ್ಲಿ ಹಲವಾರು ಸುಧಾರಣೆಗಳನ್ನು ಕೈಗೊಂಡರು. ಆರ್ಥಿಕ ಸಲಹಾ ಸಮಿತಿಯನ್ನು (ಎಕನಾಮಿಕ್ ಕಮಿಟಿ) ಪುನರ್ರಚಿಸಿ, ಅದು ಆಡಳಿತದ ಶಾಶ್ವತ ಅಂಗವಾಗಿ ಮುಂದುವರಿಯುವಂತೆ ಮಾಡಿದರು (1919-20). ನ್ಯಾಯವಿಧಾಯಕ ಸಭೆಯನ್ನು (ಲೆಜಿಸ್ಲೆಟಿವ್ ಕೌನ್ಸಿಲ್) ವಿಸ್ತರಿಸಿ, ಅದಕ್ಕೆ ಪ್ರತಿಯೊಂದು ಜಿಲ್ಲೆಯಿಂದ ಒಬ್ಬೊಬ್ಬ ಪ್ರತಿನಿಧಿಯನ್ನು ಆರಿಸುವ ವ್ಯವಸ್ಥೆಯನ್ನು ಜಾರಿಗೆ ತಂದರು. ಸಂಸ್ಥಾನದಲ್ಲಿ ಪ್ರೌಢಶಾಲಾ ಮಟ್ಟಕ್ಕಿಂತ ಕೆಳಗಿನ ತರಗತಿಗಳ ಪಾಠಶುಲ್ಕವನ್ನು ರದ್ದುಗೊಳಿಸಿದರು. ಈ ಕಾಲಕ್ಕೆ ಆಹಾರ ಪರಿಸ್ಥಿತಿ ದುಸ್ಸಹವಾಗಿದ್ದುದರಿಂದ ಆಹಾರಧಾನ್ಯಗಳ ರಫ್ತನ್ನು ನಿಲ್ಲಿಸಿ ಆಮದನ್ನು ಹೆಚ್ಚು ಮಾಡಿ ಸಹಕಾರ ಸಂಘಗಳ ಮೂಲಕ ಆಹಾರ ಧಾನ್ಯಗಳ ಮಾರಾಟಕ್ಕೆ ವ್ಯವಸ್ಥೆ ಮಾಡಿದರು. ಏಪ್ರಿಲ್ 1919ರಲ್ಲಿ ಭದ್ರಾವತಿಯ ಕಬ್ಬಿಣ ಕಾರ್ಖಾನೆಯ ಅನಾವರಣೋತ್ಸವವನ್ನು ಜರುಗಿಸಿದರು. ಗಣಿ ಕಾರ್ಯಗಳ ಅಧೀಕ್ಷಕ ಹುದ್ದೆ (ಸೂಪರಿಂಟೆಂಡೆಂಟ್ ಆಫ್ ಮೈನಿಂಗ್ ಆಪರೇಷನ್ಸ್) ಇವರ ಕಾಲದಲ್ಲಿ ಸ್ಥಾಪಿತವಾಯಿತಲ್ಲದೆ ಆಡಳಿತ ಯಂತ್ರದಲ್ಲಿ ಹಲವು ಬದಲಾವಣೆ ಗಳನ್ನು ಅಳವಡಿಸಿದರು. ಹಿಂದುಳಿದ ಪಂಗಡಗಳಿಗೆ ಸರ್ಕಾರಿ ಸೇವೆಗಳಲ್ಲಿ ಯಥೋಚಿತ ಪ್ರಾತಿನಿಧ್ಯ ವಿರಬೇಕೆಂದು 1920-21ರಲ್ಲಿ ಆದೇಶ ಹೊರಡಿಸಿದರು. ನಿಮ್ನವರ್ಗಗಳ ಸ್ಥಿತಿಗಳ ಮೇಲ್ಪಾಟಿಗೂ ಗಮನ ನೀಡಿದರು. 1921ರಲ್ಲಿ ಚಿಕ್ಕಜಾಜೂರಿನಿಂದ ಚಿತ್ರದುರ್ಗದವರೆಗಿನ ಸು.33ಕಿಮೀ ದೂರಕ್ಕೆ ಮೀಟರ್ ಗೇಜ್ ರೈಲುಮಾರ್ಗವನ್ನು ಹಾಕಿಸಿದರು. ಆರೋಗ್ಯದ ದೆಸೆಯಿಂದ 1922ರಲ್ಲಿ ವಿಶ್ರಾಂತರಾಗಿದ್ದರು. ಇವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆಗಿದ್ದರು (1920-23). ಇವರು 1923 ಅಕ್ಟೋಬರ್ 2ರಂದು ನಿಧನರಾದರು. (ಎಂ.ಕೆ.ಬಿ.)

**ಕಾಕನಕೋಟೆ :** ಮೈಸೂರು ಜಿಲ್ಲೆ ಹೆಗ್ಗಡದೇವನ ಕೋಟೆ ತಾಲ್ಲೂಕಿಗೆ ಸೇರಿದ ಆನೆಗಳನ್ನು ಸೆರೆಹಿಡಿಯುವ ಖೆಡ್ಡಾ ಪ್ರಸಿದ್ಧವಾಗಿದ್ದ ಸ್ಥಳ. ಮೈಸೂರಿಗೆ 77ಕಿಮೀ ದೂರದಲ್ಲಿದೆ. ದಟ್ಟವಾದ ಕಾಡಿನಿಂದ ಕೂಡಿದ ಈ ಪ್ರದೇಶದಲ್ಲಿ ತೇಗ, ಹೊನ್ನೆ, ನಂದಿ, ಬೀಟೆ ಮುಂತಾದ ಮರಗಳು ಹುಲುಸಾಗಿ ಬೆಳೆದಿವೆ. ಇಲ್ಲಿ ತೇಗದ ಮರಗಳನ್ನು ಬೆಳೆಯುವ ಸರ್ಕಾರಿ ಪ್ಲಾಂಟೇಷನ್ನುಗಳಿವೆ.

ಕಾಕನಕೋಟೆಯ ಕಾಡು ಆನೆಗಳ ಬೀಡು. ಆನೆಗಳಿಂದ ಬೆಳೆಗಳಿಗೂ ಜನ ಜೀವನಕ್ಕೂ ಆಗಾಗ ತೊಂದರೆ ಆಗುವುದು ಸಾಮಾನ್ಯ. 1873-1971ರ ವರೆಗೆ ನಡೆಸಿದ 36 ಖೆಡ್ಡಾಗಳಲ್ಲಿ (ನೋಡಿ: ಖೆಡ್ಡಾ) 24ನ್ನು ಕಾಕನಕೋಟೆ ಪ್ರದೇಶದಲ್ಲೇ ನಡೆಸಲಾಯಿತು. 1968ರಲ್ಲಿ ಹಿಡಿಯಲಾದ ಆನೆಗಳ ಸಂಖ್ಯೆ 88; 1971ರಲ್ಲಿ 41. ಕಪಿಲಾ ಯೋಜನೆಯಿಂದಾಗಿ ಈ ಪ್ರದೇಶ ಈಗ ನೀರಿನಲ್ಲಿ ಮುಳುಗಡೆಯಾಗಿದೆ. *

**ಕಾಕುತ್ಸ್ಥವರ್ಮ :** ಬನವಾಸಿಯ ಕದಂಬ ವಂಶದ ರಾಜ (ಸು.405-430) ರಘುವಿನ ತಮ್ಮ ಮತ್ತು ಉತ್ತರಾಧಿಕಾರಿ.

ತಾಳಗುಂದ ಮತ್ತು ಹಲ್ಮಿಡಿಯ ಶಿಲಾಶಾಸನಗಳು ಹಾಗೂ ಅನೇಕ ಕದಂಬ ತಾಮ್ರಪಟಗಳು ಇವನ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ. ಕಾಕುತ್ಸ್ಥವರ್ಮ ತನ್ನ ಅಣ್ಣನ ಆಳಿಕೆಯ ಕಾಲದಲ್ಲೇ ಹಲಸಿಯಲ್ಲಿ ಯುವರಾಜನಾಗಿ ಆಳುತ್ತಿದ್ದ. ಇವನು ಪಟ್ಟಕ್ಕೆ ಬಂದ ಅನಂತರ ಕದಂಬ ರಾಜ್ಯ ಉಚ್ಛ್ರಾಯ ಸ್ಥಿತಿಗೇರಿತು. ಪಲ್ಲವರೊಡನೆ ಯುದ್ಧಮಾಡಿ ಕದಂಬ ರಾಜ್ಯದ ಉನ್ನತಿಗೆ ಕಾರಣನಾದ. ಇವನು ಯುದ್ಧದಲ್ಲಿ ನಿಷ್ಣಾತನಾಗಿದ್ದಂತೆಯೂ ದೀನಾನಾಥರಿಗೆ ಸಹಾಯಮಾಡಿ ಪ್ರಜೆಗಳನ್ನು ರಕ್ಷಿಸಿ ಜನಪ್ರಿಯನಾಗಿದ್ದಂತೆಯೂ ದೇಶ ಶಾಂತಿ ಸುಭಿಕ್ಷದಿಂದ ಕೂಡಿದ್ದು ಜನ ಇವನ ರಾಜ್ಯದ ನೆರಳಿಗೆ ಬಂದು ಸುಖವಾಗಿದ್ದರೆಂದೂ ಶಾಸನಗಳು ವರ್ಣಿಸಿವೆ. ಈತ ತನ್ನ ಹಲವು ಪುತ್ರಿಯರನ್ನು ಗುಪ್ತರೇ ಮೊದಲಾದ ನಾನಾ ರಾಜಕುಟುಂಬಗಳಿಗೆ ಲಗ್ನಮಾಡಿಕೊಟ್ಟು ಅವರ ಸ್ನೇಹವನ್ನು ಗಳಿಸಿದ್ದಲ್ಲದೆ ಕದಂಬವಂಶದ ಸ್ಥಾನಮಾನವನ್ನೂ ಹೆಚ್ಚಿಸಿದ. ಪಾಟಲಿಪುತ್ರದಲ್ಲಿ ಆಳುತ್ತಿದ್ದ ಕುಮಾರಗುಪ್ತ ಕಾಕುತ್ಸ್ಥನ ಸಮಕಾಲೀನನಾಗಿದ್ದು ಕಾಕುತ್ಸ್ಥನ ಮಗಳನ್ನು ಕುಮಾರಗುಪ್ತನ ಮಗ

ಸ್ಕಂದಗುಪ್ತ ಮದುವೆಯಾಗಿದ್ದನೆಂದು ಊಹಿಸಲಾಗಿದೆ. ವಾಕಾಟಕ ಅರಸು ನರೇಂದ್ರಸೇನ ಕುಂತಲೇಶ್ವರನ ಮಗಳಾದ ಅಜ್ಝಿತ ಭಟ್ಟಾರಿಕಾಳನ್ನು ಮದುವೆಯಾಗಿದ್ದಂತೆ ಬೇರೆಯ ಆಧಾರಗಳಿಂದ ತಿಳಿಯುವುದರಿಂದಲೂ ನರೇಂದ್ರಸೇನ ಕಾಕುತ್ಸ್ಥನ ಸಮಕಾಲೀನನಾಗಿದ್ದರಿಂದಲೂ ಆ ಅಜ್ಝಿತ ಭಟ್ಟಾರಿಕಾ ಸಹ ಕಾಕುತ್ಸ್ಥನ ಮಗಳಾಗಿರಬಹುದು. ಗಂಗವಂಶದ ಅವಿನೀತನನ್ನು ಕದಂಬ ಕೃಷ್ಣವರ್ಮನ ಪ್ರಿಯ ಭಾಗಿನೀಯನೆಂದು ಗಂಗ ಶಾಸನಗಳು ಹೇಳುತ್ತವೆಯಾಗಿ ಕಾಕುತ್ಸ್ಥನ ಇನ್ನೊಬ್ಬ ಮಗಳನ್ನು ಗಂಗ ಅವಿನೀತನ ತಂದೆ 3ನೆಯ ಮಾಧವ ಮದುವೆಯಾಗಿರಬೇಕು. ಬಟರಿ ವಂಶದ ಪಶುಪತಿ ಎಂಬುವನು ಕಾಕುತ್ಸ್ಥನ ಇನ್ನೊಬ್ಬ ಅಳಿಯ.

ಶಾಂತಿವರ್ಮ ಮತ್ತು ಒಂದನೆಯ ಕೃಷ್ಣವರ್ಮ ಕಾಕುತ್ಸ್ಥನ ಮಕ್ಕಳು. ಕಾಕುತ್ಸ್ಥನ ಮರಣಾನಂತರ ಕದಂಬ ರಾಜ್ಯ ಇಬ್ಭಾಗವಾಯಿತು. ಶಾಂತಿವರ್ಮ ಬನವಾಸಿಯಿಂದಲೂ ಕೃಷ್ಣವರ್ಮ ತ್ರಿಪರ್ವತದಿಂದಲೂ ಆಳಲಾರಂಭಿಸಿದರು. *

**ಕಾಖಂಡಕಿ :** ಬಿಜಾಪುರ ಜಿಲ್ಲೆ ಬಿಜಾಪುರ ತಾಲ್ಲೂಕಿನ ಒಂದು ಗ್ರಾಮ. ಬಿಜಾಪುರದ ದಕ್ಷಿಣಕ್ಕೆ ಸು.35ಕಿಮೀ ದೂರದಲ್ಲಿದೆ. ಇಲ್ಲಿ ಸಂಗಮೇಶ್ವರ, ಮಲ್ಲಿಕಾರ್ಜುನ ಮತ್ತು ಕರವೀರಭದ್ರ ಎಂಬ ಮೂರು ಚಿಕ್ಕ ದೇವಸ್ಥಾನಗಳಿವೆ. ಊರಿನ ವಾಯವ್ಯ ದಿಕ್ಕಿನಲ್ಲಿ ಒಂದು ಮಸೀದಿ ಇದೆ. ಮಹಿಪತಿದಾಸರು (ನೋಡಿ) ಈ ಗ್ರಾಮದವರು. ಇವರ ದೇವಾಲಯ ಸಹ ಇಲ್ಲಿದೆ.

ಈ ಗ್ರಾಮದ ಸಮೀಪದಲ್ಲಿ ಹರಳೇಶ್ವರ ಕ್ಷೇತ್ರವಿದೆ. ಇಲ್ಲಿರುವ ಶಿವಲಿಂಗ ಪ್ರಸಿದ್ಧ ಶರಣ ಹರಳಯ್ಯನ ನೆನಪಿಗಾಗಿ 12ನೆಯ ಶತಮಾನದಲ್ಲಿ ಸ್ಥಾಪಿತವಾದುದೆಂಬ ನಂಬಿಕೆ ಇದೆ. ಮತ್ತೊಬ್ಬ ಶರಣ ಪರಮಯ್ಯನ ಹೆಸರಿನಲ್ಲಿ ಒಂದು ಕಲ್ಯಾಣಿ ಇದೆ. ಇಲ್ಲಿ ಒಂದು ವೀರಶೈವಮಠ ಸಹ ಇದೆ. (ಎಚ್.ಆರ್.ಡಿ.)

**ಕಾಗದದ ಉದ್ಯಮ :** ಕಾಗದ ತಯಾರಿಕೆ ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ನೆಲೆಗೊಂಡಿತ್ತು. ಸ್ವಿಟ್ಸರ್ಲೆಂಡಿನ ಡಾ.ಸ್ಮಿಡ್್ತರವರ ಪ್ರಕಾರ ಕಾಗದ ತಯಾರಿಕೆ ಮೊದಲಾದುದು ಭಾರತದಲ್ಲೇ. ಕರ್ನಾಟಕದಲ್ಲೂ ಸ್ವಲ್ಪಮಟ್ಟಿಗೆ ಇದು ಗೃಹಕೈಗಾರಿಕೆಯಾಗಿ ಇದ್ದಿರಬೇಕು.

ಮರದ ತೊಗಟೆ, ಹುಲ್ಲು ಮುಂತಾದ ಕಚ್ಚಾವಸ್ತುಗಳಿಂದ ಪ್ರಾರಂಭವಾದ ಕಾಗದದ ಉದ್ಯಮ ಕ್ರಮೇಣ ಹತ್ತಿ ಮತ್ತು ಹತ್ತಿಬಟ್ಟೆ ಚಿಂದಿಗಳ ಉಪಯೋಗದೊಡನೆ ಇಲ್ಲಿ ಚೆನ್ನಾಗಿ ಬೇರೂರಿತು. ಈ ಕಚ್ಚಾವಸ್ತುಗಳ ಸರಬರಾಜು ಮಿತವಾಗಿದ್ದು, ಕಾಗದದ ಕೈಗಾರಿಕೆಗೆ ಒಂದು ನಿಗದಿ ಇತ್ತು. ಡೆಹ್ರಾಡೂನಿನ ಅರಣ್ಯ ಸಂಶೋಧನ ಸಂಸ್ಥೆಯ ಸಂಶೋಧನೆಯಿಂದ ಕಾಗದದ ತಯಾರಿಕೆಗೆ ಬೊಂಬು ಒಳ್ಳೆಯ ಕಚ್ಚಾವಸ್ತುವಾಗಬಲ್ಲುದೆಂದು 1912ರ ವೇಳೆಗೆ ಖಚಿತವಾಯಿತು. ಈ ವೇಳೆಗೆ ಮೈಸೂರಿನ ದಿವಾನರಾಗಿದ್ದ ವಿಶ್ವೇಶ್ವರಯ್ಯನವರು ಈ ವಿಷಯದಲ್ಲಿ ಆಸಕ್ತಿ ವಹಿಸಿದರು. ಮುಂಬಯಿಯ ಅಯ್ಯರ್ ಮತ್ತು ಬಾಲಕೃಷ್ಣರವರ ನೇತೃತ್ವದಲ್ಲಿ ಹಲವು ಮೂಲಭೂತ ಅಧ್ಯಯನಗಳು ನಡೆದವು. ಅನಂತರ ಮಿರ್ಜಾ ಇಸ್ಮಾಯಿಲರು ಕರ್ನಾಟಕದ ಮೊಟ್ಟಮೊದಲ ಕಾಗದ ಕಾರ್ಖಾನೆಯಾದ ಭದ್ರಾವತಿಯ ಮೈಸೂರು ಪೇಪರ್ ಮಿಲ್ಸ್ ಸಂಸ್ಥೆಯನ್ನು 1936ರಲ್ಲಿ ಆರಂಭಿಸಿದರು. ಸರ್ಕಾರ ಮತ್ತು ಖಾಸಗಿ ಬಂಡವಾಳದೊಡನೆ ಪ್ರಾರಂಭವಾದ ಈ ಸಂಸ್ಥೆ ವರ್ಷಕ್ಕೆ 4000 ಟನ್ ಉತ್ಪಾದನಾ ಸಾಮರ್ಥ್ಯವುಳ್ಳದ್ದಾಗಿತ್ತು. ಕನ್ನಡ ನಾಡಿನ ಕಾಗದದ ಬೇಡಿಕೆ ಕಡಿಮೆಯಿದ್ದುದರಿಂದ ಹೆಚ್ಚು ಭಾಗ ತಮಿಳುನಾಡಿಗೆ ರಫ್ತಾಗುತ್ತಿತ್ತು. ಇದೇ ಕಾಲದಲ್ಲಿ ಗ್ರಾಮೋದ್ಯೋಗದ ಬೆಳವಣಿಗೆಯ ಅಂಗವಾಗಿ ಮೈಸೂರು ಸರ್ಕಾರ ಬದನವಾಳು ಖಾದಿಕೇಂದ್ರದಲ್ಲಿ ಕೈಯಲ್ಲಿ ಕಾಗದವನ್ನು ತಯಾರಿಸಲೂ ಆರಂಭಿಸಿತ್ತು. ಅನಂತರ ಮುಂಬಯಿ ಕರ್ನಾಟಕದಲ್ಲಿ ಬೊಂಬನ್ನು ಕಚ್ಚಾವಸ್ತುವಾಗಿ ಬಳಸಿ ಕಾಗದ ತಯಾರಿಸುವ ಉದ್ದೇಶದಿಂದ ಕರ್ನಾಟಕ ಪೇಪರ್ ಮಿಲ್ಸ್ ಎಂಬ ಸಂಸ್ಥೆಯನ್ನು ಸ್ಥಾಪಿಸಲು ಪ್ರಯತ್ನ ನಡೆದು, 1956-58ರ ವೇಳೆಗೆ ಉತ್ತರ ಕನ್ನಡ ಜಿಲ್ಲೆ ದಾಂಡೇಲಿಯಲ್ಲಿ ವೆಸ್ಟ್ ಕೋಸ್ಟ್ ಪೇಪರ್ ಮಿಲ್ಸ್ ಸ್ಥಾಪಿತವಾಯಿತು. ಇದೇ ಸಮಯದಲ್ಲಿ ಕೊಡಗು, ಮೈಸೂರು, ಹಾಸನ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಕಾಗದ ಕಾರ್ಖಾನೆಗಳನ್ನು ಸ್ಥಾಪಿಸಲು ಪ್ರಯತ್ನಗಳು ನಡೆದುವು. ಸು.1954ರಲ್ಲಿ ನಂಜನಗೂಡಿನ ಕಾರ್ಖಾನೆ ಅಸ್ತಿತ್ವಕ್ಕೆ ಬಂತು.

ಸಕ್ಕರೆ ಕಾರ್ಖಾನೆಗಳಲ್ಲಿ ದೊರೆಯುವ ಕಬ್ಬಿನ ಸಿಪ್ಪೆಯನ್ನು ಕಚ್ಚಾ ವಸ್ತುವಾಗಿ ಬಳಸಿ ಕಾಗದ ತಯಾರಿಸುವ ಉದ್ದಿಶ್ಯವನ್ನು ಇಟ್ಟುಕೊಂಡು ಮಂಡ್ಯ ನ್ಯಾಷನಲ್ ಪೇಪರ್ ಮಿಲ್ಸ್ ಎಂಬ ಕಾರ್ಖಾನೆ ಮೈಸೂರಿನ ಬಳಿ ಬೆಳಗೊಳದಲ್ಲಿ 1960ರಲ್ಲಿ ಸ್ಥಾಪಿತವಾಯಿತು. ಆದರೆ ಈ ಕಾರ್ಖಾನೆ ಬೊಂಬನ್ನೇ ಮೂಲ ಕಚ್ಚಾವಸ್ತುವಾಗಿ ಬಳಸುವ ಕಾರ್ಖಾನೆಯಾಗಿ ಪರಿವರ್ತನೆಗೊಂಡು ಅನೇಕ ವರ್ಷಗಳ ಕಾಲ ನಡೆಯಿತು. ಈಗ ಉತ್ಪಾದನೆ ಸ್ಥಗಿತಗೊಂಡಿದೆ.

ಬೊಂಬನ್ನಷ್ಟೇ ಅಲ್ಲದೆ, ಬಾಳೆನಾರು, ಹಳೆಯ ಗೋಣಿನಾರು, ನೆಲ್ಲುಹುಲ್ಲು (ಬತ್ತದ ಹುಲ್ಲು), ಹಳೆಯ ಕಾಗದಗಳನ್ನು ಉಪಯೋಗಿಸಿ ಕಾಗದ ಅಥವಾ ರಟ್ಟನ್ನು ತಯಾರಿಸುವ ಅನೇಕ ಪುಟ್ಟ ಕಾರ್ಖಾನೆಗಳು ಅಸ್ತಿತ್ವದಲ್ಲಿವೆ.

ಅರಣ್ಯಗಳು ಕುಗ್ಗುತ್ತಿದ್ದು ಈ ಎಲ್ಲ ಕಾರ್ಖಾನೆಗಳೂ ತಮ್ಮ ಉತ್ಪಾದನಾ ಸಾಮರ್ಥ್ಯಗಳನ್ನು ಹೆಚ್ಚುಹೆಚ್ಚಾಗಿ ಹೆಚ್ಚಿಸುತ್ತಿರುವುದರಿಂದ ಬೊಂಬಿನ ಬೇಡಿಕೆ ಹೆಚ್ಚುತ್ತಿದೆ. ಇಷ್ಟನ್ನೂ ಮತ್ತು ಮುಂದೆ ಬರುವ ಬೊಂಬಿನ ಬೇಡಿಕೆಗಳನ್ನೂ ಪೂರೈಸಲು ನಮ್ಮ ಅರಣ್ಯಗಳು ಅಸಮರ್ಥವಾಗುತ್ತಿವೆ. ಹೀಗಾಗಿ ಕರ್ಪೂರದ ಮರವನ್ನು ಪಲ್ಪಿಗಾಗಿ ಉಪಯೋಗಿಸಲು ಹೆಚ್ಚು ಹೆಚ್ಚು ಯಶಸ್ವೀ ಪ್ರಯತ್ನಗಳು ನಡೆಯುತ್ತಿವೆ. ಕಾಗದ ತಯಾರಿಕೆಗೆ ಬೇಕಾಗುವ ಮತ್ತೆಲ್ಲ ಕಚ್ಚಾ ವಸ್ತುಗಳೂ ಕನ್ನಡ ನಾಡಿನಲ್ಲೇ ದೊರೆಯುತ್ತವೆ.

ಕಾಗದ ಉದ್ಯಮದಲ್ಲಿ ಅಖಿಲ ಭಾರತ ಉತ್ಪಾದನಾ ಶಕ್ತಿ 9,00,000 ಟನ್. ಕರ್ನಾಟಕದ ಕಾರ್ಖಾನೆಗಳ ಒಟ್ಟು ಉತ್ಪಾದನೆ 1,02,000 ಟನ್. ಕರ್ನಾಟಕದಲ್ಲಿ ಉತ್ತಮ ವಿದ್ಯುತ್ ಮತ್ತು ನೀರಿನ ಸೌಲಭ್ಯ ವಿಶಾಲವಾದ ಬಿದಿರಿನ ಕಾಡುಗಳು ಇರುವುದಲ್ಲದೆ, ಕಬ್ಬಿನ ಸಿಪ್ಪೆ, ನೆಲ್ಲು ಹುಲ್ಲು ಇತ್ಯಾದಿಗಳೂ ಸಾಕಷ್ಟು ಪ್ರಮಾಣದಲ್ಲಿ ದೊರಕುತ್ತವಾಗಿ ಈ ಉದ್ಯಮ ಮತ್ತಷ್ಟು ಬೆಳೆಯುವ ಸಾಧ್ಯತೆ ಇದೆ. (ಟಿ.ಕೆ.ಆರ್.ಎಸ್.)

**ಕಾಗವಾಡ :** ಬೆಳಗಾಂವಿ ಜಿಲ್ಲೆ ಅಥಣಿ ತಾಲ್ಲೂಕಿನ ಒಂದು ಗ್ರಾಮ. ಅಥಣಿಯಿಂದ 30ಕಿಮೀ ದೂರದಲ್ಲಿದೆ. ಸ್ಥಳೀಯ ಜೈನದೇವ ಕಣ್ಣೋಡರಾಯನಿಂದಾಗಿ ಈ ಊರಿಗೆ ಕಾಗವಾಡ ಎಂಬ ಹೆಸರು ಬಂತೆಂದು ಪ್ರತೀತಿ. ಆದರೆ ವಾಸ್ತವದಲ್ಲಿ ಇಲ್ಲಿಯ ಕೆಂಪುಮಣ್ಣು (ಕಾಗ ಅಥವಾ ಮಸಾರಿ) ಈ ಹೆಸರಿಗೆ ಕಾರಣವಾಗಿರುವಂತಿದೆ. ಇಲ್ಲಿ ಕಗ್ಗೋಡರಾಯ ಗಣಪತಿ, ಮಾರುತಿ ಮತ್ತು ಸಂತೂಬಾಯಿ ದೇವಾಲಯಗಳಿವೆ. ಕಗ್ಗೋಡರಾಯ ಜಿನಾಲಯದ ಮುಖ್ಯಮಂಟಪ ಮತ್ತು ಗರ್ಭಗೃಹಗಳು ಈಗ ಜೀರ್ಣೋದ್ಧಾರಗೊಂಡಿವೆ. ಆಲಯದೊಳಗೆ ಕಗ್ಗೋಡರಾಯ ಮತ್ತು ಅವನ ಸಂಗಾತಿ ಕಾಳಮ್ಮನ ಮೂರ್ತಿಗಳಿವೆ. ಕೆಲವರ ಪ್ರಕಾರ ಇವು ಬ್ರಹ್ಮನಾಥ ಮತ್ತು ಪದ್ಮಾವತಿಯ ಮೂರ್ತಿಗಳು. ಇಲ್ಲಿ ಕೆಲವು ಕಂಚಿನ ಜೈನ ಮೂರ್ತಿಗಳೂ ಇವೆ. ಗರ್ಭಗೃಹದ ಎಡಬದಿಯಲ್ಲಿ ಒಂದು ಗವಿಯಿದ್ದು, ಅದು ನೆಲಮಾಳಿಗೆಯಲ್ಲಿರುವ ಕೋಣೆಯ ಕಡೆಗೆ ತೆರೆದಿದೆ. 5ಮೀ ಕೆಳಗೆ ಇಳಿದ ಅನಂತರ ಮತ್ತೊಂದು ಗರ್ಭಗೃಹದ ಎದುರಿಗೆ ಇರುವ ಚಿಕ್ಕಅಂಕಣವನ್ನು ತಲುಪುತ್ತದೆ. ಇದು ಮತ್ತೊಂದು ಬಸದಿಯ ನವರಂಗವಾಗಿದೆ. ಇಲ್ಲಿ ಜೀರ್ಣೋದ್ಧಾರ ಮಾಡಿದ ಪಾಣೀಪೀಠದ ಮೇಲೆ ಪಾರ್ಶ್ವನಾಥ ಮೂರ್ತಿಯನ್ನು ಸ್ಥಾಪಿಸಲಾಗಿದೆ. ಇನ್ನೊಂದು ಗರ್ಭಗೃಹದಲ್ಲಿ ಸು.15ಮೀ ಎತ್ತರವಿರುವ ಶಾಂತಿನಾಥ'ನ ಮೂರ್ತಿ ಇದೆ. ಈ ಮೂರ್ತಿಯನ್ನು ಜೀರ್ಣೋದ್ಧಾರಗೊಂಡ ಪಾಣೀಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ನವರಂಗದಲ್ಲಿ ಚಾಳುಕ್ಯ ಶೈಲಿಯ ಕಂಬಗಳಿವೆ. ನವರಂಗದ ಬಲಗೋಡೆಯ ಮೇಲೆ 1314ರ ಒಂದು ನಿಷಧಿ ಶಾಸನವಿದೆ.

ಇಲ್ಲಿಯ ಇನ್ನೊಬ್ಬ ದೇವತೆ ಸಂತೂಬಾಯಿ. ಈಕೆಯನ್ನು ಕಗ್ಗೋಡರಾಯನ ಸೋದರಿ ಎಂದು ಕರೆಯಲಾಗುತ್ತದೆ. ಹೆಂಚಿನ ಹೊದಿಕೆಯುಳ್ಳ ಗರ್ಭಗೃಹದಲ್ಲಿ ಕುಳಿತ ಭಂಗಿಯ ದೇವಿಯ ಮೂರ್ತಿ

ಇದೆ. ಇದನ್ನು ತಾಯಂದಿರು ತಮ್ಮ ಚೊಚ್ಚಲು ಮಕ್ಕಳೊಂದಿಗೆ ಪೂಜಿಸುವರು. ಪ್ರತಿವರ್ಷ ಮಾಘಮಾಸದಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ. ಈ ಊರಿನಲ್ಲಿ ಇಂಚಗೇರಿ ಮಠದ ಶಾಖೆಯಿದ್ದು, ಅದರಲ್ಲಿ ಬ್ರಹ್ಮಾನಂದ ಮಹಾರಾಜರ ಸಮಾಧಿಯಿದೆ. ಸಂಬಂಧಿಕರಾದ ಮೀರಜ್ ಸಂಸ್ಥಾನಿಕರ ಪಟವರ್ಧನರ ವಾಡಾದಲ್ಲಿ ಮಾರುತಿಯ ಚಿಕ್ಕ ಮಂದಿರವಿದೆ. ಪಟವರ್ಧನರ ಜಹಗೀರು 1857ರಲ್ಲಿ ಬ್ರಿಟಿಷರಿಂದ ರದ್ದುಗೊಳಿಸಲ್ಪಟ್ಟಿತು. (ಆರ್.ಐ.)

**ಕಾಗಿಣಾ :** ಗುಲ್ಬರ್ಗ ಜಿಲ್ಲೆಯ ಒಂದು ನದಿ. ಆಂಧ್ರ ಪ್ರದೇಶದ ಕೋಹಿರ್ ಎಂಬಲ್ಲಿ ಹುಟ್ಟುತ್ತದೆ. ಸೇಡಂ ತಾಲ್ಲೂಕಿನ ಈಶಾನ್ಯದ ಅಂಚಿನಲ್ಲಿ ಗುಲ್ಬರ್ಗ ಜಿಲ್ಲೆಯನ್ನು ಪ್ರವೇಶಿಸಿ ಹೈದರಾಬಾದ್-ವಾಡಿ ರೈಲುಮಾರ್ಗಕ್ಕೆ ಸಮಾನಾಂತರವಾಗಿ ಪಶ್ಚಿಮಾಭಿಮುಖವಾಗಿ ಹರಿದು ಚಿತ್ತಾಪುರ ತಾಲ್ಲೂಕನ್ನು ಪ್ರವೇಶಿಸಿ, ನೈಋತ್ಯಾಭಿಮುಖವಾಗಿ ಹರಿದು ಹುನಗುಂಟ ಗ್ರಾಮದ ಹತ್ತಿರ ಭೀಮಾನದಿಯನ್ನು ಸೇರುತ್ತದೆ. ಈ ಜಿಲ್ಲೆಯಲ್ಲಿ ನದಿಯ ಹರಿವಿನ ಒಟ್ಟು ಉದ್ದ 64ಕಿಮೀ. ಮುಲ್ಲಾಮಾರಿ, ಬೆಣ್ಣೆತೊರೆ ಮತ್ತು ಕಮಲಾವತಿ ಈ ನದಿಗೆ ಸೇರುವ ಮುಖ್ಯ ತೊರೆಗಳು. ಸೇಡಂ ಮತ್ತು ಚಿತ್ತಾಪುರ ಈ ನದಿಯ ಬಳಿ ಇರುವ ಮುಖ್ಯ ಊರುಗಳು. ಮಳಖೇಡ ಪುಣ್ಯಕ್ಷೇತ್ರ. ಗುಲ್ಬರ್ಗ-ಶಾಹಬಾದ-ವಾಡಿ ಮಾರ್ಗದಲ್ಲಿ ಶಾಹಬಾದದ ಸಮೀಪದಲ್ಲಿ ಕಾಗಿಣಾ ನದಿಗೆ ಸೇತುವೆ ಕಟ್ಟಲಾಗಿದೆ. ಈ ನದಿಗೆ ಯಡಹಳ್ಳಿ ಬಳಿ ಕಟ್ಟೆಯೊಂದನ್ನು ಕಟ್ಟಿ ಸೇಡಂ ಮತ್ತು ಚಿತ್ತಾಪುರ ತಾಲ್ಲೂಕುಗಳಲ್ಲಿ ಸು.20,000 ಎಕರೆಗಳಿಗೆ ನೀರು ಒದಗಿಸುವ ಯೋಜನೆ ಇದೆ. *

**ಕಾಗಿನೆಲೆ :** ಹಾವೇರಿ ಜಿಲ್ಲೆ ಬ್ಯಾಡಗಿ ತಾಲ್ಲೂಕಿನಲ್ಲಿ ಹಾವೇರಿಯಿಂದ ಸು.11ಕಿಮೀ ದೂರದಲ್ಲಿರುವ ಒಂದು ಹಳ್ಳಿ. ಕನಕದಾಸರ (ನೋಡಿ) ಆರಾಧ್ಯದೈವ ಆದಿಕೇಶವನ ನೆಲೆವೀಡು. ಆದಿಕೇಶವ, ಲಕ್ಷ್ಮೀನರಸಿಂಹ, ಕಾಳಹಸ್ತೀಶ್ವರ, ವೀರಭದ್ರ, ಸೋಮೇಶ್ವರ, ಬ್ರಹ್ಮೇಶ್ವರ, ಸಂಗಮೇಶ್ವರ, ಬಸವಣ್ಣ ಮತ್ತು ಆದಿಶಕ್ತಿ ಇವು ಇಲ್ಲಿರುವ ಮುಖ್ಯ ದೇವಾಲಯಗಳು. ಆದಿಕೇಶವ ಮತ್ತು ನರಸಿಂಹ ದೇವಾಲಯಗಳು ಒಂದೇ ಪ್ರಾಕಾರದೊಳಗೆ ಮಣ್ಣಿನ ಗೋಡೆಯಿಂದ ಸುತ್ತುವರಿದಿವೆ. 16ನೆಯ ಶತಮಾನದಲ್ಲಿ ಕನಕದಾಸರು ಆದಿಕೇಶವನ ಮೂರ್ತಿಯನ್ನು ಬಾಡಗ್ರಾಮದಿಂದ ತಂದು ಪ್ರತಿಷ್ಠಾಪಿಸಿದರೆಂದು ಹೇಳಲಾಗುತ್ತದೆ. ಈ ಮೂರ್ತಿ ಒಂದೂವರೆ ಅಡಿ ಎತ್ತರವಿದೆ. ಇಲ್ಲಿಯ ಕೆರೆಯ ದಂಡೆಯ ಮೇಲೆ ಕನಕದಾಸರ ಸಮಾಧಿ ಇದೆ. ಇಲ್ಲಿನ ದೇವಾಲಯಗಳಲ್ಲಿ ಕಲ್ಯಾಣದ ಚಾಳುಕ್ಯರ ಮತ್ತು ಸೇವುಣ ರಾಮಚಂದ್ರನ ಕಾಲದ ಶಾಸನಗಳು ದೊರಕಿವೆ.

14ನೆಯ ಶತಮಾನದಲ್ಲಿ ವಿಜಯನಗರದ ಅರಸ ಬುಕ್ಕನಿಂದ ಬಹಮನೀ ಸುಲ್ತಾನರು ಕಾಗಿನೆಲೆಯನ್ನು ವಶಪಡಿಸಿಕೊಂಡರು. ಅನಂತರ ಮತ್ತೆ ಇದು ವಿಜಯನಗರ ಅರಸರಿಗೇ ಸೇರಿದ್ದರಿಂದ ಕನಕದಾಸರು ಇದರ ಢಣಾಯಕರಾಗಿ ವಿಜಯನಗರದ ಮಾಂಡಲಿಕರಾಗಿದ್ದರು. ಮುಂದೆ ಬಿಜಾಪುರದ ಸುಲ್ತಾನ ಇದನ್ನು ವಶಪಡಿಸಿಕೊಂಡು (1573) ಬಂಕಾಪುರ ಪ್ರಾಂತ್ಯಕ್ಕೆ ಸೇರಿಸಿದನೆಂದು ಹೇಳಲಾಗಿದೆ. ಕಾಗಿನೆಲೆಯ ಪ್ರಕೃತಿ ಸೌಂದರ್ಯವನ್ನು ಆಂಡಯ್ಯ ಮತ್ತು ಕನಕದಾಸರು ಬಣ್ಣಿಸಿದ್ದಾರೆ. (ಎಂ.ಕೆ.ಬಿ.)

**ಕಾಗೋಡು ಸತ್ಯಾಗ್ರಹ :** ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕು ಕಾಗೋಡು ಗ್ರಾಮದಲ್ಲಿ ನಡೆದ ಗೇಣಿ ರೈತರ ಸತ್ಯಾಗ್ರಹ (1951). ದೇಶಕ್ಕೆ ಸ್ವಾತಂತ್ರ್ಯ ಬಂದಾಗ ರಾಜಕೀಯ ಅಧಿಕಾರ ಜನರಿಗೆ ಪ್ರಾಪ್ತವಾಗಿದ್ದರೂ ಆರ್ಥಿಕ ಶೋಷಣೆಯಿಂದ ಜನರು ಮುಕ್ತವಾಗಿರಲಿಲ್ಲ. ಗ್ರಾಮಾಂತರ ಪ್ರದೇಶಗಳಲ್ಲಿ ಜಮೀನ್ದಾರಿಕೆ ವ್ಯವಸ್ಥೆಯ ಮೂಲದಿಂದ ಬಂದ ಗೇಣಿ ಪದ್ಧತಿಯೂ ಅಂತಹ ಶೋಷಣೆಗೆ ಹೆಚ್ಚಿನ ಅವಕಾಶ ನೀಡಿತ್ತು. ಆಗ ಇಂಥ ವ್ಯವಸ್ಥೆಯ ವಿರುದ್ಧ ನಡೆದ ಈ ರೈತ ಹೋರಾಟ ಕರ್ನಾಟಕದ ರೈತ ಚಳವಳಿಯ ಇತಿಹಾಸದಲ್ಲಿ ಮೈಲಿಗಲ್ಲಾಗಿದೆ.

ಸಾಗರ ಪಟ್ಟಣದಿಂದ ಉತ್ತರದಿಕ್ಕಿಗೆ ಕೆಳದಿ-ಮಾಸೂರು ಮಾರ್ಗದಲ್ಲಿ ಸಾಗರದಿಂದ 15ಕಿಮೀ ದೂರದಲ್ಲಿ ವರದಾ ನದಿಯ ದಂಡೆಯ ಮೇಲಿರುವ ಕಾಗೋಡು ಮಲೆನಾಡಿನ ಒಂದು ಪುಟ್ಟ ಹಳ್ಳಿ. ಕಾಗೋಡು ಚಳವಳಿ ನಡೆದ ಕಾಲಕ್ಕೆ ಇಲ್ಲಿ ಒಟ್ಟು 50 ಮನೆಗಳಿದ್ದುವು. ಈಗ 232 ಕುಟುಂಬಗಳಿವೆ. ಅವುಗಳಲ್ಲಿ ದೀವರ ಕುಟುಂಬಗಳೆ ಹೆಚ್ಚು. ಉಳಿದಂತೆ ಹರಿಜನರು, ಮಡಿವಾಳರು, ಅಕ್ಕಸಾಲಿಗರು, ಲಿಂಗಾಯಿತರು ಮೊದಲಾದವರಿದ್ದರು. ಒಟ್ಟು ಜಮೀನಿನ ವಿಸ್ತೀರ್ಣ ಸು.891 ಎಕರೆ.

ಆಗಿನ ಮೈಸೂರು ರಾಜ್ಯದ ಮಲೆನಾಡು ಪ್ರಾಂತ್ಯದಲ್ಲಿ ಭೂ ಒಡೆತನದ ಹಕ್ಕು ಹಿಂದು ಶ್ರೇಣೀಕೃತ ಸಮಾಜದ ಮೇಲ್ವರ್ಗದವರ ಕೈಯಲ್ಲಿ ಹೆಚ್ಚಾಗಿತ್ತು. ಕೆಲವೇ ಜಮೀನ್ದಾರರ ಅಡಿಯಲ್ಲಿ ರೈತಾಪಿ ಗೇಣಿ ಒಕ್ಕಲುಗಳು ಇರುತ್ತಿದ್ದರು. ಅವರೆಲ್ಲ ಬಹುತೇಕ ಗೇಣಿದಾರರಾಗಿ ಮತ್ತು ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದರು. ಈ ದುಡಿಮೆ ಪೀಳಿಗೆಯಿಂದ ಪೀಳಿಗೆಗೆ ಸಾಗಿಬರುತ್ತಿತ್ತು. ಭೂ ಒಡೆಯರ ಮನೆಗಳಲ್ಲಿ ವರ್ಷದಲ್ಲಿ ಹಲವಾರು ದಿವಸ ಬಿಟ್ಟಿ ದುಡಿಮೆ ಮಾಡುವ ಪದ್ಧತಿಯೂ ಇತ್ತು. ರುಮಾಲು ಸುತ್ತಿಕೊಳ್ಳುವುದು, ಉದ್ದವಾಗಿ ಮೊಳಕಾಲ ಕೆಳಗಿನವರೆಗೆ ಪಂಚೆ ಉಡುವುದು, ಕಾಲಿಗೆ ಚಪ್ಪಲಿ ಹಾಕಿಕೊಳ್ಳುವುದು, ಒಡೆಯರ ಎದುರು ಛತ್ರಿ ಹಿಡಿದು ನಡೆಯುವುದು ಅಪರಾಧಗಳಾಗಿದ್ದುವು. ಒಡೆಯರು ಎದುರಾದಾಗ ಮಳೆ ಸುರಿಯುತ್ತಿದ್ದರೂ ಛತ್ರಿ ಮಡಿಚಿ ಹಿಡಿದು ಮಳೆಯಲ್ಲಿ ನೆನೆಯುತ್ತಲೇ ಮುಂದೆ ಹೋಗಬೇಕಾಗಿತ್ತು. ಒಡೆಯರು ಎದುರಾದಾಗ ಚಪ್ಪಲಿ ಕೈಯಲ್ಲಿ ಹಿಡಿದು ನಡುಬಗ್ಗಿಸಿ ನಮಸ್ಕರಿಸಿ ಮುಂದೆ ಹೋಗಬೇಕು. ತಪ್ಪಿದರೆ ಅದು ಅವಿಧೇಯ ವರ್ತನೆ ಎಂದು ಭಾವಿಸಲಾಗುತ್ತಿತ್ತು. ಅದಕ್ಕೆ ಶಿಕ್ಷೆ ಕಾದಿರುತ್ತಿತ್ತು. ಪ್ರತಿಯೊಬ್ಬ ಗೇಣಿದಾರನೂ ಭೂ ಮಾಲೀಕರ ಬಳಿ ವರ್ಷದಲ್ಲಿ 15-20 ದಿವಸ ಸಂಬಳವಿಲ್ಲದೆ ಬಿಟ್ಟಿ ಕೆಲಸ ಮಾಡಬೇಕಾಗಿತ್ತು.

ಮಲೆನಾಡಿನಲ್ಲಿ ಬತ್ತ ಮತ್ತು ಇತರ ಧಾನ್ಯಗಳನ್ನು ಅಳೆಯುವ ಸಾಧನವಾಗಿ ಕೊಳಗ ಎಂಬ ಮಾನಕವಿತ್ತು. ಒಂದು ಕೊಳಗಕ್ಕೆ ಮೂರು ಸೇರು ಎಂದು ಸರ್ಕಾರದ ಅಧಿಕೃತ ಅಳತೆ. ಆದರೆ ಕೆಲವು ಭೂಮಾಲೀಕರು ಗೇಣಿ ಬತ್ತ ಅಳೆಯಲು ಮೂರುವರೆ ಅಥವಾ ನಾಲ್ಕು ಸೇರುಗಳು ಹಿಡಿಯುವ ಕೊಳಗವನ್ನು ಮಾಡಿಸಿಟ್ಟುಕೊಂಡಿದ್ದರು. ತಮ್ಮ ಕೊಳಗದಲ್ಲೇ ಗೇಣಿ ಬತ್ತ ಅಳೆದುಕೊಡಬೇಕೆಂದು ರೈತರಿಗೆ ಕಡ್ಡಾಯ ಮಾಡುತ್ತಿದ್ದರು. ಅದಕ್ಕೆ ತಪ್ಪಿದರೆ ಜಮೀನು ಕಳೆದುಕೊಳ್ಳುವ ಅನಿಶ್ಚಿತತೆಯ ಬದುಕಿನ ಭಯದಿಂದಾಗಿ ರೈತರು ಯಾರೂ ಪ್ರತಿಭಟಿಸದೆ ಮೌನ ವಹಿಸಿದ್ದರು. ಇದಲ್ಲದೆ ಗೇಣಿ ರೈತ ಬತ್ತಕೊಡುವಾಗ ನಿಗದಿಪಡಿಸಿದ ಅಳತೆಯ ಬತ್ತವನ್ನು ಕೊಡುವುದಲ್ಲದೆ ಪ್ರತಿಯೊಂದು ಚೀಲಕ್ಕೆ ಹೆಚ್ಚು ಬತ್ತವೆಂದು ಒಂದು ಕೊಳಗವನ್ನು ಹೆಚ್ಚಾಗಿ ಕೊಡಬೇಕಾಗಿತ್ತು.

ರೈತ ಸಂಘಟನೆಯು ಸ್ವಾತಂತ್ರ್ಯ ಬರುವ ಸ್ವಲ್ಪ ಮೊದಲೇ ಒಂದು ನೆಲೆಯನ್ನು ಕಂಡುಕೊಂಡಿತ್ತು. ಕಾಂಗ್ರೆಸ್‌ನ ಪ್ರಮುಖರು ಮತ್ತು ಮುಂದೆ ಸಚಿವರಾಗಿ ಕೀರ್ತಿಪಡೆದ ಕಡಿದಾಳ್ ಮಂಜಪ್ಪನವರು (ನೋಡಿ) 1945ರಲ್ಲಿಯೇ ತೀರ್ಥಹಳ್ಳಿಯಲ್ಲಿ ಮಲೆನಾಡು ಗೇಣಿ ರೈತ ಸಂಘವನ್ನು ಸ್ಥಾಪಿಸಿದ್ದರು. ಕಡಿದಾಳರೂ ಒಂದು ಗೇಣೀ ಕುಟುಂಬ ಮೂಲದಿಂದಲೇ ಬಂದವರಾಗಿದ್ದು ಅವರು ಭೂಮಾಲೀಕರು ಮತ್ತು ಒಕ್ಕಲುಗಳ ನಡುವೆ ಸಂಧಾನ ಮಾರ್ಗದಲ್ಲಿ ಸಮಸ್ಯೆಗಳ ಪರಿಹಾರವಾಗಬೇಕೆಂದು ನಂಬಿದ್ದರು. ಸಾಗರ ತಾಲ್ಲೂಕಿನಲ್ಲಿಯೂ ಅದೇವರ್ಷ ಗೇಣಿ ರೈತರ ಸಂಘಟನೆ ರೂಪುತಳೆಯಿತು. ಸ್ವಾತಂತ್ರ್ಯ ಹೋರಾಟಗಾರ ಎಚ್.ಗಣಪತಿಯಪ್ಪ, ಮರತ್ತೂರಿನ ಡಿ.ಮೂಕಪ್ಪ, ಮನೆಘಟ್ಟ ಚೌಡಪ್ಪ, ಎಲಗಳಲೆ ಡಿ.ಆರ್.ಹುಚ್ಚಪ್ಪ, ಬರಸಿನ ದ್ಯಾವಪ್ಪ, ಕಾಗೋಡಿನ ಪವಾಜಿ ಬೀರನಾಯ್ಕ,ಮಂಡಗಳಲೆ ಹೊಸೂರು ರಾಮನಾಯ್ಕ ಮೊದಲಾದ ಮುಖಂಡರು ಈ ಸಂಘಟನೆಯಲ್ಲಿ ಪಾಲ್ಗೊಂಡಿದ್ದರು. ಗೇಣಿದಾರರ ಸಮುದಾಯದ ಬಹುಭಾಗವಾಗಿದ್ದ ದೀವರ ಜನಾಂಗದ ಹಿರಿಯರು ಈ ಸಂಸ್ಥೆಯ ಮುಂಚೂಣಿಯಲ್ಲಿದ್ದರು. ತಮ್ಮ ಹಕ್ಕು ಬಾಧ್ಯತೆಗಳ ಬಗ್ಗೆ ಗೇಣಿದಾರರಲ್ಲಿ ಅವರು ಜಾಗೃತಿ ಮೂಡಿಸತೊಡಗಿದರು.

ಆಗಿನ ಕಾಲಕ್ಕೆ ವಿದ್ಯಾವಂತರಾಗಿದ್ದ ಎಚ್.ಗಣಪತಿಯಪ್ಪನವರು ಉತ್ತರ ಕನ್ನಡ ಜಿಲ್ಲೆ ಸಿದ್ದಾಪುರದ ಸಮೀಪದ ಹೊಸೂರಿನವರು. ರೈತಕುಟುಂಬದಲ್ಲಿ ಹುಟ್ಟಿದ ಇವರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ಗಾಂಧೀವಾದಿಗಳಾಗಿದ್ದರು. ಸರ್ಕಾರಿ ನೌಕರಿ ಬಿಟ್ಟು ಖಾಸಗಿ ಶಾಲೆಯ ಉಪಾಧ್ಯಾಯರಾಗಿ ಜೀವನ ನಿರ್ವಹಿಸುತ್ತಿದ್ದರು. ಶೋಷಣೆಗೊಳಗಾದವರಲ್ಲಿ ಜಾಗೃತಿ ಉಂಟುಮಾಡುವುದು ಇವರ ಕಾರ್ಯನೀತಿಯಾಗಿತ್ತು. ಕಾಗೋಡು

ಹಿರೇನೆಲ್ಲೂರು ಗ್ರಾಮಕ್ಕೆ ಸೇರಿದ ಮುಜ್ರೆ ಗ್ರಾಮ. ಇಲ್ಲಿಯ ಭೂಮಾಲೀಕರಾದ ಕೆ.ಜಿ.ಒಡೆಯರ್ ಕುಟುಂಬದವರು ಶಿವಮೊಗ್ಗ ಜಿಲ್ಲೆಯ ಭೂಮಾಲೀಕರಲ್ಲಿ ಪ್ರಮುಖರಾಗಿದ್ದರು. ಅವರು ಮೂವರು ಅಣ್ಣ ತಮ್ಮಂದಿರು. ಕಾಗೋಡು ಚಳವಳಿಯ ಸಂದರ್ಭದಲ್ಲಿ ಕಾಗೋಡಿನಲ್ಲಿದ್ದ ಮನೆಗಳಲ್ಲಿ ಲಿಂಗಾಯತರದಾಗಿದ್ದ ಮನೆ ಅದೊಂದೇ. ಈ ಕಾಗೋಡು ಗೌಡರ ಮನೆಗೆ ಏಳುಹಳ್ಳಿ ಗೌಡಿಕೆ ಇತ್ತು. ನೆರೆಹೊರೆಯ ಅನೇಕ ಊರುಗಳಲ್ಲಿ ಇವರ ಜಮೀನುಗಳಿದ್ದುವು. ಆಗಿನ ಕಾಲದಲ್ಲಿ ಎಕರೆಗೆ ನಾಲ್ಕಾಣೆಯಂತೆ ಮೂರು ಸಾವಿರ ರೂಪಾಯಿ ಕಂದಾಯ ಕಟ್ಟುತ್ತಿದ್ದರು. ಸಾವಿರಾರು ಎಕರೆಭೂಮಿ ಇವರಿಗೆ ವಂಶಪಾರಂಪರ್ಯವಾಗಿ ಬಂದಿದ್ದಿತ್ತು. ಕಾಗೋಡು ಮನೆತನದ ಕೆ.ಗುರುಬಸಪ್ಪಗೌಡ ಅಥವಾ ಕೆ.ಜಿ.ಒಡೆಯರ್ ನಡುಕಲ ಸಹೋದರರಾಗಿದ್ದು ಉನ್ನತ ವ್ಯಾಸಂಗ ಮಾಡಿದ್ದರು. ವಿದೇಶ ಪ್ರವಾಸ ಮಾಡಿದ್ದರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ ಜೈಲು ಶಿಕ್ಷೆ ಅನುಭವಿಸಿ ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರೂ ಆಗಿದ್ದರು. ರಾಜ್ಯಮಟ್ಟದ ಅನೇಕ ಕಾಂಗ್ರೆಸ್ ನಾಯಕರಿಗೆ ನಿಕಟ ಒಡನಾಡಿಗಳಾಗಿದ್ದರು. ಇವರು ಶಿವಮೊಗ್ಗ ಬೆಂಗಳೂರುಗಳಲ್ಲಿ ಹೆಚ್ಚಾಗಿರುತ್ತಿದ್ದರು.

ಇಂತಹ ಪ್ರಭಾವಶಾಲಿ ಕುಟುಂಬದ ಗುರುವೇಗೌಡರು ಗೇಣಿ ರೈತರನ್ನು ತಮ್ಮ ಕೊಳಗದಲ್ಲೇ ಬತ್ತ ಅಳೆದುಕೊಡಲು ಒತ್ತಾಯಿಸುತ್ತಿದ್ದರು. ಕೊಡದಿದ್ದವರ ಮೇಲೆ ದರ್ಪ ತೋರಿಸುತ್ತಿದ್ದರು. ಇಂಥ'ದ್ದೊಂದು ಪರಿಸ್ಥಿತಿಯಲ್ಲಿ ಗೇಣಿ ರೈತರಲ್ಲಿ ಹುಟ್ಟಿದ ಜಾಗೃತಿ ಕ್ರಮೇಣ ದಂಗೆಯ ರೂಪ ತಳೆಯತೊಡಗಿತು. ಇದರ ಫಲವಾಗಿ ಅನೇಕ ಬದಲಾವಣೆಗಳು ಕಾಣಿಸಿಕೊಂಡವು. ರೈತರು ಒಡೆಯರ ಮನೆಗಳಿಗೆ ಬಿಟ್ಟಿ- ಬಿಗಾರಿ ಕೆಲಸಗಳಿಗೆ ಹೋಗುವುದನ್ನು ನಿಲ್ಲಿಸಬೇಕು; ಪ್ರತಿವರ್ಷ ಗೇಣಿ ಬತ್ತ ಕೊಟ್ಟಿದ್ದಕ್ಕೆ ರಶೀದಿ ಪಡೆಯಬೇಕು; ಗೇಣಿ ಬತ್ತ ಅಳೆಯುವಾಗ ಸರ್ಕಾರಿ ಅಳತೆಯ ಮಾಪನವಾದ ಮೂರು ಸೇರಿನ ಕೊಳಗದಲ್ಲಿ ಅಳೆಯಬೇಕು; ರೈತರು ಮಕ್ಕಳನ್ನು ಶಾಲೆಗೆ ಕಳುಹಿಸಿ ವಿದ್ಯಾವಂತರನ್ನಾಗಿ ಮಾಡಬೇಕು; ಗೇಣಿ ಜಮೀನಿನಿಂದ ಒಕ್ಕಲೆಬ್ಬಿಸದಂತೆ ಸರ್ಕಾರಕ್ಕೆ ರಕ್ಷಣೆ ನೀಡುವಂತೆ ಕೇಳಬೇಕು. ಇಂಥ' ಅನೇಕ ಹೊಸ ವಿಚಾರಗಳು ರೈತ ಸಂಘದ ಸದಸ್ಯರಲ್ಲಿ ಚಲಾವಣೆಗೊಳ್ಳತೊಡಗಿದವು. ಈ ಬಗೆಯ ಸಂಘದ ಸಭೆಗಳಿಂದಾಗಿ ಪ್ರಭಾವಿತರಾದ ರೈತರು ಒಡೆಯರ ಮುಂದೆ ನಿಂತು ಧೈರ್ಯವಾಗಿ ತಮ್ಮ ಬೇಡಿಕೆಗಳನ್ನು ಮಂಡಿಸತೊಡಗಿದರು.

ಕಾಗೋಡಿನ ರೈತರಲ್ಲಿ ಜಾಗೃತಿ ಮೂಡಿಸುತ್ತಿದ್ದ ಎಲೆ ಕನ್ನಪ್ಪ ಗೇಣಿ ಬತ್ತ ಕೊಟ್ಟಿದ್ದಕ್ಕೆ ರಶೀದಿ ಕೇಳಿದನೆಂಬ ಕಾರಣಕ್ಕೆ ಕಾಗೋಡು ಗೌಡರು ಆತನನ್ನು ಹಿಡಿದು ಥಳಿಸಿದರು. ಈ ವಿಚಾರ ರೈತರಲ್ಲಿ ಕಿಚ್ಚು ಹಚ್ಚಿತು. ಆಗ ಸಾಗರ ತಾಲ್ಲೂಕು ರೈತಸಂಘದ ಮುಂಖಡರು ಕಾಗೋಡು ಒಡೆಯರ ದಬ್ಬಾಳಿಕೆಗೆ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಎದುರಾಗಿ ಸತ್ಯಾಗ್ರಹ ಹೂಡುವಂತೆ ಹುರಿದುಂಬಿಸಿದರು. ಈ ನಡುವೆ 1951 ಏಪ್ರಿಲ್ 16ರಂದು ಕಡಗಳಲೆ ಎಂಬ ಗ್ರಾಮದಲ್ಲಿ ಭೂಮಾಲೀಕರು ಮತ್ತು ರೈತರ ನಡುವೆ ಜಮೀನು ಉಳುತ್ತಿದ್ದಾಗ ಘರ್ಷಣೆ ನಡೆದು ರೈತರು ಆರಂಭ ಮಾಡುತ್ತಿದ್ದಾಗ ಅವರ ಮೇಲೆ ಹಲ್ಲೆಗಳು ನಡೆದವು. ಎತ್ತುಗಳನ್ನು ಬಿಚ್ಚಿ ಓಡಿಸಿ ನೇಗಿಲು ನೊಗಗಳನ್ನು ಕಡಿದು ಹಾಕಿ, ಹೊಡೆದು ಬಡಿದು ಅವರನ್ನು ಅಲ್ಲಿಂದ ಅಟ್ಟಲಾಯಿತು. ಈ ಸುದ್ದಿ ಕೂಡಲೇ ತಾಲ್ಲೂಕಿನಾದ್ಯಂತ ಕಾಡ್ಗಿಚ್ಚಿನಂತೆ ಹಬ್ಬಿತು.

ಮಾರನೆಯ ದಿನ ಎಚ್.ಗಣಪತಿಯಪ್ಪನವರ ನೇತೃತ್ವದಲ್ಲಿ ಸಾವಿರಾರು ರೈತರು ಸಾಗರ ಪಟ್ಟಣದ ಬೀದಿಗಳಲ್ಲಿ ಮೆರವಣಿಗೆ ನಡೆಸಿದರು. ತಹಸೀಲ್ದಾರರಿಗೆ ಮನವಿ ಸಲ್ಲಿಸಿ ಕಾನೂನನ್ನು ಕೈಗೆ ತೆಗೆದುಕೊಂಡವರ ವಿರುದ್ಧ ಕ್ರಮ ಜರುಗಿಸುವಂತೆ ಆಗ್ರಹಿಸಿದರು. ಕಾಗೋಡಿನಲ್ಲಿ ಅಹಿಂಸಾತ್ಮಕ ಸತ್ಯಾಗ್ರಹ ನಡೆಸಲು ತೀರ್ಮಾನ ಮಾಡಲಾಯಿತು. ಏಪ್ರಿಲ್ 18ರಂದು ರೈತ ಸಂಘದ ಅಧ್ಯಕ್ಷರಾದ ಡಿ.ಮೂಕಪ್ಪನವರ (ಮಾಜಿ ಶಾಸಕರು) ಮುಖಂಡತ್ವದಲ್ಲಿ ಪ್ರಥ'ಮ ಸತ್ಯಾಗ್ರಹ ತಂಡ ಧರಣಿ ಕುಳಿತು ಬಂಧನಕ್ಕೊಳಗಾಯಿತು. ಸರಕಾರ ನೂರಾರು ಪೊಲೀಸರನ್ನು ಒಡೆಯರ ಜಮೀನಿಗೆ ಪಹರೆ ಹಾಕಿತು. ರೈತರು ಅಲ್ಲಲ್ಲಿ ಚಳವಳಿ ನಡೆಸಿ ಲಾಠಿ ಏಟು ತಿಂದರೂ ಹೆದರದೆ ಬಂಧನಕ್ಕೊಳಗಾಗುತ್ತಿದ್ದರು. ಆಗ ಕಂದಾಯ ಸಚಿವರಾಗಿದ್ದ ಕಡಿದಾಳ್ ಮಂಜಪ್ಪನವರು ಕಾಗೋಡು ಭೂಮಾಲೀಕರಿಗೂ ರೈತರಿಗೂ ನಡುವೆ ಸಂಧಾನಸಭೆ ನಡೆಸಿದರು. ಆದರೆ ರೈತರಿಗೆ ಯಾವುದೇ ಭೂಮಿಯನ್ನು ಬಿಡಲು ಸಾಧ್ಯವಿಲ್ಲವೆಂದು ಗುರುವೇಗೌಡರು ಪಟ್ಟುಹಿಡಿದಾಗ ಈ ಸಂಧಾನ ವಿಫಲವಾಯಿತು. ಅನೇಕ ರೈತ ಮುಂದಾಳುಗಳು ಬಂಧಿತರಾದರು.

ಇದರಿಂದಾಗಿ ರೈತ ಚಳವಳಿ ದುರ್ಬಲಗೊಳ್ಳುತ್ತಾ ಸಾಗಿಬಂತು. 1951 ಮೇ 21ರಂದು ಎಚ್.ಗಣಪತಿಯಪ್ಪನವರು ಕಾಗೋಡಿನಲ್ಲಿ ರೈತ ಸಂಘದ ಸಭೆ ಏರ್ಪಡಿಸಿದರು. ಆಗ ಆ ಸಭೆಯಲ್ಲಿ ಸಮಾಜವಾದಿ ಪಕ್ಷದ ಮುಖಂಡರಾಗಿದ್ದ ತೀರ್ಥಹಳ್ಳಿ ತಾಲ್ಲೂಕಿನ ಶಾಂತವೇರಿ ಗೋಪಾಲಗೌಡರು ಭಾಗವಹಿಸಿದ್ದರು. ರೈತ ಸಂಘ ಮತ್ತು ಸಮಾಜವಾದಿ ಪಕ್ಷಗಳು ಒಟ್ಟಾಗಿ ಚಳವಳಿಯನ್ನು ಮುಂದುವರಿಸಬೇಕೆಂದು ಸಭೆಯಲ್ಲಿ ತೀರ್ಮಾನಿಸಲಾಯಿತು. ಗೋಪಾಲಗೌಡರು ಈ ಹೋರಾಟದ ನೇತೃತ್ವ ವಹಿಸಿದರು. 28ರ ಹರೆಯದ ಗೋಪಾಲಗೌಡರು ತಮ್ಮ ವಿದ್ಯಾರ್ಥಿದೆಸೆಯಿಂದಲೂ ಪುರೋಹಿತಶಾಹಿಯನ್ನು ಜಮೀನ್ದಾರಿ ದಬ್ಬಾಳಿಕೆಯನ್ನು ಮೂಢ ನಂಬಿಕೆಗಳನ್ನು ವಿರೋಧಿಸಿಕೊಂಡು ಬಂದಿದ್ದ ಹೋರಾಟಗಾರರಾಗಿದ್ದರು. 1948 ರಿಂದಲೇ ಅವರು ರಾಜ್ಯದಲ್ಲಿ ಸಮಾಜವಾದಿ ಪಕ್ಷದ ಸಂಘಟನೆಯ ಹೊಣೆಹೊತ್ತಿದ್ದರು. ಅವರು ತೀರ್ಥಹಳ್ಳಿಯಲ್ಲಿ 1948ರಲ್ಲಿ ಸಂಘಟಿಸಿದ ರೈತ ಸಮಾವೇಶಕ್ಕೆ ರಾಮಾನಂದ ಮಿಶ್ರ ಮತ್ತು ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಬಂದು ಭಾಗವಹಿಸಿದ್ದರು. ಹೀಗೆ ರೈತರೊಡನೆ ಸಂಪರ್ಕ ಮತ್ತು ರಾಜಕೀಯ ಪ್ರಬುದ್ಧತೆ ಪಡೆದಿದ್ದ ಗೋಪಾಲಗೌಡರ ನಾಯಕತ್ವ ಕಾಗೋಡು ಸತ್ಯಾಗ್ರಹಕ್ಕೆ ದೊರೆತದ್ದು ಅದರ ಶಕ್ತಿ ನೂರ್ಮಡಿಯಾಗಲು ಕಾರಣವಾಯಿತು (ನೋಡಿ: ಗೋಪಾಲಗೌಡ, ಶಾಂತವೇರಿ).

ಕಾಗೋಡಿನ ಒಡೆಯರ ಮನೆತನದ ಕೆ.ಜಿ.ಒಡೆಯರು ಅಂದಿನ ಕಾಂಗ್ರೆಸ್‌ನ ಪ್ರಮುಖ ಮುಂದಾಳಾಗಿದ್ದುದರಿಂದ ಸಮಾಜವಾದಿ ಪಕ್ಷ ಈ ಚಳವಳಿಯನ್ನು ಒಂದು ಮಾದರಿ ಹೋರಾಟವಾಗಿ ರೂಪುಗೊಳಿಸಲು ಸಜ್ಜಾಯಿತು. ಈ ಚಳವಳಿಯಲ್ಲಿ ಸಮಾಜವಾದಿ ಕಾರ್ಯಕರ್ತರು, ವಿದ್ಯಾರ್ಥಿಗಳು, ಬುದ್ಧಿಜೀವಿಗಳು ರೈತರೊಂದಿಗೆ ಭಾಗವಹಿಸಿದರು. ಗೋಪಾಲಗೌಡರು, ವೈ.ಆರ್.ಪರಮೇಶ್ವರಪ್ಪ, ಜಿ.ಸದಾಶಿವರಾವ್, ಗರುಡಶರ್ಮ, ಖಾದ್ರಿಶಾಮಣ್ಣ, ಟಿ.ಎನ್.ಗಂಡುಗಲಿ, ಬೀ.ಸು.ಕೃಷ್ಣಮೂರ್ತಿ, ಸಿ.ಜಿ.ಕೆ. ರೆಡ್ಡಿ, ಮುಲ್ಕಾಗೋವಿಂದ ರೆಡ್ಡಿ, ಈಶ್ವರಪ್ಪ ಮೊದಲಾದವರು ಗೇಣಿ ರೈತರ ನಡುವೆ ಶಿಬಿರಗಳನ್ನು ನಡೆಸುತ್ತಾ ಹಳ್ಳಿ ಹಳ್ಳಿಗಳನ್ನು ಸುತ್ತುತ್ತಾ ರೈತರನ್ನು ಸತ್ಯಾಗ್ರಹಕ್ಕೆ ಹುರಿದುಂಬಿಸುತ್ತಿದ್ದರು. ಗೋಪಾಲಗೌಡರು, ಎಚ್.ಗಣಪತಿಯಪ್ಪ ಸೇರಿದಂತೆ ಅನೇಕ ಮುಖಂಡರು ಬಂಧನಕ್ಕೊಳಗಾಗಿ ಜೈಲು ಸೇರಿದರು. ಆಗ ಶಾಂತವೇರಿ ಗೋಪಾಲಗೌಡರು ರಾಷ್ಟ್ರಮಟ್ಟದ ಸಮಾಜವಾದಿ ನಾಯಕರಾದ ರಾಮಮನೋಹರ ಲೋಹಿಯಾ, ಜಯಪ್ರಕಾಶ ನಾರಾಯಣ್, ಪಂಡಿತ ರಮಾನಂದ ಮಿಶ್ರರಂತಹವರ ಗಮನವನ್ನು ಈ ಚಳವಳಿಯತ್ತ ಸೆಳೆದರು. ಅವರು ತಮ್ಮ ಇತರ ಕಾರ್ಯಕ್ರಮಗಳನ್ನು ಬದಿಗೊತ್ತಿ ಕಾಗೋಡಿನತ್ತ ಧಾವಿಸಿದರು. ಈ ನಾಯಕರನ್ನು ನೋಡಲು ಮಲೆನಾಡಿನ ಜನಸಾಗರವೇ ಸೇರಿತ್ತು.

ಲೋಹಿಯಾರವರು ಕಾಗೋಡಿನಲ್ಲಿ ರೈತ ಸಮಾವೇಶವನ್ನು ಉದ್ದೇಶಿಸಿ ಮಾತನಾಡಿದ್ದಲ್ಲದೆ ಸ್ವತಃ ಒಡೆಯರ ಜಮೀನನ್ನು ಸುತ್ತುವರಿದಿದ್ದ ಬೇಲಿಯನ್ನು ಕಿತ್ತೆಸೆದು ಮುನ್ನುಗ್ಗಿದ್ದರು. ಆಗ ರೈತ ಸಮೂಹ ಪ್ರವಾಹದೋಪಾದಿಯಲ್ಲಿ ನುಗ್ಗಿಬಂದು ಎಲ್ಲ ಬಂಧನಗಳನ್ನು ಕಿತ್ತೆಸದು ಉಳುವವನೆ ನೆಲದೊಡೆಯ, ಇಂಕ್ವಿಲಾಬ್ ಜಿಂದಾಬಾದ್ ಎಂಬ ಘೋಷಣೆಗಳನ್ನು ಮೊಳಗಿಸುತ್ತ ರೈತ ಚಳವಳಿಗೆ ಹೊಸ ಇತಿಹಾಸ ಬರೆಯಿತು. ಅಂದು ರಾತ್ರಿ ಸಾಗರ ರೈಲ್ವೆ ನಿಲ್ದಾಣದಲ್ಲಿ ಲೋಹಿಯಾ ಅವರನ್ನು ಬಂಧಿಸಲಾಯಿತು. ಅವರು ನ್ಯಾಯಾಲಯದ ಕಟಕಟೆಯಲ್ಲಿ ನಿಂತು ರೈತರ ಹೋರಾಟದ ನ್ಯಾಯಸಮ್ಮತ ಬೇಡಿಕೆಯನ್ನು ಪ್ರತಿಪಾದಿಸಿದರು. ಈ ಸುದ್ದಿ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಾಧ್ಯಮಗಳಲ್ಲಿ ದೊಡ್ಡ ಸುದ್ದಿಯಾಯಿತು. ಆಗ ಪ್ರಧಾನಿಯಾಗಿದ್ದ ಜವಾಹರಲಾಲ್ ನೆಹರೂರವರು ಕೂಡಲೇ ಲೋಹಿಯಾ ಅವರ ಮೇಲೆ ಹೂಡಿದ್ದ ಮೊಕದ್ದಮೆಯನ್ನು ಹಿಂದಕ್ಕೆ ಪಡೆಯುವಂತೆ ರಾಜ್ಯ ಸರ್ಕಾರಕ್ಕೆ ಸೂಚಿಸಿದರು. ರೈತ ಚಳವಳಿ ಹಾಗೂ ಕಾಗೋಡು ಸತ್ಯಾಗ್ರಹ ಚಳವಳಿ ನಿಂತಿತು. ಆದರೆ ರೈತರು ಹಿಂದಿಗಿಂತ ಹೆಚ್ಚು ಸಂಘಟಿತರಾಗಲು ಇದು ನಾಂದಿಯಾಯಿತು.

ಕಾಗೋಡು ಸತ್ಯಾಗ್ರಹ ಮೈಸೂರು ರಾಜ್ಯದ ಮೇಲೆ ಪರೋಕ್ಷವಾಗಿ ರಾಜಕೀಯ ಮತ್ತು ಸಾಮಾಜಿಕ ಪರಿಣಾಮ ಬೀರಿತು. ಜೊತೆಗೆ ಗೇಣಿ ರೈತವರ್ಗದ ಹೋರಾಟಕ್ಕೆ ಒಂದು ಸೈದ್ಧಾಂತಿಕ ನೆಲೆಯನ್ನು ಒದಗಿಸಿತು. ರಾಷ್ಟ್ರಮಟ್ಟದಲ್ಲಿಯೂ ಚಳವಳಿ ಗುರುತಿಸಲ್ಪಟ್ಟಿತು. ಶಾಂತವೇರಿ ಗೋಪಾಲಗೌಡರು 1952ರಲ್ಲಿ ಸಾಗರ ಕ್ಷೇತ್ರದಿಂದ ಸಮಾಜವಾದಿ ಪಕ್ಷದ ವತಿಯಿಂದ ವಿಧಾನಸಭೆಗೆ ಸ್ಪರ್ಧಿಸಿ ಚುನಾಯಿತರಾದರು. ವಿಧಾನಸಭೆ ರಚಿತವಾದ ಸ್ವಲ್ಪ ಕಾಲದಲ್ಲೇ ಗೇಣಿದಾರರ ಶಾಸನ ಜಾರಿಗೆ ಬಂದಿತ್ತು. ಮುಂದೆ 1961ರ ಜತ್ತಿ ಸಮಿತಿ ವರದಿಯನ್ನು ಆಧರಿಸಿ ಮತ್ತೊಂದು ಗೇಣಿ ಶಾಸನವನ್ನು ರಚಿಸಲಾಯಿತು. ಅದು 1965ರಲ್ಲಿ ಜಾರಿಗೆ ಬಂತು. ಈ ಕಾಯಿದೆಗಳು ರೈತರ ಹಕ್ಕನ್ನು ಮತ್ತು ಉಳುವ ರೈತನೆ ನೆಲದೊಡೆಯನಾಗುವ ಅವಕಾಶವನ್ನು ಹೆಚ್ಚಿಸಿದ್ದವು. ಈ ಕಾಯಿದೆ ರಚನೆಯಲ್ಲಿ ಆಗ ಕಂದಾಯ ಸಚಿವರಾಗಿದ್ದ ಮಲೆನಾಡ ಗಾಂಧಿಯೆಂದು ಪ್ರಸಿದ್ಧರಾದ ಕಡಿದಾಳ್ ಮಂಜಪ್ಪನವರ ಪಾತ್ರವೂ ಗಣನೀಯವಾಗಿತ್ತು. 1974ರಲ್ಲಿ ಡಿ.ದೇವರಾಜ ಅರಸು ಅವರ ಸರ್ಕಾರ ತಂದ ಸಮಗ್ರ ಗೇಣಿ ಶಾಸನ ಸಂಪೂರ್ಣವಾಗಿ ಸಮಗ್ರ ಗೇಣಿ ಜಮೀನಿಗೆ ಗೇಣಿದಾರರನ್ನು ಒಡೆಯರನ್ನಾಗಿ ಮಾಡುವಲ್ಲಿ ದೊಡ್ಡ ಹೆಜ್ಜೆಯಾಯಿತು. ಅಲ್ಲಿಗೆ ಕಾಗೋಡು ಸತ್ಯಾಗ್ರಹ ಯಾವ ಧ್ಯೇಯೋದ್ದೇಶಗಳಿಗಾಗಿ ಹುಟ್ಟಿಕೊಂಡಿತೋ ಅದು ಪೂರ್ಣಗೊಂಡಂತಾಯಿತು. (ಎನ್.ಎಚ್.ಎಂ.)

**ಕಾಡಸಿದ್ದೇಶ [1] :** ಸು.18ನೆಯ ಶತಮಾನ. ಇಷ್ಟಲಿಂಗಶತಕದ ಕರ್ತೃ. ವೀರಶೈವ ಕವಿ. ಇಷ್ಟಲಿಂಗಶತಕದಲ್ಲಿ ವೃತ್ತಛಂದಸ್ಸಿನ 111 ಪದ್ಯಗಳಿವೆ. ಪರ್ವತೇಶನ ಅಂಗೈಯೊಳೊಗೆದಾತ ಭಕ್ತರಣುಗ ಕಾಡಸಿದ್ದೇಶ ಎಂದು ಹೇಳಿಕೊಂಡಿರುವುದರಿಂದ ಈತನ ಗುರು ಪರ್ವತೇಶ ಎಂದು ತಿಳಿದು ಬರುತ್ತದೆ. ಚತುರಾಚಾರ್ಯಪುರಾಣವನ್ನು ಬರೆದ ಪರ್ವತೇಶನೂ (ಸು.1698) ಈತನೂ ಒಬ್ಬನೇ ಆದ ಪಕ್ಷದಲ್ಲಿ ಈತನ ಕಾಲ ಸು.1725 ಎಂದು ಊಹಿಸಬಹುದು. ಇಷ್ಟಲಿಂಗಶತಕದಲ್ಲಿನ ಪ್ರತಿಯೊಂದು ಪದ್ಯವೂ ಶ್ರೀ ಇಷ್ಟಲಿಂಗೇಶ್ವರಾ ಎಂದು ಮುಗಿಯುತ್ತದೆ. ಶಿವಾಧಿಕ್ಯವನ್ನು ಹೆಚ್ಚಾಗಿ ವರ್ಣಿಸಿರುವುದರಿಂದ ಈ ಗ್ರಂಥಕ್ಕೆ ಶಿವಾಧಿಕ್ಯ ಎಂಬ ಹೆಸರೂ ಉಂಟು. ಒಂದು ಪದ್ಯ ಹೀಗಿದೆ:

ಜಗಮಂ ರಕ್ಷಿಪ ದೇವ ತಾನೆ ಗುರುವಿಂ ಹಸ್ತಾಬ್ಜದಲ್ಲೊಪ್ಪಿರಲ್<br>
ಬಗೆಯಿಂ ಪೂಜಿಸಿ ಮುಕ್ತರಾಗಿ ಭವಪಾರಾವಾರಮಂ ದಾಂಟದೇ<br>
ನಗೆಗೇಡಾಗಿ ಕುಜಾತಿಗೂಡಿ ಕುಣಿದಾಡೀ ಪಾಡಿ ಭೂತಂಗಳಂ<br>
ಮಿಗಿಲಾರಾಧಿಸಿ ಬೀಟ್ಬರೇಕೆ ಭವದೊಳ್ ಶ್ರೀ ಇಷ್ಟಲಿಂಗೇಶ್ವರಾ

*

**ಕಾಡಸಿದ್ದೇಶ [2] :** ವಚನಕಾರ. ಕಾಡಿನೊಳಗಾದ ಶಂಕರಪ್ರಿಯ ಚೆನ್ನ ಕದಂಬಲಿಂಗ ನಿರ್ಮಾಯ ಪ್ರಭುವೇ ಎಂಬುದು ಈತನ ಅಂಕಿತ. ತನ್ನ ಗುರುಪರಂಪರೆಯನ್ನು ಒಂದು ವಚನದಲ್ಲಿ ಹೇಳಿಕೊಂಡಿದ್ದಾನೆ. ಅಲ್ಲಿನ ಇಪ್ಪತ್ತೆರಡು ಮಂದಿ ಗುರುವರ್ಯರಲ್ಲಿ ಕಡೆಯವನಾದ ಸಂಗಮೇಶ್ವರ ದೇವರೇ ಈತನ ಗುರು.

ಕಾಡಸಿದ್ದೇಶನ 561 ವಚನಗಳು ದೊರಕಿವೆ. ಇವುಗಳಲ್ಲಿ 77 ಬೆಡಗಿನ ವಚನಗಳಿವೆ. ಕೆಲವು ವಚನಗಳಿಗೆ ಟಿಪ್ಪಣಿಯಿದೆ. ಅನೇಕ ವಚನಗಳಲ್ಲಿ ಉರ್ದು ಭಾಷೆಯ ಪದಗಳು ಹೇರಳವಾಗಿವೆ. ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಸಿದ್ಧಾಂತ ರಹಸ್ಯಗಳನ್ನು ತಿಳಿಸಬಲ್ಲ ವಚನಶಾಸ್ತ್ರದಲ್ಲಿ ಕಾಡಸಿದ್ದೇಶ್ವರನ ವಚನಗಳಿಗೆ ಪ್ರಮುಖ ಸ್ಥಾನವಿದೆ. ಒಂದು ವಚನ ಹೀಗಿದೆ:

ಒಮ್ಮನದವರಿಗೆ ಹಣವಿಲ್ಲ, ಇಮ್ಮನದವರಿಗೆ ಹಣವುಂಟು; ಇಮ್ಮನ ಸುಟ್ಟು, ಒಮ್ಮನ ನುಂಗಿ ಬಂದವರು ಮರಳಿ ಬಾರದೆ ಹೋದರು ನೋಡೆಂದನಯ್ಯ ಕಾಡಿನೊಳಗಾದ ಶಂಕರಪ್ರಿಯ ಚೆನ್ನಕದಂಬಲಿಂಗ ನಿರ್ಮಾಯ ಪ್ರಭುವೇ.

*

**ಕಾಡ್ಯನಾಟ :** ಕರಾವಳಿಯ ಉಡುಪಿ, ಕುಂದಾಪುರ ಪರಿಸರದ ಪರಿಶಿಷ್ಟ ಸಮುದಾಯಗಳಲ್ಲಿ ಒಂದಾದ ಮೇರರ ಆರಾಧ್ಯ ದೈವದ ಒಂದು ಆಚರಣೆ. ಈ ಸಮುದಾಯದ ವಾಸಸ್ಥಾನ ಇರುವಲ್ಲೆಲ್ಲ ಕಾಡ್ಯನ ಮನೆ ಅಥವಾ ಕಾಡ್ಯನ ಗುಡಿಗಳು ಕಾಣಸಿಗುತ್ತವೆ. ಕಾಡ್ಯನಾಟದ ಸಂದರ್ಭದಲ್ಲಿ ಹಾಡಲಾಗುವ ಹಾಡುಗಳನ್ನು ಗಮನಿಸಿದಾಗ ಕಾಡ್ಯ ಎಂದರೆ ಕಾಳಿಂಗಸರ್ಪ ಎಂದು ತಿಳಿಯುತ್ತದೆ. ಕಾಡ್ಯನ ಗುಡಿಗಳಲ್ಲಿರುವ ಹುತ್ತ, ಸರ್ಪದ ಸಂಕೇತವಿರುವ ಕಲ್ಲುಗಳು, ಸರ್ಪದ ಉಬ್ಬುಶಿಲ್ಪವನ್ನು ರೇಖಿಸಿರುವ ಮಣ್ಣಿನ ಗಡಿಗೆಗಳು, ವಿವಿಧ ಪ್ರಾಣಿ ಪಕ್ಷಿ, ಕೃಷಿಸಂಬಂಧಿ ವಸ್ತುಗಳಿರುವ ಮಂಡಲ ಚಿತ್ತಾರಗಳು ಕಾಡ್ಯನಾಟ ಒಂದು ಸರ್ಪಾರಾಧನೆ ನಾಗಾರಾಧನೆ ಎನ್ನುವುದನ್ನು ತಿಳಿಸುತ್ತವೆ.



ಕಾಡ್ಯನಾಟಕ್ಕೆ ಸಿದ್ಧತೆ

ಕಾಡ್ಯನ ಗುಡಿ ಸಾಮಾನ್ಯವಾಗಿ ಜನವಸತಿಯಿಂದ ದೂರ ಕಾಡಿನೊಳಗೆ ಅಥವಾ ಊರ ಹೊರಗಿರುತ್ತದೆ. ಅದು ಬರಿಯ ಗುಡಿಯಲ್ಲ. ಕಾಡ್ಯನೇ ಪ್ರಧಾನವಾಗಿರುವ ಹಲವು ದೈವಗಳ ಒಂದು ಸಂಕೀರ್ಣ. ಇಂತಹ ಗುಡಿಗಳು ಗೋಡೆಗಳಿಂದ ಆವೃತವಾಗಿರುವುದಿಲ್ಲ, ಕಲ್ಲು ಕಂಬಗಳ ಮೇಲೆ ನಿಂತ ಹುಲ್ಲುಹಾಸಿನ ಚಾವಣಿಗಳಿರುತ್ತವೆ. ಗುಡಿಯ ನಡುಭಾಗದಲ್ಲಿ ಸುಮಾರು ಹತ್ತರಿಂದ ಹದಿನೈದು ಅಡಿಎತ್ತರಕ್ಕೆ ಬೆಳೆದ ಹುತ್ತವಿದ್ದು ಬುಡದಲ್ಲಿ ನಾಗರಕಲ್ಲುಗಳಿರುತ್ತವೆ. ಸುತ್ತಲೂ ನೂರಾರು ಸಂಖ್ಯೆಯ ವಿವಿಧ ಗಾತ್ರಗಳ ಮಣ್ಣಿನ ಕಲಶಗಳಿರುತ್ತವೆ. ಅವುಗಳ ಮೇಲೆ ಹೆಡೆ ಎತ್ತಿದ ಸರ್ಪದ ಉಬ್ಬುಶಿಲ್ಪಗಳಿರುತ್ತವೆ. ಕಾಡ್ಯನ ಗುಡಿಯ ಪರಿಸರದಲ್ಲಿ ಸ್ವಾಮಿ, ಬ್ರಹ್ಮ, ಯಕ್ಷಿ, ಉಮ್ಮಳ್ತಿ, ಬೊಬ್ಬರ್ಯ ಮುಂತಾದ ದೈವಗಳ ಕಲ್ಲುಗಳನ್ನೂ ಕಾಣಬಹುದು. ಭಕ್ತರು ಕಾಡ್ಯನನ್ನು ಅಮ್ಮ, ತಾಯಿ, ಕಾಳಿಕಾಂಬ, ವನದುರ್ಗಿ ಎಂಬ ಪರ್ಯಾಯ ನಾಮದಿಂದಲೂ ಗುರುತಿಸುವುದುಂಟು. ಕಾಡ್ಯನನ್ನು ಚರ್ಮರೋಗ, ದೃಷ್ಟಿದೋಷ, ಸಂತಾನ ಹೀನತೆಯ ಸಂದರ್ಭಗಳಲ್ಲಿ ಹರಕೆಹೊತ್ತು ಮೇರ ಸಮುದಾಯ ಆರಾಧಿಸುತ್ತದೆ.

ಕಾಡ್ಯನಾಟ ನಾಲ್ಕುರಾತ್ರಿ ಮೂರು ಹಗಲುಗಳ ಕಾಲ ನಡೆಯುವ ಒಂದು ಆಚರಣೆ. ಇದರಲ್ಲಿ ಹುತ್ತದ ಪೂಜೆಯಷ್ಟೇ ಮಹತ್ವ ಕಲಶ ಪೂಜೆಗೂ ಇದೆ. ವಿಧ್ಯುಕ್ತವಾಗಿ ಕುಂಬಾರರಿಂದ ಮಡಕೆಗಳ ತಯಾರಿ, ಪೂಜೆ, ಕುಲದ ಸ್ತ್ರೀಯರಿಂದಲೇ ಅವುಗಳನ್ನು ಹೊತ್ತು ತರುವಿಕೆ, ಕಲಶದೊಳಗೆ ನೀರೆರೆದು ಮೇಲೆ ಮಾವಿನ ಚಿಗುರು ಇರಿಸುವುದು, ಬರೆದ ಮಂಡಲ ಚಿತ್ತಾರಗಳ ಮೇಲೆ ಕಲಶಹೊತ್ತ ಹೆಣ್ಣು ನಿಂತಾಗ ಆಕೆಯ ಮೇಲೆ ಅಕ್ಕಿಕಾಳುಗಳನ್ನು ಚೆಲ್ಲುವುದು, ಕೊನೆಯಲ್ಲಿ ಕಲಶವನ್ನು ಹರಿವ ನೀರಲ್ಲಿ ತೊಳೆದುಕೊಂಡು ಬರುವುದು ಇವೆಲ್ಲವೂ ಕಾಡ್ಯ ಸಂತಾನಾಭಿಮಾನಿ ದೇವತೆ ಎಂಬುದನ್ನು ಸೂಚಿಸುತ್ತವೆ.

ಈ ಸಂಪ್ರದಾಯದ ಪ್ರಮುಖ ಕ್ರಿಯಾಶೀಲ ಪಾತ್ರಧಾರಿಗಳು ಕಾಡ್ಯನ ಪ್ರತಿನಿಧಿ ಅಥವಾ ಪಾತ್ರಿ ಹಾಗೂ ಇಡಿಯ ಕ್ರಿಯೆಯ ನಿಯಂತ್ರಕ ಬೈದ್ಯ. ಮಂಡಲ ಬರೆಯುವುದು ಕಾಡ್ಯನಾಟದ ಪ್ರಧಾನ ವಿಧಿ. ಸುಮಾರು ಹತ್ತು ಅಡಿ ವ್ಯಾಸದ ವೃತ್ತಾಕಾರದ ಮಂಡಲವನ್ನು ಪಂಚವರ್ಣದ ಹುಡಿಯಿಂದ ಬರೆಯುತ್ತಾರೆ. ಮಂಡಲದ ಮಧ್ಯದಲ್ಲಿ ಮುಹೂರ್ತದ ಕಂಬವಿರುತ್ತದೆ. ಆದಿಮ ಸಮಾಜದಿಂದ ಅಪ್ರಜ್ಞಾಪೂರ್ವಕವಾಗಿ ಇಳಿದು ಬಂದ ನೆನಪುಗಳನ್ನು ಇಲ್ಲಿನ ಚಿತ್ತಾರಗಳು ಪ್ರತಿನಿಧಿಸಿದಂತೆ ತೋರುತ್ತದೆ. ಈ ಸಮುದಾಯದ ಸಾಮೂಹಿಕ ಬದುಕನ್ನು ಪ್ರಭಾವಿಸಿದ ಸೂರ್ಯ, ಚಂದ್ರ, ನಕ್ಷತ್ರ, ದೇವತೆಗಳು, ಕಮಲದ ಹೂ, ಹೊನ್ನರಳಿ ಮರ, ಕಾಗೆ, ಗೂಗೆ, ಗುಬ್ಬಚ್ಚಿ, ನವಿಲು, ಒನಕೆ, ಒರಳು, ಗೆರಸೆ, ದೊರು, ಚೆನ್ನೆಮಣೆ, ಡೋಲು, ಕಾಡ್ಯ (ಕರಿನಾಗ), ನಾಗ (ಹಳದಿನಾಗ) - ಇತ್ಯಾದಿಗಳನ್ನು ಮಂಡಲ ಚಿತ್ತಾರ ಪ್ರತಿನಿಧಿಸುತ್ತದೆ. ಹಾಡುಗಳಲ್ಲಿ ಮೇಲಿನ ವಸ್ತುಗಳು ಒಂದಲ್ಲ ಒಂದು ರೀತಿಯಲ್ಲಿ ಸಂಬಂಧವನ್ನು ಪಡೆಯುತ್ತವೆ. ಕಾಡ್ಯನಾಟದ ಎರಡನೆಯ ಮತ್ತು ಮೂರನೆಯ ರಾತ್ರಿಗಳಲ್ಲಿ ಮಂಡಲ ಬರೆದು ಐದು ಹೊಸ ಮಣ್ಣಿನ ಕಲಶಗಳನ್ನು ಅದರ ಮೇಲಿರಿಸಿ ಬೈದ್ಯ (ಪೂಜಾರಿ) ಹಾಡು ಕುಣಿತಗಳೊಂದಿಗೆ ಪೂಜೆ ಸಲ್ಲಿಸುತ್ತಾನೆ.



ಕಾಡ್ಯನಾಟದ ಪೂಜಾರಿ

ಕಾಡ್ಯನಾಟದ ಆರಾಧನಾ ವಿಧಿಗಳ ನಿಯಂತ್ರಕ ಬೈದ್ಯ. ಇವನಿಗೂ ಇವನ ಕುಟುಂಬದವರಿಗೂ ಕಾಡ್ಯನ ಮನೆಯ ಎದುರು ವಿಶೇಷ ಚಪ್ಪರವನ್ನು ನಿರ್ಮಿಸಲಾಗುತ್ತದೆ. ಅಲ್ಲಿ ಬೈದ್ಯ ಹಾಗೂ ಇವನ ಸಹಾಯಕರು ಡೋಲು ಬಡಿಯುತ್ತ ನಾಲ್ಕು ದಿನಗಳ ಕಾಲ ಹಾಡು ಹೇಳುತ್ತಿರುತ್ತಾರೆ. ಕಲಶಗಳನ್ನು ಹೊತ್ತುತರುವ ಸಂದರ್ಭ,. ಕಲಶಗಳಿಗೆ ಪೂಜೆ, ಕಲಶಗಳನ್ನು ಹೊತ್ತು ಊರಾಡಲು ಹಾಗೂ ಹರಿವ ನದಿಯಲ್ಲಿ ಕಲಶ ತೊಳೆಯಲು ಹೋಗುವ ಸಂದರ್ಭಗಳಲ್ಲಿ ಮಹಿಳೆಯರು ಹಾಡು ಹೇಳುತ್ತಾರೆ. ಈ ಹಾಡುಗಳು ಕಥೆ ಅಥವಾ ಐತಿಹ್ಯಗಳ ರೂಪದಲ್ಲಿರದೆ ಆಚರಣೆಗಳ ಘಟನಾವಳಿಗಳ ವಿವರಣಾತ್ಮಕ ರೂಪದಲ್ಲಿರುತ್ತವೆ. ಬೈದ್ಯ ಹಾಡುವ ಗುರುಶಾಸ್ತ್ರ, ಕಂಬಕಡಿವಹಾಡು, ಮಂಡಲಬರೆವಹಾಡು ಇವು ಜನಪದ ಗೀತೆಗಳ ಮಾದರಿಯಲ್ಲಿರುತ್ತವೆ. ಕಾಡ್ಯನ ಹುಟ್ಟು, ಹೆಣ್ಣು ಮಕ್ಕಳ ಹುಟ್ಟು, ರಣಸಿರಿ ಹಾಡು ಇವುಗಳಲ್ಲಿ ಜೀವನಾವರ್ತನಗಳ ವಿವರ ವಿಶ್ವಸೃಷ್ಟಿಯ ಹಂತ, ಕೊರಗ ಕೊರತಿಯರಿಂದ ಮಾನವರ ವಿಕಾಸವಾದುದೆನ್ನುವ ಹೇಳಿಕೆ, ಭೂಮಿಯಲ್ಲಿ ಕೃಷಿಪದ್ಧತಿ ಆರಂಭ ಗೊಂಡುದರ ಹಿನ್ನೆಲೆ, ಜನಪದೀಯರ ವಿಶಿಷ್ಟ ಲೋಕದೃಷ್ಟಿ ಪ್ರಕಟವಾಗುತ್ತವೆ.

ಕಾಡ್ಯನಾಟದಲ್ಲಿ ವಿಧಿಕ್ರಿಯೆಯೊಳಗೆ ಕ್ರೀಡೆಯ ಸ್ವರೂಪದ ಅಂಬೋಡಿ ಆಡುವುದು ಹಾಗೂ ಹಿಡ್ಡಾಯಿ ಹಾಕುವುದು ಎಂಬ ಎರಡು ಆಚರಣೆಗಳು ಇವೆ. ಅಂಬೋಡಿ ಒಂದು ಬಗೆಯ ಅಣಕುಕಾಳಗ. ಪಾತ್ರಿಯ ಎದುರು ಯುವಕರ ಎರಡು ತಂಡ ಕೈಯಲ್ಲಿ ಉದ್ದನೆಯ ಬರಲುಗಳನ್ನು ಹಿಡಿದು ಎದುರು ಬದುರಾಗಿ ನಿಲ್ಲುತ್ತಾರೆ. ಎರಡು ಕಂಬಗಳಿಗೆ ಅಡ್ಡವಾಗಿ ಕಟ್ಟಿದ ಹುರಿಹಗ್ಗಕ್ಕೆ ಯುವಕರು ಪರಸ್ಪರ ಬರಲುಗಳನ್ನು ತಾಗಿಸುತ್ತಾರೆ. ಯುವಕರ ದೈಹಿಕಶಕ್ತಿ ಹಾಗೂ ಕ್ರೀಡಾಕ್ಷಮತೆಯನ್ನು ಸ್ಪರ್ಧೆಗೊಡ್ಡುವ ಅಣಕು ಕಾಳಗ ಇದಾಗಿರಬಹುದು. ಇಲ್ಲಿನ ಪರವಿರೋಧ ತಂಡಗಳನ್ನು ಬಂಧುತ್ವ ವ್ಯವಸ್ಥೆಯ (ಕಿನ್‌ಶಿಪ್) ಹಿನ್ನೆಲೆಯಲ್ಲಿ ಗುರುತಿಸಲಾಗುವುದು. ಹಿಡ್ಡಾಯಿ ಹಾಕುವ ಕ್ರೀಡಾಚರಣೆಯಲ್ಲಿ ಸಂಸಾರದ ಮಕ್ಕಳ ಗುಂಪಿನ ನಡುವೆ ಪಾತ್ರಿ ತೆಂಗಿನಕಾಯಿಯನ್ನು ಹಾರಿಸುವನು. ಅವರೊಳಗೆ ಆ ತೆಂಗಿನಕಾಯನ್ನು ಹಿಡಿಯುವ ಬಗ್ಗೆ ಮೇಲಾಟ ನಡೆಯುತ್ತದೆ. ಈ ಸೆಣಸಾಟದಲ್ಲಿ ಯಶಸ್ವಿಯಾದ ಹುಡುಗ ಕಾಡ್ಯನ ಗುಡಿಯ ಸಮೀಪದ ಬೆಣಗಲ್ಲಿಗೆ ಅದನ್ನು ಒಡೆಯಬೇಕು. ಎರಡನೆಯ ಬಾರಿ ನೆಂಟರು ಮಕ್ಕಳ ನಡುವೆ ಈ ಸ್ಪರ್ಧೆ ನಡೆಯುವುದು. ಸಾಮಾನ್ಯವಾಗಿ ಕ್ರೀಡೆಗಳಲ್ಲಿ ನಿಯಮವಿರುವಂತೆ ಇಲ್ಲೂ ಕೆಲವು ಖಚಿತ ನಿಯಮಗಳಿರುತ್ತವೆ. ಕ್ರೀಡಾಳುಗಳು ಈ ನಿಯಮಗಳನ್ನು ಮುರಿಯದಂತೆ ನಿಗಾವಹಿಸುವುದು ಪಾತ್ರಿಯ ಕೆಲಸ. ಜೊತೆಗೆ ಪ್ರೇಕ್ಷಕರೂ ನಿರ್ಣಾಯಕ ಪಾತ್ರವಹಿಸುವುದುಂಟು.

ಕಾಡ್ಯನಾಟ ಆಚರಣೆಯಲ್ಲಿ ಕಾಡ್ಯ ಕಾಳಿಂಗ ಸರ್ಪನ ರೂಪದಲ್ಲಿ ಅಮೂರ್ತವಾಗಿ ಆರಾಧನೆಗೊಳ್ಳುವ ಅಲೌಕಿಕ ಶಕ್ತಿ ಎನ್ನುವುದು ವಿಧಿ ಆಚರಣೆಗಳಿಂದ ವ್ಯಕ್ತಗೊಳ್ಳುವ ಸಂಗತಿ. ಅಂತಹ ಅಲೌಕಿಕ ಶಕ್ತಿಗಳು ಭೌತಪ್ರಪಂಚಕ್ಕಿಂತ ಭಿನ್ನವಾದ ಅಲೌಕಿಕ ಜಗತ್ತಿನಲ್ಲಿರುತ್ತವೆ ಎಂದು ತಿಳಿಯಲಾಗುತ್ತದೆ. ಅವುಗಳನ್ನು ಭಯಭಕ್ತಿಯಿಂದ ಆರಾಧಿಸುವುದಕ್ಕೆ ಮೇರ ಸಮುದಾಯ ರೂಪಿಸಿಕೊಂಡಿರುವ ವಿಶಿಷ್ಟ ಆಚರಣೆ ಇದಾಗಿದೆ. ಇದು ಸಾಮಾನ್ಯ ಆಚರಣೆಗಳಿಂದ ಭಿನ್ನವಾದ, ವಿಶಿಷ್ಟ ಕಾಲದಲ್ಲಿ, ಊರ ಹೊರಗಿನ ಪರಿಸರದಲ್ಲಿ (ಕಾಡಿನೊಳಗೆ) ನಡೆಯುತ್ತಿರುವುದನ್ನು ಗಮನಿಸಬೇಕು. ಇದನ್ನು ಮಾನವ ಪ್ರಪಂಚಕ್ಕೆ ವೈದೃಶ್ಯ ಲೋಕವೆಂದೂ ಮಧ್ಯಂತರ ಜಗತ್ತೆಂದೂ ವಿದ್ವಾಂಸರು ಗುರುತಿಸಿದ್ದಾರೆ. ಈ ವಾಸ್ತವವಲ್ಲದ ಭ್ರಾಮಕಪ್ರಪಂಚದಲ್ಲಿ ಮಾನವ ಶ್ರೇಯಸ್ಸು ಹಾಗೂ ಅರ್ಥವಂತಿಕೆಯನ್ನು ಪಡೆಯುತ್ತಾನೆ. ಕಾಡ್ಯನಾಟದಂತಹ ಆರಾಧನೆಯ ಸಂದರ್ಭದಲ್ಲಿ ಲೌಕಿಕ, ಅಲೌಕಿಕ, ಲೋಕಗಳ ನಡುವೆ ಒಂದು ಬಗೆಯ ಅಂತರ್‌ಸಂಬಂಧ ಏರ್ಪಡುತ್ತದೆ. ಅಲೌಕಿಕ ಶಕ್ತಿಗಳಾದ ಕಾಡ್ಯ, ನಾಗ, ಸೂರ್ಯ, ಚಂದ್ರ, ನಕ್ಷತ್ರ ಮುಂತಾದ ಶಕ್ತಿಗಳನ್ನು ಮಂಡಲ ಚಿತ್ತಾರದೊಳಗೆ ರೇಖಿಸಿ ಹಾಡು ಹೇಳಿದಾಗ ಅವು ಅಲ್ಲಿ ನೆಲೆಗೊಳ್ಳುತ್ತವೆ ಎಂಬ ನಂಬಿಕೆಯಿದೆ. ಹಾಗೆಯೇ ಈ ವಿಶಿಷ್ಟ ಶಕ್ತಿಗಳು ಆಚರಣೆಯ ಸಂದರ್ಭದಲ್ಲಿ ದೈವದ ಪಾತ್ರಿಯ ಮೂಲಕ ಅಭಿವ್ಯಕ್ತಗೊಳ್ಳುತ್ತವೆ. ಲೌಕಿಕ ಹಾಗೂ ಅಲೌಕಿಕ ಜಗತ್ತಿನ ಮಧ್ಯಸ್ಥ ಈ ಪಾತ್ರಿಯಾದರೆ ಆಚರಣೆಯ ಎಲ್ಲ ಕ್ರಿಯೆಗಳನ್ನು ಚಾಲನೆಗೊಳಿಸುವವ ಹಾಗೂ ನಿಯಂತ್ರಿಸುವವ ಬೈದ್ಯ.

ಕಾಡ್ಯನಾಟ ಒಂದು ಸಮುದಾಯದ ಸಾಮೂಹಿಕ ಹಬ್ಬ. ಇದರಲ್ಲಿ ಭಾಗವಹಿಸುವವರು ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆಯೇ ಹೊರತು ವೀಕ್ಷಕರಾಗಿ ಉಳಿಯುವುದಿಲ್ಲ. ಕೂಡುಕಟ್ಟಿನ ಸದಸ್ಯರೆಲ್ಲರೂ ನಾಲ್ಕುರಾತ್ರಿ ಮೂರು ಹಗಲು ಕಾಡ್ಯನ ಮನೆಯ ಪರಿಸರದಲ್ಲೇ ಉಳಿಯುತ್ತಾರೆ. ಈ ಬಗೆಯ ಸಾಮೂಹಿಕ ಪಾಲ್ಗೊಳ್ಳುವಿಕೆ ಅವರಲ್ಲಿ ಒಂದು ಬಗೆಯ ಸಾಂಘಿಕ ಏಕತೆಯನ್ನು ರೂಪಿಸುತ್ತದೆ. ಇದರಿಂದಾಗಿ ಪ್ರತಿಯೊಬ್ಬನೂ ಸಮಾಜದೊಳಗೆ ತನ್ನ ಸ್ಥಾನ ಹಾಗೂ ಕರ್ತವ್ಯಗಳನ್ನು ಗುರುತಿಸಿಕೊಳ್ಳುವಂತಾಗುತ್ತದೆ.

ಧಾರ್ಮಿಕ ಆಚರಣೆಯ ಚೌಕಟ್ಟಿನೊಳಗೆ ಜನಪದ ರಂಗಭೂಮಿಯ ಪ್ರಕಾರಗಳು ಪ್ರದರ್ಶನಗೊಳ್ಳುವುದು ಸಹಜ ಸಂಗತಿ. ಕಾಡ್ಯನಾಟದಲ್ಲಿನ ಆಶುಪ್ರಹಸನ ರೂಪದ ಕೋಲಬಲಿ - ಹಗರಣಗಳು ಇಡಿಯ ಆಚರಣೆಗೆ ನಾಟಕೀಯತೆಯನ್ನು ತರುತ್ತವೆ. ಸಮಾಜದ ದುರ್ಬಲ ವರ್ಗವೊಂದು ಇಲ್ಲಿನ ಜಾತಿಪದ್ಧತಿ, ಏರು ಶ್ರೇಣಿ ವ್ಯವಸ್ಥೆ, ಮಡಿ ಮೈಲಿಗೆಯಿಂದ ಹತ್ತಿಕ್ಕಲ್ಪಟ್ಟ ಭಾವವನ್ನು ತುಟಿತೆರೆದು ಮಾತನಾಡುವ ದನಿಯನ್ನು ಇಲ್ಲಿ ಪಡೆಯುತ್ತದೆ. ಎಂಬುದು ಗಮನಿಸತಕ್ಕ ಅಂಶ. ಭಾಗಾಳುಗಳಲ್ಲಿನ ಉತ್ಸಾಹ, ಉಲ್ಲಾಸಗಳನ್ನೂ ಅವು ಮೂಡಿಸುವ

ಮನರಂಜನೆಯನ್ನೂ ಈ ಹಗರಣಗಳನ್ನು ಹೋಲುವ ಆಚರಣೆಗಳಲ್ಲಿ ಗುರುತಿಸಬಹುದು. ದಾಸರಕೋಲ, ಹುಲಿಹಂದಿಕೋಲ, ಕುದುರೆಕೋಲ, ಜ್ವರನಕೋಲ, ಕೆಮ್ಮನಕೋಲ, ತಿಗಣೆಕೋಲ, ಬ್ರಾಹ್ಮಣಕೋಲಗಳು ವಿಧಿಕ್ರಿಯೆಯ ಭಾಗಗಳಾಗಿ ನಡೆಯುತ್ತವೆ.

ಕರಾವಳಿ ಪ್ರದೇಶದಲ್ಲಿ ನಾಗಾರಾಧನೆ ಎನ್ನುವುದು ಸ್ಥಳೀಕ ಜನರ ಒಂದು ಆರಾಧನಾ ಪದ್ಧತಿ. ನಾಗದರ್ಶನ, ನಾಗಮಂಡಲ, ಆಶ್ಲೇಷ ಬಲಿ ಮುಂತಾದ ನಾಗಸಂಬಂಧಿ ವೈದಿಕ ಆಚರಣೆಗಳು ಈ ಪ್ರದೇಶದಲ್ಲಿ ವ್ಯಾಪಕವಾಗಿದ್ದರೂ ಕಾದ್ಯನಾಟ (ಮೇರ), ಸ್ವಾಮಿಕೋಲ (ಪಾಣರು) ಗಳಂತಹ ಆಚರಣೆಯನ್ನು ಕಂಡಾಗ ಸರ್ಪಾರಾಧನೆ ಮೂಲತಃ ಒಂದು ಅವೈದಿಕ ಹಿನ್ನೆಲೆಯುಳ್ಳ ಆಚರಣೆ ಎಂಬ ನಿರ್ಧಾರಕ್ಕೆ ಬರಬಹುದಾಗಿದೆ. (ಎ.ವಿ.ಎನ್.ಎ.)

**ಕಾದ್ರೊಳ್ಳಿ :** ಬೆಳಗಾಂವಿ ಜಿಲ್ಲೆ ಸಂಪಗಾವ ತಾಲ್ಲೂಕಿನ ಒಂದು ಗ್ರಾಮ. ಬೈಲಹೊಂಗಲದಿಂದ 19ಕಿಮೀ ದೂರದಲ್ಲಿದೆ. ಈ ಗ್ರಾಮದ ಪೂರ್ವದ ಹೆಸರು ಕಂದರಹಳ್ಳಿ ಎಂದು ಇಲ್ಲಿನ 1075ರ ಶಾಸನದಿಂದ ತಿಳಿದುಬರುತ್ತದೆ. ಈ ಸ್ಥಳದ ಹೆಸರನ್ನು ಚೆನ್ನಬಸವಣ್ಣ ಮತ್ತು ಕಳಚುರಿ ಸೈನ್ಯದ ನಡುವೆ ಹೋರಾಟದ ಸಂದರ್ಭದೊಡನೆ ತಳಕು ಹಾಕುವ ಒಂದು ಪರಿಪಾಠ ಬೆಳೆದುಬಂದಿದೆ. ಇಲ್ಲಿ ವೀರಭದ್ರ, ಹನುಮಂತ, ದ್ಯಾಮವ್ವ ಮತ್ತು ರುದ್ರದೇವರ ಗುಡಿಗಳಿವೆ. ಸಂಪೂರ್ಣವಾಗಿ ಜೀರ್ಣೋದ್ಧಾರ ಮಾಡಲ್ಪಟ್ಟ ವೀರಭದ್ರ ದೇವರ ಗುಡಿಯಲ್ಲಿ ಮೂರು ಶಾಸನಗಳು ಮತ್ತು ಚಾಳುಕ್ಯರ ಕಾಲದ ಪ್ರಾಚೀನ ಅವಶೇಷಗಳು ಇವೆ.

ವೀರಭದ್ರ ದೇವರ ಗುಡಿಯ ಮುಂದಿರುವ 1098ರ ಶಾಸನ ತ್ರಿಭುವನ ಮಲ್ಲನಿಗೆ (ವಿಕ್ರಮಾದಿತ್ಯ VI) ಸಂಬಂಧಿಸಿದ್ದು ಗಂಗವಂಶದ ಅರಿಕೇಸರಿ ದೇವ ಕಾದರವಳ್ಳಿಯನ್ನು ಆಳುತ್ತಿದ್ದನೆಂದಿದೆ. ಇದೇ ಶಾಸನದಲ್ಲಿ ಕಾದರವಳ್ಳಿಯ ತರ್ದವಾಡಿ ಇಂದ್ರಯ್ಯನು ರಾಮೇಶ್ವರ ದೇವರಿಗೆ ಕೊಡಮಾಡಿದ ದತ್ತಿಯನ್ನು ದಾಖಲಿಸಿದೆ. ಇಲ್ಲಿದ್ದ ಪಾರ್ಶ್ವನಾಥನ ಮೂರ್ತಿಯನ್ನು ಈಗ ಕಿತ್ತೂರಿನ ವಸ್ತುಸಂಗ್ರಹಾಲಯದಲ್ಲಿ ಇಡಲಾಗಿದೆ. ಇಲ್ಲಿರುವ ಲಿಂಗಾಯತರ ಅದ್ವಯಾನಂದ ಮಠವನ್ನು ಸೀಮಾಮಠ ಎಂದೂ ಕರೆಯಲಾಗುತ್ತದೆ. ಖಂಡೋಬಾ ಸಾಧು ಮಠವೂ (ಶ್ರೀರಾಮಮಂದಿರ) ಇಲ್ಲಿದೆ. ಬಸವ ಜಯಂತಿ ದಿನ ವೀರಭದ್ರ ದೇವರ ಜಾತ್ರೆ ನಡೆಯುವುದು. (ಆರ್.ಐ.)

**ಕಾನಕಾನಹಳ್ಳಿ ವರದಾಚಾರ್ಯ :** 1870-1942. ರಸಜ್ಞ ಬೋಧನೆಗೆ ಹೆಸರಾಗಿದ್ದ ಪ್ರಾಚೀನ ಸಂಪ್ರದಾಯದ ವಿದ್ವಾಂಸರು. ಬೆಂಗಳೂರು ಜಿಲ್ಲೆಯ ಕಾನಕಾನಹಳ್ಳಿಯಲ್ಲಿ (ಈಗಿನ ಕನಕಪುರ) ಜನಿಸಿದರು. ಇವರ ತಂದೆ ಲಕ್ಷ್ಮೀನರಸಿಂಹಾಚಾರ್ಯ, ತಾಯಿ ಕಲ್ಯಾಣಮ್ಮ ವರದಾಚಾರ್ಯರು. ಪ್ರಾರಂಭದ ವ್ಯಾಸಂಗವನ್ನು ಹುಟ್ಟೂರಿನಲ್ಲಿ ಮುಗಿಸಿ, ಆಮೇಲೆ ಮೈಸೂರಿಗೆ ಹೋಗಿ ಅಲ್ಲಿನ ಕರ್ನಾಟಕ ಭಾಷೋಜ್ಜೀವಿನೀ ವಿದ್ಯಾ ಶಾಲೆಯಲ್ಲಿ ಕನ್ನಡವನ್ನು ವಿಶೇಷವಾಗಿ ವ್ಯಾಸಂಗ ಮಾಡಿದರು. ಅನಂತರ ಮೈಸೂರು ಮಹಾರಾಜರವರ ಸಂಸ್ಕೃತ ಪಾಠಶಾಲೆಯಲ್ಲಿ ವ್ಯಾಸಂಗ ಮಾಡಿ ವಿದ್ವತ್ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಮುಮ್ಮಡಿ ಕೃಷ್ಣರಾಜ ಒಡೆಯರವರ ಆಸ್ಥಾನ ವಿದ್ವಾಂಸರೂ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಕಾವ್ಯ ವ್ಯಾಕರಣಗಳ ಅಧ್ಯಾಪಕರೂ ಆಗಿದ್ದ ಮಾತಾಮಹ ಸಜ್ಜಿ ತಾತಾಚಾರ್ಯ ಮತ್ತು ಮೈಸೂರಿನ ಸಜ್ಜಿ ವೆಂಕಟಾಚಾರ್ಯರ ಬಳಿ ಇವರು ವಿಶೇಷ ಶಿಷ್ಯವೃತ್ತಿ ನಡೆಸಿ, ವ್ಯಾಕರಣ ಮತ್ತು ಅಲಂಕಾರ ಶಾಸ್ತ್ರಗಳಲ್ಲಿ ಪರಿಶ್ರಮ ಪಡೆದರು.

ವರದಾಚಾರ್ಯರು ಮೈಸೂರು ಮಹಾರಾಜರವರ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿ ತಮ್ಮ ವೃತ್ತಿ ಜೀವನವನ್ನು ಆರಂಭಿಸಿದರು. ಅನಂತರ ಮಹಾರಾಜರವರ ಕಾಲೇಜಿನಲ್ಲಿ ಜೂನಿಯರ್ ಕನ್ನಡ ಪಂಡಿತರಾಗಿ ನೇಮಕಗೊಂಡು (ಸು.1917-18) ಸೇವೆಸಲ್ಲಿಸಿ ನಿವೃತ್ತರಾದರು (1927). ಅನಂತರ ಬನುಮಯ್ಯನವರ ಹೈಸ್ಕೂಲಿನಲ್ಲಿ ಆಗ ತಾನೆ ಪ್ರಾರಂಭವಾಗಿದ್ದ ಜೂನಿಯರ್ ಇಂಟರ್ ಮೀಡಿಯಟ್ ತರಗತಿಗೆ ಪಾಠ ಹೇಳಲು ಒಂದು ವರ್ಷಕಾಲ ವಿಶೇಷ ಪಂಡಿತರಾಗಿ ನೇಮಕಗೊಂಡರು. ಕನ್ನಡ ಸಾಹಿತ್ಯ ಪ್ರಪಂಚದ ಅನೇಕ ಹೆಸರಾಂತ ಸಾಹಿತಿಗಳು ಇವರ ಶಿಷ್ಯವರ್ಗಕ್ಕೆ ಸೇರಿದವರು.

ಇವರ ಪಾಂಡಿತ್ಯಕ್ಕೆ ನಿದರ್ಶನಗಳಾಗಿ ಕೆಲವು ಬರೆವಣಿಗೆಗಳು ಇವರಿಂದ ಮೂಡಿಬಂದಿವೆ. ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ



ಕನ್ನಡ ಕೈಪಿಡಿಯಲ್ಲಿ (1927) ಶಬ್ದಾಲಂಕಾರ, ಅರ್ಥಾಲಂಕಾರ ಪ್ರಕರಣಗಳು ಇವರ ಬೆಲೆಯುಳ್ಳ ಕೊಡುಗೆ. ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಸಂಪುಟ-1 ಸಂಚಿಕೆ 3-4 (1916-17) ಪ್ರಕಟವಾಗಿರುವ ಕರ್ನಾಟಕ ಶಬ್ದಾನುಶಾಸನ ತತ್ತ್ವಾಲೋಕಂ ಎಂಬ ಲೇಖನಗಳಲ್ಲಿ ಶಬ್ದಾನುಶಾಸನದ ವ್ಯಾಖ್ಯಾನಕಾರ ಸೂತ್ರ ವೃತ್ತಿಕಾರನಾದ ಗ್ರಂಥಕರ್ತ ಭಟ್ಟಾಕಳಂಕನಿಗಿಂತ ಭಿನ್ನನಾದವನು ಎಂದು ಸಾಧಿಸಿದ್ದಾರೆ. ಪಿ.ಆರ್.ಕರಿಬಸವಶಾಸ್ತ್ರಿಗಳು ಸಂಪಾದಿಸಿರುವ ಲಕ್ಷ್ಮೀಶನ ಜೈಮಿನಿ ಭಾರತದ ಪರಿಷ್ಕರಣ ಕಾರ್ಯದಲ್ಲಿ (1912) ವರದಾಚಾರ್ಯರು ನೆರವಾಗಿದ್ದುದನ್ನು ಶಾಸ್ತ್ರಿಗಳು ಸ್ಮರಿಸಿದ್ದಾರೆ.

ಇವರ ಪಾಂಡಿತ್ಯವನ್ನು ಮೆಚ್ಚಿಕೊಂಡು ಆಗಿನ ಮೈಸೂರು ಮಹಾರಾಜರು ಇವರನ್ನು ತಮ್ಮ ಆಸ್ಥಾನ ವಿದ್ವಾಂಸರನ್ನಾಗಿ ನೇಮಿಸಿಕೊಂಡು ಗೌರವಿಸಿದರು. (ಎಂ.ವಿ.ಎಸ್.)

**ಕಾನಡಾ ಧುರೀಣ :** ಉತ್ತರ ಕನ್ನಡ ಜಿಲ್ಲೆಯಲ್ಲಿ ಪ್ರಕಟವಾಗುತ್ತಿದ್ದ ಒಂದು ವಾರಪತ್ರಿಕೆ. 1918ರಲ್ಲಿ ಈ ಪತ್ರಿಕೆಯನ್ನೂ ಇದರ ಮುದ್ರಣ ಪ್ರಕಾಶನಗಳಿಗಾಗಿ ಶ್ರೀರಾಮಕೃಷ್ಣ ಪ್ರಿಂಟಿಂಗ್ ಪ್ರೆಸ್ಸನ್ನೂ ಒಂದು ಖಾಸಗಿ ಪರಿಮಿತ ಸಹಕಾರಿ ಸಂಸ್ಥೆ ಪ್ರಾರಂಭಿಸಿತು. ಗಣಪತಿರಾವ್ ಮಾಸೂರ್‌ಕರ್ ಇದರ ವ್ಯವಸ್ಥಾಪಕರಾಗಿದ್ದರು. ಇವರ ಅನಂತರ ಸದಾಶಿವರಾವ್ ಮಾಸೂರ್‌ಕರ್ ಪತ್ರಿಕೆಯ ಕೊನೆಗಾಲದವರೆಗೂ ವ್ಯವಸ್ಥಾಪಕರಾಗಿದ್ದರು. ಪತ್ರಿಕೆ ಆರಂಭವಾಗಿ ಮೂರು ವರ್ಷಗಳವರೆಗೂ ಕನ್ನಡ ಮತ್ತು ಇಂಗ್ಲಿಷ್ ಎರಡರಲ್ಲೂ ಲೇಖನಗಳನ್ನು ಪ್ರಕಟಿಸುತ್ತಿತ್ತು. ರಾಮರಾವ್ ಎಸ್.ನಾಡಕರ್ಣಿ, ರಾಮರಾವ್ ಭಟಕಳಕರ, ಎಸ್.ಎಸ್.ಶಾಸ್ತ್ರಿ ಮತ್ತು ಜಿ.ಅಣ್ಣಾಜಿರಾವ್ ಅನುಕ್ರಮವಾಗಿ ಪತ್ರಿಕೆಯ ಸಂಪಾದಕರಾಗಿದ್ದರು. ಮುಂದೆ ಗಣೇಶ ರಾಮಯಾಜಿಯವರು ಪತ್ರಿಕೆ ನಿಲ್ಲುವತನಕ ದೀರ್ಘಕಾಲ ಅದರ ಸಂಪಾದಕರಾಗಿದ್ದರು. ಈ ಪತ್ರಿಕೆಗೆ ಅಖಿಲ ಕರ್ನಾಟಕದಲ್ಲಿ ಪ್ರಚಾರ ಪ್ರತಿಷ್ಠೆ ದೊರೆತು ಅನಂತರ ಇದು ಕರ್ನಾಟಕ ಧುರೀಣವಾಗಿ ಪರಿವರ್ತನೆಗೊಂಡಿತು. ಪತ್ರಿಕೆಯ ಪರಿಷ್ಕೃತ ಕನ್ನಡಶೈಲಿ, ದೊಡ್ಡ ಆಕಾರದ ರಚನೆ ಮತ್ತು ವಿಷಯ ಪ್ರೌಢಿಮೆಗಳಿಂದ ಜನಾದರಣೀಯವಾಗಿತ್ತು. ಪತ್ರಿಕೆಯಲ್ಲಿ ಉಗ್ರ ರಾಷ್ಟ್ರೀಯ ಸಂಪಾದಕೀಯ ಲೇಖನದ ಪ್ರಕಟಣೆಗಾಗಿ 1934ರ ಸುಮಾರಿಗೆ ಗಣೇಶ ರಾಮಯಾಜಿಯವರಿಗೆ ಬ್ರಿಟಿಷ್ ಸರ್ಕಾರ ಒಂದುತಿಂಗಳ ಜೈಲು ಶಿಕ್ಷೆ ವಿಧಿಸಿದ ಅನಂತರ ಇದು ಮತ್ತೆ ಹೊರಡಲಿಲ್ಲ. ಧುರೀಣ ಸಾಪ್ತಾಹಿಕ 1928ರ ಸುಮಾರಿಗೆ ಒಂದು ವಿಶೇಷಾಂಕವನ್ನು ಹೊರಡಿಸಿತು. 1952-54ರಲ್ಲಿ ಕರ್ನಾಟಕ ಧುರೀಣ ಹೊಸ ವ್ಯವಸ್ಥಾಪನೆಯಲ್ಲಿ ಕೆಲವು ಕಾಲ ಪ್ರಕಟವಾಗುತ್ತಿತ್ತು. ಆಗ ಜಿ.ಆರ್.ಹೆಗಡೆ ಮತ್ತು ರಾಮಚಂದ್ರ ವಾಲಗಳ್ಳಿ ಇವರು ಅನುಕ್ರಮವಾಗಿ ಪತ್ರಿಕೆಯ ಸಂಪಾದಕರಾಗಿದ್ದರು. *

**ಕಾಪಾಲಿಕ :** ವಾಮಾಚಾರಕ್ಕೆ ಹೆಸರಾಗಿದ್ದ ಒಂದು ಶೈವಪಂಥ. ನರಕಪಾಲವನ್ನು ಕೈಯಲ್ಲಿ ಧರಿಸಿ ಶಿವನನ್ನು ಭೈರವನ ಉಗ್ರ ರೂಪದಲ್ಲಿ ಪೂಜಿಸುವ ಆಚರಣೆಯಿಂದಾಗಿ ಈ ಪಂಥೀಯರು ಕಾಪಾಲಿಕರೆನಿಸಿದರು. ನರಕಪಾಲ, ಖಟ್ವಾಂಗಗಳೇ ಇವರ ಪ್ರಮುಖ ಚಿಹ್ನೆಗಳಾದುವು. ಮೈತ್ರಿ ಉಪನಿಷತ್ತ್, ಸೂತ್ರಸಂಹಿತೆ, ಪುರಾಣ ಮತ್ತು ತಂತ್ರಶಾಸ್ತ್ರಗಳಲ್ಲಿ ಕಾಪಾಲಿಕರನ್ನು ಕುರಿತ ಉಲ್ಲೇಖ ಕಂಡುಬಂದರೂ ಮಾಲತೀಮಾಧವ, ಚಂಡಕೌಶಿಕ ಮೊದಲಾದ ಗ್ರಂಥಗಳಲ್ಲಿ ಇವರ ಪಾತ್ರ ಪರಿಚಯ ಚೆನ್ನಾಗಿ

ದೊರೆಯುತ್ತದೆ. ಇವರ ಉಗ್ರತರವಾದ ಆಚರಣೆಗಳಿಂದಾಗಿ ಇವರಿಗೆ ಮಹಾವ್ರತಿಗಳು ಎಂಬ ಮತ್ತೊಂದು ಹೆಸರಿದ್ದಿತು. ಇವರ ಸಿದ್ಧಾಂತವನ್ನು ಸೋಮಸಿದ್ಧಾಂತ ಎಂದೂ ಕರೆಯಲಾಗಿದೆ. ಉಮಾಸಮೇತನಾದ ಶಿವನನ್ನು ಆರಾಧಿಸಿ ತತ್ಫಲವಾದ ಪುಣ್ಯದಿಂದ ಕೈಲಾಸವನ್ನು ಸೇರಿ ಅಲ್ಲಿ ಉಮೆಯಷ್ಟೇ ಸುಂದರಿಯಾದ ಸ್ತ್ರೀಯೊಡನೆ ವಿಹರಿಸುವುದೇ ಇವರ ಎಲ್ಲ ಆಚರಣೆಗಳ ಪರಮೋದ್ದೇಶ ಎಂಬುದಾಗಿ ಕೃಷ್ಣಮಿಶ್ರನ ಪ್ರಬೋಧಚಂದ್ರೋದಯ ಎಂಬ ಗ್ರಂಥದಲ್ಲಿ ಹೇಳಿದೆ.

ಉತ್ತರ ಭಾರತದಲ್ಲಿ ಹೆಚ್ಚು ಪ್ರಚಾರದಲ್ಲಿದ್ದ ಈ ಮತ ಕರ್ನಾಟಕದಲ್ಲೂ ಸ್ವಲ್ಪ ಮಟ್ಟಿಗೆ ಹರಡಿತ್ತು ಎಂಬುದಕ್ಕೆ ಕೆಲವು ಆಧಾರಗಳಿವೆ.

ಶಂಕರಾಚಾರ್ಯರು ತಾವು ಕರ್ನಾಟಕಕ್ಕೆ ಹೋಗುವುದಾಗಿ ಹೇಳಿದಾಗ, ಅಲ್ಲಿ ಕಾಪಾಲಿಕರು ಹೆಚ್ಚು; ಆದ್ದರಿಂದ ಹೋಗಬೇಡ ಎಂದು ವಿದರ್ಭದ ರಾಜ ಸೂಚಿಸಿದಂತೆ ವಿದ್ಯಾರಣ್ಯರ (14ನೆಯ ಶತಮಾನ) ಶಂಕರ ದಿಗ್ವಿಜಯ ಹೇಳುತ್ತದೆ. ಯಶಸ್ತಿಲಕ ಚಂಪೂಗ್ರಂಥ'ದಲ್ಲಿ (10ನೆಯ ಶತಮಾನ) ತಮ್ಮ ದೇಹದ ಮಾಂಸವನ್ನೇ ಮಾರುತ್ತಿದ್ದ ಮಹಾವ್ರತಿಗಳ ಪ್ರಸ್ತಾಪವಿದೆ. ಚೆನ್ನಬಸವಣ್ಣನವರು ಮಹಾವ್ರತಿಗಳನ್ನು ಹೆಸರಿಸುತ್ತಾರೆ. ಅಲ್ಲಮಪ್ರಭು ಕಾಪಾಲಿಕರ ಕೆಲವು ಆಚರಣೆಗಳನ್ನು ತಮ್ಮ ವಚನಗಳಲ್ಲಿ ಖಂಡಿಸಿದ್ದಾರೆ. ಶ್ರೀ ಶೈಲದಲ್ಲಿ ಗೋರಕ್ಷನೆಂಬ ವಾಮಾಚಾರಿಯನ್ನು ಅಲ್ಲಮಪ್ರಭು ವಾದದಲ್ಲಿ ಸೋಲಿಸಿ ಅವನಲ್ಲಿ ದೈವೀ ಪ್ರಜ್ಞೆಯನ್ನು ಮೂಡಿಸಿದ ಅಂಶ ಪ್ರಭುಲಿಂಗಲೀಲೆಯಲ್ಲಿ ಉಲ್ಲೇಖಿತವಾಗಿದೆ. ಶ್ರವಣಬೆಳಗೊಳದ 1100ರ ಒಂದು ಶಾಸನದಲ್ಲಿ ಕಾಪಾಲಿಕರು ಹಸಿಯ ತಲೆಗಳನ್ನು ಪೋಣಿಸಿ ಮಾಲೆ ಮಾಡಿಕೊಳ್ಳುತ್ತಿದ್ದ ವಿಷಯವಿದೆ. 1148ರ ಒಂದು ಶಾಸನದಲ್ಲಿ ಮಹಾವ್ರತಿಗಳನ್ನು ಹೆಸರಿಸಲಾಗಿದೆ. ಮಂಡ್ಯ ಜಿಲ್ಲೆಯ ಆದಿಚುಂಚನಗಿರಿಯಲ್ಲಿರುವ ಕೆಲವು ಸಮಾಧಿಗಳು ಕಾಪಾಲಿಕರವಿರಬಹುದೆಂಬ ಒಂದು ಅಭಿಪ್ರಾಯವಿದೆ.

12ನೆಯ ಶತಮಾನದಿಂದ ವೀರಶೈವಧರ್ಮ ಪ್ರಬಲಗೊಂಡಂತೆಲ್ಲ ಕಾಪಾಲಿಕ ಇತ್ಯಾದಿ ವಾಮಾಚಾರ ಶೈವಪಂಥಗಳು ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡಂತೆ ತೋರುತ್ತದೆ. (ಎ.ಎಲ್.ಎಸ್.)

**ಕಾಫಿ :** ಕರ್ನಾಟಕದ ಪ್ರಮುಖ ತೋಟದ ಬೆಳೆಗಳಲ್ಲಿ ಒಂದು. ರಾಜ್ಯಕ್ಕೆ ವಿದೇಶಿ ವಿನಿಮಯ ಗಳಿಸಿಕೊಡುವ ಬೆಳೆಗಳಲ್ಲಿ ಕಾಫಿಯದು ಪ್ರಮುಖ ಸ್ಥಾನ. 1973-74ರ ಸಾಲಿನಲ್ಲಿ ಕಾಫಿಯ ರಫ್ತಿನಿಂದ ಭಾರತ ಗಳಿಸಿದ ವರಮಾನ 45 ಕೋಟಿ 48 ಲಕ್ಷ ರೂಪಾಯಿಗಳು. ಇದರಲ್ಲಿ ಸಿಂಹಪಾಲು ಕರ್ನಾಟಕದ ಕಾಫಿ ಬೆಳೆಯಿಂದ ಬಂದುದು. ಕರ್ನಾಟಕದಲ್ಲಿ ಕಾಫಿಯ ಬೇಸಾಯ ಪಶ್ಚಿಮ ಘಟ್ಟಗಳಿಗೆ ಸೀಮಿತವಾಗಿದೆ. ರಾಜ್ಯದಲ್ಲಿ 1973-74ರ ಅಂಕಿ ಅಂಶಗಳ ಪ್ರಕಾರ ಒಟ್ಟು 91,314 ಹೆಕ್ಟೇರುಗಳಷ್ಟು ಪ್ರದೇಶದಲ್ಲಿ ಕಾಫಿ ಬೇಸಾಯ ಇದ್ದು, 1999-2000ಕ್ಕೆ ಅದು 1,92,130 ಹೆಕ್ಟೇರ್‌ಗೆ ಏರಿತು. ಅದರಲ್ಲಿ 1,10,057 ಹೆಕ್ಟೇರ್‌ಗಳಲ್ಲಿ ಅರ್‍ಯಾಬಿಕ ಕಾಫಿಯನ್ನು ಮತ್ತು 82,073 ಹೆಕ್ಟೇರುಗಳಲ್ಲಿ ರೊಬಸ್ಟ ಕಾಫಿಯನ್ನು ಬೆಳೆಯಲಾಗುತ್ತದೆ. ರಾಜ್ಯದಲ್ಲಿ ಕಾಫಿಯ ಒಟ್ಟು ಉತ್ಪನ್ನ 2,09,100 ಮೆಟ್ರಿಕ್ ಟನ್‌ಗಳು. ಇದು ಇಡೀ ಭಾರತದಲ್ಲಿ ಬೆಳೆಯುವ ಕಾಫಿಯ ಸುಮಾರು ಶೇಕಡ 70 ಭಾಗದಷ್ಟಾಗುತ್ತದೆ. ಕರ್ನಾಟಕದಲ್ಲಿ ಚಿಕ್ಕಮಗಳೂರು ಮತ್ತು ಕೊಡಗು ಜಿಲ್ಲೆಗಳದೇ ಸಿಂಹಪಾಲು. ಮೂರನೆಯ ಪ್ರಮುಖ ಕಾಫಿ ಬೆಳೆಯುವ ಜಿಲ್ಲೆ ಹಾಸನ. ಉಳಿದ ಕೆಲವು ಜಿಲ್ಲೆಗಳಲ್ಲಿ ಅತ್ಯಲ್ಪ ಪ್ರಮಾಣದಲ್ಲಿ ಕಾಫಿ ಬೆಳೆಯಲಾಗುತ್ತದೆ. ಕರ್ನಾಟಕದಲ್ಲಿ ಬೆಳೆಯುವ ಕಾಫಿಯಲ್ಲಿ ಪ್ರಧಾನವಾಗಿ ಅರ್‍ಯಾಬಿಕ (ಕಾಫೀಯ ಅರ್‍ಯಾಬಿಕ) ಮತ್ತು ರೊಬಸ್ಟ (ಕಾಫೀಯ ಕ್ಯಾನಿಫೋರ) ಎಂಬ ಎರಡು ಪ್ರಭೇದಗಳಿವೆ. ಅರ್‍ಯಾಬಿಕದ ಬೆಳವಣಿಗೆ ಎತ್ತರದ ಪ್ರದೇಶಗಳಲ್ಲಿ (900-1200ಮೀ) ಉತ್ತಮವಾಗಿದೆಯಾದರೆ ರೊಬಸ್ಟ ಕಡಿಮೆ ಎತ್ತರದ (ಸು.450ಮೀ). ಪ್ರದೇಶಗಳಲ್ಲೂ ಬೆಳೆಯಬಲ್ಲುದು. ಅಲ್ಲದೆ ರೊಬಸ್ಟಕ್ಕಿಂತ ಅರ್‍ಯಾಬಿಕ ಬಗೆಗೆ ಹೆಚ್ಚು ನೆರಳಿನ ಅಗತ್ಯ ಉಂಟು.

ಅರ್‍ಯಾಬಿಕ ಬಗೆ ಮೂಲತಃ ಇಥಿಯೋಪಿಯದ ಕಾಫ ಎಂಬ ಪ್ರಾಂತ್ಯದ್ದೆಂದೂ ರೊಬಸ್ಟ ಬಗೆ ಮಧ್ಯ ಆಫ್ರಿಕದ್ದೆಂದೂ ತಿಳಿಯಲಾಗಿದೆ. ಭಾರತಕ್ಕೆ ಕಾಫಿ ಬಂದುದರ ಬಗ್ಗೆ ಕಟ್ಟುಕತೆಯೊಂದಿದೆ. 1670ರ ಸುಮಾರಿಗೆ ಬಾಬಾಬುಡನ್ ಎಂಬ ಮುಸ್ಲಿಂ ಸಂತ ಯೆಮೆನಿನಿಂದ ಅರ್‍ಯಾಬಿಕ ಕಾಫಿಯ (ಮೋಚ ಕಾಫಿ) ಏಳು ಬೀಜಗಳನ್ನು ತಂದು ಚಿಕ್ಕಮಗಳೂರು ಬಳಿಯ ದತ್ತಾತ್ರೇಯ ಪೀಠದಲ್ಲಿನ ತನ್ನ ಆಶ್ರಮದಲ್ಲಿ ಬೆಳೆಸಿದನಂತೆ. ಈ ಬೆಟ್ಟಕ್ಕೆ ಬಾಬಾಬುಡನ್‌ಗಿರಿ ಎಂಬ ಹೆಸರೇ ಹೆಚ್ಚು ಪ್ರಚಲಿತವಿದೆ. ಕ್ರಮೇಣ ಸುತ್ತಮುತ್ತಲಿನ ಹಳ್ಳಿಗಳ, ಮುಖ್ಯವಾಗಿ ಅತ್ತಿಗುಂಡಿ ಎಂಬ ಹಳ್ಳಿಯ, ಮನೆಗಳ ಹಿತ್ತಲಿನಲ್ಲಿ ಅಂದರೆ ಮನೆತೋಟಗಳಲ್ಲಿ ಕಾಫಿಯನ್ನು ಬೆಳೆಸಲಾರಂಭಿಸಿದರು. ಅಲ್ಲಿಂದ ಕೊಡಗಿನ ನಾಲ್ಕು ನಾಡು ಪ್ರದೇಶಕ್ಕೆ ಸಸಿಗಳನ್ನು ಅತ್ತಿಗುಂಡಿಯಿಂದ ತಂದು ನೆಡಲಾಯಿತು. ಇಲ್ಲಿಂದಲೇ ದಕ್ಷಿಣ ಭಾರತದ ಇತರೆಡೆಗಳಿಗೂ ಕಾಫಿ ಗಿಡಗಳನ್ನು ಸಾಗಿಸಲಾಯಿತೆಂದು ಹೇಳಲಾಗಿದೆ. ಇನ್ನೊಂದು ಮೂಲದ ಪ್ರಕಾರ ಅರೇಬಿಯಾದ ವರ್ತಕರು ತಂದ ಕಾಫಿ ಬೀಜಗಳನ್ನು ಕೊಡಗಿನಲ್ಲಿ ಸ್ವತಂತ್ರವಾಗಿ ನೆಟ್ಟು ಬೆಳೆಯಲಾಯಿತು. ಆದರೂ 1820ನೆಯ ಇಸವಿಯ ಅನಂತರದಲ್ಲಿ ಸಾಹಸಿಗಳಾದ ಬ್ರಿಟಿಷರು ಬಂಡವಾಳ ಹೂಡಿ ಕಾಫಿ ತೋಟಗಳನ್ನು ರಚಿಸುವವರೆಗೂ ಕಾಫಿಯ ಬೇಸಾಯ ಇರಲಿಲ್ಲವೆಂದೇ ಹೇಳಬಹುದು. ಅನಂತರ ಸುಮಾರು 40 ವರ್ಷಗಳಲ್ಲಿ ಕಾಫಿಯ ಕೃಷಿ ಶೀಘ್ರಗತಿಯಲ್ಲಿ ಮುಂದುವರಿಯಿತು. 1869ರ ವೇಳೆಗೆ ಸು.58,000 ಹೆಕ್ಟೇರುಗಳಷ್ಟು ಕಾಫಿ ತೋಟಗಳಾದುವು. 1830 ರಲ್ಲಿ ಥಾಮಸ್ ಕ್ಯಾನನ್ ಎಂಬಾತ ಚಿಕ್ಕಮಗಳೂರು ಬಳಿ ಆರಂಭಿಸಿದ ಮೈಲಿ ಮನೆ ಕಾಫಿ ತೋಟ ಇಂದಿಗೂ ಉತ್ತಮ ಸ್ಥಿತಿಯಲ್ಲಿದೆ. ಪ್ಯಾರಿ ಕಂಪನಿಯ ಜೋಲಿ ಎಂಬಾತ 1823-25ರಲ್ಲಿ ಶಿವಮೊಗ್ಗದ ಬಳಿ ಕಾಫಿ ತೋಟಗಳನ್ನು ಆರಂಭಿಸಿದ. 1843ರಲ್ಲಿ ಫ್ರೆಡರಿಕ್ ಗ್ರೀನ್ ಎಂಬಾತ ಸಕಲೇಶಪುರದ ಬಳಿಯ ಐಗೂರಿನಲ್ಲೂ ಫ್ರೆಡ್ ಮೆಪನ್ ಎಂಬಾತ ಕಡೂರು ಬಳಿಯ ಎಮ್ಮೆದೊಡ್ಡಿಯಲ್ಲೂ ಕಾಫಿ ಬೆಳೆಯಲಾರಂಭಿಸಿದರು. 1854ರಲ್ಲಿ ಫೌಲರ್ ಎಂಬಾತ ಮಡಿಕೇರಿಯ ಬಳಿಯೂ ಫೆನಲ್ ಎಂಬಾತ ಉಲಿಗೊಳ್ಳಿಯಲ್ಲೂ ಕಾಫಿ ತೋಟ ಆರಂಭಿಸಿದರು. ಅಂತೆಯೇ 1855ರಲ್ಲಿ ಮಾನ್ ಮತ್ತು ಸ್ಟೀವರ್ಟ್ ಎಂಬವರು ಸಂಪಾಜೆ ಘಾಟಿಯಲ್ಲೂ ಚಿಸೋಮ್ ಎಂಬಾತ ಶುಂಠಿಕೊಪ್ಪ, ಬೇಲಿಕಾಡು ಮತ್ತು ಎಮ್ಮೆಗುಂಡಿಗಳಲ್ಲೂ (1860) ಮ್ಯಾಂಗಲ್ಸ್ ಎಂಬಾತ 1863ರಲ್ಲಿ ಅಲಿಕುಟ್ಟಿ ಹಾಲೇರಿಗಳಲ್ಲೂ ಕಾಫಿ ಬೇಸಾಯವನ್ನು ಆರಂಭಿಸಿದರು. ಹೀಗಾಗಿ 1856ರ ವೇಳೆಗೆ ಕಾಫಿಯ ವಿಸ್ತೀರ್ಣ ಕೊಡಗೊಂದರಲ್ಲೇ 11,330 ಹೆಕ್ಟೇರುಗಳಷ್ಟು ವಿಸ್ತಾರವಾಗಿತ್ತು. ಖಾಸಗಿ ಉದ್ಯಮಿಗಳು ಮಾತ್ರವಲ್ಲದೆ ಕಂಪನಿಗಳೂ ಕಾಫಿ ವ್ಯವಸಾಯದಲ್ಲಿ ತೊಡಗಿದವು. 1870ರಲ್ಲಿ ಕೊಡಗಿನಲ್ಲಿ ಆರಂಭವಾದ ಕರ್ನಾಟಕ್ ಕಾಫಿ ಕಂಪನಿ ಎಂಬುದು ಇಂಥ ಸಂಸ್ಥೆಗಳಲ್ಲಿ ಬಹುಶಃ ಮೊದಲನೆಯದು.

1860ರ ಸುಮಾರಿನಲ್ಲಿ ಕೃಷಿಯಲ್ಲಿದ್ದ ಕಾಫಿ ಪ್ರಮುಖವಾಗಿ ಅರ್‍ಯಾಬಿಕ (ಓಲ್ಡ್ ಚಿಕ್ಸ್) ಬಗೆಯದೇ ಆಗಿತ್ತು. ಕಾಫಿ ಬೇಸಾಯ ತನ್ನ ಉಚ್ಛ್ರಾಯಸ್ಥಿತಿಯನ್ನು ತಲಪಿದ್ದೂ ಈ ಅವಧಿಯಲ್ಲೇ. ಆದರೆ ಇದೇ ಸಮಯದಲ್ಲಿ ಕಾಫಿ ಹಲವಾರು ಬಗೆಯ ಬೂಷ್ಟು ಮತ್ತು ಕೀಟರೋಗಗಳಿಗೆ ತುತ್ತಾಗತೊಡಗಿತ್ತು. ಹೀಗೆ ಕಾಫಿಯ ಮೇಲೆ ದಾಳಿಯಿಕ್ಕಿದ ರೋಗ, ಪಿಡುಗುಗಳಲ್ಲಿ ಮುಖ್ಯವಾದವು ಬಿಳಿಬಣ್ಣದ ಕಾಂಡಕೊರಕ (ಕ್ಸೈಲೊಟ್ರೀಕಸ್ ಕ್ವಾಡ್ರಿಪೆಸ್) ಎಂಬ ಕೀಟ, ಹಸಿರು ತಿಗಣೆ (ಕಾಕಸ್ ವಿರಿಡಸ್) ಎಲೆ ತುಕ್ಕುರೋಗ (ಹೆಮಿಲಿಯ ವೆಸ್ಟಾ ಟ್ರಿಕ್ಸ್). ಇದರಿಂದಾಗಿ ಕಾಫಿಯ ಕೃಷಿ ಇಳಿಮುಖವಾಗುತ್ತ ಬಂತು. ಸಣ್ಣಪುಟ್ಟ ತೋಟಗಳಂತೂ ಸಂಪೂರ್ಣವಾಗಿ ನಾಶವಾದುವು. ಇದೇ ಅವಧಿಯಲ್ಲಿ ಶ್ರೀಲಂಕಾದಲ್ಲಿ ಸಿಂಹಳ ಎಲೆತುಕ್ಕುರೋಗದಿಂದಾಗಿ ಕಾಫಿ ಬೇಸಾಯ ಸಂಪೂರ್ಣವಾಗಿ ನಿಂತುಹೋಯಿತು. ಕರ್ನಾಟಕದಲ್ಲಿ ಕಾಫಿ ನಿರ್ನಾಮವಾಗುವುದನ್ನು ತಪ್ಪಿಸಲೋಸುಗ ಹಲವಾರು ಕ್ರಮಗಳನ್ನು ಕೈಗೊಳ್ಳಲಾಯಿತು. ಸಿಲ್ವರ್ ಓಕ್, ಹಾಲುವಾಣ ಮುಂತಾದ ನೆರಳೀಯುವ ಮರಗಳನ್ನು ಬೆಳೆಸಿ ಎಲೆತುಕ್ಕುರೋಗ ಮತ್ತು ಕಾಂಡಕೊರಕ ಕೀಟಗಳನ್ನು ನಿಯಂತ್ರಿಸುವ ಪ್ರಯತ್ನ ನಡೆಯಿತಲ್ಲದೆ ರೋಗನಿರೋಧಕ ಸಾಮರ್ಥ್ಯವುಳ್ಳ ಕಾಫಿ ತಳಿಗಳನ್ನು ಪಡೆಯುವ ಕಾರ್ಯವೂ ಆರಂಭವಾಯಿತು. ಇಂಥ ತಳಿಗಳಲ್ಲಿ ಮೊದಲನೆಯದು ಕೂರ್ಗ್ಸ್ ಎಂಬುದು. ಸ್ಟ್ಯಾನ್ಲಿ ಜೂಪ್ ಎಂಬಾತ 1870ರಲ್ಲಿ ಇದನ್ನು ವೃದ್ಧಿಸಿದ. ಆದರೆ ಈ ತಳಿ ಕೂಡ ಎಲೆತುಕ್ಕು ರೋಗಕ್ಕೆ ಬಲಿಯಾಗುವುದೆಂದು ತಿಳಿದು ಬಂದು ಬ್ರಜಿಲ್, ವೆನಿಜೂಲ,

ಕಾಸ್ಟರೀಕ, ಜಮೈಕ ಮುಂತಾದೆಡೆಗಳಿಂದ ಉತ್ತಮ ಬಗೆಯ ಕಾಫಿ ತಳಿಗಳ ಬೀಜಗಳನ್ನು ಮ್ಯಾತೆಸನ್ ಎಂಬಾತ ತಂದು ಬೆಳೆಸಿದರೆ ಹ್ಯಾಮಿಲ್ಟನ್, ಜ್ಯಾಕ್‌ಸನ್, ಕೆಂಟ್, ಬ್ರೌನ್ ಮುಂತಾದವರು ರೋಗನಿರೋಧಕ ತಳಿಗಳನ್ನು ಬೆಳೆಸಲುಪಕ್ರಮಿಸಿದರು. ಹೀಗೆ ರೂಢಿಗೆ ತಂದ ತಳಿಗಳಲ್ಲಿ ಜ್ಯಾಕ್‌ಸನ್ಸ್ ಹೈಬ್ರಿಡ್ ಮತ್ತು ಕೆಂಟ್ಸ್ ಎಂಬವು ಪ್ರಧಾನವಾದುವು. ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಇಂಡೋಚೀನ ಪ್ರದೇಶದಿಂದ ರೊಬಸ್ಟ ಪ್ರಭೇದವನ್ನು ತಂದು ಕಡಿಮೆ ಎತ್ತರದ ಬೆಟ್ಟಸೀಮೆಗಳಲ್ಲಿ ಬೆಳೆಸಲಾರಂಭಿಸಿದರು. ಆದರೂ ಕಾಫಿಯ ಕೃಷಿ 1869ರಲ್ಲಿದ್ದ 1,20,000 ಹೆಕ್ಟೇರುಗಳಿಂದ 1941ರ ವೇಳೆಗೆ 72,400 ಹೆಕ್ಟೇರುಗಳಿಗೆ ಇಳಿಯಿತು. ಇದರಿಂದಾಗಿ ಕಾಫಿಯ ಉದ್ಯಮದ ಹಲವಾರು ಸಮಸ್ಯೆಗಳನ್ನು ಪರಿಹರಿಸುವ ಸಲುವಾಗಿ 1892ರಲ್ಲಿ ದಕ್ಷಿಣ ಭಾರತದ ಪ್ಲಾಂಟರುಗಳ ಸಂಯುಕ್ತ ಸಂಘ (ಯುನೈಟೆಡ್ ಪ್ಲಾಂಟರ್ಸ್ ಅಸೋಸಿಯೇಷನ್ ಆಫ್ ಸದರ್ನ್ ಇಂಡಿಯ) ಸ್ಥಾಪಿತವಾಯಿತು. 1914ರ ವೇಳೆಗೆ ಕೊಡಗಿನ ಪೊಲ್ಲಿಬೆಟ್ಟದಲ್ಲಿ ಮ್ಯಾತೆಸನ್ ಎಂಬಾತ ಕಾಫಿಯ ಎಲೆತುಕ್ಕು ಮತ್ತು ಇತರ ಬೂಷ್ಟು ರೋಗಗಳ ವಿರುದ್ಧ ರಾಸಾಯನಿಕಗಳನ್ನು ಸಿಂಪಡಿಸುವುದರ ಬಗ್ಗೆ ಪ್ರಯೋಗಗಳನ್ನು ಆರಂಭಿಸಿದ. ಅಂದಿನ ಮೈಸೂರಿನ ಕೃಷಿ ಇಲಾಖೆಯ ನಿರ್ದೇಶಕರಾಗಿದ್ದ ಲೆಸ್ಲಿ ಕೋಲ್ಮನ್ ಎಂಬವರ ಸತತ ಪ್ರಯತ್ನದಿಂದಾಗಿ ಮೈಸೂರು ಸರ್ಕಾರ ಚಿಕ್ಕಮಗಳೂರು ಜಿಲ್ಲೆಯ ಬಾಳೆಹೊನ್ನೂರಿನಲ್ಲಿ 1926ರಲ್ಲಿ ಕಾಫಿ ಪ್ರಯೋಗ ಶಾಲೆಯೊಂದನ್ನು (ಕಾಫಿ ಎಕ್ಸ್‌ಪೆರಿಮೆಂಟಲ್ ಸ್ಟೇಷನ್) ಸ್ಥಾಪಿಸಿತು. ಯುನೈಟೆಡ್ ಪ್ಲಾಂಟರ್ಸ್ ಅಸೋಸಿಯೇಷನ್ನಿನ ಮೊದಲ ವಿಜ್ಞಾನಾಧಿಕಾರಿಯಾದ ಮೇಜ್ ಮತ್ತು ಕಾಫಿ ಪ್ರಯೋಗ ಶಾಲೆಯ ವಿಜ್ಞಾನಿಗಳಾದ ಶ್ರೀನಿವಾಸನ್ ಮತ್ತು ನರಸಿಂಹಸ್ವಾಮಿ ಇವರ ಸಂಶೋಧನೆಯ ಫಲವಾಗಿ ಎಸ್ 288 ಎಂಬ ರೋಗನಿರೋಧಕ ಅರ್ಯಾಬಿಕ ತಳಿ ರೂಪುಗೊಂಡು 1938 ರಲ್ಲಿ ತೋಟಗಾರರಿಗೆ ಲಭ್ಯವಾಯಿತು. ಕ್ಷಿಪ್ರದಲ್ಲಿಯೇ ಎಸ್ 333 ಎಂಬ ಇನ್ನೊಂದು ಉತ್ತಮ ತಳಿಯನ್ನು ಬಿಡುಗಡೆ ಮಾಡಲಾಯಿತು. 1946ರಲ್ಲಿ ಬಾಳೆಹೊನ್ನೂರಿನ ಕಾಫಿ ಪ್ರಯೋಗಶಾಲೆಯನ್ನು ಕಾಫಿ ಬೋರ್ಡ್ ವಹಿಸಿಕೊಂಡು ಕೇಂದ್ರ ಕಾಫಿ ಸಂಶೋಧನ ಸಂಸ್ಥೆಯನ್ನಾಗಿ ಪರಿವರ್ತಿಸಿತು. ಕಾಫಿ ಗಿಡದ ಪೋಷಣೆ, ತಳೀಕರಣ ಮತ್ತು ರಕ್ಷಣೆಗಳೇ ಈ ಸಂಸ್ಥೆಯ ಪ್ರಧಾನ ಉದ್ದೇಶಗಳು. 1947ರಲ್ಲಿ ಕೊಡಗಿನ ಬೆಟ್ಟಹಳ್ಳಿಯಲ್ಲಿ ಕಾಫಿ ಸಂಶೋಧನೆಯ ಉಪಕೇಂದ್ರವೊಂದು ಆರಂಭವಾಯಿತು. ಬಾಳೆಹೊನ್ನೂರಿನ ಸಂಸ್ಥೆಯಲ್ಲಿ ರೂಪಿಸಿದ ಹೊಸ ತಳಿಗಳನ್ನು, ರಕ್ಷಣಾ ವಿಧಾನಗಳನ್ನು ದೊಡ್ಡಪ್ರಮಾಣದಲ್ಲಿ ರೂಢಿಸುವ ಕಾರ್ಯ ಈ ಉಪಕೇಂದ್ರದ್ದು. ಈ ಸಂಸ್ಥೆಯ ಸಂಶೋಧನೆಗಳ ಫಲವಾಗಿ 1946ರಲ್ಲಿ ಎಸ್ 785 ಎಂಬ ತಳಿಯೂ 1964ರಲ್ಲಿ ಎಸ್ 1934 ಎಂಬ ತಳಿಯೂ ಬಿಡುಗಡೆಯಾಗಿದೆ.

ಕರ್ನಾಟಕದಲ್ಲಿ ಬೆಳೆಯುವ ಕಾಫಿ ಬಗೆಗಳಲ್ಲಿ ಬಲು ಮುಖ್ಯವಾದುವು ಕಾಫೀಯ ಅರ್ಯಾಬಿಕ (ಅರ್ಯಾಬಿಕ), ಕಾಫೀಯ ಕ್ಯಾನಿಫೊರ (ರೊಬಸ್ಟ) ಮತ್ತು ಕಾಫೀಯ ಲೈಬೀರಿಕ (ಟ್ರೀ ಕಾಫಿ).

ಅರ್ಯಾಬಿಕ ಪ್ರಭೇದ ಪುಟ್ಟ ಮರ ಇಲ್ಲವೆ ದೊಡ್ಡ ಪೊದೆ. ತುಂಬ ಹುಲುಸಾಗಿ ಕವಲೊಡೆದು ಬೆಳೆಯುತ್ತದೆ. ಎಲೆಗಳ ಬಣ್ಣ ದಟ್ಟ ಹಸುರು. ಕಾಯಿಗಳು ಗುಂಡಗೆ ಇಲ್ಲವೆ ಕೊಂಚ ಉದ್ದುದ್ದವಾಗಿವೆ. ಮೊಗ್ಗುಗಳು ಎಲೆಗಳ ಬುಡದಲ್ಲಿ ಅಕ್ಟೋಬರ್-ಮಾರ್ಚ್ ತಿಂಗಳುಗಳ ನಡುವಣ ಕಾಲದಲ್ಲಿ ಹೊಮ್ಮುತ್ತವೆ. ಮಾರ್ಚ್ ತಿಂಗಳಿನಲ್ಲಿ ಮೊದಲ ಮಳೆಯಾದ 9-10 ದಿನಗಳ ತರುವಾಯ ಅರಳುವುವು. ನಿಷೇಚಿತ ಅಂಡಾಶಯ 8-9 ತಿಂಗಳುಗಳಲ್ಲಿ ಕಾಯಾಗಿ ಬೆಳೆದು ಮಾಗುತ್ತವೆ. ಅರ್ಯಾಬಿಕ ಪ್ರಭೇದ ಬಹುರೂಪಿ ಸಸ್ಯ. ಇದರಲ್ಲಿ ಓಲ್ಡ್ ಚಿಕ್ಸ್, ಕೂರ್ಗ್ಸ್, ಕೆಂಟ್ಸ್, ಎಸ್ 288, ಎಸ್ 795 ಮತ್ತು ಎಸ್ 1934 ಎಂಬ 6 ಮುಖ್ಯ ತಳಿಗಳುಂಟು.

ಓಲ್ಡ್ ಚಿಕ್ಸ್ ಎಂಬುದನ್ನು ಚಿಕ್ಕಮಗಳೂರಿನಲ್ಲಿ ಪ್ರಥಮತಃ ವೃದ್ಧಿಸಲಾಯಿತು. ಆದ್ದರಿಂದಲೇ ಇದಕ್ಕೆ ಈ ಹೆಸರು. ಕೂರ್ಗ್ಸ್ ಎಂಬುದನ್ನು 1870ರಲ್ಲಿ ಕೊಡಗಿನ ನಾಲ್ಕುನಾಡು ಎಂಬಲ್ಲಿ ರೂಪಿಸಲಾಯಿತು. ಇವೆರಡು ಬಗೆಗಳು ಎಲೆ ಕೊಳೆರೋಗಕ್ಕೆ ಬಲುಬೇಗ ಬಲಿಯಾಗುತ್ತವೆ. ಕೆಂಟ್ಸ್ ಎಂಬುದು ಮೂಡಿಗೆರೆ ವಲಯದ ದೊಡ್ಡನಗುಡ್ಡ ತೋಟದಲ್ಲಿ 1918-20ರ ಸುಮಾರಿನಲ್ಲಿ ವೃದ್ಧಿಯಾದ ತಳಿ. ಎಲೆಕೊಳೆ ರೋಗಕ್ಕೆ ಸುಲಭವಾಗಿ ಈಡಾಗದು. ಟಾಂಜನೀಯ ಮುಂತಾದ ಪರದೇಶಗಳಲ್ಲೂ ಇದನ್ನೂ ಇದರಿಂದ ಪಡೆಯಲಾದ ಇತರ ಬಗೆಗಳನ್ನೂ ಬೆಳೆಸಲಾಗುತ್ತಿದೆ. 1938 ರಿಂದ ಈಚೆಗೆ ಬೆಳೆಸಲಾಗುತ್ತಿರುವ ತಳಿಗಳಲ್ಲಿ ಎಸ್ 288, ಎಸ್ 333, ಎಸ್ 795 ಮತ್ತು ಎಸ್ 1934 ಮುಖ್ಯವಾದುವು. ಅರ್ಯಾಬಿಕ ತಳಿಯು ಹೆಚ್ಚು ತಾಪಮಾನವಿರುವ ತಗ್ಗಾದ ಪ್ರದೇಶಗಳಲ್ಲಿ ವಿವಿಧ ರೋಗಗಳಿಗೆ ಈಡಾಗುತ್ತಿದ್ದುದರಿಂದ ಆಫ್ರಿಕದಿಂದ ತಂದ ರೊಬಸ್ಟ ಎಂಬ ದೊಡ್ಡ ಕಾಂಡದ ದೊಡ್ಡ ಎಲೆಯ ಒರಟು ಸ್ವರೂಪದ ಕಾಫಿ ಗಿಡಗಳನ್ನು 1930ರ ದಶಕದಿಂದ ಬೆಳೆಸಲಾಯಿತು. ಇದು ಇಂದು ಕೊಡಗಿನ ಕೆಲಭಾಗಗಳು, ಸಕಲೇಶಪುರ ಮತ್ತು ಮೂಡಿಗೆರೆ ಮತ್ತು ಕೊಪ್ಪ ತಾಲ್ಲೂಕುಗಳಲ್ಲಿ ಹೆಚ್ಚು ಪ್ರಮಾಣದಲ್ಲಿ ಕಂಡುಬರುತ್ತದೆ. ಇತ್ತೀಚಿನ ದಶಕಗಳಲ್ಲಿ ಕಾವೇರಿ ಎಂಬ ಮಿಶ್ರತಳಿ ರೂಢಿ ಹೆಚ್ಚಾಗಿ ಬಂದಿತು. ಜೊತೆಗೆ ಸಿ.ಆರ್ ಎಂಬ ರೋಬಸ್ಟದ ಉಪತಳಿ ಈಗ ಹೆಚ್ಚು ಪ್ರಚುರವಾಗಿದೆ. ಅರ್ಯಾಬಿಕದಲ್ಲಿ ನಂಬರ್ 9 ಎಂಬ ಉಪತಳಿಯನ್ನೂ ಬೆಳೆಯಲಾಗುತ್ತಿದೆ. ಇವಲ್ಲದೆ ತುಂಗಭದ್ರಾ, ಹೇಮಾವತಿ, ಮೊದಲಾದ ತಳಿಗಳು ಬಂದಿದ್ದರೂ ಅವು ಹೆಚ್ಚು ಪ್ರಚುರದಲ್ಲಿಲ್ಲ.

ಕಾಫಿ ಮಂಡಳಿ ಪ್ರಕಟಿಸಿರುವ ಕಾಫಿ ಹಿಡುವಳಿ ಮತ್ತು ಬೆಳೆಗಾರರ ವಿವರ (2002):

| ರಾಜ್ಯಗಳು | ಒಂದು ಎಕರೆ ಯಿಂದ **10** ಎಕರೆವರೆಗೆ | ಹತ್ತು ಎಕರೆ ಯಿಂದ ಇಪ್ಪತ್ತೈದು ಎಕರೆವರೆಗೆ | ಇಪ್ಪತ್ತೈದು ಎಕರೆಗಿಂತ ಹೆಚ್ಚು | ಒಟ್ಟು ಬೆಳೆಗಾರರು |
|---|---|---|---|---|
| ಕರ್ನಾಟಕ | 22,747ಮಂದಿ | 3918ಮಂದಿ | 1653ಮಂದಿ | 28318ಮಂದಿ |
| ಕೇರಳ | 73,258 | 1876 | 1516 | 76,650 |
| ತಮಿಳು ನಾಡು | 14,254 | 788 | 296 | 15,338 |
| ಆಂಧ್ರ ಪ್ರದೇಶ | 1777 | 2 | 22 | 1801 |
| ಇತರೆಡೆ | 655 | --- | 9 | 664 |
| ಒಟ್ಟು ದೇಶದಲ್ಲಿ | 1,12,691 | 6578 | 3496 | 1,22,765 |

ಕಾಫಿ ಉತ್ಪನ್ನ ಇಂದು ಪೆಟ್ರೋಲ್ ಬಿಟ್ಟರೆ ಎರಡನೆಯ ಸ್ಥಾನದಲ್ಲಿರುವ ಅಂತಾರಾಷ್ಟ್ರೀಯವಾಗಿ ಅತ್ಯಂತ ಹೆಚ್ಚಿನ ವಹಿವಾಟು ನಡೆಯುವ ಸರಕಾಗಿದೆ. ಭಾರತದಲ್ಲಿ ಸರಾಸರಿ ಮೂರು ಲಕ್ಷ ಟನ್ ಕಾಫಿ ಬೀಜ ಉತ್ಪಾದನೆಯಾಗುತ್ತಿದ್ದು ಇದು ವಿಶ್ವದ ಒಟ್ಟು ಉತ್ಪನ್ನದ ಸೇ.3 ರಷ್ಟಾಗುತ್ತದೆ. ಆದರೂ ಕಾಫಿ ಮಾರಾಟದ ಬಗ್ಗೆ ವಿಶೇಷ ಕಾಳಜಿ ವಹಿಸಬೇಕಾಗಿರುವುದು ಇಂದಿನ ಅಗತ್ಯವಾಗಿದೆ. ವಿಶ್ವಮಟ್ಟದಲ್ಲಿ ಕಾಫಿ ಉತ್ಪಾದನೆ ಹೆಚ್ಚಿ ದರಗಳು ಅತ್ಯಂತ ಕಡಿಮೆ ಮಟ್ಟದಲ್ಲಿರುವುದರಿಂದ ಈ ಕ್ಷೇತ್ರ ಹೆಚ್ಚಿನ ಪೈಪೋಟಿ ಎದುರಿಸುತ್ತಿದೆ. ಸ್ಪೆಷಾಲಿಟಿ ಕಾಫಿ ಅಥವಾ ವಿಶೇಷ ಗುಣಮಟ್ಟದ ಕಾಫಿಗೆ ಆದ್ಯತೆ ನೀಡಲಾಗುತ್ತಿದೆ. ಇದನ್ನು ಸಾಧಿಸಲು ಬೆಳೆಗಾರರು ಕಾಫಿ ಹಣ್ಣುಗಳನ್ನು ಕುಯ್ದು ಸಂಸ್ಕರಿಸುವಾಗಲೆ ವಿಶೇಷ ಗಮನ ನೀಡಬೇಕಾಗುತ್ತದೆ. ಬೀಜ ಶೇಖರಣೆ, ಬೀಜಗಳ ದರ್ಜೀಕರಣ, ಕಾಫಿಪುಡಿ ತಯಾರಿಕೆ ಮತ್ತು ಸಂರಕ್ಷಣೆ ಈ ಎಲ್ಲ ಹಂತಗಳಲ್ಲೂ ನಿಗದಿತ ಉತ್ಕೃಷ್ಟ ವಿಧಾನಗಳನ್ನು ಅನುಸರಿಸಿದರೆ ಈ ಗುರಿ ಸಾಧಿಸಲು ಸಾಧ್ಯವಾಗುತ್ತದೆ. ಅದಕ್ಕಾಗಿ ಈಗ ತರಬೇತಿ, ಪರಿಣತಿಯ ಅಭಿವೃದ್ಧಿಗೆ ಒತ್ತುಕೊಡಲಾಗಿದೆ. ಕಾಫಿ ತೋಟಗಾರಿಕೆಯನ್ನು ಅವಲಂಬಿಸಿರುವ ಲಕ್ಷಾಂತರ ಕಾರ್ಮಿಕರು, ಬೆಳೆಗಾರರು ಮತ್ತು ವ್ಯಾಪಾರಸ್ಥರು ಈ ಸೂಕ್ಷ್ಮ ಸಂವೇದಿಯಾಗಿರುವ ಅಂತಾರಾಷ್ಟ್ರೀಯ ಕಾಫಿ ವಹಿವಾಟನ್ನು ಅವಲಂಬಿಸಿದ್ದಾರೆ. *

**ಕಾಮತ್, ಎಂ.ಎನ್. :** 1883-1940 ಹೊಸಗನ್ನಡ ಅರುಣೋದಯ ಕಾಲದ, ದಕ್ಷಿಣ ಕನ್ನಡ ಜಿಲ್ಲೆಯ ಆದ್ಯಲೇಖಕರಲ್ಲೊಬ್ಬರು. ಪಂಜೆಮಂಗೇಶರಾಯ, ಗೋವಿಂದ ಪೈ ಅವರ ಸಮಕಾಲೀನರು.



ಮುಂಡ್ಕೂರು ನರಸಿಂಹ ಕಾಮತ್ ಇವರ ಪೂರ್ಣ ಹೆಸರು. 1883 ಮಾರ್ಚ್ 17ರಂದು ಮುಂಡ್ಕೂರಿನಲ್ಲಿ ಜನಿಸಿದರು. ತಂದೆ ಶ್ರೀನಿವಾಸ ಕಾಮತ್, ತಾಯಿ ತುಂಗಭದ್ರ. ಕಾಮತ್ ಈ ದಂಪತಿಗಳ ಏಕೈಕ ಪುತ್ರರು. ಬಾಲ್ಯ ಜೀವನವನ್ನು ಬಡತನದಲ್ಲೇ ಕಳೆದರು. ಮೆಟ್ರಿಕ್ಯುಲೇಶನ್ ವರೆಗೆ ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲೂ ಎಫ್.ಎ. ವರೆಗಿನ ಶಿಕ್ಷಣವನ್ನು ಸೇಂಟ್ ಅಲೋಯಿಸಿಯಸ್ ಕಾಲೇಜಿನಲ್ಲೂ ಮುಗಿಸಿದರು. ಪ್ರೌಢ ಶಾಲೆಯಲ್ಲಿ ರಾಷ್ಟ್ರಕವಿ ಗೋವಿಂದಪೈಯವರ ಸಹಪಾಠಿಯಾಗಿದ್ದರು. ಚಿಕ್ಕವಯಸ್ಸಿನಿಂದಲೇ ಮೇಧಾವಿಯೂ ಜ್ಞಾನಪಿಪಾಸುವೂ ಅಸಾಧಾರಣ ಪ್ರತಿಭಾವಂತರೂ ಆಗಿದ್ದರು. ವಿದ್ಯಾರ್ಥಿ ದೆಸೆಯಲ್ಲಿಯೇ ರಾಬಿನ್ ರೆಡ್‌ಬ್ರೆಸ್ಟ್ ಎಂಬ ಕಾವ್ಯನಾಮದಲ್ಲಿ ಗಾಡ್ಸ್ ಲೈಟ್ ಹೌಸ್, ಕ್ರಿಯೇಷನ್ಸ್ ಬ್ಯಾಪ್ಟಿಸಮ್, ಸ್ನೇಲ್ ಎಂಬ ಸ್ವತಂತ್ರ ಇಂಗ್ಲಿಷ್ ಕವನಗಳನ್ನು ಬರೆದುದಲ್ಲದೆ ಸೋಮೇಶ್ವರ ಶತಕದ ಕೆಲವು ಭಾಗವನ್ನು ಇಂಗ್ಲಿಷಿಗೆ ತರ್ಜುಮೆ ಮಾಡಿದ್ದರು.

ಮುಂದೆ ಕಾರ್ಕಳದ ಅನುಸೂಯಾಬಾಯಿ ಎಂಬುವರನ್ನು ವಿವಾಹವಾದರು. ಅನಂತರ ಮುಂಬಯಿಯ ರೋಸ್ ಎಂಡ್ ಕಂಪೆನಿ ಎಂಬ ವಾದ್ಯವಾದನಗಳ (ಮ್ಯೂಸಿಕಲ್ ಇನ್‌ಸ್ಟ್ರುಮೆಂಟ್ಸ್) ವಿದೇಶಿ ಕಂಪನಿಯ ಉದ್ಯೋಗಿಯಾಗಿ ಎರಡು ವರ್ಷ ಸೇವೆ ಸಲ್ಲಿಸಿದರು. ಆಗ ಇವರು ಮರಾಠಿ ರಂಗಭೂಮಿ, ಮರಾಠಿ ಭಾಷೆ ಸಾಹಿತ್ಯಗಳ ಪರಿಚಯ ಮಾಡಿಕೊಂಡರು. ಅನಂತರ ಇವರಿಗೆ ಕಲ್ಕತ್ತಕ್ಕೆ ವರ್ಗವಾಯಿತು. ಅಲ್ಲಿ ನೆಲೆಸಿದ್ದ ಹತ್ತುವರ್ಷಗಳಲ್ಲಿ ಇವರು ಸಾಹಿತಿಯಾಗಿ ಎತ್ತರಕ್ಕೆ ಬೆಳೆದರು. ವಂಗಸಾಹಿತ್ಯ, ಬಂಗಾಲಿಭಾಷೆ, ರವೀಂದ್ರ ಸಾಹಿತ್ಯ, ವಂಗರಂಗಭೂಮಿಗಳ ಪರಿಚಯ ಮತ್ತು ಪ್ರಭಾವಗಳು ಇವರನ್ನು ಸಾಹಿತಿಯಾಗಿ ರೂಪಿಸಿದುವು. ಆಮೇಲೆ ಹುಟ್ಟೂರಿಗೆ ಮರಳಿ ಶಿಕ್ಷಕ ತರಬೇತಿ ಪಡೆದು ಮೂಲ್ಕಿ ಮತ್ತು ಬಂಟ್ವಾಳದಲ್ಲಿ ಕೆಲಸಮಯ ಅಧ್ಯಾಪಕರಾಗಿದ್ದು ಸಾಹಿತ್ಯರಚನೆಗೆ ತೊಡಗಿದರು. ಕನ್ನಡದಲ್ಲೇ ಬರೆವೆನೆಂಬ ಪಣ ತೊಟ್ಟರು. ಸು.22 ವರ್ಷಗಳ ಕಾಲ ಇವರು ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದರು (1918-40).

ಸುಮಾರು ಮೂರು ದಶಕಗಳ ಕಾಲ (1910-40) ಇವರು ಅವಿರತವಾಗಿ ಸಾಹಿತ್ಯ ರಚಿಸಿದರು. ಜನಪ್ರಿಯ ಅಧ್ಯಾಪಕರೂ ಜನಪ್ರಿಯ ಸಾಹಿತಿಯೂ ಆಗಿ ದಕ್ಷಿಣ ಕನ್ನಡದ ಜನತೆಯಲ್ಲಿ ಓದುವ ಹವ್ಯಾಸ ಬೆಳೆಸಿದರು. ಇವರು ಮಕ್ಕಳ ನಾಟಕಕಾರ, ಮೊದಲ ಏಕಾಂಕ ನಾಟಕಕಾರ, ಲಘು ಪ್ರಬಂಧಕಾರ ಎಂದೇ ಪ್ರಸಿದ್ಧರು. ಸ್ವದೇಶಾಭಿಮಾನಿ, ಕನ್ನಡ ಸಹಕಾರಿ, ಕಂಠೀರವ, ವಾಗ್ಭೂಷಣ, ಮಧುರವಾಣಿ, ಕಾದಂಬರಿ ಸಂಗ್ರಹ, ಪ್ರವಾಸಿ, ಜಯಕರ್ನಾಟಕ, ಕಲಾರಂಗ ಮೊದಲಾದ ವೃತ್ತಪತ್ರಿಕೆ ನಿಯತಕಾಲಿಕಗಳಿಗೆ ಬರೆದು ಆ ಪತ್ರಿಕೆಗಳ ಹೆಸರನ್ನು ಪ್ರಚುರಗೊಳಿಸಿದರು.

ಇವರದು ಸದಭಿರುಚಿಯ ಶುಚಿಯಾದ ಸಾಹಿತ್ಯ. ಹಾಸ್ಯ ಮತ್ತು ಸಹ್ಯವಾದ ವಿಡಂಬನೆಯಿಂದ ರಂಜನೀಯವಾದುದು. ಇವರ ಸಾಹಿತ್ಯದಲ್ಲಿ ಮಕ್ಕಳ ಮನಸ್ಸನ್ನು ಧಕ್ಕೆಗೊಳಿಸುವ ಒಂದಾದರೂ ವಿಕೃತಮಾತು ಬಾರದು. ಇವರ ವೈನೋದಿಕಗಳ ಹಾಸ್ಯ ಮಂಗಳೂರಿನಲ್ಲಿ ಮನೆಮಾತು. ಇವರ ಸಾಹಿತ್ಯವೆಲ್ಲ ಮಂಗಳೂರು ಶೈಲಿಯಲ್ಲೇ. ನಾಟಕಗಳಲ್ಲಿ ಕೂಡ ಧಾರವಾಡ ಅಥವಾ ಮೈಸೂರು ಕನ್ನಡ ಕಾಣಸಿಗದು. ಇವರು ತಾಸುಗಟ್ಟಲೆ ಹಾಸ್ಯಪೂರಿತ ಶೈಲಿಯಿಂದ ಸಭಿಕರನ್ನು ಹೊಟ್ಟೆ ಹುಣ್ಣಾಗಿಸುವಂತೆ ನಗಿಸಬಲ್ಲ ಸಮರ್ಥ ವಾಗ್ಮಿಯಾಗಿದ್ದರು. ಹಾಸ್ಯವೆಂದರೆ ಕಾಮತರು, ಕಾಮತರೆಂದರೆ ಹಾಸ್ಯ ಎಂಬ ಖ್ಯಾತಿ ಇವರದು. ಭೂಗೋಳದ ಅಧ್ಯಾಪಕರಾದರೂ ಯಾವ ವಿಷಯವನ್ನೂ ರಸವತ್ತಾಗಿ ಬೋಧಿಸಬಲ್ಲ ಪ್ರತಿಭೆ ಇವರಲ್ಲಿತ್ತು.

ಕಾಮತರು ವಿಪುಲವಾಗಿ ಸಾಹಿತ್ಯ ಸೃಷ್ಟಿಕಾರ್ಯ ನಡೆಸಿದ್ದಾರೆ. ಈ ಸಾಹಿತ್ಯದಲ್ಲಿ ವೈವಿಧ್ಯವಿದೆ. ಯಾದವಕೃಷ್ಣ, ಗದಾಯುದ್ಧದ ಕಥೆ, ಭೀಷ್ಮಚರಿತೆ, ಕರ್ಣಕಥೆ, ಆರ್ಯಮತೋಪಾಖ್ಯಾನ, ಸೀತಾರಾಮ, ಚಂಡಕೌಶಿಕ, ನಾಗಾನಂದ ಇವು ಪೌರಾಣಿಕ ಕಥೆಗಳು. ಕುಮಾರ ಭೀಮಸಿಂಹ, ಪ್ರೇಮ ಪಿಪಾಸೆ, ಕಮಲ ಕುಮಾರಿ, ಪಟ್ಟಾಭಿಷೇಕ ವಿಂಧ್ಯವಾಸಿನಿ, ಅಶ್ವತ್ಥಮೃಗ, ದಯಾಳುವಾದ ಬುದ್ಧ, ಅಲ್ಲಾವುದ್ದೀನ ಮೊದಲಾದವು ಐತಿಹಾಸಿಕ ಕಥೆಗಳು. ಕಾಮತರದು ಕಟ್ಟಾ ಸ್ತ್ರೀಪಕ್ಷಪಾತಿ ಅಥವಾ ಸ್ತ್ರೀವಾದಿ ಸಂವೇದನೆ, ಸ್ತ್ರೀ ಶೋಷಣೆಯ ಎಲ್ಲ ಮುಖಗಳನ್ನೂ ಪರಿಚಯಿಸುವ ಸ್ವಪ್ನದ ತೊಟ್ಟಿಲು, ಕನ್ಯಾಬಲಿ, ವಧುಪರೀಕ್ಷೆ, ಹಣದಪ್ರಭಾವ, ವರದಕ್ಷಿಣೆಯ ವಿಡಂಬನೆ, ಶಾಂತಿ ಮೊದಲಾದ ಸಾಮಾಜಿಕ ಕಥೆಗಳು ನಮ್ಮ ಗಮನ ಸೆಳೆಯುತ್ತವೆ. ಹತ್ತರೊಡನೆ ಹನ್ನೊಂದು ಎಂಬುದು 11 ವಿನೋದ ಕಥೆಗಳ ಒಂದು ಗುಚ್ಛ. ಬೀಡಿ ಸೇದಬೇಡಿ, ಆಮುಗು, ಕೆಪ್ಪಟೆರಾಯ, ಕರಿನಾಯಿ, ಅಧ್ಯಕ್ಷ, ಆಮೆ, ರಾಜ್ಯಪ್ರೇಮ, ಡಾಕ್ಟರರ ವಿಜಿಟ್, ಕಲಾವತಿ, ಕೋಳಿ ಜೀವನ -ಇವು ಬಿಡಿ ಕಥೆಗಳು. ಇವರ ಅತ್ಯಂತ ಪ್ರಸಿದ್ಧಕೃತಿ, 'ಅಂದಿನ ಆವೂರು', ಇದರಲ್ಲಿರುವ ಕದ್ದವರು ಯಾರು? -ಭಾರತ ಪ್ರಯೋಗ, ಬೊಗ್ಗು ಮಹಾಶಯ, ಆವೂರು ಮಠ, ವೈದ್ಯರಾಜ ಧನ್ವಂತರಿ -ಈ ಕಥೆಗಳು ಪ್ರಾತಿನಿಧಿಕ ಮೌಲ್ಯವುಳ್ಳ, ಪ್ರಾದೇಶಿಕ ಸನ್ನಿವೇಶ ಮತ್ತು ಪಾತ್ರಗಳಿಂದ ಸೊಗಸಾಗಿವೆ. ಜಯಕರ್ನಾಟಕದಲ್ಲಿ ಪ್ರಕಟವಾದ ಒಂದು ಚಿಕ್ಕ ಕತೆಯ ಕತೆ ಮತ್ತು ಕೂಲಿ -ಇವು ಸಣ್ಣಕಥೆಗಳಂತೆ ಇದ್ದು, 'ಕೂಲಿ' ನವ್ಯದ ಲಕ್ಷಣವಿರುವ ಕಥೆಯೆನ್ನಬಹುದು. ಸಣ್ಣಕಥೆಗಳ ತಂತ್ರ, ನಿರೂಪಣೆಗೆ ಯಾವುದೇ ಸೂತ್ರವಿಲ್ಲದ ಕಾಲದಲ್ಲಿ ಕಾಮತರು ಸಣ್ಣಕಥೆ ರಚಿಸಿದರೆಂಬುದು ಮಹತ್ವದ ಸಂಗತಿ. ಮಕ್ಕಳಿಗಾಗಿಯೇ ಬರೆದ ಬಾಲಕರ ಮಹಾಭಾರತ ಮತ್ತು ರಾಮಾಯಣ -ಇವು ಪಠ್ಯಗಳಾಗಿ ಹಲವು ವರ್ಷ ಪ್ರಚಲಿತವಿದ್ದುವು.

ಕಾಮತರು ಕಾವ್ಯ ರಚನೆಯನ್ನೂ ಸಾಕಷ್ಟು ಮಾಡಿದ್ದಾರೆ. ಅನೇಕ ಕವಿತೆಗಳನ್ನು ರಚಿಸಿದ್ದಾರೆ. ವಟಪುರಾಧೀಶ್ವರ ಶತಕ ಎಂಬ ನೂರು ಪದ್ಯಗಳ ಭಾಮಿನಿ ಷಟ್ಪದಿ ಕಾವ್ಯವನ್ನು ರಚಿಸಿದ್ದಾರೆ. ಮಕ್ಕಳಿಗಾಗಿ ಬರೆದ ಇರುವೆಯೂ ಮಿಡಿತೆಯೂ, ಗೂಡಿನಲ್ಲಿಯ ಇಲಿ, ಬಾಲ ಕಳೆದ ನರಿಯ ಉಪದೇಶ, ಸಂತೆಯ ಕುರುಡನ ಹಾಡು, ಆನೆ ಆನೆಯೋ?, ಗೋವಿನ ಕತೆ,ತಂದೆ ಮಕ್ಕಳೂ ಕುದುರೆಯೂ, ತುಳುನಾಡ ರಾಣಿ, ಹರಕೆ, ತಾಯಿ, ಬೆಂಬಲ, ಕೊಡೆ, ನಾವೆಲ್ಲ ಒಂದೇ ಜಾತಿ, ನನ್ನ ನೆರಳು, ಢಿಲ್ಲಿ, ನಮ್ಮ ತಾಯಿ ಭಾರತಿ, ನೇಗಿಲು ದೇವರು, ಸವಾರನ ಸಮಾಧಾನ, ದೀಪಗಳು, ಹೂವು ಹಂಬಲಿಸಲೇಕೆ? ಈ ಮೊದಲಾದ ರಚನೆಗಳು ಮಕ್ಕಳ ಮಾನಸಿಕ ಬೆಳೆವಣಿಗೆಗೆ ಹೊಂದತಕ್ಕವುಗಳಾಗಿವೆ. ಮಕ್ಕಳ ಕೂಗನು ಕೇಳಿದಿರಾ, ನಮ್ಮ ಬೇಡಿಕೆ, ಬಂಡಿಯೆತ್ತು, ವೀರಪಥ, ಹೊಲೆಯನ ಹಂಬಲ, ದೀನನಾಥನಿಗೆ, ದರಿದ್ರ ನಾರಾಯಣ, ಪೀಡಕನಿಗೆ, ಗ್ರಾಮ ಸೇವಕರ ಹಾಡು ಎಂಬ ಕವನಗಳಲ್ಲಿ ಕಾಮತರ ಕ್ರಾಂತಿಕಾರಿ ಮನೋಭಾವ ವ್ಯಕ್ತವಾಗಿದೆ. 'ಬೇಡಿಕೆ' ಕವಿತೆಯಲ್ಲಿ ಬಂಡಾಯದ ಧ್ವನಿಮಾತ್ರವಲ್ಲ ಕಾಮತರ ಕಾವ್ಯಮಾರ್ಗ ಹಾಗೂ ಚಿಂತನೆ ತಮ್ಮ ಕಾಲಕ್ಕಿಂತ ಬಲುಮುಂದೆ ಇದ್ದಿತೆಂಬ ಅಂಶವನ್ನು ಸ್ಪಷ್ಟಪಡಿಸುತ್ತದೆ. ಗಾಂಧಿವಾದಿಯಾಗಿದ್ದ ಇವರು ಅಸ್ಪೃಶ್ಯರ ಪರವಾಗಿ ಬರೆದ ಕವನಗಳು ತುಂಬ ಮಾರ್ಮಿಕವಾಗಿವೆ; ಮನುಷ್ಯತ್ವದ ಚಿಂತನೆಯನ್ನು ಅನಾವರಣಗೊಳಿಸುತ್ತವೆ. ಆ ಕಾಲದಲ್ಲಿ ಇವರು ಅಸ್ಪೃಶ್ಯರೊಡನೆ ಸಹಪಂಕ್ತಿ ಭೋಜನಗೈದುದರಿಂದ ಜಾತಿಯಿಂದ ಬಹಿಷ್ಕೃತರೂ ಆಗಿದ್ದರು. ನಮ್ಮ ತಾಯಿ ಭಾರತಿಯಂಥ ದೇಶಭಕ್ತಿಗೀತೆಯಲ್ಲದೆ ನೀರುಳ್ಳಿಯ ಫಿರ್ಯಾದಿಯ ಯಥಾನಕಲು ಎಂಬ ವಿಡಂಬನ ಗೀತೆಯನ್ನೂ ಇವರು ರಚಿಸಿದ್ದಾರೆ. ಇಂಗ್ಲಿಷ್‌ನಿಂದ, ಬಂಗಾಲಿಯಿಂದ ಅನೇಕ ಪದ್ಯಗಳನ್ನು ಅದರಲ್ಲಿಯೂ ಠಾಕೂರರ ಕವಿತೆಗಳನ್ನು ಅನುವಾದ ಮಾಡಿದ್ದಾರೆ. ಎಲ್ಲಿ ಮನಕಳುಕಿರದೊ (ಠಾಕೂರರ ವೇರ್ ದಿ ಮೈಂಡ್ ಈಸ್ ಹೈ ಎಂಬ ಪದ್ಯದ ಅನುವಾದ) ಮತ್ತು ಸರಿದಾರಿ ತಪ್ಪದಂತೆ (ಲೀಡ್ ಕೈಂಡ್ಲಿ ಲೈಟ್ ಎಂಬ ನ್ಯೂಮನ್‌ನ ಪದ್ಯದ ಅನುವಾದ) ಎಂಬ ಪ್ರಾರ್ಥನಾ ಗೀತೆಗಳು ಪ್ರಸಿದ್ಧವಾಗಿವೆ.

ಇವರು ಹೆಚ್ಚಾಗಿ ಮಕ್ಕಳಿಗಾಗಿ ಅನೇಕ ನಾಟಕಗಳನ್ನು ಬರೆದರು; ಅನುವಾದಿಸಿದರು. ಕೆಲವೊಮ್ಮೆ ತಾವೇ ನಿರ್ದೇಶಿಸಿದರು. ಇವರ ರಚನೆಯಲ್ಲಿ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಈ ಎಲ್ಲ ಪ್ರಕಾರದ ನಾಟಕಗಳೂ ಇವೆ. ಒಂದು ಅಂದಾಜಿನಂತೆ ಇವರು 100 ನಾಟಕಗಳನ್ನು ರಚಿಸಿದ್ದಾರೆಂದು ತಿಳಿದುಬರುತ್ತದೆ. ಆದರೆ ಇದುವರೆಗೆ 27 ನಾಟಕಗಳು ಮಾತ್ರ ದೊರೆತಿವೆ. ಈ ನಾಟಕಗಳನ್ನು ಕಾಮತರು ಅನೇಕ ಶಾಲಾ ವರ್ಧಂತಿಯಂದು ಆಡಿಸುತ್ತಿದ್ದುದುಂಟು. ಶಿವರಾಮ ಕಾರಂತರಿಗಿಂತಲೂ ಮೊದಲು ಇವರು ನಾಟಕ ರಚನೆ ಮಾಡಿದ್ದರು ಎಂಬ ಸಂಗತಿ ಇಲ್ಲಿ ಗಮನಾರ್ಹವಾದುದು. ಇವರೇ ದಕ್ಷಿಣ ಕನ್ನಡ ಜಿಲ್ಲೆಯ ಆದ್ಯ ಏಕಾಂಕ ನಾಟಕಕಾರರೆನ್ನಬಹುದು. 1912ರಲ್ಲಿ ಬರೆದ 'ಸಂಗೀತ ಸಂವಾದ' ಎಂಬುದು ಸಾಮಾಜಿಕ ನಾಟಕ, ಚಂದ್ರಹಾಸಾಭ್ಯುದಯ (ಸಂಗೀತ ನಾಟಕ), ಅರ್ಜುನ ಚಾತುರ್ಮಾಸ (ಕಿರ್ಲೋಸ್ಕರರ ಮರಾಠಿ ನಾಟಕದ ಅನುವಾದ), ನಾಗಾನಂದ, ಮಧ್ಯಮ ವ್ಯಾಯೋಗ, ಸಾಧನೆ ಅಥವಾ ಏಕಲವ್ಯ (ಕಾಮತರ ಕೊನೆಯ ನಾಟಕ), ಕೃಷ್ಣ-ಸಂಧಾನ -ಇವು ಪೌರಾಣಿಕ ನಾಟಕಗಳು. ಮೌರ್ಯಸಿಂಹಾಸನ (ಸಂಗೀತ ನಾಟಕ), ತುಕಾರಾಮ, ತೆನಾಲಿರಾಮ, ದಾಮಾಜಿಪಂತ, ಪ್ರತಾಪಸಿಂಹ, ಚಂದ್ರರಾವ್ ಮೋರೆ, ವಜ್ರಮುಷ್ಟಿ, (ಸಿಖ್ ಪಂಥ ಕುರಿತದ್ದು), ವಿಠೂಮಹಾರ್, ಸತೀ ಮೀರಾಬಾಯಿ -ಇವು ಐತಿಹಾಸಿಕ ನಾಟಕಗಳು. ಮರ್ಜಿ, ವಂತಿಗೆ, ಮೆಂಬರು, ವಂತಿಗೆದಾರ, ಮಧುಸೂದನ, ಪುನರ್ಜನ್ಮ, ಮಾಲಿ, ಉದ್ಧಾರಾನಂದ (ಬಿಷಪ್‌ನ ಕ್ಯಾಂಡಲ್ ಸ್ಟಿಕ್ ನಾಟಕದ ರೂಪಾಂತರ), ಯೋಗಕ್ಷೇಮ (ಟಾಲ್‌ಸ್ಟಾಯಿನ್ ಒಂದು ನಾಟಕದ ರೂಪಾಂತರ), ಅಂಚೆಮನೆ (ಠಾಕೂರರ ಪೋಸ್ಟ್ ಆಫೀಸ್ ನಾಟಕದ ಭಾಷಾಂತರ), ಶಿಕ್ಷಣ ಪರೀಕ್ಷೆ, ಶೋಕ ಶಿಕ್ಷಣ, ಹಾರೆದೊರೆ, ಸದ್ರಿಸುಬ್ಬ, ಇದ್ದವರು ಮೂವರು, ಅವಳಿ ಜವಳಿ, ನಮ್ಮ ಹಳೆಯ ನಾಟಕದ ನೆನಪು, ಮನೆಯಲ್ಲಿ ಮಹಾಸಭೆ, ನಮ್ಮ ನಾಟ್ಯಾಭಿನಯ, ಸಾಣೂರು ಸಂಕಯ್ಯ, ಯುದ್ಧಾಂತ್ಯ -ಇವು ಸಾಮಾಜಿಕ ನಾಟಕಗಳು.

ಕಾಮತರು ಸಸ್ಯಶಾಸ್ತ್ರದಿಂದ ಹಿಡಿದು ಆಧ್ಯಾತ್ಮಿಕ ಚಿಂತನದವರೆಗೆ ನೂರಾರು ಪ್ರಬಂಧಗಳನ್ನೂ ಲೇಖನಗಳನ್ನೂ ಹರಟೆಗಳನ್ನೂ ಬರೆದಿದ್ದಾರೆ. ನನ್ನ ಕೊಡೆ, ಗಾಳಿ, ಆ ಬೆಕ್ಕಲ್ಲ ಈ ಬೆಕ್ಕು, ಪೆನ್ನನರ್ ಮೊದಲಾದ ಹಾಸ್ಯ ಪ್ರಬಂಧಗಳನ್ನೂ ಪ್ರಾಚೀನಕಾಲದ ಪತ್ರಲೇಖನ, ಸಾಹಿತ್ಯ ರೈಲ್ವೇ ಕಂಪನಿ ಎಂಬ ವಿಡಂಬನ ಪ್ರಬಂಧಗಳನ್ನೂ ಇಲ್ಲಿ ಹೆಸರಿಸಬಹುದು. ಇವರ ಪತ್ರಿಕಾ ವ್ಯವಸಾಯವೂ ಗಮನಾರ್ಹವಾದದ್ದು. ಆನಂದ ಎಂಬ ಪತ್ರಿಕೆ ಇವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿತ್ತು. 'ಭಾರತಿ' ಪತ್ರಿಕೆಗೆ ಇವರೇ ಆಧಾರಸ್ತಂಭವಾಗಿದ್ದರು. ಬೋಧಿನಿ (1914-18) ಎಂಬ ಅಮೂಲ್ಯವಾದ ಶಿಕ್ಷಣ ಕೈಪಿಡಿಯನ್ನು ಇವರು ನಡೆಸಿದರು. ಮಂಗಳೂರಿನ ಮಿತ್ರಮಂಡಳಿಯನ್ನು ಹುಟ್ಟುಹಾಕಿದವರೇ ಕಾಮತರು. ಶಾಲಾ ಮಕ್ಕಳಿಗಾಗಿ ಅನೇಕ ಪದ್ಯಗಳನ್ನು ರಚಿಸಿಕೊಟ್ಟಿದ್ದಾರೆ. ಇತ್ತೀಚೆಗೆ ಪುತ್ತೂರು ಕರ್ನಾಟಕ ಸಂಘ ಕಾಮತರ ಎಲ್ಲ ಬರೆಹಗಳನ್ನು ಎಮ್.ಎನ್. ಕಾಮತ್ ಕೃತಿಗಳು (ಸಂ: ಲೀಲಾ ಭಟ್) ಎಂಬ ಹೆಸರಿನಲ್ಲಿ ಐದು ಸಂಪುಟಗಳಲ್ಲಿ ಪ್ರಕಟಿಸಿದೆ. ಕಾಮತರಿಗೆ ಪ್ರಶಸ್ತಿ ಪುರಸ್ಕಾರಗಳು ದೊರೆಯುವುದು ಒತ್ತಟ್ಟಿಗಿರಲಿ, ಇಷ್ಟೆಲ್ಲ ಕೆಲಸಮಾಡಿಯೂ ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಇವರದು ಮರೆತುಹೋದ ಮಹನೀಯರ ಹೆಸರಾಗಿತ್ತು. ಇವರು ನಿಧನರಾಗುವುದಕ್ಕೆ ಮೂರು ತಿಂಗಳ ಮೊದಲು ನಡೆದ ಅಖಿಲ ಕರ್ನಾಟಕ ಸಣ್ಣಕಥೆಗಳ ಸಮ್ಮೇಳನಕ್ಕೆ ಇವರು ಅಧ್ಯಕ್ಷರಾಗಿದ್ದರು (1940) ಎಂಬ ಸಂಗತಿಯನ್ನು ಇಲ್ಲಿ ಉಲ್ಲೇಖಿಸಬಹುದು. (ಎಲ್.ಬಿ.)

**ಕಾಮತ, ಎಂ.ವಿ. :** 1921-. ಹೆಸರಾಂತ ಪತ್ರಿಕೋದ್ಯಮಿ, ಲೇಖಕ. ಇವರ ಪೂರ್ಣ ಹೆಸರು ಮಾಧವ ವಿಠ್ಠಲ ಕಾಮತ. ತಂದೆ ವಿಠ್ಠಲ ಕಾಮತ, ತಾಯಿ ಗಿರಿಜಾ. ಕಾಮತರು 1921 ಸೆಪ್ಟೆಂಬರ್ 7ರಂದು ಉಡುಪಿಯಲ್ಲಿ ಜನಿಸಿದರು. ಇವರ ಪ್ರಾಥಮಿಕ ಶಿಕ್ಷಣ ಉಡುಪಿಯ ಸಿಸಿಲ್ಸ್ ಕಾನ್ವೆಂಟ್, ಕ್ರಿಶ್ಚಿಯನ್ ಹೈಸ್ಕೂಲ್ ಮತ್ತು ಬೋರ್ಡ್ ಹೈಸ್ಕೂಲುಗಳಲ್ಲಾಯಿತು. 1937ರಲ್ಲಿ ಎಸ್.ಎಸ್.ಎಲ್.ಸಿ. ಪಾಸಾದರು. ಅನಂತರ ಮಂಗಳೂರಿನ ಸರ್ಕಾರಿ ಕಾಲೇಜಿನಲ್ಲಿ ಇಂಟರ್ ಮೀಡಿಯಟ್ ಓದಿ ಮುಂಬಯಿಯ ಸೆಂಟ್ ಝೇವಿಯರ್ಸ್ ಕಾಲೇಜಿನಲ್ಲಿ ಬಿ.ಎಸ್‌ಸಿ. ಪದವಿ ಪಡೆದರು (1941). ಇ.ಡಿ.ಸಸೂನ್ ಟರ್ಕಿ ರೆಡ್ ಡೈ ವರ್ಕ್ಸ್‌ನಲ್ಲಿ ಕೆಮಿಸ್ಟ್ ಆಗಿ ಸೇರಿ (1941) ಕೆಲಸ ಮಾಡಿದರು. ಮುಂಬಯಿಯ ಓರಿಯೆಂಟಲ್ ಫಾರ್ಮಾಸ್ಯುಟಿಕಲ್ ಕಂಪನಿಯಲ್ಲಿ ಸೀನಿಯರ್ ಕೆಮಿಸ್ಟ್ ಮತ್ತು ಅಸಿಸ್ಟೆಂಟ್ ಫ್ಯಾಕ್ಟರಿ ಮ್ಯಾನೇಜರಾಗಿ ಕೆಲಸ



ಮಾಡಿದರು (1944-46). ಅನಂತರ ಫ್ರೀಪ್ರೆಸ್ ಜರ್ನಲ್ ಪತ್ರಿಕೆಯ ವರದಿಗಾರರೂ ಲೇಖಕರೂ ಆಗಿ ಮೂರು ವರ್ಷ ಕೆಲಸ ಮಾಡಿದರು. ಅದೇ ಪತ್ರಿಕೆಯ ದೆಹಲಿ ವರದಿಗಾರರಾಗಿ (1949-50), ಮುಂಬಯಿಯ ಫ್ರೀಪ್ರೆಸ್ ಬುಲೆಟಿನ್‌ನ ಸಂಪಾದಕರಾಗಿ (1950-55), ಕೆಲಸಮಾಡಿದರು. ಭಾರತಜ್ಯೋತಿ ಪತ್ರಿಕೆಯ ಸಂಪಾದಕರಾಗಿದ್ದರು (1954-55). ಅನಂತರ ಪ್ರೆಸ್ ಟ್ರಸ್ಟ್ ಆಫ್ ಇಂಡಿಯಾ ಸಂಸ್ಥೆಯ ನ್ಯೂ ಯಾರ್ಕ್‌ನ ವಿಶೇಷ ವರದಿಗಾರರಾಗಿ ನಿಯುಕ್ತರಾದರು (1955-58). ಯುನೈಟೆಡ್‌ಏಷ್ಯ ಮುಂಬಯಿ ಪತ್ರಿಕೆಯಲ್ಲಿ ಒಂದು ವರ್ಷ ಸೇವೆ ಸಲ್ಲಿಸಿ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯ ಯುರೋಪ್ ಖಂಡದ ವಿಶೇಷ ವರದಿಗಾರರಾಗಿ 1959ರಿಂದ ಎಂಟು ವರ್ಷಗಳ ಕಾಲ ಕೆಲಸ ಮಾಡಿದರು. ಅದೇ ಪತ್ರಿಕೆಯ ಭಾನುವಾರ ಸಂಚಿಕೆಯ ಸಂಪಾದಕರಾಗಿಯೂ ಎರಡುವರ್ಷ ಕೆಲಸ ನಿರ್ವಹಿಸಿದರು. ಟೈಮ್ಸ್ ಆಫ್ ಇಂಡಿಯಾದ ವಾಷಿಂಗ್ ಟನ್ ವಿಶೇಷ ವರದಿಗಾರರಾಗಿ ಕಾರ್ಯನಿರ್ವಹಿಸಿದರು (1969-78). ಇದರಿಂದ ಅಂತಾರಾಷ್ಟ್ರೀಯ ಕೀರ್ತಿಗೆ ಭಾಜನರಾದರು. ಅನಂತರ ಇಂಗ್ಲಿಷಿನ ಪ್ರಸಿದ್ಧ ಪತ್ರಿಕೆ ಇಲ್ಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾದ ಸಂಪಾದಕರಾಗಿ ನಿಯುಕ್ತರಾದರು (1979). ತಮ್ಮ ಸಂಪಾದಕತ್ವದ ಅವಧಿಯಲ್ಲಿ ಪತ್ರಿಕೆಯ ಆಕರ್ಷಣೆಯನ್ನೂ ಪ್ರಸಾರ ಸಂಖ್ಯೆಯನ್ನೂ ಹೆಚ್ಚಿಸಿದ್ದರು.

ಇವರು ಫ್ರೀಪ್ರೆಸ್ ಜರ್ನಲ್, ಜನ್ಮಭೂಮಿ, ಪ್ರವಾಸಿ, ಆಫ್ಟರ್‌ನೂನ್ ಡಿಸ್‌ಪ್ಯಾಚ್ ಅಂಡ್ ಕೋರಿಯರ್, ನಾಗಪುರದ ಹಿತವಾದ, ದಿಲ್ಲಿಯ ಆರ್ಗನೈಜರ್, ದಿ ಸೆಂಟಿನೆಲ್ (ಗೌಹಾತಿ), ರಾಜಸ್ತಾನ ಪತ್ರಿಕಾ, ಕೇಸರಿ, ಉದಯವಾಣಿ, ಪ್ರಿಯದತ್ತ, ಇಶ್ಯೂಸ್ ಅಂಡ್ ಕನ್‌ಸರ್ನ್ಸ್, ನ್ಯೂಸ್ ಟುಡೇ ಮೊದಲಾದ ಪತ್ರಿಕೆಗಳ ಅಂಕಣ ಬರೆಹಗಾರರಾಗಿದ್ದರು. ಇವರ ಬರೆವಣಿಗೆಯ ಹೃದ್ಯಶೈಲಿ, ಅಧ್ಯಯನಪೂರ್ಣ ಖಚಿತ ವಿಚಾರಗಳು, ರಾಜಕೀಯ ಆಗುಹೋಗುಗಳ ಭಾಷ್ಯ ಓದುಗರನ್ನು ಸೆರೆಹಿಡಿದಿದ್ದವು.

ತಮ್ಮ ಬಿಡುವಿಲ್ಲದ ಪತ್ರಿಕಾ ವ್ಯವಸಾಯದ ನಡುವೆಯೂ ಅನೇಕ ಕೃತಿಗಳನ್ನು ಇವರು ರಚಿಸಿದ್ದಾರೆ. ಪಾರ್ಟೀಸ್ ಅಂಡ್ ಪಾಲಿಟಿಕ್ಸ್ ಇನ್ ಇಂಡಿಯಾ (1946), ದ ಕಾಪ್ಟೈನ್ (1972), ಕಿಸಿಂಜರ್ ದಿ ಇನ್‌ಕಂಪ್ಲಿಟ್ ಡಿಪ್ಲೊಮ್ಯಾಟ್ (1975), ಹಿಸ್ಟರಿ ಆಫ್ ಇಂಡಿಯನ್ ಮರ್ಚಂಟ್ಸ್ ಚೇಂಬರ್ (1982), ಪ್ರೊಫೆಷನಲ್ ಜರ್ನಲಿಸಂ (1980), ದಿ ಜರ್ನಲಿಸ್ಟ್ಸ್ ಹ್ಯಾಂಡ್‌ಬುಕ್ (1983), ಬಿಹೈಂಡ್ ದಿ ಬೈಲೈನ್ (1985), ದ ಇನೊವೇಟಿವ್ ಬ್ಯಾಂಕರ್ (1983), ಮ್ಯಾನೇಜ್‌ಮೆಂಟ್ ಕುರಿಯನ್ ಸ್ಟೈಲ್, ದಿ ಯುನೈಟೆಡ್ ಸ್ಟೇಟ್ಸ್ ಅಂಡ್ ಇಂಡಿಯಾ (1976), ವಾಟ್ ಜರ್ನಲಿಸಂ ಇಸ್ ಆಲ್ ಅಬೌಟ್ (1986), ಬಿ.ಜಿ. ಖೇರ್, ದಿ ಜಂಟಲ್‌ಮ್ಯಾನ್ ಪ್ರೀಮಿಯರ್ (1989), ದಿ ಪರ್‌ಸ್ಯೂಟ್ ಆಫ್ ಎಕ್ಸಲೆನ್ಸ್ (1982), ಗಣೇಶ ವಾಸುದೇವ ಮಾಲವಣಕರ್ (1990), ಫಿಲಾಸಫಿ ಆಫ್ ಡೆಥ್ ಅಂಡ್ ಡೈಯಿಂಗ್ (1978), ದ ಕಫ್ ಆಫ್ ಲವ್ (1981), ಸಮ್ ಆಫ್ ಅಸ್ ಆರ್ ಲಕೀ (1996), ದಿ ಮೇಕಿಂಗ್ ಆಫ್ ಎ ಮಿಲೀನರ್‌ಯು (1991), ದೇವಿ ಅಹಲ್ಯಬಾಯಿ ಹೋಳ್ಕರ್, ದಿ ಫಿಲಾಸಫರ್ ಕ್ವೀನ್ (1995), ಪಾಯಿಂಟ್ಸ್ ಅಂಡ್ ಲೈನ್ಸ್ (1994), ಲೇಟರ್ಸ್ ಟು ಗೌರಿ (1996),

ಮಿಲಿಟೆಂಟ್ ಬಟ್ ನಾನ್ ವಯಲಂಟ್ ಟ್ರೇಡ್ ಯೂನಿಯನಿಸಂ (1993), ಗಾಂಧೀಸ್ ಕೂಲಿ (1988), ಮಿಲ್ಕ್ ಮ್ಯಾನ್ ಫ್ರಂ ಆನಂದ (1996), ಜಾಯ್ಸ್ ಬುಕ್ ಆಫ್ ಇಂಡಿಯನ್ ನೇಮ್ಸ್ (1997), ಥರ್ಟಿ ಥೌಸಂಡ್ ಇಂಡಿಯನ್ ನೇಮ್ಸ್ (2001), ರಿ ಡಿಸ್ಕವರಿಂಗ್ ಕರ್ನಾಟಕ (1985), ಎ ಬ್ಯಾಂಕಿಂಗ್ ಒಡಿಸ್ಸಿ (1991), ಸೆವೆಂಟಿಫೈವ್ ಇಯರ್ಸ್ ಆಫ್ ಸರ್ವಿಂಗ್ ದಿ ಕಾಮನ್ ಮ್ಯಾನ್ (1994), ಸಿಂಡಿಕೇಟ್ ಬ್ಯಾಂಕ್ ಎ ಪೀಪಲ್ಸ್ ಬ್ಯಾಂಕ್ (2000), ಕಾರ್ಪೋರೇಶನ್ ಬ್ಯಾಂಕ್; ಎ ಕಾರ್ಪೊರೇಟ್ ಜರ್ನಿ (1997), ಟೈಡ್ ಆಫ್ ಟೈಮ್, ಹಿಸ್ಟರಿ ಆಫ್ ಮುಂಬಯ್ ಪೋರ್ಟ್ (2000), ದಿ ಎಕ್ಸೆಲ್ ಸ್ಟೋರಿ (2001), ದಿ ಅದರ್ ಫೇಸ್ ಆಫ್ ಇಂಡಿಯಾ (1991), ಮೊದಲಾದ ಗ್ರಂಥಗಳನ್ನು ಬರೆದಿದ್ದಾರೆ. ಪುನರಪಿ ಜನನಂ ಎಂಬ ಕೃತಿಯನ್ನು ಇವರು ಕನ್ನಡದಲ್ಲಿ ರಚಿಸಿದ್ದಾರೆ. ದಿ ಇಂಡಿಯಾ ಆಫ್ ಅವರ್ ಡ್ರೀಮ್ಸ್ (1982), ಅನ್‌ಟೋಲ್ಡ್ ಸ್ಟೋರಿ ಆಫ್ ಡಾಕ್ಟರ್ಸ್ ಅಂಡ್ ಪೇಷಂಟ್ಸ್ (1993), ನೆಹರು ರಿ ವಿಸಿಟೆಡ್ (2003) -ಇವು ಇವರ ಸಂಪಾದಿತ ಕೃತಿಗಳು.

ಭಾರತ ಸರ್ಕಾರ ಇವರನ್ನು ಪ್ರಸಾರಭಾರತಿ ಸಂಸ್ಥೆಯ ಅಧ್ಯಕ್ಷರನ್ನಾಗಿ ನೇಮಿಸಿತ್ತು. ಇವರು ನವದೆಹಲಿಯ ವಿಜ್ಞಾನ ಭಾರತಿ ಸಂಸ್ಥೆಯ ಅಧ್ಯಕ್ಷರೂ ಆಗಿದ್ದರು. ಇವರು ಹಲವು ಸಂಘಸಂಸ್ಥೆಗಳ ಪದಾಧಿಕಾರಿಗಳಾಗಿಯೂ ಕೆಲಸ ನಿರ್ವಹಿಸಿದ್ದರು. ಹಲವು ಸಾರ್ವಜನಿಕ ಹಿತಾಸಕ್ತಿಯ ಸಂಸ್ಥೆಗಳ ಧರ್ಮದರ್ಶಿಗಳೂ ಆಗಿದ್ದರು. ಬಾಂಬೆ ಯೂನಿಯನ್ ಆಫ್ ಜರ್ನಲಿಸ್ಟ್ಸ್ (1953), ಅಖಿಲ ಭಾರತ ಕೊಂಕಣಿ ಭಾಷಾ ಪರಿಷದ್ ಈ ಸಂಸ್ಥೆಯ ಅಧ್ಯಕ್ಷರಾಗಿದ್ದರು.

ಇವರ ಸೇವೆಯನ್ನು ಪರಿಗಣಿಸಿ ಸರ್ಕಾರ ಮತ್ತು ಸಂಘ ಸಂಸ್ಥೆಗಳು ಹಲವು ಪ್ರಶಸ್ತಿಗಳನ್ನು ನೀಡಿವೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಟಿಳಕ- ಮೊಹರೆ ಪತ್ರಿಕೋದ್ಯಮ ಪ್ರಶಸ್ತಿ, ಗೋಕರ್ಣ ಪರ್ತಗಾಳಿ ಮಠದ ವಿದ್ಯಾಧಿರಾಜ ಪ್ರಶಸ್ತಿ, ಉಡುಪಿಯ ಮಠಾಧೀಶರ ಸಮಾಜ ಭೂಷಣ ಬಿರುದು ಮುಖ್ಯವಾದವು.

ತಮ್ಮ ಜೀವಮಾನವನ್ನೆಲ್ಲ ಕರ್ನಾಟಕದ ಹೊರಗೆ ಕಳೆದರೂ ತಮ್ಮ ಬರೆಹಗಳಿಂದ, ಅರ್ಥಪೂರ್ಣ ಕೃತಿಗಳಿಂದ ಇವರು ಕನ್ನಡ ನಾಡಿನ ಕೀರ್ತಿಯನ್ನು ಹೆಚ್ಚಿಸಿದ್ದಾರೆ. (ಎಸ್.ಎಂ.ಕೆ.)

**ಕಾಮದೇವ[1]**: ಕದಂಬ ದೊರೆ (1180-1217). 12ನೆಯ ಶತಮಾನದಲ್ಲಿ ಹಾನಂಗಲ್ ಪ್ರದೇಶವನ್ನು ಆಳುತ್ತಿದ್ದ ರಾಜರಲ್ಲಿ ಪ್ರಮುಖ. ಈತನ ತಂದೆ ಇಮ್ಮಡಿ ಕೀರ್ತಿನೃಪಾಲ. ಕದಂಬರ ಬಿರುದುಗಳಾದ ಮಾಲತೀ ಮಧುಕೇಶ್ವರ, ಬನವಾಸಿ ಪುರವರಾಧೀಶ್ವರ ಎಂಬವನ್ನು ಕಾಮದೇವ ತಳೆದಿದ್ದ. ಕಾಳಲದೇವಿ ಈತನ ರಾಣಿ. ಬರಮ, ಸೋಮ ಮತ್ತು ಮಲ್ಲಿದೇವ ಗಂಡು ಮಕ್ಕಳು. ತನ್ನ ಆಳಿಕೆಯ ಪ್ರಾರಂಭದಲ್ಲಿ ಕಾಮದೇವ ಕಳಚುರಿ ಸಾಮ್ರಾಟರ ಅಧೀನನಾಗಿದ್ದ. 1184ರಲ್ಲಿ ಕಳಚುರಿ ಮನೆತನ ಕೊನೆಗೊಂಡು ನಾಲ್ವಡಿ ಸೋಮೇಶ್ವರ ಚಾಳುಕ್ಯ ಮನೆತನವನ್ನು ಪುನಃ ಸ್ಥಾಪಿಸಿದ ಮೇಲೆ ಅವರ ಅಧೀನನಾಗಿದ್ದ. ಕಲ್ಯಾಣವನ್ನು ಕಳಚುರಿಗಳಿಂದ ಮರಳಿ ಪಡೆಯುವ ಪ್ರಯತ್ನದಲ್ಲಿ ಸೋಮೇಶ್ವರನಿಗೆ ಕಾಮದೇವನ ಸಹಕಾರ ದೊರಕಿತು. 1189ರಲ್ಲಿ ಚಾಳುಕ್ಯ ಮನೆತನ ಅಳಿದು ಹೊಯ್ಸಳ ವೀರಬಲ್ಲಾಳ ಬನವಾಸಿ, ಹಾನಂಗಲ್, ನಾಗರಖಂಡ ನಾಡುಗಳನ್ನು ಗೆದ್ದು ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದ. ಕಾಮದೇವ ಹಲವು ವರ್ಷಗಳ ಕಾಲ ವೀರಬಲ್ಲಾಳ ಚಕ್ರವರ್ತಿಯ ಅಧೀನನಾಗಿದ್ದ. ಈತ 1205ರ ವೇಳೆಗೆ ಸ್ವತಂತ್ರ ರಾಜನೆಂದು ಘೋಷಿಸಿಕೊಂಡುದರಿಂದ ಬಲ್ಲಾಳನ ಸೈನ್ಯ ಇವನನ್ನು ಅನೇಕ ಬಾರಿ ಸೋಲಿಸಿತು. ಸೋತಾಗಲೆಲ್ಲ ಈತ ತಲೆತಪ್ಪಿಸಿಕೊಂಡು ಮರಸು ಯುದ್ಧದಲ್ಲಿ ತೊಡಗುತ್ತಿದ್ದ. ಕೊನೆಗೆ 1211ರ ವೇಳೆಗೆ ಕಾಮದೇವ ಸ್ವತಂತ್ರನಾದ, ಆದರೆ ಹಾನಂಗಲ್ ಕದಂಬರ ಸ್ವಾತಂತ್ರ್ಯ ಮುಂದುವರಿಯಲಿಲ್ಲ. ಇವನ ಉತ್ತರಾಧಿಕಾರಿ ಮಲ್ಲಿದೇವ ಸೇವುಣರ ಸಾಮಂತನಾದ. ಕಾಮದೇವ ಕಬ್ಬಿಗರ ಕಾವದ ಕರ್ತೃವಾದ ಆಂಡಯ್ಯನ ಪೋಷಕನಾಗಿದ್ದ. (ಜಿ.ಆರ್.ಆರ್.)

**ಕಾಮದೇವ[2]** : ಉಚ್ಚಂಗಿ ಪಾಂಡ್ಯ ಮನೆತನದ ಕೊನೆ ಅರಸ. 1161ರಿಂದ 1187ವರೆಗೆ ಆಳಿದ. ವಿಜಯ ಪಾಂಡ್ಯನೆಂದೂ ಇವನಿಗೆ ಹೆಸರಿತ್ತು. 11-12ನೆಯ ಶತಮಾನಗಳಲ್ಲಿ ಪಾಂಡ್ಯರು ಕಲ್ಯಾಣದ ಚಾಳುಕ್ಯರ ಸಾಮಂತರಾಗಿ, ಉಚ್ಚಂಗಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಇಂದಿನ ಬಳ್ಳಾರಿ, ಚಿತ್ರದುರ್ಗ, ಶಿವಮೊಗ್ಗ ಮತ್ತು ತುಮಕೂರು ಜಿಲ್ಲೆಗಳ ಹಲವು ಭಾಗಗಳನ್ನೊಳಗೊಂಡ ನೊಳಂಬವಾಡಿ ಎಂಬ ರಾಜ್ಯವನ್ನು ಆಳುತ್ತಿದ್ದರು. ಕಾಮದೇವನ ಆಳಿಕೆಯ ಪ್ರಾರಂಭಕ್ಕೆ ಮೊದಲೇ ಕಲ್ಯಾಣ ಚಾಳುಕ್ಯರ ಸಿಂಹಾಸನವನ್ನು ಕಳಚುರಿ ಮನೆತನದ ಬಿಜ್ಜಳ ಆಕ್ರಮಿಸಿಕೊಂಡಿದ್ದ. ಈತ 1162ರಲ್ಲಿ ಕಾಮದೇವನನ್ನು ಸೋಲಿಸಿದ. ಆದರೂ ಕಾಮದೇವ ಪದಚ್ಯುತರಾದ ಚಾಳುಕ್ಯರ ಪಕ್ಷಪಾತಿಯಾಗಿದ್ದ. 1177ರಲ್ಲಿ ಹೊಯ್ಸಳ ಇಮ್ಮಡಿ ವೀರಬಲ್ಲಾಳ ಉಮ್ಮತ್ತೂರಿನಲ್ಲಿ ಕಾಮದೇವನನ್ನು ಸೋಲಿಸಿ ದುರ್ಗಮವಾದ ಉಚ್ಚಂಗಿಯನ್ನು ಮುತ್ತಿ, ಕಾಮದೇವನಿಂದ ಅಪಾರ ಕಪ್ಪಕಾಣಿಕೆಗಳನ್ನು ಪಡೆದ. ಅವನ ರಾಜ್ಯವನ್ನು ಅವನಿಗೇ ಹಿಂತಿರಿಗಿಸಿ, ಪಾಂಡ್ಯರಾಜಪ್ರತಿಷ್ಠಾಪನಾಚಾರ್ಯ ಎಂಬ ಬಿರುದನ್ನು ತಳೆದ. 1184ರಿಂದ 1187ರ ವರೆಗೆ ಕಾಮದೇವ ಪುನಃ ಸ್ಥಾಪಿಸಲಾದ ಕಲ್ಯಾಣ ಚಾಳುಕ್ಯ ರಾಜ್ಯದ ನಾಲ್ವಡಿ ಸೋಮೇಶ್ವರನ ಪಕ್ಷ ವಹಿಸಿದ. ಇದರಿಂದ ಕೋಪಗೊಂಡ ಬಲ್ಲಾಳ 1187ರಲ್ಲಿ ಉಚ್ಚಂಗಿಯನ್ನು ಮುತ್ತಿದ. ಯುದ್ಧದಲ್ಲಿ ಕಾಮದೇವನೂ ಆತನ ಮಗನಾದ ಒಡೆಯನೂ ಮರಣ ಹೊಂದಿದರು. ನೊಳಂಬವಾಡಿ ಹೊಯ್ಸಳ ಸಾಮ್ರಾಜ್ಯದಲ್ಲಿ ಸೇರಿತು. *

**ಕಾಮಧೇನು** : ಕೃಷಿವಿಚಾರಗಳಿಗೆ ಮೀಸಲಾಗಿದ್ದ ಮಾಸ ಪತ್ರಿಕೆ. ಕೌಜಲಗಿ ಹಣಮಂತರಾವ್ ಸ್ಮಾರಕನಿಧಿಯಿಂದ 1958ರ ಆಗಸ್ಟ್‌ನಲ್ಲಿ ಆರಂಭವಾಯಿತು. ಕೃಷಿಕರಲ್ಲಿ ಶಾಸ್ತ್ರೀಯ ದೃಷ್ಟಿಕೋನವನ್ನು ಬೆಳೆಸುವುದು, ಶಾಸ್ತ್ರೀಯ ಕೃಷಿತಂತ್ರವನ್ನು ಅನುಸರಿಸಿ ಸಮೃದ್ಧ ಬೆಳೆ ಬೆಳೆಸುವ ಬಗ್ಗೆ ಅವರಿಗೆ ಸಲಹೆ ಮತ್ತು ಅನುಭವ ಕಥನಗಳನ್ನು ಒದಗಿಸುವುದು, ನಾಡಿನಲ್ಲೂ ವಿದೇಶಗಳಲ್ಲೂ ಕೃಷಿರಂಗದಲ್ಲಿ ನಡೆದ ಪ್ರಯೋಗಗಳ ಪರಿಚಯ ಮಾಡಿಕೊಡುವುದು, ಜೊತೆಗೆ ಬಿಡುವಿನ ಸಮಯದಲ್ಲಿ ಓದಲು ಸರಸ ಸಾಹಿತ್ಯ ಒದಗಿಸುವುದು-ಇವು ಈ ಪತ್ರಿಕೆಯ ಉದ್ದೇಶಗಳು. ಡೆಮ್ಮೆ ಚತುರ್ಥಾಕಾರದ 48 ಪುಟಗಳ ಬಿಡಿ ಸಂಚಿಕೆಯ ಬೆಲೆ 50 ಪೈ. ವಾರ್ಷಿಕ ಚಂದಾ ರೂ.5. ಈ ಪತ್ರಿಕೆಯ ಸಂಪಾದಕರಾಗಿದ್ದವರು ರಂಗನಾಥ ದಿವಾಕರ.

ಪ್ರಗತಿಪರ ರೈತರ ಅನುಭವ ಕಥನ, ದುಡಿದು ಪಡೆದವರು, ಕೃಷಿಯಲ್ಲಿ ನೀವು ಅರಿತಿರಬೇಕಾದುದು ಮೊದಲಾದ ಶೀರ್ಷಿಕೆಗಳ ಅಡಿಯಲ್ಲಿ ಈ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ಲೇಖನಗಳು ಆಕರ್ಷಕವಾಗಿದ್ದುವು. ಅಲ್ಲದೆ ಕೃಷಿರಂಗದಲ್ಲಿ ಕಾಲ ಕಾಲಕ್ಕೆ ಅನುಸರಿಸಬೇಕಾದ ರೀತಿನೀತಿಗಳ ತಿಳಿವಳಿಕೆಯನ್ನೂ ಕೊಡಲಾಗುತ್ತಿತ್ತು. ಇದರಿಂದಾಗಿ ಕಾಮಧೇನು ಎಂಬ ಹೆಸರು ಇದಕ್ಕೆ ಅನ್ವರ್ಥವಾಗಿ ಪರಿಣಮಿಸಿತು. ಗ್ರಾಮಾಯಣ ಖ್ಯಾತಿಯ ರಾವ್ ಬಹದ್ದೂರರು ಈ ಪತ್ರಿಕೆಯಲ್ಲಿ ಒಡೆದ ಕನ್ನಡಿ ಎಂಬ ಶೀರ್ಷಿಕೆಯಲ್ಲಿ ಬರೆಯುತ್ತಿದ್ದ ಕಥೆಗಳು ಹಳ್ಳಿಗರ ಜೀವನದಲ್ಲಿ ಬರುವ ನಾನಾ ಸಮಸ್ಯೆಗಳ ಮೇಲೆ ಕ್ಷಕಿರಣ ಬೀರುತ್ತಿದ್ದುವು.




ಜೊತೆಗೆ ಅನ್ಯಭಾಷೆಗಳ ಉತ್ತಮ ಕಥೆಗಳನ್ನೂ ಪತ್ರಿಕೆ ಪ್ರಕಟಿಸುತ್ತಿತ್ತು. ದನಗಳ ಪಾಲನೆ ಪೋಷಣೆ, ಅವುಗಳ ರೋಗರುಜಿನಗಳ ನಿವಾರಣೆ ಮೊದಲಾದ ವಿಷಯುಗಳನ್ನು ಕುರಿತ ಲೇಖನಗಳು ಉಪಯುಕ್ತವಾಗಿದ್ದುವು. ಮೊದಲ ಕೆಲವು ಸಂಚಿಕೆಗಳ ಮುಖಪತ್ರ ತ್ರಿವರ್ಣದಲ್ಲಿ ಮುದ್ರಿತವಾಗುತ್ತಿತ್ತು.

ಈ ಪತ್ರಿಕೆ 1963ರ ಮಾರ್ಚ್‌ವರೆಗೆ ನಡೆದು ಶಿರಸಿಯ ಒಂದು ಸಂಸ್ಥೆಗೆ ಹಸ್ತಾಂತರವಾಯಿತು. ಸ್ವಲ್ಪ ಕಾಲವಾದ ಮೇಲೆ ಅದು ಮತ್ತೆ ಹಸ್ತಾಂತರಗೊಂಡಿತಲ್ಲದೆ ಅದರ ಹೆಸರೂ ಬದಲಾಯಿತು. ರೈತರಿಗೆ ತುಂಬ ಉಪಯುಕ್ತವಾಗಿದ್ದ ಪತ್ರಿಕೆಯಾಗಿದ್ದರೂ ಇದರ ಪ್ರಸಾರ ಸಂಖ್ಯೆ 1,500ರ ಗಡಿಯನ್ನು ದಾಟಲಿಲ್ಲ. *

**ಕಾಮನ ಹಬ್ಬ :** ಕರ್ನಾಟಕದಲ್ಲಿ ಆಚರಣೆಯಲ್ಲಿರುವ ಒಂದು ಜನಪದ ಹಬ್ಬ. ಉತ್ತರ ಕರ್ನಾಟಕದಲ್ಲಿ ಈ ಹಬ್ಬವನ್ನು ಹೋಳಿ ಹುಣ್ಣಿಮೆ, ಹೋಳಿಹಬ್ಬ ಎಂದು ಆಚರಿಸುವ ರೂಢಿಯಿದೆ. ಇದು ಪ್ರತಿವರ್ಷದ ಫಾಲ್ಗುಣ ಮಾಸದಲ್ಲಿ ನಡೆಯುತ್ತದೆ.

ವಿಜಯನಗರದ ಅರಸರು ಕಾಮನ ಹಬ್ಬವನ್ನು ತುಂಬ ಉತ್ಸಾಹದಿಂದ ಆಚರಿಸುತ್ತಿದ್ದ ಸಂಗತಿಯನ್ನು ಕಣ್ಣಾರೆ ಕಂಡು ಆನಂದಿಸಿದ ವಿದೇಶೀ ಯಾತ್ರಿಕ ಡೊಮಿಂಗೊ ಪೆಯಸ್ ವರದಿ ಮಾಡಿದ್ದಾನೆ. ಕನಕದಾಸರ ವಿಖ್ಯಾತ ಹಾಡುಗಬ್ಬ 'ಮೋಹನ ತರಂಗಿಣಿ' ಕಾಮನ ಹಬ್ಬದ ಹಿನ್ನೆಲೆಯನ್ನು ಕುರಿತುದಾಗಿದೆ.

ಜನಪದ ಪರಂಪರೆಯ ಸಾಮಾಜಿಕ ಸಂಪ್ರದಾಯಗಳ ಸಂಕೇತಗಳನ್ನು ಈ ಹಬ್ಬದ ನಡೆವಳಿಯಲ್ಲಿ ನಾವು ಗುರುತಿಸಬಹುದು. ಹಳೆಯ ವಸ್ತುಗಳನ್ನು ಹೋಳಿಗಾಗಿ ಸಂಗ್ರಹಿಸುವುದು, ಕುಳ್ಳು (ಬೆರಣಿ), ಕಟ್ಟಿಗೆ ಕಳವು ಮಾಡಿ ತರುವುದು, ಕಾಮದಹನದ ಬೇರೆ ಬೇರೆ ಕಾರ್ಯಕ್ಕಾಗಿ ಹಳ್ಳಿಗಳಲ್ಲಿ ಬೇರೆ ಬೇರೆ ಹಕ್ಕುದಾರರಿರುವುದು, ಇವರೆಲ್ಲರ ಮೇಲೆ ಹೋಳಿಯ ನಾಯಕ ಎಂಬ ಹಿರಿಯನಿರುವುದು, ಅಸ್ಪೃಶ್ಯರೂ ಈ ಹಬ್ಬದಲ್ಲಿ ಪಾಲ್ಗೊಳ್ಳುವ ಅವಕಾಶವಿರುವುದು, ತಮ್ಮಟೆಗಳನ್ನು ಬಾರಿಸುವುದು, ಸಕ್ಕರೆಯ ಸರಗಳನ್ನು ಒಬ್ಬರು ಇನ್ನೊಬ್ಬರ ಮಕ್ಕಳಿಗೆ ಒಲವುಗಾಣಿಕೆಗಳನ್ನಾಗಿ ಕೊಡುವುದು, ಕಾಮದಹನದ ಕಾಲದಲ್ಲಿ ಉರಿಯಮೇಲೆ ಮಾಸ್ತಿ ಎಂಬ ಹೆಸರಿನಿಂದ ಹೆಣ್ಣು ಕೋಳಿಯನ್ನು ಹಾರಿಸುವುದು, ಉರಿಯುವ ಹೋಳಿಯಲ್ಲಿ ಕಬ್ಬಿನ ಗಣಿಕೆ (ತುಂಡು), ಬೆಲ್ಲದಿಂದ ಮಾಡಿದ ಚೇಳು, ತೆಂಗಿನಕಾಯಿ - ಇವುಗಳನ್ನು ಒಗೆಯುವುದು, ಹೋಳಿಯ ಬೆಂಕಿಯನ್ನು ಮನೆಗೆ ತಂದು ಅದರಲ್ಲಿ ಕಡಲೆಗಳನ್ನು ಸುಟ್ಟು ತಿನ್ನುವುದು ಇವೆಲ್ಲ ನಮ್ಮ ಜನಪದ ಸಂಪ್ರದಾಯಗಳಾಗಿವೆ ಎಂಬ ಬೆಟಗೇರಿ ಕೃಷ್ಣಶರ್ಮರ ಮಾತುಗಳು ಕಾಮನ ಹಬ್ಬದ ಆಚರಣೆಯ ವೈಶಿಷ್ಟ್ಯಗಳನ್ನು ನಿರೂಪಿಸುತ್ತವೆ. ಈ ಹಬ್ಬ ಕುರಿತಂತೆ ಉತ್ತರ ಕರ್ನಾಟಕದಲ್ಲಿ ಜನಪದ ಲಾವಣಿಗಳು, ದುಂದುಮೆ ಹಾಡು, ಹಿಯಾಲು ಮುಂತಾದ ಜನಪದ ಸಾಹಿತ್ಯ ಕಂಡುಬರುತ್ತದೆ.

ಕಾಮನ ಹಬ್ಬಕ್ಕೆ ಪೌರಾಣಿಕ ಅಂಶಗಳೂ ಸೇರಿಕೊಂಡಿವೆ. ವಿಷ್ಣುಪುರಾಣ, ಲಿಂಗಪುರಾಣಗಳ ಪ್ರಕಾರ ಪರಮೇಶ್ವರನ ಉಗ್ರತಪಸ್ಸಿಗೆ ಭಂಗತಂದ ಮನ್ಮಥ ಮುಕ್ಕಣ್ಣನ ಉರಿಗಣ್ಣಿನ ಬಿರುಬಿಗೆ ಸಿಕ್ಕು ಬೆಂದು ಹೋದ. ಅನಂತರ ರತಿಯ ಮೊರೆಯ ಕನಿಕರದಿಂದ ಕಾಮ ಅನಂಗನಾಗಿ ಬಾಳುವಂತೆ ಪರಮೇಶ್ವರ ಅನುಗ್ರಹಿಸಿದ. ಈ ಕಲ್ಪನೆಯಂತೆ ರತಿ-ಮನ್ಮಥರನ್ನು ಮೊದಲು ಪೂಜಿಸಿ ಹಾಡಿ ಕುಣಿದು ಅನಂತರ ಕಾಮನನ್ನು ಸುಡುವ ಸಂಪ್ರದಾಯ ಕರ್ನಾಟಕದಲ್ಲಿದೆ. (ಎನ್.ಟಿ.)

**ಕಾಮಲಾಪುರ :** ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನಲ್ಲಿ ಕಸಬೆಯಿಂದ 11ಕಿಮೀ ಈಶಾನ್ಯಕ್ಕಿರುವ ಒಂದು ಊರು. ಹಂಪೆಯಿಂದ ಮೂರೂವರೆ ಕಿಮೀ ದೂರದಲ್ಲಿದೆ. ಈ ಊರು ಒಂದು ಕಾಲದಲ್ಲಿ ವಿಜಯನಗರ ರಾಜಧಾನಿಯ ಭಾಗವಾಗಿತ್ತು. ರಾಣಿ ಕಾಮಲಾದೇವಿ ಇಲ್ಲಿ ವಾಸಿಸುತ್ತಿದ್ದುದರಿಂದ ಈ ಹೆಸರು ಬಂತೆಂದು ಹೇಳಿಕೆ. ಇದು ಕೆಲವು ಕಾಲ ಆನೆಗೊಂದಿ ರಾಜನ ವಾಸಸ್ಥಳವಾಗಿತ್ತು. ವಿಜಯನಗರದ ಅರಸರ ಕಾಲದ ಅನೇಕ ದೇವಾಲಯಗಳು ಇಲ್ಲಿವೆ. ಅವುಗಳಲ್ಲಿ ನಗರೇಶ್ವರ, ಪಟ್ಟಾಭಿರಾಮ ಮತ್ತು ಕಂಪ್ಲಿಗೆ ಹೋಗುವ ಮಾರ್ಗದಲ್ಲಿ ಸಿಕ್ಕುವ ಮಾಲ್ಯವಂತ ರಘುನಾಥ ದೇವಾಲಯಗಳು ಪ್ರಸಿದ್ಧ (ನೋಡಿ: ಹಂಪೆ).

ಊರಿನ ಮುಂಭಾಗದಲ್ಲಿ 476 ಎಕರೆ ಒಳ ಆಯ ಹೊಂದಿರುವ ದೊಡ್ಡಕೆರೆ ಇದೆ. ಫಲವತ್ತಾದ ಕೆಂಪು ಮಿಶ್ರಿತ ಮಣ್ಣಿರುವ ಈ ಪ್ರದೇಶದಲ್ಲಿ ಕಬ್ಬನ್ನು ಹೆಚ್ಚು ಬೆಳೆಸುವುದರ ಜೊತೆಗೆ ಬತ್ತ ಮತ್ತು ಬಾಳೆ ಬೆಳೆಯುತ್ತಾರೆ.

ಕಾಮಲಾಪುರಕ್ಕೆ ಸಮೀಪದಲ್ಲಿ ಜಲವಿದ್ಯುತ್ ಕೇಂದ್ರವನ್ನು ಸ್ಥಾಪಿಸಲಾಗಿದೆ. ಇಲ್ಲಿ ಕಾರ್ಮಿಕರು ಮತ್ತು ಇತರರು ನೆಲಸಿ ಒಂದು ಬಡಾವಣೆಯಾಗಿದೆ. ಹೊಸಪೇಟೆ ಬಳಿಯ ತುಂಗಭದ್ರಾ ಅಣೆಕಟ್ಟಿನಿಂದ ಸದಾ ದೊರಕುವ ನೀರಿನಿಂದ ಈ ಸುತ್ತಿನಲ್ಲಿ ವ್ಯವಸಾಯ ಪ್ರಗತಿಹೊಂದಿದೆ. ಕಬ್ಬನ್ನು ಬೆಳೆದು ಹೊಸಪೇಟೆ ಸಕ್ಕರೆ ಕಾರ್ಖಾನೆಗೆ ಒದಗಿಸುತ್ತಾರೆ. ಬೆಲ್ಲದ ತಯಾರಿಕೆಯೂ ಉಂಟು.

ಕಾಮಲಾಪುರ ನಗರ ಪಂಚಾಯಿತಿಯ ಆಡಳಿತಕ್ಕೆ ಸೇರಿದೆ. ಇಲ್ಲಿ ಒಂದು ಕಾಲೇಜು ಇದೆ. ಪ್ರವಾಸಿಮಂದಿರ ಮತ್ತು ಕೇಂದ್ರ ಸರ್ಕಾರದ ಮೇಲ್ವಿಚಾರಣೆಗೆ ಒಳಪಟ್ಟಿರುವ ಪುರಾತತ್ತ್ವ ಇಲಾಖೆಯ ಒಂದು ಕಾರ್ಯಾಲಯ ಇವೆ. *

**ಕಾರಂತ, ಕೆ.ಆರ್. :** 1894-. ಪ್ರಸಿದ್ಧ ರಾಜಕೀಯ ಧುರೀಣ ಮತ್ತು ನ್ಯಾಯವಾದಿ. ದಕ್ಷಿಣ ಕನ್ನಡ ಜಿಲ್ಲೆ ಕೋಟದಲ್ಲಿ 1894 ಮೇ 1ರಂದು ಜನಿಸಿದರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಓದಿ ಪದವೀಧರರಾದ ಅನಂತರ ಮುಂಬಯಿಯಲ್ಲಿ ನ್ಯಾಯಶಾಸ್ತ್ರ ಪದವಿಯನ್ನು ಗಳಿಸಿಕೊಂಡರು. 1919ರಿಂದ ಮಂಗಳೂರಿನಲ್ಲಿ ನೆಲೆಸಿ ವಕೀಲಿವೃತ್ತಿ ಕೈಗೊಂಡರು.

ಗಾಂಧೀಜಿಯವರ ಕರೆಗೆ ಓಗೊಟ್ಟು ತಮ್ಮ ವೃತ್ತಿ ಬಿಟ್ಟು ಅಸಹಕಾರ ಚಳವಳಿಯಲ್ಲಿ ಪಾತ್ರವಹಿಸಿ ಕಾಂಗ್ರೆಸ್ಸಿನ ಕ್ರಿಯಾತ್ಮಕ ಸದಸ್ಯರಾದರು. 1924ರಿಂದ 1937ರವರೆಗೆ ಮಂಗಳೂರು ನಗರ ಯೋಜನೆಯಲ್ಲಿ ಹೆಚ್ಚು ಆಸಕ್ತಿವಹಿಸಿದ್ದ ಇವರು ಕಾಂಗ್ರೆಸ್ಸಿನ ಸ್ವರಾಜ್ಯ ಪಕ್ಷದ ಪ್ರತಿನಿಧಿಯಾಗಿ 1926ರಲ್ಲಿ ಮದರಾಸಿನ ಶಾಸನಸಭೆಗೆ ಚುನಾಯಿತರಾದರು. 1937ರಲ್ಲಿ ಎರಡನೆಯಸಾರಿ ಚುನಾಯಿತರಾಗಿ ಸಿ.ರಾಜಗೋಪಾಲಾಚಾರಿಯವರ ಮಂತ್ರಿಮಂಡಲದ ಸಂಸತ್ತಿನ ಕಾರ್ಯದರ್ಶಿಯಾಗಿ ನೇಮಿತರಾದರು. 1940ರಲ್ಲಿ ಸತ್ಯಾಗ್ರಹಿಯಾಗಿ ಸರ್ಕಾರದಿಂದ ಬಂಧಿತರಾದರು. 1942ರಿಂದ 1944ರವರೆಗೂ ಭಾರತ ಬಿಟ್ಟು ತೊಲಗಿ ಚಳವಳಿಯ ಅಂಗವಾಗಿ ಪುನಃ ಬಂಧಿತರಾಗಿದ್ದರು. 1946ರಲ್ಲಿ ಮದರಾಸು ವಿಧಾನಸಭೆಗೆ ಚುನಾಯಿತರಾಗಿ ಟಿ.ಪ್ರಕಾಶಂ ಅವರ ಮಂತ್ರಿಮಂಡಲದಲ್ಲಿ ಕಂದಾಯಮಂತ್ರಿಯಾಗಿದ್ದಾಗ ಜಮೀನ್ದಾರಿ ರದ್ದಿಯಾತಿ ಕಾನೂನಿನ ಕರಡನ್ನು ತಂದು, ಸ್ವಾತಂತ್ರ್ಯದ ಅನಂತರ ಅದು ಕಾನೂನಾಗಲು ಕಾರಣರಾದರು. ಮಲಬಾರು ಮತ್ತು ದಕ್ಷಿಣ ಕನ್ನಡ ಪ್ರಾಂತ್ಯಗಳಲ್ಲಿ ಅರಣ್ಯರಕ್ಷಣೆ ಮತ್ತು ನೀರಾವರಿ ಕಾಯಿದೆಯನ್ನೂ ತಂದರು. 1951ರಲ್ಲಿ ಇಂಗ್ಲೆಂಡ್ ಮತ್ತು ಯುರೋಪಿನ ಕೆಲವು ದೇಶಗಳನ್ನು ಸುತ್ತಿಬಂದ ಕಾರಂತರು ತಮ್ಮ ಪ್ರವಾಸದ ಅನುಭವಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದಾರೆ.

1951ರ ಕೊನೆಯಲ್ಲಿ ಕಾಂಗ್ರೆಸ್ಸಿಗೆ ರಾಜೀನಾಮೆ ಕೊಟ್ಟು ಕೆ.ಎಂ.ಪಿ. ಪಕ್ಷದ ಸದಸ್ಯರಾಗಿದ್ದರು. ಅನಂತರ ಪ್ರಜಾ ಸೋಷಿಯಲಿಸ್ಟ್ ಪಕ್ಷದ ಸ್ಥಾಪಕ ಸದಸ್ಯ ಮತ್ತು ಉಪಾಧ್ಯಕ್ಷರಾದರು.

ರಾಜ್ಯ ಪುನರ್ ವಿಂಗಡಣೆಯಾದಮೇಲೆ ಇವರು ಬೆಂಗಳೂರಿನಲ್ಲಿ ನೆಲೆಸಿ ಕರ್ನಾಟಕದ ಉಚ್ಚ ನ್ಯಾಯಾಲಯದಲ್ಲಿ ತಮ್ಮ ವಕೀಲಿ ವೃತ್ತಿಯನ್ನು ಮುಂದುವರಿಸಿದರು. ಪ್ರಸಿದ್ಧ ಸಾಹಿತಿಗಳಾದ ಶಿವರಾಮ ಕಾರಂತರು (ನೋಡಿ) ಇವರ ಸಹೋದರರಲ್ಲೊಬ್ಬರು. (ಬಿ.ಡಿ.ಎಸ್.)

**ಕಾರಂತ, ಬಿ.ವಿ. :** 1931-2002. ಕನ್ನಡ ರಂಗಭೂಮಿ ಹಾಗೂ ಚಲನಚಿತ್ರ ಕ್ಷೇತ್ರದ ಪ್ರಯೋಗಶೀಲ ನಟ, ನಿರ್ದೇಶಕ. ದಕ್ಷಿಣ ಕನ್ನಡ ಜಿಲ್ಲೆ ಬಂಟ್ವಾಳ ತಾಲ್ಲೂಕಿನ ಹಳ್ಳಿಯೊಂದರಲ್ಲಿ ಜನಿಸಿದರು (1931). ಕಾರಂತರು ಚಿಕ್ಕಂದಿನಿಂದಲೇ ನಾಟಕದಲ್ಲಿ ಆಸಕ್ತಿ ಬೆಳೆಸಿಕೊಂಡರು. ಆ ಸುತ್ತಿನಲ್ಲಿ ನಡೆಯುತ್ತಿದ್ದ ಯಕ್ಷಗಾನ ಬಯಲಾಟಗಳನ್ನು ನೋಡುತ್ತಿದ್ದರಲ್ಲದೆ ತಮ್ಮ ಹಳ್ಳಿಯಿಂದ ಇಪ್ಪತ್ತು ಮೈಲಿ ದೂರದಲ್ಲಿರುವ ಮಂಗಳೂರಿಗೆ ಹೋಗಿ ಆಗ ಅಲ್ಲಿ ಪ್ರದರ್ಶನ ನೀಡುತ್ತಿದ್ದ ಗುಬ್ಬಿ ಕಂಪನಿಯ ನಾಟಕಗಳನ್ನೂ ವೀಕ್ಷಿಸುತ್ತಿದ್ದರು. ಕಾಂರತರ ಮೊಟ್ಟ ಮೊದಲನೆಯ

ಅಭಿನಯವೆಂದರೆ ಕುವೆಂಪು ಅವರ ಮಕ್ಕಳ ನಾಟಕ ನನ್ನ ಗೋಪಾಲದಲ್ಲಿ. ಆಗ ಇವರು ಇನ್ನೂ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಯಾಗಿದ್ದರು.

ಎಂಟನೆಯ ತರಗತಿ ಯವರೆಗೆ ಓದಿದ ಕಾರಂತರಿಗೆ ವಿದ್ಯಾಭ್ಯಾಸವನ್ನು ಮುಂದು ವರಿಸುವುದು ಸಾಧ್ಯವಾಗಲಿಲ್ಲ. ರಂಗಭೂಮಿಯ ಆಕರ್ಷಣೆ ಅದಮ್ಯವಾಗಿತ್ತು. ಇವರು ದೂರದ ಮೈಸೂರಿಗೆ ಹೋಗಿ ಅಲ್ಲಿ ತಮ್ಮ ಆಸಕ್ತಿಯ ಕ್ಷೇತ್ರದಲ್ಲಿ ಮುನ್ನಡೆಯಬಯಸಿದರು;



ಸಂಗೀತ ಕಲಿಯಬೇಕೆಂಬುದು ಆಗ ಇವರ ಇಚ್ಛೆಯಾಗಿತ್ತು. ಹೋಟೆಲು ಮಾಣಿಯಾದರು.

ಆ ಸಮಯದಲ್ಲಿ ಮೈಸೂರು ನಗರದಲ್ಲಿ ಬಿಡಾರ ಹೂಡಿದ್ದ ಗುಬ್ಬಿ ವೀರಣ್ಣನವರ ನಾಟಕ ಕಂಪನಿಯನ್ನು ಸೇರಿದರು. ವೀರಣ್ಣನವರು ಕಾರಂತರಿಗೆ ವಿಶೇಷವಾದ ಪ್ರೋತ್ಸಾಹ ಕೊಟ್ಟರು. ಇವರಿಗೆ ಸಾಮಾನ್ಯವಾಗಿ ಸ್ತ್ರೀಪಾತ್ರಗಳನ್ನು ಕೊಡಲಾಗುತ್ತಿತ್ತು. ಕೃಷ್ಣ, ಮಾರ್ಕಂಡೇಯ ಮುಂತಾದ ಪಾತ್ರಗಳನ್ನೂ ಇವರು ಬಲು ಚೆನ್ನಾಗಿ ಅಭಿನಯಿಸುತ್ತಿದ್ದರು. ಬಿ.ಪುಟ್ಟಸ್ವಾಮಯ್ಯ, ಎಂ.ವಿ. ಮುನಿಯಪ್ಪ ಮುಂತಾದವರಲ್ಲಿ ಇವರು ಶಿಷ್ಯವೃತ್ತಿ ಮಾಡಿದರು.

ನಾಟಕರಂಗದಲ್ಲಿ ಕಾರಂತರು ಮುಂದುವರಿಯುತ್ತಿದ್ದಂತೆಯೇ ಹಿಂದಿಯನ್ನೂ ಅಭ್ಯಾಸ ಮಾಡಿದರು. ಅನಂತರ ಬೆಂಗಳೂರಿನಲ್ಲಿ ಹಿಂದಿ ಅಧ್ಯಾಪಕರಾದರು. ಕಾಶಿ ವಿಶ್ವವಿದ್ಯಾಲಯದಲ್ಲಿ ಹಿಂದಿ ಎಂ.ಎ. ಪದವಿ ಪಡೆದು ಸಂಶೋಧನೆಯಲ್ಲಿ ಮುಂದುವರಿದರು. ಇವರು ಕಾಶಿಯಲ್ಲಿದ್ದಾಗಲೇ ಹಿಂದಿ ರಂಗಭೂಮಿಯೊಂದಿಗೆ ಸಂಪರ್ಕ ಬೆಳೆಸಿಕೊಂಡರು. ಅಲ್ಲಿ ಇವರ ಸಾಹಿತ್ಯಾಭ್ಯಾಸವೂ ಮುಂದುವರಿಯಿತು. ಅಲ್ಲಿಂದ ಇವರು ದೆಹಲಿಗೆ ಹೋಗಿ ಅಲ್ಲಿಯ ರಾಷ್ಟ್ರೀಯ ನಾಟಕಶಾಲೆಯಲ್ಲಿ (ಎನ್‌ಎಸ್‌ಡಿ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮ) ಮೂರೂವರೆ ವರ್ಷ ಶಿಕ್ಷಣ ಪಡೆದರು. ಸರ್ವತೋಮುಖ ಪರಿಣತರೆಂಬ ಪುರಸ್ಕಾರ ಗಳಿಸಿದರು.

ಕಾರಂತರು ಒಳ್ಳೆಯ ಅಭಿನಯಕಾರರು ಮಾತ್ರವಲ್ಲದೆ ಪ್ರಯೋಗಶೀಲರು ಕೂಡ. ದೆಹಲಿಯಲ್ಲಿದ್ದಾಗ ಇವರು ಕನ್ನಡ ನಾಟಕಗಳನ್ನು ಹಿಂದಿ ರಂಗಭೂಮಿಗೆ ತರಲು ಶ್ರಮಿಸಿದರು. ದೆಹಲಿಯ ಕನ್ನಡ ಭಾರತಿಯೊಂದಿಗೆ ದುಡಿದರು. ಸರದಾರ್ ಪಟೇಲ್ ವಿದ್ಯಾಲಯದಲ್ಲಿ ಅಧ್ಯಾಪಕರಾಗಿದ್ದುದಲ್ಲದೆ ಹಿಂದಿ ದಿಶಾಂತರ ತಂಡದಲ್ಲೂ ನಾಟಕ ಕಲಿಸುತ್ತಿದ್ದ ಕಾರಂತರ ಕೆಲವು ಗಮನಾರ್ಹ ಪ್ರಯೋಗಗಳೆಂದರೆ ಸುನೋ ಜನಮೇಜಯ, ತುಘಲಕ ಮತ್ತು ಆತೇಕಾ ಕುಕ್ಕುಟ. ಮೊದಲನೆಯದು ಶ್ರೀರಂಗರ ಕೇಳು ಜನಮೇಜಯ ನಾಟಕದ ಹಿಂದಿ ರೂಪಾಂತರ. ಎರಡನೆಯದು ಗಿರೀಶ ಕಾರ್ನಾಡರ ಅದೇ ಹೆಸರಿನ ಕನ್ನಡ ನಾಟಕದ ಹಿಂದಿ ಅನುವಾದ. ಮೂರನೆಯದು ಕಾರ್ನಾಡರ ಹಿಟ್ಟಿನ ಹುಂಜ ನಾಟಕದ ಅನುವಾದ. ಹಿಂದಿ ನಾಟಕಗಳನ್ನೂ ಗುಜರಾತಿ ನಾಟಕಗಳನ್ನೂ ಸಂಸರ ಐತಿಹಾಸಿಕ ನಾಟಕಗಳನ್ನೂ ಇವರು ಪರಿಣಾಮಕಾರಿಯಾಗಿ ಪ್ರಯೋಗಿಸಿದರು. ಕಾರಂತರು ದೆಹಲಿಯಿಂದ ಬೆಂಗಳೂರಿಗೆ ಹಿಂದಿರುಗಿ ಅಲ್ಲೂ ಅನೇಕ ನಾಟಕಗಳನ್ನು ನಿರ್ದೇಶಿಸಿ ಕನ್ನಡ ರಂಗಭೂಮಿಗೆ ಹೊಸತನದ ಚೈತನ್ಯ ತುಂಬಿದರು. ಇವರು ಇದುವರೆಗೆ 104ಕ್ಕೂ ಹೆಚ್ಚು ನಾಟಕಗಳನ್ನು ನಿರ್ದೇಶಿಸಿದರು. ಇವುಗಳಲ್ಲಿ ಇಟಾಲಿಯನ್, ಫ್ರೆಂಚ್, ಗುಜರಾತಿ, ಬಂಗಾಲಿ, ಗ್ರೀಕ್ ಹಾಗೂ ಸಂಸ್ಕೃತ ನಾಟಕಗಳೂ ಸೇರಿವೆ. ಗೋಕುಲ ನಿರ್ಗಮನ ಇವರು ನಿರ್ದೇಶಿಸಿದ ಜನಪ್ರಿಯ ನಾಟಕ. ಕನ್ನಡ ವೃತ್ತಿರಂಗಭೂಮಿಗೆ ಪುನಶ್ಚೇತನ ನೀಡಲು ಕರ್ನಾಟಕ ಸರ್ಕಾರ ಮೈಸೂರಿನಲ್ಲಿ ಸ್ಥಾಪಿಸಿದ (1989) ರಂಗಾಯಣ ಮುಖ್ಯಸ್ಥರಾಗಿಯೂ ಕೆಲಸ ನಿರ್ವಹಿಸಿದರು (1989-95) (ನೋಡಿ: ರಂಗಾಯಣ).

ಕನ್ನಡ ಚಲನಚಿತ್ರ ಕ್ಷೇತ್ರದಲ್ಲಿ ಕಾರಂತರು ಮಾಡಿರುವ ಸಾಧನೆಯೂ ಗಮನಾರ್ಹವಾದ್ದು. ಗಿರೀಶ ಕಾರ್ನಾಡರೊಂದಿಗೆ ಇವರು ನಿರ್ದೇಶಿಸಿದ ವಂಶವೃಕ್ಷ ಚಿತ್ರ ಎಸ್.ಎಲ್.ಭೈರಪ್ಪನವರ ಅದೇ ಹೆಸರಿನ ಕಾದಂಬರಿಯನ್ನು ಆಧರಿಸಿ ನಿರ್ಮಿಸಲಾದ್ದು. ಅದರಲ್ಲಿ ಕಾರಂತರೂ ಒಂದು ಪಾತ್ರ ವಹಿಸಿದ್ದಾರೆ. ಈ ಚಿತ್ರದ ನಿರ್ದೇಶನಕ್ಕಾಗಿ ಇವರೂ ಕಾರ್ನಾಡರೂ ರಾಷ್ಟ್ರೀಯ ಹಾಗೂ ಫಿಲ್ಮ್ ಫೇರ್ ಪ್ರಶಸ್ತಿಗಳನ್ನು ಗಳಿಸಿದರು. ಗಿರೀಶ ಕಾರ್ನಾಡರು ನಿರ್ದೇಶಿಸಿದ 'ಕಾಡು' ಚಿತ್ರಕ್ಕೆ ಜಿ.ವಿ.ಅಯ್ಯರ್ ನಿರ್ದೇಶಿಸಿದ 'ಹಂಸಗೀತೆ' ಚಿತ್ರಕ್ಕೆ ಇವರು ಸಂಗೀತ ಅಳವಡಿಸಿದ್ದಾರೆ.

ಚಲನಚಿತ್ರ ಕ್ಷೇತ್ರದಲ್ಲಿ ಕಾರಂತರ ಮಹತ್ತ್ವದ ಸಾಧನೆಯೆಂದರೆ ಶಿವರಾಮ ಕಾರಂತರ 'ಚೋಮನ ದುಡಿ' ಕಾದಂಬರಿಯ ಚಿತ್ರೀಕರಣ. ಶಿವರಾಮ ಕಾರಂತರೇ ಚಲನಚಿತ್ರ ಕಥೆಯನ್ನೂ ಸಂಭಾಷಣೆಯನ್ನೂ ಒದಗಿಸಿರುವ ಈ ಚಿತ್ರದ ನಿರ್ದೇಶನದಲ್ಲಿ ಕಾರಂತರು ಸ್ವಾತಂತ್ರ್ಯಪೂರ್ವ ಭಾರತದ ಹರಿಜನ ಜೀತದಾಳೊಬ್ಬನ ಸಂಸಾರದ ದಾರುಣ ಪರಿಸ್ಥಿತಿಯನ್ನು ಯಥಾವತ್ತಾಗಿ ಮೂಡಿಸಿದ್ದಾರೆ. ಹೊರಾಂಗಣದಲ್ಲಿ ವಾಸ್ತವ ಸ್ಥಳಗಳಲ್ಲೇ ಚಿತ್ರೀಕರಿಸಲಾಗಿರುವ 'ಚೋಮನ ದುಡಿ'ಗೆ ಸಂಗೀತವನ್ನು ಹೊಂದಿಸಿರುವವರೂ ಇವರೇ. ಬಂಗಾಲಿಯ 'ಪಥೇರ್ ಪಾಂಚಾಲಿ' ಯಂತೆ ಕನ್ನಡದಲ್ಲಿ 'ಚೋಮನದುಡಿ' ಒಂದು ಹೊಸ ಹಾದಿ ನಿರ್ಮಿಸಿದೆಯೆಂದು ವಿಮರ್ಶಕರಿಂದ ಪ್ರಶಂಸೆ ಪಡೆದ ಈ ಚಿತ್ರಕ್ಕೆ ಭಾರತ ಸರ್ಕಾರ, ಕರ್ನಾಟಕ ರಾಜ್ಯ ಮತ್ತು ಫಿಲ್ಮ್‌ಫೇರ್ ಪ್ರಶಸ್ತಿಗಳು ದೊರಕಿವೆ. ಮಕ್ಕಳ ಚಿತ್ರವೊಂದನ್ನೂ ಕಾರಂತರು ನಿರ್ದೇಶಿಸಿದ್ದಾರೆ.

ಇವರು ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿಯೂ ಸೇವೆ ಸಲ್ಲಿದ್ದರು (1980-82).

1979ರಲ್ಲಿ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, 1981ರಲ್ಲಿ ಪದ್ಮಶ್ರೀ ಪ್ರಶಸ್ತಿ ನೀಡಿ ಇವರನ್ನು ಗೌರವಿಸಲಾಯಿತು. ಮಧ್ಯಪ್ರದೇಶ ಸರ್ಕಾರ ರಂಗಭೂಮಿಗೆ ಮೀಸಲಾಗಿಟ್ಟಿರುವ ಕಾಳಿದಾಸ ಸಮ್ಮಾನ, ಕರ್ನಾಟಕ ಸರ್ಕಾರ ರಂಗಭೂಮಿಯಲ್ಲಿ ಅಧಿಕ ಸಾಧನೆ ಮಾಡಿರುವವರಿಗೆ ಇಟ್ಟಿರುವ ಗುಬ್ಬಿವೀರಣ್ಣ ಪ್ರಶಸ್ತಿಯೂ ಇವರಿಗೆ ಲಭಿಸಿದೆ (1995). ಇವರು 2002 ಸೆಪ್ಟೆಂಬರ್ 1ರಂದು ಬೆಂಗಳೂರಿನಲ್ಲಿ ನಿಧನರಾದರು. (ಎಚ್.ಎಸ್.ಕೆ.)

**ಕಾರಖಾನೀಸ, ಗಣೇಶ ಗೋವಿಂದ :** 1890-. ಹರಿಜನರ ಏಳಿಗೆ, ದೇವದಾಸಿಯರ ವಿಮೋಚನೆ ಮತ್ತು ದೀನದಲಿತರ ಸೇವೆಗಾಗಿ ಜೀವನವನ್ನು ಮುಡುಪಾಗಿರಿಸಿದ ಖ್ಯಾತ ಸಮಾಜ ಸುಧಾರಕ, ಗಾಂಧೀವಾದಿ ಕನ್ನಡಿಗ.

1890 ಏಪ್ರಿಲ್ 28ರಂದು ಕೊಲ್ಹಾಪುರ ಜಿಲ್ಲೆ ಮಲಕಾಪುರದಲ್ಲಿ ಜನಿಸಿದರು. ತಂದೆ ಗೋವಿಂದ, ತಾಯಿ ಪಾರ್ವತೀಬಾಯಿ. ಕಾರಖಾನೀಸ ಎಂಬುದು ಮನೆತನದ ಹೆಸರು. ಇವರ ಪೂರ್ವಿಕರೊಬ್ಬರು ಛತ್ರಪತಿ ಶಿವಾಜಿ ಗೆದ್ದಿದ್ದ ಕೋಟೆಯೊಂದನ್ನು ಸುರಕ್ಷಿತವಾಗಿ ಕಾವಲು ನೋಡಿಕೊಂಡಿದ್ದರಿಂದ ಅವರಿಗೆ ಕಾರಖಾನೀಸ ಎಂಬ ಸನ್ನದನ್ನು ಶಿವಾಜಿ ನೀಡಿದ್ದನಂತೆ. ಅದೇ ಮನೆತನದ ಹೆಸರಾಯಿತು.

ಕಾರಖಾನೀಸರು ಮಲಕಾಪುರದಲ್ಲಿ ಪ್ರಾಥಮಿಕ ಶಿಕ್ಷಣ ಮುಗಿಸಿ ಜಮಖಂಡಿಯಲ್ಲಿ ಮಾಧ್ಯಮಿಕ ಶಿಕ್ಷಣವನ್ನೂ ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಉನ್ನತ ಶಿಕ್ಷಣವನ್ನೂ ಪಡೆದರು. ಬಿ.ಎ. ಪದವಿ ಪಡೆದ ಅನಂತರ ಒಂದು ವರ್ಷ ನ್ಯಾಯಶಾಸ್ತ್ರವನ್ನೂ ಅಭ್ಯಾಸ ಮಾಡಿದರು. ವಿದ್ಯಾರ್ಥಿಯಾಗಿದ್ದಾಗ್ಗೆ 1904ರ ವಂಗಭಂಗ ಚಳವಳಿಯಿಂದಲೂ ಲೋಕಮಾನ್ಯ ಟಿಳಕರ ಲೇಖನಗಳಿಂದಲೂ ರಾಷ್ಟ್ರಸೇವೆಯ ಸ್ಫೂರ್ತಿ ಪಡೆದರು. ಚಿಕ್ಕಂದಿನಿಂದಲೂ ಜ್ಞಾನೇಶ್ವರಿ, ದಾಸಬೋಧ ಮುಂತಾದ ಆಧ್ಯಾತ್ಮ ಗ್ರಂಥಗಳ ಸತತ ಅಧ್ಯಯನ ಮಾಡಿ ಸಮಾಜಸೇವಾ ಕಾರ್ಯಕ್ಕೆ ಆಧ್ಯಾತ್ಮದ ತಳಹದಿ ಹಾಕಿಕೊಂಡರು. ಆರ್.ಡಿ.ರಾನಡೆಯವರಿಂದ ಆಧ್ಯಾತ್ಮಿಕ

ವಿಷಯಗಳ ಬಗ್ಗೆ ಪ್ರಭಾವಿತರಾಗಿ ಇಂಚಗೇರಿಯ ಉಮದೀ ಭಾವುಸಾಹೇಬ ಮಹಾರಾಜರಿಂದ ಉಪದೇಶ ಪಡೆದು ಸಮಾಜಸೇವೆಗೆ ಪಣತೊಟ್ಟರು. ರಾಮದಾಸ, ರಾಮದಾಸಿ, ಜ್ಞಾನೇಶ್ವರಿ ಹಾಗೂ ಸಂತ ವಾಙ್ಮಯದ ಬಗ್ಗೆ ಅನೇಕ ಪ್ರಬುದ್ಧ ಲೇಖನಗಳನ್ನು ಬರೆದರು.

ಇವರು 1927ರಲ್ಲಿ ಗಾಂಧೀಜಿಯವರ ಸಬರಮತಿ ಆಶ್ರಮ ಸೇರಿ ಎರಡು ವರ್ಷಗಳ ಕಾಲ ಖಾದಿ ಮತ್ತಿತರ ವಿದಾಯ ಕಾರ್ಯಗಳ ಬಗ್ಗೆ ಶಿಕ್ಷಣ ಪಡೆದರು. ಅನಂತರ ಕೌಜಲಗಿ ಹಣಮಂತರಾಯರ ಸಲಹೆ ಮೇರೆಗೆ ಕರ್ನಾಟಕಕ್ಕೆ ಬಂದು ಖಾದಿ ಪ್ರಚಾರ ಮತ್ತು ಸೇವಾದಳದ ಸಂಘಟನೆಯಲ್ಲಿ ನಿರತರಾದರು. 1930ರಲ್ಲಿ ನಡೆದ ಉಪ್ಪಿನ ಸತ್ಯಾಗ್ರಹದಲ್ಲೂ ತದನಂತರ ನಡೆದ ಸತ್ಯಾಗ್ರಹಗಳಲ್ಲೂ ಭಾಗವಹಿಸಿ ಸೆರೆಮನೆ ಶಿಕ್ಷೆಯನ್ನು ಅನುಭವಿಸಿದರು.

1933ರಲ್ಲಿ ಹರಿಜನ ಸೇವಾ ಸಂಘದ ಸ್ಥಾಪನೆಯಾದ ಮೇಲೆ ಅದರ ಆಜೀವ ಸೇವಕರಾಗಿ ಸೇರಿ ಅಂದಿನಿಂದ ನಿರಂತರವಾಗಿ ಹರಿಜನ ಸೇವಾ ಕಾರ್ಯದಲ್ಲಿ ತೊಡಗಿದರು. ಬಿಜಾಪುರದಲ್ಲಿ 1933ರಲ್ಲಿ ಹರಿಜನ ವಿದ್ಯಾರ್ಥಿ ವಸತಿಗೃಹವನ್ನೂ 1937ರಲ್ಲಿ ಹರಿಜನ ಕನ್ಯಾಮಂದಿರವನ್ನೂ ಸ್ಥಾಪಿಸಿದರು. ವರ್ಷವರ್ಷವೂ ನೂರಾರು ಮಂದಿ ಹರಿಜನ ಬಾಲಕ ಬಾಲಕಿಯರಿಗೆ ಊಟ, ಬಟ್ಟೆ, ವಸತಿ ಮತ್ತು ವಿದ್ಯೆಯನ್ನು ಒದಗಿಸಿ ಅವರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಮುನ್ನಡೆಗೆ ಅಹರ್ನಿಶಿ ದುಡಿದರು.

ಬಿಜಾಪುರ ಜಿಲ್ಲೆ ಹಾಗೂ ಉತ್ತರ ಕರ್ನಾಟಕದ ಅನೇಕ ಕಡೆಗಳಲ್ಲಿ ನಿಮ್ನವರ್ಗದ ಹಾಗೂ ಮತ್ತಿತರ ಹಿಂದುಳಿದ ವರ್ಗಗಳ ಹೆಣ್ಣು ಮಕ್ಕಳನ್ನು ದೇವದಾಸಿ ಪದ್ಧತಿಗೆ ದೂಡುವ ದುಷ್ಟ ಪದ್ಧತಿ ಆಚರಣೆಯಲ್ಲಿತ್ತು. ಅದರ ವಿರುದ್ಧ ಇವರು ಪ್ರಬಲವಾದ ಚಳವಳಿ ಕೈಗೊಂಡು ಈ ಪದ್ಧತಿ ಕಾನೂನು ಬಾಹಿರವೆಂದು ಶಾಸನ ಮಾಡಿಸಲು ಯಶಸ್ವಿಯಾಗಿ ದುಡಿದರು. ದೇವದಾಸಿಯರಾಗಿದ್ದವರನ್ನೂ ರಕ್ಷಿಸಿ ಅವರು ಗೌರವಸ್ಥರಾಗಿ ಬಾಳಲು ನೆರವು ನೀಡುವುದಕ್ಕಾಗಿ 1952ರಲ್ಲಿ ಅಹಲ್ಯೋದ್ಧಾರ ಮಂದಿರವನ್ನು ಬಿಜಾಪುರದಲ್ಲಿ ಸ್ಥಾಪಿಸಿದರು. ರಕ್ಷಿಸಲ್ಪಟ್ಟ ಮಹಿಳೆಯರು ಮದುವೆ ಮಾಡಿಕೊಂಡು ಗೌರವ ಜೀವನವನ್ನು ನಡೆಸಲು ಸಹಾಯ ಮಾಡಿದರು.

ಕಾರಖಾನೀಸರು ಆಜನ್ಮ ಬ್ರಹ್ಮಚಾರಿಗಳು. ತಮ್ಮ ನಿಷ್ಠ ಸಮಾಜಸೇವೆಯಿಂದ ಜನಪ್ರಿಯರಾಗಿದ್ದ ಇವರು ಕಾಕಾ ಕಾರಖಾನೀಸ ಎಂದೇ ಪ್ರಸಿದ್ಧರಾಗಿದ್ದಾರೆ. ಇವರ ಸೇವೆಯನ್ನು ಗುರುತಿಸಿ ಕರ್ನಾಟಕ ರಾಜ್ಯ ಸರ್ಕಾರ 1958ರಲ್ಲಿ ಪ್ರಶಸ್ತಿಯನ್ನು ನೀಡಿತು. 1959ರಲ್ಲಿ ಭಾರತ ಸರ್ಕಾರ ಇವರಿಗೆ ಪದ್ಮಶ್ರೀ ಪ್ರಶಸ್ತಿ ನೀಡಿ ಗೌರವಿಸಿದೆ. (ಬಿ.ಆರ್.ಪಿ.)

**ಕಾರವಾರ :** ಉತ್ತರ ಕನ್ನಡ ಜಿಲ್ಲೆಯ ಒಂದು ತಾಲ್ಲೂಕು. ಆ ತಾಲ್ಲೂಕು ಮತ್ತು ಜಿಲ್ಲೆಯ ಕೇಂದ್ರ ಪಟ್ಟಣ. ತಾಲ್ಲೂಕನ್ನು ಪಶ್ಚಿಮದಲ್ಲಿ ಅರಬ್ಬೀಸಮುದ್ರ, ದಕ್ಷಿಣದಲ್ಲಿ ಅಂಕೋಲ, ಪೂರ್ವದಲ್ಲಿ ಯಲ್ಲಾಪುರ, ಈಶಾನ್ಯದಲ್ಲಿ ಜೊಯಿಡಾ ತಾಲ್ಲೂಕುಗಳು, ವಾಯವ್ಯದಲ್ಲಿ ಗೋವ ರಾಜ್ಯ - ಇವು ಸುತ್ತುವರಿದಿವೆ. ಸಾವಂತವಾಡ, ಬಾಡ, ಕಿನ್ನಾರ, ಗಡಸಿ - ಇವು ಈ ತಾಲ್ಲೂಕಿನ ಹೋಬಳಿಗಳು. ಒಟ್ಟು 60 ಗ್ರಾಮಗಳಿವೆ. ಜನಸಂಖ್ಯೆ 1,47,842.

ಪಶ್ಚಿಮ ಘಟ್ಟಗಳ ತಡಿಯಲ್ಲಿ ಕರಾವಳಿ ಭಾಗದಲ್ಲಿರುವ ಕಾರವಾರ ತಾಲ್ಲೂಕಿನಲ್ಲಿ ಮರಳುಮಿಶ್ರಿತ ಮಟ್ಟ ಭೂಪ್ರದೇಶ ಹಾಗೂ ಬೆಟ್ಟಗುಡ್ಡಗಳಿವೆ. ಇಲ್ಲಿರುವ ಗುಡ್ಡಗಳಲ್ಲಿ ಪ್ರಸಿದ್ಧವಾದುದು ಕಾರವಾರದಿಂದ ಸು.5ಕಿಮೀ ದೂರದಲ್ಲಿರುವ ಗುಡ್ಡೆಹಳ್ಳಿ (ಎತ್ತರ ಸು.500ಮೀ). ಕಾಳಿ ಇಲ್ಲಿನ ಮುಖ್ಯ ನದಿ. ತಾಲ್ಲೂಕಿನ ಮಧ್ಯದಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಹರಿದು ಅರಬ್ಬೀಸಮುದ್ರವನ್ನು ಸೇರುತ್ತದೆ. ವರ್ಷದಲ್ಲಿ ಆರು ತಿಂಗಳು ಮಳೆಗಾಲವಾಗಿದ್ದು ಹೆಚ್ಚು ಮಳೆ ಈ ತಾಲ್ಲೂಕಿನಲ್ಲಿ ಬೀಳುತ್ತದೆ. ವಾರ್ಷಿಕ ಸರಾಸರಿ ಸು.3050ಮಿಮೀ ಸುತ್ತಲಬೆಟ್ಟಗುಡ್ಡಗಳು ಅರಣ್ಯಗಳಿಂದ ತುಂಬಿದ್ದು ತೇಗ, ಮತ್ತಿ, ಹೊನ್ನೆ, ಜಂಬೆ ಮುಂತಾದ ಮರಗಳಿವೆ. ಈ ತಾಲ್ಲೂಕಿನಲ್ಲಿ ಸಾಗುವಳಿ ಭೂಪ್ರದೇಶ ಇತರ ತಾಲ್ಲೂಕುಗಳಿಗಿಂತ ಕಡಿಮೆ. ಇಲ್ಲಿನ ಮರಳು ಮಣ್ಣಿನಲ್ಲಿ ಸಸ್ಯಪೋಷಕ ದ್ರವ್ಯವೂ ಕಡಿಮೆ. ಆದರೂ ಪ್ರಮುಖವಾಗಿ ಬತ್ತ, ಕಬ್ಬು, ಗೆಣಸು, ಗೇರು, ನೆಲಗಡಲೆ ಮುಂತಾದವನ್ನು ಬೆಳೆಯುತ್ತಾರೆ. ತೆಂಗು ಇನ್ನೊಂದು ಪ್ರಮುಖ ಉತ್ಪಾದನೆ. ಮೀನುಗಾರಿಕೆ ಈ ತಾಲ್ಲೂಕಿನ ಒಂದು ಮುಖ್ಯ ಉದ್ಯಮ ಬೆಸ್ತರು ಮೀನು ಹಿಡಿಯುವುದರಲ್ಲಿ ಪರಿಣತರಾಗಿದ್ದಾರೆ. ಇತ್ತೀಚೆಗೆ ಇಂಡೋ ನಾರ್ವೇಜಿಯನ್ ಯೋಜನೆಯ ಪರಿಣಾಮವಾಗಿ ದೂರಸಾಗರದಲ್ಲಿ ಮೀನು ಹಿಡಿಯುವ ಉದ್ಯಮ ಬೆಳೆಯುತ್ತಿದೆ. ದೋಣಿ ಕಟ್ಟುವುದು, ಕೈಮಗ್ಗದ ನೇಯ್ಗೆ ಇತರ ಉದ್ಯಮಗಳಿಗೆ. ಅರಣ್ಯ ಸಂಪತ್ತು ಬಳಕೆಯಾಗುತ್ತಿದೆ. ಕಾರವಾರದ ಉತ್ತರದಲ್ಲಿ ಕೋಡಿಭಾಗದಲ್ಲಿ ಅರಣ್ಯ ಇಲಾಖೆ ತೆರೆದಿರುವ ಕೋಠಿಯೊಂದಿದೆ. ಮಲೆನಾಡಿನ ಅರಣ್ಯದಿಂದ ತೇಲಿಸಿತಂದ ತೇಗದ ಮರದ ದಿಮ್ಮಿಗಳನ್ನು ಇಲ್ಲಿ ಕೂಡಿಸಿ ಬೇರೆ ಎಡೆಗಳಿಗೆ ಸಾಗಿಸುವರು. ಈ ತಾಲ್ಲೂಕಿನಲ್ಲಿ ರಸ್ತೆ ಸಂಪರ್ಕ ಉತ್ತಮವಾಗಿದೆ.



ಸೀಬರ್ಡ್ ನೌಕಾನೆಲೆಯ ತಾಣ

ಬೆಟ್ಟ ಗುಡ್ಡಗಳ ವನಶ್ರೀಯಿಂದ ಮತ್ತು ಸಮುದ್ರತೀರದಿಂದ ಈ ತಾಲ್ಲೂಕು ಸುಂದರ ಪ್ರದೇಶಗಳಲ್ಲಿ ಒಂದು ಎನಿಸಿಕೊಂಡಿದೆ. ತಾಲ್ಲೂಕಿನ ಪೂರ್ವಬದಿಯ ನೀಳಪರ್ವತಶ್ರೇಣಿ ಸೌಂದರ್ಯಪೂರಿತವಾದದ್ದು. ಕಾಳಿ ನದಿಯು ಸಮುದ್ರ ಸೇರುವೆಡೆ ಸಮುದ್ರದ ಹಿಂಬದಿಯ ನೀರಿನ ಒತ್ತಡದಿಂದ ನದಿಯ ಪಾತ್ರ ವಿಶಾಲವಾಗಿ ಒಂದು ಸುಂದರ ಸರೋವರದ ಹಾಗೆ ಕಾಣುತ್ತದೆ. ಪ್ರವಾಸಿಗಳು ದೋಣಿಗಳಲ್ಲಿ ಕುಳಿತು ವಿಹರಿಸಿ ಆನಂದಿಸುವುದನ್ನು ಕಾಣಬಹುದು.

ಸದಾಶಿವಗಡ, ಮಾಜಾಳಿ, ಶಿವೇಶ್ವರ, ಕದ್ರ, ಬಾಡ, ಬಿಣಗಿ ಮುಂತಾದವು ತಾಲ್ಲೂಕಿನ ಪ್ರಮುಖ ಸ್ಥಳಗಳು. ಗುಡ್ಡೆಹಳ್ಳಿ ಬೇಸಗೆ ಕಾಲದ ವಿಶ್ರಾಂತಿಧಾಮ. ಇಲ್ಲಿ ಕೆಲವು ಪ್ರಾಚೀನ ಗುಹೆಗಳೂ ಇವೆ ಎನ್ನಲಾಗಿದೆ. ಕಾರವಾರದ ಹತ್ತಿರವೇ ಸಮುದ್ರದಲ್ಲಿನ ಕೂರ್ಮಗಡ (ನೋಡಿ) ನಡುಗಡ್ಡೆ ಸಮುದ್ರಮಟ್ಟದಿಂದ 60ಮೀ ಎತ್ತರವಿದೆ. ಇಲ್ಲಿ ಪೂರ್ವದ ಕಡೆ ಒಂದು ಕೋಟೆಯೂ ನರಸಿಂಹ ದೇವಸ್ಥಾನವೂ ಒಂದು ಬಾವಿಯೂ ಉಂಟು. ಪ್ರತಿ ಡಿಸೆಂಬರ್ ತಿಂಗಳಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ. ಈ ದೇವಸ್ಥಾನದ ಮೂರ್ತಿಯನ್ನು ಅರಬ್ಬರು ತಂದರೆಂದು ಪ್ರತೀತಿ. ಇಲ್ಲಿರುವ ಕೋಟೆಯನ್ನು ಶಿವಾಜಿ ಕಟ್ಟಿಸಿ ಸಿದಗಡ ಎಂಬ ಹೆಸರನ್ನು ಇಟ್ಟ. 1715ರಲ್ಲಿ ಕಡವಾಡದಿಂದ ಕಲ್ಲುಗಳನ್ನು ತಂದು ಈ ಕೋಟೆಯ ನಿರ್ಮಾಣ ಪೂರೈಸಲಾಯಿತು. ಆಗಿನಿಂದ ಇದಕ್ಕೆ ಕೂರ್ಮಗಡವೆಂಬ ಹೆಸರು ಬಂತು. ಟಿಪ್ಪು ಈ ಕೋಟೆಯ ಮೇಲೆ ದಾಳಿ ಮಾಡಿದ್ದ.

ಕಾರವಾರಕ್ಕೆ ಪೂರ್ವದಲ್ಲಿರುವ ಕಡವಾಡ (ಹಿಂದಿನ ಹೆಸರು ಕಾಡೆವರ) ಪ್ರಾಚೀನ ಕಾಲದಿಂದಲೂ ಒಂದು ಬಂದರಾಗಿ ವ್ಯಾಪಾರ ಕೇಂದ್ರವಾಗಿತ್ತು. ಫಿನಿಶಿಯನರ ಕಾಲದಿಂದಲೂ ಇದು ಹೊರ ದೇಶಗಳೊಂದಿಗೆ ಸಂಪರ್ಕ ಪಡೆದಿತ್ತೆಂದೂ ಇಂಗ್ಲಿಷರು ಇಲ್ಲಿ 1639ರಲ್ಲಿ ಸ್ಥಾಪಿಸಿದ್ದ ಕಾರ್ಖಾನೆಯಲ್ಲಿ 5000 ಮಂದಿ ನೇಕಾರರು ಮಸ್ಲಿನ್ ವಸ್ತ್ರನೇಯ್ಗೆಯಲ್ಲಿ ನಿರತರಾಗಿದ್ದರೆಂದೂ ಹೇಳಲಾಗಿದೆ. ಇಲ್ಲಿಯ ವಸ್ತ್ರ

ಹುಬ್ಬಳ್ಳಿ ಮುಂತಾದ ಕಡೆಗಳಲ್ಲಿ ಮಾರಾಟವಾಗುತ್ತಿತ್ತೆಂದು ಪ್ರತೀತಿ. ಕಡವಾಡ ಶಿವಾಜಿಯ ಆಳಿಕೆಗೆ ಒಳಪಟ್ಟಿದ್ದುದರಿಂದ ಒಮ್ಮೆ ಇಂಗ್ಲಿಷರು ಸಹ ಕರವನ್ನು ಕೊಟ್ಟಿದ್ದರು. ಅನಂತರ ಇದು ಬಿಜಾಪುರದ ಸುಲ್ತಾನರ ಆಳಿಕೆಗೆ ಸೇರಿತೆಂದೂ ಬಿಜಾಪುರದ ರಾಜ್ಯಪಾಲ ಇಲ್ಲಿ ವಾಸಿಸುತ್ತಿದ್ದನೆಂದೂ 1675ರಲ್ಲಿ ಶಿವಾಜಿಯ ಸೇನೆ ಈ ಸ್ಥಳವನ್ನು ಸುಟ್ಟಿತೆಂದೂ ಪ್ರತೀತಿ. 1720ರಲ್ಲಿ ಸೋದೆಯ ರಾಜ ಇಂಗ್ಲಿಷರನ್ನು ಇಲ್ಲಿಂದ ಹೊರಹಾಕಿದ. ಕಲ್ಯಾಣದಿಂದ ವಲಸೆ ಬಂದ ಕೊಂಕಣರು ಮೊದಲು ಇಲ್ಲಿ ನೆಲೆಸಿದ್ದು ಅನಂತರ ಸದಾಶಿವಗಡಕ್ಕೆ ಹೋದರೆಂದೂ ತಿಳಿದುಬರುತ್ತದೆ. ಕಡವಾಡದಲ್ಲಿ ಒಂದು ವೈಷ್ಣವ ಮಠವಿದೆ. ಕಡವಾಡದ ಕೊಲ್ಲಿ ಮೀನುಗಾರಿಕೆಗೆ ಅನುಕೂಲವಾಗಿದೆ. ಕಡವಾಡದ ಬಳಿಯಲ್ಲಿರುವ 'ಹೆದಾರ್ ಘಾಟ್' ಪ್ರಸಿದ್ಧವಾದದ್ದು. ಹೆದಾರ್ ಘಾಟ್ ಮಾರ್ಗ ಒಂದು ಎಂಜಿನಿಯರಿಂಗ್ ಸಾಹಸವೆನ್ನುವರು. ಹೈದರ್ ಈ ಮಾರ್ಗವಾಗಿ ಹೆಚ್ಚು ಸಂಚರಿಸುತ್ತಿದ್ದನಂತೆ.

ಐದು ನಡುಗಡ್ಡೆಗಳ ಒಂದು ದ್ವೀಪಸ್ತೋಮದ ಅಂಜನಾದ್ವೀಪ ಕಾರವಾರಕ್ಕೆ 5ಕಿಮೀ ದೂರದಲ್ಲಿದೆ. ವಾಸ್ಕೋಡಗಾಮ ಈ ದ್ವೀಪದಲ್ಲಿ ಕೆಲವು ದಿವಸಗಳ ಕಾಲ ತಂಗಿದ್ದನಂತೆ. ಸ್ಥಳೀಯರು ಇದನ್ನು 'ಅಂಜಿ ದೀವ್' ಎಂದು ಕರೆಯುತ್ತಾರೆ (ಇದು ಗೋವಕ್ಕೆ ಸೇರಿದೆ). ಕಾರವಾರ ಬಂದರಿಗೆ ಪಶ್ಚಿಮದಲ್ಲಿ 11ಕಿಮೀ ದೂರದಲ್ಲಿ ದೇವಗಡ ನಡುಗಡ್ಡೆ ಇದೆ. ಇದು ಬಂದರಿಗೆ ಬಿರುಗಾಳಿಯಿಂದ ರಕ್ಷಣೆ ಕೊಟ್ಟಿದೆ. ಈ ನಡುಗಡ್ಡೆಯಲ್ಲಿ ಒಂದು ದೀಪಸ್ತಂಭವಿದೆ. ನಡುಗಡ್ಡೆಯನ್ನು 'ಆಯಿಸ್ಟರ್ ರಾಕ್ಸ್' ಎಂದೂ ಕರೆಯುತ್ತಾರೆ. ಇಲ್ಲಿ ಒಂದು ಕೋಟೆ ಸಹ ಉಂಟು. ಪ್ರವಾಸಿಗರು ಅಲ್ಲಿಗೆ ಹೋಗಿ ಬರುತ್ತಾರೆ. ಸದಾಶಿವಗಡ ಕಾರವಾರಕ್ಕೆ ಉತ್ತರದಲ್ಲಿ 5ಕಿಮೀ ದೂರದಲ್ಲಿದೆ. ಇದೂ ಒಂದು ಬಂದರು. ಇಲ್ಲಿಯ ಗುಡ್ಡದ ಮೇಲೆ ಇರುವ ಕೋಟೆಯನ್ನು 17ನೆಯ ಶತಮಾನದಲ್ಲಿ ಸ್ವಾದಿಯ ಒಂದನೆಯ ಸದಾಶಿವನಾಯಕ ಕಟ್ಟಿಸಿದನೆಂದು ತಿಳಿದುಬರುತ್ತದೆ. ಕಾರವಾರದಿಂದ 3ಕಿಮೀ ದೂರದಲ್ಲಿ ಪ್ರಸಿದ್ಧ ಸಜ್ಜೇಶ್ವರ ದೇವಾಲಯವಿದೆ.

ಕಾರವಾರ ಉತ್ತರ ಕನ್ನಡ ಜಿಲ್ಲೆಯ ಮತ್ತು ಅದೇ ತಾಲ್ಲೂಕಿನ ಕೇಂದ್ರ ಪಟ್ಟಣ. ಒಂದು ನೈಸರ್ಗಿಕ ಬಂದರು. ಪಶ್ಚಿಮಕ್ಕೆ ಅರಬ್ಬೀ ಸಮುದ್ರ, ಪೂರ್ವಕ್ಕೆ ಸಹ್ಯಾದ್ರಿ ಶ್ರೇಣಿ, ಉತ್ತರದಲ್ಲಿ ಕಾಳಿ ನದಿಯಿದ್ದು ಪಶ್ಚಿಮ ಕರಾವಳಿಯ ಪ್ರಕೃತಿಯ ಸೆರಗಿನಲ್ಲಿರುವ ಒಂದು ಸುಂದರ ಪಟ್ಟಣವೆಂದು ಹೆಸರು ಪಡೆದಿದೆ. ಜನಸಂಖ್ಯೆ 62960.



ಸಮುದ್ರತೀರ

ಇಲ್ಲಿ ಜಿಲ್ಲಾ ಮತ್ತು ತಾಲ್ಲೂಕು ಆಡಳಿತಕ್ಕೆ ಸಂಬಂಧಿಸಿದ ಎಲ್ಲ ಸರ್ಕಾರಿ ಕಚೇರಿಗಳೂ ನ್ಯಾಯಾಲಯ, ಆಸ್ಪತ್ರೆ, ಶಾಲಾ ಕಾಲೇಜುಗಳೂ ಇವೆ. ಇಲ್ಲಿಂದ ಗೋವ, ಮಂಗಳೂರು, ಹುಬ್ಬಳ್ಳಿ, ಬೆಳಗಾಂವಿ ಮತ್ತು ಬೆಂಗಳೂರಿಗೆ ರಸ್ತೆ ಸಂಪರ್ಕವಿದೆ. ಗೋವ, ಕುಮಟ, ಮುಂಬಯಿ, ಮಂಗಳೂರು, ಕೊಚ್ಚಿ ಮುಂತಾದೆಡೆಗೆ ಕರಾವಳಿಯ ಹಡಗು ಸಂಚಾರಸೌಲಭ್ಯವೂ ಇದೆ. ಕೊಂಕಣ ರೈಲು ಕಾರವಾರದ ಮೂಲಕ ಹಾದು ಹೋಗಿದೆ. ಕವಿ ರವೀಂದ್ರನಾಥ ಠಾಕೂರರ ಮನಸೂರೆಗೊಂಡಿದ್ದ ಈ ಪಶ್ಚಿಮ ಕಡಲತೀರದ ನಗರದಲ್ಲಿ 45ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಕಡೆಂಗೋಡ್ಲು ಶಂಕರಭಟ್ಟ ಅವರ ಅಧ್ಯಕ್ಷತೆಯಲ್ಲಿ 1965ರಲ್ಲಿ ನಡೆಯಿತು.

ಕಾರವಾರ ಬಂದರು ಪ್ರದೇಶ ಸುತ್ತಣ ಗುಡ್ಡಗಳಿಂದ ಆವೃತ್ತವಾಗಿದ್ದು ಮಾರುತಗಳಿಂದ ಒಳ್ಳೆಯ ರಕ್ಷಣೆ ಪಡೆದಿರುವುದಲ್ಲದೆ ಇಲ್ಲಿ ದೊಡ್ಡ ಹಡಗುಗಳು ಸುಲಭವಾಗಿ ತಂಗುವಷ್ಟು ನೀರಿನ ಆಳವೂ ಇದೆ. ಅಲ್ಲದೆ ಇಲ್ಲಿನ ಪ್ರಾಕೃತಿಕ ಸನ್ನಿವೇಶದಿಂದಾಗಿ ಹೂಳುಬಿದ್ದು ಆಳ ಕಡಿಮೆಯಾಗುವ ಸಂಭವವೂ ಕಡಿಮೆ ಎನ್ನಲಾಗಿದೆ. ಆದರೂ ಇದು ಇನ್ನೂ ಸರ್ವಋತು ಬಂದರಾಗಿ ಬೆಳೆದಿಲ್ಲ. ಈಗ ಇದು ಸಣ್ಣ ಹಡಗುಗಳಿಗೆ ರೇವು. ಒಳನಾಡಿನಿಂದ ಬರುವ ಕಬ್ಬಿಣದ ಅದುರು ಈ ಬಂದರಿನಿಂದ ರಫ್ತಾಗುತ್ತದೆ. ಇದರ ಅಭಿವೃದ್ಧಿಗೆ ಎರಡು ಹಂತಗಳ ಯೋಜನೆ ಸಿದ್ಧವಾಗಿದೆ. (ಎಚ್.ಆರ್.ಆರ್.ಬಿ.)

**ಕಾರ ಹುಣ್ಣಿಮೆ :** ಜ್ಯೇಷ್ಠಮಾಸದಲ್ಲಿ ಆಚರಿಸಲಾಗುವ ಒಂದು ಜನಪದ ಹಬ್ಬ. ಇದನ್ನು ಕಾರಹಬ್ಬ ಕಾರಹುಣ್ಣಿವೆ ಎಂದೂ ಕರೆವುದಿದೆ. ಯಜ್ಞಕರ್ಮಪ್ರಧಾನವಾದ ಸನಾತನ ಸಂಪ್ರದಾಯದಲ್ಲಿ, ಹುಣ್ಣಿಮೆಗಳಿಗೆ ವಿಶಿಷ್ಟ ಪರ್ವದಿನದ ಸ್ಥಾನವಿರುವುದಾದರೂ ಕನ್ನಡ ನಾಡಿನಲ್ಲಿ ಹುಣ್ಣಿಮೆಗಳೆಂದು ನಡೆಯುತ್ತ ಬಂದ ಜನಪದ ಸಂಸ್ಕೃತಿ ಪ್ರಧಾನವಾದ ಕಾರ್ಯಕಲಾಪಗಳು, ಸನಾತನ ವೈದಿಕ ಪರಂಪರೆಯವಾಗಿ ಕಾಣಿಸುವುದಿಲ್ಲ.

ಕನ್ನಡ ನಾಡಿನ ಇತಿಹಾಸದಲ್ಲಿ ಸಾವಿರ ವರ್ಷಗಳಿಗೆ ಹಿಂದಿನಿಂದಲೂ ಕಾರ ಹುಣ್ಣಿಮೆಯ ಹೆಸರು ಬಳಕೆಯಲ್ಲಿದ್ದಂತೆ ಕಾಣುವುದು. 1007 ಮತ್ತು 1104ನೆಯ ವರ್ಷದ ಶಿಲಾಶಾಸನಗಳಲ್ಲಿ ಕಾರಹುಣ್ಣಿಮೆ ಎಂಬ ಮಾತು ಬಂದಿದೆ. ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿರುವ ಜನಪದ ಸಾಹಿತ್ಯ ಪರಂಪರೆಯಲ್ಲಿ ಈ ಹುಣ್ಣಿವೆಯ ಹೆಸರು ಹಲವಾರು ಸಲ ಕಿವಿಗೆ ಬೀಳುತ್ತದೆ. ಕಾರಹುಣ್ಣಿವಿ ಆದ ಮೇಲೆ ಈರುಳ್ಳಿಯನ್ನು ಕತ್ತೆ ಕೂಡ ಮೂಸುವುದಿಲ್ಲ, ಕಾರಹುಣ್ಣಿವೀ ಕರಿ ಹರಿದ ಮ್ಯಾಲೆ ಕಂಕಣಾ ಕಟ್ಟಬಾರದು ಎಂಬ ನಾಣ್ಣುಡಿಗಳು ಕಾರಹುಣ್ಣಿವೆಯ ನಾಮ ನಿರ್ದೇಶನದೊಂದಿಗೆ, ಜನಪದ ಸ್ಮೃತಿಯ ವಿಧಿನಿಷೇಧನಿಯಮಗಳನ್ನೂ ಹೇಳುತ್ತವೆ.

ಕಾರಹುಣ್ಣಿಮೆ ಅದರ ಹೆಸರೇ ತಿಳಿಸುವಂತೆ ಮಳೆಗಾಲದ ಮೊದಲ ಹುಣ್ಣಿವೆ; ಕನ್ನಡನಾಡಿನ ಕೃಷಿಕರು, ಮಳೆಗಾಲದ ಮೊದಲ ಹುಣ್ಣಿವೆಯನ್ನು ಸಂತೋಷದಿಂದ ಆಚರಿಸುತ್ತಾರೆ. ಕಾರಹುಣ್ಣಿವೆಯ ಆಚರಣೆ ಬಯಲು ನಾಡಿನಲ್ಲಿ ವಿಶೇಷವಾಗಿದೆ. ಗಡಿನಾಡಿನಲ್ಲಿಯೂ ಅಲ್ಲಲ್ಲಿ - ಬಯಲುನಾಡಿನ ಪ್ರಭಾವದಿಂದಾಗಿ - ಜನಪದರು ಈ ಹಬ್ಬವನ್ನು ಆಚರಿಸುವುದುಂಟು. ಆದರೆ ಮಲೆನಾಡಿನ ಪ್ರದೇಶದಲ್ಲಿ ಈ ಹಬ್ಬದ ಆಚರಣೆಯ ಜನಪದ ಸಂಪ್ರದಾಯ, ಅಷ್ಟೊಂದು ಪ್ರಭಾವಶಾಲಿಯಾಗಿ ಕಂಡುಬರುವುದಿಲ್ಲ. ಉತ್ತರ ಕರ್ನಾಟಕದ ಉತ್ತರದ ಗಡಿಗೆ ಹೊಂದಿದ ಮಹಾರಾಷ್ಟ್ರದ ಬಯಲು ಪ್ರದೇಶದ ಒಕ್ಕಲಿಗರಲ್ಲಿಯೂ ಈ ಹಬ್ಬದ ಪರಂಪರೆ ರೂಢಿಯಲ್ಲಿದೆ. ಮಹಾರಾಷ್ಟ್ರದ ಉತ್ತರದ ಸೀಮಾಪ್ರದೇಶದ ವಿದರ್ಭ ಪ್ರಾಂತ್ಯದಲ್ಲಿಯೂ ಪೋಳಾಂಚಾ ಸಣ್ಣ ಎಂಬ ಹೆಸರಿನಿಂದ ಈ ಹಬ್ಬದ ಸಂಪ್ರದಾಯ ನಡೆದುಕೊಂಡು ಬಂದಿದೆ. ಇಲ್ಲಿ ಪೋಳ ಎಂದರೆ ಗೂಳಿ, ಕೊಬ್ಬಿದ ಹೋರಿ; ಸಣ್ಣ ಎಂದರೆ ಹಬ್ಬ. ಸಂಸ್ಕೃತ ಭಾಷೆಯಲ್ಲಿ ಈ ಹುಣ್ಣಿವೆಗೆ ಅನಡ್ವಾಹ ಪೌರ್ಣಿಮಾ ಎಂದು ಹೆಸರಿದೆ. ಅನಡ್ವಾಹ ಎಂದರೆ ಎತ್ತು. ಸಾಂಸ್ಕೃತಿಕ ಪರಂಪರೆಯಲ್ಲಿಯೂ ಇದಕ್ಕೆ ಎತ್ತಿನ ಹುಣ್ಣಿವೆ ಎಂದು ಹೆಸರಿರುವುದೂ ಕಾರಹುಣ್ಣಿವೆಯ ಹಬ್ಬಕ್ಕಿರುವ ಕೃಷಿಕ ಕುಲಸಂಬಂಧವನ್ನೇ ಗಟ್ಟಿಗೊಳಿಸುತ್ತದೆ. ಎತ್ತು ಕೃಷಿಕನ ಪ್ರಧಾನ ಸಹಕಾರಿ. ಕೃಷಿಕರಲ್ಲದ ನಾಗರಿಕರೂ ಇಂದು ಹಬ್ಬದ ಸಂಪ್ರದಾಯದಂತೆ ಮಣ್ಣಿನ ಜೋಡೆತ್ತುಗಳನ್ನು ಮಾಡಿ ಪೂಜಿಸಿ, ಅದಕ್ಕೆ ಕೋಡಬಳೆ, ಕರಿಗಡಬಿನ ನೈವೇದ್ಯವೀಯುತ್ತಾರೆ.

ಪೌರಾಣಿಕ ಸಂಪ್ರದಾಯದವರು ಈ ಹುಣ್ಣಿವೆಯನ್ನು ವಟಸಾವಿತ್ರಿ ಪೌರ್ಣಿಮೆ ಎಂದು ಹೇಳುವರು. ಕರ್ನಾಟಕ, ಮಹಾರಾಷ್ಟ್ರ ಪ್ರದೇಶಗಳಲ್ಲಿರುವ ಪುರಾಣಸಂಪ್ರದಾಯದ ಸುಮಂಗಲೆಯರು ಅಂದು ವಟಸಾವಿತ್ರೀ ವ್ರತಪೂಜೆಗಳನ್ನು ಆಚರಿಸುವರು. ಐದೆಯರೆಲ್ಲರೂ ಆ ದಿನ ಸಾವಿತ್ರೀದೇವಿಯ ಸಾನ್ನಿಧ್ಯವೃಕ್ಷವೆಂದು ಆಲದಮರವನ್ನು ಪೂಜಿಸುವರು; ಕೆಲವರು ಮನೆಯಲ್ಲಿಯೆ ಸಾವಿತ್ರೀದೇವಿಯ ಪಠವನ್ನಿರಿಸಿ ಪೂಜಿಸುವರು ಸಾವಿತ್ರಿಯ ಕಥೆಯನ್ನು ಕೇಳುವರು. ಈ ಸಂಪ್ರದಾಯ ಕೇವಲ ನಾಗರಿಕ ಜಗತ್ತಿಗೆ ಸೇರಿದುದು.

ಜ್ಯೇಷ್ಠ ಪೌರ್ಣಿಮೆಯಂದು ಎತ್ತುಗಳ ಪೂಜೆಯಾದ ಮೇಲೆ, ಮುಂದೆ ಆಷಾಢ ಮಾಸದ ಪ್ರತಿ ಮಂಗಳವಾರದಂದು, ಹಳ್ಳಿಗರ ಮನೆಗಳಲ್ಲಿಯೂ ಸಾರ್ವಜನಿಕವಾಗಿಯೂ ನಡೆಯುವ ಗುಳ್ಳವ್ವ ಎಂಬ ಹೆಸರಿನ ಮಣ್ಣಿನ ಪೂಜೆ ಅವರ ನೆಲದಮ್ಮನ ಪೂಜೆಯು ಸಂಕೇತವೆನಿಸುವಂತಿದೆ. ಕಾರಹುಣ್ಣಿವೆ ಆಚರಣೆಯಲ್ಲಿರುವ ಬಯಲು ನಾಡಿನಲ್ಲೆಲ್ಲ ಗುಳ್ಳವ್ವನ ಪೂಜೆ ಇದ್ದೇ ಇರುವುದು. ಗುಳ್ಳವ್ವ ಎಂಬ ದೇವತೆ ಕೇವಲ ಕನ್ನಡ ಜಾನಪದ ಸೃಷ್ಟಿ. ಈ ದೇವತೆ ಉತ್ತರದ ಸೀಮಾಪ್ರದೇಶದಲ್ಲಿರುವ ಮರಾಠಿಗರಲ್ಲಿಯೂ ಸೇರಿಕೊಂಡಿದ್ದಾಳೆ.

ಕಾರಹುಣ್ಣಿವೆಗೆ ಸಂಬಂಧಿಸಿದ ಕಾರ್ಯಕಲಾಪಗಳು ಎರಡು ದಿನ ನಡೆಯುವುವು. ಜ್ಯೇಷ್ಠ ಶುದ್ಧ ಚತುರ್ದಶಿ ಕಾರಹಬ್ಬದ ಪೂರ್ವಾಂಗ ದಿನವಾಗಿರುವುದು. ಉತ್ತರಾಂಗ ದಿನ ಹುಣ್ಣಿವೆ. ಈ ಚತುರ್ದಶಿಗೆ ಹೊನಹುಗ್ಗೆ, ಹೊನ್ನುಗ್ಗಿ ಎಂದು ಹೆಸರು. ಕೆಲವೆಡೆಗಳಲ್ಲಿ ಹೊನ್ನುಕ್ಕೆ ಎಂಬ ಹೆಸರೂ ಇದೆ. ಹೊನ್ನುಗ್ಗೆಯ ದಿನ ಹಳ್ಳಿಗರೆಲ್ಲರೂ ತಮ್ಮ ತಮ್ಮ ಮನೆಯ ಎತ್ತು, ಹೋರಿಗಳನ್ನು ಮೈ ತೊಳೆದು ಮೀಯಿಸುವರು. ಕೊಂಬುಗಳಿಗೆ ಚೆಂಬಣ್ಣವನ್ನು ತೊಡೆಯುವರು. ಮೈಮೇಲೆ ಅಂದ ಕಾಣುವಂತೆ ಕುಂಟೆಯ ಬಳೆಗಳಿಂದ, ಬೇರೆ ಬೇರೆ ಬಣ್ಣಗಳ ಮುದ್ರೆಗಳನ್ನು ಒತ್ತುವರು. ತುದಿಗೊಂಬುಗಳಿಗೆ ಮಿರುಗುವ ಕೊಂಬಣಸುಗಳನ್ನು ತೊಡಿಸುವರು. ಕೊರಳಿಗೆ ಹುರಿಗೆಜ್ಜೆ, ಕಿರುಗಂಟೆ ಸರಗಳನ್ನು ಹಾಕುವರು. ಹಣೆಗೆ ಕನ್ನಡಿ ಇರುವ ಹಣೆಪಟ್ಟುಗಳನ್ನು ಕಟ್ಟುವರು. ಗುಡಿಸಿ ಹಸನುಗೊಳಿಸಿದ ಕೊಟ್ಟಿಗೆಯಲ್ಲಿ ಎತ್ತುಗಳನ್ನು ಕಟ್ಟುವರು.

ಅಂದಿನ ಮುನ್ನಿರುಳಲ್ಲಿ, ಎಲ್ಲ ಎತ್ತು, ಹೋರಿಗಳನ್ನು ಪೂಜಿಸಲಾಗುವುದು. ಆಗ ಗುಗ್ಗುಳ ಧೂಪದ ಕಂಪು ಕೊಟ್ಟಿಗೆಯಲ್ಲೆಲ್ಲ ತುಂಬಿರುವುದು. ಮನೆಯ ಮುತ್ತೈದೆಯರು ಎತ್ತು, ಹೋರಿಗಳಿಗೆ ಕಲಶದಾರತಿಯನ್ನು ಎತ್ತುವರು. ನೈವೇದ್ಯಕ್ಕೆಂದು ಜೋಳವನ್ನು ಕುಟ್ಟಿ, ಜೋಳದಕ್ಕಿಯಿಂದ ತಯಾರಿಸಿದ ಹುಗ್ಗಿಯನ್ನೂ (ಕಿಚಡಿ) ಅಂಬಲಿಯನ್ನೂ ಎತ್ತುಗಳಿಗೆ ತಿನ್ನಿಸುವರು. ಆಮೇಲೆ ಮನೆಯವರೆಲ್ಲರೂ ಈ ಹುಗ್ಗಿ ಅಂಬಲಿಗಳನ್ನೇ ಪ್ರಸಾದವೆಂದು ಊಟ ಮಾಡುವರು. ಈ ದಿನದ ಹುಗ್ಗಿಯೇ ಹೊನ್ನುಗ್ಗಿ ಎಂದು ಹೆಸರು ಪಡೆದಿದೆ.

ಮರುದಿನವೇ ಕಾರಹುಣ್ಣಿವೆ, ದನಗಳೆಲ್ಲ ಅಂದೂ ಪೂಜೆಗೊಳ್ಳುವುವು. ಮಧ್ಯಾಹ್ನ ಹೋಳಿಗೆ ಪಾಯಸಗಳ ಬಿರ್ದಾಣಿಸು. ಕೆಲವೊಂದು ಹಳ್ಳಿಗಳಲ್ಲಿ ಹುರುಪಿನ ಜನ. ಊರಲ್ಲಿಯ ಎಲ್ಲ ಎತ್ತುಗಳನ್ನೂ ಸೇರಿಸಿ, ವಾದ್ಯವೈಭವದೊಂದಿಗೆ ಬೀದಿಯಲ್ಲಿ ಮೆರೆಸುವರು. ಕನ್ನಡ ನಾಡಿನ ಕೆಲವೊಂದು ಭಾಗದಲ್ಲಿ ಬಿತ್ತುವ ಬೀಜಗಳನ್ನು ಪೂಜಿಸುವ ಸಂಪ್ರದಾಯ ಕಾರಹುಣ್ಣಿವೆಯೆಂದೇ ನಡೆಯುತ್ತದೆ.

ಹುಣ್ಣಿವೆಯ ಸಂಜೆ ಕರಿ ಹರಿಯುವ ಸಂಪ್ರದಾಯ. ಈ ಕಾರ್ಯಕ್ರಮ ಮಾತ್ರ ನಾಡಿನ ಎಲ್ಲ ಭಾಗಗಳಲ್ಲಿಯೂ ಸಾರ್ವಜನಿಕವಾಗಿ ನಡೆಯುತ್ತದೆ. ಈ ಕಾರ್ಯಕ್ರಮದ ವಿವರಗಳಲ್ಲಿ ಪ್ರಾದೇಶಿಕ ಭೇದಗಳು ಕಂಡುಬರುವುವಾದರೂ ಕರಿ ಹರಿಯುವುದು ಎಂಬ ಕ್ರಿಯಾನಾಮ ಮಾತ್ರ ಸರ್ವತ್ರ ಸಾಮಾನ್ಯವಾಗಿರುವುದು. ಈ ಕಾರ್ಯಕ್ರಮದ ಪರಿಣಾಮ ಮುಂಬರುವ ಬೆಳೆಯ ಭವಿಷ್ಯವನ್ನು ಸೂಚಿಸುವುದೆಂಬ ನಂಬುಗೆ ನಾಡಿನ ಜನರೆಲ್ಲರಲ್ಲಿಯೂ ಇದೆ. ಕಾರಹುಣ್ಣಿವೆಯ ಕರಿ ಹರಿಯುವ ಸಂಪ್ರದಾಯ ಮಾತ್ರ ಕೆಲವೆಡೆ ಉಳಿದುಕೊಂಡು ಬಂದಿದೆ.

ಫಾಲ್ಗುಣ ಬಹುಳ ಪ್ರತಿಪದೆಯಂದು ಎಂದರೆ ಹೋಳಿಯ ಹಬ್ಬದ ಮರುದಿನ ಬೆಳಗಿನಲ್ಲಿ ಹೋಳಿಯನ್ನು ಸುಟ್ಟಾದ ಮೇಲೆ, ಆ ಹೋಳಿಯ ಬೂದಿಯನ್ನು ಕರಿ ತಮ್ಮಟೆಗಳ ಮೊಳಗಿನೊಂದಿಗೆ, ಹಬ್ಬದ ವಿಶಿಷ್ಟ ಹಕ್ಕುದಾರರು ತೆಗೆದು ಕೊಂಡೊಯ್ದು ಗ್ರಾಮದ ಸುತ್ತಲೂ ಚೆಲ್ಲಿ ರಕ್ಷೆಯನ್ನು ಕಟ್ಟುವರು. ಈ ರಕ್ಷಾಬಂಧನ ಕ್ರಿಯೆಯೇ ಕರಿಕಟ್ಟುವುದು. ಈ ನಡೆವಳಿಯ ಹಿಂದೆ ಹಳ್ಳಿಗರದೊಂದು ಮುಗ್ಧಶ್ರದ್ಧೆ ಅಡಗಿ ಕುಳಿತಿದೆ. ಹೋಳಿಯ ಹುಣ್ಣಿವೆಗೆಂದರೆ ಆ ವರ್ಷದ ಸುಗ್ಗಿಯ ಸಂಪತ್ತೆಲ್ಲವೂ ಊರಮನೆಗಳನ್ನು ತುಂಬಿರುತ್ತದೆ. ಈ ಸಂಪತ್ತಿಗೆ ಯಾವುದೇ ಬಗೆಯ ಭೀತಿ, ಉಪದ್ರವಗಳು ಉಂಟಾಗಬಾರದೆಂಬ ಅವರ ಭಾವನೆ, ಈ ಕರಿ ಕಟ್ಟುವ ಸಂಪ್ರದಾಯವನ್ನು ಇದುವರೆಗೆ ಉಳಿಸಿಕೊಂಡು ಬಂದಿದೆ. ಧಾನ್ಯ ತುಂಬಿದ ಹಗೇವು, ಹುಲ್ಲುಸೊಪ್ಪು, ಒಟ್ಟಿದ ಬಣವೆ ಇವುಗಳಿಗೆ ಹುಲ್ಲು ಕಾರ ಹುಣ್ಣಿವೆಯಾಗುವವರೆಗೂ ಕೈ ಹಚ್ಚಬಾರದೆಂದಿರುವ ಹಳ್ಳಿಗಳ ನಂಬುಗೆ ಈ ಸಂಪ್ರದಾಯವನ್ನು ಪುರಸ್ಕರಿಸುವಂಥದಾಗಿದೆ. ಹೋಳಿಯ ಹಬ್ಬದಲ್ಲಿ ಕಟ್ಟಿದ ಕರಿಯನ್ನು ರಕ್ಷೆ ಕಾರಹುಣ್ಣಿವೆಯ ಸಂಜೆ ಹರಿಯುವ ಸಾಂಕೇತಿಕ ಕಾರ್ಯವೊಂದು, ಸಾರ್ವಜನಿಕವಾಗಿ ಜರುಗುವುದು. ಇದೇ ಕರಿ ಹರಿಯುವ ರಕ್ಷಾವಿಮೋಚನ ಕಾರ್ಯ.

ಕರಿ ಹರಿಯುವ ಸಂಪ್ರದಾಯದ ಸಾಂಕೇತಿಕ ಉಪಕರಣಗಳಲ್ಲಿ ಪ್ರಾದೇಶಿಕ ಭೇದಗಳು ಕಂಡುಬರುವುವಾದರೂ ಬೇರೆ ಬೇರೆ ಬಣ್ಣದ ಎತ್ತುಗಳು ಮಾತ್ರ ಸರ್ವತ್ರ ಸಾಮಾನ್ಯವಾಗಿರುವುವು. ಆದರೆ ಬಯಲುಸೀಮೆಯ ಬಹುಭಾಗದಲ್ಲಿ ಈ ಕಾರ್ಯಕ್ರಮಕ್ಕೆ ಕರಿದು ಬಿಳಿದು ಅಥವಾ ಕೆಂದು ಬಿಳಿದು ಹೀಗೆ ಎರಡೇ ಎತ್ತುಗಳು ಬೇಕಾಗುವುವು. ಕೆಲವೆಡೆ ಐದು ಎತ್ತುಗಳು ಬೇಕೆಂಬ ನಿಯಮವಿರುವುದು. ಇನ್ನು ಕೆಲವೆಡೆ ಊರಲ್ಲಿಯ ಎಲ್ಲ ಎತ್ತುಗಳನ್ನೂ ತರಲಾಗುವುದು.

ಈ ಕಾರ್ಯಕ್ರಮದಲ್ಲಿ, ಇಂಥಿಂಥ ಕಾರ್ಯಗಳನ್ನೂ ಇಂಥಿಂಥ ಮನೆತನದವರೇ ವಹಿಸಿಕೊಳ್ಳಬೇಕೆಂಬ ನಿಯಮ. ವಂಶಾನುಗತವಾಗಿ ನಡೆದುಕೊಂಡು ಬಂದಿದೆ. ವಿಶಿಷ್ಟ ಕಾರಣಗಳಿಲ್ಲದೆ ಈ ನಿಯಮದ ಉಲ್ಲಂಘನೆಯಾಗುವಂತಿಲ್ಲ. ಊರ ಗೌಡ (ಪಟೇಲ), ಹತ್ತು ಸಮಸ್ತರು ಪಂಚರು, ಹಕ್ಕುದಾರರು ಇವರೇ ಈ ನಡೆವಳಿಯಲ್ಲಿ ಗೊತ್ತಾದ ವ್ಯವಸ್ಥಾಪಕರು.

ಕರಿ ಹರಿಯುವ ಪ್ರಮುಖ ಸಾಂಕೇತಿಕ ಸಾಧನವೆಂದರೆ ಬೇವು, ಮಾವುಗಳ ತೊಂಗಲುಗಳಿಂದ ಮಾಡಿದ ತೋರಣವನ್ನು ಸರಮಾಲೆ ಎತ್ತುಗಳಿಂದ ಹರಿಸುವುದು. ಮಧ್ಯೆ ಮಧ್ಯೆ ಅದರಲ್ಲಿ ತೆಂಗಿನಕಾಯಿ ಕೊಬ್ಬರಿಬಟ್ಟಲುಗಳನ್ನೂ ಕಟ್ಟಿರುತ್ತಾರೆ. ಊರ ಅಗಸೆಯ ಮುಂಗಡೆ ಎಡ ಬಲ ಬದಿಗಳಲ್ಲಿ ನಿಂತುಕೊಂಡಿರುವ ಕರೀ ಕಲ್ಲು ಕಂಬಗಳಿಗೆ, ಎತ್ತುಗಳ ನಿಲುವಿನಳತೆಗೆ ಸರಿಯಾಗುವಂತೆ, ಕರಿಯ ಸರಮಾಲೆಯನ್ನು ಕಟ್ಟಲಾಗುವುದು. ಹಬ್ಬದ ಉಡಿಗೆತೊಡಿಗೆಗಳಿಂದ ಸಿಂಗರಗೊಂಡ ಜನಜಂಗುಳಿ ಕುತೂಹಲಭಾವವನ್ನು ಹೊತ್ತು ಅಲ್ಲಿ ನೆರೆದಿರುವುದು. ಆಗ ಗೊತ್ತುಮಾಡಿದ ಮನೆಯ ಎತ್ತುಗಳನ್ನು, ವಾದ್ಯವೃಂದದ ಗುಲ್ಲುಗಲಾಟೆಯೊಂದಿಗೆ ಮೆರವಣಿಗೆ ಮಾಡುತ್ತ ಅಗಸೆಯ ಒಳಬಾಗಿಲಿಗೆ ತಂದು ನಿಲ್ಲಿಸುವರು. ಗರತಿಯರು ಎತ್ತುಗಳಿಗೆ ಆರತಿಯನ್ನೆತ್ತಿ ನಿವಾಳಿ ತೆಗೆಯುವರು.

ಬಳಿಕ ಸಿದ್ಧವಾಗಿ ನಿಂತ ಎತ್ತುಗಳನ್ನು ಹೊಡೆದು ಹೆದರಿಸಿ ರಭಸದಿಂದ ಓಡಿಸಲಾಗುವುದು. ಕರಿಯ ತೋರಣದ ತಡೆಯನ್ನು ಹರಿದು ಎತ್ತುಗಳು ಮುನ್ನುಗ್ಗಿ ಓಡುವುವು. ಈ ಓಟದ ಮೇಲಾಟದಲ್ಲಿ ಕರಿ ಅಥವಾ ಕೆಂದು ಎತ್ತು ಮುಂದಾದರೆ ಆ ವರ್ಷ ಮುಂಗಾರು ಧಾನ್ಯಗಳು ಹೆಚ್ಚಾಗಿ ಬೆಳೆಯುವುವೆಂದೂ ಬಿಳಿಯ ಎತ್ತು ಮುಂದಾದರೆ ಹಿಂಗಾರು ಧಾನ್ಯಗಳ ಸಮೃದ್ಧಿಯೆಂದೂ ನಂಬುವ ಭಾವನಾತ್ಮಕ ಪರಂಪರೆ ಹಳ್ಳಿಗರಲ್ಲಿದೆ. ಇದೆಲ್ಲ ಕಾರ್ಯಕ್ರಮ ಮುಗಿದ ಮೇಲೆ, ಅದರಲ್ಲಿ ಭಾಗವಹಿಸಿದ ಎತ್ತುಗಳನ್ನು ಊರಲ್ಲಿ ಮೆರೆಸುತ್ತ ಅವರವರ ಮನೆಗೆ ತಲುಪಿಸಲಾಗುವುದು. ಇಲ್ಲಿಗೆ ಹಬ್ಬದ ಆಚರಣೆ ಪೂರ್ತಿ ಗೊಂಡಂತಾಗುವುದು. ಕರಿ ಹರಿದ ಮೇಲೆಯೇ ಬಿತ್ತನೆ ಬೀಜಗಳು ಹೊಲಗಳಿಗೆ ಹೋಗಬೇಕು. ಅಲ್ಲಿಯವರೆಗೂ ಬಿತ್ತನೆಯ ಕೆಲಸ ನಡೆಯಕೂಡದೆಂಬ ಸಾಂಪ್ರದಾಯಿಕ ನಿಷೇಧವಿದೆ. *

**ಕಾರಾಗೃಹಗಳು :** ದೇಶ ಅಥವಾ ಸಮಾಜಕ್ಕೆ ಕಂಟಕಪ್ರಾಯವಾಗಿರುವ ವ್ಯಕ್ತಿಗಳನ್ನು ನಿರ್ಬಂಧದಲ್ಲಿರಿಸುವುದು; ಅವರನ್ನು ಪುನಃ ಸತ್ಪ್ರಜೆಗಳನ್ನಾಗಿ ಮಾಡುವ ಕಾರ್ಯಕ್ರಮಗಳನ್ನು ಕೈಗೊಳ್ಳುವುದು ಈ ಉದ್ದೇಶಗಳಿಂದ ಸ್ಥಾಪಿತವಾಗಿರುವ ಹಲವು ಕಾರಾಗೃಹಗಳು ಕರ್ನಾಟಕದಲ್ಲಿ ಇವೆ. ಇವು ರಾಜ್ಯ ಸರ್ಕಾರದ ನೇರ ಆಡಳಿತಕ್ಕೆ ಒಳಪಟ್ಟಿದ್ದು ಪ್ರತ್ಯೇಕ ಆಡಳಿತ ವಿಭಾಗವನ್ನೊಳಗೊಂಡಿವೆ.

ಕಣ್ಣಿಗೆ ಕಣ್ಣು, ಹಲ್ಲಿಗೆ ಹಲ್ಲು, ಜೀವಕ್ಕೆ ಜೀವ ಎಂಬ ನೀತಿ ಪ್ರಾಚೀನ ಕಾಲದಲ್ಲಿತ್ತು. ಶಿಕ್ಷೆಯು ಕೋಪದ, ಸೇಡಿನ, ಪ್ರತೀಕಾರದ ಪ್ರತೀಕವಾಗಿತ್ತು. ಮಾನವತೆಗೆ ಕರುಣೆಗೆ ಕಾಲವಿರಲಿಲ್ಲ. ರಾಜರುಗಳ

ಸುಲ್ತಾನರುಗಳ ಕಾಲದಲ್ಲಿ ಅಪರಾಧಿಗಳನ್ನು ಮತ್ತು ತಮಗೆ ಬೇಡವಾದವರನ್ನು ವಿಶಿಷ್ಟವಾದ ಸ್ಥಳಗಳಲ್ಲಿಟ್ಟು ಚಿತ್ರವಿಚಿತ್ರವಾದ ಹಿಂಸೆಗೆ ಗುರಿಮಾಡಿ ಸೇಡುತೀರಿಸಿಕೊಳ್ಳುತ್ತಿದ್ದರು. ದುರ್ಗಮ ಬೆಟ್ಟಗಳ ಮೇಲೆ, ನೆಲಮಾಳಿಗೆಗಳಲ್ಲಿ ಕಾರಾಗೃಹಗಳು ಇರುತ್ತಿದ್ದುವು. ಆದರೆ ಭಾರತಕ್ಕೆ ಬ್ರಿಟಿಷರು ಬಂದ ಅನಂತರ ಕಾರಾಗೃಹಗಳಿಗೆ ಒಂದು ರೀತಿ, ನೀತಿ, ರೂಪುರೇಷೆ ಕೊಡುವ ಕೆಲಸ ಆರಂಭವಾಯಿತು. ಆದರೂ ಬ್ರಿಟಿಷರ ಉದ್ದೇಶ ಈ ದೇಶದಲ್ಲಿ ಆಡಳಿತ ಸ್ಥಾಪನೆಯ ಜೊತೆಗೆ ಜನರ ಸ್ವಾತಂತ್ರ್ಯಭಾವನೆಗಳನ್ನು ಹತ್ತಿಕ್ಕುವುದೂ ಆಗಿತ್ತು. ಬಂದಿಗಳನ್ನು ಕರುಣೆಯಿಂದ ಕಂಡು, ಅವರೂ ಮಾನವರೆಂದು ತಿಳಿದು ಅವರ ಮಾನಸಿಕ ಆಂದೋಲನಗಳನ್ನು ಅರ್ಥಮಾಡಿಕೊಂಡು ಸೂಕ್ತ ಸುಧಾರಣೆಗಳನ್ನು ಜಾರಿಗೆ ತರಲು ಅವರಿಗೆ ಬಹಳ ಕಾಲವೇ ಬೇಕಾಯಿತು. ಮೊದಮೊದಲು ಬ್ರಿಟಿಷರ ಕಾಲದಲ್ಲಿಯೂ ರಾಗಿ ಬೀಸುವುದು, ಎಣ್ಣೆ ತೆಗೆಯುವುದು, ಕಲ್ಲು ಒಡೆಯುವುದು ಇವುಗಳನ್ನು ಮಾಡಿಸುತ್ತಿದ್ದರು. ದುಡಿಸುವುದೇ ದುಡಿಮೆಯ ಉದ್ದೇಶವಾಗಿ ಆ ದುಡಿಮೆಗೆ ಬೆಲೆ ಕೊಡುತ್ತಿರಲಿಲ್ಲ. ಸಣ್ಣ ತಪ್ಪುಗಳಿಗೂ ಮೈ ಕೀಳುವಂತೆ, ಬಿಸಿರಕ್ತ ಒಸರುವಂತೆ ಛಡಿ ಏಟುಗಳನ್ನು ಕೊಡಲಾಗುತ್ತಿತ್ತು.

ಕಾಲ ಬದಲಾದಂತೆ, ಜನತೆ ಎಚ್ಚೆತ್ತಂತೆ ಜೈಲುಗಳ ಆಡಳಿತದಲ್ಲಿ ಸುಧಾರಣೆ ಕಾಣಿಸಿಕೊಳ್ಳತೊಡಗಿತು. ಭಾರತ ಸರ್ಕಾರದವರು 1864ರಲ್ಲಿ ಹಾಗೂ 1919-20ರಲ್ಲಿ ಕಾರಾಗೃಹ ಸುಧಾರಣಾ ಸಮಿತಿಗಳನ್ನು ನೇಮಿಸಿದರು. ಸದರಿ ಸಮಿತಿಗಳು ಅನೇಕ ಸುಧಾರಣೆಗಳನ್ನು ಸೂಚಿಸಿದವು. ಅಂದಿನ ಮೈಸೂರು ಸರಕಾರವೂ ಜೈಲಿನ ಸುಧಾರಣೆಗಳ ಔಚಿತ್ಯವನ್ನು ಮನಗಂಡು 1940ರಲ್ಲಿ ಅಂದಿನ ಹೈಕೋರ್ಟಿನ ನಿವೃತ್ತ ನ್ಯಾಯಮೂರ್ತಿಗಳಾಗಿದ್ದ ಕೆ.ಎಸ್.ಚಂದ್ರಶೇಖರಯ್ಯನವರ ಅಧ್ಯಕ್ಷತೆಯಲ್ಲಿ ಒಂದು ಜೈಲು ಸುಧಾರಣಾ ಸಮಿತಿಯನ್ನು ನೇಮಿಸಿತು. ಆಗ ಸೆರೆಮನೆಯ ಕಷ್ಟನಷ್ಟಗಳನ್ನನುಭವಿಸಿದ್ದ ಕೆಲವು ಮಹನೀಯರನ್ನೊಳಗೊಂಡಿದ್ದ ಈ ಸಮಿತಿ ಬಹಳ ಉಪಯುಕ್ತ ಸುಧಾರಣೆಗಳನ್ನು ಸೂಚಿಸಿತು. ಆ ಪೈಕಿ ಕೆಲ ಸುಧಾರಣೆಗಳು ಸ್ವಾತಂತ್ರ್ಯಕ್ಕೆ ಮೊದಲೂ ಕೆಲವು ಸ್ವಾತಂತ್ರ್ಯಾನಂತರವೂ ಜಾರಿಗೆ ಬಂದವು.

ಹಿಂದಿನ ಕಾರಾಗೃಹಗಳಿಗೂ ಇಂದಿನ ಕಾರಾಗೃಹಗಳಿಗೂ ಕಟ್ಟಡಗಳನ್ನು ಬಿಟ್ಟು ಉಳಿದೆಲ್ಲ ರೀತಿನೀತಿಗಳಲ್ಲಿ ಬಹುಶಃ ಹೋಲಿಕೆಯೇ ಇಲ್ಲವೇನೋ. ಅಂದಿನ ಮೂಲೋದ್ದೇಶ ಶಿಕ್ಷೆಯಾಗಿತ್ತು. ಇಂದಿನ ಮೂಲೋದ್ದೇಶ ರಕ್ಷೆಯಾಗಿದೆ, ಸುಧಾರಣೆಯಾಗಿದೆ. ಇಂದಿನ ಕಾರಾಗೃಹಗಳು ಬಂದೀಖಾನೆಗಳಾಗಿರುವ ಬದಲು ಅಪರಾಧಿಗಳನ್ನು ದೈಹಿಕವಾಗಿ ಮಾನಸಿಕವಾಗಿ ಬೌದ್ಧಿಕವಾಗಿ ನರಳುತ್ತಿರುವ ರೋಗಿಗಳೆಂದು, ಜೈಲಿನ ಅಧಿಕಾರಿಗಳನ್ನು ವೈದ್ಯರುಗಳೆಂದು ಕರೆಯುವಷ್ಟರ ಮಟ್ಟಿಗೆ ಔಚಿತ್ಯಪೂರ್ಣ ಸುಧಾರಣೆಗಳಾಗಿವೆ. ಅಪರಾಧಿಗಳಿಗೆ ತಮ್ಮ ತಪ್ಪಿನ ಅರಿವನ್ನು ಮೂಡಿಸಿ, ಅವರಿಗೆ ಸೂಕ್ತ ವೈಜ್ಞಾನಿಕವಾದ ತರಬೇತಿ ಕೊಡಿಸಿ ಅವರೇ ಪಶ್ಚಾತ್ತಾಪದಲ್ಲಿ ಬೆಂದು ಸದ್ಗುಣಿಗಳಾಗಿ ಸತ್ಪ್ರಜೆಗಳಾಗಿ ಮತ್ತೆ ಸಮಾಜದಲ್ಲಿ ಸೇರಿಸುವುದೇ ಇಂದಿನ ಬಂದೀಖಾನೆಗಳ ಉದ್ದೇಶ.

ಹಿಂದಿನ ಮೈಸೂರಿನಲ್ಲಿ ಕೇವಲ ಎಂಟು ಸೆರೆಮನೆಗಳಿದ್ದುವು. ಏಕೀಕೃತ ಕರ್ನಾಟಕದಲ್ಲಿ ಎಲ್ಲ ಬಗೆಯ ಜೈಲುಗಳ ಸಂಖ್ಯೆ 99 (1981-82). ಕೈದಿಗಳನ್ನು ನೋಡಿ ನಡೆಸುವ ರೀತಿನೀತಿ ಸಹ ವೈಜ್ಞಾನಿಕವಾಗಿದೆ. ಹದಿನಾರರಿಂದ ಇಪ್ಪತ್ತೊಂದು ವರ್ಷದ ಯುವ ಅಪರಾಧಿಗಳ ಸುಧಾರಣೆಗಾಗಿ ಬಾರ್ಸ್ಟಲ್ ಶಾಲೆ ಎಂಬ ಸಂಸ್ಥೆ ಧಾರವಾಡದಲ್ಲಿದೆ. ಬದಲಾವಣೆಗಳಿಗೆ ಬಗ್ಗದೇ, ಸುಧಾರಣೆಗಳಿಗೆ ಸಗ್ಗದೇ ಇರುವವರಿಗೆ ಬಳ್ಳಾರಿ ಕಾರಾಗೃಹಗಳಲ್ಲಿ ಅತಿ ಕಟ್ಟುನಿಟ್ಟಿನ ಶಿಕ್ಷೆ, ತರಬೇತು ಮತ್ತು ಶಿಕ್ಷಣ ಕೊಡಲಾಗುತ್ತದೆ. ಹಿಂದೆ ವೈಜ್ಞಾನಿಕವಾಗಿ ತರಬೇತು ಪಡೆದ ಅಧಿಕಾರಿಗಳು ಕಾರಾಗೃಹದಲ್ಲಿ ಇರಲಿಲ್ಲ. ಈಗ ವೈಜ್ಞಾನಿಕವಾಗಿ ಪೂರ್ಣ ತರಬೇತನ್ನು ಪಡೆದ ಅಧಿಕಾರಿಗಳು ಇಲಾಖೆಯಲ್ಲಿ ಇದ್ದಾರೆ. ಕಾರಾಗೃಹಕ್ಕೆ ಅಪರಾಧಿ ಆಗಮಿಸುತ್ತಿದ್ದಂತೆಯೇ ಅವನ ವಯಸ್ಸು, ಅವನ ವಿದ್ಯಾಭ್ಯಾಸ, ಉದ್ಯೋಗ, ಮನೆತನ, ಹಿಂದಿನ ನಡೆವಳಿಕೆ, ಆರ್ಥಿಕ ಶಕ್ತಿ, ಹವ್ಯಾಸಗಳು, ಮಾಡಿರುವ ಅಪರಾಧ, ಅವನ ದೃಷ್ಟಿಕೋನ, ಅವನ ಸಾಂಸಾರಿಕ ವಿವರಗಳು ಎಲ್ಲವನ್ನೂ ಅರಿತು ಅವನ ಕಾರಾಗೃಹವಾಸದಲ್ಲಿ ಯಾವ ವೃತ್ತಿಯಲ್ಲಿ ಎಷ್ಟು ಶಿಕ್ಷಣ ಕೊಟ್ಟರೆ ಬಿಡುಗಡೆಯಾದ ಅನಂತರ ಅವನು ಎಷ್ಟರಮಟ್ಟಿಗೆ ಸಮಾಜದಲ್ಲಿ ಸದ್ಗುಣಿಯಾಗಿ ಬಾಳಬಲ್ಲ ಎಂಬುದನ್ನು ಪರೀಶೀಲಿಸಿ ಸೂಕ್ತ ನಿರ್ಧಾರವನ್ನು ತಿಳಿದುಕೊಂಡು ಅವನಿಗೆ ಶಿಕ್ಷಣ ಕೊಡಲಾಗುತ್ತದೆ. ಪಟ್ಟಣಗಳಿಂದ ಬಂದವರಿಗೆ ಬಿಡುಗಡೆಯಾದಮೇಲೆ ಅಲ್ಲಿಯೇ ನೆಲೆಸಬೇಕೆನ್ನುವವರಿಗೆ ಅಲ್ಲಿಯ ಆವಶ್ಯಕತೆಗಳನ್ನರಿತು, ಕೈಗಾರಿಕೆಗಳಲ್ಲಿ ವೈಜ್ಞಾನಿಕವಾಗಿ ವೃತ್ತಿಶಿಕ್ಷಣ ತರಬೇತು ಕೊಡಲಾಗುತ್ತದೆ. ಕೈಮಗ್ಗ, ಯಂತ್ರಚಾಲಿತ ಮಗ್ಗ, ಹೊಲಿಗೆ, ಕಮ್ಮಾರಿಕೆ, ಜಮಖಾನೆಗಳನ್ನು ಮಾಡುವುದು, ತೆಂಗಿನನಾರಿನ ಉದ್ಯೋಗ, ಸಾಬೂನು ಮಾಡುವುದು, ಕ್ರಿಮಿನಾಶಕ ದ್ರವ ತಯಾರಿಸುವುದು -ಇವು ಇಂದು ಕರ್ನಾಟಕದ ಕಾರಾಗೃಹಗಳಲ್ಲಿ ಕೊಡಲಾಗುವ ವೃತ್ತಿಶಿಕ್ಷಣಗಳಲ್ಲಿ ಮುಖ್ಯವಾದುವು. ಹಳ್ಳಿಯಿಂದಲೇ ಬಂದು ಹಳ್ಳಿಗೆ ಹಿಂತಿರುಗುವವರಿಗೆ ಆಧುನಿಕ ವ್ಯವಸಾಯ ಮತ್ತು ತೋಟಗಾರಿಕೆಗಳಲ್ಲಿ ತರಬೇತು ಕೊಡಲಾಗುತ್ತದೆ. ತರಬೇತಿಯೇ ಈ ವೃತ್ತಿ ಶಿಕ್ಷಣಗಳ ಮೂಲೋದ್ದೇಶವಾದರೂ ಉತ್ಪಾದನೆಯ ಮಟ್ಟವೂ ಕಡಿಮೆ ಏನಿಲ್ಲ. ಪ್ರಾಂತ್ಯ ಪುನರ್ವಿಂಗಡಣೆಯಾದಾಗ ಸುಮಾರು ನಾಲ್ಕು ಲಕ್ಷ ರೂಪಾಯಿಗಳಷ್ಟು ಬೆಲೆಯ ಉತ್ಪಾದನೆ ಇಂದು ಕೋಟ್ಯಾಂತರ ರೂಪಾಯಿಗಳಿಗೇರಿದೆ.

ಕರ್ನಾಟಕದ ಜೈಲುಗಳಲ್ಲಿ ಕೈದಿಗಳಿಗೆ ದುಡಿತದ ಜೊತೆಗೆ ಸಾಮಾನ್ಯ ಶಿಕ್ಷಣವನ್ನೂ ಕೊಡಲಾಗುತ್ತದೆ. ಸಾಮಾನ್ಯ ಓದುಬರಹ ಕಡ್ಡಾಯವಾದರೆ ಕೆಲವರು ಬಂದಿಗಳು ಜೈಲಿನಿಂದಲೇ ವ್ಯಾಸಂಗಮಾಡಿ, ಶಾಲಾ ಕಾಲೇಜುಗಳಿಗೂ ಹೋಗಿ ಪದವಿಗಳನ್ನು ಗಳಿಸಿದ್ದಾರೆ. ಬಂದಿಗಳಿಗೆ ದೈಹಿಕ ಶಿಕ್ಷಣವೂ ದೊರೆಯುತ್ತದೆ. ಜೈಲುಗಳಲ್ಲಿ ಕಲೆ, ಕ್ರೀಡೆ ಮತ್ತು ಮನೋಲ್ಲಾಸಗಳಿಗೂ ಪ್ರಾಶಸ್ತ್ಯವುಂಟು. ಕೆಲವು ಹೊರಾಂಗಣದ ಹಾಗೂ ಒಳಾಂಗಣದ ಕ್ರೀಡೆಗಳಿಗೆ ಕಾರಾಗೃಹಗಳಲ್ಲಿ ಅವಕಾಶವಿದೆ.

ಓದುಬರೆಹ ಬಲ್ಲ ಎಲ್ಲ ಬಂದಿಗಳಿಗೂ ವರ್ತಮಾನ ಪತ್ರಿಕೆಗಳು, ವಾರ ಹಾಗೂ ಮಾಸಪತ್ರಿಕೆಗಳನ್ನು ಒದಗಿಸಲಾಗುತ್ತದೆ. ದೊಡ್ಡ ದೊಡ್ಡ ಕಾರಾಗೃಹಗಳಲ್ಲಿ ವಾರಕ್ಕೊಮ್ಮೆ ಶೈಕ್ಷಣಿಕ ಚಿತ್ರಗಳನ್ನು ಪ್ರದರ್ಶಿಸಲಾಗುತ್ತದೆ. ಜೈಲುಗಳಲ್ಲಿಯೂ ಚುನಾವಣಾ ಪದ್ಧತಿಯಿಂದ ಬಂದಿಗಳೇ ತಮ್ಮ ಪ್ರತಿನಿಧಿಗಳನ್ನಾರಿಸುತ್ತಾರೆ. ಈ ಪ್ರತಿನಿಧಿಗಳು ಆಡಳಿತದ ಅನೇಕ ಬಾಬುಗಳಲ್ಲಿ ಮೇಲ್ವಿಚಾರಣೆ ಮಾಡುತ್ತಾರೆ. ಕಾವ್ಯರಚನೆ, ನಾಟಕ, ಲಲಿತಕಲೆಗಳಲ್ಲಿ ಆಸಕ್ತಿಯುಳ್ಳವರನ್ನು ಪ್ರೋತ್ಸಾಹಿಸಲಾಗುತ್ತದೆ. ಬಂದಿಗಳು ಆಗಾಗ್ಗೆ ನಾಟಕಾಭ್ಯಾಸ ಮಾಡಿ ಪ್ರದರ್ಶಿಸಿ ಉಲ್ಲಾಸಪಡುತ್ತಾರೆ. ಆಕಾಶವಾಣಿಯಲ್ಲೂ ಆಗಿಂದಾಗ್ಗೆ ಬಂದಿಗಳ ಕಾರ್ಯಕ್ರಮಗಳಿರುತ್ತವೆ.

ದೇಶಭಕ್ತಿಯಲ್ಲೂ ಬಂದಿಗಳು ಯಾರಿಗೂ ಕಡಿಮೆಯಿಲ್ಲ. ಜೈಲಿನಲ್ಲಿ ಅವರಿಗೆ ಕೊಡುವ ಕೂಲಿಯಿಂದಲೇ ಹಣ ಉಳಿಸಿ ಯುದ್ಧಕಾಲದಲ್ಲಿ ದೇಶಕ್ಕೆ ಅರ್ಪಿಸಿದ್ದಾರೆ. ನಾಟಕ ಪ್ರದರ್ಶಿಸಿ ಸಾವಿರಾರು ರೂಪಾಯಿ ಸಂಗ್ರಹಿಸಿ ಯುದ್ಧ ನಿಧಿಗೆ ಅರ್ಪಿಸಿರುವುದಲ್ಲದೆ ತಮ್ಮೆಲ್ಲ ಜೈಲು ದುಡಿತದ ಹಣವನ್ನೂ ದೇಶಕ್ಕಾಗಿ ಅರ್ಪಿಸಿದ ದೇಶಾಭಿಮಾನಿ ಬಂದಿಗಳಿದ್ದಾರೆ.

ಇಂದಿನ ಕರ್ನಾಟಕದ ಜೈಲುಗಳಲ್ಲಿ ಊಟೋಪಚಾರ ಸುಧಾರಿಸಿದೆ. ಅಲ್ಲಿ ನೀಡುವ ಆಹಾರ ರುಚಿಕರವಾಗಿಯೂ ಶುಚಿಕರವಾಗಿಯೂ ಪುಷ್ಟಿಕರವಾಗಿಯೂ ಇರುತ್ತದೆ. ಹಬ್ಬಹರಿದಿನಗಳಲ್ಲಿ ವಿಶೇಷ ತಿಂಡಿತಿನಿಸುಗಳನ್ನು ಒದಗಿಸಲಾಗುತ್ತದೆ. ಇಂದಿನ ಜೈಲುಗಳಲ್ಲಿ ಒಳಗೆ ಬಂದಾಗ್ಗಿಂತ ಹೊರಗೆ ಹೋಗುವಾಗ ಕೈದಿಗಳು ಹೆಚ್ಚು ಆರೋಗ್ಯವಂತರಾಗಿರುತ್ತಾರೆ. ಎಲ್ಲ ಜೈಲುಗಳಲ್ಲಿಯೂ ಕೈದಿಗಳಿಗಾಗಿಯೇ ಅವರಿಂದಲೇ ನಡೆಸಲ್ಪಡುವ ಲಾಭವೂ ನಷ್ಟವೂ ಇಲ್ಲದ ಕ್ಯಾಂಟೀನುಗಳಿವೆ. ನಿತ್ಯ ಬೇಕಾಗುವ ವಸ್ತುಗಳು ಇಲ್ಲಿ ಸಿಗುತ್ತವೆ. ಬೆಲೆ ಮಾರುಕಟ್ಟೆಗಿಂತ ಕಡಿಮೆ.

ಕೈದಿಗಳು ಶಿಕ್ಷೆ ಅನುಭವಿಸುತ್ತಿದ್ದರೂ ವರ್ಷಕ್ಕೊಂದೆರಡು ಸಲ ಅವರವರ ಊರುಗಳಿಗೆ ಹೋಗಿಬರಲು ಅವಕಾಶವಿದೆ. ಮನೆಯಲ್ಲಿ ಅಥವಾ ಬಂಧುಗಳಲ್ಲಿ ಯಾರಾದರೂ ಅಸ್ವಸ್ಥಗೊಂಡರೆ ಅಥವಾ ಉಳುಮೆ, ಬಿತ್ತನೆ ಕಾಲದಲ್ಲಿ ಎರಡರಿಂದ ಮೂರು ವಾರಗಳವರೆಗೆ ರಜೆಯ ಮೇಲೆ ಊರಿಗೆ ಹೋಗಿ ಮನೆಯ ಆಡಳಿತಕ್ಕೆ ವ್ಯವಸ್ಥೆಮಾಡಿ, ನಿಯಮಾನುಸಾರ ಮರಳಿ ಜೈಲಿಗೆ ಬರುತ್ತಾರೆ. ಹೀಗೆ ಅವರು ರಜೆಯಲ್ಲಿರುವಾಗ ಯಾವುದೇ ಕಾವಲಿನ ಕಟ್ಟುಪಾಡುಗಳಿಲ್ಲ. ಪರಸ್ಪರ ವಿಶ್ವಾಸವೇ ಆಧಾರ. ಆ ಆಧಾರಕ್ಕೆ

ಮೋಸ ಮಾಡುವ ಜನ ತೀರ ಕಡಿಮೆ. ಹಾಗೆ ವಿಶ್ವಾಸಕ್ಕೆರಡೆಣಿಸುವ ಜನರಿಗೆ ಮತ್ತೆ ಅಂಥ ಸೌಲಭ್ಯ ದೊರಕುವುದಿಲ್ಲ.

ಆಗಿಂದಾಗ್ಗೆ ಸಮಾಜದ ಶಿಕ್ಷಣವೇತ್ತರು, ವಿದ್ವಾಂಸರು, ಗುರುಗಳು, ಸಮಾಜ ಸುಧಾರಕರು ಜೈಲುಗಳಿಗೆ ಬಂದು ನೈತಿಕ, ಆಧ್ಯಾತ್ಮಿಕ, ಪೌರ ನಿಯಮಗಳ ವಿಚಾರದಲ್ಲಿ ಉಪನ್ಯಾಸ ಕೊಡುತ್ತಾರೆ. ಎಲ್ಲ ದೊಡ್ಡ ಬಂದೀಖಾನೆಗಳಲ್ಲಿ ಸುಸಜ್ಜಿತ ಪುಸ್ತಕ ಭಂಡಾರಗಳಿವೆ. ಈ ದಿಶೆಯಲ್ಲಿ ಕೇಂದ್ರ ಪುಸ್ತಕ ಭಂಡಾರದ ಸೇವೆ ಸ್ಮರಣೀಯ.

ಪ್ರತಿ ಕಾರಾಗೃಹದಲ್ಲಿಯೂ ಬಂದಿಗಳ ಆರೋಗ್ಯ ರಕ್ಷಣೆಗೆ ವೈದ್ಯರುಗಳಿರುತ್ತಾರೆ. ಉಚಿತ ವೈದ್ಯಕೀಯ ಸೇವೆ ಸದಾ ಇರುತ್ತದೆ.

ಹೀಗೆ ಸುಧಾರಣೆ ಮಾಡಿ ಹೊರಗೆ ಕಳಿಸಿದ ಕೈದಿಗಳನ್ನು ಸರ್ಕಾರ ಮರೆಯುವುದಿಲ್ಲ. ಜೈಲಿನಲ್ಲಿ ಕಲಿತ ವೃತ್ತಿಯನ್ನೇ ಸ್ವತಂತ್ರವಾಗಿ ಉದ್ಯೋಗ ನಡೆಸಬೇಕೆನ್ನುವವರಿಗೆ ಸರ್ಕಾರ ಸಹಾಯಧನ ನೀಡುತ್ತದೆ ಹಾಗೂ ಮಾರ್ಗದರ್ಶನ ಮಾಡುತ್ತದೆ. ಇಂಥ ಕೈದಿಗಳು ಸಮಾಜದಲ್ಲಿ ಸುಸಂಸ್ಕೃತರಾಗಿ ಬಾಳುತ್ತಾರೆಯೇ ಎಂಬುದನ್ನು ಅಭ್ಯಸಿಸುತ್ತದೆ. ಬಂದಿಗಳು ಬಿಡುಗಡೆಯಾದ ಅನಂತರ ಸತ್ಪ್ರಜೆಗಳಾಗಿ ಬಾಳಲು ಯೋಜನೆಗಳನ್ನು ಹಾಕಿ, ಅಂಕಿ- ಅಂಶಗಳನ್ನು ಸಂಗ್ರಹಿಸಿ, ಸರಿಯಾಗಿ ಮಾರ್ಗದರ್ಶನ ಮಾಡಲು ರಾಜ್ಯದ ಬಂದೀಖಾನೆಗಳ ಮುಖ್ಯಾಧಿಕಾರಿಗಳ ಕಚೇರಿಯಲ್ಲಿ ವಿಶೇಷ ಸಂಶೋಧನಾ ಶಾಖೆ ಇದೆ.

ರಾಜ್ಯದಲ್ಲಿ ಕೆಲವು ಬಯಲು ಕಾರಾಗೃಹಗಳಿವೆ. ಅಪರಾಧಿಗಳನ್ನು ಸುಧಾರಿಸಲು ಇಲಾಖೆ ಹಾಕಿದ ಅನೇಕ ಯೋಜನೆಗಳಲ್ಲಿ ಬಯಲು ಕಾರಾಗೃಹಗಳ ಯೋಜನೆಯೂ ಒಂದು. ಬಯಲು ಕಾರಾಗೃಹಗಳ ಉದ್ದೇಶ ಬಂದಿಗಳನ್ನು ಅವರವರ ಪೂರ್ವಪರಿಸರದಲ್ಲಿಯೇ, ಪೂರ್ವವೃತ್ತಿಯಲ್ಲಿಯೇ ಸುಸಜ್ಜಿತರನ್ನಾಗಿ ಮಾಡಿ ಉಪಯುಕ್ತ ಮಾನವರನ್ನು ಮತ್ತೆ ಸಮಾಜಕ್ಕೆ ಹಿಂದಿರುಗಿಸುವುದೇ ಆಗಿದೆ. ಇಲ್ಲಿ ಗೋಡೆಗಳಿಲ್ಲ, ತಂತಿಬೇಲಿಗಳಿಲ್ಲ, ಸದಾ ಕಣ್ಣಾಡಿಸುವ ಕಾವಲುಗಾರರಿಲ್ಲ. ಇಲ್ಲಿ ಮುಖ್ಯವಾಗಿ ರೈತರನ್ನು ಆರಿಸಿ ಕಳಿಸಿ, ಆಧುನಿಕ ವ್ಯವಸಾಯ, ತೋಟಗಾರಿಕೆ ಸುಧಾರಿತ ತಳಿಗಳ ಸಂಸ್ಕರಣೆ ಬೇಸಾಯ - ಔಷಧಿಗಳ - ಕೀಟನಾಶಕಗಳ ಉಪಯೋಗ, ಜಾನುವಾರುಗಳ ಸಂಸ್ಕರಣೆ ಮುಂತಾದವುಗಳಲ್ಲಿ ತರಬೇತಿ ನೀಡಲಾಗುತ್ತದೆ. ದೇಶ ಕಟ್ಟುವ ಜಲಾಶಯ ನಿರ್ಮಾಣದಂಥ ಯೋಜನೆಗಳಲ್ಲಿಯೂ ಇಂಥ ಬಂದೀಖಾನೆಗಳಿರುತ್ತವೆ.

ಕರ್ನಾಟಕದಲ್ಲಿ ಬಯಲು ಬಂದೀಖಾನೆಯ ಯೋಜನೆ ದಶಕಗಳಷ್ಟು ಹಿಂದಿನದಾದರೂ ಮೊಟ್ಟಮೊದಲ ಬಯಲು ಬಂದೀಖಾನೆ ಪ್ರಾರಂಭವಾದದ್ದು 1968ರಲ್ಲಿ, ಬೆಳಗಾಂವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನಲ್ಲಿ. ಮಲಪ್ರಭಾ ಜಲಾಶಯದ ಕಾಲುವೆ ನಿರ್ಮಾಣ ಕೆಲಸದಲ್ಲಿ ಪಾಲ್ಗೊಂಡ ಈ ಯೋಜನೆ 1971ರವರೆಗೆ ತುಂಬ ತೃಪ್ತಿಕರವಾಗಿ ನಡೆಯಿತು. ಸುಮಾರು ಇನ್ನೂರು ಜನ ಬಂದಿಗಳು ಸನ್ನಡತೆಯಿಂದ ಸಂತೃಪ್ತಿಯಿಂದ ಕೆಲಸಮಾಡಿ, ಕೆಲಸಗಾರರಿಗೆ ಮೇಲ್ಪಂಕ್ತಿಯಾಗಿ ಲೋಕೋಪಯೋಗಿ ಇಲಾಖೆಯ ತಜ್ಞರ ಹಾಗೂ ಎಲ್ಲರ ಮೆಚ್ಚುಗೆ ಪಡೆದರು. ಈ ಮೆಚ್ಚುಗೆಯಿಂದ ಉತ್ತೇಜಿತವಾದ ಇಲಾಖೆ, ಈಗ ವ್ಯವಸಾಯವೇ ಮೂಲವಾದ ಬಯಲು ಬಂದೀಖಾನೆಯೊಂದನ್ನು ಬೆಂಗಳೂರು ಜಿಲ್ಲೆ ದೇವನಹಳ್ಳಿ ತಾಲ್ಲೂಕು ಕೋರಮಂಗಲ ಗ್ರಾಮದ 145 ಎಕರೆ ವಿಸ್ತೀರ್ಣದಲ್ಲಿ 1972ರಲ್ಲಿ ಪ್ರಾರಂಭ ಮಾಡಿದೆ. ಈ ಬಯಲು ಕಾರಾಗೃಹದಲ್ಲಿರುವ ನೂರಾರು ಮಂದಿ ಕೊಲೆಗಾಗಿ ಶಿಕ್ಷೆ ಪಡೆದವರಾದರೂ ಅವರ ಆಸಕ್ತಿ ಶ್ರದ್ಧೆ ಉತ್ಸಾಹ ದುಡಿಮೆಗಳನ್ನು ಕಂಡವರಾರೂ ಅವರನ್ನು ಅಪರಾಧಿಗಳೆಂದು ಹೇಳಲಾಗುವುದಿಲ್ಲ. ಇಲ್ಲಿ ಅವರಿಗೆ ವೈಜ್ಞಾನಿಕ ರೀತಿಯ ವ್ಯವಸಾಯ, ತೋಟಗಾರಿಕೆ, ಕ್ರಿಮಿಕೀಟ ನಾಶಗಳ ಉಪಯೋಗ, ಧಾನ್ಯ ಸಂಗ್ರಹಣೆ, ಸಂಸ್ಕರಣೆ, ಜಾನುವಾರು ಸಾಕಾಣಿಕೆ, ಹೈನುಗಾರಿಕೆ, ಕೋಳಿ ಸಾಕಾಣಿಕೆ, ಇಟ್ಟಿಗೆ ತಯಾರಿಕೆ ಹಾಗೂ ಗೃಹ ನಿರ್ಮಾಣ ಮುಂತಾದ ವಿಷಯಗಳಲ್ಲಿ ತರಬೇತಿ ನೀಡಲಾಗುತ್ತದೆ. ಇಲ್ಲಿ ಕೆಲಸ ಮಾಡುವವರಿಗೆ ಹೆಚ್ಚಿನ ವೇತನದ ಜೊತೆಗೆ ಶಿಕ್ಷಾ ಅವಧಿಯ ಕಡಿತವೂ ಹೆಚ್ಚು. ಕೋರಮಂಗಲದ ಬಯಲು ಕಾರಾಗೃಹ ಉತ್ತಮ ಫಲಿತಾಂಶ ನೀಡುತ್ತಿದೆ.

(ಪಿ.ಎಸ್.ಎಂ.)

**ಕಾರ್ಕಳ :** ಉಡುಪಿ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಅದರ ಕೇಂದ್ರ. ತಾಲ್ಲೂಕಿನ ಸುತ್ತ ಉತ್ತರದಲ್ಲಿ ಕುಂದಾಪುರ ತಾಲ್ಲೂಕು ಮತ್ತು ಶಿವಮೊಗ್ಗ ಜಿಲ್ಲೆ, ಪೂರ್ವದಲ್ಲಿಚಿಕ್ಕಮಗಳೂರು ಜಿಲ್ಲೆ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕು, ದಕ್ಷಿಣದಲ್ಲಿ ಬಂಟ್ವಾಳ ತಾಲ್ಲೂಕು ಮತ್ತು ಪಶ್ಚಿಮದಲ್ಲಿ ಉಡುಪಿ ಮತ್ತು ಮಂಗಳೂರು ತಾಲ್ಲೂಕುಗಳು ಇವೆ. ತಾಲ್ಲೂಕಿನ ವಿಸ್ತೀರ್ಣ 1400.63 ಚ.ಕಿಮೀ. ಜನಸಂಖ್ಯೆ 204571. ಹೋಬಳಿಗಳು ಮೂರು - ಕಾರ್ಕಳ, ಮೂಡಬಿದರೆ ಮತ್ತು ಅಜೆಕಾರು. ಗ್ರಾಮಗಳು 79.



ಅನಂತಶಯನ ಪ್ರತಿಮೆ, ಕಾರ್ಕಳ

ಇದು ಪಶ್ಚಿಮಘಟ್ಟಗಳ ಸಾಲಿನಲ್ಲಿರುವ ಬೆಟ್ಟಗುಡ್ಡ ಪ್ರದೇಶ. ಆಗುಂಬೆ ಶ್ರೇಣಿಯ ಸ್ವಲ್ಪಭಾಗ ಕಾರ್ಕಳ ತಾಲ್ಲೂಕಿಗೆ ಸೇರುತ್ತದೆ. ಇಲ್ಲಿ ಹಲವು ರೀತಿಯ ಉತ್ತಮ ಕಟ್ಟಡಕಲ್ಲುಗಳು ಸಿಕ್ಕುತ್ತವೆ. ಚಪ್ಪಡಿಕಲ್ಲು, ಜಂಬುಕಲ್ಲು (ಲ್ಯಾಟರೈಟ್) ಇವು ಮುಖ್ಯವಾದುವು. ಜಂಬುಕಲ್ಲು ಇಟ್ಟಿಗೆಗಳನ್ನು ಈ ಪ್ರದೇಶದಲ್ಲೆಲ್ಲ ಕಟ್ಟಡಗಳಿಗೆ ಉಪಯೋಗಿಸುತ್ತಾರೆ. ಕಾರ್ಕಳದ ವಾಯುಗುಣ ಹಿತಕರವಾದುದು. ಜೂನ್‌ನಿಂದ ಅಕ್ಟೋಬರ್ ವರೆಗೆ ಮಳೆ. ವಾರ್ಷಿಕ ಸರಾಸರಿ ಸು.3500ಮಿಮೀ. ಅನೇಕ ಸಣ್ಣ ಹೊಳೆಗಳು ಇಲ್ಲಿ ಹರಿಯುತ್ತವೆ. ಸಹ್ಯಾದ್ರಿ ಗಿರಿಶೃಂಗಗಳಲ್ಲಿ ಜನಿಸುವ ನೀಲಾ, ಸ್ವರ್ಣ, ಶಾಂಭವಿ, ಫಲ್ಗುಣಿ ಮೊದಲಾದ ಹೊಳೆಗಳು ಈ ತಾಲ್ಲೂಕಿನ ಮೂಲಕ ಹರಿದು ಹೋಗುತ್ತವೆ. ಮುಖ್ಯವಾದುದು ತಾಲ್ಲೂಕಿನ ಮಧ್ಯಭಾಗದಲ್ಲಿ ಹರಿಯುವ ಸುವರ್ಣ ಹೊಳೆ. ರಾಮಸಾಗರ ಇಲ್ಲಿಯ ಮುಖ್ಯ ಸರೋವರ. ಪ್ರಮುಖವಾದ ಭಂಡಾಜೆ ಜಲಪಾತ ಕಾರ್ಕಳ ತಾಲ್ಲೂಕಿನಲ್ಲಿದೆ. ಸಮೃದ್ಧವಾದ ಅರಣ್ಯಸಂಪತ್ತು ಮತ್ತು ಅರಣ್ಯಜನ್ಯ ಉತ್ಪನ್ನಗಳು ಕಾರ್ಕಳದ ವೈಶಿಷ್ಟ್ಯ.

ಇಲ್ಲಿನ ಪ್ರಮುಖ ಬೆಳೆ ಬತ್ತ. ಇದಲ್ಲದೆ ತೆಂಗು, ಅಡಕೆ, ಮೆಣಸು, ಶುಂಠಿ, ಅನಾನಸು, ಹಲಸು, ಮಾವು, ಬಾಳೆ ಮತ್ತು ಗೇರುಬೀಜ ಇಲ್ಲಿಯ ಉತ್ಪನ್ನಗಳಲ್ಲಿ ಮುಖ್ಯವಾದವು. ಕಲ್ಲುಕೆಲಸ, ಬೀಡಿ ಕಟ್ಟುವುದು, ನಶ್ಯದ ತಯಾರಿಕೆ, ಕೊಬ್ಬರಿ ಎಣ್ಣೆ ತಯಾರಿಕೆ, ಹೆಂಚಿನ ತಯಾರಿಕೆ, ಮಡಕೆ ಕುಡಿಕೆ ಮತ್ತು ಬೆತ್ತದ ಕೆಲಸ ಮುಂತಾದ ಗ್ರಾಮ ಕೈಗಾರಿಕೆಗಳಿವೆ. ಸರ್ಕಾರಿ ವ್ಯವಸಾಯ ಸಂಶೋಧನ ಕೇಂದ್ರಗಳು ಇವೆ. ಬೀಜೋತ್ಪಾದನಾ ಕೇಂದ್ರ (ಸಾಣೂರು), ಅನಾನಸು ಸಂಶೋಧನ ಕೇಂದ್ರ (ಮೂಡಬಿದರೆ) ಮತ್ತು ವ್ಯವಸಾಯಾಭಿವೃದ್ಧಿ ಫಾರ್ಮಸಿ (ಕಾರ್ಕಳ) ಇವು ಮುಖ್ಯವಾದವು. ಕಾರ್ಕಳದಲ್ಲಿ 42 ಅಡಿ ಎತ್ತರದ ಗೊಮ್ಮಟ ವಿಗ್ರಹವಿದೆ. 18 ಜೈನ ಬಸದಿಗಳೂ ಜೈನರ ದಾನಶಾಲಾಮಠವೂ ಇದೆ. ಇದಲ್ಲದೆ ಅನಂತಶಯನ ಮತ್ತು ವೆಂಕಟರಮಣ ದೇವಾಲಯಗಳೂ ಇವೆ. ಇಲ್ಲಿರುವ ಚತುರ್ಮುಖ ಬಸದಿಯ ಶಿಲ್ಪಕಲಾ ಸೌಂದರ್ಯ ಅವರ್ಣನೀಯ. ಸು.800 ವರ್ಷಗಳ ಹಿಂದೆ ಇದೊಂದು ಪುಟ್ಟ ಗ್ರಾಮವಾಗಿತ್ತು. ಇದರ ಸುತ್ತಲೂ ಕರಿಯ ಕಲ್ಲುಗಳೇ ಹೆಚ್ಚಾಗಿದ್ದುದರಿಂದ ಕಾರಕಲ ಎಂದು

ಹೆಸರಾಯಿತು. ಕಾಲಕ್ರಮದಲ್ಲಿ ಕಾರ್ಕಳ ಎಂಬ ಹೆಸರು ಉಳಿದು ಬಂತು. ಭೈರರಸರು (ನೋಡಿ) ಇದನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಈ ನಗರ ಪ್ರಸಿದ್ಧ ಕಲಾಕ್ಷೇತ್ರವೂ ತೀರ್ಥಕ್ಷೇತ್ರವೂ ಆಗಲು ಅವರ ಕೊಡುಗೆ ಅಪಾರವಾದುದು. ಅವರ ಕಾಲದಲ್ಲಿ ಸಾಕಷ್ಟು ಜೈನಸಾಹಿತ್ಯದ ರಚನೆಯಾಯಿತು. ಭೈರರಸರ ರಾಜಗುರುವಾಗಿದ್ದ ಕಲ್ಯಾಣಕೀರ್ತಿ (ಸು.1440) ಜ್ಞಾನಚಂದ್ರಾಭ್ಯುದಯ, ಚಿನ್ಮಯ ಚಿಂತಾಮಣಿ ಮೊದಲಾದ ಹತ್ತು ಗ್ರಂಥಗಳನ್ನು ರಚಿಸಿದ್ದಾನೆ. ಬಾಹುಬಲಿಯ (ಸು.1560) ನಾಗಕುಮಾರ ಚರಿತೆ, ಚದುರಚಂದ್ರಮನ ಮದನಾರಿ ಕುಮ್ಮಟಸ್ವಾಮಿ ಚರಿತೆ ಗಮನಾರ್ಹ ಕೃತಿಗಳು. ಲಲಿತಕೀರ್ತಿ, ಯಶಃಕೀರ್ತಿ, ಶಾಂತಿಕೀರ್ತಿ, ವರ್ಧಮಾನ, ನಾಗಚಂದ್ರ ಮೊದಲಾದವರು ಭೈರರಸರ ಆಶ್ರಿತ ಕವಿಗಳಾಗಿದ್ದರು. ನವೋದಯ ಸಾಹಿತ್ಯದ ಆರಂಭ ಕಾಲದ ಕೃತಿಕಾರರಲ್ಲಿ ಎಂ.ಎನ್.ಕಾಮತ್ (ನೋಡಿ) ಹೆಸರು ಉಲ್ಲೇಖನೀಯ. ಇದಲ್ಲದೆ ವಿ.ಎಸ್.ಕುಡ್ವ, ರಾಘುವೇಂದ್ರ ಸುಬ್ಬರಾವ್ ಮೂಡಕಟ್ಟೆ, ಐ.ಕೆ.ಪಿ. ಶರ್ಮ, ಕೆ.ಶ್ರೀನಿವಾಸ, ಕಿಣಿ ಮೊದಲಾದ ಲೇಖಕರು ಸಾಹಿತ್ಯ ರಚಿಸಿದ್ದಾರೆ.

ಕಾರ್ಕಳ ಕ್ಷೇತ್ರವನ್ನು 1972 ರಿಂದಲೂ ಪ್ರತಿನಿಧಿಸುತ್ತಿದ್ದ ಎಂ.ವೀರಪ್ಪಮೊಯ್ಲಿ (ನೋಡಿ) ಕರ್ನಾಟಕದ ಮುಖ್ಯಮಂತ್ರಿಯಾಗಿ (1992-1994) ಸೇವೆ ಸಲ್ಲಿಸಿರುವರು. ರಾಜಕಾರಣಿಯಾಗಿಯೂ ಸೃಜನಶೀಲ ಸಾಹಿತ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರು ರಚಿಸಿದ ಕೊಟ್ಟ (1993) ಕಾದಂಬರಿ ಕೊರಗ ಜನಾಂಗದ ಬದುಕು ಬವಣೆಗಳನ್ನು ಚಿತ್ರಿಸುತ್ತದೆ. ಜೈನಕಾಶಿ ಎಂದು ಪ್ರಸಿದ್ಧವಾದ ಮೂಡಬಿದರೆ (ನೋಡಿ) ಈ ತಾಲ್ಲೂಕಿನಲ್ಲಿದೆ. ಸೋಮೇಶ್ವರ ಇನ್ನೊಂದು ಮುಖ್ಯ ಸ್ಥಳ. ಮುದ್ದಣಕವಿ ಹುಟ್ಟಿದ ನಂದಳಿಕೆ ಗ್ರಾಮ ಇರುವುದೂ ಈ ತಾಲ್ಲೂಕಿನಲ್ಲಿ. ಯಕ್ಷಗಾನಕ್ಕೆ ಈ ಪ್ರದೇಶದಲ್ಲಿ ಒಳ್ಳೆಯ ಪ್ರೋತ್ಸಾಹವಿದೆ.

ಕಾರ್ಕಳ ಈ ತಾಲ್ಲೂಕಿನ ಮುಖ್ಯ ಸ್ಥಳ. ಮಂಗಳೂರಿನ ಈಶಾನ್ಯಕ್ಕೆ 52ಕಿಮೀ ದೂರದಲ್ಲಿದೆ. ಉಡುಪಿಯ ಆಗ್ನೇಯ ದಿಕ್ಕಿನಲ್ಲಿದೆ. ಉಡುಪಿ, ಮಂಗಳೂರು, ಆಗುಂಬೆ, ಕುಂದಾಪುರ, ಮೂಡಬಿದರೆ, ಬಂಟ್ವಾಳ, ಶೃಂಗೇರಿ ಮತ್ತು ಬೆಳ್ತಂಗಡಿಗಳೊಡನೆ ರಸ್ತೆಸಂಪರ್ಕವೂ ಬಸ್ ಸೌಕರ್ಯಗಳೂ ಇವೆ. ಇಲ್ಲಿನ ಜನಸಂಖ್ಯೆ 25118. ಸಂಸ್ಕೃತ ಮತ್ತು ಆಯುರ್ವೇದದಲ್ಲಿ ಉಚಿತ ಶಿಕ್ಷಣ ನೀಡುವ ಭುವನೇಂದ್ರ ಸಂಸ್ಕೃತ ಕಾಲೇಜು, ಒಂದು ಕಲಾ ಮತ್ತು ವಿಜ್ಞಾನ ಕಾಲೇಜು ಇಲ್ಲಿವೆ. ಬೀಡಿ ಮತ್ತು ನಶ್ಯದ ತಯಾರಿಕೆ ಊರಿನ ಪ್ರಮುಖ ಉದ್ಯಮಗಳಲ್ಲೊಂದು. ಮಳೆ ಅಧಿಕವಾಗಿರುವ ಪ್ರದೇಶ ಎನ್ನುವುದರಿಂಲೂ ಈ ಊರಿಗೆ ಕಾರ್ಕಳ ಎಂಬ ಹೆಸರು ಬಂದಿದೆಯೆನ್ನಲಾಗಿದೆ. ಕಾರ್ಕಳ ಐತಿಹಾಸಿಕ ಪ್ರಾಮುಖ್ಯವುಳ್ಳ ಸ್ಥಳ. ಪಾಂಡ್ಯನಗರಿ ಎಂದು ಹೆಸರು ತಳೆದಿದ್ದ ಕಾರ್ಕಳದ ಉಲ್ಲೇಖವನ್ನುಳ್ಳ ಮೊತ್ತಮೊದಲಿನ ಶಾಸನ 1333ರರದು. ಕಳಸ ರಾಜವಂಶದ ಭೈರರಸರ ಆಳಿಕೆಗೆ ಸೇರಿದ್ದ ಈ ಪಟ್ಟಣ ಅವರ ರಾಜಧಾನಿಗಳಲ್ಲೊಂದಾಗಿತ್ತು. ಭೈರರಸವಂಶದವರು ಜೈನ ಧರ್ಮೀಯರಾಗಿದ್ದುದರಿಂದ ಇಲ್ಲಿ ಅನೇಕ ಜೈನಬಸದಿಗಳೂ ಜೈನರ ಮಠವೂ ಇವೆ. ಕೆಲವು ಪ್ರಸಿದ್ಧ ಹಿಂದು ದೇವಾಲಯಗಳೂ ಈ ರಾಜರ ಆಶ್ರಯದಲ್ಲಿ ಸ್ಥಾಪಿತವಾದುವು. ಇಲ್ಲಿರುವ ಅನಂತಶಯನ ದೇವಾಲಯವನ್ನು ಭೈರರಸ ವಂಶದಲ್ಲಿ ಪ್ರಮುಖನಾದ ಇಮ್ಮಡಿ ಭೈರವ 1567ರಲ್ಲಿ ಸ್ಥಾಪಿಸಿದುದಾಗಿ ಐತಿಹ್ಯವಿದ್ದರೂ ಅದರಲ್ಲಿರುವ ಪ್ರತಿಮೆಗಳು 12-13ನೆಯ ಶತಮಾನಗಳ ಕೃತಿಗಳಂತೆ ಕಂಡುಬರುತ್ತವೆ. ತ್ರಿಭುವನ ಜಿನ ಚೈತ್ಯಾಲಯವೆಂದು ಹೆಸರು ಪಡೆದಿದ್ದ ಮತ್ತು ಈಗ ಚತುರ್ಮುಖ ಬಸದಿಯೆಂದು ಕರೆಯುವ ಜೈನಮಂದಿರ ನಿರ್ಮಿತವಾದ್ದೂ ಈ ರಾಜನ ನೇತೃತ್ವದಲ್ಲೇ (1545). ಕಾರ್ಕಳದಲ್ಲಿರುವ 42' ಎತ್ತರದ ಗೊಮ್ಮಟೇಶ್ವರ ವಿಗ್ರಹವನ್ನು 1432ರಲ್ಲಿ ವೀರಪಾಂಡ್ಯ ಸ್ಥಾಪಿಸಿದ. ಆ ಸಂದರ್ಭದಲ್ಲಿ ವಿಜಯನಗರದ ದೊರೆ ಇಮ್ಮಡಿ ದೇವರಾಯ ಇಲ್ಲಿಗೆ ಬಂದುದಾಗಿ ಹೇಳಲಾಗಿದೆ. ಇದೊಂದು ಏಕಶಿಲಾವಿಗ್ರಹ. ಶ್ರವಣಬೆಳಗೊಳದ ಗೊಮ್ಮಟ ವಿಗ್ರಹದಂತೆ ಇದೂ ಸುಂದರವಾಗಿದೆ. ಇದರ ಎದುರು 1437ರಲ್ಲಿ ಸ್ಥಾಪಿತವಾದ ಬ್ರಹ್ಮದೇವರ ಕಂಬದ ಮೇಲೆ ಆಕರ್ಷಕ ಬ್ರಹ್ಮವಿಗ್ರಹವಿದೆ. ಕಾರ್ಕಳದಲ್ಲಿರುವ ಮಾನಸ್ತಂಭಗಳು ಉತ್ತಮ ಕಲಾಕೃತಿಗಳು. ಚತುರ್ಮುಖ ಬಸದಿಯ ನಾಲ್ಕು ಮೂಲೆಗಳಲ್ಲಿ ಅರ-ಮಲ್ಲ ಮುನಿ ಸುವ್ರತರ -ಶಿಲಾಪ್ರತಿಮೆಗಳನ್ನು ಪ್ರತಿಷ್ಠಾಪಿಸಲಾಗಿದೆ. ಇದಲ್ಲದೆ 15-16ನೆಯ ಶತಮಾನದ ಆದಿಭಾಗದಲ್ಲಿ ಜೈನಧರ್ಮಕ್ಕೆ ಸೇರಿದ ಲಲಿತಕೀರ್ತಿ ಭಟ್ಟಾರಕರ ಮಠ ಇಲ್ಲಿ ಸ್ಥಾಪಿತವಾಯಿತು. ಇಲ್ಲಿರುವ ಅನಂತಪದ್ಮನಾಭ ಮೂರ್ತಿ ದಕ್ಷಿಣ ಭಾರತದಲ್ಲೇ ವಿಶಿಷ್ಟವಾದ್ದು. ವಿಜಯನಗರದ ಕಾಲಕ್ಕೆ ಸೇರಿದ ಕಾಳಿಕಾಂಬಾ ದೇವಾಲಯ ಮತ್ತೊಂದು ಮುಖ್ಯ ಮಂದಿರ. ಇದರ ಮೂಲ ವಿಗ್ರಹ ಬಹಳ ಸುಂದರವಾಗಿದೆ. ಕಾರ್ಕಳದಲ್ಲಿ ಒಂದು ವೆಂಕಟರಮಣ ದೇವಾಲಯವೂ ಇದೆ. (ಎಸ್.ಎಸ್.)



ನೇಮಿನಾಥ ಬಸದಿಯ ಮಾನಸ್ತಂಭ, ಕಾರ್ಕಳ

ಆನೆಕೆರೆಯ ಚತುರ್ಮುಖ ಬಸದಿ (1545), ಹಿರಿಯಂಗಡಿಯ ನೇಮಿನಾಥ ಬಸದಿಯ 50' ಎತ್ತರದ ಮಾನಸ್ತಂಭ (1334), ಪೆರುವಾಜೆಯ ಚೋಳ ಶೈಲಿಯ ಮಹಲಿಂಗೇಶ್ವರ ದೇವಾಲಯ (12ನೆಯ ಶತಮಾನ), ಕುಕ್ಕುಂದೂರಿನ ಮಹಿಷಮರ್ದಿನಿ (12ನೆಯ ಶತಮಾನ), ಕಾಪೆಟ್ಟಿನ ಕೃಷ್ಣದೇವಾಲಯ (12ನೆಯ ಶತಮಾನ), ಕೆರೆವಸೆಯ ಹೊಯ್ಸಳ ಶೈಲಿಯ ಎರಡು ಜೈನ ಬಸದಿಗಳು, ಟಿಪ್ಪುವಿನ ಕಾಲದ ಮಣ್ಣಿನ ಕೋಟೆ ಮತ್ತು ಪರ್ಪಲದಲ್ಲಿರುವ ಪ್ರಾಚೀನ ಇಗರ್ಜಿ - ಸೇಂಟ್-ಲೊರೆನ್ಸ್ ಇವು ಸಮೀಪದಲ್ಲಿರುವ ಇತರ ಪ್ರಮುಖ ಐತಿಹಾಸಿಕ ನಿರ್ಮಾಣಗಳು. (ಆರ್.ಟಿ.ಎಸ್.)

**ಕಾರ್ನಾಡು, ಸದಾಶಿವರಾವ್ :** 1881-1937. ದಕ್ಷಿಣ ಕನ್ನಡ ಜಿಲ್ಲೆಯ ಒಬ್ಬ ಪ್ರಮುಖ ನ್ಯಾಯವಾದಿ, ಸಮಾಜಸೇವಕ, ಸ್ವಾತಂತ್ರ್ಯ ಹೋರಾಟಗಾರ. 1891ರಲ್ಲಿ ಮಂಗಳೂರಿನಲ್ಲಿ ಜನಿಸಿದರು. ತಂದೆ ಕಾರ್ನಾಡು ರಾಮಚಂದ್ರರಾವ್ ಮಂಗಳೂರಿನ ಪ್ರಮುಖ ವಕೀಲರು; ಸದ್ಗುಣಿಯೆಂದೂ ಸ್ವತಂತ್ರ ಧೋರಣೆಯುಳ್ಳ ಸತ್ಯನಿಷ್ಠರೆಂದೂ ಪ್ರಸಿದ್ಧರಾಗಿದ್ದರು. ತಾಯಿ ರಾಧಾಬಾಯಿ. ಸದಾಶಿವರಾಯರು

ಮಂಗಳೂರಿನಲ್ಲೇ ಪ್ರಾರಂಭಿಕ ಶಿಕ್ಷಣ ಪಡೆದರು. ಮುಂದೆ ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಓದಿ ಪದವೀಧರರಾದರು. ಮುಂಬಯಿಯಲ್ಲಿ ನ್ಯಾಯಶಾಸ್ತ್ರ ಪದವಿಗಳಿಸಿ ಮಂಗಳೂರಿನಲ್ಲಿ 1906ರಲ್ಲಿ ವಕೀಲಿಯನ್ನಾರಂಭಿಸಿದರು.

ಇವರು ಬಲು ಬೇಗ ವೃತ್ತಿಜೀವನದಲ್ಲಿ ಯಶಸ್ಸು ಗಳಿಸಿದರಾದರೂ ಇವರ ಮನಸ್ಸು ದೇಶದ ಉನ್ನತಿಗಾಗಿ ಸದಾ ತುಡಿಯುತ್ತಿತ್ತು. ಸ್ತ್ರೀಯರ ಪ್ರಗತಿಗಾಗಿ ಮಹಿಳಾ ಸಭಾ ಎಂಬ ಸಂಸ್ಥೆಯೊಂದನ್ನು ಪ್ರಾರಂಭಿಸಿದರು. ಇವರೂ ಇವರ ಪತ್ನಿ ಶಾಂತಾಬಾಯಿಯವರೂ ಆ ಸಂಸ್ಥೆಯ ಆಶ್ರಯದಲ್ಲಿ ಮಹಿಳೆಯರಿಗೆ ಉಪಯುಕ್ತವಾದ ಕೆಲಸಗಳನ್ನು ಕಲಿಸಿಕೊಡುತ್ತಿದ್ದರು. ದೇಶದಲ್ಲಿ ಸ್ವಾತಂತ್ರ್ಯಚಳವಳಿ ತೀವ್ರವಾದಾಗ ಯುವಕರಿಗೆ ರಾಷ್ಟ್ರೀಯ ಶಿಕ್ಷಣವನ್ನು ನೀಡುವತ್ತ ಇವರ ಮನಸ್ಸು ಹರಿಯಿತು. ಇವರು ತಿಲಕ್ ವಿದ್ಯಾಲಯ ಎಂಬ ರಾಷ್ಟ್ರೀಯ ವಿದ್ಯಾಶಾಲೆಯನ್ನಾರಂಭಿಸಿದರು. ಹಿಂದಿಯ ಜೊತೆಗೆ ಅಲ್ಲಿ ನೂಲುವುದು, ನೇಯುವುದು ಮುಂತಾದ ಉಪಯುಕ್ತ ಕೈಕಸುಬುಗಳನ್ನೂ ಬೋಧಿಸಲಾಗುತ್ತಿತ್ತು.



ರಚನಾತ್ಮಕ ಕಾರ್ಯಗಳಲ್ಲೆ ಅಲ್ಲದೆ ಇವರು ಸ್ವಾತಂತ್ರ್ಯ ಚಳುವಳಿಯಲ್ಲೂ ನೇರವಾಗಿ ಭಾಗವಹಿಸಿದರು. ಗಾಂಧೀಜಿ ಸತ್ಯಾಗ್ರಹ ಚಳವಳಿಯನ್ನಾರಂಭಿಸಿದಾಗ ಕರ್ನಾಟಕದಲ್ಲಿ ಅದರ ಪ್ರತಿಜ್ಞೆಗೆ ಸಹಿಹಾಕಿದವರಲ್ಲಿ ಇವರು ಮೊದಲಿಗರು. ಇವರು ಆ ಚಳವಳಿಯಲ್ಲಿ ಧುಮುಕಿದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾಂಗ್ರೆಸ್ಸು ಬಲಗೊಂಡಿತು. ದಕ್ಷ ಹಾಗೂ ನಿಷ್ಠಾವಂತ ಸತ್ಯಾಗ್ರಹಿಗಳ ತರಬೇತಿಗಾಗಿ ಇವರು ಧಾರಾಳವಾಗಿ ಹಣ ಸುರಿದರು.

ಹಲವು ವರ್ಷಗಳ ಕಾಲ ಇವರು ದಕ್ಷಿಣ ಕನ್ನಡ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರೂ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಉಪಾಧ್ಯಕ್ಷರೂ ಆಗಿದ್ದರಲ್ಲದೆ 1931-34ರಲ್ಲಿ ಅದರ ಅಧ್ಯಕ್ಷರೂ ಆಗಿದ್ದರು. ಇವರ ಖ್ಯಾತಿ ಅಖಿಲಭಾರತ ಮಟ್ಟಕ್ಕೂ ಏರಿತು. ಇವರು ಅಖಿಲಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರಾದರು.

ಮಹಾತ್ಮ ಗಾಂಧೀಯವರ ಅಚ್ಚುಮೆಚ್ಚಿನ ಅನುಯಾಯಿಗಳಲ್ಲೊಬ್ಬರಾಗಿದ್ದ ಇವರು ಗಾಂಧೀಯವರು ಆರಂಭಿಸಿದ ಉಪ್ಪಿನ ಸತ್ಯಾಗ್ರಹ ಸಮಯದಲ್ಲಿ ವೈಯಕ್ತಿಕ ಸತ್ಯಾಗ್ರಹಿಯಾಗಿ ದಸ್ತಗಿರಿಯಾಗಿ ಕಾರಾಗೃಹವಾಸವನ್ನನುಭವಿಸಿದರು. 1937ರಲ್ಲಿ ಫೈಜ್‌ಪುರದಲ್ಲಿ ಸೇರಿದ್ದ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿ ಹಿಂದಿರುಗುತ್ತಿದ್ದಾಗ ಇವರ ಆರೋಗ್ಯ ಕೆಟ್ಟಿತು. 1937 ಜನವರಿ 9ರಂದು ಮುಂಬಯಿಯಲ್ಲಿ ನಿಧನರಾದರು.

ಇವರು ಐಶ್ವರ್ಯವಂತರ ಮನೆತನದಲ್ಲಿ ಹುಟ್ಟಿ ಬೆಳೆದವರಾದರೂ ದೀನದಲಿತರ ಬಗ್ಗೆ ಸದಾ ಅನುಕಂಪ ಹೊಂದಿದ್ದರು. ಅವರ ಉದ್ಧಾರಕ್ಕಾಗಿ ಬಹಳ ಶ್ರಮಿಸಿದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಮಾಜಸುಧಾರಕರ ದೊಡ್ಡ ಪಡೆಯನ್ನೇ ಕಟ್ಟಿದ್ದರು. ಮಹಿಳೆಯರ ಪ್ರಗತಿಗಾಗಿಯೂ ರಾಷ್ಟ್ರೀಯ ಶಿಕ್ಷಣಕ್ಕಾಗಿಯೂ ಇವರು ಕಟ್ಟಿದ ಸಂಸ್ಥೆಗಳು ತುಂಬ ಯಶಸ್ವಿಯಾಗಿ ಕೆಲಸ ಮಾಡಿದುವು. ಹರಿಜನೋದ್ಧಾರ ಕಾರ್ಯದಲ್ಲಿ ಇವರು ಕೊನೆಯವರೆಗೂ ನಿರತರಾಗಿದ್ದರು. ಇವರು ಕೆನರಾ ಸಾರಸ್ವತ ಸಂಘದ ಅಧ್ಯಕ್ಷರೂ ಆಗಿದ್ದರು (1924-25).

ಇವರು ಸರಸಿ, ಸರಳ ಜೀವಿ. ಮಹಾತ್ಮ ಗಾಂಧೀಯವರಿಗೆ ಇವರಲ್ಲಿ ತುಂಬ ವಿಶ್ವಾಸವಿತ್ತು. ಬೆಂಗಳೂರಿನಲ್ಲಿ ಸೇರಿದ್ದ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಅರವತ್ತೈದನೆಯ ಅಧಿವೇಶನದ (1960) ಸ್ಥಳಕ್ಕೆ ಸದಾಶಿವನಗರ ಎಂದು ಹೆಸರಿಡಲಾಗಿತ್ತು. ಈಗ ಬೆಂಗಳೂರಿನಲ್ಲಿ ಇವರ ಹೆಸರಿನ ಒಂದು ಬಡಾವಣೆ ಇದೆ. (ಎಚ್.ಎಸ್.ಕೆ.)

**ಕಾರ್ಮಿಕ ಸಂಘಟನೆ ಮತ್ತು ಕಲ್ಯಾಣ :** ಭಾರತದಲ್ಲಿ ಕಾರ್ಮಿಕ ಸಂಘಟನೆ ಪ್ರಾರಂಭವಾದದ್ದು ಬಹಳ ವಿಳಂಬವಾಗಿ. ಕರ್ನಾಟಕ ರಾಜ್ಯದಲ್ಲೂ ಅದು ಪ್ರಾರಂಭವಾದ್ದದ್ದು ತಡವಾಗಿಯೇ. ಇಂದು ಸಂಘಟನೆ ಹಾಗೂ ಕಲ್ಯಾಣಕಾರ್ಯಗಳು ಬಿರುಸಿನಿಂದ ನಡೆಯುತ್ತಿವೆ. ಒಳ್ಳೆಯ ತಳಹದಿಯ ಮೇಲೆ ವ್ಯವಸ್ಥಿತವಾಗುತ್ತಿವೆ. ಕಳೆದ ಶತಮಾನದಿಂದ ಏಳ್ಗೆಗೊಳ್ಳುತ್ತಿರುವ ಈ ಚಟುವಟಿಕೆಯ ಇತಿವೃತ್ತ ಮತ್ತು ಅದರ ಇಂದಿನ ಸ್ಥಿತಿಗಳು ಕರ್ನಾಟಕದ ಆರ್ಥಿಕತೆಯ ಅಧ್ಯಯನದ ಒಂದು ಮುಖ್ಯಾಂಗವಾಗಿದೆ. ಇದಕ್ಕೆ ಸಂಬಂಧಿಸಿದ ವಿಷಯಗಳ ಸಮೀಕ್ಷೆಯನ್ನು ಈ ಲೇಖನದಲ್ಲಿ ಇತಿಹಾಸ, ಬೆಳೆವಣಿಗೆ, ಆರ್ಥಿಕ ಸ್ಥಿತಿಗತಿ, ರಚನೆ ಮತ್ತು ಆಡಳಿತ, ಕಾರ್ಮಿಕ ಕಲ್ಯಾಣ ಎಂಬ ವಿಭಾಗಗಳಲ್ಲಿ ವಿಂಗಡಿಸಿಕೊಡಲಾಗಿದೆ.

**ಇತಿಹಾಸ :** ಕರ್ನಾಟಕದಲ್ಲಿ 1920ರವರೆಗೂ ಯಾವ ಕಾರ್ಮಿಕ ಸಂಘಗಳೂ ಸ್ಥಾಪನೆಗೊಂಡಿರಲಿಲ್ಲ. 1884ರಲ್ಲಿ ಮೊತ್ತಮೊದಲು ಬೆಂಗಳೂರಿನಲ್ಲಿ ಒಂದು ದೊಡ್ಡ ಹತ್ತಿಬಟ್ಟೆ ಗಿರಣಿ ಸ್ಥಾಪಿತವಾದರೂ ಅಲ್ಲಿ ಕಾರ್ಮಿಕ ಸಂಘಟನೆಯ ಚಟುವಟಿಕೆಗಳೇ ಇರಲಿಲ್ಲ. 1920ರಲ್ಲಿ ಕಾರ್ಮಿಕರ ಒಂದು ದುರ್ಬಲ ಪ್ರತಿಕ್ರಿಯೆ ರೂಪುಗೊಂಡಿತು. ಇದೂ ಒಂದು ಸುಸಂಘಟಿತ ಚಟುವಟಿಕೆಯ ರೂಪವನ್ನೇನೂ ತಳೆಯಲಿಲ್ಲ. ಅದು ಉದ್ಯಮಿಗಳ ವಿರುದ್ಧ ಕೇವಲ ತಾತ್ಕಾಲಿಕ ಪ್ರತಿಭಟನೆಯಾಗಿತ್ತು. ಕರ್ನಾಟಕದ ವಿಳಂಬಿತ ಕೈಗಾರಿಕೀಕರಣ ಪ್ರಾರಂಭ ಕಾಲದಲ್ಲಿ ಕಾರ್ಮಿಕರ ಪೂರೈಕೆಯಲ್ಲಿ ವಿರಳತೆಯಿದ್ದುದರಿಂದ ಉದ್ಯಮಶೀಲರು ಅವರಿಗೆ ಬೇಕಾದ ಎಲ್ಲ ಅನುಕೂಲಗಳನ್ನೂ ಒದಗಿಸಲು ತಯಾರಿದ್ದರು. ಕಾರ್ಮಿಕರಲ್ಲಿ ಭಾಷೆ, ವ್ಯವಹಾರ, ನಡವಳಿಕೆ ಇತ್ಯಾದಿಗಳಲ್ಲಿ ವಿಭಿನ್ನತೆಯಿತ್ತು. ಕಾರ್ಮಿಕರ ಸಂಘಟನೆಗೆ ಅನುಕೂಲಕರವಾದ ಕಾನೂನುಗಳಿರಲಿಲ್ಲ, ಆದ್ದರಿಂದ ಸಂಘಟನೆ ಬೆಳೆಯಲಿಲ್ಲ. 1926ರಲ್ಲಿ ಕೇಂದ್ರದ ಕಾರ್ಮಿಕ ಸಂಘಗಳ ಕಾನೂನು ಜಾರಿಗೆ ಬಂತು. ಸುಮಾರು ಆ ಕಾಲದಲ್ಲಿ ಕರ್ನಾಟಕದಲ್ಲೂ ಕಾರ್ಮಿಕ ಸಂಘಟನೆಯ ಪ್ರಯತ್ನಗಳು ನಡೆದವು. 1926 ರಿಂದ 1942ರವರೆಗೆ ಅನೇಕ ಜವಳಿ ಗಿರಣಿಗಳಲ್ಲಿ ಕಾರ್ಮಿಕ ಸಂಘಗಳು ದಿವಂಗತ ಕೆ.ಟಿ.ಭಾಷ್ಯಂ ಅವರಂತಹ ರಾಜಕೀಯ ಮುಂದಾಳುಗಳ ಪ್ರಯತ್ನದ ಫಲವಾಗಿ ಅಸ್ತಿತ್ವಕ್ಕೆ ಬಂದುವು. ಆದರೆ ಈ ಸಂಘಗಳೆಲ್ಲವೂ 1924ರವರೆಗೆ ಕಾನೂನಿನ ಬೆಂಬಲವಿಲ್ಲದೆ ಸಮಾಜಸೇವಾ ಸಂಸ್ಥೆಗಳಂತೆ ಕೆಲಸ ಮಾಡುತ್ತಿದ್ದು ಸಹಕಾರ ಸಂಘಗಳ ಕಾನೂನಿನ ವ್ಯಾಪ್ತಿಯಲ್ಲಿ ನೋಂದಣೆಯಾದ ಸಂಸ್ಥೆಗಳಾಗಿದ್ದುವು. 1942ರಲ್ಲಿ ಮೈಸೂರು ರಾಜ್ಯದ ಕಾರ್ಮಿಕ ಸಂಘಗಳ ನಿಬಂಧನೆಗಳು ಎಂಬ ಹೆಸರಿನಲ್ಲಿ ರಾಜ್ಯಕ್ಕೆ ಅನ್ವಯಿಸಿದ 1926ರ ಕೇಂದ್ರದ ಕಾರ್ಮಿಕ ಸಂಘಗಳ ಕಾನೂನಿಂದ ಕರ್ನಾಟಕದಲ್ಲಿ ಕಾರ್ಮಿಕರ ಸಂಘಗಳ ಬೆಳೆವಣಿಗೆಗೆ ಅಂಕುರಾರ್ಪಣವಾಯಿತು. ಹಿಂದಿದ್ದ ಸಂಸ್ಥೆಗಳು ಕಾರ್ಮಿಕ ಸಂಘಗಳಾದುವು.

ಕರ್ನಾಟಕದ ಕಾರ್ಮಿಕ ಸಂಘಗಳು ಎರಡು ಮಹಾಯುದ್ಧಗಳ ಮಧ್ಯಂತರದಲ್ಲಿ ತಮ್ಮ ಸದಸ್ಯರುಗಳ ಆರ್ಥಿಕ ಸ್ಥಿತಿಗತಿಗಳನ್ನು ಉತ್ತಮಪಡಿಸುವುದಕ್ಕೆ ಹಾಗೂ ತಮಗೆ ಕಾನೂನಿನ ಮಾನ್ಯತೆಯನ್ನು ಪಡೆದುಕೊಳ್ಳುವುದಕ್ಕೆ ಚಳುವಳಿಗಳನ್ನು ನಡೆಸಿದವು. ಒಂದನೆಯ ಮಹಾಯುದ್ಧದ ಕಾಲದಲ್ಲಿ ಹಾಗೂ ಅದು ಮುಕ್ತಾಯವಾದ ತರುವಾಯ ರಾಜ್ಯದಲ್ಲಿನ ಕೈಗಾರಿಕಾ ಸಂಸ್ಥೆಗಳು ರಾಷ್ಟ್ರದ ಇತರ ಪ್ರಾಂತ್ಯಗಳ ಸಂಸ್ಥೆಗಳಂತೆ ಅಧಿಕ ಲಾಭ ಗಳಿಸಿದರೂ ಅವುಗಳ ಮಾಲೀಕರು ತಮ್ಮ ಕಾರ್ಮಿಕರಿಗೆ ಹೆಚ್ಚಿನ ವೇತನವನ್ನಾಗಲೀ ಬೋನಸ್ಸನ್ನಾಗಲೀ ಕೊಡಲು ನಿರಾಕರಿಸಿದುದು ಮತ್ತು ಇದೇ ಕಾಲದಲ್ಲಿ ಪದಾರ್ಥಗಳ ಬೆಲೆಗಳು ತೀವ್ರವಾಗಿ ಏರಿ ಕಾರ್ಮಿಕರ ಸ್ಥಿತಿಗತಿಗಳು ಹದಗೆಟ್ಟುದು ಮುಂತಾದ ಕಾರಣಗಳಿಂದ ಅಸಮಾಧಾನಗೊಂಡ ರಾಜ್ಯದ ಕಾರ್ಮಿಕರು 1920ರಲ್ಲಿ ಒಟ್ಟುಗೂಡಿ ಮುಷ್ಕರ ಪ್ರಾರಂಭಿಸಿದರು. ಬೆಂಗಳೂರಿನ ಬಿನ್ನಿಮಿಲ್ ಕೆಲಸಗಾರರಿಗೇ ಆಡಳಿತದವರು ಬೋನಸ್ಸನ್ನು ಕೊಡಲು ನಿರಾಕರಿಸಿದುದರಿಂದ ಭಾಷ್ಯಂರವರ ನೇತೃತ್ವದಲ್ಲಿ ಅವರು ಒಂದು ಮುಷ್ಕರ ಪ್ರಾರಂಭಿಸಿದರು. ಇದರಿಂದ ಬೆಂಗಳೂರಿನ ಇತರ ಮುಖ್ಯ ಜವಳಿ ಗಿರಣಿಗಳಲ್ಲೂ ಮಿನರ್ವ

ಮಿಲ್ ಮತ್ತು ಕೃಷ್ಣ ಮಿಲ್‌ಗಳಲ್ಲೂ ಕಾರ್ಮಿಕ ಸಂಘಗಳು ಪ್ರಾರಂಭವಾದುವು. ರಾಜ್ಯದ ಜವಳಿ ಗಿರಣಿ ಕಾರ್ಮಿಕರೆಲ್ಲರೂ ಒಟ್ಟುಗೂಡಿ ತಮ್ಮದೇ ಆದ ಒಂದು ಪ್ರಬಲ ಕಾರ್ಮಿಕ ಸಂಘವನ್ನು ಸ್ಥಾಪಿಸಬೇಕೆಂಬ ಅಭಿಪ್ರಾಯಕ್ಕೆ ಮನ್ನಣೆ ದೊರಕಿದಂತಾಯಿತು.

ಆದರೂ 1926 ರಿಂದ 1942ರವರೆಗಿನ ಕಾಲ ಕರ್ನಾಟಕದ ಕಾರ್ಮಿಕ ಸಂಘಟನೆಯ ದೃಷ್ಟಿಯಿಂದ ಬಲು ತ್ರಾಸದಾಯಕ ಕಾಲವಾಗಿತ್ತೆಂದೇ ಹೇಳಬೇಕು. ಈ ಕಾಲದಲ್ಲಿ ಕೈಗಾರಿಕಾ ಹಿಂಜರಿತ ಉಂಟಾಗಿ ಕೈಗಾರಿಕಾ ಸಂಸ್ಥೆಗಳಲ್ಲಿ ಕಾರ್ಮಿಕರ ಉಚ್ಚಾಟನೆ ವ್ಯಾಪಕವಾಗಿ ಪ್ರಾರಂಭವಾಯಿತು. ಇದರಿಂದ ಕೈಗಾರಿಕಾ ಮುಷ್ಕರಗಳು ಮತ್ತು ಬೀಗಮುದ್ರೆಗಳು ಪ್ರಾರಂಭವಾದುವಲ್ಲದೆ, ಕಾರ್ಮಿಕರಿಗೆ ಹಿಂಜರಿತದ ಕಾಲದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಬೇಡಿಕೆಯಿರಲಿಲ್ಲವಾಗಿ ಮುಷ್ಕರಗಳಲ್ಲಿ ಕಾರ್ಮಿಕರು ಅಪಜಯ ಗಳಿಸಬೇಕಾಯಿತು. ಈ ಕಾರಣದಿಂದ ಕೈಗಾರಿಕೆಯ ಮಟ್ಟದಲ್ಲಿ ಕಾರ್ಮಿಕರ ಪ್ರಬಲ ಸಂಘಟನೆಯ ಆವಶ್ಯಕತೆಯ ತೀವ್ರತೆಯ ಅರಿವಾಗಿ ಬೆಂಗಳೂರು ಜವಳಿ ಕಾರ್ಮಿಕರ ಸಂಘ 1929 ರಲ್ಲಿ ಕೆ.ಟಿ. ಭಾಷ್ಯಂ ಅವರ ನಾಯಕತ್ವದಲ್ಲಿ ಸ್ಥಾಪಿಸಲ್ಪಟ್ಟಿತು. ಕ್ರಮೇಣ ಈ ಸಂಘ ಪ್ರಬಲವಾಯಿತು. ಸರ್ಕಾರದ ಗಮನವನ್ನು ಸೆಳೆಯಿತು. ಈ ಸಂಘದ ಬೆಂಬಲದಿಂದ ಬಿನ್ನಿ ಮಿಲ್ ಮತ್ತು ಮಿನರ್ವ ಮಿಲ್ ಕಾರ್ಮಿಕರು ಬೇರೆ ಬೇರೆಯಾಗಿ ಮುಷ್ಕರಗಳನ್ನು ಹೂಡಿ ಜಯ ಗಳಿಸಿದರು. ಈ ಎರಡು ಮುಷ್ಕರಗಳಲ್ಲೂ ಮೊದಲು ಕಾರ್ಮಿಕರ ಮುಂದಾಳುಗಳನ್ನು ದಸ್ತಗಿರಿ ಮಾಡಿ ಮುಷ್ಕರಗಳನ್ನು ನಿಷ್ಕ್ರಿಯಗೊಳಿಸಲು ಸರ್ಕಾರ ಪ್ರಯತ್ನಿಸಿತಾದರೂ ಅಂತಿಮವಾಗಿ ಕಾರ್ಮಿಕರೇ ಜಯಗಳಿಸಿದರು. ಹೀಗೆ ಬೆಂಗಳೂರು ಜವಳಿ ಗಿರಣಿ ಕಾರ್ಮಿಕರ ಸಂಘದ ಚಟುವಟಿಕೆಗಳು ಗಮನಾರ್ಹವಾಗಿ ಬೆಳೆದುದರಿಂದ ಸರ್ಕಾರ ಇದರ ಪ್ರಭಾವವನ್ನು ಮೊಟಕುಗೊಳಿಸಲು ಏನಾದರೊಂದು ವ್ಯವಸ್ಥೆಯನ್ನು ಮಾಡಬೇಕೆಂಬ ಅಂಶವನ್ನು ಮನಗಂಡು 1940ರಲ್ಲಿ ಕಾರ್ಮಿಕರ ಸಂಘಗಳಿಗೆ ಮಾನ್ಯತೆಯನ್ನು ಕೊಡುವುದರ ಬಗ್ಗೆ ಹಾಗೂ ಕೈಗಾರಿಕಾ ಕ್ಷೇತ್ರದಲ್ಲಿ ಶಾಂತಿಯನ್ನು ಏರ್ಪಡಿಸುವುದರ ಬಗ್ಗೆ ಸೂಕ್ತ ಶಿಫಾರಸ್ಸುಗಳನ್ನು ಮಾಡಬೇಕೆಂದು ಕೋರಿ ಒಂದು ಸಮಿತಿಯನ್ನು ನೇಮಿಸಿತು. ಈ ಸಮಿತಿಯ ಸಲಹೆಗಳಿಗನುಗುಣವಾಗಿ 1942ರಲ್ಲಿ ಮೈಸೂರು ಕಾರ್ಮಿಕರ ಸಂಘ ನಿಬಂಧನೆಗಳು ಎಂಬ ಕಾನೂನನ್ನು ಜಾರಿಗೆ ತಂದಿತು. ಈ ಕಾನೂನಿನ ಪ್ರಕಾರ, ಕೈಗಾರಿಕಾ ಮಟ್ಟದಲ್ಲಿ ಕಾರ್ಮಿಕರ ಸಂಘಸ್ಥಾಪನೆ ಬಹಿಷ್ಕರಿಸಲ್ಪಟ್ಟು ಕೈಗಾರಿಕಾಘಟಕದ ಮಟ್ಟದಲ್ಲಿ ಕಾರ್ಮಿಕ ಸಂಘ ಸ್ಥಾಪಿಸಲ್ಪಡುವುದಕ್ಕೆ ಪ್ರೋತ್ಸಾಹವನ್ನು ನೀಡಿತು. ಹೀಗೆ ಘಟಕಗಳ ಮಟ್ಟದಲ್ಲಿ ಸ್ಥಾಪಿಸಲ್ಪಟ್ಟ ಕಾರ್ಮಿಕ ಸಂಘಗಳು ನೋಂದಾವಣೆ ಮಾಡಿಸಿಕೊಳ್ಳಬೇಕೆಂಬ ನಿಯಮವನ್ನು ಜಾರಿಗೆತರಲಾಯಿತು.

1942ರ ಮೈಸೂರು ಕಾರ್ಮಿಕರ ಸಂಘಗಳ ನಿಬಂಧನೆ ಜಾರಿಗೆ ಬಂದುದರಿಂದ ಕಾರ್ಮಿಕ ಸಂಘಗಳ ಮೇಲೆ ಅನೇಕ ಅನಪೇಕ್ಷಣೀಯ ಪರಿಣಾಮಗಳುಂಟಾದುವು. ಕೈಗಾರಿಕಾಮಟ್ಟದಲ್ಲಿ ಸ್ಥಾಪಿತವಾದ ಬೆಂಗಳೂರು ಜವಳಿ ಕೈಗಾರಿಕೆಯ ಕಾರ್ಮಿಕರ ಸಂಘ ಅವಸಾನಕ್ಕೀಡಾಯಿತು. ಈ ಕಾರಣದಿಂದಲೇ ಮುಷ್ಕರಗಳಲ್ಲಿ ಕಾರ್ಮಿಕರು ಅಪಜಯವನ್ನನುಭವಿಸ ಬೇಕಾಯಿತು. ಕಾರ್ಮಿಕರಲ್ಲಿ ಒಡಕುಂಟಾಯಿತು. ಅವರ ಸಂಘಟನಾಶಕ್ತಿ ದುರ್ಬಲಗೊಂಡಿತು. ಆದರೆ ಕೈಗಾರಿಕಾಘಟಕಗಳ ಮಟ್ಟದಲ್ಲಿ ಕಾರ್ಮಿಕರ ಸಂಘಗಳು ಹೆಚ್ಚು ಪ್ರಮಾಣದಲ್ಲಿ ಸ್ಥಾಪಿತವಾದುವು. ಉದಾಹರಣೆಗೆ ಕೋಲಾರದ ಚಿನ್ನದಗಣಿ ಹಾಗೂ ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಗಳಲ್ಲಿ ಕಾರ್ಮಿಕ ಸಂಘಗಳು ಸ್ಥಾಪಿತವಾದುವು. ಆದರೆ ರಾಜ್ಯದಲ್ಲಿ ಜವಳಿ ಅಂದು ಬಹುಮುಖ್ಯ ಕೈಗಾರಿಕೆಯಾಗಿದ್ದುದರಿಂದ ಆ ಕೈಗಾರಿಕೆಯ ಘಟಕಗಳಲ್ಲೂ ಕಾರ್ಮಿಕ ಸಂಘಗಳು ಹೆಚ್ಚಿನ ಪ್ರಮಾಣದಲ್ಲಿ ಅಸ್ತಿತ್ವಕ್ಕೆ ಬಂದುವು. ಎರಡನೆಯ ಮಹಾಯುದ್ಧದಿಂದೀಚೆಗೆ, ಅದರಲ್ಲೂ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಎಂಜಿನಿಯರಿಂಗ್ ಕೈಗಾರಿಕೆ ಅಭಿವೃದ್ಧಿಗೊಂಡು ಆ ಕೈಗಾರಿಕೆಯ ಘಟಕಗಳಲ್ಲಿ ಕಾರ್ಮಿಕ ಸಂಘಟನೆಯ ಚಟುವಟಿಕೆಗಳು ಪ್ರಾರಂಭವಾದುವು. ಉದಾಹರಣೆಗೆ ಮೈಕೋ, ರೆಮ್ಕೋ, ಸರ್ಕಾರಿ ವಿದ್ಯುತ್ ಕಾರ್ಖಾನೆ, ಕೇಂದ್ರ ಸರ್ಕಾರದ ವತಿಯಿಂದ ಸ್ಥಾಪಿಸಲ್ಪಟ್ಟ ಹಿಂದೂಸ್ತಾನ್ ಏರೋನಾಟಿಕ್ಸ್, ಹಿಂದೂಸ್ಥಾನ್ ಮೆಷಿನ್ ಟೂಲ್ಸ್ ಇತ್ಯಾದಿ ಕಾರ್ಖಾನೆಗಳಲ್ಲಿ ಕಾರ್ಮಿಕ ಸಂಘಗಳು ಸ್ಥಾಪಿತವಾದುವು.

ಹೀಗೆ ಘಟಕಗಳ ಮಟ್ಟದಲ್ಲಿ ಬೆಳೆದ ಕಾರ್ಮಿಕ ಸಂಘಗಳಲ್ಲಿ ಜವಳಿ ಕೈಗಾರಿಕೆಯಲ್ಲಿನ ಕಾರ್ಮಿಕ ಸಂಘಗಳಂಥ, ಮೊದಲು ಅಭಿವೃದ್ಧಿಗೆ ಬಂದ, ಕಾರ್ಮಿಕ ಚಟುವಟಿಕೆಗಳಿಗೆ ರಾಜಕೀಯ ಧುರೀಣರು ಮಾರ್ಗದರ್ಶನ ನೀಡುತ್ತಿದ್ದರು. ಎಂಜಿನಿಯರಿಂಗ್ ಕೈಗಾರಿಕೆಯ ಘಟಕಗಳ ಕಾರ್ಮಿಕ ಸಂಘಗಳಿಗೆ ಪ್ರಾರಂಭದಲ್ಲಿ ಕಾರ್ಮಿಕರೇ ಮುಂದಾಳತ್ವ ವಹಿಸಿದ್ದರು. ಆದರೆ ಈ ಮುಂದಾಳುಗಳು ಕೊನೆಗೆ ಉದ್ಯಮಿಗಳ ವ್ಯಗ್ರದೃಷ್ಟಿಗೆ ಬಿದ್ದು ತೊಂದರೆಗೀಡಾದ್ದರಿಂದ ಮುಂದೆ ಈ ಘಟಕಗಳಲ್ಲೂ ಹೊರಗಿನವರ ನಾಯಕತ್ವ ಬೇರೂರಿತು. ಇದರಿಂದ ಕಾರ್ಮಿಕ ಸಂಘಗಳಲ್ಲಿಯೇ ತಾತ್ವಿಕ ಭೇದಭಾವ, ನಿರ್ದಿಷ್ಟ ರಾಜಕೀಯ ಪಕ್ಷಗಳತ್ತ ಒಲವು ಉಂಟಾಗಿ ಅವುಗಳಲ್ಲಿ ಪರಸ್ಪರ ವೈಮನಸ್ಸಿಗೆ ಕಾರಣವಾಯಿತು. ಇದರಿಂದ ಸಂಘಟನೆಗೆ ತೊಡಕುಂಟಾಯಿತು.

ರಾಜ್ಯದಲ್ಲಿ ಕಾರ್ಮಿಕ ಸಂಘಗಳು ಮತ್ತು ಅವುಗಳ ಸದಸ್ಯರುಗಳ ಸಂಖ್ಯೆ ಉದ್ದಕ್ಕೂ ಅಧಿಕಗೊಳ್ಳುತ್ತಿದೆ. ಇದರಿಂದ ಕರ್ನಾಟಕದ ಕಾರ್ಮಿಕ ಸಂಘಟನೆ ಸಾಂಖ್ಯಿಕವಾಗಿ ಪ್ರಗತಿಯನ್ನು ಹೊಂದಿದೆಯೆಂದು ಹೇಳಬಹುದು. ಸಾಂಖ್ಯಿಕ ಪ್ರಗತಿಯೊಂದೇ ಕಾರ್ಮಿಕ ಸಂಘಟನೆಯ ಬಲದ ಸೂಚಕವೇನಲ್ಲ. ಕಾರ್ಮಿಕ ಉದ್ಯೋಗಿಗಳ ಸಂಖ್ಯೆಗೂ ಮತ್ತು ಕಾರ್ಮಿಕ ಸಂಘಗಳ ಸದಸ್ಯರ ಸಂಖ್ಯೆಗೂ ಇರುವ ಸಂಬಂಧ ಕುರಿತ ಅಂಕಿಗಳ ಅಭಾವ ಇದೆ. ವರದಿ ನೀಡುತ್ತಿರುವ ಕಾರ್ಮಿಕ ಸಂಘಗಳ ಸಂಖ್ಯೆ ಮತ್ತು ಅವುಗಳ ಸದಸ್ಯತ್ವ ಸುಮಾರು 1970ರವರೆಗೆ ಹೆಚ್ಚಾಗುತ್ತಿದ್ದರೂ ಸರಾಸರಿ ಸದಸ್ಯತ್ವ ಕಡಿಮೆಯಾಗುತ್ತಿತ್ತು. ಈಚೆಗೆ ಪರಿಸ್ಥಿತಿ ಸ್ವಲ್ಪ ಸುಧಾರಿಸಿದೆ.

ಭಾರತದ ಇತರ ರಾಜ್ಯಗಳಲ್ಲಿರುವಂತೆ ಕರ್ನಾಟಕ ರಾಜ್ಯದಲ್ಲಿಯೂ ಕಾರ್ಮಿಕ ಸಂಘಟನೆಯಲ್ಲಿ ಅನೇಕ ಸಮಸ್ಯೆಗಳು ಕಾಣುತ್ತವೆ. ಮುಖ್ಯವಾಗಿ ಕಾರ್ಮಿಕ ಸಂಘಗಳ ಸಂಖ್ಯಾಬಾಹುಳ್ಯ, ಅವುಗಳಲ್ಲಿನ ಪರಸ್ಪರ ದ್ವೇಷ ಮತ್ತು ಸ್ಪರ್ಧೆ, ಹೊರಗಿನವರ ನಾಯಕತ್ವ, ಕಾರ್ಮಿಕ ಸಂಘಗಳಿಗೆ ರಾಜಕೀಯದಲ್ಲಿನ ಆಸಕ್ತಿ, ಇದರಿಂದ ಉಂಟಾದ ರಾಜಕೀಯ ಪಕ್ಷಗಳೊಡನೆ ಕಾರ್ಮಿಕ ತಾತ್ವಿಕ ಸಂಬಂಧ, ದುರ್ಬಲ ಆರ್ಥಿಕ ಸ್ಥಿತಿ ಮುಂತಾದ ಸಮಸ್ಯೆಗಳು ರಾಜ್ಯದಲ್ಲಿನ ಕಾರ್ಮಿಕ ಸಂಘಗಳನ್ನು ದುರ್ಬಲಗೊಳಿಸಿವೆ.

ರಾಜ್ಯದಲ್ಲಿ ಕಾರ್ಮಿಕ ಸಂಘಗಳು ಸಾಮಾನ್ಯವಾಗಿ ಕೈಗಾರಿಕಾವಾರು ಸಂಘಗಳಾಗಿರುತ್ತವೆ. ಆಯಾ ಉದ್ಯಮಘಟಕದಲ್ಲಿ ಕೆಲಸ ಮಾಡುವ ಎಲ್ಲ ವಿಧವಾದ ಕಾರ್ಮಿಕರೂ ಕುಶಲ ಕೆಲಸಗಾರರೂ ಅರೆಕುಶಲರೂ ಹಾಗೂ ಕುಶಲರಲ್ಲದ ಸಾಮಾನ್ಯ ಕೆಲಸಗಾರರೂ - ಈ ಸಂಘಗಳ ಸದಸ್ಯರಾಗಿರುತ್ತಾರೆ. ಉದಾಹರಣೆಗಾಗಿ ಬಿನ್ನಿ ಮಿಲ್ ಕಾರ್ಮಿಕರ ಸಂಘ, ಮೈಕೋ ಕೆಲಸಗಾರರ ಸಂಘ ಇಂಥ ಕಾರ್ಮಿಕ ಸಂಘಗಳ ಜೊತೆಗೆ ವೃತ್ತಿ ಸಂಘಗಳೂ ಇವೆ. ಉದಾ: ಕರಣಿಕರ ಸಂಘ, ಐ.ಟಿ.ಐ. ಡ್ರೈವರುಗಳ ಸಂಘ ಇತ್ಯಾದಿ. ಇವು ಒಂದೊಂದು ವೃತ್ತಿಗೆ ಸೇರಿದ ಕಾರ್ಮಿಕ ಸಂಘಗಳಾಗಿರುತ್ತವೆ. ಇವು ರಾಜ್ಯದಲ್ಲಿ ವಿರಳ.

**ರಚನೆ ಮತ್ತು ಆಡಳಿತ :** ಕಾರ್ಮಿಕ ಸಂಘಗಳ ರಚನೆ ಭಾರತದ ಇತರ ರಾಜ್ಯಗಳಲ್ಲಿರುವಂತೆ ಒಂದು ಪಿರಮಿಡ್ಡಿನ ಆಕಾರ ಹೊಂದಿದೆ. ಉದ್ಯಮ ಘಟಕಗಳಲ್ಲಿನ ಕಾರ್ಮಿಕ ಸಂಘಗಳು ಕೆಳ ಅಂತಸ್ತಿನ ಸಂಘಗಳು. ಅವುಗಳು ಪ್ರಾಥಮಿಕ ಸಂಘಗಳು. ಇದರ ಮೇಲಿನ ಅಂತಸ್ತಿನಲ್ಲಿ ರಾಜ್ಯಮಟ್ಟದ ಕಾರ್ಮಿಕ ಸಂಘಗಳಿವೆ. ಈ ಸಂಘಗಳಿಗೂ ಸಂಬಂಧ ಕಲ್ಪಿಸುತ್ತವೆ. ಇವಲ್ಲದೆ ಕೆಲವು ಮಧ್ಯಮ ಮಟ್ಟದ ಜಿಲ್ಲಾವಾರು ಕಾರ್ಮಿಕ ಸಂಘಗಳೂ ಇವೆ (ಉದಾಹರಣೆಗೆ ಬೆಂಗಳೂರು ಜಿಲ್ಲೆಯ ಆಟೋಮೊಬೈಲ್ ಕೆಲಸಗಾರರ ಸಂಘ). ಇವು ಸ್ವತಂತ್ರ ಸಂಸ್ಥೆಗಳಾಗಿವೆ. ಇವು ಯಾವ ಸಂಯುಕ್ತ ರಚನೆಯ ಭಾಗವೂ ಆಗಿರುವುದಿಲ್ಲ. ಯಾವ ಕೇಂದ್ರ ಸಂಯುಕ್ತ ಸಂಘಗಳ ಜೊತೆಯಲ್ಲಿಯೂ ಸಂಬಂಧವಿಟ್ಟು ಕೊಂಡಿರುವುದಿಲ್ಲ. ಇನ್ನೂ ಕೆಲವು ಸ್ವತಂತ್ರ ಸಂಘಗಳಿವೆ. ಅವು ಯಾವ ಕೇಂದ್ರ ಅಥವಾ ರಾಷ್ಟ್ರೀಯ ಸಂಯುಕ್ತ ಕಾರ್ಮಿಕ ಸಂಘಗಳಿಗೂ ಸೇರಿರುವುದಿಲ್ಲ.

ಕರ್ನಾಟಕದಲ್ಲಿ ಅನೇಕ ಕಾರ್ಮಿಕ ಸಂಘಗಳು ವಿವಿಧ ರಾಷ್ಟ್ರೀಯ ಸಂಯುಕ್ತ ಸಂಘಗಳ ಜೊತೆ ಸಂಬಂಧ ಇಟ್ಟುಕೊಂಡಿವೆ. ರಾಜ್ಯದ ಕಾರ್ಮಿಕ ಸಂಘಗಳ ಸಂಖ್ಯೆಯಲ್ಲಿ ಹೆಚ್ಚು ಭಾಗ ಯಾವ ಕೇಂದ್ರ

ಸಂಯುಕ್ತ ಸಂಘಕ್ಕೂ ಸೇರದೆ ಅಥವಾ ಸಂಬಂಧವಿಟ್ಟುಕೊಳ್ಳದೆ ಸ್ವತಂತ್ರ ಸಂಸ್ಥೆಗಳಾಗಿ ಉಳಿದಿವೆ. ಆದರೆ ಕೇಂದ್ರ ಸಂಯುಕ್ತ ಸಂಘಗಳ ಜೊತೆ ಸಂಬಂಧವಿಟ್ಟುಕೊಂಡಿರುವ ಸಂಘಗಳ ಸದಸ್ಯರೇ ಅಧಿಕವಾಗಿದ್ದಾರೆ.

ಭಾರತ ರಾಷ್ಟ್ರೀಯ ಕಾರ್ಮಿಕ ಸಂಘಗಳ ಒಕ್ಕೂಟ ಕಾಂಗ್ರೆಸ್ ಪಕ್ಷದ ಬೆಂಬಲವನ್ನು ಹೊಂದಿದ್ದರೆ ಅಖಿಲ ಭಾರತ ಕಾರ್ಮಿಕರ ಸಂಘಗಳು ಕಾಂಗ್ರೆಸ್ (ಐಟಿಯುಸಿ) ಕಮ್ಯೂನಿಸ್ಟ್ ಪಕ್ಷದ ಒಲವನ್ನು ಹೊಂದಿದೆ. ಅದೇ ರೀತಿ ಹಿಂದ್ ಮಜ್‌ದೂರ್ ಸಭಾ ಮತ್ತು ಸಂಯುಕ್ತ ಕಾರ್ಮಿಕ ಸಂಘಗಳ ಕಾಂಗ್ರೆಸ್ (ಯುನೈಟೆಡ್ ಟ್ರೇಡ್ ಯೂನಿಯನ್ ಕಾಂಗ್ರೆಸ್) ಕ್ರಮವಾಗಿ ಸಮಾಜವಾದಿ ಪಕ್ಷ ಮತ್ತು ವಾಮಪಂಥೀಯರ ಪಕ್ಷದ ಬೆಂಬಲವನ್ನು ಪಡೆದಿವೆ. ಇತ್ತೀಚೆಗೆ ಮಾರ್ಕ್ಸಿಸ್ಟ್ ಪಕ್ಷದ ಬೆಂಬಲವನ್ನು ಪಡೆದಿರುವ ಸೆಂಟರ್ ಆಫ್ ಇಂಡಿಯನ್ ಟ್ರೇಡ್ ಯೂನಿಯನ್ಸ್ ಎಂಬ ಕೇಂದ್ರ ಸಂಯುಕ್ತ ಸಂಘವೂ ಬೆಳೆಯುತ್ತಿದೆ. 1980ರಲ್ಲಿ 1636 ಕಾರ್ಮಿಕ ಸಂಘಗಳಿದ್ದರೆ, 1999ರಲ್ಲಿ ಇವುಗಳ ಸಂಖ್ಯೆ 3905. ಇದು ಬೆಳೆಯುತ್ತಿರುವ ಕಾರ್ಮಿಕ ಸಂಘಟನೆಯ ಜಾಲಕ್ಕೂ ಮತ್ತು ಉದ್ಯೋಗಗಳ ಹೆಚ್ಚಳಕ್ಕೂ ಸಾಕ್ಷಿ.

ಕರ್ನಾಟಕ ರಾಜ್ಯದ ಕಾರ್ಮಿಕ ಸಂಘಗಳು ಕಾರ್ಮಿಕ ಸಂಘದ ಎಲ್ಲ ಸಾಮಾನ್ಯ ಕಾರ್ಯಗಳನ್ನೂ ಪರಿಣಾಮಕಾರಿಯಾಗಿ ನಿರ್ವಹಿಸುತ್ತಿವೆ. ಉದಾಹರಣೆಗೆ ಅವು ತಮ್ಮ ತಮ್ಮ ಸದಸ್ಯರುಗಳ ಹಿತಸಾಧನೆಗೋಸ್ಕರ ಮಾಲೀಕರೊಡನೆ ಕಾರ್ಮಿಕರ ವೇತನ, ಬೋನಸ್ಸು, ಉದ್ಯೋಗ ಮುಂತಾದವುಗಳನ್ನು ಉತ್ತಮಪಡಿಸಲು ಹೋರಾಟ ನಡೆಸುತ್ತವೆ. ಅನಿವಾರ್ಯವಾದರೆ ಮುಷ್ಕರಗಳನ್ನೂ ಘೇರಾವೊಗಳನ್ನೂ ಹೂಡಲು ಹಿಂಜರಿದಿಲ್ಲ. ಸಾರ್ವಜನಿಕ ಹಾಗೂ ಖಾಸಗಿ ಕೈಗಾರಿಕಾ ಸಂಸ್ಥೆಗಳಲ್ಲಿ ಕಾರ್ಮಿಕ ಸಂಘಗಳು ತಮ್ಮ ಮಾಲೀಕರನ್ನು ಒಳ್ಳೆಯ ಕೈಗಾರಿಕಾ ಸಂಬಂಧವೇರ್ಪಡಿಸುವ ದೃಷ್ಟಿಯಿಂದ ತಮ್ಮೊಡನೆ ಒಂದು ನಿರ್ದಿಷ್ಟ ಕಾಲಾವಧಿಯವರೆಗೆ ದ್ವಿಪಕ್ಷೀಯ ಒಪ್ಪಂದಗಳನ್ನು ಮಾಡಿಕೊಳ್ಳುವಂತೆ ಒತ್ತಾಯಪಡಿಸಿ ಜಯಗಳಿಸಿವೆ. ಇದರಿಂದ ಉದ್ಯಮ ಘಟಕಗಳಲ್ಲಿ ಸಾಧ್ಯವಾದಮಟ್ಟಿಗೂ ಒಳ್ಳೆಯ ಕೈಗಾರಿಕಾ ಬಾಂಧವ್ಯವೇರ್ಪಡುವುದು ಸಾಧ್ಯವಾಗಿದೆ. ಅಷ್ಟೇ ಅಲ್ಲದೆ ಒಂದೆರಡು ಕಾರ್ಖಾನೆಗಳಲ್ಲಿ ಕಾರ್ಮಿಕ ಸಂಘಗಳು ಮಾನ್ಯತೆಯನ್ನು ಸಂಪಾದಿಸಲು ಅದುವರೆವಿಗೂ ಅನುಸರಿಸುತ್ತಿದ್ದ ಸದಸ್ಯರ ಸಂಖ್ಯಾಬಲವನ್ನು ಅವಲೋಕಿಸುವ ಪದ್ಧತಿಯನ್ನು ಕೈಬಿಟ್ಟು ಗುಪ್ತ ಮತದಾನ ಪದ್ಧತಿಯನ್ನು ಅನುಸರಿಸುವಂತೆ ಮಾಲೀಕರನ್ನು ಒತ್ತಾಯಪಡಿಸಿ ಜಯಗಳಿಸಿರುವುದು ಕರ್ನಾಟಕ ರಾಜ್ಯದ ಕಾರ್ಮಿಕರ ಬಲಯುತ ಸಂಘಟನೆಯ ಪ್ರತೀಕವಾಗಿದೆ. ಕರ್ನಾಟಕದ ಕೆಲವು ಭಾರಿ ಉದ್ಯಮಸಂಸ್ಥೆಗಳ ಆಡಳಿತದಲ್ಲಿ ಕಾರ್ಮಿಕರು ಭಾಗವಹಿಸುವ ಯೋಜನೆಯ ಅಂಗವಾಗಿ ಜಂಟಿ ಆಡಳಿತ ಸಮಿತಿಯನ್ನು ಸ್ಥಾಪಿಸುವ ಪ್ರಯತ್ನಗಳೂ ನಡೆದಿವೆ. ಕೊನೆಯದಾಗಿ ಸರ್ಕಾರ ಮತ್ತು ಉದ್ಯಮಿಗಳ ಜೊತೆಗೆ ಕಾರ್ಮಿಕ ಸಂಘಗಳೂ ರಾಜ್ಯದಲ್ಲಿ ಕಾರ್ಮಿಕರ ಕಲ್ಯಾಣಾಭಿವೃದ್ಧಿ ಸೌಲಭ್ಯಗಳನ್ನು ಒದಗಿಸಲು ನೆರವಾಗುತ್ತಿವೆ.

ಕರ್ನಾಟಕ ಕಾರ್ಮಿಕ ಸಂಘಗಳು ಭಾರತದ ಇತರ ರಾಜ್ಯಗಳಲ್ಲಿರುವ ಕಾರ್ಮಿಕ ಸಂಘಗಳಷ್ಟೇ ಸಬಲವಾಗಿವೆಯೆಂದು ಹೇಳಬಹುದು. ಕರ್ನಾಟಕದಲ್ಲಿ ಭಾರತದ ಇತರ ಭಾಗಗಳಲ್ಲಿರುವಂತೆ ಕಾರ್ಮಿಕ ಸಂಘಗಳು ರಾಜಕೀಯ ಪಕ್ಷಗಳ ಜೊತೆ ಸಂಬಂಧವನ್ನಿಟ್ಟುಕೊಂಡಿವೆ. ಈ ರಾಜಕೀಯ ಪಕ್ಷಗಳ ಧುರೀಣರು ಕಾರ್ಮಿಕ ಸಂಘಗಳಿಗೆ ನಾಯಕತ್ವವನ್ನು ಒದಗಿಸಿರುತ್ತಾರೆ. ಇದರಿಂದ ಕಾರ್ಮಿಕ ಸಂಘಗಳು ರಾಜಕೀಯ ಪಕ್ಷಗಳ ಸಂಪೂರ್ಣ ಬೆಂಬಲವನ್ನು ಪಡೆದಂತಾಗಿ ಬಲಯುತ ಹಾಗೂ ಒತ್ತಡ ಹೇರಬಲ್ಲ ಶಕ್ತಿ ಸಮುದಾಯಗಳಾಗಿವೆ.

ಎರಡನೆಯದಾಗಿ ರಾಜ್ಯದಲ್ಲಿ ಕಾರ್ಮಿಕ ಸಂಘಗಳು ಕೆಲವೇ ಅನುಕೂಲಕರವಾದ ಬಿಂದುಗಳಲ್ಲಿ ಕೇಂದ್ರೀಕೃತವಾಗಿವೆ. ಉದಾಹರಣೆಗಾಗಿ, ಕಾರ್ಮಿಕ ಸಂಘಗಳು ಕೆಲವು ಅತಿಮುಖ್ಯವಾದ ಸಂಸ್ಥೆಗಳಲ್ಲಿ ಅಂದರೆ ಸರ್ವಜನೋಪಯೋಗಿ ಸಂಸ್ಥೆಗಳು, ದೇಶ ಸಂರಕ್ಷಣೆಗೆ ಸಂಬಂಧಿಸಿದ ಕೈಗಾರಿಕಾ ಸಂಸ್ಥೆಗಳು, ಆರ್ಥಿಕ ಬೆಳವಣಿಗೆಗೆ ಬೇಕಾಗುವ ಮೂಲ ವಸ್ತುಗಳನ್ನು ಉತ್ಪಾದಿಸುವ ಕೈಗಾರಿಕಾ ಘಟಕಗಳು ಇತ್ಯಾದಿಗಳಲ್ಲಿ ಕೇಂದ್ರೀಕೃತವಾಗಿವೆ. ಇಂತಹ ಪರಿಸ್ಥಿತಿಯಲ್ಲಿ ಕಾರ್ಮಿಕರು ಮುಷ್ಕರಗಳನ್ನೇನಾದರೂ ಹೂಡಿ ಉತ್ಪಾದನೆ ತಡೆಗಟ್ಟಲು ಪ್ರಯತ್ನಿಸಿದರೆ ರಾಷ್ಟ್ರದ ಹಾಗೂ ರಾಜ್ಯದ ಆರ್ಥಿಕ ಬೆಳವಣಿಗೆಗೆ ಮತ್ತು ಸಾರ್ವಜನಿಕರ ಸೇವಾ ಸೌಲಭ್ಯಗಳಿಗೆ ಧಕ್ಕೆ ಒದಗುವುದರಿಂದ ಸರ್ಕಾರವೇ ಆಗಲಿ ಮಾಲೀಕರೇ ಆಗಲಿ ಈ ಕಾರ್ಮಿಕ ಸಂಘಗಳನ್ನು ಕಡೆಗಣಿಸುವಂತಿಲ್ಲದಂತಾಗಿದೆ. 1991ರಿಂದ ಈಚೆಗೆ ದೇಶದಲ್ಲಿ ತೀವ್ರವಾಗಿ ಜಾರಿಗೆ ಬಂದ ಆರ್ಥಿಕ ಉದಾರೀಕರಣ ಹಾಗೂ ಸರ್ಕಾರಿ ವಲಯದ ಉದ್ಯಮಗಳ ಖಾಸಗೀಕರಣದ ನೀತಿಯಿಂದಾಗಿ ಕಾರ್ಮಿಕರ ಕಾನೂನುಗಳನ್ನು ಪುನರ್ವಿಮರ್ಶಿಸಲಾಗುತ್ತಿವೆ. ಈ ಪ್ರವೃತ್ತಿಯ ವಿರುದ್ಧ ಕಾರ್ಮಿಕರು ಹೋರಾಟದಲ್ಲಿ ತೊಡಗಿದ್ದಾರೆ.

**ಕಾರ್ಮಿಕ ಕಲ್ಯಾಣ :** ಕಾರ್ಮಿಕ ಕಲ್ಯಾಣ ವಿಶಾಲವಾದ ಅರ್ಥದಲ್ಲಿ ಕಾರ್ಮಿಕರ ಕಲ್ಯಾಣಾಭಿವೃದ್ಧಿಗೋಸ್ಕರ ಸರ್ಕಾರ, ಉದ್ಯಮಶೀಲರು ಮತ್ತು ಕಾರ್ಮಿಕ ಸಂಘಗಳು ಹಾಗೂ ಹಲವು ದಾನಶೀಲ ಸಂಸ್ಥೆಗಳು ಕೈಗೊಳ್ಳುವ ಕಾನೂನುಬದ್ಧವಾದ ಹಾಗೂ ಸ್ವಯಂಪ್ರೇರಿತ ಕಾರ್ಯಕ್ರಮಗಳನ್ನೊಳಗೊಂಡಿರುತ್ತವೆ. ಈ ಕಾರ್ಯಕ್ರಮಗಳು ಕಾರ್ಮಿಕರ ಕಾರ್ಯದಕ್ಷತೆಯನ್ನು ಮತ್ತು ಅವರ ಜೀವನದ ಸ್ಥಿತಿಗಳನ್ನು ಉತ್ತಮಗೊಳಿಸುವ ಕ್ರಮಗಳಷ್ಟೇ ಆಗಿರದೆ ಸಾಮಾಜಿಕ ಭದ್ರತಾಕ್ರಮಗಳಾಗಿವೆ. ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಸೌಕರ್ಯಗಳನ್ನು ಮತ್ತು ಕಾರ್ಮಿಕರಿಗೆ ವಸತಿಸೌಕರ್ಯಗಳನ್ನು ಒದಗಿಸಿಕೊಡುವ ಕಾರ್ಯಕ್ರಮಗಳೂ ಆಗಿರುತ್ತವೆ. ಈ ಕಾರ್ಯಕ್ರಮಗಳೆಲ್ಲವನ್ನೂ ಅಂತಾರಾಷ್ಟ್ರೀಯ ಕಾರ್ಮಿಕ ಸಂಘವೂ ಅನುಮೋದಿಸಿ ವಿಶ್ವದ ಪ್ರತಿಯೊಂದು ಕೈಗಾರಿಕಾ ರಾಷ್ಟ್ರದಲ್ಲೂ ಅವುಗಳನ್ನು ಜಾರಿಗೆ ತರುವಂತೆ ಪ್ರೋತ್ಸಾಹಿಸುತ್ತಿದೆ.

ಬಡತನ ಅಧಿಕವಾಗಿರುವ ಮತ್ತು ಕಲ್ಯಾಣ ರಾಜ್ಯ ಸ್ಥಾಪನೆಯನ್ನು ಗುರಿಯಾಗಿಟ್ಟುಕೊಂಡಿರುವ ಭಾರತದಲ್ಲೂ ಈ ಎಲ್ಲ ಕಾರ್ಮಿಕ ಕಲ್ಯಾಣ ಕಾರ್ಯಕ್ರಮಗಳು ಜಾರಿಗೆ ಬಂದಿವೆ.

ಕರ್ನಾಟಕದಲ್ಲಿ, ಎರಡನೆಯ ಮಹಾಯುದ್ಧದ ಪೂರ್ವದಲ್ಲಿಯೇ ಕೆಲವು ಪ್ರಗತಿಪರ ಹಾಗೂ ವಿವೇಕಿ ಉದ್ದಿಮೆದಾರರು ಸ್ವಪ್ರೇರಣೆಯಿಂದಲೆ ತಮ್ಮ ಕಾರ್ಖಾನೆಗಳಲ್ಲಿ ಕೆಲವು ಕಾರ್ಮಿಕ ಕಲ್ಯಾಣ ಸೌಲಭ್ಯಗಳನ್ನು ಒದಗಿಸಿದ್ದರು. ಆದರೆ ಈ ಸೌಲಭ್ಯಗಳು ಸಾಕಷ್ಟು ವ್ಯಾಪಕವಾಗಿಲ್ಲದಿದ್ದುದರಿಂದಲೂ ಕಾರ್ಮಿಕರ ಸಂಘಗಳು ಇವುಗಳನ್ನು ಕೈಗೊಳ್ಳಲು ಸಾಮರ್ಥ್ಯ ಹೊಂದಿಲ್ಲದಿದ್ದುದರಿಂದಲೂ ಸರ್ಕಾರ ಮಧ್ಯೆ ಪ್ರವೇಶಿಸ ಬೇಕಾಯಿತು. ಅದರಂತೆ ಕೇಂದ್ರದ 1948ರ ಕಾರ್ಖಾನೆಯ ಕಾನೂನಿನ ಅನ್ವಯ ರಾಜ್ಯದಲ್ಲಿ 1950ರಿಂದ ಪ್ರತಿಯೊಬ್ಬ ಉದ್ದಿಮೆದಾರನೂ ಅನೇಕ ಸೌಲಭ್ಯಗಳನ್ನು ತನ್ನ ಕಾರ್ಖಾನೆಯಲ್ಲಿ ನೇಮಿತರಾಗಿರುವ ಕಾರ್ಮಿಕರಿಗೆ ಕಡ್ಡಾಯವಾಗಿ ಒದಗಿಸಬೇಕಾಯಿತು. ಈ ಸೌಲಭ್ಯಗಳು ಯಾವುವೆಂದರೆ ಕುಡಿಯಲು ತಂಪಾದ ಹಾಗೂ ಶುದ್ಧವಾದ ನೀರು, ಶೌಚಗೃಹ, 250ಕ್ಕೂ ಹೆಚ್ಚು ಕಾರ್ಮಿಕರಿರುವ ಕಾರ್ಖಾನೆಗಳಲ್ಲಿ ಪ್ರತಿಯೊಂದರಲ್ಲೂ ಉಪಾಹಾರಮಂದಿರ, 50ಕ್ಕೂ ಹೆಚ್ಚು ಮಹಿಳಾ ಕಾರ್ಮಿಕರಿರುವ ಪ್ರತಿಯೊಂದು ಕಾರ್ಖಾನೆಯಲ್ಲಿಯೂ ಶಿಶುವಿಹಾರ, ವಿಶ್ರಾಂತಿಗೃಹ, 150ಕ್ಕೂ ಹೆಚ್ಚು ಕಾರ್ಮಿಕರಿರುವ ಪ್ರತಿ ಕಾರ್ಖಾನೆಯಲ್ಲಿಯೂ ಉಪಾಹಾರ ಕೋಣೆಗಳು ಇತ್ಯಾದಿ. ಕಾರ್ಮಿಕರ ಸುರಕ್ಷತೆ ಮತ್ತು ಆರೋಗ್ಯದ ದೃಷ್ಟಿಯಿಂದ ಪ್ರತಿಯೊಂದು ದೊಡ್ಡ ಕಾರ್ಖಾನೆಗಳಲ್ಲಿಯೂ ಆವಿ, ಹೊಗೆ ಮತ್ತು ದೂಳು ಹೊರಗೆ ಹೋಗುವಂತೆ ಸರಿಯಾದ ವ್ಯವಸ್ಥೆ, ಆಕಸ್ಮಿಕಗಳನ್ನು ತಡೆಗಟ್ಟುವ ದೃಷ್ಟಿಯಿಂದ ಯಂತ್ರಗಳಿಗೆ ಬೇಲಿ ಅಥವಾ ಕಟಕಟೆಯನ್ನು ಕಟ್ಟಿಸುವುದು, ಕಾರ್ಮಿಕರುಗಳಿಗೆ ಸುರಕ್ಷತೆಯ ವಸ್ತ್ರಗಳು, ಪಾದರಕ್ಷೆಗಳು ಮತ್ತು ಕನ್ನಡಕಗಳು ಮೊದಲಾದುವುಗಳನ್ನು ಒದಗಿಸುವುದು ಇತ್ಯಾದಿ ಸೌಲಭ್ಯಗಳೆಲ್ಲವೂ ಕಡ್ಡಾಯವಾಗಿ ಜಾರಿಗೆ ಬಂದುವು. ಕಾರ್ಖಾನೆಗಳ ಕಾಯಿದೆಗೆ ಅನುಗುಣವಾದ ನಿಯಮಗಳನ್ನು ಗಣಿ, ಪ್ಲಾಂಟೇಷನ್ ಮತ್ತು ಬಂದರುಗಳ ಕಾರ್ಮಿಕರುಗಳ ಕಲ್ಯಾಣದ ದೃಷ್ಟಿಯಿಂದ ರಾಜ್ಯದಲ್ಲಿ ಜಾರಿಗೆ ತರಲಾಯಿತು.

ಕಾರ್ಮಿಕರ ಅನಿಶ್ಚಿತತೆಯ ಪರಿಸ್ಥಿತಿಗಳನ್ನು ಎದುರಿಸಲು ನೆರವಾಗುವ ಸೌಲಭ್ಯಗಳನ್ನೊದಗಿಸುವ ಎರಡನೆಯ ಪಂಚವಾರ್ಷಿಕ ಯೋಜನೆಯ ಕಾಲದಲ್ಲಿ ರಾಜ್ಯ ಸರ್ಕಾರ ನೌಕರರ ರಾಜ್ಯ ವಿಮಾಯೋಜನೆಯನ್ನು ಜಾರಿಗೆ ತಂದಿತು. 1958ರಲ್ಲಿ ಬೆಂಗಳೂರಿನಲ್ಲೂ 1960ರಲ್ಲಿ ಹುಬ್ಬಳ್ಳಿಯಲ್ಲೂ

1961ರಲ್ಲಿ ದಾಂಡೇಲಿಯಲ್ಲೂ ಈ ಯೋಜನೆಯನ್ನು ದೊಡ್ಡ ಪ್ರಮಾಣದಲ್ಲಿ ಕಾರ್ಮಿಕರಿಗೆ ಅನ್ವಯಿಸಲಾಯಿತು. ಉದ್ಯೋಗದಾತ, ಸರ್ಕಾರ ಮತ್ತುಕಾರ್ಮಿಕರಿಂದ ಪಡೆದ ಅಂಶದಾನಗಳಿಂದ ರಚಿಸಿದ ನಿಧಿಯಿಂದ ಈ ಸೌಲಭ್ಯಗಳನ್ನು ಒದಗಿಸಲಾಗುತ್ತದೆ. ವಿಮಾ ಯೋಜನೆಗೆ ಒಳಪಟ್ಟು ರಾಜ್ಯದ ಕಾರ್ಮಿಕರು ಐದು ಬಗೆಯ ಸೌಲಭ್ಯಗಳನ್ನು ಇದರಿಂದ ಪಡೆಯುತ್ತಾರೆ. ಅಸ್ವಸ್ಥತಾ ಪರಿಹಾರ, ಪ್ರಸೂತಿ ಪರಿಹಾರ, ಕೆಲಸಮದಲ್ಲಿ ನಿರತರಾದಾಗ ಆದ ಅಂಗವಿಕಲತೆ, ಉದ್ಯೋಗಹಾನಿ ಮತ್ತು ಕಾಯಿಲೆಗಳ ಕಾಲದಲ್ಲಿ ಕಾರ್ಮಿಕರಿಗೆ ನೆರವು, ಉಚಿತ ವೈದ್ಯಕೀಯ ಚಿಕಿತ್ಸೆ ಮತ್ತು ಮರಣಹೊಂದಿದ ಕಾರ್ಮಿಕನ ಅವಲಂಬಿತರಿಗೆ ಪರಿಹಾರ - ಇವೇ ಈ ಐದು ಸೌಲಭ್ಯಗಳು. ರಾಜ್ಯದ ಎಲ್ಲ ಕೈಗಾರಿಕಾ ಕಾರ್ಮಿಕರುಗಳನ್ನು ಈ ಯೋಜನೆಯ ವ್ಯಾಪ್ತಿಗೊಳಪಡಿಸುವುದೇ ರಾಜ್ಯಸರ್ಕಾರದ ಗುರಿಯಾಯಿತು.

ಕಾಯಿದೆಗೊಳಪಡದ ಸೌಲಭ್ಯಗಳನ್ನೂ ಹಲವು ಉದ್ಯೋಗದಾತರು ಒದಗಿಸುತ್ತಿದ್ದಾರೆ. ಇವುಗಳಲ್ಲಿ ಮುಖ್ಯವಾದುವು ಉಚಿತ ವೈದ್ಯಕೀಯ ಚಿಕಿತ್ಸೆ, ಶಿಕ್ಷಣ ಮತ್ತು ಮನರಂಜನೆ. ನೌಕರರ ರಾಜ್ಯ ವಿಮಾ ವ್ಯವಸ್ಥೆಯ ಪ್ರಕಾರ ಚಿಕಿತ್ಸೆಯ ಸೌಲಭ್ಯವಿದ್ದರೂ ಕೆಲವು ಉದ್ಯಮಗಳು ತಮ್ಮವರೇ ಆದ ವೈದ್ಯರನ್ನು ನಿಯಮಿಸಿರುವುದುಂಟು. ಕಾರ್ಮಿಕರ ಮಕ್ಕಳ ಶಿಕ್ಷಣದ ವಿಷಯದಲ್ಲಿ ಅನೇಕ ಉದ್ಯಮಗಳು ಉದಾರವಾಗಿ ಧನಸಹಾಯ ನೀಡುತ್ತಿವೆ ಮತ್ತು ಕೆಲವು ಉದ್ಯಮಗಳು ತಮ್ಮವೇ ಆದ ಶಾಲೆಗಳನ್ನು ನಡೆಸುತ್ತಿವೆ. ಕಾರ್ಖಾನೆಗಳ ಪರಿಸರದಲ್ಲೇ ಕಾರ್ಮಿಕರಿಗೆ ವಸತಿಸೌಲಭ್ಯವನ್ನು ಒದಗಿಸಿಕೊಡುವುದರಲ್ಲಿ ಕೆಲವು ಉದ್ದಿಮೆದಾರರು ಸರ್ಕಾರಕ್ಕಿಂತ ಹೆಚ್ಚು ಉತ್ತಮವಾದ ಪಾತ್ರವನ್ನು ವಹಿಸಿದ್ದಾರೆ. ಬೆಂಗಳೂರಿನಲ್ಲಿ ಮತ್ತು ಇತರ ದೊಡ್ಡ ನಗರಗಳಲ್ಲಿ ಕಾರ್ಮಿಕರು ವಾಸಸ್ಥಾನದಿಂದ ಕಾರ್ಖಾನೆಗೆ ಹೋಗಿಬರಲು ಅನುಕೂಲವಾಗುವಂತೆ ಸಾರಿಗೆ ವ್ಯವಸ್ಥೆಯನ್ನು ಅನೇಕ ಕಾರ್ಖಾನೆಗಳು ಏರ್ಪಡಿಸಿವೆ. ಬೆಲೆಗಳ ತೀವ್ರ ಏರಿಕೆಯ ಕಾಲದಲ್ಲಿ ಕಾರ್ಮಿಕರಿಗೆ ಅವಶ್ಯವಾದ ಪದಾರ್ಥಗಳನ್ನು ನ್ಯಾಯ ಬೆಲೆಗಳಲ್ಲಿ ದೊರಕಿಸಲು ಅನುಕೂಲವಾಗುವಂತೆ ಬಳಕೆದಾರರ ಸಂಸ್ಥೆಗಳನ್ನು ಸ್ಥಾಪಿಸಲು ಉತ್ತೇಜನ ನೀಡಿರುವುದಲ್ಲದೆ ನ್ಯಾಯಬೆಲೆ ಅಂಗಡಿಗಳನ್ನು ತೆರೆಯಲಾಗಿದೆ. ಇದಕ್ಕೆ ಅಗತ್ಯವಾದ ಬಂಡವಾಳ, ಕಟ್ಟಡ ಹಾಗೂ ಕಾರ್ಯನಿರ್ವಹಣೆಯ ಸೌಲಭ್ಯಗಳನ್ನು ಉದ್ದಿಮೆದಾರರು ಒದಗಿಸಿದ್ದಾರೆ.

ಕರ್ನಾಟಕ ರಾಜ್ಯದಲ್ಲಿ ಕಾರ್ಮಿಕರ ಕಲ್ಯಾಣ ಸಾಧನೆಗಾಗಿ ಎರಡನೆಯ ಪಂಚವಾರ್ಷಿಕ ಯೋಜನೆಯ ಕಾಲದಿಂದ ಒಂದು ನಿರ್ದಿಷ್ಟ ಹಣದ ಮೊತ್ತವನ್ನು ರಾಜ್ಯ ಸರ್ಕಾರ ಖರ್ಚು ಮಾಡುತ್ತಿದೆ. ಕಾರ್ಮಿಕ ಕಲ್ಯಾಣ ಕೇಂದ್ರಗಳು ಸ್ಥಾಪಿಸಲ್ಪಟ್ಟಿವೆ. ರಾಜ್ಯದಲ್ಲಿ ಕಾರ್ಮಿಕರಿಗೆ ಹಲವು ವಾಚನಾಲಯಗಳು, ಮನರಂಜನಾ ಸೌಲಭ್ಯಗಳು, ಒಳಾಂಗಣ ಮತ್ತು ಹೊರಾಂಗಣ ಕ್ರೀಡಾ ಸೌಕರ್ಯಗಳು, ಮಹಿಳೆಯರಿಗಾಗಿ ಹೊಲಿಗೆ ತರಬೇತಿ ಕೇಂದ್ರಗಳು, ಉದ್ಯೋಗ ವಿನಿಮಯ ಕೇಂದ್ರಗಳು, ಶಾಲೆ ಬಿಡುವ ಯುವಕರು ಅವರವರ ಅಭಿರುಚಿ ಆಸಕ್ತಿಗಳಿಗೆ ಅನುಗುಣವಾಗಿ ಉದ್ಯೋಗಗಳನ್ನು ಆರಿಸಿಕೊಳ್ಳಲು ನೆರವಾಗಲು ವೃತ್ತಿಪೂರ್ವ ಮಾರ್ಗದರ್ಶನ ಘಟಕಗಳು - ಇವೇ ಮುಂತಾದ ಸೌಲಭ್ಯಗಳನ್ನು ಒದಗಿಸಲಾಗಿದೆ. ಇವುಗಳ ಜೊತೆಗೆ ಇನ್ನೂ ಅನೇಕ ಖಾಸಗಿ ಉದ್ಯಮಗಳಿಂದ ನಿರ್ದೇಶಿತವಾದ ಕಾರ್ಮಿಕ ಕಲ್ಯಾಣ ಕೇಂದ್ರಗಳು ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿವೆ.

ಕಾರ್ಮಿಕ ಕಲ್ಯಾಣವನ್ನು ಸಾಧಿಸುವ ದೃಷ್ಟಿಯಿಂದ ರಾಜ್ಯ ಸರ್ಕಾರ ಕಾರ್ಮಿಕ ಇಲಾಖೆಯನ್ನು ಸ್ಥಾಪಿಸಿದೆ. ಅದು ಕಾರ್ಮಿಕ ಕಮಿಷನರ್‌ರ ನೇತೃತ್ವದಲ್ಲಿದ್ದು 11 ವಿಭಾಗ ಕಚೇರಿಗಳನ್ನು ಹೊಂದಿದೆ, 99 ಉಪ ವಿಭಾಗ ಕಚೇರಿಗಳು ಜಿಲ್ಲಾ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿವೆ. ತಾಲ್ಲೂಕು ಮಟ್ಟದಲ್ಲಿ 164 ವೃತ್ತ ಕಚೇರಿಗಳಿವೆ. ಈ ಇಲಾಖೆಯ ಮುಖ್ಯ ಕಾರ್ಯಗಳೆಂದರೆ: 1 ಮುಷ್ಕರಗಳು ಆಗದಂತೆ ತಡೆಯುವುದು; ಕಾರ್ಮಿಕರು ಮತ್ತು ಒಡೆತನದ ನಡುವೆ ಉದ್ಭವಿಸುವ ಕೈಗಾರಿಕಾ ವಿವಾದಗಳನ್ನು ಸಂಧಾನದ ಮೂಲಕ ಬಗೆಹರಿಸುವುದು. 2 ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮಾಡಿದ ಕಾರ್ಮಿಕ ಕಾನೂನುಗಳು ಜಾರಿಯಾಗುವಂತೆ ನೋಡಿಕೊಳ್ಳುವುದು. 3 ಕನಿಷ್ಠ ವೇತನವನ್ನು ನಿಗದಿಗೊಳಿಸಿ ಅದು ಕಾರ್ಯಗತವಾಗುವಂತೆ ಮಾಡುವುದು. 4 ಕಾರ್ಮಿಕ ಕಲ್ಯಾಣ ಮಂಡಳಿಯ ಕೇಂದ್ರಗಳ ಮೂಲಕ ಕಾರ್ಮಿಕರ ಶಿಕ್ಷಣ ಅವರ ಮಕ್ಕಳ ಪೋಷಣೆ ಬಗ್ಗೆ ನಿಗಾ ಇಡುವುದು. 5 ವಿವಿಧ ವೇತನ ಮಂಡಳಿಗಳ ಶಿಫಾರಸುಗಳು ಜಾರಿಯಾಗುವಂತೆ ಮಾಡುವುದು. 6 ವಿವಿಧ ಕಾರ್ಮಿಕ ಕಲ್ಯಾಣ ಶಾಸನಗಳ ಪ್ರಯೋಜನ ಕಾರ್ಮಿಕರಿಗೆ ದೊರೆಯುವಂತೆ ಮಾಡುವುದು. 7 ವ್ಯವಸಾಯ ಮತ್ತಿತರ ಕ್ಷೇತ್ರಗಳಲ್ಲಿ ಕೆಲಸ ಮಾಡುವ ಅಸಂಘಟಿತ ಕಾರ್ಮಿಕರಿಗೆ ಕನಿಷ್ಠ ವೇತನ ಲಭ್ಯವಾಗುವಂತೆ ಖಾತರಿಪಡಿಸುವುದು. ರಾಜ್ಯದಲ್ಲಿ 9 ಇ.ಎಸ್.ಐ. ಆಸ್ಪತ್ರೆಗಳು, 129 ಚಿಕಿತ್ಸಾಲಯಗಳು, 9 ಆಯುರ್ವೇದ ಕೇಂದ್ರಗಳು ಕಾರ್ಮಿಕರ ಆರೋಗ್ಯ ಕ್ಷೇಮಕ್ಕಾಗಿ ಸ್ಥಾಪಿತವಾಗಿವೆ (1998-99). (ಎಸ್.ಎನ್.ಎ.)

**ಕಾರ್ಯಪ್ಪ, ಕೆ.ಎಂ. :** 1900-93. ಸ್ವತಂತ್ರ ಭಾರತ ಸೈನ್ಯದ ಪ್ರಥಮ ಭಾರತೀಯ ಕಮಾಂಡರ್-ಇನ್-ಚೀಫ್. 1900 ಜನವರಿ 28 ರಂದು ಕೊಡಗಿನಲ್ಲಿ ಜನಿಸಿದರು. ತಂದೆ ಕೊಡಂದೆರ ಮಾದಪ್ಪ, ತಾಯಿ ಕಾವೇರಿ. ವಿದ್ಯಾಭ್ಯಾಸ ಮಡಿಕೇರಿಯ ಸೆಂಟ್ರಲ್ ಹೈಸ್ಕೂಲ್ ಮತ್ತು ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ.

ಕಾರ್ಯಪ್ಪನವರು ಸೈನ್ಯದಲ್ಲಿ ಕಮಿಷನ್ ಹುದ್ದೆಯನ್ನು ಗಳಿಸಿಕೊಂಡ (ಡಿಸೆಂಬರ್ 1919) ಪ್ರಥಮ ಭಾರತೀಯರು. ಸೈನಿಕ ಶಿಕ್ಷಣಾನಂತರ ಮೊದಲು 2/88 ಕರ್ನಾಟಕ ರೆಜಿಮೆಂಟ್, ಅನಂತರ 2-125ನೆಯ ನೇಪಿಯರ್ ರೈಫಲ್ಸ್ ದಳದಲ್ಲಿ ಅಡ್ಜುಟೆಂಟ್ ಆಗಿ (1920-22) ಕೆಲಸ ಮಾಡಿದರು. ಮೆಸಪೊಟೇಮಿಯ ದಳದಲ್ಲಿ, 1922-23ರಲ್ಲಿ 37 ಡೋಗ್ರಾ ರೆಜಿಮೆಂಟ್ ಮತ್ತು 1923-24ರಲ್ಲಿ ರಾಜಪೂತ್ ದಳದಲ್ಲಿದ್ದರು. ಇವರು ಸೈನ್ಯಾಧಿಕಾರಿಗಳ ಶಿಕ್ಷಣ ವಿಧಾನ, ಜೀವನಕ್ರಮ ಮುಂತಾದವುಗಳನ್ನು ಅಭ್ಯಸಿಸುವ ಉದ್ದೇಶದಿಂದ ಸ್ವತಃ ಪ್ರಪಂಚ ಪರ್ಯಟನೆಯನ್ನು 1925ರಲ್ಲಿ ಕೈಗೊಂಡರು. ಆಗ ಚೀನ, ಜಪಾನ್, ಸಂಯುಕ್ತಸಂಸ್ಥಾನ, ಕೆನಡ, ಗ್ರೇಟ್ ಬ್ರಿಟನ್, ಫ್ರಾನ್ಸ್, ಬೆಲ್ಜಿಯಂ, ಜರ್ಮನಿ, ಸ್ವಿಟ್ಜರ್ಲೆಂಡ್, ಇಟಲಿ ಮುಂತಾದ ದೇಶಗಳಿಗೆ ಭೇಟಿಕೊಟ್ಟರು. 1922-30ರ ಅವಧಿಯಲ್ಲಿ ಅನೇಕ ಸಲ ವಜೀರಿಸ್ತಾನದಲ್ಲಿ (ವಾಯವ್ಯ ಗಡಿ ಪ್ರಾಂತ್ಯ) ಸೇವೆ ಸಲ್ಲಿಸಿದರು. ಕ್ವೆಟ್ಟ ಸ್ಟಾಫ್ ಕಾಲೇಜಿನಲ್ಲಿ ಪ್ರೌಢಸೈನ್ಯಶಿಕ್ಷಣ ಪಡೆಯಲು ಪ್ರವೇಶಿಸಿದ (1933) ಪ್ರಥಮ ಭಾರತೀಯರು ಇವರು. 1935ರಲ್ಲಿ ಸಿಂಗಪುರದ ನೌಕೆ ಹಾಗೂ ವಿಮಾನ



ನೆಲೆಗಳ ಪರೀಕ್ಷಾ ಸಂದರ್ಶನ ಮಾಡಿದರು. ಎರಡನೆಯ ಮಹಾಯುದ್ಧದಲ್ಲಿ 19ನೆಯ ಇಂಡಿಯನ್ ಡಿವಿಷನ್ ಪಡೆಯೊಡನೆ ಸೇವೆ ಸಲ್ಲಿಸುತ್ತ ಇರಾಕ್, ಸಿರಿಯ ಮತ್ತು ಇರಾನ್‌ಗಳಲ್ಲಿ ಯುದ್ಧರಂಗ ಪ್ರವೇಶ ಮಾಡಿದರು. 7ನೆಯ ರಾಜಪೂತ್ ರೆಜಿಮೆಂಟಿನ ಮಷೀನ್‌ಗನ್ ಪಡೆಯನ್ನು ರಚಿಸುವ ಕಾರ್ಯಭಾರವನ್ನು ಸರ್ಕಾರ ಕಾರ್ಯಪ್ಪನವರಿಗೆ ವಹಿಸಿತು. ಆ ಕೆಲಸವನ್ನು ಇವರು ತೃಪ್ತಿಕರವಾಗಿ ಮಾಡಿ ಮುಗಿಸಿದರು (1942). 1943-44ರಲ್ಲಿ ಇವರು ಮೊದಲು ಈಸ್ಟರ್ನ್ ಕಮಾಂಡ್ ಹುದ್ದೆಗೇರಿ ಆಮೇಲೆ 20ನೆಯ ಡಿವಿಷನ್ನಿನ ಅಸಿಸ್ಟೆಂಟ್ ಕ್ವಾರ್ಟರ್ ಮಾಸ್ಟರ್ ಜನರಲ್ ಆದರು. ಈ ಅವಧಿಯಲ್ಲಿ ಬರ್ಮಾ ಯುದ್ಧದಲ್ಲಿ ಅರಕಾನ್ ರಂಗ ಪ್ರವೇಶಮಾಡಿ ಯುದ್ಧ ನಿರ್ದೇಶನ ಮಾಡಿ ತಮ್ಮ ಯುದ್ಧತಂತ್ರನಿಪುಣತೆಯನ್ನು ತೋರಿದರು. 1944ರಲ್ಲಿ ಸೈನ್ಯ ಪುನರ್ವ್ಯವಸ್ಥಾ ಸಮಿತಿಯ (ಆರ್ಮಿ ರೀಆರ್ಗನೈಸೇಷನ್ ಕಮಿಟಿ) ಸದಸ್ಯರಾಗಿ ನೇಮಕಗೊಂಡರು. ಈ ಕಾಲದಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಕೆನಡಗಳ ಪರ್ಯಟನೆ ಮಾಡಿ ವೆಸ್ಟ್ ಪಾಯಿಂಟ್ ಎಂಬಲ್ಲಿನ ಮಿಲಿಟರಿ ಅಕಾಡೆಮಿಯನ್ನು ಸಂದರ್ಶಿಸಿದರು. 1946ರಲ್ಲಿ ಫ್ರಾಂಟಿಯರ್ ಬ್ರಿಗೇಡ್ ಗ್ರೂಪ್ ಸೈನ್ಯ

ವಿಭಾಗದ ಅಧಿಪತಿಯಾಗಿ ನೇಮಕಗೊಂಡರು. 1947ರಲ್ಲಿ ಇಂಪೀರಿಯಲ್ ಡಿಫೆನ್ಸ್ ಕಾಲೇಜಿನ ಉನ್ನತ ಸೈನ್ಯ ಶಿಕ್ಷಣಕ್ಕೆ ಆಯ್ಕೆಯಾದರು.

ಭಾರತ ಸ್ವತಂತ್ರವಾದ ಅನಂತರ ಇವರ ಮೇಲೆ ಹೆಚ್ಚು ಹೊಣೆಗಾರಿಕೆ ಬಿತ್ತು. 1947 ಜೂನ್‌ನಲ್ಲಿ ಗಳಿಸಿದ ಮೇಜರ್ ಜನರಲ್ ದರ್ಜೆ ಸಮೇತ ಚೀಫ್ ಆಫ್ ಜನರಲ್ ಸ್ಟಾಫ್ ಆಗಿ 1947 ಆಗಸ್ಟ್ 15ರಲ್ಲಿ ನೇಮಕಗೊಂಡರು. ಮುಂದೆ ಇತರ ಉನ್ನತ ಅಧಿಕಾರಗಳನ್ನು ಒಂದೊಂದಾಗಿ ಏರಿ 1948ರ ಕಾಶ್ಮೀರ ಯುದ್ಧದಲ್ಲಿ ಜನರಲ್ ದರ್ಜೆ ಸಮೇತ ಸೈನ್ಯದ ವರಿಷ್ಠಾಧಿಕಾರಿಯಾದರು. 1949 ಜನವರಿ 15ರಿಂದ ಭಾರತ ಸೈನ್ಯದ ವರಿಷ್ಠಾಧಿಕಾರಿಯಾಗಿ 1953 ಜನವರಿ 15ರವರೆಗೆ ಸೇವೆ ಸಲ್ಲಿಸಿದರು. ಈ ಅವಧಿಯಲ್ಲಿ ಭಾರತ ಸೇನೆ ಅನೇಕ ಸುಧಾರಣೆಗಳನ್ನು ಕಂಡಿತು. 1953ರ ಜುಲೈ ತಿಂಗಳಲ್ಲಿ ಆಸ್ಟ್ರೇಲಿಯ ಮತ್ತು ನ್ಯೂಜಿಲೆಂಡುಗಳಿಗೆ ಭಾರತದ ಹೈಕಮಿಷನರ್ ಆಗಿ 1956 ಏಪ್ರಿಲ್ ವರೆಗೆ ಆ ಹುದ್ದೆಯಲ್ಲಿದ್ದರು.

ನಿವೃತ್ತಿಯ ಅನಂತರ ಇವರು ಮಡಿಕೇರಿಯಲ್ಲಿ ನೆಲೆಸಿದ್ದರು. ಅನೇಕ ಸಾರ್ವಜನಿಕ ಕಾರ್ಯಗಳಲ್ಲಿ ಸಂಘಸಂಸ್ಥೆಗಳಲ್ಲಿ ಜನತೆಯ ಒಳಿತಿಗಾಗಿ ದುಡಿಯುತ್ತಿದ್ದರು. ಇವರಿಗೆ ಭಾರತ ಸರ್ಕಾರ ಫೀಲ್ಡ್ ಮಾರ್ಷಲ್ ಗೌರವ ನೀಡಿತ್ತು. ಇವರು 1993ರಲ್ಲಿ ನಿಧನರಾದರು. *

**ಕಾಲಜ್ಞಾನದ ಪದಗಳು :** ಭವಿಷ್ಯದಲ್ಲಿ ಸಂಭವಿಸಬಹುದಾದ ಕೆಲವು ಮುಖ್ಯ ಘಟನೆಗಳನ್ನು ಸಾರುವ ನುಡಿಗಳೇ ಕಾಲಜ್ಞಾನದ - ಪದಗಳು; ವಚನಗಳು. ಕನ್ನಡ ಸಾಹಿತ್ಯದ ವೀರಶೈವ ಕೃತಿಗಳಲ್ಲಿ (ವಚನ) ಇವು ಅಧಿಕವಾಗಿ ಕಂಡುಬರುತ್ತವೆ. ಪವಾಡಪುರುಷರು ತಮ್ಮ ಅರಿವಿನಿಂದ ಭವಿಷ್ಯವನ್ನು ತಿಳಿದು ಮುಂದಾಗಬಹುದಾದ ಅನಾಹುತಗಳನ್ನೂ ಅವುಗಳ ನಿವಾರಣೋಪಾಯಗಳನ್ನೂ ಹೇಳುತ್ತಿದ್ದರೆಂದು ನಂಬಿಕೆ. ತಮಗಿಂತ ಹಿಂದಿದ್ದ ಪ್ರಸಿದ್ಧರಾದವರು ಹೇಳಿರುವ ಕಾಲಜ್ಞಾನದಲ್ಲಿರುವ ವಿಷಯಗಳನ್ನು ಉದ್ಧರಿಸಿ ಹೊಸತಾಗಿ ಹೇಳಿರುವ ಕಾಲಜ್ಞಾನಗಳೂ ಇವೆ. ಪುರುಷರು ಮಾತ್ರವಲ್ಲದೆ ಸ್ತ್ರೀಯರೂ ಇಂಥ ವಚನಗಳನ್ನು, ಪದಗಳನ್ನು ಹೇಳಿದ್ದಾರೆ. ಪ್ರಭುದೇವ, ಚೆನ್ನಬಸವಣ್ಣ, ರುದ್ರಮುನಿ, ಎಮ್ಮೆಬಸವಣ್ಣ, ಸರ್ವಜ್ಞಕವಿ, ಅಖಂಡಮುನಿ, ಮೋಳಿಗೆಯ ಮಾರಯ್ಯ, ಅಕ್ಕಮಹಾದೇವಿ, ನೀಲಲೋಚನೆ, ಕಲ್ಯಾಣಮ್ಮ, ಗಂಗಮ್ಮ ಮೊದಲಾದವರ ಹೆಸರಿನಲ್ಲಿ ಕಾಲಜ್ಞಾನದ ವಚನಗಳು ಇವೆ. ಕೆಲವು ಕಾಲಜ್ಞಾನಗಳಲ್ಲಿ ಸಮಕಾಲೀನ ಚಾರಿತ್ರಿಕ ಘಟನೆಗಳು ಉಕ್ತವಾಗಿವೆ. ಈ ಕಾಲಜ್ಞಾನಗಳಲ್ಲಿ ಕೆಲವಕ್ಕೆ ಎಚ್ಚರಿಕೆ ಎಚ್ಚರಿಕೆ, ಧರ್ಮವ ಬಿಡಬೇಡಿರೋ, ಕೋಲನಾಡುವ ಬನ್ನಿರೋ, ಡಂಗುರ ಸಾರಿದೆನು, ಸುವ್ವಿ ಸುವ್ವಿ, ಸೂರೆಯೋ ಸೂರೆಯೋ ದಿಮ್ಮಿ ಸಾಲೆ ಎನ್ನಿರೋ, ಸಾರ ಬಂದೆ ಕಣಿಯ ಕೇಳಿರೋ ಎಂಬಿವೇ ಮೊದಲಾದ ಪಲ್ಲವಿಗಳಿವೆ. ಒಟ್ಟಿನಲ್ಲಿ ಧರ್ಮಗ್ಲಾನಿ ಆಗಿ ಅಧರ್ಮ ತಲೆ ಎತ್ತಿದಾಗ ಸಮಾಜದ ಪುನರುದ್ಧಾರಕ್ಕಾಗಿ 770 ವರ್ಷಗಳಿಗೊಮ್ಮೆ ಶಿವಶರಣರು ಮತ್ತೆ ಮತ್ತೆ ಬಂದು ಸ್ವಮತಧರ್ಮಬೋಧೆಯಿಂದ ಜನರನ್ನು ಉದ್ಧರಿಸುತ್ತಾರೆ ಎಂದು ಸಾಮಾನ್ಯ ಜನರಿಗೆ ಕೆಲವು ನಿರೂಪಣೆಗಳಿಂದ ತಿಳಿಯಹೇಳುವುದೇ ಈ ಕಾಲಜ್ಞಾನದ ಉದ್ದೇಶ. ಅಷ್ಟೇ ಅಲ್ಲದೆ ಕಾಲಜ್ಞಾನಗಳು ವಿವಿಧ ವಿಷಯಗಳಿಗೆ ಸಂಬಂಧಿಸಿದ್ದು ಜನರ ಆಕರ್ಷಣೆಯೂ ಇವುಗಳ ಮುಖ್ಯ ಗುರಿ ಎನ್ನಬಹುದು. ಕಲಿ ಪಾಪವಾದ ಕಾರಣ ಕಾಲಜ್ಞಾನವ ಹೇಳಬೇಕಾದೀತು ಎಂಬ ಅಕ್ಕಮಹಾದೇವಿಯ ವಚನ ಇದನ್ನು ಪುಷ್ಟೀಕರಿಸುತ್ತದೆ. ಕಾಲಜ್ಞಾನದ ಸ್ವರೂಪದ ಅರಿವಿಗಾಗಿ ಕೆಳಗೆ ಕೆಲವು ವಚನಗಳನ್ನು ಉದ್ಧರಿಸಿ ಕೊಟ್ಟಿದೆ.

1.ಹೈದರಾಬಾದದೊಳಗಿನ ತುರುಕರು ಬೊಬ್ಬಿಡುತ್ತ ತುರ್ಕಸ್ಥಾನ ದೇಶದಲ್ಲಿ ದಿಲ್ಲಿಯ ಖಾನರಿಗೆ ಫಿರ್ಯಾದಿ ಮಾಡಿಕೊಂಡರು । ಆ ದಿಲ್ಲಿಯ ಖಾನರು ಹದಿನೆಂಟು ಲಕ್ಷ ಮಾರ್ಬಲ ಸಹಿತವಾಗಿ ಬರುವರು । ಆವಾಗ್ಗೆ ಬಹುಜನರು ಮಡಿಯುವರು । ಅವರು ಬರುವ ಕಾಲಕ್ಕೆ ಕೆಂದೂಳು ಮುಸುಕಿತ್ತು । ಸಣ್ಣ ನಾಮದವರು ಹೋಗುವರು (ಅಖಂಡಮುನಿ).

2. ಕಪ್ಪಡಿ ಸಂಗಮ ತಪ್ಪದೆ ಹೇಳಿದ । ಅಪ್ಪ ಬಸವಣ್ಣ ಬರುವುದನ್ನು ಸುವ್ವಿ । ಯೇಳುನೂರು ಯೆಪ್ಪತ್ತ ವರುಷಕ್ಕೆ ಬರುತಾನೆ ಸುವ್ವಿ । ಹದಿನೆಂಟು ಜಾತಿಯು ಶಿವಭಕ್ತರಾದಾರು । ಸದಮಲಭಕ್ತಿಜ್ಞಾನವಿಡಿದು ಸುವ್ವಿ । ನಂದಿಯ ಧ್ವಜಗಳು ತಮ್ಮ ಮನೆ ಮನೆಗೆ ಸುವ್ವಿ । ಬಸವಣ್ಣ ಬರುವಾಗ ಶಶಿಧರನ ಭಕ್ತರು ಕುಶಲದ ನುಡಿಗಳ ನುಡಿದಾರು ಸುವ್ವಿ । ಮನೆಮನೆ ಬಸವನುತ್ಸಾಹ ಮೆರೆದಾವು ಸುವ್ವಿ । (ನೀಲಲೋಚನೆ).

3. ಸಟೆಯಲ್ಲ ಶಿವಸಾಕ್ಷಿ । ಕಲ್ಯಾಣದ ವಳಗಣ ಕಲ್ಲಚೇಳು ಧರೆಗಿಳಿದೀತು । ಎಂದು ಡಂಗೂರ ಹೊಯ್ಸಿದವರು । ಮುಂದೆ ವೀರವಸಂತ ಹುಟ್ಟುವಾಗ ಕಲ್ಲೆಲ್ಲ ಕನಕಮಯವಾದೀತು । ಬಳ್ಳಿ ಸೊಂಡೆಯೆಲ್ಲ ಮುತ್ತುರತ್ನಮಯವಾದಾವು । ಚಲದಂಕ ವೀರ ವಸಂತರಾಯ ಪುಟ್ಟುವಾಗ ತುಕನೂರಲ್ಲಿ ಕಲ್ಲುಕೋಳಿ ಕೂಗೀತು ।.

4. ಅಂಗದೇಶದ ಪರಂಗೇರು ಬಂದು । ಶ್ರೀರಂಗಪಟ್ಟಣವ ತಕ್ಕೊಂಡು ಲೋಕವನು । ಭಂಗಪಡಿಶ್ಯಾರು ಸರ್ವಜ್ಞ (ಎಸ್.ಎನ್.ಕೆ.)

**ಕಾವಿ ಕಲೆ :** ಜನಸಾಮಾನ್ಯರು ಹಬ್ಬ ಆಚರಣೆಗಳ ಸಂದರ್ಭದಲ್ಲಿ ಮನೆ, ಮಠ, ಮಾಡು, ದೇವಾಲಯಗಳ ಮೇಲ್ಭಾವಣಿ, ಗೋಡೆಗಳ ಒಳಬದಿ ಹಾಗೂ ಹೊರಬದಿಗಳಿಗೆ, ಕಾವಿಹಿಟ್ಟಿನಿಂದ ಸಿದ್ಧಪಡಿಸಿದ ಬಣ್ಣದಿಂದ ಚಿತ್ತಾರ ಬಿಡಿಸುವ ಒಂದು ಜನಪದಕಲೆ; ಕರ್ನಾಟಕದ



ಕೃಷ್ಣನ ಸಾರಥ್ಯದಲ್ಲಿ ಅರ್ಜುನ

ಸಾಂಪ್ರದಾಯಿಕ ಕಲೆಗಳಲ್ಲಿ ಒಂದು. ಕ್ರಿ.ಪೂ.1500ರಲ್ಲಿ ಈಜಿಪ್ಟ್ ದೇಶದಲ್ಲಿ ಸತ್ತವರ ಸಮಾಧಿಗಳ ಮೇಲೆ (ಪಿರಮಿಡ್) ಕಾವಿಕಲೆಯ ಚಿತ್ರಗಳನ್ನು ರಚಿಸುತ್ತಿದ್ದರು. ಇದಲ್ಲದೆ ಎಟ್ರುಸ್ಕನ್ ಜನಾಂಗದವರು ತಮ್ಮ ಗುಹೆಗಳಲ್ಲಿ ಮೃತಪಟ್ಟವರ ನೆನಪಿಗಾಗಿ ಕಾವಿಬಣ್ಣದಿಂದ ಚಿತ್ರಬಿಡಿಸಿದರೆ, ಗ್ರೀಕ್ ಮತ್ತು ರೋಮನ್ನರು ತಮ್ಮ ಪಾತ್ರೆ-ಪರಡೆಗಳ ಮೇಲೆ ಪೌರಾಣಿಕ ಸನ್ನಿವೇಶದ ಚಿತ್ರಗಳನ್ನು ಕೆಂಬಣ್ಣದಿಂದಲೇ ಚಿತ್ರಿಸುತ್ತಿದ್ದರು. ಜರ್ಮನಿಯ ಸಂಶೋಧಕರಾದ ಗ್ರೆಟ್ಲಿಮಿಟರ್ ಭಾರತದಲ್ಲಿ ಗೋವದಲ್ಲಿ ಕಾವಿಕಲೆಯನ್ನು

ಅಭ್ಯಸಿಸುವಾಗ, ಈ ಕಲೆ ಮೂಲತಃ ಇಟಲಿಯ ಗ್ರಾಫಿಕ್ (ರೇಖಾಚಿತ್ರ) ಕಲೆಯಾಗಿದ್ದು, ಪೋರ್ಚುಗೀಸರು ಭಾರತಕ್ಕೆ ಬಂದಾಗ ತಮ್ಮೊಡನೆ ಈ ಕಲೆಯನ್ನು ತಂದರು ಎಂದು ಅಭಿಪ್ರಾಯಪಟ್ಟಿದ್ದಾರೆ.

ಗೌಡ ಸಾರಸ್ವತರೆಂದು ಗುರುತಿಸಿಕೊಂಡಿರುವ ಕೊಂಕಣಿ ಭಾಷಿಕರು ಗೋವ ಮತ್ತು ಕರ್ನಾಟಕದ ಕರಾವಳಿಯಲ್ಲಿ ನೆಲೆಸಿದ್ದರು. ಇವರು ಕರಾವಳಿಯ ಜೀವನಕ್ಕೆ ಒಗ್ಗಿಕೊಂಡು ತಮ್ಮ ಪ್ರಾಂತೀಯ ದೈವಗಳಾದ ಶಾಂತದುರ್ಗ ಮಂಗೇಶ, ಮ್ಹಾಳಸಾ, ನಾಗೇಶ, ರಾಮನಾಥ, ರವಳನಾಥ, ದಾಮೋದರ, ನರಸಿಂಹ, ಸಪ್ತಕೋಟೇಶ್ವರ, ಮಹಾಮಾಯಿ -ಹೀಗೆ ದೇವಾಲಯಗಳನ್ನು ನಿರ್ಮಿಸಿ ತಮ್ಮ ಸಂಸ್ಕೃತಿ ಅಭಿರುಚಿಗೆ ತಕ್ಕಂತೆ ಈ ಮಂದಿರಗಳನ್ನು ಕಾವಿಚಿತ್ರಗಳಿಂದ ಅಲಂಕರಿಸಿದರು. ಕರಾವಳಿ ಪ್ರದೇಶಗಳನ್ನು ಆಳುತ್ತಿದ್ದ ರಾಜಮಾಂಡಲಿಕರು ಹೊನ್ನಾವರ, ಭಟ್ಕಳ, ಬಸರೂರು, ಬಾರಕೂರು, ಬ್ರಹ್ಮಾವರ, ಮೂಲ್ಕಿ, ಮಂಗಳೂರು, ಉಲ್ಲಾಳ ಮುಂತಾದ ಕಡೆ ಕೊಂಕಣಿಗರಿಗೆ ಆಶ್ರಯನೀಡಿ, ದೇವಾಲಯಗಳ ಸ್ಥಾಪನೆಗೆ ಕಾರಣರಾದರು. ದೇವಾಲಯ ನಿರ್ಮಾಣದ ಸಂದರ್ಭದಲ್ಲಿ ಗೋವೆಯ ಸ್ಥಾನಿಕರಾದ ಗಾರೆಗಾರರು, ಗುಡಿಗಾರರು, ಪರಿಣತ ಶಿಲ್ಪಿಗಳನ್ನೆಲ್ಲ ಕೊಂಕಣಿಗರು ವಿಶ್ವಾಸದಿಂದ ಬರಮಾಡಿಕೊಂಡು, ದೇವಾಲಯಗಳನ್ನು ನಿರ್ಮಿಸುವಲ್ಲಿ ಯಶಸ್ವಿಯಾದರು. ದೇವಾಲಯಗಳ ಹೊರಗೋಡೆ ಹಾಗೂ ಒಳಗೋಡೆಗಳಲ್ಲಿ ಕುಸ್ನಿಪಟುಗಳು, ಕಾಳಗ, ಪ್ರಕೃತಿಯಲ್ಲಿನ ಪ್ರಾಣಿಪಕ್ಷಿಗಳು, ದ್ವಾರಪಾಲಕರು, ಕುಲದೇವತೆಗಳು, ಮೊದಲಾದ ರೇಖಾಚಿತ್ರ ಹಾಗೂ ಜಾಮಿತಿ ಚಿತ್ರಗಳನ್ನು ರಚಿಸುತ್ತ ಬಂದರು. ಈ ಚಿತ್ರಗಳಲ್ಲಿ ಕರ್ನಾಟಕದ ಭಿತ್ತಿ ಚಿತ್ರಗಳ ಸಾಮ್ಯ ಹೊಂದಿದ್ದು ರಾಮಾಯಣ, ಮಹಾಭಾರತ, ಭಾಗವತಗಳ ಸಾಮಾಜಿಕ ಸನ್ನಿವೇಶಗಳನ್ನು ಒಳಗೊಂಡಿವೆ. ಮೈಸೂರು ಒಡೆಯರ ಆಡಳಿತದ ಕಾಲದಲ್ಲಿ ಕಾವಿಚಿತ್ರಗಳು ಅಲಂಕಾರ ಸ್ಥಾನ ಪಡೆದಿದ್ದುವು. ಉತ್ತರ ಕನ್ನಡ ಜಿಲ್ಲೆಯ ಕುಮಟ, ಕಾರವಾರ, ಅಂಕೋಲ ಹಾಗೂ ಉಡುಪಿ, ದಕ್ಷಿಣ ಕನ್ನಡ ಜಿಲ್ಲೆಗಳ ಕುಂದಾಪುರ, ಮಂಗಳೂರು ದೇವಾಲಯಗಳಲ್ಲಿ ಈ ಕಲೆ ಇನ್ನೂ ಜೀವಂತವಾಗಿದೆ. (ಪಿ.ಜಿಜ.)

**ಕಾವೇರಿ :** ಕರ್ನಾಟಕದ ದಕ್ಷಿಣ ಭಾಗದಲ್ಲಿ ಹರಿಯುವ ಮುಖ್ಯ ನದಿ. ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನಲ್ಲಿ ಭಾಗಮಂಡಲದ ಸಮೀಪ ಬ್ರಹ್ಮಗಿರಿ (ನೋಡಿ) ಬೆಟ್ಟದಲ್ಲಿ ಕಾವೇರಿ ಹುಟ್ಟುತ್ತದೆ. ಇದರ ಉಗಮಸ್ಥಾನಕ್ಕೆ ತಲಕಾವೇರಿ (ನೋಡಿ) ಎಂದು ಹೆಸರು. ಅಲ್ಲಿಂದ ಮಡಿಕೇರಿ ತಾಲ್ಲೂಕಿನ ಬಾವಲಿಯವರೆಗೆ ಆಗ್ನೇಯಾಭಿಮುಖವಾಗಿ ಹರಿದು, ಮುಂದೆ ಈಶಾನ್ಯಾಭಿಮುಖವಾಗಿ ಮೊದಲು ವಿರಾಜಪೇಟೆ ತಾಲ್ಲೂಕಿನ ಉತ್ತರ ಗಡಿಯಾಗಿ ಅನಂತರ ಕೊಡಗಿನ ಪೂರ್ವ ಅಂಚಿನಲ್ಲಿ ಸೋಮವಾರಪೇಟೆ ತಾಲ್ಲೂಕಿನ ಶಿರಂಗಾಲದವರೆಗೂ ಪ್ರವಹಿಸಿ, ಅಲ್ಲಿಂದ ಪೂರ್ವಕ್ಕೆ ತಿರುಗಿ ಹಾಸನ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಅಲ್ಲಿ ರಾಮನಾಥಪುರದ ಮೂಲಕ ಸಾಗಿ, ಆಗ್ನೇಯಕ್ಕೆ ತಿರುಗಿ ಮೈಸೂರು ಜಿಲ್ಲೆಯನ್ನು ಹೊಕ್ಕು ಚುಂಚನಕಟ್ಟೆಯಲ್ಲಿ ಜಲಪಾತವಾಗಿ ಪರಿಣಮಿಸಿ ಕೃಷ್ಣರಾಜನಗರದ ಮೂಲಕ ಕೃಷ್ಣರಾಜಸಾಗರ ಕಟ್ಟೆಯನ್ನು ತಲುಪುತ್ತದೆ. ಮುಂದೆ ಮಂಡ್ಯ ಜಿಲ್ಲೆಯಲ್ಲಿ ಪೂರ್ವಕ್ಕೆ ಇದರ ಗಮನ. ಶ್ರೀರಂಗಪಟ್ಟಣದಲ್ಲಿ ಕವಲೊಡೆದು ಅದನ್ನೊಂದು ದ್ವೀಪವನ್ನಾಗಿಸಿ ಮತ್ತೆ ಸೇರಿ ಪುನಃ ಮೈಸೂರು ಜಿಲ್ಲೆಗೆ ಬರುತ್ತದೆ. ಇಲ್ಲಿ ತಿರುಮಕೂಡಲು ನರಸೀಪುರದವರೆಗೆ ಆಗ್ನೇಯಕ್ಕೆ ಹರಿದು, ಮುಂದೆ ಪೂರ್ವಕ್ಕೆ ತಿರುಗಿ ತಲಕಾಡನ್ನು ದಾಟಿ ಕೊಳ್ಳೇಗಾಲದ ಹತ್ತಿರ ಬರುತ್ತದೆ. ಮುಂದೆ ಕೊಳ್ಳೇಗಾಲ ತಾಲ್ಲೂಕನ್ನು ಮಂಡ್ಯ, ಬೆಂಗಳೂರು ಜಿಲ್ಲೆಗಳು ಮತ್ತು ತಮಿಳುನಾಡುಗಳಿಂದ ಬೇರ್ಪಡಿಸುವ ಗಡಿರೇಖೆಯಾಗುತ್ತದೆ. ಕೊಳ್ಳೇಗಾಲದಿಂದ ಈಶಾನ್ಯಾಭಿಮುಖವಾಗಿ ಹರಿದು ಶಿವಸಮುದ್ರದಲ್ಲಿ ಕವಲೊಡೆದು ಗಗನಚುಕ್ಕಿ ಭರಚುಕ್ಕಿಗಳಾಗಿ ಧುಮುಕಿ ಮತ್ತೆ ಒಂದುಗೂಡಿ ಪೂರ್ವಗಾಮಿಯಾಗುತ್ತದೆ. ಕೊಳ್ಳೇಗಾಲ ತಾಲ್ಲೂಕಿನ ಈಶಾನ್ಯ ಮೂಲೆಯಲ್ಲಿ ಹೊಗೇನಕಲ್ಲಿನ ಬಳಿ ಮತ್ತೆ ಧುಮುಕಿ ಇದ್ದಕ್ಕಿದ್ದಂತೆ ದಕ್ಷಿಣಕ್ಕೆ ತಿರುಗಿ ಮಾದೇಶ್ವರ ಗಿರಿ ಶ್ರೇಣಿಯ ಆಗ್ನೇಯ ಅಂಚಿನಲ್ಲಿ ಬೋಡಮಲೈ ಬೆಟ್ಟದ ಬಳಿ ಕರ್ನಾಟಕದ ಎಲ್ಲೆಯನ್ನು ಬಿಟ್ಟು ತಮಿಳುನಾಡಿನತ್ತ ಸಾಗುತ್ತದೆ. ಅಲ್ಲಿಂದ ಮುಂದೆ ಆ ರಾಜ್ಯದ ಕೊಯಮತ್ತೂರು, ತಿರುಚ್ಚಿರಾಪಳ್ಳಿ, ತಂಜಾವೂರು ಜಿಲ್ಲೆಗಳ ಮೂಲಕ ಹರಿದು ಕಾವೇರಿಪಟ್ಟಣದ ಬಳಿ ಬಂಗಾಲ ಕೊಲ್ಲಿಯನ್ನು ಸೇರುತ್ತದೆ. (ಬಿ.ಎಂ.)



ಧುಮುಕುತ್ತಿರುವ ಕಾವೇರಿ, ಬಲಮುರಿ

ಭೂವೈಜ್ಞಾನಿಕ ದೃಷ್ಟಿಯಿಂದ ಕಾವೇರಿಯ ಓಟ ಕುತೂಹಲ ಕಾರಿಯಾದುದು. ಹುಟ್ಟುವುದು ಪಶ್ಚಿಮಘಟ್ಟಗಳ ನೆತ್ತಿಯಲ್ಲಿ, ಅದರ ಸ್ವಲ್ಪ ಪಶ್ಚಿಮದಲ್ಲಿಯೇ, ಅರಬ್ಬೀಸಮುದ್ರದಿಂದ ಅನತಿದೂರದಲ್ಲಿ. ಆದರೆ ಹರಿವು ಪೂರ್ವಾಭಿಮುಖವಾಗಿ. ಇದರಿಂದಾಗಿ ಮೊದಲು ಘಟ್ಟನೆತ್ತಿಯ ಪಶ್ಚಿಮ ಭಾಗವನ್ನು ಸ್ವಲ್ಪ ದೂರ ತೊಯ್ದು ಆ ಬೆಟ್ಟದ ಗೋಡೆಯನ್ನು ಸೀಳಿ ಪೂರ್ವಕ್ಕೆ ತಿರುಗುತ್ತದೆ. ಉಗಮಸ್ಥಾನದಿಂದ ದಿಢೀರನೆ ಇಳಿಜಾರಿನಲ್ಲಿ ವೇಗವಾಗಿ ನುಗ್ಗಿ ಸು.8ಕಿಮೀ ಅಂತರದಲ್ಲಿ 450ಮೀ ಕೆಳಕ್ಕೆ ಬಂದುಬಿಡುತ್ತದೆ. ಭಾಗಮಂಡಲದ ಬಳಿ ಈ ಓಟವನ್ನು ಇದ್ದಕ್ಕಿದಂತೆ ಕಳೆದುಕೊಳ್ಳುತ್ತದೆ. ಕೊಡಗಿನ ಭಾಗ ಬೆಟ್ಟಪ್ರದೇಶ, ಹೊಸ ನದಿಗಳಲ್ಲಿ ಕಾಣುವ ಕಡಿದಾದ ದಂಡೆಗಳೂ ಇಲ್ಲಿವೆ. ಆದರೆ ನದಿಯ ಓಟ ಮಾತ್ರ ಮಂದ. ಹರಿವಿನ ಪ್ರದೇಶದ ಮಟ್ಟ ಬಹಳ ಸ್ವಲ್ಪ ಸ್ವಲ್ಪವಾಗಿ ಇಳಿಯುತ್ತದೆ. ಇಲ್ಲಿ ನದಿ ಹಲವಾರು ಸುತ್ತುಬಳಸುಗಳಿಂದ ಕೂಡಿದೆ. ಹರಿವಿನ ಗತಿಯನ್ನು ನಿರ್ಧರಿಸುವಲ್ಲಿ ತಳಶಿಲೆಯ ಪ್ರಭಾವವೂ ಬಹಳ ಕಡಿಮೆ. ಈ ರೀತಿಯಲ್ಲಿ ಜವ್ವನದ ನದಿ ಮತ್ತು ವೃದ್ಧ ನದಿಗಳ ಸ್ವರೂಪಗಳೆರಡನ್ನೂ ಒಳಗೊಂಡಿರುವ ಇಲ್ಲಿಯ ಕಾವೇರಿ ಒಂದು ವೈಜ್ಞಾನಿಕ ಸಮಸ್ಯೆ. ಬಹುಶಃ ವೃದ್ಧನದಿಯೊಂದು ಈಚಿನ ಭೂವ್ಯತ್ಯಾಸಗಳಿಂದ ಪುನರ್ಯೌವ್ವನವನ್ನು ಪಡೆದಿರಬಹುದು ಎಂದು ಅನ್ನಿಸುತ್ತದೆ. ಮುಂದೆ ಮೈಸೂರು ಪ್ರಸ್ಥಭೂಮಿಯಲ್ಲಿ ಬಳಸಿ ಬಳಸಿ ಹರಿಯುತ್ತ ಎರಡೂ ದಡಗಳಲ್ಲಿ ವಿಶಾಲವಾದ ಮೆಕ್ಕಲು ಹರವುಗಳನ್ನು ಸೃಷ್ಟಿಸಿದೆ. ಇಲ್ಲಿ ಪಾತ್ರ ಅಗಲ, ಸಾಮಾನ್ಯವಾಗಿ ಬಂಡೆತಳದಿಂದ ಕೂಡಿರುತ್ತದೆ. ಆದರೆ ಮೈಸೂರು ಜಿಲ್ಲೆಯ ಪೂರ್ವಭಾಗದಲ್ಲಿ ಹರಿಯುವಾಗ ವಿಶಾಲವಾದ ಮರಳ ಹರವುಗಳನ್ನು ಸೃಷ್ಟಿಸಿರುವುದೂ ಉಂಟು. ಇಲ್ಲಿಯೂ ಈ ಅಂಶಗಳು ನದಿಯ ಪ್ರಾಚೀನತೆ ಅಥವಾ ವೃದ್ಧತ್ವವನ್ನು ಸೂಚಿಸುವಂತಿದ್ದರೂ ಚುಂಚನ ಕಟ್ಟೆಯ ಬಳಿಯಲ್ಲೊಮ್ಮೆ ಸುಮಾರು 27ಮೀಗಳಷ್ಟು ಕೆಳಗೆ ಧುಮುಕುತ್ತದೆ. ಪುನಃ ಶಿವಸಮುದ್ರದಲ್ಲಿ 100ಮೀ ಪ್ರಪಾತಕ್ಕೆ ಇಳಿಯುತ್ತದೆ. ಶಿವಸಮುದ್ರದಿಂದ ಮುಂದೆ ನದಿಯ ಓಟ ಅತಿ ತೀವ್ರ. ಹಿಂದಿನ ಮಂದಗಮನಕ್ಕೆ ನೇರವಿರುದ್ಧ. ಅಲ್ಲಿ ಬಹುವೇಗದಿಂದ ಹರಿದು 80ಕಿಮೀಗಳಷ್ಟು ದೂರದಲ್ಲಿ 800ಮೀ ಕೆಳಕ್ಕೆ ಇಳಿದುಬಿಡುತ್ತದೆ. ಅಲ್ಲದೆ ಈ ಭಾಗದ ಪಾತ್ರ ಹಿಂದಿನಂತೆ ವಿಶಾಲವೂ ಅಲ್ಲ. ಇಲ್ಲಿಹರಿಯುವ ನೀರಿನ ಅಗಾಧ ಪ್ರಮಾಣಕ್ಕೆ ಸಾಲದೆಂಬಷ್ಟು ಕಿರಿದಾಗಿದೆ. ಸಹಜವಾಗಿ ಅತಿ ಗಟ್ಟಿಬಂಡೆಗಳೂ ನೀರಿನ ಹೊಡೆತಕ್ಕೆ ಸಿಕ್ಕಿ ಸವೆದು ಕೊರಕಲುಗಳಾಗಿವೆ. ಕೆಲವೆಡೆ ಅಡಿ ಬಂಡೆಗಳಲ್ಲಿ ಕೊರೆತದಿಂದಾಗಿ 12-15ಮೀ ಆಳದ ಗುಂಡಿಗಳು ಇವೆ. ನದಿಯ ಈ ಸ್ವರೂಪವನ್ನು ಮೇಕೆದಾಟಿನಲ್ಲಿ ಚೆನ್ನಾಗಿ ಕಾಣಬಹುದು. ಕಾವೇರಿಯ ಇನ್ನೊಂದು ವಿಚಿತ್ರವೆಂದರೆ, ಇದೇ ಪ್ರಧಾನ ನದಿಯಾದರೂ ಈ ನದಿಯ ಹರಿವಿನಲ್ಲಿ ಓಟದ ದಿಕ್ಕಿನ ಮುಖ್ಯ ಬದಲಾವಣೆಗಳು ಬೇರೆ ನದಿಗಳು ಕೂಡುವಲ್ಲಿ

ಮಾತ್ರ ಕಂಡುಬರುತ್ತವೆ. ಕಾವೇರಿ ಅದಕ್ಕೂ ಹಿಂದೆ ಇದ್ದ ಪ್ರಾಚೀನ ನದಿಗಳ ಪಾತ್ರವನ್ನು ಈಚೆಗೆ (ಭೂ ವೈಜ್ಞಾನಿಕ ಯುಗದಲ್ಲಿ ತನ್ನದಾಗಿ) ಮಾರ್ಪಡಿಸಿಕೊಂಡಿರಬಹುದು ಎಂಬುದು ವಿಜ್ಞಾನಿಗಳ ಅಭಿಪ್ರಾಯ.

ಕರ್ನಾಟಕದ ಭಾಗದಲ್ಲಿ 20 ನದಿಗಳು ಕಾವೇರಿಯನ್ನು ಕೂಡುತ್ತವೆ. ಹೆಚ್ಚಿನ ಉಪನದಿಗಳು ಪಶ್ಚಿಮ ಬೆಟ್ಟಗಳ ಸಾಲಿನಲ್ಲಿ ಹುಟ್ಟುವುವು. ಕೊಡಗು ಪ್ರದೇಶದಲ್ಲಿನ ಮೊದಲ ಉಪನದಿ ಕನ್ನಿಕೆ. ಉತ್ತರ ಭಾಗದಿಂದ ಹರಿದುಬರುವ ಈ ನದಿ ಭಾಗಮಂಡಲದಲ್ಲಿ ಸಂಗಮವಾಗುತ್ತದೆ. ಅನಂತರ ಅಲ್ಲಿಂದ ಸು.9ಕಿಮೀ ಕೆಳಗೆ ಎಡಕಲ್ಲ ಬಳಿ ನಿಡುಹೊಳೆ, 9ಕಿಮೀ ಕೆಳಗೆ ಚೆರಂದೇತಿ ಬಳಿ ಚೆರುವು ಹೊಳೆ, 16ಕಿಮೀ ಕೆಳಗೆ ಪುಲಿಕೋಟಾ ಬಳಿ ತಂತ್ರಿ ನದಿ, ಮುಂದೆ ನಾಪೊಕ್ಲುವಿನ ಬಳಿ ಕಕ್ಕಬೆ ಹೊಳೆ ಸೇರುತ್ತವೆ. ಇವೆಲ್ಲ ದಕ್ಷಿಣದಿಂದ ಬಂದು ಸೇರುವ ಉಪನದಿಗಳು. ಮುಂದೆ ರಂಗಸಮುದ್ರದ ಬಳಿ ಸೇರುವ ಚಿಕ್ಲಿ ಹೊಳೆ, ಕುಶಾಲನಗರದಿಂದ ಸ್ವಲ್ಪ ಮೇಲೆ ಕೂಡಿಗೆ ಬಳಿ ಸೇರುವ ಹಾರಂಗಿ ಇವು ಉತ್ತರ ಭಾಗದಲ್ಲಿ ಕೂಡುವ ಉಪನದಿಗಳು. ಅನಂತರದ ದೊಡ್ಡ ಉಪನದಿ ಹೇಮಾವತಿ. ಮೂಡಿಗೆರೆ ತಾಲ್ಲೂಕಿನಲ್ಲಿ ಹುಟ್ಟಿ ಸಕಲೇಶಪುರದ ಕಡೆಯಿಂದ ಬರುವ ಈ ನದಿ ಅಕ್ಕಿಹೆಬ್ಬಾಳಿನಿಂದ ಸ್ವಲ್ಪ ಕೆಳಗೆ ತಿಪ್ಪೂರಿನ ಬಳಿ ಕೃಷ್ಣರಾಜಸಾಗರದ ಹಿನ್ನೀರಿನ ಹರವನ್ನು ಸೇರುತ್ತದೆ. ಮುಂದೆ ದಕ್ಷಿಣದಿಂದ ಬರುವ ಲಕ್ಷ್ಮಣತೀರ್ಥ' ಇದೇ ಹಿನ್ನೀರ ಹರವನ್ನು ಕೃಷ್ಣರಾಜನಗರದಿಂದ ಸು.12ಕಿಮೀ ಪೂರ್ವದಲ್ಲಿ ಸೇರುತ್ತದೆ. ಇಲ್ಲಿಂದ ಮುಂದಿನ ಕಾವೇರಿಯ ಉತ್ತರ ದಂಡೆಯಿಂದ ಬಂದು ಸೇರುವ ಉಪನದಿಗಳೆಲ್ಲ ಕಾವೇರಿ ಕೃಷ್ಣಾ ನದೀವಲಯಗಳ ನೀರ್ಬೇರ್ಪಡೆ ಮಾಡುವ ಬೆಂಗಳೂರು ಬಾಣಾವರ ಬೆಟ್ಟಬೆಟ್ಟಗಳ ಶ್ರೇಣಿಯಿಂದ ಹುಟ್ಟಿ ಬರುವುವು. ಅವುಗಳಲ್ಲಿ ಮೊದಲನೆಯದು ಲೋಕಪಾವನಿ. ಶ್ರೀರಂಗಪಟ್ಟಣದ ಬಳಿ ಕರಿಘಟ್ಟದ ಹತ್ತಿರ ಸಂಗಮ. ಮುಂದೆ ಸಂಗಮವಾಗುವ ದೊಡ್ಡ ನದಿ ಕಪಿಲಾ. ಕೇರಳದ ವೈನಾಡಿನಿಂದ ಹರಿದು ಬರುವ ಈ ನದಿ ಕೂಡುವುದು ತಿರುಮಕೂಡಲು ನರಸೀಪುರದಲ್ಲಿ. ಇಲ್ಲಿಂದ ಮುಂದಿನ, ದಕ್ಷಿಣದಿಂದ ಬರುವ ಕಾವೇರಿಯ ಉಪನದಿಗಳೆಲ್ಲ ಕರ್ನಾಟಕದ ದಕ್ಷಿಣದಂಚಿನ, ಮಾದೇಶ್ವರ - ಬಿಳಿಗಿರಿರಂಗ - ನೀಲಗಿರಿಬೆಟ್ಟ ಶ್ರೇಣಿಯಿಂದ ಹರಿದು ಬರುವುವು. ತಿರುಮಕೂಡಲು ನರಸೀಪುರದಿಂದ ಮುಂದೆ ಕೂಡುವ ಮೊದಲ ಉಪನದಿ ಸುವರ್ಣಾವತಿ. ತಲಕಾಡಿನಿಂದ ಸ್ವಲ್ಪ ಕೆಳಗೆ ಕೊಳ್ಳೇಗಾಲ ತಾಲ್ಲೂಕಿನ ಹಂಪಾಪುರದ ಹತ್ತಿರ ಕಾವೇರಿಯ ಬಲದಂಡೆಯಲ್ಲಿ ಅದರ ಸಂಗಮ. ಅನಂತರ ಉತ್ತರದಿಂದ ಬರುವ ಶಿಂಷಾ ಶಿವಸಮುದ್ರದಿಂದ ಸು.10ಕಿಮೀ ಕೆಳಗೆ ಸೇರುತ್ತದೆ. ಮುಂದಿನದು ಬೆಂಗಳೂರು ಜಿಲ್ಲೆಯಿಂದ ಹರಿದುಬರುವ ಅರ್ಕಾವತಿ. ಇದು ಕೂಡುವುದು ಮೇಕೆದಾಟಿನಿಂದ ಸು.5ಕಿಮೀ ಮೇಲೆ ಸಂಗಮ ಎಂಬಲ್ಲಿ. ಮುಂದಿನವು ಚಿಕ್ಕ ನದಿಗಳು, ಹಳ್ಳಗಳು. ಎಲ್ಲವೂ ಕಾವೇರಿಯ ಬಲದಂಡೆಯ ಉಪನದಿಗಳು. ಇವುಗಳಲ್ಲಿ ಬಿಳಿಗಿರಿರಂಗನ ಬೆಟ್ಟದಿಂದ ಹರಿದುಬರುವ ಉಡುತೊರೆ ಹಳ್ಳ ಸ್ವಲ್ಪ ದೊಡ್ಡದು. ಅನಂತರದವು ಮಾದೇಶ್ವರ ಬೆಟ್ಟದಿಂದ ಹುಟ್ಟಿ ಹರಿಯುವುವು. ಅವು ಕ್ರಮವಾಗಿ ಗಿರ್‍ಗುಳಿ ಹಳ್ಳ, ಗುಳಿ ಹಳ್ಳ, ಗುಳಿಯಾತನೂರು ಹಳ್ಳ, ಯೇಲಕ್ಕಿಯಾತು ಹಳ್ಳ. ಕೊನೆಯಲ್ಲಿ, ಕಾವೇರಿ ಕರ್ನಾಟಕದ ಎಲ್ಲೆಯನ್ನು ಬಿಡುವಲ್ಲಿ ಕೊಳ್ಳೇಗಾಲ ತಾಲ್ಲೂಕಿನ ದಕ್ಷಿಣ ಗಡಿಯಾಗಿ ಹರಿಯುವ ಪಾಲಾರ್ ಎಂಬ ಸಣ್ಣ ನದಿ ಕಾವೇರಿಯನ್ನು ಸಂಧಿಸುತ್ತದೆ.

ಕಾವೇರಿ ನದಿಯ ಒಟ್ಟು ಹರಿವಿನ ಉದ್ದ ಸು.760ಕಿಮೀ. ಉಗಮದಿಂದ ಕರ್ನಾಟಕದ ಎಲ್ಲೆಯನ್ನು ಬಿಡುವವರೆಗಿನ ಕಾವೇರಿಯ ಹರಿವಿನ ಒಟ್ಟು ಉದ್ದ ಸು.400ಕಿಮೀ. ಮುಖ್ಯ ಉಪನದಿಗಳೂ ಸೇರಿದಂತೆ ಕಾವೇರಿ ವಲಯದ ನದಿಗಳ ಒಟ್ಟು ಉದ್ದ ಸು.1100ಕಿಮೀ. ಕರ್ನಾಟಕದಲ್ಲಿನ ಕಾವೇರಿ ಕಣಿವೆಯ ವಿಸ್ತಾರ ಸು.30,000ಚ.ಕಿಮೀ.

ಏಪ್ರಿಲ್-ಮೇ ತಿಂಗಳ ಸುಮಾರಿನಲ್ಲಿ ಬೀಳುವ ಮಳೆಯಿಂದ ಹೇಮಾವತಿ, ಕಪಿಲಾ, ಅರ್ಕಾವತಿ, ಶಿಂಷಾ ಮೊದಲಾದ ನದಿಗಳಲ್ಲಿ ಸ್ವಲ್ಪ ಮಟ್ಟಿನ ಪ್ರವಾಹವಿರುತ್ತದೆ. ಇದರಿಂದ ಕಾವೇರಿಯಲ್ಲೂ ಆಗಾಗ್ಗೆ ಸ್ವಲ್ಪ ಹೆಚ್ಚು ನೀರು ಹರಿಯುವುದುಂಟು. ಜೂನ್‌ನಿಂದ ಸೆಪ್ಟಂಬರಿನವರೆಗೆ ಪಶ್ಚಿಮಘಟ್ಟದಲ್ಲಿ ವಿಶೇಷ ಮಳೆಯಾಗುವುದರಿಂದ ಆ ಕಾಲದಲ್ಲಿ ಅದರ ಉಪನದಿಗಳಲ್ಲಿ ಮುಖ್ಯವಾದ ಕಪಿಲಾ, ಹೇಮಾವತಿ ಮತ್ತು ಲಕ್ಷ್ಮಣ ತೀರ್ಥಗಳಲ್ಲೂ ಪ್ರವಾಹವಿದ್ದು ಕಾವೇರಿ ತುಂಬಿ ಹರಿಯುತ್ತದೆ. ಅನಂತರ ನೀರಿನ ಪ್ರಮಾಣ ಕ್ರಮೇಣ ಇಳಿಮುಖವಾಗುತ್ತದೆ.



ಕಾವೇರಿ ಪ್ರತಿಮೆ, ಕೃಷ್ಣರಾಜಸಾಗರ

ಕಾವೇರಿ ನದಿಗೆ ಅಡ್ಡಲಾಗಿ ಅನೇಕ ಅಣೆಕಟ್ಟೆಗಳನ್ನು ಕಟ್ಟಿ ಕಾಲುವೆಗಳ ಮೂಲಕ ನೀರಾವರಿ ಸೌಲಭ್ಯವನ್ನು ಕಲ್ಪಿಸಿಕೊಳ್ಳಲಾಗಿದೆ. ಕಾವೇರಿ ನದಿ ಬಯಲು ಪ್ರದೇಶವನ್ನು ಸೇರುವೆಡೆಯಿಂದ ಶಿವಸಮುದ್ರದವರೆಗೂ ನದಿಯ ಇಕ್ಕೆಲಗಳಲ್ಲೂ ವಿಶಾಲವಾದ ಮೆಕ್ಕಲು ಹರವುಗಳೂ ಇದ್ದು, ನೀರಾವರಿ ಸೌಕರ್ಯವೂ ಇರುವುದರಿಂದ ಈ ಭಾಗ ಸಂಪದ್ಭರಿತವಾಗಿ ಬೆಳೆಯಲು ಅವಕಾಶವಾಗಿದೆ. ಕೃಷ್ಣರಾಜಸಾಗರ ಕಟ್ಟೆಯನ್ನು ಬಿಟ್ಟರೆ ಮಿಕ್ಕವೆಲ್ಲ ಚಿಕ್ಕ ಅಣೆಕಟ್ಟುಗಳು. ಹಲವು ಬಹು ಪ್ರಾಚೀನವಾದವು. ಕಾವೇರಿಯ ಅಣೆಕಟ್ಟುಗಳಲ್ಲಿ ಮೊದಲನೆಯದು ಕೃಷ್ಣರಾಜ ಅಣೆಕಟ್ಟು, ಹಾಸನ ಜಿಲ್ಲೆಯಲ್ಲಿ ರಾಮನಾಥಪುರದ ಪಶ್ಚಿಮಕ್ಕೆ ಸು.5ಕಿಮೀ, ದೂರದಲ್ಲಿ ಕಟ್ಟೇಪುರ ಎಂಬಲ್ಲಿ ಕಟ್ಟಲಾಗಿದೆ. ಇದರ ಎಡದಂಡೆಯಿಂದ ಹೊರಡುವ ರಾಮನಾಥಪುರ ನಾಲೆ ರಾಮನಾಥಪುರ, ಬಸವಾಪಟ್ಟಣದ ಮೂಲಕ ಕಲ್ಲಾಪುರದವರೆಗೆ ನೀರುಣಿಸುತ್ತದೆ. ಬಲದಂಡೆಯ ಕಟ್ಟೆಪುರನಾಲೆ ಮಲ್ಲಿನಾಥಪುರ, ರುದ್ರಪಟ್ಟಣಗಳ ಮೂಲಕ ಸುಮಾರು ಚುಂಚನಕಟ್ಟೆಯ ಹತ್ತಿರದವರೆಗೂ ಬರುತ್ತದೆ. ಚುಂಚನಕಟ್ಟೆಯಿಂದ ಸು.12ಕಿಮೀ ಮೇಲೆ ಕೃಷ್ಣರಾಜನಗರ ತಾಲ್ಲೂಕು ಚಳ್ಳೂರು ಬಳಿ ಇರುವ ಚಾಮರಾಜಕಟ್ಟೆ (ಅಳಲೆಕಟ್ಟೆ) ಎರಡನೆಯದು. ಇಲ್ಲಿಂದ ಹೊರಡುವ ಕಾವೇರಿಯ ಎಡದಂಡೆಯ ಚಾಮರಾಜ ನಾಲೆ ಸಾಲಿಗ್ರಾಮ, ಮಿರ್ಲೆ ಗಂಧನಹಳ್ಳಿ ಮೂಲಕ ಕೃಷ್ಣರಾಜಸಾಗರದ ಹರವಿಗೆ ಸೇರುತ್ತದೆ; ಬಲದಂಡೆಯ ನಾಲೆ ಕೃಷ್ಣರಾಜನಗರದ ಮೂಲಕ ಅತ್ತಿಕುಪ್ಪೆಯವರೆಗೆ ಸಾಗುತ್ತದೆ. ಮುಂದೆ ಚುಂಚನಕಟ್ಟೆಯ ಬಳಿಯಲ್ಲೆ ಎರಡು ಅಣೆಕಟ್ಟುಗಳಿವೆ. ಅವುಗಳಲ್ಲಿ ಮೊದಲನೆಯದು ಹನುಮಂತಕಟ್ಟೆ, ಇದರ ಎಡದಂಡೆಯಿಂದ ತೆಗೆದಿರುವ ಮಿರ್ಲೆ ನಾಲೆ ಮುಂದೆ ಹೊಸನಾಲೆ, ಹಿರೇನಾಲೆ, ಅತ್ತಿಕಟ್ಟೆನಾಲೆಗಳಾಗಿ ಕವಲೊಡೆದು ಮಿರ್ಲೆ, ಗಂಧನಹಳ್ಳಿ ಮೂಲಕ ಸಾಗಿ ಕೃಷ್ಣರಾಜಸಾಗರದ

ಹಿನ್ನೀರನ್ನು ಸೇರುತ್ತವೆ. ಈ ಕಟ್ಟೆ ಚಿಕ್ಕದೇವರಾಜ ಒಡೆಯರ ಕಾಲದ ರಚನೆ; ಪೂರ್ಣಯ್ಯನವರು ಮತ್ತಷ್ಟು ದುರಸ್ತಿ ಮಾಡಿಸಿದರು. ಹನುಮಂತಕಟ್ಟೆಯಿಂದ ಕೇವಲ 200ಮೀ ಕೆಳಗಿರುವುದು ಚುಂಚನಕಟ್ಟೆ ಅಣೆಕಟ್ಟು (ಶ್ರೀರಾಮದೇವರ ಅಣೆಕಟ್ಟು) ಚುಂಚನಕಟ್ಟೆ ಜಲಪಾತದಿಂದ ಮೇಲೆ ಸ್ವಲ್ಪ ದೂರದಲ್ಲಿದೆ. ಇಲ್ಲಿಂದ ಬಲದಂಡೆಯಲ್ಲಿ ರಾಮಸಮುದ್ರ ನಾಲೆ ಹೊರಟು ಕೃಷ್ಣರಾಜನಗರದ ಮೂಲಕ ತಿಪ್ಪೂರಿನವರೆಗೆ ಸಾಗಿ ಕೃಷ್ಣರಾಜಸಾಗರ ಹರವನ್ನು ಸೇರುತ್ತದೆ. ಇಲ್ಲಿಂದ ಮುಂದೆ ಅಡಗೂರು ಕಟ್ಟೆ ಎಂಬುದಿತ್ತು. ಈಗ ಕೃಷ್ಣರಾಜಸಾಗರದ ಹಿನ್ನೀರಿನಲ್ಲಿ ಮುಳುಗಿದೆ. ಅನಂತರದ್ದು ಪ್ರಸಿದ್ಧ ಕೃಷ್ಣರಾಜಸಾಗರ (ನೋಡಿ). ಇಲ್ಲಿಂದ ಬಲ-ಎಡದಂಡೆಗಳಲ್ಲಿ ಹೊರಡುವ ನಾಲೆಗಳು ಮಂಡ್ಯ ಜಿಲ್ಲೆಯ ಬಹುಭಾಗವನ್ನು ಸಮೃದ್ಧವಾಗಿ ಮಾಡಿವೆ. ಕೃಷ್ಣರಾಜಸಾಗರದಿಂದ ಕೇವಲ 3ಕಿಮೀ ಕೆಳಗೆ ಸೀತಾಪುರದ ಬಳಿ ಮಾಡದಕಟ್ಟೆ ಇದೆ. ಈ ಚಿಕ್ಕ ಅಣೆಕಟ್ಟಿನಿಂದ ಎಡದಂಡೆಯಲ್ಲಿ ಹೊರಡುವ ಚಿಕ್ಕದೇವರಾಯ ನಾಲೆ ಮಂಡ್ಯ, ಮೈಸೂರು ಜಿಲ್ಲೆಗಳಲ್ಲಿ ಹರವು, ಕ್ಯಾತನಹಳ್ಳಿ, ಪಾಂಡವಪುರ, ಕರಿಘಟ್ಟ, ಸೆಟ್ಟಿಹಳ್ಳಿ, ಅರಕೆರೆ ಮೂಲಕ ಸು.12ಕಿಮೀ ದೂರ ಸಾಗುತ್ತದೆ. ಈ ಕಟ್ಟೆ ಚಿಕ್ಕ ದೇವರಾಯ ಒಡೆಯರ ಕಾಲದ ರಚನೆ. ಆ ಕಟ್ಟೆಯಿಂದ ಕೆಲವೇ ಮೀಟರುಗಳ ಕೆಳಗೆ ದೇವರಾಯ ಅಣೆಕಟ್ಟಿದೆ. ಇಲ್ಲಿಂದ ಹೊರಡುವ ನಾಲೆ ಬಲದಂಡೆಯಲ್ಲಿ ಪಾಲಹಳ್ಳಿಯವರೆಗೆ ಸು.12ಕಿಮೀಗಳಷ್ಟು ದೂರ ಮಾತ್ರ ಹೋಗುತ್ತದೆ. ಮತ್ತಷ್ಟು ಕೆಳಗೆ ಬೆಳಗೊಳದಿಂದ ಸು.3ಕಿಮೀ ದೂರದಲ್ಲಿ ಬಲಮುರಿ ಅಣೆಕಟ್ಟಿದೆ. ಇಲ್ಲಿಂದ ಹೊರಡುವ ವಿರಜಾ ನದಿ ನಾಲೆ ಸು.60ಕಿಮೀ ಉದ್ದವಿದೆ. ಪಾಲಹಳ್ಳಿ, ಕಳಸ್ತವಾಡಿ, ನಾಗನಹಳ್ಳಿ, ಹೆಬ್ಬಾಡಿ ಮೂಲಕ ಹರಿದು ಅಂಕನಹಳ್ಳಿಯ ಬಳಿ ಕೊನೆಗೊಳ್ಳುತ್ತದೆ. ಅಲ್ಲಿಂದ ಮತ್ತಷ್ಟು ಕೆಳಗೆ ಬಂಗಾರದೊಡ್ಡಿ ಅಣೆಕಟ್ಟಿದೆ. ಇದು ಕಾವೇರಿಯ ಶಾಖೆಯಾದ ಪಶ್ಚಿಮವಾಹಿನಿಗೆ ಅಡ್ಡಲಾಗಿದೆ. ಕಟ್ಟೆಯ ಎಡದಂಡೆಯಿಂದ ಹೊರಡುವ ಬಂಗಾರದೊಡ್ಡಿ ನಾಲೆ ನೀರ್ಸೇತುವೆಯೊಂದರ ಮೂಲಕ ಕಾವೇರಿಯ ಬಲ ಕವಲನ್ನು ದಾಟಿ ಶ್ರೀರಂಗಪಟ್ಟಣವನ್ನು ತಲುಪಿ ಅಲ್ಲಿ ಮೂರು ಕವಲಾಗುತ್ತದೆ. ಒಂದು ಕವಲು ಕೋಟೆಯೆಡೆಗೆ, ಇನ್ನೊಂದು ದರಿಯಾದೌಲತ್ತಿಗೆ, ಮತ್ತೊಂದು ಗುಂಬಜಿನವರೆಗೆ -ಹೀಗೆ ಸಾಗುತ್ತವೆ. ಶ್ರೀರಂಗಪಟ್ಟಣ ದ್ವೀಪದಿಂದ ಮತ್ತಷ್ಟು ಕೆಳಗೆ ರಾಮಸ್ವಾಮಿ ಕಟ್ಟೆ ಇದೆ. ಇಲ್ಲಿಂದ ಎಡದಂಡೆಯಲ್ಲಿ ಹೊರಡುವ ರಾಮಸ್ವಾಮಿ ನಾಲೆ ಸು.50ಕಿಮೀಗಳಷ್ಟು ದೂರ ಬನ್ನೂರು, ಸೋಸಲೆ ಮೂಲಕ ಸುಮಾರು ತಲಕಾಡಿನ ಹತ್ತಿರದವರೆಗೂ ಹೋಗುತ್ತದೆ. ಬಲದಂಡೆಯದು ರಾಜಪರಮೇಶ್ವರಿ ನಾಲೆ. ಇದು ಸು.30ಕಿಮೀ ಉದ್ದವಿದ್ದು ತಿರುಮಕೂಡಲು ನರಸೀಪುರ ತಾಲ್ಲೂಕಿನಲ್ಲಿ ರಂಗಸಮುದ್ರ, ಗರ್ಗೇಶ್ವರಿ ಮೂಲಕ ತಿರುಮಕೂಡಲಿನವರೆಗೆ ಹೋಗುತ್ತದೆ. ತಲಕಾಡಿನ ಬಳಿ ಮಾಧವಮಂತ್ರಿ ಅಣೆಕಟ್ಟಿದೆ. ನೀರಾವರಿಗೆ ಉಪಯೋಗವಾಗುವ ಕರ್ನಾಟಕ ಭಾಗದ ಕಾವೇರಿ ಅಣೆಕಟ್ಟುಗಳಲ್ಲಿ ಇದೇ ಕೊನೆಯದು. ಇದು 14ನೆಯ ಶತಮಾನದಲ್ಲಿ ರಚಿತವಾದದ್ದು. ಇದರ ಎಡದಂಡೆಯಿಂದ ನಾಲೆ ಹೊರಡುತ್ತದೆ. ಇದು ತಲಕಾಡಿನ ಮೂಲಕ ಸಾಗಿ ಮುಂದೆ ಮೂರು ಕವಲುಗಳಾಗಿ ಒಡೆಯುತ್ತದೆ. ಮುಖ್ಯ ಕವಲು ಶಿವಸಮುದ್ರದವರೆಗೂ ಹೋಗುತ್ತದೆ. ಶಿವಸಮುದ್ರದ ಬಳಿಯಲ್ಲಿ ಜಲಪಾತದಿಂದ ಸ್ವಲ್ಪ ಮೇಲೆ ವಿದ್ಯುದುತ್ಪಾದನ ಕೇಂದ್ರಕ್ಕೆ ನೀರೊದಗಿಸುವ ಸಲುವಾಗಿ ಚಿಕ್ಕ ಅಣೆಕಟ್ಟೆಯೊಂದನ್ನು ಕಟ್ಟಲಾಗಿದೆ.

ಕಾವೇರಿ ದೊಡ್ಡ ನದಿಯಾದರೂ ಬೇಸಗೆ ಕಾಲದಲ್ಲಿ ನೀರು ಕಡಿಮೆ ಇರುವುದರಿಂದ ನದಿಯನ್ನು ಸುಲಭವಾಗಿ ಹಾಯಬಹುದು. ಕೆಲವೆಡೆಗಳಲ್ಲಿ ಎರಡು ದಡಗಳ ಸಂಪರ್ಕಕ್ಕೆ ದೋಣಿ ಅಥವಾ ಹರಿಗೋಲುಗಳನ್ನು ಉಪಯೋಗಿಸಲಾಗುತ್ತದೆ. ವರ್ಷದ ಎಲ್ಲ ಕಾಲದಲ್ಲೂ ಉಪಯೋಗಿಸಬಹುದಾದ ಹಲವು ಸೇತುವೆಗಳನ್ನೂ ಕಾವೇರಿಗೆ ಕಟ್ಟಲಾಗಿದೆ. ಉಗಮಸ್ಥಾನದಿಂದ ಆರಂಭಿಸಿದರೆ ಮೊದಲನೆಯದು ಕೊಡಗಿನ ಸಿದ್ದಾಪುರದ ಬಳಿ ಇದೆ. ಇದು ವಿರಾಜಪೇಟೆ - ಕುಶಾಲನಗರಗಳಿಗೆ ಸಂಪರ್ಕ ಒದಗಿಸುತ್ತದೆ. ಎರಡನೆಯದು ಕುಶಾಲನಗರದ್ದು (ಮೈಸೂರು - ಮಡಿಕೇರಿ ರಸ್ತೆ ಇದನ್ನು ಹಾಯುತ್ತದೆ). ಮುಂದಿನ ಸೇತುವೆಗಳು ರಾಮನಾಥಪುರದ ಬಳಿ ಕೇರಳಾಪುರ, ಚುಂಚನಕಟ್ಟೆ ಮತ್ತು ಕೃಷ್ಣರಾಜನಗರದ ಬಳಿ (ಮೈಸೂರು - ಹಾಸನ ರಸ್ತೆ) ಇವೆ. ಅನಂತರ ಕೃಷ್ಣರಾಜಸಾಗರ ಕಟ್ಟೆಯ ಮೇಲೂ ಹಾದಿ ಮಾಡಲಾಗಿದೆ. ಮುಂದೆ ಶ್ರೀರಂಗಪಟ್ಟಣದಲ್ಲಿ ಕಾವೇರಿಯ ಎರಡು ಕವಲುಗಳಿಗೂ ಹೊಸದಾಗಿ ನಿರ್ಮಿಸಿದ ಒಂದೊಂದು ಬೃಹತ್ ಸೇತುವೆಗಳಿವೆ. ಇವನ್ನು ಕಟ್ಟುವುದಕ್ಕೆ ಮುಂಚೆ ಇದ್ದ ದಕ್ಷಿಣ ಕವಲಿನ ಸೇತುವೆ ಹಾಗೂ ಉತ್ತರ ಕವಲಿನ ವೆಲ್ಲೆಸ್ಲಿ ಸೇತುವೆ ಇನ್ನೂ ಉಳಿದಿವೆ. ಮುಂದೆ ಬನ್ನೂರು ಮತ್ತು ತಿರುಮಕೂಡಲು ನರಸೀಪುರದ ಬಳಿಯಲ್ಲಿ ಸೇತುವೆಗಳಿವೆ. ಕೊನೆಯದು ಶಿವಸಮುದ್ರದಲ್ಲಿದೆ.



ಶಿವಸಮುದ್ರ ಜಲಪಾತ

ಕುಶಾಲನಗರ, ಕೃಷ್ಣರಾಜನಗರ, ಶ್ರೀರಂಗಪಟ್ಟಣ ಮತ್ತು ತಿರುಮಕೂಡಲು ನರಸೀಪುರ ಕಾವೇರಿ ದಂಡೆಯಲ್ಲಿರುವ ದೊಡ್ಡ ಊರುಗಳು. ಭಾಗಮಂಡಲ, ರಾಮನಾಥಪುರ, ಚುಂಚನಕಟ್ಟೆ, ಶ್ರೀರಂಗ ಪಟ್ಟಣ, ತಿರುಮಕೂಡಲು ನರಸೀಪುರ, ಮುಡುಕುತೊರೆ, ತಲಕಾಡು ಮತ್ತು ಶಿವನಸಮುದ್ರ ಮುಖ್ಯ ಪುಣ್ಯಕ್ಷೇತ್ರಗಳು.

ಕಾವೇರಿ ನದಿ ಕರ್ನಾಟಕದಲ್ಲಿ ನೀರಾವರಿಗೆ ಬಹುಮಟ್ಟಿಗೆ ಉಪಯೋಗಿಸಿಕೊಳ್ಳಲಾಗಿರುವ ಒಂದು ಮುಖ್ಯ ನದಿ. ಇದು ದಕ್ಷಿಣ ಕರ್ನಾಟಕ ಭಾಗದ ಜೀವನಾಡಿ. ಈ ಭಾಗದ ಸಂಪತ್ತಿಗೆ ಮೂಲಹೇತು. ಮಂಡ್ಯ ಜಿಲ್ಲೆಯ ಕನ್ನಂಬಾಡಿಯ ಬಳಿ ಹೇಮಾವತಿ ಮತ್ತು ಲಕ್ಷ್ಮಣತೀರ್ಥ ಉಪನದಿಗಳು ಕೂಡಿದ ಸ್ವಲ್ಪ ದೂರದಲ್ಲೇ ಕಾವೇರಿ ನದಿಗೆ ಕೃಷ್ಣರಾಜಸಾಗರ ಅಣೆಕಟ್ಟನ್ನು ಕಟ್ಟಲಾಗಿದೆ. ಇದನ್ನು ಸರ್.ಎಂ. ವಿಶ್ವೇಶ್ವರಯ್ಯನವರು ಯೋಜಿಸಿ 1911ರಲ್ಲಿ ನಿರ್ಮಾಣ ಪ್ರಾರಂಭಿಸಿದರು. ಇದು ಮಂಡ್ಯ, ಮೈಸೂರು ಜಿಲ್ಲೆಗಳಿಗೆ ನೀರಾವರಿ ಸೌಲಭ್ಯ ಒದಗಿಸಿದೆ. ಕಾವೇರಿ ಉಪನದಿಗಳಿಗೂ ವಿವಿಧ ಕಡೆಗಳಲ್ಲಿ ಜಲಾಶಯಗಳನ್ನು ನಿರ್ಮಿಸಲಾಗಿದೆ. ತಮಿಳುನಾಡಿನ ಭಾಗದಲ್ಲಿ ಅತಿ ದೊಡ್ಡ ಮೆಟ್ಟೂರು ಜಲಾಶಯವಿದೆ. ನೀರಾವರಿಗೆ ಅಲ್ಲದೆ ಕೃಷ್ಣರಾಜಸಾಗರ ಹಾಗೂ ಶಿವಸಮುದ್ರದಲ್ಲಿ ಕಾವೇರಿಯ ನೀರನ್ನು ನಿಯಂತ್ರಿಸಿ, ಶಿವಸಮುದ್ರ ವಿದ್ಯುದಾಗರಕ್ಕೆ ವರ್ಷಪೂರ್ತಿ ನೀರೊದಗಿಸಿ ವಿದ್ಯುಚ್ಛಕ್ತಿ ಉತ್ಪಾದನೆಗೂ ಕಾವೇರಿಯನ್ನು ಬಳಸಲಾಗಿದೆ. ಈಗ ಬೆಂಗಳೂರು ಮತ್ತು ಮೈಸೂರು ಮಹಾನಗರಗಳಿಗೆ ಕುಡಿಯುವ ನೀರನ್ನು ಒದಗಿಸುವುದು ಕಾವೇರಿಯೇ.

ಈ ನದಿಯಿಂದಾಗಿ ದೇಶದ ಸಂಪದಭಿವೃದ್ಧಿಗೆ ಮಹ ದುಪಕಾರವಾಗಿದೆ. ಇದರ ದಡದಲ್ಲಿರುವ ಪುಣ್ಯಕ್ಷೇತ್ರಗಳಿಂದಾಗಿ ಕಾವೇರಿ ಪವಿತ್ರ ನದಿಯೆಂದೆನಿಸಿ, ದಕ್ಷಿಣಗಂಗೆ ಎಂದು ಖ್ಯಾತಿಪಡೆದಿದೆ. ಹಲವಾರು ಶಾಸನ ಮತ್ತು ಕಾವ್ಯಗಳಲ್ಲಿ ಇದರ ಪಾವಿತ್ರ್ಯವನ್ನೂ ಸೌಂದರ್ಯವನ್ನೂ ವರ್ಣಿಸಲಾಗಿದೆ. ಪುರಾಣಗಳಲ್ಲಿ ಸಹ ಇದರ ಪ್ರಸ್ತಾಪವಿದೆ. ಕಾವೇರಿ ನದಿಯನ್ನು ಕುರಿತು ಕೆಲವು ಮಹಾತ್ಮ್ಯೆಗಳೂ ಹುಟ್ಟಿಕೊಂಡಿವೆ.

ಅಗ್ನಿಪುರಾಣದಲ್ಲಿ ಕಾವೇರಿ ನದಿಯ ಉಗಮದ ಒಂದು ಕಥೆ ಹೀಗಿದೆ: ಪೂರ್ವಕಾಲದಲ್ಲಿ ಕವೇರನೆಂಬ ರಾಜ ಬ್ರಹ್ಮನನ್ನು ಕುರಿತು ಕಠಿಣ ತಪಸ್ಸನ್ನಾಚರಿಸಿದ. ಅವನಿಗೆ ಬ್ರಹ್ಮ ಪ್ರತ್ಯಕ್ಷನಾಗಿ, ಮೋಕ್ಷವುಂಟಾಗಬೇಕಾದರೆ ಇನ್ನು ಸ್ವಲ್ಪಕಾಲ ಕಾಯಬೇಕೆಂದೂ

ಅಲ್ಲಿಯವರೆಗೆ ಬ್ರಹ್ಮನ ಮಗಳಾದ ವಿಷ್ಣುಮಾಯೆಯನ್ನು ತನ್ನ ಮಗಳನ್ನಾಗಿ ಸ್ವೀಕರಿಸಿ ಸಾಕಬೇಕೆಂದೂ ತಿಳಿಸಿದ. ಅದರಂತೆ ಕವೇರರಾಜ ವಿಷ್ಣುಮಾಯೆಯನ್ನು ತನ್ನ ಅರಮನೆಯಲ್ಲಿ ಸಾಕಿದ. ವಿಷ್ಣುಮಾಯೆ ದೊಡ್ಡವಳಾದ ಮೇಲೆ ತಪ್ಪಸ್ಸುಮಾಡಲು ಹಿಮಾಲಯಕ್ಕೆ ತೆರಳಿದಳು. ಅವಳ ತಪಸ್ಸಿನಿಂದ ಕವೇರರಾಜನಿಗೆ ಮೋಕ್ಷ ಪ್ರಾಪ್ತವಾಯಿತು. ವಿಷ್ಣುಮಾಯೆಯ ತಪಸ್ಸಿಗೆ ವಿಷ್ಣು ಮೆಚ್ಚಿ ಪ್ರತ್ಯಕ್ಷನಾಗಿ ಅವಳಿಗೆ ಎರಡು ವರಗಳನ್ನು ಕೊಟ್ಟ. ಒಂದು, ಅವಳು ಸಹ್ಯಪರ್ವತದಲ್ಲಿ ನದಿಯಾಗಿ ಹುಟ್ಟಿ ಹರಿಯುವುದು. ಇನ್ನೊಂದು, ಮಾನವ ರೂಪದಲ್ಲಿ ಲೋಪಾಮುದ್ರೆ ಎಂಬ ಹೆಸರನ್ನು ತಳೆದು ಅಗಸ್ತ್ಯಋಷಿಯ ಪತ್ನಿಯಾಗುವುದು. ವಿಷ್ಣು ಈ ವರಗಳನ್ನು ವಿಷ್ಣುಮಾಯೆಗೆ ಕೊಟ್ಟ ಸಮಯದಲ್ಲಿ ಅಗಸ್ತ್ಯಋಷಿ ಬ್ರಹ್ಮನನ್ನು ಕುರಿತು ತಪಸ್ಸುಮಾಡುತ್ತಿದ್ದ. ಬ್ರಹ್ಮ ಅಗಸ್ತ್ಯನಿಗೆ ಪ್ರತ್ಯಕ್ಷನಾಗಿ ಲೋಪಾಮುದ್ರೆಯನ್ನು ವಿವಾಹವಾಗುವಂತೆ ಅವನಿಗೆ ಹೇಳಿದ. ಅದರಂತೆ ಅಗಸ್ತ್ಯ ಲೋಪಾಮುದ್ರೆಯ ರೂಪ ತಳೆದಿದ್ದ ವಿಷ್ಣುಮಾಯೆಯಿದ್ದಲ್ಲಿಗೆ ಬಂದು ಆಕೆಯನ್ನು ಮದುವೆಯಾದ. ಈ ವಿವಾಹವಾದ ಸ್ವಲ್ಪ ಸಮಯದ ಅನಂತರ, ದಕ್ಷಿಣ ಭಾರತದಲ್ಲಿ ನೀರಿನ ಅಭಾವವುಂಟಾಗಿದೆಯೆಂಬ ಸಂಗತಿ ಅಗಸ್ತ್ಯನಿಗೆ ತಿಳಿಯಿತು. ಆಗ ಅಗಸ್ತ್ಯ ಲೋಪಾಮುದ್ರೆಯನ್ನು ನೀರಿನ ರೂಪ ತಾಳಿ ತನ್ನ ಕಮಂಡಲದಲ್ಲಿರುವಂತೆ ಕೇಳಿಕೊಂಡ. ಲೋಪಾಮುದ್ರೆ ಹಾಗೆಯೇ ಮಾಡಿದಳು. ಅಗಸ್ತ್ಯ ಆ ಕಮಂಡಲವನ್ನು ಹಿಡಿದುಕೊಂಡು ಸಹ್ಯಪರ್ವತಶ್ರೇಣಿಯ ಬ್ರಹ್ಮಗಿರಿಗೆ ಹೋದ. ಆ ಸ್ಥಳದಲ್ಲಿ ವಿಷ್ಣು ನೆಲ್ಲಿಮರದ ರೂಪ ತಳೆದಿದ್ದ. ಬ್ರಹ್ಮ ಆ ಮರವನ್ನು ಪೂಜಿಸಲು, ಕೈಲಾಸದಲ್ಲಿ ಹರಿಯುತ್ತಿದ್ದ ವಿರಜಾ ನದಿಯ ನೀರನ್ನು ತನ್ನ ಶಂಖದಿಂದ ತಂದು ಆ ಮರಕ್ಕೆ ಎರೆಯುತ್ತಿದ್ದ. ಆ ಸಮಯದಲ್ಲಿ ಅಲ್ಲಿಗೆ ಆಗಮಿಸಿದ ಅಗಸ್ತ್ಯ ತನ್ನ ಕಮಂಡಲವನ್ನು ಅಲ್ಲಿನ ಒಂದು ದೊಡ್ಡ ಚಪ್ಪಟೆ ಕಲ್ಲಿನ ಮೇಲಿಟ್ಟು ಸ್ನಾನಕ್ಕೆಂದು ಸ್ವಲ್ಪ ದೂರ ಹೋದ. ಅದೇ ಸಮಯದಲ್ಲಿ ಬಿರುಗಾಳಿ ಬೀಸಲು, ಕಲ್ಲಿನ ಮೇಲಿಟ್ಟಿದ್ದ ಕಮಂಡಲ ಮಗುಚಿಕೊಂಡಿತು. ಅದರಲ್ಲಿದ್ದ ನೀರು ಹರಿದು ವಿರಜಾ ನದಿಯ ನೀರನ್ನು ಕೂಡಿಕೊಂಡಿತು. ಕಾವೇರಿ ತೀರ್ಥ ಕುಂಡಿಗೆಯಿಂದ ನದಿಯಾಗಿ ಹರಿಯಿತು. ವಿಷ್ಣುಮಾಯೆಯಾಗಿದ್ದ ಲೋಪಾಮುದ್ರೆ ಹೀಗೆ ನದಿಯಾಗಿ ಹರಿದಳು. ಕವೇರ ಅವಳನ್ನು ಸಾಕಿದ್ದರಿಂದ ಈ ನದಿಗೆ ಕಾವೇರಿ ಎಂಬ ಹೆಸರು ಬಂತು.



ಸ್ನಾನ ಘಟ್ಟ, ಭಾಗಮಂಡಲ

ಸ್ಕಂದಪುರಾಣದಲ್ಲಿ ನದಿಯ ಹುಟ್ಟಿನ ಬಗ್ಗೆ ಎರಡು ಕಥೆಗಳಿವೆ. ಅದರಲ್ಲಿ ಮೊದಲನೆಯ ಕಥೆ ಹೀಗಿದೆ: ಒಮ್ಮೆ ವಿಂಧ್ಯಪರ್ವತ ಸೂರ್ಯನ ಎತ್ತರಕ್ಕೇರಬೇಕೆಂದು ಬಯಸಿ, ಬೆಳೆಯುತ್ತ ಸೂರ್ಯ ಮತ್ತು ನಕ್ಷತ್ರಗಳ ದಾರಿಗೆ ಅಡ್ಡವಾಗಿ ಬಂತು. ಅವುಗಳಿಂದ ಬರುತ್ತಿದ್ದ ಬೆಳಕಿಗೆ ಇದರಿಂದ ಅಡಚಣೆಯುಂಟಾಯಿತು. ವಿಂಧ್ಯಪರ್ವತದ ಈ ಬೆಳೆವಣಿಗೆಯನ್ನು ತಡೆಯಬೇಕೆಂದು ದೇವತೆಗಳು ಅಗಸ್ತ್ಯನನ್ನು ಕೋರಿದರು. ಅದಕ್ಕೆ ಒಪ್ಪಿದ ಅಗಸ್ತ್ಯ ಈಶ್ವರನನ್ನು ಕುರಿತು ತಪಸ್ಸು ಮಾಡಿ, ಬೇಕಾಗಿದ್ದ ಆಧ್ಯಾತ್ಮಿಕ ಶಕ್ತಿಯನ್ನು ಸಂಪಾದಿಸಿಕೊಂಡ. ಅಗಸ್ತ್ಯನ ಅನುಕೂಲಕ್ಕಾಗಿ ಕೈಲಾಸಪರ್ವತದಲ್ಲಿ ಹರಿಯುತ್ತಿದ್ದ ಕಾವೇರಿಗೆ ಅವನ ಕಮಂಡಲದಲ್ಲಿರುವಂತೆಯೂ ಆಜ್ಞಾಪಿಸಿದ. ಅದರಂತೆ ಕಾವೇರಿ ಅಗಸ್ತ್ಯನ ಕಮಂಡಲವನ್ನು ಸೇರಿದಳು. ಅಗಸ್ತ್ಯ ಈ ಕಮಂಡಲವನ್ನು ಹಿಡಿದುಕೊಂಡು ಹಿಮಾಲಯ ಪ್ರದೇಶದಿಂದ ದಕ್ಷಿಣಕ್ಕೆ ಹೊರಟ. ಅವನು ವಿಂಧ್ಯಪರ್ವತದ ಬಳಿ ಬಂದಾಗ - ಅದು ಅವನಿಗೆ ಭಕ್ತಿಯಿಂದ ನಮಸ್ಕರಿಸಿತು. ಆಗ ಅಗಸ್ತ್ಯ ತಾನು ನೆಮ್ಮದಿಯಿಂದ ದಕ್ಷಿಣ ಭಾರತಕ್ಕೆ ಹೋಗಬೇಕಾಗಿರುವುದರಿಂದ, ತಾನು ಹಿಂದಿರುಗುವ ವರೆಗೂ ಮೇಲಕ್ಕೇಳದೆ ನಮಸ್ಕರಿಸಿದ ಭಂಗಿಯಲ್ಲಿಯೇ ಇರಬೇಕೆಂದು ವಿಂಧ್ಯಪರ್ವತಕ್ಕೆ ಹೇಳಿ ಹೋದ. ಅನಂತರ ಅವನು ಉತ್ತರ ಭಾರತಕ್ಕೆ ಹಿಂದಿರುಗಲೇ ಇಲ್ಲ. ಈ ಕಾರಣದಿಂದ ವಿಂಧ್ಯಪರ್ವತ ಮುಂಚಿನ ಸ್ಥಿತಿಯಲ್ಲಿಯೇ ಇದೆ ಎಂದು ಪುರಾಣಗಳಲ್ಲಿ ಹೇಳಿದೆ. ಅಗಸ್ತ್ಯ ಬ್ರಹ್ಮಗಿರಿಯ ಬಳಿ ತಪಸ್ಸು ಮಾಡುತ್ತಿದ್ದ. ಆ ಸಮಯದಲ್ಲಿ ಸೂರಪದ್ಮನೆಂಬ ಅಸುರ ತನ್ನ ತಪಶ್ಶಕ್ತಿಯಿಂದ, ಆ ಪ್ರದೇಶದಲ್ಲಿ ಮಳೆಯಾಗದಂತೆ ಮಾಡಿದ್ದ. ಇದರಿಂದ ಖೇದಗೊಂಡ ಇಂದ್ರ ದಕ್ಷಿಣದೇಶದಲ್ಲಿ ನೀರು ಸಮೃದ್ಧಿಯಾಗಿರುವಂತೆ ಮಾಡಬೇಕೆಂದು ಗಣಪತಿಯನ್ನು ಪ್ರಾರ್ಥಿಸಿದ. ಆಗ ಗಣಪತಿ ಕಾಗೆ ರೂಪವನ್ನು ತಾಳಿ, ಅಗಸ್ತ್ಯ ತನ್ನ ಪಕ್ಕದಲ್ಲಿ ಕಲ್ಲಿನ ಮೇಲೆ ಇಟ್ಟಿದ್ದ ಕಮಂಡಲವನ್ನು ಮಗುಚಿಹಾಕಿದ. ಅದರಲ್ಲಿದ್ದ ಕಾವೇರಿ ಕೂಡಲೇ ಅಲ್ಲಿಂದ ಹರಿದಳು.

ಎರಡನೆಯ ಕಥೆ ಹೀಗಿದೆ: ಸಂತಾನವಿಲ್ಲದ ಕವೇರಮುನಿ ಸಂತಾನಕ್ಕಾಗಿ ಬ್ರಹ್ಮನನ್ನು ಕುರಿತು ಬ್ರಹ್ಮಗಿರಿಯಲ್ಲಿ ತಪಸ್ಸು ಮಾಡಿದ. ಅವನ ತಪಸ್ಸಿಗೆ ಮೆಚ್ಚಿದ ಬ್ರಹ್ಮ ಪ್ರತ್ಯಕ್ಷನಾಗಿ ತನ್ನ ಸಾಕು ಮಗಳಾದ ಲೋಪಾಮುದ್ರೆಯನ್ನೇ ಅವನಿಗೆ ಕೊಟ್ಟ. ಅಂದಿನಿಂದ ಲೋಪಾಮುದ್ರೆ ಕವೇರನ ಮಗಳಾಗಿ ಕಾವೇರಿ ಎಂಬ ಹೆಸರನ್ನು ಪಡೆದಳು. ತನ್ನ ಸಾಕು ತಂದೆಗೆ ಮೋಕ್ಷವುಂಟಾಗಲೆಂದು ಬಯಸಿದ ಕಾವೇರಿ ತಾನು ನದಿಯಾಗಿ ಹರಿಯುವಂತೆ ಮತ್ತು ತನ್ನಲ್ಲಿ ಸ್ನಾನಮಾಡಿದವರು ತಮ್ಮ ಎಲ್ಲ ಪಾಪಗಳಿಂದ ಮುಕ್ತರಾಗುವಂತೆ ವರವನ್ನು ಕೊಡಬೇಕೆಂದು ಬ್ರಹ್ಮನನ್ನು ಕುರಿತು ಬ್ರಹ್ಮಗಿರಿಯಲ್ಲಿ ತಪಸ್ಸು ಮಾಡಿದಳು. ಅವಳ ತಪಸ್ಸಿಗೆ ಮೆಚ್ಚಿದ ಬ್ರಹ್ಮ ಅವಳು ಕೇಳಿದ ವರಗಳನ್ನು ಕೊಟ್ಟ.

ಕಾವೇರಿ ಬ್ರಹ್ಮಗಿರಿಯಲ್ಲಿ ತಪಸ್ಸುಮಾಡುತ್ತಿದ್ದ ಸಮಯದಲ್ಲಿ ಅಲ್ಲಿಗೆ ಬಂದ ಅಗಸ್ತ್ಯ, ಅವಳ ತಪಸ್ಸು ಮುಗಿದಮೇಲೆ ಅವಳನ್ನು ಕಂಡು ತನ್ನನ್ನು ವಿವಾಹವಾಗುವಂತೆ ಕೇಳಿಕೊಂಡ. ಅದಕ್ಕೆ ಕಾವೇರಿ ಅಗಸ್ತ್ಯ ಎಂದಿಗೂ ತನ್ನನ್ನು ಒಂಟಿಯಾಗಿ ಬಿಟ್ಟಿರಕೂಡದೆಂಬ, ಒಂದುವೇಳೆ ಹಾಗೆ ಬಿಟ್ಟರೆ ನದಿಯಾಗಿ ಹರಿದುಹೋಗುವ ಸ್ವಾತಂತ್ರ್ಯ ಇರುವುದೆಂಬ ಷರತ್ತಿನ ಮೇಲೆ ವಿವಾಹವಾಗಲು ಒಪ್ಪಿದಳು. ಅದಕ್ಕೆ ಅಗಸ್ತ್ಯ ಒಪ್ಪಿ ಆಕೆಯನ್ನು ವಿವಾಹವಾದ. ನೀರಿನ ರೂಪದಲ್ಲಿ ಕಾವೇರಿ ಇದ್ದ ಕಮಂಡಲವನ್ನು ಒಮ್ಮೆ ಅಗಸ್ತ್ಯ ಶಿಷ್ಯನ ಕೈಗೆ ಕೊಟ್ಟು, ಕನ್ನಿಕಾ ನದಿಗೆ ಸಂಧ್ಯೋಪಾಸನೆಗೆ ಹೋದ. ಆಗ ಕಾವೇರಿ ಅಗಸ್ತ್ಯ ತನ್ನ ಮಾತಿಗೆ ತಪ್ಪಿದನೆಂದು ಕಮಂಡಲದಿಂದ ಬ್ರಹ್ಮಗಿರಿಯ ತೀರ್ಥಕುಂಡಿಗೆಗೆ ಜಿಗಿದು ಅಲ್ಲಿಂದ ನದಿಯಾಗಿ ಪ್ರವಹಿಸಿದಳು. ಆಗ ಅಗಸ್ತ್ಯನ ಶಿಷ್ಯರು ಅವಳು ನದಿಯಾಗಿ ಹರಿಯುವುದನ್ನು ತಡೆದರು. ಅವಳು ತೀರ್ಥಕುಂಡಿಗೆಯ ಮುಂದಿರುವ ತೀರ್ಥಕೊಳದ ಬಲಭಾಗದ ಇಳಿಜಾರಿನಲ್ಲಿ ಕಲ್ಲುಬಂಡೆಯ ಅಡಿಭಾಗದಲ್ಲಿ ಹರಿದು ಕೆಳಗೆ ಕಾಣಿಸಿಕೊಂಡಳು. ಅಲ್ಲಿಂದ ಭಾಗಮಂಡಲ ಕ್ಷೇತ್ರ ತಲಪಿದಾಗ ಮೊದಲನೆಯ ಉಪನದಿ ಕನ್ನಿಕೆ ಕಾವೇರಿಯನ್ನು ಸೇರಿಕೊಂಡಳು. ತನ್ನ ಪತ್ನಿ ತನಗೆ ತಿಳಿಸದೆ ನದಿಯಾಗಿ ಹರಿದುದಕ್ಕೆ ಅಗಸ್ತ್ಯ ಕೋಪಗೊಳ್ಳಲು, ಬ್ರಹ್ಮ ಅವನಿಗೆ ಸಮಾಧಾನ ಹೇಳಿದ. ಅನಂತರ ಅಗಸ್ತ್ಯ ನದಿಯಾಗಿ ಹರಿಯುತ್ತಿದ್ದ ಕಾವೇರಿಯನ್ನು ಬ್ರಹ್ಮಗಿರಿಯಿಂದ ಸುಮಾರು 40ಕಿಮೀ ದೂರದಲ್ಲಿರುವ ಬಲಮುರಿಯಲ್ಲಿ ಸಂಧಿಸಿ ಮತ್ತೆ ತನ್ನ ಪತ್ನಿಯಾಗುವಂತೆ ಅವಳನ್ನು ಕೇಳಿಕೊಂಡ. ಆಗ ಕಾವೇರಿ ಈಶ್ವರ ತನಗೆ ಕೊಟ್ಟ ವರದಂತೆ ಒಂದು ರೂಪದಲ್ಲಿ ಸ್ತ್ರೀಯಾಗಿದ್ದು ಅಗಸ್ತ್ಯನ ಪತ್ನಿಯಾಗಿರಲೂ ಇನ್ನೊಂದು ರೂಪದಲ್ಲಿ ನದಿಯಾಗಿ ಹರಿಯಲೂ ಒಪ್ಪಿಕೊಂಡಳು. ಕಾವೇರಿ ಪೂರ್ವಸಮುದ್ರವನ್ನು ಸೇರುವವರೆಗೆ

ದಾರಿಯಲ್ಲಿ ಯಾವ ಯಾವ ಸ್ಥಳ ಮತ್ತು ಕ್ಷೇತ್ರಗಳ ಮೂಲಕ ಹರಿದುಹೋಗಬೇಕೆಂಬುದನ್ನು ಅಗಸ್ತ್ಯ ತಿಳಿಸಿದ.

ಕಾವೇರಿ ದೇವತೆಯನ್ನು ಕೊಡಗರು ತಮ್ಮ ಕುಲದೇವತೆ ಎಂದು ನಂಬಿ ಪೂಜಿಸುತ್ತಾರೆ. ಕಾವೇರಿ ದೇವತೆಯ ವರದಿಂದ ಕೊಡಗಿನಲ್ಲಿ ವ್ಯವಸಾಯಕ್ಕೆ ಅಗತ್ಯವಾದ ಮಳೆಯಾಗುತ್ತದೆಂದೂ ಬತ್ತದ ಬೆಳೆ ಸಮೃದ್ಧವಾಗಿ ಬೆಳೆಯುತ್ತದೆಂದೂ ಕೊಡಗಿನ ಜನಪದರು ನಂಬಿದ್ದಾರೆ. *

**ಕಾವ್ಯಕಲಾನಿಧಿ :** ಕನ್ನಡ ಸಾಹಿತ್ಯದ ಪ್ರಾಚೀನ ಕಾವ್ಯ ಹಾಗೂ ಶಾಸ್ತ್ರಗ್ರಂಥಗಳನ್ನು ತಾಳೆಗರಿಗಳ ಆಧಾರದಿಂದ ಶಾಸ್ತ್ರೀಯವಾದ ಪಾಠಸಂಸ್ಕರಣಗಳೊಂದಿಗೆ ಸಂಪಾದಿಸುವ ಯೋಜನೆ ಹಾಕಿಕೊಂಡಿದ್ದ ಮೈಸೂರಿನ ಎಂ.ಎ.ರಾಮಾನುಜಯ್ಯಂಗಾರ್ ಅವರು ಎಸ್.ಜಿ. ನರಸಿಂಹಾಚಾರ್ಯರ ಸಹಕಾರದಿಂದ ಪ್ರಾಚೀನ ಗ್ರಂಥಗಳ ಪ್ರಕಟನೆಗಾಗಿ ಕಾವ್ಯಮಂಜರಿ ಎಂಬ ಪತ್ರಿಕೆಯನ್ನಾರಂಭಿಸಿದರು. ಅದರ ಅನಂತರದ ಹೆಸರೇ ಕಾವ್ಯಕಲಾನಿಧಿ. ಇದು 19ನೆಯ ಶತಮಾನದ ಅಂತ್ಯದಲ್ಲಿ ಪ್ರಕಟವಾಗುತ್ತಿತ್ತು.

ಈ ಗ್ರಂಥಮಾಲೆಯಲ್ಲಿ ಮೊದಲು ಮುದ್ರಿತವಾಗಿ ಅನಂತರ ಪುಸ್ತಕರೂಪವಾಗಿ ಹೊರಬಂದ ಸಾಹಿತ್ಯಗ್ರಂಥಗಳಲ್ಲಿ ರನ್ನನ ಗದಾಯುದ್ಧ, ಅಜಿತಪುರಾಣ, ನೇಮಿಚಂದ್ರನ ಲೀಲಾವತಿ ಮತ್ತು ಅರ್ಧನೇಮಿಪುರಾಣ, ಚೌಂಡರಸನ ದಶಕುಮಾರಚರಿತೆ, ಕಮಲಭವನ ಶಾಂತೀಶ್ವರಪುರಾಣ, ಅಗ್ಗಳನ ಚಂದ್ರಪ್ರಭ ಪುರಾಣ ಮುಂತಾದ ಜೈನಕಾವ್ಯಪುರಾಣಗಳೂ ಗುಬ್ಬಿಯ ಮಲ್ಲಣಾರ್ಯನ ಭಾವಚಿಂತಾರತ್ನದಂಥ ವೀರಶೈವ ಕಾವ್ಯಗಳೂ ಹದಿಬದೆಯ ಧರ್ಮ, ಮೋಹನ ತರಂಗಿಣಿ, ಜಯನೃಪಕಾವ್ಯ ಮುಂತಾದುವೂ ಚಿಕದೇವ ರಾಜ ವಂಶಾವಳಿ, ರಾಮಾಶ್ವಮೇಧ ಮುಂತಾದ ಗದ್ಯ ಕೃತಿಗಳೂ ಇವೆ. ವಚನ, ಕಾದಂಬರಿ, ವರ್ಷವರ್ಧಂತಿಶತಕ, ಗುರುಚರಿತ್ರೆ ಮುಂತಾದ ಲಘುಸಾಹಿತ್ಯವೂ ಮುದ್ರಿತವಾಗಿ ಹೊರಬಂದಿವೆ. ಇವೆಲ್ಲ ಈಗ ಬೇರೆ ಬೇರೆ ಪುನರ್ಮುದ್ರಣಗಳನ್ನು ಕಂಡಿದ್ದರೂ ಕನ್ನಡ ಸಾಹಿತ್ಯದ ಉದ್ದಾಮ ಕೃತಿಗಳ ಸಾಕ್ಷಾತ್ ಪರಿಚಯವನ್ನು ನಾಡಿಗೆಲ್ಲ ಬಹಳ ಹಿಂದೆಯೇ ಮಾಡಿಸಿಕೊಟ್ಟ ಶ್ರೇಯಸ್ಸು ಕಾವ್ಯಕಲಾನಿಧಿ ಗ್ರಂಥಮಾಲೆಗೆ ಸಲ್ಲುತ್ತದೆ. (ಕೆ.ಕೆ.)

**ಕಾವ್ಯಾನಂದ ಪುಣೇಕರ :** 1870-1929. ಪತ್ರಿಕೋದ್ಯಮಿ, ಗ್ರಂಥಕರ್ತ. ಸಮಸ್ಯಾಪೂರ್ತಿ ಕಾವ್ಯರಚನೆಗೆ ಹೆಸರಾಗಿದ್ದವರು. ಇವರ ಹೆಸರು ನರಸಿಂಹಾಚಾರ್ಯ ಭೀಮಾಚಾರ್ಯ ಕಿತ್ತೂರ. ಕಾವ್ಯಾನಂದ ಪುಣೇಕರ ಇವರ ಕಾವ್ಯನಾಮ. ಬೆಳಗಾಂವಿ ಜಿಲ್ಲೆಯ ಕಿತ್ತೂರು ಇವರ ಜನ್ಮಸ್ಥಳ. ಇವರ ಮನೆತನ ಪಾಂಡಿತ್ಯಕ್ಕೆ ಹೆಸರಾಗಿತ್ತು. ಇವರ ತಾತ ತರ್ಕವಿದ್ವಾನ್ ನರಹರಿ ಆಚಾರ್ಯರಿಗೆ ಪುಣೆಯ ರಾಜಾಸ್ಥಾನದಿಂದ ಕರವಸ್ತ್ರ ಮತ್ತು ಕರದೀಪದ ಗೌರವ ಲಭಿಸಿತ್ತು. ಈ ಕಾರಣಕ್ಕಾಗಿಯೇ ಇವರ ಮನೆತನಕ್ಕೆ ಪುಣೇಕರ ಎಂಬ ಹೆಸರು ಬಂತು. ಕಾವ್ಯಾನಂದರ ಕಾಲಕ್ಕೆ ಮನೆಯಲ್ಲಿ ಬಡತನ. ಇದರಿಂದ ಇವರು ಹೆಚ್ಚಿನ ಶಿಕ್ಷಣ ಪಡೆಯಲು ಸಾಧ್ಯವಾಗಲಿಲ್ಲವಾದರೂ ಸ್ವತಂತ್ರವಾಗಿ ಸಂಸ್ಕೃತ ಮತ್ತು ಕನ್ನಡದಲ್ಲಿ ಪಾಂಡಿತ್ಯ ಗಳಿಸಿಕೊಂಡರು. ಧಾರವಾಡದ ವಿಕ್ಟೋರಿಯಾ ಪ್ರೌಢಶಾಲೆ ಮತ್ತು ರಾಷ್ಟ್ರೀಯ ಶಾಲೆಗಳಲ್ಲಿ ಅಧ್ಯಾಪಕರಾಗಿ ಇವರು ಹಲವು ವರ್ಷಗಳ ಕಾಲ ಕೆಲಸ ಮಾಡಿದರು. ಚಚಡಿಯರಗಟ್ಟಿ ದೇಸಾಯರಲ್ಲಿ ಕೆಲವು ವರ್ಷ ಕಾರಭಾರಿಯಾಗಿದ್ದರು. ಧಾರವಾಡದಿಂದ ಪ್ರಕಟವಾಗುತ್ತಿದ್ದ ಒಕ್ಕಲಿಗರೂ ಒಕ್ಕಲುತನವೂ ಎಂಬ ಮಾಸಪತ್ರಿಕೆಗೆ ಇವರು ಕೆಲಕಾಲ ಸಹಾಯಕ ಸಂಪಾದಕರಾಗಿದ್ದರಲ್ಲದೆ ಸ್ವತಂತ್ರವಾಗಿ ಕ್ಷೇಮ ಸಮಾಚಾರ ಎಂಬ ವಾರಪತ್ರಿಕೆಯನ್ನು ಎರಡು ವರ್ಷಕಾಲ ನಡೆಸಿದರು.

ಇವರು ರಾಷ್ಟ್ರೀಯ ಪ್ರವೃತ್ತಿಯವರು, ಕನ್ನಡ ಪ್ರೇಮಿಗಳು, ರಸಿಕರು ಮತ್ತು ಮಾತಿನಲ್ಲಿ ತುಂಬ ಕುಶಲರು. ಕಾವ್ಯ, ಶಾಸ್ತ್ರ, ಜ್ಯೋತಿಷ್ಯ, ಧರ್ಮ ಮತ್ತು ಆಯುರ್ವೇದಗಳಲ್ಲಿ ಬಲ್ಲಿದರಾಗಿದ್ದರು. ಇವರು ಗೃಹವೈದ್ಯಕ, ಗೃಹಿಣೀ ಭೂಷಣ, ಗರುಡಚೂರ್ಣಮಹಾತ್ಮೆ, ಸತ್ಯನಾರಾಯಣ ಕಥೆ, ಧನವಂತನೇ ಬಲವಂತನು, ಪ್ರಶ್ನೋತ್ತರಮಾಲಿಕಾ, ಬಾಲರಂಜನ ಮೊದಲಾದ ಗ್ರಂಥಗಳನ್ನು ಬರೆದಿದ್ದಾರೆ. ಪ್ರಭಾತ ಮತ್ತು ವಾಗ್ಭೂಷಣ ಪತ್ರಿಕೆಗಳಲ್ಲಿ ಇವರು ಪ್ರಕಟಿಸಿರುವ ಮಳೆಗಾಲ, ನಾಗಪಂಚಮಿ, ಕವಿಯೂ ನಾಟಕಕಾರನೂ, ಜಹಗೀರದಾರನ ಊರು - ಮೊದಲಾದ ಕವನಗಳು ಇವರ ಕಾವ್ಯಶಕ್ತಿಗೆ ಸಾಕ್ಷಿಯಾಗಿವೆ. (ಆರ್.ವೈ.ಡಿ.)

**ಕಾಶೀನಾಥ ಶಾಸ್ತ್ರೀ :** 1895-1950. ಉಭಯಭಾಷಾ ವಿದ್ವಾಂಸರು. ಸುಮಾರು ಎಪ್ಪತ್ತಕ್ಕೂ ಹೆಚ್ಚಿನ ಕನ್ನಡ ಸಂಸ್ಕೃತ ಗ್ರಂಥಗಳ ಪ್ರಕಾಶಕರಾಗಿ ಹೆಸರು ಗಳಿಸಿದ ಕನ್ನಡಿಗರು. ಇಂದಿನ ಗದಗ ಜಿಲ್ಲೆ ಗದಗ ತಾಲ್ಲೂಕು ನಾರಾಯಣಪುರದಲ್ಲಿ ಜನಿಸಿದರು. ತಂದೆ ಸಿದ್ದಯ್ಯ, ತಾಯಿ ನಾಗವ್ವ. ಅಬ್ಬಿಗೇರಿ ಸೊಲ್ಲಾಪುರಗಳ ಸಂಸ್ಕೃತ ಪಾಠಶಾಲೆಗಳಲ್ಲಿ ಅಭ್ಯಾಸ ಮಾಡಿದ ಇವರು ಅನಂತರ ವಾರಾಣಸಿಯಲ್ಲಿ ವ್ಯಾಸಂಗಮಾಡಿ ಕಾವ್ಯತೀರ್ಥ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ವಾಗ್ಮಿಗಳೂ ಪ್ರಬುದ್ಧ ಲೇಖಕರೂ ಆದ ಶಾಸ್ತ್ರಿಗಳು ಮೈಸೂರಿನಲ್ಲಿ ಪಂಚಾಚಾರ್ಯ ಪ್ರಭಾ ಎಂಬ ವಾರಪತ್ರಿಕೆಯನ್ನು (1927) ಆರಂಭಿಸಿದರಲ್ಲದೆ ಕಾಶೀನಾಥ ಗ್ರಂಥಮಾಲೆ ಎಂಬ ಮಾಲೆಯನ್ನು ಸ್ಥಾಪಿಸಿ, ವೀರಶೈವ ಧರ್ಮದ ಅನೇಕ ಗ್ರಂಥಗಳನ್ನು ಪ್ರಕಟಿಸಿದರು. ನಂದಿಕೇಶ್ವರಕಾರಿಕಾ, ಶ್ರೀಕರಭಾಷ್ಯ (ಚತುಸ್ಸೂತ್ರೀ), ವೈದಿಕವಾಙ್ಮಯ ರಹಸ್ಯ, ಶೈವೋಪನಿಷತ್ಸಂಗ್ರಹ, ಶಿವಾದ್ವೈತಮಂಜರೀ ಮುಂತಾದ ಸುಮಾರು 70 ಗ್ರಂಥಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ. (ಎಂ.ಜಿ.ಎಸ್.)

**ಕಾಳಗಿ :** ಗುಲ್ಬರ್ಗ ಜಿಲ್ಲೆ ಚಿತ್ತಾಪುರ ತಾಲ್ಲೂಕಿನ ಒಂದು ಗ್ರಾಮ. ಗುಲ್ಬರ್ಗದಿಂದ ಪೂರ್ವಕ್ಕೆ ಸು.32ಕಿಮೀ ದೂರದಲ್ಲಿದೆ. ಇದು 11ನೆಯ ಶತಮಾನದಲ್ಲಿ ಕಲ್ಯಾಣದ ಚಾಳುಕ್ಯರ ಆಳಿಕೆಯಲ್ಲಿ ಕಾಳುಗೆ ಎಂಬ ಹೆಸರಿನಿಂದ ಮನ್ನೆದಡಿ -1000 ನಾಡಿನ ರಾಜಧಾನಿಯಾಗಿ ಪ್ರಸಿದ್ಧವಾಗಿತ್ತು. ತ್ರೈಲೋಕ್ಯಮಲ್ಲ ಸೋಮೇಶ್ವರನ ಆಳಿಕೆಯಲ್ಲಿ ವಾರಣಕುಲಕ್ಕೆ ಸೇರಿದ ಮಹಾಮಂಡಲೇಶ್ವರ ದಿಬ್ಬರಸ ಈ ಪ್ರಾಂತ್ಯವನ್ನು ಆಳುತ್ತಿದ್ದ. ಬಹುಶಃ ಅವನ ಕಾಲದಲ್ಲಿ ಅವನ ಹೆಸರಿನಿಂದ ಬಿಡ್ಡೇಶ್ವರ (ದಿಬ್ಬೇಶ್ವರ) ದೇವಾಲಯವನ್ನು ಇಲ್ಲಿ ನಿರ್ಮಿಸಲಾಗಿದೆ. 12ನೆಯ ಶತಮಾನದಲ್ಲಿ ಕಳಚುರಿ ರಾಯಮುರಾರಿ ಸೋವಿದೇವ ಆಳುತ್ತಿದ್ದಾಗ ಬಾಣವಂಶದ ವೀರಗೊಂಕರಸ ಮನ್ನೆದಡಿ ನಾಡನ್ನು ಇಲ್ಲಿಂದ ಆಳುತ್ತಿದ್ದು ಬಹುಶಃ ತನ್ನ ತಂದೆ ಉದಯಾದಿತ್ಯ ವೀರಕಾಳರಸನ ಹೆಸರಿನಲ್ಲಿ ಸ್ವಯಂಭು ಕಾಳೇಶ್ವರ ದೇವಾಲಯವನ್ನು ನಿರ್ಮಿಸಿ ಅನೇಕ ದತ್ತಿಗಳನ್ನು ಬಿಟ್ಟಂತೆ ತೋರುತ್ತದೆ. ಕಾಳೇಶ್ವರ ದೇವಾಲಯಕ್ಕೆ ಮನ್ನೆದಡಿ 1000ಕ್ಕೆ ಸೇರಿದ್ದ ನೂರುಂಬಾಡ ಪ್ರಾಂತ್ಯದ ಪ್ರತಿಯೊಂದು ಹಳ್ಳಿಯಿಂದ ಒಂದು ಗದ್ಯಾಣವನ್ನು ದತ್ತಿಯಾಗಿ ಹಿರಿಯ ದಂಡನಾಯಕ ಮಾಧವಯ್ಯ ಬಿಟ್ಟುದಾಗಿ ಶಾಸನವೊಂದರಿಂದ ತಿಳಿದುಬರುತ್ತದೆ. 13ನೆಯ ಶತಮಾನದ ಅನಂತರ ಈ ಊರು ತನ್ನ ಪ್ರಾಮುಖ್ಯವನ್ನೂ ಕಳೆದುಕೊಂಡಿತು.

ಮೇಲೆ ತಿಳಿಸಿದ ದಿಬ್ಬೇಶ್ವರ ಕಾಳೇಶ್ವರ ದೇವಾಲಯಗಳಲ್ಲದೆ ಚಾಳುಕ್ಯ ಮತ್ತು ಕಳಚುರಿಗಳ ಕಾಲದಲ್ಲಿ ಸೋಮೇಶ್ವರ, ಜಯಲಿಂಗೇಶ್ವರ ದೇವಾಲಯ ಮೊದಲಾದ ಹಲವು ದೇವಾಲಯಗಳು ಇಲ್ಲಿ ನಿರ್ಮಿತವಾದುದಾಗಿ ಶಾಸನಗಳು ತಿಳಿಸುತ್ತವೆ. ಆದರೆ ಈ ದೇವಾಲಯಗಳು ಜೀರ್ಣಾವಸ್ಥೆಯಲ್ಲಿವೆ. ಕೆಲವು ನಾಮಾವಶೇಷವಾಗಿವೆ. ದೇವಾಲಯಗಳ ಶಿಲ್ಪಗಳು, ಗೋಡೆ ಚಾವಣಿಗಳ ಭಾಗಗಳು, ಇತರ ಶಿಲಾಫಲಕಗಳು ಊರಿನ ಸುತ್ತ ಚೆಲ್ಲಾಡಿವೆ. ಇವುಗಳಲ್ಲಿ ತಕ್ಕಮಟ್ಟಿಗೆ ಉಳಿದುಬಂದಿರುವ ದೇವಾಲಯವೆಂದರೆ ಕಾಳಮೇಶ್ವರ ಅಥವಾ ಕಾಳೇಶ್ವರ ದೇವಾಲಯ. ಆದರೆ ಮೂಲ ದೇವಾಲಯಕ್ಕೆ ಅನಂತರದ ಕಾಲದಲ್ಲಿ ಕೆಲವು ಭಾಗಗಳನ್ನು ಸೇರಿಸಿರುವುದಲ್ಲದೆ ದೇವಸ್ಥಾನಕ್ಕೆ ಪೂರ್ಣವಾಗಿ ಸುಣ್ಣ ತುಂಬಿರುವುದರಿಂದ ಅದರ ಮೂಲ ಸೌಂದರ್ಯ ಬಹಳ ಮಾಸಿದೆ ಎನ್ನಬಹುದು. ಆದರೂ ಈ ದೇವಾಲಯದ ಹೊರಗೋಡೆಗಳ ಮೇಲೆ ಇರುವ ಸುಂದರವಾದ ಭಂಗಿಗಳಲ್ಲಿ ನಾಟ್ಯಮಗ್ನರಾಗಿರುವ ಸ್ತ್ರೀಮೂರ್ತಿಗಳ ಉಬ್ಬು ಶಿಲ್ಪಗಳು ಆಕರ್ಷಕವಾಗಿವೆ. ಇವುಗಳಲ್ಲಿನ ಒಂದು ವಿಶೇಷವೆಂದರೆ ಈ ಕೆಲವು ಮೂರ್ತಿಗಳ ಮೇಲೆ ಅಪರೂಪವಾಗಿ ಕಿರುಶಾಸನಗಳಿದ್ದು ಆ ಮೂರ್ತಿಗಳ ಭಾವಭಂಗಿಗಳನ್ನು ಅವುಗಳನ್ನು ಕಂಡರಿಸಿರುವ ಉದ್ದೇಶವನ್ನು ವಿವರಿಸುತ್ತವೆ. ಸಾಮಾನ್ಯವಾಗಿ ಈ ಕಿರುಶಾಸನಗಳು ನೀಲಕಂಠನನ್ನು ಬಗೆಬಗೆಯಾಗಿ ಅಲ್ಲಿ

ಕಂಡರಿಸಿರುವ ಸ್ತ್ರೀಯರು ವರ್ಣಿಸುತ್ತಿರುವುದನ್ನು ಸೂಚಿಸುತ್ತವೆ. ವೀಣೆಯನ್ನು ನುಡಿಸಿ ಹಾಡುತ್ತಿರುವ ಸ್ತ್ರೀಮೂರ್ತಿಯ ಶಿಲ್ಪವೊಂದರ ಮೇಲಿನ ಶಾಸನ - 'ಧರೆಯೊಳಗೆ ನೀಲಕಂಠನೆ ಸುಜನಂ ಧಾರ್ಮಿಕನೆಂದು ಒರಳಿ ವಸಂತಂ ಗುಜರಿ ಸಿರಿರಾಗದೆ ವೀಣಾಕಾರ್ತಿ ಪಾಡುತ್ತುಮಿರ್ದಳ್' ಎಂದಿದೆ. ಇಲ್ಲಿ ಹೆಸರಿಸಿರುವ ಕೆಲವು ರಾಗಗಳು ಗಮನಿಸತಕ್ಕವಾಗಿವೆ. ಮೋಹಕ ಭಂಗಿಯಲ್ಲಿ ನಿಂತು ಮುಂಗೈ ಮೇಲೆ ಕುಳಿತಿರುವ ಗಿಳಿಯೊಂದನ್ನು ನುಡಿಸುತ್ತಿರುವ ಸ್ತ್ರೀಮೂರ್ತಿಯ ಮೇಲಿನ ಒಂದು ಶಾಸನ, 'ಲಲಿತಾಂಗಿ ಆಡಿಸುತ್ತಿರೆ ಗಿಳಿಯಾಡಿತು. ನೀಲಕಂಠನ್ ಈ ಬಂಧಂ ನೀವೇಳಿರೆ ಏಳಿರೆ ತೋರಣಂಗೂಡಿ ಕಳಸಕನ್ನಡಿಯಿಂದ ಇದಿರುಗೊಳ್ಳುದು' ಎಂದು ವರ್ಣಿಸಿದರೆ, ಮತ್ತೊಂದರಲ್ಲಿ ಬುಧಾಗ್ರಣಿ ನೀಲಕಂಠನನ್ನು ಮನೋನುರಾಗದಿಂದ ಬಗೆಬಗೆಯಾಗಿ ವರ್ಣಿಸಿ ಸರಸ್ವತಿಯಂತೆ ಆಡುತ್ತಿರುವ ಮೂರ್ತಿಯ ವರ್ಣನೆ ಇದೆ. ಹೀಗೆ ಶಾಸನಗಳನ್ನುಳ್ಳ ಶಿಲಾಬಾಲಿಕೆಯ ಮೂರ್ತಿಗಳಿರುವುದು ಚಾಳುಕ್ಯ ಶಿಲ್ಪದಲ್ಲಿ ಅಪರೂಪವೇ. ಉಳಿದಂತೆ ದೇವಾಲಯದ ದ್ವಾರಗಳು, ಕಂಬಗಳು, ಒಳಚಾವಣಿಯ ಶಿಲ್ಪಗಳು ಇತರ ಸಾಮಾನ್ಯವಾದ ಚಾಳುಕ್ಯ ದೇವಾಲಯಗಳಲ್ಲಿರುವಂತೆಯೇ ಇವೆ.

ಈ ದೇವಾಲಯದ ಮುಂದೆ ಕೆಲವು ಗಜಗಳ ಅಂತರದಲ್ಲಿ ನಿಂತಿರುವ ದೇವಾಲಯವೇ ಇಲ್ಲಿನ ಅತ್ಯಂತ ಪ್ರಾಚೀನ ದಿಬ್ಬೇಶ್ವರ ದೇವಾಲಯವಿರಬಹುದು. ಎತ್ತರವಾದ ಜಗತಿಯ ಮೇಲೆ ಮೂರು ಗರ್ಭಗೃಹಗಳು, ಮೂರು ಸುಕನಾಸಿಗಳು, ನಡುವೆ ಒಂದು ನವರಂಗ, ಮುಂದೆ ಒಂದಂಕಣದ ಮುಖಮಂಟಪಗಳಿವೆ. ಹೊರಗೋಡೆಗಳು ಕಚ್ಚುಕಚ್ಚಾಗಿ ಉಬ್ಬಿದ ಆಯಾಕಾರದ ಗೋಡೆಗಳಿಂದ ಕೂಡಿವೆ. ಚಾಳುಕ್ಯರ ಕಾಲದ ದೇವಾಲಯಗಳ ತಳವಿನ್ಯಾಸದಲ್ಲಿ ಇದು ಅಪರೂಪವಾದುದೆನಿಸಿದೆ. ಹೊರಗೋಡೆಗಳ ಮೇಲೆ ಹೆಚ್ಚು ಉಬ್ಬಿನಿಂತಿರುವ ಸುಂದರವಾದ ಮೂರ್ತಿಗಳನ್ನು ಕಾಣಬಹುದು. ಆದರೆ ದೇವಾಲಯ ಅತ್ಯಂತ ಜೀರ್ಣಾವಸ್ಥೆಯಲ್ಲಿದೆ.

ಈಗ ಊರು ಈ ದೇವಾಲಯಗಳಿರುವ ಹಳೆಯ ನಿವೇಶನದಿಂದ ಸ್ವಲ್ಪ ದೂರದಲ್ಲಿದೆ. ಅಲ್ಲಿಯೂ ಮಲ್ಲಿಕಾರ್ಜುನ ದೇವಾಲಯ, ಚೌಡೇಶ್ವರಿ ಗುಡಿ, ಆಂಜನೇಯನ ಗುಡಿಗಳಿವೆ. ಆದರೆ ವಾಸ್ತುಶಿಲ್ಪ ದೃಷ್ಟಿಯಿಂದ ಇವು ಸಾಮಾನ್ಯ ರಚನೆಗಳು.

ಕಾಳಗಿ ಒಂದು ಯಾತ್ರಾಸ್ಥಳ. ಇಲ್ಲಿನ ಕಾಳೇಶ್ವರ ಮತ್ತು ನರಸಿಂಹ ದೇವಾಲಯಗಳು ವರ್ಷವಿಡೀ ಈ ಸುತ್ತಿನ ಯಾತ್ರಾರ್ಥಿಗಳನ್ನು ಆಕರ್ಷಿಸುತ್ತವೆ. ಮೇ ತಿಂಗಳಲ್ಲಿ ವಾರ್ಷಿಕ ಜಾತ್ರೆ ನಡೆಯುತ್ತದೆ. (ಎಂ.ಎಚ್.)

**ಕಾಳಪ್ಪ, ಎಸ್. :** 1924-2000. ಹೆಸರಾಂತ ಕಲಾವಿದ. 1924ರಲ್ಲಿ ಮೈಸೂರಿನಲ್ಲಿ ಜನಿಸಿದರು. ಬಾಲ್ಯದಿಂದಲೇ ಚಿತ್ರಕಲೆಯ ಬಗ್ಗೆ ವಿಶೇಷ ಒಲವನ್ನು ಹೊಂದಿದ್ದ ಇವರು ಮೈಸೂರಿನ ಚಾಮರಾಜ ತಾಂತ್ರಿಕ ಶಾಲೆಯ ವಿದ್ಯಾರ್ಥಿಯಾಗಿ ಚಿತ್ರಕಲೆಯನ್ನು ಅಭ್ಯಾಸ ಮಾಡಿ ಡಿಪ್ಲೊಮಾ ಪದವಿ ಗಳಿಸಿದರು (1942).

ನಿಸರ್ಗ ಹಾಗೂ ಪೌರಾಣಿಕ ಚಿತ್ರಗಳ ರಚನೆಯಲ್ಲಿ ಇವರು ನಿಷ್ಣಾತರು. ಹಳೆಯ ಮೈಸೂರಿನ ಕಲಾ ಪರಂಪರೆಯನ್ನು ಮುಂದುವರೆಸಿ ಬೆಳೆಸಲು ಶ್ರಮಿಸಿದರು. ನಾಟಕ, ಚಲನಚಿತ್ರ ಮತ್ತು ಪ್ರಚಾರ ಕ್ಷೇತ್ರಗಳಲ್ಲಿ ಕಲಿಕೆಯನ್ನು ವಿಸ್ತರಿಸಿದರು. ನಿರಂತರ ಕೃತಿರಚನಾ ಚಟುವಟಿಕೆಯನ್ನು ರೂಢಿಸಿಕೊಂಡಿದ್ದ ಇವರು ಶ್ರೀಕಲಾನಿಕೇತನ ಎಂಬ ಕಲಾಶಾಲೆಯನ್ನು ಪ್ರಾರಂಭಿಸಿ (1954) ಶಿಷ್ಯಪರಂಪರೆಯನ್ನೂ ಬೆಳೆಸಿದರು.

ಕಲೆಗೆ ಸಬಂಧಿಸಿದಂತೆ ಅನೇಕ ಪ್ರಯೋಗಗಳನ್ನು ನಡೆಸಿದ ಇವರು ಅನ್ವೇಷಕ ಮನೋಭಾವ ಹೊಂದಿದ್ದ ವ್ಯಕ್ತಿ. ಇವರ ವೈಶಿಷ್ಟ್ಯವೆಂದರೆ ಚಿತ್ರಕಲೆಯನ್ನು ಸಿನಿಮಾ, ನಾಟಕ ಮತ್ತು ಪ್ರಚಾರ ಕಲೆಗಳಲ್ಲಿ ಸಮರ್ಥವಾಗಿ ಬಳಸಿದರೆಂಬುದು. ಬೆಂಗಳೂರು, ಮೈಸೂರು ಹಾಗೂ ನೆರೆಯ ರಾಜ್ಯಗಳಾದ ತಮಿಳುನಾಡು ಮತ್ತು ಕೇರಳಗಳಲ್ಲೂ ಈ ಕ್ಷೇತ್ರದಲ್ಲಿ ಇವರು ಹೆಸರಾಗಿದ್ದರು.

ಮೈಸೂರಿನಲ್ಲಿದ್ದ ನವಜ್ಯೋತಿ ಸ್ಟುಡಿಯೋದಲ್ಲಿ ಹಲವು ವರ್ಷಗಳು ಕಲಾ ದಿಗ್ದರ್ಶಕರಾಗಿ ಸೇವೆಸಲ್ಲಿಸಿದರು. ಕಲಾಕೃತಿಗಳು ಸಂಗ್ರಹಾಲಯಗಳಲ್ಲಿ, ಪ್ರದರ್ಶನಮಂದಿರಗಳಲ್ಲಿ ಮಾತ್ರವಿರದೆ ಜನಸಾಮಾನ್ಯರಿಗೂ ತಲಪುವಂತಾಗಬೇಕೆಂಬುದು ಇವರ ಹೆಬ್ಬಯಕೆಯಾಗಿತ್ತು. ಭಾರತ ಗಣರಾಜ್ಯೋತ್ಸವ ಸಂದರ್ಭದಲ್ಲಿ ನವದೆಹಲಿಯಲ್ಲಿ ಜರುಗುವ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಸ್ತಬ್ಧಚಿತ್ರಗಳನ್ನು ರಚಿಸುವುದರ ಮೂಲಕ ತಮ್ಮ ಬಯಕೆಯನ್ನು ಕಾರ್ಯರೂಪಕ್ಕೆ ತಂದರು. ಇದೇ ಸಂದರ್ಭದಲ್ಲಿ ರಾಜ್ಯದ ಪರವಾಗಿ ಇವರು ರಚಿಸಿದ ಮಹಿಷಾಸುರಮರ್ದಿನಿ ಸ್ತಬ್ಧಚಿತ್ರ ಅಪಾರ ಮೆಚ್ಚುಗೆ ಪಡೆಯಿತು.

ತಮ್ಮ ಕಲಾ ಪ್ರಾವೀಣ್ಯದಿಂದ ಇವರು ರಷ್ಯ, ಇಂಗ್ಲೆಂಡ್, ಇಂಡೋನೇಷ್ಯ ಮತ್ತು ಜಪಾನ್‌ಗಳಲ್ಲಿ ರಂಗಸಜ್ಜಿಕೆ ಅಳವಡಿಸುವ ಅವಕಾಶವನ್ನು ಪಡೆದು ಅದರಲ್ಲಿ ಯಶಸ್ಸು ಹಾಗೂ ಕೀರ್ತಿ ಗಳಿಸಿದರು. ಗುಬ್ಬಿ ನಾಟಕ ಕಂಪನಿಯ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಇವರು ತಯಾರಿಸಿದ ಎರಡು ಪ್ಯಾನೆಲ್‌ಗಳು ಮತ್ತೊಂದು ಗಮನಾರ್ಹ ರಚನೆ.

ಇವರು ಚಿತ್ರಕಲಾ ಮಾಧ್ಯಮವನ್ನು ಅನೇಕ ಪ್ರಕಾರಗಳಲ್ಲಿ ತೊಡಗಿಸಿ ಯಶಸ್ವಿಯಾದರು. ಹಳೆಯ ಭಿತ್ತಿಚಿತ್ರಗಳು, ಕಲಾಕೃತಿಗಳನ್ನು ಮೂಲದ ಸೊಗಸಿಗೆ ಕಿಂಚಿತ್ತೂ ಚ್ಯುತಿಬಾರದಂತೆ ನಕಲು ಮಾಡುವದರಲ್ಲೂ ಇವರು ನಿಪುಣರಾಗಿದ್ದರು. ಇವರು ಲಲಿತಕಲಾ ಅಕಾಡೆಮಿಯ ಕಲಾ ಪ್ರದರ್ಶನಗಳ ಹಾಗೂ ದಸರ ವಸ್ತುಪ್ರದರ್ಶನದ ಕಲಾ ವಿಭಾಗದ ತೀರ್ಪುಗಾರರಾಗಿಯೂ ಕಾರ್ಯನಿರ್ವಹಿಸಿದ್ದಾರೆ.

ಕರ್ನಾಟಕ ಚಿತ್ರಕಲಾ ಅಕಾಡೆಮಿಯ ಸದಸ್ಯರಾಗಿ, ಮೈಸೂರಿನ ಚಿತ್ರಕಲಾಸಂಘದ ಪದಾಧಿಕಾರಿಯಾಗಿ, ಕರ್ನಾಟಕ ಚಿತ್ರಕಲಾ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿದರು. ಇವರ ಬಹುಮುಖ ಪ್ರತಿಭೆ ಮತ್ತು ಕಲಾನೈಪುಣ್ಯಕ್ಕಾಗಿ ಅನೇಕ ಬಹುಮಾನಗಳು ಪ್ರಶಸ್ತಿಗಳು ಲಭಿಸಿವೆ. ದಸರ ವಸ್ತುಪ್ರದರ್ಶನದ ಪ್ರಥಮ ಬಹುಮಾನಗಳು (1938 ಮತ್ತು 1952) ಹಾಗೂ ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಶಸ್ತಿ ಇವು ಉಲ್ಲೇಖನಾರ್ಹ (1986). ಇವರು 2000 ಇಸವಿಯಲ್ಲಿ ನಿಧನರಾದರು. (ಎಸ್‌ಯು.ಎಂ.)

**ಕಾಳವ್ವೆ :** ಸು.1180. ಬಸವಾದಿ ಪ್ರಮಥರ ಕಾಲದಲ್ಲಿ ಜೀವಿಸಿದ್ದ ಪ್ರಸಿದ್ಧ ವಚನಕಾರ್ತಿ, ಶಿವಾನುಭವಿ, ಶರಣ ಮಾರ್ಗಾನುಯಾಯಿ. ಉರಿಲಿಂಗ ಪೆದ್ದಿಯ (ನೋಡಿ) ಹೆಂಡತಿ. ಉರಿಲಿಂಗ ಪೆದ್ದಿಗಳರಸ ಎಂಬ ಅಂಕಿತದಲ್ಲಿ ವಚನಗಳನ್ನು ರಚಿಸಿದ್ದಾಳೆ. ಈಗಿನ ಆಂಧ್ರಪ್ರದೇಶದಿಂದ ಬಂದು ಮಹಾರಾಷ್ಟ್ರದ ನಾಂದೇಡ ಜಿಲ್ಲೆಯ ಕಂಧಾರ ಗ್ರಾಮದಲ್ಲಿ ವಾಸಿಸುತ್ತಿದ್ದಳು. ಈಕೆಯ ಪತಿ ಪೆದ್ದಯ್ಯ ಕುಪ್ರಸಿದ್ಧ ಕಳ್ಳ. ಉರಿಲಿಂಗದೇವನ ಪ್ರಭಾವದಿಂದ ಶರಣನಾಗಿ ಉರಿಲಿಂಗ ಪೆದ್ದಿಯಾದ. ಪತಿಯನ್ನನುಸರಿಸಿ ಈಕೆಯೂ ಶರಣೆಯಾದಳು. ಈಕೆ ವಚನಗಳನ್ನು ರಚಿಸಿರುವುದಲ್ಲದೆ ತನ್ನ ಪತಿಯ ಜೊತೆಯಲ್ಲಿ ಶಿವಾನುಭವ ಪ್ರಚಾರ ಕಾರ್ಯದಲ್ಲಿ ನಿರಂತರ ನೆರವಾದವಳು. ಅಸ್ಪೃಶ್ಯರೆನಿಸಿದ್ದ ಈ ಸತಿಪತಿಯರು ಶಿವಾನುಭವವನ್ನು ಪಡೆದು ಶ್ರೇಷ್ಠಜ್ಞಾನಿಗಳೆನಿಸಿಕೊಂಡರು. ಈಕೆ ರಚಿಸಿರಬಹುದಾದ ಎಲ್ಲ ವಚನಗಳೂ ಸಿಕ್ಕಿಲ್ಲ. ಸಿಕ್ಕಿರುವ ಕೆಲವೇ ವಚನಗಳಲ್ಲಿ ಕಾಣುವ ಪಾಂಡಿತ್ಯ, ಅನುಭವ, ನಿಷ್ಠೆ, ತತ್ತ್ವಜ್ಞಾನದ ತಿಳಿವಳಿಕೆಗಳೂ ಗೃಹಿಣಿಯಲ್ಲಿರಬೇಕಾದ ಸದ್ಗುಣಗಳ ವಿವರಗಳೂ ಈಕೆಯನ್ನು ಉತ್ತಮ ವಚನಕಾರ್ತಿಯಾಗಿಸಿವೆ. ಹನ್ನೆರಡನೆಯ ಶತಮಾನದಲ್ಲಿ ಕಾಣುವ ಅಪೂರ್ವ ಸತಿ-ಪತಿ ಜೋಡಿಗಳಲ್ಲಿ ಇವರದೂ ಒಂದು.

ತುಮುರಿಯ ಕೊಳ್ಳಿಯಂತೆ ಉರಿವಾತ ಭಕ್ತನೆ; ಕೃತ್ಯ ಕಾಯಕವಿಲ್ಲದವರು ಭಕ್ತರಲ್ಲ, ಸತ್ಯ ಶುದ್ಧವಿಲ್ಲದದು ಕಾಯಕವಲ್ಲ; ವ್ರತವೇ ಮುತ್ತು ರತ್ನ -ಈಕೆಯ ವಚನಗಳಲ್ಲಿ ಬರುವ ಇಂಥ ಮಾತುಗಳು ಸಾಹಿತ್ಯದ ಕಾಂತಿಯಿಂದ ಮಿನುಗುತ್ತವೆ. *

**ಕಾಳಾಚಾರ್, ರು :** 1942-. ಹೆಸರಾಂತ ಶಿಲ್ಪಿ. ಇಂದಿನ ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕು ಅಜ್ಜಿಹಳ್ಳಿಯಲ್ಲಿ 1942 ಜೂನ್ 15ರಂದು ಜನಿಸಿದರು. ತಂದೆ ರುದ್ರಾಚಾರ್. ಇವರದು ಶಿಲ್ಪಿಗಳ ಕುಟುಂಬ. ಓದಿನ ನಡುವೆಯೇ ಕಲಾ ವ್ಯಾಸಂಗವನ್ನೂ ನಡೆಸಿದ ಕಾಳಾಚಾರ್ ಆಯ್ದುಕೊಂಡಿದ್ದು ಪೂರ್ಣಾವಧಿ ಶಿಲ್ಪವೃತ್ತಿಯನ್ನೇ. ಶಾಲಾ ವಸ್ತು ಪ್ರದರ್ಶನಗಳಲ್ಲಿ ಪ್ರದರ್ಶಿಸಲು ಕಲಾಕೃತಿ ರಚಿಸುವ ಮೂಲಕ ಕಲಾ ಪ್ರಪಂಚಕ್ಕೆ ಕಾಲಿಟ್ಟರು. ಅನಂತರ ಶಿಲೆ, ಲೋಹ, ಮರ, ಚಿನ್ನ, ಬೆಳ್ಳಿ ಮತ್ತು ಚಿತ್ರಕಲಾ ಮಾಧ್ಯಮಗಳಲ್ಲಿ ಪರಿಣಿತರಾಗಿ, ಸಾವಿರಾರು ಕೃತಿಗಳನ್ನು ರಚಿಸಿದರು. ಇವರು ರಚಿಸಿರುವ ಶಿಲ್ಪಗಳು ದೇಶ ವಿದೇಶಗಳಲ್ಲೂ ಸಂಗ್ರಹವಾಗಿವೆ. ಇವಲ್ಲದೇ ದೇವತಾಮೂರ್ತಿಗಳು ಹಾಗೂ ಉತ್ಸವ ಮೂರ್ತಿಗಳನ್ನು ರಚಿಸುವುದರಲ್ಲೂ ಇವರು ಪ್ರಾವೀಣ್ಯ ಪಡೆದಿದ್ದಾರೆ.



ಆರಾಧನಾ ಮೂರ್ತಿಗಳ ಬಗ್ಗೆ ಸಾಕಷ್ಟು ಅಧ್ಯಯನ ನಡೆಸಿದ ಬಳಿಕವೇ ಇವರು ಮೂರ್ತಿಗಳನ್ನು ನಿರ್ಮಿಸುತ್ತಿದ್ದರು. ಅಧ್ಯಯನಕ್ಕಾಗಿ ತಮ್ಮ ಮನೆಯಲ್ಲಿ ಸುಸಜ್ಜಿತ ಗ್ರಂಥಭಂಡಾರ ಹೊಂದಿರುವ ಇವರು ತಮ್ಮ ಮನೆಯನ್ನೇ ಶಿಲ್ಪ ಕಾರ್ಯಾಗಾರವನ್ನಾಗಿ ಮಾಡಿಕೊಂಡಿದ್ದರು.

ಶಿಲ್ಪಕಲೆಗೆ ಅಮೂಲ್ಯ ಸೇವೆ ಸಲ್ಲಿಸಿದ ಇವರಿಗೆ ಅನೇಕ ಪ್ರಶಸ್ತಿ ಗೌರವಗಳು ಲಭಿಸಿವೆ. ಇವುಗಳಲ್ಲಿ ಮುಖ್ಯವಾದವು: ಮೈಸೂರು ದಸರ ವಸ್ತುಪ್ರದರ್ಶನದಲ್ಲಿ ಸತತ ಮೂರು ಬಾರಿ ಪ್ರಶಸ್ತಿ (1961, 62, 63), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1995), ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಪ್ರಶಸ್ತಿ (1997), ಜಕಣಾಚಾರಿ ಪ್ರಶಸ್ತಿ (2003). (ಎಸ್.ಎಂ.)

**ಕಾಳಿ :** ಉತ್ತರ ಕನ್ನಡ ಜಿಲ್ಲೆಯ ಒಂದು ನದಿ. ಸಮುದ್ರ ಮಟ್ಟದಿಂದ 900ಮೀ ಎತ್ತರದಲ್ಲಿ, ಪಶ್ಚಿಮ ಘಟ್ಟಗಳ ಮಡಿಲಿನಲ್ಲಿ ಹುಟ್ಟಿ ಪೂರ್ವಾಭಿಮುಖವಾಗಿ ಹರಿದು ಅನಂತರ ಆಗ್ನೇಯ ದಿಕ್ಕಿನತ್ತ ತಿರುಗಿ ಹಳಿಯಾಳ ತಾಲ್ಲೂಕಿನ ದಾಂಡೇಲಿ ಮೂಲಕ ದಕ್ಷಿಣದತ್ತ ಹರಿದು, ಯಲ್ಲಾಪುರಕ್ಕೆ ನೈಋತ್ಯದಲ್ಲಿ 20ಕಿಮೀ ದೂರದಲ್ಲಿ ಸು.90ಮೀನಷ್ಟು ಕೆಳಕ್ಕೆ ದುಮುಕಿ ಸುಂದರವಾದ ಲಾಲಗುಳಿ ಜಲಪಾತವನ್ನು ನಿರ್ಮಿಸಿದೆ. ಮುಂದೆ ಸುಪ, ಹಳಿಯಾಳ ಮತ್ತು ಯಲ್ಲಾಪುರ ತಾಲ್ಲೂಕುಗಳ ಗಡಿಯಲ್ಲಿ ಹರಿದು ಕಾರವಾರ ತಾಲ್ಲೂಕನ್ನು ಪೂರ್ವ ದಿಕ್ಕಿನಲ್ಲಿ ಪ್ರವೇಶಿಸಿ ತಾಲ್ಲೂಕಿನ ಮಧ್ಯಭಾಗದಲ್ಲಿ ಹರಿದು ಕಾರವಾರದ ಹತ್ತಿರ ಪಡುವಣ ಕಡಲನ್ನು ಕೂಡಿಕೊಳ್ಳುತ್ತದೆ. ನದಿಯ ಮಾರ್ಗ ದಟ್ಟವಾದ ಅರಣ್ಯದಿಂದ ಕೂಡಿದೆ. ಪಶ್ಚಿಮಕ್ಕೆ ತಿರುಗಿದಾಗ ಘಟ್ಟದ ಇಳಿಜಾರಿನಲ್ಲಿ ಜಿಗಿದು, ಹೆಚ್ಚು ದೂರ ಇಕ್ಕಟ್ಟಾದ ಎಡೆಗಳಲ್ಲೇ ಹರಿದು, ಒಟ್ಟು 161ಕಿಮೀ ದೂರ ಪ್ರವಹಿಸುತ್ತದೆ. ಕಾಳಿ ನದಿಯ ಹೆಚ್ಚು ಭಾಗ ಪರ್ವತ ಪ್ರದೇಶದಲ್ಲಿ ಹರಿಯುವುದರಿಂದಲೂ ಕಡಲು ಸೇರುವ ಮುನ್ನ ಇದು ದಾಟುವ ಕರಾವಳಿ ಕೂಡ ತೀರ ಕಿರಿದಾಗಿರುವುದರಿಂದಲೂ ನೀರಾವರಿಗೆ ಇದನ್ನು ಹೆಚ್ಚಾಗಿ ಬಳಸಿಕೊಳ್ಳಲು ಸಾಧ್ಯವಾಗಿಲ್ಲ. ನದಿಯ ಮುಖದ ಸುಮಾರು 30ಕಿಮೀ ದೂರ ದೋಣಿಸಂಚಾರಕ್ಕೆ ಯೋಗ್ಯವಾಗಿದೆ. ಈ ನದಿಯ ಇಡೀ ಜಲಾನಯನ ಪ್ರದೇಶದಲ್ಲಿ. ವರ್ಷಕ್ಕೆ 889ಮಿಮೀ ಮಳೆಯಾಗುತ್ತದೆ. ಪಂಡ್ರಿ, ಬಾರ್ಚಿ, ತಟ್ಟಿಹಳ್ಳ, ಕಾನೇರಿ, ವಾಕಿ ಮತ್ತು ಮಾದ್ರಿ -ಇವು ಈ ನದಿಯ ಉಪನದಿಗಳು. ಕಾಳಿ ನದಿ ಮಳೆಗಾಲದಲ್ಲಿ ತುಂಬಿ ಹರಿಯುತ್ತದೆ. ಬೇಸಗೆಯಲ್ಲಿ ನೀರು ಕಡಿಮೆ. ಒಟ್ಟು 278 ಟಿ.ಎಂ.ಸಿ. ಅಡಿ ನೀರು ಈ ನದಿಯಲ್ಲಿ ವಾರ್ಷಿಕವಾಗಿ ಹರಿಯುವುದೆಂದು ಅಂದಾಜು ಮಾಡಲಾಗಿದೆ.

ಈ ನದಿ ಅರಬ್ಬೀಸಮುದ್ರವನ್ನು ಸೇರುವ ಮುನ್ನ ಅದರಿಂದ ಆದಷ್ಟು ಹೆಚ್ಚಿನ ಪ್ರಯೋಜನ ಪಡೆಯುವ ಸಲುವಾಗಿ ಈ ನದಿಗೆ ಅಲ್ಲಲ್ಲಿ ಜಲಾಶಯಗಳನ್ನು ನಿರ್ಮಿಸಿ, ವಿದ್ಯುದುತ್ಪಾದನ ಕೇಂದ್ರಗಳನ್ನು ಸ್ಥಾಪಿಸುವ ಕೆಲಸ ನಡೆದಿದೆ. ಇದಕ್ಕಾಗಿ ಈ ನದಿಯ ಸುತ್ತಣ ನೆಲದ ವ್ಯಾಪಕ ಸಮೀಕ್ಷೆಯನ್ನು ಮಾಡಲಾಗಿದೆ. ವಿದ್ಯುತ್ತಿನ ಅಭಿವೃದ್ಧಿಗಾಗಿ ಯೋಜನೆಯೊಂದನ್ನು ಜಾರಿಗೆ ತರಲಾಗಿದೆ. ಅಂತಿಮವಾಗಿ ಕಾಳಿ ನದಿ ಕಣಿವೆಯಲ್ಲಿ ಎಂಟು ಕಟ್ಟೆಗಳ ಆರು ವಿದ್ಯುತ್ ಕೇಂದ್ರಗಳ ನಿರ್ಮಾಣದ ಯೋಜನೆಯಿದು.

ಕಾಳಿ ಜಲವಿದ್ಯುತ್ ಯೋಜನೆಯ ಮುಖ್ಯ ಜಲಾಶಯವನ್ನು ಸುಪದ ಬಳಿ ನಿರ್ಮಿಸಲಾಗಿದೆ. ಅಲ್ಲಿಯ ಕಟ್ಟೆಯ ಎತ್ತರ 320'. 10ಲಕ್ಷ ಕಿವ್ಯಾ ವಿದ್ಯುತ್ತಿನ ಉತ್ಪಾದನೆಯಾಗುತ್ತದೆ.



ದಾಂಡೇಲಿಯ ದಟ್ಟಕಾಡಿನಲ್ಲಿ ಹರಿಯುತ್ತಿರುವ ಕಾಳಿ ನದಿ

ಮೊದಲನೆಯ ಹಂತದಲ್ಲಿ ಬೊಮ್ಮನಹಳ್ಳಿಯ ಬಳಿ ಕಾಳಿ ನದಿಗೆ ಅಡ್ಡಲಾಗಿ 75' ಎತ್ತರದ ಕಟ್ಟೆ ಕಟ್ಟಲಾಗಿದೆ. ಇದರಿಂದ ನಿರ್ಮಿತವಾದ ಸರೋವರದ ನೀರನ್ನು 29,100' ಉದ್ದದ ಒತ್ತಡ ಸುರಂಗವೊಂದರ ಮೂಲಕ 75' ವ್ಯಾಸ ಮತ್ತು 225' ಆಳದ ತೊಟ್ಟಿಯೊಳಕ್ಕೆ ಹರಿಸಿ, ಅದಕ್ಕೆ ತಲಾ 12 $^{1}/_{2}$ (ವ್ಯಾಸ ಮುಚ್ಚು 2,550) ಉದ್ದ ಇರುವ ಎರಡು ತೂಬುಗಳನ್ನು ನಿರ್ಮಿಸಲಾಗಿದೆ. ಇದರಿಂದ 1,166' ಯ ಔನ್ನತ್ಯ ದೊರಕುತ್ತದೆ. ತಲಾ 165 ಮೆಗಾವ್ಯಾಟಿನ ಎರಡು ವಿದ್ಯುಜ್ಜನಕ ಯಂತ್ರಗಳನ್ನು ಸ್ಥಾಪಿಸಿ ಇಲ್ಲಿ ಉತ್ಪತ್ತಿಯಾದ ವಿದ್ಯುತ್ತನ್ನು ಸು.64 ಕಿಮೀ ದೂರದಲ್ಲಿರುವ ಹುಬ್ಬಳ್ಳಿಗೆ ಸಾಗಿಸಲಾಗುತ್ತದೆ. ಸದ್ಯ ಸುಪದ ಈ ಜಲಾಶಯದಿಂದ 100 ಮೆಗಾವ್ಯಾಟ್ ವಿದ್ಯುತ್ ಉತ್ಪಾದನೆಯಾಗುತ್ತಿದ್ದು ಎರಡನೆಯ ಹಂತದ ಯೋಜನೆಯನ್ನು ಕೊಡಸಾಲಿ ಜಲಾಶಯ ಅನುಷ್ಠಾನಕ್ಕೆ ತರಲಾಗಿದೆ. ಇದು ಉತ್ಪಾದಿಸುವ ವಿದ್ಯುತ್ 120 ಮೆಗಾವ್ಯಾಟ್‌ಗಳು. *

**ಕಾಳಿಂಗನಾವಡ, ಗುಂಡ್ಮಿ :** **1957-** ಯಕ್ಷಗಾನದ ಹೆಸರಾಂತ ಭಾಗವತರು. ಉಡುಪಿ ತಾಲ್ಲೂಕಿನ ಗುಂಡ್ಮಿಯಲ್ಲಿ 1957 ಜೂನ್ 6ರಂದು ಹುಟ್ಟಿದರು. ಇವರ ತಂದೆ ಗುಂಡ್ಮಿ ರಾಮಚಂದ್ರ ನಾವಡರೂ ಪ್ರಸಿದ್ಧ ಭಾಗವತರಾಗಿದ್ದರು. ಕಾಳಿಂಗನಾವಡರ ವಿದ್ಯಾಭ್ಯಾಸ ಹೈಸ್ಕೂಲ್ ಮಟ್ಟವನ್ನು ಮೀರಲಿಲ್ಲ. ಬಾಲ್ಯದಿಂದಲೂ ಸೂಕ್ಷ್ಮ ಗ್ರಹಣಶಕ್ತಿ ಮತ್ತು ಅನುಕರಣ ಶಕ್ತಿಯನ್ನು ಹೊಂದಿದ್ದ ಇವರನ್ನು ತಂದೆಯವರ ಭಾಗವತ ವೃತ್ತಿ ಆಕರ್ಷಿಸಿತು. ಅವರ ಜೊತೆ ಯಕ್ಷಗಾನ ಆಟಗಳಿಗೆ ಹೋಗಿ ತಾಳ ನುಡಿಸುವ ಅಭ್ಯಾಸ ಬೆಳೆಸಿಕೊಂಡರು. ಯಕ್ಷಗಾನಕ್ಕೆ ಮಾರುಹೋದರು.

ತಮ್ಮ 15ನೆಯ ವಯಸ್ಸಿನಲ್ಲಿ ಅಮೃತೇಶ್ವರಿ ಮೇಳದಲ್ಲಿ ಸಂಗೀತಗಾರರಾಗಿ ಸೇರಿದರು. ಅಲ್ಲಿ ಇವರಿಗೆ ಗುರುವಾಗಿದ್ದವರು ಹಿರಿಯ ಭಾಗವತ ಉಪ್ಪರ ನಾರ್ಣಪ್ಪ. ಶುದ್ಧ ಶಾಸ್ತ್ರೀಯ ಭಾಗವತಿಕೆಯನ್ನು ಅವರಿಂದಲೂ ಕಲಿತರು. ಮುಂದೆ ಯಕ್ಷಗಾನದ ಮಹಾನ್ ಕಲಾವಿದರಾದ

ಹಿರಿಯಡ್ಕ ಗೋಪಾಲರಾವ್, ಮಹಾಬಲ ಕಾರಂತ, ಸದಾನಂದ ಹೆಬ್ಬಾರ ಮೊದಲಾದವರಿಂದ ಇವರಿಗೆ ಮಾರ್ಗದರ್ಶನ ದೊರೆಯಿತು. ಅಮೃತೇಶ್ವರಿ, ಸಾಲಿಗ್ರಾಮ ಮೊದಲಾದೆಡೆಗಳ ಮೇಳಗಳಲ್ಲಿ ಶ್ರೋತೃಗಳ ಕಿವಿಗಳನ್ನು ತಣಿಸುತ್ತಾ ಬಂದರು. ತಮ್ಮ ತುಂಬು ಕಂಠ ಮಾಧುರ್ಯದಿಂದ



ಪದಗಳನ್ನು ನಿಧಾನವಾಗಿ ಬಿಡಿಸಿ ಬಿಡಿಸಿ ಹಾಡುವುದರಲ್ಲಿ ಇವರು ಎತ್ತಿದ ಕೈ.

ಯಕ್ಷಗಾನದಲ್ಲಿ ಇವರು ಹಲವು ಪ್ರಸಂಗಗಳನ್ನು ರಚಿಸಿದ್ದರು. ರೂಪಶ್ರೀ, ನಾಗಶ್ರೀ, ಕಾಂಚನಶ್ರೀ, ಭಾಗ್ಯಶ್ರೀ, ವಿಜಯಶ್ರೀ- ಇವು ಜನಪ್ರಿಯ ಪ್ರಸಂಗಗಳು. ನಾಗಶ್ರೀ ಎಂಬ ಪ್ರಸಂಗ ಒಂದು ಸಾವಿರಕ್ಕೂ ಹೆಚ್ಚು ಪ್ರದರ್ಶನವನ್ನು ಕಂಡಿದೆ. ಹೊಸ ಪ್ರಸಂಗಗಳ ಜೊತೆ ಹೊಸ ರಾಗಗಳನ್ನು ಕೂಡ ಇವರು ಪರಿಚಯಿಸಿದರು. ಭಾಗವತರಾಗಿ ರಾಮಾಯಣ, ಭಾರತ, ಭಾಗವತ ಮುಂತಾದ ಪೌರಾಣಿಕ ಪ್ರಸಂಗಗಳ ಬಗ್ಗೆ ಒಲವಿದ್ದ ನಾವಡರು ಕಾಲ್ಪನಿಕ ಪ್ರಸಂಗಗಳ ರಚನೆಗೆ ಕೈಹಾಕಿದರು. ಪ್ರಸಂಗಗಳು ಕಾಲ್ಪನಿಕವಾದರೂ ಅವುಗಳಲ್ಲಿ ನೀತಿ ಪ್ರತಿಪಾದನೆ, ಜೀವನ ಮೌಲ್ಯಗಳನ್ನು ಎತ್ತಿ ಹಿಡಿಯುವುದು ಇವರ ಉದ್ದೇಶವಾಗಿತ್ತು.

ಇವರು ರಂಗದ ಮೇಲೆ ಶಿಸ್ತನ್ನು, ಸಾಂಸ್ಕೃತಿಕ ಗತ್ತನ್ನು ಕಾಪಾಡಿಕೊಂಡು ಬರುತ್ತಿದ್ದರು. ಅಂತಹುದೇ ಶಿಸ್ತನ್ನು ಇತರ ಕಲಾವಿದರಿಂದಲೂ ಅಪೇಕ್ಷಿಸುತ್ತಿದ್ದರು. ಇವರಿಗೆ ಕರಾವಳಿಯಲ್ಲಿ ಮಾತ್ರವಲ್ಲ ಬೆಂಗಳೂರು, ಮುಂಬಯಿ, ದೂರದ ಕೊಲ್ಲಿ ರಾಷ್ಟ್ರಗಳಲ್ಲೂ ಅಸಂಖ್ಯ ಅಭಿಮಾನಿಗಳಿದ್ದರು. ಬೆಹರಿನ್ ಕನ್ನಡ ಸಂಘ ಒಮ್ಮೆ ಇವರನ್ನು ಕರೆಸಿಕೊಂಡಿತ್ತು. ಕಿರುವಯಸ್ಸಿನಲ್ಲೇ ಅಪಾರ ಜನಪ್ರಿಯತೆ ಗಳಿಸಿಕೊಂಡಿದ್ದ ಇವರು ರಸ್ತೆ ಅಪಘಾತದಲ್ಲಿ ಅಕಾಲ ನಿಧನಕ್ಕೀಡಾದರು. (ಟಿ.ಎಂ)

**ಕಾಳಿಂಗರಾಯ** : ಸುದೀರ್ಘ ಕನ್ನಡ ಜನಪದ ಕಾವ್ಯಗಳಲ್ಲಿ ಒಂದು. ಆಂಧ್ರಪ್ರದೇಶ ಹಾಗೂ ಕರ್ನಾಟಕ ಎರಡು ರಾಜ್ಯಗಳಲ್ಲೂ ಈ ಕಥೆ ಪ್ರಚಲಿತವಾಗಿದೆ. ಜನಪದ ಪುಣ್ಯಕಥೆಗಳ ಸಾಲಿನಲ್ಲಿ ಇದಕ್ಕೆ ಅಗ್ರಸ್ಥಾನ. ತ್ರಿಪದಿ ಛಂದಸ್ಸಿನಲ್ಲಿ ಲಭ್ಯವಾಗುವ ಈ ಕಾವ್ಯ ಕಂಠಸ್ಥ ಸಂಪ್ರದಾಯದಲ್ಲಿ ಉಳಿದು ಬಂದ ಒಂದು ಸುಸಂಬದ್ಧ ರಚನೆಯಾಗಿದೆ. ಇದರ ಆರಂಭ ಅಂತ್ಯಗಳನ್ನು ಗಮನಿಸಿದಾಗ ಶಿಷ್ಟ ಸಂಪ್ರದಾಯದ ಮಾರ್ಗಕಾವ್ಯಗಳ ಸ್ವರೂಪವನ್ನೇ ಕಾಣಬಹುದಾಗಿದೆ. ಪೀಠಿಕಾ ಪ್ರಕರಣದಲ್ಲಿ ದೇವಾತಾಸ್ತುತಿ, ಕಾವ್ಯವನ್ನು ಹಾಡಿಸಿದವರ ಸ್ಮರಣೆ, ಅದನ್ನು ಕೇಳುವವರಲ್ಲಿ ಇರಬೇಕಾದ ಶ್ರದ್ಧೆ, ಆಸಕ್ತಿ ಈ ಎಲ್ಲ ವಿವರಗಳನ್ನೂ ಪ್ರಸ್ತಾಪಿಸಲಾಗುತ್ತದೆ:

ಆತಗಿನ್ನ ಮೊದಲು ಈಕೀಯ ನೆನೆದೇವೆ  
ಸುತ್ತೇಳು ಹೊಂಡದ ಗಿರಿಯಳ - ಮೇಲುದುರುಗಾದ  
ಸತ್ಯಕ್ಕನ ಮೊದಲು ಬಲಗೊಂಡೆ  
ಶರಣರ ಕತೆಯ ಈಗ್ಯಾರು ಕರೆಸ್ಯಾರೆ  
ಸಾಲು ಮಾಳಿಗೆ ಮನೆಯೋರು ತಿಪ್ಪೇಸ್ವಾಮಿ  
ಸತ್ಯಕಾರ ಕತೆಯ ತಗಿಸ್ಯಾರು  
ತಾಯಿ ತಂದೆಯ ತೋರಿಟ್ಟು ಹೇಳೇನೆ  
ಲಿಂಗದ ಗುಡಿಯಾಗೆ ನೆನೆದೇನೆ - ಈ ಹಾಡ  
ಕೆಂಚವ್ವ ಜಾಣೆ ಕಲಿಸ್ಯಾಳೆ

ಕಾವ್ಯದ ಅಂತ್ಯದಲ್ಲಿಯೂ ಕತೆಗಾರ್ತಿ ಕತೆಯನ್ನು ಹಾಡಿಸಿದವರಿಗೆ, ಕೇಳಿದವರಿಗೆ, ಸೊಲ್ಲು ಕೊಟ್ಟವರಿಗೆ ತನ್ನ ಕೃತಜ್ಞತೆಯನ್ನು ಅರ್ಪಿಸುತ್ತಾಳೆ.

ಹಾಡಿದಕ್ಕಗಿನ್ನ ಕೇಳಿದಕ್ಕಗಿನ್ನ  
ಸೋಯೆಂದ ಅಕ್ಕಗಳೆ ಸುಖಿಬಾಳು - ನಿಮ್ಮೊಟ್ಟೀಯಲ್ಲಿ  
ಕಾಳಿಂಗನೆಂಬೊ ಮಗ ಬರಲಿ  
ಕಂಚಿನುಂಗುರದ ಕೆಂಚೆಣ್ಣು ಕೇಳೆ  
ಅಂತರಿಸಿ ಧ್ವನಿಯನಿಲಹೊಯ್ಯಿ - ಉತ್ತದಾಳ  
ಸಂಪನ್ನರ ಕತೆಯ ಮುಗಿದಾವೆ

ಹೀಗೆ ಕಾಳಿಂಗರಾಯನ ವೃತ್ತಾಂತ ಅತ್ಯಂತ ಶ್ರದ್ಧೆ, ನಿಷ್ಠೆಗಳಿಂದ ವಿಶೇಷ ಸಂದರ್ಭಗಳಲ್ಲಿ ಮಾತ್ರ ಹಾಡಬಹುದಾದ ಕತೆಯಾದುದರಿಂದ ಅದರ ಸ್ವರೂಪ ಕೆಡದಂತೆ ಉಳಿದು ಬಂದಿದೆ. ನಾಲ್ಕಾರು ಅಧ್ಯಾಯಗಳಲ್ಲಿ ಕತೆಯನ್ನು ವಿಸ್ತರಿಸಿಕೊಳ್ಳುವಾಗ ಕಂಠಸ್ಥ ಸಂಪ್ರದಾಯಕ್ಕೆ ಅನುಗುಣವಾಗಿ, ಸ್ಮರಣೆಯಲ್ಲಿಟ್ಟುಕೊಳ್ಳುವ ಅನುಕೂಲಕ್ಕಾಗಿ ಬೇರೆ ಬೇರೆ ಪಲ್ಲವಿಗಳನ್ನು ಒಂದೊಂದು ಅಧ್ಯಾಯಕ್ಕೂ ಬದಲಿಸಿಕೊಂಡು ವೈವಿಧ್ಯಮಯ ಮಟ್ಟುಗಳಲ್ಲಿ ಹಾಡಲಾಗುತ್ತದೆ. ಎಲ್ಲ ಸಂಪ್ರದಾಯದ ಜನಪದ ಗಾಯಕರಲ್ಲೂ ಹಾಡುಗಾರಿಕೆಯ ಸೊಗಸನ್ನು ಮೆರೆಯಲು, ಏಕತಾನತೆಯನ್ನು ನಿವಾರಿಸಿಕೊಳ್ಳಲು ಸುದೀರ್ಘ ರಚನೆಗಳಲ್ಲಿ ಈ ತಂತ್ರವನ್ನೇ ಅಳವಡಿಸಿಕೊಳ್ಳುವುದು ಗಮನಾರ್ಹ ಅಂಶವಾಗಿದೆ.

ಕರ್ನಾಟಕದ ಪುರುಷ ಗಾಯಕರಲ್ಲಿ ನೀಲಗಾರರು, ದೇವರ, ಗುಡ್ಡರು, ಚೌಡಿಕೆಯವರು, ದೊಂಬಿದಾಸರು ಮೊದಲಾದ ವೃತ್ತಿಗಾಯಕರು ಅನೇಕ ಜನಪದ ಪುಣ್ಯಕತೆಗಳನ್ನು ವಾದ್ಯವಿಶೇಷದೊಡನೆ ಸಮಗ್ರ ರಾತ್ರಿ ಹಾಡುವ ವಿಶಿಷ್ಟ ಸಂಪ್ರದಾಯಗಳಂತೆಯೇ ಸ್ತ್ರೀ ಗಾಯಕರು ಯಾವ ವಾದ್ಯವಿಶೇಷವನ್ನೂ ಬಳಸದೆ ಹಾಡುವ ಸುದೀರ್ಘಕತೆಗಳೂ ಅನೇಕ. ಗೊತ್ತಾದ ಸಂದರ್ಭಗಳಲ್ಲಿ ಉಡುಗೊರೆಗಳನ್ನು ನೀಡಿ ಹಾಡಿಸುವ ವ್ಯಾಪಕವಾದ ಕತೆಗಳಿವು. ಗುಣಸಾಗರಿ, ಅಣಜಿ ಹೊನ್ನಮ್ಮ, ಹುಳಿಯಾರು ಕೆಂಚಮ್ಮ, ಬಾಲನಾಗಮ್ಮ ಮುಂತಾದ ಕತೆಗಳು ಈ ವರ್ಗಕ್ಕೆ ಸೇರುತ್ತವೆ. ಕಾಳಿಂಗರಾಯ ಮಧ್ಯ ಕರ್ನಾಟಕದ ಒಂದು ಶ್ರೇಷ್ಠ ಸಂಪ್ರದಾಯದಲ್ಲಿ ಅತ್ಯಂತ ಜನಪ್ರಿಯ ಕತೆಯಾಗಿದೆ.

ಮಕ್ಕಳಿಲ್ಲದ ಮದರಂಬೆ ಶಿವನ ಕರುಣೆಯಿಂದ ತನ್ನ ಇಳಿವಯಸ್ಸಿನಲ್ಲಿ ಗಂಡು ಮಗುವೊಂದನ್ನು ಪಡೆಯುತ್ತಾಳೆ. ಹುಟ್ಟುವಂಥ ಕಂದ ಹೆಚ್ಚುಕಾಲ ಬದುಕಲಾರ ಎಂದು ಹೇಳಿದರೂ ಕೇಳದೆ ಪಡೆದ ಮಗುವಿಗೆ ಕಾಳಿಂಗರಾಯನೆಂದು ಹೆಸರಿಡುತ್ತಾಳೆ. ಕಾಳಿಂಗರಾಯ ಓದಿನಲ್ಲಿ ಅತಿ ಜಾಣನಾಗಿ ಒಂದು ಬರೆಯೆಂದರೆ ಒಂಬತ್ತು ಬರೆದು ಗುರುವಿಗೆ ಆಶ್ಚರ್ಯವನ್ನುಂಟುಮಾಡುತ್ತಾನೆ. ಎಲ್ಲರ ಮೆಚ್ಚಿನ ಮಗುವಾಗಿ ಬೆಳೆದು, ಗೆಳೆಯರೊಡನೆ ಒಮ್ಮೆ ಚೆಂಡಾಡುವಾಗ ಕಾಳಿಂಗರಾಯ ವಿಧಿಮಾಯೆಯ ದೃಷ್ಟಿಗೆ ಬೀಳುತ್ತಾನೆ. ಮರುದಿನ ಹುಲಿಯ ಬೇಟೆಯಲ್ಲಿ ವಿಧಿ ಅವನ ಮರಣವನ್ನು ಬರೆದು ಮಾಯವಾಗುತ್ತಾಳೆ. ಕಾಳಿಂಗರಾಯ ಯಾರ ಮಾತನ್ನೂ ಲೆಕ್ಕಿಸದೆ ಮರುದಿನ ಹುಲಿಯ ಬೇಟೆಗೆ ಹೋಗಿ ಘೋರ ವ್ಯಾಘ್ರಕ್ಕೆ ಬಲಿಯಾಗುತ್ತಾನೆ. ಮಗನ ಮರಣದಿಂದ ಕಡುದುಃಖಕ್ಕೊಳಗಾದ ಮದರಂಬೆ ಸತ್ತ ಮಗನಿಗೆ ಮದುವೆ ಮಾಡುವ ನಿರ್ಧಾರಕ್ಕೆ ಬರುತ್ತಾಳೆ. ಮುದ್ದು ಚೆನ್ನವ್ವೊಡನೆ ಸತ್ತ ಕಾಳಿಂಗನ ಲಗ್ನವಾಗುತ್ತದೆ. ಸುಡುಗಾಡಿನಲ್ಲಿ ತನ್ನ ಪತಿಯ ಶವವನ್ನು ಬಿಟ್ಟು ಬರಲಾರದೆ, ಚೆನ್ನವ್ವ ಒಬ್ಬಳೇ ಅಲ್ಲಿ ಉಳಿಯುತ್ತಾಳೆ. ನಾನಾ ಬಗೆಯಲ್ಲಿ ಅವಳ ದೃಢತೆಯನ್ನು ಪರೀಕ್ಷಿಸಿ ಶಿವ, ಕೊನೆಗೆ ಕಾಳಿಂಗನನ್ನು ಬದುಕಿಸುತ್ತಾನೆ. ಶಿವನೊಡನೆ ಎಲ್ಲರೂ ಕೈಲಾಸಕ್ಕೆ ತೆರಳುತ್ತಾರೆ.

ಇದಿಷ್ಟು ಕತೆಯ ಚೌಕಟ್ಟು. ಮಗನನ್ನು ಪಡೆಯುವ ಮುನ್ನ ತಾಯಿಯ ಹಂಬಲ, ಪಡೆದ ಮಗನನ್ನು ಬೆಳೆಸಿದ ಬಗೆ, ಚೆಂಡಾಟದ ಸನ್ನಿವೇಶ, ಬೇಟೆ, ತಾಯಿಯ ದುಃಖ, ಚೆನ್ನವ್ವನನ್ನು ತಂದ ಬಗೆ, ಚೆನ್ನವ್ವನ ಪತಿಭಕ್ತಿ, ದೃಢನಿಷ್ಠೆ - ಮುಂತಾದುವು ಅತ್ಯಂತ ಉಜ್ವಲವಾಗಿ ಈ ಕಾವ್ಯದಲ್ಲಿ ಮೂಡಿಬಂದಿದೆ. ಜನಪದ ಕತೆಗಳ ಪ್ರಸಿದ್ಧ ಆಶಯಗಳು ಈ ಕತೆಯಲ್ಲಿ ಕೂಡಿಬಂದು ಸುಂದರ ಕಥಾಶಿಲ್ಪವನ್ನು ಮೂಡಿಸಿವೆ. ಈ ಕೃತಿ ಕನ್ನಡ ಸಾರಸ್ವತಲೋಕದ ಒಂದು ಉತ್ಕೃಷ್ಟ ಕೃತಿಯಾಗಿ ಜನಪದ ಕಾವ್ಯಗಳ ಘನತೆಯನ್ನು ಎತ್ತಿಹಿಡಿಯುವ ಅತ್ಯುತ್ತಮ ಮಾದರಿಯಾಗಿದೆ. ಉಚ್ಚಂಗಿದುರ್ಗದ ಪ್ರಸಿದ್ಧ ಜನಪದ ಗಾಯಕಿ ಎಲಿಸವ್ವ ಹಾಡಿದ ಈ ಕತೆಯ ಒಂದು ಪಾಠ ಈಗಾಗಲೇ ಕೃತಿರೂಪದಲ್ಲಿ ಪ್ರಕಟವಾಗಿದೆ. (ಜಿ.ಎಸ್.ಪಿ.)

**ಕಾಳಿಂಗರಾವ್, ಪಿ. :** 1911-81. ಪ್ರಸಿದ್ಧ ಗಾಯಕ, ಸಂಗೀತ ನಿರ್ದೇಶಕ. 1914 ಆಗಸ್ಟ್ 31ರಂದು ದಕ್ಷಿಣ ಕನ್ನಡ ಜಿಲ್ಲೆ ಪಾಂಡೇಶ್ವರದಲ್ಲಿ ಜನಿಸಿದರು. ಹಾರಾಡಿ ರಾಮಗಾಣಿಗರ ಗುರುಗಳಾಗಿದ್ದ ಪಾಂಡೇಶ್ವರ ಪುಟ್ಟಯ್ಯ ಇವರ ತಂದೆ, ತಾಯಿ ನಾಗರತ್ನಮ್ಮ. ಸುಬ್ರಹ್ಮಣ್ಯ ದೇವರ ಮನೆಯೊಕ್ಕಲಿನವರಾಗಿದ್ದ ತಾಯಿ,ಮಗನಿಗೆ ಸುಬ್ರಹ್ಮಣ್ಯ ಹೆಸರನ್ನೇ ಇಟ್ಟು ಸುಬ್ರಾಯ ಶಾನಭಾಗ್ ಎಂದು ಕರೆಯುತ್ತಿದ್ದರು. ಅನಂತರ ಕಾಳಿಂಗಶರ್ಮನೆನಿಸಿ, ಮುಂದೆ ಕಾಳಿಂಗರಾವ್ ಎಂಬ ಹೆಸರು ರೂಢಿಗತವಾಯಿತು.

ಬಾಲ್ಯದಲ್ಲಿ ಶಾಲಾರಂಗಭೂಮಿಯಿಂದಲೇ ನಾಟಕರಂಗ, ಪ್ರವೇಶಿಸಿದರು. ಇವರಲ್ಲಿದ್ದ ಸುಪ್ತಕಲೆಯ ವಿಕಾಸಕ್ಕೆ ನೆರವಾದವರು



ಸೋದರಮಾವ ಸೂರತ್ ಮಂಜಯ್ಯ. ಬಾಲಕನಲ್ಲಿದ್ದ ಸಂಗೀತಾಸಕ್ತಿಯನ್ನು ಗುರುತಿಸಿದ ಅವರು ಶ್ಲೋಕಗಳು, ದೇವರ ನಾಮಗಳು, ಭಜನೆಗಳನ್ನು ಕಲಿಸಿದರು. ಕಾಲಕ್ರಮದಲ್ಲಿ ರಾಯರ ಒಲವು ಶಾಸ್ತ್ರೀಯ ಸಂಗೀತದತ್ತ ಹೊರಳಿತು. ಜೊತೆ ಜೊತೆಗೇ ಅಂಟಿ ಕೊಂಡಿದ್ದು ಸಂಗೀತ ಹಾಗೂ ನಾಟಕದ ಗೀಳು. ಇದರೊಂದಿಗೆ ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳೆರಡರ ಸಾಹಿತ್ಯದಲ್ಲೂ ಆಸಕ್ತಿ ತಳೆದರು. ಶಾಲೆಯ ವಾರ್ಷಿಕೋತ್ಸವದ ಸಂದರ್ಭದಲ್ಲಿ ಚಂದ್ರಹಾಸ ನಾಟಕದಲ್ಲಿ ಚಂದ್ರಹಾಸನಾಗಿ ಅಭಿನಯಿಸಿ ತಮ್ಮ ಅಭಿನಯಕ್ಕೆ ಚಿನ್ನದ ಪದಕ ಪಡೆದುಕೊಂಡರು. ಆಗ ನಾಟಕ ವೀಕ್ಷಿಸಿದ ರಂಗಭೂಮಿಯ ನಟ ಮುಂಡಾಜೆ ರಂಗನಾಥ'ಭಟ್ಟರು ತಮ್ಮ ಅಂಬಾಪ್ರಸಾದಿತ ನಾಟಕ ಮಂಡಳಿಯಲ್ಲಿ ಅವಕಾಶ ಕಲ್ಪಿಸಿದರು. ಲೋಹಿತಾಶ್ವ, ಧ್ರುವ, ಕೃಷ್ಣನಾಗಿ ಬಾಲ ಪಾತ್ರಗಳಲ್ಲಿ ಮೆರೆದರು. ಭಟ್ಟರಿಂದ ಕರ್ನಾಟಕ ಶಾಸ್ತ್ರೀಯ ಸಂಗೀತ ಶಿಕ್ಷಣವನ್ನು ಪಡೆಯುವ ಅವಕಾಶ ಕಾಳಿಂಗರಾಯರಿಗೆ ದೊರೆಯಿತು. ಆ ನಾಟಕ ಕಂಪನಿಯಲ್ಲಿ ಮುಖ್ಯ ಪಾತ್ರಧಾರಿಗಳಾಗಿದ್ದ ವೆಂಕಟರಾವ್ ರಾಮದುರ್ಗಾ ಹಾಗೂ ರಾಮಚಂದ್ರಬುವಾ ಮರೇಳಕರ್ ಇವರಿಗೆ ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತವನ್ನೂ ಕಲಿಸಿದರು. ಕಾಲಕ್ರಮದಲ್ಲಿ ಇವರು ಬಾಲ ಪಾತ್ರಗಳಿಂದ ಸ್ತ್ರೀ ಪಾತ್ರಕ್ಕೇರಿದರು. ರಾಯರ ಸೊಸೆ, ಆಜನ್ಮಕುಮಾರಿ, ಕಾಳಿಯ ಮರ್ದನ, ತುಳಸಿದಾಸ, ಮಿಸ್ ಮಾಧುರಿ, ವಿಕ್ರಮ ಶಶಿಕಲಾ ಮುಂತಾದ ನಾಟಕಗಳಲ್ಲಿ ಸ್ತ್ರೀ ಪಾತ್ರಧಾರಿಯಾಗಿ ಅಭಿನಯಿಸಿದರು.

ಹಲವಾರು ಕಂಪನಿ ನಾಟಕಗಳಲ್ಲಿ ವೇಷ ಹಾಕಿ ಮೆರೆದಿದ್ದ ರಾಯರು ಚಲನಚಿತ್ರರಂಗದ ಲೋಕಕ್ಕೆ ಬೆರಗಾಗಿ ಮದರಾಸಿಗೆ ಕಾಲಿಟ್ಟರು. ಪ್ರೇಮಸಾಗರ, ವಸಂತಸೇನಾ ಮೊದಲಾದ ಚಿತ್ರಗಳಿಗೆ ಸಂಗೀತ ನೀಡಿದರು. ಇದರೊಂದಿಗೆ ಚಿತ್ರಗಳಲ್ಲೂ ಅಭಿನಯಿಸಿದರು. ಇವರ ಪ್ರತಿಭೆಯನ್ನು ಗುರುತಿಸಿ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭೆಯವರು, ತಮ್ಮ ಸಂಗೀತ ಕಾಲೇಜಿಗೆ ಪ್ರಾಚಾರ್ಯರನ್ನಾಗಿ ನೇಮಿಸಿಕೊಂಡರು. ಆದರೆ ಕೆಲಸದ ಏಕತಾನತೆಗೆ ಬೇಸರಗೊಂಡು, ಕೆಲಸಕ್ಕೆ ರಾಜೀನಾಮೆ ನೀಡಿದರು.

ಮದರಾಸು ಬಿಟ್ಟು ಮೈಸೂರಿಗೆ ಬಂದರು. ಇಲ್ಲಿ ನಿರ್ಮಾಣವಾದ ಪ್ರಥಮ ಚಲನಚಿತ್ರ ಕೃಷ್ಣಲೀಲಾಗೆ ಸಂಗೀತ ನೀಡಿದರು. ಯಾರೂ ತುಳಿಯದ ಜಾಡಿನಲ್ಲಿ ತಮ್ಮ ಹೆಜ್ಜೆಯನ್ನೂರುವ ಆಸೆ ಇವರದಾಗಿತ್ತು. ಆ ತುಡಿತದ ಫಲವೇ ಜನಪದ ಗೀತೆಗಳು, ಲಾವಣಿ, ವಚನ, ದೇವರನಾಮ, ಭಾವಗೀತೆ ಮುಂತಾದ ವೈವಿಧ್ಯಮಯವಾದ ಸಾಹಿತ್ಯದ ಹಾಡುಗಾರಿಕೆಯಲ್ಲಿ ಸಾರ್ಥಕತೆಯನ್ನು ಪಡೆದರು. ಕರ್ನಾಟಕ ಸಂಗೀತ, ಹಿಂದೂಸ್ಥಾನಿ ಸಂಗೀತದ ಜೊತೆಗೆ ಪಾಶ್ಚಾತ್ಯ ಸಂಗೀತವನ್ನೂ ಅಭ್ಯಾಸ ಮಾಡಿದ್ದರಿಂದ ಆಯಾಯಾ ಸಾಹಿತ್ಯದ ಧ್ವನಿಯನ್ನನುಸರಿಸಿ ರಾಗದ ಕವಚವನ್ನು ತೊಡಿಸಿ, ಕವನದ ಭಾವಕ್ಕೆ ಇಂಬುಕೊಡುತ್ತಿದ್ದರು.

ಹುಯಿಲಗೋಳ ನಾರಾಯಣರಾಯರ 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' - ಎಂಬ ಗೀತೆಯನ್ನು ಸ್ವರಸಂಯೋಜಿಸಿ ಹಾಡಿದರು (1946). ಕರ್ನಾಟಕ ರಾಜ್ಯೋದಯದ ಅನಂತರ ಕರ್ನಾಟಕ ಸರ್ಕಾರ ಈ ಹಾಡನ್ನು ಹಾಡಿದ್ದ ಕಾಳಿಂಗರಾಯರನ್ನು ಸನ್ಮಾನಿಸಿತು. ಇವರು ತಮ್ಮ ವಿಶಿಷ್ಟ ಗಾಯನದ ಮೂಲಕ ಜನಪದಗೀತೆಗಳಿಗೆ, ಭಾವಗೀತೆಗಳಿಗೆ ಹೊಸ ತಿರುವನ್ನು ಕೊಟ್ಟರು. ಜಿ.ಪಿ. ರಾಜರತ್ನಂರವರ ರತ್ನನ ಪದಗಳನ್ನು ಹೇಗೆ ಭಾವಪೂರ್ಣವಾಗಿ ಹಾಡಬಹುದೆಂದು ಮೊದಲಿಗೆ ತೋರಿಸಿಕೊಟ್ಟರು. ಇವರ ನಾಲಿಗೆಯ ಮೇಲೆ ದಾಸರು ನಲಿದರು, ವಚನಕಾರರು ಕುಣಿದರು, ಜನಪದರು ಉಕ್ಕಿ ಹರಿದರು, ಭಾವಗೀತಾಕಾರರು ಮಿಂಚಿದರು, ಯೆಂಡ್ಕುಡಕರತ್ನ ಮೆರೆದ. ಕಾಳಿಂಗರಾಯರು ಎಲ್ಲ ಪ್ರಕಾರದ ಹಾಡುಗಳಿಂದ ಭಾರತದ ಉದ್ದಗಲಕ್ಕೂ ತಮ್ಮ ಗಾನಸುಧೆ ಹರಿಸಿದರು. ಇದಲ್ಲದೆ ಕಿತ್ತೂರು ಚೆನ್ನಮ್ಮ, ಅಬ್ಬಾ ಆ ಹುಡುಗಿ, ಅಣ್ಣ ತಂಗಿ, ಲಗ್ನಪತ್ರಿಕೆ ಚಿತ್ರಗಳಲ್ಲಿ ಹಾಡಿದರು. ನಟಶೇಖರ, ಅಬ್ಬಾ ಆ ಹುಡುಗಿ, ತರಂಗ ಚಿತ್ರಗಳಿಗೆ ಸಂಗೀತ ನೀಡಿದರು.

ನಾಟಕರತ್ನ ಗುಬ್ಬಿವೀರಣ್ಣನವರ ದಶಾವತಾರ ನಾಟಕಕ್ಕೆ ಸಂಗೀತ ನಿರ್ದೇಶಿಸಿದರು (1955). ಆ ಕಂಪನಿಯ ಲವ-ಕುಶ ನಾಟಕಕ್ಕೂ ಸಂಗೀತ ನೀಡಿದರು. ಸುಮಾರು ಐದಾರು ವರ್ಷ ಈ ಕಂಪನಿಯಲ್ಲಿ ದುಡಿದರು. ರಂಗನಾಟಕಗಳಿಗೂ ವಿನೂತನ ಶೈಲಿಯ ಹೊಚ್ಚ ಹೊಸ ರಾಗರೂಪವನ್ನು ಕೊಟ್ಟು ಪ್ರಸಿದ್ಧರಾದರು.

ಆಕಾಶವಾಣಿಯ ಗಾಯಕರಾಗಿಯೂ ಇವರು ಸೇವೆಸಲ್ಲಿಸಿದರು. ಇಂಥ' ಪ್ರತಿಭಾವಂತ ಗಾಯಕನಿಗೆ ಜಾನಪದ ಸಂಗೀತರತ್ನ, ಬಾಲಗಂಧರ್ವ, ಜಾನಪದ ಕಲಾಚಕ್ರವರ್ತಿ, ಗಾಯನ ಚಕ್ರವರ್ತಿ, ಗಾಯನ ಕಂಠೀರವ, ಕನ್ನಡ ಉದಯಗಾನ ಕೋಗಿಲೆ, ಸಂಗೀತ ರಸವಿಹಾರಿ - ಇವು ಜನ ಮೆಚ್ಚಿಕೊಟ್ಟ ಬಿರುದುಗಳು. ಇವರ ಬಾಳಿನ ಸಂಜೆ ಅಷ್ಟೊಂದು ಸುಗಮವಾಗಿರಲಿಲ್ಲ. ಆರ್ಥಿಕ ಮುಗ್ಗಟ್ಟಿನಿಂದಾಗಿ ನಲುಗಿದರು. ಇವರ ಪತ್ನಿ ಮೀನಾಕ್ಷಿ. ಕಾಳಿಂಗರಾಯರು 1981 ಸೆಪ್ಟೆಂಬರ್ 21ರಂದು ನಿಧನರಾದರು. ಎಚ್.ಎಂ.ವಿ.ಸಂಸ್ಥೆ ಇವರ ಕೆಲವು ಧ್ವನಿಮುದ್ರಿಕೆಗಳನ್ನು ಹೊರತಂದಿದೆ. (ಎಚ್.ಆರ್.ಎಲ್.)

**ಕಾಳೆ, ಭಿ.ಪ. :** 1889-. ಕನ್ನಡ ಗ್ರಂಥಕರ್ತ, ಪ್ರಕಾಶಕ, ಮುದ್ರಕ. ಕನ್ನಡದಲ್ಲಿ ಪತ್ತೇದಾರಿ ಕಾದಂಬರಿಗಳನ್ನು ಬರೆದ ಆದ್ಯರು. ಭಿಕಾಜಿ ಪಂತ ಕಾಳೆ ಎಂಬುದು ಇವರ ಪೂರ್ಣ ಹೆಸರು.

ಧಾರವಾಡ ಜಿಲ್ಲೆ ಕುಂದಗೋಳ ತಾಲ್ಲೂಕಿನ ಸಂಶಿ ಗ್ರಾಮದಲ್ಲಿ 1889 ಜನವರಿ 20ರಂದು ಜನಿಸಿದರು. ತಂದೆ ಪರಶುರಾಮ ಪಂತ. ಆಗ ಸಂಶಿ ಗ್ರಾಮ ಪಟವರ್ಧನ ಸಂಸ್ಥಾನಿಕರ ಆಡಳಿತಕ್ಕೆ ಒಳಪಟ್ಟಿದ್ದು ಕುರಂದವಾಡ ಸಂಸ್ಥಾನಿಕರ ಅಧೀನದಲ್ಲಿತ್ತು. ಸಂಸ್ಥಾನಿಕರ ಮನೆಮಾತು ಮರಾಠಿಯಾಗಿದ್ದುದರಿಂದ ಅವರ ಆಡಳಿತದ ಭಾಷೆಯೂ ಮರಾಠಿಯೇ ಆಗಿತ್ತು. ಹೀಗಾಗಿ ನೂರರಲ್ಲಿ ನೂರು ಜನ ಕನ್ನಡಿಗರಿಂದಲೇ ತುಂಬಿದ್ದ ಸಂಶಿ ಗ್ರಾಮವೂ ಮರಾಠಿಯ ಪ್ರಭಾವಕ್ಕೆ ಒಳಗಾಗಿತ್ತು.

ಆಡಳಿತ ಭಾಷೆಯ ಕಾರಣದಿಂದಲೇ ಮಹಾರಾಷ್ಟ್ರದಿಂದ ಪಟವರ್ಧನ ಸಂಸ್ಥಾನಕ್ಕೆ ಬಂದು ಅಲ್ಲಿಯ ಬೇರೆ ಬೇರೆ ಊರುಗಳಲ್ಲಿ ನೆಲಸಿದ ಚಿತ್ಪಾವನ (ಕೊಂಕಣಸ್ಥ) ಬ್ರಾಹ್ಮಣ ಮನೆತನಗಳಲ್ಲಿ ಕಾಳೆ ಕುಟುಂಬವೂ ಒಂದು. ಈ ಕುಟುಂಬ ಸಂಶಿಯಲ್ಲಿ ನೆಲಸಿತು. ಇವರ ಮನೆಮಾತು ಮರಾಠಿಯಾದರೂ ಇವರ ಪ್ರಾಥಮಿಕ ಶಿಕ್ಷಣ ಕನ್ನಡ ಭಾಷೆಯಲ್ಲಿ ನಡೆಯಿತು. ಆ ಕಾಲದ ಪ್ರಾಥಮಿಕ ಶಾಲೆಯ ಕೊನೆಯ ಘಟ್ಟವಾದ ಮುಲ್ಕೀ ಪರೀಕ್ಷೆಯಲ್ಲಿ ಇವರು ತೇರ್ಗಡೆಹೊಂದಿದರಲ್ಲದೆ ನಾಲ್ಕನೆಯ ತರಗತಿಯವರೆಗೆ ಇಂಗ್ಲಿಷ್ ಓದಿದರು.

ಹಾವೇರಿ ತಾಲ್ಲೂಕಿನ ಅಗಡಿಯ ಬಳಿಯ ಆನಂದವನ ಅಗ್ರಹಾರದಲ್ಲಿ ಸದ್ಬೋಧ ಚಂದ್ರಿಕೆ ಮಾಸಪತ್ರಿಕೆಗಾಗಿ ಆರಂಭವಾದ ಒಂದು ಚಿಕ್ಕ ಮುದ್ರಣಾಲಯದ ವ್ಯವಸ್ಥಾಪಕರಾಗಿ ಇವರು 1909ರಲ್ಲಿ ಅಲ್ಲಿಗೆ ಹೋದರು. ಗಳಗನಾಥ'ರ ಮೊದಮೊದಲಿನ ಪುಸ್ತಕಗಳೆಲ್ಲ ಇವರ ವ್ಯವಸ್ಥಾಪಕತ್ವದಲ್ಲಿಯೇ ಮುದ್ರಿತವಾಗುತ್ತಿದ್ದುವು. ಸದ್ಬೋಧಚಂದ್ರಿಕೆ ಮಾಸಪತ್ರಿಕೆಯ ವ್ಯವಸ್ಥಾಪಕರೂ ಇವರೇ ಆಗಿದ್ದರು. ಗಳಗನಾಥರು ಆನಂದವನವನ್ನು ಬಿಟ್ಟು ಹೊರಟಮೇಲೆ ಸದ್ಬೋಧ ಚಂದ್ರಿಕೆಯ ಹೆಚ್ಚಿನ ಹೊಣೆಯನ್ನು ಇವರೇ ಹೊರಬೇಕಾಯಿತು. ಈ ಅವಧಿಯಲ್ಲಿ ಇವರು 20ಕ್ಕಿಂತ ಹೆಚ್ಚು ಐತಿಹಾಸಿಕ, ಸಾಮಾಜಿಕ ಮತ್ತು ಪತ್ತೇದಾರಿ ಕಾದಂಬರಿಗಳನ್ನು ಬರೆದು ಪ್ರಕಟಿಸಿದರು. ಇವುಗಳಲ್ಲಿ ಹೆಚ್ಚಿನ ಸಂಖ್ಯೆಯವು ಮರಾಠಿಯಿಂದ ಭಾಷಾಂತರಿಸಿದವು.

ಮಕ್ಕಳ ಶಿಕ್ಷಣಕ್ಕಾಗಿ ಇವರು ಆನಂದವನವನ್ನು ಬಿಡಬೇಕಾಯಿತು. ಧಾರವಾಡದ ಮದಿಹಾಳ ಭಾಗದಲ್ಲಿ ಮನೆಮಾಡಿ ಇರತೊಡಗಿದರು. ಇಲ್ಲಿಯೂ ಒಂದು ಚಿಕ್ಕ ಮುದ್ರಣಾಲಯವನ್ನು ಸ್ಥಾಪಿಸಿಕೊಂಡು ಹತ್ತು ಹನ್ನೆರಡು ವರ್ಷಗಳವರೆಗೆ ತಮ್ಮ ಕೃತಿಗಳನ್ನು ಪುನರ್ಮುದ್ರಿಸುವ ಕಾರ್ಯ ನಡೆಸಿದರು. ಆ ಮುದ್ರಣಾಲಯವನ್ನು ಧಾರವಾಡದ ಜನತಾ ವಿದ್ಯಾಸಂಸ್ಥೆಗೆ ದಾನವಾಗಿ ಕೊಡಲಾಗಿದೆ. ಕಾಳೆಯವರು ತಮ್ಮ ವೃದ್ಧಾಪ್ಯ ಜೀವನವನ್ನು ಧಾರವಾಡದಲ್ಲಿಯೇ ಕಳೆದು ನಿಧನರಾದರು. (ಬ.ಕೆ.)

**ಕಿಕ್ಕೇರಿ :** ಮಂಡ್ಯ ಜಿಲ್ಲೆ ಕೃಷ್ಣರಾಜಪೇಟೆ ತಾಲ್ಲೂಕಿನಲ್ಲಿ ಕೃಷ್ಣರಾಜ ಪೇಟೆಗೆ 16ಕಿಮೀ ದೂರದಲ್ಲಿ ಚನ್ನರಾಯಪಟ್ಟಣದ ರಸ್ತೆಯಲ್ಲಿರುವ ಗ್ರಾಮ.



ಮಲ್ಲೇಶ್ವರ ದೇವಾಲಯ, ಕಿಕ್ಕೇರಿ

ಇದು ಹೊಯ್ಸಳರ ಕಾಲದಲ್ಲಿ ಅಗ್ರಹಾರವಾಗಿತ್ತು. ಇಲ್ಲಿ ಆ ಕಾಲದ ಅನೇಕ ದೇವಾಲಯಗಳಿವೆ. ಇಲ್ಲಿರುವ, 1111ರಲ್ಲಿ ನಿರ್ಮಿತವಾದ ಮಲ್ಲೇಶ್ವರ, ಜನಾರ್ಧನ ಮತ್ತು ಇನ್ನೂ ಹಲವು ದೇವಾಲಯಗಳು ಹಾಳುಬಿದ್ದಿವೆ. ಬಹುಶಃ ಇವುಗಳಲ್ಲೊಂದರಲ್ಲಿದ್ದಿರಬಹುದಾದ ಕೇಶವನ ಮೂರ್ತಿಯೊಂದು ಈಗ ನ್ಯೂಯಾರ್ಕಿನ ಮೆಟ್ರೋಪಾಲಿಟನ್ ವಸ್ತುಸಂಗ್ರಹಾಲಯದಲ್ಲಿದೆ. ಅದರ ಪೀಠದ ಮೇಲಿನ ಸುಂದರವಾದ ಶಾಸನದಿಂದ ಅದನ್ನು ಪ್ರಸಿದ್ಧನಾದ ಬಳ್ಳಿಗಾಮೆಯ ದಾಸೋಜ ರಚಿಸಿದಂತೆ ತಿಳಿದುಬರುತ್ತದೆ. ಈ ಊರಿನಲ್ಲಿ ಈಗ ಭವ್ಯವಾಗಿ ನಿಂತಿರುವ ಹೊಯ್ಸಳ ದೇವಾಲಯವೆಂದರೆ ಬ್ರಹ್ಮೇಶ್ವರ ದೇವಾಲಯ. ಇದನ್ನು 1171ರಲ್ಲಿ ಬಮ್ಮವೆ ನಾಯಕಿತಿ ಕಟ್ಟಿಸಿದಳು. ಇದರ ನವರಂಗದಲ್ಲಿ ಕಂಬಗಳ ಮೇಲಿರುವ ಮದನಿಕೆಯರ ವಿಗ್ರಹಗಳು ಬೇಲೂರಿನ ಮೂರ್ತಿಗಳನ್ನು ನೆನಪಿಗೆ ತರುತ್ತವೆ. ಈಚೆಗೆ ಕಟ್ಟಿರುವ ನರಸಿಂಹ ದೇವಾಲಯದಲ್ಲಿ ಹಳೆಯ ನರಸಿಂಹ, ಜನಾರ್ದನ, ತಿರುಮಲದೇವರು ಮೊದಲಾದ ಪಾಳುಬಿದ್ದ ದೇವಾಲಯಗಳ ಮೂರ್ತಿಗಳನ್ನು ತಂದಿರಿಸಿದೆ. ಕಿಕ್ಕೇರಮ್ಮ ಮತ್ತು ಉಪ್ಪರಿಗೆ ಬಸವಣ್ಣನ ದೇವಾಲಯಗಳೂ ಇಲ್ಲಿವೆ. ಊರಿನ ಬಳಿ ಒಂದು ದೊಡ್ಡ ಕೆರೆ ಇದೆ. (ಎಂ.ಎಚ್.)

**ಕಿಕ್ಕೇರಿಯಾರಾಧ್ಯ ನಂಜುಂಡ :** ಸು.1550. ವೀರಶೈವ ಕವಿ. ಭೈರವೇಶ್ವರಕಾವ್ಯ ಎಂಬ ಗ್ರಂಥದ ಕರ್ತೃ. ಕೃಷ್ಣರಾಜಪೇಟೆ ತಾಲ್ಲೂಕಿನ ಕಿಕ್ಕೇರಿ ಈತನ ಜನ್ಮಸ್ಥಳ. ಪೂರ್ವಕವಿಗಳಲ್ಲಿ ಬಾಣ, ಮಯೂರ, ಗುಜ್ಜರ, ಮಲುಹಣ, ಹರೀಶ, ಪಾಲ್ಕುರಿಕೆ ಸೋಮನಾಥ ಇವರನ್ನು ಸ್ಮರಿಸಿದ್ದಾನೆ. ತನ್ನ ಕಾವ್ಯದಲ್ಲಿ ಸೋಮನಾಥನನ್ನು ಹೆಚ್ಚಾಗಿ ಸ್ತುತಿಸಿರುವುದರಿಂದ ಸೋಮನಾಥ ಇವನ ಇಷ್ಟದೈವವೆಂದು ತೋರುತ್ತದೆ. ಈತ ಅತ್ಯಂತ ಪ್ರತಿಭಾವಂತನೂ ಬಹುಶ್ರುತನೂ ಆಗಿದ್ದಾತ.

ಭೈರವೇಶ್ವರಕಾವ್ಯ ಷಟ್ಪದಿಯಲ್ಲಿ ರಚಿತವಾಗಿದ್ದು 5 ಸಂಧಿ, 5 ವೃತ್ತ, 1200 ಪದ್ಯಗಳನ್ನೊಳಗೊಂಡಿದೆ. ಸಾಸಲಪುರದ ಸೋಮೇಶ್ವರನುನ್ನತ ಭೈರವೇಶನಿಗೊಲಿದು ಕೈಲಾಸಾವಾಸಕೊಯ್ದ ಕಥೆ ಕಾವ್ಯವಸ್ತು. ಇದರಲ್ಲಿ 342ಕ್ಕೂ ಹೆಚ್ಚು ಶಿವಶರಣರ ಕಥೆಗಳೂ 597ಕ್ಕೂ ಹೆಚ್ಚು ಇತರ ಕಥೆಗಳೂ ಸೂತ್ರರೂಪದಲ್ಲಿವೆ. ತನ್ನ ಕಾವ್ಯ ವಸ್ತುಕವರ್ಣಕದಿಂದ ನವರಸಾರ್ಥದಿಂದ ಹದಿನೆಂಟು ಶೃಂಗಾರಯುಕ್ತ ಕಾವ್ಯ ಪ್ರಬಂಧವಾಗಿ ರೂಪುಗೊಂಡಿದೆ ಎಂದು ಕವಿ ಹೇಳಿಕೊಂಡಿದ್ದಾನೆ. ಭಕ್ತಿಯ ತಾಣ ಸನ್ಮುಕ್ತಿಯಸದನ ವಿರಕ್ತಿಯ ಸೀಮೆ ಮೋಹನರಸೋಕ್ತಿಯ ಸಿರಿ ಸರಸೋಕ್ತಿಯ ನೆಲೆ ಎಂದು ತನ್ನ ಕೃತಿಯ ಉತ್ಕೃಷ್ಟತೆಯನ್ನು ಕುರಿತು ಹೇಳಿಕೊಂಡಿದ್ದಾನೆ. (ಜಿ.ಜಿ.ಎಂ.)

**ಕಿಗ್ಗ:** ನೋಡಿ: ಋಷ್ಯಶೃಂಗಪುರ

**ಕಿಟ್ಟೆಲ್, ಫರ್ಡಿನೆಂಡ್ :** 1832-1903. ಕನ್ನಡ-ಇಂಗ್ಲಿಷ್ ನಿಘಂಟನ್ನು ಅಪಾರಶ್ರಮದಿಂದ ಸಿದ್ಧಪಡಿಸಿ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದ ಪಾಶ್ಚಾತ್ಯ ವಿದ್ವಾಂಸ. ಜರ್ಮನಿಯ ವಾಯುವ್ಯ ಭಾಗದಲ್ಲಿರುವ ರೋಸ್ಟರ್ ಹಾಫೆಯಲ್ಲಿ 1832 ಏಪ್ರಿಲ್ 7ರಂದು ಜನಿಸಿದರು. ತಂದೆ ಗಾಟ್ ಫ್ರೀಟ್ ಕ್ರಿಸ್ತಿಯಾನ್. ಕಿಟ್ಟೆಲ್ ಕ್ರೈಸ್ತಮತದ ಪ್ರಾಟೆಸ್ಟಂಟ್ ಪಂಗಡಕ್ಕೆ ಸೇರಿದ ಧರ್ಮಾಧಿಕಾರಿ. ಮಿಷನರಿ ವಾತಾವರಣದಲ್ಲಿ ಬೆಳೆದ ಕಿಟ್ಟೆಲ್ ಹುಟ್ಟೂರಿನಲ್ಲಿ ಮತ್ತು ಔರಿಕ್ ಎಂಬಲ್ಲಿ ಆರಂಭದ ವ್ಯಾಸಂಗವನ್ನು ಮುಗಿಸಿದ ಅನಂತರ ಸ್ವಿಟ್ಜರ್‌ಲೆಂಡಿನ ಬಾಸೆಲ್ ನಗರದ ಮಿಷನ್ ಕಾಲೇಜಿಗೆ ಉನ್ನತ ವ್ಯಾಸಂಗಕ್ಕಾಗಿ ತೆರಳಿದರು. ಅಲ್ಲಿ ಮೂರು ವರ್ಷಗಳ ಶಿಕ್ಷಣವನ್ನು ಮುಗಿಸಿ ಪಾದ್ರಿಯಾಗಿ ನೇಮಕಗೊಂಡು ಭಾರತಕ್ಕೆ ಬಂದು ಧಾರವಾಡದಲ್ಲಿ ನೆಲೆಸಿದರು (1853). ಅನಂತರ ಮಂಗಳೂರು, ಮಡಿಕೇರಿ, ಆನಂದಪುರ ಮತ್ತು ಹುಬ್ಬಳ್ಳಿಗಳಲ್ಲಿ ಪಾದ್ರಿಯಾಗಿ ಕೆಲಸಮಾಡಿದರು. ಮಂಗಳೂರಿನಲ್ಲಿದ್ದಾಗ ಕನ್ನಡದ ವ್ಯಾಸಂಗವನ್ನು ಆರಂಭಿಸಿ, ಅದರಲ್ಲಿ ಬಹು ಬೇಗ ಪರಿಶ್ರಮವನ್ನು ಸಂಪಾದಿಸಿಕೊಂಡರು.

ಪಾಲಿನ್ ಎಫ್.ಈತ್ ಎಂಬ ಜರ್ಮನ್ ಕನ್ಯೆಯನ್ನು ಮದುವೆ ಯಾದರು(1860). ಮದುವೆಯಾದ ನಾಲ್ಕೇವರ್ಷಗಳಲ್ಲಿ ಆಕೆ ಇಬ್ಬರು ಗಂಡು ಮಕ್ಕಳನ್ನು ಬಿಟ್ಟು ಮಂಗಳೂರಿನಲ್ಲಿ ತೀರಿಕೊಂಡರು. ಕಿಟ್ಟೆಲ್ ತಮ್ಮ ಮಕ್ಕಳೊಂದಿಗೆ ಒಂದು ವರ್ಷಕಾಲ ಯುರೋಪಿನ ಪ್ರವಾಸಕ್ಕೆ ಹೊರಟರು. ಹಿಂದಿರುಗುವಾಗ ತಮ್ಮ ಪತ್ನಿಯ ಸಹೋದರಿ ಡಬ್ಲ್ಯೂ.ಜ್ಯೂಲಿ ಎಂಬಾಕೆಯನ್ನು ವಿವಾಹವಾಗಿ ಭಾರತಕ್ಕೆ ಹಿಂದಿರುಗಿದರು.

ಕನ್ನಡ ಭಾಷೆಯಲ್ಲಿ ಕಿಟ್ಟೆಲರಿಗಿದ್ದ ಪಾಂಡಿತ್ಯವನ್ನು ಗಮನಿಸಿದ ಬಾಸೆಲ್ ಮಿಷನ್ನಿನ ಹರ್ಮನ್ ಮೊಗ್ಲಿಂಗ್ ಮುಂತಾದ ಆಂಗ್ಲ ಅಧಿಕಾರಿಗಳು ಕನ್ನಡ -ಇಂಗ್ಲಿಷ್ ನಿಘಂಟನ್ನು ರಚಿಸುವ ಕೆಲಸವನ್ನು ಕಿಟ್ಟೆಲ್ ಅವರಿಗೆ ಒಪ್ಪಿಸಿ, ಅದಕ್ಕೆ ಬೇಕಾಗುವ ಎಲ್ಲ ಬಗೆಯ ಸಹಾಯ ಸೌಲಭ್ಯಗಳನ್ನೂ ಒದಗಿಸುವ ಭರವಸೆ ಕೊಟ್ಟರು. ಆ ವೇಳೆಗೆ ಕ್ರೈಸ್ತಪಾದ್ರಿ ರೆವೆರೆಂಡ್ ರೀವ್ ಕನ್ನಡ ಇಂಗ್ಲಿಷ್ ಕೋಶವೊಂದನ್ನು ಪ್ರಕಟಿಸಿದ್ದರಾದರೂ ಅದು ಅಷ್ಟೊಂದು ಪ್ರಮಾಣಭೂತವಾಗಿಯೂ ಶಾಸ್ತ್ರೀಯವಾಗಿಯೂ ಇರಲಿಲ್ಲ. ಶಾಲಾಕಾಲೇಜುಗಳ ದೃಷ್ಟಿಯಿಂದಲೂ ಅದರ ಪ್ರಯೋಜನ ಸೀಮಿತವಾಗಿತ್ತು. ಹೀಗಾಗಿ ಹೊಸದೊಂದು ನಿಘಂಟಿನ ಅಗತ್ಯ ಬಹಳವಾಗಿತ್ತು. ಇದನ್ನು ಗಮನಿಸಿದ ಕಿಟ್ಟೆಲ್‌ರು ಕೋಶಕಾರ್ಯವನ್ನು ಸಂತೋಷದಿಂದ ಒಪ್ಪಿಕೊಂಡು ಉತ್ಸಾಹದಿಂದ ದುಡಿಯಲಾರಂಭಿಸಿದರು. ಕೋಶದ ರೂಪರೇಷೆ 1872ರಲ್ಲಿ ಪ್ರಾರಂಭವಾಯಿತು. ಹಸ್ತಪ್ರತಿಯ

ಸಿದ್ಧತೆಯಲ್ಲಿ ತೊಡಗಿದ್ದ ಕಿಟ್ಟೆಲ್ಲರ ಆರೋಗ್ಯ ಕೆಟ್ಟಿತು. ಹವಾ ಬದಲಾವಣೆಗಾಗಿ ಹಸ್ತಪ್ರತಿಯೊಂದಿಗೆ 1877ರಲ್ಲಿ ಜರ್ಮನಿಗೆ ತೆರಳಿ, ಅಲ್ಲಿಯ ಎಸ್ಲಿಂಗೆನ್ ಎಂಬಲ್ಲಿ 1883ರವರೆಗೆ ನೆಲಸಿ ಅಲ್ಲಿ ಕೋಶದ ಪ್ರಥಮ ಕರಡನ್ನು ಸಿದ್ಧಪಡಿಸಿದರು. ಅನಂತರ ಧಾರವಾಡಕ್ಕೆ ಬಂದು ಅಲ್ಲಿ ಕನ್ನಡ ಪಂಡಿತರೊಂದಿಗೆ ಪರಿಷ್ಕಾರಕಾರ್ಯವನ್ನು ನಡೆಸಿದರು. 70,000 ಶಬ್ದಗಳನ್ನೊಳಗೊಂಡ ಹಸ್ತಪ್ರತಿಯನ್ನು 1892ರಲ್ಲಿ ಅಂತಿಮವಾಗಿ ಸಿದ್ಧಪಡಿಸಿ, ಪ್ರಕಟಣೆಗಾಗಿ ಬಾಸೆಲ್ ಮಿಷನ್ ಸಂಸ್ಥೆಯವರಿಗೆ ಒಪ್ಪಿಸಿದರು.

ಕೋಶದ ಕೆಲಸಕ್ಕೆ ಅಪಾರವಾಗಿ ಶ್ರಮಿಸಿದ್ದುದರಿಂದ, ಕಣ್ಣು ನೋವು ಮತ್ತು ನರಗಳ ದೌರ್ಬಲ್ಯದಿಂದ ಬಳಲಿದ ಕಿಟ್ಟೆಲ್ ಅವರು ವಿಶ್ರಾಂತಿಗಾಗಿ ಮತ್ತೆ ಯುರೋಪಿಗೆ ತೆರಳಿದರು (1892). ಅಲ್ಲಿದ್ದುಕೊಂಡೇ ಕೋಶಕ್ಕೆ ಮೊದಲ ಮಾತುಗಳನ್ನು ಬರೆದರು. ಬೃಹತ್ ಪ್ರಮಾಣದ ಕಿಟ್ಟೆಲ್ ನಿಘಂಟು 1894ರಲ್ಲಿ ಪ್ರಕಟವಾಯಿತು. ಈ ಕೋಶ ಇಂದಿಗೂ ಕನ್ನಡಭಾಷೆಯಲ್ಲಿ ಪ್ರಮಾಣ ಭೂತವಾದ ನಿಘಂಟಾಗಿದೆ. ಇಷ್ಟು ಖಚಿತವೂ ಶಾಸ್ತ್ರೀಯವೂ ಆದ ನಿಘಂಟು ಭಾರತದ ಇತರ ದೇಶೀಯ ಭಾಷೆಗಳಲ್ಲಿ ಆ ವೇಳೆಗೆ ಪ್ರಕಟವಾಗಿರಲಿಲ್ಲ ಎಂಬುದು ಬಲ್ಲವರ ಅಭಿಪ್ರಾಯ. ಟೂಬಿಂಗನ್ ವಿಶ್ವವಿದ್ಯಾಲಯ ಕಿಟ್ಟೆಲ್ಲರ ಈ ಮಹತ್ಕಾರ್ಯವನ್ನು ಗುರುತಿಸಿ 1896ರಲ್ಲಿ ಇವರಿಗೆ ಡಾಕ್ಟರ್ ಆಫ್ ಫಿಲಾಸಫಿ ಪದವಿ ನೀಡಿ ಗೌರವಿಸಿತು.



ಕನ್ನಡ ನಿಘಂಟಿಗೆ ಬರೆದಿರುವ ಮುನ್ನುಡಿಯಲ್ಲಿ ಸಂಪಾದನೆಯ ಕಾರ್ಯದಲ್ಲಿ ಉಪಯೋಗಿಸಿಕೊಂಡ ಕನ್ನಡದ ಪ್ರಸಿದ್ಧ ಕೃತಿಗಳ ಒಂದು ಪಟ್ಟಿಯನ್ನು ಕೊಟ್ಟಿದ್ದಾರೆ. ಅನಂತರ ನಿಘಂಟಿನಲ್ಲಿ ತಾವು ಅನುಸರಿಸಿರುವ ಕ್ರಮವನ್ನುಕುರಿತು ಹೇಳಿದ್ದಾರೆ. ಲಿಪ್ಯಂತರ ಮಾಡುವಾಗ ಬಳಸಿರುವ ಸಂಜ್ಞೆಗಳ ಒಂದು ಪಟ್ಟಿಯನ್ನು ಕೊಟ್ಟಿದ್ದಾರೆ. ದ್ರಾವಿಡ ಭಾಷೆಗಳಿಂದ ಸಂಸ್ಕೃತಕ್ಕೆ ಹೋಗಿರಬಹುದಾದ ಸು.420 ಪದಗಳ ವಿಷಯಪ್ರಸ್ತಾಪಿಸಿದ್ದಾರೆ. ನಿಘಂಟಿನಲ್ಲಿ ಶಬ್ದಗಳನ್ನು ಜೋಡಿಸುವಾಗ ಸಂಸ್ಕೃತ ಶಬ್ದಗಳನ್ನು ರೋಮನ್ ಅಕ್ಷರದಲ್ಲೂ ಕನ್ನಡ ಶಬ್ದಗಳನ್ನು ಆಂಟಿಕ್ ಅಕ್ಷರಗಳಲ್ಲೂ ಕೊಟ್ಟಿರುವುದು ಈ ನಿಘಂಟಿನ ವೈಶಿಷ್ಟ್ಯ. ಒಂದು ಪದವನ್ನು ಕೊಟ್ಟು, ಅದರ ಮುಂದೆ ಇಂಗ್ಲಿಷ್ ಅಕ್ಷರಗಳಲ್ಲಿ ಅದನ್ನು ಲಿಪ್ಯಂತರ ಮಾಡಿ ಒದಗಿಸಿ, ಅನಂತರ ಪದದ ವಿವಿಧ ರೂಪಗಳನ್ನು, ಸಮಾಸಗಳಲ್ಲಿ ಅದು ಬರುವ ರೀತಿಯನ್ನು ತಿಳಿಸಿ, ಅವು ಬಂದಿರುವ ಮೂಲವಾಕ್ಯಗಳನ್ನು ಉದ್ಧರಿಸಿ, ಸಾಧ್ಯವಿದ್ದಲ್ಲೆಲ್ಲ ಆ ಮಾತು ಬಂದಿರುವ ಗಾದೆ ಮಾತುಗಳನ್ನು ಕೊಟ್ಟಿರುವುದಲ್ಲದೆ ಆ ಪದಕ್ಕೆ ಸಂಬಂಧಿಸಿದಂತೆ ಹಿಂದೆ, ಮುಂದೆ ಓದುಗ ಎಲ್ಲಿ ಏನನ್ನು ನೋಡಬೇಕು ಎಂಬ ಅಂಶವನ್ನು ಕಿಟ್ಟೆಲ್ ಒದಗಿಸಿದ್ದಾರೆ. ಅಕ್ಷರಗಳನ್ನು ಸೂಚಿಸುವಾಗ ಗ್ರಂಥಗಳ ಹೆಸರು, ಪರಿಚ್ಛೇದ, ಪುಟ ಪದಸಂಖ್ಯೆಗಳನ್ನು, ಗದ್ಯವಾದಲ್ಲಿ ಸಾಲಿನ ಸಂಖ್ಯೆಯನ್ನು ಕೊಡಲಾಗಿದೆ. ಅರ್ಥವನ್ನು ಇಂಗ್ಲಿಷಿನಲ್ಲಿ ಒದಗಿಸಲಾಗಿದೆ. ಉಳಿದ ದ್ರಾವಿಡ ಭಾಷೆಗಳಲ್ಲಿ ಪದರೂಪ ಹೇಗಿದೆ ಎಂಬುದನ್ನು ಸೂಚಿಸಿರುವುದು ಈ ನಿಘಂಟಿನ ಮತ್ತೊಂದು ಹಿರಿಮೆ. ಹಲವು ವರ್ಷಗಳಿಂದ ದುರ್ಲಭವಾಗಿದ್ದ ಈ ನಿಘಂಟನ್ನು ಆ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾಗಿದ್ದ ಎಂ.ಮರಿಯಪ್ಪ ಭಟ್ಟ (ನೋಡಿ) ಅವರು ಮದರಾಸು ವಿಶ್ವವಿದ್ಯಾಲಯದ ನೆರವಿನೊಂದಿಗೆ ಪರಿಷ್ಕರಿಸಿ ವಿಸ್ತರಿಸಿ ನಾಲ್ಕು ಸಂಪುಟಗಳಲ್ಲಿ ಪ್ರಕಟಿಸಿದರು (1968-71).

ಕೇಶಿರಾಜನ ಶಬ್ದಮಣಿದರ್ಪಣವನ್ನು ಒಂಬತ್ತು ಹಸ್ತಪ್ರತಿಗಳ ಆಧಾರದಿಂದ ಶಾಸ್ತ್ರೀಯ ರೀತಿಯಲ್ಲಿ ಸಂಪಾದಿಸಿ ವಿದ್ವತ್ಪೂರ್ಣವಾದ ಮುನ್ನುಡಿಯೊಂದಿಗೆ ಕಿಟ್ಟೆಲ್ ಪ್ರಕಟಿಸಿದರು (1872). ನಾಗವರ್ಮನ ಛಂದೋಂಬುಧಿಯನ್ನು ಇದೇ ರೀತಿ ಶಾಸ್ತ್ರೀಯವಾಗಿ ಪರಿಷ್ಕರಿಸಿ ಪ್ರಕಟಿಸಿದರು (1875). ಇದಕ್ಕೊಂದು ವಿಸ್ತಾರವಾದ ಮುನ್ನುಡಿ ಬರೆದರಲ್ಲದೆ, 19ನೆಯ ಶತಮಾನದವರೆಗಿನ ಕನ್ನಡ ಸಾಹಿತ್ಯದ ಸ್ಥೂಲ ಪರಿಚಯವನ್ನು ಇದರಲ್ಲಿ ಒದಗಿಸಿದ್ದಾರೆ. ಇವರು ಸಂಪಾದಿಸಿರುವ ಇನ್ನೊಂದು ಗ್ರಂಥ ಪಂಚತಂತ್ರ. ಕರ್ನಾಟಕ ಕಾವ್ಯ ಮಾಲೆ ಎಂಬ ಒಂದು ಸಂಗ್ರಹವನ್ನೂ ಇವರು ಪ್ರಕಟಿಸಿದರು (1874).

ಇವರು ಕ್ರೈಸ್ತಧರ್ಮಕ್ಕೆ ಸಂಬಂಧಿಸಿದ 18 ಸಣ್ಣಪುಟ್ಟ ಕೃತಿಗಳನ್ನು, ಆರು ಕನ್ನಡ ಪಠ್ಯಪುಸ್ತಕಗಳನ್ನು ಬರೆದಿದ್ದಾರೆ. ಇಂಡಿಯನ್ ಆಂಟಿಕ್ವೆರಿ ಮುಂತಾದ ಪ್ರೌಢ ಪತ್ರಿಕೆಗಳಲ್ಲಿ ಸು.24 ಅಮೂಲ್ಯ ಲೇಖನಗಳನ್ನು ಪ್ರಕಟಿಸಿದ್ದರು.

ಇಂಗ್ಲಿಷಿನಲ್ಲಿ ಬರೆದಿರುವ ಕನ್ನಡ ವ್ಯಾಕರಣ (ಗ್ರಾಮರ್ ಆಫ್ ದಿ ಕನ್ನಡ ಲಾಂಗ್ವೇಜ್) ಇವರ ಕೊನೆಯ ಕೃತಿ. ಅದು ಪ್ರಕಟವಾದಾಗ (1903 ಡಿಸೆಂಬರ್ 18) ಕಿಟ್ಟೆಲ್ ಅವರು ಅದನ್ನು ಕಣ್ಣಾರೆ ಕಂಡು, ಅದನ್ನು ಮುಟ್ಟಿ ಭಾವ ಪರವಶರಾದರಂತೆ. (ಎಂ.ಎಂ.ಬಿ.)

**ಕಿಡಿ :** ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ ಒಂದು ಪತ್ರಿಕೆ. ವಿಶ್ವಕರ್ನಾಟಕ, ಮಾತೃಭೂಮಿ ಮತ್ತು ಒಕ್ಕಲಿಗರ ಪತ್ರಿಕೆಗಳಲ್ಲಿ ಕೆಲಸ ಮಾಡಿ ತಮ್ಮ ಮೊನಚಾದ ವರದಿಗಳಿಗೂ ಲೇಖನಗಳಿಗೂ ಹೆಸರಾಗಿದ್ದ ಪಿ.ಶೇಷಪ್ಪನವರು ಈ ಪತ್ರಿಕೆಯ ಸಂಪಾದಕರಾಗಿದ್ದರು. ಶೇಷಪ್ಪನವರು ಕಿಡಿಯನ್ನು ಪ್ರಾರಂಭಿಸುವ ಮುನ್ನ, 1947 ಆಗಸ್ಟ್ 15ರಂದು ಸ್ವಾತಂತ್ರ್ಯೋದಯ ಎಂಬ ಪಾಕ್ಷಿಕವನ್ನು ಪ್ರಾರಂಭಿಸಿದ್ದರು. ಹದಿನೈದು ದಿನಗಳ ಬಳಿಕ ಜವಾಬ್ದಾರಿ ಸರ್ಕಾರಕ್ಕಾಗಿ ಚಳವಳಿ ಪ್ರಾರಂಭವಾಯಿತು. ಶೇಷಪ್ಪನವರು ಚಳವಳಿಗೆ ಬೆಂಬಲ ನೀಡಿದ್ದರಿಂದ ಅಂದಿನ ಸರ್ಕಾರದ ಆಗ್ರಹಕ್ಕೆ ತುತ್ತಾಗಬೇಕಾಯಿತು. ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪಿತವಾಯಿತು. ಶೇಷಪ್ಪನವರ ಸ್ವಾತಂತ್ರ್ಯೋದಯ ಪತ್ರಿಕೆಯ ಸ್ವತಂತ್ರಧ್ಯೇಯ ಧೋರಣೆಗಳು ಬದಲಾಗಲಿಲ್ಲ. ಸರ್ಕಾರದ ನೀತಿನಿಲವುಗಳನ್ನು ನಿರ್ಭಯವಾಗಿ ಟೀಕಿಸುತ್ತಿದ್ದ ಈ ಪತ್ರಿಕೆಯಿಂದ ಭಾರಿ ಮೊತ್ತದ ಠೇವಣಿಯನ್ನು ಸರ್ಕಾರ ಕೇಳಿತು. ಶೇಷಪ್ಪನವರು ಮುಚ್ಚಳಿಕೆ ಬರೆದುಕೊಡಲು ಮತ್ತು ಠೇವಣಿ ಕೊಡಲು ಒಪ್ಪದೆ ಪತ್ರಿಕೆಯನ್ನು ನಿಲ್ಲಿಸಿದರು.


ಕಿಡಿ

ಕೆಂಗಲ್ ವಿರುದ್ಧ ಸ್ಪರ್ಧಿಸಲು ಸಾಹುಕಾರರ ಮಸಲತ್ತು

ಶೇಷಪ್ಪನವರು ರಷ್ಯನ್ ಕ್ರಾಂತಿ ನಾಯಕ ಲೆನಿನನ ಇಸ್ಕ್ರಾ ಪತ್ರಿಕೆಯನ್ನು ಬಹು ಮೆಚ್ಚಿಕೊಂಡಿದ್ದರು. ಇಸ್ಕ್ರಾ ಎಂದರೆ ಕಿಡಿ ಎಂದರ್ಥ. ಸ್ವಾತಂತ್ರ್ಯೋದಯ ಪತ್ರಿಕೆಯನ್ನು ನಿಲ್ಲಿಸಿದ ಕೆಲವು ವಾರಗಳ ಅನಂತರ ಇವರು ಪ್ರಾರಂಭಿಸಿದ ಪತ್ರಿಕೆಗೆ ಕಿಡಿ ಎಂದು ಹೆಸರಿಟ್ಟರು. ಪತ್ರಿಕೆ ಪ್ರಾರಂಭವಾದ ಕೆಲವೇ ದಿನಗಳಲ್ಲಿ ಏಕೈಕ ರಾಜಕೀಯ ವಾರಪತ್ರಿಕೆಯಾಗಿ ಜನಪ್ರಿಯವಾಯಿತು. ರಾಜ್ಯದ ರಾಜಕೀಯಕ್ಕೆ ಮೀಸಲಾದ ಕಿಡಿ ಅಂದಿನ ಸರ್ಕಾರದ ಮೇಲೆ, ಅದರ ರಾಜಕೀಯ ನೀತಿಯ ಮೇಲೆ ಹೆಚ್ಚು ಪ್ರಭಾವ ಬೀರಿತು. ಆಳುವ ಪಕ್ಷವಾಗಿದ್ದ ಕಾಂಗ್ರೆಸಿನ ವಿರೋಧಿ ಧೋರಣೆಯನ್ನೇ ಪತ್ರಿಕೆ ತಳೆದಿತ್ತು. 1948ರ ಪೋಲಿಸ್ ಮುಷ್ಕರ ಮತ್ತು 1950ರ ವಿಮಾನ ಕಾರ್ಖಾನೆಯ ಕೆಲಸಗಾರರ ಮುಷ್ಕರದ ಸಂದರ್ಭದಲ್ಲಿ ಶೇಷಪ್ಪನವರನ್ನು ಸರ್ಕಾರ ಬಂಧಿಸಿ ಕಾರಾಗೃಹದಲ್ಲಿಟ್ಟಿತ್ತು.

ಕಿಡಿ ರಾಜ್ಯದ ರಾಜಕೀಯ ಮತ್ತು ಆಡಳಿತದ ಮರ್ಮವನ್ನು ಶೋಧಿಸಿ ಸತ್ಯವಾದವುಗಳೆಂದು ಖಚಿತಪಡಿಸಿಕೊಂಡು, ರಹಸ್ಯಗಳನ್ನು ಪ್ರಕಟಿಸಿ, ನಿಜವನ್ನು ಬಯಲು ಮಾಡುತ್ತಿತ್ತು. ಪ್ರತಿವಾರವೂ ಪತ್ರಿಕೆಗಾಗಿ ಜನರು ಕಾದುಕೊಂಡು ಓದುತ್ತಿದ್ದರು. ರಾಜಕೀಯ ವ್ಯಂಗ್ಯಚಿತ್ರಗಳು ಜನಪ್ರಿಯವಾಗಿದ್ದವು. ಶೇಷಪ್ಪನವರ ನಿರ್ದಾಕ್ಷಿಣ್ಯವಾದ ಹರಿತವಾದ ಬರೆಹ ಜನರ ಮೆಚ್ಚುಗೆ ಗಳಿಸಿಕೊಂಡಿತ್ತು.

ಕಿಡಿ ಪತ್ರಿಕೆಯ ಕಾಂಗ್ರೆಸ್ ವಿರೋಧಿ ಬರೆಹಗಳು 1952ರ ತರುವಾಯ ಅಧಿಕಾರಕ್ಕೆ ಬಂದ ಸರ್ಕಾರವನ್ನು ಕೆರಳಿಸಿದವು. ಕಿಡಿ ಪತ್ರಿಕೆಯಲ್ಲಿ ಪ್ರಕಟವಾದ ಹತ್ತಾರು ಲೇಖನಗಳ ವಿರುದ್ಧ ಮೊಕದ್ದಮೆಗಳನ್ನು ಹೂಡಲಾಯಿತು. ಒಂದೊಂದು ಮೊಕದ್ದಮೆಯಲ್ಲೂ ಮುದ್ರಕರಿಂದ ರೂ.3000, ಸಂಪಾದಕ ಮತ್ತು ಪ್ರಕಾಶಕರಿಂದ ರೂ.3000 ಠೇವಣಿ ಕೇಳಲಾಯಿತು. ಆದರೆ ನ್ಯಾಯಾಲಯದ ತೀರ್ಪು ಹೊರಬೀಳುವುದಕ್ಕೆ ಒಂದೆರಡು ದಿನಗಳಿಗೆ ಮೊದಲೇ ಎಲ್ಲ ಮೊಕದ್ದಮೆಗಳನ್ನೂ ಸರ್ಕಾರ ವಾಪಸ್ಸು ತೆಗೆದುಕೊಂಡಿತು.

ಪತ್ರಿಕೆ 10"x13" ಆಕಾರವಿದ್ದು ಅದರಲ್ಲಿ ನಾಲ್ಕು ಪುಟಗಳಿರುತ್ತಿದ್ದುವು. ಬಿಡಿ ಪ್ರತಿಯ ಬೆಲೆ ಮೊದಲು ಆರು ಕಾಸು. ದೇಶದಲ್ಲಿ ದಶಮಾಂಶ ನಾಣ್ಯಪದ್ಧತಿ ಜಾರಿಗೆ ಬಂದಮೇಲೆ ಬೆಲೆ ಏಳು ನಯಾಪೈಸೆ ಆಗಿತ್ತು.

ದೇವನಹಳ್ಳಿಯಲ್ಲಿ ಜನಿಸಿ ಬೆಂಗಳೂರಲ್ಲಿ ನೆಲೆಸಿ ಪತ್ರಿಕೋದ್ಯಮವನ್ನೇ ನಂಬಿದ್ದ ಶೇಷಪ್ಪನವರು ತಮ್ಮ ನಿಷ್ಠುರ ಬರೆಹಗಳಿಗಾಗಿ ಕಷ್ಟನಷ್ಟ ಅನುಭವಿಸಿ ಜೈಲು ಸೇರಿದ್ದರು. ಕೆಲವೊಮ್ಮೆ ಭೂಗತರಾಗಿಯೂ ಇರಬೇಕಾಗುತ್ತಿತ್ತು. ಕಿಡಿ ಶೇಷಪ್ಪ ಎಂದು ಹೆಸರು ಪಡೆದಿದ್ದ ಇವರು 1963 ಜನವರಿ 2ರಂದು ತಮ್ಮ 44ನೆಯ ವಯಸ್ಸಿನಲ್ಲಿ ನಿಧನರಾದರು. (ಎಸ್.ಪಿ.ಆರ್.)

**ಕಿತ್ತೂರು[1]:** ಮೈಸೂರು ಜಿಲ್ಲೆ ಹೆಗ್ಗಡದೇವನ ಕೋಟೆ ತಾಲ್ಲೂಕಿನ ಒಂದು ಗ್ರಾಮ. ಹೆಗ್ಗಡದೇವನ ಕೋಟೆಯ ದಕ್ಷಿಣಕ್ಕೆ ಕಪಿಲಾ ನದಿಯ ಬಲದಂಡೆಯ ಮೇಲಿದೆ. ಕೀರ್ತಿಪುರ ಅಥವಾ ಕಿತ್ತಿಪುರ ಇದರ ಪ್ರಾಚೀನ ಹೆಸರು. ಇದು ಪುನ್ನಾಟರಾಜರ ರಾಜಧಾನಿಯಾಗಿತ್ತೆಂದು ತಿಳಿದುಬರುತ್ತದೆ. 11ನೆಯ ಶತಮಾನದ ಶಾಸನ ಒಂದರಲ್ಲಿ ಇದು ಅನಂತಕೀರ್ತಿಯ ಮಹಾನಗರವೆಂಬ ಉಲ್ಲೇಖವಿದೆ. ಈ ಊರಿನ ಉತ್ತರಕ್ಕೆ ಕಪಿಲಾ ನದಿಯ ದಂಡೆಯಲ್ಲಿ ಇದ್ದ ಪುರಾತನ ನಗರದ ಅವಶೇಷಗಳು ಈಗಲೂ ಕಂಡುಬರುತ್ತವೆ. ಅಲ್ಲಲ್ಲ ಬಿದ್ದಿರುವ ಇಟ್ಟಿಗೆ ಚೂರುಗಳೂ ಮನೆಗಳ ತಳಪಾಯಗಳೂ ಕೆಂಪು ಕಪ್ಪು ಮಣ್ಣಿನ ಮಡಕೆಯ ಚೂರುಗಳೂ ಮುಂತಾದವು ಇಲ್ಲಿ ಸುಮಾರು ಒಂದು ಎರಡನೆಯ ಶತಮಾನಗಳಿಂದಲೂ ಒಂದು ಊರು ಇದ್ದುದಕ್ಕೆ ಸಾಕ್ಷಿಯಾಗಿವೆ.

ಇಲ್ಲಿರುವ ರಾಮೇಶ್ವರ ದೇವಾಲಯ ಪ್ರಾಚೀನವಾದದ್ದು. ಈಗಿರುವ ದೇವಾಲಯ ಇತ್ತೀಚೆಗೆ ನಿರ್ಮಿತವಾದುದಾದರೂ ಅದರಲ್ಲಿ ಪ್ರಾಚೀನ ದೇವಾಲಯದ ಅನೇಕ ಅವಶೇಷಗಳನ್ನು ಕಾಣಬಹುದಾಗಿದೆ. ದೇವಾಲಯದಲ್ಲಿ ಪಲ್ಲವ ಶೈಲಿಯ ಸಿಂಹದ ಕಂಬಗಳು, ಸುಂದರವಾಗಿ ಕೆತ್ತಿರುವ ದ್ವಾರಪಾಲಕರು, ಮಹಿಷಮರ್ದಿನಿ ಮುಂತಾದ ಶಿಲ್ಪಗಳಿವೆ. ಇವು ಗಂಗ, ಪಲ್ಲವ ಶೈಲಿಯವು. ಊರಿನಲ್ಲಿ ಅಲ್ಲಲ್ಲಿ ಬಿದ್ದಿರುವ ಗಂಗರ ಶೈಲಿಯ ಕಂಬಗಳೂ ಶಿಲ್ಪಗಳೂ ಈ ಊರಿನ ಪ್ರಾಚೀನತೆಗೆ ಸಾಕ್ಷಿಯಾಗಿವೆ. (ಎಂ.ಎಚ್.)

**ಕಿತ್ತೂರು[2]:** ಬೆಳಗಾಂವಿ ಜಿಲ್ಲೆ ಬೈಲಹೊಂಗಲ ತಾಲ್ಲೂಕಿನಲ್ಲಿ ಬೆಂಗಳೂರು-ಪುಣೆ ರಾಷ್ಟ್ರೀಯ ಹೆದ್ದಾರಿಯಲ್ಲಿ ಧಾರವಾಡ-ಬೆಳಗಾಂವಿಗಳ ನಡುವೆ ಇದೆ. 12ನೆಯ ಶತಮಾನದ ಹೊತ್ತಿಗೆ ಈ ಊರು ಇದ್ದುದ್ದು ಇಲ್ಲಿನ ಬಸವೇಶ್ವರ ದೇವಾಲಯದ ಶಾಸನವೊಂದರಿಂದ ತಿಳಿದುಬರುತ್ತದೆ. ಗೋವೆಯ ಕದಂಬರ ವೀರ ಜಯಕೇಶಿಯ 15ನೆಯ ಆಳಿಕೆಯ ವರ್ಷಕ್ಕೆ ಸೇರಿದ ಈ ಶಾಸನದಲ್ಲಿ ಕಿತ್ತೂರನ್ನು ಹೆಸರಿಸಿದೆ. ಆಗ ಇಲ್ಲಿ ಭವ್ಯವಾದ ದೇವಾಲಯವನ್ನು ಕಟ್ಟಿಸಿ, ಅದಕ್ಕೆ ದತ್ತಿ ಬಿಟ್ಟವಿಷಯವನ್ನು ಆ ಶಾಸನ ತಿಳಿಸುತ್ತದೆ.

ಕಿತ್ತೂರು ಪ್ರಸಿದ್ಧಿಗೆ ಬಂದುದು 16ನೆಯ ಶತಮಾನದಿಂದೀಚೆಗೆ. ಯೂಸುಫ್ ಖಾನನ ಜಹಗೀರಿಯಲ್ಲಿ ಸೇರಿದ್ದ ಈ ಊರು 16ನೆಯ ಶತಮಾನದ ಕಡೆಯ ಹೊತ್ತಿಗೆ ಒಂದು ಪುಟ್ಟ ಸಂಸ್ಥಾನದ ಮುಖ್ಯ ಪಟ್ಟಣವಾಗಿ ಬೆಳೆಯಿತು. ಇಲ್ಲಿಗೆ ಬಿಜಾಪುರದ ಸೈನ್ಯದೊಡನೆ ಬಂದ ಹಿರೇಮಲ್ಲ ಬಿಜಾಪುರದ ಸುಲ್ತಾನರಿಂದ ಕಿತ್ತೂರು ಸಂಸ್ಥಾನವನ್ನು ದತ್ತಿ ಪಡೆದು ಕಿತ್ತೂರು ದೇಸಾಯರ (ನೋಡಿ) ಮನೆತನವನ್ನು ಸ್ಥಾಪಿಸಿದ. ಬಿಜಾಪುರದ ಸುಲ್ತಾನರು, ಮರಾಠರು, ಸವಣೂರಿನ ನವಾಬರು, ಹೈದರ್ ಮತ್ತು ಟಿಪ್ಪು ಇವರುಗಳ ನಡುವೆ ಕೈಬದಲಾಯಿಸಿ ಈ ಊರು ಹಲವು ಯುದ್ಧಗಳನ್ನು ಕಂಡಿತು. ಕಿತ್ತೂರು ದೇಸಾಯರ ಮನೆತನದ ಚೆನ್ನಮ್ಮನ ವೀರ ಹೋರಾಟದ ಅನಂತರ ಇದು ಬ್ರಿಟಿಷರ ಆಳಿಕೆಗೆ ಸೇರಿತು, ಮುಂಬಯಿ ಪ್ರಾಂತ್ಯದ ಭಾಗವಾಯಿತು.

ಬ್ರಿಟಿಷರು ಈ ಭಾಗವನ್ನು ಆಕ್ರಮಿಸಿಕೊಂಡ ಅನಂತರ ಬಹುಮಟ್ಟಿಗೆ ಖಿಲವಾಗಿದ್ದ ಈ ಊರು ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ಮೇಲೆ ಮತ್ತೆ ಪ್ರಾಮುಖ್ಯ ಪಡೆಯುತ್ತಿದೆ. ತಕ್ಕಷ್ಟು ದೊಡ್ಡದಾಗಿರುವ ಈ ಗ್ರಾಮದ ಜನರ ಮುಖ್ಯ ಕಸಬು ನೇಯ್ಗೆ. ಇಲ್ಲಿನ ರೇಷ್ಮೆ ಬಟ್ಟೆಗಳು ಪ್ರಸಿದ್ಧವಾಗಿವೆ. ವೀರರಾಣಿ ಚೆನ್ನಮ್ಮನ ನೆನಪಿಗಾಗಿ ಮಹಿಳೆಯರ ಸೈನಿಕ ಶಾಲೆ ಇಲ್ಲಿ ಆರಂಭವಾಗಿದೆ. ದೇಸಾಯರ ಕಾಲದ ಜನಜೀವನ ಮತ್ತು ಪ್ರಾಚೀನ ಕಾಲದ ಶಿಲ್ಪವೈಖರಿಯನ್ನು ಪ್ರತಿಬಿಂಬಿಸುವ ವಸ್ತು ಸಂಗ್ರಹಾಲಯ ರೂಪಗೊಂಡಿದೆ. ಈ ಊರು ವ್ಯಾಪಾರ ಕೇಂದ್ರವೂ ಹೌದು.



ಕೋಟೆ ಅವಶೇಷಗಳು

ಈಗ ಕಿತ್ತೂರಿನಲ್ಲಿ ಉಳಿದು ಬಂದಿರುವ ಪ್ರಾಚೀನ ಅವಶೇಷಗಳಲ್ಲಿ ಮುಖ್ಯವಾದುದು ಹೊಂಡದ ಗುಡಿ ಎಂದು ಕರೆಯುವ ಈಶ್ವರ ದೇವಾಲಯ. 12ನೆಯ ಶತಮಾನದ ಚಾಳುಕ್ಯ ರೀತಿಯಲ್ಲಿ ನಿರ್ಮಿತವಾಗಿದ್ದ ಈ ದೇವಾಲಯ ಈಗ ಪೂರ್ತಿಯಾಗಿ ಪುನರ್ನಿರ್ಮಾಣಗೊಂಡಿದೆ. ಇಲ್ಲಿಯ ನವರಂಗದ ಕಂಬಗಳು, ನಂದಿ, ಗಣೇಶ, ಮಹಿಷಮರ್ದಿನಿ ಮೊದಲಾದ ಮೂರ್ತಿಗಳು, ದೇವಾಲಯದ ತಳಹದಿಯ ಅಷ್ಟಪಟ್ಟಿಕೆಗಳು ಚಾಳುಕ್ಯರೀತಿಯ ಉತ್ತಮ ಮಾದರಿಗಳಾಗಿವೆ.

ಎತ್ತರವಾದ ದಿಬ್ಬವೊಂದರ ಮೇಲೆ ದೇಸಾಯರು ಕಟ್ಟಿಸಿದ್ದ ಕೋಟೆ ಈಗ ಪಾಳುಬಿದ್ದಿದೆ. ಎತ್ತರವಾದ ಇದರ ಮಣ್ಣಿನ ಗೋಡೆಗಳಲ್ಲಿ ಅಲ್ಲಲ್ಲಿ ಕಿರುಗಲ್ಲಿನ ಮುಖವರಿಸೆಗಳು ಉಳಿದುಬಂದಿವೆ. ಗುಂಡಾದ ಈ ಕೋಟೆಯ ಸುತ್ತಲೂ ಆಳವೂ ಅಗಲವೂ ಆದ ಕಂದಕವಿದೆ. ಗೋಡೆಗೆ ಅಲ್ಲಲ್ಲಿ ಬುರುಜುಗಳಿದ್ದ ಗುರುತುಗಳಿವೆ. ಕೋಟೆಯೊಳಗೆ ಈಶಾನ್ಯಭಾಗದಲ್ಲಿ ದೇಸಾಯರ ಭವ್ಯವಾದ ಸೌಧವಿತ್ತು. ಅದರ ಬಹು ಭಾಗ ಪಾಳು ಬಿದ್ದಿದೆ. ಈಗ ಕೆಲವು ಗೋಡೆಗಳು ಮಾತ್ರ ನಿಂತಿವೆ. ಈ ಕಟ್ಟಡದ ಭಗ್ನಾವಶೇಷಗಳನ್ನು ಇತ್ತೀಚೆಗೆ ಬಿಡಿಸಿದೆ. ಅದರ ತಳವಿನ್ಯಾಸ ಬೆಳಕಿಗೆ ಬಂದಿದೆ. ಅದರಲ್ಲಿನ ಕೋಣೆಗಳು, ಪಾಕಶಾಲೆಗಳು, ಸ್ನಾನಗೃಹಗಳು, ಬಾವಿಗಳು, ಪ್ರತಿ ಕೋಣೆಗೂ ಗೋಡೆಯೊಳಗೇ ಸಾಗುತ್ತಿದ್ದ ನೀರಿನ ಕೊಳಾಯಿಗಳು, ಹೊಗೆಯ ಗೂಡುಗಳು, ಇವೆಲ್ಲಕ್ಕಿಂತ ಮಿಗಿಲಾಗಿ ಧ್ರುವ ನಕ್ಷತ್ರವನ್ನು ಒಳಗಿನಿಂದಲೇ ಕಾಣಬಹುದಾದ ವೀಕ್ಷಣಾಕಿಂಡಿ ಇವುಗಳನ್ನು ಈಗಲೂ ಗುರುತಿಸಬಹುದು. ಅರಮನೆಯ ಮುಂದೆ ದೊಡ್ಡದಾದ ಸಭಾಂಗಣವಿದೆ. ಅಲ್ಲಿದ್ದ ದಪ್ಪ ಮರದ ಕಂಬಗಳೂ ನೆಲಕ್ಕೆ ಹಾಸಿದ್ದ

ಹೊಳಪುಗಲ್ಲುಗಳೂ ಈಗ ಉಳಿದುಬಂದಿಲ್ಲ. ಕೋಟೆಯ ನಡುವೆ ಉನ್ನತವಾದ ವೀಕ್ಷಣಾಗೋಪುರವೊಂದಿದೆ. ಅದರ ಬುಡದಲ್ಲಿ ಆಂಜನೇಯನ ಗುಡಿ ಇದೆ. ಇದಲ್ಲದೆ ಕೋಟೆಯ ಪಶ್ಚಿಮ ದ್ವಾರದ ಬಳಿ ಒಂದು ಚಿಕ್ಕ ದೇವಾಲಯ ಇದೆ. ಉಳಿದ ಕಟ್ಟಡಗಳು ನೆಲಸಮವಾಗಿವೆ. ವಸ್ತುಸಂಗ್ರಹಾಲಯದ ಕಟ್ಟಡ ಕೋಟೆಯೊಳಗೆ ನಿರ್ಮಿತವಾಗಿದೆ. ಇಲ್ಲಿ ಒಂದು ಸುಂದರವಾದ ಉದ್ಯಾನವೂ ರೂಪುಗೊಂಡಿದೆ.

ಕೋಟೆಯಿಂದ ಪಶ್ಚಿಮಕ್ಕೆ ಎತ್ತರವಾದ ಸ್ಥಳದಲ್ಲಿ ಕಿತ್ತೂರು ದೇಸಾಯರ ಕೆಲವು ಸಮಾಧಿ ಕಟ್ಟಡಗಳಿವೆ. ಭಾರತೀಯ ಇಸ್ಲಾಮೀ ಶೈಲಿಯಲ್ಲಿ ಕಟ್ಟಿರುವ ಈ ಕಟ್ಟಡಗಳು ಭವ್ಯವಾಗಿವೆ. ಇಲ್ಲಿನ ಕಟ್ಟಡಗಳಲ್ಲಿ ಈಗ ಶಾಲೆಗಳನ್ನು ನಡೆಸಲಾಗುತ್ತಿದೆ. ಈಗ ಊರು ಕೋಟೆಯ ದಕ್ಷಿಣಕ್ಕೂ ಹರಡಿಕೊಂಡಿದೆ.

ಕಿತ್ತೂರಿನ ಜನಗಳ ಸ್ವಾತಂತ್ರ್ಯಾಕಾಂಕ್ಷೆಯಿಂದ, ಚೆನ್ನಮ್ಮನ ಧೀರೋದಾತ್ತವಾದ ಹೋರಾಟದಿಂದ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಈ ಊರು ಮೊದಲ ಹೆಜ್ಜೆ ಇಟ್ಟಿತೆಂಬ ಖ್ಯಾತಿ ಪಡೆದಿದೆ. ಹಲವು ಯುದ್ಧಗಳನ್ನು ಕಂಡ ವೀರಭೂಮಿಯಾಗಿದೆ. ಕಿತ್ತೂರಿನ ಕಥೆ ಲಾವಣಿಯಾಗಿ, ಕತೆಯಾಗಿ, ನಾನಾಮುಖವಾಗಿ ಪ್ರಚಾರ ಪಡೆದಿದೆ. (ಎಂ.ಎಚ್.)

**ಕಿತ್ತೂರು ಚೆನ್ನಮ್ಮ :** 1780-1830. ಕನ್ನಡನಾಡಿನ ವೀರ ಮಹಿಳೆಯರಲ್ಲಿ ಅಗ್ರಪಂಕ್ತಿಗೆ ಸೇರಿದ, ಸ್ವಾತಂತ್ರ್ಯ ಸ್ವಾಭಿಮಾನಗಳ ಸಾಕಾರಮೂರ್ತಿಯಾದ ಕಿತ್ತೂರಿನ ರಾಣಿ. ಕಿತ್ತೂರಿನ ದೇಸಾಯಿಗಳಲ್ಲಿ ಪ್ರಸಿದ್ಧನಾದ ಮಲ್ಲಸರ್ಜನ ಕಿರಿಯ ಹೆಂಡತಿ. ಕಾಗತಿ ದೇಸಾಯಿಯ ಮಗಳು. ತನ್ನ ಪುಟ್ಟ ರಾಜ್ಯದ ಸ್ವಾತಂತ್ರ್ಯ ರಕ್ಷಣೆಗಾಗಿ ಬ್ರಿಟಿಷರ ದೊಡ್ಡ ಸೈನ್ಯದ ವಿರುದ್ಧ ಸೆಟೆದು ನಿಂತು ನಡೆಸಿದ ಹೋರಾಟ, ಅಲ್ಲಿ ತೋರಿಸಿದ ಧೈರ್ಯ, ಸಾಹಸ, ಕೆಚ್ಚುಗಳು ಈಕೆಯನ್ನು ಅಜರಾಮರವಾದ ಕೀರ್ತಿಶಿಖರಕ್ಕೇರಿಸಿದೆ. ಚೆನ್ನಮ್ಮನಿಂದ ಕಿತ್ತೂರು ಪ್ರಸಿದ್ಧವಾಗಿದೆ.



ಕಿತ್ತೂರು ಚೆನ್ನಮ್ಮನ ಪ್ರತಿಮೆ

ಮಲ್ಲಸರ್ಜನ ಕಾಲದಲ್ಲಿ ಹೈದರ್, ಟಿಪ್ಪು ಹಾಗೂ ಮರಾಠರು ಕಿತ್ತೂರಿನ ಮೇಲೆ ದಾಳಿ ಮಾಡಿದ್ದರು. ಮರಾಠರು ದೇಸಾಯಿಯನ್ನು ಸೆರೆಹಿಡಿದಿದ್ದರು. ರಾಣಿ ಚೆನ್ನಮ್ಮನೇ ರಾಜ್ಯದ ಆಡಳಿತ ಸೂತ್ರಗಳನ್ನು ಹಿಡಿದಿದ್ದಳು (1809-10). ಪೇಶ್ವೆಯ ಬಂಧನದಲ್ಲಿದ್ದ ಮಲ್ಲಸರ್ಜ ತನ್ನ ಕಡೆಗಾಲದಲ್ಲಿ ಬಿಡುಗಡೆ ಹೊಂದಿ ಕಿತ್ತೂರಿಗೆ ಹಿಂತಿರುಗಿದೊಡನೆಯೇ ತೀರಿಕೊಂಡ. ಅವನ ಮಗ ಶಿವಲಿಂಗರುದ್ರ ಸರ್ಜ ಪಟ್ಟಕ್ಕೆ ಬಂದು (1816) ಎಂಟು ವರ್ಷಗಳ ಕಾಲ ಮಾತ್ರ ಆಳಿ, ಕ್ಷಯರೋಗಪೀಡಿತನಾಗಿ ತೀರಿಕೊಂಡ. ಮಕ್ಕಳಿಲ್ಲದಿದ್ದುದರಿಂದ ಮಾಸ್ತಮರಡಿ ಗೌಡರ ಮಗ ಶಿವಲಿಂಗಪ್ಪನನ್ನು ದತ್ತು ತೆಗೆದುಕೊಂಡಿದ್ದ ಚೆನ್ನಮ್ಮನೇ ಆಗ ದತ್ತಕನ ಹೆಸರಿನಿಂದ ರಾಜ್ಯಭಾರ ಮಾಡುತ್ತಿದ್ದಳು. ಶಿವಲಿಂಗರುದ್ರ ಸರ್ಜ ನೀಡಿದ ಸಹಾಯ ಸಹಕಾರಗಳಿಂದ ಸುಪ್ರೀತರಾಗಿದ್ದ ಬ್ರಿಟಿಷರು ಆತನಿಗೆ ವಂಶಪಾರಂಪರ್ಯವಾಗಿ ಕಿತ್ತೂರನ್ನಾಳಿಕೊಂಡಿರುವಂತೆ ಸನ್ನದನ್ನು ಕೊಟ್ಟಿದ್ದರು. ಆದರೆ ಅವನ ಮರಣದೊಂದಿಗೆ ಅವರಿಗೆ ಕಿತ್ತೂರು ಸಂಸ್ಥಾನವನ್ನು ಕಬಳಿಸಲು ನೆಪ ಸಿಕ್ಕಂತಾಯಿತು. ಧಾರವಾಡದಲ್ಲಿ ಕಲೆಕ್ಟರನೂ ರಾಜಕೀಯ ಪ್ರತಿನಿಧಿಯೂ ಆಗಿದ್ದ ಥ್ಯಾಕರೆ ದಖನ್ನಿನ ಕಮಿಷನರ್ ಆಗಿದ್ದ ಚಾಪ್ಲಿನ್ನನ ಜೊತೆಗೂಡಿ ಸನ್ನಾಹ ಮಾಡಿ ದತ್ತು ಸ್ವೀಕಾರವನ್ನು ಶಿವಲಿಂಗರುದ್ರ ಸರ್ಜ ಮಾಡಿಕೊಂಡಿಲ್ಲವೆಂದೂ ಅದು ಅವನ ಮರಣಾನಂತರ ಆದುದೆಂದೂ ತನ್ನ ಮೇಲಧಿಕಾರಿ ಗೌರ್ನರ್ ಎಲ್ಫಿನ್‌ಸ್ಟನ್‌ಗೆ ಸುಳ್ಳುವರದಿ ಕಳುಹಿಸಿ ಅವನನ್ನು ತಪ್ಪುದಾರಿಗೆಳೆದ. ಅಲ್ಲದೆ ತನ್ನ ಸರ್ಕಾರದಿಂದ ಉತ್ತರ ಬರುವವರೆಗೆ ಬನ್ನೂರು ಮಲ್ಲಪ್ಪಶೆಟ್ಟಿ ಮತ್ತು ವೆಂಕಟರಾವ್ ಎಂಬ ಕಾರಭಾರಿಗಳಿಗೆ ಆಡಳಿತವನ್ನು ಒಪ್ಪಿಸಬೇಕೆಂದು ತಿಳಿಸಿ ಖಜಾನೆಗೆ ಬೀಗಮುದ್ರೆ ಹಾಕಲು ಪ್ರಯತ್ನಿಸಿದ. ಹೀಗೆ ಥ್ಯಾಕರೆ ತನ್ನ ರಾಜ್ಯದ ಕಾರ್ಯಭಾರದಲ್ಲಿ ಅನಾವಶ್ಯಕವಾಗಿ ತಲೆಹಾಕಿದುದು ಚೆನ್ನಮ್ಮನ ಸ್ವಾಭಿಮಾನವನ್ನು ಕೆಣಕಿತು. ಚೆನ್ನಮ್ಮನೂ ಸಂಸ್ಥಾನದ ಹಿರಿಯರೂ ಇದಕ್ಕೆ ಎಷ್ಟು ಮಾತ್ರಕ್ಕೂ ಒಪ್ಪಲು ಸಿದ್ಧರಿರಲಿಲ್ಲ. ಆದರೂ ಚೆನ್ನಮ್ಮ ತಾಳ್ಮೆಯಿಂದ ದತ್ತಕ ಮತ್ತು ಆಡಳಿತದ ವಿಷಯವಾಗಿ ಪತ್ರವ್ಯವಹಾರ ನಡೆಸಿದಳು. ಸಂಸ್ಥಾನದ ಪರವಾಗಿ ಸಂಧಾನ ನಡೆಸಲು ಲಿಂಗಾಭಟ್ಟ, ರಾಚಪ್ಪ ಎಂಬ ಇಬ್ಬರು ವಕೀಲರನ್ನು ಕಂಪನಿ ಸರ್ಕಾರಕ್ಕೆ ಕಳುಹಿಸಿದಳು. ಎಂಥ ಸಂದರ್ಭವೇ ಬರಲಿ, ಸಂಸ್ಥಾನದ ಅಸ್ತಿತ್ವವನ್ನು ಉಳಿಸಬೇಕೆಂದು ಸಂಕಲ್ಪಿಸಿ ಸೈನ್ಯವನ್ನು ಸಜ್ಜುಗೊಳಿಸಲು ಏರ್ಪಡಿಸಿದಳು. ಬೇರೆ ಬೇರೆ ಸ್ಥಳಗಳಲ್ಲಿ ಇರಿಸಿದ ಸರದಾರರನ್ನೂ ಸೈನಿಕರನ್ನೂ ಕರೆಸಿಕೊಂಡಳು. ಇದು ಇಂಗ್ಲಿಷರಿಗೆ ತಿಳಿಯದಿರಲಿಲ್ಲ. ಥ್ಯಾಕರೆ 1824ರ ಅಕ್ಟೋಬರ್ 23ರಂದು ಸೈನ್ಯಸಮೇತನಾಗಿ ಕಿತ್ತೂರಿಗೆ ಬಂದ. ಕೋಟೆಯ ಬಾಗಿಲನ್ನು ಭದ್ರಪಡಿಸಲಾಗಿತ್ತು. ಕೋಟೆಯಲ್ಲಿ ಸೈನ್ಯ ಯುದ್ಧಕ್ಕೆ ಸಜ್ಜಾಗಿ ನಿಂತಿತ್ತು. ಬಾಗಿಲಿಗೆ ಎರಡು ಫಿರಂಗಿಗಳನ್ನು ಗುರಿಮಾಡಿ ನಿಲ್ಲಿಸಿದ್ದ ಸೇನಾಧಿಕಾರಿಗಳು ಇಪ್ಪತ್ತು ನಿಮಿಷಗಳೊಳಗಾಗಿ ಬಾಗಿಲು ತೆರೆಯದಿದ್ದರೆ ಲಗ್ಗೆ ಹಾಕುವುದಾಗಿ ಘೋಷಿಸಿದರು. ಕಿತ್ತೂರು ಜಗ್ಗಲಿಲ್ಲ, ಯುದ್ಧವನ್ನೇ ಆರಿಸಿಕೊಂಡಿತು. ಗುರುಸಿದ್ದಪ್ಪನ ನಾಯಕತ್ವದಲ್ಲಿ ಕಿತ್ತೂರು ಸೈನ್ಯ ಬ್ರಿಟಿಷ್ ಸೈನ್ಯದ ಮೇಲೆ ಬಿದ್ದಿತು. ಕತ್ತಿಯನ್ನು ಹಿರಿದು ಕುದುರೆಯನ್ನೇರಿದ ಚೆನ್ನಮ್ಮ ಸೈನಿಕರನ್ನು ಹುರಿದುಂಬಿಸಿದಳು. ಆಕೆಯ ಮೈಗಾವಲಿನ ಭಟ ಅಮಟೂರ ಬಾಳಪ್ಪ ಥ್ಯಾಕರೆಯನ್ನು ಗುಂಡಿಟ್ಟುಕೊಂದ. ಭೀಕರ ಕಾಳಗ ನಡೆಯಿತು. ಇಂಗ್ಲಿಷರ ಕಡೆ ಹಲವರು ಸತ್ತರು. ಅವರಿಗೆ ಸೋಲಾಯಿತು. ಹಲವರು ಸೆರೆ ಸಿಕ್ಕರು. ಅವರಲ್ಲಿ ಸ್ಟೀವನ್‌ಸನ್, ಎಲಿಯಟ್ ಮುಖ್ಯರು. ಅವರೊಂದಿಗೆ ಹಲವು ಮಕ್ಕಳೂ ಇದ್ದರು. ಚೆನ್ನಮ್ಮ ಮಕ್ಕಳ ವಿಷಯದಲ್ಲಿ ತುಂಬ ದಯೆಯಿಂದ ನಡೆದುಕೊಂಡು ಅವರನ್ನು ಸುಖವಾಗಿರಿಸಿ ಜೋಕೆಯಿಂದ ಕಾಯಲು ಆಜ್ಞಾಪಿಸಿದಳು. ಈ ಮುತ್ತಿಗೆಯಲ್ಲಿ ಚೆನ್ನಮ್ಮನಿಗೆ ಪೂರ್ಣ ಜಯವಾಯಿತು.

ಬ್ರಿಟಿಷರ ಸೋಲಿನ ಸುದ್ದಿಯನ್ನು ಕೇಳಿದೊಡನೆ ಚಾಪ್ಲಿನ್ ಮತ್ತು ಲೆಫ್ಟಿನೆಂಟ್ ಕರ್ನಲ್ ಡೀಕನ್ ದೊಡ್ಡ ಸೈನ್ಯದೊಡನೆ ಕಿತ್ತೂರಿನ ಮೇಲೆ ಸಾಗಿಬಂದರು (3-11-1824). ಯುದ್ಧವನ್ನು ತಪ್ಪಿಸಲು ಚೆನ್ನಮ್ಮ ಕಿತ್ತೂರಿನ ಪರಿಸ್ಥಿತಿಯನ್ನು ವಿವರಿಸಿ ಗೌರ್ನರಿಗೂ ಕಮಿಷನರ್‌ಗೂ ಬರೆಸಿ ತಿಳಿಸಿದುದು ವ್ಯರ್ಥವಾಯಿತು. ಕಿತ್ತೂರಿಗೆ ಬಲವಾದ ಮುತ್ತಿಗೆ ಬಿತ್ತು. ಬಂದಿಗಳನ್ನು ಬಿಡಿಸಲು ಚಾಪ್ಲಿನ್ ಪ್ರಯತ್ನಿಸಿದ. ಆದರೆ ಕಿತ್ತೂರಿನ ಆಡಳಿತದಲ್ಲಿ ಆಂಗ್ಲರು ಪ್ರವೇಶ ಮಾಡುವುದಿಲ್ಲವೆಂಬ ಭರವಸೆ ಕೊಡುವವರೆಗೂ ಬಂದಿಗಳ ಬಿಡುಗಡೆ ಇಲ್ಲವೆಂದು ಚೆನ್ನಮ್ಮ ಸ್ಪಷ್ಟವಾಗಿ ತಿಳಿಸಿದಳು. ಚಾಪ್ಲಿನ್ನನ ಬೆದರಿಕೆಗಳಿಗೆ ಆಕೆ ಅಂಜಲಿಲ್ಲ. ಎರಡು ಕಡೆಯೂ ಯುದ್ಧ ಸಿದ್ಧತೆಗಳಾದುವು. ಏನೇ ಆಗಲಿ ಶರಣಾಗತರಾಗುವುದು ಅವಮಾನಕರವೆಂದೂ ಕಡೆಯವರೆಗೂ ಹೋರಾಡಬೇಕೆಂದೂ ಚೆನ್ನಮ್ಮನೂ ಉಳಿದ ಸರದಾರರೂ ನಿರ್ಧರಿಸಿದರು. ಆದರೆ ಕೋಟೆಯೊಳಗೇ ಹಲವು ವಿದ್ರೋಹಿಗಳು ಸೇರಿ ಪಿತೂರಿ ನಡೆಸಿದ್ದರು. ಆಂಗ್ಲರದು ಅಪಾರ ಸೈನ್ಯ. ಅದು ಫಿರಂಗಿದಳ, ಅಶ್ವದಳ, ಮದರಾಸಿನ ಸಿಪಾಯಿಗಳು ಮತ್ತು ಮುಂಬೈನ ಪದಾತಿಗಳನ್ನೊಳಗೊಂಡಿತ್ತು. ಅದರೊಂದಿಗೆ ಹೋರಾಡುವುದು ಸುಲಭವಲ್ಲವೆಂಬುದು ಚೆನ್ನಮ್ಮನಿಗೆ ಗೊತ್ತಿತ್ತು. ಆದರೆ ಆಕೆಯ ಸ್ವಾಂತತ್ರ್ಯಪ್ರೇಮ, ಆಕೆಯ ಸೈನಿಕರ ಸ್ವಾಮಿಭಕ್ತಿ ಇವು ಆಕೆಯ ಧೈರ್ಯವನ್ನು ನೂರ್ಮಡಿಗೊಳಿಸಿದುವು. ಈ ನಡುವೆ ಬ್ರಿಟಿಷ್ ಸರ್ಕಾರಕ್ಕೂ ಚೆನ್ನಮ್ಮನಿಗೂ ನಡೆದ

ಪತ್ರವ್ಯವಹಾರದಲ್ಲಿ ಬ್ರಿಟಿಷರು ಕೇವಲ ತಮ್ಮ ಕಡೆಯವರನ್ನು ಸೆರೆಯಿಂದ ಬಿಡುಗಡೆ ಮಾಡಿಸುವ ಪ್ರಯತ್ನ ಮಾತ್ರ ಮಾಡಿದರು. ಚೆನ್ನಮ್ಮನ ಬೇಡಿಕೆಗಳನ್ನು ತಿರಸ್ಕರಿಸಿದ್ದ ಅವರು ಇಂಗ್ಲಿಷ್ ಖೈದಿಗಳ ಸ್ಥಾನಬದ್ಧತೆಯಿಂದ ಚೆನ್ನಮ್ಮನಿಗೆ ಯಾವ ಪ್ರಯೋಜನವಿಲ್ಲವೆಂದೂ ಅವರನ್ನು ಬಿಡುಗಡೆ ಮಾಡುವುದರಿಂದ ಪ್ರಯೋಜನವಾಗಬಹುದೆಂದೂ ತಿಳಿಸಿದರು. ಈ ಪತ್ರಕ್ಕೆ ಉತ್ತರಿಸಿದ ಚೆನ್ನಮ್ಮ ಸಂಸ್ಥಾನದ ಸ್ವಾತಂತ್ರ್ಯವನ್ನು ಮುಂದುವರಿಸುವುದೆ ತನ್ನ ಅಪೇಕ್ಷೆಯೆಂದೂ ಅದಕ್ಕಾಗಿಯೇ ಕೈದಿಗಳ ಬಿಡುಗಡೆ ಸಾಧ್ಯವಿಲ್ಲವೆಂದೂ ಸಂಸ್ಥಾನವನ್ನು ಹಾಗೆಯೇ ಉಳಿಯಗೊಡುವುದಾಗಿ ಪತ್ರ ಬರೆದು ತಿಳಿಸಿದಲ್ಲಿ ಮಾತ್ರ ತನ್ನ ಕಾರಬಾರಿಗಳನ್ನು ಸಂಧಾನಕ್ಕೆ ಕಳುಹಿಸುವುದಾಗಿಯೂ ತಿಳಿಸಿದಳು. ಬ್ರಿಟಿಷರು ತಮ್ಮ ಕಡೆಯವರನ್ನು ಬಿಡಿಸಿಕೊಳ್ಳಲು ಬೇರೆ ಉಪಾಯ ಕಾಣದೆ ಇಂಗ್ಲಿಷ್ ಕೈದಿಗಳನ್ನು ಬಿಟ್ಟರೆ ಯುದ್ಧ ಪ್ರಾರಂಭಿಸುವುದಿಲ್ಲವೆಂದು ಭರವಸೆ ಕೊಟ್ಟರು. ಅದರಂತೆ ಚೆನ್ನಮ್ಮ ಆ ಕೈದಿಗಳ್ನು ಬಿಟ್ಟುಕೊಟ್ಟಳು. ಆಕೆಗೆ ವೃಥಾ ರಕ್ತಪಾತವಾಗುವುದು ಬೇಕಿರಲಿಲ್ಲ. ಆದರೆ ಬ್ರಿಟಿಷರು ಕುಟಿಲತಂತ್ರವನ್ನನುಸರಿಸಿದರು. ಕೋಟೆಯನ್ನು ತೆರವು ಮಾಡಬೇಕೆಂದೂ ಹೊರಗೆ ಬಂದು ವಿಧೇಯತೆಯನ್ನು ತೋರದಿದ್ದರೆ ಅವರ ಪ್ರಾಣರಕ್ಷಣೆಯಾಗದೆಂದೂ ಹತ್ತುಗಂಟೆಯೊಳಗಾಗಿ ಶರಣಾಗದಿದ್ದರೆ ಯುದ್ಧ ಪ್ರಾರಂಭಿಸುವುದಾಗಿಯೂ ಚಾಪ್ಲಿನ್ ಬರೆದ. ಚೆನ್ನಮ್ಮ ಅದಕ್ಕೆ ಧೀರೋದಾತ್ತವಾದ ಮುತ್ಸದ್ದಿತನದಪತ್ರ ಬರೆದು "ನಾವು ಎಂದೂ ಯುದ್ಧವನ್ನು ಬಯಸಿಲ್ಲ. ಯುದ್ಧವನ್ನು ತಪ್ಪಿಸಲು ಪ್ರಯತ್ನಮಾಡುತ್ತ ಬಂದಿದ್ದೇವೆ. ನಮ್ಮ ಈ ಸ್ನೇಹಭಾವನೆಗಳನ್ನು ಲಕ್ಷಿಸದೆ ನೀವು ವೈರಭಾವನೆಗಳನ್ನು ತಳೆದಿದ್ದೀರಿ. ನಮಗೆ ಬೇರೆ ಮಾರ್ಗವಿಲ್ಲ" ಎಂದು ಹೇಳಿದಳು. ಅಕ್ಟೋಬರ್ 24ರಿಂದ ನವೆಂಬರ್ 30ರ ವರೆಗೆ ಈ ಪತ್ರವ್ಯವಹಾರಗಳು ನಡೆದುವು. ಯುದ್ಧದ ಸಿದ್ಧತೆಗಳನ್ನು ಪೂರೈಸುವುದಕ್ಕೆ ಮಾತ್ರ ಈ ವಿಳಂಬವನ್ನು ಬ್ರಿಟಿಷರು ಉಪಯೋಗಿಸಿಕೊಡರು. ಅವರಿಗೆ ಕಿತ್ತೂರನ್ನು ಸ್ವತಂತ್ರವಾಗಿ ಬಿಡುವುದು ಬೇಕಿರಲಿಲ್ಲ. ನವಂಬರ್ 30ರಂದು ಆರಂಭವಾದ ಯುದ್ಧ ಡಿಸೆಂಬರ್ 3ರಂದು ತೀವ್ರವಾಯಿತು. ಚೆನ್ನಮ್ಮನೂ ಕಿತ್ತೂರಿನ ಸೈನಿಕರೂ ವೀರಾವೇಶದಿಂದ ಹೋರಾಡಿದರು. ಆದರೆ ಬ್ರಿಟಿಷರ ಫಿರಂಗಿಗಳು ಕೋಟೆಯ ಭಾಗಗಳನ್ನು ಕೆಡವಿದುವು. ಕೋಟೆಯೊಳಗಿನ ವಿದ್ರೋಹದಿಂದಾಗಿ ಮದ್ದಿನ ಮನೆಯಲ್ಲಿ ಮೋಸ ನಡೆದುಹೊಯಿತು. ಕಿತ್ತೂರಿಗೆ ಸೋಲು ಸಿದ್ಧವೆನಿಸಿತು. ಶತ್ರುಗಳ ಕೈಗೆ ಸಿಗಬಾರದೆಂದು ಚೆನ್ನಮ್ಮ ಕೋಟೆಯ ಕಿರುಗಂಡಿಯಿಂದ ಪಾರಾಗಿ ಸಂಗೊಳ್ಳಿಯ ಮಾರ್ಗವಾಗಿ ತಪ್ಪಿಸಿಕೊಂಡು ಹೋಗಲೆತ್ನಿಸಿದ್ದರೂ ಬ್ರಿಟಿಷರು ಆಕೆಯನ್ನು ಹಿಡಿದು ಬೈಲಹೊಂಗಲದಲ್ಲಿ ಸೆರೆಯಿಟ್ಟರು. ಆರು ವರ್ಷಗಳ ಕಾಲ ಸೆರೆಮನೆಯಲ್ಲಿದ್ದಾಗ ಸಂಗೊಳ್ಳಿರಾಯಣ್ಣ, ಬಿಚ್ಚುಗತ್ತಿ ಚೆನ್ನಬಸಪ್ಪ, ಗಜವೀರ, ಬಾಲಣ್ಣ ಮೊದಲಾದವರು ಈಕೆಯೊಂದಿಗೆ ಸಂಪರ್ಕ ಹೊಂದಿದ್ದು, ಅಲ್ಲಲ್ಲಿ ದಂಗೆಯೆಬ್ಬಿಸಿದರು. ಸಂಗೊಳ್ಳಿ ರಾಯಣ್ಣನನ್ನು ಸೆರೆಹಿಡಿದು ಬ್ರಿಟಿಷರು ಗಲ್ಲಿಗೇರಿಸಿದಾಗ ಚೆನ್ನಮ್ಮನಿಗೆ ಪುನಃ ತನ್ನ ನಾಡನ್ನು ಬಿಡುಗಡೆ ಮಾಡುವ ಕನಸು ಒಡೆದು ಹೋಯಿತು. ಹತಾಶಳಾದ ಈಕೆ 1830 ಫೆಬ್ರವರಿ 30ರಂದು ಸೆರೆಯಲ್ಲಿಯೇ ನಿಧನಳಾದಳು.

ಚೆನ್ನಮ್ಮ ತನ್ನ ಸಂಸ್ಥಾನದ ಸ್ವಾತಂತ್ರ್ಯವನ್ನುಳಿಸಿಕೊಳ್ಳಲು ನಡೆಸಿದ ಹೋರಾಟ ಜನಮನದಲ್ಲಿ ಅಚ್ಚಳಿಯದೆ ಉಳಿಯಿತು. ಬಗೆಬಗೆಯಲ್ಲಿ ಲಾವಣಿಯಾಗಿ, ಹಾಡಾಗಿ, ಕಥೆಯಾಗಿ ವೀರ ಚೆನ್ನಮ್ಮನ ಸಾಹಸಗಳು ಕಿತ್ತೂರಿನ ಸುತ್ತಮುತ್ತಲ ಊರುಗಳಲ್ಲಿ ಹಬ್ಬಿ ಇಂದಿಗೂ ಉಳಿದಿದೆ. ಬ್ರಿಟಿಷರ ಮೇಲೆ ಬಂಡೆದ್ದು ಅವರನ್ನು ಈ ದೇಶದಿಂದಲೇ ಹೊರಗೋಡಿಸಲು ನಡೆದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಚೆನ್ನಮ್ಮ ನಡೆಸಿದ ಪ್ರಥಮ ಹೋರಾಟ ಸ್ಫೂರ್ತಿಯ ನೆಲೆಯಾಯಿತು; ನಾಂದಿಯಾಯಿತು. (ಎಂ.ಎಚ್.)

**ಕಿತ್ತೂರು ದೇಸಾಯರು :** 1585ರಿಂದ 1824ರ ವರೆಗೆ ಬೆಳಗಾಂವಿ ಜಿಲ್ಲೆ ಕಿತ್ತೂರು ಮತ್ತು ಸುತ್ತಲ ಪ್ರದೇಶಗಳನ್ನು ಆಳಿದ ಮನೆತನ.

ವಿಜಯನಗರ ಸಾಮ್ರಾಜ್ಯದ ಪತನಾನಂತರ ಹುಟ್ಟಿಕೊಂಡ ಹಲವಾರು ಸಣ್ಣಪುಟ್ಟ ಮನೆತನಗಳಲ್ಲಿ ಕಿತ್ತೂರಿನ ದೇಸಾಯರ ಮನೆತನವೂ ಒಂದು. ಹೀರೆಮಲ್ಲ ಮತ್ತು ಚಿಕ್ಕಮಲ್ಲ ಎಂಬ ಮಲೆನಾಡಿನ ಗೌಡಮನೆತನದ ಸೋದರರಿಬ್ಬರು ಈ ಮನೆತನದ ಮೂಲಪುರುಷರು. 16ನೆಯ ಶತಮಾನದ ಅಂತ್ಯದಲ್ಲಿ ವ್ಯಾಪಾರಕ್ಕಾಗಿ ಬಂದು ಸಂಪಗಾಂವಿಯಲ್ಲಿ ನೆಲಸಿ ಬಿಜಾಪುರ ಸೈನ್ಯಕ್ಕೆ ಸಾಮಾನು ಸರಬರಾಜು ಮಾಡುತ್ತಿದ್ದ ಇವರಿಗೆ ಬೆಳಗಾಂವಿಯ ಕಿಲ್ಲೇದಾರನಾಗಿದ್ದ ಅಸದ್‌ಖಾನ್‌ನು ಹಟ್ಟಿಹೊಲೆ ಮತ್ತು ಇತರ ಆರು ಊರುಗಳನ್ನು ಉಂಬಳಿಯಾಗಿ ಬಿಟ್ಟಿದ್ದ. ಹಿರೇಮಲ್ಲ ಸೈನ್ಯದಲ್ಲಿ ಸೇರಿ ಪರಾಕ್ರಮವನ್ನು ತೋರಿದ್ದರಿಂದ ಬಿಜಾಪುರದ ಸುಲ್ತಾನ ಅವನಿಗೆ ಷಂಷೇರ್ ಜಂಗ್ ಬಹದೂರ್ ಎಂಬ ಬಿರುದು ಕೊಟ್ಟುದುದಲ್ಲದೆ 1585ರಲ್ಲಿ ಹುಬ್ಬಳ್ಳಿಯ ಸರ್‌ದೇಶ ದತ್ತಿಯನ್ನು ಬಿಟ್ಟ. ಕಿತ್ತೂರು ಸೇರಿದಂತೆ 19 ಹಳ್ಳಿಗಳಿದ್ದ ಈ ನಾಡನ್ನು ಈತನೂ ಈತನ ಅನಂತರ ಬಂದ ಹಿರೇನಾಗನಗೌಡ, ಚಿಕ್ಕನಾಗನಗೌಡ ಮತ್ತು ಬಿಚ್ಚುಗತ್ತಿ ಚೆನ್ನಬಸಪ್ಪ ಮೊದಲಾದವರು ಬಹುವಾಗಿ ಅಭಿವೃದ್ಧಿಪಡಿಸಿದರು. ಔರಂಗಜೇಬ್ ಬಿಜಾಪುರವನ್ನು ಆಕ್ರಮಿಸಿದಾಗ ದೇಸಾಯರ ವಂಶದಲ್ಲಿ 5ನೆಯವನಾಗಿ 1660ರಿಂದ ಆಳಲಾರಂಭಿಸಿದ್ದ ಅಲ್ಲಪ್ಪಗೌಡ ಸರದೇಸಾಯಿ ಸಮಯ ಸಾಧಿಸಿ ಬೀಡಿ, ಸಂಪಗಾಂವಿಗಳನ್ನು ಗೆದ್ದು ಕಿತ್ತೂರಿನಿಂದ ಆಳಲಾರಂಭಿಸಿದ. ಕಿತ್ತೂರಿನ ಕೋಟೆಯನ್ನು ಇವನೇ ಕಟ್ಟಿಸಿದ್ದನೆಂದು ಹೇಳಲಾಗಿದೆ. ಇವನ ಮಗ ಮುದಿಮಲ್ಲಪ್ಪ ಸರದೇಸಾಯಿ ಮುಗಲರ ಪ್ರತಿನಿಧಿಯಾಗಿ ದಕ್ಷಿಣದಲ್ಲಿ ಆಳುತ್ತಿದ್ದ ಸವಣೂರು ನವಾಬನ ಸಾಮಂತನಾದ. ಮುಂದೆ ಕ್ರಮವಾಗಿ ಚಿಕ್ಕಮಲ್ಲಪ್ಪ ದೇಸಾಯಿ, ಶಿವನಗೌಡ ಸರದೇಸಾಯಿ ಮತ್ತು ಮಲಮರುದ್ರಸರ್ಜ ಮುಗಲರ ಅಧೀನರಾಗಿ ಆಳಿದರು. ಈ ಹೊತ್ತಿಗೆ ಮರಾಠರು ಪ್ರಬಲರಾದರು. 1746ರಲ್ಲಿ ಸವಣೂರಿನ ನವಾಬ ಕಿತ್ತೂರಿನ ಜೊತೆಗೆ ಇನ್ನೂ ಕೆಲವು ಭಾಗಗಳನ್ನು ಪೇಶ್ವೆಗೆ ಒಪ್ಪಿಸಬೇಕಾಯಿತು. ಆಗ ಕಿತ್ತೂರಿನಲ್ಲಿ ಮಲಮರುದ್ರಸರ್ಜನ ತಮ್ಮನ ಮಗ ವೀರಪ್ಪದೇಸಾಯಿ ಆಳುತ್ತಿದ್ದ. ವೀರಪ್ಪದೇಸಾಯಿ ಪರಾಕ್ರಮಶಾಲಿಯೂ ಧೈರ್ಯಸ್ಥನೂ ಆಗಿದ್ದು ಮರಾಠರು ನಡೆಸಿದ ಹಲವು ಯುದ್ಧಗಳಲ್ಲಿ ಭಾಗವಹಿಸಿದ್ದ. ಮೂರನೆಯ ಪಾಣಿಪಟ್ಟದ ಕದನದಲ್ಲಿ ಇವನು ಹೋರಾಡಿದುದಾಗಿ ತಿಳಿದುಬರುತ್ತದೆ. ಈ ನಡುವೆ ಹೈದರ್ 1774ರಲ್ಲಿ ಈ ಪ್ರಾಂತ್ಯಗಳನ್ನು ಗೆದ್ದದ್ದರಿಂದ ಕಿತ್ತೂರಿನ ದೇಸಾಯಿ ಅವನಿಗೆ ಕಪ್ಪ ಕೊಡಬೇಕಾಗಿತ್ತಾದರೂ ವೀರಪ್ಪ ದೇಸಾಯಿ ತನ್ನ ಸ್ವಂತ ರಾಜ್ಯವನ್ನು ವಿಸ್ತರಿಸಿ ಗೋಕಾಕ ಮತ್ತು ಸವದತ್ತಿ ತಾಲ್ಲೂಕಿನ ಭಾಗಗಳನ್ನು ವಶಪಡಿಸಿಕೊಂಡ. ಈ ಸುತ್ತಮುತ್ತಲಿನ ಪ್ರಾಂತ್ಯಗಳ ಮೇಲೆ ಆಗ ಅಧಿಕಾರ ನಡೆಸುತ್ತಿದ್ದ ಮರಾಠರ ಪರಶುರಾಮ ಭಾವು ದಂಡೆತ್ತಿ ಬಂದು ಗೋಕಾಕದ ಬಳಿ ವೀರಪ್ಪ ದೇಸಾಯಿಯನ್ನೆದುರಿಸಿದ. ವೀರಪ್ಪ ದೇಸಾಯಿ ಸೋತು ಸೆರೆಯಾಗಿ ಮೀರಜಿನಲ್ಲಿ ಸೆರೆಮನೆಯಲ್ಲಿರುವಾಗಲೇ ತೀರಿಕೊಂಡ.

1782ರಲ್ಲಿ ಪಟ್ಟಕ್ಕೆ ಬಂದ ಮಲ್ಲಸರ್ಜನ ಕಾಲದಲ್ಲಿ ಕಿತ್ತೂರು ರಾಜ್ಯ ಕಲಘಟಗಿ, ಮುನವಳ್ಳಿ, ನರಗುಂದ, ಧಾರವಾಡದವರೆಗೆ ವಿಸ್ತರಿಸಿತ್ತು. ಸಂಸ್ಥಾನ 700 ಹಳ್ಳಿಗಳನ್ನೊಳಗೊಂಡಿತ್ತು. ಮಲ್ಲಸರ್ಜ ಪಟ್ಟಕ್ಕೆ ಬಂದಾಗ ಅವನಿಗಿನ್ನೂ 17 ವರ್ಷ. ಒಂದು ಕಡೆ ಮರಾಠರು,ಮತ್ತೊಂದು ಕಡೆ ಟಿಪ್ಪು ಇವನ ಪ್ರಾಂತ್ಯವನ್ನು ಕಬಳಿಸಲು ಹವಣಿಸುತ್ತಿದ್ದರು. ಹಲವು ಬಾರಿ ಈ ರಾಜ್ಯ ಸುಲಿಗೆಗೊಳಗಾಯಿತು. ಟಿಪ್ಪು ಕಿತ್ತೂರಿಗೆ ಎರಡು ಬಾರಿ ಮುತ್ತಿಗೆ ಹಾಕಿ 1785ರಲ್ಲಿ ಮಲ್ಲಸರ್ಜನನ್ನು ಸೆರೆಹಿಡಿದು ಕಬ್ಬಾಳದುರ್ಗದಲ್ಲಿ ಸೆರೆಯಿಟ್ಟು ಕಿತ್ತೂರು ಕೋಟೆಯಲ್ಲಿ ಬಲವಾದ ಸೈನ್ಯವನ್ನು ಇರಿಸಿದ. ಅನಂತರ ಗಣೇಶಪಂತ ಬೆಹರೆ ಮತ್ತು ತುಕೋಜಿ ಹೋಳ್ಕರ ಎಂಬ ಮರಾಠ ಸರದಾರರು ಟಿಪ್ಪುವಿನ ಸೈನ್ಯವನ್ನೋಡಿಸಿ ಕಿತ್ತೂರು ಮತ್ತು ಆ ಪ್ರಾಂತ್ಯವನ್ನು ತಮ್ಮ ಕೈವಶಮಾಡಿಕೊಂಡರೂ ಟಿಪ್ಪುವಿನ ಸೇನಾನಿ ಬದುಲ್‌ಖಾನ್ ಝುಮಾನ್ ಮತ್ತೆ ಕಿತ್ತೂರನ್ನು ಗೆದ್ದುಕೊಂಡ. ಮಲ್ಲಸರ್ಜ ಮೂರು ವರ್ಷಗಳ ಅನಂತರ ಸೆರೆಯಿಂದ ತಪ್ಪಿಸಿಕೊಂಡು ಬಂದು ಮರಾಠರೊಂದಿಗೆ ಸ್ನೇಹ ಬೆಳೆಸಿದ. 1787ರಲ್ಲಿ ಮೂರನೆಯ ಮೈಸೂರು ಯುದ್ಧದ ಪರಿಣಾಮವಾಗಿ ಆದ ಶ್ರೀರಂಗಪಟ್ಟಣದ ಒಪ್ಪಂದದಂತೆ ಕಿತ್ತೂರು ಪೇಶ್ವೆಯ ಅಧೀನಕ್ಕೊಳಪಟ್ಟು ಪರಶುರಾಮಭಾವುವಿನ ಆಡಳಿತಕ್ಕೊಳಗಾಗಿ ಧಾರವಾಡ ಪ್ರಾಂತ್ಯದ ಭಾಗವಾಯಿತು. ಪರಶುರಾಮಭಾವು 1788ರಲ್ಲಿ ಪಟ್ಟಣಕುಡಿ ಕಾಳಗದಲ್ಲಿ ಗಾಯಗೊಂಡು ತೀರಿಕೊಂಡ ಮೇಲೆ ಮಲ್ಲಸರ್ಜ ಸ್ವತಂತ್ರನಾಗಲು ಹವಣಿಸಿದ. ಮರಾಠರ ಬಲ ಕುಂದುತ್ತಿದ್ದುದನ್ನು ಮನಗಂಡ ಇವನು 1803ರಲ್ಲಿ ಇಂಗ್ಲಿಷರ ಸ್ನೇಹ ಬೆಳೆಸಿ ವೆಲ್ಲೆಸ್ಲಿಗೆ ಯುದ್ಧದಲ್ಲಿ ಸಹಾಯ ಮಾಡಿದ. ಧೊಂಡಿಯಾ ವಾಘ್ ಇಲ್ಲಿ ನಡೆಸುತ್ತಿದ್ದ ಸುಲಿಗೆಯನ್ನು ತಪ್ಪಿಸಲು ಇಂಗ್ಲಿಷರಿಗೆ ಸೈನ್ಯಸಹಾಯವನ್ನೂ ಒದಗಿಸಿದ. ಇದರಿಂದ ಪೇಶ್ವೆ ಮತ್ತು ಕಿತ್ತೂರು

ದೇಸಾಯಿಯರ ನಡುವೆ ಒಪ್ಪಂದಉಂಟಾಗಲು ವೆಲ್ಲೆಸ್ಲಿ ಮಧ್ಯಸ್ಥಿಕೆ ವಹಿಸಿದ. ಪೇಶ್ವೆ 1809ರಲ್ಲಿ ಮಲ್ಲಸರ್ಜನ ಆಧಿಪತ್ಯವನ್ನು ಒಪ್ಪಿಕೊಂಡು ಅವನು ವರ್ಷಂಪ್ರತಿ 1,75,000 ರೂಪಾಯಿಗಳ ಕಪ್ಪ ಸಲ್ಲಿಸಬೇಕೆಂದೂ ಕಿತ್ತೂರಿನಲ್ಲಿ ಒಂದು ಸೈನ್ಯವನ್ನಿರಿಸಿ ಅದರ ವೆಚ್ಚವನ್ನು ದೇಸಾಯಿ ವಹಿಸಿಕೊಳ್ಳಬೇಕೆಂದೂ ವಿಧಿಸಿದ. ಆದರೆ ಕೆಲಕಾಲದಲ್ಲಿಯೇ ಪೇಶ್ವೆ ಮಲ್ಲಸರ್ಜನನ್ನು ಸೆರೆಹಿಡಿದು ಪುಣೆಯಲ್ಲಿ ಬಂಧನದಲ್ಲಿಟ್ಟ. ಅವನಿಗೆ ರೋಗ ಬಂದು ಅದು ಉಲ್ಬಣಿಸಿದಾಗ ಮರಾಠರು ಅವನನ್ನು ಬಿಡುಗಡೆ ಮಾಡಿದರೂ ಕಿತ್ತೂರಿಗೆ ಹಿಂದಿರುಗಿದ ಸ್ವಲ್ಪ ಕಾಲದಲ್ಲಿಯೇ ಅವನು ಮರಣಹೊಂದಿದ. ಕಿತ್ತೂರನ್ನು ದೀರ್ಘ ಕಾಲ ಆಳಿದ ಮಲ್ಲಸರ್ಜ ಪರಾಕ್ರಮಿಯೂ ಸಾಹಸಿಯೂ ಆಗಿದ್ದು ಪ್ರಬಲರಾದ ಮರಾಠರು ಮತ್ತು ಮೈಸೂರರಸರ ಆಕ್ರಮಣಗಳನ್ನು ಕೆಚ್ಚೆದೆಯಿಂದ ಎದುರಿಸಿದ. ಕಲೆ ಮತ್ತು ಸಾಹಿತ್ಯದ ಪೋಷಕನೂ ಆಗಿದ್ದ. ಇವನ ಆಸ್ಥಾನದಲ್ಲಿ ಕೊಳಸಿ ರಂಗಾಚಾರ್ಯ, ವೆಂಗಿಚೆನ್ನಬಸಪ್ಪ, ಮುಳುಗುಂದ ಚೆನ್ನಬಸಪ್ಪ ಮೊದಲಾದ ಪಂಡಿತರೂ ವರರುದ್ರಕವಿ, ಅಮೃತೇಶ್ವರ ಎಂಬ ಕವಿಗಳೂ ಇದ್ದರು.

ಮಲ್ಲಸರ್ಜನಿಗೆ ರುದ್ರಮ್ಮ ಮತ್ತು ಚೆನ್ನಮ್ಮ ಎಂಬ ಇಬ್ಬರು ಹೆಂಡಿರು. ಶಿವಲಿಂಗರುದ್ರಸರ್ಜ (ಬಾಪುಸಾಹೇಬ), ವೀರಪ್ಪಸರ್ಜ ಮತ್ತು ಶಿವಲಿಂಗಸರ್ಜ (ಬಾಳಾಸಾಹೇಬ) ಎಂಬ ಮೂವರು ಗಂಡುಮಕ್ಕಳು. ಶಿವಲಿಂಗರುದ್ರಸರ್ಜ 1816ರಲ್ಲಿ ಪಟ್ಟಕ್ಕೆ ಬಂದ. ಇವನು ಆಂಗ್ಲರ ಸ್ನೇಹ ಸಂಪಾದಿಸಿ ಅವರಿಗೆ ವಿಶೇಷ ನೆರವಿತ್ತು ಬೆಳಗಾವಿ ಕೋಟೆಯ ಮುತ್ತಿಗೆಯ ಕಾಲದಲ್ಲಿ ಸೈನಿಕರು ಮತ್ತು ಸಾಮಗ್ರಿಗಳನ್ನೊದಗಿಸಿದ. ಕಿತ್ತೂರ ದೇಸಾಯಿ ಸಲ್ಲಿಸುತ್ತಿದ್ದ ಅಪಾರ ಸಹಕಾರ ಸಹಾಯವನ್ನು ನೆನೆದು ಇಂಗ್ಲಿಷರು ಕಿತ್ತೂರ ಸಂಸ್ಥಾನ ಸ್ವತಂತ್ರವಾಗಿ ಮುಂದುವರಿಯುವ ಸಲುವಾಗಿ ಭರವಸೆಯ ಸನದನ್ನು ಕೊಟ್ಟರು. ಥಾಮಸ್ ಮನ್ರೋ ಕೊಟ್ಟ ಈ ಸನದಿನ ಪ್ರಕಾರ ಕಿತ್ತೂರು ದೇಸಾಯಿ ಬ್ರಿಟಿಷರಿಗೆ ವರ್ಷಂಪ್ರತಿ ರೂ.1,70,000 ಕಪ್ಪವನ್ನು ಕೊಡುತಕ್ಕುದೆಂದೂ ಅವನು ಕಿತ್ತೂರು ಸಂಸ್ಥಾನವನ್ನು ವಂಶಪಾರಂಪರ್ಯವಾಗಿ ಅನುಭವಿಸತಕ್ಕುದೆಂದೂ ಒಪ್ಪಂದವಾಯಿತು. ಆದರೆ ವ್ಯಾಧಿಗ್ರಸ್ತನಾಗಿದ್ದ ಶಿವಲಿಂಗರುದ್ರ ಸರ್ಜ 8 ವರ್ಷಗಳಕಾಲ ಮಾತ್ರ ಆಳಿ 1824 ಸೆಪ್ಟಂಬರ್ 11ರಂದು ಮಕ್ಕಳಿಲ್ಲದೆ ಮೃತನಾದ. ಸಾಯುವುದಕ್ಕೆ ಮುಂಚೆ ಇವನು ಶಿವಲಿಂಗಪ್ಪನೆಂಬ ಬಾಲಕನನ್ನು ದತ್ತುಸ್ವೀಕಾರ ಮಾಡಿಕೊಂಡಿದ್ದ. ಆದರೆ ಅದುವರೆಗೂ ಅತ್ಯಂತ ಸ್ನೇಹದಿಂದಿದ್ದ ಇಂಗ್ಲಿಷರು ಈ ದತ್ತುಸ್ವೀಕಾರವನ್ನು ನಿರಾಕರಿಸಿದಾಗ ಚೆನ್ನಮ್ಮ ಕಿತ್ತೂರಿನ ಸ್ವಾತಂತ್ರ್ಯವನ್ನು ರಕ್ಷಿಸಲು ಕೆಚ್ಚಿನಿಂದ ಹೋರಾಡಿ ಬ್ರಿಟಿಷ್ ಸೈನ್ಯವನ್ನು ಸೋಲಿಸಿ ಹಿಮ್ಮೆಟ್ಟಿಸಿದಳು. ಆದರೆ ಬ್ರಿಟಿಷರು ಮತ್ತೆ ಅಪಾರ ಸೈನ್ಯವನ್ನು ತಂದು ಘೋರ ಯುದ್ಧವನ್ನು ನಡೆಸಿ ಕೋಟೆಯನ್ನು ವಶಪಡಿಸಿಕೊಂಡರು. ಚೆನ್ನಮ್ಮ ಸೆರೆಯಾದಳು. ಕಿತ್ತೂರು ಸಂಸ್ಥಾನ ಬ್ರಿಟಿಷರ ಆಡಳಿತಕ್ಕೊಳಗಾಯಿತು. ದೇಸಾಯರ ಆಡಳಿತ ಕೊನೆಗೊಂಡಿತು (1824). (ಎಂ.ಎಚ್.)

**ಕಿನ್ನರಿ ಜೋಗಿ :** ಕಿನ್ನರಿ ಎಂಬ ವಾದ್ಯ ಬಾರಿಸುತ್ತ ಹಾಡು ಹೇಳಿಕೊಂಡು ಭಿಕ್ಷೆ ಬೇಡುವ ಜನಪದ ಹಾಡುಗಾರರು. ಕಿನ್ನರಿ ಅಥವಾ ಕಿಂದರಿ ಮೂರು ಅಥವಾ ಐದು ಸೋರೆಬುರುಡೆಗಳನ್ನು ಒಂದು ಬಿದಿರಿನ ಕೊಳವೆಗೆ ಜೋಡಿಸಿ, ನಾಲ್ಕೈದು ತಂತಿ ಬಿಗಿದು ಮಾಡಿದ ಒಂದು ವಾದ್ಯ. ಈ ವಾದ್ಯ ಹಿಡಿದು ಹಾಡುವ ಜನರಾದ್ದರಿಂದ ಇವರಿಗೆ ಕಿನ್ನರಿ ಜೋಗಿ (ಯೋಗಿ) ಗಳೆಂಬ ಹೆಸರು ಬಂದಿರುವಂತೆ ತೋರುತ್ತದೆ.

ಕಿನ್ನರಿ ಜೋಗಿಗಳು ಮುಖ್ಯವಾಗಿ ಆದಿಚುಂಚನಗಿರಿಯ ಭೈರವೇಶ್ವರನ ಒಕ್ಕಲು. ಇವರು ದೀಕ್ಷಾಬದ್ಧರಾದ ಜನ. ಕಿವಿಗಳಿಗೆ ಕಾಪಾಲಿ ಮುದ್ರೆ ಹಾಕಿಸಿಕೊಂಡಿರುತ್ತಾರೆ. ಅರಿಶಿಣಗಾವಿ ಅಂಗಿ, ಹಾರೋಗಚ್ಚೆ, ಸೊಂಟಕ್ಕೆ ಮತ್ತು ತಲೆಗೆ ಕೆಂಪು ವಸ್ತ್ರ, ಕಾಲಿಗೆ ಗೆಜ್ಜೆ - ಇವು ಇವರ ಉಡುಪು.

ಕಿನ್ನರಿ ಜೋಗಿಗಳು ಮುಖ್ಯವಾಗಿ ಹಾಡುವುದು ಅರ್ಜುನ ಜೋಗಿ ಹಾಡು. ಅರ್ಜುನ ಸುಭದ್ರೆಯನ್ನು ಅಪಹರಿಸಲು ಹೋದಾಗ ಜೋಗಿ ವೇಷ ಹಾಕಿಕೊಂಡು ಕಿನ್ನರಿ ಹಿಡಿದು ಬಾರಿಸುತ್ತ ಹೋದನೆಂದು ಒಂದು ಜನಪದ ಕಥೆಯುಂಟು. ಆದರೆ ಇದಕ್ಕೆ ಮಹಾಭಾರತದ ಕಥೆಯಲ್ಲಿ ಆಧಾರವಿಲ್ಲ. ಬಹುಶಃ ವೇಷದಲ್ಲಿ ಇವರು ಅರ್ಜುನನ ಸನ್ಯಾಸಿ ವೇಷಕ್ಕೆ ಸರಿಬರಬಹುದೆಂದು ಕಾಣುತ್ತದೆ. ಇವರು ಅರ್ಜುನ ಸುಭದ್ರೆಯರಿಗೆ ಸಂಬಂಧಪಟ್ಟ ಹಾಡುಗಳಲ್ಲದೆ ಬೇರೆ ಹಾಡುಗಳನ್ನೂ ಹಾಡುತ್ತಾರೆ. ಅವುಗಳಲ್ಲಿ ಚುಂಚನಗಿರಿಯ ಭೈರವ ಮಾಳವ್ವರ ಕಥೆಯೂ ಒಂದು. ಉತ್ತರ ಕರ್ನಾಟಕದ ಕಡೆ ಅರ್ಜುನಜೋಗಿಯ ಹಾಡುಗಬ್ಬಗಳೆಂಬ ಒಂದು ಪ್ರಕಾರವೇ ಉಂಟು. ಆದರೆ ಅಲ್ಲಿ ಆ ಹಾಡುಗಳನ್ನು ಹಾಡುವವರು ಕಿನ್ನರಿ ಜೋಗಿಗಳಲ್ಲ.



ಕಿನ್ನರಿ ಜೋಗಿ ಮೇಳ

ಕರ್ನಾಟಕದಲ್ಲಿ ಜೋಗಿ ಎಂಬ ಜಾತಿಯ ಜನರಿದ್ದಾರೆ. ಹಂದಿಜೋಗಿ ಎಂಬ ಹೆಸರಿನ ಜನರೂ ಇದ್ದಾರೆ. ಆದರೆ ಇವರು ಕಿನ್ನರಿ ಬಾರಿಸುವುದಿಲ್ಲ. ಇವರು ಹಂದಿಗಳನ್ನು ಸಾಕಿ ಜೀವಿಸುತ್ತಾರೆ. ಹಾಗೆಯೇ, ಭೈರಪ್ಪನ ಭಕ್ತರ ಮನೆಗಳಿಗೆ ಹೋಗಿ ಮೀಸಲು ತೀರಿಸುವ ಜೋಗಪ್ಪಗಳಿಗೂ ಜೋಗಿಗಳೆಂದೇ ಕರೆಯುತ್ತಾರೆ. ಆದರೆ ಇವರಿಗೂ ಕಿನ್ನರಿ ಜೋಗಿಗಳಿಗೂ ಯಾವುದೇ ಸಂಬಂಧ ಕಂಡುಬರುವುದಿಲ್ಲ. (ಎಚ್.ಎಲ್.ಎನ್.)

**ಕಿನ್ನರಿ ಬೊಮ್ಮಯ್ಯ :** ಸು.1160. ಶಿವಶರಣ ಮತ್ತು ವಚನಕಾರ, ಆಂಧ್ರಪ್ರದೇಶದ ಪುದೂರ ಎಂಬ ಗ್ರಾಮದ ಕಲಿದೇವಿಯ ಮಗ. ಅಕ್ಕಸಾಲೆಯ ಕಾಯಕದಲ್ಲಿದ್ದ. ಗುರುವಿನ ಆಭರಣದಲ್ಲಿ ತೂಕ ಕಡಿಮೆಯಾಗಲು ತನ್ನ ಕಾಯಕ ತ್ಯಜಿಸಿ ಕಲ್ಯಾಣಕ್ಕೆ ಬಂದು, ಬಸವಣ್ಣನ ಸಹಾಯಕನಾಗಿದ್ದು, ತ್ರಿಪುರಾಂತಕೇಶ್ವರನ ಮುಂದೆ ಕಿನ್ನರಿ ಬಾರಿಸಿ, ಬಂದ 11 ಹಾಗ ಆದಾಯದಿಂದ ಜಂಗಮ ದಾಸೋಹ ನಡೆಸುತ್ತಿದ್ದ. ಇದರಿಂದ ಇವನಿಗೆ ಕಿನ್ನರಿ ಬೊಮ್ಮಯ್ಯನೆಂಬ ಹೆಸರಾಯಿತು. ಶಿವನ ಆರೋಗಣೆಗೆ ಉಳ್ಳಿ ಬೇಡವೆಂದು ಆಕ್ಷೇಪಿಸಿದ ಬಸವಣ್ಣನೂ ಕಿನ್ನರಿ ಬೊಮ್ಮಯ್ಯನ ಭಕ್ತಿಗಾಗಿ ಕರಗಿದ. ಅಂದಿನಿಂದ ಉಳ್ಳಿಯ ಹಬ್ಬ ಮಾಡುವ ನೇಮವನ್ನೂ ಆಚರಣೆಗೆ ತಂದ. ಕೊನೆಯಲ್ಲಿ ಚೆನ್ನಬಸವಣ್ಣನಿಂದ ಇವನು ದಂಡಿನ ಆಧಿಪತ್ಯವನ್ನು ವಹಿಸಿಕೊಂಡು ಯುದ್ಧ ಮಾಡುತ್ತ ಮಡಿದನೆಂದು ಹೇಳುವರು. ಉಳುವಿಯ ಮಹಾಮನೆಯ ಸಮೀಪದಲ್ಲಿ ಈತನ ಸಮಾಧಿ ಇದೆ. ಮಹಲಿಂಗ ತ್ರಿಪುರಾಂತಕಾ ಎಂಬುದು ಇವನ ವಚನಗಳ ಅಂಕಿತ. (ಎಸ್.ಐ.)

**ಕಿಬ್ಬನಹಳ್ಳಿ :** ತುಮಕೂರು ಜಿಲ್ಲೆ ತಿಪಟೂರು ತಾಲ್ಲೂಕಿನಲ್ಲಿ ಕಸಬೆಯಿಂದ ಪೂರ್ವಕ್ಕೆ ಬೆಂಗಳೂರು ಹಾದಿಯಲ್ಲಿರುವ ಒಂದು ಗ್ರಾಮ.

ಸಮೀಪದಲ್ಲಿರುವ ಪ್ರಾಗೈತಿಹಾಸಿಕ ನೆಲೆಯಿಂದ ಈ ಗ್ರಾಮ ಪ್ರಸಿದ್ಧವಾಗಿದೆ. ಗ್ರಾಮದ ಪರಿಸರದಲ್ಲಿ ಹಬ್ಬಿರುವ ಬಾಣಸಂದ್ರ ಬೆಟ್ಟದ ಶಾಖೆಗಳ ಬುಡದಲ್ಲಿ ಮತ್ತು ಅಲ್ಲಿಂದ ಹರಿದುಬರುವ ಝರಿಗಳ ದಡಗಳಲ್ಲಿ ಪೂರ್ವ ಶಿಲಾಯುಗ ಮತ್ತು ಸೂಕ್ಷ್ಮ ಶಿಲಾಯುಗಗಳ ಕಾಲದ ಅನೇಕ ರೀತಿಯ ಶಿಲಾಯುಧಗಳು ದೊರಕುತ್ತವೆ.

ಇಲ್ಲಿಯ ಪೂರ್ವ ಶಿಲಾಯುಗದ ಕಾಲದಲ್ಲಿ ಅಬೆವಿಲಿಯನ್ ಮತ್ತು ಅಷೂಲಿಯನ್ ರೀತಿಯ ಕೈಕೊಡಲಿಗಳು, ಸೀಳುಗೊಡಲಿಗಳು (ಕ್ಲೀವರ್)

ಹೆರೆಯುವ ಆಯುಧಗಳು ಮತ್ತು ಕೊಕ್ಕು ತುದಿಯುಳ್ಳ ಆಯುಧಗಳು (ಬೀಕ್ಡ್ ಇಂಪ್ಲಿಮೆಂಟ್ಸ್) ಬಳಕೆಯಲ್ಲಿದ್ದುವು. ಉಂಡೆಕಲ್ಲುಗಳು ಮತ್ತು ಕಲ್ಲುಚಕ್ಕೆಗಳಿಂದ ಮಾಡಿದ ಎರಡು ಸಂಪ್ರದಾಯದ ಆಯುಧಗಳೂ ಇಲ್ಲಿ ದೊರಕುತ್ತವೆ. ಈ ಆಯುಧಗಳು ಬಹುಮಟ್ಟಿಗೆ ಒಟ್ಟಿಗೆ ದೊರಕಿದರೂ ಅವುಗಳ ರೂಪು, ತಂತ್ರ ಮತ್ತು ಬಳಕೆಯ ಆಧಾರದ ಮೇಲೆ ಮೊದಲ ಪೂರ್ವಶಿಲಾಯುಗದ ಮತ್ತು ಪೂರ್ವಶಿಲಾಯುಗದ ಉತ್ತರ ಭಾಗದ ಕಾಲದವುಗಳೆಂದು ಪರಿಗಣಿಸುವ ಸಾಧ್ಯತೆ ಇದೆ. ಇವೆಲ್ಲ ಮಧ್ಯ ಮತ್ತು ಉತ್ತರ ಪ್ಲೀಟೋಸೀನ್ ಯುಗದವೆಂದು, ಇದೇ ರೀತಿಯ ಆಯುಧಗಳು ತತ್ಕಾಲಕ್ಕೆ ಸೇರಿದಂತೆ ಯುರೋಪ್ ಮತ್ತು ಆಫ್ರಿಕ ಖಂಡಗಳಲ್ಲಿ ದೊರಕಿರುವುದರಿಂದ, ಹೇಳಬಹುದಾಗಿದೆ. ಸೂಕ್ಷ್ಮ ಶಿಲಾಯುಗದ ಕಾಲದಲ್ಲಿ ತೆಳು ಕಲ್ಲುಚಕ್ಕೆಯ, ಎರಡು ಕಡೆ ಅಲುಗುಳ್ಳ ಚಿಕ್ಕ ಚಾಕುಗಳು, ಮೊನೆಗಳು, ಹೆರೆಯವ ಆಯುಧಗಳು ಮತ್ತು ಅರ್ಧಚಂದ್ರಾಕೃತಿಯ ಪುಟ್ಟ ಆಯುಧಗಳು ಬಳಕೆಯಲ್ಲಿದ್ದುವು. ಹೆರೆಯುವ ಆಯುಧಗಳಲ್ಲಿ ಪಾರ್ಶ್ವಹೆರೆಗಗಳೂ ತುದಿಹೆರೆಗಗಳೂ ಒಳಬಾಗಿನ ಹೆರೆಗಗಳೂ ದೊರಕಿವೆ. ಇಲ್ಲಿನ ಸೂಕ್ಷ್ಮಶಿಲಾಯುಗದ ಆಯುಧಗಳ ರಚನೆಗೆ ಬೆಣಚುಕಲ್ಲನ್ನು ಬಳಸಲಾಗಿದೆ. ಈ ಸೂಕ್ಷ್ಮಶಿಲಾಯುಗದ ಆಯುಧಗಳು ಬೇರೆಡೆಗಳಲ್ಲಿ ಮೆಸೋಲಿಥಿಕ್ ಸಂಸ್ಕೃತಿಗಳ ಆಯುಧಗಳಂತೆಯೇ ಇರುವುದರಿಂದ ಇವೂ ಕಾಲಿಕವಾಗಿ ಇಂದಿನ ಹೋಲೋಸೀನ್ ಯುಗದ ಆದಿಭಾಗದವಿರಬೇಕೆಂದು ಭಾವಿಸಲಾಗಿದೆ.

ಇಲ್ಲಿನ ನೆಲೆಯ ವಿಸ್ತಾರ, ದೊರಕುವ ಆಯುಧಗಳ ಸಂಖ್ಯೆ ಮತ್ತು ವೈವಿಧ್ಯಗಳ ದೃಷ್ಟಿಯಿಂದ ಕಿಬ್ಬನಹಳ್ಳಿ ಕರ್ನಾಟಕದ ಒಂದು ಪ್ರಮುಖ ಪ್ರಾಗೈತಿಹಾಸಿಕ ನೆಲೆಯೆಂದು ಪರಿಗಣಿತವಾಗಿದೆ. *

**ಕೀರ್ತನೆಗಳು** : ಕನ್ನಡ ಸಾಹಿತ್ಯ ವಾಙ್ಮಯದಲ್ಲಿ ಹರಿದಾಸರ ಉಗಾಭೋಗ, ಸುಳಾದಿಗಳನ್ನುಳಿದ ಬಿಡಿರಚನೆಗಳ ಸಮೂಹಕ್ಕೆ ಕೀರ್ತನೆಗಳು ಎಂಬ ಹೆಸರಿದೆ. ಕೀರ್ತನ ಎಂಬ ಮಾತಿಗೆ ಭಾಗವತದಲ್ಲಿ ಸ್ತುತಿ, ಸ್ತೋತ್ರ ಎಂಬ ಅರ್ಥವಿದೆ. ನವವಿಧ ಭಕ್ತಿಮಾರ್ಗಗಳಲ್ಲಿ ಕೀರ್ತನವೂ ಒಂದು. ಈಗ ಆಚರಣೆಯಲ್ಲಿರುವ ಪ್ರಕಾರ, ಕೀರ್ತನಭಕ್ತಿ ಎಂದರೆ ಗಾಯನ ಮುಖೇನ ದೇವರನ್ನು ಸ್ತುತಿಸುವುದು. ಹರಿದಾಸರ ಕೀರ್ತನೆಗಳು ಎಂದು ಹೇಳುವಲ್ಲಿ ಬಹುಶಃ ಈ ಅರ್ಥವಾಪ್ತಿಯನ್ನೇ ಇಟ್ಟುಕೊಂಡಿರುವಂತೆ ಕಾಣುತ್ತದೆ. ಅಲ್ಲದೆ ಕೀರ್ತನೆ ಎಂಬ ಮಾತನ್ನು ಹರಿಕಥೆ ಎಂಬ ಮಾತಿಗೆ ಸಂವಾದಿಯಾಗಿ ಬಳಸುವುದೂ ಉಂಟು.

ಸಾಮಾನ್ಯವಾಗಿ ಕೀರ್ತನೆಯಲ್ಲಿ ಪಲ್ಲವಿ, ಅನುಪಲ್ಲವಿ, ನುಡಿಗಳು - ಈ ತ್ರಿಧಾತುಕಗಳಿರುತ್ತವೆ. ಪಲ್ಲವಿಯಲ್ಲಿ ದಾಸರು ತಾವು ಕಂಡುಕೊಂಡಂಥ ಸತ್ಯದ ಪ್ರತಿಪಾದನೆ ಮಾಡಿರುತ್ತಾರೆ. ಅನುಪಲ್ಲವಿಯಲ್ಲಿ ಅದು ಮುಂದುವರಿದು ನುಡಿಗಳಿಂದ ಪೋಷಿತವಾಗುತ್ತದೆ. ದಾಸರು ಲೌಕಿಕ ದೃಷ್ಟಾಂತಗಳಿಂದ, ಶಾಸ್ತ್ರಗಳ ಆಧಾರದಿಂದ ತಮ್ಮ ಅಭಿಪ್ರಾಯವನ್ನು ಪುಷ್ಟಿಗೊಳಿಸಲು, ಸ್ಪಷ್ಟಪಡಿಸಲು ಯತ್ನಿಸುತ್ತಾರೆ.

ಎಲ್ಲ ಕೀರ್ತನೆಗಳಲ್ಲೂ ಸೂತ್ರದೋಪಾದಿಯಲ್ಲಿರುವ ವಸ್ತು ಭಕ್ತಿ. ತೋರಿಕೆಗೆ ಭಿನ್ನಭಿನ್ನವೆಂಬಂತೆ ಕಂಡರೂ ಅಂತರಾಳದಲ್ಲಿ ಭಕ್ತಿ ಏಕರೂಪವಾಗಿ ಪ್ರವಹಿಸಿದೆ. ಹರಿದಾಸರ ಕೀರ್ತನೆಗೆ ವಸ್ತುವಾಗದ ವಸ್ತುವೇ ಇಲ್ಲವೆಂದರೆ ತಪ್ಪಾಗಲಾರದು. ಬದುಕಿನ ನೈಜಚಿತ್ರಣವನ್ನು ಕೊಡುವುದರಲ್ಲಿ, ಸಾಮಾಜಿಕ ವಲಯದಲ್ಲಿ ಸಾಂಸಾರಿಕ ಚಿತ್ರಣಗಳನ್ನು ಅಚ್ಚುಕಟ್ಟಾಗಿ ಬಿಡಿಸುವಲ್ಲಿ ದಾಸರು ಸಫಲರಾಗಿದ್ದಾರೆ. ಬುದ್ಧಿಮಾತು ಹೇಳಿದರೆ ಕೇಳಬೇಕಮ್ಮಾ ಮಗಳೆ ಎಂದು ಮನೆಯ ಹೆಣ್ಣುಮಗುವಿಗೆ ಬುದ್ಧಿವಾದ ಹೇಳುವುದರಿಂದ ಹಿಡಿದು, ಮಡದಿ ಹುಟ್ಟಿದ ಮನೆಯಲಿರುವಾತ ಮೂರ್ಖ ಎಂದು ಅಳಿಯನಿಗೆ ಎಚ್ಚರಿಸುವವರೆಗೂ ವಿವಿಧ ಹಂತಗಳಲ್ಲಿ ಅವರ ಸಾಂಸಾರಿಕ ಚಿತ್ರಣ ರೂಪುಗೊಂಡಿದೆ. ನಿತ್ಯಜೀವನದಲ್ಲಿ ಕಾಣುವ ಸಾಮಾನ್ಯ ಘಟನೆಗಳೂ ಕೀರ್ತನೆಗಳ ವಸ್ತುಗಳಾಗಿ ಪರಿಣಮಿಸಿವೆ. ಕಾಗದ ಹಂಚುವುದನ್ನು ಕಂಡಾಗ ಸಾಕ್ಷಾತ್ ಪದುಮನಾಭನೇ ಬರೆದ ಕಾಗದ ಬಂದಿದೆಯೆಂದು ಹೇಳಿ, ಕಾಮ ಕ್ರೋಧವ ಬಿಡಿರೆಂಬೋ ಕಾಗದ ಬಂದಿದೆ, ನೇಮನಿಷ್ಠೆಯೊಳಿರಿಯೆಂಬೋ ಕಾಗದ ಬಂದಿದೆ ಇತ್ಯಾದಿಯಾಗಿ ಅದರ ಒಕ್ಕಣೆಯನ್ನು ಓದಿ ಹೇಳುತ್ತಾರೆ. ಪುರಂದರದಾಸರು, ವ್ಯಾಸರಾಯರು ನಿದ್ರೆಯನ್ನು ಬಹು ಸೊಗಸಾಗಿ ನಿಂದಿಸಿದ್ದಾರೆ. ಅಂತೆಯೇ ಕೋಳಿ ಕೂಗುವಿಕೆ, ತಾಸು ಬಾರಿಸುವಿಕೆ, ಡಂಗುರ ಹೊಯ್ಯುವಿಕೆ ಎಲ್ಲವೂ ಅವರ ಕೀರ್ತನೆಗಳಲ್ಲಿ ವಸ್ತುವಿನ ಸ್ಥಾನವನ್ನು ಪಡೆದುಕೊಂಡಿದೆ. ವೇಣುಗೋಪಾಲ ಮತ್ತು ಗೋಪಿಯರ ಸರಸವಿರಸಗಳು, ತಾಯಿ ಮಕ್ಕಳ ವಾತ್ಸಲ್ಯ ಮುಂತಾದ ವರ್ಣನೆಗಳು ಸಹೃದಯನನ್ನು ಪ್ರತ್ಯೇಕ ಪ್ರಪಂಚಕ್ಕೆ ಸೆಳೆದೊಯ್ಯುತ್ತವೆ.

ಸಮಾಜದ ಆರೋಗ್ಯ ಸೂತ್ರಗಳಾದ ಸತ್ಯ, ಧರ್ಮ, ಸ್ವಚ್ಛತೆ, ಭಕ್ತಿ, ಸಜ್ಜನಿಕೆಗಳನ್ನು ಬೋಧಿಸುವುದರೊಂದಿಗೆ ಸಮಾಜದಲ್ಲಿದ್ದ ಸಣ್ಣತನ, ಮತ್ಸರ, ಮೋಹ, ಭ್ರಮೆ, ಅಂಧಶ್ರದ್ಧೆಗಳೇ ಮೊದಲಾದ ರೋಗಾಣುಗಳನ್ನೂ ಗುರುತಿಸಿ, ನಾಶಪಡಿಸಲು ಈ ಕೀರ್ತನೆಗಳ ಮೂಲಕ ಹರಿದಾಸರು ಯತ್ನಿಸಿದ್ದಾರೆ. ಮಾನವಜನ್ಮ ದೊಡ್ಡದು; ಇದ ಹಾನಿ ಮಾಡಲು ಬೇಡಿ, ಹುಚ್ಚಪ್ಪಗಳಿರಾ ಎಂದು ಎಚ್ಚರಿಸಿದ ದಾಸರು ಈ ಜನ್ಮವನ್ನು ಸಾರ್ಥಕಗೊಳಿಸಬೇಕೆಂದು ಕಳಕಳಿಯಿಂದ ಕೇಳಿಕೊಳ್ಳುತ್ತಾರೆ. ಕೇವಲ ಶರೀರದ ಮೋಹಕ್ಕೆ, ಹೆಣ್ಣು ಹೊನ್ನು ಮಣ್ಣುಗಳ ವ್ಯಸನಕ್ಕೆ ಸಿಲುಕಿ ನಲುಗುತ್ತಿರುವ ಜನತೆಗೆ ಅವುಗಳ ನಶ್ವರತೆಯ ಅರಿವುಂಟುಮಾಡಲು ಯತ್ನಿಸಿದ್ದಾರೆ. ಕಷ್ಟಜೀವಿಗಳ ಮನಸ್ಸಿನ ಆಂದೋಲನ, ಅವರ ಆಸೆ ನಿರಾಶೆಗಳ ಮಟ್ಟಗಳನ್ನು ಗುರುತಿಸಿ ವಿಶ್ಲೇಷಿಸಿ ಆ ಮೂಲಕ ತಾವೂ ಅವರೊಂದಿಗೆ ಬೆರೆಯುತ್ತಾರೆ. ಸಂಸಾರದ ನಶ್ವರತೆಯನ್ನು ಹೇಳಿ, ಗೇರುಹಣ್ಣಿನ ಬೀಜದಂತೆ ಹೊರಗಿದ್ದು ಹರಿಯನ್ನು ನೆನೆಯಬೇಕೆಂದು ಸಮರ್ಥವಾದ ಉಪಮೆಯಿಂದ ಸಾರಿದ ದಾಸರು ಈಸಬೇಕು ಇದ್ದು ಜೈಸಬೇಕು ಎಂದೂ ಹೇಳಿ ಬದುಕಿನಲ್ಲಿ ಚೆನ್ನಾಗಿ ಬಾಳುವ ಒಂದು ನೆಚ್ಚನ್ನೂ ಭರವಸೆಯನ್ನೂ ತುಂಬುತ್ತಾರೆ. ಧರ್ಮವೇ ಜಯವೆಂಬ ದಿವ್ಯಮಂತ್ರ, ಸತ್ಯವೆಂಬುದೆ ಸ್ನಾನ, ತಾಳುವಿಕೆಗಿಂತ ತಪವು ಇಲ್ಲ ಇತ್ಯಾದಿ ಧರ್ಮಸೂಕ್ಷ್ಮಗಳನ್ನು ತಮ್ಮ ಬಾಳಿನಲ್ಲಿ ಸಾಧಿಸಿ, ಆ ಮೂಲಕ ಇತರರಿಗೆ ಆದರ್ಶಪ್ರಾಯರಾಗಿ ನಿಂತಿದ್ದಾರೆ. ಈ ಮೇಲೆ ವಿವೇಚಿಸಿದ ಎಲ್ಲ ಅಂಶಗಳೂ ಪ್ರತಿಯೊಬ್ಬ ಮಾನವನಿಗೂ ಅನ್ವಯಿಸತಕ್ಕಂತವು. ಇವು ಸಾರ್ವಕಾಲಿಕ ಹಾಗೂ ಸಾರ್ವಜನಿಕವಾದವು. ಮನುಷ್ಯ ಮನುಷ್ಯನಾಗಿ ಬಾಳತಕ್ಕಂಥ ಬಟ್ಟೆಯನ್ನು ತೋರುವಂಥವು. ಈ ದೃಷ್ಟಿಯಿಂದ ಮಾನವಧರ್ಮವನ್ನು ಕಟ್ಟುವ ಪ್ರಯತ್ನವನ್ನು ಹರಿದಾಸರಲ್ಲಿ ಗುರುತಿಸಬಹುದು. ಈ ಬೃಹದ್ಯೋಜನೆಯ ಸಾಧನೆಯನ್ನು ಧರ್ಮದ ಹೆಸರಿನಲ್ಲಿ ಕೀರ್ತನೆಗಳ ಮೂಲಕ ಕೈಕೊಂಡ ಧಾರ್ಮಿಕರು ಹರಿದಾಸರು. ಅವರ ಹಾಗೂ ಸಾಮಾನ್ಯ ಜನತೆಯ ಈ ಅನುಭವಗಳ ವಿನಿಮಯಕ್ಕೆ ಕೀರ್ತನೆಗಳು ಮಾಧ್ಯಮವಾಗಿ ನಿಂತು, ಕಾವ್ಯದ ಗೌರವವನ್ನು ಸಾಧಿಸಿಕೊಂಡಿವೆ.

ಕೀರ್ತನೆ ಎಂಬ ಈ ಪ್ರಕಾರಕ್ಕೆ ಹರಿದಾಸರೇ ಮೊದಲಿಗರಲ್ಲ. ಕೀರ್ತನೆಯ ಲಕ್ಷಣಕ್ಕೆ ಹೊಂದಿಕೊಳ್ಳುವಂಥ ರಚನೆಗಳನ್ನು ಹನ್ನೆರಡನೆಯ ಶತಮಾನದಲ್ಲಿ ಬಂದಂಥ ಶಿವದಾಸರಲ್ಲೆ ಕಾಣುತ್ತೇವೆ. ಆದರೆ ಅವುಗಳನ್ನು ಹಾಡುಗಳೆಂದೂ ಗೀತೆಗಳೆಂದೂ ಕರೆದಿದ್ದಾರೆ. ಸಾಮಾನ್ಯವಾಗಿ ಹಾಡು, ಗೀತೆಗಳಲ್ಲಿ ಅನುಪಲ್ಲವಿ ಕಂಡುಬರುವುದಿಲ್ಲ. ಅಂತೆಯೇ ಕೆಲವು ಕೀರ್ತನೆಗಳಿಗೂ ಅನುಪಲ್ಲವಿಯಿಲ್ಲದಿರುವುದುಂಟು. ಇತ್ತೀಚೆಗೆ ತ್ಯಾಗರಾಜರೇ ಮೊದಲಾದವರ ಸಂಗೀತ ಕೃತಿಗಳನ್ನೂ ಕೀರ್ತನೆಗಳೆಂದು ಕರೆಯುವುದು ವಾಡಿಕೆಯಾಗಿದೆ. ಆದರೆ ಕೃತಿಗೂ ಕೀರ್ತನೆಗೂ ಸಂಗೀತಶಾಸ್ತ್ರದ ಪ್ರಕಾರ ವ್ಯತ್ಯಾಸವಿದೆ. (ಟಿ.ಎನ್.ಎಸ್.)

**ಕೀರ್ತಿನಾಥ ಕುರ್ತಕೋಟಿ** : 1928-2003. ಕನ್ನಡದ ಅಗ್ರಗಣ್ಯ ವಿಮರ್ಶಕರು ಹಾಗೂ ವಿದ್ವಾಂಸರು. 1928 ಅಕ್ಟೋಬರ್ 13ರಂದು ಗದಗ ಸಮೀಪದ ಕುರ್ತಕೋಟಿಯ ವಿದ್ವತ್‌ಪರಂಪರೆಯ ಗೌಡರ ಮನೆತನದಲ್ಲಿ ಜನಿಸಿದರು. ತಂದೆ ಡಿ.ಕೆ.ಕುರ್ತಕೋಟಿ, ತಾಯಿ ಪದ್ಮಾವತಿಬಾಯಿ. ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣವನ್ನು ಗದಗಿನಲ್ಲಿ ಪಡೆದರು. ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಪದವಿ ಪಡೆದರು. ಕರ್ನಾಟಕ ವಿಶ್ವವಿದ್ಯಾಲಯದಿಂದ ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಪಡೆದರು (1958). ಗದಗಿನಲ್ಲಿ ಪ್ರೌಢಶಾಲಾ ಶಿಕ್ಷಕರಾಗಿ, ಬೆಳಗಾಂವಿ ಕಾಲೇಜಿನಲ್ಲಿ ಟ್ಯೂಟರ್ ಆಗಿ, ಪುಣೆಯ ಸರ್.ಪರಶುರಾಮಭಾವು ಕಾಲೇಜಿನಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿದರು (1958-67). ಅನಂತರ ಗುಜರಾತಿನ ಸರ್ದಾರ್ ಪಟೇಲ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿ (1967), ಪ್ರಾಧ್ಯಾಪಕರಾಗಿ, ವಿಭಾಗದ ಮುಖ್ಯಸ್ಥರಾಗಿ ಶೈಕ್ಷಣಿಕ ಸೇವೆ ಸಲ್ಲಿಸಿ ನಿವೃತ್ತಿಯ ಬಳಿಕ ಧಾರವಾಡದಲ್ಲಿ ನೆಲೆಸಿದರು.

ಧಾರವಾಡದ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಪರಿಸರ ಇವರ ಮೇಲೆ ಗಾಢವಾದ ಪ್ರಭಾವ ಬೀರಿತು. ದ.ರಾ.ಬೇಂದ್ರೆ, ಬೆಟಗೇರಿ ಕೃಷ್ಣಶರ್ಮ, ರಂ.ಶ್ರೀ.ಮುಗಳಿ, ವಿ.ಕೃ.ಗೋಕಾಕ ಮೊದಲಾದವರ ಸಂಪರ್ಕ ಹಾಗೂ ಸಹವಾಸಗಳು ಇವರಿಗೆ ದೊರೆತವು. ಇವರು ಕನ್ನಡ, ಇಂಗ್ಲಿಷ್, ಮರಾಠಿ, ಸಂಸ್ಕೃತ, ಗುಜರಾತಿ, ಹಿಂದಿ ಮೊದಲಾದ ಭಾರತೀಯ ಭಾಷಾ ಸಾಹಿತ್ಯದ ಆಳವಾದ ಅಧ್ಯಯನ ಹಾಗೂ ಅಪೂರ್ವವಾದ ತಮ್ಮ ಪಾಂಡಿತ್ಯ ಪ್ರತಿಭೆಗಳಿಂದ ಕನ್ನಡ ವಿಮರ್ಶೆಗೆ ಹೊಸ ಆಯಾಮ ನೀಡಿದರು. 'ಮನೋಹರ ಗ್ರಂಥಮಾಲೆ'ಯು ನಡೆದು ಬಂದ ದಾರಿಯ ಸಂಪುಟಗಳಿಗೆ ಬರೆದ 'ಯುಗ ಧರ್ಮ ಹಾಗೂ ಸಾಹಿತ್ಯ ದರ್ಶನ' (1962) ಹೊಸಗನ್ನಡ ವಿಮರ್ಶೆಯಲ್ಲಿ ಗಮನಾರ್ಹ ವಾದುದು. ಆಧುನಿಕ ಕನ್ನಡ ಸಾಹಿತ್ಯವನ್ನು ವಿಮರ್ಶೆಯ ನಿಕಷಕ್ಕೆ ಹಚ್ಚಿ ನೋಡುವ ಕುರ್ತಕೋಟಿಯವರ ಸಾಹಸ ಅದ್ವಿತೀಯವಾದದ್ದು. ಇವರು ಆಧುನಿಕ ಕನ್ನಡ ವಿಮರ್ಶೆಗೆ ಹೊಸಭಾಷೆ, ದೃಷ್ಟಿ ಧೋರಣೆಗಳನ್ನು ರೂಪಿಸಿದರು. ಮನೋಹರ ಗ್ರಂಥಮಾಲೆಯ ಸಾಹಿತ್ಯ ಸಲಹೆಗಾರರಾಗಿಯೂ ಇವರು ಅನೇಕ ಲೇಖಕರ ಪ್ರತಿಭೆಯನ್ನು ಗುರುತಿಸಿ ಅವರ ಕೃತಿಗಳು ಪ್ರಕಟವಾಗುವಂತೆ ನೋಡಿಕೊಂಡರು; ಅನೇಕ ಕೃತಿಗಳನ್ನು ವಿಮರ್ಶಿಸಿದರು. ಮನ್ವಂತರ ಎಂಬ ಸಾಹಿತ್ಯ ವಿಮರ್ಶಾ ಪತ್ರಿಕೆಯ ಸಂಪಾದಕರಾಗಿ ಸಾಹಿತ್ಯ ಚರ್ಚೆಗೆ ವೈಚಾರಿಕ ಆಯಾಮವನ್ನು ಒದಗಿಸಿದರು. ನವ್ಯಕಾವ್ಯ ಪ್ರಯೋಗ (1963), ಭೃಂಗದ ಬೆನ್ನೇರಿ, ವಿಮರ್ಶೆಯ ವಿನಯ: ನಾಟಕ (1985), ವಿಮರ್ಶೆಯ ವಿನಯ: ಕಾದಂಬರಿ (1982), ಸಂಸ್ಕೃತಿ ಸ್ಪಂದನ, ಪುಟಬಂಗಾರಕ್ಕೆ ಬರೆದ ಪ್ರಸ್ತಾವನೆ, ಶ್ರಾವಣ ಪ್ರತಿಭೆ, ಕುಮಾರವ್ಯಾಸ, ಉರಿಯನಾಲಗೆ (1993), ದ.ರಾ.ಬೇಂದ್ರೆ, ಬಾರೋ ಸಾಧನಕೇರಿಗೆ, ಬಯಲು ಆಲಯ (1992), ಅಸಂಗತನಾಟಕಗಳು, ಕನ್ನಡ ಸಾಹಿತ್ಯ ಸಂಗಾತಿ (1995), ನೂರುಮರ ನೂರು ಸ್ವರ (1998) ಪ್ರತ್ಯಭಿಜ್ಞಾನ (1999) - ಹೀಗೆ ವಿಮರ್ಶೆಯ ವಿವಿಧ ಸಂಪುಟಗಳಲ್ಲಿ ಇವರ ವಿಮರ್ಶನ ಪಾಂಡಿತ್ಯಪ್ರವಾಹ ಹರಿದಿದೆ.



ಇವರು ಅಂಕಣ ಸಾಹಿತ್ಯದಲ್ಲೂ ವೈಚಾರಿಕ ಪ್ರತಿಭೆಯನ್ನು ಪ್ರಕಟಪಡಿಸಿದ್ದಾರೆ. ಪ್ರಜಾವಾಣಿಯ 'ಸಮ್ಮುಖ' ಅಂಕಣ ಲೇಖನಗಳು ವಿಶಿಷ್ಟವಾಗಿವೆ. ಭಾರತೀಯ ಸಾಹಿತ್ಯ ಸಂಸ್ಕೃತಿಗೆ ಸಂಬಂಧಿಸಿದ ಇವರ ವಿಚಾರಧಾರೆ, ವ್ಯಾಖ್ಯಾನ ಪರಿಣತಿ ವಿಶೇಷವಾದದ್ದು. ಇವರು ಕುಮಾರವ್ಯಾಸ ಮತ್ತು ಬೇಂದ್ರೆ ಸಾಹಿತ್ಯದ ತಜ್ಞರೆಂದೂ ಖ್ಯಾತರಾಗಿದ್ದಾರೆ. ಕನ್ನಡ ಹಾಗೂ ಇಂಗ್ಲಿಷ್ ಭಾಷೆಯ ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದಂತೆ ಮೂರು ನೂರಕ್ಕೂ ಹೆಚ್ಚು ಲೇಖನಗಳನ್ನು ಪ್ರಕಟಿಸಿದ್ದಾರೆ. ಶ್ರೇಷ್ಠ ಅನುವಾದಕರೂ ಆಗಿರುವ ಇವರು ಶಂ.ಬಾ.ಜೋಶಿ ಅವರ ಮರಾಠೀ ಸಂಸ್ಕೃತಿ: ಕೆಲವು ಸಮಸ್ಯೆಗಳು ಎಂಬ ಕೃತಿಯನ್ನು ಅನುವಾದಿಸಿದ್ದಾರೆ. ಇದರ ಅನುವಾದಕ್ಕಾಗಿ ಕೇಂದ್ರಸಾಹಿತ್ಯ ಅಕಾಡೆಮಿಯ ಅನುವಾದ ಪ್ರಶಸ್ತಿ (1993) ಮತ್ತು ಉರಿಯನಾಲಗೆ ಅಂಕಣ ಲೇಖನ ಸಂಪುಟಕ್ಕೆ ಕೇಂದ್ರಸಾಹಿತ್ಯ ಅಕಾಡೆಮಿ ಪ್ರಶಸ್ತಿ (1995) ದೊರಕಿವೆ. ಆಮನಿ (1956), ಚಂದ್ರಗುಪ್ತ (1983) ಇವು ಇವರ ಸೃಜನಶೀಲ ಬರೆಹದ ಮಾದರಿಗಳು.

ಇವರು ಅಪರೂಪದ ವಾಗ್ಮಿಗಳೂ ಹೌದು. ಪ್ರಾಚೀನ ಮತ್ತು ಆಧುನಿಕ ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಸಮಾನವಾದ ಶ್ರದ್ಧೆಯುಳ್ಳವರೂ ಆಗಿದ್ದ ಇವರು ಸಮಕಾಲೀನ ಭಾರತೀಯ ವಿದ್ವಾಂಸ ವಿಮರ್ಶಕರಲ್ಲಿ ಪ್ರಮುಖರಾಗಿದ್ದರು. ನಿರಂತರವಾದ ಓದು, ಸಾಹಿತ್ಯಸಂವಾದ ನಡೆಸುವ ಮನೋಹರ ಗ್ರಂಥಮಾಲೆಯ ಅಟ್ಟದ ಗೆಳೆಯರ ಬಳಗದ ರಸಿಕ ಹರಟೆಗಾರರಾಗಿಯೂ ಹೆಸರಾಗಿದ್ದರು. 'ಕನ್ನಡದ ಕೀರ್ತಿ' (1989) ಅಭಿಮಾನಿಗಳು ಇವರಿಗೆ ಅರ್ಪಿಸಿದ ಅಭಿನಂದನಗ್ರಂಥ. ಇವರು 2003 ಆಗಸ್ಟ್ 31ರಂದು ಧಾರವಾಡದಲ್ಲಿ ನಿಧನಹೊಂದಿದರು. (ಜಿ.ಎಂ.ಎಚ್)

**ಕೀರ್ತಿವರ್ಮ[1]:** ಸು.1100. ಜೈನಕವಿ. ಗೋವೈದ್ಯ ಎಂಬ ವೈದ್ಯಗ್ರಂಥ'ದ ಕರ್ತೃ. ಈತನ ಕಾಲದ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಈತನ ಗ್ರಂಥದ ಒಂದು ಪದ್ಯದಿಂದ ಕವಿಯ ತಂದೆ ತ್ರೈಲೋಕ್ಯಮಲ್ಲ, ಅಣ್ಣ ವಿಕ್ರಮಾಂಕ, ಗುರು ದೇವಚಂದ್ರಮುನಿ, ಇಷ್ಟದೇವತೆ ಜಿನ ಎಂದು ತಿಳಿದುಬರುತ್ತದೆ. ಕವಿ ತನ್ನನ್ನು ಕೀರ್ತಿಚಂದ್ರ, ವೈರಿಕರಿಹರಿ, ಕಂದರ್ಪಮೂರ್ತಿ, ಸಮ್ಯಕ್ತ್ವರತ್ನಾಕರ, ಬುಧಭವ್ಯಬಾಂಧವ, ವೈದ್ಯರತ್ನ, ಪಾಲಭವಂದ್ಯ, ಕವಿತಾಬ್ಧಿಚಂದ್ರಮ, ಕೀರ್ತಿವಿಲಾಸ ಎಂಬ ಪ್ರಶಸ್ತಿಗಳಿಂದಲೂ ಬಿರುದುಗಳಿಂದಲೂ ವಿಶೇಷಿಸಿಕೊಂಡಿದ್ದಾನೆ. ಬ್ರಹ್ಮಶಿವ ತನ್ನ ಸಮಯ ಪರೀಕ್ಷೆಯಲ್ಲಿ ಈತನನ್ನು

> ಜನತಾನಂದಂ ಚಳುಕ್ಯಾಭರಣನವನಿಪಾಳೋತ್ತಮಂ ಸಾರ್ವಭೌಮಂ
> ಜನಕಂ ತ್ರೈಲೋಕ್ಯಮಲ್ಲಂ ಸಕಳವಸುಮತೀವಲ್ಲಭಂ ವಿಕ್ರಮಾಂಕಾ
> ವನಿಪಂ ತಾನಗ್ರಜಾತಂ ತ್ರಿಭುವನಪತಿ ದೇವಾಧಿದೇವಂ ಜಿನೇಂದ್ರಂ
> ತನಗಾಪ್ತಂ ಮತ್ತೆನಲ್ಕೇಂ ಪ್ರಿಯನೊ ಜಗತೀನಾಥರೊಳ್ ಕೀರ್ತಿವರ್ಮಂ
>
> ಅರಸುಮಗಂ ಗಡ ಕವಿ ಗಡ ಪಿರಿದೀವಂ ಗಡ ಬಚುಕ್ಕೆ ಜೈನಂಗಡೆನಲ್
> ಧರಣಿಪತಿ ಕೀರ್ತಿವರ್ಮಂ ನಿರತಂ ಪೊನ್ ಕಮ್ಮಿತಾದುದೆನಿಸಿದನಿಳೆಯೊಳ್

ಎಂದು ಹೊಗಳಿದ್ದಾನೆ. ಇದರಿಂದ ಕೀರ್ತಿವರ್ಮ ಚಾಳುಕ್ಯ ರಾಜನ ವಂಶದಲ್ಲಿ ಹುಟ್ಟಿದವನೆಂದು ವ್ಯಕ್ತವಾಗುತ್ತದೆ. ಆ ರಾಜನಲ್ಲಿ ತ್ರೈಲೋಕ್ಯಮಲ್ಲ 1042ರಿಂದ 1068ರವರೆಗೆ ಆಳಿದಂತೆಯೂ ಅವನ ಮಗನಾದ ವಿಕ್ರಮಾದಿತ್ಯ 1076ರಿಂದ 1127ರವರೆಗೆ ಆಳಿದಂತೆಯೂ ತಿಳಿಯುತ್ತದೆ. ಈ ವಿಕ್ರಮಾದಿತ್ಯನೇ ಕವಿಯ ಅಣ್ಣನಾಗಿದ್ದಿರಬೇಕು. ವಿಕ್ರಮಾದಿತ್ಯನಿಗೆ ಮೂರನೆಯ ಜಯಸಿಂಹ, ವಿಷ್ಣುವರ್ಧನ ವಿಜಯಾ ದಿತ್ಯರೆಂಬ ಇಬ್ಬರು ತಮ್ಮಂದಿರಿದ್ದರು. ಕೀರ್ತಿವರ್ಮ ಎಂಬುದು ವಿಷ್ಣುವರ್ಧನ ವಿಜಯಾದಿತ್ಯನ ಮತ್ತೊಂದು ಹೆಸರೆಂಬ ಅಭಿಪ್ರಾಯವೂ ಇದೆ.

ಗೋವೈದ್ಯ ಕನ್ನಡದಲ್ಲಿ ರಚಿತವಾದ ಮೊತ್ತಮೊದಲ ವೈದ್ಯಗ್ರಂಥ. ಸಿಕ್ಕಿರುವ ಓಲೆಗರಿ ಪ್ರತಿ ಅಸಮಗ್ರವೂ ಅಶುದ್ಧವೂ ಆಗಿದೆ.ಕೃತಿ ಚಂಪೂವಿನಲ್ಲಿದೆ. ಇದರಲ್ಲಿ ಗೋವುಗಳ ವ್ಯಾಧಿಗಳಿಗೆ ಔಷಧಗಳನ್ನೂ ಯಂತ್ರಗಳನ್ನೂ ಬರೆಹಾಕುವ ಕ್ರಮಗಳನ್ನೂ ವಿಸ್ತಾರವಾಗಿ ಹೇಳಿದೆ. ಈ ಗ್ರಂಥದ ಮೊದಲ ಒಂದು ಪದ್ಯ ಹೀಗಿದೆ:

> ಬಡವಂ ಕೊಬ್ಬಿದ ಬಂಜೆಯ
> ನುಡುಗದೆ ಹಯಮಾಡಿ ಕರೆವತೆರನಂ ಕುತ್ತಂ
> ಬಿಡುವಂತು ವೈರಿಕರಿಹರಿ
> ನುಡಿದಂ ಕಂದರ್ಪಮೂರ್ತಿ ಕೀರ್ತಿವಿಲಾಸಂ

(ಜಿ.ಪಿ.ಎ.)

**ಕೀರ್ತಿವರ್ಮ[2]:** ಬಾದಾಮಿಯ ಚಳುಕ್ಯ ವಂಶದ ದೊರೆ (566-96). ಒಂದನೆಯ ಪುಲಕೇಶಿಯ ಮಗ ಹಾಗೂ ಉತ್ತರಾಧಿಕಾರಿ. ಇವನಿಗೆ ಸತ್ಯಾಶ್ರಯ, ಉರುರಣ ಪರಾಕ್ರಮ ವಲ್ಲಭ, ಕೀರ್ತಿವಲ್ಲಭ ಎಂಬ ಬಿರುದುಗಳಿದ್ದುವು. ತನ್ನ ತಂದೆಯಿಂದ ಸ್ಥಾಪಿತವಾದ ಚಿಕ್ಕ ರಾಜ್ಯವನ್ನು ವಿಸ್ತರಿಸಿದ ಕೀರ್ತಿ ಈತನದು. ಕೀರ್ತಿವರ್ಮ ಪ್ರಾಯಶಃ ಕದಂಬ ವಂಶದ ಅಜವರ್ಮನನ್ನು ಸದೆಬಡಿದು ಬನವಾಸಿಯನ್ನು ಆಕ್ರಮಿಸಿಕೊಂಡಂತೆ ತಿಳಿಯುತ್ತದೆ. ನಳವಾಡಿಯಲ್ಲಿ (ಬಳ್ಳಾರಿ, ಕರ್ನೂಲು ಜಿಲ್ಲೆಗಳ ಪ್ರದೇಶ) ಆಳುತ್ತಿದ್ದ ನಳರನ್ನು ಸೋಲಿಸಿ ಆ ಪ್ರಾಂತ್ಯವನ್ನೂ ಕೊಂಕಣದಲ್ಲಿ ಆಳುತ್ತಿದ್ದ ಮೌರ್ಯರನ್ನೂ ಸೋಲಿಸಿ ಅದನ್ನೂ ತನ್ನ ರಾಜ್ಯಕ್ಕೆ ಸೇರಿಸಿಕೊಂಡು, ಕೊಂಕಣ ಮತ್ತು ಇನ್ನುಳಿದ ಪಶ್ಚಿಮ ಕರಾವಳಿಯ ಪ್ರದೇಶದ ಆಡಳಿತವನ್ನು ನಿರ್ವಹಿಸಲು ಬಪ್ಪೂರ ವಂಶದ ಧ್ರುವರಾಜ ಇಂದ್ರವರ್ಮನನ್ನು ನೇಮಿಸಿದ. ಇವನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಳುತ್ತಿದ್ದ ಆಳುಪರನ್ನು ಮತ್ತು ತಲಕಾಡಿನ ಗಂಗರನ್ನು ಸೋಲಿಸಿದನೆಂದೂ ಶಾಸನಗಳು ವಿವರಿಸುತ್ತವೆ.

ಮೊದಲು ಕದಂಬರ ಮಾಂಡಳಿಕರಾಗಿದ್ದ ಸೇಂದ್ರಕರು ಕೀರ್ತಿವರ್ಮನ ಕಾಲದಲ್ಲಿ ತಮ್ಮ ರಾಜನಿಷ್ಠೆಯನ್ನು ಚಳುಕ್ಯ ಸಮ್ರಾಟರಿಗೆ ಬದಲಾಯಿಸಿದರು. ಈ ಸೇಂದ್ರಕ ವಂಶದ ಶ್ರೀವಲ್ಲಭ ಸೇನಾನಂದನ ಸಹೋದರಿಯನ್ನು ಕೀರ್ತಿವರ್ಮ ವಿವಾಹವಾದ. ಬಾದಾಮಿಯ ಕೆಲವು ಲೋಕವಿಖ್ಯಾತ ಗುಹಾಂತರ ದೇವಾಲಯಗಳ ನಿರ್ಮಾಣ ಕಾರ್ಯಗಳು ಇವನ ಕಾಲದಲ್ಲಿ ನಡೆದವು. ಇವನು 596ರಲ್ಲಿ ನಿಧನನಾದ. ಇವನಿಗೆ ಇಮ್ಮಡಿ ಪುಲಕೇಶಿ, ವಿಷ್ಣುವರ್ಧನ, ಧರಾಶ್ರಯ ಜಯಸಿಂಹ, ಬದ್ಧವರಸ ಎಂಬ ನಾಲ್ವರು ಗಂಡುಮಕ್ಕಳಿದ್ದರು. (ಎಸ್.)

**ಕೀರ್ತಿವರ್ಮ³ :** ಬಾದಾಮಿಯ ಚಳುಕ್ಯ ವಂಶದ ಕೊನೆಯ ಅರಸ (745-57). ಇಮ್ಮಡಿ ವಿಕ್ರಮಾದಿತ್ಯನ ಮಗ ಹಾಗೂ ಉತ್ತರಾಧಿಕಾರಿ. ತ್ರೈಲೋಕ್ಯಮಹಾದೇವಿ ಈತನ ತಾಯಿ.

ಯುವರಾಜನಾಗಿದ್ದಾಗಲೇ ತಂದೆಯ ಅನುಮತಿ ಪಡೆದು ಪಲ್ಲವರ ಮೇಲೆ ದಾಳಿ ನಡೆಸಿದ ಈತ ಅಲ್ಲಿನ ಅರಸ ನಂದಿವರ್ಮನನ್ನು ಸೋಲಿಸಿ ಶತ್ರುವಿನಿಂದ ಕಸಿದು ತಂದಿದ್ದ ಆನೆಗಳನ್ನೂ ಕನಕಾಭರಣಗಳನ್ನೂ ತಂದೆಗೆ ಕಾಣಿಕೆಯಾಗಿ ಒಪ್ಪಿಸಿದ.

ಈತನ ಆಳಿಕೆಯ ಕಾಲದಲ್ಲಿ ನಡೆದ ಘಟನೆಗಳ ವಿವರಗಳು ವಿಶೇಷವಾಗಿ ತಿಳಿದಿಲ್ಲ. ಅನಂತರದ ಶಾಸನಗಳಲ್ಲಿ ಈತನ ಕಾಲದಲ್ಲಿ ಚಳುಕ್ಯ ರಾಜ್ಯಶ್ರೀ ಕಣ್ಮರೆಯಾದಳೆಂದು ಹೇಳಿದೆ. ಚಳುಕ್ಯರ ಅವನತಿಗೆ ಈತ ಎಷ್ಟರಮಟ್ಟಿಗೆ ಕಾರಣನಾದನೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಸತತವಾಗಿ ನಡೆದ ಚಳುಕ್ಯ ಹಾಗೂ ಪಲ್ಲವರ ನಡುವಣ ಕದನಗಳು ಎರಡು ಪಕ್ಷಗಳವರ ಶಕ್ತಿಯನ್ನೂ ಕುಗ್ಗಿಸಿತ್ತು. ಪರಿಸ್ಥಿತಿಯ ಪ್ರಯೋಜನ ಪಡೆದ ಹಲವರು ಸಾಮಂತರು ಸ್ವತಂತ್ರರಾಗಲು ಹವಣಿಸಿದರು. ಅಂಥವರಲ್ಲಿ ಆಳುಪರ ಇಮ್ಮಡಿ ಆಳುವರಸನೂ ಒಬ್ಬ. ಈತ ಪಲ್ಲವ ನಂದಿವರ್ಮನ ಬೆಂಬಲಿಗನಾಗಿ ಆತನ ಸೇನಾನಿಯಾದ ಉದಯಚಂದ್ರನ ದಂಡಯಾತ್ರೆಗಳಲ್ಲಿ ಪಾಲುಗೊಂಡ.

ದಂಗೆ ಎದ್ದವರಲ್ಲಿ ಇನ್ನೊಬ್ಬ, ರಾಷ್ಟ್ರಕೂಟ ಮನೆತನದ ದಂತಿದುರ್ಗ. ಈತ ಇಮ್ಮಡಿ ವಿಕ್ರಮಾದಿತ್ಯನ ಕಾಲದಲ್ಲಿ ಅರಬರನ್ನು ಹೊರದೂಡಲು ಶ್ರಮಿಸಿ ಅರಸನಿಂದ ಪೃಥ್ವೀವಲ್ಲಭ, ಖಡ್ಗಾವಲೋಕ ಎಂಬ ಬಿರುದುಗಳನ್ನು ಪಡೆದಿದ್ದ. ಕೀರ್ತಿವರ್ಮನೊಡನೆ ಪಲ್ಲವ ರಾಜಧಾನಿಯವರೆಗೂ ಹೋಗಿದ್ದ. ಆದರೆ ಕ್ರಮೇಣ ಈತ ಬಾದಾಮಿ ಚಳುಕ್ಯರ ಸಂಬಂಧಿಗಳಾದ ನವಸಾರಿಯ ಚಳುಕ್ಯರನ್ನು ಮೊದಲು ಸೋಲಿಸಿದ. ಆ ಬಳಿಕ ಕೀರ್ತಿವರ್ಮನನ್ನು ಎದುರಿಸಿದ. ಆಗ ನಡೆದ ಕದನದಲ್ಲಿ ಕೀರ್ತಿವರ್ಮ ಸೋತನಾದರೂ ದಂತಿದುರ್ಗನ ಅಕಾಲ ಮರಣದಿಂದಾಗಿ (756) ರಾಜ್ಯವನ್ನು ಕಳೆದುಕೊಳ್ಳಲಿಲ್ಲ. ಈ ಸೋಲಿನ ಅನಂತರವೂ ಕೀರ್ತಿವರ್ಮ ರಾಜ್ಯದ ಹಲವಾರು ಪ್ರದೇಶಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡಿದ್ದನೆನ್ನಲು ಆಧಾರಗಳಿವೆ. ಆದರೆ 757ರಲ್ಲಿ ದಂತಿದುರ್ಗನ ಚಿಕ್ಕಪ್ಪನಾದ ಒಂದನೆಯ ಕೃಷ್ಣ ಕೀರ್ತಿವರ್ಮನನ್ನು ಇನ್ನೊಮ್ಮೆ ಎದುರಿಸಿ ಸೋಲಿಸಿದ. ಈ ಸೋಲಿನೊಡನೆ ಚಳುಕ್ಯ ಸಾಮ್ರಾಜ್ಯ ಅಸ್ತಂಗತವಾಯಿತು. ಈ ಕದನದಲ್ಲಿ ಕೀರ್ತಿವರ್ಮ ಮಡಿದಿರಬಹುದು. ರಾಜ್ಯದ ಸೈನ್ಯದ ಬಲಹೀನತೆ, ಬಹಶಃ ರಾಜನ ಅದಕ್ಷತೆ ಈ ಸೋಲಿಗೆ ಪ್ರಮುಖ ಕಾರಣಗಳು. ಈತನಿಗಿಂತ ಹೆಚ್ಚು ಚತುರನೂ ಬಲಶಾಲಿಯೂ ಆದ ದಂತಿದುರ್ಗ ಕೊಟ್ಟ ಪೆಟ್ಟು ತೀವ್ರವಾಗಿತ್ತು. ಅಲ್ಲದೆ ನವಸಾರಿಯ ಚಳುಕ್ಯರು ಸಹ ಆ ವೇಳೆಗೆ ಇಲ್ಲದಿದ್ದುದರಿಂದ ಅವರಿಂದ ಲಭಿಸುತ್ತಿದ್ದ ಸಹಾಯಕ್ಕೆ ಚ್ಯುತಿ ಬಂದಿದ್ದೂ ಈ ಸೋಲಿಗೆ ಕಾರಣವಾಗಿರಬೇಕು. (ಬಿ.ಆರ್.ಜಿ.)

**ಕೀಲುಕುದುರೆ :** ಒಂದು ಬಗೆಯ ಜನಪದ ನೃತ್ಯ ಸಾಧನ. ಎಲ್ಲ ದ್ರಾವಿಡ ಭಾಷಾಪ್ರದೇಶಗಳಲ್ಲೂ ಕೀಲುಕುದುರೆಯ ಕುಣಿತ ಹಿಂದಿನಿಂದ ಜನಪ್ರಿಯವಾಗಿದೆ. ಜನಪದ ಕಥೆಗಳಲ್ಲಿ ಸಾಮಾನ್ಯವಾಗಿ ಬರುವ ಕೀಲು ಕುದುರೆಯ ಸನ್ನಿವೇಶವನ್ನು ಇಲ್ಲಿ ನೆನೆಯಬಹುದು. ರಾಜಕುಮಾರ ತಾನು ಪ್ರೀತಿಸಿದ ಪ್ರಿಯತಮೆಯನ್ನು ಸಂದರ್ಶಿಸುವ ಸನ್ನಿವೇಶಗಳಲ್ಲಿ ಇಲ್ಲವೆ ಆಕೆಯನ್ನು ಅಪಹರಿಸಿಕೊಂಡು ಹೋಗುವಲ್ಲಿ ಕೀಲುಕುದುರೆಯನ್ನು ಬಳಸುವ ಕಲ್ಪನೆ ರಮ್ಯವಾದುದು. ಏಳು ಉಪ್ಪರಿಗೆ ಅರಮನೆಯ ಮೇಲೆ ಸುರಕ್ಷಿತಳಾಗಿರುವ ರಾಜಕುಮಾರಿಯನ್ನು ಆಕೆಯ ಪ್ರಿಯತಮ ಅಂತರಿಕ್ಷ ಮಾರ್ಗವಾಗಿ ಗುಟ್ಟಾಗಿ ಆಕೆಯ ಸಾಮೀಪ್ಯವನ್ನು ಸೇರಲು ಕೀಲುಕುದುರೆಯನ್ನು ಉಪಯೋಗಿಸುತ್ತಾನೆ. ಇಂಥ ಅನೇಕ ಸನ್ನಿವೇಶಗಳಲ್ಲಿ ಈ ಕೀಲುಕುದುರೆ ಮಾಯಾ ಜಗತ್ತಿನ ಕಾಲ್ಪನಿಕ ಪಾತ್ರವಾಗಿ ಬಹಳ ಸುಂದರವಾಗಿ ಬೆಳೆದು ಬಂದಿದೆ. ಜನಪದ ಕಲಾರಂಗದಲ್ಲಿ ಕೀಲುಕುದುರೆಯನ್ನು ನೃತ್ಯಕ್ಕೆ ಅಳವಡಿಸಿಕೊಳ್ಳಲಾಗಿದೆ. ಕೀಲುಗಳಿಂದ ಜೋಡಿಸಲ್ಪಟ್ಟ ಈ ಕುದುರೆಯ ರಚನೆಯೂ ಒಂದು ಅಪೂರ್ವ ಜನಪದಕಲೆ. ಶಿಲ್ಪ ಮತ್ತು ಚಿತ್ರಗಳ ಸಾಮರಸ್ಯವನ್ನು ಇಲ್ಲಿ ಕಾಣಬಹುದು. ಕೀಲುಕುದುರೆಯ ಹೊಟ್ಟೆಯ ಭಾಗವನ್ನು, ಕಾಲುಗಳನ್ನು ಬಿಟ್ಟು ಉಳಿದ ದೇಹಭಾಗವನ್ನು, ಅಂದರೆ ಎದೆ ಮತ್ತು ಹಿಂಭಾಗವನ್ನು ಕುದುರೆಯ ಆಕಾರದಂತೆ ಬಿದುರಿನ ತೆಳುವಾದ ದಬ್ಬೆಗಳಿಂದ ಹೆಣೆದು ರಚಿಸಿಕೊಳ್ಳುತ್ತಾರೆ. ಮೇದರ ವಂಶಪಾರಂಪರ್ಯವಾದ ಕಲೆ ಇದು. ತಲೆ ಮತ್ತು ಕತ್ತನ್ನು ಮಾತ್ರ ಆಯಾ ಪ್ರದೇಶದ ಗ್ರಾಮಕಲಾವಿದರು ರಚಿಸಿಕೊಡುತ್ತಾರೆ. ಅಕ್ಕಸಾಲಿ, ರಂಗಾರೆಯವ ಇಲ್ಲವೆ ಚಿತ್ರಗಾರ ಕುದುರೆಯ ತಲೆಭಾಗವನ್ನು ರೂಪಿಸಿಕೊಡುತ್ತಾನೆ. ಟೊಳ್ಳಾದ ಕತ್ತನ್ನುಳ್ಳ ಕುದುರೆಯ ತಲೆಯನ್ನು ಕಾಗದದ ಹಿಟ್ಟಿನಿಂದ ರಚಿಸಲಾಗುತ್ತದೆ. ಅನಂತರ ಅದಕ್ಕೆ ಸ್ವಾಭಾವಿಕ ಬಣ್ಣ ಹಚ್ಚಲಾಗುತ್ತದೆ. ಕೀಲನ್ನು ಅಳವಡಿಸಿರುತ್ತಾರಾಗಿ ಕುಣಿವಾಗ ಕುದರೆಯ ನಾಲಗೆ ಮೇಲೆ ಕೆಳಗೆ ಆಡುತ್ತದೆ. ತಲೆಯನ್ನು ಬಿದುರಿನ ಮುಂಡಕ್ಕೆ ಸೇರಿಸಿ ಬಿಗಿಯುತ್ತಾರೆ.



ರಾಜ-ರಾಣಿ ನೃತ್ಯ

ಕೀಲುಕುದುರೆಯನ್ನು ನಡೆಸುವ ವ್ಯಕ್ತಿ ರಾಜನಂತೆ ವೇಷ ಭೂಷಣಗಳನ್ನು ಧರಿಸಿಕೊಂಡು ತನ್ನ ಎರಡು ಕಾಲುಗಳಿಗೂ ಒಂದೊಂದು ಪುಟ್ಟನೆಯ ಮರಗಾಲುಗಳನ್ನು ಕಟ್ಟಿಕೊಂಡಿರುತ್ತಾನೆ. ಸಾಮಾನ್ಯವಾಗಿ ಇವು ಎರಡು ಅಡಿ ಉದ್ದವೂ ಹಗುರವೂ ಆದ ಮರದ ರಚನೆ. ಪಾದಗಳು ಕೂರಲು ಅನುಗುಣವಾಗಿ ಇರುವ ಈ ಮರಗಾಲುಗಳ ಮೇಲುಭಾಗವನ್ನು ಕಾಲುಗಳಿಗೆ ನುಣುಪಾದ ನೂಲಿನಿಂದ ಬಿಗಿದಿರುತ್ತಾರೆ. ಸವಾರ ಕುದುರೆಯ ಹೊಟ್ಟೆಯಲ್ಲಿರುವ ರಂಧ್ರದಿಂದ ತೂರಿ ನಿಲ್ಲುತ್ತಾನೆ. ಕುದುರೆಗೆ ಹೊದಿಸುವ ಗೌನು ಬಣ್ಣ ಬಣ್ಣದ್ದಾಗಿದ್ದು ಅದರ ದೇಹವನ್ನೂ ಸವಾರನ ಮರಗಾಲುಗಳನ್ನೂ ಮುಚ್ಚುವಷ್ಟು ಉದ್ದನಾಗಿರುತ್ತದೆ. ಹೀಗೆ ಕುದರೆಯ ಬೆನ್ನಿನ ನಡುವೆ ಸೇರಿ ನಿಂತಿರುವ ಸವಾರ ತನ್ನ ಎರಡು ಹೆಗಲುಗಳಿಗೆ ಆ ದಬ್ಬೆಯ ಕುದುರೆಯ ದೇಹವನ್ನು ಬಿಗಿದುಕೊಳ್ಳುತ್ತಾನೆ. ನೃತ್ಯಮಾಡುವಾಗ ಕುದುರೆಯ ಲಗಾಮುಗಳನ್ನು ಕೈಲಿ ಹಿಡಿದು ಅದರ ತಲೆಬಾಲಗಳನ್ನು ಹಿಂದು ಮುಂದು ಮಾಡಿ ಸಹಜಭಂಗಿಯಲ್ಲಿ ನೃತ್ಯ ಮಾಡುತ್ತಾನೆ. ಸವಾರನ ಕಾಲಿನ ಮತ್ತು ಕೈಗಳ ಒನಪು ವೈಯಾರಗಳಿಂದ, ಚಾಕಚಕ್ಯತೆಗಳಿಂದ ಆತ ಕುಳಿತಿರುವುದು ಜೀವಂತ ಕುದುರೆ ಎಂಬಂತೆ ಭಾಸವಾಗುತ್ತದೆ.

ಕೀಲುಕುದುರೆಯ ನೃತ್ಯ ಕರ್ನಾಟಕ, ಆಂಧ್ರ, ತಮಿಳುನಾಡು ಮತ್ತು ಕೇರಳ ಮುಂತಾದ ನೆರೆಪ್ರಾಂತ್ಯಗಳಲ್ಲಿ ಉಳಿದು ಬಂದಿದೆ. ದೇವರ ಉತ್ಸವಗಳಲ್ಲಿ, ಇಲ್ಲವೆ ಮದುವೆಯ ಮೆರವಣಿಗೆಗಳಲ್ಲಿ ಅಥವಾ ವಿಶೇಷ

ಉತ್ಸವಗಳಲ್ಲಿ ಈ ನೃತ್ಯದವರನ್ನು ಕರೆಸುವ ರೂಢಿ ಇದೆ. ನೃತ್ಯದಲ್ಲಿ ಸಾಮಾನ್ಯವಾಗಿ ರಾಜ ರಾಣಿಯರಿಗೆಂದು ಎರಡು ಕುದುರೆಗಳಿರುತ್ತವೆ. ವಾದ್ಯಮೇಳದೊಂದಿಗೆ ನಡೆಯುವ ಕೀಲುಕುದುರೆ ನೃತ್ಯ ಬಹು ಆಕರ್ಷಕವಾಗಿರುತ್ತದೆ. *

**ಕುಂಡಲಗಿರಿಯಾಚಾರ್ಯ :** ಸು.1865-1904. ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಅಪ್ರತಿಮ ಪಂಡಿತರು. ಬ್ರಹ್ಮವೆಂಕಟಾಚಾರ್ಯರ ಮಕ್ಕಳು. ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ಕಳಲೆ ಗ್ರಾಮದಲ್ಲಿ ಜನಿಸಿದರು. ಇವರ ವಿದ್ಯಾಭ್ಯಾಸ ತಿರುಮಕೂಡಲು ಮತ್ತು ಮೈಸೂರಿನಲ್ಲಿ ನಡೆಯಿತು.

ಶ್ರವಣಬೆಳಗೊಳದ ಸಂಸ್ಕೃತ ಪಾಠಶಾಲೆಯಲ್ಲಿ, ಅನಂತರ ಬೆಂಗಳೂರು ನಗರದ ಸಂಸ್ಕೃತ ಪಾಠಶಾಲೆ ಮತ್ತು ಮೈಸೂರಿನ ನಾರ್ಮಲ್ ಸ್ಕೂಲಿನಲ್ಲಿ ಒಟ್ಟು ಹದಿನೇಳು ವರ್ಷಗಳ ಕಾಲ ಅಧ್ಯಾಪಕರಾಗಿದ್ದರು. ತಮ್ಮ ನಲವತ್ತನೆಯ ವಯಸ್ಸಿನಲ್ಲಿ ನಿಧನರಾದರು. ವಿದ್ಯಾದಾಯಿನಿ, ಕರ್ನಾಟಕ ಗ್ರಂಥಮಾಲೆ ಮೊದಲಾದ ಮಾಸಿಕ ಪತ್ರಿಕೆಗಳಿಗೆ ಇವರ ಸೇವೆ ಸಂದಿತ್ತು. ಭಟ್ಟಾಕಳಂಕನ ಕರ್ನಾಟಕ ಶಬ್ದಾನುಶಾಸನಕ್ಕೆ ಬರೆದ ಕರ್ನಾಟಕ ಶಬ್ದಾನುಶಾಸನ ಪ್ರಕಾಶಿಕೆ ಎಂಬ ಕನ್ನಡ ವ್ಯಾಖ್ಯಾನ ಇವರ ಕೃತಿಗಳಲ್ಲಿ ಮುಖ್ಯವಾದುದು. ಇದರಲ್ಲಿ ಇವರ ಅಗಾಧ ಪರಿಶ್ರಮ ಮತ್ತು ಅದ್ಭುತ ಪರಿಣತಿ ಕಂಡುಬರುತ್ತದೆ. ಹರ್ಷಚರಿತ್ರೆ, ಧರ್ಮಶರ್ಮಾಭ್ಯುದಯ, ಜೀವಂಧರ ಚರಿತ್ರೆ -ಇವು ಇವರ ಇತರ ಸಂಪಾದಿತ ಕೃತಿಗಳು. ಇವರ ಅನುಪಮ ಪಾಂಡಿತ್ಯಕ್ಕೆ ಮೆಚ್ಚಿ ಮೈಸೂರು, ಬರೋಡ ಮತ್ತು ತಿರುವಾಂಕೂರಿನ ಮಹಾರಾಜರು ಇವರನ್ನು ಸನ್ಮಾನಿಸಿದ್ದರು. (ಡಿ.ಪಿ.ಬಿ.)

**ಕುಂತಳ :** ದಕ್ಷಿಣ ಭಾರತದ ಪ್ರಾಚೀನ ಭೂಭಾಗಗಳಲ್ಲಿ ಗಣ್ಯವಾಗಿದ್ದ ಒಂದು ಪ್ರದೇಶ. ಈ ಶಬ್ದದ ಮೂಲ ನಿರ್ದಿಷ್ಟವಾಗಿ ತಿಳಿದಿಲ್ಲ. ಕರ್ನಾಟಕ ಎಂಬ ಶಬ್ದಕ್ಕೆ ದ್ರಾವಿಡ ಮೂಲದ ನಿಷ್ಪತ್ತಿಯನ್ನು ಹೇಳುವ ಹಾಗೆಯೇ ಕುಂತಳ (ಲ) ಶಬ್ದಕ್ಕೆ ಕೂಡ ಅಂಥ ಮೂಲವನ್ನು ಊಹಿಸಿ, ಅದೊಂದು ಸಂಸ್ಕೃತೀಕರಣಗೊಂಡ ರೂಪವಾಗಿರಬಹುದು ಎಂದು ಭಾವಿಸುವಂತೆ ತೋರುತ್ತದೆ. ಕೆಲವು ಪ್ರಾಚೀನ ಕನ್ನಡ ಶಾಸನಗಳಲ್ಲಿಯೂ ಗ್ರಂಥಗಳಲ್ಲಿಯೂ ಅಲ್ಲದೆ ಮತ್ಸ್ಯ, ಮಾರ್ಕಂಡೇಯ, ಬ್ರಹ್ಮಾಂಡ, ಪದ್ಮ ಈ ಕೆಲವು ಪುರಾಣಗಳಲ್ಲಿಯೂ ಇದರ ಉಲ್ಲೇಖ ಕಂಡುಬಂದಿದೆ. 930ರ ಕಳಸ ಶಾಸನದಲ್ಲಿ ಕುಂತಳ ಧರಾತಳಂ, ತದ್ವಿಷಯಕ್ಕೆ ಎರಡಱನೂ ಱುಲಲಾಮಂ ಎಂದಿದೆ. ಈ ಹೆಸರು ಮತ್ತು ಪ್ರಾದೇಶಿಕ ಪ್ರಾಮುಖ್ಯ ಇತರ ಕೆಲವು ಶಾಸನಗಳಲ್ಲಿ ಕಂಡುಬಂದಿದೆ. ಅನುಪಮರವನಿಪರನ್ಯಾವನಿಪ ಶ್ರೀ ಕುಂತಳಕ್ಕೆ ಕೈನೀಡಿ ನಿಜಾವನಿಗೆ ತೆಗೆಯಲ್ಲದೀಯಾವನಿ ಕುಂತಳ ವಿಷಯುವೆನಿಸಿ ಪೆಸರ್ವೆತ್ತೆಸೆಗುಂ (ಕಾಲ 1058), ಜಳಧಿ ವ್ಯಾವೇಷ್ಟ ತೋರ್ವಿಮಹಿಳೆಗೆ ವಿಳಸಲ್ಲೋಳಭಾಳ ಸ್ಥಳೀ ಕುಂತಳ ದೇಶಂ ತಾನೆನಿಪ್ಪಂತಿರಲೆಸೆವ ಲಸತ್ಕುಂತಳಕ್ಷೋಣಿಗೆ (1116), ವರರತ್ನಾಕರದಿಂದಳಂಕರಿಸಿ ಮೆಯ್ವೆರ್ಚಿರ್ದ ಭೂದೇವಿಗಾದರದಿಂ ಕುಂತಳದಂತೆ ಕುಂತಳ ಸುದೇಶಂ ತೋರ್ಕುಂ (1145), ಭರತಮಹೀಕಾನ್ತೆಯ ಕುಂತಳದಂತೆಸೆವುತಿರ್ದ ಕುಂತಳದೇಶದ (1176), ದೇಸಂಗಳೊಳಗೆ ಕುಂತಳ ದೇಶಮೆ ಮಿಗಿಲ್ (1079)- ಎಂದು ಮುಂತಾದ ವರ್ಣನ ಭಾಗಗಳಲ್ಲಿ ಸೇರಿಕೊಂಡು ಬಂದಿದೆ.

ಮತ್ಸ್ಯಾಃ ಕಿರಾತಾಃ ಕುಲ್ಯಾಶ್ಚ ಕುಂತಲಾಃ ಕಾಶಿ ಕೋಸಲಾಃ ಎಂದು ಮತ್ಸ್ಯ ಪುರಾಣದಲ್ಲಿಯೂ ಮತ್ಸ್ಯಾಃ ಕುಶಲ್ಯಾಃ ಸೌಶಲ್ಯಾಃ ಕುಂತಲಾಃ ಕಾಶಿಕೋಶಲಾಃ ಎಂದು ಬ್ರಹ್ಮಾಂಡ ಪುರಾಣದಲ್ಲಿಯೂ ಝಿಲ್ಲಿಕಾಃ ಕುನ್ತಲಾಶ್ಚೈವ ಸೌಹೃದಾ ನಲಕಾನನಾಃ ಎಂದು ಪದ್ಮಪುರಾಣದಲ್ಲಿಯೂ ಮತ್ಸ್ಯಾಶ್ಚ ಕೂಟಾಃ ಕುಲ್ಯಾಶ್ಚ ಕುಂತಲಾಃ ಕಾಶಿ ಕೋಸಲಾಃ ಮತ್ತು ನೈಷಿಕಾಃ ಕುನ್ತಲಾ ಆನ್ಧ್ರಾಉದ್ಭಿದಾ ವನದಾರಕಾಃ ಎಂದು ಮಾರ್ಕಂಡೇಯ ಪುರಾಣದಲ್ಲಿಯೂ ಕುಂತಳ ಪ್ರದೇಶವನ್ನು ಉಲ್ಲೇಖಿಸಿದೆ. ಇತರ ಕೆಲವು ಪುರಾಣಗಳಲ್ಲಿಯೂ ಈ ಬಗೆಯ ಉಲ್ಲೇಖವಿರಬಹುದೆಂದು ತೋರುತ್ತದೆ.

ಕುಂತಳ, ಕರ್ನಾಟ, ವನವಾಸಿ, ಮಾಹಿಷಕ (ಮಹಿಷ ವಿಷಯ)ಇತ್ಯಾದಿ ಶಬ್ದಗಳು ಮೂಲತಃ ಬೇರೆ ಬೇರೆ ಭೌಗೋಳಿಕ ಘಟಕಗಳಾಗಿದ್ದೂ ಒಂದೊಂದೂ ಇನ್ನೊಂದರ ಮಗ್ಗುಲಿಗೆ ಸೇರಿಕೊಂಡಿದ್ದಿರುವುದೂ ಒಂದು ಇನ್ನೊಂದರ ಭಾಗವಾಗಿದ್ದಿರುವುದೂ ಸಂಭವನೀಯವಾಗಿದೆ. ಚಾಳುಕ್ಯ ಮತ್ತು ರಾಷ್ಟ್ರಕೂಟರ ಪ್ರಾಬಲ್ಯದ ಕಾಲದಲ್ಲಿ ಕರ್ನಾಟ ಮತ್ತು ಕುಂತಳಗಳು ಪಶ್ಚಿಮ ಮತ್ತು ದಕ್ಷಿಣ ದಖನ್ನಿನ ಬಹುಭಾಗಕ್ಕೆ ವ್ಯಾಪಿಸಿದ್ದುವು. ಕಲಿಂಗತ್ತುಪ್ಪರಣಿಯಲ್ಲಿ ಚಾಳುಕ್ಯರು ಕುಂತಲರ್ ಎಂದು ವರ್ಣಿಸಲ್ಪಟ್ಟಿದ್ದಾರೆ. ಬಾದಾಮಿ ಚಳುಕ್ಯರ ಕಾಲದಲ್ಲಿ ಕನ್ನಡ ಸೀಮೆ ಕರ್ಣಾಟ, ಕುಂತಲ, ಲಾಟ, ಕರಹಾಟ, ವನವಾಸ ಎಂದು ಬೇರೆ ಬೇರೆ ವಿಷಯಗಳಾಗಿ ವಿಭಜನೆಗೊಂಡಿದ್ದ ಪ್ರದೇಶ ಕರ್ಣಾಟ ಎಂಬ ಒಂದು ಹೆಸರಿನ ಕೆಳಗೆ ಬಂದುದೆಂದೂ ಇದಕ್ಕೆ ಇಮ್ಮಡಿ ಪುಲಕೇಶಿಯ ಸಾಹಸೋದ್ಯಮಗಳು ಬಹುಮಟ್ಟಿಗೆ ಕಾರಣವೆಂದೂ ತಿಳಿಯುತ್ತದೆ. ಇಮ್ಮಡಿ ಹರಿಹರನ 1385ರ ಶಾಸನವೊಂದರಲ್ಲಿ ವಿಜಯನಗರ ಕರ್ನಾಟಕ ಸೀಮೆಯ ಕುಂತಳ ವಿಷಯಕ್ಕೆ ಸೇರಿದ್ದೆಂದು ಹೇಳಿದೆ.

ಕುಂತಳ - ಕರ್ನಾಟಕಗಳನ್ನು ಪರ್ಯಾಯಪದಗಳಾಗಿ ಬಳಸಿರುವುದು ಬಿಲ್ಹಣನ ವಿಕ್ರಮಾಂಕದೇವಚರಿತದಲ್ಲಿ ಕಾಣುತ್ತದೆ. ಇಲ್ಲಿ 6ನೆಯ ವಿಕ್ರಮಾದಿತ್ಯ ಕುಂತಲೇಂದು ಎಂದೂ ಕರ್ಣಾಟೇಂದು ಎಂದೂ ಕರೆಯಲ್ಪಟ್ಟಿದ್ದಾನೆ. ವೈಜಯಂತೀಪುರ (ಬನವಾಸಿ) ಕರ್ನಾಟ ದೇಶದ ತಿಲಕ ಎಂಬುದಾಗಿ ಶಾಂತಿವರ್ಮನ ಬೀರೂರು ಶಾಸನದಲ್ಲಿ ಹೇಳಿದೆ. ಆದ್ದರಿಂದ ಕುಂತಳ ಎಂಬ ಹೆಸರು ಸೂಚಿಸುತ್ತಿದ್ದ ಅಥವಾ ಕುಂತಳ ಒಂದು ಭಾಗವಾಗಿದ್ದ ನಾಡನ್ನು ಸೂಚಿಸುತ್ತಿದ್ದ ಪ್ರದೇಶವೇ ಕರ್ನಾಟ ಎಂಬುದಾಗಿ ಅಭಿಪ್ರಾಯವಿದೆ. ವಿವೇಕಚಿಂತಾಮಣಿ, ಶಿವತತ್ತ್ವರತ್ನಾಕರ, ಚೆನ್ನಬಸವಪುರಾಣ ಇತ್ಯಾದಿಗಳಲ್ಲಿರುವ ಸಾಂಪ್ರದಾಯಿಕ ದೇಶವಾಚಕ ಪಟ್ಟಿಯಲ್ಲಿ ಒಮ್ಮೊಮ್ಮೆ ಅವನ್ನು ಬೇರೆಯಾಗಿ ಹೇಳಿರುವುದೂ ಉಂಟು.

ಒಟ್ಟಿನಲ್ಲಿ ಹೇಳುವುದಾದರೆ, ಕುಂತಳ ದೇಶದ ಭೌಗೋಳಿಕ ವ್ಯಾಪ್ತಿ ಮತ್ತು ಅದರ ಗಡಿರೇಖೆಗಳು ಅಷ್ಟೇನೂ ಸ್ಪಷ್ಟವಿರಲಿಲ್ಲ. ಅಲ್ಲದೆ ಕಾಲಕಾಲಕ್ಕೆ ಅದರ ವ್ಯಾಪ್ತಿಯನ್ನು ಕುರಿತ ಕಲ್ಪನೆಯೂ ಬದಲಾಗುತ್ತಿತ್ತು ಎನಿಸುತ್ತದೆ. ಸಾತವಾಹನ ಅರಸರಲ್ಲಿ ಒಬ್ಬ ಕುಂತಲ ಸಾತಕರ್ಣಿ ಎಂದು ಪ್ರಸಿದ್ಧವಾಗಿದ್ದ. ಗೋದಾವರಿ ದಡದ ಪ್ರತಿಷ್ಠಾನ ಕುಂತಳದ ರಾಜಧಾನಿ ಎನಿಸಿತ್ತಂತೆ. ಕುಂತಲ ಗೋದಾವರಿ ನದಿ ಹರಿಯುವ ಸಹ್ಯಪರ್ವತದ ಉತ್ತರ ದಿಗ್ಭಾಗದಲ್ಲಿರುವ ಪ್ರದೇಶ ಎಂದು ಪುರಾಣಗಳಲ್ಲಿ, ಅದರಲ್ಲೂ ಮತ್ಸ್ಯ ಮತ್ತು ಬ್ರಹ್ಮಾಂಡ ಪುರಾಣಗಳಲ್ಲಿ ಹೇಳಿದೆ. 6ನೆಯ ವಿಕ್ರಮಾದಿತ್ಯನ ನೀಲಗುಂದ ತಾಮ್ರ ಶಾಸನದಲ್ಲಿ ಉಲ್ಲೇಖಗೊಂಡಿರುವ ವಿಖ್ಯಾತ ಕೃಷ್ಣವರ್ಣ್ಣೇತ್ರೈಲಸ್ನೇಹೋಪಲಬ್ಧ ಸಕಲತ್ವೇ ಕುಂತಲವಿಷಯೇ ನಿತಹಾಂ ವಿರಜತೇ ಮಲ್ಲಿಕಾಮೋದಃ ಎಂಬ ಶ್ಲೋಕವಾದರೋ ವೆರ್ಣಾ (ವರ್ಣಾ) ನದಿ ಸಂಗಮಿಸಿದ, ಕೃಷ್ಣಾ ನದಿಗಾಗಿ ಪ್ರಸಿದ್ಧವಾಗಿರುವ ಕುಂತಲ ವಿಷಯ ಎಂದು ತಿಳಿಸುತ್ತದೆ. ಕೆಲವು ಶಾಸನಗಳ ಪ್ರಕಾರ ಕುಂತಳ, ಬನವಾಸಿಯ ಸುತ್ತಿನಲ್ಲಿರುವ ಜಿಲ್ಲೆ. ಬೃಹತ್ಸಂಹಿತೆ ಮೊದಲಾದ ಕಡೆಗಳಲ್ಲಿ ಕುಂತಳ, ಬನವಾಸಿಗಳನ್ನು ಬೇರ್ಪಡಿಸಿ ಹೇಳಿರುವುದೂ ಉಂಟು. 10-14 ನೆಯ ಶತಮಾನಗಳ ಶಾಸನಗಳ ಆಧಾರದಿಂದ ಅಂದಿನ ಕುಂತಳ ದೇಶ ಕರ್ನಾಟಕದ ಶಿವಮೊಗ್ಗ, ಚಿತ್ರದುರ್ಗ, ಬಳ್ಳಾರಿ, ರಾಯಚೂರು, ಗುಲ್ಬರ್ಗ, ಧಾರವಾಡ, ಬೆಳಗಾಂವಿ ಮತ್ತು ಮಹಾರಾಷ್ಟ್ರದ ಕೊಲ್ಹಾಪುರ, ಸಾಂಗಲಿ, ಸೊಲ್ಲಾಪುರ, ಉಸ್ಮಾನಾಬಾದ್ ಈ ಜಿಲ್ಲೆಗಳ ಪ್ರದೇಶಗಳನ್ನು ಒಳಗೊಂಡಿತ್ತು ಎಂದು ಹೇಳಬಹುದು. (ಟಿ.ವಿ.ವಿ.)

**ಕುಂದಕುಂದಾಚಾರ್ಯ :** ದಕ್ಷಿಣ ಭಾರತದಲ್ಲಿ ಜೈನಮತ ಪ್ರಸಾರ ಕಾರ್ಯದಲ್ಲಿ ಮಹತ್ವದ ಪಾತ್ರ ವಹಿಸಿದ ಪ್ರಾಚೀನ ಹಾಗೂ ಪ್ರಸಿದ್ಧ ದಿಗಂಬರ ಜೈನ ಆಚಾರ್ಯ. ಇವರ ಕಾಲ ಹಾಗೂ ಮನೆತನಗಳ ವಿಚಾರವಾಗಿ ಭಿನ್ನಾಭಿಪ್ರಾಯಗಳಿವೆ. ಕ್ರಿ.ಪೂ.8ನೆಯ ಶತಮಾನದಿಂದ ಕ್ರಿ.ಶ.5ನೆಯ ಶತಮಾನದವರೆಗೂ ಇವರ ಕಾಲದ ಗಡಿಯಿದ್ದು, ಇತ್ತೀಚೆಗೆ ಅನೇಕ ಪ್ರಮಾಣಗಳನ್ನು ಆಧರಿಸಿ ಕ್ರಿಶ.1ನೆಯ ಶತಮಾನವೆಂದು ಸದ್ಯದಲ್ಲಿ ನಿರ್ಧರಿಸಲಾಗಿದ್ದು ಇದೇ ಹೆಚ್ಚು ಮಾನ್ಯತೆ ಪಡೆದ ಅಭಿಪ್ರಾಯವಾಗಿದೆ. ಪುಣ್ಯಾಶ್ರವ ಕಥೆಯ ಆಧಾರದ ಮೇಲೆ ಇವರ ತಂದೆ ಕರ್ಣಮುಂಡ, ತಾಯಿ ಶ್ರೀಮತಿ ಎಂದೂ ತಂದೆ ಕುಂದಶ್ರೇಷ್ಠ, ತಾಯಿ ಕುಂದಲತಾ

ಎಂದೂ ಎರಡು ಅಭಿಪ್ರಾಯಗಳಿವೆ. ಇವರ ಗುರು ಜಿನಚಂದ್ರರೆಂದೂ ಕುಮಾರನಂದಿಸಿದ್ಧಾಂತದೇವ ಎಂದೂ ವಿಭಿನ್ನ ಅಭಿಪ್ರಾಯಗಳಿವೆ. ತಾವು ಭದ್ರಬಾಹುವಿನ ಶಿಷ್ಯರೆಂದು ಬೋಧಪಾಹುಡದ ಕೊನೆಯಲ್ಲಿ ಕುಂದಕುಂದಾಚಾರ್ಯರೇ ಹೇಳಿಕೊಂಡಿದ್ದಾರೆ. ಭದ್ರಬಾಹು ನೇರವಾಗಿ ಇವರ ಗುರುವಾಗಿರದಿದ್ದರೂ ಪರಂಪರೆಯಿಂದ ಗುರುವಾಗಿರಬಹುದು ಎಂದು ಅಭಿಪ್ರಾಯಪಡಲಾಗಿದೆ.

ಕುಂದಕುಂದಾಚಾರ್ಯರ ಪೂರ್ವಾಶ್ರಮದ ಹೆಸರು ಪದ್ಮನಂದಿ. ಇವರಿಗೆ ಏಲಾಚಾರ್ಯ, ಗೃಧ್ರಪಿಚ್ಛ, ವಕ್ರಗ್ರೀವ ಎಂಬ ಹೆಸರುಗಳೂ ಇವೆ. ಶಿಲಾಲೇಖಗಳಲ್ಲಿ ಇವರ ಹೆಸರು ಕೊಂಡಕುಂದ ಎಂದಿದೆ. ಆಂಧ್ರದ ಅನಂತಪುರ ಜಿಲ್ಲೆಯ ಗುತ್ತಿ ತಾಲ್ಲೂಕಿನ ಕೊನಕೊಂಡ್ಲ ಇವರ ಮೂಲಸ್ಥಳ. ಈ ಸ್ಥಳ ಮೊದಲಿಗೆ ಕೊಂಡ ಕುಂದ ಅಥವಾ ಕೊಂಡಕುಂದ ಎಂಬ ಅಚ್ಚಗನ್ನಡ ಹೆಸರಿನಿಂದ ಪ್ರಸಿದ್ಧವಾಗಿತ್ತು.

ಕುಂದಕುಂದಾಚಾರ್ಯರ ಹೆಸರಿನಲ್ಲಿ 84 ಗ್ರಂಥಗಳು ಪ್ರಸಿದ್ಧವಿವೆ. ಇವುಗಳ ಭಾಷೆ ಪ್ರಾಕೃತ. ಷಟ್ ಖಂಡಾಗಮ ಟೀಕೆ, ಮೂಲಾಚಾರ, ಭಕ್ತಿಗಳಿಗೆ ಸಂಬಂಧಪಟ್ಟ ಹತ್ತು ಗ್ರಂಥಗಳು (ಇವುಗಳಲ್ಲಿ ತೀರ್ಥಂಕರ ಭಕ್ತಿ ದಿಗಂಬರ ಶ್ವೇತಾಂಬರ ಸಂಪ್ರದಾಯಗಳಲ್ಲಿ ಕಾಣುತ್ತದೆ, ದಂಸನಪಾಹುಡ (ಸಮ್ಯಕ್ ದರ್ಶನ), ಚಾರಿತ್ರಪಾಹುಡ (ಸಚ್ಚಾರಿತ್ರ್ಯ), ಬೋಧಪಾಹುಡ, ಭಾವಪಾಹುಡ (ಭಾವಶುದ್ಧಿ), ಮೇಖ್ಖಪಾಹುಡ (ಮೋಕ್ಷ), ಲಿಂಗಪಾಹುಡ (ಭಾವಲಿಂಗ), ಶೀಲಪಾಹುಡ -ಈ ಎಂಟು ಪಾಹುಡಗಳು, ಸಂನ್ಯಾಸಿಗಳ ಮತ್ತು ಗೃಹಸ್ಥರ ಜೀವನ ನಿಯಮಗಳನ್ನು ಕುರಿತು ಬರೆದಿರುವ ರಯಣಸಾರ, ಕರ್ಮವನ್ನು ತಡೆಯುವುದಕ್ಕೆ ಅಗತ್ಯವಾದ ಹನ್ನೆರಡು ಅನುಪ್ರೇಕ್ಷೆಗಳನ್ನು ಕುರಿತ ಬಾರಸ ಅಣುವೇಖ್ಖಾ (ಇದರಲ್ಲಿ 91 ಗಾಥಾಗಳಿವೆ), ತ್ರಿರತ್ನಗಳನ್ನು ಕುರಿತ ನಿಯಮಾಸಾರ - ಇವು ಎಂಬತ್ತ ನಾಲ್ಕರಲ್ಲಿ ಕೆಲವು. ಇವೆಲ್ಲದರ ಕರ್ತೃ ಕುಂದಕುಂದಾಚಾರ್ಯರೇ ಎಂಬ ವಿಚಾರದಲ್ಲಿ ಸಂಶಯಕ್ಕೆ ಅವಕಾಶವಿದೆ.

ಆದರೆ ಪಂಚಾಸ್ತಿಕಾಯಸಾರ, ಸಮಯಸಾರ, ಪ್ರವಚನಸಾರ - ಈ ಮೂರು ಗ್ರಂಥಗಳು ಕುಂದಕುಂದಾಚಾರ್ಯಕೃತವೆಂಬುದರಲ್ಲಿ ಅನುಮಾನವಿಲ್ಲ. ಪಂಚಾಸ್ತಿಕಾಯಸಾರ ಜೀವ, ಅಜೀವ, ಧರ್ಮ, ಅಧರ್ಮ ಮುಂತಾದ ಜೈನತತ್ತ್ವಗಳಿಗೆ ಸಂಬಂಧಪಟ್ಟದ್ದು. ಸಮಯಸಾರ, ಸ್ವಸಮಯ ಪರಸಮಯಗಳನ್ನು ಮತ್ತು ಆತ್ಮದ ಮೋಕ್ಷವನ್ನು ವಿಚಾರ ಮಾಡುವ ಗ್ರಂಥ. ಈ ಗ್ರಂಥ ಸಂಸಾರವನ್ನು ನಾಟಕಕ್ಕೆ ಹೋಲಿಸುತ್ತದೆ. ಗ್ರಂಥದ ಭಾಗಗಳನ್ನು ನಾಟಕದಂತೆ ಪೂರ್ವರಂಗ, ಅಂಕ ಮುಂತಾಗಿ ವಿಂಗಡಿಸಲಾಗಿದೆ. ಇದನ್ನು ಶ್ವೇತಾಂಬರ ದಿಗಂಬರ ಸ್ಥಾವರವಾಸಿಗಳು ತಮ್ಮಲ್ಲಿನ ಭೇದಭಾವವನ್ನು ತೊರೆದು ಆದರದಿಂದ ಅಧ್ಯಯನ ಮಾಡುತ್ತಾರೆ. ವೈದಿಕರು ಉಪನಿಷತ್ತುಗಳನ್ನೂ ಭಗವದ್ಗೀತೆಯನ್ನೂ ಬ್ರಹ್ಮಸೂತ್ರವನ್ನೂ ಪ್ರಸ್ಥಾನತ್ರಯವೆಂದು ಗಣಿಸಿರುವಂತೆ ಜೈನರು ಈ ಮೂರು ಗ್ರಂಥಗಳನ್ನು ನಾಟಕತ್ರಯವೆಂದೂ ಪ್ರಾಭೃತತ್ರಯವೆಂದೂ ಪರಿಗಣಿಸಿದ್ದಾರೆ.

ತಮಿಳರಿಗೆ ಅತ್ಯಂತ ಮೆಚ್ಚಿಕೆಯಾದ ಕುಱುಳ್ ಗ್ರಂಥವನ್ನು ಏಲಾಚಾರ್ಯ ಕುಂದಕುಂದ ರಚಿಸಿ ತಿರುವಳ್ಳುವರ್‌ಗೆ ಕೊಟ್ಟರೆಂದು ಜೈನ ಸಂಪ್ರದಾಯದ ಪ್ರಕಾರ ಹೇಳಲಾಗಿದೆ. *

**ಕುಂದಗೋಳ :** ಧಾರವಾಡ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಆ ತಾಲ್ಲೂಕಿನ ಮುಖ್ಯ ಸ್ಥಳ. ಹುಬ್ಬಳ್ಳಿ ತಾಲ್ಲೂಕಿನ ಆಗ್ನೇಯಕ್ಕಿದೆ. ಹುಬ್ಬಳ್ಳಿ, ನವಲಗುಂದ, ಗದಗ ಜಿಲ್ಲೆಯ ಶಿರಹಟ್ಟಿ, ಹಾವೇರಿ ಜಿಲ್ಲೆಯ ಸವಣೂರು, ಶಿಗ್ಗಾಂವಿ ಮತ್ತು ಕುಂದಗೋಳ ಈ ತಾಲ್ಲೂಕುಗಳು ಸುತ್ತುವರಿದಿವೆ. ತಾಲ್ಲೂಕಿನಲ್ಲಿ ಒಂದು ಪಟ್ಟಣ ಮತ್ತು 56 ಗ್ರಾಮಗಳಿವೆ. ತಾಲ್ಲೂಕಿನ -ವಿಸ್ತೀರ್ಣ 648.6ಚಕಿಮೀ. ಜನಸಂಖ್ಯೆ 1,57,039. 1948ರಲ್ಲಿ ಇದು ಧಾರವಾಡ ಜಿಲ್ಲೆಯಲ್ಲಿ ಸಮಾವೇಶವಾಗುವ ಮೊದಲು ಜಮಖಂಡಿ ಸಂಸ್ಥಾನದ ಆಡಳಿತದಲ್ಲಿತ್ತು.

ತಾಲ್ಲೂಕಿನ ಬಹುಭಾಗದಲ್ಲಿ ಹರಡಿರುವ ಕಪ್ಪುಮಿಶ್ರಿತ ಮಣ್ಣು ತುಂಬ ಫಲವತ್ತಾಗಿದೆ. ವಾರ್ಷಿಕ ಸರಾಸರಿ ಮಳೆ 765ಮಿಮೀ. ತಾಲ್ಲೂಕಿನಲ್ಲಿ ದೊಡ್ಡ ನದಿಗಳಾವುವೂ ಇಲ್ಲ. ಭೂಮಿ ಸುಮಾರು ಉತ್ತರಕ್ಕೆ ಇಳಿಜಾರಾಗಿದ್ದು ಕೆಲವು ಹಳ್ಳಗಳು ಮಾತ್ರ ಹರಿಯುತ್ತವೆ. ಹತ್ತಿ ಮತ್ತು ಜೋಳ ಇಲ್ಲಿಯ ಮುಖ್ಯ ಬೆಳೆಗಳು. ಹುಬ್ಬಳ್ಳಿ - ಬೆಂಗಳೂರು ರೈಲು ಹಾದಿ ತಾಲ್ಲೂಕಿನ ಮಧ್ಯದಲ್ಲಿ ವಾಯವ್ಯಾಗ್ನೇಯವಾಗಿ ಸಾಗುತ್ತದೆ. ಮೂರು ನಿಲ್ದಾಣಗಳಿವೆ. ತಾಲ್ಲೂಕಿನ ಪಶ್ಚಿಮದ ಅಂಚಿನ ಭಾಗದಲ್ಲಿ ಹುಬ್ಬಳ್ಳಿ-ಬೆಂಗಳೂರು ಹೆದ್ದಾರಿ ಸ್ವಲ್ಪ ದೂರದವರೆಗೆ ಹಾಯುತ್ತದೆ. ಹುಬ್ಬಳ್ಳಿ-ಕುಂದಗೋಳ - ಲಕ್ಷ್ಮೇಶ್ವರ ಹಾದಿ ತಾಲ್ಲೂಕಿನ ಮುಖ್ಯ ಹಾದಿಗಳಲ್ಲೊಂದು. ಇಲ್ಲಿ ದೊಡ್ಡ ಕೈಗಾರಿಕೆ ಯಾವುದೂ ಇಲ್ಲ. ಹತ್ತಿ ಎಕ್ಕುವ ಒಂದು ಕಾರ್ಖಾನೆಯಿದೆ. ಕೃಷಿ ಮುಖ್ಯ ಕಸಬು.

ತಾಲ್ಲೂಕಿನ ಮುಖ್ಯ ಸ್ಥಳವಾದ ಕುಂದಗೋಳ ಇತಿಹಾಸ ಪ್ರಸಿದ್ಧ. ಇದು ಮೊದಲು ಬ್ರಹ್ಮಪುರವಾಗಿದ್ದಿರಬೇಕೆಂದು ಸ್ಥಳಪುರಾಣದಿಂದ ವ್ಯಕ್ತವಾಗುತ್ತದೆ. ಹುಬ್ಬಳ್ಳಿಯಿಂದ ಆಗ್ನೇಯಕ್ಕೆ ಸು.19ಕಿಮೀ ದೂರದಲ್ಲಿರುವ ಈ ಪಟ್ಟಣ ಹುಬ್ಬಳ್ಳಿ-ಬೆಂಗಳೂರು ಮುಖ್ಯ ರೈಲುಮಾರ್ಗದಲ್ಲಿದೆ. ಪಟ್ಟಣದ ಜನಸಂಖ್ಯೆ 16,837. ಇಲ್ಲಿಯ ಪುರಸಭೆ ಹಳೆಯದು. 1877ರಲ್ಲಿ ಸ್ಥಾಪಿತವಾಯಿತು. ಇಲ್ಲಿಯ ಶಂಭುಲಿಂಗದೇವಾಲಯ ಪ್ರಸಿದ್ಧ. ಇದು ಬಂಕಾಪುರ ಕೋಟೆಯಲ್ಲಿರುವ 60 ಕಂಬಗಳ ದೇವಾಲಯದ ಮಾದರಿಯಲ್ಲಿದೆ. ಚಾಳುಕ್ಯ ಶೈಲಿಯಲ್ಲಿ ನಿರ್ಮಿತವಾದ ಈ ದೇವಾಲಯದ ಮೂಲಗುಡಿಯ ಸಭಾಮಂಟಪ ಮತ್ತು ಗರ್ಭಗುಡಿಗಳು ಮಾತ್ರ ಉಳಿದಿವೆ. ಸಭಾಮಂಟಪದ ಛತ್ತಿನಲ್ಲಿ ಅಷ್ಟದಿಕ್ಪಾಲಕರನ್ನು ಕೆತ್ತಲಾಗಿದೆ. ಹೊರ ಬದಿಯಲ್ಲಿ ಕೀರ್ತಿಮುಖಗಳಿವೆ. ಗರ್ಭಗುಡಿಯಲ್ಲಿ ಶಿವಲಿಂಗವೂ ಮುಂಭಾಗದ ಕೋಣೆಯ ಎಡಬಲಗಳಲ್ಲಿ ಪಾರ್ವತಿ ವಿಘ್ನೇಶ್ವರ ವಿಗ್ರಹಗಳೂ ಇವೆ. ದ್ವಾರದ ಮೇಲ್ಭಾಗದಲ್ಲಿ ರಾಮ ಲಕ್ಷ್ಮಣ ಸೀತೆಯರ ಮೂರ್ತಿಗಳನ್ನು ಕೆತ್ತಲಾಗಿದೆ. ದೇವಾಲಯದ ಕೆಳಭಾಗ ಜೀರ್ಣೋದ್ಧಾರವಾಗಿದೆ. ಬ್ರಹ್ಮದೇವರ ಗುಡಿ, ದತ್ತಾತ್ರೇಯ ಗುಡಿ, ಶಂಕರಾಚಾರ್ಯರ ಗುಡಿ ಹಾಗೂ ಮಲ್ಲಿಕಾರ್ಜುನ ಗುಡಿಗಳು ಇಲ್ಲಿಯ ಇತರ ದೇವಾಲಯಗಳು. ಇಲ್ಲಿ ಹನ್ನೊಂದು ಶಿಲಾಶಾಸನಗಳಿವೆ. 1040ರದು ಅತಿ ಹಳೆಯದು. ಈ ಶಿಲಾಶಾಸನಗಳು ಚಾಳುಕ್ಯ, ಕಳಚುರಿ ಮತ್ತು ವಿಜಯನಗರ ಕಾಲಗಳಿಗೆ ಸೇರಿದವು.

ಕುಂದಗೋಳ ಭಾರತದ ಸಂಗೀತ ನಕ್ಷೆಯಲ್ಲಿ ತನ್ನ ಹೆಸರನ್ನು ಛಾಪಿಸಿದೆ. ಸವಾಯಿಗಂಧರ್ವರು ಇಲ್ಲಿದ್ದಾಗ ಅವರು ಭೀಮಸೇನ ಜೋಶಿ ಮತ್ತು ಗಂಗೂಬಾಯಿ ಹಾನಗಲ್ಲರಂಥ ಅಖಿಲ ಭಾರತ ಖ್ಯಾತಿಯ ಶಿಷ್ಯರನ್ನು ತಯಾರಿಸಿದರು. ಸವಾಯಿ ಗಂಧರ್ವರ ಸಂಗೀತದಿಂದಾಗಿ ಕುಂದಗೋಳ ಪಟ್ಟಣ ಸಂಗೀತದ ನೆಲೆವೀಡಾಗಿ ಪರಿಣಮಿಸಿತು. ಇಲ್ಲಿಯ ನಾನಾಸಾಹೇಬ ನಾಡಗಿರರು ಅವರ ಶಿಷ್ಯರಲ್ಲೊಬ್ಬರು. ಗುರುಗಳ ಪುಣ್ಯತಿಥಿಯಂದು ಕುಂದಗೋಳದಲ್ಲಿ ಸಂಗೀತ ಸಮಾರೋಹ ಜರುಗುತ್ತದೆ. ಭಾರತದ ನಾನಾ ಮೂಲೆಗಳಿಂದ ಬರುವ ಸಂಗೀತಗಾರರ ಕಾರ್ಯಕ್ರಮಗಳಿಂದ ಕೂಡಿದ ಈ ಸಂಗೀತಾರಾಧನೆ ಸಂಗೀತದ ರಸದೌತಣವಾಗಿ ಪರಿಣಮಿಸಿದೆ. (ಎಸ್.ವಿ.ಪಿ.)

**ಕುಂದಣಗಾರ, ಕೆ.ಜಿ :** 1895-1965. ಕನ್ನಡ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಗಳ ಅಭಿವೃದ್ಧಿಗಾಗಿ ಶ್ರಮಿಸಿದ ವಿದ್ವಾಂಸರು. ಇವರ ಪೂರ್ಣ ಹೆಸರು ಕಲ್ಲಪ್ಪ ಗಿರಿಯಪ್ಪ ಕುಂದಣಗಾರ. ಬೆಳಗಾಂವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಕೌಜಲಗಿಯಲ್ಲಿ ಅಕ್ಕಸಾಲಿಗ ಮನೆತನವೊಂದರಲ್ಲಿ ಜನಿಸಿದರು. ಇವರದು ಬಡ ಕುಟುಂಬವಾದ್ದರಿಂದ ಚಿಕ್ಕಂದಿನಿಂದಲೇ ಸ್ವಾವಲಂಬಿಯಾಗಿ ಬಾಳಬೇಕಾಯಿತು. ಪ್ರಾಥಮಿಕ ಶಿಕ್ಷಣವನ್ನು ಕೌಜಲಗಿಯಲ್ಲಿ ಮುಗಿಸಿ, ಪ್ರೌಢಶಿಕ್ಷಣಕ್ಕಾಗಿ ಬೆಳಗಾಂವಿಗೆ ಹೋದರು. ಅಲ್ಲಿ ಒಬ್ಬ ಸರಾಫನ ಅಂಗಡಿಯಲ್ಲಿ ಲೆಕ್ಕ ಬರೆದು ಬಂದ ಹಣದಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಅನಂತರ ಧಾರವಾಡದಲ್ಲಿ ವಿಕ್ಟೋರಿಯ ಹೈಸ್ಕೂಲಿನಲ್ಲಿ ವ್ಯಾಸಂಗಮಾಡಿ ಮೆಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಜೀವನದ ದುರ್ಭರ ಸನ್ನಿವೇಶಗಳಿಗೆ ಸಿಕ್ಕಿದ ಇವರು 1919ರಲ್ಲಿ ಬಿ.ಎ. ಪದವಿ ಪಡೆದು ಗೋಕಾಕದ ವಿ.ವಿ. ಹೈಸ್ಕೂಲಿನಲ್ಲಿ ಶಿಕ್ಷಕರಾಗಿ ತಮ್ಮ ವೃತ್ತಿ ಜೀವನವನ್ನು ಆರಂಭಿಸಿದರು. ಕನ್ನಡದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆಯಲು ನಿರ್ಧರಿಸಿ, ಹಳಗನ್ನಡ ಕಾವ್ಯಗಳ ವ್ಯಾಸಂಗ ಹಾಗೂ ಸಂಸ್ಕೃತ ಭಾಷೆಯ ಅಭ್ಯಾಸಕ್ಕೆ ತೊಡಗಿದರು. ಬಿಡುವಿನ ವೇಳೆಯಲ್ಲಿ ಶಾಸನಗಳ ಪರಿಚಯಕ್ಕೂ ಪ್ರಯತ್ನಿಸಿದರು. ಪ್ರಾಚೀನ

ಅವಶೇಷಗಳ ಅಧ್ಯಯನದ ಕಡೆಗೂ ಒಲವನ್ನು ಬೆಳೆಸಿಕೊಂಡರು. ಎಂ.ಎ. ಪದವಿ ಪಡೆದ ಅನಂತರ ಇವರು ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಎರಡು ವರ್ಷಗಳ ಕಾಲ ಅಧ್ಯಾಪಕರಾಗಿದ್ದರು (1925-27). ಅನಂತರ ಕೊಲ್ಹಾಪುರದ ರಾಜಾರಾಮ್ ಕಾಲೇಜನ್ನು ಸೇರಿ, ಕನ್ನಡ ಪ್ರಾಧ್ಯಾಪಕರಾಗಿ 1948ರವರೆಗೂ ಆ ಕಾಲೇಜಿನಲ್ಲಿ ಕೆಲಸ ಮಾಡಿದರು. ಅನಂತರ ತಮ್ಮ ಕೊನೆಯ ದಿನಗಳವರೆಗೂ ಬೆಳಗಾಂವಿಯ ರಾಣಿ ಪಾರ್ವತಿದೇವಿ ಕಾಲೇಜಿನಲ್ಲಿ ಗೌರವ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು.

ಕನ್ನಡಕ್ಕಾಗಿ ಸುಮಾರು ಅರ್ಧ ಶತಮಾನ ಕಾಲ ದುಡಿದ ಕುಂದಣಗಾರರು ಇಂಗ್ಲಿಷ್, ಮರಾಠಿ, ಪಾಲಿ ಮತ್ತು ಅರ್ಧಮಾಗಧೀ ಭಾಷೆಗಳಲ್ಲೂ ಪಾಂಡಿತ್ಯ ಗಳಿಸಿಕೊಂಡಿದ್ದರು. ಇವರ ಬರೆವಣಿಗೆ ವೈವಿಧ್ಯಮಯ. ರಗಳೆ, ಷಟ್ಪದಿ, ವಚನ, ಸಾಹಿತ್ಯ, ಛಂದಸ್ಸು, ಧರ್ಮ, ಕಲೆ -ಹೀಗೆ ವಿವಿಧ ವಿಷಯಗಳ ಮೇಲೆ ಇವರ ಲೇಖನಿ ಹರಿದಿದೆ. ಇವರ ಪ್ರಥಮ ಕೃತಿ ಸರಸ್ವತಿ ಎಂಬ ಕಾದಂಬರಿ 1930ರಲ್ಲಿ ಪ್ರಕಟವಾಯಿತು. ಇದೇ ವರ್ಷ ಮಹಾದೇವಿಯಕ್ಕ ಎಂಬ ವಿಮರ್ಶಾಗ್ರಂಥವೂ ಹೊರ ಬಂತು. ಲೀಲಾವತಿಪ್ರಬಂಧ (1937), ಪೂರ್ವಪುರಾಣ (1943), ಆದಿಪುರಾಣ (1953), ಕುಮುದೇಂದುರಾಮಾಯಣ -ಇವು ಇವರ ಸಂಪಾದನ ಕೃತಿಗಳಾಗಿದ್ದು ಇವರ ಪಾಂಡಿತ್ಯ ಪರಿಶ್ರಮಗಳಿಗೆ ಸಾಕ್ಷಿಯಾಗಿದೆ. ಇವರ ಹರಿಹರದೇವ (1937) ಎಂಬ ವಿಮರ್ಶನ ಗ್ರಂಥ ಕನ್ನಡ ಕವಿ ಪ್ರಶಸ್ತಿಗ್ರಂಥಗಳಲ್ಲಿ ಗಣ್ಯವಾದುದು. ಕೊಲ್ಹಾಪುರದ ಮಹಾಲಕ್ಷ್ಮೀ ದೇವಾಲಯವನ್ನು ಕುರಿತು ಇಂಗ್ಲಿಷಿನಲ್ಲಿ ಇವರು ಬರೆದಿರುವ 'ಸಮ್‌ನೋಟ್ಸ್ ಆನ್ ಶ್ರೀ ಮಹಾಲಕ್ಷ್ಮೀ ಟೆಂಪಲ್' ಎಂಬ ಗ್ರಂಥ ಪ್ರಮಾಣಭೂತವಾದುದೆಂದು ಹೆಸರಾಗಿದೆ. ಕೊಲ್ಹಾಪುರದ ಬ್ರಹ್ಮಪುರಿಯಲ್ಲಿ ಇವರು ನಡೆಸಿದ ಉತ್ಖನನ ಐತಿಹಾಸಿಕ ದೃಷ್ಟಿಯಿಂದ ಮಹತ್ತ್ವಪೂರ್ಣದ್ದಾಗಿದೆ. ಕೊಲ್ಹಾಪುರ ಸಂಸ್ಥಾನದ ಕನ್ನಡ ಶಾಸನಗಳ ಒಂದು ಸಂಗ್ರಹವನ್ನೂ ಇವರು ಪ್ರಕಟಿಸಿದ್ದಾರೆ. ಸಂಶೋಧನ ಪ್ರವೃತ್ತಿಯವರಾಗಿದ್ದ ಇವರು ಪಂಪನ ಹಿನ್ನೆಲೆ, ಪ್ರಾಚೀನ ಕನ್ನಡ ನಾಡಿನ ನಾಣ್ಯ ಪದ್ಧತಿ, ಚಾಳುಕ್ಯರ ಆರಂಭದ ಕಲೆಗಳು ಮುಂತಾದ ಸಂಶೋಧನ ಲೇಖನಗಳನ್ನು ಪ್ರಕಟಿಸಿದ್ದಾರೆ. 1961ರಲ್ಲಿ ಇವರಿಗೆ ಅರ್ಪಿಸಿದ ಕುಂದಣ ಎಂಬ ಗೌರವ ಗ್ರಂಥದಲ್ಲಿ ಇವರ 15 ಸಂಶೋಧನ ಲೇಖನಗಳು ಪ್ರಕಟವಾಗಿವೆ.



ಕೊಲ್ಹಾಪುರದಲ್ಲಿ ಕನ್ನಡದ ಬೆನ್ನೆಲುಬಾಗಿದ್ದ ಕುಂದಣಗಾರರು ಮುಂಬಯಿಯಲ್ಲಿ ಸೇರಿದ್ದ ಪ್ರಾಚ್ಯ ಮಹಾಸಭೆಯ ಕನ್ನಡ ವಿಭಾಗದ ಅಧ್ಯಕ್ಷರಾಗಿದ್ದರು. ಧಾರವಾಡದ ವಾಗ್ಭೂಷಣ ಮತ್ತು ಬೆಳಗಾಂವಿಯ ಜಿನವಿಜಯ ಪತ್ರಿಕೆಗಳಿಗೆ ಕೆಲವು ಕಾಲ ಸಂಪಾದಕರಾಗಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟು ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟುಗಳ ಸಂಪಾದಕ ಮಂಡಲಿಯ ಸದಸ್ಯರಾಗಿಯೂ ಇವರು ಸೇವೆ ಸಲ್ಲಿಸಿದ್ದಾರೆ.

ಸದ್ದುಗದ್ದಲವಿಲ್ಲದೆ ನಾಡು ನುಡಿಗಳಿಗೆ ಸೇವೆ ಸಲ್ಲಿಸಿದ ಇವರನ್ನು ಕನ್ನಡನಾಡು 1961ರಲ್ಲಿ ಗದಗದಲ್ಲಿ ನಡೆದ 43ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತು. *

**ಕುಂದಾಣ :** ಬೆಂಗಳೂರು ಗ್ರಾಮಾಂತರ ಜಿಲ್ಲೆ ದೇವನಹಳ್ಳಿ ತಾಲ್ಲೂಕಿನ ಒಂದು ಗ್ರಾಮ. ಹೋಬಳಿ ಕೇಂದ್ರ. ದೇವನಹಳ್ಳಿಯ ಪಶ್ಚಿಮಕ್ಕೆ 10ಕಿಮೀ ದೂರದಲ್ಲಿದೆ.

ಈ ಗ್ರಾಮದ ಬಳಿ 61ಮೀ ಎತ್ತರದ ಸಮತಟ್ಟಿನ ಶಿಖರವುಳ್ಳ ದೊಡ್ಡಕಲ್ಲುಬಂಡೆಯಿಂದಾಗಿರುವ ಒಂದು ಬೆಟ್ಟವಿದೆ. ಇದರ ಪೂರ್ವಭಾಗ ಮಾತ್ರ ಇಳಿಜಾರಾಗಿದ್ದು ಉಳಿದ ಮೂರು ಕಡೆ ಕಡಿದಾಗಿದೆ. ಇಲ್ಲಿ ವಿಜಯನಗರ ಮತ್ತು ಪಾಳೆಯಗಾರರ ಕಾಲದ್ದೆಂದು ಹೇಳುವ ನಾಲ್ಕು ಸುತ್ತಿನ ಕೋಟೆಯಿದೆ. ಪೂರ್ವದಿಕ್ಕಿನ ನಾಲ್ಕು ಕಲ್ಲಿನಬಾಗಿಲುಗಳ ಮುಖಾಂತರ ಇಲ್ಲಿಗೆ ಪ್ರವೇಶವಿದೆ. ಮೇಲಿನ ಕೋಟೆಯೊಳಗಿನ ಪ್ರದೇಶ ಸು.100ಮೀ ಉದ್ದ 50ಮೀ ಅಗಲವಾಗಿದ್ದು ಅಂಡಾಕಾರವಾಗಿದೆ. ಪೂರ್ವದಿಕ್ಕಿಗೆ ಎದುರಾಗಿ ಇರುವುದು ಚನ್ನರಾಯಸ್ವಾಮಿ ದೇವಾಲಯ. ಇಲ್ಲಿನ ಜನಾರ್ದನ ವಿಗ್ರಹ 2' ಎತ್ತರವಿದೆ. ಇದು ಪಾಳೆಯಗಾರರ ಕಾಲದ್ದೆಂದು ತಿಳಿದುಬರುತ್ತದೆ. ಒಂದು ಚಿಕ್ಕ ಆಂಜನೇಯ ದೇವಾಲಯವೂ ಇಲ್ಲಿದೆ. ಕುಂದಾಣ ಹೊಯ್ಸಳ ರಾಮನಾಥನ ರಾಜಧಾನಿಯಾಗಿತ್ತು. *

**ಕುಂದಾದ್ರಿ :** ಶಿವಮೊಗ್ಗ ಜಿಲ್ಲೆಯಲ್ಲಿರುವ ಒಂದು ಬೆಟ್ಟ. ಇಲ್ಲೊಂದು ಜಿನಾಲಯವಿದೆ. ನಾಗಕುಮಾರ ಚರಿತ್ರೆಯಲ್ಲಿ ಬಾಹುಬಲಿ ಕವಿ (16ನೆಯ ಶತಮಾನ) ಈ ಗಿರಿಯನ್ನು ಮನಸಾರೆ ಬಣ್ಣಿಸಿದ್ದಾನೆ. ಈಗ ಇಲ್ಲೊಂದು ಜೈನ ಬ್ರಹ್ಮಚರ್ಯಾಶ್ರಮವೂ ಇದೆ. *

**ಕುಂದಾಪುರ :** ಉಡುಪಿ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಆ ತಾಲ್ಲೂಕಿನ ಕೇಂದ್ರ. ಪಶ್ಚಿಮದಲ್ಲಿ ಅರಬ್ಬೀ ಸಮುದ್ರ, ಉತ್ತರ ಮತ್ತು ಪೂರ್ವದಲ್ಲಿ ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಗಳು, ದಕ್ಷಿಣದಲ್ಲಿ ಕಾರ್ಕಳ ಹಾಗೂ ಉಡುಪಿ ತಾಲ್ಲೂಕುಗಳು ಸುತ್ತುವರಿದಿರುವ ಈ ತಾಲ್ಲೂಕಿನ ವಿಸ್ತೀರ್ಣ 1559.8ಚ.ಕಿಮೀ. ಜನಸಂಖ್ಯೆ 3,77,372. ತಾಲ್ಲೂಕಿನಲ್ಲಿ ಒಟ್ಟು 101 ಗ್ರಾಮಗಳೂ ಕುಂದಾಪುರ, ಬೈಂದೂರು, ವಂಡ್ಸೆ -ಈ ಮೂರು ಹೋಬಳಿಗಳೂ ಇವೆ.

ತಾಲ್ಲೂಕಿನಲ್ಲಿ ಸು.45ಕಿಮೀ ಸಮುದ್ರ ಕರಾವಳಿ ಇದೆ. ಉದ್ದಕ್ಕೂ 5 ರಿಂದ 40ಕಿಮೀ ಅಗಲವಿರುವ ಮಟ್ಟಸ ಪ್ರದೇಶ ಇದೆ. ಅದರ ಪೂರ್ವಕ್ಕೆ ಪಶ್ಚಿಮ ಘಟ್ಟಗಳ ಭಾಗ. 54,902 ಹೆಕ್ಟೇರುಗಳಷ್ಟು ವಿಸ್ತೀರ್ಣವಿರುವ ಕಾಡುಗಳಲ್ಲಿ ತೇಗ, ಹೊನ್ನೆ, ಬೀಟೆ, ಕರಿಮರ, ಬೆಳನಂದಿ, ಮತ್ತಿ, ಹಲಸು ಮುಂತಾದ ವೃಕ್ಷಗಳು ಇವೆ. ದಟ್ಟ ಕಾಡಿನ ಪ್ರದೇಶದಲ್ಲಿ ಚಿರತೆ, ಕಾಟಿ ಮುಂತಾದ ಪ್ರಾಣಿಗಳನ್ನು ಕಾಣಬಹುದು. ಕೊಲ್ಲೂರು ನದಿ, ಚಕ್ರನದಿ ಮತ್ತು ಹಾಲಾಡಿ - ಇವು ತಾಲ್ಲೂಕಿನ ಮುಖ್ಯ ನದಿಗಳು. ಇವೆಲ್ಲ ಘಟ್ಟದಲ್ಲಿ ಹುಟ್ಟಿ ಸಮುದ್ರದತ್ತ ಹರಿಯುತ್ತವೆ. ವಾರ್ಷಿಕ ಸರಾಸರಿ ಮಳೆ 3,781ಮಿಮೀ. ಮುಂಗಾರು ಮಾರುತದ ಪ್ರಭಾವದಿಂದ ಮಳೆಯಾಗುತ್ತದೆ.

ಇಲ್ಲಿನ ಜನರ ಮುಖ್ಯ ವೃತ್ತಿ ಕೃಷಿ. ಬೇಸಾಯಕ್ಕೆ ಮಳೆಯ ನೀರೆ ಆಧಾರ. ನೀರಾವರಿಗಾಗಿ ಅಲ್ಲಲ್ಲಿ ನದಿಗಳಿಗೆ ಸಣ್ಣ ಅಣೆಕಟ್ಟುಗಳನ್ನು ಕಟಲಾಗಿದೆ. ತಾಲ್ಲೂಕಿನಲ್ಲಿ ಬೆಳೆಯುವ ಮುಖ್ಯ ಆಹಾರ ಬೆಳೆಗಳು ಬತ್ತ ಮತ್ತು ರಾಗಿ. ಉದ್ದು, ಹೆಸರು, ಹುರುಳಿ, ಅವರೆ, ಅಡಕೆ, ತೆಂಗು, ಬಾಳೆ, ಕಬ್ಬು, ಗೇರುಬೀಜ, ಮೆಣಸು ಮತ್ತು ಗೆಣಸು ಇತರ ಬೆಳೆಗಳು. ಬುಟ್ಟಿ ಮತ್ತು ಚಾಪೆ ಹೆಣೆಯುವುದು, ಬೆತ್ತದ ಕೆಲಸ, ನೇಯ್ಗೆ, ಚರ್ಮದ ಸಾಮಾನು, ಕೊಬ್ಬರಿ ಎಣ್ಣೆ ಮತ್ತು ಹೆಂಚು ತಯಾರಿಕೆ, ಮೀನುಗಾರಿಕೆ - ಇವು ಇಲ್ಲಿಯ ಮುಖ್ಯ ಉದ್ಯೋಗಗಳು. ಹೆಂಚು, ಬೆಲ್ಲ, ತೆಂಗಿನಕಾಯಿ ಮತ್ತು ಮಡಕೆ - ಇವು ವ್ಯಾಪಾರವಾಗುವ ವಸ್ತುಗಳು.

ಕೊಲ್ಲೂರು (ನೋಡಿ), ಶಂಕರನಾರಾಯಣ (ನೋಡಿ) ತಾಲ್ಲೂಕಿನ ಪ್ರೇಕ್ಷಣೀಯ ಸ್ಥಳಗಳು. ಕುಂದಾಪುರದಿಂದ 8ಕಿಮೀ ದೂರಕ್ಕೆ ಪೂರ್ವದಲ್ಲಿರುವ ಬಸರೂರು (ನೋಡಿ) ಒಂದು ಚಾರಿತ್ರಿಕ ಸ್ಥಳ.

ಬಡಗತಿಟ್ಟು ಸಂಪ್ರದಾಯದ ಯಕ್ಷಗಾನ, ನಾಟಕ ಮತ್ತು ಕುಣಿತ ಈ ತಾಲ್ಲೂಕಿನ ಮುಖ್ಯ ಕಲೆಗಳು. ಗ್ರಾಮಪ್ರದೇಶದಲ್ಲಿ ಕಂಬಳ ಮತ್ತು ಕೋಳಿ ಅಂಕ ಜನಪ್ರಿಯವಾಗಿವೆ.

ತಾಲ್ಲೂಕಿನ ಕೇಂದ್ರವಾದ ಕುಂದಾಪುರ ಪಟ್ಟಣ ಒಂದು ಬಂದರು ಮತ್ತು ಮುಖ್ಯ ವ್ಯಾಪಾರ ಕೇಂದ್ರ. ಜನಸಂಖ್ಯೆ 28,595. ಹಾಲಾಡಿ, ಗರ್ಗತ ಚಕ್ರ, ಕೊಲ್ಲೂರು, ಜಿಂಬೂ ಮತ್ತು ಸೂಕ್ತಿಮತಿಗಳೆಂಬ ಐದು

ನದಿಗಳ ಸಂಗಮದಿಂದ ನಿರ್ಮಾಣವಾದ ವಿಶಾಲವಾದ ಪಂಚಗಂಗಾವಳಿ (ಗಂಗೊಳ್ಳಿ) ನದಿಯ ಅಳಿವೆಯ ದಕ್ಷಿಣಕ್ಕೆ ಸಮತಟ್ಟಾದ ಪ್ರದೇಶದಲ್ಲಿದೆ. ಪಂಚ ಗಂಗಾವಳಿಯ ಅಳಿವೆಯ ಉತ್ತರ ತೀರದಲ್ಲಿರುವ ಗಂಗೊಳ್ಳಿ ಹಿಂದಿನ ಕಾಲದಿಂದಲೂ ಬಳಕೆಯಲ್ಲಿದ್ದ ಬಂದರು. ಅಳಿವೆಯಿಂದ 5ಕಿಮೀ ದೂರದೊಳಗೆ ನದಿಯಲ್ಲಿ ಹಲವು ಚಿಕ್ಕ ಫಲವತ್ತಾದ ಕುದುರುಗಳು (ದ್ವೀಪಗಳು) ಇವೆ. ಅವುಗಳಲ್ಲಿ ಉಪ್ಪಿನಕುದುರು, ಹಿರಿ(ಹೇರಿ) ಕುದುರು ಮತ್ತು ಹಟ್ಟಿಕುದುರು ಮುಖ್ಯವಾದವು.

ಕುಂದವರ್ಮನೆಂಬ ಅರಸ ಪಂಚಗಂಗಾವಳಿಯ ಹತ್ತಿರ ಕಟ್ಟಿಸಿದ ಕುಂದೇಶ್ವರ ದೇವಾಲಯದಿಂದ ಇದಕ್ಕೆ ಕುಂದಾಪುರವೆಂಬ ಹೆಸರಾಯಿತೆಂದು ಪ್ರತೀತಿ. ಈ ದೇವಾಲಯದಲ್ಲಿ ಆಳುಪರ ಕಾಲದ ಶಿಲಾಶಾಸನಗಳಿವೆ. ಪೋರ್ಚುಗೀಸರು ಇಲ್ಲಿ ಕಟ್ಟಿಸಿದ ಕೋಟೆ ಈಗಲೂ ಇದೆ. ಹೈದರ್ ಅಲಿ ಇಲ್ಲಿ ರಚಿಸಿದ ಕೊತ್ತಳದಲ್ಲಿ ಈಗ ಸರ್ಕಾರಿ ಆಡಳಿತ ಕಚೇರಿಗಳಿವೆ. ಟಿಪ್ಪುವಿನ ಕಾಲದಲ್ಲಿ ಗಂಗೊಳ್ಳಿ ಹಡಗು ಕಟ್ಟುವ ಒಂದು ಮುಖ್ಯ ಕೇಂದ್ರವಾಗಿತ್ತು. ಟಿಪ್ಪುವನ್ನು ಸೋಲಿಸಲು ಮುಂಬಯಿಯಿಂದ ಕಳುಹಿಸಲಾದ ಇಂಗ್ಲಿಷ್ ಸೈನ್ಯ ಕುಂದಾಪುರದಲ್ಲಿಳಿದು, ಅನಂತರ 45ಕಿಮೀ ದೂರದ ಹೊಸಂಗಡಿ ಘಾಟಿಯ ದಾರಿಯಾಗಿ ಬಿದನೂರಿಗೆ ಸಾಗಿತ್ತು. ಈಗ ಈ ಘಾಟಿ ಮೋಟಾರ್ ವಾಹನಗಳ ಸಂಚಾರಮಾರ್ಗವಾಗಿ ಉಪಯೋಗದಲ್ಲಿದೆ.

ಪಶ್ಚಿಮ ಕರಾವಳಿಯ ಹೆದ್ದಾರಿ ನಿರ್ಮಾಣದ ಅಂಗವಾಗಿ ಗಂಗಾವಳಿಗೆ ಹಾಕಲಾದ ಹೊಸ ಮಾದರಿಯ ಸೇತುವೆಗಳಿಂದ ಕುಂದಾಪುರದ ದಕ್ಷಿಣೋತ್ತರ ಭಾಗಗಳಿಗೆ ನೇರ ಸಂಚಾರ ಸಂಪರ್ಕವುಂಟಾಗಿದೆ. ಕುಂದಾಪುರ ಹೆಂಚು ಮತ್ತು ಕೆಲವು ಚಿಕ್ಕ ಕೈಗಾರಿಕೆಗಳ ಕೇಂದ್ರವಾಗಿಯೂ ಹೆಸರಾಗಿದೆ. ಇಲ್ಲಿ ಪ್ರತಿ ಶನಿವಾರ ನಡೆಯುವ ಸಂತೆ ಈ ಭಾಗದಲ್ಲೆಲ್ಲ ಪ್ರಸಿದ್ಧ.

ಕೊಡಚಾದ್ರಿ ವಲಯದ ಕಬ್ಬಿಣದ ಅದುರಿನ ಸ್ವಲ್ಪ ಭಾಗ ಗಂಗೊಳ್ಳಿ ಬಂದರಿನ ಮೂಲಕ ರಫ್ತಾಗುತ್ತದೆ. (ಡಿ.ಎನ್.ಕೆ.)

**ಕುಂಸಿ :** ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕಿನ ಒಂದು ಪಟ್ಟಣ, ಹೋಬಳಿ ಕೇಂದ್ರ. ಶಿವಮೊಗ್ಗ -ಜೋಗ ಮಾರ್ಗದಲ್ಲಿ ಶಿವಮೊಗ್ಗಕ್ಕೆ ವಾಯವ್ಯದಲ್ಲಿ 27ಕಿಮೀ ದೂರದಲ್ಲಿದೆ. ಇದು ಶಿವಮೊಗ್ಗ ಸಾಗರ ರೈಲ್ವೆ ಮಾರ್ಗದ ಒಂದು ನಿಲ್ದಾಣ.

ಈ ಊರಿಗೆ ಹಿಂದೆ ಕುಂಬಸೆ ಎಂಬ ಹೆಸರಿತ್ತೆಂದೂ ಹುಂಚದ ಜಿನದತ್ತರಾಯ ಇಲ್ಲಿಯ ಜೈನಬಸದಿಗೆ ಗ್ರಾಮವನ್ನು ದಾನವಾಗಿ ಕೊಟ್ಟನೆಂದೂ ಐತಿಹ್ಯವಿದೆ. ಇಲ್ಲಿನ ಪಕ್ಷಿರಂಗನಾಥ ದೇವಸ್ಥಾನದಲ್ಲಿ ಹರಡಿದ ರೆಕ್ಕೆಯುಳ್ಳ ಗರುಡನ ಮೇಲೆ ಕುಳಿತಿರುವ ವಿಷ್ಣು ವಿಗ್ರಹವಿದೆ.

ಕುಂಸಿ ಮ್ಯಾಂಗನೀಸ್ ಗಣಿಗಳಿಗೆ ಪ್ರಸಿದ್ಧ. ಈ ಊರಿನ ಬಳಿ ಧಾರವಾಡ ಶಿಲಾಸ್ತೋಮಕ್ಕೆ ಸೇರಿದ ಸುಣ್ಣಕಲ್ಲು, ಸಿಲಿಕಯುಕ್ತ ಕಬ್ಬಿಣದ ಶಿಲೆಗಳು, ಮ್ಯಾಂಗನೀಸ್ ಅದುರು, ಜೇಡು ಶಿಲೆ ಹಾಗೂ ಗ್ರ್ಯಾನೈಟ್ ಶಿಲೆಗಳು ದೊರಕುತ್ತವೆ. ಈ ಪ್ರದೇಶದಲ್ಲಿ ಮ್ಯಾಂಗನೀಸ್ ನಿಕ್ಷೇಪ, ರೂಪಾಂತರ ಶಿಲೆಗಳಾದ ಫಿಲೈಟ್ ಹಾಗೂ ಶಿಸ್ಟ್ ಶಿಲೆಗಳಲ್ಲಿ ದೊರೆಯುವುದು. ಬಹುತೇಕ ಪ್ರದೇಶದಲ್ಲಿ ಸುಣ್ಣಕಲ್ಲಿನ ಪದರಗಳು ನಿಕ್ಷೇಪದ ಮೇಲ್ಭಾಗವನ್ನು ಮತ್ತು ಸಿಲಿಕಯುಕ್ತ ಕಬ್ಬಿಣ ಶಿಲೆಗಳು ನಿಕ್ಷೇಪದ ಕೆಳಭಾಗವನ್ನು ಆಕ್ರಮಿಸಿವೆ. ಮ್ಯಾಂಗನೀಸ್ ನಿಕ್ಷೇಪ ಸುಮಾರು ಒಂದು ಸಾವಿರ ಅಡಿ ಉದ್ದದವರೆಗೆ ಪ್ರಸರಿಸಿದ್ದು, 20'-30' ಆಳದ ವರೆಗೆ ದೊರೆಯುತ್ತದೆ. ಕೆಲವೆಡೆ ಅತಿ ವಿರಳವಾಗಿ 80' ಆಳದವರೆಗೂ ದೊರೆಯುತ್ತದೆ. ಮ್ಯಾಂಗನೀಸ್ ನಿಕ್ಷೇಪ ಬಂಡೆಗಳ ರೂಪದಲ್ಲಿವೆ. ಅವುಗಳ ವ್ಯಾಸ ಒಂದರಿಂದ ಮೂರು ಅಡಿಗಳಷ್ಟು. ಇಲ್ಲಿಯ ನಿಕ್ಷೇಪದಲ್ಲಿ ರಂಜಕ ಮತ್ತು ಸಿಲಿಕದ ಅಂಶ ಅತ್ಯಂತ ಕಡಿಮೆ. ಮ್ಯಾಂಗನೀಸ್ ಲೋಹದ ಅಂಶ ಸೇಕಡ 40 ರಿಂದ 50 ರಷ್ಟಿದೆ. ಕಬ್ಬಿಣದ ಅಂಶ ಸೇ.11ರಷ್ಟು. ಕುಂಸಿಯ ಬಳಿ ಸು.50,000 ಟನ್‍ಗಳಷ್ಟು ಮ್ಯಾಂಗನೀಸ್ ನಿಕ್ಷೇಪವಿದೆಯೆಂಬುದು ಅಂದಾಜು. ಈ ಪ್ರದೇಶದ ಅದುರನ್ನು ಭದ್ರಾವತಿಯ ಉಕ್ಕು ಮತ್ತು ಕಬ್ಬಿಣದ ಕಾರ್ಖಾನೆಗಳಿಗೆ ಮತ್ತು ಜಪಾನ್ ದೇಶಕ್ಕೆ ಕಳುಹಿಸಲಾಗುತ್ತಿದೆ. ಜೇಡಿಮಣ್ಣನ್ನು ಬೆಂಗಳೂರಿನಲ್ಲಿರುವ ಪಿಂಗಾಣಿ ಕಾರ್ಖಾನೆಗೆ ಸರಬರಾಜು ಮಾಡಲಾಗುತ್ತಿದೆ. (ಟಿ.ಆರ್.ಎಸ್.)

**ಕುಕ್ಕನೂರು :** ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲ್ಲೂಕಿನಲ್ಲಿ, ಕಸಬೆಯಿಂದ ದಕ್ಷಿಣಕ್ಕೆ ಗುಂತಕಲ್ಲು -ಹುಬ್ಬಳ್ಳಿ ರೈಲುಮಾರ್ಗದ ಬನ್ನಿಕೊಪ್ಪ ನಿಲ್ದಾಣದಿಂದ 11ಕಿಮೀ ಉತ್ತರಕ್ಕಿರುವ ಗ್ರಾಮ.

ಈ ಊರು ಪ್ರಾಚೀನ ದೇವಾಲಯಗಳಿಗೆ ಪ್ರಸಿದ್ಧವಾಗಿದೆ. ಸ್ಥಳಪುರಾಣದ ಪ್ರಕಾರ ಈ ಊರು ಕುಂತಳಪುರ. ಲಕ್ಷ್ಮೀಶನೂ ಈ ಊರಿಗೆ ಇದೇ ಹೆಸರನ್ನು ಬಳಸಿದ್ದನೆನ್ನಲಾಗಿದೆ. ಚಂದ್ರಹಾಸ ದುಷ್ಟಬುದ್ಧಿಯ ಮಗಳನ್ನು ಭೇಟಿ ಮಾಡಿದ ಸ್ಥಳವೆಂದು ಇಲ್ಲಿನ 'ಶ್ರೀಂಗೇರ ತೋಟವನ್ನು' ತೋರಿಸುತ್ತಾರೆ.

ಊರಿನ ಮಧ್ಯದಲ್ಲಿ ದೊಡ್ಡ ಪ್ರಾಕಾರದ ಒಳಗೆ ಹಲವು ದೇವಾಲಯಗಳಿವೆ. ಇವುಗಳಲ್ಲಿ ಸ್ಥಳೀಯವಾಗಿ ಪ್ರಮುಖವಾದುದು ಮಹಾಮಾಯಾ ದೇವಾಲಯ. ಪ್ರಾಯಶಃ ವಿಜಯನಗರದ ಕಾಲದಲ್ಲಿ ಕಟ್ಟಲಾದ ಈ ದೇವಾಲಯ ಅನೇಕ ಆಧುನಿಕ ಸೇರ್ಪಡೆಗಳಿಂದ ಮಾರ್ಪಾಡುಗೊಂಡಿದೆ. ಇದೇ ಆವರಣದಲ್ಲಿರುವ ನವಲಿಂಗ ಎಂಬ 9 ಚಿಕ್ಕ ಶಿವದೇವಾಲಯಗಳ ಗುಂಪಿನಲ್ಲಿ ಮೂರು ನವರಂಗ ಮಂಟಪಗಳು ಮತ್ತು ಅವಕ್ಕೆ ಹೊಂದಿಕೊಂಡಂತೆ 9 ಗರ್ಭಗುಡಿಗಳಿವೆ. ಪ್ರಾಯಶಃ 10-11ನೆಯ ಶತಮಾನದಲ್ಲಿ ಕಟ್ಟಿರಬಹುದಾದ ಈ ಗುಡಿಗಳು ಬಾದಾಮಿ ಚಳುಕ್ಯ ವಾಸ್ತುಶೈಲಿ ಕಲ್ಯಾಣ ಚಾಳುಕ್ಯ ವಾಸ್ತುಶೈಲಿಯತ್ತ ಪರಿವರ್ತನೆ ಹೊಂದುತ್ತಿದ್ದ ಘಟ್ಟದ ಸೂಚಕಗಳಾಗಿವೆ. ಈ ಕಟ್ಟಡಗಳು ದ್ರಾವಿಡ ಶೈಲಿಯವು. ಪಟ್ಟದಕಲ್ಲಿನವುಗಳಂತೆ ಮರಳುಗಲ್ಲಿನಲ್ಲಿ ಅದೇ ಹೊರಮೈ ಅಲಂಕರಣ ಮತ್ತು ಶಿಖರವಿನ್ಯಾಸಗಳೊಡನೆ ಕಟ್ಟಲಾದುವು. ಆದರೆ ಒಳಗಿನ ಕಂಬಗಳು ಸ್ವಲ್ಪಮಟ್ಟಿಗೆ ತಿರುಗಣೆಯಲ್ಲಿ ಮಾಡಿದ ರೀತಿಯವು. ಇಲ್ಲಿರುವ 11-12ನೆಯ ಶತಮಾನದ ಅನೇಕ ಶಾಸನಗಳಲ್ಲಿ ಗಂಗಾ, ಕಾಳಿಕಾ, ಮಹಾಮಾಯಿ, ಸರಸ್ವತಿ ಮೊದಲಾದ ದೇವತೆಗಳಿಗೆ ಕೊಟ್ಟ ದತ್ತಿಗಳ ಪ್ರಸ್ತಾಪವಿರುವುದರಿಂದ ಈ ನವಲಿಂಗಗುಡಿ ದೇವಿಗುಡಿಗಳಾಗಿದ್ದಿರಬಹುದು ಎಂದು ಊಹಿಸಲು ಅವಕಾಶವಿದೆ.

ಗ್ರಾಮದ ನೈಋತ್ಯ ಭಾಗದಲ್ಲಿರುವ ಪ್ರಾಯಶಃ 11ನೆಯ ಶತಮಾನದ ಆದಿ ಭಾಗದ ಕಲ್ಲೇಶ್ವರ ದೇವಾಲಯ ಕಲ್ಯಾಣ ಚಾಳುಕ್ಯ ಶೈಲಿಯತ್ತಣ ನಡೆಯ ಇನ್ನೊಂದು ಘಟ್ಟವನ್ನು ಸೂಚಿಸುವಂತಿದೆ. ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖ ಅಥವಾ ನಂದಿಮಂಟಪವಿರುವ ಈ ಗುಡಿಯ ತಳವಿನ್ಯಾಸ ಪಟ್ಟದಕಲ್ಲಿನ ಗುಡಿಗಳಂತೆಯೇ ಇದೆ. ಇದೂ ಮರಳುಗಲ್ಲಿನಲ್ಲಿ ಕಟ್ಟಿದ ದ್ರಾವಿಡ ಶೈಲಿಯ ಗುಡಿ. ಆದರೆ ಶಿಖರ ಹಿಂದಿನ ದ್ರಾವಿಡ ಶಿಖರಗಳಂತೆ ಭಾರವಾದ ನಿರ್ದಿಷ್ಟವಾಗಿ ಹಂತಗಳಲ್ಲೇರುವ ಘಟ್ಟಗಳಲ್ಲಿ ಕಾಣಿಸದೆ, ಆ ಘಟ್ಟಗಳಿದ್ದರೂ ಹಲವು ಮಾರ್ಪಾಡುಗಳಿಂದ ಸ್ವಲ್ಪಮಟ್ಟಿನ ವಿರುಗೆರೆಗಳ ಧಾಟಿಯನ್ನೂ ಹೊಂದಿದೆ; ಕಲ್ಯಾಣ ಚಾಳುಕ್ಯ ಶಿಖರರೀತಿಯ ಮೊಳಕೆಯ ಘಟ್ಟದಂತೆ ತೋರುತ್ತದೆ. ಪುನಃ ಹೊರಗೋಡೆಗಳಲ್ಲಿ ಶಿಲ್ಪಾಲಂಕರಣ ಕಾಣಿಸದೆ ಕೇವಲ ದ್ರಾವಿಡ ಅಥವಾ ನಾಗರ ಸಂಪ್ರದಾಯದ ಶಿಖರಗಳನ್ನು ಹೊತ್ತ ಒಂಟಿ ಅರೆಗಂಬ ಅಥವಾ ಕೋಷ್ಠಗಳಿಂದ ಅಲಂಕೃತವಾಗಿದೆ. ಒಳಗಿನ ಕಂಬಗಳು ನವಲಿಂಗ ದೇವಾಲಯಕ್ಕಿಂತಲೂ ಸ್ವಲ್ಪ ಮುಂದಣ ಘಟ್ಟದವೆನಿಸುತ್ತವೆ. ದೇವಾಲಯದ ಒಳಗೆ ಶಿವ ಮತ್ತು ಬ್ರಹ್ಮನ ಒಂದೊಂದು ಶಿಲ್ಪಗಳುಂಟು. ಇವು ಸ್ಪಷ್ಟವಾಗಿ ಬೆಳೆದ ಕಲ್ಯಾಣ ಚಾಳುಕ್ಯ ಶೈಲಿಯವು. ಆ ದೇವಾಲಯದ ಕಾಲಕ್ಕಿಂತ ಇವು ಈಚಿನವಿರಬಹುದೆಂದೂ ಭಾವಿಸಲಾಗಿದೆ. *

**ಕುಕ್ಕಿಲ ಕೃಷ್ಣಭಟ್ಟ :** 1911-88. ಸಂಗೀತಶಾಸ್ತ್ರ, ನಾಟ್ಯಶಾಸ್ತ್ರ, ಯಕ್ಷಗಾನ, ಛಂದಸ್ಸು, ಗ್ರಂಥಸಂಪಾದನೆ, ಅನುವಾದ, ಸಂಶೋಧನೆಯ ಕ್ಷೇತ್ರಗಳಲ್ಲಿ ಕೆಲಸ ಮಾಡಿದ ಹೆಸರಾಂತ ವಿದ್ವಾಂಸರು. ದಕ್ಷಿಣ ಕನ್ನಡದ ವಿಟ್ಲ ಪಡ್ನೂರಿನ ಕುಕ್ಕಿಲ ಎಂಬ ಹಳ್ಳಿಯಲ್ಲಿ 1911 ಜುಲೈ 3ರಂದು ಜನಿಸಿದರು. ತಂದೆ ನಾರಾಯಣ ಭಟ್ಟ, ತಾಯಿ ಗೌರಮ್ಮ. ಇವರದು ಕೃಷಿಕ ಮನೆತನ. ಅಜ್ಜ ಕೃಷ್ಣಭಟ್ಟರಿಂದ ಕನ್ನಡ ಮತ್ತು ಸಂಸ್ಕೃತದ ಅಭ್ಯಾಸ ನಡೆಸಿದರು. ಸೋದರಮಾವ ಬಡೆಕ್ಕಿಲ ವೆಂಕಟರಮಣಭಟ್ಟರ ಒತ್ತಾಸೆ ಪುತ್ತೂರು ಬೋರ್ಡ್ ಹೈಸ್ಕೂಲಿನಲ್ಲಿ ಓದುವಾಗ ದೊರಕಿತು. ಹಾಗೆಯೇ ಕಡವ ಶಂಭುಶರ್ಮ, ಕನ್ನೆಪ್ಪಾಡಿ ಪರಮೇಶ್ವರಶಾಸ್ತ್ರಿಗಳ ಶಿಷ್ಯತ್ವ

ದೊರಕಿತು. ಕಡವ ಶಂಭುಶರ್ಮರಲ್ಲಿ ಭರತನ ನಾಟ್ಯಶಾಸ್ತ್ರವನ್ನು ವ್ಯಾಖ್ಯಾನಸಮೇತ ಹಲವು ವರ್ಷಗಳ ಕಾಲ ದೀರ್ಘ ವ್ಯಾಸಂಗ ಮಾಡಿದರು. ಎಂಟನೆಯ ತರಗತಿಗೆ ಶಾಲೆಯ ಓದು ನಿಂತಿತು. ಆದರೆ ಓದುವ ಆಸಕ್ತಿ ಕಡಿಮೆಯಾಗಲಿಲ್ಲ. ಸ್ವಾಧ್ಯಾಯದ ಮೂಲಕ ಕಲಿತು, ವಿದ್ವಾಂಸರಾದರು. ಸೇಡಿಯಾಪು ಕೃಷ್ಣಭಟ್ಟರು ಇವರ ಹತ್ತಿರದ ಸಂಬಂಧಿ. ಅವರ ಸಲಹೆಯಂತೆ ಮಂಗಳೂರಿಗೆ ಬಂದು ಬನಾರಸಿನ ಪ್ರವೇಶ ಪರೀಕ್ಷೆಗೆ ತಯಾರಿ ನಡೆಸಿದರು. ಆದರೆ ಸ್ವಾತಂತ್ರ್ಯ ಹೋರಾಟದ ಚಳವಳಿಯಿಂದಾಗಿ ಪರೀಕ್ಷೆ ನಡೆಯಲಿಲ್ಲ. ಸ್ವಲ್ಪ ಸಮಯ ಕನ್ನಡ ವಿದ್ವಾನ್ ಪರೀಕ್ಷೆಗೆಂದು ಅಭ್ಯಾಸ ಮಾಡಿದರು. ರಾಷ್ಟ್ರಬಂಧು ಪತ್ರಿಕೆಯಲ್ಲಿ ಕೆಲಕಾಲ ಉದ್ಯೋಗಿಯಾಗಿದ್ದರು. ಇವರಿಗೆ ಕಾವ್ಯವಾಚನ, ತಾಳಮದ್ದಳೆಯಲ್ಲಿ ವಿಶೇಷ ಅಭಿರುಚಿ; ಸಂಗೀತ, ಯಕ್ಷಗಾನ ಮತ್ತು ನಾಟ್ಯಶಾಸ್ತ್ರದಲ್ಲಿ ಒಲವು. ಮಂಗಳೂರಿನ ಸಂಗೀತ ವಿದ್ವಾಂಸರಾದ ಎಚ್.ಕೃಷ್ಣಉಡುಪರಲ್ಲಿ ಸಂಗೀತವ್ಯಾಸಂಗ ಮಾಡಿದರು. ಇವರಿಗೆ ಗಮಕ ಹಾಗೂ ಭಾಗವತಿಕೆಯಲ್ಲಿಯೂ ಪ್ರವೇಶವಿತ್ತು.



ಭಾರತೀಯ ಸಂಗೀತಶಾಸ್ತ್ರ (1971), ಪಾರ್ತಿಸುಬ್ಬನ ಯಕ್ಷಗಾನಗಳು (1975), ನಾಗವರ್ಮನ ಛಂದೋಂಬುಧಿ (1975), ಸಿಲಪ್ಪದಿಗಾರಂ (2000), ದ್ರಾವಿಡ ಛಂದಸ್ಸು (2002) ಇವರ ಮುಖ್ಯ ಕೃತಿಗಳು. ಇವರು ಸಂಪಾದಿಸಿದ ನಾಗವರ್ಮನ ಛಂದೋಂಬುಧಿ ಗ್ರಂಥಸಂಪಾದನೆಯ ಕ್ಷೇತ್ರಕ್ಕೊಂದು ಮಾದರಿ. ಛಂದಸ್ಸಿನ ಮೂಲತತ್ತ್ವಗಳು, ಲೌಕಿಕ ಸಂಸ್ಕೃತ ಛಂದಸ್ಸು, ಕರ್ನಾಟಕ ಭಾಷಾಜಾತಿಗಳು, ಗಣಗಳ ಹುಟ್ಟು, ಕನ್ನಡದ ಗಣ ಮತ್ತು ಅಕ್ಷರಗಳ ನಡುವಿರುವ ವ್ಯತ್ಯಾಸ, ಲಯ, ಗತಿ, ಯತಿ, ಪ್ರಾಸ, ಮೂಜುವಜೆ ಭಾಷೆಗಳು, ರಗಳೆ ಮೊದಲಾದ ಛಂದಸ್ಸಿನ ಅಧ್ಯಯನದ ಪ್ರವೇಶಕ್ಕೆ ಅಗತ್ಯವಿರುವ ಮೂಲಭೂತ ವಿಷಯಗಳನ್ನು ಇಲ್ಲಿ ವಿವೇಚಿಸಲಾಗಿದೆ.

ಭಾರತೀಯ ಸಂಗೀತಶಾಸ್ತ್ರ ಗಾತ್ರದಲ್ಲಿ ಚಿಕ್ಕದಾದರೂ ಪುರಾತನ ಸಂಗೀತ ಸ್ವರೂಪದ ವಿವೇಚನೆಯುಳ್ಳ ಕೃತಿ. ಸ್ವರ - ಗ್ರಾಮ, ಸಾಮಗಾನ-ಗಾಂಧರ್ವ, ಭರತನ ಶ್ರುತಿ ನಿರ್ಣಯ, ಶ್ರುತಿ ಸಮಸ್ಯೆ, ಸಂಗೀತ ರತ್ನಾಕರ, ದೇಶೀಯ ಅಶಾಸ್ತ್ರೀಯತೆ, ಶಾರ್ಙ್ಗದೇವನ ಸ್ವರ ಸಮೀಕರಣ, ಸಂಗೀತ ರತ್ನಾಕರದ ಕನ್ನಡ ವ್ಯಾಖ್ಯಾನ ಎಂಬ ಅಧ್ಯಯನಗಳು ಈ ಕೃತಿಯಲ್ಲಿವೆ. ಭರತನ ಶ್ರುತಿ ನಿರ್ಣಯ, ಶ್ರುತಿ ಸಮಸ್ಯೆ, ಇಪ್ಪತ್ತೆರಡು ಶ್ರುತಿಗಳ ಬಗೆಗೆ ಅಪೂರ್ವ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ.

'ಪಾರ್ತಿಸುಬ್ಬನ ಯಕ್ಷಗಾನಗಳು' ಪಾರ್ತಿಸುಬ್ಬನ ಎಲ್ಲಾ ಯಕ್ಷಗಾನ ಪ್ರಸಂಗಗಳನ್ನುಳ್ಳ ಇನ್ನೊಂದು ಸಂಪಾದಿತ ಕೃತಿ. ಯಕ್ಷಗಾನ ಪ್ರಸಂಗಸಾಹಿತ್ಯದಲ್ಲಿ ಬಳಕೆಯಾಗುವ ಬತ್ತೀಸರಾಗವನ್ನು, ಬತ್ತೀಸತಾಳಕ್ಕೆ ಅಳವಡಿಸಿ ಇಲ್ಲಿ ನೀಡಿದ್ದಾರೆ. ಪಾರ್ತಿಸುಬ್ಬ ಪ್ರಸ್ತಾಪಿಸುವ ಸಭಾಲಕ್ಷಣ ಭಾಗ ಇಲ್ಲಿ ಸೇರಿದೆ. ಶಿವರಾಮ ಕಾರಂತರು ತಮ್ಮ ಯಕ್ಷಗಾನ ಬಯಲಾಟ ಕೃತಿಯಲ್ಲಿ ಪ್ರಸ್ತಾಪಿಸಿದ ಹಲವು ಅಂಶಗಳನ್ನು ಕುಕ್ಕಿಲರು ಇಲ್ಲಿ ಮರುವಿಮರ್ಶಿಸಿದ್ದಾರೆ. ಪಾರ್ತಿಸುಬ್ಬನ ಬಗೆಗೆ ವಿದ್ವಾಂಸರಲ್ಲಿದ್ದ ಹಲವು ಸಂದೇಹಗಳಿಗೆ ತಮ್ಮ ಆಳವಾದ ಅಧ್ಯಯನದ ಮೂಲಕ ಪರಿಹಾರಗಳನ್ನು ಸೂಚಿಸಿದ್ದಾರೆ. ಈ ಕೃತಿಗೆ ಬರೆದಿರುವ ವಿಸ್ತಾರವಾದ ಪೀಠಿಕೆ ಇವರ ವಿದ್ವತ್ತಿಗೆ ಸಾಕ್ಷಿಯಾಗಿದೆ. ಒಟ್ಟು 32 ತಾಳಗಳನ್ನು ಗುರುತಿಸಿ ಇವುಗಳಿಗೆ ಸಂಗೀತಶಾಸ್ತ್ರದಲ್ಲಿ ನೀಡಿರುವ ಪರ್ಯಾಯ ಹೆಸರುಗಳನ್ನು ನೀಡಿದ್ದಾರೆ.

ಸಿಲಪ್ಪದಿಗಾರಂ ತಮಿಳು ಮಹಾಕಾವ್ಯದ ಕನ್ನಡ ಗದ್ಯ ಕಥಾರೂಪ. ಸಂಘಂ ಸಾಹಿತ್ಯದ ಅನಂತರ ತಮಿಳಿನಲ್ಲಿ ಬಂದ ಪಂಚ ಮಹಾಕಾವ್ಯಗಳಲ್ಲಿ ಇದು ಮೊದಲಿನದು. ದ್ರಾವಿಡ ಸಂಸ್ಕೃತಿಯ ವಸ್ತು ಕೃತಿಯ ಕೇಂದ್ರದಲ್ಲಿದೆ. ಸರಳವಾದ ಭಾಷೆ, ಲಲಿತವಾದ ಶೈಲಿ ಈ ಅನುವಾದಿತ ಕೃತಿಯ ವೈಶಿಷ್ಟ್ಯ.

ದ್ರಾವಿಡ ಛಂದಸ್ಸು ಎಂಬ (ಸಂ: ಶತಾವಧಾನಿ ಆರ್ ಗಣೇಶ್) ಕೃತಿಯಲ್ಲಿ ಮುಖ್ಯವಾಗಿ ತಮಿಳು ಛಂದಸ್ಸಿನ ವಿವೇಚನೆ ಮತ್ತು ತೊಲ್ಕಾಪ್ಪಿಯಮ್ ಕೃತಿಯ ಭಾವಾನುವಾದವಿದೆ. ದ್ರಾವಿಡ ಛಂದಸ್ಸು ಸಾಮಾನ್ಯ ಪರಿಚಯ, ಉಗಮ, ವಿಕಾಸ, ವ್ಯಾಪ್ತಿ - ತೊಲ್ಕಾಪ್ಪಿಯಮ್, ಎಮಿತ್ತದಿಕಾರಮ್, ವರ್ಣಾಧಿಕಾರ; ತೊಲ್ಕಾಪ್ಪಿಯಮ್, ಚೆಯ್‌ಯುಳಿಯುಲ್ ಛಂದೋವಿಲಾಸ; ಯಾಪ್ಪರುಂಕಲಮ್‌ಕಾರಿಕ್ಕೆ ಲಕ್ಷ್ಯೋದಾಹರಣೆಗಳು ಎಂಬ ನಾಲ್ಕು ಅಧ್ಯಾಯಗಳಿವೆ. ತಮಿಳು ವರ್ಣಮಾಲೆ ಮತ್ತು ಸಂಜ್ಞೆಯ ವಿವರಣೆಯ ಹಿನ್ನೆಲೆಯಲ್ಲಿ ಅನಾವರಣಗೊಳ್ಳುವ ದ್ರಾವಿಡ ಛಂದಸ್ಸು ಕುಕ್ಕಿಲರ ವಿಸ್ತಾರವಾದ ಓದು, ಪಾಂಡಿತ್ಯಕ್ಕೆ ಇನ್ನೊಂದು ನಿದರ್ಶನ.

ಕುಕ್ಕಿಲ ಸಂಪುಟ (ಸಂ: ಎಂ.ಪ್ರಭಾಕರ ಜೋಶಿ) ಬೇರೆ ಬೇರೆ ಸಂದರ್ಭಗಳಲ್ಲಿ ಕುಕ್ಕಿಲರು ಯಕ್ಷಗಾನ, ಛಂದಸ್ಸು, ನಾಟ್ಯಶಾಸ್ತ್ರ, ಸಂಗೀತಶಾಸ್ತ್ರ, ವ್ಯಾಕರಣ, ಕಾವ್ಯ, ಭಾಷಾವಿಜ್ಞಾನಕ್ಕೆ ಸಂಬಂಧಿಸಿದಂತೆ ಬರೆದ 25 ಬಿಡಿ ಲೇಖನಗಳ ಸಂಗ್ರಹ. ಇವರು 1988 ಜುಲೈ 21ರಂದು ನಿಧನಹೊಂದಿದರು.

(ಎಸ್.ಎಚ್.ಜಿ.)

**ಕುಕ್ಕೆ, ಎಸ್.ಎಸ್. :** 1918-91. ಪ್ರಸಿದ್ಧ ಚಿತ್ರಕಲಾವಿದ; ಲಲಿತಕಲಾತಜ್ಞ. ಕುಕ್ಕೆ ಶ್ರೀಕಂಠಶಾಸ್ತ್ರಿ ಇವರ ಪೂರ್ಣ ಹೆಸರು. ತಂದೆ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿ, ತಾಯಿ ಸಂಕಮ್ಮ. 1918 ಜೂನ್ 8ರಂದು ಶಿವಮೊಗ್ಗದಲ್ಲಿ ಜನಿಸಿದರು. ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಅನುತ್ತೀರ್ಣರಾದ ಇವರು ಪಂಡಿತರ ಮನೆತನದಲ್ಲಿ ಹುಟ್ಟಿದರೂ ಶೈಕ್ಷಣಿಕ ವಿದ್ಯಾಭ್ಯಾಸದಲ್ಲಿ ಹಿಂದುಳಿದರು. ತಮ್ಮ ಒಂಬತ್ತನೆಯ ವಯಸ್ಸಿನಲ್ಲಿ ಶಾಲೆಯಲ್ಲಿ ಉಪಾಧ್ಯಾಯರ ಪಾಠಕ್ಕೆ ಗಮನಕೊಡದೆ ಅವರ ಭಾವಚಿತ್ರವನ್ನು ರಚಿಸಿದರು. ಇದರಿಂದ ಉಪಾಧ್ಯಾಯರ ಕೋಪಕ್ಕೆ ಒಳಗಾಗಿ ಬೆತ್ತದ ರುಚಿಕಂಡು ಶಾಲೆಯಿಂದ ಹೊರಹಾಕಲಾಗಿದ್ದರಿಂದ ಇವರ ಸಾಮಾನ್ಯ ಶಿಕ್ಷಣ ಕೊನೆಗೊಂಡಿತು.

ಶಿವಮೊಗ್ಗದ ಚಿತ್ರಕಲಾ ಶಿಕ್ಷಕರಾದ ರಾಮಕೃಷ್ಣ ಮತ್ತು ಎ.ಜಿ. ಮೂರ್ತಿಯವರ ಸ್ನೇಹ ಸಹವಾಸದಿಂದ ಇವರ ಚಿತ್ರಕಲಾಸಕ್ತಿ ಮೊಳಕೆಯೊಡೆಯಿತು. ಮದರಾಸಿನ ಎಲ್.ಎ. (ಲೋಯರ್) ಆರ್ಟ್ಸ್ ಪರೀಕ್ಷೆಯಲ್ಲಿ ಇವರು ಪ್ರಥಮಶ್ರೇಣಿಯಲ್ಲಿ ತೇರ್ಗಡೆಯಾದರು. ತಂದೆಯವರೊಂದಿಗೆ ಶೃಂಗೇರಿಗೆ ಹೋಗಿದ್ದ ಸಂದರ್ಭದಲ್ಲಿ ತುಂಗಾನದಿ ದಡದಲ್ಲಿದ್ದ ವಿದ್ಯಾಶಂಕರ ದೇವಾಲಯದ ಪೆನ್ಸಿಲ್ ಸ್ಕೆಚ್ ಮಾಡಿ ಗುರುಗಳಾದ ಚಂದ್ರಶೇಖರ ಭಾರತಿ ಸ್ವಾಮಿಗಳಿಗೆ ಸಮರ್ಪಿಸಿ ಅವರ ಆಶೀರ್ವಾದ ಪಡೆದರು. ಶೃಂಗೇರಿಯ ಮಠದಲ್ಲಿ ಸಂಸ್ಕೃತ ಅಧ್ಯಯನ ನಡೆಸಿ ಪಂಡಿತೋತ್ತಮನಾಗುವುದನ್ನು ಬಿಟ್ಟು ಕುಟುಂಬದ ಹಿರಿಯರ ವಿರೋಧವನ್ನು ಎದುರಿಸಿ ಮೈಸೂರಿನ ರೈಲು ಹತ್ತಿದರು. ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆ ಸೇರಲು ಅರ್ಹತಾ ಪ್ರವೇಶ ಪರೀಕ್ಷೆಗೆ ಕುಳಿತರು. ಕಲಾ ಶಾಲೆಯ ಅಧೀಕ್ಷರಾಗಿದ್ದ ರಾಮಸ್ವಾಮಿ ಐಯ್ಯಂಗಾರ್ ಮತ್ತು ಸಹಾಯಕ ಅಧೀಕ್ಷರಾಗಿದ್ದ ಎನ್.ಜಿ.ಪಾವಂಜೆಯವರು ಇವರ ಚಿತ್ರಕಲಾ ಪ್ರೌಢಿಮೆಯನ್ನು ಕಂಡು ಮೊದಲನೆಯ ತರಗತಿಗೆ ಸೇರಬೇಕಾಗಿದ್ದ ವಿದ್ಯಾರ್ಥಿಯನ್ನು ನೇರವಾಗಿ ನಾಲ್ಕನೆಯ ತರಗತಿಗೆ ಸೇರಿಸಿಕೊಳ್ಳಲು ಶಿಫಾರಸು ಮಾಡಿದರು. ಇವರ ಹಿನ್ನೆಲೆ ಮತ್ತು ಆರ್ಥಿಕ ಪರಿಸ್ಥಿತಿ ಅರಿತು ವಿದ್ಯಾರ್ಥಿ ವೇತನ ಕೊಡಿಸಿ ಅನುಕೂಲ ಮಾಡಿಕೊಟ್ಟರು. ಆದರೆ ತಿಂಗಳಿಗೆ ಹನ್ನೆರಡು ರೂಪಾಯಿ ವಿದ್ಯಾರ್ಥಿವೇತನದಲ್ಲಿ ಊಟ, ವಸತಿ, ಬಣ್ಣ ಬ್ರಷ್ ಎಲ್ಲದಕ್ಕೂ ಹಣ ಸಾಲದಾದಾಗ ಅಧ್ಯಾಪಕ ಕೇಶವಯ್ಯ ಇವರ ಕಷ್ಟವನ್ನು ಗಮನಿಸಿ ಸ್ವಂತಕ್ಕೆ ಚಿತ್ರಗಳನ್ನು ರಚಿಸುವಾಗ ಸಹಾಯಕನಾಗಿ ಕೆಲಸಮಾಡುವಂತೆ ತಿಳಿಸಿ, ಆ ಕೆಲಸಕ್ಕೆ ದಿನಕ್ಕೆ ಹನ್ನೆರಡಾಣೆ ಮಜೂರಿ ಕೊಟ್ಟು ನೆರವಾದರು.

ಪ್ರತಿಭಾನ್ವಿತ ಕಲಾವಿದ್ಯಾರ್ಥಿಯಾಗಿದ್ದ ಕುಕ್ಕೆಯವರು ಮದರಾಸಿನ ಹೈಯರ್ ಕಲಾಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಹೊಂದಿದರು. ಮೈಸೂರಿನ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯ ಐದು ವರ್ಷಗಳ ಡಿಪ್ಲೊಮ ಶಿಕ್ಷಣವನ್ನು ಪ್ರಥಮ ಶ್ರೇಣಿಯಲ್ಲಿ ಪೂರೈಸಿದರು. ಅನಂತರ ಶಿವಮೊಗ್ಗದಲ್ಲಿ ಚಿತ್ರಕಲೆ ಮತ್ತು ಅಂಗಸಾಧನೆಯನ್ನು ಕಲಿಸಲಾರಂಭಿಸಿದರು. ಉತ್ತಮ ದೇಹದಾರ್ಢ್ಯ ಹೊಂದಿದ್ದ ಇವರಿಗೆ ಜಿಲ್ಲಾ ಆರೋಗ್ಯ ಇಲಾಖೆ ಮಲ್ನಾಡ್ ಬೆಸ್ಟ್ ಎಂಬ ಬಿರುದು ನೀಡಿತ್ತು. ಮೈಸೂರಿನ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯಿಂದ ಕ್ರಾಫ್ಟ್‌ಮನ್ ಹುದ್ದೆಗೆ ಆದೇಶಗೊಂಡು ಸೇರಿದರಾದರೂ ಆ ಕೆಲಸ ಇವರಿಗೆ ಹಿಡಿಸಲಿಲ್ಲವಾದ್ದರಿಂದ ಕೆಲಸ ತ್ಯಜಿಸಿದರು. ಬಳಿಕ ಗುರುಗಳಾದ ಕೇಶವಯ್ಯನವರೊಂದಿಗೆ ಅರಮನೆಯಲ್ಲಿ ದಸರಾ ಪ್ಯಾನಲ್ ಕೆಲಸ ಪ್ರಾರಂಭಿಸಿದರು. ಅನಾರೋಗ್ಯದ ಕಾರಣ ಶಿವಮೊಗ್ಗೆಗೆ ಮರಳಿದವರಿಗೆ ಅಣ್ಣ ಸೀತಾರಾಮಶಾಸ್ತ್ರಿಗಳು ಕ್ಯಾಮರಾ ಕೊಡಿಸಿ ಫೋಟೋ ಸ್ಟುಡಿಯೋ ಪ್ರಾರಂಭಿಸಲು ನೆರವಾದರು. ಆದರೆ ಲಾಭವಿಲ್ಲದ ಕಾರಣ ಸ್ಟುಡಿಯೋ ಮುಚ್ಚಬೇಕಾಯಿತು. ವಿವಾಹನಂತರ ಮಾವನವರೊಂದಿಗೆ ಬೆಂಗಳೂರಿಗೆ ಬಂದು ಚಿಕ್ಕಪೇಟೆಯಲ್ಲಿ ಕುಕ್ಕೆ ಬ್ರದರ್ಸ್ ಎಂಬ ಹೆಸರಿನಲ್ಲಿ ಫೋಟೋ ಸ್ಟುಡಿಯೋ ಸ್ಥಾಪಿಸಿದರು. ಅದರಲ್ಲಿ ಚಿತ್ರಕಲಾ ಸ್ಟುಡಿಯೋ ಸಹ ಹೊಂದಿದ್ದರು. ವಾಣಿಜ್ಯ ಕಲಾವಿದರಾಗಿ ವೃತ್ತಿ ಜೀವನ ಆರಂಭಿಸಿದ ಇವರಿಗೆ ಒಂದಾದ ಮೇಲೊಂದು ಕೆಲಸಗಳು ಸಿಕ್ಕಿ ಪರಿಸ್ಥಿತಿ ಸುಧಾರಿಸಿತು.

ಚಲನಚಿತ್ರ ಕ್ಷೇತ್ರದಲ್ಲಿ ಹೆಸರಾಗಿದ್ದ ನಟ, ಸಂಗೀತಗಾರ ಹೊನ್ನಪ್ಪ ಭಾಗವತರ್ ಮತ್ತು ಕು.ರಾ.ಸೀತಾರಾಮಶಾಸ್ತ್ರಿಗಳ ಸಂಪರ್ಕ ಇವರಿಗೆ ಬಂತು. ಇವರನ್ನು ಮಹಾಕವಿ ಕಾಳಿದಾಸ ಚಲನಚಿತ್ರ ಕಲಾನಿರ್ದೇಶಕರಾಗಿ ಹೊನ್ನಪ್ಪ ಭಾಗವತರು ಆಹ್ವಾನಿಸಿದರು. ಈ ಕೆಲಸದಲ್ಲಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿ ಚಿತ್ರ ಹೆಸರು ಗಳಿಸಲು ಸಹಾಯಕರಾದರು. ಅನಂತರ ಕೈವಾರ ಮಹಾತ್ಮೆ ಚಿತ್ರದ ಕಲಾನಿರ್ದೇಶಕರಾಗಿ ಕಾರ್ಯನಿರ್ವಹಿಸಿದರು.

ಕಲಾ ಮಾಧ್ಯಮದ ವಿವಿಧ ತಂತ್ರಗಳು ಇವರಿಗೆ ಸಿದ್ಧಿಸಿದ್ದವು. ಬ್ರಷ್‌ನಿಂದಲ್ಲದೆ, ಬ್ಲೇಡಿನಿಂದ, ದಾರದಿಂದ ಬಣ್ಣಲೇಪನ ಮಾಡುವುದು, ಕಾಲ್ಬೆರಳಿನಿಂದ, ಒಂದೇ ಕೈಯಿಂದ, ಎರಡೂ ಕೈಯಿಂದ ಚಿತ್ರರಚನೆ, ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಚಿತ್ರರಚನೆ ಮಾಡುವುದು ಇವರು ತೋರಿಸುತ್ತಿದ್ದ ಕೆಲವು ಚಮತ್ಕಾರಗಳು. ಚಿತ್ರ ಮಾಧ್ಯಮವೇ ಅಲ್ಲದೇ ಇವರು ಶಿಲ್ಪಕೃತಿಗಳ ರಚನೆಯನ್ನೂ ದಂತದಲ್ಲಿ, ತೇಗ, ಬೀಟೆ ಮರಗಳಲ್ಲಿ, ಪ್ಲಾಸ್ಟರ್ ಆಫ್ ಪ್ಯಾರೀಸ್ ಮಿಶ್ರಣದಲ್ಲಿ ಮಾಡಿದರು. ಶೀಘ್ರ ರೇಖಾ ರಚನೆ ಮತ್ತು ವ್ಯಕ್ತಿ ಚಿತ್ರಣ ಇವರಿಗೆ ಪ್ರಿಯವಾದ ಮಾಧ್ಯಮಗಳಾಗಿದ್ದವು.

ಮೈಸೂರು ಚಿತ್ರಕಲಾ ಪರಿಷತ್‌ನ (ಇಂದಿನ ಕರ್ನಾಟಕ ಚಿತ್ರ ಕಲಾ ಪರಿಷತ್ತು) ಸಂಸ್ಥಾಪಕ ಸದಸ್ಯರಾಗಿ ಮಹತ್ತರ ಪಾತ್ರವಹಿಸಿದರು. ಸಿದ್ದವನಹಳ್ಳಿ ಕೃಷ್ಣಶರ್ಮರ ಸಹಾಯದಿಂದ ಚಿತ್ರಕಲಾ ವಿದ್ಯಾಲಯ ಪ್ರಾರಂಭಿಸಿ ಕಲಾ ಶಿಕ್ಷಣಶಾಲೆಗೆ ಪ್ರಥಮ ಪ್ರಾಂಶುಪಾಲರಾಗಿ ನಿಯೋಜಿತರಾದರು. ಈ ಅವಧಿಯಲ್ಲಿ ಇವರು ಅನೇಕ ಕಲಾವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ನೀಡಿ ಉತ್ತಮ ಕಲಾವಿದರನ್ನಾಗಿ ರೂಪಿಸಿದರು. 22 ಮಂದಿ ವಿದ್ಯಾರ್ಥಿಗಳಿಂದ ಪ್ರಾರಂಭವಾದ ಈ ಕಲಾಶಾಲೆ ನೂರಾರು ಕಲಾ ವಿದ್ಯಾರ್ಥಿಗಳಿಗೆ ಸ್ನಾತಕೋತ್ತರ ಪದವಿಯನ್ನು ನೀಡುವ ಚಿತ್ರಕಲಾ ಮಹಾವಿದ್ಯಾಲಯವಾಗಿ ಬೆಳೆದಿದೆ. ಇವರ ಕಲಾ ಪ್ರದರ್ಶನಗಳು ಹಲವು ಸಂಘ ಸಂಸ್ಥೆಗಳು ಹಾಗೂ ಅಕಾಡೆಮಿಗಳ ಮೂಲಕ ನಡೆದಿವೆ. ಚಿತ್ರಕಲಾ ಪರಿಷತ್ತು ಏರ್ಪಡಿಸಿದ್ದ ಕಲಾ ಶಿಬಿರಗಳಲ್ಲಿ ಇವರು ಪ್ರಮುಖ ಪಾತ್ರವಹಿಸುತ್ತಿದ್ದರು. ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್‌ನಲ್ಲಿ ಲಲಿತಾ ಕಲಾ ಅಕಾಡೆಮಿ ನೆರವಿನಿಂದ ಇವರೇ ಏರ್ಪಡಿಸಿದ್ದ ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನದಲ್ಲಿ ಉಗುರಿನಿಂದ, ಚಾಕು ಅಲುಗಿನಿಂದ, ಕುಂಚದಿಂದ ರಚಿತವಾಗಿದ್ದ ಸುಮಾರು 46 ಕೃತಿಗಳನ್ನು ಪ್ರದರ್ಶಿಸಿದ್ದರು. ಪರಂಪರಾಗತ ಸಾಹಿತ್ಯ ಕಲಾಸಂಸ್ಕಾರಗಳು ಇವರಲ್ಲಿ ಸ್ವಾಭಾವಿಕವಾಗಿಯೆ ಬಂದಿದ್ದುವು. ಕಾವ್ಯ ಸನ್ನಿವೇಶಗಳನ್ನು ದೃಶ್ಯ ರೂಪಗಳಲ್ಲಿ ಚಿತ್ರಕಲೆಯ ಮೂಲಕ ಚಿತ್ರಿಸಿದರು. ಸಂಸ್ಕೃತ ಕಾವ್ಯ ಶ್ಲೋಕಗಳ ಸೂಕ್ಷ್ಮ ವರ್ಣನೆಗಳನ್ನು ಆಧರಿಸಿ ರಚಿಸಿದ ಇವರ ಪ್ರತಿಯೊಂದು ಕೃತಿಯೂ ಅಪಾರ ಶ್ರಮದ ಕುಸುರಿ ಕೆಲಸದಿಂದ ಸಾಮಾನ್ಯ ವೀಕ್ಷಕರನ್ನೂ ತಲಪುವಲ್ಲಿ ಯಶಸ್ವಿಯಾಯಿತು. ಬೆಂಗಳೂರಿನ ವೆಂಕಟಪ್ಪ ಕಲಾಭವನ, ಮೈಸೂರು ದಸರ ವಸ್ತುಪ್ರದರ್ಶನಗಳಲ್ಲಿ ಪುರಾಣ, ಇತಿಹಾಸಗಳಿಗೆ ಸಂಬಂಧಿಸಿದ ವ್ಯಕ್ತಿ ಚಿತ್ರಗಳು, ಪ್ರಾಚೀನ ಕಾವ್ಯಗಳನ್ನಾಧರಿಸಿದ ಮೇನಕಾ ವಿಶ್ವಾಮಿತ್ರ, ಕುಮಾರ ಸಂಭವ ಮೊದಲಾದ ಕಲಾಕೃತಿಗಳು ಪ್ರದರ್ಶನಗೊಂಡಿವೆ.

ಇವರಿಗೆ ಅನೇಕ ಸನ್ಮಾನ ಗೌರವಗಳು ಲಭಿಸಿವೆ. ಹಿಂದೆ ಮೈಸೂರು ದಸರ ವಸ್ತುಪ್ರದರ್ಶನದ ಚಿತ್ರಕಲಾ ಪ್ರದರ್ಶನದಲ್ಲಿ ಬಹುಮಾನ ಗಳಿಸುವುದು ಪ್ರತಿಷ್ಠೆಯ ಸಂಕೇತವಾಗಿತ್ತು. ಇವರಿಗೆ 1940ರಿಂದ ಸತತವಾಗಿ 30ಕ್ಕೂ ಹೆಚ್ಚು ಬಹುಮಾನಗಳು ಬಂದವು. ಸತತ ಏಳು ವರ್ಷಗಳು ಪ್ರಥಮ ಬಹುಮಾನ ಪಡೆದರು. ಬೆಂಗಳೂರಿನಲ್ಲಿ ಜರುಗಿದ ಅಖಿಲ ಭಾರತ ಕಲಾ ಪ್ರದರ್ಶನದಲ್ಲಿ ಪ್ರಜಾವಾಣಿಯವರ ವಿಶೇಷ ಬಹುಮಾನ ಲಭ್ಯವಾಗಿತ್ತು. ನಲವತ್ತೊಂಬತ್ತನೆಯ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಇವರನ್ನು ಸನ್ಮಾನಿಸಿತು. ವಿಧಾನಸೌಧದಲ್ಲಿ ನಾಡಿನ ಖ್ಯಾತ ಚಿತ್ರಕಲಾವಿದರನ್ನು ಸನ್ಮಾನಿಸುವ ಸಮಾರಂಭದಲ್ಲಿ ಸನ್ಮಾನವಾಯಿತು. (1973). ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ (1982), ರಾಜ್ಯೋತ್ಸವ ಪ್ರಶಸ್ತಿ (1976) ಇವರಿಗೆ ಲಭಿಸಿವೆ.

ಇವರ ಕಲಾಕೃತಿಗಳನ್ನು ಕರ್ನಾಟಕದ ಅನೇಕ ಕಡೆ ಪ್ರದರ್ಶಿಸಲಾಗಿದೆ. ಬೆಂಗಳೂರಿನ ಜಯನಗರದಲ್ಲಿರುವ ಇವರ ನಿವಾಸದಲ್ಲಿ ತಮ್ಮ ತಂದೆಯವರ ಹೆಸರಿನಲ್ಲಿ ಸ್ಥಾಪಿಸಿದ ಸುಬ್ರಹ್ಮಣ್ಯ ಆರ್ಟ್ ಗ್ಯಾಲರಿಯಲ್ಲಿಯೂ ಇವರ ಕಲಾ ಕೃತಿಗಳಿವೆ. ಇವರು 1991 ಜನವರಿ 1ರಂದು ನಿಧನರಾದರು. (ಎಸ್‌ಯು.ಎಂ.)

**ಕುಡಚಿ :** ಬೆಳಗಾಂವಿ ಜಿಲ್ಲೆ ರಾಯಭಾಗ ತಾಲ್ಲೂಕಿನಲ್ಲಿ ಕಸಬೆಯಿಂದ ಸು.18ಕಿಮೀ ಉತ್ತರ ಈಶಾನ್ಯದಲ್ಲಿ ಕೃಷ್ಣಾನದಿಯ ಬಲದಂಡೆಯಲ್ಲಿರುವ ಊರು. ಹುಬ್ಬಳ್ಳಿ - ಪುಣೆ ರೈಲುಮಾರ್ಗದ ಒಂದು ನಿಲ್ದಾಣ. ಕೃಷ್ಣಾನದಿಗೆ ಈ ಊರಿನ ಬಳಿ ದೊಡ್ಡ ಸೇತುವೆಯೊಂದನ್ನು ರಚಿಸಲಾಗಿದ್ದು ಇದು ಮಹಾರಾಷ್ಟ್ರದ ಮೀರಜ್ ಮೊದಲಾದೆಡೆಗಳಿಂದ ರಾಯಭಾಗ ತಾಲ್ಲೂಕಿಗೆ ಸಂಪರ್ಕ ಒದಗಿಸುತ್ತದೆ.

ಈ ಊರನ್ನು ಮಹಮ್ಮದ್ ತುಗಲಕನಿಂದ ಬಹಮನೀ ರಾಜ್ಯದ ಸ್ಥಾಪಕನಾದ ಹಸನ್ ಗುಂಗುವಿಗೆ ಜಹಗೀರಾಗಿ ಕೊಡಲಾಗಿತ್ತು. ಹಸನ್ ಗಂಗು ತುಗಲಕನಿಂದ ಗಳಿಸಿದ್ದ ಜಹಗೀರುಗಳಲ್ಲಿ ಇದೇ ಮೊದಲನೆಯದು ಎಂದು ಫೆರಿಷ್ಟ ತಿಳಿಸಿದ್ದಾನೆ. ಕುಡಚಿಯ ಸಮೀಪದಲ್ಲಿ ಕೃಷ್ಣಾ ನದಿಯ ನಡುಗಡ್ಡೆಯೊಂದರಲ್ಲಿ ಶೇಖ್ ಮಹಮ್ಮದ್ ಸಿರಾಜ್ಜೀನ ದಿ ಪೀರ್ದಾದಿ ಎಂಬ ಸಂತನ ಗೋರಿ ಇದೆ. ಈತ ಅನೇಕ ಜನರನ್ನು ಇಸ್ಲಾಮಿಗೆ ಮತಾಂತರಗೊಳಿಸಿದನೆಂದೂ ಅವರಲ್ಲಿ ಬಾಲ್ಕ್ ದೇಶದ ರಾಜಕುಮಾರಿ ಮುಸಪ್ಲಿ ಎಂಬುವಳು ಒಬ್ಬಳೆಂದೂ ಹೇಳಲಾಗಿದೆ. ಈತ ಗುಲ್ಬರ್ಗದಲ್ಲಿ ನಿಧನನಾದ. ಆದರೆ ಇವನ ಗೌರವಾರ್ಥ ಕುಡಚಿಯಲ್ಲಿ ಮುಸಪ್ಲಿಯ ಗೋರಿಯ ಬಳಿ ದರ್ಗಾವನ್ನು ರಚಿಸಲಾಯಿತು. ಈ ಗೋರಿಗಳ ಬಳಿ ಪತ್ರಿ ವರ್ಷ ಉರ್ಸ್ ನಡೆಯುತ್ತದೆ.

ಕುಡಚಿಯ ಬಳಿಯಲ್ಲಿ ಶಿಲಾ -ತಾಮ್ರಯುಗದ ಪ್ರಾಚೀನ ನೆಲೆಯೊಂದನ್ನು ಈಚೆಗೆ ಗುರುತಿಸಲಾಗಿದೆ. *

**ಕುಣಿಗಲು :** ತುಮಕೂರು ಜಿಲ್ಲೆಯ ದಕ್ಷಿಣದ ಕೊನೆಯಲ್ಲಿರುವ ಒಂದು ತಾಲ್ಲೂಕು ಮತ್ತು ಅದರ ಕೇಂದ್ರ. ಈ ತಾಲ್ಲೂಕನ್ನು ತುರುವೇಕೆರೆ, ಗುಬ್ಬಿ, ತುಮಕೂರು ತಾಲ್ಲೂಕುಗಳು ಮತ್ತು ಮಂಡ್ಯ ಬೆಂಗಳೂರು ಜಿಲ್ಲೆಗಳು ಸುತ್ತುವರಿದಿವೆ. ತಾಲ್ಲೂಕಿನ ವಿಸ್ತೀರ್ಣ 964.5ಚಕಿಮೀ. ಜನಸಂಖ್ಯೆ 2,35,182. ಹೋಬಳಿಗಳು ಐದು - ಕುಣಿಗಲು, ಎಡೆಯೂರು, ಅಮೃತೂರು, ಹುಲಿಯೂರುದುರ್ಗ ಮತ್ತು ಕೊತ್ತಗೆರೆ. ಗ್ರಾಮಗಳು 313.

ತಾಲ್ಲೂಕಿನ ಹೆಚ್ಚು ಭಾಗದಲ್ಲಿ ಪ್ರಸ್ಥಭೂಮಿಯ ಲಕ್ಷಣಗಳಿವೆ. ಏರಿಳಿತಗಳಿಂದ ಕೂಡಿದ ಭೂಮಿಯಲ್ಲಿ ಅಲ್ಲಲ್ಲಿ ಆಳವಾದ ಕಮರಿಗಳಿವೆ. ಪೂರ್ವ ಮತ್ತು ಆಗ್ನೇಯದ ಹುತ್ರಿದುರ್ಗ ಮತ್ತು ಹುಲಿಯೂರು ದುರ್ಗಗಳು ಬೆಟ್ಟಗಳಿಂದ ಕೂಡಿವೆ. ಹುತ್ರಿದುರ್ಗ ಪ್ರದೇಶ ಹೆಚ್ಚು

ಬೆಂಗಾಡು. ಹುಲಿಯೂರುದುರ್ಗದಲ್ಲಿ ಹೆಚ್ಚು ಅರಣ್ಯಪ್ರದೇಶವಿದೆ. ಆದರೆ ಕಾಡು ದಟ್ಟವಲ್ಲ. ಮರಮುಟ್ಟುಗಳಿಗೆ ಆಗುವಂಥ ದೊಡ್ಡ ಮರಗಳಿಲ್ಲ. ತಾಲ್ಲೂಕಿನ ಹಲವು ಭಾಗಗಳಲ್ಲಿ ಅನೇಕ ತೋಪುಗಳಿವೆ. ಪಿಂಗಾಣಿ ಕೈಗಾರಿಕೆಗೆ ಉಪಯೋಗವಾಗುವ ಫೆಲ್ಡ್‌ಸ್ಪಾರ್ ನಿಕ್ಷೇಪಗಳು ಈ ತಾಲ್ಲೂಕಿನಲ್ಲಿವೆ. ಬಂಡಿಹಳ್ಳಿ ಎಂಬಲ್ಲಿ ಗಾರ್ನೆಟ್ ಮತ್ತು ಕೊರಂಡಮ್ ದೊರಕುತ್ತವೆ. ಹೆಚ್ಚಿನ ಭಾಗದಲ್ಲಿ ಕಣಶಿಲೆ (ಗ್ರಾನೈಟ್) ಆಧಾರಶಿಲೆಯಾಗಿದೆ.

ಎತ್ತರ ಪ್ರದೇಶದಲ್ಲಿ ಬೂದುಬಣ್ಣದ, ಮರಳು ನಿಂದ ಕೂಡಿದ ಮಣ್ಣಿದೆ; ಆದರೆ ಕೆಳಗಿನ ಕಣಿವೆಗಳಲ್ಲಿರುವ ಮಣ್ಣು ಸಾಕಷ್ಟು ಉತ್ತಮವಾಗಿದೆ. ವಾರ್ಷಿಕ ಮಳೆ 751.44ಮಿಮೀ. ತಾಲ್ಲೂಕಿನ ಪಶ್ಚಿಮ ಅಂಚಿನಲ್ಲಿ ಹರಿಯುವ ಶಿಂಷಾನದಿಗೆ ಮಾರ್ಕೋನಹಳ್ಳಿಯಲ್ಲಿ ಒಂದು ಅಣೆಕಟ್ಟಿದೆ. ಈ ಅಣೆಕಟ್ಟು ಮತ್ತು ಮಂಗಳ ಎಂಬಲ್ಲಿ ನಾಗಿನಿ ಹಳ್ಳಕ್ಕೆ ಕಟ್ಟಿರುವ ಅಣೆಕಟ್ಟು ಹಾಗೂ 166 ಕೆರೆಗಳು ಮತ್ತು ಅನೇಕ ಬಾವಿಗಳು ನೀರಾವರಿ ಸೌಕರ್ಯವನ್ನು ಒದಗಿಸುತ್ತವೆ. ನೀರಿನ ಅನುಕೂಲ ಇರುವೆಡೆಗಳಲ್ಲಿ ಬತ್ತ ಅಥವಾ ಕಬ್ಬನ್ನೂ ಉಳಿದೆಡೆಗಳಲ್ಲಿ ರಾಗಿ, ಜೋಳ, ಅವರೆ, ತೊಗರಿ, ಹರಳು ಮುಂತಾದ ಬೆಳೆಗಳನ್ನೂ ಬೆಳೆಯುತ್ತಾರೆ. ಕುಣಿಗಲಿನಲ್ಲಿ ಒಂದು ವ್ಯವಸಾಯ ಉಪಕರಣಗಳ ತಯಾರಿಕಾ ಸಂಸ್ಥೆ ಇದೆ. ಸ್ವಲ್ಪ ಮಟ್ಟಿಗೆ ರೇಷ್ಮೆ ಉದ್ಯಮ, ಕಂಬಳಿ ಮತ್ತು ಹತ್ತಿನೇಯ್ಗೆಯೂ ಇವೆ.

ಅಮೃತೂರು (ನೋಡಿ), ಹುಲಿಯೂರುದುರ್ಗ (ನೋಡಿ) ಹುತ್ರಿದುರ್ಗ (ನೋಡಿ) ತಾಲ್ಲೂಕಿನ ದೊಡ್ಡ ಸ್ಥಳಗಳು. ತೋಂಟದ ಸಿದ್ಧಲಿಂಗೇಶ್ವರ ಗದ್ದಿಗೆ ಇರುವ ಎಡೆಯೂರು (ನೋಡಿ) ಮತ್ತು ಅವರಿದ್ದ ಕಗ್ಗೆರೆ ತೀರ್ಥಕ್ಷೇತ್ರಗಳು. ಕೊಡವತ್ತಿ ಎಂಬಲ್ಲಿ ಒಂದು ಲಿಂಗಾಯತ ಮಠವಿದೆ. ಕೊತ್ತಗೆರೆ ಹೊಯ್ಸಳರ ಕಾಲದಲ್ಲಿ ಶ್ರೀಧರಪುರವೆಂದು ಪ್ರಸಿದ್ಧಿ ಪಡೆದಿತ್ತು.

ಕುಣಿಗಲು ತಾಲ್ಲೂಕಿನ ಮುಖ್ಯಸ್ಥಳ. ತುಮಕೂರಿನ ದಕ್ಷಿಣಕ್ಕೆ 38ಕಿಮೀ ದೂರದಲ್ಲಿ ಬೆಂಗಳೂರು-ಹಾಸನ ಹೆದ್ದಾರಿಯಲ್ಲಿದೆ. ಜನಸಂಖ್ಯೆ 30,291.

ಇಲ್ಲಿ ಶಿವ ಹಿಂದೆ ನರ್ತನ ಮಾಡಿದ್ದ; ಆದ್ದರಿಂದ ಈ ಸ್ಥಳಕ್ಕೆ ಕುಣಿಗಲ್ ಎಂಬ ಹೆಸರಾಯಿತೆಂದೂ ಐತಿಹ್ಯ. ಪ್ರಾಚೀನ ಕನ್ನಡ ಹಾಗೂ ತಮಿಳು ಶಾಸನಗಳಲ್ಲಿ ಈ ಊರನ್ನು ಕುಣುಂಗಿಲ್, ಕುಣಿಂಗಿಲ್ ಎಂದು ಹೆಸರಿಸಲಾಗಿದೆ. ಶಿವಗಂಗೆಯಲ್ಲಿ ಹುಟ್ಟಿ ಹರಿಯುವ ನಳಿನಿ, ನಾಗಿನಿ ಮತ್ತು ಕಮಲ ನದಿಗಳು ಇಲ್ಲಿ ಸಂಗಮವಾಗುತ್ತವೆಂದು ಪ್ರತೀತಿ. ಈಗ ಈ ಮೂರು ನದಿಗಳ ನೀರನ್ನೂ ಶೇಖರಿಸುವ ದೊಡ್ಡಕೆರೆ ಇದೆ. ಉತ್ತರದೇಶದಿಂದ ಬಂದ ನೃಗ ಚಕ್ರವರ್ತಿ ಇಲ್ಲಿ ಸ್ನಾನಮಾಡಲಾಗಿ, ಅವನ ಕುಷ್ಠರೋಗ ವಾಸಿಯಾಗಿ, ಅವನೇ ಇಲ್ಲಿನ ಕೆರೆಯನ್ನು ಕಟ್ಟಿಸಿದನಂತೆ. ಈ ಕೆರೆ ಭರ್ತಿಯಿದ್ದಾಗ 23ಕಿಮೀ ಸುತ್ತಳತೆಯುಳ್ಳದ್ದೆಂದು ಅಂದಾಜು ಮಾಡಲಾಗಿದೆ.

ಕುಣಿಗಲು ಹಿಂದೆ ಕುಣಿಂಗಲು ನಾಡು ಎಂಬ ಪ್ರಾಚೀನ ಪ್ರಾಂತ್ಯದ ಕೇಂದ್ರವಾಗಿತ್ತು. ಈ ನಾಡಿಗೆ ಸು.785ರಲ್ಲಿ ಗಂಗವಂಶದ ಶಿವಮಾರ, ರಾಷ್ಟ್ರಕೂಟರ ಆಳ್ವಿಕೆಯಲ್ಲಿ ವಿಮಲಾದಿತ್ಯ (ಸು.812) ರಾಜ್ಯಪಾಲರಾಗಿದ್ದರು. ಚೋಳರ ಕಾಲದಲ್ಲಿ ಈ ಊರಿಗೆ ರಾಜೇಂದ್ರ ಶೋಳಪುರಂ ಎಂಬ ಹೆಸರಿತ್ತು. ಹೊಯ್ಸಳರ ಕಾಲದಲ್ಲಿ ಇದೊಂದು ಅಗ್ರಹಾರ. ವೀರಶೈವಧರ್ಮ, ಅದ್ವೈತ ವೇದಾಂತ ಹಾಗೂ ತರ್ಕಶಾಸ್ತ್ರಗಳಿಗೆ ಸಂಬಂಧಪಟ್ಟ ಹಲವು ಪ್ರಾಚೀನ ಕನ್ನಡ ಮತ್ತು ಸಂಸ್ಕೃತ ಗ್ರಂಥಗಳು ಇಲ್ಲಿ ಸಿಕ್ಕಿವೆ. ಇಲ್ಲಿನ ಕೋಟೆಯ ತಳಹದಿಯನ್ನು 1290ರಲ್ಲಿ ವೀರ ಕಂಬಲರಾಯ ಹಾಕಿದನೆಂದೂ ಅನಂತರ ಮಾಗಡಿಯ ನಾಯಕನೊಬ್ಬ ಈ ಕೋಟೆಯನ್ನೂ ಈ ಊರನ್ನೂ ವಿಸ್ತರಿಸಿ ಕಟ್ಟಿದನೆಂದೂ ಹೇಳಿಕೆ ಇದೆ.

ಇಲ್ಲಿನ ದೇವಾಲಯಗಳಲ್ಲಿ ಅತ್ಯಂತ ಪ್ರಮುಖವೆನಿಸಿರುವುದು ನರಸಿಂಹನ ಗುಡಿ. ಮೂಲತಃ ಇದು ಹೊಯ್ಸಳ ಶೈಲಿಯಲ್ಲಿದ್ದು, ಗರ್ಭಗುಡಿ, ಸುಕನಾಸಿ ಮತ್ತು ನವರಂಗಗಳನ್ನು ಹೊಂದಿತ್ತು. ಅನಂತರದ ಸೇರ್ಪಡೆಗಳಿಂದ ಈಗ ದೊಡ್ಡ ಕಟ್ಟಡವಾಗಿದೆ. ಈಗ ಈ ಗುಡಿಯಲ್ಲಿರುವುದು ನರಸಿಂಹನ ವಿಗ್ರಹವಲ್ಲ, ಜನಾರ್ದನನದು. ಈ ಮೂರ್ತಿಯನ್ನು ಹುಲಿಯೂರುದುರ್ಗದಿಂದ ತರಲಾಗಿದೆ. ಸೋಮೇಶ್ವರ ದೇವಾಲಯದ ಹಲವು ಭಾಗಗಳು ಹೊಯ್ಸಳರ ಕಾಲದಿಂದ ಹಿಡಿದು ಪಾಳೆಯಗಾರರ ಕಾಲದವರೆಗೂ ಹಲವು ಕಾಲದಲ್ಲಿ ಕಟ್ಟಿರುವುವು. ವೆಂಕಟರಮಣ ದೇವಾಲಯದಲ್ಲಿ ಸಾಲಾಗಿ ಮೂರು ಗುಡಿಗಳಿದ್ದು, ಮಧ್ಯದಲ್ಲಿ 3½' ಎತ್ತರದ ಸುಂದರವಾದ ಶ್ರೀನಿವಾಸನ ಮೂರ್ತಿಯಿದೆ. ಹೊಸದಾಗಿ ಕಟ್ಟಿರುವ ಶಿವರಾಮೇಶ್ವರ ದೇವಾಲಯದಲ್ಲಿ ಗಂಗಶೈಲಿಯ ಮಹಿಷಾಸುರಮರ್ದಿನಿ ವಿಗ್ರಹ ಇದೆ. ಇದು ಕೊತ್ತಗೆರೆಯಲ್ಲಿನ ಕೋಟೇಶ್ವರ ದೇವಾಲಯದಲ್ಲಿದ್ದುದು.

ಕುಣಿಗಲು ಹೆಚ್ಚು ಪ್ರಸಿದ್ಧವಾಗಿರುವುದು ಇಲ್ಲಿರುವ ಅಶ್ವವರ್ಧನ ಶಾಲೆಗಾಗಿ (ಸ್ಟಡ್ ಫಾರ್ಮ್). ಇದು ಇಡೀ ಭಾರತದಲ್ಲೆ ಪ್ರಥಮವಾಗಿ ಸ್ಥಾಪಿತವಾದದ್ದು. ಸು.175 ವರ್ಷಗಳಿಂದಲೂ ಉತ್ತಮ ಸ್ಥಿತಿಯಲ್ಲಿದೆ. ಮೊದಲು ಅಂದಿನ ಮೈಸೂರು ಸೈನ್ಯಕ್ಕೆ ಉತ್ತಮ ತಳಿಯ ಕುದುರೆಗಳನ್ನೂ ಒದಗಿಸುವ ಸಲುವಾಗಿ ಪ್ರಾರಂಭವಾದ ಈ ಕೇಂದ್ರದಲ್ಲಿ ಈಗ ರೇಸ್ ಕುದುರೆಗಳನ್ನು ಬೆಳೆಸಲಾಗುತ್ತಿದೆ. 1886ರಲ್ಲಿ ಇಂಗ್ಲೆಂಡಿನಿಂದ ಬೀಜದ ಕುದುರೆಯನ್ನು ತರಿಸಿ ಈ ಉದ್ಯಮವನ್ನು ಪ್ರಾರಂಭಿಸಲಾಯಿತು. ಇಲ್ಲಿನ ಕೆಲವು ತಳಿಯ ಕುದುರೆಗಳು ವಿದೇಶೀ ಕುದುರೆಗಳಷ್ಟೇ ಉತ್ತಮವೆನಿಸಿ, ಹಲವಾರು ಪ್ರತಿಷ್ಠಿತ ರೇಸ್‌ಗಳಲ್ಲಿ ಗೆದ್ದು ಹೊಸ ದಾಖಲೆಗಳನ್ನು ಸ್ಥಾಪಿಸಿವೆ. ಈ ಊರು ರೇಷ್ಮೆ ಕೈಗಾರಿಕೆಗೂ ಸಾಕಷ್ಟು ಹೆಸರಾಗಿದೆ. (ಎಸ್.ಜಿ.)

**ಕುದುರೆಮುಖ :** ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕಿನ ಪಶ್ಚಿಮಘಟ್ಟದ ಉನ್ನತ ಶಿಖರಗಳಲ್ಲಿ ಒಂದು. ಪಶ್ಚಿಮ ದಿಕ್ಕಿನಿಂದ ಇದು ಕುದುರೆಯ ಮುಖದಂತೆ ಕಾಣುವುದರಿಂದ ಶಿಖರಕ್ಕೆ ಈ ಹೆಸರು ಬಂದಿದೆ. ಚಿಕ್ಕಮಗಳೂರಿನಿಂದ ಸು.80ಕಿಮೀ ನೈಋತ್ಯದಲ್ಲಿ ಜಿಲ್ಲೆಯಂಚಿನಲ್ಲಿ,



ಕುದರೆಮುಖ ಪಕ್ಷಿನೋಟ

ಕಳಸದಿಂದ ಸು.15ಕಿಮೀ ದೂರದಲ್ಲಿರುವ ಕುದುರೆಮುಖ ಶಿಖರ ಸಮುದ್ರಮಟ್ಟಕ್ಕಿಂತ ಸು.1894ಮೀ ಎತ್ತರವಿದೆ. ಶಿಖರಾರೋಹಣಕ್ಕೆ ಚಿಕ್ಕಮಗಳೂರು ಕಡೆಯ ದಾರಿ ದುರ್ಗಮವಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ದಾರಿಯನ್ನೇ ಸಾಮಾನ್ಯವಾಗಿ ಅನುಸರಿಸಲಾಗುತ್ತಿದೆ. ಮಂಗಳೂರಿಗೆ 65ಕಿಮೀ ದೂರವಿರುವ ಬೆಟ್ಟದ ತಪ್ಪಲಲ್ಲಿರುವ ಸಾವೂರು ತನಕ ರಸ್ತೆಯಿದೆ. ಉಳಿದದ್ದು ಕಾಲು ದಾರಿ. ಸಾಹಸಪ್ರಿಯರು ಕಡಿದಾದ

ಬೆಟ್ಟವನ್ನೇರುವುದುಂಟು. ಕುದುರೆಮುಖದಿಂದ ಕಾಣುವ ಸುತ್ತಣ ಪ್ರಕೃತಿ ದೃಶ್ಯ ಮನೋಹರವಾದದ್ದು. ಕುದುರೆಮುಖದಲ್ಲಿ ಮೃಗ ಪಕ್ಷಿ ವಾಸ ವಿರಳ. ಕಾಡುಕೋಳಿಗಳು ಮಾತ್ರ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಇಲ್ಲಿ ಬೃಹತ್ತಾದ ಒಂದು ಬಗೆಯ ಹುಲ್ಲು ಹುಲುಸಾಗಿ ಬೆಳೆಯುತ್ತದೆ.

ಕುದುರೆಮುಖದ ಪರ್ವತಸಾಲಿನಲ್ಲಿ ಮ್ಯಾಗ್ನಟೈಟ್, ಕ್ವಾರ್ಟ್‌ಜೈಟ್ ಕಬ್ಬಿಣದ ಅದುರು ಧಾರಾಳವಾಗಿದೆ ಎಂಬುದನ್ನು ಮೈಸೂರು ಸರ್ಕಾರದ ಭೂ ವಿಜ್ಞಾನ ವಿಭಾಗದವರು 1913ರಲ್ಲೇ ಕಂಡುಹಿಡಿದರು. ಆದರೆ ಈ ನಿಕ್ಷೇಪಗಳ ವಿವರವಾದ ಪರಿಶೀಲನೆ, ಗಣಿಗಾರಿಕೆಯ ಮತ್ತು ಉಪಯೋಗದ ಚಿಂತನ ಇತ್ತೀಚೆಗೆ ಮಾತ್ರ ಮೂಡಿದೆ. ಭಾರತ ಸರ್ಕಾರದ ಅಂಗಸಂಸ್ಥೆಯಾದ ರಾಷ್ಟ್ರೀಯ ಖನಿಜಾಭಿವೃದ್ಧಿ ಮಂಡಳಿ ಈ ಪ್ರದೇಶದಲ್ಲಿನ ನಿಕ್ಷೇಪಗಳಿಗಾಗಿ ತೀವ್ರ ಭೂವೈಜ್ಞಾನಿಕ ಸಮೀಕ್ಷೆ ನಡೆಸಿತು. ಹಿಂದೆ ಈ ಪ್ರದೇಶದಲ್ಲಿ ನಡೆದ ಸಂಶೋಧನೆಯವರದಿ ಪ್ರಕಾರ 10ಅಡಿ ಆಳದವರೆಗೆ 8,56,35,200 ಚ.ಅಡಿಯಲ್ಲಿ ಸು.1,67,27,000 ಟನ್ ಅದುರು ಇದೆ ಎಂದು ತಿಳಿದುಬಂದಿತ್ತು. ಇತ್ತೀಚಿನ ಸಮೀಕ್ಷೆಯಿಂದ ಕುದುರೆಮುಖ ಆರೋಳಿ ಭಾಗಗಳಲ್ಲಿ 100ಕೋಟಿ ಟನ್ ಅದುರು ಇದೆಯೆಂದು ನಿರ್ಧರಿಸಲಾಗಿದೆ. ಆದರೆ ಈ ಪ್ರದೇಶದ ನಿಕ್ಷೇಪಗಳಲ್ಲಿ ಒಟ್ಟು 300ಕೋಟಿ ಟನ್‌ಗಳಷ್ಟಾದರೂ ಕಬ್ಬಿಣದ ಅದುರು ಇರುವ ಸಾಧ್ಯತೆ ಇದೆ ಎಂದು ಅಂದಾಜು ಮಾಡಲಾಗಿದೆ. ಇದು ಏಷ್ಯದಲ್ಲೇ ಅತಿ ದೊಡ್ಡ ಕಬ್ಬಿಣದ ಅದುರಿನ ನಿಕ್ಷೇಪ.

ಭಾರತದ ಕಬ್ಬಿಣದ ಅದುರಿಗೆ ವಿದೇಶಗಳಲ್ಲಿ ಹೆಚ್ಚು ಬೇಡಿಕೆ ಇದೆ. ಭಾರತದ ಎಲ್ಲ ಕಬ್ಬಿಣದ ಅದುರು ನಿಕ್ಷೇಪಗಳೂ ರಫ್ತಿಗೆ ಅನುಕೂಲವಾದ ಬಂದರುಗಳಿಂದ ಕನಿಷ್ಠ 450 ಕಿಮೀ ದೂರದಲ್ಲಿವೆ. ಇದರಿಂದಾಗಿ ಅದುರನ್ನು ನಿಕ್ಷೇಪಗಳಿಂದ ಬಂದರುಗಳಿಗೆ ಸಾಗಿಸುವುದಕ್ಕೆ ಹೆಚ್ಚು ಹಣ ಖರ್ಚಾಗುವುದು. ಈ ದಿಶೆಯಲ್ಲಿ ಕುದುರೆಮುಖದ ಅದುರು ಸಾಗಾಣಿಕೆಗೆ ಹತ್ತಿರದ ಬಂದರಾದ ಮಂಗಳೂರು ಕೇವಲ 50ಕಿಮೀ ದೂರದಲ್ಲಿರುವುದರಿಂದ ಇಲ್ಲಿನ ಅದುರಿನ ನಿಕ್ಷೇಪಕ್ಕೆ ಅತಿ ಹೆಚ್ಚಿನ ಮಹತ್ವ ಬಂದಿದೆ. ಕುದುರೆಮುಖದ ಅದುರಿನಲ್ಲಿ ಸೇ.60ಕ್ಕೂ ಹೆಚ್ಚು ಕಬ್ಬಿಣದಂಶವಿದ್ದರೂ ಬೆಣಚಿನ ಅಂಶವೂ ಸಾಕಷ್ಟು ಪ್ರಮಾಣದಲ್ಲಿರುವುದರಿಂದ, ಹೊರತೆಗೆದ ಅದುರನ್ನು ನೇರವಾಗಿ ಪರದೇಶಗಳಿಗೆ ರಫ್ತು ಮಾಡುವ ದರ್ಜೆಯದಾಗಿಲ್ಲ. ಆದ್ದರಿಂದ ಅದುರನ್ನು ಸಾರೀಕರಿಸಿದ ಅನಂತರವೇ ರಫ್ತು ಮಾಡಬಹುದು. ಅತ್ಯಂತ ಆಧುನಿಕ ತಾಂತ್ರಿಕ ಕುಶಲತೆಯಿಂದ ಪ್ರಾರಂಭದಲ್ಲಿ 40 ಲಕ್ಷ ಟನ್ ಪರಿಷ್ಕರಿಸಿದ ಅದುರನ್ನು ಉತ್ಪಾದಿಸಲು ಪ್ರಯತ್ನಗಳು ನಡೆದಿದೆ. ಈ ಪ್ರಮಾಣದ ಪರಿಷ್ಕರಿಸಿದ ಅದುರಿನ ಉತ್ಪಾದನೆಗೆ ಕನಿಷ್ಟ ಪಕ್ಷ 140 ಲಕ್ಷ ಟನ್ ಕೆಳದರ್ಜೆ ಅದುರನ್ನು ಬಳಸಬೇಕಾಗುವುದು. ಅಂದರೆ ಪ್ರತಿ ದಿನ 60,000 ಟನ್ ಮ್ಯಾಗ್ನಟೈಟ್ ಕ್ವಾರ್ಟ್‌ಜೈಟ್ ಅದುರನ್ನು ಹೊರತೆಗೆಯಬೇಕಾಗುವುದು. ಪರಿಷ್ಕರಿಸಿದ ಅದುರನ್ನು ನೀರಿನಲ್ಲಿ ಬೆರೆಸಿ (ಬುರುದೇ ರಾಡಿ ಮಾಡಿ) ಕುದುರೆಮುಖದಿಂದ ಮಂಗಳೂರು ಬಂದರಿಗೆ ನೇರ ಕೊಳವೆ ಮಾರ್ಗವಾಗಿ ಹಡಗಿಗೆ ತುಂಬಿ ಸಾಗಿಸುವ ಏರ್ಪಾಡು ಯಶಸ್ವಿಯಾಗಿದೆ. ಇದು ಬೃಹತ್ಪ್ರಮಾಣದ ಗಣಿಗಾರಿಕೆ ಕಾರ್ಯ. ಈ ಯೋಜನೆಯಿಂದ ಕರ್ನಾಟಕದ ಖನಿಜೋದ್ಯಮದಲ್ಲಿ ಒಂದು ಹೊಸ ಪರ್ವ ಆರಂಭವಾಗಿದೆ.

ಈ ನಿಕ್ಷೇಪಗಳ ಅದುರಿನ ಗಣಿಗಾರಿಕೆ, ಸಂಸ್ಕರಣಾಭಿವೃದ್ಧಿಯನ್ನು ಪರಸ್ಪರ ಸಹಕಾರದಿಂದ ನಿರ್ವಹಿಸಲು ಭಾರತ ಮತ್ತು ಇರಾನ್ ದೇಶಗಳ ಒಪ್ಪಂದದ ಅಡಿಯಲ್ಲಿ ಇದು ಕಾರ್ಯಾರಂಭವಾಯಿತು. ಈಗ ಪರಿಸರ ರಕ್ಷಣೆಯ ದೃಷ್ಟಿಯಿಂದ ಈ ಕಾರ್ಯವನ್ನು ಮುಂದುವರಿಸಿದ್ದರ ಬಗ್ಗೆ ವಿವಾದಗಳು ಉದ್ಭವಿಸಿವೆ. (ಎಂ.ಆರ್‌ಎ.;ಎಂ.ಎಸ್.ಎಂ.)

**ಕುದ್ಮುಲ್ ರಂಗರಾವ್ :** 1859-1928. ದಲಿತರ ಕಲ್ಯಾಣಕ್ಕಾಗಿ, ಸಮಾಜ ಸುಧಾರಣೆಗಾಗಿ ಬದುಕನ್ನು ಮುಡುಪಾಗಿಟ್ಟಿದ್ದ ಸಮಾಜ ಸೇವಕರು. 'ನಾನು ಜೀವಂತನಾಗಿರುವಾಗಲೇ, ಓರ್ವ ಪರಿಶಿಷ್ಟ ಜಾತಿಯ ಪಂಗಡದ ವಿದ್ಯಾರ್ಥಿ ತನ್ನ ವಿದ್ಯಾಸಂಸ್ಥೆಯ ಮೂಲಕ ವಿದ್ಯಾವಂತ ಪದವೀಧರನಾಗಿ ಜೀವನದಲ್ಲಿ ಉನ್ನತ ಉದ್ಯೋಗ ಹೊಂದಿ ಅವನದೇ ಆದ ಮೋಟಾರು ವಾಹನದಲ್ಲಿ ಹೋಗುತ್ತಿರುವಾಗ ರಸ್ತೆಯಲ್ಲಿ ಎದ್ದ ಧೂಳನ್ನು ನಾನು ಪ್ರತ್ಯಕ್ಷ ಕಾಣಬೇಕು' ಎಂಬ ಮಹತ್ವಾಕಾಂಕ್ಷೆಯನ್ನು ಹೊಂದಿದ್ದವರು. ಸರಳ ಜೀವನ ಇವರ ಬದುಕಿನ ವೈಶಿಷ್ಟ್ಯವಾಗಿತ್ತು. ಬದುಕಿನುದ್ದಕ್ಕೂ ಸಾಂಪ್ರದಾಯಿಕ ಸಮಾಜದ ಆಚಾರ ವಿಚಾರಗಳ ವಿರುದ್ಧ ಈಜುವ



ಎದೆಗಾರಿಕೆಯನ್ನು ತೋರಿದ ಧೀಮಂತ ವ್ಯಕ್ತಿಯಾಗಿ ದೀನದಲಿತರ ಉದ್ಧಾರಕ್ಕಾಗಿ, ಅಸ್ಪೃಶ್ಯ ಜನಾಂಗದವರ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಅಭಿವೃದ್ಧಿಗಾಗಿ ಸಮರ್ಪಣ ಭಾವದಿಂದ ಪ್ರಾಮಾಣಿಕಸೇವೆಸಲ್ಲಿಸಿದರು. ಇವರು ಕಾಸರಗೋಡಿನ ಕುದ್ಮುಲ್ ಎಂಬ ಹಳ್ಳಿಯಲ್ಲಿ ಸಾರಸ್ವತ ಬ್ರಾಹ್ಮಣ ಮನೆತನದಲ್ಲಿ 1859 ಜೂನ್ 29ರಂದು ಹುಟ್ಟಿದ್ದರು. ತಂದೆ ದೇವಪ್ಪಯ್ಯ, ತಾಯಿ ಗೌರಿ. ಈ ದಂಪತಿಗಳ ಏಳು ಮಂದಿ ಮಕ್ಕಳಲ್ಲಿ ರಂಗ ರಾಯರು ಹಿರಿಯರು. ಕಷ್ಟದಲ್ಲಿ ಕಾಸರಗೋಡಿನಲ್ಲಿ ಬಾಲ್ಯ ಶಿಕ್ಷಣ ಮುಗಿಸಿ ತಮ್ಮ 16ನೆಯ ವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಂಡು ಉದ್ಯೋಗಾರ್ಥಿಯಾಗಿ ಮಂಗಳೂರಿಗೆ ಬಂದರು. ಆರ್ಥಿಕ ತೊಂದರೆಯಿಂದಾಗಿ ಓದಿಗೆ ವಿದಾಯ ಹೇಳಿದರು. ಖಾಸಗಿಯಾಗಿ ಮೆಟ್ರಿಕ್ಯುಲೇಶನ್ ಪರೀಕ್ಷೆ ಬರೆದು ತೇರ್ಗಡೆಯಾದರು. ವಕಾಲತ್ತಿನ ಪ್ಲೀಡರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಮಂಗಳೂರು ಡಿಸ್ಟ್ರಿಕ್ಟ್ ಕೋರ್ಟಿನಲ್ಲಿ ವಕಾಲತ್ತು ವೃತ್ತಿಯನ್ನು ಆರಂಭಿಸಿದರು. ರುಕ್ಮಿಣಿ ಇವರ ಸಹಧರ್ಮಿಣಿ. ಬಾಳಿನುದ್ದಕ್ಕೂ ರಾಯರ ಎಲ್ಲಾ ಚಟುವಟಿಕೆಗಳಿಗೆ ಬೆನ್ನೆಲುಬಾಗಿ ನಿಂತರು.

ಹಿಂದು ಸಮಾಜದಲ್ಲಿದ್ದ ಅಸ್ಪೃಶ್ಯತೆ, ಜಾತೀಯತೆ, ಬಾಲ್ಯವಿವಾಹ, ವಿಧವಾ ಸಮಸ್ಯೆ, ದೇವದಾಸಿ ಪದ್ಧತಿಗಳು ರಂಗರಾಯರ ಮನಸ್ಸನ್ನು ಕಲಕಿದುವು. ಹೀಗಾಗಿ ಇವರು ಸಮಾನತೆಯನ್ನು ಸಾರುವ ಆಶಯವಿಟ್ಟುಕೊಂಡ ಬ್ರಹ್ಮಸಮಾಜದ ಕಾರ್ಯಕರ್ತರಾದರು. ವಕಾಲತ್ತಿನ ಸಂದರ್ಭದಲ್ಲಿಯೂ ಇವರು ಬಡವರಿಗೆ ಸಾಕಷ್ಟು ನೆರವೀಯುತ್ತಿದ್ದರು. ವೃತ್ತಿಯಲ್ಲಿ 'ಬಡವರ ವಕೀಲರು' ಎಂದೇ ಪ್ರಸಿದ್ಧರಾಗಿದ್ದರು. 1887-88ರ ವೇಳೆಗೆ ನಡೆದ 'ಬೆಂದೂರು ಬಾಬು ಪ್ರಕರಣ' ಇವರ ಬದುಕಿನ ದಿಕ್ಕನ್ನು ಬದಲಿಸಿತು. ಇವರು ಸಾಗಬೇಕಾದ ದಾರಿ ಸ್ಪಷ್ಟವಾಯಿತು; ಹೊಸ ಅಧ್ಯಾಯಕ್ಕೆ ನಾಂದಿ ಹಾಡಿತು. ಅಸ್ಪೃಶ್ಯ ಪಂಗಡಕ್ಕೆ ಸೇರಿದ ಬೆಂದೂರು ಬಾಬು ಎಂಬಾತ ಕೋರ್ಟಿನಲ್ಲಿ ಪೇದೆಯಾಗಿ ನೇಮಕಗೊಂಡಾಗ ಸವರ್ಣೀಯ ನೌಕರರು ಇದನ್ನು ಪ್ರತಿಭಟಿಸಿದರು. ಸವರ್ಣೀಯರ ಸಂಕುಚಿತ ಭಾವನೆ ರಂಗರಾಯರ ಮನಸ್ಸನ್ನು ಕಲಕಿತು. ಆಗಲೇ ಇವರು ದೀನದಲಿತರ ಏಳಿಗೆಗೆ ಶ್ರಮಿಸಲು ನಿರ್ಧರಿಸಿ ತಮ್ಮ 34ನೆಯ ವಯಸ್ಸಿನಲ್ಲಿ ವಕೀಲಿ ವೃತ್ತಿ ತ್ಯಜಿಸಿ ಸಮಾಜಸೇವೆಯ ಸಂಕಲ್ಪ ಮಾಡಿದರು.

ಮೊದಲ ಹೆಜ್ಜೆಯಾಗಿ ದಕ್ಷಿಣ ಕನ್ನಡ ಜಿಲ್ಲೆಯ ಪರಿಶಿಷ್ಟ ಜಾತಿ ಮತ್ತು ಪಂಗಡದವರ ಶಿಕ್ಷಣಕ್ಕಾಗಿ ಪ್ರಾಥಮಿಕ ಶಾಲೆ ಮತ್ತು ಆಶ್ರಮಗಳನ್ನು ಸ್ಥಾಪಿಸಲು ಇವರು ನಿರ್ಧರಿಸಿದರು. ದಲಿತರನ್ನು ಶೋಷಣೆಯಿಂದ ಬಿಡುಗಡೆಗೊಳಿಸಬಲ್ಲದ್ದೆಂದರೆ ಶಿಕ್ಷಣ ಮತ್ತು ಸಂಘಟನೆ ಎಂಬುದನ್ನರಿತರು. ದಲಿತರಿಗೆ ವಿದ್ಯೆಯನ್ನು ನೀಡಿದರೆ ಅವರು ಸ್ವಾಭಿಮಾನದ ಬದುಕನ್ನು ರೂಪಿಸಿಕೊಳ್ಳಬಲ್ಲರೆಂಬುದು ಇವರ ದೂರದೃಷ್ಟಿಯ ಚಿಂತೆಯಾಗಿತ್ತು. ಹೀಗಾಗಿ 1892ರಲ್ಲಿ ಮಂಗಳೂರಿನ ಉರ್ವ ಚಿಲಿಂಬಿ ಎಂಬಲ್ಲಿ ದಲಿತರಿಗಾಗಿ ಹುಲ್ಲು ಛಾವಣಿಯ ಮನೆಯಲ್ಲಿ ಪ್ರಾಥಮಿಕ ಶಾಲೆಯೊಂದನ್ನು ತೆರೆದರು. ಭಾರತದ ಇತಿಹಾಸದಲ್ಲಿ ಇದೊಂದು ಚಾರಿತ್ರಿಕ ಘಟನೆ. ಇಡೀ ನಾಡಿನಲ್ಲಿಯೇ ಇವರು ತಳೆದ ಈ ನಿರ್ಧಾರ ಅತ್ಯಂತ ಕ್ರಾಂತಿಕಾರಕವಾದುದು. ಇದರಿಂದಾಗಿ ಇವರು ಹಲವರ ವಿರೋಧವನ್ನು ಎದುರಿಸಿದರು. ಉರ್ವ ಚಿಲಿಂಬಿ ಶಾಲೆ ಹೆಚ್ಚು ಸಮಯ ಬದುಕಲಿಲ್ಲ. ಆದರೆ ಇದರಿಂದ ವಿಚಲಿತರಾಗದ ಇವರು ಮಂಗಳೂರಿನ ಕಂಕನಾಡಿ,

ಶೇಡಿಗುಡ್ಡೆ ಮತ್ತು ಬೋಳೂರುಗಳಲ್ಲಿ ಎಲಿಮೆಂಟರಿ ಶಾಲೆಗಳನ್ನು ಆರಂಭಿಸಿದರು. ಅಲ್ಲದೆ ದಲಿತರಿಗೆ ವೃತ್ತಿಪರ ಶಿಕ್ಷಣವನ್ನು ಕಲಿಸುವ ಉದ್ದೇಶದಿಂದ ಕೈಗಾರಿಕಾ ತರಬೇತಿ ಶಾಲೆಯನ್ನು ಶೇಡಿಗುಡ್ಡೆಯಲ್ಲಿ ಸ್ಥಾಪಿಸಿದರು. ಹೀಗೆ ಮೂಲಶಿಕ್ಷಣದ ಮಹತ್ವವನ್ನು ಗಾಂಧೀಜಿಗಿಂತ ಮೊದಲೇ ಇವರು ಮನಗಂಡಿದ್ದರು. ತಾವು ಸ್ಥಾಪನೆ ಮಾಡಿದ ಶಾಲೆಗಳಲ್ಲಿ ಬಡಗಿ, ನೇಯ್ಗೆ, ತೋಟಗಾರಿಕೆ, ಕಸೂತಿ, ರೇಷ್ಮೆಸಾಕಣೆ ಇತ್ಯಾದಿ ವಿಷಯಗಳಲ್ಲಿ ತರಬೇತಿ ನೀಡುತ್ತಿದ್ದರು.

ದಲಿತರ ಸಾಂಪ್ರದಾಯಿಕ ಕಾರ್ಯಕ್ರಮಗಳಿಗಾಗಿ ಸ್ಟಾರ್ ಹೋಲ್ ಎಂಬ ಭವನವನ್ನು ಇವರು ಕಾಪಿಕಾಡಿನಲ್ಲಿ ಕಟ್ಟಿಸಿದರು. ಕೊರಗ ಜನಾಂಗದವರಿಗೆ ಆಶ್ರಯ ನೀಡಿ ಅವರ ಕುಲಕಸುಬಾದ ಗುಡಿಗಾರಿಕೆಯ ಅಭಿವೃದ್ಧಿಗೆ ಸಾಕಷ್ಟು ನೆರವಿತ್ತರು. ಅತ್ತಾವರ, ಬಾಬುಗುಡ್ಡೆ, ದಡ್ಡಲಕಾಡು, ಉಳ್ಳಾಲ, ಮೂಲ್ಕಿ, ಉಡುಪಿಯ ಬನ್ನಂಜೆ ಮೊದಲಾದ ಕಡೆಗಳಲ್ಲಿ ದಲಿತರಿಗಾಗಿ ಶಾಲೆಗಳನ್ನು ತೆರೆದರು. ಈ ಶಾಲೆಗಳಲ್ಲಿ ಪರಿಶಿಷ್ಟ ಜಾತಿಯ ಅಧ್ಯಾಪಕರನ್ನೇ ನೇಮಕ ಮಾಡಿದರು. ಇವರು ಸ್ಥಾಪನೆ ಮಾಡಿದ ಶಾಲೆಗಳನ್ನು ಪಂಚಮರ ಶಾಲೆಗಳು ಎಂದು ಕರೆಯುತ್ತಿದ್ದರು. ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳನ್ನು ಆಕರ್ಷಿಸುವ ಸಲುವಾಗಿ ಮಕ್ಕಳಿಗೆ ಮಧ್ಯಾಹ್ನದ ಊಟವನ್ನೂ ದಿನಕ್ಕೆ 2ರಿಂದ 6ಕಾಸಿನವರೆಗೆ ನಗದು ಹಣವನ್ನೂ ನೀಡುತ್ತಿದ್ದರು. ತಾವು ಸ್ಥಾಪನೆ ಮಾಡಿದ ಶಾಲೆಗಳನ್ನು ನಡೆಸಿಕೊಂಡು ಹೋಗುವುದು ದುಸ್ತರವಾದಾಗ ಇವರು ಉಳ್ಳಾಲ ರಘುನಾಥ'ಯ್ಯನವರ ಸಹಕಾರದಿಂದ 'ಡಿಪ್ರೆಸ್ಡ್ ಕ್ಲಾಸಸ್ ಮಿಶನ್, ಕೊಡಿಯಾಲ ಬೈಲು, ಮಂಗಳೂರು' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. (1897).

ಹೀಗೆ ಹಲವು ವರ್ಷಗಳ ಕಾಲ ಇವರು ಮಾಡಿದ ಕೆಲಸಗಳಿಂದ ಸಾರ್ವಜನಿಕರು ಮತ್ತು ಜನಸಾಮಾನ್ಯರಲ್ಲಿ ಜಾಗೃತಿ ಉಂಟಾಯಿತು. ಕ್ರಮೇಣ ಇದು ಸಾಮಾಜಿಕ ಬದಲಾವಣೆಗೆ ದಾರಿಮಾಡಿತು. ಇವರ ಒತ್ತಡದ ಪರಿಣಾಮವಾಗಿ ಜಿಲ್ಲಾ ಬೋರ್ಡು ಮತ್ತು ಮಂಗಳೂರು ಪುರಸಭೆಯಲ್ಲಿ ಪರಿಶಿಷ್ಟ ಪಂಗಡದವರಿಗೆ ಪ್ರಾತಿನಿಧ್ಯ ದೊರೆಯಿತು. ದಲಿತರ ಆರ್ಥಿಕ ಸ್ಥಿತಿಯನ್ನು ಭದ್ರಪಡಿಸುವುದಕ್ಕಾಗಿ 'ಕೋರ್ಟುಹಿಲ್ ಆದಿದ್ರಾವಿಡ ಸಂಘ' ಅಸ್ತಿತ್ವಕ್ಕೆ ಬಂತು.

ಹಿಂದು ಸಮಾಜದಲ್ಲಿ ವಿಧವೆಯರ ಬದುಕಿನ ದುಃಸ್ಥಿತಿಯನ್ನು ಕಂಡ ಇವರು ಅವರ ಕಲ್ಯಾಣಕ್ಕಾಗಿ ಆಶ್ರಮವನ್ನು ತೆರೆದರು. ಅಲ್ಲಿ ಸಮಾಜದಿಂದ ದೂರವಾದ ಎಲ್ಲ ಜಾತಿಯ ವಿಧವೆಯರಿಗೆ ಆಶ್ರಯ ನೀಡಿ ಜೀವನೋಪಾಯದ ಮಾರ್ಗಗಳನ್ನು ತೋರಿದರು. 1922ರ ಹೊತ್ತಿಗೆ ಡಿಪ್ರೆಸ್ಡ್ ಕ್ಲಾಸಸ್ ಮಿಶನ್ ಸಂಸ್ಥೆ ಆರ್ಥಿಕ ತೊಂದರೆಗೆ ಸಿಲುಕಿತು. ಬೇರೆ ದಾರಿ ಕಾಣದೆ ಇವರು ಈ ಸಂಸ್ಥೆಯನ್ನು ಸರ್ವೆಂಟ್ ಆಫ್ ಇಂಡಿಯಾ ಸೊಸೈಟಿಗೆ ಹಸ್ತಾಂತರಿಸಿದರು. ಆದರೂ ರಂಗರಾಯರ ಸಂಸ್ಥೆಗಳನ್ನು ಬಹುಕಾಲ ನಡೆಸಿಕೊಂಡು ಹೋಗುವುದು ದುಸ್ತರವಾಯಿತು. ಇದರಿಂದಾಗಿ 1953ರ ಹೊತ್ತಿಗೆ ಡಿಪ್ರೆಸ್ಡ್ ಕ್ಲಾಸಸ್ ಮಿಶನ್ ಸಂಸ್ಥೆ ತನ್ನ ಆಡಳಿತದಲ್ಲಿದ್ದ ಎಲ್ಲಾ ವಿದ್ಯಾಸಂಸ್ಥೆಗಳನ್ನು ಮದರಾಸು ಸರ್ಕಾರಕ್ಕೆ ಒಪ್ಪಿಸಿತು.

ಇವರು ತಮ್ಮ 68ನೆಯ ವಯಸ್ಸಿನಲ್ಲಿ ಸುವಿಚಾರಾನಂದ ಸ್ವಾಮೀಜಿಯವರಿಂದ ಸಂನ್ಯಾಸ ದೀಕ್ಷೆಯನ್ನು ಪಡೆದರು. 'ಈಶ್ವರಾನಂದ ಸಂನ್ಯಾಸಿ' ಎನಿಸಿಕೊಂಡರು. ಇವರು ಸಮಾಜದ ಉನ್ನತಿಗೆ ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಆಗಿನ ಸರ್ಕಾರ ಇವರಿಗೆ 'ರಾವ್‌ಸಾಹೇಬ್' ಬಿರುದನ್ನಿತ್ತು ಗೌರವಿಸಿತು. ಬದುಕಿನ ಕೊನೆಗಾಲದಲ್ಲಿ ಹೃದಯದ ಕಾಯಿಲೆಯಿಂದ ಬಳಲಿದ ಇವರು 1928 ಜನವರಿ 30ರಂದು ನಿಧನರಾದರು.

ಸಮಾಜಸೇವಾ ಕಾರ್ಯಗಳಿಂದಾಗಿ ಇವರು ಆ ಕಾಲಕ್ಕೆ ಸಾರಸ್ವತ ಸಮಾಜದ ತೀವ್ರ ವಿರೋಧವನ್ನು ಎದುರಿಸಬೇಕಾಯಿತು. ಬಹಿಷ್ಕಾರಕ್ಕೂ ಒಳಗಾದರು. ಇದರ ನಿವೃತ್ತಿಗಾಗಿ ಇವರು ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿ ಜಯಶೀಲರಾದರು. ಇವರು ನಿಧನ ಹೊಂದಿದ 6 ವರ್ಷಗಳ ಅನಂತರ ಮಂಗಳೂರಿಗೆ ಬಂದ (24-2-1934) ಗಾಂಧೀಜಿಯವರು ಡಿಪ್ರೆಸ್ಡ್ ಕ್ಲಾಸಸ್ ಮಿಶನ್ ಸಂಸ್ಥೆಗೆ ಭೇಟಿ ನೀಡಿದರು. ಇವರು ಅಸ್ಪೃಶ್ಯತಾ ನಿವಾರಣೆ ಹಾಗೂ ದಲಿತೋದ್ಧಾರದ ಕಾಯಕದಲ್ಲಿ ಮಾಡಿದ ಸಾಧನೆಯನ್ನು ಪರಿಶೀಲಿಸಿ 'ಈ ವಿಷಯದಲ್ಲಿ ರಂಗರಾಯರು ನನ್ನ ಗುರುಗಳು' ಎಂದು ಗಾಂಧೀಜಿ ಹೇಳಿದ್ದರು. ರಂಗರಾಯರ ಸೇವೆಗೆ ಇದಕ್ಕಿಂತ ಹೆಚ್ಚಿನ ಗೌರವ ಇನ್ನೊಂದಿರಲಾರದು.

(ಎಸ್.ಎಚ್.ಜಿ.)

**ಕುಪಟೂರು :** ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಒಂದು ಗ್ರಾಮ. ಸೊರಬದಿಂದ ಸು.20ಕಿಮೀ ಉತ್ತರಕ್ಕಿದೆ.

ಈ ಗ್ರಾಮ ಚಂದ್ರಹಾಸನ ರಾಜಧಾನಿಯಾದ ಕುಂತಳ ನಗರ ಎಂದು ಪ್ರತೀತಿ. ಚಾರಿತ್ರಿಕವಾಗಿ ರಾಷ್ಟ್ರಕೂಟರ ಕಾಲದಿಂದಲೂ ಇದು ಒಂದು ದೊಡ್ಡ ಪಟ್ಟಣವಾಗಿತ್ತೆಂದು ಇಲ್ಲಿನ ವಿಸ್ತಾರವಾದ ಪ್ರಾಚೀನ ನಿವೇಶನ ಮತ್ತು ಇತರ ಅವಶೇಷಗಳಿಂದ ತಿಳಿಯಬಹುದು. ರಾಷ್ಟ್ರಕೂಟರ, ಚಾಳುಕ್ಯರ ಮತ್ತು ಈಚಿನ ಅನೇಕ ಶಾಸನಗಳು ಮತ್ತು ವೀರಗಲ್ಲುಗಳು ಇಲ್ಲಿನ ಕೆರೆ ಮತ್ತು ದೇವಾಲಯಗಳ ಬಳಿ ನಿಂತಿವೆ.

ಇಲ್ಲಿನ ರಾಮೇಶ್ವರ ಗುಡಿ ರಾಷ್ಟ್ರಕೂಟರ ಕಾಲದ ದೇವಾಲಯ (9-10ನೆಯ ಶತಮಾನ). ನವರಂಗದ ಒಳಚಾವಣಿಯಲ್ಲಿರುವ ಅಷ್ಟ ದಿಕ್ಪಾಲಕರ ನಡುವಿನ ತಾಂಡವಮೂರ್ತಿ ಸುಂದರ ಕೃತಿ. ಅಂತೆಯೇ ನವರಂಗದಲ್ಲಿರುವ ಸಪ್ತಮಾತೃಕೆಯರು, ಮಹಿಷಾಸುರಮರ್ದಿನಿ, ಗರ್ಭಗೃಹದ ಮುಂದಿರುವ ಚಂದ್ರಶಿಲೆ, ನಂದಿಮಂಟಪದಲ್ಲಿರುವ ನಂದಿ ಇವೆಲ್ಲ ರಾಷ್ಟ್ರ ಕೂಟ ಶೈಲಿಯಲ್ಲಿವೆ. ಇಲ್ಲಿನ ಕೈಟಭೇಶ್ವರ ದೇವಾಲಯ ದೇವಸ್ಥಾನದ ಹಕ್ಕು ಎಂಬ ಜಾಗದಲ್ಲಿದ್ದು ಸಂಪೂರ್ಣವಾಗಿ ಉಳಿದುಬಂದಿರುವ ಪ್ರಸಿದ್ಧ ಗುಡಿ. ಚಾಳುಕ್ಯ ಶೈಲಿಯಲ್ಲಿರುವ ಈ ದೇವಾಲಯಕ್ಕೆ ಕೋಟೇಶ್ವರ ಎಂಬ



ಕೋಟೇಶ್ವರ ದೇವಾಲಯ

ಹೆಸರಿತ್ತೆಂದು ಹೊಯ್ಸಳ ವಿನಯಾದಿತ್ಯನ ಶಾಸನದಿಂದ ತಿಳಿಯುತ್ತದೆ. ಗರ್ಭಗುಡಿ, ಸುಕನಾಸಿ ಮತ್ತು ನವರಂಗ ಮಂಟಪವಿರುವ ಈ ದೇವಾಲಯದ ಹೊರಗೋಡೆಯ ಮೇಲೆ ಅರೆ ಗಂಬಗಳು, ಅರೆಗೋಪುರಗಳು ಮತ್ತು ಮಂಟಪಗಳ ಅಲಂಕರಣವಿದೆ. ಗರ್ಭಗುಡಿಯ ಮೇಲೆ ಸುಂದರವಾದ ಕಲ್ಲಿನ ಗೋಪುರವಿದೆ. 1077ರಲ್ಲಿ ನಿರ್ಮಿತವಾದ ಪಾರ್ಶ್ವನಾಥ ಬಸದಿಯಲ್ಲಿನ ಪಾರ್ಶ್ವನಾಥಮೂರ್ತಿ ಒಂದು ಸುಂದರ ಶಿಲ್ಪ. ಈಗ ಇದರ ಕಟ್ಟಡ ಶಿಥಿಲವಾಗಿದೆ. ಇದಲ್ಲದೆ ಈ ಊರಿನಲ್ಲಿ ದುರ್ಗಾ, ಕಾಳಿ, ಚಿಂತಾಮಣಿ ನರಸಿಂಹ ಮುಂತಾದ ಬೇರೆ ಬೇರೆ ಕಾಲಕ್ಕೆ ಸೇರಿದ

ದೇವಾಲಯಗಳಿವೆ. ಚಿಂತಾಮಣಿ ನರಸಿಂಹ ದೇವಾಲಯದಲ್ಲಿರುವ ನರಸಿಂಹನ ಮೂರ್ತಿ ಸಿಂಹದ ಸ್ವಾಭಾವಿಕ ರೂಪದಲ್ಲಿದೆ. ಇದೊಂದು ಅಪರೂಪ ಕೃತಿ. ದ್ಯಾವಮ್ಮ ಗುಡಿಯಲ್ಲಿ ದೇವತೆಯ ಬೃಹತ್ ಮರದ ವಿಗ್ರಹವಿದೆ. ಅದರ ಪ್ರಭಾವಳಿ ಸೇರಿದಂತೆ ವಿಗ್ರಹದ ಎತ್ತರ 2.44ಮೀ. ಸಿಂಹದ ಮೇಲೆ ಸವಾರಿ ಮಾಡುತ್ತಿರುವ 16 ಕೈಗಳ ಈ ಮೂರ್ತಿ ನೋಡಲು ರುದ್ರ ಭಯಂಕರವಾಗಿದೆ. (ಎಂ.ಎಚ್.)

**ಕುಪ್ಪಗಲ್ಲು :** ಬಳ್ಳಾರಿ ಜಿಲ್ಲೆ ಬಳ್ಳಾರಿ ತಾಲ್ಲೂಕಿನಲ್ಲಿರುವ ಒಂದು ಮಹತ್ವದ ಪ್ರಾಗೈತಿಹಾಸಿಕ ಸ್ಥಳ. ಈ ಗ್ರಾಮದ ಸಮೀಪದಲ್ಲಿ, ಬಳ್ಳಾರಿಯಿಂದ ಮೋಕಾಕ್ಕೆ ಹೋಗುವ ರಸ್ತೆಯಲ್ಲಿ, ಹಗರಿ ನದಿಯ ಪಶ್ಚಿಮಕ್ಕೆ ಸು.9ಕಿಮೀ ಅಂತರದಲ್ಲಿ, ನವಲಿ ಬೆಟ್ಟದ ಬಳಿಯಲ್ಲಿ ಮೂರು ಬೂದಿತಿಟ್ಟುಗಳು ಇವೆ. ಈ ಬೂದಿತಿಟ್ಟುಗಳು ನವ ಶಿಲಾಯುಗಕ್ಕೆ ಸಂಬಂಧಪಟ್ಟಿವೆಯೆಂದು ಪುರಾತತ್ವಜ್ಞರ ಅಭಿಪ್ರಾಯ. ಇವುಗಳ ಹುಟ್ಟಿನ ಬಗೆಗೆ ಭಿನ್ನಾಭಿಪ್ರಾಯಗಳಿವೆ.

ಕುಪ್ಪಗಲ್ಲಿನಲ್ಲಿ ನ್ಯೂಬೋಲ್ಡ್ ಎಂಬುವನು 1843ರಲ್ಲಿ ಮೊದಲ ಉತ್ಖನನ ನಡೆಸಿದ. ಈ ಬೂದಿತಿಟ್ಟುಗಳು ಮಾನವನ ಔದ್ಯೋಗಿಕ ಕೇಂದ್ರವಾಗಿರದೆ ಪ್ರಾಯಶಃ ಶವಸಂಸ್ಕಾರ ವಿಧಿಗೆ ಸಂಬಂಧಿಸಿರಬಹುದು ಎಂಬುದು ಆತನ ನಿರ್ಣಯವಾಗಿತ್ತು. ಅನಂತರ ಆರ್.ಬ್ರೂಸ್‌ಫೂಟ್ ಈ ತಿಟ್ಟುಗಳನ್ನು ಪರೀಕ್ಷಿಸಿ ಇವುಗಳ ಕಾಲ ನವಶಿಲಾಯುಗಕ್ಕೆ ಸಂಬಂಧಿಸಿದ್ದು ಎಂದುದಲ್ಲದೆ ಈ ತಿಟ್ಟುಗಳು ಹಸುವಿನ ಸಗಣಿಯನ್ನು ಒಂದೆಡೆಯಲ್ಲಿ ಹಾಕಿ ಸುಟ್ಟುದರಿಂದ ಉಂಟಾದುವೆಂದು ವಿವರಿಸಿದ. ಯಾಜ್ದಾನಿ (1936) ಚಿನ್ನ ಹಾಗೂ ಕಬ್ಬಿಣ ಮುಂತಾದ ಲೋಹಗಳನ್ನು ತಯಾರಿಸುವಾಗ ಕರಗಿಸುತ್ತಿದ್ದ ಅದುರಿನಿಂದಾಗಿ ಈ ಬಗೆಯ ತಿಟ್ಟುಗಳು ಆಗಿರಬಹುದೆಂದು ಭಾವಿಸಿದರು.

1965ರಲ್ಲಿ ಇಲ್ಲಿನ ದೊಡ್ಡ ತಿಟ್ಟನ್ನು ಜಿ.ಜಿ.ಮುಜುಮ್‌ದಾರ್ ಹಾಗೂ ಎಸ್.ಎನ್. ರಾಜಗುರು ಉತ್ಖನನಗೈದು ಅದರ ವರದಿಯನ್ನು ಪ್ರಕಟಿಸಿದರು. ಈ ಬೂದಿತಿಟ್ಟುಗಳು ನವಶಿಲಾಯುಗದ ಕಾಲದವು ಎಂಬುದನ್ನು ಇವರ ಈ ಅಧ್ಯಯನ ಇನ್ನಷ್ಟು ಬಲವತ್ತರವಾಗಿಸಿತು. ಇಲ್ಲಿನ ಉತ್ಖನನದಲ್ಲಿ ಐತಿಹಾಸಿಕ ಕಾಲದ, ಬೃಹತ್ ಶಿಲಾಯುಗದ ಅವಶೇಷಗಳು ಮೇಲಿನ ಸ್ತರಗಳಲ್ಲಿ, ಸ್ವಲ್ಪಮಟ್ಟಿಗೆ ದೊರಕಿದುವು. ತಿಟ್ಟಿನ ಹೆಚ್ಚಿನ ಭಾಗ ನವಶಿಲಾಯುಗ ಕಾಲದ್ದು. ಇಲ್ಲಿನ ಬೂದಿಯುನ್ನು ಪ್ರಯೋಗಶಾಲೆಯಲ್ಲಿ ಪರೀಕ್ಷಿಸಿ ತಜ್ಞರು ಇವು ದನದ ಸಗಣಿ ಸುಟ್ಟಿದ್ದರಿಂದ ಆದದ್ದೆಂದು ತೀರ್ಮಾನಿಸಿದರು. ಅಲ್ಲದೆ. ಈ ಬೂದಿಯ ಭಾಗದ ಕೆಳಗಡೆ ಸ್ತರಾಂತರದಲ್ಲಿ ನವಶಿಲಾಯುಗಕ್ಕೂ ಹಿಂದೆ ಬಳಕೆಯಲ್ಲಿದ್ದ ಕೆಲವು ಕಲ್ಲಿನ ಆಯುಧಗಳೂ ಬೆಳಕಿಗೆ ಬಂದುವು.

ಕುಪ್ಪಗಲ್ಲಿನ ಬೆಟ್ಟದ ಉತ್ತರ ಭಾಗದಲ್ಲಿ ಬಹಳ ಎತ್ತರದ ಸ್ಥಳದಲ್ಲಿ ವೃಷಭ, ನವಿಲು, ಆನೆ ಇತ್ಯಾದಿ ಪ್ರಾಣಿಗಳ ಚಿತ್ರಗಳನ್ನು ಬಿಡಿಸಲಾಗಿದೆ. ವೃಷಭದ ಇಣಿಗಳು ವಿಶೇಷವಾಗಿ ದೊಡ್ಡವಾಗಿದ್ದು ಈಗಿನ ಇಲ್ಲಿನ ತಳಿಗಳಿಗಿಂತ ಕಿಂಚಿತ್ ಭಿನ್ನವಾಗಿವೆ. ಇವು ರಾಯಚೂರು ಜಿಲ್ಲೆಯಲ್ಲಿನ ಪ್ರಾಗೈತಿಹಾಸಿಕ ಚಿತ್ರಗಳನ್ನು ಹೋಲುತ್ತವೆ. (ಎಸ್.ಜಿವಿ.)

**ಕುಬ್ಜ :** ಸು.5ನೆಯ ಶತಮಾನದಲ್ಲಿದ್ದ ಒಬ್ಬ ಶಾಸನಕವಿ. ಈತ ಕದಂಬ ಶಾಂತಿವರ್ಮ (ಸು.430-55) ಬರೆಸಿದ ತಾಳಗುಂದದ ಪ್ರಣವೇಶ್ವರ ದೇವಾಲಯದ ಮುಂದಿನ ಶಿಲಾಸ್ತಂಭದಲ್ಲಿ ಕೊರೆದಿರುವ ಸಂಸ್ಕೃತ ಪದ್ಯಶಾಸನವನ್ನು (ಸು.450) ಬರೆದಿದ್ದಾನೆ. ಈ ಶಾಸನದ 34ನೆಯ ಪದ್ಯದಲ್ಲಿ ಕುಬ್ಜ ಸ್ವಕಾವ್ಯಮಿದಮಶ್ಮತಲೇಲಿಲೇಖ (ಕುಬ್ಜ ಸ್ವರಚಿತ ಈ ಕಾವ್ಯವನ್ನು ಕಲ್ಲಿನ ಮೇಲೆ ಬರೆದ) ಎಂದಿರುವುದರ ಹೊರತು ಈತನಿಗೆ ಸಂಬಂಧಿಸಿದ ವೈಯಕ್ತಿಕ ವಿವರಗಳು ಈ ಶಾಸನದಲ್ಲಾಗಲಿ ಬೇರೆ ಕಡೆಗಳಲ್ಲಾಗಲಿ ಕಂಡುಬಂದಿಲ್ಲ. ಕವಿ ಶೈವನಿರಬಹುದೆಂದು ತೋರುತ್ತದೆ. ಬಹಶಃ ಕನ್ನಡ ನಾಡಿನವನೇ ಇರಬಹುದು. ಸು.4-5ನೆಯ ಶತಮಾನಗಳಲ್ಲಿ ಕನ್ನಡ ನಾಡಿನಲ್ಲಿ ಸಂಸ್ಕೃತ ಭಾಷೆಗಿದ್ದ ಪ್ರಾಶಸ್ತ್ಯ ಕಾರಣವಾಗಿ, ಈ ಭಾಷೆಯಲ್ಲಿ ಪದ್ಯರಚನೆ ಮಾಡಿ ಖ್ಯಾತನಾಗಿರಬಹುದು. ಶಾಸನದ ಭಾಷೆ ಛಂದಸ್ಸುಗಳ ಪ್ರೌಢಿಮೆ ವೈವಿಧ್ಯಗಳನ್ನು ಗಮನಿಸಿದರೆ, ಈತ ಒಳ್ಳೆಯ ವಿದ್ವತ್ಕವಿಯಾಗಿ ತನ್ನ ಕಾಲದಲ್ಲಿ ಗಣ್ಯತೆ ಪಡೆದಿರಬೇಕೆಂದೂ ಪ್ರಾಯಶಃ ಕಾಕುತ್ಸ್ಥವರ್ಮ ಶಾಂತಿವರ್ಮರ ಪೋಷಣೆಯಲ್ಲಿ ಇದ್ದಿರಬೇಕೆಂದೂ ತೋರುತ್ತದೆ. ಶಾಸನದಲ್ಲಿ ಕದಂಬವಂಶದ ಸ್ಥಾಪನೆಯ ಹಿನ್ನೆಲೆ, ಮಯೂರಶರ್ಮನ ವೃತ್ತಾಂತ, ಕಾಕುತ್ಸ್ಥವರ್ಮನ ವೈಭವದ ವರ್ಣನೆ ಇವುಗಳನ್ನು ತನ್ನ ಕಾವ್ಯಮಯ ನಿರೂಪಣೆಯಿಂದ ಮನೋಹರವಾದ ಶಬ್ದ ಮತ್ತು ಅರ್ಥಾಲಂಕಾರಗಳ ವೈಚಿತ್ರ್ಯಗಳಿಂದ ಹೃದಯಂಗಮವಾಗಿ ನಿರೂಪಿಸಿದ್ದಾನೆ. ಒಂದೆರಡು ಕಡೆ ಹೊರತುಪಡಿಸಿ ಉಳಿದ ಕಡೆಗಳಲ್ಲಿ ಬಹುಮಟ್ಟಿಗೆ ಪ್ರಾಚೀನ ಕನ್ನಡ ಕವಿಗಳಿಗೆ ಪರಿಚಿತವಾದ ಸಂಸ್ಕೃತ ಛಂದಸ್ಸುಗಳ ಬಳಕೆಯಾಗಿರುವುದು ಗಮನಾರ್ಹವಾಗಿದೆ.

ಕವಿಯ ಹೆಸರು ಕುಬ್ಜ ಎಂದಿರುವುದು ಸ್ವಲ್ಪ ವಿಲಕ್ಷಣವಾಗಿ ತೋರುತ್ತದೆ. ಕುಬ್ಜ ಎಂದರೆ ಕುಳ್ಳಾದ ಕೊಂಕು ಬೆನ್ನಿನ ಎಂದು ಅರ್ಥ. ಈ ಅರ್ಥದ ಒಂದು ಗುಣವಾಚಕವನ್ನು ರಾಜಪುರುಷರೂ ಅಧಿಕಾರಿಗಳೂ ತಮಗೆ ಅಂಕಿತನಾಮವನ್ನಾಗಿ ಇಟ್ಟುಕೊಳ್ಳುತ್ತಿದ್ದರೇ ಎಂಬುದು ವಿಚಾರಣೀಯ, ವರಾಹಮಿಹಿರ ತನ್ನ ಬೃಹತ್‌ಸಂಹಿತೆಯಲ್ಲಿ. (ಸು.6ನೆಯ ಶತಮಾನ) ಭದ್ರ, ಹಂಸ, ಶಶ, ರುಚಕ, ಮಾಲವ ಎಂಬ ಲಕ್ಷಣದ ಐವರು ರಾಜ (ಮಹಾಪುರುಷ)ರನ್ನೂ ಅವರ ಅನುಚರರೆಂದು ಕ್ರಮವಾಗಿ ವಾಮನಕ, ಕುಬ್ಜ, ಜಘನ್ಯ, ಮಂಡಲಕ, ಸಾಚಿ ಎಂಬ ಐವರನ್ನೂ ಹೇಳಿದ್ದಾನೆ. ಇದರಿಂದ ಕುಬ್ಜನೆಂಬುವನು ಹಂಸಲಕ್ಷಣದ ರಾಜಾನುಚರನೆಂದು (ಪ್ರಾಯಶಃ ಒಬ್ಬ ಗಣ್ಯ ಅಧಿಕಾರಿ) ಹೇಳಬಹುದು. ಪ್ರಸ್ತುತದಲ್ಲಿ ಈ ಕವಿ ತನ್ನನ್ನು ಕುಬ್ಜನೆಂದು ಹೇಳಿಕೊಂಡಿರುವುದು ಈ ವಿಶೇಷಾರ್ಥದಲ್ಲಿಯೇ ಎಂದು ಒಬ್ಬ ವಿದ್ವಾಂಸರು ಊಹಿಸಿದ್ದಾರೆ. ಆದರೆ ಬೃಹತ್ ಸಂಹಿತೆಯಲ್ಲಿ ಹೇಳಿರುವಂಥ ವ್ಯಕ್ತಿಯೇ ಈ ಶಾಸನದ ಕವಿ ಎಂದು ಸಾಧಿಸುವುದು ಕಷ್ಟ. ಈಗಿನ ಕರ್ನಾಟಕದಲ್ಲಿ ಕುಳ್ಳಯ್ಯ, ಕುನ್ನಯ್ಯ, ಗಿಡ್ಡಪ್ಪ ಎನ್ನುವಂಥ ಹೆಸರುಗಳುಂಟು. ಆದ್ದರಿಂದ ಕುಬ್ಜ ಎಂಬುದು ಅಂಕಿತನಾಮವಾಗಿಯೂ ಇದ್ದಿರುವುದು ಅಸಂಭವವಲ್ಲ. ಇದು ಹೇಗಿದ್ದರೂ ಕನ್ನಡನಾಡಿನ ಪ್ರಾಚೀನ ಸಂಸ್ಕೃತ ಕವಿಗಳಲ್ಲಿ ಅದರಲ್ಲಿಯೂ ಶಾಸನಕವಿಗಳಲ್ಲಿ ಕದಂಬವಂಶ ಸ್ಥಾಪನೆಯನ್ನು ವಿವರಿಸುವ ಐತಿಹಾಸಿಕ ಮಹತ್ತ್ವದ ಮತ್ತು ಉತ್ತಮ ಕವಿತ್ವದ ಶಾಸನವನ್ನು ಬರೆದವನೆಂಬ ದೃಷ್ಟಿಯಿಂದ ಈತನ ಹೆಸರು ಚಿರಸ್ಥಾಯಿಯಾಗಿದೆ. (ಟಿ.ವಿ.ವಿ.)

**ಕುಬ್ಜ ವಿಷ್ಣುವರ್ಧನ :** ವೆಂಗಿ ಅಥವಾ ಪೂರ್ವಚಾಳುಕ್ಯ ರಾಜ್ಯದ ಪ್ರಪ್ರಥಮ ರಾಜ (ಸು.615-33). ಒಂದನೆಯ ಕೀರ್ತಿವರ್ಮನ ಮಗ. ಇಮ್ಮಡಿ ಪುಲಕೇಶಿಯ ಕಿರಿಯ ಸಹೋದರ. ಇವನಿಗೆ ಮಕರಧ್ವಜ, ವಿಷಮಸಿದ್ಧಿ ಮತ್ತು ಬಿಟ್ಟರಸ ಎಂಬ ಹೆಸರುಗಳೂ ಇದ್ದವು. ಇಮ್ಮಡಿ ಪುಲಕೇಶಿ ಬಾದಾಮಿ ಚಳುಕ್ಯ ಸಾಮ್ರಾಜ್ಯದ ಸಾಮ್ರಾಟನಾದ ಮೇಲೆ ತನ್ನ ಸಹೋದರ ಕುಬ್ಜ ವಿಷ್ಣುವರ್ಧನನನ್ನು ಯುವರಾಜನನ್ನಾಗಿ ನೇಮಿಸಿದ. ಅನಂತರ ಮಹಾರಾಷ್ಟ್ರದ ಕೆಲವು ಭಾಗಗಳ ಆಡಳಿತವನ್ನು ನಿರ್ವಹಿಸಲು ವಿಷ್ಣುವರ್ಧನನನ್ನು ತನ್ನ ಪ್ರತಿನಿಧಿಯಾಗಿ ನೇಮಿಸಿದ. ಈ ಅಂಶ ವಿಷ್ಣುವರ್ಧನನೇ (617-18) ಹೊರಡಿಸಿದ ಸಾತಾರಾ ಶಾಸನದಿಂದ ವೇದ್ಯವಾಗುತ್ತದೆ.

631ರಲ್ಲಿ ಇಮ್ಮಡಿ ಪುಲಕೇಶಿ ದಖನ್ನಿನ ಪೂರ್ವ ಪ್ರಾಂತ್ಯಗಳ ಮೇಲೆ ದಂಡೆತ್ತಿ ಹೋದಾಗ ವಿಷ್ಣುವರ್ಧನನೂ ಅವನ ಜೊತೆ ಹೋಗಿದ್ದ. ಪುಲಕೇಶಿ ದಖನ್ನಿನ ಪೂರ್ವಭಾಗದಲ್ಲಿ ಹೊಸದಾಗಿ ಗೆದ್ದು ಕೊಂಡ ಭಾಗಗಳ ಆಡಳಿತವನ್ನು ನಿರ್ವಹಿಸಲು ವಿಷ್ಣುವರ್ಧನನನ್ನು ತನ್ನ ಪ್ರತಿನಿಧಿಯಾಗಿ ನೇಮಿಸಿ ಬಾದಾಮಿಗೆ ಹಿಂದಿರುಗಿದ. ಆದರೆ ಕಾಲಾನಂತರ ವಿಷ್ಣುವರ್ಧನ ಸ್ವತಃ ಮಹಾರಾಜ ಎಂಬ ಬಿರುದನ್ನು ಧರಿಸಿ ಸ್ವತಂತ್ರ ರಾಜನಂತೆ ಆಳಲು ಪ್ರಾರಂಭಿಸಿ, ಆಂಧ್ರಪ್ರದೇಶದಲ್ಲಿ ಸು.6 ಶತಮಾನಗಳ ಕಾಲ ಆಳಿದ ಪೂರ್ವಚಾಳುಕ್ಯವಂಶದ ಮೂಲಪುರುಷನಾದ. ಅಯ್ಯನಮಹಾದೇವಿ ಈತನ ರಾಣಿ. ಈಕೆ ವಿಜಯವಾಡದಲ್ಲಿ ಒಂದು ಜೈನ ದೇವಸ್ಥಾನಕ್ಕೆ ದಾನ ನೀಡಿದಳೆಂದು ಒಂದು ಶಾಸನದಿಂದ ತಿಳಿಯುತ್ತದೆ. (ಎಸ್.)

**ಕುಮಟ :** ಉತ್ತರ ಕನ್ನಡ ಜಿಲ್ಲೆ ಕರಾವಳಿಯಲ್ಲಿರುವ ಒಂದು ತಾಲ್ಲೂಕು ಮತ್ತು ಅದರ ಆಡಳಿತ ಕೇಂದ್ರ. ಜಿಲ್ಲೆಯ ದಕ್ಷಿಣದಲ್ಲಿರುವ ಈ ತಾಲ್ಲೂಕನ್ನು ಉತ್ತರದಲ್ಲಿ ಅಂಕೋಲ, ಪೂರ್ವದಲ್ಲಿ ಶಿರಸಿ ಮತ್ತು ಸಿದ್ದಾಪುರ, ದಕ್ಷಿಣದಲ್ಲಿ ಹೊನ್ನಾವರ ತಾಲ್ಲೂಕುಗಳು ಪಶ್ಚಿಮದಲ್ಲಿ ಅರಬ್ಬೀ ಸಮುದ್ರವೂ ಸುತ್ತುವರಿದಿವೆ. ತಾಲ್ಲೂಕಿನಲ್ಲಿ ಎರಡು ಪಟ್ಟಣಗಳೂ 112 ಹಳ್ಳಿಗಳೂ ಇವೆ. ಮಿರ್ಜಾನ್, ಕುಮಟ, ಕುಂಜಳ್ಳಿ ಮತ್ತು ಗೋಕರ್ಣ ಹೋಬಳಿಗಳು. ತಾಲ್ಲೂಕಿನ ವಿಸ್ತೀರ್ಣ 608 ಚ.ಕಿಮೀ.ಗಳು; ಜನಸಂಖ್ಯೆ 1,45,772.



ಮೋಹಿನಿ ಶಿಖರ, ಯಾಣ

ಈ ತಾಲ್ಲೂಕು ಪಶ್ಚಿಮ ಘಟ್ಟದ ಇಳಿಜಾರು ಪ್ರದೇಶದಲ್ಲಿದ್ದು ಕಲ್ಲುಬಂಡೆಗಳ ಕೆಲವು ಬೆಟ್ಟಗಳಿಂದ ಮತ್ತು ಅಳಿವೆ ಕೋಡಿಗಳಿಂದ ಕೂಡಿದೆ. ತಾಲ್ಲೂಕಿನ ಮುಖ್ಯ ನದಿ ಅಘನಾಶಿನಿ (ನೋಡಿ) ತಾಲ್ಲೂಕಿನ ಪೂರ್ವದಿಂದ ಪಶ್ಚಿಮಕ್ಕೆ ಹರಿದು ಅರಬ್ಬೀ ಸಮುದ್ರವನ್ನು ಕುಮಟದ ಉತ್ತರದಲ್ಲಿ ಸೇರುವುದು. ಇದಲ್ಲದೆ ಮಳೆಗಾಲದಲ್ಲಿ ತುಂಬಿಹರಿಯುವ ಕೆಲವು ಸಣ್ಣಪುಟ್ಟ ತೊರೆಗಳುಂಟು. ಅಂಕೋಲ ತಾಲ್ಲೂಕಿನ ಗಂಗಾವಳಿ ನದಿಯ ದಕ್ಷಿಣಕ್ಕಿರುವ ಈ ತಾಲ್ಲೂಕಿನ ಉತ್ತರದ ತೀರಪ್ರದೇಶವೆಲ್ಲ ಮರಳಿನಿಂದ ಕೂಡಿದೆ. ತಾಲ್ಲೂಕಿನ ಒಳಭಾಗ ಮತ್ತು ಪೂರ್ವ ಪ್ರದೇಶ ಗೋಡು ಮತ್ತು ಮರಳುಮಿಶ್ರಿತ ಗೋಡುಮಣ್ಣಿನ ಪ್ರದೇಶವಾಗಿದೆ. ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ ಸು.3710ಮಿಮೀ. ಈ ತಾಲ್ಲೂಕಿಗೆ ಹಿನ್ನೆಲೆಯಾಗಿರುವ ಪಶ್ಚಿಮ ಘಟ್ಟದ ಮೇಲೆ ದಟ್ಟವಾದ ಕಾಡುಗಳು ಬೆಳೆದಿವೆ. ಅರಣ್ಯ ಭೂಮಿಯ ವಿಸ್ತೀರ್ಣ 3,96,412. ಬತ್ತ, ತೆಂಗು, ಅಡಕೆ, ಕಬ್ಬು, ಮೆಣಸು ಮುಖ್ಯ ಬೆಳೆಗಳು. 167 ಹೆ.ಗಳಲ್ಲಿ ದ್ವಿದಳಧಾನ್ಯಗಳನ್ನು ಬೆಳೆಯಲಾಗುತ್ತಿದೆ. ಮಾವು, ಬಾಳೆ, ಗೋಡಂಬಿ ಮುಖ್ಯ ಬೆಳೆಗಳಾಗಿವೆ. ಮೀನುಗಾರಿಕೆ ಒಂದು ಪ್ರಮುಖ ಉಪಕಸಬು. ವಾರ್ಷಿಕವಾಗಿ 7035 ಟನ್ ಸಾಗರೋತ್ಪನ್ನ ಮೀನು ಹಿಡಿಯಲಾಗುತ್ತಿದೆ.

ಈ ತಾಲ್ಲೂಕಿನ ಮುಖ್ಯ ಸ್ಥಳಗಳಲ್ಲಿ ಗೋಕರ್ಣ (ನೋಡಿ) ಒಂದು ಯಾತ್ರಾಸ್ಥಳ. ಕುಮಟದ ಉತ್ತರಕ್ಕೆ,ಗೋಕರ್ಣಕ್ಕೆ ಉತ್ತರದಲ್ಲಿ ಒಂದೂವರೆ ಕಿಮೀ ದೂರದಲ್ಲಿರುವ ಕಡೆ 18ನೆಯ ಶತಮಾನದಲ್ಲಿ ಪ್ರಾಮುಖ್ಯ ಪಡೆದಿದ್ದ ಸ್ಥಳವೆಂದು ತಿಳಿದುಬರುತ್ತದೆ. ಮಿರ್ಜಾನ್ ಈ ತಾಲ್ಲೂಕಿನ ಒಂದು ಹೋಬಳಿ ಕೇಂದ್ರ; ಕುಮಟಕ್ಕೆ ಉತ್ತರದಲ್ಲಿ 8ಕಿಮೀ ದೂರದಲ್ಲಿದೆ. ಸಮುದ್ರದಿಂದ ಮಿರ್ಜಾನ್‌ವರೆಗೆ 8-9ಕಿಮೀ. ದೂರ ದೋಣಿ ಸಂಚಾರ ಉಂಟು. ಇದೊಂದು ನದೀಬಂದರಿನ ವ್ಯಾಪಾರ ಕೇಂದ್ರ. ಅಘನಾಶಿನಿ ನದಿ ದಡದಲ್ಲಿ ನದಿಯ ಉತ್ತರಕ್ಕಿರುವ ಈ ಊರಿನಲ್ಲಿ ಹಳೆಯ ಕೋಟೆಯ ಅವಶೇಷವಿದೆ. ಗೋಕರ್ಣಕ್ಕೆ ಆಗ್ನೇಯದಲ್ಲಿ 5ಕಿಮೀ ದೂರದಲ್ಲೂ ಕುಮಟದ ಉತ್ತರಕ್ಕೆ 10ಕಿಮೀ ದೂರದಲ್ಲೂ ತದಡಿ ನದೀ ಮುಖದಲ್ಲಿ ತದಡಿ (ನೋಡಿ) ಎಂಬ ಚಿಕ್ಕ ಬಂದರಿದೆ. ಇಲ್ಲಿ ಸಣ್ಣ ದೋಣಿಗಳ ಸಂಚಾರ ಹೆಚ್ಚು. ದೊಡ್ಡ ಮಚವೆಗಳೂ ಆಗಾಗ ಲಂಗರ ಹಾಕುವುದುಂಟು. ಇಲ್ಲೊಂದು ಲೈಟ್ ಹೌಸಿದೆ. ಉಪ್ಪು, ಕಟ್ಟಿಗೆ ಇಲ್ಲಿಂದ ರಫ್ತಾಗುತ್ತಿದೆ. ಯಾಣ (ನೋಡಿ) ಅಥವಾ ಭೈರವ ಕ್ಷೇತ್ರ ಕುಮಟಕ್ಕೆ ಈಶಾನ್ಯದಲ್ಲಿ 24ಕಿಮೀ ದೂರದಲ್ಲಿರುವ ಯಾತ್ರಾಸ್ಥಳ. ಸಹ್ಯಾದ್ರಿ ಪರ್ವತ ಶ್ರೇಣಿ ಸುತ್ತುವರಿದಿರುವ ಸೊಬಗಿನ ಸ್ಥಳ. ಪುರಾಣ ಪ್ರಸಿದ್ಧ ಮೋಹಿನಿ ಭಸ್ಮಾಸುರ ಕಥೆ ನಡೆದದ್ದು ಇಲ್ಲಿ ಎನ್ನಲಾಗಿದೆ. ಕುಮಟದಿಂದ 17ಕಿಮೀ ದೂರದಲ್ಲಿರುವ ಕಳ್ಳಿಗುಡ್ಡ ವಿರಾಮ ಸ್ಥಳ, ಸೊಬಗಿನ ತಾಣ. ಸಾಣೆಕಟ್ಟೆ ಬೃಹತ್ ಪ್ರಮಾಣದ ಉಪ್ಪು ತಯಾರಿಕಾ ಕೇಂದ್ರ. ಕುಮಟದ ದಕ್ಷಿಣಕ್ಕಿರುವ ಗುಡೇಅಂಗಡಿಯ (ಬಾಡ) ಕಂಚಿಕಾಪರಮೇಶ್ವರಿ ದೇವಾಲಯ ಪ್ರಸಿದ್ಧವಾದದ್ದು. ಮೇ ತಿಂಗಳಿನಲ್ಲಿ ಇಲ್ಲಿ ತೇರು ನಡೆಯುತ್ತದೆ.

ಕುಮಟ ಈ ತಾಲ್ಲೂಕಿನ ಆಡಳಿತ ಕೇಂದ್ರ. ಕಾರವಾರದಿಂದ 64ಕಿಮೀ. ದಕ್ಷಿಣಕ್ಕೆ, ಹೊನ್ನಾವರದಿಂದ 16ಕಿಮೀ ಉತ್ತರಕ್ಕೆ ಇದೆ. ಜನಸಂಖ್ಯೆ 27,597 ಇದೊಂದು ರೇವುಪಟ್ಟಣ. ಸಮುದ್ರಯಾನ ಮಾಡುವವರ ನೆರವಿಗಾಗಿ ಇಲ್ಲೊಂದು ದೀಪಸ್ತಂಭವಿದೆ. ಇಲ್ಲಿನ ಕುಂಭೇಶ್ವರ ದೇವಾಲಯದಿಂದಾಗಿ ಇದನ್ನು ಕುಂಬಟಂ ಎಂದು ಕರೆಯುತ್ತಿದ್ದುದಾಗಿಯೂ ಅದರಿಂದ ಕುಮಟವೆಂಬ ಹೆಸರು ಬಂತೆಂದೂ ಹೇಳಲಾಗಿದೆ. ಇದು ಹಿಂದೆ ಒಂದು ಜೈನ ಕೇಂದ್ರವಾಗಿತ್ತು. ಈಗಲೂ ಇಲ್ಲಿ ಅನೇಕ ಜೈನ ಬಸದಿಗಳಿವೆ. ಊರ ಮಧ್ಯದಲ್ಲಿರುವ ಮುಖ್ಯ ಬಸದಿ ಪಾರ್ಶ್ವನಾಥನದು. ಕುಮಟ ಹಲವು ದೇವಾಲಯಗಳ ಬೀಡು, ಶಾಂತೇರಿ ಕಾಮಾಕ್ಷಿ, ಗೋಪಾಲಕೃಷ್ಣ, ವೆಂಕಟರಮಣ, ಮ್ಹಾಲಸಾದೇವಿ, ಜಟ್ಟಿಗ ಇಲ್ಲಿನ ಮುಖ್ಯ ದೇವಾಲಯಗಳು. ಶಾಂತಿಕ ಪರಮೇಶ್ವರಿ ದೇವಾಲಯದ ಹಿಂದೆ ದೊಡ್ಡ ಹುತ್ತವಿದೆ. ಈ ದೇವಸ್ಥಾನದ ಬಳಿ ನಡೆಯುವ ಬಂಡಿಹಬ್ಬ ಪ್ರಸಿದ್ಧವಾದುದು. ಹಬ್ಬದ ದಿನದಂದು ಕೋಲು ಹಿಡಿದವರು, ಹೂವಿನ ಮಕ್ಕಳು ಬೆಂಕಿಯ ಮೇಲೆ ನಡೆಯುತ್ತಾರೆ. ಪೋರ್ಚುಗೀಸರು ಇಲ್ಲಿಯ ಜನರಿಂದ ತೆರಿಗೆ ವಸೂಲಿ ಮಾಡುತ್ತಿದ್ದರೆಂದು ಹೇಳಲಾಗಿದೆ. ಟಿಪ್ಪು ಈ ಪಟ್ಟಣದ ಮೇಲೆ ಎರಡು ಸಾರಿ ಆಕ್ರಮಣ ನಡೆಸಿದ್ದ.



ವೆಂಕಟರಮಣ ದೇವಸ್ಥಾನ, ಕುಮಟ

19ನೆಯ ಶತಮಾನದಲ್ಲಿ ದಕ್ಷಿಣ ಮಹಾರಾಷ್ಟ್ರ ಮತ್ತು ಬಳ್ಳಾರಿ ಪ್ರದೇಶಗಳಿಂದ ಹತ್ತಿಯನ್ನು ಇಲ್ಲಿಗೆ ತಂದು ಇಲ್ಲಿಂದ ಮುಂಬಯಿಗೆ ಕಳುಹಿಸಲಾಗುತ್ತಿತ್ತು. ಕುಮಟ ಹತ್ತಿ ಎಂದೇ ಅದು ಪ್ರಸಿದ್ಧಿ ಪಡೆದಿತ್ತು.

ಅರಬ್ಬರು ಹಿಂದಿನಿಂದಲೂ ಕುಮಟದ ಜೊತೆ ವ್ಯಾಪಾರ ಸಂಪರ್ಕ ಹೊದಿದ್ದು ಇಲ್ಲಿಂದ ಅಕ್ಕಿ ಮತ್ತು ಇತರ ಸಾಂಬಾರ ಪದಾರ್ಥಗಳನ್ನು ತೆಗೆದುಕೊಂಡು ಹೋಗುತ್ತಿದ್ದರು. ಒಟ್ಟು 13 ಕಾರ್ಖಾನೆಗಳು ತಾಲ್ಲೂಕಿನಲ್ಲಿವೆ..

ಕುಮಟ ಒಂದು ವ್ಯಾಪಾರ ಕೇಂದ್ರ. ಅನೇಕ ರಸ್ತೆಗಳ ಸಂಧಿಸ್ಥಳ. ಇಲ್ಲಿಂದ ಕಾರವಾರ, ಭಟ್ಕಳ, ಯಲ್ಲಾಪುರ, ಶಿರಸಿ, ಶಿವಮೊಗ್ಗಗಳಿಗೆ ರಸ್ತೆಗಳಿವೆ. ಕೊಂಕಣ ರೈಲುಮಾರ್ಗ ಈ ಪಟ್ಟಣದ ಮೂಲಕ ಹಾದುಹೋಗುತ್ತದೆ. ಗಂಧದ ಕುಸುರಿ ಕೆಲಸಕ್ಕೆ ಈ ಪಟ್ಟಣ ಪ್ರಸಿದ್ಧವಾಗಿದೆ. ಹಸ್ತಿದಂತ, ದನಗಳ ಕೊಂಬಿನಿಂದ ಕಲಾತ್ಮಕ ವಸ್ತುಗಳನ್ನು ಇಲ್ಲಿ ತಯಾರಿಸಲಾಗುತ್ತದೆ. ಹಾಲಕ್ಕಿ ಒಕ್ಕಲಿಗರ ಹಗರಣ ಹಾಗೂ ಸುಗ್ಗಿ ಕುಣಿತ ಪ್ರಸಿದ್ಧವಾದುದು. ಈ ತಾಲ್ಲೂಕಿನ ಅನೇಕ ಕಲಾವಿದರು ಯಕ್ಷಗಾನ ಕ್ಷೇತ್ರದಲ್ಲಿ ಮಾಡಿದ ಸಾಧನೆ ಮಹತ್ವದ್ದು. ಕುಮಟ ಪಟ್ಟಣದಲ್ಲಿ 36ನೆಯ ಕನ್ನಡ ಸಾಹಿತ್ಯ ಸಮ್ಮೇಳನ ವಿ.ಸೀತಾರಾಮಯ್ಯನವರ ಅಧ್ಯಕ್ಷತೆಯಲ್ಲಿ ಜರುಗಿತ್ತು (1954). ಸುತ್ತಲೂ ಗದ್ದೆಗಳಿಂದ, ತೆಂಗಿನ ತೋಟಗಳಿಂದ ಆವೃತ್ತವಾಗಿರುವ ಕುಮಟ ಪಶ್ಚಿಮ ಕರಾವಳಿಯ ಸುಂದರ ತಾಣವಾಗಿದೆ. *

**ಕುಮಾರಗಂಧರ್ವ :** 1924-92. ಹಿಂದುಸ್ತಾನಿ ಸಂಗೀತದ ಹೆಸರಾಂತ ಕಲಾವಿದರು. ಶಿವಪುತ್ರಯ್ಯ ಸಿದ್ದರಾಮಯ್ಯ ಕುಂಭಕಾಳಿಮಠ ಎಂಬುದು ಇವರ ಪೂರ್ಣ ಹೆಸರು. ಇವರ ಮನೆತನದ ಮೂಲ ಊರು ಕೇರಳ ರಾಜ್ಯದ ಕೊಡವು. ಬೆಳಗಾಂವಿ ಜಿಲ್ಲೆ ಸೂಳೆಭಾವಿಯಲ್ಲಿ 1924 ಏಪ್ರಿಲ್ 8ರಂದು ಜನಿಸಿದರು. ತಂದೆ ಸಿದ್ದರಾಮಯ್ಯ, ತಾಯಿ ಗುರುಸಿದ್ದವ್ವ. ಪಂಚಾಕ್ಷರಿ ಗವಾಯಿಗಳು ಇವರ ಗುರು. ಇವರದು ಪೌರೋಹಿತ್ಯ ಮನೆತನವಾದರೂ ಅಜ್ಜನ ಕಾಲದಲ್ಲಿ ಸರಾಫ್ ಅಂಗಡಿ ತೆರೆದರು. ತಂದೆಯಿಂದ ಸಂಗೀತ ಕಲಿತು, ಆಕಾಶವಾಣಿಯಲ್ಲಿ ಮೊದಲಿಗೆ ಹಾಡುತ್ತಿದ್ದರು. ತಮ್ಮ ಆರನೆಯ ವಯಸ್ಸಿನಲ್ಲಿ ಹೆಸರಾಂತ ಗಾಯಕರ ಧ್ವನಿಮುದ್ರಿಕೆಗಳನ್ನು ಯಥಾವತ್ ಹಾಡಿ ಜನ ಸೋಜಿಗಪಡುವಂತೆ ಮಾಡುತ್ತಿದ್ದರು. ಇವರು ಓದಿದ್ದು ಪ್ರಾಥಮಿಕ ಮೂರನೆಯ ವರ್ಗದವರೆಗೆ ಮಾತ್ರ. ತಮ್ಮ ಮಗನ ಕಂಠಶ್ರೀ ಮತ್ತು ಅಪೂರ್ವ ಸಂಗೀತ ಜ್ಞಾನವನ್ನು ಗ್ರಹಿಸಿದ ತಂದೆ ಇವರ ಸಂಗೀತ ಶಿಕ್ಷಣಕ್ಕೆ ಬಿ.ಆರ್. ದೇವಧೂರರ ಹತ್ತಿರ ಬಿಟ್ಟರು. ತಮ್ಮ ಎಳೆಯ ವಯಸ್ಸಿನಲ್ಲಿಯೇ ದೊಡ್ಡ ದೊಡ್ಡ ಸಂಗೀತ ವಿದ್ವಾಂಸರ ಮುಂದೆ ಸಂಗೀತ ಕಛೇರಿ ನಡೆಸಿ ಸೈ ಎನಿಸಿಕೊಂಡರು.

ಒಮ್ಮೆ ಇವರ ಕುಲಗುರು ಶಾಂತವೀರಸ್ವಾಮಿ ಗುರುಮಠಕಲ್ ಬಾಗೇವಾಡಿಗೆ ಬಂದಿದ್ದರು. ಅವರೆದುರು ಹಾಡಿ ಗುರುಗಳ ಮೆಚ್ಚುಗೆಗೆ ಪಾತ್ರರಾಗಿ ಅವರಿಂದ ಬಂಗಾರದ ಪದಕ ಪಡೆದರು. ಪದಕದ ಹಿಂದೆ ಕುಮಾರಗಂಧರ್ವ ಎಂಬ ಬಿರುದನ್ನು ಕೊರೆಯಲಾಗಿತ್ತು. ಅಂದಿನಿಂದ ಶಿವಪುತ್ರಯ್ಯನವರು ಕುಮಾರಗಂಧರ್ವ ಎಂದೇ ಖ್ಯಾತರಾದರು.

ಮೊದಮೊದಲು ವಝೆಖಾನ ಸಾಹೇಬ ಅಬ್ದುಲ್ ಕರೀಂ ಖಾನ, ಓಂಕಾರನಾಥ್ ಠಾಕೂರ್ ಮೊದಲಾದ ಹಿರಿಯರ ಹಾಡುಗಳನ್ನು ಯಥಾವತ್ ಭಟ್ಟಿಯಿಳಿಸುತ್ತಿದ್ದ ಕುಮಾರಗಂಧರ್ವರು ದೇವಧೂರರ ಗರಡಿಯಲ್ಲಿ ಗ್ವಾಲಿಯರ್ ಘರಾನೆಯ ಸಂಗೀತದಲ್ಲಿ ಪಳಗಿದರೂ ತಮ್ಮ ಸ್ವಂತಿಕೆಯಿಂದ ಹೊಸದಾರಿ ತುಳಿದರು. ಇವರು ಗ್ವಾಲಿಯರ್ ಘರಾನೆಯ ಸಂಗೀತ ಚೌಕಟ್ಟನ್ನು ಪರಂಪರೆಯ ದೃಷ್ಟಿಯಿಂದ ಮುರಿದರೂ ಆ ಸಂಗೀತಕ್ಕೊಂದು ಹೊಸಮೆರಗು, ಹೊಸಸೊಗಸು ನೀಡಿದರು. ಸಂಗೀತದ ಜೊತೆಗೆ ಸಾಹಿತ್ಯ, ಚಿತ್ರ, ಶಿಲ್ಪಗಳ ಅಧ್ಯಯನ ಮಾಡಿದರು. ತಾರುಣ್ಯದಲ್ಲಿಯೇ ಕ್ಷಯರೋಗ ಪೀಡಿತರಾದುದರಿಂದ ವೈದ್ಯರ ಸಲಹೆಯ ಮೇರೆಗೆ ಮಧ್ಯಪ್ರದೇಶದ ದೇವಾಸಕ್ಕೆ ವಾಸಿಸಲು ತೆರಳಿದರು.

ಸಂಗೀತ ಕಲೆಯಲ್ಲಿ ಕುಮಾರಗಂಧರ್ವರು ವಿವಿಧ ಪ್ರಯೋಗ ಮಾಡಿದರು. ನಿಸರ್ಗಕ್ಕೂ ಸಂಗೀತಕ್ಕೂ ಇವರು ಸಂಬಂಧ ಕಂಡುಕೊಳ್ಳಲು ಪ್ರಯತ್ನಿಸಿದರು. ಸಂಗೀತದ ಉತ್ಪತ್ತಿ ನಾದಬ್ರಹ್ಮದಿಂದಾದುದರಿಂದ ಆ ನಾದಬ್ರಹ್ಮವನ್ನು ಶೋಧಿಸುವುದು, ಸಂಗೀತ ಮೂಲಸ್ರೋತದತ್ತ ಸಾಗುವುದು ಇವರ ಗುರಿಯಾಗಿತ್ತು. ಹಿರಿಯರು ಹಾಕಿಕೊಟ್ಟ ದಾರಿಯಲ್ಲಿ ತಾವು ನಡೆಯುತ್ತಿದ್ದರೂ ತಮ್ಮದೇ ಆದ ಹೊಸ ಕಾಣಿಕೆಯನ್ನು ಸಂಗೀತ ಕ್ಷೇತ್ರಕ್ಕೆ ನೀಡಬೇಕೆಂಬ ಹಂಬಲದಿಂದ ತಮ್ಮ ಗಾನ ಪ್ರತಿಭೆಯ ಹದಿನಾರು ರೂಪಗಳನ್ನು ತೋರಿಸುವ ವೈಶಿಷ್ಟ್ಯಪೂರ್ಣ ಕಾರ್ಯಕ್ರಮ ನೀಡಿ ಸಂಗೀತ ಜಗತ್ತಿನಲ್ಲಿ ಅಚ್ಚರಿ ಮೂಡಿಸಿದರು.

ಇದಲ್ಲದೆ ಇವರು ಹೊಸರಾಗ ಮತ್ತು ಹೊಸ ಬಂದಿಶ್ ರಚಿಸಿದರು. ಭಜನ, ಖ್ಯಾಲ, ಠುಮರಿ, ಟಪ್ಪಾ, ತರಾಣಾ, ಭಾವಗೀತೆಗಳನ್ನು ಸಮಾನ ತನ್ಮಯತೆಯಿಂದ ಹಾಡಿ ತಾನು ಸಂಗೀತದ ಎಲ್ಲ ಪ್ರಕಾರಗಳಲ್ಲೂ ಸಾಧಿಸಿದ್ದೇನೆಂಬುದನ್ನು ತೋರಿಸಿಕೊಟ್ಟರು. ತಮ್ಮ ಸಂಗೀತ ಕಛೇರಿ ಆರಂಭಿಸುವಾಗಲೇ ಅಂದು ಹಾಡಬೇಕಾದುದನ್ನು ನಿಶ್ಚಯಿಸಿ ಬರುತ್ತಿದ್ದರು. ಪರಂಪರೆಯ ರಾಗವನ್ನು ಹೊಸ ಬಂದಿಶ್‍ನಲ್ಲಿ ಹಾಡುತ್ತಿದ್ದರು. ಅದಕ್ಕೆ ರಾಗದ ಪ್ರೊಫೈಲ್ ಎನ್ನುತ್ತಿದ್ದರು. ಕೆಲವು ವೇಳೆ ಹಳೆಯ ರಾಗಗಳಲ್ಲಿ ತಮ್ಮ ಸ್ವರಚಿತ ಬಂದಿಶ್ ಹಾಡುತ್ತಿದ್ದುದುಂಟು. ಇಂಥ ಬಂದಿಶ್‍ಗಳ ಅನುಪರಾಗ ವಿಳಾಸ ಎಂಬ ಎರಡು ಗ್ರಂಥಗಳು ಪ್ರಕಟವಾಗಿವೆ.

ಇವರ ಸಂಗೀತ ಪ್ರತಿಭೆಗೆ ಹಲವು ಪ್ರಶಸ್ತಿಗಳು ಸಂದಿವೆ. ಅವುಗಳಲ್ಲಿ ಮುಖ್ಯವಾದವು: ಗಂಧರ್ವ ಮಹಾವಿದ್ಯಾಲಯ, ಉಜ್ಜೈನಿಯ ವಿಕ್ರಮ ವಿಶ್ವವಿದ್ಯಾಲಯ, ಭೂಪಾಲಿನ ಭಾರತ ಭವನ, ಮಧ್ಯಪ್ರದೇಶ ಕಲಾ ಅಕಾಡೆಮಿ, ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿಗಳು ಹಾಗೂ ಭಾರತ ಸರ್ಕಾರದ ಪದ್ಮವಿಭೂಷಣ ಪ್ರಶಸ್ತಿ. ಇವರು 1992 ಜನವರಿ 12ರಂದು ನಿಧನರಾದರು. (ಎಸ್.ಎಂ.ಕೆ.)

**ಕುಮಾರ ಚೆನ್ನಬಸವ :** ಸು.1550. ವೀರಶೈವ ಕವಿ. ಬಸವ ಪುರಾಣದ ಪುರಾತನರ ಚರಿತ್ರೆ, ಸಾಸಲಭೈರವೇಂದ್ರ ಚರಿತ್ರೆ, ಶಂಭುಪೂಜಾವಿಧಿ, ಭೂತಿಯಧ್ಯಾಯ ಎಂಬ ಗ್ರಂಥಗಳ ಕರ್ತೃ. ಕೊನೆಯ ಮೂರು ಉಪಲಬ್ಧವಿಲ್ಲ.

ಕವಿ ತಾನು ಮುಕ್ತಿಮುನಿಸಿಂಹಾಸನಾಧಿಪತಿ ಬಸವೇಶಕರ ಬಿಸಜಸಂಜನಿತ ಎಂದು ಹೇಳಿಕೊಂಡಿರುವುದರಿಂದ ಬಸವೇಶ ಇವನ ಗುರು ಎಂದು ತಿಳಿಯುತ್ತದೆ. ವಿರೂಪಾಕ್ಷಪಂಡಿತನ (ಸು.1584) ಚೆನ್ನಬಸವ ಪುರಾಣದಿಂದ ಈತ ಬಾಳೆಯಹಳ್ಳಿಯ ಸಿಂಹಾಸನಾಧಿಪತಿಯಾಗಿದ್ದನೆಂದು ತಿಳಿದುಬರುತ್ತದೆ. ಕವಿ ತನ್ನನ್ನು ಮುಕ್ತಿಮುನಿನಾಥವಂಶಾಂಬರಾದಿತ್ಯ, ಶಿವಭಕ್ತಕಲ್ಪದ್ರುಮ, ಪ್ರತಾಪಕೀರ್ತಿ ವಿರಾಜಿತ ಎಂದು ಕರೆದುಕೊಂಡಿದ್ದಾನೆ. ಪೂರ್ವಕವಿಗಳಲ್ಲಿ ಬಾಣ, ಉದ್ಭಟ, ಮಲಯರಾಜ, ಶೃಂಗಾರಕವಿ, ಹರೀಶ್ವರ, ಪದ್ಮರಾಜ, ಸೋಮೇಶ ಇವರನ್ನು ಸ್ಮರಿಸಿದ್ದಾನೆ.

ಬಸವಪುರಾಣದ ಪುರಾತನರ ಚರಿತ್ರೆ ವಾರ್ಧಕ ಷಟ್ಪದಿಯಲ್ಲಿದೆ. ಇದರಲ್ಲಿ 9 ಸಂಧಿಗಳೂ 351 ಪದ್ಯಗಳೂ ಇವೆ. ಪ್ರತಿ ಸಂಧಿಯ ಪ್ರಾರಂಭದಲ್ಲಿ ಒಂದು ಕಂದ ಇಲ್ಲವೆ ವೃತ್ತ ಇದೆ. ಬಸವಪುರಾಣದಲ್ಲಿ ಸಂಗ್ರಹವಾಗಿ ಸೂಚಿಸಿರುವ ಪುರಾತನರ ಚರಿತ್ರೆ ಇಲ್ಲಿ ಉಪಕಥೆಗಳೊಡನೆ ವಿಸ್ತಾರಗೊಂಡಿದೆ. ಕಾವ್ಯದಲ್ಲಿ ಕವಿತ್ವ ಪ್ರದರ್ಶನಕ್ಕಾಗಲೀ ವರ್ಣನೆಗಾಗಲೀ ಅವಕಾಶವಿಲ್ಲ. ಕವಿ ತನ್ನ ಸಮಯ ಶರಣತೆಯನ್ನು ಶರಣರ ಕಥಾನಕಗಳನ್ನು ಹೇಳುವುದರ ಮೂಲಕ ತೋರಿಸಿಕೊಂಡಿದ್ದಾನೆ. ಶಿವಶರಣರ ಕಥೆಗಳನ್ನುಳ್ಳದ್ದರಿಂದ ಇದು ವೀರಶೈವ ಪುರಾಣವೆನಿಸಿಕೊಳ್ಳಲು ಯೋಗ್ಯವಾಗಿದೆ. (ಆರ್.ಎನ್.ವಿ.)

**ಕುಮಾರದೇವ :** ಸು.17ನೆಯ ಶತಮಾನ. ತಮಿಳುನಾಡಿನಲ್ಲಿದ್ದು ಶೈವಪಂಥವನ್ನು ಪ್ರಬಲಗೊಳಿಸಿದ ಕನ್ನಡಿಗ. ಕುಮಾರದೇವ ಶಿವಪ್ರಕಾಶ ಈತನ ಪೂರ್ಣ ಹೆಸರು. ಕನ್ನಡಿಗನಾದರೂ ಈತನ ಜೀವನ ವಿಚಾರ ಕನ್ನಡಿಗರಿಗೇ ಹೆಚ್ಚಾಗಿ ತಿಳಿದಿಲ್ಲ. ಈತನ ಕಾಲದ ವಿಚಾರವಾಗಿ ನಿರ್ದಿಷ್ಟವಾಗಿ ತಿಳಿದುಬರುವುದಿಲ್ಲವಾದರೂ ಈತನಿಂದಲೇ ರಚಿತವಾದ ಮಹಾರಾಜ ತುರುವು (ಮಹಾರಾಜನ ಕಥೆ) ಎಂಬ ಗ್ರಂಥದಿಂದ ಈತ ಹದಿನೇಳನೆಯ ಶತಮಾನಕ್ಕೆ ಸೇರಿದವನೆಂದು ಗೊತ್ತುಮಾಡಬಹುದು. ಈ ಗ್ರಂಥದ ಸಹಾಯದಿಂದ ನಮಗೆ ಈತನ ಜೀವನ ವೃತ್ತಾಂತ ತಿಳಿದು ಬರುತ್ತದೆ. ಕನ್ನಡ ನಾಡಿನ ಪೂರ್ವ ಭಾಗದಲ್ಲಿ ಈತ ರಾಜನಾಗಿದ್ದವ.

ಆದರೆ ವೈರಾಗ್ಯ ಪ್ರವೃತ್ತಿಯಿಂದ ತನ್ನ ರಾಜ್ಯ ಮತ್ತು ಆಪ್ತಬಂಧುಗಳು ಎಲ್ಲರನ್ನೂ ಎಲ್ಲವನ್ನು ಬಿಟ್ಟು ತಮಿಳುನಾಡಿಗೆ ಹೋಗಿ ಪ್ರಖ್ಯಾತರಾಗಿದ್ದ ಪೆರೂರು ಮಠದ ಸ್ವಾಮಿಗಳ ಸನ್ನಿಧಿಯಲ್ಲಿ ಅಧ್ಯಾತ್ಮಭಿಕ್ಷೆಗಾಗಿ ಹಂಬಲಿಸಿದ. ಮಠದ ಅಧಿಪತಿಗಳಾದ ಶಾಂತಲಿಂಗ ಸ್ವಾಮಿಗಳು ತತ್ತ್ವಾರ್ಚನೆಗಾಗಿ ತಮ್ಮಲ್ಲಿಗೆ ಬಂದವರನ್ನು ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸಿ ಅನಂತರ ಶಿಷ್ಯನನ್ನಾಗಿ ಪರಿಗ್ರಹಿಸತಕ್ಕವರಾದುದರಿಂದ ಬಹಿರಂಗವಾಗಿ ಕುಮಾರದೇವನನ್ನು ಅಲಕ್ಷಿಸಿದಂತೆ ಕಂಡುಬಂದರೂ ಈತನ ತತ್ತ್ವ ಮತ್ತು ಜ್ಞಾನನಿಷ್ಠೆಗಳನ್ನು ಅಳೆಯಲು ತೊಡಗಿದರು. ಶಿಷ್ಯ ಗುರುಸೇವಾವೃತ್ತಿಯಲ್ಲಿ ನಿಂತ. ಗುರುಕುಲದ ಗೋಸಂವರ್ಧನಕಾರ್ಯ ಈತನ ಪಾಲಿಗೆ ಬಂತು. ಹುಲ್ಲು ತರುವಲ್ಲಿ ಒಮ್ಮೆ ಕತ್ತಿಯಿಂದ ತನ್ನ ಕೈಯನ್ನು ಗಾಯಪಡಿಸಿಕೊಂಡದರೂ ಕುಮಾರದೇವ ಕಾರ್ಯತತ್ಪರನಾಗಿ ಗುರುಶುಶ್ರೂಷಗೆ ಭಂಗತರದಂತೆ ನಡೆದುಕೊಂಡ. ಹೀಗೆ ಅನೇಕ ಕಷ್ಟಕರವಾದ ಪರೀಕ್ಷೆಗಳಿಗೆ ಒಳಪಟ್ಟು ಗುರುಗಳ ಪ್ರೇಮಕ್ಕೆ ಪಾತ್ರನಾದ ಈ ಹೊಸ ಶಿಷ್ಯ ರಾಜಕುಮಾರನಾಗಿದ್ದರೂ ಸಾಮಾನ್ಯನಂತೆ ದೇಹವನ್ನು ದಂಡಿಸಿಕೊಂಡು ಗುರುಗಳ ಕೃಪಾಕಟಾಕ್ಷವನ್ನು ಸಂಪಾದಿಸಲು ತೊಡಗಿದ್ದುದನ್ನು ಕಂಡ ಗುರುಗಳು ಈತನ ಅಧ್ಯಾತ್ಮ ಆರ್ತತೆಯ ಬಗ್ಗೆ ಆನಂದಪಟ್ಟರು. ಕೊನೆಯ ಸಲ ಅನುಗ್ರಹಿಸುವ ರೀತಿಯಲ್ಲಿ ಶಿಷ್ಯನನ್ನು ಒಂದು ಕಾರ್ಯದಲ್ಲಿ ನಿಯಮಿಸಿದರು. ಅವನಿಗೆ ಗೊತ್ತಾಗದಂತೆ, ಎರಡು ಗಂಟುಗಳಲ್ಲಿ ಆಹಾರವನ್ನು ಕಟ್ಟಿಸಿಕೊಂಡು ಶಿಷ್ಯನ ಹೆಗಲ ಮೇಲಿರಿಸಿಕೊಂಡು ದೂರದ ಯಾತ್ರೆಗೆಂದು ಹೊರಟರು. ಗಂಟುಗಳ ಭಾರ ಹೆಚ್ಚಾದ್ದರಿಂದ ಗುರುಗಳನ್ನು ಅನುಸರಿಸಲು ಕುಮಾರದೇವನಿಗೆ ಆಗದೆ ಹೋಯಿತು. ಹಿಂದೆ ಬಿದ್ದದ್ದು ಏಕೆ ಎಂದು ಗುರುಗಳು ಕೇಳಿದರು. ಗುರುಗಳ ನೆರಳಿನಲ್ಲೇ ನಡೆಯಬೇಕೆಂದು ಮನಸ್ಸು ಎಷ್ಟು ತವಕಪಟ್ಟರೂ ಬಳಲಿದ ದೇಹ ತನಗೆ ಅಡ್ಡಬರುತ್ತಿದೆ ಎಂದು ಶಿಷ್ಯ ಉತ್ತರಿಸಿದ. ಆತನ ವಿನಯ ಮತ್ತು ಶ್ರದ್ಧೆಗಳು ಗುರುಗಳಿಗೆ ಸಂತಸ ತಂದುವು. ಇವನ್ನು ಶಿಷ್ಯನನ್ನಾಗಿ ಪರಿಗ್ರಹಿಸಿ ಈಗ ದಕ್ಷಿಣ ಆರ್ಕಾಟ್ ಜಿಲ್ಲೆಯಲ್ಲಿರುವ ವೃದ್ಧಾಚಲಂ ಎನ್ನುವ ಸ್ಥಳಕ್ಕೆ ಹೋಗುವಂತೆ ಆಣತಿ ನೀಡಿದರು. ಅಲ್ಲಿಗೆ ಹೋಗಿ ಇವನು ಅನೇಕ ದಿನಗಳ ಕಾಲ ಧ್ಯಾನ ನಿರತನಾಗಿದ್ದು ತಪಸ್ಸಿದ್ಧಿ ಪಡೆದ. ಅನೇಕ ಪವಾಡಗಳನ್ನು ಮೆರೆದ. ದಟ್ಟದರಿದ್ರನಾದ ಕುಷ್ಠರೋಗಿಯೊಬ್ಬನನ್ನು ಭಸ್ಮಲೇಪನದಿಂದಲೇ ರೋಗಮುಕ್ತನನ್ನಾಗಿ ಮಾಡಿದ್ದು ಇವನ ಕೀರ್ತಿ ಜನಜನಿತವಾಗಲು ಕಾರಣವಾದ ಪವಾಡಗಳಲ್ಲೊಂದು.

ಅನಂತರ ಈತ ವೃದ್ಧಾಚಲದಿಂದ ತಿರುವಾಯೂರಿಗೆ ಹೋದ. ಆ ಸಂದರ್ಭದಲ್ಲಿ ಅಲ್ಲಿ ತ್ಯಾಗರಾಜರ ಉತ್ಸವ ವಿಜೃಂಭಣೆಯಿಂದ ನಡೆಯುತ್ತಿತ್ತು. ಧ್ಯಾನಾಸಕ್ತನಾಗಿದ್ದ ಇವನನ್ನು ಹಲವರು ಶೈವನೆಂದು ಮೂದಲಿಸಿದರು. ತನ್ನ ಶೈವಮತ ಸತ್ಯವೆಂದಾದರೆ ದೇವರ ಉತ್ಸವವೇ ಮುಂದೆ ಹೋಗದಂತಾಗಲಿ ಎಂದು ಕುಮಾರದೇವ ಪ್ರಾರ್ಥಿಸಿದ. ಅದರ ಪರಿಣಾಮವಾಗಿ ಉತ್ಸವ ಮುಂದೆ ಹೊರಡಲಿಲ್ಲ. ತಂಜಾವೂರಿನ ಅಂದಿನ ರಾಜ ಉತ್ಸವ ನಡೆದು ದೇವರು ಯಥಾಸ್ಥಾನಕ್ಕೆ ಸೇರದ ಹೊರತು ಊಟ ಮಾಡುತ್ತಿರಲಿಲ್ಲವಾಗಿ, ದಿಕ್ಕು ತೋಚದಂತಾಯಿತು. ಘಟನೆಗೆ ಕಾರಣವೇನಿರ ಬಹುದೆಂದು ವಿಚಾರ ಮಾಡಲಾಗಿ ಶೈವಭಕ್ತನೊಬ್ಬನಿಗೆ ಅಪಚಾರ ನಡೆದಿದೆ ಎಂದು ತಿಳಿದುಬಂತು. ಇವನಲ್ಲಿಗೆ ರಾಜ ಬಂದು ಕ್ಷಮಾಪಣೆ ಕೇಳಿದ. ಶೈವಮತ ಸತ್ಯವೆಂದಾದರೆ ರಥೋತ್ಸವ ಮುಂದೆ ಸಾಗಲಿ ಎಂದು ಇವನು ಪ್ರಾರ್ಥಿಸಲಾಗಿ ರಥ ಮುಂದೆ ಸಾಗುವಂತಾಯಿತು. ಹೀಗೆ ಇವನ ದೈವಭಕ್ತಿ ಮತ್ತು ಮಹಿಮೆಗಳು ಪವಾಡರೂಪದಲ್ಲಿ ಪ್ರಕಟಗೊಂಡುವು.

ಇವನು ಗುರುವಿನ ಆದೇಶದಂತೆ ಚಿದಂಬರನೆಂಬ ಭಕ್ತನಿಗೆ ಶೈವಮತವನ್ನು ಉಪದೇಶ ಮಾಡಿದ. ಚಿದಂಬರ ಕೆಲಕಾಲಾನಂತರ ಚಿದಂಬರ ಸ್ವಾಮಿಯಾಗಿ ಮದರಾಸಿನ ಹತ್ತಿರವಿರುವ ತಿರಪ್ಪರೂರ್ ಮಠದ ಪೀಠಸ್ಥನಾಗಿ ಪ್ರಸಿದ್ಧನಾದ.

ಕುಮಾರದೇವ ತನ್ನ ಹೆಚ್ಚಿನ ಯೋಗಸಾಧನೆಯನ್ನು ವೃದ್ಧಾಚಲದಲ್ಲಿ ನಡೆಸಿದ. ದೇವಿ ಪೆರಿಯನಾಯಕಿ ಇವನ ಕನಸಿನಲ್ಲಿ ಕಾಣಿಸಿಕೊಂಡು ಶೈವಮತದ ಅನೇಕ ನಿಗೂಢ ತತ್ತ್ವಗಳನ್ನು ಬೋಧಿಸಿ ಅದನ್ನು ಪ್ರಕಟಿಸಲು ಪ್ರೇರೇಪಿಸಿದಳಂತೆ. ಸ್ವತಃ ಹೀಗೆ ಆ ದೇವಿಯ ಪೂರ್ಣ ಅನುಗ್ರಹಕ್ಕೆ ಪಾತ್ರನಾದ ಇವನು ಹದಿನಾಲ್ಕು ಶೈವತತ್ತ್ವಪರವಾದ ಶಾಸ್ತ್ರಗ್ರಂಥಗಳನ್ನು ತಮಿಳಿನಲ್ಲಿ ಅಭಿವ್ಯಕ್ತಿಗೊಳಿಸಿದ. ಜೊತೆಗೆ ಆ ನಿಗೂಢ ತತ್ತ್ವದಲ್ಲಿ ಶಿಷ್ಯರಿಗೆ ಉಪದೇಶ ಕೊಟ್ಟ. ಉಪದೇಶ ಪಡೆದ ಚಿದಂಬರ ಸ್ವಾಮಿ ಗುರುವಿನ ಸ್ಮರಣೆಗಾಗಿ ವೃದ್ಧಾಚಲದಲ್ಲಿ ಒಂದು ಮಠವನ್ನು ಸ್ಥಾಪಿಸಿದ. ಅದು ಈಗಲೂ ಕುಮಾರದೇವಮಠ ಎಂದು ಪ್ರಸಿದ್ಧವಾಗಿದೆ. ಈ ಮಠ ಅಲ್ಲಿನ ಪಟಿಮಲೈನಾದರ್ ದೇವಸ್ಥಾನದ ಹತ್ತಿರವಿದೆ. ಕುಮಾರದೇವ ಆ ಮಠದಲ್ಲಿಯೇ ಬಹಳ ಕಾಲ ಯೋಗಸಮಾಧಿಯಲ್ಲಿದ್ದು ಅಲ್ಲಿಯೇ ಶಿವೈಕ್ಯನಾದ. ಇವನ ಸಮಾಧಿ ಇಂದಿಗೂ ಶ್ರದ್ಧಾಳುಗಳಿಗೆ ಶಿವಸ್ಫೂರ್ತಿಯನ್ನು ನೀಡುತ್ತ ಆಧ್ಯಾತ್ಮಿಕ ಸಾಧನೆಗಳಿಗೆ ಪೋಷಕವಾಗಿದೆ.

ಶೈವಸ್ವಾಮಿಗಳ ಪರಂಪರೆಯಲ್ಲಿ ಮಹಾಮಹಿಮರೆನಿಸಿಕೊಂಡವರಲ್ಲಿ ಇವನು ಐದನೆಯವನೆಂದು ತಿಳಿದುಬರುತ್ತದೆ. ಶಿವನಿಂದ ಪ್ರಬೋಧಿತವಾದ ಶೈವಮತ ನಂದೀದೇವ, ಸನತ್ಕುಮಾರ, ಸತ್ಯಯಜ್ಞ ದರ್ಶಿನಿಗಳ ಮೂಲಕ ಬಂದು ಪರಂಜ್ಯೋತಿ ಸ್ವಾಮಿಗಳಿಂದ ಧರೆಗೆ ಇಳಿದು ಬಂತು. ಪರಂಜ್ಯೋತಿ ಸ್ವಾಮಿಗಳು ಮೈಕಂಡ ದೇವನಿಗದನ್ನು ಬೋಧಿಸಿದರು. ಅಲ್ಲಿಂದ ಮುಂದೆ ಅರುಳನಂದಿ ಶಿವಾಚಾರ್ಯರಿಗದು ಲಭಿಸಿ, ಅನಂತರ ಮರೆಯಜ್ಞಾನ ಸಂಬಂಧರ್, ಉಮಾಪತಿ ಶಿವಾಚಾರ್ಯ, ಉಮಾಪತಿ ನಮಶ್ಶಿವಾಯಸ್ವಾಮಿ, ಶಿವಪ್ರಕಾಶ ಸಿದ್ಧರ್, ನಮಶ್ಶಿವಾಯ ಮೂರ್ತಿ, ಶಿವಪ್ರಕಾಶ ದೇಶಿಕರ್, ಅನಂತರ ಇವರ ಶಿಷ್ಯರಾದ ಪೆರೂರಿನ ಶಾಂತಲಿಂಗಸ್ವಾಮಿಗಳ ಮೂಲಕ ಕುಮಾರದೇವನಿಗದು ಲಭ್ಯವಾಯಿತು. ಇವನು ಮದರಾಸು ಪ್ರಾಂತ್ಯಕ್ಕೆ ಬಂದಾಗ ಮೈಲಾಪುರವೆಂಬಲ್ಲಿ ತನ್ನ ಮಠದ ಒಂದು ಕವಲನ್ನು ಸ್ಥಾಪಿಸಿದ.

ಕುಮಾರದೇವನಿಂದ ರಚಿತವಾದ ಕೃತಿಗಳು ಹದಿನೈದು. ಅವುಗಳಲ್ಲಿ ಮುಖ್ಯವಾದವು ಶುದ್ಧ ಶತಕ ಮತ್ತು ಅದ್ವೈತ ಉನ್ಮೈ ಎನ್ನುವ ಗ್ರಂಥಗಳು. ಶ್ರೀಸುಬ್ರಹ್ಮಣ್ಯ ಶಿವಪ್ರಕಾಶ ಸ್ವಾಮಿಗಳು ಕುಮಾರದೇವನ ಶುದ್ಧ ಶತಕ ಮತ್ತು ವೃದ್ಧಾಚಲ ಪುರಾಣಗಳನ್ನು ಇಂಗ್ಲಿಷಿಗೆ ಭಾಷಾಂತರ ಮಾಡಿಸಿದ್ದಾರೆ. ಮದಾರಾಸಿನ ತಮಿಳು ವಿದ್ವಾಂಸರೂ ಶೈವಸಿದ್ಧಾಂತದಲ್ಲಿ ಉನ್ನತ ಪಾಂಡಿತ್ಯವನ್ನು ಪಡೆದಿರುವವರೂ ಆದ ರಾವ್‌ಬಹದ್ದೂರ್ ಶ್ರೀಮುರುಗೇಶ ಮೊದಲಿಯಾರ್ ಎನ್ನುವವರು ಮೇಲಿನ ಗ್ರಂಥಗಳನ್ನು ಭಾಷಾಂತರಗೊಳಿಸಿದ್ದಾರೆ.

ಕುಮಾರದೇವನ ಗ್ರಂಥ'ಗಳ ವಿವರ ಹೀಗಿದೆ: ಮಹಾರಾಜ ತುರವು, ಶುದ್ಧಶತಕಮ್, ವಿಜ್ಞಾನಸಾರಂ, ಅದ್ವೈತ ಉನ್ಮೈ, ಬ್ರಹ್ಮಾನುಭೂತಿ ವಿಲಕ್ಕಂ, ಜ್ಞಾನ ಅಮ್ಮಗೈ, ದಶಾವಸ್ಥೈ, ಕಟ್ಟಳೈ, ದಶಾಕಾರ್ಯ್ಯ ಕಟ್ಟಳೈ, ಸಿದ್ಧಾಂತ ಕಟ್ಟಳೈ, ಸಹಜನಿಷ್ಠೈ, ಬ್ರಹ್ಮಸಿದ್ಧಿ ಆಹವಳ್, ಶಿವದರ್ಶನ ಆಹವಳ್, ಆಗಮನೇರಿ ಅಹವಳ್, ವೇದನೇರಿ ಆಹವಳ್, ಬ್ರಹ್ಮಾನುಭವ ಆಹವಳ್, ಶಿವಸಮರಸವಾದ ಅಹವಳ್ ಇವು ಮುಖ್ಯವಾದುವು. ಇವುಗಳಲ್ಲಿ ಮೊದಲನೆಯದು ಕುಮಾರದೇವನ ಆತ್ಮಕಥ'ನ. ಮಹಾರಾಜನಾಗಿದ್ದವ ಇಹಜೀವನವನ್ನು ತೊರೆದು ಪಾರಮಾರ್ಥಿಕ ಸತ್ಯವನ್ನು ಅರಸುತ್ತ ಸಾರ್ಥಕ್ಯವನ್ನು ಗಳಿಸಿ ಲೋಕಕ್ಕೆ ಅಧ್ಯಾತ್ಮ ಮಾರ್ಗದರ್ಶನ ನೀಡಿದ ಕಥ' ಇಲ್ಲಿದೆ. ಮಿಕ್ಕದ್ದೆಲ್ಲವೂ ಶೈವಮತಕ್ಕೆ ಸಂಬಂಧಪಟ್ಟಿವೆ. ಕುಮಾರದೇವನಿಂದ ರಚಿತವಾದ ಆರು ಆಹವಳ್ ಗ್ರಂಥ'ಗಳು ವೀರಶೈವಮತದ ವಿವಿಧ' ಅಂಶಗಳನ್ನು ವಿವರಿಸುತ್ತವೆ. ಪಂಡಿತರ ಅಭಿಪ್ರಾಯದಲ್ಲಿ ಎಲ್ಲ ಗ್ರಂಥ'ಗಳಿಗೂ ಮಕುಟಪ್ರಾಯವಾಗಿರುವುದೆಂದರೆ ಶುದ್ಧ ಶತಕ. ತತ್ತ್ವಜ್ಞಾನಿಯಾದ ಕುಮಾರದೇವ ಭಕ್ತಾಗ್ರೇಸರನೂ ಆಗಿದ್ದ. ಇದಕ್ಕೆ ನಿದರ್ಶನ ಪೆರಿಯ ನಾಯಕಿ ಅಮ್ಮನ್ ಪಾದುಕಂ ಎನ್ನುವ, ಭಕ್ತಿ ರಸಪೂರ್ಣ ಮತ್ತು ತಾತ್ತ್ವಿಕದರ್ಶನವನ್ನು ಒಳಗೊಂಡ, ದಶಶ್ಲೋಕಗಳು.
*

**ಕುಮಾರಧಾರಾ :** ದಕ್ಷಿಣ ಕನ್ನಡ ಜಿಲ್ಲೆಯ ಒಂದು ನದಿ. ಇದು ಸುಬ್ರಹ್ಮಣ್ಯ ಕ್ಷೇತ್ರದ ಹತ್ತಿರವಿರುವ ಕುಮಾರಪರ್ವತದಲ್ಲಿ ಹುಟ್ಟಿ ವಾಯವ್ಯ ದಿಕ್ಕಿನಲ್ಲಿ ಹರಿದು ಉಪ್ಪಿನಂಗಡಿ ಪೇಟೆಯ ಹತ್ತಿರ ನೇತ್ರಾವತಿಯನ್ನು ಸೇರುತ್ತದೆ. ಸುಬ್ರಹ್ಮಣ್ಯದಲ್ಲಿ ಜಾತ್ರೆಯ ಸಮಯದಲ್ಲಿ ಹರಕೆ ಹೊತ್ತ ಯಾತ್ರಿಕರು ಈ ನದಿಯಲ್ಲಿ ಸ್ನಾನಮಾಡಿ ಸುಬ್ರಹ್ಮಣ್ಯ ದೇವಸ್ಥಾನದವರೆಗೆ ಸುಮಾರು ಎರಡು ಕಿಲೋಮೀಟರುಗಳಷ್ಟು

ಉದ್ದದ ರಸ್ತೆಯಲ್ಲಿ ಉರುಳುಸೇವೆ ಹೋಗಿ ದೇವರಿಗೆ ಹರಕೆಯನ್ನೊಪ್ಪಿಸುತ್ತಾರೆ. ಹೀಗೆ ಈ ನದಿಯಲ್ಲಿ ಸ್ನಾನಮಾಡಿ ದೇವರಿಗೆ



ಕುಮಾರಧಾರಾ ನದಿ, ಸುಬ್ರಹ್ಮಣ್ಯ

ಉರುಳು ಸೇವೆ ಮಾಡುವುದರಿಂದ ಅಂಥವರ ಕಾಯಿಲೆಗಳೂ ಪಾಪಗಳೂ ಪರಿಹಾರವಾಗುವುವು ಎಂಬ ನಂಬಿಕೆಯಿದೆ. (ಡಿ.ಎಸ್.ಕೆ.)

**ಕುಮಾರ ಪದ್ಮರಸ :** ಸು.1180. ವೀರಶೈವ ಕವಿ. ಸಾನಂದಚರಿತ್ರ ಎಂಬ ಕಾವ್ಯದ ಕರ್ತೃ. ತಂದೆ ಕೆರೆಯ ಪದ್ಮರಸ (ಸು.1165), ತಾಯಿ ಮಾದೇವಿ. ಕವಿಗೆ ಶರಣಕವಿ ಎಂಬ ಹೆಸರೂ ಇದ್ದಂತೆ ತಿಳಿಯುತ್ತದೆ.

ಸಾನಂದಚರಿತ್ರ ನಾನಾ ಷಟ್ಪದಿಗಳಲ್ಲಿ ರಚಿತವಾಗಿದೆ. ಹೆಚ್ಚಾಗಿ ಬಳಕೆಯಾಗಿರುವುದು ಕುಸುಮ, ಭಾಮಿನೀ ಷಟ್ಪದಿಗಳು. ಇದರಲ್ಲಿ ಒಂಬತ್ತು ಸಂಧಿಗಳಿವೆ. ಈತನ ತಂದೆ ಸಂಸ್ಕೃತದಲ್ಲಿ ಬರೆದ ಸಾನಂದಚರಿತ್ರೆಯನ್ನೇ ಮಗ ಕನ್ನಡಿಸಿದನೆಂದೂ ಹೇಳುವವರಿದ್ದಾರೆ. ಕವಿಯೇ ಹೇಳಿಕೊಂಡಿರುವಂತೆ ಇದು ಪಂಚಾಕ್ಷರೀ ಮಹಿಮೆಯ ಚರಿತೆ. ಸಾನಂದನೆಂಬ ಋಷಿ ಪಂಚಾಕ್ಷರೀ ಮಹಿಮೆಯಿಂದ ನಾರಕಿಗಳನ್ನು ಉದ್ಧಾರ ಮಾಡಿದುದು ಕಾವ್ಯ ವಸ್ತು. ಚರಿತೆ ಸಾನಂದೇಶ ಚರಿತೆ ಜಗದಾನಂದ ಚರಿತೆ ಪಂಚಾಕ್ಷರೀವರಮಹಿಮೆಯ ಚರಿತೆ ಶಿವಭಕ್ತಿಗಿದು ಚರಿತೆ ಗುರುನಿಷ್ಠೆಗಿದು ಚರಿತೆ ಸತ್ಪಥಕೆ ತಾನೆಂತೆಂತೆನೆ ಎಂದು ತನ್ನ ಗ್ರಂಥದ ಉತ್ಕೃಷ್ಟತೆಯನ್ನು ಹೇಳಿಕೊಂಡಿದ್ದಾನೆ. ತಂದೆಯೂ ಗುರುವೂ ಆಗಿದ್ದ ಕೆರೆಯ ಪದ್ಮರಸನ ಆಜ್ಞಾನುಸಾರ ತಾನು ಈ ಕೃತಿಯನ್ನು ರಚಿಸುತ್ತಿರುವುದಾಗಿಯೂ ಹೇಳುತ್ತಾನೆ. ರಾಘವಾಂಕ ಬಳಸದ ಇತರ ಷಟ್ಪದಿಗಳನ್ನೂ ಇವನ ಕಾವ್ಯದಲ್ಲಿ ಕಾಣಬಹುದು. ಇದು ಈತನ ಕಾವ್ಯದ ವೈಶಿಷ್ಟ್ಯವಾಗಿದೆ. ಅಲ್ಲದೆ ಪಂಚಾಕ್ಷರೀ ಮಂತ್ರ ಮಹಿಮೆಯನ್ನು ಪ್ರಪ್ರಥಮವಾಗಿ ಕನ್ನಡದಲ್ಲಿ ಬಣ್ಣಿಸಿದ ಹೆಗ್ಗಳಿಕೆಯೂ ಇದಕ್ಕಿದೆ. ಮುಂದೆ ಇವನ ವಂಶದಲ್ಲಿಯೆ ಉದಿಸಿದ ಪದ್ಮಣಾಂಕ (ಸು.1420) ಸಾನಂದಚರಿತ್ರೆಯನ್ನು ಶ್ರುತಿಸ್ಮೃತಿವಿಮಳಪುರಾಣಾಗಮೋಪನಿಷತ್ಪ್ರಭೃತಿ ಶಾಸ್ತ್ರಕುಳದ ಸಾರಂದೆಗೆದು ದೃಷ್ಟಕ್ಕೆ ಬರೆದು ಸವರಜಿಯೆ ಕರ್ನಾಟಕವಾಗಿ ಅಲಘು ವರ್ಣಕ ರೀತಿಯಿಂ ರಸಂ ಮುಸುಕಿಯುಜ್ವಳಿಪಂತೆ ಬರೆದ ಸಾನಂದ ಚರಿತಾಖ್ಯಶಾಸ್ತ್ರ ಎಂದು ಹೊಗಳಿದ್ದಾನೆ. ತಂದೆಯ ಪರವಾಗಿ ತ್ರಿಭುವನತಾತನೊಡನೆ ವಾದ ಮಾಡಿ ಕುಮಾರ ಪದ್ಮರಸ ವಿಜಯಿಯಾದನೆಂದೂ ಈತ ಹೇಳುತ್ತಾನೆ. ಸಾನಂದಚರಿತ್ರದ ಕಾವ್ಯಬಂಧ ಲಲಿತವಾಗಿದೆ. ವರ್ಣನೆಗಳು ಕೆಲವು ಸಂದರ್ಭಗಳಲ್ಲಿ ಮನೋಹರವಾಗಿವೆ. ನಿದರ್ಶನವಾಗಿ ಸಾನಂದ ನರಕಕ್ಕೆ ಹೋದುದರ ವರ್ಣನೆಯನ್ನೂ ಪಂಚಾಕ್ಷರೀ ಮಹಿಮೆಯ ನಿರೂಪಣೆಯನ್ನೂ ನೋಡಬಹುದು. ಧರೆಯೊಳು ಒಳುಗನ್ನಡದಿ ಪಸರಿಸಲೆಂದು ಸ್ತ್ರೀಬಾಲೂಸಾಧ್ಯವಾಗುವಂತೆ ಕೃತಿರಚನೆ ಮಾಡುವ ಸಂಕಲ್ಪದಿಂದ ಹೊರಟ ಕುಮಾರ ಪದ್ಮರಸ ಉದ್ದೇಶಿತ ಸಂಕಲ್ಪದಲ್ಲಿ ಬಹುಮಟ್ಟಿಗೆ ಸಫಲನಾಗಿರುವನೆಂದು ಹೇಳಬಹುದು. (ಎಸ್.ಪಿ.)

**ಕುಮಾರರಾಮ :** ಕಂಪಿಲಿ ರಾಜ್ಯದ ರಾಜಕುಮಾರ. ಕನ್ನಡ ನಾಡಿನ ಜನಪ್ರಿಯ ನಾಯಕರಲ್ಲೊಬ್ಬ. ಪೌರುಷ, ಶೌಚ ಗುಣಗಳಿಗೆ ಹೆಸರಾದವ. ಈತನನ್ನು ಕುರಿತು ನಂಜುಂಡ, ಪಾಂಚಾಳಗಂಗ ಮತ್ತು ಮಹಲಿಂಗಸ್ವಾಮಿ ಎಂಬ ಕವಿಗಳು ಸಾಂಗತ್ಯದಲ್ಲಿ ಕಾವ್ಯಗಳನ್ನು ರಚಿಸಿದ್ದಾರೆ. ಅಲ್ಲದೆ ಈತನ ಬಗ್ಗೆ ಅನೇಕ ಜನಪದ ಗೀತೆಗಳೂ ಕಥೆಗಳೂ ಪ್ರಚಾರದಲ್ಲಿವೆ. ಕೆಲವು ಕೈಫಿಯತ್ತುಗಳೂ ದೊರೆತಿವೆ. ಈತನ ಪೂಜೆಗಾಗಿ ದೇವಾಲಯಗಳನ್ನು ನಿರ್ಮಿಸಿರುವ ವಿಚಾರಗಳು ಶಾಸನಗಳಲ್ಲಿ ಉಕ್ತವಾಗಿವೆ.

ಸಾಹಿತ್ಯ ಗ್ರಂಥಗಳ ಪ್ರಕಾರ ಕುಮಾರರಾಮ ಕಂಪಿಲ ಮತ್ತು ಹರಿಹರ ದೇವಿಯರ (ಹರಿಯಾಲದೇವಿ) ವರಪುತ್ರ. ಈತನಿಗೆ ರಾಮನಾಥ, ರಾಮುಗ, ಚೆನ್ನಿಗರಾಮ ಎಂಬ ಹೆಸರುಗಳೂ ಉಂಟು. ಈತನನ್ನು ಅರ್ಜುನನ ಅವತಾರವೆಂದು ನಂಜುಂಡನೂ ಜಟ್ಟಂಗಿರಾಮನ ಅವತಾರವೆಂದು ಪಾಂಚಾಳಗಂಗನೂ ಪರಶುರಾಮನ ಅವತಾರವೆಂದು ಮಹಲಿಂಗಸ್ವಾಮಿಯೂ ಚಿತ್ರಿಸಿರುತ್ತಾರೆ. ಚಿಕ್ಕಂದಿನಿಂದಲೇ ಆಟ, ಪಾಠ, ಬೇಟೆ ಮುಂತಾದ ಸಮಸ್ತ ವಿದ್ಯೆಗಳಲ್ಲಿಯೂ ಪ್ರವೀಣನಾಗಿ ಈತ ಕಂಪಿಲನಿಗೆ ಬಲಗೈಯಂತಿದ್ದ. ಹೊಸಮಲೆದುರ್ಗ ಮತ್ತು ಕುಮ್ಮಟ ದುರ್ಗಗಳಲ್ಲಿ ಪಾಳೆಯವನ್ನು ಸ್ಥಾಪಿಸಿಕೊಂಡು ಪ್ರಬಲನಾಗಿದ್ದ ಕಂಪಿಲನಿಗೆ ಹೊಯ್ಸಳ ವೀರಬಲ್ಲಾಳ, ಕಾಕತೀಯ ಪ್ರತಾಪರುದ್ರ ಮೊದಲಾದ ನೆರೆಹೊರೆಯ ರಾಜರು ಶತ್ರುಗಳಾಗಿದ್ದರು. ಕುಮಾರರಾಮ ಈ ಅರಸರನ್ನೆಲ್ಲ ಹಿಮ್ಮೆಟ್ಟಿಸಿ ಚಿಕ್ಕವಯಸ್ಸಿನಲ್ಲಿಯೇ ತುಂಬ ಯಶೋವಂತನಾದ. ಕ್ರಮಕ್ರಮವಾಗಿ ತನ್ನ ರಾಜ್ಯವನ್ನು ವಿಸ್ತರಿಸಿಕೊಂಡು ಬಲಿಷ್ಠನಾಗುತ್ತಿದ್ದ ಕಂಪಿಲನ ಮೇಲ್ಮೆಯನ್ನು ದೆಹಲಿಯ ಸುಲ್ತಾನ ಸಹಿಸದೆ ಹೋದ. ಆದರೆ ಸಾಹಸಿಯೂ ಸ್ಫುರದ್ರೂಪಿಯೂ ಆದ ಕುಮಾರರಾಮನ ವೃತ್ತಾಂತವನ್ನು ಕೇಳಿ ಸುಲ್ತಾನನ ಮಗಳಾದ ಬಾಬಮ್ಮ ಆತನನ್ನೇ ವರಿಸಬೇಕೆಂದು ಹಟ ತೊಟ್ಟಳು. ಸುಲ್ತಾನ ತನ್ನ ವಜೀರರ ಮೂಲಕ ಕಂಪಿಲನಿಗೆ ಹೇಳಿಕಳುಹಿಸಿ, ಅವನೊಂದಿಗೆ ಬಾಂಧವ್ಯ ಬೆಳೆಸಲು ಅಪೇಕ್ಷಿಸಿದ. ಕುಮಾರರಾಮನಾಗಲಿ ಕಂಪಿಲನಾಗಲಿ ಈ ಸಲಹೆಗೆ ಒಪ್ಪಲಿಲ್ಲ. ಈ ನಿರಾಕರಣೆಯಿಂದ ಸುಲ್ತಾನನಿಗೆ ಅವಮಾನವಾದಂತಾಯಿತು. ಕಂಪಿಲ ಮತ್ತು ಅವನ ಮಗನ ಅಹಂಕಾರವನ್ನು ಅಡಗಿಸಬೇಕೆಂದು ಆತ ನಿಶ್ಚಯಿಸಿಕೊಂಡ. ಈ ವೇಳೆಗೆ, ಸುಲ್ತಾನನ ಆಶ್ರಯದಲ್ಲಿದ್ದ ಬಾದೂರಖಾನನೆಂಬ ಸರದಾರ ತನ್ನ ಒಡೆಯನೊಂದಿಗೆ ವೈಮನಸ್ಯ ಕಟ್ಟಿಕೊಂಡು, ತಲೆತಪ್ಪಿಸಿಕೊಂಡು ಬಂದು ಹಿಂದು ರಾಜರಲ್ಲಿ ಆಶ್ರಯ ಕೋರಿದ. ಆದರೆ ಸುಲ್ತಾನನ ನಿಷ್ಠುರಕ್ಕೆ ಹೆದರಿದ ಹಿಂದು ರಾಜರು ಅವನಿಗೆ ಆಶ್ರಯವೀಯಲು ಹಿಂದೆಗೆದರು. ಕುಮಾರರಾಮನ ಸಲಹೆಯ ಮೇರೆಗೆ ಕಂಪಿಲ ಮುಂದೆ ಬಂದು ಬಾದೂರಖಾನನಿಗೆ ಆಶ್ರಯವಿತ್ತ. ಇದೀಗ ಸುಲ್ತಾನನಿಗೆ ಕಂಪಿಲನ ಮೇಲೆ ದಂಡೆತ್ತಿಬರಲು ಸಾಕಷ್ಟು ಕಾರಣವನ್ನೊದಗಿಸಿತು. ಸುಲ್ತಾನನ ಅಪ್ಪಣೆಯ ಮೇರೆಗೆ, ನೇಮಿ ಎಂಬಾತ ಸುತ್ತಮುತ್ತಲಿನ ಪಾಳೆಯಗಾರರನ್ನು ಕೂಡಿಸಿಕೊಂಡು ಕುಮ್ಮಟದುರ್ಗವನ್ನು ಮುತ್ತಿದ. ಕಡುಗಲಿಯಾದ ಕುಮಾರರಾಮನೂ ಆತನ ಸಹೋದರಸಮಾನನಾದ ಕಾಟಣ್ಣನೂ ವೀರಾವೇಶದಿಂದ ಹೋರಾಡಿ ಮುಸಲ್ಮಾನರನ್ನು ಹಿಂದಟ್ಟಿದರು. ಆಶಾಭಂಗಕ್ಕೊಳಗಾದ, ರೂಪಿಗೆ ಮರುಳಾದ ಆತನ ಚಿಕ್ಕಮ್ಮ ರತ್ನಾಜಿಗೆ ಕುಮಾರರಾಮನಲ್ಲಿ ವ್ಯಾಮೋಹವಂಕುರಿಸಿತು. ಒಮ್ಮೆ ಕಂಪಿಲ ಬೇಟೆಗಾಗಿ ಅರಣ್ಯಕ್ಕೆ ತೆರಳಿದ್ದಾಗ ಊರಿನಲ್ಲಿಯೇ ಇದ್ದ ಕುಮಾರರಾಮ ತನ್ನ ಸಂಗಡಿಗರೊಂದಿಗೆ ಮುತ್ತಿನ ಚೆಂಡಿನ ಲಗ್ಗೆಯಾಟವನ್ನು ಆಡುತ್ತಿರುವಾಗ ಚೆಂಡು ಕೈಮೀರಿ ರತ್ನಾಜಿಯ ಅರಮನೆಯಲ್ಲಿ ಬಿತ್ತು. ಅದನ್ನು ಕೇಳಿ ಪಡೆಯಲು ಹೋಗಿದ್ದ ಕುಮಾರ ರಾಮನನ್ನು ಆಕೆ ನಾನಾ ಬಗೆಯಾಗಿ ಮರುಳು ಮಾಡಿ ಒಲಿಸಿಕೊಳ್ಳಲು ಪ್ರಯತ್ನಿಸಿದಳು. ಕುಮಾರರಾಮ ಕಂಗೆಟ್ಟು ಆಕೆ ತನಗೆ ಮಾತೃ ಸಮಾನಳೆಂದೂ ಹಾಗೆ ವರ್ತಿಸುವುದು ಉಚಿತವಲ್ಲವೆಂದೂ ಎಚ್ಚರಿಸಿದ. ಆದರೆ ಕಾಮಪರವಶಳಾಗಿದ್ದ ರತ್ನಾಜಿಗೆ ಆತನ ಹಿತವಚನಗಳು ಹಿಡಿಸಲಿಲ್ಲ. ಹೊರ ಹೊರಟಿದ್ದ ಆತನನ್ನು ಅಡ್ಡಗಟ್ಟಿ, ಮೈಮೇಲೆ ಬಿದ್ದು ಬಲತ್ಕಾರಗೊಳಿಸಲು ಮುಂದುವರಿದಳು. ಪರದಾರಸೋದರನಾದ ಕುಮಾರರಾಮ ಚಿಕ್ಕಮ್ಮನನ್ನು ಅಲ್ಲಗಳೆದು ಆಕೆಯನ್ನು ಅತ್ತ ನೂಕಿ, ಕೈಕೊಡವಿಕೊಂಡು ಹೊರಟುಬಂದ. ರತ್ನಾಜಿ ಈರ್ಷೆಯಿಂದ ಹೆಮ್ಮಾರಿಯಾಗಿ ಕುಮಾರರಾಮನ ಮೇಲೆ ಸೇಡು ತೀರಿಸಿಕೊಳ್ಳಲು ಬಗೆದಳು. ಕಂಪಿಲ ಬೇಟೆ ಮುಗಿಸಿ ಹಿಂತಿರುಗಿ ಬಂದ ಕೂಡಲೆ ಕುಮಾರರಾಮನ ಮೇಲೆ ಸಲ್ಲದ ಆರೋಪವನ್ನು ಹೊರಿಸಿ ದೂರು ಹೇಳಿದಳು. ಹೆಂಡತಿಯಲ್ಲಿ ಮೋಹಗ್ರಸ್ತನಾಗಿದ್ದ ಕಂಪಿಲ ನಿಜಸಂಗತಿಯನ್ನು ಕೇಳಿ ತಿಳಿಯದೆ ತನ್ನ ಆಪ್ತಸಚಿವನಾಗಿದ್ದ ಬೈಚಪ್ಪನನ್ನು ಬರಮಾಡಿಕೊಂಡು ಕುಮಾರರಾಮನ ಅನುಚಿತ ವರ್ತನೆಯನ್ನು ಖಂಡಿಸಿ ಕೂಡಲೆ ಆತನ

ತಲೆಯನ್ನು ಕಡಿದು ತರುವಂತೆ ಆಜ್ಞಾಪಿಸಿದ. ವಿಚಾರಪರನಾದ ಬೈಚಪ್ಪ ಎಷ್ಟು ಬುದ್ಧಿವಾದ ಹೇಳಿದರೂ ರಾಜ ಕೇಳಲಿಲ್ಲ. ಚತುರನಾದ ಬೈಚಪ್ಪ ನಿರುಪಾಯನಾಗಿ ಕುಮಾರರಾಮನ ಬಳಿಗೆ ಬಂದು ಎಲ್ಲ ಸಂಗತಿಗಳನ್ನೂ ವಿವರವಾಗಿ ಕೇಳಿ ತಿಳಿದುಕೊಂಡು ರಾಜಕುಮಾರನನ್ನು ಕೊಲ್ಲಲು ಮನಸ್ಸು ಬಾರದೆ, ಆತನನ್ನೂ ಆತನ ಮಿತ್ರರನ್ನೂ ನೆಲಮಾಳಿಗೆಯಲ್ಲಿ ಬಚ್ಚಿಟ್ಟು ಬೇರೊಬ್ಬನ ರುಂಡವನ್ನು ತೆಗೆದುಕೊಂಡು ಹೋಗಿ ರಾಜನಿಗೆ ಒಪ್ಪಿಸಿದ. ರುಂಡವನ್ನು ಕಂಡ ರತ್ನಾಜಿಗೆ ಸಂತೋಷವಾಯಿತು. ಅತ್ತ ಕಂಪಿಲನ ಮೇಲೆ ದಂಡೆತ್ತಿ ಬರಲು ಸಮಯ ಕಾಯುತ್ತಿದ್ದ ಸುಲ್ತಾನನಿಗೆ ಕುಮಾರರಾಮನ ಮರಣವೃತ್ತಾಂತ ಕೇಳಿ ಕಿವಿ ನೆಟ್ಟಗಾಯಿತು. ಎರಡನೆಯ ಬಾರಿ ಕುಮ್ಮಟದುರ್ಗಕ್ಕೆ ಮುತ್ತಿಗೆ ಹಾಕಲು ನೇಮಿಯನ್ನು ಕಳುಹಿಸಿಕೊಟ್ಟ. ಮುಸಲ್ಮಾನರು ದಂಡೆತ್ತಿಬರುತ್ತಿರುವ ಸುದ್ದಿಯನ್ನು ಗಡಿ ಕಾಯುತ್ತಿದ್ದ ಚಾರರು ಕಂಪಿಲನಿಗೆ ತಿಳಿಸಿದ ಒಡನೆಯೇ ವೃದ್ಧರಾಜ ಕಂಗೆಟ್ಟ. ಕುಮಾರರಾಮನೂ ಅವನ ಸಂಗಡಿಗರೂ ಸತ್ತುಹೋಗಿರುವರೆಂದು ಭಾವಿಸಿದ್ದ ಆತನಿಗೆ ಮುಂದೆ ಗತಿಯೇನೆಂದು ತೋಚದಂತಾಯಿತು. ಬೈಚಪ್ಪನನ್ನು ಕರೆಸಿ ಮಂತ್ರಾಲೋಚನೆ ಮಾಡಿದ. ಇದೇ ಸಮಯವೆಂದರಿತ ಸಚಿವ ಅಕಾರ್ಯಕ್ಕಾಗಿ ಒಡೆಯನನ್ನು ಪರಿಪರಿಯಾಗಿ ಹಂಗಿಸಿದ. ಕಡೆಗೆ, ನಿರ್ವಾಹವಿಲ್ಲದೆ ತಾನು ಬೇರೊಬ್ಬ ಕಲಿಯನ್ನು ಕರೆದುಕೊಂಡು ಬಂದು ಶತ್ರುಗಳನ್ನು ಹಿಮ್ಮೆಟ್ಟಿಸಲು ಪ್ರಯತ್ನಿಸುವುದಾಗಿ ಭರವಸೆಯಿತ್ತ. ಅನಂತರ ಕುಮಾರರಾಮನನ್ನು ಅಡಗಿಸಿಟ್ಟಿದ್ದ ನೆಲಮಾಳಿಗೆಯ ಬಳಿಗೆ ಬಂದು ರಾಜ್ಯಕ್ಕೆ ಒದಗಿರುವ ಆಪತ್ತನ್ನು ತಿಳಿಸಿದ. ಬೈಚಪ್ಪನ ಹಿತೋಕ್ತಿಗಳನ್ನು ಅಲ್ಲಗಳೆಯಲಾರದೆ ಕುಮಾರರಾಮ ವೇಷಮರೆಸಿಕೊಂಡು, ತನ್ನ ನೆಚ್ಚಿನ ಕುದುರೆಯಾದ ಬೊಲ್ಲನನ್ನು ಏರಿ ರಣರಂಗದತ್ತ ಧಾವಿಸಿದನಲ್ಲದೆ ಶತ್ರುಸೈನಿಕರೊಂದಿಗೆ ವೀರಾವೇಶದಿಂದ ಕಾದಾಡಿ, ಅವರನ್ನು ಬಡಿದೋಡಿಸಿ, ಕುಮ್ಮಟದುರ್ಗಕ್ಕೆ ಪ್ರಾಪ್ತವಾಗಿದ್ದ ಕಂಟಕವನ್ನು ಪರಿಹರಿಸಿದ. ಕುಮಾರರಾಮನ ಚಹರೆಯನ್ನು ಗುರುತಿಸಿದ ಮುಸಲ್ಮಾನ ಸರದಾರರಿಗಾದರೋ ಆತ ಸತ್ತಿರುವುದು ಸುಳ್ಳಿರಬೇಕು ಎನ್ನಿಸಿತು. ಯುದ್ಧದಲ್ಲಿ ಜಯವಾದ ಬಳಿಕ ಬೈಚಪ್ಪ ವೇಷ ಮರೆಸಿಕೊಂಡಿದ್ದ ಹೊಸ ರಾಹುತನನ್ನು ಕಂಪಿಲನ ಬಳಿಗೆ ಕರೆತಂದ. ಹೊಸ ರಾಹುತ ತಲೆಯ ಮೇಲಿನ ಟೊಳಿಯನ್ನು ತೆಗೆಯುವುದೇ ತಡ ಆತ ಕುಮಾರರಾಮನೆಂದು ಕಂಪಿಲನಿಗೆ ಗೊತ್ತಾಗಿ ಹಿರಿಹಿರಿ ಹಿಗ್ಗಿದ. ಸಮಯೋಚಿತವಾದ ಚಾತುರ್ಯಕ್ಕೆ ಬೈಚಪ್ಪನನ್ನು ಮನಸಾರೆ ಶ್ಲಾಘಿಸಿದ. ರತ್ನಾಜಿ ಈ ವೃತ್ತಾಂತವನ್ನೆಲ್ಲ ಕೇಳಿದ ಕೂಡಲೆ ಇನ್ನೆಲ್ಲಿ ತನ್ನ ಕಪಟವೆಲ್ಲ ಬಯಲಾಗುವುದೊ ಎಂದು ಹೆದರಿ ನೇಣು ಹಾಕಿಕೊಂಡು ಸತ್ತಳು. ಸೋತ ನೇಮಿ ದೆಹಲಿಗೆ ಹಿಂತಿರುಗಲು ಅವನನ್ನು ಕಂಡು ಸುಲ್ತಾನನಿಗೆ ಪರಾಭವದ ಉರಿ ತಾಕಿ ಮೈ ಕಾವೇರಿತು. ಕಂಪಿಲನ ಹೆಸರನ್ನೇ ಅಳಿಸುವುದಾಗಿ ಆತ ಶಪಥ ಮಾಡಿದ.

ಸುಲ್ತಾನ ತನ್ನ ದಳಪತಿಗಳನ್ನೆಲ್ಲ ಬರಮಾಡಿಕೊಂಡು, ಕಂಪಿಲನ ಅಹಂಕಾರವನ್ನು ಹೇಗೆ ಮುರಿಯಬೇಕೆಂದು ದೀರ್ಘವಾಗಿ ಮಂತ್ರಾಲೋಚನೆ ನಡೆಸಿದ. ಆಗ ಅಲ್ಲಿಯೇ ಇದ್ದ ಮಾತಂಗಿ ಎಂಬಾಕೆ ಮುಂದೆ ಬಂದು ಸಾಕಷ್ಟು ಸೈನ್ಯವನ್ನು ಸಜ್ಜುಗೊಳಿಸಿಕೊಟ್ಟರೆ ತಾನು ಕೂಡಲೆ ಕುಮಾರರಾಮನನ್ನು ಸಂಹರಿಸಿ ಆತನ ತಲೆಯನ್ನು ತಂದುಕೊಡುವುದಾಗಿ ಪ್ರತಿಜ್ಞೆ ಮಾಡಿದಳು. ಅಲ್ಲಿದ್ದ ವೀರಾಧಿವೀರರು ಅವಳ ಮಾತುಗಳನ್ನು ಕೇಳಿ ಆಶ್ಚರ್ಯಚಕಿತರಾದರು. ಸುಲ್ತಾನ ಆಕೆಯ ಮಾತಿಗೆ ಸಮ್ಮತಿಸಿ, ಅಪಾರವಾದ ಸೈನ್ಯವನ್ನು ಶೇಖರಿಸಿ ಆಕೆಯ ನೇತೃತ್ವದಲ್ಲಿ ಕಳುಹಿಸಿ ಕೊಟ್ಟ. ಸುಲ್ತಾನನ ಸೇನೆ ದಾರಿಯುದ್ದಕ್ಕೂ ಹಾವಳಿ ಮಾಡುತ್ತಾ ಬಂದು ಕುಮ್ಮಟಕ್ಕೆ ಮುತ್ತಿಗೆ ಹಾಕಿತು. ಇತ್ತ ಕುಮಾರರಾಮನೂ ಯುದ್ಧಸನ್ನದ್ಧನಾದ. ಉಭಯಪಕ್ಷಗಳಿಗೂ ಬಿರುಸಾದ ಕಾಳಗ ನಡೆಯಿತು. ಮೊದಮೊದಲು ಮಹಮ್ಮದೀಯರಿಗೆ ತತ್ತರಿಸುವಂತಾಯಿತು. ಸುಲ್ತಾನನ ಸರದಾರರು ಮಾತಂಗಿಯನ್ನು ಹೀಯಾಳಿಸತೊಡಗಿದರು. ಆಕೆ ಯಾವುದಕ್ಕೂ ಸಗ್ಗದೆ, ಗಂಡುಡುಗೆಯನ್ನು ಧರಿಸಿ ತಾನೇ ರಣರಂಗವನ್ನು ಪ್ರವೇಶಿಸಿ ವೀರಾವೇಶದಿಂದ, ಪರಾಕ್ರಮದಿಂದ ಹೋರಾಡುತ್ತ ಮುನ್ನುಗ್ಗಿದಳು. ಶತ್ರುಸೈನ್ಯದಲ್ಲಿ ದಾರಿಮಾಡಿಕೊಂಡು ಮುಂದುವರಿಯುತ್ತ ಕುಮಾರ ರಾಮನಿದ್ದಲ್ಲಿಗೆ ಬಂದಳು. ಆ ವ್ಯಕ್ತಿಯ ಕೆಚ್ಚನ್ನು ಕಂಡು ಕುಮಾರರಾಮ ಬೆರಗಾಗಿ ಮುಂದೆ ಬಂದು ಕಾಳಗಕ್ಕೆ ಅಣಿಯಾದ. ಕೆಲಕಾಲ ಇಬ್ಬರಿಗೂ ಬಿರುಸಾದ ಕಾಳಗ ಸಾಗಿತ್ತು. ಆವೇಶಗೊಂಡು ಕತ್ತಿಯನ್ನು ಮೇಲಕ್ಕೆತ್ತಿ ಹೊಡೆಯಲು ಹೋದಾಗ ಎದುರಿನಲ್ಲಿರುವ ವ್ಯಕ್ತಿ ಸ್ತ್ರೀಯೆಂದು ಕುಮಾರರಾಮನಿಗೆ ವಿದಿತವಾಯಿತು. ತತ್‍ಕ್ಷಣವೇ ಕೈ ಹಿಂದೆ ಸರಿಯಿತಲ್ಲದೆ ಕ್ಷಣಕಾಲ ಆತ ತಟಸ್ಥನಾದ. ಸ್ತ್ರೀಯೊಬ್ಬಳ ಮೇಲೆ ಕತ್ತಿಹಿರಿದು ಯುದ್ಧಕ್ಕೆ ನಿಂತದ್ದಕ್ಕಾಗಿ ಆತನ ಮನಸ್ಸು ವ್ಯಾಕುಲಗೊಂಡಿತು. ಅದೇ ಸುಸಮಯವೆಂದು ತಿಳಿದ ಮಾತಂಗಿ ಮುನ್ನುಗ್ಗಿ ಕುಮಾರರಾಮನನ್ನು ಸಂಹರಿಸಿದಳು. ಈ ದುರಂತವನ್ನು ನೋಡಿದ ಬೇಡರ ಪಡೆ ದಿಗ್ಭ್ರಾಂತವಾಗಿ ಚದುರಿತು. ಕಂಪಿಲ ಹತಾಶನಾದ. ಶತ್ರುಸೈನಿಕರು ವಿಜಯೋನ್ಮತ್ತರಾಗಿ ಕೋಟೆಯ ಕಡೆ ನುಗ್ಗಿದರು. ಇತರ ವೀರಾಧಿವೀರರು ಎಷ್ಟು ಅಡ್ಡಗಟ್ಟಿ ಹೋರಾಡಿದರೂ ಸಫಲವಾಗಲಿಲ್ಲ. ಕೋಟೆ ಶತ್ರುಗಳ ವಶವಾಯಿತು. ವೀರಪತ್ನಿಯರು ಚಿತಾಪ್ರವೇಶ ಮಾಡಿದರು. ಶತ್ರುರಾಜರಿಗೆಲ್ಲ ಸಿಂಹಸ್ವಪ್ನವಾಗಿದ್ದ ಕುಮ್ಮಟದುರ್ಗ ಮುಸಲ್ಮಾನರ ದಾಳಿಗೆ ಸಿಕ್ಕು ಹೇಳಹೆಸರಿಲ್ಲದಂತಾಗಿ ಹಾಳು ಬೀಡಾಯಿತು. ಮಾತಂಗಿ ಕುಮಾರರಾಮನ ರುಂಡವನ್ನು ಚಾರರ ಮೂಲಕ ದೆಹಲಿಗೆ ಕಳುಹಿಸಿಕೊಟ್ಟಳು. ಅದನ್ನು ಕಂಡು ಸುಲ್ತಾನನಿಗೆ ಪರಮಾನಂದವಾಯಿತು. ಆದರೆ ಆತನ ಮಗಳಾದ ಬಾಬಮ್ಮ ಈ ದಾರುಣ ವೃತ್ತಾಂತವನ್ನು ಕೇಳಿದ ಕೂಡಲೆ ಹತಾಶಳಾಗಿ ಪ್ರಾಣ ತ್ಯಜಿಸಿದಳು. ಕುಮಾರರಾಮನ ರುಂಡ ದೆಹಲಿಯಲ್ಲಿದ್ದಷ್ಟು ಕಾಲವೂ ಅನೇಕ ಅಪಶಕುನಗಳಾಗತೊಡಗಿದವಂತೆ. ಆದ್ದರಿಂದ ಅದನ್ನು ಮತ್ತೆ ಕುಮ್ಮಟಕ್ಕೆ ಕಳುಹಿಸಿಕೊಡಲಾಯಿತು. ಅಂದಿನಿಂದ ಕುಮಾರರಾಮನನ್ನು ಜನ ದೈವಾಂಶಪುರುಷನೆಂದು ಭಾವಿಸಿ ಪೂಜಿಸಲು ಆರಂಭಿಸಿದರು.

ಕುಮಾರರಾಮನ ಬಗ್ಗೆ ಇತ್ತೀಚೆಗೆ ಸಾಕಷ್ಟು ಸಂಶೋಧನೆ ನಡೆದಿದ್ದು, ಚಿತ್ತಾಕರ್ಷಕವಾಗಿರುವ ಇವನ ಕಥೆಯನ್ನು ಹಾಸು ಹೊಕ್ಕಾಗಿರುವ ಒಂದೆರಡು ಐತಿಹಾಸಿಕ ಎಳೆಗಳನ್ನು ಬಿಡಿಸಲು ಚರಿತ್ರಕಾರರು ಪ್ರಯತ್ನಿಸಿದ್ದಾರೆ. ಇಬ್ನಬತೂತ, ನ್ಯೂನಿಜ್, ಫೆರಿಷ್ಟ, ಇಸಾಮಿ ಮೊದಲಾದವರ ಉಲ್ಲೇಖನಗಳಲ್ಲಿ ಕುಮ್ಮಟದುರ್ಗದ ದುರಂತ ವೃತ್ತಾಂತದ ಕಥೆ ಅಲ್ಪಸ್ವಲ್ಪ ತಿಳಿದುಬರುತ್ತದೆ. ಕಂಪಿಲ ಮತ್ತು ಅವನ ತಂದೆ ಮುಮ್ಮಡಿ ಸಿಂಗನ ಹೆಸರುಗಳು ಶಾಸನಗಳಲ್ಲಿ ಉಕ್ತವಾಗಿರುವುವಲ್ಲದೆ, ಇವರಿಗೂ ಹೊಯ್ಸಳ ವೀರಬಲ್ಲಾಳನ ದಂಡನಾಯಕರಿಗೂ ನಡೆದ ಯುದ್ಧದ ಪ್ರಸಂಗಗಳೂ ನಿರೂಪಿತವಾಗಿವೆ. ಕುಮಾರರಾಮನ ಸಾಂಗತ್ಯವನ್ನು ಬರೆದಿರುವ ಪ್ರತಿಯೊಬ್ಬ ಕವಿಯೂ ತನ್ನ ಕಾವ್ಯವನ್ನು ನರಚರಿತ್ರೆಯೆಂದು ಅಲ್ಲಗಳೆಯಬಾರದೆಂದೂ ಅದು ಪರದಾರಸೋದರನೊಬ್ಬನ ವೀರಕಥಾನಕವೆಂದೂ ಅಲ್ಲಿ ಪ್ರತಿಪಾದಿತವಾಗಿರುವ ಶೌರ್ಯ ಮತ್ತು ಶುಚಿತ್ವಗಳು ಆದರ್ಶಪ್ರಾಯವಾದ ಸದ್ಗುಣಗಳೆಂದೂ ಬಿನ್ನವಿಸಿ ಕೊಂಡಿರುವುದನ್ನು ಗಮನಿಸಿದರೆ ಕುಮಾರರಾಮ ಕಲ್ಪಿತವ್ಯಕ್ತಿಯಲ್ಲವೆಂಬುದು ದೃಢವಾಗುತ್ತದೆ. ಈ ಮಹಿಮಾಪುರುಷನನ್ನು ಕುರಿತ ಶಾಸನಗಳು ಧಾರವಾಡ ಜಿಲ್ಲೆಯ ಸಂಗೂರು, ಬಳ್ಳಾರಿ ಜಿಲ್ಲೆಯ ರಾಮಗಡ ಮತ್ತು ಶಿವಮೊಗ್ಗಜಿಲ್ಲೆಯ ತೀರ್ಥಹಳ್ಳಿ ಮೊದಲಾದ ಎಡೆಗಳಲ್ಲಿ ಲಭಿಸಿವೆ. ರಾಮಗಡದ ಶಾಸನದಲ್ಲಿ ಮುಮ್ಮಡಿ ಸಿಂಗನ ಮಗನಾದ ಕಂಪಿಲರಾಯ ಮತ್ತು ಆತನ ಹೆಂಡತಿ ಹರಿಹರ ದೇವಿಯವರ ಪುತ್ರ ರಾಮನಾಥವೊಡೆಯರು ಎಂಬ ವಂಶಾವಳಿ ಸ್ಪಷ್ಟವಾಗಿ ಕಂಡುಬರುವುದರಿಂದ ಈತನೊಬ್ಬ ಐತಿಹಾಸಿಕ ವ್ಯಕ್ತಿಯಾಗಿರಬೇಕೆಂದು ಇತಿಹಾಸಕಾರರು ಭಾವಿಸಿರುತ್ತಾರೆ. ಕಾವ್ಯಗಳಲ್ಲಿ ಉಕ್ತವಾಗಿರುವ ಬಾದೂರನ ಪಲಾಯನಕ್ಕೂ ಐತಿಹಾಸಿಕ ಆಧಾರ ದೊರೆಯುತ್ತದೆ. ಮಹಮ್ಮದ್ ಬಿನ್ ತುಘಲಕ್ ಪಟ್ಟಕ್ಕೆ ಬಂದ ಕೂಡಲೆ ಪ್ರಾಂತ್ಯಾಧಿಕಾರಿಯಾಗಿದ್ದ ಆತನ ಬಂಧುವಾದ ಬಹಾಉದ್ದೀನ್ ಗುರ್ಷಾಸ್ಪ್(ನೋಡಿ) ಎಂಬಾತ ಯಾವುದೋ ವೈಮನಸ್ಯದಿಂದ ರಾಜ್ಯಭ್ರಷ್ಟನಾಗಿ, ಹಿಂದು ರಾಜನಾದ ಕಂಪಿಲನ ಆಶ್ರಯವನ್ನು ಪಡೆದನೆಂದೂ ಸುಲ್ತಾನನ ಸೇನೆ ಬೆನ್ನಟ್ಟಿಬರಲು ಈ ರಾಜ ಆತನನ್ನು ಬೇರೊಬ್ಬ ರಾಜನ ಬಳಿಗೆ ಕಳುಹಿಸಿದನೆಂದೂ ಅಲ್ಲಿಯೂ ಸೈನಿಕರು ಹಿಂಬಾಲಿಸಲು ಆ ದೊರೆ ಬಹಾಉದ್ದೀನನನ್ನು ಮುಸಲ್ಮಾನರಿಗೆ ಒಪ್ಪಿಸಲು ಅವರು ಆತನನ್ನು ಚಿತ್ರಹಿಂಸೆಗೆ ಗುರಿಮಾಡಿ ಕೊಂದರೆಂದೂ ಮಹಮ್ಮದೀಯ ಇತಿಹಾಸಕಾರರು ವಿವರಿಸುತ್ತಾರೆ. ಈ ಘಟನೆಯೇ ಇಲ್ಲಿ ಸಂದರ್ಭೋಚಿತವಾಗಿ ಮಾರ್ಪಟ್ಟಿರುವಂತಿದೆ. ಕಂಪಿಲ ಹತನಾದ ಬಳಿಕ ಅವನ ಆಸ್ಥಾನದ ಕೆಲವರು ಕೈಸೆರೆಯಾದರೆಂದೂ ಅವರಲ್ಲಿ ಜೀವಸಹಿತ ಉಳಿದ ಒಬ್ಬಿಬ್ಬರೇ ಮುಂದೆ ವಿಜಯನಗರದ ಸ್ಥಾಪನೆಗೆ ಕಾರಣರಾದರೆಂದೂ ವಾದವಿದೆ. ಒಟ್ಟಿನಲ್ಲಿ ಐತಿಹಾಸಿಕವಾಗಿದ್ದ ಕೆಲವು ಸಂಗತಿಗಳು ಹೇಗೆ

ಕಾಲಕ್ರಮದಲ್ಲಿ ಐತಿಹ್ಯವಾಗಿ ಪರಿಣಮಿಸಿವೆಯೆಂಬುದನ್ನು ವ್ಯಾಸಂಗ ಮಾಡಲು ಕುಮಾರರಾಮನ ಕಥೆ ಉತ್ತಮ ಸಾಧನವಾಗಿದೆ. ನಂಜುಂಡನ ನಿರೂಪಣೆಯಲ್ಲಿ ವಿದಿತವಾಗುವಂತೆ ಕುಮಾರರಾಮನ ವೃತ್ತಾಂತ ಇಂದಿನವರೆಗೆ ಪುಣ್ಯಕಥೆ, ಪೂರ್ವಚರಿತ್ರೆ ಮತ್ತು ಪುರಾಣವೆನ್ನಿಸಿ ಪ್ರಶಸ್ತಿ ಪಡೆದಿರುತ್ತದೆ.

ಕುಮಾರರಾಮನ ಹೆಸರು ಇಂದಿಗೂ ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ಪ್ರಚಲಿತವಾಗಿದೆ. ಸ್ಫುರದ್ರೂಪಿಯೂ ಪರಾಕ್ರಮಿಯೂ ಆದವನನ್ನು 'ಏನು ಈ ಮಗ ಕೊಮರಾಮ ಆಗ್ಯಾನ' ಎಂದೂ ಕರೆಯುವುದುಂಟು. ಒಮ್ಮೊಮ್ಮೆ ಬಡಾಯಿ ಕೊಚ್ಚಿಕೊಳ್ಳುವವನನ್ನೂ 'ಮಹಾ ಕೊಮರಾಮ ಬಂದ' ಎಂದು ಆಡಿಕೊಳ್ಳುವುದೂ ಉಂಟು. ಕೊಪ್ಪಳ ಜಿಲ್ಲೆಯ ಗಂಗಾವತಿ ಸಮೀಪದಲ್ಲಿರುವ ಕುಮ್ಮಟದುರ್ಗದಲ್ಲಿ ಪ್ರತಿವರ್ಷವೂ ವೈಶಾಖ ಶುಕ್ಲ ಪೂರ್ಣಿಮೆಯಂದು ಬೇಡರು ಕುಮಾರರಾಮನ ಜಾತ್ರೆಯನ್ನು ನಡೆಸುವರೆಂದು ತಿಳಿದುಬರುತ್ತದೆ. ಅವರ ಪಾಲಿಗೆ ಈತ ಪರದಾರಸೋದರತ್ವದ ಪ್ರತೀಕವಾದ ದೈವಾಂಶಪುರುಷನೇ ಆಗಿದ್ದಾನೆ. ಇಂದಿಗೂ ಈತ ಅಪ್ರತಿಮ ಪರಾಕ್ರಮಶಾಲಿಯೆಂದೂ ಪರದಾರಸೋದರನೆಂದೂ ಜನಮನದಲ್ಲಿ ಶಾಶ್ವತ ಸ್ಥಾನ ಪಡೆದಿದ್ದಾನೆ.

ಕುಮಾರರಾಮನನ್ನು ಕುರಿತಂತೆ ಹೊಸಗನ್ನಡದಲ್ಲಿ ಹುಲ್ಲೂರು ಶ್ರೀನಿವಾಸ ಜೋಯಿಸರ ಗಂಡುಗಲಿ ಕುಮಾರರಾಮ, ಆಲೂರ ವೆಂಕಟರಾಯರ ರಣರಂಗ ಸಿಂಗನಾದ ಕುಮಾರರಾಮ, ಹುಯಿಲಗೋಳ ನಾರಾಯಣರಾಯರ ಕುಮಾರರಾಮನನ್ನು ಕುರಿತ ನಾಟಕ, ವಸುದೇವ ಭೂಪಾಲಂ ಅವರ ಕುಮ್ಮಟವಲ್ಲಭ, ವರದರಾಜ ಹುಯಿಲಗೋಳರ ರತ್ನಾಜಿ, ಎಂ.ಎಚ್. ರಾಮಶರ್ಮರ ರಣಧೀರ ರಾಮನಾಥ, ದೇಸಾಯಿ ಪಾಂಡುರಂಗರಾಯರ ಕಂಪಿಲ ಕುಮಾರ ಎಂಬ ಸಣ್ಣಕಥೆ, ದೇಜಗೌ, ಅವರ ಕದುಗಲಿ ಕುಮಾರರಾಮ ಹಾಗೂ ನಂಜುಂಡಕವಿ ವಿಮರ್ಶೆ, ಜಿ.ವರದರಾಜರಾಯರ ಕುಮ್ಮಟಕೇಸರಿ ಹಾಗೂ ಕುಮಾರರಾಮನ ಸಾಂಗತ್ಯಗಳು ಎಂಬ ಪ್ರೌಢ ಪ್ರಬಂಧ-ಈ ಸಾಹಿತ್ಯಕೃತಿಗಳು ಪ್ರಕಟಗೊಂಡಿವೆ. (ಜಿ.ವಿ.)

**ಕುಮಾರ ವಾಲ್ಮೀಕಿ :** ಸು.1500. ಭಾಗವತ ಕವಿ. ತೊರವೆ ರಾಮಾಯಣ, ಐರಾವಣಕಾಳಗ ಎಂಬ ಕಾವ್ಯಗಳ ಕರ್ತೃ. ಬಿಜಾಪುರದ ಪಶ್ಚಿಮಕ್ಕೆ 8ಕಿಮೀ ದೂರದಲ್ಲಿರುವ ತೊರವೆ ಈತನ ಜನ್ಮಸ್ಥಳ. ತೊರವೆಯ ನರಸಿಂಹ ಈತನ ಇಷ್ಟದೈವ. ಕವಿಯ ನಿಜವಾದ ಹೆಸರು ನರಹರಿ. ಕುಮಾರವಾಲ್ಮೀಕಿ ಎಂಬುದು ಈತನ ಬಿರುದಾಗಿದ್ದು ಕವಿಯಾಗಿ ಈ ಹೆಸರಿನಿಂದಲೇ ಪ್ರಸಿದ್ಧನಾಗಿದ್ದಾನೆ. ಕವಿರಾಜಹಂಸ ಎಂಬುದು ಈತನ ಇನ್ನೊಂದು ಬಿರುದಿದ್ದಂತೆ ಈತನ ಕಾವ್ಯದಿಂದ ತಿಳಿದುಬರುತ್ತದೆ. ಈತನ ಕಾವ್ಯದಲ್ಲಿ ಕಾಲನಿರ್ದೇಶಕ ಅಂಶಗಳಾವುವೂ ಕಂಡುಬಾರದಿರುವುದರಿಂದ ಖಚಿತವಾಗಿ ಈತನ ಕಾಲವನ್ನು ನಿರ್ಧರಿಸಲಾಗಿಲ್ಲ. ಪೂರ್ವಕವಿಗಳಲ್ಲಿ ಕುಮಾರವ್ಯಾಸನನ್ನು (ಸು.1400) ಸ್ತುತಿಸಿದ್ದಾನೆ. ಕುಮಾರ ವಾಲ್ಮೀಕಿಯನ್ನು ಕನಕದಾಸರು (ಸು.1508-1606) ಸ್ಮರಿಸಿದ್ದಾರೆ. ಆದ್ದರಿಂದ ಕವಿ ಇವರಿಬ್ಬರ ನಡುವಿನ ಕಾಲದಲ್ಲಿ ಅಂದರೆ ಸು.1500 ರಲ್ಲಿದ್ದಿರಬಹುದೆಂದು ಕವಿ ಚರಿತಕಾರರು ಅಭಿಪ್ರಾಯಪಟ್ಟಿದ್ದಾರೆ. ಈಚಿನ ಅಭಿಪ್ರಾಯದಂತೆ ಈತನ ಕಾಲ ಹದಿನಾರನೆಯ ಶತಮಾನದ ಅಂತ್ಯಭಾಗ. ನರಹರಿ ತನ್ನ ಗ್ರಂಥವನ್ನು ತೊರವೆ ನರಸಿಂಹದೇವರ ಅಂಕಿತದಲ್ಲಿ ರಚಿಸಿದುದರಿಂದ ಈತನ ಕಾವ್ಯಕ್ಕೆ ತೊರವೆ ರಾಮಯಣವೆಂಬ ಹೆಸರು ಬಂದಿತು.

ತೊರವೆ ರಾಮಾಯಣ ಭಾಮಿನೀ ಷಟ್ಪದಿಯಲ್ಲಿದೆ. ಇದರಲ್ಲಿ 6 ಕಾಂಡಗಳೂ 112 ಸಂಧಿಗಳೂ 5200 ಪದ್ಯಗಳೂ ಇವೆ. ಇಲ್ಲಿನ ಯುದ್ಧಕಾಂಡ ಉಳಿದ ಐದು ಕಾಂಡಗಳಿಗಿಂತಲೂ ದೊಡ್ಡದಾಗಿದೆ. ಈ ಕಾವ್ಯ ವಾಲ್ಮೀಕಿರಾಮಾಯಣದ ಕಥಾಸರಣಿಯನ್ನೇ ಅನುಸರಿಸಿ ರಚಿತವಾಗಿದೆ. ಆದರೆ ಕವಿ ಅಲ್ಲಲ್ಲಿ ಹಲಕೆಲವು ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ಅವುಗಳಲ್ಲಿ ಪ್ರಮುಖವಾದ ಒಂದೆರಡು ಅಂಶಗಳನ್ನು ಗಮನಿಸಬಹುದು. ಇಲ್ಲಿ ಶ್ರೀರಾಮಚರಿತ್ರೆಯನ್ನು ಈಶ್ವರ ಪಾರ್ವತಿಗೆ ವಿವರಿಸುತ್ತಾನೆ. ಇಲ್ಲಿಯ ಶ್ರೀರಾಮ ಸಾಮಾನ್ಯ ಮಾನವನಲ್ಲ; ವಿಷ್ಣುವಿನ ಅವತಾರ. ಮಂಥರೆ ಮಾಯೆಯ ಪ್ರತೀಕ. ಇಲ್ಲಿಯ ರಾವಣ ಸ್ವಲ್ಪ ಮಟ್ಟಿಗೆ ದುರಂತ ನಾಯಕನಾಗಿ ಕಾಣುತ್ತಾನೆ ಇತ್ಯಾದಿ. ಈ ಕೆಲವು ಮಾರ್ಪಾಡುಗಳನ್ನು ಕವಿ ಅಧ್ಯಾತ್ಮರಾಮಾಯಣವನ್ನನುಸರಿಸಿ ಮಾಡಿಕೊಂಡಿರಬಹುದೆಂದು ಊಹಿಸಬಹುದಾಗಿದೆ. ಕಥೆಗಾರಿಕೆಯಲ್ಲಿ ನಿರರ್ಗಳವಾದ ಓಟವಿದೆ, ಅಚ್ಚುಕಟ್ಟಿದೆ; ಆದರೆ ಕಾವ್ಯತ್ವ ಉಜ್ವಲವಾಗಿ ತೀಕ್ಷ್ಣವಾಗಿ ಕಂಡುಬರುವುದಿಲ್ಲ. ಶೈಲಿ ಅತ್ಯಂತ ಸರಳವೂ ಸುಲಭವೂ ಆಗಿದೆ. ಅಲ್ಲಲ್ಲಿ ಈತನ ಕಾವ್ಯದಲ್ಲಿ ಕುಮಾರವ್ಯಾಸನ ಪ್ರಭಾವ ಎದ್ದು ತೋರುತ್ತದೆ. ಒಮ್ಮೊಮ್ಮೆ ಕಾಳಿದಾಸನ ಪ್ರಭಾವವೂ ಕಾಣುತ್ತದೆ. ಹೃದ್ಯ ಸಂದರ್ಭಗಳು ಬಂದಾಗ ಕವಿ ವಿಚಿತ್ರ ರೀತಿಯಲ್ಲಿ ಅವನು ನಿರ್ವಹಿಸಿ ಪಾತ್ರಗಳ ಮನೋಧರ್ಮವನ್ನು ಅಭಿವ್ಯಕ್ತಿಸುತ್ತಾನೆ. ವರ್ಣಕ ಕಾವ್ಯಕ್ಕೆ ಕುಮಾರವ್ಯಾಸ ಹಾಗೂ ತನ್ನನ್ನು ಬಿಟ್ಟರೆ ಉಳಿದ ಕವಿಗಳು ಯಾವ ಲೆಕ್ಕ ಎಂದು ಅಭಿಮಾನದಿಂದ ಹೇಳಿಕೊಳ್ಳುತ್ತಾನೆ. ಇವನು ತನ್ನ ಕೃತಿಯನ್ನು ರಾಜಾಸ್ಥಾನಕ್ಕಾಗಲಿ ಪಂಡಿತರಿಗಾಗಲಿ ಬರೆಯಲಿಲ್ಲ. ಜನಸಾಮಾನ್ಯರ ಉದ್ಧಾರಕ್ಕಾಗಿ ಕನ್ನಡದಲ್ಲಿ ಮೊಟ್ಟಮೊದಲು ಬರೆದ. ಮಹಾ ಕಾವ್ಯವಲ್ಲದಿದ್ದರೂ ಈ ಕಾವ್ಯ ಜನಮನವನ್ನು ನೇರವಾಗಿ ಮುಟ್ಟುತ್ತದೆ.

ಐರಾವಣಕಾಳಗ ಭಾಮಿನೀ ಷಟ್ಪದಿಯಲ್ಲಿದೆ. ಇದರಲ್ಲಿ 4 ಸಂಧಿಗಳೂ 296 ಪದ್ಯಗಳೂ ಇವೆ. ಕಥಾವಸ್ತು ರಾಮಾಯಣಕ್ಕೆ ಸಂಬಂಧಿಸಿದ್ದಾಗಿದೆ. (ಬಿ.ಎಸ್.ಎಸ್.,ಎನ್.ಬಿ.,ಎನ್.ಕೆ.ಕೆ.)

**ಕುಮಾರವ್ಯಾಸ :** ಸು.1400. ಕನ್ನಡದ ಮಹಾಕವಿಗಳಲ್ಲೊಬ್ಬ. ಗದುಗಿನ ಭಾರತ, ಕನ್ನಡ ಭಾರತ, ನಾರಣಪ್ಪನ ಭಾರತ ಎಂದು ಜನಪ್ರಿಯವಾಗಿರುವ ಕರ್ಣಾಟಭಾರತ ಕಥಾಮಂಜರಿ ಎಂಬ ಮಹಾಕಾವ್ಯದ ಕರ್ತೃ.

ಗದಗಿನ ಸಮೀಪದ ಕೋಳಿವಾಡ(ನೋಡಿ) ಈತನ ಜನ್ಮಸ್ಥಳ. ನಾರಣಪ್ಪ ಅಥವಾ ನಾರಾಯಣಪ್ಪ ಎಂಬುದು ಈತನಿಗೆ ಮೊದಲಿದ್ದ ಹೆಸರಾದರೂ ಕುಮಾರವ್ಯಾಸನೆಂದೇ ಪ್ರಸಿದ್ಧ. ಕಾವ್ಯದಲ್ಲಿ ಕುಮಾರವ್ಯಾಸಯೋಗೀಂದ್ರ, ಕುಮಾರವ್ಯಾಸ ಮುನಿ, ಶುಕಮುನಿ ಎಂದು ತನ್ನನ್ನು ಕರೆದುಕೊಂಡಿರುವುದರಿಂದ ಕುಮಾರವ್ಯಾಸ ಎಂಬುದು ಬಿರುದೆಂದೂ ಕವಿಯೇ ಪ್ರೀತಿಯಿಂದ ಇಟ್ಟುಕೊಂಡಿರುವ ಕಾವ್ಯನಾಮವೆಂದೂ ಭಾವಿಸಬಹುದಾಗಿದೆ. ಈ ಹೆಸರುಗಳನ್ನು ಗಮನಿಸಿ ಇವನು ಒಬ್ಬ ಯೋಗಿಯೂ ಆಗಿದ್ದಿರಬಹುದೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ವ್ಯಾಸಭಾರತವನ್ನು ಕನ್ನಡದಲ್ಲಿ ಸಮಗ್ರವಾಗಿ ಸತ್ವಯುತವಾಗಿ ನಿರೂಪಿಸಿದ್ದರಿಂದ ಈತನನ್ನು ಜನ ಕುಮಾರವ್ಯಾಸ ಎಂಬ ಬಿರುದನ್ನಿತ್ತು ಕರೆದಿರಬಹುದೆಂಬ ಇನ್ನೊಂದು ಹೇಳಿಕೆಯೂ ಇದೆ. ಕವಿ ಶಾನುಭೋಗರ ಅಥವಾ ಕರಣಿಕರ ಮನೆತನಕ್ಕೆ ಸೇರಿದವನೆಂಬ ಪ್ರತೀತಿ ಇತ್ತು. ಆದರೆ ಇತ್ತೀಚೆಗೆ ಕೋಳಿವಾಡದ ಗೌಡ ಮನೆತನದ ಹಳೆಯ ಲೆಕ್ಕಪತ್ರಗಳಲ್ಲಿ ಕವಿಯ ವಂಶಾವಳಿಯ ದಾಖಲೆಗಳು ದೊರಕಿದ್ದು, ಕವಿಯ ವಂಶಜರು ವಿಜಯನಗರ ರಾಜ್ಯದ ಸೇನೆಯ ಮುಖ್ಯ ಅಧಿಕಾರ ಸ್ಥಾನದಲ್ಲಿದ್ದರೆಂಬ ವಿಷಯ ತಿಳಿದುಬರುತ್ತದೆ ಎನ್ನಲಾಗಿದೆ. ಆನೆಯ ದೇವಪ್ಪಯ್ಯ ಎಂಬುವನು ಕುಮಾರವ್ಯಾಸನ ಮೊಮ್ಮಗನೆಂಬ ವಿಷಯವೂ ಒಂದು ಶಾಸನದಿಂದ ತಿಳಿದುಬರುತ್ತದೆ. ವಿಜಯನಗರದ ದೊರೆ 1ನೆಯ ದೇವರಾಯನಲ್ಲಿ (1406-22) ಮಂತ್ರಿಯಾಗಿದ್ದ ಲಕ್ಕರಸನ ಐವರು ಮಕ್ಕಳಲ್ಲಿ ಹಿರಿಯ ಮಗ ವೀರನಾರಾಯಣನೇ ಭಾರತಕರ್ತೃವಾದ ಕುಮಾರವ್ಯಾಸನೆಂಬ ಅಭಿಪ್ರಾಯವೂ ಇದೆ. ಗದಗಿನ ವೀರನಾರಾಯಣ ಕವಿಯ ಇಷ್ಟದೈವ. ತನ್ನ ಇಷ್ಟದೈವದ ಹೆಸರಿನಲ್ಲಿ ಕಾವ್ಯ ರಚನೆ ಮಾಡಿದ್ದಾನೆ.

ಕುಮಾರವ್ಯಾಸನ ಕಾಲನಿರ್ಣಯದ ಬಗ್ಗೆ ಅನೇಕ ಚರ್ಚೆಗಳಾಗಿವೆ. ಲೇಸೆನಿಸಿ ಮೊದಲಾ ಕುಮಾರವ್ಯಾಸ ದಶಪರ್ವಗಳ ಹೇಳಿದ ಉಳಿದ ಪರ್ವಗಳ ನೀ ಸಕಲಜನ ಮೆಚ್ಚುವಂದದಿ ಹೇಳು ಎಂದು ವಿಜಯನಗರದ ಅರಸು ಕೃಷ್ಣದೇವರಾಯನ (1509-29) ಆಜ್ಞಾನುಸಾರ ತಾನು ಭಾರತದ ಉಳಿದ ಕಥೆಯನ್ನು ಹೇಳುವುದಾಗಿ ತಿಮ್ಮಣ್ಣಕವಿ (ಸು.1510) ಉಲ್ಲೇಖಿಸಿರುವುದರಿಂದ ಅವನ ಕಾಲಕ್ಕಿಂತ ಹಿಂದಿನವನು ಎಂಬುದು ಖಚಿತ; ಎಷ್ಟು ಹಿಂದಿನವನು ಎನ್ನುವುದು ವಿವಾದಾಸ್ಪದವಾಗಿದೆ. ಒಂದು ದಂತಕಥೆ ಕುಮಾರವ್ಯಾಸನಿಗೂ ಚಾಮರಸನಿಗೂ ಸಂಬಂಧಕಲ್ಪಿಸಿದೆ. ಇದರ ಆಧಾರದ ಮೇಲೆ, ಪ್ರೌಢದೇವರಾಯನ ಕಾಲದಲ್ಲಿದ್ದ (1424-46)

ಚಾಮರಸ ಇವನ ಸಮಕಾಲೀನನಾದುದರಿಂದ ಕುಮಾರವ್ಯಾಸನ ಕಾಲ ಸು.1430 ಎಂದು ಕವಿಚರಿತೆಕಾರರು ಅಭಿಪ್ರಾಯಪಟ್ಟಿದ್ದಾರೆ. ವೀರಶೈವ ಸಂಪ್ರದಾಯದ ದಂತಕಥೆಯೊಂದರ ಪ್ರಕಾರ ಇವನು ರಾಘವಾಂಕನ (ಸು.1225) ಸಮಕಾಲೀನ. ಈ ದಂತಕಥೆಗಳನ್ನು ನಂಬುವುದು ಕಷ್ಟ. ಭಾಸ್ಕರನ ಜೀವಂಧರ ಚರಿತ್ರೆಯ ಮೇಲೆ ಕುಮಾರವ್ಯಾಸ ಭಾರತದ ಪ್ರಭಾವಮುದ್ರೆ ಬಿದ್ದಿರುವುದು ಸ್ಪಷ್ಟವಾಗಿ ಗೋಚರವಾಗುವುದರಿಂದ ಜೀವಂಧರಚರಿತ್ರೆಯ ರಚನಾಕಾಲ 1424 ಎಂದು ಆ ಕೃತಿಯಿಂದಲೇ ತಿಳಿಯುವುದರಿಂದ (ಭಾಸ್ಕರಕವಿಯ ಕಾಲವೂ ನಿಶ್ಚಿತವಲ್ಲ) ಕುಮಾರವ್ಯಾಸನ ಕಾಲ 1424 ಕ್ಕಿಂತ ಹಿಂದೆ ಎಂದು ಹೇಳಬಹುದು. ಎಷ್ಟು ಹಿಂದೆ ಎಂಬುದಕ್ಕೆ ನಿರ್ವಿವಾದವಾದ ಪ್ರಮಾಣಗಳು ದೊರೆತಿಲ್ಲ. ಕೆಲವು ಶಬ್ದ ಪ್ರಯೋಗಗಳ ಆಧಾರದ ಮೇಲೆ ಮುಖ್ಯವಾಗಿ ಕನ್ನಡ ಭಾರತದಲ್ಲಿ ಬಂದಿರುವ ಮರಾಠಿ ಶಬ್ದಗಳು, ವ್ಯಾಕರಣ ಲಕ್ಷಣಗಳಿಂದ ಕವಿಯ ಕಾಲ 13ನೆಯ ಶತಮಾನದ ಪೂರ್ವಾರ್ಧವಾಗಿರಬೇಕೆಂದು ಗೋವಿಂದ ಪೈಗಳ ಅಭಿಪ್ರಾಯ. ರಂ.ಶ್ರೀ.ಮುಗಳಿಯವರು ಸು.1400 ಎಂದು ಅಭಿಪ್ರಾಯಪಟ್ಟಿದ್ದಾರೆ. ಸದ್ಯದ ಮಟ್ಟಿಗೆ ಕವಿಯ ಕಾಲವನ್ನು 1350 ರಿಂದ 1425ರ ನಡುವಣ ಕಾಲ (ಸು.1375) ಎಂದು ಇಟ್ಟುಕೊಳ್ಳಬಹುದು ಎಂದು ಎಂ.ವಿ.ಸೀತಾರಾಮಯ್ಯ ನವರು ಅಭಿಪ್ರಾಯಪಟ್ಟಿದ್ದಾರೆ.

ಕುಮಾರವ್ಯಾಸನ ಮತದ ಬಗೆಗೂ ಭಿನ್ನಾಭಿಪ್ರಾಯಗಳಿವೆ. ಭಾಗವತ ಧರ್ಮದಲ್ಲಿ ಪರಮ ವೈಷ್ಣವ ಭಕ್ತಿ, ಅದರಲ್ಲಿ ವಿಶೇಷವಾಗಿ ವಾಸುದೇವ ಕೃಷ್ಣ ಭಕ್ತಿ, ಶೈವಭಕ್ತಿ, ಹರಿಹರಾಭೇದ ದೃಷ್ಟಿ, ಅದ್ವೈತ ದರ್ಶನ, ವಿಶಿಷ್ಟಾದ್ವೈತಿಗಳ ಮತ್ತು ದ್ವೈತಿಗಳ ಸಿದ್ಧಾಂತಗಳಿಗೂ ಮನ್ನಣೆ. ಇವೆಲ್ಲ ಲಕ್ಷಣಗಳೂ ಕುಮಾರವ್ಯಾಸ ಭಾರತದಲ್ಲಿ ಕಂಡುಬರುತ್ತವೆ. ಆದ್ದರಿಂದ ಕುಮಾರವ್ಯಾಸ ಭಾಗವತ ಸಂಪ್ರದಾಯದ ಸ್ಮಾರ್ತ ಬ್ರಾಹ್ಮಣ ಪಂಗಡಕ್ಕೆ ಸೇರಿದವನು ಎಂದು ಊಹೆ. ಕವಿ ಯಾವ ಮತಪಂಗಡಕ್ಕಾದರೂ ಸೇರಿರಲಿ ಮುಖ್ಯವಾಗಿ ಇವನು ವೇದ ಇತಿಹಾಸ ಪುರಾಣಾದಿ ಶಾಸ್ತ್ರಗಳಲ್ಲಿ ಬಲ್ಲಿದ, ಚತುರ್ಭಾಷಾಪಂಡಿತ, ವ್ಯಾಸ ಭಾರತವನ್ನು ಶಿರಸಾ ಮನಸಾ ಧಾರಣ ಮಾಡಿಕೊಂಡಿದ್ದವನು. ಪಂಪಭಾರತವೇ ಮೊದಲಾದ ಶ್ರೇಷ್ಠ ಪೂರ್ವಕವಿಕೃತಿಗಳನ್ನು ಅನುಸಂಧಾನ ಮಾಡಿದ್ದವನು ಎಂಬ ಮಾತು ಮುಖ್ಯ.

ಕರ್ಣಾಟ ಭಾರತಕಥಾಮಂಜರಿ ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿದೆ. ಇದರಲ್ಲಿ 10 ಪರ್ವಗಳಿವೆ. ಮೊದಲನೆಯ ಐದು ಪರ್ವಗಳನ್ನು ಆದಿಪಂಚಕವೆಂದೂ ಕೊನೆಯ ಐದನ್ನು ಯುದ್ಧ ಪಂಚಕವೆಂದೂ ಕರೆಯುತ್ತಾರೆ. ಸಂಸ್ಕೃತದಲ್ಲಿ ವ್ಯಾಸರಿಂದ ರಚಿತವಾದ ಮಹಾಭಾರತ ಈ ಕೃತಿಗೆ ಆಕರ. ಮಹಾಭಾರತದ ಕಥೆಯ 10 ಪರ್ವಗಳನ್ನು ಸಾರವತ್ತಾಗಿ ಕವಿ ಕನ್ನಡಕ್ಕೆ ತಂದುಕೊಟ್ಟಿದ್ದಾನೆ. ಕಾವ್ಯಾರಂಭದಲ್ಲಿ ತನ್ನ ಇಷ್ಟದೈವದ ಸ್ತುತಿಯೊಂದಿಗೆ, ತಿಳಿಯಹೇಳುವೆ ಕೃಷ್ಣ ಕಥೆಯನ್ನು ಇಳೆಯ ಜಾಣರು ಮೆಚ್ಚುವಂತಿರೆ ನೆಲೆಗೆ ಪಂಚಮಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ ಎಂದು ತನ್ನ ಕಾವ್ಯೋದ್ದೇಶವನ್ನು ಸ್ಪಷ್ಟಪಡಿಸಿದ್ದಾನೆ. ವೀರ ನಾರಾಯಣನೆ ಕವಿ ಲಿಪಿಕಾರ ಕುಮಾರವ್ಯಾಸನೆಂದು ತನ್ನ ವಿನಯವನ್ನೂ ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ ಪದವಿಟ್ಟಳುಪದೊಂದಗ್ಗಳಿಕೆ ಎಂದು ತನ್ನ ಕಾವ್ಯಶಕ್ತಿಯನ್ನೂ ಹೇಳಿಕೊಂಡಿದ್ದಾನೆ. ತನ್ನ ಕಾವ್ಯದ ಸ್ವರೂಪವನ್ನು ಅರಸುಗಳಿಗಿದು ವೀರ ದ್ವಿಜರಿಗೆ ಪರಮವೇದದ ಸಾರ ಯೋಗೀಶ್ವರರ ತತ್ತ್ವ ವಿಚಾರ ಮಂತ್ರಿಜನಕ್ಕೆ ಬುದ್ಧಿಗುಣ ವಿರಹಿಗಳ ಶೃಂಗಾರ ವಿದ್ಯಾಪರಿಣತರಲಂಕಾರ ಕಾವ್ಯಕ್ಕೆ ಗುರುವೆನಲು ರಚಿಸಿದ ಕುಮಾರವ್ಯಾಸಭಾರತವ ಎಂದು ತಿಳಿಸಿದ್ದಾನೆ. ಈ ಮೇಲಿನ ಮಾತುಗಳಿಗೆ ಕಾವ್ಯದಲ್ಲಿ ಸಾಕಷ್ಟು ಉದಾಹರಣೆಗಳು ದೊರೆಯುತ್ತವೆ. ಇವನು ವ್ಯಾಸರ ಇತಿಹಾಸಕಾವ್ಯವನ್ನು ಅನುಸರಿಸಿದ್ದರೂ ಅದನ್ನು ಕನ್ನಡದ ಪುರಾಣಕಾವ್ಯವಾಗಿ ಮಾರ್ಪಡಿಸುವಲ್ಲಿ ಕಾವ್ಯಧರ್ಮಕ್ಕೆ ಸಾಧಾರಣವಾಗಿ ಲೋಪ ತಂದಿಲ್ಲ. ನೀತಿಬೋಧೆಗಾಗಿಯೇ ಹುಟ್ಟಿಕೊಂಡ ಉಪಾಖ್ಯಾನಗಳನ್ನೆಲ್ಲ ಬಿಟ್ಟು, ಮೂಲ ಭಾರತವನ್ನು ಸಂಗ್ರಹಿಸಿದರೂ ತನಗೆ ಇಷ್ಟಬಂದ ಕಡೆ ಹಿಗ್ಗಿಸಿ, ಎಷ್ಟೋ ಕಡೆ ಕವಿದೃಷ್ಟಿಗೆ ಒಪ್ಪಿಗೆಯಾಗದ ಮೂಲಕೃತಿಯ ಇತಿಹಾಸ ಸತ್ಯವನ್ನು ಕಾವ್ಯಸತ್ಯವಾಗಿ ಮಾರ್ಪಡಿಸಿ, ಪಾತ್ರಗಳನ್ನು ಹೆಚ್ಚು ಜೀವಂತವಾಗಿಸಿ, ವರ್ಣನೆಗಾಗಿ ವರ್ಣನೆಗಳನ್ನು ತುರುಕದೆ, ತನ್ನ ಅನುಭವ ಭಂಡಾರವನ್ನು ಕಾವ್ಯಕ್ಕೆ ಧಾರೆಯೆರೆಯಬಹುದಾದಂಥ ಸಂದರ್ಭಗಳಲ್ಲಿ ಸ್ವಲ್ಪ ಮಿತಿಮೀರಿತೋ ಎನ್ನುವಂತೆ ವರ್ಣಿಸಿ, ಸ್ವಯಂ ಪಂಡಿತನಾದರೂ ಪಾಂಡಿತ್ಯದ ಪ್ರತಿಷ್ಠೆಯನ್ನು ಮೆರೆಯದೆ ಬನಿಯಾದ ಬಳಕೆಯ ಜೀವಂತ ಕನ್ನಡವನ್ನೇ ಉಪಯೋಗಿಸಿ, ತನ್ನ ಭಾರತವನ್ನು ಭಾರವಾಗಿ ಮಾಡದೆ ರಸದ ಪೂರವನ್ನಾಗಿ ಮಾಡಿದ್ದಾನೆ.



ಕುಮಾರವ್ಯಾಸನ ಆರಾಧ್ಯದೈವ ಗದಗಿನ ವೀರನಾರಾಯಣ

ಕವಿ ಹೇಳಿಕೊಂಡಿರುವ ಕಾವ್ಯಸ್ವರೂಪವನ್ನು ಗಮನದಲ್ಲಿರಿಸಿಕೊಂಡು ಹೇಳುವುದಾದರೆ, ಕನ್ನಡ ಭಾರತ ವೀರ, ಶೃಂಗಾರರಸಗಳ ಸನ್ನಿವೇಶಗಳನ್ನು ಯಥೇಷ್ಟವಾಗಿ ಒಳಗೊಂಡಿದೆ. ಆದಿಪರ್ವದಲ್ಲಿ ಬರುವ ಪಾಂಡುಮಾದ್ರಿಯರ ಕಡೆಗಾಲದ ಶೃಂಗಾರ ಸನ್ನಿವೇಶ ಮನೋಜ್ಞವಾಗಿದೆ. ಇಲ್ಲಿನ ವಸಂತಾಗಮನದ ವರ್ಣನೆ ಅರ್ಥಗರ್ಭಿತವಾಗಿದ್ದು, ಧ್ವನಿಪೂರ್ಣವಾಗಿದೆ. ಇಷ್ಟೇ ಮಹೋನ್ನತ ಶೃಂಗಾರ ಸನ್ನಿವೇಶ, ಊರ್ವಶಿ ಅರ್ಜುನನನ್ನು ಮೋಹಿಸಿದ ಸಂದರ್ಭ. ಮೇಲುನೋಟಕ್ಕೆ ಕುಮಾರವ್ಯಾಸಭಾರತ ಭಕ್ತಿಕಾವ್ಯದಂತೆ ತೋರಿದರೂ ಅದರ ಅಂತರಂಗ ಸಂಪೂರ್ಣವಾಗಿ ಯುದ್ಧಗಳ ಕ್ಷೋಭೆಯಿಂದಲೇ ತುಂಬಿದೆ. ಕವಿ ಶೃಂಗಾರ, ಹಾಸ್ಯ

ಸನ್ನಿವೇಶಗಳನ್ನು ನವುರಾಗಿ ವರ್ಣಿಸುವಂತೆಯೇ ವೀರರಸವನ್ನೂ ಅದ್ಭುತವಾಗಿ ವರ್ಣಿಸಿದ್ದಾನೆ. ಇವನ ವರ್ಣನೆಯಲ್ಲಿ ಉತ್ಪ್ರೇಕ್ಷೆ ಇಲ್ಲ. ಇದ್ದರೂ ಅದು ಸದಾ ಕಾವ್ಯಸತ್ಯವಾಗಿಯೇ ಗೋಚರಿಸುತ್ತದೆ. ಯುದ್ಧಪಂಚಕದ ಪರ್ವಗಳೆಲ್ಲ ವೀರರಸಕ್ಕೆ ಮೀಸಲು. ಭೀಷ್ಮ, ದ್ರೋಣ, ಕರ್ಣ, ಅರ್ಜುನ, ಅಭಿಮನ್ಯು ಮುಂತಾದ ವೀರರ ವೀರಾಲಾಪ ಮತ್ತು ಯುದ್ಧಗಳ ವರ್ಣನೆಗಳಲ್ಲಿ ವೀರರಸ ರೌದ್ರರಸಗಳು ನೊರೆಗಟ್ಟಿ ಹರಿಯುತ್ತವೆ. ಯುದ್ಧ ಪಂಚಕಗಳಲ್ಲಿ ಬರುವ ಸುಪ್ರತೀಕಗಜದ ಯುದ್ಧ, ಅಭಿಮನ್ಯುವಿನ ಚಕ್ರವ್ಯೂಹಭೇದನ, ಕರ್ಣಾರ್ಜುನರ ಕಾಳಗ, ಭೀಮ ದುರ್ಯೋಧನರ ಯುದ್ಧ, ಭೀಷ್ಮರ, ದ್ರೋಣರ ವೀರಾವೇಶದ ಹೋರಾಟ ಈ ಸಂದರ್ಭಗಳಲ್ಲಿ ಬರುವ ಚಿತ್ರಣ ಇವನು ಕನ್ನಡದ ಶ್ರೇಷ್ಠ ಮಹಾಕವಿ ಎಂಬ ಮಾತಿಗೆ ಸಾಕ್ಷಿಗಳಾಗಿವೆ. ಕರ್ಣಾವಸಾನ, ಅಭಿಮನ್ಯುವಿನ ಮರಣ ಇಂಥ'ಲ್ಲಿ ಕರುಣರಸ ಕೋಡಿವರಿಯುತ್ತದೆ. ವಿರಾಟಪರ್ವದಲ್ಲಿ ಬರುವ ಉತ್ತರಕುಮಾರನ ಪರಾಕ್ರಮ ವರ್ಣನೆ, ದ್ರೌಪದೀ ಸ್ವಯಂವರದಲ್ಲಿ ಹಾರುವರ ವೇಷದ ಅರ್ಜುನನ ಮತ್ಸ್ಯಯಂತ್ರಭೇದನ -ಈ ಸನ್ನಿವೇಶಗಳಲ್ಲಿ ನಿರೂಪಿತವಾಗಿರುವ ಹಾಸ್ಯ ಶ್ರೇಷ್ಠಮಟ್ಟದ್ದು. ಇಂಥ ಕೆಲವು ಕಡೆಗಳಲ್ಲಿ ಮೂಲಭಾರತದಲ್ಲಿ ಇಲ್ಲದ ಸನ್ನಿವೇಶ, ಸಂದರ್ಭಗಳನ್ನು ಸೃಷ್ಟಿಮಾಡಿ ಅವುಗಳಲ್ಲಿ ರಸವುಕ್ಕಿಸುವ ಕಲ್ಪನಾದೃಷ್ಟಿ, ಪ್ರತಿಭಾಸಾಮರ್ಥ್ಯ ಇವನಿಗಿದೆ. ಈ ಮಹಾಕಾವ್ಯ ಪಾಂಡವ ಕೌರವರ ದಾಯಾದಿ ಮತ್ಸರದ ಕಥೆಯಾದರೂ ಕೃಷ್ಣನ ಚರಿತವನ್ನು ನಿರೂಪಿಸುವುದೇ ಕವಿಯ ಮುಖ್ಯ ಗುರಿ. ಕೃಷ್ಣನೇ ಕಾವ್ಯದ ಜೀವಾಳ, ಕಥೆಯ ಸೂತ್ರಧಾರ. ಮೂಲಭಾರತದಲ್ಲಿ ಶ್ರೀಕೃಷ್ಣ ಬರುವ ಪ್ರಸಂಗಗಳನ್ನು ತನ್ನ ಕಾವ್ಯೋದ್ದೇಶಕ್ಕೆ ತಕ್ಕಂತೆ ಮಾರ್ಪಡಿಸಿಕೊಂಡು, ಅಳವಡಿಸಿಕೊಂಡು, ಬೆಳೆಸಿಕೊಂಡಿದ್ದಾನೆ. ಕವಿಯ ಕೃಷ್ಣಭಕ್ತಿಭಾವ ಕಾವ್ಯ ಮಂದಿರದ ಮೂಲೆಮೂಲೆಯನ್ನೂ ಬೆಳಗುತ್ತದೆ. ಅರ್ಜುನನ ರಥಕ್ಕೆ ಹೇಗೊ ಹಾಗೆ ಕಾವ್ಯರಥಕ್ಕೂ ಕೃಷ್ಣನೇ ಸಾರಥಿ. ಅವನಿಲ್ಲದೆ ಕಥೆ ಮುನ್ನಡೆಯುವ ಹಾಗೇಯೇ ಇಲ್ಲ. ಕೃಷ್ಣನ ಪಾತ್ರ ಚಿತ್ರಣಕ್ಕೆ ಕವಿ ತನ್ನ ಸಕಲ ಕವಿತಾಸಾಮರ್ಥ್ಯವನ್ನೂ ನಿವೇದನ ಮಾಡಿದ್ದಾನೆ. ಕೃಷ್ಣನು ಸಾಕ್ಷಾತ್ ನಾರಾಯಣ ಎಂಬುದು ಇವನ ನಂಬಿಕೆಯಾದರೂ ಅವನು ಕಪಟನಾಟಕ ಸೂತ್ರಧಾರಿ, ಎಲ್ಲರಂತೆ ಮನುಷ್ಯ ನರರಾಚರಣೆಗಳ ನಾಟಕವ ನಟಿಸಿ ತೋರಿದ ನಿಪುಣ-ಎಂಬುದನ್ನು ಎಲ್ಲೂ ಮರೆತಿಲ್ಲ. ಹೀಗೆ ಕೃಷ್ಣನ ಪಾತ್ರದಲ್ಲಿ ತನ್ಮಯನಾದ ಕವಿ ತನ್ನ ಕಾವ್ಯವನ್ನು ಕೃಷ್ಣಚರಿತೆ ಎಂದು ಕರೆದಿರುವುದರಲ್ಲಿ ಸಹಜತೆ ಇದೆ. ಭಕ್ತಿಯೂ ಒಂದು ರಸವೇ ಎನ್ನುವಷ್ಟರ ಮಟ್ಟಿಗೆ ಇಡೀ ಕಾವ್ಯ ಭಕ್ತಿರಸಪೂರಿತವಾಗಿದೆ.

ಕಥಾಸಂವಿಧಾನದಲ್ಲಿ ಏಕಸೂತ್ರತೆಯಿದೆ. ವರ್ಣನೆಗಳಲ್ಲಿ ಅಪೂರ್ವವಾದ ಕಲ್ಪನಾವಿಲಾಸವಿದೆ. ಪಾತ್ರ ಚಿತ್ರಣದಲ್ಲಿ, ಪಾತ್ರಗಳ ಮನ ಹೊಕ್ಕು ಅವುಗಳ ಸಮಗ್ರ ವ್ಯಕ್ತಿತ್ವವನ್ನು ಪರಿಚಯಿಸಿ ಕೊಡುವಲ್ಲಿ ಕವಿಯ ಪ್ರತಿಭೆ ಅಪೂರ್ವವಾಗಿದೆ. ಕೃಷ್ಣ, ದುರ್ಯೋಧನ, ಕರ್ಣ, ಭೀಮ, ದ್ರೌಪದಿ, ಅರ್ಜುನ, ಧರ್ಮರಾಯ, ಭೀಷ್ಮ, ದ್ರೋಣ, ಉತ್ತರ, ಅಭಿಮನ್ಯು- ಮುಂತಾದ ಪಾತ್ರಗಳು ರಕ್ತಮಾಂಸ ತುಂಬಿದ ಜೀವಂತ ವ್ಯಕ್ತಿಗಳಾಗಿ ಗೋಚರಿಸುತ್ತಾರೆ. ಕವಿಯ ಲೇಖನಿ ಪ್ರತಿಯೊಂದು ಪಾತ್ರದ ನಡವಳಿಕೆ ನಂಬಿಕೆಗಳನ್ನು ಸಮರ್ಥವಾಗಿ ಸಹೃದಯರಿಗೆ ದರ್ಶಿಸುತ್ತದೆ.

ಭಾಷಾಬಳಕೆಯಲ್ಲಿಯೂ ಈ ಕವಿ ಸಮರ್ಥ. ಕನ್ನಡ ಭಾಷೆಯ ಅಂತಃಸಾರವನ್ನೆಲ್ಲಾ ತನ್ನ ಕಾವ್ಯದಲ್ಲಿ ಹಿಡಿದಿಟ್ಟಿದ್ದಾನೆ. ಈತ ಬಳಸುವ ಪದಗಳಿಗೆ ಅನ್ಯದೇಶ್ಯ, ದೇಶ್ಯ, ಗ್ರಾಮ್ಯ, ಸುಸಂಸ್ಕೃತ ಎಂಬ ಭೇದಭಾವವಿಲ್ಲ. ಸಂದರ್ಭಕ್ಕೆ, ಪಾತ್ರಕ್ಕೆ ಸಹಜವಾಗುವಂತೆ ಔಚಿತ್ಯ ಮೀರದಂತೆ ಮಾತುಗಳನ್ನು ಬಳಸುತ್ತಾನೆ. ಇವನ ಶೈಲಿ ಎಷ್ಟು ಸರಳವೊ ಅಷ್ಟೇ ಸುಂದರ. ತನ್ನ ಕಾಲದ ಆಡುಭಾಷೆಯ ಸಂಪೂರ್ಣ ಉಪಯೋಗವನ್ನು ಕವಿ ಪಡೆದುಕೊಂಡಿದ್ದಾನೆ. ಇವನ ಪಾತ್ರಗಳ ಸಂಭಾಷಣಾ ಚಾತುರ್ಯ ಬೆರಗುಗೊಳಿಸುವಂಥದ್ದು. ಅರಳು ಹುರಿದಂತೆ ಮಾತಾಡುವ ರೀತಿ ಇವನ ಪಾತ್ರಗಳ ವೈಶಿಷ್ಟ್ಯ. ಉಪಮೆ ರೂಪಕಗಳನ್ನು ಬಳಸುವಲ್ಲಿಯೂ ಕವಿ ಸಿದ್ಧಹಸ್ತ. ಇವನು ಕೊಡುವ ಒಂದೊಂದು ಉಪಮೆಯೂ ರೂಪಕವೂ ಸಹಜವಾಗಿದ್ದು, ಇಡೀ ಸನ್ನಿವೇಶ ಕಣ್ಣಿಗೆ ಕಟ್ಟುವಷ್ಟು ಪ್ರಭಾವ ಪೂರ್ಣವಾಗಿರುತ್ತದೆ. ಮುಗಿಲ ಬೆನಕಗೆ ಲಡ್ಡುಗೆಗಳಾದುವು ಸಮಸ್ತ ಗ್ರಹತಾರೆ; ಖಳನ ಕಾಲನ ಕೋಣ ತುಳಿದಂತಿಳೆಯೊಳೊರಗಿರೆ; ಕೋಪಾಯುಧವ ಮಸೆದಳು ಧಾರೆಕಂಗಳಲಿ; ಬಲೆಯ ಹಾಯಿಕಿ ಗಂಡು ಮೀನಗ್ಗಳೆಯಗಾಳವ ಕೊಳದ; ಕಾರಿರುಳ ಪಟ್ಟಣಕೆ ಚಂದ್ರನ ತೋರಣವ ಬಿಗಿದಂತೆ; ಘನಸಿಂಹನಾದದ ಸಿಡಿಲ ಶಿಕ್ಷಾಗುರುವೆನಲು ಮಸಗಿದ ಕಲಿಭೀಮ; ಗಿರಿಯ ಮಕ್ಕಳು ನರೆದು ವಜ್ರದ ಸರಸವಾಡುವ ಕಾಲವಾಯಿತೆ; ಮಂಜಿನ ಮಳೆಗೆ ಕುಲಗಿರಿ ಕರಗುವುದೆ; ಬರಿಯ ಕಾರ್ಪಣ್ಯದಲಿ ಮೇಘದ ಮರೆಯಹೊಕ್ಕರೆ ರಾಹು ಬಿಡುವನೆ ಉರಿವ ರವಿ ಮಂಡಲದ ಕೈಕಾಲ್ ಮೂಡಿತೋ ನಭಕೆ; ಪಡುವಣ ಶೈಲ ವಿಪುಲಸ್ತಂಭ ದೀಪಿಕೆಯಂತೆ ರವಿ ಮೆರೆದ ಈ ಮುಂತಾದ ಉಪಮೆ-ರೂಪಕಗಳೇ ಕವಿಯ ಕಲ್ಪನಾಚಾತುರ್ಯಕ್ಕೆ, ಪ್ರತಿಭಾಸಂಪತ್ತಿಗೆ ಕನ್ನಡಿ ಹಿಡಿಯುತ್ತವೆ.

ಸಂಸ್ಕೃತ ಭಾರತವನ್ನು ಕನ್ನಡಕ್ಕೆ ತಂದುಕೊಟ್ಟ ಇಬ್ಬರು ಮಹಾಕವಿಗಳಲ್ಲಿ ಪಂಪ ಮೊದಲಿಗನಾದರೆ, ನಾರಣಪ್ಪ ಎರಡನೆಯವನು. ಭಾಮಿನೀ ಷಟ್ಪದಿಗೆ ಪ್ರಖ್ಯಾತಿ ದೊರತದ್ದು ಈತನ ಭಾರತದಿಂದ. ಇವನ ಪ್ರಭಾವ ಛಾಯೆ ಮುಂದಿನ ಎಲ್ಲ ಷಟ್ಪದಿಕವಿಗಳ ಮೇಲೆ ಬಿದ್ದಿದೆ. ಕುಮಾರವ್ಯಾಸಯುಗ ಎಂದು ಸಾಹಿತ್ಯ ಚರಿತ್ರೆಯಲ್ಲಿ ಗುರುತಿಸುವಷ್ಟರಮಟ್ಟಿಗೆ ಈತನ ಪ್ರಭಾವ ಕನ್ನಡ ಸಾಹಿತ್ಯದಲ್ಲಿ ಕಂಡುಬರುತ್ತದೆ. ರೂಪಕಸಾಮ್ರಾಜ್ಯಚಕ್ರವರ್ತಿ, ಕಲಿಯುದವರಿಗೂ ಕಾಮಧೇನು ಎಂಬ ವಿಮರ್ಶಕರ ಮಾತುಗಳು ಇವನಿಗೆ ಸಂಪೂರ್ಣವಾಗಿ ಒಪ್ಪುತ್ತವೆ. (ಎಂ.ವಿ.ಎಸ್.)

ಇವನೇ ರಚಿಸಿರಬಹುದೆನ್ನಲಾದ 8 ಸಂಧಿ, 410 ಪದ್ಯಗಳುಳ್ಳ ಒಂದು ಚಿಕ್ಕ ಕಾವ್ಯ ಐರಾವತ. ಅರ್ಜುನನ ಪ್ರತಾಪವನ್ನು ಉತ್ಕರ್ಷಿಸುವ ಒಂದು ಪೌರಾಣಿಕ ವ್ರತ ಕಥೆಯೇ ಈ ಕಾವ್ಯದ ವಸ್ತು. ಈ ಕಥೆ ಸಂಸ್ಕೃತದಲ್ಲಿ ಸ್ಕಾಂದ ಮತ್ತು ಭವಿಷ್ಯೋತ್ತರ ಪುರಾಣಗಳಲ್ಲಿದೆ. ಈ ಕಥೆಗಳ ಮುಖ್ಯ ಗುರಿ ಒಂದೇ ಆದರೂ ಕಥಾನಿರೂಪಣೆಯ ಕ್ರಮದಲ್ಲಿ ವ್ಯತ್ಯಾಸವಿದೆ. ಇವುಗಳಲ್ಲಿ ಸ್ಕಾಂದಪುರಾಣದ ಕಥೆ ಕನ್ನಡದಲ್ಲಿ ಐರಾವತ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇದು ಭಾರತ ಕಥೆಗೆ ಸಂಬಂಧಪಟ್ಟಿರುವುದರಿಂದ ಕುಮಾರವ್ಯಾಸ ಭಾರತದ ಆದಿಪರ್ವದಲ್ಲಿ ಒಂದು ಸಂಧಿಯಾಗಿ ಸೇರಿರುವುದಲ್ಲದೆ ಸಂಧಿಯ ಕೊನೆಯಲ್ಲಿ ಗದುಗಿನ ವೀರನಾರಾಯಣನ ಅಂಕಿತವೂ ಇದೆ. ಭವಿಷ್ಯೋತ್ತರ ಪುರಾಣದ ಕಥೆಯೂ ಕುಮಾರವ್ಯಾಸಭಾರತದ ಕೆಲವು ಪ್ರತಿಗಳಲ್ಲಿದೆ. ಈ ಪದ್ಯಗಳ ಶೈಲಿ ಕುಮಾರವ್ಯಾಸನ ಶೈಲಿಗಿಂತ ಭಿನ್ನವಾಗಿರುವುದಲ್ಲದೆ ಒಂದೇ ಕಥೆ ಆದಿಪರ್ವದ 7, 8, 10, 21, 23, 24, 38 ನೆಯ ಸಂಧಿಯಾಗಿ ಬೇರೆ ಬೇರೆ ಪ್ರತಿಗಳಲ್ಲಿ ಲಿಖಿತವಾಗಿದೆ. ಪದ್ಯ ಸಂಖ್ಯೆಯಲ್ಲೂ ಒಮ್ಮತವಿಲ್ಲ. ಆದುದರಿಂದ ಈ ಕೃತಿ ಕುಮಾರವ್ಯಾಸ ರಚಿತವಲ್ಲವೆಂಬ ಅಭಿಪ್ರಾಯವೂ ಇದೆ. (ಎಸ್.ಎನ್.ಕೆ.)

**ಕುಮುದೇಂದು :** ಸು.1275. ಜೈನಕವಿ. ಕುಮುದೇಂದು ರಾಮಾಯಣ ಎಂಬ ಕಾವ್ಯದ ಕರ್ತೃ. ಈತನ ತಂದೆ ಪದ್ಮನಂದಿವ್ರತಿ, ತಾಯಿ ಕಾಮಾಂಬಿಕೆ, ದೊಡ್ಡಪ್ಪ ಅರ್ಹನಂದಿವ್ರತಿ, ಗುರು ಮಾಘಣಂದಿ ಮುನಿ. ಕವಿಗೆ ಪರವಾದಿಗಿರಿವಜ್ರ, ವಾದಿಗಜಕೇಸರಿ, ವಾದಿಭಾಳಲೋಚನ, ವಾದಿಧರಾಧರ ಕುಳಿಶ, ಪರವಾದಿ ಗಂಡಭೇರುಂಡ, ಕವಿರಾಜಶಿಖಾಮಣಿ, ಸರಸಕವಿತಿಲಕ, ಸರಸಕವಿ ಮುಖತಿಲಕ, ಕವಿಕುಳಭಾಳಲಲಾಮ ಮುಂತಾದ ಬಿರುದುಗಳಿದ್ದಂತೆ ತಿಳಿಯುತ್ತದೆ. ಈ ಬಿರುದುಗಳ ಮೇಲಿಂದ ವಾದದಲ್ಲಿ ಅನೇಕ ಪಂಡಿತರನ್ನು ಗೆದ್ದಿರಬೇಕೆಂದು ಊಹಿಸಬಹುದಾಗಿದೆ. ಪೂರ್ವಕವಿಗಳಲ್ಲಿ ಗುಣವರ್ಮ, ಜಯವರ್ಮ, ಗಜಗ, ಗುಣನಂದಿ, ನಯವರ್ಮ, ಪೊನ್ನ, ಪಂಪ, ರನ್ನ, ಸುಮನೋಬಾಣ, ಜನ್ನ ಇವರುಗಳನ್ನು ಸ್ಮರಿಸಿದ್ದಾನೆ.

ಕುಮುದೇಂದು ರಾಮಾಯಣ ಷಟ್ಪದಿಯಲ್ಲಿದೆ. ಈಗ ಪ್ರಕಟವಾಗಿರುವ ಗ್ರಂಥದಲ್ಲಿ ಏಳು ಸಂಧಿಗಳು ಮಾತ್ರ ಇವೆ. ಇದರಲ್ಲಿ ಎಲ್ಲ ಜಾತಿಯ ಷಟ್ಪದಿಗಳೂ ದೊರೆಯುತ್ತವೆ. ಅಲ್ಲಲ್ಲಿ ಕೆಲವು ರಗಳೆಗಳೂ ಬಳಕೆಯಾಗಿವೆ. ಒಂದೊಂದು ಸಂಧಿಗೂ ಒಂದೊಂದು ರಾಗ ಸೂಚಿಸಲಾಗಿದೆ. ಎರಡು ಸಂಧಿಗಳಿಗೆ ತಾಳ ಸೂಚನೆಯೂ ಇದೆ. ಇದರಲ್ಲಿನ ರಾಮ ಕಥೆ ವಿಮಲಸೂರಿಯ ಸಂಪ್ರದಾಯಕ್ಕೆ ಸೇರಿದ್ದು ಪಂಪರಾಮಾಯಣವನ್ನು ಬಹುತೇಕ ಅನುಸರಿಸಿದೆ. ಕಥೆ ರಾವಣವಧೆಯಾದ ಮೇಲೆ ರಾಮಚಂದ್ರ ಸೀತಾಲಕ್ಷ್ಮಣರೊಡನೆ ಅಯೋಧ್ಯೆಗೆ ಬರುವವರೆಗೆ

ಮಾತ್ರ ಇದೆ. ಪಂಪರಾಮಾಯಣದಂತೆ ರಾಮಕೇವಲಿಯ ಮೋಕ್ಷದವರೆಗೆ ಸಂಪೂರ್ಣವಾಗಿಲ್ಲ. ಬಹುಶಃ ಕೃತಿ ಪೂರ್ಣಗೊಳ್ಳುವ ಮುಂಚೆ ಕವಿ ಗತಿಸಿದ್ದಿರಬಹುದಾದ್ದರಿಂದ ಕಾವ್ಯ ಅರ್ಧಕ್ಕೇ ನಿಂತಿರಬಹುದೆಂದು ಊಹಿಸಬಹುದಾಗಿದೆ. ಕಾವ್ಯಬಂಧ ಲಲಿತವಾಗಿದೆ. ವರ್ಣನಾ ಭಾಗಗಳಲ್ಲಿ ಅರ್ಥ, ರಸ, ಗುಣ, ಅಲಂಕಾರ, ಮೃದು ಪದ ಈ ಗುಣಗಳನ್ನು ಶೈಲಿಯಲ್ಲಿ ಕಾಣಬಹುದು. ಹಾಡುಗಬ್ಬದಲ್ಲಿ ಪ್ರೌಢಕಾವ್ಯದ ಲಕ್ಷಣ ತಂದು ಹಳೆಯ ಹೊಸ ಶೈಲಿಗಳ ಮಿಶ್ರಣ ಮಾಡಿದ್ದಾನೆ. ಭಾಷೆಯ ಮೇಲೆ ಇವನಿಗಿರುವ ಪ್ರಭುತ್ವ ಎಲ್ಲೆಡೆಯೂ ಸುಲಭವಾಗಿ ಗೋಚರಿಸುತ್ತದೆ. ಮತ್ಕೃತಿ ಮಾಡುವುದು ಚಮತ್ಕೃತಿಯುಂ ಎಂಬ ಕವಿವಾಣಿ ಕಾವ್ಯದಲ್ಲಿ ಸಾಕಷ್ಟು ಸಮರ್ಥನೆಯನ್ನು ಪಡೆದಿದೆ ಎನ್ನಬಹುದು. *

**ಕುಮುದ್ವತಿ [1] :** ಉತ್ತರ ಪಿನಾಕಿನಿಯ ಉಪನದಿ. ಕುಂದಾರ್ ಎಂದೂ ಹೆಸರು. ಬೆಂಗಳೂರು ಜಿಲ್ಲೆಯ ಮಾಕಳಿದುರ್ಗದ ಪಶ್ಚಿಮದ ಉಜನಿ ಬೆಟ್ಟದಲ್ಲಿ ಹುಟ್ಟಿ, ದೊಡ್ಡಬಳ್ಳಾಪುರ, ಗೌರಿಬಿದನೂರು ತಾಲ್ಲೂಕುಗಳ ಮೂಲಕ ಉತ್ತರಕ್ಕೆ ಸಾಗಿ, ಕೊರಟಗೆರೆ ಮತ್ತು ಮಧುಗಿರಿ ತಾಲ್ಲೂಕುಗಳ ಮೂಲಕ ಅನಂತಪುರ ಜಿಲ್ಲೆಗೆ ಹರಿದು ಹಿಂದುಪುರದ ಬಳಿ ಉತ್ತರ ಪಿನಾಕಿನಿ (ಪೆನ್ನಾರ್) ನದಿಗೆ ಸೇರುವುದು. ನದಿಯ ಉದ್ದ ಸು.72ಕಿಮೀ. ನದಿಯಲ್ಲಿ ಮಳೆಗಾಲದಲ್ಲಷ್ಟೇ ನೀರು ಹರಿಯುತ್ತದೆ. ಬೇಸಗೆಯಲ್ಲಿ ಒಣಗಿದ್ದರೂ ಪಾತ್ರದಲ್ಲಿನ ಮರಳು ಬಗೆದರೆ ನೀರುಕ್ಕುತ್ತದೆ. ನದಿಯ ಓಟದುದ್ದಕ್ಕೂ ಚಿಕ್ಕ ಕೆರೆಕಟ್ಟೆಗಳನ್ನು ಕಟ್ಟಿ ವ್ಯವಸಾಯಕ್ಕೆ ಬಳಸಿಕೊಳ್ಳಲಾಗಿದೆ. (ಎ.ಕೆ.)

**ಕುಮುದ್ವತಿ [2] :** ತುಂಗಭದ್ರೆಯ ಉಪನದಿ. ಶಿಕಾರಿಪುರ ತಾಲ್ಲೂಕಿನ ಹುಮಚದ ಹತ್ತಿರ ಅಗಸ್ತ್ಯ ಪರ್ವತದಲ್ಲಿ (ಬಿಳೇಶ್ವರ ಬೆಟ್ಟ) ಹುಟ್ಟಿ ಕುಂಸಿ ಮತ್ತು ಶಿಕಾರಿಪುರಗಳ ಮೂಲಕ ಉತ್ತರಕ್ಕೆ ಹರಿದು ಹಿರೇಕೆರೂರು ತಾಲ್ಲೂಕನ್ನು ಪ್ರವೇಶಿಸಿ ಹರಿಹರದಿಂದ ಸ್ವಲ್ಪ ಮೇಲೆ ಮುದೇನೂರು ಗ್ರಾಮದ ಹತ್ತಿರ ತುಂಗಭದ್ರಾ ನದಿಯನ್ನು ಸೇರುತ್ತದೆ. ಇದಕ್ಕೆ ಚೊರಾಡಿ ನದಿ ಎಂಬ ಹೆಸರೂ ಇದೆ. ನದಿಯ ಉದ್ದ ಸು.96 ಕಿಮೀ. ಈ ನದಿ ಮಾಸೂರು ಮದಗ ಕೆರೆಗೆ ನೀರನ್ನೊದಗಿಸುವುದು. ಇದಕ್ಕೆ ಅನೇಕ ಕಡೆಗಳಲ್ಲಿ ಅಣೆಕಟ್ಟುಗಳನ್ನು ಕಟ್ಟಿ ನೀರಾವರಿಗಾಗಿ ನೀರನ್ನು ಉಪಯೋಗಿಸುವರು. (ಎ.ಕೆ.)

**ಕುಮ್ಮಟಗಿ :** ಬಿಜಾಪುರ ಜಿಲ್ಲೆಯ ಅದೇ ತಾಲ್ಲೂಕಿನ ಒಂದು ಐತಿಹಾಸಿಕ ಸ್ಥಳ. ಬಿಜಾಪುರ ನಗರದಿಂದ ಸು.15 ಕಿಮೀ ದೂರದಲ್ಲಿದೆ. ಬಿಜಾಪುರದ ಸುಲ್ತಾನರಾದ ಆದಿಲ್ ಷಾಹಿ ದೊರೆಗಳು ಮತ್ತು ಅವರ ಅಧಿಕಾರಿಗಳು ಇಲ್ಲಿಗೆ ಬಂದು ಇಲ್ಲಿನ ಕೆರೆಯ ಆಸುಪಾಸಿನಲ್ಲಿ ಇದ್ದ ಅರಮನೆಗಳಲ್ಲಿ ತಂಗಿ ವಿಶ್ರಾಂತಿ ಪಡೆಯುತ್ತಿದ್ದರು. ಇದೊಂದು ಸುಖಸಂಕಥಾ ವಿನೋದದ ಸ್ಥಳ. ಇಲ್ಲಿನ ಜಲಕ್ರೀಡಾ ಮಂಟಪಗಳು, ನೀರಿನ ತೊಟ್ಟಿಗಳು, ಕಾರಂಜಿಗಳು ಮತ್ತು ನೀರು ಚಿಮ್ಮಿ ಜೋರಾಗಿ ಬರುವ ನೀರನಳಿಕೆಗಳು, ಭವನಗಳ ಅವಶೇಷಗಳು ಹಿಂದಿನ ಸುಂದರ, ಭವ್ಯ ಪ್ರವಾಸಿ ತಾಣವನ್ನು ನೆನಪಿಸುತ್ತವೆ. ಮಂಟಪಗಳ ಗೋಡೆಯ ಮೇಲೆ ಅಲ್ಲಲ್ಲಿ ಸುಂದರವಾದ, ಮಬ್ಬಾದ ಭಿತ್ತಿಚಿತ್ರಗಳಿವೆ. ಒಂದು ಚಿತ್ರದಲ್ಲಿ ಅಶ್ವಕಂದುಕದಾಟದ (ಪೋಲೋ) ಚಿತ್ರವಿದೆ. ಇನ್ನೊಂದು ಚಿತ್ರದಲ್ಲಿ ಕುಸ್ತಿ ನಡೆಯುತ್ತಿರುವುದನ್ನೂ ಆ ಕುಸ್ತಿಯನ್ನು ನೋಡಲು ಸುತ್ತ ಕುಳಿತ ಹಾಗೂ ನಿಂತ ಪ್ರೇಕ್ಷಕರನ್ನೂ ಚಿತ್ರಿಸಿದೆ. ಮತ್ತೊಂದು ಚಿತ್ರ ಶ್ರೀಮಂತ ಸ್ತ್ರೀಯರಿಗೆ ಮತ್ತು ಅಧಿಕಾರಿಗಳ ಪತ್ನಿಯರಿಗೆ ರಸಾನಂದವನ್ನು ಉಣಿಸುತ್ತಿರುವ ಸಂಗೀತಗಾರನ ಚಿತ್ರವನ್ನೊಳಗೊಂಡಿದೆ. ಈ ಭಿತ್ತಿಚಿತ್ರಗಳು ಅನಂತರ ಕಾಲದ ಚಿತ್ರಕಲೆಯ ಮೇಲೆ ಪ್ರಭಾವ ಬೀರಿವೆ ಎಂದು ಹೇಳಲಾಗಿದೆ.

ಈ ಊರು ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಉನ್ನತ ಸ್ಥಿತಿಯಲ್ಲಿತ್ತು. ಇಲ್ಲಿ ಭೋಗೇಶ್ವರ, ಚೆನ್ನಬ್ರಹ್ಮೇಶ್ವರ ಎಂಬ ದೇವಾಲಯಗಳು ಇದ್ದುದರ ಬಗ್ಗೆ ಶಾಸನೋಲ್ಲೇಖವಿದೆ. (ಎಸ್.ಜಿ.ಎ.)

**ಕುಮ್ಮಟದುರ್ಗ :** ಕೊಪ್ಪಳ ಜಿಲ್ಲೆಯ ಅದೇ ತಾಲ್ಲೂಕಿನ ಒಂದು ಗಿರಿದುರ್ಗ. ಸಮುದ್ರಮಟ್ಟದಿಂದ ಸು.650ಮೀ ಎತ್ತರದಲ್ಲಿದೆ. ದುರ್ಗದ ಕೆಳಭಾಗದಲ್ಲಿ ಹೊಸಕುಮ್ಮಟ ಮತ್ತು ಸ್ವಲ್ಪ ದೂರದಲ್ಲಿ ಹಳೆಯ ಕುಮ್ಮಟ ಎಂಬ ಹಳ್ಳಿಗಳಿವೆ. ಆದರೆ ಜನವಸತಿ ಅತಿ ಕಡಿಮೆ.

ಕುಮಾರರಾಮ (ನೋಡಿ) ವೀರ ಕಂಪಿಲದೇವ ಮತ್ತು ಹರಿಯಾಲದೇವಿಯರ ಮಗ. ಆತನ ಇತಿಹಾಸ ಮತ್ತು ಐತಿಹ್ಯಗಳಿಗೆ ಸಂಬಂಧಪಟ್ಟ ಈ ಸ್ಥಳ ಕಂಪಿಲಿರಾಜ್ಯದ (ನೋಡಿ) ಒಂದು ರಾಜಧಾನಿ. ಇನ್ನೊಂದು ರಾಜಧಾನಿ ಕಂಪ್ಲಿ.

"ತುಂಗಭದ್ರಾ ದಾಟಿ ಮೊಗಲಾಯಿ ಸೀಮೆ ಎಮ್ಮಿಗುಡ್ಡಕ್ಕೆ ಐದು ಹರದಾರಿ ದೂರದಲ್ಲಿ ಗುಮ್ಮಟ ಎಂಬ ಕೋಟೆ ಇದೆ" ಎಂದು ಕೈಫಿಯತ್ತೊಂದು ತಿಳಿಸುತ್ತದೆ. ನ್ಯೂನಿಜ್ ಎಂಬ ವಿದೇಶಿ ಪ್ರವಾಸಿ ಉಲ್ಲೇಖಿಸುವ 'ಕ್ರಿನಮಟ' ಕುಮ್ಮಟವೆ ಎಂದು ಗುರುತಿಸಲಾಗಿದೆ. ಈ ದುರ್ಗವನ್ನು ಎಂ. ಎಚ್. ರಾಮಶರ್ಮ ಅವರು 1930ರ ವೇಳೆಗೆ ಪತ್ತೆಮಾಡಿದರು.

ಕೋಟೆ ಮೂರು ಪ್ರಾಕಾರಗಳಿಂದ ಕೂಡಿದ್ದು ಹೊರಗೋಡೆ 4ಮೀ ಎತ್ತರವಿದೆ. ತೋಪುಕಿಂಡಿ ಅಥವಾ ಕೋಟೆತೆನೆಗಳು ಕಂಡುಬರುವುದಿಲ್ಲ. ಕೋಟೆಯ ಸುತ್ತಳತೆ ಸು.5 ಕಿಮೀ. ಕೋಟೆಯೊಳಗೆ ಮುರಿದ ಕಂಬಗಳು, ಚಿಂತಾಲಕಲ್ಲು, ಭಗ್ನಶಿಲ್ಪ, ಬಂಡೆಗಲ್ಲುಗಳು ಚೆಲ್ಲಾಡಿವೆ. ಮೊದಲನೆಯ ಪ್ರಾಕಾರದೊಳಗೆ ಬೈಚಪ್ಪನಗುಡಿ ಇದೆಯಾದರೂ ಒಳಗೆ ಇರುವುದು ಲಿಂಗಾಕಾರದ ಶಿಲೆ. ಕುದುರೆಯ ಸವಾರಿ ಮಾಡುತ್ತಿರುವ ಶಿಲ್ಪ ಕುಮಾರರಾಮನದೆಂದು ಪ್ರತೀತಿ. ಅವನು ಶೀಲಕ್ಕೆ ಮತ್ತು ಶೌರ್ಯಕ್ಕೆ ಹೆಸರಾಗಿ ಮಹಮ್ಮದೀಯ ಸೈನ್ಯದ ವಿರುದ್ಧ ಹೋರಾಡಿ ಹುತಾತ್ಮನಾದುದು ಜನಮನದಲ್ಲಿ ಸಾಂಗತ್ಯವಾಗಿ ಹಾಡಾಗಿ ಹರಿದಿದೆ. ಕೋಟೆಯ ಎರಡನೆಯ ಪೌಳಿ ದಾಟಿದ ಮೇಲೆ ಗುಡ್ಡ ಕಡಿದಾಗುತ್ತ ಹೋಗುತ್ತದೆ. ಇಲ್ಲಿ ಕಾಟಪ್ಪನಗುಡಿ, ಆನೆಯಪಾಗ್ ಎಂಬ ಗಜಾಲಯ ಕಟ್ಟಡ ಕಾಣಸಿಗುತ್ತವೆ. ಮೂರನೆಯ ಪ್ರಾಕಾರದ ಅನಂತರ ಗುಡ್ಡದ ನೆತ್ತಿಯಲ್ಲಿ ರಾಮಸ್ವಾಮಿಗುಡಿ ಇದೆ. ಜೈನಬಸದಿ, ರಾಮನ ದೋಣೆ, ಕಟ್ಟಿಗೆ ದೋಣೆ ಮತ್ತು ಕೊತ್ತಳ ಇತರ ಪ್ರೇಕ್ಷಣೀಯ ಸ್ಥಳಗಳು. ಕೊತ್ತಳದಿಂದ ತುಂಗಭದ್ರಾನದಿ ಮನೋಹರವಾಗಿ ಕಾಣುತ್ತದೆ.

ಪ್ರತಿವರ್ಷ ವೈಶಾಖ ಹುಣ್ಣಿಮೆಯ ದಿನ ಇಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ಕೊಪ್ಪಳದ ದುರ್ಗ, ಉಚ್ಚಂಗಿ ದುರ್ಗ ಮತ್ತು ಚಿತ್ರದುರ್ಗಗಳಂತೆಯೇ ಕುಮ್ಮಟದುರ್ಗವೂ ದುರ್ಗಮವಾದ ಕೋಟೆಯಾಗಿದ್ದಿತು. ವಿಜಯನಗರ ಅಸ್ತಿತ್ವಕ್ಕೆ ಬರುವವರೆಗೂ ಈ ದುರ್ಗ ಶತಮಾನಗಳ ಕಾಲ ತನ್ನ ಮಹತ್ವವನ್ನು ಮೆರೆದಿತ್ತು. ವಿಜಯನಗರ ಕಾಲದಲ್ಲೂ ಇಲ್ಲಿ ಸಾಮಂತರು ನೆಲೆಸಿದ್ದು ತಿಳಿದುಬರುತ್ತದೆ. ಇಲ್ಲಿ ನಾಲ್ಕು ಶಾಸನಗಳು ಶೋಧಿತವಾಗಿವೆ. ಬೈಚಪ್ಪನ ಅರಮನೆಯ ಮುಂದಿನ ವೀರಗಲ್ಲು ಶಾಸನಗಳಿಂದ 1315ರಲ್ಲಿ ಸುಲ್ತಾನನ ಸೈನ್ಯದ ದಾಳಿಯ ಸಂದರ್ಭದಲ್ಲಿ ಕಾಮಿನಾಯಕ ಮತ್ತು ಕಾತ್ರುನಾಯಕರು ಹೋರಾಡಿ ಮೃತರಾದ ವಿಷಯ ತಿಳಿದುಬರುತ್ತದೆ. ಆನೆಗೊಂದಿಯಲ್ಲಿ ಸಿಂಗೆನಾಯಕ ಮತ್ತು ಹನುಮನಾಯಕರು ರಾಮನಾಥದೇವರಿಗೆ ಮನೆಯೊಂದನ್ನು ದಾನವಾಗಿತ್ತುದು ಮೂರನೆಯ ಅತೇದಿ ಶಾಸನದ ವಸ್ತು. ಇನ್ನೊಂದು ಅತೇದಿ ಶಾಸನ ರಾಮನ ಮಗಳು ಗೋಪಾಯಿಯನ್ನು ಹೆಸರಿಸುತ್ತದೆ.

ಕುಮಾರರಾಮ ತನ್ನ ಕೊನೆಗಾಲದಲ್ಲಿ ಕುಮ್ಮಟದುರ್ಗವನ್ನು ಆಶ್ರಯಿಸಿದನೆಂದು ಆತನನ್ನು ಕುರಿತು ರಚಿತವಾದ ಕೆಲವು ಸಾಂಗತ್ಯ ಕಾವ್ಯಗಳಿಂದ ತಿಳಿದುಬರುತ್ತದೆ. (ಎಚ್.ಎಂ.ಎನ್.ಆರ್.)

**ಕುರಡಿ, ನಾರಾಯಣ ವೆಂಕಟೇಶ :** 1888-1974. ಕವಿ ಮತ್ತು ಸಾಹಿತಿ. ಉತ್ತರಕನ್ನಡ ಜಿಲ್ಲೆ ಹೊನ್ನಾವರ ತಾಲ್ಲೂಕಿನ ಕರ್ಕಿ ಗ್ರಾಮದಲ್ಲಿ 1888 ಆಗಸ್ಟ್ 8ರಂದು ಜನಿಸಿದರು. ಇವರ ತಂದೆ ವೆಂಕಟೇಶ ಭಾಗವತ (ವೆಂಕಪ್ಪ), ತಾಯಿ ಮಹಾಲಕ್ಷ್ಮಿ. ಕುರಡಿಯಾಗಿದ್ದ ವೆಂಕಮ್ಮ ಎಂಬುವರ ಪೋಷಣೆಯಲ್ಲಿ ಇವರು ಬೆಳೆದುಬಂದಿದ್ದರಿಂದ ಕುರಡಿ ಎಂಬ ಅಡ್ಡಹೆಸರನ್ನು ಇಟ್ಟುಕೊಂಡರು ಎಂದು ಹೇಳಲಾಗಿದೆ. ಇವರ ಪ್ರಾಥಮಿಕ

ಶಿಕ್ಷಣ ಕರ್ಕಿ ಗ್ರಾಮದಲ್ಲಿ ನಡೆಯಿತು. ಕುಮಟ ತಾಲ್ಲೂಕಿನ ಹೆಗಡೆ ಗ್ರಾಮದಲ್ಲಿ ಮುಲ್ಕಿ ಪರೀಕ್ಷೆಯನ್ನು ಮುಗಿಸಿದರು. ಮುಂದೆ ಧಾರವಾಡದ ಪ್ರಾಥಮಿಕ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯದಲ್ಲಿ ಓದಿ ಅದೇ ಮಹಾವಿದ್ಯಾಲಯಕ್ಕೆ ಹೊಂದಿದ ಪ್ರ್ಯಾಕ್ಟಿಸಿಂಗ್ ಸ್ಕೂಲಿನಲ್ಲಿ ಸಹಶಿಕ್ಷಕರಾಗಿಯೂ ಮುಖ್ಯೋಪಾಧ್ಯಾಯರಾಗಿಯೂ ಕೆಲಸ ಮಾಡಿದರು. ಆಮೇಲೆ ಬಿಜಾಪುರ ಮತ್ತು ಉತ್ತರಕನ್ನಡ ಜಿಲ್ಲೆಗಳ ವಿದ್ಯಾಶಾಲೆಗಳ ಇನ್‌ಸ್ಪೆಕ್ಟರ್ ಆಗಿ ಕೆಲಸಮಾಡಿ ನಿವೃತ್ತರಾದ ಮೇಲೆ ಧಾರವಾಡದಲ್ಲಿ ನೆಲೆಸಿದರು.

ಹಳದೀಪುರ ಗ್ರಾಮದ ಕನ್ನಡ ಶಾಲೆಯಲ್ಲಿ ಮಾಸ್ತರಾಗಿದ್ದಾಗ ಉತ್ತರ ಕನ್ನಡ ಜಿಲ್ಲೆಯ ಕ್ಷತ್ರಿಯ ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸಿದ್ದರು. ವಿದ್ಯಾರ್ಥಿ ಜೀವನದಿಂದಲೂ ಇವರು ಕನ್ನಡ ಸಾಹಿತ್ಯದ ಅಭ್ಯಾಸಿಗಳು, ಅಭಿಮಾನಿಗಳು. ಕರ್ನಾಟಕ ವಿದ್ಯಾವರ್ಧಕ ಸಂಘ, ಕನ್ನಡ ಸಾಹಿತ್ಯ ಪರಿಷತ್ತು ಮೊದಲಾದ ಸಂಸ್ಥೆಗಳ ಸದಸ್ಯರಾಗಿ ಅವುಗಳ ಕಾರ್ಯಕಲಾಪಗಳಲ್ಲಿ ಭಾಗವಹಿಸುತ್ತಿದ್ದರು.

ಕೆರೂರ ವಾಸುದೇವಾಚಾರ್ಯರು ಇವರಿಗೆ ಮಾರ್ಗದರ್ಶಕರಾಗಿದ್ದರು. ಶಾಲಾಪತ್ರಿಕೆ, ವಾಗ್ಭೂಷಣ, ಪ್ರಾಥಮಿಕ ಶಿಕ್ಷಣ, ಸಾಹಿತ್ಯ ಪರಿಷತ್ಪತ್ರಿಕೆ ಮೊದಲಾದ ಪತ್ರಿಕೆಗಳಲ್ಲಿ ಇವರ ಲೇಖನಗಳು



ಪ್ರಕಟವಾದುವು. ಕರ್ನಾಟಕ ಏಕೀಕರಣದ ಗುರಿಯಿಂದ ಕರ್ನಾಟಕ ಹಿತೈಷಿಣೀ ಎಂಬ ಗ್ರಂಥಮಾಲೆಯನ್ನು ಸ್ಥಾಪಿಸಿದರು. 1914ರಲ್ಲಿ ಈ ಗ್ರಂಥಮಾಲೆಯ ಪ್ರಥಮ ಪ್ರಕಟಣೆಯಾಗಿ ತಮ್ಮ ಸಾವಿತ್ರಿ ಸತ್ಯವಾನ ಕಾದಂಬರಿಯನ್ನು ಪ್ರಕಟಿಸಿದರು. ಮುಂದೆ ಅಹಲ್ಯೋದ್ಧಾರ, ದಾಕ್ಷಾಯಿಣಿ, ಪಾರ್ವತಿ ಮುಂತಾದ ಪೌರಾಣಿಕ ಕಾದಂಬರಿಗಳನ್ನೂ ಪದ್ಮಿನಿ, ಮಹಾರಾಣಿ ಲಕ್ಷ್ಮೀಬಾಯಿ, ನಾನಾಸಾಹೇಬ ಪೇಶ್ವೆ, ಶ್ರೀಕೃಷ್ಣದೇವರಾಯ ವಿಜಯ ಮತ್ತು ಧರ್ಮಪಾಲ ಎಂಬ ಐತಿಹಾಸಿಕ ಕಾದಂಬರಿಗಳನ್ನೂ ಪ್ರಕಟಿಸಿದರು. ಶ್ರೀ ಹರ್ಷನ ಪ್ರಿಯದರ್ಶಿಕೆ, ರತ್ನಾವಳಿ ಮತ್ತು ನಾಗಾನಂದ ನಾಟಕಗಳ ಕನ್ನಡ ರೂಪಾಂತರ ಸಂಗ್ರಹದಲ್ಲಿ ಹರ್ಷ ಮತ್ತು ಅವನ ಕೃತಿಗಳ ವಿಮರ್ಶಾತ್ಮಕ ಟಿಪ್ಪಣಿ ಸಹ ಬರೆದಿದ್ದಾರೆ. ತಿಳಿಗನ್ನಡದಲ್ಲಿ ಬರೆದ ಇವರ ಕೆಲವು ಪುಸ್ತಕಗಳು ಪಠ್ಯ ಪುಸ್ತಕಗಳಾಗಿದ್ದುವು. ಕವಿತಾಕುಸುಮ ಮಂಜರಿ ಎಂಬ 3 ಭಾಗಗಳಲ್ಲಿ ಸಂಕಲಿತವಾದ ಇವರ ಕವನಗಳು, ಹಳತನದಿಂದ ಹೊಸತನದ ಕಡೆಗೆ ಅಡಿಯಿಟ್ಟಿರುವುದರ ಸಾಕ್ಷ್ಯಗಳಾಗಿರುವುವು. ಬಂಗಾಲಿ, ಮರಾಠಿ ಭಾಷೆಗಳನ್ನೂ ತಿಳಿದಿದ್ದರಿಂದ ಇವರು ಕವಿ ರವೀಂದ್ರರ ಗೀತಾಂಜಲಿಯ ಕೆಲವು ಗೀತೆಗಳನ್ನು ಸಾಂಪ್ರದಾಯಿಕ ಕನ್ನಡ ವೃತ್ತಗಳಲ್ಲಿ ಅನುವಾದಿಸಿದ್ದಾರೆ. ಜೊತೆಗೆ ರಾಮಕೃಷ್ಣ ಪರಮಹಂಸರ ನೀತಿಕಥೆಗಳ ಕನ್ನಡ ಅನುವಾದಗಳ ಸಂಗ್ರಹವನ್ನು ಹೊರತಂದಿದ್ದಾರೆ. ಬಿ.ಎಂ. ಶ್ರೀಯರವರು ಹೇಳಿರುವಂತೆ -ಕುರಡಿಯವರ ಗ್ರಂಥಗಳಲ್ಲಿ ಸ್ವಧರ್ಮಶ್ರದ್ಧೆ ಸ್ವದೇಶಭಕ್ತಿ, ಮತ್ತು ಸ್ವಭಾಷಾಭಿಮಾನ ಕಾಣಬರುತ್ತವೆ. ಇವರು 1974 ಡಿಸೆಂಬರ್ 12ರಂದು ನಿಧನರಾದರು. (ಬ.ಕೆ.)

**ಕುರಿಯ ವಿಠಲಶಾಸ್ತ್ರಿ** :1912-72. ಹೆಸರಾಂತ ಯಕ್ಷಗಾನ ಕಲಾವಿದ. ಈಗ ಕೇರಳ ರಾಜ್ಯದಲ್ಲಿರುವ ಕಾಸರಗೋಡು ತಾಲ್ಲೂಕಿನ ಮಂಜೇಶ್ವರ ಫಿರ್ಕಾದ ಕುರಿಯ ಎಂಬಲ್ಲಿ 1912ರಲ್ಲಿ ಜನಿಸಿದರು. ತಂದೆ ವೆಂಕಟರಮಣ ಶಾಸ್ತ್ರಿಗಳಿಗೆ ಯಕ್ಷಗಾನ ಕಲೆಯಲ್ಲಿ ಆರಾಧನೆಯ ಭಾವವಿತ್ತು. ಹದಿವಯಸ್ಸಿನಲ್ಲೇ ತಂದೆಯ ಪ್ರೋತ್ಸಾಹ ಹಾಗೂ ಅವರೇ ಕಟ್ಟಿದ ಕೋಳ್ಯೂರು ಯಕ್ಷಗಾನ ಮಂಡಲಿಯಲ್ಲಿ ವಿಧಿವತ್ತಾಗಿ ಅಭಿನಯ ಆರಂಭಿಸಿದರು. ತಂದೆ ಹಿರಣ್ಯಕಶಿಪುವಾದರೆ ಮಗ ಪ್ರಹ್ಲಾದ, ತಂದೆ ಕಂಸನಾದರೆ ಮಗ ಕೃಷ್ಣನಾಗಿ ರಂಗದ ಮೇಲೆ ಅಭಿನಯಿಸುತ್ತಿದ್ದರು. ಪ್ರಸಿದ್ಧ ಬಣ್ಣದ ವೇಷಧಾರಿ ರಾವುಗೋಳಿ ಕಣ್ಣನ್ ಅವರಿಂದ ನೃತ್ಯ ಶಿಕ್ಷಣ ಪಡೆದರು. ಶಿವರಾಮ ಕಾರಂತರ ಯಕ್ಷಗಾನ ಮೂಕನೃತ್ಯದಲ್ಲೂ ಅಭಿನಯಿಸಿದರು. ಆಳಾಗಿ, ಅರಸಾಗಿ,ಭಕ್ತನಾಗಿ, ಸಾರಥಿಯಾಗಿ, ಹೆಣ್ಣಾಗಿ, ಗಂಡಾಗಿ ಪಾತ್ರ ನಿರ್ವಹಿಸಿದರು. ಕೃಷ್ಣ, ಹನುಮಂತ, ರಾಮ, ಕರ್ಣ, ಶಿವ, ಭಸ್ಮಾಸುರ, ಕಂಸ, ದುಷ್ಟಬುದ್ಧಿ, ರಾವಣ, ವಿಶ್ವಾಮಿತ್ರ, ರುಕ್ಮಿಣಿ, ಶಬರಿ, ಕೈಕೆ, ಗಿರಿಜೆ ಈ ಎಲ್ಲ ಪಾತ್ರಗಳಲ್ಲೂ ತಮ್ಮತನ ಮೆರೆದರು. ನವರಸಗಳಲ್ಲೂ ಪರಿಣತರೆನಿಸಿದರು.

ಇವರು ಯಕ್ಷಗಾನ, ಭರತನಾಟ್ಯಗಳೆರಡರ ಸಂಗಮವಾಗಿದ್ದರು. ಹಾಡು, ತಾಳ, ಚಂಡೆ, ಮುಂತಾದ ಹಿಮ್ಮೇಳನದ ಕ್ರಮಗಳಿಗೆ ಇಂತಿಷ್ಟೂ ಧಕ್ಕೆ ಬಾರದ ಹಾಗೆ ಎಲ್ಲರಿಗೂ ಅಭಿನಯದಿಂದಲೇ ಅರ್ಥವಾಗುವ ಹಾಗೆ ಭರತನಾಟ್ಯ ಕ್ರಮದಲ್ಲಿ ನರ್ತನ ಮಾಡುತ್ತಿದ್ದುದು ಇವರದೊಂದು ವಿಶೇಷ. ಬ್ರಹ್ಮಕಪಾಲದಿಂದ ಕಚ್ಚಿಸಿಕೊಂಡು ಮುಲುಗಾಡುವ ರಾವಣ, ಧೀರೋದಾತ್ತ ಗುಣಜಲಧಿ ಶ್ರೀರಾಮ- ಈ ಪಾತ್ರದಲ್ಲಿ ಶಾಸ್ತ್ರಿಗಳ ನೃತ್ಯಗತಿಯನ್ನೂ ವಾಗ್ವೈಭವವನ್ನೂ ನಯನಾಜೂಕುಗಳನ್ನೂ ಕಂಡವರಿಗೆ ರೋಮಾಂಚನವಾಗುತ್ತಿತ್ತು.

ಯಕ್ಷಗಾನವೊಂದು ಶಿಷ್ಟಕಲೆಯೇ ಅಲ್ಲ. ಸಂಭಾವಿತರು ಯಾರೂ ಅದರಲ್ಲಿ ಪಾಲ್ಗೊಳ್ಳುವುದು ತರವಲ್ಲ ಎಂಬ ಭಾವನೆಯಿದ್ದ ಕಾಲದಲ್ಲಿ ಅದರಲ್ಲಿ ಪ್ರವೇಶಿಸಿದ ಶಾಸ್ತ್ರಿಗಳು ಆ ಕ್ಷೇತ್ರದಲ್ಲಿ ನಡೆಸಿದ ಪ್ರಯೋಗಗಳೂ ಚಾಲ್ತಿಗೆ ತಂದ ಸುಧಾರಣೆಗಳೂ ಅನೇಕ. ಪಾತ್ರಕ್ಕೆ ತಕ್ಕ ವೇಷಭೂಷಣ (ಉದಾಹರಣೆ: ಗಿರಿಜಾ ಕಲ್ಯಾಣದಲ್ಲಿ ಕಾಮರತಿಯರಕೂಟ), ಪಾತ್ರಕ್ಕೆ ತಕ್ಕ ದೃಢಕಾಯ ಗುಣವಿಶೇಷಗಳಿರುವ ವ್ಯಕ್ತಿಗಳ ಆಯ್ಕೆಯ ವಿಧಾನ (ಉದಾಹರಣೆ: ಭಾರದ ಗದೆ ಎತ್ತಿ ಬೀಸಬಲ್ಲ ಶಕ್ತಿಯುತ ಹನುಮಂತ), ರಾವು ಬಡಿಸುವ ವೇಷಕ್ಕಿಂತ ಅಭಿನಯಕ್ಕೆ ಪ್ರಾಧಾನ್ಯ (ಉದಾಹರಣೆ: ಕುಂಭಕರ್ಣ)- ಹೀಗೆ ಎಷ್ಟೋ ವಿಚಾರಗಳಲ್ಲಿ ಇವರು ತಮ್ಮ ವಿಶೇಷತೆಯನ್ನು ಮೆರೆದರು. ವೇಷ, ಮಾತು, ಕುಣಿತ, ರಸ, ಭಾವ ಎಲ್ಲವೂ ಮೇಳೈಸಿದಾಗ ಮಾತ್ರವೇ ಯಕ್ಷಗಾನದ ಆವಿರ್ಭಾವ ಎಂಬುದು ಇವರ ಸೂತ್ರವಾಗಿತ್ತು.

ಕಟೀಲು ದುರ್ಗಾಪರಮೇಶ್ವರಿ, ಧರ್ಮಸ್ಥಳ ಮುಂತಾದ ಸುಪ್ರಸಿದ್ಧ ಮೇಳಗಳಲ್ಲಿ ಭಾಗವಹಿಸಿ ಕೀರ್ತಿಗಳಿಸಿದ ಇವರು ತಮ್ಮ ಪರಂಪರೆಯನ್ನು ಮುಂದುವರೆಸಲು ಕೈಗೊಂಡ ಪ್ರಯತ್ನ ಕಡಿಮೆಯಲ್ಲ. ಮೂವತ್ತಕ್ಕೂ ಹೆಚ್ಚು ಕಲಾವಿದರನ್ನು ಪರಿಪೂರ್ಣತೆಯ ಹತ್ತಿರಕ್ಕೆ ರೂಪಿಸಿದ್ದು ಇವರ ಮಹತ್ತರ ಸಾಧನೆ. ಇವರ ಮನೆಯೇ ಒಂದು ನಾಟ್ಯಶಾಲೆಯಾಗಿತ್ತು. ಹಣಕೊಟ್ಟು, ಊಟ ಹಾಕಿ, ಕುಣಿದು ಕಲಿಸಿದ ಶಾಸ್ತ್ರಿಗಳು ಉದಾರಿಯಾಗಿದ್ದರು. ಕಲೆಯ ವಿಚಾರದಲ್ಲಿ ಶಿಸ್ತಿನ ಮೂರ್ತಿ ಎನಿಸಿದ್ದ ಇವರು ಚಂದದ ರಂಗ, ವೇಷ-ಭೂಷಣ, ಚುರುಕು, ಸೊಬಗು, ಅಭಿಜ್ಞತೆ, ಔಚಿತ್ಯ ಇಂತಿಷ್ಟೂ ಕೆಡಬಾರದೆಂದು ಶಿಷ್ಯರಿಗೆ ಇವರ ಕಿವಿಮಾತಾಗಿತ್ತು. ಇವರಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಲಭಿಸಿದೆ. ಪೆರ್ಡೂರಿನಲ್ಲಿ ಧರ್ಮಸ್ಥಳ ಕ್ಷೇತ್ರ ಮಹಾತ್ಮೆಯ ಶಿವತಾಂಡವ ನೃತ್ಯ ಮಾಡುತ್ತಿರುವಾಗ ಹೃದಯಾಘಾತದಿಂದ ಕುಸಿದು ನಿಧನರಾದರು (1972). (ಎಚ್.ಎಸ್.ಕೆ.)

**ಕುರುಗೋಡು** : ಬಳ್ಳಾರಿ ಜಿಲ್ಲೆ ಬಳ್ಳಾರಿ ತಾಲ್ಲೂಕಿನ ಒಂದು ಗ್ರಾಮ ಮತ್ತು ಹೋಬಳಿ ಕೇಂದ್ರ, ಐತಿಹಾಸಿಕ ಸ್ಥಳ. ಬಳ್ಳಾರಿಯ ಉತ್ತರಕ್ಕೆ 29ಕಿಮೀ ದೂರದಲ್ಲಿ ಬಳ್ಳಾರಿ ಸಿರಗುಪ್ಪ ಮಾರ್ಗಮಧ್ಯದಲ್ಲಿ, ಕುರುಗೋಡು ಬೆಟ್ಟಗಳ ಪೂರ್ವದ ಅಂಚಿನಲ್ಲಿದೆ. ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಇದೊಂದು ಮುಖ್ಯ ನಗರವಾಗಿತ್ತು. 1185ರ ಸುಮಾರಲ್ಲಿ ಕೆಲವು ಕಾಲ ಇದು ಚಾಳುಕ್ಯ ರಾಜರ ನೆಲೆವೀಡಾಗಿತ್ತು. 1191ರಲ್ಲಿ ಹೊಯ್ಸಳ ದೊರೆ ಎರಡನೆಯ ಬಲ್ಲಾಳನ ಕಾಲದಲ್ಲಿ ಈ ಗ್ರಾಮ ಹೊಯ್ಸಳ ರಾಜ್ಯಕ್ಕೆ ಸೇರಿತು. ಮುಂದೆ ಬಳ್ಳಾರಿಯ ಪಾಳೆಯಗಾರ ಹನುಮಪ್ಪನಾಯಕನಿಗೆ ಸೇರಿತು. ಈಗಿರುವ ಗ್ರಾಮ ಮತ್ತು ಕೋಟೆಯನ್ನು ಹನುಮಪ್ಪನಾಯಕನ ವಂಶಸ್ಥ ದೇವಪ್ಪ 1701-02ರಲ್ಲಿ ಕಟ್ಟಿಸಿದನೆಂದು

ಊಹೆ. 1775ರಲ್ಲಿ ಹೈದರ್ ಈ ಕೋಟೆಯನ್ನು ವಶಪಡಿಸಿಕೊಂಡು ಅಭಿವೃದ್ಧಿಪಡಿಸಿದ.

ಕುರುಗೋಡು ಗ್ರಾಮದ ಪಶ್ಚಿಮದ ಕೊನೆಯಲ್ಲಿ ಇತ್ತೀಚಿನ ಗೋಪುರವುಳ್ಳ ಬಸವೇಶ್ವರ ದೇವಾಲಯವಿದೆ. ಈ ದೇವಾಲಯದಲ್ಲಿ ಏಕಶಿಲಾಕೃತಿಯಾದ 12ಅಡಿ ಎತ್ತರದ ನಂದಿ ವಿಗ್ರಹವಿದೆ. ಪವಿತ್ರವಾದ ನೀಲಮ್ಮನ ಮಠ ದೇವಾಲಯಕ್ಕೆ ಸೇರಿದಂತಿದೆ. ಕುರುಗೋಡಿಗೆ ಪೂರ್ವದಲ್ಲಿ 8ಕಿಮೀ ದೂರದಲ್ಲಿರುವ ಸಿಂದಗೆರೆಯ ನೀಲಮ್ಮ ಎಂಬುವಳು ಹೈದರನ ಕಾಲದಲ್ಲಿದ್ದಳೆಂದೂ ಅನೇಕ ಪವಾಡಗಳನ್ನು ಮಾಡಿ ಪ್ರಸಿದ್ಧಳಾಗಿದ್ದಳೆಂದೂ ಹೇಳಲಾಗಿದೆ. ಗ್ರಾಮದಲ್ಲಿ ಅನೇಕ ವೀರಗಲ್ಲುಗಳಿವೆ.

ಕುರುಗೋಡಿನ ಹಿಂಧೂಳಿ ಸಂಗಮೇಶ್ವರ ದೇವಾಲಯದ ಮಂಟಪ 36 ಕಂಬಗಳಿಂದ ಕೂಡಿದೆ. ಮೆಟ್ಟಿಲುಗಳ ಅಕ್ಕಪಕ್ಕದಲ್ಲಿ 6' ಎತ್ತರದ ಎರಡು ಆನೆಗಳ ಕಲ್ಲುವಿಗ್ರಹಗಳಿವೆ.

ಹಿಂದಿನ ಕುರುಗೋಡು ಪ್ರದೇಶದಲ್ಲಿ ಒಂದೇ ಕಡೆ 9 ಪುರಾತನ ದೇವಾಲಯಗಳ ಗುಂಪಿದ್ದು, ಹತ್ತನೆಯದು ಹನುಮಂತಬೆಟ್ಟದ ಮೇಲಿದೆ. ಈ ದೇವಾಲಯಗಳೊಂದರಲ್ಲಿ ಸಿಕ್ಕಿರುವ 1175-76ರ ಶಾಸನದಲ್ಲಿ ಹೇಳಿರುವಂತೆ ಒಬ್ಬ ವ್ಯಾಪಾರಿ ಈ ದೇವಾಲಯಗಳನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಕುರುಗೋಡು ಕಂಬಳಿ ನೇಯ್ಗೆಗೆ ಪ್ರಸಿದ್ಧ. ಪ್ರತಿವರ್ಷ ಫೆಬ್ರವರಿ ಮಾರ್ಚಿಯಲ್ಲಿ ದೊಡ್ಡಬಸವೇಶ್ವರ ಜಾತ್ರೆ ನಡೆಯುತ್ತದೆ. *

**ಕುರುಡುಮಲೆ :** ಕೋಲಾರ ಜಿಲ್ಲೆ ಮುಳಬಾಗಿಲು ತಾಲ್ಲೂಕಿನಲ್ಲಿ ಮುಳಬಾಗಿಲಿನಿಂದ ವಾಯುವ್ಯಕ್ಕೆ ಸು.6ಕಿಮೀ ದೂರದಲ್ಲಿರುವ ಬೆಟ್ಟ. ಸಮುದ್ರಮಟ್ಟದಿಂದ ಎತ್ತರ 1004 ಮೀ. ಇದರ ಬುಡದಲ್ಲಿ ಜಕಣಾಚಾರಿ ಕಟ್ಟಿದ್ದೆಂಬ ಪ್ರತೀತಿ ಇರುವ ಕೆಲವು ದೇವಾಲಯಗಳ ಭಗ್ನಾವಶೇಷಗಳಿವೆ. ಹೆಚ್ಚಿನವು ಸ್ಥಳೀಯ ಚೋಳ ಶಾಖೆಯೊಂದರ ಆಳಿಕೆಯಲ್ಲಿ ಇಳವಂಜಿರಾಯ ಮತ್ತು ಅವನ ವಂಶೀಕರಿಂದ ಸು.12-13ನೆಯ ಶತಮಾನಗಳಲ್ಲಿ ನಿರ್ಮಿತವಾದವೆಂದು ತೋರುತ್ತದೆ.

ಇಲ್ಲಿನ ದೇವಾಲಯಗಳಲ್ಲಿ ಸೋಮೇಶ್ವರ ಮತ್ತು ಮಹಾಗಣಪತಿ ದೇವಾಲಯಗಳು ಮುಖ್ಯವಾದುವು. ಸೋಮೇಶ್ವರ ದೇವಾಲಯ ದ್ರಾವಿಡ ರೀತಿಯಲ್ಲಿ ನಿರ್ಮಿತವಾದ, ಹೆಚ್ಚು ಅಲಂಕರಣವಿಲ್ಲದ, ಆದರೂ ಸುಂದರವಾದ ಚಿಕ್ಕ ಕೃತಿ. ಇದರಲ್ಲಿ ಗರ್ಭಗೃಹ, ಎರಡು ಸುಕನಾಸಿಗಳು ಮತ್ತು ಮುಂದೆ ಒಂದು ಮಂಟಪ ಇವೆ. ಪ್ರವೇಶದ್ವಾರ ದಕ್ಷಿಣಾಭಿಮುಖವಾಗಿದೆ. ಮಂಟಪದಲ್ಲಿ 16 ಕೋನಗಳುಳ್ಳ 4 ಕಂಬಗಳಿವೆ. ಅದರ ಪ್ರತಿಯೊಂದು ಮುಖದಲ್ಲೂ ಶೈವ ಮತ್ತು ವೈಷ್ಣವ ಶಿಲ್ಪಗಳೂ ನರ್ತನ ದೃಶ್ಯಗಳೂ ಇವೆ. ಗರ್ಭಗುಡಿಯಲ್ಲಿರುವ ಲಿಂಗದ ಮುಂಭಾಗದ ಕಿಟಕಿಯ ಬಳಿ ಮೂರು ವ್ಯಕ್ತಿಗಳ ಶಿಲ್ಪಗಳು ಇವೆ. ಇವು ಈ ದೇವಾಲಯವನ್ನು ನಿರ್ಮಿಸಿದ ಇಳವಂಜಿರಾಯ ಮತ್ತು ಅವನ ರಾಣಿಯರದೆಂದು ಊಹಿಸಲಾಗಿದೆ. ದೇವಾಲಯದ ಗೋಡೆಗಳ ಹೊರ ಭಾಗ ಅಂದವಾಗಿದೆ. ಅದರಲ್ಲೂ ವಿಶೇಷವಾಗಿ, ನವರಂಗದ ಗೋಡೆಗಳ ಹೊರ ಭಾಗ ಹೆಚ್ಚು ಕಲಾತ್ಮಕವೆನಿಸುತ್ತದೆ. ಗುಡಿಯ ಮೇಲಿನ ಶಿಖರ (ವಿಮಾನ) ಇಟ್ಟಿಗೆಯದು. ಇದು ಪಲ್ಲವ ಹಾಗೂ ವಿಜಯನಗರ ಇವುಗಳ ಮಧ್ಯ ಕಾಲದ ರಚನೆಯ ರೀತಿಯಲ್ಲಿದೆ.

ಮಹಾಗಣಪತಿ ಅತಿ ಪ್ರಾಚೀನ ದೇವಾಲಯ. ಎರಡು ಘಟ್ಟಗಳ ಸೇರ್ಪಡೆ ಇಲ್ಲಿದೆ. ಈಗ ಪಾಳುಬಿದ್ದಿರುವ ಪ್ರಾಕಾರ ಮತ್ತು ಮಹಾದ್ವಾರಗಳು ಪ್ರಾಯಶಃ ವಿಜಯನಗರದ ಕಾಲದವು. ಈ ದೇವಾಲಯಕ್ಕೆ ಗರ್ಭಗುಡಿ, ಸುಕನಾಸಿ, ನವರಂಗ ಹಾಗೂ ಮುಖಮಂಟಪ ಇವೆ. ಇಲ್ಲಿನ ಮಂಟಪದಲ್ಲಿರುವ ಹಸುರು ಕಲ್ಲಿನ ಇಲಿ ಸು.2 ಅಡಿ ಎತ್ತರ ಹಾಗೂ 3 ಅಡಿ ಉದ್ದವಿದೆ. ವಿಶಾಲವಾದ ನವರಂಗದಲ್ಲಿ ಮಯೂರಾಸನನಾದ ಕುಮಾರನ ವಿಗ್ರಹವಿದೆ. ಹಸುರು ಕಲ್ಲಿನ ಸುಂದರವಾದ ಈ ಮೂರ್ತಿಯನ್ನು ದೇವಸ್ಥಾನದ ದಕ್ಷಿಣದಲ್ಲಿ ಪಾಳುಬಿದ್ದಿರುವ ದೇವಾಲಯದಿಂದ ಇಲ್ಲಿಗೆ ತಂದಿಟ್ಟಿದ್ದಾರೆಂದು ಊಹೆ. ಗರ್ಭಗೃಹ ಸಾಕಷ್ಟು ದೊಡ್ಡದಾಗಿದೆ. ಇದರ ಮುಂದೆ 2 ಕಂಬಗಳಿವೆ. ಇಲ್ಲಿ ಸು.2 ಅಡಿ ಎತ್ತರವಿರುವ, ದೀರ್ಘಚತುರಸ್ರಾಕಾರದ ಪೀಠದ ಮೇಲಿರುವ, ಅಂಡಾಕಾರದ ಸು.1½ ಅಡಿ ಎತ್ತರದ ಆಸನದ ಮೇಲೆ 8½ ಅಡಿ ಎತ್ತರವಿರುವ ಸುಂದರವಾದ ಮಹಾಗಣಪತಿಯ ಮೂರ್ತಿಯಿದೆ. ಈಗ ಪಾಳುಬಿದ್ದಿರುವ ಚೆನ್ನರಾಮಸ್ವಾಮಿ ದೇವಾಲಯ ಸು.13ನೆಯ ಶತಮಾನದ್ದು. ಇಲ್ಲಿನ ಅಂದವಾದ ವಿಗ್ರಹಗಳು ಈಗ ಮಹಾಗಣಪತಿಯ ದೇವಾಲಯದಲ್ಲಿವೆ.

ಈ ಊರಿನಲ್ಲಿ ದೇವತೆಗಳೆಲ್ಲ ಸೇರಿ ಗಣಪತಿಯನ್ನು ಪೂಜಿಸಿ, ವರಗಳನ್ನು ಪಡೆಯುವರಂತೆ. ಇದರಿಂದಲೂ ತ್ರಿಪುರ ಸಂಹಾರಕ್ಕಾಗಿ ಎಲ್ಲ ದೇವತೆಗಳೂ ಇಲ್ಲಿ ಸೇರಿದ್ದರಿಂದಲೂ ಇದರ ಮೂಲ ನಾಮ ಕೂಡು ಮಲೆ ಎಂದೂ ಮೊದಲಿನ ಮೂರು ಯುಗಗಳಲ್ಲಿ ಇದರ ಹೆಸರು ಕ್ರಮವಾಗಿ ಗಣೇಶಗಿರಿ, ಕೂಟಾಚಲ ಮತ್ತು ಯಾದವಾಚಲವೆಂದಿತ್ತೆಂದೂ ಇದು ಕೌಂಡಿನ್ಯ ಕ್ಷೇತ್ರ ಎಂದೂ ಐತಿಹ್ಯವಿದೆ. ಪಾಲಾರ್‌ನ ಉಪನದಿಯಾದ ಕೌಂಡಿನ್ಯ ಇಲ್ಲಿ ಹುಟ್ಟುತ್ತದೆ. (ಎಸ್.ಜಿ.)

**ಕುರುಮಾಮ :** ಕರ್ನಾಟಕದಲ್ಲಿ ಕಂಡುಬರುವ ಅಲೆಮಾರಿ ಭವಿಷ್ಯ ಕಾರರು. ಕುರುಮಾಮ ಎಂದರೆ ಕುರುಹನ್ನು ತೋರಿಸುವ ವ್ಯಕ್ತಿ. ಯಾವ ವ್ಯಕ್ತಿಯೇ ಆಗಲಿ ಆತನ ಮನಸ್ಸಿನಲ್ಲಿರುವುದನ್ನು ಈತ ಬಿಡಿಸಿ ಹೇಳುವ ಶಾಸ್ತ್ರಕಾರ.

ವೀರಗಚ್ಚೆಯನ್ನು ಬಿಗಿದು, ಎದೆಗೆ ಕಾವಿಬಟ್ಟೆ ಕಟ್ಟಿಕೊಂಡು ಇಲ್ಲವೆ ಅರೆದೋಳಿನ ಕರಿಯ ಕುಪ್ಪಸವನ್ನು ತೊಟ್ಟು, ಕೈಕಾಲುಗಳಲ್ಲಿ ಬಿಳಿ ಎಕ್ಕದ ಬೇರಿನ ಬಳೆಗಳನ್ನು ಹಾಕಿ, ಮುಡಿಯನ್ನು ಎತ್ತಿ ಮುಕುಟದಂತೆ ಬಿಗಿದುಕಟ್ಟಿ, ಮುಡಿ ಹಾಗೂ ಕೈಯ ಏಕನಾದಕ್ಕೆ ನವಿಲುಗರಿಯನ್ನು ಸಿಕ್ಕಿಸಿ,



ಕವಡೆಯ ನಡುಪಟ್ಟಿಯನ್ನು ಸುತ್ತಿ, ಬಿಳಿಯ ನಾಮದ ಮೇಲೆ ಕೆಂಪು ನಾಮ ಧರಿಸಿ, ಬಿದಿರ ದಬ್ಬೆಗೆ ನಾಲ್ಕು ಪದರಿನ ಚೀಲವನ್ನು ನೇತುಹಾಕಿಕೊಂಡು ಮತ್ತೊಂದು ಕೈಯಲ್ಲಿ ಏಕನಾದ ಹಿಡಿದು, ಕಿವಿಗಳಲ್ಲಿ ಚಂದ್ರರಮುರಿ ಇಟ್ಟುಕೊಂಡು, ಬೆನ್ನಿಗೆ ಬತ್ತಳಿಕೆ ನೇತು ಹಾಕಿ, ಉದ್ದನಾಗಿ ಗಡ್ಡಮೀಸೆ ಬಿಟ್ಟಿರುವ ಕುರುಮಾಮಗಳ ವೇಷ ಆಕರ್ಷಕವಾಗಿದ್ದು ವಿಚಿತ್ರವಾಗಿರುತ್ತದೆ.

ಈ ಜನಾಂಗದ ಮೂಲನಿವಾಸಿಗಳು ಆಂಧ್ರ ಪ್ರದೇಶದವರು. ಇವರ ಮಾತೃಭಾಷೆ ತೆಲುಗು. ವಿಜಯವಾಡ, ಶ್ರೀಶೈಲ, ಭದ್ರಾಚಲ ಕಡೆಯಿಂದ ಕನ್ನಡನಾಡಿಗೆ ವಲಸೆ ಬಂದು ಅಲ್ಲಲ್ಲಿ ನೆಲಸಿದ್ದಾರೆ. ಜೀವನೋಪಾಯಕ್ಕಾಗಿ ಕನ್ನಡ ಭಾಷೆಯನ್ನು ಕಲಿತಿದ್ದಾರೆ. ಈ ವಂಶೀಕರ ಮೂಲ ಗುರುಗಳು ಶ್ರೀಶೈಲದವರು, ಶ್ರೀಮಲ್ಲಿಕಾರ್ಜುನನ ಪರಮಭಕ್ತರು. ಒಮ್ಮೆ ಇವರ ಮೂಲ ವಂಶದವರು ಭದ್ರಾಚಲಕ್ಕೆ ಸಂದರ್ಶನ ನೀಡಿದಾಗ ಶ್ರೀರಾಮದಾಸರ ಸಂದರ್ಶನವಾದುದರ ಫಲವಾಗಿ ಶ್ರೀರಾಮನ ಭಕ್ತರಾಗಿ ಪರಿವರ್ತನೆ ಯಾದರಂತೆ. ಅಂದಿನಿಂದ ಶ್ರೀರಾಮನ ಧ್ಯಾನದಲ್ಲಿ ತಲ್ಲೀನರಾಗಿ ಶ್ರೀರಾಮ ಮುಡಿಕಟ್ಟಿ, ಏಕನಾದ, ಚಿಟಿಕೆ ಹಿಡಿದು ಭವಿಷ್ಯಕಾರರಾಗಿ ಇವರು ಜೀವನ ನಡೆಸುತ್ತಿದ್ದಾರೆ.

ಇವರದು ಅಲೆಮಾರಿ ಪ್ರವೃತ್ತಿ. ಕುಲಕಸಬು ಭವಿಷ್ಯ ಹೇಳಿ ಭಿಕ್ಷೆ ಬೇಡಿ ಜೀವಿಸುವುದು. ಜೊತೆಗೆ ದನಕರು ಸಾಕುತ್ತಾರೆ. ತಮ್ಮ ಸಂಸಾರದ ಸಾಮಗ್ರಿ ಹೇರಿಕೊಂಡು ಹಳ್ಳಿಯಿಂದ ಹಳ್ಳಿಗೆ ಸಾಗುತ್ತಾರೆ. ಊರ ಹೊರಗೆ ಚಾವಡಿಯಲ್ಲೋ ಇಲ್ಲವೆ ಮರದ ಕೆಳಗೋ ಇವರ ಬಿಡಾರ. ಗಂಡಸರು ಮಾತ್ರ ವೇಷಭೂಷಣಗಳಿಂದ ಅಲಂಕರಿಸಿಕೊಂಡು ಏಕನಾದ ಹಿಡಿದು ಮನೆಮನೆಗೂ ಹೋಗಿ ಭಿಕ್ಷೆ ಬೇಡುತ್ತಾರೆ. ಭಿಕ್ಷಾಟನೆ ಮುಗಿದಮೇಲೆ ಬಿಡುವು ಮಾಡಿಕೊಂಡು ಸಮೀಪದ ತೊರೆ, ಕೆರೆ ಇಲ್ಲವೆ ಬಾವಿಗಳಿಗೆ ಹೋಗಿ ಬಲೆಗಳ ಸಹಾಯದಿಂದ ಮೀನು ಹಿಡಿಯುತ್ತಾರೆ. ಹೆಂಗಸರು ಭಿಕ್ಷೆ ಬೇಡುವುದಿಲ್ಲ. ಅಡಿಗೆ, ಮಕ್ಕಳು, ದನಕರುಗಳು ಇವುಗಳನ್ನು ನೋಡಿ ಕೊಳ್ಳುವುದು ಇವರ ಕೆಲಸ. ಗುಡ್ಡಗಾಡು ಪ್ರದೇಶದಲ್ಲಿ ವಾಸವಾಗಿದ್ದ ಈ ಜನಾಂಗದವರು ಮೊದಮೊದಲು ಬಿದರಕ್ಕಿಗಂಜಿ, ಅಂಬಲಿ ಜೊತೆಗೆ ಮಾಂಸ ಸೇವಿಸುತ್ತಿದ್ದರು. ಮೀನು, ಕುರಿ, ಮೇಕೆ, ಕೋಳಿಗಳ ಮಾಂಸವನ್ನು ಮಾತ್ರ ಇವರು ಉಪಯೋಗಿಸುತ್ತಾರೆ. ನವಿಲು, ಗಿಳಿ, ಪಾರಿವಾಳ, ಗರುಡ ಮುಂತಾದ ಪಕ್ಷಿಗಳ ಮಾಂಸವನ್ನು ಇವರೆಂದೂ ಮುಟ್ಟುವುದಿಲ್ಲ. ಸೇಂದಿ ಕುಡಿಯುವುದು ಇವರಿಗೆ ಮೊದಲಿನಿಂದಲೂ ಅಂಟಿಬಂದ ಒಂದು ಚಟ.

ಇವರಲ್ಲೂ ಲಗ್ನ ಮುಂತಾದವು ಸಾಮಾನ್ಯವಾಗಿ ಇತರ ಹಿಂದು ಪಂಗಡದವರಂತೆಯೇ ನಡೆಯುತ್ತವೆ. ಮೊದಮೊದಲು ಬಾಲ್ಯ ವಿವಾಹ ಪದ್ಧತಿ ಹೆಚ್ಚಾಗಿ ಆಚರಣೆಯಲ್ಲಿತ್ತು. ತಾಳಿಕಟ್ಟಿ ಸರಳ ರೀತಿಯಲ್ಲಿ ಲಗ್ನ ಮಾಡುತ್ತಾರೆ. ಅಂದು ಮಾಂಸದ ವಿಶೇಷ ಊಟದ ಜೊತೆಗೆ ಲಗ್ನಕ್ಕೆ ಬಂದವರಿಗೆಲ್ಲ ಸೇಂದಿಪಾನ ದೊರಕುತ್ತದೆ. ಅಂದಿನ ರಾತ್ರಿ ಬಯಲಲ್ಲೆ ಪುಟ್ಟ ನೆರಕೆ ಕಟ್ಟಿ ಮರೆಮಾಡಿ, ಗಂಡು ಹೆಣ್ಣುಗಳನ್ನು ಬಿಟ್ಟು ನಿಷೇಕಪ್ರಸ್ತದ ಶಾಸ್ತ್ರ ಮುಗಿಸುತ್ತಾರೆ. ಮೃತರಾದವರನ್ನು ಮಣ್ಣು ಮಾಡುವುದು, ಸಮಾಧಿಗೆ ಹಾಲುತುಪ್ಪ ಎರೆಯುವುದು ಇವರಲ್ಲಿ ರೂಢಿಯಲ್ಲಿದೆ.

ಹಸ್ತಸಾಮುದ್ರಿಕೆಯಲ್ಲಿ ಇವರದು ಎತ್ತಿದ ಕೈ. ವ್ಯಕ್ತಿಯ ಹೆಸರಿನ ಬಲದಿಂದಲೂ ಅವರವರ ಭವಿಷ್ಯವನ್ನಿವರು ನುಡಿಯುತ್ತಾರೆ. ವ್ಯಕ್ತಿಯ ಹಸ್ತರೇಖೆಗಳನ್ನು ಗಮನಿಸಿ ಮೊದಲು ಶ್ರೀರಾಮನ ನಾಮವನ್ನು ನೆನೆದು ಕೈಯಲ್ಲಿರುವ ಏಕನಾದವನ್ನು ನುಡಿಸಿಕೊಂಡು

ರಾಮನಂದಂ, ರಾಮನಂದಂ ಮಸ್ತಾನನ್ನ ಗುರುನಾದನ್ನ
ಕೊಂಡದೇವತೆ, ಹೆಸರು ಯಾವುದು ಮಾಮ ನಿನ್ನದು?

ಎಂದು ವ್ಯಕ್ತಿಯ ಹೆಸರನ್ನು ಕೇಳಿ ತಿಳಿದುಕೊಳ್ಳುತ್ತಾರೆ. ಮತ್ತೆ ಉತ್ತರಿಸುತ್ತ ಹುಟ್ಟಿದ ಗಳಿಗೆ ಬೆಳೆದ ಗಳಿಗೆ ಒಳ್ಳೆಯದು, ದೊಡ್ಡ ಗುಂಪಿನಲ್ಲಿ ಹುಟ್ಟಿದೆ, ದೊಡ್ಡ ಗುಂಪಿನಲ್ಲಿ ಬೆಳೆದೆ, ಗುಂಪಿನಲ್ಲಿ ಸುಖವಿಲ್ಲ, ಅಣ್ಣತಮ್ಮಂದಿರಲ್ಲಿ ತಾಯಿತಂದೆ ಕಟ್ಟಿದ ಮನೆಯಲ್ಲಿ ಸುಖವಿಲ್ಲ, ನೀರಿನಲ್ಲಿ ಕಂಟಕ ಕಳೆದುಹೋಯ್ತು, ಈಗ ಮುಂದುಹೋಗುವ ಪಯಣ ವಳ್ಳೇದುಂಟು, ಲಾಭವಾಗ್ತದೆ, ಗೋವು ಸಂಬಂಧವಾಗಿ ವಳ್ಳೆಯದು, ಭೂಮಿಯಲ್ಲಿ ಜಯವಾಗುತ್ತೆ, ಕುರಿತ ಕಾರ್ಯಗಳು ಜಯವಾಗುತ್ತೆ ಕುರ್‌ ಮಾಮ ಇನ್ನೇನು ಕೇಳ್ತೀರಿ, ಇನ್ನೇನು ಇದ್ದರೂ ಕೇಳಬಹುದು -ಎಂದು ನುಡಿಯುತ್ತಾರೆ.

ಕುರುಮಾಮ ಬರೀ ಭವಿಷ್ಯ ಹೇಳುವವ ಮಾತ್ರವಲ್ಲ. ಒಮ್ಮೊಮ್ಮೆ ಒಳ್ಳೆಯ ವೈದ್ಯನೂ ಆಗಿರುತ್ತಾನೆ. ಇವನಲ್ಲಿ ನಾಲ್ಕು ಮೂಲೆಯ ಒಂದು ಚೀಲವಿರುತ್ತದೆ. ಇದರಲ್ಲಿ ಭವಿಷ್ಯ ಹೇಳಲು ಸಹಕಾರಿಯಾಗುವ ಸಚಿತ್ರ ಗ್ರಂಥವೇ ಮುಂತಾದ ಅನೇಕ ಚಿತ್ರವಸ್ತುಗಳು ಅಡಕವಾಗಿರುತ್ತವೆ. ದುಂಡಾಗಿ ಸುತ್ತಿದ ಬಿಳಿ ಎಕ್ಕದ ಬೇರಿನ ಒಂದು ಸಿಂಬೆ, ಕರಡಿಯ ಕಾಲಿನ ಪಂಜ, ಮೈಮದನಿಕೆ, ತಾಮ್ರ ಸಿಖಿ, ಕಲ್ಲಂಬಿ, ಜಡಮೂಲಕಿ ಮುಂತಾದ ಗಿಡಮೂಲಿಕೆಗಳೂ ಇರುತ್ತವೆ. ಮಕ್ಕಳು ಹಲ್ಲು ಕಡಿಯುವುದಿದ್ದರೆ, ಬಾಲಗ್ರಹ ನೆಲಗ್ರಹದ ಭೀತಿ ಇದ್ದರೆ ಅವೆಲ್ಲವನ್ನೂ ಈ ವಸ್ತುಗಳ ಬಳಕೆಯಿಂದ ಕುರುಮಾಮ ನಿವಾರಿಸುತ್ತಾನೆ. ಇಷ್ಟಲ್ಲದೆ ಬಂಗಿಸೊಪ್ಪಿನ ಚಿಲುಮೆ, ಅಡಕೆಲೆ ಚೀಲವೂ ಇವನಲ್ಲುಂಟು.

ಗ್ರಾಮಗಳಲ್ಲಿ ಇವರು ಮನೆಯಿಂದ ಮನೆಗೆ ಭಿಕ್ಷಾಟನೆಗೆ ಹೋಗುವಾಗ ಏಕನಾದ ಹಿಡಿದು ನುಡಿಸುತ್ತ ಅದರ ನಾದದ ಹಿನ್ನೆಲೆಯಲ್ಲಿ ಹರಿಯೋ ಕಾಲ್ದಲ್ಲಿ ಒಂದು ಅಂಚಿಕಡ್ಡಿ, ಕಳೆಯೋ ಕಾಲ್ದಲ್ಲಿ ಒಂದು ಹುಲ್ಲುಕಡ್ಡಿ ಮಾಡ್ತೀನೀ, ಮಂಡಿ ಬಾದಿನಿ, ಕೀಲು ಬಾದಿನಿ, ಮುಂಗೈ ಬಾದಿನಿ, ತಲೆಬಾದಿನಿ, ಮೂಗಿಲಿ ಪಡಿಸು ನೆಗಡಿ ಕೆಮ್ಮಲು, ಏನಾರ ಇರಲಿ ಜೀವಸ್ಥಾನ ಜನ್ಮಸ್ಥಾನ ಹಿಡಿದು, ಕಳಿತೀನಿ ಹೊಟ್ಟೆಲಿ ಬಾದಿ, ಸುಸ್ತು ಸಂಕಟ, ತಲೇಲಿ ಮಂಕು, ಕಣ್ಣಲಿ ಮಂಜು, ಏನಿದ್ದರೂ ಪರಿಹಾರ ಆಗ್ತದೆ. ಹಿಂದಿದ್ದ ಬಲ ಹೋಯ್ತು, ಮುಂದಿದ್ದ ಸಿಂಗಾರ ಹೊಯ್ತು, ಆದರಿಂದ ಕೊಂಚ ಕಷ್ಟ ಅದೆ ಕಳ್ಕೊಳ್ಳಿ. ನೂರೊಂದು ಮೂಲಿಕೆ ಬೆರೆಸಿ ಅರಸಿನದ ಪುಡಿ ಆಗದೆ, ಗಿಂಡಿ ನೀರಿಗೆ ಬೆರೆಸಿ ಎಂಟು ದಿನ ಕುಡಿಯಲಿ ಹರಿದೋಯ್ತದೆ. ಹೀಗೆ ಕಾಯಿಲೆಯವರನ್ನು ಕುರುಮಾಮ ತನ್ನ ಚಮತ್ಕಾರದ ನುಡಿಗಳಿಂದ ಸಂತೈಸುತ್ತಾನೆ; ಗುಣಪಡಿಸುವ ಭರವಸೆ ನೀಡುತ್ತಾನೆ.

ಅಲೆಮಾರಿಗಳಾದ ಇವರಿಗೆ ಈಗ ಮನೆಮಠಗಳೂ ಇದ್ದು ಕೆಲವು ಕುಟುಂಬಗಳು ವ್ಯವಸಾಯದಲ್ಲಿ ತೊಡಗಿವೆ. ಮಕ್ಕಳಿಗೆ ವಿದ್ಯಾಭ್ಯಾಸ ಸಿಗುತ್ತಿದೆ. ಭವಿಷ್ಯ ಹೇಳುವ ಕುಲಕಸಬು ಮುಂದುವರಿದು ಬರುತ್ತಿದೆ. (ಪಿ.ಆರ್.ಟಿ.)

**ಕುರುವತ್ತಿ :** ಬಳ್ಳಾರಿ ಜಿಲ್ಲೆ ಹೂವಿನಹಡಗಲಿ ತಾಲ್ಲೂಕಿನಲ್ಲಿ ಕಸಬೆ ಯಿಂದ ಸು.36ಕಿಮೀ ನೈಋತ್ಯದಲ್ಲಿ ತುಂಗಭದ್ರಾತೀರದಲ್ಲಿರುವ ದೊಡ್ಡ ಗ್ರಾಮ. ಇಲ್ಲಿರುವ ಚಾಳುಕ್ಯ ಶೈಲಿಯ ಮಲ್ಲಿಕಾರ್ಜುನ ದೇವಾಲಯ (ಮಲ್ಲೇಶ್ವರ) ಪ್ರಸಿದ್ಧವಾದುದು. ಇತರ ಚಾಳುಕ್ಯ ದೇವಾಲಯಗಳಂತೆಯೇ ತಳವಿನ್ಯಾಸವನ್ನು ಹೊಂದಿದ್ದು ಗರ್ಭಗೃಹ, ಸುಕನಾಸಿ ಮತ್ತು ನವರಂಗಗಳಿವೆ. ನವರಂಗಕ್ಕೆ ಮೂರು ಕಡೆ ಪ್ರವೇಶ ದ್ವಾರಗಳು, ಅಕ್ಕಪಕ್ಕದ ಪ್ರವೇಶದ್ವಾರಗಳ ಮುಂದೆ ಆರು ಕಂಬಗಳುಳ್ಳ ಮುಖಭದ್ರ ಈ ಭಾಗಗಳಿರುವ ಈ ದೇವಾಲಯ ತನ್ನದೇ ಆದ ಕೆಲವು ವೈಶಿಷ್ಟ್ಯಗಳಿಂದ, ಅಪರೂಪ ವಿನ್ಯಾಸಗಳಿಂದ ಚಾಳುಕ್ಯ ಶೈಲಿಯ ಪ್ರಮುಖ ದೇವಾಲಯಗಳಲ್ಲಿ ಒಂದೆನಿಸಿದೆ. ಗರ್ಭಗೃಹದ ಹೊರಗೋಡೆಗಳ ನಡುವೆ ಮೂರು ಕಡೆ ಹೆಚ್ಚು ಮುಂಚಾಚಿರುವ ಮಂಟಪಗಳಿವೆ. ಎರಡು ಕಿರುಕಂಬಗಳ ಮೇಲೆ ಆಳವಾಗಿ ಇಳಿಜಾರಾಗಿ ಮುಂಚಾಚಿರುವ ದೊಡ್ಡದಾದ ಲೋವೆ, ಮೇಲೆ ದೇವಾಲಯದ ಗೋಪುರವನ್ನು ಅನುಕರಿಸಿರುವ ಸುಂದರವಾದ ಅರೆಗೋಪುರ, ಮಂಟಪದಲ್ಲಿ ನಡುವೆ ದೇವರ ಮೂರ್ತಿ, ಇಕ್ಕೆಲಗಳಲ್ಲಿ ಕುಬ್ಜರು ಹೊತ್ತಂತಿರುವ ಮದನಿಕೆಯರ ಮೂರ್ತಿಗಳು ಇರುವ ಈ ಗೋಡೆಮಂಟಪಗಳು ಚಾಳುಕ್ಯ ಶೈಲಿಯಲ್ಲೆ ವಿಶಿಷ್ಟವಾಗಿವೆ. ಈಗ ಈ ಮದನಿಕೆ ಮೂರ್ತಿಗಳು ಇಲ್ಲ. ಇವುಗಳಲ್ಲೊಂದು ಮದರಾಸಿನ ವಸ್ತುಸಂಗ್ರಹಾಯದಲ್ಲಿರುವಂತೆ ತಿಳಿದುಬರುತ್ತದೆ. ಹೆಚ್ಚು ಕಚ್ಚುಕಚ್ಚಾಗಿ ಮುಂಚಾಚಿರುವ ಈ ದೇವಾಲಯದ ಹೊರಗೋಡೆಗಳ ಮೇಲೆ ನೀಳವಾದ ಅರೆಗಂಬಗಳು ಜೋಡಿಯಾಗಿಯೋ ಒಂಟಿಯಾಗಿಯೋ ಇದ್ದು ಅವುಗಳ ಮೇಲೆ ಬಗೆಬಗೆಯ ವಿನ್ಯಾಸದ ಕಿರುಗೋಪುರಗಳಿವೆ. ಒಮ್ಮೊಮ್ಮೆ ಗಿಡ್ಡ ಅರೆಗಂಬವೊಂದರ ಮೇಲೆ ಭವ್ಯವಾದ ಕಿರುಗೋಪುರವಿದ್ದು ಅದರ ಇಕ್ಕೆಲಗಳಲ್ಲಿ ನೀಳ ಅರೆಗಂಬಗಳ ಮೇಲಿರುವ ಮಕರಗಳ ಬಾಯಿಂದ ಸುರುಳಿ ಸುರುಳಿಯಾಗಿ ಹೊರಟು ಕಮಾನಾಗಿ ಬಳಸಿ ಬಂದಿರುವ ರೀತಿ ವಿನೂತನವಾದುದು. ಮಕರಗಳ ಬಾಲದಿಂದ ಬಿಡಿಸಿರುವ ಚಿತ್ರವಿಚಿತ್ರವಾದ ಬಳ್ಳಿವಿನ್ಯಾಸ ಅತ್ಯಂತ ನಾಜೂಕಿನದು.

ನವರಂಗದ ಪೂರ್ವದ್ವಾರ ವಿಸ್ತಾರವಾದ ಕಂಡರಣೆಯಿಂದ ಕೂಡಿದ್ದು ಚಾಳುಕ್ಯ ಶೈಲಿಯ ಸುಂದರದ್ವಾರಗಳಲ್ಲೊಂದಾಗಿದೆ. ದ್ವಾರಬಂಧಗಳ ಮೇಲೆ ವಜ್ರಾಕೃತಿ, ಬಳ್ಳಿಸುರುಳಿ, ನಾಗಬಂಧ, ಹಕ್ಕಿಗಳೂ ಮೂರ್ತಿಗಳೂ ಇರುವ ಸುರುಳಿ, ನರ್ತಕರು, ವಾದ್ಯಗಾರರು, ಉದ್ದವಾಗಿ ಹಬ್ಬಿ ಬೆಳೆದಂತಿರುವ ಬಳ್ಳಿ ಮುಂತಾದ ಹಲವು ಸಾಲುಗಳಿವೆ. ಹೊರಪಕ್ಕಗಳಲ್ಲಿರುವ ಅಗಲವಾದ ದಪ್ಪನಾದ ಅರೆಗಂಬಗಳ ಮೇಲೆ ಮುಂದಕ್ಕೂ ಬಾಗಿಲಿನ ಕಡೆಗೂ ಚಾಚಿ ನಿಂತಿರುವ ಮದನಿಕೆಯರ ಮೂರ್ತಿಗಳಿವೆ. ಲತಾವಿತಾನದ ಕೆಳಗೆ ಅತ್ಯಂತ ನವುರಾಗಿಯೂ ಪೂರ್ಣವಾಗಿಯೂ ಬಿಡಿಸಿರುವ ಈ ಮೂರ್ತಿಗಳು ಈಗ ಸ್ವಲ್ಪ ಮುಕ್ಕಾಗಿವೆ.

ನವರಂಗದಿಂದ ಸುಕನಾಸಿಗೆ ಪ್ರವೇಶಿಸುವಲ್ಲಿ ದ್ವಾರದ ಬದಲು ಚಾಳುಕ್ಯ ರೀತಿಯ ಎರಡು ಗುಂಡುಕಂಬಗಳ ಮೇಲೆ ವಿಸ್ತೃತವಾಗಿ ಕಂಡರಿಸಿರುವ ಭವ್ಯವಾದ ಮಕರ ತೋರಣವೊಂದು ಅಲಂಕರಿಸಿದೆ. ಕಲ್ಲಿನ



ಮಲ್ಲಿಕಾರ್ಜುನ ದೇವಾಲಯ

ಅಗಲವಾದ ಅಡ್ಡಹಲಗೆಯ ನಡುವೆ ಮೂರು ಗೂಡುಗಳಲ್ಲಿ ನಡುವೆ ಶಿವ, ಅತ್ತಇತ್ತ ಬ್ರಹ್ಮ ಮತ್ತು ವಿಷ್ಣು ಮೂರ್ತಿಗಳು ನಿಂತಿದ್ದು ಇವನ್ನು ಬಳಸಿ ಅರೆಗೋಲಾಕಾರದ ಒಂದು ಕಮಾನು, ಕಮಾನನ್ನನುಸರಿಸಿ ಮಕರಗಳ ಬಾಯಿಂದ ಹೊರಟು ಮೇಲೆ ಸಿಂಹಲಲಾಟದಲ್ಲಿ ಸೇರುವ ಸುರುಳಿಯಲಂಕರಣವಿದೆ; ಮಕರಗಳ ಬಾಲದಿಂದ ಅಲೆಅಲೆಯಾಗಿ ಗರಿಗೆದರಿ ಹಲಗೆಯ ಎತ್ತರಕ್ಕೂ ಹಬ್ಬಿ ಬೆಳೆದಂತಿದೆ. ಮಕರತೋರಣದ ಕಂಡರಣೆ ತೂಕ ತಪ್ಪದೆ ಲಯಬದ್ಧವಾಗಿದ್ದು ಶಿಲ್ಪ ಚತುರತೆಯನ್ನು ಪ್ರದರ್ಶಿಸುತ್ತದೆ. ದೇವಾಲಯದ ಮುಂದಿನ ನಂದಿಮಂಟಪ ಇತ್ತೀಚಿನ ಕಟ್ಟಡ.

ಕುರುವತ್ತಿಯಲ್ಲಿದ್ದ ಬ್ರಹ್ಮನ ಮೂರ್ತಿಯೊಂದು ಈಗ ಫಿಲಡೆಲ್ಫಿಯಾ ವಸ್ತುಸಂಗ್ರಹಾಲಯದಲ್ಲಿದೆ. ಅದನ್ನು ಚಾವುಣ್ಡೋಜ ಎಂಬವನು ಕಡೆದನೆಂದು ಅದರ ಪೀಠಶಾಸನ ತಿಳಿಸುತ್ತದೆ. ಬೇಲೂರಿನ ದೇವಾಲಯದಲ್ಲಿರುವ ಕೇಶವನ ಮೂರ್ತಿಯನ್ನು ಕಡೆದ ಚಾವುಣ್ಡೋಜನೂ ಈತನೇ ಇರಬೇಕು. ಇಲ್ಲಿ ಹಿಂದೆ ಮಲ್ಲಿಕಾರ್ಜುನ ದೇವಾಲಯವಲ್ಲದೆ ಬೇರೆ ಕೆಲವು ದೇವಾಲಯಗಳೂ ಇದ್ದಿರಬೇಕು. ಊರಿನಲ್ಲಿ ಅಲ್ಲಲ್ಲಿ ಅನೇಕ ಶಿಲ್ಪಗಳೂ ದೇವಾಲಯದ ಕಲ್ಲುಗಳೂ ಬಿದ್ದಿವೆ.

ಈ ಊರಿನಲ್ಲಿ ಪ್ರತಿ ವರ್ಷ ಫೆಬ್ರುವರಿ ಮಾರ್ಚ್ ತಿಂಗಳುಗಳಲ್ಲಿ ರಥೋತ್ಸವವೂ ದನಗಳ ಜಾತ್ರೆಯೂ ನಡೆಯುತ್ತವೆ. ಇಲ್ಲಿ ಒಂದು ಪ್ರೌಢ ಶಾಲೆ ಇದೆ. (ಎಂ.ಎಚ್.)

**ಕುಲಕರ್ಣಿ, ಎನ್.ಕೆ. :** 1913-2005. ಎನ್ಕೆ ಎಂಬ ಸಂಕ್ಷಿಪ್ತ ನಾಮದಿಂದ ಹೆಸರಾದ ಪತ್ರಕರ್ತರು, ಲಲಿತಪ್ರಬಂಧಕಾರರು. ನಾರಾಯಣ ಕೃಷ್ಣರಾವ್ ಕುಲಕರ್ಣಿ ಇವರ ಪೂರ್ಣ ಹೆಸರು. 1913 ಆಗಸ್ಟ್ 29ರಂದು ಜನಿಸಿದರು. ತಂದೆ ಕೃಷ್ಣರಾವ್, ತಾಯಿ ಸೋನುಬಾಯಿ. ಇವರು ಎಂ.ಎ., ಬಿ.ಟಿ. ಪದವೀಧರರು. ಇವರು ಆರಂಭದಲ್ಲಿ ಕೆ.ಇ. ಬೋರ್ಡ್‍ನ ಅಡಿಯಲ್ಲಿ ಶಿಕ್ಷಕರಾಗಿ ಕಾರ್ಯ ನಿರ್ವಹಿಸಿದರು (1940-43). ಅನಂತರ ಬಾನುಲಿ ಪ್ರಸಾರ ಕಾರ್ಯನಿರ್ವಾಹಕರಾಗಿದ್ದರು. ಅಂದಿನ ಮುಂಬಯಿ ಸರ್ಕಾರದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ ಸಂಶೋಧನ ಸಹಾಯಕರಾಗಿಯೂ (1943-45) ಆ ಸರ್ಕಾರದ ಲೋಕರಾಜ್ಯ ಎಂಬ ಪತ್ರಿಕೆಯ ಉಪಸಂಪಾದಕರಾಗಿಯೂ (1946) ಮುಂಬಯಿಯಲ್ಲಿ ಕೆಲಸ ಮಾಡಿದರು. 1946ರಲ್ಲಿ ಆಕಾಶವಾಣಿಯನ್ನು ಸೇರಿ ಪ್ರಾರಂಭದಲ್ಲಿ ಸಿಬ್ಬಂದಿ ಕಲಾವಿದರಾಗಿ, ಪ್ರಸಾರ ಸಹಾಯಕರಾಗಿ, 1965ರಲ್ಲಿ ಪದೋನ್ನತಿ ಪಡೆದು ಮುಂಬಯಿ, ಧಾರವಾಡ, ಬೆಂಗಳೂರು ಕೇಂದ್ರಗಳಲ್ಲಿ ಕಾರ್ಯಕ್ರಮ ನಿರ್ವಾಹಕರಾಗಿ ಕಾರ್ಯನಿರ್ವಹಿಸಿದರು. 1971 ಆಗಸ್ಟ್ 27ರಂದು ನಿವೃತ್ತರಾದರು. 1933 ಫೆಬ್ರುವರಿಯಲ್ಲಿ ಧಾರವಾಡದ ಬುರ್ಲಿ ಮನೆತನದ ಇಂದಿರಾ ಅವರೊಂದಿಗೆ ಇವರ ಮದುವೆಯಾಯಿತು. ಅವರು ನಿಧನರಾದ ಮೇಲೆ 1946ರಲ್ಲಿ (ಸೆಪ್ಟೆಂಬರ್) ಕುಂದಗೋಳದ ಹುದ್ದಾರ ಮನೆತನದ ನಾಗವೇಣಿಯರೊಂದಿಗೆ ದ್ವಿತೀಯ ವಿವಾಹವಾಯಿತು.

ಮುಂಬಯಿ ಆಕಾಶವಾಣಿಯಲ್ಲಿದ್ದಾಗಿನಿಂದಲೂ ಭಾಷಣ, ಕನ್ನಡ ನಾಟಕ, ಕನ್ನಡ ಗೀತೆಗಳ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ತಾವೇ ಕನ್ನಡ ಗೀತರಚನೆಮಾಡಿ, ಕಲಾವಿದರನ್ನು ಸಂಘಟಿಸಿ ಕಾರ್ಯಕ್ರಮ ರೂಪಿಸತೊಡಗಿದರು. ಗೃಹಗೋಷ್ಠಿ, ಚಕ್ರಗೋಷ್ಠಿ, ಬೆಳಕಿನ ಹೆಜ್ಜೆ (ಸಾಪ್ತಾಹಿಕ ರೂಪಕ), ಕರ್ನಾಟಕ ರಂಗಗೀತವೈಭವ ಮೊದಲಾದ ಸ್ಥಿರಶೀರ್ಷಿಕೆಗಳ ಅಡಿಯಲ್ಲಿ ವೈವಿಧ್ಯಮಯ ಕಾರ್ಯಕ್ರಮ ನೀಡಲು ಪ್ರಯತ್ನಿಸಿದರು. ಆ ಕಾಲದಲ್ಲಿ ಇವರು ಅನೇಕ ನಾಟಕಗಳನ್ನೂ ಭಾಷಣಗಳನ್ನೂ ಬರೆದರು. ಅವು ಜನಪ್ರಿಯವಾದವು.

ಇವರ ಮೇಲೆ ಪ್ರಭಾವ ಬೀರಿದವರೆಂದರೆ ಕವಿ ದ.ರಾ.ಬೇಂದ್ರೆ, ವಿದ್ಯಾಗುರು ಶ್ರೀರಂಗ, ರಂ.ಶ್ರೀ. ಮುಗಳಿ, ವಿ.ಕೃ.ಗೋಕಾಕ. ಇಂಥವರ ಪ್ರಭಾವದಿಂದಾಗಿ ಇವರು ಲೇಖಕರಾಗಿ ವಿಕಾಸಗೊಂಡರು. ವಿವಿಧ ಪ್ರಕಾರಗಳಲ್ಲಿ ಒಟ್ಟು 70 ಕೃತಿಗಳನ್ನು ಇವರು ರಚಿಸಿದ್ದಾರೆ. ಸಾವಿನ ಉಡಿಯಲ್ಲಿ (1944), ಎರಡನೆಯ ಸಂಬಂಧ (1951), ವೈನಿ (1957), ಕಲೋಪಜೀವಿ (1957), ಗೌರಿಶಂಕರ (1958), ಮೂರು ತಲೆಮಾರು (1973), ಭಾವಸಂಗಮ (1978), ವಿಧುರ ವೈರಾಗ್ಯ (1990), ಧಾರವಾಡದ ದತ್ತು ಮಾಸ್ತರ್ (1999), ಅಶ್ವತ್ಥಮರ (2002)- ಇವು ಕಾದಂಬರಿಗಳು. ಕುಮಾರವ್ಯಾಸನನ್ನು ಕುರಿತು ಇವರು ಕುಮಾರವ್ಯಾಸಭಾರತ ಎಂಬ ಕೃತಿಯನ್ನು ಬರೆದಿದ್ದಾರೆ. ನೂರು ಏಕಾಂಕ ನಾಟಕಗಳನ್ನೂ ನೂರಾರು



ಲಲಿತ ಪ್ರಬಂಧಗಳನ್ನೂ ರಚಿಸಿದ್ದಾರೆ. ಇವರ ಕೆಲವು ಹರಟೆಗಳು ಮುಂಗಾಲ್ ಪುಟಿಗೆ, ಎನ್ಕೆ ಲಲಿತ ಪ್ರಬಂಧಗಳು, ಎನ್ಕೇನ ಪ್ರಕಾರೇಣ, ಮೊಡಕಬಜಾರ್ ಎಂಬ ಸಂಗ್ರಹಗಳಲ್ಲಿ ಸಂಕಲಿತವಾಗಿವೆ. 'ಹಳೆಯ ಹವಳ ಹೊಸ ಮುತ್ತು' ಪ್ರಬಂಧಗಳ ಸಂಗ್ರಹ, ಕುಮಾರವ್ಯಾಸ ಸಾಹಿತ್ಯ, ವಿ.ಕೃ.ಗೋಕಾಕ ಮತ್ತು ಶ್ರೀರಂಗರ ಸಾಹಿತ್ಯದ ಆಳವಾದ ಅಧ್ಯಯನ ಮಾಡಿರುವ ಇವರು ಕುಮಾರವ್ಯಾಸ ಭಾರತದ ಗದ್ಯಾನುವಾದವನ್ನೂ ವಿನಾಯಕ ಮಹಾದರ್ಶನ, ಆದ್ಯ ರಂಗಾಚಾರ್ಯ ಎಂಬ ಗ್ರಂಥಗಳನ್ನೂ ಬರೆದಿದ್ದಾರೆ.

ಇವರು ಸಲ್ಲಿಸಿದ ಸಾಹಿತ್ಯ ಸೇವೆಗಾಗಿ ಇವರಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1981), ಗೊರೂರು ಪ್ರಶಸ್ತಿ (1997), ಗಳಗನಾಥ ಪ್ರಶಸ್ತಿ (1998) ದೊರಕಿವೆ. ಕರ್ನಾಟಕ ವಿಶ್ವವಿದ್ಯಾಲಯ ಇವರಿಗೆ ಗೌರವ ಡಿ.ಲಿಟ್ ಪದವಿ ನೀಡಿ ಪುರಸ್ಕರಿಸಿತು. ಇವರು 2005 ಏಪ್ರಿಲ್ 23ರಂದು ಧಾರವಾಡದಲ್ಲಿ ನಿಧನಹೊಂದಿದರು. (ಎಸ್.ಎಂ.ಕೆ.)

**ಕುಲಕರ್ಣಿ, ದ. ಬಾ. :** 1916-63. ಕಥೆಗಾರ, ಪ್ರಬಂಧಕಾರ. ಇವರ ಪೂರ್ಣ ಹೆಸರು ದತ್ತಾತ್ರೇಯ ಬಾಳಕೃಷ್ಣ ಕುಲಕರ್ಣಿ. ಸಂಕ್ಷಿಪ್ತ ನಾಮ ದ.ಬಾ.ಕು. ಹಿಂದಿನ ರಾಮದುರ್ಗ ಸಂಸ್ಥಾನದ ಮದೇನಕೊಪ್ಪದಲ್ಲಿ ಶಾನುಭೋಗ ಮನೆತನದಲ್ಲಿ 1916 ಮಾರ್ಚ್ 23ರಂದು ಜನಿಸಿದ ಇವರು ಮುಲ್ಕಿಯವರೆಗೂ ವ್ಯಾಸಂಗ ಮಾಡಿದರು. ಅನಂತರ ಧಾರವಾಡಕ್ಕೆ ತಮ್ಮ ಸೋದರಮಾವನಾದ, ಗೆಳೆಯರ ಗುಂಪಿನ ಖ್ಯಾತ ಸಾಹಿತಿ ಗೋವಿಂದರಾವ್ ಚುಳಕಿಯವರ ಜೊತೆಗಿರಲು ಬಂದರು. ದ.ಬಾ.ಕು. ಅವರ ಅಣ್ಣ (ದೊಡ್ಡಮ್ಮನ ಮಗ) ಪ್ರಹ್ಲಾದ ಎಂಬುವರೂ ಜೊತೆಗೆ ಬಂದರು. ಈ

ಇಬ್ಬರಿಗೂ ಉದ್ಯೋಗದ ದಾರಿ ತೋರಬೇಕೆಂದು ಚುಳುಕಿಯವರು ಅವರಿಗಾಗಿ ಮನೋಹರ ಗ್ರಂಥಭಂಡಾರ ತೆರೆದರು. ಗೆಳೆಯರ ಗುಂಪಿನ ತರುವಾಯ ಎರಡು ಸಾಹಿತ್ಯ ಸಂಸ್ಥೆಗಳು ಧಾರವಾಡದಲ್ಲಿ ಸ್ಥಾಪಿತವಾದುವು: ಒಂದು, ಮನೋಹರ ಗ್ರಂಥಮಾಲಾ ಎಂಬ ಪ್ರಕಾಶನ ಸಂಸ್ಥೆ; ಇನ್ನೊಂದು, ಮನೋಹರ ಗ್ರಂಥಭಂಡಾರ ಎಂಬ ಪುಸ್ತಕ ವ್ಯಾಪಾರ ಸಂಸ್ಥೆ. ಪ್ರಹ್ಲಾದ ಎಂಬುವರು ಪುಸ್ತಕದ ಅಂಗಡಿಯಲ್ಲಿ ಕೂತು ವ್ಯಾಪಾರ ಮಾಡಿದರೆ ಕುಲಕರ್ಣಿಯವರು ಪುಸ್ತಕಗಳನ್ನು ಹೆಗಲ ಮೇಲೆ ಹೊತ್ತು ಊರೂರು ಅಲೆದು ಮಾರಾಟಮಾಡಿದರು. ಮೈಸೂರು, ಕೊಡಗು, ಹೈದರಾಬಾದು, ಮುಂಬಯಿ, ಮದರಾಸುಗಳನ್ನು ಸುತ್ತಿದ್ದರು. ಪುಸ್ತಕದ ಮೂಲ ವೆಚ್ಚ ಕಳೆದು ಉಳಿಯುತ್ತಿದ್ದುದು ಅತ್ಯಲ್ಪ. ಹೀಗಿದ್ದೂ ಇವರು ಪುಸ್ತಕ ಭಂಡಾರವನ್ನು ವೈವಿಧ್ಯಪೂರ್ಣವಾಗಿ ವಿಸ್ತರಿಸಿದರು. ಯಾವುದೇ ಸಾಹಿತ್ಯ ಸಮ್ಮೇಳನದಲ್ಲಿ ಮನೋಹರ ಗ್ರಂಥಭಂಡಾರದ ಒಂದು ಅಂಗಡಿ ಇದ್ದೇ ಇರುತ್ತಿತ್ತು. ಇದರಿಂದ ಇವರು ಸಾಹಿತ್ಯ ವ್ಯಾಪಾರದೊಡನೆ ಸ್ನೇಹ ಸಂಪಾದನೆಯನ್ನೂ ಮಾಡಿದರು. ಬೇಂದ್ರೆ, ಗೋಕಾಕ, ಕಾರಂತ, ಮಾಸ್ತಿ ಅವರಂಥ ಹಿರಿಯ ಸಾಹಿತಿಗಳ ಪ್ರೀತಿಗೆ ಪಾತ್ರರಾದರು. ಸಾಹಿತಿಗಳ ಒಂದು ಬಳಗವನ್ನೇ ಕಟ್ಟಿದರು. ಹೀಗೆ ಪುಸ್ತಕ ವ್ಯಾಪಾರದಿಂದ ಜೀವನವನ್ನು ಪ್ರಾರಂಭಿಸಿದ ಇವರು ಅನಂತರ ಲಲಿತಸಾಹಿತ್ಯಮಾಲೆ ಎಂಬ ಪ್ರಕಾಶನ ಸಂಸ್ಥೆಯನ್ನು ಪ್ರಾರಂಭಿಸಿ ಪ್ರಕಾಶಕರೂ ಲೇಖಕರೂ ಆದರು.

ದ.ಬಾ.ಕು ಪ್ರಸಿದ್ಧಿಗೆ ಬಂದದ್ದು ನಾ ಕಂಡ ಗೌರಮ್ಮ ಎಂಬ ವ್ಯಕ್ತಿ ಚಿತ್ರದಿಂದ. ಕಥೆಗಾರ್ತಿ ಕೊಡಗಿನ ಗೌರಮ್ಮನವರು ದುರಂತವೊಂದರಲ್ಲಿ ತೀರಿಕೊಂಡಾಗ, ಅದನ್ನು ನೆನೆದು ತಮ್ಮ ಅಳಲನ್ನು ತೋಡಿಕೊಂಡಿದ್ದೇ ಹೃದ್ಯವಾದ ವ್ಯಕ್ತಿಚಿತ್ರವಾಯಿತು. ಅಂದಿನಿಂದ ದ.ಬಾ.ಕು. ವ್ಯಕ್ತಿಚಿತ್ರಣದಲ್ಲಿ ಎತ್ತಿದ ಕೈಯೆನಿಸಿ ಅನೇಕ ವ್ಯಕ್ತಿಚಿತ್ರಗಳನ್ನು ರಚಿಸಿದರು. ಹಕ್ಕಿನೋಟ ಮತ್ತು ಸೀಮಾಪುರುಷರು ಎಂಬ ಎರಡು ವ್ಯಕ್ತಿಚಿತ್ರಗಳ ಸಂಗ್ರಹವನ್ನು ಇವರು ಪ್ರಕಟಿಸಿದರು. ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ ಸ್ಮೃತಿ ಚಿತ್ರಗಳು ಎಂಬ ಇನ್ನೊಂದು ವ್ಯಕ್ತಿಚಿತ್ರ ಸಂಗ್ರಹವನ್ನು ಮರಾಠಿಯಿಂದ ಭಾಷಾಂತರಿಸಿದರು.

ದ.ಬಾ.ಕು. ಕಥೆಗಾರಿಕೆಯಲ್ಲಿ ಹೆಚ್ಚು ಕೃಷಿ ಮಾಡಿದರು. ಕೊಡಗಿನ ಗೌರಮ್ಮ, ಧಾರವಾಡದ ಗೀತಾ ಕುಲಕರ್ಣಿ ಇವರು ಕಥೆಗಾರ್ತಿಯರಾಗಿ ಹೆಸರು ಗಳಿಸಿದುದು ಇವರು ಅವರ ಪ್ರಕಾಶನದ ಸ್ಫೂರ್ತಿಯಿಂದಲೇ. ಸ್ವತಃ ಕಥೆಗಾರರಾಗಿ ಇವರು ಹಾಸುಹೊಕ್ಕು, ಕಪ್ಪುಹುಡುಗಿ, ನಾಳಿನ ಕನಸು ಎಂಬ ಮೂರು ಕಥಾಸಂಗ್ರಹಗಳಲ್ಲಿ ಅನೇಕ ಅಪೂರ್ವ ಮಾದರಿಯ ಕಥೆಗಳನ್ನು ಪ್ರಕಟಿಸಿದ್ದಾರೆ. ಪರಿಹಾರ ಎಂಬ ಇವರ ಒಂದು ಕಾದಂಬರಿಯೂ ಪ್ರಕಟವಾಗಿದೆ. ಗೋವಾ ಎಂಬ ಕಾದಂಬರಿಯೊಂದನ್ನು ಇವರು ಬರೆಯಲು ಆಲೋಚಿಸಿದ್ದರೆಂದು ಹೇಳಲಾಗಿದೆ.

ಸಮಕಾಲೀನ ಸಾಮಾಜಿಕ ಪರಿಸ್ಥಿತಿ, ಇದರ ಸ್ಥಿತ್ಯಂತರಗಳು, ಆಧುನಿಕ ಜೀವನಕ್ರಮದಲ್ಲಿ ಅನಿವಾರ್ಯವಾಗಿ ಸಡಿಲಗೊಂಡಿರುವ ಸಂಪ್ರದಾಯದ ಕಟ್ಟುಗಳು, ಬದಲಾದ ನೀತಿಮೌಲ್ಯಗಳು ಇವೆಲ್ಲ ನಾಳಿನ ಕನಸು ಎಂಬ ಕಥಾಸಂಗ್ರಹದ ವೈಶಿಷ್ಟ್ಯಗಳೆಂದು ಮುನ್ನುಡಿಕಾರ ವ್ಯಾಸರಾಯ ಬಲ್ಲಾಳರು ಎತ್ತಿ ತೋರಿದ್ದಾರೆ. ನಮ್ಮನ್ನು ಕೆಣಕಿ ಕಾಡುತ್ತಿರುವ ಸಾಮಾಜಿಕ ಸಮಸ್ಯೆಗಳು, ಹಳೆ-ಹೊಸದರ ಲೆಕ್ಕಾಚಾರಗಳು; ದಾಂಪತ್ಯದ ಸರಸವಿರಸಗಳು ಕಥೆಯ ಸಾಮಗ್ರಿಯಾಗಿವೆಯೆಂದು ಕಪ್ಪುಹುಡುಗಿ ಎಂಬ ಕಥಾ ಸಂಗ್ರಹದ ಮುನ್ನುಡಿಯಲ್ಲಿ ರಾ.ಕು. ಹೇಳಿದ್ದಾರೆ.

'ಸಾವಧಾನ' ದ.ಬಾ.ಕು. ಅವರ ಪ್ರಬಂಧಸಂಕಲನ. ಇವರು ಹರಟೆ ಹೊಡೆಯಬಲ್ಲವರಾಗಿದ್ದರು. ಹಾಸ್ಯವೇ ಇವರ ಹರಟೆಯ ರಹಸ್ಯ. ಈ ಹಾಸ್ಯಗಾರಿಕೆಯನ್ನು ದ.ಬಾ.ಕು. ಜೀವನದಲ್ಲಿಯೂ ಬೆಳೆಸಿಕೊಂಡು, ಬಳಸಿಕೊಂಡು ಬಂದಿದ್ದರು.

ದ.ಬಾ.ಕು ಬರೆದು ಬಿಡಿಬಿಡಿಯಾಗಿ ಪ್ರಕಟಿಸಿದ್ದ ಕಥೆ, ಕವನ ಮತ್ತು ವ್ಯಕ್ತಿಚಿತ್ರಗಳನ್ನೊಳಗೊಂಡ ಬದುಕಿದ ಬಾಳು ಎಂಬ ಸಂಕಲನ ಇವರು ತೀರಿಕೊಂಡಮೇಲೆ ಪ್ರಕಟವಾಯಿತು (1964). *

**ಕುಲಕರ್ಣಿ, ಶಂಭುಲಿಂಗಪ್ಪ :** 1907-78. ಕನ್ನಡ ಪ್ರಾಥಮಿಕ ಪಠ್ಯಪುಸ್ತಕ ನಿರ್ಮಾಣಕಾರ್ಯದಲ್ಲಿ ಅಪಾರ ಸೇವೆ ಸಲ್ಲಿಸಿದವರು. ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರ್ಣಿ ಇವರ ಪೂರ್ಣ ಹೆಸರು. ಇವರ ತಂದೆ ಶಿವರುದ್ರಪ್ಪ ಸೋಮಪ್ಪ ಕುಲಕರ್ಣಿ. ಅವರು ಶಿಕ್ಷಕರಾಗಿದ್ದರು. ಇವರು ಬೆಡಗಿನ ಕವಿತೆಗಳನ್ನು ಬರೆದಿದ್ದಾರೆ. ಇವರು ಬರೆದ ನನ್ನ ತಾಯಿ, ನಾಡನೆಲೆಗಾರ ಎಂಬ ನೂರು ನೀತಿಪರ ಕಥೆಗಳ ಸಂಗ್ರಹ ತುಂಬ ಜನಪ್ರಿಯವಾಗಿತ್ತು. ನಾಡನೆಲೆಗಾರ ಪ್ರತಿವರ್ಷ ಪ್ರಾಥಮಿಕ ಮಾಧ್ಯಮಿಕ ಶಾಲೆಗಳಿಗೆ ಪಠ್ಯವಾಗಿ ನೇಮಿಸಲ್ಪಡುತ್ತಿತ್ತು. ಶಂಭುಲಿಂಗಪ್ಪನವರು ವಿಶೇಷ ಶಿಕ್ಷಣ ಪಡೆಯದಿದ್ದರೂ ತಮ್ಮ ತಂದೆಯವರ ಕೆಲವು ಇತಿಹಾಸ ಮತ್ತು ಭೂಗೋಳ ಸಂಬಂಧವಾದ ಪುಸ್ತಕಗಳನ್ನು ಪ್ರಕಟಿಸಲು ಒಂದು ಸಂಪಾದಕ ಮಂಡಲಿಯನ್ನು ರಚಿಸಿದರು. ಆ ಮಂಡಲಿಯಲ್ಲಿ ಎಸ್.ಎಸ್.ಭೂಸನೂರಮಠ, ಆರ್.ಸಿ.ಹಿರೇಮಠ, ಬೆಟಗೇರಿ ಕೃಷ್ಣಶರ್ಮರಂತಹ ಸಾಹಿತಿಗಳೂ ಸಂಶೋಧಕರೂ ಸೇರಿದ್ದರು. ಕನ್ನಡ ಶಿಕ್ಷಣ ಲೋಕಕ್ಕೆ ಗೌರೀಶ ವಾಚನಮಾಲೆಯ ಮೂಲಕ ಪಠ್ಯ ಪುಸ್ತಕಗಳ ಅಪಾರ ಭಂಡಾರವನ್ನೂ ತಮ್ಮ ಸಮಸ್ತ ಆಸ್ತಿಯನ್ನೂ ಇವರು ಬಿಟ್ಟು ಹೋಗಿದ್ದಾರೆ. (ಎನ್.ಕೆ.ಕೆ.)



**ಕುಲಗೋಡ ತಮ್ಮಣ್ಣ :** ಸು.1860. ಯಕ್ಷಗಾನ ಕಲಾವಿದ ಹಾಗೂ ಕವಿ. ಬೆಳಗಾಂವಿ ಜಿಲ್ಲೆ ಕುಲಗೋಡ ಗ್ರಾಮದಲ್ಲಿ ಕುಲಕರ್ಣಿಯಾಗಿದ್ದ, ಸಂಗೀತ, ಸಾಹಿತ್ಯ ಮತ್ತು ಅಭಿನಯಗಳಲ್ಲಿ ಆಸಕ್ತಿಯನ್ನು ಹೊಂದಿದ್ದ ಇವನು ಅಪರಾಳ ತಮ್ಮಣ್ಣಕೃತ ಶ್ರೀಕೃಷ್ಣಪಾರಿಜಾತ ನಾಟಕವನ್ನು ಮನಸಾರೆ ಮೆಚ್ಚಿ ಅದನ್ನು ರಂಗದಮೇಲೆ ಪ್ರದರ್ಶಿಸಲು ಕೆಲವು ಸೂಕ್ತ ಬದಲಾವಣೆಗಳನ್ನು ಅಳವಡಿಸಿ ಆ ಮೇಳದ ಯಶಸ್ಸು ಹಾಗೂ ಜನಪ್ರಿಯತೆಗೆ ಕಾರಣನಾದ. ಕೆಲವೊಮ್ಮೆ ತಾನೇ ಭಾಗವತನಾಗಿ ದೂತ ಮತ್ತು ಕೃಷ್ಣನ ಪಾತ್ರವನ್ನೂ ವಹಿಸಿ ಪಾರಿಜಾತ ಪ್ರಯೋಗಗಳನ್ನು ಯಶಸ್ವಿಯಾಗಿ ಪ್ರದರ್ಶಿಸಿದ. ಪಾರಿಜಾತ ಮೇಳದಲ್ಲಿ ಮೊದಲ ಬಾರಿಗೆ ಸ್ತ್ರೀಯರು ಪಾತ್ರವಹಿಸುವಂತೆ ಮಾಡಿದ. ಇವನ ಮೇಳದಲ್ಲಿ ನುರಿತ ನಟಿ ಕೌಜಲಗಿ ನಿಂಗವ್ವ ಪಾರಿಜಾತ ನಾಟಕದಲ್ಲಿ ಕೊರವಂಜಿ ಪಾತ್ರ ವಹಿಸುತ್ತಿದ್ದಳಲ್ಲದೆ ಮುಂದೆ ತನ್ನದೇ ಆದ ಆಟದ ಮೇಳವನ್ನು ಸ್ಥಾಪಿಸಿದಂತೆ ತಿಳಿದುಬರುತ್ತದೆ. ತಮ್ಮಣ್ಣನ ರಂಗಜೀವನದಲ್ಲಿ ವಿಸ್ಮಯಕರ ಹಾಗೂ ಮಹತ್ವದ ಘಟನೆಯೊಂದು ಜರುಗಿದಂತೆ ತಿಳಿಯುತ್ತದೆ. ಒಮ್ಮೆ ಇವನ ಪ್ರೇಯಸಿಯೊಬ್ಬಳು ಸತ್ಯಭಾಮೆಯ ಪಾತ್ರ ಅಭಿನಯಿಸುತ್ತಿದ್ದಾಗ, ನಾಟಕ ತುಂಬಾ ಸ್ವಾರಸ್ಯವಾಗಿ ಸಾಗುತ್ತಿರುವ ಸಂದರ್ಭದಲ್ಲಿ ತಾಳ ತಪ್ಪಿತು. ಇದರಿಂದ ಕುಪಿತನಾದ ತಮ್ಮಣ್ಣ ತನ್ನ ಕೈಯಲ್ಲಿದ್ದ ತಾಳವನ್ನೇ ಅವಳೆಡೆಗೆ ಎಸೆದಾಗ ಅದು ಅವಳ ತಲೆಗೆ ಬಡಿದು ಆಕೆ ಪ್ರಾಣ ಬಿಟ್ಟಳಂತೆ. ಆಗಿನ ಆಂಗ್ಲ ನ್ಯಾಯಾಧೀಶ ತಮ್ಮಣ್ಣನಿಗೆ ಸೆರೆಮನೆವಾಸವನ್ನು ವಿಧಿಸಿ ಕೊನೆಗೆ ಅವನಿಗೆ ಫಾಸೀ ಶಿಕ್ಷೆಗೆ ವಿಧಿಸಿದ. ಆದರೆ ಅವನಿಗೆ ಕೊನೆಯಾಸೆ ಏನೆಂದು ಕೇಳಿದಾಗ ತಮ್ಮಣ್ಣ ಪಾರಿಜಾತ ನಾಟಕವನ್ನು ಅಭಿನಯಿಸುವ ಇಚ್ಛೆಯನ್ನು ವ್ಯಕ್ತಪಡಿಸಿದ. ಅದರಂತೆ ನಾಟಕ ಅಭಿನಯಿಸುತ್ತಿರುವಾಗ ತಾಳ ತಪ್ಪಿದಾಗ ಆಗುವ ಆಭಾಸವನ್ನು ನ್ಯಾಯಾಧೀಶರಿಗೆ ಮನದಟ್ಟು ಮಾಡಿಕೊಡಲಾಗಿ ಅವನ ಫಾಸೀ ಶಿಕ್ಷೆ ರದ್ದಾಯಿತು. ಇಂದಿಗೂ ಗೋಕಾಕ ಸೆರೆಮನೆಯ ಕೋಣೆಯಲ್ಲಿ ತಮ್ಮಣ್ಣನ ಹಸ್ತಾಕ್ಷರಗಳಿವೆಯೆಂದು ಹೇಳಲಾಗಿದೆ.

ಯಕ್ಷಗಾನ ಪರಂಪರೆಯಂತೆ ಪೂರ್ವರಂಗದಲ್ಲಿ ಬಾಲಗೋಪಾಲರ ಪ್ರವೇಶ, ಚೈತನ್ಯಪಂಥದ ನಾಟಕಗಳಲ್ಲಿ ರಾಧಾಕೃಷ್ಣರ ಪ್ರವೇಶ ಮತ್ತು ದೊಡ್ಡಾಟಗಳಲ್ಲಿ ಗೋಪಾಲನ ಪ್ರವೇಶವಿರುವಂತೆ ತಮ್ಮಣ್ಣ ತಾನು ಅಳವಡಿಸಿದ ಪಾರಿಜಾತಮೇಳದ ಪೂರ್ವರಂಗದಲ್ಲಿ ಗೋಪಾಲ ಗೊಲ್ಲತಿಯರನ್ನು ತಂದ. ಪ್ರಾರ್ಥನೆಯ ಅನಂತರ ಗೋಪಾಲ ಗೊಲ್ಲತಿಯರ ಪ್ರವೇಶ, ಅವರ ಲೀಲಾವಿನೋದ, ಹೆಪ್ಪು ಮುರಿಯದ ಮೊಸರು ಸುಂಕ ಕೊಡು ಎಂದು ಗೋಪಾಲ ಕೇಳುವುದು, 'ರಂಗ ಸೆರಗ ಬಿಡೊ' ಎಂದು

ಗೊಲ್ಲತಿ ಬೇಡುವುದು - ಇವೇ ಮೊದಲಾದ ಶೃಂಗಾರ ರಸ ಸಂಭಾಷಣೆಗಳಿಂದ ಕೂಡಿದ ಗೋಕುಲ ದೃಶ್ಯ ಇವನ ಪಾರಿಜಾತದಲ್ಲಿ ಹೆಚ್ಚು ಮನರಂಜನೀಯವೂ ಜನಪ್ರಿಯವೂ ಆಗಿದೆ. ಪೂರ್ವರಂಗದ ಅನಂತರ ದ್ವಾರಕೆಗೆ ನಾರದರ ಆಗಮನ, ಕೃಷ್ಣನಿಗೆ ಪಾರಿಜಾತ ಕೊಡುವುದು, ನಾರದರು ಈ ಸುದ್ದಿಯನ್ನು ಸತ್ಯಭಾಮೆಗೆ ಮುಟ್ಟಿಸುವುದು, ರುಕ್ಮಿಣಿಗೆ ಪಾರಿಜಾತವನ್ನು ಕೊಟ್ಟಿದ್ದರಿಂದ ಸತ್ಯಭಾಮೆ ಕೋಪಗೊಳ್ಳುವುದು, ರುಕ್ಮಿಣಿ ಸತ್ಯಭಾಮೆಯರ ಜಗಳ, ಕೃಷ್ಣನ ಮನಸ್ಸನ್ನು ಪರಿವರ್ತಿಸಲು ಸತ್ಯಭಾಮೆ ಕೈಗೊಳ್ಳುವ ಪಾರ್ವತಿ ಆರಾಧನೆ, ಪರಿಣಾಮವಾಗಿ ಕೃಷ್ಣ ಕೊರವಂಜಿ ವೇಷದಲ್ಲಿ ಬಂದು ಸತ್ಯಭಾಮೆಗೆ ಕಣಿ ಹೇಳುವುದು, ಮರುದಿನ ಕೃಷ್ಣ ತನ್ನ ಹತ್ತು ಅವತಾರಗಳನ್ನು ಅವಳಿಗೆ ಪರಿಚಯಿಸುವುದು, ಸತ್ಯಭಾಮೆ ಮುಯ್ಯಿ ತೀರಿಸುವಂತೆ ವ್ಯಂಗ್ಯೋಕ್ತಿಗಳನ್ನಾಡುವುದು, ಅನಂತರ ಕೃಷ್ಣ ಸತ್ಯಭಾಮೆಯರ ಮಿಲನ, ಇಂದ್ರಲೋಕದಿಂದ ಪಾರಿಜಾತ ಪುಷ್ಪವನ್ನು ತಂದುಕೊಡುವ ಆಶ್ವಾಸನೆ, ಸತ್ಯಭಾಮೆಯ ಸಂತೃಪ್ತಿ ಇದು ಕುಲಗೋಡ ತಮ್ಮಣ್ಣ ಕ್ರಮವಾಗಿ ಅಳವಡಿಸಿ ಸಿದ್ಧಪಡಿಸಿದ ಪಾರಿಜಾತ ಆಟದ ಕಥಾವಸ್ತು.

ಈತನ ಪಾರಿಜಾತ ಮೇಳದಲ್ಲಿ ದೂತ ಎಂದು ಕರೆಯಲಾಗುವ ಸೂತ್ರಧಾರನ ಪಾತ್ರ ಪ್ರಮುಖ ಪಾತ್ರಗಳಲ್ಲೊಂದಾಗಿದೆ. ಸಭಿಕರಿಗೆ ಪಾತ್ರಗಳನ್ನು ಪರಿಚಯಿಸುವುದು, ಹಾಸ್ಯದ ವಾತಾವರಣ ಕಲ್ಪಿಸುವುದು ಮತ್ತು ಕಥೆಯನ್ನು ಸರಾಗವಾಗಿ ಮುಂದುವರಿಸಲು ಅನುವಾಗುವುದು ಇವಿಷ್ಟು ಸೂತ್ರಧಾರನ ಕೆಲಸ. ಹಾಡುಗಳನ್ನು ಆಧರಿಸಿದ ಸಂಭಾಷಣೆಯಲ್ಲದೆ ಅಲ್ಲಲ್ಲಿ ಬರುವ ಮಾತಿನ ಚಕಮಕಿ ತಮ್ಮಣ್ಣನ ಪಾರಿಜಾತ ನಾಟಕದ ಮುಖ್ಯ ಲಕ್ಷಣ. ಈತ ಅಳವಡಿಸಿದ ಕೆಲವು ಹಾಡುಗಳು ಸುಮಧುರವೂ ಹೆಚ್ಚು ಜನಪ್ರಿಯವೂ ಆಗಿದ್ದು ಅವು ಮರಾಠೀ ರಂಗಭೂಮಿಯ ಮೇಲೂ ತಮ್ಮ ಪ್ರಭಾವ ಬೀರಿದವು. ಇಂಥ' ಹಾಡುಗಳ ಮಾಧುರ್ಯಕ್ಕೆ ಮನಸೋತ ಅಣ್ಣಾರಾವ್ ಕಿರ್ಲೋಸ್ಕರ ಎಂಬ ಮರಾಠಿ ನಾಟಕಗಳ ಪ್ರವರ್ತಕರು ಈತ ರಚಿಸಿದ ಕ್ಷೀರಸಾಗರ ತವರುಮನೆ, ದ್ವಾರಕಿ ನಮ್ಮತ್ತೇಮನೆ ಎಂಬ ಹಾಡನ್ನು ತಮ್ಮ 'ಸಂಗೀತ ಸೌಭದ್ರ'ದಲ್ಲಿ ಅದೇ ಧಾಟಿಯನ್ನು ಅನುಸರಿಸಿ ಪಾಂಡುನೃಪತಿಜನಕಜಯಾ ಮಾತಾ ಕುಂತಿ ಯದುತನಯಾ ಎಂಬ ಹಾಡಿಗೆ ಸಂಗೀತವನ್ನು ಅಳವಡಿಸಿದರು.

ಕರ್ನಾಟಕದ ಬಯಲಾಟಗಳ ಚರಿತ್ರೆಯಲ್ಲಿ ಚಿರಸ್ಮರಣೀಯ ಯುಗವೊಂದು ಕುಲಗೋಡ ತಮ್ಮಣ್ಣನಿಂದ ಆರಂಭವಾಯಿತೆನ್ನಬಹುದು. ಈತನ ಮೇಳ ಎಲ್ಲ ಕಡೆ ಪಾರಿಜಾತ ಮೇಳಗಳ ಉದಯಕ್ಕೆ ಪ್ರೇರಣೆಯನ್ನೊದಗಿಸಿತು. ಬರಬರುತ್ತ ಹೆಚ್ಚಿನ ಪ್ರಚಾರ ಹಾಗೂ ಜನಪ್ರಿಯತೆಯಿಂದಾಗಿ ಶ್ರೀಕೃಷ್ಣಪಾರಿಜಾತ ಕುಲಗೋಡ ತಮ್ಮಣ್ಣನದೇ ಎಂಬ ಭಾವನೆ ಮೂಡಿತು.

ಈತ ಪಾರಿಜಾತ ನಾಟಕವನ್ನು ಜನಪ್ರಿಯಗೊಳಿಸಿದ್ದರಿಂದ ಇದೇ ಮಾದರಿಯಲ್ಲಿ ಅನೇಕ ಪಾರಿಜಾತ ಸಂಬಂಧ ನಾಟಕಗಳು ರಚಿತವಾಗಿ ರಂಗದ ಮೇಲೆ ಬಂದವು. ನಾಟಕ ಕಲಿಸುವುದರಲ್ಲಿಯೂ ತಮ್ಮಣ್ಣ ಹೊಸ ಪರಂಪರೆಯೊಂದನ್ನು ಸೃಷ್ಟಿಮಾಡಿದ. ಈ ದಿಶೆಯಲ್ಲಿ ಶೂರಪಾಲಿ ಅಚ್ಯುತನದು ತಮ್ಮಣ್ಣನ ಅನಂತರದ ಒಂದು ಪ್ರಮುಖ ಹೆಸರು. (ಎಸ್.ಎನ್.ಜಿ.)

**ಕುವೆಂಪು** : ನೋಡಿ - ಪುಟ್ಟಪ್ಪ, ಕೆ.ವಿ.

**ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ** : ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಚಟುವಟಿಕೆಗಳನ್ನೆಲ್ಲ ಕೇಂದ್ರೀಕರಿಸುವ ದೃಷ್ಟಿಯಿಂದ ರೂಪುಗೊಂಡ ಸಂಸ್ಥೆ (1966). ಇದು ಈ ವಿಶ್ವವಿದ್ಯಾನಿಲಯದಲ್ಲಿ ಆರಂಭವಾದ ಮೊದಲನೆಯ ಸಂಸ್ಥೆಯೂ (ಇನ್‌ಸ್ಟಿಟ್ಯೂಟ್) ಹೌದು. ತನ್ನ ಸ್ವರೂಪ ವ್ಯಾಪ್ತಿಗಳಲ್ಲಿ ಭಾರತೀಯ ಭಾಷೆಯೊಂದರ ಅಧ್ಯಯನಕ್ಕೆ ಈ ಸಂಸ್ಥೆ ವಿಶಿಷ್ಟವಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ ಚರಿತ್ರೆಯಲ್ಲಿ ಮತ್ತು ಕನ್ನಡ ಭಾಷಾಸಾಹಿತ್ಯಗಳ ಚಟುವಟಿಕೆಗಳ ಇತಿಹಾಸದಲ್ಲಿ ಅಧ್ಯಯನ ಸಂಸ್ಥೆ ಅಸ್ತಿತ್ವಕ್ಕೆ ಬಂದದ್ದು ಮಹತ್ತ್ವಪೂರ್ಣವಾದ, ಪರಿಣಾಮಕಾರಿಯಾದ ಘಟನೆ. ಶಿಕ್ಷಣದ ಎಲ್ಲ ಹಂತಗಳಲ್ಲಿಯೂ ಶಿಕ್ಷಣ ಮಾಧ್ಯಮವಾಗಿ, ಆಡಳಿತದ ಎಲ್ಲ ಸ್ತರಗಳಲ್ಲಿಯೂ ಆಡಳಿತ ಭಾಷೆಯಾಗಿ, ಕನ್ನಡನಾಡಿನ ಜನಜೀವನದಲ್ಲಿ ಪ್ರಥಮ ಭಾಷೆಯಾಗಿ ಕನ್ನಡಕ್ಕೆ ಗೌರವದ ಸ್ಥಾನಮಾನಗಳು ಲಭಿಸಬೇಕೆಂಬ ಸಂಕ್ರಮಣ ಕಾಲದಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಆರಂಭವಾಯಿತು. ಬೋಧನೆ, ಸಂಶೋಧನೆ, ಸಂಪಾದನೆಗಳೊಂದಿಗೆ ಬೇರೆ ಭಾಷೆಗಳಿಂದ ಬಗೆಬಗೆಯಾದ ಗ್ರಂಥಗಳನ್ನು ಕನ್ನಡಕ್ಕೆ ತರಬೇಕು, ಕನ್ನಡದ ಶ್ರೇಷ್ಠ ಕೃತಿಗಳನ್ನು ಇತರ ಭಾಷೆಗಳವರಿಗೆ ಪರಿಚಯಿಸಬೇಕು, ಇನ್ನೂ ಬೆಳಕಿಗೆ ಬಾರದ ಪ್ರಾಚೀನ ಗ್ರಂಥಗಳನ್ನು ಶಾಸ್ತ್ರೀಯವಾಗಿ ಪ್ರಕಟಿಸಬೇಕು, ಜಾನಪದದಂಥ ಮೂಲೆಗುಂಪಾದ ವಿಷಯಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಬೇಕು, ಭಾರತೀಯ ಸಾಹಿತ್ಯದ ಹಿನ್ನೆಲೆಯಲ್ಲಿ ಕನ್ನಡದ ವಲಯವನ್ನು ವಿಸ್ತೃತಗೊಳಿಸಬೇಕು, ಕನ್ನಡ ಭಾಷೆಯನ್ನು ಆಧುನಿಕ ಕಾಲಕ್ಕೆ ಅನುಗುಣವಾಗಿ ಬಲಪಡಿಸಬೇಕು - ಇವೇ ಮೊದಲಾದ ಉದ್ದೇಶಗಳಿಗನುಗುಣವಾಗಿ ಸುವ್ಯವಸ್ಥಿತವಾದ ಯೋಜನೆಗಳನ್ನು ಕೈಗೊಂಡು, ಅವನ್ನು ಶ್ರದ್ಧಾನಿಷ್ಠೆಗಳಿಂದ ಕಾರ್ಯರೂಪಕ್ಕೆ ತರುವ, ಕನ್ನಡದ ಬಹುಮುಖ ಬೆಳೆವಣಿಗೆಗೆ ಉತ್ತೇಜನ ನೀಡುವ, ನಾನಾ ಕಡೆ ಹಂಚಿಹೊದ ಶಕ್ತಿಗಳನ್ನೆಲ್ಲ ಒಂದೆಡೆ ಸೇರಿಸುವ ರಂಗವಾಗಿ ಸಜ್ಜುಗೊಳಿಸಲು ಕನ್ನಡ ಅಧ್ಯಯನ ಸಂಸ್ಥೆ ರೂಪುಗೊಂಡಿತು.

ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣಮಹೋತ್ಸವದ ಅಂಗವಾಗಿ ನಡೆದ ಕನ್ನಡ ಲೇಖಕರ ಸಮ್ಮೇಳನವನ್ನು ಉದ್ಘಾಟಿಸುವ ಸಮಯದಲ್ಲಿಯೇ (1966 ಡಿಸೆಂಬರ್ 8), ಆಗಿನ ಕುಲಪತಿ ಕೆ.ಎಲ್.ಶ್ರೀಮಾಲಿ ಅವರು ಕನ್ನಡ ಅಧ್ಯಯನ ಸಂಸ್ಥೆಯನ್ನೂ ಉದ್ಘಾಟಿಸಿದರು. ಆ ಸಂದರ್ಭದಲ್ಲಿ ಅವರು ಕನ್ನಡ ಅಧ್ಯಯನ ಸಂಸ್ಥೆ ಈ ನಾಡಿನ ಭಾಷೆ, ಸಾಹಿತ್ಯ, ಸಂಸ್ಕೃತಿ, ಸಂಶೋಧನೆ ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ನಂದಾದೀಪವಾಗಲೆಂದೂ ಸಾಹಿತ್ಯ ಕ್ಷೇತ್ರದ ಅಧ್ವರ್ಯುಗಳಾದ ತಾವೂ ತಮ್ಮ ಮುಂದಿನ ಪೀಳಿಗೆಗಳೂ ಅದಕ್ಕೆ ಸದಾ ಸಹಕಾರದ ಎಣ್ಣೆಯನ್ನು ತುಂಬುವ ಅವಕಾಶವಿರಲೆಂದೂ ತಾವು ಹೃತ್ಪೂರ್ವಕವಾಗಿ ಹಾರೈಸುವುದಾಗಿ ಅಭಿಪ್ರಾಯ ವ್ಯಕ್ತಪಡಿಸಿದ್ದರು. ಅವರ ಮಾತುಗಳು ಕನ್ನಡದ ಸರ್ವತೋಮುಖವಾದ ಅಭ್ಯುದಯಕ್ಕೆ ಇಂಥದೊಂದು ಸಂಸ್ಥೆಯ ಸ್ಥಾಪನೆಯ ಅಗತ್ಯವಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತವೆ. ಇದೇ ಸಂದರ್ಭದಲ್ಲಿ ಸಂಸ್ಥೆಯ ನಿರ್ದೇಶಕರಾಗಿದ್ದ ದೇ.ಜವರೇಗೌಡರು, ಈ ಸಂಸ್ಥೆಯೊಂದು ಭೂಮ ಬಂಧುರ ವಿಸ್ಮಯವಾಗಿ, ಕರ್ನಾಟಕ ಸಾಹಿತ್ಯ ಸಂಸ್ಕೃತಿಗಳ ತಲಕಾವೇರಿಯಾಗಿ, ಕನ್ನಡಿಗರ ಪವಿತ್ರ ಯಾತ್ರಾಸ್ಥಾನವಾಗಿ ನಾಡಿನ ಪುಣ್ಯವೇ ಸಾಕಾರಗೊಂಡಂತೆ ವಿಕಾಸಗೊಳ್ಳುವುದರಲ್ಲಿ ಸಂಶಯವಿಲ್ಲ ಎಂದು ಹೇಳಿದ್ದರು. ಈ ಮಾತಿಗೆ ಸಾಕ್ಷಿಯಾಗಿ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಅದ್ವಿತೀಯವಾಗಿ ರೂಪುತಳೆದಿದೆ. 1994ರಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ಹೆಸರನ್ನು ಕುವೆಂಪು ಅವರ ಗೌರವಾರ್ಥ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಎಂದು ಪುನರ್ನಾಮಕರಣ ಮಾಡಲಾಯಿತು.

ವಿಶ್ವವಿದ್ಯಾನಿಲಯದ ಓರಿಯೆಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನ ಕನ್ನಡ ಸಂಪಾದನ ವಿಭಾಗವನ್ನು ಬೇರ್ಪಡಿಸಿ, ಕನ್ನಡ ಸ್ನಾತಕೋತ್ತರ ಬೋಧನ ಮತ್ತು ಸಂಶೋಧನ ವಿಭಾಗಗಳೊಡನೆ ಕೂಡಿಸುವುದರೊಂದಿಗೆ ಕನ್ನಡ ಅಧ್ಯಯನ ಸಂಸ್ಥೆ ಆರಂಭವಾಯಿತು. ಆಮೇಲೆ ಅದಕ್ಕೆ ಅನೇಕ ವಿಭಾಗಗಳು ಹೊಸದಾಗಿ ಕೂಡಿಕೊಂಡುವು.

ಅನಂತರ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ವಿಸ್ತೃತಗೊಂಡಿತು. ಬೋಧನಾಂಗ, ಸಂಶೋಧನಾಂಗ, ಪ್ರಕಟಣಾಂಗ, ಕಾರ್ಯಾಂಗ ಹೀಗೆ ವಿಸ್ತಾರವಾದ ಹಾಗೂ ವ್ಯಾಪಕವಾದ ಕಾರ್ಯಕ್ರಮಗಳನ್ನು ರೂಪಿಸಿಕೊಂಡಿತು. ವಿವಿಧ ಶಾಖೆಗಳ, ಉಪಶಾಖೆಗಳ ಸಾಧನೆಗಳನ್ನೂ ಕಾರ್ಯಚಟುವಟಿಕೆಗಳನ್ನೂ ಏಕಸೂತ್ರದಲ್ಲಿ ನಿಯಂತ್ರಿಸುತ್ತ ಮಾನಸಗಂಗೋತ್ರಿಯ ಭವ್ಯ ಆವರಣದಲ್ಲಿ ಅದರ ಹೃದಯಪ್ರಾಯವಾಗಿ ಸಂಸ್ಥೆ ತಲೆಯೆತ್ತಿ ನಿಂತಿತು. ಕನ್ನಡ ವಿಭಾಗ ಕುವೆಂಪು, ಡಿ.ಎಲ್.ನರಸಿಂಹಾಚಾರ್, ತೀ.ನಂ.ಶ್ರೀಕಂಠಯ್ಯ ಇಂಥ ಅನೇಕ ಗಣ್ಯ ವಿದ್ವಾಂಸರ ಬೋಧನೆ ಮತ್ತು ಮಾರ್ಗದರ್ಶನದಲ್ಲಿ ಮುನ್ನಡೆದು ಕನ್ನಡ ಅಧ್ಯಯನ ಸಂಸ್ಥೆಯಾಗಿ ರೂಪುಗೊಂಡು ದೇ.ಜವರೇಗೌಡ, ಹಾ.ಮಾ. ನಾಯಕ, ಎಚ್.ತಿಪ್ಪೇರುದ್ರಸ್ವಾಮಿ ಮುಂತಾದ ವಿದ್ವಾಂಸರ ನಿರ್ದೇಶನದಲ್ಲಿ ಹಲವಾರು ಬಗೆಯ ಬೋಧನೆ, ಸಂಶೋಧನೆ ಮತ್ತು ಶೈಕ್ಷಣಿಕ ಚಟುವಟಿಕೆಗಳನ್ನು ಹಮ್ಮಿಕೊಂಡು ನಿರೀಕ್ಷೆಗೆ ತಕ್ಕಂತೆ ಬೆಳೆವಣಿಗೆಯನ್ನು ಸಾಧಿಸಿದೆ.

ಹಳಗನ್ನಡ, ನಡುಗನ್ನಡ, ವಚನಸಾಹಿತ್ಯ, ದಾಸಸಾಹಿತ್ಯ, ಛಂದಸ್ಸು, ದ್ರಾವಿಡಭಾಷಾವಿಜ್ಞಾನ, ಸಂಸ್ಕೃತಿ, ಶಾಸನ, ಜಾನಪದ, ಕಾವ್ಯಮೀಮಾಂಸೆ, ಸಾಹಿತ್ಯವಿಮರ್ಶೆ, ಭಾಷಾಂತರ, ಸಾಹಿತ್ಯ ಚರಿತ್ರೆ, ಸಂಶೋಧನೆ, ಆಧುನಿಕ ಸಾಹಿತ್ಯ ಮುಂತಾದ ವಿಷಯಗಳಲ್ಲಿ ವಿಶೇಷ ತಜ್ಞರಾದವರು ಇಲ್ಲಿನ ಬೋಧಕ ಹಾಗೂ ಬೋಧಕೇತರ ಶೈಕ್ಷಣಿಕ ವರ್ಗದಲ್ಲಿರುವಂತೆಯೇ ಅನ್ಯ ಭಾಷಾ ನಿಪುಣರನ್ನೂ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಪಡೆದುಕೊಂಡಿದೆ. ಇಂಗ್ಲಿಷ್, ತಮಿಳು, ತೆಲುಗು, ಮಲಯಾಳಂ ಭಾಷೆಗೆ ಸಂಬಂಧಿಸಿದಂತೆ ವಿಶೇಷ ಪರಿಣಿತರೂ ಇಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಕಳೆದ ಮೂರೂವರೆ ದಶಕಗಳಿಂದ ಹಲವಾರು ರಾಷ್ಟ್ರಮಟ್ಟದ ಹಾಗೂ ರಾಜ್ಯಮಟ್ಟದ ಸಮ್ಮೇಳನಗಳು ಮತ್ತು ವಿಚಾರ ಸಂಕಿರಣಗಳು ಸಂಸ್ಥೆಯ ಆಶ್ರಯದಲ್ಲಿ ನಡೆದು ಕನ್ನಡ ಭಾಷೆ ಹಾಗೂ ಸಾಹಿತ್ಯಗಳನ್ನು ಶ್ರೀಮಂತವಾಗಿಸುವಲ್ಲಿ ವಿಶೇಷವಾಗಿ ನೆರವಾಗಿವೆ. ಕನ್ನಡ ಭಾಷೆ, ಸಾಹಿತ್ಯ ಮತ್ತು ಜಾನಪದಗಳಿಗೆ ಸಂಬಂಧಪಟ್ಟಂತೆ ನಿರಂತರವಾಗಿ ನಡೆದ ಇಂಥ ಸಮ್ಮೇಳನ ಹಾಗೂ ವಿಚಾರಸಂಕಿರಣಗಳಲ್ಲಿ ಹೊರಬಂದ ಮೌಲಿಕವಾದ ಕೆಲವು ವಿಚಾರಗಳು ಪುಸ್ತಕರೂಪದಲ್ಲಿ ಹೊರಬಂದಿವೆ. ಸಂಸ್ಥೆಯಲ್ಲಿ ಈ ಹಿಂದೆ ಸೇವೆಸಲ್ಲಿಸಿದ ಹಾಗೂ ಸೇವೆಸಲ್ಲಿಸುತ್ತಿರುವ ಅನೇಕ ಪ್ರಾಧ್ಯಾಪಕ, ಸಂಶೋಧಕ ಮತ್ತು ಶೈಕ್ಷಣಿಕ ಉದ್ಯೋಗಿಗಳು ತಮ್ಮ ವಿಶಿಷ್ಟ ಸಾಧನೆ ಮತ್ತು ಕೊಡುಗೆಗಳಿಗಾಗಿ ರಾಷ್ಟ್ರಮಟ್ಟದ, ರಾಜ್ಯಮಟ್ಟದ ಬಹುಮಾನಗಳನ್ನೂ ಪ್ರಶಸ್ತಿ-ಗೌರವಗಳನ್ನು ಗಳಿಸಿದ್ದಾರೆ. ಶೈಕ್ಷಣಿಕ ಸಿಬ್ಬಂದಿ ಕಾಲೇಜಿನ ವತಿಯಿಂದ ನಡೆಯುತ್ತಿರುವ ಕನ್ನಡ ಪುನರ್ಮನನ ಶಿಕ್ಷಣದ (ರಿಫ್ರೆಶರ್‌ಕೋರ್ಸ್) ಹೊಣೆಯನ್ನು ಸಂಸ್ಥೆಯ ಸಿಬ್ಬಂದಿ ನಿರ್ವಹಿಸುತ್ತಿದ್ದು ಇಂಥ ಶಿಬಿರಗಳು ಯಶಸ್ವಿಯಾಗಿ ನಡೆದಿವೆ.

ಇಂಥ ಸಂಸ್ಥೆಯಲ್ಲಿ ಇಲ್ಲಿಯವರೆಗೆ ನಿರ್ದೇಶಕರಾಗಿ ಸೇವೆಸಲ್ಲಿಸಿರುವ ಪ್ರಾಧ್ಯಾಪಕರ ಹೆಸರುಗಳು ಹೀಗಿವೆ: ದೇ.ಜವರೇಗೌಡ (1966-69), ಹಾ.ಮಾ.ನಾಯಕ (1969-84), ಎಚ್.ತಿಪ್ಪೇರುದ್ರಸ್ವಾಮಿ (1984-87), ಜೀ.ಶಂ.ಪರಮಶಿವಯ್ಯ (1987-89), ಸಿ.ಪಿ.ಕೃಷ್ಣಕುಮಾರ್ (1989-91), ಟಿ.ವಿ.ವೆಂಕಟಾಚಲಶಾಸ್ತ್ರೀ (1991-93), ಎಚ್.ಎಂ.ಚನ್ನಯ್ಯ (1993-95), ಕೆ.ಕೆಂಪೇಗೌಡ (1995-97), ಡಿ.ಕೆ.ರಾಜೇಂದ್ರ (1997-99), ಸಿ.ಪಿ.ಸಿದ್ಧಾಶ್ರಮ (11-1-1999ರಿಂದ 2-1-2001), ಅರವಿಂದ ಮಾಲಗತ್ತಿ (2-1-2001ರಿಂದ 1-1-2002), ಡಿ.ಕೆ.ರಾಜೇಂದ್ರ (1-1-2002ರಿಂದ 12-4-2002), ಸಿ.ಪಿ.ಸಿದ್ಧಾಶ್ರಮ, (13-4-2002ರಿಂದ 14-4-2004). ಅರವಿಂದ ಮಾಲಗತ್ತಿ ಪ್ರಸ್ತುತ ನಿರ್ದೇಶಕರಾಗಿದ್ದಾರೆ (2005).

**ಬೋಧನಾಂಗಗಳು :** ಸಂಸ್ಥೆಯ ಬೋಧನಾಂಗದಲ್ಲಿ ಎರಡು ವರ್ಷದ ಕನ್ನಡ ಸ್ನಾತಕೋತ್ತರ ಶಿಕ್ಷಣ ಬಹಳ ಮುಖ್ಯವಾದುದು. ಜಾಗತೀಕರಣ, ಉದಾರೀಕರಣ, ಆಧುನೀಕರಣದೊಂದಿಗೆ ನಿಕಟ ಬಾಂಧವ್ಯ ಸಾಧಿಸುವ ಹಿನ್ನೆಲೆಯಲ್ಲಿ ಪಠ್ಯಕ್ರಮದಲ್ಲಿ ಈಗ ಸಂಪೂರ್ಣವಾಗಿ ಬದಲಾವಣೆ ಮಾಡಲಾಗಿದ್ದು, ಉದ್ಯೋಗಕ್ಕಾಗಿ ಶಿಕ್ಷಣ, ಜ್ಞಾನಕ್ಕಾಗಿ ಶಿಕ್ಷಣ ಎನ್ನುವುದಕ್ಕೆಂದು ಇವೆರಡರ ಸಂಯೋಜನಾತ್ಮಕ ಮಧ್ಯಂತರ ಶಿಕ್ಷಣ ಮಾರ್ಗವನ್ನು ತರಬೇಕೆಂಬುದು ಪಠ್ಯಕ್ರಮ ರೂಪಿಸುವುದರ ಹಿಂದಿನ ಆಶಯ. ಸಂಶೋಧನೆ ಹಾಗೂ ಗಣಕಜ್ಞಾನದ ವಿಷಯಗಳನ್ನು ಪಠ್ಯದ ಭಾಗಗಳಾಗಿ ಅಳವಡಿಸಲಾಗಿದೆ.

ಭಾಷಾವಿಜ್ಞಾನ ಅಂತಾರಾಷ್ಟ್ರೀಯ ಮನ್ನಣೆ ಪಡೆದಿರುವ ಪ್ರಮುಖ ಅಧ್ಯಯನ ವಿಷಯಗಳಲ್ಲೊಂದಾಗಿದೆ. ಅಧ್ಯಯನ ಸಂಸ್ಥೆಯಲ್ಲಿ ಈ ವಿಷಯದಲ್ಲಿ ಎಂ.ಎ. ಹಾಗೂ ಸ್ನಾತಕೋತ್ತರ ಡಿಪ್ಲೊಮಾ ಅಧ್ಯಯನ ಮಾಡುವ ಸೌಲಭ್ಯವನ್ನು ಒದಗಿಸಲಾಗಿದೆ. 1972ರಲ್ಲಿ ಎಂ.ಎ. ತರಗತಿ ಪ್ರಾರಂಭಗೊಂಡಿದೆ. ಸ್ನಾತಕೋತ್ತರ ಡಿಪ್ಲೊಮಾ ತರಗತಿ 1990ರಲ್ಲಿ ಪ್ರಾರಂಭವಾಯಿತು. ಈ ವಿಭಾಗದಲ್ಲಿ ಪಿಎಚ್.ಡಿ. ಅಧ್ಯಯನಕ್ಕೂ ಅವಕಾಶ ಕಲ್ಪಿಸಲಾಗಿದೆ. ಸಂಸ್ಥೆಯಲ್ಲಿ ಕನ್ನಡ ಕಲಿಕೆಗೆ ಬರುವ ಕನ್ನಡೇತರ ವಿದ್ಯಾರ್ಥಿಗಳಿಗಾಗಿ ಕನ್ನಡ ಸರ್ಟಿಫಿಕೇಟ್ ಶಿಕ್ಷಣದ ಪ್ರಾಯೋಗಿಕ ತರಗತಿಗಳಿಗಾಗಿ ಭಾಷಾವಿಜ್ಞಾನ ವಿಭಾಗದಲ್ಲಿ ಸುಸಜ್ಜಿತ ಭಾಷಾ ಪ್ರಯೋಗಾಲಯವನ್ನು ಸ್ಥಾಪಿಸಲಾಗಿತ್ತು (1975). ಕನ್ನಡೇತರರು, ವಿದೇಶೀಯರು ಹಾಗೂ ಸಂಶೋಧಕರ ಭಾಷಾ ಅಧ್ಯಯನ ಮತ್ತು ಬೋಧನಾ ಸೌಲಭ್ಯದ ಸುಗಮತೆಯ ದೃಷ್ಟಿಯಿಂದ ಪ್ರಾರಂಭವಾದ ಈ ಭಾಷಾ ಪ್ರಯೋಗಾಲಯ ಮಹತ್ತ್ವದ್ದು. ಈಗ ಸಂಪೂರ್ಣವಾಗಿ ಆಧುನಿಕಗೊಂಡಿದೆ

ಕರ್ನಾಟಕದಲ್ಲಿ ಜಾನಪದ ಅಧ್ಯಯನಕ್ಕೆ ಒಂದು ಸ್ಥಿರವಾದ ಬುನಾದಿಯನ್ನು ಪ್ರಪ್ರಥಮವಾಗಿ ಹಾಕಿಕೊಟ್ಟ ಕೀರ್ತಿ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಗೆ ಸಲ್ಲುತ್ತದೆ. ಜಾನಪದ ಅಧ್ಯಯನಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಮನ್ನಣೆ ದೊರೆತದ್ದು 1966ರಲ್ಲಿ. ಆಗ ಕನ್ನಡ ಎಂ.ಎ. ಪಠ್ಯಕ್ರಮದಲ್ಲಿ ಜಾನಪದ ಅಧ್ಯಯನ ಸೇರ್ಪಡೆಗೊಂಡಿತು. ಜಾನಪದ ಅಧ್ಯಯನದ ಮಹತ್ತ್ವವನ್ನು ಮನಗಂಡು ಅದರ ಅಧ್ಯಯನಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಮನ್ನಣೆಯನ್ನು ದೊರಕಿಸಿಕೊಡಲು ಶ್ರಮಿಸಿದವರು ಆಗಿನ ನಿರ್ದೇಶಕರಾಗಿದ್ದ ದೇ. ಜವರೇಗೌಡರು. ಅವರೊಡನೆ ಜಾನಪದ ಅಧ್ಯಯನವನ್ನು ಬೆಳೆಸಲು ಹಾ.ಮಾ. ನಾಯಕ ಮತ್ತು ಜೀ.ಶಂ.ಪರಮಶಿವಯ್ಯನವರು ಶ್ರಮಿಸಿದರು. ಅನಂತರ ಜಾನಪದವನ್ನು ಐಚ್ಛಿಕ ವಿಷಯವಾಗಿ ಅಭ್ಯಾಸ ಮಾಡುವವರ ಮತ್ತು ಆಸಕ್ತರ ಅನುಕೂಲಕ್ಕಾಗಿ ಒಂದು ವರ್ಷದ ಸ್ನಾತಕೋತ್ತರ ಜಾನಪದ ಡಿಪ್ಲೊಮಾ ಶಿಕ್ಷಣವನ್ನೂ ಆರಂಭಿಸಲಾಯಿತು (1972). ಜಾನಪದ ಅಧ್ಯಯನಕ್ಕೇ ಪ್ರತ್ಯೇಕವಾದ ಪೂರ್ಣಪ್ರಮಾಣದ ಜಾನಪದ ಎಂ.ಎ. ಶಿಕ್ಷಣವನ್ನು ಭಾರತದಲ್ಲೇ ಮೊತ್ತಮೊದಲ ಬಾರಿಗೆ ಆರಂಭಿಸಿದ್ದು 1974ರಲ್ಲಿ.

ದಕ್ಷಿಣ ಭಾರತವನ್ನು ಒಂದು ಸಮಗ್ರ ಘಟಕವನ್ನಾಗಿ ತೆಗೆದುಕೊಂಡು ಅಧ್ಯಯನ ಮಾಡುವ ದೃಷ್ಟಿಯಿಂದ ಪ್ರಾರಂಭಗೊಂಡ (1971-72) ಎರಡು ವರ್ಷಗಳ ದಕ್ಷಿಣ ಭಾರತೀಯ ಅಧ್ಯಯನ ಎಂ.ಎ. ಇಡೀ ರಾಷ್ಟ್ರದಲ್ಲೇ ಈ ಬಗೆಯ ಶಿಕ್ಷಣದಲ್ಲಿ ಇದು ಮೊದಲನೆಯದು. ಈ ಅಧ್ಯಯನ ಕೇವಲ ಇತಿಹಾಸ ಅಥವಾ ಸಾಹಿತ್ಯಕ್ಕೆ ಮೀಸಲಾಗಿರದೆ ದಕ್ಷಿಣ ಭಾರತೀಯ ಸಾಹಿತ್ಯಗಳು, ಅದಕ್ಕೆ ಸಂಬಂಧಿಸಿದ ಪಠ್ಯಗಳು, ಇತಿಹಾಸ, ಪ್ರಾಚೀನ ಇತಿಹಾಸ, ಕಲೆ ಮತ್ತು ವಾಸ್ತುಶಿಲ್ಪ, ತತ್ತ್ವಶಾಸ್ತ್ರ ಮತ್ತು ದ್ರಾವಿಡ ಭಾಷಾ ವಿಜ್ಞಾನ ಸೇರಿ, ದಕ್ಷಿಣ ಭಾರತೀಯ ಅಧ್ಯಯನ ಅರ್ಥಪೂರ್ಣ ಶೈಕ್ಷಣಿಕ ಶಿಸ್ತಾಗಿ ವಿಶಿಷ್ಟತೆಯನ್ನು ಪಡೆದಿದೆ.

ಭಾಷಾಂತರದ ಮಹತ್ತ್ವ ದಿನೇದಿನೇ ಹೆಚ್ಚುತ್ತಿರುವುದನ್ನು ಮನಗಂಡು 1967-68ರಲ್ಲಿ ಭಾಷಾಂತರದಲ್ಲಿ ಡಿಪ್ಲೊಮಾ ಶಿಕ್ಷಣವನ್ನು ಪ್ರಾರಂಭಿಸಲಾಯಿತು. ತರುವಾಯ ಭಾಷಾಂತರದಲ್ಲಿ ಎಂ.ಫಿಲ್ ಪದವಿ ಶಿಕ್ಷಣ ಜಾರಿಗೆ ಬಂದಿತು. ಭಾಷಾಂತರಕಾರರನ್ನು ಸಿದ್ಧಪಡಿಸುವಲ್ಲಿ ಇದು ಮುಖ್ಯ ಪಾತ್ರವಹಿಸಿತು.

ಭಾರತೀಯ ಭಾಷೆಗಳು ಹಲವಾದರೂ ಭಾರತೀಯ ಸಾಹಿತ್ಯ ಒಂದೇ ಎಂಬ ಪರಿಕಲ್ಪನೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಭಾರತೀಯ ಸಾಹಿತ್ಯದ ವಿವಿಧ ಮುಖಗಳನ್ನು ಅಧ್ಯಯನ ಮಾಡುವ ಉದ್ದೇಶದಿಂದ ಸ್ನಾತಕೋತ್ತರ ಭಾರತೀಯ ಸಾಹಿತ್ಯ ಡಿಪ್ಲೊಮಾವನ್ನು ಪ್ರಾರಂಭಿಸಲಾಯಿತು (1970-71).ಯಾವುದೇ ಪದವಿಯಲ್ಲಿ ಉತ್ತೀರ್ಣರಾದವರು ಈ ಶಿಕ್ಷಣಕ್ಕೆ ಸೇರಲು ಅರ್ಹರು.

ಕನ್ನಡ ಮಾತೃಭಾಷೆಯಲ್ಲದ, ಶಿಕ್ಷಣದ ಯಾವ ಹಂತದಲ್ಲಿಯೂ ಕನ್ನಡವನ್ನು ಅಭ್ಯಾಸ ಮಾಡದಿರುವ ಕನಿಷ್ಠ ಪಕ್ಷ ಎಸ್‌ಎಸ್‌ಎಲ್‌ಸಿ. ಮಟ್ಟದಲ್ಲಿ ಉತ್ತೀರ್ಣರಾಗಿರುವ ಅಭ್ಯರ್ಥಿಗಳಿಗಾಗಿ ಕನ್ನಡ ಸರ್ಟಿಫಿಕೇಟ್ ಶಿಕ್ಷಣವನ್ನು ಪ್ರಾರಂಭಿಸಲಾಗಿದೆ (1968-69). ಕನ್ನಡ ಓದು ಬರೆಹಗಳಿಗೆ ಹಾಗೂ ಮಾತನಾಡುವುದಕ್ಕೆ ಮೊದಲ ಪ್ರಾಶಸ್ತ್ಯ ನೀಡಿ ಕನ್ನಡ ಸಾಹಿತ್ಯವನ್ನು ಸ್ಥೂಲವಾಗಿ ಪರಿಚಯ ಮಾಡಿಕೊಡುವಂತೆ ಈ ಶಿಕ್ಷಣವನ್ನು ರೂಪಿಸಲಾಗಿದೆ. ಇದನ್ನು ಯಶಸ್ವಿಯಾಗಿ ಮುಗಿಸುವವರಿಗೆ ಒಂದು ಶೈಕ್ಷಣಿಕ ವರ್ಷ ಅವಧಿಯ ಕನ್ನಡ ಡಿಪ್ಲೊಮಾ ಶಿಕ್ಷಣ ನೀಡುವ ಮೂಲಕ ಹೆಚ್ಚಿನ ಅಧ್ಯಯನಕ್ಕೆ ಅವಕಾಶ ಕಲ್ಪಿಸಲಾಗಿದೆ.

1968-69ರಲ್ಲಿ ಅಮೆರಿಕದ ಬಫೆಲೋ ಸ್ಟೇಟ್ ಕಾಲೇಜಿನ ಒಂಬತ್ತು ವಿದ್ಯಾರ್ಥಿಗಳು ಅವರ ಶಿಕ್ಷಣದ ಅಂಗವಾಗಿ ವಿದ್ಯಾರ್ಥಿ ವಿನಿಮಯ ಕಾರ್ಯಕ್ರಮದ ಅನ್ವಯ ಕನ್ನಡ ಕಲಿಯಲು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಬಂದಂದಿನಿಂದ ಕನ್ನಡ ಶಿಕ್ಷಣ ಪ್ರಾರಂಭವಾಯಿತು. ಅಂದಿನಿಂದ ವಿವಿಧ ಶೈಕ್ಷಣಿಕ ಅವಧಿಗಳಲ್ಲಿ ಅಮೆರಿಕ, ರಷ್ಯ ಮೊದಲಾದ

ದೇಶಗಳಿಂದ ವಿದೇಶೀಯರು ಬಂದು ಕನ್ನಡ ಕಲಿಯುತ್ತಿದ್ದಾರೆ. ಆರು ತಿಂಗಳ ಅವಧಿಯಲ್ಲಿ ಅವರು ಸ್ವತಂತ್ರವಾಗಿ ಓದಲು, ಬರೆಯಲು, ಮಾತನಾಡಲು ಕಲಿಯುತ್ತಾರೆ.

1996-97ರಲ್ಲಿ ಕರ್ನಾಟಕ ಸರ್ಕಾರದ ಆಶಯದಂತೆ ಆಡಳಿತ ತರಬೇತಿ ಸಹಕಾರದೊಂದಿಗೆ ಐ.ಎ.ಎಸ್., ಐ.ಪಿ.ಎಸ್., ಐ.ಎಫ್.ಎಸ್. ವರ್ಗದ ಪ್ರೊಬೇಷನರಿ ಅಧಿಕಾರಿಗಳಿಗಾಗಿ ಕರ್ನಾಟಕ ಸರ್ಕಾರ ನಡೆಸುವ ತತ್ಸಂಬಂಧವಾದ ಪರೀಕ್ಷೆಗಾಗಿ ಸರ್ಕಾರದ ಆರ್ಥಿಕ ನೆರವಿನಿಂದ ಸಂಸ್ಥೆಯ ವತಿಯಿಂದ ಕನ್ನಡ ತರಬೇತಿ ಕಾರ್ಯಕ್ರಮ ನಡೆಸಲಾಗಿದೆ.

**ಸಂಶೋಧನ ಸೌಲಭ್ಯ :** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸಂಶೋಧನ ಅಭ್ಯರ್ಥಿಗಳು ಕನ್ನಡ ಭಾಷಾಸಾಹಿತ್ಯ, ಭಾಷಾವಿಜ್ಞಾನ, ಜಾನಪದ, ಭಾಷಾಂತರ, ದಕ್ಷಿಣ ಭಾರತೀಯ ಅಧ್ಯಯನಗಳಿಗೆ ಸಂಬಂಧಿಸಿದಂತೆ ಹಾಗೂ ಅಂತರಶಾಸ್ತ್ರೀಯ ಅಧ್ಯಯನಕ್ಕೆ ಸಂಬಂಧಿಸಿದಂತೆ ಬೋಧನ ಸಿಬ್ಬಂದಿಯ ಹಾಗೂ ಶೈಕ್ಷಣಿಕ ಸಿಬ್ಬಂದಿಯ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಸಂಶೋಧನೆ ನಡೆಸಲು ಅವಕಾಶವಿದೆ. ಸಂಶೋಧನ ಅಭ್ಯರ್ಥಿಗಳು ಖಾಸಗಿಯಾಗಿ ಕೂಡ ವಿವಿಧ ವಿಷಯಗಳನ್ನು ಕುರಿತಂತೆ ಪಿಎಚ್.ಡಿ.ಗಾಗಿ ಸಂಶೋಧನೆ ನಡೆಸಲು ಅವಕಾಶವಿದೆ. ಸಂಸ್ಥೆಯಲ್ಲಿ ಕುವೆಂಪು ಕಾವ್ಯಾಧ್ಯಯನ ಪೀಠ ಸ್ಥಾಪಿತಗೊಂಡಿದ್ದು ಒಂದೊಂದು ವರ್ಷದ ಅವಧಿಗೆ ನಿವೃತ್ತ ವಿದ್ವಾಂಸರು ಈ ಪೀಠಕ್ಕೆ ಸಂದರ್ಶಕ ಪ್ರಾಧ್ಯಾಪಕರಾಗಿ ನೇಮಕವಾಗುತ್ತಾರೆ.

**ಗಣಕ ಶಾಖೆ :** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಎಲ್ಲ ವಿಭಾಗಗಳ ಗಣಕೀಕರಣದ ಮೊದಲ ಹಂತದ ಕೆಲಸಕ್ಕೆ ಮುಂದಾಗಿದೆ. ವಿದ್ಯಾರ್ಥಿಗಳಿಗಾಗಿ ಪಠ್ಯದಲ್ಲಿ ಮಾಹಿತಿ ತಂತ್ರಜ್ಞಾನ ಹಾಗೂ ಗಣಕದ ವಿಷಯವನ್ನು ಕಡ್ಡಾಯವಾಗಿ ಸೇರಿಸಲಾಗಿದ್ದು ಬೋಧನಾಂಗಗಳಲ್ಲಿ ಏಕರೂಪತೆ ಮತ್ತು ಸಂಯುಕ್ತತೆಯನ್ನು ಕಾಪಾಡಲಾಗಿದೆ.

**ಭೌತಿಕ ಸ್ವರೂಪ :** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಅಪರೂಪವಾದ ಕಟ್ಟಡ. ಎರಡು ಅಂತಸ್ತಿನ ಈ ಕಟ್ಟಡದಲ್ಲಿ ಒಟ್ಟು 35 ಕೊಠಡಿಗಳಿವೆ. ಸಂಸ್ಥೆಯಲ್ಲಿ ಸುಸಜ್ಜಿತ ಗ್ರಂಥಾಲಯವಿದೆ. ಇಲ್ಲಿ ಸುಮಾರು 35 ಸಾವಿರ ಗ್ರಂಥಗಳಿವೆ. ಕೇವಲ ಕನ್ನಡ ವಿಷಯಕ್ಕೆ ಸಂಬಂಧಿಸಿರದೆ ಬಗೆಬಗೆಯ ವಿಶ್ವಕೋಶಗಳೂ ಇಂಗ್ಲಿಷ್, ಹಿಂದಿ, ತಮಿಳು, ತೆಲುಗು, ಮಲಯಾಳಂ, ಮರಾಠಿ, ಭಾಷಾ ವಿಷಯಗಳ ಗ್ರಂಥಗಳೂ ಸೇರ್ಪಡೆಗೊಂಡಿವೆ. ಸಭೆಸಮಾರಂಭಗಳನ್ನು ನಡೆಸಲು ವಿಭಿನ್ನ ಸ್ವರೂಪದ ಮೂರು ಸಂರಚನೆಗಳಿವೆ. ಐವತ್ತು ಆಸನಗಳಿರುವ ಸಮಿತಿ ಕೊಠಡಿ, ನೂರೈವತ್ತು ಆಸನಗಳಿರುವ ಸಭಾಂಗಣ, ನೂರು ಆಸನಗಳ ಸಭಾಮನೆ ಇವೆ. ಇವುಗಳಲ್ಲಿ ವಿಚಾರಸಂಕಿರಣ, ವಿಚಾರಗೋಷ್ಠಿ, ವಿಶೇಷ ಉಪನ್ಯಾಸ, ಶಿಬಿರಗಳು ಜರಗುತ್ತವೆ.

**ಪ್ರಕಟಣೆಗಳು :** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಿಂದ ಇಲ್ಲಿಯ ವರೆಗೆ ಒಟ್ಟು 536 ಕೃತಿಗಳು ಪ್ರಕಟವಾಗಿವೆ. ಅನುವಾದಿತ ಕೃತಿಗಳು 230, ಸಂಪಾದಿತ ಕೃತಿಗಳು 131, ಜಾನಪದಕ್ಕೆ ಸಂಬಂಧಿಸಿದ ಕೃತಿಗಳು 73, ದಾಸಸಾಹಿತ್ಯಕ್ಕೆ ಸಂಬಂಧಿಸಿದಂತೆ 13, ಇತರ ಪ್ರಕಟಣೆಗಳು 44, ಇಂಗ್ಲಿಷ್ ಕೃತಿಗಳು 10 -ಹೀಗೆ ಪ್ರಕಟಣೆಯಲ್ಲಿ ಸಂಸ್ಥೆ ತನ್ನದೇ ಆದ ಛಾಪನ್ನು ಮೂಡಿಸಿದೆ.

**ಕನ್ನಡ ವಿಶ್ವಕೋಶ ಮತ್ತು ವಿಷಯ ವಿಶ್ವಕೋಶ ಯೋಜನೆ :** ಕನ್ನಡ ವಿಶ್ವ ಕೋಶ ಮೈಸೂರು ವಿಶ್ವವಿದ್ಯಾನಿಲಯದ ಹಾಗೂ ಕನ್ನಡದ ಪ್ರತಿಷ್ಠಿತ ಯೋಜನೆಗಳಲ್ಲೊಂದು. ಸಾಮಾನ್ಯ ವಿಶ್ವಕೋಶ 14 ಸಂಪುಟಗಳ ಯೋಜನೆ. ಈ ಯೋಜನೆಯಂತೆ ಇದುವರೆಗೆ 14 ಸಂಪುಟಗಳು ಬಂದಿವೆ (2004). ಕನ್ನಡ ವಿಶ್ವಕೋಶದ ಸೂಚಿ ಸಂಪುಟ ಪ್ರಕಟವಾಗಬೇಕಾಗಿದೆ.

**ಕನ್ನಡ ವಿಷಯ ವಿಶ್ವಕೋಶ :** ಸಾಮಾನ್ಯ ವಿಶ್ವಕೋಶಗಳು ಗಳಿಸಿದ ಯಶಸ್ಸನ್ನು ಪರಿಗಣಿಸಿ 30 ಸಂಪುಟಗಳಲ್ಲಿ ವಿಷಯ ವಿಶ್ವಕೋಶಗಳನ್ನು ಹೊರತರಲು ಬೃಹತ್ ಯೋಜನೆಯೊಂದನ್ನು ತಯಾರಿಸಲಾಗಿದೆ. ವಿಷಯದ ಆಯ್ಕೆ, ನಿರೂಪಣೆ, ತಾಂತ್ರಿಕತೆಗಳ ದೃಷ್ಟಿಯಿಂದ ಸಾಮಾನ್ಯ ವಿಶ್ವಕೋಶ ಹಾಗೂ ವಿಷಯ ವಿಶ್ವಕೋಶಗಳಲ್ಲಿ ಕೆಲವು ಭಿನ್ನತೆಗಳನ್ನು ಗುರುತಿಸಬಹುದು. ಸಾಮಾನ್ಯ ವಿಶ್ವಕೋಶ ಎಲ್ಲ ವರ್ಗದ ಆಸಕ್ತಿಯ ವಾಚಕರನ್ನು ಗಮನದಲ್ಲಿಟ್ಟುಕೊಂಡರೆ, ವಿಷಯ ವಿಶ್ವಕೋಶ ಆಯಾ ವಿಷಯಗಳಲ್ಲಿ ಆಸಕ್ತರನ್ನು ಮತ್ತು ಪರಿಣತರನ್ನು ಮುಖ್ಯವಾಗಿ ಗಮನದಲ್ಲಿಟ್ಟುಕೊಳ್ಳುತ್ತದೆ. 16 ವಿಜ್ಞಾನ ವಿಷಯಗಳು, 14 ಮಾನವಿಕ ವಿಷಯಗಳು -ಹೀಗೆ ಒಟ್ಟು ಸಂಪುಟಗಳನ್ನು ಸಿದ್ಧಪಡಿಸಲು ಸು.99 ಲಕ್ಷ ರೂಪಾಯಿಗಳನ್ನು ಕರ್ನಾಟಕ ಸರ್ಕಾರ ಮಂಜೂರು ಮಾಡಿತ್ತು. ಈ ಹೊಣೆಯನ್ನು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಗೇ ವಹಿಸಿಕೊಟ್ಟಿತ್ತು. ಕನ್ನಡ ವಿಷಯ ವಿಶ್ವಕೋಶದ ಮೊದಲ ಸಂಪುಟ ಕರ್ನಾಟಕ 1979ರಲ್ಲಿ ಪ್ರಕಟವಾಯಿತು. ಇದರ ಪರಿಷ್ಕಾರ ಹಾಗೂ ಪುನರ್ ಮುದ್ರಣ ಕಾರ್ಯವನ್ನು ಈಗ ಕೈಗೆತ್ತಿಕೊಳ್ಳಲಾಗಿದ್ದು ಎರಡು ಸಂಪುಟಗಳಲ್ಲಿ ಪ್ರಕಟಿಸಲು ಯೋಜಿಸಲಾಗಿದೆ. ಪ್ರಸ್ತುತ ಸಂಪುಟ ಕರ್ನಾಟಕ ವಿಷಯ ವಿಶ್ವಕೋಶದ ಮೊದಲನೆಯ ಸಂಪುಟವಾಗಿ ಪ್ರಕಟವಾವಾಗುತ್ತಿದೆ. (ನೋಡಿ: ಕನ್ನಡದಲ್ಲಿ ವಿಶ್ವಕೋಶಗಳು).

**ಎಪಿಗ್ರಾಫಿಯ ಕರ್ನಾಟಿಕ :** ಕನ್ನಡನಾಡಿನಲ್ಲಿ ಸುಮಾರು ನಲವತ್ತು ಸಾವಿರ ಶಾಸನಗಳಿರಬಹುದೆಂದು ಅಂದಾಜು ಮಾಡಲಾಗಿದೆ. 'ಎಪಿಗ್ರಾಫಿಯ ಕರ್ನಾಟಿಕ' ಹಳೆಯ ಮೈಸೂರು ಮತ್ತು ಕೊಡಗು ರಾಜ್ಯಗಳಲ್ಲಿ ಲಭ್ಯವಾದ ಶಾಸನಗಳನ್ನು ಜಿಲ್ಲಾವಾರು ಸಂಕಲಿಸಿ, ಸಂಪಾದಿಸಿ, ಪ್ರಕಟಿಸಿದ ಸಂಪುಟಗಳಿಗೆ ನೀಡಲಾದ ಒಂದು ಶೀರ್ಷಿಕೆ. ಪಾಶ್ಚಾತ್ಯ ವಿದ್ವಾಂಸರಾದ ಬೆಂಜಮಿನ್ ಲೂಯಿ ರೈಸ್ 1984ರಿಂದ 1906ರ ಅವಧಿಯಲ್ಲಿ ಹನ್ನೆರಡು ಬೃಹತ್ ಸಂಪುಟಗಳನ್ನು ಹೊರತಂದರು. ಅವರು ಒಟ್ಟು 8669 ಶಾಸನಗಳನ್ನು ಲಿಪ್ಯಂತರ, ಸಂಕ್ಷಿಪ್ತ ಭಾಷಾಂತರ ಮತ್ತು ಪೀಠಿಕೆಗಳೊಡನೆ ಪ್ರಕಟಿಸಿದರು. ಅನಂತರ ಸುಮಾರು ಐದು ದಶಕಗಳಲ್ಲಿ ಸು.5000 ಶಾಸನಗಳು ಅನ್ವೇಷಿತವಾದವು. ಇವು ಎಂ.ಎ.ಆರ್. ವಾರ್ಷಿಕ ವರದಿಗಳಲ್ಲಿಯೂ ಎಪಿಗ್ರಾಫಿಯ ಕರ್ನಾಟಿಕ ಅನುಬಂಧ ಸಂಪುಟಗಳಲ್ಲಿಯೂ ಪ್ರಕಟಗೊಂಡವು. ಇವೆಲ್ಲವನ್ನೂ ಒಳಗೊಂಡಂತೆ ಪರಿಷ್ಕರಣದ ಕೆಲಸವನ್ನು ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಗೆ ವಹಿಸಲಾಯಿತು. ಪರಿಷ್ಕರಣಕಾರ್ಯ ಪ್ರಗತಿಯಲ್ಲಿದ್ದು ಈಗ 12 ಸಂಪುಟಗಳು ಪ್ರಕಟವಾಗಿವೆ. ಉಳಿದ ಸಂಪುಟಗಳ ಕಾರ್ಯ ನಡೆದಿದೆ (ನೋಡಿ: ಎಪಿಗ್ರಾಫಿಯ ಕರ್ನಾಟಿಕ).

**ಸಂಪಾದನೆ ವಿಭಾಗ :** ಪ್ರಾಚೀನ ಹಸ್ತಪ್ರತಿಗಳು ಯಾವುದೇ ನಾಡಿನ ಅಮೂಲ್ಯ ಆಸ್ತಿ; ಅವು ಆ ಜನಾಂಗದ ಸಾವಿರಾರು ವರ್ಷಗಳ ಸಂಸ್ಕೃತಿ ಮತ್ತು ಸಾಹಿತ್ಯ ಸಂಪತ್ತಿನ ವಾಹಕಗಳು. ಸುಮಾರು ಒಂದು ಸಾವಿರದ ಮುನ್ನೂರು ವರ್ಷಗಳ ಕನ್ನಡ ಸಾಹಿತ್ಯವಾಹಿನಿ ಹರಿದುಬಂದಿರುವುದು ಕೂಡ ಈ ಹಸ್ತಪ್ರತಿಗಳಿಂದಲೇ. ಇವುಗಳಿಲ್ಲದೇ ಹೋಗಿದ್ದಿದ್ದರೆ ನಮ್ಮ ಪ್ರಾಚೀನ ಸಾಹಿತ್ಯ ಯುಗ ಕಗ್ಗತ್ತಲೆಯ ಯುಗವಾಗಿಯೇ ಉಳಿದಿರುತ್ತಿತ್ತು.

1891ರಲ್ಲಿ ಬಿ.ಎಲ್.ರೈಸ್ ಅವರ ನೇತೃತ್ವದಲ್ಲಿ ಮೈಸೂರು ಪ್ರಾಚ್ಯಕೋಶಾಗಾರ ಪ್ರಾರಂಭವಾಯಿತು. ಇಲ್ಲಿ ಸಂಸ್ಕೃತ, ಕನ್ನಡ, ಅರೇಬಿಕ್ ಮತ್ತು ಪರ್ಷಿಯನ್ ಭಾಷೆಗಳ ಅಧ್ಯಯನ ನಡೆಯತೊಡಗಿತು. ಜೊತೆಗೆ ಗ್ರಂಥ ಸಂಪಾದನ ಕಾರ್ಯವನ್ನೂ ಮಾಡತೊಡಗಿದರು. ಸರ್ಕಾರಿ ಇಲಾಖೆಯಾಗಿದ್ದ ಪ್ರಾಚ್ಯ ಕೋಶಾಗಾರ 1956ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ವಿಲೀನಗೊಂಡಿತು. ಅನಂತರ ಪ್ರಾಚ್ಯ ವಿದ್ಯಾಸಂಶೋಧನಾಲಯ ಎಂಬ ಹೆಸರಿನಲ್ಲಿ ಸಂಸ್ಥೆಯ ಕೆಲಸ ಮುಂದುವರಿಯಿತು. ಆಗ ಕನ್ನಡ ಮತ್ತು ಸಂಸ್ಕೃತ ವಿಭಾಗಗಳು ಒಟ್ಟಿಗೆ ಇದ್ದುವು.

ಕನ್ನಡದ ಕೆಲಸಗಳೆಲ್ಲ ಒಂದೇ ಸೂರಡಿಯಲ್ಲಿ ನಡೆಯಬೇಕು ಎಂಬ ಉದ್ದೇಶದಿಂದ ಮತ್ತು ಪರಸ್ಪರ ಸಂಬಂಧರಹಿತವಾಗಿದ್ದ ಭಿನ್ನಾಂಗಗಳನ್ನು ಒಂದೆಡೆ ಕೂಡಿಸಿ ಸಾವಯವ ಸಂಬಂಧವನ್ನು ಕಲ್ಪಿಸುವ ಉದ್ದೇಶದಿಂದ ಪ್ರಾಚ್ಯವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿ ವಿಭಾಗವನ್ನು ಕನ್ನಡ ಅಧ್ಯಯನ ಸಂಸ್ಥೆ ಸ್ಥಾಪಿತವಾದ ಮೇಲೆ ಸಂಸ್ಕೃತದಿಂದ ಬೇರ್ಪಡಿಸಿ ಈ ಸಂಸ್ಥೆಯಲ್ಲಿ ಸೇರಿಸಲಾಯಿತು (1966). ಕನ್ನಡ ಅಧ್ಯಯನ ಸಂಸ್ಥೆಗೆ ವರ್ಗಾಯಿಸಲ್ಪಟ್ಟು, ವಿಲೀನಗೊಂಡ ಬಳಿಕ ಸಂಪಾದನ ವಿಭಾಗ ಎಂಬ ಹೆಸರು ಪಡೆದು ಸಂಸ್ಥೆಯ ಪ್ರಧಾನ ವಿಭಾಗವಾಗಿದೆ.

ಪ್ರಾಚೀನ ಕನ್ನಡ ಹಸ್ತಪ್ರತಿಗಳ ಸಂಗ್ರಹಣೆ, ಸಂರಕ್ಷಣೆ, ಸಂಪಾದನೆ ಮತ್ತು ಪ್ರಕಟಣೆ ಸಂಪಾದನ ವಿಭಾಗದ ಕಾರ್ಯ. ಇಲ್ಲಿಯ ವಿದ್ವಾಂಸರು ಸಂಪಾದನಕಾರ್ಯದ ಜೊತೆಜೊತೆಯಲ್ಲಿಯೇ ಹಸ್ತಪ್ರತಿಗಳ ಸಂಗ್ರಹಣೆಗಾಗಿ ವ್ಯಾಪಕವಾದ ಕ್ಷೇತ್ರಕಾರ್ಯ ಕೈಗೊಂಡು ನಾಡಿನಲ್ಲೆಲ್ಲ ಸಂಚರಿಸಿ ಅವನ್ನು ಸಂಗ್ರಹಿಸಿ ತಂದು ವಿಭಾಗದ ಹಸ್ತಪ್ರತಿ ಭಂಡಾರವನ್ನು ತುಂಬುತ್ತ ಬಂದಿದ್ದಾರೆ. ಹೀಗಾಗಿ ಸಂಪಾದನ ವಿಭಾಗದ ಹಸ್ತಪ್ರತಿ ಭಂಡಾರ ಅಧಿಕ ಸಂಖ್ಯೆಯ ಹಾಗೂ ವೈವಿಧ್ಯಮಯ ಹಸ್ತಪ್ರತಿಗಳನ್ನು ಪಡೆದುಕೊಂಡು ಶ್ರೀಮಂತವಾಗಿದೆ. 19ನೆಯ ಶತಮಾನದಲ್ಲಿ ಕರ್ನಲ್ ಮೆಕೆಂಜಿಯಿಂದ ಆರಂಭವಾಗಿ ಬಿ.ಎಲ್.ರೈಸ್ ಮತ್ತು ಆರ್.ನರಸಿಂಹಾಚಾರ್ಯ ಮುಂತಾದವರು ಇಲ್ಲಿಯವರೆಗೆ ಸಂಗ್ರಹಿಸಿರುವ ಸು.10,000 ಹಸ್ತಪ್ರತಿಗಳು ಈ ಭಂಡಾರದಲ್ಲಿವೆ. ಅಲ್ಲದೆ ಸು.1,300 ಮೈಕ್ರೊ ಫಿಲ್ಮ್ ಪ್ರತಿಗಳು ಕೂಡ ಇವೆ. ಈ ಪ್ರತಿಗಳಲ್ಲಿ ಓಲೆಪ್ರತಿಗಳು, ಕಾಗದದ ಪ್ರತಿಗಳು, ಕಡತಗಳು ಮತ್ತು ಉದ್ಧರಣೆಯ ಪಟಲಗಳಿವೆ. ಇವುಗಳಲ್ಲಿ ರನ್ನ ಕವಿಯ ಗದಾಯುದ್ಧ, ಎರಡನೆಯ ನಾಗವರ್ಮನ ವರ್ಧಮಾನ ಪುರಾಣ, ಸಂಸ್ಕೃತಭಾಷೆ ಮತ್ತು ಮಲಯಾಳಂ ಲಿಪಿಯಲ್ಲಿ ಬರೆದಿರುವಂಥ ಕನ್ನಡ ವ್ಯಾಕರಣ ಶಾಸ್ತ್ರವನ್ನು ಹೇಳುವ ನಾಗವರ್ಮನ ಭಾಷಾಭೂಷಣ, ಹಸ್ತಪ್ರತಿಯ ಪ್ರತಿಯೊಂದು ಪುಟದ ನಾಲ್ಕೂ ಅಂಚುಗಳಲ್ಲಿ ವಿವಿಧ ಬಣ್ಣಗಳ ಹೂವುಗಳನ್ನು ಬಿಡಿಸಿರುವ ಬಸವಪುರಾಣ, ಕಾಲದ ದೃಷ್ಟಿಯಿಂದ ಕುಮಾರವ್ಯಾಸನಿಗೆ ತೀರ ಹತ್ತಿರವಾದ, 1544ರಲ್ಲಿ ಪ್ರತಿ ಮಾಡಲಾದ ಗದುಗಿನ ಭಾರತ, ಪಗಡೆಯಾಟ, ಅಶ್ವಶಾಸ್ತ್ರ ಮುಂತಾದ ಗ್ರಂಥಗಳ ಹಸ್ತಪ್ರತಿಗಳು ವಿಶಿಷ್ಟವಾಗಿವೆ. ಇವಲ್ಲದೆ 1852ರಲ್ಲಿ ಮಂಗಳೂರಿನ ಬಾಸೆಲ್ ಮಿಷನ್ನಿನಲ್ಲಿ ಮುದ್ರಣಗೊಂಡ ಕನ್ನಡ ಗಾದೆಗಳು ಕೃತಿಯ ಕಲ್ಲಚ್ಚಿನ ಪ್ರತಿ, ಇತ್ತೀಚಿನ ಅಳಿಯ ಲಿಂಗರಾಜನ ಪ್ರಭಾವತೀಪರಿಣಯ ಕಲಾತ್ಮಕ ಬರೆವಣಿಗೆಯ ಪ್ರತಿಗಳು ಮುಂತಾದ ವೈವಿಧ್ಯಮಯ ಹಸ್ತಪ್ರತಿಗಳನ್ನು ಈ ಭಂಡಾರ ಒಳಗೊಂಡಿದೆ. ವಸ್ತುವಿನ ದೃಷ್ಟಿಯಿಂದ ಇಲ್ಲಿ ಕಾವ್ಯ, ಇತಿಹಾಸ, ಪುರಾಣ, ವಿವಿಧಶಾಸ್ತ್ರವಿಷಯಗಳಾದ ವ್ಯಾಕರಣ, ಛಂದಸ್ಸು, ನಿಘಂಟು, ಅಲಂಕಾರ, ಜ್ಯೋತಿಷ, ಭಾಷಾಶಾಸ್ತ್ರ, ವೈದ್ಯಶಾಸ್ತ್ರ, ಯೋಗ, ಕಾಮಶಾಸ್ತ್ರ, ಅಶ್ವಶಾಸ್ತ್ರ, ಶಕುನಶಾಸ್ತ್ರ, ಮುಂತಾದವನ್ನೊಳಗೊಂಡ ಪ್ರತಿಗಳೂ ಸಂಕಲನ ಗ್ರಂಥಗಳೂ ನಾಟಕಗಳೂ -ಹೀಗೆ ಬಗೆಬಗೆಯ ಹಸ್ತಪ್ರತಿಗಳಿವೆ. ಇವೆಲ್ಲ ಜೈನ, ವೀರಶೈವ, ವೈದಿಕ ಮೊದಲಾದ ಧರ್ಮಕ್ಕೆ ಸೇರಿದವಾಗಿವೆ. ಸಂಗ್ರಹಿಸಿದ ಹಸ್ತಪ್ರತಿಗಳನ್ನು ಸಂರಕ್ಷಿಸುವುದು ಕೂಡ ಅಷ್ಟೇ ಅಗತ್ಯವಾದ ಮತ್ತು ಬಲು ಮುಖ್ಯವಾದ ಕಾರ್ಯ. ಹಾಗಾಗಿ ಇಲ್ಲಿ ಅತ್ಯಾಧುನಿಕ ವೈಜ್ಞಾನಿಕ ವಿಧಾನಗಳನ್ನು ಅನುಸರಿಸಿ ಹಸ್ತಪ್ರತಿಗಳನ್ನು ಕಾಪಾಡಿಕೊಂಡು ಬರಲಾಗುತ್ತಿದೆ. ಮೈಕ್ರೊ ಫಿಲಂ ಮಾಡಿದ ಅಪರೂಪದ ಹಸ್ತಪ್ರತಿಗಳನ್ನು ಓದುವುದಕ್ಕಾಗಿ ಇಲ್ಲಿ ಮೈಕ್ರೊ ಫಿಲ್ಮ್ ರೀಡರ್ ಸೌಲಭ್ಯವೂ ಇದೆ. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯನ್ನೂ (9 ಸಂಪುಟಗಳು; 1962-81) ಒಂದು ಮೈಕ್ರೊಫಿಲ್ಮ್ ಸೂಚಿಯನ್ನೂ (1989) ಪ್ರಕಟಿಸಲಾಗಿದೆ.

**ಹರಿದಾಸ ಸಾಹಿತ್ಯ ಯೋಜನೆ :** ಸಂಪಾದನ ವಿಭಾಗದ ಒಂದು ಉಪ ಶಾಖೆಯಾಗಿ ಇದು ಕೆಲಸ ಮಾಡುತ್ತಿದೆ. ಈ ಯೋಜನಾ ವಿಭಾಗದಿಂದ ಶಾಸ್ತ್ರೀಯ ಸಂಪಾದನ ಕಾರ್ಯದ ನಾಂದಿಯಾಯಿತು. ಅಂತೆಯೇ ಇದನ್ನು ಕಾರ್ಯರೂಪಕ್ಕೆ ತರುವ ಸಲುವಾಗಿ 1963ರಲ್ಲಿ ಯೋಜನೆ ಸಿದ್ಧವಾಗಿ ವಿಶ್ವವಿದ್ಯಾಲಯದ ಧನಸಹಾಯ ಆಯೋಗದ ಸು.3,00,000 ರೂಪಾಯಿಗಳ ನೆರವಿನೊಡನೆ 1968ರ ಜುಲೈ ತಿಂಗಳಿನಲ್ಲಿ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಇದು ಪ್ರಾರಂಭವಾಯಿತು. ಹರಿದಾಸ ಸಾಹಿತ್ಯಕ್ಷೇತ್ರದಲ್ಲಾಗಲೇ ಸಾಕಷ್ಟು ಕೆಲಸ ಮಾಡಿದ್ದ ಜಿ.ವರದರಾಜರಾಯರು (ನೋಡಿ) ಈ ಯೋಜನೆಯ ಮೇಲ್ವಿಚಾರಕರಾಗಿ ನಿಯೋಜಿತರಾಗಿದ್ದರು.

ವಾಕ್ಪರಂಪರೆಯಲ್ಲೇ ಉಳಿದಿದ್ದ ಸುಮಾರು ಇನ್ನೂರಕ್ಕೂ ಹೆಚ್ಚು ಮಂದಿ ಹರಿದಾಸರು ಹಾಡಿರುವ ಸಾವಿರಾರು ಕೀರ್ತನೆಗಳನ್ನು ಬರೆದಿಟ್ಟುಕೊಂಡಿದ್ದ ಆಸಕ್ತರಿಂದ ಈ ವಿಭಾಗದ ವಿದ್ವಾಂಸರು ನಾಡಿನ ಮೂಲೆಮೂಲೆಗಳಲ್ಲಿ ಸಂಚರಿಸಿ, ಕ್ಷೇತ್ರಕಾರ್ಯದ ಮೂಲಕ ಜನರ ಮನವೊಲಿಸಿ ಅಂತಹ ಹಸ್ತಪ್ರತಿಗಳನ್ನು ಸಂಗ್ರಹಿಸುವ ಕೆಲಸ ಮಾಡಿದರು. ಕಾಗದದ, ಓಲೆಯ ಹಾಗೂ ಹಳೆಯ ಮುದ್ರಿತ ಪ್ರತಿಗಳು ನೂರಾರು ಸಂಖ್ಯೆಯಲ್ಲಿ ಸಂಗ್ರಹವಾದವು. ಅಪರೂಪದ ಹಾಡುಗಾರರನ್ನು ಹುಡುಕಿ ಕೀರ್ತನೆಗಳನ್ನು ಹಾಡುವ ಸಂಪ್ರದಾಯ ಹೇಗೆ ಉಳಿದುಬಂದಿದೆ ಎಂಬುದನ್ನು ಅಭ್ಯಾಸಮಾಡುವ ಸಲುವಾಗಿ ನೂರಾರು ಕೀರ್ತನೆಗಳನ್ನು ಹಾಡಿಸಿ ಧ್ವನಿ ಮುದ್ರಿಸಿಕೊಳ್ಳಲಾಯಿತು. ವೈಯಕ್ತಿಕವಾಗಿ ಕೆಲವು ವಿದ್ವಾಂಸರು ಹಸ್ತಪ್ರತಿಗಳನ್ನು ದಾನವಾಗಿಯೂ ಕೊಟ್ಟಿದ್ದಾರೆ. ಈ ಹಸ್ತಪ್ರತಿಗಳಲ್ಲಿ ದೊರೆತ ಕೀರ್ತನೆಗಳನ್ನು ವಿಂಗಡಿಸಿ, ಶಾಸ್ತ್ರೀಯ, ಗ್ರಂಥಸಂಪಾದನೆಯ ಕ್ರಮವನ್ನನುಸರಿಸಿ ದಾಸರ ಅಧಿಕೃತ ಪಠ್ಯಗಳನ್ನು ಸಿದ್ಧಪಡಿಸಿಕೊಡುವ ಗುರುತರ ಜವಾಬ್ದಾರಿಯನ್ನು ಸಂಸ್ಥೆ ಹೊತ್ತು ನಿರ್ವಹಿಸುತ್ತಿದೆ. ಹೀಗೆ ಸಿದ್ಧವಾದ ಸಾಹಿತ್ಯವನ್ನು ವಿಷಯ, ಗಾತ್ರಗಳಿಗನುಗುಣವಾಗಿ ಬೇರೆ ಬೇರೆ ಸಂಪುಟಗಳಾಗಿ ಪ್ರಕಟಿಸುವುದು, ಪ್ರತಿಯೊಂದು ಸಂಪುಟಕ್ಕೂ ವಿದ್ವತ್ಪರಿಕರಗಳಾದ ಕವಿಕಾವ್ಯ ಸಂಬಂಧಿ ವಿಮರ್ಶಾತ್ಮಕ ಪೀಠಿಕೆ, ಅಭ್ಯಾಸಕ್ಕೆ ಅನುಕೂಲವಾಗುವ ಶಬ್ದಾರ್ಥಸೂಚಿ, ಲಘುಟಿಪ್ಪಣಿಗಳು, ಆಧಾರಗಳು, ಸಹಾಯಕ ಸಾಹಿತ್ಯದೊಂದಿಗೆ ಅನುಬಂಧ ಸಿದ್ಧಪಡಿಸಿ ಹರಿದಾಸ ಸಾಹಿತ್ಯವನ್ನು ಹೊರತರಲಾಗಿದೆ.

**ಭಾಷಾಂತರ ಮತ್ತು ಪಠ್ಯ ಪುಸ್ತಕ ವಿಭಾಗ :** ಕನ್ನಡವನ್ನು ಶಿಕ್ಷಣ ಮಾಧ್ಯಮವಾಗಿ ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಜಾರಿಗೆ ತರಲು ಸಹಾಯಕವಾಗುವ ದೃಷ್ಟಿಯಿಂದ ಪಠ್ಯಪುಸ್ತಕ ಮತ್ತು ಆಕರ ಗ್ರಂಥಗಳನ್ನು ಕನ್ನಡದಲ್ಲಿ ತರುವ ಉದ್ದೇಶದಿಂದ 1966-67ರಲ್ಲಿ ಈ ವಿಭಾಗವನ್ನು ಸ್ಥಾಪಿಸಲಾಯಿತು. 1969ರಲ್ಲಿ ಕೇಂದ್ರ ಸರ್ಕಾರ ಮಂಜೂರು ಮಾಡಿದ ಧನಸಹಾಯದಿಂದ ಕೆಲಸಕ್ಕೆ ಹೆಚ್ಚಿನ ಚಾಲನೆ ದೊರೆಯಿತು. ಈವರೆಗೆ ಈ ವಿಭಾಗ 232 ಪುಸ್ತಕಗಳನ್ನು ಹೊರತಂದಿದೆ. ಇವುಗಳಲ್ಲಿ ಪದವಿ ಮತ್ತು ಸ್ನಾತಕೋತ್ತರ ಶಿಕ್ಷಣಗಳಿಗೆ ಸಂಬಂಧಿಸಿದ ಪಠ್ಯಪುಸ್ತಕಗಳು, ಪರಾಮರ್ಶನ ಗ್ರಂಥಗಳು ಮತ್ತು ಆಕರ ಗ್ರಂಥಗಳಿವೆ.

ಇಷ್ಟೇ ಅಲ್ಲದೆ ಕರ್ನಾಟಕ ಸರ್ಕಾರ ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗೊಳಿಸಲು ಅಗತ್ಯವಾದ ಎಲ್ಲ ನೆರವನ್ನೂ ಈ ವಿಭಾಗ ನೀಡುತ್ತಿದೆ ಹಾಗೂ ಭಾರತ ಸರ್ಕಾರದ ವೈಜ್ಞಾನಿಕ ಮತ್ತು ತಾಂತ್ರಿಕ ಪಾರಿಭಾಷಿಕ ಪದಗಳ ಪರಿಷತ್ತು ವಿವಿಧ ವಿಷಯಗಳಿಗೆ ಸಂಬಂಧಿಸಿದ ಪಾರಿಭಾಷಿಕ ಪದಕೋಶಗಳನ್ನು ತರಲು ಹಾಕಿಕೊಂಡ ಯೋಜನೆಯಲ್ಲಿ ಕನ್ನಡಕ್ಕೆ ಸಂಬಂಧಿಸಿದ ಕೆಲಸಗಳನ್ನು ಈ ವಿಭಾಗ ಮಾಡಿಕೊಟ್ಟಿದೆ. ಪಿ.ವಿ.ಕಾಣೆಯುವರ ಧರ್ಮಶಾಸ್ತ್ರದ ಇತಿಹಾಸ, ಭಂಡಾರಕರ್ ಪ್ರಾಚ್ಯ ಸಂಶೋಧನ ಸಂಸ್ಥೆಯ ಮಹಾಭಾರತದ ಸಟೀಕಾ ಆವೃತ್ತಿ ಹಾಗೂ ಕಾನೂನು ಪುಸ್ತಕಗಳ ಕನ್ನಡ ಆವೃತ್ತಿ ಇವನ್ನು ಹೊರತರುವ ಯೋಜನೆಯನ್ನು ಕೂಡ ಈ ವಿಭಾಗ ಕೈಗೊಂಡಿದೆ.

**ಜಾನಪದ ಸಂಶೋಧನೆ :** 1966ರಲ್ಲಿ ಜಾನಪದ ವಿಷಯವನ್ನು ಕನ್ನಡ ಸ್ನಾತಕೋತ್ತರ ವಿಷಯಗಳಲ್ಲಿ ಐಚ್ಛಿಕ ವಿಷಯವಾಗಿ ಸೇರಿಸಿದ್ದರ ಪರಿಣಾಮವಾಗಿ ಈ ವಿಷಯದ ಕುರಿತು ಹೆಚ್ಚಿನ ಅಧ್ಯಯನಗಳು ಆರಂಭವಾದವು. 1974ರಲ್ಲಿ ಮೊದಲ ಬಾರಿಗೆ ಜಾನಪದ ಎಂ.ಎ. ತರಗತಿಗಳನ್ನು ಆರಂಭಿಸಲಾಯಿತು. ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಜಾನಪದ ಸಂಶೋಧನೆಗಾಗಿಯೇ ಕ್ಷೇತ್ರಜ್ಞರನ್ನೂ ನೇಮಕಗೊಳಿಸಿ ಜಾನಪದ ವಿಭಾಗದ ಸಂಶೋಧನಾಂಗವನ್ನು ಆರಂಭಿಸಲಾಯಿತು (1970). ಜಾನಪದ ಸಂಗ್ರಹ ಮತ್ತು ಸಂಪಾದನೆ ಇದರ ಮುಖ್ಯ ಗುರಿಯಾಗಿತ್ತು. ಇದರೊಂದಿಗೆ ಸಂಶೋಧನೆಗಳೂ ಆರಂಭವಾದವು.

ಜಾನಪದ ಸಂಗ್ರಹವೆಂದರೆ ಬರಿಯ ಸಾಹಿತ್ಯ ಕೃತಿಗಳ ಸಂಗ್ರಹವಲ್ಲ. ಜಾನಪದ ಸಂಸ್ಕೃತಿಗೆ ಸಂಬಂಧಿಸಿದ ಸಕಲ ಸಾಮಗ್ರಿಗಳ ಸಂಗ್ರಹ. ಈ ನಿಟ್ಟಿನಲ್ಲಿ ಜಾನಪದ ವಿಭಾಗ ಗಮನೀಯವಾದ ಕಾರ್ಯವನ್ನು ಸಾಧಿಸಿದೆ. ಅನೇಕ ಪ್ರದೇಶಗಳ ವೈವಿಧ್ಯಮಯವಾದ ಅಪಾರ ಜನಪದ ಗೀತೆಗಳನ್ನು ಧ್ವನಿಮುದ್ರಣ ಮಾಡಿಕೊಳ್ಳಲಾಗಿದೆ. ಜಾನಪದದ ಸಾಹಿತ್ಯಕಬಗೆ, ಭಾಷಿಕ ಬಗೆ, ವೈಜ್ಞಾನಿಕ ಬಗೆ, ಕ್ರಿಯಾತ್ಮಕ ಬಗೆಗಳಿಗೆ ಸಂಬಂಧಿಸಿದಂತೆ ಕಥೆ, ಗೀತೆ, ಲಾವಣಿ, ಗಾದೆ, ರಂಗೋಲಿ, ಕಸೂತಿ, ವಾಸ್ತುಶಿಲ್ಪ, ವೃತ್ತಿ ಕಲೆಗಳು, ಬುಡಕಟ್ಟುಗಳು, ಒಗಟು, ನಂಬಿಕೆ, ಸಂಪ್ರದಾಯ, ವೈದ್ಯ, ಅಡುಗೆ, ಉಡುಗೆ, ತೊಡುಗೆ- ಹೀಗೆ ಜನಪದ ಜೀವನದ ಎಲ್ಲಾ ಸ್ತರಗಳ ಅಧ್ಯಯನ ನಡೆಯುತ್ತ ಬಂದಿದೆ.

**ಕನ್ನಡ ಸಾಹಿತ್ಯ ಚರಿತ್ರೆಯ ಯೋಜನೆ :** 1964ರಲ್ಲಿ ಸಮಗ್ರವಾದ ಕನ್ನಡ ಸಾಹಿತ್ಯ ಚರಿತ್ರೆಯ ರಚನೆಯ ಯೋಜನೆ ಹಾಕಿದವರು ದೇಜಗೌ ಅವರು. ಒಂದು ದಶಕದ ಅನಂತರ ಕನ್ನಡ ಅಧ್ಯಯನ ಸಂಸ್ಥೆಯ ಸಾಹಿತ್ಯ ಚರಿತ್ರೆಯ ಮೊದಲ ಸಂಪುಟ ಹೊರಬಂತು (1974). ಹಾ.ಮಾ.ನಾ. ಇದರ ಪ್ರಧಾನ ಸಂಪಾದಕರು. ಹತ್ತು ಸಂಪುಟಗಳ ಹರವುಳ್ಳ ಈ ಸಾಹಿತ್ಯ ಚರಿತ್ರೆಯ ಸಿದ್ಧತೆಯಲ್ಲಿ ತೀ.ನಂ.ಶ್ರೀ. ಹಾಕಿಕೊಟ್ಟ ರೂಪರೇಖೆಗಳ ಅನೇಕ ಅಂಶಗಳನ್ನು ಯಥಾವತ್ತಾಗಿ ಸ್ವೀಕರಿಸಿ, ಅಗತ್ಯವೆನಿಸಿದ ಅನೇಕ ಬದಲಾವಣೆಗಳನ್ನು ಮಾಡಿಕೊಳ್ಳಲಾಗಿದೆ. ಈವರೆಗೆ ಐದು ಸಂಪುಟಗಳು ಪ್ರಕಟಗೊಂಡಿವೆ.

**ಜಾನಪದ ವಸ್ತುಸಂಗ್ರಹಾಲಯ :** ಇದು ದಕ್ಷಿಣ ಮತ್ತು ಪೂರ್ವ ಏಷ್ಯದಲ್ಲಿಯೇ ಅತಿ ದೊಡ್ಡದಾದ ಮತ್ತು ಸುಸಜ್ಜಿತವಾದ ವಸ್ತುಸಂಗ್ರಹಾಲಯವೆಂದು ಪ್ರಸಿದ್ಧಿ ಪಡೆದಿದೆ. ದೇಜಗೌ ಮತ್ತು



ಜಾನಪದ ವಸ್ತುಸಂಗ್ರಹಾಲಯ

ಹಾಮಾನಾ ಅವರ ದೂರದೃಷ್ಟಿಯ ಫಲವಾಗಿ ಇದು ಸ್ಥಾಪನೆಯಾಯಿತು (1968). 1964ರಲ್ಲಿ ಹಾಮಾನಾ ಅವರು ಇಂಡಿಯಾನ ವಿಶ್ವವಿದ್ಯಾಲಯದಲ್ಲಿದ್ದಾಗ ಅಲ್ಲಿಯ ಜಾನಪದ ವಸ್ತುಸಂಗ್ರಹಾಲಯದಿಂದ ಪ್ರಭಾವಿತರಾಗಿದ್ದರು. ದೇಜಗೌ ಅವರು ತಮ್ಮ ಮನೆಯಲ್ಲಿ ಸಂಗ್ರಹಿಸಿಕೊಂಡಿದ್ದ ವಸ್ತುಗಳನ್ನು ದಾನವಾಗಿ ವಸ್ತುಸಂಗ್ರಹಾಲಯಕ್ಕೆ ಕೊಡುವುದರ ಮೂಲಕ ವಸ್ತುಸಂಗ್ರಹಾಲಯವೊಂದು ಮಾನಸಗಂಗೋತ್ರಿಯ ಜಯಲಕ್ಷ್ಮೀವಿಲಾಸದ ಕಟ್ಟಡದಲ್ಲಿ ಸ್ಥಾಪನೆಯಾಗಲು ಅಸ್ತಿಭಾರ ಹಾಕಿದರು. ನಾಡಿನ ಹೆಸರಾಂತ ಜಾನಪದ ವಿದ್ವಾಂಸರಲ್ಲೊಬ್ಬರಾದ ಜೀ.ಶಂ. ಪರಮಶಿವಯ್ಯ (ನೋಡಿ) ಮತ್ತು ಪ್ರಸಿದ್ಧ ಚಿತ್ರ ಕಲಾವಿದರಾಗಿದ್ದ ಪಿ.ಆರ್.ತಿಪ್ಪೇಸ್ವಾಮಿ (ನೋಡಿ) ಅವರು ಸಂಗ್ರಹಾಲಯವನ್ನು ಕಟ್ಟುವ ಕಾರ್ಯದಲ್ಲಿ ದುಡಿದಿದ್ದಾರೆ. ಇವರು ನಾಡಿನ ಮೂಲೆಮೂಲೆಗಳಲ್ಲಿ ಕ್ಷೇತ್ರಕಾರ್ಯ ನಡೆಸಿ ಮಠಮಾನ್ಯಗಳನ್ನೂ ಹಳೆಯ ಮನೆಗಳನ್ನೂ ಶೋಧಿಸಿ ವಸ್ತುಗಳನ್ನು ಸಂಗ್ರಹಿಸಿದರು. ಹೀಗೆ ತಂದ ವಸ್ತುಗಳನ್ನು ವೈಜ್ಞಾನಿಕವಾಗಿ ವರ್ಗೀಕರಿಸಿ ಪ್ರದರ್ಶನಕ್ಕೆ ಇಡಲಾಗಿದೆ.

ಈಗ ವಸ್ತುಸಂಗ್ರಹಾಲಯದಲ್ಲಿ ಸು.600 ವಸ್ತುಗಳು ಸಂಗ್ರಹಗೊಂಡಿವೆ. ಇಷ್ಟು ದೊಡ್ಡ ಮೊತ್ತದ ವಸ್ತುಗಳು ಬೇರಾವ ಜಾನಪದ ವಸ್ತುಸಂಗ್ರಹಾಲಯದಲ್ಲಿಯೂ ಇಲ್ಲ. ಕರ್ನಾಟಕದ ಸಾಂಸ್ಕೃತಿಕ ಮಹತ್ತ್ವದ ಈ ಸಂಗ್ರಹಾಲಯ ಪ್ರಮುಖವಾಗಿ ಕರ್ನಾಟಕಕ್ಕೂ ಆ ಮೂಲಕ ಭಾರತದ ಸಂಶೋಧಕರಿಗೂ ವಿದ್ವಾಂಸರಿಗೂ ಮೂರು ದಶಕಗಳಿಂದ ಸ್ಫೂರ್ತಿದಾಯಕ ಆಶ್ರಯವನ್ನು ನೀಡುತ್ತ ಬಂದಿದೆ. ಇದಕ್ಕೆ ನಿದರ್ಶನವಾಗಿ 1985 ಮತ್ತು 1992ರಲ್ಲಿ ಇಂಗ್ಲೆಂಡಿನಲ್ಲಿ ಸಂಸ್ಥೆಯ ಜಾನಪದ ವಸ್ತುಸಂಗ್ರಹಾಲಯದ ವಸ್ತುಗಳು ಪ್ರದರ್ಶನಗೊಂಡಿದ್ದವು. ಬ್ರಿಟಿಷ್ ಸರ್ಕಾರ ಇದರ ವ್ಯವಸ್ಥೆ ಮಾಡಿತ್ತು. ಈ ವಿಭಾಗದಲ್ಲಿ ಸಾಹಿತಿಗಳ ಕೊಠಡಿ ಮತ್ತು 500ಕ್ಕೂ ಹೆಚ್ಚು ಕಲಾಕೃತಿಗಳುಳ್ಳ ಕಲಾಶಾಲೆಯೂ ಇದೆ. ಇನ್‌ಫೋಸಿಸ್ ಫೌಂಡೇಷನ್‌ನ ಮುಖ್ಯಸ್ಥರಾದ ಸುಧಾ ಮೂರ್ತಿ ಅವರ ಉದಾರ ದೇಣಿಗೆಯಿಂದಾಗಿ ಜಾನಪದ ವಸ್ತುಸಂಗ್ರಹಾಲಯವಿರುವ ಜಯಲಕ್ಷ್ಮೀವಿಲಾಸ ಕಟ್ಟಡ ಇತ್ತೀಚೆಗೆ ನವೀಕರಣಗೊಂಡಿದೆ.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಸ್ಥಾಪಿತವಾದ ಬಳಿಕ ಇದೇ ಮಾದರಿಯ ಸಂಸ್ಥೆಗಳು ಕರ್ನಾಟಕ, ಬೆಂಗಳೂರು, ಗುಲ್ಬರ್ಗ, ಮತ್ತು ಕುವೆಂಪು ವಿಶ್ವವಿದ್ಯಾಲಯಗಳಲ್ಲಿ ಸ್ಥಾಪಿತವಾದುವು. *

**ಕುವೆಂಪು ವಿದ್ಯಾವರ್ಧಕ ಟ್ರಸ್ಟ್ :** ಮೈಸೂರು ನಗರದ ಜಯಲಕ್ಷ್ಮೀಪುರಂ ಬಡಾವಣೆಯಲ್ಲಿರುವ ಶಿಕ್ಷಣ ಹಾಗೂ ಸಂಶೋಧನ ಸಂಸ್ಥೆ. ಕುವೆಂಪು ಅವರು ನಾಡುನುಡಿಗಳಿಗೆ ಸಲ್ಲಿಸಿರುವ ಅಪಾರ ಸೇವೆಗೆ ಕೃತಜ್ಞತೆಯಾಗಿ ಅವರಿಗೆ ಅಭಿನಂದನ ಗ್ರಂಥ ಸಲ್ಲಿಸಬೇಕೆಂಬ ಉದ್ದೇಶದಿಂದ 1964ರಲ್ಲಿ ಅಸ್ತಿತ್ವಕ್ಕೆ ಬಂತು. ತನ್ನ ಆರಂಭಿಕ ಉದ್ದೇಶಕ್ಕನುಗುಣವಾಗಿ ಕುವೆಂಪು ಅವರಿಗೆ ಗಂಗೋತ್ರಿ ಹಾಗೂ ಸಹ್ಯಾದ್ರಿ ಎಂಬ ಎರಡು ಬೃಹತ್ ಅಭಿನಂದನ ಗ್ರಂಥಗಳನ್ನು ಪ್ರಕಟಿಸಿದ ಟ್ರಸ್ಟ್ ಇಂದು ಶಿಕ್ಷಣ ವಿಭಾಗ, ಸಂಶೋಧನ ವಿಭಾಗ, ಪ್ರಕಟಣ ವಿಭಾಗ, ಜ್ಞಾನ ಪ್ರಸಾರ ವಿಭಾಗ, ಸೇವಾ ವಿಭಾಗ ಮುಂತಾದ ಹಲವು ಕ್ಷೇತ್ರಗಳಲ್ಲಿ ಗಣನೀಯ ಪಾತ್ರವಹಿಸುತ್ತಿದೆ. ನಾಡೋಜ ಪ್ರಶಸ್ತಿ ವಿಜೇತರಾದ ದೇ.ಜವರೇಗೌಡರು ಇದರ ರೂವಾರಿ.

ಸಾಮಾಜಿಕವಾಗಿ, ಆರ್ಥಿಕವಾಗಿ, ಬೌದ್ಧಿಕವಾಗಿ ಹಿಂದುಳಿದ ಹಾಗೂ ಬೇರೆ ಶಾಲೆಗಳಲ್ಲಿ ಪ್ರವೇಶ ದೊರೆಯದ, ಸಮಾಜದಿಂದ ನಿರ್ಲಕ್ಷಿತರಾದ ದೀನದಲಿತರ ಮಕ್ಕಳ ಬೌದ್ಧಿಕ ಮಟ್ಟವನ್ನು ಉತ್ತಮಪಡಿಸಿ ಆ ಮೂಲಕ ಅವರನ್ನು ಸರ್ವತಂತ್ರ ಸ್ವತಂತ್ರ ಜವಾಬ್ದಾರಿಯುತ ಪ್ರಜೆಗಳನ್ನಾಗಿ ರೂಪಿಸಬೇಕೆಂಬ ಉದ್ದೇಶದಿಂದ ಟ್ರಸ್ಟ್ ಶೈಕ್ಷಣಿಕ ಕ್ಷೇತ್ರದಲ್ಲಿ ಕಾಲಿರಿಸಿದೆ. ಪ್ರಸ್ತುತ ಬೃಂದಾವನ ಪ್ರೌಢಶಾಲೆ (1975), ಕುವೆಂಪು ಪ್ರೌಢಶಾಲೆ (1980), ವಿವೇಕಾನಂದ ಪ್ರೌಢಶಾಲೆಗಳನ್ನು ಮೈಸೂರಿನ ವಿವಿಧ ಬಡಾವಣೆಗಳಲ್ಲಿ ಟ್ರಸ್ಟ್‌ನ ವತಿಯಿಂದ ನಡೆಸಲಾಗುತ್ತಿದೆ. ವಿವೇಕಾನಂದ ಪ್ರೌಢಶಾಲೆ ಸಂಯುಕ್ತ ಕಿರಿಯ ಕಾಲೇಜಾಗಿ ಪರಿವರ್ತನೆಗೊಂಡಿದೆ (1990). ವಿಶ್ವಕವಿ ಕುವೆಂಪು ಪ್ರಥಮ ದರ್ಜೆ ಕಾಲೇಜನ್ನು ಆರಂಭಿಸಲಾಗಿದೆ (1996).

ಶಾಲೆಯ ಪ್ರಾರಂಭದ ಒಂದು ತಿಂಗಳು ಮಕ್ಕಳಿಗೆ ಸಾಮಾನ್ಯಜ್ಞಾನ ಹಾಗೂ ಬುನಾದಿ ಶಿಕ್ಷಣದ ಸೇತುಬಂಧ ತರಗತಿಗಳನ್ನು ನಡೆಸುವುದು, ಓದುಬರೆಹಗಳಲ್ಲಿ ಮಕ್ಕಳಿಗೆ ವಿಶೇಷ ತರಬೇತಿ ನೀಡುವುದು, ಪ್ರಶ್ನೋತ್ತರಗಳ ರೂಪದಲ್ಲಿ ವಿದ್ಯಾರ್ಥಿಗಳ ಮೂಲಕವೇ ಹಿಂದಿನ ದಿನದ ಪಾಠಗಳ ಪುನರಾವರ್ತನೆ ಮಾಡಿಸುವುದು, ಪ್ರಶ್ನೆ, ಚರ್ಚೆ, ಪ್ರಬಂಧ ಸ್ಪರ್ಧೆಗಳ ಮೂಲಕ ಮಕ್ಕಳ ಜ್ಞಾನಾಸಕ್ತಿ ಮತ್ತು ವಾಗ್ಮಿತೆಯ ವಿಕಾಸಕ್ಕೆ ನೆರವಾಗಿ ಅವರಲ್ಲಿ ಆತ್ಮಪ್ರತ್ಯಯ ತುಂಬುವುದು, ಪರಿಸರ ಕಾಳಜಿ ಬೆಳೆಸುವುದು, ಶಾಲೆಯ ವೇಳೆ ಮುಗಿದ ಅನಂತರ ತುಂಬ ಹಿಂದುಳಿದ ಮಕ್ಕಳ ಜೊತೆಗೆ ಭಾವಸಂಪರ್ಕ ರೂಢಿಸಿಕೊಂಡು ಅವರ ಹಿಂದುಳಿಯುವಿಕೆಗೆ ಕಾರಣಗಳನ್ನು ಗುರುತಿಸಿ ಸಮಸ್ಯೆಗಳ ಪರಿಹಾರಕ್ಕೆ ಯತ್ನಿಸುವುದು -ಇಂಥ ಹಲವು ಹತ್ತು ರೀತಿಗಳಲ್ಲಿ ಶಾಲೆಗಳ ಉಪಾಧ್ಯಾಯರ ಮತ್ತು ವಿದ್ಯಾರ್ಥಿಗಳ ನಡುವೆ ಸಹಸ್ಪಂದನವೇರ್ಪಡಿಸಲು ಟ್ರಸ್ಟ್ ಪ್ರಯತ್ನಿಸುತ್ತಿದೆ.

ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳಿಗೆ ಸಂಬಂಧಿಸಿದಂತೆ ಸಂಶೋಧಕರು ಪ್ರೌಢ ಅಧ್ಯಯನ ನಡೆಸಲು ಕೂಡ ಟ್ರಸ್ಟ್ ನೆರವು ನೀಡುತ್ತದೆ. ಮೈಸೂರು ವಿಶ್ವವಿದ್ಯಾನಿಲಯದಿಂದ ಮಾನ್ಯತೆಯನ್ನು ಪಡೆದುಕೊಂಡಿರುವ ಟ್ರಸ್ಟ್‌ನಿಂದ ಇದುವರೆಗೆ ಆರು ಮಂದಿ ವಿದ್ವಾಂಸರು ಪಿಎಚ್.ಡಿ. ಪದವಿಯನ್ನು ಪಡೆದಿದ್ದಾರೆ. ತೌಲನಿಕ ಸಾಹಿತ್ಯ ಅಧ್ಯಯನ ಕೇಂದ್ರ ಮತ್ತು ಆಫ್ರೊ-ದ್ರವಿಡಿಯನ್ ಅಧ್ಯಯನ ಕೇಂದ್ರಗಳನ್ನು ತೆರೆಯಬೇಕೆಂಬುದು ಟ್ರಸ್ಟ್‌ನ ಆಶಯವಾಗಿದೆ.

ಸಹ್ಯಾದ್ರಿ ಪ್ರಕಾಶನದ ಮೂಲಕ ಎಂಬತ್ತೈದು ಪುಸ್ತಕಗಳನ್ನು ಪ್ರಕಟಿಸಿರುವ ಟ್ರಸ್ಟ್ ಜ್ಞಾನಪ್ರಸಾರಕ್ಕೆ ಅನುವಾಗುವಂತೆ ಆಗಾಗ್ಗೆ ವಿಚಾರಗೋಷ್ಠಿ, ಕಾವ್ಯವಾಚನ, ದತ್ತಿ ಉಪನ್ಯಾಸಗಳನ್ನು ಏರ್ಪಡಿಸುತ್ತದೆ; ಕುವೆಂಪು ಸಾಹಿತ್ಯ ಪ್ರಸಾರಕ್ಕಾಗಿ ಯತ್ನಿಸುತ್ತಿದೆ. ಇಪ್ಪತ್ತು ಸಾವಿರಕ್ಕೂ

ಅಧಿಕ ಗ್ರಂಥಗಳಿಂದ ಕೂಡಿದ ಗ್ರಂಥಭಂಡಾರ, ಕುವೆಂಪು ವಸ್ತುಸಂಗ್ರಹಾಲಯ, ಕುವೆಂಪು ಮಾಹಿತಿ ಕೇಂದ್ರ, ಶ್ರೀಕುವೆಂಪು ಸ್ಮಾರಕೋದ್ಯಾನ, ಪಂಪವನ - ಇಂಥ ಹಲವಾರು ರಚನಾತ್ಮಕ ಯೋಜನೆಗಳು ಟ್ರಸ್ಟಿನ ಸಾಧನೆಗಳಾಗಿವೆ.

ಅಜ್ಞಾನ, ಮೌಢ್ಯ, ಜಾತಿಮತ ಭಾವನೆಗಳಿಂದ ಮುಕ್ತವಾದ ಸಮಾಜದ ನಿರ್ಮಾಣ ಮತ್ತು ಜನಮನದಲ್ಲಿ ವೈಜ್ಞಾನಿಕ, ವೈಚಾರಿಕ ಅಂಶಗಳನ್ನು ಮೂಡಿಸುವುದು ಟ್ರಸ್ಟ್‌ನ ಆಶಯ. ಇದಕ್ಕಾಗಿ ವಿಶ್ವಧರ್ಮ ಮಂದಿರ, ಸಮುದಾಯಭವನ ಮುಂತಾದ ನಿರ್ಮಾಣಗಳ ಜೊತೆಗೆ ಸ್ವಉದ್ಯೋಗಕ್ಕೆ ಪ್ರೇರಣೆ ನೀಡುವ ಕಾರ್ಯಾಗಾರಗಳನ್ನೂ ಹಮ್ಮಿಕೊಳ್ಳಲಾಗುತ್ತದೆ. (ಎಂ.ಎಚ್‌ಯು.)

**ಕುವೆಂಪು ವಿಶ್ವವಿದ್ಯಾಲಯ :** ಕರ್ನಾಟಕ ರಾಜ್ಯದ ವಿಶ್ವವಿದ್ಯಾಲಯಗಳಲ್ಲೊಂದು. ಶಿವಮೊಗ್ಗ, ಚಿಕ್ಕಮಗಳೂರು, ಚಿತ್ರದುರ್ಗ, ದಾವಣಗೆರೆ ಜಿಲ್ಲೆಗಳು ಇದರ ಪ್ರಾದೇಶಿಕ ವ್ಯಾಪ್ತಿಯಲ್ಲಿವೆ. ಇದರ ಆಡಳಿತ ಕೇಂದ್ರ ಬಿ.ಆರ್.ಪ್ರಾಜೆಕ್ಟ್. ಮೈಸೂರು ವಿಶ್ವವಿದ್ಯಾಲಯ ಐದನೆಯ ಪಂಚವಾರ್ಷಿಕ ಯೋಜನೆಯಲ್ಲಿ ವಿಶ್ವವಿದ್ಯಾಲಯ ಧನಸಹಾಯ ಆಯೋಗದ ನೆರವಿನಿಂದ ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಚಿತ್ರದುರ್ಗ ಜಿಲ್ಲೆಗಳಿಗೆ ಸ್ನಾತಕೋತ್ತರ ಶಿಕ್ಷಣದ ಸೌಲಭ್ಯವನ್ನು ವಿಸ್ತರಿಸುವ ಉದ್ದೇಶದಿಂದ ಬಿ.ಆರ್.ಪ್ರಾಜೆಕ್ಟ್‌ನಲ್ಲಿ ಸ್ನಾತಕೋತ್ತರ ಕೇಂದ್ರವನ್ನು ಆರಂಭಿಸಿತು (1973 ಸೆಪ್ಟೆಂಬರ್ 5). ಆಗ ಕರ್ನಾಟಕ ಸರ್ಕಾರದ ಉನ್ನತಶಿಕ್ಷಣ ಸಚಿವರಾಗಿದ್ದ ಎ.ಆರ್.ಬದರಿ ನಾರಾಯಣ ಹಾಗೂ ಮೈಸೂರು ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ದೇ.ಜವರೇಗೌಡ ಈ ಸ್ನಾತಕೋತ್ತರ ಕೇಂದ್ರವನ್ನು ಆರಂಭಿಸಲು ವಿಶೇಷವಾಗಿ ಶ್ರಮಿಸಿದರು. ಪ್ರಾರಂಭದಲ್ಲಿ ಈ ಕೇಂದ್ರದಲ್ಲಿ ಕನ್ನಡ, ಕೈಗಾರಿಕಾ ರಸಾಯನಶಾಸ್ತ್ರ, ಅರ್ಥಶಾಸ್ತ್ರ ಮತ್ತು ಗಣಿತಶಾಸ್ತ್ರ ವಿಭಾಗಗಳನ್ನು ಆರಂಭಿಸಲಾಯಿತು. ವಿಶ್ವವಿದ್ಯಾಲಯ ಸ್ಥಾಪನೆ ಕುರಿತಂತೆ ಟಿ.ಆರ್.ಜಯರಾಮನ್ ಆಯೋಗದ ವರದಿಯನ್ನು ಒಪ್ಪಿಕೊಂಡ ಕರ್ನಾಟಕ ಸರ್ಕಾರ ಈ ವಿಶ್ವವಿದ್ಯಾಲಯವನ್ನು 1987 ಜೂನ್ 29ರಂದು ಸ್ಥಾಪಿಸಿತು. ಸಹ್ಯಾದ್ರಿ ಶ್ರೇಣಿಯ ಪ್ರಾಕೃತಿಕ ಸೌಂದರ್ಯ ಮತ್ತು ಪ್ರಾಕೃತಿಕ ಸಂಪನ್ಮೂಲಗಳಿಂದ ಕೂಡಿದ ಈ ವಿಶ್ವವಿದ್ಯಾನಿಲಯ ಪರಿಸರ ಮಾಲಿನ್ಯದಿಂದ ದೂರದಲ್ಲಿದ್ದು ಉನ್ನತ ಶಿಕ್ಷಣಕ್ಕೆ ಸೂಕ್ತವಾದ ಸ್ಥಳದಲ್ಲಿದೆ. ಇದು ಶಿವಮೊಗ್ಗದಿಂದ 26ಕಿಮೀ ಭದ್ರಾವತಿಯಿಂದ 18ಕಿಮೀ ತರೀಕೆರೆಯಿಂದ 20ಕಿಮೀ ದೂರದಲ್ಲಿದೆ. ವಿಶ್ವವಿದ್ಯಾಲಯದ ಆವರಣಕ್ಕೆ ಜ್ಞಾನಸಹ್ಯಾದ್ರಿ ಎಂದು ನಾಮಕರಣ ಮಾಡಲಾಗಿದೆ. ನಾಲ್ಕು ಜಿಲ್ಲೆಗಳಲ್ಲಿರುವ 123 ಕಾಲೇಜುಗಳು ಕುವೆಂಪು ವಿಶ್ವವಿದ್ಯಾಲಯದ ವ್ಯಾಪ್ತಿಗೆ ಸೇರಿವೆ. ಇವುಗಳಲ್ಲಿ ಶಿವಮೊಗ್ಗದ ಸಹ್ಯಾದ್ರಿ ಕಲಾ ಕಾಲೇಜು ಮತ್ತು ಸಹ್ಯಾದ್ರಿ ವಿಜ್ಞಾನ ಕಾಲೇಜು, ದಾವಣಗೆರೆಯ ಬಿ.ಡಿ.ಟಿ. ಎಂಜಿನಿಯರಿಂಗ್ ಮತ್ತು ಲಲಿತ ಕಲಾ ಕಾಲೇಜುಗಳು ಘಟಕ ಕಾಲೇಜುಗಳಾಗಿವೆ. ಇವು ವಿಶ್ವವಿದ್ಯಾಲಯದ ನೇರ ಆಡಳಿತಕ್ಕೊಳಪಟ್ಟಿವೆ. 28 ಸರ್ಕಾರಿ ಕಾಲೇಜುಗಳು, 29 ಅನುದಾನಿತ ಕಾಲೇಜುಗಳು ಮತ್ತು 62 ಅನುದಾನ ರಹಿತ ಕಾಲೇಜುಗಳು ಸಂಯೋಜಿತ ಕಾಲೇಜುಗಳಾಗಿವೆ. ಕಲಾ, ವಿಜ್ಞಾನ, ವಾಣಿಜ್ಯ, ಶಿಕ್ಷಣ, ಕಾನೂನು ಮತ್ತು ಎಂಜಿನಿಯರಿಂಗ್ ನಿಕಾಯಗಳಿಗೆ ಸೇರಿದ 27 ವಿಷಯಗಳಲ್ಲಿ ಸ್ನಾತಕೋತ್ತರ ಶಿಕ್ಷಣ ಮತ್ತು ಸಂಶೋಧನೆಗೆ ಅವಕಾಶ ಕಲ್ಪಿಸಲಾಗಿದೆ. ಈ ಅಧ್ಯಯನಗಳಲ್ಲಿ ಈ ಪ್ರದೇಶದ ಸಾಂಸ್ಕೃತಿಕ ವೈವಿಧ್ಯ, ಜೀವ ವೈವಿಧ್ಯ ಹಾಗೂ ಪ್ರಾಕೃತಿಕ ಸಂಪನ್ಮೂಲಗಳನ್ನು ಸಂರಕ್ಷಿಸುವ, ಅಭಿವೃದ್ಧಿಪಡಿಸುವ ಹಾಗೂ ಸಂಶೋಧಿಸುವ ಪ್ರಯತ್ನ ಮಾಡಲಾಗುತ್ತಿದೆ.

330 ಎಕರೆಗಳ ವ್ಯಾಪ್ತಿಯುಳ್ಳ ಜ್ಞಾನಸಹ್ಯಾದ್ರಿ ಆವರಣ ಸುಂದರವಾದ ಕಾಡಿನ ಪರಿಸರದಲ್ಲಿದೆ. ಈ ಆವರಣದಲ್ಲಿ ಆಡಳಿತ ಭವನ, ವಸ್ತುಸಂಗ್ರಹಾಲಯ, ಗ್ರಂಥಾಲಯ, ಶೈಕ್ಷಣಿಕ ಕಟ್ಟಡ, ವಿಜ್ಞಾನ ಭವನ, ವಿದ್ಯಾರ್ಥಿಗಳಿಗೆ ಹಾಗೂ ಉದ್ಯೋಗಸ್ಥ ಮಹಿಳೆಯರಿಗೆ ಪ್ರತ್ಯೇಕ ವಸತಿ ನಿಲಯ, ಕುಲಪತಿ ಭವನ, ಅಥಿತಿ ಗೃಹ, ಆರೋಗ್ಯ ಕೇಂದ್ರ ಮತ್ತು ಅಧ್ಯಾಪಕ, ಅಧ್ಯಾಪಕೇತರ ನಿವಾಸಗಳಿಗೆ ಅಗತ್ಯವಾಗಿ ಬೇಕಾಗಿರುವ ಹಲವಾರು ಕಟ್ಟಡಗಳನ್ನು ಕಟ್ಟಲು ಕ್ರಮ ತೆಗೆದುಕೊಳ್ಳಲಾಗುತ್ತಿದೆ. ಕಲಾ ನಿಕಾಯದಲ್ಲಿ 5 ಭಾಷಾ ವಿಭಾಗಗಳು ಮತ್ತು 4 ಸಮಾಜವಿಜ್ಞಾನ ವಿಭಾಗಗಳಿವೆ. ಕನ್ನಡ ವಿಭಾಗವನ್ನು ಕನ್ನಡ ಅಧ್ಯಯನ ಸಂಸ್ಥೆಯಾಗಿ ಅಭಿವೃದ್ಧಿಪಡಿಸಲಾಗಿದ್ದು ಇದಕ್ಕೆ ಕನ್ನಡ ಭಾರತಿ ಎಂದು ನಾಮಕರಣ ಮಾಡಲಾಗಿದೆ. ಜಾನಪದ, ಆಧುನಿಕ ಕನ್ನಡ ಸಾಹಿತ್ಯ, ಸಾಹಿತ್ಯ ತತ್ತ್ವ ಮತ್ತು ವಿಮರ್ಶೆ ಹಾಗೂ ತೌಲನಿಕ ಅಧ್ಯಯನ ವಿಷಯಗಳಲ್ಲಿ ವಿಶೇಷ ಅಧ್ಯಯನಕ್ಕೆ ಅವಕಾಶ ಕಲ್ಪಿಸಲಾಗಿದೆ. ಜಾನಪದ ವಸ್ತುಸಂಗ್ರಹಾಲಯ ಮತ್ತು ಕನ್ನಡ ಗಣಕ ಕೇಂದ್ರಗಳನ್ನು ಕನ್ನಡ ಭಾರತಿ ಒಳಗೊಂಡಿದೆ. ರಾಜ್ಯಶಾಸ್ತ್ರ ವಿಭಾಗದಲ್ಲಿ ಅಬ್ದುಲ್ ನಜೀರ್ ಸಾಬ್ ಪೀಠ, ಅಂಬೇಡ್ಕರ್ ಅಧ್ಯಯನ ಕೇಂದ್ರ ಹಾಗೂ ಶಾಂತವೇರಿ ಗೋಪಾಲಗೌಡ ಪೀಠಗಳು ಕಾರ್ಯ ನಿರ್ವಹಿಸುತ್ತಿವೆ. ಅನೇಕ ದತ್ತಿ ಉಪನ್ಯಾಸಗಳನ್ನು ವಿಶ್ವವಿದ್ಯಾಲಯ ಏರ್ಪಡಿಸುತ್ತಿದೆ.

ವಿಜ್ಞಾನ ನಿಕಾಯದ ಭೌತವಿಜ್ಞಾನ, ರಸಾಯನವಿಜ್ಞಾನ, ಕೈಗಾರಿಕಾ ರಸಾಯನವಿಜ್ಞಾನ, ಗಣಿತವಿಜ್ಞಾನ, ಗಣಕವಿಜ್ಞಾನ, ಎಂ.ಸಿ.ಎ., ಭೂವಿಜ್ಞಾನ ಮತ್ತು ಮಾನವಸಂಪನ್ಮೂಲ ವಿಭಾಗ ಹಾಗೂ ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗಗಳಿವೆ. ಜೈವಿಕ ತಂತ್ರಜ್ಞಾನ, ಪರಿಸರವಿಜ್ಞಾನ, ಆನ್ವಯಿಕ ಸಸ್ಯವಿಜ್ಞಾನ ಮತ್ತು ಆನ್ವಯಿಕ ಪ್ರಾಣಿವಿಜ್ಞಾನ ಈ ನಾಲ್ಕು ಜೀವವಿಜ್ಞಾನ ವಿಭಾಗಗಳಿವೆ.

ಕುವೆಂಪು ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ ಬರುವ ಸಹ್ಯಾದ್ರಿ ಪರ್ವತ ಶ್ರೇಣಿ ಜಗತ್ತಿನ ಅತ್ಯಂತ ಮಹತ್ತ್ವಪೂರ್ಣ ಜೀವ ವೈವಿಧ್ಯ ಕೇಂದ್ರಗಳಲ್ಲಿ ಒಂದಾಗಿದ್ದು ಜೀವವಿಜ್ಞಾನ ವಿಭಾಗಗಳು ಈ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನೆ ನಡೆಸುತ್ತಿವೆ. ರಸಾಯನವಿಜ್ಞಾನ ಮತ್ತು ಕೈಗಾರಿಕಾ ರಸಾಯನವಿಜ್ಞಾನ ವಿಭಾಗಗಳು ಕೈಗಾರಿಕೆಗಳೊಡನೆ ಸಂಪರ್ಕ ಹೊಂದಿ, ಅವುಗಳಿಗೆ ಸಲಹೆ ನೀಡುತ್ತಿವೆ.

ಮೈಸೂರು ವಿಶ್ವವಿದ್ಯಾನಿಲಯ ದಾವಣಗೆರೆಯಲ್ಲಿ ಆರಂಭ ಮಾಡಿದ ಸ್ನಾತಕೋತ್ತರ ಕೇಂದ್ರ (1979) ಈ ವಿಶ್ವವಿದ್ಯಾನಿಲಯಕ್ಕೆ ಸೇರಿದೆ. ಇತ್ತೀಚೆಗೆ (2002-03) ವಿಶ್ವವಿದ್ಯಾನಿಲಯದಲ್ಲಿ ಕನ್ನಡ, ಇಂಗ್ಲಿಷ್, ಹಿಂದಿ, ಸಂಸ್ಕೃತ,



ಸ್ನಾತಕೋತ್ತರ ಕೇಂದ್ರ, ದಾವಣಗೆರೆ

ಉರ್ದು, ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ಗಣಿತವಿಜ್ಞಾನ, ರಾಜ್ಯಶಾಸ್ತ್ರ, ವಾಣಿಜ್ಯಶಾಸ್ತ್ರ ಈ ವಿಷಯಗಳಲ್ಲಿ ಸ್ನಾತಕೋತ್ತರ ದೂರ ಶಿಕ್ಷಣ ಕೋರ್ಸುಗಳನ್ನು ಆರಂಭಿಸಲಾಗಿದೆ. ವಿಶ್ವವಿದ್ಯಾನಿಲಯದಲ್ಲಿದ್ದುಕೊಂಡು ಅಭ್ಯಾಸ ಮಾಡಲು ಸಾಧ್ಯವಾಗದವರಿಗೆ ಶಿಕ್ಷಣ ನೀಡುವುದು ಇದರ ಉದ್ದೇಶ.

ಪ್ರಸಾರಾಂಗ ಈ ವಿಶ್ವವಿದ್ಯಾನಿಲಯದ ಜ್ಞಾನವಿಸ್ತರಣೆ ಮತ್ತು ಪ್ರಕಟಣ ವಿಭಾಗ; ವಿಶ್ವವಿದ್ಯಾಲಯ ಮತ್ತು ಜನಸಾಮಾನ್ಯರ ನಡುವೆ; ಸಂಪರ್ಕ ಕಲ್ಪಿಸುವ ಸಾಧನ. ಇದು ವಿಶ್ವವಿದ್ಯಾನಿಲಯದ ವ್ಯಾಪ್ತಿಯಲ್ಲಿ ಬರುವ ನಾಲ್ಕು ಜಿಲ್ಲೆಗಳಲ್ಲಿ, ಸ್ಥಳೀಯ ಸಂಘ ಸಂಸ್ಥೆಗಳ ಸಹಯೋಗದೊಡನೆ ಇದುವರೆಗೆ 75 ಅರಿವು ವಿಸ್ತರಣೋಪನ್ಯಾಸ

ಕಾರ್ಯಕ್ರಮಗಳನ್ನು ಏರ್ಪಡಿಸಿದೆ. ಈ ಉಪನ್ಯಾಸಗಳನ್ನು ವಿಸ್ತರಣೋಪನ್ಯಾಸ ಮಾಲೆಯಲ್ಲಿ ಪ್ರಕಟಿಸಲಾಗುತ್ತಿದೆ. ಈ ಮಾಲೆಯಲ್ಲಿ ಇದುವರೆಗೂ 20



ವಿಜ್ಞಾನ ವಿಭಾಗ, ಕುವೆಂಪು ವಿಶ್ವವಿದ್ಯಾಲಯ

ಪುಸ್ತಕಗಳನ್ನು ಪ್ರಕಟಿಸಲಾಗಿದೆ. ಪಠ್ಯ ಪುಸ್ತಕ ಮಾಲೆಯಲ್ಲಿ ಆರು ಪುಸ್ತಕಗಳನ್ನು ಪ್ರಕಟಿಸಲಾಗಿದೆ. ವಿಜ್ಞಾನ, ಮಾನವಿಕ ಹಾಗೂ ಸಮಾಜ ವಿಜ್ಞಾನಗಳಲ್ಲಿ ವಿದ್ಯುತ್ ಪತ್ರಿಕೆಗಳನ್ನು ಪ್ರಕಟಿಸಲು ವಿಶ್ವವಿದ್ಯಾಲಯ ಉದ್ದೇಶಿಸಿದೆ. ಈಗಾಗಲೇ ವಿಜ್ಞಾನದ ವಿದ್ಯುತ್ ಪತ್ರಿಕೆ ಪ್ರಕಟಿಸಲಾಗಿದೆ. ತ್ರೈಮಾಸಿಕ ವಾರ್ತಾಪತ್ರವನ್ನು ಪ್ರಕಟಿಸಲಾಗುತ್ತಿದೆ. ಆಗಾಗ ವಿಚಾರ ಸಂಕಿರಣಗಳನ್ನು ಏರ್ಪಡಿಸಿ, ಅವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲಾಗಿದೆ. ಗ್ರಂಥಾಲಯಕ್ಕೆ ಸುಸಜ್ಜಿತವಾದ ಕಟ್ಟಡವಿದೆ. ಇದರಲ್ಲಿ ಆಧುನಿಕ ಗ್ರಂಥಾಲಯಕ್ಕೆ ಬೇಕಾಗಿರುವ ಎಲ್ಲ ಸೌಲಭ್ಯಗಳನ್ನೂ ಒದಗಿಸಲಾಗಿದೆ. 52000 ಗ್ರಂಥಗಳು ಮತ್ತು 227 ನಿಯತಕಾಲಿಕೆಗಳಿವೆ. ಸಿಡಿ ರೋಂ ಡೇಟಾ ಬೇಸ್, ಇ ಮೇಲ್ ಮತ್ತು ಇಂಟರ್‌ನೆಟ್ ಸೌಲಭ್ಯವನ್ನು ಒದಗಿಸಲಾಗಿದೆ. ಡಿಜಿಟಲ್ ಲೈಬ್ರರಿಯನ್ನೂ ರೂಪಿಸಲು ಪ್ರಯತ್ನ ನಡೆಯುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಸುಸಜ್ಜಿತವಾದ ಗಣಕ ಕೇಂದ್ರವಿದೆ. ವಿಶ್ವವಿದ್ಯಾನಿಲಯದ ಆಡಳಿತ, ಹಣಕಾಸು ವ್ಯವಹಾರ ಹಾಗೂ ಪರೀಕ್ಷಾ ಸಂಬಂಧವಾದ ಮಾಹಿತಿಗಳನ್ನೂ ದಾಖಲೆಗಳನ್ನೂ ಕಂಪ್ಯೂಟರೀಕರಿಸಲಾಗಿದೆ. ಶಿವಮೊಗ್ಗ ನಗರದಲ್ಲಿರುವ ಪರೀಕ್ಷಾಂಗ ಕಚೇರಿಯಲ್ಲಿ ಪರೀಕ್ಷಾ ಸಂಬಂಧವಾಗಿ ಮಾಡಿರುವ ಕಂಪ್ಯೂಟರೀಕರಣ ವ್ಯವಸ್ಥೆ ತುಂಬ ಅಚ್ಚುಕಟ್ಟಾಗಿದೆ.

ಸಾಕ್ಷರತಾ ಯೋಜನೆ ಕುವೆಂಪು ವಿಶ್ವವಿದ್ಯಾನಿಲಯದ ವಿಶಿಷ್ಟವಾದ ಯೋಜನೆ. ಇದು ಜನ ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡುವ ಸ್ನಾತಕ ತರಗತಿಯ ವಿದ್ಯಾರ್ಥಿಗಳಿಗೆ ನಿರ್ದಿಷ್ಟ ಅಂಕಗಳನ್ನು ನೀಡುವ ವ್ಯವಸ್ಥೆ ಮಾಡಲಾಗಿದ್ದು, ಸ್ನಾತಕೋತ್ತರ ತರಗತಿಗಳಿಗೆ ಈ ಅಂಕಗಳನ್ನು ಪರಿಗಣಿಸಿ ಪ್ರವೇಶ ನೀಡಲಾಗುತ್ತಿದೆ. ಈ ವಿಶಿಷ್ಟವಾದ ಯೋಜನೆಯನ್ನು ಇತರ ವಿಶ್ವವಿದ್ಯಾನಿಲಯಗಳಲ್ಲಿಯೂ ಅಳವಡಿಸಿಕೊಳ್ಳಲು ಶಿಫಾರಸು ಮಾಡಲಾಗಿದೆ. ವಿದ್ಯಾರ್ಥಿಗಳ ಅನುಕೂಲಕ್ಕಾಗಿ ವಿದ್ಯಾರ್ಥಿ ಕ್ಷೇಮಪಾಲನಾ ನಿರ್ದೇಶನಾಲಯ ಸ್ಥಾಪಿಸಲಾಗಿದೆ. ಇದಲ್ಲದೆ ವಿಶ್ವವಿದ್ಯಾನಿಲಯ ಉದ್ಯೋಗ ಮಾರ್ಗದರ್ಶಿ ಕೇಂದ್ರ ಸ್ಥಾಪಿಸಿದೆ. ಆ ಮೂಲಕ ವಿದ್ಯಾರ್ಥಿಗಳಿಗೆ ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗೆ ಮತ್ತು ಉದ್ಯೋಗಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ಒದಗಿಸಿ ಉಪಯುಕ್ತ ಸಲಹೆಗಳನ್ನು ನೀಡಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಸುಸಜ್ಜಿತವಾದ ಆರೋಗ್ಯ ಕೇಂದ್ರವಿದೆ.

ಇತಿಹಾಸ ಪ್ರಸಿದ್ಧ ಕೆಳದಿಯ ರಾಮೇಶ್ವರ ದೇವಾಲಯದ ಶಿಲ್ಪವೊಂದರ ಆಕೃತಿಯನ್ನು ವಿಶ್ವವಿದ್ಯಾನಿಲಯ ತನ್ನ ಲಾಂಛನವಾಗಿ ಬಳಸಿಕೊಂಡಿದೆ. ಹಂಸ ಮತ್ತು ಗಜದ ಅನ್ಯೋನ್ಯ ಹಾಗೂ ಅಭೇದ ಸಂಬಂಧವನ್ನು ಸೂಚಿಸುವ ಈ ಆಕೃತಿ ಸುಂದರವೂ ಅರ್ಥಪೂರ್ಣವೂ ಆಗಿದೆ. ಆನೆ ಶಕ್ತಿಯನ್ನೂ ಗಾಂಭೀರ್ಯವನ್ನೂ ಧೀಮಂತಿಕೆಯನ್ನೂ ಸೂಚಿಸಿದರೆ, ಹಂಸ ಪರಿಶುದ್ಧತೆಯನ್ನೂ ವಿವೇಕವನ್ನೂ ಪೂರ್ಣ ಜ್ಞಾನವನ್ನೂ ಪ್ರತಿಮಾತ್ಮಕವಾಗಿ ಸೂಚಿಸುತ್ತದೆ. ವ್ಯಕ್ತಿಯ ಪೂರ್ಣ ವಿಕಾಸ, ಜ್ಞಾನ-ವಿಜ್ಞಾನ-ಶಕ್ತಿ-ಗಾಂಭೀರ್ಯ-ಪರಿಶುದ್ಧತೆಗಳ ಅರ್ಥಪೂರ್ಣ ಸಂಯೋಗದ ಪರಿಣಾಮ ಫಲವಾಗಿರುತ್ತದೆ ಎಂಬ ಉನ್ನತ ಧ್ಯೇಯ ಈ ಶಿಲ್ಪಕೃತಿಯದು.

ಕುವೆಂಪು ವಿಶ್ವವಿದ್ಯಾನಿಲಯದ ಮೊದಲ ಕುಲಪತಿ ಶಾಂತಿನಾಥ ದೇಸಾಯಿ (1988-90). ಅನಂತರ ಎಂ.ಆರ್.ಗಜೇಂದ್ರಗಡ್ (1991-96), ಪಿ.ವೆಂಕಟರಾಮಯ್ಯ (1996-99), ಎಸ್.ಪಿ.ಹಿರೇಮಠ (1999-2002), ಸಿ.ಎಸ್.ಬಾಗೇವಾಡಿ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ (ಹಂಗಾಮಿ) ಸೇವೆ ಸಲ್ಲಿಸಿದ್ದಾರೆ. ಈಗಿನ ಕುಲಪತಿ ಪ್ರಸಿದ್ಧ ಗಣಕ ವಿಜ್ಞಾನಿ ಕೆ.ಚಿದಾನಂದಗೌಡ (2002ರಿಂದ).

ಈ ವಿಶ್ವವಿದ್ಯಾನಿಲಯಕ್ಕೆ ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ನ್ಯಾಕ್ ಸಮಿತಿ ಮೂರು ನಕ್ಷತ್ರಗಳ ಮಾನ್ಯತೆ ನೀಡಿದೆ. (ಟಿ.ಎನ್.ಎಸ್.)

**ಕುಶಾಲನಗರ :** ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ಒಂದು ಪಟ್ಟಣ. ಮಡಿಕೇರಿಯಿಂದ 30ಕಿಮೀ ಪೂರ್ವಕ್ಕಿದೆ. ಜನಸಂಖ್ಯೆ 13262. ಇದರ ಪೂರ್ವದ ಬದಿಗಾಗಿ ಕಾವೇರಿ ನದಿ ಹರಿಯುತ್ತದೆ. ಕಾವೇರಿ ನದಿಗೆ ಇಲ್ಲಿ ಕಳೆದ ಶತಮಾನದಲ್ಲೇ ಕಟ್ಟಿದ ಸೇತುವೆಯಿದೆ. ಮಡಿಕೇರಿ-ಮೈಸೂರು ಮುಖ್ಯ ರಸ್ತೆ ಈ ಊರ ಮೂಲಕ ಹಾದುಹೋಗುವುದಲ್ಲದೆ ಸಿದ್ದಾಪುರ, ಹೆಬ್ಬಾಲೆ ಮತ್ತು ಸೋಮವಾರಪೇಟೆ ಗಳಿಗೂ ರಸ್ತೆಗಳಿವೆ. ಸಾರಿಗೆ ಸಂಚಾರದ ಸೌಲಭ್ಯ ಉತ್ತಮವಾಗಿರುವುದರಿಂದ ಇದೊಂದು ಮುಖ್ಯ ವ್ಯಾಪಾರಸ್ಥಳ. ಕೊಡಗಿನಲ್ಲಿ ಎರಡು ಸಂಸ್ಕರಣ ಸಹಕಾರಿ ಸಂಘ ಮತ್ತು ಕಾರ್ಖಾನೆಗಳಲ್ಲಿ ಒಂದು ಕುಶಾಲನಗರದಲ್ಲಿದೆ.

1773ರಲ್ಲಿ ಕೊಡಗಿಗೆ ಮೊದಲಬಾರಿಗೆ ದಂಡೆತ್ತಿ ಬಂದಿದ್ದ ಹೈದರ್ ಅಲಿ ಆಗ ಒಂದು ಹಳ್ಳಿಯಾಗಿದ್ದ ಈ ಸ್ಥಳಕ್ಕೆ, ತಾನು ಅಲ್ಲಿದ್ದಾಗ ತನಗೆ ದೊರೆತ ಒಂದು ಸಂತೋಷದ ವರ್ತಮಾನದ ನೆನಪಿಗಾಗಿ ಕುಶಾಲ್ ನಗರವೆಂದು ಹೆಸರಿಟ್ಟ. ಟಿಪ್ಪುಸುಲ್ತಾನ ಇಲ್ಲಿ ಒಂದು ಕೋಟೆಯನ್ನು ಕಟ್ಟಿಸಿ ಸೈನ್ಯ ಠಾಣ್ಯ ಮಾಡಿದ್ದ. 1789ರಲ್ಲಿ ದೊಡ್ಡ ವೀರರಾಜೇಂದ್ರ ಒಡೆಯ ಈ ಕೋಟೆಯನ್ನು ಹಿಡಿದುಕೊಂಡ. ಈಗಲೂ ಈ ಕೋಟೆಯ ಕೆಲವು ಅವಶೇಷಗಳನ್ನು ಕುಶಾಲನಗರದಲ್ಲಿ ಕಾಣಬಹುದು. 1834ರಲ್ಲಿ ಬ್ರಿಟಿಷರು ಕೊಡಗನ್ನು ತಮ್ಮ ಆಡಳಿತಕ್ಕೊಳಪಡಿಸಿದ ಮೇಲೆ ಆಗ ಬ್ರಿಟಿಷ್ ಆಡಳಿತಾಧಿಕಾರಿಯಾಗಿದ್ದ ಕರ್ನಲ್ ಫ್ರೇಸರ್, ಅದುವರೆಗೆ ನಂಜರಾಜಪಟ್ಟಣದಲ್ಲಿದ್ದ ತಾಲ್ಲೂಕು ಅಧಿಕಾರಿಗಳ ಕಚೇರಿಯನ್ನು ಇಲ್ಲಿಗೆ ವರ್ಗಾಯಿಸಿ ಇದಕ್ಕೂ ಫ್ರೇಸರ್‌ಪೇಟೆ ಎಂದು ತನ್ನ ಹೆಸರಿಟ್ಟ. 1895ರಲ್ಲಿ ತಾಲ್ಲೂಕು ಕಛೇರಿ ಇಲ್ಲಿಂದ ಸೋಮವಾರಪೇಟೆಗೆ ವರ್ಗಾವಣೆಯಾಯಿತು.



ತೂಗುಸೇತುವೆ, ಕುಶಾಲನಗರ

ಇಲ್ಲಿ ಮಡಿಕೇರಿಗಿಂತ ಮಳೆ ಮತ್ತು ಚಳಿ ಕಡಿಮೆಯಾಗಿರು ವುದರಿಂದ ಆ ಕಾಲಗಳಲ್ಲಿ ಬ್ರಿಟಿಷರು ತಮ್ಮ ಕಛೇರಿಗಳನ್ನು ಇಲ್ಲಿಗೆ ವರ್ಗಾಯಿಸುತ್ತಿದ್ದರು. ಕುಶಾಲನಗರಕ್ಕೆ ಹೊಂದಿಕೊಂಡಂತೆ ಕಾವೇರಿ ನಿಸರ್ಗಧಾಮವಿದೆ. 65 ಎಕರೆ ವಿಸ್ತಾರ ಪ್ರದೇಶದಲ್ಲಿರುವ ಈ ತಾಣ ಪ್ರಕೃತಿ ಪ್ರಿಯರಿಗೊಂದು ಆಕರ್ಷಕ ತಾಣ. ಹಸುರು ಬಿದಿರು ಮೆಳೆಗಳಿಂದ ಕಂಗೊಳಿಸುತ್ತಿರುವ ದ್ವೀಪದ ಸುತ್ತಲೂ ಕಾವೇರಿ ನದಿ ಹರಿಯುತ್ತಿದೆ.

ದ್ವೀಪದಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ತೂಗುಸೇತುವೆ ನಿರ್ಮಿಸಲಾಗಿದೆ. ನದಿಯಲ್ಲಿ ದೋಣಿ ವಿಹಾರದ ವ್ಯವಸ್ಥೆ ಇದೆ. ಈ ನಿಸರ್ಗಧಾಮದಲ್ಲಿ ಬಿದಿರು ಮೆಳೆ ಸೇರಿದಂತೆ ಅನೇಕ ಔಷಧ ಸಸ್ಯಗಳಿವೆ. ಇಲ್ಲಿ ಮರಗಳ ಮೇಲೆ ವಸತಿ ನಿರ್ಮಿಸಲಾಗಿದೆ. ಪ್ರವಾಸಿಗರಿಗಾಗಿ ಕೇವಲ ಮರದಿಂದಲೇ ನಿರ್ಮಿಸಿರುವ ಅತಿಥಿಗೃಹಗಳಿವೆ. ಕಾಡಿನಲ್ಲಿ ಜಿಂಕೆಗಳ ಹಿಂಡಿನ ದೃಶ್ಯ ಕಂಡುಬರುತ್ತದೆ. ಆನೆಸವಾರಿ ಇಲ್ಲಿಯ ಆಕರ್ಷಣೆಗಳಲ್ಲೊಂದಾಗಿದೆ. (ಡಿ.ಎನ್.ಕೆ.)

**ಕುಷ್ಟಗಿ :** ಕೊಪ್ಪಳ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಆ ತಾಲ್ಲೂಕಿನ ಕೇಂದ್ರ. ತಾಲ್ಲೂಕಿನ ವಿಸ್ತೀರ್ಣ 1,360ಚ.ಕಿಮೀ. ಜನಸಂಖ್ಯೆ 2,39,259. ಕುಷ್ಟಗಿ, ಹನಮಸಾಗರ, ಗುಡದೂರು ಮತ್ತು ತಾವರಗೇರಿ ಎಂಬ ನಾಲ್ಕು ಹೋಬಳಿಗಳೂ ಒಟ್ಟು 176 ಹಳ್ಳಿಗಳೂ ಈ ತಾಲ್ಲೂಕಿನಲ್ಲಿವೆ.

ತಾಲ್ಲೂಕಿನ ಬಹುಭಾಗ ಪ್ರಿ-ಕೇಂಬ್ರಿಯನ್ ಮತ್ತು ಕೇಂಬ್ರಿಯನ್ ಯುಗದಲ್ಲಿ ನಿರ್ಮಾಣಗೊಂಡ ಭೂಪದರಗಳಿಂದ ಕೂಡಿದೆ. ಇಲ್ಲಿಯ ಬಹುಪಾಲು ಶಿಲೆಗಳು ಧಾರವಾಡ ಶಿಲಾವರ್ಗಕ್ಕೆ ಸೇರಿದವು. ಕಲಾದಗಿ ಶ್ರೇಣಿಗೆ ಸೇರಿದ ಕೆಲವು ಶಿಲೆಗಳು ತಾಲ್ಲೂಕಿನ ವಾಯವ್ಯಕ್ಕೆ ಹರಡಿವೆ. ಇವುಗಳಲ್ಲಿ ಪೆಂಟೆಶಿಲೆ ಮತ್ತು ಮರಳುಶಿಲೆಯ ಪದರಗಳನ್ನು ಕಾಣಬಹುದು. ತಾಲ್ಲೂಕಿನ ಬಹುಪಾಲು ಭೂಮಿ ಕಪ್ಪು. ಕೆಲವು ಕಡೆ ಮರಳು ಮಿಶ್ರಿತವಾದ ಕೆಂಪು ಛಾಯೆಯ ಮಣ್ಣನ್ನು ಕಾಣಬಹುದು. ವರ್ಷವಿಡೀ ಸಾಮಾನ್ಯವಾಗಿ ಒಣ ಹವೆ ಇರುತ್ತದೆ. ವಾರ್ಷಿಕ ಮಳೆ ಸರಾಸರಿ 563 ಮಿಮೀ. ಸಾಮಾನ್ಯವಾಗಿ ಮಳೆ ಕಡಿಮೆಯಾದರೂ ಕೆಲವು ಸಾರಿ ತಾಲ್ಲೂಕು ಅತಿವೃಷ್ಟಿಗೆ ಈಡಾದದ್ದೂ ಉಂಟು. 1944ರ ಸುಮಾರಿನಲ್ಲಿ ಆದ ಅತಿವೃಷ್ಟಿಯಿಂದ ತಾಲ್ಲೂಕಿನ ಪ್ರಮುಖ ಆಹಾರ ಬೆಳೆಯಾದ ಜೋಳವೆಲ್ಲ ಹಾಳಾಗಿ ಬರ ಬಂದಿತ್ತು. ಇದನ್ನು ಇಲ್ಲಿಯ ಜನ ಸೆಜ್ಜೆಬರ ಎಂದು ಕರೆಯುತ್ತಾರೆ. 1949ರಲ್ಲಿ ತಾಲ್ಲೂಕು ಭಾರಿ ಮಳೆಗೆ ಈಡಾಗಿತ್ತು.

ತಾಲ್ಲೂಕಿನಲ್ಲಿ ಖುಷ್ಕಿ ಬೆಳೆಯೇ ಹೆಚ್ಚು. ಜೋಳ, ಸೆಜ್ಜೆ, ಗೋಧಿ, ಸೇಂಗ, ಹತ್ತಿ, ಎಳ್ಳು ಮತ್ತು ತೊಗರಿ ಇಲ್ಲಿಯ ಮುಖ್ಯ ಬೆಳೆಗಳು. ತರಿ ಜಮೀನಿನಲ್ಲಿ ಸಾಮಾನ್ಯವಾಗಿ ಬತ್ತವನ್ನೂ ಕೆಲವೆಡೆ ಕಬ್ಬನ್ನೂ ಬೆಳೆಯುತ್ತಾರೆ. ತಾಲ್ಲೂಕಿನಲ್ಲಿರುವ ಕೆರೆಗಳು ನಾಲ್ಕು. ಇವು ಸುಮಾರು 921 ಎಕರೆ ಜಮೀನಿನ ನೀರಾವರಿಗೆ ಸಹಾಯಕವಾಗಿವೆ. ಕಡೂರು ಗ್ರಾಮದ ಸಮೀಪದಲ್ಲಿ ಚಿತ್ತವಡಗಿ ಕೆರೆಯಿದೆ. ಈ ಕೆರೆಯಿಂದ ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲ್ಲೂಕಿನ ಸ್ವಲ್ಪ ಜಮೀನಿಗೂ ನೀರೊದಗಿಸಲಾಗಿದೆ. ತಾಲ್ಲೂಕಿನಲ್ಲಿ ಬಹಳ ಕಡೆ ಲಕ್ಷ್ಮೀ ಹತ್ತಿ ಬೆಳೆಯುತ್ತಾರೆ. ಕೃಷಿಯಲ್ಲಿ ಆಧುನಿಕ ಯಂತ್ರೋಪಕರಣಗಳ ಬಳಕೆ ಅಷ್ಟಾಗಿಲ್ಲ.

ಕೃಷಿಯನ್ನು ಬಿಟ್ಟರೆ ಎರಡನೆಯ ಮುಖ್ಯ ಕಸಬು ನೇಯ್ಗೆ. ಹನಮಸಾಗರ, ತಾವರಗೇರಿ ಮತ್ತು ದೋತಿಹಾಳಗಳು ನೇಯ್ಗೆಯ ಕೇಂದ್ರಗಳು. ಇಲ್ಲಿ ತಯಾರಾಗುವ ಇಳಕಲ ಸೀರೆಗಳಿಗೆ ಗ್ರಾಮ ಪ್ರದೇಶದಲ್ಲಿ ಬೇಡಿಕೆಯಿದೆ.

*

ಕುಷ್ಟಗಿ ಈ ತಹಶೀಲಿನ ಮುಖ್ಯ ಪಟ್ಟಣ. ರಾಯಚೂರಿನಿಂದ ಪಶ್ಚಿಮಕ್ಕೆ 142ಕಿಮೀ ಅಂತರದಲ್ಲಿದೆ. ಜನಸಂಖ್ಯೆ 21,180. ಚಿತ್ರದುರ್ಗ ಸೊಲ್ಲಾಪುರ ರಾಷ್ಟ್ರೀಯ ಹೆದ್ದಾರಿ ಈ ಮೂಲಕ ಹಾದುಹೋಗುತ್ತದೆ. ಸಿಂಧನೂರು, ಕೊಪ್ಪಳ, ಹುನಗುಂದ, ಗದಗ ಮುಂತಾದ ಪಟ್ಟಣಗಳಿಗೆ ಮಾರ್ಗಗಳಿವೆ. ಊರಿನ ಉತ್ತರಕ್ಕೆ 4ಕಿಮೀ ದೂರದಲ್ಲಿ ಮುಸ್ಕಿ ನದಿ ಹರಿಯುತ್ತದೆ.

ಇದು ಮುಖ್ಯ ವ್ಯಾಪಾರ ಕೇಂದ್ರ. ಜೋಳ, ಸೆಜ್ಜೆ, ಸೇಂಗ, ಔಡಲ ಮುಂತಾದ ಬೆಳೆಗಳ ವ್ಯಾಪಾರ ವಿಪುಲವಾಗಿ ಆಗುತ್ತದೆ. ವ್ಯಾಸಪೂರ್ಣಿಮೆಯಂದು ನಡೆಯುವ ಅಡವಿರಾಯ ಜಾತ್ರೆ ಈ ಊರಿನ ಮುಖ್ಯ ಆಕರ್ಷಣೆ. (ಡಿ.ಕೆ.; ಎಸ್.ಜಿ.ಕೆ.)

**ಕುಳ್ಳಿ, ಜೆ. ಎಸ್. :** 1936-82. ಹೆಸರಾಂತ ಭಾಷಾವಿಜ್ಞಾನಿ, ವಿದ್ವಾಂಸ. ಇವರ ಪೂರ್ಣ ಹೆಸರು ಜಯವಂತ ಶಿವರುದ್ರಪ್ಪ ಕುಳ್ಳಿ. ಇಂದಿನ ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನ ಬನಹಟ್ಟಿ ಗ್ರಾಮದಲ್ಲಿ 1936 ಸೆಪ್ಟೆಂಬರ್ 14ರಂದು ನೇಕಾರ ಕುಟುಂಬದಲ್ಲಿ ಜನಿಸಿದರು. ತಂದೆ ಶಿವರುದ್ರಪ್ಪ, ತಾಯಿ ಆನಂದವ್ವ. ಕುಳ್ಳಿ ಇವರ ಮನೆತನದ ಹೆಸರು. ಇವರಿಗೆ ಆರು ವರ್ಷವಾದಾಗ ತಂದೆ ತಾಯಿಯರನ್ನು ಕಳೆದುಕೊಂಡು ಕಷ್ಟದಲ್ಲಿ ಬೆಳೆದರು.

ಇವರು ಪ್ರಾಥಮಿಕ, ಮಾಧ್ಯಮಿಕ ಹಾಗೂ ಪ್ರೌಢಶಾಲಾ ಶಿಕ್ಷಣವನ್ನು ಹುಟ್ಟೂರಿನಲ್ಲೇ ಮುಗಿಸಿದರು (1955). ಬಾಗಲಕೋಟೆ



ಬಸವೇಶ್ವರ ಕಾಲೇಜಿನಲ್ಲಿ ಸಂಸ್ಕೃತವನ್ನು ವಿಶೇಷ ವಿಷಯವಾಗಿ ತೆಗೆದುಕೊಂಡು ಉನ್ನತ ದರ್ಜೆಯಲ್ಲಿ ಬಿ.ಎ. ಪದವಿಯನ್ನು ಪಡೆದರು. ಮುಧೋಳದ ಪ್ರೌಢಶಾಲೆಯಲ್ಲಿ ಕೆಲಕಾಲ ಸಂಸ್ಕೃತ ಶಿಕ್ಷಕರಾಗಿ ದುಡಿದರು. ಅನಂತರ ಓದನ್ನು ಮುಂದುವರಿಸಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಸಂಸ್ಕೃತ ಎಂ.ಎ.ಪದವಿಯನ್ನು ಮೊದಲ ಶ್ರೇಣಿಯಲ್ಲಿ ಸಿ.ಡಿ.ದೇಶಮುಖ ಸುವರ್ಣಪದಕದೊಂದಿಗೆ ಪಡೆದರು (1961). ವಚನ ಸಾಹಿತ್ಯ ಸಂಗ್ರಹ ಮತ್ತು ಪ್ರಕಟಣೆಯ ಕಾರ್ಯದಲ್ಲಿ ಆರ್.ಸಿ.ಹಿರೇಮಠ ಅವರೊಂದಿಗೆ ಕೆಲಸ ಮಾಡಿದರು. ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದಲ್ಲಿ ಸಹಾಯಕ ನಿರ್ದೇಶಕರಾಗಿಯೂ ದುಡಿದರು. 1967ರಲ್ಲಿ ಮದರಾಸಿನ ಅಣ್ಣಾಮಲೈ ವಿಶ್ವವಿದ್ಯಾಲಯದ ಭಾಷಾವಿಜ್ಞಾನದ ಉನ್ನತ ಕೇಂದ್ರದಲ್ಲಿ ಭಾಷಾವಿಜ್ಞಾನ ಎಂ.ಎ. ಪದವಿ ಗಳಿಸಿಕೊಂಡರು. ಇದೇ ವರ್ಷ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ವಿಭಾಗದಲ್ಲಿ ಭಾಷಾವಿಜ್ಞಾನದ ಅಧ್ಯಾಪಕರಾದರು. ಕೇಶಿರಾಜಾಸ್ ಶಬ್ದಮಣಿ ದರ್ಪಣ ಎ ಲಿಂಗ್ವಿಸ್ಟಿಕ್ ಅನಾಲಿಸಿಸ್ ಎಂಬ ವಿಷಯವಾಗಿ ಆರ್.ಸಿ.ಹಿರೇಮಠ ಅವರ ಮಾರ್ಗದರ್ಶನದಲ್ಲಿ ಭಾಷಾವಿಜ್ಞಾನದಲ್ಲಿ ಪಿಎಚ್.ಡಿ. ಪದವಿ ಪಡೆದರು (1971).

ಇವರ ಸಂಶೋಧನ ಅಧ್ಯಯನ ವ್ಯಾಪಕವಾದದ್ದು. ಇವರು ಇಂಗ್ಲಿಷ್ ಮತ್ತು ಕನ್ನಡದಲ್ಲಿ ಐವತ್ತಕ್ಕೂ ಹೆಚ್ಚು ಸಂಶೋಧನ ಪ್ರಬಂಧಗಳನ್ನು ಪ್ರಕಟಿಸಿದ್ದಾರೆ. ಭಾಷಾವಿಜ್ಞಾನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಕನ್ನಡ ಭಾಷಾವಿಜ್ಞಾನ ಕ್ಷೇತ್ರ ಅಷ್ಟಾಗಿ ಬೆಳೆಯದಿದ್ದ ಕಾಲದಲ್ಲಿ ಅದರ ಬೆಳವಣಿಗೆಗೆ ಶ್ರಮಿಸಿದ ಇವರು ಅನೇಕ ಪುಸ್ತಕಗಳನ್ನು ರಚಿಸಿದ್ದಾರೆ. ಆಧುನಿಕ ಭಾಷಾವಿಜ್ಞಾನ (1967), ವರ್ಣನಾತ್ಮಕ ಭಾಷಾ ಸೌಧ (1972), ಭಾಷಾವಿಜ್ಞಾನ (1971), ಐತಿಹಾಸಿಕ ಭಾಷಾವಿಜ್ಞಾನ (1974), ಅನುವಾದ ಕಲೆ (1974), ಕೇಶಿರಾಜಾಸ್ ಶಬ್ದಮಣಿದರ್ಪಣ - ಎ ಲಿಂಗ್ವಿಸ್ಟಿಕ್ ಅನಾಲಿಸಿಸ್ (1976), ಹಿಸ್ಟರಿ ಆಫ್ ಗ್ರಮ್ಯಾಟಿಕಲ್ ಥಿಯರೀಸ್ ಇನ್ ಕನ್ನಡ (1999) - ಇವು ಇವರ ಕೆಲವು ಮುಖ್ಯ ಕೃತಿಗಳು.

ಇವರು ವಿಶ್ವವಿದ್ಯಾಲಯ ಧನಸಹಾಯ ಆಯೋಗದ ನೆರವಿನ ಅನೇಕ ಯೋಜನೆಗಳನ್ನು ಕೈಗೊಂಡಿದ್ದರು. ಕೊರವ ಡಯಲೆಕ್ಟ್ ಆಫ್ ಕನ್ನಡ, ಗೋಂಡಿ ಡಯಲೆಕ್ಟ್ ಆಫ್ ಕನ್ನಡ, ಜೋಳೈನಾಯಕನ್ ಲ್ಯಾಂಗ್ವೇಜ್ ಇವು ಪ್ರಮುಖವಾದವು.

ಕುಳ್ಳಿಯವರ ಸಾಧನೆ, ಕ್ರಿಯಾಶೀಲತೆ, ವಿದ್ವತ್ತು ಮತ್ತು ಪರಿಶ್ರಮಕ್ಕೆ ಸಂದ ಗೌರವ ಪುರಸ್ಕಾರಗಳು ಅನೇಕ. ಇವರು ಆಲ್ ಇಂಡಿಯ ದ್ರವಿಡಿಯನ್ ಲಿಂಗ್ವಿಸ್ಟಿಕ್ಸ್ ಅಸೋಸಿಯೇಷನ್ ಕಾರ್ಯದರ್ಶಿ (1977-80), ಭಾಷಾವಿಜ್ಞಾನದ ಬೇಸಗೆ ಶಿಬಿರ ಕಾರ್ಯದರ್ಶಿ (1962),

ಪ್ರಾಕೃತ, ಸಂಸ್ಕೃತ ಮತ್ತು ದಕ್ಷಿಣ ಭಾರತೀಯ ಭಾಷೆಗಳ ವಿಚಾರಗೋಷ್ಠಿಯ ನಿರ್ದೇಶಕ (1978), ಅಂತಾರಾಷ್ಟ್ರೀಯ ಭಾಷಾವಿಜ್ಞಾನ ಶಾಲೆಯ ಹಿರಿಯ ಸಂಶೋಧಕ (1980-81) ಆಗಿದ್ದರು. ಇವರ ವರ್ಣನಾತ್ಮಕ ಭಾಷಾವಿಜ್ಞಾನ ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭ್ಯವಾಗಿದೆ (1971).

ಜಯವಂತ ಅವರು ಸರಳರೂ ಉತ್ತಮ ಜನಾನುರಾಗಿ ಅಧ್ಯಾಪಕರೂ ಆಗಿದ್ದರು. ಇವರು 1982 ಡಿಸೆಂಬರ್ 29ರಂದು ನಿಧನಹೊಂದಿದರು. (ಪಿ.ಎಸ್.ಆರ್.)

**ಕೂಡಲ ಸಂಗಮ** (ಸಂಗಮ): ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿಗೆ ಸೇರಿದ ಗ್ರಾಮ, ಪವಿತ್ರ ಕ್ಷೇತ್ರ; ಹುನಗುಂದದ ಉತ್ತರಕ್ಕೆ 19ಕಿಮೀ ದೂರದಲ್ಲಿದೆ. ಕೃಷ್ಣಾ ಮತ್ತು ಮಲಪ್ರಭಾ ನದಿಗಳು ಇಲ್ಲಿ ಕೂಡುತ್ತವೆ.



ಐಕ್ಯಮಂಟಪ

ಇಲ್ಲಿ ಚಾಳುಕ್ಯ ಶೈಲಿಯಲ್ಲಿ ಕಟ್ಟಿರುವ ಸಂಗಮೇಶ್ವರ ದೇವಾಲಯವಿದೆ. ಇಲ್ಲಿರುವ ಶಿವಲಿಂಗ ಪ್ರಸಿದ್ಧವಾದದ್ದು. ವರ್ಷಕ್ಕೆ ಒಮ್ಮೆ ದೊಡ್ಡ ಜಾತ್ರೆ ನಡೆಯುತ್ತದೆ. 12ನೆಯ ಶತಮಾನದಲ್ಲಿ ಜಾತವೇದಮುನಿ ಇಲ್ಲಿ ಒಂದು ವಿದ್ಯಾಕೇಂದ್ರವನ್ನು ಸ್ಥಾಪಿಸಿದ್ದ. ಈ ವಿದ್ಯಾಕೇಂದ್ರದಲ್ಲಿ ಬಸವೇಶ್ವರ, ಚೆನ್ನಬಸವಣ್ಣ, ಅಕ್ಕನಾಗಮ್ಮ ಮೊದಲಾದವರು ಇದ್ದರೆಂದು ಹೇಳುತ್ತಾರೆ. ಬಸವೇಶ್ವರರ ಬಾಲ್ಯ ಮತ್ತು ವಿದ್ಯಾಭ್ಯಾಸ ಇಲ್ಲೇ ಆಯಿತು. ಇವರ ವಚನಗಳ ಅಂಕಿತದ ಕೂಡಲ ಸಂಗಮದೇವ ಈ ಸಂಗಮನಾಥನೇ. ಕೂಡಲಸಂಗಮದೇವ ಬಸವೇಶ್ವರರ ಆರಾಧ್ಯದೈವ. ಬಸವಣ್ಣನವರು ಕಲ್ಯಾಣವನ್ನು ಬಿಟ್ಟಮೇಲೆ ಕೂಡಲ ಸಂಗಮಕ್ಕೆ ಬಂದು ಅಲ್ಲಿ ಐಕ್ಯರಾದರು. ಬಸವೇಶ್ವರರ ಸಂಪರ್ಕದಿಂದ ಕೂಡಲಸಂಗಮ ಪವಿತ್ರಕ್ಷೇತ್ರವಾಗಿದೆ. ವರ್ಷಂಪ್ರತಿ ಇಲ್ಲಿ ಜಾತ್ರೆ ನಡೆಯುತ್ತದೆ. (ಪಿ.ಬಿ.ಡಿ.)

**ಕೂಡಲಿ :** ಶಿವಮೊಗ್ಗ ಜಿಲ್ಲೆಯಲ್ಲಿ ಶಿವಮೊಗ್ಗ ನಗರದ ಈಶಾನ್ಯಕ್ಕೆ 16ಕಿಮೀ ದೂರದಲ್ಲಿ ಇರುವ ಗ್ರಾಮ. ತುಂಗಾ ಮತ್ತು ಭದ್ರಾ ನದಿಗಳು ಇಲ್ಲಿ ಸಂಗಮವಾಗುವುದರಿಂದ ಇದಕ್ಕೆ ಕೂಡಲಿ ಎಂಬ ಹೆಸರು ಬಂದಿದೆ. ದಕ್ಷಿಣ ವಾರಾಣಸಿ, ಮಹಾಪ್ರಯಾಗ, ಋಷ್ಯಾಶ್ರಮ ಎಂದೂ ಪ್ರಸಿದ್ಧವಾಗಿರುವ, ಶಂಕರಾಚಾರ್ಯರ ಪರಂಪರೆಗೆ ಸೇರಿದ ಒಂದು ಸ್ಮಾರ್ತ ಮಠವಿದೆ. ಇದು ಸು.600 ವರ್ಷಕ್ಕೂ ಹಳೆಯದು ಎನ್ನಲಾಗಿದೆ. ಒಂದು ಮಾಧ್ವ ಮಠವೂ (ಆರ್ಯಮಠ) ಉಂಟು.

ಈ ಮಠಗಳಲ್ಲಿ ಅನೇಕ ತಾಮ್ರ ಮತ್ತು ಶಿಲಾಶಾಸನಗಳು ದೊರಕಿವೆ. ಸ್ಮಾರ್ತ ಮಠದಲ್ಲಿರುವ ಪ್ರಾಚೀನ ಶಾಸನದಲ್ಲಿ ಹೊಯ್ಸಳ ದೊರೆ ಮೂರನೆಯ ಬಲ್ಲಾಳ ರಾಮನಾಥ ದೇವಾಲಯಕ್ಕೆ ಕೊಟ್ಟ ದಾನಗಳ ವಿವರಗಳಿವೆ. ಮಾಧ್ವ ಮಠದಲ್ಲಿರುವ ಶಾಸನವೊಂದು ವಿಜಯನಗರದ ಅರಸ ಕೃಷ್ಣದೇವರಾಯ 1527ರಲ್ಲಿ ನಾರಾಯಣ ಯತೀಂದ್ರರಿಗೆ ಐದು ಗ್ರಾಮಗಳನ್ನು ದತ್ತಿಯಾಗಿ ಕೊಟ್ಟ ವಿಚಾರವನ್ನು ತಿಳಿಸುತ್ತದೆ. ಇದೇ ಅರಸನ ಇನ್ನೊಂದು ಶಾಸನ ಬ್ರಹ್ಮಣ್ಯತೀರ್ಥರ ಶಿಷ್ಯರಾದ ವ್ಯಾಸಯತೀಂದ್ರರಿಗೆ ಕೊಟ್ಟ ದಾನಗಳ ವಿವರಗಳನ್ನು ತಿಳಿಸುತ್ತದೆ. ಇತರ ಅನೇಕ ಶಾಸನಗಳು ಮತ್ತು ಕಾಗದದ ದಾಖಲೆಗಳಿಂದ ಕೂಡಲಿಯ ಮಠಗಳು ರಾಜಪೋಷಣೆಯನ್ನು ದೊರಕಿಸಿಕೊಂಡಿದ್ದುವೆಂದು ತಿಳಿಯುತ್ತದೆ. 1791ರಲ್ಲಿ ಮರಾಠರು ಈ ಸ್ಥಳದ ಮೇಲೆ ದಾಳಿ ನಡೆಸಿದ್ದರು. ಹನ್ನೊಂದನೆಯ ಶತಮಾನದಲ್ಲಿ ಚೋಳರಿಗೂ ಚಾಳುಕ್ಯರಿಗೂ ಕೂಡಲ ಸಂಗಮದಲ್ಲಿ ಯುದ್ಧ ನಡೆಯಿತು. ಈ ಕೂಡಲಸಂಗಮ ಕೂಡಲಿಯೇ ಎಂದು ಪ್ರಸಿದ್ಧ ಶಾಸನಶಾಸ್ತ್ರಜ್ಞ ಹುಲ್ಷ್ ಭಾವಿಸಿದ್ದರು.

ಇಲ್ಲಿ ಬ್ರಹ್ಮೇಶ್ವರ, ನರಸಿಂಹ ಮತ್ತು ರಾಮೇಶ್ವರ ಎಂಬ ಪ್ರಾಚೀನ ದೇವಾಲಯಗಳಿವೆ. (ಎ.ವಿ.ಎನ್.,ಎಚ್.ವಿ.ಎಸ್.)

**ಕೂಡಿಗೆ :** ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ಒಂದು ಗ್ರಾಮ. ಕುಶಾಲನಗರದ ಉತ್ತರಕ್ಕೆ ಸುಮಾರು 6ಕಿಮೀ ದೂರದಲ್ಲಿ ಕುಶಾಲನಗರ-ಸೋಮವಾರ ಪೇಟೆ ಮಾರ್ಗದ ಮಧ್ಯದಲ್ಲಿದೆ. ಇದು ಮಾದರಿ ಪಶುಸಂಗೋಪನದ ಮತ್ತು ವ್ಯವಸಾಯದ ಕೇಂದ್ರ. ಬತ್ತ, ರಾಗಿ ಮತ್ತು ಇತರ ಅನೇಕ ಬೆಳೆಗಳ ಸಂಶೋಧನೆಗಾಗಿ ಸು.202 ಹೆಕ್ಟೇರ್ ಭೂಮಿಯನ್ನು ಬಳಸಿಕೊಳ್ಳಲಾಗಿದೆ. ರೇಷ್ಮೆ ವ್ಯವಸಾಯವೂ ಇದೆ. ರೇಷ್ಮೆ ಗೂಡುಗಳನ್ನು ಮೈಸೂರಿನ ಸರ್ಕಾರಿ ರೇಷ್ಮೆ ಕಾರ್ಖಾನೆಗೆ ಕಳಿಸುತ್ತಾರೆ. ಈ ಕೇಂದ್ರದಲ್ಲಿ ಉತ್ತಮ ತಳಿಯ ಹಸುಗಳನ್ನು ಸಾಕುತ್ತಾರೆ. ಇಲ್ಲಿ ಪಶುಗಳ ಕೃತಕ ಗರ್ಭಧಾರಣ ಕೇಂದ್ರವನ್ನು ತೆರೆಯಲಾಗಿದೆ. 1952ರಲ್ಲಿ ಪ್ರಾರಂಭವಾದ ಈ ಕೇಂದ್ರ ಪಶು ಆಹಾರ ಉತ್ಪಾದನೆಯನ್ನೂ ಕೈಗೊಂಡಿದ್ದು ಪಶುಪಾಲಕರ ಮೆಚ್ಚುಗೆಗಳಿಸಿದೆ. ಪಶು ಆಹಾರ ಸಂಶೋಧನೆಯನ್ನು 1954ರಿಂದ ಕೈಗೊಳ್ಳಲಾಗಿದೆ. (ವಿ.ಜಿ.ಕೆ.)

**ಕೂಡುವಳಿ :** ಗಂಡ ಬಿಟ್ಟ ಅಥವಾ ಗಂಡ ಸತ್ತ ಹೆಣ್ಣು ತಾನು ಒಪ್ಪಿದ ಬೇರೊಬ್ಬನೊಡನೆ ಸಂಸಾರಿಕ ಜೀವನ ನಡೆಸಲು ಅನುವು ಮಾಡಿಕೊಟ್ಟಿರುವ ಒಂದು ಸಾಮಾಜಿಕ ಪದ್ಧತಿ. ಕೂಟಿಕೆ, ಕೂಡಿಕೆ, ಸೀರುಡಿಕೆ, ಉಡಿಕೆ ಎಂಬ ಪದಗಳು ಇದೇ ಅರ್ಥದಲ್ಲಿ ಬಳಕೆಯಲ್ಲಿವೆ.

ಈ ಪದ್ಧತಿ ಸಮಾಜದ ಕೆಲವು ವರ್ಗಗಳಲ್ಲಿ ಮಾತ್ರ ಕಂಡುಬರುತ್ತದೆ. ಪ್ರಾಯವೂ ಸಾಂಸಾರಿಕ ಅಭಿಲಾಷೆಯೂ ಇರುವ ಹೆಣ್ಣು ಮತ್ತೆ ಸಂಸಾರಿಯಾಗುವ ಸೌಲಭ್ಯವನ್ನು ಕೂಡುವಳಿ ಆಕೆಗೆ ಒದಗಿಸಿದೆ. ಪ್ರಾಯ ಮೀರಿದ್ದಾಗ ಅಥವಾ ಪ್ರಾಯದ ಮಕ್ಕಳಿದ್ದಾಗ ಕೂಡುವಳಿಗೆ ಅವಕಾಶ ಉಂಟೆ ಎಂಬುದು ವೈಯಕ್ತಿಕ ಸಮಸ್ಯೆ. ಗಂಡು ಹೆಣ್ಣು ಒಪ್ಪಿದಲ್ಲಿ ಆಗಬಹುದು. ಕೆಲವು ಆದಿವಾಸಿ ಜನಾಂಗಗಳವರಲ್ಲಿ ಪ್ರಾಯದ ಮಕ್ಕಳಿದ್ದಾಗಲೂ ಕೂಡುವಳಿ ನಡೆಯುತ್ತದೆ.

ತಂದೆ ತಾಯಿಗಳು ಹಾಗೂ ಕುಲಸ್ಥರು ಒಪ್ಪಿಯೇ ವಿಧಿವತ್ತಾಗಿ ಕೂಡುವಳಿ ಮಾಡಿಕೊಡುತ್ತಾರೆ. ಅಂದರೆ ಹೆಣ್ಣು ಗಂಡುಗಳನ್ನು ಕೂರಿಸಿ ಹಸೆ ಹಚ್ಚುವುದು, ಮುತ್ತೈದೆಯರಿಂದ ಸೇಸೆ ಇಡಿಸಿ ಹರಸಿಸುವುದು, ಕುಲಸ್ಥರಿಗೆ ಊಟ ಹಾಕಿಸುವುದು ಮುಂತಾದುವೆಲ್ಲ ಯಥಾವತ್ತಾಗಿ ಜರುಗುತ್ತವೆ. ಇಷ್ಟೆಲ್ಲ ವೆಚ್ಚವನ್ನು ನಿಭಾಯಿಸಲಾಗದವರು ಕೇವಲ ಒಂದು ಸೀರೆ ಉಡಿಸಿ ಹಿರಿಯರ ಅನುಮತಿ ಆಶೀರ್ವಾದಗಳೊಂದಿಗೆ ಹೆಣ್ಣನ್ನು ಕರೆದೊಯ್ಯುತ್ತಾರೆ. ಹೀಗೆ ಎರಡನೆಯ ಸಂಬಂಧ ಬೆಳೆಸುವ ಮನೆತನ ದವರನ್ನು ಕೂಟಿಕೆ (ಕೂಡಿಕೆ) ಸಾಲಿನವರು ಎಂದು ಹೀಗಳೆದು ಕೊಡುಕೊಳೆ ಮಾಡದವರೂ ಇದ್ದಾರೆ. (ಎಸ್‌ಯು.)

**ಕೂಡ್ಲಿಗಿ :** ಬಳ್ಳಾರಿ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಆ ತಾಲ್ಲೂಕಿನ ಆಡಳಿತಕೇಂದ್ರ. ಬಳ್ಳಾರಿಯ ನೈಋತ್ಯಕ್ಕಿರುವ ಈ ತಾಲ್ಲೂಕನ್ನು ಪಶ್ಚಿಮದಲ್ಲಿ ಹಡಗಲಿ ಮತ್ತು ಹರಪನಹಳ್ಳಿ ತಾಲ್ಲೂಕುಗಳೂ ಉತ್ತರದಲ್ಲಿ ಹಗರಿಬೊಮ್ಮನಹಳ್ಳಿ ಮತ್ತು ಸಂಡೂರು ಆಗ್ನೇಯದಲ್ಲಿ ಚಿತ್ರದುರ್ಗ ಜಿಲ್ಲೆಯೂ ದಕ್ಷಿಣದಲ್ಲಿ ದಾವಣಗೆರೆ ಜಿಲ್ಲೆಯೂ ಸುತ್ತುವರಿದಿವೆ. ಇದು ಹೊಸಪೇಟೆ ಉಪವಿಭಾಗಕ್ಕೆ ಸೇರಿದೆ. ಕೊಟ್ಟೂರು, ಹೊಸಹಳ್ಳಿ, ಕೂಡ್ಲಿಗಿ ಮತ್ತು ಗುಡಿಕೋಟೆ ಹೋಬಳಿಗಳು. 82 ಗ್ರಾಮಗಳಿವೆ. ವಿಸ್ತೀರ್ಣ 1,825ಚಕಿಮೀ. ಜನಸಂಖ್ಯೆ 2,71,890.

ಈ ತಾಲ್ಲೂಕಿನಲ್ಲಿ ಕೂಡ್ಲಿಗಿ ಮತ್ತು ಗುಡಿಕೋಟೆ ಬೆಟ್ಟಗಳ ಸಾಲಿದೆ. ಕೂಡ್ಲಿಗಿ ಬೆಟ್ಟಸಾಲು ಆನೆಕಲ್ಲುಗುಡ್ಡದ (780 ಮೀ) ಉತ್ತರದಲ್ಲಿ 5ಕಿಮೀ ದೂರದಲ್ಲಿ ಪ್ರಾರಂಭವಾಗಿ ಕೂಡ್ಲಿಗಿ ಪಟ್ಟಣದ ಉತ್ತರ ಮತ್ತು ಪೂರ್ವದಲ್ಲಿ ಹಬ್ಬಿ ಜರಮಲಿದುರ್ಗದ 890 ಮೀ ಆಗ್ನೇಯದಲ್ಲಿ ಕೊನೆಗೊಳ್ಳುತ್ತದೆ. ಗುಡಿಕೋಟೆ ಶ್ರೇಣಿ ಸಂಡೂರು ತಾಲ್ಲೂಕಿನ ಚೋರನೂರಿನ ಬಳಿ ಪ್ರಾರಂಭವಾಗಿ ಆಗ್ನೇಯ ದಿಕ್ಕಿಗೆ ಹಬ್ಬಿ ಗುಡಿಕೋಟೆ ಕೋಟೆಯ ಉತ್ತರ ಭಾಗದಲ್ಲಿ ಮುಂದುವರಿದು ಚಿನ್ನಹಗರಿ ಕಣಿವೆಯನ್ನು ದಾಟುತ್ತದೆ. ಕೂಡ್ಲಿಗಿ ತಾಲ್ಲೂಕಿನಲ್ಲಿ ಈ ಶ್ರೇಣಿಯ 919 ಮತ್ತು 851ಮೀ. ಎತ್ತರವಿರುವ ಎರಡು ಬೆಟ್ಟಗಳುಂಟು. ಈ ಪ್ರದೇಶ ಒರಟು ಭೂಮಿಯ ಏರಿಳಿತಗಳಿಂದ ಕೂಡಿದ್ದು. ಚಿನ್ನಹಗರಿ ನದಿ ಕೂಡ್ಲಿಗಿ ತಾಲ್ಲೂಕಿನ ದಕ್ಷಿಣ ಮತ್ತು ಆಗ್ನೇಯ ದಿಕ್ಕಿನಲ್ಲಿ ಚಿತ್ರದುರ್ಗ ಜಿಲ್ಲೆಯಿಂದ ಈ ತಾಲ್ಲೂಕನ್ನು ಬೇರ್ಪಡಿಸಿ (ಜನಗಹಳ್ಳ) ಹರಿಯುತ್ತದೆ. ಈ ಭಾಗದಲ್ಲಿ 8ಕಿಮೀ ಹರಿದ ಅನಂತರ ಹಗರಿ ನದಿಯನ್ನು ರಾಯದುರ್ಗಕ್ಕೆ ಉತ್ತರದಲ್ಲಿ ಕೂಡಿಕೊಳ್ಳುತ್ತದೆ. ಕೂಡ್ಲಿಗಿ ತಾಲ್ಲೂಕಿನ ಪೂರ್ವಭಾಗಕ್ಕೆ ಈ ನದಿಯಿಂದ ನೀರೊದಗುತ್ತದೆ. ಈ ನದಿಗೆ ಕುಮತಿ ಗ್ರಾಮದ ಹತ್ತಿರ ಭಾಗದ ಬೆಟ್ಟ ಪ್ರದೇಶಕ್ಕೆ ಹೊಂದಿಕೊಂಡ ಹಂಪಾಪಟ್ಟಣ ಅಥವಾ ಬೆಳ್ಳಹುಣಿಸಿ ತೊರೆಯಿಂದ ಸ್ವಲ್ಪ ನೀರೊದಗುವುದು.

ಈ ತಾಲ್ಲೂಕಿನ ನಿಂಬಳಪುರದ ದಕ್ಷಿಣದ ಕೀಕಲಗುಡ್ಡದಲ್ಲಿ ಪದ್ಮರಾಗ ಶಿಲಾ ನಿಕ್ಷೇಪವುಂಟು. ತಾಲ್ಲೂಕಿನ ಬಹುಭಾಗ ಬೆಣಚುಕಲ್ಲು ಮತ್ತು ಗ್ರಾನೈಟ್ ಶಿಲೆಗಳ ಪ್ರದೇಶ.

ಇಲ್ಲಿಯದು ಮರಳು ಮಿಶ್ರಿತ ಕೆಂಪು ಮತ್ತು ಕಪ್ಪು ಮಣ್ಣು ಭೂಮಿ. ತಾಲ್ಲೂಕಿನ ಸರಾಸರಿ ವಾರ್ಷಿಕ ಮಳೆ 7390ಮಿಮೀ. ತಾಲ್ಲೂಕಿನಲ್ಲಿ ಹತ್ತು ದೊಡ್ಡ ಕೆರೆಗಳೂ ಸೇರಿದಂತೆ ಒಟ್ಟು 73 ಕೆರೆಗಳಿವೆ. ಬತ್ತ, ಜೋಳ, ನವಣೆ, ಬಾಜ್ರ, ತೊಗರಿ, ನೆಲಗಡಲೆ, ಕಬ್ಬು, ಹತ್ತಿ, ಮೆಣಸಿನಕಾಯಿ ಇವು ಇಲ್ಲಿಯ ಬೆಳೆಗಳು. ಕೃಷಿಯೊಂದಿಗೆ ಪಶುಪಾಲನೆ ಉಪಕಸಬಾಗಿದೆ. ತಾಲ್ಲೂಕಿನಲ್ಲಿ ಹತ್ತಿ ಗಿರಣಿಗಳು, ಎಣ್ಣೆ ಕಾರ್ಖಾನೆಗಳು ಇವೆ. ಕೈಮಗ್ಗದ ಬಟ್ಟೆ ತಯಾರಿಕೆ, ಕಂಬಳಿ, ಬುಟ್ಟಿ ಚಾಪೆ ತಯಾರಿಕೆ ಇತರ ಕಸಬುಗಳು.

ಕೊಟ್ಟೂರು, ಚಿಕ್ಕಜೋಗಿಹಳ್ಳಿ, ಸರ್ವೋದಯ ಗ್ರಾಮ ಇವು ತಾಲ್ಲೂಕಿನ ಕೆಲವು ಮುಖ್ಯ ಗ್ರಾಮಗಳು. ಗುಡಿಕೋಟೆ, ಜರಮಲಿ ಇತಿಹಾಸಪ್ರಸಿದ್ಧ ಸ್ಥಳಗಳು. ಕೊಟ್ಟೂರಿನಿಂದ ಸು.10ಕಿಮೀ ವಾಯವ್ಯಕ್ಕಿರುವ ಅಂಬಲಿಯಲ್ಲಿ 12ನೆಯ ಶತಮಾನದ ಚಾಳುಕ್ಯ ಶೈಲಿಯ ಕಲ್ಲೇಶ್ವರ ದೇವಾಲಯವಿದೆ. ಕೂಡ್ಲಿಗಿಯ ದಕ್ಷಿಣಕ್ಕೆ ಸು.20ಕಿಮೀ ದೂರದಲ್ಲಿರುವ ಗುಣಸಾಗರದಲ್ಲಿ ಇರುವ ದೇವಾಲಯ ಗೋಪಾಲ ಕೃಷ್ಣನದು. ಇಲ್ಲಿನ ವಿಗ್ರಹ ಬಹು ಸುಂದರ. ವೀರವದುರ್ಗ ಎಂಬಲ್ಲಿ ರಮ್ಯ ಸನ್ನಿವೇಶದಲ್ಲಿ ಭದ್ರವಾದ ಕೋಟೆಯಿತ್ತು. ಟಿಪ್ಪುಸುಲ್ತಾನ ಇದರ ಮೇಲೆ ದಾಳಿ ಮಾಡಿ ಅಸಫಲನಾದನಂತೆ. ಕೊಟ್ಟೂರಿನಿಂದ ನೈಋತ್ಯಕ್ಕೆ ತಾಲ್ಲೂಕಿನ ಎಲ್ಲೆಯ ಬಳಿ ಇರುವ ಉಜ್ಜನಿ ಪ್ರಸಿದ್ಧ ವೀರಶೈವ ಕೇಂದ್ರ. ಇಲ್ಲಿನ ವೀರಶೈವ ಮಠ ಉಜ್ಜಯಿನಿ ಸದ್ಧರ್ಮಪೀಠ ಎಂದು ಹೆಸರಾಗಿದೆ. ಮಠವೂ ಅದರಲ್ಲಿನ ಸಿದ್ಧೇಶ್ವರ ದೇವಾಲಯವೂ ಗಮನಾರ್ಹ ವಾಸ್ತುಕೃತಿಗಳು. ಇಲ್ಲಿ ಮಠದ ವತಿಯಿಂದ ನಡೆಯುವ ಪ್ರೌಢಶಾಲೆ ಮತ್ತು ಸಂಸ್ಕೃತ ಪಾಠಶಾಲೆ ಇವೆ. ಉಜ್ಜಯಿನಿಯಿಂದ ಸು.40ಕಿಮೀ ದೂರದಲ್ಲಿರುವ ಕಾನಮಡುವಿನಲ್ಲಿ ಒಂದು ವೀರಶೈವ ಮಠ ಮತ್ತು ಶರಣಾರ್ಯರೆಂಬ ಸಂತರ ಸಮಾಧಿ ಇವೆ. ಈ ತಾಲ್ಲೂಕಿನ ಶಿಡಿಗಲ್ಲು ಎಂಬ ಗ್ರಾಮ ಇತ್ತೀಚಿನವರೆಗೂ ಕಬ್ಬಿಣ ಕರಗಿಸಿ ಸುತ್ತಲ ಪ್ರದೇಶಕ್ಕೆ ಒದಗಿಸುತ್ತಿತ್ತು. ನಿಂಬಳಗಿರಿ ಅಡಕೆ ಬೆಳೆಗೆ ಪ್ರಸಿದ್ಧ. ಇಲ್ಲಿ ಒಳ್ಳೆಯ ಕಂಬಳಿಗಳು ತಯಾರಾಗುತ್ತವೆ. ಕೂಡ್ಲಿಗಿಗೆ ಸು.3ಕಿಮೀ ದೂರದಲ್ಲಿರುವ ಅಮರ ದೇವರ ಗುಡ್ಡದಲ್ಲಿ ಸು.1.71 ಎಕರೆಗಳಷ್ಟು ವಿಸ್ತಾರವಾಗಿ ಹಬ್ಬಿರುವ ದೊಡ್ಡ ಆಲದ ಮರವಿದೆ.

ಕೂಡ್ಲಿಗಿ ಈ ತಾಲ್ಲೂಕಿನ ಆಡಳಿತ ಕೇಂದ್ರ. ಜನಸಂಖ್ಯೆ 21,855. ಬಳ್ಳಾರಿ ನಗರದ ನೈಋತ್ಯಕ್ಕೆ ಸುಮಾರು 80ಕಿಮೀ ದೂರದಲ್ಲಿದೆ. ಕೂಡ್ಲಿಗಿಯ ನೈಋತ್ಯದಲ್ಲಿ ಪ್ರಸಿದ್ಧ ಸಿದ್ಧೇಶ್ವರ ದೇವಾಲಯವಿದೆ. *

**ಕೂಡ್ಲೂರು :** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣ ತಾಲ್ಲೂಕಿನ ಒಂದು ಗ್ರಾಮ. ಚನ್ನಪಟ್ಟಣಕ್ಕೆ 6ಕಿಮೀ ದೂರದಲ್ಲಿ ಕಣ್ವ ನದಿಯ ದಡದಲ್ಲಿ ಚೋಳರ ಪುರಾತನ ಪಟ್ಟಣವಾದ ಚಿಕ್ಕ ಮಳೂರು ಬಳಿಯಲ್ಲಿದೆ. ಚೋಳರ ಕಾಲದಲ್ಲಿ ಇದೊಂದು ಅಗ್ರಹಾರ ಹಾಗೂ ಪ್ರಸಿದ್ಧ ಪಟ್ಟಣವಾಗಿತ್ತು. ತಮಿಳು ಶಾಸನಗಳಲ್ಲಿ ಈ ಊರನ್ನು ಕೂಡಲೂರು, ರಾಜರಾಜಚತುರ್ವೇದಿಮಂಗಳ ಎಂದು ಕರೆದಿದೆ. 1767ರಲ್ಲಿ ಹೈದರ್ ಅಲಿ ಈ ಗ್ರಾಮವನ್ನು ಸೈಯದ್ ಮಹಮ್ಮದ್ ಅಖಿಲ್ ಷಾ ಖಾದ್ರಿ ಎಂಬುವನಿಗೆ ಫಕೀರರ ಧರ್ಮಕ್ಕೆ ಇನಾಮಾಗಿ (ದಾನವಾಗಿ) ಕೊಟ್ಟ ಸಂಗತಿ ಇಲ್ಲಿಯ ಶಾಸನವೊಂದರಲ್ಲಿದೆ.

ಚಲ್ಲಮ್ಮ, ಶ್ರೀರಾಮ, ಮಂಗಳೇಶ್ವರ, ನರಸಿಂಹ, ಮಳವಳ್ಳಮ್ಮ, ಮಸಣಮ್ಮ, ಮಾಗಮ್ಮ, ಆಂಜನೇಯ, ಗಣಪತಿ, ಕರಿಚಲ್ಲಮ್ಮ ಮುಂತಾದ ದೇವಾಲಯಗಳು ಇಲ್ಲಿವೆ. ಚಲ್ಲಮ್ಮಗುಡಿ ಗಂಗರ ಕಾಲದ ಕಂಬಗಳುಳ್ಳ ಒಂದು ಚಿಕ್ಕ ಕಟ್ಟಡ. ಇದರ ಮುಂಭಾಗದಲ್ಲಿ ಉತ್ತಮ ಕೆತ್ತನೆಯಿಂದ ಕೂಡಿರುವ ಎರಡು ವೀರಗಲ್ಲುಗಳಿವೆ. ಮುಖ್ಯ ದೇವತೆಯಾದ ಲಕ್ಷ್ಮಿಗೆ ಕೇವಲ ಎರಡು ಕೈಗಳಿವೆ. ರಾಮ ದೇವಾಲಯದ ಗೋಡೆಗಳು ಬಿರುಕು ಬಿಟ್ಟಿವೆ. ಇದರ ಆವರಣದಲ್ಲಿ ಗಂಗರ ಶೈಲಿಯ ಸುಮಾರು ಒಂದೂವರೆ ಮೀಟರ್ ಎತ್ತರವಿರುವ ವಿಷ್ಣುವಿನ ವಿಗ್ರಹವಿದೆ. ಇದರ ನವರಂಗವನ್ನು ವಿಜಯನಗರ ಅರಸರ ಕಾಲದಲ್ಲಿ ಜೀರ್ಣೋದ್ಧಾರ ಮಾಡಲಾಗಿದೆ. ಇಲ್ಲಿ ನಾಲ್ಕು ತಮಿಳು ಶಾಸನಗಳಿವೆ. ಮಣವಲರಮನ್ ಎಂಬ ದೇವರನ್ನು ಸುರಿಯ ಸೌರಿಯ ಪಂಡಿತನೆಂಬುವನು ಪ್ರತಿಷ್ಠೆ ಮಾಡಿದನೆಂದು 1200ರ ಶಾಸನದಲ್ಲಿ ಹೇಳಿದೆ. ಇದೇ ಕಾಲದ ಇನ್ನೊಂದು ಶಾಸನದಲ್ಲಿ ತಿರುಮಲಪಡಿ ರಾಜಸಿಂಗನ್ ಎಂಬ ಅಧಿಕಾರಿ ಕೂಡ್ಲೂರಿನ ಶರ್ಕುನರಾಮ ಪೆರುಮಾಳ್ ದೇವಸ್ಥಾನದ ಸಂಬಂಧ ಮಠವೊಂದಕ್ಕೆ ಜಮೀನನ್ನು ದತ್ತಿಯಾಗಿ ಕೊಟ್ಟನೆಂದಿದೆ. ಈ ದೇವಸ್ಥಾನದ ಹತ್ತಿರದಲ್ಲಿರುವ 1180ರ ಶಾಸನ ಹೊಯ್ಸಳ ಅರಸ ಎರಡನೆಯ ಬಲ್ಲಾಳನ ಕಾಲಕ್ಕೆ ಸೇರಿದ್ದು, ಶಾನ್ತರ ಬಸದಿಯ ಉಲ್ಲೇಖ ಹಾಗೂ ಬಸದಿಯೊಂದಕ್ಕೆ ತೋಟವನ್ನು ಕೊಟ್ಟ ದತ್ತಿಯ ಉಲ್ಲೇಖ ಇಲ್ಲಿಯ ಎರಡು ಶಾಸನಗಳಲ್ಲಿವೆ. 1828ರ ಕನ್ನಡ ಭಾಷೆಯ ಶಾಸನವೊಂದರಲ್ಲಿ ಕಾನಕಾನಹಳ್ಳಿಯ ವೆಂಕಟಲಕ್ಷ್ಮಿ ಎಂಬ ಮಹಿಳೆ ಕೂಡ್ಲೂರು ಶಾನುಭೋಗ ಕಪನಿಪತಯ್ಯನಿಂದ ತೆಂಗಿನ ತೋಟವೊಂದನ್ನು ಕ್ರಯಕ್ಕೆ ತೆಗೆದುಕೊಂಡು ಶ್ರೀರಾಮಸ್ವಾಮಿ ದೇವಸ್ಥಾನಕ್ಕೆ ವಾರ್ಷಿಕ ಕಟ್ಲೆ ನಡೆಸುವ ಉದ್ದೇಶಕ್ಕಾಗಿ ಕೊಟ್ಟಳೆಂದು ಹೇಳಿದೆ. ಈ ದೇವಸ್ಥಾನದ ವಾರ್ಷಿಕ ರಥೋತ್ಸವ ಶ್ರೀರಾಮ ನವಮಿಯಂದು ನಡೆಯುತ್ತದೆಂದು ಇದರಲ್ಲಿ ಹೇಳಿದೆ.

ಮಂಗಳೇಶ್ವರ ದೇವರ ಪಾಳು ದೇವಾಲಯ ಶ್ರೀರಾಮ ದೇವಾಲಯಕ್ಕೆ ಸಮೀಪದಲ್ಲಿದೆ. ಇದರಲ್ಲಿ ಒರಟಾದ ಕಂಬಗಳಿರುವ ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗ ಇವೆ. ಇದು ಗಂಗರ ಕಾಲದಲ್ಲಿ ಕಟ್ಟಿದ್ದೆಂದು ಇಲ್ಲಿರುವ ಅನೇಕ ಶಾಸನಗಳಿಂದ ಹೇಳಬಹುದು. ಈ ದೇವಾಲಯಕ್ಕೆ ಹೇರಳವಾಗಿ ದತ್ತಿ ಕೊಟ್ಟ ಪ್ರಸ್ತಾಪಗಳು ತದನಂತರದ ಚೋಳರ ಶಾಸನಗಳಲ್ಲಿವೆ. ಇದರ ಗರ್ಭಗೃಹದಲ್ಲಿ ಗಂಗರ ಕಾಲದ ಶೈಲಿಯ ಎತ್ತರವಾದ ಲಿಂಗವಿದೆ. ಮುಖ್ಯ ಗರ್ಭಗೃಹದ ಬಲಭಾಗದ ಕೋಣೆಯಲ್ಲಿ ಇನ್ನೊಂದು ಲಿಂಗವಿದೆ. ಸಿಂಹದ ಮೇಲೆ ಕೂತಿರುವ ಗಂಗರ ಕಾಲದ ಶೈಲಿಯ ಚಾಮುಂಡಿಯ ವಿಗ್ರಹವೂ ಇಲ್ಲಿದೆ. ಇದಕ್ಕೆ ಸಮೀಪದ ಶ್ರೀರಂಗದಮ್ಮನ ಚಿಕ್ಕಗುಡಿಯಲ್ಲಿ ಪುರಾತನ ಭೈರವ ವಿಗ್ರಹವಿದೆ. ಈ ದೇವಾಲಯಕ್ಕೆ ಸಮೀಪ ಕೊಳವೊಂದಿದೆ. ಇದಕ್ಕೆ ಸಮೀಪ ಚೋಳರ ಶೈಲಿಯ ಚಂದ್ರಶೇಖರ ದೇವರು, ಎಂಟು ಕೈಗಳುಳ್ಳ ದುರ್ಗಾ

ದೇವಿಯ ವಿಗ್ರಹಗಳು ಹಾಗೂ ಎರಡು ದೊಡ್ಡ ಶಿವಲಿಂಗಗಳಿವೆ. ಚಂದ್ರಶೇಖರಮೂರ್ತಿಯನ್ನು ಈ ಊರಿನ ಮಂಗಳೇಶ್ವರ ದೇವಾಲಯದಲ್ಲಿ ಸ್ಥಾಪಿಸಿರುವ ವಿಷಯವನ್ನು 1200ರ ಚೋಳರ ಶಾಸನವೊಂದರಲ್ಲಿ ಹೇಳಿದೆ. ಹೊಯ್ಸಳರ ಕಾಲದ 1305ರ ಶಾಸನವೊಂದರಲ್ಲಿ ಈ ದೇವಾಲಯಕ್ಕೆ ಕೊಟ್ಟ ದತ್ತಿಯ ಉಲ್ಲೇಖವಿದೆ. ಇದಕ್ಕೆ ಸಮೀಪವಿರುವ ಬಸವೇಶ್ವರ ದೇವಾಲಯದಲ್ಲಿ ನಿಂತ ಭಂಗಿಯ ದುರ್ಗಾ, ಮಹಿಷನ ಮುಂದೆ ನಿಂತಿರುವ ದುರ್ಗಾ, ಬ್ರಹ್ಮ, ಮಹಿಷಮರ್ದಿನಿ ಮುಂತಾದ ದೇವ ದೇವತೆಗಳ ಮೂರ್ತಿಗಳಿವೆ. ನರಸಿಂಹ ದೇವಾಲಯದ ಹೊರಗಡೆ ಒಂದು ಪಾರ್ಶ್ವದಲ್ಲಿ ಗುಂಡಮ್ಮ (ಬಹುಶಃ ಭುವನೇಶ್ವರಿ) ದೇವತೆಯ ಒಂದು ಚಿಕ್ಕ ಗುಡಿ ಇದೆ. ಇದರ ಸಮೀಪ ಎರಡು ಕೈಗಳಿರುವ ಗಂಡಸಿನ ಮೂರ್ತಿಯೊಂದು ಇದೆ. ಇದರ ಎದುರುಗಡೆ ಸುಂದರ ಕೆತ್ತನೆ ಕೆಲಸ ಮಾಡಿರುವ ಕಮಾನುಗಳಿರುವ ಲಕ್ಷ್ಮೀದೇವಿಯ ದೇವಾಲಯವಿದೆ. ಇಲ್ಲಿ ಹಿಂದೆ ಇದ್ದ ನಟರಾಜ, ಶಿವ, ಪಾರ್ವತಿ ಮುಂತಾದ ಕಂಚಿನ ಮೂರ್ತಿಗಳು ಈಗ ಪುರಾತತ್ವ ಇಲಾಖೆಯಲ್ಲಿವೆ. (ಕೆ.ಎಂ.ಎಸ್.)

**ಕೂರ್ಮಗಡ :** ಉತ್ತರ ಕನ್ನಡ ಜಿಲ್ಲೆಯ ಕಾರವಾರದಿಂದ 4ಕಿಮೀ ಅಂತರದಲ್ಲಿ ಅರಬ್ಬಿ ಸಮುದ್ರದಲ್ಲಿರುವ ಒಂದು ಸುಂದರ ಪುಟ್ಟ ದ್ವೀಪ. ವಿಸ್ತೀರ್ಣ ಸುಮಾರು 0.2ಚಮೀ. ಇಲ್ಲಿ ಸೋಂದಾದ ಸದಾಶಿವ ನಾಯಕ 1705ರಲ್ಲಿ ಕಟ್ಟಿಸಿದ ಒಂದು ಕೋಟೆಯಿದೆ. ನರಸಿಂಹ



ಕೂರ್ಮಗಡ ದ್ವೀಪ

ಹಾಗೂ ಮಾರುತಿ ದೇವಸ್ಥಾನ ಇವೆ. ನರಸಿಂಹ ದೇವಾಲಯವನ್ನು ಜೀರ್ಣೋದ್ಧಾರ ಮಾಡಲಾಗಿದೆ. ಒಳಗೆ ವಿಗ್ರಹವಿಲ್ಲ. ಜಾತ್ರೆಯ ಸಂದರ್ಭದಲ್ಲಿ ಸದವಾಡದ ಸಪ್ರೆ ಮನೆತನದವರು ಬೆಳ್ಳಿ ವಿಗ್ರಹವನ್ನು ತಂದಿಟ್ಟು ಪೂಜಿಸುವರು. ಪ್ರತಿ ವರ್ಷ ಪುಷ್ಯ ಪೂರ್ಣಿಮೆಯಂದು ಇಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ದ್ವೀಪದಲ್ಲಿ ಕೆಲವು ಹಳೆಯ ಫಿರಂಗಿಗಳಿವೆ. ಇಲ್ಲಿ ಒಂದು ಹಳೆಯ ತಳಪಾಯ ನೆಲೆ ಇದೆ. ಅದನ್ನು ಅಂಬಾ ಭವಾನಿ ದೇವಾಲಯಕ್ಕಾಗಿ ನಿರ್ಮಿಸಿದ್ದೆಂದು ತಿಳಿದುಬರುತ್ತದೆ. ಇಲ್ಲೊಂದು ಆಕರ್ಷಕವಾದ ಗುಹೆ ಇದೆ. ಈ ದ್ವೀಪದ ಸಮೀಪ ಮಧುಲಿಂಗಗಢ ಎಂಬ ಇನ್ನೊಂದು ದ್ವೀಪ ಮತ್ತು ಬ್ಲಾಕ್ ರಾಕ್ ಎಂದು ಕರೆಯಲಾಗುವ ಒಂದು ಬಂಡೆ ಇವೆ. (ಬಿ.ಎನ್.ಎಂ.)

**ಕೃಷಿ :** ಕರ್ನಾಟಕದ ಆರ್ಥಿಕ ವ್ಯವಸ್ಥೆಗೆ ಕೃಷಿ ಬೆನ್ನೆಲುಬು. ಈ ನಾಡಿನ ಬಹುಸಂಖ್ಯಾತ ಜನರ ಜೀವನ ನಿರ್ವಹಣೆ ಸಾಗುವುದು ಕೃಷಿಯಿಂದಲೇ. ರಾಜ್ಯದ ಬೊಕ್ಕಸವನ್ನು ತುಂಬುವ ಆದಾಯಗಳಲ್ಲಿ ಕೃಷಿಯದೇ ಸಿಂಹಪಾಲು. ಇದು ನಾಡಿನ ಎಲ್ಲೆಡೆಯಲ್ಲೂ ಪಸರಿಸಿರುವ ಉದ್ಯಮ. ಈ ವಿಷಯಕ್ಕೆ ಸಂಬಂಧಪಟ್ಟಂತೆ ಈ ಸಂಪುಟದಲ್ಲಿ ಬತ್ತ, ಕಬ್ಬು, ಗೋದಿ, ರಾಗಿ ಮೊದಲಾದ ಎಲ್ಲಾ ಮುಖ್ಯ ಬೆಳೆಗಳ ಬಗ್ಗೆಯೂ ಅಲ್ಲದೆ, ಹಿನ್ನೆಲೆಗೆ ಉಪಯುಕ್ತವಾಗುವಂತೆ, ಭೂರಚನೆ, ಹವಾಮಾನ, ಮಳೆ ಇತ್ಯಾದಿಗಳಿಗೂ ಪ್ರತ್ಯೇಕ ಲೇಖನಗಳನ್ನು ಆಯಾ ಶೀರ್ಷಿಕೆಗಳಲ್ಲಿ ಕೊಡಲಾಗಿದೆ. ಪ್ರಸಕ್ತ ಲೇಖನದಲ್ಲಿ ಕೃಷಿಯ ಇತಿಹಾಸ, ಆಧುನಿಕ ಕೃಷಿ, ಕೃಷಿಭೂಮಿ, ನೀರಾವರಿ ಮತ್ತು ಬೆಳೆಗಳು ಈ ವಿಷಯಗಳನ್ನು ಸಮೀಕ್ಷಿಸಲಾಗಿದೆ.

**ಇತಿಹಾಸ :** ವಿಶ್ವದ ಅತ್ಯಂತ ಪ್ರಾಚೀನ ಉದ್ಯಮವಾದ ಕೃಷಿ ಕರ್ನಾಟಕದಲ್ಲಿ ಪ್ರಚಲಿತವಾದ್ದು ನವಶಿಲಾಯುಗದ ಸಂಸ್ಕೃತಿಗಳು ಹರಡಲಾರಂಭಿಸಿದಂದಿನಿಂದ ಅಂದರೆ ಕ್ರಿ.ಪೂ.3000-2500ರ ಆರಂಭ. ಆಗಿನ ಕಾಲದಲ್ಲಿ ಬಳಸುತ್ತಿದ್ದ ಕೃಷಿ ವಿಧಾನಗಳು, ಬೆಳೆಗಳು ಇವುಗಳ ಬಗ್ಗೆ ಹೆಚ್ಚಿನ ಮಾಹಿತಿಗಳು ದೊರಕಿಲ್ಲ. ಆದರೆ ಕಲ್ಲಿನ ಕೊಡಲಿಗಳನ್ನು ಉಪಯೋಗಿಸಿ ಕಾಡನ್ನು ಸವರಿ ಭೂಮಿಯನ್ನು ವ್ಯವಸಾಯಯೋಗ್ಯವಾಗಿ ಮಾಡಿಕೊಂಡು, ಬಹುಶಃ ಭಾರವಾದ ಕಲ್ಲನ್ನು ಸಿಕ್ಕಿಸಿದ ಮರದ ಚೂಪು ಕೋಲುಗಳಿಂದ ನೆಲವನ್ನು ಅಗೆದು ವ್ಯವಸಾಯ ಮಾಡುತ್ತಿದ್ದುದಕ್ಕೆ ಸಾಂದರ್ಭಿಕ ಸಾಕ್ಷ್ಯಗಳು ದೊರಕುತ್ತವೆ. ಆ ಕಾಲದಲ್ಲಿ ಜನ ಸಾಮಾನ್ಯವಾಗಿ ಕರ್ನಾಟಕದ ಮೈದಾನ ಪ್ರದೇಶದ ನದಿ ದಂಡೆಗಳಲ್ಲಿ ಅಥವಾ ಬೆಟ್ಟಗಳ ಮೇಲೆ ಕಾಣುವ ಮಟ್ಟಪ್ರದೇಶಗಳಲ್ಲಿ ಮಾತ್ರ ವಸತಿ ಹೂಡಿ ಸುತ್ತಲ ಪ್ರದೇಶದಲ್ಲಿ ಬೇಸಾಯ ಮಾಡುತ್ತಿದ್ದರು. ಕ್ರಿ.ಪೂ. 1500ರ ಸುಮಾರಿನಲ್ಲಿ ರಾಗಿ, ಅವರೆ ಮತ್ತು ಹುರುಳಿಯನ್ನು ಬೆಳೆಯುತ್ತಿದ್ದರೆಂಬುದಕ್ಕೆ ಪ್ರಾಚೀನ ನೆಲೆಗಳಲ್ಲಿ ಸಾಕ್ಷ್ಯಗಳು ದೊರಕಿವೆ. ಕಟ್ಟೆಗಳನ್ನು ಕಟ್ಟಿ ನೀರಾವರಿ ವ್ಯವಸಾಯವನ್ನು ರೂಢಿಸಿ ಬತ್ತ ಇತ್ಯಾದಿಗಳನ್ನು ಬೆಳೆಯುವುದು ಕರ್ನಾಟಕದ ಕಬ್ಬಿಣದ ಯುಗದಲ್ಲಿ ಅಂದರೆ ಕ್ರಿ.ಪೂ.800-600ರ ಸುಮಾರಿನಲ್ಲಿ ಪ್ರಾರಂಭವಾಗಿರಬಹುದು.

ಶಾಸನಗಳು, ಸಾಹಿತ್ಯ ಇತ್ಯಾದಿ ಆಧಾರಗಳು ಪ್ರಾಚೀನ ಕಾಲದಲ್ಲಿದ್ದ ಕೃಷಿಯ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ. ಅಂದು ಕೃಷಿಯ ಪ್ರಗತಿಯೇ ದೇಶದ ಪ್ರಗತಿಯೆಂಬ ಭಾವನೆಯಿತ್ತು. ಸಿದ್ಧರಾಮನ 'ಕೃಷಿಯ ಮಾಡಿ ಉಣ್ಣದೆ ಹಸಿವು ಹರಿವ ಪರಿ ಇನ್ನೆಂತು' ಎಂಬ ಸೋಮೇಶ್ವರ ಕವಿಯ 'ಬೆಳೆಯೋ ಸರ್ವರ ಜೀವನಂ' ಎಂಬ ಉಕ್ತಿ ಇತ್ಯಾದಿಗಳಲ್ಲಿ ಅಂದಿನ ಸಮಾಜದಲ್ಲಿ ಕೃಷಿಗಿದ್ದ ಪ್ರಾಧಾನ್ಯವನ್ನು ಕಾಣಬಹುದು. ಭೂಮಿಯನ್ನು ತಾಯಿಯೆಂದೂ ರೈತರನ್ನು ಭೂಮಾತೆಯ ಮಕ್ಕಳೆಂದೂ ಭಾವಿಸಿದ್ದರು. ಒಕ್ಕಲ ಮಕ್ಕಳನ್ನು ಸಮಾಜ ಆದರ ಅಭಿಮಾನಗಳಿಂದ ನೋಡುತ್ತಿತ್ತು. ಕವಿ ನಯಸೇನ ತಿಳಿಸುವಂತೆ, ಸ್ವತಃ ಉತ್ತಿಬಿತ್ತಿ ಬೆಳೆಯದೆ ಪರರ ಬೆಳೆಗಳನ್ನು ಎದುರುನೋಡುತ್ತಾ ಕೂಡುವ ರೈತನಿಗೆ ಸಮಾಜದಲ್ಲಿ ಆದರಣೆಯಿರಲಿಲ್ಲ.

ಆಗಿನ ಕಾಲದಲ್ಲಿ ವ್ಯವಸಾಯದ ಭೂಮಿಯನ್ನು ದೇವಮಾತೃಕ ಮತ್ತು ನದೀಮಾತೃಕ ಎಂದು ಎರಡು ವಿಧಗಳಾಗಿ ವಿಂಗಡಿಸಿ ಕೊಳ್ಳಲಾಗಿತ್ತು. ಕೇವಲ ಮಳೆಯ ನೀರನ್ನೇ ಅವಲಂಬಿಸಿದ ಹೊಲಗಳು ದೇವಮಾತೃಕಗಳು; ನದಿ, ಕೆರೆ ಮುಂತಾದವುಗಳ ನೀರನ್ನು ಆಶ್ರಯಿಸಿದವು ನದೀಮಾತೃಕಗಳು. ಇವನ್ನೇ (ಬೆದ್ದಲೆ, ಬೆಟ್ಡಿಲೆ, ಬೆರ್ದಲೆ, ಬೆದೆಮಣ್), ಗದ್ದೆ (ನೀರ್ನೆಲೆ, ನೀರ್ಮಣ್ಣು) ಎಂದೂ ಕರೆಯಲಾಗುತ್ತಿತ್ತು. ಬೆದಗದ್ದೆಗಳೂ ಇದ್ದುವು. ಇವು ಹೊಲದಲ್ಲೇ ನೀರು ನಿಲ್ಲುವಂತೆ ಕಟ್ಟೆಯನ್ನು ಕಟ್ಟಿ, ಮಳೆಯ ನೀರನ್ನು ಸಂಗ್ರಹಿಸಿ, ಬತ್ತವನ್ನು ಬೆಳೆಯುವ ತಾತ್ಕಾಲಿಕ ಗದ್ದೆಗಳು. ಕಾಯಿ-ಪಲ್ಯ, ಹೂವು-ಹಣ್ಣು ಮುಂತಾದವುಗಳನ್ನು ಬೆಳೆಯುವ ತೋಟಗಳೂ ಇದ್ದುವು.

ಕೃಷಿ ರಾಜ್ಯದ ಮುಖ್ಯ ಆದಾಯಮೂಲವಾಗಿದ್ದುದರಿಂದ ಅಂದಿನ ಆಡಳಿತಗಾರರು ಬೆಳೆಯ ಭೂಮಿಗಳನ್ನು ಅದರ ಗುಣದ ಮೇಲೆ ವಿಂಗಡಿಸಿ ತೆರಿಗೆ ಇತ್ಯಾದಿಗಳನ್ನು ನಿಷ್ಕರ್ಷೆ ಮಾಡುತ್ತಿದ್ದರು. ಅಂಥ ಅನೇಕ ಹೆಸರುಗಳು ಶಾಸನಗಳಲ್ಲಿ ದೊರಕುತ್ತವೆ. ಉದಾ: ನೆಲ್ಲಗೆ (ಬತ್ತ ಬೆಳೆಯುವ ಭೂಮಿ), ವಕುಲಕಚ್ಛ ಕ್ಷೇತ್ರ (ವಕುಲಗಳು ತುಂಬಿದ ಜವುಗು ನೆಲ), ಎರೆ ಅಥವಾ ಕರಿಯ ಕೆಮಿ (ಕರಿಮಣ್ಣಿನ ಭೂಮಿ), ಕಿಸುಕಾಡು ಅಥವಾ ಕಿಸುಮಣ್ಣು (ಕೆಂಪು ಮಣ್ಣಿನ ಭೂಮಿ), ಮಳಲ ಕೆಮಿ (ಮರಳು ಭೂಮಿ), ಹರಳ ಕೆಮಿ (ಕಲ್‌ಜರಗು ಭೂಮಿ), ಖಿಜ್ಜಣ ಸರಂಧ್ರ ಅಥವಾ ಸಚ್ಛಿದ್ರವಾದ ಭೂಮಿ. ಶಾಸನಗಳಲ್ಲಿ ಉತ್ತಮ, ಮಧ್ಯಮ ಮತ್ತು ಅಧಮ ಭೂಮಿಗಳ ಉಲ್ಲೇಖವೂ ಇದೆ.

ಆಧುನಿಕ ಮತ್ತು ವೈಜ್ಞಾನಿಕ ಜ್ಞಾನ ಹಾಗೂ ಸಲಕರಣೆಗಳನ್ನು ಬಿಟ್ಟರೆ ಇಂದಿನ ಮತ್ತು ಅಂದಿನ ವ್ಯವಸಾಯ ಕ್ರಮಗಳಲ್ಲಿ ಅಷ್ಟೇನೂ ವ್ಯತ್ಯಾಸವಿಲ್ಲವೆಂದೇ ಹೇಳಬಹುದು. ಅಂದಿನ ಹಲವಾರು ಸಾಹಿತ್ಯ ಕೃತಿಗಳಲ್ಲಿ ಸಾದೃಶ್ಯ ಮತ್ತು ಉಪಮಾನಗಳ ರೂಪದಲ್ಲಿನ ವ್ಯವಸಾಯದ ಹಲವು ಕ್ರಮಗಳು, ಬಳಸುತ್ತಿದ್ದ ಕೆಲವು ಸಲಕರಣೆಗಳು ಮುಂತಾದ ವಿವರಗಳು ಸಿಗುವುದುಂಟು.

ವ್ಯವಸಾಯಕಾರ್ಯ ಸುಗಮವಾಗಿ ಸಾಗಲು, ಒಳ್ಳೆಯ ದಿನದ ಸಮಯವನ್ನು ಜ್ಯೋತಿಷಿಗಳಿಂದ ತಿಳಿದು ಪ್ರಾರಂಭ ಮಾಡುವ ಸಂಪ್ರದಾಯವಿತ್ತು. ಜೋಡೆತ್ತುಗಳಿಗೆ ನೊಗ ಹಾಕಿ, ನೊಗಕ್ಕೆ ನೇಗಿಲು ಕಟ್ಟಿ ಭೂಮಿಯನ್ನು ಉತ್ತು, ಗೋಡು ಗೊಬ್ಬರ ಹಾಕಿ ಹದಮಾಡಿದ ಭೂಮಿಗೆ ಬೀಜವನ್ನು ಬಿತ್ತುತ್ತಿದ್ದರು. ಮೂರನೆಯ ಸೋಮೇಶ್ವರನಿಂದ ವಿರಚಿತವಾದ ಮಾನಸೋಲ್ಲಾಸ (ಅಭಿಲಷಿತಾರ್ಥ ಚಿಂತಾಮಣಿ) ಎಂಬ ಗ್ರಂಥದಲ್ಲಿ ಹೂಗಿಡಗಳು ಮತ್ತು ಹಣ್ಣಿನ ಮರಗಳು ಇವುಗಳ ಬೀಜಗಳನ್ನು ಬಿತ್ತುವುದಕ್ಕೆ ಮುನ್ನ ಹೇಗೆ ಸಂಸ್ಕರಿಸಬೇಕು, ಅವುಗಳನ್ನು ನೆಡುವ ಪಾತಿಗಳು ಹೇಗಿರಬೇಕು ಇತ್ಯಾದಿ ವಿವರಗಳು ಸಹ ಇವೆ.

ಬೆಳೆಗಳ ಬಗ್ಗೆ ಜನ ಹೆಚ್ಚು ಶ್ರದ್ಧೆ ವಹಿಸುತ್ತಿದ್ದರು. ಗಿಡಮರಗಳಿಗೆ ನೀರನ್ನು ಸರಿಯಾದ ಸಮಯದಲ್ಲಿ ಎರೆಯುವುದಲ್ಲದೆ, ಬೆಳೆಗಳನ್ನು ಪ್ರಾಣಿಗಳಿಂದ ಹಾಗೂ ಕಳ್ಳಕಾಕರ ಹಾವಳಿಯಿಂದ ರಕ್ಷಿಸಲು ಶ್ರಮವಹಿಸುತ್ತಿದ್ದರು. ಕೆಯ್ಗೆ ಬೇಲಿ ಶಿಶುವಿಂಗೆ ಪಾಲ್ ಎನ್ನುತ್ತಾನೆ ನಯಸೇನ. ದನ, ಕುರಿ, ಆಡು, ಹಂದಿ ಮುಂತಾದ ಪ್ರಾಣಿಗಳೇನಾದರೂ ಹೊಲಗದ್ದೆಗಳಿಗೆ ನುಗ್ಗಿ, ಬೆಳೆದು ನಿಂತಿರುವ ಬೆಳೆಗಳನ್ನು ತಿಂದು ಹಾಳು ಮಾಡಿದರೆ ಆ ಪ್ರಾಣಿಗಳ ಒಡೆಯರಿಗೆ ದಂಡವನ್ನು ವಿಧಿಸಬೇಕು, ಪ್ರಜೆಗಳಿಗೆ ಜೀವನಾಧಾರವಾದ ಯಾವುದೇ ಗಿಡಮರಗಳನ್ನು ಯಾರಾದರೂ ಕಡಿದುಹಾಕಿದ್ದೇ ಆದರೆ ಅಂಥವರನ್ನು ರಾಜ ದಂಡ ವಿಧಿಸಿ ಶಿಕ್ಷಿಸಬೇಕು, ಬೆಳೆದು ಪಕ್ವವಾಗಿ ನಿಂತಿರುವ ಬೆಳೆಗಳಿಗೆ ಯಾರಾದರೂ ಬೆಂಕಿಯನ್ನು ಹಾಕಿ ನಷ್ಟಮಾಡಿದ್ದೇ ಆದರೆ ಅಂಥವರನ್ನು ವಿರಣ ಹುಲ್ಲಿನೊಳಗೆ ಹಾಕಿ ಸಜೀವವಾಗಿ ಸುಡಬೇಕು ಎಂದು ವಿಜ್ಞಾನೇಶ್ವರ ತಿಳಿಸುತ್ತಾನೆ.

ಬತ್ತವೇ ಮೊದಲಾದ ಧಾನ್ಯಗಳು ಬೆಳೆದು ಪಕ್ವವಾದ ಮೇಲೆ ಕೊಯ್ಲು ಮಾಡುತ್ತಿದ್ದರು. ಕತ್ತರಿಸಿದ ಧಾನ್ಯದ ತೆನೆಗಳನ್ನು ಸೂಡು ಕಟ್ಟಿ, ಕಳ(ಕಣ)ದಲ್ಲಿ ಹಾಕಿ, ಒಕ್ಕಣ ಮಾಡಿ, ಧಾನ್ಯಗಳನ್ನು ಬೇರ್ಪಡಿಸಿ, ಕಣದಲ್ಲಿ ರಾಶಿ ಮಾಡಿ ಧಾನ್ಯ ಸರಿಯಾಗಿ ಒಣಗಿ ಹದವಾದ ಮೇಲೆ, ಅದನ್ನು ಕೊಂಡೊಯ್ದು ಹಗೇವುಗಳಲ್ಲಿ ಸಂಗ್ರಹಿಸುತ್ತಿದ್ದರು. ವಿಜ್ಞಾನೇಶ್ವರ ಸೂಚಿಸುವಂತೆ ಬೆಳೆಗಳ ಸರದಿ ಅಂದರೆ, ಭೂಮಿಯನ್ನು ನಿಸ್ಸಾರಗೊಳಿಸದಿರಲು ಸರದಿಯ ಮೇಲೆ ಬೇರೆಬೇರೆ ಬೆಳೆಗಳನ್ನು ಬೆಳೆಯುವ ವಿಧಾನ ಬಳಕೆಯಲ್ಲಿತ್ತು. ಕೆಲವು ಶಾಸನಗಳಲ್ಲಿ 'ಕುಮರಿ' ವ್ಯವಸಾಯ ಪದ್ಧತಿಯ ಉಲ್ಲೇಖವಿದೆ. ಕಾಡು ಪ್ರದೇಶಗಳಲ್ಲಿ ಮರಗಳನ್ನು ಕಡಿದು ಅವನ್ನು ಸುಟ್ಟು, ಆ ಪ್ರದೇಶದಲ್ಲಿ ಒಂದು ಅಥವಾ ಎರಡು ವರ್ಷಗಳು ಮಾತ್ರ ವ್ಯವಸಾಯ ಮಾಡಿ ಬೆಳೆಯನ್ನು ತೆಗೆದು, ಅನಂತರ ಅದನ್ನು ತ್ಯಜಿಸಿ ಮತ್ತೆ ಅದೇ ರೀತಿಯಲ್ಲಿ ಹೊಸ ವ್ಯವಸಾಯ ಭೂಮಿಯನ್ನು ರೂಢಿಸುವುದು ಕುಮರಿ ಪದ್ಧತಿ.

ನಿತ್ಯಬಳಕೆಯ ಹಾಗೂ ಕೃಷಿಯ ಉದ್ದೇಶಕ್ಕಾಗಿ ಕೆರೆಕಟ್ಟೆ ಬಾವಿಗಳನ್ನು ಕಟ್ಟಿಸುವುದು ಅತಿ ಶ್ರೇಯಸ್ಕರವೆಂಬ ನಂಬಿಕೆಯಿತ್ತು. ಆಳರಸರು, ಅಧಿಕಾರಿಗಳು, ಶ್ರೀಮಂತರು, ಗ್ರಾಮಸಂಸ್ಥೆಯವರು - ಹೀಗೆ ಸಮಾಜದ ನಾನಾ ವರ್ಗದವರು ಕೆರೆ ಬಾವಿಗಳನ್ನು ನಿರ್ಮಿಸಿರುವ ನಿದರ್ಶನಗಳು ನೂರಾರಿವೆ. ಕಾವೇರಿಗೆ ತೂಬುಗಳೂ ಕಾಲುವೆಗಳೂ ಇದ್ದುವು ಎಂದು ಶಾಸನವೊಂದು ತಿಳಿಸುತ್ತದೆ. ತುಂಗಭದ್ರೆಗೆ ಅಡ್ಡಕಟ್ಟೆಯನ್ನು ಕಟ್ಟಿ ಅದರ ನೀರನ್ನು ಕಾಲುವೆಗಳ ಮೂಲಕ ಜಮೀನುಗಳಿಗೆ ಹಾಯಿಸಿ ವ್ಯವಸಾಯ ಮಾಡಿದುದರ ಉಲ್ಲೇಖವೂ ಶಾಸನದಲ್ಲಿದೆ. ಅಲ್ಲದೆ, ಬೆಟ್ಟದಿಂದ ಹರಿದು ಬರುವ ಸಣ್ಣ ಸಣ್ಣ ನದಿಗಳ ನೀರನ್ನೂ ಕಾಲುವೆಗಳ ಮೂಲಕ ಹಾಯಿಸಿ ಬತ್ತ, ಕಬ್ಬು ಮುಂತಾದವುಗಳನ್ನು ಬೆಳೆಯುತ್ತಿದ್ದರು. ಆ ಕಾಲದಲ್ಲಿ ಬಹುಶಃ ಕೆರೆಗಳಿಲ್ಲದ ಗ್ರಾಮವಿರಲಿಲ್ಲವೆನ್ನಬಹುದು. ಕೆರೆಯ ತೂಬಿನಿಂದ ಹೊರಟ ನೀರು ಬಾಯ್ಕಲ್ ಅಥವಾ ಕಾಲ್‌ಗಳ (ಕಾಲುವೆ) ಮೂಲಕ ಹರಿದು, ಗದ್ದೆಗಳನ್ನು ತಲಪುತ್ತಿತ್ತು. ವಿಶೇಷವಾಗಿ ತೋಟಗಳಲ್ಲಿ ಬಾವಿಗಳಿರುತ್ತಿದ್ದವು. ಏತಗಳಿಂದಲೋ ಘಟೀಯಂತ್ರಗಳಿಂದಲೋ ನೀರನ್ನೆತ್ತಿ ಹಾಯಿಸುತ್ತಿದ್ದರು.

ಕಾಫೀ, ಟೀ, ಹೊಗೆಸೊಪ್ಪುಗಳಂಥ ಬೆಳೆಗಳನ್ನು ಬಿಟ್ಟು, ಈಗ ಬೆಳೆಯುತ್ತಿರುವ ಬೆಳೆಗಳನ್ನೇ ಬಹುಶಃ ಪ್ರಾಚೀನ ಕರ್ನಾಟಕದಲ್ಲೂ ಬೆಳೆಯುತ್ತಿದ್ದರು. ಗದ್ದೆಗಳಲ್ಲಿ ಮುಖ್ಯವಾಗಿ ಬತ್ತ ಮತ್ತು ಕಬ್ಬನ್ನು ಬೆಳೆಯುತ್ತಿದ್ದರು. ಫಲವತ್ತಾದ ಮಣ್ಣು ಹಾಗೂ ಸಾಕಷ್ಟು ನೀರಿದ್ದ ಪ್ರದೇಶದಲ್ಲೆಲ್ಲ ಬತ್ತವನ್ನು ಬೆಳೆಯುತ್ತಿದ್ದರು. ಕೊಂಕಣ ಪ್ರದೇಶ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಬತ್ತದ ಬೆಳೆಗೆ ಬಹು ಪ್ರಸಿದ್ಧವೆನಿಸಿದ್ದುವು. ಭಟ್ಕಳದಿಂದ ಹೊನ್ನಾವರ ಮತ್ತು ಬಂಕಾಪುರಗಳ ಮಾರ್ಗವಾಗಿ ವಿಜಯನಗರದವರೆಗೂ ಇದ್ದ ಹೆದ್ದಾರಿಯ ಇಕ್ಕೆಲಗಳಲ್ಲಿಯೂ ಬತ್ತವನ್ನು ಸಮೃದ್ಧವಾಗಿ ಬೆಳೆಯುತ್ತಿದ್ದರು. ದಕ್ಷಿಣ ಕನ್ನಡದ ಕಡಲತೀರಪ್ರದೇಶದಲ್ಲಿ ಹೇರಳವಾಗಿ ಬೆಳೆಯುತ್ತಿದ್ದ ಬತ್ತವನ್ನು ಮಲಬಾರ್ ಮತ್ತು ಓರ್ಮುಜ್ ದೇಶಗಳಿಗೆ ರಫ್ತು ಮಾಡುತ್ತಿದ್ದರು ಎಂದು ಬಾರ್ಬೋಸ ತಿಳಿಸುತ್ತಾನೆ. ಹಲವಾರು ಬಗೆಯ ಬತ್ತವನ್ನು ಬೆಳೆಯುತ್ತಿದ್ದರು. ಸೋಮೇಶ್ವರ ರಕ್ತಶಾಲಿ, ಮಹಾಶಾಲಿ, ಗಂಧಶಾಲಿ, ಸೂಕ್ಷ್ಮಶಾಲಿ ಮೊದಲಾದ ಎಂಟು ಬಗೆಯ ಅಕ್ಕಿಯನ್ನು ಹೆಸರಿಸಿದ್ದಾನೆ. ಸುಶ್ರುತ 39 ಬಗೆಯ ಅಕ್ಕಿಗಳನ್ನು ಹೆಸರಿಸುತ್ತಾನೆ. ಸುಗಂಧಶಾಲಿ, ರಾಜಶಾಲಿ, ರಾಜಾನ್ನ, ಗಂಧಶಾಲಿ ಇತ್ಯಾದಿಗಳು ಶಾಸನಗಳಲ್ಲಿ ಉಲ್ಲೇಖಿತವಾಗಿವೆ. ಬತ್ತವನ್ನು ಸಾಮಾನ್ಯವಾಗಿ ವರ್ಷಕ್ಕೆರಡು ಸಲ ಸುಗ್ಗಿ ಮಾಡುತ್ತಿದ್ದರು. ಚಳಿಗಾಲದಲ್ಲೊಂದು ಬೆಳೆ, ಬೇಸಗೆಯಲ್ಲೊಂದು ಬೆಳೆ. ಗದ್ದೆಗಳಲ್ಲಿ ಸಮೃದ್ಧವಾಗಿ ಬೆಳೆದು ನಿಂತಿರುವ ಕಬ್ಬಿನ ವರ್ಣನೆಗಳು ಸಾಹಿತ್ಯ ಕೃತಿಗಳಲ್ಲಿ ಮತ್ತು ಶಾಸನಗಳಲ್ಲಿ ಹಲವಾರಿವೆ. ಕುರುಜಾಂಗಣನಾಡಿನಲ್ಲಿ ಬೆರಳಿಂದ ಮಿಡಿದರೆ ರಸಬಿಡುವ ತನಿಯಾದ ಕಬ್ಬನ್ನು (ಮಿಡಿದೊಡೆ ತನಿಗರ್ಬು ರಸಂ ಬಿಡುವುವು) ಬೆಳೆಯುತ್ತಿದ್ದರೆಂದು ಪಂಪ ವರ್ಣಿಸಿದ್ದಾನೆ. ಕಬ್ಬಿನ ಗದ್ದೆಗಳಿಗೆ ನುಗ್ಗಿ ಬೆಳೆಗೆ ಹಾನಿ ಮಾಡುತ್ತಿದ್ದ ಆನೆ ನರಿಗಳಂಥ ಪ್ರಾಣಿಗಳ ಹಾವಳಿಯ ಬಗ್ಗೆಯೂ ಕಾವ್ಯಶಾಸನಾದಿಗಳಲ್ಲಿ ಸೂಚನೆಯಿದೆ. ಪ್ರಾಚೀನ ತುಳುನಾಡಿನ ರಾಜಧಾನಿಯೆನಿಸಿದ್ದ ಬಾರಕೂರಿನಲ್ಲಿ ಅತ್ಯುತ್ತಮವಾದ ಕಬ್ಬನ್ನು ಹೇರಳವಾಗಿ ಬೆಳೆಯುತ್ತಿದ್ದರು ಎಂದು ಇಬ್ನ್ ಬತೂತ್ ಹೇಳಿದ್ದಾನೆ. ಕಬ್ಬಿನ ಬೆಳೆಯನ್ನು ಬೇಸಗೆಯಲ್ಲಿ ಕೊಯ್ಲು ಮಾಡುತ್ತಿದ್ದರೆಂಬ ಅಂಶವನ್ನು ಕೃಷ್ಣದೇವರಾಯ ತನ್ನ ಅಮುಕ್ತಮಾಲ್ಯದಾ ಎಂಬ ಗ್ರಂಥದಲ್ಲಿ ತಿಳಿಸಿದ್ದಾನೆ.

ಹೊಲಗಳಲ್ಲಿ ಸಾಮಾನ್ಯವಾಗಿ ಗೋದಿ, ಜೋಳ, ರಾಗಿ, ಕಂಬು, ನವಣೆ, ಬರಗು, ಸಾಮೆ, ಸಜ್ಜೆ ಮುಂತಾದ ಧಾನ್ಯಗಳನ್ನು ಬೆಳೆಯುತ್ತಿದ್ದರು. ಅಲ್ಲದೆ ತೊಗರಿ, ಕಡಲೆ, ಹೆಸರು, ಉದ್ದು, ಅವರೆ, ಹುರುಳಿ ಮೊದಲಾದ ದ್ವಿದಳಧಾನ್ಯಗಳನ್ನು ಬೆಳೆಯುತ್ತಿದ್ದರು. ಹಾಗೆಯೆ ಹರಳು ಎಳ್ಳು ಕುಸುಬೆಗಳಂಥ ಎಣ್ಣೆ ಬೀಜಗಳನ್ನೂ ಬೆಳೆಯುತ್ತಿದ್ದರು. ವಾಣಿಜ್ಯ ಮಹತ್ವವುಳ್ಳ ಹತ್ತಿಯ ಬೆಳೆಗೆ ಕರ್ನಾಟಕ ಮೊದಲಿನಿಂದಲೂ ಪ್ರಸಿದ್ಧವೆನಿಸಿತ್ತು.

ಜೀರಿಗೆ, ಕೊತ್ತಂಬರಿ, ಮೆಣಸು ಮೊದಲಾದ ಹಲವು ಸಂಬಾರ ಪದಾರ್ಥಗಳನ್ನೂ ಬೆಳೆಯಲಾಗುತ್ತಿತ್ತು. ಬಾರಕೂರು ಮತ್ತು ಮಂಗಳೂರುಗಳಲ್ಲಿ ಮೆಣಸನ್ನು ಹೇರಳವಾಗಿ ಬೆಳೆದು ರಫ್ತು ಮಾಡುತ್ತಿದ್ದ ಸಂಗತಿ ಯಾಖೂತ್ ಮತ್ತು ದಿಮಿಷ್ಕಿಗಳ ಬರೆಹದಿಂದ ಸ್ಪಷ್ಟವಾಗುತ್ತದೆ. ಹಾಗೆಯೆ ಇಬ್ನ್ ಬತೂತ್ ಮಂಗಳೂರಿನಿಂದ ಹೊರದೇಶಗಳಿಗೆ ಹೆಚ್ಚು ಪ್ರಮಾಣದಲ್ಲಿ ರಫ್ತಾಗುತ್ತಿದ್ದ ಮೆಣಸು ಮತ್ತು ಶುಂಠಿಯನ್ನು ಹೆಸರಿಸುತ್ತಾನೆ.

ತೋಟಗಳಲ್ಲಿ ಬದನೆ ಸೌತೆ ಕುಂಬಳ ಹಾಗಲ ಹೀರೆ ಮೊದಲಾದ ತರಕಾರಿಗಳು; ಮಾವು ಹಲಸು ಕಿತ್ತಳೆ ನಿಂಬೆ ದಾಳಿಂಬೆ ಬಾಳೆಯೇ ಮೊದಲಾದ ಹಣ್ಣುಗಳು; ಜಾಜಿ ಮಲ್ಲಿಗೆ ಸಂಪಿಗೆ ಇರುವಂತಿಗೆ ಮುಂತಾದ ಹಲವಾರು ಬಗೆ ಹೂವುಗಳು ಮೊದಲಾದವನ್ನು ಬೆಳೆಯುತ್ತಿದ್ದರು. ವಿಜಯನಗರ ಕಾಲದಲ್ಲಿ ಭಟ್ಕಳ ರೇವಿನಿಂದ ತೆಂಗಿನಕಾಯಿಯನ್ನು ಓರ್ಮುಜ್ ಮತ್ತು ಏಡನ್ ದೇಶಗಳಿಗೆ ರಫ್ತು ಮಾಡುತ್ತಿದ್ದರು. ಇದು ಮಾತ್ರವಲ್ಲದೆ, ಅಡಕೆ, ವೀಳ್ಯದೆಲೆ, ಅರಿಶಿನ ಮುಂತಾದವುಗಳ ಬೆಳೆಯೂ ಇತ್ತು. ಈ ಹಲವು ವ್ಯವಸಾಯ ಉತ್ಪನ್ನಗಳ ಉಲ್ಲೇಖ ಅನೇಕ ಶಾಸನಗಳಲ್ಲಿವೆ. ಹೈದರ್ ಅಲಿ ಹಿಪ್ಪನೇರಳೆ ಗಿಡಗಳನ್ನು

ಬೆಳೆಸಲು ಪ್ರಯತ್ನಿಸಿದನಾದರೂ ಆಗ ವ್ಯವಸಾಯದಲ್ಲಿ ಸಾಕಷ್ಟು ಪ್ರಗತಿ ಸಾಧಿಸಲಾಗಲಿಲ್ಲ. ಪಾಶ್ಚಾತ್ಯರು ಕರ್ನಾಟಕಕ್ಕೆ ಹೊಗೆಸೊಪ್ಪು, ಆಲೂಗಡ್ಡೆ, ಕಾಫಿ, ಪರಂಗಿ, ಅನಾನಸ್ ಮೊದಲಾದ ಹಲವು ಬೆಳೆಗಳನ್ನು ತಂದರು. ಅಂದಿನಿಂದ ಅವುಗಳ ವ್ಯವಸಾಯವೂ ಸಾಗುತ್ತಿದೆ. (ಎಸ್.ಜಿ.)

**ಕೃಷಿ ಭೂಮಿ :** ಕರ್ನಾಟಕದ ಒಟ್ಟು ಭೂವಿಸ್ತಾರವಾದ 1,89,43,050 ಹೆಕ್ಟೇರುಗಳಲ್ಲಿ 30,62,769 ಹೆಕ್ಟೇರು ಕಾಡು, 17,77,591 ಹೆಕ್ಟೇರು ಕೃಷಿಗೆ ಯೋಗ್ಯವಲ್ಲದ ಭೂಮಿ ಇದನ್ನು ಬಿಟ್ಟು ಪ್ರತಿವರ್ಷ ಸಾಗುವಳಿಯಾಗುತ್ತಿರುವ ಭೂಮಿ 10,48,92,29 ಹೆಕ್ಟೇರುಗಳು. ಇದರಲ್ಲಿ ಆಹಾರ ಬೆಳೆಗಳನ್ನು ಬೆಳೆಯುವ ಭೂಮಿ 72%, ಉಳಿದ ಬೆಳೆಗಳದು, 26%. ಆಹಾರ ಬೆಳೆಗಳಲ್ಲಿ ಬತ್ತ, ಜೋಳ, ರಾಗಿಗಳದೆ ಪ್ರಥಮ ಸ್ಥಾನ. ಉಳಿದ ಬಗೆಯ ಬೆಳೆಗಳಲ್ಲಿ ಪ್ರಮುಖವಾದುವು ಎಣ್ಣೆಬೀಜಗಳು ಮತ್ತು ಹತ್ತಿ. ವರ್ಷಕ್ಕೆ ಒಂದಕ್ಕಿಂತ ಹೆಚ್ಚು ಬೆಳೆ ತೆಗೆಯುವ ನೆಲದ ವಿಸ್ತೀರ್ಣ 18,22,374 ಹೆಕ್ಟೇರುಗಳು. ವ್ಯವಸಾಯದ ವೈವಿಧ್ಯದ ಆಧಾರದ ಮೇಲೆ ಕರ್ನಾಟಕದಲ್ಲಿ ಎಂಟು ವಿಭಾಗಗಳನ್ನು ಗುರುತಿಸಬಹುದು:

**1. ಕರಾವಳಿ ವಿಭಾಗ :** ಒಂದು ಪಾರ್ಶ್ವದಲ್ಲಿ ಉನ್ನತವಾದ ಪಶ್ಚಿಮ ಘಟ್ಟಗಳು, ಇನ್ನೊಂದು ಪಾರ್ಶ್ವದಲ್ಲಿ ಸಮುದ್ರ - ಇವುಗಳ ಮಧ್ಯೆ ಇರುವ ಕಿರಿಯಗಲದ ಪ್ರದೇಶ. ದಕ್ಷಿಣ ಕನ್ನಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳನ್ನು ಒಳಗೊಂಡಿದೆ. ಈ ಪ್ರದೇಶದುದ್ದಕ್ಕೂ ಅಲ್ಲಲ್ಲಿ ಸಣ್ಣ ನದಿಗಳೂ ತೊರೆಗಳೂ ಉಂಟು. ಪಶ್ಚಿಮ ಘಟ್ಟಗಳಲ್ಲಿ ಉಗಮಿಸುವ ಈ ನದಿಗಳು ಅರಬ್ಬೀ ಸಮುದ್ರವನ್ನು ಸೇರುತ್ತವೆ. ಈ ಪ್ರದೇಶದ ಮಳೆಯ ವಾರ್ಷಿಕ ಪರಿಮಾಣ 2,540ಮಿಮೀ. ಬಹುಪಾಲು ಮಳೆ ಮುಂಗಾರಿನಲ್ಲಿ ಅಂದರೆ ಮೇ-ಅಕ್ಟೋಬರ್ ಅವಧಿಯಲ್ಲಿ, ದಕ್ಷಿಣದ ಭಾಗಗಳಲ್ಲಿ ಕೊಂಚ ಮುಂಚೆಯೂ ಉತ್ತರದಲ್ಲಿ ತಡವಾಗಿಯೂ ಮುಂಗಾರು ಮಳೆ ಆರಂಭವಾಗುತ್ತದೆ. ಇಲ್ಲಿನ ಮಣ್ಣು ಮೆಕ್ಕಲು ಬಗೆಯದು. ಈ ಪ್ರದೇಶದ ಮುಖ್ಯ ಬೆಳೆ ಬತ್ತ. ದಕ್ಷಿಣ ಕನ್ನಡ, ಉಡುಪಿ, ಜಿಲ್ಲೆಗಳಲ್ಲಿ ನೀರಾವರಿ ಸೌಲಭ್ಯವಿರುವಂಥ ಕಡೆ ವರ್ಷಕ್ಕೆ ಮೂರು ಬಾರಿ, ಮೇ-ಅಕ್ಟೋಬರ್, ಅಕ್ಟೋಬರ್-ಜನವರಿ ಹಾಗೂ ಜನವರಿ-ಏಪ್ರಿಲ್‍ಗಳಲ್ಲಿ, ಬತ್ತದ ಬೆಳೆಯನ್ನು ಪಡೆಯುಲಾಗುತ್ತದೆ. ಹುರುಳಿ, ಹೆಸರು, ಉದ್ದು, ಅಲಸಂದೆ ಮುಂತಾದ ದ್ವಿದಳಧಾನ್ಯಗಳನ್ನೂ ಬೆಳೆಯಲಾಗುವುದು. ಕೊಂಚಮಟ್ಟಿಗೆ ಆಲೂಗೆಡ್ಡೆ, ಮೆಣಸಿನಕಾಯಿ, ಶುಂಠಿ ಹಾಗೂ ಮೆಣಸನ್ನು ಬೆಳೆಯಲಾಗುತ್ತದೆ. ಅಂತೆಯೇ ಮಾವು, ನಿಂಬೆ, ತೆಂಗು, ಅಡಕೆಗಳೂ ಇಲ್ಲಿನ ಪ್ರಧಾನ ಬೆಳೆಗಳು. ಉನ್ನತ ಪ್ರದೇಶಗಳಲ್ಲಿ ಕಾಡು ಸವರಿ ಗೋಡಂಬಿಯನ್ನೂ ಬೇಸಾಯ ಮಾಡಲಾಗಿದೆ.

**2. ಬೆಟ್ಟಗಳ ವಿಭಾಗ :** ಪಶ್ಚಿಮ ಘಟ್ಟಗಳನ್ನೊಳಗೊಂಡ ಪ್ರದೇಶ ಇದು. ಕರಾವಳಿ ವಿಭಾಗಕ್ಕೆ ಸಮಾನಾಂತರವಾಗಿ ಉತ್ತರದಿಂದ ದಕ್ಷಿಣಕ್ಕೆ ಹಬ್ಬಿದೆ. ಉತ್ತರ ಭಾಗದಲ್ಲಿ ಕಿರಿದಾಗಿಯೂ ದಕ್ಷಿಣದಲ್ಲಿ ಕೊಂಚ ಅಗಲವಾಗಿಯೂ ಉಂಟು. ಇದರ ಪೂರ್ವ ಹಾಗೂ ಪಶ್ಚಿಮ ಪಾರ್ಶ್ವಗಳ ಇಳಿಜಾರುಗಳಲ್ಲಿ ಕಾಡುಗಳಿವೆ. ಈ ವಿಭಾಗದಲ್ಲಿ ಕೊಡಗುಜಿಲ್ಲೆ ಹಾಗೂ ಚಿಕ್ಕಮಗಳೂರು, ಶಿವಮೊಗ್ಗ, ಹಾಸನ, ಧಾರವಾಡ, ಬೆಳಗಾಂವಿ ಜಿಲ್ಲೆಗಳ ಪಶ್ಚಿಮಭಾಗ ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಪೂರ್ವ ಭಾಗ ಸೇರಿವೆ. ಮಳೆಯ ವಾರ್ಷಿಕ ಪರಿಮಾಣ 1,524-6,350 ಮಿಮೀ. ಮಣ್ಣು ಲ್ಯಾಟರೈಟ್ ಬಗೆಯದು. ಇಲ್ಲಿ ಕೂಡ ಬತ್ತವೇ ಪ್ರಧಾನ ಬೆಳೆ. ಕಬ್ಬು, ಜೋಳ, ರಾಗಿ, ಹತ್ತಿ, ಸೇಂಗ, ಎಣ್ಣೆಬೀಜಗಳನ್ನೂ ಬೆಳೆಯಲಾಗುವುದು. ಶಿವಮೊಗ್ಗ ಜಿಲ್ಲೆಯಲ್ಲಿ ತೆಂಗು ಮತ್ತು ಅಡಕೆ ಬೆಳೆಯುಂಟು. ಕೊಡಗು, ಚಿಕ್ಕಮಗಳೂರು, ಹಾಸನ ಜಿಲ್ಲೆಗಳಲ್ಲಿ ಕಾಫಿತೋಟಗಳಿವೆ. ಚಹಾವನ್ನೂ ಅಲ್ಲಲ್ಲಿ ಕಾಣಬಹುದು. ದಕ್ಷಿಣ ಭಾಗಗಳಲ್ಲಿ ಕಿತ್ತಳೆಯನ್ನು ಬೆಳೆಯಲಾಗುತ್ತದೆ.

**3. ಉತ್ತರದ ಸಂಕ್ರಮಣ ವಲಯ :** ಬೆಟ್ಟಗಳ ವಿಭಾಗದ ಪೂರ್ವಕ್ಕಿದೆ. ಧಾರವಾಡ ಮತ್ತು ಬೆಳಗಾಂವಿ ಜಿಲ್ಲೆಗಳನ್ನೊಳಗೊಂಡ ಪ್ರದೇಶ ಇದು. ಇಲ್ಲಿನ ಮಣ್ಣು ಕೆಂಪು ಇಲ್ಲವೆ ಕಪ್ಪು ಬಗೆಯದು. ಮಳೆಯ ಪರಿಮಾಣ 1,015-1,525ಮಿಮೀ. ಇದರ ಪೂರ್ವಭಾಗದಲ್ಲಿ ಮಳೆ ಕಡಿಮೆಯಾಗುತ್ತ ಬರುತ್ತದಲ್ಲದೆ ಅನಿಶ್ಚಿತವೂ ಆಗುತ್ತದೆ. ಹಿಂಗಾರು ಜೋಳ, ಬತ್ತ, ಸೇಂಗ, ಮೆಣಸಿನಕಾಯಿ, ತಂಬಾಕು, ಹತ್ತಿ, ಕುಸುಬೆ, ಗೋದಿ, ಮುಸುಕಿನ ಜೋಳ, ಬೇಳೆಧಾನ್ಯಗಳು ಅಲ್ಲಿನ ಮುಖ್ಯ ಬೆಳೆಗಳು.

**4. ದಕ್ಷಿಣ ಸಂಕ್ರಮಣ ವಲಯ :** ಇದು ಕೂಡ ಹಿಂದಿನ ವಿಭಾಗ ದಂತೆಯೇ ಬೆಟ್ಟಗಳ ವಿಭಾಗದ ಪೂರ್ವಕ್ಕಿದೆ. ಆದರೆ ಇದರ ವ್ಯಾಪ್ತಿಯೆಲ್ಲವೂ ರಾಜ್ಯದ ದಕ್ಷಿಣಭಾಗದಲ್ಲಿ. ಶಿವಮೊಗ್ಗ ಮತ್ತು ಚಿಕ್ಕ ಮಗಳೂರು ಜಿಲ್ಲೆಗಳ ಪೂರ್ವಭಾಗ, ಹಾಸನ ಜಿಲ್ಲೆಯ ಮಧ್ಯಭಾಗ ಹಾಗೂ ಮೈಸೂರು ಚಾಮರಾಜನಗರ ಜಿಲ್ಲೆ ಈ ವಲಯಕ್ಕೆ ಸೇರಿವೆ. ಇಲ್ಲಿನ ಮಣ್ಣು ಮರಳುಮಿಶ್ರಿತ. ಮುಂಗಾರು ಮಳೆ ಆರಂಭವಾಗುವುದು ಉತ್ತರದ ಸಂಕ್ರಮಣ ವಲಯಕ್ಕಿಂತ ಮುಂಚೆ. ಕಾರುರಾಗಿ ಇಲ್ಲಿನ ಮುಖ್ಯ ಬೆಳೆ. ತಗ್ಗುಪ್ರದೇಶಗಳಲ್ಲಿ ಬತ್ತವನ್ನು ಬೆಳೆಯಲಾಗುತ್ತದೆ. ಸೀ ಐಲೆಂಡ್ ಹತ್ತಿ ಇಲ್ಲಿನ ಪ್ರಮುಖ ಆರ್ಥಿಕ ಬೆಳೆಯಾಗುತ್ತಿದೆ.

**5. ಈಶಾನ್ಯದ ಸಂಕ್ರಮಣ ವಲಯ :** ಕರ್ನಾಟಕದ ಈಶಾನ್ಯ ಮೂಲೆ ಯಲ್ಲಿದೆ. ಬೀದರ್ ಜಿಲ್ಲೆ ಹಾಗೂ ಗುಲ್ಬರ್ಗ ಜಿಲ್ಲೆಯ ಈಶಾನ್ಯ ಭಾಗಗಳನ್ನು ಈ ವಲಯ ಒಳಗೊಂಡಿದೆ. ಇಲ್ಲಿನ ಮಣ್ಣು ಲ್ಯಾಟರೈಟ್ ಇಲ್ಲವೆ ಕಪ್ಪು ಬಗೆಯದು. ಮಳೆಯ ಪರಿಮಾಣ ವರ್ಷಕ್ಕೆ 760 ಮಿಮೀ. ಬಹುಪಾಲೆಲ್ಲ ಸೆಪ್ಟಂಬರ್-ನವೆಂಬರ್ ಅವಧಿಯಲ್ಲಿ ಬೀಳುತ್ತದೆ. ಕಬ್ಬು, ದ್ವಿದಳ ಧಾನ್ಯಗಳು, ಜೋಳ - ಇಲ್ಲಿನ ಮುಖ್ಯ ಬೆಳೆಗಳು. ತಗ್ಗು ಪ್ರದೇಶಗಳಲ್ಲಿ ಬತ್ತವನ್ನೂ ಬೆಳೆಯಲಾಗುತ್ತದೆ.

**6. ಉತ್ತರದ ಒಣ ಪ್ರದೇಶ :** ವರ್ಷಕ್ಕೆ ಕೇವಲ 500ಮಿಮೀ ಮಳೆ ಯನ್ನು ಪಡೆಯುವ ಶುಷ್ಕ ಹವೆಯ ಪ್ರದೇಶ ಇದು. ಮಳೆ ಸೆಪ್ಟೆಂಬರ್-ಅಕ್ಟೋಬರ್ ತಿಂಗಳುಗಳಲ್ಲಿ ಬೀಳುತ್ತದೆ. ಬಿಜಾಪುರ, ಗುಲ್ಬರ್ಗ, ಬಳ್ಳಾರಿ ಜಿಲ್ಲೆಗಳು, ಧಾರವಾಡ ಜಿಲ್ಲೆಯ ಪೂರ್ವಭಾಗ, ರಾಯಚೂರು, ಬೆಳಗಾಂವಿ ಮತ್ತು ಚಿತ್ರದುರ್ಗ ಜಿಲ್ಲೆಯ ವಾಯವ್ಯಭಾಗಗಳು ಈ ಪ್ರದೇಶಕ್ಕೆ ಸೇರಿವೆ. ಇಲ್ಲಿನದು ಬಹುವಾಗಿ ಎರೆಮಣ್ಣು. ಇಲ್ಲೆಲ್ಲ ಹಿಂಗಾರು ಬೆಳೆಯೇ ಹೆಚ್ಚು. ಹತ್ತಿ, ಜೋಳ, ಸೇಂಗ ಮುಖ್ಯ ಬೆಳೆಗಳು. ಗೋದಿ ಮೊದಲಾದ ದ್ವಿದಳ ಧಾನ್ಯಗಳನ್ನೂ ಬೆಳೆಯಲಾಗುತ್ತದೆ.

**7. ಮಧ್ಯದ ಒಣ ಪ್ರದೇಶ :** ಚಿಕ್ಕಮಗಳೂರು, ಹಾಸನ ಜಿಲ್ಲೆಗಳ ಪೂರ್ವಭಾಗ, ತುಮಕೂರು ಜಿಲ್ಲೆಯ ಕೊಂಚ ಭಾಗ, ಚಿತ್ರದುರ್ಗ ಜಿಲ್ಲೆಯ ದಕ್ಷಿಣ ಭಾಗ, ಮಂಡ್ಯ ಜಿಲ್ಲೆ - ಇವು ಈ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಭಾಗಗಳು. ಈ ಪ್ರದೇಶ ಕೂಡ ಶುಷ್ಕ ಭೂಮಿಯೇ. ಇಲ್ಲಿನ ವಾರ್ಷಿಕ ಮಳೆಯ ಮೊತ್ತ 380-508ಮಿಮೀ. ಮಣ್ಣು ಮರಳುಮಿಶ್ರಿತ ಗೋಡು, ಕೆಲವೆಡೆ ಕ್ಷಾರೀಯವಾಗಿದೆ. ಸಾಮಾನ್ಯವಾಗಿ ಈ ಪ್ರದೇಶವನ್ನು ಅಭಾವ ಪರಿಸ್ಥಿತಿಯ ವಲಯವೆಂದು ಪರಿಗಣಿಸಲಾಗಿದೆ. ಆದರೆ ಮಂಡ್ಯ ಜಿಲ್ಲೆಯಲ್ಲಿ ಕಾಲುವೆ ನೀರಾವರಿ ಸೌಲಭ್ಯವಿರುವೆಡೆಯಲ್ಲೆಲ್ಲ ಬತ್ತ, ಕಬ್ಬುಗಳ ಎರಡೆರಡು ಬೆಳೆಗಳನ್ನು ಬೆಳೆಯಲಾಗುತ್ತದೆ. ರಾಗಿ, ಮತ್ತಿತರ ಧಾನ್ಯಗಳು ಇಲ್ಲಿನ ಇತರ ಬಗೆಯ ಬೆಳೆಗಳು. ಹುರುಳಿ, ಹರಳುಗಳನ್ನೂ ಬೆಳೆಯಲಾಗುವುದು. ಕಣಿವೆ ಪ್ರದೇಶಗಳಲ್ಲಿ ತೆಂಗು ಮತ್ತು ಅಡಕೆಗಳನ್ನು ಕಾಣಬಹುದು.

**8. ಆಗ್ನೇಯದ ಒಣ ಪ್ರದೇಶ :** ಇದು ಮಟ್ಟಸ ಪ್ರದೇಶ. ಕೋಲಾರ, ಬೆಂಗಳೂರು, ತುಮಕೂರು ಮತ್ತು ಮಂಡ್ಯ ಜಿಲ್ಲೆಯ ಪ್ರದೇಶಗಳನ್ನು ಒಳಗೊಂಡಿದೆ. ಇಲ್ಲಿನ ಮಳೆಯ ಪರಿಮಾಣ ವರ್ಷಕ್ಕೆ 760ಮಿಮೀ. ಮಣ್ಣು ಕೆಂಪು ಗೋಡು ಬಗೆಯದು. ರಾಗಿ ಇಲ್ಲಿನ ಮುಖ್ಯ ಬೆಳೆ. ಕೆರೆ ನೀರಾವರಿ ಸೌಲಭ್ಯವಿರುವೆಡೆಯಲ್ಲಿ ಬತ್ತವನ್ನೂ ಅಡಕೆಯನ್ನೂ ಬೆಳೆಯಲಾಗುತ್ತದೆ. ತರಕಾರಿ ಹಾಗೂ ಹಣ್ಣಿನ ಗಿಡಗಳನ್ನೂ ಗಣನೀಯ ಪ್ರಮಾಣದಲ್ಲಿ ಬೆಳೆಯುವುದುಂಟು.

**ನೀರಾವರಿ :** ಕರ್ನಾಟಕದಲ್ಲಿ ನೀರಾವರಿ ಸೌಕರ್ಯವಿರುವ ಭೂಮಿ 24,91,871 ಹೆಕ್ಟೇರುಗಳು ಉಳಿದೆಲ್ಲ ಜಮೀನುಗಳಲ್ಲಿ, ಕೃಷಿಗೆ ಆಧಾರ ಮಳೆ. ಅದರಲ್ಲಿನ ಉತ್ಪನ್ನ ಮಳೆಯಷ್ಟೇ ಅನಿಶ್ಚಿತ. ಇದನ್ನು ತಪ್ಪಿಸಲು ನೀರಾವರಿ ಸೌಕರ್ಯ ಹೆಚ್ಚಿಸುವ ದಿಕ್ಕಿನಲ್ಲಿ ಬೃಹತ್ ಪ್ರಯತ್ನ ನಡೆದಿದೆ.

ವ್ಯವಸಾಯಕ್ಕೆ ಬಾವಿ, ಕಾಲುವೆ, ಕೆರೆಗಳಿಂದ ನೀರೊದಗುತ್ತದೆ. ಬಾವಿಗಳಿಂದ ನೀರೆತ್ತಿ ಸಾಗುವಳಿ ಮಾಡುವುದು ಕರ್ನಾಟಕದಲ್ಲಿ ಹಿಂದಿನಿಂದ ಬಂದ ಪದ್ಧತಿ. 1998-99ರ ಅಂಕಿ ಅಂಶಗಳ ಪ್ರಕಾರ ರಾಜ್ಯದಲ್ಲಿ ಬಾವಿಗಳಿಂದ 4,78,818 ಹೆಕ್ಟೇರುಗಳಿಗೆ ನೀರೊದಗಿದ್ದುದು ತಿಳಿದುಬಂದಿದೆ. ಬಾವಿಗಳ ಸಂಖ್ಯೆ ಹಾಗೂ ಅವುಗಳಿಂದ ಕೃಷಿಗೆ ಒದಗುವ ಆಸರೆ ಬೆಳಗಾಂವಿ, ಕೋಲಾರ, ಬಿಜಾಪುರ, ಜಿಲ್ಲೆಗಳಲ್ಲಿ ಹೆಚ್ಚು. ಹಾಗೆಯೇ ಬೆಂಗಳೂರು, ತುಮಕೂರು, ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಗಳಲ್ಲೂ ಗಣನೀಯ. ಉಳಿದ ಜಿಲ್ಲೆಗಳಲ್ಲಿ ಅವುಗಳ ಸಂಖ್ಯೆ ಸಾಧಾರಣ. ಚಿಕ್ಕಮಗಳೂರು, ಹಾಸನ, ಕೊಡಗು ಜಿಲ್ಲೆಗಳ ಬಾವಿಗಳ ಸಂಖ್ಯೆ ಕಡಿಮೆ.

ಜಲಾಶಯ, ಅಣೆಕಟ್ಟು ಇವುಗಳಲ್ಲಿ ನೀರನ್ನು ಸಂಗ್ರಹಿಸಿ ಕಾಲುವೆಗಳ ಮುಖಾಂತರ ಅದನ್ನು ಹತ್ತಾರು ಕಿಮೀ ಹರಿಸಿ ಕೃಷಿಗೆ ನೀರು ಒದಗಿಸುತ್ತಾರೆ. ಹೀಗೆ ಕಾಲುವೆಗಳ ಆಸರೆಯಲ್ಲಿ ಸಾಗುವಳಿಯಾಗುತ್ತಿರುವ ಭೂಮಿ 9,52,021 ಹೆಕ್ಟೇರುಗಳು (1998-99). ಇದೇ ರೀತಿ ಕೆರೆಗಳ ಆಸರೆಯಲ್ಲಿ ಕೃಷಿಯಾಗುತ್ತಿದ್ದ ಭೂವಿಸ್ತೀರ್ಣ 2,54,965 ಹೆಕ್ಟೇರುಗಳು. ರಾಯಚೂರು, ಬಳ್ಳಾರಿ, ಶಿವಮೊಗ್ಗ, ಮಂಡ್ಯ, ಮೈಸೂರು, ಚಿತ್ರದುರ್ಗ -ಈ ಜಿಲ್ಲೆಗಳಲ್ಲಿ ನಾಲೆ ಬಯಲಿನ ಪ್ರದೇಶ ಹೆಚ್ಚು. ಉಳಿದೆಡೆ ಕೆರೆಗಳೇ ನೀರಾವರಿಗೆ ಆಧಾರ. ಸುಮಾರು 21 ಲಕ್ಷಕ್ಕೂ ಹೆಚ್ಚು ಹೆಕ್ಟೇರುಗಳಿಗೆ ನೀರಾವರಿ ಒದಗಿಸಲಾಗಿದೆ. ಈಗ ನಿರ್ಮಾಣವಾಗುತ್ತಿರುವ ತುಂಗಭದ್ರಾ ಮೇಲ್ಮಟ್ಟದ ನಾಲೆ, ಘಟಪ್ರಭಾ ಎರಡನೆಯ ಹಂತ, ಮಲಪ್ರಭಾ, ಕೃಷ್ಣಾ ಮೇಲ್ದಂಡೆ, ಹೇಮಾವತಿ, ಹಾರಂಗಿ ಈ ದೊಡ್ಡ ಪ್ರಮಾಣದ ಯೋಜನೆಗಳು ಮತ್ತು ಮಧ್ಯಮ ಪ್ರಮಾಣದ ಇನ್ನೂ ಅನೇಕ ಯೋಜನೆಗಳು ಮುಗಿದಾಗ ರಾಜ್ಯದ ನೀರಾವರಿ ವಿಸ್ತೀರ್ಣದ ಪ್ರಮಾಣ ಅಖಿಲ ಭಾರತ ನೀರಾವರಿ ಸೇಕಡ ಪ್ರಮಾಣದ 201ಕ್ಕಿಂತ ಹೆಚ್ಚಾಗಬಹುದು.

**ಬೆಳೆಗಳು :** ಹವಾಗುಣ ಒಟ್ಟಾರೆ ಹಿತಕರವಾಗಿರವುದರಿಂದ ರಾಜ್ಯದಲ್ಲಿ ಹಲವಾರು ಬೆಳೆಗಳನ್ನು ಬೆಳೆಯುತ್ತಾರೆ. ಬೆಳೆಗಳಲ್ಲಿ ಇಷ್ಟು ವೈವಿಧ್ಯ ಬೇರೆ ಯಾವ ರಾಜ್ಯದಲ್ಲೂ ಕಂಡುಬರುವುದಿಲ್ಲ. ಧಾನ್ಯಗಳಲ್ಲಿ ಜೋಳ, ರಾಗಿ, ಬತ್ತ, ಮುಸುಕಿನ ಜೋಳ, ಸಜ್ಜೆ, ಗೋದಿ, ಬಾರ್ಲಿ, ಸಾಮೆ, ನವಣೆ, ಹಾರಕ; ಬೇಳೆ ಬೆಳೆಗಳಲ್ಲಿ ತೊಗರಿ ಅಲಸಂದೆ ಹೆಸರು ಉದ್ದು ಅವರೆ ಹುರುಳಿ ಕಡಲೆ; ಎಣ್ಣೆ ಬೆಳೆಗಳಲ್ಲಿ ನೆಲಗಡಲೆ ಕುಸುಮೆ ಎಳ್ಳು ಹುಚ್ಚೆಳ್ಳು ಹರಳು ಅಗಸೆ; ನಾರು ಬೆಳೆಗಳಲ್ಲಿ ಹತ್ತಿ ಪುಂಡಿ; ಸಾಂಬಾರು ಬೆಳೆಗಳಲ್ಲಿ ಮೆಣಸಿನಕಾಯಿ ಸಾಸುವೆ ಕೊತ್ತಂಬರಿ ಜೀರಿಗೆ ಈರುಳ್ಳಿ ಬೆಳ್ಳುಳ್ಳಿ- ಹೀಗೆ ಅನೇಕ ಬೆಳೆಗಳು ರಾಜ್ಯದ ಅನೇಕ ಭಾಗಗಳಲ್ಲಿ ಬೆಳೆಯುತ್ತವೆ. ಇದೇ ರೀತಿ ಕಾಫಿ ಟೀ ಏಲಕ್ಕಿ ಗೋಡಂಬಿ ವೀಳೆಯದೆಲೆ ಕೋಕೋ ತೆಂಗು ಅಡಕೆ ಮೆಣಸು ಇಂಥ ತೋಟದ ಬೆಳೆಗಳು, ಮಾವು ಸಪೋಟ ಬಾಳೆ ಹಲಸು ದಾಳಿಂಬೆ ನಿಂಬೆ ಅಂಜೂರ ಸೀತಾಫಲ ಕಲ್ಲಂಗಡಿ ಕರಬೂಜ ಇಂಥ ಹಣ್ಣಿನ ಬೆಳೆಗಳನ್ನು ಹವಾ ಹಾಗೂ ನೀರಾವರಿ ಅನುಕೂಲವಿರುವೆಡೆ ಬೆಳೆಯುತ್ತಾರೆ. ಹಲವಾರು ತರಕಾರಿ ಬೆಳೆಗಳು ಹೂವಿನ ಪೊದೆಗಳು, ಹೂವಿನ ಮರಗಳು, ಪಟ್ಟಣಗಳಲ್ಲಿ ಸುತ್ತಮುತ್ತ ಮಾರುಕಟ್ಟೆ ಅನುಕೂಲವಿರುವೆಡೆ ಹಾಗೂ ಪಟ್ಟಣ ಉದ್ಯಾನವನಗಳಲ್ಲಿ ವ್ಯಾಪಕವಾಗಿ ಕೃಷಿಯಾಗುತ್ತಿವೆ. ಭಾರತದ ಇತರ ರಾಜ್ಯಗಳೊಂದಿಗೆ ಹೋಲಿಸಿದರೆ ಕರ್ನಾಟಕಕ್ಕೆ ರಾಗಿ ವ್ಯವಸಾಯದಲ್ಲಿ ಪ್ರಥಮ ಸ್ಥಾನವೂ ಹರಳು ಮತ್ತು ಹತ್ತಿ ವ್ಯವಸಾಯದಲ್ಲಿ ದ್ವಿತೀಯ ಸ್ಥಾನವೂ ಜೋಳ ಮತ್ತು ತಂಬಾಕು ಕೃಷಿಯಲ್ಲಿ ಮೂರನೆಯ ಸ್ಥಾನವೂ ಸೇಂಗ ಕೃಷಿಯಲ್ಲಿ ನಾಲ್ಕನೆಯ ಸ್ಥಾನವೂ ಇನ್ನಿತರ ಎಣ್ಣೆಬೀಜಗಳ ಕೃಷಿಯಲ್ಲಿ ಐದನೆಯ ಸ್ಥಾನವೂ ಲಭಿಸುತ್ತದೆ. ಕರ್ನಾಟಕದ ಬೆಳೆಗಳ ಕ್ಷೇತ್ರವಾರು ವಿಸ್ತೀರ್ಣ ಮತ್ತು ವಾರ್ಷಿಕ ಉತ್ಪನ್ನದ ಅಂಕಿ ಅಂಶಗಳನ್ನು ಮುಂದಿನ ಪುಟದ ಪಟ್ಟಿಯಲ್ಲಿ ಕೊಟ್ಟಿದೆ. ಕೆಲವು ಬೆಳೆಗಳ ಬಗ್ಗೆ ಮುಂದೆ ವಿವರಗಳನ್ನು ನೀಡಿದೆ.

**ಜೋಳ :** ರಾಜ್ಯದ ಉತ್ತರಭಾಗದಲ್ಲಿ ಜೋಳ ಸಾಮಾನ್ಯ ಜನರ ಮುಖ್ಯ ಆಹಾರ ಬೆಳೆ. ಈ ಬೆಳೆಯ ವಿಸ್ತೀರ್ಣ ಸುಮಾರು 18,49,867 ಹೆಕ್ಟೇರುಗಳು. ಇದೊಂದು ಉತ್ತಮ ಪೌಷ್ಟಿಕ ಗುಣಗಳನ್ನುಳ್ಳ ಆಹಾರ. ಜೋಳದ ದಂಟು ಅಥವಾ ಕಡ್ಡಿ ದನಗಳಿಗೆ ಮೇವಾಗಿ ಬಳಕೆಯಾಗುತ್ತದೆ. ಗುಲ್ಬರ್ಗ, ಬಿಜಾಪುರ, ರಾಯಚೂರು, ಧಾರವಾಡ, ಬೆಳಗಾಂವಿ, ಜೋಳ ಬೆಳೆಯುವ ಮುಖ್ಯ ಜಿಲ್ಲೆಗಳು. ಬೇಸಗೆ ಹಾಗೂ ಮುಂಗಾರು ಕಾಲಗಳಲ್ಲಿ ಸ್ವಲ್ಪಮಟ್ಟಿನ ಬೆಳೆ ಹಾಕಿದರೂ ಜೋಳದ ಬೆಳೆ ಮುಖ್ಯವಾಗಿ ಹಿಂಗಾರಿನಲ್ಲೇ. ರಾಜ್ಯದಲ್ಲಿ ಜೋಳದ ಒಟ್ಟು ಉತ್ಪನ್ನ 12,54,000 ಟನ್ನುಗಳು. ಇತ್ತೀಚೆಗೆ ಜನಪ್ರಿಯವಾಗುತ್ತಿರುವ ಸಿ.ಎಸ್.ಎಚ್.1-ಮತ್ತು ಸಿ.ಎಸ್.ಎಚ್.2-ಈ ಹೈಬ್ರಿಡ್ ತಳಿಗಳು ಸ್ಥಳೀಯ 2-3 ರಷ್ಟು ಹೆಚ್ಚು ಇಳುವರಿ ಕೊಡುತ್ತವೆ. ಜೋಳ ಬಹುವಾಗಿ ಮಳೆ ಆಶ್ರಿತ ಬೆಳೆ. ನೀರಾವರಿ ಸೌಕರ್ಯ ಇದ್ದರೆ ಕನಿಷ್ಠ ಪಕ್ಷ ಈಗಿನ ಎರಡರಷ್ಟು ಇಳುವರಿ ಪಡೆಯುವುದು ಸಾಧ್ಯ.

**ಬತ್ತ :** ರಾಜ್ಯದಲ್ಲಿ ಇದು ಮುಖ್ಯವಾದ ನೀರಾವರಿ ಬೆಳೆ. ಇದರ ವಿಸ್ತೀರ್ಣ 14,26,805 ಹೆಕ್ಟೇರುಗಳು. ಉತ್ಪನ್ನ, 32,13,000 ಟನ್ನುಗಳು. ಮಲೆನಾಡು ಹಾಗೂ ಕರಾವಳಿ ಪ್ರದೇಶಗಳಲ್ಲಿ ಮಳೆ ಆಸರೆಯಲ್ಲಿ ಇದನ್ನು ಬೆಳೆಯುತ್ತಾರೆ. ಇಲ್ಲಿ ಮಳೆಯಿಂದ ಒದಗುವ ನೀರು ಅಪಾರವಾಗಿದ್ದು ನೀರಾವರಿಯಷ್ಟೆ ಖಚಿತವಾಗಿದ್ದು ಸಮೃದ್ಧವಾಗಿರುತ್ತದೆ. ಸಾಮಾನ್ಯ ಮಳೆ ಬೀಳುವ ಕೆಲವೆಡೆ ಬತ್ತವನ್ನು ನೀರಾವರಿಯಿಲ್ಲದೆ ಮಳೆಯ ಆಶ್ರಯದಲ್ಲೇ ಬೆಳೆಯುವುದುಂಟು. ಆದರೆ ಇಂಥಲ್ಲಿ ಇಳುವರಿ ತೀರಾ ಕಡಮೆ. ಬತ್ತವನ್ನು ಮಳೆಗಾಲ, ಚಳಿಗಾಲ ಹಾಗೂ ಬೇಸಗೆ ಕಾಲಗಳಲ್ಲಿ ಬೆಳೆಯಬಹುದು. ಜೂನ್-ಜುಲೈನಲ್ಲಿ ನಾಟಿಮಾಡಿ ನವೆಂಬರ್-ಡಿಸೆಂಬರ್‌ನಲ್ಲಿ ಕೊಯ್ಲು ಇಲ್ಲವೆ ಫೆಬ್ರುವರಿ-ಮಾರ್ಚ್‌ನಲ್ಲಿ ನಾಟಿ, ಜೂನ್-ಜುಲೈನಲ್ಲಿ ಕೊಯ್ಲು ಸಾಮಾನ್ಯ. (ಬಿ.ವಿ.ವಿ.)

ಡಿಸೆಂಬರ್‌ನಲ್ಲಿ ನಾಟಿ ಮಾಡಿ ಮಾರ್ಚ್-ಏಪ್ರಿಲ್‌ನಲ್ಲಿ ಕೊಯ್ಲು ಮಾಡುವುದೂ ಉಂಟು. ಬತ್ತದ ಬೆಳೆಯ ವಿಸ್ತೀರ್ಣವನ್ನು ತೆಗೆದುಕೊಂಡರೆ ಶಿವಮೊಗ್ಗ ಜಿಲ್ಲೆಗೆ ಪ್ರಥಮ ಸ್ಥಾನ. ಅನಂತರ ಕ್ರಮವಾಗಿ ದಕ್ಷಿಣ ಕನ್ನಡ, ಉಡುಪಿ, ಧಾರವಾಡ, ಉತ್ತರ ಕನ್ನಡ, ತುಮಕೂರು, ಮೈಸೂರು, ಬೆಳಗಾಂವಿ, ಮಂಡ್ಯ, ಹಾಸನ, ಚಿಕ್ಕಮಗಳೂರು, ರಾಯಚೂರು ಜಿಲ್ಲೆಗಳು ಬರುತ್ತವೆ. ಉಳಿದ ಜಿಲ್ಲೆಗಳಲ್ಲಿ ನೀರಿನ ಅನುಕೂಲ ಇರುವೆಡೆಯಲ್ಲೆಲ್ಲ ಬತ್ತ ಬೆಳೆದೇ ಬೆಳೆಯುತ್ತಾರೆ. ಇತ್ತೀಚೆಗೆ ಜನಪ್ರಿಯವಾಗಿರುವ ಸುಧಾರಿತ ತಳಿಗಳು ಐ.ಆರ್.8, ಜಯ ಮತ್ತು ಮಧು.

**ರಾಗಿ :** ರಾಜ್ಯದ ಬಹುತೇಕ ಜನತೆಯ ಮುಖ್ಯ ಆಹಾರ. ಪೌಷ್ಟಿಕ ಆಹಾರವೆಂದೂ ಹೆಸರಾಗಿದೆ. ಇದು ಮುಖ್ಯವಾಗಿ ಮಳೆಯ ಆಶ್ರಯದ ಬೆಳೆ. ಇದನ್ನು ಜೂನ್-ಜುಲೈನಲ್ಲಿ ಬಿತ್ತಿ, ನವೆಂಬರ್- ಡಿಸೆಂಬರ್‌ನಲ್ಲಿ ಕಟಾವು ಮಾಡುತ್ತಾರೆ. ಕಾರುರಾಗಿಯನ್ನು ಏಪ್ರಿಲ್- ಮೇನಲ್ಲಿ ಬಿತ್ತಿ ಸೆಪ್ಟೆಂಬರ್- ಅಕ್ಟೋಬರ್‌ನಲ್ಲಿ ಕುಯ್ಲು ಮಾಡುತ್ತಾರೆ. ಬೆಳೆಯ ಒಟ್ಟು ವಿಸ್ತೀರ್ಣ 9,39,000 ಹೆಕ್ಟೇರುಗಳು. ಇದರಲ್ಲಿ ಕಾಲುಭಾಗ ಬೆಂಗಳೂರು ಜಿಲ್ಲೆಯಲ್ಲೆ ಇದೆ. ಕ್ರಮವಾಗಿ ತುಮಕೂರು, ಹಾಸನ, ಮೈಸೂರು, ಮಂಡ್ಯ, ಕೋಲಾರ ರಾಗಿ ಬೆಳೆಯುವ ಇತರ ಮುಖ್ಯ ಜಿಲ್ಲೆಗಳು. ರಾಜ್ಯದಲ್ಲಿ ರಾಗಿಯ ಒಟ್ಟು ಉತ್ಪನ್ನ 2,73,000 ಟನ್ನುಗಳು. ಈ ಬೆಳೆಯ ಸುಧಾರಣೆ ಕಾರ್ಯಕ್ರಮ ರಾಜ್ಯದಲ್ಲಿ ಕಳೆದ 60ವರ್ಷಕ್ಕೂ ಹಿಂದೆಯೇ ನಡೆದಿತ್ತು. ಎಚ್.22 ಸುಧಾರಿತ ತಳಿ ಜಾರಿಯಲ್ಲಿತ್ತು. ಇತ್ತೀಚೆಗೆ ಪೂರ್ಣ, ಶಕ್ತಿ, ಕಾವೇರಿ ಮುಂತಾದ ಉತ್ತಮ ತಳಿಗಳು ರೂಢಿಗೆ ಬಂದಿವೆ.

**ಗೋದಿ :** ಗೋದಿ ಹಿಂಗಾರಿನಲ್ಲಿ ಬೆಳೆಯುವ ಮುಖ್ಯ ಬೆಳೆ. ಇದರ ವಿಸ್ತೀರ್ಣ 2,51,000 ಹೆಕ್ಟೇರುಗಳು. ವಿಸ್ತೀರ್ಣ ಹೆಚ್ಚಾಗಿಲ್ಲದಿದ್ದರೂ ಇದೊಂದು ಉತ್ತಮವಾದ ಪೌಷ್ಟಿಕ ಆಹಾರವಾದುದರಿಂದ ಇದಕ್ಕೆ ಗಮನ ಹೆಚ್ಚು. ಇದನ್ನು ಧಾರವಾಡ, ಗದಗ, ಹಾವೇರಿ, ಕೊಪ್ಪಳ, ಬಿಜಾಪುರ, ಬೆಳಗಾಂವಿ, ರಾಯಚೂರು, ಗುಲ್ಬರ್ಗ ಜಿಲ್ಲೆಗಳಲ್ಲಿ ಹೆಚ್ಚಾಗಿ ಬೆಳೆಯುತ್ತಾರೆ. ರಾಜ್ಯದಲ್ಲಿ ಇದರ ಉತ್ಪನ್ನ 1.09 ಲಕ್ಷ ಟನ್ನುಗಳು. ಇದನ್ನು ಅಕ್ಟೋಬರ್-ನವೆಂಬರ್‌ನಲ್ಲಿ ಬಿತ್ತಿ ಫೆಬ್ರುವರಿ- ಮಾರ್ಚ್‌ನಲ್ಲಿ ಕೊಯ್ಲು ಮಾಡುತ್ತಾರೆ. ನೀರಾವರಿ ಸೌಕರ್ಯವಿರುವೆಡೆ ಪೂರ್ತಿ ಬೆಳೆಯಾಗಿ ಬೆಳೆದರೆ ಮಳೆ ಆಸರೆಯಲ್ಲಿ ಕುಸುಮೆ, ಅಗಸೆ, ಕಡಲೆ ಇಂಥವುಗಳ ಜೊತೆ ಅಕ್ಕಡಿ ಬೆಳೆಯಾಗಿ ಬೆಳೆಯುತ್ತಾರೆ. ಹತ್ತಿ,ಜೋಳ ಇವುಗಳೊಡನೆ ಸರದಿ ಬೆಳೆಯಾಗಿ ಬೆಳೆಯುವುದೂ ಸಾಮಾನ್ಯ. ಇತ್ತೀಚೆಗೆ ಅಧಿಕ ಇಳುವರಿ ಕೊಡುವ ಚೋಟೆಲರ್ಮ, ಸಫೇದ್‌ಲರ್ಮ, ಯು.ಪಿ.301 ಎಂಬ ತಳಿಗಳು ಜನಪ್ರಿಯವಾಗುತ್ತಿವೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಮುಖ್ಯ ಬೆಳೆಗಳ ಉತ್ಪನ್ನ 1998-99 (ಟನ್ನುಗಳಲ್ಲಿ) | | | | | | |
|---|---|---|---|---|---|---|---|---|
| | | ನೆಲಗಡಲೆ | ಕಬ್ಬು | ಹತ್ತಿ (ಬೇಲುಗಳಲ್ಲಿ) | ಕಡಲೆ | ತೊಗರಿ | ಇತರ ದ್ವಿದಳ ಧಾನ್ಯಗಳು | ಒಟ್ಟು ದ್ವಿದಳ ಧಾನ್ಯಗಳು |
| 1 | 2 | 3 | 4 | 5 | 6 | 7 | 8 | 9 |
| 1 | ಬೆಂಗಳೂರು | 846 | 6,874 | --- | --- | 436 | 189 | 4,461 |
| 2 | ಬೆಂಗಳೂರು ಗ್ರಾ | 25,809 | 104,447 | --- | 35 | 2,151 | 1,217 | 11,132 |
| 3 | ಚಿತ್ರದುರ್ಗ | 198,441 | 54,272 | 30,271 | 1,627 | 3,393 | 610 | 18,587 |
| 4 | ದಾವಣಗೆರೆ | 47,794 | 880,086 | 30,271 | 1,114 | 3,428 | 449 | 9,064 |
| 5 | ಕೋಲಾರ | 71,506 | 267,351 | 31,242 | 15 | 11,239 | 1,011 | 21,480 |
| 6 | ಶಿವಮೊಗ್ಗ | 6,480 | 1,248,548 | 42,405 | 186 | 236 | 239 | 5,425 |
| 7 | ತುಮಕೂರು | 264,184 | 133,329 | 2,020 | 260 | 6,787 | 2,484 | 27,749 |
| **I** | **ಬೆಂಗಳೂರು ವಿಭಾಗ** | **615,060** | **2,694,907** | **136,209** | **3,237** | **27,670** | **6,199** | **97,898** |
| 8 | ಬೆಳಗಾಂವಿ | 73,604 | 12,370,995 | 98,969 | 17,873 | 3,645 | 2,394 | 35,814 |
| 9 | ಬಿಜಾಪುರ | 24,812 | 1,572,334 | 12,667 | 29,390 | 5,191 | 3,340 | 49,210 |
| 10 | ಬಾಗಲಕೋಟೆ | 31,900 | 5,778,116 | 22,129 | 15,170 | 2,602 | 843 | 21,578 |
| 11 | ಧಾರವಾಡ | 40,369 | 310,194 | 160,464 | 15,281 | 611 | 286 | 22,522 |
| 12 | ಗದಗ | 59,178 | 7,900 | 69,246 | 13,291 | 503 | 766 | 21,238 |
| 13 | ಹಾವೇರಿ | 45,151 | 519,669 | 91,997 | 1,169 | 2,216 | 1,515 | 13,508 |
| 14 | ಉತ್ತರ ಕನ್ನಡ | 7,122 | 197,291 | 14,823 | 70 | 95 | 146 | 3,346 |
| **II** | **ಬೆಳಗಾಂವಿ ವಿಭಾಗ** | **282,136** | **20,756,499** | **470,295** | **92,244** | **14,863** | **9,290** | **167,216** |
| 15 | ಬಳ್ಳಾರಿ | 86,799 | 654,922 | 85,696 | 6,070 | 2,234 | 809 | 15,851 |
| 16 | ಬೀದರ್ | 2,664 | 1,770,200 | 3,439 | 18,557 | 41,464 | 167 | 86,902 |
| 17 | ಗುಲ್ಬರ್ಗ | 79,976 | 822,510 | 38,605 | 62,134 | 124,147 | 353 | 235,626 |
| 18 | ರಾಯಚೂರು | 29,015 | 13,748 | 58,421 | 10,077 | 3,429 | 112 | 16,588 |
| 19 | ಕೊಪ್ಪಳ | 31,521 | 200,686 | 18,430 | 5,352 | 2,818 | 789 | 14,424 |
| **III** | **ಗುಲ್ಬರ್ಗ ವಿಭಾಗ** | **229,975** | **3,462,066** | **204,591** | **102,190** | **174,092** | **2,230** | **369,391** |
| 20 | ಚಿಕ್ಕಮಗಳೂರು | 10,020 | 124,488 | 4,898 | 3,476 | 482 | 244 | 14,682 |
| 21 | ದಕ್ಷಿಣ ಕನ್ನಡ | --- | 45,087 | --- | --- | --- | 41 | 2,103 |
| 22 | ಉಡುಪಿ | 5,897 | 137,974 | --- | --- | --- | 153 | 4,960 |
| 23 | ಹಾಸನ | 4,573 | 470,640 | 5,688 | 909 | 858 | 2,124 | 23,864 |
| 24 | ಕೊಡಗು | --- | 718 | 3 | --- | --- | 116 | 116 |
| 25 | ಮಂಡ್ಯ | 7,805 | 4,015,593 | 65 | 38 | 959 | 2,880 | 21,047 |
| 26 | ಮೈಸೂರು | 13,149 | 753,392 | 153,042 | 213 | 1,957 | 6,880 | 34,682 |
| 27 | ಚಾಮರಾಜನಗರ | 23,519 | 2,309,555 | 32,303 | 201 | 572 | 1,494 | 10,930 |
| **IV** | **ಮೈಸೂರು ವಿಭಾಗ** | **64,963** | **7,857,447** | **195,999** | **4,837** | **4,828** | **13,932** | **112,384** |
| | ರಾಜ್ಯ | **1,192,134** | **34,770,919** | **1,007,094** | **202,508** | **221,453** | **31,651** | **746,889** |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಮುಖ್ಯ ಬೆಳೆಗಳ ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) | | | | | |
|---|---|---|---|---|---|---|---|
| | | ಬತ್ತ | ರಾಗಿ | ಜೋಳ | ಸಜ್ಜೆ | ಮುಸುಕಿನ ಜೋಳ | ಗೋದಿ |
| 1 | 2 | 3 | 4 | 5 | 6 | 7 | 8 |
| 1 | ಬೆಂಗಳೂರು | 7,245 | 48,459 | -- | -- | 1,415 | --- |
| 2 | ಬೆಂಗಳೂರು ಗ್ರಾ | 20,967 | 147,409 | -- | -- | 5,368 | --- |
| 3 | ಚಿತ್ರದುರ್ಗ | 9,422 | 62,409 | 40,287 | 8,649 | 33,386 | 486 |
| 4 | ದಾವಣಗೆರೆ | 118,178 | 35,741 | 56,587 | 914 | 103,680 | 601 |
| 5 | ಕೋಲಾರ | 29,267 | 118,444 | --- | 172 | 14,021 | --- |
| 6 | ಶಿವಮೊಗ್ಗ | 158,633 | 8,702 | 2,215 | -- | 8,295 | 4 |
| 7 | ತುಮಕೂರು | 47,448 | 206,568 | 4,579 | 376 | 6,219 | 6 |
| **I** | ಬೆಂಗಳೂರು ವಿಭಾಗ | **391,160** | **627,732** | **103,668** | **10,111** | **172,384** | **1,097** |
| 8 | ಬೆಳಗಾಂವಿ | 62,731 | 2,625 | 192,490 | 30,894 | 109,370 | 54,399 |
| 9 | ಬಿಜಾಪುರ | 391 | --- | 295,005 | 88,693 | 12,170 | 62,688 |
| 10 | ಬಾಗಲಕೋಟೆ | 197 | --- | 164,903 | 48,855 | 43,402 | 22,207 |
| 11 | ಧಾರವಾಡ | 37,633 | 165 | 56,208 | --- | 18,569 | 43,362 |
| 12 | ಗದಗ | 1,044 | 18 | 84,427 | 1,190 | 18,063 | 35,181 |
| 13 | ಹಾವೇರಿ | 54,375 | 4,756 | 73,706 | 892 | 54,083 | 2,138 |
| 14 | ಉತ್ತರ ಕನ್ನಡ | 89,868 | 4,756 | 73,706 | 892 | 47 | --- |
| **II** | ಬೆಳಗಾಂವಿ ವಿಭಾಗ | **246,239** | **12,320** | **940,445** | **171,416** | **255,704** | **219,975** |
| 15 | ಬಳ್ಳಾರಿ | 68,854 | 6,547 | 94,463 | 170,524 | 32,090 | 2,382 |
| 16 | ಬೀದರ್ | 9,587 | --- | 115,788 | 13,994 | 306 | 8,128 |
| 17 | ಗುಲ್ಬರ್ಗ | 22,202 | 5 | 375,788 | 13,994 | 2,021 | 21,882 |
| 18 | ರಾಯಚೂರು | 117,347 | --- | 174,386 | 65,722 | 249 | 4,158 |
| 19 | ಕೊಪ್ಪಳ | 68,847 | --- | 62,709 | 54,118 | 15,664 | 11,287 |
| **III** | ಗುಲ್ಬರ್ಗ ವಿಭಾಗ | **286,837** | **6,552** | **823,174** | **318,352** | **50,330** | **47,837** |
| 20 | ಚಿಕ್ಕಮಗಳೂರು | 49,841 | 61,058 | 13,104 | --- | 460 | 62 |
| 21 | ದಕ್ಷಿಣ ಕನ್ನಡ | 67,754 | --- | --- | --- | --- | --- |
| 22 | ಉಡುಪಿ | 69.598 | --- | --- | --- | --- | --- |
| 23 | ಹಾಸನ | 66,684 | 135,019 | 3,933 | --- | 5,242 | --- |
| 24 | ಕೊಡಗು | 40,666 | 425 | --- | --- | 1,495 | --- |
| 25 | ಮಂಡ್ಯ | 79,892 | 85,467 | 3,536 | 5 | 22 | --- |
| 26 | ಮೈಸೂರು | 109,666 | 83,670 | 17,492 | 6 | 17,602 | --- |
| 27 | ಚಾಮರಾಜನಗರ | 18,465 | 23,484 | 17,786 | 6 | 9,129 | 10 |
| **IV** | ಮೈಸೂರು ವಿಭಾಗ | **502,566** | **389,123** | **55,851** | **17** | **33,950** | **72** |
| | ರಾಜ್ಯ | **1,426,802** | **1,035,727** | **1,923,138** | **499,896** | **990,786** | **268,981** |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಇತರೆ ಏಕದಳ ಧಾನ್ಯಗಳು ಮತ್ತು ಉಪತೃಣ ಬೆಳೆಗಳು | ಒಟ್ಟು ಏಕದಳ ಧಾನ್ಯಗಳು ಮತ್ತು ಉಪತೃಣ ಬೆಳೆಗಳು | ಕಡಲೆ | ತೊಗರಿ | ಇತರ ದ್ವಿದಳ ಧಾನ್ಯಗಳು | ಒಟ್ಟು ದ್ವಿದಳ ಧಾನ್ಯಗಳು |
|---|---|---|---|---|---|---|---|
| 9 | 10 | 11 | 12 | 13 | 14 | 15 | 16 |
| 1 | ಬೆಂಗಳೂರು | 149 | 57,268 | --- | 936 | 997 | 11,783 |
| 2 | ಬೆಂಗಳೂರು ಗ್ರಾ | 274 | 173,617 | 50 | 5,522 | 5,531 | 38,525 |
| 3 | ಚಿತ್ರದುರ್ಗ | 14,789 | 169,428 | 2,960 | 7,582 | 1,904 | 34,603 |
| 4 | ದಾವಣಗೆರೆ | 3,383 | 319,084 | 2,151 | 6,657 | 1,970 | 19,713 |
| 5 | ಕೋಲಾರ | 1,070 | 162,974 | 21 | 12,694 | 2,988 | 38,423 |
| 6 | ಶಿವಮೊಗ್ಗ | 139 | 177,988 | 332 | 508 | 1,120 | 11,061 |
| 7 | ತುಮಕೂರು | 3,675 | 268,871 | 47 | 15,946 | 7,125 | 69,514 |
| **I** | **ಬೆಂಗಳೂರು ವಿಭಾಗ** | **23,479** | **1,329,230** | **5,561** | **49,845** | **21,635** | **223,622** |
| 8 | ಬೆಳಗಾಂವಿ | 6,031 | 458,540 | 24,199 | 8,602 | 8,096 | 81,711 |
| 9 | ಬಿಜಾಪುರ | 341 | 459,291 | 48,080 | 14,304 | 9,731 | 121,080 |
| 10 | ಬಾಗಲಕೋಟೆ | 568 | 280,132 | 17,835 | 6,154 | 2,681 | 46,456 |
| 11 | ಧಾರವಾಡ | 2,802 | 158,739 | 25,359 | 2,473 | 1,093 | 55,944 |
| 12 | ಗದಗ | 1,278 | 141,201 | 26,180 | 2,449 | 2,990 | 71,311 |
| 13 | ಹಾವೇರಿ | 12,456 | 202,406 | 1,902 | 7,477 | 6,262 | 45,930 |
| 14 | ಉತ್ತರ ಕನ್ನಡ | --- | 90,311 | 128 | 204 | 1,079 | 7,966 |
| **II** | **ಬೆಳಗಾಂವಿ ವಿಭಾಗ** | **23,476** | **1,790,620** | **143,683** | **41,663** | **31,932** | **430,398** |
| 15 | ಬಳ್ಳಾರಿ | 24,225 | 255,776 | 9,325 | 7,563 | 4,807 | 39,090 |
| 16 | ಬೀದರ್ | 1,118 | 148,921 | 41,731 | 54,354 | 1,519 | 227,078 |
| 17 | ಗುಲ್ಬರ್ಗ | 1,996 | 498,710 | 119,488 | 273,391 | 2,136 | 538,969 |
| 18 | ರಾಯಚೂರು | 2,121 | 363,983 | 14,597 | 19,100 | 909 | 47,030 |
| 19 | ಕೊಪ್ಪಳ | 11,833 | 224,458 | 11,179 | 13,481 | 6,513 | 53,082 |
| **III** | **ಗುಲ್ಬರ್ಗ ವಿಭಾಗ** | **41,293** | **1,491,848** | **196,320** | **367,889** | **15,884** | **905,249** |
| 20 | ಚಿಕ್ಕಮಗಳೂರು | 1,330 | 125,855 | 3,670 | 1,035 | 1,272 | 28,782 |
| 21 | ದಕ್ಷಿಣ ಕನ್ನಡ | --- | 67,754 | --- | --- | 286 | 4,491 |
| 22 | ಉಡುಪಿ | --- | 69,598 | --- | --- | 681 | 11,759 |
| 23 | ಹಾಸನ | 243 | 211,121 | 3,937 | 3,730 | 7,424 | 57,986 |
| 24 | ಕೊಡಗು | --- | 42,586 | --- | --- | 850 | 850 |
| 25 | ಮಂಡ್ಯ | 70 | 168,992 | 57 | 2,060 | 6,450 | 41,678 |
| 26 | ಮೈಸೂರು | 3 | 228,439 | 923 | 6,687 | 17,920 | 87,731 |
| 27 | ಚಾಮರಾಜನಗರ | 83 | 69,747 | 748 | 2,487 | 3,689 | 27,417 |
| **IV** | **ಮೈಸೂರು ವಿಭಾಗ** | **1,729** | **984,092** | **9,335** | **15,999** | **38,572** | **260,694** |
| | ರಾಜ್ಯ | **89,977** | **5,595,790** | **354,899** | **475,396** | **108,023** | **1,819,963** |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಮುಖ್ಯ ಬೆಳೆಗಳ ವಿಸ್ತೀರ್ಣ (ಹೆಕ್ಟೇರುಗಳಲ್ಲಿ) | | | | |
|---|---|---|---|---|---|---|
| | | ನೆಲಗಡಲೆ | ಕಬ್ಬು | ಹತ್ತಿ | ಅಕ್ಕಿ | ರಾಗಿ |
| 1 | 2 | 3 | 4 | 5 | 6 | 7 |
| 1 | ಬೆಂಗಳೂರು | 885 | 67 | --- | 21,102 | 103,596 |
| 2 | ಬೆಂಗಳೂರು ಗ್ರಾ. | 24,656 | 1,018 | --- | 61,073 | 247,161 |
| 3 | ಚಿತ್ರದುರ್ಗ | 161,072 | 772 | 26,795 | 27,541 | 98,169 |
| 4 | ದಾವಣಗೆರೆ | 37,712 | 12,519 | 26,284 | 390,808 | 61,248 |
| 5 | ಕೋಲಾರ | 86,894 | 3,803 | 30 | 79,828 | 223,034 |
| 6 | ಶಿವಮೊಗ್ಗ | 5 399 | 11,233 | 18,011 | 383,617 | 12,549 |
| 7 | ತುಮಕೂರು | 190,123 | 1,017 | 1,343 | 136,903 | 296,350 |
| I | **ಬೆಂಗಳೂರು ವಿಭಾಗ** | **506,741** | **30,429** | **72,463** | **1,100,872** | **1,042,107** |
| 8 | ಬೆಳಗಾಂವಿ | 86,020 | 124,020 | 65,829 | 114,147 | 2,325 |
| 9 | ಬಿಜಾಪುರ | 66,436 | 13,456 | 8,727 | 541 | --- |
| 10 | ಬಾಗಲಕೋಟೆ | 32,217 | 49,449 | 15,225 | 316 | --- |
| 11 | ಧಾರವಾಡ | 39,937 | 3,628 | 86,875 | 35,730 | 148 |
| 12 | ಗದಗ | 84,441 | 77 | 62,230 | 2,565 | 26 |
| 13 | ಹಾವೇರಿ | 37,851 | 6,078 | 79,382 | 83,333 | 4,079 |
| 14 | ಉತ್ತರ ಕನ್ನಡ | 4,053 | 1,775 | 6,286 | 157,039 | 116 |
| II | **ಬೆಳಗಾಂವಿ ವಿಭಾಗ** | **350,955** | **198,483** | **324,554** | **393,671** | **6,694** |
| 15 | ಬಳ್ಳಾರಿ | 93,803 | 7,834 | 66,412 | 224,87 | 5,840 |
| 16 | ಬೀದರ್ | 3,767 | 24,518 | 3,616 | 5,825 | --- |
| 17 | ಗುಲ್ಬರ್ಗ | 118,005 | 8,658 | 20,113 | 41,335 | 4 |
| 18 | ರಾಯಚೂರು | 50,040 | 134 | 49,208 | 395,453 | --- |
| 19 | ಕೊಪ್ಪಳ | 53,391 | 1,956 | 19,182 | 233,409 | --- |
| **III** | **ಗುಲ್ಬರ್ಗ ವಿಭಾಗ** | **319,006** | **43,100** | **158,531** | **900,709** | **5,844** |
| 20 | ಚಿಕ್ಕಮಗಳೂರು | 7,547 | 1,560 | 3,270 | 118,813 | 104,235 |
| 21 | ದಕ್ಷಿಣ ಕನ್ನಡ | --- | 565 | --- | 141,211 | --- |
| 22 | ಉಡುಪಿ | 2,956 | 1,729 | --- | 122,106 | --- |
| 23 | ಹಾಸನ | 4,203 | 5,327 | 5,225 | 156,248 | 241,479 |
| 24 | ಕೊಡಗು | --- | 7 | 2 | 85,142 | 40 |
| 25 | ಮಂಡ್ಯ | 8,982 | 30,630 | 44 | 245,663 | 164,759 |
| 26 | ಮೈಸೂರು | 11,790 | 9,441 | 59,668 | 333,026 | 133,160 |
| 27 | ಚಾಮರಾಜನಗರ | 17,842 | 17,490 | 12,738 | 59,350 | 35,338 |
| **IV** | **ಮೈಸೂರು ವಿಭಾಗ** | **2,406,719** | **610,773** | **1,191,893** | **5,849,863** | **2,788,301** |
| | **ರಾಜ್ಯ** | **1,230,022** | **338,761** | **636,495** | **3,656,811** | **1,734,076** |

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಮುಖ್ಯ ಬೆಳೆಗಳ ಉತ್ಪನ್ನ (ಟನ್ನುಗಳಲಿ) | | | | | |
|---|---|---|---|---|---|---|---|
| | | ಜೋಳ | ಸಜ್ಜೆ | ಮುಸುಕಿನ ಜೋಳ | ಗೋದಿ | ಉಪತೃಣ ಬೆಳೆಗಳು | ಒಟ್ಟು ಏಕದಳ ಧಾನ್ಯಗಳು ಮತ್ತು ಉಪತೃಣ ಬೆಳೆಗಳು |
| 8 | 9 | 10 | 11 | 12 | 13 | 14 | 15 |
| 1 | ಬೆಂಗಳೂರು | --- | --- | 4,175 | --- | 112 | 128,985 |
| 2 | ಬೆಂಗಳೂರು ಗ್ರಾ. | --- | --- | 16,189 | --- | 204 | 324,627 |
| 3 | ಚಿತ್ರದುರ್ಗ | 47,048 | 6,113 | 105,152 | 546 | 7,235 | 291,804 |
| 4 | ದಾವಣಗೆರೆ | 123,346 | 515 | 383,332 | 474 | 1,449 | 961,172 |
| 5 | ಕೋಲಾರ | --- | 81 | 47,194 | --- | 778 | 350,915 |
| 6 | ಶಿವಮೊಗ್ಗ | 3,730 | --- | 32,134 | 2 | 72 | 432,104 |
| 7 | ತುಮಕೂರು | 4,770 | 176 | 16,144 | 8 | 1,740 | 456,091 |
| I | ಬೆಂಗಳೂರು ವಿಭಾಗ | **178,894** | **6,885** | **604,320** | **1,030** | **11,590** | **2,945,698** |
| 8 | ಬೆಳಗಾಂವಿ | 213,104 | 8,901 | 306,391 | 61,350 | 2,865 | 709,083 |
| 9 | ಬಿಜಾಪುರ | 204,686 | 64,614 | 35,920 | 45,667 | 121 | 351,549 |
| 10 | ಬಾಗಲಕೋಟೆ | 145,695 | 52,375 | 121,873 | 28,030 | 217 | 348,506 |
| 11 | ಧಾರವಾಡ | 43,197 | --- | 65,302 | 30,657 | 1,814 | 176,848 |
| 12 | ಗದಗ | 56,695 | 598 | 65,112 | 25,021 | 576 | 150,593 |
| 13 | ಹಾವೇರಿ | 93,390 | 589 | 175,258 | 1,557 | 8,661 | 366,867 |
| 14 | ಉತ್ತರ ಕನ್ನಡ | 253 | --- | 94 | --- | --- | 157,502 |
| II | ಬೆಳಗಾಂವಿ ವಿಭಾಗ | **757,020** | **127,077** | **769,950** | **192,282** | **14,254** | **2,260,948** |
| 15 | ಬಳ್ಳಾರಿ | 119,499 | 25,148 | 99,860 | 2,193 | 9,731 | 486,958 |
| 16 | ಬೀದರ್ | 119,423 | 6,398 | 715 | 7,040 | 764 | 140,165 |
| 17 | ಗುಲ್ಬರ್ಗ | 237,907 | 47,736 | 5,859 | 10,947 | 859 | 344,647 |
| 18 | ರಾಯಚೂರು | 130,587 | 42,536 | 816 | 1,772 | 504 | 571,668 |
| 19 | ಕೊಪ್ಪಳ | 44,562 | 26,932 | 55,687 | 4,097 | 2,849 | 367,536 |
| **III** | ಗುಲ್ಬರ್ಗ ವಿಭಾಗ | **651,978** | **148,750** | **162,937** | **26,049** | **14,707** | **1,910,974** |
| 20 | ಚಿಕ್ಕಮಗಳೂರು | 12,101 | --- | 1,567 | 58 | 795 | 237,569 |
| 21 | ದಕ್ಷಿಣ ಕನ್ನಡ | --- | --- | --- | --- | --- | 141,211 |
| 22 | ಉಡುಪಿ | --- | --- | --- | - -- | --- | 122,106 |
| 23 | ಹಾಸನ | 4,304 | --- | 17,271 | --- | 145 | 419,447 |
| 24 | ಕೊಡಗು | --- | --- | 5,800 | --- | --- | 91,402 |
| 25 | ಮಂಡ್ಯ | 3,618 | 2 | 77 | --- | 43 | 414,162 |
| 26 | ಮೈಸೂರು | 20,258 | 3 | 75,139 | --- | 1 | 561,587 |
| 27 | ಚಾಮರಾಜನಗರ | 15,066 | 548 | 34,231 | 14 | 55 | 144,602 |
| **IV** | ಮೈಸೂರು ವಿಭಾಗ | **55,347** | **553** | **134,085** | **72** | **1,039** | **2,132,086** |
| | ರಾಜ್ಯ | **1,643,239** | **283,265** | **1,671,292** | **219,433** | **41,590** | **9,249,706** |

**ಸಜ್ಜೆ :** ಮಳೆ ಆಶ್ರಯದಲ್ಲಿ ಬೆಳೆಯಲಾಗುವ ಇನ್ನೊಂದು ಮುಖ್ಯ ಆಹಾರದ ಬೆಳೆ. ಬಿಜಾಪುರ, ಬಾಗಲಕೋಟೆ, ಗುಲ್ಬರ್ಗ, ರಾಯಚೂರು, ಕೊಪ್ಪಳ ಹಾಗೂ ಬೆಳಗಾಂವಿ ಜಿಲ್ಲೆಗಳಲ್ಲಿ ಇದನ್ನು ಹೆಚ್ಚಾಗಿ ಬೆಳೆಯುತ್ತಾರೆ. ಮುಖ್ಯವಾಗಿ ಇದು ಮುಂಗಾರು ಬೆಳೆ. ಜೂನ್-ಜುಲೈನಲ್ಲಿ ಬಿತ್ತಿ ನವೆಂಬರ್‌ನಲ್ಲಿ ಕುಯ್ಲು ಮಾಡುತ್ತಾರೆ. ಈ ಬೆಳೆಯ ನೆಲದ ವಿಸ್ತೀರ್ಣ 4,17,113 ಹೆಕ್ಟೇರುಗಳು. ಉತ್ಪನ್ನ ಸುಮಾರು 2,83,265 ಟನ್ನುಗಳು. ಬೆಳೆಯ ನೆಲದ ಬಹುಭಾಗ ಬೆಳಗಾಂವಿ ಜಿಲ್ಲೆಯಲ್ಲಿದೆ. ಅನಂತರ ಅನುಕ್ರಮವಾಗಿ ರಾಯಚೂರು, ಬಿಜಾಪುರ, ಗುಲ್ಬರ್ಗ, ಚಿತ್ರದುರ್ಗ ಜಿಲ್ಲೆಗಳು ಬರುತ್ತವೆ. ಎಚ್‌ಬಿ 1, ಎಚ್‌ಬಿ 2 ಮುಂತಾದ ಅಧಿಕ ಇಳುವರಿ ಕೊಡುವ ಸಜ್ಜೆ ತಳಿಗಳು ಜನಪ್ರಿಯವಾಗುತ್ತಿವೆ. ಇವನ್ನು ನೀರಾವರಿಯಲ್ಲಿ ಬೆಳೆದಾಗ ಉತ್ತಮ ಇಳುವರಿ ಬರುವುದು ಕಂಡುಬಂದಿದೆ. ಎಚ್‌ಬಿ 3 ಮಳೆಯ ಆಶ್ರಯದಲ್ಲಿ ಬೆಳೆಯುವುದಕ್ಕೆ ಅನುಕೂಲವಾದ ತಳಿ.

**ದ್ವಿದಳ ಧಾನ್ಯಗಳು :** ಈ ಬೆಳೆಗಳನ್ನು ಸಾಧಾರಣವಾಗಿ ಅಕ್ಕಡಿ ಬೆಳೆ, ಅಂದರೆ ರಾಗಿ, ಜೋಳ ಇಂಥ ಇತರ ಬೆಳೆಗಳ ಮಧ್ಯೆ 8"-6" ಅಂತರದಲ್ಲಿ ಸಾಲುಗಳಾಗಿ ಬಿತ್ತಿ ಬೆಳೆಯುತ್ತಾರೆ. ಒಟ್ಟು ದ್ವಿದಳಧಾನ್ಯ ಬೆಳೆಯ ವಿಸ್ತೀರ್ಣ 18,19,963 ಹೆಕ್ಟೇರುಗಳು. ಇದರಲ್ಲಿ ಸುಮಾರು 5,38,969 ಹೆಕ್ಟೇರುಗಳು ಗುಲ್ಬರ್ಗ ಜಿಲ್ಲೆಯಲ್ಲಿದೆ. ದ್ವಿದಳ ಧಾನ್ಯಗಳಲ್ಲಿ ತೊಗರಿಗೆ ಪ್ರಥಮ ಸ್ಥಾನ. 47,53,962 ಹೆಕ್ಟೇರು ನೆಲದಲ್ಲಿ ಕೃಷಿಯಾಗುತ್ತಿದೆ. ಕಡಲೆಗೆ ಎರಡನೆಯ ಸ್ಥಾನ, ದ್ವಿದಳಧಾನ್ಯ ಬೆಳೆಗಳಿಗೆ ಅವುಗಳ ಪ್ರಾಮುಖ್ಯಕ್ಕೆ ಅನುಗುಣವಾದ ಗಮನ ಸಿಕ್ಕಿಲ್ಲ. ಈ ಬೆಳೆಗಳ ಸುಧಾರಣೆಯ ದಿಕ್ಕಿನಲ್ಲಿ ಹೆಚ್ಚು ಕೆಲಸ ಆಗಿಲ್ಲ. ಅದರಲ್ಲೂ ಹುರುಳಿ ಬೆಳೆಯ ವಿಷಯದಲ್ಲಿ ಏನೂ ಕೆಲಸ ಆಗಿಲ್ಲ. ಪ್ರಚಲಿತ ಬಳಕೆಯಲ್ಲಿರುವ ಸುಧಾರಿತ ದ್ವಿದಳಧಾನ್ಯ ಬೆಳೆಗಳು ಇವು: ತೊಗರಿ-ಸಿ.29, ಟಿ.21 ಮತ್ತು ಎಸ್.52; ಕಡಲೆ-ಅಣಗೇರಿ, ಹೆಸರು-ಜವಹರ್ 45, ಪಿ.ಎಸ್.7 ಮತ್ತು ಪಿ.ಎಸ್.16; ಉದ್ದು-ಕೊರೆಗಾಂವ್ 3, ಕೃಷ್ಣಾ, ಉಪು 1, ಮತ್ತು ಎಲ್.4; ಅಲಸಂದೆ-ಸಿ.152, ಇ.ಸಿ.4216 ಮತ್ತು ಟೈಪ್ 2.

**ಕಬ್ಬು :** ನೀರಾವರಿ ಆಶ್ರಿತ ಬೆಳೆ ಇದು. 12ರಿಂದ 15 ತಿಂಗಳ ಬೆಳೆಯಾದ್ದರಿಂದ ಅಷ್ಟು ಕಾಲವೂ ನೀರಿನ ಸೌಕರ್ಯ ಇರುವುದು ಅಗತ್ಯ. ಕೆರೆ ಬಯಲುಗಳಲ್ಲಿ ಕೆರೆಯಲ್ಲಿ ನೀರಿಲ್ಲದ ಸಮಯದಲ್ಲಿ ಬಾವಿಯಿಂದ ನೀರೆತ್ತಿ ಕಬ್ಬಿಗೆ ಅಗತ್ಯವಾದ ನೀರನ್ನು ಒದಗಿಸಿಕೊಳ್ಳುತ್ತಾರೆ. ನಾಲಾಬಯಲುಗಳಲ್ಲಿ ವರ್ಷವೆಲ್ಲ ಕಬ್ಬನ್ನು ಬೆಳೆಯುತ್ತಾರೆ. ಇಂಥ ಕಡೆ ಬೆಳೆದ ಕಬ್ಬಿನ ನೆಲದ ವಿಸ್ತೀರ್ಣ ಸಾವಿರಾರು ಎಕರೆಗಳಿರುವುದರಿಂದ ಅಲ್ಲಿ ಸಕ್ಕರೆ ಕಾರ್ಖಾನೆಗಳಿಳಿವೆ. ಬೆಳೆದ ಕಬ್ಬಿನಿಂದ ಸಕ್ಕರೆ ತಯಾರಿಸುತ್ತಾರೆ. ರಾಜ್ಯದಲ್ಲಿ ಕಬ್ಬಿನ ಬೆಳೆ ನೆಲದ ವಿಸ್ತೀರ್ಣ 3,38,761 ಹೆಕ್ಟೇರುಗಳು. ಬೆಳಗಾಂವಿ, ಮಂಡ್ಯ, ಬಳ್ಳಾರಿ, ರಾಯಚೂರು, ಬೀದರ್, ಕೋಲಾರ, ಶಿವಮೊಗ್ಗ, ಹಾಸನ, ಚಿತ್ರದುರ್ಗ, ತುಮಕೂರು ಮತ್ತು ಉಡುಪಿ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಪ್ರಮುಖವಾಗಿ ಬೆಳೆಯಲಾಗುತ್ತಿದೆ. ರಾಜ್ಯದಲ್ಲಿ ಕಬ್ಬಿನ ಉತ್ಪನ್ನ 3,47,70,919 ಮೆ. ಟನ್ನುಗಳು. ವ್ಯಾಪಕವಾಗಿ ರೂಢಿಯಲ್ಲಿರುವ ಕಬ್ಬಿನ ತಳಿಗಳು: ತಡವಾಗಿ ಕೊಯ್ಲಿಗೆ ಬರುವ ಸಿಒ 419, ಶೀಘ್ರವಾಗಿ ಕಟಾವು ಮಾಡಬಲ್ಲ ಪಿ.ಸಿ.225, ಸಿ.ಒ.740 ಹಾಗೂ ಮಧ್ಯಮಾವಧಿಯ ಸಿ.ಒ.449.

**ಎಣ್ಣೆ ಕಾಳುಗಳು :** ಸೇಂಗ, ಹರಳು, ಎಳ್ಳು, ಸಾಸುವೆ, ಅಗಸೆ, ಹುಚ್ಚೆಳ್ಳು, ಕುಸುಬೆ ಇವು ಕೆಲವು ಮುಖ್ಯ ಎಣ್ಣೆಕಾಳು ಬೆಳೆಗಳು. ಇವುಗಳಲ್ಲಿ ಪ್ರಧಾನವಾದದ್ದು ಸೇಂಗ. ಇದರ ನೆಲದ ವಿಸ್ತೀರ್ಣ ಸುಮಾರು 12,30,022 ಹೆಕ್ಟೇರುಗಳು. ಕುಸುಬೆ ಮತ್ತು ಎಳ್ಳು ಅನಂತರದವು. ಸೇಂಗ ಉತ್ಪನ್ನ 11,92,134 ಮೆ. ಟನ್ನಿಗೂ ಹೆಚ್ಚಾಗಿದೆ. ಗದಗ, ಹಾವೇರಿ, ಬಾಗಲಕೋಟೆ, ಬಳ್ಳಾರಿ, ಹಾಸನ, ಬೆಳಗಾಂವಿ, ಧಾರವಾಡ, ರಾಯಚೂರು, ಬಿಜಾಪುರ, ಕೋಲಾರ, ದಾವಣಗೆರೆ, ಗುಲ್ಬರ್ಗ, ಚಿತ್ರದುರ್ಗ - ಇವು ಸೇಂಗ ಬೆಳೆಯುವ ಜಿಲ್ಲೆಗಳಲ್ಲಿ ಮುಖ್ಯವಾದವು. ಇದರ ಬೆಳೆ ಬಹುಮಟ್ಟಿಗೆ ಮಳೆ ಆಶ್ರಯದಲ್ಲೇ. ಇದರ ಸುಧಾರಿತ ತಳಿಗಳು ಹಾಗೂ ಕೃಷಿಕ್ರಮಗಳ ಬಗ್ಗೆ ಸಾಕಷ್ಟು ಸಂಶೋಧನೆ ನಡೆದಿದೆ. ನೀರಾವರಿಯಲ್ಲಿ ಸ್ಪ್ಯಾನಿಷ್ ಇಂಪ್ರೂವ್ಡ್ ಟಿ.ಎಂ.ವಿ. 2, ಎಸ್.206 ಮತ್ತು ಎಚ್.ಜಿ.8, ಮಳೆ ಆಸರೆಯಲ್ಲಿ ಎಚ್.ಜಿ.10 ಮತ್ತು ಎಸ್.ಬಿ.11 - ಇವು ಪ್ರಚಲಿತ ರೂಢಿಯಲ್ಲಿರುವ ತಳಿಗಳು.

**ಹತ್ತಿ :** ಇದೊಂದು ಪ್ರಮುಖ ವಾಣಿಜ್ಯ ಬೆಳೆ. ನಾರು ಬೆಳೆಗಳಲ್ಲಿ ಪ್ರಧಾನವಾದುದು. ಇದರ ನೆಲದ ವಿಸ್ತೀರ್ಣ ಸುಮಾರು 6,36,495 ಹೆಕ್ಟೇರುಗಳು. ಇದನ್ನು ರಾಜ್ಯದ ಕಪ್ಪುಮಣ್ಣಿನಲ್ಲಿ ಹೆಚ್ಚಾಗಿ ಬೆಳೆಯುತ್ತಾರೆ. ಜಯಧರ್, ಲಕ್ಷ್ಮೀ ಸುಯೋಧರ್, ವೆಸ್ಟರ್ನ್ ಜೆ, ಎ.ಕೆ.22/235, ಮೈ.14, ರಾಯಚೂರು 51, ಹಂಪಿ, ಭಾಗ್ಯ (ಜಿ.ಎಸ್.23) - ಈ ತಳಿ ಹತ್ತಿಗಳನ್ನು ಮಳೆ ಬೆಳೆಯಾಗಿ ಬೆಳೆಯುತ್ತಾರೆ. ಮೈಸೂರು ವಿಜಯ, ಹಂಪಿ 170, ಸಿ.ಒ.2, ವಿಬಾರ್, ಸೀ ಐಲೆಂಡ್, ವರಲಕ್ಷ್ಮಿ ಹೈಬ್ರಿಡ್- ಇವುಗಳನ್ನು ನೀರಾವರಿಯಲ್ಲಿ ಬೆಳೆಯುತ್ತಾರೆ. ಈ ನೀರಾವರಿ ಬೆಳೆಗಳು ಹೆಕ್ಟೇರಿಗೆ 28 ಕ್ವಿಂಟಲ್ ಇಳುವರಿ ಕೊಡುತ್ತವೆ. ವರಲಕ್ಷ್ಮಿ ಹಾಗೂ ಹೈಬ್ರಿಡ್ 4 ತಳಿಗಳ ಇಳುವರಿ ಹೆಕ್ಟೇರಿಗೆ 40 ಕ್ವಿಂಟಲ್‌ವರೆಗೂ ಹೋಗುತ್ತದೆ.

ಇದುವರೆಗೂ ಲಕ್ಷ್ಮೀ ತಳಿ ಒಟ್ಟು ಹತ್ತಿ ಬೆಳೆಯ ವಿಸ್ತೀರ್ಣದ ಅರ್ಧಕ್ಕೂ ಹೆಚ್ಚು ಹೆಕ್ಟೇರುಗಳನ್ನು ಆವರಿಸಿತ್ತು. ಈಗ ಅದರ ಬದಲು ಹಂಪಿ ಹಾಗೂ ಭಾಗ್ಯ ತಳಿಗಳು ಪ್ರಿಯವಾಗುತ್ತಿವೆ. ಉದ್ದದ ಎಳೆ ಹತ್ತಿಗಳಿಗೆ ಮಾರುಕಟ್ಟೆಯಲ್ಲಿ ಅಧಿಕ ಬೇಡಿಕೆ ಇದೆ. ಈ ಕಾರಣದಿಂದ ತುಂಗಭದ್ರಾ ಆಯಕಟ್ಟಿನಲ್ಲಿ ವರಲಕ್ಷ್ಮಿ ತಳಿಯ ವಿಸ್ತೀರ್ಣ ವೇಗವಾಗಿ ಹೆಚ್ಚುತ್ತಿದೆ. ರಾಯಚೂರು, ಧಾರವಾಡ, ಬಿಜಾಪುರ, ಮೈಸೂರು, ಕೊಪ್ಪಳ, ಹಾವೇರಿ, ಗದಗ, ಬಳ್ಳಾರಿ ಹತ್ತಿ ಬೆಳೆಯುವ ಮುಖ್ಯ ಜಿಲ್ಲೆಗಳು. ರಾಜ್ಯದಲ್ಲಿ ಹತ್ತಿ ಉತ್ಪನ್ನ ಸುಮಾರು 9,76,876 ಬೇಲುಗಳು.

**ತೋಟದ ಬೆಳೆಗಳು :** ಹಣ್ಣು, ಕಾಫಿ, ಟೀ, ತರಕಾರಿ ಇಂಥ ಬೆಳೆಗಳನ್ನು ತೋಟದ ಬೆಳೆಗಳು ಎಂದು ಪರಿಗಣಿಸುತ್ತಾರೆ. ಕರ್ನಾಟಕದಲ್ಲಿ ಇಂಥ ಬೆಳೆಗಳು ವ್ಯಾಪಕವಾಗಿವೆ. ಹಣ್ಣಿನ ಬೆಳೆಗಳಲ್ಲಿ ಪ್ರಮುಖವಾದುವು ಮಾವು, ಜಂಬೀರ ಜಾತಿಯವು. ಹಲಸು, ಬಾಳೆ, ದ್ರಾಕ್ಷಿ, ಸೀಬೆ, ಸಪೋಟ, ಅನಾನಸು, ಇವು ರಾಜ್ಯದಲ್ಲಿನ ಕೆಲವು ಜನಪ್ರಿಯ ಹಣ್ಣಿನ ಬೆಳೆಗಳು.

ರಾಜ್ಯದಲ್ಲಿ ಮಾವು ಬೆಳೆಯುವ ಜಿಲ್ಲೆಗಳಲ್ಲಿ ಕೋಲಾರ ಮುಖ್ಯವಾದ್ದು. ಬೆಂಗಳೂರು, ತುಮಕೂರು, ದಕ್ಷಿಣ ಕನ್ನಡ, ಉಡುಪಿ, ಉತ್ತರಕನ್ನಡ ಜಿಲ್ಲೆಗಳಲ್ಲೂ ಸಾಕಷ್ಟು ಮಾವಿನ ತೋಟಗಳಿವೆ. ತಂಪಾದ ಹಾಗೂ ಹೆಚ್ಚು ಮಳೆ ಬೀಳದ ಸನ್ನಿವೇಶ ಮತ್ತು ಚೆನ್ನಾಗಿ ಗಾಳಿಯಾಡುವ ನೀರು ಬಸಿಯುವ ಮಣ್ಣು ಮಾವಿನ ಬೆಳೆಗೆ ಅನುಕೂಲ. ಬಾದಾಮಿ, ರಸಪುರಿ, ನೀಲಂ, ಮಲಗೋವಾ, ತೀರಪ್ರದೇಶಗಳಲ್ಲಿ ಬೆಳೆಯುವ ಮುಂಡಪ್ಪ, ಬೆನೆಟ್, ಬಾದಾಮಿ, ಕಾಳಿಪಾಕ್, ತಾರೀಪಾಡಿ ರಾಜ್ಯದ ಪ್ರಮುಖ ಮಾವಿನ ಜಾತಿಗಳು. ಸಸಿಗಳನ್ನು ಬಹುತೇಕ ಓಟೆಯಿಂದಲೇ ಬೆಳೆಸುತ್ತಾರೆ. ಉತ್ತಮ ಮಟ್ಟದ ತಳಿಗಳನ್ನು ಕಸಿಮಾಡಿ ವೃದ್ಧಿಪಡಿಸುವುದುಂಟು.

ಕಿತ್ತಳೆ, ನಿಂಬೆ, ಮೋಸಂಬಿ, ಮಾದಳ, ಚಕ್ಕೋತ, ಹೇರಳೆ ಇವು ಜಂಬೀರ ಜಾತಿಯ ಗಿಡಮರಗಳು. ರಾಜ್ಯದಲ್ಲಿ ಕಿತ್ತಳೆ, ನಿಂಬೆ, ಮೋಸಂಬಿಯನ್ನೂ ಬೆಳೆಯಲಾಗುತ್ತದೆ. ಕೊಡಗು, ಹಾಸನ, ಚಿಕ್ಕಮಗಳೂರು ಜಿಲ್ಲೆಗಳು ಕಿತ್ತಳೆ ಕೃಷಿಗೆ ಪ್ರಸಿದ್ಧ. ಕಿತ್ತಳೆ ಬಹುಮಟ್ಟಿಗೆ ಕಾಫಿತೋಟಗಳಲ್ಲಿನ ಮಧ್ಯಂತರದ ಬೆಳೆ. ಕೆಲವು ಕಡೆ ಇದನ್ನು ಶುದ್ಧ ಬೆಳೆಯಾಗಿಯೂ ಬೆಳೆಯುವುದುಂಟು. ಚೆನ್ನಾಗಿ ನೀರು ಬಸಿಯುವ ಮಣ್ಣು ಇದಕ್ಕೆ ಆವಶ್ಯಕ. ಆದ್ದರಿಂದಲೇ ಬೆಟ್ಟದ ಇಳಿಜಾರಿನಲ್ಲಿ ಕಿತ್ತಳೆ ಬೆಳೆ ಹೊಂದಿಕೊಂಡಿದೆ. ಬೀಜದಿಂದ ಸಸಿಮಾಡಿ ಬೆಳೆಸುವುದು ವಾಡಿಕೆ. ಹಣ್ಣು ಕಸಿಮಾಡಿ ಬೆಳೆಸುವುದೂ ಸಾಧ್ಯ. ಮಲೆನಾಡಿನಲ್ಲಿ ಕಿತ್ತಳೆಗೆ ನೀರಾವರಿ ಅಗತ್ಯವಿರುವುದಿಲ್ಲ. ಆದರೆ ಬೇಸಗೆಯಲ್ಲಿ ಸ್ವಲ್ಪ ನೀರು ಕಟ್ಟುವುದು ರೂಢಿಯಲ್ಲಿದೆ. ನಿಂಬೆ ಕಡಿಮೆಮಳೆ ಬೀಳುವ ಪ್ರದೇಶಗಳಲ್ಲಿ ನೀರಾವರಿಯಲ್ಲಿ ಬೆಳೆಯುವ ಜಾತಿ. ಇದನ್ನು ರಾಜ್ಯದ ಎಲ್ಲ ಭಾಗಗಳಲ್ಲೂ ಕಾಣಬಹುದು.

ಹಲಸು ಪ್ರಕೃತಿಯಲ್ಲಿ ತಾನೇತಾನಾಗಿ ಬೆಳೆದು ಫಲಕೊಡುವ ಗಿಡ. ಮಲೆನಾಡಿನ ಕಾಡುಗಳಲ್ಲಿ ಹೇರಳವಾಗಿ ಕಂಡುಬರುತ್ತದೆ. ಮೈದಾನ ಸೀಮೆಯಲ್ಲಿ ಅಲ್ಲಲ್ಲಿ ಒಂಟಿಯಾಗಿ ಬೆಳೆಯುತ್ತದೆ. ಇತ್ತೀಚೆಗೆ ಈ ಬೆಳೆಯ ಸುಧಾರಣೆ ಕೆಲಸ ನಡೆಯುತ್ತಿದೆ.

ದ್ರಾಕ್ಷಿ ಜನಪ್ರಿಯವಾಗುತ್ತಿರುವ ಇನ್ನೊಂದು ಹಣ್ಣಿನ ಬೆಳೆ. ಮಾರುಕಟ್ಟೆ ಅನುಕೂಲವಿರುವ ಬೆಂಗಳೂರು, ಧಾರವಾಡ, ಬೆಳಗಾಂವಿ, ಇಂಥ ಪಟ್ಟಣಗಳ ಸುತ್ತಮುತ್ತ ಇದನ್ನು ಬೆಳೆಯುವ ನೆಲ ಅತಿವೇಗವಾಗಿ ಬೆಳೆಯುತ್ತಿದೆ. ಅನಾಬ್ ಷಾಹಿ, ತಾಮಸನ್ ಸೀಡ್‍ಲೆಸ್ ಮುಂತಾದ ಸುಧಾರಿತ ತಳಿಗಳನ್ನು ಬೆಂಗಳೂರು, ಧಾರವಾಡ ಪ್ರದೇಶಗಳಲ್ಲಿ ಬೆಳೆಯಲಾಗುತ್ತಿದೆ.

ಕಾಫಿ, ಏಲಕ್ಕಿ, ಟೀ, ತೆಂಗು, ಅಡಕೆ ಇವು ರಾಜ್ಯದ ಮುಖ್ಯ ಪ್ಲಾಂಟೇಷನ್ ಬೆಳೆಗಳು. ಕಾಫಿ ವ್ಯವಸಾಯ ಇತರ ಬೆಳೆಗಳಂತಲ್ಲದೆ ಒಂದು ಕೈಗಾರಿಕೆ ಉದ್ಯಮದಂತೆ ನಡೆಯುತ್ತಿದೆ. ಇದರ ರಫ್ತಿನಿಂದ ವರ್ಷಕ್ಕೆ ಸಾಕಷ್ಟು ವಿದೇಶಿ ವಿನಿಮಯ ಗಳಿಕೆಯಾಗುತ್ತಿದೆ. ಕೊಡಗು, ಹಾಸನ, ಚಿಕ್ಕಮಗಳೂರು ಜಿಲ್ಲೆಗಳು ಕಾಫಿ ಬೆಳೆಗೆ ಪ್ರಸಿದ್ಧ. ಅರ್‍ಯಾಬಿಕ, ರೊಬಸ್ಟ ಇವು ಸಾಮಾನ್ಯವಾಗಿ ಬಳಕೆಯಲ್ಲಿರುವ ತಳಿಗಳು (ನೋಡಿ: ಕಾಫಿ).

ತೆಂಗು ರಾಜ್ಯದ ಎಲ್ಲ ಭಾಗಗಳಲ್ಲೂ ಬೆಳೆಯುವುದಾದರೂ ಮುಖ್ಯವಾಗಿ ಹಾಸನ ಜಿಲ್ಲೆಯ ಪೂರ್ವ ತಾಲ್ಲೂಕುಗಳಲ್ಲಿ, ಅರಸೀಕೆರೆ, ತಿಪಟೂರು ಪ್ರದೇಶಗಳಲ್ಲಿ ಹಾಗೂ ತೀರಪ್ರದೇಶದಲ್ಲಿ, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ವ್ಯಾಪಕವಾಗಿದೆ. ರಾಜ್ಯದಲ್ಲಿ ಇದರ ವಿಸ್ತೀರ್ಣ ಸುಮಾರು 5.14 ಲಕ್ಷ ಹೆಕ್ಟೇರುಗಳು. ಮಳೆ 7.62ಮೀ ರಿಂದ 18.288ಮೀ ಇರುವಂಥ ಹಾಗೂ ನೀರು ಬಸಿದುಹೋಗಿ ಸಾಕಷ್ಟು ನೀರು ಉಳಿಸಿಕೊಳ್ಳಬಲ್ಲ ಆಳವಾದ ಕೆಂಪು ಗೋಡುಮಣ್ಣಿನ ಪ್ರದೇಶಗಳಲ್ಲಿ ತೆಂಗಿನ ಬೆಳೆ ಹೆಚ್ಚಾಗಿದೆ.

ಅಡಕೆಯನ್ನು ಚಿಕ್ಕಮಗಳೂರು ಶಿವಮೊಗ್ಗ, ಉತ್ತರ ಕನ್ನಡ, ಉಡುಪಿ, ದಕ್ಷಿಣ ಕನ್ನಡ, ತುಮಕೂರು, ಜಿಲ್ಲೆಯ ಮೈದಾನ ಪ್ರದೇಶದಲ್ಲಿ ಬೆಳೆಯುತ್ತಾರೆ. ಪ್ರಸ್ತುತ ವ್ಯವಸ್ಥಿತ ತರಕಾರಿ ಬೇಸಾಯ ಪಟ್ಟಣಗಳ ಹೊರ ಅಂಚಿನಲ್ಲೇ. ಎಲೆಕೋಸು, ಹೂಕೋಸು, ಗೆಡ್ಡೆ ಕೋಸು, ಬೀನ್ಸ್, ಅವರೆ, ಹುರುಳಿ ಮುಂತಾದವು ತರಕಾರಿಗಳಲ್ಲಿ ಪ್ರಧಾನವಾದವು. (ಬಿ.ವಿ.ವಿ.)

**ಕೃಷಿ ವಿಶ್ವವಿದ್ಯಾಲಯ, ಧಾರವಾಡ :** ಕರ್ನಾಟಕದಲ್ಲಿರುವ ಕೃಷಿ ವಿಶ್ವವಿದ್ಯಾಲಯಗಳಲ್ಲೊಂದು. ಇನ್ನೊಂದು ಬೆಂಗಳೂರಿನಲ್ಲಿದೆ. ಉತ್ತರ ಕರ್ನಾಟಕದ ಭಾಗದಲ್ಲಿ ಒಂದು ಕೃಷಿ ವಿಶ್ವವಿದ್ಯಾಲಯವನ್ನು ಪ್ರತ್ಯೇಕವಾಗಿ ಸ್ಥಾಪಿಸುವ ಅಗತ್ಯವನ್ನು ಮನಗಂಡು ರಾಜ್ಯ ಸರ್ಕಾರ 1986ರಲ್ಲಿ ಧಾರವಾಡದಲ್ಲಿ ಕೃಷಿ ವಿಶ್ವವಿದ್ಯಾಲಯವನ್ನು ಸ್ಥಾಪಿಸಿತು. ಈ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಉತ್ತರ ಕರ್ನಾಟಕದ ಬಹುತೇಕ ಜಿಲ್ಲೆಗಳು ಸೇರುತ್ತವೆ.



ಘಟಿಕೋತ್ಸವದಲ್ಲಿ ಪದವಿಪ್ರದಾನ ಮಾಡುತ್ತಿರುವ ರಾಜ್ಯಪಾಲ ಟಿ.ಎನ್.ಚತುರ್ವೇದಿ

ಈ ವಿಶ್ವವಿದ್ಯಾಲಯ ಸ್ನಾತಕೋತ್ತರ ಪದವಿ ಅಧ್ಯಯನ ಕೇಂದ್ರಗಳನ್ನೂ ಕಾಲೇಜುಗಳನ್ನೂ ಹೊಂದಿದೆ. ಒಟ್ಟು ಏಳು ಶೈಕ್ಷಣಿಕ ಕೇಂದ್ರಗಳಲ್ಲಿರುವ ಒಂಬತ್ತು ಕಾಲೇಜುಗಳಲ್ಲಿ ಸ್ನಾತಕ ಬೋಧನಾ ಚಟುವಟಿಕೆಗಳು ನಡೆಯುತ್ತಿವೆ. ಧಾರವಾಡದಲ್ಲಿ ಕೃಷಿ, ಕೃಷಿ ಮಾರಾಟ ಮತ್ತು ಸಹಕಾರ ಹಾಗೂ ಗ್ರಾಮೀಣ ಗೃಹ ವಿಜ್ಞಾನ ಪದವಿಗಳಿಗೆ ಶಿಕ್ಷಣ ನೀಡಲಾಗುತ್ತಿದೆ. ರಾಯಚೂರು ಕೇಂದ್ರದಲ್ಲಿ ಕೃಷಿ ಮತ್ತು ಕೃಷಿ ಎಂಜಿನಿಯರಿಂಗ್; ಬೀದರ್‍ನಲ್ಲಿ ಪಶುವೈದ್ಯಕೀಯ, ಬಿಜಾಪುರ ಮತ್ತು ಭೀಮರಾಯನ ಗುಡಿಯಲ್ಲಿ ಕೃಷಿ; ಅರಭಾವಿಯಲ್ಲಿ ತೋಟಗಾರಿಕೆ, ಶಿರಸಿಯಲ್ಲಿ ಅರಣ್ಯವಿಜ್ಞಾನ ಪದವಿಗಳಿಗೆ ಶಿಕ್ಷಣ ಸೌಲಭ್ಯವಿದೆ. ಸ್ನಾತಕೋತ್ತರ ಪದವಿ ಕೇಂದ್ರಗಳು ಧಾರವಾಡ, ರಾಯಚೂರು, ಶಿರಸಿ, ಬೀದರ್ ಮತ್ತು ಅರಭಾವಿಗಳಲ್ಲಿವೆ.

ಕೃಷಿ ವಿಶ್ವವಿದ್ಯಾಲಯ ಕೃಷಿ, ಪಶುವಿಜ್ಞಾನಗಳ ಶಿಕ್ಷಣ ನಿಕಾಯಗಳನ್ನು ಹೊಂದಿದೆ. ಅಧ್ಯಯನ ಮಂಡಲಿಗಳು ಮತ್ತು ಶೈಕ್ಷಣಿಕ ಪರಿಷತ್ತುಗಳಿವೆ. ವಿಶ್ವವಿದ್ಯಾಲಯದಲ್ಲಿ ಒಟ್ಟು 2,234 ವಿದ್ಯಾರ್ಥಿಗಳು ವಿವಿಧ ಸ್ನಾತಕ, ಸ್ನಾತಕೋತ್ತರ ಮತ್ತು ಡಾಕ್ಟರೇಟ್ ಪದವಿಗಳಿಗಾಗಿ ಅಭ್ಯಾಸ ಮಾಡುತ್ತಿದ್ದಾರೆ (2003). ವಿಶ್ವವಿದ್ಯಾಲಯ ವಿವಿಧ ಕೃಷಿ ವಲಯಗಳಲ್ಲಿ ಒಟ್ಟು 33 ಸಂಶೋಧನ ಕೇಂದ್ರಗಳನ್ನು ನಡೆಸುತ್ತಿದೆ. ಅವು ಅಂಕೋಲ, ಅಣ್ಣಿಗೇರಿ, ಅರಭಾವಿ, ಬಾಗಲಕೋಟೆ, ಬೈಲಹೊಂಗಲ, ಬೆಳಗಾಂವಿ, ಬೆಳವಟಗಿ, ಭೀಮರಾಯನ ಗುಡಿ, ಬೀದರ್, ಬಿಜಾಪುರ, ಜೆನವಾಡಾ, ದೇವಣಿ, ಎಂ.ಆರ್.ಎಸ್. ಧಾರವಾಡ -5, ಎ.ಆರ್.ಎಸ್. ಧಾರವಾಡ -7, ಗದಗ, ಗಂಗಾವತಿ, ಗುಲ್ಬರ್ಗ, ಹಗರಿ, ಹನುಮನಹಟ್ಟಿ, ಕವಡಿಮಟ್ಟಿ, ಕಲ್ಲೋಳಿ, ಮಾಲನೂರ, ಮುಂಡಗೋಡ, ಮುಗದ, ನಿಪ್ಪಾಣಿ, ಪ್ರಭುನಗರ, ರಾಯಚೂರು, ಶಿರಸಿ (ಬತ್ತ), ಶಿರಸಿ (ಮೆಣಸು), ಸಿರಗುಪ್ಪ, ಸಂಕೇಶ್ವರ, ದೇವಿಹೊಸೂರು, ಅಲಮೇಲ್. ಹೊಸದಾಗಿ ಜಾರಿಗೆ ಬಂದ ರಾಷ್ಟ್ರೀಯ ಕೃಷಿ ತಾಂತ್ರಿಕ ಯೋಜನೆಯಡಿ 60 ಸಂಶೋಧನ ಯೋಜನೆಗಳು ಆರಂಭವಾಗಿವೆ. ಇವುಗಳ ಅಂದಾಜು ವಿನಿಯೋಗ 11.63 ಕೋಟಿ ರೂಪಾಯಿ.

ವಿಶ್ವವಿದ್ಯಾಲಯದ ಸಂಶೋಧನೆ, ಪ್ರಯೋಗ ಮತ್ತು ಪರಿಶೀಲನೆಯ ಪರಿಣಾಮವಾಗಿ 15 ಸಂಕರಣ ತಳಿಗಳನ್ನೂ 87 ತಳಿಗಳನ್ನು ಅಭಿವೃದ್ಧಿಪಡಿಸಿ ಬಿಡುಗಡೆಗೊಳಿಸಲಾಗಿದೆ. ಇದರಲ್ಲಿ ಜೋಳ, ಬತ್ತ, ಗೋದಿ, ಸೋಯಬೀನ್, ಸೇಂಗ, ಸೂರ್ಯಕಾಂತಿ, ಹಸುರು ಮೆಣಸಿನಕಾಯಿ, ಫ್ರೆಂಚ್ ಬೀನ್ ಮತ್ತು ಕಬ್ಬು ಸೇರಿವೆ. ವಿವಿಧ ಬೆಳೆ ರೋಗಗಳ ನಿಯಂತ್ರಣಕ್ಕೂ ಆದ್ಯತೆ ನೀಡಲಾಗಿದೆ. ವಿಶ್ವವಿದ್ಯಾಲಯವು ವಿಸ್ತರಣ ನಿರ್ದೇಶನಾಲಯವಿದೆ. ಅದರ ಮುಖ್ಯ ಕಾರ್ಯಗಳೆಂದರೆ ತಾಂತ್ರಿಕ ವರ್ಗಾವಣೆ, ಸಿಬ್ಬಂದಿ ತರಬೇತಿ, ಪ್ರಕಟಣೆ, ವಿಸ್ತರಣಾ ಶಿಕ್ಷಣ, ಸಂಶೋಧನ ಕೇಂದ್ರಗಳು ಮತ್ತು ರೈತರ ನಡುವೆ ಸಂಪರ್ಕಸೇವೆ ಏರ್ಪಡಿಸುವುದು. ಇದಕ್ಕಾಗಿ ವಸ್ತುಪ್ರದರ್ಶನ, ಪ್ರಾತ್ಯಕ್ಷಿಕೆ, ಸುದ್ದಿ ಮಾಧ್ಯಮಗಳು ಮತ್ತು ಕೃಷಿ ಮೇಳಗಳನ್ನು ಸಾಧನಗಳಾಗಿ ಬಳಸಿಕೊಳ್ಳಲಾಗಿದೆ. ರೈತ ಮಹಿಳೆಯರಲ್ಲಿ ಕೃಷಿ ಕುರಿತ ಹೊಸ ಅವಿಷ್ಕಾರಗಳ ಬಗ್ಗೆ ಅರಿವುಂಟುಮಾಡಲು ಕಾಳಜಿ ವಹಿಸಲಾಗುತ್ತಿದೆ. ಕೃಷಿ ವಿಶ್ವವಿದ್ಯಾಲಯ ಅತ್ಯುತ್ತಮ ಕಾರ್ಯನಿರ್ವಹಣೆಗಾಗಿ 1995-2000 ಅವಧಿಗೆ ಸರದಾರ್ ಪಟೇಲ್ ಪ್ರಶಸ್ತಿ ಪಡೆದಿದೆ. ಇಲ್ಲಿನ ಹಲವು ವಿಜ್ಞಾನಿಗಳು ಜವಹರಲಾಲ್ ನೆಹರೂ ಪ್ರಶಸ್ತಿ, ಸರ್.ಸಿ.ವಿ.ರಾಮನ್ ಪ್ರಶಸ್ತಿ ಸೇರಿದಂತೆ ವಿವಿಧ ರಾಷ್ಟ್ರೀಯ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಈ ವಿಶ್ವವಿದ್ಯಾಲಯದಲ್ಲಿ ಇಲ್ಲಿಯವರೆಗೆ ಜಿ.ವಿ.ಗೌಡ (1986-89), ಆರ್.ಕೆ.ಹೆಗಡೆ (1989-91), ಎನ್.ಎಲ್.ಮೌರ್ಯ (1991), ಪಿ.ವಿ.ರೈ (1991-94), ಎಂ.ಮಹದೇವಪ್ಪ (1994-2000) ಮತ್ತು ಎಸ್.ಎ.ಪಾಟೀಲ (2000ದಿಂದ) ಇವರು ಕುಲಪತಿಗಳಾಗಿ ಸೇವೆ ಸಲ್ಲಿಸಿದ್ದಾರೆ. *

**ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು :** ಕರ್ನಾಟಕದಲ್ಲಿ ಕೃಷಿ ಶಿಕ್ಷಣ ಹಾಗೂ ಸಂಶೋಧನೆಗಾಗಿ ಬೆಂಗಳೂರು ನಗರದ ಹೆಬ್ಬಾಳದಲ್ಲಿ ನೆಲೆಗೊಂಡ ವಿಶ್ವವಿದ್ಯಾಲಯ. ಸ್ಥಾಪನೆ 1965. 1899ರಲ್ಲಿ ಮೈಸೂರು ಸರ್ಕಾರ ಕೃಷಿ ಸಂಶೋಧನೆ ಹಾಗೂ ಶಿಕ್ಷಣವನ್ನು ಪ್ರೋತ್ಸಾಹಿಸಲು ಜರ್ಮನ್ ರಾಷ್ಟ್ರೀಯನಾದ ಲೆಹಮನ್ ಎಂಬಾತನನ್ನು ಮೊದಲ ಕೃಷಿ ತಜ್ಞನನ್ನಾಗಿ ನೇಮಿಸಿತು. ಆತ ಈಗಿನ ಸೆಂಟ್ರಲ್ ಕಾಲೇಜ್ ಕಟ್ಟಡದ ಪಕ್ಕದಲ್ಲಿ ಒಂದು ಕೃಷಿ ಸಂಶೋಧನ ಪ್ರಯೋಗಾಲಯ ಹಾಗೂ ಹೆಬ್ಬಾಳದಲ್ಲಿ 30 ಎಕರೆ ಜಾಗದಲ್ಲಿ ಒಂದು ಪ್ರಾಯೋಗಿಕ ಕ್ಷೇತ್ರವನ್ನು ಸ್ಥಾಪಿಸಿದ. ಈ ಕ್ಷೇತ್ರದಲ್ಲಿ ಸಂಶೋಧನ ಪ್ರಗತಿ ಕಂಡ ಅನಂತರ ಅದೇ

ಸ್ಥಳದಲ್ಲಿ 1913ರಲ್ಲಿ ಮೈಸೂರು ಕೃಷಿ ಶಾಲೆ ಸ್ಥಾಪಿಸಲಾಯಿತು. ರಾಜ್ಯ ಕೃಷಿ ಇಲಾಖೆಯ ನಿರ್ದೇಶಕರಾಗಿದ್ದ (1907) ಕೀಟಶಾಸ್ತ್ರಜ್ಞ ಹಾಗೂ ಶಿಲೀಂಧ್ರ ಶಾಸ್ತ್ರಜ್ಞ ಕೆನಡದ ಲೆಸ್ಲೀ ಕೋಲ್‍ಮನ್‍ರನ್ನು (ನೋಡಿ) ಕೃಷಿ ಶಾಲೆಯ ಮೊದಲ ಪ್ರಾಂಶುಪಾಲರನ್ನಾಗಿ ನೇಮಿಸಲಾಯಿತು. ಮೊದಲಿಗೆ ಈ ಶಾಲೆ ಎರಡು ವರ್ಷಗಳ ಪೋಸ್ಟ್ ಸೆಕೆಂಡರಿ ಟ್ರೈನಿಂಗ್ ಕೋರ್ಸ್ ನಡೆಸುತ್ತಿತ್ತು. ಅನಂತರ ಅದನ್ನು ಮೂರು ವರ್ಷಗಳ ಅವಧಿಯ ಪೋಸ್ಟ್ ಸೆಕೆಂಡರಿ ಡಿಪ್ಲೊಮಾ ಕೋರ್ಸ್ ಆಗಿ ಬದಲಾಯಿಸಲಾಯಿತು. ಕೋಲ್‍ಮನ್ ಅವರ ನೇತೃತ್ವದಲ್ಲಿ ಮೈಸೂರು ಕೃಷಿ ಶಾಲೆ ರಾಜ್ಯದಲ್ಲಿ ಮಾತ್ರವಲ್ಲ, ಇಡೀ ದೇಶದಲ್ಲಿ ಹಾಗೂ ಬರ್ಮಾ (ಈಗಿನ ಮಯನ್‍ಮಾರ್), ಶ್ರೀ ಲಂಕಾ ಹಾಗೂ ದಕ್ಷಿಣ ಆಫ್ರಿಕ ದೇಶಗಳಲ್ಲೂ ಪ್ರಖ್ಯಾತವಾಯಿತು. ಈ ಖ್ಯಾತಿಯಿಂದಾಗಿ ಕೋಲ್‍ಮನ್ ಅವರು ಕೃಷಿ ಶಾಲೆಯನ್ನು ಕೃಷಿ ಕಾಲೇಜಾಗಿ ಪರಿವರ್ತಿಸುವ ಕನಸು ಕಂಡರು. ಅವರ ಕನಸು ನನಸಾಗುವುದು ತಡವಾದರೂ ಆಗ ರಾಜ್ಯ ಕೃಷಿ ಅಧಿಕಾರಿಯಾಗಿದ್ದ ಎಂ.ಎ.ಶ್ರೀನಿವಾಸನ್ ಅವರ ಆಸಕ್ತಿಯಿಂದಾಗಿ 1946ರಲ್ಲಿ 3 ವರ್ಷಗಳ ಸ್ನಾತಕ ಪದವಿ (ಬ್ಯಾಚೆಲರ್ ಡಿಗ್ರಿ) ಕೋರ್ಸ್‍ನೊಂದಿಗೆ ಕೃಷಿ ಕಾಲೇಜು ಸ್ಥಾಪಿತವಾಯಿತು. ಕೃಷಿ ಕಾಲೇಜಿನ ನಿರ್ವಹಣೆ ಕೃಷಿ ಇಲಾಖೆಯ ಅಧೀನದಲ್ಲಿದ್ದು ಮೈಸೂರು ವಿಶ್ವವಿದ್ಯಾನಿಲಯದ ಆಡಳಿತಕ್ಕೆ ಒಳಪಟ್ಟಿತ್ತು. ಸ್ನಾತಕ ಪದವಿ ಕೋರ್ಸಿಗೆ ಎರಡು ವರ್ಷಗಳ ಇಂಟರ್‍ಮೀಡಿಯೇಟ್ ಮುಗಿಸಿದ ವಿದ್ಯಾರ್ಥಿಗಳಿಗೆ ಪ್ರವೇಶವಿತ್ತು. ಮುಂದೆ ರಾಜ್ಯ ಸರ್ಕಾರ ಇಂಟರ್‍ಮೀಡಿಯೇಟ್ ಕೋರ್ಸ್ ಬದಲಿಗೆ ಒಂದು ವರ್ಷದ ಪದವಿ ಪೂರ್ವ (ಪ್ರೀಯೂನಿವರ್ಸಿಟಿ) ಪರೀಕ್ಷೆ ಜಾರಿಗೆ ತಂದಾಗ ಕೃಷಿ ಸ್ನಾತಕ ಪದವಿಯನ್ನು ನಾಲ್ಕು ವರ್ಷದ ಕಾರ್ಯಕ್ರಮವನ್ನಾಗಿ ಬದಲಾಯಿಸಲಾಯಿತು.

ಕೃಷಿ ಕಾಲೇಜಿಗೆ ಒಂದು ಹೊಸ ವಿಸ್ತಾರವಾದ ಕಟ್ಟಡದ ಆವಶ್ಯಕತೆಯನ್ನು ಮನಗಂಡಿದ್ದ ಆಗಿನ ಮೈಸೂರು ರಾಜ್ಯದ ಮುಖ್ಯ ಮಂತ್ರಿಗಳಾಗಿದ್ದ ಕೆಂಗಲ್ ಹನುಮಂತಯ್ಯನವರು ಮೈಸೂರು ಕೃಷಿ ಕಾಲೇಜಿನ ಶಂಖುಸ್ಥಾಪನೆ ನೆರವೇರಿಸಿದ್ದರು (1956). ಅನಂತರ 1959ರಲ್ಲಿ ಬೆಂಗಳೂರು ನಗರದ ಬಳ್ಳಾರಿ ರಸ್ತೆಯಲ್ಲಿರುವ ಹೊಸ ಕಟ್ಟಡಕ್ಕೆ ಕೃಷಿ ಕಾಲೇಜು ವರ್ಗಾವಣೆಗೊಂಡಿತು.



ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು

ರಾಜ್ಯ ವಿಧಾನಮಂಡಲದಲ್ಲಿ ವಿಶ್ವವಿದ್ಯಾನಿಲಯ ಅಧಿನಿಯಮ (1963ರ ಅಧಿನಿಯಮ 22) ಅಂಗೀಕೃತವಾದ ಅನಂತರ 1964ರಲ್ಲಿ ಕೃಷಿ ವಿಶ್ವವಿದ್ಯಾಲಯ ಅಸ್ತಿತ್ವಕ್ಕೆ ಬಂತು. ವಿಶ್ವವಿದ್ಯಾಲಯದ ಉದ್ಘಾಟನೆಯನ್ನು ಆಗಿನ ರಾಷ್ಟ್ರಪತಿಗಳಾದ ಜಾಕೀರ್ ಹುಸೇನ್ ಅವರು ವಿಧ್ಯುಕ್ತವಾಗಿ ನೆರವೇರಿಸಿದರು (1965 ಅಕ್ಟೋಬರ್ 1). ಕೆ.ಸಿ.ನಾಯಕ್ ಕೃಷಿ ವಿಶ್ವವಿದ್ಯಾಲಯದ ಮೊದಲ ಕುಲಪತಿ (1964-73), ಕೃಷಿ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಎಂ.ಪುಟ್ಟರುದ್ರಯ್ಯ ಅವರು ಮೊದಲ ಶಿಕ್ಷಣ ನಿರ್ದೇಶಕರು. ಅನಂತರ ಎಚ್.ಆರ್.ಅರಕೆರೆ (1973-79), ಆರ್.ದ್ವಾರಕೀನಾಥ (1979-81), ಎನ್.ಜಿ.ಪೆರೂರ್ (1981-85), ಎಸ್.ವಿ.ಪಾಟೀಲ್ (1985-88), ಆರ್.ವಿ.ರಾಮಕೃಷ್ಣ (1988), ಕೆ.ಕೃಷ್ಣಮೂರ್ತಿ (1989-92), ಕೆ.ವಿ.ದೇವರಾಜ್ (1992-95), ಜಿ.ಕೆ.ವೀರೇಶ್ (1995-98), ಎಸ್.ಬಿಸಲಯ್ಯ (1998-2001) ಕುಲಪತಿಗಳಾಗಿ ಸೇವೆ ಸಲ್ಲಿಸಿದ್ದಾರೆ. ಈಗಿನ ಕುಲಪತಿ ಎ.ಎಂ.ಕೃಷ್ಣಪ್ಪ, (2001).

1986ರಲ್ಲಿ ಈ ವಿಶ್ವವಿದ್ಯಾಲಯವನ್ನು ವಿಭಜಿಸಿ ಧಾರವಾಡದಲ್ಲಿ ಮತ್ತೊಂದು ಕೃಷಿ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಯಿತು. ಮೊದಲಿಗೆ ಕೃಷಿ ವಿಜ್ಞಾನ ಬೋಧನೆಯೊಂದಿಗೆ ಪ್ರಾರಂಭವಾದ ಕೃಷಿ ವಿಶ್ವವಿದ್ಯಾಲಯ ಪ್ರಸ್ತುತ 9 ವಿಷಯಗಳಲ್ಲಿ ಸ್ನಾತಕ ಪದವಿಗಳನ್ನೂ 47 ವಿಷಯಗಳಲ್ಲಿ ಸ್ನಾತಕೋತ್ತರ ಪದವಿಗಳನ್ನೂ 34 ವಿಷಯಗಳಲ್ಲಿ ಪಿಎಚ್.ಡಿ. ಪದವಿಗಳನ್ನೂ ಪ್ರದಾನ ಮಾಡುತ್ತಿದೆ. ಕರ್ನಾಟಕದ ಕೃಷಿ ಕಾಲೇಜುಗಳ ವಿವರ ಹೀಗಿದೆ: ಬೆಂಗಳೂರಿನ ಗಾಂಧಿ ಕೃಷಿ ವಿಜ್ಞಾನ ಕೇಂದ್ರ, ಮಂಡ್ಯ; ಶಿವಮೊಗ್ಗ ಹಾಗೂ ಹಾಸನಗಳಲ್ಲಿ ಕೃಷಿ ಕಾಲೇಜುಗಳು; ಮಂಗಳೂರಿನಲ್ಲಿ ಮೀನುಗಾರಿಕೆ ಕಾಲೇಜು; ಮೂಡಿಗೆರೆಯಲ್ಲಿ ತೋಟಗಾರಿಕೆ ಕಾಲೇಜು, ಪೊನ್ನಂಪೇಟೆಯಲ್ಲಿ ಅರಣ್ಯಶಾಸ್ತ್ರ ಕಾಲೇಜು; ಚಿಂತಾಮಣಿಯಲ್ಲಿ ರೇಷ್ಮೆ ಕೃಷಿ ಕಾಲೇಜು; ಬೆಂಗಳೂರಿನ ಹೆಬ್ಬಾಳ ಆವರಣದಲ್ಲಿ ಪಶುವೈದ್ಯಕೀಯ ಹಾಗೂ ಹೈನು ತಂತ್ರಜ್ಞಾನ ಕಾಲೇಜು. ಬೆಂಗಳೂರಿನ ಗಾಂಧಿ ಕೃಷಿ ವಿಜ್ಞಾನ ಕೇಂದ್ರದಲ್ಲಿ ಕೃಷಿ ಮಾರುಕಟ್ಟೆ ಮತ್ತು ಸಹಕಾರ ಹಾಗೂ ಕೃಷಿ ಇಂಜಿನಿಯರಿಂಗ್ ಸ್ನಾತಕ ಪದವಿಗಳನ್ನು ಬೋಧಿಸಲಾಗುತ್ತಿದೆ. ಈ ಎಲ್ಲ ಕಾಲೇಜುಗಳಲ್ಲಿ ಸು.2,343 ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ.

ವಿಶ್ವವಿದ್ಯಾನಿಲಯದ ಪ್ರಮುಖ ಅಧ್ಯಯನ ವಿಭಾಗಗಳಿವು: ಕೃಷಿ ಜೀವತಂತ್ರಜ್ಞಾನ, ಕೃಷಿ ಅರ್ಥಶಾಸ್ತ್ರ, ಕೃಷಿ ವಿಸ್ತರಣೆ, ಕೃಷಿ ಸೂಕ್ಷ್ಮ ಜೀವವಿಜ್ಞಾನ, ಬೇಸಾಯವಿಜ್ಞಾನ, ಆನುವಂಶಿಕತೆ ಹಾಗೂ ಸಸ್ಯಸಂವರ್ಧನೆ, ಬೆಳೆ ಶರೀರಕ್ರಿಯಾಶಾಸ್ತ್ರ, ಸಸ್ಯರೋಗಶಾಸ್ತ್ರ, ಕೃಷಿ ಕೀಟವಿಜ್ಞಾನ, ಕುಕ್ಕುಟ ವಿಜ್ಞಾನ, ಪಶುವೈದ್ಯಕೀಯ, ಅಂಗಶಾಸ್ತ್ರ, ಪಶು ಆನುವಂಶಿಕತೆ ಮತ್ತು ಪಶುಸಂವರ್ಧನೆ, ಹೈನುತಂತ್ರಜ್ಞಾನ, ಮೀನು ಉತ್ಪಾದನೆ ಹಾಗೂ ನಿರ್ವಹಣೆ.

ಪ್ರಾದೇಶಿಕ ಭಾಷೆ ಶಿಕ್ಷಣಮಾಧ್ಯಮವಾಗಿರಬೇಕೆಂಬ ಸಂಸತ್ತಿನ ತೀರ್ಮಾನದಂತೆ ಕೃಷಿ ವಿಶ್ವವಿದ್ಯಾಲಯದಲ್ಲಿ 1970ರಲ್ಲಿ ಪ್ರಾರಂಭಿಸಲಾದ ಕನ್ನಡ ಅಧ್ಯಯನ ವಿಭಾಗ ಕನ್ನಡವನ್ನು ಕೃಷಿ ಶಿಕ್ಷಣ ಮಾಧ್ಯಮಕ್ಕೆ ಅನುವಾಗುವಂತೆ ಮೊದಲ ಹೆಜ್ಜೆಯಾಗಿ ಕೃಷಿವಿಜ್ಞಾನದ ವಿವಿಧ ವಿಷಯಗಳಲ್ಲಿ ಕನ್ನಡದಲ್ಲಿ ಪಠ್ಯಪುಸ್ತಕಗಳನ್ನು ನಿರ್ಮಿಸುವ ಕಾರ್ಯ ಕೈಗೊಂಡಿದೆ. ಈ ವಿಭಾಗ ಇದುವರೆಗೆ 230ಕ್ಕೂ ಹೆಚ್ಚು ಕನ್ನಡ ಪುಸ್ತಕಗಳನ್ನು ಪ್ರಕಟಿಸಿದೆ.

ವಿಶ್ವವಿದ್ಯಾಲಯ ಕರ್ನಾಟಕ ರಾಜ್ಯವನ್ನು ಹವಾಮಾನದ ಆಧಾರದ ಮೇಲೆ ವಿವಿಧ ಕೃಷಿ ಹವಾಮಾನ ವಲಯಗಳೆಂದು ವಿಂಗಡಿಸಿ ಆಯಾ ವಲಯಗಳಲ್ಲಿನ ಬೆಳೆಗಳಿಗನುಸಾರವಾಗಿ ಸಂಶೋಧನೆ ನಡೆಸಲು 23 ಕೃಷಿ ಹಾಗೂ ಪ್ರಾದೇಶಿಕ ಸಂಶೋಧನ ಕೇಂದ್ರಗಳನ್ನು ಸ್ಥಾಪಿಸಿದೆ.

ಕೃಷಿ ವಿಶ್ವವಿದ್ಯಾಲಯ ಸಂಶೋಧನ ಪ್ರಕಟಣೆಗಳನ್ನಾಧರಿಸಿ ಅಖಿಲ ಭಾರತ ಶ್ರೇಣೀಕರಣದಲ್ಲಿ ಎಲ್ಲಾ ಕೃಷಿ ಸಂಸ್ಥೆ ಹಾಗೂ ವಿಶ್ವವಿದ್ಯಾನಿಲಯಗಳಲ್ಲಿ 4ನೆಯ ಸ್ಥಾನವನ್ನೂ ಎಲ್ಲ ರಾಜ್ಯ ಕೃಷಿ ವಿಶ್ವವಿದ್ಯಾಲಯಗಳಲ್ಲಿ ಮೂರನೆಯ ಸ್ಥಾನವನ್ನೂ ಗಳಿಸಿದೆ. ಮಂಗಳೂರಿನ ಮೀನುಗಾರಿಕೆ ಕಾಲೇಜು ಎಲ್ಲ ಸಂಸ್ಥೆಗಳಲ್ಲೂ 3ನೆಯ ಸ್ಥಾನವನ್ನೂ ಭಾರತದ ಎಲ್ಲ ವಿಶ್ವವಿದ್ಯಾನಿಲಯಗಳಲ್ಲಿ ಮೊದಲನೆಯ ಸ್ಥಾನವನ್ನೂ ಗಳಿಸಿದೆ. ಭಾರತೀಯ ಕೃಷಿ ಅನುಸಂಧಾನ ಪರಿಷತ್ತಿನ ಜೂನಿಯರ್ ಫೆಲೋಷಿಪ್ ಗಳಿಕೆಯಲ್ಲಿ ಈ ವಿಶ್ವವಿದ್ಯಾಲಯ 4ನೆಯ ಸ್ಥಾನವನ್ನು ಪಡೆದಿದೆ. ಜಲಾನಯನ ನಿರ್ವಹಣೆಯಲ್ಲಿ ಸತತವಾಗಿ ಎರಡು ಬಾರಿ ರಾಷ್ಟ್ರೀಯ ಪ್ರಶಸ್ತಿ ಗಳಿಸಿದೆ. ವಿಶ್ವವಿದ್ಯಾಲಯದ ಎರಡು ವಿಭಾಗಗಳಾದ ಕೀಟವಿಜ್ಞಾನ ವಿಭಾಗ ಹಾಗೂ ಕೃಷಿ ಸೂಕ್ಷ್ಮ ಜೀವವಿಜ್ಞಾನ ವಿಭಾಗಗಳಿಗೆ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ನೀಡುವ ಸ್ಪರ್ಧಾತ್ಮಕ ಅನುದಾನಗಳನ್ನು ಪಡೆದಿರುವ ಮೊತ್ತಮೊದಲ ಹಾಗೂ ಏಕೈಕ ವಿಶ್ವವಿದ್ಯಾಲಯ ಇದಾಗಿದೆ.

ಭಾರತದ ಜೀವವೈವಿಧ್ಯದ ನಕ್ಷೆ ರಚಿಸಲು ಭಾರತ ಸರ್ಕಾರದ ಜೀವತಂತ್ರಜ್ಞಾನ ವಿಭಾಗ ವಿಶ್ವವಿದ್ಯಾಲಯವನ್ನು ಕೇಂದ್ರ ಕಾರ್ಯಸ್ಥಾನವಾಗಿ ಗುರುತಿಸಿದೆ ಹಾಗೂ ಚಿಟ್ಟೆಗಳ ಸಂಗ್ರಹಾವರಣ ಸ್ಥಾಪಿಸಲು ಸಹ ಆಯ್ಕೆ ಮಾಡಿದೆ. ಸಂಶೋಧನೆಗಾಗಿ ಕೃಷಿ ವಿಜ್ಞಾನಗಳಲ್ಲಿ (ಎರಡು) ಹಾಗೂ ಮೀನುಗಾರಿಕೆ ವಿಜ್ಞಾನವನ್ನೊಳಗೊಂಡಂತೆ ಪಶುವೈದ್ಯಕೀಯ ಮತ್ತು ಸಂಬಂಧಿ ವಿಜ್ಞಾನಗಳಲ್ಲಿ (ಐದು) ಅಂತಾರಾಷ್ಟ್ರೀಯ ಪ್ರಶಸ್ತಿಗಳನ್ನು ಈ ವಿಶ್ವಾವಿದ್ಯಾಲಯಗಳಿಸಿದೆ. (ಎನ್.ಎಸ್.ವಿ.)

ಪ್ರಾದೇಶಿಕ ಕೃಷಿ ಸಂಶೋಧನಾ ಕೇಂದ್ರ : ಈ ಕೇಂದ್ರ ಕರ್ನಾಟಕ ಸರ್ಕಾರದ ವ್ಯವಸಾಯ ಇಲಾಖೆಯ ಅಧೀನದಲ್ಲಿ 1957ರಲ್ಲಿ ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆಯಲ್ಲಿ ಪ್ರಾರಂಭವಾಯಿತು. ಮೂಡಿಗೆರೆಗೆ ಪಟ್ಟಣಕ್ಕೆ 2ಕಿಮೀ ದೂರದಲ್ಲಿ ಕಡೂರು-ಮಂಗಳೂರು ರಸ್ತೆಯಲ್ಲಿದೆ. ಕುದುರೆಗುಂಡಿ ತಿಮ್ಮಶೆಟ್ಟಿ ಎಂಬ ಕಾಫಿ ಬೆಳೆಗಾರರು ತಮ್ಮ ತೋಟದ ಭೂಮಿಯನ್ನು ಈ ಕೇಂದ್ರಕ್ಕೆ ನೀಡಿದರು. ಮಲೆನಾಡಿನ ಈ ಭಾಗದಲ್ಲಿ ಏಲಕ್ಕಿ ಬೆಳೆ ಅಧಿಕವಾಗಿದ್ದುದರಿಂದ ಆರಂಭದಲ್ಲಿ ಈ ಬೆಳೆಯ ಅಭಿವೃದ್ಧಿಗಾಗಿ ಈ ಪ್ರಾದೇಶಿಕ ಕೇಂದ್ರವನ್ನು ಸ್ಥಾಪಿಸಲಾಯಿತು. 1965ರಲ್ಲಿ ಇದು ಹೆಬ್ಬಾಳಿನ ಕೃಷಿ ವಿಶ್ವವಿದ್ಯಾಲಯಕ್ಕೆ ಸೇರಿತು. ಏಲಕ್ಕಿ ಬೆಳೆಯುವ ಪ್ರದೇಶ ಕಡಿಮೆಯಾದಂತೆ ಇದರ ಕಾರ್ಯವ್ಯಾಪ್ತಿ ಇತರ ಬೆಳೆಗಳಿಗೂ ವಿಸ್ತರಿಸಿತು.

ಏಲಕ್ಕಿ ಬೆಳೆಗೆ ವಿಶೇಷ ಪ್ರಾಶಸ್ತ್ಯ ನೀಡಿ ಸಂಶೋಧನೆ ನಡೆಸಿದ್ದರ ಫಲವಾಗಿ ಅಧಿಕ ಇಳುವರಿ ಕೊಡುವ ಮೂಡಿಗೆರೆ- 1 ಮತ್ತು ಮೂಡಿಗೆರೆ- 2 ಏಲಕ್ಕಿ ತಳಿಗಳನ್ನು ರೂಪಿಸಿ ಬಿಡುಗಡೆಗೊಳಿಸಲಾಗಿದೆ. ಬತ್ತ, ಕರಿಮೆಣಸು, ಶುಂಠಿ, ಅಡಕೆ ಮತ್ತು ಇತರ ತೋಟದ ಬೆಳೆಗಳ ಬಗ್ಗೆಯೂ ಸಂಶೋಧನೆಗಳು ನಡೆಯುತ್ತಿವೆ. ಅಧಿಕ ಇಳುವರಿ ಮತ್ತು ಬೆಂಕಿರೋಗ ನಿರೋಧಕ ಬತ್ತದ ತಳಿಗಳಾದ ಐ.ಇ.ಟಿ. 7191, ಕೆ.ಎಚ್.ಪಿ. 2, ಹೇಮಾವತಿ, ಕೆ.ಎಚ್.ಆರ್.ಎಸ್. 26 ತಳಿಗಳನ್ನು ಸಾಗುವಳಿಗೆ ಬಿಡುಗಡೆ ಮಾಡಲಾಗಿದೆ. ಬತ್ತದ ಬೇಸಗೆ ಹಂಗಾಮಿಗೆ ಸೂಕ್ತವಾದ ರಾಶಿ, ಸಿ.ಟಿ.ಎಚ್.1, ಹಾಗೂ ಸಿ.ಟಿ.ಎಚ್.3 ತಳಿಗಳನ್ನು ರೂಪಿಸಿ ಬಿಡುಗಡೆ ಮಾಡಲಾಗಿದೆ. ಬೋಳಾದ ಗುಡ್ಡಗಾಡು ಪ್ರದೇಶಕ್ಕೆ ಸಪೋಟ ಮತ್ತು ಸೀಬೆ ಹಣ್ಣು ಸಾಗುವಳಿ ಸೂಕ್ತವೆಂದು ಶಿಫಾರಸು ಮಾಡಲಾಗಿದೆ.

ವಿವಿಧ ಬಗೆಯ ತೋಟಗಾರಿಕೆ ಬೆಳೆಗಳನ್ನು ಪ್ರಯೋಗಾರ್ಥವಾಗಿ ಬೆಳೆದು ಅವುಗಳ ಗುಣಸಾಮರ್ಥ್ಯಗಳನ್ನೂ ಸ್ಥಳೀಯ ಪರಿಸರಕ್ಕೆ ಅವುಗಳ ಯಥಾರ್ಥತೆಯನ್ನೂ ಕಂಡುಕೊಳ್ಳಲು ಕೇಂದ್ರ ಶ್ರಮಿಸಿದೆ. ಈ ಬೆಳೆಗಳಿಗೆ ತಗಲುವ ಕೀಟಬಾಧೆಗಳನ್ನು ಪರೀಕ್ಷಿಸಿ ಸೂಕ್ತ ಕ್ರಿಮಿನಾಶಕ ಔಷಧಗಳನ್ನು ಸಲಹೆ ಮಾಡುವ ಕಾರ್ಯಯೋಜನೆ ನಡೆದಿದೆ. ಸದ್ಯದಲ್ಲಿ ಈ ಕೇಂದ್ರದಲ್ಲಿ ಸಂಶೋಧನೆಗಾಗಿ ಬೆಳೆಯಲಾಗುತ್ತಿರುವ ಬೆಳೆ ಮತ್ತು ಅವುಗಳ ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) ಈ ಮುಂದಿನಂತಿದೆ: ಸಪೋಟ (20.70), ಸೀಬೆ (1.20), ಗೋಡಂಬಿ ಮತ್ತು ಸಪೋಟ (2.10), ಕಾಫಿ (4.04), ತೆಂಗು ಮತ್ತು ಕಾಫಿ (0.62), ಚಿಕ್ಕೆ (0.20), ವೆನಿಲಾ (0.20), ಅಡಕೆ (0.40), ಬತ್ತ (1.60), ತೆಂಗು ಮತ್ತು ಅಡಕೆ (0.62), ಏಲಕ್ಕಿ (2.06) ಮತ್ತು ಇತರೆ (6.85). ಕೇಂದ್ರದ ಒಟ್ಟು ವಿಸ್ತೀರ್ಣ 178.54 ಹೆಕ್ಟೇರ್.

ಗುಡ್ಡಗಾಡು ಮತ್ತು ಮಲೆನಾಡು ಪ್ರದೇಶದಲ್ಲಿ ಬೆಳೆಯುವ ಬೆಳೆಗಳ ತಳಿ ಅಭಿವೃದ್ಧಿ, ರೋಗ ನಿವಾರಣೆ ವಿಧಾನಗಳ ಆವಿಷ್ಕಾರ, ಕೃಷಿ ಅರಣ್ಯ ಮತ್ತು ಮಣ್ಣುತೇವಾಂಶ ಸಂರಕ್ಷಣೆ ಬಗ್ಗೆ ಅಧ್ಯಯನ ಮಾಡುವುದು ಈ ಕೇಂದ್ರದ ಮುಖ್ಯ ಗುರಿ. ಜೊತೆಗೆ ಈ ಕೇಂದ್ರಕ್ಕೆ ಹೊಂದಿಕೊಂಡಂತೆ ತೋಟಗಾರಿಕೆ ಕಾಲೇಜನ್ನು ಸ್ಥಾಪಿಸಲಾಗಿದೆ (1991). ಇಲ್ಲಿ ಬೋಧನೆ, ಸಂಶೋಧನೆ ಮತ್ತು ವಿಸ್ತರಣೆ ಕಾರ್ಯಗಳು ನಡೆಯುತ್ತಿವೆ. ಪ್ರತಿ ವರ್ಷ ನವೆಂಬರ್ ತಿಂಗಳಲ್ಲಿ ಕೃಷಿ ವಸ್ತು ಪ್ರದರ್ಶನ ಸೇರಿದಂತೆ ಕೃಷಿ ಮೇಳ ಏರ್ಪಡುತ್ತದೆ. ರೈತರು ಮತ್ತು ತೋಟಗಾರರ ಸಮಸ್ಯೆಗಳಿಗೆ ಸೂಕ್ತ ಸಲಹೆಗಳನ್ನು ನೀಡುವುದು, ಖುದ್ದಾಗಿ ಕ್ಷೇತ್ರಕ್ಕೆ ಭೇಟಿ ನೀಡಿ ಪರಿಹಾರ ಒದಗಿಸುವುದು ವಿಸ್ತರಣ ಕಾರ್ಯದ ಅಡಿಯಲ್ಲಿ ಬರುತ್ತದೆ. ವೆನಿಲಾ ಸೇರಿದಂತೆ ವಿವಿಧ ಲಾಭದಾಯಕ ಬೆಳೆಗಳ ಮತ್ತು ಸಸ್ಯಗಳ ಸಸಿಗಳನ್ನು ಬೆಳೆಸಿ ರೈತರಿಗೆ ಮತ್ತು ತೋಟಗಾರರಿಗೆ ಒದಗಿಸುವ ಕಾರ್ಯವೂ ವ್ಯಾಪಕವಾಗಿ ನಡೆದಿದೆ. *

**ಕೃಷ್ಣ :** 1941-. ಕರ್ನಾಟಕ ವಿಧಾನಸಭಾ ಅಧ್ಯಕ್ಷರು (2004 ಜೂನ್), ಮಾಜಿ ಸಚಿವರು. ಮಂಡ್ಯ ಜಿಲ್ಲೆ ಕೃಷ್ಣರಾಜಪೇಟೆ ತಾಲ್ಲೂಕಿನ ಕೊತ್ತಮಾರನಹಳ್ಳಿಯಲ್ಲಿ 1941 ಜುಲೈ 1 ರಂದು ಜನಿಸಿದರು. ಇವರ ತಂದೆ ಹನುಮೇಗೌಡ, ತಾಯಿ ನಂಜಮ್ಮ. ಆರಂಭದ ಶಿಕ್ಷಣ ಹಳ್ಳಿಯಲ್ಲೇ ಆಯಿತು. ಅನಂತರ ಇವರು ಬೆಂಗಳೂರು



ವಿಶ್ವವಿದ್ಯಾಲಯ ದಿಂದ ಬಿ.ಎ., ಬಿ.ಎಲ್. ಪದವಿ ಪಡೆದರು. 1970ರ ದಶಕದ ಪ್ರಾರಂಭದಲ್ಲಿ ಶಾಲಾ ಶಿಕ್ಷಕ ರಾಗಿ ಸೇವೆ ಸಲ್ಲಿಸಿದರು. ತಮ್ಮ ಸರಳತೆ ಹಾಗೂ ಸೌಜನ್ಯದ ವ್ಯಕ್ತಿತ್ವದಿಂದ ಸಾರ್ವಜನಿಕರ ಪ್ರೀತಿವಿಶ್ವಾಸ ಗಳನ್ನು ಗಳಿಸಿದರು. ಇವರು 1978ರಲ್ಲಿ ಸಂತೆಬಾಚಹಳ್ಳಿ ಕ್ಷೇತ್ರದಿಂದ ಕೃಷ್ಣರಾಜಪೇಟೆ ತಾಲ್ಲೂಕು ಮಂಡಳಿಗೆ ಚುನಾಯಿತರಾದರು. 1983 ರಲ್ಲಿ ಮೊದಲ ಬಾರಿಗೆ ಕೃಷ್ಣರಾಜಪೇಟೆ ವಿಧಾನಸಭಾ ಕ್ಷೇತ್ರದಿಂದ ಚುನಾವಣೆಗೆ ಸ್ಪರ್ಧಿಸಿದರಾದರೂ ಸಫಲ ರಾಗಲಿಲ್ಲ. 1985ರ ಚುನಾವಣೆಯಲ್ಲಿ ಸ್ಪರ್ಧಿಸಿ ಜಯಶೀಲರಾದರು. ಅನಂತರ ಎಸ್.ಆರ್.ಬೊಮ್ಮಾಯಿಯವರ ಸಂಪುಟದಲ್ಲಿ ರೇಷ್ಮೆ ಮತ್ತು ಪಶುಸಂಗೋಪನೆ ಖಾತೆ ಸಚಿವರಾಗಿ ಸೇವೆ ಸಲ್ಲಿಸಿದರು. 1989ರ ಚುನಾವಣೆಯಲ್ಲಿ ಜನತಾದಳದ ಅಭ್ಯರ್ಥಿಯಾಗಿ ಸ್ಪರ್ಧಿಸಿದರೂ ಸಫಲರಾಗಲಿಲ್ಲ. 1994ರಲ್ಲಿ ಅದೇ ಪಕ್ಷದಿಂದ ಸ್ಪರ್ಧಿಸಿ ವಿಧಾನಸಭೆಗೆ ಚುನಾಯಿತರಾದರು. 1997ರಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಮಂಡ್ಯ ಜಿಲ್ಲೆಯ ಜನಪ್ರಿಯ ರಾಜಕಾರಣಿ ಎನಿಸಿದ್ದ ಜಿ.ಮಾದೇಗೌಡರ ವಿರುದ್ಧ ಸ್ಪರ್ಧಿಸಿ ಜಯ ಗಳಿಸಿ ರಾಜ್ಯದ ಗಮನ ಸೆಳೆದರು. 1999ರ ಲೋಕಸಭಾ ಚುನಾವಣೆಯಲ್ಲಿ ಚಿತ್ರನಟ ಅಂಬರೀಶ್ ವಿರುದ್ಧ ಸ್ಪರ್ಧಿಸಿ ಸೋತರು.

ಅನಂತರ 2004ರ ವಿಧಾನಸಭಾ ಚುನಾವಣೆಯಲ್ಲಿ ಕೃಷ್ಣರಾಜಪೇಟೆ ಕ್ಷೇತ್ರದಿಂದ ಸ್ಪರ್ಧಿಸಿ ಜಯಗಳಿಸಿದರು. ಕಾಂಗ್ರೆಸ್-ಜ್ಯಾತ್ಯತೀತ ಜನತಾದಳ ಸಂಯುಕ್ತ ಸರ್ಕಾರ ರಚಿಸಿದಾಗ ಜೂನ್ 10ರಂದು ವಿಧಾನಸಭಾಧ್ಯಕ್ಷರಾಗಿ ಆಯ್ಕೆಗೊಂಡರು. ಮಂಡ್ಯ ಜಿಲ್ಲೆಯಿಂದ ವಿಧಾನಸಭಾಧ್ಯಕ್ಷ ಪದವಿ ಗಳಿಸಿದವರಲ್ಲಿ ಇವರು ಎರಡನೆಯವರು. ಈ ಮೊದಲು ಎಸ್.ಎಂ.ಕೃಷ್ಣ (ನೋಡಿ) ಅವರು 1989ರಲ್ಲಿ ವಿಧಾನಸಭಾಧ್ಯಕ್ಷರಾಗಿದ್ದರು. ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿರುವ ಇಂದ್ರಮ್ಮ ಇವರ ಪತ್ನಿ. *

**ಕೃಷ್ಣ I :** ರಾಷ್ಟ್ರಕೂಟ ವಂಶದ 2ನೆಯ ದೊರೆ (ಸು.756-74). ದಂತಿದುರ್ಗನ ಚಿಕ್ಕಪ್ಪ ಮತ್ತು ಉತ್ತರಾಧಿಕಾರಿ. ದಂತಿದುರ್ಗ ರಾಷ್ಟ್ರಕೂಟ ರಾಜ್ಯವನ್ನು ಸ್ಥಾಪಿಸಲು ಇವನು ನೆರವಾಗಿದ್ದು, ಅವನು ಮಕ್ಕಳಿಲ್ಲದೆ ಮೃತನಾದ ಮೇಲೆ ಇವನು ಅಧಿಕಾರಕ್ಕೆ ಬಂದ. ಶುಭತುಂಗ, ಅಕಾಲವರ್ಷ ಎಂಬುದು ಈತನ ಬಿರುದುಗಳು.

ಇವನು ಪಟ್ಟಾಭಿಷಿಕ್ತನಾಗುವ ಮುನ್ನ ರಾಷ್ಟ್ರಕೂಟ ಸಿಂಹಾಸನಕ್ಕಾಗಿ ಅಂತಃಕಲಹಗಳು ಉಂಟಾಗಿದ್ದುವು. ಅವನ್ನು ಕೃಷ್ಣ ಹತ್ತಿಕ್ಕಿ ರಾಜನಾದಂತೆ ತೋರುತ್ತದೆ. ಸಿಂಹಾಸನಕ್ಕೆ ಪ್ರತಿಸ್ಪರ್ಧಿಯಾಗಿದ್ದವನು ದಕ್ಷಿಣ ಗುಜರಾತಿನಲ್ಲಿ ಆಳುತ್ತಿದ್ದ 2ನೆಯ ಕರ್ಕ. ಇವನೇ ಶಾಸನಗಳಲ್ಲಿ ಕೃಷ್ಣನಿಂದ ಪರಾಜಿತನಾದನೆಂದು ಹೇಳಿರುವ ರಾಹಪ್ಪ ಎಂದು ಊಹಿಸಲಾಗಿದೆ. ಕೃಷ್ಣ ಪಟ್ಟಕ್ಕೆ ಬರುತ್ತಿದ್ದಂತೆಯೇ ಚಳುಕ್ಯರ ವಿರುದ್ಧದ ಕಾರ್ಯಾಚರಣೆಗಳನ್ನು ಮುಂದುವರಿಸಿದ. ಎರಡನೆಯ ಕೀರ್ತಿವರ್ಮನನ್ನು ಸೋಲಿಸಿ, ಪ್ರಾಯಶಃ ರಣರಂಗದಲ್ಲಿ ಕೊಂದು ಚಳುಕ್ಯರ ವಶದಲ್ಲಿದ್ದ ರಾಜ್ಯಕ್ಕೆಲ್ಲ ತಾನೇ ಅಧಿಪತಿಯಾದ. ಮುಂದೆ ರಾಜ್ಯವನ್ನು ವಿಸ್ತರಿಸಲು ಗಂಗವಾಡಿಯ ಮೇಲೆ

ದಂಡೆತ್ತಿಹೋಗಿ ಶ್ರೀಪುರುಷನನ್ನು ಎದುರಿಸಿ ಮಣ್ಣೆಯಲ್ಲಿ (ಬೆಂಗಳೂರು ಜಿಲ್ಲೆ) ನೆಲೆ ಹೂಡಿದ. ಆದರೆ ಗಂಗವಾಡಿ ಪೂರ್ಣವಾಗಿ ಇವನ ಕೈ ಸೇರಲಿಲ್ಲ. ಸು.769ರಲ್ಲಿ ಶ್ರೀಪುರುಷ ಸಾಮಂತನಾಗಲು ಒಪ್ಪಿಕೊಂಡಂತೆ ತೋರುತ್ತದೆ.

ಈ ಸುಮಾರಿನಲ್ಲಿ ಕೃಷ್ಣ ತನ್ನ ಮಗ ಗೋವಿಂದನನ್ನು ಯುವರಾಜನಾಗಿ ಮಾಡಿದ. ಈತ 768ರಲ್ಲಿ ವೆಂಗಿಯ ಚಾಳುಕ್ಯರ ಮೇಲೆ ದಂಡೆತ್ತಿ ಹೋದ. 769ರಲ್ಲಿ ರಾಷ್ಟ್ರಕೂಟ ಸೈನ್ಯ ಕೃಷ್ಣಾ ಮತ್ತು ಮುಸೀ ನದಿಗಳ ಸಂಗಮ ಪ್ರದೇಶವನ್ನು ತಲುಪಿತ್ತು. ಆಗ ವೆಂಗಿಯ ಅಧಿಪತಿಯಾಗಿದ್ದ 4ನೆಯ ವಿಷ್ಣುವರ್ಧನ ರಾಷ್ಟ್ರಕೂಟರ ವೈರವನ್ನು ಬಯಸದೆ ತನ್ನ ರಾಜ್ಯದ ಪಶ್ಚಿಮ ಭಾಗಗಳನ್ನೆಲ್ಲ ಕೃಷ್ಣನಿಗೆ ಒಪ್ಪಿಸಿದ್ದಲ್ಲದೆ, ರಾಜಕುಮಾರಿ ಶೀಲಭಟ್ಟಾರಿಕಾಳನ್ನು ಕೃಷ್ಣನ ಕಿರಿಯ ಮಗನಾದ ಧ್ರುವನಿಗೆ ಮದುವೆ ಮಾಡಿಕೊಟ್ಟ.

ಕೃಷ್ಣ ಸು.774ರಲ್ಲಿ ಮೃತನಾದ. ಚಳುಕ್ಯ ಸಾಮ್ರಾಜ್ಯವನ್ನು ಮುಳುಗಿಸಿ, ಗಂಗರು ಮತ್ತು ವೆಂಗಿಯ ಚಾಳುಕ್ಯರನ್ನು ಸೋಲಿಸಿ, ಉತ್ತರ ದಕ್ಷಿಣವಾಗಿ ವಿಂಧ್ಯದ ದಕ್ಷಿಣದಿಂದ ಬೆಂಗಳೂರು ಜಿಲ್ಲೆಯವರೆಗೆ ಮತ್ತು ಪಶ್ಚಿಮದಲ್ಲಿ ಅರಬ್ಬೀ ಸಮುದ್ರದಿಂದ ಪೂರ್ವದಲ್ಲಿ ಸುಮಾರು ಹೈದರಾಬಾದ್ ವರೆಗಿನ ವಿಶಾಲ ಪ್ರದೇಶವನ್ನು ಸಾಧಿಸಿಕೊಂಡು, ರಾಷ್ಟ್ರಕೂಟರನ್ನು ದಕ್ಷಿಣ ಭಾರತದ ಬೃಹತ್ ಶಕ್ತಿಯಾಗಿ ಬೆಳೆಸಿದ್ದು ಕೃಷ್ಣನ ಮಹತ್ವದ ಸಾಧನೆ.

ಎಲ್ಲೋರದಲ್ಲಿ ಏಕಶಿಲೆಯಲ್ಲಿ ಕಂಡರಿಸಿರುವ ಕೈಲಾಸ ದೇವಾಲಯ ಇವನ ಕಾಲದ ಮಹತ್ ಕಲಾಸಾಧನೆ. (ಕೆ.ಎಸ್.ಎಸ್.)

**ಕೃಷ್ಣ II :** ರಾಷ್ಟ್ರಕೂಟ ದೊರೆ (878-914). ಇವನಿಗೂ ಶುಭತುಂಗ, ಅಕಾಲವರ್ಷ ಎಂಬ ಬಿರುದುಗಳಿದ್ದುವು. ಒಂದನೆಯ ಅಮೋಘವರ್ಷ ನೃಪತುಂಗ ಇವನ ತಂದೆ.

ಅಮೋಘವರ್ಷ ಮೃತನಾಗುವಾಗ ಬಹು ವೃದ್ಧನಾಗಿದ್ದರಿಂದ, ಪಟ್ಟಕ್ಕೆ ಬರುವ ಹೊತ್ತಿಗೆ ಕೃಷ್ಣನಿಗೂ ಸಾಕಷ್ಟು ವಯಸ್ಸಾಗಿತ್ತು. ಈತ ಸ್ವತಃ ಚೇದಿ ರಾಜಕುಮಾರಿಯೊಬ್ಬಳನ್ನು ಮದುವೆಯಾಗಿದ್ದನಲ್ಲದೆ, ಮುಂದೆ ಅನೇಕ ರಾಷ್ಟ್ರಕೂಟ ಮನೆತನದವರು ಚೇದಿವಂಶದೊಡನೆ ಸಂಬಂಧ ಬೆಳೆಸಿ, ಈ ಎರಡು ಮನೆತನಗಳ ಸಂಬಂಧವನ್ನು ಗಟ್ಟಿಮಾಡಿ ಕೊಂಡರಾದ್ದರಿಂದ, ಕೃಷ್ಣನ ಕಾಲದ ರಾಜಕೀಯ ಆಗುಹೋಗುಗಳಲ್ಲಿ ಚೇದಿ ವಂಶದವರು ಬಹಳ ಸಹಕಾರ ನೀಡುತ್ತಿದ್ದರು. ಇವನ ಕಾಲದಲ್ಲಿ ದಕ್ಷಿಣದ ರಾಜಕೀಯ ಪರಿಸ್ಥಿತಿಯಲ್ಲಿ ಬದಲಾವಣೆಯಾಗುತ್ತಿತ್ತು. ಪಲ್ಲವರ ಬಲ ಕ್ಷೀಣವಾಗಿ ಚೋಳರು ತಲೆಯೆತ್ತುತ್ತಿದ್ದರು. ಇದನ್ನು ಗಮನಿಸಿದ ಕೃಷ್ಣ ತನ್ನ ಮಗಳನ್ನು ಚೋಳ 1ನೆಯ ಆದಿತ್ಯನಿಗೆ ವಿವಾಹ ಮಾಡಿಕೊಟ್ಟ. ಇವರ ಮಗ ಕನ್ನರನಿಗೂ ಆದಿತ್ಯನ ಇನ್ನೊಬ್ಬ ಹೆಂಡತಿಯಲ್ಲಿ ಜನಿಸಿದ 1ನೆಯ ಪರಾಂತಕನಿಗೂ ಮುಂದೆ ಸಿಂಹಾಸನಕ್ಕಾಗಿ ಕಲಹವಾದಾಗ ಕೃಷ್ಣ ತನ್ನ ಮೊಮ್ಮಗ ಕನ್ನರನ ಪರ ವಹಿಸಿದ. ಆಗ ವಲ್ಲಾಳವೆಂಬಲ್ಲಿ ನಡೆದ ಯುದ್ಧದಲ್ಲಿ (911) ಪರಾಂತಕನೇ ಜಯ ಗಳಿಸಿದ.

ವೆಂಗಿಯಲ್ಲಿ ಆಳುತ್ತಿದ್ದ 3ನೆಯ ವಿಜಯಾದಿತ್ಯ ಹಿಂದೆ ಅಮೋಘವರ್ಷನ ಕಾಲದಲ್ಲಿ ರಾಷ್ಟ್ರಕೂಟರಿಂದ ಅನುಭವಿಸಿದ ಸೋಲಿಗೆ ಪ್ರತೀಕಾರವಾಗಿ ಕಾರ್ಯಾಚರಣೆ ಆರಂಭಿಸಿದ. ಮೊದಲು ರಾಷ್ಟ್ರಕೂಟರ ಸಾಮಂತರಾಗಿದ್ದ ಗಂಗ ಮತ್ತು ನೊಳಂಬರ ರಾಜ್ಯಗಳ ಮೇಲೆ ದಾಳಿ ಮಾಡಿ ಜಯ ಗಳಿಸಿದ. ಅನಂತರ ರಾಷ್ಟ್ರಕೂಟ ರಾಜ್ಯದ ಈಶಾನ್ಯ ಭಾಗಗಳನ್ನು, ಅಂದರೆ ಚಕ್ರಕೂಟ ಪ್ರದೇಶವನ್ನೂ ಬಿರಾರಿನ ಅಚಲಪುರವನ್ನೂ ಆಕ್ರಮಿಸಿದ. ಚಕ್ರಕೂಟದ ಬಳಿಯ ಕಿರಣಪುರದಲ್ಲಿ ಆಗ ಕೃಷ್ಣ ಮತ್ತು ಅವನ ಮೈದುನ ಶಂಕರಗಣ ಬೀಡುಬಿಟ್ಟಿದ್ದರೂ ಲೆಕ್ಕಿಸದೆ ವಿಜಯಾದಿತ್ಯ ಅವರ ಮೇಲೆ ಬಿದ್ದ. ಈ ಯುದ್ಧದಲ್ಲಿ ವಿಜಯಾದಿತ್ಯನ ಕೈ ಮೇಲಾಗಿರಬೇಕೆಂದು ಪೂರ್ವ ಚಾಳುಕ್ಯ ಶಾಸನಗಳ ಹೆಮ್ಮೆಯ ಹೇಳಿಕೆಗಳಿಂದ ತಿಳಿಯುತ್ತದೆ. ಇದರಿಂದ ಬುದ್ಧಿ ಕಲಿತ ಕೃಷ್ಣ ಗುಜರಾತ್ ಮತ್ತಿತರೆಡೆಗಳ ಸಾಮಂತರಿಂದ ಸೈನ್ಯವನ್ನು ಒಟ್ಟು ಹಾಕಿ, ಉತ್ತರ ಕರ್ನಾಟಕದ ಭಾಗದಲ್ಲಿ ಸಾಮಂತರಾಗಿ ಆಳುತ್ತಿದ್ದ ಚಾಳುಕ್ಯ ವಂಶದ ಬದ್ದೆಗನ ನೇತೃತ್ವದಲ್ಲಿ ಒಂದು ದಳವನ್ನು ರಚಿಸಿ, ಇನ್ನೊಂದು ದಳದ ನೇತೃತ್ವವನ್ನು ತಾನೇ ವಹಿಸಿ ವೆಂಗಿಯ ಮೇಲೆ ನಡೆದ. ಈ ಹೊತ್ತಿಗೆ ವಿಜಯಾದಿತ್ಯ ಮೃತನಾಗಿದ್ದರಿಂದ ವೆಂಗಿಯಲ್ಲಿ ಅವನ ಮಗ ಭೀಮ ಆಳುತ್ತಿದ್ದ. ಆ ಭೀಮನನ್ನು ಸೆರೆ ಹಿಡಿದು ವೆಂಗಿಯನ್ನು ಪೂರ್ಣವಾಗಿ ವಶಪಡಿಸಿಕೊಂಡ. ವೆಂಗಿ ಪತನಾನಂತರ ಗಂಗರೂ ನೊಳಂಬರೂ ಪುನಃ ತಮ್ಮ ರಾಜ್ಯಗಳನ್ನು ಸಾಧಿಸಿಕೊಂಡರು. ಕೆಲಕಾಲಾನಂತರ ವೆಂಗಿ ರಾಜ್ಯವನ್ನು ಭೀಮನಿಗೆ ವಹಿಸಿಕೊಟ್ಟು, ಅವನು ರಾಷ್ಟ್ರಕೂಟರ ಸಾಮಂತನಾಗಿರುವ ವ್ಯವಸ್ಥೆಯಾಯಿತು. ಎಷ್ಟು ದಿನಗಳ ಕಾಲ ಈ ಸ್ಥಿತಿ ಮುಂದುವರಿಯಿತೆಂದು ತಿಳಿಯುವುದಿಲ್ಲ ವಾದರೂ ಕೃಷ್ಣನ ಕಾಲದಲ್ಲೇ ಭೀಮ ಸ್ವತಂತ್ರನಾದ. ಅವನು ರಾಷ್ಟ್ರಕೂಟ ರಾಜ್ಯದ ಮೇಲೆ ನುಗ್ಗುವ ಸಾಹಸವನ್ನು ಮಾಡಲಿಲ್ಲ. ಕೃಷ್ಣನೂ ಅತ್ತ ಗಮನ ಹರಿಸಲಿಲ್ಲ.

ಗುಜರಾತಿನ ರಾಷ್ಟ್ರಕೂಟರು ಕೃಷ್ಣನ ಆಳಿಕೆಯಲ್ಲಿ ಇವನೊಡನೆ ಸ್ನೇಹದಿಂದಲೇ ಇದ್ದರು. ಕೃಷ್ಣ ಅಭಿಷಿಕ್ತನಾದ ಹೊಸದರಲ್ಲಿ ಮಾಳವದಲ್ಲಿದ್ದ ಗೂರ್ಜರ ಪ್ರತೀಹಾರ ಭೋಜ ರಾಷ್ಟ್ರಕೂಟ ರಾಜ್ಯದ ಮೇಲೆ ಒಮ್ಮೆ ದಂಡೆತ್ತಿ ಬಂದ. ಆ ಸಂದರ್ಭದಲ್ಲಿ ನಡೆದ ಯುದ್ಧದಲ್ಲಿ ರಾಷ್ಟ್ರಕೂಟರು ಸೋಲನ್ನನುಭವಿಸಿದರೂ ಶೀಘ್ರದಲ್ಲೇ ಕೃಷ್ಣನೂ ಗುಜರಾತಿನ ರಾಷ್ಟ್ರಕೂಟ ಶಾಖೆಯ ಕೃಷ್ಣನೂ ಜೊತೆಗೂಡಿ ಭೋಜನನ್ನು ಅಟ್ಟಿ ಉಜ್ಜಯಿನಿಯವರೆಗೂ ನಡೆದರು. ಆದರೆ ಆ ಪ್ರದೇಶವನ್ನು ಪೂರ್ಣವಾಗಿ ಆಕ್ರಮಿಸಲಿಲ್ಲ. ರಾಷ್ಟ್ರಕೂಟ ರಾಜ್ಯದ ಎಲ್ಲೆಯನ್ನು ಮಾತ್ರ ಅವನು ಬಿಗಿಪಡಿಸಿಕೊಂಡ ಸು.900ರ ಹೊತ್ತಿಗೆ ಗುಜರಾತ್ ರಾಷ್ಟ್ರಕೂಟರ ಆಳಿಕೆ ಕೊನೆಗೊಂಡಿತು. ಅಲ್ಲಿ ಆಳುತ್ತಿದ್ದ ಕೃಷ್ಣ ಪ್ರಾಯಶಃ ಮಕ್ಕಳಿಲ್ಲದೆ ಮೃತನಾದಾಗ, ಆ ಭಾಗವೆಲ್ಲ ಮಾನ್ಯಖೇಟದ ರಾಷ್ಟ್ರಕೂಟರ ನೇರ ಆಡಳಿತಕ್ಕೆ ಒಳಗಾದಂತೆ ತೋರುತ್ತದೆ.

ಇವನ ಕಾಲದಲ್ಲಿ ಅರಬರ ಜೊತೆ ಸ್ನೇಹ ಬೆಳೆಯಿತು. ಅನೇಕ ಅರಬರು ಈ ದೇಶದಲ್ಲಿ ನೆಲಸಲಾರಂಭಿಸಿದರು. 3ನೆಯ ಇಂದ್ರನ ಒಂದು ಶಾಸನದಲ್ಲಿ ಒಬ್ಬ ತಾಜಿಕ (ಅರಬ) ಕೃಷ್ಣನ ಕೈ ಕೆಳಗೆ ಸಂಜಾನವನ್ನು ಆಳುತ್ತಿದ್ದ ಪ್ರಸ್ತಾಪವಿದೆ.

ತನ್ನ ತಂದೆಯಂತೆ ಕೃಷ್ಣನೂ ಜೈನಮತಾವಲಂಬಿ. ಆದಿಪುರಾಣದ ಉತ್ತರ ಭಾಗವನ್ನು ಬರೆದ ಗುಣಭದ್ರ ಈತನ ಗುರು. ಕೊಕ್ಕಲನ ಮಗಳೂ ಶಂಕರಗಣನ ಸೋದರಿಯೂ ಆದ ಚೇದಿವಂಶದ ರಾಜಕುಮಾರಿಯೊಬ್ಬಳು ಈತನ ಪತ್ನಿ. ಇವನಿಗೆ ಜಗತ್ತುಂಗನೆಂಬ ಮಗನಿದ್ದ. ಆದರೆ ಜಗತ್ತುಂಗ ತಂದೆಗಿಂತ ಮುಂಚೆಯೇ ಗತಿಸಿದ್ದನಾದ್ದರಿಂದ ಆತನ ಹೆಂಡತಿಯಾದ ಚೇದಿವಂಶದ ಲಕ್ಷ್ಮಿಯಲ್ಲಿ ಜನಿಸಿದ, ಕೃಷ್ಣನ ಮೊಮ್ಮಗ ಇಂದ್ರ III ಕೃಷ್ಣನ ಮರಣಾನಂತರ (ಸು.914) ರಾಷ್ಟ್ರಕೂಟ ಸಿಂಹಾಸನವನ್ನೇರಿದ. (ಎಂ.ಎಚ್.)

**ಕೃಷ್ಣ III :** ರಾಷ್ಟ್ರಕೂಟ ವಂಶದ ದಕ್ಷ ಚಕ್ರವರ್ತಿ (ಸು.939-67) ಮುಮ್ಮಡಿ ಅಮೋಘವರ್ಷನ ಮಗ. ಕನ್ನರ ಎಂಬುದು ಇವನ ಹೆಸರಿನ ಪ್ರಾಕೃತ ರೂಪ. ಅಕಾಲವರ್ಷ, ವಲ್ಲಭನರೇಂದ್ರ, ಪೃಥ್ವೀವಲ್ಲಭ ಇವು ಇವನ ಬಿರುದುಗಳು.

ಇವನು ಯುವರಾಜನಾಗಿದ್ದಾಗಲೇ ಗೋವಿಂದನ ಪಂಗಡದವರಾದ ಅಚಲಾಪುರದ ದಂತಿಗ ಮತ್ತು ವಪ್ಪುಗರನ್ನು ಹತ್ತಿಕ್ಕಿದ. ಗಂಗರ ಮುಮ್ಮಡಿ ರಾಚಮಲ್ಲನನ್ನು ಕೊಂದು ತನ್ನ ಭಾವ ಇಮ್ಮಡಿ ಬೂತುಗನಿಗೆ ಗಂಗರಾಜ್ಯದ ಪಟ್ಟಗಟ್ಟಿ ಗಂಗರ ಸಹಕಾರ ತನ್ನ ಕಡೆಗೆ ಉಳಿಯುವಂತೆ ಮಾಡಿಕೊಂಡ. ಉತ್ತರದಲ್ಲಿ ತನ್ನ ಬಂಧುಗಳೇ ಆಗಿದ್ದ ಚೇದಿರಾಜರನ್ನು ಸೋಲಿಸಿದ್ದಲ್ಲದೆ ಬುಂದೇಲಖಂಡದ ಮೇಲೆ ದಂಡೆತ್ತಿ ಹೋಗಿ ಕಲಿಂಜರ ಮತ್ತು ಚಿತ್ರಕೂಟಗಳನ್ನು ಗೆದ್ದ.

ಪಟ್ಟಕ್ಕೆ ಬಂದ ತರುಣದಲ್ಲಿಯೇ ಇವನ ಅಧಿಕಾರವನ್ನು ಪ್ರಶ್ನಿಸಿದ ಲಲ್ಲೆಯ ಎಂಬ ಮಾಂಡಲಿಕನನ್ನು ಭಾವ ಬೂತುಗ ಹತ್ತಿಕ್ಕಿದ. ಅನಂತರ ಕೃಷ್ಣನ ಗಮನ ದಕ್ಷಿಣದತ್ತ ಹರಿಯಿತು. ಇಮ್ಮಡಿ ಬೂತುಗನ ನೆರವಿನಿಂದ ತಮಿಳುನಾಡಿಗೆ ನುಗ್ಗಿ ಹೊಸದಾಗಿ ತಲೆಯೆತ್ತಿದ್ದ ಚೋಳರನ್ನು ಸೋಲಿಸಿ ತೊಂಡೈಮಂಡಲವನ್ನು ವಶಪಡಿಸಿಕೊಂಡ (ಸು.943). ಅಲ್ಲಿ

ದೊರೆತಿರುವ ಇವನ ಅನೇಕ ಶಾಸನಗಳಿಂದ ತೊಂಡೈಮಂಡಲ ಇವನ ಆಳಿಕೆಯ ಕೊನೆಯವರೆಗೂ ರಾಷ್ಟ್ರಕೂಟ ಸಾಮ್ರಾಜ್ಯದ ಭಾಗವಾಗಿ ಉಳಿದಿತ್ತೆಂಬುದು ಸ್ಪಷ್ಟ. ಆಗಿನ ಚೋಳ ರಾಜ ಪರಾಂತಕ ರಾಷ್ಟ್ರಕೂಟರನ್ನು ಓಡಿಸಲು ನಡೆಸಿದ ಪ್ರಯತ್ನ ಕೈಗೂಡದೆ ಕಡೆಗೆ ತಕ್ಕೋಲಂನಲ್ಲಿ ನಿರ್ಣಾಯಕ ಯುದ್ಧ ನಡೆದು ಪೂರ್ಣವಾಗಿ ಸೋತುಹೋದ. ಇಲ್ಲಿ ಚೋಳ ರಾಜಕುಮಾರ ರಾಜಾದಿತ್ಯನನ್ನು ಬೂತುಗ ಕೊಂದ. ಇಲ್ಲಿ ದೊರೆತ ಜಯದಿಂದ ಕೃಷ್ಣ ದಕ್ಷಿಣದ ತುದಿಯವರೆಗೂ ನಿರಾಂತಕವಾಗಿ ನುಗ್ಗಲು ಅವಕಾಶವಾಯಿತು. ಈ ಗೆಲುವಿಗೆ ಮುಖ್ಯ ಕಾರಣನಾದ ಬೂತುಗನಿಗೆ ಬನವಾಸಿ 12,000, ಬೆಳ್ವಲ 300, ಪುರಿಗೆರೆ 300, ಕಿಸುಕಾಡು 70 ಮತ್ತು ಬಾಗೆನಾಡು 70ನ್ನು ಮೆಚ್ಚಿಕೆಯಾಗಿ ಕೊಟ್ಟ. ಪಾಂಡ್ಯ, ಕೇರಳರನ್ನು ಸೋಲಿಸಿ ಲಂಕೆಯ ಅರಸನಿಂದ ಕಪ್ಪವನ್ನು ಪಡೆದ. ರಾಮೇಶ್ವರದಲ್ಲಿ ಜಯಸ್ತಂಭವನ್ನು ನಿಲ್ಲಿಸಿ ಕೃಷ್ಣೇಶ್ವರ, ಗಂಡಮಾರ್ತಂಡಾದಿತ್ಯ ಮೊದಲಾದ ದೇವಾಲಯಗಳನ್ನು ಕಟ್ಟಿಸಿದ. ಈ ವಿಜಯಗಳ ಕುರುಹಾಗಿ ಕಂಚಿಯುಂ ತೊಂಡೈಯುಂ ಕೊಂಡ ಎಂಬ ಬಿರುದನ್ನು ಧರಿಸಿದ. ಗೆದ್ದ ಭಾಗಗಳನ್ನು ಸ್ಥಿರಪಡಿಸಲು ಸಾಕಷ್ಟು ಕಾಲ ಆರ್ಕಾಟಿನ ಮೇಲ್ಪಾಡಿ ಎಂಬಲ್ಲಿ ತಂಗಿದ್ದ. ಆದರೆ ಇವನ ದಕ್ಷಿಣದ ದಂಡಯಾತ್ರೆಯ ಕಾಲದಲ್ಲಿ ಬುಂದೇಲಖಂಡದಲ್ಲಿ ಚಂದೇಲರು ಪ್ರಬಲರಾಗಿ ಚಿತ್ರಕೂಟ ಮತ್ತು ಕಾಲಂಜರ ಕೋಟೆಗಳನ್ನು ವಶಪಡಿಸಿಕೊಂಡರು. 963ರ ಹೊತ್ತಿಗೆ ಕೃಷ್ಣ ಆಗ ಗಂಗವಾಡಿಯನ್ನಾಳುತ್ತಿದ್ದ ಇಮ್ಮಡಿ ಮಾರಸಿಂಹನನ್ನು ಜೊತೆಗಿಟ್ಟುಕೊಂಡು ಪುನಃ ಉತ್ತರದ ಕಡೆಗೆ ದಂಡೆತ್ತಿ ಹೋಗಿ ಗೂರ್ಜರ ಪ್ರತೀಹಾರರು ಮತ್ತು ಮಾಳವದ ಪರಮಾರರನ್ನು ಸೋಲಿಸಿ ಮಾಳವದ ಬಹುಭಾಗ ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಉಳಿಯುವಂತೆ ಮಾಡಿದ. ವೆಂಗಿಯಲ್ಲಿಯೂ ಕೃಷ್ಣ ಇಮ್ಮಡಿ ಅಮ್ಮನನ್ನು ಓಡಿಸಿ ಯುದ್ಧಮಲ್ಲನ ಮಗ ಬಾಡಪನನ್ನು ಸಿಂಹಾಸನದ ಮೇಲೆ ಕೂರಿಸಿ ವೆಂಗಿ ರಾಷ್ಟ್ರಕೂಟರ ಅಧೀನದಲ್ಲಿರುವಂತೆ ಮಾಡಿದ. ಹೀಗೆ ನರ್ಮದೆಯ ದಕ್ಷಿಣಕ್ಕಿರುವ ಪ್ರದೇಶವೆಲ್ಲ ಕೃಷ್ಣನ ಅಂಕೆಗೆ ಒಳಪಟ್ಟಂತಾಯಿತು. ಜಬ್ಬಲಪುರದ ಬಳಿ ಜೂರ ಎಂಬಲ್ಲಿ ಇರುವ ಇವನ ಪ್ರಶಸ್ತಿಶಾಸನ ಕನ್ನಡದಲ್ಲಿದೆ. ಇದು ಇವನ ಸಾಧನೆಗಳನ್ನು ಸುಂದರವಾಗಿ ವರ್ಣಿಸಿದೆ.

ಮುಮ್ಮಡಿ ಕೃಷ್ಣ ಚಾಣಾಕ್ಷ ದೊರೆ, ಸಮರ್ಥ ಆಡಳಿತಗಾರ, ಧೀರ ಸೈನಿಕ. ಕುಂದುತ್ತಿದ್ದ ರಾಷ್ಟ್ರಕೂಟರ ವರ್ಚಸ್ಸನ್ನು ಹೆಚ್ಚಿಸಿದ ಶೂರ. ಇಡೀ ದಕ್ಷಿಣ ಭಾರತದ ಇತಿಹಾಸದಲ್ಲಿ ವಿಂಧ್ಯದಿಂದ ರಾಮೇಶ್ವರದ ವರೆಗಿನ ಭಾಗವನ್ನೆಲ್ಲ ಹಿಡಿತದಲ್ಲಿಟ್ಟುಕೊಂಡಿದ್ದ ಏಕೈಕ ದೊರೆ.

ಕೃಷ್ಣ ಸು.967ರಲ್ಲಿ ಮೃತನಾದ. ಇವನ ಮಕ್ಕಳು ಮುಂಚೆಯೇ ಸತ್ತಿದ್ದರಿಂದ ತಮ್ಮನಾದ ಖೊಟ್ಟಿಗ ಅನಂತರ ಪಟ್ಟಕ್ಕೆ ಬಂದ. (ಎಂ.ಎಚ್.)

**ಕೃಷ್ಣ** (ಸೇವುಣ) : ದೇವಗಿರಿಯ ಸೇವುಣರ 2ನೆಯ ಸಿಂಘಣನ ಮೊಮ್ಮಗ ಮತ್ತು ಜೈತುಗಿಯ ಮಗ. ಇವನ ಆಳಿಕೆಯ ಅವಧಿ 1247-61. ಸಿಂಘಣನಿಗಿಂತ ಮೊದಲೇ ಜೈತುಗಿ ಕಾಲವಾದ್ದರಿಂದ ಸಿಂಘಣನ ಅನಂತರ ಕೃಷ್ಣನೇ ಸಿಂಹಾಸನವನ್ನೇರಿದ (1247). ಶಾಸನಗಳಲ್ಲಿ ಇವನ ಹೆಸರು ಕನ್ಹ, ಕನ್ನಪ, ಕಂಧಾರ, ಕನ್ಹಾರ ಎಂದೆಲ್ಲ ಉಲ್ಲೇಖಿತವಾಗಿದೆ. ರಾಜ್ಯಭಾರವನ್ನು ವಹಿಸಿಕೊಂಡ ಅನಂತರ ಈತ ಮಾಳವದೇಶದ ದೊರೆಯಾಗಿದ್ದ. ಜೈತುಗಿದೇವನನ್ನೂ ಗುಜರಾತಿನ ವೀಸಲದೇವನನ್ನೂ ಸೋಲಿಸಿದರೂ ಇದರಿಂದ ಇವನ ರಾಜ್ಯ ವಿಸ್ತಾರವೇನೂ ಆಗಲಿಲ್ಲ. ಈ ದಾಳಿಗಳು ಸು.1250ರಲ್ಲಿ ನಡೆದಿರಬಹುದು.

ಉತ್ತರದಲ್ಲಿ ಲಭ್ಯವಾದ ಈ ವಿಜಯಗಳಿಂದ ಕೃಷ್ಣ ಉತ್ಸಾಹಗೊಂಡು ಹೊಯ್ಸಳ ರಾಜ್ಯದ ಮೇಲೆ ಆಕ್ರಮಣ ನಡೆಸಿದಾಗ ಚಿತ್ರದುರ್ಗದ ಕೆಲವು ಭಾಗಗಳು ಇವನ ವಶವಾದುವು. ಕೃಷ್ಣನ ಮಂತ್ರಿಯಾಗಿದ್ದ ಚಾವುಂಡರಸ ಕುಕ್ಕನೂರಿನಲ್ಲಿ ಬೀಡುಬಿಟ್ಟಿದ್ದ ಸಮಯದಲ್ಲಿ ಹೊಯ್ಸಳರು ಪಾಂಡ್ಯರನ್ನು ಎದುರಿಸುತ್ತಿದ್ದುದರಿಂದ ಇದೇ ತಕ್ಕ ಸಮಯವೆಂದು ಚಾವುಂಡರಸ ಕಾವೇರಿಯ ತೀರದವರೆಗೂ ದಾಳಿ ನಡೆಸಿದ. ಹೊಯ್ಸಳ ದೊರೆ 3ನೆಯ ನರಸಿಂಹ ಅಸಹಾಯಕನಾಗಿದ್ದ.

ಕೃಷ್ಣ ಗೋವೆಯ ಕದಂಬರನ್ನು ಸೋಲಿಸಲು ಚಂದ್ರದೇವ ಮತ್ತು ಕೇಶವದೇವ ಎಂಬ ತನ್ನ ಮಂತ್ರಿಗಳನ್ನು ಕಳುಹಿಸಿದ. ಅವರ ದೊರೆ ಷಷ್ಠದೇವ ಸೋತು ಕೃಷ್ಣನ ಸಾಮಂತನಾದ. ಹಾನುಗಲ್ಲಿನ ಕದಂಬರು ಕೃಷ್ಣನ ಸಾಮಂತರಾಗಿದ್ದರು. ಕೃಷ್ಣ ಗುತ್ತವೊಳಲಿನ ಗುತ್ತರ ಮೇಲೂ ಯುದ್ಧ ಮಾಡಿದ. ಮೂರನೆಯ ಗುತ್ತನನ್ನು ಸೋಲಿಸಿದ. ಅವನು ಕೃಷ್ಣನ ಸಾಮಂತನಾದ. ಅವಿಧೇಯನಾಗಿದ್ದ ಸೌಂದತ್ತಿಯ ರಟ್ಟರಾಜ ಲಕ್ಷ್ಮೀದೇವನಿಗೂ ಮಹಾಪ್ರಧಾನ ನಾಗರಸನ ನೇತೃತ್ವದಲ್ಲಿ ಹೊರಟ ಸೇವುಣ ಸೈನ್ಯದಿಂದ ಸೋಲಾಯಿತು. ಅವನೂ ಸೇವುಣರ ಸಾಮಂತನಾದ. ವಂಶ ಪಾರಂಪರ್ಯವಾಗಿ ಬಂದಿದ್ದ ತೆಲುಂಗರಾಯ ಸ್ಥಾಪನಾಚಾರ್ಯ ಎಂಬ ಬಿರುದು ಕೃಷ್ಣನಿಗಿತ್ತಾದರೂ ಕಾಕತೀಯರೂ ಸೇವುಣರೂ ಆ ಕಾಲದಲ್ಲಿ ಮಿತ್ರರಾಗಿದ್ದರು. ಆಭೀರ ರಾಜ ಕಾಮಪಾಲನೂ ಕೃಷ್ಣನಿಂದ ಪರಾಜಯ ಹೊಂದಿದ. ಕೃಷ್ಣನ ಆಡಳಿತಕ್ಕೆ ಕೋಸಲವೂ ಸೇರಿತ್ತೆಂದು ತಿಳಿದುಬರುತ್ತದೆ.

ಕೃಷ್ಣನ ರಾಜ್ಯ ದಕ್ಷಿಣದಲ್ಲಿ ನೊಳಂಬವಾಡಿಯವರೆಗೂ ಪೂರ್ವದಲ್ಲಿ ಛತ್ತೀಸ್‌ಗಢದವರೆಗೂ ಉತ್ತರದಲ್ಲಿ ಮಾಳ್ವದವರೆಗೂ ಹರಡಿತ್ತು. ಇವನು ಕೇವಲ ಯುದ್ಧಾಸಕ್ತನಾಗಿರದೆ ಸಾಂಸ್ಕೃತಿಕ ಕಾರ್ಯಗಳಲ್ಲೂ ಆಸಕ್ತಿ ವಹಿಸಿದ್ದ. ಕೃಷ್ಣನ ಆಶ್ರಯದಲ್ಲಿ ಸೂಕ್ತಿಮುಕ್ತಾವಲೀ ಎಂಬ ಸಂಸ್ಕೃತ ಗ್ರಂಥವನ್ನು ಜಲ್ಹಣಪಂಡಿತನೂ ಕಲ್ಪತರು ಎಂಬ ಸಂಸ್ಕೃತ ಗ್ರಂಥವನ್ನು ಅಮಲಾನಂದನೂ ರಚಿಸಿದರು. ಬ್ರಾಹ್ಮಣ, ಶೈವ, ವೀರಶೈವ, ಜೈನ ಮತ್ತು ಮಹಾನುಭಾವ ಪಂಥದ ಮುನಿಗಳಿಗೆ ಮತ್ತು ದೇವಾಲಯಗಳಿಗೆ ಇವನಿಂದ ಆಶ್ರಯ ದೊರಕಿತೆಂದು ಶಾಸನಗಳಿಂದ ತಿಳಿಯುತ್ತದೆ. ಚಕ್ರಧರ ಸ್ವಾಮಿ ಕೋಸಲ ದೇಶದಲ್ಲಿ ತಂಗಿದ್ದ ಸಮಯದಲ್ಲಿ ಕೃಷ್ಣ ಅಲ್ಲಿಗೆ ಹೋಗಿ (1256) ಆ ಮುನಿಯ ದರ್ಶನ ಭಾಗ್ಯವನ್ನು ಪಡೆದನೆಂದು ಲೀಲಾಚರಿತ ಗ್ರಂಥ ತಿಳಿಸುತ್ತದೆ. ಕೃಷ್ಣ 14 ವರ್ಷಗಳ ಕಾಲ ರಾಜ್ಯವಾಳಿದ. ಸೇವುಣರಾಜ್ಯ ಇವನ ಕಾಲದಲ್ಲಿ ಪ್ರಭಾವಶಾಲಿಯಾಗಿತ್ತು. ಇವನು 1261ರಲ್ಲಿ ಮರಣ ಹೊಂದಿದ. *

**ಕೃಷ್ಣ, ಎಂ.ಎಚ್. :** 1892-1947. ಪ್ರಸಿದ್ಧ ಪುರಾತತ್ತ್ವಜ್ಞರು, ಮೈಸೂರು ಹಟ್ಟಿ ಕೃಷ್ಣೆಂಗಾರ್ಯ ಎಂಬುದು ಇವರ ಪೂರ್ಣ ಹೆಸರು. 1892 ಆಗಸ್ಟ್ 19ರಂದು ಜನಿಸಿದರು. ಮೊದಲು ಮೈಸೂರಿನ ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲಿಯೂ ಅನಂತರ ಮಹಾರಾಜ ಕಾಲೇಜಿನಲ್ಲಿಯೂ ವ್ಯಾಸಂಗ ನಡೆಸಿ ಮಹಾರಾಜ ಹೈಸ್ಕೂಲಿನಲ್ಲಿ ಉಪಾಧ್ಯಾಯರಾದರು. ಮುಂದೆ ಮದರಾಸು ವಿಶ್ವವಿದ್ಯಾಲಯದಲ್ಲಿ ಇತಿಹಾಸದಲ್ಲಿ ವ್ಯಾಸಂಗ ನಡೆಸಿ ಎಂ.ಎ. ಪದವೀಧರರಾದರು (1916). 1924ರಲ್ಲಿ ಉನ್ನತ ವ್ಯಾಸಂಗ ವೇತನ ಪಡೆದು ಲಂಡನ್ನಿಗೆ ತೆರಳಿದರು. ಲಂಡನ್ ವಿಶ್ವವಿದ್ಯಾಲಯ ಮತ್ತು ಬ್ರಿಟಿಷ್ ಮ್ಯೂಸಿಯಂಗಳಲ್ಲಿ ಎರಡು ವರ್ಷ ವ್ಯಾಸಂಗ ನಡೆಸಿದ ಇವರಿಗೆ ಪ್ರಸಿದ್ಧ ಪುರಾತತ್ತ್ವಜ್ಞರಾದ ಸರ್ ಫ್ಲಿಂಡರ್ಸ್ ಪೇಟ್ರಿ, ಇ.ಎ.ಗಾರ್ಡನರ್, ಎಚ್.ಡಿ.ಬಾರ್ನೆಟ್, ಎಫ್.ಡಿ.ಥಾಮಸ್, ಜೆ.ಅಲನ್ ಮೊದಲಾದವರಿಂದ ಮಾರ್ಗದರ್ಶನ ದೊರೆತು, ಇವರು ಪುರಾತತ್ತ್ವದ ಹಲವು ಮುಖಗಳಲ್ಲಿ ಅಭ್ಯಾಸ ನಡೆಸಿದರು. ಮುಖ್ಯವಾಗಿ ನಾಣ್ಯಶಾಸ್ತ್ರವನ್ನು ವ್ಯಾಸಂಗ ಮಾಡಿ ಬ್ರಿಟಿಷ್ ಮ್ಯೂಸಿಯಂನಲ್ಲಿದ್ದ ನಾಣ್ಯರಾಶಿಯಲ್ಲಿ ದಕ್ಷಿಣ ಭಾರತದ ನಾಣ್ಯಗಳನ್ನು ಕುರಿತು ವಿವರಪೂರ್ಣವಾದ ಅಭ್ಯಾಸದಿಂದ ಪ್ರೌಢ ಪ್ರಬಂಧವನ್ನು ರಚಿಸಿದರು. ಈ ಪ್ರಬಂಧಕ್ಕಾಗಿ ಇವರಿಗೆ ಡಿ.ಲಿಟ್. ಪದವಿ ದೊರೆಯಿತು. ಇದರೊಂದಿಗೆ ಇವರು ಈಜಿಪ್ಟಿನಲ್ಲಿ ಉತ್ಖನನದ ಬಗ್ಗೆ ಅನುಭವವನ್ನು ಪಡೆದು ಬಂದರು.



ಇಂಗ್ಲೆಂಡಿನಿಂದ 1926ರಲ್ಲಿ ಹಿಂದಿರುಗಿದ ಅನಂತರ ಇವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇತಿಹಾಸದ ಉಪಪ್ರಾಧ್ಯಾಪಕರಾದರು.

1928ರಲ್ಲಿ ವೆಂಕಟೇಶ್ವರುಲು ಅವರ ಅನಂತರ ಪ್ರಾಧ್ಯಾಪಕರಾದರು. 1929 ಫೆಬ್ರವರಿ 6ರಂದು ತಮ್ಮ ಪ್ರಾಧ್ಯಾಪಕ ಹುದ್ದೆಯೊಂದಿಗೆ ಪುರಾತತ್ತ್ವ ಇಲಾಖೆಯ ಒಪ್ಪೊತ್ತಿನ ನಿರ್ದೇಶಕರಾಗಿಯೂ ಅಧಿಕಾರ ವಹಿಸಿಕೊಡರು. ಈ ಎರಡು ಹುದ್ದೆಗಳಲ್ಲಿಯೂ 1944ರ ಜೂನ್ ವರೆಗೂ ಮುಂದುವರೆದ ಇವರು ಆ ವರ್ಷ ಜುಲೈ 1ರಿಂದ ಪುರಾತತ್ತ್ವ ಇಲಾಖೆಯ ಪೂರ್ಣ ಕಾಲದ ನಿರ್ದೇಶಕರಾದರು. ಈ ಕೆಲಸದಲ್ಲಿ ಮುಂದುವರಿಯುತ್ತಿದ್ದಾಗಲೇ 1947 ಡಿಸೆಂಬರ್ 23ರಂದು ಹಠಾತ್ತಾಗಿ ನಿಧನಹೊಂದಿದರು.

ತುಂಬ ಸರಳ ಸ್ವಭಾವದ ಕೃಷ್ಣ ಪ್ರಾಧ್ಯಾಪಕರಾಗಿ ವಿದ್ಯಾರ್ಥಿಗಳಲ್ಲಿ ಹೆಚ್ಚಿನ ಗೌರವ ಸಂಪಾದಿಸಿದ್ದರು. ಪುರಾತತ್ತ್ವ ಇಲಾಖೆಯ ನಿರ್ದೇಶಕರಾಗಿ ಆ ಇಲಾಖೆಯ ಕೆಲಸಗಳನ್ನು ಬಹುಮುಖವಾಗಿ ವಿಸ್ತರಿಸಿದ ದಕ್ಷ ಅಧಿಕಾರಿಗಳಾಗಿದ್ದರು. ಆಗಿನ ಮೈಸೂರು ಸಂಸ್ಥಾನದ ಪುರಾತತ್ತ್ವದ ಬಗ್ಗೆ ಇವರು ನಡೆಸಿದ ಅನೇಕ ಸಂಶೋಧನೆಗಳು ಮಹತ್ತ್ವಪೂರ್ಣವಾದುವು. ಕರ್ನಾಟಕದಲ್ಲಿಯೇ ಮೊದಲ ಬಾರಿಗೆ ಇವರು ವೈಜ್ಞಾನಿಕ ರೀತಿಯ ಭೂಶೋಧನೆಯನ್ನು ಚಂದ್ರವಳ್ಳಿ ಮತ್ತು ಬ್ರಹ್ಮಗಿರಿಗಳಲ್ಲಿ ನಡೆಸಿದರು. ಇವರ ನಿರ್ದೇಶಕತ್ವದಲ್ಲಿ ಸಹಸ್ರಕ್ಕೂ ಹೆಚ್ಚು ಶಾಸನಗಳು ಬೆಳಕಿಗೆ ಬಂದುವು. ಚಂದ್ರವಳ್ಳಿ ಶಾಸನ, ಹಲ್ಮಿಡಿ ಶಾಸನ -ಇವು ಇವರ ಕಾಲದ ಮುಖ್ಯ ಶಾಸನಶೋಧಗಳು. ವಾಸ್ತುಕಲೆ ಮತ್ತು ಶಿಲ್ಪಕಲೆಗಳನ್ನು ಕುರಿತಂತೆ ಇವರು ನಡೆಸಿದ ಸಂಶೋಧನೆಗಳು ನೂರಾರು. ಅನೇಕ ದೇವಾಲಯಗಳ ಮತ್ತು ಶಿಲ್ಪಗಳ ವಿವರವಾದ ಅಭ್ಯಾಸ ನಡೆಸಿ ವಾರ್ಷಿಕ ವರದಿಗಳಲ್ಲಿ ಪ್ರಕಟಿಸಿದರು. ಇವಲ್ಲದೆ ದಕ್ಷಿಣ ಭಾರತದ ಅನೇಕ ರಾಜಮನೆತನಗಳು ಹಾಕಿಸಿದ ನಾಣ್ಯಗಳ ವಿವರಣೆಗಳನ್ನು ಕೊಟ್ಟರು. 1929ರಿಂದ 45ರವರೆಗಿನ 17 ವಾರ್ಷಿಕ ವರದಿಗಳು ಈ ಎಲ್ಲ ವಿವರಗಳನ್ನೊಳಗೊಂಡು ವಿಷಯವೈವಿಧ್ಯದಿಂದ ಕೂಡಿ ಹೆಚ್ಚು ಆಕರ್ಷಕವಾಗಿ ಪ್ರಕಟಗೊಂಡು ಭಾರತದಲ್ಲಿಯೇ ಅತ್ಯಂತ ಶ್ರೇಷ್ಠವಾದ ವರದಿಗಳೆಂದು ಖ್ಯಾತವಾದುವು. ಇವುಗಳೊಂದಿಗೆ ಕೃಷ್ಣ ಅವರು ಮೈಸೂರು ಮತ್ತು ಹಾಸನ ಜಿಲ್ಲೆಗಳ ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳ ಅನುಬಂಧಗಳನ್ನೂ ಹಲವು ಪ್ರಸಿದ್ಧ ಪ್ರವಾಸಿ ಕ್ಷೇತ್ರಗಳಿಗೆ ಜನಪ್ರಿಯ ಕೈಪಿಡಿಗಳನ್ನೂ ಪ್ರಕಟಿಸಿದರು. ಬೇಲೂರು, ಹಳೇಬೀಡು, ಶ್ರವಣಬೆಳಗೊಳ, ಶ್ರೀರಂಗಪಟ್ಟಣ, ತಲಕಾಡು ಮತ್ತು ನಂದಿಯ ಕೈಪಿಡಿಗಳಲ್ಲದೆ ಆಗಿನ ಇಡೀ ಮೈಸೂರು ಸಂಸ್ಥಾನಕ್ಕೇ ಅನ್ವಯಿಸುವಂತೆ ಒಂದು ಕೈಪಿಡಿಯನ್ನೂ ಹೊರತಂದರು. ಹಿಂದೂ ದೇಶದ ಚರಿತ್ರಸಾರ, ಕನ್ನಡ ನಾಡಿನ ಚರಿತ್ರೆ, ಅಜಂತ ಮತ್ತು ಎಲ್ಲೋರ ಇವು ಇವರು ಕನ್ನಡದಲ್ಲಿ ಪ್ರಕಟಿಸಿರುವ ಗ್ರಂಥಗಳು. ಇವಲ್ಲದೆ ಇವರ ಅನೇಕ ಲೇಖನಗಳು ಹಲವು ಸಂಶೋಧನ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವರು 1934ರಲ್ಲಿ ಮೈಸೂರಿನಲ್ಲಿ ನಡೆದ ಪ್ರಾಚ್ಯ ಸಮ್ಮೇಳನದ ಕಾರ್ಯದರ್ಶಿಯೂ 1942ರಲ್ಲಿ ಇಂಡಿಯನ್ ಸೈನ್ಸ್ ಕಾಂಗ್ರೆಸ್ಸಿನ ಮಾನವಶಾಸ್ತ್ರ ವಿಭಾಗದ ಅಧ್ಯಕ್ಷರೂ ಆಗಿದ್ದರು. (ಎಂ.ಎಚ್.)

**ಕೃಷ್ಣ, ಎಸ್.ಎಂ. :** 1932-. ಕರ್ನಾಟಕ ರಾಜ್ಯದ ಮಾಜಿ ಮುಖ್ಯ ಮಂತ್ರಿ (1999-2004). ಮಹಾರಾಷ್ಟ್ರದ ರಾಜ್ಯಪಾಲರು (2004). ಇವರು ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕು ಸೋಮನಹಳ್ಳಿಯಲ್ಲಿ 1932 ಮೇ 1ರಂದು ಜನಿಸಿದರು. ತಂದೆ ಎಸ್.ಸಿ.ಮಲ್ಲಯ್ಯ, ತಾಯಿ ತಾಯಮ್ಮ. ಇವರ ತಂದೆ ಎಸ್.ಸಿ.ಮಲ್ಲಯ್ಯನವರು ದೀರ್ಘಕಾಲ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರು; ದೀರ್ಘಕಾಲ ಸಾರ್ವಜನಿಕ ಜೀವನದಲ್ಲಿ ಭಾಗವಹಿಸಿದ್ದರು. ಮಂಡ್ಯ ಜಿಲ್ಲೆಯ ಪ್ರತ್ಯೇಕ ರಚನೆಗಾಗಿ ಶ್ರಮಿಸಿದ ಪ್ರಮುಖರಲ್ಲಿ ಅವರೂ ಒಬ್ಬರು.

ಕೃಷ್ಣ ಅವರ ಪ್ರಾಥಮಿಕ ಶಿಕ್ಷಣ ಸೋಮನಹಳ್ಳಿಯಲ್ಲಿ ನಡೆಯಿತು. ಅನಂತರ ಇವರ ವಿದ್ಯಾಭ್ಯಾಸ ಮೈಸೂರಿನ ಶ್ರೀ ರಾಮಕೃಷ್ಣಾಶ್ರಮದ ಶ್ರೀ ರಾಮಕೃಷ್ಣ ವಿದ್ಯಾಶಾಲೆಯಲ್ಲಿ ಮುಂದುವರಿಯಿತು. ಮಹಾಜನ ಶಾಲೆ ಮತ್ತು ಮಹಾರಾಜ ಕಾಲೇಜಿನಲ್ಲೂ ವ್ಯಾಸಂಗ ಮಾಡಿ ಬಿ.ಎ. ಪದವಿ ಗಳಿಸಿ ತರುವಾಯ ಬೆಂಗಳೂರಿನಲ್ಲಿ ಬಿ.ಎಲ್. ಪದವಿ ಪಡೆದರು. ಕಾಲೇಜಿನ ದಿನಗಳಲ್ಲಿ ಇವರು ಉತ್ಸಾಹದಿಂದ ಚರ್ಚಾಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದು ಉತ್ತಮ ವಾಗ್ಮಿ ಎಂಬ ಹೆಸರು ಪಡೆದಿದ್ದರು. ಮುಂದೆ ಇವರು ಅಮೆರಿಕಕ್ಕೆ ತೆರಳಿ ಡಲ್ಲಾಸ್‌ನ ಮೆಥಾಡಿಸ್ಟ್ ವಿಶ್ವವಿದ್ಯಾಲಯದ ಎಂ.ಸಿ.ಎಲ್. ಪದವಿ ಪಡೆದರು. ಅಮೆರಿಕದಲ್ಲಿ ಕೆನಡಿಯವರು ಅಧ್ಯಕ್ಷ ಚುನಾವಣೆಗೆ ಸ್ಪರ್ಧಿಸಿದ್ದಾಗ ಅವರ ಪರವಾಗಿ ಇವರೂ ಪ್ರಚಾರ ಮಾಡಿದ್ದರು.

ಇವರು ಸ್ವದೇಶಕ್ಕೆ ಹಿಂದಿರುಗಿ ಅನಂತರ ವಕೀಲ ವೃತ್ತಿ ಆರಂಭಿಸಿದರು. ಜೊತೆಗೆ ಬೆಂಗಳೂರಿನ ರೇಣುಕಾಚಾರ್ಯ ಕಾನೂನು ಕಾಲೇಜಿನಲ್ಲಿ ಅಂತಾರಾಷ್ಟ್ರೀಯ ಕಾನೂನಿನ ಪ್ರಾಧ್ಯಾಪಕರಾಗಿದ್ದರು.



ಇವರು ಚಿಕ್ಕಂದಿನಿಂದಲೂ ರಾಜಕಾರಣದಲ್ಲಿ ಆಸಕ್ತಿ ತಳೆದಿದ್ದರು. ಒಮ್ಮೆ ಸೋಮನಹಳ್ಳಿಗೆ ಮಹಾತ್ಮಗಾಂಧೀಜಿಯವರು ಭೇಟಿ ನೀಡಿದ್ದರು. ಸರ್ ಮಿರ್ಜಾ ಇಸ್ಮಾಯಿಲ್ ಮೊದಲಾದ ಗಣ್ಯರು ಬೆಂಗಳೂರು-ಮೈಸೂರು ಸಂಚಾರದ ನಡುವೆ ಇವರ ತಂದೆಯವರೊಡನೆ ಮನೆಗೆ ಭೇಟಿ ನೀಡುತ್ತಿದ್ದರು. ಹಾಗಾಗಿ ರಾಜ್ಯದ ಹಲವಾರು ರಾಜಕೀಯ ಮುಖಂಡರ ಪರಿಚಯ ಕೃಷ್ಣರಿಗಿತ್ತು. ಕೃಷ್ಣರು ಒಳ್ಳೆಯ ಮಾತುಗಾರರು. ಇವರು 1962ರ ವಿಧಾನಸಭೆಯ ಚುನಾವಣೆಗೆ ಮದ್ದೂರು ಕ್ಷೇತ್ರದಿಂದ ಸ್ಪರ್ಧಿಸಿ ಆ ಮೂಲಕ ರಾಜಕೀಯ ಪ್ರವೇಶ ಮಾಡಿದರು. ಮೊದಲ ಪ್ರಯತ್ನದಲ್ಲೇ ಯಶಸ್ವಿಯಾದರು. ಆಗ ಅಂದಿನ ಪ್ರಮುಖ ನಾಯಕರಲ್ಲೊಬ್ಬರಾಗಿದ್ದ ಮದ್ದೂರಿನ ಎಚ್.ಕೆ.ವೀರಣ್ಣಗೌಡರನ್ನು ಇವರು ಸೋಲಿಸಿದ್ದು ಎಲ್ಲರ ಗಮನ ಸೆಳೆಯಿತು. ಪ್ರಜಾಸಮಾಜವಾದಿ ಪಕ್ಷದ ಯುವ ಸದಸ್ಯರೆಂಬ ಖ್ಯಾತಿಗೆ ಇವರು ಪಾತ್ರರಾದರು.

ಮುಂದೆ ಇವರು ಕರ್ನಾಟಕ ರಾಜ್ಯದ ಮುಖ್ಯ ಮಂತ್ರಿಯಾಗುವವರೆಗೆ ನಾಲ್ಕು ದಶಕಗಳ ಕಾಲ ರಾಜಕೀಯದಲ್ಲಿ ಮುಂದುವರಿದರು. 1968ರಲ್ಲಿ ಲೋಕಸಭೆಗೆ ಆಯ್ಕೆಯಾದರು. 1969ರಲ್ಲಿ ಕಾಂಗ್ರೆಸ್ ಪಕ್ಷ ವಿಭಜಿತವಾದಾಗ ಇವರು ಇಂದಿರಾಗಾಂಧಿಯವರ ನೇತೃತ್ವದ ಆಡಳಿತ ಕಾಂಗ್ರೆಸ್ ಪಕ್ಷವನ್ನು ಸೇರಿದರು.

1971ರಲ್ಲಿ ಇವರು ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ಮಂಡ್ಯ ಕ್ಷೇತ್ರದಿಂದ ಲೋಕಸಭೆಗೆ ಸ್ಪರ್ಧಿಸಿ ಆಯ್ಕೆಯಾದರು. 1972ರಲ್ಲಿ ಲೋಕಸಭಾ ಸದಸ್ಯತ್ವವನ್ನು ತ್ಯಜಿಸಿ ಡಿ. ದೇವರಾಜ ಅರಸು ಸಂಪುಟದಲ್ಲಿ ಕೈಗಾರಿಕೆ, ವಾಣಿಜ್ಯ ಮತ್ತು ಸಂಸದೀಯ ವ್ಯವಹಾರಗಳ ಸಚಿವರಾದರು. ಮತ್ತು ವಿಧಾನ ಪರಿಷತ್ ಸದಸ್ಯರಾಗಿ ಚುನಾಯಿತರಾದರು. 1980ರಲ್ಲಿ ಮತ್ತೆ ತಮ್ಮ ಜಿಲ್ಲೆಯಿಂದ ಲೋಕಸಭೆಗೆ ಸ್ಪರ್ಧಿಸಿ ಗೆದ್ದರು. 1982ರಲ್ಲಿ ಭಾರತದ ನಿಯೋಗದ ಪ್ರತಿನಿಧಿಯಾಗಿ ವಿಶ್ವಸಂಸ್ಥೆಯ ಅಧಿವೇಶನದಲ್ಲಿ ಭಾಗವಹಿಸಿದರು. ಇಂದಿರಾ ಗಾಂಧಿಯವರ ಸಂಪುಟದಲ್ಲಿ ಕೈಗಾರಿಕೆ ಖಾತೆ ಸಚಿವರಾಗಿ ಕಾರ್ಯನಿರ್ವಹಿಸಿದರು (1983-84). ಕೃಷ್ಣರು ತಮ್ಮ ವ್ಯಕ್ತಿತ್ವ ಮತ್ತು ಸ್ನೇಹಪರತೆಯಿಂದ ಇಂದಿರಾ ಗಾಂಧಿಯವರ ಕುಟುಂಬದ ಆಪ್ತರಲ್ಲೊಬ್ಬರಾದರು.

ಅನಂತರ ನಡೆದ ಲೋಕಸಭಾ ಚುನಾವಣೆಯಲ್ಲಿ ಇವರಿಗೆ ಯಶಸ್ಸು ದೊರಕದಿದ್ದುದರಿಂದ ಕೇಂದ್ರ ಸಂಪುಟದ ಸಚಿವರಾಗುವ ಅವಕಾಶ ತಪ್ಪಿಹೋಯಿತು. ಆಗ ಇವರು ರಾಜ್ಯದ ರಾಜಕೀಯಕ್ಕೆ ಮರಳಿದರು. 1989ರಲ್ಲಿ ರಾಜ್ಯ ವಿಧಾನಸಭೆಗೆ ಆರಿಸಿ ಬಂದು ಅದರ ಸಭಾಪತಿಯಾಗಿ ಆಯ್ಕೆಯಾದರು. ವೀರಪ್ಪ ಮೊಯಿಲಿಯವರು ಮುಖ್ಯಮಂತ್ರಿಗಳಾಗಿದ್ದಾಗ (1992-94) ಇವರು ಉಪಮುಖ್ಯಮಂತ್ರಿಯಾಗಿ ಜವಾಬ್ದಾರಿ ನಿರ್ವಹಿಸಿದರು (1993-94). 1996ರಲ್ಲಿ ರಾಜ್ಯಸಭಾ ಸದಸ್ಯರಾಗಿ ಚುನಾಯಿತರಾದರು.

1999ರಲ್ಲಿ ಇವರು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ನೇಮಿತರಾದರು. ಪಕ್ಷವನ್ನು ಮುಂದಿನ ವಿಧಾನಸಭಾ ಚುನಾವಣೆಯಲ್ಲಿ ಮುನ್ನಡೆಸುವ ಅತ್ಯಂತ ಗುರುತರವಾದ ಹೊಣೆ ಇವರ

ಮೇಲೆ ಬಿತ್ತು. ಆಗ ಇವರು ರಾಜ್ಯಾದ್ಯಂತ ನಿರಂತರ ಪ್ರವಾಸ ಕೈಗೊಂಡರು. ಪಕ್ಷದ ಕಾರ್ಯಕರ್ತರನ್ನು ಒಗ್ಗೂಡಿಸಿದರು. ಪಕ್ಷ ಮೂರನೆಯ ಎರಡು ಭಾಗ ಬಹುಮತದೊಂದಿಗೆ ರಾಜ್ಯ ವಿಧಾನಸಭಾ ಚುನಾವಣೆಯಲ್ಲಿ ಆರಿಸಿ ಬಂತು. ಲೋಕಸಭೆಗೂ ಗಣನೀಯ ಸಂಖ್ಯೆಯ ಸದಸ್ಯರು ಚುನಾಯಿತರಾದರು. ಈ ಸಾಧನೆಗೆ ಪಾರಿತೋಷಕವೆಂಬಂತೆ ಎಸ್.ಎಂ.ಕೃಷ್ಣ ಅವರು 1999ರಲ್ಲಿ ಕರ್ನಾಟಕದ ಮುಖ್ಯಮಂತ್ರಿಯಾದರು.

ಇವರು ಮುಖ್ಯಮಂತ್ರಿಗಳಾದ ಮೇಲೆ ರಾಜ್ಯದ ಆರ್ಥಿಕ ಮತ್ತು ಆಡಳಿತ ಕ್ಷೇತ್ರದಲ್ಲಿ ಕೆಲವೊಂದು ಬದಲಾವಣೆಗಳನ್ನು ತಂದರು. ತಂತ್ರಾಂಶ ಜಾಗತೀಕರಣಕ್ಕೆ ಸ್ಪಂದಿಸಿದ ಇವರು ಬೆಂಗಳೂರು ಭಾರತದ ಪ್ರಥಮ (ಸಾಫ್ಟ್‌ವೇರ್) ಕೇಂದ್ರವಾಗುವಂತೆ ಮಾಡಿದರು. ಬೆಂಗಳೂರು ನಗರದಲ್ಲಿ ಹಲವಾರು ಮೇಲು ಸೇತುವೆಗಳನ್ನು ನಿರ್ಮಿಸಿ ಸಾರಿಗೆ ವ್ಯವಸ್ಥೆಯನ್ನು ಸುಧಾರಿಸಿದರು. ವಿಧಾನ ಸೌಧದ ಬಳಿ ವಿಕಾಸಸೌಧ ಎಂಬ ಬೃಹತ್ ಸಚಿವಾಲಯವನ್ನು ನಿರ್ಮಿಸಿದ್ದು ಇವರ ಮುಖ್ಯ ಸಾಧನೆಗಳಲ್ಲೊಂದು. ಇವರ ಕಾರ್ಯಾವಧಿಯಲ್ಲಿ ರಾಜ್ಯದಲ್ಲಿ ಹೆದ್ದಾರಿಗಳ ದುರಸ್ತು ಮತ್ತು ಅಗಲಗೊಳಿಸುವ ಕಾರ್ಯ ಆದ್ಯತೆ ದೊರೆಯಿತು. ತಾಲ್ಲೂಕು ಮತ್ತು ಜಿಲ್ಲಾ ಕಚೇರಿಗಳಲ್ಲಿ ಕಂಪ್ಯೂಟರ್ ಮತ್ತಿತರ ಸಲಕರಣೆಗಳನ್ನು ಸಜ್ಜುಗೊಳಿಸಿದರು. ಇದರಿಂದ ಜನಸಾಮಾನ್ಯರು ಅತ್ಯಲ್ಪ ಕಾಲದಲ್ಲಿ ಕೆಲವೊಂದು ಭೂದಾಖಲೆಗಳನ್ನು ಪಡೆಯುವುದು ಸಾಧ್ಯವಾಯಿತು. ಸ್ತ್ರೀ ಸಬಲೀಕರಣದ ಅಂಗವಾಗಿ ಸ್ತ್ರೀಶಕ್ತಿ ಸಂಘಗಳು ರಾಜ್ಯಾದ್ಯಂತ ಸ್ಥಾಪನೆಯಾದವು. ಇವರು ಪ್ರಾಥಮಿಕ ಶಾಲಾ ಮಕ್ಕಳಿಗೆ ಮಧ್ಯಾಹ್ನದ ಬಿಸಿಯೂಟ ಯೋಜನೆಯನ್ನು ಜಾರಿಗೆ ತಂದರು. ಇವರ ಅಧಿಕಾರಾವಧಿಯ ಹೆಚ್ಚು ಕಾಲ ಬರಗಾಲದ ಭೀಕರ ಛಾಯೆ ಆವರಿಸಿದ್ದರಿಂದ ಗ್ರಾಮಾಂತರ ಪ್ರದೇಶಗಳ ಅಭಿವೃದ್ಧಿಯಲ್ಲಿ ಸರ್ಕಾರ ಹೆಚ್ಚಾಗಿ ಸವಾಲುಗಳನ್ನೇ ಎದುರಿಸಬೇಕಾಯಿತು. ಕಾಡುಗಳ್ಳ ವೀರಪ್ಪನ್‌ನಿಂದ ವರನಟ ರಾಜಕುಮಾರ್ ಅಪಹರಣ ಮತ್ತು ರಾಜಕಾರಣಿ ನಾಗಪ್ಪ ಅಪಹರಣ ಹಾಗೂ ಹತ್ಯೆ ಕೃಷ್ಣ ಸರ್ಕಾರಕ್ಕೆ ದೊಡ್ಡ ಸಮಸ್ಯೆಗಳನ್ನು ತಂದಿದ್ದವು.

ಕೃಷ್ಣ 2004ರಲ್ಲಿ ವಿಧಾನಸಭೆಗೆ, ಅವಧಿಗೆ ಮುನ್ನವೇ ಚುನಾವಣೆ ಘೋಷಿಸಿದರು. ಬೆಂಗಳೂರಿನ ಚಾಮರಾಜಪೇಟೆ ಕ್ಷೇತ್ರದಿಂದ ಸ್ಪರ್ಧಿಸಿ ಜಯಗಳಿಸಿದರು. ಪಕ್ಷಕ್ಕೆ ಬಹುಮತ ಲಭಿಸದೆ ಮುಖ್ಯಮಂತ್ರಿ ಹುದ್ದೆಯಿಂದ ಹೊರಗುಳಿಯಬೇಕಾಯಿತು. ಬೆಂಗಳೂರು ನಗರ ಕಾಂಗ್ರೆಸ್‌ಗೆ ಅಧಿಕ ಸ್ಥಾನಗಳು ದೊರಕಿದುವು. 2004 ಡಿಸೆಂಬರ್ 6ರಂದು ಇವರು ಮಹಾರಾಷ್ಟ್ರದ ರಾಜ್ಯಪಾಲರಾಗಿ ಅಧಿಕಾರ ವಹಿಸಿಕೊಂಡಿದ್ದಾರೆ.

'ಎಸ್.ಎಂ.ಕೃಷ್ಣ ಬದುಕು-ಸಾಧನೆ' ಎಂಬ ಬೃಹತ್ ಗೌರವ ಗ್ರಂಥ ಇವರ 68ನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಪ್ರಕಟವಾಯಿತು. ಪ್ರೇಮಾ ಇವರ ಪತ್ನಿ. ಈ ದಂಪತಿಗಳಿಗೆ ಇಬ್ಬರು ಪುತ್ರಿಯರಿದ್ದಾರೆ. (ಡಿ.ಎಸ್.ಜೆ.)

**ಕೃಷ್ಣಗಿರಿ ಕೃಷ್ಣರಾಯ :** 1890-1966. ಪ್ರಸಿದ್ಧ ಗಮಕಿ. ಹಾಸನದಲ್ಲಿ ಜನಿಸಿದರು. ಇವರ ತಂದೆ ಕೃಷ್ಣಗಿರಿ ಅನಂತಯ್ಯ. ತಾಯಿ ನಾಮಗಿರಿಯಮ್ಮ. ಇವರ ಪೂರ್ವಜರು ಆಂಧ್ರದವರು. ಮಾತೃಭಾಷೆ ತೆಲುಗು. ಅವರು ಮೈಸೂರಿಗೆ ಬಂದು ನೆಲಸಿದರು. ತಂದೆತಾಯಿಯರ ಮೂರನೆಯ ಪುತ್ರರಾಗಿ ಜನಿಸಿದ ಇವರು ಚಿಕ್ಕಂದಿನಲ್ಲೇ ತಂದೆಯನ್ನು ಕಳೆದುಕೊಂಡು ಸೋದರಮಾವನ ಪೋಷಣೆಯಲ್ಲಿ ಬಾಲ್ಯವನ್ನು ಕಳೆದರು. ಬೆಂಗಳೂರಿನ ಕೋಟೆ ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ಮೈಸೂರು ಮಹಾರಾಜ ಕಾಲೇಜಿನಲ್ಲಿ ಮುಂದುವರಿದರಾದರೂ ಪದವಿ ಪಡೆಯಲಾಗದೆ ಅದೇ ಕಾಲೇಜಿನಲ್ಲಿ ಗುಮಾಸ್ತರಾಗಿ ಕೆಲಸಕ್ಕೆ ಸೇರಿ ಅನಂತರ ಕಾಲೇಜಿನ ಗ್ರಂಥಪಾಲರಾಗಿ ಸೇವೆ ಸಲ್ಲಿಸಿ ನಿವೃತ್ತರಾದರು.

ಕೃಷ್ಣರಾಯರು ಬಾಲ್ಯದಲ್ಲಿಯೇ ಪಿಟೀಲು ವಾದನವನ್ನು ಅಭ್ಯಾಸ ಮಾಡಿ ತಮ್ಮ ಸಂಗೀತಪ್ರಜ್ಞೆಯನ್ನು ಬೆಳೆಸಿಕೊಂಡರು. ಮನೆಯಲ್ಲಿ ಇವರಿಗೆ ಅಕ್ಕ ಮತ್ತು ಸೋದರತ್ತೆ, ಚಿಕ್ಕಪ್ಪ ರಾಮಚಂದ್ರರಾಯ ಇವರಿಂದ ಪ್ರೋತ್ಸಾಹ ದೊರಕಿತು. ಉಪವಿಭಾಗಾಧಿಕಾರಿಯಾಗಿದ್ದ ರಾಮಚಂದ್ರರಾಯರು ರಾಮಾಯಣ ವಾಚನದಲ್ಲಿ ನಿಪುಣರು. ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನ ವಿದ್ವಾಂಸರಾಗಿದ್ದ ಸಂಗೀತ ವಿದ್ವಾನ್ ಸುಬ್ಬಣ್ಣನವರಲ್ಲಿ ಕೃಷ್ಣರಾಯರು 2 ವರ್ಷ ಸತತವಾಗಿ ಶಾಸ್ತ್ರೀಯ ಸಂಗೀತಾಭ್ಯಾಸ ಮಾಡಿ ಉತ್ತಮ ಸಂಗೀತ ಗಾರರಾದರು. ಜೊತೆಗೆ ಕ್ರಮೇಣ ಇಂಗ್ಲಿಷ್ ಮತ್ತು ಕನ್ನಡ ಸಾಹಿತ್ಯಗಳನ್ನು ರೂಢಿಸಿಕೊಂಡರು. ಕಾನಕಾನಹಳ್ಳಿ ವರದಾಚಾರ್ಯ, ಬಿ.ಎಂ.ಶ್ರೀ. ಮೊದಲಾದವರ ಸ್ನೇಹಲಾಭ, ಎಂ.ಆರ್.ಶ್ರೀ. ಅಂಥವರ ಬಂಧುತ್ವ ಸಂಪರ್ಕಗಳಿಂದ ಇವರ ಮನಸ್ಸು ಸಾಹಿತ್ಯ ಮತ್ತು ಗಮಕಗಳ ಕಡೆ ತಿರುಗಿತು. ಆ ಕಾಲದಲ್ಲಿ ಭಾರತವನ್ನು ವಾಚಿಸುವುದರಲ್ಲಿ ಪ್ರಖ್ಯಾತರಾಗಿದ್ದ ಬಿಂದೂರಾಯರ ಸ್ನೇಹ 1919ರ ಸುಮಾರಿನಲ್ಲಿ ದೊರಕಿ ಅಂದಿನಿಂದ ಕೃಷ್ಣರಾಯರು ಸುಮಾರು 30 ವರ್ಷ ಗಮಕದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು. ಟಿ.ಎಸ್. ವೆಂಕಣ್ಣಯ್ಯ, ಕುವೆಂಪು, ಮೊದಲಾದವರ ಸಖ್ಯಗಳಿಸಿದರು. ಕುವೆಂಪು ಅವರ ಚಿತ್ರಾಂಗದಾ, ಶ್ರೀರಾಮಾಯಣ ದರ್ಶನಂ ಕಾವ್ಯಗಳನ್ನು ಅಚ್ಚಾಗುವುದಕ್ಕೆ ಮುಂಚೆಯೇ ಓದಿ (1938-40) ಅವರ ಮೆಚ್ಚುಗೆ ಪಡೆದರು. ಭಾರತವನ್ನು ಮಾತ್ರವಲ್ಲ, ಇತರ ಕಾವ್ಯಗಳನ್ನು ಓದುವುದರಲ್ಲೂ ಸಮರ್ಥರು ಎನಿಸಿಕೊಂಡರು.

ಸಂಗೀತಕ್ಕೆ ಸಾಹಿತ್ಯ, ಸಾಹಿತ್ಯಕ್ಕೆ ಸಂಗೀತ ಇವೆರಡನ್ನೂ ಬೆಸೆದು ಗಮಕ ಕೆಡದಂತೆ, ರಸಭಂಗವಾಗದಂತೆ ಓದುತ್ತಿದ್ದುದು ಇವರ ವೈಶಿಷ್ಟ್ಯ. ಕಾವ್ಯದ ಭಾವಾರ್ಥ ರಸಗಳನ್ನು ಓದಿನಲ್ಲೇ ವ್ಯಕ್ತಪಡಿಸುವ ನೈಪುಣ್ಯವನ್ನೂ ಪಡೆದುಕೊಂಡಿದ್ದರು. ಪ್ರತಿಯೊಂದು ಪದ್ಯವನ್ನೂ ಸ್ವಲ್ಪಮಟ್ಟಿಗೆ ವಿವರಿಸಿ ಅದರ ಭಾವ ಸಹೃದಯರ ಮನಸ್ಸಿಗೆ ತಾಕಿ ಅದು ಅಚ್ಚಳಿಯದೆ ಉಳಿಯುವಂತೆ ವಾಚನಮಾಡುತ್ತಿದ್ದರು. ಭಾರತವನ್ನೇ ಹೆಚ್ಚಾಗಿ ಓದುತ್ತಿದ್ದುದರಿಂದ ಭಾರತದ ಕೃಷ್ಣರಾಯರೆಂದೇ ಪ್ರಸಿದ್ಧರಾದರು.

ಇವರು ಮೃದುಸ್ವಭಾವದವರು, ಸ್ನೇಹಪರರು, ಸಹೃದಯರು, ಹಾಸ್ಯ ಪ್ರಿಯರು. ಅನೇಕರಿಗೆ ಗಮಕಕಲೆಯನ್ನು ಕಲಿಸಿದರು. ಇವರ ಶಿಷ್ಯವೃಂದದಲ್ಲಿ ಬಿ.ಎಸ್.ಎಸ್.ಕೌಶಿಕ್ ಅವರು ಹೆಸರಾಂತ ಗಮಕಿಗಳು. 1935ರಲ್ಲಿ ಬೇಲೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕೃಷ್ಣರಾಯರು ಗಮಕಗೋಷ್ಠಿಯ ಅಧ್ಯಕ್ಷರಾಗಿದ್ದರು. ಇವರು 1966ರಲ್ಲಿ ಬೆಂಗಳೂರಿನಲ್ಲಿ ನಿಧನಹೊಂದಿದರು. (ಕೆ.ಟಿ.ಆರ್.ಐ.)

**ಕೃಷ್ಣದೇವರಾಯ :** ವಿಜಯನಗರ ಸಾಮ್ರಾಜ್ಯವನ್ನು ಆಳಿದ ತುಳುವ ವಂಶದ ಪ್ರಖ್ಯಾತ ಅರಸು (1509-29). ಸಾಳುವ ನರಸಿಂಹನ ಮಹಾದಂಡ ನಾಯಕನಾಗಿದ್ದ ನರಸನಾಯಕನ ಮಗ. ತಾಯಿ ನಾಗಲಾದೇವಿ.

ಬಲ ಅಣ್ಣನಾದ ವೀರನರಸಿಂಹನ ಮರಣಾನಂತರ ಕೃಷ್ಣದೇವರಾಯ ಪಟ್ಟಕ್ಕೆ ಬಂದ (1509). ಆಗ ವಿಜಯನಗರ ಸಾಮ್ರಾಜ್ಯ ಒಳ ಹೊರ ಶತ್ರುಗಳಿಂದ ಮತ್ತು ದೀರ್ಘಕಾಲದ ದುರಾಡಳಿತದಿಂದ ದುರ್ಬಲವಾಗಿ ಇವನು ಮೊದಲು ರಾಜ್ಯದ ಸಂಪನ್ಮೂಲಗಳ ಅಭಿವೃದ್ಧಿ ಮತ್ತು ಆಂತರಿಕ ಸುವ್ಯವಸ್ಥೆಯ ಸ್ಥಾಪನೆಗಾಗಿ ಹೆಣಗಿದ. ಮದುವೆ ಸುಂಕ ಮೊದಲಾದ ಕಿರುಕುಳದ ರೀತಿಯ ಕೆಲವು ತೆರಿಗೆಗಳನ್ನು ರದ್ದುಮಾಡಿ ಜನರ ವಿಶ್ವಾಸ ಗಳಿಸಿದ. ಹೆಚ್ಚು ಭೂಮಿಯನ್ನು ಆಬಾದಿಗೆ ತರಲು ಜನರನ್ನು ಪ್ರೋತ್ಸಾಹಿಸಿ ರಾಜ್ಯಾದಾಯವನ್ನು ಹೆಚ್ಚಿಸಿದ. ಪ್ರಾಂತ್ಯಾಧಿಕಾರಿಗಳು ಮತ್ತು ಸಾಮಂತರು ನಿರ್ದಿಷ್ಟ ಸಂಖ್ಯೆಯ ಸೈನಿಕರನ್ನು ರಾಜನಿಗೆ ಒದಗಿಸಬೇಕೆಂಬ ಕಟ್ಟುಪಾಡು ಮಾಡಿ ರಾಜ್ಯದ ಸೇನಾಬಲವನ್ನು ಹೆಚ್ಚಿಸಿದ.

ಈ ಕಾರ್ಯಕ್ರಮಗಳ ಅನಂತರ ಶತ್ರುನಿಗ್ರಹ ಕಾರ್ಯವನ್ನು ಕೈಗೊಂಡ. ಆಗ ಉತ್ತರ ಪೂರ್ವ ಪಶ್ಚಿಮ ಗಡಿ ಭಾಗಗಳಲ್ಲಿ ಬಹಮನೀ ಗಜಪತಿ ಮತ್ತು ಬಿಜಾಪುರದವರ ಒತ್ತಡ ಬಲವಾಗಿತ್ತು. ಈ ಸಮಯದಲ್ಲಿ ಕೃಷ್ಣದೇವರಾಯ ಚಾಣಾಕ್ಷತನದಿಂದ ಪೋರ್ಚುಗೀಸರ ಸ್ನೇಹ ಮಾಡಿ ಮುಸಲ್ಮಾನರ ಬಲ ಮುರಿಯಲು ಸೈನ್ಯವನ್ನು ಸಂಘಟಿಸಿದ. ಇದೇ ಸಮಯದಲ್ಲಿ ಗುಲ್ಬರ್ಗದ ಮಹಮ್ಮದ್ ಷಾ ದಾಳಿ ಮಾಡಿದೊಡನೆ (1509) ಬಹು ದೊಡ್ಡ ಸೈನ್ಯದೊಂದಿಗೆ ಕೃಷ್ಣದೇವರಾಯ ಅವನ ಮೇಲೇರಿ ಹೋದ. ಬಿಜಾಪುರದ ಯೂಸುಫ್ ಆದಿಲ್ ಷಾನೂ ಮಹಮ್ಮದ್ ಷಾನೊಡನೆ ಸೇರಿಕೊಂಡ. ಆದರೆ ಈ ಯುದ್ಧದಲ್ಲಿ ಮಹಮ್ಮದ್ ಷಾ ಗಾಯಗೊಂಡು ಓಡಿಹೋದ. ಆದಿಲ್ ಷಾ ಮರಣ ಹೊಂದಿದ. ದಕ್ಷಿಣದಲ್ಲಿ ತೊಂದರೆ ಕೊಡುತ್ತಿದ್ದ ಉಮ್ಮತ್ತೂರು ಪಾಳೆಯಗಾರನನ್ನು ಸದೆಬಡಿದು ಉಮ್ಮತ್ತೂರು, ಶಿವಸಮುದ್ರ ಶ್ರೀರಂಗಪಟ್ಟಣದ ಭಾಗಗಳನ್ನು ತನ್ನ ರಾಜ್ಯದಲ್ಲಿ ಭದ್ರಪಡಿಸಿಕೊಂಡ.

ಅನಂತರ ಇವನ ಆತ್ಮರಕ್ಷಕ ದಾಳಿಗಳು ರಾಜ್ಯ ವಿಸ್ತಾರದ ದಾಳಿಗಳ ಸ್ವರೂಪ ತಳೆದವು. ಉದಯಗಿರಿ ಕೊಂಡವೀಡು ರಾಜ್ಯಗಳನ್ನು ಆಕ್ರಮಿಸಿದ ಉತ್ಕಲದ ಗಜಪತಿ ಪ್ರತಾಪರುದ್ರನ ಮೇಲೆ ದಂಡೆತ್ತಿ ಹೋಗಿ ಮೊದಲು. ಉದಯಗಿರಿಯನ್ನು ಮುತ್ತಿದ (1513). ಇವನನ್ನು ಎದುರಿಸಿದ ಪ್ರತಾಪರುದ್ರನನ್ನು ಓಡಿಸಿದ. 18 ತಿಂಗಳ ಮುತ್ತಿಗೆಯ ಅನಂತರ ಉದಯಗಿರಿ ಇವನ ವಶವಾಯಿತು. ಕೊಂಡವೀಡನ್ನು ಆಕ್ರಮಿಸಲು ಸಾಳುವ ತಿಮ್ಮರಸನನ್ನು ಕಳುಹಿಸಿದ. ಅವನು ಕಂದುಕೂರು, ವಿನುಕೊಂಡ, ನಾಗಾರ್ಜುನಕೊಂಡಗಳನ್ನು ಹಿಡಿದು ಕೊಂಡವೀಡನ್ನು ತಲಪುವ ಹೊತ್ತಿಗೆ ರಾಯನೂ ಅವನೊಡನೆ ಸೇರಿ ಆ ಕೋಟೆಯನ್ನು ಆಕ್ರಮಿಸಿ ಗಜಪತಿ, ವೀರಭದ್ರ ಮತ್ತು ಅವನ ಹೆಂಡತಿಯನ್ನು ಸೆರೆಹಿಡಿದ (1515). ದಾಳಿಯ ಮುಂದುವರಿಕೆಯಿಂದ ಕರಾವಳಿಯ ವಿಜಯವಾಡ, ರಾಜ ಮಹೇಂದ್ರಿ, ಸಿಂಹಾಚಲಗಳೂ ತೆಲಂಗಾಣದ ನಲಗೊಂಡ, ವಾರಂಗಲ್ ಪ್ರದೇಶಗಳೂ ಒಂದರ ಮೇಲೊಂದರಂತೆ ವಶವಾದುವು. ಈ ಸಂದರ್ಭದಲ್ಲಿ ಗಜಪತಿಯ ನೆರವಿನಿಂದ ಎದುರಿಸಿದ ಗೋಲ್ಕೊಂಡದ ಶಿತಾಬಖಾನನನ್ನು ಮಣಿಸಿದ. ಪೋತನೂರಿನಲ್ಲಿ ವಿಜಯಸ್ತಂಭ ಸ್ಥಾಪಿಸಿದ. ಇವನ ಸೈನ್ಯಕ್ಕೆ ಸೋಲೇ ಇಲ್ಲವೆಂಬಂತಾಯಿತು. ಇವನ ಸೈನ್ಯ ಮತ್ತೆ ಮುನ್ನಡೆದು ಗಜಪತಿಯ ರಾಜಧಾನಿ ಕಟಕವನ್ನು ಮುತ್ತಿತು (1518). ರಾಯನನ್ನು ಎದುರಿಸಲಾರದ ಪ್ರತಾಪರುದ್ರ ಸಂಧಿ ಮಾಡಿಕೊಂಡು ತನ್ನ ಮಗಳು ಜಗನ್ಮೋಹಿನಿಯನ್ನು ಇವನಿಗೆ ಮದುವೆ ಮಾಡಿಕೊಟ್ಟ. ರಾಯ ತಾನು ಆಕ್ರಮಿಸಿದ್ದ ಕೃಷ್ಣಾನದಿಯ ಉತ್ತರ ಭಾಗವನ್ನೆಲ್ಲ ಉದಾರವಾಗಿ ಗಜಪತಿ ಅರಸನಿಗೆ ಬಿಟ್ಟುಕೊಟ್ಟ. ಉತ್ಕಲದ ಗಜಪತಿಯ ಸೋಲು ಗೋಲ್ಕೊಂಡ ಸುಲ್ತಾನ ತಲೆಯೆತ್ತುವಂತೆ ಮಾಡಿತು. ಅವನು ಹಲವು ಸ್ಥಳಗಳನ್ನು ಆಕ್ರಮಿಸಿ ವಿಜಯನಗರದ ಮೇಲೆ ದಂಡೆತ್ತಿ ಬಂದ. ಸಾಳುವ ತಿಮ್ಮರಸನ ನಾಯಕತ್ವದಲ್ಲಿ ಕಳಿಸಲಾದ ವಿಜಯನಗರದ ಸೈನ್ಯ ಸುಲ್ತಾನನ್ನು ಮಣಿಸಿ ಆಕ್ರಮಿತ ಪ್ರದೇಶಗಳಿಂದ ಓಡಿಸಿತು.

ಇವನ ದಾಳಿಗಳಲ್ಲಿ ರಾಯಚೂರು ಮುತ್ತಿಗೆ (1520) ಮತ್ತು ಪತನ ಬಹು ಮಹತ್ವವುಳ್ಳದ್ದು. ರಾಯಚೂರು ಮತ್ತು ಮುದ್ಗಲ್ಲು ಕೋಟೆಗಳಿಗಾಗಿ ಗುಲ್ಬರ್ಗ, ಬಿಜಾಪುರ ಮತ್ತು ವಿಜಯನಗರದವರ ನಡುವೆ ಯಾವಾಗಲೂ ಕದನಗಳಾಗುತ್ತಿದ್ದವು. ಆಗ ಅದನ್ನು ಆಕ್ರಮಿಸಿದ್ದ ಬಿಜಾಪುರದ ಇಸ್ಮಾಯಿಲ್ ಆದಿಲ್‌ಷಾನನ್ನು ಸೋಲಿಸಿ ರಾಯಚೂರನ್ನು ವಿಜಯನಗರದ ಪರಿಧಿಯಲ್ಲಿ ಸೇರಿಸಿಕೊಂಡ. ಮುಂದೆ ಸಂಧಾನಕ್ಕೆಂದು ಮುದ್ಗಲ್ಲಿಗೆ ಬರಲು ಒಪ್ಪಿದ್ದ ಬಿಜಾಪುರದ ಸುಲ್ತಾನ ಬಾರದಿದ್ದಾಗ ಇವನು ರೊಚ್ಚಿಗೆದ್ದು ಗಡಿ ದಾಟಿ ಬಿಜಾಪುರವನ್ನು ಹೊಕ್ಕ. ಸಾಗರದಲ್ಲಿ ಮತ್ತೆ ಎರಡೂ ಸೈನ್ಯಗಳು ತಾಕಲಾಡಿದವು (1523). ಸುಲ್ತಾನನ ಸೈನ್ಯಕ್ಕೆ ಖಚಿತವಾದ ಸೋಲಾಯಿತು. ಇವನು ಗುಲ್ಬರ್ಗದವರೆಗೂ ಸಾಗಿ ಅದನ್ನೂ ವಶಪಡಿಸಿಕೊಂಡ. ಅಲ್ಲಿ ಬಂಧಿತರಾಗಿದ್ದ ಬಹಮನೀ ರಾಜಕುಮಾರರನ್ನು ಬಿಡಿಸಿ ಹಿರಿಯರಿಗೆ ರಾಜ್ಯಾಧಿಕಾರ ಕೊಟ್ಟು ಮರಳಿದ. ಈ ಸಾಧನೆಯ ಕುರುಹಾಗಿ 'ಯವನರಾಜ್ಯಪ್ರತಿಷ್ಠಾಪನಾಚಾರ್ಯ' ಎಂಬ ಬಿರುದನ್ನು ಧರಿಸಿದ.

ಇವನ ಪ್ರತಾಪದ ವ್ಯಾಪ್ತಿ ದಕ್ಷಿಣ ಭಾರತದಲ್ಲೆಲ್ಲ ಹಬ್ಬಿತ್ತು. ಅಲ್ಲದೆ ಸಿಂಹಳದ ಇವನು ವಿಜಯಬಾಹುವಿನ ವಿರುದ್ಧ ಸಂಚು ನಡೆದಾಗ ಈತ ಹಸ್ತಕ್ಷೇಪ ಮಾಡಿ ದಂಗೆಯನ್ನು ಹತ್ತಿಕ್ಕಿ ವಿಜಯಬಾಹುವಿನ ಮಗನಾದ ಭುವನೈಕಬಾಹುವನ್ನು ಸಿಂಹಾಸನದ ಮೇಲೆ ಕೂರಿಸುವ ವ್ಯವಸ್ಥೆ ಮಾಡಿದ.

ರಾಯನ ಆಳಿಕೆಯ ಕೊನೆಯ ವರ್ಷಗಳಲ್ಲಿ ಶಾಂತಿ ನೆಲಸಿತ್ತು. ಆಗ ತನ್ನ ಆರು ವರ್ಷದ ಮಗ ತಿರುಮಲನನ್ನು ಇವನು ಯುವರಾಜನನ್ನಾಗಿ ಮಾಡಿದ. ಆದರೆ ಅಲ್ಲಿಂದ ಒಂದು ವರ್ಷದೊಳಗೇ ಇವನ ಮಂತ್ರಿ ಸಾಳುವ ತಿಮ್ಮರಸನ ಮಗ ತಿಮ್ಮದಂಡನಾಯಕ ವಿಷಪ್ರಯೋಗ ಮಾಡಿದ್ದರಿಂದ ಈ ಬಾಲಕ ಮೃತನಾದ. ಇದರಿಂದ ರೊಚ್ಚಿಗೆದ್ದ ರಾಯ ತಂದೆ ಮಕ್ಕಳಿಬ್ಬರನ್ನೂ ಸೆರೆಗೆ ದೂಡಿದ. ತಿಮ್ಮ ಸೆರೆಯಿಂದ ತಪ್ಪಿಸಿಕೊಂಡು ಗುತ್ತಿಗೆ ಹೋಗಿ ದಂಗೆಯೆದ್ದ. ರಾಯ ಅವನನ್ನು ಸೋಲಿಸಿ, ತಂದೆ ಮಕ್ಕಳಿಬ್ಬರ ಕಣ್ಣು ಕಿತ್ತು ಮತ್ತೆ ಸೆರೆಗೆ ಅಟ್ಟಿದ ಎಂದು ನೂನಿಜ್ ತಿಳಿಸುತ್ತಾನೆ. ಆದರೆ ಇದರ ಸತ್ಯಾಂಶ ಸ್ಪಷ್ಟವಿಲ್ಲ.

ಕೃಷ್ಣದೇವರಾಯನಿಗೆ ಚಿನ್ನಾದೇವಿ, ತಿರುಮಲಾದೇವಿ ಎಂಬ ಇಬ್ಬರು ರಾಣಿಯರಿದ್ದರು. ಇಬ್ಬರು ಗಂಡುಮಕ್ಕಳು. ಒಬ್ಬ ತಿರುಮಲ ಕೃಷ್ಣದೇವರಾಯ ಸಾಯುವಾಗ ಹದಿನೆಂಟು ತಿಂಗಳಿನ ಕೂಸಾಗಿದ್ದವನು ಇನ್ನೊಬ್ಬ. ರಾಯನಿಗೆ ಇಬ್ಬರು ಹೆಣ್ಣು ಮಕ್ಕಳೂ ಇದ್ದರು. ಅವರಲ್ಲಿ ಹಿರಿಯಳಾದ ತಿರುಮಲಾಂಬೆಯ ಗಂಡನೇ ಅರವೀಡು ಮನೆತನದ ಅಳಿಯ ರಾಮರಾಯ. ಇವಳ ತಂಗಿ ವೇಂಗಳಾಂಬಾ, ರಾಮರಾಯನ ತಮ್ಮ ತಿರುಮಲನನ್ನು ಮದುವೆಯಾಗಿದ್ದಳು.



ಚಿನ್ನಾದೇವಿ,ಕೃಷ್ಣದೇವರಾಯ, ತಿರುಮಲಾದೇವಿ - ತಿರುಮಲೆ ದೇವಾಲಯದಲ್ಲಿರುವ ಕಂಚಿನ ಪ್ರತಿಮೆಗಳು

ಇವನು ಕವಿಪೋಷಕನೂ ಸ್ವತಃ ಕವಿಯೂ ಆಗಿದ್ದ. ಜಾಂಬವತೀ ಕಲ್ಯಾಣ ಎಂಬ ನಾಟಕ ಮತ್ತು ಇತರ ಸಂಸ್ಕೃತ ಗ್ರಂಥಗಳನ್ನೂ ಆಮುಕ್ತಮಾಲ್ಯದಾ ಎಂಬ ತೆಲುಗು ಕಾವ್ಯವನ್ನೂ ಬರೆದಿರುವನೆಂದು ಪ್ರತೀತಿ. ಇವನ ಆಸ್ಥಾನದಲ್ಲಿ ಅಷ್ಟದಿಗ್ಗಜಗಳೆನ್ನಿಸಿಕೊಂಡ ವಿವಿಧ ಭಾಷಾವಿದ್ವಾಂಸರಿದ್ದರು. ಅವರಲ್ಲಿ ಮಹಾಕವಿ ಅಲ್ಲಸಾನಿಪೆದ್ದನ ತೆಲುಗು ವಿದ್ವಾಂಸರಲ್ಲಿ ಮುಖ್ಯನಾದವನು. ಕುಮಾರವ್ಯಾಸ ಭಾರತವನ್ನು ಪೂರ್ತಿಮಾಡಿದ. (8 ಪರ್ವಗಳು) ತಿಮ್ಮಣ್ಣ ಕವಿ ಕನ್ನಡ ವಿದ್ವಾಂಸರಲ್ಲಿ ಮುಖ್ಯನಾದವನು. ಕರ್ಣಾಟ ಕೃಷ್ಣರಾಯ ಭಾರತ ಕಥಾಮಂಜರಿ ಎಂದೇ ಈ ಗ್ರಂಥವನ್ನು ಕೃಷ್ಣದೇವರಾಯನಿಗೆ ಅರ್ಪಿಸಲಾಗಿದೆ.

ಮಧ್ವ ಸಂಪ್ರದಾಯದ ಪ್ರಸಿದ್ಧ ಯತಿಗಳಾದ ವ್ಯಾಸರಾಯರು ರಾಜಗುರುಗಳಾಗಿದ್ದು ವಿಜಯನಗರದಲ್ಲಿ ವಿಶ್ವವಿದ್ಯಾಲಯವನ್ನು ನಡೆಸಿದರು. ದಾಸಶ್ರೇಷ್ಠರಾದ ಪುರಂದರದಾಸರು ದಾಸಸಾಹಿತ್ಯದ ನಿರ್ಮಾಣ ಮತ್ತು ಪ್ರಚಾರಕಾರ್ಯವನ್ನು ಈತನ ಕಾಲದಲ್ಲಿ ಮಾಡಿದರು. ಕನಕದಾಸರೂ ಈ ಕಾಲದ ಶ್ರೇಷ್ಠ ಕೀರ್ತನಕಾರರು.

ಇವನು ಅನೇಕ ಊರು, ಅಣೆಕಟ್ಟು, ನಾಲೆ, ಕೆರೆ, ದೇವಾಲಯ ಮತ್ತು ಇತರ ಕಟ್ಟಡಗಳನ್ನು ಕಟ್ಟಿಸಿದ. ನಾಗಲಾಪುರವೆಂಬ ಹೆಸರಿನಲ್ಲಿ ವಿಜಯನಗರದ ಒಂದು ವಿಸ್ತರಣೆಯನ್ನು ರೂಪಿಸಿದ. ತನ್ನ ಪಟ್ಟಾಭಿಷೇಕ ಸಂದರ್ಭದಲ್ಲಿ ವಿರೂಪಾಕ್ಷ ದೇವಾಲಯದಲ್ಲಿ ಒಂದು ಬೃಹತ್ ಮಂಟಪವನ್ನು ರಚಿಸಿದ. ಹಂಪೆಯ ಹಜಾರರಾಮ ಮತ್ತು ವಿಠ್ಠಲ ದೇವಾಲಯಗಳು ಈತನೇ ಕಟ್ಟಿಸಿದವುಗಳಿರಬಹುದು. ತನ್ನ ಉದಯಗಿರಿ ವಿಜಯದಲ್ಲಿ ಅಲ್ಲಿಂದ ತಂದ ಕೃಷ್ಣವಿಗ್ರಹವನ್ನು ಸ್ಥಾಪಿಸಲು ಹಂಪೆಯ ಕೃಷ್ಣಸ್ವಾಮಿ ದೇವಾಲಯವನ್ನು ಕಟ್ಟಿಸಿದ. ವಿಜಯನಗರದಲ್ಲಿ ಅನೇಕ ಲೋಕೋಪಯೋಗಿ ಕಟ್ಟಡಗಳನ್ನು ಕಟ್ಟಿಸಿದ್ದಲ್ಲದೆ,ಇತರ ಹಲವೆಡೆಗಳ ದೇವಾಲಯಗಳಲ್ಲಿ ರಾಯಗೋಪುರಗಳನ್ನೂ ಮಂಟಪಗಳನ್ನೂ ಕಟ್ಟಲು ಕಾರಣನಾದ.

ಪೋರ್ಚುಗೀಸ್ ಪ್ರವಾಸಿಗಳು ಕಂಡ ಆಗಿನ ವಿಜಯನಗರದ ವೈಭವದ ವರ್ಣನೆಯನ್ನು ನೀಡಿದ್ದಾರೆ. ಇವನು ಆಗಿನ ಭಾರತದಲ್ಲಿಯೇ ಏಕೆ, ಪ್ರಪಂಚದಲ್ಲೇ ಅತ್ಯಂತ ಶೂರ ಸಮರ್ಥ ಶ್ರೀಮಂತ ಮುತ್ಸದ್ದಿ, ಸಾಹಿತ್ಯ ಸಂಸ್ಕೃತಿಪ್ರಿಯ, ಸಾಮ್ರಾಟರಲ್ಲಿ ಅಗ್ರಗಣ್ಯ. ಕನ್ನಡ ರಾಜ್ಯರಮಾರಮಣ, ಆಂಧ್ರಭೋಜ, ಚತುಸ್ಸಮಯ ಸಮುದ್ಧರಣರಾಯ, ಯವನರಾಜ್ಯಪ್ರತಿಷ್ಠಾಪನಾಚಾರ್ಯ ಮುಂತಾದ ಬಿರುದುಗಳಲ್ಲಿ ಕೃಷ್ಣದೇವರಾಯನ ಬಹುಮುಖ ವ್ಯಕ್ತಿತ್ವದ ಚಿತ್ರ ಸಿಗುತ್ತದೆ. ಹಿಂದು ಧರ್ಮದ ರಕ್ಷಣೆಯೇ ಮುಖ್ಯವಾಗಿದ್ದ ಆ ಕಾಲದಲ್ಲಿ ಕೃಷ್ಣದೇವರಾಯ ಈ ಕೆಲಸವನ್ನು ಎಷ್ಟು ಸಮರ್ಥವಾಗಿ ನಿರ್ವಹಿಸಿದನೆಂದರೆ ಧರ್ಮ ನಾಲ್ಕೂ ಕಾಲುಗಳನ್ನು ಭದ್ರವಾಗಿ ಊರಿ ಗುಟುರು ಹಾಕುವ ಸಶಕ್ತ ಹೋರಿಯಂತೆ ಇದೆ ಎನ್ನುತ್ತಾನೆ ಆಗಿನ ಒಬ್ಬ ಕವಿ ಸೋಮನಾಥ. ಕೃಷ್ಣದೇವರಾಯ ತನ್ನ 42ನೆಯ ವಯಸ್ಸಿನಲ್ಲಿ 1529ರಲ್ಲಿ ನಿಧನ ಹೊಂದಿದ. (ಜೆ.ಆರ್.ಪಿ.)

**ಕೃಷ್ಣಪ್ಪ, ಬಿ. :** -1955. ಮೈಸೂರು ಮಹಾರಾಜ ಕಾಲೇಜಿನಲ್ಲಿ ಪ್ರಥಮ ಕನ್ನಡ ಪ್ರಾಧ್ಯಾಪಕರೂ ಕನ್ನಡ ಸಾಹಿತ್ಯ ಪರಿಷತ್ತಿನ ಮೊದಲ ಗೌರವ ಕಾರ್ಯದರ್ಶಿಗಳೂ ಆಗಿದ್ದು, ಕನ್ನಡ ನುಡಿ ಸೇವೆಯಲ್ಲಿ ನಿರತರಾಗಿದ್ದ ವಿದ್ವಾಂಸರು, ಮೈಸೂರಿನವರು. 1907ರಲ್ಲಿ ಬಿ.ಎ. ಪದವೀಧರರಾಗಿ ಹಳೆ ಮೈಸೂರು ಸಂಸ್ಥಾನದ ಅನೇಕ ಕಡೆಗಳಲ್ಲಿ ಏಳೆಂಟು ವರ್ಷಗಳ ಕಾಲ ಅಧ್ಯಾಪಕರಾಗಿ ಕೆಲಸ ಮಾಡಿ, 1915ರಲ್ಲಿ ಮೈಸೂರಿಗೆ ಬಂದರು. ಅಲ್ಲಿ ಕುರುಡ-ಮೂಗರ ಶಾಲೆಯ ಮುಖ್ಯೋಪಾಧ್ಯಾಯರಾದರು. ಮುಂದೆ ಕನ್ನಡ ಭಾಷೆ ಸಾಹಿತ್ಯಗಳಲ್ಲಿ ಎಂ.ಎ. ಪದವಿ ಪಡೆದು ವಿದ್ಯಾ ಇಲಾಖೆಯಲ್ಲಿ ಭಾಷಾಂತರಕಾರರಾಗಿ ಕೆಲಸ ಮಾಡಿದರು. ಅನಂತರ ಮೈಸೂರು ಮಹಾರಾಜ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾದರು.



ಬಿ.ಕೃಷ್ಣಪ್ಪನವರು ವಿದ್ಯಾದಾಯಿನಿ ಮಾಸಪತ್ರಿಕೆ ಮತ್ತು ಕರ್ಣಾಟಕ ಗ್ರಂಥಮಾಲೆ ಪತ್ರಿಕೆಗಳಿಗೆ ಕೆಲಕಾಲ ಸಂಪಾದಕರಾಗಿದ್ದರಲ್ಲದೆ, ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಉಪಾಧ್ಯಕ್ಷರೂ ಆಗಿದ್ದರು (1919-26).

ಟಿ.ಶ್ರೀನಿವಾಸ ರಾಘವಾಚಾರ್ಯರೊಡನೆ ಕೃಷ್ಣಪ್ಪನವರು ಕನ್ನಡ ಕೈಪಿಡಿಯ ಮೊದಲ ಸಂಪುಟದ ಮೊದಲನೆಯ ಭಾಗವಾದ ಹಳಗನ್ನಡ ವ್ಯಾಕರಣವನ್ನು ಬರೆದಿದ್ದಾರೆ. ಅಭಿಜ್ಞಾನ ಶಾಕುಂತಲ ನಾಟಕದ ಗದ್ಯಾನುವಾದವನ್ನೂ ವಿಮರ್ಶೆಯನ್ನೂ ಕನಕೋರ್ಣಾರ್ಜುನ ಎಂಬ, ವನಸ್ಪತಿ ಶಾಸ್ತ್ರಕ್ಕೆ ಸಂಬಂಧಿಸಿದ, ಗ್ರಂಥವನ್ನೂ ಟ್ರೋಜನ್ ದಂಡಯಾತ್ರೆ, ಯವನವೀರ ಕಥಾವಳಿ ಮೊದಲಾದ ಕಥಾಸಾಹಿತ್ಯ ಕೃತಿಗಳನ್ನೂ ಇವರು ರಚಿಸಿದ್ದಾರೆ. (ಜಿ.ಪಿ.ಎ.)

**ಕೃಷ್ಣಮೂರ್ತಿ, ಕೆ. :** 1923-97. ಸಂಸ್ಕೃತ ಭಾಷೆ ಮತ್ತು ಸಾಹಿತ್ಯಗಳ ಕ್ಷೇತ್ರಗಳಲ್ಲಿ ಚಿರಸ್ಮರಣೀಯವಾದ ಕೆಲಸಗಳನ್ನು ಮಾಡಿ ಅಂತಾರಾಷ್ಟ್ರೀಯ ಖ್ಯಾತಿಯನ್ನು ಪಡೆದ ಕರ್ನಾಟಕದ ವಿರಳ ವಿದ್ವಾಂಸರಲ್ಲಿ ಒಬ್ಬರು. ಹಾಸನ ಜಿಲ್ಲೆ ಕೇರಳಾಪುರದಲ್ಲಿ 1923 ಜುಲೈ 30ರಂದು ಜನಿಸಿದರು. ತಂದೆ ಎನ್.ವೆಂಕಟೇಶಯ್ಯ, ತಾಯಿ ಗೌರಮ್ಮ. ತಂದೆಯವರು ಸಂಸ್ಕೃತ ಪಂಡಿತರು. ಇವರು ತಂದೆಯಿಂದ ಪ್ರಭಾವಿತರಾದರು. ಇವರ ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸ ಅರಕಲಗೂಡಿನಲ್ಲಿಯೂ ಪ್ರೌಢಶಾಲೆಯ ಮತ್ತು ಕಾಲೇಜಿನ ವಿದ್ಯಾಭ್ಯಾಸ ಮೈಸೂರಿನಲ್ಲೂ ಜರುಗಿದವು (1943). ಮೈಸೂರು ವಿಶ್ವವಿದ್ಯಾನಿಲಯದಿಂದ ಉನ್ನತಶ್ರೇಣಿಯಲ್ಲಿ ಚಿನ್ನದ ಪದಕದೊಂದಿಗೆ ಸಂಸ್ಕೃತ ಎಂ.ಎ.ಪದವಿ ಪಡೆದರು. ಮುಂಬೈ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ದೊರಕಿತು (1947). ಇವರು ಬಿ.ಟಿ. ಮತ್ತು ಕನ್ನಡ ಪಂಡಿತ ಪರೀಕ್ಷೆಗಳಲ್ಲೂ ಉತ್ತೀರ್ಣರಾಗಿದ್ದರು. ಬೋಧನಾ ವೃತ್ತಿಯನ್ನು ಸ್ವೀಕರಿಸಿದ ಇವರು ಆರಂಭದ ಹದಿನೈದು ವರ್ಷ (1944-58) ಬಾಗಲಕೋಟೆ, ಮೈಸೂರು ಮತ್ತು ಕುಮಟ ಕಾಲೇಜುಗಳಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು. ಬಳಿಕ ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಸಂಸ್ಕೃತ ವಿಭಾಗದ ಮುಖ್ಯಸ್ಥರಾದರು (1959). ಅಲ್ಲಿಂದ ನಿವೃತ್ತಿ ಹೊಂದಿದ ಮೇಲೆ (1983) ಪ್ರಶಾಂತನಿಲಯದ ಶ್ರೀಸತ್ಯಸಾಯಿ ವಿಶ್ವವಿದ್ಯಾಲಯದಲ್ಲಿ ಭಾರತೀಯ ಸಂಸ್ಕೃತಿ ವಿಭಾಗದ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸಿದರು. ತರುವಾಯ ಮೈಸೂರಿನಲ್ಲಿ ನೆಲಸಿದರು.



ಪ್ರತಿಭೆ, ವ್ಯುತ್ಪತ್ತಿ ಮತ್ತು ವ್ಯಾಸಂಗಗಳ ತ್ರಿವೇಣಿ ಸಂಗಮವಾಗಿದ್ದ ಇವರು ಮಹಾನ್ ವಿದ್ವಾಂಸರಾಗಿದ್ದರು. ಸಂಸ್ಕೃತ, ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಇವರು 80ಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ವಾದಿರಾಜನ ಯಶೋಧರಚರಿತ, ಸಾಯಣನ ಸುಭಾಷಿತ, ಸುಧಾನಿಧಿ, ಆನಂದವರ್ಧನನ ಧ್ವನ್ಯಾಲೋಕ, ಕುಂತಕನ ವಕ್ರೋಕ್ತಿ ಜೀವಿತ, ಅಭಿನವಭಾರತಿಯ ಟೀಕೆಯೊಂದಿಗೆ ಭರತನ ನಾಟ್ಯಶಾಸ್ತ್ರ, ಕವಿರಾಜಮಾರ್ಗ - ಇವು ಇವರ ಸವಿಮರ್ಶ ಗ್ರಂಥ ಸಂಪಾದನ ಕೃತಿಗಳು, ಬುದ್ಧಚರಿತ, ನಾಗಾನಂದ, ರತ್ನಾವಳಿ, ಮಾಲವಿಕಾಗ್ನಿಮಿತ್ರ, ಉತ್ತರರಾಮಚರಿತ - ಇವು ಇವರು ಪ್ರಕಟಿಸಿದ ಇತರ ಸಂಸ್ಕೃತ ಕೃತಿಗಳು. ಕನ್ನಡ ಪ್ರತಿಮಾ ನಾಟಕ, ಕನ್ನಡ ಕಿರಾತಾರ್ಜುನೀಯ, ಕನ್ನಡ ಮೃಚ್ಛಕಟಿಕ, ಕನ್ನಡ ಉತ್ತರರಾಮಚರಿತ, ಕನ್ನಡ ಯಜ್ಞಫಲ, ಮತ್ತು ಭಾಸನ ಆರು ನಾಟಕಗಳು - ಇವು ಇವರ ಕೆಲವು ಕನ್ನಡ ಅನುವಾದಗಳು. ಕನ್ನಡ ಕಾವ್ಯಾಲಂಕಾರ ಕನ್ನಡ ಕಾವ್ಯಪ್ರಕಾಶ, ಕನ್ನಡ ಧ್ವನ್ಯಾಲೋಕಲೋಚನ ಮತ್ತು ಲೋಚನಸಾರ, ವಾಮನನ ಕಾವ್ಯಾಲಂಕಾರ ಸೂತ್ರವೃತ್ತಿ, ಕನ್ನಡ

ಕಾವ್ಯಮೀಮಾಂಸೆ ಮತ್ತು ಔಚಿತ್ಯ ವಿಚಾರ ಚರ್ಚೆ ಇವು ಕಾವ್ಯಮೀಮಾಂಸೆಯ ಗ್ರಂಥಾನುವಾದಗಳು. ಆನಂದವರ್ಧನನ ಕಾವ್ಯಮೀಮಾಂಸೆ, ಕನ್ನಡದಲ್ಲಿ ಕಾವ್ಯತತ್ತ್ವ, ರಸೋಲ್ಲಾಸ, ಸೃಜನಶೀಲತೆ ಮತ್ತು ಪಾಂಡಿತ್ಯ, ಸಮ್ ಥಾಟ್ಸ್ ಆನ್ ಇಂಡಿಯನ್ ಏಸ್ತೆಟಿಕ್ಸ್ ಅಂಡ್ ಲಿಟರರಿ ಕ್ರಿಟಿಸಿಸಂ, ದಿ ಧ್ವನ್ಯಾಲೋಕ ಅಂಡ್ ಇಟ್ಸ್ ಕ್ರಿಟಿಕ್ಸ್, ಭಾರತೀಯ ಕಾವ್ಯಮೀಮಾಂಸೆ ತತ್ತ್ವ ಮತ್ತು ಪ್ರಯೋಗ, ಎಸ್ಸೇಸ್ ಇನ್ ಸಂಸ್ಕೃತ್ ಕ್ರಿಟಿಸಿಸಂ, ನ್ಯೂ ಬೇರಿಂಗ್ಸ್ ಆಫ್ ಲಿಟರರಿ ಥಿಯರಿ ಅಂಡ್ ಕ್ರಿಟಿಸಿಸಂ ಇವರ ಕಾವ್ಯತತ್ತ್ವ ವಿಮರ್ಶನ ಪುಸ್ತಕಗಳು. ಇವುಗಳಲ್ಲದೆ ಭವಭೂತಿ, ಕಾಳಿದಾಸ, ಪಾಣಿನಿ, ಬಾಣ ಮತ್ತು ಭಾಸನ ಮೇಲೆ ಪರಿಚಯಾತ್ಮಕ ಹೊತ್ತಗೆಗಳನ್ನೂ ರಚಿಸಿದ್ದಾರೆ. ಹಿಂದೂಸ್ಥಾನ್ ಕ್ವಾರ್ಟರ್ಲಿ, ಇಂಡಿಯನ್ ಹಿಸ್ಟಾರಿಕಲ್ ಕ್ವಾರ್ಟರ್ಲಿ, ಅನಾಲ್ಸ್ ಆಫ್ ಭಂಡಾರ್ಕರ್ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್, ಪೂನಾ ಓರಿಯಂಟಲಿಸ್ಟ್, ಆರ್ಯನ್‌ಪಾತ್ ಮುಂತಾದ ವಿದ್ವತ್ಪತ್ರಿಕೆಗಳಲ್ಲಿ 300 ಸಂಪ್ರಬಂಧಗಳನ್ನು ಇವರು ಪ್ರಕಟಿಸಿದ್ದಾರೆ. ಕನ್ನಡದಲ್ಲಿ 16ಕ್ಕೂ ಹೆಚ್ಚು ಗ್ರಂಥ, 20ಕ್ಕೂ ಹೆಚ್ಚು ಅನುವಾದ, 60ಕ್ಕೂ ಹೆಚ್ಚು ಲೇಖನಗಳನ್ನು ಪ್ರಕಾಶಿಸಿದ್ದಾರೆ. ವಿವಿಧ ಪತ್ರಿಕೆಗಳಲ್ಲಿ 500ಕ್ಕೂ ಹೆಚ್ಚು ಪುಸ್ತಕಗಳನ್ನು ವಿಮರ್ಶಿಸಿದ್ದಾರೆ.

ಇವರು ಪಿ.ವಿ.ಕಾಣೆ, ಎಸ್.ಕೆ.ಡೇ, ವಿ.ರಾಘವನ್ ಅವರ ಸಾಲಿನ ವಿದ್ವಾಂಸರು. ಆರ್.ಶಾಮಶಾಸ್ತ್ರಿ ಮತ್ತು ಎಂ.ಹಿರಿಯಣ್ಣ ನವರ ಅನಂತರ ಅಂತಾರಾಷ್ಟ್ರೀಯ ಮಟ್ಟದಲ್ಲಿ ಕರ್ನಾಟಕದ ಕೀರ್ತಿಯನ್ನು ಎತ್ತಿಹಿಡಿದವರು. ಕನ್ನಡಕ್ಕೆ ಇವರ ಕೊಡುಗೆ ತುಂಬ ದೊಡ್ಡದು. ಇವರು ಕನ್ನಡಿಸದ ಮುಖ್ಯ ಸಂಸ್ಕೃತ ಅಲಂಕಾರ ಗ್ರಂಥ'ವೇ ಇಲ್ಲವೆನ್ನಬಹುದು. ಶಾಸ್ತ್ರಗ್ರಂಥಗಳನ್ನು ಅನುವಾದಿಸಿರುವುದೂ ಜೊತೆಗೆ ಪದ್ಯವನ್ನು ಪದ್ಯವಾಗಿ ಅನುವಾದಿಸಿರುವುದೂ ಇವರ ಭಾಷಾಂತರದ ವಿಶೇಷತೆ ಎನ್ನಬೇಕು. ತದೇಕಚಿತ್ತದ ಇವರ ದುಡಿಮೆಯುಲ್ಲಿ ಹಳತೂ ಹೊಸತೂ ಪೂರ್ವ ಪಶ್ಚಿಮಗಳೂ ಸಂಗಮಿಸಿವೆ. ಇವರ ಅನನ್ಯವಾದ ವಿದ್ವತ್ತಿನಲ್ಲಿ ಆಳ-ಅಗಲಗಳಿರುವಂತೆ, ಒಳನೋಟ-ಖಚಿತತೆಗಳಿವೆ.

ಇವರ ಪಾಂಡಿತ್ಯಕ್ಕಾಗಿ, ಸಂಸ್ಕೃತ ಕನ್ನಡ ಸಾಹಿತ್ಯಗಳಿಗೆ ಇವರು ಸಲ್ಲಿಸಿದ ಸೇವೆಗಾಗಿ ಇವರಿಗೆ ಅನೇಕ ಪ್ರಶಸ್ತಿಗಳೂ ಬಹುಮಾನಗಳೂ ಸಂದಿವೆ. ಕೇರಳ ವಿಶ್ವವಿದ್ಯಾಲಯದ ಸೇತು ಪಾರ್ವತಿ ಪುರಸ್ಕಾರ (1964), ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣ ಮಹೋತ್ಸವ ಪ್ರಶಸ್ತಿ (1970, 1980), ಮೈಸೂರು ಸರ್ಕಾರದ ಸಾಹಿತ್ಯ ಬಹುಮಾನ (1972), ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1973), ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವ ಗೌರವ (1977), ಭಾರತ ಸರ್ಕಾರದ ರಾಷ್ಟ್ರಪತಿಗಳ ಸರ್ಟಿಫಿಕೇಟ್ ಆಫ್ ಆನರ್ (1978), ಮುಂಬಯಿಯ ಕಾಣೆ ಚಿನ್ನದ ಪದಕ (1980), ಉತ್ತರ ಪ್ರದೇಶದ ಸಂಸ್ಕೃತ ಅಕಾಡೆಮಿ ಪ್ರಶಸ್ತಿ (1985), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1990) ಇವು ಉಲ್ಲೇಖಿಸಬಹುದಾದವು. ಇಂಗ್ಲಿಷಿನಲ್ಲಿ ಆನಂದಭಾರತಿ, ಕನ್ನಡದಲ್ಲಿ ಅಭಿಜ್ಞಾನ ಎಂಬ ಅಭಿನಂದನ ಗ್ರಂಥಗಳನ್ನು ಇವರ ಶಿಷ್ಯರೂ ಸ್ನೇಹಿತರೂ ಅಭಿಮಾನಿಗಳೂ ಇವರಿಗೆ ಅರ್ಪಿಸಿದ್ದಾರೆ (1995). ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟು, ಸಮಿತಿ, ಗೋಕಾಕ್ ವರದಿ ಸಮಿತಿ, ಡಿಕ್ಷನರಿ ಆಫ್ ಅಲಂಕಾರಶಾಸ್ತ್ರ ಸಮಿತಿ, ಭಾರತೀಯ ಜ್ಞಾನಪೀಠದ ಸಂಸ್ಕೃತ ಆಯ್ಕೆ ಸಮಿತಿಗಳಲ್ಲಿ ಇವರು ಸದಸ್ಯರಾಗಿದ್ದರು. ಲಂಡನ್ನಿನ ಭಾರತೀಯ ವಿದ್ಯಾಭವನದ ಶಾಖೆಯಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಇವರು ಕೆಲಕಾಲ ಕೆಲಸ ಮಾಡಿದ್ದರು (1990). ಇವರು 1997 ಜುಲೈ 19ರಂದು ನಿಧನಹೊಂದಿದರು. (ಎನ್.ಎಸ್.ಟಿ.)

**ಕೃಷ್ಣಮೂರ್ತಿ,ಪಿ.ಎನ್. :** 1849-1911. ಮೈಸೂರು ಸಂಸ್ಥಾನದ ದಿವಾನರು (1901-06). ಪೂರ್ಣಯ್ಯ ನರಸಿಂಗರಾವ್ ಕೃಷ್ಣಮೂರ್ತಿ ಇವರ ಪೂರ್ಣನಾಮ. ಇವರು ದಿವಾನ್ ಪೂರ್ಣಯ್ಯನವರ ಸಂತತಿಯವರು. ಅವರಿಂದ ನಾಲ್ಕನೆಯ ತಲೆಮಾರಿನವರಾದ ಇವರು 1849ರ ಆಗಸ್ಟ್ 12ರಂದು ಜನಿಸಿದರು. ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮುಗಿಸಿ ಮದರಾಸು ವಿಶ್ವವಿದ್ಯಾಲಯದಿಂದ ನ್ಯಾಯಶಾಸ್ತ್ರದಲ್ಲಿ ಪದವಿ ಪಡೆದು, ಅನಂತರ ಮೈಸೂರಿನಲ್ಲಿ ಅಸಿಸ್ಟೆಂಟ್ ಸೂಪರಿಂಟೆಂಡೆಂಟರಾಗಿ ಸರ್ಕಾರದ ಸೇವೆಗೆ ಸೇರಿದರು (1870). ಕ್ರಮ ಕ್ರಮವಾಗಿ ಮೇಲೇರುತ್ತ ಮುಖ್ಯ ನ್ಯಾಯಾಧೀಶರಾಗಿಯೂ ಕೌನ್ಸಿಲ್ ಆಫ್ ರೀಜೆನ್ಸಿಯ ಸದಸ್ಯರಾಗಿಯೂ ಇದ್ದರು. ಸರ್.ಕೆ.ಶೇಷಾದ್ರಿ ಅಯ್ಯರ್ ಅವರು ದಿವಾನ್ ಪದವಿಯಿಂದ ನಿವೃತ್ತರಾಗಲು 1901ರಲ್ಲಿ ಕೃಷ್ಣಮೂರ್ತಿಯವರು ಆ ಪದವಿಗೆ ನೇಮಿಸಲ್ಪಟ್ಟರು. 1902ರಲ್ಲಿ ರೀಜೆನ್ಸಿ ಕೊನೆಗೊಂಡು ನಾಲ್ವಡಿ ಕೃಷ್ಣರಾಜ ಒಡೆಯರು ಸ್ವತಃ ರಾಜ್ಯಭಾರ ವಹಿಸಿಕೊಂಡಾಗ ಇವರು ಅವರ ಮೊದಲನೆಯ ದಿವಾನರಾದರು.

ಇವರ ದಿವಾನ್‌ಗಿರಿಯಲ್ಲಿ ಗ್ರಾಮಾಭಿವೃದ್ಧಿ, ವಿದ್ಯಾಭ್ಯಾಸ, ನೀರಾವರಿ ಕಾಮಗಾರಿಗಳು ಅಭಿವೃದ್ಧಿಗೊಂಡವು. ಇವರು ರಾಜ್ಯದ ಹಣಕಾಸು ಪರಿಸ್ಥಿತಿಯನ್ನು ಕ್ರಮಪಡಿಸಿ ಆ ಶಾಖೆಗೆ ಕಂಟ್ರೋಲರ್ ಎಂಬ ಅಧಿಕಾರಿಯನ್ನು ನೇಮಕ ಮಾಡಿದರು. ನೇಯ್ಗೆ, ರೇಷ್ಮೆ ವ್ಯವಸಾಯ, ಮರದ ಕೆಲಸ ಮುಂತಾದ ಗ್ರಾಮೀಣ ಕೈಗಾರಿಕೆಗಳ ಅಭಿವೃದ್ಧಿಗಾಗಿ ನೂತನ ವಿಧಾನಗಳನ್ನೊಳಗೊಂಡ ತರಬೇತಿನೀಡಲು ಚನ್ನಪಟ್ಟಣವೇ ಮೊದಲಾದ ಹಲವೆಡೆಗಳಲ್ಲಿ ವೃತ್ತಿ ಶಿಕ್ಷಣ ಶಾಲೆಗಳನ್ನೇರ್ಪಡಿಸುವ ವ್ಯವಸ್ಥೆ ಮಾಡಿದರು. ಲಂಬಾಣಿಗಳೇ ಮುಂತಾದ ಹಿಂದುಳಿದ ವರ್ಗಗಳಿಗೆ ಶಾಲೆಗಳನ್ನು ಏರ್ಪಡಿಸಿದರು. 1902-3ರಲ್ಲಿ ಅಲಿಘರ್ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡಲು ಎರಡು ವಿದ್ಯಾರ್ಥಿ ವೇತನಗಳನ್ನು ಕೊಟ್ಟರು. ಮೈಸೂರು ಮಹಾರಾಣಿ ಶಾಲೆಯನ್ನು ಕಾಲೇಜನ್ನಾಗಿ ಮಾಡಿ ಸ್ತ್ರೀ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಕೊಟ್ಟರು. ಅಲ್ಲದೆ ವಿಧವೆಯರ ವಿದ್ಯಾಭ್ಯಾಸಕ್ಕೆ ಮೂವತ್ತು ವಿದ್ಯಾರ್ಥಿವೇತನಗಳನ್ನು ಒದಗಿಸಿದರು. ಇವರು ಬೆಂಗಳೂರಿನಲ್ಲಿ ಟಾಟಾ ವಿಜ್ಞಾನಮಂದಿರದ ಸ್ಥಾಪನೆಗೆ ನೆರವಾಗಿ, ಪ್ರತಿವರ್ಷವೂ ಮೈಸೂರು ಸರ್ಕಾರ 50ಸಾವಿರ ರೂಪಾಯಿ ಧನಸಹಾಯವನ್ನು ಕೊಡುವಂತೆ ಏರ್ಪಾಡು ಮಾಡಿದರು. 1903ರಲ್ಲಿ 8 ಜಿಲ್ಲಾ ಬೋರ್ಡುಗಳು ಮತ್ತು 77 ತಾಲ್ಲೂಕು ಬೋರ್ಡುಗಳು ಮತ್ತು 38 ಯೂನಿಯನ್ನುಗಳನ್ನು ಸ್ಥಾಪಿಸಿ ಸ್ಥಳೀಯ ಸಂಸ್ಥೆಗಳನ್ನು ಪ್ರೋತ್ಸಾಹಿಸಿದರು.



ಕೋಲಾರ ಚಿನ್ನದ ಗಣಿ ಪ್ರದೇಶಕ್ಕೆ ನೀರು ಸರಬರಾಜು ವ್ಯವಸ್ಥೆ, ಮೈಸೂರು ಅರಮನೆಯ ಪುನರ್ನಿರ್ಮಾಣ, ಕಾವೇರಿ ವಿದ್ಯುತ್ ಯೋಜನೆಯ ಮೊದಲ ಹಂತದ ಪೂರೈಕೆ ಮತ್ತು ಎರಡನೆಯ ಹಂತದ ಆರಂಭ ಇವರ ಕಾಲದಲ್ಲಾದವು. ಬೆಂಗಳೂರು ನಗರಕ್ಕೆ ವಿದ್ಯುತ್ ಸರಬರಾಜನ್ನು ಒದಗಿಸಿ ಅದು ಇಡೀ ಭಾರತದಲ್ಲೇ ವಿದ್ಯುದೀಕರಣವಾದ ಮೊದಲ ನಗರವೆಂಬ ಹೆಮ್ಮೆ ಗಳಿಸಲೂ ಕೃಷ್ಣಮೂರ್ತಿಯವರು ಕಾರಣರಾದರು. ಇವರು 1906ರ ಮಾರ್ಚ್ 30ರಂದು ದಿವಾನ್ ಪದವಿಯಿಂದ ನಿವೃತ್ತರಾದರು. 1911ರಲ್ಲಿ ನಿಧನಹೊಂದಿದರು.

ಇವರ ಬಹುಮುಖ ಸೇವೆಗಾಗಿ ಬ್ರಿಟಿಷ್ ಸರ್ಕಾರ ಇವರಿಗೆ ಸಿ.ಐ.ಇ. (1897) ಮತ್ತು ಕೆ.ಸಿ.ಐ.ಇ. (1903) ಪ್ರಶಸ್ತಿಗಳನ್ನು ನೀಡಿತ್ತು. (ಎ.ವಿ.ವಿ.)

**ಕೃಷ್ಣಮೂರ್ತಿರಾವ್, ಎಸ್.ವಿ. :** 1902-68. ರಾಜಕಾರಣಿ ಮತ್ತು ಲೇಖಕರು. ಸಂತೆಬೆನ್ನೂರು ವಾದಿರಾಯಾಚಾರ್ ಕೃಷ್ಣಮೂರ್ತಿರಾವ್ ಇವರ ಪೂರ್ಣ ಹೆಸರು. ಶಿವಮೊಗ್ಗ ಜಿಲ್ಲೆಯ ನಲ್ಲೂರಿನಲ್ಲಿ 1902 ನವೆಂಬರ್ 15ರಂದು ಜನಿಸಿದರು. ಶಿವಮೊಗ್ಗ, ತುಮಕೂರುಗಳಲ್ಲಿ ವಿದ್ಯಾಭ್ಯಾಸ ಮಾಡಿ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎಸ್‌ಸಿ. ಪದವಿಯನ್ನೂ ಪುಣೆಯ ಲಾ ಕಾಲೇಜಿನಲ್ಲಿ ಎಲ್.ಎಲ್.ಬಿ. ಪದವಿಯನ್ನೂ ಗಳಿಸಿ 1927ರಲ್ಲಿ ವಕೀಲಿ ವೃತ್ತಿ ಕೈಗೊಂಡು ಶಿವಮೊಗ್ಗದಲ್ಲಿ ನೆಲೆಸಿದರು.

ಕೃಷ್ಣಮೂರ್ತಿರಾಯರು ಕಾಂಗ್ರೆಸ್ಸಿನ ಸದಸ್ಯರಾಗಿ, ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ಸೆರೆಮನೆ ಶಿಕ್ಷೆ ಅನುಭವಿಸಿದರು. 1945ರಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರು. 1947ರಲ್ಲಿ ವಿಧಾನಸಭೆಯ ಸದಸ್ಯರಾಗಿಯೂ 1947-52ರವರೆಗೆ ಭಾರತ ಸಂವಿಧಾನ ಸಭೆಯ ಸದಸ್ಯರಾಗಿಯೂ ತಾತ್ಕಾಲಿಕ ಲೋಕಸಭೆಯ ಸದಸ್ಯರಾಗಿಯೂ ಇದ್ದು 1952-62ರ ಅವಧಿಯಲ್ಲಿ ರಾಜ್ಯಸಭೆಯ ಸದಸ್ಯರಾಗಿ, 1962-67 ರಲ್ಲಿ ಲೋಕಸಭೆಯ ಸದಸ್ಯರಾಗಿದ್ದರು. 1952-62 ರವರೆಗೆ ರಾಜ್ಯ ಸಭೆಯ ಅಧ್ಯಕ್ಷರಾಗಿ ಮತ್ತು 1962-67ರ ವರೆಗೆ ಲೋಕಸಭೆಯ ಉಪಾಧ್ಯಕ್ಷರಾಗಿ ಸೇವೆಸಲ್ಲಿಸಿದರು. ಇದರೊಂದಿಗೆ ಅನೇಕ ಸ್ಥಾಯಿ ಸಮಿತಿಗಳ ಅಧ್ಯಕ್ಷರಾಗಿ, ಸದಸ್ಯರಾಗಿ ಕಾರ್ಯನಿರ್ವಹಿಸಿದರು.

ಇವರು ಅನೇಕ ಸಂಸದೀಯ ನಿಯೋಗಗಳ ನೇತಾರರಾಗಿ ರಷ್ಯ, ಚೀನ, ಇಂಗ್ಲೆಂಡ್, ಆಸ್ಟ್ರೇಲಿಯ ಮತ್ತು ನ್ಯೂಜಿಲೆಂಡ್ ಮುಂತಾದ ರಾಷ್ಟ್ರಗಳಿಗೆ ಭೇಟಿ ಕೊಟ್ಟಿದ್ದರು.

ಕೃಷ್ಣಮೂರ್ತಿರಾಯರು ಸ್ವಯಂ ಲೇಖಕರೂ ಭಾಷಾಭಿಮಾನಿಯೂ ಆಗಿದ್ದರು, ಶಿವಮೊಗ್ಗದ ಕರ್ಣಾಟಕ ಸಂಘವನ್ನು ಕಟ್ಟಿ ಅದರ ಕಾರ್ಯದರ್ಶಿಯಾಗಿ ಕೆಲಸ ಮಾಡಿದರು. ಈ ಸಂಘ ಕನ್ನಡದ ಶ್ರೇಷ್ಠ ಸಾಹಿತ್ಯ ಕೃತಿಗಳನ್ನು ಪ್ರಕಟಿಸಿತು. ಎ.ಆರ್.ಕೃಷ್ಣಶಾಸ್ತ್ರಿಗಳು ಪ್ರಬುದ್ಧ ಕರ್ಣಾಟಕದಲ್ಲಿ ಹೇಳಿದಂತೆ ಕನ್ನಡಕ್ಕೆ ಒಂದು ಗುಡಿಯನ್ನು ಕಟ್ಟಿತು. ಇವರು ಸಾಹಿತ್ಯ ಪರಿಷತ್ತಿನ ಸದಸ್ಯರಾಗಿದ್ದರು. ದೆಹಲಿಯಲ್ಲಿ ಕನ್ನಡ ಸಂಘಕ್ಕೆ ನಿವೇಶನ ಒದಗಿಸಿಕೊಟ್ಟು ಸಂಸ್ಥೆ ಕಟ್ಟಿದರು. ಇವರು ಎಂ.ವಿಶ್ವೇಶ್ವರಯ್ಯನವರ 'ಪ್ಲಾನ್ಡ್ ಎಕಾನಮಿ ಫಾರ್ ಇಂಡಿಯ' ಗ್ರಂಥವನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. 'ದಕ್ಷಿಣಆಫ್ರಿಕಾದಲ್ಲಿ ಸತ್ಯಾಗ್ರಹ', 'ಮಹಿಳೆಯರಿಗೆ' ಈ ಎರಡು ಗ್ರಂಥಗಳೂ ಗಾಂಧೀ ಸಾಹಿತ್ಯದ ಅನುವಾದಗಳು. ಜವಾಹರಲಾಲ ನೆಹರೂ ಅವರ 'ದಿ ಡಿಸ್ಕವರಿ ಆಫ್ ಇಂಡಿಯ'ವನ್ನು ಭಾರತ ದರ್ಶನ ಎಂದು ಅನುವಾದಿಸಿದ್ದಾರೆ. ದೆಹಲಿಯಿಂದ ತಮ್ಮ ಮಗಳಿಗೆ ಬರೆದ ಪತ್ರಗಳನ್ನು ದಿಲ್ಲಿಯ ಪತ್ರಗಳು ಎಂದು ಪ್ರಕಟಿಸಿದ್ದಾರೆ. ಇವರ ಸ್ವತಂತ್ರ ಕೃತಿ ಲೂಯಿಪಾಶ್ಚರ್ ಆಕರ್ಷಣೀಯವಾಗಿ ನಿರೂಪಿತವಾಗಿರುವ ಜೀವನ ಕಥೆ. ಆಂಟೊನಿನ ವ್ಯಾಲೆಂಟಿನ ಅವರು ಐನ್‌ಸ್ಟೈನ್‌ನ ವಿಚಾರವಾಗಿ ಬರೆದ ನಾಟಕವನ್ನು ಕನ್ನಡಕ್ಕೆ ತಂದಿದ್ದಾರೆ. ಇವರು ಅಕ್ಟೋಬರ್ 1968ರಲ್ಲಿ ದೆಹಲಿಯಲ್ಲಿ ನಿಧನಹೊಂದಿದರು. (ಕೆ.ಪಿ.)

**ಕೃಷ್ಣಮೂರ್ತಿ ಪುರಾಣಿಕ :** 1911-85. ಕನ್ನಡದ ಜನಪ್ರಿಯ ಕಾದಂಬರಿಕಾರರು. 1911, ಸೆಪ್ಟೆಂಬರ್ 5ರಂದು ಬಿಜಾಪುರ ಜಿಲ್ಲೆಯ ಬಿಳಗಿಯಲ್ಲಿ ಜನಿಸಿದರು. ತಂದೆ ತಮ್ಮಣ್ಣ ಭಟ್ಟ, ತಾಯಿ ಲಕ್ಷ್ಮೀಬಾಯಿ. ಪುರಾಣಿಕರು ಮುಲ್ಕಿ ಪರೀಕ್ಷೆ ಮುಗಿಸಿ ಬಾಗಲಕೋಟೆಯ ಬಸವೇಶ್ವರ ಪ್ರೌಢಶಾಲೆಯಲ್ಲಿ ಓದು ಮುಂದುವರಿಸಿದರು. ಆಗಲೇ ಇವರು ಕವನ ರಚಿಸತೊಡಗಿದ್ದರು. ಇವರ ಪ್ರತಿಭೆಯನ್ನು ಯಲಗುರ್ದರಾವ್ ಧಾರವಾಡಕರರು ಗುರುತಿಸಿ ಇವರನ್ನು ಪ್ರೋತ್ಸಾಹಿಸಿದರು. ಮಂಗಳವೇಡೆ ಶ್ರೀನಿವಾಸರಾಯರು, ಪ್ರಕಟಿಸುತ್ತಿದ್ದ 'ಕನ್ನಡಿಗ' ಪತ್ರಿಕೆಗೂ ಅಲ್ಲಿಂದಲೇ ಹೊರಡುತ್ತಿದ್ದ 'ಕರ್ನಾಟಕ ವೈಭವ'ಕ್ಕೂ ಇವರು ಲೇಖನ ಬರೆಯುತ್ತಿದ್ದರು. ಆಗ ಇವರು ಅನೇಕ ರಾಷ್ಟ್ರಪ್ರೇಮದ ಕವನಗಳನ್ನು ರಚಿಸತೊಡಗಿದ್ದರು. ಗೆಳೆಯರೊಂದಿಗೆ ಬಲಭೀಮ ವಾಚನಾಲಯ ಕಟ್ಟಿದರು. ಭಾರತದ ಸ್ವಾತಂತ್ರ್ಯ ಸಂಗ್ರಾಮ ಆಗ ಬಿರುಸಾಗತೊಡಗಿತ್ತು. ರಾಷ್ಟ್ರೀಯ ಭಾವನೆಯಿಂದ ಉದ್ದೀಪಿತರಾದ ಇವರು ಶಾಲೆಯಲ್ಲಿ ರಾಷ್ಟ್ರೀಯ ವಿಚಾರ ಜಾಗೃತಿಗೆ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದರು. ಒಮ್ಮೆ ಶಾಲಾ ಇನ್‌ಸ್ಪೆಕ್ಟರರು ಶಾಲೆಗೆ ಬಂದಿದ್ದಾಗ ಅಲ್ಲಿ ತೂಗುಹಾಕಿದ್ದ ಜಾರ್ಜ್ ಬಾದಶಹ ಮತ್ತು ವಿಕ್ಟೋರಿಯ ರಾಣಿಯ ಚಿತ್ರಗಳನ್ನು ಇವರು ತೆಗೆದುಹಾಕಿ ಗಾಂಧೀಜಿ ಮತ್ತು ನೆಹರೂ ಚಿತ್ರಗಳನ್ನು ತೂಗು ಹಾಕಿ ಇನ್‌ಸ್ಪೆಕ್ಟರ್‌ರ ಅಸಮಾಧಾನಕ್ಕೆ ಕಾರಣರಾದರು. ಜಾರ್ಜ್ ಚಕ್ರವರ್ತಿಯ ಚಿತ್ರವನ್ನು ಸುಟ್ಟು ಹಾಕಲಾಗಿದೆಯೆಂಬ ದೂರು ಪೋಲಿಸರನ್ನು ಮುಟ್ಟಿತು. ಅವರು ಪುರಾಣಿಕರನ್ನು ದಸ್ತಗಿರಿ ಮಾಡಿದರು. ಜಾರ್ಜರ ಚಿತ್ರವನ್ನು ಸುಟ್ಟು ಹಾಕಲಿಲ್ಲವೆಂದು ಶಾಲೆಯ ಮುಖ್ಯೋಪಾಧ್ಯಾಯರಾದ ಎಚ್.ಎಫ್.ಕಟ್ಟೀಮನಿ ಯವರು ಸಾಕ್ಷಿ ಹೇಳಿ ಇವರನ್ನು ಬಿಡಿಸಿದರು.

ಇವರು ಸುಶ್ರಾವ್ಯವಾಗಿ ಹಾಡುತ್ತಿದ್ದರು. ಇವರು ಗೆಳೆಯರನ್ನು ಕೂಡಿಸಿ ರಾಷ್ಟ್ರಭಕ್ತಿಯ ಹಾಡು ಹಾಡಿ ಕೊನೆಯಲ್ಲಿ ಭಾರತ ಮಾತಾ ಕಿ ಜೈ ಎಂದು ಘೋಷಣೆ ಕೂಗಿಸುತ್ತಿದ್ದರು. ಒಂದು ದಿನ ಪೋಲೀಸ್ ಸಬ್‌ಇನ್‌ಸ್ಪೆಕ್ಟರರು ಪುರಾಣಿಕರ ವರ್ತನೆಯ ಬಗ್ಗೆ ಅವರ ತಂದೆಗೆ



ದೂರು ನೀಡಿದರು. ಇಂಥ ನಡತೆಯನ್ನು ತಿದ್ದಿಕೊಳ್ಳದಿದ್ದರೆ ಬಂಧಿಸುವುದಾಗಿ ಎಚ್ಚರಿಸಿದರು. ಆದರೆ ಪುರಾಣಿಕರು ಇದಕ್ಕೆ ಹೆದರಲಿಲ್ಲ. ಸ್ವಾತಂತ್ರ್ಯಯೋಧ ಹನುಮಂತರಾವ್ ಕೌಜಲಗಿ ಯವರ ಸಂಪರ್ಕ ಪಡೆದು ಅವರೊಂದಿಗೆ ಕೆರೂರು ಬಳಿಯ ಮುಗುಟಗೇರಿಯಲ್ಲಿ ಸೇಂದಿಗಿಡ (ಈಚಲುಮರ) ಕಡಿಯುವ ಸತ್ಯಾಗ್ರಹದಲ್ಲಿ ಭಾಗವಹಿಸಿದರು. ಸತ್ಯಾಗ್ರಹ ಮಾಡಿ ದಣಿದ ಹುಡುಗರು ಮನೆ ಮನೆಗೆ ಹೋಗಿ ಕದನ್ನ ಬೇಡಿ ತಂದು ಹಸಿವೆ ಹಿಂಗಿಸಿಕೊಳ್ಳುತ್ತಿದ್ದರು. ಆದರೆ ಮುಖ್ಯ ಶಿಬಿರದಲ್ಲಿದ್ದವರು ಮೃಷ್ಟಾನ್ನ ಉಣ್ಣುವುದನ್ನು ನೋಡಿ ಕಿಡಿಕಾರಿದರು. ಚಹದಂಗಡಿಗೆ ಹೋಗುವುದೂ ಆಗ ಹಿರಿಯರ ದೃಷ್ಟಿಯಲ್ಲಿ ಒಂದು ಅಪರಾಧವಾಗಿತ್ತು.

ಮುಂದೆ ಪುರಾಣಿಕರು ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಓದು ಮುಂದುವರಿಸಿದರು. ವಿದ್ಯಾರ್ಥಿನಿಲಯದ ಶುಲ್ಕ ತುಂಬಲಾಗದೆ ಇವರು ವಿದ್ಯಾರ್ಥಿಗಳಿಗೆ ಉಣಬಡಿಸುವ ಕೆಲಸವಮಾಡುತ್ತಿದ್ದರು. ಆ ಕಾಲದಲ್ಲಿ ಇವರು ಭಾಷಣ, ಪ್ರಬಂಧ, ಲೇಖನ ಮುಂತಾದ ಸ್ಪರ್ಧೆಗಳಲ್ಲಿ ಸ್ಪರ್ಧಿಸಿ ಅನೇಕ ಬಹುಮಾನ ಪಡೆದರು.

ಇವರು ತಮ್ಮ 23ನೆಯ ವಯಸ್ಸಿನಲ್ಲಿ ಅಕ್ಕ ಅಬಚಿತಾಯಿಯ ಮಗಳು ಗಂಗಾ ಅವರನ್ನು ಮದುವೆಯಾದರು (1935). ಇವರಿಗೆ 4 ಹೆಣ್ಣು, 3 ಗಂಡು ಮಕ್ಕಳು. ಪುರಾಣಿಕರು ಪದವೀಧರರಾಗಿ ಗೋಕಾಕ ಪುರಸಭಾ ಪ್ರೌಢಶಾಲೆಯಲ್ಲಿ ಸು.35 ವರ್ಷಗಳಕಾಲ ಶಿಕ್ಷಕರಾಗಿ ಸೇವೆ ಸಲ್ಲಿಸಿದರು (1936-71). ಕಥೆಗಾರರಾಗಿಯೂ ಕಾದಂಬರಿಕಾರರಾಗಿಯೂ ಕವಿಯಾಗಿಯೂ ಅಪಾರ ಜನಪ್ರಿಯತೆಗಳಿಸಿದರು. ರಾಮೂನ ಕತೆಗಳು - ಇವರ ಮೊದಲ ಕಥಾ ಸಂಗ್ರಹ (1946), ಮೊದಲ ಕವನಸಂಗ್ರಹ ಬಾಳಕನಸು' (1947). ಮೊದಲ ಕಾದಂಬರಿ 'ಮುಗಿಲ ಮಲ್ಲಿಗೆ' (1948). ಇವರು 80 ಕಾದಂಬರಿಗಳನ್ನೂ 14 ಕಥಾಸಂಗ್ರಹಗಳನ್ನೂ 3 ಕವನ ಸಂಕಲನಗಳನ್ನೂ 11 ಸರಳ ರಗಳೆಯ ಸಂಗ್ರಹಗಳನ್ನೂ ಅನೇಕ ಮಕ್ಕಳ ಪುಸ್ತಕಗಳನ್ನೂ ಪ್ರಕಟಿಸಿದ್ದಾರೆ. ಇವರ ಕೃತಿಗಳ ಒಟ್ಟು ಸಂಖ್ಯೆ 116.

ಇವರ ಕಾದಂಬರಿಗಳಲ್ಲಿ ಮುಗಿಲ ಮಲ್ಲಿಗೆ, ಮುತ್ತೈದೆ, ಭಾಗೀರಥಿ, ಬೆವರಿನ ಬೆಲೆ, ವೇಷಧಾರಿ, ಧರ್ಮದೇವತೆ, ಪಾವನಗಂಗಾ, ಕುಲವಧು, ಮನಸೋತ ಮನದನ್ನೆ, ಹಸಿರುತೋರಣ, ಸನಾದಿಅಪ್ಪಣ್ಣ, ಹಾಲುಂಡ ತವರು ಇವು ತುಂಬ ಜನಪ್ರಿಯವಾಗಿವೆ. ಸಾತ್ವಿಕ ಜೀವನ, ಸುಸಂಸ್ಕೃತ ಬದುಕು, ಸಂಸ್ಕೃತಿ ಪ್ರೇಮ, ರಾಷ್ಟ್ರಪ್ರೇಮ, ಆದರ್ಶ, ಹಳ್ಳಿಯ ಬದುಕು -ಬವಣೆಗಳನ್ನು ತಮ್ಮ ಕಥೆ ಕಾದಂಬರಿಗಳಲ್ಲಿ ಇವರು

ಹೃದಯಂಗಮವಾಗಿ ತಂದಿದ್ದಾರೆ. ಆ ಕಾಲಕ್ಕೆ ಇವರ ಕಾದಂಬರಿಗಳು ಅಪಾರ ಸಂಖ್ಯೆಯ ಮಹಿಳಾ ಓದುಗವರ್ಗವನ್ನು ಸೃಷ್ಟಿಸಿದ್ದವು. ಕನ್ನಡದಲ್ಲಿ ವಾಚನಾಭಿರುಚಿಯನ್ನು ಬೆಳೆಯಿಸಿದ ಮಹನೀಯರಲ್ಲಿ ಇವರ ಹೆಸರೂ ಮುಂಚೂಣಿಯಲ್ಲಿ ನಿಲ್ಲುತ್ತದೆ.

ಸನಾದಿ ಅಪ್ಪಣ್ಣ, ಪಾವನಗಂಗಾ, ದೇವರಕೂಸು, ಅನಿರೀಕ್ಷಿತ, ಭಾಗೀರಥಿ, ಕುಲವಧು, ಧರ್ಮದೇವತೆ -ಈ ಕಾದಂಬರಿಗಳು ಕನ್ನಡ ಚಲನಚಿತ್ರಗಳಾಗಿ ಹೆಸರು ಮಾಡಿವೆ. ಮುತ್ತೈದೆ ಎಂಬ ಕಾದಂಬರಿ ಕನ್ನಡ ಮತ್ತು ತಮಿಳು ಭಾಷೆಗಳಲ್ಲಿ ಚಲನಚಿತ್ರವಾಗಿದೆ.

ಇವರ ಸಾಹಿತ್ಯ ಸಾಧನೆಗಾಗಿ ಅನೇಕ ಸಂಘ ಸಂಸ್ಥೆಗಳು ಇವರನ್ನು ಗೌರವಿಸಿವೆ. ತರಳಬಾಳು ಜಗದ್ಗುರುಗಳಿಂದ ಕಾದಂಬರಿ ಶ್ರೀ ಪ್ರಶಸ್ತಿ (1969), ಶೃಂಗೇರಿ ಜಗದ್ಗುರುಗಳಿಂದ ಶಾರದಾಂಬಾ ಬಂಗಾರದ ಪದಕ (1972), ಹೊನ್ನಾವರದ ಶೃಂಗಾರ ಮಂಟಪ ಪ್ರಶಸ್ತಿ (1973), ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1974) ಬಂದಿವೆ. ಕಾದಂಬರಿ ದರ್ಶನ ಎಂಬ ಗೌರವ ಗ್ರಂಥವನ್ನು ಇವರಿಗೆ ಸಮರ್ಪಿಸಲಾಗಿದೆ (1974). ಇವರು 1985 ನವೆಂಬರ್ 9ರಂದು ನಿಧನರಾದರು. (ಎಸ್.ಎಂ.ಕೆ.)

**ಕೃಷ್ಣಮೂರ್ತಿ, ವೈ. ಎನ್. :** 1926-99. ಕನ್ನಡ ಸಾಹಿತ್ಯ ಹಾಗೂ ಪತ್ರಿಕೋದ್ಯಮ ಕ್ಷೇತ್ರಗಳಲ್ಲಿ ವೈ.ಎನ್.ಕೆ. ಎಂಬ ಮೂರಕ್ಷರಗಳಿಂದ ಚಿರಪರಿಚಿತರಾಗಿದ್ದ ಹೆಸರಾಂತ ಪತ್ರಕರ್ತ ಮತ್ತು ಲೇಖಕ.



1926ರ ಮೇ 16ರಂದು ಜನಿಸಿದರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿಓದಿ ಬಿ.ಎಸ್.ಸಿ.ಪದವಿ ಪಡೆದರು (1946). ಕನ್ನಡದಲ್ಲಿ ಉನ್ನತ ಮೊದಲ ದರ್ಜೆಯ ಅಂಕಗಳನ್ನು ಗಳಿಸಿದ ಖ್ಯಾತಿ ಇವರದು. ವಿದ್ಯಾರ್ಥಿಯಾಗಿದ್ದಾಗಲೆ ಪತ್ರಿಕೋದ್ಯಮದಲ್ಲಿ ತೀವ್ರ ಆಸಕ್ತಿ ತಾಳಿದ್ದರು. ದೇಶಬಂಧು ದಿನಪತ್ರಿಕೆ ಮತ್ತು ಛಾಯಾ ಮಾಸಪತ್ರಿಕೆಗಳಲ್ಲಿ ಕೆಲಸ ಮಾಡುತ್ತ ತಮ್ಮ ವೃತ್ತಿ ಜೀವನ ಆರಂಭಿಸಿದರು. ವರದಿಗಾರರಾಗಿ ಪ್ರಜಾವಾಣಿ ದಿನಪತ್ರಿಕೆ ಸೇರಿದರು (1949). ಅದೇ ಪತ್ರಿಕೆಯಲ್ಲಿ ಕ್ರಮವಾಗಿ ಬಡ್ತಿ ಪಡೆಯುತ್ತ ಹೋದರು. ಉಪಸಂಪಾದಕರಾಗಿದ್ದವರು ಉಪಸುದ್ದಿ ಸಂಪಾದಕರಾದರು (1965). 1974ರಲ್ಲಿ ಸುದ್ದಿ ಸಂಪಾದಕರಾಗಿ, 1977ರಲ್ಲಿ ಸಂಪಾದಕರಾಗಿ ನೇಮಕಗೊಂಡು 1983ರ ವರೆಗೂ ಆ ಹುದ್ದೆಯಲ್ಲಿದ್ದರು. ಮುಂದೆ ಸುಮಾರು ಒಂದು ವರ್ಷಕಾಲ ಸಲಹೆಗಾರರೆಂದು ಕೆಲಸ ಮಾಡಿದರು (1983-84).

ವೈ.ಎನ್.ಕೆ. ಹಲವು ದೇಶಗಳನ್ನು ಸುತ್ತಿದ್ದರು. 1977ರಲ್ಲಿ ಅಂದಿನ ಪ್ರಧಾನಮಂತ್ರಿಗಳಾಗಿದ್ದ ಮೊರಾರ್ಜಿದೇಸಾಯಿ ಅವರೊಂದಿಗೆ ರಷ್ಯ ಪ್ರವಾಸ ಕೈಗೊಂಡರು. ಎರಡು ವರ್ಷಗಳ ಅನಂತರ ಹಂಗರಿ, ಪೋಲೆಂಡ್ ಮತ್ತು ಚೆಕೊಸ್ಲೊವಾಕಿಯ ದೇಶಗಳಿಗೆ ಭೇಟಿಕೊಡಲು ಆಹ್ವಾನ ಪಡೆದರು. ಮರುವರ್ಷ ಅಮೇರಿಕಕ್ಕೆ ಭೇಟಿಕೊಡಲು ಆಹ್ವಾನ ಪಡೆದರು. ಜರ್ಮನ್ ಸರ್ಕಾರದ ಆಹ್ವಾನದ ಮೇಲೆ ಪಶ್ಚಿಮ ಜರ್ಮನಿಗೆ ಹೋದರು (1982). 1984ರಲ್ಲಿ ಬ್ರಿಟನ್, ಅಮೆರಿಕ, ಕೆನಡ ದೇಶಗಳಿಗೆ ಭೇಟಿ ನೀಡಿದರು.

ಇವರು ಸಾಹಿತ್ಯವನ್ನು ಸೃಷ್ಟಿಸಿರುವುದರ ಜೊತೆಗೆ ಸಾಹಿತಿಗಳನ್ನೂ ಸೃಷ್ಟಿಸಿದರು. ನವ್ಯ ಸಾಹಿತ್ಯದ ಅನೇಕ ಲೇಖಕರು ವೈ.ಎನ್.ಕೆ.ಯವರ ಸೃಷ್ಟಿ. ಕಾವ್ಯವನ್ನು ಜನತೆಗೆ ಮುಟ್ಟಿಸುವ ಕೆಲಸವನ್ನು ಪ್ರಜಾವಾಣಿಯಲ್ಲಿ ಪರಿಣಾಮಕಾರಿಯಾಗಿ ನಿರ್ವಹಿಸಿದರು. ನವ್ಯಸಾಹಿತ್ಯಕ್ಕೆ ಇವರು ಕೊಟ್ಟ ಬೆಂಬಲ, ಪ್ರೋತ್ಸಾಹ ಅಸದೃಶ್ಯವಾದದ್ದು. ಅದನ್ನು ಜನಪ್ರಿಯಗೊಳಿಸುವಲ್ಲಿಯೂ ಸಮರ್ಥವಾಗಿ ದುಡಿದರು.

ಛಾಯಾಗ್ರಹಣ, ಚಿತ್ರಕಲೆ, ಟೇಬಲ್ ಟೆನ್ನಿಸ್, ಗಾಲ್ಫ್, ಯೋಗ, ನಾಟಕ, ಚಲನಚಿತ್ರ ಮೊದಲಾದ ಹಲವು ವಿಷಯಗಳಲ್ಲಿ ಇವರಿಗೆ ಆಸಕ್ತಿ ಇತ್ತು. ಸಂಸ್ಕಾರ ಹೊಸ ಅಲೆಯ ಚಿತ್ರದ ವಿಷಯದಲ್ಲಿ ಇವರು ಅಪಾರ ಆಸಕ್ತಿ ವಹಿಸಿದ್ದರು. ವಂಶವೃಕ್ಷ, ಹಂಸಗೀತೆ, ಕನ್ನೇಶ್ವರರಾಮ, ಫಣಿಯಮ್ಮ ಮೊದಲಾದ ಚಿತ್ರಗಳ ಯಶಸ್ಸಿಗೆ ಇವರೂ ಕಾರಣರಾಗಿದ್ದರು. ಚೆನ್ನೈ, ನವದೆಹಲಿ ಚಲನಚಿತ್ರೋತ್ಸವಗಳ ಜೊತೆ ಇವರ ಸಂಬಂಧ ನಿಕಟವಾದುದಾಗಿತ್ತು. ನಾಲ್ಕನೆಯ ಅಂತಾರಾಷ್ಟ್ರೀಯ ಮಕ್ಕಳ ಚಲನಚಿತ್ರೋತ್ಸವದ ಪ್ರಕಾಶನ ಸಮಿತಿಗೆ ಇವರು ಅಧ್ಯಕ್ಷರಾಗಿದ್ದರು (1985). ಬೆಂಗಳೂರಿನಲ್ಲಿ ನಡೆದ ಚಲನಚಿತ್ರೋತ್ಸವ ವ್ಯವಸ್ಥಾಪಕ ಸಮಿತಿಯಲ್ಲಿ ಒಬ್ಬ ಸದಸ್ಯರಾಗಿದ್ದರು.

ಇವರು 1991ರಲ್ಲಿ ಕನ್ನಡಪ್ರಭ ಸಂಪಾದಕರಾಗಿ ನೇಮಕಗೊಂಡರು. ಒಂದು ದಶಕದ ಕಾಲ ಆ ಪತ್ರಿಕೆಯ ಸಂಪಾದಕರಾಗಿದ್ದರು. ಆ ಪತ್ರಿಕೆಯ ಸಾಹಿತ್ಯಿಕ ಮೌಲ್ಯವನ್ನು ಬಹುವಾಗಿ ಹೆಚ್ಚಿಸಿದರು. ಅದರ ಸಂಪಾದಕೀಯ ಪುಟದಲ್ಲಿ ಹಲವಾರು ಸಿದ್ಧಪ್ರಸಿದ್ಧರು ಸಾಹಿತ್ಯಕ ಲೇಖನಗಳನ್ನು ಬರೆಯುವಂತಾದದ್ದು ಇವರ ಶ್ರಮದ ಫಲ. ಅನೇಕ ಹೊಸ ಅಂಕಣಗಳನ್ನು ಪ್ರಾರಂಭಿಸಿದರು.

ಇವರು ಕನ್ನಡದಲ್ಲಿ ಹಲವು ಕೃತಿಗಳನ್ನು ರಚಿಸಿದ್ದಾರೆ. ಇವರು ಸಂಪಾದಿಸಿದ ಪುಸ್ತಕ ಜಾಕ್ ಲಂಡನ್, ಮುಂದೇನು ರಾಮನ್, ಇದು ಸುದ್ದಿ ಇದು ಸುದ್ದಿ, ಹೈಡ್ ಪಾರ್ಕ್, ಬರಲಿದೆ ಬರಲಿದೆ - ಇವೆಲ್ಲ ಪತ್ರಿಕೋದ್ಯಮಕ್ಕೆ ಸಂಬಂಧಿಸಿದವು. ಕಾಲಕ್ರೀಡೆ, ಪದ್ಯ ಇಷ್ಟು ಲೈಟ್ ಆದರೆ ಹೇಗೆ ಸ್ವಾಮಿ, ತೀರ್ಥರೂಪ, ವಂಡರ್ ಕಣ್ಣು - ಮೊದಲಾದವು ಹಾಗೂ ವಂಡರ್‌ಮಾಲೆಯ ಕೆಲವು ಪುಸ್ತಕಗಳು - ಇವು ಇವರ ಪ್ರತಿಭೆಗೆ ಸಾಕ್ಷಿಯಾಗಿವೆ. ಇವರ ವಂಡರ್ ಅಂಕಣ ಕನ್ನಡ ಪ್ರಭದಲ್ಲಿ ಪ್ರಕಟವಾಗುತ್ತಿತ್ತು. ಕೈಲಾಸಂ ಅವರ ಆಪ್ತರಲ್ಲಿ ಒಬ್ಬರಾಗಿದ್ದ ಇವರು ಅನೇಕ ದೃಷ್ಟಿಗಳಿಂದ ಕೈಲಾಸಂ ಅವರ ಬರೆವಣಿಗೆಯನ್ನೇ ಅನುಸರಿಸಿದರು, ಅನುಕರಿಸಿದರು. ಭಾಷೆಯನ್ನು ಯಾವ ರೀತಿಯಾಗಿ ದುಡಿಸಿಕೊಳ್ಳಬಹುದು ಎಂಬುದನ್ನು ತಮ್ಮ ಬರೆವಣಿಗೆಯಲ್ಲಿ ತೋರಿಸಿದರು. ಭಾಷೆ ಬಳಕೆಯಲ್ಲಿ ಬಗೆ ಬಗೆಯ ಕಸರತ್ತು ಮಾಡಿ ತಮ್ಮ ಬರೆವಣಿಗೆಗೊಂದು ಸೊಗಸು ಕೊಟ್ಟರು.

ಇವರು ಪತ್ರಿಕೋದ್ಯಮದಲ್ಲಿ ಸಲ್ಲಿಸಿದ ಅಸಾಧಾರಣ ಸೇವೆಗಾಗಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1986), ಹಾಸ್ಯ ಕವನಗಳ ಸಂಕಲನಕ್ಕಾಗಿ 1988ರಲ್ಲಿ ರಾಜ್ಯ ಪತ್ರಿಕಾ ಅಕಾಡೆಮಿಯ ಪ್ರಶಸ್ತಿ (1995) ಹಾಗೂ ಹಾಸ್ಯ ಬರೆಹಗಳಿಗಾಗಿ 1995ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿವೆ.

ಇವರು 1999ರ ಅಕ್ಟೋಬರ್ 15ರಂದು ವಿಮಾನದಲ್ಲಿ ಪಯಣಿಸುತ್ತಿದ್ದಾಗಲೆ ಹೃದಯಾಘಾತದಿಂದ ನಿಧನಹೊಂದಿದರು. (ಎಚ್.ಎಂ.ಎಸ್ಎ.)

**ಕೃಷ್ಣರಾಜ ಒಡೆಯರ್ I :** ಮೈಸೂರು ರಾಜವಂಶದ ದೊರೆ (1713-32). ಇಮ್ಮಡಿ ಕಂಠೀರವ ನರಸರಾಜನ ಮಗ. ಇವನಿಗೆ ದೊಡ್ಡ ಕೃಷ್ಣರಾಜ ಎಂದೂ ಹೆಸರಿತ್ತು. ತಂದೆಯ ಕಾಲದಲ್ಲಿ ರಾಜ್ಯಾಡಳಿತ ದಳವಾಯಿಗಳ ಕೈವಶವಾಗಿದ್ದ ಪರಿಸ್ಥಿತಿಯಲ್ಲಿ ಸಿಂಹಾಸನವನ್ನೇರಿದ ಕೃಷ್ಣರಾಜನೂ ದಕ್ಷನಾಗಿರಲಿಲ್ಲವಾಗಿ ಸಮೀಪವರ್ತಿಗಳಾದ ದಳವಾಯಿ ದೇವರಾಜ ಮತ್ತು ಸರ್ವಾಧಿಕಾರಿ ನಂಜರಾಜ ಎಂಬ ಬಂಧುಗಳು ಈತನನ್ನು ತಮ್ಮ ಕೈಗೊಂಬೆಯಾಗಿ ಮಾಡಿಕೊಂಡು ಆಡಳಿತ ನಡೆಸುತ್ತಿದ್ದರು.

ಇವನ ಕಾಲದಲ್ಲಿ ಬಾಲಾಘಾಟ್ ಪ್ರದೇಶವನ್ನು ಆಳುತ್ತಿದ್ದ ಸಾದತ್ತುಲ್ಲಾಖಾನ್ ಮೈಸೂರಿನ ಬೊಕ್ಕಸದ ಅಪಾರ ಸಂಪತ್ತನ್ನು ದೋಚುವ ಹವಣಿಕೆಯಿಂದ ಕಡಪ, ಕರ್ನೂಲು ಮತ್ತು ಸವಣೂರಿನ ನವಾಬರನ್ನೂ ಗುತ್ತಿಯ ಮರಾಠ ನಾಯಕನನ್ನೂ ಕೂಡಿಕೊಂಡು ಮೈಸೂರಿನ ಮೇಲೆ ಆಕ್ರಮಣ ಮಾಡಲು ಸಿದ್ಧನಾಗಿದ್ದಾಗ ಮತ್ತೊಂದು ದಿಕ್ಕಿನಿಂದ ಸೀರ್ಯದ

ಅಮೀರ್‌ಖಾನನೂ ನುಗ್ಗಿಬಂದ. ಎರಡು ಸೈನ್ಯಗಳೂ ಶ್ರೀರಂಗಪಟ್ಟಣ ತಲುಪಿ ಒಟ್ಟಿಗೆ ಆ ನಗರವನ್ನು ಸಾದತ್ತುಲ್ಲಾ ಖಾನನ ನಾಯಕತ್ವದಲ್ಲಿ ಮುತ್ತಿದಾಗ ಹೆದರಿದ ಕೃಷ್ಣರಾಜ ಒಂದು ಕೋಟಿ ರೂಪಾಯಿಗಳನ್ನು ಕೊಟ್ಟು ಆಕ್ರಮಣದಿಂದ ಪಾರಾದ. ಯುದ್ಧದಲ್ಲಿ ಪಾಲ್ಗೊಂಡ ಐವರು ನಾಯಕರಿಗೂ ತಲಾ 12 ಲಕ್ಷ ರೂಪಾಯಿಗಳನ್ನು ಕೊಟ್ಟು, ಉಳಿದ 40ಲಕ್ಷ ರೂಗಳನ್ನು ಸಾದತ್ತುಲ್ಲಾಖಾನ್ ತಾನೇ ಕಬಳಿಸಿದ. ದುರಾಶಾಪೀಡಿತರಾದ ಮರಾಠರು ಎರಡು ವರ್ಷಗಳ ಅನಂತರ ಮತ್ತೆ ದಾಳಿ ಮಾಡಿ, ಕೃಷ್ಣರಾಜನಿಂದ ಪುನಃ ಹಣ ಪಡೆದರು. ಹೀಗೆ ಹಣದ ಅಪವ್ಯಯವಾಗಿ ಬೊಕ್ಕಸ ಬರಿದಾಯಿತು. ಈ ನಷ್ಟವನ್ನು ತುಂಬಿಕೊಳ್ಳಲು 1728ರಲ್ಲಿ ದಳವಾಯಿ ದೇವರಾಜನ ನೇತೃತ್ವದಲ್ಲಿ ಮೈಸೂರು ಸೈನ್ಯ ಮಾಗಡಿ ಕೆಂಪೇಗೌಡನನ್ನು ಎದುರಿಸಿ, ಅವನನ್ನು ಸೆರೆಹಿಡಿದು, ಸಾವನದುರ್ಗದಲ್ಲಿ ಶೇಖರವಾಗಿದ್ದ ಹಣವನ್ನು ದೋಚಿಕೊಂಡಿತಾದರೂ ಸ್ಥಿತಿ ಉತ್ತಮ ಗೊಳ್ಳಲಿಲ್ಲ. ರಾಜಕಾರಣದಲ್ಲಿ ಕೃಷ್ಣರಾಜ ಫಲಪ್ರದನಾಗಲಿಲ್ಲ. ಕಷ್ಟಪರಂಪರೆಗಳನ್ನು ಅನುಭವಿಸಿ 1732ರಲ್ಲಿ ಮೃತನಾದ. ಅನಂತರ ಇವನ ದತ್ತುಪುತ್ರ 7ನೆಯ ಚಾಮರಾಜ ಅರಸನಾದ.

ಕೃಷ್ಣರಾಜ ದೈವಭಕ್ತನೂ ಉದಾರಿಯೂ ಆಗಿದ್ದ. ಈತ ಕಂಚಿಯ ವರದರಾಜ, ಮೇಲುಕೋಟೆಯ ಚೆಲುವರಾಯ ಮುಂತಾದ ಅನೇಕ ದೇವಾಲಯಗಳಿಗೆ ದಾನ ಮಾಡಿದುದಲ್ಲದೆ ಕಳಲೆಯಲ್ಲಿ ಅಗ್ರಹಾರವೊಂದನ್ನು ನಿರ್ಮಿಸಿದನೆಂದು 1722ರ ತಿರುಮಲಾರ್ಯನಿಂದ ರಚಿತವಾದ, ಒಂದು ಶಾಸನ ತಿಳಿಸುತ್ತದೆ.



ಕಳಲೆಯ ವೀರರಾಜನ ಸಕಲವೈದ್ಯಸಂಹಿತಸಾರಾರ್ಣವ ಮತ್ತು ಆಂಧ್ರ ವಚನ ಭಾರತಮು, ಚನ್ನಯ್ಯನ ಭಗವದ್ಗೀತಾ ಟೀಕೆ, ಚೆಲುವಾಂಬೆಯ ತುಲಾ ಕಾವೇರೀ ಮಹಾತ್ಮ್ಯ, ವರನಂದಿಕಲ್ಯಾಣ, ಬಾಲವೈದ್ಯದ ಚಲುವನ ರತ್ನಶಾಸ್ತ್ರ ಮತ್ತು ಕನ್ನಡ ಲೀಲಾವತಿ, ರಂಗಯ್ಯನ ಕಾವೇರಿ ಮಾಹಾತ್ಮ್ಯ ಮುಂತಾದ ಕೃತಿಗಳು ಈತನ ಕಾಲದಲ್ಲಿ ರಚಿತವಾದುವು. (ಬಿ.ಕೆ.ಜಿ.)

**ಕೃಷ್ಣರಾಜ ಒಡೆಯರ್ II :** ಮೈಸೂರು ರಾಜವಂಶದ ದೊರೆ (1734-66). ದೊಡ್ಡ ಕೃಷ್ಣರಾಜನ ಎರಡನೆಯ ದತ್ತುಪುತ್ರ. ಮೊದಲನೆಯ ದತ್ತುಪುತ್ರ ಚಾಮರಾಜನ ಅನಂತರ, ತನ್ನ ಐದನೆಯ ವರ್ಷದಲ್ಲಿ ಸಿಂಹಾಸನಾರೋಹಣ ಮಾಡಿದ. ಇಮ್ಮಡಿ ಕೃಷ್ಣರಾಜ ಒಡೆಯರ್ ಎಂದು ನಾಮಾಂಕಿತನಾದ. ಈತನ ಕಾಲದಲ್ಲೂ ಹಿಂದಿನಂತೆಯೇ ನಂಜರಾಜಯ್ಯ, ದೇವರಾಜಯ್ಯ ಎಂಬ ದಳವಾಯಿ ಸೋದರರು ಸರ್ವಶಕ್ತರಾಗಿದ್ದರು. ನಂಜರಾಜಯ್ಯನ ಕೈವಾಡ ಕೊನೆಯವರೆಗೂ ನಡೆಯಿತು. ದೂರಾಲೋಚನೆಯಿಂದ ತನ್ನ ಮಗಳನ್ನು ಒಡೆಯರಿಗೆ ಧಾರೆಯೆರೆದು ಕೊಟ್ಟ ನಂಜರಾಜನಿಗೆ ಸ್ವಾರ್ಥಸಾಧನೆಯೇ ಮೂಲಗುರಿಯಾಗಿದ್ದು, ತನ್ನ ಸರ್ವಾಧಿಕಾರವನ್ನು ಬಲಪಡಿಸಲು ಇವನು ತೀವ್ರ ಪ್ರಯತ್ನ ಮಾಡಿದ.



ಕಾಲಾನಂತರದಲ್ಲಿ ದಳವಾಯಿ ಸೋದರರಲ್ಲಿ ಉಂಟಾದ ಒಡಕನ್ನು ಸದುಪಯೋಗಪಡಿಸಿಕೊಳ್ಳಲು ಯೋಚಿಸಿದ ಇಮ್ಮಡಿ ಕೃಷ್ಣರಾಜ, ಅಂದಿನ ಹಲವಾರು ಕದನಗಳಲ್ಲಿ ಕೀರ್ತಿ ಗಳಿಸಿದ್ದ ಹೈದರನ ನೆರವನ್ನು ಬೇಡಿದ. ತನ್ನ ಅಧಿಕಾರವನ್ನು ವಿಸ್ತರಿಸಲು ಹೊಂಚುಹಾಕಿ ಕಾಯುತ್ತಿದ್ದ ತೀಕ್ಷ್ಣಮತಿಯಾದ ಹೈದರನಿಗೆ ಈ ಬೇಡಿಕೆ ಸದವಕಾಶವನ್ನೊದಗಿಸಿತು. ರಾಜನ ಅದೃಷ್ಟ ಆಗಲೂ ಕುದುರಲಿಲ್ಲ. ನಂಜರಾಜನನ್ನು ಕೆಳಗಿಳಿಸಿದ ಹೈದರ್ ಅಧಿಕಾರವನ್ನು ತಾನೇ ವಹಿಸಿಕೊಂಡು ರಾಜನಿಗೆ ಕೇವಲ ಮೂರು ಲಕ್ಷ ವರಹಗಳನ್ನು ಅಶನಾರ್ಥವಾಗಿ ನೀಡುತ್ತಿದ್ದ. 1766ರಲ್ಲಿ ಇಮ್ಮಡಿ ಕೃಷ್ಣರಾಜ ನಿಧನನಾದಾಗ ಹೈದರ್ ಅವನ ಹಿರಿಯ ಮಗ ನಂಜರಾಜನಿಗೆ ಪಟ್ಟ ಕಟ್ಟಿದ್ದರೂ ರಾಜನ ಭೃತ್ಯವನ್ನೂ ನಿಲ್ಲಿಸಿ ಅರಮನೆಯ ಆಭರಣಗಳನ್ನೆಲ್ಲ ಸುಲಿದುಕೊಂಡು ತನ್ನ ಸ್ವಂತ ಭಟರನ್ನು ಅರಮನೆಯ ಕಾವಲಿಗೆ ನಿಲ್ಲಿಸಿದ. ಕೃಷ್ಣರಾಜನ ನಿರ್ವೀರ್ಯವಾದ ಹಾಗೂ ದೂರಾಲೋಚನೆಯಿಲ್ಲದ ವರ್ತನೆಯಿಂದ ಮೈಸೂರು ರಾಜತ್ವ ಮಸುಕಾಯಿತು. (ಎಚ್.ಆರ್.ಡಿ.ಜಿ.)

**ಕೃಷ್ಣರಾಜ ಒಡೆಯರ್ III :** 1794-1868. ಮೈಸೂರು ಸಂಸ್ಥಾನದ ದೊರೆ (1799-1831). 8ನೆಯ ಚಾಮರಾಜ ಒಡೆಯರು ಸಂತಾನವಿಲ್ಲದೆ ಮೃತರಾದ ಕಾರಣ ಮಹಾರಾಣಿ ಲಕ್ಷಮ್ಮಣ್ಣಿಯವರು ಎರಡು ವರ್ಷದ ಬಾಲಕ ಕೃಷ್ಣರಾಜನನ್ನು ದತ್ತು ತೆಗೆದುಕೊಂಡಿದ್ದರು. 1799ರ ಶ್ರೀರಂಗಪಟ್ಟಣ ದಾಳಿಯಲ್ಲಿ ಟಿಪ್ಪುಸುಲ್ತಾನ ಮಡಿದ ಮೇಲೆ ವಿಜಯಿಗಳಾದ ಬ್ರಿಟಿಷರು ಮೈಸೂರಿನ ರಾಜವಂಶದವರಿಗೆ ಅಧಿಕಾರ ವಹಿಸುವ ತೀರ್ಮಾನ ಮಾಡಿದ್ದರಿಂದ ಕೃಷ್ಣರಾಜರು ಮುಮ್ಮಡಿ ಕೃಷ್ಣರಾಜ ಒಡೆಯರ್ ಎಂಬ ಅಭಿಧಾನದಿಂದ ಸಿಂಹಾಸನಾರೋಹಣಮಾಡಿದರು. ಹಳೆಯ ಮೈಸೂರು ಸಂಸ್ಥಾನದ, ದಕ್ಷಿಣ ಕರ್ನಾಟಕದ ಒಂಬತ್ತು ಜಿಲ್ಲೆಗಳು ಇವರ ಆಳಿಕೆಗೆ ಒಳಪಟ್ಟವು. ಮುಮ್ಮಡಿ ಕೃಷ್ಣರಾಜರು ಪ್ರಾಪ್ತ ವಯಸ್ಕರಾಗುವವರೆಗೂ ರಾಜ್ಯದ ಸೂತ್ರ ದಿವಾನ್ ಪೂರ್ಣಯ್ಯನವರ ಕೈಯಲ್ಲಿರಬೇಕೆಂದು ತೀರ್ಮಾನವಾಯಿತು. ಅಲ್ಲದೆ ರಾಜ್ಯದ ವ್ಯವಹಾರಗಳ ಮೇಲೆ ಗಮನವಿಡಲು ಬ್ಯಾರಿ ಕ್ಲೋಸ್ ಬ್ರಿಟಿಷರ ಪ್ರತಿನಿಧಿಯಾಗಿ (ರೆಸಿಡೆಂಟ್) ಅಧಿಕಾರ ವಹಿಸಿಕೊಂಡ.

ಮೈಸೂರು ಸಂಸ್ಥಾನದ ಆಡಳಿತ ಹೇಗಿರಬೇಕು ಎಂಬುದರ ಬಗ್ಗೆ ವೆಲ್ಲೆಸ್ಲಿಯ ಸ್ಪಷ್ಟ ಲೇಖನಗಳು ಮತ್ತು ಆಡಳಿತದಲ್ಲಿ ನುರಿತಿದ್ದ ಪೂರ್ಣಯ್ಯನವರ ದಿಗ್ದರ್ಶನವಿದ್ದುದರಿಂದ ರಾಜ್ಯದ ಆಡಳಿತ ವ್ಯವಸ್ಥಿತ ವಾಯಿತು. ಆದರೆ ಟಿಪ್ಪುವಿನ ಮುಷ್ಟಿಯಲ್ಲಿ ಮುದುಡಿಹೋಗಿದ್ದ ಅಥವಾ ಪ್ರಬಲವಾಗಿದ್ದ ಹಲವು ಶಕ್ತಿಗಳು ಮತ್ತೆ ಗರಿಗೆದರಲು ಪ್ರಯತ್ನ ಪಟ್ಟಿದ್ದರಿಂದ ಆಳಿಕೆಯ ಮೊದಲ ವರ್ಷಗಳಲ್ಲಿ ಅಶಾಂತಿ ತಲೆದೋರಿತು. ಹಿಂದೆ ಟಿಪ್ಪುವಿನ ಆಶ್ರಯದಲ್ಲಿದ್ದ ಧೋಂಡಿಯಾವಾಘ್ 1799ರಲ್ಲಿ ಶಿವಮೊಗ್ಗ, ನಗರ ಮುಂತಾದ ರಾಜ್ಯದ ವಾಯುವ್ಯ ಭಾಗಗಳ ಕೋಟೆಗಳನ್ನು ಹಿಡಿದು ಸ್ವಾತಂತ್ರ್ಯ ಸಾರಿಕೊಂಡ. ಆದರೆ ಬ್ರಿಟಿಷ್ ಮತ್ತು ಮೈಸೂರು ಸೈನ್ಯಗಳು ಧೋಂಡಿಯಾವಾಘನನ್ನು ಮೈಸೂರು ಪ್ರಾಂತ್ಯದಿಂದ ಓಡಿಸಿ ರಾಜ್ಯದ ಭಾಗಗಳನ್ನು ವಶಪಡಿಸಿಕೊಂಡದ್ದಲ್ಲದೆ ಕೊನೆಗೆ 1800ರಲ್ಲಿ ಉತ್ತರ ಕರ್ನಾಟಕದ ಕೊನಗಲ್‌ನಲ್ಲಿ ಅವನನ್ನು ಕೊಂದರು.

1800ರಲ್ಲಿ ಮಂಜರಾಬಾದಿನ ಕೃಷ್ಣಪ್ಪನಾಯಕ ಅರಕೆರೆಯಲ್ಲಿ ತಳ ಊರಿ ಬಿಸಲೆ ಘಾಟಿನ ಸುತ್ತಮುತ್ತ ಹಾವಳಿ ಆರಂಭಿಸಿದ. 1802ರಲ್ಲಿ ಅವನ ಬಲವನ್ನೂ ಹತ್ತಿಕ್ಕಲಾಯಿತು. ದಿವಾನ್ ಪೂರ್ಣಯ್ಯನವರ ನೇತೃತ್ವದಲ್ಲಿ ಬೆಳೆದ ಮೈಸೂರು ಸೈನ್ಯ ಹಲವು ವಿಧಗಳಲ್ಲಿ ಕೀರ್ತಿಗಳಿಸಿತು. 1802ರಲ್ಲಿ ವೈನಾಡಿನ ಬಂಡಾಯ, 1803ರ ಮರಾಠ ಕದನ, 1804-5ರಲ್ಲಿ ಚಿತ್ತೂರಿನಲ್ಲಿ ಅಶಾಂತಿ, 1806ರಲ್ಲಿ ವೆಲ್ಲೂರಿನಲ್ಲಿ ವಿರೋಧ, 1809ರಲ್ಲಿ ಬ್ರಿಟಿಷ್ ಸೈನ್ಯದ ದಂಗೆ ಇತ್ಯಾದಿಗಳ ವಿರುದ್ಧ ಮೈಸೂರು ಸೈನ್ಯ ಬ್ರಿಟಿಷ್ ಆಡಳಿತಕ್ಕೆ ಸಹಾಯ ಮಾಡಿತು. ಪೂರ್ಣಯ್ಯ 11 ವರ್ಷಗಳ ದಿವಾನ್ ಪದವಿಯನ್ನು ನಿರ್ವಹಿಸಿ, ರಾಜ್ಯದ ಆಯವ್ಯಯವನ್ನು ಬಹುಮಟ್ಟಿಗೆ ಸುಧಾರಿಸಿ, ಹಲವು ಜನೋಪಯೋಗಿ ಕಾರ್ಯಗಳನ್ನು ಮಾಡಿ, 1811ರಲ್ಲಿ ದಿವಾನಗಿರಿಯಿಂದ ನಿವೃತ್ತರಾಗಿ 1812ರಲ್ಲಿ ಮೃತರಾದರು.

ಅನಂತರ ರಾಜ್ಯ ಸೂತ್ರಗಳನ್ನು ಕೃಷ್ಣರಾಜ ಒಡೆಯರೇ ವಹಿಸಿಕೊಂಡು ತಾವೇ ನೇಮಿಸಿದ ದಿವಾನರುಗಳ ಮೂಲಕ ರಾಜ್ಯವಾಳಲಾರಂಭಿಸಿದರು. ಬ್ರಿಟಿಷರಿಗೆ ನಿಷ್ಠಾವಂತರಾಗಿ, ಅವರ ಹಲವು ಕಾರ್ಯಾಚರಣೆಗಳಲ್ಲಿ ಮೈಸೂರು ಸೈನ್ಯದ ಸಹಾಯವನ್ನು ಒದಗಿಸಿದರು. ಈ ಕಾರ್ಯಗಳಿಂದಾಗಿ ಮತ್ತು ಎರಡು ಕ್ಷಾಮಗಳಿಂದ ಮೈಸೂರು ಬೊಕ್ಕಸದ ಸ್ಥಿತಿ ಕಳವಳಕಾರಿಯಾಯಿತು. ದೇಶದಲ್ಲಿ ಕ್ಷೋಭೆ ಕಾಣಿಸಿಕೊಂಡಿತು. 1830ರಲ್ಲಿ ಕುಂಸಿಯ ಸಾದರಮಲ್ಲನೆಂಬವನು ಬೂದಿಬಸವಪ್ಪ ಎಂಬ ಹೆಸರಿನಿಂದ ತಾನು ಕೆಳದಿ ರಾಜವಂಶಕ್ಕೆ ಸೇರಿದವನೆಂದೂ ಕೆಳದಿಯ ರಾಜ್ಯದ ನ್ಯಾಯ ಹಕ್ಕುದಾರನೆಂದೂ ಆ ಪ್ರಾಂತ್ಯದಲ್ಲಿ ಸಾಕಷ್ಟು ಬೆಂಬಲ ಗಳಿಸಿಕೊಂಡು ಬಂಡಾಯವನ್ನು ಆರಂಭಿಸಿದ. ಈ ಬಂಡಾಯವನ್ನು ಹತ್ತಿಕ್ಕಲು ಮುಮ್ಮಡಿ ಕೃಷ್ಣರಾಜರು ಬ್ರಿಟಿಷರ ಬೆಂಬಲವನ್ನು ಕೋರಬೇಕಾಯಿತು. ಬಂಡಾಯವನ್ನು ಮುರಿದರೂ ಆಗಿನ ಬ್ರಿಟಿಷ್ ಗವರ್ನರ್ ಜನರಲ್ ಆಗಿದ್ದ ಬೆಂಟಿಂಕನು ಕೃಷ್ಣರಾಜರು ಆಡಳಿತ ನಿರ್ವಹಿಸಲು ಅಶಕ್ತರೆಂದು ಸಾರಿ ಮೈಸೂರು ಸಂಸ್ಥಾನವನ್ನು ಬ್ರಿಟಿಷರ ನೇರ ಆಡಳಿತಕ್ಕೆ ಒಳಪಡಿಸಿ ರಾಜರಿಗೆ ವರ್ಷಾಶನವನ್ನೀಯುವ ಏರ್ಪಾಡು ಮಾಡಿದ (1831).

ಮುಮ್ಮಡಿ ಕೃಷ್ಣರಾಜ ಒಡೆಯರು ಹಲವು ರೀತಿಯಲ್ಲಿ ಪ್ರಯತ್ನಿಸಿದರೂ ಮುಂದೆ ಬ್ರಿಟಿಷರೇ ನೇಮಿಸಿದ್ದ ವಿಚಾರಣಾ ಸಮಿತಿಯೊಂದು ಮೈಸೂರಿನ ಕಷ್ಟ ಆರ್ಥಿಕಸ್ಥಿತಿಗೆ ಹಾಗೂ ನಗರದ ಬಂಡಾಯಕ್ಕೆ ಒಡೆಯರ ರಾಜನೀತಿ ಕಾರಣವಲ್ಲವೆಂದು ಸ್ಪಷ್ಟಪಡಿಸಿದರೂ ಇವರಿಗೆ ರಾಜ್ಯಾಧಿಕಾರ ಪುನಃ ದಕ್ಕಲಿಲ್ಲ. ಜೀವಿತದ ಕೊನೆಯ ವರ್ಷಗಳಲ್ಲಿ ಬ್ರಿಟಿಷ್ ಸರ್ಕಾರ ಮೈಸೂರು ರಾಜವಂಶದವರಿಗೆ ರಾಜ್ಯ ಸೇರಬೇಕೆಂದು ತೀರ್ಮಾನಿಸಿದರೂ ಅದು ಜಾರಿಗೆ ಬಂದದ್ದು ಇವರ ಮರಣಾನಂತರ, 1881ರಲ್ಲಿ.

ಅನೇಕ ಗೊಂದಲ, ದಂಗೆ, ಯುದ್ಧ, ಕ್ಷೋಭೆ ಹಾಗೂ ಕ್ಷಾಮಗಳ ಶ್ರೇಣಿಯಲ್ಲಿ ಏರಿಳಿದು ಜೀವನಪರ್ಯಂತ ಹೋರಾಟದ ಬದುಕನ್ನೇ ಬಾಳಿದ ಮುಮ್ಮಡಿ ಕೃಷ್ಣರಾಜ ಒಡೆಯರು 1868ರಲ್ಲಿ ನಿಧನಹೊಂದಿದರು.

ಧರ್ಮಭೀರುವಾಗಿದ್ದ ಇವರು ಅನೇಕ ದಾನ ಕಾರ್ಯಗಳನ್ನು ನಡೆಸಿದರು. ನಂಜನಗೂಡು, ಮೇಲುಕೋಟೆ, ಶ್ರೀರಂಗಪಟ್ಟಣ, ಚಾಮುಂಡಿಬೆಟ್ಟ ಇತ್ಯಾದಿ ದೇವಾಲಯಗಳಿಗೂ ಅನೇಕ ಮಠಗಳಿಗೂ ದಾನದತ್ತಿಗಳನ್ನಿತ್ತರು. ಅನೇಕ ಅಗ್ರಹಾರಗಳನ್ನು ಸ್ಥಾಪಿಸಿದರು. ಸೋಸಲೆ, ಮೂಗೂರು, ಮುಡುಕುತೊರೆ, ತಲಕಾಡು, ಬಿಳಿಗಿರಿರಂಗನಬೆಟ್ಟ, ಚಾಮುಂಡಿಬೆಟ್ಟ ಮೊದಲಾದೆಡೆಗಳ ದೇವಾಲಯಗಳ ಜೀರ್ಣೋದ್ಧಾರ ಮಾಡಿದರು. ಮೈಸೂರಿನ ಲಕ್ಷ್ಮೀರಮಣ, ಚಾಮುಂಡಿಬೆಟ್ಟದ ಚಾಮುಂಡೇಶ್ವರಿ ಮತ್ತು ನಂಜನಗೂಡಿನ ಶ್ರೀಕಂಠೇಶ್ವರ ದೇವಾಲಯಗಳ ಮಹಾಗೋಪುರಗಳು ಇವರ ಕಾಲದ ರಚನೆಗಳು. (ಎಚ್.ಆರ್.ಡಿ.ಜಿ.)

ಮುಮ್ಮಡಿ ಕೃಷ್ಣರಾಜರಿಗೆ ಸಾಹಿತ್ಯ, ಸಂಸ್ಕೃತಿಗಳ ಬಗ್ಗೆ ಅಪಾರವಾದ ಒಲವಿತ್ತು. ಇವರ ಆಶ್ರಯದಲ್ಲಿ ಪ್ರಸಿದ್ಧ ವಿದ್ವಾಂಸರು, ಕವಿಗಳು, ಶಿಲ್ಪಿಗಳು ಮತ್ತು ಸಂಗೀತಗಾರರು ಕಲಾಸೃಷ್ಟಿಯಲ್ಲಿ ನಿರತರಾಗಿದ್ದರು. ವೀಣೆ ವೆಂಕಟಸುಬ್ಬಯ್ಯ, ಕುಣಿಗಲು ರಾಮಶಾಸ್ತ್ರಿ, ಸೋಸಲೆ ಗರಳಪುರಿಶಾಸ್ತ್ರಿ, ಅಳಿಯ ಲಿಂಗರಾಜ, ಕೆಂಪುನಾರಾಯಣ, ದೇವಚಂದ್ರ, ದೇವಲಾಪುರದ ನಂಜುಂಡ, ಬಸವಪ್ಪಶಾಸ್ತ್ರಿ ಮೊದಲಾದವರನ್ನು ಹೆಸರಿಸಬಹುದು. ರಾಜರು ಇಂಥ' ಕವಿಗಳಿಗೆ, ಕಲಾವಿದರಿಗೆ ಆಶ್ರಯ ನೀಡಿದುದೆ ಅಲ್ಲದೆ ಸ್ವತಃ ಕನ್ನಡದಲ್ಲಿ ಹೇರಳವಾಗಿ ಕೃತಿರಚನೆ ಮಾಡಿದ್ದಾರೆ. ಸಂಸ್ಕೃತದಲ್ಲಿ ಕೃಷ್ಣಕಥಾಪುಷ್ಪಮಂಜರಿ, ರಾಮಾಯಣ ಕಥಾಪುಷ್ಪಮಂಜರಿ, ಚಾಮುಂಡಿ ಮಂಗಳಮಾಲಿಕಾ ಎಂಬ ಕೃತಿಗಳನ್ನು ರಚಿಸಿದ್ದಾರೆ. ಕನ್ನಡ ಮತ್ತು ಸಂಸ್ಕೃತ ಎರಡೂ ಭಾಷೆಗಳಲ್ಲಿ ಸುಮಾರು ಐವತ್ತೊಂಬತ್ತು ಗ್ರಂಥಗಳು ಇವರ ಹೆಸರಿನಲ್ಲಿವೆ. ಇವು ಇವರ ವಿದ್ವತ್ತು ಪ್ರತಿಭೆಗಳಿಗೆ ಸಾಕ್ಷಿಯಾಗಿವೆ.



ಇವರು ಶೃಂಗಾರಪ್ರಧಾನವಾದ ರತ್ನಾವಳಿ ನಾಟಕವನ್ನು ಗದ್ಯದಲ್ಲಿ ವತ್ಸರಾಜಕಥೆ ಎಂಬ ಹೆಸರಿನಲ್ಲಿ ಬರೆದಿದ್ದಾರೆ. ಸೌಗಂಧಿಕಾಪರಿಣಯವನ್ನು ಭಾಮಿನೀ ಷಟ್ಪದಿಯಲ್ಲಿಯೂ ಗದ್ಯದಲ್ಲಿಯೂ ಬರೆದಿದ್ದಾರೆ. ಕೃಷ್ಣಕಥಾಸಂಗ್ರಹ ಇವರ ಇನ್ನೊಂದು ಗ್ರಂಥ'. ಇದರಲ್ಲಿ ಕೃಷ್ಣನ ಅನೇಕ ಅವತಾರಗಳು ವರ್ಣಿತವಾಗಿವೆ. ರಾಮಾವತಾರದ ಕಥೆ 77 ಅಧ್ಯಾಯಗಳಲ್ಲಿ ವಿಸ್ತಾರವಾಗಿ ವರ್ಣಿತವಾಗಿದೆ. ಬೌದ್ಧಾವತಾರ ಕಪಿಲಾವತಾರಗಳೂ ದತ್ತಾತ್ರೇಯ ವೃತ್ತಾಂತವೂ ವೆಂಕಟೇಶಮಹಾತ್ಮೆ, ಶ್ರೀನಿವಾಸ ಕೊರವಂಜಿಯ ವೇಷ ಧರಿಸಿದ ಪ್ರಸಂಗಗಳೂ ಇಲ್ಲಿ ಸೇರಿವೆ.

ಸಂಸ್ಕೃತ ಭಾಷೆಯಲ್ಲಿದ್ದು ಸಾಮಾನ್ಯ ಜನರಿಗೆ ನಿಲುಕದಿದ್ದ ಭಾರತ ಭಾಗವತಗಳನ್ನು ಇವರು ತಿಳಿಯಾದ ಕನ್ನಡದಲ್ಲಿ ಗದ್ಯರೂಪದಲ್ಲಿ ಬರೆದಿದ್ದಾರೆ. ಕಾಳಿದಾಸನ ಶಾಕುಂತಲ, ವಿಕ್ರಮೋರ್ವಶೀಯ, ಮಾಳವಿಕಾಗ್ನಿಮಿತ್ರ ನಾಟಕಗಳು ಕನ್ನಡ ಗದ್ಯರೂಪದಲ್ಲಿವೆ. ಪಂಚತಂತ್ರದ ನೀತಿಕಥೆಗಳನ್ನು ಕನ್ನಡದಲ್ಲಿ ಬಾಲಹಿತಾರ್ಥವಾಗಿ ಬರೆದಿರುವುದಾಗಿ ಹೇಳಿಕೊಂಡಿದ್ದಾರೆ. ಪದ್ಮಪುರಾಣಾಂತರ್ಗತವಾದ ಆರ್ಕಪುಷ್ಕರಿಣಿ ಮಹಾತ್ಮ್ಯವೂ ಅಖಂಡ ಕಾವೇರಿ ಮಹಾತ್ಮ್ಯವೂ ಸಾಮಾನ್ಯ ಜನರಿಗಾಗಿ ಬರೆದ ಕೃತಿಗಳು. ಅಖಂಡ ಕಾವೇರಿ ಮಹಾತ್ಮ್ಯ ಟೀಕು ಸ್ಕಾಂದ ಪುರಾಣದ ಆಧಾರದ ಮೇಲೆ ರಚಿತವಾದುದು. ಇದರಲ್ಲಿ ಸಂಸ್ಕೃತ ಶ್ಲೋಕಗಳಿಗೆ ವಿವರಣಾತ್ಮಕ ಟೀಕೆಯಿದೆ. ಶ್ರೀತತ್ತ್ವನಿಧಿ ಮುಮ್ಮಡಿಯವರಿಂದ ರಚಿತವಾದ ಒಂದು ವಿಶಿಷ್ಟ ಗ್ರಂಥ. ಇದರಲ್ಲಿ ಶಕ್ತಿನಿಧಿ, ವಿಷ್ಣುನಿಧಿ, ಶಿವನಿಧಿ, ಬ್ರಹ್ಮನಿಧಿ, ಗ್ರಹನಿಧಿ, ವೈಷ್ಣವನಿಧಿ, ಶೈವನಿಧಿ, ಆಗಮನಿಧಿ ಮತ್ತು ಕೌತುಕನಿಧಿ ಎಂಬ ಒಂಬತ್ತು ನಿಧಿಗಳಿವೆ. ಅವುಗಳಲ್ಲಿರುವ ವಿಷಯಗಳನ್ನು ಸುಲಭವಾಗಿ ಅರಿತುಕೊಳ್ಳಲು ಸಾಧ್ಯವಾಗುವಂತೆ ಚಿತ್ರಗಳನ್ನು ಕೊಡಲಾಗಿದೆ. ಈಗ ಉಪಲಬ್ಧವಿರುವ ಹಸ್ತಪ್ರತಿಯಲ್ಲಿ ಸುಮಾರು ನಾಲ್ಕು ಸಾವಿರ ಚಿತ್ರಗಳಿವೆ. ಈ ಚಿತ್ರಗಳ ಕಲಾಕೌಶಲ ಅದ್ಭುತವಾದುದು. ಕೊನೆಯದಾದ ಕೌತುಕ ನಿಧಿಯಲ್ಲಿ ಪುರಾತನ ಕಾಲದಿಂದ ರೂಢಿಯಲ್ಲಿ ಬಂದಿರುವ ಹಸ್ತಿಬಂಧಾದಿ ಕ್ರೀಡೆಗಳ ವಿವರಣೆ, ಚತುರಂಗಾದಿ ಆಟಗಳ ನಿರೂಪಣೆ ವಿವರವಾಗಿ ಬಂದಿವೆ. ಇದೊಂದು ಸಣ್ಣ ವಿಶ್ವಕೋಶ. ಸಂಖ್ಯಾರತ್ನಮಾಲಾ, ತ್ರೇತಾಗ್ನಿ, ತ್ರಿಮೂರ್ತಿಗಳು, ಗುಣತ್ರಯ, ಪಂಚಮಹಾಪಾತಕಗಳು, ಪಂಚಪ್ರಾಣ, ಪಂಚೇಂದ್ರಿಯಗಳು ಮುಂತಾದವುಗಳ ಸಾರಸಂಗ್ರಹ ಇಲ್ಲಿದೆ.

ಮುಮ್ಮಡಿ ಕೃಷ್ಣರಾಜರದು ಕನ್ನಡದಲ್ಲೊಂದು ಸಂಧಿಕಾಲ. ಈ ಕಾಲದಲ್ಲಿ ರಚನೆಗೊಂಡ ವಾಙ್ಮಯರಾಶಿಯಲ್ಲಿ ಹಳೆಯವು ಹೊಸವು ಹಲವು ಇವೆ. ಇಪ್ಪತ್ತನೆಯ ಶತಮಾನದ ಪ್ರಾರಂಭಕಾಲ ಕನ್ನಡ ಸಾಹಿತ್ಯದ ನವೋದಯ ಕಾಲವಾಗಿದ್ದು ಅದರ ಹಿನ್ನೆಲೆ, ಹತ್ತೊಂಬತ್ತನೆಯ ಶತಮಾನದಲ್ಲಿ ಇವರ ಆಳಿಕೆಯ ದಿನಗಳಲ್ಲಿ ರೂಪುಗೊಂಡಿತೆಂದು ಹೇಳಬೇಕು. (ಎಚ್.ಕೆ.ಆರ್.ಜಿ.)

**ಕೃಷ್ಣರಾಜ ಒಡೆಯರ್ IV :** 1884-1940. ಮೈಸೂರು ಸಂಸ್ಥಾನದ ಮಹಾರಾಜರು (1895-1940) 9ನೆಯ ಚಾಮರಾಜ ಒಡೆಯರ ಮಗ. ತಂದೆಯ ನಿಧನಾನಂತರ 1895ರಲ್ಲಿ ಸಿಂಹಾಸನಾರೋಹಣ ಮಾಡಿದರು. ನಾಲ್ವಡಿ ಕೃಷ್ಣರಾಜ ಒಡೆಯರು ಪ್ರಾಪ್ತವಯಸ್ಕರಾಗುವವರೆಗೆ (1902) ಅವರ ತಾಯಿ ಮಹಾರಾಣಿ ಕೆಂಪರಾಜಮ್ಮಣ್ಣಿಯವರು ರಾಜ್ಯಭಾರವನ್ನು ನೋಡಿಕೊಂಡರು. ಕೃಷ್ಣರಾಜರಿಗೆ ಕಾಲಕ್ಕನುಗುಣವಾದ ಹೊಸ ರೀತಿಯ ವಿದ್ಯೆ ಕೊಡಿಸಲಾಯಿತು. ಮೊದಲಿಗೆ ಜೆ.ಜೆ.ವಿಟ್ಲೆ, ಅನಂತರ ಸ್ಟೂವರ್ಟ್ ಫ್ರೇಸರ್ ಇವರ ಅಧ್ಯಾಪಕರಾಗಿದ್ದರು. ಜೊತೆಗೆ ಕೃಷ್ಣರಾಜರು ರಾಜ್ಯಾದ್ಯಂತ ಪ್ರವಾಸ ಮಾಡಿ ಜನಸಾಮಾನ್ಯರನ್ನು ಭೇಟಿಮಾಡಿ ಆಡಳಿತಾನುಭವ ಪಡೆದುಕೊಂಡರು ದೇಶದ ಸಂಪತ್ತನ್ನು ಪ್ರತ್ಯಕ್ಷವಾಗಿ ಅರಿತುಕೊಂಡರು. ಉತ್ತರ ಭಾರತದ ಅನೇಕ ರಾಜ್ಯಗಳಲ್ಲೂ ಇವರು ಪ್ರವಾಸ ಮಾಡಿದರು. ಪ್ರವಾಸ ಮತ್ತು ಭೇಟಿಗಳೇ ಕೃಷ್ಣರಾಜರ ಜನಪ್ರಿಯತೆಗೆ ಕಾರಣ. ಇವರು 1900ರಲ್ಲಿ ಕಾಠಿಯಾವಾಡದ ಉಪಶಾಖೆಗೆ ಸೇರಿದ ರಾಣಾ ಥಲಬಾಸ್ ಸಿಂಗ್‌ಜೀಯವರ ಪುತ್ರಿ ಪ್ರತಾಪಕುಮಾರಿ ದೇವಿಯವರನ್ನು ವಿವಾಹವಾದರು.

ಕೃಷ್ಣರಾಜ ಒಡೆಯರು ರಾಜ್ಯಾಡಳಿತವನ್ನು 1902ರಲ್ಲಿ ವಹಿಸಿಕೊಂಡರು. ಪ್ರವಾಸಾನುಭವದಿಂದ ರಾಜ್ಯದ ಕೊರತೆಗಳನ್ನು ಕೂಲಂಕಷವಾಗಿ ತಿಳಿದಿದ್ದ ಇವರು ಜನತೆಯಲ್ಲಿ ಪ್ರಜಾಸರ್ಕಾರದ ಬಗ್ಗೆ ಇದ್ದ ಒಲವನ್ನು ಅರಿತುಕೊಂಡಿದ್ದರು. ಸಂಸ್ಥಾನದ ಕಾನೂನು ರಚನೆಯ ಕಾರ್ಯದಲ್ಲಿ ಅಧಿಕಾರಿಗಳು ಮತ್ತು ಸಾರ್ವಜನಿಕ ಪಾಲ್ಗೊಳ್ಳುವಂತೆ ಮಾಡುವ ದೃಷ್ಟಿಯಿಂದ 1907ರಲ್ಲಿ ನ್ಯಾಯವಿಧಾಯಕ ಸಭೆಯನ್ನು ರಚಿಸಿದರು. ಸ್ತ್ರೀಯರಿಗೂ ಮತದಾನದ ಹಕ್ಕನ್ನು ಕಲ್ಪಿಸಿದರು. ವಿದ್ಯಾಭ್ಯಾಸ, ಜನಾರೋಗ್ಯ ರಕ್ಷಣೆ, ನೀರಾವರಿ, ವ್ಯವಸಾಯಾಭಿವೃದ್ಧಿ ಮೊದಲಾದ ಕ್ಷೇತ್ರಗಳಿಗೆ ಸಂಬಂಧಪಟ್ಟಂತೆ ಅನೇಕ ಇಲಾಖೆಗಳನ್ನು ವ್ಯವಸ್ಥೆಗೊಳಿಸಿ, ತಾವೇ ಮೇಲ್ವಿಚಾರಣೆ ನಡೆಸಿ ಮೈಸೂರು ಸಂಸ್ಥಾನವನ್ನು ಪ್ರಗತಿಪಥದಲ್ಲಿ ಸಾಗಿಸಿದರು.

ಕೃಷ್ಣರಾಜ ಒಡೆಯರು ಪ್ರವಾಸಪ್ರಿಯರು, ಧರ್ಮಭೀರುಗಳು. 1931ರಲ್ಲಿ ಕೈಲಾಸ ಮಾನಸಸರೋವರ ಯಾತ್ರೆಯನ್ನೂ 1937ರಲ್ಲಿ ಯುರೋಪ್ ಪ್ರವಾಸವನ್ನೂ ಮಾಡಿದರು. ಇವರ ಸಹೋದರರಾದ ಯುವರಾಜ ಕಂಠೀರವ ನರಸರಾಜ ಒಡೆಯರ ವಿದೇಶ ಪ್ರವಾಸದ ಅನುಭವ ಕೃಷ್ಣರಾಜ ಒಡೆಯರ ರಾಜ್ಯಸುಧಾರಣೆಗೆ ಅನೇಕ ವಿಧದಲ್ಲಿ ಸಹಾಯಕವಾಯಿತು.



ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತಾವಧಿಯಲ್ಲಿ ಪಿ.ಎನ್. ಕೃಷ್ಣಮೂರ್ತಿ, ವಿ.ಪಿ.ಮಾಧವರಾವ್, ಎಂ.ವಿಶ್ವೇಶ್ವರಯ್ಯ, ಕಾಂತರಾಜ ಅರಸು, ಆಲ್ಬಿಯನ್ ಬ್ಯಾನರ್ಜಿ, ಮಿರ್ಜಾ ಇಸ್ಮಾಯಿಲ್ - ಇವರು ದಿವಾನರಾಗಿ ರಾಜ್ಯದ ಪ್ರಗತಿಗಾಗಿ ಶ್ರಮಿಸಿದರು. ಮುಂಬಯಿ ಪ್ರಾಂತ್ಯದ ಸೇವೆಯಲ್ಲಿದ್ದ ಎಂ.ವಿಶ್ವೇಶ್ವರಯ್ಯನವರನ್ನು ಕರೆಸಿ ಮುಖ್ಯ ಎಂಜಿನಿಯರಾಗಿ ನೇಮಿಸಿದರು. 1912ರಲ್ಲಿ ಅವರನ್ನು ದಿವಾನರನ್ನಾಗಿ ನೇಮಿಸಿ ಅವರಿಂದ ರಾಜ್ಯಕ್ಕೆ ಹಲವಾರು ಆಧುನಿಕ ಯೋಜನೆಗಳು ಕಾರ್ಯಗತಗೊಳ್ಳುವಂತೆ ಪ್ರೇರಕರೂ ಪೋಷಕರೂ ಆಗಿ ನಿಂತವರು ನಾಲ್ವಡಿಯವರು. ಮೈಸೂರು ಸಂಸ್ಥಾನ ಪ್ರಗತಿಪರ ಸಂಸ್ಥಾನವೆಂದು ಕರೆಸಿಕೊಳ್ಳಲು ನಾಲ್ವಡಿಯವರು, ಎಂ.ವಿಶ್ವೇಶ್ವರಯ್ಯನವರು ಮತ್ತು ಸರ್ ಇಸ್ಮಾಯಿಲರು ನೀಡಿದ ಕೊಡುಗೆಗಳು ಅಮೂಲ್ಯವಾದವು. ಇದರ ಪರಿಣಾಮವಾಗಿ ಮೈಸೂರು ಸಂಸ್ಥಾನ ಭಾರತದ ಮಾದರಿ ರಾಜ್ಯ ಎನಿಸಿತು. ವಿಶ್ವಪ್ರಸಿದ್ಧವಾದ ಕೃಷ್ಣರಾಜ ಸಾಗರ ಮತ್ತು ಬೃಂದಾವನ ಹಾಗೂ ಭದ್ರಾವತಿಯ ಕಬ್ಬಿಣದ ಕಾರ್ಖಾನೆ, ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆ (1916) - ಇವು ಕೃಷ್ಣರಾಜರ ಮಹತ್ತರ ಸಾಧನೆ. ಇವರು ಮೈಸೂರು ವಿಶ್ವವಿದ್ಯಾನಿಲಯದ ಮೊದಲ ಕುಲಾಧಿಪತಿಯಾಗಿದ್ದರು. ಮಹಾತ್ಮ ಗಾಂಧಿಯವರಿಂದ ರಾಜರ್ಷಿ ಎಂಬ ಬಿರುದನ್ನು ಪಡೆದು, ಆದರ್ಶ ರಾಜನೆನಿಸಿಕೊಂಡು, ಹಿಂದಿನ ಒಡೆಯರುಗಳ ಕನಸುಗಳನ್ನು ನನಸಾಗಿಸಿ, ತನುಮನಧನಗಳನ್ನು ಸವೆಸಿ, ಅನೇಕ ಸುಧಾರಣೆಗಳನ್ನು ಮಾಡಿ, ಅನೇಕ ಉದ್ಯಮ ಸಂಸ್ಥೆಗಳನ್ನು ಸ್ಥಾಪಿಸಿ ಮೈಸೂರು ರಾಜ್ಯಕ್ಕೆ ರಾಮರಾಜ್ಯ ಎಂಬ ಖ್ಯಾತಿ ದೊರಕಿಸಿ ಕೊಟ್ಟ ಕೀರ್ತಿ ಇವರದು.

ನಾಲ್ವಡಿ ಕೃಷ್ಣರಾಜ ಒಡೆಯರು ಬನಾರಸ್ ಹಿಂದು ವಿಶ್ವವಿದ್ಯಾಲಯದ ಪ್ರಥಮ ಕುಲಾಧಿಪತಿಗಳಾಗಿದ್ದರು. ಆ ವಿಶ್ವವಿದ್ಯಾಲಯ 1921ರಲ್ಲಿ ಇವರಿಗೆ ಡಾಕ್ಟರ್ ಆಫ್ ಲಾ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿತು. ಚಾಮರಾಜ ಒಡೆಯರು 1888ರಲ್ಲಿ ಏರ್ಪಡಿಸಿದ್ದ ದಸರ ವಸ್ತು ಪ್ರದರ್ಶನವನ್ನು ನಾಲ್ವಡಿ ಕೃಷ್ಣರಾಜ ಒಡೆಯರು 1907ರಲ್ಲಿ ಮತ್ತೆ ಪ್ರಾರಂಭಿಸಿದರು.

ನಾಲ್ವಡಿ ಕೃಷ್ಣರಾಜ ಒಡೆಯರು ಸಂಗೀತಾದಿ ಕಲೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿ ಮೈಸೂರಿನ ಕೀರ್ತಿಯನ್ನು ಹೆಚ್ಚಿಸಿದರು. ವೈಣಿಕ ಶಿಖಾಮಣಿ ಶೇಷಣ್ಣ, ಭಕ್ಷಿ ಸುಬ್ಬಣ್ಣ, ಬಿಡಾರಂ ಕೃಷ್ಣಪ್ಪ, ಮೈಸೂರು ವಾಸುದೇವಾಚಾರ್ಯ, ತಚ್ಚೂರು ಶಿಂಗರಾಚಾರ್ಯ, ಚಿಂತಲಪಲ್ಲಿ ವೆಂಕಟರಾವ್, ವೀಣೆ ಶಿವರಾಮಯ್ಯ, ವೀಣೆ ವೆಂಕಟಗಿರಿಯಪ್ಪ, ಬಿ.ದೇವೇಂದ್ರಪ್ಪ, ಆರ್.ಎನ್.ಕೇಶವಮೂರ್ತಿ, ಎಂ.ಎಸ್.ಶಿವರುದ್ರಪ್ಪ ಇವರೇ ಮೊದಲಾದ ಸಂಗೀತಗಾರರೂ, ಜಟ್ಟಿ ತಾಯಮ್ಮ, ತಿರುಮಕೂಡಲು ಸುಂದರಮ್ಮ ಮೊದಲಾದ ನಾಟ್ಯ ಕಲಾವಿದೆಯರೂ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿದ್ದರು. ಆಗಾಗ್ಗೆ ಹೊರಗಿನ ಪ್ರಾಂತ್ಯಗಳ ಪ್ರಸಿದ್ಧ ಉತ್ತರಾದಿ ದಕ್ಷಿಣಾದಿ ಸಂಗೀತ ವಿದ್ವಾಂಸರನ್ನು ಇವರು ಮೈಸೂರಿಗೆ ಆಹ್ವಾನಿಸಿ ಗೌರವಿಸಿದರು. ಕರ್ನಾಟಕ ಸಂಗೀತದ ವಾದ್ಯವೃಂದವನ್ನು ಏರ್ಪಡಿಸಿದವರು ಕೃಷ್ಣರಾಜ ಒಡೆಯರು.

ಹೀಗೆ ಆದರ್ಶ ಪ್ರಭುವಾಗಿ ಹಲವು ಲೋಕೋಪಕಾರಿ ಕಾರ್ಯಗಳನ್ನು ಮಾಡಿ, ಸಾಹಿತ್ಯ ಸಂಸ್ಕೃತಿ ಸಂವರ್ಧನೆಯನ್ನು ಸಾಧಿಸಿ ಜನಪ್ರಿಯರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರು 1940ರಲ್ಲಿ ನಿಧನಹೊಂದಿದರು. (ವಿ.ಎಸ್.ಎಸ್.; ಎಚ್.ಆರ್.ಡಿ.ಜಿ.)

**ಕೃಷ್ಣರಾಜನಗರ** : ಮೈಸೂರು ಜಿಲ್ಲೆಯ ಉತ್ತರ ಭಾಗದ ಒಂದು ತಾಲ್ಲೂಕು, ಆ ತಾಲ್ಲೂಕಿನ ಕೇಂದ್ರ. ದಕ್ಷಿಣದಲ್ಲಿ ಹುಣಸೂರು ತಾಲ್ಲೂಕು, ಆಗ್ನೇಯದಲ್ಲಿ ಮೈಸೂರು ತಾಲ್ಲೂಕು, ಈಶಾನ್ಯ ಮತ್ತು ಪೂರ್ವದಲ್ಲಿ ಮಂಡ್ಯ ಜಿಲ್ಲೆ ಉತ್ತರದಲ್ಲಿ ಹಾಸನ ಮತ್ತು ಮಂಡ್ಯ ಜಿಲ್ಲೆಗಳು ಮತ್ತು ಪಶ್ಚಿಮದಲ್ಲಿ ಪಿರಿಯಾಪಟ್ಟಣ ತಾಲ್ಲೂಕು ಇವೆ. ಈ ತಾಲ್ಲೂಕಿನ ಮೇರೆಗಳು. ವಿಸ್ತೀರ್ಣ 602.4ಚ.ಕಿಮೀ. ಜನಸಂಖ್ಯೆ 2,39,155. ಕಸಬೆ, ಹೆಬ್ಬಾಳು, ಚುಂಚನಕಟ್ಟೆ, ಸಾಲಿಗ್ರಾಮ, ಮಿರ್ಲೆ, ಹೊಸ ಅಗ್ರಹಾರ ಹೋಬಳಿಗಳು. ಒಟ್ಟು 173 ಗ್ರಾಮಗಳಿವೆ.

ಪಶ್ಚಿಮದಿಂದ ಪೂರ್ವಾಭಿಮುಖವಾಗಿ ತಾಲ್ಲೂಕು ಇಳಿಜಾರಾಗಿದೆ. ಎತ್ತರದ ಬೆಟ್ಟಗಳಾಗಲಿ, ಕಾಡುಗಳಾಗಲಿ ಇಲ್ಲ. ಎತ್ತರದ ಪ್ರದೇಶಗಳಲ್ಲಿ ಕಿರಿ ಪೊದೆಗಳೂ ತಗ್ಗಿನಲ್ಲಿ ಮುಳ್ಳಿನ ಗಿಡಗಳೂ ಇಲ್ಲಿನ ಸ್ವಾಭಾವಿಕ ಸಸ್ಯಗಳು. ಅಲ್ಲಲ್ಲಿ ತೋಪುಗಳುಂಟು. ಇಲ್ಲಿಯ ಮಣ್ಣು ಮರಳು ಮಿಶ್ರಿತ ಕೆಂಪು ಅಥವಾ ಕಂದು ಜೇಡಿ. ಮಣ್ಣಿನ ಗುಣದಲ್ಲಿ ಅಲ್ಲಲ್ಲಿ ವ್ಯತ್ಯಾಸವಿದ್ದರೂ ನೀರಾವರಿಯ ಅನುಕೂಲವಿರುವೆಡೆಯಲ್ಲಿ ಅದನ್ನು ವ್ಯವಸಾಯಕ್ಕೆ ಚೆನ್ನಾಗಿ ಅಳವಡಿಸಿಕೊಳ್ಳಲಾಗಿದೆ. ತಾಲ್ಲೂಕಿನ ಉತ್ತರ ಭಾಗದಲ್ಲಿ ಅತ್ಯಂತ ಪ್ರಾಚೀನವಾದ ಧಾರವಾಡ ಪದರಶಿಲೆಗಳಿವೆ. ಉಳಿದ ಭಾಗಗಳು ಪರ್ಯಾಯದ್ವೀಪೀಯ ನೈಸ್ ಶಿಲೆಯಿಂದ ಕೂಡಿವೆ. ಜುಲೈ, ಆಗಸ್ಟ್, ಸೆಪ್ಟೆಂಬರ್ ತಿಂಗಳುಗಳಲ್ಲಿ ಸಾಮಾನ್ಯವಾಗಿಯೂ ಅಕ್ಟೋಬರ್‌ನಲ್ಲಿ ಹೆಚ್ಚಾಗಿಯೂ ಮಳೆಯಾಗುತ್ತದೆ. ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ 953ಮಿಮೀ.

ಕಾವೇರಿ ನದಿ ಈ ತಾಲ್ಲೂಕಿನ ನಡುವೆ ಪ್ರವಹಿಸುತ್ತದೆ. ಚುಂಚನಕಟ್ಟೆಯ ಬಳಿ ಇಕ್ಕಟ್ಟಾದ ಕಣಿವೆಯಲ್ಲಿ ಬಂಡೆಗಳ ಮೇಲಿಂದ ದುಮುಕಿ ಮುಂದೆ ಹೇಮಾವತಿ ಮತ್ತು ಲಕ್ಷ್ಮಣತೀರ್ಥಗಳೊಂದಿಗೆ ಕೂಡಿಕೊಳ್ಳುತ್ತದೆ. ಕೃಷ್ಣರಾಜಸಾಗರ ಕಟ್ಟೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನಲ್ಲಿದೆಯಾದರೂ ಆ ಜಲಾಶಯದ ನೀರು ಕೃಷ್ಣರಾಜನಗರದ ಭಾಗದಲ್ಲೂ ಹರಡಿದೆ.

ಕಾವೇರಿಯ ಅಣೆಕಟ್ಟುಗಳಿಂದ ಈ ತಾಲ್ಲೂಕಿಗೆ ನೀರಾವರಿ ಸೌಲಭ್ಯ ಒದಗಿಬಂದಿದೆ. ಕಾಲುವೆಗಳ ಒಟ್ಟು ಉದ್ದ 161ಕಿಮೀ ಗಳಿಗಿಂತಲೂ ಹೆಚ್ಚು. ಈ ತಾಲ್ಲೂಕಿನ ಮುಖ್ಯ ಬೆಳೆ ಬತ್ತ. ಕಬ್ಬಿನ ಬೆಳೆ ಈಚೆಗೆ ರೂಢಿಗೆ ಬಂದಿದೆ. ರಾಗಿ ಇಲ್ಲಿಯ ಮುಖ್ಯ ಖುಷ್ಕಿ ಬೆಳೆ. ಎಣ್ಣೆ ಬೀಜಗಳು, ದ್ವಿದಳ ಧಾನ್ಯಗಳು ಮತ್ತು ಹೊಗೆಸೊಪ್ಪು ಇತರ ಬೆಳೆಗಳು. ಇಲ್ಲಿ ತೋಟದ ಬೇಸಾಯವೂ ಬಾಗಾಯ್ತು ಉಂಟು. ತೋಟದ ಬೆಳೆಗಳೆಂದರೆ ಬಾಳೆ, ವೀಳೆಯದೆಲೆ, ಗೆಣಸು ಮತ್ತು ತರಕಾರಿಗಳು.

ಈ ತಾಲ್ಲೂಕಿನಲ್ಲಿ ಅನೇಕ ಗೃಹಕೈಗಾರಿಕೆಗಳುಂಟು. ಅಲ್ಲಲ್ಲಿ ಹತ್ತಿಬಟ್ಟೆ ಮತ್ತು ಕಂಬಳಿಗಳನ್ನು ತಯಾರಿಸುತ್ತಾರೆ.

ಮೈಸೂರು-ಹಾಸನ ರೈಲು ಮತ್ತು ರಸ್ತೆಗಳು ಈ ತಾಲ್ಲೂಕಿನ ಮುಖಾಂತರ ಹಾದುಹೋಗುತ್ತವೆ. ಕೃಷ್ಣರಾಜನಗರದಿಂದ ನೆರೆಯ ತಾಲ್ಲೂಕು ಕೇಂದ್ರಗಳಿಗೆ ರಸ್ತೆಗಳಿವೆ. ಮಿರ್ಲೆ, ಸಾಲಿಗ್ರಾಮ, ಹೊಸ ಅಗ್ರಹಾರ ಮತ್ತು ಹೆಬ್ಬಾಳು ಈ ತಾಲ್ಲೂಕಿನ ಮುಖ್ಯ ಸ್ಥಳಗಳು. ಚುಂಚನಕಟ್ಟೆ, (ನೋಡಿ) ಕಪ್ಪಡಿ ಪವಿತ್ರ ಸ್ಥಳಗಳು. ಚುಂಚನಕಟ್ಟೆಯಲ್ಲಿ ಜನವರಿ ತಿಂಗಳಲ್ಲಿ ದೊಡ್ಡ ಜಾತ್ರೆಯಾಗುತ್ತದೆ. ದನಗಳ ಪ್ರದರ್ಶನ ಈ ಜಾತ್ರೆಯ ಮುಖ್ಯ ಆಕರ್ಷಣೆ.

ಕೃಷ್ಣರಾಜನಗರ ಈ ತಾಲ್ಲೂಕಿನ ಕೇಂದ್ರ. ಜನಸಂಖ್ಯೆ 30,603. ಇದು ತಾಲ್ಲೂಕಿನ ಪ್ರಮುಖ ಸಾರಿಗೆ ಹಾಗೂ ವ್ಯಾಪಾರ ಕೇಂದ್ರ. ಇಲ್ಲಿ ಅನೇಕ ಬತ್ತದ ಗಿರಣಿಗಳಿವೆ. ಹಿಂದೆ ಕಾವೇರಿ ನದಿಯ ದಂಡೆಯಲ್ಲಿ ನದಿ ಎಡಕ್ಕೆ ತಿರುಗುವಲ್ಲಿ ಈ ಊರಿದ್ದು ಇದಕ್ಕೆ ಎಡತೊರೆ ಎಂಬ ಹೆಸರು ಇತ್ತು. ಕೃಷ್ಣರಾಜ ಸಾಗರದ ನಿರ್ಮಾಣ ಆದ ಮೇಲೆ ಅದರಿಂದ ಈ



ಅರ್ಕೇಶ್ವರ ದೇವಾಲಯ, ಕೃಷ್ಣರಾಜನಗರ

ಎಡತೊರೆಯ ಒಂದು ಭಾಗ ಆಗಾಗ ಮುಳುಗಡೆಯಾಗುತ್ತಿದ್ದುದರಿಂದ ಹೊಸ ಪಟ್ಟಣವನ್ನು ಹಳೆಯ ಊರಿಗೆ 3ಕಿಮೀ ದೂರದಲ್ಲಿ ಎತ್ತರವಾದ ಸ್ಥಳದಲ್ಲಿ ನಿರ್ಮಿಸಿ (1934) ನಾಲ್ವಡಿ ಕೃಷ್ಣರಾಜ ಒಡೆಯರ ಹೆಸರಿನಲ್ಲಿ ಕೃಷ್ಣರಾಜನಗರ ಎಂದು ನಾಮಕರಣ ಮಾಡಲಾಯಿತು. ಎಡತೊರೆಯ ಹಳೆಯ ನಿವೇಶನದಲ್ಲಿ ಪ್ರಸಿದ್ಧವಾದ ಅರ್ಕೇಶ್ವರ ದೇವಾಲಯವಿದೆ. ದೇವಾಲಯದ ಪಕ್ಕದಲ್ಲಿ ನದಿಗೆ ಇಳಿಯಲು ಪಾವಟಿಗೆಗಳಿವೆ. ಇದೊಂದು ಸುಂದರ ತಾಣವಾಗಿದೆ. ಇದು ಪವಿತ್ರ ಸ್ಥಳವೂ ಹೌದು. ರಥಸಪ್ತಮಿಯ ದಿನ ಸೂರ್ಯ ರಶ್ಮಿ ನೇರವಾಗಿ ಗರ್ಭಗುಡಿಯ ಲಿಂಗದ ಮೇಲೆ ಬೀಳುವುದು ಇಲ್ಲಿಯ ವೈಶಿಷ್ಟ್ಯ. ಆ ದಿನ ದೊಡ್ಡ ಜಾತ್ರೆ ನಡೆಯುತ್ತದೆ. ದೇವಾಲಯ ಬಹುಶಃ ಮೂಲತಃ ಚೋಳರ ಕಾಲದ್ದು. ಈಗಿನ ಹೆಚ್ಚಿನ ಭಾಗ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಕಟ್ಟಡ. 11ನೆಯ ಶತಮಾನದಲ್ಲಿ ಗಂಗರನ್ನು ಸೋಲಿಸಿ ರಾಜೇಂದ್ರ ಚೋಳ ಈ ಸ್ಥಳವನ್ನು ವಶಪಡಿಸಿಕೊಂಡಿದ್ದ. (ಕೆ.ಆರ್.ಆರ್.; ಟಿ.ಎಲ್.ಕೆ.)

**ಕೃಷ್ಣರಾಜಪೇಟೆ** : ಮಂಡ್ಯ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಅದರ ಕೇಂದ್ರ. ಈಶಾನ್ಯ, ಪೂರ್ವ ಮತ್ತು ಆಗ್ನೇಯ ದಿಕ್ಕಿನಲ್ಲಿ ನಾಗಮಂಗಲ ಮತ್ತು ಪಾಂಡವಪುರ ತಾಲ್ಲೂಕುಗಳೂ ದಕ್ಷಿಣ ಮತ್ತು ನೈಋತ್ಯದಲ್ಲಿ ಮೈಸೂರು ಜಿಲ್ಲೆಯೂ ಉತ್ತರ ಮತ್ತು ವಾಯವ್ಯ ದಿಕ್ಕುಗಳ ಹಾಸನ ಜಿಲ್ಲೆಯೂ ಈ ತಾಲ್ಲೂಕನ್ನು ಸುತ್ತುವರಿದಿವೆ. 1891ರವರೆಗೆ ಇದಕ್ಕೆ ಅತ್ತಿಗುಪ್ಪೆ ಎಂಬ ಹೆಸರಿತ್ತು. ಆಗ ಇದು ಹಾಸನ ಜಿಲ್ಲೆಗೆ ಸೇರಿತ್ತು. ಆ ವರ್ಷ ಇದಕ್ಕೆ ಕೃಷ್ಣರಾಜಪೇಟೆ ಎಂದು ನಾಮಕರಣ ಮಾಡಿ ಮೈಸೂರು ಜಿಲ್ಲೆಗೆ ವರ್ಗಾಯಿಸಲಾಯಿತು. 1939ರಲ್ಲಿ ಮೈಸೂರು

ಜಿಲ್ಲೆಯನ್ನು ಒಡೆದು ಮಂಡ್ಯ ಜಿಲ್ಲೆಯನ್ನು ನಿರ್ಮಿಸಿದಾಗ ಇದು ಪಾಂಡವಪುರ ಉಪವಿಭಾಗಕ್ಕೆ ಸೇರಿತು. ತಾಲ್ಲೂಕಿನ ವಿಸ್ತೀರ್ಣ 906.3 ಚ.ಕಿಮೀ. ಜನಸಂಖ್ಯೆ 2,47,757. ಅಕ್ಕಿಹೆಬ್ಬಾಳು ಕೃಷ್ಣರಾಜಪೇಟೆ, ಕಿಕ್ಕೇರಿ, ಸೀಳನೆರೆ, ಸಂತೆಬಾಚಹಳ್ಳಿ ಮತ್ತು ಬೂಕನಕೆರೆ ಈ ತಾಲ್ಲೂಕಿನ ಹೋಬಳಿಗಳು. ಒಟ್ಟು 317 ಗ್ರಾಮಗಳಿವೆ.

ಕೃಷ್ಣರಾಜಪೇಟೆ ತಾಲ್ಲೂಕಿನಲ್ಲಿರುವ ಬೆಟ್ಟಗುಡ್ಡಗಳಲ್ಲಿ ಚೆನ್ನಗಿರಿ ಮತ್ತು ಜೆಲ್ಲಿ ಬೆಟ್ಟಗಳು ಮುಖ್ಯವಾದವು. ಜೆಲ್ಲಿ ಬೆಟ್ಟ ಕೃಷ್ಣರಾಜಪೇಟೆಗೆ ಸು.5ಕಿಮೀ ದೂರದಲ್ಲಿದೆ. ಬೆಣಚುಕಲ್ಲು ಮತ್ತು ಬೂದುಬಣ್ಣದ ಶಿಲೆಗಳು ಇಲ್ಲಿವೆ. ದಕ್ಷಿಣದ ಗವಿಬೆಟ್ಟ ಭಾಗದಲ್ಲಿ ಗಟ್ಟಿಯಾದ ಕೆಂಪು ಶಿಲೆಗಳಿವೆ. ಇದರ ಎತ್ತರ ಸಮುದ್ರಮಟ್ಟದಿಂದ ಸು.750 ರಿಂದ 900ಮೀ. ಸೀಳನೆರೆ ಹಳ್ಳಿಯ ಬಳಿ ಕ್ರೋಮೈಟ್ ನಿಕ್ಷೇಪಗಳಿವೆ. ಕೃಷ್ಣರಾಜಪೇಟೆಯ ಪಶ್ಚಿಮಕ್ಕೆ ಬೆಳ್ಳಿಬೆಟ್ಟದ ಬಳಿ ಚಿನ್ನ ದೊರೆಯುವುದೆಂದು ಭಾವಿಸಲಾಗಿದೆ. ಹೇಮಾವತಿ ನದಿ ಕಿಕ್ಕೇರಿ ಹೋಬಳಿಯ ಗುಡ್ಡೆ ಹೊಸಹಳ್ಳಿಯ ಬಳಿ ಈ ತಾಲ್ಲೂಕನ್ನು ಪ್ರವೇಶಿಸಿ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಹರಿದು ಕಾವೇರಿಯನ್ನು ಸೇರಿಕೊಳ್ಳುತ್ತದೆ.

ಕೃಷ್ಣರಾಜಪೇಟೆ ತಾಲ್ಲೂಕಿನಲ್ಲಿ ಮರಳು ಮಿಶ್ರಿತ ಕೆಂಪು ಮಣ್ಣಿನ ಪ್ರದೇಶ ಹೆಚ್ಚು. ಕೆಲವು ಕಡೆಗಳಲ್ಲಿ ಜೇಡಿಮಣ್ಣಿನ ನೆಲವಿದೆ. ಹೆಚ್ಚು ಪ್ರದೇಶ ಬಂಜರು ನೆಲ. ಪೊದೆ ಅಥವಾ ಕುರುಚಲು ಗಿಡಗಳಿಂದ ಕೂಡಿದ ಕಾಡುಗಳು ಅಲ್ಲಲ್ಲಿ ಕಂಡುಬರುತ್ತವೆ.

ತಾಲ್ಲೂಕಿನಲ್ಲಿ ಮುಂಗಾರು ಮತ್ತು ಹಿಂಗಾರು ಮಾರುತಗಳಿಂದ ಮತ್ತು ಏಪ್ರಿಲ್‌ನಿಂದ ನವೆಂಬರ್‌ವರೆಗೆ ನೈಋತ್ಯ ಮಾರುತಗಳಿಂದ ಮಳೆಯಾಗುವುದು. ಅಕ್ಟೋಬರ್ ಮಳೆಯ ಶಿಖರ ಮಾಸ. ಮಾರ್ಚ್ ಮೇ ತಿಂಗಳುಗಳಲ್ಲಿ ಉಷ್ಣತೆ ಹೆಚ್ಚು.

ಕೃಷ್ಣರಾಜಪೇಟೆಯ ಮುಖ್ಯ ವೃತ್ತಿ ವ್ಯವಸಾಯ; ಸೇ.90ರಷ್ಟು ಜನ ವ್ಯವಸಾಯವನ್ನೇ ಅವಲಂಬಿಸಿದ್ದಾರೆ. 24,344 ಎಕರೆಗಳಷ್ಟು ಭೂಮಿ ಕೃಷಿ ಯೋಗ್ಯವಲ್ಲ. ಸು.1,10,755 ಎಕರೆ ಭೂಮಿ ಸಾಗುವಳಿಗೆ ಒಳಪಟ್ಟಿದೆ. ಈ ತಾಲ್ಲೂಕಿನ ವ್ಯವಸಾಯ ಮಳೆಯನ್ನೇ ಬಹುವಾಗಿ ಅವಲಂಬಿಸಿದೆ. ಕೆರೆ, ಕಾಲುವೆ ಮತ್ತು ಬಾವಿಗಳೂ ಇವೆ.

ಈ ತಾಲ್ಲೂಕಿನಲ್ಲಿ ಕಾರು ಮತ್ತು ಹೈನು ಎಂಬ ಎರಡು ಬೆಳೆಗಳನ್ನು ಬೆಳೆಯುವರು. ಕಾರು ಬೆಳೆ ಜೂನ್-ಜುಲೈ ತಿಂಗಳುಗಳಲ್ಲೂ ಹೈನು ಬೆಳೆ ಡಿಸೆಂಬರ್-ಜನವರಿಗಳಲ್ಲೂ ಕಟಾವಾಗುತ್ತದೆ. ರಾಗಿ, ಬತ್ತ, ಹುರುಳಿ ಮತ್ತು ಜೋಳ ಇಲ್ಲಿನ ಮುಖ್ಯ ಬೆಳೆಗಳು. ಕಬ್ಬು, ನೆಲಗಡಲೆ, ಬಾಳೆ, ತೆಂಗು, ಹೊಗೆಸೊಪ್ಪು, ಇವನ್ನೂ ಬೆಳೆಯುತ್ತಾರೆ. ಇಲ್ಲಿ ಬನ್ನೂರು ಜಾತಿಯ ಕುರಿ ಸಾಕಣೆ ಇದೆ. ದನ ಮತ್ತು ಕೋಳಿ ಸಾಕಣೆಯೂ ಸಾಕಷ್ಟು ರೂಢಿಯಲ್ಲಿದೆ. (ಪಿ.ಎಚ್.)

ಈ ತಾಲ್ಲೂಕಿನ ಅಗ್ರಹಾರಬಾಚಹಳ್ಳಿ, ಅಘಲಯ, ಕಿಕ್ಕೇರಿ, ಗೋವಿಂದನಹಳ್ಳಿ, ತೆಂಗಿನಘಟ್ಟ, ತೊಣಚಿ, ಮಾದಾಪುರ ಮತ್ತು ಹೊಸಹೊಳಲು (ಆಯಾ ಲೇಖನಗಳನ್ನು ನೋಡಿ) ಈ ಸ್ಥಳಗಳು 12-13ನೆಯ ಶತಮಾನಗಳಲ್ಲಿ ಕಟ್ಟಿದ ಹೊಯ್ಸಳ ದೇವಾಲಯಗಳಿಗೆ ಪ್ರಸಿದ್ಧವಾಗಿವೆ. ಅಂಕನಹಳ್ಳಿಯಲ್ಲಿ ವ್ಯಾಸನತೋಳುಕಲ್ಲು ರೀತಿಯ ಮಾಸ್ತಿಕಲ್ಲುಗಳಿವೆ. ಸಾಸಲು ವೀರಶೈವರ ಯಾತ್ರಾಸ್ಥಳ. ತೆಂಡೆಕೆರೆಯಲ್ಲಿ ಒಂದು ಲಿಂಗಾಯತ ಮಠವಿದೆ. ಹೇಮಾವತಿ ದಡದಲ್ಲಿರುವ ಹೇಮಗಿರಿಯ (ನೋಡಿ) ಜಾತ್ರೆ ಈ ಸುತ್ತಿಗೆ ಪ್ರಸಿದ್ಧ. ಕಿಕ್ಕೇರಿ ಮತ್ತು ಸಿಂದಘಟ್ಟಗಳಲ್ಲಿ ರೇಷ್ಮೆ ನೂಲುವಿಕೆ ಮುಖ್ಯ ಉದ್ಯಮವಾಗಿದೆ.

ಕೃಷ್ಣರಾಜಪೇಟೆ ಈ ತಾಲ್ಲೂಕಿನ ಕೇಂದ್ರ. ಮಂಡ್ಯಕ್ಕೆ ವಾಯುವ್ಯ ದಿಕ್ಕಿನಲ್ಲಿದ್ದು ಪಾಂಡವಪುರ ರೈಲ್ವೆ ನಿಲ್ದಾಣದಿಂದ 33ಕಿಮೀ ಮತ್ತು ಮೈಸೂರಿಗೆ 53ಕಿಮೀ ದೂರದಲ್ಲಿದೆ. ಜನಸಂಖ್ಯೆ 22,473. 1891ರ ವರೆಗೂ ಇದನ್ನು ಅತ್ತಿಗುಪ್ಪೆ ಎಂದು ಕರೆಯುತ್ತಿದ್ದರು. ಇದು ತಾಲ್ಲೂಕಿನ ವ್ಯಾಪಾರ ಕೇಂದ್ರ. ಮೈಸೂರು-ಹಾಸನ ರಸ್ತೆ ಈ ಊರಿನ ಮೂಲಕ ಹೋಗುತ್ತದೆ. ಇಲ್ಲಿಂದ ನಾಗಮಂಗಲ, ಅಕ್ಕಿಹೆಬ್ಬಾಳು, ಮೇಲುಕೋಟೆ, ಪಾಂಡವಪುರ, ಮಂಡ್ಯ ಮುಂತಾದ ಕಡೆಗಳಿಗೆ ಮಾರ್ಗಸಂಪರ್ಕವಿದ್ದು ವಾಹನ ಸೌಕರ್ಯವಿದೆ. *

**ಕೃಷ್ಣರಾಜ, ಶಾಲ್ಯದ :** 1748-75. ಮೈಸೂರು ರಾಜರ ವಂಶದವನಾದ ಈತ ಕನ್ನಡ, ಸಂಸ್ಕೃತ, ತೆಲುಗು ಭಾಷೆಗಳಲ್ಲಿ ಗ್ರಂಥಗಳನ್ನು ಬರೆದಿರುವಂತೆ ತಿಳಿದುಬರುತ್ತದೆ. ಈತನನ್ನು ಶಾಲ್ಯದ ಅರಸು ಎಂದು ಕರೆಯುವುದೂ ಉಂಟು. ಅಕ್ಷರಾದಿ ನಿಘಂಟು, ಅಧ್ಯಾತ್ಮ ರಾಮಾಯಣದ ಉತ್ತರಕಾಂಡ, ಅನುಭವರಸಾಯನ, ಟೀಕಿನ ಕೀರ್ತನೆ, ಧರ್ಮಗುಪ್ತಚರಿತ್ರೆ, ನಳನಾಟಕ, ನಿಜದೀಪಿಕಾರತ್ನ, ನಿರ್ಣಯಶಿಖಾಮಣಿ, ಬಾಹಟದ ಟೀಕೆ, ಭಕ್ತಿಮಾರ್ಗಸರೋವರ, ಮೋಕ್ಷಲಕ್ಷ್ಮೀಮಂದಿರ, ಯಯಾತಿಕಾವ್ಯ, ವಿವೇಕಾಭರಣ, ವ್ರತಚರ್ಯೆ, ಷಟ್ಕೃತ್ಯಯ, ಸದಾಶಿವಶತಕ, ಅಪ್ರಸ್ತುತ (ಪ್ರಶಂಸಾಶತಕ) ಪ್ರಾಣೇಶ್ವರಶತಕ - ಇವು ಈತನ ಕೃತಿಗಳು. ಇವುಗಳಲ್ಲಿ ಕೆಲವು ಸಂಸ್ಕೃತ ಗ್ರಂಥಗಳಿರಬಹುದೆಂದು ಕವಿಚರಿತೆಕಾರರು ಅಭಿಪ್ರಾಯಪಟ್ಟಿದ್ದಾರೆ. ಹತ್ತು ಗ್ರಂಥಗಳು ಮಾತ್ರ ದೊರಕಿವೆ. ಜಗತ್ತಿನಲ್ಲಿ ಬೇಗುದಿಗೊಳ್ಳುವ ಜನರನ್ನು ನೋಡಿ ಕರುಣದಿಂದ ಭಕ್ತಿ, ಜ್ಞಾನ, ವೈರಾಗ್ಯಪರವಾದ ಗ್ರಂಥಗಳನ್ನು ತಾನು ಬರೆದುದಾಗಿ ಹೇಳಿಕೊಂಡಿರುವ ಇವನು ಷಟ್ಪದಿ, ಶತಕ, ಕೀರ್ತನೆ, ಯಕ್ಷಗಾನ ಈ ಎಲ್ಲ ಪ್ರಕಾರಗಳಲ್ಲಿ ಕೃತಿರಚನೆ ಮಾಡಿದ್ದಾನೆ.

ವಿವೇಕಾಭರಣ ಭಾಮಿನೀಷಟ್ಪದಿಯಲ್ಲಿದೆ. ಶ್ರೀರಂಗಪಟ್ಟಣದ ತ್ರಯಂಬಕ ಗುರು ತನ್ನ ಶಿಷ್ಯ ನರಸಾರ್ಯನಿಗೆ ನಿಗಮಾರ್ಥಗಳನ್ನು ಉಪದೇಶಿಸಿದ. ಆ ಉಪದೇಶ ಸಾರವನ್ನು ಸಂಸ್ಕೃತದಲ್ಲಿ ಜ್ಞಾನಸರ್ವಸ್ವ ಎಂಬ ಗ್ರಂಥದಲ್ಲಿ ನರಸಾರ್ಯ ನಿರೂಪಿಸಿದ. ಅದನ್ನು ಕನ್ನಡಿಸುವಂತೆ ಇವನಿಗೆ ಹೇಳಲು ಇವನು ಅದನ್ನು ವಿವೇಕಾಭರಣ ಎಂಬ ಗ್ರಂಥದಲ್ಲಿ ನೆರವೇರಿಸಿದ. ಪೂರ್ವ ಪುರಾಣೋಕ್ತಿಗಳ ಘನಸಾರವನ್ನು ನರಸಾರ್ಯನ ಗ್ರಂಥದಿಂದ ತೆಗೆದು ಎಲ್ಲರಿಗೂ ತಿಳಿಯುವಂತೆ, ತಿಳಿವು ನೆಲೆಗೊಳ್ಳುವ ಹಾಗೆ, ಶಾಸ್ತ್ರದ ಬಳಕೆ ತಲೆದೋರುವ ಹಾಗೆ, ಸಂದೇಹ ಉದಿಸದಂತೆ, ನಂಬಿಕೆ ಹುಟ್ಟುವಂತೆ ಕೃಷ್ಣರಾಜ ನಿರೂಪಿಸಿದ. ಇದರೊಳಗೆ ತನ್ನನ್ನು ನೋಡುವವನಿಗೆ ನಿಜಭಾವ ಕಾಣಿಸುವುದು ಎಂದಿದ್ದಾನೆ ಕವಿ.

ಸದಾಶಿವಶತಕದಲ್ಲಿ ಸದಾಶಿವ ಎಂದು ಕೊನೆಗೊಳ್ಳುವ ನೂರೊಂದು ವೃತ್ತಗಳಿವೆ. ಆರ್ತನಾಗಿ ಭಕ್ತಿಯಿಂದ ಮನಸ್ಸಿನ ಭಾವವನ್ನು ಕವಿ ಇಲ್ಲಿ ಹೊರಪಡಿಸಿರುವುದನ್ನು ಕಾಣಬಹುದು. ಪ್ರಾಣೇಶ್ವರಾ ಎಂಬ ಪದದಿಂದ ಕೊನೆಯಾಗುವ 102 ವೃತ್ತಗಳ ಗ್ರಂಥ ಪ್ರಾಣೇಶ್ವರಶತಕ. ನೀತಿಯನ್ನು ಇಲ್ಲಿ ಅನ್ಯೋಕ್ತಿರೂಪವಾಗಿ ಬೋಧಿಸಲಾಗಿದೆ.

ಟೀಕಿನ ಕೀರ್ತನೆಯಲ್ಲಿ ವೇದಾಂತವನ್ನು ಬೋಧಿಸುವ ಪದಗಳೂ ಅವುಗಳ ಮೇಲಿನ ವ್ಯಾಖ್ಯಾನವೂ ಇವೆ. ಭಕ್ತಿಮಾರ್ಗ ಸರೋವರದಲ್ಲಿ 86 ಕೀರ್ತನಗಳಿವೆ. ನಿಜದೀಪಿಕಾರತ್ನದಲ್ಲಿ ಹಾಡು, ವಚನ, ಸಾಂಗತ್ಯ ಮೂರೂ ಬರುತ್ತವೆ. ಧರ್ಮಗುಪ್ತ ಚರಿತ್ರೆ ಒಂದು ಯಕ್ಷಗಾನ. ಅನುಭವರಸಾಯನ ಗದ್ಯಗ್ರಂಥ; ಗುರು ಶಿಷ್ಯರ ಸಂವಾದದ ಮೂಲಕ ಜ್ಞಾನಮೋಕ್ಷಗಳ ತಿಳಿವಳಿಕೆಯನ್ನು ಕೊಡುತ್ತದೆ. ಈ ಗ್ರಂಥದಲ್ಲಿ ಅಂದಿನ ವ್ಯವಹಾರದಲ್ಲಿದ್ದ ಸರಳ ಸುಲಭ ಕನ್ನಡದ ಬಳಕೆ ಕಂಡುಬರುತ್ತದೆ. ಪುಟ್ಟ ಪುಟ್ಟ ವಾಕ್ಯಗಳನ್ನು ರಮ್ಯವಾಗಿ ಹೆಣೆದಿರುವುದು ಇಲ್ಲಿನ ವೈಶಿಷ್ಟ್ಯ. ಭಾಷೆ ಹೊಸಗನ್ನಡ ಗದ್ಯಕ್ಕೆ ಹತ್ತಿರವಾಗಿದೆ. *

**ಕೃಷ್ಣರಾಜಸಾಗರ :** ಮಂಡ್ಯ ಜಿಲ್ಲೆಯಲ್ಲಿ ಕನ್ನಂಬಾಡಿಯ ಬಳಿ ಕಾವೇರಿ ನದಿಗೆ ಕಟ್ಟೆ ಕಟ್ಟಿ ನಿರ್ಮಿಸಿರುವ ಜಲಾಶಯ. ಮೈಸೂರು ನಗರಕ್ಕೆ ವಾಯುವ್ಯದಲ್ಲಿ 16ಕಿಮೀ ದೂರದಲ್ಲಿದೆ. ಈ ಕಟ್ಟೆಯನ್ನು ಹೇಮಾವತಿ ಮತ್ತು ಲಕ್ಷ್ಮಣತೀರ್ಥ ನದಿಗಳ ಸಂಗಮದ ಸ್ಥಳದಿಂದ ಕೆಳಗೆ ಕಾವೇರಿಗೆ ಅಡ್ಡಲಾಗಿ ಇತಿಹಾಸಪ್ರಸಿದ್ಧ ಶ್ರೀರಂಗಪಟ್ಟಣಕ್ಕೆ 14ಕಿಮೀ ಮೇಲುಗಡೆ ಕಟ್ಟಲಾಗಿದೆ. ಈ ಜಲಾಶಯವನ್ನು ಕಟ್ಟುವ ಯೋಚನೆ 1870ರಿಂದಲೂ ಇತ್ತು. 1900ರಲ್ಲಿ ಮೈಸೂರು ಸರ್ಕಾರ ಕೆ.ಶೇಷಾದ್ರಿ ಅಯ್ಯರ್ ದಿವಾನರಾಗಿದ್ದಾಗ ಕೋಲಾರದ ಚಿನ್ನದ ಗಣಿಗಳಿಗೆ ವಿದ್ಯುತ್ತನ್ನು ಒದಗಿಸಲು ಶಿವಸಮುದ್ರದ ವಿದ್ಯುತ್ಕೇಂದ್ರದ ಯೋಜನೆ ಕೈಗೊಂಡಿತು. ಬೇಸಗೆಯಲ್ಲಿ ನದಿಯ ಪ್ರವಾಹ 50 ಕ್ಯೂಸೆಕ್ಕುಗಳಿಗೆ ಇಳಿಯುತ್ತಿದ್ದುದರಿಂದ

ಶಿವಸಮುದ್ರದ ಮೇಲಿನ ಅಣೆಕಟ್ಟುಗಳಲ್ಲಿ ತಾತ್ಕಾಲಿಕವಾಗಿ ನೀರನ್ನು ಕೂಡಿಡಲು ವರ್ಷಕ್ಕೆ ಅರ್ಧ ಲಕ್ಷ ರೂಪಾಯಿ ವ್ಯಯಮಾಡಬೇಕಾಗುತ್ತಿತ್ತು. ವಿಶ್ವೇಶ್ವರಯ್ಯನವರು ಮೈಸೂರಿನ ಪ್ರಧಾನ ಎಂಜನಿಯರಾಗಿ ಬಂದಾಗ ಕಾವೇರಿ ನದಿಗೆ ಅಡ್ಡಲಾಗಿ ಕನ್ನಂಬಾಡಿಯಲ್ಲಿ ಕಲ್ಲುಗಾರೆಯ ಕಟ್ಟೆ ಕಟ್ಟಿ ಜಲಾಶಯ ನಿರ್ಮಿಸಿ, ಚಿನ್ನದ ಗಣಿಗಳಿಗೆ ವಿದ್ಯುತ್ತನ್ನೂ ಮಂಡ್ಯ ಮತ್ತು ಮಳವಳ್ಳಿಯ ಬೆಂಗಾಡು ಭೂಮಿಗೆ ನೀರನ್ನೂ ಒದಗಿಸುವುದಕ್ಕೆ 1911ರ



ಕೃಷ್ಣರಾಜಸಾಗರ ಅಣೆಕಟ್ಟು

ನವೆಂಬರಿನಲ್ಲಿ 89ಲಕ್ಷ ರೂಪಾಯಿ ಖರ್ಚಿನ ಒಂದು ಯೋಜನೆ ತಯಾರಿಸಿದರು. ಅದರಂತೆ ಕೆಲಸ ಪ್ರಾರಂಭವಾಯಿತು. ಜಲಾಶಯವನ್ನು 124 ಅಡಿಗಳಿಗೆ ಏರಿಸುವ ಯೋಜನೆಯನ್ನು ತಯಾರಿಸಿದ್ದರೂ ಮದರಾಸು ಸರ್ಕಾರದ ಆಕ್ಷೇಪಣೆಯಿಂದಾಗಿ ಮೊದಲು ಕೇಂದ್ರ ಸರ್ಕಾರದಿಂದ 80 ಅಡಿಗಳ ಎತ್ತರಕ್ಕೆ ಕಟ್ಟಲು ಅನುಮತಿ ದೊರೆಯಿತು. ಆದರೆ ವಿಶ್ವೇಶ್ವರಯ್ಯನವರು 124 ಅಡಿ ಎತ್ತರದ ಕಟ್ಟೆಗೆ ಸಾಕಾಗುವಂತಹ ತಳಪಾಯವನ್ನೇ ಹಾಕಿದರು. ಚಿನ್ನದ ಗಣಿಗಳೊಂದಿಗೆ ಮಾಡಿಕೊಂಡ ಒಪ್ಪಂದದಂತೆ 1915ರ ಜೂನ್‌ನಲ್ಲಿ 50 ಅಡಿ ಆಳದ ನೀರನ್ನು ಜಲಾಶಯದಲ್ಲಿ ಶೇಖರಿಸಿದರು. ಆಗ ಎಂ.ವಿಶ್ವೇಶ್ವರಯ್ಯನವರು ದಿವಾನರಾಗಿದ್ದರು.

ಮದಾರಾಸು ಸರ್ಕಾರ ತಂಜಾವೂರಿನ ಭೂಮಿಗೆ ನೀರು ಸಾಲದೆ ಹೋಗುತ್ತದೆಂದು ಈ ಯೋಜನೆಗೆ ವಿರೋಧ ವ್ಯಕ್ತಪಡಿಸಿತ್ತು. ದೀರ್ಘ ಚರ್ಚೆಯ ಅನಂತರ 1924ರಲ್ಲಿ ಮೈಸೂರು-ಮದರಾಸು ಸರ್ಕಾರಗಳಿಗೆ ಈ ಮುಂದಿನಂತೆ ಒಪ್ಪಂದವಾಯಿತು.

1. ಕೃಷ್ಣರಾಜಸಾಗರದ ಕಟ್ಟೆಯನ್ನು 130 ಅಡಿ ಎತ್ತರಕ್ಕೆ ಎತ್ತಿ ಜಲಾಶಯದಲ್ಲಿ 124 ಅಡಿ ಎತ್ತರದ ನೀರನ್ನು ಶೇಖರಿಸಿ 49,229 ಮಿಲಿಯನ್ ಸಲೆ ಅಡಿ ನೀರನ್ನು ಕೂಡಿಟ್ಟು 1,25,000 ಎಕರೆಗಳಿಗೆ ನೀರನ್ನು ಮೈಸೂರು ಸರ್ಕಾರ ಒದಗಿಸಿಕೊಳ್ಳಬಹುದು. 2. ಇದಲ್ಲದೆ ಕಾವೇರಿ ಮತ್ತು ಅದರ ಉಪನದಿಗಳಿಗೆ ಅಡ್ಡಲಾಗಿ ಒಟ್ಟು 45,000 ಮಿಲಿಯನ್ ಸಲೆ ಅಡಿ ನೀರನ್ನು ಕೂಡಿಟ್ಟು ಇನ್ನೂ 1,10,000 ಎಕರೆಗಳಿಗೆ ನೀರಾವರಿಯನ್ನು ವಿಸ್ತರಿಸಬಹುದು. 3. ಕಾವೇರಿ ಮತ್ತು ಉಪನದಿಗಳಿಂದ ಈಗ ಇರುವ ನಾಲೆಗಳ ಕೆಳಗೆ ನೀರಿನ ತೆರಿಗೆಯನ್ನು ಹೆಚ್ಚಿಸಿ ಆಗ ಇದ್ದ ನೀರಾವರಿಯನ್ನು 33.33% ರಷ್ಟು ಹೆಚ್ಚಿಸಬಹುದು. 1974ರಲ್ಲಿ ಈ ಒಪ್ಪಂದದ ಅವಧಿ ಮುಗಿಯಿತು.

1924ರಲ್ಲಿ ಕಾವೇರಿ ಮತ್ತು ಉಪನದಿಗಳಲ್ಲಿ ಅಭೂತಪೂರ್ವವಾದ ಪ್ರವಾಹ ಬಂತು. 1924ರಲ್ಲಿ ಇಲ್ಲಿ 2.8 ಲಕ್ಷ ಸಲೆ ಅಡಿ ನೀರು ಒಂದು ಸೆಕೆಂಡಿನಲ್ಲಿ ಹರಿಯಿತು. ಇದರಿಂದಾಗಿ ಜಲಾಶಯದ ಕೋಡಿಯನ್ನು 3.5 ಲಕ್ಷ ಕ್ಯೂಸೆಕ್ಸ್ ನೀರನ್ನು ಸುರಕ್ಷಿತವಾಗಿ ಕಟ್ಟೆಯಿಂದ ಬಿಡುವ ಹಾಗೆ ಕಟ್ಟಬೇಕಾಯಿತು. ಜಲಾಶಯದ ಒಟ್ಟು ಜಲಾನಯನ ಭೂಮಿ 10,619ಚ.ಕಿಮೀ.

ಇಲ್ಲಿ ನದಿಯ ತಳ ಸಮುದ್ರಮಟ್ಟದ ಮೇಲೆ 2,344' ಎತ್ತರದಲ್ಲಿದೆ. ಕಟ್ಟೆಯನ್ನು ಗ್ರಾನೈಟ್‌ನೈಸ್ ಬಂಡೆಯ ತಳಪಾಯದ ಮೇಲೆ ಕಟ್ಟಲಾಗಿದೆ. ತಳಪಾಯದ ಸರಾಸರಿ ಆಳ 16', ಕಟ್ಟೆಯ ಅಗಲ ತಳಪಾಯದಲ್ಲಿ 111', ನದಿಯ ತಳದ ಮೇಲೆ ಕಟ್ಟೆಯ ಗರಿಷ್ಠ ಎತ್ತರ 134'. ಕಟ್ಟೆಯ ಮೇಲುಗಡೆ ರಸ್ತೆಯ ಅಗಲ 14.25', ಕಟ್ಟೆಯ ಉದ್ದ 8,600.

ಕಟ್ಟೆಯಲ್ಲಿ ಒಟ್ಟು 48,330 ಮಿಲಿಯನ್ ಸಲೆ ಅಡಿ ನೀರು ಹಿಡಿಯುತ್ತದೆ. ಜಲಾಶಯದ ನೀರು ಮೇಲುಗಡೆ 50 ಚದರ ಮೈಲಿಯಷ್ಟು ಹರಡಿರುತ್ತದೆ. ಸರೋವರದ ಸರಾಸರಿ ಉದ್ದ 40ಕಿ.ಮೀ. ಅಗಲ 8ಕಿ.ಮೀ. ಕಟ್ಟೆಯ ನೀರಿನಲ್ಲಿ ಒಟ್ಟು 31,943 ಎಕರೆ ಭೂಮಿ ಮುಳುಗಡೆಯಾಗಿದೆ. ಈ ಪೈಕಿ 9,520 ಎಕರೆ ತರಿ, 13,923 ಎಕರೆ ಹಿಡುವಳಿಯಲ್ಲಿದ್ದ ಖುಷ್ಕಿ. 8,500 ಎಕರೆ ಸರ್ಕಾರದ ವಶದಲ್ಲಿದ್ದ ಪಾಳು ಭೂಮಿ. ಕಟ್ಟೆಯನ್ನು ಮಾರಿಕಣಿವೆ ಕಟ್ಟೆಯಂತೆಯೇ ಗ್ರಾನೈಟ್ ಕಲ್ಲು ಮತ್ತು ಸುರ್ಕಿಗಾರೆಯಿಂದ ಕಟ್ಟಲಾಗಿದೆ. ಕಟ್ಟೆಯ ತಳಪಾಯದಲ್ಲಿ 90 ಲಕ್ಷ ಸಲೆ ಅಡಿ ಕಲ್ಲು ಮತ್ತು ಮಣ್ಣನ್ನು ತೆಗೆದಿದ್ದಾರೆ. ಇದರ ತಳಪಾಯದ ಕಲ್ಲಿನ ಮೇಲೆ ಚದರ ಅಡಿಗೆ 9 ಟನ್ನಿನ ಗರಿಷ್ಠ ಒತ್ತಡದ ತ್ರಾಸ ಬೀಳುತ್ತದೆ. ಕಲ್ಲುಗಾರೆಯ ತೂಕ ಸಲೆ ಅಡಿಗೆ 146 ಪೌಂಡ್. ಕಲ್ಲುಗಾರೆಯ ಕಟ್ಟೆಯ ತೂಕ ಮತ್ತು ಕೂಡಿಟ್ಟ ನೀರಿನ ಒತ್ತಡ ಇವನ್ನೆಲ್ಲ ಗಣನೆಗೆ ತೆಗೆದುಕೊಂಡಾಗ ತಳಪಾಯದ ಮೇಲೆ 8.9 ಟನ್ನಿನ ಗರಿಷ್ಠ ಒತ್ತಡದ ತ್ರಾಸ ಬೀಳುತ್ತದೆ. (ಪೆರಿಯಾರ್ ನದಿಗೆ ಅಡ್ಡವಾಗಿ 170' ಎತ್ತರವಾದ ಕಾಂಕ್ರೀಟಿನ ಕಟ್ಟೆಯ ತಳದ ಮೇಲೆ ಚದರ ಅಡಿಗೆ 9 ಟನ್ ತ್ರಾಸ ಬೀಳುತ್ತದೆ). ಕೃಷ್ಣರಾಜ ಸಾಗರ ಕಟ್ಟೆ 30 ಮಿಲಿಯನ್ ಸಲೆ ಅಡಿ ಕಲ್ಲುಗಾರೆಯಿಂದ ಕೂಡಿದ್ದು ಆಗ್ಗೆ ಭಾರತದಲ್ಲಿಯೇ ಅತ್ಯಂತ ದೊಡ್ಡ ಕಲ್ಲುಗಾರೆಯ ಕಟ್ಟೆಯಾಗಿತ್ತು.



ಹಿನ್ನೀರಲ್ಲಿ ಮುಳುಗಿದ್ದು ಈಗ ಸ್ಥಳಾಂತರಗೊಂಡಿರುವ ವೇಣುಗೋಪಾಲಸ್ವಾಮಿ ದೇವಾಲಯ

ಕಟ್ಟೆಯಲ್ಲಿ ಹಲವು ತೂಬುಗಳಿವೆ. ಒಂದು ತೂಬಿನಿಂದ ನೀರು 350' ಉದ್ದವಾದ ಸಣ್ಣ ಸುರಂಗದ ಮೂಲಕ ಹರಿದು 3,500 ಎಕರೆ ಭೂಮಿಗೆ ನೀರಾವರಿಯನ್ನು ಒದಗಿಸುವ ಬಲದಂಡೆಯ ನಾಲೆಗೆ ಹೋಗುತ್ತದೆ. ಉತ್ತರ ದಡದ ತೂಬಿನಿಂದ ವಿಶ್ವೇಶ್ವರಯ್ಯ ನಾಲೆಗೆ (ಹಿಂದೆ ಇರ್ವಿನ್ ನಾಲೆ ಎಂಬ ಹೆಸರಿತ್ತು) ನೀರನ್ನು ಬಿಟ್ಟು ಮಂಡ್ಯ ಮತ್ತು ಮಳವಳ್ಳಿ ತಾಲ್ಲೂಕುಗಳಲ್ಲಿ 1,20,000 ಎಕರೆ ಭೂಮಿಗೆ ನೀರಾವರಿಯನ್ನು ಒದಗಿಸಿದ್ದಾರೆ. ಜಲಾಶಯದ ನೀರು 124' ಮಟ್ಟದಲ್ಲಿದ್ದಾಗ 1.42 ಲಕ್ಷ ಕ್ಯೂಸೆಕ್ಕುಗಳಷ್ಟು ನೀರನ್ನು ಹೊರಸಾಗಿಸಲು ನಡುಹೊಳೆಯಲ್ಲಿ 8 ಬಾಗಿಲುಗಳು, 50' ಎತ್ತರದಲ್ಲಿ 3 ಮತ್ತು 80' ಎತ್ತರದಲ್ಲಿ 16 ಬಾಗಿಲುಗಳಿವೆ. 1924ರಲ್ಲಿ ಬಂದಂಥ ಮಹಾಪ್ರವಾಹವನ್ನು ನಿಯಂತ್ರಿಸಲು 103' ಮಟ್ಟದ 48 ಬಾಗಿಲುಗಳ ಮೇಲುಗಡೆ 114' ಮಟ್ಟದಲ್ಲಿ 48 ಬಾಗಿಲುಗಳನ್ನೂ ಇಟ್ಟಿದೆ. ಇವುಗಳಲ್ಲಿ ಕೆಳಗಿನ ಬಾಗಿಲುಗಳನ್ನು ಕೈಯಿಂದ ಎತ್ತಬೇಕು. ಮೇಲಿನ ಕಂಡಿಗಳಿಗೆ ಎಂ.ವಿಶ್ವೇಶ್ವರಯ್ಯ ಅವರ ಉಪಜ್ಞೆಯಾದ ಸ್ವಯಂಚಾಲಿತ ಬಾಗಿಲುಗಳಿವೆ. ಈ ಕೋಡಿ ಬಾಗಿಲುಗಳೆಲ್ಲವುಗಳಿಂದ ಒಟ್ಟು 3.5 ಲಕ್ಷ ಕ್ಯೂಸೆಕ್ಕುಗಳ ಪ್ರವಾಹವನ್ನು ನದಿಯಲ್ಲಿ ಸುರಕ್ಷಿತವಾಗಿ ಬಿಡಬಹುದು.

ಜಲಾಶಯದಲ್ಲಿ ಮುಳುಗಿಹೋಗಿದ್ದ ಹೊಯ್ಸಳ ಕಾಲದ ವೇಣು ಗೋಪಾಲಸ್ವಾಮಿ ದೇವಾಲಯ ಬೇಸಗೆಯಲ್ಲಿ ಹೊರಗೆ ಕಾಣುತ್ತಿದ್ದು ಪ್ರೇಕ್ಷಕರು ಹೋಗಿ ನೋಡಿ ಬರುತ್ತಿದ್ದರು. ಈಗ ಅದನ್ನು ಸ್ಥಳಾಂತರಿಸಿ ಸಮೀಪದ ದಂಡೆಯ ಮೇಲೆ ಪುನರ್‌ನಿರ್ಮಿಸಲಾಗಿದೆ. ಮಿರ್ಜಾ ಇಸ್ಮಾಯಿಲ್ ದಿವಾನರಾಗಿದ್ದ ಕಾಲದಲ್ಲಿ ಕಟ್ಟೆಯ ಹಿಂದುಗಡೆ ಕಾಶ್ಮೀರದ ಶಾಲಿಮಾರ್ ತೋಟವನ್ನು ಹೋಲುವ ಬೃಂದಾವನವನ್ನು ನದಿಯ ಎರಡು ದಡಗಳಲ್ಲಿಯೂ ನಿರ್ಮಿಸಿದರು. ಇದು ಸುಂದರ ವಿಹಾರ ಸ್ಥಳ. ದೇಶದ ನಾನಾ ಭಾಗಗಳಿಂದ ಹಾಗೂ ವಿದೇಶಗಳಿಂದ ಪ್ರೇಕ್ಷಕರು ಇಲ್ಲಿಗೆ ಬರುತ್ತಾರೆ. ಕೃಷ್ಣರಾಜಸಾಗರದಲ್ಲಿ ಆಧುನಿಕ ಜಲಾಭಾರ ಶಾಸ್ತ್ರದ ಒಂದು ಪ್ರಯೋಗಶಾಲೆ ಇದೆ. ಒಂದು ಜೂನಿಯರ್ ಕಾಲೇಜಿದೆ. *

**ಕೃಷ್ಣರಾಯ, ಅ.ನ. :** 1908-71. ಅನಕೃ ಎಂಬ ಮೂರಕ್ಷರಗಳಿಂದ ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಪರಿಚಿತರಾದ ಇವರ ಪೂರ್ಣ ಹೆಸರು ಅರಕಲಗೂಡು ನರಸಿಂಗರಾವ್ ಕೃಷ್ಣರಾವ್. ಕೃಷ್ಣರಾಯರು 1908 ಮೇ 9ರಂದು ಕೋಲಾರದಲ್ಲಿ ಜನಿಸಿದರು. ತಂದೆ ನರಸಿಂಗರಾಯ, ತಾಯಿ ಅನ್ನಪೂರ್ಣಮ್ಮ. ಪ್ರಾಥಮಿಕ ಮಾಧ್ಯಮಿಕ ಶಾಲೆಗಳ ಓದನ್ನು ಮುಗಿಸಿ ಕೃಷ್ಣರಾಯರು ಬೆಂಗಳೂರಿನ ದೇಶೀಯ ವಿದ್ಯಾಶಾಲೆಗೆ ಸೇರಿದರು. ರಾಷ್ಟ್ರೀಯ ಭಾವನೆಗಳ ಕೇಂದ್ರವಾಗಿದ್ದ ಆ ಶಾಲೆಯಲ್ಲಿ ಸಂಪದ್ಗಿರಿರಾಯರಂಥ, ಕಂದಾಡೆ ಕೃಷ್ಣಯ್ಯಂಗಾರ್ಯರಂಥ ಅಧ್ಯಾಪಕರು ಶಿಷ್ಯರ ಹೃದಯ ಮನಸ್ಸುಗಳನ್ನು ರೂಪಿಸುತ್ತಿದ್ದರು. ಕೃಷ್ಣರಾಯರಿಗೆ ಓದಿನ ಗೀಳು ಹತ್ತಿತು; ಗಾಂಧಿ, ವಿವೇಕಾನಂದರ ಪರಿಚಯವಾಯಿತು. ಅವರ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದರು. ಶಾಲೆಯ ಓದಿಗೆ ಗಮನ ಕೊಡಲಿಲ್ಲವಾಗಿ ಆ ಕಾಲದ ಎಂಟ್ರೆನ್ಸ್ ಪರೀಕ್ಷೆಯನ್ನು ದಾಟುವುದು ಕೃಷ್ಣರಾಯರಿಗೆ ಸಾಧ್ಯವಾಗಲಿಲ್ಲ.

ತಂದೆ ನರಸಿಂಗರಾಯರಿಗೆ ನಾಟಕದ ಹುಚ್ಚು. ಕರ್ನಾಟಕ ರಂಗಭೂಮಿಯ ಸ್ಥಾಪಕರಲ್ಲಿ ಅವರೂ ಒಬ್ಬರಾಗಿದ್ದರು. ಎ.ವಿ.ವರದಾಚಾರ್ಯರಂಥ ಶ್ರೇಷ್ಠಕಲಾವಿದರನ್ನು ಕಟ್ಟಿಕೊಂಡು ಅವರು ನಾಟಕ ಪ್ರದರ್ಶನಗಳಿಗಾಗಿ ಹವ್ಯಾಸಿ ಕ್ಲಬ್ ಒಂದನ್ನು ನಡೆಸುತ್ತಿದ್ದರು. ಇದರಿಂದ ಸಹಜವಾಗಿಯೇ ಕೃಷ್ಣರಾಯರಿಗೆ ಎಳವೆಯಿಂದಲೂ ರಂಗಭೂಮಿಯ ಪರಿಚಯವಾಯಿತು. ವರದಾಚಾರ್ಯರ ನಾಟಕಗಳನ್ನು ಇವರು ತಪ್ಪದೆ ನೋಡುತ್ತಿದ್ದರು. ಅವರ ಅಭಿನಯಕ್ಕೆ ಮಾರುಹೋದರು. ಆ



ಕಾಲದಲ್ಲಿ ರಂಗದ ಮೇಲೆ ಬರುತ್ತಿದ್ದ ನಾಟಕಗಳೆಲ್ಲ ಪೌರಾಣಿಕ ವಸ್ತುವನ್ನು ಅವಲಂಬಿಸಿರುತ್ತಿದ್ದುವು. ಅಪರೂಪವಾಗಿ ಐತಿಹಾಸಿಕ ಪ್ರಸಂಗಗಳೂ ನಾಟಕರೂಪ ತಾಳುತ್ತಿದ್ದವು. ಈ ನಾಟಕಗಳು ಹದಿಹರೆಯದ ಕೃಷ್ಣರಾಯರಿಗೆ ಕಂದಾಚಾರದ ನಾಟಕಗಳಾಗಿ ಕಂಡವು. ತಮ್ಮ ಸುತ್ತಣ ಸಮಾಜದ ಸಮಸ್ಯೆಗಳು ಸಂಗತಿಗಳು ಏಕೆ ರಂಗದ ಮೇಲೆ ಬರಬಾರದು ಎಂಬ ಪ್ರಶ್ನೆ ಇವರನ್ನು ಕಾಡುತ್ತಿತ್ತು. ಒಂದು ಸಲ ಇವರು ವರದಾಚಾರ್ಯರಿಗೇ ಈ ಪ್ರಶ್ನೆ ಹಾಕಿದ್ದರು. ಅಂಥ ನಾಟಕಗಳನ್ನು ಯಾರು ಬರೆಯುತ್ತಾರೆ ಎಂದು ಆಚಾರ್ಯರು ನಿರಾಶೆಯಿಂದ ಕೇಳಿದರು. ಕೃಷ್ಣರಾಯರು ಮರುದಿನವೇ ತಾವು ಅಂಥ ನಾಟಕವೊಂದನ್ನು ಬರೆದು ಕೊಡುವುದಾಗಿ ಹೇಳಿ ಆಚಾರ್ಯರನ್ನು ತಬ್ಬಿಬ್ಬು ಮಾಡಿದರು. ಅಷ್ಟೇ ಅಲ್ಲ, ಅಂದು ಇಡೀ ರಾತ್ರಿ ಕುಳಿತು ಒಂದು ನಾಟಕ ಬರೆದು ಬೆಳಗ್ಗೆ ಅದನ್ನು ಆಚಾರ್ಯರ ಕೈಯಲ್ಲಿಟ್ಟರು. ಅದೊಂದು ಸಾಮಾಜಿಕ ನಾಟಕ. ಅದರ ಹೆಸರು ಮದುವೆಯೋ ಮನೆ ಹಾಳೋ? ಎಂದು. ಅದು ಕೃಷ್ಣರಾಯರ ಮೊದಲ ಕೃತಿ (1924). ಅದರೊಂದಿಗೇ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹೊಸ ಅಧ್ಯಾಯವೊಂದು ತೊಡಗಿತು. ಕೃಷ್ಣರಾಯರು ಹೀಗೆ ನಾಟಕಕಾರರಾಗಿ ಸಾಹಿತ್ಯ ಕ್ಷೇತ್ರದಲ್ಲಿ ಕಾಲಿಟ್ಟು ಮುಂದೆ ಹತ್ತಿರ ಹತ್ತಿರ ಅರ್ಧಶತಮಾನ ಕಾಲ ಕಾವ್ಯವೊಂದನ್ನು ಬಿಟ್ಟು ಮಿಕ್ಕ ಎಲ್ಲ ಸಾಹಿತ್ಯ ಪ್ರಕಾರಗಳಲ್ಲೂ ಕೆಲಸ ಮಾಡಿ, ಪ್ರಭಾವಶಾಲಿಯಾಗಿ ಖ್ಯಾತಿಗಳಿಸಿದರು.

ಕೃಷ್ಣರಾಯರು ಸು.190 ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 112 ಕಾದಂಬರಿಗಳು, 9 ಕಥಾಸಂಗ್ರಹಗಳು, 24 ನಾಟಕಗಳು, 24 ವಿಮರ್ಶೆ ಹಾಗೂ ಪ್ರಬಂಧ ಸಂಕಲನಗಳು, 9 ಜೀವನ ಚರಿತ್ರೆಗಳು, 3 ಅನುವಾದಗಳು, 9 ಸಂಪಾದಿತ ಗ್ರಂಥಗಳು. ಹೀಗೆ ನಾನಾ ಪ್ರಕಾರಗಳಲ್ಲಿ ಕೃಷ್ಣರಾಯರು ದುಡಿದಿದ್ದರೂ ಕಾದಂಬರಿಕಾರರೆಂದೇ ಇವರು ಪ್ರಸಿದ್ಧರಾಗಿದ್ದಾರೆ. ಇವರ ಕಾದಂಬರಿಗಳಲ್ಲಿ ಹದಿನೈದನ್ನು ಬಿಟ್ಟರೆ ಉಳಿದವೆಲ್ಲ ಸಾಮಾಜಿಕ ಕಾದಂಬರಿಗಳು. ಈ ಕಾದಂಬರಿಗಳಲ್ಲಿ ಇವರು ಸಮಕಾಲೀನ ಜೀವನದ ಬೇರೆ ಬೇರೆ ಮುಖಗಳನ್ನು ತೋರಿಸಿದ್ದಾರೆ. ಕಲಾವಿದರ ಸಮಸ್ಯೆಗಳು, ಆಧುನಿಕ ವಿದ್ಯಾಭ್ಯಾಸದ ಪರಿಣಾಮ, ಭಾರತೀಯ ಸಂಸ್ಕೃತಿಯ ಮೌಲ್ಯಗಳ ಮಹತ್ವ, ಅವಿಭಕ್ತ ಕುಟುಂಬ ಜೀವನ, ಒಡೆಯುತ್ತಿರುವ ಬದುಕು, ವೇಶ್ಯಾ ಸಮಸ್ಯೆ, ಲಂಚಗುಳಿತನ, ಸ್ತ್ರೀಸ್ವಾತಂತ್ರ್ಯ, ಜೈಲುಗಳ ಸುಧಾರಣೆ, ದಾಂಪತ್ಯ ವಿಚ್ಛೇದನ, ಜಾತೀಯತೆಯ ಭೂತ, ರಾಜಕೀಯ ಡೊಂಬರಾಟ, ಪವಿತ್ರ ಪ್ರೇಮ, ಕೊಳಚೆಯ ಕಾಮ, ಪಾನನಿರೋಧದ ಸಮಸ್ಯೆ, ಶ್ರೀಮಂತಿಕೆಯ ದೌಲು, ಬಡತನದ ದಾರುಣತೆ, ಪೂರ್ವಪಶ್ಚಿಮಗಳ ಸಂಗಮ, ಧಾರ್ಮಿಕತೆಯ ಸೋಗು, ಆಡಳಿತದ ಅಬ್ಬರ, ಆರ್ಭಟಗಳು, ಸ್ವಾತಂತ್ರ್ಯದ ಕೆಚ್ಚು, ಬದುಕಿನ ಮೇಲೆ ವಿಜ್ಞಾನದ ಪ್ರಭಾವ -ಹೀಗೆ ನಾನಾ ಸಂಗತಿಗಳನ್ನು ಕುರಿತು ಕೃಷ್ಣರಾಯರು ವಿಚಾರ ಮಾಡಿದ್ದಾರೆ. ತಮ್ಮ ವಿಚಾರಗಳನ್ನು ಪ್ರತಿಪಾದಿಸಲು ಇವರು ಕಾದಂಬರಿಯನ್ನು ಬಳಸಿಕೊಂಡರು. ಕಥನಕೌಶಲ, ನಿರರ್ಗಳವಾದ ಶೈಲಿ, ಸಂಭಾಷಣೆಯ ಚಾತುರ್ಯ -ಇವುಗಳಿಂದ ಓದುಗರನ್ನು ಸೆರೆಹಿಡಿದರು; ತಮ್ಮ ಕಾಲದ ಅತ್ಯಂತ ಜನಪ್ರಿಯ ಲೇಖಕ ಎನ್ನಿಸಿಕೊಂಡರು.

ಕೃಷ್ಣರಾಯರು ತಮ್ಮ ಬರವಣಿಗೆಯ ಆರಂಭಕಾಲದಲ್ಲಿ ರಚಿಸಿದ ಕಲಾವಿದರ ಜೀವನವನ್ನು ಕುರಿತ ಸಂಧ್ಯಾರಾಗ, ಉದಯರಾಗ,ಸಾಹಿತ್ಯರತ್ನ, ನಟಸಾರ್ವಭೌಮ ಮೊದಲಾದ ಕಾದಂಬರಿಗಳೇ ಇವರ ಶ್ರೇಷ್ಠ ಕೃತಿಗಳೆಂದು ಪರಿಗಣಿತವಾಗಿವೆ. ಇವರ ಮುಂದಿನ ಬರೆಹಗಳಲ್ಲಿ ಗಾತ್ರದ ಪ್ರಮಾಣವನ್ನು ಗುಣಕಾಯ್ದುಕೊಳ್ಳುವುದು ಸಾಧ್ಯವಾಗಲಿಲ್ಲ. ಅವರ ಪಾತ್ರಗಳಲ್ಲಿ ವೈವಿಧ್ಯದ ಬಲವಿಲ್ಲದಿರುವುದೇ ಒಂದು ದೋಷ. ಬೇರೆ ಬೇರೆ ಸಂದರ್ಭಗಳಿಗೆ ಸಮಸ್ಯೆಗಳಿಗೆ ಬೇಕಾದ ಬೇರೆ ಬೇರೆ ಪಾತ್ರಗಳು ಅನಕೃ ಅವರ ಕುಲುಮೆಯಲ್ಲಿ ಕರಗಿಹೋಗಿ ತಮ್ಮತನಗಳನ್ನು ಕಳೆದುಕೊಂಡು ಸಾಧಾರಣೀಕೃತವಾಗಿಬಿಡುತ್ತವೆ. ಇವರ ಯಾವುದೇ ಕಾದಂಬರಿಯನ್ನು ಎತ್ತಿಕೊಂಡರೂ ಅಲ್ಲಿನ ಪಾತ್ರಗಳನ್ನು ಇನ್ನೆಲ್ಲಿಯೋ ನೋಡಿದ್ದೇವಲ್ಲ ಎನ್ನಿಸಿಬಿಡುತ್ತದೆ. ಸಮಕಾಲೀನ ಜೀವನ ಸಮಸ್ಯೆಗಳ ವಿಸ್ತಾರವನ್ನು, ವಿವಿಧ ಪರಿಗಳನ್ನು ಅನಕೃ ವಿವರವಾಗಿ ಗುರುತಿಸಿ, ವರ್ಣಿಸಲು ಸಮರ್ಥರಾಗಿದ್ದರೂ ಸಾಹಿತ್ಯ ಚರಿತ್ರೆಯಲ್ಲಿ ಇವರ ಹೆಸರು ಇವರ ಮೊದಲ ಕೃತಿಗಳಿಂದಲೇ ನಿಲ್ಲಬೇಕಾಗುತ್ತದೆಂಬುದು, ಸಮಕಾಲೀನ ಸಾಹಿತ್ಯದ ಒಂದು ಸೋಜಿಗವಾಗಿದೆ. ಸಾಹಿತ್ಯವನ್ನು ಜನಪ್ರಿಯಗೊಳಿಸಿದ ಕನ್ನಡ ಕಾದಂಬರಿಕಾರರಲ್ಲಿ ಅನಕೃ ಇಂದಿಗೂ ಅದ್ವಿತೀಯರು ಎಂಬುದಾಗಿ ವಿಮರ್ಶಕರೊಬ್ಬರು ಅಭಿಪ್ರಾಯಪಟ್ಟಿದ್ದಾರೆ. ಕೃಷ್ಣರಾಯರ ಕೊನೆಕೊನೆಯ ಕಾದಂಬರಿಗಳಂತೂ ಬರೆವಣಿಗೆಯ ಯಾಂತ್ರಿಕತೆಯಿಂದ ತುಂಬ ಜಾಳುಜಾಳಾಗಿಹೋಗಿವೆ.

ನಗ್ನಸತ್ಯ, ಶನಿಸಂತಾನ, ಸಂಜೆಗತ್ತಲು ಮೊದಲಾದ ಕಾದಂಬರಿಗಳಲ್ಲಿ ಕೃಷ್ಣರಾಯರು ಸೂಳೆಯರ ಜೀವನವನ್ನೂ ಆ ಜೀವನದ ಸಮಸ್ಯೆಗಳನ್ನೂ ಚಿತ್ರಿಸಿದ್ದಾರೆ. ಆ ಕಾದಂಬರಿಗಳು ಪ್ರಕಟವಾದಾಗ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಕೋಲಾಹಲವಾಯಿತು. ಕೃಷ್ಣರಾಯರ ಮೇಲೆ ಅಶ್ಲೀಲತೆಯ ಆರೋಪ ಬಂತು. ಆಗ ಇವರು ತಮ್ಮ ನಿಲವನ್ನು ಸಮರ್ಥಿಸಿಕೊಳ್ಳಲು ಸಾಹಿತ್ಯ ಮತ್ತು ಕಾಮಪ್ರಚೋದನೆ ಎಂಬ ಗ್ರಂಥವನ್ನೇ ಬರೆಯ ಬೇಕಾಯಿತು. ಈ ಕಾದಂಬರಿಗಳಲ್ಲಿ ಸೂಳೆಯರ ದುಃಖಕ್ಕಿಂತ ಸುಖವೇ ಹೆಚ್ಚಾಗಿ ವರ್ಣಿತವಾಗಿದೆಯೆಂಬುದಂತೂ ನಿಜ. ಗೃಹಲಕ್ಷ್ಮಿ, ರುಕ್ಮಿಣಿ ಮೊದಲಾದ ಕಾದಂಬರಿಗಳಲ್ಲಿ ಇವರು ಭಾರತೀಯ ಸ್ತ್ರೀಯನ್ನು ಆ

ಸಂಸ್ಕೃತಿಯ ಪ್ರತೀಕವನ್ನಾಗಿ ಚಿತ್ರಿಸಿದ್ದಾರೆ. ಅವುಗಳಲ್ಲಿ ಬರುವ ಸಮಾಜ ಜೀವನದ ಚಿತ್ರಣದಲ್ಲಿ ಕಥೆಯನ್ನು ಭಾವುಕತೆಯೇ ಆಳುವಂತೆ ತೋರುತ್ತದೆ. ಯಾವುದೇ ಪಾತ್ರಗಳನ್ನು ನಿರ್ಮಿಸುವಲ್ಲಿ ಕೃಷ್ಣರಾಯರಿಗೆ ಒಳ್ಳೆಯ ಹಾಗೂ ಕೆಟ್ಟ ತುದಿಗಳು ಮಾತ್ರ ತಿಳಿದಿವೆ. ಬಹುಪಾಲು ಜೀವನ ಈ ಎರಡರ ನಡುವೆ ಇದೆ ಎಂಬುದನ್ನು ಇವರು ಸಾಮಾನ್ಯವಾಗಿ ಲಕ್ಷಿಸುವುದಿಲ್ಲ. ಕಲಾವಿದರಾಗಿ ಇವರ ಸೋಲಿಗೆ ಈ ದೃಷ್ಟಿಯೂ ಒಂದು ಕಾರಣವಿರಬಹುದು. ಕೃಷ್ಣರಾಯರ ಐತಿಹಾಸಿಕ ಕಾದಂಬರಿಗಳಲ್ಲಿ ಬಹುಪಾಲು ಕಾದಂಬರಿಗಳು ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದವು. ಬೆಂಗಳೂರು ಕೆಂಪೇಗೌಡನನ್ನೂ ಕಿತ್ತೂರು ಚೆನ್ನಮ್ಮನನ್ನೂ ಕುರಿತು ಇವರು ಒಂದೊಂದು ಕಾದಂಬರಿಯನ್ನು ಬರೆದಿದ್ದಾರೆ.

ಇವರ ಸಣ್ಣಕಥೆ ಮತ್ತು ನಾಟಕಗಳಲ್ಲಿಯೂ ಕಾದಂಬರಿಯ ವಸ್ತುಗಳೇ ಅನೇಕ ಸಲ ಕಾಣಿಸಿಕೊಳ್ಳುತ್ತವೆ. ದೇಶಕ್ಕೆ ಸ್ವಾತಂತ್ರ್ಯ ಬಂದ ತರುಣದಲ್ಲಿ ತೀವ್ರವಾಗಿ ಉದ್ಭವಿಸಿದ ಕೋಮುವಾರು ಗಲಭೆಗಳಿಗೆ ಸಂಬಂಧಿಸಿದಂತೆ ಇವರು ಬರೆದ ಕಥೆಯೊಂದು ಸರ್ಕಾರದ ಬಹಿಷ್ಕಾರಕ್ಕೆ ಒಳಗಾಗಿತ್ತು. ಇವರ ಕೆಲವು ನಾಟಕಗಳು ರಂಗಭೂಮಿಯ ಮೇಲೂ ಯಶಸ್ವಿಯಾಗಿವೆ. ಸಂಧ್ಯಾರಾಗ ಕಾದಂಬರಿ ಬೆಳ್ಳಿತೆರೆಯ ಮೇಲೆ ಕಾಣಿಸಿಕೊಂಡಿದೆ.

ಕೃಷ್ಣರಾಯರ ವಿಮರ್ಶಾತ್ಮಕ ಪ್ರಬಂಧಗಳು ಹಲವು ಸಂಪುಟಗಳಲ್ಲಿ ಪ್ರಕಟವಾಗಿವೆ. ಇವುಗಳಲ್ಲಿ ನಾಟಕಕಲೆ, ಸಜೀವ ಸಾಹಿತ್ಯ, ಸಮದರ್ಶನ, ಸಂಸ್ಕೃತಿಯ ವಿಶ್ವರೂಪ, ಸಾಹಿತ್ಯ ಮತ್ತು ಜೀವನ, ಸಾಹಿತ್ಯ ಮತ್ತು ಯುಗಧರ್ಮ ಮೊದಲಾದವು ಉಲ್ಲೇಖನೀಯವಾಗಿವೆ. ಕನ್ನಡದ ದಾರಿ, ಅಖಂಡ ಕರ್ನಾಟಕ, ಕರ್ನಾಟಕದ ಹಿತಚಿಂತನೆ, ಬಳ್ಳಾರಿ ಸಮಸ್ಯೆ ಮೊದಲಾದ ಗ್ರಂಥಗಳಲ್ಲಿ ಕೃಷ್ಣರಾಯರು ಕನ್ನಡ ನಾಡು, ನುಡಿ, ಸಾಹಿತ್ಯ, ಸಂಸ್ಕೃತಿಗಳಿಗೆ ಸಂಬಂಧಿಸಿದ ಅನೇಕ ಸಮಸ್ಯೆಗಳನ್ನು ಚರ್ಚಿಸಿದ್ದಾರೆ. ತಮ್ಮವೇ ಆದ ಸಲಹೆ ಸೂಚನೆಗಳನ್ನು ಮುಂಡಿಸಿದ್ದಾರೆ. ಕರ್ನಾಟಕದ ಕಲಾವಿದರು ಎಂಬ ಹೆಸರಿನ ಎರಡು ಸಂಪುಟಗಳಲ್ಲಿ ಕನ್ನಡನಾಡಿನ ಕಲಾವಿದರನೇಕರ ಸಾಧನೆ ಸಿದ್ಧಿಗಳನ್ನು ನಿರೂಪಿಸಿ, ಕರ್ನಾಟಕದ ಕಲಾಶ್ರೀಮಂತಿಕೆ ಯಾವ ಬಗೆಯದೆಂಬುದನ್ನು ವಿವೇಚಿಸಿದ್ದಾರೆ. ಅಷ್ಟಾಗಿ ಬೆಳಕಿಗೆ ಬಾರದ ಕಲಾವಿದರ ಸಾಧನೆಗಳನ್ನೂ ಗಮನಿಸಿ ಅವರನ್ನು ನಾಡವರ ಕಣ್ಣಿಗೆ ಬೀಳುವಂತೆ ಮಾಡಿದ್ದು ಕೃಷ್ಣರಾಯರ ಹೆಚ್ಚುಗಾರಿಕೆ. ಕನ್ನಡ ಕುಲರಸಿಕರು ಎಂಬ ಗ್ರಂಥದಲ್ಲಿ ಪ್ರಖ್ಯಾತರಾದ ಕನ್ನಡ ಲೇಖಕರು, ವಿದ್ವಾಂಸರು, ಸಂಶೋಧಕರ ವ್ಯಕ್ತಿಚಿತ್ರಗಳಿವೆ. ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ, ಬಸವಣ್ಣನವರ ಅಮೃತವಾಣಿ ಮೊದಲಾದ ಗ್ರಂಥಗಳು ವೀರಶೈವ ಸಾಹಿತ್ಯದಲ್ಲಿ ಇವರಿಗಿದ್ದ ಪ್ರವೇಶವನ್ನು ಸೂಚಿಸುತ್ತವೆ. ಕೃಷ್ಣರಾಯರು ಕಲಾವಿಮರ್ಶಕರೂ ಆಗಿದ್ದರು. ಭಾರತೀಯ ಚಿತ್ರಕಲೆಯಲ್ಲಿ ರಾಜಾರವಿವರ್ಮನ ಸ್ಥಾನ ಎಂಬ ಗ್ರಂಥದಲ್ಲಿ ರವಿವರ್ಮನ ಕೃತಿಗಳನ್ನು ಸವಿಸ್ತಾರವಾಗಿ ವಿಮರ್ಶಿಸಿದ್ದಾರೆ. ಚಿತ್ರಕಲೆ ಎಂಬುದು ಇಂಥದೇ ಇನ್ನೊಂದು ಗ್ರಂಥ. ಗಾಂಧೀ, ವಿವೇಕಾನಂದ, ಬಸವೇಶ್ವರ, ಕಬೀರ್ ಮೊದಲಾದವರ ಜೀವನ ಚರಿತ್ರೆಗಳನ್ನು ಕೃಷ್ಣರಾಯರು ರಚಿಸಿದ್ದಾರೆ. ನನ್ನನ್ನು ನಾನೇ ಕಂಡೆ ಎನ್ನುವುದು ಸ್ವಯಂ ಸಂದರ್ಶನಗಳನ್ನೊಳಗೊಂಡ ಗ್ರಂಥ. ಇದರಲ್ಲಿ ಇವರು ತಮ್ಮ ವಿಚಾರಗಳನ್ನು ವಿನೂತನವಾಗಿ ನಿರೂಪಿಸಿದ್ದಾರೆ. ಬರೆಹಗಾರನ ಬದುಕು ಎನ್ನುವುದು ಇವರ ಆತ್ಮಕಥೆ. ಇದನ್ನು ಇವರು ದಿನಪತ್ರಿಕೆಯೊಂದರ ವಾರದ ಪುರವಣಿಯಲ್ಲಿ ಧಾರಾವಾಹಿಯಾಗಿ ಪ್ರಕಟಿಸಿದರು. (1972). ಇದು ಪುಸ್ತಕರೂಪದಲ್ಲಿ ಪ್ರಕಟವಾಯಿತು. ಎರಡು ಸಂಪುಟಗಳಲ್ಲಿ ಗಾರ್ಕಿಯ ಕಥೆಗಳನ್ನೂ ಭಾರತದ ಕಥೆ (ದಿ ಸ್ಟೋರಿ ಆಫ್ ಇಂಡಿಯ) ಎಂಬ ಪುಸ್ತಕವನ್ನೂ ಇವರು ಅನುವಾದಿಸಿದ್ದಾರೆ. ಒಂಬತ್ತು ಪುಸ್ತಕಗಳನ್ನು ಕೃಷ್ಣರಾಯರು ಸಂಪಾದಿಸಿ ಪ್ರಕಟಿಸಿದ್ದಾರೆ. ಕನ್ನಡದ ಕಥೆಗಳನ್ನೂ ಪ್ರೇಮ ಗೀತೆಗಳನ್ನೂ ಪ್ರಾತಿನಿಧಿಕವಾಗಿ ಆಯ್ದು ಮೊದಲಬಾರಿಗೆ ಪ್ರಕಟಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಮಾಕ್ಸಿಂ ಗಾರ್ಕಿಯ ಬಗೆಗೆ ಇವರು ಸಂಪಾದಿಸಿರುವ ಗ್ರಂಥ ವಿಶಿಷ್ಟ ರೀತಿಯದಾಗಿದೆ. ಬಸವೇಶ್ವರ, ಅಲ್ಲಮಪ್ರಭು, ಅಕ್ಕಮಹಾದೇವಿಯವರನ್ನು ಕುರಿತು ಇವರು ಇಂಗ್ಲಿಷಿನಲ್ಲಿಯೂ ಬರೆದಿದ್ದಾರೆ.

ಕೃಷ್ಣರಾಯರು ಕನ್ನಡದಲ್ಲಿ ಪ್ರಗತಿಶೀಲಸಾಹಿತ್ಯ ಚಳವಳಿಯ ಪ್ರವರ್ತಕರು. ಇವರು ತಮ್ಮ ಧ್ಯೇಯಸಾಧನೆಗಾಗಿ ಒಂದು ಗುಂಪನ್ನೇ ಕಟ್ಟಿದ್ದರು. ಹೊಸ ಲೇಖಕರ ಒಂದು ಪಡೆಯನ್ನೇ ನಿರ್ಮಿಸಿದರು. ಉತ್ಸಾಹ ಉದ್ವೇಗಗಳಿಂದ ಸಾಹಿತ್ಯಕ್ಕೆ ಹೊಸ ತಿರುವು ತಂದುಕೊಟ್ಟರು. ಈ ಚಳವಳಿ ಕೇವಲ ಚಳವಳಿಯಾಗಿ ಉಳಿಯಿತೇ ವಿನಾ ಪರಂಪರೆಯಾಗಲಿಲ್ಲ, ಪರಂಪರೆಯ ಭಾಗವಾಗಲಿಲ್ಲ. ಆದರೆ ಇದಕ್ಕೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ವಿಶೇಷ ಸ್ಥಾನವಿದೆಯೆಂಬುದನ್ನು ಮರೆಯುವ ಹಾಗಿಲ್ಲ. ಕೃಷ್ಣರಾಯರು ಬೆಳಕಿಗೆ ತಂದ ಲೇಖಕರಲ್ಲಿ ಒಬ್ಬಿಬ್ಬರಾದರೂ ಕನ್ನಡದಲ್ಲಿ ಇಂದು ಮಹತ್ವದ ಹೆಸರು ಪಡೆದಿದ್ದಾರೆ. ವಿಶಿಷ್ಟವಾದ ಕೆಲಸ ಮಾಡಿದ್ದಾರೆ.

ಕೃಷ್ಣರಾಯರು ಪತ್ರಿಕೋದ್ಯಮ, ಚಲನಚಿತ್ರೋದ್ಯಮಗಳಲ್ಲಿಯೂ ಸಕ್ರಿಯವಾಗಿ ಭಾಗವಹಿಸಿದರು. ಕನ್ನಡ ನುಡಿ ಮತ್ತು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಗಳಿಗೆ ಇವರು ಕೆಲಕಾಲ ಸಂಪಾದಕರಾಗಿದ್ದರು. ಕಥಾಂಜಲಿ, ವಿಶ್ವವಾಣಿ ಎಂಬ ಪತ್ರಿಕೆಗಳನ್ನು ಇವರೇ ಪ್ರಕಟಿಸುತ್ತಿದ್ದರು. ಉದ್ದೇಶ, ವಿನ್ಯಾಸಗಳಲ್ಲಿ ಆ ಪತ್ರಿಕೆಗಳು ಆದರ್ಶಪ್ರಾಯವಾಗಿದ್ದುವು. ಕೆಲವು ಕನ್ನಡ ಚಲನಚಿತ್ರಗಳ ನಿರ್ಮಾಣದೊಂದಿಗೂ ಇವರ ಸಂಪರ್ಕವಿತ್ತು. ಕೃಷ್ಣರಾಯರು ನಡೆಸಿದ ಸಾಹಿತ್ಯಕ ಜಗಳಗಳಿಗೆ ಲೆಕ್ಕವಿಲ್ಲ. ತಮ್ಮನ್ನು ಹಲವು ಕಾಳಗಗಳ ಕಲಿ ಎಂದು ತಾವೇ ಒಂದು ಕಡೆ ವರ್ಣಿಸಿಕೊಂಡಿದ್ದಾರೆ. ಕನ್ನಡದ ಬಗೆಗೆ ಯಾರಿಂದಲೇ ಆಗಲಿ, ಯಾವುದೇ ಮೂಲೆಯಿಂದಾಗಲಿ ಅಪಸ್ವರ ಬಂದಾಗ ಕೃಷ್ಣರಾಯರು ಗರ್ಜಿಸುತ್ತಿದ್ದರು. ತಮ್ಮ ಸ್ವಂತ ವಿಚಾರಗಳನ್ನು ಪ್ರತಿಪಾದಿಸಲು ಇವರು ಯಾವಾಗಲೂ ಹಿಂದೆ ಮುಂದೆ ನೋಡಿದವರಲ್ಲ. ಇವರ ಕನ್ನಡ ಅಭಿಮಾನ ಅಪೂರ್ವವಾದದ್ದು. ನನ್ನಂಥವರು ಕನ್ನಡಕ್ಕೆ ಅನೇಕರಿದ್ದಾರೆ. ಆದರೆ ನನಗಿರುವುದು ಒಂದೇ ಕನ್ನಡ - ಎನ್ನುವುದು ಇವರದೇ ಒಂದು ಮಾತು. ಕನ್ನಡ ನಾಡಿನ ಏಕೀಕರಣಕ್ಕಾಗಿ, ಏಕೀಕೃತ ನಾಡಿನ ಸರ್ವಾಂಗೀಣ ಪ್ರಗತಿಗಾಗಿ ಇವರು ತಮ್ಮ ಜೀವನವನ್ನೇ ಮುಡುಪಿಟ್ಟಿದ್ದರು. ನಾಡಿನ ಉದ್ದಗಲಗಳಲ್ಲೆಲ್ಲ ಸಂಚರಿಸಿ ಜಾಗೃತಿಯ ಜಯಘಂಟೆಯನ್ನು ಬಾರಿಸಿದರು. ನಾಡಿನ ಹೊರಗೂ ಸಂಚರಿಸಿ ಕನ್ನಡ ಸಾಹಿತ್ಯಕ, ಸಾಂಸ್ಕೃತಿಕ ಹಿರಿಮೆಯ ಜಯಘೋಷ ಮಾಡಿದರು. ಕೃಷ್ಣರಾಯರು ಶುದ್ಧ ಕನ್ನಡಿಗರು, ವೀರ ಕನ್ನಡಿಗರು, ಕನ್ನಡಿಗರ ಆತ್ಮಾಭಿಮಾನವನ್ನು ಇವರ ಹಾಗೆ ಉಕ್ಕಿಸಿದವರು ಹಲವರಿಲ್ಲ.

ಕೃಷ್ಣರಾಯರು ಜನರ ಪ್ರೀತಿ ಅಗಾಧ ವಿಶ್ವಾಸಗಳನ್ನು ಪಡೆದಿದ್ದರು. ಸಾಹಿತಿಯಾಗಿ, ವಾಗ್ಮಿಯಾಗಿ ಜನಪ್ರಿಯತೆಯ ಶಿಖರವನ್ನೇರಿದ್ದರು. ಮಣಿಪಾಲದಲ್ಲಿ 1960ರಲ್ಲಿ ನಡೆದ 42ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಇವರು ಅಧ್ಯಕ್ಷರಾಗಿದ್ದರು. ಮೈಸೂರು ವಿಶ್ವವಿದ್ಯಾನಿಲಯ 1970ರಲ್ಲಿ ಇವರಿಗೆ ಗೌರವ ಡಾಕ್ಟೊರೇಟ್ ಪ್ರಶಸ್ತಿಯನ್ನಿತ್ತು ಗೌರವಿಸಿತು. ಗೋವ ಕನ್ನಡ ಸಂಘದವರು 1970ರಲ್ಲಿ ಇವರಿಗೆ ರಸಚೇತನ (ಸಂ. ಶಾ.ಮಂ.ಕೃಷ್ಣರಾಯ) ಎಂಬ ಗೌರವ ಗ್ರಂಥವನ್ನು ಒಪ್ಪಿಸಿದರು (1971). ಮೈಸೂರು ರಾಜ್ಯದ ಸಾಹಿತ್ಯ ಅಕಾಡೆಮಿಗೆ ಇವರು ಮೊದಲ ಅಧ್ಯಕ್ಷರಾಗಿದ್ದರು. *

**ಕೃಷ್ಣರಾಯ, ನಾಡಿಗೇರ :** 1908-92. ವಿಡಂಬನ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆ ನೀಡಿದ ಸಾಹಿತಿ, ಪತ್ರಿಕೋದ್ಯಮಿ, ನಗೆ ಚಿತ್ರಣಕ್ಕೆ ಒಂದು ಮಾದರಿಯನ್ನೂ ಹರಟೆಗೆ ಒಂದು ಶೈಲಿಯನ್ನು ರೂಪಿಸಿದವರು. 1908 ಮೇ 18ರಂದು ಹರಿಹರದಲ್ಲಿ ಜನಿಸಿದರು. ತಂದೆ ದತ್ತಾತ್ರೇಯ ರಾಯ. ಇವರ ಸೋದರರಾದ ನಾಡಿಗೇರ ಗೋವಿಂದರಾಯರೂ ಸಾಹಿಲೆಯಾದರು. ಎರಡು ಹರಟೆ ಸಂಕಲನಗಳನ್ನು ಬರೆದಿದ್ದಾರೆ. ಇವರ ಇನ್ನೊಬ್ಬ ಸೋದರ ನಾಡಿಗೇರ ಮಾಧವರಾಯ (ಮಾದಿಗೇರ) ಒಂದು ಹರಟೆ ಸಂಕಲನ ಪ್ರಕಟಿಸಿದ್ದಾರೆ. ಅಚ್ಯುತರಾವ್, ಆನಂದರಾವ್ ಉಳಿದ ಇಬ್ಬರು ಸಹೋದರರು.

ಐದನೆಯ ಫಾರಂನಲ್ಲಿ ಅನುತ್ತೀರ್ಣರಾದಾಗ (1924-25) ಜವಳಿಅಂಗಡಿ ಗುಮಾಸ್ತರಾಗಿ ವೃತ್ತಿಯನ್ನು ಆರಂಭಿಸಿದರು. ಜೀವನೋಪಾಯಕ್ಕಾಗಿ ಹಲವು ವೃತ್ತಿಗಳನ್ನು ನಿರ್ವಹಿಸಿ ಅನುಭವ ಪಡೆದರು. ಜೀವನ ಎನ್ನುವುದು ಬೇವು ಬೆಲ್ಲದ ಮಿಶ್ರಣ, ಅರೆಕಹಿ, ಅರೆಸಿಹಿ, ಸ್ವಲ್ಪ ನಗು, ಕೊಂಚ ಅಳು, ತುಸುಕೋಪ, ನಸುತಾಪ -

ಇದು ನಾಡಿಗೇರರ ಸಿದ್ಧಾಂತ. ಇವರು ಕೆಲಕಾಲ ಮೈಸೂರಿನ ಮಾಡರ್ನ್ ಹೋಟೆಲ್‌ನಲ್ಲಿ ಕೆಲಸ ಮಾಡಿದರು (1930-31). ಕೆಲವು ದಿನ ಭದ್ರಾವತಿ ಕಬ್ಬಿಣ ಕಾರ್ಖಾನೆಯಲ್ಲಿ ದಿನಗೂಲಿಯಾಗಿ ದುಡಿದರು. ಲಕ್ಕವಳ್ಳಿ ಕಾಡಿನಲ್ಲಿ ಇದ್ದಿಲು ಸುಡಿಸುವ ಕಾರ್ಯದ ಮೇಲ್ವಿಚಾರಕರಾಗಿ ಕಾರ್ಯ ನಿರ್ವಹಿಸಿದರು (1931-34). ಇದೇ ಅವಧಿಯಲ್ಲಿ ವಿವಾಹವಾದರು (1934). ಇವರ ಪತ್ನಿ ಇಂದಿರಮ್ಮ. 1935ರಲ್ಲಿ 'ಲೋಕಮತ' ಪತ್ರಿಕೆಯ ಸಹ ಸಂಪಾದಕರಾದರು. ಅಲ್ಲಿಂದ ಹೊರಬಂದು ಒಂದೂವರೆ ವರ್ಷಗಳ ಕಾಲ ಶ್ಯಾನುಭೋಗರಾಗಿ ಲೆಕ್ಕ ಬರೆದರು. ಕಂದಾಯ ವಸೂಲಿ ಮಾಡಿದರು.

1937ರಲ್ಲಿ ಮತ್ತೆ ಪತ್ರಿಕೋದ್ಯಮವನ್ನು ಪ್ರವೇಶಿಸಿದ ನಾಡಿಗೇರರು ಸಂಯುಕ್ತ ಕರ್ನಾಟಕ (1937-39), ಕಥಾಂಜಲಿ ಹಾಗೂ ಪ್ರಜಾಮತ (1940-44), ದೇಶಬಂಧು (1944) ಪತ್ರಿಕೆಗಳ ಸಹಸಂಪಾದಕರಾಗಿ ದುಡಿದರು. ಕೆಲವು ತಿಂಗಳು ನೀಲಕಂಠೇಶ್ವರ ಪ್ರಿಂಟಿಂಗ್ ಪ್ರೆಸ್‌ನ ವ್ಯವಸ್ಥಾಪಕರಾಗಿದ್ದರು. ಸಂಜಯ ವಾರಪತ್ರಿಕೆಯ ಸಂಪಾದಕರೂ (1946-47) ಆಗಿದ್ದ ಇವರು ಅನಂತರ ಸುಗ್ಗಿ (1947) ಪತ್ರಿಕೆಯಲ್ಲಿ ಸೇವೆ ಸಲ್ಲಿಸಿದರು. ಪ್ರಜಾಮತ, ಜನವಾಣಿ, ಸತ್ಯ, ಕ್ರಾಂತಿ, ತಾಯಿನಾಡು ಪತ್ರಿಕೆಗಳಲ್ಲಿ ಸಹಸಂಪಾದಕರಾಗಿಯೂ ಜನಪ್ರಗತಿ, ಮಲ್ಲಿಗೆ, ಮೈಸೂರು ಪ್ರಭಾ, ಉಷಾ ಪತ್ರಿಕೆಗಳ ಸಂಪಾದಕರಾಗಿಯೂ ಕಾರ್ಯನಿರ್ವಹಿಸಿದರು (1961-72).

ಒಂದೇ ಕಲ್ಲಿನಿಂದ ಎರಡು ಹಕ್ಕಿ ಎಂಬ ಕಿರುಹಾಸ್ಯ ಲೇಖನದಿಂದ ಬರವಣಿಗೆಯನ್ನಾರಂಭಿಸಿದ ಇವರು 45 ಕಾದಂಬರಿಗಳನ್ನೂ 25 ಹರಟೆ ಸಂಕಲನಗಳನ್ನೂ ಪ್ರಕಟಿಸಿದ್ದಾರೆ. ನರಕದಲ್ಲಿ ಸ್ವರ್ಗ ಎಂಬುದು ಪೆರ್ರಿ ಬರ್ಗನ್ ಕುಷ್ಠರೋಗಿಗಳ ಬಗ್ಗೆ ಬರೆದ ಕೂವಾಕ್ ಅಲೋನ್ ಎಂಬುದರ ಭಾಷಾಂತರ. ಪುಡಾರಿ ಪುಟ್ಟಯ್ಯ ಎಂಬ ಹಾಸ್ಯ ನಾಟಕ, ಶ್ರೀಹರಿಹರಕ್ಷೇತ್ರ ಎಂಬ ಕ್ಷೇತ್ರಪರಿಚಯ ಮತ್ತು ರಾಷ್ಟ್ರಪತಿ ವಿ.ವಿ.ಗಿರಿ ಎಂಬ ಜೀವನ ಚರಿತ್ರೆಯನ್ನೂ ಇವರು ರಚಿಸಿದ್ದಾರೆ.

ಇವರು ರಂಗಭೂಮಿಯ ನಟರಾಗಿಯೂ ದುಡಿದಿದ್ದಾರೆ. ತ್ರಿಶಂಕುನರಕ, ಇಬ್ಬರು ಸುಂದರಿಯರು ಎಂಬ ಕೃತಿಗಳಲ್ಲಿ ಕಲಾವಿದರ ನೋವು, ಸಮಾಜ ಅವರನ್ನು ನೋಡುವ ದೃಷ್ಟಿ, ನಡೆಸಿಕೊಳ್ಳುವ ರೀತಿಯನ್ನು ನಗೆಯ ಪರಿಸರದಲ್ಲಿ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಚಲನಚಿತ್ರರಂಗವೂ ಇವರಿಗೆ ಅಪರಿಚಿತವಲ್ಲ. ನಟಶೇಖರ ಚಿತ್ರಕ್ಕೆ ಇವರು ಬರೆದ ಸಂಭಾಷಣೆ ಹಲವರ ಮೆಚ್ಚುಗೆ ಗಳಿಸಿದೆ. ಈ ಕ್ಷೇತ್ರದ ಒಳ ಹೊರಗನ್ನು ತಿಳಿದಿದ್ದ ಇವರು ಚಿತ್ರವ್ಯೂಹ, ಪ್ರಣಯ ಕೋಲಾಹಲ, ಕವಲೊಡೆದ ಪ್ರೇಮ, ತೆರೆಮರೆಯ ಸುಂದರಿಯರು ಎಂಬ ಕಾದಂಬರಿಗಳಲ್ಲಿ ಚಲನಚಿತ್ರದ ನಟನಟಿಯರ ಬದುಕಿನ ಚಿತ್ರವನ್ನು ನೀಡಿದ್ದಾರೆ. ಈ ಕಾದಂಬರಿಗಳು ಜನಪ್ರಿಯವಾಗಿವೆ.

ಇವರು ಬರೆಹಕ್ಕೆ ಸಾಮಾನ್ಯ ವಸ್ತುವನ್ನು ಆಯ್ದುಕೊಂಡರೂ ಪ್ರತಿಯೊಂದು ಬರೆಹದಲ್ಲೂ ವೈಶಿಷ್ಟ್ಯವಿರುವುದನ್ನು ಕಾಣಬಹುದು. ಹೇಳುವ ರೀತಿಯಿಂದಾಗಿ ಅದು ಥಟ್ಟನೆ ಮನಮುಟ್ಟುತ್ತದೆ. ಜೀವನದ ವಿವಿಧ ಮಗ್ಗುಲುಗಳಲ್ಲಿ ಕಂಡು ಬರುವ ಅರೆಕೊರೆಗಳನ್ನು ರಂಜನೀಯವಾಗಿ ತಿಳಿಸುತ್ತಲೇ ಜನರನ್ನು ತಿದ್ದಲು ಇವರು ಪ್ರಯತ್ನಿಸಿದರು. ಸುತ್ತಮುತ್ತ ನಡೆಯುತ್ತಿರುವ ಅನಾಚಾರ, ಅನ್ಯಾಯ, ಅಪವ್ಯಯವನ್ನು ಚಿತ್ರಿಸುವವರನ್ನು ಸಂದರ್ಭದಲ್ಲಿ ವ್ಯಂಗ್ಯ ಪರಿಣಾಮಕಾರಿಯಾಗಿ ಬಳಕೆಯಾಗಿದೆ. ಕಸದಬುಟ್ಟಿ ಸಂಕಲನದ ಪಾನನಿರೋಧ, ನಮ್ಮ ಚಿತ್ರಗಳಲ್ಲಿನ ಹಾಸ್ಯ, ನವಯೋಜನೆ, ಚುನಾವಣೆ ಪ್ರಬಂಧಗಳಲ್ಲೂ ಹರಕು ಮುರುಕುವಿನಲ್ಲಿ ಬರುವ ಜೀವನದ ಗುರಿ, ಯುದ್ಧದ ಪ್ರಯೋಜನಗಳು ಮುಂತಾದ ಪ್ರಬಂಧಗಳಲ್ಲೂ ಈ ಅಂಶವನ್ನು ಕಾಣಬಹುದು.

ರನ್ನಗನ್ನಡಿ 14 ಸಣ್ಣಕಥೆಗಳ ಸಂಕಲನ. ವಾಸ್ತವತೆ ಮತ್ತು ವೈವಿಧ್ಯವನ್ನು ಇಲ್ಲಿಯ ಕಥೆಗಳಲ್ಲಿ ಕಾಣಬಹುದು. ಬಡತನದ ಬವಣೆ, ಹೆಣ್ಣಿನ ಸಹನೆ, ಅಸಹಾಯಕತೆ,ಹೋರಾಟ, ಅಂತಿಮವಾಗಿ ಆಮಿಷಗಳಿಗೆ ಶರಣಾಗತಿ ಇವನ್ನು ಜ್ಯೋತಿ ಕಥೆಯಲ್ಲಿ ಚಿತ್ರಿಸಲಾಗಿದೆ. ದಾಂಪತ್ಯದ ವಿರಸಕ್ಕೆ ಸಂಬಂಧಿಸಿದ ಕಥೆಗಳು ಅಪರಾಧಿ, ಜ್ಞಾನೋದಯ, ಸಿದ್ದಪ್ಪನ ಕತೆ, ಕಣ್ಣಿದ್ದರೂ ಕುರುಡು. ಯೋಗಿಯೊಬ್ಬನ ಸಂಯಮ ಭಗ್ನವಾಗುವುದು ಮನೋನಿಗ್ರಹದ ವಸ್ತು. ಮಹತ್ವಾಕಾಂಕ್ಷೆ ಕನಸಿನ ಲೋಕಕ್ಕೂ ವಾಸ್ತವ ಜಗತ್ತಿಗೂ ಇರುವ ಅಂತರವನ್ನು ತಿಳಿಸುತ್ತದೆ. ತಮ್ಮನ್ನು ತಾವೆ ವಿಡಂಬಿಸಿಕೊಳ್ಳುವ ನಾಡೀಗೇರರು ಗೇಡಿನಾರ್ ಎಂಬ ಹೆಸರಿನಲ್ಲೂ ಬರೆದಿದ್ದಾರೆ.

ಇದಿರೇಟು ಇವರ ಮೊದಲ ಕಾದಂಬರಿ. ವೆಂಕೋಬಾಚಾರಿ, ಎರಡು ಮತ್ತೊಂದು, ಬೆಂಕಿಯ ಹೂ, ಜಾನಕಿ, ಬಂಗಾರದ ಬಳ್ಳಿ, ಪ್ರೇಮದ ಮಂಟಪ, ಮಧುರಸ್ಮೃತಿ, ಮೂವರು ಗೆಳತಿಯರು ಮೊದಲಾದ ಕಾದಂಬರಿಗಳಲ್ಲಿ ಹೆಣ್ಣಿನ ಚಿತ್ರಣ, ಅವಳ ಶೃಂಗಾರ ನಾಜೂಕು, ಸಂಭಾಷಣೆಗಳನ್ನು ನಿಜಜೀವನದಲ್ಲಿ ಕಂಡು ಕೇಳಿಬರುವಂತೆಯೇ ಚಿತ್ರಿಸಿದ್ದಾರೆ. ಇದರಿಂದಾಗಿ ಪಾತ್ರಗಳಿಗೆ ಜೀವಂತಿಕೆ ಬಂದಿದೆ. ಕೈಹಿಡಿದವಳ ಪುಣ್ಯದಲ್ಲಿ ಗ್ರಾಮಗಳ ಪರಿಚಯ, ರಾಜಕೀಯದ್ವೇಷ, ದಾಯಾದಿ ಮಾತ್ಸರ್ಯಗಳ ಜೊತೆಗೆ ಗೃಹಿಣಿಯ ಅರ್ಥ, ವೇಶ್ಯಾವೃತ್ತಿಯಲ್ಲಿರುವವರ ಅಸೂಯೆ ಮೊದಲಾದುವನ್ನು ಕಾಣಬಹುದು. ದಿಕ್ಕೆಟ್ಟದೇಶ ಕಾದಂಬರಿಯಲ್ಲಿ ಭ್ರಷ್ಟರಾಜಕಾರಣಿಗಳು, ಅವರಿಂದ ಲಾಭ ಪಡೆಯುವ ಪತ್ರಿಕೋದ್ಯಮಿಗಳು ಅವರಿಂದಾಗಿ ದಿಕ್ಕೆಟ್ಟು ಹಾಳಾಗುವ ದೇಶದ ಕಥೆ ಇದೆ. ಈ ಎಲ್ಲ ಕಾದಂಬರಿಗಳಲ್ಲೂ ನಾಡಿಗೇರರ ಸರಸಸಂಭಾಷಣೆ, ಸಹಜವಾಗಿ ನಡೆದುಹೋಗುವ ಘಟನೆಗಳು, ತಮ್ಮತನವನ್ನು ತಾವೆ ಪ್ರದರ್ಶಿಸಿಕೊಳ್ಳುವ ಪಾತ್ರಗಳು ಮೊದಲಾದುವನ್ನು ಕಾಣಬಹುದು.

ನಾಡಿಗೇರರು 1944ರಲ್ಲಿ ಅ.ನ.ಕೃ. ಅವರ ನೇತೃತ್ವದಲ್ಲಿ ಸ್ಥಾಪಿತವಾದ ಪ್ರಗತಿಶೀಲ ಸಾಹಿತ್ಯ ಸಂಘದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದರು. ಇವರ 61ನೆಯ ಹುಟ್ಟು ಹಬ್ಬದ ಸಂದರ್ಭದಲ್ಲಿ ನಟನಕಲಾಸಂಘ ಇವರನ್ನು ಸನ್ಮಾನಿಸಿತು (1968). ಇವರಿಗೆ ನಾಡಿಗೇರ್ ಎಂಬ ಸಂಭಾವನಾ ಗ್ರಂಥವನ್ನು ಅರ್ಪಿಸಲಾಗಿದೆ. ಇವರು 1992ರಲ್ಲಿ ನಿಧನರಾದರು.
(ಎಂ.ಎಲ್.ಎನ್.)

**ಕೃಷ್ಣರಾಯ, ಮುದವೀಡು** : 1874-1947. ಕರ್ನಾಟಕದ ಏಕೀಕರಣಕ್ಕೆ ಶ್ರಮಿಸಿದ ಹಿರಿಯರು. ರಂಗಭೂಮಿಯ ನಟ, ಪತ್ರಿಕೋದ್ಯಮಿ ಮತ್ತು ಲೇಖಕರು. ಇವರು 1874 ಜುಲೈ 24ರಂದು ಬಾಗಲಕೋಟೆಯಲ್ಲಿ



ಜನಿಸಿದರು. ಚಿಕ್ಕಂದಿನಲ್ಲಿಯೇ ತಂದೆ ತಾಯಿಯರನ್ನು ಕಳೆದುಕೊಂಡು ಚಿಕ್ಕಮ್ಮನ ಆಶ್ರಯದಲ್ಲಿ ಬೆಳೆದರು. ಧಾರವಾಡದಲ್ಲಿ ಮೆಟ್ರಿಕ್ ತರಗತಿಯವರೆಗೂ ವ್ಯಾಸಂಗ ಮಾಡಿದರು. ಭಾರತ ಸ್ವಾತಂತ್ರ್ಯ ಆಂದೋಲನದಿಂದ ಪ್ರಭಾವಿತ ರಾದರು. ಅದರಿಂದಾಗಿ ವ್ಯಾಸಂಗವನ್ನು ಮುಂದು ವರಿಸಲಾಗಲಿಲ್ಲ. ಲೋಕ ಮಾನ್ಯ ಟಿಳಕರ ಪ್ರಭಾವಕ್ಕೆ ಒಳಗಾದ ಇವರು ಅನೇಕ ರಾಜಕೀಯ ಸಮ್ಮೇಳನ ಗಳಲ್ಲಿ ಭಾಗವಹಿಸಿದರಲ್ಲದೆ ಕಾರಾಗೃಹ ವಾಸವನ್ನು ಅನುಭವಿಸಿದರು. ಬೆಳಗಾಂವಿ ಯಲ್ಲಿ 1924ರಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ಇವರು ಸಕ್ರಿಯ ಪಾತ್ರ ವಹಿಸಿದ್ದರು. ಉತ್ತಮ ವಾಗ್ಮಿಗಳಾಗಿದ್ದ ಇವರದು ಸಿಂಹಗರ್ಜನೆ. ಸಭೆ ಸಮಾರಂಭಗಳಲ್ಲಿ ತತ್‌ಕ್ಷಣದ ಅನುವಾದದಲ್ಲಿ ಇವರು ಎತ್ತಿದ ಕೈ ಎನಿಸಿದ್ದರು. ನೆಹರೂ, ರಾಜಾಜಿ, ಪಟ್ಟಾಭಿ ಸೀತಾರಾಮಯ್ಯ ಮುಂತಾದ ರಾಷ್ಟ್ರ ನಾಯಕರು ಕರ್ನಾಟಕದ ತಮ್ಮ ಕಾರ್ಯಕ್ರಮಗಳಲ್ಲಿ ತಮ್ಮ ಭಾಷಣಗಳ ಅನುವಾದಕ್ಕಾಗಿ ಕೃಷ್ಣರಾಯರನ್ನು ಕರೆದೊಯ್ಯುತ್ತಿದ್ದರು.

ಕನ್ನಡದ ಆಂದೋಲನವನ್ನು ಕೃಷ್ಣರಾಯರು ತಮ್ಮ ಎಳವೆಯಲ್ಲಿಯೇ ಪ್ರಾರಂಭಿಸಿದರು. ಮರಾಠಿ ಪ್ರಾಬಲ್ಯವಿದ್ದ ಉತ್ತರ ಕರ್ನಾಟಕದಲ್ಲಿ ಇವರು ತಮ್ಮ ಬರೆಹ-ಭಾಷಣಗಳಿಂದ ಕನ್ನಡದ

ಜಾಗೃತಿಯನ್ನುಂಟುಮಾಡಿ, ತರುಣರಲ್ಲಿ ಹೊಸ ಚೈತನ್ಯವನ್ನು ತುಂಬಿ ಅವರು ಕನ್ನಡಕ್ಕಾಗಿ ದುಡಿಯಲು ಕಾರಣರಾದರು. ಕರ್ನಾಟಕದ ಏಕೀಕರಣಕ್ಕಾಗಿ ಇವರು ತಮ್ಮ ಜೀವನದುದ್ದಕ್ಕೂ ಶ್ರಮಿಸಿದರು.

ಕೃಷ್ಣರಾಯರ ಪತ್ರಿಕಾವ್ಯವಸಾಯುವೂ ಗಣ್ಯವಾದುದು. ಇವರು ಕರ್ನಾಟಕ ವೃತ್ತ ಮತ್ತು ಕರ್ನಾಟಕ ಧನಂಜಯ ಎಂಬ ಪತ್ರಿಕೆಗಳನ್ನು ಸುಮಾರು ಕಾಲು ಶತಮಾನ ಕಾಲ ನಡೆಸಿದರು. ಭಾರತದ ಸ್ವಾತಂತ್ರ್ಯ ಮತ್ತು ಕರ್ನಾಟಕ ಏಕೀಕರಣವನ್ನು ಕುರಿತಂತೆ ತಮ್ಮ ಗಡುಸಾದ ಗದ್ಯಶೈಲಿಯಲ್ಲಿ ಅಗ್ರಲೇಖನಗಳನ್ನು ಬರೆದು ಪ್ರಕಟಿಸಿದ್ದರು.

ರಂಗಭೂಮಿಯ ಕಲಾವಿದರೂ ಆಗಿದ್ದ ಕೃಷ್ಣರಾಯರು 1907ರಲ್ಲಿ ಭಾರತ ಕಲೋತ್ತೇಜಕ ನಾಟಕ ಮಂಡಳಿ ಎಂಬ ನಾಟ್ಯವಿಲಾಸಿ ಸಂಸ್ಥೆಯನ್ನು ಸಂಘಟಿಸಿದರು. ಪ್ರೇಮಭಂಗ ಮೊದಲಾದ ಹಲವು ನಾಟಕಗಳನ್ನು ಬರೆದು ಆಡಿಸಿದರಲ್ಲದೆ ತಾವೂ ಹಲವು ಪಾತ್ರಗಳನ್ನು ನಿರ್ವಹಿಸಿದರು. ಇವರಿಂದ ಅನೇಕ ಶ್ರೇಷ್ಠ ನಾಟಕ ಕಂಪನಿಗಳು ಸ್ಫೂರ್ತಿಗೊಂಡು ಬೆಳೆದುವು.

ಕಾದಂಬರಿಕಾರರೂ ಆಗಿದ್ದ ಕೃಷ್ಣರಾಯರು ಚಿತ್ತೂರು ಮುತ್ತಿಗೆ, ರಾಮರಾಜ್ಯ ವಿಯೋಗ, ಪ್ರೇಮಭಂಗ ಮುಂತಾದ ಕಾದಂಬರಿಗಳನ್ನು ಬರೆದಿದ್ದಾರೆ. ಬೆಳಗಾಂವಿಯಲ್ಲಿ 1939ರಲ್ಲಿ ನಡೆದ 24ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಕೃಷ್ಣರಾಯರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿ ಗೌರವಿಸಲಾಯಿತು. (ವಿ.ಎಸ್.)

**ಕೃಷ್ಣರಾವ್, ಯು.ಎಸ್.[1]:** 1912-2005. ಪ್ರಸಿದ್ಧ ಭರತನಾಟ್ಯ ಪ್ರವೀಣರು. ಉಭಯಕರ್ ಶಿವರಾವ್ ಕೃಷ್ಣರಾವ್ ಇವರ ಪೂರ್ಣ ಹೆಸರು. ಇವರು 1912 ಡಿಸೆಂಬರ್ 31ರಂದು ಉತ್ತರ ಕನ್ನಡ ಜಿಲ್ಲೆಯ ಕುಮಟ ಸಮೀಪದ ಮಲ್ಲಾಪುರ ಎಂಬಲ್ಲಿ ಜನಿಸಿದರು. ತಂದೆ ಶಿವರಾವ್, ತಾಯಿ ಗಿರಿಜಾಬಾಯಿ. ಇವರದು ವ್ಯಾಪಾರಸ್ಥ ಮನೆತನ. ಕೃಷ್ಣರಾವ್ ಬೆಂಗಳೂರಿನಲ್ಲಿ ವಿದ್ಯಾಭ್ಯಾಸ ಮಾಡಿ ರಸಾಯನ ವಿಜ್ಞಾನದಲ್ಲಿ ಎಂ.ಎಸ್‌ಸಿ. ಪದವಿಯನ್ನು ಚಿನ್ನದ ಪದಕದೊಂದಿಗೆ ಪಡೆದರು. ಹಲವು ವರ್ಷ ಸೆಂಟ್ರಲ್ ಕಾಲೇಜಿನಲ್ಲಿ ರಸಾಯನ ವಿಜ್ಞಾನದಲ್ಲಿ ಅಧ್ಯಾಪಕರಾಗಿ ದುಡಿದರು.

ಬಾಲ್ಯದಿಂದಲೂ ಭರತನಾಟ್ಯದಲ್ಲಿ ಹೆಚ್ಚು ಒಲವು ಹೊಂದಿದ್ದ ಇವರು ಖ್ಯಾತ ನಾಟ್ಯಕಲಾವಿದ ರಾಮಗೋಪಾಲ್ ಅವರಿಂದ ಪ್ರಭಾವಿತರಾದರು. ಮನೆಯವರ ಕಣ್ಣು ತಪ್ಪಿಸಿ ನೃತ್ಯಕಲೆಯನ್ನು ಅಭ್ಯಾಸಮಾಡುತ್ತಿದ್ದ ಕೃಷ್ಣರಾಯರಿಗೆ, ಇವರ ಗುರು ಕೋಲಾರದ ಪುಟ್ಟಪ್ಪನವರು ಮೈಸೂರುಶೈಲಿಯ ಭರತನಾಟ್ಯವನ್ನು ಕಲಿಸಿದರು. ಅನಂತರ ಇವರು ಪಂದನಲ್ಲೂರು ಶೈಲಿಯ ನೃತ್ಯಾಭ್ಯಾಸ ಮಾಡಿದ್ದು ಪಂದನಲ್ಲೂರು ಮೀನಾಕ್ಷಿಸುಂದರಂ ಪಿಳ್ಳೆಯವರಲ್ಲಿ. ಕೃಷ್ಣರಾಯರು ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾಗ ಇವರ ಶಿಷ್ಯೆಯಾಗಿದ್ದ ಚಂದ್ರಭಾಗಾದೇವಿಯವರನ್ನು ಒಲಿದು ಮದುವೆಯಾದರು. ಇಬ್ಬರೂ ನೃತ್ಯಕಲೆಗೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡರು.

ಇವರು ಭರತನಾಟ್ಯದ ಬೆಳೆವಣಿಗೆ, ಏಳಿಗೆ, ಅಭಿವೃದ್ಧಿಗಾಗಿ ಅನೇಕ ರೀತಿಯಲ್ಲಿ ದುಡಿದರು. ಬೆಂಗಳೂರು ವಿಶ್ವವಿದ್ಯಾಲಯದ ನೃತ್ಯ ವಿಭಾಗದಲ್ಲಿ ಗೌರವ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸಿದರು. ಭಾರತ ಹಾಗೂ ಅನ್ಯದೇಶಗಳ ಕಲಾಭಿಲಾಷಿ ವಿದ್ಯಾರ್ಥಿಗಳಿಗೆ ನೃತ್ಯ ಗುರುಗಳಾದರು. ಅವರಿಗೆ ಈ ಕಲೆಯಲ್ಲಿ ಆಸಕ್ತಿ ಮೂಡಿಸಿದರು. ನೃತ್ಯದ ಬಗ್ಗೆ ಅನೇಕ ಉಪನ್ಯಾಸ ಹಾಗೂ ಪ್ರಾತ್ಯಕ್ಷಿಕೆಗಳನ್ನು ಇವರು ನೀಡಿದರು. ಹಲವಾರು ಲೇಖನ ಹಾಗೂ ಪುಸ್ತಕಗಳನ್ನೂ ಬರೆದಿದ್ದಾರೆ. ತಮ್ಮ ಮನೆಯಲ್ಲೇ ಒಂದು ನೃತ್ಯ ಪ್ರಸರಣ ಕೇಂದ್ರ ತೆರೆದು, ಅಲ್ಲಿ ನೃತ್ಯ ಪ್ರದರ್ಶನಗಳನ್ನು ಹಮ್ಮಿಕೊಂಡರು. ಕಲಾರಸಿಕರಿಗೆ, ಪರದೇಶಗಳ ಗೌರವಾನ್ವಿತರಿಗೆ, ಪ್ರತಿನಿಧಿಗಳಿಗೆ, ಪ್ರವಾಸಿಗಳಿಗೆ ನೃತ್ಯದ ರಸದೌತಣ ನೀಡಿದ್ದಾರೆ.

ಚಂದ್ರಭಾಗಾದೇವಿ ಕೃಷ್ಣರಾವ್ ದಂಪತಿಗಳು ಹಲವು ಬಾರಿ ದೇಶ-ವಿದೇಶ ಪ್ರವಾಸ ಮಾಡಿದರು. ಈ ದಂಪತಿಗಳು ಲಂಡನ್ನಿನ ಸಂಗೀತ ವೃತ್ತದಲ್ಲಿ (ಏಷ್ಯನ್ ಮ್ಯೂಸಿಕ್ ಸರ್ಕಲ್) ಅನೇಕ



ನೃತ್ಯಕಾರ್ಯಕ್ರಮಗಳನ್ನು ನಡೆಸಿ ಕೊಟ್ಟಿದ್ದಾರೆ. ಈ ಸಂಸ್ಥೆಯಲ್ಲಿ ನೃತ್ಯಕಾರ್ಯಕ್ರಮ ನೀಡಲು, ನೃತ್ಯಕಲಿಸಲು, ಉಪನ್ಯಾಸ ಹಾಗೂ ನೃತ್ಯ ಸಂಯೋಜನೆ ಮಾಡಲು ಆಗಿನ ಮೈಸೂರು ಸರ್ಕಾರ ಇವರನ್ನು ಪ್ರತಿನಿಧಿಗಳಾಗಿ ಕಳುಹಿಸಿತ್ತು. ಇಂಗ್ಲೆಂಡ್, ಐರ್ಲೆಂಡ್,ಪಶ್ಚಿಮ ಜರ್ಮನಿ, ಫ್ರಾನ್ಸ್, ಬೆಲ್ಜಿಯಂ, ಅಮೆರಿಕ, ಹಾಂಗ್‌ಕಾಂಗ್, ಬ್ಯಾಂಕಾಕ್, ಸಿಂಗಪುರ, ಕೌಲಾಲಂಪುರ, ಕೊಲೊಂಬೊ -ಹೀಗೆ ಎಲ್ಲ ಕಡೆ ಪ್ರವಾಸ ಮಾಡಿ ನೃತ್ಯ ಕಾರ್ಯಕ್ರಮದ ಜೊತೆಗೆ ಉಪನ್ಯಾಸ, ಪ್ರಾತ್ಯಕ್ಷಿಕೆ ಹಾಗೂ ನೃತ್ಯ ಸಂಯೋಜನೆ ಮಾಡಿ ಪ್ರದರ್ಶನಗಳನ್ನು ನೀಡಿದರು. ಆ ದೇಶಗಳ ದೂರದರ್ಶನಗಳಲ್ಲೂ ನೃತ್ಯ ಪ್ರದರ್ಶನ ಹಾಗೂ ಉಪನ್ಯಾಸ ನೀಡಿ ಈ ದಂಪತಿಗಳು ವಿದೇಶಗಳಲ್ಲೂ ತುಂಬ ಜನಪ್ರಿಯತೆ ಗಳಿಸಿದರು. ಕೆನಡದ ಮಾಂಟ್ರಿಯಲ್‌ನಲ್ಲಿರುವ ಕಲಾಭಾರತಿ ಸಂಸ್ಥೆಯ ಆಹ್ವಾನದ ಮೇರೆಗೆ ಅಲ್ಲಿ ಭಾರತೀಯ ನೃತ್ಯ ಪರಂಪರೆಯ ಬಗ್ಗೆ ಉಪನ್ಯಾಸ ನೀಡಿ ಅಲ್ಲಿಯ ವಿದ್ಯಾರ್ಥಿಗಳಿಗೆ ಇವರು ನೃತ್ಯ ಕಲಿಸಿದರು.

ಕೃಷ್ಣರಾವ ದಂಪತಿಗಳು ಕನ್ನಡದಲ್ಲಿ ಬರೆದ ಆಧುನಿಕ ಭಾರತದಲ್ಲಿ ನೃತ್ಯಕಲೆ ಎಂಬ ಪುಸ್ತಕವನ್ನು ಮೈಸೂರು ವಿಶ್ವವಿದ್ಯಾನಿಲಯ ಹೊರತಂದಿದೆ. ಲಾಸ್ಯರಂಜನ ಎಂಬ ಕೃತಿ ಇಂಗ್ಲಿಷಿಗೆ ಅನುವಾದವಾಗಿದೆ. ಕೃಷ್ಣರಾವ್‌ರವರು ಭರತನಾಟ್ಯದ ಪಾರಿಭಾಷಿಕ ಶಬ್ದಗಳ ಒಂದು ನಿಘಂಟನ್ನು ಬರೆದಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದ ಬಿ.ಎ. ತರಗತಿಯ ಪಠ್ಯಪುಸ್ತಕವಾಗಿ ಕನ್ನಡದಲ್ಲಿ ನೃತ್ಯಕಲೆ ಎಂಬ ಪುಸ್ತಕವನ್ನು ದಂಪತಿಗಳು ರಚಿಸಿದ್ದಾರೆ. ಎ ಪನೋರಮ ಆಫ್ ಇಂಡಿಯನ್ ಡಾನ್ಸ್ ಎಂಬುದು ಇವರು ಬರೆದ ಇನ್ನೊಂದು ಪುಸ್ತಕ.

ಇವರು ಅನೇಕ ಸಹಾಯಾರ್ಥ ನೃತ್ಯ ಪ್ರದರ್ಶನಗಳನ್ನು ನೀಡಿ ಸಮಾಜಸೇವೆಯನ್ನು ಮಾಡಿದ್ದಾರೆ. ವಿಶ್ವವಿಖ್ಯಾತರಾದ ಇವರ ಶಿಷ್ಯರ ಸಂಖ್ಯೆ ಅಪಾರ. ಇಂದ್ರಾಣಿ ರೇಹಮಾನ್, ಸೋನಾಲ್ ಮಾನಸಿಂಗ್, ಸುಧಾರಾಣಿ ರಘುಪತಿ, ಪ್ರತಿಭಾ ಪ್ರಹ್ಲಾದ್, ರೇವತಿಸತ್ಯು, ಕಾಮದೇವ್ ಈ ದಂಪತಿಗಳ ಪ್ರಮುಖ ಶಿಷ್ಯ-ಶಿಷ್ಯೆಯರು.

ಸರ್ಕಾರ ಹಾಗೂ ಅನೇಕ ಸಂಘ ಸಂಸ್ಥೆಗಳಿಂದ ಇವರಿಗೆ ಗೌರವ ಸಂದಿದೆ. ಸಂಗೀತ ನೃತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಸರ್ಕಾರದ ಶಾಂತಲಾ ನಾಟ್ಯ ಪ್ರಶಸ್ತಿ, ರಾಷ್ಟ್ರಪತಿಗಳಿಂದ ಇವರು ಕೊಲ್ಕತ್ತದಲ್ಲಿ ಪಡೆದ ರಾಷ್ಟ್ರೀಯ ಪ್ರಶಸ್ತಿ (1988) ಇವು ಕೆಲವು. ಕರ್ನಾಟಕದಲ್ಲಷ್ಟೇ ಅಲ್ಲದೆ ಇವರನ್ನು ಕೆನಡದ ಮಾಂಟ್ರಿಯಲ್‌ನ ಕಲಾಭಾರತಿ ಸಂಸ್ಥೆ ಕೂಡ ಸನ್ಮಾನಿಸಿದೆ. ಚೆನ್ನೈನ ಶ್ರೀ ಭರತಾಲಯ ಸಂಸ್ಥೆ ಇವರನ್ನು ಸನ್ಮಾನಿಸಿದೆ. ಚೆನ್ನೈನ ಕಲೈಮಗಳ್ ಸಭೆಯ ಗೌರವ ಸನ್ಮಾನವೂ ಇವರಿಗೆ ದೊರೆತಿದೆ. ಗಾಯನ ಸಮಾಜ, ಗಾನಕಲಾಪರಿಷತ್ತು, ಕರ್ನಾಟಕ ನೃತ್ಯಕಲಾಪರಿಷತ್ತು, ನೂಪುರ, ದೂರದರ್ಶನ ಪ್ರಶಸ್ತಿ ಇವು ಇವರಿಗೆ ದೊರೆತ ಇನ್ನು ಕೆಲವು ಗೌರವಗಳು. ಕೃಷ್ಣರಾವ್ ಚಂದ್ರಭಾಗಾದೇವಿ ದಂಪತಿಗಳು ದೇಶ ವಿದೇಶಗಳಲ್ಲಿ ಪ್ರದರ್ಶಿಸಿದ ದಿ ಟೆಂಪ್ಟೇಷನ್ ಆಫ್ ಬುದ್ಧ, ರಾಣಿ ಶಾಂತಲಾ, ಗೀತ ಗೋವಿಂದ, ಕಾಮ ದಹನ ಇವು ತುಂಬ ಪ್ರಸಿದ್ಧವಾದ ಪ್ರದರ್ಶನಗಳು. ಇವರು 2005 ಮಾರ್ಚ್ 6ರಂದು ಬೆಂಗಳೂರಿನಲ್ಲಿ ನಿಧನಹೊಂದಿದರು. (ಎಚ್.ಆರ್.ಎಲ್.)

**ಕೃಷ್ಣರಾವ್, ಯು.ಎಸ್. 2 :** 1914-. ಹೆಸರಾಂತ ನೃತ್ಯಪಟು. ಶಾಂತಲಾ ನಾಟ್ಯಪ್ರಶಸ್ತಿ ವಿಜೇತರು. ದಕ್ಷಿಣ ಕನ್ನಡ ಜಿಲ್ಲೆಯ ಉಚ್ಚಿಲದ ಸಂಪ್ರದಾಯಸ್ಥ ಕುಟುಂಬದಲ್ಲಿ 1914 ನವೆಂಬರ್ 9ರಂದು ಜನಿಸಿದರು. ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲಿ ಇವರ ವಿದ್ಯಾಭ್ಯಾಸ ನಡೆಯಿತು. ಅನಂತರ ಕದ್ರಿಯ ವಿದ್ಯಾಬೋಧಿನಿ ಶಾಲೆಯಲ್ಲಿ ಅಧ್ಯಾಪಕ ವೃತ್ತಿಗೆ ಸೇರಿದರು (1934). ನೃತ್ಯದಲ್ಲಿದ್ದ ಆಸಕ್ತಿಯಿಂದಾಗಿ ಶಾಸ್ತ್ರೀಯವಾಗಿ ನೃತ್ಯಾಭ್ಯಾಸಕ್ಕೆ ತಮ್ಮನ್ನು ತೊಡಗಿಸಿಕೊಂಡರು. ಅಂತಾರಾಷ್ಟ್ರೀಯ ಖ್ಯಾತಿಯ ನೃತ್ಯಪಟು ಉದಯ ಶಂಕರ ತಂಡದ ಕೆ.ಕೆ.ಶೆಟ್ಟಿ ಇವರ ಮೊದಲ ಗುರು. ಇವರು ಕಥಕ್ಕಳಿ ಅಭ್ಯಸಿಸಿದ್ದು ನೃತ್ಯಗುರು ಮಹಾಲಿಂಗಂ ಅವರಲ್ಲಿ ನೃತ್ಯರಂಗದಲ್ಲಿ ಹೊಸ ಅಲೆ ಎಬ್ಬಿಸಿದ ನಾಟ್ಯ ಕಲಾನಿಪುಣ ರಾಜನ್ ಅಯ್ಯರ್ ಅವರಿಂದ ಕಥಕ್ಕಳಿ ಹಾಗೂ ಭರತನಾಟ್ಯ ಎರಡನ್ನೂ ಅಭ್ಯಾಸ ಮಾಡಿದರು. ಅಲ್ಲದೆ, ಅವರೊಂದಿಗೆ ಅನೇಕ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡರು.



ಅನಂತರ ಕದ್ರಿಯಲ್ಲಿ ತಮ್ಮದೇ ಆದ ನೃತ್ಯವಿದ್ಯಾಲಯವನ್ನು ಸ್ಥಾಪಿಸಿದರು. ದಕ್ಷಿಣ ಕನ್ನಡದ ಎಲ್ಲ ಊರುಗಳಲ್ಲೂ ನೃತ್ಯ ಪ್ರದರ್ಶನ ನೀಡಿ ಮನೆ ಮಾತಾದರು. ಸಾವಿರಕ್ಕೂ ಹೆಚ್ಚು ನೃತ್ಯಪ್ರದರ್ಶನಗಳನ್ನು ನೀಡಿದ ದಾಖಲೆ ಇವರದು. ತಮ್ಮ ನೃತ್ಯ ವಿದ್ಯಾಲಯದ ರಜತ ಮಹೋತ್ಸವ ಸಮಾರಂಭವನ್ನು ಮುಂಬಯಿಯಲ್ಲಿ ನಡೆಸಿದರು. ನವದೆಹಲಿಯಲ್ಲಿ ಅಂದಿನ ರಾಷ್ಟ್ರಪತಿ ಎಸ್.ರಾಧಾಕೃಷ್ಣನ್ ಅವರ ಸಮ್ಮುಖದಲ್ಲಿ ನೃತ್ಯಪ್ರದರ್ಶನ ನೀಡಿ ಪ್ರಶಸ್ತಿಪತ್ರ ಪಡೆದ ಹೆಗ್ಗಳಿಕೆ ಇವರದು. ಜನತೆಯಲ್ಲಿ ನೃತ್ಯಾಭಿರುಚಿಯನ್ನು ಬೆಳೆಸುವಲ್ಲಿ ಇವರು ಅಪಾರ ಶ್ರಮವಹಿಸಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ನೂರಾರು ಜನರಿಗೆ ನೃತ್ಯ ಕಲಿಸಿದ್ದಾರೆ. ಇವರ ಐವರು ಮಕ್ಕಳೂ ನೃತ್ಯ ಹಾಗೂ ಸಂಗೀತ ರಂಗದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ನೃತ್ಯರಂಗದಲ್ಲಿ ಇವರ ಸಾಧನೆಗಾಗಿ ಅನೇಕ ಪ್ರಶಸ್ತಿ-ಗೌರವಗಳು ಲಭಿಸಿವೆ. ಇವರಿಗೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ನೀಡಿದ ಕರ್ನಾಟಕ ಕಲಾತಿಲಕ ಬಿರುದು (1981), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1992), ಕರ್ನಾಟಕ ಸರ್ಕಾರದ ಶಾಂತಲಾ ನಾಟ್ಯ ಪ್ರಶಸ್ತಿ (1988) ಹಾಗೂ ಉತ್ತಮ ಶಿಕ್ಷಕ ಪ್ರಶಸ್ತಿ ಲಭಿಸಿವೆ. (1972). ಇವರು ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಹಾಗೂ ತಂಜಾವೂರಿನ ದಕ್ಷಿಣ ವಲಯ ಸಾಂಸ್ಕೃತಿಕ ಕೇಂದ್ರದ ಸದಸ್ಯರಾಗಿ ಸೇವೆಸಲ್ಲಿಸಿದ್ದಾರೆ. (ಎಚ್.ಆರ್.ಎಲ್.)

**ಕೃಷ್ಣರಾವ್, ಎಂ.ವಿ. :** ಪ್ರಸಿದ್ಧ ಇತಿಹಾಸಜ್ಞ, ರಾಜನೀತಿಜ್ಞ. ಇವರು ತಮ್ಮ ವಿದ್ಯಾಭ್ಯಾಸ ಕಾಲದಲ್ಲಿ ಖ್ಯಾತವಿದ್ವಾಂಸ ಥಾಮಸ್ ಡೆನ್‌ಹ್ಯಾಮ್, ಸಿ.ಆರ್.ರೆಡ್ಡಿ, ರಾಧಾಕುಮುದ ಮುಖರ್ಜಿ, ಎಸ್.ವಿ.ವೆಂಕಟೇಶ್ವರ, ಎಂ.ಎಚ್.ಕೃಷ್ಣ ಮೊದಲಾದವರ ಶಿಷ್ಯರಾಗಿದ್ದು, ಅವರಿಂದ ಜೀವನದ ವಿಶಾಲ ದೃಷ್ಟಿ, ವಿದ್ಯಾರ್ಜನೆಯಲ್ಲಿ ಆಳವಾದ ಸಂಶೋಧನಾತ್ಮಕ ಆಸಕ್ತಿ ಮತ್ತು ಪ್ರೌಢವಾದ ವಿದ್ವತ್ತನ್ನು ಗಳಿಸಿಕೊಂಡರು. ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿಗೆ ಸೇರಿದ ತರುವಾಯ ರಾಜ್ಯಶಾಸ್ತ್ರದಲ್ಲಿ ಹೆಚ್ಚಿನ ಪಾಂಡಿತ್ಯ ಗಳಿಸುವ ದೃಷ್ಟಿಯಿಂದ ಲಂಡನ್ನಿಗೆ ತೆರಳಿ, ಲಾಸ್ಕಿಯ ಶಿಷ್ಯರಾದರು. ಇದರ ಫಲವಾಗಿ ಗ್ರೋತ್ ಆಫ್ ಲಿಬರಲಿಸಂ ಇನ್ ಇಂಡಿಯ ಇನ್ ದಿ ನೈನ್‌ಟೀನ್ತ್ ಸೆಂಚುರಿ ಎಂಬ ಗ್ರಂಥ ರಚಿಸಿದರು.

ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಸಂಶೋಧನೆ ಮತ್ತು ಬೋಧನೆಯಲ್ಲಿ ನಿರತರಾದರು. ಇವರು ಒಳ್ಳೆಯ ವಾಗ್ಮಿತೆಯನ್ನೂ ವಿಷಯದ ಮೇಲೆ ಪ್ರಭುತ್ವವನ್ನೂ ಪಡೆದಿದ್ದರು. ಇವರು ಮೊದಲು ರಾಜ್ಯಶಾಸ್ತ್ರದ ಉಪಪ್ರಾಧ್ಯಾಪಕರೂ ಅನಂತರ ಇತಿಹಾಸದ ಪ್ರಾಧ್ಯಾಪಕರೂ ಆದರು. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಹುದ್ದೆಯಿಂದ 1956ರಲ್ಲಿ ಇವರು ನಿವೃತ್ತರಾದರು. ಅನಂತರ ಒಂದೂವರೆ ದಶಕಗಳ ಕಾಲ ಕರ್ನಾಟಕದ ಇತಿಹಾಸ, ಸಂಸ್ಕೃತಿಗಳ ವಿಚಾರವಾಗಿ ಆಳವಾದ ಅಧ್ಯಯನ ಸಂಶೋಧನೆಗಳಲ್ಲಿ ನಿರತರಾಗಿದ್ದರಲ್ಲದೆ ಬೆಂಗಳೂರಿನ ಕಾಲೇಜೊಂದರಲ್ಲಿ ಅಧ್ಯಾಪಕ ವೃತ್ತಿಯನ್ನು ಮುಂದುವರಿಸಿದರು. ಬೆಂಗಳೂರು ನಗರದ ಅನೇಕ ಪ್ರಮುಖ ಐತಿಹಾಸಿಕ ಸಾಂಸ್ಕೃತಿಕ ಸಭೆಗಳ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತಿನ ಉಪಾಧ್ಯಕ್ಷತೆ, ಪ್ರೌಢಶಾಲಾ ಉಪಾಧ್ಯಾಯ ಸಂಘದ ಅಧ್ಯಕ್ಷತೆ, ಮಿಥಿಕ್ ಸೊಸೈಟಿಯ ಅಧ್ಯಕ್ಷತೆ, ಆಚಾರ್ಯ ತುಳಸಿಯವರಿಂದ ಪ್ರಚಲಿತವಾದ ಅಣುವ್ರತ ಸಮಿತಿಯ ಕರ್ನಾಟಕ ಸಮಿತಿಯ ನಿರ್ದೇಶಕತ್ವ - ಇವು ಇವರ ಚಟುವಟಿಕೆಗಳಲ್ಲಿ ಕೆಲವು.

ವಿದ್ವತ್ ಲೋಕಕ್ಕೆ ಇವರ ಕೊಡುಗೆ ಗಮನಾರ್ಹ. ಕೌಟಿಲ್ಯನ ಅರ್ಥಶಾಸ್ತ್ರವನ್ನು ಕುರಿತ ಇವರ ಸಂಶೋಧನಾತ್ಮಕ ಲೇಖನಗಳು ಪುರಾತನ ಭಾರತೀಯ ರಾಜನೀತಿಯ ಅಧ್ಯಯನಕ್ಷೇತ್ರದಲ್ಲಿ ಉತ್ತಮ ಕೊಡುಗೆಗಳಾಗಿವೆ. 19ನೆಯ ಶತಮಾನದಲ್ಲಿ ಭಾರತದ ರಾಜಕಾರಣದಲ್ಲಿ ಬೆಳೆದುಬಂದ ಉದಾರತಾವಾದದ ಮೇಲಿನ ಇವರ ಅಧ್ಯಯನ ಉತ್ತಮವಾದ ಶಾಸ್ತ್ರೀಯ ಬರೆವಣಿಗೆಗೂ ಭಾಷಾಪ್ರೌಢಿಮೆಗೂ ಹೆಸರಾಗಿದೆ. ಪ್ರಾಚೀನ ಕರ್ನಾಟಕದಲ್ಲಿ 7 ಶತಮಾನಗಳ ಕಾಲ ರಾಜ್ಯವಾಳಿ ಸಂಸ್ಕೃತಿಯ ಬೆಳೆವಣಿಗೆಗೆ ಗಮನಾರ್ಹ ಕಾಣಿಕೆ ನೀಡಿದ ಗಂಗವಂಶದ ಚರಿತ್ರೆಯ ಮೇಲೆ ಇವರು ರಚಿಸಿದ ಹೊತ್ತಗೆ ತಲಕಾಡಿನ ಗಂಗರು ಇಂದಿಗೂ ಆ ವಂಶದ ಮೇಲಿನ ಅಧಿಕಾರಯುತ ಗ್ರಂಥಗಳಲ್ಲೊಂದು. ಕರ್ನಾಟಕದ ಇತಿಹಾಸದ ಮೇಲೆ ಇವರು ಹಲವಾರು ಗ್ರಂಥಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಗ್ಲಿಂಪ್ಸಸ್ ಆಫ್ ಕರ್ನಾಟಕ ಹಿಸ್ಟೊರಿ ಮತ್ತು ಕರ್ನಾಟಕ ಇತಿಹಾಸ ದರ್ಶನ -ಇವು ಮುಖ್ಯವಾದವು. ಕರ್ನಾಟಕ ಇತಿಹಾಸ ದರ್ಶನ ಕನ್ನಡ ನಾಡಿನ 2000 ವರ್ಷಗಳ ಇತಿಹಾಸದ ಸಮಗ್ರ ನೋಟವನ್ನೊದಗಿಸುವ ದೊಡ್ಡ ಕೃತಿ. ಇವರ ಜೀವನದ ಕೊನೆಗಾಲದಲ್ಲಿ ಪ್ರಕಟವಾದ ಈ ಪುಸ್ತಕ ಇವರ ಆಳವಾದ ವಿದ್ವತ್ತು ಮತ್ತು ವಿಶಾಲವಾದ ಅನುಭವಗಳ ದ್ಯೋತಕವಾಗಿದೆ.



ಕೃಷ್ಣರಾಯರು ಬ್ರಿಟನ್ನಿನ ರಾಯಲ್ ಏಷ್ಯಾಟಿಕ್ ಸೊಸೈಟಿಯ ಗೌರವ ಸದಸ್ಯತ್ವ ಪಡೆದಿದ್ದರು. ರಾಜ್ಯ ಸರ್ಕಾರದ ಆಶ್ರಯದಲ್ಲಿ ನಡೆದ ಕರ್ನಾಟಕ ಸ್ವಾತಂತ್ರ್ಯ ಚಳವಳಿಯ ಇತಿಹಾಸದ ರಚನೆಯಲ್ಲೂ ಇವರು ಭಾಗವಹಿಸಿದ್ದರು. ಕನ್ನಡ ವಿಶ್ವಕೋಶದ ಇತಿಹಾಸ ಉಪಸಮಿತಿಯ ಅಧ್ಯಕ್ಷರಾಗಿದ್ದ ಇವರ ಹಲವು ಲೇಖನಗಳು ಕನ್ನಡ ವಿಶ್ವಕೋಶದಲ್ಲಿ ಪ್ರಕಟವಾಗಿವೆ. ಇವರು 1971ರಲ್ಲಿ ನಿಧನ ಹೊಂದಿದರು. *

**ಕೃಷ್ಣವರ್ಮ I :** ಬನವಾಸಿಯ ಕದಂಬ ವಂಶದ ತ್ರಿಪರ್ವತ ಶಾಖೆಯ ಮೊದಲ ಅರಸ (ಸು.430-60) ಕಾಕುತ್ಸ್ಥವರ್ಮನ ಕಿರಿಯ ಮಗ.

ಕಾಕುತ್ಸ್ಥವರ್ಮನ ಉತ್ತರಾಧಿಕಾರಿಯಾಗಿ ಇವನ ಅಣ್ಣ ಶಾಂತಿವರ್ಮ ಬನವಾಸಿಯಲ್ಲಿ ಸಿಂಹಾಸನಸ್ಥನಾದಾಗ ಇವನು ತ್ರಿಪರ್ವತದಿಂದ ಸ್ವತಂತ್ರವಾಗಿ ಆಳಲಾರಂಭಿಸಿದ. ತ್ರಿಪರ್ವತವನ್ನು ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ ಶ್ರೀಪರ್ವತ (ಶ್ರೀಶೈಲ) ಎಂದು ಕೆಲವರು ಗುರುತಿಸಿದ್ದರೆ, ಕೆಲವರು ಇದು ಹಾಸನ ಜಿಲ್ಲೆಯ ಹಳೇಬೀಡೆಂದು ಅಭಿಪ್ರಾಯಪಟ್ಟಿದ್ದಾರೆ. ಇದು ಬೆಳಗಾಂವಿ

ಜಿಲ್ಲೆ ಮೂರುಗೋಡು ತ್ರಿಪರ್ವತ ಎಂದು ಪಾಠಕ್ ಅವರ ಅಭಿಪ್ರಾಯವಿದೆ. ದ.ಕ.ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಶಿಶಿಲ ಬೆಟ್ಟ ತ್ರಿಪರ್ವತವೆಂದೂ ಹೆಸರಾಗಿತ್ತೆಂದೂ ಕದಂಬ ಅರಸ ಶಿಶಿಲದಿಂದ ಆಳಿದನೆಂದೂ ಐತಹ್ಯವಿದೆ.

ಸೇಂದ್ರಕರ ಸಾಮಂತರಾಗಿದ್ದು ಕದಂಬರ ವಿರುದ್ಧ ದಂಗೆ ಎದ್ದ ನಾಗವಂಶೀಯರನ್ನು ಇವನು ಸೋಲಿಸಿ ಅವರ ರಾಜ್ಯವನ್ನು ಕಸಿದುಕೊಂಡ. ಇದಲ್ಲದೆ ಪಲ್ಲವರನ್ನು ಸಹ ಈತ ಕದನದಲ್ಲಿ ಎದುರಿಸಬೇಕಾಯಿತು. ಶಾಸನಗಳಲ್ಲಿ ಈ ಪಲ್ಲವದೊರೆಯನನ್ನು ನಣಕ್ಕಾಸ ಪಲ್ಲವನೆಂದು ಕರೆಯಲಾಗಿದೆ. ಇವರಿಬ್ಬರ ನಡುವೆ ನಡೆದ ಕದನದಲ್ಲಿ ಕೃಷ್ಣವರ್ಮ ಸೋಲನ್ನನುಭವಿಸಿದ. ಆದರೆ ಈತನ ಬಂಧುವಾದ ಕೇಕೆಯ ಶಿವಸ್ಕಂದವರ್ಮ ಕೃಷ್ಣವರ್ಮನ ಪೂರ್ವವೈಭವವನ್ನು ಸಂಪಾದಿಸಿಯೇ ತೀರುವೆನೆಂದು ನಿಶ್ಚಯಿಸಿ ಉಗ್ರವಾದ ತಪಸ್ಸನ್ನಾಚರಿಸಿದನೆಂದು ದಾವಣಗೆರೆ ತಾಲ್ಲೂಕಿನ ಒಂದು ಶಾಸನದಲ್ಲಿ ಹೇಳಿದೆ. ಕೃಷ್ಣವರ್ಮ ಅಶ್ವಮೇಧಯಾಗವನ್ನು ಮಾಡಿದನೆಂಬುದು ಇತರ ಶಾಸನಗಳಿಂದ ತಿಳಿದಿದೆ. ಆದ್ದರಿಂದ ಹೀಗೆ ಪಲ್ಲವರಿಂದ ಸೋಲಿಸಲ್ಪಟ್ಟ ಕೃಷ್ಣವರ್ಮ ಅನಂತರ ಕೇಕಯ ಮುಂತಾದ ಇತರ ಸಮರ್ಥ ಸಾಮಂತರ ನೆರವಿನಿಂದ ಪಲ್ಲವರನ್ನು ಸೋಲಿಸಿ, ಆ ವಿಜಯದ ಅನಂತರ ಈ ಯಾಗ ಮಾಡಿರಬಹುದು. ಬಹುಶಃ ಈ ಸಂದರ್ಭದಲ್ಲಿ ಈತನ ಅಣ್ಣನ ಮಗನಾದ ಮೃಗೇಶವರ್ಮ ಇವನಿಗೆ ಬೆಂಬಲವನ್ನು ನೀಡಿರಬೇಕು.

ಈತನಿಗೆ ಇಬ್ಬರು ಮಕ್ಕಳು - ವಿಷ್ಣುವರ್ಮ ಮತ್ತು ದೇವವರ್ಮ. ಕಿರಿಯನಾದ ದೇವವರ್ಮನನ್ನು ಈತ ಉತ್ತರಾಧಿಕಾರಿಯಾಗಿ ಆರಿಸಿದ. ಇದಕ್ಕೆ ಕಾರಣ ಗೊತ್ತಿಲ್ಲ. ಹಿರಿಯನಾದ ವಿಷ್ಣುವರ್ಮ ಕೇಕಯ ರಾಜಪುತ್ರಿಯ ಮಗ. ಕೃಷ್ಣವರ್ಮನ ಭಗಿನಿಯನ್ನು ಗಂಗವಂಶದ ಮುಮ್ಮುಡಿ ಮಾಧವ ಮದುವೆಯಾಗಿದ್ದ. (ಬಿ.ಆರ್.ಜಿ)

**ಕೃಷ್ಣವರ್ಮ II :** ಬನವಾಸಿಯ ಕದಂಬ ವಂಶದ ಅರಸ (ಸು.516-40). ತ್ರಿಪರ್ವತಶಾಖೆಯ ಸಿಂಹವರ್ಮನ ಮಗ.

ಈತ ಬನವಾಸಿಯಲ್ಲಿ ಆಳುತ್ತಿದ್ದ ಸೋದರಸಂಬಂಧಿಯಾದ ಹರಿವರ್ಮನನ್ನು ಸೋಲಿಸಿ ಆ ರಾಜ್ಯವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡ. ಇಬ್ಭಾಗವಾಗಿದ್ದ ಕದಂಬ ರಾಜ್ಯ ಇವನ ಕಾಲದಲ್ಲಿ ಪುನಃ ಒಟ್ಟುಗೂಡಿತು. ಬನವಾಸಿಯನ್ನು (ವೈಜಯಂತಿ) ಪುನಃ ತನ್ನ ರಾಜಧಾನಿಯಾಗಿ ಮಾಡಿಕೊಂಡ. ಇದು ಈತನ ಆಳಿಕೆಯ ಎಂಟನೆಯ ವರ್ಷದೊಳಗೆ ನಡೆದ ಘಟನೆ. ಆದರೆ ಈತನನ್ನು ಚಳುಕ್ಯ ಪುಲಕೇಶಿ ಸೋಲಿಸಿದನೆಂದೂ ತನ್ಮೂಲಕ ಕದಂಬರಾಜ್ಯ ಅಸ್ತವಾಯಿತೆಂದೂ ಹೇಳಲಾಗಿದೆ. ಆದರೆ ಈ ಕುರಿತು ಹೆಚ್ಚಿನ ವಿವರಗಳು ತಿಳಿದಿಲ್ಲ. ಇಮ್ಮಡಿ ಕೃಷ್ಣವರ್ಮನಿಗೆ ಅಜವರ್ಮ ಮತ್ತು ರವಿವರ್ಮರೆಂಬ ಇಬ್ಬರು ಮಕ್ಕಳಿದ್ದರು. ಆದರೆ ಇವರು ಬಹುಶಃ ಸಾಮಂತ ಪದವಿಯಿಂದಲೇ ತೃಪ್ತರಾಗಿರಬೇಕಾಯಿತು. (ಬಿ.ಆರ್.ಜಿ.)

**ಕೃಷ್ಣಶಾಸ್ತ್ರಿ, ಎಚ್. :** 1870-1928. ಖ್ಯಾತ ಶಾಸನತಜ್ಞರು. ಬೆಂಗಳೂರು ಜಿಲ್ಲೆ ಹೊಸಕೋಟೆಯಲ್ಲಿ ಜನಿಸಿ, ಬೆಂಗಳೂರಿನಲ್ಲಿ ಬಿ.ಎ. ವರೆಗೆ ಓದಿ ಅನಂತರ ಭಾರತ ಸರ್ಕಾರದ ಶಾಸನ ಇಲಾಖೆಯನ್ನು ಸೇರಿ ಜರ್ಮನ್ ವಿದ್ವಾಂಸರಾದ ಹುಲ್ಷ್‌ರ ಸಹಾಯಕರಾದರು. ಶಾಸನತಜ್ಞರಾಗಿ ದೇಶವಿದೇಶಗಳಲ್ಲಿ ಸಂಚರಿಸಿದ ಇವರಿಗೆ ಕನ್ನಡ, ಇಂಗ್ಲಿಷ್, ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿ ಪ್ರಭುತ್ವವಿತ್ತು. 1908ರಲ್ಲಿ ಅಸಿಸ್ಟೆಂಟ್ ಸೂಪರಿಂಟೆಂಡೆಂಟರ ಹುದ್ದೆಗೂ 1920ರಲ್ಲಿ ಗವರ್ನಮೆಂಟ್ ಎಪಿಗ್ರಫಿಸ್ಟ್ ಫಾರ್ ಇಂಡಿಯಾ ಮುಖ್ಯಾಧಿಕಾರಿಯ ಹುದ್ದೆಗೂ ನೇಮಕಗೊಂಡರು. ಇವರ ಪಾಂಡಿತ್ಯ ಮತ್ತು ಕಾರ್ಯದಕ್ಷತೆಗೆ ಮೆಚ್ಚಿ ಭಾರತ ಸರ್ಕಾರ 1912ರಲ್ಲಿ ರಾವ್ ಸಾಹೇಬ್ ಮತ್ತು 1920ರಲ್ಲಿ ರಾವ್ ಬಹದ್ದೂರ್ ಬಿರುದುಗಳನ್ನಿತ್ತು ಸನ್ಮಾನಿಸಿತು. 1924ರಲ್ಲಿ ಕೋಲಾರದಲ್ಲಿ ನಡೆದ 10ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಇವರು ಆಯ್ಕೆಯಾದರು. 1925ರಲ್ಲಿ ಹುದ್ದೆಯಿಂದ ನಿವೃತ್ತರಾದರು.

ಕೃಷ್ಣಶಾಸ್ತ್ರಿಗಳು ಸಂಪಾದಿಸಿದ ದಕ್ಷಿಣ ಭಾರತ ಶಾಸನಗಳಿಗೆ ಸಂಬಂಧಿಸಿದ ವಾರ್ಷಿಕ ವರದಿಗಳು, ಎಪಿಗ್ರಾಫಿಯಾ ಇಂಡಿಕಾದ 17ನೆಯ ಸಂಪುಟ, 16 ಮತ್ತು 18ನೆಯ ಸಂಪುಟಗಳ ಕೆಲವು ಸಂಚಿಕೆಗಳು ಮತ್ತು ದಕ್ಷಿಣ ಭಾರತ ಶಾಸನಗಳ 2ನೆಯ ಸಂಪುಟದ 4ನೆಯ ಭಾಗ ಮತ್ತು 4 ಹಾಗೂ 5ನೆಯ ಸಂಪುಟಗಳು ಇತಿಹಾಸಕಾರರಿಗೆ ಅಮೂಲ್ಯ ಆಧಾರ ಗ್ರಂಥಗಳಾಗಿವೆ. ದಕ್ಷಿಣ ಭಾರತ ಶಾಸನಗಳ ಅನುಕ್ರಮ ಸಂಚಿಕೆಗಳ 2ನೆಯ ಸಂಪುಟದ 5ನೆಯ ಭಾಗ ಮತ್ತು 3ನೆಯ ಸಂಪುಟದ 3ನೆಯ ಭಾಗವನ್ನು ಇವರು ಹೊರತಂದರು. ಮಸ್ಕಿಯ ಅಶೋಕನ ಶಾಸನ, ಮಹಾಬಲಿಪುರದ ಶಿವದೇವಾಲಯವೊಂದರಲ್ಲಿರುವ ಎರಡು ವಿಗ್ರಹಗಳು, ಐದು ಪಲ್ಲವ ಶಾಸನಗಳು ಇವುಗಳ ಮೇಲೆ ಬರೆದ ಮತ್ತು ಎಪಿಗ್ರಾಫಿಯಾ ಇಂಡಿಕಾದಲ್ಲಿ ಪ್ರಕಟವಾಗಿರುವ ಇವರ ಸಂಶೋಧನಾತ್ಮಕ ಪ್ರಬಂಧಗಳು ಇವರ ಪ್ರತಿಭೆಯನ್ನು ವ್ಯಕ್ತಪಡಿಸುತ್ತವೆ. ಹಿಂದು ಪ್ರತಿಮಾಶಿಲ್ಪಗಳ ಅಧ್ಯಯನದಲ್ಲಿ ಇಂದಿಗೂ ಉತ್ತಮ ಸಹಾಯಕ ಗ್ರಂಥವಾಗಿರುವ ದಕ್ಷಿಣ ಭಾರತದ ಪ್ರತಿಮೆಗಳನ್ನು ಕುರಿತ ಇವರ ಸಚಿತ್ರ ಗ್ರಂಥ 1916ರಲ್ಲಿ ಪ್ರಕಟವಾಯಿತು. ಇವರು 1928ರಲ್ಲಿ ಬೆಂಗಳೂರಿನಲ್ಲಿ ನಿಧನರಾದರು. (ಎಚ್.ಎಂ.ಎನ್.ಆರ್.)

**ಕೃಷ್ಣಶಾಸ್ತ್ರೀ, ಎ.ಆರ್. :** 1890-1968. ಹೊಸಗನ್ನಡದ ಅಶ್ವಿನೀ ದೇವತೆಗಳಲ್ಲಿ ಒಬ್ಬರೆಂದು ಪ್ರಸಿದ್ಧರಾದ ಲೇಖಕರು. ಇವರು 1890 ಫೆಬ್ರವರಿ 12ರಂದು ಮೈಸೂರು ನಗರದಲ್ಲಿ ಜನಿಸಿದರು. ತಂದೆ ಅಂಬಳೆ ರಾಮಕೃಷ್ಣಶಾಸ್ತ್ರಿಗಳು ಮೈಸೂರಿನ ಮಹಾರಾಜರ ಸಂಸ್ಕೃತ ಪಾಠಶಾಲೆಯಲ್ಲಿ ವ್ಯಾಕರಣಶಾಸ್ತ್ರದ ಪ್ರಾಧ್ಯಾಪಕರಾಗಿದ್ದುದ್ದರಿಂದ ಶಾಸ್ತ್ರಿಗಳಿಗೆ ಚಿಕ್ಕಂದಿನಲ್ಲಿಯೇ ಸಂಸ್ಕೃತಭಾಷಾ ಸಾಹಿತ್ಯಗಳ ಪ್ರವೇಶಕ್ಕೆ ಅನುಕೂಲವಾಯಿತು. ಮೈಸೂರಿನ ವೆಸ್ಲಿಯನ್ ಮಿಷನ್ ಪ್ರೌಢಶಾಲೆಯ ವಿದ್ಯಾಭ್ಯಾಸವನ್ನು ಮುಗಿಸಿದಮೇಲೆ, ಮಹಾರಾಜ ಕಾಲೇಜಿನಲ್ಲಿ ಬಿ.ಎಂ.ಶ್ರೀಕಂಠಯ್ಯ ಮತ್ತು ಎಂ.ಹಿರಿಯಣ್ಣನವರ ಶಿಷ್ಯರಾಗಿ ಇಂಗ್ಲಿಷ್, ಕನ್ನಡ ಮತ್ತು ಸಂಸ್ಕೃತ ಭಾಷೆಗಳನ್ನು ಮುಖ್ಯ ವಿಷಯಗಳಾಗಿ ಆರಿಸಿಕೊಂಡು 1913ರಲ್ಲಿ ಬಿ.ಎ. ಪದವಿ ಗಳಿಸಿದರು. ಅನಂತರ ಕನ್ನಡ ಮತ್ತು ಸಂಸ್ಕೃತ ಭಾಷೆಗಳನ್ನು ವಿಶೇಷವಾಗಿ ವ್ಯಾಸಂಗಮಾಡಿ 1915ರಲ್ಲಿ ಎಂ.ಎ. ಪದವಿ ಪಡೆದರು.



ಮೈಸೂರು ಜಿಲ್ಲಾ ಕಚೇರಿಯಲ್ಲಿ ಕೆಲವು ತಿಂಗಳುಗಳ ಕಾಲ ಕೆಲಸ ಮಾಡಿದ ಮೇಲೆ ಶಾಸ್ತ್ರಿಗಳು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಬೋಧಕರಾಗಿ ನೇಮಕಗೊಂಡರು (1915). ಕೇಳುವವರಿಲ್ಲದೆ ಮೂಲೆಗುಂಪಾಗಿದ್ದ ಕನ್ನಡವನ್ನು ಮೇಲೆತ್ತಲು ಅಲ್ಲಿ ಇವರು ಮಾಡಿದ ಮುಖ್ಯವಾದ ಮೂರು ಕೆಲಸಗಳಿವು: ಮೊದಲನೆಯದಾಗಿ ಇಂಗ್ಲಿಷ್ ಸಾಹಿತ್ಯಾಭ್ಯಾಸದಿಂದ ತಾವು ಪಡೆದ ಜ್ಞಾನದಿಂದ ಕನ್ನಡದ ಬೋಧನೆಗೆ ಹೊಸ ತಿರುವನ್ನು ಕೊಟ್ಟು, ಕನ್ನಡದ ವಿಷಯದಲ್ಲಿ ವಿದ್ಯಾರ್ಥಿಗಳಲ್ಲಿ ಉತ್ಸಾಹವನ್ನು ತುಂಬಿ ಕನ್ನಡಕ್ಕೆ ಕನ್ನಡದ ಉಪಾಧ್ಯಾಯನಿಗೆ ಒಂದು ಗೌರವದ ಸ್ಥಾನವನ್ನು ತಂದುಕೊಟ್ಟರು. ಎರಡನೆಯದಾಗಿ ಕನ್ನಡದ ವಿಷಯದಲ್ಲಿ ವಿದ್ಯಾರ್ಥಿಗಳ ಪ್ರತಿಭೆಯನ್ನು ಅರಳಿಸಲು ಯೋಗ್ಯವಾದ, ನಾಡಿನ ಕರ್ಣಾಟಕ ಸಂಘಗಳಿಗೆ ಮಾತೃಪ್ರಾಯವಾದ ಸೆಂಟ್ರಲ್ ಕಾಲೇಜಿನಲ್ಲಿ ಕರ್ಣಾಟಕ ಸಂಘವೊಂದನ್ನು ಸ್ಥಾಪಿಸಿದರು (1918). ವಿಜ್ಞಾನವನ್ನು ಕನ್ನಡದ ಮೂಲಕ ಬೋಧಿಸಲು ಸಾಧ್ಯ ಎಂಬುದನ್ನು ತೋರಿಸಿಕೊಟ್ಟಿದ್ದು ಸಂಘ; ತಮ್ಮ ಸಹೋದ್ಯೋಗಿಗಳ ನೆರವಿನಿಂದ ಹಾಗೆ ತೋರಿಸಿಕೊಟ್ಟವರು ಶಾಸ್ತ್ರಿಗಳು. ಮೂರನೆಯದಾಗಿ ಎಂಬತ್ತು ವರ್ಷಗಳಿಗೂ ಮಿಕ್ಕು ನಡೆದುಬಂದ ಕನ್ನಡದ ಉತ್ಕೃಷ್ಟ ತ್ರೈಮಾಸಿಕವಾಗಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾಗುತ್ತಿರುವ ಪ್ರಬುದ್ಧ ಕರ್ಣಾಟಕ ಪತ್ರಿಕೆಯನ್ನು ಹೊಸಗನ್ನಡದ ಪುನರುಜ್ಜೀವನ ಕಾರ್ಯಕ್ಕೆ ಪ್ರೇರಕಶಕ್ತಿಯಾಗಿ ರೂಪಿಸಿದವರು (1919) ಶಾಸ್ತ್ರಿಗಳೇ. ಅದೇ ವರ್ಷ ಇವರಿಗೆ ಮೈಸೂರಿನ ಓರಿಯೆಂಟಲ್ ಲೈಬ್ರರಿಗೆ ವರ್ಗವಾಗಲು, ಅಲ್ಲಿ ಶಾಮಶಾಸ್ತ್ರಿಗಳ ನೇತೃತ್ವದಲ್ಲಿ ನಯಸೇನನ

ಧರ್ಮಾಮೃತವನ್ನು ಸಂಪಾದಿಸಿ, ಪೀಠಿಕೆಯೊಡನೆ ಅದನ್ನು ಅಚ್ಚಿಗೆ ಸಿದ್ಧಪಡಿಸಿದರು. 1927ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಎಂ.ಎ. ತರಗತಿಗಳು ತೆರೆಯುವಂತಾಗಲು ಶಾಸ್ತ್ರಿಗಳು ತೆರೆಯಮರೆಯಲ್ಲಿ ಕೆಲಸಮಾಡಿ, ಅದು ಅಸ್ತಿತ್ವಕ್ಕೆ ಬಂದಾಗ ಕೆಲವು ತಿಂಗಳ ಕಾಲ ಆ ತರಗತಿಗಳಿಗೆ ಪಾಠ ಹೇಳಿದರು. ಅದೇ ವರ್ಷ ಮತ್ತೆ ಸೆಂಟ್ರಲ್ ಕಾಲೇಜಿಗೆ ಕನ್ನಡದ ಉಪಪ್ರಾಧ್ಯಾಪಕರಾಗಿ ಹೋಗಿದ್ದು, 1939ರಲ್ಲಿ ವೆಂಕಣ್ಣಯ್ಯನವರು ದಿವಂಗತರಾದಾಗ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ, ಕನ್ನಡ ಪ್ರಾಧ್ಯಾಪಕರೂ ಇಲಾಖೆಯ ಮುಖ್ಯರೂ ಆಗಿ 1946ರ ಆಗಸ್ಟ್ ತಿಂಗಳವರೆಗೂ ಆ ಹುದ್ದೆಯಲ್ಲಿದ್ದರು.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಮೂವತ್ತುವರ್ಷಗಳ ಕಾಲ ಶಾಸ್ತ್ರಿಗಳು ಕನ್ನಡ ಬೋಧಕರಾಗಿ ಹೊಸ ಪೀಳಿಗೆಯನ್ನು ಸೃಷ್ಟಿಮಾಡಿದರಲ್ಲದೆ, ಕನ್ನಡದ ಮುನ್ನಡೆಗಾಗಿ ಹಲವು ಸಂಘ ಸಂಸ್ಥೆಗಳ ಸದಸ್ಯರಾಗಿ ಕೆಲಸ ಮಾಡಿದರು. 1942ರಿಂದ 1946ರವರೆಗೆ ಶಾಸ್ತ್ರಿಗಳು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ಪ್ರಧಾನ ಸಂಪಾದಕರಾಗಿದ್ದುದಲ್ಲದೆ, ಕುಮಾರವ್ಯಾಸ ಭಾರತದ ಯುದ್ಧ ಪಂಚಕದ ಪರಿಷ್ಕರಣ ಸಮಿತಿಯ ಸದಸ್ಯರಾಗಿದ್ದು ಕರ್ಣ ಶಲ್ಯ ಗದಾ ಪರ್ವಗಳು ಕ್ಷಿಪ್ರವಾಗಿ ಹೊರಬೀಳಲು ಕಾರಣರಾದರು. ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪ್ರಬುದ್ಧ ಕರ್ಣಾಟಕ ವರ್ಗವಾಗುವವರೆಗೂ ಅದರ ಸಂಪಾದಕರಾಗಿದ್ದರಲ್ಲದೆ ಮೈಸೂರಿನಲ್ಲಿ ಪ್ರಾಧ್ಯಾಪಕರಾದಾಗಲೂ ಅದರ ಸಂಪಾದಕತ್ವವನ್ನು ವಹಿಸಿಕೊಂಡು ಅದು ಕಾಲಕ್ಕೆ ಸರಿಯಾಗಿ ಬರುವಂತೆ ಮಾಡಿ ಪತ್ರಿಕೆಯ ಗುಣಮಟ್ಟವನ್ನು ಹೆಚ್ಚಿಸಿದರು. ಈ ಪತ್ರಿಕೆಯ ಮೂಲಕ ವಿದ್ವತ್ತಿಗೆ, ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಬರೆಯುವ ತರುಣ ಲೇಖಕರಿಗೆ ಪ್ರೋತ್ಸಾಹ ಕೊಟ್ಟಂತೆ ಶಾಸ್ತ್ರಿಗಳು ತಮ್ಮ ಲೇಖನಗಳಿಂದ ಕಾವ್ಯ ಪರೀಕ್ಷೆಯ ಹೊಸ ವಿಮರ್ಶನ ಮಾರ್ಗವನ್ನು ನಿರ್ಮಿಸಿದರು. ಹಾಗೆಯೇ ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆಯ ಸಂಪಾದಕರಾಗಿ ಅದರ ಮಟ್ಟವನ್ನು ಕಾಯ್ದುಕೊಂಡು ಬಂದರು. ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟು ಪ್ರಾರಂಭವಾದಂದಿನಿಂದ ಅದು ಮುಗಿಯುವವರೆಗೆ ಅದರ ಸದಸ್ಯರಾಗಿದ್ದರು. ಎಲ್ಲಕ್ಕೂ ಮಿಗಿಲಾಗಿ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸುತ್ತಿರುವ ಕನ್ನಡ ನಿಘಂಟಿನ ಪ್ರಥಮ ಸಂಪಾದಕರಾಗಿದ್ದು (1943-57) ಅದಕ್ಕೆ ಒಂದು ಖಚಿತರೂಪವನ್ನು ಕೊಟ್ಟವರು ಶಾಸ್ತ್ರಿಗಳು. ಇವರ ಸಾರ್ವಜನಿಕಸೇವೆ ಎಲೆಮರೆಯ ಕಾಯಿಯಂತಿರುತ್ತಿತ್ತು. ಅಂತೆಯೇ ಅದು ಮಾಗಿ ತುಂಬ ಫಲಪ್ರದವಾಯಿತು.

ಶ್ರೇಷ್ಠ ಅಧ್ಯಾಪಕರಾಗಿ ಶಾಸ್ತ್ರಿಗಳು ಹೊಸ ಪೀಳಿಗೆಯ ಲೇಖಕರನ್ನು ಗುರುತಿಸಿ, ಅವರನ್ನು ಕೃತಿರಚನೆಗೆ ಪ್ರೋತ್ಸಾಹಿಸಿದುದು ಮಾತ್ರವಲ್ಲದೆ ತಾವೇ ಕನ್ನಡದಲ್ಲಿ ಘನವಾದ ಗದ್ಯಕೃತಿಗಳನ್ನು ರಚಿಸಿದರು. ಇವರ ಗ್ರಂಥಗಳು ಇವು: ಶ್ರೀರಾಮಕೃಷ್ಣ ಪರಮಹಂಸರ ಚರಿತ್ರೆ (ವೆಂಕಣ್ಣಯ್ಯನವರೊಡನೆ, 1917); ಸ್ವಾಮಿ-ಶಿಷ್ಯ ಸಂವಾದ, ಭಾಗ-1 (ವೆಂಕಣ್ಣಯ್ಯನವರೊಡನೆ 1923); ಕನ್ನಡ ಕೈಪಿಡಿ ಭಾಗ-I ಕಾವ್ಯಲಕ್ಷಣ ವಿಭಾಗ (1928); ಹರಿಶ್ಚಂದ್ರ ಕಾವ್ಯ ಸಂಗ್ರಹ (ವೆಂಕಣ್ಣಯ್ಯನವರೊಡನೆ, 1931); ಭಾಸಕವಿ (1933); ಸಂಸ್ಕೃತ ನಾಟಕ (1937); ನಾಗಮಹಾಶಯ, (1939); ಸರ್ವಜ್ಞ ಕವಿ (1948); ಭಾಷಣಗಳು ಮತ್ತು ಲೇಖನಗಳು (ಭಾಗ-1, 1948, ಭಾಗ-2 1949). ಸಂಯುಕ್ತ ಸಂಪುಟ, (1960); ಶ್ರೀಪತಿಯ ಕಥೆಗಳು (1948); ವಚನ ಭಾರತ (1950); ಕಥಾಮೃತ (1952); ಕವಿಜಿಹ್ವಾಬಂಧನಂ (1952); ಬಂಕಿಮಚಂದ್ರ (1960); ನಿರ್ಮಲಭಾರತೀ (1960); ನಿಬಂಧಮಾಲಾ (1963).

ಕೃಷ್ಣಶಾಸ್ತ್ರಿಗಳ ಕೃತಿಗಳನ್ನು ಸಂಪಾದಿತ, ಅನುವಾದಿತ, ಸ್ವತಂತ್ರ್ಯ ಎಂದು ಮೂರು ಭಾಗಗಳಾಗಿ ವಿಂಗಡಿಸಬಹುದು. ಪೀಠಿಕೆಯೊಡನೆ ಕೂಡಿದ ನಯಸೇನನ ಧರ್ಮಾಮೃತ, ಮೈಸೂರಿನ ಓರಿಯೆಂಟಲ್ ಲೈಬ್ರರಿಗಾಗಿ, ಕವಿಜಿಹ್ವಾಬಂಧನಂ -ಇವು ಶಾಸ್ತ್ರಿಗಳ ಸಂಪಾದಿತ ಗ್ರಂಥಗಳು. ಶರಶ್ಚಂದ್ರ ಚಕ್ರವರ್ತಿಯವರ ಪ್ರಸಿದ್ಧ ಬಂಗಾಲಿ ಮೂಲಕೃತಿಯ ಅನುವಾದ ನಾಗಮಹಾಶಯ. ರವೀಂದ್ರ ಶತಮಾನೋತ್ಸವ ಸಂದರ್ಭದಲ್ಲಿ ದೆಹಲಿಯ ಸಾಹಿತ್ಯ ಅಕಾಡೆಮಿಗಾಗಿ ಬಂಗಾಲಿಯಿಂದ ಅನುವಾದಗೊಂಡ ರವೀಂದ್ರನಾಥ ಠಾಕೂರರ ಲೇಖನಗಳ ಸಂಗ್ರಹವೇ ನಿಬಂಧಮಾಲಾ. ಇದು ಶಾಸ್ತ್ರಿಗಳ ಕೊನೆಯ ಗ್ರಂಥ. ಸ್ವತಂತ್ರಕೃತಿಯನ್ನು ಓದಿದಷ್ಟು ಸೊಗಸಾಗಿರುವುದೇ ಈ ಅನುವಾದಗಳ ವೈಶಿಷ್ಟ್ಯ. ಧ್ವನಿತತ್ತ್ವದ ವಿಸ್ತಾರವಾದ ವಿವೇಚನೆಯೊಂದನ್ನು ಬಿಟ್ಟರೆ ಅಲಂಕಾರಶಾಸ್ತ್ರದ ಎಲ್ಲ ವಿಷಯಗಳನ್ನೂ ಸಂಗ್ರಹವಾಗಿ ಸಾರವತ್ತಾಗಿ ತಿಳಿಸುವ ಕೈಪಿಡಿಯ ಭಾಗವೇ ಕಾವ್ಯಲಕ್ಷಣ ವಿಭಾಗ. ರಾಘವಾಂಕನ ಕೃತಿಗಳ, ಅದರಲ್ಲೂ ಹರಿಶ್ಚಂದ್ರ ಕಾವ್ಯದ ಘನವಾದ ವಿಮರ್ಶೆ ಹರಿಶ್ಚಂದ್ರ ಕಾವ್ಯಸಂಗ್ರಹ ಪೀಠಿಕೆ. ಭಾಸಕವಿ ಶಾಸ್ತ್ರಿಗಳ ಮೊದಲ ಪಂಡಿತಕೃತಿ. ಭಾಸನ ಕಾಲ, ದೇಶ, ಕೃತಿ, ಕರ್ತೃತ್ವಗಳ ವಿಚಾರವಾಗಿ ಅದುವರೆಗೂ ನಡೆದ ವಿದ್ವಾಂಸರ ವಾದಗಳನ್ನು ನಿರೂಪಿಸಿ ಅವನನ್ನು ತೂಗಿ ನೋಡಿ, ತಮ್ಮ ಅಭಿಪ್ರಾಯವನ್ನು ಹೇಳಿ, ಸ್ವಪ್ನವಾಸವದತ್ತ, ಪ್ರತಿಮಾ, ಪಂಚರಾತ್ರ ನಾಟಕಗಳ ಕಲಾಸೌಂದರ್ಯವನ್ನು ವಿಸ್ತಾರವಾಗಿ ತಿಳಿಸಿ, ಮಿಕ್ಕ ನಾಟಕಗಳನ್ನು ಪರಿಚಯಮಾಡಿಕೊಡುವ ಗ್ರಂಥವಿದು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ಹತ್ತನೆಯ ಕುಸುಮವಾಗಿ ಅರಳಿದ ಸಂಸ್ಕೃತದ ನಾಟಕ ಅಪೂರ್ವವೂ ಅದ್ವಿತೀಯವೂ ಆದ ಗ್ರಂಥ. ಪಂಡಿತ ಪತ್ರಿಕೆಗಳಲ್ಲಿ ಚದರಿಹೋಗಿದ್ದ ಅಸಂಖ್ಯಾತ ಲೇಖನಗಳನ್ನು ಪರಿಶೀಲಿಸಿ, ಸಂಸ್ಕೃತ ನಾಟಕಗಳನ್ನು ಅಭ್ಯಾಸಮಾಡಿ, ತಮ್ಮ ಸ್ವಂತ ಅನುಭವಗಳನ್ನು ಸೇರಿಸಿ ರಚಿಸಿದ ಈ ಗ್ರಂಥದಲ್ಲಿ ಸಂಸ್ಕೃತ ನಾಟಕದ ಉತ್ಪತ್ತಿ ಮತ್ತು ಬೆಳವಣಿಗೆಯನ್ನು ಹೇಳಿರುವುದಲ್ಲದೆ, ಅಶ್ವಘೋಷನಿಂದ ಕೃಷ್ಣಮಿಶ್ರನವರೆಗೆ ರಚಿತವಾದ ನಾಟಕಗಳ ವಿಮರ್ಶೆಯನ್ನೂ ಕೊಟ್ಟಿದೆ. ಕವಿಯ ಕಾಲದೇಶ ಕೃತಿಗಳನ್ನು ಸಂಗ್ರಹವಾಗಿ ನಿರೂಪಿಸಿ, ಬಳಿಕ ಅಡಕವಾಗಿ ನಾಟಕದ ಸಾರಾಂಶವನ್ನು ತಿಳಿಸಿ, ಅನಂತರ ವಿಮರ್ಶೆಯನ್ನು ಕೊಟ್ಟಿರುವುದು ಇಲ್ಲಿನ ಪದ್ಧತಿ. ಪಾತ್ರಗಳ ಗುಣದೋಷಗಳನ್ನು, ನಾಟಕಗಳ ಕಲಾಸೌಂದರ್ಯವನ್ನು ಹಿಡಿದಿಡುವ ಸೂತ್ರಪ್ರಾಯವಾದ ಮಾತುಗಳು, ವಾಕ್ಯಗಳು, ಇಲ್ಲಿ ಪುಟಪುಟದಲ್ಲೂ ಕಂಗೊಳಿಸುತ್ತಿವೆ. ವಿಷಯವನ್ನು ಸಮರ್ಥಿಸಲು ನಾಟಕಗಳಿಂದ ವಾಕ್ಯಗಳನ್ನೂ ಪದ್ಯಗಳನ್ನೂ ಅಲ್ಲಲ್ಲಿ ಉದ್ಧರಿಸಿದೆ. ಗ್ರಂಥದ ಕೊನೆಯಲ್ಲಿ 650 ನಾಟಕಗಳ ಪಟ್ಟಿ ಇದೆ. ಹತ್ತು ವರ್ಷಗಳ ಪರಿಶ್ರಮದಿಂದ ರಚಿತವಾದ ಈ ಗ್ರಂಥ ಇವರ ವಿದ್ವತ್ತಿಗೂ ರಸಜ್ಞತೆಗೂ ಸಾಕ್ಷಿಯಾಗಿದೆ. ಇಂಥ ಗ್ರಂಥ ಭಾರತೀಯ ಭಾಷೆಗಳಲ್ಲಾಗಲಿ, ಇಂಗ್ಲಿಷಿನಲ್ಲಾಗಲಿ ಇಲ್ಲವೆಂಬುದು ವಿದ್ವಾಂಸರ ಮತ. ಅಂಗ್ಯೆಯಗಲದ ಅರವತ್ತಾಲ್ಕು ಪುಟಗಳಲ್ಲಿ ಸರ್ವಜ್ಞನ ಜೀವನ ಹಾಗೂ ವಚನಗಳನ್ನು ಅವನ ಮಾತುಗಳಿಂದಲೇ ಪರಿಚಯ ಮಾಡಿಕೊಡುವ, ಪ್ರಚಾರೋಪನ್ಯಾಸ ಮಾಲೆಯ ಚಿಕ್ಕಪುಸ್ತಕ ಸರ್ವಜ್ಞಕವಿ. ಭಾಷಣಗಳು ಮತ್ತು ಲೇಖನಗಳು ಎಂಬ ಗ್ರಂಥದಲ್ಲಿ ಹೈದರಾಬಾದಿನ ಸಾಹಿತ್ಯ ಸಮ್ಮೇಳನದ (1941) ಅಧ್ಯಕ್ಷ ಭಾಷಣವೂ ವಿಶೇಷ ಸಾಹಿತ್ಯೋತ್ಸವದ ಆರಂಭ ಭಾಷಣವೂ (1947) ನಾಲ್ಕು ಲೇಖನ ಗುಚ್ಛಗಳೂ ಇವೆ. ಮೊದಲ ಎರಡು ಲೇಖನ ಗುಚ್ಛಗಳಲ್ಲಿ ಹಿಂದಿನ ಮತ್ತು ಇಂದಿನ ಕವಿಗಳ ಹಾಗೂ ಅವರ ಕೃತಿಗಳಿಗೆ ಸಂಬಂಧಪಟ್ಟ ಲೇಖನಗಳೂ ತರುಣಸಾಹಿತಿಗಳಿಗೆ ಮಾರ್ಗದರ್ಶನ ಮಾಡತಕ್ಕ ಲೇಖನಗಳೂ ಮೂರನೆಯ ಗುಚ್ಛದಲ್ಲಿ ಹನ್ನೆರಡು ಗ್ರಂಥಗಳ ಮೇಲೆ ಲೇಖಕರು ಬರೆದಿರುವ ವಿಮರ್ಶೆಗಳೂ ನಾಲ್ಕನೆಯದರಲ್ಲಿ ಪ್ರಬುದ್ಧ ಕರ್ಣಾಟಕದ ಸಂಪಾದಕರಾಗಿ ಇವರು ಬರೆದ ವಿವಿಧ ವಿಷಯಗಳ ಮೂವತ್ತೆರಡು ಸಂಪಾದಕೀಯಗಳೂ ಇವೆ. ಭಾಷಣಗಳಲ್ಲಿ ಶಾಸ್ತ್ರಿಗಳ ಉಜ್ವಲವಾದ ಕನ್ನಡದ ಅಭಿಮಾನ, ಲೇಖನಗಳಲ್ಲಿ ಇವರು ಕನ್ನಡ ಸಾಹಿತ್ಯಕ್ಕೆ ತಂದುಕೊಟ್ಟ ಹೊಸದೃಷ್ಟಿ ಸುಸ್ಪಷ್ಟವಾಗಿ ಗೋಚರಿಸುತ್ತವೆ. ಶ್ರೀಪತಿ ಎಂಬ ಕಾವ್ಯನಾಮದಿಂದ ಪ್ರಬುದ್ಧ ಕರ್ಣಾಟಕಕ್ಕೆ ಶಾಸ್ತ್ರಿಗಳು ಬರೆದ ಹದಿಮೂರು ಸಣ್ಣಕಥೆಗಳೇ ಶ್ರೀಪತಿಯ ಕಥೆಗಳು. ಮಧ್ಯಮ ವರ್ಗದ ಜನರ ಕಷ್ಟಕಾರ್ಪಣ್ಯಗಳನ್ನೂ ನಂಬಿಕೆಗಳನ್ನೂ ಕಣ್ಣಿಗೆ ಕಟ್ಟುವಂತೆ ಈ ಕಥೆಗಳು ಚಿತ್ರಿಸುವುವಲ್ಲದೆ, ಸ್ತ್ರೀಯರ ವಿಷಯದಲ್ಲಿ ಲೇಖಕರ ಅಭಿಪ್ರಾಯಗಳನ್ನು ಪ್ರತಿಬಿಂಬಿಸುತ್ತವೆ. ಇದೊಂದೇ ಶಾಸ್ತ್ರಿಗಳ ಸ್ವತಂತ್ರ ಸೃಜನಾತ್ಮಕ ಕೃತಿ. ಇವೆಲ್ಲಕ್ಕೂ ಮಿಗಿಲಾಗಿ ಕೃಷ್ಣಶಾಸ್ತ್ರಿಗಳಿಗೆ ಕೀರ್ತಿ ತಂದ ಕೃತಿ ವಚನಭಾರತ. ಇಂದಿನ ಜೀವನಕ್ಕೆ ಅಗತ್ಯವಾದ ಧರ್ಮ ನೀತಿಗಳನ್ನೊಳಗೊಂಡು ವ್ಯಾಸಭಾರತದ ಹದಿನೆಂಟು ಪರ್ವಗಳ ಕಥೆ ವಚನಭಾರತದಲ್ಲಿ ಸರಳ ಸುಂದರ ಗದ್ಯದಲ್ಲಿ ಮೂಲದ ಗಾಂಭೀರ್ಯವನ್ನು ಬಿಟ್ಟುಕೊಡದೆ ಹೊಸಗನ್ನಡದಲ್ಲಿ ಬಟ್ಟಿಯಿಳಿದು ಬಂದಿದೆ. ಹಲವು ಸಂಸ್ಕರಣಗಳನ್ನು ಓದಿ ನೋಡಿ, ತೂಗಿ ವಿಮರ್ಶೆ ಮಾಡಿ, ಆರು ತಿಂಗಳಲ್ಲಿ ಬರೆದ ಗ್ರಂಥ ಇದು. ನಾನೂರು ಪುಟಗಳ ಕಥೆ ಒಂದು ತೂಕವಾದರೆ ಇದರ ವಿದ್ವತ್ಪೂರ್ಣವಾದ ಪೀಠಿಕೆಯೇ ಒಂದು ತೂಕ. ಮಹಾಭಾರತದ ಹುಟ್ಟು, ಬೆಳವಣಿಗೆ, ಅದು ಪ್ರತಿಪಾದಿಸುವ ತತ್ತ್ವ, ಆಧುನಿಕ ಯುಗಕ್ಕೆ ಅದರ ಸಂದೇಶ - ಇವೇ ಮೊದಲಾದ ಹಲವು

ವಿಷಯಗಳನ್ನೊಳಗೊಂಡ ಪೀಠಿಕೆ ಪ್ರೌಢವೂ ಸರಳವೂ ಆಗಿದೆ. ಇಷ್ಟು ಸರಳ ಸುಂದರವಾದ ಗದ್ಯಭಾರತ ಇನ್ನಾವ ಭಾಷೆಯಲ್ಲಿಯೂ ರಚಿತವಾಗಿರಲಾರದು. ಸಂಸ್ಕೃತ ಭಾಷೆಯಲ್ಲಿ ಸೋಮದೇವನಿಂದ ರಚಿತವಾದ ಕಥಾಸರಿತ್ಸಾಗರದ ಸಾರಸಂಗ್ರಹವೇ ಕಥಾಮೃತ. ಬೃಹತ್ಕಥೆ, ಗುಣಾಢ್ಯ, ಸಮಾಜ, ನೀತಿ ಇವೇ ಮೊದಲಾದ ಹಲವು ವಿಷಯಗಳನ್ನೊಳಗೊಂಡ ಪ್ರೌಢವಾದ ಪೀಠಿಕೆ ಈ ಗ್ರಂಥಕ್ಕೂ ಇದೆ. ಬಂಕಿಮಚಂದ್ರರ ಲೇಖನಗಳು ಮತ್ತು ಕೃತಿಗಳನ್ನು ಮೂಲದಲ್ಲಿಯೇ ಅಭ್ಯಾಸ ಮಾಡಿ ಬರೆದ ಗ್ರಂಥ ಬಂಕಿಮಚಂದ್ರ. ಸಂಕ್ಷಿಪ್ತ ಬಂಗಾಲಿ ಸಾಹಿತ್ಯಚರಿತ್ರೆ ಮತ್ತು ಬಂಕಿಮರ ಜೀವನಚರಿತ್ರೆಯಾದ ಮೇಲೆ, ಕಾದಂಬರಿಗಳ ಕಥಾಸಾರವನ್ನು ಸಂಕ್ಷೇಪವಾಗಿ ನಿರೂಪಿಸಿ ಆ ಬಳಿಕ ಶಾಸ್ತ್ರಿಗಳು ವಿಸ್ತಾರವಾಗಿ ಕೃತಿ ವಿಮರ್ಶೆ ಮಾಡಿದ್ದಾರಲ್ಲದೆ, ಇವರ ಇತರ ಕೃತಿಗಳ ಲೇಖನಗಳ ಹಕ್ಕಿನೋಟವೂ ಇಲ್ಲಿದೆ. ಬಂಕಿಮಚಂದ್ರ ಗ್ರಂಥ ವಿಮರ್ಶೆಯ ಒಂದು ರಸದೂಟ. ಇದರ ರಚನೆಗೆ ಶಾಸ್ತ್ರಿಗಳಿಗೆ ಎಂಟು ವರ್ಷ ಕಾಲ ಹಿಡಿಯಿತು. ಇಂಥ ಕೃತಿ ಬಂಗಾಲಿ ಭಾಷೆಯಲ್ಲಿಯೂ ಇಲ್ಲವೆಂಬುದು ವಿದ್ವಾಂಸರ ಅಭಿಮತ. ನಿರ್ಮಲ ಭಾರತೀ ಎಂಬ ಸಚಿತ್ರ ಕಿರುಹೊತ್ತಿಗೆ ಮಕ್ಕಳಿಗಾಗಿ ಸರಳವಾದ ಭಾಷೆಯಲ್ಲಿ ಮಹಾಭಾರತದ ಇಡೀ ಕಥೆಯನ್ನು ತಿಳಿಸುತ್ತದೆ. ಈ ಪುಸ್ತಕದಲ್ಲಿ ದೊಡ್ಡ ಚಿತ್ರಗಳೊಡನೆ ಮಕ್ಕಳ ಕುತೂಹಲವನ್ನು ಕೆರಳಿಸುವ ಬಿಲ್ಲು ಬಾಣ ಗದೆ ಈಟಿ ಚತುರಂಗ ಸೇನೆ ಶಂಖ ಕೊಂಬು ಕಹಳೆ ಮುಂತಾದ ಚಿಕ್ಕ ಚಿಕ್ಕ ಚಿತ್ರಗಳಿರುವುದು ಒಂದು ವೈಶಿಷ್ಟ್ಯ.

ಹೈದರಾಬಾದಿನಲ್ಲಿ 1941ರಲ್ಲಿ ನಡೆದ ಇಪ್ಪತ್ತಾರನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಶಾಸ್ತ್ರಿಗಳು ಅಧ್ಯಕ್ಷರಾಗಿದ್ದರು. 1956ರಲ್ಲಿ ಶಾಸ್ತ್ರಿಗಳ ಶಿಷ್ಯರೂ ಮಿತ್ರರೂ ಅಭಿವಂದನೆ ಎಂಬ ವಿದ್ವತ್ ಪ್ರಬಂಧಗಳ ಸಂಪುಟವನ್ನು ಇವರಿಗೆ ಅರ್ಪಿಸಿದರು. ಮೈಸೂರು ವಿಶ್ವವಿದ್ಯಾನಿಲಯ 1960ರಲ್ಲಿ ಇವರಿಗೆ ಡಿ.ಲಿಟ್. ಪದವಿಯನ್ನು ಕೊಟ್ಟು ಗೌರವಿಸಿತು. ಇವರ ಗ್ರಂಥ' ಬಂಕಿಮಚಂದ್ರಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿತು (1961).

ಸಂಸ್ಕೃತ, ಕನ್ನಡ, ಇಂಗ್ಲಿಷ್, ಬಂಗಾಲಿ ಭಾಷೆಗಳಲ್ಲಿ ಘನವಾದ ಪಾಂಡಿತ್ಯವನ್ನೂ ತಮಿಳು ತೆಲುಗು ಭಾಷೆಗಳಲ್ಲಿ ಸಲಿಗೆಯನ್ನೂ ಹೊಂದಿದ್ದ ಶಾಸ್ತ್ರಿಗಳು ಕನ್ನಡ ಬರೆವಣಿಗೆಯ ವಿಷಯದಲ್ಲಿ ನಿಷ್ಕೃಷ್ಟವಾದ ಅಭಿಪ್ರಾಯವ ಹೊಂದಿದ್ದರು: ವಿಷಯವನ್ನು ಚೆನ್ನಾಗಿ ತಿಳಿಯದೆ ಏನನ್ನೂ ಬರೆಯಬಾರದು. ತಿಳಿದ ವಿಷಯವನ್ನು ತಿಳಿಯಾದ ಬಿಗಿಯಾದ ಅಡಕವಾದ ಭಾಷೆಯಲ್ಲಿ ಹೇಳಬೇಕು. ಅನಾವಶ್ಯಕವಾದ ಸಂಸ್ಕೃತ ಪದಗಳಿಂದ ಭಾಷೆಯನ್ನು ಹೊರೆಯಾಗಿಸಬಾರದು. ವಿಷಯ ನಿರೂಪಣೆ ಸರಳವೂ ಸ್ಪಷ್ಟವೂ ಅಸಂದಿಗ್ಧವೂ ಆಗಿರಬೇಕು. ಶಾಸ್ತ್ರಿಗಳ ಬರೆವಣಿಗೆಯಲ್ಲಿ ಈ ಎಲ್ಲ ಗುಣಗಳನ್ನೂ ಸಂಪೂರ್ಣವಾಗಿ ಕಾಣುತ್ತೇವೆ. ತಮ್ಮ ಪಾಂಡಿತ್ಯದಿಂದ ಶಾಸ್ತ್ರಿಗಳು ಬರೆವಣಿಗೆಯನ್ನು ಎಲ್ಲಿಯೂ ಹೊರೆಯಾಗಿಸಿಲ್ಲ. ಶಾಸ್ತ್ರಿಗಳು ಗದ್ಯಶೈಲಿ ಸುಂದರ, ಸರಳ; ವಾಕ್ಯಗಳು ಸಾಮಾನ್ಯವಾಗಿ ಚಿಕ್ಕವಾಗಿರುತ್ತವೆ. ನಡೆ ಎಲ್ಲಿಯೂ ಕುಂಟುವುದಿಲ್ಲ. ಆಡುಮಾತಿನ ಬಳಕೆ ಯಥೇಚ್ಛ. ಆದರೂ ಭಾಷೆ ಬಿಗಿಯಾದುದು. ಸ್ವಾನುಭವದಿಂದ ಉಕ್ಕಿಬಂದ ಸೂಕ್ತಿಗಳು ಹೇರಳವಾಗಿ ಸಿಗುತ್ತವೆ. ಅಲ್ಲಲ್ಲಿ ಬರುವ ಸಹಜವಾದ ಉಪಮಾನ ರೂಪಕಗಳಂತೂ ಮೋಹಕ.

ಸಂಪ್ರದಾಯದಲ್ಲಿ ಹುಟ್ಟಿ ಬೆಳೆದು, ಅದಕ್ಕೆ ವಿರೋಧಿಯಲ್ಲದಿದ್ದರೂ ಧರ್ಮ ನೀತಿ ನಡೆ ಮುಂತಾದ ವಿಚಾರಗಳನ್ನು ಧಾರಾಳವಾಗಿ ಸ್ವತಂತ್ರವಾದ ವಾತಾವರಣದಲ್ಲಿ ನಡೆಸಬೇಕು ಎಂದು ನಂಬಿ ಅದರಂತೆ ಮನೋವೃತ್ತಿಯನ್ನು ಬೆಳೆಸಿಕೊಂಡು ಜೀವನ ನಡೆಸಿದ ಕೃಷ್ಣಶಾಸ್ತ್ರಿಗಳು ಕನ್ನಡ ನಾಡಿಗೆ ಕನ್ನಡವೇ ಗತಿ; ದೇಶದಲ್ಲಿ ಅದು ಮೊದಲಸ್ಥಾನವನ್ನು ಪಡೆದ ರಾಣಿಯಂತೆ ಮೆರೆಯಬೇಕು ಎಂದು ಸಾರಿ ಹೇಳಿ, ಇದೇ ಮಂತ್ರವನ್ನು ತಮ್ಮ ಬಾಳಿನ ಉದ್ದಕ್ಕೂ ಜಪಿಸುತ್ತ ತಮ್ಮ ಎಪ್ಪತ್ತೆಂಟನೆಯ ವಯಸ್ಸಿನಲ್ಲಿ 1968 ಫೆಬ್ರವರಿ 1ರಂದು ಬೆಂಗಳೂರಿನಲ್ಲಿ ನಿಧನಹೊಂದಿದರು. (ಎಚ್.ಎಂ.ಎಸ್.)

ಶಾಸ್ತ್ರಿಗಳ ಗೌರವಾರ್ಥಗಾಗಿ ಪ್ರಬುದ್ಧ ಕರ್ಣಾಟಕದ 50ನೆಯ ಸಂಪುಟದ ಮೊದಲ ಸಂಚಿಕೆಯನ್ನು ನೆನಪಿನ ಸಂಚಿಕೆಯಾಗಿ ಪ್ರಕಟಿಸಲಾಯಿತು. ಶಾಸ್ತ್ರಿಗಳ ವ್ಯಕ್ತಿತ್ವವನ್ನೂ ಅವರ ಸಾಹಿತ್ಯವನ್ನೂ ಕುರಿತಂತೆ ಲೇಖನಗಳಿರುವ ಈ ಸಂಚಿಕೆ ಅನಂತರ ಎ.ಆರ್.ಕೃ. ಜೀವನ-ಸಾಧನೆ ಎಂಬ ಹೆಸರಿನಲ್ಲಿ ಪುಸ್ತಕರೂಪದಲ್ಲೂ ಪ್ರಕಟವಾಯಿತು (1971).

*

**ಕೃಷ್ಣಸೂಕ್ತಿ :** ಉಡುಪಿಯಿಂದ ಪ್ರಕಟವಾಗುತ್ತಿದ್ದ ಒಂದು ಮಾಸ ಪತ್ರಿಕೆ. 1905ರಲ್ಲಿ ಕೆರೋಡಿ ಸುಬ್ಬರಾಯರು ಈ ಪತ್ರಿಕೆಯನ್ನು ಪ್ರಾರಂಭಿಸಿದರು. ಅವರ ಅನಂತರ ರಾಜಗೋಪಾಲಕೃಷ್ಣರಾಯರು ಸಂಪಾದಕರಾಗಿ ಅನೇಕ ವರ್ಷಗಳ ಕಾಲ ಪತ್ರಿಕೆಯನ್ನು ಯಶಸ್ವಿಯಾಗಿ ನಡೆಸಿಕೊಂಡು ಬಂದರು. ಸಣ್ಣಕಥೆಗಳು, ವಿಚಾರಪೂರಿತ ಲೇಖನಗಳು ಮತ್ತು ಪ್ರಬಂಧಗಳು ಇದರಲ್ಲಿ ಪ್ರಕಟವಾಗುತ್ತಿದ್ದುವು. (ಎನ್.ಕೆ.)

**ಕೃಷ್ಣಾ :** ಕರ್ನಾಟಕದ ಪ್ರಮುಖ ನದಿಗಳಲ್ಲಿ ಒಂದು. ಉತ್ತರ ಕರ್ನಾಟಕದ ಭಾಗಕ್ಕೆ ಅತ್ಯಂತ ಉಪಯುಕ್ತವಾದ ನದಿ. ಪವಿತ್ರ ನದಿಯೆಂದೂ ಹೆಸರು ಗಳಿಸಿದೆ. ಸ್ಥಳೀಯರಲ್ಲಿ ಇದಕ್ಕೆ ಹಿರೇಹೊಳೆ ಎಂಬ ಹೆಸರಿದೆ. ಶಾಸನಗಳಲ್ಲಿ ಪೆದ್ದೊರೆ, ಸಂಸ್ಕೃತದಲ್ಲಿ ಕೃಷ್ಣವೇಣೀ ಎಂಬ ಹೆಸರುಗಳು ಕಂಡುಬರುತ್ತವೆ.

ಕೃಷ್ಣಾ ನದಿಯ ಒಟ್ಟು ಜಲಾನಯನ ಪ್ರದೇಶದ ಸೇ.43.74ರಷ್ಟು ಅಂದರೆ 111,000.74ಚ.ಕಿಮೀ ಪ್ರದೇಶ ರಾಜ್ಯದಲ್ಲಿದೆ. ಇದು ರಾಜ್ಯದ ಒಟ್ಟು ವಿಸ್ತೀರ್ಣದ ಸೇ.58.66 ಆಗುತ್ತದೆ. ಇದರಲ್ಲಿ ಹರಿಯುವ ಸರಾಸರಿ ನೀರಿನ ಪ್ರಮಾಣ 969.44ಟಿ.ಎಂ.ಸಿ. ಸಹ್ಯಾದ್ರಿ ಶ್ರೇಣಿಯಲ್ಲಿ ಮಹಾರಾಷ್ಟ್ರದ ಸಾತಾರಾ ಜಿಲ್ಲೆಯ ಮಹಾಬಲೇಶ್ವರದ ಬಳಿ ಇದರ ಉಗಮ. ಅಲ್ಲಿಂದ ಆ ರಾಜ್ಯದ ಸಾತಾರಾ, ಸಾಂಗಲಿ, ಕೊಲ್ಹಾಪುರ ಜಿಲ್ಲೆಗಳ ಮೂಲಕ ಹರಿದು ಕರ್ನಾಟಕವನ್ನು ಪ್ರವೇಶಿಸುವುದು. ಕರ್ನಾಟಕಕ್ಕೆ ಕೃಷ್ಣಾನದಿಯ ಮೊದಲ ಸಂಪರ್ಕ ಒದಗುವುದು ಬೆಳಗಾಂವಿ ಜಿಲ್ಲೆಯ ಅಥಣಿ ತಾಲ್ಲೂಕಿನ ವಾಯುವ್ಯದ ಅಂಚಿನಲ್ಲಿ. ಅಲ್ಲಿ ಕಾನವಾಡದ ಬಳಿ ಸು.2ಕಿಮೀ ದೂರದವರೆಗೆ ತಾಲ್ಲೂಕಿನ ಎಲ್ಲೆಯನ್ನು ಸೋಕಿ ಹರಿಯುತ್ತದೆ. ಮುಂದೆ ಕೊಲ್ಹಾಪುರ ಜಿಲ್ಲೆಯ ಮೂಲಕ ಪ್ರವಹಿಸಿ ಮತ್ತೆ ಅಥಣಿ ತಾಲ್ಲೂಕಿನ ಮಂಗವತಿ ಬಳಿಯಿಂದ ಸು.16ಕಿಮೀ ದೂರದವರೆಗೆ ಆ ತಾಲ್ಲೂಕು ಮತ್ತು ಕೊಲ್ಹಾಪುರ ಜಿಲ್ಲೆಯ ಗಡಿರೇಖೆಯಾಗಿ ಹರಿಯುತ್ತದೆ. ಈ ಭಾಗದಲ್ಲಿ ನದಿ ಮೊದಲು ಆಗ್ನೇಯಕ್ಕೆ, ಅನಂತರ ಪಶ್ಚಿಮಕ್ಕೆ, ದಕ್ಷಿಣಕ್ಕೆ ಮತ್ತು ಮತ್ತೆ ಆಗ್ನೇಯಕ್ಕೆ, ಹೀಗೆ ಸುತ್ತಿ ಬಳಸಿ ಹರಿಯುವುದು ವಿಶೇಷ. ಈ ಆಗ್ನೇಯದ ತಿರುವಿನೊಡನೆ ಚಿಕ್ಕೋಡಿ ತಾಲ್ಲೂಕಿನ ಕಲ್ಲೋಳ್ಳಿ ಬಳಿ ಕರ್ನಾಟಕದ ನೆಲವನ್ನು ಪೂರ್ಣವಾಗಿ ಪ್ರವೇಶಿಸುತ್ತದೆ. ಇಲ್ಲಿಂದ ಬೆಳಗಾಂವಿ, ಬಾಗಲಕೋಟೆ, ಬಿಜಾಪುರ, ಗುಲ್ಬರ್ಗ, ರಾಯಚೂರು ಜಿಲ್ಲೆಗಳ ನಡುವೆ ಇದರ ಹರಿವು. ಬೆಳಗಾಂವಿ ಜಿಲ್ಲೆಯಲ್ಲಿ ಇದರ ಹಾದಿ ಸುತ್ತುಬಳಸಿನದು. ಕಲ್ಲೋಳ್ಳಿಯಿಂದ ಅಥಣಿ ತಾಲ್ಲೂಕಿನ ಮಂಜರಿಯವರೆಗೆ ಆಗ್ನೇಯಾಭಿಮುಖ, ಅಲ್ಲಿಂದ ಈಶಾನ್ಯಕ್ಕೆ ತಿರುವು. ಅದೇ ತಾಲ್ಲೂಕಿನ ಉಗರದ ಬಳಿ ಪೂರ್ವಕ್ಕೆ ತಿರುಗಿ ಮತ್ತೆ ಆಗ್ನೇಯಾಭಿಮುಖವಾಗಿ ರಾಯಬಾಗ ತಾಲ್ಲೂಕಿನ ಖೇಮಲಾಪುರದ ಬಳಿ ಉತ್ತರಾಭಿಮುಖವಾಗುತ್ತದೆ. ರಾಜ್ಯದ ಪ್ರವೇಶದಿಂದ ಈ ಸ್ಥಳದವರೆಗೂ ಈ ನದಿಯೇ ಎಡದಂಡೆಯಲ್ಲಿ ಅಥಣಿ ತಾಲ್ಲೂಕು, ಬಲದಂಡೆಯಲ್ಲಿ ಚಿಕ್ಕೋಡಿ ಮತ್ತು ರಾಯಬಾಗ ತಾಲ್ಲೂಕುಗಳು ಇವುಗಳ ನಡುವಿನ ಗಡಿರೇಖೆ. ಇಲ್ಲಿಂದ ಸ್ವಲ್ಪ ದೂರ ಇದು ಅಥಣಿ ತಾಲ್ಲೂಕಿನ ಭಾಗವನ್ನು ಕ್ರಮಿಸುತ್ತದೆ. ಇಲ್ಲಿ ಉತ್ತರಕ್ಕೆ ಹರಿದು ಆಗ್ನೇಯಕ್ಕೆ ತಿರುಗಿ ಅಥಣಿ ತಾಲ್ಲೂಕಿನ ಸೇಗುಣಸಿಯ ಬಳಿ ಮತ್ತು ಆ ತಾಲ್ಲೂಕು ಮತ್ತು ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಗಡಿರೇಖೆಯಾಗುತ್ತದೆ. ಜಮಖಂಡಿ ತಾಲ್ಲೂಕಿನ ಮುತ್ತೂರಿನ ಬಳಿ ಬಾಗಲಕೋಟೆ ಜಿಲ್ಲೆಯನ್ನು ಪೂರ್ಣವಾಗಿ ಪ್ರವೇಶಿಸಿ ಮೊದಲು ಜಮಖಂಡಿ ತಾಲ್ಲೂಕಿನ ಒಳಗೆ ಹರಿದು ಸ್ವಲ್ಪದೂರ ಬೀಳಗಿ ತಾಲ್ಲೂಕಿನ ವಾಯುವ್ಯಭಾಗದಲ್ಲಿ ಸಾಗಿ ಅಲ್ಲಿಂದ ಎಡದಂಡೆಯಲ್ಲಿ ಬಿಜಾಪುರ, ಬಾಗೇವಾಡಿ ಮತ್ತು ಮುದ್ದೇಬಿಹಾಳ ತಾಲ್ಲೂಕುಗಳು ಮತ್ತು ಬಲದಂಡೆಯಲ್ಲಿನ ಬಾಗಲಕೋಟೆ ಜಿಲ್ಲೆಯ ಬೀಳಗಿ, ಬಾಗಲಕೋಟೆ ಮತ್ತು ಹುನಗುಂದ ತಾಲ್ಲೂಕುಗಳು - ಇವುಗಳ ನಡುವಿನ ಗಡಿರೇಖೆಯಾಗಿ ಹರಿದು ಮುಂದೆ ಸ್ವಲ್ಪ ದೂರ ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕು ಮತ್ತು ರಾಯಚೂರು ಜಿಲ್ಲೆಯ ಗಡಿಯಾಗಿ ಪ್ರವಹಿಸುತ್ತದೆ. ಈ ಜಿಲ್ಲೆಯಲ್ಲಿ ನದಿಯ ಸಾಮಾನ್ಯ ಹರಿವು ಆಗ್ನೇಯಾಭಿಮುಖವಾಗಿದ್ದು, ಈ

ಜಿಲ್ಲೆಯಲ್ಲಿನ ಹರಿವಿನ ಮೊದಲ ಸುಮಾರು ಮೂರನೆಯ ಒಂದು ಭಾಗದಲ್ಲಿ ಸುತ್ತುಬಳಸಾಗಿ ಕ್ರಮಿಸುತ್ತದೆ. ಜಮಖಂಡಿಯ ಉತ್ತರದಲ್ಲಿರುವ ಮುತ್ತೂರಿನಿಂದ ತಾಲ್ಲೂಕನ್ನು ಬಿಡುವವರೆಗೆ ಸಮಸ್ಥಿತಿಯಲ್ಲೇ ಸಾಗಿ, ಅಲ್ಲಿ ಇದ್ದಕ್ಕಿದ್ದಂತೆ ದಕ್ಷಿಣಕ್ಕೆ ತಿರುಗಿ ಬೀಳಗಿ ತಾಲ್ಲೂಕಿನ ಗಲಗಲಿಯ ಬಳಿ ಪೂರ್ವಕ್ಕೆ ಪ್ರವಹಿಸಲಾರಂಭಿಸಿ ಮತ್ತೆ ಉತ್ತರ, ಪೂರ್ವ, ದಕ್ಷಿಣ ಹೀಗೆ ತಿರುಗುತ್ತ ಬಾಗೇವಾಡಿಯ ಅಂಚನ್ನು ಮುಟ್ಟುತ್ತದೆ. ಈ ತಾಣದಿಂದ ನದಿಯ ಗಮನ ಸುಮಾರು ನೇರವೇ, ಪೂರ್ವ ಆಗ್ನೇಯಾಭಿಮುಖವಾಗಿ. ಆದರೆ ಬೀಳಗಿ ತಾಲ್ಲೂಕಿನ ಈಶಾನ್ಯದಲ್ಲಿ ತಕ್ಕಲಕಿಯ ಬಳಿ ಇಬ್ಭಾಗವಾಗಿ ಮತ್ತೆ ಚಿಮ್ಮಲಗಿಯ ಬಳಿ ಒಂದಾಗಿ ಒಂದು ದೊಡ್ಡ ದ್ವೀಪವನ್ನು ನಿರ್ಮಿಸಿದೆ. ಮತ್ತೆ ಮುದ್ದೇಬಿಹಾಳ ತಾಲ್ಲೂಕಿನ ದೇವೂರಿನ ಬಳಿ ದಕ್ಷಿಣಕ್ಕೆ ತಿರುಗಿ ಘಟಪ್ರಭಾ ನದಿ ಸಂಗಮವಾಗುವ ಸ್ಥಳದಿಂದ ಜಿಲ್ಲೆಯ ಎಲ್ಲೆಯವರೆಗೆ ಪೂರ್ವಕ್ಕೆ ಸಾಗುತ್ತದೆ. ಆ ಭಾಗದಲ್ಲಿ ಪುನಃ ಈಶಾನ್ಯಕ್ಕೆ ತಿರುವು. ಅಲ್ಲಿಂದ ಮುಂದೆ ಈ ನದಿ ಬಿಜಾಪುರ ಮತ್ತು ರಾಯಚೂರು ಜಿಲ್ಲೆಗಳ ಗಡಿರೇಖೆಯಾಗಿ ಈಶಾನ್ಯಾಭಿಮುಖವಾಗಿ ಪ್ರವಹಿಸುತ್ತದೆ. ಮುಂದೆ ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಗಳ ಗಡಿಯಾಗಿ ಆಂಧ್ರಪ್ರದೇಶ ತಲಪುವವರೆಗೂ ಸಾಗುತ್ತದೆ. ಗುಲ್ಬರ್ಗ ಗಡಿಯನ್ನು ಪ್ರವೇಶಿಸುವೆಡೆಯಲ್ಲಿ ಒಂದೆರಡು ಸಣ್ಣ ದ್ವೀಪಗಳನ್ನು ನಿರ್ಮಿಸಿರುವುದಲ್ಲದೆ ಇಲ್ಲಿ ನಾರಾಯಣಪುರ ಗ್ರಾಮದ ಬಳಿ ಇದ್ದಕ್ಕಿದ್ದಂತೆ 200 ಅಡಿಗಳಷ್ಟು ದುಮುಕಿ ಜಲದುರ್ಗ ಜಲಪಾತವನ್ನು ನಿರ್ಮಿಸಿದೆ. ಗುಲ್ಬರ್ಗ, ರಾಯಚೂರು ಗಡಿಯಾಗಿ ಹರಿಯುವ ಭಾಗದ ಮೊದಲರ್ಧ, ಅಂದರೆ ಶಾಹಪುರ ತಾಲ್ಲೂಕಿನ ಗೌಡೂರಿನವರೆಗೆ, ಈಶಾನ್ಯಾಭಿಮುಖವಾಗಿ ನದಿ ಸಾಗುತ್ತದೆ. ಅಲ್ಲಿ ಒಂದು ದೊಡ್ಡ ಕವಲಾಗಿ ಸುತ್ತಿ ಮತ್ತೆ ಚನ್ನೂರಿನಿಂದ ರಾಜ್ಯದ ಗಡಿ ಬಿಡುವವರೆಗೂ ಆಗ್ನೇಯಾಭಿಮುಖವಾಗಿ ಗಮಿಸುತ್ತದೆ. ಕೊನೆಯ ಭಾಗದಲ್ಲೂ ಸಣ್ಣಸಣ್ಣ ದ್ವೀಪಗಳನ್ನು ನಿರ್ಮಿಸಿದೆ. ರಾಯಚೂರು ತಾಲ್ಲೂಕಿನ ಈಶಾನ್ಯದಲ್ಲಿ ಬುಡದಿಪಾಡು ಗ್ರಾಮದ ಬಳಿ ರಾಜ್ಯದ ಎಲ್ಲೆಯನ್ನು ಬಿಡುತ್ತದೆ. ಮುಂದೆ ಆಂಧ್ರ ಪ್ರದೇಶದ ಮೂಲಕ ಹರಿದು ಮಚಲಿಪಟ್ಟಣದ ಬಳಿ ಬಂಗಾಲ ಕೊಲ್ಲಿಯನ್ನು ಸೇರುತ್ತದೆ. ಉಗಮ ಸ್ಥಾನದಿಂದ ಸಮುದ್ರವನ್ನು ಸೇರುವವರೆಗೆ ನದಿಯ ಒಟ್ಟು ಉದ್ದ 1,400ಕಿಮೀ ಕರ್ನಾಟಕ ರಾಜ್ಯದಲ್ಲಿ ನದಿಯ ಹರಿವಿನ ಉದ್ದ 483 ಕಿಮೀ.

ಬೆಳಗಾಂವಿ ಜಿಲ್ಲೆಯ ಮೊದಲ ಭಾಗದಲ್ಲಿ ನದಿ ಕಡಿದಾದ ಕರಿ ಎರೆಮಣ್ಣಿನ ಅಥವಾ ಜಂಬುಮಣ್ಣಿನ ದಂಡೆಗಳ ಮಧ್ಯೆ ಹರಿಯುತ್ತದೆ. ಮುಂದೆ ಈ ಜಿಲ್ಲೆಯ ಪೂರ್ವಭಾಗ ಹಾಗೂ ಬಿಜಾಪುರ ಜಿಲ್ಲೆಯ ಪ್ರದೇಶದಲ್ಲಿ ವಿಶಾಲವಾದ ಎರೆಮಣ್ಣಿನ ಹರವು, ಪಕ್ಕಗಳಲ್ಲಿ, ಅದರಲ್ಲೂ ಬಲದಂಡೆಯಲ್ಲಿ, ಎತ್ತರವಾದ ಎರೆಮಣ್ಣಿನ ಮೆಟ್ಟಲುಮೆಟ್ಟಲಾದ ವಿಶಾಲ ಪ್ರದೇಶಗಳು ಇರುತ್ತವೆ. ಜಮಖಂಡಿ ತಾಲ್ಲೂಕಿನ ಪಡಸಲಗಿ ಮುಂತಾದೆಡೆಗಳಲ್ಲಿ ಮಾತ್ರ ನದಿಯ ಪಾತ್ರದಲ್ಲಿ ಗಟ್ಟಿಬಂಡೆಗಳು ಕಾಣಿಸಿಕೊಳ್ಳುತ್ತವೆ. ಸಾಮಾನ್ಯವಾಗಿ ಈ ನದಿಯ ಪ್ರದೇಶ ಸುತ್ತಲ ಪ್ರದೇಶಗಳಿಗಿಂತ ವಿಶಿಷ್ಟ ರೀತಿಯದಾಗಿ ಎದ್ದುಕಾಣುತ್ತದೆ. ನದಿಯ ಉತ್ತರ ಭಾಗ ಟ್ರಾಪ್ ಶಿಲೆಯ ಪ್ರದೇಶವಾದರೆ, ದಕ್ಷಿಣಭಾಗ ಕಲಾದಗಿ ವ್ಯವಸ್ಥೆಯ ಮರಳು ಶಿಲೆಯ ಪ್ರದೇಶ. ಇವೆರಡರ ಮಧ್ಯೆ ಪ್ರವಾಹದ ಕಾಲದಲ್ಲಿ ಬಂದು ಸೇರಿರುವ ಮೆಕ್ಕಲಿನ ಫಲವತ್ತಾದ ಭೂಮಿ. ಬಿಜಾಪುರ ಜಿಲ್ಲೆಯಲ್ಲಿ ಘಟಪ್ರಭಾ ನದಿ ಸೇರುವವರೆಗೆ ನದಿ ಅನೇಕ ಸೀಳುಗಳಾಗಿ, ಹರಿದು, ಮಧ್ಯೆಮಧ್ಯೆ ಮೇಲೆದ್ದ ಬಂಡೆಗಳ ಸಣ್ಣ ದ್ವೀಪಗಳನ್ನು ನಿರ್ಮಿಸಿರುವುದು ಕಾಣುತ್ತದೆ. ಸ್ವಲ್ಪ ದೂರ ಕಣಶಿಲೆಯ ಪ್ರದೇಶದ ಮೂಲಕವೂ ಸಾಗುತ್ತದೆ. ಈ ಭಾಗದಲ್ಲಿ ನದಿಯಲ್ಲಿ ಸಣ್ಣ ಪಾತಗಳು ಉಂಟಾಗಿವೆ. ಇದುವರೆಗಿನ ನದಿಯ ಪಾತ್ರ ಕಿರಿದು. ಮುಂದೆ ಘಟಪ್ರಭಾ ನದಿಯ ಸಂಗಮ ಸ್ಥಾನದ ಬಳಿ ನದಿಯ ಪಾತ್ರ ಸು.500ಮೀ. ಇದ್ದು ಮುಂದೆ ಮಲಪ್ರಭಾ ಸಂಗಮದ ಅನಂತರ ಸು.600-700ಮೀ. ಅಗಲವಾಗಿರುತ್ತದೆ. ಬಿಜಾಪುರ ಜಿಲ್ಲೆಯ ಭಾಗದಲ್ಲಿ ನದಿ ಹರಿಯುವಾಗ ಕಣಶಿಲೆ, ಟ್ರಾಪ್ ಶಿಲೆ, ಮರಳುಶಿಲೆ ಇತ್ಯಾದಿ ವಿವಿಧ ರೀತಿಯ ಶಿಲಾಪ್ರದೇಶಗಳನ್ನು ದಾಟಿ ಬರುವುದರಿಂದ ನದಿಯ ದಂಡೆಯಲ್ಲಿ ಮತ್ತು ಪಾತ್ರದಲ್ಲಿ ಅನೇಕ ರೀತಿಯ ಕಲ್ಲುಗುಂಡುಗಳ ಹರಹುಗಳನ್ನು ಕಾಣಬಹುದು. ರಾಯಚೂರು ಗುಲ್ಬರ್ಗ ಪ್ರದೇಶಗಳಲ್ಲಿ ನದಿ ಶಿಲಾಪ್ರದೇಶದಿಂದ ವಿಶಾಲ ಕರಿಮಣ್ಣಿನ ಪ್ರಸ್ಥಭೂಮಿಗೆ ಬರುತ್ತದೆ. ಸುಮಾರು 5ಕಿಮೀ ದೂರದಲ್ಲಿ 139ಮೀ. ಹೀಗೆ ತ್ವರಿತವಾಗಿ ಇಳಿಯುತ್ತದೆ. ಇಳಿಯುವ ಭಾಗದಲ್ಲಿ ನದಿಯ ಹರಿವಿನ ವೇಗ ಅಧಿಕ. ರಾಯಚೂರು - ಗುಲ್ಬರ್ಗ ಭಾಗದಲ್ಲಿ ಸಾಮಾನ್ಯವಾಗಿ ಬಂಡೆಯ ಮೇಲೆ ಹರಿಯುತ್ತದೆ. ಬಂಡೆಗಳ ಮೇಲೆ ಜಿಗಿದು ಅಬ್ಬರದಿಂದ ತುಂತುರಿನ ರಾಶಿಯನ್ನು ಸಿಂಪಡಿಸುತ್ತ ಹರಿಯುವ ದೃಶ್ಯ ಸಾಮಾನ್ಯ. ಈ ಭಾಗದಲ್ಲಿ ನದಿಯ ಪಾತ್ರ ಅರ್ಧದಿಂದ ಮುಕ್ಕಾಲು ಕಿಮೀಗಳಷ್ಟು ಅಗಲವಾಗಿದ್ದು ಮಧ್ಯೆ ಮಧ್ಯೆ ದ್ವೀಪಗಳನ್ನು ನಿರ್ಮಿಸಿರುವುದುಂಟು. ದಂಡೆಗಳು ಹೆಚ್ಚು ಕಡಿದಾಗಿರುವುದಿಲ್ಲ.

ಕೃಷ್ಣಾ ನದಿ ಪ್ರಸ್ಥಭೂಮಿ ಪ್ರದೇಶದ ನದಿಯಾಗಿ ಮುಂಗಾರು ಮಳೆಯೇ ಪ್ರಧಾನ ನೀರಿನ ಆಸರೆಯಾಗಿರುವುದರಿಂದ ಜೂನ್‌ನಿಂದ ಡಿಸೆಂಬರ್‌ವರೆಗೆ ನದಿಯ ಪ್ರವಾಹ ಅಧಿಕವಾಗಿರುತ್ತದೆ. ಈ ಕಾಲದಲ್ಲಿ ಅಗಾಧಪ್ರಮಾಣದ ನೀರು ಹಲವು ಬಾರಿ ಎರಡು ದಂಡೆಗಳನ್ನೂ ಮೀರಿ ಏರಿ ಹರಿದುಹೋಗುತ್ತದೆ. ಈ ಕಾಲದಲ್ಲಿ ಹರಿಯುವ ನೀರಿನ ಪ್ರಮಾಣ ನೈಲ್ ನದಿಯದಕ್ಕಿಂತ ಎರಡು ಪಟ್ಟಿನಷ್ಟು ಎಂದು ಹೇಳಲಾಗಿದೆ. ಆದರೆ ಬೇಸಗೆಯ ದಿನಗಳಲ್ಲಿ ನದಿ ಸುಮಾರು ತಳಮುಟ್ಟಿ ಹರಿಯುತ್ತದೆ. ಆಗ ಹರಿವಿನ ಪ್ರಮಾಣ ಒಂದು ನೂರು ಕ್ಯೂಸೆಕ್ಕುಗಳಿಗಿಂತ ಹೆಚ್ಚಿರುವುದಿಲ್ಲ. ಮಳೆಗಾಲದ ಭೋರ್ಗರೆತದ ತುಂಬು ಪ್ರವಾಹದ ಬದಲು ನದಿ ಸೀಳುಸೀಳಾಗಿ ಸಣ್ಣ ಧಾರೆಗಳಾಗಿ ಹರಿಯುತ್ತ ನದಿಯ ಪಾತ್ರದಲ್ಲಿ ಬಂಡೆಯ ದ್ವೀಪಗಳನ್ನು ಕರಿಮರಳಿನ ಹರಹನ್ನೂ ಪ್ರದರ್ಶಿಸುವುದು ಕಾಣುತ್ತದೆ.

ಕೃಷ್ಣಾ ನದಿಯಷ್ಟನ್ನೇ ತೆಗೆದುಕೊಂಡರೆ, ಕರ್ನಾಟಕ ರಾಜ್ಯದಲ್ಲಿ ಅದರ ಹರಿವಿನ ಉದ್ದ ನದಿಯ ಒಟ್ಟು ಉದ್ದದ ಸು.$^{1}/_{3}$ ಭಾಗದಷ್ಟೇ ಇದ್ದಂತೆ ಕಂಡರೂ ಕರ್ನಾಟಕದ ಪ್ರಸ್ಥಭೂಮಿಯ $^{2}/_{3}$ ರಷ್ಟು ಭಾಗ ಕೃಷ್ಣಾ ವ್ಯವಸ್ಥೆಗೆ ಸೇರಿದ್ದಾಗಿದೆ. ತನ್ನ ಹರಿವಿನ ಮಾರ್ಗದಲ್ಲಿ ಇದು ಕೂಡಿಸಿಕೊಳ್ಳುವ ಉಪನದಿಗಳು ಅನೇಕ. ಕರ್ನಾಟಕ ರಾಜ್ಯದಲ್ಲಿ ಸೇರುವ ಉಪನದಿಗಳಲ್ಲಿ ಮೊದಲನೆಯದು ದೂದ್‌ಗಂಗಾ. ಇದು ಚಿಕ್ಕೋಡಿ ತಾಲ್ಲೂಕಿನೆಡೆಯಿಂದ ಪೂರ್ವಾಭಿಮುಖವಾಗಿ ಹರಿದು ಕೃಷ್ಣಾನದಿ ಚಿಕ್ಕೋಡಿ ತಾಲ್ಲೂಕಿನ ಅಂಚನ್ನು ಪ್ರವೇಶಿಸುವಲ್ಲಿಯೇ ಅದರ ಬಲದಂಡೆಯಲ್ಲಿ ಸೇರುತ್ತದೆ. ಮುಂದೆ ಬೇಸಗೆಯಲ್ಲಿ ಬತ್ತಿಹೋಗುವ ಹಲವಾರು ತೊರೆಗಳು ಕೃಷ್ಣಾನದಿಯನ್ನು ಕೂಡಿದರೂ ಬೆಳಗಾಂವಿ ಜಿಲ್ಲೆಯ ಭಾಗದಲ್ಲಿ ಹೆಸರಿಸಬಹುದಾದ ಉಪನದಿಗಳೆಂದರೆ ದೂದ್‌ನಾಲಾ ಮತ್ತು ಅಗರಣಿ. ದೂದ್‌ನಾಲಾ ರಾಯಭಾಗ ತಾಲ್ಲೂಕಿನಲ್ಲಿ ಉತ್ತರಕ್ಕೆ ಹರಿದು ಚಿಂಚಲಿಯ ಬಳಿಯಲ್ಲಿ ಸಂಗಮವಾಗುತ್ತದೆ. ಅಗರಣಿ, ಅಥಣಿ ತಾಲ್ಲೂಕಿನಲ್ಲಿ ದಕ್ಷಿಣಾಭಿಮುಖವಾಗಿ ಬಂದು ಐನಾಪುರದ ಸ್ವಲ್ಪಪೂರ್ವದಲ್ಲಿ ಬಣಜವಾಡ ಬಳಿ ಸೇರುತ್ತದೆ. ಈ ನದಿಗಳೆಲ್ಲ ಚಿಕ್ಕವು, ಸಾಮಾನ್ಯವಾಗಿ ಅದೇ ಪ್ರದೇಶದಲ್ಲಿ ಹುಟ್ಟಿ 60-70ಕಿಮೀಗಳಿಗಿಂತ ಹೆಚ್ಚು ಉದ್ದವಿಲ್ಲದೆ ಮಳೆಗಾಲದಲ್ಲಿ ಮಾತ್ರ ತುಂಬಿ ಹರಿಯುವುವು. ಬಿಜಾಪುರ ಜಿಲ್ಲೆ ಹಾಗೂ ಮುಂದೆ ಕೊಪ್ಪಳ, ಬಾಗಲಕೋಟೆ, ಗುಲ್ಬರ್ಗ, ರಾಯಚೂರು ಜಿಲ್ಲೆಯ ಭಾಗಗಳಲ್ಲೂ ಇಂಥ ತೊರೆಗಳು ಅನೇಕವಿವೆ. ಬಾಗಲಕೋಟೆ ಭಾಗದ ಉಪನದಿಗಳಲ್ಲಿ ಘಟಪ್ರಭಾ ಮತ್ತು ಮಲಪ್ರಭಾ ಮುಖ್ಯವಾದವು. ಇವೆರಡೂ ಸಹ್ಯಾದ್ರಿಪರ್ವತ ಪ್ರದೇಶದಲ್ಲಿ ಹುಟ್ಟಿ ಕೃಷ್ಣಾ ನದಿಯ ದಕ್ಷಿಣದ ಪ್ರದೇಶದಲ್ಲಿ ಹರಿದು ಬರುವವು. ಘಟಪ್ರಭಾ ಬೀಳಗಿ ತಾಲ್ಲೂಕಿನ ಹಿರೇಮುರ್ಮಟ್ಟಿಯ ಬಳಿ ಕೃಷ್ಣಾ ನದಿಯ ಬಲಶಾಖೆಯನ್ನು ಕೂಡುತ್ತದೆ. ಮಲಪ್ರಭಾ ಹುನಗುಂದ ತಾಲ್ಲೂಕಿನ ಪ್ರಸಿದ್ಧ ಕೂಡಲಸಂಗಮ ಕ್ಷೇತ್ರದಲ್ಲಿ ಸೇರುತ್ತದೆ. ಬಿಜಾಪುರ ಜಿಲ್ಲೆಯ ಬಹುಭಾಗದಲ್ಲಿ ಪ್ರವಹಿಸಿ ಗುಲ್ಬರ್ಗ ಜಿಲ್ಲೆಯಲ್ಲಿ ಮುನ್ನಡೆಯುವ ಡೋಣಿ ನದಿ ಕೃಷ್ಣಾನದಿಯ ಉತ್ತರದ ಉಪನದಿಗಳಲ್ಲಿ ಒಂದು. ಇದು ಸುರಪುರ ತಾಲ್ಲೂಕಿನ ನೈಋತ್ಯ ಭಾಗದಲ್ಲಿ ಉಮ್ಮಾಪುರದ ಬಳಿ ಕೃಷ್ಣಾ ನದಿಯನ್ನು ಕೂಡುತ್ತದೆ. ಮುಂದಿನ ಉಪನದಿಗಳಲ್ಲಿ ಸಣ್ಣ ತೊರೆಗಳನ್ನು ಬಿಟ್ಟರೆ ಭೀಮಾನದಿ ಮುಖ್ಯವಾದುದು. ಇದು ಗುಲ್ಬರ್ಗ ಜಿಲ್ಲೆಯ ಪೂರ್ವದ ಅಂಚಿನಲ್ಲಿ ಕೃಷ್ಣಾ ನದಿ ರಾಜ್ಯದ ಎಲ್ಲೆಯನ್ನು ಬಿಡುವಲ್ಲಿ ಗುಂಡೂರು ಸಂಗಮದಲ್ಲಿ ಸಂಗಮಿಸುತ್ತದೆ.

ಬಹು ಪ್ರಯೋಜನಕಾರಿಯಾದ ಕೃಷ್ಣಾ ನದಿ ಉತ್ತರ ಕರ್ನಾಟಕ ಭಾಗದ ಅತಿ ದೊಡ್ಡ ನದಿಯಾದರೂ ಅದನ್ನು ನೀರಾವರಿಗೆ ಇದುವರೆಗೂ

ಸರಿಯಾಗಿ ಬಳಸಿಕೊಳ್ಳಲಾಗಿರಲಿಲ್ಲ. ಈವರೆಗೂ ಇದಕ್ಕೆ ಯಾವ ಅಣೆಕಟ್ಟೂ ಇರಲಿಲ್ಲ. ನದಿಯ ಪಾತ್ರದ ಪಕ್ಕದ ಪ್ರದೇಶಗಳಿಗೆ ಫಲವತ್ತಾದ ಮಣ್ಣನ್ನು ತಂದು ಹಾಕುವುದರಷ್ಟರಲ್ಲಿ ಮಾತ್ರ ನದಿಯ ಉಪಯೋಗವಿತ್ತು. ಕೆಲವೆಡೆಗಳಲ್ಲಿ ನದಿಯ ಪಕ್ಕದಲ್ಲಿ ಬಾವಿಗಳನ್ನು ತೋಡಿ ಏತದಿಂದ ಬೇಸಾಯ ಮಾಡಲಾಗುತ್ತಿತ್ತು. ಮಹಾರಾಷ್ಟ್ರದಲ್ಲಿ ಕಟ್ಟಿರುವ ಕೃಷ್ಣಾ ಅಣೆಕಟ್ಟಿನಿಂದ ಬೆಳಗಾಂವಿ ಜಿಲ್ಲೆಯ ಕೆಲವು ಭಾಗಗಳಿಗೆ ನೀರೊದಗಲಾರಂಭವಾಯಿತು. ಅಲ್ಲಿಂದ ಬರುವ ಕೃಷ್ಣಾ ವಿಸ್ತರಣ ನಾಲೆ ಅಥಣಿ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ನದಿಯ ಎಡದಂಡೆಯ ಪ್ರದೇಶಕ್ಕೆ ನೀರೊದಗಿಸುತ್ತದೆ. ಈಚೆಗೆ ಕರ್ನಾಟಕ ಸರ್ಕಾರ ಕೃಷ್ಣಾ ಮೇಲ್ದಂಡೆ ಯೋಜನೆಯ ಕಾರ್ಯವನ್ನು ಕೈಗೊಂಡಿದೆ. ಇದು ಕರ್ನಾಟಕದ ಬೃಹತ್ ನೀರಾವರಿ ಯೋಜನೆಗಳಲ್ಲಿ ಒಂದು. ಈ ಯೋಜನೆಯ ಪ್ರಕಾರ ನದಿಗೆ ಎರಡು ಕಟ್ಟೆಗಳನ್ನು ಕಟ್ಟಲಾಗಿದೆ. ಮೊದಲನೆಯದು ಕೃಷ್ಣಾ-ಘಟಪ್ರಭಾ ಸಂಗಮದಿಂದ ಸ್ವಲ್ಪ ಪೂರ್ವದಲ್ಲಿ ಆಲಮಟ್ಟಿ ಗ್ರಾಮದ ಬಳಿ ಇದೆ.

ಇಲ್ಲಿ ನದಿ ಬೆಟ್ಟಗಳ ಪ್ರದೇಶವನ್ನು ಹಾಯುವುದರಿಂದ ಭದ್ರ ಕಟ್ಟೆಗೆ ಅನುಕೂಲವಾಗಿರುವುದಲ್ಲದೆ, ಜಲಸಂಗ್ರಹಕ್ಕೆ ವಿಸ್ತಾರವಾದ ಪ್ರದೇಶ ಸಹ ದೊರಕುವುದರಿಂದ ಈ ಸ್ಥಳವನ್ನು ಆಯ್ಕೆಮಾಡಲಾಗಿದೆ. ಎರಡನೆಯದು ನಾರಾಯಣಪುರ ಕಟ್ಟೆ. ಆಲಮಟ್ಟಿಯಿಂದ ಮತ್ತಷ್ಟು ಕೆಳಗೆ ಮಲಪ್ರಭಾ - ಕೃಷ್ಣಾ ಸಂಗಮದಿಂದ ಕೆಲವೇ ಮೈಲಿಗಳ ಅಂತರದಲ್ಲಿ ಮುದ್ದೇಬಿಹಾಳ ತಾಲ್ಲೂಕಿನ ಸಿದ್ದಾಪುರಗ್ರಾಮದ ಬಳಿ ಕಟ್ಟಲಾಗುತ್ತಿದೆ. ಈ ಜಲಾಶಯಗಳ ನೆರವಿನಿಂದ ಬಿಜಾಪುರ, ಗುಲ್ಬರ್ಗ, ರಾಯಚೂರು ಜಿಲ್ಲೆಯ ಪ್ರದೇಶಗಳಲ್ಲಿ 8,43,353 ಹೆಕ್ಟೇರುಗಳಷ್ಟು (20.84 ಲಕ್ಷ ಎಕರೆಗಳು) ವಿಸ್ತಾರದ ಭೂಮಿಗೆ ನೀರಾವರಿ ಸೌಲಭ್ಯ ಒದಗಲಿದೆ. ಇದರಿಂದ ವಾರ್ಷಿಕ ಸು.15.54 ಮಿಲಿಯನ್ ಮೆಟ್ರಿಕ್ ಟನ್ ಅಧಿಕ ಆಹಾರ ಉತ್ಪಾದನೆಯಾಗುವ ನಿರೀಕ್ಷೆಯಿದೆ. ಈ ಯೋಜನೆಯ ಅಂದಾಜು ವೆಚ್ಚ 285 ಕೋಟಿ ರೂಪಾಯಿಗಳು.

ಕೃಷ್ಣಾ ಮೇಲ್ದಂಡೆ ಯೋಜನೆಗಳ ಹಣಕಾಸು ವೆಚ್ಚ ಮತ್ತು ನೀರಾವರಿ ಸಾಮರ್ಥ್ಯದ ಅಂಕಿಅಂಶಗಳು

| ಕ್ರಮ ಸಂಖ್ಯೆ | ಯೋಜನೆಯ ಹೆಸರು | ಕೋಟಿ ರೂ.ಗಳಲ್ಲಿ | | ನೀರಾವರಿ ಸಾಮರ್ಥ್ಯ (ಹೆಕ್ಟೇರ್‌ಗಳಲ್ಲಿ) | |
|---|---|---|---|---|---|
| | | ಇತ್ತೀಚಿನ ವೆಚ್ಚ | 2000ದ ಮಾರ್ಚ್ ವರೆಗಿನ ಖರ್ಚು | ಅಂತಿಮ ಸಾಮರ್ಥ್ಯ | 2000ದ ಮಾರ್ಚ್ ವರೆಗಿನ ಸಾಮರ್ಥ್ಯ |
| | ಪ್ರಮುಖ ಯೋಜನೆಗಳು | | | | |
| 1 | ಕೃಷ್ಣಾ ಮೇಲ್ದಂಡೆ I ಮತ್ತು II | 9,066.21 | 5,329.84 | 6,22,020 | 3,07,181 |
| 2 | ಹಿಪ್ಪರಗಿ | 524.21 | 37.75 | 59,690 | – |
| 3 | ಘಟಪ್ರಭಾ III | 871.00 | 425.13 | 1,78,064 | 48,487 |
| 4 | ಮಲಪ್ರಭಾ | 703.71 | 559.96 | 2,18,191 | 1,76,074 |
| 5 | ಬೆಣ್ಣೆತೊರೆ | 195.42 | 164.15 | 20,236 | 8,302 |
| 6 | ಭದ್ರಾ | 170.00 | 167.43 | 1,05,570 | 1,05,570 |
| 7 | ತುಂಗಭದ್ರಾ ಎಲ್‌ಬಿಸಿ | 319.90 | 259.30 | 2,44,381 | 2,44,199 |
| 8 | ತುಂಗಭದ್ರಾ ಆರ್ ಬಿ ಎಚ್‌ಎಲ್‌ಸಿ | 79.48 | 50.29 | 80,910 | 70,439 |
| 9 | ದೂಧ್‌ಗಂಗಾ | 110.00 | 12.57 | 19,668 | – |
| 10 | ಮಾರ್ಕಂಡೇಯ | 134.53 | 21.32 | 32,375 | – |
| 11 | ರಮ್ಥಾಲ್ ಏತನೀರಾವರಿ | 114.05 | - - | 22,260 | – |
| 12 | ಭೀಮಾ ಹರಿವು | 85.18 | 0.49 | 42,170 | – |
| 13 | ಭೀಮಾ ಏತನೀರಾವರಿ | 153.00 | 5.00 | 24,282 | – |
| 14 | ತುಂಗಾ ಮೇಲ್ದಂಡೆ 11 | 832.46 | 39.40 | 94,700 | – |
| 15 | ಸಿಂಗಟ್ಲೂರ್ | 123.00 | 19.06 | 20,241 | – |
| | ಒಟ್ಟು | **13,581.34** | **7,091.69** | **17,84,758** | **9,60,252** |

ಮಧ್ಯಮ ಯೋಜನೆಗಳು

| ಕ್ರಮ ಸಂಖ್ಯೆ | ಯೋಜನೆಯ ಹೆಸರು | ಕೋಟಿ ರೂ.ಗಳಲ್ಲಿ | | ನೀರಾವರಿ ಸಾಮರ್ಥ್ಯ (ಹೆಕ್ಟೇರ್‌ಗಳಲ್ಲಿ) | |
|---|---|---|---|---|---|
| | | ಇತ್ತೀಚಿನ ವೆಚ್ಚ | 2000ದ ಮಾರ್ಚ್ ವರೆಗಿನ ಖರ್ಚು | ಅಂತಿಮ ಸಾಮರ್ಥ್ಯ | 2000ದ ಮಾರ್ಚ್ ವರೆಗಿನ ಸಾಮರ್ಥ್ಯ |
| | ಮಧ್ಯಮ ಯೋಜನೆಗಳು | | | | |
| 16 | ಅಮರಜಾ | 97.50 | 89.74 | 8,903 | 6,639 |
| 17 | ಕೆಳಮುಲ್ಲಾಮಾರಿ | 115.00 | 101.77 | 9,713 | 2,611 |
| 18 | ಹಿರೇಹಳ್ಳ | 120.81 | 112.90 | 8,103 | -- |
| 19 | ಮಸ್ಕಿನಾಲಾ | 38.50 | 32.78 | 2,833 | -- |
| 20 | ರಾಣಿಕೆರೆ ಫೀಡರ್ ಕಾಲುವೆ | 9.49 | 9.49 | 3,328 | 283 |
| 21 | ಗಂಧೋರಿ ನಾಲಾ | 153.00 | 26.16 | 8,094 | -- |
| 22 | ಇಟಗಿ ಸಾಸಲ್‌ವಾಡ | 12.15 | 0.53 | 5,700 | -- |
| 23 | ಮುಲ್ಲಾಮಾರಿ ಮೇಲ್ದಂಡೆ | 19.92 | 19.65 | 3,279 | 3,279 |
| 24 | ಬಾಸಪುರ | 14.02 | 1.05 | 2,276 | -- |
| 25 | ಹೊದಿರಾಯನ ಹಳ್ಳ | 11.87 | 0.7 | -- | -- |
| 26 | ಕಾಗಿಣಾ | 51.91 | -- | 7,689 | -- |
| 27 | ಹರಿನಾಲಾ | 30.60 | 19.38 | 4,370 | -- |
| | ಒಟ್ಟು | **14,256.11** | **7,505.61** | **18,48,866** | **9,73,064** |

ಕೃಷ್ಣಾ ನದಿಯಲ್ಲಿ ಬೇಸಗೆ ಕಾಲದಲ್ಲಿ ಕಡಿಮೆ ಪ್ರವಾಹ ವಿರುವುದರಿಂದ ಆಗ ಹಲವೆಡೆಗಳಲ್ಲಿ ನದಿಯನ್ನು ದಾಟಬಹುದು. ಕೆಲವು ಸ್ಥಳಗಳಲ್ಲಿ ಹರಿಗೋಲುಗಳಿಂದಲೂ ತಗ್ಗುಪಟ್ಟೆಗಳಿಂದಲೂ (ಕಾಸ್‌ವೇ) ದಾಟುವ ಸೌಲಭ್ಯವಿದೆ. ನದಿಗೆ ಅಡ್ಡಲಾಗಿ ಕರ್ನಾಟಕದ ಭಾಗದಲ್ಲಿ 7 ಮುಖ್ಯ ಸೇತುವೆಗಳಿವೆ. ಅನುಕ್ರಮವಾಗಿ ಅವು ಈ ಸ್ಥಳಗಳಲ್ಲಿವೆ: ಬೆಳಗಾಂವಿ ಜಿಲ್ಲೆಯ ಅಂಕಲಗಿ (ಚಿಕ್ಕೋಡಿ- ಕಾನವಾಡ- ಮಿರಜ ರಸ್ತೆ), ಕುಡಚಿ (ರಾಯಬಾಗ-ಮಿರಜ ರಸ್ತೆ), ದರೂರು (ರಾಯಬಾಗ-ಅಥಣಿ ರಸ್ತೆ), ಬಿಜಾಪುರ ಜಿಲ್ಲೆಯ ಪಡಸಲ್ಗಿ (ಜಮಖಂಡಿ -ಬಿಜಾಪುರ ರಸ್ತೆ), ಗಲಗಲಿ (ಮುಧೋಳ-ಬಿಜಾಪುರ ರಸ್ತೆ), ಕೊಲ್ಹಾರ (ಬಿಜಾಪುರ-ಹುಬ್ಬಳ್ಳಿ ರಸ್ತೆ), ಗುಲ್ಬರ್ಗ ಜಿಲ್ಲೆಯ ತಿಂಥಿಣಿ (ಗುಲ್ಬರ್ಗ- ಬಳ್ಳಾರಿ ರಸ್ತೆ), ರಾಯಚೂರು ಜಿಲ್ಲೆಯ ದೇವರಸುಗೂರು (ರಾಯಚೂರು- ಮಹಬೂಬ್‌ನಗರ-ಹೈದರಾಬಾದು ರಸ್ತೆ), ಹುಬ್ಬಳ್ಳಿ-ಪುಣೆ, ಗದಗ- ಸೊಲ್ಲಾಪುರ, ಗುಂತಕಲ್ಲು-ಮುಂಬಯಿ ಈ ರೈಲು ಮಾರ್ಗಗಳು ಅನುಕ್ರಮವಾಗಿ ಬೆಳಗಾಂವಿ ಜಿಲ್ಲೆಯ ಕುಡಚಿ, ಬಿಜಾಪುರ ಜಿಲ್ಲೆಯ ಆಲಮಟ್ಟಿ ಮತ್ತು ರಾಯಚೂರು ಜಿಲ್ಲೆಯ ಕರೆಕಲ್ ಬಳಿಯಲ್ಲಿ ಕೃಷ್ಣಾನದಿಯನ್ನು ಹಾದುಹೋಗುತ್ತವೆ.

ಹಿಂದಿನ ಅನೇಕ ಬರೆಹಗಳಲ್ಲಿ ಕೃಷ್ಣಾನದಿಯ ಉಲ್ಲೇಖವಿದೆ. ಸ್ಕಾಂದಪುರಾಣದ ಕೃಷ್ಣಾಮಾಹಾತ್ಮ್ಯ ವಿಭಾಗದಲ್ಲಿ ಹೇಳಿರುವಂತೆ ಸ್ವರ್ಗದಿಂದ ಈ ನದಿಯನ್ನು ಭೂಲೋಕಕ್ಕೆ ತರಲಾಯಿತು. ಕಲಿಯುಗದಲ್ಲಿ ಧರ್ಮಗ್ಲಾನಿಯಿಂದ ಬೇಸತ್ತ ಋಷಿಗಳು ನಾರದನನ್ನು ಮೊರೆಹೊಕ್ಕಾಗ ನಾರದ ತನ್ನ ತಂದೆ ಬ್ರಹ್ಮನನ್ನು ಪ್ರಾರ್ಥಿಸಿದ. ಆಗ ಬ್ರಹ್ಮ ಅನೇಕ ತೀರ್ಥಗಳನ್ನು ಸೃಷ್ಟಿಸಿದ. ಹಾಗೆಯೇ ನಾರಾಯಣನನ್ನು ಧರ್ಮರಕ್ಷಣೆಗೆ ಪ್ರಾರ್ಥಿಸಿದಾಗ ನಾರಾಯಣನ ಶರೀರದಿಂದ ಈ ನದಿ ಹುಟ್ಟಿತೆಂದೂ ಆದ್ದರಿಂದಲೇ ಇದಕ್ಕೆ ಕೃಷ್ಣಾ ನದಿ ಎಂಬ ಹೆಸರು ಬಂತೆಂದೂ ಹೇಳುವರು. ಜೊತೆಗೆ ಸಹ್ಯಾದ್ರಿಯು ದೊರೆ ನಾರಾಯಣನನ್ನು ಕುರಿತು ತಪಸ್ಸನ್ನು ಮಾಡಿದಾಗ ನಾರಾಯಣ ಪ್ರತ್ಯಕ್ಷನಾಗಿ ವರರೂಪವಾಗಿ ಕೃಷ್ಣಾ ನದಿಯಾಗಿ ಹರಿದನೆಂದೂ ಹೇಳುವರು. ಕೃಷ್ಣಾ ಎಂದರೆ ಪಾಪವನ್ನೆಲ್ಲಾ ಕೊಚ್ಚಿಕೊಂಡು ಹೋಗುವುದು ಎಂಬ ಅರ್ಥವೆಂದೂ ಹೇಳುವುದುಂಟು.

ಪದ್ಮ ಮತ್ತು ಬ್ರಹ್ಮ ಪುರಾಣಗಳಲ್ಲೂ ಕೃಷ್ಣಾ ನದಿಯ ಮಹಿಮೆ ಕುರಿತು ಹೇಳಿದೆ. ಕೃಷ್ಣಾ ನದಿಯನ್ನು ದಕ್ಷಿಣದ ಗಂಗೆ ಎಂದೂ ಕರೆಯುತ್ತಾರೆ. ಮಲಪ್ರಭಾ ಕೃಷ್ಣಾ ನದಿಯನ್ನು ಸೇರುವ ಕೂಡಲ ಸಂಗಮದ ಹತ್ತಿರ ಜಾತವೇದ ಮುನಿಯ ಆಶ್ರಮವಿತ್ತೆಂದೂ ಐತಿಹ್ಯವಿದೆ. ಬಸವೇಶ್ವರರ ಆರಾಧ್ಯದೈವ ಕೂಡಲಸಂಗಮ (ನೋಡಿ) ಇಲ್ಲೇ ಇದೆ. ಅದೊಂದು ಪವಿತ್ರಸ್ಥಳವಾಗಿದೆ.

ಬೆಳಗಾಂವಿ ಜಿಲ್ಲೆಯಲ್ಲಿ ಚಿಕ್ಕೋಡಿ ತಾಲ್ಲೂಕಿನ ಪಡೂರು, ರಾಯಬಾಗ ತಾಲ್ಲೂಕಿನ ಸಪ್ತಸಾಗರ, ಬಿಜಾಪುರ ಜಿಲ್ಲೆಯಲ್ಲಿ ಬಿಜಾಪುರ ತಾಲ್ಲೂಕಿನ ಬಬ್ಲಾದ, ಜೈನಾಪುರ, ಬಾಗೇವಾಡಿ ತಾಲ್ಲೂಕಿನ ಚಿಮ್ಮಲಗಿ, ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಮುತ್ತೂರು, ಶೂರ್ಪಾಲಿ, ಗುಲ್ಬರ್ಗ ಜಿಲ್ಲೆಯಲ್ಲಿ ಸುರಪುರ ತಾಲ್ಲೂಕಿನ ಛಾಯಾಭಗವತಿ, ತಿಂಥಿಣಿ, ಯಾದಗಿರಿ ತಾಲ್ಲೂಕಿನ ಭೀಮಾ -ಕೃಷ್ಣಾ ಸಂಗಮ, ರಾಯಚೂರು ಜಿಲ್ಲೆಯಲ್ಲಿ ರಾಯಚೂರು ತಾಲ್ಲೂಕಿನ ದೇವರಸುಗೂರು, ಕಡಲೂರು, ಕೊರ್ವ (ನಾರದಗಡ್ಡೆ) ರಾಮಗಡ್ಡೆ ಇವು ಕೃಷ್ಣಾ ನದಿಯ ದಂಡೆಯಲ್ಲಿರುವ ಪುಣ್ಯ ಕ್ಷೇತ್ರಗಳಲ್ಲಿ ಕೆಲವು. *

**ಕೃಷ್ಣಾಚಾರ್ಯ, ಗರಣಿ :** 1857-1918. ಪ್ರಸಿದ್ಧ ವಿದ್ವಾಂಸರು. ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡರಲ್ಲೂ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಕೃಷ್ಣಾಚಾರ್ಯ ತಿಮ್ಮಣ್ಣಾಚಾರ್ಯ ಗರಣಿ ಇವರ ಪೂರ್ಣ ಹೆಸರು. ತುಮಕೂರು ಜಿಲ್ಲೆ ಗರಣಿ ಇವರ ಜನ್ಮಸ್ಥಳ. ಪ್ರಸಿದ್ಧ ವ್ಯಾಕರಣ ಪಂಡಿತರಾಗಿದ್ದ ಇವರು ಮೊದಲು ಮದರಾಸಿನ ಕ್ರಿಶ್ಚನ್ ಕಾಲೇಜಿನಲ್ಲೂ ಅನಂತರ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲೂ ಕನ್ನಡ ಪಂಡಿತರಾಗಿ ಕೆಲಸ ಮಾಡಿದರು. ಮೈಸೂರು ಮಹಾರಾಜರ ಆಸ್ಥಾನವಿದ್ವಾಂಸರೂ ಆಗಿದ್ದರು. ಕನ್ನಡದಲ್ಲಿ ಇವರು ಬರೆದಿರುವ ಕೆಲವು ಮುಖ್ಯ ಕೃತಿಗಳಿವು: ಕರ್ಣಾಟಕ ಭಾಷಾ ವಿಷಯವು, ಕರ್ನಾಟಕ ಭಾಷಾ ಸಮೀಕರಣೋಪನ್ಯಾಸ, ಕಾದಂಬರೀ ಕಥೆ, ನಾಗಾನಂದ ನಾಟಕಂ, ಸ್ಮೃತಿಧರ್ಮ ಪದ್ಧತಿ. ಸಂಸ್ಕೃತದಲ್ಲಿ ಧಾತುರೂಪಾವಳಿ, ಶಬ್ದರತ್ನಾವಳಿ ಮುಂತಾದ ಗ್ರಂಥಗಳನ್ನು ಬರೆದಿದ್ದಾರೆ. ಇವರು 1918 ಅಕ್ಟೋಬರ್ 1ರಂದು ನಿಧನಹೊಂದಿದರು.*

**ಕೃಷ್ಣಾನಂದಾ, ಕಾಮತ :** 1934-2002. ವಿಜ್ಞಾನಿ, ಲೇಖಕ, ಛಾಯಾಗ್ರಾಹಕ, ಕಲಾವಿದ. ಉತ್ತರ ಕನ್ನಡ ಜಿಲ್ಲೆ ಹೊನ್ನಾವರದಲ್ಲಿ 1934 ಸೆಪ್ಟೆಂಬರ್ 29ರಂದು ಹುಟ್ಟಿದರು. ತಂದೆ ಲಕ್ಷ್ಮಣ ಕಾಮತ, ತಾಯಿ ರಮಾಬಾಯಿ. ಹೊನ್ನಾವರದ ನ್ಯೂ ಇಂಗ್ಲಿಷ್ ಹೈಸ್ಕೂಲಿನಲ್ಲಿ ಓದಿ, ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ವಿಜ್ಞಾನ ಪದವಿ ಪಡೆದು, ಕರ್ನಾಟಕ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವೀಧರರಾಗಿ ನ್ಯೂ ಯಾರ್ಕ್‌ನ ಸ್ಟೇಟ್ ಯೂನಿವರ್ಸಿಟಿಯಲ್ಲಿ ಕೀಟಶಾಸ್ತ್ರ ಕುರಿತು ಸಂಶೋಧನೆ ಮಾಡಿ ಡಾಕ್ಟೊರೇಟ್ ಪಡೆದರು. ಕೆಲಕಾಲ ರಾಜಸ್ತಾನದಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿದ ಇವರು ಅನಂತರ ಬೆಂಗಳೂರಿನಲ್ಲಿ ನೆಲಸಿದರು. ಛಾಯಾಗ್ರಹಣ, ಸಾಹಿತ್ಯ ರಚನೆ, ಚಿತ್ರಕಲೆ, ಪ್ರವಾಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇವರಿಗೆ ಕೊಂಕಣಿ, ಇಂಗ್ಲಿಷ್, ಮರಾಠಿ, ಹಿಂದಿ ಭಾಷೆಗಳ ಮೇಲೂ ಪ್ರಭುತ್ವವಿತ್ತು. ಇಂಗ್ಲಿಷ್, ಕೊಂಕಣಿ ಭಾಷೆಗಳಲ್ಲೂ ಇವರು ಲೇಖನ ಪುಸ್ತಕಗಳನ್ನು ಬರೆದಿದ್ದಾರೆ.



ಕೀಟಶಾಸ್ತ್ರದ ಮತ್ತು ಪರಿಸರ ಅಧ್ಯಯನದ ಪಂಡಿತರಾಗಿದ್ದ ಕಾಮತರು ಕನ್ನಡ ಸಾಹಿತ್ಯದಲ್ಲೂ ಆಸಕ್ತಿ ವಹಿಸಿದ್ದರು. ನಾನು ಅಮೇರಿಕೆಗೆ ಹೋಗಿದ್ದೆ (1969) ಎಂಬುದು ಇವರ ಪ್ರಸಿದ್ಧ ಪ್ರವಾಸ ಸಾಹಿತ್ಯ ಕೃತಿ. ವಂಗದರ್ಶನ (1972), ನಾ ರಾಜಸ್ಥಾನದಲ್ಲಿ (1974), ಕಲಾರಂಗ (1982), ಬಸ್ತರ ಪ್ರವಾಸ (1991), ಮಧ್ಯಪ್ರದೇಶದ ಮಡಿಲಲ್ಲಿ (1993), ಪ್ರವಾಸಿಯ ಪ್ರಬಂಧಗಳು (2000) -ಇವು ಇತರ ಕೃತಿಗಳು. ಇವರು ಭಗ್ನಸ್ವಪ್ನ ಎಂಬ ಕಾದಂಬರಿಯನ್ನು ಬರೆದಿದ್ದಾರೆ. ತಮ್ಮ ಪತ್ನಿ ಜ್ಯೋತ್ಸ್ನಾ ಕಾಮತರಿಗೆ ಬರೆದ ಪತ್ರಗಳು ಪ್ರೇಯಸಿಗೆ ಪತ್ರಗಳು ಎಂಬ ಹೆಸರಿನಲ್ಲಿ ಪ್ರಕಟವಾಗಿವೆ.

ಪ್ರಾಣಿಶಾಸ್ತ್ರ ಮತ್ತು ಸಸ್ಯಶಾಸ್ತ್ರ ಕುರಿತು ಇವರು ಪ್ರಾಣಿಪರಿಸರ (1975), ಪಶುಪಕ್ಷಿ ಪ್ರಪಂಚ (1990), ಸಸ್ಯ ಪ್ರಪಂಚ (1992), ಸಸ್ಯ ಪರಿಸರ (1994), ಕಾಗೆಯ ಕಾಯಕ (1999), ಇರುವೆಯ ಇರುವು (1999), ಸರ್ಪಸಂಕುಲ (1999), ಕೀಟ ಜಗತ್ತು (1992) ಎಂಬ ಗ್ರಂಥಗಳನ್ನು ಬರೆದಿದ್ದಾರೆ. ಕರ್ನಾಟಕದ ಕಾವಿಕಲೆಯನ್ನು ಕುರಿತು ಅಧ್ಯಯನ ಮಾಡಿ ಕಾವಿಕಲೆ ಎಂಬ ಪುಸ್ತಕವನ್ನು ಕನ್ನಡ ಮತ್ತು ಕೊಂಕಣಿ ಭಾಷೆಗಳಲ್ಲಿ ರಚಿಸಿದ್ದಾರೆ. ಇವರು ಬರೆದ ಕೊನೆಯ ಕೃತಿ ಮರುಪಯಣ (2001). ಇವರ ಕೃತಿಗಳಲ್ಲಿ ನವುರಾದ ಹಾಸ್ಯವನ್ನೂ ಸೂಕ್ಷ್ಮಾವಲೋಕನ ದೃಷ್ಟಿಯನ್ನೂ ಗುರುತಿಸಬಹುದು. ಹೀಗಾಗಿ ಇವು ಓದುಗರ ಮೆಚ್ಚುಗೆ ಗಳಿಸಿವೆ.

ನಾನು ಅಮೇರಿಕೆಗೆ ಹೋಗಿದ್ದೆ, ಪ್ರಾಣಿ ಪರಿಸರ, ಬಸ್ತರ ಪ್ರವಾಸ ಪುಸ್ತಕಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ವಾರ್ಷಿಕ ಬಹುಮಾನಗಳೂ ಸಾಹಿತ್ಯ ಯಾತ್ರೆ ಎಂಬ ಕೃತಿಗೆ 1994ರಲ್ಲಿ ಗೌರೀಶ ಕಾಯ್ಕಿಣಿ ಪ್ರತಿಷ್ಠಾನದ ಪ್ರಶಸ್ತಿಯೂ ಲಭಿಸಿವೆ. ಇವರು 2002 ಫೆಬ್ರವರಿ 20ರಂದು ಬೆಂಗಳೂರಿನಲ್ಲಿ ನಿಧನಹೊಂದಿದರು. (ಎಸ್.ಎಂ.ಕೆ.)

**ಕೆಂಗಲ್ :** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣ ತಾಲ್ಲೂಕಿನ ಒಂದು ಪ್ರವಾಸಿ ತಾಣ. ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ಚನ್ನಪಟ್ಟಣದಿಂದ ಸು.3ಕಿಮೀ ದೂರದಲ್ಲಿದೆ. ಇದು ವಂದರಗುಪ್ಪೆ ಗ್ರಾಮಕ್ಕೆ ಸೇರಿದೆ. ಇಲ್ಲಿ ಪ್ರಸಿದ್ಧ ಹನುಮಂತರಾಯನ ಗುಡಿ ಇದೆ.



ಹನುಮಂತರಾಯ ದೇವಾಲಯ

ಕರ್ನಾಟಕದ ಮಾಜಿ ಮುಖ್ಯಮಂತ್ರಿ ಹಾಗೂ ಪ್ರಸಿದ್ಧ ರಾಜಕಾರಣಿ ಕೆಂಗಲ್ ಹನುಮಂತಯ್ಯನವರು ಈ ದೇವಾಲಯದ ಜೀರ್ಣೋದ್ಧಾರ ಮಾಡಿಸಿದರು. ಆಂಜನೇಯ ಮೂರ್ತಿಯನ್ನು ಕೆಂಪು ಗ್ರಾನೈಟ್ ಕಲ್ಲಿನಿಂದ ನಿರ್ಮಿಸಲಾಗಿದೆ. ದೇವಾಲಯಕ್ಕೂ ಕೆಂಪು ಕಲ್ಲು ಬಳಸಲಾಗಿದೆ. ಪ್ರಾಯಃ ಅದಕ್ಕಾಗಿ ಈ ಊರಿಗೆ ಮತ್ತು ದೇವಾಲಯಕ್ಕೆ ಕೆಂಗಲ್ ದೇವರು ಎಂದು ಹೆಸರು ಬಂದಿರಬೇಕು. ಈ ಮೂರ್ತಿಯನ್ನೂ ಮಾಧ್ವ ಯತಿಗಳಾದ ವ್ಯಾಸರಾಯರು ಪ್ರತಿಷ್ಠಾಪಿಸಿದರೆಂದು ತಿಳಿದುಬರುತ್ತದೆ. ಈ ದೇವಾಲಯದಲ್ಲಿ ರಾಮ, ಲಕ್ಷ್ಮಣ ಹಾಗೂ ಸೀತಾದೇವಿಯರ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಮುಂದೆ ಒಂದು ಸುಂದರವಾದ ಉದ್ಯಾನವಿದೆ. ಇಲ್ಲಿನ ಒಂದು ಕುತೂಹಲದ ಸಂಗತಿಯೆಂದರೆ ಕೆರೆಯನ್ನು ಹನುಮಂತನ ಗದೆಯ ಆಕಾರದಲ್ಲಿ ಕಟ್ಟಿರುವುದು. ಯಾತ್ರಿಗಳಿಗೆ ತಂಗಲು ಇಲ್ಲಿ ಕೊಠಡಿ ವ್ಯವಸ್ಥೆಯಿದೆ, ಕಲ್ಯಾಣಮಂಟಪವಿದೆ. ಪ್ರತಿ ವರ್ಷ ಇಲ್ಲಿ ದೊಡ್ಡ ಪ್ರಮಾಣದಲ್ಲಿ ದನಗಳ ಜಾತ್ರೆ ನಡೆಯುತ್ತದೆ. ಇಲ್ಲೊಂದು ಸರ್ಕಾರಿ ನೆಡುತೋಪು ಇದೆ. (ಎಸ್.ಜಿವಿ.)

**ಕೆಂಚನಗುಡ್ಡ:** ಬಳ್ಳಾರಿ ಜಿಲ್ಲೆ ಸಿರಗುಪ್ಪ ತಾಲ್ಲೂಕಿನ ಒಂದು ಗ್ರಾಮ. ತುಂಗಭದ್ರಾ ನದಿ ದಂಡೆಯ ಮೇಲೆ ಸಿರಗುಪ್ಪದ ನೈಋತ್ಯಕ್ಕೆ 5ಕಿಮೀ ದೂರದಲ್ಲಿದೆ. ಇಲ್ಲಿನ ಗುಡ್ಡದ ಮೇಲೆ ಮತ್ತು ಕೆಳಗೆ ಎರಡು ಕೋಟೆಗಳಿವೆ. ಮೊದಲು ಕೆಳಗಿನ ಕೋಟೆಯಲ್ಲಿ ಜನ ವಾಸಿಸುತ್ತಿದ್ದರು. ಅನಂತರ ಈ ಗ್ರಾಮದಲ್ಲಿ ನೆಲೆಸಿದರು. ಸ್ಥಳೀಯ ಅಧಿಪತಿ ಕೆಂಚನಗೌಡ ಎಂಬುವನು ಗುಡ್ಡದ ಮೇಲೆ ಕೋಟೆ ಕಟ್ಟಿದ್ದರಿಂದ ಅದಕ್ಕೆ ಕೆಂಚನಗುಡ್ಡ ಎಂಬ ಹೆಸರು ಬಂತು. ಈ ಗುಡ್ಡದ ಬುಡದಲ್ಲಿ ಗಂಗಾಧರ ದೇವಾಲಯವಿದೆ.

ಇಲ್ಲಿನ 1708ರ ಶಾಸನ ಒಂದರಲ್ಲಿ ಕೆಂಚನಗೌಡನ ವಂಶಾವಳಿ ಇದೆ. ಇವನ ಮನೆತನದವರು ಸಿರಗುಪ್ಪದ ಮುಖ್ಯಸ್ಥರಾಗಿದ್ದರು. ಕೆಂಚನಗೌಡ ಮೇಲಿನ ಕೋಟೆ ಮತ್ತು ದೇವಾಲಯವನ್ನು ಕಟ್ಟಿಸಿದ. ಕೆಂಚನಗೌಡನಿಗೆ ಮೂರು ಮಕ್ಕಳಿದ್ದು ಅವರಲ್ಲಿ ವಿರೂಪಾಕ್ಷ ಎಂಬವನನ್ನು ತಂದೆಯ ಉತ್ತರಾಧಿಕಾರಿಯಾದ ಎಂಬ ವಿಷಯವಿದೆ. ಕೆಂಚನಗೌಡನ ಮೂರು ಮಂದಿ ಗಂಡುಮಕ್ಕಳಲ್ಲಿ ಪಂಪಾವತಿ ಎಂಬುವನ ಮರಣದ

ಅನಂತರ ಆತನ ಹೆಂಡತಿ ತಂಗವ್ಮ್ಮ ಗದ್ದುಗೆಯೇರಿದಳೆಂದೂ ಅವಳ ಇಬ್ಬರು ಮಕ್ಕಳನ್ನು ಟಿಪ್ಪು ಸೆರೆಹಿಡಿದು ಒಬ್ಬನನ್ನು ಕೊಂದು ಇನ್ನೊಬ್ಬನನ್ನು ಮತಾಂತರಗೊಳಿಸಿದನೆಂದೂ ಮುಸ್ಲಿಂ ಮತ ಸ್ವೀಕರಿಸಿದ ತನ್ನ ಮಗ ರಾಜ್ಯಕ್ಕೆ ಉತ್ತರಾಧಿಕಾರಿಯಾಗಬಾರದೆಂಬ ಉದ್ದೇಶದಿಂದ ತಂಗಮ್ಮ ಬ್ರಿಟಿಷರಿಗೆ ರಾಜ್ಯವನ್ನು ವಹಿಸಿಕೊಟ್ಟು ಜೀವಾವಧಿ ನಿವೃತ್ತಿ ವೇತನ ಪಡೆದಳೆಂದೂ ಸ್ಥಳೀಯರ ಹೇಳಿಕೆ. ಕೆಂಚನಗುಡ್ಡ ಪಾಳೆಯಪಟ್ಟು ಹರಿಪಂತ್ ಎಂಬುವನ ಮಗನ ಹೆಸರಿನಲ್ಲಿ ಮರಾಠನೊಬ್ಬನ ಅಧೀನದಲ್ಲಿತ್ತು. ಆದರೆ 1792ರ ಇಂಗ್ಲಿಷರ ಮತ್ತು ಟಿಪ್ಪುಸುಲ್ತಾನರ ಸಂಧಿಯಲ್ಲಿ ಇದರ ಬಗ್ಗೆ ಪ್ರಸ್ತಾಪವಿರಲಿಲ್ಲ. ಟಿಪ್ಪು ಈ ಭಾಗವನ್ನು ಹರಿಪಂತನ ಸೇವೆಯಲ್ಲಿದ್ದ ನರಹರಿಶಾಸ್ತ್ರಿ ಎಂಬುವನಿಗೆ ಅವನ ಯಾವುದೋ ಉಪಕಾರಕ್ಕಾಗಿ ಬಿಟ್ಟುಕೊಟ್ಟಿದ್ದ. ಮುಂದೆ ಅಲ್ಲಿಯ ದೇಶಾಯಿಣಿ ತಂಗಮ್ಮ ಪಾಳೆಯಪಟ್ಟನ್ನು ಹಿಡಿದಿದ್ದಳು. ಕಂಪನಿಯ ಸೂಚನೆಯಂತೆ ಮನ್ರೋ ಆ ಜಾಗೀರನ್ನು ವಶಪಡಿಸಿಕೊಂಡ ಎಂದು ಬ್ರಿಟಿಷ್ ದಾಖಲೆಗಳು ತಿಳಿಸುತ್ತವೆ.

ಕೆಂಚನಗುಡ್ಡದಲ್ಲಿ ಸಿದ್ಧಮಲ್ಲಯ್ಯ ಎಂಬ ಸಂತರ ಗುಹೆ ಇದೆ. ಇದರ ಹತ್ತಿರ ಒಂದು ಕನ್ನಡ ಶಾಸನವಿದೆ. ರಾಘವೇಂದ್ರರ ಶಿಷ್ಯರೊಬ್ಬರ ಬೃಂದಾವನವೂ ಇಲ್ಲಿದೆ. *

**ಕೆಂಪರಾಜ ಅರಸು, ಡಿ. :** -1982. ಹಿರಿಯ ತಲೆಮಾರಿನ ಚಲನಚಿತ್ರ ನಿರ್ಮಾಪಕ ಮತ್ತು ನಟ. ಗುಬ್ಬಿ ಫಿಲ್ಮ್ ಕಂಪನಿ ತಯಾರಿಸಿದ ಜೀವನನಾಟಕ ಚಿತ್ರದ ಮೂಲಕ ಬೆಳ್ಳಿತೆರೆ ಪ್ರವೇಶಿಸಿದರು (1942). ಅನಂತರ ಕೃಷ್ಣಾಲೀಲಾ (1947), ಭಕ್ತರಾಮದಾಸ (1948) ಚಿತ್ರಗಳಲ್ಲಿ ಅಭಿನಯಿಸಿದರು. ಕೆಂಪರಾಜ ಪ್ರೊಡಕ್ಷನ್ಸ್ ಲಾಂಛನದಲ್ಲಿ ತಾವೇ ಮೂರು ಚಿತ್ರಗಳನ್ನು ನಿರ್ಮಿಸಿದರು. ಈ ಚಿತ್ರಗಳಲ್ಲಿ ಬಹು ತಾರಾಗಣ ವಿರುತ್ತಿತ್ತು. ಇವರು ಅಂದಿನ ದಿನಗಳಲ್ಲಿ ಅದ್ದೂರಿ ಸಿನಿಮಾ ನಿರ್ಮಾಪಕರೆಂದು ಹೆಸರುಗಳಿಸಿದ್ದರು.



1954ರಲ್ಲಿ ಶನಿಮಹಾರಾಜನ ಕತೆಯುಳ್ಳ ರಾಜಾವಿಕ್ರಮ ಎಂಬ ಚಿತ್ರವನ್ನು ನಿರ್ಮಿಸಿದರು. ಈ ಚಿತ್ರ ಗಳಿಕೆಯಲ್ಲಿ ವಿಕ್ರಮ ಸಾಧಿಸಿತು. ಅನಂತರ ಅದೇವರ್ಷ ಕೌಂಟ್ ಆಫ್ ಮಾಂಟೆ ಕ್ರಿಸ್ಟೊ ಎಂಬ ಫ್ರೆಂಚ್ ಕಥೆಯನ್ನು ಆಧರಿಸಿ ಜಲದುರ್ಗ ಎಂಬ ಚಿತ್ರ ನಿರ್ಮಿಸಿದರು. ಆದರೆ ಈ ಚಿತ್ರ ಗಲ್ಲಾಪೆಟ್ಟಿಗೆಯಲ್ಲಿ ಯಶಸ್ವಿಯಾಗಲಿಲ್ಲ. 1957ರ ವರೆಗೆ ಇವರಿಗೆ ಚಲನಚಿತ್ರಗಳಲ್ಲಿ ಯಾವ ಅವಕಾಶಗಳೂ ದೊರೆಯಲಿಲ್ಲ. ಪುನಃ ತಮ್ಮ ಸ್ವಂತ ಲಾಂಛನದಲ್ಲಿ ನಳದಮಯಂತಿ ಚಿತ್ರವನ್ನು ಕನ್ನಡ, ತೆಲುಗು ಭಾಷೆಗಳೆರಡರಲ್ಲೂ ನಿರ್ಮಿಸಿದರು (1957). ನಳನ ಪಾತ್ರವನ್ನು ತಾವೇ ನಿರ್ವಹಿಸಿದರು. ಚಿತ್ರದ ಹಾಡುಗಳನ್ನೂ ಇವರೇ ರಚಿಸಿದರು. ತೆಲುಗು ಚಿತ್ರರಂಗದ ಹೆಸರಾಂತ ತಾರೆ ಭಾನುಮತಿ ಈ ಚಿತ್ರದಲ್ಲಿ ದಮಯಂತಿ ಪಾತ್ರವಹಿಸಿದ್ದರು.

ಇವರು ಕರ್ನಾಟಕ ಚಲನಚಿತ್ರ ಅಭಿವೃದ್ಧಿ ನಿಗಮದ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದರು (1978). ಭಾರತೀಯ ವಾಕ್ಚಿತ್ರದ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಕರ್ನಾಟಕ ಚಲನಚಿತ್ರ ವಾಣಿಜ್ಯ ಸಂಸ್ಥೆ ಪ್ರಕಟಿಸಿದ ಸ್ಮರಣಸಂಚಿಕೆಯಲ್ಲಿ (1981) ಇವರು ತಮ್ಮ ಕಾಲದ ಚಲನಚಿತ್ರರಂಗದ ಅನುಭವಗಳನ್ನು ದಾಖಲಿಸಿದ್ದಾರೆ. ಮಾಜಿ ಮುಖ್ಯಮಂತ್ರಿ ಡಿ.ದೇವರಾಜ ಅರಸರು ಇವರ ಸಹೋದರರು. ಪ್ರಯೋಗಶೀಲರೂ ಸಾಹಸಿ ಚಿತ್ರೋದ್ಯಮಿಯೂ ಆಗಿದ್ದ ಇವರು 1982 ಮೇ 18ರಂದು ನಿಧನಹೊಂದಿದರು. (ಜಿ.ಎಂಯು.)

**ಕೆಂಪಣ್ಣಗೌಡ :** ಸು.1480. ಕನ್ನಡದ ಮೊದಲ ಯಕ್ಷಗಾನ ಕವಿ. ಕರಿರಾಯ ಚರಿತ್ರೆ, ನಳಚರಿತ್ರೆ, ಶನಿಚರಿತ್ರೆ ಎಂಬ ಯಕ್ಷಗಾನ ಕಾವ್ಯಗಳನ್ನು ಬರೆದಿದ್ದಾನೆ. ತಾನು ಅಂದೇನಪುರದ ಓದೋ ಕೆಂಪಯ್ಯನ ಮಗ ಎಂದು ಹೇಳಿಕೊಂಡಿದ್ದಾನೆ. ಈ ಅಂದೇನಪುರ ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನಲ್ಲಿ ಲೋಕಪಾವನಿ ನದಿಯ ದಡದಲ್ಲಿರುವ ಈಗಿನ ಅಂದೇನಹಳ್ಳಿ. ಇವನ ತಾತ ಜೀರಿಗೆ ಕೆಂಪಯ್ಯ. ನಳಚರಿತ್ರೆಯ ಕೊನೆಯಲ್ಲಿ ದುರ್ಮತಿ ಸಂವತ್ಸರದ ಜೇಷ್ಠ ಬಹುಳ ಬುಧವಾರ ಮಧ್ಯಾಹ್ನದ ಕಾಲದ ಒಳಗೆ ಸಂಪೂರ್ಣಂ ಎಂದು ಹಸ್ತಪ್ರತಿಕಾರನೊಬ್ಬ ಹೇಳಿದ್ದಾನೆ. ಇದು 1480ಕ್ಕೆ ಸರಿಹೋಗುತ್ತದೆ. ಆದ್ದರಿಂದ ಕೆಂಪಣ್ಣಗೌಡ 15ನೇಯ ಶತಮಾನದ ಉತ್ತರಾರ್ಧದವನಾಗಿರಬೇಕು. ಇವನ ಕಾವ್ಯಗಳು ಆ ಹೊತ್ತಿಗೆ ಸಾಕಷ್ಟು ಪ್ರಸಿದ್ಧಿ ಪಡೆದಿದ್ದಿರಬೇಕು. ಇವನ ತಂದೆಯ ಹೆಸರು ಓದೋ ಕೆಂಪಯ್ಯ ಎಂದಿರುವುದರಿಂದ ಆತ ಕಾವ್ಯಗಳನ್ನು ಓದುವ ಗಮಕಿಯಾಗಿದ್ದಿರಬಹುದೆಂದು ಊಹಿಸಬಹುದು. ಕರಿರಾಯಚರಿತ್ರೆಯಲ್ಲಿ ಕೆಂಪಣ್ಣಗೌಡ ತನ್ನ ಬಗ್ಗೆ ಹೀಗೆ ಹೇಳಿಕೊಂಡಿದ್ದಾನೆ:

ಸೂಕ್ಷ್ಮದೊಳೀಕೃತಿ ಸುಲಭವಾಗಿರಲು
ಯಕ್ಷಗಾನವನು ಮಾಡಿದವರಾರೆನಲು

ಸವುಭಾಗ್ಯ ಸಕಲ ಗುಣ ಸಂಪನ್ನ
ಸುವಿವೇಕಿ ಕೆಂಪಯ್ಯನಾತನರ್ಧಾಂಗಿ

ಲಲನಾರತುನವೆಂಬ ತಿಮ್ಮಮಾಂಬ
ಸಲೆಗರ್ಭಾಬ್ಧಿ ಚಂದ್ರ ನೆರೆ ಜಾಣ

ಸುವಿವೇಕಿ ಕೆಂಪಣ್ಣಗೌಡನೀ ಕಥೆಯ
ಸವಿವರದೊಳು ಪೇಳಿದನು ತಾನು

ಸಕಲಕವಿಗಳಿಗೆ ಸಾಷ್ಟಾಂಗವೆರಗಿ
ಅಕಲಂಕ ಕನ್ನಡದಿ ಪೇಳಿದನು ಬಿನ್ನಾಣದಿಂದ

- ಮೇಲಿನ ಈ ಪದ್ಯ ಇವನ ಮೂರು ಕಾವ್ಯಗಳಲ್ಲೂ ಸಿಗುತ್ತದೆ.

ಈತ ರಚಿಸಿದ ಕರಿರಾಯಚರಿತ್ರೆ, ನಳಚರಿತ್ರೆ ಮತ್ತು ಶನಿಚರಿತ್ರೆ ಈ ಮೂರೂ ಕಾವ್ಯಗಳನ್ನು ಬಿಟ್ಟರೆ ಕನ್ನಡದಲ್ಲಿ ಮತ್ತಾವ ಯಕ್ಷಗಾನ ಕಾವ್ಯಗಳೂ ದೊರೆತಿಲ್ಲ. ಕರಿಭಂಟನ ಕಾಳಗ, ಯಕ್ಷಗಾನ ಪ್ರಸಂಗ ಬರೆದವನೆಂದೂ ಹದಿನೇಳನೆಯ ಶತಮಾನದಲ್ಲಿದ್ದವನೆಂದೂ ಕೆಂಪಣ್ಣಗೌಡನನ್ನು ಮೊದಲು ಗುರುತಿಸಲಾಗಿತ್ತು. ಆದರೆ ಕರಿರಾಯಚರಿತ್ರೆ, ನಳಚರಿತ್ರೆ, ಶನಿಚರಿತ್ರೆಗಳ ಮೂಲ ಓಲೆಯ ಪ್ರತಿಗಳು ಈ ಕಾವ್ಯಗಳು ನಮ್ಮ ಪ್ರಾಚೀನ ಶಿಷ್ಟಕಾವ್ಯ ಸಂಪ್ರದಾಯದ ಚಂಪೂ ರೀತಿಯ ದೇಶೀಯ ಕಾವ್ಯಗಳು ಎಂಬುದಕ್ಕೆ ಸಾಕ್ಷಿಯಾದವು. ಹಳಗನ್ನಡದ ಚಂಪೂವಿನಂತೆ ಇಲ್ಲಿಯೂ ಪದ್ಯಗಳ ಅನಂತರ ಗದ್ಯ ವಿವರಣೆ ಬರುತ್ತದೆ. ಈ ಗದ್ಯ ಭಾಗ ಯಕ್ಷಗಾನ ಪ್ರಸಂಗಗಳಲ್ಲಿ ಬರುವಂತಹ ಪಾತ್ರಗಳು ಆಡುವ ಮಾತುಗಳಲ್ಲ; ಇದೊಂದು ಕಾವ್ಯ ಸಂಪ್ರದಾಯವೇ ಆಗಿದೆ. ಈ ಮೂರೂ ಕಾವ್ಯಗಳನ್ನು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಒಂದೇ ಸಂಪುಟದಲ್ಲಿ ಮುದ್ರಿಸಿ ಪ್ರಕಟಿಸಿದೆ. ಅಂದೇನಹಳ್ಳಿಯಲ್ಲಿ ಈಗಲೂ ಈತನ ವಂಶಸ್ಥರಿದ್ದಾರೆಂದು ತಿಳಿದುಬರುತ್ತದೆ. (ಎಚ್.ಕೆ.ಆರ್.ಜಿ.)

**ಕೆಂಪುನಾರಾಯಣ :** 19ನೆಯ ಶತಮಾನದ ಆದಿಭಾಗದಲ್ಲಿದ್ದ ಬ್ರಾಹ್ಮಣ ಕವಿ. ಮುದ್ರಾಮಂಜೂಷವು ಎಂಬ ಗದ್ಯಗ್ರಂಥದ ಕರ್ತೃ. ಈತ ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನಕವಿಯಾಗಿದ್ದ. ಮೂಲ ಹೆಸರು ನಾರಾಯಣಶರ್ಮ. ಕವಿಯಾಗಿ ಕೆಂಪುನಾರಾಯಣನೆಂದು ಪ್ರಸಿದ್ಧ.

ಮುದ್ರಾಮಂಜೂಷ ಗ್ರಂಥ'ದ ರಚನೆಯ ಕಾಲ 1823. ರಾಜತಂತ್ರನಿಪುಣನಾದ ಚಾಣಕ್ಯನೆಂಬ ಬ್ರಾಹ್ಮಣ ತನ್ನನ್ನು ಅವಮಾನಗೊಳಿಸಿದ ನವನಂದರನ್ನು ಕೊಂದು, ಚಂದ್ರಗುಪ್ತ ಮೌರ್ಯನನ್ನು ಮಗಧ ರಾಜ್ಯದ ಚಕ್ರವರ್ತಿಯಾಗಿ ಮಾಡಿದ ವಿಷಯ ಇದರ ಕಥಾವಸ್ತು. ವಿಶಾಖದತ್ತನ ಮುದ್ರಾರಾಕ್ಷಸ ಈ ಗ್ರಂಥರಚನೆಗೆ ಪ್ರಮುಖ ಆಧಾರ. ಮಹಾಭಾರತ, ಕ್ಷೇಮೇಂದ್ರನ ಬೃಹತ್ಕಥೆ, ಮಹದೇವನ ಮುದ್ರಾರಾಕ್ಷಸ ನಾಟಕ ಕಥಾ, ರವಿನರ್ತಕನ ಮುದ್ರಾರಾಕ್ಷಸ ಕಥಾಸಾರ ಮುಂತಾದ ಕೆಲವು ಗ್ರಂಥ'ಗಳಿಂದಲೂ ಈತ ನೆರವು ಪಡೆದಿದ್ದಾನೆ. ಆದರೂ ಈ ಕೃತಿ

ಭಾಷಾಂತರವಲ್ಲ, ಸ್ವತಂತ್ರ ಸೃಷ್ಟಿ. ಕಥೆಯಲ್ಲಿ ಕೆಲವು ಸ್ವತಂತ್ರ ಕಲ್ಪನೆಗಳನ್ನು ಸೇರಿಸಿದ್ದಾನೆ. ಮೂಲದಲ್ಲಿಯ ಕೆಲವನ್ನು ಬಿಟ್ಟಿದ್ದಾನೆ, ಮಾರ್ಪಾಟು ಮಾಡಿಕೊಂಡಿದ್ದಾನೆ. ವರ್ಣನೆಗಳಲ್ಲಿ ನೀತಿನಿರೂಪಣೆಗಳಲ್ಲಿ ಕವಿ ಬಾಣನ ಕಾದಂಬರಿಗೆ, ಶುಕ್ರನೀತಿ, ಕಾಮಂದಕ, ನೀತಿಸಾರಗಳಿಗೆ ಋಣಿಯಾಗಿದ್ದಾನೆ. ಇವನ ಗ್ರಂಥದ ಪೂರ್ವಾರ್ಧದ ಮೊದಲ ಭಾಗಗಳಲ್ಲಿ ಭರ್ತೃಹರಿಯ ನೀತಿಶತಕದಿಂದ, ಇತರ ಸುಭಾಷಿತ ಗ್ರಂಥಗಳಿಂದ ಆಯ್ದ ಕೆಲವು ಸಂಸ್ಕೃತ ಶ್ಲೋಕಗಳಿವೆ.

ಮುದ್ರಾಮಂಜೂಷದ ಪ್ರಧಾನ ರಸ ವೀರ. ಶೃಂಗಾರಕ್ಕೆ ಇಲ್ಲಿ ಎಡೆ ಇಲ್ಲ. ಅಲ್ಲಲ್ಲಿ ತಿಳಿಹಾಸ್ಯ ಮಿಂಚುತ್ತದೆ. ಕವಿಗೆ ವಾಚಕರ ಆಸಕ್ತಿ ಎಲ್ಲಿಯೂ ಕುಗ್ಗದಂತೆ ಕಥೆ ಹೇಳುವ ಜಾಣ್ಮೆಯಿದೆ. ಭಾಷಾಶೈಲಿ ಏಕರೂಪವಾಗಿಲ್ಲ. ಸಂಧಿಕಾಲದ ವಿಷಮತೆಯನ್ನೊಳಗೊಂಡಿದೆ. ಗದ್ಯ ಪ್ರೌಢವಾಗಿದ್ದರೂ ಲಲಿತವಾಗಿದೆ, ಜೀವಪೂರ್ಣವಾಗಿದ್ದು ಶಕ್ತಿಯುತವಾಗಿದೆ. ಸಂಸ್ಕೃತ ಭೂಯಿಷ್ಠವಾಗಿದ್ದರೂ ಸರಳವಾಗಿದೆ. ಕನ್ನಡದ ಗದ್ಯಸಾಹಿತ್ಯದ ಬೆಳವಣಿಗೆಯಲ್ಲಿ ಕೃತಿ ಒಂದು ವಿಶಿಷ್ಟ ಘಟ್ಟವನ್ನು ನಿರೂಪಿಸುತ್ತದೆ. ಗದ್ಯಗ್ರಂಥಗಳ ಸಾಲಿನಲ್ಲಿ ಈ ಕೃತಿಗೆ ಒಂದು ಮಹತ್ತ್ವದ ಸ್ಥಾನ ದೊರಕಿದೆ. (ಎಚ್.ಎಂ.ಎಸ್.)

**ಕೆಂಪೇಗೌಡ I :** ಯಲಹಂಕ ಪಾಳೆಯಗಾರ ವಂಶದ ಪ್ರಭು (ಸು.1513-69). ಬೆಂಗಳೂರನ್ನು ಸ್ಥಾಪಿಸಿ ಅಲ್ಲೇ ನೆಲಸಿದ್ದರಿಂದ ಬೆಂಗಳೂರು ಕೆಂಪೇಗೌಡ ಎಂದು ಪ್ರಸಿದ್ಧನಾಗಿದ್ದಾನೆ.

ಆವತಿ ವಂಶಕ್ಕೆ ಸೇರಿದ್ದ ಈತ ವಿಜಯನಗರದ ಕೃಷ್ಣದೇವರಾಯ ಮತ್ತು ಅಚ್ಯುತರಾಯರ ಸಾಮಂತನಾಗಿ ಯಲಹಂಕನಾಡನ್ನು ಆಳುತ್ತಿದ್ದ. ಒಮ್ಮೆ ತನ್ನ ಪ್ರವಾಸಕಾಲದಲ್ಲಿ ಶಿವನಸಮುದ್ರಂ (ಈಗಿನ ಬೆಂಗಳೂರು ಪ್ರದೇಶ) ಕೋಟೆಯ ರಚನೆಗೆ ಅನುಕೂಲವಾಗಿರುವುದನ್ನು ಕಂಡು ಅಚ್ಯುತರಾಯನ ಅನುಮತಿಯಿಂದ ಅಲ್ಲೊಂದು ದುರ್ಗ ನಿರ್ಮಾಣಮಾಡಿ ಬೆಂಗಳೂರು ಎಂದು ಕರೆದು ತನ್ನ ರಾಜಧಾನಿಯಾಗಿ ಮಾಡಿಕೊಂಡ (ಆದರೆ ಬೆಂಗಳೂರು ಇದಕ್ಕೂ ಮುಂಚಿನಿಂದಲೂ ಇತ್ತೆಂದೂ ಕೆಂಪೇಗೌಡ ಅಲ್ಲಿ ಕೋಟೆ ಕಟ್ಟಿರಬೇಕು ಎಂದೂ ಊಹಿಸಲು ಆಧಾರಗಳಿವೆ). ಇದೇ ಸಂದರ್ಭದಲ್ಲಿ ಅಚ್ಯುತರಾಯ 30,000 ವರಹ ಆದಾಯವಿದ್ದ ಹಳೆ ಬೆಂಗಳೂರು, ವರ್ತೂರು, ಬೇಗೂರು, ಹಲಸೂರು, ಕೆಂಗೇರಿ, ತಲಘಟ್ಟಪುರ, ಜಿಗಣಿ, ಕುಂಬಳಗೋಡು, ಕಾನಳ್ಳಿ, ಬಾಣಾವರ, ಹೆಸರಘಟ್ಟ ಮುಂತಾದ 12 ಹೋಬಳಿಗಳನ್ನು (ಬೆಂಗಳೂರಿನ ಸುತ್ತಣ ಪ್ರದೇಶ) ಕೆಂಪೇಗೌಡನಿಗೆ ಕೊಟ್ಟ. ಈತ ಈ ಆದಾಯವನ್ನು ಉಪಯೋಗಿಸಿಕೊಂಡು ಬೆಂಗಳೂರನ್ನು ವಿಸ್ತರಿಸಿ, ಪೇಟೆಗಳನ್ನು ಸ್ಥಾಪಿಸಿ, ವ್ಯಾಪಾರಿಗಳನ್ನೂ ಕುಶಲಕರ್ಮಿಗಳನ್ನೂ ನೆಲೆಗೊಳಿಸಿದ. ಬೆಂಗಳೂರು ಕೋಟೆಯನ್ನು ಕಟ್ಟುವ ಸಂದರ್ಭದಲ್ಲಿ ಕೆಂಪೇಗೌಡನ ಸೊಸೆ ಲಕ್ಷ್ಮಮ್ಮ ತಾನೇ ಬಲಿಯಾದಳೆಂಬ ಪ್ರತೀತಿ ಇದೆ. ಕೆಂಪೇಗೌಡ ಅವಳ ಜ್ಞಾಪಕಾರ್ಥವಾಗಿ ಕೋರಮಂಗಲದಲ್ಲಿ ಒಂದು ದೇವಾಲಯವನ್ನು ಸ್ಥಾಪಿಸಿ ಅವಳ ಮೂರ್ತಿಯನ್ನು ಪ್ರತಿಷ್ಠಾಪಿಸಿದ. ಆ ನಗರದ ಬೆಳವಣಿಗೆಯ ಭವಿಷ್ಯ ಸೂಚಕವೆಂಬಂತೆ ಬೆಂಗಳೂರಿನ ನಾಲ್ಕು ದಿಕ್ಕುಗಳಲ್ಲಿ, ಪೂರ್ವದಲ್ಲಿ ಅಲಸೂರು ಕೆರೆಯ ಏರಿಯ ಮೇಲಿನ ಬಂಡೆಯ ಮೇಲೆ, ಪಶ್ಚಿಮದಲ್ಲಿ ಕೆಂಪಾಂಬುಧಿ ಕೆರೆಯ ಏರಿಯ ಬಂಡೆಯ ಮೇಲೆ, ಉತ್ತರದಲ್ಲಿ ಹೆಬ್ಬಾಳದ ರಸ್ತೆಯಲ್ಲಿ ಮತ್ತು ದಕ್ಷಿಣದಲ್ಲಿ ಲಾಲ್‌ಬಾಗಿನ ಎತ್ತರವಾದ ಬಂಡೆಯ ಮೇಲೆ ಒಂದೊಂದು ಕಾವಲು ಗೋಪುರಗಳನ್ನು ನಿರ್ಮಿಸಿದ.

1550ರಲ್ಲಿ ಇವನು ಶಿವಗಂಗೆ ಬೆಟ್ಟವನ್ನು ಆಕ್ರಮಿಸಿಕೊಂಡ. ಇವನ ಏಳಿಗೆ ಕೀರ್ತಿಗಳಿಂದ ಹಲವು ಸಾಮಂತರಿಗೆ ಅಸೂಯೆ ಉಂಟಾಯಿತು. ಇವರಲ್ಲಿ ಜಗದೇವರಾಯ ಎಂಬುವನು ಕೆಂಪೇಗೌಡನನ್ನು ತುಳಿಯಲು ಪಿತೂರಿ ಮಾಡಿದ. ವಿಜಯನಗರದ ಅರಸರಿಗೂ ಕೆಂಪೇಗೌಡನಿಗೂ ಇದ್ದ ಸ್ನೇಹವನ್ನು ಮುರಿಯಲೂ ಪ್ರಯತ್ನಿಸಿದ. ಕೆಂಪೇಗೌಡ ಜಗದೇವರಾಯನ ಪ್ರಲೋಭನಕ್ಕೆ ಒಳಗಾಗದೆ ವಿಜಯನಗರದ ಅರಸುಗಳ ಬಗ್ಗೆ ತನಗಿದ್ದ ರಾಜಭಕ್ತಿ ಅಚಲವಾದುದೆಂದು ತೋರಿಸಿದ. ಇದರಿಂದ ಕುಪಿತನಾದ ಜಗದೇವರಾಯ ವಿಜಯನಗರದ ರಾಮರಾಯ ರಾಜಧಾನಿಯಲ್ಲಿಲ್ಲದ ಕಾಲದಲ್ಲಿ ಅಲ್ಲಿಗೆ ಬಂದ ಕೆಂಪೇಗೌಡನನ್ನೂ ಅವನ ಸಂಗಡಿಗರನ್ನೂ ಸೆರೆಮನೆ ಸೇರುವಂತೆ ಮಾಡಿದ. ಜಗದೇವರಾಯನ ಮಾತನ್ನು ನಂಬಿದ ಸದಾಶಿವರಾಯ, ಯಲಹಂಕನಾಡನ್ನು ಜಗದೇವರಾಯನಿಗೆ ಕೊಟ್ಟ. 5 ವರ್ಷಗಳ ಕಾಲ ಕೆಂಪೇಗೌಡ ಸೆರೆಮನೆವಾಸವನ್ನನುಭವಿಸ ಬೇಕಾಯಿತು. ರಾಜಧಾನಿಗೆ ಹಿಂದಿರುಗಿದ ಅನಂತರ, ನಿಜಸ್ಥಿತಿಯನ್ನರಿತ ರಾಮರಾಯ ಕೆಂಪೇಗೌಡನನ್ನು ಬಿಡುಗಡೆ ಮಾಡಿ ಬೆಂಗಳೂರನ್ನು ಮತ್ತೆ ಅವನಿಗೆ ಕೊಟ್ಟು ಗೌರವಿಸಿ ಕಳುಹಿಸಿದ. ಕೆಂಪೇಗೌಡ ಪ್ರಜಾಪೋಷಕನಾಗಿ, ಧರ್ಮಪ್ರಭುವಾಗಿ ರಾಜ್ಯವಾಳಿ, ಪ್ರಜಾವತ್ಸಲ, ಅರಿಗಳಿಗೆ ಗಂಡಭೇರುಂಡ ಎಂಬ ಬಿರುದುಗಳನ್ನು ಪಡೆದ. ಈತ 1569ರಲ್ಲಿ ಕಾಲವಾದ.



ಶಿವಗಂಗೆಯ ಗಂಗಾಧರ ದೇವಾಲಯದಲ್ಲಿರುವ ಕೆಂಪೇಗೌಡನ ಕಂಚಿನ ಪ್ರತಿಮೆ

ಕೆಂಪೇಗೌಡ ಧರ್ಮಿಷ್ಠ. ಕುಲದೈವ ಭೈರವನಾದರೂ ಇವನ ಒಲುಮೆ ಶೈವಧರ್ಮದೆಡೆಗಿದ್ದಂತೆ ತೋರುತ್ತದೆ. ಈತ ಅನೇಕ ಜನಹಿತಕಾರ್ಯಗಳನ್ನು ಮಾಡಿದ. ತನ್ನ ಕುಲದಲ್ಲಿ ವಿವಾಹವಯಸ್ಕರಾದ ಕನ್ಯೆಯರ ಬೆರಳುಗಳನ್ನು

ಕತ್ತರಿಸುವ ಕ್ರೂರ ಸಂಪ್ರದಾಯವನ್ನು ನಿಲ್ಲಿಸಿದ. ತಾನು ಸ್ಥಾಪಿಸಿದ ಬೆಂಗಳೂರಿನ ಬಳಿಯಲ್ಲಿ ಕೆಂಪಾಂಬುಧಿ ಕೆರೆಯನ್ನಲ್ಲದೆ ಸಮೀಪದಲ್ಲಿ ಹಲವು ಅಗ್ರಹಾರಗಳನ್ನೂ ದೇವಾಲಯಗಳನ್ನೂ ನಿರ್ಮಿಸಿದ. ಬೆಂಗಳೂರಿನ ಗವಿಪುರದಲ್ಲಿರುವ ಗವಿ ಗಂಗಾಧರೇಶ್ವರ ದೇವಾಲಯ, ಬಸವನ ಗುಡಿಯಲ್ಲಿರುವ 11 ಅಡಿ ಎತ್ತರದ ವೃಷಭವಿರುವ ದೊಡ್ಡ ಬಸವಣ್ಣನ ಗುಡಿ, ಅದರ ಸಮೀಪದ ಗಣಪತಿ, ಆಂಜನೇಯ, ನಂದೀಶ್ವರ ಮತ್ತು ಮಲ್ಲಿಕಾರ್ಜುನ ದೇವಾಲಯ ಇವು ಈತನ ಕಾಲದ ರಚನೆಗಳು. ಇಷ್ಟೇ ಅಲ್ಲದೆ ಅಲಸೂರಿನ ಸೋಮೇಶ್ವರ ದೇವಾಲಯದ ಜೀರ್ಣೋದ್ಧಾರ ಮಾಡಿಸಿದ (ಬೆಂಗಳೂರಿನಲ್ಲಿ ಕೇಶವ ದೇವಾಲಯವೊಂದನ್ನು ಕಟ್ಟಿಸಿದ್ದನೆಂಬ ಪ್ರತೀತಿ ಇದೆ. ಇದು ಈಗ ಉಳಿದಿಲ್ಲ). ಮಾಗಡಿಯಲ್ಲೂ ದೇವಾಲಯಗಳ ಜೀರ್ಣೋದ್ಧಾರ ಮಾಡಿರುವನಲ್ಲದೆ ಅಲ್ಲಿ ಛತ್ರಗಳನ್ನು ಕಟ್ಟಿಸಿದ. ಕೆಂಪೇಗೌಡ ಒಂದು ಟಂಕಸಾಲೆಯನ್ನು ಸ್ಥಾಪಿಸಿ ಭೈರವ ನಾಣ್ಯಗಳನ್ನು ಟಂಕಿಸಿದ. *

**ಕೆಂಪೇಗೌಡ II :** ಯಲಹಂಕ ಪಾಳೆಯಗಾರರ ವಂಶದ ಪ್ರಭು (ಸು.1578-1658). ಮಾಗಡಿ ಪ್ರಭುಗಳಲ್ಲಿ ಪ್ರಮುಖ. ಮೊದಲು ಬೆಂಗಳೂರಿನಿಂದ ಆಳುತ್ತಿದ್ದ ಈತ ಮಾಗಡಿ ಕೋಟೆಯನ್ನು ಅಭಿವೃದ್ಧಿಗೊಳಿಸಿ ಅಲ್ಲಿ ಪಟ್ಟಣವನ್ನು ನಿರ್ಮಿಸಿದ. 1623ರಲ್ಲಿ ವಿಜಯನಗರ ಸಮ್ರಾಟನ ಪರವಾಗಿ ಗುಡೇಮಾರನಹಳ್ಳಿಯ ತಳವಾರನಾದ ಗಂಗನಿಂದ ಸಾವನದುರ್ಗವನ್ನು ವಶಪಡಿಸಿಕೊಂಡನಲ್ಲದೆ ಸುತ್ತಣ ಹುಲಿಕಲ್ಲು, ಹುಲಿಯೂರುದುರ್ಗ, ಹುತ್ರಿದುರ್ಗ, ಭೈರನದುರ್ಗ, ಕುಣಿಗಲುಗಳನ್ನೂ ಗೆದ್ದ. ಶ್ರೀರಂಗಪಟ್ಟಣದಲ್ಲಿದ್ದ ವಿಜಯನಗರದ ಪ್ರತಿನಿಧಿ ಶ್ರೀರಂಗರಾಯನನ್ನು ಸೋಲಿಸಿ ಅಪಾರ ದ್ರವ್ಯ ಗಳಿಸಿದ. 1638ರಲ್ಲಿ ಈತ ಬಹಮನೀ ಸುಲ್ತಾನರ ಪ್ರತಿನಿಧಿ ರಣದುಲ್ಲಾಖಾನನಿಗೆ ಶರಣಾಗತನಾಗಬೇಕಾಗಿ ಬಂದು ಬೆಂಗಳೂರನ್ನು ಅವನಿಗೆ ಬಿಟ್ಟು, ತನ್ನ ರಾಜಧಾನಿಯನ್ನು ಮಾಗಡಿಗೆ ವರ್ಗಾಯಿಸಿಕೊಂಡ. ಈ ಕಾರಣದಿಂದ ಇವನಿಗೆ ಮಾಗಡಿ ಕೆಂಪೇಗೌಡ ಎಂದೇ ಹೆಸರಾಯಿತು.

ಕೆಂಪೇಗೌಡ ಅನೇಕ ದೇವಾಲಯಗಳ, ಹಳ್ಳಿಗಳ ಮತ್ತು ಕೆರೆಗಳ ನಿರ್ಮಾಪಕ. ಬೆಂಗಳೂರಿನ ಬಳಿ ಕೆಂಪಾಪುರ ಅಗ್ರಹಾರ, ಹೆಸರಘಟ್ಟದ ಬಳಿ ವರಕಂಡಾಪುರದ ಅಗ್ರಹಾರ ಮತ್ತು ಸಾವನದುರ್ಗದ ಬಳಿಯ ನೆಲಪಟ್ಟಣ, ಬೆಂಗಳೂರಿನ ಈಗಿನ ಬಿನ್ನಿ ಮಿಲ್ಲಿನ ಕೆರೆ ಮತ್ತು ಕಾರಂಜಿಕೆರೆ -ಇವು ಇವನ ಕಾಲದ ರಚನೆಗಳು. ಬೆಂಗಳೂರಿನ ಅಲಸೂರುಪೇಟೆ ಸೋಮೇಶ್ವರ ದೇವಾಲಯದ ಭಿತ್ತಿಗಳ ಮೇಲೆ ಇವನು ಗಿರಿಜಾಕಲ್ಯಾಣದ ಶಿಲ್ಪಗಳನ್ನು ಕೆತ್ತಿಸಿದ. ಮಾಗಡಿ ರಂಗನಾಥ ದೇವಾಲಯವನ್ನು ಅಭಿವೃದ್ಧಿಪಡಿಸಿದ. ಮಾಗಡಿಯ ಸೋಮೇಶ್ವರ ದೇವಾಲಯವನ್ನು ಪೂರ್ಣಗೊಳಿಸಿದ್ದೂ ಈತನ ಪ್ರಮುಖ ಸಾಧನೆಗಳಲ್ಲೊಂದು. *

**ಕೆಂಭಾವಿ :** ಗುಲ್ಬರ್ಗ ಜಿಲ್ಲೆ ಸುರಪುರ ತಾಲ್ಲೂಕಿನ ಒಂದು ಗ್ರಾಮ. ಹೋಬಳಿ ಕೇಂದ್ರ. ಸುರಪುರದ ವಾಯವ್ಯಕ್ಕೆ 29ಕಿಮೀ ಅಂತರದಲ್ಲಿದೆ. ಇಲ್ಲಿ ರೇವಣಸಿದ್ಧೇಶ್ವರ ಮತ್ತು ಭೋಗಣ್ಣನ ದೇವಾಲಯಗಳಿವೆ. ಬಹಮನೀ ಸುಲ್ತಾನರ ಅನೇಕ ಸ್ಮಾರಕಗಳೂ ಇರುವುವಲ್ಲದೆ ಸುತ್ತಿನ ಜನ ಪವಿತ್ರವೆಂದು ಪರಿಗಣಿಸುವ ಕೆಲವು ಮುಸ್ಲಿಮ್ ಸಮಾಧಿಗಳಿವೆ. ಇಲ್ಲಿ ಪ್ರತಿ ಸೋಮವಾರ ಸಂತೆಯಾಗುತ್ತದೆ. ಸುಪ್ರಸಿದ್ಧ ವಚನಕಾರ ಭೋಗಣ್ಣಈ ಊರಿನವನು. ತಾಳಿಕೋಟೆಯ ಶಾಸನದಲ್ಲಿ (1184) ಈ ಊರಿನ ಹೆಸರಿನ ಉಲ್ಲೇಖವಿದೆ. ಇಲ್ಲಿ ಸಿಕ್ಕಿರುವ ಕೆಲವು ಶಾಸನಗಳಿಂದ ಇದೊಂದು ಜೈನ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಬಿಜಾಪುರದ ಸುಲ್ತಾನ ವಿಜಯನಗರದ ಕೃಷ್ಣದೇವರಾಯನೊಡನೆ ಯುದ್ಧದಲ್ಲಿ ಸೋತಿದ್ದು ಇಲ್ಲಿಯೆ. (ಎಸ್.ಎಸ್.ಬಿ.)

**ಕೆಂಭಾವಿಯ ಭೋಗಣ್ಣ :** ಪುರಾತನ ವಚನಕಾರರಲ್ಲೊಬ್ಬ. ದೇವರ ದಾಸಿಮಯ್ಯ ತನ್ನ ವಚನಗಳಲ್ಲಿ ಕೆಂಭಾವಿಯ ಭೋಗಯ್ಯನ ಹಿಂದಾಡಿಹೋದ ...... ನಂಬದೆ ಕರೆದವರ ಹಂಬಲನೊಲ್ಲ ನಮ್ಮ ರಾಮನಾಥ ಎಂದಿರುವುದರಿಂದ ಈತ ದಾಸಿಮಯ್ಯನಿಗಿಂತ ಪ್ರಾಚೀನನೆಂದು ಊಹಿಸಲಾಗಿದೆ. ಇವನನ್ನು ಕುರಿತು ಹರಿಹರ ಒಂದು ರಗಳೆಯನ್ನು ಬರೆದಿರುವುದಾಗಿ ತಿಳಿದುಬರುತ್ತದೆ. ಗುಲ್ಬರ್ಗ ಜಿಲ್ಲೆಯ ಕೆಂಭಾವಿಯ ಶಿವಪುರದಲ್ಲಿ ಈತ ವಾಸವಾಗಿದ್ದನೆಂದೂ, ಶಿವಭಕ್ತರೆಲ್ಲ ಒಂದೇ ಕುಲದವರು ಎಂದು ನಂಬಿದ್ದ ಇತರ ಎಲ್ಲ ಕುಲದವರನ್ನು 'ಗೋಜಾಗತ' ಮಾಡಲು, ಇದನ್ನು ಸಹಿಸದ ಬ್ರಾಹ್ಮಣರೂ ಆ ಊರಿನ ರಾಜ ಚಂದಿಮರಸನಿಗೆ ದೂರಿತ್ತರೆಂದೂ ಆಗ ಅವನು ಭೋಗಣ್ಣನನ್ನು ಊರಿನಿಂದ ಹೊರಕ್ಕೆ ಕಳಿಸಿದಾಗ ಊರಲ್ಲಿದ್ದ ಲಿಂಗಗಳೂ ಭೋಗಣ್ಣನ ಹಿಂದೆ ಕುಣಿಯುತ್ತ ಹೋದವೆಂದೂ, ಇವನ ಮಹಿಮೆಯನ್ನು ಕಣ್ಣಾರೆ ಕಂಡ ಬ್ರಾಹ್ಮಣರು ರಾಜನ ಮೊರೆಹೊಕ್ಕು ಇವನನ್ನು ಹಿಂದಕ್ಕೆ ಕರೆಸಿಕೊಂಡರೆಂದೂ ಪ್ರತೀತಿ.

ಕನ್ನಡ ಸಾಹಿತ್ಯದಲ್ಲಿ ಭೋಗಣ್ಣ ಎಂಬ ಹೆಸರಿನ ಇಬ್ಬರು ವಚನಕಾರರು ಕಂಡುಬರುತ್ತಾರೆ. ನಿಜಗುರುಭೋಗಸಂಗ ಎಂಬ ಅಂಕಿತವನ್ನಿಟ್ಟುಕೊಂಡು ವಚನರಚನೆ ಮಾಡಿದವನೊಬ್ಬ. ಚೆನ್ನಬಸವಣ್ಣ ಪ್ರಿಯ ಭೋಗಮಲ್ಲಿಕಾರ್ಜುನ ಲಿಂಗ ಎಂಬ ಅಂಕಿತವನ್ನು ಹೊಂದಿ ಸು.102 ವಚನಗಳನ್ನು ಬರೆದ ಪ್ರಸಾದ ಭೋಗಣ್ಣ ಇನ್ನೊಬ್ಬ. ಕನ್ನಡ ಸಾಹಿತ್ಯದಲ್ಲಿ ನಿಜಗುರು ಭೋಗೇಶ್ವರ ಎಂಬ ಅಂಕಿತವುಳ್ಳ ಕೆಲವು ವಚನಗಳು ಕಂಡುಬರುವುದರಿಂದ, ಈ ವಚನಗಳು ಕೆಂಭಾವಿ ಭೋಗಣ್ಣನ ವಚನಗಳಿರಬೇಕೆಂದೂ ಈತ ಒಬ್ಬ ಪ್ರಸಿದ್ಧ ವಚನಕಾರನಾಗಿದ್ದಿರಬಹುದೆಂದೂ ಊಹಿಸಬಹುದಾಗಿದೆ. (ಎಂ.ಎಚ್.ಕೆ.)

**ಕೆಕ್ಕಾರ :** ಉತ್ತರ ಕನ್ನಡ ಜಿಲ್ಲೆ ಹೊನ್ನಾವರ ತಾಲ್ಲೂಕಿನಲ್ಲಿರುವ ಒಂದು ಪ್ರಾಚೀನ ಊರು. ಹೊನ್ನಾವರದಿಂದ 15ಕಿಮೀ ದೂರದಲ್ಲಿದೆ. ಈ ಗ್ರಾಮದಲ್ಲಿ ಕೆಕ್ಕಾರ ಮಠವಿದೆ. ಲಕ್ಷ್ಮೀನರಸಿಂಹ, ವಿಷ್ಣು, ವಿನಾಯಕ ಮತ್ತು ಅಮ್ಮನವರ ಗುಡಿಗಳಿವೆ. ವಿಜಯನಗರ ಕಾಲದ ವಿಷ್ಣು ವಿಗ್ರಹ ಮತ್ತು ಅನೇಕ ಸಮಾಧಿಗಳು ಕೆಕ್ಕಾರ ಮಠದ ಸಮೀಪದ ಕೆರೆಯ ಬಳಿ ಇವೆ. ಇಲ್ಲಿನ ಮಠ ಹವ್ಯಕ ಬ್ರಾಹ್ಮಣರ ಮಠವಾಗಿದ್ದು ದೊಡ್ಡ ವ್ಯವಸ್ಥೆ ಹೊಂದಿದೆ. ಇಲ್ಲಿ ರಾಮಚಂದ್ರ ಭಾರತಿಯವರ ಸಮಾಧಿ ಇದೆ. ರಾಮನವಮಿಯಲ್ಲಿ ಇಲ್ಲಿ ಜಾತ್ರೆ ಸೇರುತ್ತದೆ.

ದುರ್ಗಾಪರಮೇಶ್ವರಿ ದೇವಾಲಯವನ್ನು ಸ್ಥಳೀಯರು ಅಮ್ಮನವರ ಗುಡಿ ಎಂದು ಕರೆಯುತ್ತಾರೆ. ಇದಕ್ಕೆ ಗರ್ಭಗುಡಿ ಇದೆ. ಪ್ರಾಕಾರದಲ್ಲಿ ಒಂದು ಸ್ತಂಭ ಇದೆ. ಮುಖಮಂಟಪದ ಎರಡು ಸ್ತಂಭಗಳಲ್ಲಿ ವಿವಿಧ ಬಗೆಯ ಚಿತ್ರಗಳನ್ನೂ ರಾಮಾಯಣದ ಘಟನೆಗಳನ್ನೂ ಚಿತ್ರಿಸಲಾಗಿದೆ. ಇಲ್ಲಿನ ಕಂಬದ ಮೇಲೊಂದು ಶಾಸನವಿದೆ (1078). ಮಹಾಸಾಮಂತಾಧಿಪತಿ ಪ್ರಚಂಡ ದಂಡನಾಯಕನೊಬ್ಬ ಗೋಕರ್ಣದಲ್ಲಿ ಮರಣ ಹೊಂದಿದ ವಿಚಾರವನ್ನು ತಿಳಿಸುತ್ತದೆ.

ಇನ್ನೊಂದು ವೀರಗಲ್ಲು ಕವಡೇವರಸ ದೇಗುಲದಲ್ಲಿದೆ. ಇದು ಹೊನ್ನಾವರಪುರದ ಕವಡೇವರಸ ಮತ್ತು ಗೋಕರ್ಣದ ಅಧಿಪತಿಯ ನಡುವೆ ನಡೆದ ಯುದ್ಧದಲ್ಲಿ ಮಡಿದ ವೀರನಿಗಾಗಿ ನಿಲ್ಲಿಸಿದ್ದು. ಮಹಾಸತಿ ದೇವಾಲಯದಲ್ಲಿ 978ರ ಶಾಸನ ದೊರೆತಿದ್ದು ಅದರಲ್ಲಿ ಕೈಕೇಯ ಅರಸುಗಳ ಉಲ್ಲೇಖವಿದೆ. ಇನ್ನೊಂದು ಶಾಸನ ಹಳೆಮಠದ ಹಿತ್ತಲಿನಲ್ಲಿದೆ. ಇದರಲ್ಲಿ ಅರೆಕಾಲ ಪರಮೇಶ್ವರಿ ಮೂರ್ತಿ ಇದೆ. ಇದನ್ನು ಪೂಜಿಸುತ್ತಾರೆ. ಇದು 8ನೆಯ ಶತಮಾನಕ್ಕೆ ಸೇರಿದ್ದು ಇದರಲ್ಲಿ ಕೆಲವು ವ್ಯಕ್ತಿಗಳ ಉಲ್ಲೇಖಗಳಿವೆ. ಆವರಣದೊಳಗೆ ಹುಲಿದೇವರ ಗುಡಿಯಿದೆ. ಇಲ್ಲಿ ಮಠದ ಹೆಸರಲ್ಲಿ ರಾಮನವಮಿಯಂದು ಜಾತ್ರೆ ನಡೆಯುತ್ತದೆ. ಸಮೀಪದ ಬೀರೇದೇವರ ಹೆಸರಿನಲ್ಲಿ ಜಾತ್ರೆ ಸೇರುತ್ತದೆ. ಆಗ ಕೆಂಡಕೊಂಡ ನಡೆಯುತ್ತದೆ. (ಎಸ್.ಎಚ್.ಇ.)

**ಕೆದಂಬಾಡಿ ಜತ್ತಪ್ಪ ರೈ :** 1916-2003. ಕನ್ನಡದಲ್ಲಿ ಬೇಟೆ ಸಾಹಿತ್ಯವನ್ನು ಸೃಷ್ಟಿಸಿ ಬೇಟೆಯ ನೆನಪುಗಳು ಎಂಬ ಕೃತಿಯನ್ನು ರಚಿಸಿದ ಮೃಗಯಾ ಸಾಹಿತಿ. ದಕ್ಷಿಣ ಕನ್ನಡ ಜಿಲ್ಲೆ ಪುತ್ತೂರು ತಾಲ್ಲೂಕಿನ ಪಾಣಾಜೆ ಗ್ರಾಮದ ಕೆದಂಬಾಡಿಯಲ್ಲಿ 1916 ಫೆಬ್ರವರಿ 11ರಂದು ಜನಿಸಿದರು. ಇವರ ತಂದೆ ಮುಂಡ್ರಾಡಿ ಪಿಲಿಮಜಲು ದಾಸ ರೈ, ತಾಯಿ ಕೆದಂಬಾಡಿ ಸೀತಮ್ಮ.

ಪ್ರಾರಂಭದಲ್ಲಿ ಮರ್ಧಾಳ ಮತ್ತು ಬೆಳ್ಳಾರೆ ಪ್ರಾಥಮಿಕ ಶಾಲೆಯಲ್ಲಿ, ಬಳಿಕ ಪುತ್ತೂರು ಬೋರ್ಡು ಹೈಸ್ಕೂಲಿನಲ್ಲಿ, ಮುಂದೆ ಪೆರಡಾಲದ ಮಹಾಜನ ಸಂಸ್ಕೃತ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡಿದರು. ಮಂಗಳೂರು ಸರಕಾರಿ ಕಾಲೇಜಿನಲ್ಲಿ ಕನ್ನಡ ವಿದ್ವಾನ್ ಪ್ರವೇಶ ಪರೀಕ್ಷೆ

ತೆಗೆದುಕೊಂಡು ಮದರಾಸು ಪ್ರಾಂತ್ಯದಲ್ಲೇ ಮೊದಲ ಸ್ಥಾನ ಪಡೆದು ಉತ್ತೀರ್ಣರಾದರೂ ಓದು ಮುಂದುವರಿಸದೆ ಊರಿಗೆ ಮರಳಿದರು.

ಹಳ್ಳಿಗೆ ಬಂದು ಮಣ್ಣಿನ ಮಗನಾಗಿ, ಕೃಷಿಕನಾಗಿ, ಹಂದಿ, ಕೋಳಿ ಸಾಕಣೆ, ಬೇಟೆ, ಕಂಬಳ, ಕೋಳಿಕಟ್ಟು, ಸಾಹಿತ್ಯ, ಸಂಗೀತ, ಯಕ್ಷಗಾನ,



ಪುಸ್ತಕ ಪಠಣ, ಕಾವ್ಯವಾಚನ, ಒಳಾಂಗಣ ಆಟಗಳು, ಬಾಲ್ ಬ್ಯಾಡ್ಮಿಂಟನ್, ಪಂಚಾಯತಿಕೆ, ಪಾಕಶಾಸ್ತ್ರ ಮೊದಲಾದ ಕೂಟಗಳಲ್ಲಿ ಸಮೃದ್ಧ ಜೀವನದ ಆರು ದಶಕಗಳನ್ನು ಕಳೆದರು. ಆದರೆ ಈ ಬೇಟೆಗಾರ ಬಂಟನಲ್ಲಿ ಓರ್ವ ಸೃಜನಶೀಲ ಬರೆಹಗಾರ ಮರೆಯಾಗಿದ್ದ ಎಂಬುದು ಬೆಳಕಿಗೆ ಬಂದದ್ದು ತುಂಬ ತಡವಾಗಿ. ಬಹುಶಃ ಕನ್ನಡ ದಲ್ಲಿ ಬೇಟೆ ಸಾಹಿತ್ಯ ಬರೆದವರಲ್ಲಿ ಜತ್ತಪ್ಪ ರೈಗಳು ಅಗ್ರ ಪಂಕ್ತಿಯವರು. 'ಬೇಟೆಯ ನೆನಪುಗಳು' (1978) ಇವರ ಚೊಚ್ಚಲ ಕೃತಿ. ಈ ಕೃತಿ ಕನ್ನಡ ಓದುಗ ಪ್ರಪಂಚವನ್ನು ಅಯಸ್ಕಾಂತದಂತೆ ಸೆಳೆಯಿತು. ಕುವೆಂಪು ಅವರ ಬರೆಹಗಳಲ್ಲಿ ಇಣುಕಿದ ಬೇಟೆಯ ಅನುಭವ ರೈ ಅವರಲ್ಲಿ ವಿಶ್ವರೂಪದರ್ಶನವನ್ನೇ ಮಾಡಿಸಿತು. ಹೀಗೆ ಸಾಹಿತ್ಯ ಕ್ಷೇತ್ರಕ್ಕೆ ಕಾಲಿಟ್ಟ ರೈಗಳು ಮತ್ತೆ ತಿರುಗಿ ನೋಡಿದ್ದೇ ಇಲ್ಲ. ಈ ಪ್ರೇರಣೆಯಲ್ಲೇ 'ಈಡೊಂದು ಹುಲಿಯೆರಡು' (1979), 'ಬೇಟೆಯ ಉರುಳು' (1982), 'ಬೆಟ್ಟದ ತಪ್ಪಲಿನಿಂದ ಕಡಲ ತಡಿಗೆ' (1988) ಎಂಬ ಕೃತಿಗಳನ್ನು ಪ್ರಕಟಿಸಿ ಕನ್ನಡದ ಜಿಮ್ ಕಾರ್ಬೆಟ್ ಎಂದು ಮನೆಮಾತಾದರು. ಈ ಕೃತಿಗಳನ್ನು ಓದುತ್ತಿದ್ದರೆ ಕಳೆದುಹೋದ ಕಾಲಖಂಡದ ಬದುಕು ಮನಃಪಟಲದ ಮೇಲೆ ವರ್ಣರಂಜಿತವಾಗಿ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಇವರ ಈ ಕೃತಿಗಳು ದಕ್ಷಿಣ ಕನ್ನಡ ಜಿಲ್ಲೆಯ ಶ್ರೀಮಂತ ಜನಪದ ಬದುಕಿನ ಹಗೇವುಗಳಾಗಿವೆ. ಕರ್ಮಯೋಗಿ ಬೆಳ್ಳಾರೆ ನಾರಾಯಣ ಶೇಕ (1984), ತಲೆಬುರುಡೆ ಬಿಡಿಸಿದ ಕೊಲೆ ರಹಸ್ಯ (ಅನುವಾದ 1994). ಇವು ಇವರು ರಚಿಸಿದ ಇನ್ನೆರಡು ಕನ್ನಡ ಕೃತಿಗಳು.

ತುಳುವಿನಲ್ಲಿ ಒಳ್ಳೆಯ ಸಾಹಿತ್ಯ ಕೃತಿಗಳು ರಚನೆಯಾಗಿಲ್ಲ ಎಂಬ ಅಪವಾದವಿದ್ದ ಕಾಲಕ್ಕೆ ಕನ್ನಡದ ಪ್ರಸಿದ್ಧ ಕವಿ ಸಾಹಿತಿಗಳ ಹಾಗೂ ಭಾರತೀಯ ಮತ್ತು ಜಗತ್ತಿನ ಇತರ ಭಾಷೆಗಳ ಶ್ರೇಷ್ಠ ಕೃತಿಗಳನ್ನು ತುಳುವಿಗೆ ಅನುವಾದಿಸಿ, ತುಳು ಸಾಹಿತ್ಯವನ್ನು ಶ್ರೀಮಂತಗೊಳಿಸಿದವರಲ್ಲಿ ಇವರು ಮೊದಲಿಗರು. ಅನೇಕ ಸುಭಾಷಿತಗಳನ್ನು ತುಳು ಭಾಷೆಗೆ ರೂಪಾಂತರಗೊಳಿಸಿದ್ದಾರೆ. ತುಳುತ್ತ್ಪೊರ್ಲು (1982) ಎಸ್.ವಿ.ಪರಮೇಶ್ವರ ಭಟ್ಟರ ಇಂದ್ರಚಾಪ. ಸಂಸ್ಕೃತ ಸುಭಾಷಿತಗಳು ಮತ್ತು ದಾಸರ ಹಾಡುಗಳನ್ನು ಅಜ್ಜಬಿರು (1982) ಎಂದೂ, ಡಿ.ವಿ.ಜಿ. ಅವರು ಕನ್ನಡಕ್ಕೆ ಅನುವಾದಿಸಿದ ಉಮರ್ ಖಯ್ಯಾಮನ ರುಬಾಯತ್‌ಗಳನ್ನು ಕುಜಲಿ ಪೂಜೆ' (1989) ಎಂದೂ, ಆಂಗ್ಲಕವಿ ಬ್ರೌನಿಂಗನ ದಿ ಪೈಡ್ ಪೈಪರ್ ಆಫ್ ಹ್ಯಾಮಲಿನ್ ಹಾಗೂ ಕುವೆಂಪುರವರ ಬೊಮ್ಮನ ಹಳ್ಳಿಯ ಕಿಂದರಜೋಗಿ'ಯನ್ನು 'ಅಸನಿಯಾಗೊ ಕಾಂತಗಜೋಗಿ' (1994) ಎಂದೂ ತುಳುವಿಗೆ ತಂದುಕೊಟ್ಟಿದ್ದಾರೆ. ಈ ಸಂಕಲನಗಳು ತುಳು ಕವಿತೆಯ ಸೊಗಸನ್ನೂ ಇವರ ಅನುವಾದ ಸಾಮರ್ಥ್ಯವನ್ನೂ ಎತ್ತಿ ತೋರಿಸುತ್ತವೆ.

ಪಡಿಲಿ ಪಂಪೆ (1982, ಎಂ.ಆರ್.ಶ್ರೀ. ಅವರ ನಾಗರಿಕ), ಯಮನ ಸೋಲು (1982, ಕುವೆಂಪು ಅವರ ಯಮನ ಸೋಲು), ತುಳು ಕಾಬೂಲಿವಾಲ (1986, ಠಾಕೂರರ ಕಾಬೂಲಿವಾಲ ಕತೆ), ಸೂದ್ರೆ ಏಕಲವ್ಯ (1986, ಕುವೆಂಪು ಅವರ ಬೆರಳ್ಗೆ ಕೊರಳ್ ಹಾಗೂ ಗೋವಿಂದ ಪೈಗಳ ಹೆಬ್ಬೆರಳು) ಈ ನಾಲ್ಕು ನಾಟಕಗಳು ಕೆದಂಬಾಡಿಯವರ ತುಳು ರೂಪಾಂತರಗಳು.

'ತುಳು ಚೋಮನದುಡಿ' (1983, ಶಿವರಾಮ ಕಾರಂತರ ಚೋಮನದುಡಿ) ಮದಪ್ಪಂದಿ ನೆಂಪು (1984, ನಿರಂಜನರ ಚಿರಸ್ಮರಣೆ), ಸಿರಿ ರಾಮಾಶ್ವಮೇಧ (1988, ಮುದ್ದಣನ ಶ್ರೀರಾಮಾಶ್ವಮೇಧ) ಸೊಗಸಾದ ತರ್ಜುಮೆಗಳಾಗಿದೆ.

ಶೃಂಗಾರಶಯ್ಯ, ಜ್ವಾಲಾಮುಖಿ ಎಂಬ ಕನ್ನಡ ಕಾದಂಬರಿಗಳನ್ನೂ, ತುಳು ಭಗವದ್ಗೀತೆಯನ್ನೂ ಅಳಕೆ ರಾಮಯ್ಯ ರೈ ಜೀವನಚರಿತ್ರೆಯನ್ನೂ ಇವರು ರಚಿಸಿದ್ದಾರೆ. ತಬ್ಬಲಿ (ಕೃತಿಕಾರನ ಬದುಕು ಬರೆಹ) ಎಂಬ ಕೃತಿಯನ್ನೂ ರಚಿಸಿರುವುದಾಗಿ ತಿಳಿದುಬರುತ್ತದೆ. ಇವು ಪ್ರಕಟವಾಗಿಲ್ಲ.

ಸಹಜ ಕಸುವು ತುಂಬಿದ ತುಳ್ಳು ಭಾಷೆಯ ಬನಿ, ಬಿಗಿ, ಚೆಲುವುಗಳನ್ನು ಹೊಮ್ಮಿಸುವ ಕೃತಿಗಳನ್ನು ನೀಡಿದ ಕೆದಂಬಾಡಿಯವರು ಉತ್ತಮ ವಾಗ್ಮಿ ಮತ್ತು ಸಂಭಾಷಣ ಪಟು. ತಾಳಮದ್ದಲೆ ಕೂಟಗಳಲ್ಲಿ ಇವರು ಒಳ್ಳೆಯ ಅರ್ಥಧಾರಿಗಳೂ ಆಗಿದ್ದರೆಂದು ಹೇಳಲಾಗಿದೆ. ಇವರ ವ್ಯಕ್ತಿತ್ವದ ಉಲ್ಲಾಸಪ್ರವೃತ್ತಿ ಇತರರಿಗೆ ಸ್ಫೂರ್ತಿದಾಯಕವಾಗಿರುತ್ತಿತ್ತು.

ಇವರಿಗೆ ಅನೇಕ ಸನ್ಮಾನ, ಪ್ರಶಸ್ತಿ, ಗೌರವಗಳು ದೊರಕಿವೆ. ಇವರು ಪುತ್ತೂರು ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿಯ ಮೊತ್ತ ಮೊದಲ ಗೌರವ ಪ್ರಶಸ್ತಿ ಇವರಿಗೆ ಲಭ್ಯವಾಗಿತ್ತು (1995). ಇವರ ಅಸನಿಯಾಗೊ ಕಾಂತಗಜೋಗಿ ಎಂಬ ಕೃತಿಗೆ ಪುಸ್ತಕ ಬಹುಮಾನ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿಯ ಭಾಷಾ ಸಮ್ಮಾನ ಪ್ರಶಸ್ತಿ (1997), ಪೊಳಲಿ ಶೀನಪ್ಪ ಹೆಗ್ಗಡೆ ಪ್ರಶಸ್ತಿ ಲಭಿಸಿದ್ದವು. ಇವರ 'ಬೇಟೆಯ ನೆನಪುಗಳು' ಭಾರತದ 12 ಭಾಷೆಗಳಲ್ಲಿ ಭಾಷಾಂತರವಾಗಿದೆ. ಈ ಕೃತಿಯನ್ನು ನ್ಯಾಷನಲ್ ಬುಕ್ ಟ್ರಸ್ಟ್‌ಗಾಗಿ ರೆಮಿನಿಸೆನ್ಸಸ್ ಆಫ್ ಎ ಹಂಟರ್ ಎಂಬುದಾಗಿ ಸಿ.ಎನ್.ರಾಮಚಂದ್ರನ್ ಇಂಗ್ಲಿಷ್‌ಗೆ ಭಾಷಾಂತರಿಸಿದ್ದಾರೆ (1999). ಇವರಿಗೆ ಮೃಗಯಾ ಸಾಹಿತ್ಯ ನಿರ್ಮಾತೃ, ತುಳು ಭಾಷಾ ಭೀಷ್ಮ ಮೊದಲಾದ ಬಿರುದುಗಳು ಬಂದಿವೆ. ಇವರು 2003 ಜೂನ್ 22ರಂದು ನಿಧನಹೊಂದಿದರು. (ವಿ.ಎನ್.)

**ಕೆಮ್ಮಣ್ಣುಗುಂಡಿ :** ಚಿಕ್ಕಮಗಳೂರು ಜಿಲ್ಲೆ ತರೀಕೆರೆ ತಾಲ್ಲೂಕಿನಲ್ಲಿರುವ ಗಿರಿಧಾಮ. ಕಲ್ಲತ್ತಗಿರಿಯ ಸಮೀಪದಲ್ಲಿದೆ.

ಹಿಂದೆ ಕೆಮ್ಮಣ್ಣುಗುಂಡಿ ಮತ್ತು ಕಲ್ಲತ್ತಗಿರಿಗಳು ಕಾಫಿ ತೋಟದ ಯುರೋಪಿಯನರಿಗೆ ಬೇಸಗೆಯ ಗಿರಿಧಾಮಗಳಾಗಿದ್ದವು. ಕಲ್ಲತ್ತಗಿರಿಯ (1,876ಮೀ) ಉತ್ತರದಲ್ಲಿ ಯುರೋಪಿಯನರು ಕಟ್ಟಿಸಿದ ಬಂಗಲೆಗಳಿವೆ.



ಗಿರಿಧಾಮ, ಕೆಮ್ಮಣ್ಣುಗುಂಡಿ

ಇವನ್ನೆಲ್ಲ ಉಪಯೋಗಿಸಿಕೊಂಡು ಇಲ್ಲಿ ಉತ್ತಮ ಗಿರಿಧಾಮವನ್ನು ರೂಪಿಸಲಾಗಿದೆ. ಸುಲಭ ರಸ್ತೆ ಸಂಪರ್ಕ, ತಂಪಾದ ಹವೆ, ನೈಸರ್ಗಿಕ ಸೌಂದರ್ಯ, ಆಧುನಿಕ ಅನುಕೂಲತೆಗಳು -ಇವುಗಳಿಂದ ಕೆಮ್ಮಣ್ಣುಗುಂಡಿ ವಿಶ್ರಾಂತಿಧಾಮವಾಗಿದೆ. ಇಲ್ಲಿನ ಹೆಬ್ಬೆ ಜಲಪಾತ ಪ್ರವಾಸಿಗಳನ್ನು ಆಕರ್ಷಿಸುತ್ತದೆ. (ವಿ.ಜಿ.ಕೆ.)

ಕಲ್ಲತ್ತಗಿರಿ ಮತ್ತು ಕೆಮ್ಮಣ್ಣುಗುಂಡಿ ಭಾಗಗಳಲ್ಲಿ ಕಬ್ಬಿಣದ ಅದಿರು ಅಧಿಕವಾಗಿದೆ. ಎಂ.ವಿಶ್ವೇಶ್ವರಯ್ಯನವರು ಇದನ್ನು ಬಳಸಿಕೊಳ್ಳುವ ಯೋಜನೆಯನ್ನು ರೂಪಿಸಿದರು. ಇಲ್ಲಿಯ ಅದಿರನ್ನು ಭದ್ರಾವತಿಯ ಕಬ್ಬಿಣದ ಕಾರ್ಖಾನೆಗೆ ರವಾನಿಸುವ ವ್ಯವಸ್ಥೆಯಾಯಿತು (1918). ಈಗ



ಹೆಬ್ಬೆ ಜಲಪಾತ

ಆಧುನಿಕ ಯಂತ್ರಗಳ ಸಹಾಯದಿಂದ ಕಬ್ಬಿಣದ ಗಣಿಗಾರಿಕೆಯ ಕಾರ್ಯ ಮುಂದುವರಿದಿದೆ. *

**ಕೆರೂರ ವಾಸುದೇವಾಚಾರ್ಯ :** 1866-1921. ಸಾಹಿತಿ, ಪತ್ರಿಕೋದ್ಯಮಿ. ಕನ್ನಡದ ಪ್ರಥಮ ಸಾಮಾಜಿಕ ಕಾದಂಬರಿ ಎಂದು ಎನಿಸಿರುವ ಇಂದಿರೆಯ (1908) ಕರ್ತೃ. ಬಿಜಾಪುರ ಜಿಲ್ಲೆಯ ಬಾಗಲ ಕೋಟೆಯಲ್ಲಿ (ಈಗ ಜಿಲ್ಲೆ) ಜನಿಸಿದರು. ಧಾರವಾಡದಲ್ಲಿ ಮಾಧ್ಯಮಿಕ ಶಿಕ್ಷಣವನ್ನು ಮುಗಿಸಿ, ಪ್ರೌಢಶಿಕ್ಷಣಕ್ಕಾಗಿ ಪುಣೆಯ ಫರ್ಗ್ಯೂಸನ್ ಕಾಲೇಜಿಗೆ ಸೇರಿದರಾದರೂ ಮಧ್ಯದಲ್ಲಿಯೇ ಕಾಲೇಜನ್ನು ಬಿಟ್ಟರು. ಖಾಸಗಿಯಾಗಿ ವ್ಯಾಸಂಗ ಮಾಡಿ ಆಗಿನ ಎಚ್.ಪಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ (1888) ಬಾಗಲಕೋಟೆಯಲ್ಲಿ ವಕೀಲ ವೃತ್ತಿಯನ್ನು ಆರಂಭಿಸಿದರು. ಜೊತೆಗೆ ಸಾಹಿತ್ಯ ಸಾಂಸ್ಕೃತಿಕ ಚಟುವಟಿಕೆಗಳಲ್ಲೂ ತೊಡಗಿದ್ದರು. ಉತ್ತರ ಕರ್ನಾಟಕದ ಸಾಂಸ್ಕೃತಿಕ ಜೀವನಕ್ಕೆ ಕನ್ನಡದ ಅಸ್ಮಿತೆಯನ್ನು ತಂದುಕೊಟ್ಟದ್ದು ಕೆರೂರರ ವಿಶಿಷ್ಟವಾದ ಸಾಧನೆ. ಇವರು ಶುಭೋದಯ ಮತ್ತು ಸಚಿತ್ರ ಭಾರತ ಎಂಬ ಪತ್ರಿಕೆಗಳ ಸಂಪಾದಕರಾಗಿದ್ದರು. ಇವು ಇವರ ಧೀರ ವಿಚಾರವಾದಿ ಲೇಖನಗಳಿಗೆ ಪ್ರಸಿದ್ಧವಾಗಿದ್ದುವು.

ಕೆರೂರರ ಸಾಹಿತ್ಯರಚನೆ ಸಂಕೀರ್ಣವಾದುದು. ಪ್ರಾರಂಭದಲ್ಲಿ ಇವರು ಪದ್ಯಗಳನ್ನು ಬರೆದರಾದರೂ ಅನಂತರ ಗದ್ಯರಚನೆಯತ್ತ ತಿರುಗಿದರು. ಇವರು ಬರೆದ ಯದುಮಹಾರಾಜ ಸ್ವತಂತ್ರ ಐತಿಹಾಸಿಕ ಕಾದಂಬರಿ. ಪ್ರೇಮವಿಜಯ, ಬೆಳಗಿದ ದೀಪಗಳು, ತೊಳೆದ ಮುತ್ತು -ಇವು ಇವರ ಸಣ್ಣಕಥೆಗಳ ಸಂಗ್ರಹಗಳು. ಇವರು ನಾಲ್ಕು ನಾಟಕಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ನಳದಮಯಂತಿ ಎಂಬುದು ಇವರ ಸ್ವತಂತ್ರ ನಾಟಕ. ಷೇಕ್ಸ್‌ಪಿಯರ್‌ನ ಎ ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್ ಮತ್ತು ದಿ ಮರ್ಚೆಂಟ್ ಆಫ್ ವೆನಿಸ್ ಎಂಬ ನಾಟಕಗಳನ್ನು ವಸಂತಯಾಮಿನೀ ಸ್ವಪ್ನ ಚಮತ್ಕಾರ ಮತ್ತು ಸುರತ ನಗರದ ಶ್ರೇಷ್ಠಿ ಎಂಬ ಹೆಸರಿನಿಂದ ಕನ್ನಡಕ್ಕೆ ಭಾಷಾಂತರಿಸಿದರು. ಆಲಿವರ್ ಗೋಲ್ಡ್‌ಸ್ಮಿತ್ತನ ಷೀ ಸ್ಟೂಪ್ಸ್ ಟು ಕಾನ್ಕರ್ ಎಂಬ ನಾಟಕವನ್ನು ಪತಿವಶೀಕರಣ ಒಂದು ಭಾಷಾಂತರಿಸಿದರು. ಕೆರೂರರ ಗದ್ಯ ಬುದ್ಧಿಭಾವಗಳ ಸಂಕೀರ್ಣತೆಯಿಂದ, ತಾಕಲಾಟದಿಂದ, ವಿಭಿನ್ನ ಅನುಭವಗಳ ಬೆರಕೆಯಿಂದ ಮಿಶ್ರಲೋಹದಂತೆ ಕಾಂತಿಯುಳ್ಳದ್ದಾಗಿದೆ. ಆ ಕಾಲಕ್ಕೆ ಉತ್ತರ ಕರ್ನಾಟಕದ ಉಳಿದ ಬರೆಹಗಾರರು ಜನಪದ ಸಾಹಿತ್ಯವನ್ನು ಪರಿಷ್ಕರಿಸುವ ಪ್ರಯತ್ನದಲ್ಲಿದ್ದಾಗ ಕೆರೂರರು ಒಮ್ಮೆಲೆ ಸುಶಿಕ್ಷಿತ ಪ್ರಜ್ಞೆಯ ವಿದಗ್ಧ ಸಾಹಿತ್ಯವನ್ನು ನಿರ್ಮಿಸಿದ್ದು ಗಮನಾರ್ಹವಾದುದು. ಪರಿಣತವಾದ ಹಾಸ್ಯಪ್ರಜ್ಞೆ, ಪರಿಶ್ರಮ, ಪಾಂಡಿತ್ಯ ಮತ್ತು ಸ್ವತಂತ್ರ ವಿಚಾರಲಹರಿ -ಇವು ಕೆರೂರರ ಸಾಹಿತ್ಯಕ ವ್ಯಕ್ತಿತ್ವದ ಕೆಲವು ಲಕ್ಷಣಗಳಾಗಿವೆ.

ಕೆರೂರರ ಜ್ಞಾಪಕಾರ್ಥವಾಗಿ ಬಾಗಲಕೋಟೆಯ ವಾಸುದೇವ ವಿನೋದಿನಿ ನಾಟ್ಯ ಸಭೆಯವರು 1964ರಲ್ಲಿ ವಾಸುದೇವಪ್ರಶಸ್ತಿ ಎಂಬ ಸ್ಮಾರಕ ಸಂಪುಟವನ್ನು ಪ್ರಕಟಿಸಿದ್ದಾರೆ. (ಕೆ.ಕೆ.ಕೆ.)

**ಕೆರೂರು :** ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕಿನ ಒಂದು ಪಟ್ಟಣ. ಬಿಜಾಪುರಕ್ಕೆ ದಕ್ಷಿಣದಲ್ಲಿ ಬಾದಾಮಿಯ ವಾಯವ್ಯಕ್ಕೆ 17ಕಿಮೀ ದೂರದಲ್ಲಿದೆ. 35 ಹಳ್ಳಿಗಳನ್ನೊಳಗೊಂಡ ಹೋಬಳಿ ಕೇಂದ್ರ. ಇಲ್ಲಿ ಪಾಳುಬಿದ್ದಿರುವ ಒಂದು ಕೋಟೆ ಇದೆ. ಕೈಮಗ್ಗದ ಬಟ್ಟೆಗಳಿಗೆ ಈ ಸ್ಥಳ ಬಹು ಪ್ರಸಿದ್ಧ. ಇಲ್ಲಿನ ಬನಶಂಕರಿ ದೇವಾಲಯ ಮುಖ್ಯವಾದುದು. *

**ಕೆರೆಗೆ ಹಾರ :** ಜನಪ್ರಿಯ ಜನಪದ ಕಥನ ಕವನಗಳಲ್ಲೊಂದು. ಊರಿನ ಹಿತಕ್ಕಾಗಿ ಗುರುಹಿರಿಯರ ಮಾತಿನಂತೆ ಕೆರೆಗೆ ಆಹುತಿಯಾದ ತ್ಯಾಗಜೀವಿ ಹೆಣ್ಣು ಮಗಳೊಬ್ಬಳ ಜ್ವಲಂತ ಚಿತ್ರಣ, ಆಹುತಿಯಾದ ಹೆಂಡತಿಗಾಗಿ ತನ್ನ ಪ್ರಾಣವನ್ನೇ ಅರ್ಪಿಸಿ ಅಮರನಾದ ಗಂಡನ ತ್ಯಾಗ - ಇದು ಕವನದ ವಸ್ತು. ಕೆರೆಗೆಹಾರ ಭಾರತೀಯ ಜನಪದ ಸಾಹಿತ್ಯದಲ್ಲಿ ಮಾತ್ರವೇ ಅಲ್ಲ, ಜಗತ್ತಿನ ಯಾವುದೇ ಜನಪದ ಸಾಹಿತ್ಯದ ಅತ್ಯುತ್ತಮ ಕೃತಿಗಳಿಗೆ ಸರಿಸಮವಾಗಿ ನಿಲ್ಲಬಲ್ಲ ಸತ್ವದಿಂದ ಕೂಡಿದ ಸುಮಾರು ನೂರ ಇಪ್ಪತ್ತು ಸಾಲುಗಳುಳ್ಳ ಕವಿತೆ. ಹಳ್ಳಿಯ ಮುಗ್ಧಜೀವಿಗಳ ತ್ಯಾಗ, ಪರೋಪಕಾರ, ಉದಾತ್ತ ಸಂಸ್ಕಾರವಂತ ಹಿರಿಬಾಳಿನ ಉಜ್ವಲಚಿತ್ರಣ ಕಥೆಯ ಉದ್ದಕ್ಕೂ ಪಡಿಮಿಡಿಯುತ್ತಿದೆ.

ಕಲ್ಲನಕೇರಿ ಮಲ್ಲನ ಗೌಡ ಕೆರೆಯೊಂದನ್ನು ಕಟ್ಟಿಸಲು, ಕೆರೆಗೆ ಬೊಗಸೆ ನೀರೂ ಬಾರದಿದ್ದನ್ನು ಕಂಡು ಜೋಯಿಸರಲ್ಲಿ ಹೋಗಿ ಶಾಸ್ತ್ರ ಕೇಳಿದ. ಹಿರಿಸೊಸೆ ಮಲ್ಲವ್ವನನ್ನು ಹಾರವ ಕೊಟ್ಟರೆ ನೀರು ಬರುವುದು ಎಂದ ಜೋಯಿಸನ ಮಾತಿಗೆ, ಹಿರಿಸೊಸೆ ಹಾರವಾದರೆ ಹಿರಿತನಕೆ ಯಾರಿಲ್ಲ ಕಿರಿಸೊಸೆ ಭಾಗೀರಥೀನ ಹಾರ ಕೊಡಬೇಕೆಂದು ಮನೆಯಲ್ಲಿ ತೀರ್ಮಾನವಾಯಿತು. ಕೊನೆ ಸಲ ತಂದೆತಾಯಿ ಬಂಧುಬಳಗಗಳನ್ನು ನೋಡಿಕೊಂಡು ಬರಲು ಭಾಗೀರಥಿ ತವರುಮನೆಗೆ ಬಂದಳು. ಇವಳ ಬಾಡಿದ ಮೋರೆ ನೋಡಿದ ತಂದೆತಾಯಿಗಳು ಕಾರಣವನ್ನು ಕೇಳಿದಾಗ, ಭಾಗೀರಥಿ ನಿಜವನ್ನು ಮರೆಮಾಚಿ ನಮ್ಮತ್ತಿ ನಮ್ಮಾವ ಬ್ಯಾರೆ ಇಡುತಾರಂತೆ ಎಂದಾಗ ಇಟ್ಟರೆ ಇಡಲಿ ನಿನಗೆ ಬೇರೆ ಸಂಸಾರ ಹೂಡಲು ಎಲ್ಲ ಅನುಕೂಲ ಮಾಡಿಕೊಡುತ್ತೇವೆ ಎನ್ನುತ್ತಾರೆ. ಭಾಗೀರಥಿ ಗೆಳತಿಯ ಮನೆಗೆ ಹೋದಾಗ ತಡೆಯಲಾರದೆ ನಮ್ಮತ್ತೆ ನಮ್ಮಾವ ಕೆರೆಗ್ಹಾರ ಕೊಡುತ್ತಾರೆ ಎಂದು ಹೇಳಿದಳು. ಅದಕ್ಕೆ ಸ್ನೇಹಿತೆ ಕೊಟ್ಟರೆ ಕೊಡಲೇಳು ಇಟ್ಟಂಗ ಇರಬೇಕು ಎಂದು ಹೇಳಿದಮೇಲೆ ಭಾಗೀರಥಿ ಕೆರೆಗೆ ಹಾರವಾಗಲು ನಿರ್ಣಯಿಸಿದಳು.

ತವರು ಮನೆಯಿಂದ ಭಾಗೀರಥಿ ಅತ್ತೆಯ ಮನೆಗೆ ಹಿಂದಿರುಗಿ ಬಂದ ಮೇಲೆ ಗಂಗೆ ಪೂಜೆಮಾಡಿ ಕೆರೆಗೆ ಹಾರ ಕೊಡಲು ನಿರ್ಣಯಿಸಿದರು. ಸಣ್ಣ ಸೊಸಿ ಭಾಗೀರಥಿ ಕೆರೆಗ್ಹಾರವಾದಳು.

ಭಾಗೀರಥಿಯ ಗಂಡ, ಮಾದೇವರಾಯ ಯುದ್ಧಕ್ಕೆ ಹೋಗಿದ್ದವನು ಕೆಟ್ಟ ಕನಸು ಕಂಡು, ಬೆತ್ತಲೆ ಕುದುರೆಯೇರಿ ಬಂದು ಹೆಂಡತಿ ಕೆರೆಗೆ ಹಾರವಾದ ಸಂಗತಿ ತಿಳಿದು ದುಃಖಪಟ್ಟು, ಸಿಗಲಾರದ ಸತಿಯನ್ನು ನೆನೆದು ಅದೇ ಕೆರೆಗೆ ಆಹುತಿಯಾದ.

ಪದ್ಯದ ಒಂದೊಂದು ಸಾಲಿನಲ್ಲೂ ಕ್ರಿಯೆಯು ಒಂದೊಂದು ಹೆಜ್ಜೆಯಲ್ಲೂ ಮಹಾಕೃತಿಯಲ್ಲಿ ಕಾಣಬರುವ ಅನಿವಾರ್ಯತೆ ಇದೆ. ಕಥೆಯ ಸನ್ನಿವೇಶಗಳು ದೃಶ್ಯದಂತೆ ಕಣ್ಣಿಗೆ ಕಟ್ಟುತ್ತವೆ. ಶೈಲಿ ಸರಳವಾಗಿದೆ. ಹಾರ ಕೊಡುತಾರಂತ ತಿಳಿದಾಗ ಭಾಗೀರಥಿಯ ಮನಸ್ಸಿನಲ್ಲಿ ಮೂಡಿದ ಸೂಕ್ಷ್ಮ ಹೊಯ್ದಾಟ, ದಂಡಿನಲ್ಲಿದ್ದ ಗಂಡ ಮಾದೇವರಾಯನಿಗೆ ಕನಸಿನಲ್ಲಿ ಕಂಡ ದೃಶ್ಯ, ಆತ ಇದ್ದಕ್ಕಿದ್ದಂತೆ ಬತ್ತಲೆಗುದರೆ ಹತ್ತಿಬಂದ ಸನ್ನಿವೇಶ - ಇವು ಧ್ವನಿಪೂರ್ಣವಾಗಿ ನಿರೂಪಿತವಾಗಿದ್ದು ಉತ್ತಮ ಕಾವ್ಯತ್ವದಿಂದ ಕೂಡಿದೆ. ಇಡೀ ಕಥೆ ಧ್ವನಿರಮ್ಯತೆಯಿಂದ, ಗಂಭೀರತೆಯಿಂದ, ಉಜ್ವಲ ಪಾತ್ರಚಿತ್ರಣದಿಂದ ಕಳೆ ಕಟ್ಟುತ್ತದೆ. ಗಂಡ ಸತ್ತಾಗ ಹೆಣ್ಣು ಸತಿ ಹೋಗುವ ಪದ್ಧತಿ ಹಿಂದಿನಿಂದಲೂ ನಡೆದುಬಂದದ್ದು. ಆದರೆ ಒಂದು ಹೆಣ್ಣಿಗಾಗಿ ಗಂಡು ಪ್ರಾಣಬಿಡುವ ಸಂಗತಿ ಅಪರೂಪ. ಈ ಕಾವ್ಯ ಅಂಥ ಅಪೂರ್ವ ಪ್ರೇಮದುರಂತ ಸಂಗತಿಗೆ ಸಾಕ್ಷಿಯಾಗಿದೆ. ಇಂತಹ ಕೃತಿಯನ್ನು ಕಟ್ಟಿದ್ದ ಅಜ್ಞಾತ ವ್ಯಕ್ತಿ ಶ್ರೇಷ್ಠಕವಿ ಎಂಬ ಪ್ರಶಂಸೆಗೆ ಪಾತ್ರನಾಗಿದ್ದಾನೆ. (ಜಿ.ಆರ್.ಐ.)

**ಕೆರೆಮನೆ ಮಹಾಬಲ ಹೆಗಡೆ :** 1927-. ಪ್ರಸಿದ್ಧ ಯಕ್ಷಗಾನ ಕಲಾವಿದರು. ಉತ್ತರ ಕನ್ನಡ ಜಿಲ್ಲೆ ಹೊನ್ನಾವರ ತಾಲ್ಲೂಕಿನ ಗುಣವಂತೆಯಲ್ಲಿ 1927 ಜೂನ್ 30ರಂದು ಜನಿಸಿದರು. ತಂದೆ ರಾಮ ಹೆಗಡೆ, ತಾಯಿ ಮಹಾದೇವಿ. ತಮ್ಮ ಹನ್ನೆರಡನೆಯ ವಯಸ್ಸಿನಲ್ಲಿ, ಇವರ



ಚಿಕ್ಕಪ್ಪ ಕೆರೆಮನೆ ಶಿವರಾಮ ಹೆಗಡೆ ಮತ್ತು ವೆಂಕಟರಮಣ ಯಾಜಿಗಳು ನಡೆಸುತ್ತಿದ್ದ ಶ್ರೀ ಇಡಗುಂಜಿ ಮಹಾಗಣಪತಿ ಯಕ್ಷಗಾನ ಮಂಡಳಿಯಲ್ಲಿ ರಂಗ ಪ್ರವೇಶಿಸಿದರು. ಆರಂಭದಲ್ಲಿ ಶಿವರಾಮ ಹೆಗಡೆ, ವೆಂಕಟರಮಣ ಯಾಜಿಯವರಿಂದ ತರಬೇತಿ ಪಡೆದರು. ಅನಂತರ ಇನ್ನೊಬ್ಬ ಪ್ರಸಿದ್ಧ ಕಲಾವಿದ ಮೂಡ್ಕಣಿ ನಾರಾಯಣ ಹೆಗಡೆಯವ ರಿಂದ ಹಸ್ತಾಭಿನಯದ ವಿಶೇಷ ತರಬೇತಿ ಪಡೆದರು. ಭಾಗವತಿಕೆಯಲ್ಲಿ ತರಬೇತಿ ಪಡೆದದ್ದು ಅಜ್ಜ ಮಹಾಬಲ ಹೆಗಡೆಯವರಿಂದ. ಇವರು ವೆಂಕಟರಮಣ ಯಾಜಿಗಳಲ್ಲಿ ಹೆಚ್ಚಿನ ವ್ಯಾಸಂಗ ಮಾಡಿದರು. ಕರ್ಣಪರ್ವದ ವೃಷಸೇನ ಇವರು ನಿರ್ವಹಿಸಿದ ಮೊದಲ ಪಾತ್ರ.

ಯಕ್ಷಗಾನದ ಚತುರಂಗಗಳಾದ ಹಾಡುಗಾರಿಕೆ, ಅರ್ಥಗಾರಿಕೆ, ಕುಣಿತ, ಅಭಿನಯ - ಈ ನಾಲ್ಕೂ ಅಂಗಗಳಲ್ಲಿ ವಿಶೇಷ ಪರಿಣತಿಯುಳ್ಳ ಪರಿಪೂರ್ಣ ಕಲಾವಿದ ಎಂಬ ಖ್ಯಾತಿಗೆ ಇವರು ಪಾತ್ರರಾಗಿದ್ದಾರೆ. ಇದಲ್ಲದೆ ಇವರಿಗೆ ಬಣ್ಣಗಾರಿಕೆಯ ನೈಪುಣ್ಯ, ವಾದ್ಯಗಳನ್ನು ನುಡಿಸುವ ಚಾಕಚಕ್ಯತೆ, ವೇಷಭೂಷಣಗಳನ್ನು ನಿರ್ಮಿಸುವ ಕಲೆಗಾರಿಕೆ ಕೂಡ ಕರಗತವಾಗಿವೆ. ಕನ್ನಡ ಸಾಹಿತ್ಯದ ಗಾಢ ಅಧ್ಯಯನ ಮಾಡಿರುವ ಇವರು ಪಾತ್ರಗಳನ್ನು ಸರ್ವಾಂಗ ಸುಂದರವಾಗಿ ನಿಲ್ಲಿಸುತ್ತಾರೆ. ಕೌರವ, ಶ್ರೀಕೃಷ್ಣ, ಸುಧಾಮ, ಸುಧನ್ವ ಯಾವುದೇ ಪಾತ್ರವಿರಲಿ, ಅದರಲ್ಲಿ ಸಮಗ್ರತೆ ತರುತ್ತಾರೆ. ಪಾತ್ರ ನಿರ್ವಹಿಸುವಾಗ ಇವರಿಗೆ ನುರಿತ ಭಾಗವತನೆ ಬೇಕು. ಪ್ರಸಂಗದ ಪ್ರತಿ ಪದವನ್ನೂ ಸ್ವರಪ್ರಸ್ತಾರ ಹಾಕಿ ನಿರೂಪಿಸುವ ಇವರು ಭಾಗವತರು ಅಪಸ್ವರವೆತ್ತಿದರೆ, ಲಯ ತಪ್ಪಿದರೆ ಸಹಿಸುವುದಿಲ್ಲ. ಇದಕ್ಕೆ ಕಾರಣ ಇವರಲ್ಲಿರುವ ಹಾಡುಗಾರಿಕೆಯ ಖಚಿತ ಜ್ಞಾನ.

ಇವರ ಅಜ್ಜ ಮಹಾಬಲ ಹೆಗಡೆ ಮಧುರಕಂಠದ ಭಾಗವತರು. ಚಿಕ್ಕಪ್ಪ ಶಿವರಾಮ ಹೆಗಡೆ ಹೆಸರಾಂತ ನಟರು. ಶಿವರಾಮ ಹೆಗಡೆಯವರ ತಂದೆ ಶಂಭು ಹೆಗಡೆಯವರು ಕಾವ್ಯರಚನೆಯಲ್ಲಿ ಎತ್ತಿದ ಕೈ. ಇವರು ಅಜ್ಜನ ಕಂಠಶಕ್ತಿ, ಚಿಕ್ಕಪ್ಪನ ಕಲಾಪ್ರೌಢಿಮೆ, ಇನ್ನೊಬ್ಬ ಅಜ್ಜನ ಕಾವ್ಯಾಭಿರುಚಿ ಪಡೆದು ಯಕ್ಷಗಾನದ 'ಮಹಾಬಲ' ಎಂದೇ ಹೆಸರಾಗಿದ್ದಾರೆ. ಇಡಗುಂಜಿ ಶ್ರೀ ಮಹಾಗಣಪತಿ ಯಕ್ಷಗಾನ ಮೇಳದೊಂದಿಗೆ ಬೆಳೆದ ಇವರು ಶಿವರಾಮ ಹೆಗಡೆ, ಕೊಂಡದಕುಳಿ ರಾಮಹೆಗಡೆ, ಲಕ್ಷ್ಮಣ ಹೆಗಡೆ, ಶಂಕರನಾರಾಯಣ ಸಾಮಗ, ಜಲವಳ್ಳಿ ವೆಂಕಟೇಶ ರಾಮದಾಸ ಮೊದಲಾದ ಅನೇಕ ಕಲಾವಿದರೊಂದಿಗೆ ಪಾತ್ರ ನಿರ್ವಹಿಸಿದ್ದಾರೆ.

ಇವರು ಸ್ತ್ರೀಪಾತ್ರಗಳಿಂದ ಆರಂಭಿಸಿ ಪುರುಷ ಪಾತ್ರಗಳವರೆಗೆ ಬಡ್ತಿ ಪಡೆದರು. ಪಟ್ಟಾಭಿಷೇಕದ ಉದಾತ್ತರಾಮ, ಭಕ್ತ ಸುಧನ್ವ, ಚಂದ್ರಾವಳಿ ವಿಲಾಸದ ಶೃಂಗಾರಕೃಷ್ಣ, ಖಳನಾಯಕ ಕಂಸ, ಸತ್ಯಹರಿಶ್ಚಂದ್ರ, ಪ್ರಚಂಡ ವಿಶ್ವಾಮಿತ್ರ, ಸ್ತ್ರೀಲಂಪಟ ಕೀಚಕ, ಛಲದಂಕಮಲ್ಲ ಕೌರವ, ಬೇಡರ ಕಣ್ಣಪ್ಪ, ರುಕ್ಮಾಂಗದ, ಬ್ರಹ್ಮಕಪಾಲದ ಈಶ್ವರ, ಕೊಲ್ಲೂರು ಮಹಾತ್ಮೆಯ ಷಣ್ಮುಖ, ಭೀಷ್ಮವಿಜಯದ ಭೀಷ್ಮ ಹೀಗೆ ರಾಜನಿಂದ ಕಂಕನ ವರೆಗೆ ಎಲ್ಲ ಬಗೆಯ ಪಾತ್ರವಹಿಸಿ ಪಾತ್ರಗಳು ಮೈತುಂಬುವಂತೆ ಅಭಿನಯಿಸಿದ್ದಾರೆ.

ಇವರೊಬ್ಬ ಕಲಾವಿದರಷ್ಟೆ ಅಲ್ಲ ವಿಮರ್ಶಕರೂ ಚಿಂತಕರೂ ಆಗಿದ್ದಾರೆ. ಇತರರ ಪಾತ್ರಗಳನ್ನು ವಿಮರ್ಶಿಸುವಂತೆ ತಮ್ಮ ಪಾತ್ರಗಳನ್ನು ವಿಮರ್ಶೆ ಮಾಡುವ ಸಾಕ್ಷಿಪ್ರಜ್ಞೆ ಇವರಲ್ಲಿದೆ. ಯಕ್ಷಗಾನ ಒಂದು ಶಾಸ್ತ್ರೀಯ ಕಲೆಯೆಂದು ವಾದಿಸುವ ಇವರು ಪ್ರಸಂಗದಲ್ಲಿ ಕನ್ನಡ ಕಾವ್ಯರಚನೆಯ ನಿಯಮಗಳಿವೆ, ಭಾಗವತಿಕೆಯಲ್ಲಿ ತಾಳಲಯಗಳ ಖಚಿತತೆ ಇದೆ, ಅಭಿನಯದಲ್ಲಿ, ಹಸ್ತಾಭಿನಯದಲ್ಲಿ ನೃತ್ಯದ ಮುದ್ರೆಗಳಿವೆ, ಕುಣಿತದಲ್ಲಿ ನೃತ್ಯದ ಶಿಸ್ತು ಇದೆಯೆಂದು ಖಚಿತವಾದ ದಾಖಲೆಗಳೊಂದಿಗೆ ವಾದಿಸುತ್ತಾರೆ. ಸಾಭಿನಯ ಉಪನ್ಯಾಸ ನೀಡುವಾಗ ಇವರ ವಿದ್ವತ್ತು ವ್ಯಕ್ತ ವಾಗುತ್ತದೆ. ಇವರು ಪ್ರಯೋಗಪ್ರಿಯರು. ರಾತ್ರಿಯಿಂದ ಬೆಳಗಾಗುವವರೆಗೆ ನಡೆಯುವ ಯಕ್ಷಗಾನವನ್ನು ಒಂದು ಗಂಟೆ, ಮೂರು ಗಂಟೆ ಅವಧಿಯಲ್ಲಿ ಮೊಟ್ಟಮೊದಲು ಪ್ರಯೋಗಿಸಿದವರು. ಭಾಗವತಿಕೆ, ಅರ್ಥಗಾರಿಕೆಯಿಲ್ಲದ ಮೂಕಾಭಿನಯದ ಯಕ್ಷಗಾನವನ್ನು ಶಿವರಾಮ ಕಾರಂತರು ಪ್ರಯೋಗಕ್ಕೆ ತಂದಾಗ ಮಹಾಬಲ ಹೆಗಡೆಯವರು ಯಕ್ಷರಂಗ ಸೇರಿಕೊಂಡರು.

ಮೂರು ದಶಕ ಕಾಲ ಶ್ರೀ ಇಡಗುಂಜಿ ಮಹಾಗಣಪತಿ ಯಕ್ಷಗಾನ ಮಂಡಳಿಯಲ್ಲಿ (1942-69) ದುಡಿದು ಗುರುಪ್ರಸಾದಿತ ಯಕ್ಷಗಾನ ಮಂಡಳಿ ಸಾಲಿಗ್ರಾಮ, ಅಮೃತೇಶ್ವರಿ ಯಕ್ಷಗಾನ ಮಂಡಳಿ, ಪಂಚಲಿಂಗೇಶ್ವರ ಕೃಪಾಪೋಷಿತ ಯಕ್ಷಗಾನ ಮಂಡಳಿ. ಶ್ರೀ ಮಹಾಗಣಪತಿ ಯಕ್ಷಗಾನ ಮಂಡಳಿ, ಉಚಗಾರು -ಈ ಸಂಸ್ಥೆಗಳಲ್ಲಿ ಇವರು ಪಾತ್ರವಹಿಸಿದ್ದಾರೆ. ಕೇಂದ್ರ ಸರಕಾರದ ಸಾಂಸ್ಕೃತಿಕ ಸಂಸ್ಥೆಯ ವತಿಯಿಂದ ಮಾಯಾ ರಾವ್ ತಂಡದೊಂದಿಗೆ ಈಜಿಪ್ಟ್, ನೆದರ್ಲೆಂಡ್ಸ್, ಜರ್ಮನಿ ಮತ್ತು ಗ್ರೀಸ್‌ಗಳಲ್ಲಿ ಯಕ್ಷಗಾನ ಪ್ರದರ್ಶನ ನೀಡಿದರು (1982), ಅಲ್ಲಿ ಇವರು ಭಾಗವತಿಕೆ, ಪಾತ್ರ ಒಟ್ಟೊಟ್ಟಿಗೆ ಮಾಡಿದರು.

ಇವರಿಗೆ ಹಿಂದುಸ್ತಾನಿ ಶಾಸ್ತ್ರೀಯ ಸಂಗೀತದಲ್ಲೂ ಆಸಕ್ತಿಯಿದೆ. ಶ್ರೀಪಾದರಾವ್ ಪಡುಕೋಣೆ ಮತ್ತು ನಾರಾಯಣರಾವ್ ಮುಜುಮದಾರರಲ್ಲಿ (ಧಾರವಾಡ) ಶಾಸ್ತ್ರೀಯ ಸಂಗೀತಾಭ್ಯಾಸ ಮಾಡಿ ಅನೇಕ ಖಾಸಗಿ ಕಛೇರಿಗಳಲ್ಲಿ ಹಾಡಿದ್ದಾರೆ. ಸಂಗೀತ, ಸಾಹಿತ್ಯ, ನೃತ್ಯಪ್ರಕಾರಗಳನ್ನು ಆಳವಾಗಿ ಅಧ್ಯಯನ ಮಾಡಿದ್ದಾರೆ. ಉತ್ತಮ ವಾಗ್ಮಿಗಳಾದ ಇವರು ಅನೇಕ ಸಭೆ, ಸಮಾರಂಭಗಳಲ್ಲಿ ತಮ್ಮ ವಿದ್ವತ್ಪೂರ್ಣ ವಿಚಾರಗಳಿಂದ ಶ್ರೋತೃಗಳನ್ನು ಸೆರೆಹಿಡಿದಿದ್ದಾರೆ. ಮಹಾದೇವಿ ಇವರ ಧರ್ಮಪತ್ನಿ. ಇವರಿಗೆ ಮೂವರು ಮಕ್ಕಳು: ಎರಡು ಗಂಡು, ಒಂದು ಹೆಣ್ಣು.

ಇವರ ಸಾಧನೆಯನ್ನು ಗಮನಿಸಿ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ (1991). ಕರ್ನಾಟಕ ರಾಜ್ಯ ಸರ್ಕಾರ 1986ರಿಂದ ಮಾಸಿಕ ಗೌರವಧನ ನೀಡಿ ಗೌರವಿಸಿದೆ. ಮದರಾಸಿನ ಶ್ರುತಿ ಸಂಸ್ಥೆ, ಎಡನೀರು ಮಠ, ಪೇಜಾವರ ಮಠ, ಶಿರೂರು ಮಠ (ಉಡುಪಿ), ಯಕ್ಷಲೋಕ (ಮಂಗಳೂರು), ಯಕ್ಷರಂಗ (1992) ಮೂರೂರು ದೇವರು ಹೆಗಡೆ ಪ್ರತಿಷ್ಠಾನ, ಬೆಂಗಳೂರು ಗಾಯನ ಸಮಾಜ, ಕಲಾಸಂಗಮ, ಹೊನ್ನಾವರ ಮೊದಲಾದ ಅನೇಕ ಸಂಘ ಸಂಸ್ಥೆಗಳು ಇವರನ್ನು ಸನ್ಮಾನಿಸಿವೆ. (ಎಸ್.ಎಂ.ಕೆ.)

**ಕೆರೆಮನೆ ಶಂಭು ಹೆಗಡೆ :** 1938-. ಪ್ರಸಿದ್ಧ ಯಕ್ಷಗಾನ ಕಲಾವಿದರು. 1938 ಅಕ್ಟೋಬರ್ 6ರಂದು ಜನಿಸಿದರು. ತಂದೆ ಕೆರೆಮನೆ ಶಿವರಾಮ ಹೆಗಡೆ, ತಾಯಿ ಮೂಕಾಂಬಿಕಾ. ಎಸ್.ಎಸ್.ಎಲ್.ಸಿ.ವರೆಗೆ ಓದಿ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ಎರಡು ವರ್ಷ (1959-60) ದುಡಿದರು. ಯಕ್ಷಗಾನ ಕಲೆಯ ಮೇಲಿನ ಅಭಿಮಾನದಿಂದ ನೌಕರಿಯನ್ನು ತ್ಯಜಿಸಿ ಸಂಪೂರ್ಣ ಜೀವಿತವನ್ನು ಯಕ್ಷಗಾನ ಕಲೆಯ ಅಭಿವೃದ್ಧಿಗಾಗಿ ಮೀಸಲಿಟ್ಟರು. ಇವರು ತಮ್ಮ ತಂದೆಯಿಂದ ಯಕ್ಷಗಾನ ಶಿಕ್ಷಣ ಪಡೆದರು. ಪ್ರಾರಂಭದಲ್ಲಿ ಯಕ್ಷಗಾನ ಪಟು ವರದ ಹಾಸ್ಯಗಾರರು ತರಬೇತಿ ನೀಡಿದರು. ಇವರು ಆಗ ಸಾಮಾಜಿಕ ಮತ್ತು ಪೌರಾಣಿಕ ನಾಟಕಗಳಲ್ಲೂ ಭಾಗವಹಿಸುತ್ತಿದ್ದರು.

ಸಂಗೀತ ವಿದ್ವಾಂಸ ಎಂ.ಎಸ್.ನಟರಾಜನ್ ಅವರ ಪರಿಚಯವಾಗಿ (1965) ಮೈಸೂರಿನ ಸಂಗೀತ ನಾಟಕ ಅಕಾಡೆಮಿ ಶಿಷ್ಯವೇತನ ಪಡೆದು



ದೆಹಲಿಯ ನಾಟ್ಯ ಇನ್‌ಸ್ಟಿಟ್ಯೂಟ್ ಆಫ್ ಕೋರಿಯೋಗ್ರಫಿ ಎಂಬ ಸಂಸ್ಥೆಯಲ್ಲಿ ಮೂರು ವರ್ಷ ಅಭ್ಯಾಸ ಮಾಡಿ ಡಿಪ್ಲೊಮಾ ಪಡೆದರು (1966-69). ಆ ಸಂಸ್ಥೆಯ ನಿರ್ದೇಶಕರೂ ಪ್ರಿನ್ಸಿಪಾಲರೂ ಆಗಿದ್ದ ಮಾಯಾ ರಾವ್ ಭಾರತೀಯ ನೃತ್ಯಗಳ ಪರಿಚಯ ಮಾಡಿಕೊಟ್ಟು, ನೃತ್ಯ ಸಂಯೋಜನೆಯಲ್ಲಿ ಇವರಿಗೆ ತರಬೇತಿ ನೀಡಿ ತಮ್ಮ ತಂಡದೊಂದಿಗೆ ದೇಶವಿದೇಶಗಳ ನೃತ್ಯ ಕಾರ್ಯಕ್ರಮಗಳಿಗೆ ಕರೆದುಕೊಂಡು ಹೋದರು. ದೆಹಲಿಯ ಮೂರು ವರ್ಷಗಳ ವಾಸ ಇವರಿಗೆ ಭಾರತೀಯ ಹಾಗೂ ವಿದೇಶೀಯ ಕಲಾವಿದರೊಂದಿಗೆ ಸಂಪರ್ಕ ಬೆಳೆಸಲು ಕಾರಣವಾಯಿತು; ಕಲೆಯನ್ನು ನೋಡುವ ದೃಷ್ಟಿಯನ್ನು ಬದಲಾಯಿಸಿತು; ಯಕ್ಷಗಾನಕ್ಕೆ ಹೊಸ ಮೆರುಗು ನೀಡಲು ಪ್ರೇರೇಪಿಸಿತು. ದೆಹಲಿಯಿಂದ ಬಂದ ಬಳಿಕ ಎಂ.ಎಸ್.ನಟರಾಜನ್ ಅವರ ನೇತೃತ್ವದಲ್ಲಿ ನಡೆಯುತ್ತಿದ್ದ ಮೈಸೂರು ಸಾಂಸ್ಕೃತಿಕ ತಂಡದಲ್ಲಿ ಯಕ್ಷಗಾನ ತಂಡದ ನೇತೃತ್ವ ವಹಿಸಿ ಭಾರತದ ಬೇರೆಬೇರೆ ಭಾಗಗಳಲ್ಲಿ ಪ್ರದರ್ಶನ ನೀಡಿದರು. ಕೆಲವು ಕಾರಣಗಳಿಂದ ಇಡಗುಂಜಿ ಮೇಳ ಸ್ಥಗಿತಗೊಂಡಿದ್ದರಿಂದ ಇವರು ಬೇರೆಬೇರೆ ಮೇಳಗಳಲ್ಲಿ ದುಡಿದು ಹೆಸರು ಗಳಿಸಿದರು.

1973ರಲ್ಲಿ ಇವರು ಶ್ರೀಇಡಗುಂಜಿ ಮಹಾಗಣಪತಿ ಯಕ್ಷಗಾನ ಮಂಡಳಿಯನ್ನು ಪುನರುಜ್ಜೀವನಗೊಳಿಸಿದರು. ಪ್ರೇಕ್ಷಕರು ಮೂರು ಕಡೆಯಿಂದ ಕುಳಿತು ನೋಡುವಂತಹ ಅರ್ಧಚಂದ್ರಾಕಾರದ ವೇದಿಕೆಯನ್ನು ಮೊದಲಬಾರಿಗೆ ಪ್ರಯೋಗಕ್ಕೆ ತಂದರು. ಇವರ ಮೇಳ ಉತ್ತರ ಕನ್ನಡ, ದಕ್ಷಿಣ ಕನ್ನಡ, ಶಿವಮೊಗ್ಗ ಜಿಲ್ಲೆಗಳಲ್ಲದೆ ಭಾರತದ ಬೇರೆಬೇರೆ ಭಾಗಗಳಲ್ಲಿ ಪ್ರದರ್ಶನ ನೀಡಿತು. ಈ ಸಂಸ್ಥೆ 1985ರವರೆಗೆ ತಿರುಗಾಟ ಮಾಡಿ ಜನಪ್ರಿಯತೆ ಪಡೆಯಿತು.

ಇವರು ನಿರ್ವಹಿಸಿದ ಪಾತ್ರಗಳು ಇತರರಿಗಿಂತ ಭಿನ್ನವಾಗಿರಲು ಕಾರಣ ಇವರು ಕೋರಿಯೋಗ್ರಫಿಯಲ್ಲಿ ಪಡೆದ ತರಬೇತಿ. ಹಿತಮಿತವಾದ ಕುಣಿತ, ಸ್ಪಷ್ಟ ಅರ್ಥಗಾರಿಕೆ, ಆಕರ್ಷಕ ಬಣ್ಣಗಾರಿಕೆ, ಪಾತ್ರಗಳ ಅಂತಃಸತ್ವವನ್ನು ವಿಸ್ತರಿಸುವ ಪೌರಾಣಿಕ ಜ್ಞಾನ ಇವು ಇವರನ್ನು ಪ್ರೇಕ್ಷಕರ ಸಮೀಪಕ್ಕೆ ತಂದುವು. ಶ್ರೀಕೃಷ್ಣ, ಹರಿಶ್ಚಂದ್ರ, ಕಾರ್ತವೀರ್ಯನ ಪಾತ್ರಗಳಿಗೆ ಇವರು ಹೊಸ ಆಯಾಮ ನೀಡಿದರು. ಹಾಗೆಯೇ ಆರಂಭದಲ್ಲಿ ಇವರು ಅಭಿನಯಿಸುತ್ತಿದ್ದ ಸುಭದ್ರಾ, ಅಂಬೆ, ಕೈಕೆಯಿ ಮೊದಲಾದ ಸ್ತ್ರೀ ಪಾತ್ರಗಳಿಗೂ ಜೀವ ತುಂಬಿದರು. ಲಂಕಾದಹನದ ಹನುಮಂತ, ಚಂದ್ರಹಾಸದ ಮದನ, ಭೀಷ್ಮವಿಜಯದ ಸಾಳ್ವ ಪಾತ್ರಗಳು ಇವರ ಅಭಿನಯದ ಸ್ಮರಣೀಯ ಪಾತ್ರಗಳು. ರಾವಣನಂತಹ ಪಾತ್ರದ ಕ್ರೂರತೆ ಮಾನವತೆಗಳನ್ನು ಸಂಯೋಜಿಸಿ ಅದನ್ನೊಂದು ಹೊಸ ಸೃಷ್ಟಿಯಾಗಿ ನಿಲ್ಲಿಸುವ ಜಾಣ್ಮೆ ಇವರದು.

ಇವರು ಐದು ಸಾವಿರಕ್ಕಿಂತ ಹೆಚ್ಚು ಯಕ್ಷಗಾನ ಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ. ರಾಜನಿಂದ ಸೇವಕನವರೆಗೆ ಒಂದು ನೂರ ಐವತ್ತಕ್ಕಿಂತ ಹೆಚ್ಚು ಪಾತ್ರ ಮಾಡಿದ್ದಾರೆ. ಅರವತ್ತಕ್ಕಿಂತ ಹೆಚ್ಚು ಪ್ರಸಂಗಗಳಲ್ಲಿ ಪರಿಣತಿ ಪಡೆದಿದ್ದಾರೆ. ಕರ್ಣ, ಕಂಸ, ಅರ್ಜುನ, ಭೀಮ, ಕೀಚಕ, ಕೌರವ, ಸೈರೇಂಧ್ರಿ, ದಾರುಕ, ಮದನ ಹೀಗೆ ಯಾವುದೇ ಪಾತ್ರ ಮಾಡಲಿ ಅದರಲ್ಲಿ ಜೀವ ತುಂಬುವ, ಹೊಸ ನೋಟ ನೀಡುವ ಕಲೆಗಾರಿಕೆ ಇವರಿಗೆ ಕರಗತವಾಗಿದೆ. ಉಡುಪಿಯ ಸಂಸ್ಥೆಯೊಂದು ಸರ್ವಶ್ರೇಷ್ಠ ಪುರುಷವೇಷಧಾರಿ ಎಂದು ಇವರನ್ನು ಗುರುತಿಸಿದೆ. ಪರ್ವ ಎಂಬ ಕನ್ನಡ ಚಲನಚಿತ್ರದಲ್ಲಿ ಇವರು ಪೋಷಕಪಾತ್ರ ವಹಿಸಿದ್ದರು.

ಪ್ರತಿವರ್ಷ ತಮ್ಮ ತಂದೆ ಕೆರೆಮನೆ ಶಿವರಾಮ ಹೆಗಡೆಯವರ ಸಂಸ್ಮರಣ ದಿನವನ್ನಾಚರಿಸಿ ಕಲಾವಿದರನ್ನು ಸತ್ಕರಿಸಿ ಗೌರವಿಸುವ ಪರಿಪಾಠವನ್ನಿಟ್ಟುಕೊಂಡಿದ್ದಾರೆ. 1986ರಿಂದ ಹೊನ್ನಾವರ ತಾಲ್ಲೂಕಿನ ಗುಣವಂತೆಯಲ್ಲಿ ಯಕ್ಷಗಾನ ಕಲಾಕೇಂದ್ರ ಸ್ಥಾಪಿಸಿ ವಿದ್ಯಾರ್ಥಿಗಳಿಗೆ ತರಬೇತಿ ನಿಡುತ್ತಿದ್ದಾರೆ.

ಇವರ ಕಲಾಸಾಧನೆಗಾಗಿ ಅನೇಕ ಪ್ರಶಸ್ತಿ ಗೌರವಗಳು ಲಭ್ಯವಾಗಿವೆ. ಇವುಗಳಲ್ಲಿ ಮುಖ್ಯವಾದವು ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (2000), ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ (1993). ಇವರು ಕರ್ನಾಟಕ ನಾಟಕ ಅಕಾಡೆಮಿ (1978-81), ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ (1984-87)ಗಳ ಸದಸ್ಯರಾಗಿದ್ದರು. ಅಲ್ಲದೆ ನಾಗಪುರದ ದಕ್ಷಿಣವಲಯ ಸಾಂಸ್ಕೃತಿಕ ಕೇಂದ್ರದ ಕಾರ್ಯಕ್ರಮ ಸಮಿತಿಯ ಸದಸ್ಯರಾಗಿಯೂ ಇವರು ಸೇವೆ ಸಲ್ಲಿಸಿದ್ದಾರೆ (1987-90). ಈಗ ಇವರು ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಸಲಹಾ ಸಮಿತಿಯ ಸದಸ್ಯರಾಗಿದ್ದಾರೆ. ಇವರು ತಮ್ಮ ಯಕ್ಷಗಾನ ತಂಡದೊಂದಿಗೆ ಚೀನ (1994), ಬ್ರಿಟನ್ (1995) ಬಾಂಗ್ಲಾದೇಶ, ಬೆಹರೇನ್, ಫ್ರಾನ್ಸ್, ಇಂಗ್ಲೆಂಡ್, ಸ್ಪೇನ್, ನೇಪಾಲ ಮೊದಲಾದ ದೇಶಗಳಿಗೆ ಭೇಟಿ ನೀಡಿದ್ದಾರೆ. ಇವರು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಪ್ರಸ್ತುತ ಅಧ್ಯಕ್ಷರಾಗಿದ್ದಾರೆ (2005). (ಎಸ್.ಎಂ.ಕೆ.)

**ಕೆರೆಮನೆ ಶಿವರಾಮ ಹೆಗಡೆ :** 1907-92. ಉತ್ತರ ಕನ್ನಡ ಜಿಲ್ಲೆಯ ಯಕ್ಷಗಾನ ಕಲಾವಿದರು. ತಂದೆ ಶಂಭು ಹೆಗಡೆ, ತಾಯಿ



ಸುಬ್ಬಮ್ಮ. 1907 ಜೂನ್ 21ರಂದು ಇವರ ಜನನ. ಪ್ರತಿ ನಿತ್ಯ ರಾಮಾಯಣ ಮಹಾಭಾರತಗಳ ಪಠಣ ನಡೆಯುತ್ತಿದ್ದ ಮನೆಯ ವಾತಾವರಣದಲ್ಲಿ ಬೆಳೆದ ಶಿವರಾಮ ಹೆಗಡೆಯವರು ಯಕ್ಷಗಾನ ಕಲಾವಿದರಾದ ಕೆ.ಸದಾನಂದ ಹೆಗಡೆ, ಮೂಡ್ಕಣಿ ನಾರಾಯಣ ಹೆಗಡೆ, ಬಾಬುಭಟ್ಟ, ಸೋದರ ಮಾವ ಗಣಪತಿಭಟ್ಟ ಇವರ ಮಾರ್ಗದರ್ಶನದಿಂದ ಹದಿನಾರನೆಯ ವಯಸ್ಸಿನಲ್ಲಿಯೇ ಗೆಜ್ಜೆಕಟ್ಟಿ ರಂಗಸ್ಥಳಕ್ಕೆ ಇಳಿದರು. ಸ್ವಲ್ಪ ಕಾಲ ಬಸ್ ಕಂಡಕ್ಟರ್, ಖಾನಾವಳಿ ಮಾಲೀಕ, ಗುಮಾಸ್ತ ಮುಂತಾದ ಉದ್ಯೋಗ ನಡೆಸಿದ್ದರೂ ಮತ್ತೆ ಯಕ್ಷಗಾನ ಕ್ಷೇತ್ರಕ್ಕೆ ಮರಳಿ 1935ರಲ್ಲಿ ಶ್ರೀ ಇಡಗುಂಜಿ ಮಹಾಗಣಪತಿ ಪ್ರಸಾದಿತ ಯಕ್ಷಗಾನ ಮಂಡಳಿ ಎಂಬ ಸಂಸ್ಥೆಯನ್ನು ಸ್ಥಾಪಿಸಿದ್ದಲ್ಲದೆ ಸಂಸ್ಥೆಯ ಮೂಲಕ ಹಲವು ಕಲಾವಿದರಿಗೆ ಆಶ್ರಯ ನೀಡಿದರು. ಸುಮಾರು ಇಪ್ಪತ್ತೈದು ವರ್ಷಗಳ ಕಾಲ ಮೇಳ ನಡೆಸಿ 1958-59ರಲ್ಲಿ ಅದನ್ನು ಸ್ಥಗಿತಗೊಳಿಸಿದರು. ಮೇಳದಲ್ಲಿ ಹೊಸ ಪ್ರಯೋಗಗಳನ್ನು ಮಾಡಿದರು.

ತಮ್ಮ ಮೇಳ ಸ್ಥಗಿತಗೊಳಿಸಿದ ಬಳಿಕವೂ ಬೇರೆ ಬೇರೆ ಮೇಳಗಳಲ್ಲಿ ವೇಷ ಹಾಕಿ ಯಕ್ಷಗಾನ ಪ್ರೇಮಿಗಳನ್ನು ರಂಜಿಸಿದರು. ಮೂರೂರಿನ ಮಹಾವಿಷ್ಣು ಪ್ರಾಸಾರಿಕ ಯಕ್ಷಗಾನ ಮಂಡಳಿ ಕೊಲ್ಲೂರುಮೇಳ ಸಂಯುಕ್ತ ಮೇಳಗಳಲ್ಲಿ ಪಾಲ್ಗೊಂಡರು. ಇವರ ಮಗ ಶಂಭು ಹೆಗಡೆ (ನೋಡಿ) ಇಡಗುಂಜಿ ಮೇಳವನ್ನು ಪುನರ್‌ಸಂಘಟಿಸಿದಾಗಲೂ (ಸು.1973) ಇವರು ಪಾತ್ರ ವಹಿಸಿದರು. ಆಗ ಇವರು ದೇವೇಂದ್ರ, ಅತಿಕಾಯ, ಪಾತ್ರಗಳನ್ನು ಮಾಡಿದರು. ಹೆಗಡೆಯುವರು ತೆಂಕು ಬಡಗು ಎರಡೂ ತಿಟ್ಟುಗಳ ಕಲಾವಿದರನ್ನು ಗೌರವ ಪ್ರೀತಿಯಿಂದ ಕಾಣುತ್ತಿದ್ದರು.

ಉತ್ತರ ಕನ್ನಡ ಜಿಲ್ಲೆಯಲ್ಲಿ ಡೇರೆ ಪದ್ಧತಿಯ ಆಟವನ್ನು ಆಚರಣೆಗೆ ತಂದವರಲ್ಲಿ ಇವರು ಮೊದಲಿಗರು. ಲೋಂಡಾ, ಕಲಘಟಗಿ, ಸಾಂಗ್ಲಿ, ನಾಸಿಕ, ಮುಂಬಯಿ ಮುಂತಾದೆಡೆಗಳಲ್ಲೂ ಇವರು ಯಕ್ಷಗಾನ ಪ್ರದರ್ಶಿಸಿದರು. 1949ರಲ್ಲಿ ಇವರೇ ನಿರ್ದೇಶಿಸಿ ಅಭಿನಯಿಸಿದ ಭೀಷ್ಮ ವಿಜಯ ಚಲನಚಿತ್ರಕ್ಕೂ ಅಳವಡಿಸಲ್ಪಟ್ಟಿತು. ಆಕಾಶವಾಣಿಯ ಧಾರವಾಡ ಕೇಂದ್ರದವರು ಇವರ ಅನೇಕ ಯಕ್ಷಗಾನ ರೂಪಕಗಳನ್ನು ಪ್ರಸಾರ ಮಾಡಿದ್ದಾರೆ. 1968ರಲ್ಲಿ ಇವರ ಜರಾಸಂಧವನ್ನು ದೂರದರ್ಶನದ ಮೂಲಕ ದೆಹಲಿಯಲ್ಲಿ ಬಿತ್ತರಿಸಲಾಯಿತು.

ಕೆರೆಮನೆ ಶಿವರಾಮ ಹೆಗಡೆಯವರು ಅಭಿನಯಿಸಿದ ಉತ್ಕೃಷ್ಟ, ಪಾತ್ರಗಳೆಂದರೆ ದುರ್ಯೋಧನ, ಜರಾಸಂಧ, ಕಂಸ, ಅಕ್ರೂರ, ಸುಧನ್ವ, ಆಂಜನೇಯ, ವಾಲ್ಮೀಕಿ, ಅರ್ಜುನ, ದುಷ್ಟಬುದ್ಧಿ, ಭದ್ರಸೇನ, ಕೀಚಕ, ಭೀಮ, ಭೀಷ್ಮ, ಕೌರವ - ಈ ಹಿರಿಯ ಕಲಾವಿದರನ್ನು ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ 1965ರಲ್ಲಿ ರಾಜ್ಯಪ್ರಶಸ್ತಿಯನ್ನೂ, ಕೇಂದ್ರ ಸಂಗೀತನಾಟಕ ಅಕಾಡೆಮಿ ರಾಷ್ಟ್ರಪ್ರಶಸ್ತಿಯನ್ನೂ ನೀಡಿ ಗೌರವಿಸಿದುವು (1971). ಯಕ್ಷಗಾನಕ್ಕೆ ಹೊಸ ಆಯಾಮ ನೀಡಿದ ಅಭಿಜಾತ ಕಲಾವಿದರಾದ ಇವರು 1992ರಲ್ಲಿ ನಿಧನಹೊಂದಿದರು. (ಬಿ.ವಿ.ಕೆ.)

**ಕೆರೆಯ ಪದ್ಮರಸ :** ಸು.1165. ವೀರಶೈವ ಕವಿ. ದೀಕ್ಷಾಬೋಧೆ, ಸಾನಂದಚರಿತ್ರೆ ಎಂಬ ಗ್ರಂಥಗಳ ಕರ್ತೃ. ಈತ ಹರಿಹರನ ಸಮಕಾಲೀನನೂ ರಾಘವಾಂಕನಿಗೆ ಹತ್ತಿಪ್ಪತ್ತು ವರ್ಷ ಹಿರಿಯನೂ ಆಗಿದ್ದಿರಬಹುದೆಂದು ವಿದ್ವಾಂಸರ ಊಹೆ. ಈತನ ಮುತ್ತಜ್ಜ ಕುಲ್ಲಕುರಿಕೆಯಲ್ಲಿ ದೊರೆಯಾಗಿದ್ದ ಶಿವಯೋಗಿ ಮಲ್ಲಿಕಾರ್ಜುನ ಪಂಡಿತ (ಮಲ್ಲರಸ), ಅಜ್ಜ ಸಕಲೇಶ ಮಾದರಸ, ತಂದೆ ಮಾಯಿದೇವ, ತಾಯಿ ಮಂಗಲೆ, ಮಗ ಕುಮಾರ ಪದ್ಮರಸ. ಈತ ಹೊಯ್ಸಳ ಒಂದನೆಯ ನರಸಿಂಹನ ಮಂತ್ರಿಯೂ ದಂಡೇಶನೂ ಆಗಿದ್ದನಲ್ಲದೆ ಕನ್ನಡ ಮತ್ತು ಸಂಸ್ಕೃತಗಳೆರಡರಲ್ಲೂ ಕವಿಯಾಗಿದ್ದಂತೆಯೂ ತಿಳಿಯುತ್ತದೆ. ಬೇಲೂರಿನಲ್ಲಿ ಒಂದು ಕೆರೆಯನ್ನು ಕಟ್ಟಿಸಿದ್ದರಿಂದ ಕೆರೆಯ ಪದ್ಮರಸನೆಂದು ಪ್ರಸಿದ್ಧನಾದ. ಈತನಿಗೆ ಸಕಲಶಾಬ್ದಿಕಸಾರ್ವಭೌಮ, ತಾರ್ಕಿಕ ಕವಿ ಚಕ್ರವರ್ತಿ, ಶರಣಕವಿ, ಶ್ರೀಶಿವಾದ್ವೈತಸಾಕಾರಸಿದ್ಧಾಂತಪ್ರತಿಷ್ಠಾಪನಾಚಾರ್ಯ ಎಂಬ ಬಿರುದುಗಳಿದ್ದಂತೆ ತಿಳಿದುಬರುತ್ತದೆ. ಈತ ನರಸಿಂಹ ಬಲ್ಲಾಳನ ಸಭೆಯಲ್ಲಿ ಪ್ರಸಿದ್ಧ ವಾಗ್ಮಿಯಾಗಿದ್ದು ವಾದದಲ್ಲಿ ಆಂಧ್ರದೇಶದ ತ್ರಿಭುವನ ತಾತನೆಂಬುವನನ್ನು ಸೋಲಿಸಿದ ಮುಂತಾದ ವಿಷಯಗಳು ಪದ್ಮಣಾಂಕನ ಪದ್ಮಪುರಾಣದಲ್ಲಿ ಸಮಗ್ರವಾಗಿ ನಿರೂಪಿತವಾಗಿವೆ.

ಕನ್ನಡದಲ್ಲಿರುವ ದೀಕ್ಷಾಬೋಧ ಕೃತಿ ರಗಳೆಯ ರೂಪದಲ್ಲಿದೆ ಅಲ್ಲಲ್ಲಿ ಕಂದವೃತ್ತಗಳೂ ಬಳಕೆಯಾಗಿವೆ. ಈ ಗ್ರಂಥವನ್ನು ಮೂರು ಸ್ಥಲಗಳಾಗಿ ವಿಭಾಗಿಸಲಾಗಿದೆ. ಇದರಲ್ಲಿ ವೀರಶೈವ ದೀಕ್ಷೆಯನ್ನು ಪಡೆಯುವುದಕ್ಕೆ ಬೇಕಾದ ವಿಷಯಗಳು ಗುರುಶಿಷ್ಯ ಸಂವಾದ ರೂಪದಲ್ಲಿ ನಿರೂಪಿತವಾಗಿವೆ. ಅಲ್ಲಲ್ಲಿ ಸಂಸ್ಕೃತ ಶ್ಲೋಕಗಳ ಕನ್ನಡ ಅನುವಾದಗಳೂ ಕಂಡುಬರುತ್ತವೆ. ಈ ಗ್ರಂಥದಲ್ಲಿ ಕಾವ್ಯತ್ವಕ್ಕಿಂತ ಹೆಚ್ಚಾಗಿ ಅನುಭಾವ ಮತ್ತು ತತ್ವನಿರೂಪಣೆ ಕಂಡುಬರುತ್ತದೆ.

ಸಾನಂದಚರಿತ್ರೆ ಸಂಸ್ಕೃತದಲ್ಲಿದೆ. ಕೆರೆಯ ಪದ್ಮರಸನ ಮಗ ಕುಮಾರ ಪದ್ಮರಸ ಈ ಗ್ರಂಥವನ್ನೇ ಷಟ್ಪದಿಯಲ್ಲಿ ಕನ್ನಡಕ್ಕೆ ತಂದುಕೊಟ್ಟಿದ್ದಾನೆ. (ಸಿ.ಎ.)

**ಕೆರೆಸಂತೆ :** ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕಿನ ಒಂದು ಗ್ರಾಮ. ಕಡೂರು-ಬಾಣಾವರ ನಡುವಣ ಪ್ರಧಾನರಸ್ತೆಗೆ ಸಮೀಪವಾಗಿ ಕಡೂರಿನಿಂದ 18ಕಿಮೀ ದೂರದಲ್ಲಿದೆ.

ಹೊಯ್ಸಳರ ಕಾಲದಲ್ಲಿ ಇದೊಂದು ಪ್ರಮುಖ ಅಗ್ರಹಾರವೂ ವ್ಯಾಪಾರ ಕೇಂದ್ರವೂ ಆಗಿತ್ತು. ಹಿಮಗಿರಿ ಅಥವಾ ಹೇಮಗಿರಿ ಬೆಟ್ಟದ ಬುಡದಲ್ಲಿರುವ ವಿಶಾಲ ಕೆರೆಗೆ ವಿಷ್ಣು ಸಮುದ್ರವೆಂಬ ಹೆಸರಿದೆ. ಹಿಂದೆ ಈ ಕೆರೆಗೆ ಮತ್ತು ಕೆರೆಸಂತೆ ಗ್ರಾಮಕ್ಕೆ ವಿಷ್ಣುಸಮುದ್ರ ಎಂಬ ಹೆಸರೇ ಅನ್ವಯವಾಗುತ್ತಿತ್ತು. ಈ ಊರನ್ನು ಹೇಮಾವತಿಪಟ್ಟಣವೆಂದೂ ಉಲ್ಲೇಖಿಸಿದೆ. ಇಲ್ಲಿನ ಶಾಸನಗಳಲ್ಲಿ ಊರನ್ನೂ ಕೆರೆಯನ್ನೂ ವಿಶೇಷವಾಗಿ ಬಣ್ಣಿಸಲಾಗಿದೆ. ಕೆರೆಯ ತೂಬನ್ನು ಒಂದು ಶಾಸನದಲ್ಲಿ ರಾಯರಾಯಪುರಂಗೊಂಡ ತೂಬು ಎಂದು ಕರೆದಿದೆ. ರಾಯರಾಯಪುರ ಎಂದರೆ ತಲಕಾಡು; 'ತಲಕಾಡುಗೊಂಡ' ಎಂಬುದು ವಿಷ್ಣುವರ್ಧನನ ಅಭಿಮಾನದ ಬಿರುದುಗಳಲ್ಲೊಂದು. ಆತನ ಪತ್ನಿ ರಾಜಲದೇವಿಯ ಸೋದರಮಾವನಾದ ಮಂಚಿಯರಸ ಈ ಪ್ರದೇಶವನ್ನು ಆಳುತ್ತಿದ್ದ ಈತ ಮಂಜೇಶ್ವರ ದೇವಾಲಯವನ್ನು (1141) ಕಟ್ಟಿಸಿದ. ಇದಲ್ಲದೆ ಶಾಸನಗಳಿಂದ ತಿಳಿದುಬರುವ ಆಲಯಗಳೆಂದರೆ ಒಡೇಶ್ವರ (1136), ನಖರೇಶ್ವರ (1143), ಸಿದ್ಧೇಶ್ವರ (1181), ಹಿಮಗಿರಿ ಲಕ್ಷ್ಮೀನರಸಿಂಹ (1223), ಆದಿನಾಥ ಮತ್ತು ಪಾರ್ಶ್ವನಾಥ (12-13ನೆಯ ಶತಮಾನ) ಜನಾರ್ದನ (ಬೇರೆ ಬೇರೆ ಕಾಲದ ಭಾಗಗಳಿವೆ) ಮತ್ತು ಶಂಭುಲಿಂಗೇಶ್ವರ (1223). ಆದರೆ ಬಹಳಷ್ಟು ದೇವಾಲಯಗಳು ಹಾನಿಹೊಂದಿವೆ ಇಲ್ಲವೇ ನಾಶವಾಗಿವೆ. ಈಗಿನ ಪಾಳು ಗುಡಿಗಳಲ್ಲಿ ವೀರಭದ್ರ, ಗಣೇಶ, ತ್ರಿಕೂಟೇಶ್ವರ, ಮಹಾಲಕ್ಷ್ಮಿ, ಆಂಜನೇಯ ಮುಂತಾದವುಗಳಿವೆ. ಜಿನಬಸದಿಯ ಚಾವಣಿಯಲ್ಲಿ ಹೊಯ್ಸಳ ಕಾಲದ ಕನ್ನಡ ವರ್ಣಮಾಲೆ ಇತ್ತೀಚೆಗೆ ಪತ್ತೆಯಾಗಿದೆ.

ಬೆಟ್ಟದ ಮೇಲಿನ ಶಿವಾಲಯವನ್ನು ಮಲ್ಲಿಕಾರ್ಜುನ ದೇವಾಲಯವೆಂದು ಕರೆಯುತ್ತಾರೆ. ಬಂಡೆಯ ಚಾಚಿನಿಂದಾದ ಆಸರೆಯಲ್ಲಿ ಈ ಗುಡಿ ರೂಪುಗೊಂಡಿದೆ. ಬುಡದಲ್ಲಿ ಸಿದ್ಧರಮಠ ಮತ್ತು ಶಾಲಾಕಟ್ಟಡಗಳಿವೆ. ಶಾಲೆಯ ಆವರಣದಲ್ಲಿ ಹೊಯ್ಸಳ ಶಿಲ್ಪಗಳನ್ನೂ ಶಾಸನಗಳನ್ನೂ ತಂದು ಇರಿಸಲಾಗಿದೆ. ಹಳೆಯ ಊರನ್ನು ತೊರೆದು ಹೊಸ ಊರನ್ನು ಕಟ್ಟಿಕೊಳ್ಳಲಾಗಿದೆ. ಪ್ರತಿ ವರ್ಷ ಜನವರಿಯ ಸುಮಾರಿಗೆ ಇಲ್ಲಿ ನಡೆಯುವ ಜಾತ್ರೆ ಬಹಳ ಪ್ರಸಿದ್ಧ. (ಎಚ್.ಎಂ.ಎನ್.ಆರ್.)

**ಕೆಲಸದ ಹಾಡುಗಳು :** ಕೆಲಸದ ಸಮಯಗಳಲ್ಲಿ ಶ್ರಮವನ್ನು ಹಗುರ ಮಾಡಿಕೊಳ್ಳುವುದಕ್ಕೂ ಉತ್ಸಾಹ ಪಡೆವುದಕ್ಕೂ ಗ್ರಾಮೀಣ ಜನ ಬಳಸುವ ಹಾಡುಗಳು (ವರ್ಕ್ ಸಾಂಗ್ಸ್). ಇಲ್ಲಿ ಕೆಲಸ ಎಂಬ ಪದ ಜನಬಳಕೆಯಲ್ಲಿರುವ ವಿವಿಧ ಕಾಯಕಗಳನ್ನು ಸೂಚಿಸುವುದರಿಂದ ಈ ಹಾಡುಗಳನ್ನು ಕಾಯಕ ಗೀತೆಗಳು ಎಂದೂ ಕರೆವುದಿದೆ.

ಕೆಲಸದ ಹಾಡುಗಳ ಬಳಕೆ ಜನಪದದಲ್ಲಿ ಆದಿಯಿಂದಲೂ ರೂಢಿಯಲ್ಲಿದೆ. ಇವನ್ನು ವ್ಯಕ್ತಿಗಳು ಒಂಟಿಯಾಗಿಯೂ ಗುಂಪಾಗಿಯೂ ಹಾಡುವುದುಂಟು. ಹಳ್ಳಿಗರಲ್ಲಿ ಮಾತ್ರವಲ್ಲದೆ ಮುಂದುವರಿದ, ನಾಗರಿಕರೆನಿಸಿಕೊಂಡವರಲ್ಲಿಯೂ ಈ ಗೀತೆಗಳನ್ನು ಕ್ವಚಿತ್ತಾಗಿ ಕಾಣಬಹುದು. ಇವು ಭಾರತದಲ್ಲಿ ಮಾತ್ರವಲ್ಲದೆ ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿಯೂ ಕಂಡುಬರುತ್ತವೆ. ವೈಜ್ಞಾನಿಕವಾಗಿ ಮುಂದುವರಿದ ಯಂತ್ರೋಪಕರಣಗಳ ಸೌಲಭ್ಯ ಹೆಚ್ಚಿದಂತೆ, ನಾಗರಿಕತೆ ಬೆಳೆದಂತೆ ಇಂಥ ಹಾಡುಗಳ ಬಳಕೆ ಕಡಿಮೆಯಾಗುತ್ತ ಬರುತ್ತಿದೆ. ಈ ಹಾಡುಗಳನ್ನು ಎಲ್ಲ ವೃತ್ತಿಯವರೂ ಬಳಸುತ್ತಾರೆ. ಎಲ್ಲರ ಉದ್ದೇಶವೂ ಒಂದೇ. ಆದರೆ ಆಯಾ ಕೆಲಸಕ್ಕನುಗುಣವಾಗಿ ಹಾಡುವ ಗೀತೆಗಳಿಗೆ ಆಯಾ ಕೆಲಸದ ಹೆಸರೇ ಬರಬಹುದು. ಉದಾಹರಣೆಗೆ, ರಾಗಿ ಬೀಸುವ ಸಮಯದಲ್ಲಿ ಹಾಡುವ ಪದಗಳನ್ನು ರಾಗಿಕಲ್ಲಿನ ಪದಗಳು ಎಂದೂ ಗಾಡಿಹೊಡೆಯುವಾಗಿನ ಪದಗಳನ್ನು ಗಾಡೀ ಪದಗಳೆಂದೂ ಕರೆಯುವುದು ವಾಡಿಕೆಯಾಗಿದೆ.

ಮನೆಗೆಲಸಗಳಿಗೆ, ಬೇಸಾಯಕ್ಕೆ, ಗೃಹಕೈಗಾರಿಕೆಗಳಿಗೆ ಮತ್ತು ಇತರ ನಾನಾ ವೃತ್ತಿಗಳಿಗೆ ಸಂಬಂಧಿಸಿದಂತೆ ಈ ಕೆಲಸದ ಹಾಡುಗಳವೆ. ರಾಗಿ ಬೀಸುವಾಗ, ಬತ್ತಕುಟ್ಟುವಾಗ, ಹೊಲದಲ್ಲಿ ಕಳೆಕೀಳುವಾಗ, ನಾಟಿ ಮಾಡುವಾಗ, ಧಾನ್ಯಗಳನ್ನು ಒನೆಯುವಾಗ, ನೆಲಗಡಲೆ ಸುಲಿಯುವಾಗ, ಕಣದಲ್ಲಿ ದವಸಧಾನ್ಯಗಳನ್ನು ತೂರುವಾಗ ಸ್ತ್ರೀಯರು ಹಾಡುಗಳನ್ನು ಹೇಳಿಕೊಂಡು ತಮ್ಮ ಕೆಲಸ, ಶ್ರಮವನ್ನು ಕಡಿಮೆಮಾಡಿಕೊಳ್ಳುತ್ತಾರೆ. ರಾಗಿ ಬೀಸುವಾಗ ಸ್ತ್ರೀ ಒಬ್ಬಂಟಿಗಳಾಗಿಯೂ ಕೆಲವು ಸಮಯಗಳಲ್ಲಿ ಇಬ್ಬರು ಜೊತೆಯಾಗಿಯೂ ಹಾಡುವುದುಂಟು.

ಹಿಂದೆ ಯಂತ್ರಸೌಕರ್ಯವಿರಲಿಲ್ಲವಾಗಿ ಸ್ತ್ರೀಯರು ಮುಂಜಾನೆ ಎದ್ದು ಬೆಳಕು ಹರಿಯುವವರೆಗೆ ಬೀಸುತ್ತಿದ್ದರು. ಅಂಥ ಸಂದರ್ಭದಲ್ಲಿನ ಕೆಲವು ಗೀತೆಗಳನ್ನಿಲ್ಲಿ ನೋಡಬಹುದು:

ಮೂಡು ಮುಂದಾಗಿ ಹೂಡೇವು ರಾಗೀ ಕಲ್ಲು
ರೂಢಿಗೆ ಈಶ್ವರನ ಮಡದೀಯ - ಗೌರಮ್ಮನ
ಹೂಡೇವು ಹೊನ್ನ ಗೆರಸೀಯ

ಕಲ್ಲು ಹಿಡಿವಾಗ ಒಳ್ಳೊಳ್ಳೆ ನುಡಿ ನುಡಿಯೆ
ಸೊಲ್ಲುಸೊಲ್ಲಿಗೆ ಶಿವ ಬರಲಿ - ಈ ಮನೆ
ಮಲ್ಲಯ್ಯ ಬರಲಿ ಮನದಾಗೆ

ಬಿದಿರೆ ಬೆಟ್ಟದ ಮೇಲೆ ಚದುರೆ ರಾಗಿಯ ಕಲ್ಲೆ
ಮದನಾರಿ ನೆಂಬೊ ಹಿಡಿಗೂಟ - ಹಿಡುಕೊಂಡು
ಮೊದಲೇ ಸಿರಿಗೌರಿ ನೆನೆದೇವು

ಕಲ್ಲು ಬಿಟ್ಟೇವೆಂದು ಎಲ್ಲರೂ ಕೇಳಿರಿ
ಕುಕ್ಕೇಲಿ ರಾಗಿ ಬಿಳಿ ಎಲೆ - ತಕ್ಕೊಂಡು
ಮತ್ತೆ ರಾತ್ರಿಕೆ ಬರುತೀವಿ

ಉಳಿದ ಸಮಯಗಳಲ್ಲಿ ಗೀತಗಳನ್ನು ಗುಂಪಾಗಿಯೇ ಹಾಡುತ್ತಿರುತ್ತಾರೆ. ಹೀಗೆ ಗುಂಪಾಗಿ ಹಾಡುವಾಗ ಮುಮ್ಮೇಳ ಹಿಮ್ಮೇಳಗಳು ಕಂಡುಬರುತ್ತವೆ. ಮುಮ್ಮೇಳ ಎಂದರೆ ಮೊದಲು ಹಾಡುವವರ ಗುಂಪು. ಅವರು ಗೀತೆಯಲ್ಲಿನ ಕಥೆಯನ್ನು ಮುಂದುವರಿಸಿಕೊಂಡು ಹೋಗುತ್ತಾರೆ ಅಥವಾ ಗೀತೆಯ ಮುಕ್ತಾಯದತ್ತ ಸಾಗುತ್ತಾರೆ. ಹಿಮ್ಮೇಳದವರು ಮೊದಲು ಹಾಡಿದವರ ಪಲ್ಲವಿಯನ್ನು ಮಾತ್ರ ಪುನರುಚ್ಚರಿಸಿಕೊಂಡು ಹೋಗುತ್ತಾರೆ.

ಇನ್ನು ಪುರುಷರು ಗಾಡಿ ಹೊಡೆಯುವಾಗ, ಬತ್ತದ ಹುಲ್ಲನ್ನು ಒಕ್ಕುವಾಗ, ರೋಣುಗಲ್ಲು ಹೊಡೆಯುವಾಗ, ದನ ಕಾಯುವಾಗ, ಹುಟ್ಟು ಹಾಕುವಾಗ, ಮೀನು ಹಿಡಿಯುವಾಗ, ಮನೆ ಕಟ್ಟುವಾಗ, ಗದ್ದೆಕೆಲಸ ಮಾಡುವಾಗ, ಹೊಲ ಉಳುವಾಗ ಹಾಡುಗಳನ್ನು ಹೇಳುವುದರ ಮೂಲಕ ತಮ್ಮ ಬೇಸರವನ್ನು ಕಳೆದುಕೊಳ್ಳುವುದನ್ನು ಗಮನಿಸಬಹುದು. ಕಾಯಕದ ದೈಹಿಕ ಶ್ರಮಕ್ಕನುಗುಣವಾಗಿ ಗೀತೆಗಳ ರಾಗ ಲಯ ಗತಿಗಳನ್ನು ಏರಿಸಿ ಇಳಿಸುವುದು ಅನಿವಾರ್ಯವಾಗುತ್ತದೆ. ಕಾಯಕದ ಹಾಡುಗಳಲ್ಲಿ ಪ್ರೇಮಗೀತೆಗಳು, ಶೋಕಗೀತೆಗಳು, ದೈವಿಕ ಆವರಣಕ್ಕೆ ಒಳಪಟ್ಟ ಸೂತ್ರ ರೂಪದ ಗೀತಗಳು, ಮಿಶ್ರಗೀತಗಳು, ಕಥನಗೀತಗಳು, ಹಾಸ್ಯಗೀತಗಳು ಕಂಡುಬರುತ್ತವೆಯಾದರೂ ಸಾಮಾನ್ಯವಾಗಿ ಪ್ರೇಮಗೀತಗಳೇ ಹೆಚ್ಚು. ಹಿಂದೆ ಒಂದೂರಿಂದ ಮತ್ತೊಂದು ಊರಿಗೆ ಹತ್ತಾರು ಮೈಲಿಗಳ ದೂರ ಪ್ರಯಾಣವನ್ನೂ ಗಾಡಿಗಳಲ್ಲಿ ಮಾಡುತ್ತಿದ್ದುದುಂಟು. ಆ ಸಮಯದಲ್ಲಿ ಗಟ್ಟಿಯಾಗಿ ಪದಗಳನ್ನು ಹೇಳುತ್ತ ಗಾಡಿ ಹೊಡೆಯುತ್ತಿದ್ದರೆ ದಾರಿ ಸಾಗಿದ್ದೆ ತಿಳಿಯುತ್ತಿರಲಿಲ್ಲ. ಹಾಡಿನಿಂದ ಎತ್ತುಗಳಿಗೂ ಹಿತವೆನಿಸುತ್ತಿತ್ತೆಂದು ತೋರುತ್ತದೆ. ಅನೇಕ ಗಾಡಿಗಳು ಒಟ್ಟಿಗೆ ಹೋಗುತ್ತಿದ್ದರೆ, ಒಂದು ಗಾಡಿಯವರು ಮತ್ತೊಂದು ಗಾಡಿಯವರನ್ನೋ ದಾರಿಯಲ್ಲಿ ಕಂಡ ಹೆಣ್ಣುಗಳನ್ನೊ ಅಥವಾ ಮತ್ತೇನನ್ನೋ ಕುರಿತು ಹಾಡು ಕಟ್ಟಿ ಹೇಳುವುದು ವಾಡಿಕೆ ಆಗಿತ್ತು.

ಬಂಡಿ ಹೊಡೆಯೋನ ಬಂಡಾಟ ನೋಡಿರೋ
ಬಾರುಕೋಲ್ಹಿಡು ಬಲಗೈಲಿ - ಹಿಡಕೊಂಡು
ಬೋರಾಡಿ ಘಟ್ಟ ಇಳಿಸ್ಯಾನು

ಕಬ್ಬು ಕಡಿಯೋನೆ ಉಬ್ಬು ನೇರುಳ್ಳೋನೆ
ಗೊಬ್ಬರದ ಗಾಡಿ ಹೊಡೆಯೋನೆ - ತಮ್ಮಯ್ಯನ
ಉಬ್ಬು ತಿದ್ಯವಳೆ ಶ್ರೀಗೌರಿ

ಹಾಡು ಬಂದರೆ ಹಾಡು ಗಾಳಿ ಬಂದರೆ ತೂರೋ
ಹಾಡೇಲೊ ಗೆಣಯ ನನದ್ಯೂಲಿ - ಬಲ್ಲಂಥ
ಜಾಣ ನೀ ಒಡದ್ದೇಲೊ

ಹೋರಿಯ ಹೊಡಕಂಡು ಕೋರ್ ಹುಡುಗಿ ನಾ ಕಂಡೆ
ಗೋರಿಕಾಯಂತ ಎದೆಯೋಳ - ನಾ ಕಂಡು
ಹೋರಿಯ ಹೊಡೆಯಾಕೆ ಮನಸಿಲ್ಲ

ಕೆಂಪಾನೆ ಹೆಣ್ಣಿಗೂ ಸಂಪಿಗೆ ಹೂವಿಗೂ
ಅಂತರದಲ್ಲಾಡೊ ಹುಣುಸೇಯ - ದೋರ್ಹಣ್ಣೂ
ಎಂತೋರು ಬಾಯಿ ಬಿಡುತಾರೆ

ಅಮೆರಿಕದ ತೋಟಗಳಲ್ಲಿ ಕೂಲಿಗಳಾಗಿ ಕೆಲಸಮಾಡುವ ನಿಗ್ರೋಗಳಲ್ಲಿ ಹೆಚ್ಚಾಗಿ ಈ ಕೆಲಸದ ಹಾಡುಗಳ ಬಳಕೆಯಿತ್ತು. ಫ್ರಾನ್ಸ್ ದೇಶದಲ್ಲಿ ಕೆಲಸದ ಸಮಯದಲ್ಲಿ ಸ್ತ್ರೀಪುರುಷರು ಒಟ್ಟಾಗಿ ಪ್ರೇಮಗೀತಗಳನ್ನು ಹಾಡುತ್ತಿದ್ದರು. ಜಪಾನಿನಲ್ಲಿ ಹಗ್ಗಹೊಸೆಯುವ ಸಮಯದ ಇಂಥ ಹಾಡುಗಳ ಬಳಕೆ ಇತ್ತು. ಹಿಂದೆ ಸಮುದ್ರದಲ್ಲಿ ಯಾನಮಾಡುತ್ತಿದ್ದ ನಾವಿಕರು ತಮ್ಮ ಬೇಸರಿಕೆಯನ್ನು ಕಳೆಯುವುದಕ್ಕಾಗಿ ಗೀತಗಳನ್ನು ಹಾಡಿಕೊಳ್ಳುತ್ತಿದ್ದರು. ಕೇರಳದಲ್ಲಿ ಈಗಲೂ ದೋಣಿಗಳನ್ನು ನಡೆಸುವ ಸ್ಪರ್ಧೆಗಳೇರ್ಪಟ್ಟಾಗ ಅಲ್ಲದೆ ಮಿಕ್ಕ ಕಾಲಗಳಲ್ಲಿ ಕೂಡ ಗುಂಪುಗುಂಪಾಗಿ ಗೀತಗಳನ್ನು ಹೇಳಿಕೊಂಡು ಹುರುಪಿನಿಂದ ಹುಟ್ಟುಹಾಕುವುದನ್ನು ಕಾಣಬಹುದು. ಕರ್ನಾಟಕದ ಕರಾವಳಿಯ ಮೀನುಗಾರರಿಗೆ ಬೇಸರ ಕಳೆಯಲು ಹಾಡುವುದು ರೂಢಿಯಲ್ಲುಂಟು. *

**ಕೆಳದಿ :** ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನಲ್ಲಿ ಸಾಗರಕ್ಕೆ 8ಕಿಮೀ ಉತ್ತರಕ್ಕಿರುವ ಗ್ರಾಮ, ಐತಿಹಾಸಿಕ ಸ್ಥಳ.

ಹನ್ನೆರಡನೆಯ ಶತಮಾನದಲ್ಲಿ ಈ ಊರು ಸಾಂತರರ ಅಧೀನದಲ್ಲಿತ್ತು. ಪೊಂಬುಚ್ಚಪುರವರಾಧೀಶ್ವರನಾಗಿದ್ದ ಮಹಾಮಂಡಳೇಶ್ವರ ತ್ರಿಭುವನಮಲ್ಲ ಭುಜಬಲ ಪ್ರತಾಪ ಶಾಂತರಸನ ತ್ರುಟಿತ ಶಾಸನವೊಂದು ಇಲ್ಲಿ ದೊರೆತಿದೆ. ಊರು ಪ್ರವರ್ಧಮಾನಕ್ಕೆ ಬಂದುದು 16ನೆಯ ಶತಮಾನದ ಆರಂಭದಲ್ಲಿ, ವಿಜಯನಗರದ ಕೃಷ್ಣದೇವರಾಯನ ಆಳಿಕೆಯಲ್ಲಿ. ಇಲ್ಲಿಯೇ ಹುಟ್ಟಿ ಬೆಳೆದ ಸಾಮಾನ್ಯ ಮನೆತನವೊಂದಕ್ಕೆ ಸೇರಿದ್ದ ಚೌಡಗೌಡನೆಂಬ ರೈತನಿಗೆ ನಿಕ್ಷೇಪವೊಂದು ದೊರೆತುದಾಗಿಯೂ ಅದರ ಸಹಾಯದಿಂದ ಇಲ್ಲಿ ಸಣ್ಣ ಪಾಳೆಯಪಟ್ಟೊಂದನ್ನು ಅವನು ಕಟ್ಟಿಕೊಂಡು ಮುಂದೆ ತನ್ನ ಪ್ರಭಾವವನ್ನು ಬೆಳೆಸಿಕೊಂಡನೆಂದೂ ಐತಿಹ್ಯವಿದೆ. ಇವನ ಪರಾಕ್ರಮಕ್ಕೆ ಮೆಚ್ಚಿ ಕೃಷ್ಣದೇವರಾಯ ಎಂಟು ಮಾಗಣೆಗಳ ನಾಯಕತ್ವವನ್ನು ಕೊಟ್ಟು ಇವನನ್ನು ನಾಯಕನನ್ನಾಗಿ ಮಾಡಿದ. ಹೀಗೆ ಕೆಳದಿ ಸು.1500ರಲ್ಲಿ ಒಂದು ಪುಟ್ಟ ಸಂಸ್ಥಾನದ ರಾಜಧಾನಿಯಾಯಿತು. ಚೌಡಪ್ಪನಾಯಕ ಇಲ್ಲಿ ಅರಮನೆ, ಕೋಟೆ, ಕೆರೆಗಳನ್ನು ನಿರ್ಮಿಸಿದ. ಜೊತೆಗೆ ಸುಂದರವಾದ ರಾಮೇಶ್ವರ ದೇವಾಲಯವನ್ನೂ ಕಟ್ಟಿಸಿದ. ಮುಂದೆ 60 ವರ್ಷಗಳ ಕಾಲ ಇದು ಇವನ ವಂಶದವರ ರಾಜಧಾನಿಯಾಗಿತ್ತು. ಅನಂತರ ರಾಜಧಾನಿಯನ್ನು ಇದರ ಸಮೀಪದಲ್ಲಿಯೇ ಇದ್ದ ಇಕ್ಕೇರಿಗೂ ಆಮೇಲೆ ಬಿದನೂರಿಗೂ ಬದಲಾಯಿಸಲಾಯಿತಾದರೂ ಈ ಊರು ನಾಯಕನ ಆಳಿಕೆ ಕೊನೆಗೊಳ್ಳುವವರೆಗೂ ಆ ರಾಜ್ಯದ ಒಂದು ಪ್ರಮುಖ ನಗರವಾಗಿಯೇ ಮುಂದುವರಿಯಿತು. ಅನಂತರ ಇದರ ಪ್ರಾಮುಖ್ಯ ಇಳಿಮುಖವಾಗಿ ಕಡೆಗೆ ಒಂದು ಸಾಮಾನ್ಯ ಹಳ್ಳಿಯಾಗಿ ಉಳಿಯಿತು. ಇಲ್ಲಿ ವಿಸ್ತಾರವಾಗಿ ಹರಡಿರುವ ಹಳೆಯ ಊರಿನ ನಿವೇಶನಗಳು, ದೇವಾಲಯಗಳು, ಕೆರೆ, ಮಠಗಳು, ಅದರ ಹಿಂದಿನ ವೈಭವವನ್ನು ಸೂಚಿಸುತ್ತವೆ.



ವೀರಭದ್ರ ದೇವಾಲಯದ ಭುವನೇಶ್ವರಿಯಲ್ಲಿರುವ ಗಂಡಭೇರುಂಡ, ಕೆಳದಿ

ಈಗ ಇಲ್ಲಿ ಉಳಿದುಬಂದಿರುವ ಅವಶೇಷಗಳಲ್ಲಿ ಮುಖ್ಯವಾದವು ಒಂದೇ ಆವರಣದಲ್ಲಿ ನಿಂತಿರುವ ಮೂರು ದೇವಾಲಯಗಳು - ನಡುವೆ ರಾಮೇಶ್ವರ ದೇವಾಲಯ, ಅದರ ಬಲಕ್ಕೆ ವೀರಭದ್ರ ದೇವಾಲಯ,

ಎಡಕ್ಕೆ ಪಾರ್ವತಿ ದೇವಾಲಯ. ಇವುಗಳಲ್ಲಿ ಮೊದಲು ಕಟ್ಟಿದುದು ರಾಮೇಶ್ವರ ದೇವಾಲಯ. ಹುತ್ತವೊಂದರಲ್ಲಿ ರಾಮೇಶ್ವರ ಲಿಂಗ ದೊರೆಯಿತೆಂದೂ ಅದಕ್ಕೆ ಮೊದಲು ಸಾಮಾನ್ಯ ಗುಡಿಸಲು ಕಟ್ಟಿಸಿ ಚೌಡಪ್ಪಗೌಡ ಪೂಜಿಸುತ್ತಿದ್ದನೆಂದೂ ಮುಂದೆ ಕೆಳದಿಯ ನಾಯಕನಾದ ಮೇಲೆ ಶಿಲಾಮಯ ದೇವಾಲಯವನ್ನು ಕಟ್ಟಿಸಿದನೆಂದೂ ಐತಿಹ್ಯವಿದೆ. ಮುಂದೆ ಸದಾಶಿವನಾಯಕನ ಮತ್ತು ಹಿರಿಯ ವೆಂಕಟಪ್ಪನಾಯಕನ ಕಾಲದಲ್ಲಿ ಈ ಕಟ್ಟಡ ಪೂರ್ಣವಾಯಿತೆಂದು ಇತರ ಆಧಾರಗಳಿಂದ ನಿರ್ಧರಿಸಬಹುದು. ಈ ದೇವಾಲಯ ಕೆಳದಿಯ ನಾಯಕರ ಕಾಲದ ವಾಸ್ತು ಶೈಲಿಯ ಮಾದರಿಯಾಗಿದ್ದು, ಹೊಯ್ಸಳ, ದ್ರಾವಿಡ ಮತ್ತು ಇಸ್ಲಾಮಿ ಶೈಲಿಗಳ ಮಿಶ್ರಣವನ್ನಿಲ್ಲಿ ಕಾಣಬಹುದು. ಚೌಕನಾದ ಗರ್ಭಗೃಹ, ಸುತ್ತಲೂ ಪ್ರದಕ್ಷಿಣಾಪಥ ಮುಂದೆ ಎರಡು ಕಂಬಗಳಿಂದ ಕೂಡಿದ ರಂಗಮಂಟಪ ಮತ್ತು ದೊಡ್ಡದಾದ ಮುಖಮಂಟಪಗಳಿರುವ ಈ ದೇವಾಲಯ ಎತ್ತರವಾದ ಜಗತಿಯ ಮೇಲಿದೆ. ಜಗತಿಯ ದಿಂಡೊಂದರ ಮೇಲೆ ಕಿರುಚಿತ್ರಗಳೂ ಸರಳವಾದ ಗೋಡೆಗಳ ಮೇಲೆ ಅಲ್ಲಲ್ಲಿ ತೆಳುವುಬ್ಬು ಶಿಲ್ಪಗಳಲ್ಲಿ ಬಿಡಿಸಿರುವ ಕಣ್ಣಪ್ಪ; ಗರುಡ ಹನುಮರು ಹಣ್ಣೊಂದಕ್ಕಾಗಿ ಕಿತ್ತಾಡುತ್ತಿರುವುದು; ಒಂಟೆ, ಆನೆ, ಯಾಳಿ ಕ್ರೋಧೋನ್ಮತ್ತವಾದ ಆನೆ ಯೋಧನೊಬ್ಬನನ್ನು ಸೀಳುತ್ತಿರುವುದು ಮೊದಲಾದ ಮೂರ್ತಿಗಳು ಇವೆ. ಮುಖಮಂಟಪದ ಸುತ್ತಲೂ ದ್ರಾವಿಡ ರೀತಿಯ ಅರೆಮಂಟಪಗಳನ್ನು ಹೊತ್ತ ಅರೆಗಂಬಗಳಿವೆ; ಒಳಭಾಗದಲ್ಲಿ ಜಗುಲಿಯಿದೆ. ಮೂರು ಕಡೆ ಪ್ರವೇಶವುಳ್ಳ ಈ ತೆರೆದ ಮಂಟಪದ ಒಳ ಚಾವಣಿ ಸರಳವಾದುದು. ನಡುವಣ ಅಂಕಣದಲ್ಲಿ ಮಾತ್ರ ಪದ್ಮಗಳಿವೆ. ಪಶ್ಚಿಮದ ಗೋಡೆಗೆ ಹೊಂದಿಕೊಂಡಿರುವ ಅರೆಮಂಟಪಗಳೆರಡರಲ್ಲಿ ಗಣಪತಿ ಮತ್ತು ಮಹಿಷಾಸುರ ಮರ್ದಿನಿಯ ಮೂರ್ತಿಗಳಿವೆ. ನಡುವಣ ಶೈವ ದ್ವಾರಪಾಲಕರುಳ್ಳ ಪ್ರವೇಶದ್ವಾರ ನಂದಿಯನ್ನುಳ್ಳ ಕಿರಿದಾದ ರಂಗಮಂಟಪಕ್ಕೆ ಸೇರಿದಂತಿದೆ. ಮುಕ್ಕಾಲು ಮೀಟರಿನಷ್ಟು ಎತ್ತರವಿರುವ, ಹೊಳಪಿನ ಮೈಯುಳ್ಳ ಲಿಂಗವಿರುವ ಗರ್ಭಗೃಹ ಬಾಗಿಲುವಾಡದ ಮೇಲೆ ನಿಂತಿರುವ ರಾಮೇಶ್ವರನ ಮೂರ್ತಿಯುಂಟು. ಗರ್ಭಗೃಹದ ಮೇಲೆ ಚೌಕಾಕೃತಿಯ ದ್ರಾವಿಡ ರೀತಿಯ ಶಿಲಾಗೋಪುರ, ಅದರ ನಾಲ್ಕು ಮೂಲೆಗಳಲ್ಲಿಯೂ, ನಂದಿ, ತುದಿಯಲ್ಲಿ ಲೋಹ ಕಲಶ ಇವೆ.

ವೀರಭದ್ರದೇವಾಲಯ ರಾಮೇಶ್ವರ ದೇವಾಲಯಕ್ಕೆ ಸೇರಿದಂತೆಯೇ ಇದೆ. ಆ ದೇವಾಲಯ ನಿರ್ಮಾಣವಾದ ಮೇಲೆ ಒಂದು ತಲೆಮಾರು ಈಚೆಗೆ ಇದನ್ನು ಕಟ್ಟಿದ್ದುದಾಗಿ ತೋರುತ್ತದೆ.



ವೀರಭದ್ರ ದೇವಾಲಯದ ಅಲಂಕೃತ ಮೇಲ್ಚಾವಣಿ

ಬಹುಮಟ್ಟಿಗೆ ರಾಮೇಶ್ವರ ದೇವಾಲಯದಂತೆಯೇ ಇರುವ ಈ ಗುಡಿಯಲ್ಲಿ ಶಿಲ್ಪಗಳು ಹೆಚ್ಚು. ಹೊರ ಗೋಡೆಯ ಮೂರ್ತಿಶಿಲ್ಪಗಳಲ್ಲಿ ಕುತೂಹಲವನ್ನು ಕೆರಳಿಸುವುದು ವಾಸ್ತುಪುರುಷ ಎನ್ನಲಾದ ಮೂರ್ತಿ. ಆನೆಯ ಕಾಲುಗಳಂಥ ದಪ್ಪಕಾಲುಗಳು, ಆನೆಯ ಸೊಂಡಿಲಿನಂಥ ಕೈಗಳು, ಪಕ್ಷಿಯ ಬೆನ್ನಿನಂಥ ದೇಹ, ಸಿಂಹದ ಮುಖ, ನೀಳವಾದ ಗಡ್ಡವಿರುವ ಈ ವಿಚಿತ್ರ ಮೂರ್ತಿಯ ಸುತ್ತಲೂ ಬಗೆಬಗೆಯ ಮಿಥುನ ಮತ್ತು ಇತರ ಮೂರ್ತಿಶಿಲ್ಪಗಳುಂಟು. ಈ ದೇವಾಲಯದ ಮುಖಮಂಟಪಕ್ಕೆ ಮಾತ್ರ ಮುಂದೆ ಒಂದು ಮುಖಭದ್ರವುಂಟು. ಈ ಮುಖಮಂಟಪದ ಪಶ್ಚಿಮದ ಗೋಡೆಗೆ ಸೇರಿದಂತೆ ಉನ್ನತವಾದ ದಕ್ಷಬ್ರಹ್ಮ ಮತ್ತು ನರಸಿಂಹನ ಮೂರ್ತಿಗಳು ಮೂಲ ವೀರಭದ್ರನ ಮೂರ್ತಿಯ ಇಕ್ಕೆಲಗಳಲ್ಲಿ ಕೈಮುಗಿದು ನಿಂತಂತಿದ್ದು ಭವ್ಯವಾಗಿವೆ. ಮಂಟಪದ ಹನ್ನೆರಡು ಅಂಕಣಗಳ ಒಳಚಾವಣಿಗಳ ಶಿಲ್ಪ ಅಪೂರ್ವ.

ಸುಂದರವಾಗಿ ಸುರುಳಿಸುರುಳಿಯಾಗಿ ಬಿಡಿಸಿರುವ ವಿಶಾಲವಾದ ಪದ್ಮಗಳೂ ಸುತ್ತಣ ಅಂಕಣಗಳಲ್ಲಿ ನಡುವೆ ಸೂರ್ಯ ಮತ್ತು ಅವನನ್ನು ಬಳಸಿದ ಗ್ರಹಗಳೂ ಇವೆ. ಇದರ ಮುಂದಿನ ಅಂಕಣದಲ್ಲಿ ದೊಡ್ಡದಾಗಿ ವಿವರವಾಗಿ ಬಿಡಿಸಿರುವ ಗಂಡಭೇರುಂಡ ಮೂರ್ತಿಯಿದೆ. ಇದು ಅಚ್ಯುತರಾಯನ ನಾಣ್ಯಗಳ ಮೇಲಿರುವ ಪಕ್ಷಿಯನ್ನು ಹೋಲುತ್ತದೆ. ಬಳ್ಳಿಯ ಸುರುಳಿಗಳ ನಡುವೆ ವಿಶಾಲವಾಗಿ ಹರಡಿಕೊಂಡಿರುವ ರೆಕ್ಕೆಗಳು, ಅಗಲವಾಗಿ ಬಿಟ್ಟಿರುವ ಹಿಂಭಾಗದ ಪುಕ್ಕಗಳು, ಎರಡು ಕಡೆಯೂ ಚಾಚಿರುವ ಎರಡು ಬಲವಾದ ಕೊಕ್ಕುಗಳು, ಒಂದೊಂದು ಕೊಕ್ಕಿನಲ್ಲಿಯೂ ಕಚ್ಚಿ ಹಿಡಿದಿರುವ ಸಿಂಹಗಳು, ಆ ಸಿಂಹಗಳ ಕಾಲುಗುರುಗಳಿಗೆ ಸಿಕ್ಕಿಕೊಂಡು ಘೀಳಿಡುತ್ತಿರುವ ಆನೆಗಳು, ಇವುಗಳಿಂದ ಕೂಡಿರುವ, ತನ್ನ ಕಾಲುಗಳಲ್ಲಿಯೂ ಮದ್ದಾನೆಗಳನ್ನು ಹಿಡಿದು ಲೀಲಾಜಾಲವಾಗಿ ಮೇಲೇರಿ ಹೋಗುತ್ತಿರುವಂತೆ ಕಡೆಯಲಾಗಿರುವ ಈ ಗಂಡಭೇರುಂಡ ಒಂದು ಶ್ರೇಷ್ಠ ಶಿಲ್ಪ. ಕಂಬಗಳ ಮೇಲಿನ ಮೂರ್ತಿಗಳ ಪೈಕಿ ಬಹುಶಃ ಈ ದೇವಾಲಯವನ್ನು ಕಟ್ಟಿಸಿದ ಕೆಳದಿ ನಾಯಕ ಭದ್ರಪ್ಪ ನಾಯಕನದೂ ಒಂದು.

ಮಾದವಾಡಿ ಸೀಮೆಯ ವಾಲವಳ್ಳಿ ಅಥವಾ ಆಳವಾಳವೆಂಬ ಗ್ರಾಮದಲ್ಲಿ ದೊರೆತ ವೀರಭದ್ರಮೂರ್ತಿಯನ್ನು ಸಂಕಣ್ಣನಾಯಕ ಕೆಳದಿಗೆ ತಂದು ಇಲ್ಲಿ ಪ್ರತಿಷ್ಠೆ ಮಾಡಿದನೆಂದು ಕೆಳದಿನೃಪವಿಜಯ, ಕೆಳದಿ ಸಂಸ್ಥಾನದ ರಾಯರ ವಂಶಾವಳಿ ಮೊದಲಾದುವು ತಿಳಿಸುತ್ತವೆ. ಚಿಕ್ಕದಾದ ಈ ವೀರಭದ್ರನ ಮೂರ್ತಿ ಸಾಮಾನ್ಯವಾದುದು. ದೇವಾಲಯದ ಮುಂದಿರುವ ಧ್ವಜಸ್ತಂಭವನ್ನು 1681ರಲ್ಲಿ ನಿಲ್ಲಿಸಿದುದಾಗಿ ಅದರ ಮೇಲಿನ ಶಾಸನದಿಂದ ವ್ಯಕ್ತವಾಗುತ್ತದೆ.

ರಾಮೇಶ್ವರ ದೇವಾಲಯದ ಎಡಪಕ್ಕದಲ್ಲಿರುವ ಪಾರ್ವತಿಯ ಗುಡಿ ಚಿಕ್ಕದು. ಗರ್ಭಗೃಹ ಮಾತ್ರ ಕಲ್ಲಿನ ಕಟ್ಟಡ, ಮುಂದಿನ ಭಾಗ ಇಟ್ಟಿಗೆಯದು. ಮುಂದಿನ ಮಂಟಪದ ಒಳಭಾಗದ ಮರದ ಕೆತ್ತನೆ ಸುಂದರವಾಗಿದೆ.

ನಾಯಕರು ಕಟ್ಟಿಸಿದ ಕೆಳದಿಯ ಕೆರೆ ದೊಡ್ಡದಾಗಿದೆ. ಇದನ್ನು ಕಟ್ಟುವಾಗ ಕೆಳದಿ ಎಂಬ ವೇಶ್ಯೆ ಆತ್ಮಾರ್ಪಣೆ ಮಾಡಿಕೊಂಡುದಾಗಿಯೂ ಅವಳ ಹೆಸರಿನಲ್ಲಿ ಈ ಊರಿಗೆ ಕೆಳದಿ ಎಂಬ ಹೆಸರು ಬಂತೆಂದೂ ದಂತಕಥೆಯೊಂದುಂಟು. ಕೆಳದಿಯಲ್ಲಿ ನಾಯಕರ ಕಾಲದಲ್ಲಿ ಕಟ್ಟಿಸಿದ್ದ ಮಹಂತಿನ ಮಠ ಈಗಿನ ಕೆಳದಿ ಗ್ರಾಮಕ್ಕೆ ಸಮೀಪದ ಬಂದಗದ್ದೆಯಲ್ಲಿದೆ. ಈ ಮಠ ದೊಡ್ಡದಾಗಿ ಭವ್ಯವಾಗಿದೆ. ಕೆಳದಿ ಅರಸರು ಕಟ್ಟಿಸಿದ್ದ ಸಂಪಕಟ್ಟೆ ಕೆರೆ ಈಗ ಪಾಳು ಬಿದ್ದಿದೆ. ಇಲ್ಲಿ ಚಿಕ್ಕದಾದ ಆಂಜನೇಯ, ವೆಂಕಟರಮಣ, ಗೋಪಾಲಕೃಷ್ಣ, ವೀರಭದ್ರ ಮೊದಲಾದ ದೇವಾಲಯಗಳೂ ಜೈನ ಬಸದಿಯೂ ಇವೆ. ಇವೆಲ್ಲವೂ ಆಗಿನ ಕೆಳದಿ ನಗರಕ್ಕೆ ಸೇರಿದುವಾಗಿದ್ದುವು. (ಎಂ.ಎಚ್.)

**ಕೆಳದಿ ರಾಜವಂಶ :** 16ನೆಯ ಶತಮಾನದಾರಭ್ಯ 18ನೆಯ ಶತಮಾನದ ಮೂರನೆಯ ಪಾದದ ವರೆಗೆ ಕರ್ನಾಟಕದ ಮಲೆನಾಡು ಮತ್ತು ಕರಾವಳಿ ಪ್ರದೇಶಗಳಲ್ಲಿ ಆಳಿದ ಒಂದು ಮನೆತನ. ಈ ವಂಶದವರು ಮೊದಲು ವಿಜಯನಗರದ ಸಾಮಂತರಾಗಿದ್ದು, ಆ ರಾಜ್ಯದ ಪತನಾನಂತರ ಸ್ವತಂತ್ರರಾದರು.

ಕೆಳದಿ ಅರಸರ ರಾಜ್ಯ ಅದರ ಉಚ್ಛ್ರಾಯಸ್ಥಿತಿಯಲ್ಲಿ ಈಗಿನ ಶಿವಮೊಗ್ಗ, ದಕ್ಷಿಣ ಕನ್ನಡ, ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳ ಬಹುಭಾಗ, ಉತ್ತರ ಕನ್ನಡ, ಧಾರವಾಡ, ಚಿತ್ರದುರ್ಗ ಜಿಲ್ಲೆಗಳ ಕೆಳಭಾಗ ಮತ್ತು ಕೇರಳದ ಸ್ವಲ್ಪ ಭಾಗಗಳನ್ನು ಒಳಗೊಂಡಿತ್ತು. ಈ ರಾಜ್ಯದ ರಾಜಧಾನಿಗಳು ಕ್ರಮವಾಗಿ ಕೆಳದಿ, ಇಕ್ಕೇರಿ ಮತ್ತು ಕೊನೆಗೆ ಬಿದನೂರು

ಕೆಳದಿ ಅರಸರ ವಂಶಾವಳಿ :




(ನಗರ), ಸ್ವಲ್ಪಕಾಲ ಭುವನಗಿರಿ ಅಥವಾ ಕವಲೆದುರ್ಗ ಆಗಿದ್ದುವು. ಆದ್ದರಿಂದ ಈ ಅರಸರನ್ನು ಇತಿಹಾಸಕಾರರು ಕೆಳದಿ, ಇಕ್ಕೇರಿ ಅಥವಾ ಬಿದನೂರಿನ ನಾಯಕರೆಂದು ಕರೆದಿದ್ದಾರೆ. ಆದರೆ ಈ ವಂಶ ಕೆಳದಿಯಿಂದ ಬಂದಿದ್ದರಿಂದಲೂ ತಮ್ಮನ್ನು ಯಾವಾಗಲೂ ಕೆಳದಿನಾಯಕರೆಂದು ಕರೆದುಕೊಂಡಿರುವುದರಿಂದಲೂ ಕೆಳದಿ ಎಂಬ ಹೆಸರೇ ಉಚಿತ. ಮಲೆನಾಡಿನ ರಾಜ್ಯವಾದ ಇದಕ್ಕೆ ಮಲೆರಾಜ್ಯವೆನ್ನುವ ಹೆಸರೂ ಇತ್ತು. ಗಂಡಭೇರುಂಡ ಈ ವಂಶದವರ ರಾಜಲಾಂಛನವಾಗಿತ್ತು.

ಈ ವಂಶದ ಇತಿಹಾಸದ ರಚನೆಗೆ ಹಿರಿಯ ಬಸವಪ್ಪನಾಯಕ ರಚಿಸಿದ ಶಿವತತ್ತ್ವರತ್ನಾಕರ ಎಂಬ ಸಂಸ್ಕೃತ ವಿಶ್ವಕೋಶ, ಲಿಂಗಣ್ಣ ವಿರಚಿತ ಕೆಳದಿನೃಪವಿಜಯ ಎಂಬ ಕನ್ನಡ ಚಂಪೂಗ್ರಂಥ, ಆ ಕಾಲದ ವಿಪುಲ ಶಾಸನಗಳು ಮತ್ತು ಪೆಟ್ರೊ ಡೆಲವೆಲ್ಲೆ, ಪೀಟರ್ ಮಂಡಿ, ಅಲೆಗ್ಸಾಂಡರ್ ಹ್ಯಾಮಿಲ್ಟನ್ ಮುಂತಾದ ವಿದೇಶಿ ಪ್ರವಾಸಿಗಳ ಬರೆಹಗಳು ಸಹಾಯಕವಾಗಿವೆ. ಇವಲ್ಲದೆ ಪೋರ್ಚುಗೀಸ್ ರಾಜಕೀಯ ದಾಖಲೆಗಳೂ ಅಮೂಲ್ಯ ವಿಷಯಗಳನ್ನು ಒದಗಿಸುತ್ತವೆ.

ಈ ವಂಶದ ಅರಸರು ಶೌರ್ಯ, ದಾನ, ಸ್ವಧರ್ಮನಿಷ್ಠೆ, ಪರಧರ್ಮಸಹಿಷ್ಣುತೆ ಮತ್ತು ವಿದ್ಯಾಪ್ರೋತ್ಸಾಹಗಳಲ್ಲಿ ವಿಜಯನಗರದ ಅರಸರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಯಥಾಶಕ್ತಿಯಾಗಿ ಅನುಸರಿಸಿದರು. ಆದ್ದರಿಂದಲೇ ಕೆಳದಿ ರಾಜ್ಯ ವಿಜಯನಗರದ ಹಾಗೆ ಜನಪ್ರಿಯವಾಗಿತ್ತು. ಈ ದೃಷ್ಟಿಯಲ್ಲಿ ಕೆಳದಿ ರಾಜ್ಯ ವಿಜಯನಗರದ ಪರಂಪರೆಯನ್ನು ಮುಂದುವರಿಸಿದ ಅದರ ಸಂತಾನ ಎನ್ನಬಹುದು.

**ರಾಜಕೀಯ ಇತಿಹಾಸ:** ಈ ವಂಶದ ಮೂಲಪುರುಷ ಚೌಡಗೌಡ (ಸು.1500-30). ಇವನು ಸ್ವಶ್ರಮದಿಂದ ಕೆಳದಿಯ ಸುತ್ತಣ ಪ್ರದೇಶದಲ್ಲಿ ಒಂದು ಪಾಳೆಯಪಟ್ಟನ್ನು ಸ್ಥಾಪಿಸಿ ವಿಜಯನಗರದ ಅರಸರಿಂದ ಮಾನ್ಯ ಪಡೆದ. ಇವನ ಮಗ ಸದಾಶಿವನಾಯಕ (ಸು.1530-67) ಬಹು ಪರಾಕ್ರಮಶಾಲಿ. ವಿಜಯನಗರದ ಅರಸರ ಪರವಾಗಿ ಬಿಜಾಪುರದ ಸುಲ್ತಾನನನ್ನು ಪರಾಜಯಗೊಳಿಸಿದ್ದಲ್ಲದೆ ಇತರ ಅನೇಕ ಯುದ್ಧಗಳಲ್ಲೂ ನೆರವಾಗಿ, ಅವರಿಂದ ಮಂಗಳೂರು, ಬಾರಕೂರು, ಚಂದ್ರಗುತ್ತಿ ಪ್ರಾಂತ್ಯಗಳನ್ನು ಪಡೆದು ಕೆಳದಿ ರಾಜ್ಯದ ವಿಸ್ತಾರಕ್ಕೂ ಕೀರ್ತಿಗೂ ಕಾರಣನಾದ. ಹಿಂದಿದ್ದ ಸಣ್ಣ ಪಾಳೆಯಪಟ್ಟು ಇವನ ಕಾಲದಲ್ಲಿ ರಾಜ್ಯವಾಯಿತು. ಇವನ ಆಳಿಕೆಯ ಕೊನೆಯ ಭಾಗದಲ್ಲಿ ರಕ್ಕಸತಂಗಡಿ ಕದನದಿಂದಾಗಿ ವಿಜಯನಗರ ಸಾಮ್ರಾಜ್ಯದ ಪತನವಾಯಿತು. ಅನಂತರ ಕೆಳದಿಯ ಅರಸರು ಬಹುತೇಕ ಸ್ವತಂತ್ರರಾಗಿಯೇ ಆಳಿದರು. ಆದರೂ ವಿಜಯನಗರದ ವಂಶಿಕರಾದ ಸದಾಶಿವ, ತಿರುಮಲ, ಶ್ರೀರಂಗ ಇವರನ್ನು ನಿಮಿತ್ತಮಾತ್ರಕ್ಕೆ ಸಾರ್ವಭೌಮರೆಂದು ಗೌರವಿಸುತ್ತಿದ್ದರು.

ಸದಾಶಿವನಾಯಕ (ದೊಡ್ಡಸಂಕಣ್ಣನಾಯಕ) ಮೃತನಾದಮೇಲೆ ಅವನ ಮಗ ಚಿಕ್ಕಸಂಕಣ್ಣನಾಯಕ (ಸು.1567-82) ರಾಜ್ಯವಾಳಿದ. ಈ ಕಾಲದ ಆಳಿಕೆಯ ಬಗ್ಗೆ ಇರುವ ಇನ್ನೊಂದು ಅಭಿಪ್ರಾಯ ಹೀಗಿದೆ; ದೊಡ್ಡ ಸಂಕಣ್ಣ ನಾಯಕ ಸದಾಶಿವನ ಮಗ. ಇವನು 1567-82ರ ವರೆಗೆ ರಾಜ್ಯವಾಳಿ ಅನಂತರ ತನ್ನ ತಮ್ಮ ಚಿಕ್ಕಸಂಕಣ್ಣನಿಗೆ ಅಧಿಕಾರ ವಹಿಸಿದ, ಚಿಕ್ಕಸಂಕಣ್ಣನೂ ಇವನ ತಮ್ಮ ರಾಮರಾಜಯ್ಯನೂ ಸ್ವಲ್ಪ ಕಾಲ (ಸು.1570-82) ಜೊತೆಯಾಗಿ ರಾಜ್ಯಭಾರ ಮಾಡಿದರು.



ನಗರದ ಕೋಟೆಯ ದ್ವಾರ

ಅನಂತರದ ರಾಜ ವೆಂಕಟಪ್ಪನಾಯಕ (1582-1629). ಈತ ಸಮರ್ಥನೂ ದೂರದರ್ಶಿಯೂ ಆಗಿದ್ದ. ಇವನ ಕಾಲದಲ್ಲಿ ಈ ಸಂಸ್ಥಾನ ಅಧೀನತೆಯಿಂದ ಪೂರ್ಣವಾಗಿ ಮುಕ್ತವಾಯಿತು. ಇದನ್ನು ಸಹಿಸದ ಬಿಜಾಪುರದ ಸುಲ್ತಾನ ಕೆಳದಿಯನ್ನು ವಶಪಡಿಸಿಕೊಳ್ಳಲು ಕಳಿಸಿದ ಸೇನೆಯನ್ನು ವೆಂಕಟಪ್ಪ ಹಿಮ್ಮೆಟ್ಟಿಸಿ, ಅದರ ಸ್ಮಾರಕವಾಗಿ ಹಾನಗಲ್ಲಿನಲ್ಲಿ ವಿಜಯಸ್ತಂಭವನ್ನು ನಿರ್ಮಿಸಿದ. ಅನಂತರ ಸಾತಳಲು, ಬೆಳವಂದೂರು, ಮುಂಡಗದ್ದೆ, ಹೊನ್ನೂರು, ಹಾರ್‍ನಹಳ್ಳಿ ಮೊದಲಾದ ಪಾಳೆಯಗಾರರನ್ನು ಸೋಲಿಸಿ ತನ್ನ ರಾಜ್ಯವನ್ನು ವಿಸ್ತರಿಸಿದ. ರಾಜ್ಯ ಪಶ್ಚಿಮಕ್ಕೆ ಸಮುದ್ರದವರೆಗೂ ವಿಸ್ತರಿಸಿತು. ಗೇರುಸೊಪ್ಪೆಯ ಭೈರಾದೇವಿಯನ್ನು ಸೋಲಿಸಿ, ಪೋರ್ಚುಗೀಸರ ಪ್ರಭಾವವನ್ನು ಕುಗ್ಗಿಸಿ ಲಾಭದಾಯಕವಾದ ಮೆಣಸಿನವ್ಯಾಪಾರವನ್ನು ತನ್ನ ಹಿಡಿತಕ್ಕೆ ತಂದು, ದೇಶದ ಸಂಪತ್ತನ್ನು ಹೆಚ್ಚಿಸಿದ. ಅನಂತರ ಆಳಿದ ಇವನ ಮೊಮ್ಮಗ ವೀರಭದ್ರನಾಯಕನ (1629-45) ಕಾಲದಲ್ಲಿ ರಾಜ್ಯ ಅನೇಕ ವಿಪತ್ತುಗಳನ್ನು ಎದುರಿಸಬೇಕಾಯಿತು. ಸೋದೆ ಮತ್ತು ಬಿಳಗಿ ಅರಸರು, ತರೀಕೆರೆ, ಬಾಣಾವರದ ಪಾಳೆಯಗಾರರು ಇವನ ಮೇಲೆ ಪಿತೂರಿ ಹೂಡಿ ಸಜ್ಜುಗೊಳಿಸಿದ್ದ ದಾಳಿಯನ್ನು ವೀರಭದ್ರನಾಯಕ ಸಾಮೋಪಾಯದಿಂದ ನಿಲ್ಲಿಸಿದ. ಆದರೆ ಬಿಜಾಪುರದ ಆದಿಲ್‍ಶಾಹೀ ದೊರೆಯ ದಂಡನಾಯಕ ಇವನ ರಾಜ್ಯದಲ್ಲಿ ಹಾವಳಿ ಮಾಡಿದ. ಪೋರ್ಚುಗೀಸರು ಸಮಯ ಸಾಧಿಸಿ ರಾಜ್ಯದ ಕೆಲವು ಭಾಗಗಳನ್ನೂ ಹಲವು ಅನುಕೂಲಗಳನ್ನೂ ಪಡೆದರು. ರಾಜ್ಯ ಶಿಥಿಲವಾಯಿತು.

ಶಿವಪ್ಪನಾಯಕ (1645-60) ಈ ವಂಶದ ಪ್ರಮುಖದೊರೆ. ರಾಜಧಾನಿ ಬಿದನೂರನ್ನು ವೃದ್ಧಿಮಾಡಿ, ದೇಶದ ಇತರ ಭಾಗಗಳಿಂದ ವ್ಯಾಪಾರಿಗಳೂ ಕುಶಲಕೆಲಸಗಾರರೂ ಬಂದು ನೆಲಸಲು ಸಹಾಯಕನಾದ. ಈತ ತನ್ನ ರಾಜ್ಯದ ಗಡಿಯನ್ನು ಸಕ್ಕರೆಪಟ್ಟಣ ಮತ್ತು ಹಾಸನದವರೆಗೆ ವಿಸ್ತರಿಸಿದ. ತುಳುನಾಡಿನ ದಾಳಿಯಿಂದ ಇವನ ರಾಜ್ಯ ಕಾಸರಗೋಡಿನವರೆಗೆ ವಿಸ್ತರಿಸಿದ್ದಲ್ಲದೆ ಅಲ್ಲಿನ ಅತುಳೈಶ್ವರ್ಯ ಇವನ ಪಾಲಿಗೆ ಬಂತು. 1646ರಲ್ಲಿ ವಿಜಯನಗರದ ಅರಸ ಶ್ರೀರಂಗರಾಯ ಸೋತು ಓಡಿ ಬಂದಾಗ, ಶಿವಪ್ಪನಾಯಕ ಅವನಿಗೆ ಆಶ್ರಯಕೊಟ್ಟು, ಬೇಲೂರು, ಸಕ್ಕರೆಪಟ್ಟಣಗಳ ಆಧಿಪತ್ಯವನ್ನು ವಹಿಸಿಕೊಟ್ಟ. ಶ್ರೀರಂಗರಾಯನ ಪರವಾಗಿ ಶ್ರೀರಂಗಪಟ್ಟಣವನ್ನು ಮುತ್ತಿದ. ಅನಂತರ ವೆಲ್ಲೂರನ್ನು ವಶಪಡಿಸಿಕೊಂಡ. ಅರಬ್ಬೀಸಮುದ್ರದ ದ್ವೀಪವೊಂದನ್ನು ಹಿಡಿದುಕೊಂಡು ಬಸವರಾಜದುರ್ಗವನ್ನು ಕಟ್ಟಿದ. ಕಂದಾಯದ ವಸೂಲಿಗಾಗಿ ಭೂಕಂದಾಯದ ಶಿಸ್ತು, ಪ್ರಹರಪಟ್ಟಿ ಅಥವಾ ಅಡಿಕೆ ಹಾಲತ್ತು ಎಂಬ ನಿಬಂಧನೆಗಳನ್ನು ಮಾಡಿದ. ಪೋರ್ಚುಗೀಸರನ್ನು ಹಲವು ಯುದ್ಧಗಳಲ್ಲಿ ಸೋಲಿಸಿ ರಾಜ್ಯವನ್ನು ನಿಷ್ಕಂಟಕವಾಗಿ ಮಾಡಿ, ಕೆಳದಿರಾಜ್ಯದ ಕೀರ್ತಿ, ಬಲ ಮತ್ತು ವರ್ಚಸ್ಸನ್ನು ಹೆಚ್ಚಿಸಿದ.

ಕೇವಲ ಒಂದು ವರ್ಷ ಆಳಿದ ಶಿವಪ್ಪನಾಯಕನ ತಮ್ಮ ವೆಂಕಟಪ್ಪನಾಯಕನ ಆಳಿಕೆ (1660-61) ಸತ್ವಹೀನವಾಗಿತ್ತು. ಇವನ ಮರಣಾನಂತರ ರಾಜ್ಯದ ಬಲ ಕುಗ್ಗಲು ಪ್ರಾರಂಭವಾಯಿತು. ದಕ್ಷಿಣದಲ್ಲಿ ಮೈಸೂರು, ಉತ್ತರದಲ್ಲಿ ಬಿಜಾಪುರ ಇವುಗಳೊಂದಿಗೆ ಪದೇಪದೇ ಯುದ್ಧವಾದದ್ದೇ ಇದಕ್ಕೆ ಕಾರಣ. ಈ ಮಧ್ಯೆ ಶಿವಾಜಿ ಕೆಳದಿ ರಾಜ್ಯದ ತೀರಪ್ರದೇಶಗಳಿಗೆ ಬಿರುಗಾಳಿಯಂತೆ ನುಗ್ಗಿ, ಕುಂದಾಪುರವನ್ನು ಸೂರೆ ಮಾಡಿ, ಅನೇಕ ಗ್ರಾಮಗಳನ್ನು ಲೂಟಿಮಾಡಿ ಹಿಂದಿರುಗಿದ. ಶಿವಪ್ಪನಾಯಕನ ಹಿರಿಯಮಗ ಭದ್ರಪ್ಪನಾಯಕನ ಕಾಲದಲ್ಲಿ (ಸು.1661-63) ರಾಜಧಾನಿ ಬಿದನೂರು ಮತ್ತು ಭುವನಗಿರಿ ಕೋಟೆಗಳನ್ನು ಬಿಜಾಪುರದ ಸುಲ್ತಾನರು ಆಕ್ರಮಿಸಿದರು. ಇವನ ತಮ್ಮ ಹಿರಿಯ ಸೋಮಶೇಖರನಾಯಕ (ಸು.1663-71) ತನ್ನ ದುರ್ನಡತೆಯಿಂದ ಜನರಿಂದಲೇ ಕೊಲೆಯಾದ. ಅನಂತರ ಅವನ ರಾಣಿ ಚೆನ್ನಮ್ಮಾಜಿ (1671-97) ಆಡಳಿತ ನಡೆಸಿದಳು. ರಾಜ್ಯದಲ್ಲಿ ನಡೆಯುತ್ತಿದ್ದ ಒಳಸಂಚಿನಿಂದ ಪ್ರಾಣಕ್ಕೆ ಅಪಾಯವೆಂದು ತಿಳಿದು ಭುವನಗಿರಿಗೆ (ಕವಲೇದುರ್ಗ) ಹೋದಳು. ಸಾಹಸಿಯೂ ಸಮರ್ಥಳೂ ಆದ ಈಕೆಯ ಕಾಲದಲ್ಲಿ ಬಸವಾಪಟ್ಟಣ ಮತ್ತು ಇತರ ಪ್ರದೇಶಗಳು ಕೆಳದಿ ಸಂಸ್ಥಾನಕ್ಕೆ ಬಂದುವು. ಹುಲಿಕೆರೆಯಲ್ಲಿ ಕೋಟೆಯನ್ನು ಕಟ್ಟಿ ಅದಕ್ಕೆ ಚೆನ್ನಗಿರಿ ಎಂದು ನಾಮಕರಣ ಮಾಡಿದಳು. ಮುಗಲರ ಕೈಗೆ ಸಿಕ್ಕದ ಹಾಗೆ ಅಲೆಯುತ್ತಿದ್ದ ಶಿವಾಜಿಯ ಮಗ ರಾಜಾರಾಮನಿಗೆ ಆಶ್ರಯ ಕೊಟ್ಟು ಔರಂಗಜೇಬನನ್ನೂ ಎದುರಿಸಿದಳು. ಇವಳ ಅನಂತರ ಆಳಿದ ದತ್ತುಪುತ್ರ ಬಸವಪ್ಪನಾಯಕ (1697-1714) ರಾಜ್ಯವನ್ನು ಬಿಗಿಪಡಿಸಿದ್ದಲ್ಲದೆ ಧರ್ಮ, ಸಾಹಿತ್ಯಗಳಿಗೆ ಪ್ರೋತ್ಸಾಹವಿತ್ತ.

ಅನಂತರ ಆಳಿದ ಇಮ್ಮಡಿ ಸೋಮಶೇಖರನಾಯಕ (1714-39) ಶಿರಾದ ಮೇಲೆ ದಾಳಿ ನಡೆಸಿ ಅಜ್ಜಂಪುರ, ಸಂತೆಬೆನ್ನೂರು ಮೊದಲಾದ ಸ್ಥಳಗಳನ್ನು ಕಸಿದುಕೊಂಡು ಮಲಬಾರಿನ ಚಿಕ್ಕಪುಟ್ಟ ಸಂಸ್ಥಾನಗಳಲ್ಲಿ ತನ್ನ ಪ್ರಭಾವವನ್ನು ಹೆಚ್ಚಿಸಿಕೊಂಡು, ಕೆಳದಿ ಸಂಸ್ಥಾನವನ್ನು ಶಕ್ತಿಯುತವಾಗಿ ಮಾಡಿದ. ಇವನ ದತ್ತುಪುತ್ರ ಇಮ್ಮಡಿ ಬಸವಪ್ಪನಾಯಕ (1739-54) ಚಿತ್ರದುರ್ಗದ ಮದಕರಿನಾಯಕನನ್ನು ಕೊಂದ. ಅದೇ ಸಂದರ್ಭದಲ್ಲಿ ಆರ್ಕಾಟಿನ ನವಾಬ ಚಂದಾಸಾಹೇಬನನ್ನೂ ಸೆರೆಹಿಡಿದ. ಇವನ ಕಾಲದಲ್ಲಿ ರಾಜ್ಯ ಉಚ್ಛ್ರಾಯಸ್ಥಿತಿಗೇರಿತು. ಆಡಳಿತ ಉತ್ತಮವಾಗಿತ್ತು. ಇವನ ದತ್ತುಪುತ್ರ ಕೆಲವೇ ದಿನಗಳಕಾಲ ರಾಜ್ಯವಾಳಿ ಕೊಲೆಯಾದ. ಅನಂತರ ಬಸವಪ್ಪನಾಯಕನ ಹೆಂಡತಿ ವೀರಮ್ಮಾಜಿ (1756-63) ಮುಮ್ಮಡಿ ಸೋಮಶೇಖರನಾಯಕನನ್ನು ದತ್ತು ತೆಗೆದುಕೊಂಡು ಆಡಳಿತ ಸೂತ್ರವನ್ನು ತಾನೇ ಹಿಡಿದಳು. ಮರಾಠರ ಹಾವಳಿ ದಿನೇ ದಿನೇ ಜಾಸ್ತಿಯಾಗಲು ಅವರನ್ನು ಹಣ ಕೊಟ್ಟು ತೃಪ್ತಿಪಡಿಸಲು ಪ್ರಜೆಗಳ ಮೇಲೆ ಸೇ.50ರ ತೆರಿಗೆ ವಿಧಿಸಿದಳು. ಅವಳ ನಡತೆ ಮತ್ತು ಈ ಕ್ರಮದಿಂದ ಜನ ಕ್ರುದ್ಧಗೊಂಡರು. ಈ ರೀತಿ ಕುಗ್ಗಿ ಬಲಹೀನವಾಗಿದ್ದ ರಾಜ್ಯಕ್ಕೆ ಹೈದರ್ ಅಲಿ ನುಗ್ಗಿ ಬಿದನೂರನ್ನು 1763ರಲ್ಲಿ ವಶಪಡಿಸಿಕೊಂಡ. ವಿಜಯನಗರ ಸಾಮ್ರಾಜ್ಯಕ್ಕೆ ಅನುಪಮ ಸೇವೆ ಸಲ್ಲಿಸಿ ಅದರ ಸಂಪ್ರದಾಯ ಧ್ಯೇಯಗಳನ್ನು ಸಮರ್ಥವಾಗಿ ಮುಂದುವರಿಸಿ ಸೋದೆ, ಬಿಳಗಿ, ತರೀಕೆರೆ, ಬಸವಾಪಟ್ಟಣ, ಚಿತ್ರದುರ್ಗ ಮುಂತಾದುವುಗಳ ಚಿಕ್ಕಪುಟ್ಟ ಅರಸುಗಳ ಕೂಡ ಒಡನಾಟ ಬಡಿದಾಟಗಳೊಡನೆ ರಾಜ್ಯನಿರ್ವಹಣೆ ಮಾಡಿ ಭಾರಿ ಶತ್ರುಗಳಾದ ಆದಿಲ್‍ಶಾಹೀ, ಮುಗಲರು, ಮರಾಠರು ಮತ್ತು ಮೈಸೂರು ಅರಸರೊಡನೆ ಯುದ್ಧ ಹೂಡಿ, ವಿದೇಶೀಯರಾದ ಪೋರ್ಚುಗೀಸ್, ಡಚ್, ಫ್ರೆಂಚ್ ಮತ್ತು ಇಂಗ್ಲಿಷರೊಡನೆ ವ್ಯಾಪಾರಕ್ಕಾಗಿ ಕುಶಲ ವ್ಯವಹಾರ

ನಡೆಸಿ ಸು.250 ವರ್ಷಗಳ ಕಾಲ ಕರ್ನಾಟಕದ ಪ್ರಬಲ ರಾಜಕೀಯ ಶಕ್ತಿಯಾಗಿದ್ದ ಕೆಳದಿ ರಾಜ್ಯ ಕೊನೆಗೊಂಡಿತು. (ಜಿ.ಎಸ್.ಡಿ.;ಎಚ್.ವಿ.ಎಸ್.)

**ಆಡಳಿತ ವ್ಯವಸ್ಥೆ :** ಕೆಳದಿ ಅರಸರ ಆಡಳಿತ ಕ್ರಮ ವಿಜಯನಗರದ ಆಡಳಿತ ಪದ್ಧತಿಯನ್ನೇ ಅನುಸರಿಸಿತ್ತು. ಈ ನಾಯಕರು ಸಾಮಂತರಾಗಿದ್ದಾಗಲೂ ತಮ್ಮ ರಾಜ್ಯದೊಳಗೆ ಪೂರ್ಣ ಸ್ವತಂತ್ರರಾಗಿದ್ದರು. ರಾಜಮನೆತನ ವಂಶಪಾರಂಪರ್ಯವಾಯಿತು. ಎಲ್ಲ ವಿಷಯಗಳಲ್ಲಿಯೂ ರಾಜನದೇ ಸರ್ವೋಚ್ಚ ಅಧಿಕಾರ. ರಾಜ ಪಟ್ಟಕ್ಕೇರುವಾಗ ವೈಭವದಿಂದ ಪಟ್ಟಾಭಿಷೇಕ ನಡೆಸಿಕೊಳ್ಳುತ್ತಿದ್ದ. ಸಾಮಾನ್ಯವಾಗಿ ರಾಜನ ಹಿರಿಯಮಗನೇ ಯುವರಾಜ; ಯುವರಾಜನನ್ನಾರಿಸುವ ಅಧಿಕಾರವೂ ರಾಜನದೇ. ಕೆಲವು ವೇಳೆ ರಾಜರು ತಮ್ಮ ರಾಜಪದವಿಯನ್ನು ಮಕ್ಕಳಿಗೆ ಒಪ್ಪಿಸಿ ತಾವು ವಿಶ್ರಮಿಸುತ್ತಿದ್ದುದೂ ಉಂಟು. ಸದಾಶಿವನಾಯಕ ತನ್ನ ರಾಜ್ಯವನ್ನು ಭದ್ರಪ್ಪನಾಯಕನಿಗೆ ಒಪ್ಪಿಸಿ ತಾನು ಕಾಡಿಗೆ ಹೋದನೆಂದು ಶಿವತತ್ತ್ವ ರತ್ನಾಕರ ತಿಳಿಸುತ್ತದೆ. ವೆಂಕಟಪ್ಪನಾಯಕ ತನ್ನ ಮೊಮ್ಮಗ ವೀರಭದ್ರನಾಯಕನಿಗೆ ರಾಜ್ಯಭಾರವನ್ನು ವಹಿಸಿ ತಾನು ವಿಶ್ರಾಂತಿಯನ್ನು ಪಡೆದನಂತೆ. ಉತ್ತರಾಧಿಕಾರಿ ಕಿರಿಯವನಿದ್ದಾಗ ರಾಜಪ್ರತಿನಿಧಿ ಆಳುತ್ತಿದ್ದುದುಂಟು. ವೆಂಕಟಪ್ಪನಾಯಕನ ಮೊಮ್ಮಗ ವೀರಭದ್ರನಾಯಕ ಚಿಕ್ಕವನಿದ್ದಾಗ ಶಿವಪ್ಪನಾಯಕ ಅವನ ಪರವಾಗಿ ರಾಜ್ಯಭಾರ ನಡೆಸಿದ.

ಪ್ರಜೆಗಳ ರಕ್ಷಣೆ ರಾಜರ ಆದ್ಯಕರ್ತವ್ಯವಾಗಿದ್ದು ನ್ಯಾಯನಿರ್ವಹಣೆಯಲ್ಲಿ ಅವರು ವಿಶೇಷ ಆಸಕ್ತಿ ವಹಿಸುತ್ತಿದ್ದರು. ರಾಜ್ಯದ ಅಭಿವೃದ್ಧಿಗಾಗಿ ಅನೇಕ ಉಪಯೋಗಿ ಕೆಲಸಗಳನ್ನು ಅವರು ಮಾಡಿಸಿರುವುದನ್ನು ಕಾಣಬಹುದು. ಹಲವು ಅಗ್ರಹಾರಗಳನ್ನು, ಕೆರೆ ದೇವಾಲಯಗಳನ್ನು ಕಟ್ಟಿಸಿದುದಲ್ಲದೆ ರಾಜ್ಯದಲ್ಲಿ ವ್ಯಾಪಾರದ ಅಭಿವೃದ್ಧಿಗೆ ಹೆಚ್ಚಿನ ಪ್ರೋತ್ಸಾಹ ನೀಡಿ ಆರ್ಥಿಕವಾಗಿ ಕೆಳದಿರಾಜ್ಯ ಸುಭದ್ರವಾಗುವಂತೆ ಮಾಡಿದ್ದರು. ಆಡಳಿತದಲ್ಲಿ ರಾಜರಿಗೆ ನೆರವಾಗಲು ಪ್ರಧಾನರು, ಮಂತ್ರಿಗಳು ಇರುತ್ತಿದ್ದರು. ಆಡಳಿತಾಂಗಕ್ಕೆ ಸಂಬಂಧಿಸಿದಂತೆ ಕರಣಿಕರು, ಭಂಡಾರಿ, ಪಾರುಪತ್ಯಗಾರ, ಸೇನಬೋವ, ನಾಡಧಿಕಾರಿ ಮೊದಲಾದ ಅಧಿಕಾರಿಗಳ ಹೆಸರುಗಳು ಕಂಡುಬರುತ್ತವೆ.



ದೇವಗಂಗೆ

ವಿಸ್ತಾರವಾಗಿದ್ದ ಸಂಸ್ಥಾನವನ್ನು ಆಡಳಿತದ ಸೌಲಭ್ಯಕ್ಕಾಗಿ ಹಲವು ಭಾಗಗಳಾಗಿ ವಿಂಗಡಿಸಲಾಗಿತ್ತು. ಮಂಡಲ, ರಾಜ್ಯ, ಕಂಪಣ, ವೇಂಠೆಯ, ನಾಡು, ಹೋಬಳಿ, ಸೀಮೆ, ಸ್ಥಳ, ಪೇಟೆ, ಗ್ರಾಮ ಮೊದಲಾದ ಹೆಸರುಗಳು ಶಾಸನಗಳಲ್ಲಿ ಕಾಣಸಿಗುತ್ತವೆ. ಆದರೆ ರಾಜ್ಯವನ್ನು ಭಾಗ ಅಥವಾ ಉಪಭಾಗಗಳಾಗಿ ವಿಂಗಡಿಸುವಲ್ಲಿ ಯಾವ ಒಂದು ನಿರ್ದಿಷ್ಟವಾದ ನಿಯಮವನ್ನೂ ಪಾಲಿಸುತ್ತಿದ್ದಂತೆ ತೋರದು. ಗ್ರಾಮವೇ ಚಿಕ್ಕ ಆಡಳಿತ ಭಾಗವಾಗಿದ್ದು ಅದರ ಆಡಳಿತ ಭಾಗವನ್ನು ನೋಡಿಕೊಳ್ಳಲು ಪಾರುಪತ್ಯಗಾರರಿರುತ್ತಿದ್ದರು. ಸುಂಕಸಾರಿಗೆಗಳನ್ನು ಎತ್ತುವುದು, ದುರ್ಗಗಳ ರಕ್ಷಣೆ, ಗ್ರಾಮಾಡಳಿತದ ಹೊಣೆ ಈ ಪಾರುಪತ್ಯಗಾರರಿಗೆ ಸೇರಿದ್ದು ರಾಜ್ಯ ನಿರೂಪ ಇವರಿಗೆ ಕಳುಹಿಸಲಾಗುತ್ತಿತ್ತು. ನಾಡಧಿಕಾರಿಗಳು ನಾಡಿನ ಆಡಳಿತಕ್ಕೆ ಹೊಣೆಗಾರರಾಗಿದ್ದರು. ದಾನದತ್ತಿಗಳನ್ನು ಕೊಡುವಾಗ ಈ ಅಧಿಕಾರಿಗಳು, ನಾಡಿನವರು, ಗಣಪಣಗಳು ಮತ್ತು ಗ್ರಾಮಾಧಿಕಾರಿಗಳ ಒಪ್ಪಿತವನ್ನು ಪಡೆಯುತ್ತಿದ್ದರು. ಸೇನಬೋವ ಗ್ರಾಮಗಳಲ್ಲಿ ನಡೆಯುವ ಎಲ್ಲ ಆಡಳಿತ ವ್ಯವಹಾರಗಳನ್ನೂ ಬರೆದಿಡುವ ಅಧಿಕಾರಿ. ದಾನ, ಕ್ರಯ, ವರ್ಗಾವಣೆ ಮುಂತಾದ ಯಾವ ವ್ಯವಹಾರವಾದರೂ ಅದನ್ನು ಸೇನಬೋವನ ಕಡತದಲ್ಲಿ ನಮೂದಿಸಬೇಕಾಗಿತ್ತು.



ಇಕ್ಕೇರಿಯ ಅಘೋರೇಶ್ವರ ದೇವಾಲಯ, ಮುಂಭಾಗದ ಒಂದು ನೋಟ

**ಆರ್ಥಿಕ-ಸಾಮಾಜಿಕ ಸ್ಥಿತಿ :** ರಾಜ್ಯದ ಬೊಕ್ಕಸಕ್ಕೆ ಭೂಮಿಯ ಮೇಲಿನ ಕಂದಾಯವಲ್ಲದೆ ಅನೇಕ ಬಗೆಯ ತೆರಿಗೆ ಸುಂಕಗಳ ಮೂಲಕ ಆದಾಯ ಬರುತ್ತಿತ್ತು. ನಾಯಕರ ಕಾಲದಲ್ಲಿ ಭೂ ಕಂದಾಯವನ್ನೆತ್ತಲು ಅತ್ಯಂತ ಉತ್ತಮವಾದ ಪದ್ಧತಿ ಆರಂಭವಾಯಿತು. ಶಿವಪ್ಪನಾಯಕನ ಶಿಸ್ತು ಎಂದು ಪ್ರಸಿದ್ಧವಾಗಿರುವ ಭೂ ಸುಧಾರಣೆಯ ಪದ್ಧತಿಯನ್ನು ಜಾರಿಗೆ ತಂದ ಶಿವಪ್ಪನಾಯಕ ಭೂಮಿಯನ್ನು ಸರ್ಕಾರದ ಖರ್ಚಿನಿಂದ ಸಾಗುವಳಿ ಮಾಡಿಸಿ ಅದರ ಹುಟ್ಟುವಳಿಯ ಮೇಲೆ ರಾಜಾದಾಯವನ್ನು ಗೊತ್ತುಪಡಿಸಿದ. ಭೂಮಿಯನ್ನು ಅಳತೆ ಮಾಡಿಸಿದುದಲ್ಲದೆ ಉತ್ತಮ, ಮಧ್ಯಮ, ಕನಿಷ್ಠ, ಅಧಮ ಮತ್ತು ಕೀಳು ಎಂದು ಐದು ಬಗೆಯಾಗಿ ವಿಭಾಗಮಾಡಿ ಆಯಾ ಭೂಮಿಯ ಉತ್ಪತ್ತಿಯ ಪ್ರಮಾಣಕ್ಕನುಸಾರವಾಗಿ ಕಂದಾಯವನ್ನು ಗೊತ್ತುಪಡಿಸಿದ. ಇದರಿಂದ ಕೃಷಿಕರು ನ್ಯಾಯವಾದ ಕಂದಾಯವನ್ನು ಸರ್ಕಾರಕ್ಕೆ ಸಲ್ಲಿಸುವಂತಾದುದೇ ಅಲ್ಲದೆ ಕಂದಾಯವನ್ನು ಕೊಡದೆ ತಪ್ಪಿಸಿಕೊಳ್ಳಲೂ ಸಾಧ್ಯವಿಲ್ಲದಂತಾಗಿ ರಾಜ್ಯದ ಆದಾಯ ಹೆಚ್ಚಿತು. ಹೀಗೆ ಆಧುನಿಕ ರೀತಿಯ ಭೂಕಂದಾಯವನ್ನು ನಿರ್ಧರಿಸಿದವರಲ್ಲಿ ಕೆಳದಿ ನಾಯಕರು ಮೊದಲಿಗರು. ಇದರೊಂದಿಗೆ ಸಿದ್ದಾಯ, ಬಿಟ್ಟಿ, ಬಿರಾಡ, ಮೇಲುವಣ, ಸ್ಥಳಸುಂಕ, ಉಂಬಳಿ, ವರ್ತನೆ, ಮಡಿಹಡಿಕೆ, ದಿವಗಾರಿಕೆ, ಬನದಸೋಗೆ, ಹರವರಿ, ಉಡುಗೊರೆ, ಸೇನಬೋವನ ವರ್ತನೆ, ಮಣಿಹದ ವಾರ, ಅರೆವಾಸಿ, ಸಂಬಂಧಗಾಣಿಕೆ, ಮೂಲವೀಸ ಮುಂತಾದ ಹಲವು ರೀತಿಯ ತೆರಿಗೆಗಳೂ ಸಾಮಾನುಸರಂಜಾಮುಗಳ ಸಾಗಾಣಿಕೆಯ ಮೇಲಿನ ಸುಂಕಗಳೂ ರಾಜ್ಯದ ಮುಖ್ಯ ಆದಾಯ ಮೂಲಗಳಾಗಿದ್ದುವು. ಹೊರಗಿನಿಂದ ಬರುತ್ತಿದ್ದ ಹಡಗು ಮತ್ತು ದೋಣಿಗಳ ಮೇಲೆ ಸುಂಕ ವಿಧಿಸುತ್ತಿದ್ದುದಲ್ಲದೆ ಊರಿಂದ ಊರಿಗೆ ಸಾಮಾನು ಸಾಗಿಸುತ್ತಿದ್ದ ಎತ್ತಿನ ಹೇರು ಮತ್ತು ತಲೆಹೊರೆಗಳ ಮೇಲೂ ಸುಂಕದ ಠಾಣೆಗಳಲ್ಲಿ ಸುಂಕವನ್ನು ಎತ್ತುತ್ತಿದ್ದರು. ಗುತ್ತಿ, ಆರಗ, ಕುಪಟೂರು, ಕಳಸ ಮುಂತಾದ ಅನೇಕ ಊರುಗಳಲ್ಲಿ ಇಂಥ ಸುಂಕದ ಠಾಣೆಗಳಿದ್ದುವು. ಮುಖ್ಯವಾಗಿ ಘಟ್ಟದ ಕೆಳಗಿನಿಂದ ಮೇಲಕ್ಕೆ ಸಾಗುತ್ತಿದ್ದ ಎತ್ತಿನ ಹೇರುಗಳ ಮೇಲಿನ ಸುಂಕದ ವಿವರಗಳು ಅನೇಕ ತಾಮ್ರಶಾಸಗಳಲ್ಲಿ ಬರುತ್ತವೆ. ಯುರೋಪಿನ ದೇಶಗಳೊಂದಿಗೆ ಭಟ್ಕಳದ ಮೂಲಕ ಮೆಣಸು ಮೊದಲಾದ ಸಂಬಾರ ಪದಾರ್ಥಗಳ ವ್ಯಾಪಾರ ಹೇರಳವಾಗಿ ಅಭಿವೃದ್ಧಿಯಾಯಿತು. ಈ ಪದಾರ್ಥಗಳಿಗೆ ಬದಲಾಗಿ ಅರಬ್ಬೀ ಕುದುರೆಗಳು ಮತ್ತು ಬೆಲೆ ಬಾಳುವ ಪದಾರ್ಥಗಳು ಹೊರಗಿನಿಂದ ಬರುತ್ತಿದ್ದುವು. ಇದರಿಂದ ರಾಜ್ಯದ ಆರ್ಥಿಕ ಸ್ಥಿತಿ ಸುಭದ್ರವಾಗಿತ್ತು. ರಾಜರು ಅನೇಕ ಮಠಗಳಿಗೆ, ದೇವಾಲಯಗಳಿಗೆ,

ಅನ್ನಛತ್ರಗಳಿಗೆ ಭೂಮಿಯನ್ನು ಉತ್ತಾರ ಹಾಕಿಕೊಟ್ಟಿದ್ದಾರೆ. ಸ್ಥಳದಿಂದ, ಸ್ಥಳಕ್ಕೆ ಸಾಗಿಸುತ್ತಿದ್ದ ಅನೇಕ ಸರಕುಗಳ ಮೇಲಿನ ಸುಂಕವನ್ನು ಈ ಮಠಮಾನ್ಯಗಳ ವೆಚ್ಚಕ್ಕಾಗಿ ಬಿಟ್ಟು ನೂರಾರು ತಾಮ್ರಶಾಸನಗಳನ್ನು ಹಾಕಿಸಿದ್ದಾರೆ. ಅನೇಕ ಮಹತ್ತಿನ ಮಠಗಳು, ಶೃಂಗೇರಿ, ಕೂಡಲಿ, ಉಡುಪಿ ಮುಂತಾದ ಮಠಗಳು ಇಂಥ ದತ್ತಿಗಳನ್ನು ಪಡೆದುವು. ಭೂಮಿಯ ಒಡೆತನ ವಂಶಪಾರಂಪರ್ಯವಾಗಿತ್ತು. ರಾಜ್ಯದ ಕೆಲವುಭಾಗಗಳಲ್ಲಿ ಅಳಿಯಸಂತಾನಕಟ್ಟು ಜಾರಿಯಲ್ಲಿತ್ತು. ಮಕ್ಕಳಿಲ್ಲದವರ ಆಸ್ತಿಗೆ ಅಣ್ಣತಮ್ಮಂದಿರೋ ಜ್ಞಾತಿಗಳೋ ಹಕ್ಕುದಾರರಾಗಿದ್ದರು. ಅವರಿಲ್ಲದಾಗ ಮೃತನ ಹೆಂಡತಿಗೂ, ಅವಳೂ ಇಲ್ಲದಾಗ ಕೆರೆ ಕಟ್ಟಿಸಲೋ ದೇವಸ್ಥಾನಗಳಿಗೋ ಆಸ್ತಿ ಸೇರಬೇಕೆಂದು ನಿಯಮವಿತ್ತು.



ಕೆಳದಿಯ ವೀರಭದ್ರ ದೇವಾಲಯದ ಮುಂದಿರುವ ದೀಪಸ್ತಂಭ

ಎಲ್ಲ ಮತಗಳಿಗೂ ಕೆಳದಿ ನಾಯಕರು ಸಮಾನ ಪ್ರೋತ್ಸಾಹ ನೀಡುತ್ತಿದ್ದುದರಿಂದ ಶೈವ, ವೈಷ್ಣವ, ಇಸ್ಲಾಂ, ಕ್ರೈಸ್ತ ಮುಂತಾದ ಮತಗಳ ಜನರೆಲ್ಲ ಒಟ್ಟಾಗಿ ಬಾಳುತ್ತಿದ್ದರು. ಜಾತಿಮತಗಳು ಅನೇಕ ಬಗೆಯಾಗಿ ಹರಡಿ ಹಲವು ಉಪಜಾತಿಗಳೂ ಕುಲಗಳೂ ಹುಟ್ಟಿಕೊಂಡಿದ್ದುವು. ಹದಿನೆಂಟು ಜಾತಿ ನೂರೊಂದು ಕುಲಗಳಿದ್ದುವೆಂದು ಶಾಸನಗಳು ಸೂಚಿಸುತ್ತವೆ. ಬ್ರಾಹ್ಮಣರು ವಿದ್ಯಾಪೀಠಗಳ್ಲಿ ದೇವಾಲಯಗಳಲ್ಲಿ ಸೇವೆ ಸಲ್ಲಿಸುತ್ತಿದ್ದು ವಿದ್ಯಾವಂತರೆನಿಸಿಕೊಂಡಿದ್ದರು. ಇವರಲ್ಲಿ ಹಲವರು ಉನ್ನತ ಹುದ್ದೆಗಳಲ್ಲಿದ್ದು ಆಡಳಿತಗಾರರೂ ದಂಡನಾಯಕರೂ ಮಂತ್ರಿಗಳೂ ಆಗಿದ್ದರು. ವೃತ್ತಿ ಸಂಘಗಳೂ ವಣಿಕ್‌ಶ್ರೇಣಿಗಳೂ ಪ್ರಬಲವಾಗಿದ್ದುವು. ರಾಜರಿಗೆ ಹಲವರು ಪತ್ನಿಯರಿರುತ್ತಿದ್ದರು. ಅದರಂತೆ ಶ್ರೀಮಂತ ವರ್ಗವೂ ಒಬ್ಬಳಿಗಿಂತ ಹೆಚ್ಚು ಮಂದಿ ಹೆಂಡಿರನ್ನು ಹೊಂದಲು ಅವಕಾಶವಿತ್ತು. ಗಂಡ ತೀರಿಕೊಂಡಾಗ ಹೆಂಡತಿ ಸಹಗಮನ ಮಾಡುವ ಸತಿಪದ್ಧತಿ ವಿಶೇಷವಾಗಿ ಜಾರಿಯಲ್ಲಿತ್ತು. ಈ ರಾಜ್ಯದ ನಾನಾ ಭಾಗಗಳಲ್ಲಿ ದೊರೆತಿರುವ ನಾಯಕರ ಕಾಲದ ಒಕ್ಕೈಮಾಸ್ತಿಕಲ್ಲುಗಳು, ಮಹಾಸತಿಯ ಮೂರ್ತಿಯನ್ನು ಬಿಡಿಸಿರುವ ಶಿಲ್ಪಗಳು ಊರೂರಿನಲ್ಲಿಯೂ ಗುಂಪುಗುಂಪಾಗಿ ದೊರೆತಿರುವುದನ್ನು ನೋಡಿದಲ್ಲಿ ಈ ಪದ್ಧತಿ ಎಷ್ಟು ವಿಸ್ತಾರವಾಗಿ ಹರಡಿತ್ತೆಂಬುದು ಸ್ಪಷ್ಟಪಡುವುದು. ರಾಜರು, ದಂಡನಾಯಕರು ಮೊದಲಾದ ಅಧಿಕಾರಿಗಳು ತೀರಿದಾಗ ಮಾತ್ರವಲ್ಲ, ಸಾಮಾನ್ಯ ಪ್ರಜೆಗಳು ತೀರಿಕೊಂಡಾಗಲೂ ಅವರ ಹೆಂಡಿರು ತಮ್ಮ ಗಂಡನ ಜೊತೆ ಚಿತೆಯೇರಿಯೋ, ಗುಣಿಯಲ್ಲಿ ಹೂಳಲ್ಪಟ್ಟೋ ಸಹಗಮನ ಮಾಡುತ್ತಿದ್ದ ಹಲವು ಸಂದರ್ಭಗಳು ಶಾಸನಗಳಲ್ಲಿ, ಕಾವ್ಯಗಳಲ್ಲಿ ಹಾಗೂ ಹೊರದೇಶದ ಯಾತ್ರಿಕರ ವರ್ಣನೆಗಳಲ್ಲಿ ಕಂಡುಬರುತ್ತವೆ. ಶಿವಪ್ಪನಾಯಕನೊಂದಿಗೆ ಅವನ ಹೆಂಡಿರಲ್ಲಿ ಇಬ್ಬರು -- ಲಿಂಗಮ್ಮಾಜಿ, ನಾಗಮ್ಮಾಜಿ, ಸಹಗಮನ ಮಾಡಿದರು. ಸಹಗಮನವನ್ನು ಕಣ್ಣಾರೆ ಕಂಡ ಯಾತ್ರಿಕ ಪೆಟ್ರೋಡೆ ಲ ವೆಲ್ಲೆ ಸತಿಯರಾಗುತ್ತಿದ್ದ ಹೆಂಗಸರು ಸ್ವಂತ ಇಚ್ಛೆಯಿಂದ ಆಚರಿಸುತ್ತಿದ್ದದ್ದನ್ನೂ, ಅವರ ಧೈರ್ಯ ಸ್ಥೈರ್ಯಗಳನ್ನೂ ಮೆಚ್ಚಿ ಸಹಗಮನ ನಡೆಯುತ್ತಿದ್ದ ರೀತಿಯನ್ನೂ ವಿವರಿಸಿದ್ದಾನೆ. ವಿಜಯನಗರದಲ್ಲಿ ಇದ್ದಂತೆ ವೇಶ್ಯಾಸ್ತ್ರೀಯರು ರಾಜಾಸ್ಥಾನಗಳಲ್ಲಿ ಇರುತ್ತಿದ್ದರು.

**ಲಲಿತಕಲೆ, ಸಾಹಿತ್ಯ :** ವೈಭವದಿಂದ ಜರುಗುತ್ತಿದ್ದ ರಾಜರ ಒಡ್ಡೋಲಗಗಳು ಸಂಗೀತ, ನೃತ್ಯಗಳಿಗೆ ಪ್ರೋತ್ಸಾಹ ದೊರಕಲು ಅವಕಾಶ ಮಾಡಿಕೊಟ್ಟಿದ್ದುವು. ಹಬ್ಬ ಹರಿದಿನಗಳಲ್ಲಿ ಅರಮನೆ, ದೇವಾಲಯಗಳಲ್ಲಿ ವಿಶೇಷವಾದ ಉತ್ಸವಗಳು, ನೃತ್ಯ ಮೇಳ ಸಂಗೀತ ಕುಸ್ತಿ ಮುಂತಾದುವು ನಡೆಯುತ್ತಿದ್ದುವು. ನಾಟ್ಯಶಾಲೆಗಳಿದ್ದುದಕ್ಕೂ ಆಧಾರಗಳಿವೆ. ವೆಂಕಟಪ್ಪನಾಯಕ ನಾಟ್ಯಶಾಲೆಯೊಂದನ್ನು ಕಟ್ಟಿಸಿದ್ದ.

ನಾಯಕರು ಸಾಹಿತ್ಯರಚನೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ಅನೇಕ ಶಾಸ್ತ್ರಗ್ರಂಥಗಳೂ ಕಾವ್ಯಗಳೂ ಇವರ ಆಸ್ಥಾನದ ವಿದ್ವಾಂಸರಿಂದ ರಚಿತವಾದುವು. ವೆಂಕಟಪ್ಪನಾಯಕನ ಆಸ್ಥಾನದಲ್ಲಿ ತಿರುಮಲಭಟ್ಟ, ರಂಗನಾಥ ದೀಕ್ಷಿತ, ಅಶ್ವಪಂಡಿತ, ಭಟ್ಟೋಜಿ ದೀಕ್ಷಿತ ಮೊದಲಾದ ಪಂಡಿತರಿದ್ದರು. ಅವರು ಶಿವಗೀತ, ಶಿವಾಷ್ಟಪದಿ, ತಂತ್ರಸಾರಭಾಷ್ಯ, ಮಾನಪ್ರಿಯ, ತತ್ತ್ವಕೌಸ್ತುಭ ಮೊದಲಾದ ಶಾಸ್ತ್ರ ಗ್ರಂಥಗಳನ್ನು ರಚಿಸಿದ್ದಾರೆ. ಸ್ವತಃ ನಾಯಕರೇ ಸಾಹಿತ್ಯರಚನೆ ಮಾಡಿದ್ದಾರೆ. ಬಸವಪ್ಪನಾಯಕ ಶಿವತತ್ತ್ವರತ್ನಾಕರವೆಂಬ ವಿಶ್ವಕೋಶಸದೃಶ ಉದ್ಗ್ರಂಥವನ್ನು ರಚಿಸಿದ್ದಾನೆ. ಇದರಲ್ಲಿ ತನ್ನ ವಂಶದ ಚರಿತ್ರೆಯನ್ನೂ ಸೇರಿಸಿದ್ದಾನೆ. ಸುಭಾಷಿತ ಸುರದ್ರುಮ ಎಂಬುದೂ ಈತನಿಂದ ರಚಿತವಾದುದು. ಸೋಮಶೇಖರ ನಾಯಕನ ಮಂತ್ರಿ ನಿರ್ವಾಣಯ್ಯ ಶಿವಪೂಜಾವಿಧಾನವನ್ನೂ ಇಮ್ಮಡಿ ಬಸವಪ್ಪನಾಯಕನ ಮಂತ್ರಿ ಷಡಕ್ಷರಿ ವೀರಶೈವಧರ್ಮ ಶಿರೋಮಣಿಯನ್ನೂ ಮರಿತೋಂಟದಾರ್ಯನೆಂಬ ಕವಿ ವೀರಶೈವಾನಂದ ಚಂದ್ರಿಕೆಯನ್ನೂ ಬರೆದಿದ್ದಾರೆ. (ಎಂ.ಎಚ್.)



ರಾಮೇಶ್ವರ ದೇವಾಲಯ

**ವಾಸ್ತುಶಿಲ್ಪ :** ಕೆಳದಿ ಅರಸರ ಆಳಿಕೆಗೆ ಸಂಬಂಧಿಸಿದ ಶಿವತತ್ತ್ವರತ್ನಾಕರ, ಕೆಳದಿನೃಪವಿಜಯ ಮುಂತಾದ ಸ್ಥಳೀಯ ಕೃತಿಗಳಲ್ಲೂ ಪಯೆಸ್, ಡೆ ಲ ವೆಲ್ಲೆ ಮುಂತಾದ ವಿದೇಶೀಯರ ಬರೆಹಗಳಲ್ಲೂ ಅನೇಕ ಸಮಕಾಲೀನ ಕೋಟೆಕೊತ್ತಳಗಳ, ಸುಂದರ ನಗರಗಳ ವೈಭವಯುತ ಅರಮನೆ ಮತ್ತು ದೇವಾಲಯಗಳ ವರ್ಣನೆಗಳು ದೊರಕುತ್ತವೆ. ಈ ವಾಸ್ತು ಕೃತಿಗಳಲ್ಲಿ ಹಲವು ಇಂದಿಗೂ ಉಳಿದುಬಂದಿವೆ.

ಸಮಕಾಲೀನ ಕ್ಷಾತ್ರವಾಸ್ತುಗಳ ಪೈಕಿ ಶಿವಮೊಗ್ಗ ಜಿಲ್ಲೆಯ ನಗರದಲ್ಲಿರುವ (ಬಿದನೂರು) ಕೋಟೆ ಇದ್ದುದರಲ್ಲಿ ಒಳ್ಳೆಯ ಸ್ಥಿತಿಯಲ್ಲಿ

ಉಳಿದಿದೆ. ಕೆಳದಿ ಅರಸರು ತಮ್ಮ ರಾಜಧಾನಿಯನ್ನು 1638ರ ಹೊತ್ತಿಗೆ ಅಲ್ಲಿಗೆ ಬದಲಾಯಿಸಿದ್ದರೂ ಈಗ ಅಲ್ಲಿರುವ ಬಹುತೇಕ ಕಟ್ಟಡಗಳನ್ನು ಶಿವಪ್ಪನಾಯಕನ ಕಾಲದಲ್ಲಿ ಕಟ್ಟಿರಬಹುದೆಂದು ನಂಬಲಾಗಿದೆ. ಕೆಳದಿ ರಾಜವಂಶದ ಪತನದ (1763) ಅನಂತರ, ಹೈದರ್ ಅಲಿ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲೂ ಈ ಕೋಟೆ ಊರ್ಜಿತ ಸ್ಥಿತಿಯಲ್ಲಿದ್ದು, ಅನಂತರ ಶಿಥಿಲವಾಗಲಾರಂಭಿಸಿತು. ಕೋಟೆ ಪೂರ್ಣವಾಗಿ ಕಲ್ಲು ಕಟ್ಟಡ; ವಿನ್ಯಾಸದಲ್ಲಿ ಮಾವಿನಕಾಯಂತಿದ್ದು ಸುತ್ತಲೂ ಕಂದಕದಿಂದ ಆವೃತ್ತವಾಗಿದೆ. ಅದೇ ಜಿಲ್ಲೆಯ ಚನ್ನಗಿರಿಯಲ್ಲಿ ಎರಡು ಸುತ್ತಿನ ಕೋಟೆಯಿದೆ. ಅದು ರಾಣಿ ಚೆನ್ನಮ್ಮಾಜಿ ಕಟ್ಟಿಸಿದ್ದೆಂದು ತಿಳಿದುಬರುತ್ತದೆ. ಹಾಗೆಯೇ ಕವಲೆದುರ್ಗ, ಹೊನ್ನಾವರ, ಕುಮಟ, ಭಾರಂಗಿ ಮುಂತಾದೆಡೆಗಳಲ್ಲೂ ಆ ಕಾಲದ ಕೋಟೆಗಳ ಅವಶೇಷಗಳಿವೆ.



ಇಕ್ಕೇರಿಯ ಅಘೋರೇಶ್ವರ ದೇವಾಲಯ, ಪ್ರವೇಶದ್ವಾರದ ಹೊರನೋಟ

ಲೌಕಿಕ ವಾಸ್ತುಕೃತಿಗಳಿಗೆ ಸಂಬಂಧಿಸಿದಂತೆ ನಗರದ ಒಳಕೋಟೆಯ ಒಳಭಾಗದಲ್ಲಿದ್ದ ಶಿವಪ್ಪನಾಯಕನ ಕಾಲದ ಅರಮನೆಯ ಕೆಲವು ಕಂಬಗಳು ಮತ್ತು ಅಡಿಪಾಯಗಳು ಮಾತ್ರವೆ ಉಳಿದಿವೆ. ಅವುಗಳಲ್ಲಿ ದರ್ಬಾರು, ಹಜಾರ, ಒಳಕೋಣೆ ಮುಂತಾದುವು ಇದ್ದ ಸ್ಥಳಗಳನ್ನು ಮಾತ್ರ ಗುರುತಿಸಬಹುದು. ಇಕ್ಕೇರಿ ಮತ್ತು ಕೆಳದಿಯ ಅರಮನೆಗಳಲ್ಲಿ ಏನೂ ಉಳಿದಿಲ್ಲವೆಂದೇ ಹೇಳಬಹುದು. ಈ ಕೋಟೆಗಳ ರಚನೆಯಲ್ಲಿ ಭಾರತೀಯ - ಇಸ್ಲಾಮೀ ಸಂಪ್ರದಾಯದ ಛಾಯೆ ಬಹುವಾಗಿ ಕಾಣುತ್ತದೆ. ಅಲ್ಲದೆ 17 ಮತ್ತು 18ನೆಯ ಶತಮಾನಗಳಲ್ಲಿ ದಕ್ಷಿಣ ಭಾರತದ ಐರೋಪ್ಯ ವಾಸ್ತುಶಿಲ್ಪಗಳ ಕೈವಾಡ, ಅಲ್ಲಿಯ ಸಂಪ್ರದಾಯದ ಪ್ರಭಾವ ಕೆಳದಿ ಕಟ್ಟಡಗಳಲ್ಲೂ ಇರುವ ಸೂಚನೆಗಳಿವೆ. ಇವುಗಳ ವ್ಯವಸ್ಥಿತ ಅಧ್ಯಯನ ಇನ್ನೂ ನಡೆದಿಲ್ಲ.

ಈ ಕಾಲದ ವೈಭವದ ದ್ಯೋತಕವಾದ ಕೆಲವು ಕೊಳಗಳು ಇನ್ನೂ ಒಳ್ಳೆಯ ಸ್ಥಿತಿಯಲ್ಲಿ ಉಳಿದಿವೆ. ಇವುಗಳಲ್ಲಿ ನಗರದ (ನೋಡಿ) ಸಮೀಪದಲ್ಲಿರುವ ದೇವಗಂಗೆ ಒಂದು ವಿಚಿತ್ರ ರೀತಿಯ ಕೃತಿ. ಇಲ್ಲಿ 285' ಉದ್ದ 98' ಅಗಲದ ಪ್ರಾಂಗಣದ ಮಧ್ಯೆ ಅನೇಕ ಕೊಳಗಳು ನಿರ್ಮಿತವಾಗಿವೆ. ಕೊಳಗಳ ತಳವಿನ್ಯಾಸ ಪದ್ಮ, ನಕ್ಷತ್ರ ಮುಂತಾದ ಆಕಾರಗಳಲ್ಲಿವೆ. ಇವೆಲ್ಲಕ್ಕೂ ಬೆಟ್ಟದೆಡೆಯಿಂದ ಹರಿಯುತ್ತಿದ್ದ ಚಿಕ್ಕ ಝರಿಯೊಂದನ್ನು ತಿರುಗಿಸಿ ನೀರು ಒದಗಿಸಲಾಗುತ್ತಿತ್ತು. ಈ ಕೊಳಗಳನ್ನು ಅಂತಃಪುರದವರ ಜಲಕ್ರೀಡೆಗಾಗಿ ಕಟ್ಟಲಾಗಿತ್ತೆಂದು ಪ್ರತೀತಿ. ಚಂಪಕಾ ಸರಸ್ಸು ಎಂದು ಕರೆಯುವ ಇನ್ನೊಂದು ಸುಂದರ ಕೊಳ ಶಿವಮೊಗ್ಗ ಜಿಲ್ಲೆಯ ಆನಂದಾಪುರದಲ್ಲಿದೆ.

ಕೆಳದಿ ಅರಸರ ಆಳಿಕೆಯ ಕಾಲದಲ್ಲಿ, ಅವರು ಆಳುತ್ತಿದ್ದ ಮಲೆನಾಡಿನ ಭಾಗಗಳಲ್ಲಿ ಒಂದು ವಿಶಿಷ್ಟ ರೀತಿಯ ದೇವಾಲಯ ರಚನಾಶೈಲಿ ಬೆಳೆದು ಬಂದಿತು. ಇದೇ ಕಾಲದಲ್ಲಿ ದಕ್ಷಿಣ ಭಾರತದ ಇತರೆಡೆಗಳಲ್ಲಿ ಪ್ರಚಲಿತವಾಗಿದ್ದ ವಿಜಯನಗರ ರೀತಿಯ ದ್ರಾವಿಡ ವಾಸ್ತುಶೈಲಿಯ ಮತ್ತು ಹಿಂದೆ ಇದೇ ಮಲೆನಾಡು ಪ್ರದೇಶದಲ್ಲಿ ವಿಶೇಷವಾಗಿ ಮೆರೆದಿದ್ದ ಹೊಯ್ಸಳ ವಾಸ್ತುಶೈಲಿಯ ಮಿಶ್ರಣ ಇಲ್ಲಿ ಕಂಡುಬರುತ್ತದೆ. ಈ ಸಂಕರ ಶೈಲಿಯನ್ನು ಇಕ್ಕೇರಿ ಶೈಲಿ ಅಥವಾ ಮಲೆನಾಡು ಶೈಲಿಯೆಂದು ಕರೆಯುವ ರೂಢಿಯಿದೆ. ಇಕ್ಕೇರಿಯಲ್ಲಿರುವ ಸು.1520ರಲ್ಲಿ ಕಟ್ಟಲಾಗಿರುವ ಅಘೋರೇಶ್ವರ ದೇವಾಲಯ ಈ ಶೈಲಿಗೆ ಒಳ್ಳೆಯ ಉದಾಹರಣೆ (ನೋಡಿ:ಇಕ್ಕೇರಿ). ಜಗತಿಯ ಮೇಲೆ ರಚಿತವಾಗಿರುವ ಈ ದೇವಾಲಯದ ತಳವಿನ್ಯಾಸ ಸುಮಾರು ಚತುರಸ್ರಾಕಾರವಾಗಿದೆ. ಆದರೆ ಪರಿಗದ ಓಟವನ್ನು ಅಲ್ಲಲ್ಲಿ ಹಿಂದಕ್ಕೆ ಮುಂದಕ್ಕೆ ಜಗ್ಗಿರುವುದರಿಂದ ಅಂಚುಗಳು ದಂತಪಂಕ್ತಿಯಂತೆ ಕಾಣುತ್ತವೆ. ಈ ಅಂಶಗಳು ಹೊಯ್ಸಳ ಶೈಲಿಯ ಅನುಕರಣೆ. ಗುಡಿಯಲ್ಲಿ ಗರ್ಭಗೃಹ, ತೆರೆದ ಸುಕನಾಸಿ ಮತ್ತು ಮುಂದೆ ಮಂಟಪ ಇವೆ. ಗರ್ಭಗೃಹದ ಹೊರಭಿತ್ತಿಯ ಮೇಲೆ ದೇವಕೋಷ್ಠಗಳು, ಸಿಂಹಪಟ್ಟಿಕೆ ಮತ್ತು ಗೋಪುರಗಳ ಅಲಂಕರಣವಿದೆ. ಸೂರಿನ ಭಾಗದಲ್ಲಿ 'S' ಆಕಾರದ ಕಪೋತವಿದೆ. ಮೇಲಿನ ಗೋಪುರ ಎರಡು ತಲಗಳಲ್ಲಿದೆ. ಚಿಕ್ಕ ಗೋಪುರಗಳ ಮತ್ತು ನಿಂತ ಸಿಂಹಗಳ ಶಿಲ್ಪಗಳಿಂದ ಇದು ಅಲಂಕೃತವಾಗಿದೆ. ಮಂಟಪದ ಹೊರಗೋಡೆಯ ಮೇಲೂ ಅಲ್ಪ ಉಬ್ಬಿನ ಶಿಲ್ಪಗಳು, ಜಾಲಂಧ್ರಗಳು ಮತ್ತು ಕಮಾನಿನಾಕೃತಿಯ ಕೋಷ್ಠಗಳು ಇವೆ. ಗರ್ಭಗೃಹದಲ್ಲಿ ಪ್ರದಕ್ಷಿಣಾಪಥವಿದೆ. ಈ ದೇವಾಲಯದಲ್ಲಿ ಆಳವಾಗಿ ಕೆತ್ತಿದ ದಿಂಡುಗಳ ಸರಗಳುಳ್ಳ ಜಗತಿ, ಸುಕನಾಸಿಯ ಮೇಲೆ ಚಾಚಣಿಕೆಯಿರುವ ಕಲ್ಲಿನ ಶಿಖರ, ಗುಂಡಾದ ಮತ್ತು ಷೋಡಶ ಮುಖದ ಕಂಬಗಳು, ದ್ವಾರ ಮತ್ತು ಹೊರಗೋಡೆಯ ಅಲಂಕರಣ ವಿನ್ಯಾಸಗಳು ಹೊಯ್ಸಳಶೈಲಿಯ ಅಂಶಗಳನ್ನೂ ತಲಗಳು ಮತ್ತು ದ್ವಾರವಿರುವ ಗೋಪುರ, ಚತುರಸ್ರಾಕಾರದ ಮಂಟಪ, ಸಿಂಹಬೋದಿಗೆಯನ್ನುಳ್ಳ ಅನೇಕ ಕಂಬಗಳು ಮತ್ತು ಅರೆಕಂಬಗಳು ಮತ್ತು ಸುಕನಾಸಿಯಿಂದಾರಂಭವಾಗುವ ಪ್ರದಕ್ಷಿಣಾ ಪಥ ಇವು ದ್ರಾವಿಡ ಶೈಲಿಯ ಅಂಶಗಳನ್ನೂ ತೋರಿಸುತ್ತವೆ.

ಮೇಲಿನ ಮಾದರಿಯಲ್ಲಿರುವ ಇಲ್ಲಿನ ಪಾರ್ವತಿ ಗುಡಿಯ ನವರಂಗದ ಬಾಗಿಲುವಾಡ ಮತ್ತು ಕಿಟಕಿಗಳಲ್ಲಿ ಚೂಪುತಲೆಯ ಕಮಾನುಗಳನ್ನು ಉಪಯೋಗಿಸಿರುವುದು ವಿಶೇಷ. ಈ ಅಂಶ ಭಾರತೀಯ ಮುಸ್ಲಿಮ್ ವಾಸ್ತುಶೈಲಿಯಿಂದ ಬಂದಿದ್ದಾಗಿದೆ.

ಸುಮಾರು 1512ರಲ್ಲಿ ಕಟ್ಟಿರಬಹುದಾದ ಕೆಳದಿಯ (ನೋಡಿ) ರಾಮೇಶ್ವರ ದೇವಾಲಯ ಇದೇ ಮಿಶ್ರಶೈಲಿಯಲ್ಲಿರುವ ಚಿಕ್ಕ ಕಟ್ಟಡ. ಈ ಗುಡಿಯ ಜಗತಿಯ ಹೊರಮೈಯ ಒಂದು ದಿಂಡಿನ ಮೇಲೆ ವಾದ್ಯಗಾರರ ಮತ್ತು ನರ್ತಕರ ಶಿಲ್ಪಗಳಿವೆ. ಮೇಲಿನ ಗೋಪುರ ಚತುರಸ್ರಾಕಾರದಲ್ಲಿದೆ. ವಿನ್ಯಾಸದಲ್ಲಿ ಗರ್ಭಗೃಹ, ಪ್ರದಕ್ಷಿಣ ಪಥಕ್ಕೆಡೆಯಿರುವ ಸುಕನಾಸಿ, ಚಿಕ್ಕ ನವರಂಗ ಮತ್ತು ಮುಖಮಂಟಪವಿರುವ ಈ ಗುಡಿಯ ಮುಂದಿನ ಮಂಟಪದಲ್ಲಿ ಸುತ್ತಲೂ ಒರಗು ಬೆಂಚುಗಳಿರುವುದು ವಿಶೇಷ. ಕೆಳದಿಯ ವೀರಭದ್ರ ದೇವಾಲಯ ರಚನೆ (ಸು.1530-40), ನಗರದ ನೀಲಕಂಠೇಶ್ವರ ಮತ್ತು ಆಂಜನೇಯ ದೇವಾಲಯಗಳು, ಹಂಪನೂರ ರಂಗನಾಥಸ್ವಾಮಿ ದೇವಸ್ಥಾನ, ಮಳಿಗೆಯ ಜೈನಬಸದಿ ಮೊದಲಾದ ಇದೇ ಕಾಲದ ಇತರ ಕಟ್ಟಡಗಳಲ್ಲೂ ಕೆಳದಿ ವಾಸ್ತುಸಂಪ್ರದಾಯದ ಅಚ್ಚನ್ನು ಕಾಣಬಹುದು.

ಕೆಳದಿಶೈಲಿಯ ಶಿಲ್ಪಗಳು ಸಮಕಾಲೀನ ವಿಜಯನಗರ ಮತ್ತು ಅನಂತರದ ಶಿಲ್ಪಸಂಪ್ರದಾಯದಲ್ಲೇ ಇವೆ. ವಾಸ್ತುರಚನೆಯಲ್ಲಿ ಹಲವು ಹೊಯ್ಸಳ ಅಂಶಗಳು ಈ ಕಾಲದ ಕಟ್ಟಡಗಳಲ್ಲಿ ಕಂಡುಬಂದರೂ ಅವುಗಳ

ರಚನೆಗೆ ಒರಟುಕಲ್ಲುಗಳನ್ನು ಉಪಯೋಗಿಸಿರುವುದರಿಂದ, ಹೊಯ್ಸಳ ಕಾಲದ ಶಿಲ್ಪಗಳ ನಯನಾಜೂಕು, ಸೂಕ್ಷ್ಮ ಅಲಂಕರಣಗಳು ಇವುಗಳಲ್ಲಿ ಮೂಡಿಬಂದಿಲ್ಲ. ದೇವಾಲಯಗಳ ಹೊರಗೋಡೆಗಳ ಶಿಲ್ಪಗಳು ವಾಸ್ತುವಿನ್ಯಾಸದಲ್ಲಿ ಹೊಯ್ಸಳ ಶೈಲಿಯ ಸ್ಥಾನವನ್ನೇ ಅಲಂಕರಿಸಿದ್ದರೂ ಒಂದೊಂದೇ ಶಿಲ್ಪಗಳನ್ನು ಪ್ರತ್ಯೇಕವಾಗಿ ಪರಿಶೀಲಿಸಿದರೆ ಇವು ಹೊಯ್ಸಳ ಶಿಲ್ಪಗಳ ಅತಿ ಅಸಮರ್ಪಕ ಅನುಕರಣೆಗಳಂತೆ ಕಾಣುತ್ತವೆ. ಶಿಲ್ಪಗಳಲ್ಲಿ ಸ್ವಲ್ಪಮಟ್ಟಿನ ಒರಟುತನ ಎದ್ದುಕಾಣುವ ಅಂಶ. ಹೆಚ್ಚಿನವೆಲ್ಲ ಶಾಸ್ತ್ರ ಮತ್ತು ಸಂಪ್ರದಾಯದ ಹಿಡಿತದಲ್ಲಿ ಸಿಕ್ಕಿಕೊಂಡು ಶಿಲ್ಪಿಯ ಸ್ವಪ್ರತಿಭೆಯ ಸುಲಭ ಪ್ರಕಟನೆಗೆ ದಾರಿಮಾಡಿಕೊಟ್ಟಿಲ್ಲ. ಆದರೆ ಇಕ್ಕೇರಿ ದೇವಾಲಯದ ನಂದಿ, ಕೆಳದಿಯ ವೀರಭದ್ರ ದೇವಾಲಯದ ಭುವನೇಶ್ವರಿಗಳು ಈ ಕಾಲದ ಉತ್ತಮ ಮಟ್ಟದ ಶಿಲ್ಪಗಳೆನ್ನಬಹುದು. ವೀರಭದ್ರ ದೇವಾಲಯದ ಗಂಡಭೇರುಂಡವಿರುವ ಭುವನೇಶ್ವರಿ ಒಂದು ಅಸದೃಶ ಕಲಾಕೃತಿ. ಈ ಕಾಲದ ದೇವಾಲಯಗಳ ಮೇಲಿರುವ ನರ್ತಕರು, ವಾದ್ಯಗಾರರು ಮುಂತಾದ ಶಿಲ್ಪಗಳೂ ಅನೇಕ ವೀರಗಲ್ಲು ಮತ್ತು ಮಾಸತಿಕಲ್ಲುಗಳೂ ಸಮಕಾಲೀನ ಸಾಮಾಜಿಕ ಸ್ಥಿತಿಯ ಮೇಲೆ ಬೆಳಕು ಚೆಲ್ಲುತ್ತವೆ.

**ನಾಣ್ಯಗಳು :** ಈ ವಂಶದ ಅರಸರ ಚಿನ್ನದ ನಾಣ್ಯಗಳು ಇಕ್ಕೇರಿ ವರಹಗಳು ಎಂದು ಪ್ರಸಿದ್ಧವಾಗಿವೆ. ಇವುಗಳಲ್ಲಿ ಸದಾಶಿವನಾಯಕನ ಕಾಲದವು ಮಾತ್ರ ದೊರಕಿವೆ. ಇತರ ಅರಸರ ಆಳಿಕೆಯಲ್ಲೂ ಇದೇ ರೀತಿಯ ನಾಣ್ಯಗಳನ್ನೇ ಪುನಃಪುನಃ ಅಚ್ಚುಹಾಕುತ್ತಿದ್ದರೆಂದೂ ಪ್ರಾಯಶಃ ಈ ಕಾರಣದಿಂದಲೇ ಆ ಅರಸುಮನೆತನದ ಇತರ ರಾಜರ ನಾಣ್ಯಗಳಾವುವೂ ದೊರೆತಿಲ್ಲವೆಂದೂ ಕೆಲವು ವಿದ್ವಾಂಸರ ಅಭಿಪ್ರಾಯ.

ಸದಾಶಿವನಾಯಕನ ನಾಣ್ಯಗಳು ವಿಜಯನಗರದ ಹರಿಹರ, ದೇವರಾಯ, ಸದಾಶಿವರಾಯ ಮುಂತಾದವರ ನಾಣ್ಯಗಳ ಮಾದರಿಯಲ್ಲಿವೆ. ವೃತ್ತಾಕಾರದ ಈ ನಾಣ್ಯಗಳ ಮುಮ್ಮುಖದಲ್ಲಿ ಬಲಗೈಯಲ್ಲಿ ತ್ರಿಶೂಲವನ್ನೂ ಎಡಗೈಯಲ್ಲಿ ಮೃಗವನ್ನೂ ಹಿಡಿದು, ಎಡತೊಡೆಯ ಮೇಲೆ ಪಾರ್ವತಿಯನ್ನು ಕುಳ್ಳಿರಿಸಿಕೊಂಡಿರುವ ಉಮಾಮಹೇಶ್ವರನ ಚಿತ್ರ, ಹಿಮ್ಮುಖದಲ್ಲಿ ಎರಡು ಅಥವಾ ಮೂರು ಅಡ್ಡ ಗೆರೆಗಳ ಮಧ್ಯೆ 'ಶ್ರೀಸದಾಶಿವ' ಎಂಬ ನಾಗರಾಕ್ಷರದ ಬರೆವಣಿಗೆ ಇವೆ. (ಎಸ್.ಎನ್.)

**ಕೆಳವಾಡಿ :** ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕಿನಲ್ಲಿರುವ ಒಂದು ಪ್ರಾಚೀನ ಸ್ಥಳ. ಬಾದಾಮಿಗೆ ಉತ್ತರದಲ್ಲಿ ಸು.18ಕಿಮೀ ದೂರದಲ್ಲಿದೆ. ಗುಳೇದಗುಡ್ಡ ರೋಡ್ ರೈಲ್ವೆ ನಿಲ್ದಾಣಕ್ಕೆ ಸಮೀಪದಲ್ಲಿದೆ. ಗ್ರಾಮದ ಪೂರ್ವಭಾಗಕ್ಕೆ ಕೊಳದ ತಟದಲ್ಲಿ ಸುಂದರವಾದ ಶಿಲ್ಪದಿಂದ ಕೂಡಿದ ಪ್ರಾಚೀನ ರಂಗನಾಥ ದೇವಾಲಯವಿದೆ. ಈ ಊರು ಈಗ ಚಿಕ್ಕ ಗ್ರಾಮವಾದರೂ ಯರಂಬರಿಗೆಯ ಸಿಂದರ ರಾಜ್ಯದಲ್ಲಿ ಇದು ಕೆಳವಾಡಿ 300 ಎಂಬ ಒಂದು ಮಂಡಲವಾಗಿದ್ದು ಆ ರಾಜ್ಯದ ಒಂದು ಮುಖ್ಯ ಊರಾಗಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ. (ಎಸ್.ಜೆ.ಎ.)

**ಕೇಕಯ ವಂಶ :** ಸು.5-8ನೆಯ ಶತಮಾನಗಳ ಅವಧಿಯಲ್ಲಿ ಚಿತ್ರದುರ್ಗ, ಶಿವಮೊಗ್ಗ, ಹಾಸನ ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಅಸ್ತಿತ್ವದಲ್ಲಿದ್ದ ಸಾಮಂತ ಮನೆತನ. ರಾಮಾಯಣಾದಿ ಗ್ರಂಥಗಳಲ್ಲಿ ಈ ಮನೆತನದ ಉಲ್ಲೇಖವಿದ್ದರೂ ಈ ವಂಶದವರು ಉತ್ತರ ಭಾರತದಲ್ಲಿ ಆಳಿದುದರ ಬಗ್ಗೆ ಶಾಸನೇತ್ಯಾದಿ ಚಾರಿತ್ರಿಕ ಆಧಾರಗಳು ಇಲ್ಲ. ಆದರೂ ಮೂಲತಃ ಈ ಮನೆತನದವರು ಪಂಜಾಬ್ ಪ್ರದೇಶದವರೆಂದೂ ಊಹಿಸಲಾಗಿದೆ. ಕರ್ನಾಟಕದಲ್ಲಿ ಈ ಮನೆತನಕ್ಕೆ ಸೇರಿದ ಹಲವರು ಶಾಸನೋಕ್ತರಾಗಿದ್ದಾರೆ. ಈ ಮನೆತನದ ಅರಸರ ಅತ್ಯಂತ ಪ್ರಾಚೀನ ಉಲ್ಲೇಖ ಚಿತ್ರದುರ್ಗ ಜಿಲ್ಲೆಯ ಅಣಜಿ ಗ್ರಾಮದ ಶಾಸನದಲ್ಲಿದೆ. ಸುಮಾರು ಐದನೆಯ ಶತಮಾನಕ್ಕೆ ಸೇರಬಹುದಾದ ಈ ಶಾಸನದಲ್ಲಿ ಉಕ್ತನಾದ ಶಿವಾನಂದ ವರ್ಮ ಕೇಕಯ ಕುಲದವನು. ಸೋಮ ವಂಶೋದ್ಭವನಾದ ಈತ ಆತ್ರೇಯ ಗೋತ್ರಜನಾಗಿದ್ದು ಇಕ್ಷ್ವಾಕು ಮುಂತಾದ ರಾಜಕುಲದವರೊಡನೆ ವೈವಾಹಿಕ ಸಂಬಂಧ ಪಡೆದಿದ್ದ.

ಹಲ್ಮಿಡಿ ಶಾಸನದಲ್ಲಿ ಕೇಕಯ ವಂಶವನ್ನು ಪಲ್ಲವರೊಡಗೂಡಿಸಿ, ಆ ಎರಡು ಮನೆತನದವರನ್ನೂ ಕದನದಲ್ಲಿ ಇರಿದುದಾಗಿ ಹೇಳಿದೆ. ಆದರೆ ಅರಸರ ಹೆಸರನ್ನು ಹೇಳಿಲ್ಲ. 8ನೆಯ ಶತಮಾನದ ಶಾಸನವೊಂದರಿಂದ ಪಲ್ಲವ ಗೋಪಾಲದೇವನೂ ಕೇಕಯರಿಗೆ ಸಂಬಂಧಿಸಿದವನೆಂದು ತಿಳಿದಿದೆ. ಭೋಜ ಅಶಂಕಿತವರ್ಮನ ಹಿರೇಗುತ್ತಿ ತಾಮ್ರಶಾಸನ ನಂದಿಪಲ್ಲಿ ಕೈಕಯಾನ್ವಯಕ್ಕೆ ಸೇರಿದ ಕೊತ್ತಿಪೆಗ್ಗಿಲಿ ಎಂಬಾತನನ್ನು ಹೆಸರಿಸಿದೆ. ಇನ್ನೊಬ್ಬ ಅಶಂಕಿತವರ್ಮನ ಶಾಸನದಲ್ಲಿ ಇದೇ ವಂಶದಲ್ಲಿ ಜನಿಸಿದ ಏಲಕೆಲ್ಲನ ಉಲ್ಲೇಖವಿದೆ. ಕದಂಬ ರವಿವರ್ಮನ ಶಾಸನವೊಂದರಲ್ಲಿಯೂ ಸಹ ಇದೇ ಕುಲದ 'ಕೆಲ್ಲ' ಎಂಬ ನಾಮಾಂತ್ಯವುಳ್ಳ ಚಿತ್ರಸೇನ ಮಹಾಕೆಲ್ಲನ ಪ್ರಸ್ತಾಪವಿದೆ. ಈತ ವಿಜಯಾಂಬುದ್ವೀಪದಲ್ಲಿ ಆಳುತ್ತಿದ್ದನೆಂದಿದೆ. ಇವರ ನಡುವಣ ಸಂಬಂಧ ತಿಳಿಯದು. ಕದಂಬ ಕೃಷ್ಣವರ್ಮನ ಪತ್ನಿಯೊಬ್ಬಳು ಈ ವಂಶಕ್ಕೆ ಸೇರಿದವಳು. ಈಕೆಯ ಹೆಸರುಗೊತ್ತಿಲ್ಲ. ಈ ದಂಪತಿಗಳಿಗೆ ಜನಿಸಿದಾತ ವಿಷ್ಣುಶರ್ಮ. ಅಂತೆಯೇ ಕದಂಬ ಮೃಗೇಶವರ್ಮನ ಪತ್ನಿ ಪ್ರಭಾವತಿ ಕೇಕಯ ಮಹಾಕುಲ ಪ್ರಸೂತಳು. ಈಕೆಯ ಮಗ ರವಿವರ್ಮ.

ಕೆಕ್ಕಾರ್ ಗ್ರಾಮದ 8ನೆಯ ಶತಮಾನದ ಶಾಸನದಲ್ಲಿ ಇನ್ನೊಬ್ಬ ಕೇಕಯ ಅಣ್ಣಿಯರಸನ ಪ್ರಸ್ತಾಪವಿದೆ. ಈತನನ್ನು ಪಯೊಗುಂಡ ಪುರವರೇಶ್ವರನೆಂದು ಶಾಸನದಲ್ಲಿ ವರ್ಣಿಸಿರುವುದರಿಂದ ಈ ಮನೆತನದವರು ಪಶ್ಚಿಮ ತೀರಪ್ರದೇಶದಲ್ಲಿ ಅಧಿಕಾರದಲ್ಲಿದ್ದವರೆಂದೂ ಊಹಿಸಬಹುದು. ಈತನ ಲಾಂಛನ ಸಿಂಹ. (ಬಿ.ಆರ್.ಜಿ.)

**ಕೇಶವನ್, ಬಿ.ಎಸ್. :** 1909-2000. ಭಾರತದ ಗ್ರಂಥಾಲಯ ವಿಜ್ಞಾನಿ. ಭಾರತದಲ್ಲಿ ಗ್ರಂಥಾಲಯೋದ್ಯಮವನ್ನು ಒಂದು ಉದಾತ್ತ ಉದ್ಯಮವನ್ನಾಗಿ ಪರಿವರ್ತಿಸುವಲ್ಲಿ ಸತತವಾಗಿ ಪರಿಶ್ರಮಿಸಿದವರು. ಶಿಕ್ಷಕ, ಗ್ರಂಥಪಾಲ ಮತ್ತು ಹಿರಿಯ ಯೋಜಕರಾಗಿ ರಾಷ್ಟ್ರೀಯ ಕ್ಷೇತ್ರಗಳಲ್ಲಿ ಹೆಚ್ಚಿನ ಕೆಲಸ ಮಾಡಿದ್ದಾರೆ. ಇವರ ಪೂರ್ಣ ಹೆಸರು ಬಳ್ಳಾರಿ ಶಾಮಣ್ಣ ಕೇಶವನ್.

ಇವರು 1909 ಮೇ 10ರಂದು ಮದರಾಸಿನಲ್ಲಿ ಜನಿಸಿದರು. ಮದರಾಸಿನಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಬಿ.ಎ. ಪದವಿ ಪಡೆದು ಅನಂತರ ಲಂಡನ್ ವಿಶ್ವವಿದ್ಯಾಲಯದಿಂದ ಇಂಗ್ಲಿಷ್ ಭಾಷೆಯಲ್ಲಿ ಎಂ.ಎ. ಪದವಿಯನ್ನಲ್ಲದೆ ಗ್ರಂಥಾಲಯ ವಿಜ್ಞಾನದಲ್ಲಿ ಡಿಪ್ಲೊಮಾವನ್ನು ಪಡೆದರು. ಏಳು ವರ್ಷಗಳ ಅನಂತರ ಭಾರತಕ್ಕೆ ಮರಳಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಸಹಪ್ರಾಧ್ಯಾಪಕರಾಗಿ ನೇಮಕಗೊಂಡರು.

ಮುಂದೆ ಇವರು ದೆಹಲಿಯ ವೈಜ್ಞಾನಿಕ ಹಾಗೂ ಔದ್ಯೋಗಿಕ ಸಂಶೋಧನ ಮಂಡಳದ ಆರ್ಥಿಕ ಸಂಪನ್ಮೂಲಗಳ ಹಾಗೂ ಔದ್ಯೋಗಿಕ ನಿಘಂಟು ಕಚೇರಿಯಲ್ಲಿ ಸಹಕಾರ್ಯದರ್ಶಿಯಾಗಿ (1944) ಭಾರತದ ಸಂಪತ್ತು (ದಿವೆಲ್ತ್ ಆಫ್ ಇಂಡಿಯ) ಎಂಬ ಗ್ರಂಥ ಪ್ರಕಟಣೆಯಲ್ಲಿ ಪ್ರಮುಖವಾಗಿ ದುಡಿದರು. ಇದಾದ ಎರಡು ವರ್ಷಗಳ ತರುವಾಯ ಭಾರತ ಸರ್ಕಾರದ ಶಿಕ್ಷಣ ಸಚಿವಾಲಯದಲ್ಲಿ ಅಧಿಕಾರಿಗಳಾದರು. ಇವರು ಕಲ್ಕತ್ತೆಯ ರಾಷ್ಟ್ರೀಯ ಗ್ರಂಥಾಲಯದ ಪ್ರಥಮ ಗ್ರಂಥಪಾಲರಾಗಿ ನೇಮಕ ಗೊಂಡಿದ್ದು 1948ರಲ್ಲಿ. ಆಗ ಈ ಗ್ರಂಥಾಲಯಕ್ಕೆ ಸುಸಜ್ಜಿತ ಕಟ್ಟಡವಿರಲಿಲ್ಲ. ವೈಸರಾಯ್ ನಿವಾಸವಾಗಿದ್ದ ಬೆಲ್ವಡೇರ್ ಅರಮನೆಯನ್ನು ಗ್ರಂಥಾಲಯಕ್ಕೆ ಪಡೆದುಕೊಳ್ಳುವುದರಲ್ಲಿ ಯಶಸ್ವಿಯಾದರು. ಈ ಗ್ರಂಥಾಲಯವನ್ನು ಬೆಳೆಸಿದ ಮತ್ತು ಇದನ್ನು ಅಧುನಾತನಗೊಳಿಸಿದ ಕೀರ್ತಿ ಇವರದು. ಇವರು ಮಾಡಿದ ಇನ್ನೊಂದು ಕೆಲಸವೆಂದರೆ ಅಲ್ಲಿ ಭಾಷಾ ವಿಭಾಗವನ್ನಾರಂಭಿಸಿದ್ದು. ರಾಷ್ಟ್ರೀಯ ಗ್ರಂಥಸೂಚಿಗಾಗಿ (ನ್ಯಾಷನಲ್ ಬಿಬ್ಲಿಯಾಗ್ರಫಿ) ಇವರು



ಪ್ರಾರಂಭಿಸಿದ ಯೋಜನೆ 1958ರಲ್ಲಿ ಕಾರ್ಯಗತವಾಯಿತು. ಇವರು ರಾಷ್ಟ್ರೀಯ ಗ್ರಂಥಾಲಯದ ಗ್ರಂಥಸಂಗ್ರಹವನ್ನು ಹೆಚ್ಚಿಸಿದ್ದಲ್ಲದೆ ಅಪೂರ್ವ ವೈಯಕ್ತಿಕ ಸಂಗ್ರಹಗಳನ್ನು ಕಲೆಹಾಕಿದರು. ಕೇಂದ್ರೀಯ ಸಂದರ್ಭ ಗ್ರಂಥಾಲಯವನ್ನು ಪ್ರಾರಂಭಿಸಿದರು.

ಕೇಂದ್ರ ರಾಷ್ಟ್ರೀಯ ಭೌತ ಪ್ರಯೋಗಾಲಯದ ಒಂದು ಅಂಗವಾಗಿದ್ದ ಭಾರತ ರಾಷ್ಟ್ರೀಯ ವೈಜ್ಞಾನಿಕ ಕೇಂದ್ರವನ್ನು ಪ್ರತ್ಯೇಕಿಸಿ ಅದಕ್ಕೆ ಪ್ರಥಮ ನಿರ್ದೇಶಕರಾಗಿ ಇವರನ್ನು ನೇಮಿಸಲಾಯಿತು. ಅನಂತರ ಭಾರತ ಸರ್ಕಾರ ಇವರನ್ನು ಗ್ರಂಥಾಲಯದ ಸಲಹೆಗಾರರಾಗಿ ನೇಮಿಸಿತು. ಗ್ರಂಥಾಲಯ ವಿಜ್ಞಾನದಲ್ಲಿ ಸಂದರ್ಶ ಪ್ರಾಧ್ಯಾಪಕರಾಗಿ ದೆಹಲಿ ವಿಶ್ವವಿದ್ಯಾಲಯ ಇವರನ್ನು ನೇಮಕ ಮಾಡಿತು. ಯುನೆಸ್ಕೋ ಇವರನ್ನು ಮನಿಲಾದಲ್ಲಿ ನಡೆದ ಏಷ್ಯದ ರಾಷ್ಟ್ರೀಯ ಗ್ರಂಥಾಲಯಗಳ ಸಮ್ಮೇಳನಕ್ಕೆ ಮುಖ್ಯ ಕಾರ್ಯಕರ್ತರಾಗಲು ಆಮಂತ್ರಿಸಿತು (1964). ಭಾರತ ಸರ್ಕಾರದಿಂದ ಇವರಿಗೆ ಪದ್ಮಶ್ರೀ ಪ್ರಶಸ್ತಿ ದೊರೆತದ್ದು 1960ರಲ್ಲಿ.

ಕೇಶವನ್ ಭಾರತೀಯ ಗ್ರಂಥಾಲಯ ಸಂಘದ ಅಧ್ಯಕ್ಷರಾಗಿ ಒಂದು ದಶಕದ ಕಾಲ ಸೇವೆ ಸಲ್ಲಿಸಿದರು. ಇವರು ಗ್ರಂಥಸೂಚಿ ಕುರಿತ ಅಂತಾರಾಷ್ಟ್ರೀಯ ಸಮಿತಿ, ಯುನೆಸ್ಕೋದ ಪ್ರಲೇಖನ ಹಾಗೂ ಪರಿಭಾಷಾ ಸಮಿತಿ, ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಗ್ರಂಥಪಾಲಕರ ಸಮಿತಿಯ ಹಾಗೂ ವಿಶ್ವವಿದ್ಯಾಲಯಗಳ ಪಠ್ಯಕ್ರಮ ಮಂಡಳಿಗಳ ಸದಸ್ಯರಾಗಿದ್ದರು. ಅಂತಾರಾಷ್ಟ್ರೀಯ ಪ್ರಲೇಖನ ಮಂಡಳದ ಆಫ್ರೋ- ಏಷ್ಯನ್ ವಿಭಾಗಕ್ಕೆ ಇವರು ಉಪಾಧ್ಯಕ್ಷರಾಗಿದ್ದರು. ಪ್ರಲೇಖನ ವಿಷಯದಲ್ಲಿ ಯುನೆಸ್ಕೋದ ಸಲಹೆಗಾರರಾಗಿದ್ದರು. ಅಲ್ಲದೆ ಭಾರತೀಯ ಮಾನಕ ಸಂಸ್ಥೆಯ ಪ್ರಲೇಖನ ವಿಭಾಗ ಸಮಿತಿಯ ಅಧ್ಯಕ್ಷರಾಗಿದ್ದರು. ಜೊತೆಗೆ ಇವರು ಭಾರತದ ರಾಷ್ಟ್ರೀಯ ಗ್ರಂಥ ಸಂಸ್ಥೆಯ ಸದಸ್ಯರಾಗಿದ್ದರಲ್ಲದೆ ಇರಾನಿನ ಪ್ರಲೇಖನ ಕೇಂದ್ರ ಸ್ಥಾಪನೆಗೆ ಹಾಗೂ ಅದಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಯುನೆಸ್ಕೋದ ತಜ್ಞರಾಗಿ ಸೇವೆ ಸಲ್ಲಿಸಿದ್ದರು. ರಾಷ್ಟ್ರೀಯ ಗ್ರಂಥಾಲಯವನ್ನು ಕುರಿತು ಇವರು ಬರೆದ ಇಂಡಿಯಾಸ್ ನ್ಯಾಷನಲ್ ಲೈಬ್ರರಿ ಎಂಬ ಕೃತಿ ಉಪಯುಕ್ತವಾಗಿದೆ. ಇವರು 2000 ಫೆಬ್ರವರಿ 16ರಂದು ನಿಧನರಾದರು. (ಟಿ.ಎಲ್.ಬಿ.)

**ಕೇಶವಮೂರ್ತಿ, ಆರ್.ಆರ್. :** 1914-. ಹೆಸರಾಂತ ಪಿಟೀಲು ವಿದ್ವಾಂಸರು. ರುದ್ರಪಟ್ಟಣಂ ರಾಮಸ್ವಾಮಯ್ಯ ಕೇಶವಮೂರ್ತಿ ಎಂಬುದು ಇವರ ಪೂರ್ತಿ ಹೆಸರು. 1914 ಮೇ 25ರಂದು ಜನಿಸಿದರು. ತಂದೆ ಆರ್. ರಾಮಸ್ವಾಮಯ್ಯ, ತಾಯಿ ಆರ್.ಸುಬ್ಬಮ್ಮ. ತಂದೆಯೇ ಇವರ ಮೊದಲ ಸಂಗೀತ ಗುರು. ತಂದೆ ರಾಮಸ್ವಾಮಯ್ಯ ಉತ್ತಮ ಸಂಗೀತ ಬೋಧಕರಾಗಿದ್ದರು.



ಮನೆಯ ಸಂಗೀತದ ವಾತಾವರಣದಿಂದಾಗಿ ಕೇಶವಮೂರ್ತಿಯವರು ತಮ್ಮ ಏಳನೆಯ ವಯಸ್ಸಿನಿಂದಲೇ ಸಂಗೀತ ಕಛೇರಿಗಳನ್ನು ನೀಡಲು ಪ್ರಾರಂಭಿಸಿದರು. ಹೆಚ್ಚಿನ ಸಂಗೀತಾಭ್ಯಾಸಕ್ಕಾಗಿ ಮೈಸೂರಿಗೆ ಬಂದರು (1923). ಅಲ್ಲಿ ಸಂಗೀತ ರತ್ನ ಚಿಕ್ಕರಾಮರಾಯರಲ್ಲಿ ಹಾಗೂ ಗಾನವಿಶಾರದ ಬಿಡಾರಂ ಕೃಷ್ಣಪ್ಪನವರಲ್ಲಿ ಸಂಗೀತಾಭ್ಯಾಸ ಮಾಡಿಸಿದರು. ಅನಂತರ 1934ರಲ್ಲಿ ಬೆಂಗಳೂರಿಗೆ ಬಂದು ನೆಲೆಸಿದರು. ಅದೇ ವರ್ಷ ಭಾರತದಾದ್ಯಂತ ಅನೇಕ ಕಛೇರಿಗಳನ್ನು ನಡೆಸಿದರು. ಇದಲ್ಲದೆ ಹೆಸರಾಂತ ವಿದ್ವಾಂಸರಾದ ಮೈಸೂರು ವಾಸುದೇವಾಚಾರ್ಯ, ಅರಿಯಕುಡಿ ರಾಮಾನುಜಯ್ಯಂಗಾರ್, ಆಲತ್ತೂರು ಸೋದರರು, ಪಲ್ಲಡಂ ಸಂಜೀವರಾವ್, ಮುಸುರಿ ಸುಬ್ರಹ್ಮಣ್ಯ ಅಯ್ಯರ್, ಟೈಗರ್ ವರದಾಚಾರ್ಯ, ಬಿಡಾರಂ ಕೃಷ್ಣಪ್ಪ, ಚೆಂಬೈ ವೈದ್ಯನಾಥ ಭಾಗವತರ್ ಮೊದಲಾದವರ ಸಂಗೀತ ಕಛೇರಿಗಳಲ್ಲಿ ಪಿಟೀಲು ಪಕ್ಕವಾದ್ಯ ನುಡಿಸಿದ್ದಾರೆ. ಸಾಮಾನ್ಯವಾಗಿ ಎಲ್ಲರೂ ನಾಲ್ಕು ತಂತಿ ಪಿಟೀಲು ನುಡಿಸಿದರೆ. ಇವರು ಏಳುತಂತಿ ಪಿಟೀಲಿನಲ್ಲೇ ಅಭ್ಯಾಸವನ್ನು ಕರಗತ ಮಾಡಿಕೊಂಡಿದ್ದು ಒಂದು ವಿಶೇಷ. ಏಳುತಂತಿಪಿಟೀಲು ಒಂದು ಹೊಸ ಆವಿಷ್ಕಾರ, ಇದರಲ್ಲಿ ಇನ್ನೊಬ್ಬ ಹೆಸರಾಂತ ಕಲಾವಿದರು ಮೈಸೂರು ಟಿ.ಚೌಡಯ್ಯನವರು.

ಕೇಶವಮೂರ್ತಿ ಬಹುಭಾಷಾ ಪ್ರೇಮಿ. ಇವರು ಸಂಸ್ಕೃತ, ತೆಲುಗು, ತಮಿಳು, ಹಿಂದಿ ಭಾಷೆಗಳಲ್ಲಿ ಪರಿಣತಿ ಸಾಧಿಸಿದ್ದಾರೆ. ಇವರು ರಚಿಸಿರುವ ಗ್ರಂಥಗಳು ವಿದ್ಯಾರ್ಥಿಗಳಿಗೆ ಹಾಗೂ ವಿದ್ವಾಂಸರಿಗೆ ಪ್ರಿಯವಾಗಿ ಅಂತಾರಾಷ್ಟ್ರೀಯ ಮನ್ನಣೆ ಗಳಿಸಿವೆ. ಬಾಲಶಿಕ್ಷೆ, ವಾಗ್ಗೇಯಕಾರ ಕೃತಿಗಳು, ಲಕ್ಷ್ಯ ಲಕ್ಷಣ ಪದ್ಧತಿ, ರಾಗ ಲಕ್ಷಣ ಮತ್ತು ರಾಗಕೋಶ, ಸಂಗೀತ ಲಕ್ಷ್ಯವಿಜ್ಞಾನ, ಹಿಂದೂಸ್ಥಾನಿ ರಾಗಕೋಶ, ಭಾರತೀಯ ವಾಗ್ಗೇಯಕಾರರು, ಬಹತ್ತರ ರಾಗಮಾಲಿಕ, ಕ್ಷೇತ್ರಯ್ಯ ಪದಗಳು ಹಾಗೂ ಕಚೇರಿ ಪದ್ಧತಿ ಇವು ಇವರು ಕನ್ನಡದಲ್ಲಿ ರಚಿಸಿರುವ ಕೆಲವು ಸಂಗೀತ ಗ್ರಂಥಗಳು. ಇವು ಸಂಗೀತದ ವಿದ್ಯಾರ್ಥಿಗಳಿಗೆ ಆಕರ ಗ್ರಂಥಗಳಾಗಿವೆ.

ಇವರು ತಮ್ಮ ಗುರುಗಳಾದ ಬಿಡಾರಂ ಕೃಷ್ಣಪ್ಪನವರ ಹೆಸರಿನಲ್ಲಿ ಸಂಗೀತ ವಿದ್ಯಾಲಯವನ್ನು ಪ್ರಾರಂಭಿಸಿದ್ದರು. ಸುಗಮಸಂಗೀತ ಮತ್ತು ವಾದ್ಯಸಂಗೀತಗಳೆರಡನ್ನೂ ಇಲ್ಲಿ ಕಲಿಸುವ ಏರ್ಪಾಡಿದೆ. ರಾಷ್ಟ್ರ ಹಾಗೂ ಅಂತಾರಾಷ್ಟ್ರೀಯ ಮಟ್ಟದ ಕಲಾವಿದರು ಈ ವಿದ್ಯಾಲಯದಿಂದ ಹೊರಬಂದಿದ್ದಾರೆ. ಎಚ್.ಎಂ.ವಿ. ಕಂಪನಿ ಇವರ ಪಿಟೀಲುವಾದನದ ಎಂಟು ಧ್ವನಿ ಸುರುಳಿಗಳನ್ನು ಹೊರತಂದಿದೆ.

ಇವರಿಗೆ ಅನೇಕ ಪ್ರಶಸ್ತಿಗಳೂ ಬಿರುದುಗಳೂ ಲಭಿಸಿವೆ. ಇವುಗಳಲ್ಲಿ ಮುಖ್ಯವಾದವು ಗಾನ ಸಾಹಿತ್ಯ ಶಿರೋಮಣಿ, ಸಂಗೀತ ವಿದ್ಯಾಸಾಗರ, ಸಂಗೀತಶಾಸ್ತ್ರಪ್ರವೀಣ, ಲಯಕಲಾನಿಪುಣ, ಸಂಗೀತಕಲಾ ಪ್ರಪೂರ್ಣ. ಇವರಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಸಂಗೀತನೃತ್ಯ ಅಕಾಡೆಮಿ ಪ್ರಶಸ್ತಿ, ಕನಕ-ಪುರಂದರ ಪ್ರಶಸ್ತಿ (1993), ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ಗಾಯನ ಸಮಾಜದ ಸಂಗೀತ ಕಲಾರತ್ನ ಪ್ರಶಸ್ತಿ ಲಭ್ಯವಾಗಿವೆ. ಕೇಶವಮೂರ್ತಿಯವರು ಗಾನಕಲಾಪರಿಷತ್, ಪುರಂದರ ಸೇವಾ ಸಮಿತಿ ಹಾಗೂ ಶ್ರೀರಂಗಪಟ್ಟಣದ ತ್ಯಾಗರಾಜಪೀಠ ಇವುಗಳ ಏಳಿಗೆಗಾಗಿಯೂ ದುಡಿದಿದ್ದಾರೆ.

ಈಗ ಇವರು ರಾಗಗಳ ರಸ, ಭಾವಗಳನ್ನು ಕುರಿತು ಸಂಶೋಧನೆ ನಡೆಸುತ್ತಿದ್ದಾರೆ. (ಎಚ್.ಆರ್.ಎಲ್.)

**ಕೇಶವಮೂರ್ತಿ, ಎಚ್.ಆರ್. :** 1919. ಪ್ರಸಿದ್ಧ ನೃತ್ಯಪಟು. ಶಾಂತಲಾ ನಾಟ್ಯ ಪ್ರಶಸ್ತಿ ವಿಜೇತರು (1998). ತಂದೆ ಬಿ.ರಾಮಸ್ವಾಮಯ್ಯ, ತಾಯಿ ಸೀತಮ್ಮ. ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ಹೊಚಿಹಳ್ಳಿಯಲ್ಲಿ 1919 ಜೂನ್ ತಿಂಗಳಲ್ಲಿ ಜನಿಸಿದರು. ಹೊಚಿಹಳ್ಳಿ, ತುಮಕೂರು ಹಾಗೂ ಮೈಸೂರಿನಲ್ಲಿ ಎಸ್.ಎಸ್.ಎಲ್.ಸಿ. ಯವರೆಗೆ ವಿದ್ಯಾಭ್ಯಾಸ ಮಾಡಿದರು. ಶಾಲೆಯ ವಿದ್ಯಾಭ್ಯಾಸದ ಜೊತೆಗೆ ಸಂಗೀತಾಭ್ಯಾಸವನ್ನೂ ಹಿರಿಯ ಗುರುಗಳಿಂದ ಕಲಿತರು. ಇದೇ ವೇಳೆಗೆ ಸಂಗೀತ ಕಛೇರಿಗಳನ್ನೂ ನೀಡುತ್ತಿದ್ದರು. ಅನಂತರ ನೃತ್ಯಕಲೆಯ ಕಡೆಗೆ ಆಕರ್ಷಿತರಾಗಿ ಬೆಂಗಳೂರಿಗೆ ಬಂದು ಸೋಹನ್‌ಲಾಲ್‌ರಲ್ಲಿ ಕಥಕ್ ನೃತ್ಯಾಭ್ಯಾಸಕ್ಕೆ ತೊಡಗಿದರು. ಅಲ್ಲಿಂದ ಮುಂದೆ ನಟುವನಾರ್ ಗುಂಡಪ್ಪನವರಲ್ಲಿ ಭರತನಾಟ್ಯದಲ್ಲಿ ಶಿಕ್ಷಣ ಪಡೆದರು.

ನೃತ್ಯಕಲೆಗೆ ಸಮರ್ಪಿತವಾದ, ತಮ್ಮ ಕನಸಿನ ಕೂಸಾದ ಕೇಶವ ನೃತ್ಯಶಾಲೆಯನ್ನು ಬೆಂಗಳೂರಿನಲ್ಲಿ ಸ್ಥಾಪಿಸಿದರು (1949). ಅಲ್ಲಿ ಪ್ರಾರಂಭದ ದಿನಗಳಲ್ಲಿ ಕಥಕ್ ಹಾಗೂ ಭರತನಾಟ್ಯ ಎರಡೂ ಪ್ರಕಾರಗಳಲ್ಲಿ ವಿದ್ಯಾರ್ಥಿಗಳಿಗೆ ಕಲಿಸುತ್ತಿದ್ದವರು, ಕ್ರಮೇಣ ಭರತನಾಟ್ಯದ ಬೋಧನೆಗಷ್ಟೇ ತಮ್ಮನ್ನು ತೊಡಗಿಸಿಕೊಂಡರು. ಇವರ ಅನೇಕ ಶಿಷ್ಯರು ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಮಟ್ಟದಲ್ಲಿ ಕೀರ್ತಿ, ಯಶಸ್ಸನ್ನು ಪಡೆದಿದ್ದಾರೆ. ಭರತನಾಟ್ಯವನ್ನು ಕಲಿಸುವುದರ ಜೊತೆಗೆ ಕನ್ನಡ, ಸಂಸ್ಕೃತ, ಹಿಂದಿ

ಭಾಷೆಗಳಲ್ಲಿ ಚಾರಿತ್ರಿಕ, ಪೌರಾಣಿಕ ಹಾಗೂ ಸಾಮಾಜಿಕ ವಿಷಯಗಳನ್ನು ತೆಗೆದುಕೊಂಡು ನೃತ್ಯರೂಪಕ ಹಾಗೂ ನೃತ್ಯನಾಟಕಗಳನ್ನು ಸಿದ್ಧಪಡಿಸಿ ಪ್ರಸ್ತುತಪಡಿಸಿ ಯಶಸ್ಸು ಗಳಿಸಿದರು. ಕನ್ನಡ ಕವಿಕಾವ್ಯದರ್ಶನ ಎಂಬ ಮಾಲಿಕೆಯಲ್ಲಿ ನೃತ್ಯ ನಾಟಕ ಹಾಗೂ ರೂಪಕಗಳ ಮೂಲಕ ಕನ್ನಡ ಕಾವ್ಯ ಹಾಗೂ ಸಾಹಿತ್ಯವನ್ನೂ ಪರಿಚಯಿಸಿದರು. ಕೇಶವ ನೃತ್ಯಶಾಲೆಯ ಕಲಾತಂಡ ಕರ್ನಾಟಕದ ಎಲ್ಲ ಪ್ರಮುಖ ನಗರಗಳಲ್ಲೂ ಕಾರ್ಯಕ್ರಮ ನೀಡಿದೆ. ಭಾರತದ ಪ್ರಮುಖ ನಗರಗಳಾದ ದೆಹಲಿ, ಮುಂಬಯಿ, ಕೋಲ್ಕತ್ತ, ಚೆನ್ನೈ ಹಾಗೂ ತಿರುವನಂತಪುರಗಲ್ಲೂ ತಮ್ಮ ತಂಡದ ಮೂಲಕ ನೃತ್ಯ ಪ್ರದರ್ಶನ ನೀಡಿದ್ದಾರೆ. ಜರ್ಮನಿ ಹಾಗೂ ಇಂಗ್ಲೆಂಡ್‌ಗಳಲ್ಲೂ ಈ ವೃಂದ ಭರತನಾಟ್ಯ ಪ್ರದರ್ಶಿಸಿದೆ. ಸುವರ್ಣ ಮಹೋತ್ಸವವನ್ನು ಆಚರಿಸಿಕೊಂಡಿರುವ ಕೇಶವ ನೃತ್ಯಶಾಲೆ ಸುಸಜ್ಜಿತ ಗ್ರಂಥಾಲಯವನ್ನೂ ಹೊಂದಿದೆ. ನೃತ್ಯಕಲೆಗಾಗಿಯೇ ತಮ್ಮನ್ನು ಸಮರ್ಪಿಸಿಕೊಂಡಿರುವ ಕೇಶವಮೂರ್ತಿಯವರು ಈ ಕಲೆಯ ಏಳ್ಗೆಗಾಗಿ ದುಡಿಯುತ್ತಿದ್ದಾರೆ.



ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಸದಸ್ಯರಾಗಿ ಇವರು ಹಲವುಬಾರಿ ನಾಮಕರಣಗೊಂಡು ಕಲೆಯ ಬೆಳೆವಣಿಗೆಗಾಗಿ ದುಡಿದಿದ್ದಾರೆ. ವಿದ್ವತ್ ಪರೀಕ್ಷೆಯ ಮುಖ್ಯ ಪರೀಕ್ಷಕರಾಗಿ ನೃತ್ಯಲೋಕಕ್ಕೆ ಸೇವೆ ಸಲ್ಲಿಸಿದ್ದಾರೆ. ಭರತನಾಟ್ಯ ಪಠ್ಯ ಪುಸ್ತಕ ಸಮಿತಿಯ ಮುಖ್ಯಸ್ಥರಾಗಿ ಪಠ್ಯಪುಸ್ತಕಗಳನ್ನು ಹೊರತರುವುದರಲ್ಲಿ ಕಾರ್ಯನಿರ್ವಹಿಸಿದ್ದಾರೆ. ಕಲೆ ಕುರಿತಂತೆ ವಿಶೇಷ ಉಪನ್ಯಾಸಗಳು ಹಾಗೂ ಪ್ರಾತ್ಯಕ್ಷಿಕೆಗಳನ್ನು ನೀಡಿದ್ದಾರೆ. ಇವರು ರಚಿಸಿರುವ ನಾಟ್ಯವಿಚಾರಸಂಗ್ರಹ ಎಂಬುದು ಬಹು ಮುಖ್ಯವಾದ ಆಕರ ಗ್ರಂಥವೆನಿಸಿದೆ. ಇದಲ್ಲದೆ ನಾಡಿನ ಪತ್ರಿಕೆಗಳಿಗೆ ನೃತ್ಯ ಸಂಬಂಧವಾದ ಪ್ರಬಂಧ ಲೇಖನಗಳನ್ನೂ ಬರೆದಿದ್ದಾರೆ.

ನೃತ್ಯರಂಗಕ್ಕೆ ಇವರು ಇಲ್ಲಿಸಿರುವ ಸೇವೆಯನ್ನು ಗುರುತಿಸಿ ಸರ್ಕಾರ ಹಾಗೂ ಅನೇಕ ಸಂಘ ಸಂಸ್ಥೆಗಳು ಪ್ರಶಸ್ತಿ - ಗೌರವ ನೀಡಿ ಸನ್ಮಾನಿಸಿವೆ. ಅವುಗಳಲ್ಲಿ ಮುಖ್ಯವಾದವು: ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಕರ್ನಾಟಕ ಕಲಾತಿಲಕ ಬಿರುದು, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ನೃತ್ಯಕಲಾಪರಿಷತ್ತಿನ ನೃತ್ಯಕಲಾಶಿರೋಮಣಿ, ಕರ್ನಾಟಕ ನವೋದಯ ಸಂಸ್ಥೆಯ ಅಚಲ ಪ್ರಶಸ್ತಿ, ಬೆಂಗಳೂರು ಗಾಯನ ಸಮಾಜದ ಗೌರವ, 69ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನ, ಕರ್ನಾಟಕ ಸರ್ಕಾರದ ಶಾಂತಲ ಪ್ರಶಸ್ತಿ (1998). ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ಇವರಿಗೆ ಲಭ್ಯವಾಗಿದೆ.

ಇವರ ಪುತ್ರಿ ವಸಂತಲಕ್ಷ್ಮಿ, ಪುತ್ರ ಶ್ಯಾಮಪ್ರಸಾದ್ ಹಾಗೂ ಲಲಿತಾ ಶ್ರೀನಿವಾಸ್ ಇವರು ಕೇಶವಮೂರ್ತಿಯರ ಶಿಷ್ಯರಲ್ಲಿ ಪ್ರಮುಖರು. ಕೇಶವಮೂರ್ತಿಯವರ ನೃತ್ಯ ಪರಂಪರೆಯನ್ನು ಇವರೆಲ್ಲ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. (ಎಚ್.ಆರ್.ಎಲ್.)

**ಕೇಶವರ್ಣಿ :** ಸು.1359. ಜೈನಕವಿ. ಗೊಮ್ಮಟಸಾರ, ಅಮಿತಗತಿಶ್ರಾವಕಾಚಾರ ಇವುಗಳಿಗೆ ಕರ್ನಾಟಕವೃತ್ತಿಯನ್ನು ಬರೆದಿದ್ದಾನೆ. ಈತ ಅಭಯಸೂರಿ ಸಿದ್ಧಾಂತಚಕ್ರವರ್ತಿಯ ಶಿಷ್ಯ. ದೇವಚಂದ್ರ (ಸು.1838) ತನ್ನ ರಾಜಾವಳೀಕಥೆಯಲ್ಲಿ ಇವನು ಸಾರತ್ರಯಕ್ಕೂ ಕನ್ನಡ ವ್ಯಾಖ್ಯಾನಗಳನ್ನು ಬರೆದಿರುವಂತೆ ಹೇಳುತ್ತಾನೆ. ಒಂದನೆಯ ಮಂಗರಾಜ (ಸು.1360) ಈತನನ್ನು ಸಾರತ್ರಯವೇದಿ ಎಂದು ಹೇಳಿರುವುದರಿಂದಲೂ ಕವಿ ತನ್ನನ್ನು ಸಾರತ್ರಯವೇದಿ ಎಂದು ಹೇಳಿಕೊಂಡಿರುವುದರಿಂದಲೂ ದೇವಚಂದ್ರ ಹೇಳುವ ಸಂಗತಿ ನಿಜವಿರಬಹುದೆಂದು ತೋರುತ್ತದೆ. ಇವನು ಜಿತೇಂದ್ರಮಾಲೆಗೂ ಕನ್ನಡ ಟೀಕೆಯನ್ನು ಬರೆದಿರುವಂತೆ ತಿಳಿಯುತ್ತದೆ.

ಗೊಮ್ಮಟಸಾರದ ವೃತ್ತಿಯ ಹೆಸರು ಜೀವತತ್ತ್ವಪ್ರದೀಪಿಕಾ. ಇದು ಜೀವಕಾಂಡ, ಕರ್ಮಕಾಂಡ ಎಂಬ ಎರಡು ಭಾಗಗಳನ್ನೊಳಗೊಂಡಿದೆ. ಇದನ್ನು ಧರ್ಮಭೂಷಣ ಭಟ್ಟಾರಕರ ಆಜ್ಞೆಯಿಂದ ಸು.1359ರಲ್ಲಿ ರಚಿಸಿದಂತೆ ತಿಳಿಯುತ್ತದೆ. ಈ ಕನ್ನಡ ಟೀಕೆಯನ್ನು ನೇಮಿಚಂದ್ರ (16ನೆಯ ಶತಮಾನ) ಕೆಲವು ಶ್ರಾವಕರ ಆಗ್ರಹದ ಮೇರೆಗೆ ಸಂಸ್ಕೃತ ಭಾಷೆಯಲ್ಲಿ ಜೀವತತ್ತ್ವಪ್ರದೀಪಿಕಾ ಎಂಬ ಹೆಸರಿನಿಂದ ಅನುವಾದ ಮಾಡಿದ್ದಾನೆ. ನೇಮಿಚಂದ್ರನ ಸಂಸ್ಕೃತ ಟೀಕೆ ತೋಡರಮಲ್ಲನ ಹಿಂದಿ ಟೀಕೆಯೊಡನೆ ಮುದ್ರಿತವಾಗಿದೆ. ಕೇಶವ್ರವರ್ಣಿಯ ಕನ್ನಡ ವೃತ್ತಿ ಈವರೆಗೆ ಪ್ರಸಿದ್ಧವಾಗಿಲ್ಲ. (ಎ.ಎಸ್.ಯು.)

**ಕೇಶವ ಶರ್ಮಾ, ಗಲಗಲಿ :** 1893-1966. ಪ್ರಸಿದ್ಧ ಸಂಸ್ಕೃತ ಪಂಡಿತರು. ಬಿಜಾಪುರದ ಬಡ ಕುಟುಂಬವೊಂದರಲ್ಲಿ 1893 ಮಾರ್ಚ್ 13ರಂದು ಜನಿಸಿದರು. ಕೇಶವ ರಂಗ ಭಟ್ಟ ಜೋಶಿ ಎಂಬುದು ಇವರ ನಿಜನಾಮ. ಇವರ ತಂದೆ ರಂಗ ಭಟ್ಟರು ಜ್ಯೋತಿಷ್ಯಶಾಸ್ತ್ರದಲ್ಲಿ ಶ್ರೇಷ್ಠಪಂಡಿತರು. ಕೇಶವ ಶರ್ಮರು ಹುಟ್ಟಿದಮೇಲೆ ರಂಗಭಟ್ಟರು ತಮ್ಮ ಕುಟುಂಬವನ್ನು ಬಾಗಲಕೋಟೆ ಬಳಿಯ ಕೃಷ್ಣಾ ತೀರದ ಗಲಗಲಿಗೆ ಸ್ಥಳಾಂತರಿಸಿದರು. ಅಲ್ಲಿಯೇ ಕೇಶವ ಶರ್ಮರ ಪ್ರಾಥಮಿಕ ಶಾಲಾ ಶಿಕ್ಷಣ ಆರಂಭವಾಯಿತು. ಪ್ರತಿಕೂಲ ಪರಿಸ್ಥಿತಿಯಲ್ಲಿಯೇ ಇವರ ಬಾಲ್ಯಜೀವನ ನಡೆಯಿತು. ಕನ್ನಡ ಮುಲ್ಕಿ ಪರೀಕ್ಷೆಯಾದ ಮೇಲೆ ಇವರು ಶಿಕ್ಷಕ ವೃತ್ತಿಯನ್ನು ಆರಂಭಿಸಿದರು. ಜ್ಞಾನಾರ್ಜನೆಯ ಹಂಬಲವಿದ್ದ ಕೇಶವ ಶರ್ಮರು ಗಲಗಲಿಯ ಸುಪ್ರಸಿದ್ಧ ಸಂಸ್ಕೃತ ಪಂಡಿತಸಹೋದರರಾದ ಕೂರ್ಮಾಚಾರ್ಯ ಗಲಗಲಿ ಹಾಗೂ ಸುಬ್ರಹ್ಮಣ್ಯಾಚಾರ್ಯ ಗಲಗಲಿ ಅವರ ಬಳಿ ಸಂಸ್ಕೃತ ವ್ಯಾಕರಣ, ಸಾಹಿತ್ಯಾಧ್ಯಯನ ಮಾಡಿದರು. ಅನಂತರ ಗ್ರಂಥರಚನೆಗೆ ಆರಂಭಿಸಿದರು. 1918ರಲ್ಲಿ ಪಂಡಿತರಾಜ ಜಗನ್ನಾಥ ಎಂಬ ಸಂಸ್ಕೃತ ಕವಿಯನ್ನು ಕುರಿತ ಪರಿಚಯಗ್ರಂಥವನ್ನು ಕನ್ನಡದಲ್ಲಿ ರಚಿಸಿದರು. ಈ ಗ್ರಂಥಕ್ಕೆ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಪಾರಿತೋಷಕ ದೊರಕಿತು. ಅನಂತರ ಪಾಣಿನಿಯ ಬಗ್ಗೆಯೂ ಅಂಥದೇ ಇನ್ನೊಂದು ಗ್ರಂಥ ರಚಿಸಿದರು. ಕನ್ನಡ ಮತ್ತು ಸಂಸ್ಕೃತ ಸಾಹಿತ್ಯ, ವ್ಯಾಕರಣ, ಅಲಂಕಾರಗಳನ್ನು ಕುರಿತು, ಕನ್ನಡ ಹಾಗೂ ಸಂಸ್ಕೃತಗಳಲ್ಲಿ ಹಲವಾರು ಪಾಂಡಿತ್ಯಪೂರ್ಣ ಲೇಖನಗಳನ್ನು ಬರೆದರು. ವಂಗ ಭಾಷೆಯನ್ನು ಕಲಿತು ಗೀತಾಂಜಲಿಯನ್ನು ಕನ್ನಡಕ್ಕೆ ಯಶಸ್ವಿಯಾಗಿ ಅನುವಾದಿಸಿದರು. ಅನಂತರ ನೂರಜಹಾನ್ ಎಂಬ ಒಂದು ಸ್ವತಂತ್ರ ಕಾದಂಬರಿಯನ್ನು ರಚಿಸಿದರು. ಜ್ಯೋತಿಷ್ಯಶಾಸ್ತ್ರದಲ್ಲಿ ಇವರಿಗೆ ಆಳವಾದ ಅನುಭವವಿತ್ತು. ತಮ್ಮ ತಂದೆಯ ಕೊನೆಯ ಆಸೆಯನ್ನು ಈಡೇರಿಸುವುದಕ್ಕಾಗಿ ಜ್ಯೋತಿಷ್ಯಕ್ಕೆ ಕೈ ಹಾಕಿ ಕೆಲವು ಜ್ಯೋತಿಷ್ಯ ಗ್ರಂಥಗಳನ್ನೂ ರಚಿಸಿದರು. 1922ರಲ್ಲಿ ಇವರು ಮೈಸೂರಿಗೆ ತೆರಳಿ ಅಲ್ಲಿ ಒಂದು ವರ್ಷವಿದ್ದು ಪಂಡಿತ ಪರೀಕ್ಷೆಯಲ್ಲಿ ಉಜ್ಜ್ವಲ ಯಶಸ್ಸನ್ನು ಸಂಪಾದಿಸಿದರು. ಮುಂದೆ ಪಂಡಿತ ಕೇಶವ ಶರ್ಮಾ ಗಲಗಲಿ ಎಂದು ಖ್ಯಾತನಾಮರಾದರು. ಸುಮಾರು 25 ವರ್ಷಗಳ ಕಾಲ (1912-37) ಸಂಸ್ಕೃತ, ಇಂಗ್ಲಿಷ್, ಪಾಲಿ, ವಂಗ ಹಾಗೂ ಮರಾಠಿ ಭಾಷೆಗಳ ಆಳವಾದ ಅಧ್ಯಯನ ಮಾಡಿ ಅವುಗಳ ಮೇಲೆ ಪ್ರಭುತ್ವ ಸ್ಥಾಪಿಸಿಕೊಂಡರು. ಕಾಂಚೀವರಂನಿಂದ ಹೊರಡುತ್ತಿದ್ದ ಮಂಜುಭಾಷಿಣಿ ಹಾಗೂ ಮದರಾಸಿನ ಸಹೃದಯ ಎಂಬ ಸಂಸ್ಕೃತ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತಿದ್ದರು. ಕೇಶವಶರ್ಮರು 1966ರಲ್ಲಿ ನಿಧನಹೊಂದಿದರು. 'ಸಾಲಂಕೃತ ಸಾಹಿತ್ಯ' ಎಂಬುದು ಇವರ ಲೇಖನ ಸಂಗ್ರಹ, ಇವರ ಪುತ್ರ ಎಚ್.ಜಿ.ಜೋಶಿ ಇದನ್ನು ಪ್ರಕಟಿಸಿದ್ದಾರೆ. (ಎಸ್.ಕೆ.ಕೆ.)

**ಕೇಶವೈನ್, ಶೇಷಗಿರಿ ನಾರಾಯಣ :** 1889-1964. ಹಿರಿಯ ಸ್ವಾತಂತ್ರ್ಯ ಹೋರಾಟಗಾರರು, ರಾಜಕೀಯ ಧುರೀಣರು ಮತ್ತು ಸಹಕಾರಿ



ಬ್ಯಾಂಕಿಂಗ್ ಸಂಸ್ಥೆಗಳ ಸ್ಥಾಪಕರು. ಉತ್ತರ ಕನ್ನಡ ಜಿಲ್ಲೆ ಶಿರಸಿಯಿಂದ 17ಕಿಮೀ ದೂರದಲ್ಲಿರುವ ವಾಳಗಿ ಗ್ರಾಮದಲ್ಲಿ 1889 ಮಾರ್ಚ್ 22ರಂದು ಜನಿಸಿದರು. ತಂದೆ ರಾಮ ಚಂದ್ರರಾವ್ ತಾಯಿ ರುಕ್ಮಿಣಿ. ಮೂಲಾ ನಕ್ಷತ್ರ ದಲ್ಲಿ ಹುಟ್ಟಿದ್ದರಿಂದ ಶಿರಸಿಯ ಕೇಶವೈನ್ ಕುಟುಂಬಕ್ಕೆ ಇವರನ್ನು ದತ್ತಕ ಕೊಡಲಾಯಿತು. ದತ್ತಕ ತಂದೆ ನಾರಾಯಣ ರಾಯ, ತಾಯಿ ಪದ್ಮಾವತಿ. ಕೇಶವೈನ್ ಪ್ರಾಥಮಿಕ ಶಿಕ್ಷಣವನ್ನು ಶಿರಸಿಯಲ್ಲಿ ಮುಗಿಸಿ, ಮುಂದಿನ ಎಸ್.ಎಸ್.ಸಿ. ವರೆಗಿನ ಓದನ್ನು ಕಾರವಾರದಲ್ಲಿ ಮಾಡಿದರು. ಅನಂತರ ಇವರ ಮನೆತನದ ಕಸಬಾಗಿದ್ದ ಕೃಷಿ ಮತ್ತು ವ್ಯಾಪಾರದಲ್ಲಿ ತಮ್ಮನ್ನು ತೊಡಗಿಸಿಕೊಂಡರು.

1905ರಲ್ಲಿ ಸ್ಥಾಪನೆಗೊಂಡ ಶಿರಸಿ ರೂರಲ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಮುಚ್ಚುವ ಸ್ಥಿತಿಯಲ್ಲಿದ್ದಾಗ (1906) ಅದರ ಆಡಳಿತ ಇವರ ಕೈಗೆ ಬಂತು. ತಮ್ಮ ಪ್ರಾಮಾಣಿಕತೆ, ಸ್ವಪ್ರಯತ್ನ ಮತ್ತು ಶ್ರದ್ಧೆಯಿಂದ ಕೇಶವೈನ್ ಅದನ್ನು ಬೆಳೆಯಿಸಿ ಶಿರಸಿ ಅರ್ಬನ್ ಬ್ಯಾಂಕ್ ಸ್ಥಾಪಿಸಿದರು (1913). ಜಾಗತಿಕ ಆರ್ಥಿಕ ಕುಸಿತದಿಂದ (1930-40) ರೈತರು, ತೋಟಗಾರರು, ವ್ಯಾಪಾರಿಗಳು ಆರ್ಥಿಕವಾಗಿ ಕಂಗಾಲಾದಾಗ ಅವರ ನೆರವಿಗೆ ನಿಂತರು. ಇಂದು ಈ ಬ್ಯಾಂಕು ಶಿರಸಿ ಅರ್ಬನ್ ಸೌಹಾರ್ದ ಬ್ಯಾಂಕಾಗಿ ಪರಿವರ್ತನೆಗೊಂಡು ಹದಿನಾರು ಶಾಖೆಗಳನ್ನು ಹೊಂದಿದೆ. ಕೇಶವೈನ್ ಬ್ಯಾಂಕಿನ ಅಧ್ಯಕ್ಷರಾಗಿ, ವ್ಯವಸ್ಥಾಪಕ ನಿರ್ದೇಶಕರಾಗಿ ಸಲ್ಲಿಸಿದ ಸೇವೆಗಾಗಿ ಸ್ಥಳೀಯರು ಅದನ್ನು ಕೇಶವೈನ್ ಬ್ಯಾಂಕ್ ಎಂದೇ ಕರೆಯುತ್ತಿದ್ದರು (1964). ಈ ಬ್ಯಾಂಕಿನ ಅಭಿವೃದ್ಧಿಗೆ ಅವಿಶ್ರಾಂತವಾಗಿ ದುಡಿದುದರಿಂದ ಇವರ ಜೀವಿತಾವಧಿಯಲ್ಲೇ ಇವರ ಬೃಹತ್ ಭಾವಚಿತ್ರದ ಅನಾವರಣ ಮಾಡಿ, ಚೆಕ್ ಹಾಳೆಗಳ ಮೇಲೆ ಇವರ ಭಾವಚಿತ್ರ ಮುದ್ರಿಸಿ ಗೌರವಿಸಲಾಯಿತು. ಇವರ ನಿಧನಾನಂತರ ಇವರ ಶಿಲಾ ಪ್ರತಿಮೆಯನ್ನು ನಿಲ್ಲಿಸಲಾಗಿದೆ. ಇವರ ಜೀವನ ಸಾಧನೆ ಕುರಿತಂತೆ ಬೆಳಕಿನ ಬದುಕು ಎಂಬ ಗ್ರಂಥ ಪ್ರಕಟಿಸಲಾಗಿದೆ.

ಪ್ರಾರಂಭದಿಂದಲೂ ದೇಶದ ಸ್ವಾತಂತ್ರ್ಯಕ್ಕಾಗಿ ದುಡಿಯುವ ಗುಂಪಿನಲ್ಲಿದ್ದ ಕೇಶವೈನ್ ಶಿರಸಿಯ ಮಾರಿಕಾಂಬಾ ದೇವಾಲಯದ ಧರ್ಮದರ್ಶಿಗಳಾಗಿದ್ದಾಗ ಸ್ವಾತಂತ್ರ್ಯಯೋಧರಿಗೆ ದೇವಾಲಯದಲ್ಲಿ ಆಶ್ರಯ ನೀಡಿದರು. ಹರಿಜನರ ದೇವಾಲಯ ಪ್ರವೇಶಿಸಲು ತಂಡದ ನೇತೃತ್ವ ವಹಿಸಿದರು. 1934ರಲ್ಲಿ ಗಾಂಧೀಜಿಯವರು ಕರ್ನಾಟಕಕ್ಕೆ ಬಂದಿದ್ದಾಗ ಇವರ ಮನೆಯಲ್ಲಿ ಅತಿಥಿಗಳಾಗಿ ತಂಗಿದ್ದರು. ಕೇಶವೈನ್ ಮಾರಿಕಾಂಬಾ ದೇವಸ್ಥಾನದಲ್ಲೂ ನಡೆಯುತ್ತಿದ್ದ ಪ್ರಾಣಿವಧೆಯನ್ನು ನಿಲ್ಲಿಸಿದರು. ಅವರು ಪ್ರಾಣಿವಧೆ ನಿಲ್ಲಿಸಿದ ಸುದ್ದಿಯನ್ನು ತಿಳಿದ ಮಹಾತ್ಮ ಗಾಂಧಿಯವರು ಹರಿಜನ ಪತ್ರಿಕೆಯಲ್ಲಿ ಇವರನ್ನು ಅಭಿನಂದಿಸಿ ಬರೆದರು (1942).

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಇವರು ಮಾಡಿದ ಸೇವೆಯನ್ನು ಗುರುತಿಸಿ ಪ್ರಥಮ ಚುನಾವಣೆಯಲ್ಲಿ (1937) ಉತ್ತರ ಕನ್ನಡ ಜಿಲ್ಲೆಯ ಅಭ್ಯರ್ಥಿಯಾಗಿ ಗಾಂಧೀಜಿಯವರು ಕೇಶವೈನ್‌ರ ಹೆಸರನ್ನು ಘೋಷಿಸಿದರು. ಎರಡನೆಯ ಮಹಾಯುದ್ಧ ಆರಂಭವಾದಾಗ (1939) ಬ್ರಿಟಿಷ್ ಸರ್ಕಾರ ಭಾರತೀಯರ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಮೊಟಕುಗೊಳಿಸಿತು. ಆಗ ಗಾಂಧೀಜಿ ವೈಯಕ್ತಿಕ ಸತ್ಯಾಗ್ರಹಕ್ಕೆ ಕರೆ ನೀಡಿದರು. ಗಾಂಧೀಜಿಯವರ ಆದೇಶದಂತೆ ಇವರು ತಮ್ಮ ಶಾಸಕ ಸ್ಥಾನಕ್ಕೆ ರಾಜೀನಾಮೆ ನೀಡಿ ಸತ್ಯಾಗ್ರಹಿಯಾಗಿ ಪಾಲ್ಗೊಂಡು ಹಿಂಡಲಗಾ ಜೈಲಿನಲ್ಲಿ ಒಂದು ವರ್ಷದ ಸಾದಾ ಶಿಕ್ಷೆ ಅನುಭವಿಸಿದರು (1940). ಕೆನರಾ ಜಿಲ್ಲಾ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ 83 ಗ್ರಾಮೀಣ ಶಾಲೆಗಳನ್ನು ತೆರೆದು 25 ವರ್ಷ ನಡೆಸಿ ಜಿಲ್ಲಾ ಶಿಕ್ಷಣ ಬೋರ್ಡಿಗೆ ವಹಿಸಿಕೊಟ್ಟರು. ಮೂರು ಬಾರಿ ಶಿರಸಿ ನಗರಸಭಾ ಸದಸ್ಯರಾಗಿ ಮಾರಿಕಾಂಬಾ ದೇವಾಲಯದ ಧರ್ಮದರ್ಶಿಗಳಾಗಿ, ಕಾಂಗ್ರೆಸ್ ಸಮಿತಿಯ ಉಪಾಧ್ಯಕ್ಷರಾಗಿ, ಹರಿಜನ ಸೇವಕ ಸಂಘದ ಉತ್ತರ ಕನ್ನಡ ಜಿಲ್ಲಾಧ್ಯಕ್ಷರಾಗಿ, ಶಿವಮೊಗ್ಗ- ಕಾರವಾರಗಳಲ್ಲಿದ್ದ ಬಾಲಕಾಶ್ರಮಗಳ ಆಡಳಿತ ಸಮಿತಿಯ ಪದಾಧಿಕಾರಿಯಾಗಿ, ರೈತ ತೋಟಗಾರರ ಸಂಘದ ಪ್ರತಿನಿಧಿಯಾಗಿ, ಸಹಕಾರ ಧುರೀಣರಾಗಿ, ಸ್ವಾತಂತ್ರ್ಯ ಸೇನಾನಿಯಾಗಿ, ಜಿಲ್ಲೆಯ ಪ್ರಥಮ ಶಾಸಕನಾಗಿ ಇವರು ಅಪೂರ್ವ ಸೇವೆ ಸಲ್ಲಿಸಿದರು. ಇವರು 1964 ಸೆಪ್ಟೆಂಬರ್ 21ರಂದು ಶಿರಸಿಯಲ್ಲಿ ನಿಧನಹೊಂದಿದರು. (ಎಸ್.ಎಂ.ಕೆ.)

**ಕೇಶಾಲಂಕಾರ :** ದೈಹಿಕ ಶೃಂಗಾರದ ಒಂದು ಬಗೆ. ಈ ವಿಚಾರದಲ್ಲಿ ಗಂಡಸರಿಗಿಂತ ಸ್ತ್ರೀಯರಲ್ಲಿ ಹೆಚ್ಚು ಆಸಕ್ತಿ ಹಾಗೂ ಒಲವು ಕಂಡು ಬರುತ್ತದೆ. ಪ್ರಾಚೀನ ಕಾಲದಿಂದ ಕನ್ನಡ ಮಹಿಳೆಯರು ಕೇಶಾಲಂಕಾರ ಕಲೆಯಲ್ಲಿ ನಿಪುಣರೆನಿಸಿ ಕೊಂಡಿದ್ದಾರೆ. ಪ್ರಾಚೀನ ಕರ್ನಾಟಕದ ಶಿಲ್ಪಕಲೆಯಲ್ಲಿ ಮೂಡಿಬಂದ ಮಹಿಳೆಯರ ಅಲಂಕಾರಗಳನ್ನು ಗಮನಿಸಿದರೆ, ಆ ಕಾಲದ ಕನ್ನಡ ಕಾವ್ಯಗಳನ್ನವಲೋಕಿಸಿದರೆ ಇದು ವೇದ್ಯವಾಗುವುದು. ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ದೊರೆಯುವ ಜಡೆಮುಡಿಗಳ ವರ್ಣನೆಯನ್ನು, ವೈವಿಧ್ಯವನ್ನು ಶಿಲ್ಪದ ಮೂರ್ತಿಮಂತ ರೂಪದೊಂದಿಗೆ ಸಮನ್ವಯಗೊಳಿಸಿ ನೋಡಿದಾಗ ಆ ಕಾಲದ ಕೇಶಾಲಂಕಾರದ ವೈವಿಧ್ಯಮಯ ಚಿತ್ರ ನಮಗೆ ಕಂಡುಬರುತ್ತದೆ.

ಕುಡಿವುಗುರಿಂದಳಲ್ಮುಡಿಯ ಗಂಟು ಸಡಲ್ಚಿಸಿ ಗಂಧತೈಲಮಂ ಕುಡಿತೆಯೊಳಾಂತು ನೆತ್ತಿಯೊಳಗೊತ್ತಿ ಬಿದಿರ್ಚುತೆ ಕೇಶಪಾಶಮಂ,

ಸಹಜ ದಿವ್ಯಸುಗಂಧದ ಕೇಶಪಾಶಮಂ ಮೃಗಗಂಧಿ ಪೂಸಿದಳುಪಾಸಿತ ಚಂಪಕ ಗಂಧತೈಲಮಂ,

ಇತ್ಯಾದಿ ವರ್ಣನೆಗಳನ್ನು ಓದಿದಾಗ ಅಂದಿನ ಮಹಿಳೆಯರು ಕೇಶಾಲಂಕಾರಕ್ಕಾಗಿ ಗಂಧ, ಚಂಪಕ, ಮಲ್ಲಿಗೆ, ದವನಗಳ ಎಣ್ಣೆಗಳನ್ನು ಉಪಯೋಗಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ.

ಚಾಳುಕ್ಯರ ರಾಜಧಾನಿಗಳಾದ ಐಹೊಳೆ, ಪಟ್ಟದಕಲ್ಲುಗಳಲ್ಲಿಯ ಶಿಲ್ಪಾಲಂಕೃತ ದೇವಾಲಯಗ ಪ್ರಾಚೀನ ದೇವಾಲಯಗಳಾಗಿವೆಯಷ್ಟೆ. ಪಟ್ಟದಕಲ್ಲಿನ ವಿರೂಪಾಕ್ಷ, ಮಲ್ಲಿಕಾರ್ಜುನ ದೇವಾಲಯಗಳ ಮೂರ್ತಿ



ಅನೇಕ ವಿಗ್ರಹಗಳ ಜಡೆ ಮುಡಿಗಳು ಸುಂದರವಾಗಿವೆ. ಐಹೊಳೆಯ ದುರ್ಗಾ, ಲಾಡ ಖಾನ ಮೊದಲಾದ ದೇವಾಲಯಗಳ ಕೇಶಾಲಂಕಾರ ವೈವಿಧ್ಯ ಮಯವಾಗಿದೆ. ಅವುಗಳಲ್ಲಿ ಬಿಡುಮುಡಿ, ಸೋಗೆ ದುರುಂಬು, ಮುತ್ತಿನ ಮುಡಿ, ಎಳಲ್ಮುಡಿ, ಬಳಲ್ಮುಡಿ, ಗೋಡಂಬಿಮುಡಿ ಇವು ಆ ಕಾಲದ ಕೇಶಾಲಂಕಾರಗಳನ್ನು ಎತ್ತಿತೋರುತ್ತವೆ. ಚಾಳುಕ್ಯ ವಿಕ್ರಮಾದಿತ್ಯನ ರಾಣಿಯರಾದ ಲೋಕಮಹಾದೇವಿ. ತ್ರೈಲೋಕ್ಯ ಮಹಾದೇವಿಯರು ಪಟ್ಟದಕಲ್ಲಿನಲ್ಲಿ ಕಟ್ಟಿಸಿದ ದೇವಾಲಯಗಳು ಲೋಕೇಶ್ವರ, ತ್ರೈಲೋಕೇಶ್ವರ ದೇವಾಲಯಗಳೆಂದು ಪ್ರಸಿದ್ಧವಾಗಿವೆ. ಈಗ ಆ ದೇವಾಲಯಗಳಿಗೆ ವಿರೂಪಾಕ್ಷ, ಮಲ್ಲಿಕಾರ್ಜುನ ದೇವಾಲಯ ಗಳೆನ್ನುವರು. ಶಿಲ್ಪಕಲೆಯ ಆಗರವಾಗಿರುವ ಆ ದೇವಾಲಯಗಳಲ್ಲಿ ಶಿಲಾಬಾಲಿಕೆಯರು ಕಟ್ಟಿದ ಬಿಡುಮುಡಿಯನ್ನು ಕಾಣಬಹುದು.

1 ಪ್ರಾಚೀನ ಕೇಶಾಲಂಕಾರಗಳಲ್ಲಿ ಕಾಣುವಂಥ ಬಿಡುಮುಡಿ ಕಟ್ಟುವುದು ಕಠಿಣವೆನಿಸುವುದೇನೋ ನಿಜ; ಆದರೆ ಅದು



ಕಲಾಪೂರ್ಣವಾಗಿದೆ. ಮೊದಲು ಒಂದು ಸಿಂಬಿ ಇಟ್ಟು ದೊಡ್ಡ ಗಂಟನ್ನು ಕಟ್ಟಬೇಕು. ಉಳಿದರ್ಧ ಕೂದಲನ್ನು ಓರಣವಾಗಿ ಬಾಚಿ ಅರ್ಧ ಚಂದ್ರಾಕಾರದ ಸಿಂಬಿಯನ್ನು ಒಳಗಿಟ್ಟುಸುತ್ತಲೂ ಕೂದಲನ್ನು ಸುತ್ತಿ ಅದನ್ನು ಮುಡಿಯ ಕೆಳಭಾಗದಿಂದ ನೆಟ್ಟಗೆ ಮುಡಿಯವರೆಗೆ ಬರುವಂತೆ ಸುತ್ತಿ ಪಿನ್ನುಗಳನ್ನು ಹಾಕಿದರೆ ಬಿಡುಮುಡಿ ಸಿದ್ಧವಾಗುತ್ತದೆ.

2 ಮುಡಿ ನವಿಲಂತೆ ನರ್ತಿಕುಂ ಎನ್ನುವಂತೆ ನವಿಲು ಗರಿಗೆದರಿ ಕುಣಿಯುತ್ತಿರುವಂತೆ ತೋರುವ ಸೋಗೆ ದುರುಂಬನ್ನು ಐಹೊಳೆಯ ದೇವಾಲಯಗಳಲ್ಲಿ ಕಾಣಬಹುದು.

ನೆತ್ತಿಯ ಮೇಲೆ ಕೂದಲುಗಳನ್ನು ಮಾತ್ರ ತೆಗೆದುಕೊಂಡು ಸಣ್ಣ ತುರುಬೊಂದನ್ನು ನೆತ್ತಿಯ ಮೇಲೆ ಕಟ್ಟಿ ಹಿಂಭಾಗದ ಕೂದಲನ್ನು ಚೆನ್ನಾಗಿ ಬಾಚಿ ಅನೇಕ ವಿಭಾಗಗಳಾಗಿ ಮಾಡಿ ನವಿಲುಗರಿಯಂತೆ ಒಂದರ ಮೇಲೊಂದು ಗರಿ ಬರುವ ಹಾಗೆ ತಲೆಯ ಸುತ್ತಲೂ ಕಟ್ಟಬೇಕು. ಈ ಸೋಗೆದುರುಬು ಮಹಿಳೆಯರ ಕೇಶಾಲಂಕಾರ ನಿಪುಣತೆಗೆ ಸಾಕ್ಷಿಯಾಗಿದೆ.

3 ಆ ಕಾಲದ ಅರಮನೆಗಳಲ್ಲಿ ಮುತ್ತು ರಾಶಿರಾಶಿಯಾಗಿರುತ್ತಿತ್ತು. ಮಹಿಳೆಯರು ಮುಡಿಯ ಅಲಂಕಾರದ ಸಾಧನವಾಗಿ ಮುತ್ತಿನ ಎಳೆಗಳನ್ನು ಉಪಯೋಗಿಸುತ್ತಿದ್ದರು. ಪಟ್ಟದಕಲ್ಲಿನ ತ್ರಿಲೋಕೇಶ್ವರ ದೇವಾಲಯದಲ್ಲಿರುವ ಶಿಲ್ಪಸುಂದರಿ ಮುತ್ತಿನ ಮುಡಿಯಿಂದ ಅಲಂಕೃತಳಾಗಿದ್ದಾಳೆ. ತಲೆಯ ಸುತ್ತಲೂ ಮೂರೆಳೆಯ ಮುತ್ತಿನ ಸರವನ್ನು ಅಂದವಾಗಿ ಸುತ್ತಲಾಗಿದೆ. ನೆತ್ತಿಯ ಮೇಲೆ ಮುತ್ತಿನ ಗೊನೆಯನ್ನಿಟ್ಟು ಎಲ್ಲ ಕೂದಲನ್ನೂ ತಲೆಯ ಎಡಭಾಗದಿಂದ ಮುರಿಗೆ ಮಾಡಿ ಮುತ್ತಿನ ಗೊನೆಯ ಸುತ್ತಲೂ ಎತ್ತಿ ಸುತ್ತಿದ್ದಾರೆ. ಆ ಮುಡಿ ಗಟ್ಟಿಯಾಗಿರಲು ಮುತ್ತಿನ ಎರಡೆಳೆಯನ್ನು ಕಲಾತ್ಮಕವಾಗಿ ಸುತ್ತ ಸುತ್ತಿದ್ದಾರೆ. ತೋರಮುಡಿಯೊಳೆ ಮುತ್ತಿನ ಶೃಂಗಾರವೊಪ್ಪಿತ್ತು -ಎಂಬಂತೆ ತೋರುವುದು ಮುತ್ತಿನ ಮುಡಿ.

4 ಅದೇ ದೇವಾಲಯದಲ್ಲಿರುವ ಇನ್ನೋರ್ವ ಶಿಲ್ಪಸುಂದರಿ ತನ್ನ ದುಂಡಗಿನ ಮುಖಕ್ಕೊಪ್ಪುವಂತೆ ಗೋಡಂಬಿಮುಡಿ ಕಟ್ಟಿದ್ದಾಳೆ. ತಲೆಗೂದಲನ್ನೆಲ್ಲ ಬಾಚಿ, ಒಳಗೆ ಗೋಡಂಬಿಯಾಕಾರದ ಸಿಂಬಿಯನ್ನಿಟ್ಟು ಅದರ ಸುತ್ತಲೂ ಕೂದಲನ್ನು ಸುತ್ತಿ ತಲೆಯ ಮೇಲ್ಭಾಗದಲ್ಲಿ ಎದ್ದು ಕಾಣುವಂತೆ ಕಟ್ಟಿದ ಈ ಮುಡಿಗೆ ಆಭರಣಗಳ ಆವಶ್ಯಕತೆಯಿಲ್ಲ. ನಾರಿಗೆ ಮುಡಿಯೇ ಶೃಂಗಾರವಾಗಿದೆ.

5 ಪಟ್ಟದಕಲ್ಲಿನ ಪಾಪನಾಥ ದೇವಾಲಯದ ಶಿಲಾಬಾಲಿಕೆಯರಲ್ಲಿ ಕಂಡುಬರುವ ಮುಡಿಗಳಲ್ಲಿ ಎಳಲ್ಮುಡಿ ಸುಂದರವಾಗಿದೆ. ಅರ್ಧಚಂದ್ರಾಕೃತಿಯ ಸಿಂಬಿಗೆ ಕೂದಲನ್ನು ಸುತ್ತಿ ತಲೆಯ ಮೇಲ್ಭಾಗದಲ್ಲಿ ಎದ್ದುಕಾಣುವಂತೆ ಕಟ್ಟಿದ ಮುಡಿಯ ಮಧ್ಯದಲ್ಲೊಂದು ಹರಳು ಹುಗಿಸಿದ ಕೇಶಾಭರಣವಿದೆ. ಹಳೇಬೀಡು, ಬೇಲೂರು ದೇವಾಲಯಗಳ ಶಿಲಾಬಾಲಿಕೆಯರ ಮುಡಿಗಳು ಅಜಂತ ಚಿತ್ರಗಳ ಮುಡಿಗಳಂತೆ ಪ್ರಸಿದ್ಧವಾಗಿವೆ. ಈ ಮುಡಿಗಳನ್ನೂ ತಲೆಗಿಂತಲೂ ಎತ್ತರವಾಗಿ ಕಟ್ಟಲಾಗಿದೆ. ಒಂದು ಸುತ್ತು ಜಡೆಯನ್ನು ಚಕ್ರಾಕಾರವಾಗಿ ಸುತ್ತಿದ್ದಾರೆ. ಅದರ ಸುತ್ತಲೂ ಮಲ್ಲಿಗೆಮಾಲೆ, ಅದರ ಮೇಲೆ ಕೂದಲನ್ನು ದುಂಡಗೆ ಸುತ್ತಿದ್ದಾರೆ. ಮತ್ತೊಂದು ಜಡೆಯನ್ನು ಅದರ ಸುತ್ತಲೂ ಸುತ್ತಲಾಗಿದೆ. ಬೀಸಣಿಕೆಯ ಆಕಾರದ ಜಡೆಮುಡಿ ಅಂದವಾಗಿ ತೋರುತ್ತದೆ. ಜಡೆಗೆ ಕಟ್ಟಿದ ಜರದ ಗೊಂಡೆಗಳು ಹಿಂಭಾಗದಲ್ಲಿ ನರ್ತಿಸುತ್ತವೆ. ಈ ಜಡೆಮುಡಿಗೆ ಸಿರಿಮುಡಿ, ಬೇಲೂರ ಮುಡಿ, ಬೀಸಣಿಕೆಮುಡಿ ಎಂದು ಹೆಸರುಂಟು. ವಿಜಯನಗರದ ಅರಸರ ಕಾಲದ ಶಿಲ್ಪಸುಂದರಿಯರ ಮುಡಿಗಳೆಲ್ಲ ಬಂಬಲ್ಮುಡಿ ಅಥವಾ ತೆಕ್ಕೆದುರುಂಬುಗಳಾಗಿವೆ. ಬಂಬಲ್ಮುಡಿ ಎಂದರೆ ದೊಡ್ಡಮುಡಿ; ತೆಕ್ಕೆದುರುಬೂ ಅದೇ ಅರ್ಥವುಳ್ಳದ್ದು. ದೊಡ್ಡ ಅಳತೆಯ ಗಂಗಾವನವನ್ನು (ಬನ್) ಕೂದಲಿನ ಮಧ್ಯದಲ್ಲಿಟ್ಟು ದೊಡ್ಡ ಮುಡಿಯನ್ನು ಕಟ್ಟಿದ್ದಾರೆ. ಆ ಕಾಲದ ಶಿಲ್ಪಗಳಲ್ಲಿ ಈ ಮುಡಿಯೊಂದೇ ಎದ್ದು ತೋರುವುದು. ವಿಜಯನಗರದಲ್ಲಷ್ಟೇ ಅಲ್ಲ ಆ ಅರಸರು ಕಟ್ಟಿಸಿದ ದೇವಾಲಯಗಳೆಲ್ಲೆಲ್ಲ ಬಂಬಲ್ಮುಡಿಯೇ ಕಂಡುಬರುತ್ತದೆ.



ಆಧುನಿಕ ಕಾಲದ ಕೇಶಾಲಂಕಾರ ದಿನಕ್ಕೊಂದು ಬಗೆಯಾಗಿ ಮಾರ್ಪಡುತ್ತಿದೆ. ಇಂದಿನ ಮಹಿಳೆಯರು ಕೇಶಾಲಂಕಾರಕ್ಕೆ ಹೆಚ್ಚಿನ ಗಮನ ಕೊಡುತ್ತಿದ್ದಾರೆ. ಶಿಲಾಬಾಲಿಕೆಯರ ಜಡೆಮುಡಿಗಳು ಚಲನಚಿತ್ರ ಜಗತ್ತಿಗೆ ಪ್ರವೇಶಿಸಿ ಆ ಮೂಲಕ ಎಲ್ಲೆಡೆ ಪ್ರಸಾರವಾಗುತ್ತಿವೆ. ಮಹಿಳೆಯರ ಸೌಂದರ್ಯಾಭಿವೃದ್ಧಿಗೆ ಕೇಶಾಲಂಕಾರ ಒಂದು ಮಹತ್ತ್ವದ ಸಾಧನವಾಗಿದೆ.

ಮುಖದ ಆಕೃತಿಗೆ, ದೇಹದ ಗಾತ್ರಕ್ಕೆ, ಎತ್ತರಕ್ಕೆ ತಕ್ಕಂತೆ ಮುಡಿ ಕಟ್ಟುವ ಕಲೆ ಬೆಳೆದುಬರುತ್ತಿದೆ. ದೊಡ್ಡದೊಡ್ಡ ಪಟ್ಟಣಗಳಲ್ಲಿ ಕುಶಲ ಕೇಶಾಲಂಕಾರ ಕಲೆಯಲ್ಲಿ ನಿಪುಣೆಯರಾದವರು ಮುಡಿಕಟ್ಟುವ ಉದ್ಯೋಗ ಕೈಕೊಂಡಿದ್ದಾರೆ. ಅಂಥವರು ಮುಡಿ ಕಟ್ಟಲು ವಿದ್ಯುತ್ ಸಲಕರಣೆಗಳನ್ನೂ ಬಳಸುತ್ತಾರೆ. ಅವರು ಪರಿಶ್ರಮಪಟ್ಟು ಕಟ್ಟುವ ಮುಡಿಗಳನ್ನು ನೋಡುವುದೆಂದರೆ ಕಣ್ಣಿಗೊಂದು ಹಬ್ಬ.

ಪಟ್ಟದಕಲ್ಲು, ಅಜಂತ, ಬೇಲೂರು ಮುಡಿಗಳ ಅನುಕರಣೆ ಚಿತ್ರಪ್ರಪಂಚದಲ್ಲಿ ಪ್ರಾರಂಭವಾಗಿ, ಆಧುನಿಕ ಮಹಿಳೆಯರ ಕೇಶಾಲಂಕಾರಕ್ಕೆ ಮಾರ್ಗದರ್ಶಕವಾಗಿದೆ. ಇಂದಿನ ಮಹಿಳೆಯರು ಪೇಟೆಯಲ್ಲಿ ದೊರೆಯುವ ಗಂಗಾವನ, ಸಿಂಬಿಗಳನ್ನು ಬಳಸುತ್ತಾರೆ. ಅವು ಚಕ್ರಾಕಾರ, ಅರ್ಧಚಂದ್ರಾಕಾರ ಹಾಗೂ ದೊಡ್ಡ ಮುಡಿಗಳ ಆಕಾರದಲ್ಲಿ ದೊರೆಯುತ್ತವೆ. ಅಂಥ ಸಿಂಬಿಗಳನ್ನು ಉಪಯೋಗಿಸಿ ಚಿತ್ತಾಕರ್ಷಕವಾಗಿ, ವೈವಿಧ್ಯಪೂರ್ಣವಾಗಿ ನಾನಾ ರೀತಿಯಾಗಿ ಮುಡಿಗಳನ್ನು ಕಟ್ಟುತ್ತಾರೆ. ದುಂಡಗಿನ ಮುಖಕ್ಕೆ ತಲೆಗಿಂತ ಎತ್ತರವಾಗಿ ಕಾಣುವ ಮುಡಿ ಒಪ್ಪುತ್ತದೆ. ತಲೆಯ ಹಿಂಭಾಗದಲ್ಲಿ ಅರ್ಧ ಚಂದ್ರಾಕಾರದ ಗಂಗಾವನ ಹಾಕಿ ಆ ಭಾಗದ ಕೂದಲನ್ನು ಏರಿಸಿ ಬಾಚಬೇಕು. ಮುಂದೆ ನಡು ಬೈತಲೆ ಇರಬೇಕು. ನೆತ್ತಿಯ ಹಿಂಭಾಗದ ಕೂದಲನ್ನು ಕೂಡಿಸಿ ಅಲ್ಲೊಂದು ದೊಡ್ಡ ಗಂಗಾವನ ಹಾಕಿ ಮುಡಿ ಕಟ್ಟಿದರೆ ದುಂಡಗಿನ ಮುಖದ ಅಂದ ಹೆಚ್ಚುವುದು. ಅಂಡಾಕೃತಿ



ಮುಖವುಳ್ಳವರು ಚಕ್ರಾಕಾರದ ದೊಡ್ಡ ಅಳತೆಯ ಗಂಗಾವನ ಹಾಕಿ ಬಂಬಲ್ಮುಡಿಯಂತೆ ಕಾಣುವ ಮುಡಿಯನ್ನು ಕಟ್ಟಿದ್ದರೆ ಒಪ್ಪುತ್ತದೆ. ಎತ್ತರವಾಗಿರುವವರು ಉದ್ದವಾಗಿರುವ ಗಂಗಾವನ ಹಾಕಿ ಎಡಭಾಗದಿಂದ ಆ ಗಂಗಾವನಕ್ಕೆ ಕೂದಲುಗಳನ್ನು ಸುತ್ತಿ ಮುಡಿ ತಲೆಯ ಕೆಳಭಾಗದಲ್ಲಿ



ಬರುವಂತೆ, ಅಂದರೆ ಬಳಲ್ಮುಡಿಯಂತೆ ಕಟ್ಟಿದರೆ ಅವರ ನಿಲುವು ಹೆಚ್ಚು ಎತ್ತರವಾಗಿ ಕಾಣುವುದಿಲ್ಲ. ಚೌಕೋನಾಕೃತಿಯ ಮುಖವುಳ್ಳವರು ಸಮವಾಗಿ ಬಾಚಿಕೊಂಡು ಮುಡಿ ಅಗಲವಾಗಿ ಕಾಣುವಂತೆ ಗಂಗಾವನ ಹಾಕಿ ಅರ್ಧಕೂದಲಿನಿಂದ ದುಂಡಗಿನ ಮುಡಿ ಕಟ್ಟಬೇಕು. ಉಳಿದರ್ಧ ಕೂದಲ ಜಡೆ ಹೆಣೆದು ಆ ಮುಡಿಯ ಸುತ್ತಲೂ ಸುತ್ತ ಬೇಕು. ಮೇಲೊಂದು ಅರೆಬಿರಿದ ಮಲ್ಲಿಗೆ ಮಾಲೆ ಹಾಕಿದರೆ ಜಡೆ ಮುಡಿಯ ಅಂದ ಹೆಚ್ಚು ವುದು. ಇತ್ತೀಚೆಗೆ ಮುಖದ ಗಾತ್ರಕ್ಕಿಂತ ದೊಡ್ಡದಾದ ಮುಡಿಯನ್ನು ತಲೆಗಿಂತ ಎತ್ತರವಾಗಿ ಕಾಣುವಂತೆ ಕಟ್ಟುವರು. ತರುಣಿಯರು ಎರಡು ಜಡೆ ಹೆಣೆದುಕೊಳ್ಳುವರು. ಇಲ್ಲವೆ ಬಾಬ್‌ಕಟ್ ಮಾಡಿಸಿಕೊಂಡು ನಡುಬೈತಲೆ ತೆಗೆಯುವರು. ಪೋನಿ ಟೇಲ್ ಕಟ್ಟುವುದೂ (ಕುದುರೆಯ ಬಾಲದಂಥ ಜುಟ್ಟು) ವಾಡಿಕೆಯಾಗಿದೆ.

ಜಡೆ ಕಟ್ಟುವುದು ಒಂದು ವಿಶಿಷ್ಟ ಕಲೆ. ಬೈತಲೆಯನ್ನು ನಡುವಿಗೆ ತೆಗೆಯುವವರಿದ್ದಾರೆ, ಎಡಕ್ಕೋ ಬಲಕ್ಕೋ ತೆಗೆಯುವವರಿದ್ದಾರೆ.



ಸ್ವಲ್ಪವೇ ನಡುಬೈತಲೆ ತೆಗೆದು ಕೂದಲನ್ನೆಲ್ಲ ಹಿಂದಕ್ಕೆ ಬಾಚುವವರಿದ್ದಾರೆ. ಕೆಲವರು ಹಾಗೆಯೇ ಎಲ್ಲ ತಲೆಗೂದಲನ್ನೂ ಬೈತಲೆ ತೆಗೆಯದೆ ಹಿಂದಕ್ಕೆ ಬಾಚುತ್ತಾರೆ. ಜಡೆ ಒಂದೇ ಆದಾಗ ಮೂರು ಕಾಲಿನದಾಗಬಹುದು. ಐದು ಕಾಲಿನದಾಗಬಹುದು. ಎರಡು ಜಡೆ ಹಾಕುವುದು ಬಾಲ್ಯ ಯೌವನಗಳಲ್ಲಿ ಸಹಜ. ಜಡೆ ಬಿಗಿಯಾಗಿರಬಹುದು. ಸಡಿಲವಾಗಿರಬಹುದು. ಎರಡು ಜಡೆಗಳ ತುದಿಗಳನ್ನೂ ಎತ್ತಿ ಜಡೆ ಮೂಲಗಳಲ್ಲಿ ಗಂಟುಕಟ್ಟುವ ವಾಡಿಕೆಯೂ ಇದೆ. ನೀಳವಾದ ಜಡೆಯ ತುದಿಯಲ್ಲೆರಡು ಗೊಂಡೆ ಕಟ್ಟುವುದು ಒಂದು ಬಗೆಯ ಅಲಂಕರಣವಾದರೆ ಜಡೆಯನ್ನು ಅರ್ಧವೇ ಹೆಣೆದು ಅದರ ಮೂಲದಲ್ಲಿ ಒಂದು ಉಣ್ಣೆಯ ದಪ್ಪದಾರ ಬಿಗಿದರೆ ಮತ್ತೊಂದು ಅಲಂಕರಣವಾಗುತ್ತದೆ. ನಿತಂಬದವರೆಗೂ ನೀಳವಾಗಿ ಬಳಕುತ್ತಿರುವ ಜಡೆ ಎಲ್ಲ ಶೃಂಗಾರಪ್ರಿಯರ ಆದರ್ಶವೆನ್ನಿಸಿದೆ. ಬೇಕೆಂದವರು ಮಲ್ಲಿಗೆ ಮೊಗ್ಗನ್ನು ಹೆಣೆದು ನಾಗರ ಜಡೆ ಕಟ್ಟುತ್ತಾರೆ. ಕೇದಗೆ ಹೂವಿನ ಜಡೆ ಹಾಕುವವರಿದ್ದಾರೆ.

ಉಟ್ಟ ಸೀರೆಯ ಬಣ್ಣ, ಮುಡಿದ ಹೂವಿನ ಬಣ್ಣ ಒಂದೇ ಆಗಿರುವಂತೆ ಬಣ್ಣದ ಹೊಂದಾಣಿಕೆಯನ್ನು ಸಾಧಿಸಬಹುದು. ಮೊದಲಿನ ಕಾಲದಲ್ಲಿ ಬಣ್ಣಬಣ್ಣದ ಹೂಮಾಲೆಯನ್ನು ಮುಡಿಯ ಸುತ್ತಲೂ ಕಟ್ಟಿಕೊಳ್ಳುವುದು ಅಲಂಕಾರವೆನಿಸಿತ್ತು. ಈಗ ಹೂಮಾಲೆಗಿಂತ ಬಿಡಿಹೂವನ್ನು ಮುಡಿದುಕೊಳ್ಳುವುದು ಸಾಮಾನ್ಯವಾಗುತ್ತಿದೆ. ಅದು ಜಡೆಯ ನಡುವಿಗೆ ಇರಬಹುದು. ಇಲ್ಲವೆ ಕಿವಿಯ ಬಳಿ ಕರ್ಣಪೂರವಾಗಿರಬಹುದು.

ಕೇಶಾಲಂಕರಣಕ್ಕೆ ತೈಲ, ಪುಷ್ಪಗಳಂತೆ ಹಲಕೆಲವು ಆಭರಣಗಳನ್ನೂ ತೊಟ್ಟುಕೊಳ್ಳಬಹುದು. ನೆತ್ತಿಯಲ್ಲಿ ಹಾಕುವ ನಾಗರ, ಜಡೆಯ ಮೇಲರ್ಧದ ಮೇಲಕ್ಕೆ ಧರಿಸುವ ಜಡೆಬಿಲ್ಲೆ, ತುರುಬಿನ ನಡುವೆ, ಓರೆಯಲ್ಲಿ ಧರಿಸುವ ತುರುಬು ಹೂ, ಜಡೆಯ ತುದಿಯಲ್ಲಿ ತೊನೆದಾಡುವಂತೆ ಕಟ್ಟುವ ಗೊಂಡೆ ಇವು ಕೆಲವು ಪ್ರಸಿದ್ಧ ಆಭರಣಗಳು; ಇವುಗಳ ಮಾಟ ಮಾದರಿಗಳು ಕಾಲಕಾಲಕ್ಕೆ ವ್ಯತ್ಯಾಸವಾಗುತ್ತ ಬಂದಿವೆ. ನಾಗರ ತನ್ನ ಪ್ರಾಮುಖ್ಯವನ್ನು ಕಳೆದುಕೊಳ್ಳುತ್ತಿದ್ದರೂ ಉಳಿದ ಆಭರಣಗಳನ್ನು ಕೆಲವು ಮಾರ್ಪಾಟುಗಳೊಂದಿಗೆ ಬಳಸುವುದುಂಟು.

ಸ್ತ್ರೀಯರಂತೆಯೆ ಗಂಡಸರಲ್ಲಿಯೂ ಕೇಶಾಲಂಕಾರದ ಬಗೆಗಳನ್ನು ಕಾಣಬಹುದು. ನಾನಾ ಬಗೆಯ ಶಿಖೆಗಳುಂಟು. ಒಬ್ಬೊಬ್ಬ ವ್ಯಕ್ತಿಯ ಹೆಸರಿನಲ್ಲಿಯೇ ಕೇಶಾಲಂಕಾರವನ್ನು ಗುರುತಿಸುವ ಪರಿ ಗಂಡಸರಲ್ಲಿದೆ. ಬಚ್ಚನ್ ಸ್ಟೈಲ್, ಬೆಕ್ಹಾಮ್ ಸ್ಟೈಲ್, ರೊನಾಲ್ಡೋಸ್ಟೈಲ್, ಪ್ರೀಸ್ಲಿಸ್ಟೈಲ್ ಇತ್ಯಾದಿ ಕೇಶಾಲಂಕಾರದ ಹೆಸರುಗಳನ್ನು ನಾವು ಕಾಣುತ್ತೇವೆ. ಕೃತಕ ಕೂದಲಿನ ವಿಗ್ ಮಾದರಿಗಳನ್ನು ಧರಿಸುವುದು ಈಗೀಗ ಜನಪ್ರಿಯತೆ ಗಳಿಸುತ್ತಿದೆ. *

**ಕೇಶಿ ದಂಡನಾಯಕ :** ಈತ ರನ್ನನ (ಸು.993) ಸಾಹಸಭೀಮವಿಜಯ (ಗದಾಯುದ್ಧ) ಕಾವ್ಯವನ್ನು ತಿದ್ದಿದನೆಂಬುದು ಆ ಗ್ರಂಥದ, ವನರುಹಭವನೆನಿಸಿದ ದಂಡನಾಯಕಂ ಕೇಶಿ ತಿರ್ದೆ ಪೇೞ್ದಂ, ಎಂಬ ಪದ್ಯಭಾಗದಿಂದ ತಿಳಿಯುತ್ತದೆ. ರನ್ನನ ಗ್ರಂಥವನ್ನು ತಿದ್ದಿರುವುದನ್ನು ನೋಡಿದರೆ ಈತ ದೊಡ್ಡ ವಿದ್ವಾಂಸನಾಗಿರಬೇಕು. ಈ ಕೇಶಿದಂಡನಾಯಕನೇ 1023 ಮತ್ತು 1048ರ ಗುತ್ತಿ ಹಾಗೂ ಕುಡಿತಿನಿ ಶಾಸನಗಳಲ್ಲಿ ಉಲ್ಲೇಖಿತನಾಗಿರುವ ಕೇಶಿ ಅಥವಾ ಕೇಶಿರಾಜ ಎಂಬ ಒಂದು ಅಭಿಪ್ರಾಯವೂ 1012ರ ಕೋಟವಿಮುಚಗಿ ಶಾಸನದಲ್ಲಿ ಬಂದಿರುವ ದಣ್ಣನಾಯಕ ಕೇಶವಯ್ಯನೇ ಇವನು ಎಂಬ ಇನ್ನೊಂದು ಅಭಿಪ್ರಾಯವೂ ಇವೆ. (ಎಸ್.ಜಿಎ.)

**ಕೇಶಿರಾಜ :** ಸು.1260. ಕನ್ನಡದ ಪ್ರಸಿದ್ಧ ವೈಯಾಕರಣ. ಶಬ್ದಮಣಿದರ್ಪಣಂ ಎಂಬ ಹಳಗನ್ನಡ ವ್ಯಾಕರಣ ಗ್ರಂಥದ ಕರ್ತೃ. ಈತನ ಅಜ್ಜ (ತಾಯಿಯ ತಂದೆ) ಕವಿಸುಮನೋಬಾಣ, ತಂದೆ ಸೂಕ್ತಿಸುಧಾರ್ಣವದ ಕರ್ತೃ ಚಿದಾನಂದ ಮಲ್ಲಿಕಾರ್ಜುನ. ಜನ್ನ (ಸು.1230) ಇವನ ಸೋದರಮಾವ. ಇಂಥ ವಿದ್ವತ್ ಪರಿಸರದಲ್ಲಿ ಬೆಳೆದ ಕೇಶಿರಾಜ ಕವಿಯೂ ಶಾಸ್ತ್ರಕಾರನೂ ಆದುದು ಸಹಜವೇ ಆಗಿದೆ. ಈತ ಶಬ್ದಮಣಿದರ್ಪಣದ ಕೊನೆಯ ಪದ್ಯವೊಂದರಲ್ಲಿ ಚೋಳಪಾಲಕಚರಿತೆ, ಶ್ರೀಚಿತ್ರಮಾಲೆ, ಸುಭದ್ರಾಹರಣ, ಪ್ರಬೋಧಚಂದ್ರ, ಕಿರಾತ ಎಂಬ ಕೃತಿಗಳನ್ನು ಬರೆದಿರುವಂತೆ ಹೇಳಿಕೊಂಡಿದ್ದಾನೆ. ಆದರೆ ಶಬ್ದಮಣಿದರ್ಪಣ ಗ್ರಂಥವನ್ನುಳಿದು ನಮಗೆ ಈತನ ಬೇರೆ ಯಾವುದೇ ಗ್ರಂಥ ದೊರೆತಿಲ್ಲ. ಇವುಗಳಲ್ಲಿ ಸುಭದ್ರಾಹರಣ ಮತ್ತು ಪ್ರಬೋಧಚಂದ್ರ ನಾಟಕಗಳಾಗಿರಬೇಕೆಂಬುದು ಕೆಲವರ ಅಭಿಪ್ರಾಯ. ಲಾಕ್ಷಣಿಕನೆಂದು ಇವನ ಖ್ಯಾತಿಯನ್ನು ಕವಿಮಲ್ಲ (ಸು.1400) ಮತ್ತು ಈಶ್ವರಕವಿ (ಸು.1450) ಕೊಂಡಾಡಿದ್ದಾರೆ. ಕೇಶಿರಾಜನಿಗೆ ಸುಕವಿ, ಕರ್ನಾಟಕ ಲಕ್ಷಣಶಿಕ್ಷಾಚಾರ್ಯ ಎಂಬ ಬಿರುದುಗಳು ಇದ್ದಂತೆ ತಿಳಿಯುತ್ತದೆ.

ಶಬ್ದಮಣಿದರ್ಪಣಂ ಕನ್ನಡದಲ್ಲಿ ಸ್ವತಂತ್ರವಾಗಿ ರಚಿತವಾಗಿರುವ ವ್ಯಾಕರಣಗಳಲ್ಲಿ ಮೊದಲನೆಯದು. ಸೂತ್ರಗಳು ಕಂದಪದ್ಯದಲ್ಲಿವೆ. ವೃತ್ತಿ ಗದ್ಯದಲ್ಲಿದೆ. ಇದು ಹಳಗನ್ನಡ ಭಾಷೆಗೆ ಬರೆದ ವ್ಯಾಕರಣ ಗ್ರಂಥವಾಗಿದ್ದು, 13ನೆಯ ಶತಮಾನಕ್ಕೆ ಮೊದಲು ಹಳಗನ್ನಡ ಭಾಷೆಯ ಸ್ಥಿತಿಗತಿಗಳು ಹೇಗಿದ್ದುವೆಂಬ ಬಗೆಗೆ ಸವಿಸ್ತಾರವೂ ಸಪ್ರಮಾಣವೂ ಆದ ವಿವೇಚನೆಯನ್ನೊಳಗೊಂಡಿದೆ. ಇದರಲ್ಲಿ ಸಂಧಿ, ನಾಮ, ಸಮಾಸ, ತದ್ಧಿತ, ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ ಎಂಬ ಎಂಟು ಪ್ರಕರಣಗಳಿವೆ.

ಈ ಎಂಟು ಪ್ರಕರಣಗಳಲ್ಲಿ ಕೇಶಿರಾಜ ಪೂರ್ವಸೂರಿಗಳು ಹೇಳಿದ ವಿಷಯಗಳನ್ನೇ ವಿವರಿಸಿದ್ದರೂ ಅನೇಕ ಹೊಸ ವಿಷಯಗಳನ್ನೂ ಚರ್ಚಿಸಿ ಸ್ವಂತಿಕೆಯನ್ನು ವ್ಯಕ್ತಪಡಿಸಿದ್ದಾನೆ. ಗ್ರಂಥದ ಆದಿಯಲ್ಲಿ ಮುಖ್ಯವಾಗಿ ಗ್ರಂಥಕಾರನ ಪರಿಚಯಾತ್ಮಕವಾದ ಒಂದು ಪೀಠಿಕೆಯ ಭಾಗವೂ ಅಂತ್ಯದಲ್ಲಿ ಪ್ರಯೋಗಸಾರವೆಂಬ ಒಂದು ಚಿಕ್ಕ ಶಬ್ದಾರ್ಥನಿರ್ಣಯ ಭಾಗವೂ ಸೇರಿಕೊಂಡಿವೆ. ಸಂಧಿಪ್ರಕರಣದಲ್ಲಿ ವರ್ಣಗಳ ಶ್ರಾವಣ, ಚಾಕ್ಷುಷ ಎಂಬ ವಿಭಜನೆ, ರಳ ಕುಳ ಕ್ಷಳಗಳ ವಿಚಾರ, ಲಾಂತ ಶಬ್ದಗಳು, ನಿತ್ಯಬಿಂದು, ಅಬಿಂದು, ವಿಕಲ್ಪಬಿಂದುಗಳು, ನಿಯತದ್ವಿತ್ವ, ಶಿಥಿಲದ್ವಿತ್ವ, ಸ್ವರ, ವ್ಯಂಜನ, ಸಂಧಿಗಳು, ಸಂಧಿ ವಿಸಂಧಿ, ಸಂಧಿದೋಷ, ವಿಕಲ್ಪಸಂಧಿ ವಿಷಯಗಳು, ನಾಮಪ್ರಕರಣದಲ್ಲಿ ಕೃತ್ತಾದಿಯಾದ ಲಿಂಗಚತುಷ್ಟಯಗಳು, ಸಮಸಂಸ್ಕೃತಗಳು, ನಾಮಭೇದಗಳು, ಸರ್ವನಾಮಗಳು, ಲಿಂಗ, ವಚನ, ವಿಭಕ್ತಿ, ಇತ್ಯಾದಿಗಳು, ಸಮಾಸ ಪ್ರಕರಣದಲ್ಲಿ ಲೋಪಾಗಮಾದೇಶಗಳು, ತತ್ಪುರುಷ, ಕರ್ಮಧಾರಯ, ಅವ್ಯಯೀಭಾವ ಕ್ರಿಯಾ ಗಮಕ ಮುಂತಾದ ಸಂಸ್ಕೃತ ಕನ್ನಡ ಸಮಾಸಗಳು, ತದ್ಧಿತಪ್ರಕರಣದಲ್ಲಿ ಬಗೆಬಗೆಯ ಅರ್ಥಗಳನ್ನು ಕೊಡುವ ತದ್ಧಿತ ಪ್ರತ್ಯಯಗಳನ್ನು ಹಚ್ಚಿದ ಪುಂಸ್ತ್ರೀವಾಚಕಗಳಾದ ತದ್ಧಿತ ನಾಮಗಳು ಹಾಗೂ ತದ್ಧಿತ ಭಾವನಾಮಗಳು, ಆಖ್ಯಾತ ಪ್ರಕರಣದಲ್ಲಿ ಪುರುಷವಾಚಕ ಮತ್ತು ಕಾಲವಾಚಕ ಪ್ರತ್ಯಯಗಳು ಸೇರತಕ್ಕ ರೀತಿ ಪರಿಸರಗಳು, ವಿಧ್ಯರ್ಥ ಮತ್ತು ಸತಿಸಪ್ತಮಿಗಳು, ಧಾತುಪ್ರಕರಣದಲ್ಲಿ ಧಾತುಗಳು ಮತ್ತು ಅವುಗಳ ಅರ್ಥವಿವರಣೆ, ಅಪಭ್ರಂಶ ಪ್ರಕರಣದಲ್ಲಿ ಕನ್ನಡದಲ್ಲಿ ಬಳಕೆಯಾಗುವ ರೂಢಿಯ ಸಂಸ್ಕೃತ ಪದಗಳ ಹಾಗೂ ಸಂಸ್ಕೃತ ಸಮಾಸ ಪದಗಳ ತದ್ಭವರೂಪಗಳು, ಸಂಸ್ಕೃತ-ಕನ್ನಡ ಪದಗಳೊಡನೆ ಸಮಾನವಾಗಿ ಕೂಡಿ ಸಮಾಸವಾಗಬಹುದಾದ ತತ್ಸಮ ಶಬ್ದ, ಇತ್ಯಾದಿಗಳು, ಅವ್ಯಯ ಪ್ರಕರಣದಲ್ಲಿ ಬೇರೆಬೇರೆ ಸಂದರ್ಭಗಳಿಗೆ ಅರ್ಥಗಳಿಗೆ ಬಳಸತಕ್ಕ ಅವ್ಯಯಗಳು, ಕೊನೆಯದಾಗಿ ಪ್ರಯೋಗಸಾರದಲ್ಲಿ ಕೆಲವು ಕ್ಲಿಷ್ಟ ಪದಗಳ ಅರ್ಥವಿವರಣೆ ಪ್ರತಿಪಾದಿತವಾಗಿವೆ.

ಕೇಶಿರಾಜ ಇಮ್ಮಡಿ ನಾಗವರ್ಮನ (ಸು.1150) ಶಬ್ದಸ್ಮೃತಿ, ಭಾಷಾಭೂಷಣ ಈ ಎರಡೂ ವ್ಯಾಕರಣಗ್ರಂಥಗಳನ್ನೇ ಸೂತ್ರ, ವೃತ್ತಿ ಮತ್ತು ಪ್ರಯೋಗಗಳಲ್ಲಿ ಮುಖ್ಯವಾಗಿ ಆಧರಿಸಿದ್ದಾನೆ. ಆದರೆ ಕೆಲವೆಡೆ ಹಿಂದೆ ಹೇಳಿದ್ದ ವಿಷಯಗಳನ್ನು ವಿಸ್ತರಿಸಿಯೂ ಹೆಚ್ಚಿನ ವಿಷಯಗಳನ್ನು ಸೇರಿಸಿಯೂ ತನ್ನ ಗ್ರಂಥವನ್ನು ಹೆಚ್ಚು ಉಪಯುಕ್ತವಾಗುವಂತೆ ಮಾಡಿದ್ದಾನೆ. ಹೀಗೆ ವಿವರಿಸಿ ವಿಶ್ಲೇಷಿಸುವಾಗ ಇವನಲ್ಲಿ ಶಾಸ್ತ್ರದೃಷ್ಟಿ, ಪ್ರಾಮಾಣಿಕತೆಗಳು ಕಂಡುಬರುತ್ತವೆ. ನಿರಾಧಾರವಾಗಿ ಏನನ್ನೂ ಹೇಳಲು ಪ್ರಯತ್ನಿಸಿಲ್ಲ. ಸಂದೇಹ ಬಂದ ಕಡೆ ಹಾಗೆಂದು ಒಪ್ಪಿಕೊಂಡಿದ್ದಾನೆ. ತನಗೆ ಒಪ್ಪಿಗೆಯಾಗದಿರುವುದನ್ನು ಕಂಠೋಕ್ತವಾಗಿ ನಿಷೇಧಿಸಿದ್ದಾನೆ. ಆತ್ಮವಂಚನೆ ಪರವಂಚನೆಗಳು ಇವನಲ್ಲಿ ಕಂಡುಬರುವುದಿಲ್ಲ. ಪ್ರಯೋಗಗಳ ಸಂಗ್ರಹಣೆಯೂ ಸಂಯೋಜನೆಯೂ ವ್ಯಾಕರಣಾಂಶಗಳ ವಿಶದೀಕರಣಕ್ಕೆ ಸಹಾಯಕವಾಗಿರುವಂತೆಯೇ ಈತನ ಕಾವ್ಯ ಮನೋಧರ್ಮದ, ಸರಸಪ್ರವೃತ್ತಿಯ ಪ್ರತೀಕಗಳೂ ಆಗಿ ಪರಿಣಮಿಸಿವೆ. ಪ್ರತಿಭೆ, ಪಾಂಡಿತ್ಯ, ವಿದ್ವಜ್ಜನಸೇವೆ, ಸತತಾಭ್ಯಾಸ ಇವು ಕೇಶಿರಾಜನಲ್ಲಿ ಮೈದುಂಬಿಕೊಂಡಿದ್ದವು. ಹಾಗಾಗಿ ಶುಷ್ಕವಾಗಬಹುದಾಗಿದ್ದ ವ್ಯಾಕರಣದ ಅಭ್ಯಾಸ ಆಕರ್ಷಕವಾಗಿದೆ. ಪ್ರಯೋಗಗಳನ್ನು ಗಜಗ, ಗುಣನಂದಿ, ಮನಸಿಜ, ಅಸಗ, ಚಂದ್ರಭಟ್ಟ, ಗುಣವರ್ಮ, ಶ್ರೀವಿಜಯ, ಹೊನ್ನ, ಹಂಪ, ಸುಜನೋತ್ತಂಸಹಂಸ ಮುಂತಾದ ಕವಿಗಳ ಗ್ರಂಥಗಳಿಂದ ತೆಗೆದುಕೊಂಡಿರುವುದಾಗಿ ಹೇಳಿದ್ದಾನೆ. ಈ ಕವಿಗಳ ಗ್ರಂಥಗಳಿಂದಲ್ಲದೆ ರನ್ನ, ನಾಗಚಂದ್ರ, ನಾಗವರ್ಮ, ನೇಮಿಚಂದ್ರ, ಹಂಸರಾಜ, ಬ್ರಹ್ಮಶಿವ ಮೊದಲಾದವರ ಗ್ರಂಥಗಳಿಂದಲೂ ಉದಾಹೃತವಾದ ಪದ್ಯಗಳು ದೊರೆಯುತ್ತವೆ. ಸಾಂಪ್ರದಾಯಿಕವಾಗಿ ಹೇಳಬೇಕಾದ್ದನ್ನು ಹೇಳಿ, ಬಳಿಕ ತನ್ನ ನಿಲುವನ್ನು ಈತ ಆಗಿಂದಾಗ್ಗೆ ವ್ಯಕ್ತಪಡಿಸಿದ್ದಾನೆ. ಕನ್ನಡ ಭಾಷೆಯ ಸ್ವರೂಪವನ್ನು ಈ ಒಂದು ಪದ್ಯದಲ್ಲಿ ಸಂಕ್ಷೇಪವಾಗಿ ಹೇಳಿದ್ದಾನೆ: ಗಮಕಸಮಾಸದಿಂ ರಳಕುಳಕ್ಷಳದಿಂ ಶ್ರುತಿಸಹ್ಯಸಂಧಿಯಿಂ ಸಮುಚಿತಮಾಗಿ ಬರ್ಪಸತಿಸಪ್ತಮಿಯಿಂ ಸಮಸಂಸ್ಕೃತೋಕ್ತಿಯಿಂ ಮಮಹಪಭೇದದಿಂ ವಿರಹಿತಾವ್ಯಯ ಸಂಸ್ಕೃತಲಿಂಗದಿಂ ಪದೋತ್ತಮಶಿಥಿಲದಿಂ ಯತಿವಿಳಂಘನದಿಂದರಿದಲ್ತೆ ಕನ್ನಡ. ಇದರಿಂದ ಕೇಶಿರಾಜನಿಗೆ ಕನ್ನಡ ಭಾಷೆಯ ಬಗ್ಗೆ ಇದ್ದ ತಿಳಿವಳಿಕೆ ಹಾಗೂ ಸೂಕ್ಷ್ಮ ದೃಷ್ಟಿ ಎದ್ದುತೋರುತ್ತವೆ.

ಶಬ್ದಮಣಿದರ್ಪಣ ಪ್ರಧಾನವಾಗಿ ವಿಧ್ಯಾತ್ಮಕ ಅಥವಾ ಆದರ್ಶ (ಪ್ರಿಸ್ಕ್ರಿಪ್ಟಿವ್) ರೀತಿಯ ವ್ಯಾಕರಣವಾದರೂ ವಿವರಣಾತ್ಮಕ ಅಥವಾ ವರ್ಣನಾತ್ಮಕ (ಡಿಸ್ಕ್ರಿಪ್ಟಿವ್) ರೀತಿಯ ನಿರೂಪಣ ದೃಷ್ಟಿಯನ್ನೂ ಅದು ಒಳಗೊಂಡಿದೆ. ವ್ಯಾಕರಣಾಂಶಗಳ ವಿಶ್ಲೇಷಣೆಯಲ್ಲಿಯೂ ನಿರೂಪಣ ಕ್ರಮದಲ್ಲಿಯೂ ಅಲ್ಲಲ್ಲಿ ಕೆಲವು ಲೋಪದೋಷಗಳನ್ನು, ಅನೌಚಿತ್ಯಗಳನ್ನು ಭಾಷಾತಜ್ಞರು ಎತ್ತಿ ತೋರುವುದುಂಟು. ಹೀಗಿದ್ದೂ ಹಳಗನ್ನಡ ಭಾಷಾಸ್ವರೂಪವನ್ನು ಪ್ರಾಮಾಣಿಕವಾದ ರೀತಿಯಲ್ಲಿ ನಿಷ್ಠೆಯಿಂದ ವಿವರಿಸುವ ಪ್ರಯತ್ನದಿಂದಾಗಿ ಇದು ಪ್ರಸಿದ್ಧವಾಗಿದೆ. ಕೇಶಿರಾಜನ ವ್ಯಕ್ತಿತ್ವ ಶಬ್ದಮಣಿದರ್ಪಣದಲ್ಲಿ 'ಮನದೊಳೋವರಿಯಿಲ್ಲ ಬುದ್ಧಿಯೊಳ್ ವಿಸಂಚವಿಲ್ಲ' ಎನ್ನುವಂತೆ ಪ್ರತಿಬಿಂಬಿತವಾಗಿದೆ. ಈ ಎಲ್ಲ ದೃಷ್ಟಿಗಳಿಂದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕೇಶಿರಾಜ ಮಾದರಿಯ ಶಾಸ್ತ್ರಕಾರನಾಗಿ ಕಂಡುಬರುತ್ತಾನೆ. (ಎಸ್.ಜಿಎ.)

**ಕೇಶಿರಾಜ, ಕೊಂಡಗುಳಿ :** ಸು.1160. ವೀರಶೈವ ಕವಿ. ಷಡಕ್ಷರಕಂದ ಎಂಬ ಗ್ರಂಥದ ಕರ್ತೃ. ಬಿಜಾಪುರ ಜಿಲ್ಲೆಯ ಸಿಂದಗಿ ಗ್ರಾಮಕ್ಕೆ 16ಕಿಮೀ ಆಗ್ನೇಯಕ್ಕಿರುವ ಕೊಂಡಗುಳಿ ಇವನ ಜನ್ಮಸ್ಥಳ. ಈತನ ತಂದೆ ಹೊಳಲಮರಸ, ತಾಯಿ ದುರ್ಗಾದೇವಿ ಎಂದು ಶಿಕಾರಿಪುರದ ಶಾಸನಗಳಲ್ಲಿ ಹೇಳಿದೆ. ಈತನ ಹೆಂಡತಿ ಗಂಗಾದೇವಿ, ಗುರು ವಿರೂಪಾಕ್ಷ, ಸೋಮನಾಥ ಇಷ್ಟದೈವ. ಕೇಶಿರಾಜ ದೊಡ್ಡ ವಿದ್ವಾಂಸನಾಗಿದ್ದಂತೆ ಶಿವಾನುಭವಿಯೂ ಆಗಿದ್ದ. ಸ್ವಲ್ಪ ಕಾಲ ಈತ ಕಲ್ಯಾಣದ ಸಮೀಪದ ಶಿವಪುರ ಎಂಬ ಗ್ರಾಮದಲ್ಲಿ ನೆಲಸಿದ್ದು ಅಲ್ಲಿ ಲಿಂಗಾರ್ಚನೆ ಜಂಗಮದಾಸೋಹ ಮೊದಲಾದವನ್ನು ನಡೆಸುತ್ತಿದ್ದ. ಇವನ ಶಾಸ್ತ್ರ ಪಾಂಡಿತ್ಯ, ವಿಚಾರಲಹರಿ ಮತ್ತು ಮಹತ್ವದ ಸದ್ಗುಣಗಳು ಸಮಕಾಲೀನ ಜನರ ಮೇಲೆ ಒಳ್ಳೆಯ ಪರಿಣಾಮವನ್ನುಂಟುಮಾಡಿದವು. ತರ್ದವಾಡಿ ನಾಡಿನ ರಾಜಧಾನಿಯಾದ ಮಂಗಳವಾಡದಲ್ಲಿ ಸೊಲ್ಲಾಪುರ ಜಿಲ್ಲೆ ಆಳುತ್ತಿದ್ದ ಕಳಚುರಿ ವಂಶೀಯನಾದ ಪೆರ್ಮಾಡಿ ಎಂಬ ರಾಜ ಈತನ ಕೀರ್ತಿ, ವಿದ್ವತ್ತು ಮೊದಲಾದುವನ್ನು ಕಂಡು ತನ್ನ ಮಂತ್ರಿಯಾಗಿ ನೇಮಿಸಿಕೊಂಡ. ಅಂದಿನಿಂದ ಕೇಶಿರಾಜನಿಗೆ ದಣ್ಣಾಯಕ ಎಂಬ ಬಿರುದು ಬಂತು.

ಈತ ಸಕಲಶಾಸ್ತ್ರ ಪಂಡಿತನೂ ರಾಜನೀತಿ ವಿಶಾರದನೂ ಆಗಿದ್ದುದರಿಂದ ಇವನ ಆಡಳಿತ ಜನಪ್ರಿಯವೆನಿಸಿತು. ಶರಣನಾಗಿ ಶಿವಶರಣರ ಉದಾರ ತತ್ತ್ವಗಳನ್ನು ಈತ ಪ್ರಸಾರ ಮಾಡತೊಡಗಿದ್ದರಿಂದ ಅಸಮಾಧಾನಗೊಂಡ ಕೆಲವರು ರಾಜನಲ್ಲಿ ದೂರಿತ್ತರು. ಇದರಿಂದ ರಾಜನಿಗೂ ಕೇಶಿರಾಜನಿಗೂ ವಿರಸವುಂಟಾಯಿತು. ಕೇಶಿರಾಜ ಮಂತ್ರಿಪದವಿಯನ್ನು ತೊರೆದು ತನ್ನ ಗ್ರಾಮವಾದ ಕೊಂಡಗುಳಿಗೆ ತೆರಳಿದ. ತನ್ನ ತಪ್ಪನ್ನರಿತ ರಾಜ ಕ್ಷಮಾಪಣೆ ಕೇಳಿ ರಾಜಧಾನಿಗೆ ವಾಪಸಾಗುವಂತೆ ಕರೆ ಕಳಿಸಲು ಅದನ್ನು ವಿನಯಪೂರ್ವಕವಾಗಿ ನಿರಾಕರಿಸಿದ. ಭೀಮಾ ನದಿಯಲ್ಲಿ ಬಿದ್ದ ಇಷ್ಟಲಿಂಗವನ್ನು ಕರಸ್ಥಳಕ್ಕೆ ಬರಿಸಿದ್ದು ಈತ ಮೆರೆದನೆನ್ನಲಾದ ಪವಾಡ. ಕೊಂಡಗುಳಿಯಲ್ಲೇ ಈತ ಶಿವಲಿಂಗದಲ್ಲಿ ಐಕ್ಯನಾದನೆಂದು ಪ್ರತೀತಿ. ಅಲ್ಲಿ ಇವನ ಹೆಸರಿನ ಒಂದು ದೇವಾಲಯವಿದೆ. ಇಲ್ಲೇ ಈತನ ಸಮಾಧಿಯೂ ಇದೆಯೆಂದು ಹೇಳುತ್ತಾರೆ. ಹಂಪೆಯ ಹರಿಹರ ರಾಘವಾಂಕರು ಅನುಕ್ರಮವಾಗಿ ತಮ್ಮ ಗಿರಿಜಾಕಲ್ಯಾಣ ಮತ್ತು ಹರಿಶ್ಚಂದ್ರ ಕಾವ್ಯಗಳಲ್ಲಿ ಈತನನ್ನು ಸ್ಮರಿಸಿದ್ದಾರೆ. ಪಾಲ್ಕುರಿಕೆ ಸೋಮನಾಥನ ಸಹಸ್ರಗಣನಾಮದಲ್ಲಿ ಇವನ ಹೆಸರಿನ ಉಲ್ಲೇಖವಿದೆ. ಭೈರವೇಶ್ವರಕಾವ್ಯದ ಕಥಾಮಣಿಸೂತ್ರರತ್ನಾಕರದಲ್ಲಿ ಮತ್ತು ಇತರ ವೀರಶೈವ ಗ್ರಂಥಗಳಲ್ಲಿ ಈತನ ವಿಷಯವಾಗಿ ಅನೇಕ ಉಲ್ಲೇಖಗಳಿವೆ. ಶಿಕಾರಿಪುರದ 119 ಮತ್ತು 123ನೆಯ ಶಾಸನಗಳಲ್ಲಿ ಇವನನ್ನು ಬಣ್ಣಿಸಲಾಗಿದೆ. ವೀರಶೈವರಲ್ಲಿ ಈತ ಮಹಿಮಾಪುರುಷನೆಂಬ ನಂಬಿಕೆಯುಂಟು.

ಕೇಶಿರಾಜನ ಷಡಕ್ಷರ ಕಂದಕ್ಕೆ ಮಂತ್ರಮಹತ್ವದ ಕಂದ ಎಂಬ ಹೆಸರೂ ಇದೆ. ಇದರಲ್ಲಿ 110 ಕಂದಪದ್ಯಗಳಿವೆ. ಓಂ ನಮಃ ಶಿವಾಯ ಎಂಬ ಮಂತ್ರದ ಮಾಹಾತ್ಮ್ಯವನ್ನು ಬಗೆಬಗೆಯಾಗಿ ಬಣ್ಣಿಸಲಾಗಿದೆ. ಕಾವ್ಯಬಂಧ ಪ್ರೌಢವಾದುದು. ಈತ ವಚನಗಳನ್ನೂ ಬರೆದಿರುವಂತೆ ತಿಳಿಯುತ್ತದೆ. ಆದರೆ ವಚನಗಳು ಉಪಲಬ್ಧವಿಲ್ಲ.

1195ರಲ್ಲಿ ಅಬ್ಬಲೂರು ಶಾಸನದಲ್ಲಿ ಒಬ್ಬ ಕೇಶಿರಾಜನ ಉಲ್ಲೇಖವಿದೆ. ಇವನು ಗುಲ್ಬರ್ಗ ಜಿಲ್ಲೆಯ ಜೇವರಗಿ ತಾಲ್ಲೂಕಿನಲ್ಲಿರುವ

ಕೊಂಡಗುಳಿಯವನು. ಅಲ್ಲಿ ದೊರಕಿರುವ ಒಂದು ಶಾಸನದಲ್ಲಿ ಈತ ಕಟ್ಟಿಸಿದ ಸೋಮೇಶ್ವರ ದೇವಾಲಯದ ವಿಷಯವಿದೆ. ವೀರಶೈವ ಪರಂಪರೆಯಲ್ಲಿ ಪ್ರಸಿದ್ಧನಾದ ಕೊಂಡಗುಳಿ ಕೇಶಿರಾಜ ಈತನೇ ಇರಬಹುದು ಎಂಬ ಅಭಿಪ್ರಾಯವೂ ಇದೆ. *

**ಕೈಕಿಣಿ :** ಉತ್ತರ ಕನ್ನಡ ಜಿಲ್ಲೆ; ಭಟ್ಕಳ ತಾಲ್ಲೂಕಿನಲ್ಲಿರುವ ಒಂದು ಗ್ರಾಮ, ಐತಿಹಾಸಿಕ ಸ್ಥಳ. ಭಟ್ಕಳದಿಂದ 13ಕಿಮೀ ದೂರದಲ್ಲಿದೆ. ಈ ಊರಿಗೆ ಬಸದಿ ಎಂಬ ಹೆಸರೂ ಇದೆ. ಇಲ್ಲಿ ಪ್ರಾಚೀನ ಪಾರ್ಶ್ವನಾಥ ಬಸದಿ ಇದೆ. ಇತ್ತೀಚೆಗೆ ಇದನ್ನು ಜೀರ್ಣೋದ್ಧಾರ ಮಾಡಲಾಗಿದೆ. ಈ ಬಸದಿಯಲ್ಲಿ 22 ಶಿಲಾಶಾಸನಗಳಿವೆ. ಇವುಗಳಲ್ಲಿ ಹೆಚ್ಚಿನವು ವೀರಗಲ್ಲುಗಳು, ಎರಡು ಮಾಸ್ತಿ ಕಲ್ಲುಗಳು. ಒಂದು ಶಾಸನದಲ್ಲಿ ಈ ಹಳೆಯ ಪಟ್ಟಣ ಕೈಕಿಣಿಯು 24 ತೀರ್ಥಂಕರರನ್ನು ನೋಡಿದೆ ಎಂದು ಉಲ್ಲೇಖಿಸಿದೆ. 1422ರ ವೀರಗಲ್ಲೊಂದು ಹಾಡುವಳ್ಳಿ ಹಾಗೂ ಗೇರುಸೊಪ್ಪೆಯ ನಡುವೆ ನಡೆದ ಹೋರಾಟವನ್ನು ವಿವರಿಸಿದರೆ ಕೆಲವು ಶಾಸನಗಳು ವಿಜಯನಗರ ಹಾಗೂ ಹಾಡುವಳ್ಳಿಯ ಮಧ್ಯೆ ನಡೆದ ಕಾಳಗವನ್ನು ಬಣ್ಣಿಸಿವೆ. ಒಂಬತ್ತು ವೀರಗಲ್ಲುಗಳು ಪಾರ್ಶ್ವನಾಥ ಬಸದಿಗೆ ನೀಡಲಾದ ದಾನಗಳ ಬಗ್ಗೆ ಮಾಹಿತಿ ನೀಡುತ್ತವೆ. ಕೋಟೇಶ್ವರ ನಾಯಕನ 1427ರ ಶಾಸನ ಕಾಸರಗೋಡು ಹಾಗೂ ಹೊನ್ನಾವರದ ಮಧ್ಯೆ ನಡೆದ ಕದನವನ್ನು ಸಾರುತ್ತದೆ. ಈ ಊರಿನಲ್ಲಿ ಮಹಿಷ ಮರ್ದಿನಿಯ ಮಂದಿರ ಇದೆ. ವಿಜಯನಗರ ಕಾಲದಲ್ಲಿ ಇಲ್ಲಿ ವೈಶ್ಯರು ಹೆಚ್ಚಾಗಿದ್ದರು. ಹೊನ್ನ ಮಾಸ್ತಿ ಹೆರಾಡಿ ಹತ್ತಿರ ಹಾಗೂ ತೆರ್ನಮಕ್ಕಿಯಲ್ಲಿ ರೋಮನ್ ಕ್ಯಾಥೊಲಿಕ್ ಚರ್ಚ್‌ಗಳಿವೆ. (ಎಸ್.ಎಚ್.ಇ.)

**ಕೈಗಾರಿಕೆಗಳು :** ಕರ್ನಾಟಕ ಸಣ್ಣದೊಡ್ಡ ಕೈಗಾರಿಕೆಗಳ ಬೆಳೆವಣಿಗೆಗೆ ಅನುಕೂಲವಾದ ಪರಿಸರವನ್ನುಳ್ಳ ಪ್ರದೇಶ. ಇಲ್ಲಿ ವಿದ್ಯುತ್ತು, ಖನಿಜಸಂಪತ್ತು, ವ್ಯವಸಾಯ ಮತ್ತು ಅರಣ್ಯ ಉತ್ಪನ್ನಗಳು ಧಾರಾಳವಾಗಿರುವವಲ್ಲದೆ ಇಲ್ಲಿನ ಉತ್ತಮ ವಾಯುಗುಣ ಹಾಗೂ ಜನಬಲ ಕೈಗಾರಿಕಾ ಪ್ರಗತಿಗೆ ಸಹಾಯಕವಾಗಿವೆ. ಈ ಲೇಖನದಲ್ಲಿ ಕರ್ನಾಟಕದಲ್ಲಿ ಕೈಗಾರಿಕೆಗಳ ಪ್ರಾಚೀನ ಇತಿಹಾಸ, ಈಚಿನ ಬೆಳೆವಣಿಗೆ, ಪಂಚವಾರ್ಷಿಕ ಯೋಜನೆಗಳ ಅಡಿಯಲ್ಲಿ, ಕೈಗಾರಿಕಾ ಬೆಳೆವಣಿಗೆಗೆ ಹಾಕಿಕೊಳ್ಳಲಾದ ಕಾರ್ಯಕ್ರಮಗಳು, ರಾಜ್ಯದ ಕೈಗಾರಿಕಾನೀತಿ ಮತ್ತು ಪ್ರೋತ್ಸಾಹ (ಕೈಗಾರಿಕಾ ಎಸ್ಟೇಟುಗಳು, ಕೈಗಾರಿಕಾ ಬಂಡವಾಳ, ಇತ್ಯಾದಿ), ಕೈಗಾರಿಕಾ ಪ್ರಗತಿಯ ಗತಿ (ಸಾರ್ವಜನಿಕ ಕ್ಷೇತ್ರದ ಕೈಗಾರಿಕೆಗಳು, ಪ್ರಾದೇಶಿಕ ಅಸಮತೋಲ ಇತ್ಯಾದಿ), ಹೊಸ ಆರ್ಥಿಕ ನೀತಿಯ ಅಡಿಯಲ್ಲಿ ಆಗುತ್ತಿರುವ ಬದಲಾವಣೆಗಳು - ಇವುಗಳನ್ನು ಸ್ಥೂಲವಾಗಿ ಪರಿಚಯ ಮಾಡಿಕೊಡಲಾಗಿದೆ.

**ಇತಿಹಾಸ :** ಪ್ರಾಚೀನ ಕರ್ನಾಟಕದ ಕೈಗಾರಿಕೆಯನ್ನು ಕುರಿತು ಸಮಗ್ರ ಹಾಗೂ ವೈಜ್ಞಾನಿಕ ಅಧ್ಯಯನಕ್ಕೆ ಮಾಹಿತಿಯ ಕೊರತೆಯಿದೆ. ಆ ಕಾಲದ ನೂರಾರು ಶಾಸನಗಳು, ಮಿತಾಕ್ಷರಾ, ಮಾನಸೋಲ್ಲಾಸ, ವಚನಸಾಹಿತ್ಯ ಮತ್ತು ಇತರ ಸಾಹಿತ್ಯ ಕೃತಿಗಳು ಹಾಗೂ ವಿಜಯನಗರದ ಕಾಲದಲ್ಲಿ ಬಂದು ಹೋದ ವಿದೇಶೀ ಪ್ರವಾಸಿಗರ ಬರೆಹಗಳು ಮುಂತಾದ ಆಕರಗಳಲ್ಲಿ ಪ್ರತ್ಯಕ್ಷವಾಗಿಯೋ ಪ್ರಾಸಂಗಿಕವಾಗಿಯೋ ಅಲ್ಲಿ ಇಲ್ಲಿ ಕಾಣುವ ಕೆಲವು ಅಂಶಗಳ ಆಧಾರದ ಮೇಲೆ ಅಂದಿನ ಕೆಲವು ಪ್ರಮುಖ ಕೈಗಾರಿಕೆಗಳನ್ನು ಗುರುತಿಸಬಹುದು. ಆದರೂ ಕೈಗಾರಿಕೆಗಳಲ್ಲಿ ಅನುಸರಿಸುತ್ತಿದ್ದ ಹಲವು ವಿಧಾನಗಳು, ವಿವಿಧ ಕೈಗಾರಿಕಾ ಕೇಂದ್ರಗಳು ಮುಂತಾದ ಅಂಶಗಳ ಬಗ್ಗೆ ಮಾಹಿತಿ ದೊರಕುವುದು ಅಲ್ಪ.

ಆ ಕಾಲದ ಕೈಗಾರಿಕೆಗಳ ಸಾಮಾನ್ಯ ಲಕ್ಷಣವೆಂದರೆ, ಅವು ಕಸಬು ರೀತಿಯವು. ಉತ್ಪಾದನೆಯ ವಿಧಾನ ಸರಳ ಮತ್ತು ಅತಿ ಖರ್ಚಿನದಲ್ಲದ್ದು, ಸಾಮಾನ್ಯವಾಗಿ ಉತ್ಪಾದನ ಕೇಂದ್ರ ಕಾರ್ಮಿಕನ ಮನೆಯೋ ಕುಟೀರವೋ ಆಗಿರುತ್ತಿತ್ತು. ಕೈಗಾರಿಕೆಗೆ ಅಗತ್ಯವಾದ ಕಚ್ಚಾ ಪದಾರ್ಥಗಳು ಅನತಿದೂರದಲ್ಲಿ ಉಪಲಬ್ಧವಿರುತ್ತಿದ್ದುವು. ತಯಾರಾದ ಸಾಮಾನುಗಳು ಮಾಮೂಲು ಪೇಟೆಯಲ್ಲೋ ವಾರದ ಸಂತೆಗಳಲ್ಲೋ ಮಾರಾಟ ವಾಗುತ್ತಿದ್ದುವು.

ನೇಯ್ಗೆ, ಶಿಲ್ಪ ಇತ್ಯಾದಿ ಕೆಲವು ಕಸಬುಗಳಲ್ಲಿ ಉತ್ತಮ ಕಾರ್ಯಕೌಶಲವನ್ನು ಕಾಣಬಹುದಿತ್ತು. ಇವು ಸಾಮಾನ್ಯವಾಗಿ ವಂಶಪಾರಂಪರ್ಯವಾಗಿ, ಹಲವಾರು ತಲೆಮಾರುಗಳಿಂದ ಬಂದ ಕಸಬುಗಳಾಗಿದ್ದವು. ಕೆಲವು ಸುಪ್ರಸಿದ್ಧ ಆಚಾರ್ಯರ ಶಿಷ್ಯವೃತ್ತಿಯಲ್ಲಿ ಕಸಬುಗಳನ್ನು ಅಭ್ಯಾಸಿಗಳಾಗಿ ಕಲಿಯುತ್ತಿದ್ದುದರ ಸೂಚನೆ ಮಿತಾಕ್ಷರಾದಲ್ಲಿದೆ. ಇಂಥ ವಾತಾವರಣದಲ್ಲಿ ಹೊಸಹೊಸ ಪ್ರಯೋಗಗಳಿಗೆ ಅವಕಾಶ ಸಹಜವಾಗಿಯೇ ಇರುತ್ತಿತ್ತು.

ಪ್ರತಿಯೊಂದು ಕಸಬಿನವರೂ ತಮ್ಮದೇ ಆದ ಶ್ರೇಣಿಯನ್ನು ಹೊಂದಿದ್ದರು. ಅಂಥ ಶ್ರೇಣಿಯ ಅಧಿಕಾರವ್ಯಾಪ್ತಿ ಅಥವಾ ಹತೋಟಿಯಲ್ಲಿ ತಮ್ಮ ಕಾರ್ಯಗಳನ್ನು ನಡೆಸಿಕೊಂಡು ಹೋಗುತ್ತಿದ್ದರು. ದೊಡ್ಡ ದೊಡ್ಡ ಊರುಗಳಲ್ಲಿ, ಪಟ್ಟಣ ಮತ್ತು ರಾಜಧಾನಿಗಳಲ್ಲಿ ಈ ಶ್ರೇಣಿಗಳು ಹೆಚ್ಚಿನ ಅಧಿಕಾರ ಮತ್ತು ಪ್ರಭಾವವನ್ನು ಹೊಂದಿರುತ್ತಿದ್ದುವು. ಅಲ್ಲದೆ, ಮಿತಾಕ್ಷರಾ ತಿಳಿಸುವಂತೆ, ತಮ್ಮದೇ ಆದ ನೀತಿನಿಯಮಗಳನ್ನು ರೂಪಿಸಿಕೊಳ್ಳುವ ಅಧಿಕಾರ ಈ ಶ್ರೇಣಿಗಳಿಗಿತ್ತು. ನೇಯ್ಗೆಯವರ, ಚಮ್ಮಾರರ, ಗಾಣಿಗರ, ಲೋಹಕಾರರ, ಕಲ್ಲುಕುಟಿಗರ -ಹೀಗೆ ಹಲವಾರು ಕಸಬಿನವರ ಶ್ರೇಣಿಗಳಿದ್ದುವು.



ಎನ್.ಜಿ.ಎಫ್ ಕಾರ್ಖಾನೆ, ಬೆಂಗಳೂರು

ಪ್ರಾಚೀನ ಭಾರತದ ಬೇರೆಡೆಗಳಲ್ಲಿದ್ದಂತೆ ಕರ್ನಾಟಕದಲ್ಲೂ ನೇಯ್ಗೆ ಕೈಗಾರಿಕೆ ಬಹಳ ಅಭಿವೃದ್ಧಿ ಹೊಂದಿತ್ತು. ನೇಯ್ಗೆಯವರ ಶ್ರೇಣಿಯನ್ನು ಮಿತಾಕ್ಷರಾ ಹಾಗೂ ಹಲವಾರು ಶಾಸನಗಳು ಹೆಸರಿಸುತ್ತವೆ. 1087ರ ಶಾಸನವೊಂದು ದಾನವಾಗಿ ಕೊಟ್ಟ ನೈವಮನೆಯನ್ನು ಹೆಸರಿಸುವುದು ಗಮನಾರ್ಹವಾಗಿದೆ. ನೇಯ್ಗೆಯವರ ನೂಲು ಮತ್ತು ಮಗ್ಗಗಳ ಮೇಲೆ ತೆರಿಗೆ ಹಾಕುತ್ತಿದ್ದರು. ಅಲ್ಲದೆ ನೇಯ್ದ ಬಟ್ಟೆಗಳು ಚೀಲಗಳಲ್ಲೋ ಗಂಟುಗಳಲ್ಲೋ ಮಾರುಕಟ್ಟೆಯನ್ನು ತಲುಪಿದಾಗ ಅವುಗಳ ಮೇಲೆ ಸುಂಕವನ್ನು ತೆರಬೇಕಾಗಿತ್ತು. ಕೆಲವು ಸಂದರ್ಭಗಳಲ್ಲಿ ಇಂಥ ತೆರಿಗೆಗಳನ್ನು ಹಾಕದೆ ಕೈಗಾರಿಕೆಗೆ ಪ್ರೋತ್ಸಾಹ ನೀಡಿದ ನಿದರ್ಶನಗಳೂ ಉಂಟು. ಉತ್ತಮ ದರ್ಜೆಯ ಬಟ್ಟೆಗಳು ಕರ್ನಾಟಕದಲ್ಲಿ ತಯಾರಾಗುತ್ತಿದ್ದುವು. ಕಲ್ಯಾಣ ಪಟ್ಟಣದ ಪೇಟೆಯಲ್ಲಿ ಉಪಲಬ್ಧವಾಗಿದ್ದ ಬಟ್ಟೆಗಳನ್ನು ಸೋಮೇಶ್ವರ ತನ್ನ ವಿಕ್ರಮಾಂಕಾಭ್ಯುದಯಂ ಗ್ರಂಥದಲ್ಲಿ ವರ್ಣಿಸಿದ್ದಾನೆ. 'ಅಲ್ಲಿನ ಬಟ್ಟೆಗಳು ದೃಷ್ಟಿಗಗೋಚರ, ಕೇವಲ ಸ್ಪರ್ಶದಿಂದ ಮಾತ್ರ ತಿಳಿಯಲು ಸಾಧ್ಯ; ಅತಿ ಹಗುರವಾಗಿದ್ದಾಗ್ಯೂ ಬಹಳ ಬೆಲೆಬಾಳುವ ಈ ಬಟ್ಟೆಗಳು ಧರಿಸಿದವರ ಅಂಗಾಂಗಳು ಸ್ಪಷ್ಟವಾಗಿ ಕಾಣುವಷ್ಟು ಪಾರದರ್ಶಕವಾಗಿದ್ದುವು ಎಂದು ಇಂಥದೇ ವರ್ಣನೆಯನ್ನು ಮಾರ್ಕೋ ಪೋಲೋ ಸಹ ಕೊಟ್ಟಿದ್ದಾನೆ. 18ನೆಯ ಶತಮಾನದಲ್ಲೂ ಈ ಕೈಗಾರಿಕೆ ದೇಶದ ಹಲವಾರು ಭಾಗಗಳಲ್ಲಿ ಪ್ರವರ್ಧಮಾನವಾಗಿದ್ದು ಅತ್ಯುತ್ತಮ ಹಾಗೂ ಸುಂದರವಾದ ಬಟ್ಟೆಗಳನ್ನು ನೇಯಲಾಗುತ್ತಿತ್ತೆಂಬ ಅಂಶ ಬುಕನಾನನ ವರ್ಣನೆಯಿಂದಲೂ ಸ್ಪಷ್ಟವಾಗುತ್ತದೆ. ಮುಖ್ಯವಾಗಿ ಹತ್ತಿ, ರೇಷ್ಮೆ ಮತ್ತು ಉಣ್ಣೆ ಬಟ್ಟೆಗಳು ತಯಾರಾಗುತ್ತಿದ್ದವು. ರೇಷ್ಮೆ ಬಟ್ಟೆಗಳ ಪಟ್ಟೆ, ಪಟ್ಟಾವಳಿ, ಚೀನ, ಮಹಾಚೀನ, ದೇವಾಂಗ ಮುಂತಾದ ಹೆಸರುಗಳನ್ನು ಗಮನಿಸಬಹುದು. ರೇಷ್ಮೆ ಕೈಗಾರಿಕೆಗೆ ಹಲವಾರು ಸ್ಥಳಗಳು ಪ್ರಸಿದ್ಧವಾಗಿದ್ದುವು. ದಕ್ಷಿಣ ಕನ್ನಡದ ಚೋಳೂರು ಮತ್ತು ಕಾಪೂರುಗಳು ಪ್ರಾಚೀನ ಕಾಲದಿಂದಲೂ ರೇಷ್ಮೆ ನೇಯ್ಗೆಗೆ ಪ್ರಸಿದ್ಧವೆನಿಸಿದ್ದುವು.

ಧಾರವಾಡ ಜಿಲ್ಲೆಯ 12ನೆಯ ಶತಮಾನದ ಶಾಸನವೊಂದು ಬರಗಿರಿಯ ಸೋಮಗೌಂಡ ಎಂಬುವನನ್ನು ಪಟ್ಟಗಾಱಕುಳಭೂಷಣ ಎಂದು ವರ್ಣಿಸಿರುವುದು ಗಮನಾರ್ಹವಾಗಿದೆ. ಬಹಮನೀ ಸುಲ್ತಾನರ ಆಳಿಕೆಯಲ್ಲಿ ಗುಲ್ಬರ್ಗ ನೇಯ್ಗೆ ಕೈಗಾರಿಕೆಯ ಪ್ರಮುಖ ಕೇಂದ್ರವೆನಿಸಿದ್ದು, ಇಲ್ಲಿ ತಯಾರಾದ ಉತ್ತಮ ರೇಷ್ಮೆ ಬಟ್ಟೆಗಳು ಅಗ್ಗದ ಬೆಲೆಗೆ ಸಿಗುತ್ತಿದ್ದುವು. ಹಾಗೆಯೇ ರಾಯಚೂರಿನಲ್ಲಿ ತಯಾರಾದ ಪಗಡಿಗಳಿಗೆ ಅಮೀರರುಗಳಿಂದ ಬಹಳ ಬೇಡಿಕೆಯಿತ್ತು. ಇದೇ ಕಾಲದಲ್ಲಿ ಬಿಜಾಪುರ ನೇಯ್ಗೆ ಕೈಗಾರಿಕೆಯ ಪ್ರಸಿದ್ಧ ಕೇಂದ್ರವೆನಿಸಿತ್ತು. ಕ್ಯಾಲಿಕೋ ಮತ್ತು ಮಸ್ಲಿನ್ ಬಟ್ಟೆಗಳು ಇಲ್ಲಿನ ಪ್ರಧಾನವಾದ ತಯಾರಿಕೆಗಳಾಗಿದ್ದುವು. ಇಲ್ಲಿ ತಯಾರಾದ ಬಟ್ಟೆಗಳು ಪರ್ಷಿಯ, ಅರೇಬಿಯ, ಮತ್ತು ಪೂರ್ವ ಆಫ್ರಿಕ ದೇಶಗಳಿಗೆ ರಫ್ತಾಗುತ್ತಿದ್ದುವು. ಪೋರ್ಚುಗೀಸ್ ವ್ಯಾಪಾರಿಗಳು ಈ ಬಟ್ಟೆಗಳನ್ನು ಕೊಳ್ಳಲು ಸ್ವತಃ ಬಿಜಾಪುರಕ್ಕೆ ಬಂದು ಹೋಗುತ್ತಿದ್ದರೆಂದು ಬಾರ್ಬೋಸ ಹೇಳಿದ್ದಾನೆ.

ಉಣ್ಣೆಯಲ್ಲಿ ಮೇಲೆ ಧರಿಸುವ ವಸ್ತ್ರಗಳನ್ನು ಹಾಗೂ ಮುಖ್ಯವಾಗಿ ಕಂಬಳಿಗಳನ್ನು ನೇಯುತ್ತಿದ್ದರು. ಬಹುಶಃ ದಾವಣಗೆರೆ, ದೊಡ್ಡಬಳ್ಳಾಪುರ ಮುಂತಾದೆಡೆಗಳಲ್ಲಿ ಕಂಬಳಿಗಳನ್ನು ನೇಯುತ್ತಿದ್ದಂತೆ ಕಾಣುತ್ತದೆ. ಸ್ವಲ್ಪ ಒರಟಾದ ತುಪ್ಪಟವನ್ನು ಕಂಬಳಿ ನೇಯಲು ಉಪಯೋಗಿಸುತ್ತಿದ್ದರು. ವಾಲವಾಸಾ ಅಂದರೆ ದನದ ಕೂದಲಿನಿಂದ ಮಾಡಿದ ಬಟ್ಟೆಯನ್ನು ಮಿತಾಕ್ಷರಾ ಗ್ರಂಥ ಹೆಸರಿಸಿದೆ.



ಎಚ್.ಎಂ.ಟಿ. ಕಾರ್ಖಾನೆಯ ಒಳನೋಟ, ಬೆಂಗಳೂರು

ನೇಯ್ಗೆ ಬಟ್ಟೆಗಳ ಮೇಲೆ ಕಸೂತಿ ಕೆಲಸ ಮಾಡುತ್ತಿದ್ದುದುಂಟು. ಅವುಗಳ ಮೇಲೆ ಹಲವಾರು ಚಿತ್ರಗಳನ್ನು ಕಾಣಬಹುದಾಗಿತ್ತು. ವಿಜ್ಞಾನೇಶ್ವರ, ಸೋಮೇಶ್ವರ ಮತ್ತು ಹರಿಹರ ಇವರ ಕೃತಿಗಳಲ್ಲಿ ಕಂಡುಬರುವಂತೆ, ಬಟ್ಟೆಗಳ ಮೇಲೆ ಚಕ್ರ ಸ್ವಸ್ತಿಕ ಆನೆ ಕುದುರೆ ರಥ ಸಿಂಹ ಜಿಂಕೆ ಗಿಡ ಬಳ್ಳಿ ಹೂವುಗಳೇ ಮೊದಲಾದ ಚಿತ್ರಗಳಿರುತ್ತಿದ್ದವು. ಕೆಲವು ಬಟ್ಟೆಗಳ ಮೇಲೆ ಅಕ್ಷರಗಳಿದ್ದುದರಿಂದ ಅವು ಪುಸ್ತಕದಂತೆ ಕಾಣುತ್ತಿದ್ದುವಂತೆ.

ಚಿಪ್ಪಿಗರು ಕೈಸೂಜಿ ಮತ್ತು ದಾರಗಳಿಂದ ಬಟ್ಟೆಗಳನ್ನು ಹೊಲಿಯುತ್ತಿದ್ದರು. ಬೇಲೂರಿನ ಶಾಸನವೊಂದು (1139) ಚಿಪ್ಪಿಗರನ್ನು ವಸ್ತ್ರಖಂಡಿತ ಶ್ರಿಂಗಾರ ಚಿತ್ರೋದ್ಭವರ್, ಅನೇಕ ವಸ್ತ್ರಖಂಡಿತ ಶ್ರಿಂಗಾರವಿದ್ಯಾಪ್ರವೀಣರ್ ಎಂದು ವರ್ಣಿಸುವುದಷ್ಟೇ ಅಲ್ಲದೆ, ಚಿಪ್ಪಿಗಗೊತ್ತಳಿಯನ್ನು ಅಂದರೆ ಚಿಪ್ಪಿಗರ ಶ್ರೇಣಿಯನ್ನು ಹೆಸರಿಸುತ್ತದೆ. ಪ್ರಸಿದ್ಧ ವಚನಕಾರರಲ್ಲೊಬ್ಬನಾದ ಸೂಜಿಕಾಯಕದ ರಾಮಿತಂದೆಯನ್ನು (ಸು.1160) ಚಿಪ್ಪಿಗರ ಶ್ರೇಣಿಗೆ ಸೇರಿದ್ದವ.

ವಾಣಿಜ್ಯ ಮಹತ್ವವುಳ್ಳ ಕಬ್ಬು ಬೆಳೆಯುವೆಡೆಗಳಲ್ಲಿ ಕಬ್ಬನ್ನು ಗಾಣದಲ್ಲಿ ಅರೆದು, ಹಾಲನ್ನು ತೆಗೆದು, ಅದನ್ನು ಮರಳಿಸಿ ಸಕ್ಕರೆ ಹಾಗೂ ಬೆಲ್ಲವನ್ನು ಮಾಡುತ್ತಿದ್ದರು. ಈ ಕೈಗಾರಿಕೆಯ ಮೇಲೆ ಆಲೆದೆಱೆ ಎಂಬ ತೆರಿಗೆಯನ್ನು ವಿಧಿಸುತ್ತಿದ್ದರು. 'ಸಕ್ಕರೆ ಮರಳಿನಂತೆ ಕಾಣುತ್ತಿತ್ತು. ಸಕ್ಕರೆ ಪುಡಿಯಂತಿತ್ತು. ಅದನು ಪೊಟ್ಟಣಗಳಲ್ಲಿ ಕಟ್ಟುತ್ತಿದ್ದರು. ಏಕೆಂದರೆ ಸಕ್ಕರೆ ಅಚ್ಚು ಹುಯ್ಯುವುದು ಅವರಿಗೆ ತಿಳಿದಿರಲಿಲ್ಲ' ಎಂಬುದು ಬಾರ್ಬೋಸನ ಹೇಳಿಕೆ. ವರ್ಥೇಮ ಎಂಬ ಪ್ರವಾಸಿ ಭಟ್ಕಳದಲ್ಲಿ ಹೇರಳವಾಗಿ ಸಕ್ಕರೆ ತಯಾರಾಗುತ್ತಿತ್ತೆಂಬುದನ್ನು ಪ್ರಸ್ತಾಪಿಸಿ, ಕಲ್ಲುಸಕ್ಕರೆಯನ್ನೂ ಮಾಡುತ್ತಿದ್ದರು ಎಂದು ತಿಳಿಸುತ್ತಾನೆ. ವಿಜಯನಗರದ ಕಾಲದಲ್ಲಿ ಭಟ್ಕಳದಿಂದ ಸಕ್ಕರೆಯನ್ನು ರಫ್ತು ಮಾಡುತ್ತಿದ್ದರು. ಬೆಲ್ಲವನ್ನು ತೆಂಗಿನ ಹಾಲಿನಿಂದಲೂ ಮಾಡುತ್ತಿದ್ದರು.

ಎಣ್ಣೆ ತೆಗೆಯುವುದು ಹೆಚ್ಚು ಭಾಗಗಳಲ್ಲಿ ಕಂಡುಬರುವ ಕೈಗಾರಿಕೆಯಾಗಿತ್ತು. ಎಳ್ಳು ಹರಳು ಕುಸುಬೆ ಮುಂತಾದ ಎಣ್ಣೆಬೀಜಗಳನ್ನು ಗಾಣಗಳಲ್ಲಿ ಅರೆದು ಎಣ್ಣೆ ತೆಗೆಯುತ್ತಿದ್ದರು. ತೆಂಗಿನಿಂದಲೂ ಎಣ್ಣೆಯನ್ನು ತೆಗೆಯುತ್ತಿದ್ದರು. ಅಲ್ಲದೆ, ಕೆಲವು ಸುಗಂಧದ್ರವ್ಯಗಳನ್ನು ಬೆರೆಸಿ, ಸುಗಂಧಯುತವಾದ ತೈಲಗಳನೂ ಮಾಡುತ್ತಿದ್ದರು. ಸಾಮಾನ್ಯವಾಗಿ ಇವರು ಉಪಯೋಗಿಸುತ್ತಿದ್ದುದ್ದು ಕಲ್ಲುಗಾಣ. ಶಾಸನಗಳು ಕೈಗಾಣ (ಕೈಗಳಿಂದ ತಿರುಗಿಸುವಂಥದು), ಮೆಟ್ಟುಗಾಣ (ಕಾಲುಗಳಿಂದ ತುಳಿಯುವಂಥದು), ಎತ್ತುಗಾಣ (ಎತ್ತುಗಳಿಂದ ತಿರುಗಿಸುವಂಥದು) ಎಂಬ ಮೂರು ವಿಧವಾದ ಗಾಣಗಳನ್ನು ಹೆಸರಿಸುತ್ತವೆ. ಈ ಕಸಬಿನವರನ್ನು ತೆಲ್ಲಿಗ, ಗಾಣಿಗ ಎಂದು ಕರೆಯಲಾಗುತ್ತಿತ್ತು. ಇವರ ಶ್ರೇಣಿ ತೆಲ್ಲಿಗ ನಖರವೆಂದು ಶಾಸನಗಳಲ್ಲಿ ಉಕ್ತವಾಗಿದೆ. ಈ ಜನರು ಅಂದಿನ ಸಮಾಜದಲ್ಲಿ ಸಾಕಷ್ಟು ಪ್ರಭಾವಶಾಲಿಗಳಾಗಿದ್ದಂತೆ ತೋರುತ್ತದೆ.

ಮಣ್ಣಿನ ಮಡಕೆ ಕುಡಿಕೆಗಳು, ಪಾತ್ರೆಗಳು, ಗೊಂಬೆಗಳು ಮುಂತಾದವು ಸಾಮಾನ್ಯವಾಗಿ ಎಲ್ಲ ಗ್ರಾಮಗಳಲ್ಲೂ ಕುಂಬಾರರಿಂದ ತಯಾರಾಗುತ್ತಿದ್ದವು. ಬಿದ್ರಿ ಕೆಲಸವೆಂದು ಪ್ರಸಿದ್ಧವಾಗಿರುವ ಬೀದರ್ ಮತ್ತು ಸುತ್ತಲ ಪ್ರದೇಶದಲ್ಲಿ ತಯಾರಾಗುತ್ತಿದ್ದ ಸಾಮಾನುಗಳು ಮಧ್ಯಯುಗದಲ್ಲಿ ಭಾರತದಲ್ಲಿ ಮಾತ್ರವಲ್ಲದೆ ಹೊರದೇಶಗಳಲ್ಲೂ ಹೆಸರನ್ನು ಗಳಿಸಿದ್ದುವು. ಗಾಜಿನ ಬಳೆ ಮಣಿ ಮುಂತಾದುವುಗಳನ್ನೂ ಮಾಡುತ್ತಿದ್ದರು. 18ನೆಯ ಶತಮಾನದಲ್ಲಿ ಗಾಜಿನ ಸಾಮಾನುಗಳನ್ನು ತಯಾರಿಸುವ ಕೈಗಾರಿಕೆ ಹೆಚ್ಚು ಅಭಿವೃದ್ಧಿ ಹೊಂದಿತ್ತು.

ದೇಶದಲ್ಲಿ ಹೇರಳವಾಗಿ ಸಿಗುತ್ತಿದ್ದ ಹಲವಾರು ಬಗೆಯ ಮರಗಳಿಂದ ವಿವಿಧ ಆಸನಗಳು, ಗಾಡಿ ಮುಂತಾದ ವಾಹನಗಳು ದೋಣಿ ಮತ್ತು ಹಡಗುಗಳನ್ನು ಬಡಗಿಗಳು ಮಾಡುತ್ತಿದ್ದರು. ಅಲ್ಲದೆ, ಗೃಹನಿರ್ಮಾಣ, ವ್ಯವಸಾಯ ಹಾಗೂ ನೀರಾವರಿ ಕಾರ್ಯಗಳಿಗೆ ಸಂಬಂಧಿಸಿದಂತೆ ಹಲವಾರು ಉಪಕರಣಗಳನ್ನೂ ಅವರು ತಯಾರಿಸುತ್ತಿದ್ದರು.

ಹಲವು ಬಗೆಯ ಪಾದರಕ್ಷೆಗಳು, ನೀರು ತುಂಬುವ ಚೀಲಗಳು, ಹಗ್ಗಗಳು ಇತ್ಯಾದಿ ಚರ್ಮದ ಪದಾರ್ಥಗಳನ್ನು ಚಮ್ಮಾರರು ತಯಾರಿಸುತ್ತಿದ್ದರು.

ಕರ್ನಾಟಕದಲ್ಲಿ ಗಣಿ ಉದ್ಯಮ ಸಾಕಷ್ಟು ಪ್ರಗತಿಯನ್ನು ಸಾಧಿಸಿತ್ತು. ಚಿನ್ನ, ತಾಮ್ರ ಮತ್ತು ಕಬ್ಬಿಣದ ಗಣಿಗಳ ಕೆಲಸ ಬಹು ಪ್ರಾಚೀನ ಕಾಲದಿಂದಲೂ ನಡೆದುಬಂದಿದೆ (ನೋಡಿ: ಗಣಿಗಾರಿಕೆ).

ಚಿನ್ನ-ಬೆಳ್ಳಿಯ ಆಭರಣಗಳು, ದೇವತಾಮೂರ್ತಿಗಳು, ಹರಿವಾಣಗಳು ಹೀಗೆ ಲೋಹದಿಂದ ನಾನಾ ಬಗೆಯ ಪಾತ್ರೆ ಪದಾರ್ಥಗಳನ್ನು ತಯಾರಿಸಲಾಗುತ್ತಿತ್ತು. ಇದಲ್ಲದೆ ಮನೆಬಳಕೆಯ ಪಾತ್ರೆಗಳು ಚೊಂಬು, ತಟ್ಟೆ, ಸೌಟು, ಕನ್ನಡಿ ಮುಂತಾದವನ್ನು ಕಂಚು ಅಥವಾ ಹಿತ್ತಾಳೆಯಿಂದ ತಯಾರಿಸುತ್ತಿದ್ದರು. ದೇವತಾವಿಗ್ರಹಗಳನ್ನು ಕಂಚು ಅಥವಾ ಪಂಚ ಲೋಹದಿಂದ ಎರಕಹೊಯ್ದು ತಯಾರಿಸುತ್ತಿದ್ದರು. ಶಾಸನಗಳಲ್ಲಿ ಬೋಗಾಱ ಮಹಾನಖರದ, ಅಂದರೆ ಲೋಹಕಾರರ ಶ್ರೇಣಿಗಳ ಉಲ್ಲೇಖವಿದೆ.

ಕಡೆಯದಾಗಿ ಯುದ್ಧದ ಆಯುಧಗಳನ್ನು ಹೆಸರಿಸಬಹುದು. ಪ್ರಧಾನವಾಗಿ ಕಬ್ಬಿಣ ಮತ್ತು ಉಕ್ಕಿನಿಂದ ಕತ್ತಿ, ಭಲ್ಲೆ, ಗುರಾಣಿ, ಬಾಣ, ಚಾಕು ಇತ್ಯಾದಿ ಹಲವಾರು ಆಯುಧಗಳು ತಯಾರಾಗುತ್ತಿದ್ದುವು. (ಎಸ್.ಜಿ.)

**ಬೆಳವಣಿಗೆ :** ಪ್ರಾಚೀನ ಕರ್ನಾಟಕದಲ್ಲಿ ಬಹುತೇಕ ಕೈಗಾರಿಕೆಗಳು ಗೃಹ ಕೈಗಾರಿಕೆಗಳ ಮಟ್ಟದಲ್ಲಷ್ಟೇ ಇದ್ದರೆ, 19ನೆಯ ಶತಮಾನದ ಅಂತ್ಯದ ಹೊತ್ತಿಗೆ ಆಧುನಿಕ ರೀತಿಯ ವ್ಯವಸ್ಥಿತ ಕೈಗಾರಿಕಾರಂಗ ಉಗಮವಾಗುವ ಸೂಚನೆಗಳು ಕಂಡುಬಂದವು. ಟಿಪ್ಪುಸುಲ್ತಾನನ ಕಾಲದಲ್ಲಿ ದೇಶದ ಸಂಪನ್ಮೂಲಗಳನ್ನು ರೂಢಿಸುವ ಅದರಲ್ಲೂ ಬ್ರಿಟಿಷರ ವಿರುದ್ಧದ

ಕಾರ್ಯಾಚರಣೆಗೆ ಸಹಾಯಕವಾಗುವಂತೆ ನೌಕೆಗಳು, ಮದ್ದುಗುಂಡುಗಳು ಮತ್ತು ತುಪಾಕಿಗಳ ತಯಾರಿಕೆ, ಉಕ್ಕು ಉತ್ಪಾದನೆ ಮುಂತಾದವಕ್ಕೆ ಪ್ರೋತ್ಸಾಹ ನೀಡಲಾಯಿತು. ಕರ್ನಾಟಕದಲ್ಲಿ ತಯಾರಾದ ಉಕ್ಕು ಉತ್ತಮ ದರ್ಜೆಯದಾಗಿದ್ದು ಹೊರದೇಶಗಳಿಗೂ ರಫ್ತಾಗುತ್ತಿತ್ತು. ಆದರೆ ಕರ್ನಾಟಕ ಬ್ರಿಟಿಷರ ನೇರ ಆಡಳಿತ ಅಥವಾ ಪ್ರಭಾವಕ್ಕೆ ಒಳಗಾದಾಗ ಈ ಕೈಗಾರಿಕೆಗಳು ಮೂಲೆಗುಂಪಾದವು. ಐರೋಪ್ಯ ರಾಷ್ಟ್ರಗಳಿಂದ ಕೈಗಾರಿಕಾ ಸರಕುಗಳನ್ನು ಆಮದು ಮಾಡಿಕೊಳ್ಳಲಾರಂಭಿಸಿದುದರಿಂದ ಸ್ಥಳೀಯ ಕೈಗಾರಿಕೆಗಳಿಗೆ ಭಾರಿ ಪೆಟ್ಟು ಬಿತ್ತು.

ಆದರೂ ಭಾರತದ ಕೈಗಾರಿಕಾ ಇತಿಹಾಸದಲ್ಲಿ ಕರ್ನಾಟಕದ ಸ್ಥಾನ ಗಮನಾರ್ಹವಾದುದು. ಇಲ್ಲಿ 19ನೆಯ ಶತಮಾನದ ಕೊನೆಯಲ್ಲಿಯೇ ವ್ಯವಸ್ಥಿತ ರೀತಿಯ ಕೈಗಾರಿಕೆಗಳು ಪ್ರಾರಂಭವಾದುವು. ಜಾನ್ ಟೇಲರ್ ಮತ್ತು ಪುತ್ರರ ಕೋಲಾರದ ಚಿನ್ನದ ಗಣಿ ಕಂಪನಿ (1880), ರಾಯಚೂರು ದೋ ಆಬ್ ಪ್ರದೇಶದ ಚಿನ್ನದ ಗಣಿ (1882), ಮೈಸೂರು ಸ್ಪಿನ್ನಿಂಗ್ ಮತ್ತು ಮ್ಯಾನುಫ್ಯಾಕ್ಚರಿಂಗ್ ಕಂಪನಿ, ಬೆಂಗಳೂರು (1883), ಬೆಂಗಳೂರು ಕಾಟನ್ ಮತ್ತು ಸಿಲ್ಕ್ ಮಿಲ್, ದಾವಣಗೆರೆ ಕಾಟನ್ ಜಿನ್ನಿಂಗ್ ಫ್ಯಾಕ್ಟರಿ, ಗುಲ್ಬರ್ಗದ ಎಂ.ಎಸ್.ಕೆ. ಮಿಲ್ಸ್, ಬೆಂಗಳೂರಿನ ಕಾಫಿ ಕ್ಯೂರಿಂಗ್ ವರ್ಕ್ಸ್ (1884), ಶಿವಮೊಗ್ಗದ ಮ್ಯಾಂಗನೀಸ್ ಕಂಪನಿ (1900) ಮುಂತಾದ ಉದ್ಯಮಗಳು ಈ ಕಾಲದಲ್ಲಿ ಹುಟ್ಟಿಕೊಂಡುವು.

ಕೈಗಾರಿಕೀಕರಣಕ್ಕೆ ಪ್ರಾರಂಭದಿಂದಲೂ ಸರ್ಕಾರದ ಪ್ರೋತ್ಸಾಹವಿತ್ತು. 1884ರಷ್ಟು ಹಿಂದೆಯೇ ಸರ್ಕಾರ ಎರಡು ಹತ್ತಿ ಗಿರಣಿಗಳ ಸ್ಥಾಪನೆಗೆ ನೆರವು ದೊರಕಿಸಿಕೊಟ್ಟಿತ್ತು. ಮುಂದೆ 20ನೆಯ ಶತಮಾನದ ಆರಂಭದಲ್ಲಿ ಸರ್ಕಾರ ಔದ್ಯೋಗೀಕರಣದಲ್ಲಿ ಬಹಳ ಉತ್ಸಾಹ ತೋರಿತು. ಕೋಲಾರದಲ್ಲಿ ಚಿನ್ನದ ಉತ್ಪಾದನೆ, ಬೆಂಗಳೂರಿನಲ್ಲಿ ಅನೇಕ ಕೈಗಾರಿಕೆಗಳ ಸ್ಥಾಪನೆ ಮುಂತಾದವು ಕೈಗಾರಿಕೀಕರಣದ ಫಲದ ರುಚಿಯನ್ನು ತೋರಿಸಿಕೊಟ್ಟುವು. 1902ರಲ್ಲಿ ಶಿವಸಮುದ್ರದಿಂದ ವಿದ್ಯುತ್ ಉತ್ಪಾದನೆ ಆರಂಭವಾದಾಗ ಕರ್ನಾಟಕ ರಾಜ್ಯದ ಕೈಗಾರಿಕಾ ಇತಿಹಾಸ ಒಂದು ಹೊಸ ಯುಗವನ್ನು ತಲಪಿತು. ವಿದ್ಯುತ್ ಉತ್ಪಾದನೆ ಆರಂಭವಾದ ಒಂದು ದಶಕದೊಳಗಾಗಿ, ವಿದ್ಯುತ್ತನ್ನು ಬಳಸಿಕೊಂಡು ಉತ್ಪಾದಿಸುವ ಘಟಕಗಳ ಸಂಖ್ಯೆ ಸುಮಾರು 80ಕ್ಕೆ ಏರಿತು. ಉಳಿದ ರಾಜ್ಯಗಳಿಗೆ ಹೋಲಿಸಿದರೆ, ಕರ್ನಾಟಕದ ಸಾಧನೆ ಆ ದಿನಗಳಲ್ಲಿ ವಿಶೇಷ ಮಹತ್ವದ್ದಾಗಿತ್ತು.

ಕೈಗಾರಿಕೆಗಳ ಸ್ಥಾಪನೆಯ ಪ್ರಯತ್ನಗಳ ಅನುಭವದ ಪೂರ್ಣ ಸಂಘಟನಾಕಾರ್ಯ 1911ರಲ್ಲಿ ಮೈಸೂರು ಆರ್ಥಿಕ ಸಮ್ಮೇಳನದೊಂದಿಗೆ ಆರಂಭವಾಯಿತೆನ್ನಬಹುದು. ಈ ರಾಜ್ಯದ ಕೈಗಾರಿಕಾನೀತಿಯನ್ನು ರೂಪಿಸಿದವರಲ್ಲಿ ಸರ್ ಎಂ.ವಿಶ್ವೇಶ್ವರಯ್ಯನವರು ಪ್ರಮುಖರು. ಕೈಗಾರಿಕೀಕರಣ ಇಲ್ಲವೆ ವಿನಾಶ ಎಂಬ ಮಂತ್ರವನ್ನು ಇವರು ಉಚ್ಚರಿಸಿದ್ದರು. ಕಾರ್ಯತತ್ಪರರಾಗಿದ್ದ ಇವರು ಅನೇಕ ಕೈಗಾರಿಕೆಗಳಿಗೆ ಬುನಾದಿಯನ್ನು ಹಾಕಿದರು. ಇವರ ಕುಶಾಗ್ರಮತಿಯಿಂದಾಗಿ ಅನೇಕ ಮೂಲ ಸಾಮಗ್ರಿಗಳ ಹಾಗೂ ದಿನೋಪಯೋಗಿ ವಸ್ತುಗಳ ಉತ್ಪಾದನೆಯ ಕೈಗಾರಿಕೆಗಳು ಅಸ್ತಿತ್ವಕ್ಕೆ ಬಂದವು. 1913ರಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಸ್ಥಾಪನೆಯಾಯಿತು. ಕೈಗಾರಿಕೆಗಳ ಸ್ಥಾಪನೆಯ ಬಗ್ಗೆ ಪರಿಶೀಲನೆ, ಕೈಗಾರಿಕೆಗಳನ್ನು ಸ್ಥಾಪಿಸುವವರಿಗೆ ಸಲಹೆ ಮತ್ತು ನೆರವು ನೀಡುವುದು ಇವು ಈ ಇಲಾಖೆಯ ಮುಖ್ಯ ಉದ್ದೇಶಗಳಾಗಿದ್ದವು. ವಿಶ್ವೇಶ್ವರಯ್ಯನವರ ಸಲಹೆಯ ಮೇರೆಗೆ ರಾಜ್ಯದ ನಿಸರ್ಗ ಸಂಪನ್ಮೂಲಗಳನ್ನು ಕುರಿತ ಸಮೀಕ್ಷೆಯೊಂದನ್ನು ಸಹ ಕೈಗೊಳ್ಳಲಾಯಿತು. 1913ರಲ್ಲಿ ಪ್ರಕಟವಾದ ಈ ಸಮೀಕ್ಷೆ ರಾಜ್ಯದಲ್ಲಿ ಯಾವಯಾವ ಕೈಗಾರಿಕೆಗಳನ್ನು ಸ್ಥಾಪಿಸಲು ಸಾಧ್ಯತೆಗಳಿವೆ ಎನ್ನುವ ಅಂಶವನ್ನು ಬೆಳಕಿಗೆ ತಂದಿತು.

1914ರ ವೇಳೆಗೆ ಅನೇಕ ಅಕ್ಕಿ ಗಿರಣಿಗಳು, ಹೆಂಚಿನ ಕಾರ್ಖಾನೆಗಳು, ಸಿಗರೇಟ್ ಕಾರ್ಖಾನೆಗಳು, ಕಬ್ಬಿಣ ಮತ್ತು ಹಿತ್ತಾಳೆ ಫೌಂಡ್ರಿಗಳು ಸ್ಥಾಪಿತವಾಗಿದ್ದುವು. 1913-14ರಲ್ಲಿ ಮೈಸೂರು ಸಂಸ್ಥಾನದ ಭಾಗದಲ್ಲಿ ಗಣಿಗಳನ್ನು ಬಿಟ್ಟು 72 ಕಾರ್ಖಾನೆಗಳಿದ್ದುವು. ಇವು 1.6 ಕೋಟಿ ರೂಪಾಯಿ ಮೌಲ್ಯದ ಸರಕುಗಳನ್ನು ಉತ್ಪಾದಿಸುತ್ತಿದ್ದುವು. ಈ ಕಾರ್ಖಾನೆಗಳಲ್ಲಿ 4,451 ಕಾರ್ಮಿಕರಿದ್ದರು.

1914-24ರ ದಶಕದಲ್ಲಿ ರಾಜ್ಯದ ಕೈಗಾರಿಕಾ ಪ್ರಗತಿ ಗಮನಾರ್ಹವಾಗಿ ನಡೆಯಿತು. ಈ ಅವಧಿಯಲ್ಲಿ ರಾಜ್ಯದಲ್ಲಿ ಅನೇಕ ಹೊಸ ಕೈಗಾರಿಕೆಗಳು ಜನ್ಮತಾಳಿದ್ದವು. ಅಸ್ತಿತ್ವದಲ್ಲಿದ್ದ ಅನೇಕ ಕೈಗಾರಿಕೆಗಳು ವ್ಯವಸ್ಥಿತ ಕೈಗಾರಿಕೆಗಳಾಗಿ ಪರಿವರ್ತನೆಗೊಂಡುವು. ವಿಶ್ವೇಶ್ವರಯ್ಯನವರ ಆರ್ಥಿಕ ಯೋಜನೆಗಳು ಮತ್ತು ಅಂದಿನ ಮೈಸೂರು ಸಂಸ್ಥಾನದ ಸರ್ಕಾರದ ಪ್ರಗತಿಪರ ನೀತಿ ಇದಕ್ಕೆ ಮುಖ್ಯ ಕಾರಣಗಳು. ಈ ದಶಕದಲ್ಲಿ ಭದ್ರಾವತಿಯ ಮೈಸೂರು ಕಬ್ಬಿಣ ಮತ್ತು ಉಕ್ಕು ಕಾರ್ಖಾನೆ, ಸರ್ಕಾರಿ ಸಾಬೂನು ಕಾರ್ಖಾನೆ, ಸರ್ಕಾರಿ ಇಂಡಸ್ಟ್ರಿಯಲ್ ವರ್ಕ್‌ಷಾಪ್ -ಇವು ಸರ್ಕಾರಿ ವಲಯದಲ್ಲಿಯೂ ಮಿನರ್ವ ಮತ್ತು ಕೃಷ್ಣರಾಜೇಂದ್ರ ಜವಳಿ ಗಿರಣಿಗಳು, ಮಹಾಲಕ್ಷ್ಮಿ ಉಲ್ಲನ್ ಮತ್ತು ಸಿಲ್ಕ್ ಟೆಕ್ಸ್‌ಟೈಲ್ ಮಿಲ್ಸ್, ಮೈಸೂರು ಪ್ರೀಮಿಯರ್ ಮೆಟಲ್ ಫ್ಯಾಕ್ಟರಿ, ಸ್ಟ್ಯಾಂಡರ್ಡ್ ಟೈಲ್ ಅಂಡ್ ಕ್ಲೇ ವರ್ಕ್ಸ್, ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪನಿ, ಕಿಯೊಲಿನ್ ಸಿಂಡಿಕೇಟ್, ಮೈಸೂರು ಆಸ್‌ಬಸ್ಟಾಸ್, ಸಿಂಧುವಳ್ಳಿ ಕ್ರೋಮೈಟ್ ಮತ್ತು ಇತರ ಅನೇಕ ಉದ್ಯಮಗಳು ಖಾಸಗಿ ವಲಯದಲ್ಲಿ ಸ್ಥಾಪಿತವಾದವು.



ಬೆಂಗಳೂರಿನ ಹೊರವಲಯದ ಕೈಗಾರಿಕಾಪ್ರದೇಶ

ಕೈಗಾರಿಕಾಭಿವೃದ್ಧಿಯ ದೃಷ್ಟಿಯಿಂದ 1924ರ ಅನಂತರದ ಎರಡು ದಶಕಗಳು ಮಹತ್ವಪೂರ್ಣವಾಗಿದ್ದವು. ಭಾರತ ಸರ್ಕಾರದ ವಾಣಿಜ್ಯ ನೀತಿ, ದಿವಾನ್ ಮಿರ್ಜಾ ಇಸ್ಮಾಯಿಲ್‌ರವರ ಆಸಕ್ತಿ, ಎರಡನೆಯ ಮಹಾಯುದ್ಧದಿಂದಾಗಿ ಒದಗಿ ಬಂದ ಸದವಕಾಶ ಇವು ಈ ಕಾಲದ ಪ್ರಗತಿಗೆ ಮುಖ್ಯಕಾರಣಗಳು, ಈ ಕಾಲದಲ್ಲಿ ಕಾಗದ, ಸಿಮೆಂಟು, ವ್ಯವಸಾಯೋಪಯೋಗಿ ಉಪಕರಣಗಳು, ಪೋರ್ಸಲಿನ್ ಸರಕುಗಳು, ಲ್ಯಾಂಪು, ಟ್ರಾನ್ಸ್‌ಫಾರ್ಮರು, ಬ್ಯಾಟರಿ, ಇನ್ಸುಲೇಟರ್ ಮೊದಲಾದ ವಿದ್ಯುಚ್ಛಕ್ತಿ ಸರಕುಗಳು, ಗಾಜು ಮತ್ತು ಎನಾಮಲ್ ವಸ್ತುಗಳು, ಬೇಕ್‌ಲೈಟ್ ಉತ್ಪನ್ನಗಳು, ಬೆಂಕಿಕಡ್ಡಿ, ಯಂತ್ರೋಪಕರಣಗಳು, ಅರಗು ಮತ್ತು ಬಣ್ಣಗಳು, ಸ್ಟೋನ್‌ವೇರ್ ಕೊಳವೆಗಳು, ಸಕ್ಕರೆ, ಆಲ್ಕೋಹಾಲ್, ರಾಸಾಯನಿಕ ವಸ್ತುಗಳು ಮತ್ತು ಗೊಬ್ಬರ, ಕ್ರೋಮ್ ಮತ್ತು ಚರ್ಮದ ಸಾಮಾನುಗಳು, ಶುದ್ಧಗೊಳಿಸಿದ ಹೊಗೆಸೊಪ್ಪು ಮತ್ತು ಕಾಫಿ, ವನಸ್ಪತಿ ತೈಲ ಮತ್ತು ತುಪ್ಪ, ಫಿಲೇಚರ್ ರೇಷ್ಮೆ, ರಸ್ತೆ ನಿರ್ಮಾಣದ ವಸ್ತುಗಳು ಮೊದಲಾದವುಗಳ ಉತ್ಪಾದನೆಗಾಗಿ ಅನೇಕ ಕಾರ್ಖಾನೆಗಳು ಹುಟ್ಟಿದುವು.

ಎರಡನೆಯ ಮಹಾಯುದ್ಧ ಸಹಜವಾಗಿಯೇ ಕೈಗಾರಿಕಾಕ್ಷೇತ್ರಕ್ಕೆ ಹೊಸ ಹುರುಪನ್ನು ತುಂಬಿತು. ಬೆಂಗಳೂರಿನ ಹಿಂದೂಸ್ತಾನ್ ಏರ್‌ಕ್ರಾಫ್ಟ್, ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್ ಮೊದಲಾದ ರಾಷ್ಟ್ರೀಯ ಪ್ರಾಮುಖ್ಯದ ಕೈಗಾರಿಕೆಗಳು, ರೇಡಿಯೋ ಅಂಡ್ ಎಲೆಕ್ಟ್ರಿಕಲ್ ಮ್ಯಾನುಫ್ಯಾಕ್ಚರಿಂಗ್ ಕಂಪನಿ, ಕಿರ್ಲೋಸ್ಕರ್ ಲಿಮಿಟೆಡ್, ಮೈಸೂರು ಕೆಮಿಕಲ್ ಆಂಡ್ ಫರ್ಟಿಲೈಸರ್ಸ್‌ಗಳಂಥ ದೊಡ್ಡ ಕೈಗಾರಿಕೆಗಳು ಸ್ಥಾಪಿತವಾದದ್ದು ಈ ಕಾಲದಲ್ಲಿಯೇ. ಬೆಲೆ ಮತ್ತು ಬೇಡಿಕೆಗಳಲ್ಲಿನ ಏರಿಕೆ ಈ ಕೈಗಾರಿಕೆಗಳ ಸ್ಥಾಪನೆ ಮತ್ತು ಪ್ರಗತಿಗೆ ಮುಖ್ಯ

ಕಾರಣಗಳಾಗಿದ್ದುವು. ಸರ್ಕಾರ ಸಹ ಈ ಕೈಗಾರಿಕೆಗಳನ್ನು ಪ್ರೋತ್ಸಾಹಿಸುವ ಹಾಗೂ ಆರಂಭಿಸುವ ಧೋರಣೆಯನ್ನು ಪ್ರಕಟಿಸಿತು. ಈ ಅವಧಿಯಲ್ಲಿ ಉತ್ತೇಜನಗೊಂಡ ಅತಿ ಮುಖ್ಯ ಕೈಗಾರಿಕೆಗಳೆಂದರೆ ಹತ್ತಿಬಟ್ಟೆ, ವನಸ್ಪತಿ, ಬಣ್ಣ ತಯಾರಿಕೆ, ಪೊಟಾಷ್ ಲವಣ, ಮೊಲಾಸಿಸ್, ಕಾಸ್ಟಿಕ್ ಸೋಡಾ, ಕ್ಲೋರಿನ್, ಸಿಮೆಂಟ್, ರೇಡಿಯೋ ಉಪಕರಣ, ಪ್ಲಾಸ್ಟಿಕ್, ವಿದ್ಯುತ್ ಸಲಕರಣೆಗಳು, ಸೋಡಾ, ಎಲೆಕ್ಟ್ರೋ ಕೆಮಿಕಲ್ಸ್, ಹುರಿಹಗ್ಗ, ಛಾಯಾಚಿತ್ರ ಸಾಮಗ್ರಿ ಇತ್ಯಾದಿ.

ಸ್ವಾತಂತ್ರ್ಯಪೂರ್ವದಲ್ಲಿ ಮೈಸೂರು ಸಂಸ್ಥಾನದ ಕೈಗಾರಿಕಾನೀತಿ ಎರಡು ಪ್ರಮುಖ ಅಂಶಗಳನ್ನೊಳಗೊಂಡಿತ್ತು. ಮೊದಲನೆಯದಾಗಿ, ಸರ್ಕಾರವೇ ಕೆಲವು ಪ್ರಮುಖ ಕೈಗಾರಿಕೆಗಳನ್ನು ಸ್ಥಾಪಿಸಿ ಔದ್ಯೋಗೀಕರಣಕ್ಕೆ ನೆರವಾಗಿತ್ತು. ಎರಡನೆಯದಾಗಿ, ಖಾಸಗೀ ಬಂಡವಾಳದಾರರಿಗೆ ಸರ್ಕಾರ ಕೈಗಾರಿಕೆಗಳನ್ನು ಸ್ಥಾಪಿಸಲು ತುಂಬಾ ಉತ್ತೇಜನ ನೀಡುತ್ತಿತ್ತು. ಇಷ್ಟೇ ಅಲ್ಲದೆ ಖಾಸಗೀ ಬಂಡವಾಳಿಗರೊಡನೆ ತಾನೂ ಪಾಲ್ಗೊಳ್ಳುವ ಉತ್ಸಾಹವನ್ನು ಸಹ ತೋರುತ್ತಿತ್ತು. ಈಗ ಅತ್ಯಂತ ಪ್ರಚಾರದಲ್ಲಿರುವ ಸಂಯುಕ್ತ ಕ್ಷೇತ್ರ ಕೈಗಾರಿಕೆ ಪ್ರಯತ್ನವನ್ನು ಮೈಸೂರು ಸಂಸ್ಥಾನ ಬಹಳ ಹಿಂದೆಯೇ ಪ್ರಯೋಗಿಸಿತ್ತು.



ಬೆಂಗಳೂರಿನ ಹೊರವಲಯದ ಕೈಗಾರಿಕಾಪ್ರದೇಶ

ಮೈಸೂರು ಸಂಸ್ಥಾನದ ಕೈಗಾರಿಕಾ ಪ್ರಗತಿಯ ಮತ್ತೊಂದು ಪ್ರಮುಖ ಅಂಶವೆಂದರೆ ಪ್ರಾರಂಭದಿಂದಲೂ ಈ ರಾಜ್ಯದಲ್ಲಿ ಸಣ್ಣ ಕೈಗಾರಿಕೆಗಳಿಗೆ ಪ್ರೋತ್ಸಾಹ ದೊರೆಯುತ್ತ ಬಂದದ್ದು. ಇದಕ್ಕೆ ಸಹ ಯೋಜನೆಯನ್ನು ರೂಪಿಸಿದ ಶ್ರೇಯಸ್ಸು ಎಂ.ವಿಶ್ವೇಶ್ವರಯ್ಯನವರದು. ಈ ರಾಜ್ಯದ ಗೃಹಕೈಗಾರಿಕೆಗಳಾದ ನೇಯ್ಗೆ, ಕುಂಬಾರಿಕೆ, ಹೆಂಚು ತಯಾರಿಕೆ, ಗಾಣದಿಂದ ಎಣ್ಣೆ ಹಿಂಡುವಿಕೆ, ಬುಟ್ಟಿ ತಯಾರಿಕೆ, ಚಿನ್ನದ ಕೆಲಸ, ಕಬ್ಬಿಣದ ಕೆಲಸ, ಮರಗೆಲಸ, ಚಾಪೆ ತಯಾರಿಕೆ, ಚರ್ಮದ ಕೆಲಸ, ಬೀಡಿ ತಯಾರಿಕೆ ಮತ್ತು ಅಗರಬತ್ತಿ ಉದ್ಯಮಗಳ ಪ್ರೋತ್ಸಾಹ ಅತ್ಯಂತ ಅಗತ್ಯವೆಂಬುದನ್ನು ಮನಗಾಣಲಾಯಿತು. ರಾಜ್ಯದಲ್ಲಿ ವಿದ್ಯುತ್ ಉತ್ಪಾದನೆ ಹೆಚ್ಚಾದಂತೆ ಈ ಕೈಗಾರಿಕೆಗಳು ಅಭಿವೃದ್ಧಿ ಹೊಂದಲಾರಂಭಿಸಿದವು.

ಲಭ್ಯವಿರುವ ಅಂಕಿ ಅಂಶದ ಪ್ರಕಾರ 1920ರಲ್ಲೇ ರಾಜ್ಯದಲ್ಲಿ ವಿದ್ಯುತ್ ಕೇಂದ್ರ, ಹತ್ತಿ ಬಟ್ಟೆ ಗಿರಣಿ ಮತ್ತು ಚಿನ್ನದ ಗಣಿಯನ್ನುಳಿದು, ಇತರ 29 ದೊಡ್ಡ ಕೈಗಾರಿಕೆಗಳಿದ್ದವು. ಇವುಗಳ ಬಂಡವಾಳ ಸುಮಾರು ರೂ.5 ಕೋಟಿ. ಈ ಕೈಗಾರಿಕೆಗಳಲ್ಲಿ 16,500 ಉದ್ಯೋಗಿಗಳಿದ್ದರು. 1944ರ ವೇಳೆಗೆ ರಾಜ್ಯದಲ್ಲಿ ಒಟ್ಟು 313 ದೊಡ್ಡ ಕಾರ್ಖಾನೆಗಳಿದ್ದುವು. ಇವುಗಳಲ್ಲಿ ಉದ್ಯೋಗಿಗಳ ಸಂಖ್ಯೆ 1,00,000. ಇವುಗಳಲ್ಲಿ 26 ಅತಿ ದೊಡ್ಡ ಕೈಗಾರಿಕೆಗಳು ಯುದ್ಧಕ್ಕೆ ಅಗತ್ಯವಾದ ವಸ್ತುಗಳನ್ನು ಸರಬರಾಜು ಮಾಡುತ್ತಿದ್ದವು. ಯುದ್ಧಮುಗಿಯುವ ವೇಳೆಗೆ ಇವು ರೂ.11 ಕೋಟಿ ಮೊತ್ತದ ಸಾಮಗ್ರಿಗಳನ್ನು ಸರಬರಾಜು ಮಾಡಿದ್ದವು.

ಮೈಸೂರು ಸಂಸ್ಥಾನವನ್ನು ಬಿಟ್ಟು ಕರ್ನಾಟಕದ ಉಳಿದ ಭಾಗಗಳಲ್ಲಿ ಕೈಗಾರಿಕಾಭಿವೃದ್ಧಿ ವ್ಯವಸ್ಥಿತವಾಗಿಯಾಗಲಿ ಗಣನೀಯವಾಗಿಯಾಗಲಿ ಇರಲಿಲ್ಲ. ಆದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬೆಳೆದ ಹೆಂಚಿನ ಕಾರ್ಖಾನೆಗಳು, ಶಾಹಬಾದಿನ ಸಿಮೆಂಟ್ ಕಾರ್ಖಾನೆ, ಹುಬ್ಬಳ್ಳಿಯ ಲೋಹ ಕೈಗಾರಿಕೆಗಳು ಮತ್ತು ರೈಲ್ವೆ ಕಾರ್ಖಾನೆ, ಗುಲ್ಬರ್ಗ ಧಾರವಾಡ ಬೆಳಗಾಂವಿಯ ಬಟ್ಟೆ ಗಿರಣಿಗಳು, ಕೊಡಗಿನ ಮರಗೆಲಸ ಕಾರ್ಖಾನೆಗಳು ಉಲ್ಲೇಖಾರ್ಹ.

**ಪಂಚವಾರ್ಷಿಕ ಯೋಜನೆಗಳು :** ಸ್ವಾತಂತ್ರ್ಯಾನಂತರ 1948 ಮತ್ತು 1956ರಲ್ಲಿ ಭಾರತ ಸರ್ಕಾರದ ಕೈಗಾರಿಕಾನೀತಿಗಳು ರೂಪಿತವಾದವು. ರಾಜ್ಯ ಸರ್ಕಾರಗಳು ಈ ನೀತಿಗಳಿಗನುಗುಣವಾಗಿ ನಡೆಯಬೇಕಾಯಿತು. 1951ರಲ್ಲಿ ಪ್ರಾರಂಭವಾದ ಪಂಚವಾರ್ಷಿಕ ಯೋಜನೆ ಕೈಗಾರಿಕಾ ಪ್ರಗತಿ ರಾಷ್ಟ್ರದಲ್ಲಿ ವ್ಯವಸ್ಥಿತವಾಗಿ ನಡೆಯುವಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ಹೊತ್ತಿತು. ರಾಜ್ಯ ಸರ್ಕಾರಗಳು ಸಹ ಪಂಚವಾರ್ಷಿಕ ಯೋಜನೆಗಳನ್ನು ರಾಷ್ಟ್ರೀಯ ನೀತಿಗನುಗುಣವಾಗಿ ರೂಪಿಸಿದವು. ಕೈಗಾರಿಕಾ ಕ್ಷೇತ್ರದ ಯೋಜನೆಗಳು ಆರ್ಥಿಕ ಯೋಜನೆಯ ಚೌಕಟ್ಟಿನೊಳಗೇ ನಡೆಯಬೇಕಾಗಿ ಬಂತು. ರಾಷ್ಟ್ರದ ಮಿಶ್ರ ಆರ್ಥಿಕ ವ್ಯವಸ್ಥೆಯ ನೀತಿಗನುಗುಣವಾಗಿ ರಾಜ್ಯದಲ್ಲಿ ಸಹ ಕೈಗಾರಿಕಾ ರಂಗದಲ್ಲಿ ಮೂರು ಕ್ಷೇತ್ರಗಳು ರೂಪಿತವಾದವು. ಅವುಗಳೆಂದರೆ, ಸಾರ್ವಜನಿಕ ಕ್ಷೇತ್ರ, ಖಾಸಗಿ ಕ್ಷೇತ್ರ ಮತ್ತು ಸಂಯುಕ್ತ ಕ್ಷೇತ್ರ. ಅವಶ್ಯವಿರುವ ಕಡೆ ಸಹಕಾರ ಕ್ಷೇತ್ರದಲ್ಲಿ ಕೈಗಾರಿಕೆಗಳನ್ನು ಉತ್ತೇಜಿಸುವ ನೀತಿಯನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಒಪ್ಪಿಕೊಂಡವು.

ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ರಾಜ್ಯದ ಕೈಗಾರಿಕಾ ಪ್ರಗತಿ ಗಣನೀಯ ಪ್ರಮಾಣದಲ್ಲಿ ನಡೆದಿದೆಯೆಂದು ಹೇಳಬೇಕು. ಮೊದಲನೆಯ ಪಂಚವಾರ್ಷಿಕ ಯೋಜನೆಯಲ್ಲಿ ಕೈಗಾರಿಕೆಗಳ ಮೇಲೆ ಮಾಡಲಾದ ವೆಚ್ಚ 1.3 ಕೋಟಿ ರೂಪಾಯಿಗಳು. ಇದು ಒಟ್ಟು ಯೋಜನಾ ವೆಚ್ಚದ ಸೇ.3ರಷ್ಟಾಗಿತ್ತು. ಮೊದಲನೆಯ ಯೋಜನೆಯ ಅವಧಿಯಲ್ಲಿ ಸಾಬೂನು ಕಾರ್ಖಾನೆ, ವಿದ್ಯುತ್ ಉಪಕರಣ ಮತ್ತು ಪಿಂಗಾಣಿ ಕೈಗಾರಿಕೆಗಳನ್ನು ಬಹಳವಾಗಿ ಅಭಿವೃದ್ಧಿಗೊಳಿಸಲಾಯಿತು. ಇವೆಲ್ಲವೂ ಸರ್ಕಾರೀ ಕ್ಷೇತ್ರದ ಉದ್ಯಮಗಳಾಗಿದ್ದುವು. ಇವಲ್ಲದೆ ಭದ್ರಾವತಿ ಕಬ್ಬಿಣ ಕಾರ್ಖಾನೆಯನ್ನು ವಿಸ್ತರಿಸಲಾಯಿತು. ಸಣ್ಣ ಕೈಗಾರಿಕಾ ಕ್ಷೇತ್ರದಲ್ಲಿ ಮುಖ್ಯವಾಗಿ ನೇಕಾರರ ಸಹಕಾರ ಸಂಘಗಳನ್ನು ಹೆಚ್ಚಾಗಿ ಸ್ಥಾಪಿಸಲಾಯಿತು.

ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಕೈಗಾರಿಕಾಪ್ರಗತಿ ಅತ್ಯಂತ ಮಹತ್ವದ್ದಾಗಿತ್ತು. ಮೊದಲನೆಯ ಯೋಜನೆಗೆ ಹೋಲಿಸಿದಂತೆ ಕೈಗಾರಿಕಾ ಕ್ಷೇತ್ರದ ಮೇಲೆ ವೆಚ್ಚವನ್ನು ತುಂಬಾ ಹೆಚ್ಚಿಸಲಾಯಿತು. ಈ ಯೋಜನೆಯಲ್ಲಿ ಕೈಗಾರಿಕಾ ಕ್ಷೇತ್ರದ ಮೇಲೆ 8.87 ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಲಾಯಿತು. ಇದರಲ್ಲಿ ಹೆಚ್ಚಿನಂಶದ ವೆಚ್ಚವನ್ನು ಗ್ರಾಮೀಣ ಮತ್ತು ಸಣ್ಣ ಕೈಗಾರಿಕೆಗಳಿಗೆ ಮೀಸಲಾಗಿಡಲಾಯಿತು. ಸರ್ಕಾರಿ ಕ್ಷೇತ್ರದ ಕೈಗಾರಿಕೆಗಳ ಉತ್ಪಾದನೆಯಲ್ಲಿನ ಹೆಚ್ಚಳ, ಉತ್ಪಾದನೆಯ ದಕ್ಷತೆಯ ವಿಸ್ತರಣೆ, ಕೈಗಾರಿಕಾ ಎಸ್ಟೇಟ್‌ಗಳ ಸ್ಥಾಪನೆ, ಖಾಸಗಿ ಕಾರ್ಖಾನೆಗಳ ಉತ್ಪಾದನೆಯಲ್ಲಿನ ಹೆಚ್ಚಳ ಈ ಯೋಜನೆಯ ಅತಿ ಮುಖ್ಯ ಅಂಶಗಳಾಗಿದ್ದವು. ಈ ಯೋಜನೆಯ ಅವಧಿಯಲ್ಲಿ ಶಿವಮೊಗ್ಗದಲ್ಲಿ ಒಂದು ಹೊಸ ಗಂಧದೆಣ್ಣೆ ಕಾರ್ಖಾನೆಯನ್ನು ಸ್ಥಾಪಿಸಲಾಯಿತು. ಸರ್ಕಾರಿ ಸಾಬೂನು ಕಾರ್ಖಾನೆಯನ್ನು ವಿಸ್ತರಿಸಲಾಯಿತು. ವಾಸ್ತವವಾಗಿ ಯೋಜನೆಯ ಅವಧಿಯಲ್ಲಿ ಸಾಬೂನು ಉತ್ಪಾದನೆ 610 ಟನ್‌ಗಳಿಂದ 1,524 ಟನ್‌ಗಳಿಗೆ ಏರಿತು. ಹಾಗೆಯೇ ಪಿಂಗಾಣಿ ಕಾರ್ಖಾನೆಯ ವಿಸ್ತರಣೆಯಿಂದಾಗಿ ಅದರ ಉತ್ಪನ್ನ ವರ್ಷಕ್ಕೆ 2,540 ಟನ್‌ಗಳಿಗೆ ಏರಿತು. 1960ರಲ್ಲಿ ರಾಜ್ಯ ಸರ್ಕಾರ ಚನ್ನಪಟ್ಟಣದ ರೇಷ್ಮೆ ಕಾರ್ಖಾನೆಯನ್ನು ತನ್ನ ವಶಕ್ಕೆ ತೆಗೆದುಕೊಂಡಿತು.

ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುವ ದೃಷ್ಟಿಯಿಂದ ಸ್ಥಾಪಿತವಾದ ಕೈಗಾರಿಕಾ ಎಸ್ಟೇಟುಗಳು ಹೊಸ ಕೈಗಾರಿಕೆಗೆ ಬೇಕಾಗುವ ಎಲ್ಲ ಆವಶ್ಯಕತೆಗಳನ್ನೂ ಒದಗಿಸುವ ಉದ್ದೇಶವನ್ನು ಇಟ್ಟುಕೊಂಡಿದ್ದವು. ಸಣ್ಣ ಕೈಗಾರಿಕೆಗಳಿಗೆ ಅಗತ್ಯವಾದ ವಿದ್ಯುತ್, ನೀರು, ಒಳಚರಂಡಿ, ರಸ್ತೆ,

ಉಗ್ರಾಣ, ಅಂಚೆ ಕಚೇರಿ, ಬ್ಯಾಂಕು ಮೊದಲಾದ ಅನುಕೂಲಗಳನ್ನು ಎಸ್ಟೇಟುಗಳಲ್ಲಿ ಒದಗಿಸಿಕೊಡುವುದರ ಮೂಲಕ ಹೊಸ ಕೈಗಾರಿಕೆಗಳನ್ನು ಅಸ್ತಿತ್ವಕ್ಕೆ ತರುವುದು ಇದರ ಮುಖ್ಯ ಗುರಿ. ಇವುಗಳನ್ನು ದೊರಕಿಸಿಕೊಡುವುದರಿಂದ ಸಣ್ಣ ಕೈಗಾರಿಕೆಗಳ ತೀವ್ರ ಹಾಗೂ ಸಮನ್ವಯ ರೀತಿಯ ಅಭಿವೃದ್ಧಿ ಸಾಧ್ಯವೆಂಬುದನ್ನು ರಾಜ್ಯದ ಎರಡನೆಯ ಯೋಜನೆಯ ಅವಧಿಯಲ್ಲಿ ಮನಗಾಣಲಾಯಿತು. ಎರಡನೆಯ ಯೋಜನೆಯ ಅವಧಿಯಲ್ಲಿ ಬೆಂಗಳೂರು, ಹುಬ್ಬಳ್ಳಿ, ರಾಮನಗರ, ಮೈಸೂರು, ಹರಿಹರ, ಬೆಳಗಾಂವಿ, ಮಂಗಳೂರು ಮತ್ತು ಗುಲ್ಬರ್ಗದಲ್ಲಿ 8 ಕೈಗಾರಿಕಾ ಎಸ್ಟೇಟುಗಳನ್ನು ಸ್ಥಾಪಿಸಲಾಯಿತು. ರಾಜ್ಯದಲ್ಲಿ ಗ್ರಾಮೀಣ ಕೈಗಾರಿಕೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ, ಗ್ರಾಮಾಂತರ ಕಸಬುದಾರರಿಗೆ ಪೀಠೋಪಕರಣ ತಯಾರಿಕೆಗೆ ಆಧುನಿಕ ಸಲಕರಣೆ ಮತ್ತು ಯಂತ್ರಗಳ ಬಳಕೆ. ಮರಗೆಲಸ ಹಾಗೂ ಕಮ್ಮಾರಿಕೆ ಇವುಗಳ ಬಗ್ಗೆ ತರಬೇತಿ ನೀಡಲು ಏಳು ಮಾದರಿ ಕೇಂದ್ರಗಳನ್ನು ಸ್ಥಾಪಿಸಲಾಯಿತು.



ಬೆಂಗಳೂರು, ವೈಟ್‌ಫೀಲ್ಡ್ ಕೈಗಾರಿಕಾ ಪ್ರದೇಶ

ಈ ಯೋಜನೆಯ ಅವಧಿಯಲ್ಲಿ ನೇಮಿಸಲಾದ ಕೈಗಾರಿಕಾ ಸಹಕಾರ ಸಂಘಗಳ ಕ್ರಿಯಾಸಮಿತಿ ತನ್ನ ಶಿಫಾರಸುಗಳನ್ನು ಸರ್ಕಾರಕ್ಕೆ ಸಲ್ಲಿಸಿತು. ಇದೇ ರೀತಿ 1959ರಲ್ಲಿ ಮೈಸೂರು ಸಣ್ಣ ಕೈಗಾರಿಕೆ ಮತ್ತು ಕರಕುಶಲ ಕಸಬುಗಳ ಮಂಡಳಿಯನ್ನು ರಚಿಸಲಾಯಿತು. ಇದರ ಮುಖ್ಯ ಉದ್ದೇಶ ಸಣ್ಣಕೈಗಾರಿಕೆಗಳ ಅಭಿವೃದ್ಧಿಯನ್ನು ಕುರಿತು ಸರ್ಕಾರಕ್ಕೆ ಸಲಹೆಗಳನ್ನು ನೀಡುವುದಾಗಿತ್ತು. ಈ ಮಂಡಳಿಯ ಶಿಫಾರಸುಗಳ ಫಲವಾಗಿ ಈ ಯೋಜನೆಯ ಅವಧಿಯಲ್ಲಿ 123 ಕರಕುಶಲ ಸಂಘಗಳು ನಿರ್ಮಾಣವಾದವು. ಈ ಸಂಘಗಳು ಆಸಕ್ತಿ ತಳೆದಿದ್ದ ಕಸಬುಗಳೆಂದರೆ ಬಲೆ ನೇಯ್ಗೆ, ಗಂಧದ ಕೆತ್ತನೆ, ದಂತದ ಕೆತ್ತನೆ, ಲೋಹ ಸಾಮಗ್ರಿ, ಮರದ ಆಟದ ಸಾಮಾನುಗಳು ಇತ್ಯಾದಿ.

ಈ ಯೋಜನೆಯ ಅವಧಿಯಲ್ಲೇ ಮೈಸೂರು ಸಣ್ಣ ಕೈಗಾರಿಕೆಗಳ ಕಾರ್ಪೊರೇಷನ್ ಅಸ್ತಿತ್ವಕ್ಕೆ ಬಂತು. ಈ ಕಾರ್ಪೊರೇಷನ್ನಿನ ಪ್ರಮುಖ ಕಾರ್ಯಗಳೆಂದರೆ ಕೈಗಾರಿಕಾ ಎಸ್ಟೇಟುಗಳ ನಿರ್ಮಾಣ, ಅವುಗಳ ವ್ಯವಸ್ಥಾಪನೆ, ಮುಖ್ಯ ಕೈಗಾರಿಕಾ ಕೇಂದ್ರಗಳಲ್ಲಿ ಉಕ್ಕು, ಇದ್ದಿಲು, ಕಬ್ಬಿಣೇತರ ಲೋಹ ಮುಂತಾದ ಕಚ್ಚಾಮಾಲು ಸಂಗ್ರಹ, ಕೋಠಿಗಳ ಪ್ರಾರಂಭ ಮತ್ತು ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಮಾರುಕಟ್ಟೆಯನ್ನು ಒದಗಿಸುವುದಾಗಿತ್ತು. ಯೋಜನೆಯ ಎರಡನೆಯ ವರ್ಷದಲ್ಲಿ ಕೈಮಗ್ಗ ಉದ್ಯಮವನ್ನು ವ್ಯವಸ್ಥಿತಗೊಳಿಸಲು ಮೈಸೂರು ರಾಜ್ಯ ಹತ್ತಿ ಮತ್ತು ಉಣ್ಣೆ ನೇಕಾರರ ಸಂಘ ಮತ್ತು ಮೈಸೂರು ರಾಜ್ಯ ರೇಷ್ಮೆ ಕೈಮಗ್ಗ ನೇಕಾರರ ಕೇಂದ್ರ ಸಹಕಾರ ಸಂಘಗಳನ್ನು ರಚಿಸಲಾಯಿತು. ಯೋಜನೆಯ ಕರಡಿನಲ್ಲಿ ಪ್ರಕಟಿಸಿದಂತೆ ಕೈಗಾರಿಕಾ ಸಹಕಾರವನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಯೋಜನೆಯ ಅವಧಿಯಲ್ಲಿ 210 ಕೈಮಗ್ಗ ಸಹಕಾರ ಸಂಘಗಳಿಗೆ ಸುಮಾರು 2,000 ವಿದ್ಯುತ್‌ಚಾಲಿತ ಮಗ್ಗಗಳನ್ನು ಒದಗಿಸಲಾಯಿತು. ಇಷ್ಟೇ ಅಲ್ಲದೆ 35 ಹುರಿಹಗ್ಗ ಸಹಕಾರ ಸಂಘಗಳಿಗೆ ವ್ಯವಸ್ಥಾಪನೆ ಮತ್ತು ಬಂಡವಾಳ ವೆಚ್ಚವನ್ನು ದೊರಕಿಸಿಕೊಡಲಾಯಿತು. ಒಟ್ಟಿನಲ್ಲಿ ಹೇಳುವುದಾದರೆ, ಎರಡನೆಯ ಪಂಚವಾರ್ಷಿಕ ಯೋಜನೆ ರಾಜ್ಯದ ಕೈಗಾರಿಕಾ ಪ್ರಗತಿಗೆ ಅತ್ಯಂತ ದಕ್ಷವಾದ ಬುನಾದಿಯನ್ನು ಹಾಕಿತು. ಮುಖ್ಯವಾಗಿ ಈ ಯೋಜನೆಯಲ್ಲಿ ಅಸ್ತಿತ್ವಕ್ಕೆ ಬಂದ ಕೈಗಾರಿಕೆಗಳು ಮುಂದಿನ ಯೋಜನೆಯ ಅವಧಿಯಲ್ಲಿ ಫಲ ಕೊಡುವ ನಿರೀಕ್ಷೆ ಇತ್ತು. ರಾಜ್ಯದಲ್ಲಿ ಕೈಗಾರಿಕೋದ್ಯಮಿಗಳು ಮುಂದೆ ಬರುವುದಾದರೆ, ಅವರಿಗೆ ಎಲ್ಲ ವಿಧವಾದ ನೆರವು ಸರ್ಕಾರದ ವತಿಯಿಂದ ದೊರೆಯುತ್ತದೆಂಬ ಖಾತ್ರಿಯ ಮಾನಸಿಕ ವಾತಾವರಣ ಏರ್ಪಟ್ಟಿತು. ಈ ಯೋಜನೆಯಲ್ಲಿ ವಿದ್ಯುತ್ ಕೊರತೆಯುಂಟಾದರೂ ಈ ಅಡಚಣೆಯಲ್ಲೂ ಕೈಗಾರಿಕೆಗಳು ಸಾಕಷ್ಟು ಮಟ್ಟಿಗಿನ ಉತ್ಪಾದನ ಪ್ರಗತಿಯನ್ನು ತೋರಿದವು.

ಮೂರನೆಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಮೊದಲೆರಡು ಯೋಜನೆಗಳಲ್ಲಿ ಕೈಗೊಂಡಿದ್ದ ಕೈಗಾರಿಕೀಕರಣವನ್ನು ತೀವ್ರಗೊಳಿಸಲಾಯಿತು. ಎರಡನೆಯ ಯೋಜನೆಯಂತೆಯೇ ಮೂರನೆಯ ಯೋಜನೆಯಲ್ಲೂ ಪ್ರಸ್ತುತ ಕೈಗಾರಿಕೆಗಳಲ್ಲಿನ ಉತ್ಪಾದನೆಯ ವಿಸ್ತರಣೆ, ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಪ್ರೋತ್ಸಾಹ ಮತ್ತು ಸರ್ಕಾರದ ನೆರವು ಇವು ಕೈಗಾರಿಕಾ ನೀತಿಯ ಮುಖ್ಯ ಉದ್ದೇಶಗಳಾಗಿದ್ದವು. ಈ ಯೋಜನೆಯಲ್ಲಿ ಕೈಗಾರಿಕಾ ಕ್ಷೇತ್ರದಲ್ಲಿ ರೂ.11.99 ಕೋಟಿಗಳನ್ನು ವೆಚ್ಚಮಾಡಲಾಯಿತು. ಯೋಜನೆಯ ಅವಧಿಯಲ್ಲಿ ಪ್ರಾರಂಭವಾದ ಶರಾವತಿ ವಿದ್ಯುತ್ ಕೇಂದ್ರ ವಿದ್ಯುತ್‌ಕೊರತೆಯ ಸಮಸ್ಯೆಯನ್ನು ಬಹು ಮಟ್ಟಿಗೆ ಬಗೆಹರಿಸಿತು.

ದೊಡ್ಡ ಕೈಗಾರಿಕಾ ಕ್ಷೇತ್ರದ ಅತ್ಯಂತ ಮುಖ್ಯ ಬೆಳೆವಣಿಗೆಯೆಂದರೆ, ಸರ್ಕಾರ ಎನ್.ಜಿ.ಇ.ಎಫ್. ಸ್ಥಾಪನೆಗಾಗಿ 650 ಲಕ್ಷ ರೂ.ಗಳನ್ನು ಒದಗಿಸಿದ್ದು. ಈ ಕೈಗಾರಿಕೆ ಬೃಹತ್ ಪ್ರಮಾಣದ್ದಾಗಿದ್ದು ಟ್ರಾನ್ಸ್‌ಫಾರ್ಮರ್, ಮೋಟಾರ್ ಸ್ವಿಚ್‌ಗೇರ್ ಹಾಗೂ ವಿದ್ಯುತ್ ಯಂತ್ರ ಸಲಕರಣೆಗಳ ಉತ್ಪಾದನೆಗೆ ತೊಡಗಿತು. ರಾಜ್ಯದಲ್ಲಿ ವಿದ್ಯುತ್ ಉತ್ಪಾದನೆಯನ್ನು ವೃದ್ಧಿಗೊಳಿಸುವುದು ಅನಿವಾರ್ಯವಾದ್ದರಿಂದ ಈ ಯೋಜನೆಯಲ್ಲಿ ಪಿಂಗಾಣಿ ಕಾರ್ಖಾನೆಯನ್ನು ಮತ್ತೂ ವಿಸ್ತರಿಸಲಾಯಿತು.

ಮಧ್ಯಮ ಹಾಗೂ ಸಣ್ಣ ಕೈಗಾರಿಕಾ ಕ್ಷೇತ್ರಗಳಲ್ಲಿ ಸಹ ಕೆಲವು ಮುಖ್ಯ ಬೆಳೆವಣಿಗೆಗಳು ಈ ಯೋಜನಾವಧಿಯಲ್ಲಿ ಆದುವು. ಸರ್ಕಾರಿ ರೇಷ್ಮೆ ಕಾರ್ಖಾನೆಯಲ್ಲಿ 1,500 ಕದಿರುಗಳ ಸಾಮರ್ಥ್ಯದ ಘಟಕವನ್ನು ಹೊಂದಿಸಲಾಯಿತು ಮತ್ತು ಈ ಕಾರ್ಖಾನೆಯನ್ನು ಜಪಾನಿನ ಸಹಕಾರದಿಂದ ಆಧುನೀಕರಿಸಲಾಯಿತು. ಬಾಗಲಕೋಟೆಯ ಸಹಕಾರಿ ನೂಲುಗಿರಣಿ ಉತ್ಪಾದನೆಯಲ್ಲಿ ಅತ್ಯಂತ ಹೆಚ್ಚಿನ ದಾಖಲೆಯನ್ನು ಸ್ಥಾಪಿಸಿತು. ಸಹಕಾರಿ ಮತ್ತು ಖಾಸಗಿ ಗಿರಣಿಗಳಿಗೆ ಈ ಯೋಜನೆಯಲ್ಲಿ 4,300 ವಿದ್ಯುತ್‌ಮಗ್ಗಗಳನ್ನು ಒದಗಿಸಲಾಯಿತು.

ಉತ್ಪಾದನೆಯನ್ನು ವಿಸ್ತರಿಸುವ ದೃಷ್ಟಿಯಿಂದ ಮೈಸೂರು ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಯಲ್ಲಿ ವಿಶಿಷ್ಟ ಉಕ್ಕು ಉತ್ಪಾದನೆಯಾಗುವಂತೆ ಕೈಗಾರಿಕೆಯನ್ನು ವಿಸ್ತರಿಸಲಾಯಿತು. ತುಂಗಭದ್ರಾ ಉಕ್ಕು ಘಟಕದಲ್ಲಿ ಸಹ ಹೊಸ ಬಗೆಯ ಉತ್ಪನ್ನಗಳನ್ನು ಆರಂಭಿಸಲಾಯಿತು. ರಾಸಾಯನಿಕ ಕೈಗಾರಿಕೆಗಳನ್ನು ಸಹ ವಿಸ್ತರಿಸಲಾಯಿತು. ಹಾಸನದ ಉಪಕರಣಗಳ ಕಾರ್ಖಾನೆಯನ್ನು ಸಹ ವಿಸ್ತರಿಸಲಾಯಿತು.

ಕೈಗಾರಿಕಾ ಎಸ್ಟೇಟ್‌ಗಳ ನಿರ್ಮಾಣದ ಕಾರ್ಯ ಮುಂದುವರಿಸಿ ಈ ಯೋಜನೆಯ ಅವಧಿಯಲ್ಲಿ 12 ಎಸ್ಟೇಟ್‌ಗಳನ್ನು ಸ್ಥಾಪಿಸಲಾಯಿತು. ಇವುಗಳಲ್ಲಿ 216 ಶೆಡ್ಡುಗಳು ಉತ್ಪಾದನೆಯಲ್ಲಿ ತೊಡಗಿದ್ದವು. ಈ ಎಸ್ಟೇಟುಗಳಲ್ಲಿ ಎಲ್ಲ ಉತ್ಪಾದಕರಿಗೂ ಅನುಕೂಲವಾಗುವಂಥ' ಸೌಕರ್ಯವನ್ನು ಕಲ್ಪಿಸುವ ಉದ್ದೇಶದಿಂದ ಸರ್ಕಾರವೇ ಅನೇಕ ಯಂತ್ರೋಪಕರಣಗಳನ್ನು ಖರೀದಿ ಮಾಡಿತು.

ಮೂರನೆಯ ಯೋಜನೆಯ ಅವಧಿಯಲ್ಲಿ ಕೈಗಾರಿಕಾ ಕ್ಷೇತ್ರದ ಬೆಳೆವಣಿಗೆಗೆ ಪೋಷಕವಾಗುವಂತೆ ರಾಜ್ಯ ಕೈಗಾರಿಕಾ ವಿನಿಯೋಜನೆ ಮತ್ತು ಅಭಿವೃದ್ಧಿ ಕಾರ್ಪೊರೇಷನ್ ಅಸ್ತಿತ್ವಕ್ಕೆ ಬಂತು. ರೂ.5 ಕೋಟಿ ಅಧಿಕೃತ ಬಂಡವಾಳದೊಂದಿಗೆ ಆರಂಭವಾದ ಈ ಸಂಸ್ಥೆಯ ಮುಖ್ಯ ಉದ್ದೇಶಗಳೆಂದರೆ ಕೈಗಾರಿಕೆಗಳಿಗೆ ಬಂಡವಾಳವನ್ನು ದೊರಕಿಸಿಕೊಡುವುದು

ಮತ್ತು ಹೊಸ ಕೈಗಾರಿಕೆಗಳು ಅಸ್ತಿತ್ವಕ್ಕೆ ಬರುವಂತೆ ಪ್ರೋತ್ಸಾಹ ನೀಡುವುದು. ಈ ಯೋಜನೆಯ ಅವಧಿಯಲ್ಲಿ, ರಾಜ್ಯ ಸರ್ಕಾರ ಅನೇಕ ಸಮೀಕ್ಷೆಗಳಿಗೆ ಏರ್ಪಾಡು ಮಾಡಿತು. ಇವುಗಳಲ್ಲಿ ಮುಖ್ಯವಾಗಿದ್ದ ಸಮೀಕ್ಷೆಗಳೆಂದರೆ, ಆನ್ವಯಿಕ ಆರ್ಥಿಕ ಸಂಶೋಧನ ರಾಷ್ಟ್ರೀಯ ಮಂಡಳಿ ಮತ್ತು ರಾಜ್ಯದ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಪ್ರಕಟಿಸಿದ ಕೈಗಾರಿಕೆಗಳ ಸಂಪನ್ಮೂಲ ಮತ್ತು ಸ್ಥಾಪನೆಗೆ ಸಂಬಂಧಿಸಿದ ಅಧ್ಯಯನಗಳು. ಒಟ್ಟಿನಲ್ಲಿ ಕೈಗಾರಿಕಾ ಕ್ಷೇತ್ರದ ಬೆಳವಣಿಗೆಯ ದೃಷ್ಟಿಯಿಂದ ಮೂರನೆಯ ಪಂಚವಾರ್ಷಿಕ ಯೋಜನೆಯ ಅವಧಿ ಒಂದು ಸಂಧಿಕಾಲವಾಗಿತ್ತು. ರಾಜ್ಯದಲ್ಲಿ ಕೈಗಾರಿಕಾ ಪ್ರಗತಿಯ ಪ್ರಜ್ಞೆ ಈ ಅವಧಿಯಲ್ಲಿ ಕೈಗಾರಿಕೋದ್ಯಮಿಗಳ ಮನಸ್ಸಿನಲ್ಲಿ ಆಳವಾಗಿ ಬೇರೂರಿತು.

ರಾಷ್ಟ್ರೀಯ ಆರ್ಥಿಕ ಯೋಜನೆಗನ್ವಯವಾಗಿ ಮೂರನೆಯ ಪಂಚವಾರ್ಷಿಕ ಯೋಜನೆ ಮುಗಿದ ಅನಂತರ ಮುಂದಿನ 3 ವರ್ಷಗಳಲ್ಲಿ ಕೇವಲ ವಾರ್ಷಿಕ ಯೋಜನೆಗಳನ್ನು ಮಾತ್ರ ಕೈಗೊಳ್ಳಲಾಯಿತು. 1966-69ರ ಮೂರು ವಾರ್ಷಿಕ ಯೋಜನೆಗಳ ಅವಧಿಯಲ್ಲಿ ಕೈಗಾರಿಕಾ ಕ್ಷೇತ್ರದ ಮೇಲೆ ಮಾಡಿದ ವೆಚ್ಚ ಅನುಕ್ರಮವಾಗಿ 227 ಲಕ್ಷ, 276 ಲಕ್ಷ ಮತ್ತು 346 ಲಕ್ಷ ರೂ.ಗಳಾಗಿದ್ದವು. ಈ ವರ್ಷಗಳಲ್ಲಿ ಮೂರನೆಯ ಯೋಜನೆಯ ಕೈಗಾರಿಕಾ ಉತ್ಪನ್ನ ವಿಸ್ತರಣೆ ಮತ್ತು ಹೊಸ ಕೈಗಾರಿಕೆಗಳ ಸ್ಥಾಪನೆಯ ನೀತಿಯನ್ನೇ ಮುಂದುವರಿಸಲಾಯಿತು. 1966-67ರಲ್ಲಿ ಮೈಸೂರು ಕೈಗಾರಿಕಾ ಪ್ರದೇಶಗಳ ಅಭಿವೃದ್ಧಿ ಮಂಡಳಿಯನ್ನು ಸ್ಥಾಪಿಸಲಾಯಿತು. ಇದರ ಮುಖ್ಯ ಉದ್ದೇಶ ರಾಜ್ಯದ ನಾನಾ ಭಾಗಗಳಲ್ಲಿ ಕೈಗಾರಿಕೆಗಳಿಗೆ ಯೋಗ್ಯವಾದ ಸ್ಥಳಗಳನ್ನು ಸ್ವಾಧೀನಪಡಿಸಿಕೊಂಡು ಉದ್ಯಮ ಸಾಹಸಿಗಳಿಗೆ ಹಂಚುವುದಾಗಿತ್ತು. 1967-68ರಲ್ಲಿ ಸರ್ಕಾರ ಕೆಲವು ಮಹತ್ವದ ವರದಿಗಳನ್ನು ಪ್ರಕಟಿಸಿತು. ಅವುಗಳೆಂದರೆ ಐದನೆಯ ಉಕ್ಕು ಕಾರ್ಖಾನೆ ಸ್ಥಾಪಿಸಲು ಹೊಸಪೇಟೆಯ ಅರ್ಹತೆ, ಮೈಸೂರು ರಾಜ್ಯದಲ್ಲಿ ದೊಡ್ಡ ಗಾತ್ರದ ಸಾರಜನಕ ಗೊಬ್ಬರ ಯೋಜನೆಗೆ ಅವಕಾಶ ಮತ್ತು ಹೊಳೆನರಸೀಪುರದ ಸಮೀಪ ಸಿಮೆಂಟು ಆಸ್ಬೆಸ್ಟಾಸ್ ಉತ್ಪಾದನೆಯ ಘಟಕವೊಂದನ್ನು ಸ್ಥಾಪಿಸುವುದು. ಆ ವರ್ಷ ರಾಜ್ಯದಲ್ಲಿ ಮೊದಲ ಬಾರಿಗೆ 83 ಟನ್ ತೆಂಗಿನ ನಾರು ರಫ್ತು ಮಾಡಿದ್ದು ಒಂದು ವಿಶೇಷ. ಇಷ್ಟೇ ಅಲ್ಲದೆ ರೇಷ್ಮೆ ತಳಿ ಅಭಿವೃದ್ಧಿಯ 31 ಕೇಂದ್ರಗಳನ್ನು ಸ್ಥಾಪಿಸಲಾಯಿತು. 1968-69ರಲ್ಲಿ 660 ವಿದ್ಯುತ್‌ಚಾಲಿತ ಮಗ್ಗಗಳನ್ನು ಅಳವಡಿಸಲಾಯಿತು. ಆ ವರ್ಷ ಸರ್ಕಾರ ಹೊಸ ಉದ್ಯಮಗಳಿಗೆ ಉತ್ತೇಜನವನ್ನು ನೀಡುವ ದೃಷ್ಟಿಯಿಂದ, ಅನೇಕ ರಿಯಾಯಿತಿಗಳನ್ನು ಪ್ರಕಟಿಸಿತು. ಅವುಗಳೆಂದರೆ ವಿದ್ಯುತ್ ತೆರಿಗೆ ರಿಯಾಯಿತಿ, ವ್ಯಾಪಾರ ತೆರಿಗೆ ವಿನಾಯಿತಿ, ಆಕ್ಟ್ರಾಯ್ ತೆರಿಗೆ ವಿನಾಯಿತಿ ಮತ್ತು ಉತ್ಪನ್ನಗಳನ್ನು ಸರ್ಕಾರವೇ ಖರೀದಿ ಮಾಡುವುದು. ಸಹಜವಾಗಿಯೇ ಈ ಯೋಜನೆ ಕೈಗಾರಿಕೋದ್ಯಮಿಗಳಿಗೆ ಹೊಸ ಕೈಗಾರಿಕೆಗಳನ್ನು ಸ್ಥಾಪಿಸಲು ಸಾಕಷ್ಟು ಪ್ರೋತ್ಸಾಹ ನೀಡಿತ್ತು.

ನಾಲ್ಕನೆಯ ಯೋಜನೆಯ ಪ್ರಾರಂಭದ ವರ್ಷ, ಅಂದರೆ 1969ರಲ್ಲಿ ಮೈಸೂರು ಸರ್ಕಾರದ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಒಂದು ಮುಖ್ಯವಾದ ಸಮೀಕ್ಷೆಯನ್ನು ಪ್ರಕಟಿಸಿತು. ಕೈಗಾರಿಕೆಗೆ ಸಂಬಂಧಿಸಿದಂತೆ ಈ ಸಮೀಕ್ಷೆ ಅನೇಕ ವಿಷಯಗಳನ್ನು ಬೆಳಕಿಗೆ ತಂದಿತು. ಈ ಸಮೀಕ್ಷೆಯ ಪ್ರಕಾರ ರಾಜ್ಯದಲ್ಲಿ ಒಟ್ಟು 9657 ಕೈಗಾರಿಕಾ ಘಟಕಗಳಿದ್ದುವು. ಹಿಂದುಸ್ಥಾನ್ ಏರೋನಾಟಿಕ್ಸ್ ಮತ್ತು ರಕ್ಷಣಾ ಕೈಗಾರಿಕೆಗಳನ್ನು ಬಿಟ್ಟು. ಇವುಗಳಲ್ಲಿ ಹೂಡಿದ್ದ ಬಂಡವಾಳ ರೂ.318 ಕೋಟಿ ಉದ್ಯೋಗಸ್ಥರ ಸಂಖ್ಯೆ 2.8 ಲಕ್ಷ. ಕೇವಲ ಬೆಂಗಳೂರು ನಗರದಲ್ಲೇ ರಾಜ್ಯದ ಸೇ.40ರಷ್ಟು ಕೈಗಾರಿಕೆಗಳು ಕೇಂದ್ರೀಕೃತವಾಗಿದ್ದು, ಒಟ್ಟು ಬಂಡವಾಳ ಹೂಡಿಕೆಯಲ್ಲಿ ಸೇ.66.6ರಷ್ಟು ಈ ಕೈಗಾರಿಕೆಗಳಲ್ಲಿ ವಿನಿಯೋಜಿತವಾಗಿತ್ತು. ಈ ಕೈಗಾರಿಕೆಗಳಲ್ಲಿ 167 ಮಾತ್ರ ದೊಡ್ಡ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳ ಗುಂಪಿಗೆ ಸೇರಿದ್ದು, ಉಳಿದವು ಸಣ್ಣ ಪ್ರಮಾಣದ ಕೈಗಾರಿಕೆಗಳ ಗುಂಪಿಗೆ ಸೇರಿದವಾಗಿದ್ದವು.

ನಾಲ್ಕನೆಯ ಯೋಜನೆಯಲ್ಲಿ ಕೈಗಾರಿಕೆಗಳ ಮೇಲೆ ರೂ.982.79 ಲಕ್ಷ ವೆಚ್ಚವಾಗಿರುವ ದಾಖಲೆಯಿದೆ. ಇದರಲ್ಲಿ ರೂ.148.53 ಲಕ್ಷಗಳನ್ನು ಸರ್ಕಾರದ ಕೈಗಾರಿಕೆಗಳ ಮೇಲೂ ರೂ.834.26 ಲಕ್ಷಗಳನ್ನು ರಾಜ್ಯದ ಕೈಗಾರಿಕಾ ಬಂಡವಾಳ ವಿನಿಯೋಜನೆ ಹಾಗೂ ಅಭಿವೃದ್ಧಿ ಮಂಡಳಿಯ ಪಾಲುದಾರಿಕೆಗೂ ವೆಚ್ಚ ಮಾಡಲು ವಿನಿಯೋಜಿಸಲಾಗಿತ್ತು. ನಾಲ್ಕನೆಯ ಯೋಜನೆಯ ಕೈಗಾರಿಕಾ ನೀತಿಯ ಲಕ್ಷಣವೆಂದರೆ ಹೊಸ ಘಟಕಗಳನ್ನು ಆರಂಭಿಸುವ ಬದಲು ಇರುವ ಕೈಗಾರಿಕಾ ಯೋಜನೆಗಳ ವಿಸ್ತರಣೆ ಹಾಗೂ ಆಧುನೀಕರಣಕ್ಕೆ ಕ್ರಮಕೈಗೊಳ್ಳುವುದು. ಇದರ ಜೊತೆಗೆ, ರಾಜ್ಯದ ಕೈಗಾರಿಕಾ ಬಂಡವಾಳ ವಿನಿಯೋಜನೆ ಮತ್ತು ಅಭಿವೃದ್ಧಿ ಮಂಡಳಿ ಹಾಗೂ ರಾಜ್ಯ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗಳ ಮೂಲಕ ಹೊಸ ಉದ್ಯಮಗಳಿಗೆ ನಾನಾ ಸೌಲಭ್ಯಗಳು ಹಾಗೂ ರಿಯಾಯಿತಿಯನ್ನು ದೊರಕಿಸಿಕೊಡುವುದು. ಮೊದಲ ಮೂರು ಯೋಜನೆಗಳಂತೆಯೇ ಮಧ್ಯಮ ಹಾಗೂ ಸಣ್ಣ ಕೈಗಾರಿಕೆಗಳನ್ನು ಪ್ರೋತ್ಸಾಹಿಸುವ ಕಾರ್ಯವನ್ನು ನಾಲ್ಕನೆಯ ಯೋಜನೆಯಲ್ಲೂ ಮನಗಾಣಲಾಯಿತು. ಕೈಗಾರಿಕೆಗಳ ಪ್ರಗತಿಯ ದೃಷ್ಟಿಯಿಂದ ತೀರಾ ಹಿಂದುಳಿದಿರುವ ಜಿಲ್ಲೆಗಳನ್ನು ಆಯ್ದು ಅವುಗಳಲ್ಲಿ ಕೈಗಾರಿಕೆಗಳು ಬೆಳೆಯುವಂತೆ ನೋಡಿಕೊಳ್ಳುವ ನಿರ್ಧಾರ ನಾಲ್ಕನೆಯ ಯೋಜನೆಯ ಮತ್ತೊಂದು ಮಹತ್ವದ ಅಂಶವಾಗಿತ್ತು.

ಕರ್ನಾಟಕ ರಾಜ್ಯ ಭಾರತದ ಪಂಚವಾರ್ಷಿಕ ಯೋಜನೆಯ ಚೌಕಟ್ಟಿಗನುಗುಣವಾಗಿ 4 ಪಂಚವಾರ್ಷಿಕ ಯೋಜನೆಗಳಲ್ಲಿ ಪಡೆದಿರುವ ಪ್ರಗತಿಯನ್ನು ಸಮಗ್ರವಾಗಿ ಸಮೀಕ್ಷಿಸಿದಾಗ, ಅನೇಕ ಕೈಗಾರಿಕೆಗಳಲ್ಲಿ ಉತ್ಪಾದನೆಯ ದೃಷ್ಟಿಯಿಂದ ತೀವ್ರಪ್ರಗತಿ ನಡೆದಿರುವುದು ಗೋಚರವಾಗುತ್ತದೆ.

**ಐದನೆಯ ಪಂಚವಾರ್ಷಿಕ ಯೋಜನೆಯಲ್ಲಿ ಕೈಗಾರಿಕೆ :** 1974-79ರ ಐದನೆಯ ಪಂಚವಾರ್ಷಿಕ ಯೋಜನೆಯಲ್ಲಿ ಸಹ ಕೈಗಾರಿಕಾ ಕ್ಷೇತ್ರಕ್ಕೆ ಮಹತ್ವದ ಸ್ಥಾನವನ್ನು ನೀಡಲಾಯಿತು. ಈ ಯೋಜನೆಯಲ್ಲಿ ಕೈಗಾರಿಕೆಗಳ ಮೇಲೆ ರೂ.54 ಕೋಟಿಗಳನ್ನು ಗಣಿ ಉದ್ಯಮವನ್ನೂ ಒಳಗೊಂಡಂತೆ ವೆಚ್ಚಮಾಡುವ ನಿರೀಕ್ಷೆಯಿತ್ತು. ಈ ವೆಚ್ಚ ಒಟ್ಟು ಯೋಜನಾವೆಚ್ಚದ ಸೇ.4ರಷ್ಟಾಗುತ್ತದೆ. ಇದರಲ್ಲಿ ರೂ.30 ಕೋಟಿಗಳನ್ನು ದೊಡ್ಡ ಹಾಗೂ ಮಧ್ಯಮ ಗಾತ್ರದ ಕೈಗಾರಿಕೆಗಳ ಮೇಲೂ ರೂ.21.5 ಕೋಟಿಗಳನ್ನು ಸಣ್ಣ ಹಾಗೂ ಗ್ರಾಮೀಣ ಕೈಗಾರಿಕೆಗಳ ಮೇಲೂ ವೆಚ್ಚಮಾಡಲು ಉದ್ದೇಶಿಸಲಾಯಿತು.

ಕೈಗಾರಿಕಾ ನೀತಿಗೆ ಸಂಬಂಧಿಸಿದಂತೆ 5ನೆಯ ಯೋಜನೆಯಲ್ಲಿ ಹೊಸ ಕೈಗಾರಿಕೆಗಳನ್ನು ಸ್ಥಾಪಿಸುವುದು, ಪ್ರಸ್ತುತದಲ್ಲಿರುವ ಕೈಗಾರಿಕೆಗಳ ಉತ್ಪಾದನ ಸಾಮರ್ಥ್ಯ ಸಂಪೂರ್ಣವಾಗಿ ಬಳಕೆಯಾಗುವಂತೆ ನೋಡಿಕೊಳ್ಳುವುದು ಮುಖ್ಯ ಉದ್ದೇಶಗಳಾಗಿದ್ದುವು, ಕರ್ನಾಟಕದಲ್ಲಿ ಲಭ್ಯವಿರುವ ಕಬ್ಬಿಣದ ಅದುರನ್ನು ಬಳಸಿಕೊಳ್ಳಲು ಈ ರಾಜ್ಯದಲ್ಲಿ ಹೊಸ ಉಕ್ಕು ಕಾರ್ಖಾನೆಯನ್ನು ಸ್ಥಾಪಿಸುವ ಅಗತ್ಯವನ್ನು ಮನಗಾಣಲಾಯಿತು. ವಾಸ್ತವವಾಗಿ ಭಾರತ ಸರ್ಕಾರ ಹೊಸಪೇಟೆಯ ಬಳಿ ಹೊಸ ಉಕ್ಕು ಕೈಗಾರಿಕೆಯ ನಿರ್ಮಾಣವನ್ನು ಕೈಗೊಂಡಿತ್ತು. ಈ ಕಾರ್ಖಾನೆಗೆ ರೂ.800 ಕೋಟಿ ವೆಚ್ಚವನ್ನು ನಿರೀಕ್ಷಿಸಲಾಗಿತ್ತು. ಇದು ಸಂಪೂರ್ಣಗೊಂಡಾಗ ಸುಮಾರು 6000 ಜನರಿಗೆ ಉದ್ಯೋಗವನ್ನು ದೊರಕಿಸಿಕೊಡುವ ನಿರೀಕ್ಷೆ ಇತ್ತು. ಕುದುರೆಮುಖದಲ್ಲಿ ಲಭ್ಯವಿರುವ ಕಬ್ಬಿಣದ ಅದುರನ್ನು ಗಮನದಲ್ಲಿಟ್ಟುಕೊಂಡರೆ ರಾಜ್ಯದಲ್ಲಿ ಇನ್ನೂ ಒಂದು ಉಕ್ಕು ಕಾರ್ಖಾನೆಯ ಸ್ಥಾಪನೆಗೆ ಅವಕಾಶವಿದೆ ಎಂಬುದನ್ನು 5ನೆಯ ಯೋಜನೆಯಲ್ಲಿ ಮನಗಾಣಲಾಗಿತ್ತು. ಕೃಷಿಗೆ ಪೂರಕವಾಗುವ ಕೈಗಾರಿಕೆಗಳಿಗೆ ಯೋಜನೆಯಲ್ಲಿ ಮಹತ್ವದ ಸ್ಥಾನವನ್ನು ನೀಡಲಾಯಿತು. ರಾಜ್ಯದಲ್ಲಿ ಇನ್ನೂ 25 ಹೊಸ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಿ ಸಕ್ಕರೆಯ ಉತ್ಪಾದನೆಯನ್ನು ವೃದ್ಧಿಸಲು ಅವಕಾಶವನ್ನು ಕಲ್ಪಿಸಿಕೊಡಬೇಕೆಂದು ಯೋಜಿಸಲಾಗಿತ್ತು. ಹೆಚ್ಚಾಗಿ ಮಧ್ಯಮ ಗಾತ್ರದ ಕೈಗಾರಿಕೆಗಳು ಸಹಕಾರ ಕ್ಷೇತ್ರದಲ್ಲಿ ಅಥವಾ ಸಂಯುಕ್ತ ಮಾಲೀಕತ್ವದ ರೀತಿಯಲ್ಲಿ ಸ್ಥಾಪನೆಯಾಗಬೇಕೆಂಬುದು ಸರ್ಕಾರದ ಉದ್ದೇಶವಾಗಿತ್ತು. ಮೈಸೂರು ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಯ ಉತ್ಪಾದನೆ 1,16,000 ಟನ್‌ಗಳಿಂದ ಯೋಜನೆಯ ಅಂತ್ಯದ ವೇಳೆಗೆ 2,84,000 ಟನ್‌ಗಳಿಗೆ ಏರಬೇಕೆಂದು ಆಶಿಸಲಾಗಿತ್ತು.

ಐದನೆಯ ಯೋಜನೆಯಲ್ಲಿ ಕೈಗಾರಿಕಾ ಎಸ್ಟೇಟ್‌ಗಳಿಗೆ ಸಂಬಂಧಿಸಿದಂತೆ ಒಂದು ಬೃಹತ್ ಕಾರ್ಯಕ್ರಮವನ್ನು ರೂಪಿಸಲಾಯಿತು.

ವಿದ್ಯಾವಂತ ನಿರುದ್ಯೋಗಿಗಳ ಸಮಸ್ಯೆಯನ್ನು ಬಗೆಹರಿಸುವ ದೃಷ್ಟಿಯಿಂದ ಅಗತ್ಯವಿರುವ ಕಡೆಗಳಲ್ಲಿ ವರ್ಷವೊಂದಕ್ಕೆ 24ರಿಂದ 32 ಶೆಡ್ಡುಗಳ ನಿರ್ಮಾಣ ಮಾಡಬೇಕೆಂದು ತೀರ್ಮಾನಿಸಲಾಯಿತು. ಈ ಶೆಡ್ಡುಗಳಲ್ಲಿ ಕೈಗಾರಿಕಾ ಯಂತ್ರೋಪಕರಣಗಳನ್ನು ಕಂತುಪಾವತಿಯ ಸೌಲಭ್ಯದ ಮೇಲೆ ಒದಗಿಸಲು ನಿರ್ಧರಿಸಲಾಯಿತು.

ಒಟ್ಟಿನಲ್ಲಿ 5ನೆಯ ಪಂಚವಾರ್ಷಿಕ ಯೋಜನೆಯಲ್ಲಿ ಕೈಗಾರಿಕಾ ಪ್ರಗತಿಯ ದೃಷ್ಟಿಯಿಂದ ಸರ್ಕಾರ ಬಹಳ ಆಶಾದಾಯಕವಾದ ಕಾರ್ಯಕ್ರಮಗಳನ್ನು ಹಾಕಿಕೊಂಡಿತು.

**ಕೈಗಾರಿಕಾ ನೀತಿ ಮತ್ತು ಪ್ರೋತ್ಸಾಹ :** ಕರ್ನಾಟಕ ರಾಜ್ಯದ ಕೈಗಾರಿಕಾ ನೀತಿ 3 ಮುಖ್ಯ ಉದ್ದೇಶಗಳನ್ನು ಹೊಂದಿದೆ. ಅವುಗಳೆಂದರೆ ರಾಜ್ಯದಲ್ಲಿ ಕೈಗಾರಿಕೆಗೆ ಬಂಡವಾಳ ವಿನಿಯೋಜನೆಯನ್ನು ಉತ್ತೇಜಿಸುವುದು. ಅದರ ಮೂಲಕ ಉದ್ಯೋಗಾವಕಾಶಗಳನ್ನು ಸೃಷ್ಟಿಸುವುದು ಮತ್ತು ರಾಜ್ಯದ ಬೊಕ್ಕಸಕ್ಕೆ ಕೈಗಾರಿಕಾ ಕ್ಷೇತ್ರದಿಂದ ಆದಾಯ ಹೆಚ್ಚಾಗಿ ಬರುವಂತೆ ಮಾಡುವುದು. ಈ ಉದ್ದೇಶಗಳನ್ನು ಪೂರೈಕೆ ಮಾಡುವಾಗ ಅನೇಕ ಮುಖ್ಯ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಲಾಗುತ್ತದೆ. ದೊಡ್ಡ ಗಾತ್ರದ ಕೈಗಾರಿಕೆಗಳನ್ನು ಸರ್ಕಾರದ ವತಿಯಿಂದಲೇ ಪ್ರಾರಂಭಿಸುವುದು ಇತ್ತೀಚಿನ ವರೆಗಿನ ಗುರಿಯಾಗಿತ್ತು. ಸರ್ಕಾರದ ಬಂಡವಾಳವನ್ನು ನಿರೀಕ್ಷಿಸುವವರಿಗೆ ಅದನ್ನು ದೊರಕಿಸಿಕೊಡುವುದು ಮತ್ತು ಕೈಗಾರಿಕೆಯ ದೃಷ್ಟಿಯಿಂದ ಹಿಂದುಳಿದಿರುವ ಪ್ರದೇಶಗಳನ್ನು ಆಯ್ದು ಅವುಗಳಲ್ಲಿ ಕೈಗಾರಿಕೆಗಳು ಅಭಿವೃದ್ಧಿಯಾಗುವಂತೆ ಮಾಡುವುದು ಇವೂ ಮುಖ್ಯವಾದವು.

ರಾಜ್ಯದಲ್ಲಿ ಕೈಗಾರಿಕಾ ಬಂಡವಾಳಕ್ಕೆ ಕೊರತೆಯಿರುವುದು, ಉದ್ಯಮ ಸಾಹಸತೆ ಅಲ್ಪಪ್ರಮಾಣದಲ್ಲಿರುವುದು ತಿಳಿದ ವಿಷಯವಾಗಿದೆ. ಈ ಸಮಸ್ಯೆಯನ್ನು ಬಗೆಹರಿಸುವ ದೃಷ್ಟಿಯಿಂದ ರಾಜ್ಯದ ಹೊರಭಾಗಗಳಿಂದ ಇವೆರಡನ್ನೂ ಸ್ವೀಕರಿಸಲು ಕೈಗಾರಿಕಾನೀತಿ ಅವಕಾಶ ಮಾಡಿಕೊಟ್ಟಿದೆ. ಪರರಾಜ್ಯಗಳಿಂದ ಮತ್ತು ಹೊರದೇಶಗಳಿಂದ ದೊರೆಯುವ ಬಂಡವಾಳ ಮತ್ತು ಉದ್ಯಮ ಸಾಹಸತೆಗಳನ್ನು ಬೆಸೆದು ರಾಜ್ಯದಲ್ಲಿ ಕೈಗಾರಿಕಾ ಕ್ರಾಂತಿಯುಂಟಾಗುವಂತೆ ಮಾಡುವ ಧ್ಯೇಯವನ್ನು ಕೈಗಾರಿಕಾನೀತಿ ಹೊಂದಿದೆ. ಈ ಕಾರ್ಯಕ್ರಮ ಯಶಸ್ವಿಯಾಗುವಂತೆ ಮಾಡಲು ಸರ್ಕಾರ ಅನೇಕ ಆಕರ್ಷಣೆಗಳನ್ನು ಉದ್ಯಮಸಾಹಸಿಗಳಿಗೆ ನೀಡಲು ಸಿದ್ಧವಾಗಿದೆ. ಹೀಗೆ ಕೈಗಾರಿಕೆಗಳು ಅಸ್ತಿತ್ವಕ್ಕೆ ಬರುವಾಗ ಆರ್ಥಿಕ ಕೇಂದ್ರೀಕರಣವನ್ನು ತಪ್ಪಿಸುವ ಮತ್ತು ಅವ್ಯವಸ್ಥಿತವಾಗಿ ಕೈಗಾರಿಕೆಗಳು ಬೆಳೆಯದ ಹಾಗೆ ನೋಡಿಕೊಳ್ಳುವ ಕಡೆ ತೀವ್ರ ಲಕ್ಷ್ಯವನ್ನು ನೀಡಲಾಗುತ್ತದೆ.

ಸಣ್ಣ ಕೈಗಾರಿಕೆಗಳಲ್ಲದೆ ಕೈಕಸಬು, ಕುಶಲವೃತ್ತಿಗಳನ್ನು ಪೋಷಿಸುವುದು ಕರ್ನಾಟಕ ರಾಜ್ಯದ ಕೈಗಾರಿಕಾನೀತಿಯ ಮುಖ್ಯ ಧ್ಯೇಯವಾಗಿದೆ. ಈ ದೃಷ್ಟಿಯಿಂದಲೇ ಕೈಕಸಬು, ಖಾದಿ ಉದ್ಯಮ, ಹುರಿಹಗ್ಗ, ಚರ್ಮ ಮುಂತಾದ ಕೈಗಾರಿಕೆಗಳನ್ನು ತೀವ್ರವಾಗಿ ಪೋಷಿಸಲಾಗುತ್ತದೆ. ಈ ಕಾರ್ಯವನ್ನು ಈ ಕೈಗಾರಿಕೆಗಳಿಗೆ ಸಂಬಂಧಿಸಿದ ಹಾಗೆ ಸಲಹಾಬೋರ್ಡ್‌ಗಳ ರಚನೆ ಹಾಗೂ ಅಭಿವೃದ್ಧಿ ಕಾರ್ಪೋರೇಷನ್‌ಗಳ ರಚನೆಯ ಮೂಲಕ ಕೈಗೊಳ್ಳಲಾಗುತ್ತಿದೆ.

ಕೇವಲ ಕೆಲವು ಜಿಲ್ಲೆಗಳಲ್ಲಿ ಮಾತ್ರ ಕೈಗಾರಿಕೆಗಳು ಕೇಂದ್ರೀಕೃತವಾಗಿರುವ ಅಂಶವನ್ನು ಕೈಗಾರಿಕಾನೀತಿ ಮನಗಂಡಿದೆ. ಆದ್ದರಿಂದ ಮುಂದೆ ಕೈಗಾರಿಕೆಗಳು ಅಸ್ತಿತ್ವಕ್ಕೆ ಬರುವಾಗ ಕೈಗಾರಿಕೆಯ ಬೆಳವಣಿಗೆಯ ದೃಷ್ಟಿಯಿಂದ ಹಿಂದುಳಿದಿರುವ ಜಿಲ್ಲೆಗಳಲ್ಲಿ ಇವು ಬೆಳೆಯುವಂತೆ ನೋಡಿಕೊಳ್ಳಲಾಗುತ್ತದೆ. ಇದಕ್ಕೆ ಅಗತ್ಯವಾದ ಅನುಕೂಲಗಳನ್ನು ಒದಗಿಸಿಕೊಡುವ ಎಲ್ಲ ಜವಾಬ್ದಾರಿಯನ್ನೂ ಸರ್ಕಾರ ವಹಿಸುತ್ತದೆ.

1966ರಲ್ಲಿ ಮೈಸೂರು ಕೈಗಾರಿಕಾ ಪ್ರದೇಶ ಅಭಿವೃದ್ಧಿ ಬೋರ್ಡನ್ನು ರಚಿಸಲಾಯಿತು. ಕೈಗಾರಿಕೆಗಳಿಗೆ ಪ್ರಗತಿಯನ್ನು ಸಾಧಿಸಲು ಅವಕಾಶವಿರುವ ಪ್ರದೇಶಗಳಲ್ಲಿ ಅವು ಅಸ್ತಿತ್ವಕ್ಕೆ ಬರುವಂತೆ ನೆರವು ನೀಡುವುದು ಈ ಸಂಸ್ಥೆಯ ಮುಖ್ಯ ಉದ್ದೇಶ. ಸರ್ಕಾರ ಕೈಗಾರಿಕಾಭಿವೃದ್ಧಿ ಪ್ರದೇಶಗಳನ್ನು ಘೋಷಿಸುತ್ತದೆ. ಈ ಪ್ರದೇಶಗಳನ್ನು ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡು ಅನಂತರ ಅದನ್ನು ಅಭಿವೃದ್ಧಿ ಬೋರ್ಡಿಗೆ ವಹಿಸುತ್ತದೆ. ರಸ್ತೆ, ನೀರು, ವಿದ್ಯುತ್ ಮುಂತಾದ ಸೌಲಭ್ಯಗಳನ್ನು ಆ ಪ್ರದೇಶಗಳಿಗೆ ದೊರಕಿಸಿಕೊಟ್ಟು ಕೈಗಾರಿಕೆಗಳು ಆ ಪ್ರದೇಶಕ್ಕೆ ಪ್ರವೇಶಿಸುವಂತೆ ಈ ಬೋರ್ಡ್ ಆಕರ್ಷಿಸುತ್ತದೆ.

ಹೊಸ ಕೈಗಾರಿಕೆಗಳಿಗೆ ಅನೇಕ ವಿಧದಲ್ಲಿ ನೆರವು ದೊರಕಿಸಿಕೊಡುತ್ತಿರುವ ಮತ್ತೊಂದು ಸಂಸ್ಥೆಯೆಂದರೆ ಕರ್ನಾಟಕದ ರಾಜ್ಯ ಕೈಗಾರಿಕಾ ವಿನಿಯೋಗ ಮತ್ತು ಅಭಿವೃದ್ಧಿ ಕಾರ್ಪೋರೇಷನ್. ದೊಡ್ಡ ಪ್ರಮಾಣದ ಕೈಗಾರಿಕೆಗಳಿಗೆ ನೆರವಾಗುವುದು ಈ ಸಂಸ್ಥೆಯ ಮುಖ್ಯ ಉದ್ದೇಶ. ಅನೇಕ ಹೊಸ ಕೈಗಾರಿಕೆಗಳನ್ನು ಅಸ್ತಿತ್ವಕ್ಕೆ ತರುವುದರಲ್ಲಿ ಕಾರ್ಪೋರೇಷನ್ ಸಕ್ರಿಯ ಪಾತ್ರವಹಿಸುತ್ತದೆ. ಕಾರ್ಪೋರೇಷನ್ ನಡೆಸುತ್ತಿರುವ ಮತ್ತೊಂದು ಉಪಯುಕ್ತ ಕಾರ್ಯವೆಂದರೆ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಆರ್ಥಿಕ ಸಮೀಕ್ಷೆಗಳನ್ನು ಕೈಗೊಂಡಿರುವುದು. ಕರ್ನಾಟಕ ರಾಜ್ಯ ಹಣಕಾಸು ಮಂಡಳಿ ಮತ್ತು ರಾಷ್ಟ್ರೀಕೃತ ಬ್ಯಾಂಕುಗಳನ್ನೊಳಗೊಂಡ ಈ ಕಾರ್ಪೋರೇಷನ್ ರಾಜ್ಯದ ಆಯ್ದ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನು ಅಸ್ತಿತ್ವಕ್ಕೆ ತರುವ ಯೋಜನೆಯನ್ನು ಹಾಕಿಕೊಂಡಿದೆ.

ಸಣ್ಣ ಹಾಗೂ ಮಧ್ಯಮಗಾತ್ರದ ಕೈಗಾರಿಕೆಗಳಿಗೆನೆರವನ್ನೊದಗಿ ಸುತ್ತಿರುವ ಅತಿ ಮುಖ್ಯ ಸಂಸ್ಥೆಯೆಂದರೆ ಕರ್ನಾಟಕ ರಾಜ್ಯ ಹಣಕಾಸು ಮಂಡಳಿ. ಇದು ದಕ್ಷವಾಗಿ ಕೆಲಸಮಾಡುತ್ತಿರುವ ಹಣಕಾಸು ಸಂಸ್ಥೆಗಳಲ್ಲೊಂದು. ವಿಶ್ವಬ್ಯಾಂಕಿನಿಂದ ವಿದೇಶೀ ವಿನಿಮಯದ ನೆರವಿಗಾಗಿ ಅನುಮತಿಯನ್ನು ಮಂಡಳಿ ಪಡೆದುಕೊಂಡಿದೆ. ವಿದೇಶೀ ವಿನಿಮಯದ ವಿತರಣೆಯ ಅವಕಾಶವನ್ನು ಮಂಡಳಿ ಪಡೆದುಕೊಂಡಿದೆ. ರಾಷ್ಟ್ರದ ಇತರ ಹಣಕಾಸು ಮಂಡಳಿಗಳೊಡನೆ ಹೋಲಿಸಿದಂತೆ ರಾಷ್ಟ್ರದಲ್ಲೇ ಮೊದಲ ಮೂರು ಮಂಡಳಿಗಳಲ್ಲಿ ಒಂದು ಸ್ಥಾನವನ್ನು ರಾಜ್ಯ ಮಂಡಳಿ ಪಡೆದುಕೊಂಡಿತು.

ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕು ಸಹಕಾರ ಕ್ಷೇತ್ರದ ಕೈಗಾರಿಕೆಗಳಿಗೆ ಹಣವನ್ನೊದಗಿಸುತ್ತಿರುವ ಮುಖ್ಯ ಮೂಲ. ಇದು ಗ್ರಾಮೀಣ ಕೈಗಾರಿಕೆಗಳನ್ನು ಸ್ಥಾಪಿಸಲು ವ್ಯಕ್ತಿಗಳಿಗೆ ಸಹ ಹಣವನ್ನೊದಗಿಸುತ್ತದೆ. ಕೆಲವು ಸೂಕ್ಷ್ಮ ಉಪಕರಣಗಳ ಕೈಗಾರಿಕೆಗಳವರೆಗೆ ಅನೇಕ ವಿಧದ ಕೈಗಾರಿಕೆಗಳಿಗೆ ಈ ಸಂಸ್ಥೆ ಹಣವನ್ನೊದಗಿಸಿದೆ. ಭಾರತೀಯ ರಿಸರ್ವ್ ಬ್ಯಾಂಕಿನಿಂದ ನೇರ ನೆರವನ್ನು ಪಡೆಯುವಂತೆ ಮಾಡಲು ಈ ಸಂಸ್ಥೆಗೆ ಶಿಖರಪ್ರಾಯ ಸ್ಥಾನ ಕೊಡಲಾಗಿದೆ.

1960ರಲ್ಲಿ ಅಸ್ತಿತ್ವಕ್ಕೆ ಬಂದ ಕರ್ನಾಟಕ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ಕಾರ್ಪೋರೇಷನ್ ಮುಖ್ಯವಾಗಿ ರಾಜ್ಯದ ಸಣ್ಣ ಕೈಗಾರಿಕೆಗಳಿಗೆ ಅನೇಕ ರೀತಿಯ ಸೇವಾಕಾರ್ಯಗಳನ್ನು ಮಾಡುವುದರಲ್ಲಿ ಉದ್ಯುಕ್ತವಾಗಿತ್ತು. ಸರ್ಕಾರದ ಪರವಾಗಿ ಕೈಗಾರಿಕಾ ಎಸ್ಟೇಟ್‌ಗಳ ನಿರ್ಮಾಣ, ಉಕ್ಕು ಮತ್ತು ಕಬ್ಬಿಣ ಮುಂತಾದ ಪಡಿತರ ವಸ್ತುಗಳ ಮಾರಾಟ ಇತ್ಯಾದಿಗಳು ಇದರ ಮುಖ್ಯ ಕರ್ತವ್ಯಗಳಾಗಿದ್ದುವು. 1972-73ರ ಅನಂತರ ಈ ಸಂಸ್ಥೆ ಕಾರ್ಯದ ದೃಷ್ಟಿಯಿಂದ ಬಹುಮಟ್ಟಿಗೆ ಪುನರ್‌ರೂಪಿತವಾಯಿತು. ಕೈಗಾರಿಕಾ ಎಸ್ಟೇಟ್‌ಗಳ ನಿರ್ಮಾಣ ಮತ್ತು ಮೇಲ್ವಿಚಾರಣೆ, ಕಚ್ಚಾಪದಾರ್ಥಗಳ ಶೇಖರಣೆ ಮತ್ತು ವಿತರಣೆ, ಸಣ್ಣ ಪ್ರಮಾಣದ ಉದ್ಯಮಗಳಿಗೆ ನೆರವು, ರಫ್ತು ಕೈಗಾರಿಕೆಗಳಿಗೆ ಉತ್ತೇಜನ ಇತ್ಯಾದಿ ಕಾರ್ಯಗಳನ್ನು ಕೈಗೊಳ್ಳತೊಡಗಿತು.

ರಾಜ್ಯ ತನ್ನ ಮಿಶ್ರ ಆರ್ಥಿಕ ವ್ಯವಸ್ಥೆಯ ಧೋರಣೆಗನುಗುಣವಾಗಿ ಪಂಚವಾರ್ಷಿಕ ಯೋಜನೆಗಳಲ್ಲಿ ಸಾರ್ವಜನಿಕ ಕ್ಷೇತ್ರದಲ್ಲಿ ಕೈಗಾರಿಕೆಗಳ ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು ಬಂದಿದೆ. ವಾಸ್ತವವಾಗಿ ವರ್ಷದಿಂದ ವರ್ಷಕ್ಕೆ ಸಾರ್ವಜನಿಕ ಕ್ಷೇತ್ರದ ಕೈಗಾರಿಕೆಗಳ ಮೇಲೆ ಹೂಡಿರುವ ಬಂಡವಾಳ ಮತ್ತು ಅದರ ವ್ಯಾಪ್ತಿ ಹೆಚ್ಚಾಗುತ್ತಾ ಬಂದಿದೆ. ಇಲ್ಲಿ ನಾವು ರಾಜ್ಯದ ಸಾರ್ವಜನಿಕ ಕ್ಷೇತ್ರದ ಪ್ರಮುಖ ಕೈಗಾರಿಕೆಗಳ ಬೆಳವಣಿಗೆಯ ಪ್ರವೃತ್ತಿಯನ್ನು ಸ್ಥೂಲವಾಗಿ ವಿವೇಚಿಸಬಹುದು.

ರಾಜ್ಯದ ಸಾರ್ವಜನಿಕ ಕೈಗಾರಿಕೆಗಳಲ್ಲೆಲ್ಲಾ ಮೈಸೂರು ಕಬ್ಬಿಣ ಮತ್ತು ಉಕ್ಕು ಕೈಗಾರಿಕೆ ಅತ್ಯಂತ ದೊಡ್ಡದು. ಎನ್.ಜಿ.ಇ.ಎಫ್ ಕೈಗಾರಿಕೆ ಸಾರ್ವಜನಿಕ ಕ್ಷೇತ್ರದಲ್ಲಿ ಮತ್ತೊಂದು ಮಹತ್ವವಾದ ಕೈಗಾರಿಕೆಯಾಗಿತ್ತು. 1973-74ರಲ್ಲಿ ರಾಷ್ಟ್ರದಲ್ಲೇ ಪ್ರಥಮ ಬಾರಿಗೆ ತಾಮ್ರದ ಉತ್ಪಾದನೆಯನ್ನು

ನಡೆಸಿದ ಯಶಸ್ಸು ಚಿತ್ರದುರ್ಗ ತಾಮ್ರ ಕಂಪನಿಯದು. ಹಟ್ಟಿ ಚಿನ್ನದ ಗಣಿಯೊಡನೆ ಈ ಕೈಗಾರಿಕೆ ಹಾಸನ ಮತ್ತು ಗುಲ್ಬರ್ಗ ಜಿಲ್ಲೆಗಳ ತಾಮ್ರ ನಿಕ್ಷೇಪಗಳ ಅಭಿವೃದ್ಧಿಯ ಜವಾಬ್ದಾರಿಯನ್ನು ಹೊತ್ತುಕೊಂಡಿತ್ತು. ಸಾರ್ವಜನಿಕ ಕ್ಷೇತ್ರದ ಮೈಸೂರು ಸಕ್ಕರೆ ಕಾರ್ಖಾನೆ ಸಹ ಉತ್ಪಾದನೆಯ ದೃಷ್ಟಿಯಿಂದ ಮುಖ್ಯವಾದುದು.

ಸಾರ್ವಜನಿಕ ಕೈಗಾರಿಕಾ ಕ್ಷೇತ್ರದಲ್ಲಿನ ದುರ್ಬಲ ಕೈಗಾರಿಕೆಗಳಲ್ಲಿ ಒಂದೆಂದರೆ ರೇಡಿಯೋ ಅಂಡ್ ಎಲೆಕ್ಟ್ರಿಕಲ್ ಮ್ಯಾನುಫ್ಯಾಕ್ಚರಿಂಗ್ ಕಂಪನಿ, ರೇಡಿಯೋ ರಿಸೀವರ್‌ಗಳ ಉತ್ಪಾದನೆ ಇದರ ಮುಖ್ಯಕಾರ್ಯ.

ಸರ್ಕಾರದ ಮೇಲ್ವಿಚಾರಣೆಯ ಇನ್ನೊಂದು ಉದ್ದಿಮೆ ಮೈಸೂರ್ ಪೇಪರ್ ಮಿಲ್ಸ್ ಲಿಮಿಟೆಡ್. ಮೈಸೂರು ಮತ್ತು ಶಿವಮೊಗ್ಗದ ಗಂಧದೆಣ್ಣೆ ಕಾರ್ಖಾನೆಗಳೂ ಈಚೆಗೆ ಸಮಸ್ಯೆಗಳನ್ನೆದುರಿಸಬೇಕಾಗಿ ಬಂತು. ಕಚ್ಚಾಸಾಮಗ್ರಿಯ ಅಭಾವದಿಂದ ಅವು ದುಸ್ಥಿತಿಗೆ ಒಳಗಾದವು.

ಸಾರ್ವಜನಿಕ ಕ್ಷೇತ್ರದ ಕೈಗಾರಿಕೆಗಳಲ್ಲಿ ಅತಿಮುಖ್ಯವಾದ ಪಾತ್ರವನ್ನು ವಹಿಸುತ್ತಿರುವ ಮತ್ತೊಂದು ಸಂಸ್ಥೆಯೆಂದರೆ ಮೈಸೂರು ಮಿನರಲ್ಸ್ ಲಿಮಿಟೆಡ್. ಇದು 1966ರಲ್ಲಿ ಅಸ್ತಿತ್ವಕ್ಕೆ ಬಂತು. ರಾಜ್ಯದ ಗಣಿಕೈಗಾರಿಕೆಯ ಉತ್ಪಾದನೆಯ ಸರ್ವ ಜವಾಬ್ದಾರಿಯನ್ನೂ ಈ ಸಂಸ್ಥೆ ಹೊತ್ತುಕೊಂಡಿತು.

ಸಾರ್ವಜನಿಕ ಕ್ಷೇತ್ರದಲ್ಲಿ ಹೆಸರಿಸಬಹುದಾದ ಇನ್ನೂ ಕೆಲವು ಕೈಗಾರಿಕೆಗಳನ್ನು ಕೈಗಾರಿಕೆಗಳೆಂದರೆ ಗೌರ್ನಮೆಂಟ್ ಸೋಪ್ ಫ್ಯಾಕ್ಟರಿ, ಸೆಂಟ್ರಲ್ ಇಂಡಸ್ಟ್ರಿಯಲ್ ವರ್ಕ್‌ಷಾಪ್, ಮೈಸೂರ್ ಇಂಪ್ಲಿಮೆಂಟ್ಸ್ ಫ್ಯಾಕ್ಟರಿ, ಗೌರ್ನಮೆಂಟ್ ಎಲೆಕ್ಟ್ರಿಕ್ ಫ್ಯಾಕ್ಟರಿ ಮತ್ತು ಗೌರ್ನಮೆಂಟ್ ಸ್ಯಾಂಡಲ್ ವುಡ್ ಫ್ಯಾಕ್ಟರಿ.

ಭಾರತದಲ್ಲಿ 1990ರ ದಶಕದ ಆದಿಯಲ್ಲಿ ಆರ್ಥಿಕ ಉದಾರೀಕರಣದ ಹಾದಿ ಅನುಸರಿಸತೊಡಗಿದ್ದರ ಅಂಗವಾಗಿ ಕರ್ನಾಟಕ ರಾಜ್ಯ ಈ ಮಾರ್ಗದಲ್ಲಿ ಕ್ರಮಿಸುತ್ತಿದೆ. ಹಿಂದಿನ ನಾಲ್ಕು ದಶಕಗಳಲ್ಲಿ ಸಾಧಿಸಲಾದ ಪ್ರಗತಿಯ ಎಳೆಗಳನ್ನು ಕೂಡಿಸಿಕೊಂಡು ಕೈಗಾರಿಕೀಕರಣದ ವೇಗವರ್ಧನೆ ಮಾಡಲು ಕ್ರಮಗಳನ್ನು ಕೈಗೊಳ್ಳಲಾಗಿದೆ. ದೇಶದ ಐದು ಪ್ರಮುಖ ಕೈಗಾರಿಕಾ ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ಈಚಿನ ವರ್ಷಗಳಲ್ಲಿ ರಾಜ್ಯ ದೃಢವಾಗಿ ಮುನ್ನಡೆದಿದೆ. ವಿದ್ಯುನ್ಮಾನ, ದೂರಸಂಪರ್ಕ, ಮಾಹಿತಿ ತಂತ್ರಜ್ಞಾನ, ಸಿವಿಲ್ ಎಂಜಿನಿಯರಿಂಗ್, ಮೋಟಾರ್ ವಾಹನ, ಸಿದ್ಧಪಡಿಸಿದ ಉಡುಪು, ಜೈವಿಕ ತಂತ್ರಜ್ಞಾನ, ಆಹಾರ ಸಂಸ್ಕರಣ ಈ ಕ್ಷೇತ್ರಗಳಲ್ಲಿ ಗಮನಾರ್ಹ ಬೆಳವಣಿಗೆಗಳಾಗಿವೆ. ವಿದೇಶಿ ನೇರ ಬಂಡವಾಳವೂ ರಾಜ್ಯಕ್ಕೆ ಹರಿದುಬರುತ್ತಿದೆ.

ರಾಜ್ಯದಲ್ಲಿ ದೃಢವಾದ ಹಾಗೂ ಚೈತನ್ಯಪೂರ್ಣವಾದ ಕೈಗಾರಿಕಾ ಅಸ್ತಿಭಾರ ನಿರ್ಮಾಣವಾಗಿದೆ. ಜ್ಞಾನ ಹಾಗೂ ತಂತ್ರಜ್ಞಾನ ಕ್ಷೇತ್ರದಲ್ಲಿ ರಾಜ್ಯ ಇತರ ಹಲವು ರಾಜ್ಯಗಳಿಗಿಂತ ಮುಂದಾಗಿದೆ. ಮಾಹಿತಿ ತಂತ್ರಜ್ಞಾನ ಮತ್ತು ಇತರ ಸಹಕೈಗಾರಿಕೆಗಳ ಕ್ಷೇತ್ರದಲ್ಲಿ ರಾಜ್ಯ ವಿಶ್ವದ ಮಾರುಕಟ್ಟೆಯಲ್ಲಿ ಒಂದು ಭದ್ರವಾದ ಸ್ಥಾನ ದೊರಕಿಸಿಕೊಂಡಿದೆ.

1993ರಲ್ಲಿ ರಾಜ್ಯ ಸರ್ಕಾರ ಹೊಸ ಕೈಗಾರಿಕಾ ನೀತಿಯನ್ನು ಘೋಷಿಸಿಕೊಂಡಿತು. ಆರ್ಥಿಕ ಉದಾರೀಕರಣದ ಅಡಿಯಲ್ಲಿ ಕೈಗಾರಿಕೆಗಳಿಗೆ ಹಲವಾರು ಉತ್ತೇಜನಗಳನ್ನೂ ರಿಯಾಯಿತಿಗಳನ್ನೂ ನೀಡಲಾಯಿತು. ಕೈಗಾರಿಕಾ ಉದ್ದೇಶಗಳಿಗಾಗಿ ಕೃಷಿ ಜಮೀನನ್ನು ಕೊಳ್ಳಲು ಅವಕಾಶ ದೊರಕಿಸಿಕೊಡಲಾಯಿತು. 1996ರಲ್ಲಿ ಜಾರಿಗೆ ಬಂದ ಕೈಗಾರಿಕಾ ನೀತಿಯ ಒಂದು ಮುಖ್ಯ ಅಂಶವೆಂದರೆ ಮೂಲ ಸೌಲಭ್ಯಗಳಿಗೆ (ಅಧೋರಚನೆ) ನೀಡಿದ ಪ್ರಾಶಸ್ತ್ಯ, ಕೈಗಾರಿಕೆಗಳು ಮತ್ತು ರಾಜ್ಯ ಅಧಿಕರಣಗಳ ಸಹಯೋಗದಲ್ಲಿ ಅಭಿವೃದ್ಧಿ ಸಾಧಿಸುವ ನೀತಿ ಜಾರಿಗೆ ಬಂತು.

ವಿದ್ಯುನ್ಮಾನ, ದೂರಸಂಪರ್ಕ, ತಂತ್ರಾಂಶ ಮತ್ತು ಇಂಥ ಇತರ ಉದ್ಯಮಗಳ ವಲಯಗಳಿಗೆ ಸಂಬಂಧಿಸಿದಂತೆ ಕ್ರೋಡೀಕೃತಗೊಳಿಸುವ ಉದ್ದೇಶದಿಂದ 1997ರಲ್ಲಿ ಘೋಷಿಸಲಾದ ಮಾಹಿತಿ ತಂತ್ರಜ್ಞಾನ ನೀತಿ ಒಂದು ಪ್ರಮುಖ ಹೆಜ್ಜೆ. ಮರುವರ್ಷ ರಾಜ್ಯದಲ್ಲಿ ಒಂದು ಪ್ರತ್ಯೇಕ ಮಾಹಿತಿ ತಂತ್ರಜ್ಞಾನ ಇಲಾಖೆಯನ್ನು ಸ್ಥಾಪಿಸಲಾಯಿತು. ಮಾಹಿತಿ ತಂತ್ರಜ್ಞಾನದ ಅಭಿವೃದ್ಧಿಗಾಗಿ ಕ್ರಿಯಾ ಯೋಜನೆ ರೂಪಿಸಲು ಒಂದು ವಿಶೇಷ ಕಾರ್ಯಪಡೆ ಅಸ್ತಿತ್ವಕ್ಕೆ ಬಂತು. ಸಹಸ್ರಮಾನದ ಮಾಹಿತಿ ತಂತ್ರಜ್ಞಾನ ನೀತಿಯನ್ನು ಕುರಿತಂತೆ ಮಾಹಿತಿ ಎಂಬ ಹೆಸರಿನಲ್ಲಿ ನೀತಿ ಸಂಹಿತೆಯನ್ನು ರೂಪಿಸಲಾಯಿತು. ಅಂತೆಯೇ ಸಹಸ್ರಮಾನ ಜೈವಿಕ ತಂತ್ರಜ್ಞಾನ ನೀತಿ ಸಂಹಿತೆಯೂ ಜಾರಿಗೆ ಬಂದಿದೆ. ಈ ನಿಟ್ಟಿನಲ್ಲಿ ಪ್ರಗತಿ ಸಾಧಿಸಲು ಹಾಗೂ ಕ್ರಾಂತಿಯನ್ನು ಇನ್ನೊಂದು ಮಜಲಿಗೆ ಮುಂದೂಡಲು ಅಗತ್ಯವಾದ ತರಬೇತಿ ಭೂಮಿಕೆ ಸಿದ್ಧವಾಗಿದೆ.

ಕೈಗಾರಿಕಾ ಚಟುವಟಿಕೆಗಳನ್ನು ವಿಕೇಂದ್ರೀಕರಿಸುವುದು ಒಂದು ಮುಖ್ಯ ಕ್ರಮವೆನಿಸಿದೆ. ತರಬೇತಿ ಮತ್ತು ವಿಸ್ತರಣಕ್ಕೆ ಹೆಚ್ಚು ಒತ್ತು ಕೊಡಲಾಗಿದೆ. ತಾಲ್ಲೂಕು ಕೈಗಾರಿಕಾ ಕೇಂದ್ರಗಳು, ಸಣ್ಣ ಉದ್ಯಮಗಳ ಸಹಾಯ ಕೇಂದ್ರಗಳು, ಶಿಕ್ಷಣ ಸಂಸ್ಥೆಗಳಲ್ಲಿ ಗಣಕೀಕರಣ ವ್ಯವಸ್ಥೆ, ಕರಕುಶಲ ಕೈಗಾರಿಕೆಗಳ ಪ್ರವರ್ತನೆ ಹಾಗೂ ಸಂರಕ್ಷಣೆ, ಪುಷ್ಪೋದ್ಯಮ ವನಗಳು, ಪ್ರಾದೇಶಿಕ ವಿಮರ್ಶೆ ಸಂಪರ್ಕ ಸ್ಥಾಪನೆ, ಚರ್ಮೋದ್ಯಮ ವಿನ್ಯಾಸ ಮತ್ತು ಅಭಿವೃದ್ಧಿ ಕೇಂದ್ರ, ಪಿಂಗಾಣಿ ಸಂಸ್ಥೆ, ರಫ್ತು ಮಾಹಿತಿ ವಿನಿಮಯ ಕೇಂದ್ರ ಇವನ್ನು ಸ್ಥಾಪಿಸಲಾಗಿದೆ. ರಾಜ್ಯ ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯದ ಜೊತೆಗೆ ಹಲವಾರು ವೃತ್ತಿಪರ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ಕರ್ನಾಟಕ ರಾಜ್ಯ ಕೈಗಾರಿಕಾ ಬಂಡವಾಳ ಮತ್ತು ಅಭಿವೃದ್ಧಿ ನಿಗಮ, ಕರ್ನಾಟಕ ರಾಜ್ಯ ಹಣಕಾಸು ನಿಗಮ, ಕರ್ನಾಟಕ ಉದ್ಯೋಗ ನಿಗಮ ಮುಂತಾದ ಹಲವು ಸಂಸ್ಥೆಗಳು ವಿವಿಧ ನಿಟ್ಟುಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. ತಂತ್ರಜ್ಞಾನ, ನವೋನ್ಮೇಷ, ನೂತನ ಪದಾರ್ಥೋತ್ಪಾದನೆ, ಹೊಸ ಹೊಸ ಪ್ರಕ್ರಿಯೆಗಳ ಅನುಷ್ಠಾನ, ಆಧುನಿಕ ವ್ಯವಹಾರ ವಿಧಾನಗಳು -ಇವೆಲ್ಲ ಜಗತ್ತಿನ ಬದಲಾದ ಪರಿಸ್ಥಿತಿಗೆ ಅನುಗುಣವಾಗಿ ರೂಪುಗೊಂಡಿವೆ.

ಸುಮಾರು ಒಂದು ದಶಕದಲ್ಲಿ ಆದ ಸುಧಾರಣೆ ಹಾಗೂ ಪ್ರಗತಿಯ ಹಿನ್ನೆಲೆಯಲ್ಲಿ 2001ರಲ್ಲಿ ಹೊಸ ಕೈಗಾರಿಕಾ ನೀತಿಯನ್ನು ಜಾರಿಗೆ ತರಲಾಯಿತು. 2006ರವರೆಗೆ ಜಾರಿಯಲ್ಲಿದೆಯೆಂದು ಯೋಜಿಸಲಾದರೂ ನೀತಿಯಲ್ಲಿ ಸೇ.10-12ರ ವಾರ್ಷಿಕ ಸರಾಸರಿ ದರದಲ್ಲಿ ಕೈಗಾರಿಕೆಗಳ ಬೆಳವಣಿಗೆ ಸಾಧಿಸುವ ಗುರಿ ಹೊಂದಲಾಗಿದೆ. ಇದರ ವಾರ್ಷಿಕ ಅಂದಾಜು ವೆಚ್ಚ ರೂ.20,000 ಕೋಟಿ. ವಾರ್ಷಿಕವಾಗಿ ಕನಿಷ್ಠ 1.50 ಲಕ್ಷ ಉದ್ಯೋಗಗಳನ್ನು ಸೃಷ್ಟಿಸುವುದಾಗಿ ಆಶಿಸಲಾಗಿದೆ. ಈ ಹೊಸ ಕೈಗಾರಿಕೆ ನೀತಿಯಲ್ಲಿ ಇಟ್ಟುಕೊಳ್ಳಲಾಗಿರುವ ಗುರಿಗಳೆಂದರೆ, ರಾಜ್ಯದಲ್ಲಿ ಸಹಜವಾದ ಅನುಕೂಲ ಹೊಂದಿರದ ಹಾಗೂ ಆಯಕಟ್ಟಿನ ಸ್ವರೂಪದವುಗಳಾದ ವಲಯಗಳ ಶೀಘ್ರಬೆಳವಣಿಗೆಗೆ ಉತ್ತೇಜನ, ತಂತ್ರಜ್ಞಾನದ ಏರಿಕೆ, ಉತ್ಪನ್ನಗಳು ಹಾಗೂ ಪ್ರಕ್ರಿಯೆಗಳ ಮೌಲ್ಯವರ್ಧನ, ಕೃಷಿ, ತೋಟಗಾರಿಕೆ ಪಶುಸಂಗೋಪನೆ, ಖನಿಜ, ಮಾನವ ಬಂಡವಾಳಗಳ ಸಾಮರ್ಥ್ಯ ಹಾಗೂ ಸಂಪನ್ಮೂಲಗಳ ಅನುಕೂಲತಮ ಬಳಕೆ, ಹೊಸಮಾರುಕಟ್ಟೆಗಳ ಅನ್ವೇಷಣೆ ಹಾಗೂ ಸಂಪಾದನೆ, ಜ್ಞಾನಾಧಾರಿತ ಕೈಗಾರಿಕೆ ಹಾಗೂ ಸೇವೆಗಳಿಗೆ ಉತ್ತೇಜನ, ಖಾಸಗಿ ವಲಯವನ್ನು ಬೆಳೆವಣಿಗೆಯ ಮುಖ್ಯ ಸಾಧನವಾಗಿ ಬಳಸಿಕೊಳ್ಳುವುದು, ಕೈಗಾರಿಕೆಗಳಿಗೆ ಶ್ರೇಷ್ಠ ಗುಣಮಟ್ಟದ ಅಧೋರಚನೆ (ಮೂಲಸೌಲಭ್ಯ) ಲಭ್ಯವಾಗುವಂತೆ ಏರ್ಪಾಡು ಮತ್ತು ಸಣ್ಣಕೈಗಾರಿಕೆಗಳ ಭವಸಾಮರ್ಥ್ಯದ ಸಂಪೂರ್ಣ ಪ್ರಯೋಜನ.

ಈ ಗುರಿಗಳನ್ನು ಸಾಧಿಸಲು ಕೈಗಾರಿಕಾ ನೀತಿಯ ಅನುಷ್ಠಾನದಲ್ಲಿ ಖಾಸಗಿ ವಲಯದೊಂದಿಗೆ ಸಹಭಾಗಿತ್ವ, ಸ್ಥಳೀಯ ಕೈಗಾರಿಕೆಗಳಲ್ಲಿ ಸ್ಪರ್ಧೆಯ ವಾತಾವರಣ ಮೂಡಿಸುವುದು, ಸ್ಪರ್ಧಾತ್ಮಕ ಕೈಗಾರಿಕಾ ಅಧೋರಚನೆಗೆ ಅಗತ್ಯವಾದ ನೀತಿನಿರೂಪಣೆ, ಪರಸ್ಪರವಾಗಿ ವರ್ತಿಸುವ ಹಾಗೂ ಪರಸ್ಪರ ಪ್ರಯೋಜನಕಾರಿಯಾಗಿ ಕಾರ್ಯನಿರ್ವಹಿಸುವ ಸಂಸ್ಥೆಗಳ ರಚನೆ, ಜಾಗತಿಕ ಮಾರುಕಟ್ಟೆಯಲ್ಲಿ ರಾಜ್ಯಕ್ಕೆ ಅನುಕೂಲವಾಗಿರುವ ಪ್ರವೃತ್ತಿಗಳನ್ನು ಗಮನಿಸಿ ಅವಕ್ಕೆ ಉತ್ತೇಜನ, ಅತಿ ಸಣ್ಣ ಹಾಗೂ ಮಧ್ಯಮ ಗಾತ್ರದ ಕೈಗಾರಿಕೆಗಳ ತಂತ್ರಜ್ಞಾನದ ಉನ್ನತಿಗೆ ಸಹಾಯ ನೀಡಿಕೆ ಮುಂತಾದ ಕ್ರಮಗಳನ್ನು ಅನುಸರಿಸಲಾಗುತ್ತಿದೆ. (ಸಿ.ಕೆ.ಆರ್.)

**ಕೈದಾಳ :** ತುಮಕೂರು ತಾಲ್ಲೂಕಿನ ಒಂದು ಗ್ರಾಮ. ತುಮಕೂರಿನ ದಕ್ಷಿಣಕ್ಕೆ ಸು.5ಕಿಮೀ ದೂರದಲ್ಲಿದೆ.

ಇದು ಹಿಂದೆ ಒಂದು ಪುಟ್ಟ ರಾಜ್ಯದ ಮುಖ್ಯ ನಗರವಾಗಿತ್ತು. ಇದಕ್ಕೆ ಕ್ರೀಡಾಪುರವೆಂಬ ಹೆಸರಿತ್ತು. ಇದು ಶಿಲ್ಪಿ ಜಕಣಾಚಾರಿಯ ಜನ್ಮಸ್ಥಳ ಎನ್ನಲಾಗಿದೆ. ಜಕಣಾಚಾರಿಯ ಮಗ ಡಕಣಾಚಾರಿ ಬೇಲೂರು ಚೆನ್ನಿಗರಾಯ ಮೂರ್ತಿಯಲ್ಲಿ ದೋಷವನ್ನು ಕಂಡು ಅದನ್ನು ತೋರಿಸಿದಾಗ ಜಕಣಾಚಾರಿ ತನ್ನ ಬಲಗೈಯನ್ನು ಕತ್ತರಿಸಿಕೊಂಡ, ಅನಂತರ ತನ್ನ ಹುಟ್ಟೂರಾದ ಕೈದಾಳಕ್ಕೆ ಬಂದು ಅಲ್ಲಿ ಚೆನ್ನಿಗರಾಯನ ದೇವಾಲಯ ನಿರ್ಮಿಸಲು ಜಕಣಾಚಾರಿಗೆ ಪುನಃ ಕೈ ಬಂತು. ಆದ್ದರಿಂದ ಆ ಊರಿಗೆ ಕೈದಾಳವೆಂಬ ಹೆಸರಾಯಿತು ಎಂದು ಐತಿಹ್ಯವಿದೆ.



ಚೆನ್ನಕೇಶವಮೂರ್ತಿ

1150-51ರಲ್ಲಿ ಹೊಯ್ಸಳ 1ನೆಯ ನರಸಿಂಹನ ಸಾಮಂತನಾಗಿದ್ದ ಬಾಚಿ ಅಥವಾ ಗುಳೇಬಾಚಿ ಎಂಬುವನು ಇಲ್ಲಿ ಶಿವ, ವಿಷ್ಣು ಮತ್ತು ಜಿನ ದೇವಾಲಯಗಳನ್ನು ಕಟ್ಟಿಸಿದನೆಂದು ಇಲ್ಲಿನ ಒಂದು ಶಾಸನದಿಂದ ತಿಳಿದುಬರುತ್ತದೆ. ಈಗ ಚೆನ್ನಕೇಶವ ಮತ್ತು ಗಂಗಾಧರೇಶ್ವರ ದೇವಾಲಯಗಳು ಮಾತ್ರ ಉಳಿದಿವೆ.

ಚೆನ್ನಕೇಶವ ದೇವಾಲಯ ದ್ರಾವಿಡ ವಾಸ್ತುಶೈಲಿಯಲ್ಲಿದೆ. ಮೂಲತಃ ಇದು ಹೊಯ್ಸಳ ಕಾಲದ ದೇವಾಲಯವಾಗಿದ್ದರೂ ಅನಂತರದ ಕಾಲಗಳಲ್ಲಿ ಬಹುವಾಗಿ ನವೀಕೃತವಾಗಿರುವಂತೆ ತೋರುತ್ತದೆ. ಈ ದೇವಾಲಯದ ಮಹಾದ್ವಾರದ ಮೇಲಿನ ಗೋಪುರ ವಿಜಯನಗರ ಕಾಲದಲ್ಲಿ ನಿರ್ಮಿತವಾದ್ದು, ಚೆನ್ನಿಗರಾಯನ ಮೂಲವಿಗ್ರಹ ಬಹು ಸುಂದರವಾಗಿದೆ. ವಿಗ್ರಹ $5^{1}/_{2}$' ಎತ್ತರವಿದ್ದು $2^{1}/_{2}$' ಎತ್ತರದ ಪೀಠದ ಮೇಲೆ ಸ್ಥಾಪಿತವಾಗಿದೆ. ವಿಗ್ರಹದ ಪ್ರಭಾವಳಿಯಲ್ಲಿ ದಶಾವತಾರದ ಚಿತ್ರಗಳಿವೆ. ಮಹಾದ್ವಾರದ ಬಲಬದಿಯ ಕಂಬವೊಂದರ ಮೇಲೆ ಪತ್ನೀಸಹಿತ, ಚೆನ್ನಕೇಶವನ ವಿಗ್ರಹವಿದೆ. ಎಡಗಡೆಯ ಕಂಬದ ಮೇಲೆ ಅಂಜಲಿಬದ್ಧನೂ ಉತ್ತರೀಯಧಾರಿಯೂ ಖಡ್ಗಭೂಷಿತನೂ ಆದ ಮೂರ್ತಿಯನ್ನು ಕೆತ್ತಲಾಗಿದೆ. ಇದು ಜಕಣಾಚಾರಿಯ ಮೂರ್ತಿಯೆಂದು ಹೇಳಿಕೆ. ಆದರೆ ಇದು ದೇವಾಲಯವನ್ನು ನಿರ್ಮಿಸಿದ ಬಾಚಿ ಸಾಮಂತನ ಮೂರ್ತಿಯಾಗಿರಬಹುದು.

ಚೆನ್ನಕೇಶವ ಮಂದಿರದ ಪೂರ್ವದಲ್ಲಿರುವ ಗಂಗಾಧರೇಶ್ವರ ದೇವಾಲಯವೂ ದ್ರಾವಿಡ ಶೈಲಿಗೆ ಸೇರಿದ್ದು. ಇದರ ನವರಂಗದಲ್ಲಿ ಹೊಯ್ಸಳ ಶೈಲಿಯಲ್ಲಿ ಕೆತ್ತಲಾದ ಕರಿಕಲ್ಲಿನ ನಯವಾದ ನಾಲ್ಕು ಕಂಬಗಳುಂಟು. ಈ ಕಂಬಗಳ ತಳಭಾಗದ ನಾಲ್ಕು ಪಕ್ಕಗಳಲ್ಲೂ ಶಿವ, ಬ್ರಹ್ಮ, ವಿಷ್ಣು, ಭೈರವ, ಕೃಷ್ಣ, ಗಣಪತಿ, ವೀರಭದ್ರ ಮುಂತಾದ ದೇವತೆಗಳ ಉಬ್ಬುಚಿತ್ರಗಳನ್ನು ಕೆತ್ತಲಾಗಿದೆ. ನವರಂಗದ ಗೋಡೆಗಳ ಹೊರವಲಯ ಆನೆ ಮತ್ತು ಹೂವಿನ ಚಿತ್ರ ಪಟ್ಟಿಕೆಗಳಿಂದ ಅಲಂಕೃತವಾಗಿದೆ. (ಬಿ.ಕೆ.ಜ.)

**ಕೈಫಿಯತ್ತು :** ಪಾರ್ಸಿಭಾಷೆಯ ಈ ಮಾತಿಗೆ ಸಮಾಚಾರ ಎಂಬುದು ಸಾಮಾನ್ಯವಾದ ಅರ್ಥ. ಇಂದೂ ನ್ಯಾಯಸ್ಥಾನಗಳಲ್ಲಿ ಸಾಕ್ಷಿ ನುಡಿಯುವವರ ಕಡೆಯಿಂದ ಪ್ರಮಾಣ ಮಾಡಿಸಿ ಪಡೆಯುವ ಹೇಳಿಕೆಗಳನ್ನು ಕೈಫೀತು ಅನ್ನುತ್ತಾರೆ. ಈ ಮಾತು ಬಿಜಾಪುರದ ಆದಿಲ್‌ಶಾಹೀಗಳ ಕಾಲದಲ್ಲಿ ಕನ್ನಡ ಭಾಷೆಗೆ ಬಂದು ಸೇರಿ ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ಕನ್ನಡ ನಾಡಿನಲ್ಲೆಲ್ಲ ವಿಶೇಷವಾಗಿ ಪ್ರಚುರಗೊಂಡಿತು. ಅಂದಿಗಾಗಲೇ ಈ ಮಾತಿನ ಅರ್ಥ ವಿಶಾಲಗೊಂಡು ಚಾರಿತ್ರಿಕ ನಿರೂಪಣೆಯೆಂಬ ಬಣ್ಣವೂ ಬಂದಿತು.

ಹೈದರ್ ಮತ್ತು ಟಿಪ್ಪು ಕಾಲದಲ್ಲಿ ರಾಜಧಾನಿಯಾದ ಶ್ರೀರಂಗಪಟ್ಟಣದಲ್ಲಿ ಅನೇಕ ಮಂದಿ ಇತಿಹಾಸಪ್ರಿಯರಾದ ಪಾರ್ಸಿ ಲಿಪಿಕಾರರಿದ್ದರು. ಒಂದು ಐತಿಹಾಸಿಕ ಘಟನೆ ಕುರಿತು ಯಾರು ಏನು ಹೇಳಿದರೂ ತತ್‌ಕ್ಷಣ ಅವರು ಅದನ್ನು ಬರೆದಿಡುತ್ತಿದ್ದರು. ಆ ಕಾಲದಲ್ಲಿ ಸುಲ್ತಾನರಿಗೆ ಸೋತ ಅನೇಕ ಹಿರಿಯ, ಕಿರಿಯ ಪಾಳೆಯಗಾರರು ಸಂಸಾರಸಮೇತರಾಗಿ ರಾಜಧಾನಿಯಲ್ಲಿದ್ದರಷ್ಟೆ. ಪಾರ್ಸಿ ಲಿಪಿಕಾರರಿಗೆ ಅವರಿಂದ ನೇರವಾಗಿ ವಿಷಯಗಳನ್ನು ಕೇಳಿ ತಿಳಿದುಕೊಳ್ಳುವ ಆಸಕ್ತಿ, ಬರೆದಿಡಬೇಕೆಂಬ ಉತ್ಸಾಹಗಳಿದ್ದಂತೆ ನಿರ್ಭಾಗ್ಯ ಪಾಳೆಯಗಾರರಿಗೂ ತಮ್ಮ ಮನೆತನದ ಗತವೈಭವವನ್ನು ಕುರಿತು ಹೇಳಿ ಬರೆಯಿಸಲು ಆಶೆ, ಆತುರ ಇತ್ತು. ಹೀಗಾಗಿ ಹೇಳಿ ಬರೆಯಿಸುವವರ ಗುಂಪೊಂದು, ಹೇಳಿದ್ದನ್ನು ಬರೆದಿಡುವವರ ಗುಂಪೊಂದು -ಇವೆರಡೂ ಗುಂಪುಗಳ ಸಹಕಾರ ಫಲವಾಗಿ ಕೈಫಿಯತ್ತುಗಳು ವಿಪುಲವಾಗಿ ಸೃಷ್ಟಿಯಾದುವು. ಸಾಮಾನ್ಯವಾಗಿ ಇವೆಲ್ಲ ಪಾಳೆಯಗಾರರ ಜೀವನಚರಿತ್ರೆಗಳೇ ಆಗಿದ್ದುವು.

ಶ್ರೀರಂಗಪಟ್ಟಣದ ಪತನಾನಂತರ ಪಾರ್ಸಿಭಾಷೆಗೆ ಇದ್ದ ರಾಜಪದ ಕೊಂಚಕಾಲ ಕನ್ನಡಕ್ಕೂ ಮರಾಠಿಗೂ ಲಭ್ಯವಾಯಿತು. ಅನೇಕ ಪಾರ್ಸಿ ಕೈಫಿಯತ್ತುಗಳು ಕನ್ನಡಕ್ಕೂ ಮರಾಠಿಗೂ ಭಾಷಾಂತರಗೊಂಡವು. ಈ ಹಂತದಲ್ಲಿ ಕೈಫಿಯತ್ತು ಕಪಿಯಾತು ಆಯಿತು.

ದಕ್ಷಿಣ ಭಾರತದಲ್ಲಿ ಸಂಚಾರ ಮಾಡಿ, ಇತಿಹಾಸ, ಸಾಹಿತ್ಯ, ಕಲೆ ಮತ್ತು ಸಂಸ್ಕೃತಿಗೆ ಸಂಬಂಧಪಟ್ಟ ಪ್ರಾಚೀನ ವಸ್ತು, ಗ್ರಂಥ ಮುಂತಾದವನ್ನು ಸಂಗ್ರಹ ಮಾಡಿದವರಲ್ಲಿ ಮುಖ್ಯರಾದ ಬುಕ್ಯಾನನ್, ಎಲಿಯಟ್, ಮೆಕೆಂಜಿ, ಸಿ.ಪಿ.ಬ್ರೌನ್, ವಿಲ್ಕ್ಸ ಮೊದಲಾದವರು ತಾವು ಭೇಟಿ ಮಾಡಿದ ಹಳಬರನೇಕರ ಕಡೆಯಿಂದ ಕೈಫಿಯತ್ತುಗಳನ್ನು ಪಡೆದರು. ಇವುಗಳಲ್ಲೆಲ್ಲ ಮೆಕೆಂಜಿ ಸಂಗ್ರಹವೇ ಬಹಳ ದೊಡ್ಡದು; ಪ್ರಖ್ಯಾತವೂ ಅಮೂಲ್ಯವೂ ಆದುದು. ಈ ಸಂಗ್ರಹದ ಬಹುಭಾಗ ಲಂಡನ್ನಿನ ಇಂಡಿಯ ಆಫೀಸ್ ಗ್ರಂಥಾಲಯ ಸೇರಿತು. ಕೊಂಚಭಾಗ ಕಲ್ಕತ್ತೆಯ ಇಂಪೀರಿಯಲ್ ಗ್ರಂಥಾಲಯಕ್ಕೆ ಹೋಯಿತು. ಉಳಿದ ಅಷ್ಟಿಷ್ಟು ಮದರಾಸಿನ ಓರಿಯಂಟಲ್ ಹಸ್ತಪ್ರತಿ ಗ್ರಂಥಾಲಯಕ್ಕೆ ಬಂದು ಬಿತ್ತು.

ಮೈಸೂರು ಸಂಸ್ಥಾನದ ಇತಿಹಾಸ ಬರೆಯಲು ನಿಯುಕ್ತನಾದ ವಿಲ್ಕ್ಸ ಶ್ರೀರಂಗಪಟ್ಟಣಕ್ಕೆ ಬಂದು ಸಂಸ್ಥಾನದ ಚರಿತ್ರೆಗೆ ಸಂಬಂಧಪಟ್ಟ ಸಾಹಿತ್ಯವನ್ನೆಲ್ಲ ದಿವಾನ್ ಪೂರ್ಣಯ್ಯನವರ ಸಹಕಾರದಿಂದ ಪಡೆದುಕೊಂಡ. ಒಡೆಯರ ಮನೆತನದ ಅರಮನೆ ಸರಸ್ವತೀ ಭಂಡಾರವೆಲ್ಲ ಅವನದಾಯಿತು. ಟಿಪ್ಪುವಿನ ಮರಣಾನಂತರ ಅವನ ಅಮೂಲ್ಯವಾದ ಸಮಗ್ರ ಗ್ರಂಥ ಭಂಡಾರ ವಿಲಾಯಿತಿಗೆ ಸಾಗಿತು. ಅಲ್ಲದೆ ಕೈಫಿಯತ್ತುಗಳ ರಚನೆಗಾಗಿಯೇ

ಪೂರ್ಣಯ್ಯನವರು ಸಂಸ್ಥಾನದ ನಾನಾ ಭಾಗಗಳ ಹಿರಿಯರನ್ನು ಆರಿಸಿ ಕರೆಸಿದರು. ಅವರಲ್ಲಿ ಕೆಲವರು ಇತಿಹಾಸಕಾರರೂ ಇದ್ದರು. ಪೂರ್ಣಯ್ಯನವರ ಅನುಜ್ಞೆಯಂತೆ ಅವರೆಲ್ಲ ಇತಿಹಾಸ ರಚನೆಯಲ್ಲಿ ತೊಡಗಿದರು. ಕೆಲವರು ತಾವೇ ಬರೆದರು; ಬರೆಹಗಾರರಲ್ಲದ ಇತರರು ಹೇಳಿ ಬರೆಯಿಸಿದರು. ನೂರಾರು ಕೈಫಿಯತ್ತುಗಳು ಸಿದ್ಧವಾದುವು. ಈ ಗ್ರಂಥ ರಾಶಿಯನ್ನೆಲ್ಲ ಅಂದರೆ ಇತಿಹಾಸದ ಮೂಲ ಸಾಮಗ್ರಿಯನ್ನೆಲ್ಲ ವಿಲ್ಕ್ಸ ತೆಗೆದುಕೊಂಡು ಹೋದ. ಹೀಗಾಗಿ ಮೈಸೂರು ಚರಿತ್ರೆಗೆ ಬೇಕಾದ ಕೈಫಿಯತ್ತುಗಳೆಲ್ಲ ವಿದೇಶೀ ಗ್ರಂಥಭಂಡಾರವನ್ನು ಸೇರಿದುವು. *

**ಕೈಲಾಸ :** ತಾಯಿನಾಡು ಪ್ರಕಾಶನ ಸಂಸ್ಥೆ 1963ರ ಆಗಸ್ಟ್ ತಿಂಗಳಲ್ಲಿ ಆರಂಭಿಸಿದ ಕನ್ನಡ ಮಾಸಪತ್ರಿಕೆ. ಕಿರೀಟ ಅಷ್ಟದಳಾಕಾರದ 148 ಪುಟಗಳ ಈ ಪತ್ರಿಕೆ ಜನಾಭಿರುಚಿಯನ್ನು ಗಮನದಲ್ಲಿಟ್ಟುಕೊಂಡು ಸಾಹಿತ್ಯದ ಎಲ್ಲ ಪ್ರಕಾರಗಳಿಗೂ ಎಡೆಕೊಡುತ್ತಿತ್ತು. ಇದರಲ್ಲಿ ಕಾಣಬರುತ್ತಿದ್ದ ಲೇಖನ ವೈವಿಧ್ಯದಿಂದ ಇದಕ್ಕೆ ಸರಿದೂಗುವಂತಿದ್ದ ವರ್ಣಚಿತ್ರಬಾಹುಳ್ಯದಿಂದ ಪತ್ರಿಕೆ ಬಹು ಬೇಗ ಜನಪ್ರಿಯವಾಯಿತು. ಮೊದಲನೆಯ ಸಂಚಿಕೆಯನ್ನು ಪ್ರಾಯೋಗಿಕ ಸಂಚಿಕೆ ಎಂದು ಕರೆದು ಕನ್ನಡ ನಾಡಿನಲ್ಲೆಲ್ಲ ಉಚಿತವಾಗಿ ಹಂಚಿದ್ದು ಈ ಪತ್ರಿಕೆಯ ವೈಶಿಷ್ಟ್ಯ. ಇಂಥ ಪ್ರಯೋಗವನ್ನು ಬಹುಶಃ ಯಾವ ಪತ್ರಿಕೆಯೂ ಆಗ ಮಾಡಿರಲಿಲ್ಲ. ಕಿರಿಯ ಬರೆಹಗಾರರ ಬೆನ್ನುತಟ್ಟಿ ಹೊಸ ಲೇಖಕರ ಒಂದು ಪೀಳಿಗೆಯನ್ನು ಪತ್ರಿಕೆ ನಿರ್ಮಿಸಿತು. ಬರೆಹಗಾರರಲ್ಲದಿದ್ದರೂ ಜೀವನದ ಹಲವಾರು ಕ್ಷೇತ್ರಗಳಲ್ಲಿ ಕೆಲಸಮಾಡಿ ಅಪೂರ್ವವಾದ, ಸ್ವಾರಸ್ಯಕರವಾದ ಅನುಭವಗಳನ್ನು ಪಡೆದಿರತಕ್ಕವರಿಂದ ವಿಷಯಸಂಗ್ರಹಿಸಿ, ಲೇಖನಗಳನ್ನು ಪ್ರಕಟಿಸುವುದರಲ್ಲಿ ಈ ಪತ್ರಿಕೆ ಹೊಸ ಹಾದಿಯನ್ನೇ ತೆರೆಯಿತೆನ್ನಬೇಕು. ಎನ್.ಎಸ್.ಸೀತಾರಾಮಶಾಸ್ತ್ರಿ, ಎಸ್.ವೆಂಕಟರಾವ್ ಇವರ ಸಂಯುಕ್ತ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ ಈ ಪತ್ರಿಕೆ 1967ರಲ್ಲಿ ನಿಂತುಹೋಯಿತು. *

**ಕೈಲಾಸಂ, ಟಿ.ಪಿ. :** 1884-1946. ಇಪ್ಪತ್ತನೆಯ ಶತಮಾನದ ಮೊದಲ ನಾಲ್ಕು ದಶಕಗಳಲ್ಲಿ ಹೊಸ ನಾಟಕ ಸೃಷ್ಟಿಯಿಂದ ಕನ್ನಡ ನಾಟಕ ಕ್ಷೇತ್ರವನ್ನು ಬೆಳಗಿದ ಜನಪ್ರಿಯ ನಾಟಕಕಾರರು. ಕೈ ಎಂಬ ಸಂಕ್ಷಿಪ್ತನಾಮದಿಂದ ಪ್ರಸಿದ್ಧರಾಗಿದ್ದಾರೆ. ಪ್ರಸಿದ್ಧ ನಾಟಕಕಾರರಲ್ಲದೆ ನುರಿತ ನಟರೂ ನಿರ್ದೇಶಕರೂ ಆದ ಇವರು ತಮ್ಮ ಅನೇಕ ನಾಟಕಗಳನ್ನು ಆಡಿಸಿದರಲ್ಲದೆ ಅವುಗಳಲ್ಲಿ ಪಾತ್ರವಹಿಸಿದ್ದೂ ಉಂಟು.

ಇವರು 1884 ಜುಲೈ 29ರಂದು ಬೆಂಗಳೂರಿನಲ್ಲಿ ಜನಿಸಿದರು. ಇವರ ಹಿರಿಯರಿದ್ದದ್ದು ತಂಜಾವೂರಿನ ಬಳಿಯ ಒಂದು ಗ್ರಾಮದಲ್ಲಿ.



ತಂದೆ ತ್ಯಾಗರಾಜ ಪರಮಶಿವ ಅಯ್ಯರ್ ಅವರು ಬೆಂಗಳೂರಿನಲ್ಲಿ ಮುನ್ಸೀಫರಾಗಿ ಜೀವನ ಪ್ರಾರಂಭಿಸಿ ಶ್ರೇಷ್ಠನ್ಯಾಯಾಧೀಶರ ಪದವಿಗೆ ಏರಿ ನಿವೃತ್ತರಾದರು. ಅವರ ಮೂವರು ಗಂಡು ಮಕ್ಕಳಲ್ಲಿ ಕೈಲಾಸಂ ಹಿರಿಯರು. ಉಳಿದಿಬ್ಬರು ಎಳೆಯ ವಯಸ್ಸಿನಲ್ಲಿಯೆ ತೀರಿಕೊಂಡರು. ಕೈಲಾಸಂ ಅವರ ಬಾಲ್ಯದ ವಿದ್ಯಾಭ್ಯಾಸ ನಡೆದದ್ದು ಬೆಂಗಳೂರು, ಮೈಸೂರು, ಹಾಸನಗಳಲ್ಲಿ. ಇವರು ಮೆಟ್ರಿಕ್ಯುಲೇಷನ್ ಪರೀಕ್ಷೆ ಪಾಸು ಮಾಡಿದ್ದು ಮದರಾಸಿನ ಸರ್.ಪಿ.ಎಸ್. ಶಿವಸ್ವಾಮಿ ಅಯ್ಯರ್ ಅವರ ಹಿಂದು ಹೈಸ್ಕೂಲಿನಲ್ಲಿ. ಕೈಲಾಸಂ ವಿ.ಎಸ್.ಶ್ರೀನಿವಾಸ ಶಾಸ್ತ್ರಿಗಳ ನೆಚ್ಚಿನ ಶಿಷ್ಯರು. ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಓದಿ ಭೂವಿಜ್ಞಾನದಲ್ಲಿ ಪ್ರಥಮ ದರ್ಜೆಯಲ್ಲಿ ಬಿ.ಎ. ಪದವಿ ಪಡೆದ ಅನಂತರ ಎಂ.ಎ. ಪದವಿಗಾಗಿ ಎರಡು ವರ್ಷ ವ್ಯಾಸಂಗ ನಡೆಸಿದರು. ಅನಂತರ ಮೈಸೂರು ಸರ್ಕಾರದ ಮಾಸಿಕ ವಿದ್ಯಾರ್ಥಿವೇತನ ಪಡೆದು ಲಂಡನ್ನಿಗೆ ತೆರಳಿ (1908) ರಾಯಲ್ ಕಾಲೇಜ್ ಆಫ್ ಸೈನ್ಸ್ (ಈಗ ಇಂಪೀರಿಯಲ್ ಕಾಲೇಜು) ಸೇರಿ ಶಾಸ್ತ್ರಾಧ್ಯಯನ ಮಾಡಿ ಏಳು ವಿಷಯಗಳಲ್ಲಿ ಮೊದಲ ದರ್ಜೆಯ ಪ್ರಶಸ್ತಿ ಗಳಿಸಿದರು. ಅನಂತರ ರಾಯಲ್ ಜಿಯಲಾಜಿಕಲ್ ಸೊಸೈಟಿಗೆ ಒಂದು ಪ್ರಬಂಧ ಬರೆದುಕೊಟ್ಟು ಆ ಸಂಸ್ಥೆಯ ಫೆಲೊ ಆದರು. ಹಾಗೆ ಫೆಲೊಷಿಪ್ ಪಡೆದ ಭಾರತೀಯರಲ್ಲಿ ಇವರೇ ಮೊದಲಿಗರು. ಕೈಲಾಸಂ ಅವರು ವಿದ್ಯಾರ್ಜನೆ ಜ್ಞಾನಾರ್ಜನೆಗಳಲ್ಲಿ ಹೇಗೋ ಹಾಗೆ ಕ್ರೀಡಾರಂಗದಲ್ಲಿಯೂ ಅಮಿತವಾದ ಆಸಕ್ತಿಯನ್ನು ಮೆರೆದರು. ಹಾಕಿ, ಫುಟ್‌ಬಾಲ್‌ಗಳಲ್ಲಿ ಅಜೇಯ ಗೋಲ್‌ಕೀಪರ್ ಆಗಿದ್ದರು. ಇವರು ಲಂಡನ್ನಿನಲ್ಲಿದ್ದಾಗ ಪ್ರೊಫೆಸರ್ ಯೂಜೀನ್ ಸ್ಯಾಂಡೋರ ಶಿಷ್ಯರಾಗಿ ವ್ಯಾಯಾಮ ಪಟುವೆನಿಸಿಕೊಂಡು ಶರೀರದ ಸ್ನಾಯುಗಳ ಮೇಲೆ ಅಸಾಮಾನ್ಯ ಹತೋಟಿ ಪಡೆದುಕೊಂಡರು. ಪಾಶ್ಚಾತ್ಯ ಸಂಗೀತವನ್ನು ಕೇಳಿ ಕಲಿತು ಅದರಲ್ಲೂ ಸಾಕಷ್ಟು ಪರಿಶ್ರಮ ಗಳಿಸಿದರು. ಭಾರತೀಯ ಸಂಗೀತಕ್ಕೂ ಅದಕ್ಕೂ ಇರುವ ಸಾಮ್ಯ ವೈಷಮ್ಯಗಳನ್ನು ಗುರುತಿಸಿಕೊಂಡರು. ಅಲ್ಲಿನ ಗಾಯಕರೊಡನೆ ಬೆರೆತು, ಅವರು ಇಂಗ್ಲಿಷಿನಲ್ಲೊ ಫ್ರೆಂಚಿನಲ್ಲೊ ಜರ್ಮನ್ ಭಾಷೆಯಲ್ಲೊ ಯಾವ ಹಾಡನ್ನೇ ಹಾಡಲಿ ಅದಕ್ಕನುಗುಣವಾಗಿ ಕನ್ನಡ ಭಾಷೆಯಲ್ಲಿ ಅದೇ ರಾಗ ತಾಳ ಲಯಕ್ಕೆ ಹೊಂದಿಸಿಕೊಂಡು ಹಾಡಿ ಅವರನ್ನು ಅಚ್ಚರಿಗೊಳಿಸಿದುದುಂಟು. ಇಟಿಸ್ ಎ ಲಾಂಗ್ ವೇ ಟು ಟಿಪ್ಪರೇರೀ.... ಎಂಬ ಹಾಡಿಗೆ ಪ್ರತಿಯಾಗಿ ನಮ್ ತಿಪ್ಪಾರಳ್ಳಿ ಬಲು ದೂರ, ನಡಿಯಾಕ್ ಬಲುದೂರ ಎಂದು ಹಾಡಿ ಕನ್ನಡ ತಿಳಿಯದಿದ್ದ ಪ್ರೇಕ್ಷಕರಿಂದಲೂ ನಾಲ್ಕಾರು ಬಾರಿ ಒನ್ಸ್ ಮೋರ್ ಗಿಟ್ಟಿಸಿದವರಿವರು. ಇವರ ಮಾತೃಭಾಷೆ ತಮಿಳಾದರೂ ಕನ್ನಡದ ಬಗ್ಗೆ ಕೈಲಾಸಂ ಅವರಿಗಿದ್ದ ಅಭಿಮಾನಕ್ಕೆ ಇದೊಂದು ನಿದರ್ಶನ. ಕೈಲಾಸಂ ತಮ್ಮ ಜೀವನವೀಡಿ ತಾವು ಭಾರತೀಯ, ಕನ್ನಡಿಗ ಎಂಬ ಪ್ರಜ್ಞೆಯಿಂದ ಎಂದೂ ದೂರವಾಗಲಿಲ್ಲ.

ಕೈಲಾಸಂ ಅವರ ತಂದೆ ರಾಮಾಯಣ ಅಧ್ಯಯನವನ್ನು ಚೆನ್ನಾಗಿ ಮಾಡಿದ್ದವರು. ದೊಡ್ಡಪ್ಪ ಸರ್.ಟಿ.ಸದಾಶಿವಯ್ಯರ್ (ಅವರೂ ಮುನ್ಸಿಫ್ ಪದವಿಯಿಂದ ಶ್ರೇಷ್ಠ ನ್ಯಾಯಾಧೀಶ ಪದವಿಗೆ ಏರಿದ್ದವರೆ) ಮಹಾಭಾರತದ ಅಧ್ಯಯನ ಮಾಡಿದ್ದವರು. ಆ ಇಬ್ಬರೂ ತಮ್ಮ ಮಕ್ಕಳಿಗೆ ಮಹಾಭಾರತದಲ್ಲಿನ ವೀರ ವ್ಯಕ್ತಿಗಳ ಕತೆಗಳನ್ನು ರೋಚಕವಾಗಿ ಹೇಳುತ್ತಿದ್ದರು. ಕೈಲಾಸಂ ಅವರಿಗೆ ಅದು ಚೆನ್ನಾಗಿ ಹಿಡಿಸಿರಬೇಕು. ಕೈಲಾಸಂ ಆಗಲೇ ಸಂಸ್ಕೃತವನ್ನೂ ಐಚ್ಛಿಕ ಭಾಷೆಯನ್ನಾಗಿ ಕಲಿತು, ತಮ್ಮ ಮಾವ ಅಮೃತಲಿಂಗ ಅಯ್ಯರವರಲ್ಲಿ ಚೆನ್ನಾಗಿ ಅಭ್ಯಾಸ ಮಾಡಿಕೊಂಡು, ಮಹಾಭಾರತವನ್ನು ತಾವಾಗಿಯೇ ಓದಿಕೊಂಡು, ಮುಂದಕ್ಕೆ ಕಾಳಿದಾಸ, ಭವಭೂತಿ, ಭಾಸ ಮೊದಲಾದ ಮಹಾಕವಿಗಳ ಕೃತಿಗಳನ್ನೂ ಅಭ್ಯಾಸ ಮಾಡಿದರು. ಇವರ ಮೆಚ್ಚಿನ ಕವಿ ಭಾಸ. ಕೈಲಾಸಂ ಇಂಗ್ಲಿಷ್ ಭಾಷೆಯಲ್ಲಿ ಬರೆದ ದಿ ಪರ್ಪಸ್, ದಿ ಫುಲ್‌ಫಿಲ್‌ಮೆಂಟ್, ಕರ್ಣ - ಈ ನಾಟಕಗಳಲ್ಲಿ ಇವರ ರಾಮಾಯಣ ಮಹಾಭಾರತಗಳ ಜ್ಞಾನವನ್ನು ಗುರುತಿಸಬಹುದು.

ಲಂಡನ್ನಿನಲ್ಲಿ ಇವರು ಇದ್ದ ಏಳು ವರ್ಷಗಳಲ್ಲಿ ವಿವಿಧ ನಾಟಕ ಮಂದಿರಗಳಲ್ಲಿ ನಡೆಯುತ್ತಿದ್ದ ನಾಟಕಗಳನ್ನು ಅವಲೋಕಿಸಿದರು. ಷೇಕ್ಸ್‌ಪಿಯರ್, ಆಸ್ಕರ್ ವೈಲ್ಡ್, ಮೋಲಿಯರ್, ಇಬ್ಸೆನ್, ಬರ್ನಾರ್ಡ್ ಷಾ, ಗಾಲ್ಸ್‌ವರ್ದಿ ಮುಂತಾದ ಪ್ರತಿಭಾವಂತರ ನಾಟಕಗಳ ಪ್ರದರ್ಶನದಿಂದಾಗಿ ನಾಟಕ ಕ್ಷೇತ್ರದಲ್ಲಿ ಒಂದು ನವೀನ ಯುಗವೇ ಆಗ ಆರಂಭವಾಗಿತ್ತು. ಈ ನಾವೀನ್ಯದ ಬೃಹತ್ ದರ್ಶನ ಪಡೆದ ಕೈಲಾಸಂ ಅಲ್ಲಿನ ಪ್ರದರ್ಶನ ತಂತ್ರಗಳನ್ನೂ ಕರತಲಾಮಲಕ ಮಾಡಿಕೊಂಡರು. ಆಗಿನ ಮಹಾ ನಟನಟಿಯರಾಗಿದ್ದ ಎಲ್ಲೆನ್‌ಟೆರಿ ಜೂನಿಯರ್, ಹೆನ್ರಿ ಅರ್ವಿಂಗ್ ಜೂನಿಯರ್, ಹೆನ್ರಿ ಐನ್ಲಿ, ಅಯಾನ್ ಹೇ, ಸರ್ ಜಾನ್ ಫೋರ್ಬ್ಸ್ ರಾಬರ್ಟ್‌ಸನ್, ಬೀರ್‌ಬ್ಹಾಂ, ಟ್ರೀ ಮುಂತಾದವರನ್ನು ಭೇಟಿಮಾಡಿ ಅವರ ಪಾತ್ರಾಭಿನಯಗಳನ್ನು ಕುರಿತು ಸುದೀರ್ಘ ಚರ್ಚೆ ನಡೆಸಿದರು. ಕ್ರಮೇಣ ಅವರನ್ನೆಲ್ಲ ಅನುಕರಿಸಿ ಆಯಾ ಪಾತ್ರಗಳನ್ನು ಅವರೆದುರಿಗೆ ಮಾಡಿತೋರಿಸಿ ಅವರ ಮೆಚ್ಚುಗೆ ಗಳಿಸಿದರು. ಇವರು ವಿಜ್ಞಾನ ಮತ್ತು ಕ್ರೀಡಾಶಾಸ್ತ್ರಗಳಲ್ಲಿ ಪಾಂಡಿತ್ಯ ಸಂಪಾದಿಸಿದ್ದಲ್ಲದೆ ನಾಟಕಾಭಿನಯ ಶಾಸ್ತ್ರದಲ್ಲೂ ಪಾರಂಗತರಾಗಿ, ಏಳು ವರ್ಷಗಳಲ್ಲಿ ವಿವಿಧ ಮುಖಗಳ ಅಧ್ಯಯನ ಮುಗಿಸಿ 1915ರ ಡಿಸೆಂಬರ್‌ನಲ್ಲಿ ಮೈಸೂರಿಗೆ ಮರಳಿ, ಸರ್ಕಾರದ ಭೂಗರ್ಭ ಶಾಖೆಯಲ್ಲಿ

ಪ್ರೊಬೇಷನರಿ ನೌಕರಿ ಹಿಡಿದರು. ಐದುವರ್ಷ ಕೋಲಾರದ ಚಿನ್ನದ ಗಣಿ, ಹಾಸನ, ಶಿವಮೊಗ್ಗ, ಭದ್ರಾವತಿ, ಲಕ್ಕವಳ್ಳಿ, ತರೀಕೆರೆ, ಎಡೇಹಳ್ಳಿ ಮೊದಲಾದ ಸ್ಥಳಗಳಲ್ಲಿ ಕೆಲಸಮಾಡಿ ವಿವಿಧ ಮಾದರಿಯ ಕಲ್ಲುಗಳನ್ನು ಶೇಖರಿಸಿ, ಪರೀಕ್ಷಿಸಿ ಅವುಗಳಿಗೆಲ್ಲ ಹೆಸರು ಕೊಟ್ಟರು. ಭೂಗರ್ಭ ಶಾಸ್ತ್ರದಲ್ಲಿ ಪೂರ್ಣ ಪಾಂಡಿತ್ಯ ಹಾಗೂ ಸಹಜಾಸಕ್ತಿಗಳಿದ್ದರೂ ಕೈಲಾಸಂ 1920 ಜುಲೈ 1ರಂದು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟರು.



ವಸಂತಸೇನೆಯಲ್ಲಿ ಶಕಾರನ ಪಾತ್ರದಲ್ಲಿ ಕೈಲಾಸಂ

ಕೈಲಾಸಂ ಶಿವಮೊಗ್ಗದಲ್ಲಿ ಕೆಲಸದಲ್ಲಿದ್ದಾಗ (1918), ಆಗ್ಗ ನ್ಯಾಯವಾದಿಯಾಗಿದ್ದ (ಅನಂತರ ಮೈಸೂರು ಹೈಕೋರ್ಟಿನ ನ್ಯಾಯಾಧೀಶರಾದ) ಶಂಕರನಾರಾಯಣರಾಯರ ಒತ್ತಾಯದಿಂದ ಸ್ಕೌಟ್ ತತ್ತ್ವಗಳನ್ನು ಪ್ರತಿಪಾದಿಸಲು ಸಹಾಯವಾಗುವಂತೆ ನಾಟಕವೊಂದನ್ನು ರಚಿಸಬೇಕಾಯಿತು. ಕೈಲಾಸಂ ತುಂಗಾತೀರದಲ್ಲಿ ತಿಂಗಳ ಬೆಳಕಿನಲ್ಲಿ ನಾಟಕವನ್ನು ಬಾಯಲ್ಲಿ ಹೇಳುತ್ತ ಹೋದರು. ಕತೆಗಾರ ಆನಂದರು ಅದನ್ನು ಬರೆದುಕೊಂಡರು. ಕೈಲಾಸಂ ತಾವಾಗಿ ಯಾವತ್ತೂ ಬರೆದುದಿಲ್ಲ. ಇದುವರೆಗೆ ಅಚ್ಚಾಗಿರುವ ಅವರ ನಾಟಕಗಳೆಲ್ಲ ಹೀಗೆಯೇ ರಚಿತವಾಗಿ ಹೊರಬಿದ್ದಿರುವುದು. ಆಗ ಹೊರಬಂದ ನಾಟಕ ಮಕ್ಕಳ ಸ್ಕೂಲ್ ಮನೇಲಲ್ವೇ ಅಥವಾ ಟೊಳ್ಳುಗಟ್ಟಿ ಎಂಬ ಏಕಾಂಕ. ಅದೇ ಸಮಯಕ್ಕೆ ಬೆಂಗಳೂರಿಗೆ ಬಂದ ವಿಶ್ವಕವಿ ರವೀಂದ್ರನಾಥ ಠಾಕೂರರ ಸಮ್ಮುಖದಲ್ಲಿ ಇದರ ಪ್ರದರ್ಶನವಾಗಿ, ರಾತ್ರಿ ಕಳೆದು ಬೆಳಗಾಗುವ ಹೊತ್ತಿಗೆ ಕೈಲಾಸಂ ಕರ್ನಾಟಕ ನಾಟಕ ಪ್ರಹಸನ ಪ್ರಪಿತಾಮಹರಾಗಿದ್ದರು. ಚೊಚ್ಚಲ ನಾಟಕದ ಪದಾರ್ಪಣದಿಂದ ಕನ್ನಡ ರಂಗಭೂಮಿಯಲ್ಲೇ ಕ್ರಾಂತಿ ಎಬ್ಬಿಸಿದ ಮಹಾವ್ಯಕ್ತಿ ಕೈಲಾಸಂ. ಅನಂತರ 28 ವರ್ಷಗಳ ಅವಧಿಯಲ್ಲಿ ಹೋಂ ರೂಲು, ಬಹಿಷ್ಕಾರ, ಗಂಡಸ್ಕತ್ರಿ, ನಮ್ಬ್ರಾಹ್ಮಣ್ಕೆ, ಬಂಡ್ವಾಳ್ವಿಲ್ಲದ್ಬಡಾಯಿ, ನಮ್ ಕ್ಳಬ್ಬು, ಅಮ್ಮಾವ್ರ ಗಂಡ, ಸತ್ತವನ ಸಂತಾಪ, ಅನುಕೂಲಕ್ಕೊಬ್ಬಣ್ಣ, ಸೀಕರ್ಣೆ ಸಾವಿತ್ರಿ, ಶೂರ್ಪನಖಾ ಕುಲವೈಭವ ಅಥವಾ ನಮ್ ಕಂಪ್ನಿ, ತಾಳೀಕಟ್ಟೋಕ್ಕೂಲೀನೇ, ಪೋಲಿಕಿಟ್ಟಿ, ಬಹಿಷ್ಕಾರ, ವೈದ್ಯನ ವ್ಯಾಧಿ, ಸೂಳೆ ಎಂಬ ನಾಟಕಗಳನ್ನು ರಚಿಸಿದರು. ತಮ್ಮ ಕಾಲದ ಮಧ್ಯಮವರ್ಗದ ಬ್ರಾಹ್ಮಣ ಸಮಾಜದ ಸಮಸ್ಯೆಗಳೇ ಇವರ ನಾಟಕಗಳ ವಸ್ತು. ತಾವರೆಕೆರೆ ಎಂಬುದು ಇವರ ಸಣ್ಣಕತೆಗಳ ಸಂಗ್ರಹ. ಇಂಗ್ಲಿಷಿನಲ್ಲಿ ದಿ ಪರ್ಪಸ್ ಏಕಲವ್ಯ, ದಿ ಕರ್ಸ್ ಅಥ'ವಾ ಕರ್ಣ, ದಿ ಬರ್ಡನ್ ಮತ್ತು ದಿ ಫುಲ್‌ಫಿಲ್‌ಮೆಂಟ್ ಎಂಬ ನಾಟಕಗಳನ್ನು ಬರೆದು ಆ ಮೂಲಕ ಭಾರತದ ಪುರಾಣ ಕಥೆಗಳನ್ನು ಕನ್ನಡೇತರರಿಗೆ ಪರಿಚಯಿಸಿದರು. ಲಿಟ್ಲ್ ಲೇಸ್ ಅಂಡ್ ಪ್ಲೇಸ್ ಎಂಬುದು ಇಂಗ್ಲಿಷ್‌ನಲ್ಲಿ ಪ್ರಕಟವಾಗಿರುವ ಕವನ ಸ್ರಂಗಹ. ಇವಲ್ಲದೆ ಇನ್ನೂ ಅಪೂರ್ಣಾವಸ್ಥೆಯಲ್ಲಿದ್ದ ಪ್ರಕಟಗೊಳಿಸಬಹುದಾಗಿದ್ದ ಅನೇಕ ಪೌರಾಣಿಕ ಸಾಮಾಜಿಕ ನಾಟಕಗಳೂ ಇವೆ. ಕೀಚಕ, ಮೊಮ್ಮಗಳ ಮುಯ್ಯಿ, ಹೆಣ್ಣಿನ ಬಾಳು ಕಣ್ಣೀರೇನೆ, ಶಂಬರನ ಶೃಂಗಾರ ಅಥವಾ ಮಟ್ಟುಗಳಿಗೆ ಮಟ್ಟ ಅಥ'ವಾ ವಿವಿಧ ವಿನೋದ್ಹಾವಳಿ ಎಂಬ ಕೆಲವು ನಾಟಕಗಳು ಇವರ ನಿಧನಾನಂತರ ಪ್ರಕಟವಾಗಿವೆ. ದಿ ಪರ್ಪಸ್, ಕರ್ಣ, ಕೀಚಕ, ಅಮ್ಮಾವ್ರ ಗಂಡ, ಹೋಂ ರೂಲು, ಬಂಡ್ವಾಳ್ವಿಲ್ಲದ್ಬಡಾಯಿ ನಾಟಕಗಳನ್ನು ಅನುಕ್ರಮವಾಗಿ ಸಂಸ್ಕೃತ, ಮರಾಠಿ, ಬಂಗಾಲಿ, ತೆಲುಗು, ಹಿಂದಿ ಮತ್ತು ಉತ್ತರ ಕರ್ನಾಟಕದ ದೇಸೀ ಭಾಷೆಗಳಿಗೆ ಪರಿವರ್ತಿಸಲಾಗಿದೆ.

ಲಂಡನ್ನಿನ ರಂಗಮಂದಿರಗಳಲ್ಲಿ ತಾವು ಅಭ್ಯಸಿಸಿದ ನಾಟಕಗಳಿಂದ ಕೈಲಾಸಂ ಅನೇಕಾನೇಕ ಹೊಸ ವಿಷಯಗಳನ್ನು ಗ್ರಹಿಸಿದರು. ಇಬ್ಸೆನ್, ಷಾ, ಗಾಲ್ಸ್‌ವರ್ದಿಯಂಥ' ನಾಟಕಕಾರರ ಕೆಚ್ಚೆದೆ, ಪ್ರಖರ ಬುದ್ಧಿ, ಆಗಿನ ಜನಜೀವನದಲ್ಲಿನ ಅನ್ಯಾಯ, ದುರ್ವ್ಯಾಪಾರ, ದುರ್ನಡತೆಗಳನ್ನು ಕಂಡು ನಾಟಕಕಾರರು ಕನಲಿದುದು, ದೀನದಲಿತರ ಮನಃಕ್ಲೇಶಗಳು - ಅವರ ಮನವನ್ನು ಕದಡಿ, ಕರುಳು ಕರಗಿಸಿ ಮನ ಮರುಗುವಂತೆ ಮಾಡಿದುವು. ನಿಜ ಜೀವನಕ್ಕೆ ದೂರವಾದ ಅನೇಕಾನೇಕ ನಿರರ್ಥ'ಕ ಗೊಡ್ಡು ಸಂಪ್ರದಾಯಗಳನ್ನು ರೂಢಮೂಲವಾಗಿ ಕಿತ್ತೊಗೆಯಬೇಕೆಂಬ ದೃಢಸಂಕಲ್ಪ, ಇಂತಿದ್ದ ಜನಜೀವನವನ್ನು ರಂಗಸ್ಥಳದಲ್ಲಿ ಆ ಜನತೆಯ ಎದುರಿಗೇ ಪ್ರತಿಬಿಂಬಿಸಿ ತನ್ಮೂಲಕವಾದರೂ ಸಮಾಜ ಜೀವನವನ್ನು ಪರಿಷ್ಕರಿಸುವ ಅವರ ಸಾಹಸಪೂರ್ಣ ಪ್ರಯತ್ನಗಳು -ಇವು ಕೈಲಾಸಂ ಅವರ ಮನಸ್ಸಿನ ಮೇಲೆ ತುಂಬ ಪರಿಣಾಮ ಬೀರಿದುವು. ಜೊತೆಗೆ ಈ ಪ್ರಯತ್ನಗಳ ಸಾಧ'ನವಾಗಿ ಅವರೆಲ್ಲ ಜನತೆಯ ದಿನಬಳಕೆಯ ಭಾಷೆಯನ್ನು ಬಳಸಿಕೊಂಡದ್ದೂ ಇವರಿಗೆ ಮೆಚ್ಚುಗೆಯಾಯಿತು. ಅವರ ಸತ್ಯಪ್ರಿಯತೆ, ಕುಶಲಮತಿ, ಸಮಾಜದ ಕೆಲವಾರು ಜನದ ಮೂಲಕವೆ ಹೊಸ ಹೊಸ ಸಂದೇಶಗಳನ್ನು ಜನತೆಗೆ ನೀಡುವ ಕ್ರಮ ಎಲ್ಲಕ್ಕಿಂತ ಹೆಚ್ಚಾಗಿ ಅವರು ಜೀವನದ ನೋವುನಲಿವುಗಳ ಕಟುಸತ್ಯಕ್ಕೆ ಹಾಸ್ಯದ ಹೊದಿಕೆಯನ್ನು ಅಳವಡಿಸಿರುವ ಜಾಣ್ಮೆ -ಇವು ಕೈಲಾಸಂ ಅವರಿಗೆ ತುಂಬ ಪ್ರಿಯವಾದವು. ಚಿಕ್ಕಂದಿನಿಂದಲೂ ತಮ್ಮಲ್ಲಿ ಸುಪ್ತವಾಗಿದ್ದ ಶುದ್ಧಹಾಸ್ಯದ ಪ್ರವೃತ್ತಿಯನ್ನು ಈ ನಾಟಕತಂತ್ರ ಶಿಕ್ಷಣ ಬೆಳಕಿಗೆ ತಂದಿತು.

ಅನುಕರಣದಲ್ಲಿ ಅದ್ವಿತೀಯರೂ ಅಭಿನಯದಲ್ಲಿ ಸಿದ್ಧಹಸ್ತರೂ ಪಾಶ್ಚಾತ್ಯ ಭಾರತೀಯ ಸಂಗೀತಶಾಸ್ತ್ರ ಪಂಡಿತರೂ ಇವೆರಡೂ ಪದ್ಧತಿಯ ಹಾಡುಗಳನ್ನು ನುಡಿಯುವುದರಲ್ಲಿ ಕಟುತರ ಅಭ್ಯಾಸ ನಡೆಸಿ ಜ್ಞಾನವೃದ್ಧಿ ಮಾಡಿಕೊಂಡವರೂ ಆದ ಕೈಲಾಸಂ ತಮ್ಮ ಭಾರತೀಯತೆ, ಪರಂಪರಾಗತವಾಗಿಯೂ ವಂಶಪಾರಂಪರ್ಯದಿಂದಲೂ ಬಂದ ಉಚ್ಚ ಸಂಸ್ಕೃತಿ ಇವನ್ನು ಮರೆಯದೆ ತಮ್ಮ ಕೃತಿರಚನೆಯಿಂದ ಅವಕ್ಕೆ ಕುಂದಣವಿಕ್ಕಿದರು. ಭಾರತೀಯರಿಗೆ ಪುರಾಣಗಳೇ ಉಸಿರು. ಅಂತೆಯೇ ರಾಮಾಯಣ, ಭಾರತ, ಭಾಗವತಾದಿ ಮಹಾಕಾವ್ಯಗಳ ದಿವ್ಯ ವ್ಯಕ್ತಿಗಳ ದರ್ಶನವನ್ನು ಸಾಮಾಜಿಕ ನಾಟಕಗಳ ಸಂಭಾಷಣೆಯ ನೇಯ್ಗೆಯಲ್ಲಿ ಹಾಸುಹೊಕ್ಕಾಗಿ ನಯವಾಗಿ ಹೊಂದಿಸಿ ಸಮಾಜದ ರೋಗರುಜಿನ ದೌರ್ಬಲ್ಯಗಳಿಗೆ ಆಯಾ ಸಮಾಜ ಜೀವಿಗಳಲ್ಲಿ ಅನುಭವಿಕರಾದವರು ತಾವಾಗಿ ಸ್ವಾಭಾವಿಕವಾಗಿ ಲೀಲಾಜಾಲವಾಗಿ ಸಿದ್ಧೌಷಧಗಳನ್ನು ಕಂಡುಕೊಳ್ಳುವಂತೆ ಪ್ರಚೋದಿಸಿದರು. ಅಂತೆಯೇ ಇವರ ಎಲ್ಲ ನಾಟಕಗಳೂ ಸದ್‌ಬುದ್ಧಿ ಮತ್ತು ಸತ್‌ಕ್ರಿಯೆಗಳನ್ನು ಪ್ರಚೋದನಗೊಳಿಸುವಂತಿವೆ.

ಕನ್ನಡದಲ್ಲಿ ಆಡುಭಾಷೆಯನ್ನು ಬಳಸಿ ನಾಟಕ ರಚಿಸಿದವರಲ್ಲಿ ಕೈಲಾಸಂ ಅಗ್ರಗಣ್ಯರು. ಪಾಶ್ಚಾತ್ಯ ನಾಟಕಗಳಲ್ಲಿ ಆಗ ಪ್ರಚಲಿತವಾಗಿದ್ದ ಈ ನೂತನ ವಿಧಾನವನ್ನು ಕನ್ನಡಕ್ಕೆ ತಂದುಕೊಂಡ ಕೀರ್ತಿಯೂ ಇವರದೇ. ಇವರು ಬಳಸಿದ ಆಡುಭಾಷೆಯಾದರೋ ಅಚ್ಚಕನ್ನಡವಲ್ಲ. ಅರ್ಧಮರ್ಧ ಇಂಗ್ಲಿಷ್ ಬೆರೆತ ಕಲಬೆರಕೆ ಭಾಷೆ, ಅದಕ್ಕೆ ಕಾರಣ ವಿದ್ಯಾವಂತರೆಂದು ಆಗ ಮೆರೆಯುತ್ತಿದ್ದ ಮೈಸೂರಿನ ಮಧ್ಯಮವರ್ಗದ ನಾಗರಿಕರು. ಅವರು ತಮ್ಮ

ನಿತ್ಯವ್ಯವಹಾರದಲ್ಲಿ. ಬಳಸುತ್ತಿದ್ದುದ್ದೇ ಈ ಭಾಷೆ. ಒಮ್ಮೊಮ್ಮೆ ಇಲ್ಲಿನ ಬೆರಕೆ ಅತಿರೇಕಕ್ಕೂ ಹೋಗಿ ಅಸಹ್ಯವಾಗುತ್ತಿದ್ದುದಲ್ಲದೆ ಕನ್ನಡಕ್ಕೆ ಇದರಿಂದ ಎಂಥ ಅಪಚಾರವಾಗುತ್ತಿದೆಯೆಂಬ ಕಲ್ಪನೆಯೂ ಅವರಿಗೆ ಇರುತ್ತಿರಲಿಲ್ಲ. ಏನು ಮಿಸ್ಟರ್ ಕೈಲಾಸಂ ನಿಮ್ಮ ಡ್ರಾಮಾಸ್‌ನಲ್ಲೆಲ್ಲ ಹಾಫ್ ಎ ಡಜನ್ ಇಂಗ್ಲಿಷ್ ವರ್ಡ್ಸ್‌ಗೆ ಒಂದು ಕನ್ನಡ ವರ್ಡ್ ಯೂಸ್ ಮಾಡ್ತೀರಲ್ಲ. ಹ್ಯಾಗೆ ಅಂಡರ್‌ಸ್ಟ್ಯಾಂಡ್ ಆಗತ್ತೆ ಆರ್ಡಿನರಿ ಪೀಪಲ್‌ಗೆ ಎಂದು ತುಂಬಿದ ಸಭೆಯಲ್ಲಿ ಒಬ್ಬರು ಕೈಲಾಸಂ ಅವರನ್ನು ಪ್ರಶ್ನಿಸಿದರಂತೆ. ಅದಕ್ಕೆ ಕೈಲಾಸಂ ನೀವು ಕೇಳಿದ ಪ್ರಶ್ನೆ ಹಾಗೇನೇ ಎಂದು ಉತ್ತರಿಸಿದರಂತೆ! ಕೈಲಾಸಂ ತಮ್ಮ ನಾಟಕಗಳಲ್ಲಿ ಉಪಯೋಗಿಸಿರುವ ಭಾಷೆ ಅದನ್ನಾಡುತ್ತಿರುವ ಸಮಾಜದ ಮುಖಕ್ಕೆ ಕನ್ನಡಿ ಹಿಡಿದಂತಿದೆ. ಸ್ವಲ್ಪ ಅತಿ ಎನಿಸುವಂತೆ ಉತ್ಪ್ರೇಕ್ಷಿಸಿ, ವಿಡಂಬಿಸಿ ನಾಟಕಕಾರ ಅದನ್ನು ಪ್ರೇಕ್ಷಕರ ಮನಮುಟ್ಟಿಸುತ್ತಾನೆ. ಈ ಆಡುಭಾಷೆಯ ಉಪಯೋಗವೂ ಸಮಯೋಚಿತ. ಬೇಕೆಂದೇ ಅದನ್ನು ಜಗ್ಗಿಸುವ ಚಟವೂ ಕೈಲಾಸಂಗಿಲ್ಲ. ಅಂತೆಯೇ ಒಂದು ಇಂಗ್ಲಿಷ್ ಪದವನ್ನೂ ಬೆರೆಸದೆ ಶುದ್ಧವಾಗಿ ಅರ್ಥವತ್ತಾಗಿ ಆದರೂ ಸರಳವಾಗಿ ಮಾತನಾಡುವ ಜನರೂ ಸಮಾಜದಲ್ಲಿ ಹೇರಳವಾಗಿದ್ದಾರೆಂಬುದನ್ನೂ ಕೆಲವು ನಾಟಕಗಳಲ್ಲಿ ಕಾಣಬಹುದು. ಹೊಸ ವಿದ್ಯಾಭ್ಯಾಸ ಪದ್ಧತಿಯಿಂದ ಸಂಸ್ಕೃತಿಯನ್ನು ಮರೆತು ಸಭ್ಯತೆಯ ಗೆರೆದಾಟಿದ ಜನತೆ ಸಮಾಜವನ್ನು ಎಂಥ ದುಃಸ್ಥಿತಿಗೆ ತಂದು ನಿಲ್ಲಿಸಿದೆ ಎಂಬುದನ್ನು ಅನೇಕ ನಾಟಕಗಳು ಎತ್ತಿ ತೋರುತ್ತವೆ. ಈ ದುಸ್ಥಿತಿಗಳಿಂದ ಕೂಡಿದ ಸಮಾಜದಲ್ಲೂ ಸಜ್ಜನರೂ ಸುಶಿಕ್ಷಿತರೂ ಆದ ಹಿರಿಯರೂ ಕಿರಿಯರೂ ಇನ್ನೂ ಇದ್ದಾರೆ. ಅವರ ಹಿರಿತನವನ್ನು ಕಂಡುಕೊಂಡು ಅದಕ್ಕೆ ಮನ್ನಣೆಯಿತ್ತು ಸಮಾಜ ಜೀವನವನ್ನು ಅಂಥವರ ಸಹಾಯ ಸಹಾನುಭೂತಿ ಸಹಕಾರಗಳಿಂದ ಸುಧಾರಿಸಬಹುದು ಎಂಬ ಧ್ವನಿಯಂತೂ ಈ ನಾಟಕಗಳಲ್ಲಿ ಎದ್ದು ಕಾಣುತ್ತದೆ. ಸಮಾಜದಲ್ಲಿ ಟೊಳ್ಳೂ ಇದೆ. ಗಟ್ಟಿಯೂ ಇದೆ. ಪರಿಸ್ಥಿತಿ ಸನ್ನಿವೇಶಗಳ ಪ್ರಭಾವದಿಂದ ಹಾಸ್ಯದ ಕುಲುಮೆಯಲ್ಲಿ ಸಮಾಜಜೀವಿ ಕುದಿದಾಗ ಟೊಳ್ಳು ಮಾಯವಾಗಿ ಗಟ್ಟಿ ಉಳಿಯುತ್ತದೆ. ಅಂಥ ಗಟ್ಟಿ ಉಳಿಯಲೆಂಬುದೇ ಕೈಲಾಸಂ ಕೃತಿಗಳ ಉದ್ದೇಶ. ಹಾಗಾದಾಗ ಸಮಾಜದ ಉದ್ಧಾರ ತಾನೇ ತಾನಾಗಿ ಆಗುತ್ತದೆ ಎಂಬ ಘನತತ್ತ್ವ ಇವರ ನಾಟಕಗಳ ಧ್ವನಿ.

ಇವರು ಪಾಶ್ಚಾತ್ಯ ಸಾಮಾಜಿಕ ಹಾಗೂ ಪೌರಾಣಿಕ ನಾಟಕಾವಲೋಕನ ಮತ್ತು ಅಧ್ಯಯನಗಳಿಂದ ಪ್ರೇರಿತರಾದರಷ್ಟೇ ಹೊರತು ವಸ್ತುತಃ ಅವುಗಳನ್ನೇ ಇಲ್ಲಿಗೆ ತಂದುಕೊಳ್ಳಲಿಲ್ಲ. ಕನ್ನಡ ಸಮಾಜದಿಂದ ಎತ್ತಿಕೊಂಡ ಕಥಾವಸ್ತುವನ್ನು ಬಳಸಿಕೊಂಡು ತಮ್ಮದೇ ಆದ ವೈಖರಿಯಿಂದ ನಾಟಕ ಕಟ್ಟಿರುವುದು ಕೈಲಾಸಂ ಅವರ ವೈಶಿಷ್ಟ್ಯ. ಆಗ ಜಿಲ್ಲಾಧಿಕಾರಿಗಳಾಗಿದ್ದ ಸಾಹಿತಿ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರು ಕೈಲಾಸಂರ ಬಗ್ಗೆ ಅಪಾರ ಗೌರವ ಹೊಂದಿದ್ದು ಅವರನ್ನು ತಮ್ಮ ಮನೆಯಲ್ಲಿ ಕೆಲವು ದಿನಗಳು ಅತಿಥಿಯಾಗಿ ಸತ್ಕರಿಸಿ ಅವರ ನಾಟಕ ಪ್ರದರ್ಶನಗಳಿಗೆ ಪ್ರೋತ್ಸಾಹ ನೀಡಿದರು.

ಇತರರು ನಡೆದು ಸವೆಸಿದ ಜಾಡು ಹಿಡಿಯದೆ ನಾಟಕ ಪ್ರಪಂಚದಲ್ಲಿ ಹೊಸ ಹಾದಿ ಹಾಕಿಕೊಟ್ಟ ಹಿರಿತನ ಕೈಲಾಸಂ ಅವರದು. ಸಮಾಜಜೀವನದ ವೈವಿಧ್ಯ, ಅಂಕುಡೊಂಕುಗಳಿಗೆ ಭೂತಗನ್ನಡಿ ಹಿಡಿದು ಅದರ ಉಬ್ಬಿದ ಪ್ರತಿಬಿಂಬಗಳನ್ನು ನಮ್ಮೆದುರಿಗೆ ನಿಲ್ಲಿಸಿ, ಬಾಳನ್ನು ಆಳವಾಗಿ ಹೊಕ್ಕು, ಜನತೆಯ ಕಷ್ಟ ಕಾರ್ಪಣ್ಯ, ಮರೆಮೋಸ, ಸಾವುನೋವುಗಳನ್ನು ತೀಕ್ಷ್ಣವಾಗಿ ಪರಿಶೀಲಿಸಿ ಸಮಾಜಜೀವನದಲ್ಲಿ ಹೆಜ್ಜೆ ಹೆಜ್ಜೆಗೂ ಎದುರಾಗುವ ಕಣ್ಣೀರಿನ ಕಡಲನ್ನು ಕೈಲಾಸಂ ತಮ್ಮ ಹಾಸ್ಯದ ಹರಿಗೋಲಿನಿಂದ ದಾಟಿಸುತ್ತಾರೆ. ಜನಮನದಲ್ಲಿ ತಾಂಡವವಾಡುತ್ತಿರುವ ನೋವುನಲಿವು ಆಸೆ ಆಮಿಷಗಳನ್ನು ತಾವೂ ಅನುಭವಿಸುವುದಲ್ಲದೆ ತಾವು ಸೃಷ್ಟಿಸಿದ ಪಾತ್ರಗಳಿಗೆ ಜೀವಕಳೆ ತುಂಬಿ ತಾವು ಮಾತ್ರ ದೂರ ನಿಲ್ಲುವುದು ಕೈಲಾಸಂ ನಾಟಕ ನಿರೂಪಣೆಯ ವೈಖರಿ. ಸಂವಿಧಾನ ಚಾತುರ್ಯ, ರಸೈಕ್ಯತೆ, ಸಂಭಾಷಣೆಯಲ್ಲಿ ಭಾವಪೂರ್ಣವಾಗಿ ಅರ್ಥಪೂರ್ಣವಾಗಿ ಜೀವನದ ಸಮಸ್ಯೆಗಳ ವಿವೇಚನೆ, ಸನ್ನಿವೇಶಗಳ ರಸಸ್ಥಾನ ಹಿಡಿದು ಮಿಡಿಯಬಲ್ಲ ಅಮಿತಶಕ್ತಿ -ಇವು ಕೈಲಾಸಂ ಕೃತಿಗಳ ಸಾಮಾನ್ಯ ಲಕ್ಷಣಗಳು.

ಇವರು ಒಬ್ಬ ಮಹಾ ವಿಸ್ಮಯಕಾರ ವ್ಯಕ್ತಿ. ವಾಕ್ಚತುರ, ರಸಿಕ, ನಗೆಗಾರ, ಪ್ರಾಜ್ಞ, ವೇದಾಂತಿ, ಅಭಿನಯಚತುರ. ಇವರಲ್ಲಿ ಕುಂಡುಬರುವ ಒಂದು ಅಸಾಧಾರಣ ಶಕ್ತಿಯೆಂದರೆ ಪರಸ್ಪರ ಸಂಬಂಧವಿಲ್ಲದ ಭಾವಗಳ ಅಥ್‌ವಾ ಮಾತುಗಳ ಅನಿರೀಕ್ಷಿತ ಸಂಯೋಜನೆ ಅಥ್‌ವಾ ವೈದೃಶ್ಯ ನಿರೂಪಣೆಯಿಂದ ಥ್‌ಟ್ಟನೆ ಬುದ್ಧಿಗೆ ಆನಂದವನ್ನುಂಟುಮಾಡುವ ಚತುರೋಕ್ತಿ.

ಮದರಾಸಿನಲ್ಲಿ 1945ರಲ್ಲಿ ನಡೆದ 29ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ್ಯ ಸ್ಥಾನಕ್ಕೆ ಕನ್ನಡ ಸಾಹಿತ್ಯ ಪರಿಷತ್ತು ಕೈಲಾಸಂ ಅವರನ್ನು ಆಯ್ಕೆ ಮಾಡಿತ್ತು. ಈ ಸಮ್ಮೇಳನದಲ್ಲಿ ಇವರು ತಮ್ಮ ಅಧ್ಯಕ್ಷಭಾಷಣದಲ್ಲಿ 'ಹಿರಿಯರುಂ ಕಿರಿಯರುಂ ಕಿಲಕಿಲನೆ ನಕ್ಕಿರಡು ಕಣ್ಣಹನಿಯಿತ್ತರೆನಗದುವನಿತೆ ಸಾಕು' ಎಂಬುದಾಗಿ ತಮ್ಮ ಅಂತರಂಗದ ಹಂಬಲವನ್ನು ಅಭಿವ್ಯಕ್ತಪಡಿಸಿದರು. ಅನಂತರ ಕೆಲವೇ ದಿನಗಳಲ್ಲಿ ಕೈಲಾಸಂ ಬೆಂಗಳೂರಿನಲ್ಲಿ ತಮ್ಮ ವಿಶ್ವಾಸಿಗಳೂ ಬಂಧುಗಳೂ ಆದ ವಿ.ಟಿ.ಶ್ರೀನಿವಾಸನ್ ಅವರ ಮನೆಯಲ್ಲಿ ನಿಧನಹೊಂದಿದರು (1946). (ಬಿ.ಎಸ್.ಆರ್.,ಕೆ.ವಿ.ಐ.)

**ಕೈವಾರ** : ಕೋಲಾರ ಜಿಲ್ಲೆ ಚಿಂತಾಮಣಿ ತಾಲ್ಲೂಕಿನ ಒಂದು ಗ್ರಾಮ. ಪವಿತ್ರ ಕ್ಷೇತ್ರ. ಚಿಂತಾಮಣಿಯಿಂದ ನೈಋತ್ಯಕ್ಕೆ ಬೆಂಗಳೂರು ಮಾರ್ಗದಲ್ಲಿ 13ಕಿಮೀ ದೂರದಲ್ಲಿದೆ. ಇದು ಹೋಬಳಿ ಕೇಂದ್ರ.

ಕೈವಾರ ಮಹಾಭಾರತದಲ್ಲಿ ಬರುವ ಏಕಚಕ್ರಪುರವೆಂದು ಹೇಳುವರು. ಅರಗಿನ ಮನೆಯಿಂದ ತಪ್ಪಿಸಿಕೊಂಡ ಪಾಂಡವರು ಕೆಲವು ಕಾಲ ಇಲ್ಲಿದ್ದರೆಂದೂ ಈ ಗ್ರಾಮದ ಹತ್ತಿರವಿರುವ ಚಿದಂಬರಗಿರಿ ಅಥವಾ ಚಿಕ್ಕಬೆಟ್ಟದಲ್ಲಿ ಇದ್ದ ಬಕಾಸುರನನ್ನು ಭೀಮ ಕೊಂದು ಅವನ ಶವವನ್ನು ಬೆಟ್ಟದ ಗುಹೆಯೊಂದರಲ್ಲಿ ಮುಚ್ಚಿಟ್ಟನೆಂಬುದೂ ಸ್ಥಳಪುರಾಣ. ಬಕಾಸುರನಿದ್ದನೆಂದು ಹೇಳುವ ಒಂದು ಗವಿ ಬೆಟ್ಟದಲ್ಲಿದೆ. ಕೆಲವೊಮ್ಮೆ ಮಳೆಯ ದಿನಗಳಲ್ಲಿ ಕೊರಕಲುಗಳಿಂದ ಕೆಂಪು ಅಥವಾ ಬಿಳಿಯ ಬಣ್ಣದ ಮಣ್ಣಿನ ರಾಡಿಯ ನೀರು ಒಸರುತ್ತದೆ. ಇದು ಬಕಾಸುರನ ರಕ್ತ ಎಂದು ಸ್ಥಳೀಯರ ನಂಬಿಕೆ.

ಇಲ್ಲಿ ಅಮರನಾರಾಯಣ, ಭೀಮೇಶ್ವರ, ನಕುಲೇಶ್ವರ ಸಹದೇವೇಶ್ವರ ದೇವಾಲಯಗಳಿವೆ. ಇವೆಲ್ಲ 1283ಕ್ಕೆ ಮುಂಚೆಯೇ ಇದ್ದುವೆಂದು ಇಲ್ಲಿ ದೊರಕಿರುವ ತಮಿಳು ಶಾಸನಗಳಿಂದ ತಿಳಿದುಬರುತ್ತದೆ. ಬಹುಶಃ ಇವು 1280ರ ರಚನೆಗಳು. ಆದರೆ ಎಲ್ಲವೂ ಬಹುವಾಗಿ ನವೀಕೃತವಾಗಿವೆ.



ಅಮರನಾರಾಯಣ ದೇವಾಲಯದ ಅರ್ಧಮಂಟಪ

ಅಮರನಾರಾಯಣ ದೇವಾಲಯ ಇಲ್ಲಿಯ ಪ್ರಧಾನ ಗುಡಿ ಹಾಗೂ ಮುಖ್ಯ ವಾಸ್ತು ಕೃತಿ. ಇಟ್ಟಿಗೆಗಳಿಂದ ಕಟ್ಟಿದ ಶಿಖರವನ್ನುಳ್ಳ ಗರ್ಭಗೃಹ, ಸಣ್ಣ ಸುಕನಾಸಿ, ನಾಲ್ಕು ಕಂಬಗಳಿರುವ ನವರಂಗ, ಉತ್ತರ ಭಾಗದಲ್ಲಿ ಒಂದು ಸಣ್ಣ ಗುಡಿ ಮತ್ತು ಮುಖಮಂಟಪಗಳಿಂದ ಕೂಡಿದೆ. ಮುಖಮಂಟಪ ಸುಂದರವಾಗಿದ್ದು ಮುಂದಿನ ಎರಡು ಕಂಬಗಳ ಮೇಲೆ ವಿಮಾನ, ಸಿಂಹ ಮತ್ತು ಇತರ ಪ್ರಾಣಿಗಳ ಚಿತ್ರಗಳನ್ನು ಕೆತ್ತಲಾಗಿದೆ.

ಉತ್ತರ ಭಾಗದ ಕಂಬದ ಮೇಲೆ ಹಾರುತ್ತಿರುವ ಸಿಂಹ, ಮಕರ ಮತ್ತು ಗಂಧರ್ವರ ಚಿತ್ರಗಳನ್ನು ಕೆತ್ತಲಾಗಿದೆ. ನವರಂಗದ ಮಹಾದ್ವಾರ ಉತ್ತಮ ಕೆತ್ತನೆಗಳಿಂದ ಕೂಡಿದೆ. ದಕ್ಷಿಣ ದ್ವಾರಸ್ತಂಭದ ಮೇಲೆ ಹಂಸ, ನವಿಲು, ಸಿಂಹ, ಹುಲಿ ಮತ್ತು ಸವಾರಿ ಆನೆಗಳನ್ನು ಚಿತ್ರಿಸಿದೆ. ಉತ್ತರ ದ್ವಾರಸ್ತಂಭ ಮತ್ತು ದಾರವಂದಗಳ ಮೇಲೆ ಗಂಧರ್ವರ ಶಿಲ್ಪಗಳಿವೆ. 25' ಚಚ್ಚೌಕದ ನವರಂಗದ ದಕ್ಷಿಣ ಭಾಗದಲ್ಲಿ ಕಲ್ಲಿನ ಕಿಟಕಿಯೂ ಉತ್ತರ ಭಾಗದಲ್ಲಿ ವಿಜಯನಗರ ಸಾಮ್ರಾಜ್ಯ ಕಾಲದ ಸೀತಾರಾಮಲಕ್ಷ್ಮಣರ ಪ್ರತಿಮೆಗಳಿರುವ ಸಣ್ಣ ಗುಡಿಯೂ ಇವೆ. ನವರಂಗದ ಚಾವಣಿಯ ಮಧ್ಯದಲ್ಲಿ ಒಂಬತ್ತು ಫಲಕಗಳುಂಟು. ನಡುವೆ ಹಂಸವಾಹನ ತ್ರಿಮುಖ ಬ್ರಹ್ಮನನ್ನು ಸುತ್ತಲೂ ಅಷ್ಟದಿಕ್ಪಾಲಕರನ್ನೂ ಕಡೆಯಲಾಗಿದೆ. ಇಲ್ಲಿಯ ಕಂಬಗಳ ಮೇಲೆ ವಿವಿಧ ದೇವತೆಗಳ, ಗಂಧರ್ವರ ಮತ್ತು ಸಿಂಹಗಳ ಚಿತ್ರಗಳಿವೆ. ಸುಕನಾಸಿ ಚಿಕ್ಕದು. ಗರ್ಭಗುಡಿಯಲ್ಲಿ ಅಮರನಾರಾಯಣನ ಸುಂದರ ಪ್ರತಿಮೆ ಇದೆ.

ಭೀಮೇಶ್ವರ ದೇವಾಲಯ ಅಮರನಾರಾಯಣ ದೇವಾಲಯಕ್ಕಿಂತ ದೊಡ್ಡದು. ಇದರಲ್ಲಿ ಗರ್ಭಗುಡಿ, ಸುಕನಾಸಿ, ಅರ್ಧಮಂಟಪ ಮತ್ತು ರಂಗಮಂಟಪಗಳುಂಟು. ಇಲ್ಲಿರುವ ಹದಿನಾರು ಮುಖಗಳ ಕಂಬಗಳ ಮೇಲೆ ದೇವತೆಗಳ, ವೀರರ, ಹೂ ಬಳ್ಳಿ ಎಲೆಗಳ ಚಿತ್ರಗಳನ್ನು ಕೆತ್ತಲಾಗಿದೆ. ನವರಂಗದ ಮತ್ತು ಮುಂಭಾಗದ ಕಂಬಗಳು ವಿಜಯನಗರದ ಶೈಲಿಗೆ ಸೇರಿದವು. ಚಾವಣಿಯ ಕೆತ್ತನೆಗಳು ಮತ್ತು ಕೆಲವು ತಮಿಳು ಶಾಸನಗಳು 1294ರ ಸುಮಾರಿಗೆ ಹೊಯ್ಸಳ ಮುಮ್ಮಡಿ ವೀರಬಲ್ಲಾಳನ ಕಾಲಕ್ಕೆ ಸೇರುತ್ತವೆ. ಆಗ ಇದ್ದ ದೇವಾಲಯವನ್ನು ಅಚ್ಯುತರಾಯ ಕೃಷ್ಣದೇವರಾಯರ ಕಾಲದಲ್ಲಿ ಜೀರ್ಣೋದ್ಧಾರ ಮಾಡಿರಬಹುದು.

ಸಹದೇವೇಶ್ವರ ಮತ್ತು ನಕುಲೇಶ್ವರ ಮಂದಿರಗಳು ಸಣ್ಣವು. ಸಹದೇವೇಶ್ವರ ಮಂದಿರದ ಗೋಡೆಗಳ ಮೇಲೆ ಅನೇಕ ತಮಿಳು ಶಾಸನಗಳುಂಟು. ಬಹುಶಃ ಹೊಯ್ಸಳ ಸಾಮಂತನಾಗಿದ್ದ 1280-90ರ ಸುಮಾರಿನಲ್ಲಿ ಕೈವಾರ ನಾಡಿನ ರಾಜ್ಯಪಾಲನಾಗಿದ್ದ ಚೋಳ ದುಟ್ಟರಾದಿತ್ಯ ರಾಜನಾರಾಣಯನ ಉಲ್ಲೇಖಗಳು ಈ ಶಾಸನಗಳಲ್ಲಿವೆ. ಇಲ್ಲಿಯ ಶಿವದೇವಾಲಯಗಳನ್ನು ಈತ ಕಟ್ಟಿಸಿರಬಹುದು.

ನಾರೇಯಣಯೋಗಿಗಳೆಂಬ ಪ್ರಸಿದ್ಧ ಸಂತರು ಈ ಊರಿನಲ್ಲಿ ನೆಲಸಿದ್ದರು. ಅವರ ಸಮಾಧಿ ಮತ್ತು ದೇವಾಲಯ ಪವಿತ್ರ ತಾಣವಾಗಿದೆ. ಎಂ.ಎಸ್.ರಾಮಯ್ಯನವರು ಸ್ಥಾಪಿಸಿದ ಟ್ರಸ್ಟ್ ಈ ಊರಿನಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ನಡೆಸುತ್ತಿದೆ. (ಬಿ.ಕೆ.ಜಿ.)

**ಕೈವಾರ ನಾರೇಯಣ ಯೋಗಿ** (ಕೈವಾರ ನಾರಣಪ್ಪ) : 1730-1840. ಪ್ರಸಿದ್ಧ ಸಂತರು. ಚಿಂತಾಮಣಿ ತಾಲ್ಲೂಕು ಕೈವಾರ ಗ್ರಾಮದಲ್ಲಿ ಜನಿಸಿ, ನೆಲಸಿ ಮುಕ್ತರಾದವರು. ಇವರ ತಂದೆ ಕೊಂಡಪ್ಪ, ತಾಯಿ ಮುದ್ದಮ್ಮ. ಇವರು ತೆಲುಗು ಬಣಜಿಗರು, ಉದ್ಯೋಗ ವ್ಯವಸಾಯ ಮತ್ತು ಬಳೆಗಾರ ವೃತ್ತಿ. ಇವರ ವಿದ್ಯಾಭ್ಯಾಸ ಕೂಲಿಮಠದಲ್ಲಿ ನಡೆಯಿತು. ಇವರು ಮುನಿಯಮ್ಮನೆಂಬುವರನ್ನು ಮದುವೆ ಆದರು. ಈ ದಂಪತಿಗಳಿಗೆ ಮೂವರು ಮಕ್ಕಳು ಎರಡು ಗಂಡು, ಒಂದು ಹೆಣ್ಣು.

ನಾರಾಯಣಪ್ಪನವರಿಗೆ ಬಾಲ್ಯದಿಂದಲೇ ಆಸ್ತಿಕತೆ, ದೈವಭಕ್ತಿಗಳು ಬೆಳೆದುವು. ಆಕಸ್ಮಿಕಾಗಿ ಇವರಿಗೆ ವೆಂಕಟಗಿರಿಗುಡ್ಡದ ಕಣಿವೆಯಲ್ಲಿ ಒಬ್ಬ ಸಿದ್ಧಪುರುಷರ ಸಂದರ್ಶನವಾಯಿತು. ಅವರು ನಾರಣಪ್ಪನವರಿಗೆ ಒಂದು ಮಂತ್ರವನ್ನು ಉಪದೇಶಿಸಿ, ಬಾಯಲ್ಲಿ ಬೆಣಚು ಕಲ್ಲನ್ನಿಟ್ಟುಕೊಂಡು ಇದನ್ನು ಜಪಿಸುತ್ತಿರಬೇಕೆಂದೂ ಯಾವಾಗ ಬೆಣಚುಕಲ್ಲು ಸಕ್ಕರೆಯಂತೆ ಕರಗಿಹೋಗುವುದೋ ಆಗ ಮಂತ್ರ ಸಿದ್ಧಿಸಿತೆಂದು ತಿಳಿಯಬೇಕೆಂದೂ ಹೇಳಿದರು. ನಾರಣಪ್ಪನವರು ಅದೇಪ್ರಕಾರ ಜಪಿಸಿ ಮಂತ್ರಸಿದ್ಧಿ ಪಡೆದರಂತೆ. ಇವರ ಭಕ್ತಿಗೆ ಮೆಚ್ಚಿ ಕೈವಾರದ ಅಮರನಾರಾಯಣಸ್ವಾಮಿ ಗೊಲ್ಲನ ವೇಷದಲ್ಲಿ ಬಂದು ತತ್ತ್ವಮಸಿ ಎಂಬ ಮಹಾವಾಕ್ಯವನ್ನು ಉಪದೇಶಿಸಿದನಂತೆ. ನಾರಣಪ್ಪನವರು ವಿರಕ್ತರಾಗಿ ಸಂನ್ಯಾಸವನ್ನು ಸ್ವೀಕರಿಸಿ ಯೋಗಸಾಧನೆಯಲ್ಲಿ ನಿರತರಾಗಿ ನಾರೇಯಣ ಯೋಗಿಗಳು, ಯತಿಗಳು, ತಾತನವರು ಎಂದು ವಿಖ್ಯಾತರಾದರು.

ಯೋಗಸಾಧನೆ, ಭಜನೆಕೀರ್ತನೆಗಳನ್ನು ರಚಿಸಿ ತತ್ತ್ವವನ್ನು ಬೋಧಿಸುವುದು ನಾರೇಯಣ ಯೋಗಿಗಳ ಮುಖ್ಯ ಕಾರ್ಯಗಳಾಗಿದ್ದುವು. ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಇವರು ಕೃತಿಗಳನ್ನು ರಚಿಸಿದರು. ವೇದಾಂತ ಸಾರಾವಳಿ ನಾರೇಯಣ ಕವಿ ಶತಕ, ಭೀಮಲಿಂಗಶತಕ, ತಾರಕಬ್ರಹ್ಮಾನಂದಶತಕ, ಶ್ರೀಕೃಷ್ಣ ಚರಿತಾಮೃತ, ಯೋಗಸಾರ, ಕಾಲಜ್ಞಾನ ಮುಂತಾದವು ಇವರ ಕೃತಿಗಳು.

1840ರಲ್ಲಿ ಇವರು ಮುಕ್ತರಾದರೆಂದು ತಿಳಿದುಬರುತ್ತದೆ. ನಾರೇಯಣಾಶ್ರಮದಲ್ಲಿ ಇವರ ಸಮಾಧಿ ಇದೆ. ಇದರ ಬಲಗಡೆ ನಾರಾಯಣ ಯೋಗಿಗಳ ಶಿಲಾಮೂರ್ತಿ ಇರುವ ಮಂದಿರ ಇದೆ. ಎಡಗಡೆ ಇವರು ನೆಟ್ಟ ಅಶ್ವತ್ಥವೃಕ್ಷ ಮತ್ತು ತೋಡಿಸಿದ ಬಾವಿ ಇದೆ.

ಪ್ರತಿವರ್ಷ ಜ್ಯೇಷ್ಠ ಶುದ್ಧ ತದಿಗೆಯಂದು ಯೋಗಿಗಳ ಆರಾಧನೋತ್ಸವವೂ ಫಾಲ್ಗುಣ ಬಹುಳ ಪಾಡ್ಯದಲ್ಲಿ ರಥೋತ್ಸವವೂ ವೈಭವದಿಂದ ನಡೆಯುತ್ತವೆ. ನಾರಾಯಣ ಯೋಗಿಗಳ ಆಶ್ರಮ ಒಂದು ಧಾರ್ಮಿಕ ಕೇಂದ್ರವಾಗಿದೆ. (ಎನ್.ಆರ್.ಎಸ್)

**ಕೊಂಗಾಡಿಯಪ್ಪ** : 1861-1951 ಸಮಾಜಸೇವಾಧುರೀಣರು, ವಿದ್ಯಾಭಿಮಾನಿಗಳು. ಬೆಂಗಳೂರು ಜಿಲ್ಲೆ ದೊಡ್ಡಬಳ್ಳಾಪುರದಲ್ಲಿ ಜನಿಸಿದ ಅಲ್ಲಿಯ ಆಂಗ್ಲೋವರ್ನಾಕ್ಯುಲರ್ ಶಾಲೆಯ ಮುಖ್ಯೋಪಾಧ್ಯಾಯರಾಗಿ ಅನೇಕವರ್ಷ ಸೇವೆಸಲ್ಲಿಸಿದರು. ಸಮಾಜಕ್ಕೆ ಸೇವೆ ಸಲ್ಲಿಸಲು



ಯೋಗ್ಯವಾದಂಥ ವಿದ್ಯೆಯನ್ನು ಒದಗಿಸಬೇಕೆಂಬ ಧ್ಯೇಯಕ್ಕಾಗಿ ದುಡಿದರು. ವಿದ್ಯಾರ್ಥಿಗಳು ಒಳ್ಳೆಯ ನಡತೆಯುಳ್ಳವರಾಗಿರಬೇಕೆಂಬ ಸದುದ್ದೇಶದಿಂದ ಸಾಮೂಹಿಕ ಭಜನೆ, ಗೀತಾ ಪಾರಾಯಣ ಮುಂತಾದ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದರು. ತಮಗೆ ಸಾರ್ವಜನಿಕರಿಂದ ಕೊಡಲ್ಪಟ್ಟ ಗೌರವನಿಧಿಯೊಂದನ್ನು ಸಂಪೂರ್ಣವಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ನೀಡಿ, ತನ್ಮೂಲಕ ಬಡವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನಗಳು ದೊರೆಯುವಂತೆ ಮಾಡಿದ್ದಾರೆ. ಇವರ ಸ್ಮರಣಾರ್ಥವಾಗಿ ಸ್ಥಾಪಿತವಾಗಿರುವ ಲೋಕಸೇವಾನಿರತ ಕೊಂಗಾಡಿಯಪ್ಪ ಸ್ಮಾರಕ ವಿದ್ಯಾಸಂಸ್ಥೆ ದೊಡ್ಡಬಳ್ಳಾಪುರದಲ್ಲಿದೆ. ಇದರ ಆಶ್ರಯದಲ್ಲಿ ಪ್ರೌಢಶಾಲೆ ಮತ್ತು ಕಾಲೇಜು ನಡೆಯುತ್ತಿವೆ. ಇವರು ದೊಡ್ಡಬಳ್ಳಾಪುರ ಪುರಸಭೆಯ ಪ್ರಥಮ ಅಧ್ಯಕ್ಷರಾಗಿದ್ದರು.

ಇವರ ನಿಸ್ವಾರ್ಥ ಸೇವೆಯನ್ನು ಮೆಚ್ಚಿ ನಾಲ್ವಡಿ ಕೃಷ್ಣರಾಜ ಒಡೆಯರು ಇವರಿಗೆ ಲೋಕಸೇವಾನಿರತ ಎಂಬ ಬಿರುದನ್ನು ನೀಡಿದ್ದರು. (ಎಚ್.ಎಲ್.ಎಸ್.)

**ಕೊಂಗಾಳ್ವ ವಂಶ** : ಹಾಸನ ಜಿಲ್ಲೆಯ ಅರಕಲಗೂಡು ಮತ್ತು ಅದರ ಪಕ್ಕದಲ್ಲಿನ ಉತ್ತರ ಕೊಡಗಿನ ಕೆಲವು ಭಾಗಗಳನ್ನು ಒಳಗೊಂಡಿದ್ದ ಏಳು ಸಾವಿರ ಸೀಮೆ ಎಂಬ ಪ್ರದೇಶವನ್ನು 11-12ನೆಯ ಶತಮಾನಗಳಲ್ಲಿ ಆಳುತ್ತಿದ್ದ ರಾಜಮನೆತನ. ಕೊಂಗಾಳ್ವರ ರಾಜ್ಯ ಸು.880ರಲ್ಲಿ ಗಂಗ ಎಜೆಯಪ್ಪನು ಆಳುತ್ತಿದ್ದ ಕೊಂಗಲನಾಡು 8000 ಪ್ರದೇಶಕ್ಕೆ ಸರಿಸಮವಾಗಿದ್ದಿತೆಂದು ಕಾಣುತ್ತದೆ.

ಸು.1004-05ರಲ್ಲಿ ಚೋಳ ರಾಜರಾಜ ಪನಸೋಗೆಯ ಕಾಳಗದಲ್ಲಿ ಶತ್ರುಗಳನ್ನು ಸದೆಬಡಿಯುವವರೆಗೂ ಹೋರಾಡಿದ ಮನಿಜನೆಂಬುವನ ಶೌರ್ಯವನ್ನು ಮೆಚ್ಚಿ, ಅವನಿಗೆ ಪಟ್ಟವನ್ನು ಕಟ್ಟಿ ನಾಡನ್ನು ಕೊಡಬೇಕೆಂದು ಪಂಚವನ್ ಮಾರಾಯನಿಗೆ (ರಾಜೇಂದ್ರ ಚೋಳ) ಆದೇಶ ನೀಡಿದ್ದರಿಂದ ಪಂಚವನ್ ಮಾರಾಯ ಮನಿಜನಿಗೆ 'ಕ್ಷತ್ರಿಯಶಿಖಾಮಣಿ ಕೊಂಗಾಳ್ವ' ಎಂಬ ಬಿರುದನ್ನು ಕೊಟ್ಟು ಮಾಲವ್ವಿ ಗ್ರಾಮವನ್ನು

ನೀಡಿದನೆಂದು (ಸೋಮವಾರಪೇಟೆ ತಾಲ್ಲೂಕು ಮಾಲಂಬಿ) ಒಂದು ಶಾಸನದಿಂದ ತಿಳಿಯುತ್ತದೆ. ಈ ಮನಿಜ ಕೊಂಗಾಳ್ವ ರಾಜವಂಶದ ಆದ್ಯ ಮಾಂಡಲಿಕನೆಂದು ತಿಳಿಯಬಹುದು.

ಸು.1020ರ ಶಾಸನವೊಂದರಲ್ಲಿ ಬಡಿವ ಕೊಂಗಾಳ್ವನೆಂಬವನ ಉಲ್ಲೇಖ ಸಿಕ್ಕುತ್ತದೆ. ಇದೇ ಸಮಯದಲ್ಲಿರಬಹುದಾದ ಕಾಡವ ಕೊಂಗಾಳ್ವ ಎಂಬ ಮತ್ತೊಬ್ಬನೂ ಕಾಣಬರುತ್ತಾನೆ. ಆದರೆ ಇವನಿಗೂ ಮನಿಜನಿಗೂ ಇದ್ದ ಸಂಬಂಧ ತಿಳಿಯದು. ಅನಂತರ ಆಳಿದ ರಾಜೇಂದ್ರ ಚೋಳ ಪೃಥ್ವೀ ಮಹಾರಾಜ ಅಥವಾ ರಾಜೇಂದ್ರ ಚೋಳ ಕೊಂಗಾಳ್ವ ಪ್ರಬಲನಾದ ದೊರೆ. 1022 ಮತ್ತು 1026ರ ಎರಡು ಶಾಸನಗಳಲ್ಲಿ ಈತ ಹೊಯ್ಸಳ ನೃಪಕಾಮನ ಮೇಲೆ ಯುದ್ಧಮಾಡಿ ಜಯಗಳಿಸಿದ ಪ್ರಸ್ತಾಪವಿದೆ. ಬಹುಶಃ ಕೊಂಗಾಳ್ವರು ಚೋಳರ ಪರವಾಗಿ ಈ ಯುದ್ಧಗಳಲ್ಲಿ ಭಾಗವಹಿಸಿರಬೇಕು. ರಾಜೇಂದ್ರ ಚೋಳ ಕೊಂಗಾಳ್ವನ ಅನಂತರ ಸುಮಾರು ಮೂರು ದಶಕಗಳ ವರೆಗಿನ ಕೊಂಗಾಳ್ವರ ಯಾವ ಶಾಸನಗಳೂ ದೊರಕಿಲ್ಲ. 1059ರ ಮುಳೂರು ಶಾಸನದಲ್ಲಿ ಎರಡನೆಯ ರಾಜೇಂದ್ರ ಚೋಳನ ಹೆಸರು ಕಂಡುಬರುತ್ತದೆ. ಈತನ ತಂದೆ ರಾಜಾಧಿರಾಜ ಮತ್ತು ಪತ್ನಿ ಪೋಚಬ್ಬರಸಿ ಎಂದು ಸಾಂದರ್ಭಿಕ ಸಾಕ್ಷ್ಯಗಳಿಂದ ಊಹಿಸಬಹುದು. ರಾಜೇಂದ್ರ ಚೋಳನ ಮಗ ಇಮ್ಮಡಿ ರಾಜಾಧಿರಾಜ. ಇವನ ಪತ್ನಿ ರುಕ್ಮಿಣಿದೇವಿ. ಈಕೆ ಒಂದು ವಿಗ್ರಹವನ್ನು ಪ್ರತಿಷ್ಠೆ ಮಾಡಿದ ಉಲ್ಲೇಖ ಮುಳ್ಳೂರಿನ ಶಾಸನವೊಂದರಲ್ಲಿ ಕಾಣಬರುತ್ತದೆ.

ಇಮ್ಮಡಿ ರಾಜಾಧಿರಾಜನ ಅನಂತರ ರಾಜೇಂದ್ರ ಪ್ರಿಥುವೀ ಕೊಂಗಾಳ್ವ (ಸು.1066-1105) ಆಳಿದ. ಈತನ ಪತ್ನಿ ಪದ್ಮಲದೇವಿ. ಕೊಂಗಾಳ್ವರು ಚೋಳ ರಾಜರ ಹೆಸರುಗಳನ್ನು ಅನುಕರಿಸಿದ್ದು ಮಾತ್ರವಲ್ಲದೆ ಅವರ ಬಿರುದುಗಳನ್ನೂ ಹೊಂದಿದ್ದರೆಂಬುದು 1079ರ ಶಾಸನವೊಂದರಲ್ಲಿ ದೊರಕುವ ಜಟಾಚೋಳಕುಳೋದಯಾಚಳಗಭಕ್ತಿಮಾಳಿ ಒರೆಯೂರು ಪುರವರಾಧೀಶ್ವರ ಇತ್ಯಾದಿ ಬಿರುದುಗಳಿಂದ ತಿಳಿಯುತ್ತದೆ. ತ್ರಿಭುವನಮಲ್ಲ ಚೋಳ, ಕೊಂಗಾಳ್ವ ಅದಟಾರಾದಿತ್ಯ ಎಂಬ ಬಿರುದುಗಳು ರಾಜೇಂದ್ರ ಪ್ರಿಥುವೀ ಕೊಂಗಾಳ್ವನಿಗೆ ಇದ್ದಂತೆ ತೋರುತ್ತದೆ. ಈ ಸಮಯದಲ್ಲಿ ಚಾಳುಕ್ಯರು ಪ್ರಬಲರಾಗುತ್ತಿದ್ದುದನ್ನು ಗಮನಿಸಿದ ರಾಜೇಂದ್ರ ಕೊಂಗಾಳ್ವ ಅವರ ವಿರೋಧವನ್ನು ಕಟ್ಟಿಕೊಳ್ಳಲು ಇಚ್ಛಿಸದೆ ತ್ರಿಭುವನಮಲ್ಲ ಎಂಬ ಬಿರುದನ್ನು ಧರಿಸಿರಬೇಕು. 1079ರ ಶಾಸನದಿಂದಲೇ ಚಂಗಾಳ್ವರು ಸಾಲಿಗ್ರಾಮದ ಮೇಲೆ ಮುತ್ತಿಗೆ ಹಾಕಿದಾಗ ತ್ರಿಭುವನಮಲ್ಲ ಕೊಂಗಾಳ್ವನ ಸೈನಿಕರಾದ ತ್ರೈಲೋಕ್ಯಸೆಟ್ಟಿ ಮತ್ತು ಚಳುಕಸೆಟ್ಟಿ ಎಂಬುವರು ಧೈರ್ಯದಿಂದ ಕಾದಾಡಿ ಚಂಗಾಳ್ವರನ್ನು ಸೋಲಿಸಿ ಮರಣ ಹೊಂದಿದರೆಂದು ತಿಳಿದುಬರುತ್ತದೆ. ಸು.1105ರಲ್ಲಿ ಚಂಗಾಳ್ವರು ಮತ್ತೊಮ್ಮೆ ಸಾಲಿಗ್ರಾಮದಲ್ಲಿ ಎದುರಿಸಿದಾಗ ರಾಜೇಂದ್ರ ಪ್ರಿಥುವೀ ಕೊಂಗಾಳ್ವನ ಪರವಾಗಿ ಹೋರಾಡಿದ ಮಾಸಯ್ಯನೆಂಬುವನು ಸತ್ತನೆಂದು ಒಂದು ವೀರಗಲ್ಲು ತಿಳಿಸುತ್ತದೆ. ರಾಜೇಂದ್ರ ಶೂರನಷ್ಟೆ ಅಲ್ಲದೆ ಧರ್ಮಿಷ್ಠನೂ ಆಗಿದ್ದ. ಇವನು ಹೊಸಹಳ್ಳಿಯ ವೀರಸಿದ್ದೇಶ್ವರ ದೇವರಿಗೆ ದಾನಗಳನ್ನು ನೀಡಿದ ವಿವರಗಳನ್ನು ಎರಡು ಶಾಸನಗಳು ತಿಳಿಸುತ್ತವೆ. ಇವನು ಜೈನಬಸದಿಗಳಿಗೂ ದತ್ತಿಗಳನ್ನು ಬಿಟ್ಟಿದ್ದ.

ಇವನ ಅನಂತರ ವೀರಚೋಳ ಕೊಂಗಾಳ್ವದೇವ ರಾಜನಾದ. ಸು.1120ರಲ್ಲಿ ಆಳುತ್ತಿದ್ದ ಇವನಿಗೆ ದುದ್ಧಮಲ್ಲನೆಂಬ ಇನ್ನೊಂದು ಹೆಸರೂ ಇತ್ತೆಂದು ಊಹಿಸಬಹುದು. ಪ್ರಭಾಚಂದ್ರಸಿದ್ಧಾಂತ ಮುನಿಯ ಶಿಷ್ಯನಾಗಿ ಈತ ಹೆಣ್ಣಿಗಡಂಗ ಎಂಬಲ್ಲಿ ತಂಗಿದ್ದಾಗ ಜಿನಾಲಯವೊಂದರ ನಿರ್ಮಾಣಕ್ಕಾಗಿ ಪ್ರಭಾಚಂದ್ರದೇವನೆಂಬ ಮುನಿಗೆ ಒಂದು ಗ್ರಾಮವನ್ನು ದಾನ ಮಾಡಿದನೆಂದು ಒಂದು ಶಾಸನ ತಿಳಿಸುತ್ತದೆ.

ಅನಂತರ ಸುಮಾರು ಅರ್ಧ ಶತಮಾನದ ಕಾಲದ ಕೊಂಗಾಳ್ವ ರಾಜರ ವಿಷಯವೇ ತಿಳಿಯದು. ತ್ರಿಭುವನಮಲ್ಲ ವೀರದುದ್ಧ ಕೊಂಗಾಳ್ವದೇವ ಆಳುತ್ತಿದ್ದನೆಂದು 1171 ಮತ್ತು 1177ರ ಎರಡು ಶಾಸನಗಳಿಂದ ತಿಳಿದುಬರುತ್ತದೆ. ಇವನಿಗೆ ತ್ರಿಭುವನಮಲ್ಲ ಮತ್ತು ವೀರಚೋಳ ಎಂಬ ಹೆಸರುಗಳೂ ಇದ್ದುವು. ಇವನು ಮೊಳತೆಬೀಡಿನಿಂದ ರಾಜ್ಯವಾಳುತ್ತಿರುವಾಗ (1171) ಹೊಯ್ಸಳರು ಇಲ್ಲಿಗೆ ಮುತ್ತಿಗೆ ಹಾಕಿದರು. ಈ ಯುದ್ಧದಲ್ಲಿ ಹೊಯ್ಸಳರದೇ ಮೈಲುಗೈಯಾಯಿತು. 1177ರ ಅನಂತರ ಕೊಂಗಾಳ್ವ ರಾಜವಂಶ ಅಳಿಸಿಹೋದಂತೆ ಕಾಣುತ್ತದೆ.

ಕೊಂಗಾಳ್ವರು ಜೈನ ಮತ್ತು ಶೈವ ಧರ್ಮಗಳಿಗೆ ಪ್ರೋತ್ಸಾಹವನ್ನು ಕೊಟ್ಟರು. ಅದರಲ್ಲಿಯೂ ಜೈನಧರ್ಮ ಇವರ ಆಶ್ರಯವನ್ನು ವಿಶೇಷವಾಗಿ ಪಡೆಯಿತು. ಮುಳ್ಳೂರು ಆ ಕಾಲದಲ್ಲಿ ಜೈನಕೇಂದ್ರವಾಗಿತ್ತು. ಇಲ್ಲಿ ಅನೇಕ ಜೈನಬಸದಿಗಳಿದ್ದವು. ಇಲ್ಲಿಯ ಗುರು ಪರಂಪರೆಯಲ್ಲಿ ಖ್ಯಾತನಾದವನು ತಿವುಳ ಗಣ ನಂದಿಸಂಘ ಅರುಂಗಳಾನ್ವಯಕ್ಕೆ ಸೇರಿದ ಪುಷ್ಪಸೇನ ಸಿದ್ಧಾಂತನ ಶಿಷ್ಯ ಗುಣಸೇನ ಪಂಡಿತ. ಹೊಯ್ಸಳ ಎರೆಯಂಗನ ಪತ್ನಿ ಏಚಲದೇವಿಗೂ ಗುರುವಾಗಿದ್ದ ಈತ 1064ರಲ್ಲಿ ಮುಳ್ಳೂರಿನಲ್ಲಿ ಸಮಾಧಿ ಹೊಂದಿದ. ವೀರ ಕೊಂಗಾಳ್ವನ ಗುರುವಾಗಿದ್ದ ಪ್ರಭಾಚಂದ್ರಸಿದ್ಧಾಂತದೇವ ಇನ್ನೊಬ್ಬ ಖ್ಯಾತ ಜೈನಮುನಿ. ಮುಳ್ಳೂರಿನಲ್ಲಿರುವ ಪಾರ್ಶ್ವನಾಥ ಬಸದಿಯನ್ನು ಇಮ್ಮಡಿ ರಾಜೇಂದ್ರನ ಪತ್ನಿ ಪೋಚಬ್ಬರಸಿಯೂ ಚಂದ್ರನಾಥ ಬಸದಿಯನ್ನು ಎರಡನೆಯ ರಾಜಾಧಿರಾಜ ಕೊಂಗಾಳ್ವನೂ ಶಾಂತೀಶ್ವರ ಬಸದಿಯನ್ನು ಒಂದನೆಯ ರಾಜಾಧಿರಾಜನೂ ಕಟ್ಟಿಸಿದ್ದಕ್ಕೆ ಶಾಸನಾಧಾರಗಳಿವೆ. ಈ ಬಸದಿಗಳು ಮತ್ತು ಇಲ್ಲಿಯ ಜಿನವಿಗ್ರಹಗಳು ಕೊಂಗಾಳ್ವರ ಕಾಲದ ಕಲಾನೈಪುಣ್ಯವನ್ನು ಸಾರುತ್ತವೆ.

ಕೊಂಗಾಳ್ವರ ವಂಶವೃಕ್ಷವನ್ನು ಉಪಲಬ್ಧ ಆಧಾರಗಳ ಮೇಲೆ ಈ ರೀತಿ ರಚಿಸಬಹುದು:

ಮನಿಜ (1004-05)
|
ಬಡಿವ (ಕಾಡವ) (1020-21)
|
ರಾಜೇಂದ್ರ ಪೃಥ್ವೀ ಮಹಾರಾಜ I (1022-26)
(ರಾಜೇಂದ್ರ ಚೋಳ ಕೊಂಗಾಳ್ವ)
|
ರಾಜಾಧಿರಾಜ I ರಾಜೇಂದ್ರ ಚೋಳ ಕೊಂಗಾಳ್ವ II (1058, ಪತ್ನಿ ಪೋಚಬ್ಬರಸಿ)
|
ರಾಜಾಧಿರಾಜ II (ಪತ್ನಿ ರುಕ್ಮಿಣೀದೇವಿ)
|
ರಾಜೇಂದ್ರ ಪ್ರಿಥುವೀ ಕೊಂಗಾಳ್ವ III (1066-1105, ಪತ್ನಿ ಪದ್ಮಲದೇವಿ)
(ತ್ರಿಭುವನಮಲ್ಲ ಚೋಳ ಕೊಂಗಾಳ್ವ, ಅದಟರಾದಿತ್ಯ)
|
ದುದ್ಧಮಲ್ಲ (ಸು.1120)
|
ವೀರದುದ್ಧ ಕೊಂಗಾಳ್ವ (1171-77)
(ತ್ರಿಭುವನಮಲ್ಲ ವೀರಚೋಳ)

(ಎ.ವಿ.ಎನ್.)

**ಕೊಂಗುಣಿವರ್ಮ** : ತಲಕಾಡು ಗಂಗವಂಶದ ಮೂಲಪುರುಷ (ಸು.325-50). ದಡಿಗ ಎಂದೂ ಇವನ ಹೆಸರು. ಈತನ ಬಗ್ಗೆ ಸ್ಪಷ್ಟ ಚಾರಿತ್ರಿಕ ಆಧಾರಗಳು ಕಡಿಮೆ. ದೊರಕುವ ಅನೇಕ ಪ್ರತೀತಿಗಳನ್ನು ಹೀಗೆ ಸಂಗ್ರಹಿಸಬಹುದು: ಅಯೋಧ್ಯೆಯಲ್ಲಿ ಪದ್ಮನಾಭ ಆಳುತ್ತಿದ್ದ. ಈತನಿಗೆ ಶಾಸನ ದೇವತೆಯ ಆಶೀರ್ವಾದದಿಂದ ರಾಮ ಮತ್ತು ಲಕ್ಷ್ಮಣರೆಂಬ ಇಬ್ಬರು ಮಕ್ಕಳು ಹುಟ್ಟಿದ್ದರು. ಸ್ವಲ್ಪ ಕಾಲದಲ್ಲಿಯೇ ಉಜ್ಜಯಿನಿಪುರದ ಮಹೀಪಾಲನೆಂಬ ಅರಸು ಪದ್ಮನಾಭನ ಮೇಲೆ ದಂಡೆತ್ತಿ ಬರಲು ಪದ್ಮನಾಭ ತನ್ನ ಮಕ್ಕಳಿಗೆ ದಡಿಗ ಮತ್ತು ಮಾಧವರೆಂದು ಹೆಸರಿಟ್ಟು ಅವರನ್ನೂ ಮಗಳಾದ ಅಲಬ್ಬೆಯನ್ನೂ 48 ಬ್ರಾಹ್ಮಣರ ಜೊತೆಗೆ ದಕ್ಷಿಣ ಭಾರತಕ್ಕೆ ಕಳುಹಿಸಿದ. ಅವರು ಅನೇಕ ದಿನ ಪ್ರಯಾಣ ಮಾಡಿ ದಕ್ಷಿಣ ಪೇರೂರಿಗೆ (ಪ್ರಾಯಶಃ ಈಗಿನ ಕಡಪ ಜಿಲ್ಲೆಯ ಗಂಗ ಪೇರೂರು) ಬಂದು ಅಲ್ಲಿಯ ಜೈನಗುರು ಸಿಂಹನಂದಿ ಆಚಾರ್ಯರಿಗೆ ತಮ್ಮ ಕಷ್ಟವನ್ನು ನಿವೇದಿಸಿಕೊಂಡರು. ಸಿಂಹನಂದಿ ಆಚಾರ್ಯರು ಕೃಪೆತೋರಿ ದಡಿಗ ಹಾಗೂ ಮಾಧವರನ್ನು ಸಾಕಿ ಸಕಲ ವಿದ್ಯಾಪಾರಂಗತರನ್ನಾಗಿ ಮಾಡಿ ಪದ್ಮಾವತಿ ದೇವಿಯಿಂದ ಪಡೆದ ಒಂದು ಕತ್ತಿಯನ್ನು ಅವರಿಗೆ ಕೊಟ್ಟರು. ಮಾಧವ ತನ್ನ ಶಕ್ತಿಯನ್ನೆಲ್ಲ ಪ್ರಯೋಗಿಸಿ ಕತ್ತಿಯಿಂದ ಆ ದೊಡ್ಡ ಕಲ್ಲಿನ ಕಂಬವೊಂದನ್ನು ಒಂದೇ ಏಟಿಗೆ ತುಂಡರಿಸಲಾಗಿ ಇದನ್ನೇ ಶುಭಶಕುನವೆಂದು ಅರಿತ ಸಿಂಹನಂದಿ ಆಚಾರ್ಯರು ಕರ್ಣಿಕಾರ ಪುಷ್ಪದಿಂದ ಮಾಡಿದ ಕಿರೀಟವನ್ನು ಅವರಿಗೆ ತೊಡಿಸಿ, ಅವರನ್ನು ಗಂಗವಾಡಿ ತೊಂಬತ್ತಾರು ಸಾವಿರ ಪ್ರಾಂತ್ಯದ ಅಧಿಪತಿಗಳನ್ನಾಗಿ ಮಾಡಿದರು. ಆಗ ಅವರ ರಾಜಧಾನಿ ಕುವಳಾಪುರ (ಈಗಿನ

ಕೋಲಾರ). ನಂದಿದುರ್ಗ ಇವರ ಒಂದು ಅಭೇದ್ಯವಾದ ಕೋಟೆ. ದಡಿಗನ ಕಾಲದಲ್ಲಿ ಗಂಗರಾಜ್ಯ ಉತ್ತರದಲ್ಲಿ ಮರಂಡಲೆಯವರೆಗೆ, ಪೂರ್ವದಲ್ಲಿ ತೊಂಡೈಮಂಡಲದವರೆಗೆ, ಪಶ್ಚಿಮದಲ್ಲಿ ಸಮುದ್ರದವರೆಗೆ ಹಾಗೂ ದಕ್ಷಿಣದಲ್ಲಿ ಕೊಂಗುದೇಶದವರೆಗೂ ವಿಸ್ತರಿಸಿತ್ತು. ದಡಿಗ ಹಾಗೂ ಮಾಧವರು ತಮ್ಮ ಕೊಂಕಣದ ದಂಡಯಾತ್ರೆಯ ಸಮಯದಲ್ಲಿ ಶಿವಮೊಗ್ಗದ ಬಳಿ ಇರುವ ಮಂಡಲಿಯನ್ನು ಆಕ್ರಮಿಸಿ, ಸಿಂಹನಂದ್ಯಾಚಾರ್ಯರ ಆದೇಶದ ಮೇರೆಗೆ ಅಲ್ಲಿ ಒಂದು ಚೈತ್ಯಾಲಯವನ್ನು ಕಟ್ಟಿಸಿದ್ದರು.

ಕೋಲಾರ ಜಿಲ್ಲೆಯಲ್ಲಿ ಆಳುತ್ತಿದ್ದ ದಡಿಗ ತನ್ನ ರಾಜ್ಯದ ಪೂರ್ವದಲ್ಲಿ ಅಂದರೆ ಪಾಲಾರ್ ನದಿಯಾಚೆಗೆ ಆಳುತ್ತಿದ್ದ ಮಹಾಬಲಿ ಬಾಣರನ್ನು ಸೋಲಿಸಿ ಬಾಣವಂಶದಾವಾನಲ ಎಂಬ ಬಿರುದನ್ನು ಪಡೆದ ಎಂದು ಅನಂತರದ ಕಾಲದ ಕೆಲವು ಶಾಸನಗಳಲ್ಲಿ ಹೇಳಿಕೆಗಳಿವೆ. ಶಾಸನಗಳ ಪ್ರಕಾರ 2ನೆಯ ಮಾಧವ ಇವನ ಮಗ.

ಮುಂದೆ ಗಂಗವಂಶದಲ್ಲಿ ಆಳಿದ ಹಲವು ಅರಸರೂ ತಮ್ಮ ಹೆಸರಿನ ಜೊತೆಗೆ ಕೊಂಗುಣಿವರ್ಮ ಎಂದು ಸೇರಿಸಿಕೊಳ್ಳುತ್ತಿದ್ದರೆಂದು ತೋರುತ್ತದೆ. (ಎಂ.ಎಸ್.ಕೆ.)

**ಕೊಂಡಜ್ಜಿ :** ಹಾಸನ ಜಿಲ್ಲೆ ಹಾಸನ ತಾಲ್ಲೂಕಿನ ಒಂದುಗ್ರಾಮ. ಸಾಲಗಾಮೆ ಹೋಬಳಿಗೆ ಸೇರಿದ್ದು, ಹಾಸನ ನಗರಕ್ಕೆ ಉತ್ತರದಲ್ಲಿ 16ಕಿಮೀ ದೂರದಲ್ಲಿದೆ. ಇಲ್ಲಿನ ಚನ್ನಕೇಶವ (ಅಲ್ಲಾಳನಾಥ) ದೇವಾಲಯ ಪ್ರಸಿದ್ಧವಾದದ್ದು. ಇದು 14ನೆಯ ಶತಮಾನದಲ್ಲಿ ಕಟ್ಟಿದ್ದೆಂದು ತಿಳಿದುಬರುತ್ತದೆ. ವಿಜಯನಗರದ ಮಧ್ಯಕಾಲದಲ್ಲಿ ಪಾಳುಬಿದ್ದ ದೇವಾಲಯ ಮತ್ತೆ ಊರ್ಜಿತಗೊಂಡಿದೆ. ದೇವಾಲಯದಲ್ಲಿರುವ ಮೂಲ ವಿಗ್ರಹ 14' ಎತ್ತರವಿದೆ. ಈ ದೇವಾಲಯಕ್ಕೆ ಎರಡು ಫರ್ಲಾಂಗ್ ದೂರದಲ್ಲಿ ಮತ್ತು ಈಗಿರುವ ಗ್ರಾಮಕ್ಕೆ ಪಶ್ಚಿಮದಲ್ಲಿ ಬೃಹತ್ ಶಿಲಾಸಮಾಧಿಗಳ ಸಮೂಹವಿದೆ. ಈ ಗ್ರಾಮದ ಹತ್ತಿರ ಇರುವ ಸೀಗೆಗುಡ್ಡದ ಮೇಲಿನಿಂದ ಸುತ್ತಣ ಪ್ರಕೃತಿಯ ಚೆಲುವನ್ನು ಆಸ್ವಾದಿಸಬಹುದು. *

**ಕೊಂಡರಹಳ್ಳಿ :** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಾಲ್ಲೂಕಿನಲ್ಲಿ ಕಸಬೆಯಿಂದ ಈಶಾನ್ಯಕ್ಕೆ 18ಕಿಮೀ ದೂರದಲ್ಲಿರುವ ಒಂದು ಹಳ್ಳಿ. ಮೊದಲು ಇದೊಂದು ಅಗ್ರಹಾರವಾಗಿತ್ತು. 11ನೆಯ ಶತಮಾನದಲ್ಲಿ ಈ ಊರು ಚೋಳರ ಆಳಿಕೆಗೆ ಒಳಪಟ್ಟಿತ್ತೆಂದು ಇಲ್ಲಿ ದೊರೆತಿರುವ ಶಾಸನಗಳಿಂದ ತಿಳಿದುಬರುತ್ತದೆ. ಇಲ್ಲಿ ದ್ರಾವಿಡ ಶೈಲಿಯಲ್ಲಿ ಕಟ್ಟಲಾದ ಧರ್ಮೇಶ್ವರ ದೇವಾಲಯವಿದೆ. ಇದರ ಪ್ರಾಕಾರದಲ್ಲಿ 1065ರ ಶಾಸನ ಒಂದಿದೆ. ಈ ದೇವಾಲಯ ದಕ್ಷಿಣಾಭಿಮುಖವಾಗಿದ್ದು ಇದರಲ್ಲಿರುವ ಲಿಂಗ ಪೂರ್ವಾಭಿಮುಖವಾಗಿದೆ. ಲಿಂಗಕ್ಕೆ ಎದುರಾಗಿರುವ ಗೋಡೆಯಲ್ಲಿ ಸಾಲುರಂಧ್ರಗಳ ವಾತಾಯನವಿದೆ. ದೇವಾಲಯದಲ್ಲಿ ಮೂರು ಗುಡಿಗಳಿದ್ದು, ಮಧ್ಯದ ಕೋಣೆಯಲ್ಲಿ ಲಿಂಗವಿರುವ ಸುಕನಾಸಿಯೂ ಆಚೀಚೆ ಪಾರ್ವತಿ ಮತ್ತು ಗಣಪತಿಯ ಗುಡಿಗಳೂ ಇವೆ. ಸುಕನಾಸಿಯ ಪ್ರವೇಶದ್ವಾರದ ಬಲಗಡೆ ದುರ್ಗಾದೇವಿ ಮತ್ತು ಎಡಗಡೆ ಭೈರವಮೂರ್ತಿಗಳಿವೆ. ದೇವಾಲಯದ ನವರಂಗ ನಾಲ್ಕು ಕಂಬಗಳಿಂದ ಕೂಡಿದ್ದು. ನವರಂಗದ ಆಗ್ನೇಯ, ಈಶಾನ್ಯ ಮತ್ತು ನೈಋತ್ಯ ದಿಕ್ಕುಗಳಲ್ಲಿರುವ ಕಂಬಗಳ ಮೇಲೆ ಮಹಾಭಾರತಕ್ಕೆ ಸಂಬಂಧಿಸಿದ ಚಿತ್ರಗಳನ್ನು ಕೆತ್ತಲಾಗಿದೆ. ನವರಂಗದ ಚಾವಣಿ ಸಮತಟ್ಟಾಗಿದೆ. ಏಳು ಚದರಡಿಗಳಷ್ಟು ವಿಸ್ತಾರವಾಗಿರುವ ಈ ಚಾವಣಿಯ ಮಧ್ಯದಲ್ಲಿ ಅಷ್ಟದಿಕ್ಪಾಲಕ ವಿಗ್ರಹಗಳನ್ನುಳ್ಳ ಕಮಲದ ಹೂವಿನ ಕೆತ್ತನೆ ಇದೆ. (ಕೆ.ಆರ್.ಆರ್.)

**ಕೊಂಡ ಹಾಯುವುದು :** ದೇವರಿಗೆ ಹರಕೆ ಹೊತ್ತವರು ಗೊತ್ತಾದ ದಿನ ನಿಗಿನಿಗಿ ಉರಿಯುತ್ತಿರುವ ಕೆಂಡದ ಕೊಂಡದಲ್ಲಿ ಬರಿಗಾಲಿನಲ್ಲಿ ನಡೆದುಹೋಗುವ ಒಂದು ಜನಪದ ಸಂಪ್ರದಾಯ. ಇದನ್ನು ಕೆಂಡದ ಮೇಲೆ ನಡೆಯುವುದು ಎಂದೂ ಕರೆಯುತ್ತಾರೆ. ಕರ್ನಾಟಕದ ಅನೇಕ ಭಾಗಗಳಲ್ಲಿ ಈ ಸಂಪ್ರದಾಯ ಇಂದಿಗೂ ಉಳಿದುಬಂದಿದೆ. ಸಾಮಾನ್ಯವಾಗಿ ಹೆಣ್ಣು ದೇವತೆಗಳ ಗುಡಿಗಳ ಎದುರು ಇಂಥ ಕೊಂಡಗಳಿರುತ್ತವೆ. ಇವು ಉಗ್ರ ಅಥವಾ ತಾಮಸ ದೇವತೆಗಳ ಗುಡಿಗಳೆದುರೇ ಇರುವುದು ಹೆಚ್ಚು.

ಕೊಂಡ ಹಾಯಬೇಕಾಗಿರುವ ಹಿಂದಿನ ದಿನ ಭಕ್ತರು ಮಡಿ ಉಪವಾಸವಿದ್ದು, ಕೊಂಡಕ್ಕೆ ಬೇಕಾಗುವ ಸೌದೆ ಕಡಿದು ತಂದು ಅದನ್ನು ಕೊಂಡದಲ್ಲಿ ತುಂಬಿ ಬೆಂಕಿ ಹಚ್ಚುತ್ತಾರೆ. ಮಾರನೆಯ ದಿನ ಕೊಂಡ ಹಾಯುವ ವೇಳೆಗೆ ಸೌದೆಯೆಲ್ಲಾ ಉರಿದು ಕೆಂಡವಾಗಿರುತ್ತದೆ. ಅನಂತರ ಒಂದು ಜವಣಿಗೆಯಿಂದ ಕೊಳ್ಳಿಗಳನ್ನು ಈಚೆ ಎಳೆದು, ಕೆಂಡವನ್ನು ಮಟ್ಟಸ ಮಾಡುತ್ತಾರೆ. ಕೆಂಡದ ಮೇಲಿರುವ ಬೂದಿಯನ್ನು ತೆಗೆಯುತ್ತಾರೆ. ಈ ರೀತಿ ಕೆಂಡದ ಕೊಂಡ ನಿರ್ಮಿಸಿದ ಅನಂತರ, ದೇವರನ್ನು ಹೊತ್ತ ಜನ, ಅವರ ಹಿಂದೆ ದೇವರ ಬಸವ, ಅದರ ಹಿಂದೆ ಕೆಂಡ ತುಳಿಯುವುದಾಗಿ ಹರಕೆ ಹೊತ್ತುಕೊಂಡ ಭಕ್ತರು ಕೆಂಡವನ್ನು ಹಾಯುತ್ತಾರೆ. ಸಾಮಾನ್ಯವಾಗಿ ಕೊಂಡ ನಾಲ್ಕೈದು ಹೆಜ್ಜೆಗಳಲ್ಲಿ ದಾಟಬಹುದಾಗಿರುವಷ್ಟು ವಿಸ್ತಾರವಾಗಿರುತ್ತದೆ. ಕೆಂಡ ತುಳಿದ ಜನರ ಕಾಲಿನಲ್ಲಿ ಬೊಬ್ಬೆ ಬಂದಿರುವುದಿಲ್ಲ; ಕಾಲಿನಲ್ಲಿ ಗಾಯವಾಗಿರುವುದಿಲ್ಲ. ನೆಲದ ಮೇಲೆ ನಡೆದಷ್ಟೇ ಸಲೀಸಾಗಿ ಕೆಂಡದ ಮೇಲೆ ಈ ಜನ ಹಾದು ಬಂದಿರುತ್ತಾರೆ. ಕೆಂಡ ತಮ್ಮ ಕಾಲನ್ನು ಸುಡದಿರಲು ದೇವರಲ್ಲಿ ತಮಗಿರುವ ನಂಬಿಕೆಯೇ ಕಾರಣವೆಂದು ಇವರು ಹೇಳುತ್ತಾರೆ. ಕೊಂಡಗಳನ್ನು ಹಗಲು ಕೊಂಡ, ಇರುಳು ಕೊಂಡ ಎಂದು ವಿಂಗಡಿಸುವುದು ವಾಡಿಕೆ. ಕೆಂಡದ ಮೇಲೆ ನಡೆಯುವುದು ಒಂದು ಧಾರ್ಮಿಕ ಆಚರಣೆ. ಜನ ತಮಗೆ ಏನಾದರೂ ತೊಂದರೆಯೋ ಕಾಯಿಲೆಯೋ ಆದಾಗ ಅದು ಪರಿಹಾರವಾದರೆ ದೇವರ ಜಾತ್ರೆಯಲ್ಲಿ ಕೊಂಡ ಹಾಯುವುದಾಗಿ ಹರಕೆ ಮಾಡಿಕೊಳ್ಳುತ್ತಾರೆ. ಈ ಹರಕೆ ತೀರಿಸುವ ಉದ್ದೇಶದಿಂದ ಕೊಂಡ ಹಾಯುತ್ತಾರೆ. ಕೊಂಡ ಹಾಯುವ ಜನ ತುಂಬ ಕಟ್ಟುನಿಟ್ಟಾಗಿರಬೇಕು. ಮೈಲಿಗೆ ಮಾಡಿಕೊಳ್ಳಬಾರದು; ಉಪವಾಸವಿರಬೇಕು; ಎಲ್ಲಕ್ಕಿಂತ ಮಿಗಿಲಾಗಿ ದೇವರಲ್ಲಿ ನಂಬಿಕೆ ಇಡಬೇಕು. ವಿಜ್ಞಾನ ಇದನ್ನು ನಂಬದಿದ್ದರೂ ಕೆಂಡದ ಮೇಲೆ ನಡೆಯಲು ಮನಸ್ಥೈರ್ಯ ಬಹಳ ಅಗತ್ಯ ಎಂದು ಹೇಳುತ್ತದೆ. ಕೆಲವು ಕಡೆಗಳಲ್ಲಿ ಭಕ್ತರ ತಲೆಯ ಮೇಲೆ ಬಾಳೆಯ ಎಲೆಯನ್ನಿಟ್ಟು, ಅದರ ಮೇಲೆ ಕೆಂಡವನ್ನು ಹಾಕಿ ಅನಂತರ ನೀರು ಹೊಯ್ಯುವುದೂ ಉಂಟು.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಜನ ಬೆಂಕಿಗೆ ಕೊಟ್ಟಿರುವ ಮಹತ್ವ. ಬೆಂಕಿಯನ್ನು ಹಾಯುವುದರ ಮೂಲಕ ವ್ಯಕ್ತಿತ್ವ ಶುದ್ಧವಾಗುತ್ತದೆ. ಕಾಯಿಲೆ ಕಸಾಲೆಗಳು ದೂರವಾಗುತ್ತವೆ. ಮಳೆಬೆಳೆಗಳು ವೃದ್ಧಿಯಾಗುತ್ತವೆ. ನಿಸರ್ಗದಿಂದ ಉಂಟಾಗಬಹುದಾದ ಹಾನಿ ತಪ್ಪುತ್ತದೆ ಎಂಬ ನಂಬಿಕೆ ಪ್ರಬಲ ಕಾರಣ. ಸೀತೆಯ ಅಗ್ನಿಪ್ರವೇಶ ಪ್ರಸಂಗವನ್ನು ಈ ಸಂಪ್ರದಾಯ ನೆನಪಿಗೆ ತರುತ್ತದೆ. ಇಂಥದೇ ಆಚರಣೆ ದಕ್ಷಿಣ ಕನ್ನಡ, ಕೊಡಗು, ಉತ್ತರ ಕೇರಳ ಪ್ರದೇಶಗಳಲ್ಲಿ ಒತ್ತೆಕೋಲ ಎಂಬ ಹೆಸರಿನಲ್ಲಿ ರೂಢಿಯಲ್ಲಿದೆ ಎಂದು ತಿಳಿದುಬರುತ್ತದೆ. ಒಟ್ಟಿನಲ್ಲಿ ದೇವರ ಸಾಕ್ಷಿಯಲ್ಲಿ ತಾವು ಪರಿಶುದ್ಧರೆಂಬದನ್ನು ದೈವದ್ರೋಹ ಅಥವಾ ಜನದ್ರೋಹ ಮಾಡಿಲ್ಲವೆಂಬುದನ್ನು ರುಜುವಾತು ಪಡಿಸಿಕೊಳ್ಳಲು ಜನಪದರು ಬೆಳೆಸಿ ಉಳಿಸಿಕೊಂಡು ಬಂದಿರುವ ಪದ್ಧತಿ ಇದೆಂದು ಹೇಳಬಹುದು. (ಟಿ.ಎನ್.ಎಸ್.)

**ಕೊಂತಿಪೂಜೆ :** ಮಂಡ್ಯ ಹಾಗೂ ಮೈಸೂರು ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬಂದರೂ ಕರ್ನಾಟಕದ ಬಹುಭಾಗಗಳಲ್ಲಿ ಆಚರಣೆಯಲ್ಲಿರುವ ಒಂದು ವಿಶಿಷ್ಟ ಜನಪದ ಸಂಪ್ರದಾಯ. ಇದು ಪ್ರತಿವರ್ಷ ಕಾರ್ತಿಕಮಾಸದ ಬೆಳದಿಂಗಳ ರಾತ್ರಿಗಳಲ್ಲಿ ಹದಿನಾರು ದಿನಗಳ ಕಾಲ ವಿಜೃಂಭಣೆಯಿಂದ ನಡೆಯುತ್ತದೆ (ಕೆಲವು ಕಡೆ ದೀವಳಿಗೆಯ ತಿಂಗಳಿನ ಮೊದಲನೆಯ ಅಥವಾ ಕಡೆಯ ಸೋಮವಾರ ಪ್ರಾರಂಭವಾಗಿ ಒಂದು ತಿಂಗಳ ಕಾಲ ನಡೆಯುವುದೂ ಉಂಟು). ಆದರ್ಶಸತಿ, ಮಾತೆ ಎಂದೆನಿಸಿದ ಕುಂತಿಯನ್ನು (ಆಡುಮಾತಿನಲ್ಲಿ ಕೊಂತಿ ಆಗಿದೆ) ತಮಗೂ ಸತ್‌ಸಂತಾನ, ಸತ್‌ಕೀರ್ತಿ ಲಭಿಸಲೆಂಬ ಉದ್ದೇಶದಿಂದ ಹಳ್ಳಿಯ ಹೆಣ್ಣುಮಕ್ಕಳು ಪೂಜಿಸುತ್ತಾರೆ. ಮೈನೆರೆದ ಕನ್ಯೆಯನ್ನು ಗುಡ್ಲು ಕೂಡಿಸುವುದು, ಪ್ರಸ್ತ ಇವುಗಳಿಗೂ ಕೊಂತಿ ಪೂಜೆಗೂ ಸಾಂಕೇತಿಕ ಸಂಬಂಧವಿರುವಂತೆ ತೋರುತ್ತದೆ. ಕೊಂತಿಯನ್ನು ಹೆಚ್ಚಾಗಿ ಒಕ್ಕಲಿಗರು, ಹರಿಜನರು, ಗೊಲ್ಲರು, ಕುಂಚಿಟಿಗರು, ಬೆಸ್ತರು, ಕೆಲವು ಕಡೆ ಶಿವ ಭಕ್ತರು ಪೂಜಿಸುವರು.

ಕೊಂತಿಪೂಜೆ ಸಾಮಾನ್ಯವಾಗಿ ಎಲ್ಲ ಕಡೆಗಳಲ್ಲೂ ಸೋಮವಾರ ಪ್ರಾರಂಭವಾಗುತ್ತದೆ. ಅಂದು ರಾತ್ರಿ ಹೆಂಗಸರು ಕೊಂತಿಯನ್ನು ಕೂಡಿಸುವ ಸ್ಥಳವನ್ನು ಹಸುವಿನ ಸಗಣಿಯಿಂದ ಸಾರಿಸಿ ಸ್ವಚ್ಛಗೊಳಿಸಿ ಪಡಸಾಲೆಯ ಪಶ್ಚಿಮ ದಿಕ್ಕಿನ ಗೋಡೆಯ ಮೇಲೆ, ನೆಲದಿಂದ ಒಂದು ಮೊಳ ಮೇಲಕ್ಕಾದಂತೆ, ಹಸಿ ಎರೆಮಣ್ಣಿನಿಂದ ಅಥವಾ ಸಗಣಿಯಿಂದ ಕುದುರೆಗೊರಸಿನ ಆಕೃತಿಯ ಒಂದು ಪ್ರಾಕಾರವನ್ನು ಬಿಡಿಸುವರು. ಇದೇ ಋತುಮತಿಯಾದ ಕೊಂತಿಯನ್ನು ಕೂರಿಸುವ ಗುಡಿಸಲು. ಪ್ರಾಕಾರದ ಒಳಗಡೆ ಎರೆಮಣ್ಣಿನಿಂದ ತಿದ್ದಿ ಮಾಡಿದ ಸುಂದರವಾದ ಸ್ತ್ರೀವಿಗ್ರಹವನ್ನು ಇಡುವರು. ಇದೇ ಕೊಂತಿ. ಕೆಲವು ಕಡೆ ಸಣ್ಣ ಗುಂಡುಕಲ್ಲನ್ನೇ ಕೊಂತಿಯೆಂದು ಭಾವಿಸಿ ಪೂಜಿಸುವುದೂ ತೇಗದ ಮರದಲ್ಲೂ ಬಳಪದ ಕಲ್ಲಿನಲ್ಲೂ ಕೊಂತಿಯ ವಿಗ್ರಹ ಮಾಡಿಟ್ಟುಕೊಳ್ಳುವುದೂ ಉಂಟು. ಕೊಂತಿಯನ್ನು ಹುಚ್ಚೆಳ್ಳು ಹೂ ಮುಂತಾದ ಹೂಪತ್ರೆಗಳಿಂದ ಅಲಂಕರಿಸುವರು. ಪೂಜಾ ಸಾಮುಗ್ರಿಗಳನ್ನೂ ತಿಂಡಿಪದಾರ್ಥಗಳನ್ನೂ ಮುಂದೆ ಇಟ್ಟು ಎಲ್ಲರೂ ಭಕ್ತಿಯಿಂದ ಪೂಜಿಸುವರು. ಪೂಜೆಯ ಸಮಯದಲ್ಲಿ ತಪ್ಪದೆ ಕೊಂತಿಪದಗಳನ್ನು ಹಾಡುವರು. ಇವು ಜನಪದ ಮಹಿಳೆಯರ ಸಾಂಘಿಕ ಸೃಷ್ಟಿಯಾಗಿದ್ದು ತುಳುನಾಡಿನ ಪಾಡ್ದನಗಳಂತೆ, ದಕ್ಕಿಬಲಿಯ ಹಾಡುಗಳಂತೆ, ಬಯಲು ನಾಡಿನ ತಿಂಗಳಮಾವನ ಹಾಡುಗಳಂತೆ ವಿಶಿಷ್ಟ ಗೀತೆಗಳಾಗಿವೆ; ಬೆಡಗಿನ ಭಾವಗೀತೆಗಳ ಬೆರಗಿನ ಧಾಟಿಗಳಿಗೆ ಪ್ರಸಿದ್ಧವಾಗಿವೆ.

ಕೊಂತಿಪದಗಳ ವಸ್ತು ಪ್ರಧಾನವಾಗಿ ಕೊಂತಿಯ ಬಾಲ್ಯದಿಂದ ಅವಳ ಒಸಗೆಯ ವರೆಗಿನ ಘಟನೆಗಳೇ ಆದರೂ ಸಮಗ್ರ ಭಾರತದ ಕಥೆಯನ್ನೇ ಸ್ಥೂಲವಾಗಿ ಒಳಗೊಂಡಿದೆ. ಹಾಡುವ ಎರಡು ಗುಂಪುಗಳಲ್ಲಿ ಒಂದು ಗುಂಪಿನವರು ಪಲ್ಲವಿಯನ್ನೂ ಇನ್ನೊಂದು ಗುಂಪಿನವರು ಪದಗಳನ್ನೂ ರಾಗಬದ್ಧವಾಗಿ ಹಾಡುವರು.

ಒನ್ಕೊಂತಿ ಪೂಜೆ, ಒನ್ನೆಲ್ಲ ತಾರ್ಸಿ  
ಇಂಬಿಗೆ ಹೋದಣ್ಣ, ಏನೇನು ತಂದಾನು  
ಇಂಬಾಳೆ ತಂದಾನು, ಮುಂಬಾಳೆ ತಂದಾನು  
ಇಷ್ಟೆಲ್ಲನೂ ತಂದೋನS ನಮ್ಕೊಂತಿಗೆ ಹೂವೇಕೆ ತರಲಿಲ್ಲವೋS;

ಇದು ಕೊಂತಿಪೂಜೆಯ ನಾಂದಿ ಹಾಡು. ಈ ಹಾಡು ಏಡ್ಕೊಂತಿ ಪೂಜೆ, ಮೂರ್ಕೊಂತಿ ಪೂಜೆ ಎಂದು ಹತ್ತರವರೆಗೆ ಮುಂದುವರಿಯುತ್ತದೆ. ಕೆಲವು ಕಡೆ ಈ ನಾಂದಿ ಹಾಡಿಗೆ ಬದಲಾಗಿ

ಕೊಂತೆಮ್ಮ ನಿನಗುಡಿಗೇ  
ಎಂತೇವು ಬರಬೇಕು  
ಮುತ್ತೀನ ಬಊತಾಲೇ ಮುದುಕೀರು  
ಮುತ್ತೀನ ಬಊತಾಲೇ ಮುದಕೀರು ಬಂದಾರೆ  
ಕೊಂತೆಮ್ಮನ ಗುಡಿಗೇ ಕಲಿಯಾಯ್ತು

ಒಂದು ದೀಪಕ್ಕೆ ಒಂದೇ ಬತ್ತಿಯನ್ಹಾಕಿ ಒಂದು ಮಾನೆಣ್ಣೆ ಆಳಾದ್ಹೂದು ಎಂಬ ಹಾಡನ್ನು, ತೂಗುದೀಪ ಉರಿದುವಮ್ಮ ತಾಯಿ ಕೊಂತಿ ಗುಡಿಯಲ್ಲಿ ಭಾಗುವಂತರಾಡುತಾರಮ್ಮ ಎಂಬ ಪಲ್ಲವಿಯೊಂದಿಗೆ ಹಾಡುವರು. ಇದು ಎರಡು ದೀಪಕ್ಕೆ, ಮೂರು ದೀಪಕ್ಕೆ ಎಂದು ಐದು ನುಡಿಗಳವರೆಗೆ ಮುಂದುವರಿಯುತ್ತದೆ.

ಮಲ್ಲಿಗೆ ಹೂವ ತಂದ ಕೊಂತಮ್ಮ ಚಿಲಕ ಬಟ್ಟಲ ನೀಡೋS; ಶಿವರಾಯ ದಂಡೆತ್ತಿ ಕೇಳಿ ಬಂದಾS ಸಾಲುಮಲ್ಲಿಗೆ ಕೊಂತಮ್ಮನ ಮುಡಿಗೆರಡು ಮುತ್ತಿನ ಕುಚ್ಚು; ತಣ್ಣೀರು ತನುವಾಯಿತೋ ಕೊಂತಮ್ಮ ತಾವರೆ ಕೊಳವಾಯಿತೋ; ಅಚ್ಚೆಚ್ಚಳ ಬೆಳದಿಂಗಳೋ ಕೊಂತಮ್ಮನಿಗೆ ನಿತ್ಯ ವೈಭೋಗವೋ; ಓಕುಳೋಕುಳಿಯ ಬೆಟ್ಟದ ಮೇಲಿರುವ ನೆಲ್ಲಿಮರಕ್ಕೆ ಚಲ್ಲಿದರೋಕುಳಿಯS; ಏನಾದರೇನಾಗಿತ್ತೋ ಹಸ್ತಿನಾಪುರದ ರಾಜ್ಯವು ದಾಯಾದಿ ಪಾಲಾಗಿತ್ತೋ - ಈ ಮೊದಲಾದ ಪಲ್ಲವಿಗಳನ್ನೊಳಗೊಂಡ ಕೊಂತಿಯ ಪದಗಳು ಸಹೃದಯರ ಮನಸ್ಸನ್ನು ಸೂರೆಗೊಳ್ಳುತ್ತವೆ.

ಪೂಜೆಯ ಕೊನೆಯ ದಿನ ರಾತ್ರಿ ಕೊಂತಿಯನ್ನು ವಿಸರ್ಜಿಸುತ್ತಾರೆ. ಅದಕ್ಕಾಗಿ ಮಣ್ಣಿನಲ್ಲಿ ಕೊಂತಿ ಮತ್ತು ಪಾಂಡುವಿನ ದೊಡ್ಡ ವಿಗ್ರಹಗಳನ್ನು ಮಾಡಿ ಇಬ್ಬರು ವಯಸ್ಸಿನ ಹುಡುಗರಿಗೆ ಹೆಣ್ಣು ಗಂಡಿನ ವೇಷ ಹಾಕಿ ಅವರಿಂದ ವಿಗ್ರಹಗಳನ್ನು ಹೊರಿಸಿಕೊಂಡು ಮೆರವಣಿಗೆಯೊಂದಿಗೆ ಊರ ಹೊರಗೆ ರಾಗಿ ಅಥವಾ ನವಣೆಯ ಹೊಲಕ್ಕೆ ಬರುವರು. ಹೊಲದಲ್ಲಿ ಒಂದೆಡೆ ವಿಗ್ರಹಗಳನ್ನು ಒಟ್ಟಿಗೆ ಇಟ್ಟು ಪೂಜಿಸಿ ಒಸಗೆಯ ಶಾಸ್ತ್ರ ತೀರಿಸಿ ಮನೆಗೆ ತೆರಳುವರು.

ಬಾಳೆಯ ತೋಟದಲ್ಲಿ ಬಾಲನಾಡುತ ಬಂದ  
ಬಾಲೇಸ್ತ್ರೀ ಶಿವನ ಪಾದಕ್ಕೆ ಎತ್ತಿದಳಾರತಿಯ  
ಶ್ರೀ ದ್ರೌಪದಿ ಬೆಳಗಿದಳಾರತಿಯ

ಇದು ಕೊಂತಿಪೂಜೆಯ ಮುಕ್ತಾಯ ಗೀತೆ. ಅಲ್ಲಿಗೆ ಮನೆಯಲ್ಲಿ ಪ್ರಾರಂಭವಾದ ಕೊಂತಿಪೂಜೆ ಬಾಳಿಗೆ ಸಂಕೇತವೋ ಎನ್ನುವಂತೆ ಬಯಲಿನಲ್ಲಿ ಮುಕ್ತಾಯವಾಗುತ್ತದೆ. ಇದು ಹಳ್ಳಿಗರಷ್ಟೇ ಸರಳವಾದ, ಅರ್ಥವತ್ತಾದ ಒಂದು ಕಟ್ಟಳೆ. ಕೊಂತಿ ಪೂಜೆ ಸಂಪ್ರದಾಯದ ವಿವರಣೆಯೊಂದಿಗೆ ಪದಗಳನ್ನು ಸಂಗ್ರಹಿಸಿ ಡಿ.ಲಿಂಗಯ್ಯ ಅವರು ಕೊಂತಿಪೂಜೆ ಎಂಬ ಕಿರುಹೊತ್ತಗೆಯನ್ನು ಪ್ರಕಟಿಸಿದ್ದಾರೆ (1967). ಕ್ಯಾತನಹಳ್ಳಿ ರಾಮಣ್ಣ ಅವರ ಕೊಂತಿಪೂಜೆ ಒಂದು ಅಧ್ಯಯನ ಈ ವಿಷಯದ ಬಗ್ಗೆ ಬಂದಿರುವ ಇನ್ನೊಂದು ಕೃತಿ. *

**ಕೊಂಬಿನ ಸಾಮಾನುಗಳು :** ಎಮ್ಮೆ, ದನ ಮುಂತಾದ ಪ್ರಾಣಿಗಳ ಕೊಂಬಿನಿಂದ ನಾಜೂಕಾದ ಸಾಮಾನುಗಳನ್ನು ತಯಾರಿಸುವ ಕಲೆ ಭಾರತದಲ್ಲಿ ಬಹಳ ಹಿಂದಿನಿಂದ ಕೈಕಸಬಾಗಿ ಉಳಿದುಬಂದಿದೆ. ಮುಖ್ಯವಾಗಿ ಗುಜರಾತ್, ರಾಜಸ್ಥಾನ, ಬಿಹಾರ, ಒರಿಸ್ಸ ಹಾಗೂ ಕರ್ನಾಟಕ ರಾಜ್ಯದಲ್ಲಿ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ, ಕುಮಟ, ತಾಲ್ಲೂಕುಗಳಲ್ಲಿಯೂ ಬೆಳಗಾಂವಿ ಜಿಲ್ಲೆಯ ಖಾನಾಪುರದಲ್ಲಿಯೂ ಈ ಕಸಬಿನವರನ್ನು ಇಂದಿಗೂ ಕಾಣಬಹುದು.



ಕೊಂಬಿನಿಂದ ತಯಾರಿಸಿದ ವಸ್ತುಗಳು

ಮೊದಲು ಡೊಂಬಾರಿ ಜನ ಈ ಸಾಮಾನುಗಳನ್ನು ತಯಾರಿಸುತ್ತಿದ್ದರಾದರೂ ಅವರು ತಯಾರಿಸುತ್ತಿದ್ದ ಸಾಮಾನುಗಳು ಅಷ್ಟು ನಯವಾಗಿಯೂ ಕಲಾತ್ಮಕವಾಗಿಯೂ ಇರುತ್ತಿರಲಿಲ್ಲ. ಈ ಕಲೆಯನ್ನು ಉತ್ತಮಪಡಿಸಬೇಕೆಂಬ ಉದ್ದೇಶದಿಂದ ಹನುಮಂತರಾವ್ ಕೌಜಲಗಿಯವರು ಡೊಂಬಾರಿ ಜನರನ್ನು ಕಲೆ ಹಾಕಿ ಅವರಿಗೆ ಪ್ರೋತ್ಸಾಹ ಕೊಟ್ಟಿದ್ದುಂಟು. ಆದರೆ ಅಲೆಮಾರಿಗಳಾದ ಡೊಂಬಾರಿಗಳು ಒಂದು ಕಡೆ ನೆಲೆನಿಲ್ಲದೆ ಹೊರಟುಹೋದರಾದ ಕಾರಣ ಕೌಜಲಗಿಯವರ ಉದ್ದೇಶ ನೆರವೇರಲಿಲ್ಲ. ಅನಂತರ ಸು.1938ರಲ್ಲಿ ಕೌಜಲಗಿಯವರೂ ಎಸ್.ಕೆ.ಕಲ್ಲಾಪುರ ಅವರೂ ಒಂದಾಗಿ ಹೊನ್ನಾವರದಲ್ಲಿ ಒಂದು ತರಬೇತು ಸಂಸ್ಥೆಯನ್ನು ಸ್ಥಾಪಿಸಿದರು. ಇಲ್ಲಿ ತರಬೇತಿ ಕೊಡಲು ನುರಿತ ಶಿಕ್ಷಕರನ್ನು ಬಿಹಾರ, ಒರಿಸ್ಸಗಳಿಂದ ಕರೆಸಲಾಗಿತ್ತು. ಪ್ರತಿಯೊಬ್ಬ ವಿದ್ಯಾರ್ಥಿಗೂ 15 ರೂಪಾಯಿ ವಿದ್ಯಾರ್ಥಿವೇತನ ಸಿಗುತ್ತಿತ್ತು. ಈ ಸಂಸ್ಥೆ ಮೂರು ವರ್ಷಗಳವರೆಗೆ ತರಬೇತು ಕೊಟ್ಟು ಸು.30-40 ಜನರನ್ನು ತಯಾರಿಸಿತು. ಹೀಗೆ ತರಬೇತಿ ಪಡೆದವರಲ್ಲಿ ಯಾರೂ ಈ ಕಸಬನ್ನು ಮಾಡುವವರ ಮನೆತನದವರಾಗಿರಲಿಲ್ಲ ಎಂಬುದು ಗಮನಾರ್ಹವಾದ ವಿಷಯ.

ಮುಂದೆ 1942ರಲ್ಲಿ ತರಬೇತು ಪಡೆದ 15 ಜನ ಒಂದಾಗಿ ಒಂದು ಸಹಕಾರಿ ಸಂಘವನ್ನು ಸ್ಥಾಪಿಸಿದರು. ಆರು ವರ್ಷಗಳಲ್ಲಿ ಸದಸ್ಯರ ಸಂಖ್ಯೆ 80ಕ್ಕೆ ಏರಿತು. ಸಂಘ ತಯಾರಿಸಿದ ಸಾಮಾನುಗಳನ್ನು ಮುಂಬಯಿಯ ಗೃಹಕೈಗಾರಿಕೆ ಮತ್ತು ಚಿಕ್ಕ ಉದ್ದಿಮೆ ಸಾಮಾನುಗಳ ಮಾರಾಟ ಮಳಿಗೆಯವರು ಕೊಂಡು ಮಾರುತ್ತಿದ್ದರು. ಆಗ ಈ ಸಾಮಾನುಗಳಿಗೆ ಪರದೇಶದ ಜನರ ಬೇಡಿಕೆ ಬಹಳಷ್ಟಿತ್ತು. ಕ್ರಮೇಣ ಆ ಬೇಡಿಕೆ ಕಡಿಮೆಯಾದಂತೆ ಕೊಂಬಿನ ಸಾಮಾನಿನ ತಯಾರಿಕೆ ಹಿಂದೆ ಬಿತ್ತು.



ಕೊಂಬಿನಿಂದ ತಯಾರಿಸಿದ ಆಧುನಿಕ ಕಲಾವಸ್ತುಗಳು

ಕುಶಲಕಲೆಗಳಿಗೆ ಸರ್ಕಾರ ಈಗ ನೀಡುತ್ತಿರುವ ಪ್ರೋತ್ಸಾಹದಿಂದ ಈ ಕಲೆ ಅಭಿವೃದ್ಧಿ ಹೊಂದಬಹುದೆಂಬ ಭರವಸೆ ಕಂಡುಬರುತ್ತಿದೆ.

ವಸ್ತುಗಳ ತಯಾರಿಕೆಗೆ ಮೊದಲು ಕೊಂಬುಗಳನ್ನು ಸ್ವಚ್ಛಪಡಿಸಿ ಹದಮಾಡಬೇಕಾಗುತ್ತದೆ. ಬಾಚಣಿಕೆ ಮಾಡಬೇಕಾದಾಗ ಪೊಳ್ಳಾದ ಕೊಂಬಿನ ಒಳಭಾಗವನ್ನು ಕಾಯಿಸಿ ಅದನ್ನು ಅಗಲ ಮಾಡಿ ಒತ್ತಡದ ಉಪಕರಣದಲ್ಲಿ 15-20 ನಿಮಿಷಗಳವರೆಗೆ ಇಡುತ್ತಾರೆ. ಅನಂತರ ನೀರಿಗೆ ಹಾಕಿ ಸ್ವಚ್ಛ ಮಾಡುತ್ತಾರೆ. ಆ ಮೇಲೆ ಅಳತೆಗೆ ತಕ್ಕಂತೆ ಕತ್ತರಿಸಿಕೊಂಡು ಮೇಲ್ಮೈಯನ್ನು ತಿಕ್ಕಿ, ಬಾಚಣಿಕೆಗಳನ್ನು ಮಾಡುತ್ತಾರೆ. ಸಿದ್ಧವಾದ ಬಾಚಣಿಕೆಗಳನ್ನು ಉಪ್ಪು ಕಾಗದದಿಂದ ಉಜ್ಜಿ ಶೃಂಗಕಾಂತ ಮರದ ಎಲೆ ಮತ್ತು ಕರಿ ಸೀಮೆಸುಣ್ಣದ ಪುಡಿಯಿಂದ ತಿಕ್ಕಿ ನಯ ಮಾಡುತ್ತಾರೆ. ಕೊಂಬಿನಿಂದಾದ ವಸ್ತುಗಳಲ್ಲಿ ಬಾಚಣಿಕೆಗಳು, ಹೂದಾನಿಗಳು, ಪ್ರಾಣಿಪಕ್ಷಿ ನಮೂನೆಗಳು ಬಹು ಜನಪ್ರಿಯವೆನಿಸಿವೆ. ಗೋಡೆಯ ಅಲಂಕಾರಕ್ಕಾಗಿ ಸಿದ್ಧಪಡಿಸಿದ ಜಿಂಕೆ ಮತ್ತು ಕಾಡೆಮ್ಮೆಯ ಕೊಂಬುಗಳ ಮಾರಾಟವೂ ಹಿಂದಿನಿಂದ ಲಾಭದಾಯಕವೆನಿಸಿದೆ. *

**ಕೊಟ್ಟಣದ ಸೋಮವ್ವೆ :** ಸು.1160 ವಚನಕಾರ್ತಿ. ಬಸವಣ್ಣನವರ ಸಮಕಾಲೀನ ನಿರ್ಲಜ್ಜ ಶಾಂತಯ್ಯ ಇವಳ ಗುರು. ಇವಳ ಸ್ಥಳ ಕಲ್ಯಾಣ. ಕೊಟ್ಟಣ ಕಟ್ಟುವುದು ಇವಳ ಕಾಯಕವಾಗಿದ್ದು ಪರಮದಾಸೋಹಿಯಾಗಿದ್ದಳು.

ಈಕೆ ನಿರ್ಲಜ್ಜೇಶ್ವರಾ ಎಂಬ ಅಂಕಿತವನ್ನಿಟ್ಟುಕೊಂಡು ವಚನಗಳನ್ನು ಬರೆದಿರುವಂತೆ ತಿಳಿದುಬರುತ್ತದೆ. ಎಲ್ಲ ಶರಣರಂತೆ ತನ್ನ ಅನುಭಾವವನ್ನು ವ್ಯಕ್ತಪಡಿಸಲು ತನ್ನ ಕಾಯಕವನ್ನೇ ದೃಷ್ಟಾಂತವನ್ನಾಗಿ ಉಪಯೋಗಿಸಿಕೊಂಡಿದ್ದಾಳೆ. 'ಹದ ತಪ್ಪಿ ಕುಟ್ಟಲು ನುಚ್ಚಲ್ಲದೆ' ಅಕ್ಕಿಯಿಲ್ಲ. ವ್ರತಹೀನನ ನೆರೆಯ ನರಕವಲ್ಲದೆ ಮುಕ್ತಿಯಿಲ್ಲ, ಅರಿಯದುದುದ ಹೋಗಲಿ, ಅರಿದು ಬೆರೆದೆನಾದೊಡೆ ಕಾದ ಕತ್ತಿಯಲ್ಲಿ ಕಿವಿಯ ಕೊಯ್ವರಯ್ಯಾ, ಒಲ್ಲೆ ಒಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ - ಎಂಬ ಇವಳ ಒಂದೇ ವಚನ ಉಪಲಬ್ಧವಿದ್ದು ವ್ರತ, ಆಚಾರ, ನಿಷ್ಠೆ, ವಿವೇಕಗಳಿಂದೊಡಗೂಡಿದ್ದು ಈಕೆ ಏರಿದ ಎತ್ತರವನ್ನೂ ಗಳಿಸಿದ ಅನುಭಾವಸಂಪತ್ತಿಯನ್ನೂ ಸಾರಿಹೇಳುತ್ತದೆ.

ಸರ್ವಪುರಾತನರ ವಚನಗಳ ಶೀಲಸಂಪಾದನೆಯ ವಚನಗಳು ಎಂಬ ಭಾಗದಲ್ಲಿ, ಹದಿನಾರು ಮಂದಿ ಶರಣೆಯರ ವಚನಗಳೊಂದಿಗೆ ಸೋಮವ್ವೆಯ ವಚನವೂ ಸೇರಿದೆ. (ಎಸ್.ಆರ್‌ಎ.)

**ಕೊಟ್ಟೂರಪ್ಪ :** 1888-1976. ಕನ್ನಡ ರಂಗಭೂಮಿಯ ಪ್ರಸಿದ್ಧ ನಟರು. ಭಕ್ತಿರಸಪ್ರಧಾನವಾದ ಪಾತ್ರಗಳ ಅಭಿನಯಕ್ಕೆ ಹೆಸರಾಗಿದ್ದವರು. ಹುಟ್ಟಿದ್ದು ಬಳ್ಳಾರಿ ಜಿಲ್ಲೆ ಹಡಗಲಿ ತಾಲ್ಲೂಕಿನ ಸೋಗೆ ಎಂಬ ಹಳ್ಳಿಯಲ್ಲಿ. ಇವರ ತಂದೆಗೆ ಬಯಲುನಾಟಕಗಳನ್ನು ಆಡಿಸುವ ಹವ್ಯಾಸವಿತ್ತು. ಹೀಗಾಗಿ ಬಾಲ್ಯದಲ್ಲಿಯೇ ಇವರಿಗೆ ನಾಟಕ ಮತ್ತು ಸಂಗೀತದ ಕಡೆ ಒಲವು ಮೂಡಿತು. ನಿಜಗುಣ ಶಿವಯೋಗಿಗಳ ವಚನಗಳು, ಶಿಶುನಾಳ ಷರೀಫರ ತತ್ತ್ವಪದಗಳು, ಸರ್ಪಣಪ್ಪನವರ ಹಾಡುಗಳು ಇವರ ಎಳೆಯ ಮನಸ್ಸಿನ ಮೇಲೆ ಪ್ರಭಾವ ಬೀರಿದುವು. ಸಂಸ್ಕೃತ ವ್ಯಾಸಂಗಕ್ಕೆಂದು ಹಡಗಲಿಯ ಸಂಸ್ಕೃತ ಪಾಠಶಾಲೆಯನ್ನು ಸೇರಿದ ಇವರಿಗೆ, ಅಲ್ಲಿಯ ಸಂಸ್ಕೃತ ಉಪಾಧ್ಯಾಯರಾಗಿದ್ದ ತುಂಬಿನಕೆರೆ ವೀರಪ್ಪಶಾಸ್ತ್ರಿಗಳು ಸಂಸ್ಕೃತಕ್ಕಿಂತ ಹೆಚ್ಚಾಗಿ ನಾಟಕದ ಬಗ್ಗೆ ಹೇಳಿಕೊಟ್ಟರಲ್ಲದೆ ತಾವು ಪ್ರಯೋಗಿಸಿದ ಹರಿಶ್ಚಂದ್ರ ನಾಟಕದಲ್ಲಿ ಇವರಿಗೆ ಲೋಹಿತಾಶ್ವನ ಪಾತ್ರವನ್ನು ಕೊಟ್ಟರು. ಇದೇ ಕೊಟ್ಟೂರಪ್ಪನವರ ಮೊದಲ ರಂಗಪ್ರವೇಶ; ಆಗಿನ್ನೂ ಇವರು ಎಂಟು ವರ್ಷಗಳ ಬಾಲಕ.

ರಂಗಭೂಮಿಯ ಬಗ್ಗೆ ಒಲವು ಮೂಡಿದ್ದರಿಂದ ಕೊಟ್ಟೂರಪ್ಪನವರು ಶಿರಹಟ್ಟಿ ವೆಂಕೋಬರಾವ್ ಅವರ ನಾಟಕ ಕಂಪನಿಯನ್ನು ಸೇರಿದರು. ಆ ಕಂಪನಿ ಪ್ರದರ್ಶಿಸಿದ ಪದ್ಮಾವತೀಪರಿಣಯ, ಶ್ರೀರಾಮಪಾದುಕಾಪಟ್ಟಾಭಿಷೇಕ ಮೊದಲಾದ ನಾಟಕಗಳಲ್ಲಿ ಅಭಿನಯಿಸಲು ಇವರಿಗೆ ಅವಕಾಶ ದೊರೆಯಿತು. ಕಂಪನಿಯ ಜೊತೆಗೆ ಹರಿಹರ, ಹುಬ್ಬಳ್ಳಿ, ಬೆಳಗಾಂವಿ, ಸೊಲ್ಲಾಪುರ, ಗೋವ ಮುಂತಾದ ಕಡೆ ಸಂಚರಿಸಿದರು. ಬೆಳಗಾಂವಿಯಲ್ಲಿದ್ದಾಗ ಗೋವದ ಹರಿರಾಮ ರಘುನಾಥ್ ಎಂಬುವರ ಪರಿಚಯವಾಗಿ, ಅವರಿಂದ ಹಾರ್ಮೋನಿಯಂ ಕಲಿತರು. ಬೆಂಗಳೂರಿನಲ್ಲಿ ಪಿಟೀಲು ತಾಯಪ್ಪನವರಲ್ಲಿ, ಮೈಸೂರಿನಲ್ಲಿ ಬಿಡಾರಂ ಕೃಷ್ಣಪ್ಪನವರಲ್ಲಿ ಶಿಷ್ಯವೃತ್ತಿ ಮಾಡಿ ಸಂಗೀತವನ್ನು ಕಲಿತರು.

ಅನಂತರ ಇವರು ಪ್ರಸಿದ್ಧ ಚಾಮುಂಡೇಶ್ವರಿ ನಾಟಕ ಕಂಪನಿಯನ್ನು ಸೇರಿದರು. ಇಲ್ಲಿದ್ದಾಗ ಇವರು ಆಂಜನೇಯ, ನಾರದ ಮುಂತಾದ ಭಕ್ತಿರಸ ಪ್ರಧಾನವಾದ ಪಾತ್ರಗಳನ್ನೂ ವೀರ ಅಭಿಮನ್ಯು ನಾಟಕದಲ್ಲಿ ವೀರ ಅಭಿಮನ್ಯು, ನೂರ್‌ಜಹಾನ್ ನಾಟಕದಲ್ಲಿ ಷಹಜಹಾನ್, ಪಾದುಕಾ ಪಟ್ಟಾಭಿಷೇಕದಲ್ಲಿ ಭರತ, ಗಯ ಚರಿತ್ರೆಯಲ್ಲಿ ಗಯ ಮುಂತಾದ ಪಾತ್ರಗಳನ್ನೂ ವಹಿಸಿ ತಮ್ಮ ಅಭಿನಯಕಲೆಯನ್ನು ಪ್ರದರ್ಶಿಸಿ, ಪ್ರಸಿದ್ಧರಾದರು. ಎಂ.ಎಸ್. ರಾಮಸ್ವಾಮಿಯವರ ದಾನಶೂರ ಕರ್ಣ ನಾಟಕದಲ್ಲಿ ಕರ್ಣನ ಪಾತ್ರಕ್ಕೆ ಆಯ್ಕೆಯಾದ ಕೊಟ್ಟೂರಪ್ಪನವರು, ಆ ಪಾತ್ರವನ್ನು ಅತ್ಯುತ್ತಮವಾಗಿ ನಿರ್ವಹಿಸಿ ಜನಮೆಚ್ಚುಗೆಯನ್ನೂ ಅಭಿನವ ಕರ್ಣ ಎಂಬ ಬಿರುದನ್ನೂ ಗಳಿಸಿಕೊಂಡರು. ತುಕಾರಾಮ ನಾಟಕದ ಸಂತ ತುಕಾರಾಮನ ಪಾತ್ರ ಇವರಿಗೆ ಒಳ್ಳೆಯ ಹೆಸರನ್ನು ತಂದುಕೊಟ್ಟಿತು. ಭೀಷ್ಮ ಪ್ರತಿಜ್ಞೆ ನಾಟಕದಲ್ಲಿ ಇವರು ಅಭಿನಯಿಸಿದ ಭೀಷ್ಮನ ಪಾತ್ರ ನಾಲ್ವಡಿ ಕೃಷ್ಣರಾಜ ಒಡೆಯರ ಮೆಚ್ಚುಗೆಗೂ ಪಾತ್ರವಾಯಿತು. ಚಾಮುಂಡೇಶ್ವರಿ ನಾಟಕ ಕಂಪನಿಯ ಪ್ರಾಕ್ಟೀಸ್ ಮ್ಯಾನೇಜರಾಗಿಯೂ ಇವರು ಸ್ವಲ್ಪ ಕಾಲ ಕಾರ್ಯನಿರ್ವಹಿಸಿದರು. ಹೊಸ ಹೊಸ ಹಾಡುಗಳಿಗೆ ಮರಾಠಿ ಮಟ್ಟುಗಳನ್ನು ಅಳವಡಿಸಿದ್ದು ಇವರ ಒಂದು ಸಾಧನೆ. ಚಾಮುಂಡೇಶ್ವರಿ ನಾಟಕ ಕಂಪನಿ ನಿಂತ ಮೇಲೆ (1937) ಕೊಟ್ಟೂರಪ್ಪನವರು ಬ್ಯಾಟಪ್ಪನವರ ಕಂಪೆನಿಯನ್ನು ಸೇರಿ ಅಲ್ಲಿ ಸುಮಾರು ಎರಡು ವರ್ಷವಿದ್ದು ಅನಂತರ ಮತ್ತೆ ಪ್ರಾರಂಭವಾದ ಚಾಮುಂಡೇಶ್ವರಿ ಕಂಪೆನಿಯನ್ನು ಸೇರಿದರು. ಆಮೇಲೆ ಮಳವಳ್ಳಿ ಸುಂದರಮ್ಮನವರ ನಾಟಕ ಕಂಪೆನಿ ಸೇರಿ ಆರು ವರ್ಷಗಳ ಕಾಲ ಅಲ್ಲಿದ್ದರು.

ಚಲನಚಿತ್ರ ರಂಗದಲ್ಲೂ ಇವರು ಸೇವೆ ಸಲ್ಲಿಸಿದ್ದಾರೆ. ತಿಲೋತ್ತಮೆಯಲ್ಲಿ ನಾರದರಾಗಿ, ವೆಂಕಟೇಶ ಮಹಾತ್ಮ್ಯೆಯಲ್ಲಿ ಹಾತೀರಾಮ

ಬಾಲಾಜಿಯಾಗಿ ಅಭಿನಯ ನೀಡಿದ್ದಾರೆ. ಕೊಟ್ಟೂರಪ್ಪನವರ ನಾದಮಾಧುರ್ಯ ಮತ್ತು ಮಾತಿನ ಗತ್ತನ್ನು ಕೊಲಂಬೊ, ಎಚ್.ಎಂ.ವಿ. ಮುಂತಾದ ಗ್ರಾಮೊಫೋನ್ ಕಂಪನಿಗಳು ಧ್ವನಿಮುದ್ರಿಸಿಕೊಂಡಿವೆ.

ಸುಮಾರು ಎಪ್ಪತ್ತು ವರ್ಷಗಳಷ್ಟು ದೀರ್ಘಕಾಲ ರಂಗಭೂಮಿಯ ಸೇವೆಸಲ್ಲಿಸಿದ ಕೊಟ್ಟೂರಪ್ಪನವರು ಅರಮನೆ ಗುರುಮನೆಗಳಿಂದ ಸನ್ಮಾನಿತರಾಗಿದ್ದರು. ಅಭಿನಯವಿಶಾರದ, ಗಾನವಿಶಾರದ ಮುಂತಾದವು ಇವರಿಗೆ ಬಂದ ಬಿರುದುಗಳಲ್ಲಿ ಕೆಲವು. ರಾಜ್ಯ ಸಂಗೀತ ನಾಟಕ ಅಕಾಡೆಮಿ ಇವರಿಗೆ ಪ್ರಶಸ್ತಿ ನೀಡಿ ಗೌರವಿಸಿತ್ತು (1965). (ಜಿ.ಜಿ.ಎಂ.)

**ಕೊಟ್ಟೂರು :** ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲ್ಲೂಕಿನಲ್ಲಿ ಕಸಬೆಯಿಂದ 19ಕಿಮೀ ನೈಋತ್ಯಕ್ಕಿರುವ ಊರು. ಇದು ಹೊಸಪೇಟೆ - ಕೊಟ್ಟೂರು ರೈಲುಮಾರ್ಗದ ಕೊನೆಯ ನಿಲ್ದಾಣ. ಕೂಡ್ಲಿಗಿ, ಹರಪನಹಳ್ಳಿ, ಹಗರಿ ಬೊಮ್ಮನಹಳ್ಳಿ, ಹೂವಿನ ಹಡಗಲಿ, ಜಗಳೂರು - ಈ ಸ್ಥಳಗಳೊಡನೆ ಉತ್ತಮ ರಸ್ತೆ ಸಂಪರ್ಕವನ್ನು ಹೊಂದಿದ್ದು ಈ ಭಾಗದ ಮುಖ್ಯ ವ್ಯಾಪಾರಸ್ಥಳವಾಗಿದೆ. ಇಲ್ಲಿ ನಿಯಂತ್ರಿತ ಮಾರುಕಟ್ಟೆ ಇದೆ. ಪ್ರತಿ ಗುರುವಾರ ಸಂತೆ ಸೇರುತ್ತದೆ. ಹತ್ತಿ ನೇಯ್ಗೆ ಈ ಊರಿನ ಮುಖ್ಯ ಉದ್ಯಮಗಳಲ್ಲೊಂದು.

ಕೊಟ್ರಬಸಪ್ಪ, ಕೊಟ್ಟೂರ ಬಸಪ್ಪ, ಕೊಟ್ಟೂರ ಸ್ವಾಮಿ, ಕೊಟ್ಟೂರೇಶ್ವರ ಎಂಬ ಹೆಸರು ಗಳಿಸಿರುವ ಬಸಪ್ಪಲಿಂಗ ಸ್ವಾಮಿ ಎಂಬ ವೀರಶೈವ ಸಂತರ ಸಂಪರ್ಕದಿಂದ ಕೊಟ್ಟೂರು ಧಾರ್ಮಿಕ ಕೇಂದ್ರವಾಗಿಯೂ ಪ್ರಸಿದ್ಧವಾಗಿದೆ. ಬಸವಲಿಂಗ ಕವಿಯ ಕೊಟ್ಟೂರು ಬಸವೇಶ್ವರ ಪುರಾಣದಲ್ಲಿ (1679) ಇವರ ಮಹಿಮೆ ವರ್ಣಿತವಾಗಿದೆ. ಆದರೆ ಇವರ ಕಾಲ ಸರಿಯಾಗಿ ತಿಳಿದಿಲ್ಲ. ಜೈನರು ಪ್ರಬಲರಾಗಿದ್ದ ಕಾಲದಲ್ಲಿ ಈ ಶರಣರು ಬಂದು ವೀರಶೈವ ಧರ್ಮವನ್ನು ಇಲ್ಲಿ ನೆಲೆಗೊಳಿಸಿದರು ಎನ್ನಲಾಗಿದೆ. ಇಲ್ಲಿನ 'ಮೂರು ಕಲ್ಲು ಮಠ' ದಪ್ಪ ಕಲ್ಲುಗಳಲ್ಲಿ ಕಟ್ಟಿರುವ ಕದಂಬ ನಾಗರ ಶಿಖರಗಳನ್ನುಳ್ಳ ತ್ರಿಕೂಟಾಚಲ. ಕೊಟ್ರಬಸಪ್ಪ ಇಲ್ಲಿಯ ಲಿಂಗವನ್ನು ಸ್ಥಾಪನೆ ಮಾಡಿದರೆಂದು ಪ್ರತೀತಿ. ಊರ ಮಧ್ಯದಲ್ಲಿ ಕೊಟ್ರಬಸಪ್ಪ ದೇವಾಲಯವಿದೆ. ಇದು ಹಿಂದೆ ವೀರಭದ್ರ ದೇವಾಲಯವಾಗಿದ್ದಂತೆ ತಿಳಿಯುತ್ತದೆ. ಊರಿನ ಪೂರ್ವಭಾಗದಲ್ಲಿ ಕೊಟ್ರಬಸಪ್ಪನವರ ಸಮಾಧಿ ಇದೆ. ಇದು ದೊಡ್ಡ ಆಯಾಕಾರದ ಕಲ್ಲುಕಟ್ಟಡ, ಸುತ್ತಲೂ ದೊಡ್ಡ ಪ್ರಾಕಾರವಿದೆ. ಈ ಕಟ್ಟಡ ಅನೇಕ ಶಿಲ್ಪಗಳಿಂದ (ಕೆಲವು ವರ್ಣರಂಜಿತ), ಉತ್ತಮ ಕೆತ್ತನೆಯುಳ್ಳ ಕಂಬಗಳಿಂದ ಅಲಂಕೃತವಾಗಿದೆ. ಕೊಟ್ಟೂರೇಶ್ವರರ ವಾರ್ಷಿಕ ರಥೋತ್ಸವ (ಫೆಬ್ರವರಿ) ಮತ್ತು ಕಾರ್ತಿಕಮಹೋತ್ಸವ (ನವೆಂಬರ್) ಬಹು ಜನರನ್ನು ಆಕರ್ಷಿಸುತ್ತವೆ. ಕೊಟ್ಟೂರಿನಲ್ಲಿ ಹಿಂದೆ ಒಂದು ಕೋಟೆ ಇತ್ತು. ಈಗ ಹಾಳಾಗಿದೆ. ಕೆಲವು ಶಿಲಾಶಾಸನಗಳೂ ಇಲ್ಲಿವೆ. *

**ಕೊಡಗನೂರು :** ದಾವಣಗೆರೆ ಜಿಲ್ಲೆಯ ಅದೇ ತಾಲ್ಲೂಕಿನಲ್ಲಿ ಕಸಬೆಯಿಂದ ಆಗ್ನೇಯಕ್ಕಿರುವ ಒಂದು ಗ್ರಾಮ. ಹುಬ್ಬಳ್ಳಿ - ಅರಸೀಕೆರೆ ರೈಲುಮಾರ್ಗದ ಒಂದು ನಿಲ್ದಾಣ. ಇಲ್ಲಿ 10ನೆಯ ಶತಮಾನದ ಶಾಸನಗಳೂ ಪುರಾತನ ದೇವಾಲಯಗಳೂ ಇವೆ. ಒಂದು ಶಾಸನದ ಪ್ರಕಾರ ಇದು ಒಂದು ಅಗ್ರಹಾರ. ದಕ್ಷಿಣ ಅಯ್ಯಾವೊಳೆ ಎಂದು ಪ್ರಸಿದ್ಧವಾಗಿತ್ತು. ಗ್ರಾಮದ ಪುರಾತನ ಕಲ್ಲೇಶ್ವರ ದೇವಾಲಯವನ್ನು ಪುನರ್ನಿರ್ಮಾಣ ಮಾಡಲಾಗಿದೆ. ಇದರ ನವರಂಗದಲ್ಲಿರುವ ನಾಲ್ಕು ಕಂಬಗಳು ಮಾತ್ರ ಇದರ ಪುರಾತನತ್ವವನ್ನು ತೋರಿಸಿ ಕೊಡುತ್ತವೆ. ಒಂದು ಶಾಸನದ ಪ್ರಕಾರ 12ನೆಯ ಶತಮಾನಕ್ಕೆ ಸೇರಿದ್ದೆಂದು ಹೇಳುವ ವಿಷ್ಣುದೇವಾಲಯ ಈಗ ಇಲ್ಲ. ಆದರೆ ಊರ ಅಶ್ವತ್ಥಕಟ್ಟೆಯಲ್ಲಿ ಮುಕ್ಕಾದ ವಿಷ್ಣುವಿಗ್ರಹವಿದೆ. 17ನೆಯ ಶತಮಾನದ ಹನುಮಂತದೇವರ ಗುಡಿಯನ್ನು ಹೊಸದಾಗಿ ಕಟ್ಟಲಾಗಿದೆ. ಊರಿನ ಹತ್ತಿರದ ಒಂದು ದಿಣ್ಣೆಯ ಮೇಲೆ ಬಳಪದ ಕಲ್ಲಿನ ಒಂದು ಆಸೀನ ದುರ್ಗಾದೇವಿಯ ವಿಗ್ರಹವಿದೆ. ವಿಗ್ರಹಕ್ಕೆ ನಾಲ್ಕು ಕೈಗಳು, ಮೇಲೆ ಕಿರೀಟವಿದ್ದು ತಲೆಯ ಹಿಂದಿನಿಂದ ಜ್ವಾಲೆಗಳು ಉದ್ಭವಿಸುತ್ತಿರುವಂತೆ ಕೆತ್ತಲಾಗಿದೆ. ಇದೇ ವಿಗ್ರಹವನ್ನೇ ಕೊಡಗನೂರಿನ 'ಬನದ-ಶಂಕರಿ' ಎಂದು ದೊಡ್ಡ ಮಾಗಡಿಯ ಶಾಸನದಲ್ಲಿ ಹೇಳಿದೆ. ಈ ಶಾಸನ 1518ರದು. ಈ ವಿಗ್ರಹ ಹೊಯ್ಸಳರ ಕಾಲದ್ದಾಗಿದೆ. ಊರಿಗೆ ಮೂರು ಫರ್ಲಾಂಗ್ ದೂರಕ್ಕೆ ಈಶಾನ್ಯ ದಿಕ್ಕಿನಲ್ಲಿ ಮಲಕನ ದೇವರ ಗುಡಿ ಇದೆ. ಈ ಗುಡಿಯ ಹೊರಗೋಡೆಗಳು ಮತ್ತು ಮೇಲಿನ ಭಾಗವೆಲ್ಲ ಮಣ್ಣಿನ ದಿಬ್ಬದಿಂದ ಮುಚ್ಚಿಹೋಗಿ ಎದುರುಗಡೆಯಿಂದ ಗುಡಿಯ ಒಳಭಾಗ ಕಾಣಿಸುತ್ತದೆ. ಈ ದೇವಾಲಯ 12ನೆಯ ಶತಮಾನಕ್ಕೆ ಸೇರಿದ್ದಿರಬಹುದು. ಸ್ಥಳೀಯ ಶಾಸನದಲ್ಲಿ ಹೇಳಿರುವ (1101) ಸೋಮೇಶ್ವರ ದೇವಾಲಯ ಇದೇ ಇರಬಹುದೆಂದು ಊಹೆ. *

**ಕೊಡಗಿನ ಗೌರಮ್ಮ :** 1912-39. ಕನ್ನಡದ ಹೆಸರಾಂತ ಕಥೆಗಾರ್ತಿ. ಕೊಡಗು ಜಿಲ್ಲೆ ಮಡಿಕೇರಿಯ ಹವ್ಯಕ ಬ್ರಾಹ್ಮಣ ಮನೆತನವೊಂದರಲ್ಲಿ ಜನಿಸಿದರು. ಇವರ ತಂದೆ ರಾಮಯ್ಯ, ತಾಯಿ ನಂಜಕ್ಕ. ಮಡಿಕೇರಿಯ ಶಾಲೆಯಲ್ಲಿ ಗೌರಮ್ಮನವರ ವ್ಯಾಸಂಗ ನಡೆಯಿತು. 1928ರಲ್ಲಿ ಸಮೀಪದ ಬಂಧು ಬಿ.ಟಿ.ಗೋಪಾಲಕೃಷ್ಣ ಎಂಬುವರೊಂದಿಗೆ ಇವರ ವಿವಾಹವಾಯಿತು. ಈ ದಂಪತಿಗಳಿಗೆ ಒಂದು ಗಂಡು ಮಗುವಿತ್ತು (1931).

ಗೌರಮ್ಮ ಮನೆಗೆಲಸದ ಜೊತೆಗೆ, ಬಿಡುವಿನ ವೇಳೆಯಲ್ಲಿ ಪುಸ್ತಕಗಳನ್ನು ಓದತೊಡಗಿದರು. ಮಿಸೆಸ್ ಬಿ.ಟಿ.ಜೀ.ಕೃಷ್ಣ ಎಂಬ ಹೆಸರಿನಿಂದ ಕಥೆಗಳನ್ನು ಬರೆಯಲಾರಂಭಿಸಿದರು. ಇವರು ಬರೆದ ಕಥೆಗಳಲ್ಲಿ ಮನುವಿನ ರಾಣಿ ಎಂಬುದು ಇವರಿಗೆ ಒಳ್ಳೆಯ ಹೆಸರನ್ನು ತಂದುಕೊಟ್ಟಿತು.



ಬದುಕನ್ನು ನೋಡಬಲ್ಲ ಕಣ್ಣು, ಸಹಾನುಭೂತಿಯ ಮನಸ್ಸು, ಸರಳವಾದ ಭಾಷೆ, ಸಹಜವಾದ ಕಥನ ಈ ಮುಂತಾದ ಗುಣಗಳನ್ನು ಮನುವಿನ ರಾಣಿ ಕಥೆಯಲ್ಲಿ ಗುರುತಿಸಬಹುದು. ಗೌರಮ್ಮನವರು ಬರೆದು ಪ್ರಕಟಿಸಿದ ಹಲವು ಕಥೆಗಳನ್ನು ಸೇರಿಸಿ ಸಂಕಲನ ರೂಪದಲ್ಲಿ ಪ್ರಕಟಿಸಲು ಪ್ರಕಾಶಕ ದ.ಬಾ.ಕುಲಕರ್ಣಿ ಅವರು ಪ್ರಯತ್ನಿಸಿದರು. ಆದರೆ ಈ ಪುಸ್ತಕ ಪ್ರಕಟವಾಗುವ ಮುನ್ನವೆ, ತಮ್ಮ ಮನೆಯ ಸಮೀಪದ ಹೊಳೆಯಲ್ಲಿ ಈಜಲು ಹೋಗಿದ್ದ ಗೌರಮ್ಮನವರು ನೀರಿನಲ್ಲಿ ಮುಳುಗಿ ಅಕಾಲ ಮರಣಕ್ಕೆ ತುತ್ತಾದರು. ಗೌರಮ್ಮನವರ ಪುಸ್ತಕವನ್ನು ಚಿಗುರು ಎಂಬ ಹೆಸರಿನಿಂದ ಪ್ರಕಟಿಸಬೇಕೆಂದಿದ್ದ ಪ್ರಕಾಶಕರು ಅನಂತರ ಕಂಬನಿ ಎಂಬ ಹೆಸರಿನಿಂದ ಪ್ರಕಟಿಸಿದರು.

ಗೌರಮ್ಮನವರು ಹೊಸಕಾಲದ ಉನ್ನತ ಪ್ರೇರಣೆಗಳಿಗೆ ಮನ ತೆತ್ತಿದ್ದವರು. ಮಹಾತ್ಮಗಾಂಧೀ ಅವರು ಕೊಡಗಿನಲ್ಲಿ ಪ್ರವಾಸಮಾಡಿದಾಗ, ಗೌರಮ್ಮನವರು ಸತ್ಯಾಗ್ರಹ ಮಾಡಿ ಗಾಂಧೀಜಿಯವರನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಅವರ ದೇಶಸೇವೆಯ ನಿಧಿಗಾಗಿ ತಮ್ಮ ಆಭರಣಗಳನ್ನು ಮುಡುಪಾಗಿ ಕೊಟ್ಟರು ಎಂಬ ಸಂಗತಿಯನ್ನು ಇಲ್ಲಿ ಸ್ಮರಿಸಬಹುದು. (ಎಂ.ವಿ.ಐ.)

**ಕೊಡಗು [1] :** ಕೊಡಗು ಜಿಲ್ಲೆ ಮಡಿಕೇರಿಯಿಂದ ಪ್ರಕಟವಾಗುತ್ತಿರುವ



ಕೊಡಗು.

ವಾರಪತ್ರಿಕೆ. 1921 ಜೂನ್ 1ರಲ್ಲಿ ಪ್ರಾರಂಭವಾಯಿತು. ರಾಷ್ಟ್ರೀಯ ಹೋರಾಟದಲ್ಲಿ ಬ್ರಿಟಿಷ್ ಸರ್ಕಾರದ ದಬ್ಬಾಳಿಕೆಗೆ ತುತ್ತಾಗಿ ಭದ್ರತಾ ಇಡುಗಂಟನ್ನು ಎರಡುಬಾರಿ ಕಳೆದುಕೊಂಡು, 1942ರಲ್ಲಿ ಸುಮಾರು 6

ತಿಂಗಳ ವರೆಗೆ ಮುಟ್ಟುಗೋಲು ಹಾಕಲ್ಪಟ್ಟು ವಿವಿಧ ಕಷ್ಟಗಳನ್ನೆದುರಿಸಬೇಕಾಗಿ ಬಂದರೂ ಪತ್ರಿಕೆ ತನ್ನ ರಾಷ್ಟ್ರೀಯ ಧ್ಯೇಯದಿಂದ ವಿಚಲಿತವಾಗದೆ ನಡೆದುಬಂದಿದೆ. ಇದರಲ್ಲಿ ರಾಜಕೀಯ ಆರ್ಥಿಕ ಸಾಮಾಜಿಕ ವಿಷಯಗಳು, ಧರ್ಮ, ಕೃಷಿ, ಆರೋಗ್ಯ ಇತ್ಯಾದಿಗಳಿಗೆ ಸಂಬಂಧಿಸಿದ ಲೇಖನಗಳು, ಕಥೆ, ಕವನ, ಜಿಲ್ಲಾ ಹಾಗೂ ಇತರ ವರ್ತಮಾನಗಳು, ಓದುಗರ ಓಲೆಗಳು ಪ್ರಕಟವಾಗುತ್ತವೆ. ಪ್ರಾರಂಭದಿಂದ 1964ರ ವರೆಗೆ ಪಂದ್ಯಂಡ ಬೆಳ್ಯಪ್ಪ ಸಂಪಾದಕರಾಗಿದ್ದರು. ಅನಂತರ ಬಿ.ಡಿ.ಗಣಪತಿಯವರು ಸಂಪಾದಕರಾಗಿದ್ದರು. ಪತ್ರಿಕೆಯ ಸುವರ್ಣ ಮಹೋತ್ಸವವನ್ನು 1972ರಲ್ಲಿ ಆಚರಿಸಲಾಯಿತು. (ಬಿ.ಡಿ.ಜಿ.)

**ಕೊಡಗು** 2: ಕರ್ನಾಟಕದ ನೈಋತ್ಯ ಭಾಗದಲ್ಲಿರುವ ಒಂದು ಜಿಲ್ಲೆ. ಉತ್ತರ ಅಕ್ಷಾಂಶ $11^0$ 56' - $12^0$ 50' ಮತ್ತು ಪೂರ್ವ ರೇಖಾಂಶ $75^0$ 22' - $76^0$ 12' ನಡುವೆ ಹಬ್ಬಿದೆ. ಈ ಜಿಲ್ಲೆ ಪೂರ್ವದಲ್ಲಿ ಮೈಸೂರು, ಉತ್ತರದಲ್ಲಿ ಹಾಸನ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಿಂದಲೂ ಪಶ್ಚಿಮ ಮತ್ತು ದಕ್ಷಿಣದಲ್ಲಿ ಕೇರಳ ರಾಜ್ಯದಿಂದಲೂ ಸುತ್ತುವರಿದಿದೆ. ಕೊಡಗಿನ ಗರಿಷ್ಠ ಉದ್ದ ದಕ್ಷಿಣೋತ್ತರವಾಗಿ 96ಕಿಮೀ; ಗರಿಷ್ಠ ಅಗಲ ಪೂರ್ವಪಶ್ಚಿಮವಾಗಿ 64ಕಿಮೀ ಮಡಿಕೇರಿ, ವಿರಾಜಪೇಟೆ ಮತ್ತು ಸೋಮವಾರಪೇಟೆ ತಾಲ್ಲೂಕುಗಳೂ ಹನ್ನೊಂದು ಹೋಬಳಿಗಳೂ 304 ಗ್ರಾಮಗಳೂ ಇರುವ ಕೊಡಗು ಜಿಲ್ಲೆಯ ಒಟ್ಟು ವಿಸ್ತೀರ್ಣ 4,104ಚ.ಕಿಮೀ. ಜನಸಂಖ್ಯೆ 5,45,322. ಇದರ ಆಡಳಿತ ಕೇಂದ್ರ ಮಡಿಕೇರಿ.

ಇಲ್ಲಿರುವ ಪಶ್ಚಿಮ ಘಟ್ಟಗಳ ಮುಖ್ಯ ಶ್ರೇಣಿ ಕೊಡಗಿನ ಬೆನ್ನುಮೂಳೆಯಂತಿದೆ. ಇದು ವಾಯವ್ಯದಿಂದ ದಕ್ಷಿಣಕ್ಕೆ, ಸುಬ್ರಹ್ಮಣ್ಯದಿಂದ ಬ್ರಹ್ಮಗಿರಿಯ ಪಶ್ಚಿಮಾಗ್ರದವರೆಗೆ ಹಬ್ಬಿದೆ. ಇದರ ಉದ್ದ 96ಕಿಮೀ ಗಿಂತಲೂ ಹೆಚ್ಚು. ಇದರಿಂದ ಪೂರ್ವದ ಕಡೆಗೆ ಕೈಬೆರಳುಗಳಂತೆ ಸಾಗಿರುವ ಉನ್ನತ ಶ್ರೇಣಿಗಳು ಹಲವಾರು. ಸುಬ್ರಹ್ಮಣ್ಯ ಅಥವಾ ಪುಷ್ಪಗಿರಿಯಲ್ಲಿ ಪರ್ವತ ಹೆಗ್ಗಂಟಿನ ಎತ್ತರ ಸಮುದ್ರಮಟ್ಟಕ್ಕಿಂತ 1908ಮೀ. ಈ ಎಡೆಯಿಂದ ಕವಲೊಡೆಯುವ ಹಲವು ಶ್ರೇಣಿಗಳ ಪೈಕಿ ಅತ್ಯಂತ ಮುಖ್ಯವಾದ್ದು ಕೋಟೆಬೆಟ್ಟ; ಮಡಿಕೇರಿಯಿಂದ 14ಕಿಮೀ ಉತ್ತರದಲ್ಲಿರುವ ಇದರ ಎತ್ತರ 1792ಮೀ. ಮಡಿಕೇರಿಯ ಬಳಿ ಆರಂಭವಾಗಿ ಪಶ್ಚಿಮಕ್ಕೆ ಸಾಗುವುದು ಬೇಂಗುನಾಡು ಶ್ರೇಣಿ. ಇದಕ್ಕೂ ಘಟ್ಟಗಳ ಮುಖ್ಯ ಶ್ರೇಣಿಗೂ ನಡುವೆ ಅತ್ಯಂತ ಕಿರಿದಾದ ಕೋನ ಏರ್ಪಟ್ಟಿದೆ. ಇವೆರಡೂ ಕೂಡುವೆಡೆಯಲ್ಲಿರುವುದೇ ಬ್ರಹ್ಮಗಿರಿ. ಕಾವೇರಿ ನದಿ ಇಲ್ಲಿ ಉಗಮಿಸುತ್ತದೆ. ಇದಕ್ಕೆ ಉತ್ತರಕ್ಕಿರುವುದು ಸಂಪಾಜೆ ಕಣಿವೆ. ಮಂಗಳೂರು ರಸ್ತೆ ಈ ಮೂಲಕ ಸಾಗುತ್ತದೆ. ಬ್ರಹ್ಮಗಿರಿಯೆಡೆಯಿಂದ ಮುಂದಕ್ಕೆ ಪಶ್ಚಿಮ ಘಟ್ಟಗಳ ಮುಖ್ಯಶ್ರೇಣಿ ಸಾಗುವುದು ಆಗ್ನೇಯಾಭಿಮುಖವಾಗಿ. ತುಂಬೆಮಲೆ, ಇಗ್ಗುತಪ್ಪ ದೇವರ ಶಿಖರ, ತಡಿಯಂಡಮೋಳು ಮತ್ತು ಸೋಮಮಲೆ ಮುಖ್ಯ ಶಿಖರಗಳು. ಈ ಶ್ರೇಣಿಗೆ ದಕ್ಷಿಣದಲ್ಲಿರುವ ಪೆರಿಯಂಬಾಡಿ ಘಾಟಿನ ಮೂಲಕ ಕಣ್ಣಾನೂರಿಗೆ ರಸ್ತೆಯುಂಟು. ಕೊಡಗಿನ ಆಗ್ನೇಯ ತುದಿಯಲ್ಲಿರುವ ಶ್ರೇಣಿ ಮಲೆನಾಡು. ಇದೂ ಬ್ರಹ್ಮಗಿರಿಯ ಹೊರಗವಲೂ ಕೊಡಗಿನ ದಕ್ಷಿಣದ ಎಲ್ಲೆಗಳು, ವೈನಾಡಿನಿಂದ ಕೊಡಗನ್ನು ಪ್ರತ್ಯೇಕಿಸುವ ಶ್ರೇಣಿಗಳು ಇವು. ಇಲ್ಲಿರುವ ಅತ್ಯುನ್ನತ ಶಿಖರ ದವಸಿಬೆಟ್ಟ. ಇದರ ಸುತ್ತಣಪ್ರದೇಶ ಬಹಳ ಚೆಲುವಾಗಿದೆ. ಅದರ ಹೆಸರು ಹುಯಲೆ ಮಲೆ. ಕೊಡಗಿನ ಪಶ್ಚಿಮದ ಎಲ್ಲೆಯ ಬಳಿ ಇರುವ ಶಿಖರಗಳಲ್ಲಿ ಮುಖ್ಯವಾದವು ಹನುಮನಬೆಟ್ಟ ಮತ್ತು ಪೆರೆಮಾಲೆಮಲೆ. ಬ್ರಹ್ಮಗಿರಿಯಿಂದ ಕಿಗ್ಗಟ್ಟನಾಡಿನ ಕಡೆಗೆ ಅನೇಕ ಕವಲುಗಳು ಹಬ್ಬಿವೆ. ಇವು ಕಡಿದುಮಲೆಗಳು. ವಿರಾಜಪೇಟೆಯ ಬಳಿಯ ಅಂಬಟೆ ಬೆಟ್ಟ, ಬೆಟ್ಟಂಗಾಲ, ಕುಂಡದಬೆಟ್ಟ, ಸಿದ್ದೇಶ್ವರ ಬೆಟ್ಟ ಇವು ಮುಖ್ಯ. ಇನ್ನು ಕೆಲವು ಕವಲುಗಳು ಪೂರ್ವದ ಕಡೆಗೆ ಜಾರಿ, ಏರಿಳಿದು ಸಾಗಿ, ವಿಶಾಲವಾದ ಬತ್ತದ ಬಯಲುಗಳು ಆಲಿಂಗಿಸಿಕೊಂಡಿವೆ. ಬೇಂಗುನಾಡು ಶ್ರೇಣಿ ಮಡಿಕೇರಿಯ ದಕ್ಷಿಣದಲ್ಲಿ ಎರಡು ಕವಲುಗಳಾಗಿ ಮುನ್ನಡೆಯುತ್ತದೆ. ಒಂದು ಕವಲು ನೂರೊಕ್ಕಲು ಬೆಟ್ಟದಲ್ಲಿ ಪರ್ಯವಸಾನಗೊಂಡರೆ ಇನ್ನೊಂದು ಕವಲು ಡೊಂಕುಡೊಂಕಾಗಿ ಕುಶಾಲನಗರದ ಕಡೆಗೆ ಸಾಗುತ್ತದೆ. ಇದರ ಉನ್ನತ ಶಿಖರ ಕಲ್ಲೂರುಬೆಟ್ಟ. ಇಲ್ಲಿ ತೇಗದ ಕಾಡು ವಿಶೇಷ. ಕೋಟೆಬೆಟ್ಟದ ಉತ್ತರಕ್ಕಿರುವುದು ಸಂತೆಹಳ್ಳಿ ಬೆಟ್ಟಗಳು. ಮುಕ್ರಿಬೆಟ್ಟವೇ ಇವುಗಳ ತುದಿ. ಕೊಡಗಿನ ಉತ್ತರದ ಗಡಿಯಿಂದ ಕಾವೇರಿಯ ಕಡೆಗೆ ಒಂದು ಶ್ರೇಣಿ ಹಬ್ಬಿದೆ. ಮಾಲಂಬಿ ಮತ್ತು ಕನಗಲುಬೆಟ್ಟ ಇದರ ಮುಖ್ಯಶಿಖರಗಳು.

ದಕ್ಷಿಣದ ಕಾಶ್ಮೀರ ಎಂದು ಕರೆಯುವ ಇಡೀ ಕೊಡಗು ಪ್ರದೇಶ ಪರ್ವತಮಯವಾಗಿದ್ದರೂ ಸ್ಥಳದಿಂದ ಸ್ಥಳಕ್ಕೆ ಇದರ ಲಕ್ಷಣ ವ್ಯತ್ಯಾಸವಾಗುತ್ತದೆ. ಇದು ಪಶ್ಚಿಮದಿಂದ ಪೂರ್ವಕ್ಕೆ ಇಳಿಜಾರಾಗಿದೆ. ಮಡಿಕೇರಿ ಪ್ರಸ್ಥಭೂಮಿಯ ಎತ್ತರ ಕೋಟೆಯ ಬಳಿಯಲ್ಲಿ ಸಮುದ್ರಮಟ್ಟದಿಂದ 1270ಮೀ. ಪೂರ್ವದ ಕುಶಾಲನಗರದ ಬಳಿ 907ಮೀ. ಸರಾಸರಿ 1170ಮೀ. ಎತ್ತರವಿರುವ ಈ ಪ್ರಸ್ಥಭೂಮಿ ಮಡಿಕೇರಿಯ ಉತ್ತರಕ್ಕೆ 42ಕಿಮೀ ದೂರದಲ್ಲಿರುವ ಸೋಮವಾರಪೇಟೆಯ ವರೆಗೂ ಹಬ್ಬಿದೆ. ಸೋಮವಾರಪೇಟೆಯ ಬಳಿ ಪರ್ವತಗಳು ಅಷ್ಟು ಕಡಿದಾಗಿಲ್ಲ.



ಚೆಲಾವರ ಜಲಪಾತ, ನಾಪೋಕ್ಲು

ಅಲ್ಲಿ ನಡುನಡುವೆ ಹಸುರು ಇಳಿಜಾರುಗಳೂ ದಟ್ಟ ಕಾಡುಗಳೂ ಉಂಟು. ಇವು ಯುರೋಪಿನ ಉದ್ಯಾನ ನೆಲದ ದೃಶ್ಯವನ್ನು ನೆನಪಿಗೆ ತರುತ್ತವೆ ಎಂದು ಹೇಳುವುದುಂಟು. ಮಡಿಕೇರಿಯ ಬಳಿಯ ಬೆಟ್ಟಗಳು ಒತ್ತೊತ್ತು, ಕಡಿದು, ಕಣಿವೆಗಳ ಆಳ ಹೆಚ್ಚು. ಕಾಡು ಬಲು ದಟ್ಟ. ಕುಶಾಲನಗರದ ಬಳಿಗೆ ಸಾಗಿದಂತೆ ಕರ್ನಾಟಕ ಪ್ರಸ್ಥಭೂಮಿಯ ವಿಶಾಲ ಬಯಲುಗಳು ಆರಂಭವಾಗುತ್ತವೆ. ಇಲ್ಲಿ ನಡುನಡುವೆ ಒಂಟಿ ಬೆಟ್ಟಗಳುಂಟು. ವಿರಾಜಪೇಟೆಯ ಕಡೆಯಲ್ಲಿ-ಬೆಪ್ಪುನಾಡು ಮತ್ತು ಕಡ್ಯೆಟ್ ನಾಡುಗಳಲ್ಲಿ ಅರಣ್ಯ ದಟ್ಟವಾಗಿಲ್ಲ. ವಿಶಾಲ ಗದ್ದೆ ಬಯಲುಗಳ ಹೆಗಲ ಮೇಲೆ ಚೆಲುವಾದ ಹುಲ್ಲಿನ ದಿಬ್ಬಗಳನ್ನು ಕಾಣಬಹುದು. ಕೊಡಗಿನ ಪೂರ್ವ ಎಲ್ಲೆಯ ಬಳಿ ಕಾವೇರಿ ಮತ್ತು ಲಕ್ಷ್ಮಣತೀರ್ಥಗಳ ನಡುವೆ- ಪರ್ಣಪಾತೀ ವೃಕ್ಷಗಳ ವಿಶಾಲ ಕಾಡುಂಟು. ಇದಕ್ಕೆ

ಪಶ್ಚಿಮದಲ್ಲಿ ನಿತ್ಯಹಸುರುಕಾಡು ಹಬ್ಬಿದೆ. ಬಿದಿರುಮೆಳೆ ವಿಶೇಷ. ಒಟ್ಟಿನಲ್ಲಿ ಪರ್ವತಶಿಖರಗಳು ಹುಲ್ಲಿನಿಂದಲೂ ಕಣಿವೆಗಳು ಮತ್ತು ಪರ್ವತಸಾನುಪ್ರದೇಶದ ತೆರವಾದ ಸ್ಥಳಗಳು ನಿತ್ಯಹಸುರುಕಾಡುಗಳಿಂದಲೂ ಕೂಡಿವೆ. ಇಡೀ ಕೊಡಗು ಹಸುರುಮಯ. ಇಲ್ಲಿ ನಿಸರ್ಗ ಸಸ್ಯವೇ ಹೇರಳ. ಅಲ್ಲಲ್ಲಿ ಕಾಫಿ ಮತ್ತು ಇತರ ಬೆಳೆಗಳಿಗಾಗಿ ಇದನ್ನು ತೆಗೆಯಲಾಗಿದೆ.



ಓಂಕಾರೇಶ್ವರ ದೇವಾಲಯ, ಮಡಿಕೇರಿ

ಧಾರವಾಡ ಶಿಲಾರಚನೆಗೆ ಸೇರಿದ ಗಾರ್ನಿಟಿಫೆರಸ್ ಬಯೊಟೈಟ್, ಸಿಲ್ಲಿಮನೈಟ್ ಮತ್ತು ಗಾರ್ನಿಟಿಫೆರಸ್ ನೈಸ್‍ಗಳೂ ಪದರಶಿಲೆಗಳೂ ಜಿಲ್ಲೆಯಲ್ಲಿ ವಿಶೇಷವಾಗಿ ಹರಡಿವೆ. ಮಧ್ಯೆ ಮಧ್ಯೆ ಡಾಲೆರೈಟ್, ಬೆಣಚು, ಗ್ರ್ಯಾನೈಟ್ ಮತ್ತು ಚಾರ್ನ್‍ಕೈಟ್ ಶಿಲೆಗಳ ಅಂತರ್‍ಚಾಚುಗಳಿವೆ. ಎತ್ತರದ ಭಾಗಗಳಲ್ಲಿ ಜಂಬಿಟ್ಟಿಗೆಯ ಮಣ್ಣು, ನದಿದಡಗಳಲ್ಲಿ ಮತ್ತು ಕಣಿವೆಗಳಲ್ಲಿ ಮೆಕ್ಕಲು ಮಣ್ಣಿನ ಹರಹು ಇದೆ. ಬಹಳ ಕೆಳದರ್ಜೆಯ ಕಾಗೆಬಂಗಾರದ ನಿಕ್ಷೇಪಗಳು ಕುಶಾಲನಗರ, ಮಡಿಕೇರಿ ಬಳಿಯಲ್ಲೂ ಮತ್ತು ಶ್ರೀಮಂಗಲನಾಡಿನ ಕೆಲವು ಪ್ರದೇಶಗಳಲ್ಲೂ ಇವೆ. ಮಡಿಕೇರಿ ಮತ್ತು ಸಿದ್ದಾಪುರದ ಬಳಿಯಲ್ಲಿ ಕ್ಯಾನೈಟ್ ದೊರಕುತ್ತದೆ. ಜಿಲ್ಲೆಯ ಖನಿಜಸಂಪತ್ತು ಅಲ್ಪ.

ಕೊಡಗಿನ ಮುಖ್ಯ ನದಿ ಕಾವೇರಿ (ನೋಡಿ). ಬ್ರಹ್ಮಗಿರಿಯಲ್ಲಿ ಇದರ ಉಗಮ. ಇದು ಸಿದ್ದಾಪುರದವರೆಗೂ ಆಗ್ನೇಯಾಭಿಮುಖವಾಗಿ ಹರಿದು, ಅಲ್ಲಿಂದ ಈಶಾನ್ಯಕ್ಕೆ ದಿಕ್ಕು ಬದಲಾಯಿಸಿ, ಸ್ವಲ್ಪ ದೂರ ಜಿಲ್ಲೆಯ ಪೂರ್ವ ಗಡಿಯಾಗಿ ಪರಿಣಮಿಸಿ, ಶಿರಂಗಾಲದ ಬಳಿ ಜಿಲ್ಲೆಯನ್ನು ಬಿಡುತ್ತದೆ. ಇದರ ಎರಡು ಮುಖ್ಯ ಉಪನದಿಗಳಾದ ಹೇಮಾವತಿ ಮತ್ತು ಲಕ್ಷ್ಮಣತೀರ್ಥಗಳು ಕ್ರಮವಾಗಿ ಉತ್ತರ ಮತ್ತು ದಕ್ಷಿಣ ಕೊಡಗುಗಳಲ್ಲಿ ಹರಿಯುತ್ತವೆ. ಹೇಮಾವತಿಯೇ ಕೊಡಗಿನ ಉತ್ತರತಮ ಗಡಿರೇಖೆ. ಕೊಡಗಿನಲ್ಲಿ ಕಾವೇರಿಯನ್ನು ಸೇರುವ ಉಪನದಿಗಳು, ಕನ್ನಿಕೆ, ಕಕ್ಕಬೆ, ಕಾಡನೂರು ಹೊಳೆ, ಮುತ್ತಾರುಮುಡಿ, ಚಿಕ್ಕಹೊಳೆ ಮತ್ತು ಹಾರಂಗಿ. ಕಕ್ಕೆಹೊಳೆ, ಚೇರನಹೊಳೆ, ಮಾದಪುರ ಮತ್ತು ಹಟ್ಟಿಹೊಳೆ -ಇವು ಹಾರಂಗಿಯ ಉಪನದಿಗಳು. ಪಶ್ಚಿಮಕ್ಕೆ ಹರಿಯುವ ಒಂದು ಮುಖ್ಯ ನದಿಯೆಂದರೆ ಬರಪೊಳೆ. ಇದು ನೈಋತ್ಯದಲ್ಲಿ ಮಲಬಾರಿನ ಕಡೆಗೆ ಸಾಗುತ್ತದೆ. ಸಾರತ್, ಕುಮಾರಧಾರಾ ಮತ್ತು ಪಯಸ್ವಿನಿ ಇತರ ನದಿಗಳು. ಸಾರತ್ 434' ಎತ್ತರದಿಂದ ದುಮುಕುತ್ತದೆ. ಕೊಡಗಿನ ನದಿಗಳು ಮಳೆಗಾಲದಲ್ಲಿ ತುಂಬಿ ಹರಿಯುತ್ತವೆ. ಬೇಸಗೆಯಲ್ಲಿ ಇವನ್ನು ಸುಲಭವಾಗಿ ದಾಟಬಹುದು.

ಕೊಡಗು ಜಿಲ್ಲೆಯ ವಾಯುಗುಣ ಸಾಮಾನ್ಯವಾಗಿ ಹಿತಕರ. ಪೂರ್ವಕ್ಕಿಂತ ಪಶ್ಚಿಮ ಭಾಗ ಹೆಚ್ಚು ತಂಪಾಗಿರುತ್ತದೆ. ಏಪ್ರಿಲ್-ಮೇಗಳಲ್ಲಿ ಗರಿಷ್ಠ ಉಷ್ಣತೆ. ಜನವರಿಯಲ್ಲಿ ಕನಿಷ್ಠ. ಮಳೆಯೂ ಪೂರ್ವಕ್ಕಿಂತ ಪಶ್ಚಿಮದಲ್ಲಿ ಅಧಿಕ. ಭಾಗಮಂಡಲದಲ್ಲಿ ವಾರ್ಷಿಕ ಮಳೆ 6030ಮಿಮೀ. ಜಿಲ್ಲೆಯ ಪೂರ್ವದ ಎಲ್ಲೆಯಲ್ಲಿರುವ ಕುಶಾಲನಗರದಲ್ಲಿ 1120ಮಿಮೀ. ಜಿಲ್ಲೆಯ ಸರಾಸರಿ ಮಳೆ 2725ಮಿಮೀ. ಸರಾಸರಿ ವರ್ಷದಲ್ಲಿ 118 ಮಳೆದಿನಗಳು.

ಕೊಡಗಿನ ಪ್ರಾಣಿಗಳು ನೆರೆಯ ಪ್ರದೇಶಗಳ ಪ್ರಾಣಿಗಳಿಗಿಂತ ಭಿನ್ನವಲ್ಲ. ಕೊಡಗಿನಲ್ಲಿ ಅವಕ್ಕೆ ಕಾಡುಗಳ ರಕ್ಷಣೆಯೂ ಯಥೇಚ್ಛವಾಗಿ ಕುಡಿಯುವ ನೀರೂ ಇರುವುದರಿಂದ ಅವು ಇಲ್ಲಿ ಅಧಿಕ ಸಂಖ್ಯೆಯಲ್ಲಿವೆ. ಇಲ್ಲಿಯ ಮಾಂಸಾಹಾರಿ ಮೃಗಗಳು ಮಳೆಗಾಲದಲ್ಲಿ ನೆರೆಯ ಜಿಲ್ಲೆಗಳಿಗೆ ಹೋಗುತ್ತವೆ. ಹೊಳೆಗಳಿರುವಲ್ಲಿ ಅತ್ಯಂತ ಕಡಿದಾದ ಬೆಟ್ಟಗಳು ಇಲ್ಲದಿರುವಲ್ಲಿ ದೊಡ್ಡ ದೊಡ್ಡ ಮೃಗಗಳುಂಟು. ಉತ್ತರ ಪೂರ್ವ ದಕ್ಷಿಣ ಪ್ರದೇಶಗಳಲ್ಲಿ ಅನೇಕ ಬಗೆಯ ಪ್ರಾಣಿಗಳಿವೆ. ಕಪ್ಪು ಬೂದು ಮತ್ತು ಕಂದು ಬಣ್ಣಗಳ ಕೋತಿಗಳು ಹೇರಳ. ನಾಯಿ ಜಾತಿಯ ಪ್ರಾಣಿಗಳಲ್ಲಿ ಕೆನ್ನಾಯಿ ಮುಖ್ಯವಾದ್ದು. ಈ ಪ್ರಾಣಿ ತೋಳವನ್ನು ಹೋಲುತ್ತದೆ, ಬಹು ಭಯಂಕರ. ಹುಲಿ, ಕಿರುಬ, ಹುಲಿಬೆಕ್ಕು, ಕಾಡುಹಂದಿ, ಕರಡಿ, ಕತ್ತೆ ಕಿರುಬ, ಮುಳ್ಳುಹಂದಿ, ಪುನುಗು ಬೆಕ್ಕುಗಳೂ ಮುಂಗುಸಿ, ಆಮೆ, ಜಿಂಕೆ, ಸಾಂಬಾರ್‍ಗಳು, ಆನೆ, ಕಾಡೆಮ್ಮೆಗಳೂ ಇವೆ. ನಾಗರಹಾವು, ಹೆಬ್ಬಾವುಗಳು, ವಿಶೇಷ ನದಿಗಳಲ್ಲಿ ಮೊಸಳೆ ಇರುವುದುಂಟು. ಗಿಡುಗ, ಹದ್ದು, ಮಿಂಚುಳ್ಳಿ, ಮರಕುಟುಕ, ಕೋಗಿಲೆ, ಮೈನಾ ಮುಂತಾದ ಹಕ್ಕಿಗಳಿವೆ.

ಕೊಡಗು ಜಿಲ್ಲೆಯ ಮೂರನೆಯ ಒಂದು ಭಾಗ ಅರಣ್ಯಾವೃತ. ರಕ್ಷಿತ ಅರಣ್ಯ ಪ್ರದೇಶಗಳೂ ಸೇರಿ 1,25,952ಹೆ. ಅರಣ್ಯವಿದೆ. ತೇಗ, ಬೀಟೆ, ಹೊನ್ನೆ, ಶ್ರೀಗಂಧ ಇವು ಮುಖ್ಯವಾದ ಮರಗಳು. ತೇಗದ ಮರಗಳ ಕಾಡುಗಳನ್ನು ಸರ್ಕಾರದ ಅರಣ್ಯ ಇಲಾಖೆ ಅಭಿವೃದ್ಧಿಪಡಿಸುತ್ತಿದೆ. ಬೆಂಕಿಕಡ್ಡಿ ಕೈಗಾರಿಕೆಗೆ ಆವಶ್ಯವಾದ ಮೆದುಮರಗಳನ್ನೂ ನೆಟ್ಟು ಬೆಳೆಸಲಾಗುತ್ತಿದೆ. ಕೊಡಗಿನ ಜನರ ಮುಖ್ಯ ಕಸಬು ಕೃಷಿ. ಬತ್ತ, ರಾಗಿ ಮುಖ್ಯ ಬೆಳೆಗಳು. ಕಾಫಿ, ಕೊಡಗಿನ ಮತ್ತೊಂದು ಮುಖ್ಯ ಕೃಷಿ ಉತ್ಪನ್ನ (ಸು.83,150ಹೆ). ಕಿತ್ತಳೆ ಬೆಳೆಯೂ ವಿಶೇಷ. ಏಲಕ್ಕಿ, ಮೆಣಸು ಬೆಳೆಯುತ್ತಾರೆ. ಅಡಕೆ ಇನ್ನೊಂದು ಫಸಲು. ಮಡಿಕೇರಿಯ ಬಳಿ ಚಹ ತೋಟವೂ ಉಂಟು. ಮಾವುಕೂಟ, ಜೋಡುಪಾಲ, ಸಂಪಾಜೆ ಮತ್ತು ಕಡಮಕಲ್ಲುಗಳಲ್ಲಿ ರಬ್ಬರ್ ತೋಟಗಳಿವೆ. ಬೆಟ್ಟದ ಕೆಳಗೆ ಸಂಪಾಜೆ, ಪೆರಾಜೆ ಮತ್ತು ಚೆಂಬುಗಳಲ್ಲಿ ತೆಂಗು ಮತ್ತು ಗೇರು ಬೆಳೆಯುತ್ತಾರೆ.



ಅಗಸ್ತ್ಯೇಶ್ವರ ದೇವಾಲಯ, ಬಲಮುರಿ

ಜೇನುಸಾಕಣೆ ಕೊಡಗಿನ ಒಂದು ಮುಖ್ಯ ಉದ್ಯಮ. ಭಾಗಮಂಡಲದಲ್ಲಿ ಮಧುವನ ಎಂಬ ಜೇನುಸಾಕಣೆ ಕೇಂದ್ರವಿದೆ. ಕೊಡಗು ಜೇನು ಉತ್ಪಾದಕರ ಸಂಘ ಈ ಉದ್ಯಮದ ಬೆಳವಣಿಗೆಗಾಗಿ ಶ್ರಮಿಸುತ್ತಿದೆ. ಭಾಗಮಂಡಲದ ಕೇಂದ್ರದಲ್ಲಿ ಜೇನುಸಾಕುವ ತರಬೇತು ನೀಡಲಾಗುತ್ತಿದೆ. ಶನಿವಾರಸಂತೆ ಮತ್ತು ಶಿರಂಗಾಲದಲ್ಲಿ ಕೈಮಗ್ಗದ ಬಟ್ಟೆ ತಯಾರಾಗುತ್ತದೆ. ಶನಿವಾರಸಂತೆಯಲ್ಲಿ ನೇಯ್ಗೆಯ ಶಾಲೆಯುಂಟು. ಶಿರಂಗಾಲದಲ್ಲಿ ಕೈಮಗ್ಗ ನೇಕಾರರ ಸಹಕಾರ ಸಂಘ ಸ್ಥಾಪಿತವಾಗಿದೆ. ವಿರಾಜಪೇಟೆ ತಾಲ್ಲೂಕಿನ ಮಲೆನಾಡಿನಲ್ಲಿ ಬೆತ್ತದ ಸಾಮಾನು ಮಾಡುವವರ ಒಂದು ಸಹಕಾರ ಸಂಘವುಂಟು. ಪೊನ್ನಂಪೇಟೆಯ ಬಳಿಯ ಮಡಕೆಬೀಡು ಕುಂಭ ಕೈಗಾರಿಕೆಯ ಕೇಂದ್ರ. ಇಲ್ಲಿ ಇದರ ಒಂದು ಶಾಲೆ ಇದೆ. ಮಡಿಕೇರಿಯಲ್ಲಿ ಪ್ಲಾಸ್ಟಿಕ್

ಚೀಲ ತಯಾರಿಸುವ ಕಾರ್ಖಾನೆಯೂ ತುಕ್ಕುಹಿಡಿಯದ ಉಕ್ಕಿನ ಪಾತ್ರೆ ತಯಾರಿಸುವ ಕಾರ್ಖಾನೆಯೂ ಇವೆ. ಕೂಡಿಗೆಯಲ್ಲಿ ಕಾಫಿ ಪರಿಷ್ಕರಣ ಕಾರ್ಖಾನೆಯುಂಟು. ಮಡಿಕೇರಿಯಲ್ಲಿ ಒಂದು ಸರ್ಕಾರಿ ಮುದ್ರಣಾಲಯವೂ ವಾಹನಗಳ ದುರಸ್ತಿ ಕಾರ್ಯಾಗಾರವೂ



ಕಣ್ವಮುನೀಶ್ವರ ದೇವಾಲಯ, ಬಲಮುರಿ

ಇವೆ. 1954ರಲ್ಲಿ ಸರ್ಕಾರ ಮೂರ್ಕಲ್‍ನಲ್ಲಿ ಒಂದು ಮರ ಕೊಯ್ಯುವ ಕಾರ್ಖಾನೆ ಸ್ಥಾಪಿಸಿತು. ಕೊಡಗಿನ ಮುಖ್ಯಬೆಳೆ ಬತ್ತವಾದ್ದರಿಂದ ಇಲ್ಲಿ ಹಲವು ಅಕ್ಕಿ ಗಿರಣಿಗಳಿವೆ. ಮಡಿಕೇರಿಯಲ್ಲಿ ನಾಲ್ಕು ಸಣ್ಣ ಎಂಜಿನಿಯರಿಂಗ್ ಕಾರ್ಯಾಗಾರಗಳೂ ಸೋಮವಾರಪೇಟೆ ಮತ್ತು ಕೂಡಿಗೆಗಳಲ್ಲಿ ಒಂದೊಂದು ವ್ಯವಸಾಯೋಪಕರಣ ಕಾರ್ಖಾನೆಯೂ ಉಂಟು. ಕಾಫಿ ತೋಟಗಳಿಗೆ ಅವಶ್ಯವಾದ ಉಪಕರಣಗಳು ಇಲ್ಲಿ ತಯಾರಾಗುತ್ತವೆ. ರಾಜ್ಯದ ಇತರ ಜಿಲ್ಲೆಗಳಲ್ಲಿರುವಂತೆ ಕೊಡಗಿನಲ್ಲೂ ಹಲವು ಜಾತಿ ಮತಗಳ ಜನ ಇದ್ದಾರೆ. ಎರವರು, ಕುಡಿಯರು, ಬೆಟ್ಟ ಕುರುಬರು, ಜೇನು ಕುರುಬರು, ಕೊರಗರು, ಪಣಿಯರು -ಇವರು ಗಿರಿಜನರು; ಹರಿಜನರೂ ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಇಲ್ಲಿನ ಕೊಡವರು ವಿಶಿಷ್ಟ ಜನ. ಕದಂಬ ವಂಶದ ಚಂದ್ರವರ್ಮ ಇವರ ಮೂಲಪುರುಷನೆಂದು ಹೇಳುತ್ತಾರೆ.



ರಾಜಾಸೀಟು, ಮಡಿಕೇರಿ

ಶತ್ರುಗಳ ಆಕ್ರಮಣದಿಂದಾಗಿ ಸ್ವಂತ ರಾಜ್ಯ ತೊರೆದುಬಂದು ಕೊಡಗಿನಲ್ಲಿ ನೆಲಸಿದ ಕದಂಬ ಸೈನಿಕರು ಇವರ ಮೂಲಪುರುಷರಿರಬಹುದೆಂದು ಹೇಳಲಾಗಿದೆ. ಕೊಡಗಿನ ಜನರ ಸಂಸ್ಕೃತಿ ವಿಶಿಷ್ಟವಾದ್ದು. ಕತ್ತಿ ಕೋವಿಗಳು ಇವರಿಗೆ ಪ್ರಿಯ. ಹುತ್ತರಿಯ ಕುಣಿತ, ಬೊಳಕಾಟ, ಕೋಲಾಟ ಮೊದಲಾದವು ಕೊಡಗಿನ ಜನಪದ ನೃತ್ಯಗಳು. ಇವು ವೀರರಸ ಪ್ರಧಾನ. ಹುತ್ತರಿ ಹಬ್ಬದ ಸಮಯದಲ್ಲಿ ಕೋಲಾಟ ಮುಖ್ಯವಾದ್ದು. ಪರಿಯಕುಳಿ ಎಂಬುದು ಯುದ್ಧ ನೃತ್ಯ. ಬೊಳುಕಾಟ ಅಖಿಲ ಭಾರತ ಪ್ರಸಿದ್ಧಿ ಪಡೆದಿದೆ. ಕೈಲ್‍ಪೊಳದ್, ಕಾವೇರಿ ಸಂಕ್ರಮಣ, ಹುತ್ತರಿ, ಶಿವರಾತ್ರಿ, ಉಗಾದಿ, ಷಷ್ಠಿ, ವಿಷ್ಣು ಸಂಕ್ರಮಣ -ಇವು ಕೊಡವರ ಮುಖ್ಯ ಹಬ್ಬಗಳು. ಕೊಡಗರ ಉಡುಪೂ ವೈಶಿಷ್ಟ್ಯಪೂರ್ಣ. ಗಂಡಸರು ಹಬ್ಬಹರಿದಿನ ವಿವಾಹ ಸಮಯಗಳಲ್ಲಿ ಜರಿಪೇಟ, ಕರಿಯ ಮೇಲಂಗಿ, ಜರಿಯ ನಡುದಟ್ಟಿ, ತೊಟ್ಟು, ಬಲಗಡೆಗೆ ಬೆಳ್ಳಿಯ ಒರೆಯಲ್ಲಿ ಕತ್ತಿ ಧರಿಸುತ್ತಾರೆ. ಸೆರಗನ್ನು ಹಿಂದಕ್ಕೆ ಬಿಟ್ಟು ವಿಶಿಷ್ಟ ರೀತಿಯಲ್ಲಿ ಸೀರೆ ಉಡುವುದೂ ತುಂಬುತೋಳಿನ ರವಿಕೆ ತೊಡುವುದು ಸ್ತ್ರೀಯರ ಕ್ರಮ. ವಿಶೇಷ ದಿನಗಳಲ್ಲಿ ಇವರು ತಲೆಗೆ ಜರಿಹೊದಿಕೆ ಕಟ್ಟುತ್ತಾರೆ. ಕೊಡವರಿಗೆ ಅವರದೇ ಆದ ಭಾಷೆಯಿದೆ. ಅದು ಕೊಡವ ನುಡಿ. ಅದಕ್ಕೆ ಲಿಪಿಯಿಲ್ಲ. ಅದು ಕನ್ನಡ ತಮಿಳು ಮಲಯಾಳಂ ಶಬ್ದಗಳಿಂದ ಕೂಡಿದೆ. ಕನ್ನಡ ಮೂಲ ಶಬ್ದಗಳೇ ಅಧಿಕ. ಅಪ್ಪನೆರವಂಡ ಅಪ್ಪಚ್ಚಕವಿ, ನಡಿಕೇರಿಯಂಡ ಚಿಣ್ಣಪ್ಪ ಇವರು ಕೊಡವ ಭಾಷೆಯ ಮುಖ್ಯ ಕೃತಿಕಾರರು. ಕನ್ನಡ ಕೊಡಗಿನ ವ್ಯವಹಾರ ಭಾಷೆ.

ಕೊಡಗಿನ ಜಿಲ್ಲಾ ಕೇಂದ್ರವಾದ ಮಡಿಕೇರಿಗೂ ಜಿಲ್ಲೆಯ ಮುಖ್ಯ ಸ್ಥಳಗಳಿಗೂ ಒಳ್ಳೆಯ ರಸ್ತೆಗಳುಂಟು. ಬೆಂಗಳೂರು, ಮೈಸೂರು, ಮಂಗಳೂರು, ಹಾಸನ, ಚಿಕ್ಕಮಗಳೂರು, ಉಡುಪಿ, ತಲಚೇರಿ, ಕಣ್ಣಾನೂರು ಮುಂತಾದ ಕಡೆಗಳಿಗೆ ಬಸ್ ಮಾರ್ಗಗಳಿವೆ. ಕುಶಾಲನಗರದಲ್ಲಿ ಕೊಡಗು



ಭಗಂಡೇಶ್ವರ ದೇವಾಲಯ, ಭಾಗಮಂಡಲ

ಜಿಲ್ಲೆಯನ್ನು ಪ್ರವೇಶಿಸಿ, ಮಡಿಕೇರಿಯ ಮಾರ್ಗವಾಗಿ ಸಂಪಾಜೆಗೆ ಸಾಗಿ ಮುಂದುವರಿಯುವ ಮೈಸೂರು -ಮಂಗಳೂರು ಹೆದ್ದಾರಿ, ಮಡಿಕೇರಿಯಿಂದ ಸಿದ್ದಾಪುರ ವಿರಾಜಪೇಟೆಗಳ ಮೂಲಕ ಕಣ್ಣಾನೂರು ತಲಪುವ ಮಡಿಕೇರಿ - ತಲಚೇರಿ ಹೆದ್ದಾರಿ, ಮಡಿಕೇರಿಯಿಂದ ಮಾದಾಪುರ, ಸೋಮವಾರಪೇಟೆ, ಶನಿವಾರ ಸಂತೆಗಳ ಮೂಲಕ ಸಾಗುವ ಮಡಿಕೇರಿ - ಕೊಡ್ಲಿಪೇಟೆ ಹೆದ್ದಾರಿ, ಮಡಿಕೇರಿಯಿಂದ ಮೂರ್ನಾಡು ಮೂಲಕ ವಿರಾಜಪೇಟೆ ತಲಪುವ ದಾರಿ, ಮಡಿಕೇರಿ - ಭಾಗಮಂಡಲ ಮಾರ್ಗ, ವಿರಾಜಪೇಟೆಯಿಂದ ಗೋಣಿಕೊಪ್ಪಲು, ತಿತ್ತಿಮತ್ತಿ ಮತ್ತು ಆನೇಚೌಕೂರು ಮಾರ್ಗ, ವಿರಾಜಪೇಟೆ ಹುಣಸೂರು ಹೆದ್ದಾರಿ, ಗೋಣಿಕೊಪ್ಪಲಿನಿಂದ ಪೊನ್ನಂಪೇಟೆ ಹುದಕೇರಿ ಕುಟ್ಟಗಳ ಮೂಲಕ ಸಾಗುವ ಗೋಣಿಕೊಪ್ಪಲು ಮಾನಂದವಾಡಿ ಹೆದ್ದಾರಿ, ನಾಪೊಕ್ಲು ಕಕ್ಕಬೆ ಕಡಂಗ ಕದನೂರು ವಿರಾಜಪೇಟೆ ಹೆದ್ದಾರಿ, ಕುಶಾಲನಗರದಿಂದ ಕೂಡಿಗೆಯ ಮೂಲಕ ಮಡಕೇರಿ ಕೊಡ್ಲಿಪೇಟೆ ಹೆದ್ದಾರಿಯನ್ನು ಸೇರುವ ದಾರಿ, ಕೂಡಿಗೆ-ಶಿರಂಗಾಲ ಮಾರ್ಗ - ಇವು ಜಿಲ್ಲೆಯ ಮುಖ್ಯ ರಸ್ತೆಗಳು ಕೊಡಗಿನಲ್ಲಿ ರೈಲುಮಾರ್ಗವಿಲ್ಲ.

ಜಿಲ್ಲೆಯ ಕೇಂದ್ರ ಮಡಿಕೇರಿ, ಇದು ಪ್ರವಾಸಿ ಕೇಂದ್ರ ಕೂಡ. ತಲಕಾವೇರಿ, ಭಾಗಮಂಡಲ, ರಾಮಸ್ವಾಮಿ ಕಣಿವೆ, ಕೂಡಿಗೆ, ನಾಲ್ಕುನಾಡು ಅರಮನೆ, ಇಗ್ಗುತಪ್ಪದೇವರ ಶಿಖರ, ಚೆಟ್ಟಳ್ಳಿ ಇವು ಇತರ ಪ್ರೇಕ್ಷಣೀಯ ಸ್ಥಳಗಳು.

ವಿರಾಜಪೇಟೆ, ಪೊನ್ನಂಪೇಟೆ, ಗೋಣಿಕೊಪ್ಪಲು, ಸೋಮವಾರಪೇಟೆ, ಶನಿವಾರಸಂತೆ, ಕೊಡ್ಲಿಪೇಟೆ, ಕುಶಾಲನಗರ, ಶುಂಟಿಕೊಪ್ಪ -ಇವು ಇತರ ಮುಖ್ಯ ಊರುಗಳು. ಅಮ್ಮತ್ತಿ, ಸಿದ್ದಾಪುರ, ಪೊಲ್ಲಿಬೆಟ್ಟ, ತಿತ್ತಿಮತ್ತಿ, ಬಾಳೆಲೆ -ಇವು ಕಾಫಿ ವ್ಯವಸಾಯ ಕೇಂದ್ರಗಳು. ಪೊಲ್ಲಿಬೆಟ್ಟ, ತಿತ್ತಿಮತ್ತಿ, ಬಾಳೆಲೆ -ಇವು ಕಿತ್ತಳೆ ತೋಟಗಳಿಗೂ ಪ್ರಸಿದ್ಧವಾಗಿವೆ. (ಎಂ.ಆರ್.ಆರ್.)

ಕರ್ನಾಟಕ ಭಾಗದ ಸಹ್ಯಾದ್ರಿಯ ದಕ್ಷಿಣ ತುದಿಯಲ್ಲಿರುವ ಈ ಜಿಲ್ಲೆ ಐತಿಹಾಸಿಕವಾಗಿ ಸಾಂಸ್ಕೃತಿಕವಾಗಿ ವೈಶಿಷ್ಟ್ಯವನ್ನು ಉಳಿಸಿಕೊಂಡಿದೆ.



ಕೊಡವರ ಆರಾಧ್ಯದೈವ: ಇಗ್ಗುತಪ್ಪ

ಈ ಜಿಲ್ಲೆಯ ವಿಶೇಷ ಹೆಸರಾದ ಕೊಡಗು ಪದದ ಮೂಲ ಅಸ್ಪಷ್ಟ. ಕನ್ನಡದ ಕುಡು (ಮಲೆಯ ಪ್ರದೇಶ) ಕೊಡಗು ಆಗಿದೆ; ಹಲವಾರು ಮಲೆಗಳ ಇಳಿಜಾರುಗಳಿರುವುದರಿಂದ ಮೂಲತಃ ಕೊಡಿಮಲೆನಾಡು ಎಂದಿದ್ದ ಇದು ಕೊಡಗಾಗಿ ರೂಪಾಂತರವಾಗಿದೆ; ಕೊಡಗು ಎಂದರೆ ಪಶ್ಚಿಮಕ್ಕಿರುವ ನಾಡು, ಈ ಜಿಲ್ಲೆ ಪಶ್ಚಿಮಕ್ಕಿರುವುದರಿಂದ ಈ ಹೆಸರು ಬಂತು ಎಂದು ಊಹೆಗಳಿವೆ. ಕೊಡಗಿನಲ್ಲಿ ಪ್ರಸಿದ್ಧವಾಗಿರುವ ಕಾವೇರಿ ಮಾಹಾತ್ಮ್ಯವೆಂಬ ಪೌರಾಣಿಕ ಗ್ರಂಥದ ಪ್ರಕಾರ ಇದಕ್ಕೆ ಬ್ರಹ್ಮಕ್ಷೇತ್ರ, ಮತ್ಸ್ಯದೇಶ ಮತ್ತು ಕ್ರೋಡದೇಶ ಎಂಬ ಹೆಸರುಗಳೂ ಇವೆ. ಈ ಹೆಸರುಗಳ ಮೂಲದ ಬಗ್ಗೆ ಹಲವು ಪೌರಾಣಿಕ ಕಥೆಗಳಿವೆ. ಕೊಡಗಿನ ಇತಿಹಾಸ ಕ್ರಿ.ಶ.2ನೆಯ ಶತಮಾನದಿಂದ ಪ್ರಾರಂಭವಾಗುತ್ತದೆ. ತಮಿಳು ಸಂಘಂ ಸಾಹಿತ್ಯದಲ್ಲಿ ಕುಡಗು ನಾಡಿನ ಉಲ್ಲೇಖವಿದ್ದು, ಇದು ಪಾಂಡ್ಯರಾಜ್ಯದೊಳಗಿದ್ದಂತೆ ಹೇಳಿಕೆಗಳಿವೆ. 4ನೆಯ ಶತಮಾನದಾರಭ್ಯ ಗಂಗ, ಕದಂಬ, ಚೋಳರ ವಶದಲ್ಲಿತ್ತು. 11-12ನೆಯ ಶತಮಾನದಲ್ಲಿ ಕೊಂಗಾಳ್ವರು, ಚಂಗಾಳ್ವರು ಇಲ್ಲಿ ಆಳುತ್ತಿದ್ದರು. ಅನಂತರ ಇದು ಹೊಯ್ಸಳ, ವಿಜಯನಗರ ರಾಜ್ಯಗಳ ಆಳಿಕೆಗೊಳಪಟ್ಟಿತ್ತು. ಪುನಃ ಸ್ವಲ್ಪಕಾಲ ಚಂಗಾಳ್ವರ ಕೈಸೇರಿತು. ಸ್ವಲ್ಪ ಕಾಲ ಹಲವು ಪಾಳೆಯಗಾರರ ವಶದಲ್ಲಿತ್ತು. ಅನಂತರ ಹಾಲೇರಿ ವಂಶದವರು ರಾಜ್ಯವಾಳಿದರು. 1780-89ರವರೆಗೆ ಹೈದರ್ ಅಲಿ ಮತ್ತು ಟಿಪ್ಪುಸುಲ್ತಾನ್ ಆಕ್ರಮಿಸಿದ್ದರು. 1834ರಲ್ಲಿ ಬ್ರಿಟಿಷರ ಆಳಿಕೆಗೊಳಪಟ್ಟು ಪ್ರತ್ಯೇಕ ಸಂಸ್ಥಾನದ ಸ್ಥಾನವನ್ನು ಹೊಂದಿತ್ತು. ಆ ಕಾಲದಲ್ಲಿ ಬೆಂಗಳೂರಿನಲ್ಲಿರುತ್ತಿದ್ದ ಮೈಸೂರು ಚೀಫ್ ಕಮಿಷನರ್ ಆಡಳಿತ ನಡೆಸುತ್ತಿದ್ದ. ಇವನ ಅಧೀನದಲ್ಲಿ ಕೊಡಗಿನಲ್ಲಿ ಒಬ್ಬ ಸೂಪರಿಂಟೆಂಡೆಂಟ್ ಇರುತ್ತಿದ್ದ. ಕ್ಯಾಪ್ಟನ್ ಲೇಹಾರ್ಡಿ ಕೊಡಗಿನ ಮೊದಲ ಸೂಪರಿಟೆಂಡೆಂಟ್. ಆ ವರೆಗೂ ಕೊಡಗು ರಾಜ್ಯಕ್ಕೆ ಸೇರಿದ್ದ ಪುತ್ತೂರು ಮತ್ತು ಸುಳ್ಯಗಳನ್ನು ದಕ್ಷಿಣ ಕನ್ನಡ ಜಿಲ್ಲೆಗೆ ವರ್ಗಾಯಿಸಿದ್ದರಿಂದ ಕೊಡಗು ರಾಜ್ಯದ ವಿಸ್ತಾರ ಕಡಿಮೆಯಾಯಿತು. ಕೊಡಗು ಇದೇ ಸ್ಥಿತಿಯಲ್ಲೇ ಮುಂದುವರಿದು 1947ರಲ್ಲಿ ಭಾರತ ಸ್ವತಂತ್ರವಾದಾಗ ಕೇಂದ್ರ ಸರ್ಕಾರದ ಗೃಹಖಾತೆಯ ನೇರ ಆಡಳಿತಕ್ಕೆ ಒಳಪಟ್ಟಿತು. 1951ರಲ್ಲಿ ಕೊಡಗು 'ಸಿ' ರಾಜ್ಯವೆಂದು ಘೋಷಿತವಾಗಿ ಇಲ್ಲಿ 24 ಸದಸ್ಯರ ಲೆಜಿಸ್ಲೇಟೀವ್ ಅಸೆಂಬ್ಲಿ ಸ್ಥಾಪಿತವಾಯಿತು. 1956ರಲ್ಲಿ ರಾಜ್ಯ ಮರುವಿಂಗಡಣೆಯಾದಾಗ ಕೊಡಗು ಮೈಸೂರು ರಾಜ್ಯದ ಭಾಗವಾಗಿ ಸೇರಿತು.

ಈ ಜಿಲ್ಲೆಯಲ್ಲಿ ವಿರಾಜಪೇಟೆ, ಸುಂಟಿಕೊಪ್ಪ ಮಂಗಳೂರು ರಸ್ತೆ... 

ಪ್ರಾಚೀನ ವಾಸ್ತುಶಿಲ್ಪದೃಷ್ಟಿಯಿಂದ ಬಹು ಮಹತ್ವದ ಕೃತಿಗಳು ಕೊಡಗಿನಲ್ಲಿ ಇಲ್ಲವೆಂದೇ ಹೇಳಬಹುದು. ಶನಿವಾರಸಂತೆಯ ಬಳಿಯ ಮುಳ್ಳೂರು (ನೋಡಿ) ಹಿಂದೆ ಜೈನ ಕೇಂದ್ರವಾಗಿದ್ದು ಇಲ್ಲಿ ಕೊಂಗಾಳ್ವರ ಕಾಲದ ಕೆಲವು ಬಸದಿಗಳ ಅವಶೇಷಗಳಿವೆ; ಈಗ ಬಸದಿಗಳು ಜೀರ್ಣೋದ್ಧಾರಗೊಂಡಿವೆ. ಶುಂಟಿಕೊಪ್ಪ ಬಳಿಯ ಬೆಟಗೇರಿಯಲ್ಲಿ ವಿಜಯನಗರ ಕಾಲದ ಒಂದು ಜೈನ ಬಸದಿ ಇದೆ. ಇದು ಕಗ್ಗಲ್ಲಿನ ಸಾಮಾನ್ಯ ರಚನೆ. ಹೊರಮಲೆ ಹಾಲೇರಿ ರಾಜರ ಒಂದು ಶಾಖೆಯ ಕೇಂದ್ರವಾಗಿತ್ತು. ಇಲ್ಲಿ ಅರಮನೆಯ ಅವಶೇಷಗಳು ಮತ್ತು ಒಂದು ಭದ್ರಕಾಳಿ ದೇವಾಲಯ ಇದೆ. ಕೊಡಗಿನ ಪ್ರಸಿದ್ಧವಾದ ವಾಸ್ತು ಕೃತಿಗಳೆಂದರೆ 18-19ನೆಯ ಶತಮಾನಕ್ಕೆ ಸೇರಿದ ಮಡಿಕೇರಿಯಲ್ಲಿರುವ ಕೋಟೆ, ಓಂಕಾರೇಶ್ವರ ದೇವಾಲಯ, ರಾಜರ ಸಮಾಧಿಗಳು ಮತ್ತು ಇಗರ್ಜಿ (ನೋಡಿ: ಮಡಿಕೇರಿ), ಕೊಡಗಿನ ಇಗ್ಗುತಪ್ಪ ದೇವರ ಶಿಖರ (ನೋಡಿ), ಇರ್ಪು (ನೋಡಿ), ಭಾಗಮಂಡಲ (ನೋಡಿ) ಮೊದಲಾದೆಡೆಯ ದೇವಾಲಯಗಳು ವಾಸ್ತುಶಿಲ್ಪ ದೃಷ್ಟಿಯಿಂದಲ್ಲದಿದ್ದರೂ ಪವಿತ್ರ ಸ್ಥಾನಗಳಾಗಿ ಪ್ರಸಿದ್ಧವಾಗಿವೆ. *

1973ರಲ್ಲಿ ಪ್ರಕಟವಾಗಿರುವ ಎಪಿಗ್ರಾಫಿಯ ಕರ್ನಾಟಿಕ ನವಮಾಲಿಕೆಯ ಮೊದಲ ಸಂಪುಟದಲ್ಲಿ ನೂರಕ್ಕೂ ಹೆಚ್ಚು ಕೊಡಗಿನ ಶಾಸನಗಳು ಪ್ರಕಟವಾಗಿವೆ. ಹೆಚ್ಚಿನವು ಶಿಲಾಶಾಸನಗಳು. ಕೆಲವು ತಾಮ್ರ ಶಾಸನಗಳು, ಪಾತ್ರೆಗಳ ಹಾಗೂ ಲೋಹದ ಮುದ್ರೆಗಳ ಮೇಲಣ ಬರೆಹಗಳೂ ಇವೆ. ಈ ಶಾಸನಗಳು ಗಂಗ, ಕೊಂಗಾಳ್ವ, ಚಂಗಾಳ್ವ, ವಿಜಯನಗರ, ಬೇಲೂರು ನಾಯಕರು, ಕೊಡಗಿನ ಒಡೆಯರು ಮತ್ತು ಬ್ರಿಟಿಷರ ಕಾಲಕ್ಕೆ ಸೇರಿದವು. ಹೆಚ್ಚಿನ ಶಾಸನಗಳು ಕನ್ನಡದಲ್ಲಿವೆ. ಸಂಸ್ಕೃತ, ಪಾರಸೀ, ಇಂಗ್ಲಿಷ್ ಹಾಗೂ ಗ್ರಂಥಲಿಪಿಯವೂ ಇವೆ. (ಎಸ್.ಕೆ.)

**ಕೊಡಚಾದ್ರಿ :** ಸಹ್ಯಾದ್ರಿ ಶ್ರೇಣಿಯ ಒಂದು ಶಿಖರ. ಶಿವಮೊಗ್ಗ ಜಿಲ್ಲೆ ಮತ್ತು ಕುಂದಾಪುರ ತಾಲ್ಲೂಕಿನ ಮಧ್ಯೆ ಇದೆ. ಸಮುದ್ರ ಮಟ್ಟದಿಂದ 1344ಮೀ ಎತ್ತರವಿದ್ದು ಶಿಖರದ ಪಾದದಲ್ಲಿರುವ ಗ್ರಾಮಗಳಿಂದ ಸು.600ಮೀ ಗಳಿಗಿಂತ ಎತ್ತರವಾಗಿದೆ. ಪಶ್ಚಿಮದ ಕಡೆ ದಕ್ಷಿಣ ಕನ್ನಡ ಜಿಲ್ಲಾ ಪ್ರದೇಶದ ಮೈದಾನಕ್ಕೆ 1200ಮೀ ಎತ್ತರದಲ್ಲಿದೆ. ಶಿವಮೊಗ್ಗದ ಕಡೆ ದಟ್ಟ ಕಾಡುಗಳಿಂದ ಕೂಡಿದೆ. ಶಿಖರದ ಬುಡದಲ್ಲಿರುವ ದುರ್ಗಾದೇವಿಯ ನಿವಾಸವೆನ್ನುವ ನಿಬಿಡವಾದ ಅರಣ್ಯವನ್ನು ಅಂಬಾವನವೆಂದು ಕರೆಯುತ್ತಾರೆ. ಶಿಖರದ ಮಾರ್ಗಮಧ್ಯದಲ್ಲಿ ಹುಲಿ ದೇವರ ಗುಡಿಯಿದೆ. ಅಲ್ಲಿ 32 ಬಾಹುಗಳುಳ್ಳ ಒಂದು ಮೂರ್ತಿಯಿದೆ. ಶಿಖರದ ಮೇಲುಭಾಗ ವಿಶಾಲವಾಗಿಲ್ಲ. ಕೊಡಚಾದ್ರಿ ಪಶ್ಚಿಮಘಟ್ಟಗಳ ಪ್ರದೇಶದ ಒಂದು ಸುಂದರ ನೆಲೆ. ಶಿಖರದ ಮೇಲಿಂದ ಪಶ್ಚಿಮದಲ್ಲಿ ಸಮುದ್ರವನ್ನೂ ಮೋಡಗಳಿಲ್ಲದ ದಿನ ಹಡಗುಗಳನ್ನೂ ಕಾಣಬಹುದು. ಇಲ್ಲಿಯದು ಅತ್ಯಂತ ಆಹ್ಲಾದದಾಯಕ ವಾಯುಗುಣ. ಅಮೂಲ್ಯ ಔಷಧ ಮೂಲಿಕೆಗಳು ಇಲ್ಲಿ ಬೆಳೆಯುತ್ತವೆ. ಶಿಖರದ ಕೆಳಗಡೆ ಕಾಲಭೈರವ ಮತ್ತು ಉಮಾಮಹೇಶ್ವರ ದೇವಾಲಯಗಳಿವೆ. ಈ ದೇವಾಲಯಗಳ ಮಧ್ಯೆ ಇರುವ ಒಂದು ಕೊಳ ಸೌಪರ್ಣಿಕ ನದಿಯ ಉಗಮಸ್ಥಳ. ಆದಿಶಂಕರಾಚಾರ್ಯರು ಸರಸ್ವತಿಯನ್ನು ಕುರಿತು ಇಲ್ಲಿ ತಪಸ್ಸನ್ನಾಚರಿಸುತ್ತಿದ್ದರೆಂದು ಹೇಳಲಾಗಿದೆ. *

**ಕೊಡವ ಭಾಷೆ ಮತ್ತು ಸಾಹಿತ್ಯ :** ಕೊಡಗು ಪ್ರದೇಶದ ಮೂಲ ನಿವಾಸಿಗಳಾದ ಈ ಮಾತನ್ನಾಡುವ ಜನಾಂಗವಿಶಿಷ್ಟವನ್ನು ಕೊಡವರು ಅಥವಾ ಕೊಡಗರು ಎಂದೂ ಭಾಷೆಯನ್ನು ಕೊಡವ, ಕೊಡಗ ಎಂದೂ ನಿರ್ದೇಶಿಸಲಾಗುತ್ತದೆ. ಕೊಡವರು ಮಾತ್ರವಲ್ಲದೆ ಕೊಡಗಿನಲ್ಲಿ ವಾಸವಿರುವ ಇತರ ಜಾತಿಗಳಾದ ಅಯಿರಿ, ಮೇದ ಮುಂತಾದವರೂ ಈ ಭಾಷೆಯನ್ನಾಡುತ್ತಾರೆ. ಕೊಡವರು ತಮ್ಮ ಮನೆಗಳಲ್ಲೂ ಹೊರಗೆ ಇತರ ಕೊಡವರೊಡನೆ ಮಾತಾಡುವಾಗಲೂ ಉಪಯೋಗಿಸುವುದು ಕೊಡವ ಮಾತನ್ನೇ. ಹೊರಗಣ ವ್ಯವಹಾರಕ್ಕೆ ಮಾತ್ರ ಕನ್ನಡವನ್ನು ಉಪಯೋಗಿಸುತ್ತಾರೆ.

ಕೊಡಗು ದಕ್ಷಿಣ ದ್ರಾವಿಡ ಪಂಗಡಕ್ಕೆ ಸೇರಿದ ಭಾಷೆ. ಈ ಭಾಷೆಗೆ ಲಿಪಿಯಿಲ್ಲ. ಲಿಖಿತ ರೂಪಗಳೇನೂ ದೊರೆಯದೆ ಇರುವುದರಿಂದ ಈ ಭಾಷೆಯ ಹಳೆಯ ಸ್ವರೂಪ ಹೇಗಿತ್ತೆಂದೂ ತಿಳಿಯಲು ಸಾಧ್ಯವಿಲ್ಲವಾಗಿದೆ. ಪ್ರಚಲಿತ ಕೊಡಗು ಭಾಷೆಯಲ್ಲಿ ಅ ಇ ಇ ಉ ಎ ಎ ಒ ಎಂಬ ಏಳು ಹ್ರಸ್ವ ಸ್ವರಗಳೂ ಆ ಈ ಈ ಊ ಏ ಏ ಓ ಎಂಬ ಏಳು ದೀರ್ಘಸ್ವರಗಳೂ ಕ ಗ ಙ; ಚ ಜ ಞ; ಟ ಡ ಣ; ತ ದ ನ; ಪ ಬ ಮ; ಯ ರ ಲ ವ ಶ ಷ ಸ ಹ ಳ ಎಂಬ ವ್ಯಂಜನಗಳೂ ಇವೆ. ಕೊಡಗು ಮಾತಿನಲ್ಲಿ ಮಹಾಪ್ರಾಣ ಇಲ್ಲ. ಪದಾದಿಯಲ್ಲಿ ಸಂಯುಕ್ತ ವ್ಯಂಜನಗಳು ಅನ್ಯ ಭಾಷೆಯಿಂದ ಎರವಲು ಬಂದ ಪದಗಳಲ್ಲಿ ಮಾತ್ರ ಬರುತ್ತವೆ. ಪ್ರೇಮ, ಬ್ರಹ್ಮ, ತ್ರಿವೇಣಿ, ತ್ಯಾಗ, ದೃಢ, ದ್ವೇಷ ಇತ್ಯಾದಿ (ಸಂ). ಪದಮಧ್ಯದಲ್ಲಿ ದ್ವಿತ್ವಗಳು ದೇಶೀಯ ಪದಗಳಲ್ಲಿಯೂ ಬರುತ್ತವೆ. ಅಪ್ಪೆ, ಅಬ್ಬಿ, ಎತ್ತಟ ಇತ್ಯಾದಿ. ಸಂಯುಕ್ತ ವ್ಯಂಜನಗಳು ಅನ್ಯದೇಶ್ಯ ಪದಗಳಲ್ಲಿ ಒಂದು ರೂಪಿಮದೊಳಗೆ ಬರಬಹುದು; ಆದರೆ ದೇಶ್ಯ ಪದಗಳಲ್ಲಿ ಅವು ಎರಡು ರೂಪಿಮಗಳು ಸಂಧಿಯಾಗುವುದರಿಂದ, ಇಲ್ಲವೆ ಸ್ವರಲೋಪ ಕ್ರಿಯೆಯಿಂದ ಫಲಿಸುತ್ತವೆ. ಶಬ್ದಗಳಲ್ಲಿ ದ್ವಿವರ್ಣ (ಡೈಸಿಲಬಿಕ್) ಮತ್ತು ತ್ರಿವರ್ಣ (ಟ್ರೈಸಿಲಬಿಕ್) ಮಿತಿಯ ಶಬ್ದಗಳು ಅಧಿಕ ಸಂಖ್ಯೆಯಲ್ಲಿವೆ. ಪುಂ, ಸ್ತ್ರೀ, ನಪುಂಸಕವೆಂಬ ಮೂರು ಲಿಂಗಪ್ರಭೇದಗಳು ಏಕವಚನದಲ್ಲೂ ಪ್ರಥಮ ಪುರುಷ ಸರ್ವನಾಮದಲ್ಲೂ ಇವೆ. ಬಹುವಚನದಲ್ಲಿ ಸ್ತ್ರೀ ಪುಂಗಳಿಗಾಗಿ ಒಂದು ರೂಪ ಮಾತ್ರ ಇದೆ. ಉದಾ ಅವಂ (ಪು), ಅವ (ಳ್) (ಸ್ತ್ರೀ) ಅದ್ (ನಪುಂ), ಅವು - ಅಯಂಗ (ಸ್ತ್ರೀ - ಪುಂ ಬಹುವಚನ). ಪೂರ್ಣಕ್ರಿಯಾಪದದಲ್ಲಿ ವಚನ ವ್ಯತ್ಯಾಸ ಮಾತ್ರ ಪರಿಗಣಿತವಾಗುತ್ತದೆ. ಲಿಂಗ ನಿರ್ದೇಶನವಿಲ್ಲ. ಉದಾ: ಬಂದೆ - ನಾನು ಬಂದೆ; ಬಾತ - ನಾವು ಬಂದೆವು; ಬಂದಿಯ - ನೀನು ಬಂದೆ; ಬಂದಿರ - ನೀವು ಬಂದಿರಿ; ಬಾತ - ಅವನು, ಅವಳು, ಅದು, ಅವರು, ಅವುಗಳು, ಬಂದನು, ಬಂದಳು, ಬಂದಿತು, ಬಂದರು, ಬಂದುವು; ಅಂದರೆ ಲಿಂಗ - ವಚನ ಭೇದಗಳನ್ನರಿಯಲು ವಾಕ್ಯದಲ್ಲಿ ಸರ್ವನಾಮವಿದ್ದರೆ ಮಾತ್ರ ಸಾಧ್ಯ.

ಭಾಷಾದೃಷ್ಟಿಯಿಂದ ಕೊಡವ ಭಾಷೆ ತಮಿಳು ಮಲೆಯಾಳಂಗಳಿಗೆ ಹೆಚ್ಚು ಸಮೀಪವಾಗಿದೆಯೆಂದು ಭಾಷಾವಿಜ್ಞಾನಿಗಳು ಹೇಳುತ್ತಾರೆ. ಆದರೆ ಬಾಹ್ಯ ವ್ಯವಹಾರವೆಲ್ಲ ಕನ್ನಡದ ಮೂಲಕವೇ ನಡೆಯ ಬೇಕಾಗಿರುವುದ ರಿಂದಲೂ ಭೌಗೋಳಿಕವಾಗಿಯೂ ಕನ್ನಡ ಪ್ರದೇಶ ಕೊಡಗನ್ನು ಸುತ್ತುವರಿದಿರುವುದರಿಂದಲೂ ಕೊಡಗು ಭಾಷೆಯ ಮೇಲೆ ಕನ್ನಡದ ಪ್ರಭಾವ ಅನಿವಾರ್ಯವೇ ಆಗಿದೆ. ಪದಕೋಶದಲ್ಲಿ ಕನ್ನಡಕ್ಕೂ ಕೊಡಗಿಗೂ ಸಮಾನವಾಗಿರುವ ಹಲವು ಪದಗಳಿವೆ. ಅಘೋಷ, ಘೋಷ ವ್ಯತ್ಯಾಸವಿರುವ ಸ್ಪರ್ಶ ಸ್ಫೋಟಕ ವ್ಯಂಜನಗಳು ಕನ್ನಡದಂತೆ ಕೊಡಗಿನಲ್ಲಿಯೂ ಇವೆ. ಕನ್ನಡದಲ್ಲಿ ಪ ಕಾರ ಹ ಕಾರವಾಗುವುದೊಂದು ಚಾರಿತ್ರಿಕ ಪ್ರಕ್ರಿಯೆ. ಕೊಡಗಿನಲ್ಲಿಯೂ 'ಹ' ಧ್ವನಿ ಧ್ವನಿಮಾ ಮಟ್ಟಕ್ಕೇರಿದೆ. ಉತ್ತಮಪುರುಷ ಸರ್ವನಾಮದ ಬಹುವಚನದಲ್ಲಿ ಅಭಿವ್ಯಾಪಕ (ಇನ್‌ಕ್ಲೂಸಿವ್) ಮತ್ತು ವ್ಯಾವರ್ತಕ (ಎಕ್ಸ್‌ಕ್ಲೂಸಿವ್) ಎಂಬ ವ್ಯತ್ಯಾಸ ತಮಿಳು, ಮಲೆಯಾಳಂ, ತುಳು - ತೆಲುಗುಗಳಲ್ಲಿ ಈಗಲೂ ಪ್ರಚಲಿತವಾಗಿದೆ. ಹಳೆಗನ್ನಡದಲ್ಲಿದ್ದ ಈ ಪ್ರಕ್ರಿಯೆ ಹೊಸಗನ್ನಡದಲ್ಲಿ ಇಲ್ಲವಾಗಿರುವಂತೆ ಕೊಡಗಿನಲ್ಲೂ ಇಲ್ಲವಾಗಿದೆ. ಪೂರ್ಣ ಕ್ರಿಯಾಪದದಲ್ಲಿ ಲಿಂಗನಿರ್ದೇಶನವಿಲ್ಲದಿರುವ ಪ್ರಕ್ರಿಯೆ, ಕನ್ನಡದ ಉಪಭಾಷೆಯಾದ ಗೌಡ ಕನ್ನಡವನ್ನು ಹೋಲುತ್ತದೆ. ಉದಾ: ನಾ ಬಂದೆ (ಗೌಕ; ಕೊ); ನಾವು ಬಂದೆ (ಗೌಕ), ನಾವು ಬಾತ್ (ಕೊ); ನೀ ಬಂದ (ಗೌಕ), ನೀ ಬಂದಿಯ (ಕೊ); ಅದ್ ಬಾತ್ (ಗೌಕ), ಅವ ಬಾತ್ (ಕೊ), ಅಂದರೆ ಅವಳು ಬಂದಳು, ಅದ ಬಾತ್ (ಗೌಕ); ಅಂದರೆ ಅದು ಬಂದಿತು. ಅವು ಬಂದೂ (ಗೌಕ); ಅಯಂಗ - ಅವು ಬಾತ್ (ಕೊ) ಅಂದರೆ ಅವರು ಬಂದರು: ಪೂರ್ಣ ಕ್ರಿಯೆ ಉತ್ತಮ ಪುರುಷ ಬಹುವಚನಗಳಿಗೆ ಏಕರೂಪವಿರುವುದು ಕೊಡಗು ಮತ್ತು ಗೌಡ ಕನ್ನಡಗಳೆರಡರಲ್ಲಿಯೂ ಕಂಡುಬರುತ್ತದೆ. ಗೌಡ ಕನ್ನಡದಲ್ಲಿ ಪ್ರಥಮ ಪುರುಷದಲ್ಲಿ ಲಿಂಗನಿರ್ದೇಶನವಿಲ್ಲದಿರುವಂತೆ ಕೊಡಗಿನಲ್ಲಿಯೂ ಇಲ್ಲವಾಗಿದೆ. ಕೊಡಗು ವಚನವ್ಯತ್ಯಯವನ್ನೂ ತೋರಿಸುವುದಿಲ್ಲ. ಈ ಅಂಶಗಳು ಕೊಡಗು -ಕನ್ನಡಗಳ ಪರಸ್ಪರ ಪ್ರಭಾವವನ್ನು ನಿರ್ದೇಶಿಸುತ್ತವೆ. ಈಗಿನ ಕೊಡಗು ಭಾಷೆಯಲ್ಲಿ ಪಾರಸೀ, ಅರಬ್ಬೀ, ಉರ್ದು ಪದಗಳು ಕೆಲವು ಸೇರ್ಪಡೆಯಾಗಿ ದಿನಬಳಕೆಯಲ್ಲಿವೆ ಉದಾ: ಹುಕುಂ, ಹಜಾಮ, ಹುಷಾರ್ ಇತ್ಯಾದಿ.

ಕೊಡವ ಭಾಷೆಯನ್ನು ಮೊದಲಿಗೆ ಪರಿಚಯಿಸಿಕೊಟ್ಟವರು ಕಾಲ್ಡ್‌ವೆಲ್, ಗ್ರೇಟರ್ ಮುಂತಾದ ವಿದ್ವಾಂಸರು. ಈ ಭಾಷೆಗೆ ಮೊಟ್ಟಮೊದಲು ವ್ಯಾಕರಣ ರಚಿಸಿದವನು ಕೋಲ್ ಎಂಬಾತ.

ಕೊಡವ ಭಾಷೆಯ ಜನಪದ ಹಾಡುಗಳು ಅಥವಾ ಇತರ ಕೆಲವು ಇತ್ತೀಚಿನ ಸಾಹಿತ್ಯ ರಚನೆಗಳನ್ನೆಲ್ಲ ಕನ್ನಡ ಲಿಪಿಯಲ್ಲಿಯೆ ಬರೆಯಲಾಗಿದೆ. ಇಂಥ ಲಿಖಿತ ಸಾಹಿತ್ಯವೂ ಕಡಿಮೆಯೇ. ಇದರಲ್ಲಿ ಪಟ್ಟೋಲೆ ಪಳಮೆ (ಕೊಡಗು ಜನಪದ ಹಾಡುಗಳು, ಅವರ ರೀತಿ, ನಡತೆಗಳು ಮುಂತಾದುವುಗಳ ಸಂಗ್ರಹ ಎಸ್.ಚಿಣ್ಣಪ್ಪ, 1924) ಅಪ್ಪಚ್ಚು ಕವಿಯ ನಾಲ್ಕು ನಾಟಕ (ಪುರಾಣ ಕಥೆಗಳನ್ನು ಸಾಂಪ್ರದಾಯಿಕ ನಾಟಕರೂಪಕ್ಕೆ ಅಳವಡಿಸಿದುದು ಪುನರ್ಮುದ್ರಣ 1968), ಕುತ್ತುಂಬೊಳಿಚ್ಚ (ಬಿ.ಡಿ.ಗಣಪತಿ, 1972) ಇವು ಜನಪ್ರಿಯ ಕೃತಿಗಳು. ಪಳಮೆ ಎಂಬ ಹಾಡುಗಳು ಸಾಮೂಹಿಕ ಕಾರ್ಯಕ್ರಮಗಳಲ್ಲಿ ಅಂದರೆ ನೃತ್ಯ, ಮದುವೆ, ಸಾವು ಮುಂತಾದ ಸಂದರ್ಭಾನುಸಾರ ಹಾಡುವಂಥವುಗಳು. ಇವು ಹೊರತು ಇನ್ನೇನೂ ಹೆಚ್ಚಿನ ಸಾಹಿತ್ಯಕೃಷಿ ಕೊಡವ ಭಾಷೆಯಲ್ಲಿ ನಡೆದಿಲ್ಲ. ಆದರೆ ಕೊಡವ ಭಾಷೆಗೆ ಈಗ ಪ್ರತ್ಯೇಕ ಅಕಾಡೆಮಿ ರಚಿತವಾಗಿದ್ದು ಹೆಚ್ಚಿನ ಕಾರ್ಯಗಳನ್ನು ನಿರೀಕ್ಷಿಸಬಹುದಾಗಿದೆ (ನೋಡಿ:ಅಕಾಡೆಮಿಗಳು). (ಕೆ.ಕೆಯು.ಜಿ.)

**ಕೊಡೆಕಲ್ಲು :** ಗುಲ್ಬರ್ಗ ಜಿಲ್ಲೆಯ ವಾಯವ್ಯ ಭಾಗದಲ್ಲಿ ಸುರಪುರ ತಹಸೀಲಿನಲ್ಲಿ ಕೃಷ್ಣಾ ನದಿಯ ಉತ್ತರಕ್ಕೆ ಸು.16ಕಿಮೀ ದೂರದಲ್ಲಿರುವ ಊರು.

ಈ ಊರಿನಲ್ಲಿ ಪ್ರಾಚೀನ ಸಾಂಸ್ಕೃತಿಕ ಅವಶೇಷಗಳು ದೊರೆತಿವೆ. ಕಲ್ಲಿನ ಸಣ್ಣ ಆಯುಧಗಳು ಈ ಗ್ರಾಮದ ಸುತ್ತಲೂ ಸಿಗುತ್ತವೆ. ಅವು ಇಲ್ಲಿ ಹಿಂದಕ್ಕಿದ್ದ ಸೂಕ್ಷ್ಮಶಿಲಾಯುಗ ಸಂಸ್ಕೃತಿಯನ್ನು ನಿದರ್ಶಿಸುತ್ತವೆ. ಈ ಗ್ರಾಮದಿಂದ 4-5ಕಿಮೀ ಅಂತರದಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಕಾಲಕ್ಕೆ ಸೇರಬಹುದಾದ ಒಂದು ದೊಡ್ಡ ಬೂದಿಯ ದಿನ್ನೆ ಮತ್ತು ಅದರ ಸಮೀಪದಲ್ಲಿಯೆ ಆ ಸಂಸ್ಕೃತಿಯ ಒಂದು ನೆಲೆ ಇದೆ. ಬೂದಿಯ ದಿನ್ನೆಯ ಕೆಳಭಾಗದಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಆದಿಭಾಗದ ಕಾಲದ ಅವಶೇಷಗಳು ಕಂಡುಬಂದಿವೆ. ಇಂಗಾಲ 14 ಪರೀಕ್ಷೆಯಿಂದ ಈ ಅವಶೇಷಗಳ ಕಾಲ ಸು.ಕ್ರಿ.ಪೂ.2300 ಎಂದು ತಿಳಿದಿದೆ. ಇಲ್ಲಿ ಚೆನ್ನಾಗಿ ಉಜ್ಜಿ ನಯಮಾಡಿದ ಕಲ್ಲಿನ ಕೊಡಲಿಗಳು, ಬೂದುಬಣ್ಣದ ಮಣ್ಣಿನ ಪಾತ್ರೆಗಳು, ಅಸ್ಥಿಗಳು ಸಿಕ್ಕಿವೆ. ಈ ಊರಿನ ಪಶ್ಚಿಮಕ್ಕೆ ಸ್ವಲ್ಪ ದೂರದಲ್ಲಿ ಬೃಹತ್ ಶಿಲಾಗೋರಿಗಳಿವೆ. ಅವು ದುಂಡಾದ ಕುಪ್ಪರಿ ಕೋಣೆ ಗೋರಿ ರೀತಿಯವು.

ಕೊಡೆಕಲ್ಲಿಗೆ ಧಾರ್ಮಿಕ ಮಹತ್ವವೂ ಉಂಟು. ವರ್ಷದುದ್ದಕ್ಕೂ ಪ್ರವಾಸಿಗಳು ಇಲ್ಲಿಯ ಚೆನ್ನಬಸವೇಶ್ವರ ದೇವಾಲಯಕ್ಕೆ ಭೇಟಿಕೊಡುವರು. ಜಾತ್ರೆಯ ವೇಳೆಯಲ್ಲಿ ಸಾವಿರಾರು ಜನ ಸೇರುತ್ತಾರೆ. ಇಲ್ಲಿಯ ದರ್ಗಾ ಹಿಂದುಗಳಿಗೂ ಮುಸಲ್ಮಾನರಿಗೂ ಪವಿತ್ರ ಸ್ಥಳ. (ಎ.ಎಂ.ಎ.)

**ಕೊಡೇಕಲ್ಲು ಬಸವಣ್ಣ :** ಸು.15ನೆಯ ಶತಮಾನದ ಶಿವಶರಣ. ಕಲ್ಯಾಣದ ಬಸವಣ್ಣನ ಬದ್ಧ ಅನುಯಾಯಿಯಾಗಿದ್ದು ಹಿಂದು - ಮುಸ್ಲಿಂ ಈ ಎರಡೂ ಸಮುದಾಯಗಳ ಪ್ರೀತಿ ವಿಶ್ವಾಸ ಪಡೆದಿದ್ದ ಸಂತ. ಗುಲ್ಬರ್ಗ ಜಿಲ್ಲೆ ಸುರಪುರ ತಾಲ್ಲೂಕಿನ ಕೋಡೇಕಲ್ಲಿನಲ್ಲಿ ನೆಲಸಿದ್ದರಿಂದ ಇವನಿಗೆ ಕೊಡೇಕಲ್ಲು ಬಸವಣ್ಣ ಎಂಬ ಹೆಸರು ಬಂದಿತ್ತು. ವೀರಶೈವ ಅಷ್ಟಾವರಣಗಳನ್ನು ತೊರೆದು, ಲಿಂಗವಿರಹಿತನಾಗಿ ಆರೂಢನಾಗಿದ್ದ. ನಾಥಪಂಥದ ಪ್ರಭಾವಕ್ಕೊಳಗಾಗಿ ಯೋಗ, ಪವಾಡ ಮೆರೆದ; ಮಹ್ಮದೀಯ ಸುಲ್ತಾನರ ಆಳಿಕೆಯಲ್ಲಿ ಜೀವಿಸಿದ್ದ ಈತ ಧರ್ಮ ಸಮನ್ವಯಕ್ಕಾಗಿ ಶ್ರಮಿಸಿದ. ಕುದುರೆ ಏರಿ ದೇಶಾದ್ಯಂತ ಸಂಚಾರ ಮಾಡಿ ಅಲ್ಲಾ ಅಲ್ಲಮ ಈರ್ವರೂ ಒಂದೇ ಎಂಬ ಸಂದೇಶ ಸಾರಿದ. ಮುಸ್ಲಿಮರ ಮೆಚ್ಚುಗೆಗಳಿಸಿ ಅವರಿಂದ ಪೈಗಂಬರರ ಅವತಾರ ಎಂದು ಕರೆಸಿಕೊಂಡ.



ಕೊಡೇಕಲ್ಲು ಬಸವಣ್ಣಮಂದಿರ

ಆದರೆ ಅದೇ ಕಾಲದಲ್ಲಿ ವಚನ ಸಾಹಿತ್ಯದ ರಕ್ಷಣೆಗಾಗಿ ಕಂಕಣ ಬದ್ಧನಾದ. ಕಲ್ಯಾಣಕ್ಕೆ ಹೋಗಿ ಅಲ್ಲಿ ಶರಣರ ವಚನಗಳ ಹಸ್ತಪ್ರತಿಗಳನ್ನು ಮಹಮ್ಮದೀಯ ಮೂಲಭೂತವಾದಿಗಳಿಂದ ರಕ್ಷಿಸಲು ಕ್ರಮಕೈಗೊಂಡ. ಪಾರಸೀ ಲಿಪಿಯಂತೆ ಕಾಣುವ ಅಮರಗನ್ನಡ ಲಿಪಿಯನ್ನು ಸೃಷ್ಟಿಸಿ ಅದರಲ್ಲಿ ಸಾಹಿತ್ಯ ರಚಿಸಿದನಂತೆ. ಅಲ್ಲದೆ ತನ್ನದೇ ಆದ ಸಾಹಿತ್ಯ ಸಂಪ್ರದಾಯವನ್ನು ಹುಟ್ಟು ಹಾಕಿ ದೇಶೀ ಛಂದಸ್ಸಿನಲ್ಲಿ ಕಾವ್ಯ ರಚಿಸಿದ. ಬಸವಣ್ಣನ ಕಾಲಜ್ಞಾನ ಎಂಬ ಇವನ ಕೃತಿ ಪ್ರಸಿದ್ಧವಾಗಿದೆ. ಹಿಂದೆ ಇದನ್ನು ಹಾಡಿ ಪ್ರಚುರಗೊಳಿಸಲು ತರಬೇತಾದ ಸಾರುವ ಅಯ್ಯಗಳು ಎಂಬ ಒಂದು ದಂಡೇ ನಿರ್ಮಾಣವಾಗಿತ್ತು. ಅವರನ್ನು ಕರ್ನಾಟಕದ ದಕ್ಷಿಣ ಭಾಗದಲ್ಲಿ ಕರಪಲ್ಲದವರು (ಕರಪಾಲ) ಎಂದು ಕರೆಯುತ್ತಿದ್ದರು. ಸಾತ್ವಿಕ ಜೀವನ, ಜನಸೇವೆ ಮತ್ತು ಧಾರ್ಮಿಕ ಸಾಧನೆಗಳಿಗೆ ಹೆಸರಾದ ಇವನಿಗೆ ಅನೇಕ ಮಂದಿ ಶಿಷ್ಯರಿದ್ದರು. ಅವರು ದೇಶದ ವಿವಿಧ ಭಾಗಗಳಲ್ಲಿ ನೆಲಸಿ ಈತನ ತತ್ತ್ವ ಪ್ರಚಾರ ಮಾಡಿದರು. ಅವರಲ್ಲಿ ಕೊಡೇಕಲ್ಲು ಸಮೀಪದ ತಿಂಥಿಣಿ ಮೋನಪ್ಪ, ಮೈಸೂರು ಸಮೀಪದ ಕೃಷ್ಣರಾಜನಗರ ತಾಲ್ಲೂಕಿನ ಕಪ್ಪಡಿಯಲ್ಲಿ ನೆಲೆಸಿದ್ದ ಮಗ ರಾಚಪ್ಪ, ಮಳವಳ್ಳಿ ತಾಲ್ಲೂಕಿನ ಬೊಪ್ಪಗೌಡನಪುರದಲ್ಲಿ ನೆಲೆಸಿ ಸಮಾಧಿಸ್ಥನಾದ ಮಂಟೆಸ್ವಾಮಿ ಇವರು ಮುಖ್ಯರು. ಇವರಲ್ಲಿ ಅನೇಕರು ಕೊಡೇಕಲ್ಲು ಸಂಪ್ರದಾಯದ ಸಾಹಿತ್ಯ ರಚಿಸಿದ್ದಾರೆ. ಅವರ ಅನೇಕ ಶಾಖಾ ಮಠಗಳು ಇವೆ.

ಕೊಡೇಕಲ್ಲಿನಲ್ಲಿರುವ ಬಸವಣ್ಣನ ಮಂದಿರ ಮುಸ್ಲಿಂ ವಾಸ್ತುಶಿಲ್ಪ ಶೈಲಿಯಲ್ಲಿದೆ. ಅದರಲ್ಲಿರುವ ಗಲ್ಲೀಫ ಹೊದಿಸಿದ ಈತನ ಸಮಾಧಿಯೂ ಅದೇ ಮಾದರಿಯಲ್ಲಿದೆ. ಆ ಸಮಾಧಿಯ ಮೇಲೆ ವಚನಗಳನ್ನು ಕೆತ್ತಿ ಅಲಂಕರಿಸಲಾಗಿದೆ. ಹಿಂದು ಮತ್ತು ಮುಸ್ಲಿಂ ಈ ಎರಡೂ ಸಂಪ್ರದಾಯ ರೀತಿಯಲ್ಲಿ ಇಲ್ಲಿ ಒಮ್ಮೆಲೇ ಪೂಜೆ ನಡೆಯುತ್ತದೆ. ಇಲ್ಲಿನ ಕೊಡೇಕಲ್ಲು ಹಿಂದು-ಮುಸ್ಲಿಂ ಸಂಸ್ಕೃತಿಗಳ ಸಾಮರಸ್ಯದ ನೆಲೆಯಾಗಿದೆ. (ಎಂ.ಜಿ.ಬಿ.)

**ಕೊಡ್ಲಿಪೇಟೆ :** ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿಗೆ ಸೇರಿದ ಪಟ್ಟಣ. ಮಡಿಕೇರಿಯಿಂದ 71ಕಿಮೀ ದೂರದಲ್ಲಿದೆ. ಇಲ್ಲಿಂದ ಸುಮಾರು ಒಂದೂವರೆ ಕಿಮೀ ಉತ್ತರದಲ್ಲಿ ಕೊಡಗು ಹಾಸನ ಜಿಲ್ಲೆಗಳ ಮೇರೆಯಾಗಿ ಹೇಮಾವತಿ ನದಿ ಪೂರ್ವಾಭಿಮುಖವಾಗಿ ಹರಿಯುತ್ತದೆ. ಮಡಿಕೇರಿ-ಸಕಲೇಶಪುರ ರಸ್ತೆ ಈ ಊರನ್ನು ಹಾದುಹೋಗುತ್ತದೆ. ಇಲ್ಲಿಂದ ಅರಕಲಗೂಡು, ಸಕಲೇಶಪುರ ಮತ್ತು ಮಡಿಕೇರಿವರೆಗಿನ ಎಲ್ಲ ಊರುಗಳಿಗೂ ನೇರವಾದ ಬಸ್ಸು ಸಂಚಾರದ ಸೌಲಭ್ಯಗಳುಂಟು. ಭಾನುವಾರ ಸಂತೆ ಜರುಗುತ್ತದೆ. ಏಲಕ್ಕಿ ಬೆಳೆಯುವ ಸಕಲೇಶಪುರ ಪ್ರದೇಶದೊಡನೆ ಇದು ವ್ಯಾಪಾರಸಂಬಂಧವನ್ನಿಟ್ಟುಕೊಂಡಿದೆ. ಕೊಡಗು ರಾಜರ ಕಾಲದಲ್ಲಿ ಇದು ಮುಖ್ಯವಾದ ವ್ಯಾಪಾರಸ್ಥಳವಾಗಿತ್ತು. (ಡಿ.ಎಸ್.ಕೆ.)

**ಕೊಣನೂರು :** ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕಿನ ಒಂದು ಊರು. ಹಾಸನದಿಂದ ದಕ್ಷಿಣಕ್ಕೆ 56ಕಿಮೀ ದೂರದಲ್ಲೂ ಅರಕಲಗೂಡಿಗೆ ದಕ್ಷಿಣದಲ್ಲಿ 24ಕಿಮೀ ದೂರದಲ್ಲೂ ಕಾವೇರಿ ನದಿಯ ಎಡದಂಡೆಯ ಮೇಲಿದೆ. ಇಲ್ಲಿ ಕೊಳಲ ಗೋಪಾಲಸ್ವಾಮಿ ದೇವಾಲಯ ಇರುವುದರಿಂದ ಪ್ರಥಮದಲ್ಲಿ ಇದನ್ನು ಕೊಳಲೂರು ಎಂದು ಕರೆಯುತ್ತಿದ್ದರು. ಹೈದರ್ ಅಲಿಯಿಂದ ಅಧಿಕಾರಚ್ಯುತನಾದ ದಳವಾಯಿ ನಂಜರಾಜ ಈ ಊರನ್ನು ಜಹಗೀರಾಗಿ ಪಡೆದು ಇಲ್ಲಿ ನೆಲೆಸಿದ್ದ.

ಪ್ರತಿ ಗುರುವಾರ ಸೇರುವ ಸಂತೆಯಲ್ಲಿ ಬತ್ತ ಮತ್ತು ಅಡಕೆಯ ವ್ಯಾಪಾರ ಹೆಚ್ಚು. ಕೊಣನೂರಿಗೆ ತಾಲ್ಲೂಕಿನ ಮತ್ತು ಜಿಲ್ಲೆಯ ಎಲ್ಲ ಮುಖ್ಯ ಸ್ಥಳಗಳಿಂದ ಉತ್ತಮ ಮಾರ್ಗಗಳಿವೆ. ಇಲ್ಲಿ ಬಿ.ಎಂ. ಶೆಟ್ಟಿ ಪ್ರಥಮ ದರ್ಜೆ ಕಾಲೇಜು ಇದೆ (1954). *

**ಕೊಣ್ಣೂರು :** ಬೆಳಗಾಂವಿ ಜಿಲ್ಲೆ ಗೋಕಾಕ ತಾಲ್ಲೂಕಿನಲ್ಲಿ ಘಟಪ್ರಭಾ ನದಿಯ ಬಲದಂಡೆಯ ಮೇಲಿರುವ ಊರು. ಗೋಕಾಕ ರೋಡ್ ರೈಲ್ವೆ ನಿಲ್ದಾಣದಿಂದ 5ಕಿಮೀ ದೂರದಲ್ಲಿದೆ.

ಈ ಊರು ಪ್ರಾಚೀನ ಅವಶೇಷಗಳಿಂದ ಪ್ರಸಿದ್ಧವಾಗಿದೆ. ಊರೊಳಗೆ ಒಂದು ತೀರ್ಥಂಕರ ದೇವಾಲಯ ಇದೆ. ಇಲ್ಲಿನ ಒಂದು ಶಿಲಾಶಾಸನದ ಪ್ರಕಾರ ಸೌಂದತ್ತಿಯ ರಟ್ಟರ ಪ್ರಾಂತ್ಯದಲ್ಲಿದ್ದ ಇದು ಜೈನಧರ್ಮದ ಕೇಂದ್ರಗಳಲ್ಲಿ ಒಂದಾಗಿದ್ದು ಇದನ್ನು ಕೊಂಡನೂರು ಎಂದು ಕರೆಯಲಾಗಿತ್ತು. ಕಲ್ಯಾಣ ಚಾಳುಕ್ಯ ಆರನೆಯ ವಿಕ್ರಮಾದಿತ್ಯನ ಮಂಡಲೇಶ್ವರನಾದ ರಟ್ಟವಂಶದ ಎರಡನೆಯ ಸೇನ ಇಲ್ಲಿ ಒಂದು ಜೈನಬಸದಿಯನ್ನು ಕಟ್ಟಿಸಿ 1087ರಲ್ಲಿ ಅದಕ್ಕೆ ದತ್ತಿಯನ್ನು ಬಿಟ್ಟ. ಈ ಜೈನದೇವಾಲಯ ಕಾಲಾಂತರದಲ್ಲಿ ಜೀರ್ಣೋದ್ಧಾರ ಹೊಂದಿತ್ತು. ಮೊದಲಿನ ಅಧಿಷ್ಠಾನ ಮತ್ತು ಗರ್ಭಗುಡಿ ಮತ್ತು ಅಂತರಾಳದ ಹೊರ ಬದಿಯಗೋಡೆಗಳ ಭಾಗಗಳು ಮಾತ್ರ ಉಳಿದಿವೆ. ಇದಲ್ಲದೆ ಸುಮಾರು 11ನೆಯ ಶತಮಾನದ ಕದಂಬನಾಗರ ಶೈಲಿಯ ಶಿಖರವುಳ್ಳ ಚಿಕಲೇಶ್ವರ ಎಂಬ ಮತ್ತೊಂದು ದೇವಾಲಯವಿದೆ. ಇದರಲ್ಲೂ ಮೊದಲಿನ ಗರ್ಭಗುಡಿ ಮಾತ್ರ ಉಳಿದಿದೆ.

ಗ್ರಾಮದ ವಾಯುವ್ಯ ದಿಕ್ಕಿಗೆ ಸು.1ಕಿಮೀ ದೂರದಲ್ಲಿ ನದಿಯ ದಂಡೆಯ ಮೇಲೆ ಒಂದು ಶಿಲಾ ತಾಮ್ರಯುಗದ ವಾಸ್ತವ್ಯದ ನೆಲೆಯಿದೆ. ಇದರಲ್ಲಿ ಉಜ್ಜಿ ನಯಮಾಡಿದ ಕಲ್ಲಿನ ಕೊಡಲಿಗಳು, ನೀಳ ಚಕ್ಕೆಕಲ್ಲಿನ ಸೂಕ್ಷ್ಮ ಉಪಕರಣಗಳು, ಅಪರೂಪವಾಗಿ ನೇರಳೆ ವರ್ಣದ ರೇಖಾಚಿತ್ರಗಳುಳ್ಳ ಬೂದು ಹಾಗೂ ಕೆಂಪು ಬಣ್ಣದ ಸುಟ್ಟ ಗಡಿಗೆ ಮಡಕೆಗಳು, ಭೂಮಿಯ ಸುಣ್ಣದ ಸಂಪರ್ಕದಿಂದ ಗಟ್ಟಿಯಾದ ಪ್ರಾಣಿಗಳ ಎಲುಬುಗಳು ಮತ್ತು ವಿಪರೀತ ಶಾಖದಿಂದ ಉಂಟಾದ ಬೂದಿ ಕಿಟ್ಟದ ಉಂಡೆಗಳು ಮುಂತಾದ ಅವಶೇಷಗಳು ವಿಶಾಲ ಪ್ರದೇಶದಲ್ಲಿ ಹರಡಿವೆ. ಊರಿನ ದಕ್ಷಿಣಕ್ಕೆ, ಸಮೀಪದ ಬಯಲಿನಲ್ಲಿ ಬೃಹತ್ ಶಿಲಾಸಂಸ್ಕೃತಿಯ ಸು.100 ದಾರಿಕೋಣೆ ಗೋರಿಗಳಿವೆ. (ಎ.ಎಸ್.)

**ಕೊಪ್ಪ :** ಚಿಕ್ಕಮಗಳೂರು ಜಿಲ್ಲೆಯ ಒಂದು ತಾಲ್ಲೂಕು ಮತ್ತು ಅದರ ಆಡಳಿತ ಕೇಂದ್ರ. ಈ ತಾಲ್ಲೂಕು ಚಿಕ್ಕಮಗಳೂರಿನ ವಾಯುವ್ಯಕ್ಕೆ ಪಶ್ಚಿಮಘಟ್ಟಪ್ರದೇಶದಲ್ಲಿದೆ. ನರಸಿಂಹರಾಜಪುರ, ಶೃಂಗೇರಿ, ಮೂಡಿಗೆರೆ ಮತ್ತು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕುಗಳ ಮಧ್ಯದಲ್ಲಿದೆ. ವಿಸ್ತೀರ್ಣ 572.4ಚ.ಕಿಮೀ. ಜನಸಂಖ್ಯೆ 87,663. ಈ ತಾಲ್ಲೂಕಿನಲ್ಲಿ ಮೂರು ಹೋಬಳಿಗಳೂ 80 ಗ್ರಾಮಗಳೂ ಇವೆ.

ಈ ತಾಲ್ಲೂಕಿನಲ್ಲಿ ಪಶ್ಚಿಮ ಘಟ್ಟ ಶ್ರೇಣಿ ಹಾದು ಹೋಗುವುದರಿಂದ ಇದು ಬೆಟ್ಟಗುಡ್ಡಗಳಿಂದಲೂ ದಟ್ಟವಾದ ಅರಣ್ಯಗಳಿಂದಲೂ ಕೂಡಿದೆ. ಮೇಟಿಪರ್ವತದಿಂದ ಆಗುಂಬೆವರೆಗಿನ ಘಟ್ಟಸಾಲಿನ ಮಧ್ಯಭಾಗದಲ್ಲಿ ಬರುವ ಬೆಟ್ಟಗುಡ್ಡಗಳು ಈ ತಾಲ್ಲೂಕಿನ ಭೌತಿಕ ಲಕ್ಷಣವನ್ನು ನಿರ್ಧರಿಸಿದೆ. ವರಾಹ ಪರ್ವತ (1457.2ಮೀ.) ಮೇಟಿ ಪರ್ವತ, ನರಸಿಬೆಟ್ಟ ಮೊದಲಾದ ಎತ್ತರದ ಪರ್ವತಗಳಿವೆ. ಈ ತಾಲ್ಲೂಕಿನ ಸರಾಸರಿಮಳೆಯ ಪ್ರಮಾಣ 3002ಮಿಮೀ. ಇದ್ದು ಜಿಲ್ಲೆಯಲ್ಲಿ ಎರಡನೆಯ ಸ್ಥಾನ ಪಡೆದಿದೆ. ಇದರಿಂದಾಗಿ ಇಲ್ಲಿಯ ಜಲಸಂಪತ್ತು ಅಪಾರ. ಈ ತಾಲ್ಲೂಕಿನ ಸೆರಗಿನಲ್ಲೇ ಇರುವ ಗಂಗಾಮೂಲದಲ್ಲಿ ತುಂಗಾ ಮತ್ತು ಭದ್ರಾ ನದಿಗಳು ಹುಟ್ಟಿ ತಾಲ್ಲೂಕಿನ ಬೆಟ್ಟಗಳ ಸಾಲುಗಳಿಂದ ಅವು ಪ್ರತ್ಯೇಕಗೊಳ್ಳುತ್ತವೆ. ಇವಲ್ಲದೆ ನಂದಿನಿ, ಸೀತಾ, ನಳಿನಿ ಮೊದಲಾದ ಸಣ್ಣ ಹೊಳೆಗಳೂ ಝರಿಗಳೂ ಇವೆ. ಬೆಟ್ಟಗಳ ಮಧ್ಯದಲ್ಲಿ ಇರುವ ಕಿರಿ ಅಗಲದ ಕಣಿವೆಗಳು ಮಾತ್ರ ವಸತಿ ಮತ್ತು ಬೇಸಾಯಕ್ಕೆ ಅನುಕೂಲವಾಗಿವೆ. ಇಲ್ಲಿ ಹೆಚ್ಚಾಗಿ ಗಟ್ಟಿಮಣ್ಣು ಮತ್ತು ಕೆಮ್ಮಣ್ಣು ಕಂಡುಬರುತ್ತವೆ. ಈ ಮಣ್ಣು ಅಡಕೆ ಮತ್ತು ಬತ್ತದ ಬೆಳೆಗೆ ಅನುಕೂಲವಾಗಿವೆ.

ಈ ತಾಲ್ಲೂಕಿನ ಅರಣ್ಯ ಪ್ರದೇಶದ ವಿಸ್ತೀರ್ಣ 14,670 ಹೆಕ್ಟೇರುಗಳು. ಇಲ್ಲಿಯ ಕಾಡುಗಳಲ್ಲಿ ತೇಗ, ಶ್ರೀಗಂಧ, ಮತ್ತಿ, ನಂದಿ, ಹಲಸು, ಹೆಬ್ಬಲಸು, ದಬ್ಬೆ, ನೇರಳೆ, ಬೀಟೆ ಮೊದಲಾದ ಮರಗಳಿವೆ. ಇಲ್ಲಿ ಬಿದಿರು ಕಾಡುಗಳೂ ಉಂಟು. ಕಾಗದ ತಯಾರಿಸಲು ಬೊಂಬನ್ನು ಇಲ್ಲಿಂದ ಸಾಗಿಸಲಾಗುತ್ತದೆ. ಕಾಡುಗಳಲ್ಲಿ ಹಲಸು, ನೇರಳೆ, ಚೊಬ್ಬೆ, ಬಕ್ಕಲ, ಹಾಲಿ ಮೊದಲಾದ ಹಣ್ಣುಗಳ ಮರಗಳಿವೆ. ಅಂಟವಾಳ, ಸೀಗೆಕಾಯಿ, ಕಾಡು ಮೆಣಸು ಮೊದಲಾದವು ಬೆಳೆಯುತ್ತವೆ.

ಈ ಪ್ರದೇಶದಲ್ಲಿ ಪ್ರಾಣಿಸಂಪತ್ತೂ ವಿಪುಲವಾಗಿದೆ. ಮಲೆನಾಡಿನ ಎಲ್ಲ ಜಾತಿಯ ಪ್ರಾಣಿಗಳೂ ಇಲ್ಲಿ ಕಂಡುಬರುತ್ತವೆ. ನದಿಗಳಲ್ಲಿ ಅಧಿಕವಾಗಿ ದೊಡ್ಡ ಜಾತಿಯ ಮೀನುಗಳೂ ಮೊಸಳೆಗಳೂ ಇವೆ.

ಇಲ್ಲಿನ ಮುಖ್ಯ ಕಸಬು ಕೃಷಿ ಮತ್ತು ಪ್ಲಾಂಟೇಷನ್ ಉದ್ಯಮ. ಕಾಫಿ, ರಬ್ಬರ್, ಅಡಕೆ, ಮೆಣಸು, ಏಲಕ್ಕಿ ತೋಟದ ಬೆಳೆಗಳು. ಅಡಕೆ, ಏಲಕ್ಕಿ ಬೆಳೆಗಳನ್ನು ನೀರಿನ ಸೌಲಭ್ಯವಿರುವಲ್ಲಿ ಬೆಳೆಯುತ್ತಾರೆ. ಈಚೆಗೆ ಹೆಚ್ಚು ಹೆಚ್ಚು ವೆನಿಲಾ ಬೆಳೆಯಲಾಗುತ್ತಿದೆ. ಕಾಫಿ ಬೆಳೆಯ ಸಂಶೋಧನೆಗಾಗಿ ಈ ತಾಲ್ಲೂಕಿನಲ್ಲಿ ಬಾಳೆಹೊನ್ನೂರಿನ ಬಳಿ ಒಂದು ಸಂಶೋಧನ ಕೇಂದ್ರವಿದೆ. ಈ ತಾಲ್ಲೂಕಿನಲ್ಲಿ ಹೆಚ್ಚು ಮಳೆ ಬೀಳುವುದರಿಂದ ಇಳಿಜಾರು ಪ್ರದೇಶಗಳಲ್ಲಿ ಮಾತ್ರ ಕಾಫಿ ಚೆನ್ನಾಗಿ ಬೆಳೆಯುತ್ತದೆ. ಅರ್‍ಯಾಬಿಕಾ ಮತ್ತು ರೋಬಸ್ಟ ಕಾಫಿ ತಳಿಗಳನ್ನು ಬೆಳೆಯಲಾಗುತ್ತದೆ. ರೊಬಸ್ಟ ಕಾಫಿ ಸಾಮಾನ್ಯವಾಗಿ ದೃಢವಾಗಿ ಬೆಳೆಯುತ್ತದೆ. ನದಿ ಬಯಲುಗಳಲ್ಲಿ ಮಣ್ಣು ಫಲವತ್ತಾಗಿದೆ. ಬತ್ತ ಮುಖ್ಯ ಆಹಾರ ಬೆಳೆ. ಬತ್ತದ ಒಳ್ಳೆಯ ಇಳುವರಿ ಬರುತ್ತದೆ.

ಈ ತಾಲ್ಲೂಕಿನಲ್ಲಿ ರಬ್ಬರ್ ಕಾರ್ಖಾನೆಯೊಂದಿದೆ. ಕೊಪ್ಪ ಮತ್ತಿತರ ಕಡೆಗಳಲ್ಲಿ ಅಕ್ಕಿ ಗಿರಣಿಗಳಿವೆ. ಮರ ಕುಯ್ಯುವ ಕಾರ್ಖಾನೆ ಇದೆ. ಬಿದಿರಿನ ವಸ್ತುಗಳನ್ನು ತಯಾರಿಸುವುದು, ಗಾಡಿ ಕೂಡಿಸುವುದು, ಪಾತ್ರೆ ರಿಪೇರಿ, ಪೀಠೋಪಕರಣಗಳನ್ನು ಮಾಡುವುದು ಮೊದಲಾದ ಕೈಕಸಬುಗಳು ರೂಢಿಯಲ್ಲಿವೆ. ಜೇನು ಸಾಕಣೆ ಉದ್ಯಮ ವ್ಯಾಪಕವಾಗಿದೆ. ಅಡಕೆ, ಬತ್ತ ಮತ್ತಿತರ ಉತ್ಪನ್ನಗಳ ಮತ್ತು ಹೊರಗಿನಿಂದ ಬರುವ ವಸ್ತುಗಳ ವ್ಯಾಪಾರ ಅನೇಕರಿಗೆ ಉದ್ಯೋಗ ಒದಗಿಸಿದೆ.

ಇತ್ತೀಚಿನವರೆಗೂ ಈ ತಾಲ್ಲೂಕು ಸಾರಿಗೆ ಸಂಪರ್ಕದ ದೃಷ್ಟಿಯಿಂದ ಬಹು ಹಿಂದೆ ಉಳಿದಿತ್ತು. ಹಿಂದೆ ಆಗುಂಬೆ ಮತ್ತು ಚಾರ್ಮಾಡಿ ಘಾಟಿಗಳ ಮೂಲಕ ದಕ್ಷಿಣಕನ್ನಡ ಜಿಲ್ಲೆಗೆ ಮಾರ್ಗಗಳಿದ್ದವು. ಏಲಕ್ಕಿ, ಮೆಣಸು, ಅಕ್ಕಿ ಇತ್ಯಾದಿಗಳು ಎತ್ತುಗಳ ಮೇಲೆ ಸಾಗುತ್ತಿದ್ದವು. ಅಲ್ಲಿಂದ ಉಪ್ಪು, ಸೀಮೆಎಣ್ಣೆ, ಬಟ್ಟೆ ಮುಂತಾದವು ಬರುತ್ತಿದ್ದುವು. 20ನೆಯ ಶತಮಾನದಲ್ಲಿ ಪ್ಲಾಂಟೇಷನ್ ಸಾಗುವಳಿ ಬಂತು. ಸ್ವಾತಂತ್ರ್ಯೋತರ ಕಾಲದಲ್ಲಿ ರಸ್ತೆ ನಿರ್ಮಾಣ ಕಾರ್ಯ ತ್ವರಿತವಾಗಿ ನಡೆಯಿತು. ಸಾರಿಗೆವ್ಯವಸ್ಥೆ ಸುಧಾರಿಸಿದೆ. ಚಿಕ್ಕಮಗಳೂರು-ಬಾಳೆಹೊನ್ನೂರು-ಕೊಪ್ಪರಸ್ತೆ; ತರೀಕೆರೆ-ಕೊಪ್ಪರಸ್ತೆ; ಹರಿಹರಪುರ-ಕೊಪ್ಪರಸ್ತೆ; ಮೇಗುಂದ-ಕಿಗ್ಗ ಹರಿಹರಪುರರಸ್ತೆ; ಜಯಪುರ-ಮೇಗುಂದರಸ್ತೆ; ಕೊಪ್ಪ-ತೀರ್ಥಹಳ್ಳಿರಸ್ತೆ ಮೊದಲಾದವು ಈ ತಾಲ್ಲೂಕಿನ ಮುಖ್ಯ ಮಾರ್ಗಗಳು. ದುರ್ಗಮ ಅರಣ್ಯ ಮತ್ತು ಬೆಟ್ಟಗುಡ್ಡಗಳಿಂದ ಕೂಡಿದ್ದ ಈ ಪ್ರದೇಶದ ನೆನಪೇ ಒಂದು ಕಾಲಕ್ಕೆ ಭಯವನ್ನು ತರುತ್ತಿತ್ತು. ತಪ್ಪು ಮಾಡಿದವನನ್ನು ಕೊಪ್ಪಕ್ಕೆ ಹಾಕು ಎಂಬ ಮಾತು ಸರ್ಕಾರಿ ವಲಯದಲ್ಲಿ ಗಾದೆಯೇ ಆಗಿಬಿಟ್ಟಿತ್ತು. ಆದರೆ ಈಗ ನಡೆದಿರುವ ಅಭಿವೃದ್ಧಿ ಕಾರ್ಯಕ್ರಮಗಳು, ಕಾಡುಗಳನ್ನು ಕಡಿದು ಸಾಗುವಳಿ, ಆಧುನಿಕ ಸಾರಿಗೆಸಂಪರ್ಕ, ಆರೋಗ್ಯಯೋಜನೆ, ಕಡಿಮೆಯಾಗುತ್ತಿರುವ ಮಳೆ ಇವೆಲ್ಲ ಈ ಮಾತನ್ನು ಇಂದು ಸುಳ್ಳಾಗಿಸಿವೆ.

ಕೊಪ್ಪ ತಾಲ್ಲೂಕಿನಲ್ಲಿ ಜಯಪುರ, ಮೇಗುಂದ, ಹೊಸೂರು, ಹಿರೇಗದ್ದೆ, ಎಲೆಮಡ್ಲು, ಚಾವಲ್‍ಮನೆ, ಹಿರೇಕೊಡಿಗೆ, ಮೇಗೂರು, ಹಾಲ್ಮತ್ತೂರು ಮುಂತಾದ ಗ್ರಾಮಗಳು ಅಭಿವೃದ್ಧಿಹೊಂದಿವೆ. ಜಂಬಿಟ್ಟಿಗೆ (ನೋಡಿ) ಮತ್ತು ಹರಿಹರಪುರ (ನೋಡಿ) ಪುಣ್ಯಸ್ಥಳಗಳೆಂದು ಪರಿಗಣಿತವಾಗಿವೆ. ಹರಿಹರಪುರ 1897ರವರೆಗೂ ಕೊಪ್ಪ ತಾಲ್ಲೂಕಿನ ಕೇಂದ್ರವಾಗಿತ್ತು. ಹರಿಹರಪುರಕ್ಕೆ 8ಕಿಮೀ ದೂರದಲ್ಲಿರುವ ಬಂಡಿಗಡಿಯಲ್ಲಿ ಒಂದು ಸ್ಮಾರ್ತ ಮಠ ಮತ್ತು ಗೋಪಾಲಕೃಷ್ಣ ದೇವಾಲಯ ಇವೆ. ತಾಲ್ಲೂಕಿನ ಸೆರಗಿನಲ್ಲಿ ಪಶ್ಚಿಮಘಟ್ಟ ಶ್ರೇಣಿಯಲ್ಲಿ ಬರುವ ವರಾಹಪರ್ವತದಲ್ಲಿರುವ ಗಂಗಾಮೂಲ ತುಂಗಾ ಭದ್ರಾ, ನೇತ್ರಾವತಿ ನದಿಗಳ ಉಗಮ ಸ್ಥಾನ, ಪವಿತ್ರಕ್ಷೇತ್ರ. ಹರಿಹರಪುರದ ನರಸಿಂಹ, ಜಂಬಿಟ್ಟಿಗೆಯ ನೀಲಕಂಠೇಶ್ವರ ಮೊದಲಾದ ದೇವತೆಗಳ ರಥೋತ್ಸವಗಳು ಈ ತಾಲ್ಲೂಕಿನಲ್ಲಿ ಪ್ರಸಿದ್ಧವಾದವು.

ಕೊಪ್ಪ ಈ ತಾಲ್ಲೂಕಿನ ಮುಖ್ಯ ಊರು ಮತ್ತು ಆಡಳಿತ ಕೇಂದ್ರ. ಶಿವಮೊಗ್ಗದ ನೈಋತ್ಯಕ್ಕೆ 65ಕಿಮೀ ದೂರದಲ್ಲಿ ಆಗುಂಬೆ ರಸ್ತೆಯಲ್ಲಿದೆ. ಜನಸಂಖ್ಯೆ 5115.

ಪೀಠೋಪಕರಣಗಳ ತಯಾರಿಕಾ ಉದ್ಯಮ, ಮರ ಕೊಯ್ಯುವ ಮಿಲ್ಲು, ದಿನಸಿ, ಜವಳಿ, ಏಲಕ್ಕಿ, ಅಡಕೆಗಳಿಗೆ ಸಂಬಂಧಿಸಿದ ವ್ಯಾಪಾರ ಉದ್ಯಮಗಳಿವೆ.

ಈ ಪಟ್ಟಣ ಹಿಂದೆ ಮೇಲುಕೊಪ್ಪ, ಕೆಳಕೊಪ್ಪ ಮತ್ತು ಬಾಳಗಡಿ ಎಂಬ ಮೂರು ಭಾಗಗಳಿಂದ ಕೂಡಿತ್ತು. ಮೇಲುಕೊಪ್ಪದಲ್ಲಿರುವ ವೀರಭದ್ರನ ದೇವಾಲಯದಲ್ಲಿ ಗರ್ಭಗೃಹ, ಸುಕನಾಸಿ ಮತ್ತು ಮುಖಮಂಟಪಗಳಿವೆ. ಹೊರ ಗೋಡೆಯಲ್ಲಿ ಶಿವನ ಲೀಲೆಗಳನ್ನು ಕೆತ್ತಲಾಗಿದೆ. ದಕ್ಷಿಣದ ಗೋಡೆಯಲ್ಲಿ ಶಿವ ತ್ರಿಪುರಗಳನ್ನು ನಾಶಮಾಡಿದ ದೃಶ್ಯ ಚೆನ್ನಾಗಿದೆ. ಶಿವನ ಬಲಗಡೆ ಮಯೂರ ಆರೂಢನಾಗಿರುವ ಸುಬ್ರಹ್ಮಣ್ಯನ ಚಿತ್ರವಿದೆ. ಪಶ್ಚಿಮದ ಗೋಡೆಯ ಮೇಲೆ ಶಿವ ಮಾರ್ಕಂಡೇಯನನ್ನು ರಕ್ಷಿಸುವ ದೃಶ್ಯವಿದೆ. ಉತ್ತರದ ಗೋಡೆಯ ಮೇಲೆ ಶಿವಪಾರ್ವತಿಯರು ನಂದೀರೂಢರಾಗಿರುವ ದೃಶ್ಯವಿದೆ. ವೀರಭದ್ರನ ಮೂಲ ವಿಗ್ರಹ ಭಿನ್ನವಾಗಿದ್ದು ಈಗ ಆ ಸ್ಥಾನದಲ್ಲಿ ಬೇರೊಂದು ವಿಗ್ರಹ ಇಡಲಾಗಿದೆ. ಇಲ್ಲಿ ವೀರಭದ್ರ ಮತ್ತು ಭದ್ರಕಾಳಿಯರ ಲೋಹದ ವಿಗ್ರಹಗಳೂ ಇವೆ. ಕೊಪ್ಪಕ್ಕೆ 10ಕಿಮೀ ದೂರದಲ್ಲಿರುವ ಹರಿಹರಪುರದಲ್ಲಿ ದಕ್ಷ ಯಜ್ಞಮಾಡುತ್ತಿದ್ದ; ಅದಕ್ಕೆ ಆಹ್ವಾನ ದೊರಕದಿದ್ದರಿಂದ ಅವಮಾನಿತನಾದ ಶಿವ ಯಜ್ಞವನ್ನೇ ನಾಶಮಾಡಲು ವೀರಭದ್ರನನ್ನು ಕಳುಹಿಸಿದ. ಆಜ್ಞೆಯನ್ನು ನೆರವೇರಿಸಿದ ವೀರಭದ್ರ ಅದಮ್ಯಕೋಪದಿಂದ ಇಲ್ಲಿಗೆ ಬಂದು ನೆಲೆಸಿದ. ಆದ್ದರಿಂದ ಈ ಊರಿಗೆ ಕೋಪ ಅಥವಾ ಕೊಪ್ಪವೆಂದು ಹೆಸರಾಯಿತು ಎಂದು ಸ್ಥಳ ಐತಿಹ್ಯವಿದೆ. (ಡಿ.ಎಸ್.ಜೆ.)

**ಕೊಪ್ಪಳ :** ಕರ್ನಾಟಕ ರಾಜ್ಯದ ಒಂದು ಜಿಲ್ಲೆ; ತಾಲ್ಲೂಕು ಮತ್ತು ಅವುಗಳ ಆಡಳಿತ ಕೇಂದ್ರ. ರಾಜ್ಯದ ಈಶಾನ್ಯ ಭಾಗದಲ್ಲಿ ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ನಡುವಿನ ಪ್ರದೇಶದಲ್ಲಿದೆ. ಹಿಂದಿನ ರಾಯಚೂರು ಜಿಲ್ಲೆಯನ್ನು ವಿಭಜಿಸಿ 1997ರಲ್ಲಿ ಹೊಸ ಜಿಲ್ಲೆ ಕೊಪ್ಪಳವನ್ನು ರಚಿಸಲಾಯಿತು. ಇದರಲ್ಲಿ ನಾಲ್ಕು ತಾಲ್ಲೂಕುಗಳಿವೆ-ಕೊಪ್ಪಳ, ಗಂಗಾವತಿ ಕುಷ್ಟಗಿ ಮತ್ತು ಯಲಬುರ್ಗ. 20 ಹೋಬಳಿಗಳು, 618 ಗ್ರಾಮಗಳಿವೆ. ಈ ಜಿಲ್ಲೆಯನ್ನು ಉತ್ತರದಲ್ಲಿ ಬಾಗಲಕೋಟೆ ಮತ್ತು ರಾಯಚೂರು, ಪೂರ್ವದಲ್ಲಿ ರಾಯಚೂರು ಮತ್ತು ಬಳ್ಳಾರಿ, ದಕ್ಷಿಣದಲ್ಲಿ ಬಳ್ಳಾರಿ ಹಾಗೂ ಪಶ್ಚಿಮದಲ್ಲಿ ಗದಗ ಜಿಲ್ಲೆಗಳು ಸುತ್ತುವರಿದಿವೆ. ವಿಸ್ತೀರ್ಣ, 8,458ಚ.ಕಿಮೀ. ಜನಸಂಖ್ಯೆ 11,93,496.


ಕೊಪ್ಪಳ ಜಿಲ್ಲೆ
ಹನುಮಸಾಗರ
ಕೈಗುಪ್ಪೆ
ದೋತಿಹಾಳ
ಗುಡದೂರು
ಮಂಗ್ಳೂರು
ಕುಷ್ಟಗಿ
ತಾವರಗೆರೆ
ಯಲಬುರ್ಗಾ
ಉಪ್ಪಲದೊಡ್ಡಿ
ಹುಲಿಗಿ
ಕನಕಗಿರಿ
ಕುಕನೂರು
ಬೇಂಕಲ್
ಇರ್ಕಲ್‌ಗೂಡ
ಗಂಗಾವತಿ
ಹೊಸೂರು
ಆನೆಗೊಂದಿ
ಬನ್ನಿಕೊಪ್ಪ
ಕೊಪ್ಪಳ
ಹಿಟ್ನಹಾಳ
ಮುನಿರಾಬಾದ್
ಅಳವಂಡಿ
ತುಂಗಭದ್ರ ಜಲಾಶಯ
ತುಂಗಭದ್ರಾ ನದಿ
ಕುಂಟೋಜಿ
ಸಿದ್ದಾಪುರ
ಕಿಲೋಮೀಟರುಗಳು
0 10 20

**ಪರಿಸರ :** ಈ ಜಿಲ್ಲೆ ದಖನ್ನಿನ ಕಣಿವೆ ಭಾಗದ್ದಲ್ಲಿದ್ದು ಸಮುದ್ರ ಮಟ್ಟಕ್ಕೆ ಹೆಚ್ಚು ಎತ್ತರವಲ್ಲದ ಭೂಪ್ರದೇಶದಿಂದ ಕೂಡಿದೆ. ಇದರಿಂದಾಗಿ ಇಲ್ಲಿ ಯಾವ ಪ್ರಮುಖ ಬೆಟ್ಟಸಾಲುಗಳೂ ಕಂಡುಬರುವುದಿಲ್ಲ. ಅಲ್ಲಲ್ಲಿ ಪಶ್ಚಿಮ ಅಥವಾ ಪೂರ್ವ ಘಟ್ಟಸಾಲಿಗೆ ಸೇರದ ಹೆಚ್ಚು ಎತ್ತರವಲ್ಲದ ಗುಡ್ಡಗಳಿವೆ. ಕುಷ್ಟಗಿ ತಾಲ್ಲೂಕಿನಲ್ಲಿ ಕಂಡುಬರುವ ಬಾದಾಮಿ ಬೆಟ್ಟಗಳ ಶ್ರೇಣಿಗೆ ಸೇರಿದ ಸಾಲೊಂದು ಗಂಗಾವತಿ ತಾಲ್ಲೂಕಿನಲ್ಲಿ ಮುಂದುವರಿಯುತ್ತದೆ. ಕುಷ್ಟಗಿಯಿಂದ 32ಕಿಮೀ ದೂರದಲ್ಲಿರುವ ಜಗದ ಗುಡ್ಡ (736ಮೀ.), ಗಂಗಾವತಿ ತಾಲ್ಲೂಕಿನ ಎಮ್ಮೆಗುಡ್ಡ (821ಮೀ.), ಕನಕಗಿರಿಗೆ ಈಶಾನ್ಯದಲ್ಲಿರುವ ನಿಶಾನಿಗುಡ್ಡ (580ಮೀ.), ಮಾರಿಗುಡ್ಡ (597ಮೀ.), ಇವು ಈ ಜಿಲ್ಲೆಯ ಎತ್ತರದ ಬೆಟ್ಟಗಳು. ಈ ಜಿಲ್ಲೆಯಲ್ಲಿ ಮಳೆ ಕಡಿಮೆ. ಹಾಗಾಗಿ ಸಸ್ಯ ಸಂಪತ್ತೂ ಕಡಿಮೆ. ಕಡಿದಾದ ಮತ್ತು ವಿವಿಧ ಆಕಾರದ ಬಂಡೆಗಳಿಂದ ಆವೃತವಾದ ಪರಿಸರವನ್ನು, ಬಯಲು ಭೂದೃಶ್ಯಗಳನ್ನು ಕಾಣುತ್ತೇವೆ.

ಇಲ್ಲಿನ ಬೆಟ್ಟಗಳು ಪ್ರಾಕೃತಿಕವಾಗಿ ರೂಪಾಂತರ ಹೊಂದಿದ ಪ್ರಾಚೀನ ಶಿಲಾಯುಗಕ್ಕೆ ಸೇರಿದವು. ಅಲ್ಲಲ್ಲಿ ಗ್ರಾನೈಟ್ ಕಲ್ಲಿನ ಬೆಟ್ಟಗಳು ಕಾಣುತ್ತವೆ; ಉಳಿದಂತೆ ಸಮತಟ್ಟಾದ ಬಯಲು ಪ್ರದೇಶ. ಈ ಶಿಲಾ ಪದರದಲ್ಲಿ ನೈಸ್ ಶಿಲೆಗಳು, ಪದರಗಲ್ಲು ಶಿಲೆಗಳು, ಬೆಣಚುಕಲ್ಲುಗಳು ಇವೆ. ಮುಖ್ಯವಾಗಿ ಕೇಂಬ್ರಿಯನ್ ಯುಗಪೂರ್ವದ ರೂಪ ಪರಿವರ್ತನಾ ಪದರಗಲ್ಲುಗಳು ಮತ್ತು ಗ್ರಾನೈಟ್ ಬೆಣಚುಗಲ್ಲು ಬಹುಪಾಲು ಶಿಲೆಗಳು ಧಾರವಾಡ ಶಿಲಾವರ್ಗಕ್ಕೆ ಸೇರಿದವು. ಪರ್ಯಾಯ ದ್ವೀಪ ಸಂಬಂಧವಾದ ಡೈಕ್ ಮಾದರಿಯ ಶಿಲೆಗಳೂ ಕಂಡುಬರುತ್ತವೆ. ಕಲಾದಗಿ ಶ್ರೇಣಿಗೆ ಸೇರಿದ ಕೆಲವು ಶಿಲೆಗಳು ಕುಷ್ಟಗಿ ಸಮೀಪ ಇವೆ. ಇಲ್ಲಿ ಪೆಂಟೆ ಶಿಲೆ ಮತ್ತು ಪುರಳು ಶಿಲೆಯ ಪದರಗಳನ್ನು ಕಾಣಬಹುದು. ಕಣಶಿಲೆಯ ಗುಡ್ಡಗಳು, ಟ್ರ್ಯಾಪ್ ಶಿಲೆಯ ಉಬ್ಬುಗಳು ಗಂಗಾವತಿ ತಾಲ್ಲೂಕಿನಲ್ಲಿವೆ.

ಜಿಲ್ಲೆಯಲ್ಲಿ ಕಬ್ಬಿಣ, ತಾಮ್ರ, ಸೀಸದ ಅದುರು, ಅಭ್ರಕ, ಸ್ಫಟಿಕ ಶಿಲೆ ಮುಂತಾದ ಖನಿಜಗಳಿವೆ. ಸಮೀಪದ ರಾಯಚೂರು ಜಿಲ್ಲೆಯಲ್ಲಿ ಚಿನ್ನದ ನಿಕ್ಷೇಪಗಳಿವೆ. ಜಂಬುಮಣ್ಣು ಮತ್ತು ಕಾವಿಮಣ್ಣಿನ ಭೂಮಿ ಉಪಯುಕ್ತವಾಗಿದೆ. ಕೊಪ್ಪಳ ತಾಲ್ಲೂಕಿನ ಬಹುಭಾಗ ಕಪ್ಪುಮೆಕ್ಕಲು ಮಣ್ಣಿನಿಂದ ಕೂಡಿದ್ದು ಫಲವತ್ತಾಗಿದೆ. ಕಪ್ಪುಮಿಶ್ರಿತ ಕೆಂಪುಮಣ್ಣು ಅಲ್ಲಲ್ಲಿ ಕಂಡುಬರುತ್ತದೆ. ಮರಳು ಮಿಶ್ರಿತ ಕಪ್ಪುಮಣ್ಣು ಅನೇಕ ಕಡೆಗಳಲ್ಲಿ ಹರಡಿದೆ.



ಕಬ್ಬರಗಿ ಜಲಪಾತ, ಕೊಪ್ಪಳ

ಈ ಜಿಲ್ಲೆಯಲ್ಲಿ ಮಳೆ ಕಡಿಮೆ ಬಿದ್ದರೂ ತುಂಗಭದ್ರಾ ಮತ್ತು ಕೃಷ್ಣಾ ನದಿಗಳು ಎರಡೂ ಪಾರ್ಶ್ವಗಳಲ್ಲಿ ಹರಿಯುವುದರಿಂದ ಜಲ ಸಂಪನ್ಮೂಲ ಉತ್ತಮವಾಗಿದೆ. ತುಂಗಭದ್ರಾ ನದಿ ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳ ಸರಹದ್ದಾಗಿ ಕ್ರಮಿಸುತ್ತದೆ. ಜಿಲ್ಲೆಯ ಸರಾಸರಿ ಮಳೆ 595ಮಿಮೀ. ಜಿಲ್ಲೆಯಲ್ಲಿ ಹುಟ್ಟಿ ಹರಿಯುವ ತೊರೆಗಳಲ್ಲಿ ನೀರಿನ ಪ್ರಮಾಣ ಕಡಿಮೆ. ಯಲಬುರ್ಗಾ ತಾಲ್ಲೂಕಿನಲ್ಲಿ ಹುಟ್ಟುವ ಒಂದು ತೊರೆ ಕೊಪ್ಪಳದ ಸಮೀಪ ಹರಿದು ತುಂಗಭದ್ರಾ ಜಲಾಶಯದ ಹಿನ್ನೀರನ್ನು ಸೇರುತ್ತದೆ. ಕುಷ್ಟಗಿ ತಾಲ್ಲೂಕಿನ ಉಪ್ಪಲದೊಡ್ಡಿ ಬಳಿ ಹುಟ್ಟುವ ಕನಕಗಿರಿ ನಾಲಾ ಗಂಗಾವತಿ ತಾಲ್ಲೂಕನ್ನು ಪ್ರವೇಶಿಸಿ ತುಂಗಭದ್ರಾ ನದಿಯನ್ನು ಸೇರುತ್ತದೆ. ತಾವರಗೆರೆ ಬಳಿ ಹುಟ್ಟುವ ಸಿದ್ಧಾಪುರ ನಾಲೆ ಕುಂಟೋಜಿ ಬಳಿ ತುಂಗಭದ್ರಾ ನದಿಯನ್ನು ಸೇರುತ್ತದೆ. ಇನ್ನು ಅನೇಕ ಚಿಕ್ಕ ಪುಟ್ಟ ತೊರೆಗಳು ಆಗ್ನೇಯಾಭಿಮುಖವಾಗಿ ಹರಿದು ತುಂಗಭದ್ರಾ ನದಿ ಸೇರುತ್ತವೆ. ತೊರೆ ಮತ್ತು ನಾಲಾಗಳ ಮೂಲಕ ಮಳೆಗಾಲದಲ್ಲಿ ನೀರು ಹರಿದರೂ ಬೇಸಗೆಯಲ್ಲಿ ಹೆಚ್ಚಿನವು ಬತ್ತಿಹೋಗುತ್ತವೆ.

ಜಿಲ್ಲೆಯ ಅತಿ ಉಷ್ಣ ಹವಾಮಾನ ಹಾಗೂ ವಾತಾವರಣದಲ್ಲಿನ ಕಡಿಮೆ ತೇವಾಂಶ ಸಸ್ಯಗಳ ಬೆಳೆವಣಿಗೆಗೆ ಸಹಾಯಕವಾಗಿಲ್ಲ. ಅಲ್ಲಲ್ಲಿ ಗುಡ್ಡಗಳ ಇಳಿಜಾರಿನಲ್ಲಿ ಪೊದೆ ಕಾಡುಗಳು ಕಂಡುಬರುತ್ತವೆ. ಕುಷ್ಟಗಿ ತಾಲ್ಲೂಕಿನಲ್ಲಿ ಅರಣ್ಯ ಪ್ರದೇಶ ಇತರೆಡೆಗಿಂತ ಹೆಚ್ಚಿದೆ. ಜಿಲ್ಲೆಯ ಅರಣ್ಯ ಪ್ರದೇಶದ ವಿಸ್ತೀರ್ಣ 29451 ಹೆಕ್ಟೇರುಗಳು. ಇಲ್ಲಿನ ಕಾಡುಗಳಲ್ಲಿ ಜಾಲ, ಹುಣಿಸೆ, ಹೊಂಗೆ, ಹಾಲೆ, ಮುತ್ತುಗ, ದಿಂಡಿಗ, ಚುಜ್ಜಲು, ಹುರಗಲು, ಹೊನ್ನೆ, ಕಮ್ಮಾರ, ನಲ್ಲಮಡ್ಡಿ, ಬಿಲ್ವ, ಬಾಗೆ, ಕಕ್ಕೆ, ಸೀತಾಫಲ ಮುಂತಾದ ಗಿಡಮರಗಳಿವೆ. ಅಲ್ಲಲ್ಲಿ ಮುಳ್ಳುಗಿಡಗಳ ಕುರುಚಲು ಕಾಡುಗಳಿವೆ. ಭೂಸವಕಳಿಯನ್ನು ತಡೆಯಲು ನೆಡುತೋಪುಗಳನ್ನು ಬೆಳೆಸಲಾಗಿದೆ.

ಕಾಡುಗಳ ಕೊರತೆಯಿಂದ ಪ್ರಾಣಿಪಕ್ಷಿಗಳ ಸಂಖ್ಯೆಯೂ ಕಡಿಮೆ. ಚಿರತೆ, ತೋಳ, ಕತ್ತೆಕಿರುಬ, ನರಿ, ಕಪಿ ಮತ್ತು ಜಿಂಕೆಗಳು ಅಲ್ಲಲ್ಲಿ ಕಂಡುಬರುತ್ತವೆ. ಹಾವುಗಳ ಸಂತತಿ ಹೆಚ್ಚು. ಚೇಳು, ಹಲ್ಲಿ, ನೀರಹಾವು, ಮಣ್ಣುಮುಕ್ಕ, ನಾಗರಹಾವು ಎಲ್ಲೆಡೆಯೂ ಇವೆ. ಬಾತು, ನೀರಕೋಳಿ, ಕಾಗೆ, ಗಾಜುಗ ಮುಖ್ಯವಾದ ಪಕ್ಷಿಗಳು. ಹಸು, ಎಮ್ಮೆ, ಕುರಿ, ಮೇಕೆ, ಕುದುರೆ ಮತ್ತು ಕೋಳಿ ಮುಖ್ಯ ಸಾಕುಪ್ರಾಣಿಗಳು.

ಹವಾಮಾನ ವರ್ಷದ ಬಹುಭಾಗ ಉಷ್ಣಾಂಶದಿಂದ ಕೂಡಿರುತ್ತದೆ. ಮಳೆ ಕೆಲವು ವರ್ಷಗಳಲ್ಲಿ ಕಡಿಮೆ ಇದ್ದು ಕೆಲವೊಮ್ಮೆ ಹೆಚ್ಚು ಮಳೆ ಆಗುವುದುಂಟು. 2000 ಇಸವಿಯ ಮಳೆಗಾಲದಲ್ಲಿ 701ಮಿಮೀ. ಮಳೆಯಾಗಿತ್ತು. ವರ್ಷದಲ್ಲಿ 41 ಮಳೆ ದಿನಗಳೆಂದು ಗುರುತಿಸಲಾಗಿದೆ. ಮುಂಗಾರಿನಲ್ಲಿ ವರ್ಷದ ಹೆಚ್ಚಿನ ಭಾಗ ಮಳೆಯಾದರೂ ಹಿಂಗಾರಿನಲ್ಲಿ ಚಂಡಮಾರುತದ ಮಳೆ ಬಿರುಸಿನಿಂದ ದೊಡ್ಡ ಪ್ರಮಾಣದಲ್ಲಿ ಬೀಳುತ್ತದೆ. ಉಷ್ಣಾಂಶ ಅಧಿಕವಿರುವ ಭಾಗದಲ್ಲಿರುವ ಈ ಜಿಲ್ಲೆಯ ಕೆಲವೆಡೆ ಗರಿಷ್ಠ ಉಷ್ಣಾಂಶ $40^{0}$ಸೆ.ಇರುವುದೂ ಉಂಟು. ಹಿಂದಿನ ಜಿಲ್ಲಾ ಕೇಂದ್ರ ರಾಯಚೂರಿನಲ್ಲಿ $45^{0}$ಸೆ.ವರೆಗೂ ಉಷ್ಣಾಂಶ ಏರುವುದನ್ನು ಸ್ಮರಿಸಬಹುದು. ರಾತ್ರಿವೇಳೆ ಉಷ್ಣಾಂಶ ಬೇಗ ಕಡಿಮೆ ಆಗುತ್ತದೆ. ಡಿಸೆಂಬರ್‌ನಲ್ಲಿ ಗರಿಷ್ಠ ಉಷ್ಣಾಂಶ 29.30ಸೆ. ಇದ್ದರೆ ಕನಿಷ್ಠ ಉಷ್ಣಾಂಶ 17.70 ಸೆ.ಗೆ ಇಳಿಯುತ್ತದೆ. ನವೆಂಬರ್‌ನಿಂದ ಮೇ ವರೆಗೆ ಒಣ ಹವೆ ಇರುವುದು.

**ವ್ಯವಸಾಯ :** ಕೊಪ್ಪಳ ಜಿಲ್ಲೆ ವ್ಯವಸಾಯ ಪ್ರಧಾನವಾದುದು. ಜಿಲ್ಲೆಯ ಶೇ.75 ರಷ್ಟು ಜನರು ವ್ಯವಸಾಯ ಮತ್ತು ಆ ಸಂಬಂಧವಾದ ಕಸಬುಗಳನ್ನು ಅವಲಂಬಿಸಿದ್ದಾರೆ. ಮಳೆ ಕಡಿಮೆ ಪ್ರಮಾಣದಲ್ಲಿ ಬೀಳುವುದರಿಂದ ಸಾಗುವಳಿಗಾರರ ಬದುಕು ಅನಿಶ್ಚಿತ ಆದಾಯವನ್ನು ಆಧರಿಸಿದೆ. ಹಿಂದಿನ ವಿಜಯನಗರ ಕಾಲದ ನಾಲೆಗಳು ಸ್ಥಳೀಯವಾಗಿ ಸೀಮಿತ ಪ್ರದೇಶಗಳಿಗೆ ನೀರೊದಗಿಸುತ್ತಿದ್ದವು. ಸುದೈವವಶಾತ್ ಈ ಜಿಲ್ಲೆಯು ರಾಜ್ಯದ ಪ್ರಮುಖ ನದಿಗಳಾದ ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ದೋಆಬ್ ಪ್ರದೇಶದಲ್ಲಿ ಬರುವುದರಿಂದ ನೀರಾವರಿ ಯೋಜನೆಗಳಿಂದ ಜಿಲ್ಲೆ ಹೆಚ್ಚು ಪ್ರಯೋಜನ ಪಡೆದಿದೆ.

ಹೈದರಬಾದ್ ಸಂಸ್ಥಾನದ ಆಡಳಿತದಲ್ಲಿದ್ದಾಗ ತುಂಗಭದ್ರಾ ನದಿಯ ಅಣೆಕಟ್ಟು ಯೋಜನೆಗಳನ್ನು ಕಾರ್ಯಗತಗೊಳಿಸಲು ವಿವಿಧ ಪ್ರಯತ್ನಗಳು ನಡೆದವು. ಆಗಿನ ಮೈಸೂರು ಸಂಸ್ಥಾನ ಮತ್ತು ಮದರಾಸು ಪ್ರಾಂತಗಳು ಈ ಸರಹದ್ದಿನಲ್ಲಿ ಬರುತ್ತಿದ್ದುದರಿಂದ ಅವುಗಳೊಂದಿಗೆ ಸಮಾಲೋಚನೆ ಮತ್ತು ಒಪ್ಪಂದಗಳ ಅಂಗೀಕಾರದಲ್ಲೇ ಸಾಕಷ್ಟು ಕಾಲ ಕಳೆಯಿತು. ಸ್ವಾತಂತ್ರ್ಯ ಬಂದ ಮೇಲೆ 1950ರ ದಶಕದಲ್ಲಿ ತುಂಗಭದ್ರಾ ನದಿಗೆ ಹೊಸಪೇಟೆ ಬಳಿ ಬೃಹತ್ ಜಲಾಶಯ ನಿರ್ಮಿಸುವ ಕಾರ್ಯಯೋಜನೆ ತ್ವರಿತಗೊಂಡಿತು. ಇದು 1968ರ ಹೊತ್ತಿಗೆ ಪೂರ್ಣಗೊಂಡು ಕೊಪ್ಪಳವನ್ನು

ಒಳಗೊಂಡಂತೆ ಹಿಂದಿನ ರಾಯಚೂರು ಜಿಲ್ಲೆಯ - ಈ ಜಲಾಶಯದ ಎಡದಂಡೆ ಕಾಲುವೆ ಮೂಲಕ ಹೆಚ್ಚು ಪ್ರದೇಶಗಳಿಗೆ ನೀರಾವರಿ ಸೌಲಭ್ಯ ದೊರೆಯಿತು. ಈಗಿನ ಕೊಪ್ಪಳ ಜಿಲ್ಲೆಯ ಕೊಪ್ಪಳ, ಗಂಗಾವತಿ ತಾಲ್ಲೂಕುಗಳಲ್ಲಿ ನೀರಾವರಿ ಪ್ರದೇಶ ಹೆಚ್ಚಿತು. ಇದಲ್ಲದೆ ಹಳೆಯ ನಾಲಾಗಳು, ಸಣ್ಣ ಪ್ರಮಾಣದ ಅಣೆಕಟ್ಟುಗಳು ಅಥವಾ ಬ್ಯಾರೇಜ್‌ಗಳು ನಿರ್ಮಾಣವಾಗಿದ್ದು ಇವು ಬೇಸಗೆಯ ಬೆಳೆಗಳಿಗೆ ಆಶ್ರಯವಾಗಿವೆ. ಹಾಲಿ ಜಿಲ್ಲೆಯಲ್ಲಿ ಕಾಲುವೆಗಳಿಂದ 63,411 ಹೆಕ್ಟೇರ್, ಕೆರೆಗಳಿಂದ 1763 ಹೆಕ್ಟೇರ್ ಬಾವಿಗಳಿಂದ, 20,262 ಹೆಕ್ಟೇರ್ ಮತ್ತು ಕೊಳವೆ ಬಾವಿಗಳಿಂದ 6363 ಹೆಕ್ಟೇರ್ ಜಮೀನಿಗೆ ನೀರೊದಗುತ್ತಿದೆ.



ಜಿನಶಿಲ್ಪಗಳು, ಚಂದ್ರಾಮ

ಬತ್ತ, ಜೋಳ, ಸಜ್ಜೆ, ಹುರುಳಿ, ಹೆಸರು, ಮುಸುಕಿನ ಜೋಳ, ಕಡಲೆ, ಎಳ್ಳು, ದ್ವಿದಳ ಧಾನ್ಯಗಳು, ಸೂರ್ಯಕಾಂತಿ, ಸೋಯಾಬೀನ್, ಹತ್ತಿ, ತೊಗರಿ, ಹರಳುಬೀಜ, ನೆಲಗಡಲೆ, ಅಗಸೆ ಇವು ಮುಖ್ಯ ಬೆಳೆಗಳಾಗಿವೆ. ತೋಟಗಾರಿಕೆ ಬೆಳೆಗಳಲ್ಲಿ ಮಾವು, ಸಪೋಟ, ಸೀಬೆ, ಬಾಳೆ, ನಿಂಬೆ, ದಾಳಿಂಬೆ, ಅಂಜೂರ ಮೊದಲಾದವು ಪ್ರಮುಖವಾದವು.

ಪಶುಸಂಗೋಪನೆ ಕೃಷಿಯೊಂದಿಗೆ ಜಿಲ್ಲೆಯ ಮುಖ್ಯ ಉಪಕಸಬುಗಳಲ್ಲಿ ಒಂದಾಗಿದೆ. ಇಲ್ಲಿ ಖಿಲಾರ್ ತಳಿಯ ಜಾನುವಾರುಗಳು ಹೆಚ್ಚು. ಅಧಿಕ ಹಾಲು ಉತ್ಪಾದನೆಯ ದೃಷ್ಟಿಯಿಂದ ಮಿಶ್ರತಳಿಗಳನ್ನು ಅಭಿವೃದ್ಧಿಪಡಿಸಲಾಗಿದೆ. ಜಾನುವಾರು ಮತ್ತು ಕುರಿಗಳ ತಳಿ ಅಭಿವೃದ್ಧಿಗಾಗಿ ವಿವಿಧ ಫಾರಂಗಳನ್ನು ಸ್ಥಾಪಿಸಿದೆ. 1953ರಲ್ಲಿ ಕೊಪ್ಪಳ ತಾಲ್ಲೂಕಿನ ಮುನಿರಾಬಾದಿನಲ್ಲಿ ಸ್ಥಾಪಿಸಲಾದ ಫಾರಂ ಅವುಗಳಲ್ಲಿ ಪ್ರಮುಖವಾದುದು. ಇಲ್ಲಿ ಆಂಧ್ರ ಮತ್ತು ವಿದೇಶಗಳಿಂದ ತಂದ ತಳಿಗಳೊಂದಿಗೆ ಸ್ಥಳೀಯ ತಳಿಗಳ ಸಂಕರ ಮಾಡುವ ಮೂಲಕ ಹೊಸ ತಳಿಗಳನ್ನು ಬೆಳೆಸಲಾಗುತ್ತಿದೆ. ಕೋಳಿಗಳ ತಳಿ ಅಭಿವೃದ್ಧಿಗೆ ಸಹ ಇಲ್ಲಿ ಒಂದು ಕೇಂದ್ರವಿದೆ. ಗಂಗಾವತಿಯಲ್ಲಿ ಪ್ರಾದೇಶಿಕ ಕೋಳಿ ಸಾಕಣೆ ಫಾರಂ ಇದೆ. ಆಗಾಗ ಬರಗಾಲಕ್ಕೆ ತುತ್ತಾಗುವ ಪ್ರದೇಶಗಳಲ್ಲಿ ಜಾನುವಾರುಗಳ ಸಂರಕ್ಷಣೆಗಾಗಿ ಗೋಶಾಲೆಗಳಿವೆ. ಮೇವು ಬೆಳೆಸುವ ಫಾರಂಗಳಿವೆ. 1998-99ರ ಅಂಕಿಅಂಶಗಳ ಮೇರೆಗೆ 249,976 ಸ್ಥಳೀಯ ಜಾನುವಾರುಗಳು; 2,165 ವಿದೇಶಿ ತಳಿಯ ಹಸುಗಳು, 8037 ಮಿಶ್ರತಳಿ ಹಸುಗಳು, 90078, ಎಮ್ಮೆಗಳೂ 191912 ಕುರಿಗಳು, 136671 ಮೇಕೆಗಳು ಜಿಲ್ಲೆಯಲ್ಲಿದ್ದವು. ಸಾಕು ಪ್ರಾಣಿಗಳ ಕ್ಷೇಮಾಭಿವೃದ್ಧಿಗೆ ಪಶುಸಂಗೋಪನ ಇಲಾಖೆಯ ಆಸ್ಪತ್ರೆಗಳು, ಚಿಕಿತ್ಸಾಲಯಗಳು ಇವೆ. ಜಿಲ್ಲೆಯಲ್ಲಿ 9 ಪಶುವೈದ್ಯ ಆಸ್ಪತ್ರೆಗಳು, 11 ಚಿಕಿತ್ಸಾಲಯಗಳು, 59 ಪ್ರಾಥಮಿಕ ಪಶುವೈದ್ಯಕೇಂದ್ರಗಳು, 5 ಸಂಚಾರಿ ಚಿಕಿತ್ಸಾಲಯಗಳು, 12 ಕೃತಕ ಗರ್ಭಧಾರಣಾ ಕೇಂದ್ರಗಳಿವೆ.

ಸಾಕಷ್ಟು ಜಲಾಶಯಗಳು ಮತ್ತು ಕೆರೆಕಟ್ಟೆಗಳಿಂದ ಕೂಡಿರುವ ಈ ಜಿಲ್ಲೆಯಲ್ಲಿ ಮೀನುಗಾರಿಕೆ ಸಹ ಬೆಳೆದಿದೆ. 2000-01ರಲ್ಲಿ 3,324 ಮೆಟ್ರಿಕ್‌ಟನ್ ಮೀನನ್ನು ಹಿಡಿಯಲಾಗಿತ್ತು. ಮುನಿರಾಬಾದಿನಲ್ಲಿ ಮೀನು ಸಾಕಣೆ ಅಭಿವೃದ್ಧಿ ಫಾರಂ ಇದೆ.

ಕೃಷಿ ಪ್ರದೇಶದ ಸರ್ವತೋಭಿಮುಖ ಅಭಿವೃದ್ಧಿಗಾಗಿ ಸರ್ಕಾರ ಹತ್ತು ಹಲವು ಯೋಜನೆಗಳನ್ನು ಹಮ್ಮಿಕೊಂಡಿದ್ದು ಅವನ್ನು ಕಾರ್ಯಗತಗೊಳಿಸುವ ಜವಾಬ್ದಾರಿಯನ್ನು ಮುಖ್ಯವಾಗಿ ವಿವಿಧ ಇಲಾಖೆಗಳು ಮತ್ತು ಸಂಸ್ಥೆಗಳಿಗೆ ವಹಿಸಲಾಗಿದೆ. ಗಂಗಾವತಿಯ ಗ್ರಾಮಸೇವಕರ ತರಬೇತಿ ಕೇಂದ್ರ, ಸಾಮಾನ್ಯ ಕೃಷಿ ಸಂಶೋಧನ ಕೇಂದ್ರ, ತುಂಗಭದ್ರಾ ಕೃಷಿ ಅಭಿವೃದ್ಧಿ ಕೇಂದ್ರ, ವ್ಯವಸಾಯ ಮತ್ತು ತೋಟಗಾರಿಕೆ ಇಲಾಖೆಗಳು ಗ್ರಾಮೀಣ ಅಭಿವೃದ್ಧಿಗೆ ಪೂರಕವಾಗಿವೆ.

**ಕೈಗಾರಿಕೆ :** ಈ ಜಿಲ್ಲೆ ಕೈಗಾರಿಕೆಯಲ್ಲಿ ಹಿಂದುಳಿದಿದೆ. ಇಲ್ಲಿನ ಹವಾಮಾನ ಮತ್ತು ಸಾರಿಗೆ ಸಂಪರ್ಕದ ಕೊರತೆಗಳು ಇದಕ್ಕೆ ಭಾಗಶಃ ಕಾರಣವಾಗಿವೆ. ಒಟ್ಟು 179 ಕಾರ್ಖಾನೆಗಳಿದ್ದು ಅವುಗಳಲ್ಲಿ 6012 ಜನ ಉದ್ಯೋಗಿಗಳಿದ್ದಾರೆ. 2 ಕೈಗಾರಿಕಾ ಪ್ರದೇಶಗಳು, 4 ಕೈಗಾರಿಕಾ ಶೆಡ್ಡುಗಳು, 1 ಕಾರ್ಯನಿರತ ಸಕ್ಕರೆ ಕಾರ್ಖಾನೆ ಇವೆ. 199 ಸಣ್ಣ ಕೈಗಾರಿಕಾ ಘಟಕಗಳಿದ್ದು 965 ಜನ ಉದ್ಯೋಗಿಗಳಿದ್ದಾರೆ. ಒಟ್ಟಾರೆ 3,013 ಉದ್ಯೋಗ ಘಟಕಗಳಲ್ಲಿ 21,665 ಉದ್ಯೋಗಗಳು ಸೃಷ್ಟಿಯಾಗಿವೆ (2001). ಮುನಿರಾಬಾದಿನ ಸಾಲಾರಜಂಗ್ ಸಕ್ಕರೆ ಕಾರ್ಖಾನೆ, ತುಂಗಭದ್ರಾ ಪಲ್ಪ್ ಅಂಡ್ ಬೋರ್ಡ್ ಮಿಲ್ಸ್, ಚಾಮುಂಡಿ ರಾಸಾಯನಿಕ ಮತ್ತು ಗೊಬ್ಬರ ತಯಾರಿಕಾ ಕಾರ್ಖಾನೆ, ಫರೂಕ್ ಅನ್ವರ್ ಎಣ್ಣೆ ಕಾರ್ಖಾನೆ, ಸಹಕಾರಿ ನೂಲು ಕಾರ್ಖಾನೆ, ಹತ್ತಿ ಸಂಸ್ಕರಣ ಘಟಕ -ಇವು ಮುಖ್ಯ ಕೈಗಾರಿಕಾ ಸ್ಥಾವರಗಳು.

ಜಿಲ್ಲೆಯಲ್ಲಿ ವಾಣಿಜ್ಯ ಬೆಳೆಗಳು ಅಧಿಕವಾಗಿ ಬೆಳೆಯುವುದರಿಂದ ಹೊರ ಜಿಲ್ಲೆಗಳು ಮತ್ತು ಹೊರ ರಾಜ್ಯಗಳೊಂದಿಗೆ ವ್ಯಾಪಾರ ವಹಿವಾಟು ಹೆಚ್ಚು. ಎಣ್ಣೆ ಬೀಜಗಳು, ಸೇಂಗಾ ಎಣ್ಣೆ, ದ್ವಿದಳ ಧಾನ್ಯಗಳು ಮತ್ತು ಹತ್ತಿ ಹೊರ ರಾಜ್ಯಗಳಿಗೆ ರಫ್ತಾಗುತ್ತವೆ. ಮಹಾರಾಷ್ಟ್ರದ ಸೋಲಾಪುರ, ಪುಣೆ, ಮುಂಬಯಿ ಹಾಗೂ ತಮಿಳುನಾಡಿನ ಕೊಯಮತ್ತೂರುಗಳಿಗೆ ಇಲ್ಲಿಂದ ಸರಕುಗಳು ಹೋಗುತ್ತವೆ. ಹದವಾಡಿದ ಚರ್ಮಕ್ಕೆ ಹೊಸಪೇಟೆ, ಗದಗಗಳಲ್ಲಿ ಮಾರುಕಟ್ಟೆಗಳಿವೆ. ತೆಂಗಿನಕಾಯಿ, ಬೆಲ್ಲ, ಮರ, ವನಸ್ಪತಿ, ಹೊಗೆಸೊಪ್ಪು, ಕೃತಕ ರೇಷ್ಮೆ ಮೊದಲಾದ ವಸ್ತುಗಳನ್ನು ಜಿಲ್ಲೆಗೆ ಆಮದು ಮಾಡಿಕೊಳ್ಳಲಾಗುವುದು. ಹತ್ತಿ, ಸೇಂಗಾ, ಹುಣಿಸೆಹಣ್ಣು, ಮೆಣಸಿನಕಾಯಿ ಮತ್ತು ಕೈಮಗ್ಗದ ಬಟ್ಟೆಗಳಿಗೆ ಕೊಪ್ಪಳ ದೊಡ್ಡ ವ್ಯಾಪಾರ ಕೇಂದ್ರ.



ಕಾಡಸಿದ್ದೇಶದೇವಾಲಯ, ಮುಧೋಳ

ಬತ್ತ, ಜೋಳ, ಸೇಂಗಾ, ಬೆಲ್ಲ, ಹರಳು, ಸಜ್ಜೆ ಇವುಗಳಿಗೆ ಗಂಗಾವತಿ ಮುಖ್ಯ ವ್ಯಾಪಾರ ಸ್ಥಳ. ಕುಷ್ಟಗಿ, ಯಲಬುರ್ಗಾ, ಕುಕನೂರು ಇತರ ಮುಖ್ಯ ವ್ಯಾಪಾರ ಕೇಂದ್ರಗಳು. 93 ಕೃಷಿ ಮಾರಾಟ ಸಹಕಾರ ಸಂಘಗಳಿವೆ. 4 ನಿಯಂತ್ರಿತ ಮಾರುಕಟ್ಟೆಗಳು, 12 ಉಪ ಮಾರುಕಟ್ಟೆಗಳಿವೆ.

ಸಹಕಾರಿ ರಂಗ ಆರ್ಥಿಕ ಚಟುವಟಿಕೆಗಳ ಎಲ್ಲ ಕ್ಷೇತ್ರಗಳಲ್ಲೂ ಕೈ ಹಾಕಿದೆ. ಜಿಲ್ಲಾ ಸಹಕಾರಿ ಬ್ಯಾಂಕಿಂಗ್ ವ್ಯವಸ್ಥೆ ಕೃಷಿ ಸಾಲಗಳನ್ನು ನೀಡುತ್ತ ಬಂದಿದೆ. 172 ಕೃಷಿ ಸಾಲ ನೀಡಿಕೆ ಸಹಕಾರ ಸಂಘಗಳು ಕಾರ್ಯನಿರತವಾಗಿವೆ. ವ್ಯವಸಾಯೇತರ ಸಾಲನೀಡಿಕೆ ಸಹಕಾರ ಸಂಘಗಳ

ಸಂಖ್ಯೆ 55. ಶಾಲೇತರ ಸಹಕಾರ ಸಂಘಗಳ ಸಂಖ್ಯೆ 465 (1998). ಹಾಲು ಉತ್ಪಾದನೆ, ಕೋಳಿ ಸಾಕಣೆ, ಮೀನು ಮಾರಾಟ, ಕಂಬಳಿ ಮಾರಾಟ, ತೋಟಗಾರಿಕೆ ಉತ್ಪನ್ನಗಳ ಮಾರಾಟ ಈ ಎಲ್ಲ ವ್ಯವಹಾರಗಳಲ್ಲೂ ಸಹಕಾರಿ ಸಂಘಗಳ ಪಾತ್ರ ಪ್ರಮುಖವಾಗಿದೆ.

ಜಿಲ್ಲೆಯ ಸಾಕ್ಷರತಾ ಪ್ರಮಾಣ ಶೇ.55.02. ಅದರಲ್ಲಿ ಶೇ.169.15 ಪುರುಷರು, ಶೇ.40.76 ಮಹಿಳೆಯರು ಸಾಕ್ಷರರಾಗಿದ್ದಾರೆ. ಸಾಕ್ಷರತಾ ಆಂದೋಲನ ಯೋಜನೆ ಜಿಲ್ಲೆಯಲ್ಲಿ ಕಾರ್ಯನಿರತವಾಗಿರುವುದಲ್ಲದೆ ಗ್ರಾಮಾಂತರ ಪ್ರದೇಶದಲ್ಲಿ ಹೆಚ್ಚಾಗಿ ಶಾಲೆಗಳನ್ನು ತೆರೆದು ಶಿಕ್ಷಣ ಒದಗಿಸಲಾಗುತ್ತಿದೆ. ಮಕ್ಕಳನ್ನು ಶಾಲೆಗೆ ಸೇರಿಸಲು ಒಡಂಬಡಿಸಿ ವಿವಿಧ ಯೋಜನೆಗಳನ್ನು ಜಾರಿಗೆ ತಂದು ಅವರಿಗೆ ಸೌಲಭ್ಯಗಳನ್ನು ಒದಗಿಸುವ ಪ್ರಯತ್ನವೂ ನಡೆದಿದೆ. ಆದರೆ ಅಜ್ಞಾನ, ಬಡತನ, ಕುಟುಂಬದಲ್ಲಿ ಸಾಮಾನ್ಯ ಶಿಕ್ಷಣದ ಜೊತೆಗೆ ಉನ್ನತ ಶಿಕ್ಷಣ ನೀಡುವ 9 ಕಾಲೇಜುಗಳು, ತಾಂತ್ರಿಕ ಶಿಕ್ಷಣ ನೀಡುವ 3 ಪಾಲಿಟೆಕ್ನಿಕ್‌ಗಳು ಇವೆ. ಆರೋಗ್ಯ ಸುಧಾರಣೆಗಾಗಿ 5 ಸರ್ಕಾರಿ ಆಸ್ಪತ್ರೆಗಳನ್ನು ಸ್ಥಾಪಿಸಲಾಗಿದೆ. ಭಾರತೀಯ ವೈದ್ಯಪದ್ಧತಿಯ ಚಿಕಿತ್ಸಾಲಯಗಳು ಮತ್ತು ಅನೇಕ ಸರ್ಕಾರಿ ಆರೋಗ್ಯ ಕೇಂದ್ರಗಳು ಇವೆ.

ಸಮಗ್ರ ಗ್ರಾಮ ಸ್ವಸಹಾಯ ಯೋಜನೆ, ಗ್ರಾಮೀಣ ಇಂಧನ ಕಾರ್ಯಕ್ರಮ, ಮಾನವ ದಿನಗಳ ಕೆಲಸಗಳ ಸೃಷ್ಟಿ, ನಿರ್ಮಲ ಗ್ರಾಮ ಯೋಜನೆ, ಇಂದಿರಾ ಆವಾಸ್ ಯೋಜನೆ, ಪ್ರಧಾನ ಮಂತ್ರಿಗಳ ರಸ್ತೆ ನಿರ್ಮಾಣ ಯೋಜನೆ, ಕೊಳವೆ ನೀರು ಸರಬರಾಜು ಯೋಜನೆ ಮೊದಲಾದವು ಗ್ರಾಮಗಳ ನಾಗರಿಕ ಸೌಲಭ್ಯಗಳನ್ನು ಹೆಚ್ಚಿಸಲು ಉದ್ದೇಶಿತವಾಗಿವೆ. ಜಿಲ್ಲೆ, ತಾಲ್ಲೂಕು ಮತ್ತು ಗ್ರಾಮ ಪಂಚಾಯಿತಿ ಸಮಿತಿಗಳು ಗ್ರಾಮೀಣ ಪ್ರದೇಶದ ಪ್ರತಿನಿಧಿಗಳಿಂದ ಕೂಡಿದ್ದು ಈ ಪ್ರದೇಶದ ಅಭಿವೃದ್ಧಿ ಕಾರ್ಯಗಳ ಮುಖ್ಯ ಜವಾಬ್ದಾರಿ ಹೊತ್ತಿವೆ.

**ಸಾರಿಗೆ ಸಂಪರ್ಕ :** ಆರ್ಥಿಕವಾಗಿ ಹಿಂದುಳಿದಿದ್ದು ತುಂಗಭದ್ರಾನದಿ ಮತ್ತು ಕಣಿವೆಗಳಿಂದ ಕೂಡಿದ ಈ ಜಿಲ್ಲೆ ರಸ್ತೆ ಸಂಪರ್ಕದಲ್ಲಿ ತುಂಬಾ ಕನಿಷ್ಠ ಸೌಲಭ್ಯ ಹೊಂದಿದ್ದಿತು. ತುಂಗಭದ್ರಾ ನದಿಗೆ ಸೇತುವೆಗಳಾದ ಮೇಲೆ ಹೊರ ಪ್ರದೇಶಗಳೊಂದಿಗೆ ಹೆಚ್ಚು ಸಂಪರ್ಕವೇರ್ಪಟ್ಟಿತು. ಚೆನ್ನೈ-ಪುಣೆ ರಾಷ್ಟ್ರೀಯ ಹೆದ್ದಾರಿ ಈ ಜಿಲ್ಲೆಯ ಕೊಪ್ಪಳ-ಕುಷ್ಟಗಿ ಮೂಲಕ ಹಾದುಹೋಗಿದ್ದು ಅದರ ಉದ್ದ ಜಿಲ್ಲೆಯಲ್ಲಿ 125ಕಿಮೀ ಬಿಜಾಪುರ ಜಿಲ್ಲೆಯ ಹುನಗುಂದದಿಂದ ಕುಷ್ಟಗಿ ಇರಕಲ್‌ಗಡ ಕೊಪ್ಪಳ ಮೂಲಕ ಬಳ್ಳಾರಿ ಸೇರುವ ಮಾರ್ಗ ಪ್ರಮುಖ ರಾಜ್ಯ ಹೆದ್ದಾರಿಯಾಗಿದೆ. ಕೊಪ್ಪಳದಿಂದ ಹುಬ್ಬಳಿ-ಧಾರವಾಡದೊಡನೆ ಸಂಪರ್ಕಿಸುವ ರಸ್ತೆ ಇನ್ನೊಂದು ಪ್ರಮುಖ ರಸ್ತೆ ಮಾರ್ಗ. ಕೊಪ್ಪಳದಿಂದ ರಾಯಚೂರು, ಗದಗ, ಶೋರಾಪುರ, ಲಿಂಗಸುಗೂರು, ಮುದ್ಗಲ್ ಮೊದಲಾದ ಜಿಲ್ಲೆಯ ಹೊರ ಸ್ಥಳಗಳಿಗೆ ಉತ್ತಮ ರಸ್ತೆ ಸಂಪರ್ಕವಿದೆ. ಜಿಲ್ಲೆಯ ಒಳಗೆ ಜಿಲ್ಲಾ ಕೇಂದ್ರದಿಂದ ಎಲ್ಲ ತಾಲ್ಲೂಕುಗಳನ್ನು ಕೂಡಿಸುವ ಜಿಲ್ಲಾ ರಸ್ತೆಗಳಿವೆ. ಗ್ರಾಮೀಣ ರಸ್ತೆಗಳು ನಿಧಾನಗತಿಯಲ್ಲಿ ಅಭಿವೃದ್ಧಿ ಕಾಣುತ್ತಿವೆ. ಜಿಲ್ಲೆಯಲ್ಲಿ 270ಕಿಮೀ ರಾಜ್ಯ ಹೆದ್ದಾರಿ; 537ಕಿಮೀ ಜಿಲ್ಲಾ ರಸ್ತೆಗಳು ಮತ್ತು 1251ಕಿಮೀ ಗ್ರಾಮ ರಸ್ತೆಗಳಿವೆ. ಭಾರಿ ಸೇತುವೆಗಳ ಸಂಖ್ಯೆ 19 (2001). ಹುಬ್ಬಳ್ಳಿ-ಬಳ್ಳಾರಿ ರೈಲು ಮಾರ್ಗ ಮುನಿರಾಬಾದ್ ಮತ್ತು ಕೊಪ್ಪಳದ ಮೂಲಕ ಹಾದುಹೋಗುತ್ತದೆ. ಅದರ ಉದ್ದ 55ಕಿಮೀ.

**ಇತಿಹಾಸ :** ಕೊಪ್ಪಳ ಜಿಲ್ಲೆ ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ಆಸುಪಾಸಿನಲ್ಲಿದ್ದು ಪ್ರಾಚೀನ ಕಾಲದಿಂದಲೂ ಜನವಸತಿ ಹೊಂದಿದ ಪ್ರದೇಶವಾಗಿದೆ. ಗಂಗಾವತಿ ತಾಲ್ಲೂಕಿನ ಬೆಂಕಲ್ ಮತ್ತು ಕೆರೆಹಾಳ್ ನೆರೆಯ ರಾಯಚೂರು ಜಿಲ್ಲೆಯ ಮಸ್ಕಿ, ಹಾಳಾಪುರ, ಕಲ್ಲೂರು ಮೊದಲಾದ ಕಡೆಗಳಲ್ಲಿ ಇತಿಹಾಸ ಪೂರ್ವ ಕಾಲದ ನಿವೇಶನಗಳಿದ್ದುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಕೊಪ್ಪಳ ಮತ್ತಿತರ ಕಡೆಗಳಲ್ಲಿ ಬೃಹತ್ ಶಿಲಾ ಸಮಾಧಿಗಳು ದೊರೆತಿವೆ. ಶಿಲಾಯುಗದ ಉಪಕರಣಗಳು, ಮಣ್ಣಿನ ಮಡಿಕೆಗಳು, ಟೆರಕೋಟ ಮೂರ್ತಿಗಳು ಇಲ್ಲಿ ದೊರೆತಿವೆ. ಈ ಆಧಾರಗಳ ಮೇಲೆ ಈ ಪ್ರದೇಶ ದಕ್ಷಿಣ ಭಾರತದ ಅತಿ ಪುರಾತನ ಮಾನವ ನೆಲೆಗಳನ್ನು ಹೊಂದಿದ್ದ ವಲಯಗಳಲ್ಲೊಂದೆಂದು ಹೇಳಬಹುದು.

ಕೊಪ್ಪಳದ ಬಳಿಯ ಮಲಿಮಲ್ಲಪ್ಪ ಬೆಟ್ಟದ ತುದಿಯ ಮೇಲೆ ಅನೇಕ ಹಾಸುಗಲ್ಲಿನ ಕಟ್ಟಡಗಳು ಕಂಡುಬಂದಿವೆ. ಅವನ್ನು ಸ್ಥಳೀಯವಾಗಿ 'ಮೊರಿಯರ ಅಂಗಡಿ' ಎಂದು ಕರೆಯುತ್ತಾರೆ. ಇದು ಮೌರ್ಯರ ಕಾಲದ ವಸತಿಯ ಬಗ್ಗೆ ಮತ್ತು ಆಗ ಉತ್ತರ ಭಾರತದ ಜನ ಇಲ್ಲಿ ಮಾರುಕಟ್ಟೆಗಳನ್ನು ಸ್ಥಾಪಿಸಿ ವಾಣಿಜ್ಯ ವ್ಯವಹಾರಗಳನ್ನು ನಡೆಸುತ್ತಿದ್ದ ಬಗ್ಗೆ ಸುಳಿವು ನೀಡುತ್ತದೆ. ಪೌರಾಣಿಕ ಐತಿಹ್ಯಗಳು ಈ ಪ್ರದೇಶದಲ್ಲೂ ಇತರೆಡೆಗಳಂತೆಯೆ ಅಸ್ತಿತ್ವದಲ್ಲಿವೆ. ಪಾಲ್ಕಿಗುಂಡು ಬೆಟ್ಟ ಮತ್ತು ಮಲಿ ಮಲ್ಲಪ್ಪನ ಬೆಟ್ಟದ ನಡುವಿನ ಬಯಲನ್ನು ಪಾಂಡವರ ಮಠಾರ ಎಂದು ಕರೆಯಲಾಗಿದೆ. ಇಲ್ಲೂ ಹಾಸುಗಲ್ಲು ಕಟ್ಟಡಗಳಿವೆ. ಗಂಗಾವತಿ ತಾಲ್ಲೂಕಿನ ಆನೆಗೊಂದಿ (ನೋಡಿ) ರಾಮಾಯಣ ಕಾಲದ ಕಿಷ್ಕಿಂದೆಯ ಭಾಗವಾಗಿತ್ತೆಂದು ನಂಬಿಕೆಯಿದೆ. ಗವಿಮಠ ಬೆಟ್ಟ ಮತ್ತು ಪಾಲ್ಕಿಗುಂಡು ಬೆಟ್ಟದಲ್ಲಿ ಒಂದೊಂದು ಅಶೋಕನ ಶಾಸನಗಳು ದೊರೆತಿವೆ. ಕೌಟಿಲ್ಯ ತನ್ನ ಅರ್ಥಶಾಸ್ತ್ರದಲ್ಲಿ ಮೌರ್ಯ ಸಾಮ್ರಾಜ್ಯದ ಕಾಲದಲ್ಲಿ ಉತ್ತರ ಭಾರತ ಮತ್ತು ದಕ್ಷಿಣ ಭಾರತದ ನಡುವೆ ನಡೆಯುತ್ತಿದ್ದ ವಾಣಿಜ್ಯ ಹಾಗೂ ಆಗಿನ ವ್ಯಾಪಾರ ಸರಕುಗಳ ಬಗ್ಗೆ ಮಾಹಿತಿ ನೀಡಿದ್ದಾನೆ. ಮೌರ್ಯ ಸಾಮ್ರಾಜ್ಯದ ಹೊರಗಿನ ದಕ್ಷಿಣ ರಾಜ್ಯಗಳನ್ನು ಚೋಳ, ಪಾಂಡ್ಯ, ಸಾತಿಯಪುತ, ಕೇರಲಪುತ ಮತ್ತು ತಂಬಪನ್ನಿ (ಶ್ರೀಲಂಕಾ) ಎಂದು ಅಶೋಕನ ಶಾಸನಗಳಲ್ಲಿ ಹೆಸರಿಸಲಾಗಿದೆ. ಈ ದೃಷ್ಟಿಯಿಂದ ನೋಡಿದಾಗ ಪೂರ್ವೋಕ್ತ ದೇಶಗಳು ದಖನ್ನಿನ ಹೊರಗಿದ್ದು ಅಂದಿನ ದಖನ್ನಿನ ಪ್ರದೇಶ ಮೌರ್ಯ ಸಾಮ್ರಾಜ್ಯದ ಒಂದು ಪ್ರಾಂತ್ಯವಾಗಿದ್ದದ್ದು ತಿಳಿದುಬರುತ್ತದೆ. ಮೌರ್ಯರ ಶಾಸನಗಳಲ್ಲಿ ಬರುವ ಸುವರ್ಣಗಿರಿಯನ್ನು ಕೊಪ್ಪಳ ಜಿಲ್ಲೆಯ ಕನಕಗಿರಿ ಎಂದು ಕೆಲವು ವಿದ್ವಾಂಸರು ಗುರುತಿಸಿದ್ದರೆ, ಇನ್ನು ಕೆಲವರು ಇದನ್ನು ಮಸ್ಕಿ ಇರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ. ಅದೇನೇ ಇದ್ದರೂ ಈ ಪ್ರದೇಶ ಬಹು ಪುರಾತನ ನಾಗರಿಕತೆ ಮತ್ತು ಸಂಸ್ಕೃತಿಗಳ ನೆಲೆಬೀಡೆಂಬುದು ಸ್ಪಷ್ಟವಾಗಿದೆ.



ಕುಮಾರೇಶ್ವರ ದೇವಾಲಯ

ಮೌರ್ಯ ಸಾಮ್ರಾಜ್ಯದ ಪತನಾನಂತರ ದಖನ್‌ನಲ್ಲಿ ಸ್ಥಾಪಿತವಾದ ಪ್ರಥಮ ಸ್ವತಂತ್ರ ಸಾಮ್ರಾಜ್ಯವೆಂದರೆ ಸಾತವಾಹನರದು. ಇಂದಿನ ಮಹಾರಾಷ್ಟ್ರ ರಾಜ್ಯದ ಪ್ರತಿಷ್ಠಾನ ಅಥವಾ ಪೈಠಣ್ ಅನ್ನು ರಾಜಧಾನಿಯಾಗಿ ಹೊಂದಿದ್ದ ಈ ಸಾಮ್ರಾಜ್ಯದ ಭಾಗವಾಗಿ ಕೊಪ್ಪಳ ಉನ್ನತ ಸ್ಥಿತಿಗೆ ಬಂದಿತು. ಕ್ರಿ.ಪೂ.3ನೆಯ ಶತಮಾನದಿಂದ ಕ್ರಿ.ಶ 2ನೆಯ ಶತಮಾನದವರೆಗೂ ಆಳಿದ ಈ ವಂಶದ ಸಾಮ್ರಾಟರು ಉತ್ತರ ಭಾರತದವರೆಗೂ ತಮ್ಮ ಕೀರ್ತಿ ಪತಾಕೆಯನ್ನು ಹಾರಿಸಿದರು. ಕೊನೆಗೆ ದಕ್ಷಿಣ ಪಥಕ್ಕೆ ಸೀಮಿತವಾದ ಇವರು ತುಂಗಭದ್ರಾ ದಕ್ಷಿಣಕ್ಕೂ ತಮ್ಮ ಆಳಿಕೆಯನ್ನು ಚಾಚಿದ್ದರು. ಸಾತವಾಹನರ ಕಾಲದಿಂದ ಕೊಪ್ಪಳ ಪ್ರಸಿದ್ಧಿ ಪಡೆದಿತ್ತು. ಇಲ್ಲಿನ ಸುತ್ತಮುತ್ತಲ ಬೆಟ್ಟಗುಡ್ಡಗಳಿಗೆ ಕೊಪಣಾದ್ರಿ ಮತ್ತು ಕುಪಣಾಚಲ ಎಂಬ ಹೆಸರುಗಳಿವೆ. ಕೊಪ್ಪಳಕ್ಕೆ ಕೊಪಣ ಅಥವಾ ಕೋಪಣ

ನಗರವೆಂಬ ಹೆಸರಿದ್ದಿತು. ಈ ಜಿಲ್ಲೆಯ ಕವಲೂರು, ಅಳವಂಡಿ, ಮಾದಿನೂರು, ಕುಕ್ಕನೂರು, ಪುರ, ಆನೆಗೊಂದಿ, ಇಟಗಿ ಮತ್ತು ಮುಧುವೊಳಲು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿವೆ.

ಸಾತವಾಹನರ ಅನಂತರ ಕರ್ನಾಟಕದ ಉತ್ತರ ಭಾಗದಲ್ಲಿ ಮತ್ತು ಕರಾವಳಿಯಲ್ಲಿ ಕದಂಬರು ಪ್ರಬಲ ರಾಜ್ಯಸ್ಥಾಪಿಸಿ ಆಳಿದರು. ಆದರೆ ದಕ್ಷಿಣದಲ್ಲಿ ತಲಕಾಡಿನ ಗಂಗರು, ಪೂರ್ವದಲ್ಲಿ ವಾಕಾಟಕರು ಕದಂಬರ ಸಮಕಾಲೀನರಾಗಿ ಆಳಿದರು. ಕದಂಬರು ಈ ಜಿಲ್ಲೆಯ ಮೇಲೆ ಎಷ್ಟು ನಿಯಂತ್ರಣ ಹೊಂದಿದ್ದರು ಎಂದು ಹೇಳಲು ಸ್ಪಷ್ಟ ಆಧಾರಗಳು ಲಭ್ಯವಿಲ್ಲ. ಆದರೆ ಚಿತ್ರದುರ್ಗದ ಬಳಿಯ ಚಂದ್ರವಳ್ಳಿಯಲ್ಲಿ ಕದಂಬರ ಶಾಸನ ದೊರೆತಿರುವುದರಿಂದ ಈ ಜಿಲ್ಲೆಯ ಮೇಲೆ ಒಂದಲ್ಲ ಒಂದು ಕಾಲದಲ್ಲಿ ಭಾಗಶಃವಾಗಿ ಅಥವಾ ಪೂರ್ಣವಾಗಿ ಅವರು ನಿಯಂತ್ರಣ ಹೊಂದಿದ್ದರು ಎಂದು ಹೇಳಬಹುದು. ಇದೇ ವೇಳೆಗೆ ಮಧ್ಯ ಭಾರತದಲ್ಲಿ ಪ್ರಬಲ ರಾಜ್ಯ ಸ್ಥಾಪಿಸಿದ ವಾಕಾಟಕರು ಕುಂತಳ ದೇಶದವರೆಗೂ ತಮ್ಮ ರಾಜ್ಯ ವಿಸ್ತರಿಸಿದ್ದರೆಂದು ತಿಳಿದುಬರುತ್ತದೆ. ಅವರು ಈ ಪ್ರದೇಶವನ್ನು ಸಾಕಷ್ಟು ಕಾಲ ಆಳಿರಬೇಕು.

ಕೊಪ್ಪಳ ಜಿಲ್ಲೆಗೆ ಸಮೀಪದಲ್ಲಿ ಈಗಿನ ಬಿಜಾಪುರ ಜಿಲ್ಲೆಯ ಬಾದಾಮಿಯಲ್ಲಿ 6ನೆಯ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದ ಚಳುಕ್ಯ ಮನೆತನ ಪರ್ಯಾಯ ದ್ವೀಪದಲ್ಲಿ ಒಂದು ಪ್ರಬಲ ಸಾಮ್ರಾಜ್ಯವನ್ನು ಕಟ್ಟುವಲ್ಲಿ ಸಫಲವಾಯಿತು. ಕದಂಬ ರಾಜ್ಯ ಬಹುಮಟ್ಟಿಗೆ ಚಳುಕ್ಯ ಸಾಮ್ರಾಜ್ಯದಲ್ಲಿ ವಿಲೀನವಾಗಿ ಕೆಲವು ಶಾಖೆಗಳ ಆಳಿಕೆ ಮಾತ್ರ ಮುಂದುವರಿಯಿತು. ಬಾದಾಮಿ ಚಳುಕ್ಯರ ಶಾಸನಗಳು ಕೊಪ್ಪಳ ಜಿಲ್ಲೆಯ ಕೊಪ್ಪಳ, ಹಲಗೇರಿ, ಇಟಗಿ ಮತ್ತು ಕುಕನೂರು ಮೊದಲಾದೆಡೆಗಳಲ್ಲಿ ದೊರೆತಿವೆ. ಇವರು 757ರಲ್ಲಿ ರಾಷ್ಟ್ರಕೂಟರಿಂದ ಪರಾಜಯ ಹೊಂದುವವರೆಗೂ ಸಮಗ್ರವಾಗಿ ಆಳಿದರು. ಇವರ ಕಾಲದಲ್ಲಿ ಕೊಪ್ಪಳ ಒಂದು ಪಟ್ಟಣವಾಗಿ ಬೆಳೆಯಿತು. ಚೀನಿ ಪ್ರವಾಸಿ ಯುವಾನ್‌ಚಾಂಗನು ದಾಖಲಿಸಿರುವ ಕೊಂಕಿನಪುಲೋ ಎಂಬುದು ಕೊಪ್ಪಳವೆಂದು ಗುರುತಿಸಲಾಗಿದೆ.

ರಾಷ್ಟ್ರಕೂಟರು, ಬಾದಾಮಿ ಚಳುಕ್ಯರನ್ನು ಸೋಲಿಸಿ ಅವರ ಉತ್ತರಾಧಿಕಾರಿಗಳಾಗಿ ಮಾನ್ಯಖೇಟದಿಂದ ಆಳತೊಡಗಿದ್ದು ಕೊಪ್ಪಳ ಜಿಲ್ಲೆಯ ಇತಿಹಾಸಕ್ಕೆ ಹೊಸ ತಿರುವನ್ನು ನೀಡಿತು. ಆಗ ಕೋಪ್ಪಳ ಅಥವಾ ಕೋಪಣ ನಗರ ಜೈನರ ಪುಣ್ಯಸ್ಥಳವಾಗಿ ಪ್ರಸಿದ್ಧವಾಗಿತ್ತು. ದಕ್ಷಿಣ ಭಾರತದ ಜೈನ ರಾಜಮನೆತನದವರು ವಿಶೇಷವಾಗಿ ಇಲ್ಲಿಗೆ ಯಾತ್ರೆ ಬರುತ್ತಿದ್ದರು. ಕೊಪ್ಪಳ, ಇಟಗಿ, ಅರಕೇರಿ, ಸಂಕನೂರು, ಅಳವಂಡಿ, ಬೆಣಗೇರಿಗಳಲ್ಲಿ ರಾಷ್ಟ್ರಕೂಟರಿಗೆ ಸಂಬಂಧಿಸಿದ ಶಾಸನಗಳು ದೊರೆತಿವೆ. ಕೊಪ್ಪಳದಲ್ಲಿ ರಾಷ್ಟ್ರಕೂಟರ ದಂಡನಾಯಕರಲ್ಲೊಬ್ಬನಾದ ಮಾಮರಸನೆಂಬಾತನಿದ್ದನೆಂದು ತಿಳಿದುಬರುತ್ತದೆ. ರಾಷ್ಟ್ರಕೂಟರ ಸಾಮಂತರೂ ನಿಕಟ ಬಂಧುಗಳೂ ಆಗಿದ್ದ ತಲಕಾಡಿನ ಗಂಗರು ಈ ಪ್ರದೇಶದೊಂದಿಗೆ ಹೆಚ್ಚಿನ ಸಂಪರ್ಕ ಮತ್ತು ಅಧಿಕಾರ ಹೊಂದಿದ್ದರು. ಗಂಗ ಇಮ್ಮಡಿ ಬೂತುಗನ (936-61) ಶಾಸನ ಸಮೀಪದ ಇಟಗಿಯಲ್ಲಿ ದೊರೆತಿದೆ. ಈತ ರಾಷ್ಟ್ರಕೂಟ ಮುಮ್ಮಡಿ ಅಮೋಘವರ್ಷನ ಮಗಳು ರೇವಕನಿಮ್ಮಡಿಯನ್ನು ಮದುವೆಯಾಗಿದ್ದ. ಈ ಸಂದರ್ಭದಲ್ಲಿ ಚಕ್ರವರ್ತಿಯು ಬೂತುಗನಿಗೆ ಪುರಿಗೆರೆ 300, ಬೆಳ್ವೊಲ 300, ಕಿಸುಕಾಡು 70 ಮತ್ತು ಬಾಗೆನಾಡು 70 ಇವುಗಳನ್ನು ನೀಡಿದ್ದ. ಕುಕನೂರಿನ ತಾಮ್ರಶಾಸನ ಇಮ್ಮಡಿ ಮಾರಸಿಂಹನಿಗೆ ಸೇರಿದ್ದು ಅದರಲ್ಲಿ ಗಂಗರ ವಂಶಾವಳಿಯನ್ನು ನೀಡಲಾಗಿದೆ. ಗಂಗಾವತಿ ತಾಲ್ಲೂಕಿನ ಹೆಬ್ಬಾಳದ ಶಾಸನ ಈ ಭಾಗದಲ್ಲಿ ಗಂಗರು ಆಳಿದ್ದಕ್ಕೆ ಸಾಕ್ಷಿಯಾಗಿದೆ.

ಗಂಗ ಮನೆತನಕ್ಕೆ ಕೊಪ್ಪಳ ಪುಣ್ಯಕ್ಷೇತ್ರವಾಗಿದ್ದುದಲ್ಲದೆ ಅಲ್ಲಿ ರಾಜಮನೆತನದ ಅನೇಕ ಸದಸ್ಯರು ಸ್ವಯಂಪ್ರೇರಣೆಯಿಂದ ಸಲ್ಲೇಖನ ವ್ರತ ಕೈಗೊಂಡು ದೇಹತ್ಯಾಗ ಮಾಡಿದ ವಿವರಗಳು ತಿಳಿದುಬರುತ್ತವೆ. ಇವರಲ್ಲಿ ಇಮ್ಮಡಿ ಬೂತುಗನ ಪತ್ನಿ ಪದ್ಮಬ್ಬರಸಿ, ಮಾರಸಿಂಹನ ಅಕ್ಕ ಹಾಗೂ ಚಾಳುಕ್ಯ ಹರಿಗನ ಪತ್ನಿ ಬಿಜ್ಜಬ್ಬರಸಿ ಮೊದಲಾದವರು ಸೇರಿದ್ದಾರೆ. ಕೊಪ್ಪಳದಲ್ಲಿ ಹಲವಾರು ಜೈನ ಮುನಿಗಳು ಮೋಕ್ಷ ಪಡೆದ ವಿವರಗಳು ಅಲ್ಲಿನ ಶಾಸನಗಳಲ್ಲಿ ದೊರೆಯುತ್ತವೆ.

ರಾಷ್ಟ್ರಕೂಟರ ಆಳಿಕೆಯನ್ನು ಕೊನೆಗಾಣಿಸಿ ಚಾಳುಕ್ಯರ ಅಧಿಕಾರವನ್ನು ಮತ್ತೆ ಸ್ಥಾಪಿಸಿದ ಚಾಳುಕ್ಯ ತೈಲಪನ ಮೊದಲ ವರ್ಷದ ಆಳಿಕೆಯ (973) ಶಾಸನ ಮಾದಿನೂರಿನಲ್ಲಿದೆ. ಅದರಲ್ಲಿ ರಾಜನು ಬ್ರಹ್ಮಾಂಡಕ್ರತು ಎಂಬ ಯಾಗವನ್ನು ಮಾಡಿದನೆಂದು ಹೇಳಿದೆ. ಕಲ್ಯಾಣದ ಚಾಳುಕ್ಯರೆಂದು ಪ್ರಸಿದ್ಧರಾದ ಈ ವಂಶದವರ ಆಳಿಕೆಯು 12ನೆಯ ಶತಮಾನದ ಉತ್ತರಾರ್ಧದವರೆಗೂ ಮುಂದುವರಿಯಿತು. ಈ ಯುಗದಲ್ಲಿ ಹೇಮಾವತಿ, ಹೆಂಜೇರು ಮತ್ತು ಕಂಪಿಲಿಯಿಂದ ಆಳಿದ ನೊಳಂಬರು ಈ ಜಿಲ್ಲೆಯ ಕೆಲವು ಭಾಗಗಳನ್ನು ಆಳಿರುವ ಸಂಭವ ಹೆಚ್ಚಿದೆ. ಕಳಚುರಿಗಳು ಅಲ್ಪಾವಧಿಯ ಕಾಲ ಆಳಿದರೂ ಅವರ ಕೆಲ ಶಾಸನಗಳು ಜಿಲ್ಲೆಯಲ್ಲಿ ದೊರೆತಿವೆ. ಆ ಕಾಲದಲ್ಲಿ ಕುಕನೂರು ಪ್ರಸಿದ್ಧ ಧಾರ್ಮಿಕ ಸ್ಥಳವಾಗಿತ್ತು. ಅಲ್ಲಿನ ಜೇಷ್ಠಾದೇವಿಗೆ ರಾಜರು ಮತ್ತು ದಂಡನಾಯಕರು ನಡೆದುಕೊಳ್ಳುತ್ತಿದ್ದರು.



ವೆಂಕಟಪ್ಪ ಬಾವಿ, ಕನಕಗಿರಿ

ಹೊಯ್ಸಳರು ಮತ್ತು ಸೇವುಣರ ಕಾಲದಲ್ಲಿ ಈ ಪ್ರಾಂತ್ಯ ಅವರಿಬ್ಬರ ನಡುವಿನ ವಿವಾದಾತ್ಮಕ ಪ್ರದೇಶವಾಗಿತ್ತು. ಈ ಎರಡು ರಾಜ್ಯಗಳ ನಡುವೆ ಮಧ್ಯಗಾಮಿ ರಾಜ್ಯದಂತಿದ್ದ ಕಂಪಿಲಿ ರಾಜ್ಯದ ಪ್ರಬಲ ನೆಲೆಗಳಲ್ಲೊಂದಾದ ಕುಮ್ಮಟದುರ್ಗ ಕೊಪ್ಪಳ ತಾಲ್ಲೂಕಿನಲ್ಲಿದೆ. ಮೊದಲು ಕಂಪಿಲಿಯಿಂದ ಬಳ್ಳಾರಿ ಜಿಲ್ಲೆ ಆಳುತ್ತಿದ್ದ ಇಲ್ಲಿನ ಅರಸರು 1315ರಲ್ಲಿ ಕುಮ್ಮಟದುರ್ಗದಿಂದ ಆಳುತ್ತಿದ್ದುದು ಶಾಸನಗಳಿಂದ ಕಂಡುಬರುತ್ತದೆ. ದೇವಗಿರಿಯಲ್ಲಿ ನೆಲೆಸಿದ್ದ ದೆಹಲಿ ಸುಲ್ತಾನರ ಸೈನ್ಯವನ್ನು ಧೈರ್ಯದಿಂದ ಎದುರಿಸಿ ಹುತಾತ್ಮರಾದ ಕಂಪಿಲಿರಾಯ ಮತ್ತು ಕುಮಾರರಾಮ ಈ ಮನೆತನದವರು.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಮೊದಲ ಚಟುವಟಿಕೆಗಳು ಪ್ರಾರಂಭವಾದದ್ದು ಈ ಜಿಲ್ಲೆಯ ಆನೆಗೊಂದಿಯಲ್ಲಿ ಎಂದು ತಿಳಿದುಬರುತ್ತದೆ. ವಿಜಯನಗರ ಅರಸರ 1342ರ ಶಾಸನ ಆನೆಗೊಂದಿಯಲ್ಲಿ ದೊರೆತಿದೆ. ಕೊಪ್ಪಳದ 1346ರ ಶಾಸನದಲ್ಲಿ ಹರಿಹರನ ಉಲ್ಲೇಖವಿದೆ. ಆನೆಗೊಂದಿ, ಕನ್ನೇರುಮಡು, ಕೆಸರಟ್ಟಿ, ಕಲ್ಲೂರು, ಬಂಡಿಹಾಳಗಳಲ್ಲಿ ವಿಜಯನಗರದ ಅರಸರ ಮತ್ತು ಮಾಂಡಲಿಕರ ಶಾಸನಗಳು ಲಭ್ಯವಾಗಿವೆ. ವಿಜಯನಗರದ ಆಯಕಟ್ಟಿನ ಪ್ರದೇಶವಾಗಿದ್ದ ಈ ಜಿಲ್ಲೆಯ ಒಡೆತನಕ್ಕಾಗಿ ವಿಜಯನಗರ ಅರಸರು ಮತ್ತು ಬಹಮನೀ ಸುಲ್ತಾನರುಗಳ ನಡುವೆ ಆಗಾಗ ಯುದ್ಧಗಳಾಗುತ್ತಿದ್ದವು. ಕಲ್ಲೂರು ಮತ್ತು ಬಂಡಿಹಾಳದ ಶಾಸನಗಳು ಅಚ್ಯುತರಾಯನ ಕಾಲದಲ್ಲಿ ಅವನ ಮಾಂಡಲಿಕರಾಗಿದ್ದ ಗುಜ್ಜಲವಂಶದ ಅರಸರ ಬಗ್ಗೆ ತಿಳಿಸುತ್ತದೆ.

ತಾಳಿಕೋಟೆಯ ಯುದ್ಧದ ತರುವಾಯವೂ ಗಂಗಾವತಿ ತಾಲ್ಲೂಕಿನ ಆನೆಗೊಂದಿ ಸ್ವಲ್ಪ ಕಾಲ ಐತಿಹಾಸಿಕ ಮಹತ್ತ್ವ ಪಡೆದಿತ್ತು. ಆನೆಗೊಂದಿಯಲ್ಲಿ ಆಶ್ರಯ ಪಡೆದ ವಿಜಯನಗರದ ಅರಸು ಮನೆತನದವರು ಅಲ್ಲಿ ತಮ್ಮ ಅಧಿಕಾರವನ್ನು ಮುಂದುವರಿಸಿದರು. ಶ್ರೀರಂಗಪಟ್ಟಣದ ಪ್ರಾಂತ್ಯಾಧಿಕಾರಿಯಾಗಿದ್ದ ಶ್ರೀರಂಗರಾಯ ಆನೆಗೊಂದಿಯ

ಮೂಲದವನೆಂದು ತಿಳಿದುಬರುತ್ತದೆ. 1657ರಲ್ಲಿ ಶಿವಾಜಿಯು ಆನೆಗೊಂದಿ ಮೊದಲಾದ ಒಂಬತ್ತು ಸಮುತಗಳನ್ನು ಶ್ರೀರಂಗರಾಯನ ಕುಟುಂಬದ ಪೋಷಣೆಗಾಗಿ ನೀಡಿದ್ದನೆಂದು ಹೇಳಲಾಗಿದೆ. ಈ ಕಾಲದಲ್ಲಿ ಕೊಪ್ಪಳವು ಕೊಪಣನಾಡು ಅಥವಾ ಕೋಪಣವೇಂಟೆಯ ಕೇಂದ್ರ ಸ್ಥಳವಾಗಿದ್ದಿತು.

ಕಂಪಿಲಿ ರಾಜ್ಯ ಪತನಗೊಂಡು ದಖನ್ನಿನ ದೆಹಲಿ ಪ್ರಾಂತ್ಯಾಧಿಕಾರಿಯ ವಶಕ್ಕೆ ಬಂದ ದೋಆಬ್ ಪ್ರಾಂತ್ಯವು ಅಂದರೆ ಕೊಪ್ಪಳ ಜಿಲ್ಲೆ ಮತ್ತು ಈಗಿನ ರಾಯಚೂರು ಜಿಲ್ಲೆಗಳ ಪ್ರದೇಶವು ಮುಂದೆ ಸದಾ ವಿಜಯನಗರ ಮತ್ತು ಬಹಮನೀ ರಾಜ್ಯದ ನಡುವೆ ವಿವಾದಿತ ಪ್ರದೇಶವಾಗಿ ಪರಿಣಮಿಸಿತು. ರಾಯಚೂರಿನೊಂದಿಗೆ ಕೊಪ್ಪಳ ಜಿಲ್ಲೆಯ ಕೆಲವು ಭಾಗಗಳೂ ಆಗಾಗ ಈ ಎರಡು ರಾಜ್ಯ- ಸಾಮ್ರಾಜ್ಯಗಳ ನಡುವೆ ಕೈ ಬದಲಾಯಿಸುತ್ತಿದ್ದುದನ್ನು ಕಾಣಬಹುದು. ರಾಯಚೂರು ಮತ್ತು ಮುದುಗಲ್ಲು ದೀರ್ಘಕಾಲ ಬಿಜಾಪುರ -ಗುಲ್ಬರ್ಗ ಮತ್ತು ಬೀದರ್‌ನಿಂದ ಆಳಿದ ಬಹಮನೀ ರಾಜ್ಯದ ವಶದಲ್ಲಿರುತ್ತಿದ್ದುದ್ದರಿಂದ ಕೊಪ್ಪಳದ ಅನೇಕ ಸ್ಥಳಗಳೂ ಅದರ ಆಳಿಕೆಗೊಳಪಟ್ಟಿದ್ದವು. ಪದೇ ಪದೇ ಬಹಮನೀ ಸೈನ್ಯಗಳು ವಿಜಯನಗರದ ಪ್ರದೇಶಗಳಿಗೆ ನುಗ್ಗಿ ಕೊಲೆ, ಲೂಟಿ ಮತ್ತು ದಬ್ಬಾಳಿಕೆಗಳಲ್ಲಿ ತೊಡಗುತ್ತಿದ್ದವು. ಎರಡನೆಯ ದೇವರಾಯ ಮತ್ತು ಕೃಷ್ಣದೇವರಾಯ ಈ ದಾಳಿಗಳನ್ನು ಯಶಸ್ವಿಯಾಗಿ ಎದುರಿಸಿ ಸುಲ್ತಾನರ ಆಳಿಕೆಯಿಂದ ಈ ಪ್ರದೇಶವನ್ನು ಮುಕ್ತಗೊಳಿಸಿದ್ದರು. 1565ರಲ್ಲಿ ತಾಳಿಕೋಟೆ ಯುದ್ಧದಲ್ಲಿ ವಿಜಯನಗರದ ಸೈನ್ಯ ಸೋತ ಮೇಲೆ ಈ ಜಿಲ್ಲೆ ಬಹುಮಟ್ಟಿಗೆ ಬಿಜಾಪುರದ ಸುಲ್ತಾನ್‌ಶಾಹಿಯ ಅಧೀನಕ್ಕೊಳಗಾಯಿತು. ಶಿವಾಜಿ 1677ರಲ್ಲಿ ಕೊಪ್ಪಳವನ್ನು ಮುತ್ತಿ ವಶಪಡಿಸಿಕೊಂಡ. ಸ್ವಲ್ಪ ಕಾಲದಲ್ಲೇ ಬಿಜಾಪುರ ರಾಜ್ಯ ಔರಂಗಜೇಬನ ಮಹಾ ದಕ್ಷಿಣ ದಂಡಯಾತ್ರೆಗೆ ಬಲಿಯಾದ ಮೇಲೆ ಅನೇಕ ವರ್ಷಗಳ ಅರಾಜಕತೆಯ ಅನಂತರ ಈ ಜಿಲ್ಲೆ ಹೈದರಾಬಾದಿನ ನಿಜಾಮರ ಆಡಳಿತದಡಿ ಬಂದಿತು.

ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನರ ದಂಡಯಾತ್ರೆಗಳಿಂದಾಗಿ ಈ ಪ್ರದೇಶ ಸ್ವಲ್ಪ ಅವಧಿಗೆ ಮೈಸೂರು ರಾಜ್ಯದ ಭಾಗವಾಗಿತ್ತು. ಆದರೆ 1799ರಲ್ಲಿ ಟಿಪ್ಪು ಬ್ರಿಟಿಷರಿಗೆ ಸಂಪೂರ್ಣವಾಗಿ ಸೋತ ಅನಂತರ ಆದ ರಾಜಕೀಯ ಒಡಂಬಡಿಕೆಯ ಮೇರೆಗೆ ಕೊಪ್ಪಳ ಜಿಲ್ಲೆ ಅಂದಿನ ರಾಯಚೂರು ಜಿಲ್ಲೆಯ ಭಾಗವಾಗಿ ಹೈದರಾಬಾದ್ ಸಂಸ್ಥಾನಕ್ಕೆ ಸೇರಿತು. ಹೈದರಾಬಾದ್ ನಿಜಾಮರ ಸರ್ಕಾರವು ಸಂಸ್ಥಾನವನ್ನು ಜಹಗೀರಿಗಳು, ಪೈಗಗಳು ಮತ್ತು ನಿಜಾಮರ ಖಾಸಾ ಜಮೀನುಗಳೆಂದು ವಿಂಗಡಿಸಿದ್ದಿತು. ಜಹಗೀರಿಗಳನ್ನು ರಾಜ್ಯಕ್ಕೆ ಸೈನ್ಯ ಮೊದಲಾದವನ್ನು ಒದಗಿಸಿ ಉತ್ತಮ ಸೇವೆ ಸಲ್ಲಿಸಿದವರಿಗೆ ನೀಡಲಾಗುತ್ತಿತ್ತು. ಪೈಗಗಳನ್ನು ಅರಮನೆಗೆ ಬೇಕಾದ ಶ್ರೀಮಂತರು ಮತ್ತು ಕುಲೀನರಿಗೆ ಕೊಡಲಾಗುತ್ತಿತ್ತು. ಈ ನಿಜಾಮರ ಖಾಸಾ ಜಮೀನುಗಳನ್ನು ರೈತರು ಗುತ್ತಿಗೆಗೆ ಸಾಗುವಳಿ ಮಾಡುತ್ತಿದ್ದರು. ಕೊಪ್ಪಳ ಮತ್ತು ಯಲಬುರ್ಗ ತಾಲ್ಲೂಕುಗಳು ನವಾಬ್ ಸಾಲರ್‌ಜಂಗ ಎಂಬ ಜಹಗೀರುದಾರನಿಗೆ ಸೇರಿದ್ದವು. ಕುಷ್ಟಗಿ ತಾಲ್ಲೂಕು ಒಬ್ಬ ದೇಸಾಯಿಯ ಜಹಗೀರಾಗಿದ್ದಿತು. ಆನೆಗೊಂದಿಯೂ ಒಂದು ಪುಟ್ಟ ಜಹಗೀರಾಗಿತ್ತು. ಈ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಶ್ರೀಮಂತ ಮತ್ತು ಪ್ರಭಾವಿ ವರ್ಗದ ಅಲ್ಪಸಂಖ್ಯಾತರ ಕೈಯಲ್ಲಿ ರೈತರೂ ಕಾರ್ಮಿಕರು ಹೀನ ಸ್ಥಿತಿಯಲ್ಲಿ ಬದುಕಬೇಕಾಯಿತು. ಗ್ರಾಮದಲ್ಲಿ ಸರ್ಕಾರದ ಪರವಾಗಿ ಪಟೇಲ ಮತ್ತು ಗ್ರಾಮ ಮುಖ್ಯರಿರುತ್ತಿದ್ದರು. ಈ ಜಹಗೀರುದಾರರುಗಳು ನಿಜಾಮನಿಗೆ ವಾರ್ಷಿಕ ಪೊಗದಿ ಕೊಡುತ್ತಿದ್ದರು. ಅವರಿಗೆ ಪೊಲೀಸ್ ಮತ್ತು ನ್ಯಾಯಾಂಗ ವ್ಯವಸ್ಥೆಗಳನ್ನು ಹೊಂದುವ ಅಧಿಕಾರವಿದ್ದಿತು.

ಈ ಬಗೆಯ ಆಳಿಕೆಯಲ್ಲಿ ಜನಸಾಮಾನ್ಯರ ಹಕ್ಕುಬಾಧ್ಯತೆಗಳು ಕುಂಠಿತಗೊಂಡಿದ್ದುವು. 20ನೆಯ ಶತಮಾನದ ಪ್ರಾರಂಭದ ಹೊತ್ತಿಗೆ ಭಾರತಾದ್ಯಂತ ಬಲಗೊಳ್ಳುತ್ತಿದ್ದ ಸ್ವಾತಂತ್ರ್ಯಚಳವಳಿಯ ಪ್ರಭಾವ ಹೈದರಾಬಾದ್ ಸಂಸ್ಥಾನವನ್ನೂ ತಟ್ಟದಿರಲಿಲ್ಲ. 1911ರಲ್ಲಿ ಧಾರವಾಡದಲ್ಲಿ ಜರುಗಿದ ಅಖಿಲ ಕರ್ನಾಟಕ ರಾಜಕೀಯ ಸಮ್ಮೇಳನದಲ್ಲಿ ಈ ಜಿಲ್ಲೆಯ ಹಲವರು ಬಂದು ಭಾಗವಹಿಸಿದರು. ಬೆಳಗಾಂವಿಯಲ್ಲಿ ನಡೆದ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಸಮ್ಮೇಳನ (1924) ಸ್ವಾತಂತ್ರ್ಯ ಹೋರಾಟದ ಬಗ್ಗೆ ಈ ಪ್ರಾಂತದ ಜನರ ಗಮನ ಸೆಳೆಯುವಲ್ಲಿ ಮುಖ್ಯ ಪಾತ್ರ ವಹಿಸಿತು. 1916-17 ರಿಂದಲೇ ಕೊಪ್ಪಳದಲ್ಲಿ ಒಂದು ಖಾದಿ ಪ್ರಚಾರ ಕೇಂದ್ರ ಪ್ರಾರಂಭಗೊಂಡಿತ್ತು. 1922ರಲ್ಲಿ ಆರ್.ಬಿ.ದೇಸಾಯಿಯವರು ಕುಕನೂರಿನಲ್ಲಿ ವಿದ್ಯಾನಂದ ಗುರುಕುಲವನ್ನು ಸ್ಥಾಪಿಸಿದರು. ಇದು ಜನರಲ್ಲಿ ರಾಷ್ಟ್ರೀಯ ಭಾವನೆ ಬೆಳೆಸಲು ಸಹಕಾರಿಯಾಯಿತು. 1920-21ರಲ್ಲಿ ರಾಯಚೂರಿನಲ್ಲಿ ಪಂಡಿತ ತಾರಾನಾಥರು ಸ್ಥಾಪಿಸಿದ ಹಮ್‌ದರ್ದ್ ರಾಷ್ಟ್ರೀಯ ಶಾಲೆಯು ಸ್ವಾತಂತ್ರ್ಯ ಚಳವಳಿಯ ಗುರಿಗಳನ್ನು ಪ್ರಚಾರಗೊಳಿಸಿತು. ರಾಯಚೂರಿನ ಅಡವಿರಾವ್ ಫಡ್ನಾವಿಸ್, ಆರ್.ಜಿ.ಜೋಷಿ, ಗಾಣದಾಳ್ ನಾರಾಯಣಪ್ಪ, ವೀರಣ್ಣಮಾಸ್ತರ ಮೊದಲಾದವರ ನಾಯಕತ್ವದಲ್ಲಿ ಸ್ವಾತಂತ್ರ್ಯ ಚಳವಳಿ ಹರಡಿತು. 1928ರಲ್ಲಿ ರಾಯಚೂರಿನಲ್ಲಿ ಸ್ಥಾಪನೆಗೊಂಡ ಕರ್ನಾಟಕ ಸಂಘ ಇನ್ನೊಂದು ಮುಖ್ಯ ಘಟ್ಟವಾಯಿತು. 1930ರಲ್ಲಿ ಗಾಂಧೀಜಿಯವರು ಕೊಪ್ಪಳ ತಾಲ್ಲೂಕಿನ ಮೂಲಕ ರೈಲಿನಲ್ಲಿ ಹಾದುಹೋದಾಗ ಅವರನ್ನು ಅನೇಕರು ಭೇಟಿಯಾದರು. 1934ರಲ್ಲಿ ರಾಯಚೂರಿನಲ್ಲಿ 20ನೆಯ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತು. 1938ರಲ್ಲಿ ಹೈದರಾಬಾದ್ ಸಂಸ್ಥಾನದ ಪ್ರದೇಶ ಕಾಂಗ್ರೆಸ್ ಸಮಿತಿ ಅಸ್ತಿತ್ವಕ್ಕೆ ಬಂತು. ಈ ಭಾಗದ ಜನರು ಮೂರು ನಿಟ್ಟಿನಲ್ಲಿ ತಮ್ಮ ಹೋರಾಟವನ್ನು ಮುಂದುವರಿಸಬೇಕಾಗಿತ್ತು. ಒಂದು ಕಡೆ ಬ್ರಿಟಿಷರಿಂದ ವಿಮೋಚನೆ; ಇನ್ನೊಂದು ಕಡೆ ಜಹಗೀರ್‌ದಾರಿ ವ್ಯವಸ್ಥೆ ನಿಜಾಮ್‌ಶಾಹಿಯಿಂದ ಬಿಡುಗಡೆ; ಮೂರನೆಯದಾಗಿ ಕನ್ನಡೇತರ ರಾಜ್ಯದಿಂದ ಹೊರಬಂದು ಕನ್ನಡನಾಡಿನ ಏಕೀಕರಣ ಸಾಧಿಸುವುದು.



ಕೋಟೆ ಅವಶೇಷಗಳ ದೃಶ್ಯ, ಕೊಪ್ಪಳ

ಸಿರೂರು ವೀರಭದ್ರಪ್ಪ ಅಳವಂಡಿ ಶಿವಮೂರ್ತಿಸ್ವಾಮಿ, ಎಲ್.ಕೆ.ಷರಾಫ್, ಡಿ.ಜಿ.ಬಿಂದು, ಜನಾರ್ಧನರಾವ್‌ದೇಸಾಯಿ, ಬುರ್ಲಿಬಿಂದು ಮಾಧವರಾವ್, ಜಿ.ಕೆ.ಪ್ರಾಣೇಶಾಚಾರ್ಯ ಮತ್ತಿತರರು ಜನಜಾಗೃತಿ ಮತ್ತು ಸಂಘಟನೆಯಲ್ಲಿ ಪ್ರಮುಖ ಪಾತ್ರವಹಿಸಿದರು. ಸ್ವಾತಂತ್ರ್ಯ ಚಳವಳಿ ಮತ್ತು ಕರ್ನಾಟಕ ಏಕೀಕರಣ ಚಳವಳಿಗಳು ನಿಧಾನವಾಗಿಯಾದರೂ ದೃಢವಾಗಿ ಪ್ರಗತಿಯಲ್ಲಿದ್ದಾಗಲೇ ಇಲ್ಲಿ ಜನತೆ ಹೊಸ ಸಮಸ್ಯೆಯನ್ನು ಎದುರಿಸಬೇಕಾಯಿತು. 1945ರ ಅನಂತರ ಭಾರತಕ್ಕೆ ಸ್ವಾತಂತ್ರ್ಯ ಸಿಗುವುದು ನಿಚ್ಚಳವಾಗುತ್ತಿದ್ದಂತೆಲ್ಲ ಹೈದರಾಬಾದ್ ಸಂಸ್ಥಾನದ ನಿಜಾಮರು ಭಾರತ ಒಕ್ಕೂಟದಿಂದ ಪ್ರತ್ಯೇಕವಾಗುಳಿಯುವ ಪ್ರಯತ್ನದಲ್ಲಿ ತೊಡಗಿದರು. 1947ರ ಆಗಸ್ಟ್ 15ರಂದು ಭಾರತ ಸ್ವತಂತ್ರವಾಯಿತು. ಅದೇ ತಿಂಗಳ 27ರಂದು ಹೈದರಾಬಾದ್ ರಾಜ್ಯ ಭಾರತ ಒಕ್ಕೂಟದಿಂದ ಪ್ರತ್ಯೇಕವಾಗುಳಿಯಲು ನಿರ್ಧರಿಸಿ ಸ್ವಾತಂತ್ರ್ಯ ಘೋಷಿಸಿಕೊಂಡಿತು. ಜೊತೆಗೆ ಸ್ವಾತಂತ್ರ್ಯ ಚಳವಳಿಯಲ್ಲಿ ತೊಡಗಿರುವವರನ್ನು ದಮನ ಮಾಡುವುದಕ್ಕಾಗಿ ಜನರಲ್ಲಿ ಭಯ ಹುಟ್ಟಿಸಲು ರಜಾಕಾರರೆಂದು ಕರೆದುಕೊಂಡ ಮುಸ್ಲಿಮ್ ಉಗ್ರವಾದಿಗಳ ಗುಂಪು ಹಿಂಸಾಚಾರಕ್ಕಿಳಿಯಿತು. ಇದರಿಂದ ಅನೇಕಕಡೆ ಭೀಕರ ಲೂಟಿ, ದರೋಡೆ, ಕೊಲೆ ಸುಲಿಗೆ, ಅತ್ಯಾಚಾರಗಳು ನಡೆದವು. ಆಗ ಈ ರಾಜ್ಯದ ಜನರ ರಕ್ಷಣೆಗೆ ಭಾರತ ಸರ್ಕಾರ ಮುಂದಾಗಿ 1948ರ ಸೆಪ್ಟೆಂಬರ್ 13ರಂದು ಪೊಲೀಸ್ ಕಾರ್ಯಾಚರಣೆ ಪ್ರಾರಂಭಿಸಿತು. ಅದೇ ತಿಂಗಳ 18ರಂದು ಹೈದರಾಬಾದ್ ಸಂಸ್ಥಾನವನ್ನು ವಶಪಡಿಸಿಕೊಂಡು ಭಾರತ ಒಕ್ಕೂಟದಲ್ಲಿ ಸೇರಿಸಲಾಯಿತು. 1956 ನವೆಂಬರ್ 1ರಂದು ಭಾಷಾವಾರು ರಾಜ್ಯಗಳ ರಚನೆಯಾದಾಗ ಕೊಪ್ಪಳವೂ ಸೇರಿದಂತೆ ಅಂದಿನ ರಾಯಚೂರು

ಜಿಲ್ಲೆ ಮತ್ತು ಹೈದರಾಬಾದ್ ಕರ್ನಾಟಕ ಭಾಗ ವಿಶಾಲ ಮೈಸೂರು ರಾಜ್ಯದಲ್ಲಿ ಒಂದಾಯಿತು.

ಈ ಜಿಲ್ಲೆ ಸಾಂಸ್ಕೃತಿಕವಾಗಿ ಮತ್ತು ಧಾರ್ಮಿಕವಾಗಿ ಉತ್ತಮ ಪರಂಪರೆ ಹೊಂದಿದೆ. ಶೈವ ಮಠಗಳು, ಅಗ್ರಹಾರಗಳು, ಜೈನ ಕೇಂದ್ರಗಳಿಂದ ಕೂಡಿರುವುದಲ್ಲದೆ ಜನಪದ ಸಾಹಿತ್ಯ ಸಂಪತ್ತಿನಿಂದಲೂ ಕೂಡಿದೆ. ವೀರಶೈವಧರ್ಮ ಹೊಸ ಸಾಂಸ್ಕೃತಿಕ ಪರಿಸರವನ್ನು ಸೃಷ್ಟಿಸಿತು. ಯಲಬುರ್ಗ ತಾಲ್ಲೂಕಿನ ಕುಕನೂರಿನ ಕಲ್ಲೇಶ್ವರ ದೇವಾಲಯ ಮತ್ತು ಅದೇ ತಾಲ್ಲೂಕಿನ ಇಟಗಿಯ ಮಹಾದೇವ ದೇವಾಲಯ ಚಾಳುಕ್ಯ ಪರಂಪರೆಯ ಶಿಲ್ಪ ಮತ್ತು ವಾಸ್ತುಗಳನ್ನು ಹೊಂದಿವೆ. ಕೊಪ್ಪಳದ ಕೋಟೆ ನೆಲಮಟ್ಟದಿಂದ 400' ಎತ್ತರದ ಗುಡ್ಡದ ಮೇಲಿದ್ದು ಅದನ್ನು ವಿನ್ಯಾಸ ಮತ್ತು ಭದ್ರತೆಯ ದೃಷ್ಟಿಯಿಂದ ಐರೋಪ್ಯ ದಂಡನಾಯಕರೂ ಮೆಚ್ಚಿಕೊಂಡಿದ್ದಾರೆ. ಜಿಲ್ಲೆಯಲ್ಲಿ ಕೌರೂರು, ಬಳಗೆರೆ, ಆಳವಂಡಿ, ತಳಕಲ್ಲು, ಆನೆಗೊಂದಿ, ಮುನಿರಾಬಾದ್ ಮೊದಲಾದ ಪ್ರೇಕ್ಷಣೀಯ ಸ್ಥಳಗಳಿವೆ. ಸ್ತ್ರೀ ದೇವತೆಗಳ ಆರಾಧನೆ ಅತ್ಯಂತ ಪೂರ್ವಕಾಲದಿಂದಲೂ ಬಂದ ಬಳುವಳಿ. ಕುಕನೂರಿನ ಮಹಾಮಾಯಾ, ಜೇಷ್ಠಾದೇವಿ, ಸಂಕನೂರಿನ ಸಂಕಲಾದೇವಿ, ಹೊಸೂರಿನ ಮಹಾಮಾಯಾ, ಹುಲಿಗಿಯ ಹುಲಿಗೆಮ್ಮ ಇವು ಪ್ರಸಿದ್ಧ ಶಕ್ತಿ ದೇವತೆಗಳು. ಕುಷ್ಟಗಿಯ ಅಡವಿರಾಯನ ಜಾತ್ರೆ, ಕೊಪ್ಪಳದ ಗವಿಸಿದ್ಧೇಶ್ವರ ಜಾತ್ರೆ, ಕನಕಗಿರಿ ಜಾತ್ರೆ, ಯಲಬುರ್ಗ ತಾಲ್ಲೂಕಿನ ಮಂಗಳೂರಿನ ಮಂಗಳೇಶ್ವರ ಜಾತ್ರೆಗಳು ಭಕ್ತಾದಿಗಳನ್ನು ಆಕರ್ಷಿಸುತ್ತವೆ.

ಶಾಸ್ತ್ರೀಯ ಸಂಗೀತ ಇಲ್ಲಿ ಹೆಚ್ಚು ಜನಪ್ರಿಯ; ದಾಸ ಪರಂಪರೆಯೂ ಉಂಟು. ಪ್ರಾಚೀನ ಕಾಲದಿಂದಲೂ ಸಾಹಿತ್ಯ ರಚನೆಗೆ, ಕವಿಪಂಡಿತರಿಗೆ ಹೆಸರುವಾಸಿ. ಇತ್ತೀಚಿನ ಸಾರಸ್ವತ ಲೋಕದ ಹಲವಾರು ಸಾಧಕರು ಇಲ್ಲಿನವರು. ಇವರಲ್ಲಿ ಸಿದ್ದಯ್ಯ ಪುರಾಣಿಕ, ಪಾಂಡುರಂಗರಾವ್ ದೇಸಾಯಿ, ಜಯತೀರ್ಥ ರಾಜಪುರೋಹಿತ, ಇಟಗಿ ರಾಘವೇಂದ್ರ, ಕುಷ್ಟಗಿ ರಾಘವೇಂದ್ರರಾವ್, ದೇವೇಂದ್ರ ಕುಮಾರ ಹಕಾರಿ, ಎಚ್.ಎಸ್.ಪಾಟೀಲ, ಬಿ.ಆರ್.ತುಬಾಕಿ, ಗವಿಸಿದ್ದ ಬಳ್ಳಾರಿ, ನಾ.ಭ.ಶಾಸ್ತ್ರಿ,ಕೀರ್ತನಕೇಸರಿ ಜಯರಾಮಾಚಾರ್ಯ, ಮಾಧವರಾವ್ ಮುಧೋಳ (ಉರ್ದು ಮತ್ತು ಕನ್ನಡ ಭಾಷೆಗಳೆರಡರಲ್ಲೂ ಪರಿಣಿತಿ ಪಡೆದಿದ್ದರು. ಉರ್ದು-ಕನ್ನಡ ನಿಘಂಟಿನಲ್ಲಿ ಇವರು ಕೆಲಸಮಾಡಿದ್ದರು) ಮೊದಲಾದವರನ್ನು ಇಲ್ಲಿ ಹೆಸರಿಸಬಹುದು. (ಡಿ.ಎಸ್.ಜೆ.)

**ತಾಲ್ಲೂಕು :** ಕೊಪ್ಪಳ ತಾಲ್ಲೂಕು ಹಾಗೂ ಅದರ ಮುಖ್ಯ ಪಟ್ಟಣ. ದಕ್ಷಿಣಕ್ಕೆ ತುಂಗಭದ್ರಾ ಜಲಾಶಯ, ಪಶ್ಚಿಮಕ್ಕೆ ಧಾರವಾಡ ಜಿಲ್ಲೆ, ಉತ್ತರಕ್ಕೆ ಯಲಬುರ್ಗ ತಾಲ್ಲೂಕು ಮತ್ತು ಪೂರ್ವಕ್ಕೆ ಗಂಗಾವತಿ ತಾಲ್ಲೂಕು ಇವೆ. ಕೊಪ್ಪಳ, ಇರಕಲ್ಲಗಡ, ಇತ್ತಿನಹಾಳ ಮತ್ತು ಅಲವಂಡಿ ಈ ನಾಲ್ಕು ಹೋಬಳಿಗಳಿವೆ. 156 ಹಳ್ಳಿಗಳಿವೆ. ತಾಲ್ಲೂಕಿನ ಒಟ್ಟು ವಿಸ್ತೀರ್ಣ 1,378.6ಚ.ಕಿಮೀ.

ತಾಲ್ಲೂಕಿನ ಬಹುಭಾಗ ಕಪ್ಪುಮೆಕ್ಕಲು ಮಣ್ಣಿನ ಮಟ್ಟಸ ಪ್ರಸ್ಥಭೂಮಿ. ತಾಲ್ಲೂಕಿನ ಈಶಾನ್ಯ ಮತ್ತು ಕೊಪ್ಪಳ ಪಟ್ಟಣದ ಸಮೀಪದಲ್ಲಿ ಗುಡ್ಡಗಳಿವೆ. ತುಂಗಭದ್ರಾನದಿ ತಾಲ್ಲೂಕಿನ ದಕ್ಷಿಣದ ಗಡಿಯಾಗಿತ್ತು. ಈಗ ತುಂಗಭದ್ರಾ ಜಲಾಶಯದ ಹರವಿನಲ್ಲಿ ಆ ಅಂಚಿನ ಭಾಗಗಳು ಮುಳುಗಿವೆ. ತುಂಗಭದ್ರಾ ಅಣೆಕಟ್ಟಿರುವುದು ತಾಲ್ಲೂಕಿನ ಆಗ್ನೇಯದಲ್ಲಿ ಮುನಿರಾಬಾದ್ ಬಳಿ. ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ 594.65ಮಿಮೀ. ಕೃಷಿ ತಾಲ್ಲೂಕಿನ ಮುಖ್ಯ ಜೀವನೋಪಾಯ. ಸಾಗುವಳಿಯಾಗುತ್ತಿರುವ ಒಟ್ಟು 3,40,592 ಎಕರೆಗಳಲ್ಲಿ 5,285ಕ್ಕೂ ಹೆಚ್ಚು ಎಕರೆಗಳಿಗೆ ನೀರಾವರಿ ಸೌಲಭ್ಯವಿದೆ (ಕಾಲುವೆಯಿಂದ 4,702 ಎಕರೆಗಳು, ಬಾವಿಗಳಿಂದ 285 ಎಕರೆಗಳು, ಇತರ ಮೂಲಗಳಿಂದ 150 ಎಕರೆಗಳು). ಜೋಳ (51,940), ನೆಲಗಡಲೆ (37,005), ಹತ್ತಿ (27,835), ಗೋದಿ (7,200), ತೊಗರಿ (5,562), ಬಾಜ್ರ (4,593), ಬತ್ತ (2,942), ಕಬ್ಬು (2,583), ಹುರುಳಿ (1,320), ಹರಳು (260) ಮುಖ್ಯ ಬೆಳೆಗಳು.

ಕೊಪ್ಪಳದಿಂದ 13ಕಿಮೀ ದೂರದಲ್ಲಿರುವ ಕಿನ್ನಾಳು ಗ್ರಾಮ ಮರದ ಕುಶಲ ಕೈಗಾರಿಕೆಗಳಿಗೆ ಪ್ರಸಿದ್ಧವಾಗಿದೆ. ಇಲ್ಲಿನ ಕೆಲವು ಚಿತ್ರಗಾರ ಮನೆತನದವರು ಉತ್ತಮವಾಗಿ ರಚಿಸಿ ಬಣ್ಣಹಾಕಿದ ದೇವವಿಗ್ರಹಗಳು, ಪ್ರಾಣಿಗಳ ಬೊಂಬೆಗಳು, ಹಣ್ಣು ತರಕಾರಿಗಳ ತದ್ರೂಪ ಬೊಂಬೆಗಳು, ನಾಟಕಗಳಲ್ಲಿ ಬಳಸುವ ಕಿರೀಟ, ಮುಖವಾಡ, ತೊಟ್ಟಿಲು, ಪೀಠಗಳನ್ನು ತಯಾರಿಸುತ್ತಾರೆ. ನೇಯ್ಗೆ, ಕೊಂಬಿನಿಂದ ಬಾಚಣಿಗೆಯ ತಯಾರಿಕೆ ಈ ಮೊದಲಾದ ಉದ್ಯಮಗಳೂ ಇಲ್ಲಿವೆ.

ತುಂಗಭದ್ರಾ ನದಿಯ ಉಪನದಿಯಾದ ಹಿರೇಹಳ್ಳದ ಎಡದಂಡೆಯ ಮೇಲಿರುವ ಕೊಪ್ಪಳ ಈ ತಾಲ್ಲೂಕಿನ ಮುಖ್ಯ ಪಟ್ಟಣ. ಜನಸಂಖ್ಯೆ 56,145. ಇದು ತಾಲ್ಲೂಕಿನ ವಾಣಿಜ್ಯ, ಕೈಗಾರಿಕೆ ಮತ್ತು ವಿದ್ಯಾಕೇಂದ್ರ ಹಾಗೂ ಹುಬ್ಬಳ್ಳಿ ಗುಂತಕಲ್ಲು ರೈಲುಮಾರ್ಗದ ಒಂದು ನಿಲ್ದಾಣ. ಬಳ್ಳಾರಿ, ಕುಷ್ಟಗಿ, ಹುಬ್ಬಳ್ಳಿ, ಯಲಬುರ್ಗ, ಗಂಗಾವತಿಗಳಿಗೆ ರಸ್ತೆ ಸಂಪರ್ಕವಿದೆ. ಕೈಮಗ್ಗದ ಬಟ್ಟೆಗಳಿಗೆ ಇದು ಪ್ರಸಿದ್ಧ. ವಾರ್ಷಿಕವಾಗಿ ಜನವರಿಯಲ್ಲಿ ಗವಿಸಿದ್ದೇಶ್ವರ ಜಾತ್ರೆ ನಡೆಯುತ್ತದೆ. ಈ ಪಟ್ಟಣದ ಪಶ್ಚಿಮಕ್ಕೆ ಬೆಟ್ಟಗಳ ಸಾಲು ಹಬ್ಬಿದೆ. ಇವುಗಳಲ್ಲಿ ಪಾಲ್ಕಿ ಗುಂಡು ಅತ್ಯಂತ ಎತ್ತರವಾದ್ದು (2339'). ಪೂರ್ವಕ್ಕಿರುವ ಬೆಟ್ಟಗಳ ಸಾಲಿನಲ್ಲಿ ಗವಿಮಠವಿದೆ. ದಕ್ಷಿಣಕ್ಕೆ ಮತ್ತೊಂದು ಬೆಟ್ಟದ ಸಾಲು ಇದೆ. ಅದನ್ನು ಬಹದ್ದೂರ್ ಬಂಡೆ (1980') ಎನ್ನುತ್ತಾರೆ.

ಗವಿಮಠ ಬೆಟ್ಟದಲ್ಲಿ ನಾಲ್ಕು ಗವಿಗಳಿವೆ. ಅಲ್ಲದೆ ಪುರಾತನವಾದ ವೀರಶೈವ ಮಠ ಮತ್ತು ಜೈನಸಮಾಧಿಗಳೂ ಇವೆ. ಪಾಲ್ಕಿಗುಂಡಿನ ಪಶ್ಚಿಮಕ್ಕಿರುವ ಮಲಿಮಲ್ಲಪ್ಪನ ಬೆಟ್ಟದಲ್ಲಿ ಮೋರಿಯರ ಅಂಗಡಿ ಎಂದು ಕರೆಯುವ ಬೃಹತ್ ಶಿಲಾಯುಗೀನ ಕಲ್ಮನೆ ಸಮಾಧಿಗಳಿವೆ. ಅಶೋಕನ ಎರಡು ಲಘುಪ್ರಸ್ತರ ಧರ್ಮಶಾಸನಗಳು ಸಿಕ್ಕಿದ್ದು ಗವಿಮಠ ಮತ್ತು ಪಾಲ್ಕಿಗುಂಡು ಬೆಟ್ಟಗಳಲ್ಲಿ. ಇವುಗಳಿಂದ ಕೊಪ್ಪಳ ಕ್ರಿ.ಪೂ.3ನೆಯ ಶತಮಾನದಷ್ಟು ಪ್ರಾಚೀನವಾದ್ದೆಂದು ಊಹಿಸಬಹುದು. ಕ್ರಿ.ಶ.9ನೆಯ ಶತಮಾನದಿಂದ 13ನೆಯ ಶತಮಾನದವರೆಗಿನ ಹಲವು ಶಿಲಾಶಾಸನಗಳೂ ಅನಂತರದ ಮುಸ್ಲಿಂ ದಾಖಲೆಗಳೂ ದೊರಕಿವೆ. ಕೊಪಣಪುರವರಾಧೀಶ್ವರರಾದ ಶಿಲಾಹಾರರ ಒಂದು ಶಾಖೆಗೆ ಇದು ರಾಜಧಾನಿಯಾಗಿದ್ದಿರಬಹುದು. ಗಂಗ ಮತ್ತು ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಕೊಪ್ಪಳ ಮುಖ್ಯ ಕೇಂದ್ರವಾಗಿದ್ದಿರಲೂಬಹುದು. ಇದನ್ನು ಶಾಸನ ಮತ್ತು ಸಾಹಿತ್ಯಗಳಲ್ಲಿ ಕೊಪಣ, ಕುಪಣ, ಕುಪಿನ ಎಂದು ಕರೆದಿರುವುದಲ್ಲದೆ, ಆದಿತೀರ್ಥ, ಮಹಾತೀರ್ಥ,ವಿದಿತ ಮಹಾ ಕೊಪಣನಗರ ಮುಂತಾಗಿ ಬಣ್ಣಿಸಲಾಗಿದೆ. ಒಂದು ಕಾಲದಲ್ಲಿ ಪ್ರಸಿದ್ಧ ಜೈನಕ್ಷೇತ್ರವಾಗಿತ್ತು. ಇಲ್ಲಿ 722 ಬಸದಿಗಳೂ 24 ಜೈನಸಂಘಗಳೂ ಇದ್ದುವೆಂದು ಹೇಳಲಾಗಿದೆ.ಇಲ್ಲಿ ಅನೇಕ ಜೈನಶಾಸನಗಳೂ ದೊರೆತಿವೆ.

ಇತಿಹಾಸಪ್ರಸಿದ್ಧವಾದ ಕೊಪ್ಪಳದ ಕೋಟೆಯನ್ನು ಕಟ್ಟಿದವರು ಯಾರೆಂಬುದು ತಿಳಿದಿಲ್ಲ. ಟಿಪ್ಪುಸುಲ್ತಾನ 1786ರಲ್ಲಿ ಇದನ್ನು ವಶಪಡಿಸಿಕೊಂಡು, ಫ್ರೆಂಚ್ ಶಿಲ್ಪಿಗಳ ನೆರವಿನಿಂದ ಇನ್ನೂ ಭದ್ರ ಪಡಿಸಿದನೆಂದು ತಿಳಿದುಬರುತ್ತದೆ. ಕಡಿದಾದ ಮೆಟ್ಟಿಲುಗಳನ್ನೊಳ ಗೊಂಡಿದೆ. ದಕ್ಷಿಣ ಭಾರತದ ದುರ್ಗಮ ಕೋಟೆಗಳಲ್ಲಿ ಕೊಪ್ಪಳ ಕೋಟೆಯೂ ಒಂದು. ಈ ಕೋಟೆಯನ್ನು 1790ರಲ್ಲಿ ಇಂಗ್ಲಿಷ್ ಮತ್ತು ನಿಜಾಮಿ ಪಡೆಗಳು ಸತತವಾಗಿ ಮುತ್ತಿಗೆ ಹಾಕಿದ್ದುಂಟು. 1858ರಲ್ಲಿ ಈ ದುರ್ಗ ಮುಂಡರಗಿ ಭೀಮರಾಯನ ವಶದಲ್ಲಿತ್ತು. 1949ರ ವರೆಗೆ ಕೊಪ್ಪಳ ನವಾಬ್ ಸಾಲಾರ್‌ಜಂಗನ ಜಹಗೀರಿಯಾಗಿತ್ತು. (ಜೆ.ಆರ್.ಪಿ.,ಎಚ್.ಆರ್.ಆರ್.ಬಿ.)

ಕೊಪ್ಪಳ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮುಖ್ಯ ಪಾತ್ರವಹಿಸಿತ್ತು. ಸಂಗ್ರಾಮದ ಜ್ವಾಲೆ 1858ರಲ್ಲಿ ಮುಂಡರಗಿ ಭೀಮರಾಯ (ನೋಡಿ) ಹಾಗೂ ಹಮ್ಮಿಗೆ ಕೆಂಚನಗೌಡ ಇವರ ಹೋರಾಟದಿಂದಲೇ ಪ್ರಾರಂಭವಾಯಿತೆನ್ನಬಹುದು. ಹೈದರಾಬಾದು ಕರ್ನಾಟಕದಲ್ಲಿ ಕೊಪ್ಪಳ ಭಾಗದಲ್ಲಿಯೇ ಮೊದಲಿಗೆ ರಾಜಕೀಯ ಚಟುವಟಿಕೆಗಳು ಕಂಡುಬಂದವು. ಬಹಳ ಮೊದಲೇ ಕೀರ್ತನಕೇಸರಿ ಜಯರಾಮಾಚಾರ್ಯರು ಪುರಾಣದ ಕಥೆಗಳಿಗೆ ರಾಜಕೀಯ ರಂಗು ಕೊಟ್ಟು ಸ್ಫೂರ್ತಿ ಹುಟ್ಟುವಂತೆ ಸ್ವಚ್ಛಂದ ಶೈಲಿಯಲ್ಲಿ ಕೀರ್ತನಗಳನ್ನು ಹೇಳತೊಡಗಿ ಕರ್ನಾಟಕದಲ್ಲೆಲ್ಲ ಅಸಹಕಾರ, ಕಾಯಿದೆ ಭಂಗ, ಖಾದಿ ಪ್ರಚಾರ, ನಿಧಿಸಂಗ್ರಹಗಳಿಗಾಗಿ ಅದನ್ನು ಬಳಸಿಕೊಡರು. ಪುಟ್ಟಾಭಟ್ಟ ಜಹಗೀರದಾರ ಮತ್ತು ಹೊಸಪೇಟೆಯ ಚಕ್ರಪಾಣಿ ಆಚಾರ್ಯರು ಈ ಭಾಗದಲ್ಲಿ ಖಾದಿ ಪ್ರಚಾರ ಮಾಡಿದರು.

ಇಲ್ಲಿಯವರಾದ ಬಸವಂತರಾವ್ ಕಾಟರಹಳ್ಳಿ ಮತ್ತು ಹಿರೇಮಠ ಅವರು ಹೈದರಾಬಾದಿನಲ್ಲಿ ಪೋಲಿಸರ ಕಣ್ಣುತಪ್ಪಿಸಿ ರಾಷ್ಟ್ರಧ್ವಜ ಹಾರಿಸಿದರು. 1928ರಷ್ಟು ಮುಂಚೆಯೇ ಕಾಂಗ್ರೆಸ್ಸನ್ನು ಸೇರಿದವರಲ್ಲಿ ಪ್ರಮುಖರೆಂದರೆ ಕೊಪ್ಪಳದವರಾದ ಎಚ್.ಕೊಟ್ರಪ್ಪ, ಹಂಪಿ ನರಸಿಂಗರಾವ್ ಮತ್ತು ಸಿರೂರು ವೀರಭದ್ರಪ್ಪನವರು. ನಿಜಾಮ್ ಮತ್ತು ಬ್ರಿಟಿಷ್ ಸರ್ಕಾರ ಇವರಿಗೆ ಬಹಳ ತೊಂದರೆ ಕೊಟ್ಟಿತ್ತು. 1938ರಲ್ಲಿ ಹೈದರಾಬಾದಿನಲ್ಲಿ ನಡೆದ ವಂದೇ ಮಾತರಂ ವಿದ್ಯಾರ್ಥಿ ಆಂದೋಲನದಲ್ಲಿ ಮತ್ತು 1941ರಲ್ಲಿ ನಡೆದ ವೈಯಕ್ತಿಕ ಸತ್ಯಾಗ್ರಹದಲ್ಲಿ ಕೊಪ್ಪಳದ ವಿದ್ಯಾರ್ಥಿ ಮುಖಂಡ ಇಟಗಿ ವಿರೂಪಾಕ್ಷಯ್ಯನವರ ನೇತೃತ್ವದಲ್ಲಿ ಅನೇಕರು ಸೆರೆಮನೆ ಸೇರಿದರು. ಈ ಭಾಗದಲ್ಲಿದ್ದ ಕುಕನೂರಿನ ವಿದ್ಯಾವಂತ ಗುರುಕುಲ ಅದರ ಸಂಸ್ಥಾಪಕರಾದ ರಾಘವೇಂದ್ರರಾವ್ ದೇಸಾಯಿ ಅವರ ಮುಂಧೋರಣೆಯಿಂದ ರಾಜಕೀಯ ಜಾಗೃತಿಯಲ್ಲಿ ಬಹಳ ಮಹತ್ವದ ಪಾತ್ರ ವಹಿಸಿತು. ಈ ಹೊತ್ತಿಗೆ ನಗರದ ಪ್ರಮುಖ ವಕೀಲರನೇಕರು ರಾಜಕೀಯದಲ್ಲಿ ದುಮುಕಿದರು. ಹಳ್ಳಿಹಳ್ಳಿಗಳಲ್ಲಿ ವಾಚನಾಲಯಗಳು ಸ್ಥಾಪನೆಯಾದವು. ಚಲೇಜಾವ್ ಚಳವಳಿಯಿಂದಾರಂಭಿಸಿ ಸ್ವಾತಂತ್ರ್ಯದವರೆಗೆ ಈ ಭಾಗದಲ್ಲಿ ಆದ ಹೆಚ್ಚಿನ ಜಾಗೃತಿ ಮುಖಂಡರಾದ ಜನಾರ್ದನರಾವ್ ದೇಸಾಯಿ (ವಕೀಲರು), ಪ್ರಾಣೇಶಾಚಾರ್ ಮುಂತಾದವರ ಲಕ್ಷ್ಯವನ್ನು ಸೆಳೆಯಿತು. ತಂಡತಂಡವಾಗಿ ಸತ್ಯಾಗ್ರಹಿಗಳು ಕೊಪ್ಪಳಕ್ಕೆ ಬಂದು ಸೆರೆಯಾದರು. ಭಾರತ ಸ್ವತಂತ್ರವಾದರೂ ಇನ್ನೂ ಜಾಗೀರಾಗಿ ಉಳಿದಿದ್ದ ಕೊಪ್ಪಳ ಭಾಗದಲ್ಲಿ ಅನೇಕ ಕಡೆ ಜನರು ರಾಷ್ಟ್ರಧ್ವಜವನ್ನು ಹಾರಿಸಿ ಸ್ವಾತಂತ್ರ್ಯ ಘೋಷಿಸಿ ಮತ್ತೆ ಸೆರೆಮನೆಗೆ ಹೋದರು. ಈ ಚಳವಳಿಯೇ ಪ್ರಬಲವಾಗಿ ಹೈದರಾಬಾದ್ ಸ್ವಾತಂತ್ರ್ಯಾಂದೋಳನದ ಸ್ವರೂಪ ತಳೆಯಿತು. ಚಳವಳಿ ಹೆಚ್ಚಿದಂತೆ ನಿಜಾಮರ ದಬ್ಬಾಳಿಕೆ ಹೆಚ್ಚಾದಾಗ ಕೊಪ್ಪಳ ಭಾಗದಿಂದ ಜೇಲು ಸೇರಿದ ಬೆಣಕಲ್ ಭೀಮಸೇನರಾವ್ ಎಂಬ ತರುಣ ಸತ್ಯಾಗ್ರಹಿ ಗುಲ್ಬರ್ಗ ಜೈಲಿನಲ್ಲಿ ನಡೆದ ಲಾಠಿ ಪ್ರಹಾರದಲ್ಲಿ ಮೃತನಾದ. ಜನ ರೊಚ್ಚಿಗೆದ್ದರು. ಗದಗಿನಲ್ಲಿ ಪ್ರಾದೇಶಿಕ ಸ್ಟೇಟ್ ಕಾಂಗ್ರೆಸ್ ಕೇಂದ್ರವನ್ನು ತೆರೆದರು. ನಿರಾಶ್ರಿತರಾಗಿ ಹೊರಬರುವ ಕುಟುಂಬಗಳ ವ್ಯವಸ್ಥೆ ಮಾಡಬೇಕಾಯಿತು. ಕೊಪ್ಪಳದ ಗಡಿಯ ಸುತ್ತ ಕಾಂಗ್ರೆಸಿನ ಕಾರ್ಯಕರ್ತರ ಸಶಸ್ತ್ರ ಶಿಬಿರಗಳು ಏರ್ಪಟ್ಟವು. ನಿಜಾಮರ ಪೊಲೀಸು, ಸೈನ್ಯ ಮತ್ತು ರಜಾಕಾರರ ವಿರುದ್ಧ ದಾಳಿ, ಕಚೇರಿಗಳ ನಾಶ ಮೊದಲಾದವು ನಡೆದವು. ಗಡಿಭಾಗದ ಅನೇಕ ಹಳ್ಳಿಗಳು ಸಂಪೂರ್ಣವಾಗಿ ಈ ಕಾರ್ಯಕರ್ತರ ಅಧೀನವಾದವು. ಹೀಗೆ ನಿಜಾಮರ ಸತ್ತೆಯನ್ನು ನಿಷ್ಕ್ರಿಯೆಗೊಳಿಸುವ ಆಂದೋಲನ ತೀವ್ರಗೊಂಡಾಗ ಭಾರತ ಸರ್ಕಾರದಿಂದ ಪೊಲೀಸ್ ಕಾರ್ಯಾಚರಣೆ ನಡೆದು ಹೈದರಾಬಾದಿನೊಂದಿಗೆ ಕೊಪ್ಪಳವೂ ಸ್ವತಂತ್ರವಾಯಿತು. (ಜಿ.ಆರ್.ಪಿ.)

**ಕೊರಟಗೆರೆ** : ತುಮಕೂರು ಜಿಲ್ಲೆಯ ಮಧುಗಿರಿ ಉಪವಿಭಾಗಕ್ಕೆ ಸೇರಿದ ತಾಲ್ಲೂಕು ಮತ್ತು ಅದರ ಕೇಂದ್ರ. ದಕ್ಷಿಣಕ್ಕೆ ತುಮಕೂರು, ಪಶ್ಚಿಮ ಮತ್ತು ಉತ್ತರಕ್ಕೆ ಶಿರಾ ಮತ್ತು ಮಧುಗಿರಿ ತಾಲ್ಲೂಕುಗಳು ಮತ್ತು ಪೂರ್ವಕ್ಕೆ ಕೋಲಾರ ಜಿಲ್ಲೆ ಸುತ್ತುವರಿದಿವೆ. ವಿಸ್ತೀರ್ಣ 648.1ಚ.ಕಿಮೀ. ಜನಸಂಖ್ಯೆ 1,60,669. 251 ಗ್ರಾಮಗಳಿವೆ. ಕಸಬ, ಚನ್ನರಾಯನದುರ್ಗ, ಹೊಳವನಹಳ್ಳಿ ಮತ್ತು ಕೋಳಾಲ ಹೋಬಳಿಗಳು.

ತಾಲ್ಲೂಕಿನ ಬಹು ಭಾಗ ಕಣಶಿಲೆಯ ಬೆಟ್ಟಗುಡ್ಡಗಳಿಂದಲೂ ಅವುಗಳ ನಡುವೆ ತಗ್ಗಿನ ಕಣಿವೆಗಳಿಂದಲೂ ಕೂಡಿದ ಪ್ರದೇಶ. 1138ಮೀ. ಎತ್ತರವಿರುವ ಚನ್ನರಾಯನದುರ್ಗ, 879ಮೀ. ಇರುವ ಕೊರಟಗಿರಿ ಈ ತಾಲ್ಲೂಕಿನಲ್ಲಿವೆ. ಚನ್ನರಾಯನದುರ್ಗದಲ್ಲಿ ಸುವರ್ಣಮುಖಿ ನದಿ ಹುಟ್ಟಿ ತಾಲ್ಲೂಕಿನಲ್ಲಿ 24ಕಿಮೀ ದೂರ ಹರಿದು ರಾಮಪುರದ ಹತ್ತಿರ ಜಯಮಂಗಲಿ ನದಿಯನ್ನು ಸೇರುತ್ತದೆ. ಈ ನದಿಗೆ ಅಡ್ಡಗಟ್ಟೆ ಹಾಕಿ ಚೋರನ ಕಣಿವೆ ಜಲಾಶಯವನ್ನು ನಿರ್ಮಿಸಲಾಗಿದೆ. ದೇವರಾಯನ ದುರ್ಗದಿಂದ ಹರಿಯುವ ಗರುಡಾಚಲ ತೊರೆ ಈ ತಾಲ್ಲೂಕಿನಲ್ಲಿ ಹರಿದು ಹೊಳವನಹಳ್ಳಿಯ ಬಳಿ ಜಯಮಂಗಲಿ ನದಿಯನ್ನು ಸೇರುತ್ತದೆ.

ವರ್ಷಕ್ಕೆ ಸರಾಸರಿ 594.27ಮಿಮೀ. ಮಳೆಯಾಗುತ್ತದೆ. ಆಲ, ಹುಣಿಸೆ, ತೇಗ, ದೂಪ, ಹೊನ್ನೆ ಮರ ಇಲ್ಲಿನ ಅರಣ್ಯೋತ್ಪನ್ನಗಳು, ಮಳೆ ಕಡಿಮೆಯಾಗಿದ್ದರಿಂದ ಕೆರೆ ಮತ್ತು ನೀರಾವರಿ ಬಾವಿಗಳ ಮೇಲೆ ಅವಲಂಬನೆ ಹೆಚ್ಚು. ರಾಗಿ, ಜೋಳ, ಬತ್ತ, ನೆಲಗಡಲೆ, ಕಬ್ಬು, ಮೆಣಸಿನಕಾಯಿ ಮತ್ತು ದ್ವಿದಳಧಾನ್ಯ ತಾಲ್ಲೂಕಿನ ಮುಖ್ಯಬೆಳೆಗಳು.



ಕೊರಟಗೆರೆ ಬೆಟ್ಟ

ಅಗ್ರಹಾರ, ಅಕ್ಕಿರಾಮಪುರ, ಬೂದಗಾವಿ, ಹೊಳವನಹಳ್ಳಿ, ಕ್ಯಾಮೇನಹಳ್ಳಿ ಮತ್ತು ತುಂಬಡಿ ಇವು ಕೊರಟಗೆರೆ ತಾಲ್ಲೂಕಿನ ಮುಖ್ಯ ಗ್ರಾಮಗಳು. ಅಗ್ರಹಾರ ಸಾಂಪ್ರದಾಯಿಕ ವಿದ್ಯಾಕೇಂದ್ರವಾಗಿದ್ದು ಅಲ್ಲಿ ವೀರಭದ್ರ ದೇವಾಲಯವಿದೆ. ಅಕ್ಕಿರಾಮಪುರದಲ್ಲಿ ಹೈದರನ ಕಾಲದಲ್ಲಿ ಪುನರ್ನಿರ್ಮಾಣ ಮಾಡಲಾದ ವೆಂಕಟರಮಣ ದೇವಾಲಯವಿದೆ. ಬೂದಗಾವಿಯಲ್ಲಿ ಸಿದ್ಧರ ಬೆಟ್ಟವಿದ್ದು ಅಲ್ಲಿ ಗೋಸಲ ಸಿದ್ಧೇಶ್ವರಸ್ವಾಮಿಯ ಸಮಾಧಿ ಇದೆ. ಇಲ್ಲಿಯ ಗುಹಾದೇವಾಲಯದ ಬಳಿ ಇರುವ ಬುಗ್ಗೆ ಸುವರ್ಣಮುಖಿಯ ಮೂಲವೆನ್ನುತ್ತಾರೆ. ಕೊರಟಗೆರೆಯ ಪೂರ್ವದಲ್ಲಿ 6ಕಿಮೀ. ದೂರದಲ್ಲಿರುವ ಹೊಳವನಹಳ್ಳಿ ಜಯಮಂಗಲಿ ನದಿ ದಡದಲ್ಲಿದೆ. ಇಲ್ಲೊಂದು ರಾಘವೇಂದ್ರಸ್ವಾಮಿ ಬೃಂದಾವನವಿದೆ. ಹೊಳವನಹಳ್ಳಿಗೆ ಸಮೀಪದಲ್ಲಿರುವ ಕ್ಯಾಮೇನಹಳ್ಳಿಯಲ್ಲಿ ವರ್ಷಕ್ಕೊಮ್ಮೆ ಜರುಗುವ ಆಂಜನೇಯ ಸ್ವಾಮಿ ಜಾತ್ರೆ ಪ್ರಸಿದ್ಧವಾದದ್ದು. ತುಂಬಡಿ ಪ್ರಾಚೀನ ಗ್ರಾಮ. ಗಂಗದೊರೆ ಎರೆಯಪ್ಪನ ಆಜ್ಞೆಯ ಮೇಲೆ ನೊಳಂಬರೊಡನೆ ನಾಗತ್ತರ ಎಂಬುವನು ಇಲ್ಲಿ ಕಾದು ಮಡಿದನೆಂದು ತಿಳಿಸುವ ಒಂದು ಶಾಸನ ಇದೆ. ಇದಕ್ಕೆ ತುಂದೇವಾಡಿ ಎಂದು ಹೆಸರಿತ್ತೆಂದು ಶಾಸನದಿಂದ ತಿಳಿದುಬರುತ್ತದೆ.

ತಾಲ್ಲೂಕಿನ ಕೇಂದ್ರವಾದ ಕೊರಟಗೆರೆ, ಮಧುಗಿರಿ ರಸ್ತೆಯಲ್ಲಿ ತುಮಕೂರಿನಿಂದ 20ಕಿಮೀ ಈಶಾನ್ಯಕ್ಕೆ ಸುವರ್ಣಮುಖಿ ನದಿ ಎಡದಂಡೆಯ ಮೇಲಿದೆ. ಜನಸಂಖ್ಯೆ 13638. ಇಲ್ಲಿಂದ ತುಮಕೂರು, ಮಧುಗಿರಿ, ಗುಬ್ಬಿ, ಶಿರಾ ಇವುಗಳಿಗೆ ನೇರ ರಸ್ತೆಗಳಿವೆ. ಕೊರಟಗೆರೆ ಮಾವತ್ತೂರು ರಸ್ತೆ ಬೆಂಗಳೂರು - ಗುಂತಕಲ್ ರೈಲುಮಾರ್ಗದಲ್ಲಿರುವ ತೊಂಡೆಬಾವಿಗೂ ಹೋಗುತ್ತದೆ.

ಕೊರಟಗೆರೆಯಲ್ಲಿ ಹತ್ತಿ ಉಣ್ಣೆ ನೇಯ್ಗೆಯವರ, ಬಿದಿರು ಕೆಲಸಗಾರರ ಮತ್ತು ಕುಂಬಾರರ ಸಹಕಾರ ಸಂಘಗಳಿವೆ.

ಹೊಳವನಹಳ್ಳಿಯ ಪಾಳೆಯಗಾರನೊಬ್ಬ ಕೊರಟಗೆರೆಯ ಕೋಟೆ ಮತ್ತು ಪೇಟೆಯನ್ನು ಸ್ಥಾಪಿಸಿ, ಪಾಳೆಯಪಟ್ಟಿನ ರಾಜಧಾನಿ ಮಾಡಿಕೊಂಡಿದ್ದ. ಕೋಟೆಯನ್ನು ಟಿಪ್ಪುಸುಲ್ತಾನ್ ಕೆಡವಿಸಿದ್ದರಿಂದ ಅದು ಹಾಳಾಗಿದೆ. ಊರಿನಲ್ಲಿ ಗೋಕುಲದ ಆಂಜನೇಯ ದೇವಾಲಯವುಂಟು. ಅದರ ಬಳಿ ಪಾಳೆಯಗಾರರ ಕುಲದ ಬಯ್ಯಮ್ಮ ಎಂಬುವಳು ಕಟ್ಟಿಸಿದ್ದೆನ್ನುವ ಒಂದು ಕೊಳವಿದೆ. ಹಿಂದೆ ಈ ಊರಿನಲ್ಲಿ ಗಾಜಿನ ಬಳೆ ಕೈಗಾರಿಕೆ ಇತ್ತು.

ಸಮೀಪದ ಕೊರಟಗೆರೆ ಬೆಟ್ಟದ ಮೇಲೆ ಕೋಟೆಯ ಅವಶೇಷಗಳನ್ನು ಕಾಣಬಹುದು. ಇದರ ಒಂದು ಬಾಗಿಲ ಬಳಿ ಹಿಂದೆ ಟಂಕಸಾಲೆ ಇತ್ತೆಂದು ಹೇಳಲಾಗಿದೆ. ಬೆಟ್ಟದ ಮಧ್ಯ ಎತ್ತರದಲ್ಲಿರುವುದು ಗಂಗಾಧರೇಶ್ವರ ದೇವಾಲಯ. ಬೆಟ್ಟದ ನೆತ್ತಿಯ ಮೇಲೆ ಒಂದು ಬಸವಣ್ಣನ ಗುಡಿ ಇದೆ. *

**ಕೊರವಂಜಿ :** ನಗೆ ಲೇಖನಗಳಿಗೇ ಮೀಸಲಾಗಿದ್ದ ಕನ್ನಡ ಮಾಸಪತ್ರಿಕೆ. ಸ್ಥಾಪನೆ 1942ರಲ್ಲಿ. ಪ್ರತಿ ತಿಂಗಳೂ ಒಂದನೆಯ ತಾರೀಖಿನಂದು ಪ್ರಕಟವಾಗುತ್ತಿತ್ತು. ಸಂಪಾದಕರು ರಾ.ಶಿ.(ಎಂ.ಶಿವರಾಂ). ಸಂಪಾದನ ಕಾರ್ಯದಲ್ಲಿ ನಾ.ಕಸ್ತೂರಿಯವರ ಸಹಕಾರ ವಿತ್ತು. ಕೊರವಂಜಿಯ ಮೊದಲ ಸಂಚಿಕೆ ಚಿತ್ರಭಾನು ಸಂವತ್ಸರದ ಉಗಾದಿ ಯಂದು ಹೊರಬಿತ್ತು. ವಾರ್ತೆ ಮತ್ತು ಘಟನೆಗಳನ್ನು ತಿಳಿಹಾಸ್ಯದ ಹಿನ್ನೆಲೆಯಲ್ಲಿ ಕಣಿ ಹೇಳುವಂತೆ ವರದಿ ಮಾಡುವುದು ಈ ಪತ್ರಿಕೆಯ ಗುರಿಯಾಗಿತ್ತು. ಕಣಿ ಹೇಳಲು ಕನ್ನಡ ಸಾಹಿತ್ಯದ ನಾನಾ ಪ್ರಕಾರಗಳನ್ನು ಬಳಸಿ ಕೊಂಡದ್ದೇ ಅಲ್ಲದೆ ಪ್ರಪಂಚದ ಇತರ ಭಾಷಾ ಸಾಹಿತ್ಯದಲ್ಲಿ ನೂತನವಾಗಿ ಬಂದ ಪ್ರಕಾರಗಳನ್ನೂ ಕನ್ನಡಕ್ಕೆ ಅಳವಡಿಸಿ ಕೊಂಡಿತು. ಪಂಚ ಪಂಕ್ತಿ ಲಿಮರಿಕ್ಸ್ ಅಣಕವಾಡು, ಲಘುಪದ್ಯ, ಹರಟೆ, ಕಿರುನಾಟಕ ಮುಂತಾದ ಹೊಸ ಪ್ರಕಾರಗಳನ್ನು ಒದಗಿಸಿಕೊಟ್ಟಿತು.




ತಿಳಿವಿಗಾಗಲಿ, ತಿಳಿ ಹಾಸ್ಯಕ್ಕಾಗಲಿ ಇರಬೇಕಾದ ದೃಷ್ಟಿಯನ್ನು ಕನ್ನಡಿಗರಲ್ಲಿ ಕೊರವಂಜಿ ಪ್ರಚಾರ ಮಾಡಿತು. ವಿವಿಧ ಹಂತಗಳ ಜನರ ಮನೋಧರ್ಮಕ್ಕನುಗುಣವಾಗಿ ರಂಜನೀಯ ಲೇಖನಗಳು ಕೊರವಂಜಿಯಲ್ಲಿ ಪ್ರಕಟವಾಗುತ್ತಿದ್ದವು. ಇದು 25 ವರ್ಷಗಳ ಕಾಲ ನಡೆಯಿತು.

ದಾಶರಥಿದೀಕ್ಷಿತ್, ಟಿ.ಸುನಂದಮ್ಮ, ರಾಮಿ, ಕೇಫ, ಅ.ರಾ.ಸೇ., ಇವರ ಜೊತೆಗೆ ಶಿವರಾಮಕಾರಂತ, ಶ್ರೀರಂಗ, ಜಿ.ಪಿ.ರಾಜರತ್ನಂ ಮೊದಲಾದ ಹಿರಿಯರ ಲೇಖನಗಳಿಂದಲೂ ಆರ್.ಕೆ.ಲಕ್ಷ್ಮಣ್ ಮೊದಲಾದವರ ವ್ಯಂಗ್ಯಚಿತ್ರಗಳಿಂದಲೂ ಕೊರವಂಜಿ ರಂಜಿಸಿತು.

ಕೊರವಂಜಿ ಪ್ರಪಂಚದ ಇತರ ಭಾಷೆಗಳ ಹಾಸ್ಯ ಸಾಹಿತ್ಯಕ್ಕೆ ಸಮನಾಗಿ, ಕೆಲವು ವೇಳೆ ಅವುಗಳನ್ನು ಮೀರಿಸಬಲ್ಲ ಔನ್ನತ್ಯವನ್ನು ಸಾಧಿಸಿತ್ತು. ಬೆಳ್ಳಿಯ ಹಬ್ಬವನ್ನು ಆಚರಿಸುವ ಬದಲು ಪತ್ರಿಕೆ ಆರ್ಥಿಕ ಮುಗ್ಗಟ್ಟಿನಿಂದ ನಿಂತುಹೋಯಿತು (1967). ಪತ್ರಿಕೆ ನಿಂತುಹೋದರೂ ಕೊರವಂಜಿ ಸೃಷ್ಟಿಸಿದ ಹಾಸ್ಯ ಲೇಖನ ಪ್ರಕಾರ ಕನ್ನಡ ಸಾಹಿತ್ಯದಲ್ಲಿ ಬೆಳೆದುಕೊಂಡು ಬರುತ್ತಿದೆ (ನೋಡಿ:ಶಿವರಾಂ,ಎಂ). (ಎಂ.ಎಸ್.)

**ಕೊರ್ವ :** ಕೃಷ್ಣಾ ನದಿ ಸುತ್ತುವರಿದಿರುವ ಒಂದು ಸುಂದರ ದ್ವೀಪ ಮತ್ತು ಪುಣ್ಯಕ್ಷೇತ್ರ. ರಾಯಚೂರು ತಾಲ್ಲೂಕಿನಲ್ಲಿ ರಾಯಚೂರು ನಗರಕ್ಕೆ ಈಶಾನ್ಯದಲ್ಲಿ 29ಕಿಮೀ ದೂರದಲ್ಲಿದೆ. ನಾರದಮಹರ್ಷಿ ಈ ಸ್ಥಳದಲ್ಲಿ ಪ್ರಾರ್ಥನೆ ಸಲ್ಲಿಸಿದ್ದರಿಂದ ಇದನ್ನು ನಾರದಗಡ್ಡೆ ಎಂತಲೂ ಕರೆಯುವರು. ನಾರದ ದೇವಾಲಯವೂ ಒಂದು ವೀರಶೈವ ಮಠವೂ ವೈರಾಗ್ಯ ಚೆನ್ನಬಸವಸ್ವಾಮಿಯ ಸಮಾಧಿಯೂ ಶಿವಯೋಗ ಪೀಠ ಮತ್ತು ಬಸವಣ್ಣ ದೇವಾಲಯವೂ ಇವೆ. ಪ್ರತಿವರ್ಷ ಫಾಲ್ಗುಣದಲ್ಲಿ ನಡೆಯುವ ಜಾತ್ರೆಗೆ ಸಾವಿರಾರು ಮಂದಿ ಸೇರುತ್ತಾರೆ. ದನದ ಜಾತ್ರೆಯೂ ನಡೆಯುತ್ತದೆ. ಕಂಬಳಿ, ಹಿತ್ತಾಳೆ ಪಾತ್ರೆಗಳ ಮತ್ತು ಎತ್ತಿನ ಬಂಡಿ ಮತ್ತು ಎತ್ತುಗಳನ್ನು ಕೊಳ್ಳುವ - ಮಾರುವ ವ್ಯಾಪಾರ ನಡೆಯುತ್ತದೆ.

ನಾರದಗಡ್ಡೆಗೆ ಹತ್ತಿರವಿರುವ ಕೂರ್ಮಗಡ್ಡೆಯೂ ಕೃಷ್ಣಾನದಿ ಸುತ್ತುವರಿದಿರುವ ಒಂದು ದ್ವೀಪ. ಇದನ್ನು ಕುರುಮ ಕ್ಷೇತ್ರವೆಂದೂ ಕರೆಯುತ್ತಾರೆ. ಇಲ್ಲಿ ದತ್ತಾತ್ರೇಯ ಪೀಠ ಮತ್ತು ಶ್ರೀಪಾದವಲ್ಲಭ ಸ್ವಾಮಿಯ ಸಮಾಧಿ ಇವೆ. ದತ್ತಾತ್ರೇಯನ ಮೂಲ ಸ್ಥಾನವೆಂದು ಈ ಸ್ಥಳವನ್ನು ಪರಿಗಣಿಸಿರುವುದರಿಂದ ಇದೊಂದು ಪುಣ್ಯಕ್ಷೇತ್ರವಾಗಿದೆ. ಇಲ್ಲಿರುವ ದತ್ತಾತ್ರೇಯ ಮಂದಿರಕ್ಕೆ ವರ್ಷವಿಡೀ ಯಾತ್ರಿಕರು ಬರುತ್ತಾರೆ. *

**ಕೊಲ್ಲೂರು :** ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕಿನಲ್ಲಿ ಕಸಬೆಯಿಂದ ಈಶಾನ್ಯಕ್ಕೆ 42ಕಿಮೀ ದೂರದಲ್ಲಿರುವ ಒಂದು ಊರು. ಕರ್ನಾಟಕದ ಪ್ರಸಿದ್ಧ ಯಾತ್ರಾಸ್ಥಳಗಳಲ್ಲಿ ಒಂದು.

ಕುಂದಾಪುರ, ಬೈಂದೂರು, ನಾಗೋಡಿಗಳಿಂದ ಬಸ್ ಸೌಕರ್ಯವಿರುವ ಈ ಊರಿಗೆ ಕರ್ನಾಟಕ ಮತ್ತು ಕೇರಳದಿಂದ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರು ಬರುತ್ತಾರೆ. ಇಲ್ಲಿರುವ ಮೂಕಾಂಬಿಕೆಯ ಸ್ವಯಂಭು ಉದ್ಭವಲಿಂಗ 28ನೆಯ ದ್ವಾಪರಯುಗದಲ್ಲಿ ವೈವಸ್ವತ ಮನ್ವಂತರದಲ್ಲಿ ಕೋಲಮುನಿಯ ಪ್ರಾರ್ಥನೆಯಿಂದ ಪ್ರಕಟವಾಯಿತೆಂದೂ ಈ ಲಿಂಗದಲ್ಲಿ ಪರಾಶಕ್ತಿ ಪರಶಿವನೊಡಗೂಡಿ ಸದಾ ಸನ್ನಿಹಿತಳಾಗಿದ್ದುಕೊಂಡು ಭಕ್ತಜನರನ್ನು ಅನುಗ್ರಹಿಸುತ್ತ ಇರುವಳೆಂದೂ ಮೂಕಾಂಬಿಕೆ ಮೂಕಾಸುರನನ್ನು ಸಂಹರಿಸಿದಳೆಂದೂ ಆ ದೇವಿ ಮಹಾಕಾಳಿ, ಮಹಾಲಕ್ಷ್ಮಿ ಮತ್ತು ಮಹಾಸರಸ್ವತಿಯರ ತ್ರಿಗುಣಸಮನ್ವಿತೆಯಾಗಿರುವಳೆಂದೂ ಪುರಾಣ ಪ್ರಸಿದ್ಧವಾಗಿದೆ. ಶಂಕರಾಚಾರ್ಯರು ಇಲ್ಲಿಗೆ ಬಂದಿದ್ದ ಉಲ್ಲೇಖವಿದೆ.

ಕೊಲ್ಲೂರಿನಿಂದ ಸುಮಾರು 22ಕಿಮೀ ದೂರದಲ್ಲಿ ಕೊಡಚಾದ್ರಿ (ನೋಡಿ) ಇದೆ. ಇಲ್ಲಿ ಹುಟ್ಟುವ ಸೌಪರ್ಣಿಕಾ ನದಿ ಕೊಲ್ಲೂರ ದೇವಾಲಯದ ಸಮೀಪವೇ ಹರಿಯುತ್ತದೆ. ಸುಪರ್ಣನೆಂಬ ಗರುಡ ಈ ನದಿಯ ತೀರದಲ್ಲಿ ತಪಸ್ಸನ್ನಾಚರಿಸಿ ಸಿದ್ಧಿಪಡೆದನೆನ್ನುವುದರಿಂದ ಇದಕ್ಕೆ ಈ ಹೆಸರು ಬಂದಿದೆ.



ಮೂಕಾಂಬಿಕಾ ದೇವಾಲಯ

ಈಗಿರುವ ಶಿಲಾದೇವಾಲಯವನ್ನು ಕೊಲ್ಲೂರಿನಿಂದ ಸು.5ಕಿಮೀ ದೂರದ ಹಾಲ್ಕಲ್ ಎಂಬಲ್ಲಿ ಕೋಟೆ ಕಟ್ಟಿಕೊಂಡಿದ್ದ ಹೊನ್ನಕಂಬಳಿಯ ಪಾಳೆಯಗಾರ ಬಂಕಿ ಅರಸರ ವಂಶದ ಸಂಕಣ್ಣ ಸಾಮಂತರ ಅಳಿಯ ವೆಂಕಣ್ಣ ಸಾಮಂತ ಶಾ.ಶ. 1140ರಲ್ಲಿ (1218) ಕಟ್ಟಿಸಿದನೆಂದು ತಾಳೆಯೋಲೆಯ ಪುಸ್ತಕಗಳಲ್ಲಿ ಉಲ್ಲೇಖವಿದ್ದರೂ ಇದರ ಕಾಲ ಅಸ್ಪಷ್ಟ. ಕೆಳದಿಯ ವೆಂಕಟಾದ್ರಿನಾಯಕ ಮತ್ತು ವಿಜಯನಗರದ ವೀರವಿರೂಪಾಕ್ಷರಾಯ ಈ ದೇವಾಲಯದ ಪೂಜಾದಿಗಳಿಗೆ ಭೂಮಿದತ್ತಿ ಬಿಟ್ಟಿರುವುದು ತಾಮ್ರ ಮತ್ತು ಶಿಲಾಶಾಸನಗಳಿಂದ ತಿಳಿದುಬರುತ್ತದೆ. ದೇವಾಲಯದಲ್ಲಿರುವ ಲೋಹದ ಪಂಚಮುಖ ಗಣೇಶ ವೈಶಿಷ್ಟ್ಯ ಪೂರ್ಣವಾದ ಸುಂದರ ವಿಗ್ರಹ. ದೇವಾಲಯದ ಸುತ್ತ ಕೆಲವು ಸಣ್ಣ ಗುಡಿಗಳೂ ಶಂಕರಾಚಾರ್ಯರು ಸ್ಥಾಪಿಸಿದರೆನ್ನುವ ಚಂದ್ರಮೌಳೀಶ್ವರ ಗುಡಿಯೂ ಇವೆ.

ಪ್ರತಿವರ್ಷ ಫಾಲ್ಗುಣ ಮಾಸದಲ್ಲಿ ಇಲ್ಲಿ ಮಹಾರಥೋತ್ಸವ ನಡೆಯುತ್ತದೆ. ಶರನ್ನವರಾತ್ರಿಯಲ್ಲಿ ವಿಶೇಷ ಉತ್ಸವಗಳು ನಡೆಯುತ್ತವೆ. ಇಲ್ಲೊಂದು ಪ್ರೌಢಶಾಲೆ ಇದೆ. (ಎಚ್.ಜಿ.)

**ಕೊಲ್ಲೂರು ನದಿ :** ಉಡುಪಿ ಜಿಲ್ಲೆಯ ಒಂದು ನದಿ. ಸೌಪರ್ಣಿಕಾ ಎಂದೂ ಹೆಸರು. ಉದ್ದ ಸು.48ಕಿಮೀ. ಪಶ್ಚಿಮಘಟ್ಟಗಳ ಕೊಡಚಾದ್ರಿ ಶಿಖರದ ಬಳಿ ಹುಟ್ಟಿ ಕುಂದಾಪುರ ತಾಲ್ಲೂಕಿನ ಉತ್ತರ ಭಾಗದಲ್ಲಿ ಪಶ್ಚಿಮಘಟ್ಟಗಳಿಂದ ಕರಾವಳಿಯ ಹತ್ತಿರದವರೆಗೆ ಪಶ್ಚಿಮಾಭಿಮುಖವಾಗಿಯೂ ಅಲ್ಲಿಂದ 15ಕಿಮೀ ದೂರ ದಕ್ಷಿಣಾಭಿಮುಖವಾಗಿ ಕರಾವಳಿಯುದ್ದಕ್ಕೂ

ಹರಿದು ಅರಬ್ಬೀಸಮುದ್ರದಿಂದ ಅನತಿದೂರದಲ್ಲಿ ಕುಂದಾಪುರದ ಬಳಿ ಗಂಗೊಳ್ಳಿ ನದಿಯನ್ನು ಸೇರುವುದು. ಈ ನದಿ ಹರಿಯುವ ಪ್ರದೇಶಗಳಲ್ಲಿ ತುಂಬ ಮಳೆ ಬೀಳುವ ಕಾರಣ ಬಹಳಷ್ಟು ನೀರಿನಿಂದ ತುಂಬಿ ಹರಿಯುವುದು. ಗಂಗೊಳ್ಳಿಪೇಟೆಗೆ 4ಕಿಮೀ ಉತ್ತರದಲ್ಲಿ ಚಕ್ರನದಿ ಎಂಬ ಇನ್ನೊಂದು ಉಪನದಿ ಕೊಲ್ಲೂರು ನದಿಯನ್ನು ಸೇರುವುದು. ಕೊಲ್ಲೂರು ನದಿ ಜಲಯಾನಕ್ಕೆ ಯೋಗ್ಯವಾಗಿದೆ. ಇದು ಗಂಗೊಳ್ಳಿ ನದಿಯನ್ನು ಸೇರುವಲ್ಲಿ ವಿಶಾಲವಾದ ಕುದುರು ಪ್ರದೇಶವನ್ನುಂಟುಮಾಡಿರುವುದು. ಕೊಲ್ಲೂರು ಮೂಕಾಂಬಿಕಾ ಕ್ಷೇತ್ರ ಈ ನದಿಯ ಸಮೀಪದಲ್ಲಿಯೆ ಇದೆ. (ಟಿ.ಪಿ.ಎಸ್.ಆರ್)

**ಕೊಳ್ಳೇಗಾಲ :** ಚಾಮರಾಜನಗರ ಜಿಲ್ಲೆಯಲ್ಲಿ ಪೂರ್ವದ ಕೊನೆಯಲ್ಲಿರುವ ತಾಲ್ಲೂಕು ಮತ್ತು ಅದರ ಮುಖ್ಯಸ್ಥಳ. ಪಶ್ಚಿಮದಲ್ಲಿ ಚಾಮರಾಜನಗರ ತಾಲ್ಲೂಕು, ಯಳಂದೂರು ಮತ್ತು ತಿರುಮಕೂಡಲು ನರಸೀಪುರ ತಾಲ್ಲೂಕುಗಳು, ಉತ್ತರದಲ್ಲಿ ಮಂಡ್ಯ ಮತ್ತು ಬೆಂಗಳೂರು ಜಿಲ್ಲೆಗಳು, ಪೂರ್ವ ಮತ್ತು ದಕ್ಷಿಣದಲ್ಲಿ ತಮಿಳುನಾಡು ಇವೆ. ತಾಲ್ಲೂಕಿನ ವಿಸ್ತೀರ್ಣ 2,787.5ಚ.ಕಿಮೀ ಜನಸಂಖ್ಯೆ 336520. ತಾಲ್ಲೂಕಿನಲ್ಲಿ ಒಟ್ಟು 125 ಗ್ರಾಮಗಳಿವೆ. ಕೊಳ್ಳೇಗಾಲ ತಾಲ್ಲೂಕು 1956ರವರೆಗೆ ಮದರಾಸು ರಾಜ್ಯದ ಕೊಯಮತ್ತೂರು ಜಿಲ್ಲೆಗೆ ಸೇರಿತ್ತು. ಆ ವರ್ಷ ರಾಜ್ಯಗಳ ಪುನರ್ವಿಂಗಡನೆಯಾದಾಗ ಮೈಸೂರು ಜಿಲ್ಲೆಗೆ ಸೇರಿತು.

ಪ್ರಾಕೃತಿಕವಾಗಿ ಕೊಳ್ಳೇಗಾಲ ತಾಲ್ಲೂಕು ಪ್ರಸ್ಥಭೂಮಿಯ ಒಂದು ಭಾಗ. ಅದರ ಆಗ್ನೇಯ ಅಂಚಿನಲ್ಲಿದೆ. ತಾಲ್ಲೂಕಿನ ಪೂರ್ವ ಮತ್ತು ದಕ್ಷಿಣ ಭಾಗಗಳಲ್ಲಿ ಪೂರ್ವಘಟ್ಟಗಳ ದಕ್ಷಿಣದ ಕವಲುಗಳು ಹರಡಿವೆ. ಪೂರ್ವದಲ್ಲಿರುವ ಬೆಟ್ಟಗಳಲ್ಲಿ ಮಹದೇಶ್ವರ ಬೆಟ್ಟ ಶ್ರೇಣಿ ಪ್ರಸಿದ್ಧವಾದುದು. ಪಶ್ಚಿಮದಲ್ಲಿ ಬಿಳಿಗಿರಿರಂಗನ ಬೆಟ್ಟದ ಶ್ರೇಣಿ ಇದೆ. ತಾಲ್ಲೂಕಿನ ವಾಯುವ್ಯ, ಉತ್ತರ ಮತ್ತು ಪೂರ್ವದ ಅಂಚುಗಳಲ್ಲಿ ಕಾವೇರಿ ನದಿ ಹರಿಯುತ್ತದೆ. ಇದೇ ಆ ಭಾಗದ ಗಡಿರೇಖೆ ಸಹ. ಕಾವೇರಿ ನದಿಯ ಗಗನಚುಕ್ಕಿ ಭರಚುಕ್ಕಿ ಜಲಪಾತಗಳು ಈ ತಾಲ್ಲೂಕಿನ ವಾಯುವ್ಯ ಭಾಗದಲ್ಲಿವೆ. ಆಗ್ನೇಯದ ಗಡಿಯಲ್ಲಿ ಪಾಲಾರ್ ಎಂಬ ಚಿಕ್ಕ ನದಿ ಇದೆ. ಚಾಮರಾಜನಗರ, ಯಳಂದೂರು ತಾಲ್ಲೂಕುಗಳಿಂದ ಬರುವ ಸುವರ್ಣಾವತಿ, ಕೊಳ್ಳೇಗಾಲದಿಂದ ಸ್ವಲ್ಪದೂರ ಪೂರ್ವದಲ್ಲಿ ಬಿಳಿಗಿರಿರಂಗನ ಬೆಟ್ಟದಿಂದ ಬರುವ ಗುಂಡ್ಲುಹೊಳೆ ಇದೆ. ಬಿಳಿಗಿರಿರಂಗನ ಬೆಟ್ಟ ಮತ್ತು ಮಹದೇಶ್ವರ ಬೆಟ್ಟಗಳ ನಡುವೆ ತಗ್ಗುಪ್ರದೇಶವಿದೆ. ಇಲ್ಲಿ ಹರಿಯುವ ಉಲಿಕೊಪ್ಪಹಳ್ಳ, ತಟಹಳ್ಳ, ಉಡುತೊರೆ ಹಳ್ಳವನ್ನು ಕೂಡಿ ಈಶಾನ್ಯಾಭಿಮುಖವಾಗಿ ಹರಿದು ಕಾವೇರಿಯನ್ನು ಸೇರುತ್ತವೆ. ಮಹದೇಶ್ವರ ಬೆಟ್ಟದಿಂದ ಗಿರ್ಲಿಗುಳಿ ಹಳ್ಳ, ಗುಳಿನಾಲಾಗಳು ಉತ್ತರಾಭಿಮುಖವಾಗಿ ಹರಿದು ಕಾವೇರಿಯನ್ನು ಸೇರುತ್ತವೆ. ಮಹದೇಶ್ವರ ಬೆಟ್ಟದ ಪೂರ್ವಭಾಗದಲ್ಲಿ ಪೂರ್ವಾಭಿಮುಖವಾಗಿ ಹರಿದು ಕಾವೇರಿಯನ್ನು ಸೇರುವ ಗುಳಿಯಾತನೂರು ಹಳ್ಳ ಮತ್ತು ಯೇಲಕ್ಕಿಯಾತು ಹಳ್ಳಗಳಿವೆ. ಆಗ್ನೇಯದಲ್ಲಿ ಮೆದುಗನಾಳ ಹಳ್ಳ ಪಾಲಾರ್ ನದಿಯನ್ನು ಸೇರುತ್ತದೆ.

ಇಲ್ಲಿಯ ವಾಯುಗುಣ ಜಿಲ್ಲೆಯ ಇತರ ಭಾಗಗಳಲ್ಲಿರುವಂತೆಯೇ. ಮಳೆಯ ವಾರ್ಷಿಕ ಸರಾಸರಿ 791.03ಮಿಮೀ. ತಾಲ್ಲೂಕಿನ ಸುಮಾರು ಅರ್ಧಭಾಗ ಕಾಡುಗಳಿಂದ ಕೂಡಿದೆ. ಬೆಟ್ಟದ ಪ್ರದೇಶಗಳಲ್ಲಿ ದಟ್ಟವಾದ ಕಾಡುಗಳಿವೆ.

ಜನರ ಮುಖ್ಯ ಕಸಬು ಕೃಷಿ. ಅಲ್ಲಲ್ಲಿ ನಿರ್ಮಿಸಿರುವ ಕೆರೆಗಳು ಅಲ್ಪ ಪ್ರಮಾಣದಲ್ಲಿ ನೀರಾವರಿ ಸೌಲಭ್ಯವನ್ನು ಒದಗಿಸುತ್ತವೆ. ಬತ್ತ, ರಾಗಿ ಮುಖ್ಯ ಬೆಳೆಗಳು. ಸ್ವಲ್ಪ ಮಟ್ಟಿಗೆ ತೋಟದ ಬೆಳೆ ಸಹ ಉಂಟು. ರೇಷ್ಮೆ ವ್ಯವಸಾಯ ಮತ್ತು ಕೈಗಾರಿಕೆ ಕೆಲವು ಭಾಗಗಳಲ್ಲಿವೆ. ಕೊಳ್ಳೇಗಾಲ ಬಿಟ್ಟರೆ ತಾಲ್ಲೂಕಿನ ಹೆಚ್ಚಿನ ಪ್ರದೇಶಗಳಿಗೆ ರಸ್ತೆಸಂಪರ್ಕ ಸಹ ಉತ್ತಮವಾಗಿಲ್ಲ. ಕೊಳ್ಳೇಗಾಲದಿಂದ ಲೊಕ್ಕನಹಳ್ಳಿ, ಬಲ್ಲೂರು ಮೂಲಕ ಸಾಗುವ ಸತ್ಯಮಂಗಲ ರಸ್ತೆ; ಹನೂರು, ಅಜ್ಜಿಪುರ ಮೂಲಕ ಹೋಗುವ ಭವಾನಿ ರಸ್ತೆ ಮುಖ್ಯವಾದುವು. ಕೊಳ್ಳೇಗಾಲದಿಂದ ಮಹದೇಶ್ವರ ಬೆಟ್ಟಕ್ಕೆ ಉತ್ತಮ ರಸ್ತೆಯಿದೆ.

ಮುಳ್ಳೂರು, ಸತ್ತೇಗಾಲ, ಸಿಂಗಾನಲ್ಲೂರು, ಹನೂರು, ಅಜ್ಜಿಪುರ, ಬಂಡಹಳ್ಳಿ, ಬಲ್ಲೂರು, ಲೊಕ್ಕನಹಳ್ಳಿ, ಕಾಡಳ್ಳಿ, ಸೆಟ್ಟಳ್ಳಿ, ತೆಲ್ಲನೂರು ಕೆಲವು ಮುಖ್ಯ ಸ್ಥಳಗಳು. ಸಿಂಗಾನಲ್ಲೂರು ಮತ್ತು ಹನೂರುಗಳಲ್ಲಿ ಸಂತೆ ನಡೆಯುತ್ತದೆ. ಸತ್ತೇಗಾಲದಲ್ಲಿ ಪ್ರಾಚೀನ ದೇವಾಲಯಗಳಿವೆ. ಬಸ್ತಿಪುರ ಐತಿಹಾಸಿಕ ಸ್ಥಳ. ಸು.480ರಲ್ಲಿ ಪೂಜ್ಯಪಾದನೆಂಬ ಜೈನಯತಿ ಇಲ್ಲಿ ಇದ್ದನೆಂದು ಪ್ರತೀತಿ. ಇಲ್ಲಿ ದೊರಕಿದ ಪ್ರಾಚೀನ ಜೈನವಿಗ್ರಹಗಳು ಈಗ ಮದರಾಸು ವಸ್ತುಸಂಗ್ರಹಾಲಯದಲ್ಲಿವೆ. ನಿಜಗುಣ ಶಿವಯೋಗಿ ಈ ತಾಲ್ಲೂಕಿನವನೆಂದು ಪ್ರತೀತಿ. ಈತ ಶಂಭುಲಿಂಗನ ಬೆಟ್ಟದ ಸುತ್ತಣ ಪ್ರದೇಶದ ಅರಸನಾಗಿದ್ದು ವಿರಕ್ತನಾದಂತೆ ಹೇಳಿಕೆ. ಮಹದೇಶ್ವರ ಬೆಟ್ಟ (ನೋಡಿ) ಪ್ರಸಿದ್ಧ ಪವಿತ್ರ ಕ್ಷೇತ್ರ. ಈಗ ಪ್ರವಾಸಿಕೇಂದ್ರವಾಗಿಯೂ ಬೆಳೆಯುತ್ತಿದೆ.

ತಾಲ್ಲೂಕಿನ ಆಡಳಿತ ಕೇಂದ್ರ ಕೊಳ್ಳೇಗಾಲ ಪಟ್ಟಣ ಮೈಸೂರಿಗೆ ಸು. 64ಕಿಮೀ ಆಗ್ನೇಯದಲ್ಲಿದೆ. ಜನಸಂಖ್ಯೆ 52450. ಇದು ರೇಷ್ಮೆಕೈಗಾರಿಕೆಯ ಕೇಂದ್ರ. ಇಲ್ಲಿಯ ಜರತಾರಿ ಬಟ್ಟೆಗಳು ಪ್ರಸಿದ್ಧವಾಗಿವೆ.

1972ರ ಆಗಸ್ಟ್ ತಿಂಗಳಲ್ಲಿ ಕೊಳ್ಳೇಗಾಲದಲ್ಲಿ ಮೈಸೂರು ಜಿಲ್ಲೆಯ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತ್ತು. *

**ಕೋಗಳಿ :** ಬಳ್ಳಾರಿ ಜಿಲ್ಲೆ ಹೂವಿನಹಡಗಲಿ ತಾಲ್ಲೂಕಿನಲ್ಲಿ ಕಸಬೆಯಿಂದ ಈಶಾನ್ಯಕ್ಕೆ ಚಿನ್ನಹಗರಿ ನದಿಯ ಬಲದಂಡೆಯಲ್ಲಿರುವ ಗ್ರಾಮ. ಇದು ಚಾರಿತ್ರಿಕ ಪ್ರಾಮುಖ್ಯವುಳ್ಳ ಸ್ಥಳ. 7ನೆಯ ಶತಮಾನದ ಮಧ್ಯಕಾಲದಿಂದ 10-12ನೆಯ ಶತಮಾನಗಳ ಅವಧಿಯಲ್ಲಿ ನೊಳಂಬವಾಡಿ - 32000 ಪ್ರಾಂತ್ಯದೊಳಗೆ ಇದ್ದ ಸುಮಾರು ಈಗಿನ ಹೂವಿನಹಡಗಲಿ ಮತ್ತು ಹರಪನಹಳ್ಳಿ ತಾಲ್ಲೂಕುಗಳನ್ನೊಳಗೊಂಡಿದ್ದ ಕೋಗಳಿ-500 ಎಂಬ ಚಿಕ್ಕ ವಿಭಾಗವೊಂದರ ಕೇಂದ್ರವಾಗಿತ್ತು. ಇಲ್ಲಿ ಮತ್ತು ಸುತ್ತಮುತ್ತಣ ಸ್ಥಳಗಳಲ್ಲಿ ಹಳೆಯ ದೇವಾಲಯಗಳು ಸಾಕಷ್ಟು ಸಂಖ್ಯೆಯಲ್ಲಿವೆ. ಕದಂಬ ಗಂಗ, ಚಾಳುಕ್ಯ, ರಾಷ್ಟ್ರಕೂಟ, ಹೊಯ್ಸಳ ಮತ್ತು ವಿಜಯನಗರದ ಅರಸರ ಹಾಗೂ ಪಾಳೆಯಗಾರರ ಅನೇಕ ಶಾಸನಗಳು ಇಲ್ಲಿವೆ.

ಇಲ್ಲಿರುವ ಒಂದು ಪ್ರಾಚೀನ ಜೈನ ಮಂದಿರ ಗಂಗದೊರೆ ದುರ್ವಿನೀತನಿಂದ ನಿರ್ಮಿತವಾದಂತೆ ಹೇಳಿಕೆ ಇದೆ. 11-12ನೆಯ ಶತಮಾನದ ಕೆಲವು ಶಾಸನಗಳು ಈ ದೇವಾಲಯಕ್ಕೆ ಸಂದ ದತ್ತಿಗಳನ್ನು ವಿವರಿಸುತ್ತವೆ. ಇದಲ್ಲದೆ ಚೆನ್ನಪಾರ್ಶ್ವಬಸ್ತಿ, ಕಲ್ಲೇಶ್ವರ, ವೀರಭದ್ರೇಶ್ವರ ಮತ್ತು ಹನುಮಂತ ದೇವಸ್ಥಾನಗಳೂ ಇಲ್ಲಿವೆ. ಈ ಊರಿನ ಚಾವಡಿಯ ಬಳಿ ವೀರಗಲ್ಲೊಂದು ದೊರೆತಿದೆ. ಚೆನ್ನಪಾರ್ಶ್ವ ಬಸ್ತಿಗೆ ಹೊಯ್ಸಳ ವೀರರಾಮನಾಥ ಮತ್ತು ವೀರಭದ್ರೇಶ್ವರ ದೇವಸ್ಥಾನಕ್ಕೆ ವಿಜಯನಗರದ ಅಚ್ಯುತರಾಯ ಕೊಡುಗೆಗಳನ್ನಿತ್ತ ಬಗ್ಗೆ ಶಾಸನಗಳಿವೆ. ಜೈನಬಸ್ತಿಯ ಹತ್ತಿರ ಎತ್ತರದ ಜಿನಪ್ರತಿಮೆಯೊಂದಿದೆ. (ವಿ.)

**ಕೋಟೆಗಳು :** ಕರ್ನಾಟಕದಲ್ಲಿ ಜನ ಊರುಗಳನ್ನು ಕಟ್ಟಿಕೊಂಡು ನೆಲೆಸತೊಡಗಿದಾರಭ್ಯದಿಂದ ಸು.19ನೆಯ ಶತಮಾನದವರೆಗೂ ಊರುಗಳ ಸುತ್ತಲೂ ರಕ್ಷಣೆಯ ಆವರಣಗಳನ್ನು ನಿರ್ಮಿಸುತ್ತಿದ್ದುದು ಸಾಮಾನ್ಯ. ಸುತ್ತಲೂ ಮಣ್ಣಿನ ದಿಬ್ಬವನ್ನು ಏರಿಸುವುದು, ಆಳವಾದ ಕಂದಕವನ್ನು ತೋಡುವುದು, ಇಟ್ಟಿಗೆಯಿಂದಲೋ ಕಲ್ಲಿನಿಂದಲೋ ಗೋಡೆಯನ್ನು ನಿರ್ಮಿಸುವುದು-ಇವು ಸಾಮಾನ್ಯವಾಗಿ ಈ ಕೋಟೆಗಳ ರಚನೆಯಲ್ಲಿ ಕಂಡುಬರುವ ಅಂಶಗಳು. ಶತ್ರುಗಳು ತಮ್ಮ ಮೇಲೆ ನುಗ್ಗಿಬರದಂತೆ ತಡೆಯುವುದಕ್ಕೆ ಮತ್ತು ತಾವು ಸುಭದ್ರವಾದ ಸ್ಥಿತಿಯಲ್ಲಿ ನಿಂತು ಅವರನ್ನು ಸದೆಬಡಿಯುವುದಕ್ಕೆ ಅನುಕೂಲ ಮಾಡಿಕೊಳ್ಳುವುದಕ್ಕಾಗಿ ಕೋಟೆಗಳನ್ನು ರಚಿಸಲಾಗುತ್ತಿತ್ತು. ಅನುಭವ, ಯುದ್ಧತಂತ್ರ, ಆಯುಧಗಳ ಬಳಕೆ, ನಿವೇಶನದ ಪರಿಸರ ಮುಂತಾದವುಗಳನ್ನನುಸರಿಸಿ ಕೋಟೆಗಳ ರಚನೆಯಲ್ಲಿ ಕಾಲಕ್ರಮದಲ್ಲಿ ಅನೇಕ ಮಾರ್ಪಟುಗಳಾಗಿರುವುದನ್ನು ಗುರುತಿಸಬಹುದು. ಮೊದಲು ಶತ್ರುಗಳ ದಾಳಿಯನ್ನು ತಡೆಗಟ್ಟಲು ಮಾತ್ರ ರಚಿಸಲಾಗುತ್ತಿದ್ದ ನೇರವಾದ ಗೋಡೆಗಳು ಇರುತ್ತಿದ್ದು ಅದನ್ನು ಸುಲಭವಾಗಿ ಏಣಿಗಳ ಸಹಾಯದಿಂದಲೋ ಉಡಗಳ ಸಹಾಯದಿಂದಲೋ ಏರುವುದು ಸಾಧ್ಯವೆಂಬುದನ್ನು ಕಂಡುಕೊಂಡಾಗ ಗೋಡೆಗಳ ಹತ್ತಿರಕ್ಕೆ ಶತ್ರುಗಳು ಬರದಂತೆ ಅದಕ್ಕೆ ಹೊಂದಿಕೊಂಡ ಹಾಗೆ ಆಳವಾದ ಅಗಲವಾದ

ಕಂದಕಗಳ ನಿರ್ಮಾಣ ಆರಂಭವಾಯಿತು. ಶತ್ರುದಾಳಿಗಳ ಸಮಯದಲ್ಲಿ ಈ ಕಂದಕಗಳಿಗೆ ನೀರು ತುಂಬಿಸುವ ಏರ್ಪಾಟು ಆಗತೊಡಗಿತ್ತು. ಕಂದಕಗಳನ್ನು ದಾಟಿಕೊಂಡು ಶತ್ರು ಲಗ್ಗೆ ಹತ್ತಲು ಪ್ರಯತ್ನಿಸಿದಾಗ ಕೋಟೆಗೋಡೆಗಳ ಮೇಲೆ ನಿಂತು ಗುಂಡುಗಳನ್ನುರುಳಿಸಿ, ಕಾದ ಎಣ್ಣೆಯನ್ನು ಸುರಿದು ಶತ್ರುಗಳನ್ನು ನಾಶಮಾಡಲು ಅನುಕೂಲಿಸುವಂತೆ ಗೋಡೆಯ ಒಳಭಾಗಕ್ಕೆ ಇಳಿಜಾರಾದ ಏಣು ಮಣ್ಣನ್ನು ತುಂಬಿಸುತ್ತಿದ್ದರು. ಇದರಿಂದ ಗೋಡೆಯ ಕೆಲವು ಭಾಗಗಳನ್ನು ಮುಂದಕ್ಕೆ ಚಾಚಿ ಕಟ್ಟಿರುವುದು ಕಂಡುಬರುತ್ತದೆ. ಇಂಥ ಚಾಚುಗೋಡೆಗಳ ಮೇಲೆ ನಿಂತು ಲಗ್ಗೆ ಹತ್ತುವ ಶತ್ರುಗಳ ಮೇಲೆ ಬಾಣಗಳಿಂದಲೋ ಈಟಿಗಳಿಂದಲೋ ಹೊಡೆಯಲು ಅನುಕೂಲ ಉಂಟಾಗುತ್ತದೆ. ಕೋಟೆ ಗೋಡೆಯನ್ನೇರುವುದು ಸಾಧ್ಯವಾಗದಿದ್ದರೂ ಪ್ರವೇಶದ್ವಾರಗಳನ್ನು ಸುಲಭವಾಗಿ ಭೇದಿಸಿಕೊಂಡು ಒಳಹೋಗಲು ಶತ್ರುಗಳಿಗೆ ಸುಲಭವಾಗದಂತೆ ಪ್ರವೇಶದ್ವಾರಗಳ ರಚನೆ ಮತ್ತು ರಕ್ಷಣೆಗೆ ವಿಶೇಷ ಗಮನ ಕೊಡಲಾರಂಭವಾಯಿತು. ಪ್ರವೇಶದ್ವಾರಗಳ ಎರಡೂ ಕಡೆಯೂ ರಕ್ಷಣಾಗೋಪುರಗಳನ್ನು ನಿರ್ಮಿಸುವುದು ಇವುಗಳಲ್ಲೊಂದು. ಅತ್ಯಂತ ಭದ್ರವಾದ ಬಾಗಿಲುಗಳಿಂದ ಈ ದ್ವಾರವನ್ನು ಮುಚ್ಚಿ ತೊಲೆಗಳಂಥ ಭಾರವಾದ ಲಾಳವಿಂಡಿಕೆಗಳನ್ನು ಅಡ್ಡಕೊಟ್ಟಿದ್ದರೂ ಆನೆಗಳ ಸಹಾಯದಿಂದ ಆ ಬಾಗಿಲುಗಳನ್ನು ನೂಕಿಸಿ ಒಡೆದು ತೆಗೆಯುವ ಸಾಹಸದಲ್ಲಿ ಶತ್ರುಗಳು ತೊಡಗಿದಾಗ ಆನೆಗಳು ತಮ್ಮಕುಂಭಸ್ಥಳಗಳಿಂದ ಬಾಗಿಲುಗಳನ್ನು ನೂಕಲು ಸಾಧ್ಯವಾಗದಂತೆ ಹಾರೇಕೋಲುಗಳಂತೆ ದಪ್ಪನಾಗಿಯೂ ಚೂಪಾಗಿಯೂ ಮುಂಚಾಚಿಕೊಂಡ ಮೊಳೆಗಳನ್ನು ಬಾಗಿಲುಗಳಿಗೆ ಅಲ್ಲಲ್ಲಿ ಸೇರಿಸಲಾರಂಭಿಸಿದರು. ಶತ್ರುಗಳು ಕೋಟೆಗೆ ಮುತ್ತಿಗೆ ಹಾಕಿ ಹೆಚ್ಚು ಕಾಲ ಅಲ್ಲಿಯೇ ಬೀಡುಬಿಟ್ಟು ಒಳಗಿದ್ದವರಿಗೆ ನಿತ್ಯಾವಶ್ಯಕ ವಸ್ತುಗಳು ದೊರಕದಂತೆ ಮಾಡುವುದು ಸಾಧ್ಯವಿತ್ತು. ಶತ್ರುಗಳಿಗೆ ಗೋಚರಿಸದಂತೆ ಕೋಟೆಯಿಂದ ಹೊರಗೆ ಹೋಗಿ ಬರಲು ಗುಪ್ತ ದ್ವಾರಗಳು ಇರುತ್ತಿದ್ದವು. ಕೋಟೆಯ ನಡುವೆ ಉನ್ನತವಾದ ಗೋಪುರವೊಂದಿರುತ್ತಿತ್ತು. ಅಲ್ಲಿಂದ ಶತ್ರುಗಳ ಚಲನವಲನವನ್ನು ವೀಕ್ಷಿಸುವ ಅನುಕೂಲವೂ ಇತ್ತು. ಮದ್ದುಗುಂಡುಗಳ ಬಳಕೆ ಆರಂಭವಾದಮೇಲೆ ಕೋಟೆಗಳ ರಚನಾತಂತ್ರದಲ್ಲಿಯೂ ಹಲವು ಬದಲಾವಣೆಗಳು ಆದುವು; ಒಂದು ಸುತ್ತು ಕೋಟೆಯ ಬದಲು ಹಲವು ಸುತ್ತು ಕೋಟೆಗಳನ್ನು ರಚಿಸುವುದು, ಕೋಟೆಯ ಗೋಡೆಗಳ ತುದಿಯಲ್ಲಿ ತೆನೆಗಳನ್ನು ಕಟ್ಟಿ ಮರೆಯಲ್ಲಿ ನಿಂತು ಅವುಗಳ ಮೂಲಕ ಬಂದೂಕಗಳಿಂದ ಗುಂಡು ಹಾರಿಸಲು ಓರೆಯಾದ ಕಿಂಡಿಗಳನ್ನು ಬಿಡುವುದು, ಗೊತ್ತಾದ ಅಂತರಗಳಲ್ಲಿ ಗುಂಡು ಬುರುಜುಗಳನ್ನು ಕಟ್ಟಿ ದೊಡ್ಡ ಫಿರಂಗಿಗಳನ್ನು ನೆಲೆಗೊಳಿಸುವುದು, ಕಂದಕಕ್ಕೆ ಹೊರಮುಖದಲ್ಲಿ ಶತ್ರುಗಳು ಫಿರಂಗಿ ಏಟುಗಳಿಂದ ಕೋಟೆ ಗೋಡೆಯ ಬಿರುಕು ಬಿಡದಂತೆ ರಕ್ಷಿಸಲೋಸುಗ ಮಣ್ಣುದಿಬ್ಬಗಳನ್ನು ನಿರ್ಮಿಸುವುದು, ನೇರವಾದ ಗೋಡೆಯ ಬದಲು ಹಲವು ಕೋನಾಕೃತಿ ಗೋಡೆಗಳನ್ನು ರಚಿಸುವುದು, ಒಳಗೋಡೆಗೆ ಹೊಂದಿಕೊಂಡಂತೆ ಮದ್ದಿನ ಮನೆಗಳು, ಮದ್ದನ್ನು ತಯಾರಿಸುವ ಯಂತ್ರಗಳು ಮೊದಲಾದುವನ್ನು ರಚಿಸುವುದು ಇತ್ಯಾದಿ. ಇತರೆಡೆಗಳಂತೆ ಕರ್ನಾಟಕದಲ್ಲಿಯೂ ಮಾನವನ ಇತಿಹಾಸ ಆರಂಭವಾಗುವ ಕಾಲದಿಂದ ಹತ್ತೊಂಬತ್ತನೆಯ ಶತಮಾನದ ವರೆಗೂ ರಾಜಮನೆತನಗಳು, ಪಾಳೆಯಪಟ್ಟುಗಳ ಸಣ್ಣಪುಟ್ಟ ಸಂಸ್ಥಾನಗಳು, ತಮ್ಮ ಉಳಿವಿಗೆ ಬೆಳೆವಣಿಗೆಗೆ ಇಂಥ ಕೋಟೆಗಳನ್ನು ಆಶ್ರಯಿಸಿ ಕೊಂಡಿದ್ದುದ್ದು ಕಂಡುಬರುತ್ತದೆ.

ಮೇಲೆ ತಿಳಿಸಿದ ಎಲ್ಲ ರೀತಿಯ ಬೆಳೆವಣಿಗೆಗಳನ್ನು ಕರ್ನಾಟಕದಲ್ಲಿ ಕಾಣಬಹುದು. ಹಿಂದಿನ ಕಾಲದಲ್ಲಿ ಮುಖ್ಯವಾಗಿ ರಾಜರ ನೆಲೆ ವೀಡುಗಳಿಗೆ ಮತ್ತು ಆಯಾ ರಾಜ್ಯದ ಗಡಿಯ ಪ್ರದೇಶಗಳಿಗೆ ಇಂಥ ಕೋಟೆಗಳ ನಿರ್ಮಾಣ ಆವಶ್ಯಕವಾಗಿತ್ತು. ಪ್ರಾಚೀನ ರಾಜಮನೆತನಗಳು ತಮ್ಮ ರಾಜಧಾನಿಗಳಿಗಾಗಿ ಸ್ವಾಭಾವಿಕ ರಕ್ಷಣಾಪರಿಸರಗಳುಳ್ಳ ಸ್ಥಳಗಳನ್ನು ಆರಿಸಿಕೊಂಡು ಜೊತೆಗೆ ಕೋಟೆಗಳನ್ನು ಕಟ್ಟಿಕೊಳ್ಳುತ್ತಿದ್ದರು. ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ಇಸಿಲ ಎಂಬ ಊರಿನ ಹೆಸರಿದ್ದು ಅದಕ್ಕೆ ಕೋಟೆ ಎಂಬ ಅರ್ಥ ಇತ್ತು. ಕೋಟೆಯಿಂದಾವೃತವಾಗಿದ್ದ ಊರು ಅದಾಗಿದ್ದಿರಬಹುದು. ಹೀಗಿದ್ದಲ್ಲಿ ಕೋಟೆಗಳು ಕರ್ನಾಟಕದಲ್ಲಿ ಮೌರ್ಯರ ಕಾಲಕ್ಕೇ ಇದ್ದುವು ಎನ್ನುವುದು ಖಚಿತಗೊಳ್ಳುತ್ತದೆ. ಬ್ರಹ್ಮಗಿರಿ ಪರಿಸರದಲ್ಲಿ ಈಗ ಕೋಟೆಯ ಅವಶೇಷಗಳು ಕಂಡುಬರುವುದಿಲ್ಲ. ಕ್ರಿಸ್ತಶಕದ ಆರಂಭ ಕಾಲಕ್ಕೂ ಮುಂಚೆಯೇ ಕೆಲವು ಕೋಟೆಗಳಿದ್ದುದನ್ನು ಕಾಣಬಹುದು. ಗುಲ್ಬರ್ಗ ಜಿಲ್ಲೆಯ ಸನ್ನತಿ ಇಂಥ ಒಂದು ಪ್ರಾಚೀನ ಕೋಟೆ ಹೊಂದಿದ್ದ ಊರು. ಭೀಮಾನದಿ ಬಳಸಿಕೊಂಡು ಹರಿಯುವ ಈ ಸ್ಥಳದಲ್ಲಿ ಮೂರು ಕಡೆ ನೀರಿನ ರಕ್ಷಣೆಯಿದ್ದು ಉಳಿದೊಂದು ಕಡೆ ನೇರವಾದ ಇಟ್ಟಿಗೆ ಗೋಡೆ ಇದೆ. ಇಲ್ಲಿ ಕ್ರಿ.ಪೂ.2-1ನೆಯ ಶತಮಾನದಲ್ಲಿಯೇ ಊರು ಇದ್ದದು ಅಲ್ಲಿನ ಶಾಸನಗಳಿಂದ ವ್ಯಕ್ತಪಡುವುದರಿಂದ ಆ ಕಾಲಕ್ಕೆ ಈ ಕೋಟೆಯ ನಿರ್ಮಾಣ ಆಗಿದ್ದಿರಬಹುದು. ಇದೇ ರೀತಿ ಮೂರು ಕಡೆ ವರದಾ ನದಿಯಿಂದಾವೃತವಾದ ಬನವಾಸಿಯಲ್ಲೂ ಒಂದು ಇಟ್ಟಿಗೆ ಕೋಟೆಯ ಅವಶೇಷ ಉಳಿದುಬಂದಿದೆ. ಇಲ್ಲಿ ಸಾತವಾಹನರು ಕ್ರಿಸ್ತಶಕದ ಆರಂಭದ ವರ್ಷಗಳಲ್ಲಿ ಆಳುತ್ತಿದ್ದರು. ಮುಂದೆ ಕದಂಬರು ಇದನ್ನು ರಾಜಧಾನಿಯಾಗಿ ಮಾಡಿಕೊಂಡರು. ದಪ್ಪ ಇಟ್ಟಿಗೆಗಳಿಂದ ಎತ್ತರವಾಗಿ ಕಟ್ಟಿದ್ದ ಕೋಟೆ ಭದ್ರವಾದುದಾಗಿತ್ತು. ಸಾತವಾಹನರ ಕಾಲದ ಮತ್ತೊಂದು ಮುಖ್ಯಪಟ್ಟಣವಾಗಿದ್ದ ಚಂದ್ರವಳ್ಳಿಯಲ್ಲಿ ಮನೆಗಳ ಗೋಡೆಗಳಿಗೆ ಕಟ್ಟಿದ್ದ ಇಟ್ಟಿಗೆಗಳಲ್ಲದೆ ದಪ್ಪ ಇಟ್ಟಿಗೆಗಳೂ ದೊರಕಿವೆ. ಅವು ಅಲ್ಲಿ ನಿರ್ಮಿತವಾಗಿದ್ದ ಕೋಟೆಗೆ ಸೇರಿದುವಾಗಿದ್ದುವೆಂದು ಊಹಿಸಲಾಗಿದೆ. ತಲಕಾಡು ಪ್ರಾಚೀನ ರಾಜಧಾನಿಗಳಲ್ಲೊಂದು. ಅಲ್ಲಿಯೂ ಕಾವೇರಿ ನದಿ ಊರನ್ನು ಮೂರು ಕಡೆ ಬಳಸಿದೆ. ಗಂಗರು ಇದನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಳ್ಳುವುದಕ್ಕೆ ಮುಂಚೆಯೇ ಇಲ್ಲಿ ಜನವಸತಿಯಿದ್ದ ಕುರುಹುಗಳಿವೆ. ಊರಿನ ಉಳಿದೊಂದು ಕಡೆ ವಿಜಯಪುರದ ಬಳಿ ಈಗಲೂ ಮಣ್ಣಿನ ದಿಬ್ಬಗಳಿರುವುದನ್ನು ಕಾಣಬಹುದು. ಈ ದಿಬ್ಬಗಳು ಆಗ ನಿರ್ಮಿತವಾಗಿದ್ದ ಕೋಟೆಯ ಅವಶೇಷಗಳೆಂದು ತೋರುತ್ತದೆ. ಈ ಮಣ್ಣಿನ ಕೋಟೆಯ ಮುಂಭಾಗದಲ್ಲಿ ಕಂದಕವಿದ್ದುದನ್ನು ಗುರುತಿಸಬಹುದು.



ಮಡಿಕೇರಿ ಕೋಟೆ

ಕದಂಬರು ತಮ್ಮ ರಾಜಧಾನಿಯಾದ ಬನವಾಸಿಯಲ್ಲಿದ್ದ ಕೋಟೆಯನ್ನು ಭದ್ರಪಡಿಸಿದುದಲ್ಲದೆ ಅವರ ಕಾಲದ ಇತರ ಮುಖ್ಯ ಪಟ್ಟಣಗಳಾದ ಉಚ್ಚಂಗಿದುರ್ಗ, ಹಾನಗಲ್ಲು, ಹಲಸಿ, ಅಣಜಿ ಮುಂತಾದ ಕಡೆ ಕೋಟೆಗಳನ್ನು ಕಟ್ಟಿಸಿದ್ದರು. ಅಣಜಿಯಲ್ಲಿ ಈಗಲೂ ಒಂದು ಮಣ್ಣಿನ ಕೋಟೆಯ ಅವಶೇಷ ಉಳಿದು ಬಂದಿದೆ. ಉಚ್ಚಂಗಿದುರ್ಗ, ಹಾನಗಲ್ಲುಗಳಲ್ಲಿ ಇದ್ದ ಕೋಟೆಗಳನ್ನು ಮುಂದೆ ಬಂದ ಪಾಂಡ್ಯರು, ಹೊಯ್ಸಳರು, ಪುನರ್ನಿರ್ಮಾಣಗೊಳಿಸಿದ್ದಾರೆ. ಚಳುಕ್ಯ ಒಂದನೆಯ ಪುಲಕೇಶಿ ಬಾದಾಮಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ 543ರಲ್ಲಿ ಒಂದು ಭದ್ರವಾದ ಕೋಟೆಯನ್ನು ಕಟ್ಟಿಸಿದ್ದುದು ಅವನ ಒಂದು ಶಾಸನದಿಂದ ತಿಳಿದುಬರುತ್ತದೆ. ಇದು ಕಲ್ಲಿನ ಕೋಟೆಯೇ ಆಗಿದ್ದಿರಬೇಕು. ಇದೇ ಚಳುಕ್ಯರ ಕಾಲದ ಒಂದು ಕಲ್ಲಿನ ಕೋಟೆ ಐಹೊಳೆಯಲ್ಲಿ ಉಳಿದುಬಂದಿದೆ. ಇದು ಸು.500ಮೀ. ಅಗಲದ ಅಂಡಾಕಾರ ವಿನ್ಯಾಸದ ಕೋಟೆ. ಆ ಕೋಟೆಯ ಗೋಡೆಗಳ ಮೇಲೆ ಏಳನೆಯ ಶತಮಾನದ ಕಾಲದ ಶಾಸನಗಳಿರುವುದರಿಂದ ಆ ಕಾಲಕ್ಕಾಗಲೇ ಈ ಕೋಟೆ ಇದ್ದದ್ದು ನಿರ್ವಿವಾದ. ಆ ಕೋಟೆಯ ನಾಲ್ಕು ಕಡೆಯ ಮಹಾದ್ವಾರಗಳಲ್ಲಿಯೂ ಚೌಕಾಕಾರದ ಅಟ್ಟಾಲಕಗಳಿದ್ದು ಕೋಟೆಯ ಸುತ್ತಲೂ ಕಂದಕವೂ ಇದ್ದಿರಬೇಕೆಂದು ಈಗ ಉಳಿದಿರುವ ಅವಶೇಷಗಳಿಂದ ತಿಳಿಯಬಹುದಾಗಿದೆ.

ಈ ಗೋಡೆ ಆಯತಾಕಾರದ ದಪ್ಪ ಕಲ್ಲಿನ ದಿಮ್ಮಿಗಳನ್ನು ಸೇರಿಸಿ ರಚಿತವಾದದ್ದು.

ಕರ್ನಾಟಕದ ಉತ್ತರ ಭಾಗದಲ್ಲಿ ರಾಷ್ಟ್ರಕೂಟರ ಕಾಲದ ಕೆಲವು ಕೋಟೆಗಳಿದ್ದಿರಬೇಕು. ಆದರೆ ಈಗ ಅವು ಶಿಥಿಲವಾಗಿಯೋ ಪುನರ್ನಿರ್ಮಾಣಗೊಂಡೋ ಇರುವುದರಿಂದ ಅವುಗಳ ಮೂಲ ರಚನೆಯ ಸ್ವರೂಪವನ್ನು ಕಂಡುಕೊಳ್ಳುವುದು ಅಸಾಧ್ಯ.



ಬೇಕಲ್ ಕೋಟೆ

ಕಲ್ಯಾಣದ ಚಾಳುಕ್ಯರ ಕಾಲದ ಅನೇಕ ಕೋಟೆಗಳ ವರ್ಣನೆಗಳು ಸಾಹಿತ್ಯದಲ್ಲೂ ಶಾಸನದಲ್ಲೂ ಕಂಡುಬರುತ್ತವೆ. ಆದರೆ ಇವರ ರಾಜಧಾನಿಯಾದ ಕಲ್ಯಾಣದಲ್ಲಿಯೇ ಆ ಕಾಲದ ಕೋಟೆ ಉಳಿದುಬಂದಿಲ್ಲ. ಆಳಂದ ತಾಲ್ಲೂಕಿನ ನಿಂಬರ್ಗ ಮೊದಲಾದ ಸ್ಥಳಗಳಲ್ಲಿ ಊರನ್ನು ಸುತ್ತಿರುವಂತೆ ಕಲ್ಲುಕೋಟೆಗಳಿವೆ. ಉತ್ತರ ಕರ್ನಾಟಕದ ಹಲವೆಡೆಗಳಲ್ಲಿ ಈ ಕಾಲದ ಕೋಟೆಗಳು ಉಳಿದು ಬಂದಿರುವ ಸಾಧ್ಯತೆ ಇದೆ.

ಕಾಕತೀಯರ ಕಾಲದಲ್ಲಿ ನಿರ್ಮಿತವಾದ ಭದ್ರವಾದ ಕೋಟೆಯ ಭಾಗವೊಂದು ಈಗ ರಾಯಚೂರಿನಲ್ಲಿ ಉಳಿದುಬಂದಿದೆ. ಕಾಕತೀಯರ ರಾಣಿ ರುದ್ರಮಹಾದೇವಿ ಕಟ್ಟಿಸಿದ ಈ ಕೋಟೆಗೆ ಬೃಹದ್‌ಗಾತ್ರದ ಹಲವು ಮೀಟರುಗಳಷ್ಟು ಉದ್ದವಾಗಿರುವ ದಪ್ಪ ಕಲ್ಲಿನ ದಿಮ್ಮಿಗಳನ್ನು ಸೇರಿಸಿ ಕಟ್ಟಿರುವ ಈ ಕೋಟೆ ಆಶ್ಚರ್ಯವನ್ನುಂಟುಮಾಡುವಂತಿದೆ. ಅವುಗಳಲ್ಲಿ ಒಂದು ಅತ್ಯಂತ ದೊಡ್ಡದಾದ ಕಲ್ಲಿನ ದಿಮ್ಮಿಯನ್ನು ಆ ಕೋಟೆಯ ಗೋಡೆಗೆ ತಂದು ಸೇರಿಸಿದ ರೀತಿಯನ್ನು ಅದೇ ಕಲ್ಲಿನ ಮೇಲಿರುವ ಒಂದು ರೇಖಾಚಿತ್ರ ಚಿತ್ರಿಸುತ್ತದೆ. ಗುಂಡಾದ ಮರದ ತುಂಡುಗಳ ಮೇಲೆ ಈ ಬಂಡೆಕಲ್ಲುಗಳನ್ನುರುಳಿಸಿ ಹತ್ತಾರು ಜೊತೆ ಕೋಣಗಳ ಸಹಾಯದಿಂದ ಅದನ್ನೆಳೆಸುತ್ತಿರುವುದು ಮತ್ತು ಹಿಂದೆ ಉದ್ದವಾದ ಹೆದ್ದವನ್ನು ಕೊಟ್ಟು ಹತ್ತಾರು ಜನ ಮೀಟುತ್ತಿರುವುದನ್ನು ಬಹು ಸೊಗಸಾಗಿ ತೋರಿಸಿದೆ. ಆಗ ಕೋಟೆಗಳನ್ನು ಕಟ್ಟಿಸುತ್ತಿದ್ದ ರೀತಿ ಇದರಿಂದ ವ್ಯಕ್ತವಾಗುತ್ತದೆ.

ಹೊಯ್ಸಳರ ಕಾಲದ ಕೋಟೆಗಳ ಕುರುಹು ಉಳಿದುಬಂದಿರುವುದು ಹಳೇಬೀಡಿನಲ್ಲಿ. ಇಲ್ಲಿ ಬೆಣ್ಣೆಗುಡ್ಡದ ಬುಡದಲ್ಲಿ ಪೂರ್ವಕ್ಕೆ ಅರಮನೆಯನ್ನು ಬಳಸಿದ ಭದ್ರವಾದ ಚೌಕನಾದ ಕೋಟೆ ಮತ್ತು ಊರನ್ನು ಬಳಸಿದ್ದ ಮತ್ತೊಂದು ದೊಡ್ಡದಾದ ಕೋಟೆ ನಿರ್ಮಾಣವಾಗಿದ್ದುವು. ದೊಡ್ಡ ದೊಡ್ಡ ಗುಂಡುಗಳನ್ನು ಒಂದರಮೇಲೊಂದು ಪೇರಿಸಿ ಒಳಭಾಗದಿಂದ ಮಣ್ಣಿನ ಒತ್ತು ಕೊಟ್ಟಿದ್ದುದಲ್ಲದೆ ಅಲ್ಲಲ್ಲಿ ಬತೇರಿಯಂತೆ ಗೋಡೆ ಮುಂಚಾಚಿಕೊಂಡಿತ್ತು. ಕೆಲವು ಕಡೆ ಆಳವಾದ ಅಗಳು ಕೋಟೆಗೆ ರಕ್ಷಣೆಯಾಗಿತ್ತು. ಈಗ ಕೋಟೆ ಅಲ್ಲಲ್ಲಿ ನಾಶವಾಗಿ ಮಣ್ಣಿನ ದಿಬ್ಬಗಳು ಉಳಿದುಕೊಂಡಿವೆ. ಬೇಲೂರಿನಲ್ಲಿ ಅವರೇ ಕಟ್ಟಿಸಿದ ಮಣ್ಣಿನ ಕೋಟೆ ಮತ್ತು ಕಂದಕಗಳ ಅವಶೇಷಗಳು ಈಗಲೂ ಕಂಡುಬರುತ್ತವೆ. ಹಾನೆಯದ ಕೋಟೆಯನ್ನು ವಿಷ್ಣುವರ್ಧನನೂ ಉಚ್ಚಂಗಿದುರ್ಗವನ್ನು ವೀರಬಲ್ಲಾಳನೂ ಗೆದ್ದದ್ದನ್ನು ಶಾಸನಗಳಲ್ಲಿ ಭವ್ಯವಾಗಿ ವರ್ಣಿಸಲಾಗಿವೆ. ಬಂಕಾಪುರ ಮೊದಲಾದ ಕಡೆ ಈ ಕಾಲದ ಕೋಟೆಗಳು ಉಳಿದುಬಂದಿವೆ.

ದಕ್ಷಿಣದಲ್ಲಿ ಅಲಾಉದ್ದೀನನ ದಂಡನಾಯಕ ಮಲಿಕ್ ಕಾಫೂರ್ ನಡೆಸಿದ ದಾಳಿಗಳಿಂದಾಗಿ ರಾಜಕೀಯ ಸ್ಥಿರತೆಗೆ ಧಕ್ಕೆ ಒದಗಿದುದೂ ಮುಂದೆ ಕರ್ನಾಟಕದ ಉತ್ತರಭಾಗದಲ್ಲಿ ಬಹಮನೀ ಸುಲ್ತಾನರ ರಾಜ್ಯ ಸ್ಥಾಪನೆಯಾದುದೂ ಅದುವರೆಗಿದ್ದ ಕೋಟೆಗಳಿಗಿಂತ ಹೆಚ್ಚು ಸುಭದ್ರವಾದ ಕೋಟೆಗಳನ್ನು ಕಟ್ಟಲು ಪ್ರೇರಕವಾಗಿದ್ದಿರಬಹುದು. ವಿಜಯನಗರ ರಾಜ್ಯ ಸ್ಥಾಪನೆಯಾಗುತ್ತಿದ್ದಂತೆಯೇ ಒಂದು ಸುತ್ತಿನ ಕೋಟೆಗೆ ಬದಲು ಹಲವು ಸುತ್ತು ಕೋಟೆಗಳ ನಿರ್ಮಾಣ ಆರಂಭವಾಯಿತು. ಬಹಮನೀ ಸುಲ್ತಾನರ ಮತ್ತು ವಿಜಯನಗರದರಸರ ನಡುವೆ ಆಗಾಗ ನಡೆಯುತ್ತಿದ್ದ ಯುದ್ಧಗಳಿಂದ, ಈ ಎರಡು ರಾಜ್ಯಗಳ ನಡುವಣ ಆಯಕಟ್ಟಿನ ಸ್ಥಳಗಳಲ್ಲಿ ಮೊದಲಿದ್ದ ಕೋಟೆಗಳನ್ನು ಅತ್ಯಂತ ಸುಭದ್ರವಾಗಿ ನಿರ್ಮಿಸುವ ಆವಶ್ಯಕತೆ ಉಂಟಾಯಿತು. ಇದರೊಂದಿಗೆ ಈ ಕಾಲಕ್ಕೆ ಮದ್ದುಗುಂಡುಗಳ ಬಳಕೆ ಹೆಚ್ಚಾಗಿ ಯುದ್ಧತಂತ್ರ ಬದಲಾಯಿಸಿದ್ದರಿಂದ ಫಿರಂಗಿಗಳ ಹೊಡೆತಗಳನ್ನು ತಡೆಯಬಲ್ಲಂತೆ ಮಾಡಲು ಕೋಟೆಯ ರಚನೆಯಲ್ಲಿಯೂ ಬದಲಾವಣೆ ಕಂಡುಬರುತ್ತದೆ. ಇದರಿಂದಾಗಿ ತಮ್ಮತಮ್ಮ ರಾಜಧಾನಿಗಳ ಸುತ್ತಲೂ ಬಲವಾದ ಕೋಟೆಗಳನ್ನು ಆಯಾ ರಾಜರು ಕಟ್ಟಿಕೊಂಡರು. ವಿಜಯನಗರದ ರಾಜಧಾನಿಯಾಗಿದ್ದ ಹಂಪೆಯಲ್ಲಿ ದಪ್ಪ ಕಗ್ಗಲ್ಲಿನ ದಿಮ್ಮಿಗಳಿಂದ ರಚಿಸಿರುವ ಹಲವು ಸುತ್ತುಗಳಿಂದ ವಿಸ್ತಾರವಾಗಿರುವ ಪಾಳುಬಿದ್ದ ಕೋಟೆಗಳನ್ನು ಈಗಲೂ ಗುರುತಿಸಬಹುದು. ಬೆಟ್ಟಗುಡ್ಡಗಳ ನಡುವೆ ಇದ್ದ ಈ ಊರಿಗೆ ಈ ಕೋಟೆಗಳೂ ಸೇರಿ ಶತ್ರುಗಳಿಗೆ ಇದು ದುರ್ಭೇದ್ಯವಾದುದು ಎನ್ನಿಸಿಕೊಂಡಿತ್ತು. ಹೊರದೇಶದಿಂದ ಬಂದ ಯಾತ್ರಿಕರು ವಿಜಯನಗರದ ಕೋಟೆಯ ಭದ್ರತೆಯನ್ನು ಹೊಗಳಿದ್ದಾರೆ. ಇದಲ್ಲದೆ ವಿಜಯನಗರದ ಅರಸರು ರಾಯಚೂರು, ಮುದ್ಗಲ್ಲು, ಬಾದಾಮಿ ಮೊದಲಾದ ತಮ್ಮ ರಾಜ್ಯದ ಗಡಿಪ್ರದೇಶಗಳಲ್ಲಿ ಬೆಟ್ಟಗಳನ್ನಾವರಿಸಿಕೊಂಡು ಹಲವು ಸುತ್ತು ಕೋಟೆಗಳನ್ನು ರಚಿಸಿದ್ದ ಗಿರಿದುರ್ಗಗಳು ಆ ಕಾಲದ ಕೋಟೆಗಳ ಸುಭದ್ರ ರಚನೆಯ ಪ್ರತೀಕಗಳಾಗಿ ಉಳಿದಿವೆ. ಗಡಿಪ್ರಾಂತಗಳ ಕೋಟೆಗಳ ರಕ್ಷಣೆ ಉಭಯ ಶತ್ರು ರಾಜರಿಗೂ ಅತ್ಯಂತ ಪ್ರಮುಖವಾದುದಾಗಿರುತ್ತಿತ್ತು. ಅದರಿಂದಲೇ ರಾಯಚೂರು ಮತ್ತು ಮುದ್ಗಲ್ಲು ಕೋಟೆಗಳು ಬಹಮನೀ ಮತ್ತು ವಿಜಯನಗರಗಳ ನಡುವೆ ಹಲವು ಬಾರಿ ಕೈ ಬದಲಾಯಿಸಿದ್ದುವು. ರಾಯಚೂರಿನಲ್ಲಿ ಮೊದಲೇ ಇದ್ದ ಕಾಕತೀಯರ ಕೋಟೆ ಗೋಡೆಯೊಂದಿಗೆ ವಿಜಯನಗರ ಅರಸರು, ಅನಂತರ ಬಹಮನೀ ಅರಸರು ಸೇರಿಸಿದ ಹಲವು ಸಾಲು ಕೋಟೆಗಳ ನಡುವೆಯೇ ಊರಿನ ಬಹುಭಾಗ ಇದೆ.



ಗುಮ್ಮನಾಯಕನ ಕೋಟೆ

ಗುಲ್ಬರ್ಗದ ಸುತ್ತಲೂ ಬಹಮನೀ ಅರಸರು ಕಟ್ಟಿದ ಭದ್ರವಾದ ಕೋಟೆ ಈಗಲೂ ಉಳಿದುಬಂದಿದೆ. ಮೊದಲು ಇಲ್ಲಿ ರಾಜಾ ಗುಲ್‌ಚಂದ್ ಎಂಬ ಹಿಂದು ದೊರೆ ಕೋಟೆಯನ್ನು ಕಟ್ಟಿಸಿದ್ದನೆಂಬ ಪ್ರತೀತಿ ಇದೆ. ಈಗಿನ ಕೋಟೆ ಅಲಾಉದ್ದೀನ್ ಹಸನ್ ಬಹಮನೀ ಕಾಲದಲ್ಲಿ ನಿರ್ಮಿತವಾಯಿತು. ಈ ಕೋಟೆ ಹದಿನೈದು ಗುಂಡುಬುರುಜುಗಳನ್ನು 20 ಫಿರಂಗಿ ಬತೇರಿಗಳನ್ನು ಒಳಗೊಂಡಿರುವ ಕಲ್ಲುಕಟ್ಟಡ. ಬಹಮನೀ ರಾಜ್ಯ ಬೆಳೆದಂತೆ ಅದು ನಾಲ್ಕು ಪ್ರಾಂತ್ಯಗಳಾಗಿ

ಒಂದೊಂದು ಪ್ರಾಂತ್ಯದ ಮುಖ್ಯಪಟ್ಟಣವೂ ಕೋಟೆಕೊತ್ತಲಗಳಿಂದ ಭದ್ರಪಡಿಸಲ್ಪಟ್ಟುವು. ಇವುಗಳಲ್ಲಿ ಬೀದರ್ ಒಂದು. ಇಲ್ಲಿ ಮೊದಲೇ ಇದ್ದ ಕೋಟೆ ಕೊತ್ತಲಗಳನ್ನು ಬಲಪಡಿಸಲಾಯಿತು. ವಿಸ್ತಾರವಾದ ರಾಜ್ಯದ ರಾಜಧಾನಿಯಾದ ಮೇಲೆ ಅಹ್ಮದ್ ಷಾ ವಲಿ 1429ರಲ್ಲಿ ಕೋಟೆಯ ನಿರ್ಮಾಣಕಾರ್ಯವನ್ನಾರಂಭಿಸಿ 1432ರಲ್ಲಿ ಪೂರೈಸಿದ. ಭದ್ರವಾದ ಎತ್ತರವಾದ ಕಲ್ಲಿನ ಗೋಡೆಗಳಿಂದ ನಿರ್ಮಿತವಾದ ಈ ಕೋಟೆಯ ಸುತ್ತಲೂ ಹುಟ್ಟುಬಂಡೆಯಲ್ಲಿಯೇ ಆಳವಾಗಿ, ಅಗಲವಾಗಿ ಕಂದಕಗಳನ್ನು ಕೊರೆಸಲಾಯಿತು. ಮುಂದೆ ಮಾಳವದ ಮಹಮ್ಮದ್ ಖಿಲ್ಜಿ ಈ ಕೋಟೆಯನ್ನು ನಾಶಮಾಡಿದರೂ ನಿಜಾಮ್ ಷಾ ಬಹಮನೀ ಹಿಂದೆ ಇದ್ದ ರೀತಿಯಲ್ಲಿಯೇ ಅದನ್ನು ಪುನರ್ನಿರ್ಮಿಸಿದ. ಆದರೆ ಮಹಮ್ಮದ್ ಷಾನ ಕಾಲದಲ್ಲಿ ಮದ್ದಿನ ಬಳಕೆ ಹೆಚ್ಚಾದುದರಿಂದ ಅದಕ್ಕನುಗುಣವಾಗಿ ಕೋಟೆಯ ರಚನೆ ಬದಲಾವಣೆ ಹೊಂದಿತು. ಫಿರಂಗಿಗಳನ್ನು ಅಳವಡಿಸಿದ್ದು, ಗೋಡೆಗಳನ್ನು ಮತ್ತಷ್ಟು ಭದ್ರಪಡಿಸಿದುದು ಇವನ ಕಾಲದಲ್ಲಿಯೇ.

ಬಹಮನೀ ರಾಜ್ಯ 5 ಭಾಗಗಳಾಗಿ ಒಡೆದಮೇಲೆ ಆದಿಲ್‌ಶಾಹೀಗಳ ರಾಜಧಾನಿಯಾದ ಬಿಜಾಪುರದಲ್ಲಿ ಒಂದು ಸಣ್ಣ ಕೋಟೆಯ ನಿರ್ಮಾಣವಾಯಿತು. ರಾಜ್ಯ ವಿಸ್ತಾರವಾದಂತೆಲ್ಲ, ಊರು ಬೆಳೆದಂತೆಲ್ಲ, ಊರನ್ನು ಬಳಸಿದ ದೊಡ್ಡದಾದ ಒಂದು ಕೋಟೆಯನ್ನು ನಿರ್ಮಿಸಲಾಯಿತು. ಇಡೀ ನಗರವನ್ನೇ ಬಳಸಿದ್ದ ಈ ಕೋಟೆಗೆ ಹಲವಾರು ಗುಂಡುಬತೇರಿಗಳು ಇದ್ದುವು. ಒಂದೊಂದು ಬತೇರಿಯ ಮೇಲೂ ಯಾವ ದಿಕ್ಕಿಗಾದರೂ ತಿರುಗಿಸಿ ಗುಂಡು ಹಾರಿಸಬಲ್ಲಂಥ ಫಿರಂಗಿಗಳು ಇದ್ದುವು. ಅದರಲ್ಲಿಯೂ ಪಶ್ಚಿಮದ ದ್ವಾರದ ಸಮೀಪದಲ್ಲಿಯೇ ಮಲ್ಲಿಕ್ ಎ ಮೈದಾನ್ ಎಂಬ ಒಂದು ಭಾರಿ ಫಿರಂಗಿಯನ್ನು ಸ್ಥಾಪಿಸಲಾಗಿತ್ತು. ಇದು ಈಗಲೂ ಅಲ್ಲಿ



ಗುಲ್ಬರ್ಗ ಕೋಟೆ

ಉಳಿದಿದೆ. ಈ ಫಿರಂಗಿಯಿಂದ ಗುಂಡು ಹಾರಿಸಿದಾಗ ಉಂಟಾಗುತ್ತಿದ್ದ ಸಾವುನೋವುಗಳಿಗಿಂತ ಹೆಚ್ಚಾಗಿ ಅದರ ಭಯಂಕರ ಶಬ್ದಕ್ಕೆ ಶತ್ರುಗಳ ಆನೆಗಳೂ ಕುದುರೆಗಳೂ ಸೈನ್ಯಗಳೂ ಚೆಲ್ಲಾಪಿಲ್ಲಿಯಾಗುತ್ತಿದ್ದುವಂತೆ. ಕೋಟೆಯೊಳಗೆ ಪಶ್ಚಿಮದ ಗೋಡೆಗೆ ಸಮೀಪವಾಗಿಯೇ ಒಂದು ಉನ್ನತವಾದ ಬುರುಜು ಇತ್ತು. ಇದರ ಮೇಲೆ ಅತ್ಯಂತ ಉದ್ದವಾದ ಭಾರಿ ಫಿರಂಗಿಯೊಂದು ಬಿದ್ದಿದೆ. ಲಾಂಬ್ ಚಡಿ ಎಂಬ ಈ ಫಿರಂಗಿಯಿಂದ ಬಹುದೂರದವರೆಗೂ ಗುಂಡು ಹಾರಿಸಬಹುದಿತ್ತು. ಸುಲ್ತಾನರ ಕೋಟೆಗಳಲ್ಲೆಲ್ಲಾ ಬಿಜಾಪುರದ ಕೋಟೆ ಅತ್ಯಂತ ವಿಸ್ತಾರವಾದುದೆಂದು ಹೇಳಬಹುದು.



ಬಾದಾಮಿ ಕೋಟೆ

ವಿಜಯನಗರದ ಬಲ ತಾಳಿಕೋಟೆ ಯುದ್ಧವಾದ ಅನಂತರ ಕುಗ್ಗಿ ಆಮೇಲೆ ವಿಜಯನಗರ ಸಾಮ್ರಾಜ್ಯಾದ್ಯಂತ ಅನೇಕ ಪಾಳೆಯಪಟ್ಟುಗಳು ಹುಟ್ಟಿಕೊಂಡುವು. ಒಂದೊಂದು ಪಾಳೆಯಗಾರ ಮನೆತನವೂ ತನ್ನ ರಾಜ್ಯದ ಭದ್ರತೆಗಾಗಿ ಭದ್ರವಾದ ಕೋಟೆಗಳನ್ನು ಕಟ್ಟಿಸಲಾರಂಭಿಸಿತು. ನೂರಾರು ಕೋಟೆಗಳು ಈ ಕಾಲದಲ್ಲಿ ನಿರ್ಮಿತವಾಗಿವೆ. ಇವುಗಳಲ್ಲಿ ಪ್ರಸಿದ್ಧವಾದುದು ಚಿತ್ರದುರ್ಗದ ಕೋಟೆ. ಹಿಂದೆಯೇ ಇಲ್ಲಿ ಇದ್ದಿರಬಹುದಾದ ಕೋಟೆಯನ್ನು ಚಿತ್ರದುರ್ಗದ ನಾಯಕರು ಬಹುವಾಗಿ ಬೆಳೆಸಿದರು. ಇಲ್ಲಿನದು ಪ್ರಸಿದ್ಧವಾದ ಗಿರಿದುರ್ಗ. ಇಡೀ ಬೆಟ್ಟವನ್ನು ಬಳಸಿದಂತಿರುವ ಕೆಳಕೋಟೆಯಿಂದಾರಂಭಿಸಿ ಬೆಟ್ಟದ ತುದಿಯಲ್ಲಿ ಅರಮನೆಯನ್ನು ಸುತ್ತುವರಿದಿದ್ದ, ಕಿರುಕೋಟೆಯವರೆಗೆ ಏಳು ಸುತ್ತು ಕೋಟೆಗಳು ಶತ್ರುಗಳಿಗೆ ದುರ್ಭೇದ್ಯವಾಗಿ ಬೆಟ್ಟವನ್ನು ಬಳಸಿ ಹಬ್ಬಿವೆ. ಇವುಗಳ ಪ್ರವೇಶ ದ್ವಾರಗಳು ಅತ್ಯಂತ ಸುಭದ್ರವಾದ ರೀತಿಯಲ್ಲಿವೆ. ಈ ಕೋಟೆಯ ಗೋಡೆಗಳು ದಪ್ಪ ಕಲ್ಲಿನ ದಿಮ್ಮಿಗಳಿಂದ ನಿರ್ಮಿತವಾಗಿದ್ದುವು. ನಾಯಕರ ಕಾಲದಲ್ಲಿ ಇದಕ್ಕೆ ಗಾರೆಗಚ್ಚುಗಳೇನೂ ಇರಲಿಲ್ಲ. ಮೊದಲ ಮತ್ತು ಎರಡನೆಯ ಕೋಟೆಗಳಿಗೆ ಆಳವಾದ ಕಂದಕಗಳಿದ್ದುವು. ಆ ಕೋಟೆಯಲ್ಲಿ ಒಟ್ಟು 19 ದ್ವಾರಗಳು, 38 ದಿಡ್ಡಿಬಾಗಿಲುಗಳು, 35 ಗುಪ್ತದ್ವಾರಗಳು, 4 ಸುರಂಗ ಮಾರ್ಗಗಳು ಇದ್ದುವೆಂದು ಹೇಳಲಾಗಿದೆ. ಈ ಕೋಟೆಗಳಿಗೆ ಹೊಂದಿಕೊಂಡಂತೆ ಇರುವ ಎಣ್ಣೆಕೊಳ, ತುಪ್ಪದ ಕೊಳ ಎಂದು ಕರೆಯುವ, ಕಲ್ಲಿನಲ್ಲಿಯೇ ಕೊರೆದು ಮಾಡಿರುವ ದೊಡ್ಡ ತೊಟ್ಟಿಗಳೂ ಮದ್ದನ್ನು ಅರೆಯಲು ಉಪಯೋಗಿಸುವ ಭಾರಿಯಾದ 5 ಅಡಿ ವ್ಯಾಸವುಳ್ಳ 4 ಬೀಸುವ ಕಲ್ಲುಗಳೂ ಅವುಗಳನ್ನು ಏಕಕಾಲದಲ್ಲಿ ತಿರುಗಿಸಲು ಸಾಧ್ಯವಾಗುವಂತೆ ಜೋಡಿಸಿರುವ ಹಲ್ಲಿನ ಚಕ್ರವೂ ನಾಯಕರ ಕಾಲದ ಶಕ್ತಿಸಂಕೇತಗಳಾಗಿ ನಿಂತಿವೆ. ಹೊರಗಿನ ಕೋಟೆಗೆ ಇರುವ ನಾಲ್ಕು ಬಾಗಿಲುಗಳಲ್ಲಿ ರಂಗಯ್ಯನ ಬಾಗಿಲು ಮತ್ತು ಸಂತೇ ಬಾಗಿಲು ಪ್ರಸಿದ್ಧವಾದುವು. ಬೆಟ್ಟದ ಬುಡದಲ್ಲಿ ಇರುವ ಒಳಸುತ್ತಿನ ಕೋಟೆ 25' ಹೆಚ್ಚು ಎತ್ತರವಾಗಿದ್ದು ಆಳವಾದ ಕಂದಕಗಳಿಂದ ಕೂಡಿ ಬತೇರಿ, ಜೀನಗಂಡಿ, ಬುರುಜು, ಕೈಪಿಡಿ ಗೋಡೆಗಳಿಂದ ಕೂಡಿದ್ದು ಇದರ ಪ್ರವೇಶದ್ವಾರ ಅತ್ಯಂತ ಭದ್ರವಾದುದು. ಈ ದ್ವಾರದ ಎರಡು ಕಡೆಯೂ ಚೌಕ ಬತೇರಿಗಳಿವೆ. ಒಳಗೆ ಪ್ರವೇಶಿಸುತ್ತಿದ್ದಂತೆ ಬೃಹತ್ ಗಾತ್ರದ ಒಂದು ಅಡ್ಡಗೋಡೆ, ಅದನ್ನು ಬಳಸಿ ಒಳಹೊಕ್ಕರೆ ಅಲ್ಲಿ ಮತ್ತೊಂದು ಬಾಗಿಲು, ಪಕ್ಕದಲ್ಲಿಯೇ ದಿಡ್ಡಿ - ಇವು ಶತ್ರುಗಳು ಸುಲಭವಾಗಿ ಒಳನುಗ್ಗಲು ಸಾಧ್ಯವಿಲ್ಲದಂತೆ ಅಥವಾ ಮುಂದಿನ ಬಾಗಿಲನ್ನು ತೂರಿ ಒಳನುಗ್ಗಿದಾಗ ಅವರ ಮೇಲೆ ಗುಂಡಿನ ಮಳೆಗರೆಯಲು ಅಥವಾ ಕಲ್ಲುಗುಂಡುಗಳನ್ನುರುಳಿಸಿ ನಾಶಪಡಿಸಲು ಅನುಕೂಲವಾಗುವ ರೀತಿಯಲ್ಲಿ

ರಚಿತವಾಗಿವೆ. ಈ ದ್ವಾರದ ಬಳಿ ಗೋಡೆಯ ಮೇಲೆ ವಿಘ್ನವಿನಾಶಕ ಗಣಪತಿ, ಶಕ್ತಿದಾಯಕ ಆಂಜನೇಯ, ವಿಜಯಸ್ಮಾರಕ ಗಂಡಭೇರುಂಡ, ಛಲದ ಸಂಕೇತವಾದ ಘಟಸರ್ಪ ಮುಂತಾದವನ್ನು ಬಿಡಿಸಿರುವುದನ್ನು ನೋಡಬಹುದು. ಈಗ ಚಿತ್ರದುರ್ಗದಲ್ಲಿರುವ ಕೋಟೆಯ ಹೆಚ್ಚಿನ ಭಾಗ, ಮದ್ದಿನಮನೆ ಮುಂತಾದವು ಹೈದರ್ ಮತ್ತು ಟಿಪ್ಪುಸುಲ್ತಾನರ ಕಾಲದ ರಚನೆಗಳು ಎಂಬ ಅಭಿಪ್ರಾಯವೂ ಇದೆ.



ಬೀದರ್ ಕೋಟೆ

ಚಿತ್ರದುರ್ಗದ ಪಾಳೆಯಗಾರರಂತೆ ಕೆಳದಿ ನಾಯಕರು ಮೊದಲು ಕೆಳದಿಯಲ್ಲಿಯೂ ಅನಂತರ ಇಕ್ಕೇರಿಯಲ್ಲಿಯೂ ಕೊನೆಗೆ ಬಿದನೂರಿನಲ್ಲಿಯೂ ರಾಜ್ಯವಾಳಿ ಅಲ್ಲೆಲ್ಲ ಕೋಟೆಗಳನ್ನು ಕಟ್ಟಿಸಿದ್ದಾರೆ. ಇಕ್ಕೇರಿ ಕೋಟೆಯನ್ನು ಆ ಕಾಲದಲ್ಲಿ ಸಂದರ್ಶಿಸಿದ್ದ ಪೋರ್ಚುಗೀಸ್ ಯಾತ್ರಿಕನೊಬ್ಬ ಮೂರು ಬಾಗಿಲುಗಳನ್ನು ದಾಟಿ ಕೋಟೆಯನ್ನು ಪ್ರವೇಶಿಸಬೇಕಾಗಿತ್ತೆಂದೂ ಅವುಗಳಿಗೆ ಬೇರೆ ಬೇರೆ ಕಂದಕಗಳಿದ್ದುವೆಂದೂ ಮೊದಲ ಎರಡು ಕಲ್ಲಿನ ಗೋಡೆಗಳು ದಟ್ಟವಾಗಿ ಬೆಳೆಸಿದ್ದ ಬಿದಿರುವನಗಳು ಸುತ್ತುವರಿದಿದ್ದುವೆಂದೂ ಒಳಗಿನದು ಮಾತ್ರ ಕಲ್ಲಿನ ಕೋಟೆಯೆಂದೂ ತಿಳಿಸುತ್ತಾನೆ. ಹಲವು ಬಗೆಯ ದುರ್ಗಗಳಲ್ಲಿ ವನದುರ್ಗ ಎಂದು ಕರೆಸಿಕೊಳ್ಳುವ ಕೋಟೆಯ ಮಾದರಿ ಇದು ಆಗಿತ್ತೆಂಬುದು ಸ್ಪಷ್ಟ. ಬಿದನೂರಿನಲ್ಲಿ ಶಿವಪ್ಪನಾಯಕ ಕಟ್ಟಿಸಿದ ಕೋಟೆ ಎತ್ತರವಾದ ದಿಬ್ಬದ ಮೇಲಿತ್ತು. ಪ್ರವೇಶದ್ವಾರದ ಎರಡು ಕಡೆಯೂ ಗುಂಡು ಬತೇರಿಗಳೂ ಒಳಗೆ ರಕ್ಷಕರ ಕೋಣೆಗಳೂ ಇದ್ದುವು. ಕೆಳದಿಯ ರಾಣಿ ಚೆನ್ನಮ್ಮಾಜಿ ಚೆನ್ನಗಿರಿಯ ಒಂದು ಗುಡ್ಡದ ಮೇಲೆ ತನ್ನ ಹೆಸರಿನಲ್ಲಿ ಒಂದು ಕೋಟೆಯನ್ನು ಕಟ್ಟಿಸಿದ್ದಾಳೆ (ಸು.1770). ಎರಡು ಸುತ್ತು ಗೋಡೆಗಳಿರುವ ಈ ಕೋಟೆಗೆ ಉಪಯೋಗಿಸಿರುವುದು ಸಣ್ಣಪುಟ್ಟ ಆಕಾರರಹಿತ ಉರುಟು ಕಲ್ಲುಗಳು. ಇವುಗಳ ಮುಂದೆ ಅಗಳುಗಳಿವೆ. ಮುಖ್ಯದ್ವಾರ ಉತ್ತರ ದಿಕ್ಕಿಗಿದೆ. ಶಿವಮೊಗ್ಗ ಜಿಲ್ಲೆಯ ಕವಲೆದುರ್ಗ ಬೆಟ್ಟದ ಮೇಲೆ ನಿರ್ಮಿಸಿದ್ದ ಭುವನಗಿರಿದುರ್ಗ ಎಂಬ ಕೋಟೆ ಶತ್ರುದಾಳಿಗೆ ರಾಜ್ಯ ತುತ್ತಾದಾಗ ಆಶ್ರಯಪಡೆಯಲು ಉಪಯೋಗಿಸುತ್ತಿದ್ದ ಪ್ರಬಲ ದುರ್ಗವಾಗಿತ್ತು. ಇಲ್ಲಿ ಕೋಟೆಗಳ ರಕ್ಷಣೆಯೊಂದಿಗೆ ಸುತ್ತಲೂ ದಟ್ಟವಾದ ಕಾಡಿನ ರಕ್ಷಣೆಯೂ ಇತ್ತು. ಇದು ಒಂದು ಉತ್ತಮವಾದ ವನದುರ್ಗವೂ ಆಗಿತ್ತು. ಇದೇರೀತಿ ಹತ್ತಾರು ಪಾಳೆಯಗಾರ ಮನೆತನಗಳು ಹಲವು ಕಡೆ ಬೆಟ್ಟಗಳ ಮೇಲೋ ಸಮತಟ್ಟಿನ ಭೂಮಿಯ ಮೇಲೋ ಕೋಟೆಗಳನ್ನು ಕಟ್ಟಿಕೊಂಡು ಚಿಕ್ಕ ಚಿಕ್ಕ ಪಾಳೆಯಪಟ್ಟುಗಳನ್ನು ಆಳುತ್ತಿದ್ದುದಕ್ಕೆ ಈಗಲೂ ಅಲ್ಲಲ್ಲಿ ನಿಂತಿರುವ ಕೋಟೆಗಳು ಸಾಕ್ಷಿಗಳಾಗಿವೆ. ಇವುಗಳಲ್ಲಿ ಗಿರಿದುರ್ಗಗಳಿಗೆ ಪಾವಗಡ, ಮಧುಗಿರಿ, ನಿಡುಗಲ್ಲು, ಮಿಡಿಗೇಶಿ, ಕೊರಟಗೆರೆ, ಹುಲಿಯೂರುದುರ್ಗ, ಕಬ್ಬಾಳದುರ್ಗ, ರಾಮದುರ್ಗ, ಗುಡಿಬಂಡೆ, ಸದಾಶಿವಗಡ, ಬೆಟ್ಟದಪುರ, ಸಾವನದುರ್ಗ ಮುಂತಾದುವುಗಳನ್ನು ಉದಾಹರಣೆಗಳಾಗಿ ಹೆಸರಿಸಬಹುದು. ಈ ಗಿರಿದುರ್ಗಗಳು ಸಾಮಾನ್ಯವಾಗಿ ಹಲವು ಸುತ್ತು ಕೋಟೆಗಳನ್ನೊಳಗೊಂಡವು. ಕಡಿದಾದ ಬೆಟ್ಟಗಳನ್ನಾರಿಸಿ ಇವರು ಕೋಟೆಗಳನ್ನು ನಿರ್ಮಿಸುತ್ತಿದ್ದರು. ನೇರವಾಗಿ ಉನ್ನತವಾಗಿ ಮೇಲೇಳುವ ಬೆಟ್ಟಕ್ಕೆ ಆರು ಸುತ್ತು ಕೋಟೆ ಗೋಡೆಗಳನ್ನು ನಿರ್ಮಿಸಿದ, ದುರ್ಗಮವಾಗಿದ್ದ ಕೋಟೆ ಕಬ್ಬಾಳದುರ್ಗ. ಹುಲಿಯೂರುದುರ್ಗ ಗುಂಡಾದ ಸುಲಭವಾಗಿ ಏರಲಸಾಧ್ಯವಾದ ಬೆಟ್ಟದ ಸುತ್ತ ಕಟ್ಟಿದ ಕೋಟೆಗಳಿಂದ ಕೂಡಿದ್ದು ಮಿಡಗೇಶಿಯ ಕೋಟೆಯನ್ನು ನೇರವಾಗಿ ಮೇಲೆದ್ದ ಬಂಡೆಗಲ್ಲುಗಳನ್ನಾಧರಿಸಿ ಕಟ್ಟಲಾಗಿದೆ. ಈ ಕೋಟೆಯನ್ನು ಪ್ರವೇಶಿಸಲು ಬಂಡೆಗಲ್ಲಿನಲ್ಲಿಯೇ ಕೊರೆದ ಬಾಗಿಲಿನ ಮೂಲಕ ಹೋಗಬೇಕು. ಇವುಗಳಲ್ಲದೆ ಮಾಗಡಿ, ಯಲಹಂಕ, ಬೂದಿಹಾಳು, ಶಿರಾ, ಬಾಣಾವರ, ಐಮಂಗಲ, ಪಿರಿಯಾಪಟ್ಟಣ, ಮಡಿಕೇರಿ ಮುಂತಾದ ನೂರಾರು ಸಣ್ಣ ದೊಡ್ಡ ಕೋಟೆಗಳು, ಅವುಗಳನ್ನು ಬಳಸಿದ ಅಗಳುಗಳು ಈಗಲೂ ಉಳಿದುಬಂದಿವೆ. ಸಣ್ಣಪುಟ್ಟ ಪಾಳೆಯಗಾರರು ತಮ್ಮ ರಕ್ಷಣೆಗಾಗಿ ಕೋಟೆಗಳನ್ನು ಹೇಗೆ ನಂಬಿಕೊಂಡಿದ್ದರೆಂಬುದನ್ನು ಇವುಗಳಲ್ಲಿ ಮನಗಾಣಬಹುದು.

18ನೆಯ ಶತಮಾನದಲ್ಲಿ ಹೈದರ್ ಮತ್ತು ಟಿಪ್ಪು ಇವರು ಮೈಸೂರು ರಾಜ್ಯವನ್ನು ವಿಸ್ತರಿಸುತ್ತ ಈ ಪಾಳೆಯಗಾರರ ಒಂದೊಂದು ಕೋಟೆಯನ್ನು ಹಿಡಿದರು. ರಾಜ್ಯದ ರಕ್ಷಣೆಗೂ ವಿಸ್ತರಣೆಗೂ ಕೋಟೆಗಳ ಪಾತ್ರ ಅವರಿಗೆ ಅತ್ಯಂತ ಮಹತ್ವದ್ದಾಗಿತ್ತು. ಆದ್ದರಿಂದಲೇ ಅವರು ಗೆದ್ದ ಕೋಟೆಗಳನ್ನೆಲ್ಲ ಹೆಚ್ಚು ಭದ್ರಪಡಿಸಿ ಅಲ್ಲೆಲ್ಲ ಸೈನ್ಯದ ತುಕಡಿಗಳನ್ನು ನೆಲೆಗೊಳಿಸುತ್ತ ಬಂದರು ಹಾಗೂ ಹೊಸ ಹೊಸ ಕೋಟೆಗಳನ್ನು ನಿರ್ಮಿಸುತ್ತ ಬಂದರು. ಈ ಕೋಟೆಗಳ ನಿರ್ಮಾಣಕ್ಕೆ ಹೊಸ ತಂತ್ರವನ್ನು ಬಳಸಿದರು. ಈ ವಿಷಯದಲ್ಲಿ ಇವರಿಗೆ ಫ್ರೆಂಚ್ ಎಂಜಿನಿಯರುಗಳ ನೆರವು ದೊರೆತಂತೆ ತೋರುತ್ತದೆ. ಹಳೆಯ ಹಿಂದು ರೀತಿಯ ಕೋಟೆಗಳನ್ನು ದೊಡ್ಡ ದೊಡ್ಡ ಕಲ್ಲಿನ ತುಂಡುಗಳನ್ನು ಪೇರಿಸಿ ಕಟ್ಟಲಾಗಿತ್ತು. ಫಿರಂಗಿಯ ಗುಂಡಿನ ಏಟುಗಳಿಗೆ ಇವು ಸಡಿಲಗೊಳ್ಳುವ ಅವಕಾಶ ಹೆಚ್ಚಾಗಿತ್ತು. ಆದ್ದರಿಂದಲೇ ಹೈದರ್ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ಕೋಟೆಗಳಿಗೆ ಭದ್ರವಾಗಿ ಗಾರೆಗಚ್ಚುಗಳನ್ನು ಹಾಕುವುದು ರೂಢಿಯಾಯಿತು. ಇವರು ನಿರ್ಮಿಸಿದ ಅಥವಾ ಪುನರ್‌ನಿರ್ಮಿಸಿದ ಅನೇಕ ಕೋಟೆಗಳು ಈಗಲೂ ಅತ್ಯಂತ ಭದ್ರವಾದ ಸ್ಥಿತಿಯಲ್ಲಿವೆ. ಟಿಪ್ಪು ಹುಟ್ಟಿದ ಸ್ಥಳವಾದ ದೇವನಹಳ್ಳಿಯಲ್ಲಿ ಊರನ್ನು ಬಳಸಿ ನಿಂತಿರುವ ಕೋಟೆ ಕಲ್ಲಿನದಾಗಿದ್ದು ಮೇಲಿನ ಕೈಪಿಡಿಗೋಡೆಗಳು ಇಟ್ಟಿಗೆ ಗಾರೆಗಳಿಂದ ಕಟ್ಟಿದವು. ಅಲ್ಲಲ್ಲಿ ಗುಂಡು ಬತೇರಿಗಳು, ಫಿರಂಗಿ ಹಾರಿಸುವ ಕಿಂಡಿಗಳು ಇವೆ. ಅವಕ್ಕೆ ಬಳಸಿರುವ ಗಾರೆಗಚ್ಚುಗಳು ಕೂಡ ಸ್ವಲ್ಪವೂ ನಲುಗದೆ ಹೊಸದಾಗಿ ನಿರ್ಮಿಸಿದ ಕೋಟೆಯಂತೆಯೆ ಉಳಿದುಬಂದಿವೆ. ರಾಜಧಾನಿ ಶ್ರೀರಂಗಪಟ್ಟಣದಲ್ಲಿ ಎರಡು ಸುತ್ತು ಕೋಟೆಗಳಿವೆ. ಇವುಗಳ ಹಿಂಭಾಗದಲ್ಲಿ ಮತ್ತೊಂದು ಮಣ್ಣಿನ ಕೋಟೆ ಇದ್ದಂತೆ ತಿಳಿದುಬರುತ್ತದೆ.



ಚಿತ್ರದುರ್ಗದ ಏಳುಸುತ್ತಿನ ಕೋಟೆ

ಕೋಟೆಯ ಕೆಲವು ಭಾಗಗಳನ್ನು ಇಟ್ಟಿಗೆಗಾರೆಗಳಿಂದಲೇ ನಿರ್ಮಿಸಲಾಗಿದೆ. ಆ ರಚನೆ ಅತ್ಯಂತ ಗಡುಸಾಗಿದೆ. ಈ ಕೋಟೆಯ ಗೋಡೆಗಳ ಬುಡದಲ್ಲಿಯೇ, ಭೂಮಿಯ ಒಳಭಾಗಕ್ಕೇ ಸೇರಿದಂತೆ, ದಪ್ಪವಾದ ಗೋಡೆಗಳಿಂದ ನಿರ್ಮಿತವಾದ, ಮದ್ದಿನ ಮನೆಗಳೂ ನೆಲಮಾಳಿಗೆಗಳೂ ಉಂಟು.

ರಹಮಾನ್‌ಘರ್ ಟಿಪ್ಪು ಕಟ್ಟಿಸಿದ ಗಿರಿದುರ್ಗಗಳಲ್ಲೊಂದು. ನಂದಿಯನ್ನು ಕಾರನ್‌ವಾಲೀಸ್ ಹಿಡಿದ ಮೇಲೆ ಟಿಪ್ಪು ಇದನ್ನು ಭದ್ರವಾದ ರಕ್ಷಣೆಯ ಸ್ಥಾನವನ್ನಾಗಿ ಮಾಡಲು ಯತ್ನಿಸಿದ. ಬೆಂಗಳೂರಿನಲ್ಲಿ ಇವನು



ಸುರಪುರ ಕೋಟೆ

ಕಟ್ಟಿಸಿದ ಕೋಟೆಯು ಮತ್ತು ಮದ್ದಿನ ಮನೆಗಳ ಸ್ವಲ್ಪಭಾಗ ಮಾತ್ರ ಉಳಿದುಬಂದಿದೆ. ಪಾವಗಡವನ್ನು ಗೆದ್ದಾಗ ಅಲ್ಲಿರುವ ಗಿರಿದುರ್ಗವನ್ನು ಇವನು ಹಲವು ರೀತಿಯಲ್ಲಿ ಅಭಿವೃದ್ಧಿಪಡಿಸಿ ಫಿರಂಗಿಗಳನ್ನು ಸ್ಥಾಪಿಸಲು ಗುಂಡು ಬತೇರಿಗಳು ಮತ್ತು ಕೋವಿಯನ್ನು ಉಪಯೋಗಿಸಲು ಕಿಂಡಿಗಳನ್ನು ಅಳವಡಿಸಿದ. ಎಲ್ಲಕ್ಕಿಂತ ಮೇಲಿರುವ ಸುಲ್ತಾನ್ ಬತೇರಿ ಸುಮಾರು 30 ಮೀಟರ್ ಸುತ್ತಳತೆಯುಳ್ಳ ಗುಂಡು ಬತೇರಿ. ಇದರ ಮೇಲೆ 14 ಫಿರಂಗಿಗಳನ್ನಳವಡಿಸಿಲು ಅವಕಾಶವಿದೆ. ಚಿತ್ರದುರ್ಗ, ಬಳ್ಳಾರಿ, ಮಿಡಿಗೇಶಿ ಮುಂತಾದವು ಹೈದರ್ ಮತ್ತು ಟಿಪ್ಪು ಇವರು ಗೆದ್ದು ಭದ್ರಪಡಿಸಿದ ಕೋಟೆಗಳು. ಟಿಪ್ಪು ಕಟ್ಟಿಸಿದ ಕೋಟೆಗಳಲ್ಲಿ ಅಪರೂಪವಾದುದು ಮಂಜರಾಬಾದಿನಲ್ಲಿ 200' ಎತ್ತರದ ಗುಡ್ಡವೊಂದರ ಮೇಲೆ ಕಟ್ಟಿರುವ ಅಷ್ಟಕೋನಾಕೃತಿಯ ನಕ್ಷತ್ರದಂತಿರುವಂಥ'ದ್ದು. ಇದರ ಎಂಟು ಮೂಲೆಗಳಲ್ಲಿಯೂ ಗುಂಡಾದ ರಕ್ಷಕ ಕೋಟೆಗಳಿವೆ. ಪ್ರವೇಶದ್ವಾರದ ದ್ವಾರಬಂಧವನ್ನು ಬಳ್ಳಿಸುರುಳಿಯಾಕೃತಿ ಮತ್ತು ಹುಲಿಯ ಪಟ್ಟೆಗಳಿಂದ ಅಲಂಕರಿಸಿ ಅರೆಗೋಲಾಕೃತಿಯ ಕಮಾನುಗಳನ್ನು ಅಳವಡಿಸಲಾಗಿದೆ. ಅಲ್ಲದೆ ಅದರ ಒಳಚಾವಣಿಯಲ್ಲಿ ಕೋಟೆಯ ವಿನ್ಯಾಸವನ್ನು ಬಿಡಿಸಿದೆ. ಬಹುಶಃ ಇಷ್ಟೊಂದು ವ್ಯಾಪಕವಾಗಿ ಮತ್ತು ಭದ್ರವಾಗಿ ಕೋಟೆಗಳನ್ನು ನಿರ್ಮಿಸಿದವರಲ್ಲಿ ಟಿಪ್ಪುವೇ ಕೊನೆಯವನೆಂದು ಹೇಳಬಹುದು.

ಉತ್ತರ ಕರ್ನಾಟಕ ಭಾಗದಲ್ಲೂ ಬಹಮನೀ ಮತ್ತು ಬಿಜಾಪುರ ಸುಲ್ತಾನರ ಕಾಲದ ಅನಂತರ ಅನೇಕ ಸಣ್ಣಪುಟ್ಟ ಕೋಟೆಗಳು ನಿರ್ಮಿತವಾದುವು. ಅಲ್ಲಿ ಹಲವು ಜಹಗೀರಿಗಳು, ದೇಸಗತ್ತಿಗಳು ಹುಟ್ಟಿಕೊಂಡವು. ಅವುಗಳ ಮುಖ್ಯಸ್ಥರು ತಮ್ಮ ಸೌಧಗಳ ಭದ್ರತೆಗಾಗಿ ವಾಡೆಗಳನ್ನು ನಿರ್ಮಿಸಿದರು. ಈ ಕೋಟೆಗಳು ಚಿಕ್ಕವು, ಸಾಮಾನ್ಯವಾಗಿ ಚೌಕ ವಿನ್ಯಾಸದವು. ನಾಲ್ಕು ಮೂಲೆಗಳಲ್ಲಿ ಮತ್ತು ನಾಲ್ಕು ದಿಕ್ಕಿನ ಗೋಡೆಗಳಲ್ಲಿ ನಡುವೆ ಗುಂಡುಬತೇರಿಗಳನ್ನು, ಒಂದು ಭಾಗದಲ್ಲಿ ಮಾತ್ರ ಪ್ರವೇಶದ್ವಾರ, ಕೆಲವು ಎಡೆ ಸುತ್ತಲೂ ಕಂದಕಗಳು ಇರುತ್ತಿದ್ದುದುಂಟು. ಇಂಥ ಚಿಕ್ಕ ಕೋಟೆಗಳಲ್ಲಿ ಕೋಟೆಬಾಗಿಲಿಗೆದುರಾಗಿ ಹಿಂಭಾಗದ ಗೋಡೆಗೆ ಹೊಂದಿಕೊಂಡಂತೆ ಮುಖ್ಯ ಸೌಧವೂ ಉಳಿದಂತೆ ಕೆಲವು ಅಧಿಕಾರಿಗಳ ಮತ್ತು ಸೈನ್ಯದವರ ಮನೆಗಳು ಮಾತ್ರ ಇರಲು ಅವಕಾಶ ಇರುತ್ತಿತ್ತು. ಶತ್ರುಗಳ ಚಲನವನ್ನು ಅರಿಯಲು ಕೋಟೆಗೆ ಸಮೀಪದಲ್ಲಿ ಎತ್ತರವಾದ ದಿಬ್ಬದ ಮೇಲೆ ಉನ್ನತವಾದ ವೀಕ್ಷಣಾಗೋಪುರಗಳಿರುತ್ತಿದ್ದುದು ಸಾಮಾನ್ಯ. ಕಿತ್ತೂರು, ತೆಕ್ಕಲಕೋಟೆ ಮೊದಲಾದ ಕಡೆ ಇರುವ ಕೋಟೆಗಳು ಈ ಬಗೆಯವು.

ಕೋಟೆಗಳನ್ನು ಅವುಗಳ ಪರಿಸರ, ರಚನೆ, ರೀತಿಗಳನ್ನಾಧರಿಸಿ ಹಲವು ಬಗೆಯಾಗಿ ವಿಂಗಡಿಸಲಾಗಿದೆ. ಕಾವ್ಯಗಳಲ್ಲಿ, ಶಾಸನಗಳಲ್ಲಿ ನಗರಗಳನ್ನು ವರ್ಣಿಸುವಾಗ ಕೋಟೆಗಳು, ಆಳ್ವೇರಿಗಳು, ತೆನೆಗಳು ಮುಂತಾದುವುಗಳ ವರ್ಣನೆ ವಿವರವಾಗಿ ಕಂಡುಬರುತ್ತದೆ. ಮುಖ್ಯವಾಗಿ ಇವನ್ನು ಗಿರಿದುರ್ಗ, ವನದುರ್ಗ ಮತ್ತು ಜಲದುರ್ಗಗಳೆಂದು ವಿಂಗಡಿಸುವುದು ರೂಢಿ. ಕನ್ನಡನಾಡಿನ ಜನತೆಯ ರಾಜಮನೆತನಗಳ ಆಗುಹೋಗುಗಗಳಲ್ಲಿ ಮಹತ್ತರ ಪಾತ್ರವನ್ನು ವಹಿಸಿದ ಈ ಕೋಟೆಗಳು ಅಂದಿನ ಶಕ್ತಿಯ, ಸಾಧನೆಗಳ ಸಂಕೇತಗಳಾಗಿ ನಾನಾ ಕಡೆ ಚದುರಿ ನಿಂತಿವೆ.

19ನೆಯ ಶತಮಾನದಲ್ಲಿ, ಕರ್ನಾಟಕದ ಬಹುಭಾಗ ಬ್ರಿಟಿಷರ ಕೈವಶವಾಗಿದ್ದ ಕಾಲದಲ್ಲಿ, ಸ್ಥಳೀಯ ಜನ ಕೋಟೆಗಳಲ್ಲಿ ಆಶ್ರಯಪಡೆದು ಬಲಿಷ್ಠರಾಗಿ ಸರ್ಕಾರಕ್ಕೆ ತೊಂದರೆ ಕೊಡಬಹುದೆಂಬ ದೃಷ್ಟಿಯಿಂದ ಅವರು ಅನೇಕ ಕೋಟೆಗಳನ್ನು ನೆಲಸಮಮಾಡಿದರು ಅಥವಾ ನಿರುಪಯುಕ್ತವಾಗುವಂತೆ ಮಾಡಿದರು. ಅಲ್ಲದೆ ಆ ಕಾಲದಲ್ಲಿ ದೇಶೀ ಪಾಳೆಯಪಟ್ಟುಗಳ ಪರಸ್ಪರ ಕಾದಾಟ ಅಥವಾ ರಕ್ಷಣೆಯ ಪ್ರಶ್ನೆಯೇ ಇರಲಿಲ್ಲವಾಗಿ ಯಾವ ಹೊಸ ಕೋಟೆಗಳ ರಚನೆಯೂ ಆಗಲಿಲ್ಲ. (ಎಂ.ಎಚ್.)

**ಕೋಡಂಗಿ** : ಯಕ್ಷಗಾನ ಆಟಗಳಲ್ಲಿಯ ಒಂದು ಹಾಸ್ಯ ಪಾತ್ರ. ಕೋಡಂಗಿ ಎಂಬ ಮಾತಿಗೆ ಹಾಸ್ಯಗಾರ, ವಿನೋದಗಾರ, ವಿದೂಷಕ, ವಿಚಿತ್ರ ವೇಷ ಧರಿಸಿದ ವ್ಯಕ್ತಿ ಎಂಬ ಅರ್ಥ ಇದೆ.

ಯಕ್ಷಗಾನ ಆಟಗಳಲ್ಲಿ (ತಾಳಮದ್ದಳೆ ಇಲ್ಲದೆ ವೇಷ ಕಟ್ಟಿ ಕುಣಿಯುವುದು) ಪ್ರತಿಯೊಂದು ಪಾತ್ರವನ್ನೂ ರಂಗಸ್ಥಳಕ್ಕೆ ಪ್ರವೇಶಗೊಳಿಸುವುದು ಕೋಡಂಗಿಯ ಕೆಲಸ. ಭಾಗವತರನ್ನು ಬಿಟ್ಟರೆ ಕೋಡಂಗಿ ತಾನೇ ಸೂತ್ರಧಾರನಾಗಿ ಪ್ರೇಕ್ಷಕರಿಗೆ ಪಾತ್ರಗಳ ಪರಿಚಯ ಮಾಡಿಸುತ್ತಾನೆ. ರಂಗ ಪ್ರವೇಶಿಸುತ್ತಾ ಆಟಕೆ ಮೊದಲು ಕೋಡಂಗಿ, ತೋಟಕೆ ಮೊದಲು ಮೂಲಂಗಿ, ಹರೇ ರಮಣ ಗೋವಿಂದ,



ರಮಾರಮಣ ಗೋವಿಂದ ಎಂಬ ಹಾಡಿನೊಂದಿಗೆ ಪ್ರೇಕ್ಷಕರನ್ನು ನಕ್ಕು ನಗಿಸುತ್ತಾನೆ. ಇವನಿಗೆ ರಂಗಸ್ಥಳದಲ್ಲಿ ನಿಲ್ಲಲ್ಲು ಒಂದು ಗೊತ್ತಾದ ಸ್ಥಾನವಿರುತ್ತದೆ. ಇವನು ಅಲ್ಲಿ ನಿಂತು, ಒಂದು ಪಾತ್ರ ರಂಗಸ್ಥಳಕ್ಕೆ ಬಂದಕೊಡಲೇ ತಾವು ಧಾರ್ರೈ ಪೇಳ್ರೈ, ರಾಜಾ ರಘುಕುಲಸೋಮ ಎಂದು ಮುಂತಾಗಿ ಪ್ರಶ್ನೆ ಹಾಕಿ ಪಾತ್ರಗಳ ಬಾಯಿಂದ ತಾನು ಇಂಥ'ವನು, ಇಂಥ'ವಳು ಎಂದು ಹೇಳಿಸುವನು. ಪಾತ್ರ ಮಾತನಾಡುವಾಗ, ಮಾತಿನ ಮಧ್ಯೆ, ಅಲ್ಲವೆ? ಹೌದು, ಆಹಾ, ಮತ್ತೂ ಎಂದೆಲ್ಲಾ 'ಸುಮಾನು' (ಮನಬಂದಂತೆ) ಆಡಿ ಕಥೆ ಮುಂದುವರಿಯಲು ಸಹಾಯ ಮಾಡುವುದು ಇವನ ಕೆಲಸ.

ಕೋಡಂಗಿ ವೇಷ ಯಾವ ಬಗೆಯದಾದರೂ ಆಗಿರಬಹುದು. ಅದು ಪ್ರೇಕ್ಷಕರಲ್ಲಿ ನಗು ಹುಟ್ಟಿಸುವಂತಿರಬೇಕು. ಚಿತ್ರ ವಿಚಿತ್ರ ಬಣ್ಣದ ಬಟ್ಟೆ ಧರಿಸಿ ಉದ್ದನೆಯ ವಿಚಿತ್ರವಾದ ಟೋಪಿ ಹಾಕಿಕೊಳ್ಳುವುದು ಪದ್ಧತಿ.

ಅಂಗಾಂಗಗಳನ್ನು ವಕ್ರವಕ್ರವಾಗಿ ತಿರುಗಿಸುವುದು, ಬಾಯಿಗೆ ಬಂದದ್ದನ್ನು ಮಾತಾಡುವುದು, ಮೂಗಿನಿಂದ ವೀಣೆ ನುಡಿಸುವುದು, ಅಂಗೈಯ ಮುಂಗೈಯ ಮಾಡುತ್ತೇನೆ, ಮುಂಗೈಯ ಅಂಗೈಯ ಮಾಡುತ್ತೇನೆ ಎಂದೆಲ್ಲ ಕೈಯನ್ನು ಹಿಂದಕ್ಕೂ ಮುಂದಕ್ಕೂ ತಿರುಗಿಸುವುದು ಮೊದಲಾದ ಚಿತ್ರ ವಿಚಿತ್ರ ಅಂಗಾಭಿನಯಗಳಿಂದ ಪ್ರೇಕ್ಷಕರ ಬೇಸರಿಕೆಯನ್ನು ಕಳೆಯುತ್ತಾನೆ.ಇವನ ಹಾಸ್ಯ, ಚೇಷ್ಟೆ ಒಮ್ಮೊಮ್ಮೆ ಅತಿ ಎನಿಸುವುದೂ ಉಂಟು.

ಕೆಲವೊಮ್ಮೆ ಮೊಹರಂ ಹಬ್ಬದ ಮೆರವಣಿಗೆಯಲ್ಲೂ ಹುಲಿವೇಷ, ಪಾಳೆಗಾರ ವೇಷಗಳಂತೆ ಕೋಡಂಗಿ ವೇಷವೂ ಬರುವುದುಂಟು. ಇಲ್ಲಿ ಇದೊಂದು ತಮಾಷೆ ವೇಷ ಅಷ್ಟೆ. ಯಕ್ಷಗಾನದ ಕೋಡಂಗಿಗೂ ಈ ವೇಷಕ್ಕೂ ಏನೂ ಸಂಬಂಧ ಕಂಡುಬರುವುದಿಲ್ಲ. (ಜಿ.ಆರ್.ಐ.)

**ಕೋಡಿಹಳ್ಳಿ :** ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನಲ್ಲಿ ಬೆಳ್ಳೂರಿನಿಂದ ನೈಋತ್ಯಕ್ಕೆ 6ಕಿಮೀ ದೂರದಲ್ಲಿ ದಡಿಗನಕೆರೆಯ ಕೋಡಿಯ ಬಳಿ ಇರುವ ಒಂದು ಹಳ್ಳಿ. ಹೊಯ್ಸಳರ ಕಾಲದ ಶಾಸನಗಳಲ್ಲಿ ಈ ಊರನ್ನು ಅನಾದಿಯಗ್ರಹಾರ ದಡಿಗನಕೆರೆ ಎಂದು ಉಲ್ಲೇಖಿಸಲಾಗಿದೆ. ಕೆರೆಯ ಉತ್ತರಕ್ಕೆ ದಡಿಗ, ದಕ್ಷಿಣಕ್ಕೆ ಕೋಡಿಹಳ್ಳಿ ಇವೆ. ಕೆರೆಗೂ ಎಡದಂಡೆಯ ಮೇಲಿನ ಊರಿಗೂ ದಡಿಗನಕೆರೆ ಎಂಬ ಹೆಸರೂ ಕೋಡಿಹಳ್ಳಿಗೆ ಸೇರಿದಂತೆ ಕೋಡಿಯ ಬಳಿ ಇರುವ ಈಶ್ವರ ದೇವಾಲಯಕ್ಕೆ ದಡಿಗೇಶ್ವರ ಎಂಬ ಹೆಸರೂ ಇದ್ದು ಈ ಹೆಸರುಗಳು ತಲಕಾಡು ಗಂಗರ ಮೂಲಪುರುಷರಲ್ಲೊಬ್ಬನಾದ ದಡಿಗನ ನೆನಪನ್ನು ತರುತ್ತವೆ. ಮೊದಲಿಗೆ ಈ ಎರಡು ಊರುಗಳೂ ಒಂದೇ ಆಗಿದ್ದಿರಬೇಕೆಂದು ತೋರುತ್ತದೆ.

ದಡಿಗದಲ್ಲಿರುವ ಯೋಗಾನರಸಿಂಹ ದೇವಾಲಯ ಮತ್ತು ಕೋಡಿಹಳ್ಳಿಯಲ್ಲಿರುವ ದಡಿಗೇಶ್ವರ ದೇವಾಲಯಗಳು ಇಟ್ಟಿಗೆಯ ಗೋಡೆಗಳಿಂದ ರಚಿತವಾಗಿವೆ. ಹೊರನೋಟಕ್ಕೆ ಇವು ಈಚಿನ ರಚನೆಗಳಂತೆ ಕಂಡುಬಂದರೂ ಒಳಗಿನ ಕಂಬಗಳು, ನಡುವಣ ದೊಡ್ಡ ಅಂಕಣದ ಚಾವಣಿಯಲ್ಲಿ ಉಬ್ಬಿಸಿ ಬಿಡಿಸಿರುವ ಪೂರ್ಣ ವಿಕಸಿತ ಪದ್ಮ ಮೊದಲಾದವು ಗಂಗರ ಕಾಲದ ರಚನೆಗಳಂತಿವೆ. ಹತ್ತನೆಯ ಶತಮಾನದಲ್ಲಿ ಇಲ್ಲಿ ಜೈನ ವಸತಿಯಿದ್ದ ವಿಷಯ ಕೋಡಿಹಳ್ಳಿಯ ನಿಷಿಧಿ ಶಾಸನವೊಂದರಿಂದ ವ್ಯಕ್ತವಾಗುತ್ತದೆ. ಸಂನ್ಯಾಸವನ್ನು ಪಡೆದು ಎರಡು ಸಲ ನೋಂತು ಮುಡಿಪಿದ ಭವ್ಯನೊಬ್ಬನ ನೆನಪಿಗೆ ಆತನ ಮಗಳು ಬಿಡಕ್ಕ ನಿಷಿಧಿಯನ್ನು ನಿಲ್ಲಿಸಿದ್ದಾಳೆ. ದಡಿಗನಕೆರೆಯಲ್ಲಿ ಪಂಚಬಸದಿಯಿದೆ. ಹೊಯ್ಸಳರ ಕಾಲದಲ್ಲಿ ಮರಿಯಾನೆ ಮತ್ತು ಭರತರು ಬಾಹುಬಲಿ ಕೂಟವನ್ನು ಪ್ರತಿಷ್ಠಾಪಿಸಿದ್ದರು.

ದಡಿಗೇಶ್ವರ ದೇವಾಲಯದಲ್ಲಿ ಗರ್ಭಗೃಹ, ತೆರೆದ ಸುಕನಾಸಿ ಮತ್ತು ನವರಂಗಗಳಿವೆ. ಗರ್ಭಗೃಹದ ಚಾವಣಿಯಲ್ಲಿ ವಿಶಾಲವಾದ ಪದ್ಮಾಕೃತಿ ಇದೆ. ಇಲ್ಲಿನ ದೊಡ್ಡ ಶಿವಲಿಂಗ ಅಗಲವಾದ ಪಾಣಿಪೀಠದ ಮೇಲಿದೆ. ಇದು ನಂದಿ, ನರಸಮಂಗಲಗಳಲ್ಲಿರುವ ಲಿಂಗಗಳಂತಿದೆ. ನವರಂಗದಲ್ಲಿ ಚೌಕನಾದ ಬುಡವುಳ್ಳ ಅಷ್ಟಮುಖದ ಕಂಬಗಳೂ ನಂದಿ, ಸೂರ್ಯ, ಗಣೇಶ, ನಾಗರ ಮೂರ್ತಿಗಳೂ ಇವೆ. ಸೂರ್ಯನ ಹಿಂಭಾಗದಲ್ಲಿ ಲಾಳದಾಕಾರದ ಪ್ರಭಾವಳಿಯಿದೆ. ಇದರ ಮೇಲೆ ಬಿಡಿಸಿರುವ ಬಳ್ಳಿ ಸುರುಳಿ ಗಂಗರ ಶಿಲ್ಪದ ಕುರುಹಾಗಿದೆ. ಇದು ಅರಳುಗುಪ್ಪೆಯ ಈಶ್ವರ ದೇವಾಲಯದಲ್ಲಿನ ಉಮಾಮಹೇಶ್ವರ ಮೂರ್ತಿಯ ಪ್ರಭಾವಳಿಯಂತಿದೆ.

ಯೋಗಾನರಸಿಂಹ ದಡಿಗದ ಪುರಾತನ ದೇವಾಲಯ. ಇಲ್ಲಿನ ಕಂಬಗಳು ಗಂಗ ಸ್ತಂಭರೀತಿಯ ಪ್ರಾರಂಭಿಕ ಘಟ್ಟದ ರಚನೆಗಳಂತೆ ಇವೆ. ಯೋಗಾನರಸಿಂಹನ ಮೂರ್ತಿ ಸುಂದರವಾಗಿದೆ. ಇಲ್ಲಿರುವ ಚೆನ್ನಕೇಶವ ದೇವಾಲಯ ಹೊಯ್ಸಳರ ಕಾಲದ ಬಳಪದ ಕಲ್ಲಿನ ಸಾಧಾರಣ ಕಟ್ಟಡ. ದೇವಾಲಯದಲ್ಲಿರುವ ಐದು ಅಡಿ ಎತ್ತರದ ಚೆನ್ನಕೇಶವ ಮೂರ್ತಿಗೆ ಹೆಚ್ಚು ಅಲಂಕರಣಗಳಿಲ್ಲದೆ ಇದರ ಪ್ರಭಾವಳಿಯಲ್ಲಿ ದಶಾವತಾರವಿದೆ. ದೇವಾಲಯದ ಮುಖಮಂಟಪ ಪಾತಾಳಾಂಕಣಗಳು ವಿಜಯನಗರದ ಕಾಲದಲ್ಲಿ ಸೇರ್ಪಡೆಗೊಂಡಿವೆ. ಇದಲ್ಲದೆ ಸೋಮೇಶ್ವರ ದೇವಾಲಯ ಮತ್ತು ಶಾಂತಿನಾಥ ಬಸದಿ ಇಲ್ಲಿವೆ. ಶಾಂತಿನಾಥ ಬಸದಿಯಲ್ಲಿನ ಸುಂದರವಾದ ಜಿನಬಿಂಬವನ್ನು ಬೇರೆಡೆಯಿಂದ ತಂದು ಇಲ್ಲಿ ಪ್ರತಿಷ್ಠಾಪಿಸಿದುದಾಗಿ ತಿಳಿದುಬರುತ್ತದೆ. (ಎಂ.ಎಚ್.)

**ಕೋನಯ್ಯ :** ಸು.1750. ಬ್ರಾಹ್ಮಣ ಕವಿ. ಕೃಷ್ಣಾರ್ಜುನಸಂಗರ ಎಂಬ ಗ್ರಂಥದ ಕರ್ತೃ. ಹೋತೂರು ಬೆಟ್ಟರಸನ ಮಗ. ಇವನಿಗೆ ಸರಸ ಭಾರತಿ ಎಂಬ ಬಿರುದು ಇದ್ದಂತೆ ತೋರುತ್ತದೆ. ಪೂರ್ವಕವಿಗಳಲ್ಲಿ ವ್ಯಾಸ, ವಾಲ್ಮೀಕಿ, ಕುಮಾರವ್ಯಾಸ, ಲಕ್ಷ್ಮೀಶ ಮೊದಲಾದವರನ್ನು ಸ್ಮರಿಸಿದ್ದಾನೆ.

ಕೃಷ್ಣಾರ್ಜುನಸಂಗರ ಭಾಮಿನೀ ಷಟ್ಪದಿಯಲ್ಲಿದೆ. ಇದಕ್ಕೆ ಗಯಚರಿತೆ ಎಂಬ ಹೆಸರೂ ಇದೆ. ಇದರಲ್ಲಿ 27 ಸಂಧಿ, 1721 ಪದ್ಯ ಇವೆ. ಗಯನೆಂಬ ಗಂಧರ್ವ ಶಿರೋಮಣಿ ಕೃಷ್ಣರಾಯಂಗೆ ದ್ರೋಹವನೆಸಗಿ ಫಲುಗುಣನ ಮರೆಹೋಗಲು ಹರಿ ಕೊಡಹೇಳಲವನನು ಕೊಡನೆನೆ ಕಾದಿದರು ಹರಿನರರು ದ್ವೈತಕಾನನದಿ ಪರಮೇಶನೀರ್ವರ ತಿಳುಹಿ ಸಾಮದಲೊಂದಮಾಡಿದನು - ಇದು ಕಥಾವಸ್ತು. ಮಹಾಭಾರತದ ವನಪರ್ವದಲ್ಲಿಯ ಕಥೆ ತನ್ನ ಗ್ರಂಥಕ್ಕೆ ಆಕರ ಎಂಬುದು ಕವಿಯ ಹೇಳಿಕೆ. ಆದರೆ ವ್ಯಾಸಭಾರತದ ವನಪರ್ವದಲ್ಲಿ ಈ ಕಥೆ ಸಿಕ್ಕುವುದಿಲ್ಲ. ಹಲವೆಡೆ ಸಂಸ್ಕೃತ ಸುಭಾಷಿತಗಳ ರೂಪಾಂತರವಿದೆ. ಕೆಲವು ಪದ್ಯಗಳಲ್ಲಿ ಕವಿಯ ಸ್ವೋಪಜ್ಞತೆಯನ್ನು ಕಾಣಬಹುದಾಗಿದೆ. ಬಂಧ ಸರಳವೂ ಸುಲಭವೂ ಆಗಿದೆ. ಒಟ್ಟಿನಲ್ಲಿ ಗಯಚರಿತೆ ಒಂದು ಸಾಮಾನ್ಯ ಕಾವ್ಯ ಎನ್ನಬಹುದು. (ಎಂ.ಆರ್)

**ಕೋರಮಂಗಲ :** ಹಾಸನ ಜಿಲ್ಲೆ ಹಾಸನ ತಾಲ್ಲೂಕಿನಲ್ಲಿ ಹಾಸನದಿಂದ ಈಶಾನ್ಯಕ್ಕೆ 11ಕಿಮೀ ದೂರದಲ್ಲಿರುವ ಹಳ್ಳಿ. ಇತಿಹಾಸಪ್ರಸಿದ್ಧ ಸ್ಥಳ. ಇಲ್ಲಿ ಮೂರು ಹೊಯ್ಸಳ ದೇವಾಲಯಗಳಿವೆ. ಇಲ್ಲಿರುವ ಬೂಚೇಶ್ವರ ದೇವಾಲಯ ಹೊಯ್ಸಳ ವಾಸ್ತುಶೈಲಿಯ ಉತ್ತಮ ಕೃತಿ. ಈ ಗುಡಿಯನ್ನು ಬೂಚಿರಾಜ ಎಂಬ ಅಧಿಕಾರಿ 2ನೆಯ ಬಲ್ಲಾಳನ ಸಿಂಹಾಸನಾರೋಹಣದ ನೆನಪಿಗಾಗಿ 1173ರಲ್ಲಿ ಕಟ್ಟಿಸಿದ್ದ. ಇದರಲ್ಲಿ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಅದರ ಮುಂದೆ 18 ಕಂಬಗಳಿಂದೆತ್ತಿದ್ದ ಮಹಾಮಂಟಪ ಇವೆ. ಪೂರ್ವಭಾಗದಲ್ಲಿ ಗರ್ಭಗುಡಿಯ ಲಿಂಗದ ನೇರ ಎದುರಾಗಿ ಸೂರ್ಯದೇವರ ಗುಡಿ ಇದೆ. ಪ್ರವೇಶ ದ್ವಾರಗಳು ಮಹಾಮಂಟಪದ ಇಕ್ಕೆಲಗಳಲ್ಲಿವೆ. ಇಡೀ ಘಟಕ ಎತ್ತರದ ಜಾಗದಲ್ಲಿದೆ. ಇದು ಪ್ರಾಯಶಃ ಜಗತಿಯ ಮೇಲಿರಬೇಕು.



ಬೂಚೇಶ್ವರ ದೇವಾಲಯದ ಭಿತ್ತಿಶಿಲ್ಪಗಳು

ಹೊರಮೈಯಲ್ಲಿ ಹೊಯ್ಸಳ ಶೈಲಿಗೆ ಸಾಮಾನ್ಯವಾದ ಶಿಲ್ಪಿತ ಅಧಿಷ್ಠಾನಪಟ್ಟಿಕೆಗಳು, ಭಿತ್ತಿಯ ಮೇಲೆ ದೇವಶಿಲ್ಪಗಳು ಇತ್ಯಾದಿ ಇವೆ. ಹೊರಭಾಗದಲ್ಲಿ ಹಾಗೂ ಶಿಖರದಲ್ಲಿ ಶಿಲ್ಪಗಳಿವೆ. ಶಿಖರದ ಪೂರ್ವಭಾಗದಲ್ಲಿ ಬಿಡಿಸಿರುವ ಇಂದ್ರ ಮತ್ತು ಭಿತ್ತಿಯ ಮೇಲಿನ ಅನೇಕ ಶಿಲ್ಪಗಳು ಸೊಬಗಿನವು. ತಿರುಗಣೆಯಲ್ಲಿ ಮಾಡಿದ ದುಂಡುಕಂಬಗಳು, ದ್ವಾರಬಂಧ ಮತ್ತು ಭುವನೇಶ್ವರಿ ಸುಂದರ ರಚನೆಗಳು. ಗರ್ಭಗುಡಿಯ ನೇರ ಎದುರಿಗೆ ಸೂರ್ಯಗುಡಿ ಇದೆ. ಮಹಾಮಂಟಪ ತೆರೆದಿದ್ದು ಸುತ್ತಲೂ ಕಕ್ಷಾಸನ ಇರುವುದು, ಪಾರ್ಶ್ವದಲ್ಲಿ ದ್ವಾರಗಳಿರುವುದೂ ಈ

ದೇವಾಲಯದ ವೈಶಿಷ್ಟ್ಯ. ಈ ಗುಡಿಯ ಈಶಾನ್ಯದಲ್ಲಿ ಇದೇ ಕಾಲದ ಭೈರವನ ಗುಡಿ ಇದೆ. ನಾಗೇಶ್ವರ, ಗೋವಿಂದೇಶ್ವರ ದೇವಾಲಯಗಳು ಬಹು ಶಿಥಿಲವಾಗಿವೆ. ಇವು ಬೂಚೇಶ್ವರ ಗುಡಿಗಿಂತ ಸ್ವಲ್ಪ ಹಳೆಯವು. ಗರ್ಭಗೃಹ, ಸುಕನಾಸಿ, ನವರಂಗಗಳಿರುವ ಈ ದೇವಾಲಯಗಳಲ್ಲಿ ಸುಕನಾಸಿ ತೆರೆದಂತಿರುವುದು ವಿಶೇಷ. ಇತರ ಹೊಯ್ಸಳ ಶೈಲಿಯ ಅಂಶಗಳೆಲ್ಲ ಇವುಗಳಲ್ಲಿ ಇವೆ. (ಕೆ.ಎಸ್.ಎಸ್.)

**ಕೋಲ್, ಆರ್ಥರ್ ಹೆನ್ರಿ :** -1844. ಮೈಸೂರು ಸಂಸ್ಥಾನದಲ್ಲಿದ್ದ ಈಸ್ಟ್ ಇಂಡಿಯಾ ಕಂಪೆನಿಯ ರೆಸಿಡೆಂಟ್ (1818-27). ಮೊದಲು ಕಂಪೆನಿಯ ಸೇವೆಯಲ್ಲಿ ಗುಮಾಸ್ತನಾಗಿದ್ದು (1801) ವಿಲ್ಕ್ಸ್ ಮೈಸೂರು ಸಂಸ್ಥಾನದ ರೆಸಿಡೆಂಟ್ ಆಗಿದ್ದಾಗ 1806ರಲ್ಲಿ ಆತನ ಕಾರ್ಯದರ್ಶಿಯಾದ. ವಿಲ್ಕ್ಸ್ ಹೆಲಿನಾ ದ್ವೀಪಕ್ಕೆ ಹೋದಮೇಲೆ (1809) ಆತನ ಸ್ಥಾನದಲ್ಲಿ ಹಂಗಾಮಿ ರೆಸಿಡೆಂಟ್ ಆದ. ಖಾಯಂ ರೆಸಿಡೆಂಟಾಗಿ 1812ರಲ್ಲಿ ಕಾರ್ಯನಿರ್ವಹಣೆ ಮಾಡಿದ್ದ. 1818ರಲ್ಲಿ ಸರ್ಕಾರಿ ಲಾಟರಿಗಳ ಸೂಪರಿಂಟೆಂಡೆಂಟ್ ಆಗಿದ್ದ. 1827ರಲ್ಲಿ ರಜೆಯ ಮೇಲೆ ಲಂಡನ್ನಿಗೆ ತೆರಳಿ 1829ರಲ್ಲಿ ನಿವೃತ್ತನಾದ. ಮರಣ 1844. ಈತ "ಬಹಳ ವರ್ಷಗಳವರೆಗೆ ರೆಸಿಡೆಂಟನಾಗಿದ್ದ. ಮೈಸೂರನ್ನು ಬಿಟ್ಟು ಹೋದ ಮೇಲೆ ಮಾರಿಷಸ್ ದ್ವೀಪಕ್ಕೆ ಹೋದ. ಪಾರ್ಲಿಮೆಂಟಿನ ಸದಸ್ಯನಾಗಿಯೂ ಇದ್ದಂತೆ ತೋರುತ್ತದೆ; ಈತನ ಬಗ್ಗೆ ಹೆಚ್ಚು ಮಾಹಿತಿಗಳು ತಿಳಿದುಬಂದಿಲ್ಲ" ಎಂದು ಲೂಯಿ ರೈಸ್ ತಿಳಿಸುತ್ತಾರೆ. ಬೆಂಗಳೂರಿನ ಕೋಲ್ಸ್ ಪಾರ್ಕ್ ಈತನ ಹೆಸರಿನಲ್ಲಿದೆ.

ದಿವಾನ್ ಪೂರ್ಣಯ್ಯನವರ ಬಗ್ಗೆ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಅಸಮಾಧಾನವಾಗಿತ್ತಾಗಿ ಮಹಾರಾಜರು ಪ್ರಾಪ್ತವಯಸ್ಸನ್ನು ಮುಟ್ಟುತ್ತಿದ್ದಂತೆಯೇ (1811) ತಾವೇ ಆಡಳಿತ ವಹಿಸಿಕೊಳ್ಳುವ ಅಪೇಕ್ಷೆಯನ್ನು ರೆಸಿಡೆಂಟ್ ಕೋಲ್ ಅವರಿಗೆ ವ್ಯಕ್ತಪಡಿಸಿದಾಗ, ಕೋಲ್ ಪೂರ್ಣಯ್ಯನವರನ್ನು ಆಡಳಿತದಲ್ಲಿ ಉಳಿಸಿಕೊಳ್ಳುವ ಪ್ರಯತ್ನ ನಡೆಸಿದ. ಆದರೆ ಪೂರ್ಣಯ್ಯನವರು ನಿವೃತ್ತರಾದರು. ಮಹಾರಾಜರ ನೇರ ಆಳಿಕೆ ಪ್ರಾರಂಭವಾದ ಅನಂತರದ ರಾಜರ ಆರ್ಥಿಕ ನೀತಿಯ ಬಗ್ಗೆ ಕೋಲ್ ಅಸಮಾಧಾನ ತಾಳಿದ್ದನಲ್ಲದೆ, ಮಹಾರಾಜರಿಗೂ ಈತನಿಗೂ ಸ್ವಲ್ಪಮಟ್ಟಿಗೆ ವಿರಸವೂ ಬೆಳೆದಿತ್ತು. ಮದರಾಸಿನ ಗವರ್ನರ್ ಮನ್ರೊ 1825ರಲ್ಲಿ ಮೈಸೂರಿಗೆ ಬಂದು ಪರಿಸ್ಥಿತಿಯನ್ನು ಪರಿಶೀಲಿಸಿ ವೆಚ್ಚಗಳ ಬಗ್ಗೆ ಕೋಲ್ ಮಾಡಿದ ವರದಿ ಆಧಾರರಹಿತವೆಂದು ತೀರ್ಮಾನಿಸಿದನಲ್ಲದೆ ಇಬ್ಬರಲ್ಲೂ ಸಹಕಾರ ಬೆಳೆಸಲು ಪ್ರಯತ್ನಿಸಿದ. (ಎ.ಜಿ.ಕೆ.)

**ಕೋಲ್‍ಮನ್ ವೆಸ್ಲಿ, ಸಿ. :** -1954. ಮಂಡ್ಯದಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ ಸ್ಥಾಪನೆಗೆ (1933) ಮೂಲ ಕಾರಣರಾದ ಕೃಷಿ ತಜ್ಞ. ಹಿಂದಿನ ಮೈಸೂರು ಸಂಸ್ಥಾನದ ವ್ಯವಸಾಯ ಇಲಾಖೆಯ ಪ್ರಥಮ ನಿರ್ದೇಶಕ (1908-34). ಕೋಲ್‍ಮನ್ ಮೂಲತಃ ಕೆನಡ ದೇಶದವರು. 1908ರಲ್ಲಿ ಇವರು ವ್ಯವಸಾಯ ಇಲಾಖೆಯ ನಿರ್ದೇಶಕರಾಗಿ ನೇಮಕಗೊಂಡು ಸುಮಾರು ಇಪ್ಪತ್ತೈದು ವರ್ಷಗಳಷ್ಟು ದೀರ್ಘಕಾಲ ಆ ಹುದ್ದೆಯಲ್ಲಿ ತಮ್ಮ ಸೇವೆಯನ್ನು ಸಲ್ಲಿಸಿದರು. ಈ ಅವಧಿಯಲ್ಲಿ ವ್ಯವಸಾಯ ಇಲಾಖೆಯನ್ನು ವೈಜ್ಞಾನಿಕವಾಗಿ ಸಜ್ಜುಗೊಳಿಸಿ ಅದು ಪ್ರಗತಿ ಪಥದಲ್ಲಿ ಹೆಜ್ಜೆ ಇಡಲು ನಾಂದಿ ಹಾಡಿದರು. ಅಡಿಕೆ ಬೆಳೆಗೆ ತಗಲುವ ಕೊಳೆರೋಗ, ಕಾಫಿಗೆ ಕಾಡುವ ಬೋರಕರ್‌ಗಳು ಇವುಗಳ ಕುರಿತಂತೆ ಸಂಶೋಧನೆ ನಡೆಸಿ ವೈಜ್ಞಾನಿಕ ವಿಧಾನಗಳಿಂದ ರೋಗ ನಿಯಂತ್ರಣವನ್ನು ತೋರಿಸಿಕೊಟ್ಟರು. ವಿದೇಶಗಳಿಂದ ವಿವಿಧ ಬಗೆಯ ತರಕಾರಿ ಬೀಜಗಳನ್ನು ತಂದು ಅವುಗಳನ್ನು ಹಣದ ಬೆಳೆಯಾಗಿ ಲಾಭದಾಯಕವಾಗಿ ಬೆಳೆಯುವಂತೆ ರೈತರನ್ನು ಉತ್ತೇಜಿಸಿದರು. ಬೆಂಗಳೂರಿನ ಸುತ್ತಲಿನ ರೈತರು ತರಕಾರಿ ಬೆಳೆಯುವುದರಲ್ಲಿ ಪರಿಣತಿ ಹೊಂದಿರಲು ಅಂದಿನ ಕೋಲ್‍ಮನ್‍ರ ಒತ್ತಾಸೆಯೇ ಪ್ರಮುಖ ಕಾರಣವಾಯಿತು.

1931ರಲ್ಲಿ ಇರ್ವಿನ್ ನಾಲೆಯ ಮೂಲಕ (ಈಗಿನ ವಿಶ್ವೇಶ್ವರಯ್ಯ ನಾಲೆ) ಮಂಡ್ಯ ಜಿಲ್ಲೆಯ ಸುಮಾರು ಒಂದು ಲಕ್ಷದ ಇಪ್ಪತ್ತು ಸಾವಿರ ಎಕರೆ ಪ್ರದೇಶಕ್ಕೆ ನೀರಾವರಿ ಸೌಲಭ್ಯ ದೊರೆಯಿತು. ಈ ಸೌಲಭ್ಯ ಬಳಸಿಕೊಂಡು ಬತ್ತದ ಜೊತೆಗೆ ಕಬ್ಬು ಬೆಳೆಯಲು ಇವರು ಪ್ರೋತ್ಸಾಹಿಸಿದರು. ನಾಲೆಗೆ ನೀರು ಬಂದ ಅನಂತರ ಮಲೇರಿಯಾ ಜ್ವರ ವ್ಯಾಪಿಸಿ ಜನರು ತೊಂದರೆಗೀಡಾದರು. ಈ ನೀರು, ಈ ಕಬ್ಬು ಯಾರಿಗೆ ಬೇಕಾಗಿದೆ ಎನ್ನುವಷ್ಟು ಜನರಲ್ಲಿ ಜಿಗುಪ್ಸೆ ಮನೆಮಾಡಿತು. ಅಲ್ಲದೆ ಕಬ್ಬಿನ ಬೇಸಾಯ ಹೊಸದು. ಉಳುಮೆ, ನೇಗಿಲು, ಗೊಬ್ಬರ ಎಲ್ಲದಕ್ಕೂ ಹಣಬೇಕು. ಆಗ ಕೋಲ್‍ಮನ್ ರೈತರನ್ನು ಹುರಿದುಂಬಿಸಿದರು. ಸರ್ಕಾರದಿಂದ ಸಾಲ ಕೊಡಿಸಿದರು. ನೇಗಿಲು ಮಾದರಿಯನ್ನು ತಾವೇ ಕೊಟ್ಟು ಕೋಲಾರದಲ್ಲಿ ಮಾಡಿಸಿ ಸರಬರಾಜು ಮಾಡಿದರು. ಈಗಲೂ ಆ ನೇಗಿಲಿಗೆ ಮಂಡ್ಯದ ಕಡೆ ಕೋಲಾರದ ನೇಗಿಲು ಎಂಬ ಹೆಸರಿದೆ.

1932ರಲ್ಲಿ ಭಾರತ ಸರ್ಕಾರ ಸಕ್ಕರೆ ಆಮದನ್ನು ಪೂರ್ಣವಾಗಿ ನಿಲ್ಲಿಸಿತು. ಸಕ್ಕರೆ ಕಂಪನಿ ಸ್ಥಾಪಿಸಿದಲ್ಲಿ ಅದು ಲಾಭದಾಯಕ ಉದ್ಯಮವಾಗುತ್ತದೆಂದೂ ರೈತರು ಬೆಳೆಯುವ ಕಬ್ಬನ್ನು ಬಳಸಿ ಸಕ್ಕರೆ ಉತ್ಪಾದಿಸಬಹುದೆಂದೂ ಕೋಲ್‍ಮನ್ ಅವರು ಸರ್ಕಾರಕ್ಕೆ ವರದಿ ನೀಡಿ, ಒಪ್ಪಿಗೆ ಪಡೆದರು. ಆಗ ಸ್ಥಾಪಿತವಾದ ಮೈಸೂರು ಸಕ್ಕರೆ ಕಾರ್ಖಾನೆಗೆ ಇವರನ್ನೇ ಪ್ರಥಮ ಅಧ್ಯಕ್ಷರು ಮತ್ತು ಕಾರ್ಯನಿರ್ವಾಹಕ ನಿರ್ದೇಶಕರಾಗಿ ಸರ್ಕಾರ ನೇಮಿಸಿತು.

ಕೃಷಿ ತಂತ್ರಜ್ಞಾನದ ಸಂಶೋಧನೆ ಮತ್ತು ವಿಸ್ತರಣೆಗಾಗಿ ವಿ.ಸಿ. ಫಾರಂ ಸ್ಥಾಪಿಸಿದರು. ಕಬ್ಬಿನ ತಳಿಯ ಸಂಶೋಧನೆಗಾಗಿಯೇ ಕಾರ್ಖಾನೆಯ ಹೆಸರಿನಲ್ಲಿ ನೂರಾರು ಎಕರೆ ಜಮೀನನ್ನು ಮೀಸಲಾಗಿರಿಸಲಾಯಿತು.

ಇವರು 1934ರಲ್ಲಿ ನಿವೃತ್ತರಾದ ಅನಂತರ ಸ್ವದೇಶಕ್ಕೆ ಮರಳಿದರು. ಸುಮಾರು ಇಪ್ಪತ್ತು ವರ್ಷಗಳ ಅನಂತರ ತಮ್ಮ 80ನೆಯ ಇಳಿ ವಯಸ್ಸಿನಲ್ಲಿ 1953ರಲ್ಲಿ ಮತ್ತೆ ಮೈಸೂರು ಸಂಸ್ಥಾನಕ್ಕೆ ಬಂದು ಭಾವನಾತ್ಮಕ ಸಂಬಂಧ ಹೊಂದಿದ್ದ ಮೈಸೂರು ಸಕ್ಕರೆ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡುತ್ತಿದ್ದ ತಾವು ಬಲ್ಲ ರೈತಾಪಿ ಜನರನ್ನು ಕರೆಸಿ ಮಾತನಾಡಿದ್ದುಂಟು. 1954 ಜನವರಿ 5ರಂದು ಮೈಸೂರು ಸಕ್ಕರೆ ಕಾರ್ಖಾನೆ ಆವರಣದಲ್ಲಿ ರೈತರು ಇವರನ್ನು ಸನ್ಮಾನಿಸಿ ತಮ್ಮ ಗೌರವವನ್ನು ಸೂಚಿಸಿದರು. ಕೋಲ್‍ಮನ್ ಕೆನಡದಲ್ಲಿ ಕಾರು ಅಪಘಾತವೊಂದರಲ್ಲಿ 1954 ಸೆಪ್ಟೆಂಬರ್ 14ರಂದು ನಿಧನರಾದರು. (ಎಚ್.ಎಲ್.ಕೆ.)

**ಕೋಲ ಶಾಂತಯ್ಯ :** ಸು.1160. ಹಿರಿಯ ಶರಣ ಹಾಗೂ ವಚನಕಾರ. ಬಸವಣ್ಣ-ಬಿಜ್ಜಳರ ಸಮಕಾಲೀನ. ಈತನನ್ನು ಕೋಲು ಶಾಂತಯ್ಯನೆಂದೂ ಕರೆದಿರುವುದು ಕಂಡುಬರುತ್ತದೆ. ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರದಲ್ಲಿ ಬರುವಂತೆ ಈತ ಬಸವಣ್ಣನಲ್ಲಿ ಕಟ್ಟಿಗೆವಿಡಿದು ಮಾಲದಾರ ನಿಯೋಗವನ್ನು ನಡೆಸುವವನಾಗಿದ್ದ. ಈ ಮಾಲದಾರ ನಿಯೋಗದ ಕೆಲಸವೇನೆಂಬುದು ಸ್ಪಷ್ಟವಾಗದಿದ್ದರೂ ಅಲ್ಲಿಯೇ ಬರುವ ಕಟ್ಟಿಗೆದಾರ ಎಂಬುದರಿಂದ ಈತ ಕಟ್ಟಿಗೆ ಅಥವಾ ಕೋಲನ್ನು ಹಿಡಿದು ಕಾಯಕವನ್ನು ನಡೆಸುತ್ತಿದ್ದನೆಂದೂ ಆದುದರಿಂದ ಶಾಂತಯ್ಯ ಕೋಲಶಾಂತಯ್ಯನಾದನೆಂದೂ ಹೇಳಬಹುದಾಗಿದೆ. ವಿವಿಧ ಸಾಹಿತ್ಯ ಮೂಲಗಳಿಂದ ತಿಳಿದುಬರುವಂತೆ ಈತ ಚಿತ್ರದ ಜಂಗಮವನಿರಿದವನನಿರಿದ ಪವಾಡದ ವ್ಯಕ್ತಿಯಾಗಿ ತನ್ನ ಮಹಿಮೆಯನ್ನು ಮೆರೆದಿದ್ದಾನೆ. ಈತನನ್ನು ಚೆನ್ನಬಸವಣ್ಣ, ಮಡಿವಾಳ ಮಾಚಿದೇವ, ವಿರೂಪಾಕ್ಷ ಪಂಡಿತ ಮೊದಲಾದವರು ಸ್ಮರಿಸಿದ್ದಾರೆ. ಕೋಲಶಾಂತಯ್ಯ ವೀರಶೈವ ಅಮರಗಣಾಧೀಶ್ವರರ ಪಂಕ್ತಿಯಲ್ಲಿ ಒಂದು ಸ್ಥಾನವನ್ನು ಪಡೆದು ಕೊಂಡಿರುವಂತೆಯೇ ವಚನರಚನೆಯಿಂದ ಸಾಹಿತ್ಯದಲ್ಲಿಯೂ ಹಿರಿಯ ಸ್ಥಾನವನ್ನು ಸಂಪಾದಿಸಿಕೊಂಡಿದ್ದಾನೆ.

ಇದುವರೆಗೆ ಈತನ 100 ವಚನಗಳು ದೊರಕಿವೆ. ಇವುಗಳಲ್ಲಿ 64 ಸಾಮಾನ್ಯ ವಚನಗಳು, 36 ಬೆಡಗಿನ ವಚನಗಳು. ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ ಎಂಬುದು ಈತನ ವಚನಗಳ ಅಂಕಿತ. ಎಲ್ಲ ವಚನಕಾರರಂತೆ ಈತನೂ ಷಟ್ಸ್ಥಲಸಿದ್ಧಾಂತವನ್ನು ಪ್ರತಿಪಾದಿಸಿದ್ದಾನೆ. ಈತನ ನೀತಿನಿರೂಪಣವಚನಗಳ ಶೈಲಿ ಉತ್ತಮಮಟ್ಟದ್ದಾಗಿದೆ. (ಬಿ.ಎಸ್.ಎಸ್.)

**ಕೋಲಾಟ :** ಜನಪದ ಮನರಂಜನೆ ಕಲೆಗಳಲ್ಲೊಂದು. ಕೋಲುಗಳ ಮೂಲಕ ಆಟ ಸಾಗುವುದರಿಂದ ಇದಕ್ಕೆ ಕೋಲಾಟವೆಂಬ ಹೆಸರು ಬಂದಿದೆ. ಸಂಗೀತ ಮತ್ತು ನೃತ್ಯಗಳ ಸಮ್ಮಿಲನವಾಗಿರುವ ಈ ಆಟ ಗ್ರಾಮಜೀವನದ ಒಂದು ವಿಶೇಷ ಮನರಂಜನ ಸಾಧನ. ಹೆಚ್ಚಾಗಿ ಸುಗ್ಗಿಯ

ಕಾಲದಲ್ಲಿ, ಹಬ್ಬಹರಿದಿನಗಳಲ್ಲಿ ಪ್ರಚುರವಿದೆ. ಕೋಲಾಟ ಗ್ರಾಮೀಣ ಪ್ರದೇಶದಲ್ಲಿ ಅಪಾರ ಜನಪ್ರಿಯತೆ ಗಳಿಸಿದೆ.

ಕೋಲಾಟದಲ್ಲಿ ಸುಮಾರು ಎಂಟರಿಂದ ಇಪ್ಪತ್ನಾಲ್ಕು ಜನರವರೆಗೆ ಕೋಲು ಹುಯ್ಯುವ ಕಲಾವಿದರಿರುತ್ತಾರೆ. ಹುಡುಗರಂತೆ ದೊಡ್ಡವರೂ ಭಾಗವಹಿಸುತ್ತಾರೆ. ಅಲ್ಲಿ ಕೋಲುಗಳದೇ ಮುಖ್ಯಪಾತ್ರ. ಇವುಗಳನ್ನು ಸಾಮಾನ್ಯವಾಗಿ ನೀರಂಜಿ, ಬೈನೆ, ಸೀಬೆ, ಕಾರೆ ಮುಂತಾದ ಮರಗಿಡಗಳಿಂದ ಮಾಡಲಾಗಿರುತ್ತದೆ. ಆಟದಲ್ಲಿ ಗೆಜ್ಜೆ, ತಾಳ ಮತ್ತು ದಮ್ಮಡಿಗಳನ್ನೂ ಬಳಸಲಾಗುತ್ತದೆ. ತಾಳ ಮತ್ತು ದಮ್ಮಡಿ ಬಾರಿಸಲು ಪ್ರತ್ಯೇಕ ಪರಿಣತರಿರುತ್ತಾರೆ. ಕಲಾವಿದರು ತಮ್ಮ ಕಾಲುಗಳಿಗೆ ಗೆಜ್ಜೆ ಕಟ್ಟಿಕೊಳ್ಳುವುದು ಸಾಮಾನ್ಯ. ಇದರಿಂದ ಅವರ ಕುಣಿತಕ್ಕೆ ಆವೇಶ, ಹುಮ್ಮಸು ಲಭ್ಯವಾಗುತ್ತದೆ. ತಾಳ ಹಾಕುವ ಮತ್ತು ದಮ್ಮಡಿ ಬಡಿಯುವ ಕಾರ್ಯ ಕುಣಿತವನ್ನು ಪುಷ್ಟಿಗೊಳಿಸುತ್ತದೆ.



ಕೋಲಾಟದ ಒಂದು ದೃಶ್ಯ

ಕೋಲಾಟದಲ್ಲಿ ಹಲವಾರು ಪ್ರಭೇದಗಳು ಕಂಡುಬರುತ್ತವೆ. ಆಟಗಾರರು ವೃತ್ತಾಕಾರದಲ್ಲಿ ಸುತ್ತುತ್ತ ತಮ್ಮೆರಡು ಕೈಗಳಲ್ಲಿನ ಕೋಲುಗಳಿಂದ ಒಂದಕ್ಕೊಂದಕ್ಕೆ ಹೊಡೆಯುತ್ತಿದ್ದರೆ ಇದಕ್ಕೆ ಸುತ್ತಕೋಲು ಎನ್ನುತ್ತಾರೆ. ಇದನ್ನು ವಿಶ್ರಾಂತಿಯ ಆಟವೆಂದೂ ಕರೆಯುವುದುಂಟು. ಕೋಲುಗಳು ಇತರರ ಕೋಲುಗಳಿಗೆ ಹೊಡೆದರೂ ಹೊಡೆಯದ ಹಾಗೆ ಹಾರುತ್ತಿದ್ದರೆ ಅದು ಹಾರ್‌ಗಟಕು ಎನಿಸಿಕೊಳ್ಳುತ್ತದೆ. ಇದರಲ್ಲಿ ಆಟಗಾರರು ಸಾಮಾನ್ಯವಾಗಿ ಕೋಲುಗಳನ್ನು ತಲೆಯ ಮೇಲೆ ಎತ್ತಿ ಮತ್ತೊಬ್ಬರ ಕೋಲುಗಳಿಗೆ ಹೊಡೆಯುತ್ತಾರೆ. ತೇರುಕೋಲಿನಲ್ಲಿ ಅರ್ಧ ಜನ ಹಿಂದಕ್ಕೂ ಉಳಿದರ್ಧ ಜನ ಅವರ ಮೇಲೆ ಬಾಗಿದಂತಿದ್ದು ತೇರಿನಂತೆ ಸಾಗುವುದರಿಂದ, ಈ ಹೆಸರು ಬಂದಿರುವಂತೆ ಕಾಣುತ್ತದೆ. ಆಟಗಾರರ ಮನೆಯನ್ನು ದಾಟುತ್ತ ಕೋಲು ಕೊಡುವ ವಿಧಾನ ಮನೆಕೋಲಿನದು. ಪ್ರತಿಯೊಬ್ಬ ಆಟಗಾರನೂ ಒಬ್ಬೊಬ್ಬರನ್ನೇ ದಾಟಿ ಕೋಲುಕೊಡುವ ವಿಧಾನಕ್ಕೆ ಒಂದುಮನೆ ಕೋಲೆಂದೂ ಇಬ್ಬರನ್ನು ದಾಟಿ ಕೋಲು ಕೊಡುವ ವಿಧಾನಕ್ಕೆ ಎರಡುಮನೆ ಕೋಲೆಂದೂ ಕರೆಯುತ್ತಾರೆ.

ಜಡೆಕೋಲು ಎಂಬುದು ಕೋಲಾಟದಲ್ಲಿ ಒಂದು ವಿಶಿಷ್ಟ ಬಗೆ. ಆಟದ ಪ್ರಾರಂಭಕ್ಕೆ ಮೊದಲು ಹಗ್ಗಗಳಿಂದ ಜಡೆಯ ದಿಂಡನ್ನು ಹೆಣೆದು ಒಟ್ಟುಗೂಡಿಸಿ ಅವುಗಳಿಂದ ತುದಿಯ ಜಡೆ ಅಥ’ವಾ ಹಗ್ಗಗಳನ್ನು ಬಿಡಿಯಾಗಿಯೇ ಬಿಡಬೇಕು. ಈ ಬಿಡಿ ಹಗ್ಗಗಳನ್ನೆಲ್ಲ ಸೇರಿಸಿದ ದಿಂಡುಜಡೆಯನ್ನು ಯಾವುದಾದರೊಂದು ಉಪಕರಣಕ್ಕೆ ಕಟ್ಟಿರುತ್ತಾರೆ. ಉಳಿದ ಬಿಡಿ ಹಗ್ಗಗಳನ್ನು ಕಲಾವಿದರು ಸೊಂಟಕ್ಕೆ ಕಟ್ಟಿರುತ್ತಾರೆ. ಕೋಲು ಹುಯ್ಯುವಾಗ ಬಿಡಿಹಗ್ಗಗಳೆಲ್ಲ ಸೇರಿಕೊಂಡು ಜಡೆಯ ಆಕಾರಕ್ಕೆ ತಿರುಗುವುದರಿಂದ ಇದಕ್ಕೆ ಜಡೆಕೋಲು ಎಂಬ ಹೆಸರು ಬಂದಿದೆ. ಗೀಜುಗನ ಕೋಲು ಮತ್ತೊಂದು ವಿಶೇಷ ರೀತಿಯ ಆಟ. ಎರಡು ಕೈಗಳಲ್ಲೂ ಜೋಡಿಸಿಕೊಂಡಿರುವ ಕೋಲುಗಳನ್ನು ಎಡಕ್ಕೊಂದು ಬಾರಿ ಬಲಕ್ಕೊಂದು ಬಾರಿ ಕೊಟ್ಟು, ಮೂರನೆಯ ಏಟಿಗೆ ಎರಡು ಕೈಗಳನ್ನು ಮೇಲೆತ್ತಿ ಹೊಡೆದು ಬಲದಲ್ಲಿದ್ದವನು ಎಡಕ್ಕೆ ಎಡದಲ್ಲಿದ್ದವನು ಬಲಕ್ಕೆ ವೃತ್ತಾಕಾರದಲ್ಲಿ ಸುತ್ತುತ್ತಿರುವುದೇ ಈ ಆಟದ ಸ್ವಾರಸ್ಯ. ಕಾಲುಸಂದಿನ ಕೋಲು ವಿಚಿತ್ರ ರೀತಿಯದು. ಆಟಗಾರರಲ್ಲಿ ಇಬ್ಬಿಬ್ಬರು ಎದುರು ಬದುರು ನಿಂತುಕೊಂಡಿದ್ದು, ಪ್ರತಿಯೊಬ್ಬನೂ ಮೊದಲು ತನ್ನ ಎಡಗಾಲನ್ನು ಎತ್ತಿ ಎರಡು ಕೈಗಳ ಕೋಲುಗಳನ್ನು ಅಲ್ಲಿ ಬಡಿಯುವನು. ಅನಂತರ ಇದೇ ರೀತಿ ಬಲಗಾಲನ್ನು ಎತ್ತಿ ಬಡಿಯುವನು. ಎರಡು ಕಾಲುಗಳಲ್ಲೂ ಈ ರೀತಿ ಕೋಲು ಹುಯ್ದುಮೇಲೆ ಮುಂದಕ್ಕೆ ನೆಗೆದು ಮತ್ತೊಬ್ಬನಿಗೆ ಕೋಲು ಕೊಡುವನು. ಇದೇ ರೀತಿ ಪುನರಾವರ್ತನೆ ಸಾಗಿ ಆಟ ಮುಗಿಯುತ್ತದೆ. ಇದು ನೋಡಲು ತುಂಬ ರಂಜನೀಯವಾಗಿರುತ್ತದೆ.

ಉಯ್ಯಾಲೆಯಾಟದಲ್ಲಿ ಉಯ್ಯಾಲೆಯಂಥ ಸುಂದರ ಚಲನೆಯೊಂದು ಕಂಡುಬರುತ್ತದೆ. ಪ್ರಾರಂಭದಲ್ಲಿ ಆಟದ ಜನರು ವೃತ್ತಾಕಾರದಲ್ಲಿ ನಿಂತು ಎಡಕ್ಕೊಮ್ಮೆ ಬಲಕ್ಕೊಮ್ಮೆ ಕೋಲು ಕೊಡುತ್ತಿರುತ್ತಾರೆ. ಅನಂತರ ಮಧ್ಯದಲ್ಲಿ ನಾಲ್ವರು ಎದುರೆದುರಾಗಿ, ಉಳಿದ ನಾಲ್ವರು ಅಕ್ಕಪಕ್ಕದಲ್ಲಿ ನಿಂತು ಕೋಲುಕೊಡುವರು. ಆಮೇಲೆ ಅಕ್ಕಪಕ್ಕದಲ್ಲಿದ್ದವರು ಮಧ್ಯಕ್ಕೆ ಬಂದು, ಮಧ್ಯದಲ್ಲಿದ್ದವರು ಅತ್ತ ಸರಿಯುವರು. ಈ ರೀತಿಯ ವೇಗದ ಆಟದಿಂದಾಗಿ ಉಯ್ಯಾಲೆ ಚಿತ್ರ ಕಣ್ಣಿಗೆ ಕಟ್ಟುತ್ತದೆ. ಸ್ಪರ್ಧಾತ್ಮಕವಾಗಿ ಬೆಳೆಯುವುದು ವಾದದ ಕೋಲಿನ ವೈಶಿಷ್ಟ್ಯ. ಇದಕ್ಕೆ ನಿಲ್‌ಕೋಲೆಂದೂ ಹೆಸರಿದೆ. ಸಮಭಾಗವಾಗಿ ನಿಂತ ಆಟಗಾರರು ಪ್ರಶ್ನಾರ್ಥ’ಕವಾದ ಸವಾಲ್-ಜವಾಬ್ ರೀತಿಯ ಹಾಡುಗಳನ್ನು ಹಾಡುತ್ತ ಪರಸ್ಪರ ಆಕರ್ಷಕ ಭಂಗಿಯಲ್ಲಿ ಅಟ್ಟಿಸಿಕೊಂಡು ಹೋಗುವುದೇ ಈ ಆಟದ ತಿರುಳು. ಇದರಲ್ಲಿ ಕೋಲುಗಳು ಮೌನವಾಗಿದ್ದು ಹಾಡು ಮತ್ತು ನಡಿಗೆ ಪ್ರಧಾನವಾಗಿರುತ್ತದೆ. ಕೋಲಾಟದ ಮುಕ್ತಾಯದ ಹಂತದಲ್ಲಿ ಕೊರವಂಜಿ ಕೋಲನ್ನು ಆಡುತ್ತಾರೆ. ಇದರಲ್ಲಿ ಕೊರವಂಜಿ ವೇಷದ ಆಟಗಾರನನ್ನು ಮತ್ತೊಬ್ಬ ಹಿಡಿಯಲು ತೊಡಗುವನು. ಕೋಲು ಹುಯ್ಯುತ್ತಿರುವ ಉಳಿದವರ ಮಧ್ಯದಲ್ಲಿ ಕೊರವಂಜಿ ತಪ್ಪಿಸಿಕೊಳ್ಳಲು ಪ್ರಯತ್ನಿಸುವಳು. ಅವಳನ್ನು ಅಟ್ಟಿಸಿಕೊಂಡು ಹೋಗುತ್ತ, ಕಡೆಗೊಮ್ಮೆ ಹಿಡಿಯುವನು.ಇದರ ತರುವಾಯ ಮಂಗಳದೊಡನೆ ಆ ದಿನದ ಕೋಲಾಟ ಕೊನೆಗೊಳ್ಳುತ್ತದೆ.

**ಕೋಲಾಟದ ಪದಗಳು :** ಕೋಲಾಟದಲ್ಲಿ ಬಳಸಲಾಗುವ ಪದಗಳದೂ ಒಂದು ಪ್ರಮುಖ ಪಾತ್ರ. ಆಟಕ್ಕೆ ಸಂಗೀತದ ಆವರಣವನ್ನು ಸೃಷ್ಟಿಸುವುದರ ಮೂಲಕ ಅದರ ಶುಷ್ಕತೆಯನ್ನು ಹೋಗಲಾಡಿಸಿ ರಸವತ್ತಾಗಿಸಿ ಅದನ್ನು ಪರಿಣಾಮರಮಣೀಯತೆಯಲ್ಲಿ ನಾಟಿಸುವಂತೆ ಮಾಡುವುದು ಇವುಗಳ ಉದ್ದೇಶ.

ಇವುಗಳ ರಚನೆಗೆ ಸಂಬಂಧಿಸಿದಂತೆ ಕೆಲವು ಮಾತುಗಳನ್ನಿಲ್ಲಿ ಪ್ರಸ್ತಾಪಿಸಬಹುದು. ಈ ಎಲ್ಲ ಗೀತೆಗಳು ಮೂಲತಃ ಕೋಲಾಟಕ್ಕಾಗಿಯೇ ರಚಿತವಾದವುಗಳೆಂದು ಯಾವಾಗಲೂ ಹೇಳಲಾಗುವುದಿಲ್ಲ. ಏಕೆಂದರೆ ಕೋಲಾಟ ತನ್ನ ಆರಂಭದ ಹಂತಗಳಲ್ಲಿ ಇತರ ಜನಪದ ಆಟಗಳಂತೆಯೇ ಒಂದು ಆಟವಾಗಿದ್ದು ಕ್ರಮೇಣ ನೃತ್ಯ ಮತ್ತು ಗೀತೆಗಳನ್ನು ಅಳವಡಿಸಿಕೊಳ್ಳುವುದರ ಮೂಲಕ ಕಲೆಯಾಗಿ ಮಾರ್ಪಟ್ಟಿತೆಂದು ಹೇಳಬಹುದು. ಇದರಿಂದಾಗಿ ಗೀತೆಗಳು ಕೋಲಾಟಕ್ಕೆ ಆಮೇಲೆ ಬಂದು ಸೇರಿದ ಸಾಧನಗಳೆಂದು ತಿಳಿಯುತ್ತದೆ. ಅಲ್ಲದೆ ಮೊದಮೊದಲು ಬೇರೆ ಬೇರೆ ಸಂದರ್ಭಗಳಲ್ಲಿ ಹಾಡುತ್ತಿದ್ದ ಪದಗಳನ್ನೇ ಪಲ್ಲವಿ ಅನುಪಲ್ಲವಿ ಅಥವಾ ಮುಮ್ಮೇಳ ಹಿಮ್ಮೇಳಗಳನ್ನು ಹೊಂದಿಸಿಕೊಳ್ಳುವುದರ ಮೂಲಕ ಕೋಲಾಟಕ್ಕೆ ಅನ್ವಯಿಸಿಕೊಳ್ಳಲಾಯಿತೆಂದು ತೋರುತ್ತದೆ. ಕೋಲಾಟಕ್ಕಾಗಿ ಮಾಡಲಾದ ರಚನೆಗಳು ಇವುಗಳ ಸಹಜಸ್ಫೂರ್ತಿ ಪ್ರೇರಣೆಗಳ ಆಮೇಲಿನ ಫಲಗಳೆಂದು ಹೇಳಬಹುದು.

ರಚನೆಯ ದೃಷ್ಟಿಯಿಂದ ಕೋಲಾಟದ ಪದಗಳನ್ನು ಭಾವಗೀತಾತ್ಮಕ ಮತ್ತು ಕಥಾತ್ಮಕಗಳೆಂದು ವಿಭಾಗ ಮಾಡಿಕೊಳ್ಳಲು ಸಾಧ್ಯವಿದೆ. ಕೋಲಾಟಕ್ಕಾಗಿ ರಚಿತವಾದ ಗೀತೆಗಳು ಹೆಚ್ಚಾಗಿ ಮೊದಲ ಭಾಗದಲ್ಲಿ ಕಾಣಿಸಿಕೊಳ್ಳುತ್ತವೆ. ಆದ್ದರಿಂದ ಭಾವಗೀತಾತ್ಮಕ ಗೀತೆಗಳನ್ನು ಮತ್ತೆ ಎರಡು ಭಾಗವಾಗಿ ಮಾಡಿಕೊಳ್ಳಬಹುದು. ಕೋಲಾಟಕ್ಕಾಗಿಯೇ ರಚಿತವಾದವು ಮತ್ತು ಅನ್ಯಸಂದರ್ಭದವುಗಳನ್ನು ಅಳವಡಿಸಿಕೊಂಡವು. ಕೋಲಾಟಕ್ಕಾಗಿ ರಚಿತವಾದ ಗೀತೆಗಳು ತಮ್ಮ ಸ್ವರೂಪದಲ್ಲಿ ಸಾಮಾನ್ಯವಾಗಿ ಚಿಕ್ಕವಾಗಿರುತ್ತವೆ. ಒಂದು ಪಕ್ಷ ದೀರ್ಘವಾಗಿರುವುದಾದರೆ ಪದಪ್ರಾಸಗಳೂ ಪುನರಾವರ್ತನೆಗಳೂ ಮಡುಗಟ್ಟುತ್ತವೆ. ಇಂಥ’ವುಗಳಲ್ಲಿ ತರ್ಕಬದ್ಧ ಅರ್ಥ’ವನ್ನಾಗಲಿ ಕ್ರಿಯೆಯನ್ನಾಗಲಿ ನಿರೀಕ್ಷಿಸುವಂತಿಲ್ಲ. ಬದಲಾಗಿ, ಆಟ ಮತ್ತು

ಕುಣಿತಗಳಿಗನುಗುಣವಾದ ಪದ ನರ್ತನಚರಣಗಳಾಗಿ ಮಾತ್ರ ಇವು ಕಾಣಿಸಿಕೊಳ್ಳುತ್ತವೆ.

ಕೋಲಾಟದ ಪದಗಳಲ್ಲಿ ಕಥನರೂಪದ ಅನೇಕ ರಚನೆಗಳೂ ಸಿಗುತ್ತವೆ. ಈ ಬಗೆಗಿನ ಬಹುತೇಕ ಪದಗಳು ಮೂಲತಃ ಅನ್ಯಸಂದರ್ಭದವಾಗಿದ್ದೂ ಕೋಲಾಟಕ್ಕೆ ಅಳವಡಿಸಿಕೊಂಡಿರುವ ಸಾಧ್ಯತೆ ಹೆಚ್ಚೆಂದು ತೋರುತ್ತದೆ. ಹೀಗೆ ಹೊಂದಿಸಿಕೊಳ್ಳುವಾಗ ಪದಗಳು ಕೋಲಾಟದ ಗತಿಗೆ ಹೊಂದಿಕೊಂಡು ಬದಲಾಗಿಬಿಡುವುದರಿಂದ ಅವುಗಳ ಮೂಲರೂಪವನ್ನು ನಿಜವಾಗಿ ನಿರ್ದೇಶಿಸುವುದು ಕಷ್ಟವಾಗುತ್ತದೆ. ಕಥನಗಳು ದೀರ್ಘವಾಗಿದ್ದಾಗ, ಅವನ್ನು ಮೊಟಕುಗೊಳಿಸಿ ಇಲ್ಲವೆ ಕೆಲವೊಂದು ಭಾಗವನ್ನು ತೆಗೆದುಕೊಂಡು ಉಳಿದುದನ್ನು ಹೇಳದೇ ಬಿಡುವ ಸಂದರ್ಭವುಂಟು. ಆಟದಲ್ಲಿ ವೈವಿಧ್ಯ ತರುವುದಕ್ಕಾಗಿ ಹೀಗೆ ಮಾಡಿಕೊಳ್ಳುತ್ತಾರೆ ಎಂದು ಮೇಲುನೋಟಕ್ಕೆ ಕಂಡರೂ ವಾಸ್ತವವಾಗಿ ದೀರ್ಘಕಥನಗಳನ್ನು ಕೋಲಾಟದ ಸಮಯದಲ್ಲಿ ತರುವುದು ಕಷ್ಟವಿರುವುದು ಕಾರಣವಿರಬೇಕೆಂದು ತೋರುತ್ತದೆ. ಏಕೆಂದರೆ ಕೋಲಾಟ ಉತ್ಸಾಹ ಪ್ರಧಾನವಾಗಿದ್ದು, ಇದಕ್ಕೆ ಭಾವಗೀತಾತ್ಮಕ ಪದಗಳು ಹೊಂದಿಕೊಳ್ಳುವಂತೆ, ಪ್ರಶಾಂತಲಕ್ಷಣದ ನಿಧಾನ ಓಟದ ಕಥನಗೀತೆ ಹೊಂದಿಕೊಳ್ಳಲಾರದೆನಿಸುತ್ತದೆ. ಇದರಿಂದಾಗಿ ಈ ಬಗೆಯ ಕೆಲವು ಗೀತೆಗಳು ಅರ್ಥವಾಗದೆ ಒಗಟಿನ ಸ್ವರೂಪವನ್ನು ಪಡೆದುಕೊಳ್ಳುವುದೂ ಉಂಟು. ಆಗ ಕ್ರಿಯೆ ನಡೆದಂತೆ ತೋರಿದರೂ ಅದು ಅಸ್ಪಷ್ಟತೆಯ ಹಾದಿಯಲ್ಲಿರುತ್ತದೆಯೇ ಹೊರತು, ಸ್ಪಷ್ಟವಾಗಿ ತೋರುವುದಿಲ್ಲ. ಆದ್ದರಿಂದ ಇದರಲ್ಲಿ ಆಟ ಮತ್ತು ಅದರ ವಿವಿಧ ಭಂಗಿಗಳು ಮುಖ್ಯವೇ ಹೊರತು, ಅದಕ್ಕೆ ಸಂಬಂಧಿಸಿದ ಹಾಡು ಯಾವಾಗಲೂ ಪ್ರಧಾನ ಕ್ರಿಯೆಯ ಪಾತ್ರವನ್ನು ವಹಿಸುವುದಿಲ್ಲ ಎಂದು ಹೇಳಬಹುದು. ಒಂದು ಪಕ್ಷ ವಹಿಸಿದರೂ ಮೊದಲೆರಡರ ಒಟ್ಟು ಪರಿಣಾಮವನ್ನು ಪ್ರೇಕ್ಷಕರಿಗೆ ಅತ್ಯಂತ ಸಮರ್ಥ ರೀತಿಯಲ್ಲಿ ವಚನಿಸುವುದು ಇದರ ಪ್ರಮುಖ ಉದ್ದೇಶವಾಗಿರುತ್ತದೆ.

ಈ ಎಲ್ಲ ಹಿನ್ನೆಲೆಯಲ್ಲಿ ನೋಡಿದಾಗ ಕೋಲಾಟಕ್ಕೆ ಸಂಬಂಧಿಸಿದ ಗೀತೆಗಳನ್ನು ಒಂದು ಪ್ರತ್ಯೇಕ ಗೀತಪ್ರಕಾರವೆಂದು ಕರೆಯಲು ಸಾಧ್ಯವೇ ಎಂಬ ಸಂದೇಹ ಕಾಡುತ್ತದೆ. ಕೋಲಾಟದ ಉದ್ದೇಶಕ್ಕಾಗಿ ರಚಿತವಾದ ಪದಗಳಲ್ಲಿ ಈ ಪ್ರಶ್ನೆ ಸಹಜವಾಗಿ ಏಳುವುದಿಲ್ಲವಾದರೂ ಇದಕ್ಕಾಗಿ ಅಳವಡಿಸಿಕೊಂಡ ಅನ್ಯಗೀತೆಗಳನ್ನು ಗಮನಿಸಿದಾಗ ಈ ಪ್ರಶ್ನೆ ಉದ್ಭವಿಸುತ್ತದೆ. ಕೆಲವು ಸಮಯದಲ್ಲಿ ಯಾವ ಗೀತೆಗಳನ್ನು ಬೇಕಾದರೂ ಕೋಲಾಟದ ತಂತ್ರಗಳನ್ನು ಬಳಸಿಕೊಂಡು ಹಾಡಬಹುದೆನಿಸುತ್ತದೆ. ಇಂಥ ಸಂದರ್ಭದಲ್ಲಂತೂ ಮೇಲಿನ ಪ್ರಶ್ನೆ ಗಾಢತರವಾಗುತ್ತದೆ. ಆದರೆ ಕೋಲಾಟದ ಮೂಲಗೀತೆಗಳಲ್ಲಾಗಲಿ, ಅಳವಟ್ಟ ಪದಗಳಲ್ಲಾಗಲಿ ಒಂದಲ್ಲ ಒಂದು ರೀತಿಯಲ್ಲಿ ಕೋಲಾಟದ ತಾಂತ್ರಿಕ ಭಾಗ ಕೆಲಸ ಮಾಡುವುದರಿಂದ, ಇದನ್ನು ಒಂದು ಪ್ರತ್ಯೇಕ ಪ್ರಕಾರವಾಗಿ ಪರಿಗಣಿಸುವುದರಲ್ಲಿ ಅರ್ಥವಿದೆ ಎಂದು ಹೇಳಬಹುದು. ಈ ಪ್ರಕಾರವನ್ನು ಕುರಿತಂತೆ ಎಸ್.ವಿ.ರಂಗಣ್ಣನವರ ಕೋಲ್ ಕೋಲ್ ಕೂಡಿ ಬರಲಿ ಬಿ.ಜಿ.ಸಂಕೇಶ್ವರ ಅವರ 'ಕೋಲಿನ ಪದಗಳು', ರಾಮಚಂದ್ರ ವೆಂಕಟೇಶ ಕರಗುದರಿ ಅವರ 'ಕೋಲು ಹಾಡುಗಳು' (1934) ಕ.ರಾ.ಕೃ. ಅವರ 'ಕೋಲು ಮಲ್ಲಿಗೆ ಕೋಲೆ' (1962), ಎಂ.ಸಿ. ವಸಂತಕುಮಾರ್ ಅವರ 'ಕೋಲು ಪದಗಳು' (1970), ಡಿ.ಕೆ.ಈರೇಗೌಡ ಅವರ ಕೋಲಾಟದ ಪದಗಳು (1974) ಇತ್ಯಾದಿ ಗ್ರಂಥಗಳು ಪ್ರಕಟಗೊಂಡಿವೆ. (ಆರ್.ಜಿ.)

**ಕೋಲಾರ :** ಕರ್ನಾಟಕ ರಾಜ್ಯದ ಪೂರ್ವದ ಅಂಚಿನಲ್ಲಿರುವ ಒಂದು ಜಿಲ್ಲೆ. ಇದೇ ಹೆಸರಿನ ತಾಲ್ಲೂಕು ಮತ್ತು ಪಟ್ಟಣ.

ಪಶ್ಚಿಮದಲ್ಲಿ ಬೆಂಗಳೂರು ಮತ್ತು ತುಮಕೂರು ಜಿಲ್ಲೆಗಳು, ಉತ್ತರ ಮತ್ತು ಪೂರ್ವದಲ್ಲಿ ಅನುಕ್ರಮವಾಗಿ ಆಂಧ್ರ ಪ್ರದೇಶದ ಅನಂತಪುರ ಮತ್ತು ಚಿತ್ತೂರು ಜಿಲ್ಲೆಗಳು, ದಕ್ಷಿಣದಲ್ಲಿ ತಮಿಳುನಾಡಿನ ಉತ್ತರ ಆರ್ಕಾಟ್ ಮತ್ತು ಧರ್ಮಪುರಿ ಜಿಲ್ಲೆಗಳು - ಇವು ಕೋಲಾರ ಜಿಲ್ಲೆಯ ಮೇರೆಗಳು. ಜಿಲ್ಲೆಯಲ್ಲಿ ಚಿಕ್ಕಬಳ್ಳಾಪುರ ಮತ್ತು ಕೋಲಾರ ಎಂಬ ಎರಡು ಉಪವಿಭಾಗಗಳು ಇವೆ. ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಚಿಂತಾಮಣಿ, ಬಾಗೇಪಲ್ಲಿ, ಗುಡಿಬಂಡೆ ಮತ್ತು ಗೌರಿಬಿದನೂರು, ತಾಲ್ಲೂಕುಗಳು ಚಿಕ್ಕಬಳ್ಳಾಪುರ ಉಪವಿಭಾಗದಲ್ಲೂ ಕೋಲಾರ, ಶ್ರೀನಿವಾಸಪುರ, ಮುಳಬಾಗಿಲು, ಬಂಗಾರಪೇಟೆ ಮತ್ತು ಮಾಲೂರು ತಾಲ್ಲೂಕುಗಳು ಕೋಲಾರ ಉಪವಿಭಾಗದಲ್ಲೂ ಇವೆ. ಜಿಲ್ಲೆಯ ವಿಸ್ತೀರ್ಣ 8223ಚ.ಕಿಮೀ. ಇದು ಕರ್ನಾಟಕ ರಾಜ್ಯದ 1/23ರಷ್ಟಿದೆ. ಜನಸಂಖ್ಯೆ 25,23,406 (2001).

ಕೋಲಾರ ಜಿಲ್ಲೆ ಕರ್ನಾಟಕ ಪ್ರಸ್ಥಭೂಮಿಯ ಅಂಚಿನ ಭಾಗವಾಗಿದ್ದು, ಅದರ ಎಲ್ಲೆಗಳು ವಾಯುವ್ಯ ಮತ್ತು ದಕ್ಷಿಣ ಭಾಗದಲ್ಲಿ ಪೂರ್ವಘಟ್ಟಗಳ ಬೆಟ್ಟಶ್ರೇಣಿಯನ್ನು ಮುಟ್ಟುತ್ತವೆ. ಜಿಲ್ಲೆಯಲ್ಲೂ ಹಲವು ಬೆಟ್ಟಶ್ರೇಣಿಗಳಿವೆ. ಚಿಕ್ಕಬಳ್ಳಾಪುರ ತಾಲ್ಲೂಕಿನ ನಂದಿದುರ್ಗದಿಂದ ಗುಡಿಬಂಡೆಯ ಮೂಲಕ ಮುಂದೆ ಆಂಧ್ರಪ್ರದೇಶದ ಪೆನುಗೊಂಡೆಯೆಡೆಗೆ ದಕ್ಷಿಣೋತ್ತರವಾಗಿ ಹಬ್ಬಿರುವ ಶ್ರೇಣಿ ಮುಖ್ಯವಾದುದು. ಈ ನಂದಿದುರ್ಗ ಶ್ರೇಣಿಯಲ್ಲಿ ನಂದಿದುರ್ಗ (ಎತ್ತರ 1479ಮೀ) ಚಿಕ್ಕಬಳ್ಳಾಪುರದ ಆಗ್ನೇಯಕ್ಕೆ 8ಕಿಮೀ ದೂರದಲ್ಲಿರುವ ಚೆನ್ನರಾಯನ ಬೆಟ್ಟ (1451ಮೀ), ನಂದಿದುರ್ಗದ ಉತ್ತರಕ್ಕೆ 8ಕಿಮೀ ದೂರದಲ್ಲಿರುವ ಸ್ಕಂದಗಿರಿ (1447ಮೀ), ನಂದಿದುರ್ಗದ ಆಗ್ನೇಯ ದಿಕ್ಕಿನಲ್ಲಿರುವ ಬ್ರಹ್ಮಗಿರಿ (1419ಮೀ), ನಂದಿದುರ್ಗದ ಉತ್ತರಕ್ಕಿರುವ ಹರಿಹರೇಶ್ವರ ಬೆಟ್ಟ (1256ಮೀ), ವಾಯುವ್ಯಕ್ಕೆ ಇರುವ ಕಳವರದುರ್ಗ ಮತ್ತು ದಕ್ಷಿಣದಲ್ಲಿರುವ ದಿಬ್ಬಗಿರಿ ಇವು ನಂದಿದುರ್ಗ ಶ್ರೇಣಿಯ ಮುಖ್ಯ ಶಿಖರಗಳು. ಈ ಶ್ರೇಣಿಗೆ ಸಮಾನಾಂತರದಲ್ಲಿ ಸು.50-65ಕಿಮೀ ಪೂರ್ವಕ್ಕೆ ಇನ್ನೊಂದು ಬೆಟ್ಟಸಾಲಿದೆ. ಆಂಧ್ರಪ್ರದೇಶದ ಕಡೆಯಿಂದ ಹಬ್ಬಿರುವ ಈ ಶ್ರೇಣಿ ಈ ಜಿಲ್ಲೆಯಲ್ಲಿ ಗುಮ್ಮನಾಯಕನ ಪಾಳ್ಯದ ಉತ್ತರದಲ್ಲಿ ದೊಂಗಲಕೊಂಡ ಅಥವಾ ದೊಕ್ಕಲದುರ್ಗದ ಬಳಿ ಆರಂಭವಾಗಿ ದಕ್ಷಿಣಾಭಿಮುಖವಾಗಿ ಸಾಗುತ್ತದೆ. ಮುಂದೆ ಸ್ವಲ್ಪ ದೂರ ತಗ್ಗಾಗಿದ್ದು ಮತ್ತೆ ಮುರುಗಮಲೆ, ಅಂಬಾಜಿದುರ್ಗ (1341ಮೀ), ರಹಮಾನ್‌ದುರ್ಗ (1304ಮೀ) ಈ ರೀತಿಯ ಒಂಟಿ ಬೆಟ್ಟಗಳಾಗಿ ಕಾಣಿಸಿಕೊಳ್ಳುತ್ತದೆ. ಅಲ್ಲಿಂದಾಚೆಗೆ ಕೋಲಾರ ನಗರದ ಪಶ್ಚಿಮದಿಂದ ಮತ್ತೆ ಅವಿರತವಾಗಿ ದಕ್ಷಿಣದಲ್ಲಿ ವಕ್ಕಲೇರಿ ಮತ್ತು ಟೇಕಲ್ ಬೆಟ್ಟಗಳವರೆಗೂ ಮುಂದುವರಿಯುತ್ತದೆ. ಇವೆರಡರ ಜೊತೆಗೆ ಅಲ್ಲಲ್ಲಿ ಕುಳ್ಳುಗುಡ್ಡಗಳಂತೆ ಕಾಣಿಸಿಕೊಳ್ಳುವ ಇನ್ನೊಂದು ಶ್ರೇಣಿ ಇದೆ. ಇದು ಶ್ರೀನಿವಾಸಪುರದ ಬಳಿ ಆರಂಭವಾಗಿ ಕೋಲಾರ ಪಟ್ಟಣದ ಪೂರ್ವದಲ್ಲಿ ಸಾಗಿ, ಬಂಗಾರಪೇಟೆಯ ದಕ್ಷಿಣಾಗ್ರವನ್ನು ಹಾದು ಕುಪ್ಪಂ ಕಡೆಯ ಘಟ್ಟದವರೆಗೂ ಮುಂದುವರಿಯುತ್ತದೆ. ಇನ್ನೂ ಪೂರ್ವಕ್ಕೆ ವೃತ್ತಾಕಾರವಾಗಿ ಬಾಗಿರುವ ಕೆಲವು ಬೆಟ್ಟಗಳಿವೆ. ಇವುಗಳ ನಡುವೆ ಗ್ರಾಮವಸತಿಗಳಿಗೆ ಅನುಕೂಲವಾಗಿರುವ ಎತ್ತರದ ಕಣಿವೆಗಳು ಇರುವುದು ವಿಶೇಷ.

ಕೋಲಾರ ಜಿಲ್ಲೆ ಬಹುಮಟ್ಟಿಗೆ ನೈಸ್ ಕಣಶಿಲೆಯ ಪ್ರದೇಶ. ಶ್ರೀನಿವಾಸಪುರದಿಂದ ದಕ್ಷಿಣಾಭಿಮುಖವಾಗಿ ಜಿಲ್ಲೆಯ ಅಂಚಿನವರೆಗೆ ಸುಮಾರು 6ಕಿಮೀ ಅಗಲದ ಶಿಸ್ಟ್ ಕಲ್ಲಿನ ಪಟ್ಟೆಯೊಂದು ಹಬ್ಬಿದೆ. ಜಿಲ್ಲೆಯ ಹೆಚ್ಚಿನ ಭಾಗದಲ್ಲಿ ನೆಲ ಅಲ್ಪಸ್ವಲ್ಪ ಏರುತಗ್ಗುಗಳೊಡನೆ ಹರಡಿದ್ದು ಕಣಶಿಲೆಯ ಗುಡ್ಡಬೆಟ್ಟಗಳು ಅಲ್ಲಲ್ಲಿ ಎದ್ದು ನಿಂತಂತಿರುತ್ತವೆ. ದೊಡ್ಡ ದೊಡ್ಡ ಬಂಡೆಗಳನ್ನು ಒಂದರ ಮೇಲೊಂದು ವಿಚಿತ್ರಾಕಾರದಲ್ಲಿ ಪೇರಿಸಿದಂತಿರುವ ಈ ಬೆಟ್ಟಗಳು ಕೋಲಾರ ಜಿಲ್ಲೆಯ ವೈಶಿಷ್ಟ್ಯ. ಶಿಸ್ಟ್ ಕಲ್ಲಿನ ಪಟ್ಟೆಯ ಪ್ರದೇಶ ಆರ್ಥಿಕವಾಗಿ ಮುಖ್ಯವಾದುದು. ಇದಕ್ಕೆ ಹೊಂದಿಕೊಂಡಂತೆ ಕ್ವಾರ್ಟ್ಜೈಟ್, ಬೆಣಚುಕಲ್ಲು ಮುಂತಾದ ವಿವಿಧ ಬಗೆಯ ಶಿಲೆಗಳ ಸಮುದಾಯವಿದೆ. ಪ್ರಸಿದ್ಧವಾದ ಚಿನ್ನದ ಭೂನಿಕ್ಷೇಪಗಳು ಹಬ್ಬಿರುವುದೂ ಇದರ ಜೊತೆಯಲ್ಲೇ. ಇದಲ್ಲದೆ ಜಿಲ್ಲೆಯ ಹಲವು ಭಾಗಗಳಲ್ಲಿ ಉತ್ತರ ದಕ್ಷಿಣ ಅಥವಾ ಪೂರ್ವ ಪಶ್ಚಿಮವಾಗಿ ಹಬ್ಬಿರುವ ಡಾಲರೈಟ್‌ನ ಹೊಡೆಸಾಲುಗಳೂ ಇವೆ. ಚಿಕ್ಕಬಳ್ಳಾಪುರ ಶಿಡ್ಲಘಟ್ಟ ಜಂಗಮಕೋಟೆ ಈ ತ್ರಿಕೋನ ಪ್ರದೇಶದಲ್ಲಿ ಮತ್ತು ಸ್ವಲ್ಪಮಟ್ಟಿಗೆ ಶ್ರೀನಿವಾಸಪುರದ ಬಳಿ ಜಂಬುಮಣ್ಣು ಸಹ ಇದೆ. ಕೋಲಾರದ ಚಿನ್ನದ ಗಣಿಗಳು ಜಗತ್ಪ್ರಸಿದ್ಧ. ಇಲ್ಲಿ ಅಲ್ಪಾಂಶ ಬೆಳ್ಳಿಯೂ ದೊರಕುತ್ತದೆ. ಬಂಗಾರಪೇಟೆ ತಾಲ್ಲೂಕಿನ ರಾಮಸಮುದ್ರದ ಬಳಿ ಕೊರಂಡಂ, ಮಾಲೂರು ತಾಲ್ಲೂಕಿನ ಕರಡಿಬಂಡೆ ಬಳಿ ಸುದ್ದೆಮಣ್ಣು ದೊರಕುತ್ತವೆ.

ಜಿಲ್ಲೆಯ ಎತ್ತರದ ಭಾಗಗಳಲ್ಲಿ ಕೆಂಪುಕಲ್ಲು ಮಿಶ್ರಿತ ಮಣ್ಣೂ ನದಿಕಣಿವೆ ಪ್ರದೇಶಗಳಲ್ಲಿ ಎರೆಮಣ್ಣೂ ಸಾಮಾನ್ಯ. ಪೂರ್ವದಂಚಿನ ಶಿಸ್ಟ್ ಪಟ್ಟೆ ಪ್ರದೇಶದಲ್ಲಿ ಕಬ್ಬಿಣದ ಅಂಶ ಹೆಚ್ಚಾಗಿರುವ ಕಪ್ಪು ಮತ್ತು ಕೆಂಪು ಮಣ್ಣು, ಸ್ವಲ್ಪ ಎರೆಭೂಮಿ ಇದೆ.

ನಂದಿದುರ್ಗದ ಭಾಗ ಜಿಲ್ಲೆಯ ಎತ್ತರದ ಪ್ರದೇಶ. ಇದೇ ಜಿಲ್ಲೆಯಲ್ಲಿನ ಮುಖ್ಯ ನೀರ್ಬೇರ್ಪಡೆಯ ಬೆನ್ನಿನ ಪ್ರದೇಶ, ವಿವಿಧ ದಿಕ್ಕುಗಳಿಗೆ ಹರಿಯುವ ಹಲವು ನದಿಗಳ ಉಗಮಸ್ಥಾನ. ಜಿಲ್ಲೆಯನ್ನು ಮುಖ್ಯವಾಗಿ ಉತ್ತರದಲ್ಲಿ ಉತ್ತರ ಪಿನಾಕಿನಿ ದಕ್ಷಿಣದಲ್ಲಿ ಪಾಲಾರ್ ಈ ಎರಡು ನದಿಗಳ ಕಣಿವೆಗಳಾಗಿ ಚಿಕ್ಕಬಳ್ಳಾಪುರ -ಶ್ರೀನಿವಾಸಪುರ ಗೆರೆಯಿಂದ ಬೇರ್ಪಡಿಸಬಹುದು. ಈ ಗೆರೆಯಿಂದ ಉತ್ತರ ಮತ್ತು ದಕ್ಷಿಣಕ್ಕೆ ಭೂಮಿಯ ಸಾಮಾನ್ಯ ಇಳಿವು ಕಾಣಿಸುತ್ತದೆ.

ಜಿಲ್ಲೆಯ ಮಧ್ಯ ಮತ್ತು ಪೂರ್ವಭಾಗಗಳು ಪಾಲಾರ್ ನದೀಕಣಿವೆ ಪ್ರದೇಶ. ಇದು ಅಲೆಅಲೆಯಾಗಿ ಹಬ್ಬಿದೆ. ಕೋಲಾರ ಪಟ್ಟಣದ ಬಳಿ ಇದರ ಎತ್ತರ 800ಮೀ. ಮಾಲೂರಿನಲ್ಲಿ 854ಮೀ. ಅಂಬಾಜಿದುರ್ಗದ ತಪ್ಪಲಿನ ಪ್ರದೇಶ 859ಮೀ. ಎತ್ತರವಿದೆ. ಉತ್ತರಪಿನಾಕಿನಿ ನದೀಕಣಿವೆಯಲ್ಲಿ ಗೌರಿಬಿದನೂರಿನ ಕಡೆಗೆ ಹೋದಂತೆ ನೆಲ ತಗ್ಗುತ್ತದೆ. ಪೂರ್ವದಲ್ಲಿ ಮುಗ್ಲಿ ಮತ್ತು ನಾಯಕನೇರಿ ಕಣಿವೆಮಾರ್ಗಗಳು ಜಿಲ್ಲೆಯ ಎಲ್ಲೆಯಿಂದ ಸ್ವಲ್ಪ ದೂರದಲ್ಲಿವೆ.



ಹುಟ್ಟಿ ವಾಯುವ್ಯ ದಿಕ್ಕಿನಲ್ಲಿ ಹರಿದು, ಮಂಚೇನಹಳ್ಳಿ ಮತ್ತು ಗೌರಿಬಿದನೂರುಗಳ ಬಳಿಯಲ್ಲಿ ಸಾಗಿ ಅನಂತಪುರ ಜಿಲ್ಲೆಯ ಹಿಂದೂಪುರ ತಾಲ್ಲೂಕನ್ನು ಪ್ರವೇಶಿಸುತ್ತದೆ. ಜಿಲ್ಲೆಯಲ್ಲಿ ಈ ನದಿಯ ಉದ್ದ 55ಕಿಮೀ. ನಂದಿಬೆಟ್ಟದ ಬಳಿ ಹುಟ್ಟಿ ದಕ್ಷಿಣಕ್ಕೆ ಪ್ರವಹಿಸುವ ದಕ್ಷಿಣಪಿನಾಕಿನಿ ಕೋಲಾರ ಜಿಲ್ಲೆಯಲ್ಲಿ ಸ್ವಲ್ಪ ದೂರ ಮಾತ್ರ ಹರಿಯುತ್ತದೆ. ಜಿಲ್ಲೆಯ ಇನ್ನೊಂದು ಮುಖ್ಯ ನದಿ ಪಾಪಘ್ನಿ. ಚಿಕ್ಕಬಳ್ಳಾಪುರದ ಬಳಿಯ ಬೆಟ್ಟದಲ್ಲಿ ಇದರ ಉಗಮ. ಇದು ಈಶಾನ್ಯ ದಿಕ್ಕಿನಲ್ಲಿ ಬಾಗೇಪಲ್ಲಿ ತಾಲ್ಲೂಕಿನ ಮೂಲಕ ಹರಿದು, ಚಿತ್ತೂರು ಜಿಲ್ಲೆಯ ಮದನಪಲ್ಲಿ ತಾಲ್ಲೂಕನ್ನು ಪ್ರವೇಶಿಸುತ್ತದೆ. ಜಿಲ್ಲೆಯಲ್ಲಿ ಈ ನದಿಯ ಉದ್ದ 68ಕಿಮೀ. ಚಿತ್ರಾವತಿ ಇನ್ನೊಂದು ನದಿ. ನಂದಿ ಬೆಟ್ಟಕ್ಕೆ ಉತ್ತರದಲ್ಲಿ 14ಕಿಮೀ ದೂರದಲ್ಲಿ ಹುಟ್ಟಿ ಈಶಾನ್ಯಾಭಿಮುಖವಾಗಿ ಹರಿದು ಹಿಂದೂಪುರವನ್ನು ಪ್ರವೇಶಿಸುತ್ತದೆ. ಇದು ಉತ್ತರ ಪಿನಾಕಿನಿಯ ಒಂದು ಉಪನದಿ. ಜಿಲ್ಲೆಯಲ್ಲಿ ಇದರ ಹರಿವು 48ಕಿಮೀ. ಇದರ ಜಲಾನಯನ ಪ್ರದೇಶ 538ಚ.ಕಿಮೀ. ಇಲ್ಲಿ 206 ಕೆರೆಗಳಿವೆ. ನಂಗ್ಲಿಹೊಳೆ ಮುಳಬಾಗಿಲಬಳಿಯ ಕುರುಡುಮಲೆಯಲ್ಲಿ ಹುಟ್ಟಿ ಪೂರ್ವಾಭಿಮುಖವಾಗಿ ಹರಿದು ಜಿಲ್ಲೆಯನ್ನು ದಾಟಿ ಹೋಗುತ್ತದೆ. ಇದು ಕೌಂಡಿನ್ಯ ನದಿಯ ಉಪನದಿ. ಕುಮುದ್ವತಿ ನದಿ ಉತ್ತರ ಪಿನಾಕಿನಿಯ ಉಪನದಿ. ಜಿಲ್ಲೆಯಲ್ಲಿ ಇದರ ಉದ್ದ 29ಕಿಮೀ. ಇದು ಮಾಕಳಿದುರ್ಗಕ್ಕೆ ಪಶ್ಚಿಮದಲ್ಲಿ ಉಜನಿ ಬೆಟ್ಟದಲ್ಲಿ ಹುಟ್ಟಿ ಉತ್ತರಕ್ಕೆ ಹರಿದು ಗೌರಿಬಿದನೂರು ತಾಲ್ಲೂಕಿನಲ್ಲಿ ಸಾಗಿ ಜಿಲ್ಲೆಯ ಎಲ್ಲೆಯನ್ನು ದಾಟುತ್ತದೆ. ಕುಶಾವತಿ ಎಂಬ ಹೆಸರಿನ ಎರಡು ಹೊಳೆಗಳು ಈ ಜಿಲ್ಲೆಯಲ್ಲುಂಟು. ಒಂದು ಪಾಪಘ್ನಿಯನ್ನೂ ಇನ್ನೊಂದು ಚಿತ್ರಾವತಿಯನ್ನೂ ಸೇರುತ್ತದೆ. ಮಾರ್ಕಂಡೇಯ ಇನ್ನೊಂದು ಹೊಳೆ. ಕೋಲಾರ ತಾಲ್ಲೂಕಿನ ವಕ್ಕಲೇರಿ ಬೆಟ್ಟಗಳ ಮೇಲೆ ಮತ್ತು ಮಾಲೂರು ತಾಲ್ಲೂಕಿನ ಟೇಕಲ್ ಬೆಟ್ಟಗಳ ಮೇಲೆ ಹುಟ್ಟುವ ಎರಡು ತೊರೆಗಳು ಬಂಗಾರಪೇಟೆ ತಾಲ್ಲೂಕಿನ ಬೂದಿಕೋಟೆ ಎಂಬಲ್ಲಿ ಸೇರಿ ಮಾರ್ಕಂಡೇಯ ನದಿಯಾಗಿ ದಕ್ಷಿಣದತ್ತ ಹರಿದು ವೃಷಭಾವತಿಯನ್ನು ಸೇರಿಕೊಳ್ಳುವುದು. ಜಿಲ್ಲೆಯಲ್ಲಿ 50ಕಿಮೀ ದೂರ ಈ ನದಿ ಹರಿಯುವುದು. ಇದರ ಜಲಾನಯನ ಪ್ರದೇಶದಲ್ಲಿ 274 ಕೆರೆಗಳಿವೆ. ದಕ್ಷಿಣಪಿನಾಕಿನಿ ನದಿ ಹುಟ್ಟುವುದು ಚೆನ್ನರಾಯನ ಬೆಟ್ಟದಲ್ಲಿ. ಶಿಡ್ಲಘಟ್ಟದವರೆಗೆ ಪೂರ್ವಾಭಿಮುಖವಾಗಿ ಹರಿದು, ದಕ್ಷಿಣಕ್ಕೆ ತಿರುಗಿ, ಬೆಂಗಳೂರು ಜಿಲ್ಲೆಯನ್ನು ಪ್ರವೇಶಿಸುತ್ತದೆ. ಕೋಲಾರ ಜಿಲ್ಲೆಯಲ್ಲಿ ಇದರ ಉದ್ದ 39ಕಿಮೀ. ಜಲಾನಯನ ಪ್ರದೇಶ 580ಚ.ಕಿಮೀ. ಕಾವೇರಿಯ ಉಪನದಿಗಳಲ್ಲಿ ಒಂದಾದ ಅರ್ಕಾವತಿ ಉದಿಸುವುದು ನಂದಿದುರ್ಗದಲ್ಲಿ. ಇದು ಬೆಟ್ಟವನ್ನಿಳಿದು ಜಿಲ್ಲೆಯನ್ನು ದಾಟಿ ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕನ್ನು ಸೇರುತ್ತದೆ. ವೃಷಭಾವತಿ ನದಿ ವಕ್ಕಲೇರಿ ಬೆಟ್ಟದಲ್ಲಿ ಹುಟ್ಟುತ್ತದೆ. ಬಂಗಾರಪೇಟೆ ತಾಲ್ಲೂಕಿನಲ್ಲಿ ಹಾಯ್ದು, ಕೊಪ್ಪ -ದೊಡ್ಡ ಕೆರೆಗೆ ನೀರು ಒದಗಿಸಿ, ಕಾಮಸಂದ್ರದ ಬಳಿ ದಕ್ಷಿಣಕ್ಕೆ ಹರಿದು ತಮಿಳುನಾಡು ರಾಜ್ಯದ ಧರ್ಮಪುರಿ ಜಿಲ್ಲೆಯ ಹೊಸೂರು ತಾಲ್ಲೂಕನ್ನು ಪ್ರವೇಶಿಸುತ್ತದೆ. ಕಾಮಸಂದ್ರದ ಬಳಿ ಇದಕ್ಕೆ ಕಟ್ಟೆ ಕಟ್ಟಲಾಗಿದೆ. ಜಿಲ್ಲೆಯಲ್ಲಿ ಈ ನದಿಯ ಉದ್ದ 58ಕಿಮೀ. ಜಲಾನಯನ ಪ್ರದೇಶ 347ಚ.ಕಿಮೀ. ಈ ಪ್ರದೇಶದಲ್ಲಿ 264 ಕೆರೆಗಳಿವೆ.

ಜಿಲ್ಲೆಯ ವಾಯುಗುಣ ಹಿತಕರ, ವರ್ಷದಲ್ಲಿ ಸ್ಥೂಲವಾಗಿ ನಾಲ್ಕು ಋತುಗಳಿವೆ: ಡಿಸೆಂಬರ್-ಫೆಬ್ರುವರಿ ಶುಷ್ಕ ಹವೆ. ಮಾರ್ಚ್-ಮೇ ಬೇಸಗೆ. ಜೂನ್-ಅಕ್ಟೋಬರ್ ಮಳೆಗಾಲ. ನವೆಂಬರಿನಲ್ಲಿ ಮುಂಗಾರು ಹಿಂದೆ

ಸ್ವಲ್ಪ ಹೆಚ್ಚು ಮಳೆಯಾಗುವ ಬೆಟ್ಟಗುಡ್ಡಗಳಲ್ಲಿ ಚಿಕ್ಕ ಮರ ಮತ್ತು ಕುರುಚಲು ಕಾಡುಗಳಿವೆ. ಈ ಕಾಡುಗಳಲ್ಲಿ ಬೇವು, ಹುಣಿಸೆ, ಗಂಧ, ಹೊಂಗೆ, ಕರಿಜಾಲಿ, ಬಿಳಿಜಾಲಿ, ಕಗ್ಗಲಿ, ಬನ್ನಿ, ಗುಜ್ಜಲು, ಬಿಲ್ವಾರ, ಚುಜ್ಜಲು, ದಿಂಡಿಗ, ನೇರಳೆ, ಚೆನ್ನಂಗಿ, ಪಚರಿ, ನವಿಲಾದಿ, ದೇವದಾರು, ಆಲ, ಬೇಲ, ಮುತ್ತುಗ ಬೆಳೆಯುತ್ತವೆ. ಸೌದೆ, ಶ್ರೀಗಂಧ ಮುಖ್ಯ ಉತ್ಪನ್ನಗಳು. ನಂದಿಬೆಟ್ಟದ ಕಾಡುಗಳಲ್ಲಿ ಕರಡಿ, ಚಿರತೆ, ಕಾಡುಮೊಲ, ಕಾಡುಹಂದಿ ಮತ್ತು ಜಿಂಕೆಗಳಿವೆ.



ವೆಂಕಟೇಶ್ವರದೇವಾಲಯ, ಬಂಗಾರುತಿರುಪತಿ

ದೊಡ್ಡ ನದಿಗಳಿಲ್ಲದಿರುವುದರಿಂದಲೂ ಮಳೆ ಕಡಿಮೆಯಾದ್ದರಿಂದಲೂ ಈ ಜಿಲ್ಲೆಯ ವ್ಯವಸಾಯಕ್ಕೆ ಕೆರೆಗಳು ಮುಖ್ಯ ಆಧಾರ. ಜಿಲ್ಲೆಯಲ್ಲಿ ಉತ್ತಮ ವಿದ್ಯುತ್ ಸಂಪರ್ಕಗಳಿರುವುದರಿಂದ, ನೀರಾವರಿ ಪಂಪ್‌ಗಳೂ ಹೆಚ್ಚು ಸಂಖ್ಯೆಯಲ್ಲಿವೆ. ರಾಗಿ, ಬತ್ತ, ಜೋಳ, ಸಜ್ಜೆ, ಕಾಳುಗಳು, ನೆಲಗಡಲೆ, ಕಬ್ಬು, ಆಲೂಗೆಡ್ಡೆ, ಈರುಳ್ಳಿ ಮತ್ತು ಹೊಗೆಸೊಪ್ಪು ಇಲ್ಲಿಯ ಮುಖ್ಯ ಬೆಳೆಗಳು.

ಚಿನ್ನದ ಗಣಿಗಾರಿಕೆ ಜಿಲ್ಲೆಯ ಒಂದು ದೊಡ್ಡ ಉದ್ಯಮ. ಭಾರತದ ಒಟ್ಟು ಚಿನ್ನದ ಉತ್ಪಾದನೆಯಲ್ಲಿ ಸೇ.99ನ್ನು ಕೋಲಾರ ಚಿನ್ನದ ಗಣಿಗಳಲ್ಲಿ ತೆಗೆಯಲಾಗುತ್ತಿತ್ತು. ಈಗ ಚಿನ್ನದ ಗಣಿಗಾರಿಕೆ ಸ್ಥಗಿತಗೊಳ್ಳುವ ಪರಿಸ್ಥಿತಿಯನ್ನು ಎದುರಿಸುತ್ತಿದೆ. ಭಾರತ ಸರ್ಕಾರದ ರಕ್ಷಣಾ ಇಲಾಖೆಯ ಆಡಳಿತ ನಿಯಂತ್ರಣಕ್ಕೊಳಪಟ್ಟ ಭಾರತ್ ಅರ್ತ್ ಮೂವರ್ಸ್ ಲಿಮಿಟೆಡ್ ಸಂಸ್ಥೆ ಭಾರಿ ಯಂತ್ರೋಪಕರಣಗಳನ್ನು ತಯಾರಿಸುತ್ತಿದೆ. ಗೌರಿಬಿದನೂರಿನಲ್ಲಿ ಸಹಕಾರ ಸಕ್ಕರೆ ಕಾರ್ಖಾನೆ ಸ್ಥಾಪಿತವಾಗಿದೆ. ಹಲವು ಸಣ್ಣ ಕೈಗಾರಿಕೆಗಳು ಕೋಲಾರ, ಚಿಕ್ಕಬಳ್ಳಾಪುರ, ಚಿಂತಾಮಣಿ ಮತ್ತು ಕೋಲಾರ ಚಿನ್ನದ ಗಣಿ ಪ್ರದೇಶದಲ್ಲಿವೆ. ಉಕ್ಕಿನ ಸಾಮಾನುಗಳು, ವ್ಯವಸಾಯೋಪಕರಣಗಳು, ಅಲ್ಯುಮಿನಿಯಂ ಪಾತ್ರೆಗಳು, ಹೆಂಚು, ಇಟ್ಟಿಗೆ, ಸ್ಲೇಟ್, ಸೀಸದಕಡ್ಡಿ, ಸಾಬೂನು, ಅಂಟು, ಸುಗಂಧದ್ರವ್ಯಗಳು, ಔಷಧಿಗಳು, ಕಡ್ಡಿಪೆಟ್ಟಿಗೆ, ಪ್ಲಾಸ್ಟಿಕ್ ಸಾಮಾನುಗಳು ಕೂಡ ಕೋಲಾರ ಜಿಲ್ಲೆಯಲ್ಲಿ ತಯಾರಾಗುತ್ತವೆ. ಕಲ್ಲಿಗೆ ಹೊಳಪು ಕೊಡುವುದು, ಬೀಡಿ ಕಟ್ಟುವುದು, ಊದುಬತ್ತಿ ತಯಾರಿಕೆ, ಕೈಮಗ್ಗ, ಕಂಬಳಿ ತಯಾರಿಕೆ, ಗಾಣದಿಂದ ಮತ್ತು ಯಂತ್ರಗಳಿಂದ ಎಣ್ಣೆ ಉತ್ಪಾದನೆ, ಬೆಲ್ಲ ತಯಾರಿಕೆ ಇವೂ ಇವಕ್ಕೆ



ವೀರಾಂಜನೇಯ ಸ್ವಾಮಿ ದೇವಾಲಯ, ಮುಳಬಾಗಿಲು

ಕೋಲಾರ ಜಿಲ್ಲೆಯಲ್ಲಿ ರಸ್ತೆ ಸಂಪರ್ಕ ಚೆನ್ನಾಗಿ ಬೆಳೆದಿದೆ. ರಾಷ್ಟ್ರೀಯ ಹೆದ್ದಾರಿ ನಂ. 4 ಮತ್ತು 7 ಮತ್ತು ರಾಜ್ಯ ಹೆದ್ದಾರಿಗಳು ಇಲ್ಲಿ ಹಾದು ನೆರೆರಾಜ್ಯಗಳಿಗೆ ಸಂಪರ್ಕ ಕಲ್ಪಿಸಿವೆ. ಪ್ರತಿ ಹಳ್ಳಿಗೂ ತಾಲ್ಲೂಕಿಗೂ ಜಾಲದಂತೆ ರಸ್ತೆ ಮಾರ್ಗಗಳು ಹೆಣೆದುಕೊಂಡಿವೆ. ಸರ್ಕಾರಿ ಮತ್ತು ಖಾಸಗಿ ಬಸ್ಸುಗಳೂ ಕಾರುಗಳೂ ಬಂಡಿಗಳೂ ಜನರನ್ನೂ ಸರಕುಗಳನ್ನೂ ಒಂದೆಡೆಯಿಂದ ಇನ್ನೊಂದೆಡೆಗೆ ಸುಲಭವಾಗಿ ಸಾಗಿಸುತ್ತವೆ. ಹಿಂದೂಪುರ - ಬೆಂಗಳೂರು ರೈಲುಮಾರ್ಗ ಗೌರಿಬಿದನೂರು ಮೂಲಕವೂ ಚೆನ್ನೈ - ಬೆಂಗಳೂರು ರೈಲುಮಾರ್ಗ ಬಂಗಾರಪೇಟೆಯ ಮೂಲಕವೂ ಸಾಗುತ್ತವೆ. ಇನ್ನೊಂದು ರೈಲುಮಾರ್ಗ ಬೆಂಗಳೂರಿನಿಂದ ನಂದಿ, ಚಿಕ್ಕಬಳ್ಳಾಪುರ, ಚಿಂತಾಮಣಿ, ಶಿಡ್ಲಘಟ್ಟ, ಕೋಲಾರಗಳ ಮೂಲಕ ಬಂಗಾರ ಪೇಟೆಗೆ ಸಾಗುತ್ತದೆ. ಬಂಗಾರಪೇಟೆಯಿಂದ ಚಿನ್ನದ ಗಣಿ ಪ್ರದೇಶಕ್ಕೆ ರೈಲ್ವೆ ಸಂಪರ್ಕವುಂಟು.

ಕೋಲಾರ ಜಿಲ್ಲೆಯಲ್ಲಿ ಹಲವಾರು ಪ್ರಾಚೀನ ಅವಶೇಷಗಳು ಬೆಳಕಿಗೆ ಬಂದಿವೆ. ಹಳೆಯ ಶಿಲಾಯುಗಕ್ಕೆ ಸಂಬಂಧಿಸಿದ ಯಾವ ಅವಶೇಷಗಳೂ ಇದುವರೆಗೆ ಕಂಡುಬಂದಿಲ್ಲ. ನವಶಿಲಾಯುಗಕ್ಕೆ ಸಂಬಂಧಿಸಿದ ನೆಲೆಗಳು ಬಂಗಾರಪೇಟೆ ತಾಲ್ಲೂಕಿನ ಹುನಗುಂದ, ಬೂದಿಕೋಟೆ ಮತ್ತು ಸೂಲಿಕುಂಟೆ ಗ್ರಾಮಗಳಲ್ಲಿಯೂ ಮಾಲೂರು ತಾಲ್ಲೂಕಿನ ಬನಹಳ್ಳಿ ಗ್ರಾಮದಲ್ಲಿಯೂ ಶಿಡ್ಲಘಟ್ಟ ತಾಲ್ಲೂಕಿನ ತಲಕಾಯಲು ಬೆಟ್ಟಪ್ರದೇಶಗಳಲ್ಲಿಯೂ ಬೆಳಕಿಗೆ ಬಂದಿವೆ. ಅಲ್ಲದೆ ಮಾಲೂರು ತಾಲ್ಲೂಕಿನ ಕೆಂದನಹಳ್ಳಿ ಮತ್ತು ಗಂಗಸಂದ್ರ ಹಳ್ಳಿಗಳ ಸುತ್ತಮುತ್ತಲಿನಲ್ಲಿ ಹೊಸ ಶಿಲಾಯುಗದ ಕಲ್ಲಿನ ಆಯುಧಗಳು ದೊರಕಿವೆ. ಇವು ತಯಾರಿಕೆಯ ಹಲವು ಹಂತಗಳಲ್ಲಿರುವುದರಿಂದ ಈ ಪ್ರದೇಶ ಶಿಲಾಯುಧಗಳನ್ನು ತಯಾರಿಸುವ ಕೇಂದ್ರವಾಗಿದ್ದಿತೆಂದು ಹೇಳಬಹುದು. ಬಂಗಾರಪೇಟೆ ತಾಲ್ಲೂಕಿನಲ್ಲಿ ಚಿನ್ನದ ಗಣಿ ಪ್ರದೇಶದ ನೈಋತ್ಯಕ್ಕೆ ಸು.21ಕಿಮೀ ದೂರದಲ್ಲಿರುವ ಹುನಗುಂದದಲ್ಲಿ ನವಶಿಲಾಯುಗದ ಕಾಲದಲ್ಲಿ ಚಿನ್ನದ ಗಣಿಗಳಿದ್ದವೆಂದೂ ಅಲ್ಲಿ ಚಿನ್ನವನ್ನು ತೆಗೆಯುತ್ತಿದ್ದರೆಂದೂ ಊಹಿಸಲಾಗಿದೆ. ಅಲ್ಲಿರುವ 9ನೆಯ ಶತಮಾನದ ತಮಿಳು ಶಾಸನವೊಂದು ಇದನ್ನು ಪೊನ್‌ಕುನ್ರಂ-ಪೊನ್-ಚಿನ್ನ, ಕುನ್ರಂ-ಬೆಟ್ಟ ಎಂದು ಕರೆದಿದೆ. ಈ ಜಿಲ್ಲೆಯಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳ ನೆಲೆಗಳು

ಕುರುಡುಮಲೆಯಲ್ಲಿ ತ್ರಿಪುರಾಂತಕನ ಮೇಲೆ ಯುದ್ಧಕ್ಕೆ ಹೊರಡುವುದಕ್ಕೆ ಮುಂಚೆ ದೇವತೆಗಳೆಲ್ಲರೂ ಒಂದುಗೂಡಿದ್ದರಂತೆ.

ಸುಮಾರು 4ನೆಯ ಶತಮಾನದಲ್ಲಿ ಗಂಗರಸರು ಇಲ್ಲಿ ತಮ್ಮ ರಾಜ್ಯವನ್ನು ಕಟ್ಟಿ ರಾಜ್ಯಭಾರ ಮಾಡಲಾರಂಭಿಸಿದರು. 7-8ನೆಯ ಶತಮಾನಗಳಲ್ಲಿ ಮಹಾವಲಿ ಬಾಣರಸರು ಪಾಲಾರ್ ನದಿಯ ಪೂರ್ವಪ್ರದೇಶದಲ್ಲಿ ರಾಜ್ಯಭಾರ ಮಾಡುತ್ತಿದ್ದರು. 8, 9 ಮತ್ತು 10ನೆಯ ಶತಮಾನಗಳಲ್ಲಿ ಜಿಲ್ಲೆಯ ಬಹುಭಾಗ ನೊಳಂಬರ ವಶದಲ್ಲಿತ್ತು. 10ನೆಯ ಶತಮಾನದ ಅಂತ್ಯದಲ್ಲಿ ಜಿಲ್ಲೆಯ ಪ್ರದೇಶ ಚೋಳರ ವಶವಾಯಿತು. 12ನೆಯ ಶತಮಾನದ ಹೊತ್ತಿಗೆ ಹೊಯ್ಸಳರ ಆಳಿಕೆಗೆ ಬಂತು. ಆದರೂ ಮಧ್ಯೆ ಮಧ್ಯೆ ಸ್ವಲ್ಪಕಾಲ ತಮಿಳು ಗಂಗರು ಬ್ರಹ್ಮಾಧಿರಾಜರು ಮೊದಲಾದ ವಂಶಗಳವರು ಕೆಲವು ಪ್ರದೇಶಗಳಲ್ಲಿ ಸ್ವತಂತ್ರವಾಗಿಯೂ ಆಳುತ್ತಿದ್ದರು. ಅನಂತರ ವಿಜಯನಗರದರಸರು ಮತ್ತು ಕೆಲವು ಪಾಳೆಯಗಾರರು ಈ ಜಿಲ್ಲೆಯ ರಾಜ್ಯಭಾರ ಮಾಡಿದರು. ಮುಂದೆ ಇದು ಮೈಸೂರು ಸಂಸ್ಥಾನದ ಕಕ್ಷೆಯಲ್ಲಿತ್ತು.

ಇದುವರೆಗೆ ಈ ಜಿಲ್ಲೆಯಲ್ಲಿ ಸಿಕ್ಕಿರುವ ಅತ್ಯಂತ ಪ್ರಾಚೀನ ಶಾಸನ ಸು.370ರದು. ಇದು ಗಂಗಕುಲದ ಕೊಂಗುಣಿವರ್ಮ ಧರ್ಮಮಹಾರಾಜನಿಗೆ ಸಂಬಂಧಿಸಿದ್ದು; ಮಾಲೂರು ತಾಲ್ಲೂಕಿನ ನೊಣಮಂಗಲದಲ್ಲಿರುವ ಪಾಳು ಜೈನಬಸ್ತಿಯಲ್ಲಿದೆ. ಅಂದಿನಿಂದ ಹಿಡಿದು ಇತ್ತೀಚಿನವರೆಗಿನ ಕನ್ನಡ, ಸಂಸ್ಕೃತ, ತಮಿಳು ಮತ್ತು ತೆಲುಗು ಶಾಸನಗಳು ಜಿಲ್ಲೆಯ ಹಲವು ಸ್ಥಳಗಳಲ್ಲಿ ದೊರಕಿವೆ.



ವಿರೂಪಾಕ್ಷ ದೇವಾಲಯ, ವಿರೂಪಾಕ್ಷಪುರ

ನಂದಿಯಲ್ಲಿರುವ ಭೋಗನಂದೀಶ್ವರ (ಸು.800) ಮತ್ತು ಅರುಣಾಚಲೇಶ್ವರ (ಸು.880) ದೇವಾಲಯಗಳು ಜಿಲ್ಲೆಯ ಅತಿ ಪ್ರಾಚೀನ ವಾಸ್ತುಕೃತಿಗಳು. ಆವನಿಯ ರಾಮಲಿಂಗೇಶ್ವರ ದೇವಾಲಯ ಮತ್ತು ಇತರ ದೇವಾಲಯಗಳು ನೊಳಂಬರ ಕಾಲದ ಕಟ್ಟಡಗಳು. ಕೋಲಾರ ತಾಲ್ಲೂಕಿನ ಸೀತಿ ಬೆಟ್ಟದ ಮೇಲಿರುವ ದೇವಾಲಯ ಸಹ ಬಹುಶಃ ನೊಳಂಬರ ಕಾಲಕ್ಕೆ ಸಂಬಂಧಿಸಿದ್ದು. ಕುರುಡುಮಲೆಯ ಚೋಳರ ಕಾಲದ ಸೋಮೇಶ್ವರ ದೇವಾಲಯ ಮತ್ತು ಬೃಹದಾಕಾರದ ಗಣಪತಿ ದೇವಾಲಯಗಳು ಬಹಳ ಪ್ರಸಿದ್ಧವಾಗಿವೆ. ಕೋಲಾರದಲ್ಲಿರುವ ಕೋಲಾರಮ್ಮನ ದೇವಾಲಯ ಚೋಳ ಮತ್ತು ಗಂಗರಸರಿಂದ ನಿರ್ಮಿತವಾದುದೆಂದು ಹೇಳಬಹುದು.

ಮಹಮ್ಮದೀಯರ ಕಾಲದ ಕಟ್ಟಡಗಳಲ್ಲಿ ಗೌರಿಬಿದನೂರಿನ ಹತ್ತಿರವಿರುವ ಹೀರೇಬಿದನೂರಿನ (ನೋಡಿ) ಬಿಜಾಪುರದ ಪ್ರಾಂತ್ಯಾಧಿಕಾರಿಯ ಸಮಾಧಿ ಮತ್ತು ಕೋಲಾರದಲ್ಲಿರುವ ಹೈದರ್ ಅಲಿಯ ತಂದೆಯ ಸಮಾಧಿಗಳು ಉಲ್ಲೇಖಾರ್ಹ. ಖ್ಯಾತ ಎಂಜಿನಿಯರ್ ಎಂ.ವಿಶ್ವೇಶ್ವರಯ್ಯನವರ ಹೆಸರಿನಲ್ಲಿ ಚಿಕ್ಕಬಳಾಪುರ ತಾಲ್ಲೂಕಿನ ಮುದ್ದೇನಹಳ್ಳಿಯಲ್ಲಿ ವಸ್ತು ಸಂಗ್ರಹಾಲಯವಿದೆ.

ಈ ಜಿಲ್ಲೆಯಲ್ಲಿ ಅನೇಕ ಪ್ರಸಿದ್ಧ ಕೋಟೆಗಳಿವೆ. ನಂದಿದುರ್ಗ, ರಹಮಾನ್ ದುರ್ಗ ಪ್ರಖ್ಯಾತವಾದುವು (ಜಿಲ್ಲೆಯ ಅನೇಕ ಮುಖ್ಯಸ್ಥಳಗಳಿಗೆ ಆಯಾ ಶೀರ್ಷಿಕೆಯಲ್ಲಿ ಪ್ರತ್ಯೇಕ ಲೇಖನಗಳಿವೆ). (ಪಿ.ಕೆ.)

**ತಾಲ್ಲೂಕು :** ಜಿಲ್ಲೆಯ ಮಧ್ಯಭಾಗದಲ್ಲಿ ಸ್ವಲ್ಪಮಟ್ಟಿಗೆ ದಕ್ಷಿಣಕ್ಕಿದ್ದು, ಉತ್ತರದಲ್ಲಿ ಚಿಂತಾಮಣಿ, ಶ್ರೀನಿವಾಸಪುರ ತಾಲ್ಲೂಕುಗಳು, ಪೂರ್ವದಲ್ಲಿ ಮುಳಬಾಗಲು ತಾಲ್ಲೂಕು, ದಕ್ಷಿಣದಲ್ಲಿ ಬಂಗಾರಪೇಟೆ ಮತ್ತು ಮಾಲೂರು ತಾಲ್ಲೂಕುಗಳು ಮತ್ತು ಪಶ್ಚಿಮದಲ್ಲಿ ಬೆಂಗಳೂರು ಜಿಲ್ಲೆಯ ಎಲ್ಲೆಗಳು ಸುತ್ತುವರಿದಿವೆ. ವಿಸ್ತೀರ್ಣ 791.1ಚ.ಕಿಮೀ. ಜನಸಂಖ್ಯೆ 3,41,784. ಕಸಬೆ, ವಕ್ಕಲೇರಿ, ವೇಮಗಲ್ಲು, ನರಸಾಪುರ, ಸುಗಟೂರು, ಹೋಳೂರು, ಹುತ್ತೂರು ಈ ಏಳು ಹೋಬಳಿಗಳು. ಒಟ್ಟು ಗ್ರಾಮಗಳ ಸಂಖ್ಯೆ 361.



ಹಜರತ್ ಬಾಬಾ ಹೈದರ್ ಅಲಿ ದರ್ಗ, ಮುಳಬಾಗಿಲು

ತಾಲ್ಲೂಕು ಕಣಶಿಲೆಯ ಪ್ರದೇಶ, ಅಲೆಯಲೆಯಾಗಿ ಸುಮಾರು ಮಟ್ಟಸವಾದ ಭೂಪ್ರದೇಶದಲ್ಲಿ ಅಲ್ಲಲ್ಲಿ ಕಣಶಿಲೆಯ ಬೆಟ್ಟಗುಡ್ಡಗಳಿವೆ. ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ಕೋಲಾರ ಮತ್ತು ವೇಮಗಲ್ಲು ಬೆಟ್ಟಗಳ ಸಾಲುಗಳು ಇವೆ. ತಾಲ್ಲೂಕಿನ ಉತ್ತರ ಮತ್ತು ಪೂರ್ವಭಾಗ ಪಾಲಾರ್ ನದಿಯ ಹರಿವಿನ ಪ್ರದೇಶ. ತಾಲ್ಲೂಕಿನ ಹೆಚ್ಚುಭಾಗ ಮರಳುಮಿಶ್ರಿತ ಕೆಂಪು ಮಣ್ಣಿನದು. ಹೋಳೂರು ಹೋಬಳಿ ಮತ್ತು ದಲಸನೂರಿನ ಸುತ್ತಮುತ್ತ ಉತ್ಕೃಷ್ಟ ಭೂಮಿ ಇದೆ. ಈ ಭಾಗದಲ್ಲಿ ಕೆಲವೆಡೆ ಕಪ್ಪು ಎರೆ ಮಣ್ಣು ಸಹ ಇದೆ. ವಾರ್ಷಿಕ ಸರಾಸರಿ ಮಳೆ 693.93ಮಿಮೀ. ಪಾಲಾರ್ ನದಿಗೆ ಕಟ್ಟಲಾಗಿರುವ ಸೋಮಾಂಬುಧಿ ಅಗ್ರಹಾರಕೆರೆ ಮತ್ತು ಇತರ ಅನೇಕ ಕೆರೆಗಳು ಮತ್ತು ಬಾವಿಗಳೂ ನೀರಾವರಿ ಸೌಲಭ್ಯವನ್ನು ಒದಗಿಸಿವೆ. ತಾಲ್ಲೂಕಿನ ಮುಖ್ಯ ಬೆಳೆಗಳು ರಾಗಿ ಮತ್ತು ಬತ್ತ. ಸ್ವಲ್ಪಮಟ್ಟಿಗೆ ಕಬ್ಬು,



ವಿಶ್ವೇಶ್ವರಯ್ಯ ವಸ್ತುಸಂಗ್ರಹಾಲಯ, ಮುದ್ದೇನಹಳ್ಳಿ

ಹೋಬಳಿ ಗ್ರಾಮಗಳಲ್ಲದೆ ಬೆಳ್ಳೂರು, ಗರುಡನಪಾಳ್ಯ, ಪಾಪರಾಜನ ಹಳ್ಳಿ, ಸೀತಿ, ಸುಗಟೂರು ತೇರುಹಳ್ಳಿ, ವಾಣರಾಶಿ, ವಕ್ಕಲೇರಿ, ವೇಮಗಲ್ಲು ಮೊದಲಾದವು ಈ ತಾಲ್ಲೂಕಿನಲ್ಲಿನ ಮುಖ್ಯ ಸ್ಥಳಗಳು. ಗರುಡನಪಾಳ್ಯದ ಬಳಿಯ ಚಿಕ್ಕಗುಡ್ಡದಲ್ಲಿ ಸ್ಥಳೀಯವಾಗಿ ಪಾಂಡವರ ಗುಡಿಗಳೆಂದು ಕರೆಯುವ ಬೃಹತ್ ಶಿಲಾಸಮಾಧಿಗಳಿವೆ. ಕೋಲಾರದ ಬಳಿಯ ಬೆಟ್ಟವೊಂದರ ಮೇಲಿರುವ ಪಾಪರಾಜನ ಹಳ್ಳಿಯಲ್ಲಿ ಒಂದು ಶಿವ ದೇವಾಲಯ ಮತ್ತು ಉಸ್ಮಾನ್ ಅಲಿಯ ದರ್ಗ ಅಲ್ಲದೆ ಭೂತಗೌಡನ ಗವಿ, ಮುಗಲ್ ಸುಬೇದಾರನ ಕೋಟೆ ಮೊದಲಾದವು ಇವೆ. ಮತ್ತೊಂದು ಬೆಟ್ಟದ ಮೇಲೆ ತೇರುಹಳ್ಳಿ ಗ್ರಾಮದಲ್ಲಿ ಸು.12-13ನೆಯ ಶತಮಾನದ ಗಂಗಾಧರೇಶ್ವರನ ಬೃಹತ್ ದೇವಾಲಯ ಮತ್ತು ಕೆಲವು ಪ್ರಾಗೈತಿಹಾಸಿಕ ಅವಶೇಷಗಳು ಇವೆ. ಬೆಳ್ಳೂರು ಗಂಗರ ಕಾಲದಿಂದಲೂ ಅಸ್ತಿತ್ವದಲ್ಲಿದ್ದು ಹೊಯ್ಸಳರ ಕಾಲದಲ್ಲಿ ವಿಷ್ಣುವರ್ಧನ ಚತುರ್ವೇದಿ ಮಂಗಲಂ ಎಂದು ಪ್ರಸಿದ್ಧವಾಗಿದ್ದ ಶ್ರೀವೈಷ್ಣವ ಅಗ್ರಹಾರವಾಗಿತ್ತು. ಮಣವಾಲ ಮಹಾಮುನಿಯ ಶಿಷ್ಯರಾದ ಪ್ರತಿವಾದಿ ಭಯಂಕರರ ಅಣ್ಣ ಇಲ್ಲಿಯವರೆಂದು ಪ್ರತೀತಿ. ಇಲ್ಲಿ ರಾಮದೇವಾಲಯವಿದೆ. ವೆಂಕಟಾಪುರದಲ್ಲಿ ವೆಂಕಟರಮಣ ದೇವಾಲಯವಿದೆ. ವಕ್ಕಲೇರಿಯ ಬೆಟ್ಟದ ಮೇಲೆ ಪ್ರಾಚೀನ ಮಾರ್ಕಂಡೇಶ್ವರ ದೇವಾಲಯವಿದೆ. ಪ್ರತಿ ಮಾಘ ಮಾಸದಲ್ಲಿ ಸು.20 ದಿನಗಳ ಕಾಲ ಇಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ವಾಣರಾಸಿಯಲ್ಲಿ ಸ್ಥಳೀಯ ವೀರ ಇರಳಪ್ಪನ ದೇವಾಲಯವಿದೆ. ಪ್ರತಿ ಚೈತ್ರಮಾಸದಲ್ಲಿ ಇಲ್ಲೂ ದೊಡ್ಡ ಜಾತ್ರೆ ನಡೆಯುತ್ತವೆ. ಹೋಳೂರಿನಲ್ಲಿ ಲಕ್ಷ್ಮೀನಾರಾಯಣ ದೇವಾಲಯವಿದೆ. ಮಾಘ ಶುದ್ಧ ಪಾಡ್ಯಮಿಯಂದು ಜಾತ್ರೆ ನಡೆಯುತ್ತದೆ. ವೇಮಗಲ್ಲಿನಲ್ಲಿರುವ ದರ್ಗಾ ಪ್ರಸಿದ್ಧವಾದುದು.

**ಪಟ್ಟಣ :** ಕೋಲಾರ, ದೊಡ್ಡ ಊರು; ಜಿಲ್ಲೆ ಹಾಗೂ ತಾಲ್ಲೂಕಿನ ಆಡಳಿತ ಕೇಂದ್ರ. ಬೆಂಗಳೂರಿನಿಂದ 72ಕಿಮೀ ಪೂರ್ವ ಈಶಾನ್ಯಕ್ಕೆ ಹಳೆಯ ಬೆಂಗಳೂರು - ಚೆನ್ನೈ ಹೆದ್ದಾರಿಯ ಮೇಲಿದೆ. ಬೆಂಗಳೂರು - ಬಂಗಾರಪೇಟೆ ರೈಲುಮಾರ್ಗ ಈ ಪಟ್ಟಣದ ಮೂಲಕ ಹಾದುಹೋಗುತ್ತದೆ. ಜನಸಂಖ್ಯೆ 1,13,299.

ಈ ಊರು ರೈಲುಮಾರ್ಗದ ಉತ್ತರಕ್ಕೆ ಬೆಳೆದಿದೆ. ಪೂರ್ವದಲ್ಲಿ ಅಮಾನಿಕೆರೆ ಇದೆ. ಕೈಗಾರಿಕಾ ತರಬೇತಿ ಕೇಂದ್ರ, ರೇಷ್ಮೆ ತಯಾರಿಕಾ ತರಬೇತಿ ಕೇಂದ್ರ ಇವೆ. ಸುತ್ತಲ ಪ್ರದೇಶದಲ್ಲಿ ಉತ್ಪನ್ನವಾಗುವ ರೇಷ್ಮೆಯ ವ್ಯಾಪಾರ ಈ ನಗರದ ಮೂಲಕ ಸಾಗುತ್ತದೆ. ರೇಷ್ಮೆಮೊಟ್ಟೆ ಕೇಂದ್ರಗಳಿವೆ. ಇಲ್ಲಿನ ಕಂಬಳಿಗಳು ಹೆಸರುವಾಸಿ. ಸರ್ಕಾರದ ಒಂದು ಉಣ್ಣೆನೇಯ್ಗೆ ಕಾರ್ಖಾನೆ ಇದೆ. ಒಂದು ಕೈಗಾರಿಕಾ ಎಸ್ಟೇಟ್, ಅಲ್ಯುಮಿನಿಯಂ ಪಾತ್ರೆಗಳ ಕಾರ್ಖಾನೆ, ಗೋಂದು ಮತ್ತು ಪರಿಮಳ ದ್ರವ್ಯಗಳ ಕಾರ್ಖಾನೆ ಇವೆ.

ಸತ್ಕರಿಸಿದ. ಕಾರ್ತವೀರ್ಯ ಆ ಗೋವನ್ನು ತನಗೆ ಕೊಡಬೇಕೆಂದು ಜಮದಗ್ನಿಯನ್ನು ಪೀಡಿಸಿದ. ಜಮದಗ್ನಿ ಗೋವನ್ನು ಕೊಡಲು ನಿರಾಕರಿಸಲು ಅದನ್ನು ಬಲಾತ್ಕಾರವಾಗಿ ತೆಗೆದುಕೊಂಡು ಹೋಗಲು ಪ್ರಯತ್ನಿಸಿದ. ಆಗ ಜಮದಗ್ನಿಯ ಮಗ ಪರಶುರಾಮನಿಂದ ಕಾರ್ತವೀರ್ಯಾರ್ಜುನ ಹತನಾದ. ಅನಂತರ ಕಾರ್ತವೀರ್ಯಾರ್ಜುನನ ಮಕ್ಕಳಿಂದ ಜಮದಗ್ನಿಯ ಹತ್ಯೆ ನಡೆಯಿತು. ಜಮದಗ್ನಿಯ ಪತ್ನಿ ರೇಣುಕೆ ಪತಿಯ ದೇಹದೊಡನೆ ಚಿತೆಯೇರಿದಳು. ಇದರಿಂದ ಕುಪಿತನಾದ ಪರಶುರಾಮ ಎಲ್ಲ ಕ್ಷತ್ರಿಯರನ್ನೂ ನಾಶಮಾಡುವುದಾಗಿ ಪಣ ತೊಟ್ಟು ಕಾರ್ತವೀರ್ಯಾರ್ಜುನನ ಎಲ್ಲ ಮಕ್ಕಳನ್ನೂ ಯುದ್ಧದಲ್ಲಿ ಕೊಂದುಹಾಕಿದ. ಆ ಯುದ್ಧಗಳಿಂದ ಉಂಟಾದ ಕೋಲಾಹಲ ಸುತ್ತಲ ಬೆಟ್ಟಗಳಿಂದ ಮಾರ್ದನಿ ಕೊಟ್ಟು ಆ ಪ್ರದೇಶಕ್ಕೆ ಕೋಲಾಹಲವೆಂಬ ಹೆಸರು ಬಂತು. ಅದೇ ಇಂದಿನ ಕೋಲಾರವೆಂದು ಪ್ರತೀತಿ. ರೇಣುಕೆಯ ನೆನಪಿಗಾಗಿ ಇಲ್ಲಿನ ಕೋಲಾರಮ್ಮನ ದೇವಾಲಯವನ್ನು ಕಟ್ಟಲಾಯಿತು. ಇದು ಇಲ್ಲಿಯ ಐತಿಹ್ಯ. ಈಗ ಕೋಲಾರ ಪಟ್ಟಣವಿರುವ ಜಾಗದಲ್ಲಿ ಕೋಲ ಎಂಬ ಗೊಲ್ಲ ನೇಗಿಲಿನಿಂದ ಭೂಮಿಯನ್ನು ಉಳುತ್ತಿರುವಾಗ ಬಚ್ಚಿಟ್ಟ ಹಣ ದೊರಕಿತೆಂದೂ ಚೋಳ ದೊರೆ ಉತ್ತಮಚೋಳ ಆ ಗೊಲ್ಲನನ್ನು ಕಂಚಿಗೆ ಬರುವಂತೆ ಹೇಳಿಕಳುಹಿಸಿದನೆಂದೂ ಆಗ ರೇಣುಕಾದೇವಿ ಕೋಲಾಹಲಮ್ಮನ ರೂಪದಲ್ಲಿ ಕಾಣಿಸಿಕೊಂಡು ಅವನಿಗೆ ಎಚ್ಚರಿಕೆ ಕೊಟ್ಟಿದ್ದರಿಂದ ದೊರೆ ಕೋಲಾರಮ್ಮನ ಹೆಸರಿನಲ್ಲಿ ದೇವಾಲಯವನ್ನೂ ಊರನ್ನೂ ಕಟ್ಟಿಸಿದನೆಂದೂ ಇನ್ನೊಂದು ಕಥೆ ಇದೆ. ಕೋಲನ ನೇಗಿಲು ಹಲ ಎಂಬುದರಿಂದ ಕೋಲಾಹಲ (ಕೋಲಾರ) ಹೆಸರು ಬಂದಿರಬೇಕೆಂಬ ಊಹೆಯೂ ಇದೆ.

ಸು.4ನೆಯ ಶತಮಾನದಿಂದಲೂ ಈ ಊರು ಅಸ್ತಿತ್ವದಲ್ಲಿದ್ದಿರಬೇಕು. ತಲಕಾಡಿನ ಗಂಗವಂಶದ ಅರಸರು ಮೂಲತಃ ಕೋಲಾರದವರಾಗಿದ್ದು ತಮ್ಮನ್ನು ಕೋಳಾಲಪುರವರೇಶ್ವರರೆಂದು ಕರೆದುಕೊಂಡಿದ್ದಾರೆ. ತಲಕಾಡು ರಾಜಧಾನಿಯಾಗುವುದಕ್ಕೆ ಮುಂಚೆ ಕೋಲಾರ ಅವರ ರಾಜಧಾನಿಯಾಗಿದ್ದಿರಬೇಕು. ಇಲ್ಲಿ ಚೋಳ, ಹೊಯ್ಸಳ, ವಿಜಯನಗರ ಮತ್ತು ಪಾಳೆಯಗಾರರ ಕಾಲದ ಶಾಸನಗಳು ದೊರಕಿವೆ. ಆ ಕಾಲಗಳಲ್ಲೂ ಇದೊಂದು ಮುಖ್ಯ ಪಟ್ಟಣವಾಗಿ ಮೆರೆದಿತ್ತು. 15ನೆಯ ಶತಮಾನದಲ್ಲಿ ಇದು ತಿಮ್ಮೇಗೌಡನೆಂಬ ಪಾಳೆಯಗಾರನ ವಶದಲ್ಲಿತ್ತು. ಆತ ಇಲ್ಲಿನ ಕೋಟೆಯನ್ನು ದುರಸ್ತಿ ಮಾಡಿಸಿದ. 1639ರಲ್ಲಿ ಬಿಜಾಪುರದ ಸರದಾರ ಷಾಜಿಯ ವಶಕ್ಕೆ ಬಂತು. ಇಪ್ಪತ್ತು ವರ್ಷಗಳ ಅನಂತರ ಈ ಊರು ಮುಗಲರ ವಶವಾಯಿತು. 1720ರಲ್ಲಿ ಹೈದರನ ತಂದೆ ಫತೆ ಮಹಮ್ಮದ್ ಶಿರಾ ಸುಬೇದಾರರ ಅಧೀನದಲ್ಲಿ ಇದರ ಫೌಜುದಾರನಾದ. 1761ರಲ್ಲಿ ಪಟ್ಟಣ ಹೈದರನ ಅಧೀನಕ್ಕೆ ಬಂತು. 1768ರಲ್ಲಿ ಬ್ರಿಟಿಷ್ ಸೇನಾನಿ ಕ್ಯಾಂಪ್‌ಬೆಲ್ ವಶಪಡಿಸಿಕೊಂಡಿದ್ದ. 1770ರಲ್ಲಿ ಮಾಧವರಾವ್‌ನ ಕೈಸೇರಿತು. 1791ರಲ್ಲಿ ಇದನ್ನು ಕಾರ್ನವಾಲಿಸ್ ಗೆದ್ದ. 1792ರ ಸಂಧಿಯ ಪ್ರಕಾರ ಇದು ಮೈಸೂರು ಸಂಸ್ಥಾನಕ್ಕೆ ಸೇರಿತು. ಮೆಕೆಂಜಿ ಎಂಬ ಬ್ರಿಟಿಷ್ ಅಧಿಕಾರಿ 1801ರಲ್ಲಿ ಇದನ್ನು ನೋಡಿದಾಗ ಇಲ್ಲಿ ಮಣ್ಣಿನ ಕೋಟೆಯೂ ಸುತ್ತಣ ಕಂದಕ ಸುಸ್ಥಿತಿಯಲ್ಲಿತ್ತೆಂದೂ ವರ್ಣಿಸಿದ್ದಾನೆ. 19ನೆಯ ಶತಮಾನದ ಉತ್ತರ ಭಾಗದಲ್ಲಿ ಕೋಟೆಯನ್ನು ನೆಲಸಮ ಮಾಡಿ ಕಂದಕವನ್ನು ಮುಚ್ಚಲಾಯಿತು.

ಈ ಊರಿನಲ್ಲಿ ಕೋಲಾರಮ್ಮ, ಸೋಮೇಶ್ವರ, ಆಂಜನೇಯ, ವೆಂಕಟರಮಣ ಮತ್ತು ಕೋದಂಡರಾಮ ದೇವಾಲಯಗಳಿವೆ. ಕೋಲಾರಮ್ಮನ ಇವುಗಳಲ್ಲಿ ಚಾಮುಂಡಾ ವಿಗ್ರಹ ದೊಡ್ಡದು ಇದರ ಎದುರು ಶ್ರೀಯಂತ್ರವನ್ನು ಸ್ಥಾಪಿಸಲಾಗಿದೆ. ಮಧ್ಯದ ಅಂಕಣದಲ್ಲಿ 5' ಎತ್ತರದ ಕಪಾಲಭೈರವಿಯ ಮೂರ್ತಿ ಇದೆ. ಈ ದೇವಿ ಚೇಳುಕಡಿತವನ್ನು ನಿವಾರಿಸುವಳೆಂಬ ನಂಬಿಕೆ ಇದೆ. ದಕ್ಷಿಣದ ಕಡೆಗೆ ನಾಲ್ಕು ಕುಬ್ಜ ಕಂಬಗಳಿರುವ ಇನ್ನೊಂದು ಗುಡಿ ಇದೆ. ಇದರಲ್ಲಿ ಸಪ್ತಮಾತೃಕೆಯರ ಸುದ್ದೆಮಣ್ಣಿನ ದೊಡ್ಡ ವಿಗ್ರಹಗಳೂ ಕೋಲಾರಮ್ಮನ ಉತ್ಸವಮೂರ್ತಿಯೂ ಇವೆ. ಉತ್ತರಕ್ಕಿರುವ ನವರಂಗದಲ್ಲಿ ಚಂಡಿಕೇಶ್ವರ ಮತ್ತು ಚೋಳರಾಜನ ವಿಗ್ರಹಗಳಿವೆ. ಈ ಭಾಗಗಳೆಲ್ಲವೂ ಬಹುಶಃ ಗಂಗರ ಕಾಲದಲ್ಲಿದ್ದಂತೆ ತೋರುತ್ತದೆ. ಇದರಿಂದ ದಕ್ಷಿಣಕ್ಕಿರುವ ಕಟ್ಟಡಗಳು ಚೋಳರ ಕಾಲದ ಸೇರ್ಪಡೆಗಳು. ದೇವಾಲಯದಲ್ಲಿ ರಾಜೇಂದ್ರ ಚೋಳ ಮೊದಲಾದ ಹಲವು ಚೋಳರಾಜರ ತಮಿಳು ಶಾಸನಗಳಿವೆ.



ಷಣ್ಮುಖ, ಮುಳಬಾಗಿಲು

ಸೋಮೇಶ್ವರ ದೇವಾಲಯ ದ್ರಾವಿಡ ಶೈಲಿಯ ದೊಡ್ಡ ಕಟ್ಟಡ. ದೊಡ್ಡ ಪ್ರಾಕಾರದ ಮುಂದೆ ಮಹಾದ್ವಾರ ಮತ್ತು ಮೇಲೆ ಇಟ್ಟಿಗೆಯ ಗೋಪುರ ಇದೆ. ಒಳಭಾಗದ ಮುಖ್ಯ ಗುಡಿಯಲ್ಲಿ ಒಂದು ಗರ್ಭಗೃಹ, ದೊಡ್ಡ ಸುಕನಾಸಿ ಮತ್ತು ನಾಲ್ಕು ಕಂಬಗಳ ನವರಂಗ ಇವೆ. ಮುಂದೆ ಅನೇಕ ಕಂಬಗಳನ್ನುಳ್ಳ ಒಂದು ಮುಖಮಂಟಪವಿದೆ. ಗರ್ಭಗುಡಿಯ ಮೇಲೆ

ಕೋಲಾರದ ಮಕ್ಬರಾ ಇಲ್ಲಿನ ಇಸ್ಲಾಮೀ ಕಟ್ಟಡಗಳಲ್ಲಿ ಮುಖ್ಯವಾದುದು. ಇದು ಒಂದು ಮಂಟಪ. ಇದರಲ್ಲಿ ಹೈದರ್ ಅಲಿಯ 12 ಜನ ಸಂಬಂಧಿಕರ ಗೋರಿಗಳಿವೆ. ಇಲ್ಲಿ ಹೈದರ್ ಅಲಿಯ ತಂದೆ ಫತೆ ಮುಹಮ್ಮದ್, ತಾಯಿ ರಜಿಯಾ ಬೇಗಂ ಮತ್ತು ಹಿರಿಯ ಮಲತಾಯಿ ಖೂಲ್ಸಿನ್ ಬೀಬಿ ಇವರ ಗೌರವಾರ್ಥ ವಾರ್ಷಿಕವಾಗಿ ಉರುಸ್ ನಡೆಯುತ್ತದೆ. ಮಕ್ಬರಾದ ಪ್ರಾಂಗಣದಲ್ಲಿ ಒಂದು ದರ್ಗಾ ಮತ್ತು ಮಸೀದಿ ಇವೆ. *

**ಕೋಲಾರ ಚಿನ್ನದ ಗಣಿ** (ಪ್ರದೇಶ): ಕೋಲಾರ ಜಿಲ್ಲೆಯ ಬಂಗಾರ ಪೇಟೆ ತಾಲ್ಲೂಕಿನ ದಕ್ಷಿಣದಲ್ಲಿ ಬೇಟರಾಯನ ಬೆಟ್ಟಸಾಲಿನ ಪೂರ್ವಕ್ಕೆ ಇರುವ ಸ್ಥಳ. ಇದೇ ಹೆಸರಿನ ಪಟ್ಟಣ, ಕೆ.ಜಿ.ಎಫ್. ಎಂದೂ ಪ್ರಸಿದ್ಧ. ಬೆಂಗಳೂರಿನಿಂದ ಸು.90ಕಿಮೀ ಪೂರ್ವಕ್ಕಿದೆ. ಚಿನ್ನದ ಗಣಿ ಪ್ರದೇಶಕ್ಕೂ ಬೆಂಗಳೂರು - ಚೆನ್ನೈ ರೈಲು ಮಾರ್ಗದಲ್ಲಿರುವ ಬಂಗಾರಪೇಟೆ ನಿಲ್ದಾಣಕ್ಕೂ ಚಿನ್ನದ ಗಣಿ ರೈಲ್ವೆ ಸಂಪರ್ಕವಿದೆ.

ಕೋಲಾರ ಚಿನ್ನದ ಗಣಿ ನಗರ ಇಲ್ಲಿ ಆರಂಭವಾದ ಚಿನ್ನದ ಗಣಿ ಕೈಗಾರಿಕೆಯ ಫಲ. ಇದು ಕಾರ್ಮಿಕರ ನಗರ. 1899ರಲ್ಲಿ ಈ ಪ್ರದೇಶದ ಪೌರಾಡಳಿತಕ್ಕಾಗಿ ಒಂದು ಸ್ಯಾನಿಟರಿ ಬೋರ್ಡ್ ಸ್ಥಾಪಿತವಾಯಿತು. 1964ರವರೆಗೂ ಇದರ ನಗರ ಪ್ರದೇಶಕ್ಕೆ ರಾಬರ್ಟ್ ಸನ್ ಪೇಟೆ ಮತ್ತು ಆ್ಯಂಡರ್ಸನ್ ಪೇಟೆ, ಸೊಣ್ಣಕೊಪ್ಪ, ನಾಚಕಪಲ್ಲಿ, ಉರಿಗಾಂ ಮುಂತಾದ ಸ್ಥಳಗಳು ಮತ್ತು ಕಾರ್ಮಿಕ ವಸತಿಗಳು ಸೇರಿದ್ದುವು. 1964ರಲ್ಲಿ ರಾಬರ್ಟ್‌ಸನ್ ಪೇಟೆ ಪೌರಸಭೆ ಬೇರೆಯಾಯಿತು. 1991ರ ಜನಗಣತಿಯ ಅನಂತರ ಕೋಲಾರ ಚಿನ್ನದ ಗಣಿ ಸ್ಯಾನಿಟರಿ ಬೋರ್ಡ್ ಮತ್ತು ಬೆಮೆಲ್ ನಗರ ಇವೆರಡನ್ನೂ ರಾಬರ್ಟ್ ಸನ್ ಪೇಟೆಗೆ ಸೇರ್ಪಡೆ ಮಾಡಲಾಗಿದೆ.

ಕೋಲಾರದ ಚಿನ್ನದ ಗಣಿಗಾರಿಕೆಯ ಪ್ರಾಚೀನ ಇತಿಹಾಸ ನಿಖರವಾಗಿ ಗೊತ್ತಿಲ್ಲ. ಈಗ ನಂದಿದುರ್ಗ ಗಣಿಯ ಭಾಗವಾಗಿರುವ ಕೋರಮಂಡಲ ಗಣಿಯಲ್ಲಿ ಸು.200ಅಡಿ ಆಳದಲ್ಲಿ ನೀರಿನ ಪಾತ್ರೆಗಳೂ ಹಳ್ಳದ ಬದಿಯಲ್ಲಿ ಜನರು ಹೆಜ್ಜೆಯಿಟ್ಟು ಇಳಿದು ಹತ್ತಲು ಅನುವಾಗಿ ಮಾಡಲಾಗಿದ್ದ ಗೂಡುಗಳೂ ಇದ್ದುವು. ಇತಿಹಾಸದ ಉದ್ದಕ್ಕೂ ಇಲ್ಲಿ ಅವ್ಯವಸ್ಥಿತವಾಗಿ ಗಣಿ ಕೆಲಸ ನಡೆಯುತ್ತಿದ್ದಿರಬೇಕು. ಟಿಪ್ಪುಸುಲ್ತಾನ ಇಲ್ಲಿ ಗಣಿಗಾರಿಕೆ ನಡೆಯಿಸಲು ಪ್ರಯತ್ನಿಸಿ ವಿಫಲನಾದನೆಂದು ತಿಳಿದುಬರುತ್ತದೆ. ಸ್ಥಳೀಯರು ಪುರಾತನ ಗಣಿಗಳಿಂದ ಅಷ್ಟಿಷ್ಟು ಚಿನ್ನ ತೆಗೆಯುತ್ತಿದ್ದುದುಂಟು. ಹಿಂದಿನ ಗಣಿಗಾರರು ಸು.300 ಅಡಿ ಆಳದವರೆಗೂ ನೆಲವನ್ನು ತೋಡಿ ಚಿನ್ನ ತೆಗೆದಿದ್ದರೆಂದು ಗೊತ್ತಾಗುತ್ತದೆ. ಹಿಂದಿನ ಗಣಿಗಾರಿಕೆಗೆ ಉಕ್ಕಿನ ಉಪಕರಣಗಳಾಗಲಿ, ಸ್ಫೋಟಕಗಳಾಗಲಿ ಇರಲಿಲ್ಲ. ಬಂಡೆಗೆ ಬೆಂಕಿ ಒಟ್ಟಿ ಅದು ಕಾದಾಗ ನೀರು ಸುರಿದು ಬಂಡೆ ಒಡೆಯಿಸಿ ಚಿನ್ನ ತೆಗೆಯುತ್ತಿದ್ದರೆಂದು ಗೊತ್ತಾಗುತ್ತದೆ. ಆದರೆ ಇದು ಅಪಾಯಕಾರಿಯಾಗಿತ್ತು. ಆದ್ದರಿಂದ 1859ರಲ್ಲಿ ಕಾನೂನಿನ ಮೂಲಕ ಇದನ್ನು ನಿಷೇಧಿಸಲಾಗಿತ್ತು.

ಈಗಿನ ಕೋಲಾರ ಚಿನ್ನದ ಗಣಿಯ ಮೂಲಕರ್ತ ನಿಸ್ಸಂದೇಹವಾಗಿ ಮೈಕಲ್ ಎಫ್. ಲಾವೆಲ್. ಈ ಸ್ಥಳದಲ್ಲಿ ಚಿನ್ನ ತೆಗೆಯುವ ಹಕ್ಕನ್ನು ಈತ 1875ರಲ್ಲಿ ಮೈಸೂರು ಸರ್ಕಾರದಿಂದ ಪಡೆದುಕೊಂಡ. ಆದರೆ ಕರ್ನಾಟಕ ಸರ್ಕಾರದಿಂದ ಗಣಿಗಳನ್ನು ತನ್ನ ಹತೋಟಿಗೆ ತೆಗೆದುಕೊಂಡು ಹಣಕಾಸು ಸಚಿವಾಲಯದ ಆರ್ಥಿಕ ವ್ಯವಹಾರ ವಿಭಾಗಕ್ಕೆ ಸೇರಿಸಿತು. 1971ರ ಏಪ್ರಿಲ್ ಒಂದರಿಂದ 1972ರ ಮಾರ್ಚ್ 31ರ ತನಕ ಗಣಿಗಳಿಂದ ಉತ್ಪನ್ನವಾದ ಚಿನ್ನ 72,226 ಔನ್ಸ್‌ಗಳೆಂದು ತಿಳಿದುಬಂದಿದೆ. 1972ರ ಏಪ್ರಿಲ್ ಒಂದರಂದು ಕೆ.ಜಿ.ಎಂ.ಯು. ಸಂಸ್ಥೆಯನ್ನು ಉತ್ತಮ ಭವಿಷ್ಯದ ದೃಷ್ಟಿಯಿಂದ ಭಾರತ ಗೋಲ್ಡ್ ಮೈನ್ಸ್ ಪ್ರೈವೇಟ್ ಲಿಮಿಟೆಡ್ ಆಗಿ ಮಾರ್ಪಾಟು ಮಾಡಲಾಯಿತು.

ಈ ಗಣಿ ಪ್ರದೇಶದಲ್ಲಿ ಧಾರವಾಡ ಪದರುಶಿಲಾವರ್ಗವನ್ನು ಛೇದಿಸಿರುವ ಬೆಣಚು ಸಿರಗಳಲ್ಲಿ ಅತಿಸೂಕ್ಷ್ಮ ಕಣಗಳ ರೂಪದಲ್ಲಿ ಚಿನ್ನ ದೊರಕುತ್ತಿತ್ತು. ಈ ಶಿಲಾವರ್ಗ ಸು.80ಕಿಮೀ ಉದ್ದ ಮತ್ತು 5 ಕಿಮೀ ಅಗಲವಿದ್ದು, ಉತ್ತರ ದಕ್ಷಿಣವಾಗಿ ಹರಡಿದೆ. ಇದರ ಪೂರ್ವಕ್ಕೆ ಪೆಂಟೆ ಶಿಲೆಯೂ ಮಧ್ಯದಲ್ಲಿ ಶಿಸ್ಟ್ ಪದರು ಶಿಲೆಯೂ ಮತ್ತು ಪಶ್ಚಿಮಕ್ಕೆ ಫೆರುಜಿನಸ್ ಕ್ವಾರ್ಟ್ಸೈಟ್ ಶಿಲೆಯೂ ಇವೆ. ಇವುಗಳಲ್ಲಿಯೂ ಚಿನ್ನ ದೊರಕುವುದೆಂದು ಪತ್ತೆಯಾಯಿತು. ಚಿನ್ನವಿರುವ ಹಲವಾರು ಶಿಲೆಯ ಸಿರಗಳಲ್ಲಿ ಛಾಂಪಿಯನ್ ಲೋಡ್ ಸಿರವೇ ಮುಖ್ಯವೆನಿಸಿತ್ತು.

ಕೆ.ಜಿ.ಎಫ್.ನಲ್ಲಿ ಮೈಸೂರು, ಛಾಂಪಿಯನ್ ರೀಫ್, ನಂದಿದುರ್ಗ ಮತ್ತು ಗೋಲ್‌ಕೊಂಡ ಗಣಿಗಳಲ್ಲಿ ಕೆಲಸ ನಡೆಯುತ್ತಿತ್ತು. ಮಿತವ್ಯಯ ಮತ್ತು ದಕ್ಷ ಆಡಳಿತ ದೃಷ್ಟಿಯಿಂದ ಮೈಸೂರು ಮತ್ತು ಛಾಂಪಿಯನ್ ರೀಫ್ ಗಣಿಗಳನ್ನೂ ನಂದಿದುರ್ಗ ಮತ್ತು ಗೋಲ್‌ಕೊಂಡ ಗಣಿಗಳನ್ನೂ ಪ್ರತ್ಯೇಕ ಘಟಕಗಳೆಂದು ಪರಿಗಣಿಸಲಾಯಿತು. ಹಲವು ವರ್ಷ ಕೆಲಸಮಾಡಿದ ಉರಿಗಾಂ ಗಣಿಯನ್ನು ಸಂಪೂರ್ಣವಾಗಿ ಮುಚ್ಚಲಾಯಿತು. ಈ ಗಣಿಗಳಲ್ಲೆಲ್ಲ ಛಾಂಪಿಯನ್ ರೀಫ್‌ನ ಗೀಫರ್ಡ್ ಸುರಂಗ ಪ್ರಪಂಚದಲ್ಲೇ ಆಳವಾದುದೆಂದು ತಿಳಿದುಬಂದಿದೆ. ಇದರ ಆಳ 14,000'. ಮೈಸೂರು ಗಣಿಯ ಎಡ್ಗರ್ ಸುರಂಗ, ಛಾಂಪಿಯನ್‌ನ ಬುಲನ್ಸ್ ಸುರಂಗ ಮತ್ತು ನಂದಿದುರ್ಗದ ಹೆನ್ರಿ ಸುರಂಗ - ಇವು ಕೆ.ಜಿ.ಎಫ್.ನಲ್ಲಿರುವ ಇನ್ನಿತರ ಸುರಂಗಗಳು. ಸುರಂಗದ್ವಾರ ಅಡ್ಡಕೊಯ್ತದಲ್ಲಿ ವೃತ್ತಾಕಾರವಾಗಿ ಅಡ್ಡಳತೆ 18' ಗಳಿರುತ್ತವೆ. ವಿದ್ಯುಚ್ಛಕ್ತಿಯಿಂದ ಚಲಿಸುವ ಡುರಾಲ್ಯೂಮಿನ್ ಬೋನು ಪ್ರತಿ ಸುರಂಗದ್ವಾರದಲ್ಲಿ ಎರಡು ಇದ್ದು ಜನರನ್ನು ಮತ್ತು ಸಾಮಗ್ರಿಗಳನ್ನು ಗಂಟೆಗೆ 48ಕಿಮೀ ವೇಗದಲ್ಲಿ ಸಾಗಿಸುವ ಸಾಮರ್ಥ್ಯ ಉಳ್ಳವುಗಳಿವು. ಸುರಂಗದ್ವಾರದ ಮಧ್ಯದ ಒಂದೊಂದು ಗೊತ್ತಾದ ಮಟ್ಟದಲ್ಲಿ ಸಮತಲವಾಗಿ ಸುರಂಗಗಳನ್ನು ತೋಡಿ ಅಲ್ಲಿಂದ ಮೇಲಿರುವಂತೆ ಷಾಫ್ಟನ್ನು ಸ್ಥಾಪಿಸಿ ಲಂಬವಾಗಿ ಸುರಂಗಗಳನ್ನು ತೋಡಲಾಗಿತ್ತು. ಸ್ಥೂಲಾಕಾರದ ಉಕ್ಕಿನ ಉಂಗುರಗಳನ್ನು ಸುರಂಗಗಳಿಗೆ ಆಧಾರಸ್ತಂಭವಾಗಿ ಮೂರು ಅಂಗುಲಗಳ ಅಂತರದಲ್ಲಿ ನಿರಂತರವಾಗಿ ಜೋಡಿಸಲಾಗಿತ್ತು. ಭೂಕುಸಿತದ ತೊಂದರೆಯನ್ನು ತಪ್ಪಿಸಲು ಈ ಕಾರ್ಯವನ್ನು ಕೈಗೊಳ್ಳಲಾಗಿತ್ತು.

ಗಣಿ ತೋಡಿದಾಗ ಬರುವ ಭೂಜಲವನ್ನು ಆ ಮಟ್ಟದಲ್ಲಿ ಪಾಳುಬಿದ್ದ ಸುರಂಗಗಳಲ್ಲಿ ಕಟ್ಟೆಗಳನ್ನು ಕಟ್ಟಿ ವಿವಿಧ ಗಾತ್ರದ ಪೈಪ್‌ಗಳ ಮೂಲಕ ಹಾಯಿಸಿ ತುಂಬುವ ವ್ಯವಸ್ಥೆಯಿತ್ತು. ತಳದಿಂದ ಮೇಲಕ್ಕೆ ಇಂಥ ಹಲವಾರು ಕಟ್ಟೆಗಳನ್ನು ಕಟ್ಟಿ ಪೈಪ್‌ಗಳ ಮೂಲಕ ಒಂದಕ್ಕೊಂದು ಸಂಬಂಧ ಏರ್ಪಡಿಸಿ ಭೂಜಲವನ್ನು ಮೇಲಕ್ಕೆ ಸಾಗಿಸಲಾಗುತ್ತಿತ್ತು. ಈ ಭೂಜಲವನ್ನು ಕಂಡಿ ಕೊರೆಯುವುದಕ್ಕೂ ಅದುರನ್ನು ತೊಳೆಯುವುದಕ್ಕೂ ಇನ್ನಿತರ ಉದ್ದೇಶಗಳಿಗೂ ಉಪಯೋಗಿಸಲಾಗುತ್ತಿತ್ತು.

ಜೋಡಿಸಲಾಯಿತು. ಸಣ್ಣ ಭೂಕಂಪಗಳಂತೆ ಒತ್ತಡದ ವ್ಯತ್ಯಾಸದಿಂದ ಸಂಭವಿಸುವ ಶಿಲೆಸಿಡಿತ ಬಹಳ ಅಪಾಯಕರವಾದುದು. ಇದು ಪ್ರಾಣಹಾನಿ ಉಂಟುಮಾಡುವುದಲ್ಲದೆ ಮೇಲಿನ ಕಟ್ಟಡಗಳಿಗೆ ನಷ್ಟವನ್ನುಂಟು ಮಾಡುವಂಥದು. ಇಲ್ಲಿನ ಸೀಸ್‍ಮಾಲಜಿ ಭೂಕಂಪನ ಪ್ರಯೋಗ ಶಾಲೆ ಈ ಕ್ಷೇತ್ರದಲ್ಲಿ ಹಲವಾರು ಪ್ರಯೋಗಗಳನ್ನು ನಡೆಸಿದೆ.

ಇಲ್ಲಿಗೆ 135ಕಿಮೀ ದೂರವಿರುವ ಶಿವಸಮುದ್ರ ವಿದ್ಯುತ್ ಕೇಂದ್ರದಿಂದ ಗಣಿಗಳಿಗೆ ವಿದ್ಯುಚ್ಛಕ್ತಿ ಸರಬರಾಜು ಆಗುತ್ತಿದೆ. ಈಚೆಗೆ ಚಿನ್ನದ ಗಣಿ ಉದ್ಯಮವನ್ನು ಕೊನೆಗೊಳಿಸಲಾಗಿದೆ. ಈ ನಷ್ಟದಲ್ಲಿ ನಡೆಯುವಂತಾದದು ಈ ಗಣಿ ಉದ್ಯಮದ ಸ್ಥಗಿತತೆಗೆ ಮುಖ್ಯ ಕಾರಣ. ಇದರ ಪುನಶ್ಚೇತನಕ್ಕೆ ಕೇಂದ್ರ ಸರ್ಕಾರದ ಮಟ್ಟದಲ್ಲಿ ಮತ್ತು ಖಾಸಗಿ ಮಟ್ಟದಲ್ಲಿ ಪ್ರಯತ್ನಗಳು ನಡೆಯುತ್ತಿವೆ.

ಕೋಲಾರ ಚಿನ್ನದ ಗಣಿ ನಗರದಲ್ಲಿ ಸರ್ಕಾರದ ಒಡೆತನದಲ್ಲಿ ಭಾರತ್ ಅರ್ತ್ ಮೂವರ್ಸ್ ಲಿಮಿಟೆಡ್ ಎಂಬ ಸಂಸ್ಥೆಯೊಂದು ಸ್ಥಾಪಿತವಾಗಿದೆ. ಭಾರತ ಸರ್ಕಾರದ ರಕ್ಷಣಾ ಸಚಿವಾಲಯದ ರಕ್ಷಣೋತ್ಪಾದನ ಇಲಾಖೆಯ ಆಡಳಿತ ನಿಯಂತ್ರಣಕ್ಕೊಳಪಟ್ಟಿರುವ ಈ ಸಂಸ್ಥೆ ಮಣ್ಣನ್ನು ಅಗೆದು ತಳ್ಳುವ, ಸಾಗಿಸುವ, ಹರಗುವ ಬೃಹತ್ ಯಂತ್ರಗಳ ತಯಾರಿಕೆಯಲ್ಲಿ ತೊಡಗಿದೆ. (ಎಂ.ಎಸ್.ಕೆ.)

**ಕೋಳಿ ಅಂಕ :** ತುಳುನಾಡಿನಲ್ಲಿ ಪ್ರಚಲಿತವಾಗಿರುವ ಮನರಂಜನೆಯ ಜನಪದ ಆಟಗಳಲ್ಲಿ ಒಂದು. ಇದು ಹೆಚ್ಚಾಗಿ ಹಬ್ಬ, ಜಾತ್ರೆ, ನೇಮ, ಕಂಬಳ ಕಳೆದ ಕೂಡಲೇ ಜರುಗುವುದು ಸಂಪ್ರದಾಯ. ಮೂರು ಅಥವಾ ಐದು ದಿನ ನಡೆಯುವುದು ವಾಡಿಕೆ. ಸಾಮಾನ್ಯವಾಗಿ ಮಧ್ಯಾಹ್ನದಿಂದ ಮಧ್ಯರಾತ್ರಿಯ ತನಕ ನಡೆಯುವ ಕೋಳಿ ಅಂಕದ ಸ್ಥಳ ಹೆಚ್ಚಾಗಿ ವಿಶಾಲವಾದ ಬಯಲು, ಇಲ್ಲವೇ ಬೆಳೆ ಕೊಯ್ದ ಗದ್ದೆಯಾಗಿರುತ್ತದೆ.

ಹುಂಜಗಳ ವರ್ಗೀಕರಣದಲ್ಲಿ ಅವುಗಳ ಬಣ್ಣಕ್ಕೆ ಪ್ರಾಧಾನ್ಯ. ಬೊಳ್ಳೆ, ಕರ್ಬೊಳ್ಳೆ, ಕೆಂಪೆ, ಮಂಜಲೆ, ಪಂಚಣೆ, ಕಕ್ಕೆ, ನೀಲೆ, ಕುಪ್ಪುಳೆ, ಗರುಡ, ಬೂದಿ, ಕರಿನೀಲೆ, ಕೆಮ್ಮೈರೆ, ಗಿಡಿಯೆ (ಕಪ್ಪು, ಕೆಂಪು, ಬಿಳಿ, ಕೆಮ್ಮೈರ, ಬೂದಿ), ಮೈಪೆ (ಬಿಳಿ, ಕಪ್ಪು, ಹಳದಿ), ಉರಿಯೆ, (ಕಪ್ಪು ಕೆಂಪು), ಬೂದಿ, ಕಾವೆ (ಗರುಡ, ಕೆಂಪು, ಕಪ್ಪು), ಪಂಬದ (ಕಾಲಿನಲ್ಲಿ ಗರಿ ಇರುವುದು), ಗಡ್ಡಮೆ (ಗಡ್ಡದಲ್ಲಿ ಗರಿ ಇರುವುದು). ಕೊಟ್ಟುಚಾಲೆ (ಜುಟ್ಟಿನ ಬುಡದಲ್ಲಿ ಕೆಲವು ಗರಿಗಳು ಎತ್ತರಕ್ಕಿರುವುದು) ಮೊದಲಾದ ನಾನಾ ಪ್ರಭೇದಗಳಿವೆ. ದೊಡ್ಡ ಜಾತಿಯ ಹುಂಜಗಳನ್ನು ಪೈಕಾ ಎಂದೂ ಸಣ್ಣ ಜಾತಿಯವನ್ನು ಜೇಕಾ ಎಂದೂ ಕರೆಯುತ್ತಾರೆ. ಹುಂಜಗಳ ಗರಿಗಳ ಆಕಾರಕ್ಕೆ ಅನುಗುಣವಾಗಿ ಮುಖ್ಯವಾಗಿ ಜಳ್ಳಿ ಮತ್ತು ಪೆರಡಿಂಗ ಎಂಬ ಎರಡು ವರ್ಗಗಳಿವೆ. ಜಳ್ಳಿಯ ಗರಿಗಳು ಉದ್ದವಾಗಿ ಮೊನಚಾಗಿರುತ್ತವೆ. ಪೆರಡಿಂಗದ ಗರಿಗಳು ಹೇಂಟೆಯ ಗರಿಗಳಂತೆ ಉರುಟಾಗಿರುತ್ತವೆ. ಆಕಾರಕ್ಕೆ ಅನುಸಾರವಾಗಿ ಹುಂಜಗಳ ಜುಟ್ಟುಗಳಿಗೆ ಹಾಗಲಕಾಯಿ ಜುಟ್ಟು, ಎಲೆ ಜುಟ್ಟು, ಸಹಸ್ರಜುಟ್ಟು, ಸುತ್ತಿಗೆ ಅಥ'ವಾ ಮುಂಡಾಸು ಜುಟ್ಟು, ರೂಪಾಯಿ ಜುಟ್ಟು ಮುಂತಾದ ಹೆಸರುಗಳಿವೆ.

ಸಮಗಾತ್ರದ ಎರಡು ಹುಂಜಗಳು ಕಾಳಗಕ್ಕೆ ಸಿದ್ಧವಾಗುವಂತೆ ಕೋಳಿಗಳ ಒಡೆಯರು ಅವನ್ನು ಕೆರಳಿಸಿ, ಒಂದರ ಮೇಲೊಂದನ್ನು ಛೂ ಬಿಡುತ್ತಾರೆ. ಈ ರೀತಿ ಎರಡು ಕೋಳಿಗಳು ಜಗಳವಾಡುವಾಗ ಅವುಗಳಲ್ಲಿ ಕೊಕ್ಕೆಯಾಗಿರುವ ಇಟ್ಟಿಮುಳ್ಳು - ಇವು ಇತರ ಎರಡು ಬಾಳುಗಳು. ಕೋಳಿಯ ಬಲಗಾಲಿನ ಹೆಬ್ಬೆರಳಿನ ಬಳಿ ಯಾವಾಗಲೂ ಹಿಮ್ಮುಖವಾಗಿ ಬಾಳನ್ನು ಕಟ್ಟುತ್ತಾರೆ. ಬಡೆಕ್ಕಾಯಿ ಬಾಳಿಗೆ ಅರಿವೆ ಸುತ್ತಿ ದಾರ ಕಟ್ಟುತ್ತಾರೆ. ತೆನ್ಕಾಯಿ ಬಾಳಿಗೆ ಅರಿವೆಯ ಅಗತ್ಯವಿಲ್ಲ. ಬಾಳುಗಳನ್ನು ಇಡುವ ಚೀಲ ಬಾಳಸೂಡಿ. ಕಾಳಗದಲ್ಲಿ ಸಮಜೋಡಿಯಾದ ಹುಂಜಗಳನ್ನೇ ಆರಿಸಿ ಅವುಗಳ ಕಾಲಿಗೆ ಮೇಲೆ ತಿಳಿಸಿದಂತೆ ಬಾಳು ಕಟ್ಟಲಾಗುತ್ತದೆ. ಅವು ಗರಿ ಕೆದರಿಸಿ, ಬಾಲ ಹಾರಿಸಿ, ಬಹಳ ಹುಮ್ಮಸ್ಸಿನಿಂದ ಕಾದಾಡುತ್ತವೆ. ಆಗ ಒಂದು ಕೋಳಿಯ ಕಾಲಿಗೆ ಹಿಮ್ಮುಖವಾಗಿ ಕಟ್ಟಿದ್ದ ಬಾಳು ಎದುರುಕೋಳಿಯನ್ನು ಇರಿಯುತ್ತದೆ. ಎದುರುಕೋಳಿಯೂ ಸಾಧಾರಣವಾದ ಗಾಯಗಳ ನೋವನ್ನು ಲೆಕ್ಕಿಸದೆ ವೀರಾವೇಶದಿಂದ ಕಾದಾಡುತ್ತದೆ. ಕೋಳಿ ಅಂಕದಲ್ಲಿ ಗಾಯಗೊಂಡ ಕೋಳಿಗಳಿಗೆ ಶುಶ್ರೂಷೆಗಳು ಜರುಗುತ್ತವೆ.



ಕೋಳಿ ಪಂದ್ಯದಲ್ಲಿ ಎರಡು ವಿಧ. ಸಮ ಮತ್ತು ಓಡಿ. ಸಮ ಎಂದರೆ ಕಾಳಗಕ್ಕೆ ಬಿಟ್ಟ ಎರಡು ಕೋಳಿಗಳಲ್ಲಿ ಯಾವುದಾದರೊಂದು ಸತ್ತರೆ ಅಥವಾ ಸೋತು ಓಡಿ ಹೋದರೆ, ಅದು ಗೆದ್ದ ಕೋಳಿಯವನಿಗೆ ದಕ್ಕುತ್ತದೆ. ಓಡಿಯಾದರೆ ಎದುರು ಕೋಳಿ, ಸತ್ತರೆ ಮಾತ್ರ ಅದು ಗೆದ್ದ ಕೋಳಿಯವನಿಗೆ ದೊರೆಯುತ್ತದೆಯೇ ಹೊರತು ಓಡಿಹೋದರೆ ಲಭಿಸುವುದಿಲ್ಲ. ಓಡಿಹೋದ ಅಥವಾ ಸತ್ತಕೋಳಿಯನ್ನು ಒಟ್ಟೆ ಎಂದೂ ಗೆದ್ದುದನ್ನು ಬಂಟ ಎಂದೂ ಕರೆಯುತ್ತಾರೆ. ಸೋಡ್ತಿ ಅಂಕದಲ್ಲಿ ನಿರ್ದಿಷ್ಟ ಸಂಖ್ಯೆಯ ಕೋಳಿಗಳನ್ನು ಕಾಳಗಕ್ಕೆ ಬಿಟ್ಟು, ಗೆದ್ದವುಗಳಿಗೆ ಬಹುಮಾನ ಕೊಡುತ್ತಾರೆ. ಅಂಕದ ಕೋಳಿಗಳ ಲಕ್ಷಣಗಳನ್ನೊಳಗೊಂಡ ಪಂಚಾಂಗವೇ ಕುಕ್ಕುಟ ಪಂಚಾಂಗ. ಇದು ಕೋಳಿ ಕಟ್ಟುವವರಿಗೆ ಉಪಯುಕ್ತ ಕೈಪಿಡಿ. ಕೋಳಿ ಅಂಕ ಈಗ ಹಣವನ್ನು ಬಾಜಿ ಕಟ್ಟಿ ಆಡುವ ಜೂಜೂ ಆಗಿ ಪರಿವರ್ತನೆ ಹೊಂದುತ್ತಿದೆ. (ಬಿ.ಎ.ವಿ.ಆರ್.)

**ಕೋಳಿವಾಡ :** ಧಾರವಾಡ ಜಿಲ್ಲೆ ಹುಬ್ಬಳ್ಳಿ ತಾಲ್ಲೂಕಿನಲ್ಲಿ ಹುಬ್ಬಳಿಯಿಂದ ಪೂರ್ವಕ್ಕೆ 33ಕಿಮೀ ದೂರದಲ್ಲಿರುವ ಒಂದು ಗ್ರಾಮ.

ಜೈನ, ಹಿಂದು ಮತ್ತು ಬೌದ್ಧ ಧಾರ್ಮಿಕ ಅವಶೇಷಗಳು ಇಲ್ಲಿ ದೊರಕಿವೆ. ಇಲ್ಲಿಯ ಗ್ರಾಮದ ಹೊರಗೆ ಕಲಮೇಶ್ವರ ದೇವಾಲಯವಿದೆ. ಅದರ ಪರಿಸರದಲ್ಲಿ ಬೌದ್ಧ ತಾರಾವಿಗ್ರಹವೊಂದು ದೊರಕಿದ್ದು ಅದರ ಪೀಠದ ಮೇಲೆ ಬೌದ್ಧಶಾಸನವಿದೆ. ಹಳ್ಳಿಯಲ್ಲಿ ಸು.14-15ನೆಯ

ಲಾಭದಾಯಕವಾಗಿರುವುದರಿಂದ ಇದಕ್ಕಾಗಿ ಫಾರ್ಮ್‌ಗಳನ್ನು ಸ್ಥಾಪಿಸಿ ಪಟ್ಟಣ ಮತ್ತು ಸುತ್ತಮುತ್ತಲ ಪ್ರದೇಶಗಳಲ್ಲಿ ಇದನ್ನೇ ಸ್ವತಂತ್ರ ಉದ್ಯಮವಾಗಿ ಕೈಗೊಳ್ಳುವುದೂ ಹೆಚ್ಚುತ್ತಿದೆ. ಗ್ರಾಮಗಳಲ್ಲಿ ಕೋಳಿಸಾಕಣೆ ಹಳೆಯ ಪದ್ಧತಿಯಲ್ಲಿ ನಡೆದರೆ ಫಾರ್ಮ್‌ಗಳಲ್ಲಿ ಸುಧಾರಿತ ಪದ್ಧತಿಗಳು ರೂಢಿಯಲ್ಲಿವೆ.

ಗ್ರಾಮಗಳಲ್ಲಿ ಒಂದು ಕುಟುಂಬ ಸರಾಸರಿ 10 ರಿಂದ 12 ಕೋಳಿಗಳನ್ನು ಸಾಕಬಹುದು. ಇಲ್ಲಿ ಕೋಳಿಗಳು ಹಗಲೆಲ್ಲ ಗದ್ದೆ, ತೋಟ, ಹೊಲ ಮತ್ತು ತಿಪ್ಪೆಗಳಲ್ಲಿ ಅಲೆದು ಆಹಾರ ಸಂಪಾದಿಸಿ ರಾತ್ರಿ ಗೂಡು ಸೇರುತ್ತವೆ. ಹೀಗೆ ಸಾಕುವುದರಿಂದ ಕೋಳಿಗಳ ಉತ್ಪನ್ನ ಕಡಿಮೆ ಇರುವುದರ ಜೊತೆಗೆ, ಇದಕ್ಕೆ ಅನೇಕ ಬಗೆಯ ರೋಗರುಜಿನಗಳು ಬರುವ ಸಂಭವಗಳೂ ಉಂಟು.

ಕೋಳಿ ಮಾಂಸ ಮತ್ತು ಮೊಟ್ಟೆ ಪುಷ್ಟಿಕರ ಆಹಾರ ವಾಗಿರುವುದಲ್ಲದೆ, ಕೋಳಿಗಳಿಂದ ಒಳ್ಳೆಯ ಗೊಬ್ಬರ ಸಹ ದೊರಕುತ್ತದೆ. ಈ ದೃಷ್ಟಿಯಿಂದ ಅಧಿಕ ಆಹಾರ ಉತ್ಪಾದನೆಯ ಯೋಜನೆಯ ಅಂಗವಾಗಿ ಕೋಳಿಸಾಕಣೆಯನ್ನು ಪ್ರೋತ್ಸಾಹಿಸಲು ಹಲವು ಕಾರ್ಯಕ್ರಮಗಳನ್ನು ಸರ್ಕಾರ ಕೈಗೊಂಡಿದೆ. ಕೋಳಿ ಫಾರ್ಮ್‌ಗಳನ್ನು ಸ್ಥಾಪಿಸಲು ಸಾಲ ಕೊಡುವುದು. ಮೊದಲ ಐದು ವರ್ಷಗಳ ಆದಾಯದ ಮೇಲೆ ತೆರಿಗೆ ವಿಧಿಸದಿರುವುದು. ಸಾಕುವವರಿಗೆ ಹೆಚ್ಚು ಮೊಟ್ಟೆ ಮಾಂಸ ದೊರಕಿಸುವ ಉತ್ತಮ ತಳಿಗಳನ್ನು ಒದಗಿಸುವುದು ಹಾಗೂ ವೈದ್ಯಕೀಯ ಸಹಾಯ ದೊರಕಿಸಿಕೊಡುವುದು ಈ ಕಾರ್ಯಕ್ರಮಗಳಲ್ಲಿ ಹಲವು.

ಕರ್ನಾಟಕದಲ್ಲಿ ಒಂದು ಕೋಳಿಸಾಕಣೆ ಕೇಂದ್ರವನ್ನು ಸರ್ಕಾರದವರು ಬೆಂಗಳೂರು ಜಿಲ್ಲೆ ಹೆಸರಘಟ್ಟದ ಬಳಿ 1948ರಲ್ಲಿ ಸ್ಥಾಪಿಸಿದರು. ಕೋಳಿಗಳ ಅಭಿವೃದ್ಧಿಗಾಗಿ ರೈತರಿಗೆ ಸುಧಾರಿತ ತಳಿ ಕೋಳಿಗಳನ್ನು ಒದಗಿಸುವುದು ಈ ಕೇಂದ್ರದ ಉದ್ದೇಶ. ಅಲ್ಲಿಂದೀಚೆಗೆ ಯೋಜನೆಗಳ ಅಂಗವಾಗಿ ರಾಜ್ಯದ ವಿವಿಧ ಭಾಗಗಳಲ್ಲಿ ಕೇಂದ್ರಗಳನ್ನು ಪ್ರಾರಂಭಿಸಲಾಯಿತು. ಈ ಕೇಂದ್ರಗಳು ರೈತರಿಗೆ ಸುಧಾರಿತ ತಳಿ ಕೋಳಿಗಳನ್ನು ಒದಗಿಸುವುದರ ಜೊತೆಗೆ, ಕೋಳಿಸಾಕಣೆ ಕೇಂದ್ರಗಳನ್ನು ರೈತರು ಪ್ರಾರಂಭಿಸಲು ಬೇಕಾಗುವ ತಿಳಿವಳಿಕೆ ಮತ್ತು ಸಹಾಯಗಳನ್ನು ನೀಡುತ್ತವೆ. ಹೆಸರಘಟ್ಟದ ಕೋಳಿ ಸಾಕಣೆ ಕೇಂದ್ರ ರಾಜ್ಯಮಟ್ಟದ್ದು. ಮಳವಳ್ಳಿ, ಗುಂಡ್ಲುಪೇಟೆ, ಹಾವೇರಿ, ಬಿಜಾಪುರ, ಗುಲ್ಬರ್ಗ, ಬೀದರ್, ಗಂಗಾವತಿ, ಮಂಗಳೂರು, ಕೂಡಿಗೆ, ದಾವಣಗೆರೆ ಮತ್ತು ಕೋಲಾರಗಳಲ್ಲಿ ಪ್ರಾದೇಶಿಕ ಕ್ಷೇತ್ರಗಳಿವೆ. ಕೋಳಿ ವಿಸ್ತರಣ ಕೇಂದ್ರಗಳು ಕುಮಟ, ಬೆಳಗಾಂವಿ, ಕುರಿಕುಪ್ಪೆ, ರಾಯಚೂರು, ಪೊನ್ನಂಪೇಟೆ, ತುಮಕೂರು, ಹಾಸನ, ಕುಂದಾಪುರ, ತಿರುಮಕೂಡಲು ನರಸೀಪುರ, ಚಿಕ್ಕಮಗಳೂರು, ಶಿವಮೊಗ್ಗ, ಹೊಳೆನರಸೀಪುರ ಮತ್ತು ರಾಮನಗರಗಳಲ್ಲಿವೆ.

ಕೋಳಿ ಮತ್ತು ಮೊಟ್ಟೆಗಳ ಮಾರಾಟ ಕೇಂದ್ರಗಳನ್ನು ಪ್ರಾದೇಶಿಕ ಮಟ್ಟದಲ್ಲಿ ಬೆಂಗಳೂರು, ಮೈಸೂರು, ಧಾರವಾಡ ಮತ್ತು ಗುಲ್ಬರ್ಗಗಳಲ್ಲಿ ಸ್ಥಾಪಿಸಲಾಗಿದೆ. ಇದನ್ನು ಕರ್ನಾಟಕ ಸಹಕಾರಿ ಕೋಳಿ ಸಾಕಣೆ ಮಹಾ ಮಂಡಲದಲ್ಲಿ ವಿಲೀನಗೊಳಿಸಲಾಗಿದೆ. ರಾಜ್ಯದಲ್ಲಿ ಈ ಮಹಾಮಂಡಲದ ಅಡಿಯಲ್ಲಿ 44 ಪ್ರಾಥಮಿಕ ಸಹಕಾರಿ ಸಂಘಗಳು ಕಾರ್ಯನಿರತವಾಗಿವೆ. ಒದಗಿಸುವುದು ಮತ್ತು ಇತರರು ತಂದುಕೊಡುವ ಮೊಟ್ಟೆಗಳನ್ನು ಮರಿಮಾಡಿಕೊಡುವ ವ್ಯವಸ್ಥೆಯೂ ಇದೆ.

ಮೇಲಿನ ಸಂಸ್ಥೆಗಳಲ್ಲದೆ ಮೈಸೂರು, ಬೆಂಗಳೂರು ಮತ್ತು ಧಾರವಾಡ ಜಿಲ್ಲೆಗಳಲ್ಲಿ ಕೋಳಿ ಅಭಿವೃದ್ಧಿ ಯೋಜನೆಗಳು ಕಾರ್ಯಗತವಾಗಿವೆ. ವಿಶ್ವ ಆಹಾರ ಯೋಜನೆಯ ಅಂಗವಾಗಿ ಈ ಜಿಲ್ಲೆಗಳಲ್ಲಿ ಸಮತೂಕದ ಕೋಳಿ ಆಹಾರ ತಯಾರಿಸಿ ಸುಲಭ ದರದಲ್ಲಿ ರೈತರಿಗೆ ಮಾರಲು ಮುಸುಕಿನ ಜೋಳದ ಸರಬರಾಜಾಗುತ್ತಿದೆ. ಕಾರ್ಯಗತ ಪೋಷಕಾಂಶ ಕಾರ್ಯಕ್ರಮದಲ್ಲಿ ಕೋಳಿ ಉತ್ಪಾದನೆ ಯೋಜನೆ ಮುಖ್ಯವಾದದ್ದು. ಇದನ್ನು ತಾಲ್ಲೂಕು ಮಟ್ಟದ ಕ್ಷೇತ್ರಗಳಲ್ಲಿ ಆಚರಣೆಗೆ ತರಲಾಗಿದೆ. ಪ್ರತಿ ತಾಲ್ಲೂಕಿನಲ್ಲೂ 10-15 ಕೋಳಿ ಕೇಂದ್ರಗಳನ್ನು ಪ್ರಾರಂಭಿಸಲು ಅಭಿವೃದ್ಧಿ ಕ್ಷೇತ್ರಗಳಿಗೆ ಸಹಾಯ ದೊರಕುತ್ತದೆ. ಪ್ರತಿ ಕೇಂದ್ರಕ್ಕೂ ಕೋಳಿ ಮನೆಗಳು, ಕೋಳಿ ಮತ್ತು ಇತರ ಸಲಕರಣೆಗಳನ್ನು ಕೊಳ್ಳಲು ಸಹಾಯಧನವನ್ನು ಕೋಳಿಮೊಟ್ಟೆ ಇಡಲು ಪ್ರಾರಂಭಿಸುವ ಹಂತದವರೆಗೆ ನೀಡಲಾಗುವುದು.

ಕೋಳಿ ಆರೋಗ್ಯ ನೋಡಿಕೊಳ್ಳಲು ರಾಜ್ಯಸರ್ಕಾರದ ಪಶುಪಾಲನೆ ಮತ್ತು ಪಶುವಿಜ್ಞಾನ ಇಲಾಖೆ ಪಶುವೈದ್ಯ ಆಸ್ಪತ್ರೆಗಳನ್ನು ನಡೆಸುತ್ತಿದೆ. ಜೊತೆಗೆ ಕೋಳಿ ಸಾಕಣಿಕೆ ಅಭಿವೃದ್ಧಿಗಾಗಿ ಬೆಂಗಳೂರು ಮತ್ತು ತುಮಕೂರು ಜಿಲ್ಲೆಗಳಲ್ಲಿ ಸಣ್ಣ ರೈತರ ಅಭಿವೃದ್ಧಿ ಸಂಸ್ಥೆ, ಮೈಸೂರು ಜಿಲ್ಲೆಯ ಕೃಷಿ ಅಭಿವೃದ್ಧಿ ಕಾರ್ಮಿಕ ಮತ್ತು ರೈತ ಸಹಾಯ ಸಂಸ್ಥೆ ಇವು ಸಹಾಯ ಮಾಡುತ್ತಿವೆ. ಕೋಳಿಸಾಕಣೆ ಕೇಂದ್ರಗಳನ್ನು ಸ್ಥಾಪಿಸಲು ರಾಷ್ಟ್ರೀಕೃತ ಬ್ಯಾಂಕ್‌ಗಳು ಮತ್ತು ಕೆಲವು ಖಾಸಗಿ ಸಂಸ್ಥೆಗಳೂ ಸಾಲ ಕೊಡುತ್ತವೆ.

ಗ್ರಾಮಾಂತರ ಪ್ರದೇಶಗಳಲ್ಲಿ ಹಿಂದಿನಿಂದಲೂ ಬಳಕೆಯಲ್ಲಿರುವ ನಾಡುಕೋಳಿಗಳಲ್ಲದೆ ಕರ್ನಾಟಕದಲ್ಲಿ ಇರುವ ಮುಖ್ಯ ಕೋಳಿ ತಳಿಗಳೆಂದರೆ ಚಳಿ ಮತ್ತು ತೇವವನ್ನು ತಡೆಯುವ ಶಕ್ತಿಯುಳ್ಳ ಅಮೆರಿಕ ಮೂಲದ ರ್‍ಹೋಡ್ ಐಲೆಂಡ್ ರೆಡ್, ಅಧಿಕ ಮಳೆ ಬೀಳುವ ಪ್ರದೇಶಗಳಲ್ಲಿ ಸಾಕಲು ಉಪಯುಕ್ತವಾದ ಇಂಗ್ಲಿಷ್ ಮೂಲದ ಆಸ್ಟ್ರಲಾರ್ಪ್, ಹೆಚ್ಚು ತೇವವಿಲ್ಲದ ಪ್ರದೇಶಗಳಿಗೆ ಸೂಕ್ತವಾದ ಮೆಡಿಟರೇನಿಯನ್ ಮೂಲದ ಲೆಗ್‌ಹಾರ್ನ್ ಮತ್ತು ಏಷ್ಯ ಮೂಲದ ಬ್ರಾಹ್ಮ, ಪ್ಲಿಮತ್, ರಾಕ್, ನ್ಯೂ ಹ್ಯಾಂಪ್‌ಷೈರ್ ಎಂಬ ಪಾಶ್ಚಾತ್ಯ ತಳಿಗಳು ದೇಶೀ ಕೋಳಿಗಳು ಹೆಚ್ಚು ರೋಗನಿರೋಧಕ ಸಾಮರ್ಥ್ಯ ಹೊಂದಿದ್ದು ದೇಶದ ವಿವಿಧ ಸನ್ನಿವೇಶಗಳಲ್ಲಿ ಬದುಕಬಲ್ಲವು. ಇವುಗಳಲ್ಲಿ ಮುಖ್ಯವಾದುವು ನಾಡುಕೋಳಿ, ಕಾಶ್ಮೀರಿ, ತಿರ್ಶಿ, ಆಸೀಲ್, ಬಸರಾ, ಚಿತ್ತಗಾಂಗ್, ತೆಲ್ಲಿಚೇರಿ, ಡೋಂಕಿ, ಕಾಳಹಸ್ತಿ ಮುಂತಾದುವು. ಈಗ ಮಾರುಕಟ್ಟೆಗೆ ಮೊಟ್ಟೆಗಾಗಿ ಮತ್ತು ಮಾಂಸಕ್ಕಾಗಿ ಸಾಕಲು ಹೈಬ್ರಿಡ್ ತಳಿಗಳನ್ನು ಅಭಿವೃದ್ಧಿಪಡಿಸಲಾಗಿದೆ. ಹೈಬ್ರಿಡ್ ತಳಿಗಳು ಒಂದು ವರ್ಷದಲ್ಲಿ ಸರಾಸರಿ 220-280 ಮೊಟ್ಟೆಗಳನ್ನು ಕೊಡುತ್ತವೆ. 20-24 ವಾರ ವಯಸ್ಸಿಗೆ ಇವು ಮೊಟ್ಟೆ ಇಡಲು ಪ್ರಾರಂಭಿಸುತ್ತವೆ. ಹೈಬ್ರಿಡ್ ತಳಿಗಳಲ್ಲಿ ಹೈಲೈನ್, ರಾಣಿ ಶೇವರ್ಸ್, ಆರ್‌ಬರ್ ಏಕರ್ಸ್, ಕೀಸ್ಟೋನ್, ಬಾಬ್‌ಕಾಕ್, ಪೂನಾ ಪರ್ಲ್, ಥಾರನ್‌ಬರ್-808, ಹಿಸೆಕ್ಸ್, ಮೈಚಿಕ್ ಮತ್ತು ಯುಬ್ರೊಗಳು ಮುಖ್ಯವಾದುವು.

ಕೋಳಿಸಾಕಣೆಯಲ್ಲಿ ಆಸಕ್ತರಾದವರಿಗೆ ರಾಜ್ಯಸರ್ಕಾರದ ಪಶುಪಾಲನೆ ಇಲಾಖೆ, ಕೋಳಿ ಸಾಕಣಿಕೆ ಮುಖ್ಯ ಕ್ಷೇತ್ರವಾದ ಹೆಸರಘಟ್ಟ ಮತ್ತು

ದೇಶನೂರು ಗ್ರಾಮದಲ್ಲಿ 1938 ಸೆಪ್ಟೆಂಬರ್ 21ರಂದು ಜನಿಸಿದರು. ಸ್ವಾತಂತ್ರ್ಯ ಹೋರಾಟದ ಪ್ರಖರ ಪರಿಸರದಲ್ಲಿ ಬಾಲ್ಯ ವನ್ನು ಕಳೆದ ಇವರು ತಾಂತ್ರಿಕ ಶಿಕ್ಷಣದತ್ತ ಒಲವು ತೋರಿಸಿ ಬಿ.ಇ. ಪದವಿ ಪಡೆದರು. ಮುಂದೆ ಭಾರತೀಯ ನೌಕಾಪಡೆ ಸೇರಿ ಮೆರೀನ್ ಎಂಜಿನಿಯರಿಂಗ್‌ನಲ್ಲಿ ವಿಶೇಷ, ಪರಿಣತಿ ಹೊಂದಿದರು. ಸಬ್ ಲೆಫ್ಟಿನೆಂಟ್ ಆಗಿ ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿ ವಿವಿಧ ದೇಶಗಳಿಗೆ ಭೇಟಿ ನೀಡಿದರು. 1971ರ ಭಾರತ-ಪಾಕಿಸ್ತಾನ ಯುದ್ಧದಲ್ಲಿ ಪಾಲ್ಗೊಂಡ ಹೆಗ್ಗಳಿಕೆ ಇವರದು.

ಭಾರತೀಯ ಸೇನಾ ಸೇವೆಯಿಂದ ಮುಕ್ತರಾಗಿ ಬಂದ ಮೇಲೆ ಪುಣೆಯಲ್ಲಿ ಖಾಸಗಿ ಕಂಪನಿಯೊಂದರಲ್ಲಿ ಸೇವೆಯಲ್ಲಿದ್ದರು. ಶಿಸ್ತಿನ ಸೇವಾ ಕ್ಷೇತ್ರದಲ್ಲೂ ಇವರು ಅಂತರ್ಯವಾಗಿ ಜನಸೇವೆ ಮತ್ತು ದೇಶದ



ಆಗುಹೋಗುಗಳ ಬಗ್ಗೆ ಕಾಳಜಿ ಉಳ್ಳವರಾಗಿದ್ದರು. ಕೌಜಲಗಿ ಮನೆತನ ರಾಜಕೀಯ ಪರಂಪರೆಯನ್ನು ಅಂತರ್ಗತಗೊಳಿಸಿಕೊಂಡು ಬೆಳೆದಿರುವಂಥದ್ದು. ಹಲವು ರಾಜಕೀಯ ನಾಯಕರನ್ನು ರಾಜ್ಯಕ್ಕೆ ನೀಡಿದೆ. ಕಾಂಗ್ರೆಸ್ ಪಕ್ಷ ಸೇರುವ ಮೂಲಕ ಇವರ ರಾಜಕೀಯ ಪ್ರವೇಶ ವಾಯಿತು. ಆರಂಭದಲ್ಲಿ ಬೆಳಗಾಂವಿ ಜಿಲ್ಲಾ ಯುವ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿ ಸೇವೆಸಲ್ಲಿಸಿದರು. ಇಂದಿರಾಗಾಂಧಿಯವರ ನೇತೃತ್ವದ ಕಾಂಗ್ರೆಸ್ ಪಕ್ಷದ ವತಿಯಿಂದ ಅರಭಾವಿ ಕ್ಷೇತ್ರದಿಂದ 1972 ಮತ್ತು 1978ರ ವಿಧಾನಸಭಾ ಚುನಾವಣೆಗಳಲ್ಲಿ ಸ್ಪರ್ಧಿಸಿ ವಿಜೇತರಾದರು. ಅನಂತರ 7ನೆಯ ವಿಧಾನಸಭೆಗೂ 1983ರಲ್ಲಿ ಅದೇ ಪಕ್ಷದಿಂದ ಪುನರಾಯ್ಕೆಯಾದರು. ಇದು ಇವರ ಜನಪ್ರಿಯತೆಗೆ ಹಚ್ಚಿದ ಒರೆಗಲ್ಲಾಗಿದೆ. 1989ರ ಚುನಾವಣೆಯಲ್ಲಿ ಪುನಃ ಆರಿಸಿ ಬಂದ ಇವರು ವಿಧಾನ ಸಭೆಯ ಅಧ್ಯಕ್ಷರಾಗಿ 15-2-93 ರಿಂದ 24-10-99 ರವರೆಗೆ ಸೇವೆ ಸಲ್ಲಿಸಿದ್ದಾರೆ. ಇವರು ವಿವಿಧ ಅವಧಿಯಲ್ಲಿ ಬೇರೆ ಬೇರೆ ಸಚಿವ ಖಾತೆಗಳನ್ನು ನಿರ್ವಹಿಸಿದರು. ಯುವಜನಸೇವೆ ಸಣ್ಣ ಕೈಗಾರಿಕೆ, ರೇಷ್ಮೆ, ಕುಟುಂಬ ಕಲ್ಯಾಣ ಮೊದಲಾದ ಖಾತೆಗಳನ್ನು ನಿರ್ವಹಿಸಿದ ಇವರು ಕಾರ್ಮಿಕ ಸಚಿವರಾಗಿಯೂ ಕೆಲಸ ಮಾಡಿದರು. ಇವರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರೂ ಆಗಿದ್ದರು. (ಎಸ್.ಎನ್.ಜಿ.)

**ಕೌಜಲಗಿ, ಶ್ರೀನಿವಾಸರಾವ್ :** ಪ್ರಸಿದ್ಧ ಸ್ವಾತಂತ್ರ್ಯ ಹೋರಾಟಗಾರರು. ಇವರು ಕಾಂಗ್ರೆಸ್ಸಿನ ಕಾರ್ಯಕರ್ತರೂ ಟಿಳಕರ ಮಿತ್ರರೂ ಆಗಿದ್ದರು. 1906ರ ಸ್ವದೇಶೀ ಚಳವಳಿಯ ಕಾಲಕ್ಕೆ ಬಿಜಾಪುರದಲ್ಲಿ ಶ್ರೀಕೃಷ್ಣ ಪಾಠಶಾಲಾ ಎಂಬ ಶಾಲೆಯನ್ನು ಸ್ಥಾಪಿಸಿ ಕೆಲಕಾಲ ನಡೆಸಿದರು. ಸೂರತ್ ಕರ್ನಾಟಕದ ಪರಮ ಅಭಿಮಾನಿಗಳಾಗಿ, ಕರ್ನಾಟಕದಲ್ಲೆಲ್ಲ ಸಂಚರಿಸಿ ಕಾಂಗ್ರೆಸ್ಸಿನ ಪ್ರಚಾರಕ್ಕಾಗಿ ಶ್ರಮಿಸಿದರು. ಇವರು ಒಳ್ಳೆಯ ವಾಗ್ಮಿಗಳಾಗಿದ್ದರು. ಕನ್ನಡದ ಜೊತೆಗೆ ಮರಾಠಿ, ಇಂಗ್ಲಿಷ್, ಉರ್ದುಗಳಲ್ಲೂ ಚೆನ್ನಾಗಿ ಮಾತನಾಡಬಲ್ಲವರಾಗಿದ್ದರು. ಶ್ರೀಮಂತರೂ ಉದಾರಿಗಳೂ ಆಗಿದ್ದ ಇವರ ಮನೆ ರಾಷ್ಟ್ರೀಯ ಕಾರ್ಯಕರ್ತರಿಗೆ ನೆಲೆಯಾಗಿತ್ತು. (ಎನ್.ಕೆ.ಕೆ.,ಎಸ್.ಕೆ.)

**ಕೌಜಲಗಿ ಹಣಮಂತರಾವ್ :** 1890-1945. ಸ್ವಾತಂತ್ರ್ಯ ಹೋರಾಟಗಾರರು, ಗಾಂಧೀಮಾರ್ಗಾನುಯಾಯಿಗಳು, ಖಾದಿ ಕಾರ್ಯಕರ್ತರು. ಇಂದಿನ ಬಾಗಲಕೋಟೆ ಜಿಲ್ಲೆ ಮುಧೋಳದಲ್ಲಿ 1890 ಡಿಸೆಂಬರ್ 31ರಂದು ಜನಿಸಿದರು. ತಂದೆ ಕೌಜಲಗಿ ಶ್ರೀಪತಿರಾಯರು, ತಾಯಿ ಯಮುನಾಬಾಯಿ.

1908ರಲ್ಲಿ ಟಿಳಕರನ್ನು ಬ್ರಿಟಿಷ್ ಸರ್ಕಾರ ಬಂಧಿಸಿದಾಗ ಇವರು ಗೆಳೆಯರೊಂದಿಗೆ ಬಾಂಬ್ ತಯಾರಿಸುವ ಮಟ್ಟದ ವರೆಗೂ ಮುಂಬರಿದರು. ಪುಣೆಯ ಫರ್ಗ್ಯುಸನ್ ಕಾಲೇಜಿನಲ್ಲಿ ಓದುತ್ತಿದ್ದಾಗ ಶಿವಾಜಿ ಜಯಂತಿ ಆಚರಿಸಿ ಅಲ್ಲಿನ ಅಧಿಕಾರಿಗಳ ಆಗ್ರಹಕ್ಕೆ ತುತ್ತಾಗಿ ಅವರು ವಿದ್ಯಾರ್ಥಿನಿಲಯದಿಂದ ಹೊರಬರಬೇಕಾಯಿತು. ಆಗ ಸ್ನೇಹಿತರೊಡನೆ ತಮ್ಮದೇ ಆದ ವಿದ್ಯಾರ್ಥಿನಿಲಯವನ್ನು ಸ್ಥಾಪಿಸಿದರು. 1915ರಲ್ಲಿ ಮುಂಬಯಿಯ ಸಭೆಯೊಂದರಲ್ಲಿ ಗಾಂಧೀಜಿಯವರು ಕ್ರಾಂತಿಕಾರಿಗಳನ್ನು ಕುರಿತು ಆಡಿದ ಕೆಲವು ಮಾತುಗಳನ್ನು ಇವರು ಒಪ್ಪದೆ ಗಾಂಧೀಜಿಯವರನ್ನು ಕಂಡು ಆ ಬಗ್ಗೆ ಚರ್ಚಿಸಿದರು. ಇದೇ ಇವರ ಮತ್ತು ಗಾಂಧಿಯವರ ಪ್ರಥಮ ಭೇಟಿ.

1916ರಲ್ಲಿ ಬಿಜಾಪುರದಲ್ಲಿ ವಕೀಲಿವೃತ್ತಿ ಆರಂಭಿಸಿದರು. ಒಂದನೆಯ ಮಹಾಯುದ್ಧದ ಕಾಲದಲ್ಲಿ ಸೈನಿಕರಾಗಿ ಇವರು ಸೇನಾತರಬೇತಿ ಪಡೆದರೆ ಮುಂದೆ ಬ್ರಿಟಿಷರ ವಿರುದ್ಧ ಸಶಸ್ತ್ರಕ್ರಾಂತಿ ಮಾಡಬಹುದು ಎಂಬ ಉದ್ದೇಶದಿಂದ ಸೈನ್ಯ ಸೇರಿದರು. ಆದರೆ ಒಂದು ವರ್ಷದಲ್ಲೇ ಯುದ್ಧ ನಿಂತು ಇವರು ಊರಿಗೆ ಮರಳಿ ಮತ್ತೆ ವಕೀಲಿ ಪ್ರಾರಂಭಿಸಿದರು.

1921ರ ಅಸಹಕಾರ ಚಳವಳಿಯಲ್ಲಿ ಭಾಗವಹಿಸಲು ಇವರು ತಮ್ಮ ವಕೀಲಿ ವೃತ್ತಿಯನ್ನು ತ್ಯಜಿಸಿದರು. ಗ್ರಾಮಗಳಲ್ಲಿ ಸಂಚರಿಸಿ ಜನರಲ್ಲಿ ರಾಷ್ಟ್ರಸ್ವಾತಂತ್ರ್ಯದ ಜಾಗೃತಿಯನ್ನುಂಟುಮಾಡಿದರು. ಚರಕದಿಂದ ನೂತು ಖಾದಿ ಬಟ್ಟೆ ಧರಿಸಬೇಕೆಂದೂ ಮದ್ಯಪಾನ ಮಾಡಬಾರದೆಂದೂ ಪ್ರಚಾರ ಮಾಡಿದರು. ಸರ್ಕಾರದ ವಿರುದ್ಧವಾಗಿ ಪ್ರಚಾರ ಮಾಡುತ್ತಿದ್ದರೆಂದು ಸರ್ಕಾರ ಇವರನ್ನು ಬಂಧಿಸಿತು. ಇವರು ಧರಿಸಿದ್ದ ಗಾಂಧೀ ಟೋಪಿಯನ್ನು ತೆಗೆಯಲಿಲ್ಲ, ತಮಗೆ ವಿಧಿಸಿದ ಶಿಕ್ಷೆಯ ವಿರುದ್ಧ ಅಪೀಲು ಹೋಗಿ ಗೆದ್ದರು. ಮುಂದೆ ನ್ಯಾಯಾಲಯಕ್ಕೆ ಅವಮಾನ ಮಾಡಿದರೆಂಬ ಕಾರಣದಿಂದ ಸೊಲ್ಲಾಪುರದ ನ್ಯಾಯಾಧೀಶರು ಒಂದು ವರ್ಷ ಸದ್ವರ್ತನೆಯ ಜಾಮೀನು ಕೊಡಬೇಕೆಂದೂ ಇಲ್ಲವಾದರೆ ಒಂದು ವರ್ಷ ಜೈಲು ಶಿಕ್ಷೆ ಅನುಭವಿಸಬೇಕೆಂದೂ ವಿಧಿಸಿದರು. ಇವರು ಸದ್ವರ್ತನೆಯ ಜಾಮೀನು ಕೊಡುವುದು ಸರಿಯಲ್ಲವೆಂದು ಭಾವಿಸಿ ಬಿಜಾಪುರದ ಜೈಲನ್ನು ಸೇರಿದರು. ಅಲ್ಲಿ ತಮ್ಮ ಜೊತೆ ಕೈದಿಗಳಿಗೆ ಕಾನೂನು ಪ್ರಕಾರ ಶಿಸ್ತಿನಿಂದ ನಡೆದುಕೊಳ್ಳುವಂತೆ ಮಾಡಿ ಜೈಲಿನ ಪರಿಸ್ಥಿತಿಯನ್ನು ಸರ್ಕಾರಕ್ಕೆ ಬರೆದು ಸರ್ಕಾರ ಜೈಲುಗಳನ್ನು ಸುಧಾರಿಸಲು ಒಂದು ಸಮಿತಿಯನ್ನು ನೇಮಿಸುವಂತೆ ಮಾಡಿದರು.

ಬಿಡುಗಡೆಯಾದ ಅನಂತರ ಬಿಜಾಪುರದಲ್ಲಿ ಒಂದು ರಾಷ್ಟ್ರೀಯ ಶಾಲೆ ಸ್ಥಾಪಿಸಿ ವಿದ್ಯಾರ್ಥಿಗಳಿಗೆ ಅವರ ನಿತ್ಯದ ಓದಿನೊಂದಿಗೆ ರಾಷ್ಟ್ರೀಯ ವಿಚಾರವನ್ನು ಬೋಧಿಸುತ್ತಿದ್ದರು. 1924ರಲ್ಲಿ ಬೆಳಗಾಂವಿಯ ಕಾಂಗ್ರೆಸ್ ಮಹಾಧಿವೇಶನದ ಅಧ್ಯಕ್ಷರಾಗಿದ್ದ ಗಾಂಧಿಯವರು ಇವರ ಮೇಲ್ವಿಚಾರಣೆಯ ಖಾದಿ ಮತ್ತು ಗ್ರಾಮೋದ್ಯೋಗ ವಸ್ತುಪ್ರದರ್ಶನವನ್ನು ಮೆಚ್ಚಿಕೊಂಡರು. ಇವರು ಗಲಗಲಿಯಲ್ಲಿ ಖಾದಿಕೇಂದ್ರವನ್ನು ಪ್ರಾರಂಭಿಸಿ ಸುತ್ತಲ ಗ್ರಾಮಗಳಲ್ಲೆಲ್ಲಾ ಪ್ರಚಾರ ಮಾಡಿ ಖಾದಿ ಹಣಮಂತರಾಯರೆಂದೇ ಪ್ರಸಿದ್ಧರಾದರು. ಇವರು ಭಾರತ ಚರಕಾ ಸಂಘದ ಹುಬ್ಬಳ್ಳಿ ಶಾಖೆಯ ಕಾರ್ಯದರ್ಶಿಗಳಾಗಿ ದುಡಿದರು. ಗ್ರಾಮೋದ್ಯೋಗಗಳಿಗೆ ಹೆಚ್ಚು ಪ್ರಚಾರ ನೀಡಿ ಹೊನ್ನಾವರದಲ್ಲಿ ಒಂದು ಕರಕುಶಲ ವಸ್ತು ತಯಾರಿಕಾ ಕೇಂದ್ರ ಸ್ಥಾಪಿಸಿದರು. ಗಾಂಧೀಜಿ 1934ರಲ್ಲಿ ಪ್ರಾರಂಭಿಸಿದ ಅಖಿಲ ಭಾರತ ಗ್ರಾಮೋದ್ಯೋಗ ಸಂಘದ ಕರ್ನಾಟಕ ಶಾಖೆಗೆ ಇವರನ್ನೇ ಕಾರ್ಯದರ್ಶಿಯನ್ನಾಗಿ ನೇಮಿಸಿದರು. ಹಿಂದಿನ ಮುಂಬಯಿ ಸರ್ಕಾರ 1938ರಲ್ಲಿ ಇವರನ್ನು ಗ್ರಾಮೋದ್ಯೋಗ ಸಲಹಾಮಂಡಳಿಯ ಸದಸ್ಯರಾಗಿ ನೇಮಿಸಿ ಇವರ ಸಲಹೆಯ ಪ್ರಕಾರ ಹೊನ್ನಾವರದಲ್ಲಿ ಒಂದು ಗ್ರಾಮೋದ್ಯೋಗ ತರಬೇತಿ ಕೇಂದ್ರವನ್ನು ಪ್ರಾರಂಭಿಸಿತು. ಇವರು ನೇಕಾರರ ಪರಿಸ್ಥಿತಿಯನ್ನು ಸುಧಾರಿಸಲು ಶ್ರಮಿಸಿ ಉಣ್ಣೆ ಉದ್ಯಮ ಮತ್ತು ನೇಕಾರರಿಗೆ ಪ್ರೋತ್ಸಾಹ ಕೊಟ್ಟು ಆ ಕೈಗಾರಿಕೆಗಳು ಅಭಿವೃದ್ಧಿಹೊಂದುವಂತೆ ಮಾಡಿದರು.

ಮುಧೋಳ ಸಂಸ್ಥಾನದ ದೊರೆ ಮಾಲೋಜಿರಾವ್ ಘೋರ್ಪಡೆ ಹೆಚ್ಚು ಕಂದಾಯ ವಿಧಿಸಿ ಪ್ರಜೆಗಳ ಸುಲಿಗೆ ಮಾಡುತ್ತಿದ್ದುದನ್ನು ಪುಣೆಯಿಂದ ಪ್ರಕಟವಾಗುತ್ತಿದ್ದ 'ಸಂಸ್ಥಾನೀ ಸ್ವರಾಜ್ಯ' ಪತ್ರಿಕೆಯಲ್ಲಿ ಇವರು ಗುಪ್ತನಾಮದಿಂದ ಲೇಖನ ಬರೆದು ಬಯಲಿಗೆ ತಂದರು. ಪ್ರಜಾಪರಿಷತ್ತನ್ನು ಸ್ಥಾಪಿಸಿ ಅಹಿಂಸಾತ್ಮಕ ಆಂದೋಲನ ಪ್ರಾರಂಭಿಸಿ, ಘೋರ್ಪಡೆ ಸಿಂಹಾಸನದ ತ್ಯಾಗಮಾಡಿ ಮಗನಿಗೆ ಪಟ್ಟಕಟ್ಟುವಂತೆ ಮಾಡಿದರು. ಹೀಗೆ ಇವರು ರಾಮದುರ್ಗ ಮತ್ತು ಜಮಖಂಡಿಗಳಲ್ಲೂ ಪ್ರಜಾಸಂಘಟನೆ ಮಾಡಿದರು.

1930ರ ಕಾನೂನುಭಂಗ ಚಳವಳಿಯಲ್ಲಿ ಭಾಗವಹಿಸಿ ದಂಡಿಯಲ್ಲಿ ಉಪ್ಪನ್ನು ಮಾಡಿ ಕಾನೂನನ್ನು ಉಲ್ಲಂಘಿಸಿದರು. ಅಂಕೋಲೆಯ ಸತ್ಯಾಗ್ರಹ ಶಿಬಿರದಲ್ಲಿ ಇವರು ಬಂಧನಕ್ಕೊಳಗಾದರು. ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸತ್ಯಾಗ್ರಹದ ಸರ್ವಾಧಿಕಾರಿಯಾಗಿ ಮತ್ತೆ ಜೈಲು ಕಂಡು 1933ರಲ್ಲಿ ಬಿಡುಗಡೆಯಾದರು.

ಗಾಂಧಿಯವರ ಅಸ್ಪೃಶ್ಯತಾ ನಿವಾರಣಾ ಆಂದೋಲನದ ಕರೆಯಂತೆ ಅವರು ಒಂದು ಹರಿಜನ ಕನ್ಯಾ ಮಂದಿರವನ್ನು ಸ್ಥಾಪಿಸಿ ಕಾಕಾ ಕಾರಖಾನೀಸರನ್ನು ಅದರ ಮೇಲ್ವಿಚಾರಣೆಗೆ ನೇಮಿಸಿ ತಮ್ಮ ಕೈಯಿಂದಲೇ ಅವರಿಗೆ ಸಂಬಳ ಕೊಡುತ್ತಿದ್ದರು. ಬಿಜಾಪುರದ 1943ರ ಬರಗಾಲದಲ್ಲಿ ಜನರಿಗೆ ರಾಟೆ ಹಂಚಿ ನೂಲು ಕೊಳ್ಳುವ ವ್ಯವಸ್ಥೆ ಮಾಡಿ ಯಶಸ್ವಿಯಾಗಿ ಪರಿಹಾರಕಾರ್ಯವನ್ನು ನಡೆಸಿದರು.

ಇವರು ದೀನದಲಿತರ ಸೇವೆಗೆ ಸದಾ ಮುಂದೆಬರುತ್ತಿದ್ದರು. 1938ರಲ್ಲಿ ಬಾಗಲಕೋಟೆಯಲ್ಲಿ ಲಮಾಣಿಗಳ ಸಭೆ ಸೇರಿಸಿ ತಾವೇ ಸಭಾಧ್ಯಕ್ಷರಾಗಿ ಅವರಿಗೆ ಸುಧಾರಣಾಮಾರ್ಗಗಳನ್ನು ತೋರಿದರು. ತಾವೇ ದೇಶಭಕ್ತಿಗೀತೆಗಳನ್ನು ಕಟ್ಟಿ ಹಾಡುತ್ತಿದ್ದರು. ಇವರು 'ಎ ವಿಸಿಟ್ ಟು ಬಿಜಾಪುರ' ಎಂಬ ಪುಸ್ತಕವನ್ನು ಬರೆದಿದ್ದಾರೆ. ಈ ದೇಶಭಕ್ತ, ಸುಧಾರಣಾವಾದಿ 1945 ಜೂನ್ 10ರಂದು ನಿಧನರಾದರು. *

**ಕೌಳರು** : ಕರ್ನಾಟಕದಲ್ಲಿ ಪ್ರಚಲಿತವಾಗಿದ್ದ ವಾಮಾಚಾರದ ತಾಂತ್ರಿಕ ಮತಗಳಲ್ಲಿ ಒಂದು. ಕೌಳ ಮೂಲತಃ ಒಂದು ಶಾಕ್ತಮತ. ಎಂದರೆ ಚಂಡಿ ಇವರ ಆರಾಧ್ಯದೈವ. ಇತರ ದೈವಗಳಿಗಿಂತ, ಬ್ರಹ್ಮ, ವಿಷ್ಣು, ಶಿವರಿಗಿಂತಲೂ ಚಂಡಿಯೇ ದೊಡ್ಡವಳು ಎಂಬುದು ಇವರ ನಂಬಿಕೆ. ಮಾಂಸಾಹಾರ ಸೇವಿಸುತ್ತಿದ್ದು, ಮದ್ಯಪಾನ ಮಾಡುತ್ತಿದ್ದ ಇವರು ಇತರರು ಸಾಮಾನ್ಯವಾಗಿ ನಿಷಿದ್ಧವೆಂದೂ ಪಾಪಕರ್ಮವೆಂದೂ ಭಾವಿಸುತ್ತಿದ್ದ, ಸ್ತ್ರೀಯರೊಡನೆ ಕಾಮುಕ ಸಂಬಂಧ ಮೊದಲಾದ ಕ್ರಿಯೆಗಳನ್ನು ಸಾಧನೆಯ ಅಂಗವೆಂದು ಹೇಳಿಕೊಂಡು ಅನುಸರಿಸುತ್ತಿದ್ದರು. ಅಂಥ ಸಂಬಂಧದಲ್ಲಿ ತಾಯಿ, ತಂಗಿ, ಅನ್ಯ ಸ್ತ್ರೀ ಎಂಬ ಭೇದವನ್ನೇ ಮಾಡುತ್ತಿರಲಿಲ್ಲವೆಂದೂ ಹೇಳಿಕೆಗಳಿವೆ. ತಮ್ಮ ದೈವವಾದ ಚಂಡಿ ಅಥವಾ ಮಹಾಕಾಳಿಯನ್ನು ವಿಶೇಷವಾಗಿ ಮಂಗಳವಾರ ಮತ್ತು ಶುಕ್ರವಾರ ರಾತ್ರಿ ಕೆಂಪು ಹೂಗಳಿಂದ ಪೂಜಿಸುತ್ತಿದ್ದರು. ಇವರು ತಾವೇ ನಿಜವಾದ ಬ್ರಾಹ್ಮಣರೆಂದೂ ವೇದಾರ್ಥವನ್ನು ತಿಳಿದವರಲ್ಲಿ ತಾವೇ ಅಗ್ರಗಣ್ಯರೆಂದೂ ನಂಬಿದ್ದರು. ಬ್ರಾಹ್ಮಣರಂತೆ ಹೋಮವನ್ನು ಮಾಡುತ್ತಿದ್ದರು. ಇವರಲ್ಲಿ ಎರಡು ಪಂಗಡಗಳಿವೆ. ಪೂರ್ವ ಮತ್ತು ಉತ್ತರ. ಇಬ್ಬರೂ ಶಕ್ತಿಯ ಆರಾಧಕರಾದರೂ ಪೂರ್ವಕೌಳರು ಯೋನಿಯ ಚಿತ್ರವನ್ನು ಪೂಜಿಸಿದರೆ, ಉತ್ತರಕೌಳರು ಯೋನಿಯನ್ನೇ ಪೂಜಿಸುತ್ತಿದ್ದರು. ಇದು ಪ್ರತಿಪಕ್ಷದವರಿಂದ ನಮಗೆ ದೊರಕುವ ಕೌಳಮತದ ಚಿತ್ರ. ಆದರೆ ಇದರ ಗುರಿ ಇಂದ್ರಿಯಭೋಗವಲ್ಲ. ಬ್ರಹ್ಮಸಾಯುಜ್ಯ, ಬ್ರಹ್ಮಸಾಕ್ಷಾತ್ಕಾರ. ಅದನ್ನು ಪಡೆಯಲು ಈ ಮತ ಸೂಚಿಸುವ ಮಾರ್ಗ ಮಾತ್ರ ವಿಲಕ್ಷಣವಾದುದು. ಕೌಳಸಾಧನೆಗೆ ಅತ್ಯಗತ್ಯವಾಗಿ ಬೇಕಾಗಿರುವವು ಪಂಚ ಮಕಾರಗಳು: ಮದ್ಯ, ಮಾಂಸ, ಮತ್ಸ್ಯ, ಮುದ್ರಾ, ಮೈಥುನ. ಭೋಗವಸ್ತುಗಳೆಂದು ಇತರರು ಭಾವಿಸುವ ಇವುಗಳ ಮಧ್ಯೆಯೇ ಉಪಾಸನೆ ಸಾಗುತ್ತದೆ. ಕೌಳಮತದ ಸಾಧಕ ಅದ್ಭುತಸಂಯಮಿಯಾಗಿರಬೇಕೆಂದೂ ಎಲ್ಲರಿಗೂ ಆ ಮತ ಸಾಧ್ಯವಿಲ್ಲವೆಂದೂ ಕೌಳಮತದ ಗ್ರಂಥಗಳು ಸ್ಪಷ್ಟಪಡಿಸುತ್ತವೆ.

ಕರ್ನಾಟಕದಲ್ಲಿ ಕೌಳಮತ ಎಷ್ಟರಮಟ್ಟಿಗೆ ಪ್ರಚಾರದಲ್ಲಿತ್ತೆಂಬುದಕ್ಕೆ ಸಾಕಷ್ಟು ಆಧಾರಗಳಿಲ್ಲ. ಶಾಸನಗಳಲ್ಲಿ ಇದರ ಪ್ರಸ್ತಾಪ ದೊರೆಯುವುದಿಲ್ಲ. ಆದರೆ ಈ ಪಂಥೀಯರು ಸ್ವಲ್ಪ ಸಂಖ್ಯೆಯಲ್ಲಾದರೂ ಇದ್ದಿರಬೇಕು. ಸೋಮದೇವನ ಯಶಸ್ತಿಲಕಚಂಪೂ, ಬ್ರಹ್ಮಶಿವನ ಸಮಯಪರೀಕ್ಷೆ, ಈ ಜೈನಕೃತಿಗಳು ಹಾಗೂ ವೀರಶೈವ ಕೃತಿಯಾದ ಶಂಕರದಾಸಿಮಯ್ಯನ ಪುರಾಣ ಕೌಳಮತದ ಬಗ್ಗೆ ಅನೇಕ ಸಂಗತಿಗಳನ್ನು ತಿಳಿಸುತ್ತವೆ. (ಎಂ.ಪಿ.)

**ಕ್ಯಾಂಪ್‌ಬೆಲ್, ಸಿ.** : ಕರ್ನಾಟಕಕ್ಕೆ ಬಂದ (1846) ಕ್ರೈಸ್ತಮತ ಪ್ರಚಾರಕ. ಕನ್ನಡ ಭಾಷೆಯನ್ನು ಚೆನ್ನಾಗಿ ತಿಳಿದಿದ್ದ ಈತ ಕನ್ನಡ ಬೈಬಲ್ ಕೃತಿಯ ಪರಿಷ್ಕರಣ ಸಮಿತಿಯ ಸದಸ್ಯನಾಗಿ ವೈಗಲ್, ಗ್ಯಾರೆಟ್, ಮೋಗ್ಲಿಂಗ್, ಸ್ಯಾಂಡರ್ಸನ್ ಇವರ ಜೊತೆ ಕೆಲಸಮಾಡಿದ. ಬೈಬಲ್ ಸೂಕ್ತಿಗಳನ್ನಾಧರಿಸಿ ಬರೆದ ಡೈಲಿ ಬ್ರೆಡ್ ಎಂಬ ಇಂಗ್ಲಿಷ್ ಗ್ರಂಥವನ್ನು ಕನ್ನಡಕ್ಕೆ ಭಾಷಾಂತರಿಸಿದ (1857). ಅನಂತರ ಬೈಬಲ್‌ನಿಂದ ನೂರಾರು ಪ್ರಸಿದ್ಧ ಸೂಕ್ತಿಗಳನ್ನು ಆಯ್ದು ಕನ್ನಡಕ್ಕೆ ಅನುವಾದಿಸಿದ (1860). ಇವನ ಈ ಕನ್ನಡ ಅನುವಾದ ಕೃತಿಗಳು ಕ್ರೈಸ್ತಗುರುಗಳ ಪ್ರಶಂಸೆಗೂ ಪಾತ್ರವಾಗಿದ್ದುವು. ಈತನಿಗೆ ಪಠ್ಯಪುಸ್ತಕಗಳ ರಚನೆಯಲ್ಲಿ ಅಭಿರುಚಿಯಿತ್ತು. 1849ರಲ್ಲಿ ಕನ್ನಡ ಶಾಲಾ ವ್ಯಾಕರಣವೆಂಬ ಕೃತಿಯನ್ನು ರಚಿಸಿದ. ಈತ ಮಕ್ಕಳಿಗಾಗಿಯೇ ಬಾಲ್ಯೋಪದೇಶ ಎಂಬ ಗ್ರಂಥವನ್ನು ರಚಿಸಿದ್ದಾನೆ (1852). ಕನ್ನಡ ವ್ಯಾಕರಣವನ್ನು ಕುರಿತಂತೆ ಇಂಗ್ಲಿಷ್‌ನಲ್ಲಿ ಎಲಿಮೆಂಟ್ಸ್ ಆಫ್ ಕೆನರೀಸ್ ಗ್ರಾಮರ್ ಫಾರ್ ನೇಟಿವ್ಸ್ ಎಂಬ ಗ್ರಂಥವನ್ನು ಬರೆದಿದ್ದಾನೆ. ಇದು 1870ರಲ್ಲಿ ಪ್ರಕಟವಾಯಿತು. *

**ಕ್ಯಾಸನೂರು ಕಾಡಿನ ಕಾಯಿಲೆ** : ವೈರಸ್ ಸೋಂಕಿನಿಂದ ಮೊದಲು ಮಂಗಗಳಲ್ಲಿಯೂ ತರುವಾಯ ಮನುಷ್ಯರಲ್ಲಿಯೂ 1957ರಲ್ಲಿ ಕಾಣಿಸಿಕೊಂಡ ಒಂದು ಪ್ರಾಣಾಂತಿಕ ವ್ಯಾಧಿ. ಇದು ಮೊಟ್ಟಮೊದಲಿಗೆ ಕಾಣಿಸಿಕೊಂಡದ್ದು ಕರ್ನಾಟಕದ ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಕೆಲವು ಹಳ್ಳಿಗಳಲ್ಲಿ (1955-56). ಆರೋಗ್ಯ ಇಲಾಖೆಯ ಪ್ರಥಮ ಹೊಸ ಪರಿಶೋಧನೆಯಿಂದ ಇದು ಬಹುಶಃ ಹೊಸ ಕಾಯಿಲೆ ಇರಬೇಕೆಂಬ ಸಂಶಯ ಮೂಡಿತು. 1957ರ ಆದಿಭಾಗದಲ್ಲಿ ಇದೇ ಕಾಯಿಲೆ ಮತ್ತೆ ಆ ಹಳ್ಳಿಗಳ ಸಮೀಪದಲ್ಲಿ ಉಗ್ರರೀತಿಯಲ್ಲಿ ತಲೆದೋರಿತು. ಇದರ ವಿಶಿಷ್ಟ ಲಕ್ಷಣವೆಂದರೆ ಈ ರೋಗದಿಂದ ಮನುಷ್ಯರು ನರಳುತ್ತಿದ್ದ ಹಳ್ಳಿಗಳ ಸುತ್ತಮುತ್ತಲಿನ ಕಾಡುಗಳಲ್ಲಿ ಮಂಗಗಳು ಅಸ್ವಾಭಾವಿಕವಾಗಿ ಅಧಿಕ ಸಂಖ್ಯೆಯಲ್ಲಿ ಸಾಯುತ್ತಿದ್ದವು. ಅಂದಿನಿಂದ ಪ್ರತಿವರ್ಷವೂ ಬೇಸಗೆಯಲ್ಲಿ ಈ ರೋಗ ಅಲ್ಲಿ ಕಾಣಿಸಿಕೊಳ್ಳುತ್ತಿದೆ. ಕಾಯಿಲೆಯ ಜನರ ರಕ್ತ ಮತ್ತು ಆಗತಾನೆ ಸತ್ತ ಮಂಗಗಳ ಅವಯವಗಳ (ಮಿದುಳು, ಹೃದಯ, ಶ್ವಾಸಕೋಶ, ಪಿತ್ತಜನಕಾಂಗ) ಪರೀಕ್ಷೆಯಿಂದ ರೋಗಕಾರಕ ವೈರಸ್ಸಿನ ಶೋಧವಾಯಿತು. ಮನುಷ್ಯ ಮತ್ತು ಮಂಗಗಳ ಕಾಯಿಲೆ ಒಂದೇ ಎಂದು

ಇದರಿಂದ ಖಚಿತವಾಯಿತು. ವೈರಸ್ಸನ್ನು ಮೊಟ್ಟಮೊದಲು ಕ್ಯಾಸನೂರು ಕಾಡಿನಲ್ಲಿ ಸತ್ತ ಮಂಗದಿಂದಲೂ ಅದೇ ಕಾಡಿನಲ್ಲಿ ಓಡಾಡಿ ಬಂದ ರೋಗಿಗಳಿಂದಲೂ ಪತ್ತೆ ಹಚ್ಚಿದುದರಿಂದ ಈ ಕಾಯಿಲೆಗೆ ಕ್ಯಾಸನೂರು ಕಾಡಿನ ಕಾಯಿಲೆ ಎಂಬ ಹೆಸರು ಬಂದಿದೆ. ಅನಂತರ ಪರೀಕ್ಷೆ ಮಾಡಿದ್ದರಲ್ಲಿ ಕೆಲವು ಜಾತಿಯ ಉಣ್ಣಿಗಳಲ್ಲಿ ಸಹ ಈ ವೈರಸ್ಸಿನ ಶೋಧವಾಗಿದೆ. ಆದ್ದರಿಂದ ಉಣ್ಣಿಗಳ ಕಡಿತದಿಂದ ವೈರಸ್ಸಿನ ಸೋಂಕು ಹರಡಿ ಕಾಯಿಲೆ ವ್ಯಾಪಿಸುವುದೆಂದು ತರ್ಕಿಸಿದ್ದಾರೆ.

**ರೋಗದ ಲಕ್ಷಣಗಳು :** ಇದ್ದಕ್ಕಿದ್ದಂತೆ ಚಳಿಜ್ವರ ಕಾಣಿಸಿಕೊಂಡು ಸತತವಾಗಿ ಒಂದೆರಡು ವಾರಗಳು ಬಿಡದೆ ಇರುತ್ತದೆ. ತಲೆನೋವು ತೀವ್ರವಾಗಿರುವುದು. ಮೈ ಕೈ ಸೊಂಟನೋವು, ಸುಸ್ತು ನಿಶ್ಯಕ್ತಿ ಅತ್ಯಧಿಕ. ಆಗಾಗ ಕೆಲವರಿಗೆ ವಾಂತಿ ಮತ್ತು ಭೇದಿಯಾಗಬಹುದು. ವಿರಳವಾಗಿ ಮತಿವಿಕಲ್ಪವಾಗಲೂಬಹುದು. ಪ್ರಾರಂಭದಲ್ಲಿ ಕಣ್ಣುಗಳು ಕೆಂಪಾಗಿದ್ದು ಕಣ್ಣುಗುಡ್ಡೆಗಳ ನೋವಾಗುವುದುಂಟು. ಸಾಧಾರಣವಾಗಿ ರೋಗ ಅಂಟಿದ ನಾಲ್ಕಾರು ದಿವಸಗಳ ತರುವಾಯ ಮೂಗು, ಬಾಯಿಗಳಲ್ಲಿ, ಕಫ ವಾಂತಿ ಮತ್ತು ಮಲವಿಸರ್ಜನೆಗಳ ಮೂಲಕ ರಕ್ತಸ್ರಾವವಾಗುವುದು. ಈ ರೋಗದಲ್ಲಿ ವಿಶೇಷ ಬಾಯಾರಿಕೆ, ದಣಿವು ಮತ್ತು ಬಿಳಿಯ ರಕ್ತಕಣಗಳ ಅಭಾವ, ಕೆಂಪು ರಕ್ತಕಣಗಳ ಅಭಾವ, ಕ್ಷೀಣ ರಕ್ತ ಒತ್ತಡ ಮತ್ತು ಕ್ಷೀಣ ಹೃದಯ ಬಡಿತ ವ್ಯಕ್ತಪಟ್ಟಿವೆ. ರೋಗ ಎರಡರಿಂದ ಮೂರು ವಾರಗಳಿದ್ದರೂ ರೋಗಿ ಮುಕ್ತನಾಗಿ ಯಥಾಸ್ಥಿತಿಗೆ ಬರಲು ಒಂದೆರಡು ತಿಂಗಳಾದರೂ ಬೇಕಾಗಬಹುದು.

ಈ ರೋಗ ಸಾಮಾನ್ಯವಾಗಿ ಪ್ರತಿವರ್ಷವೂ ಬೇಸಗೆಯಲ್ಲಿ ಜನವರಿಯಿಂದ ಜೂನ್ ತಿಂಗಳುಗಳಲ್ಲಿ ವಿಶೇಷವಾಗಿ ಕಾಣಿಸಿಕೊಳ್ಳುತ್ತದೆ. ಮಂಗಗಳು ಮತ್ತು ಮನುಷ್ಯರು ಏಕಕಾಲದಲ್ಲಿ ಈ ರೋಗಕ್ಕೆ ತುತ್ತಾಗುವರು. ಇದೇ ಸಮಯದಲ್ಲಿ ಕಾಡಿನಲ್ಲಿ ಉಣ್ಣಿಗಳು ಯಥೇಚ್ಛವಾಗಿರುವುದಲ್ಲದೆ ವೈರಸ್ ಕೂಡ ಈ ಉಣ್ಣಿಗಳಲ್ಲಿ ವಿಪುಲವಾಗಿ ಕಂಡು ಬಂದಿದೆ. ವೈರಸ್ ಯುಕ್ತ ಉಣ್ಣಿಗಳು ಮನುಷ್ಯರ ಮೇಲೂ ಮಂಗಗಳ ಮೇಲೂ ದೊರಕಿವೆ. ಅಂಥ ಕಾಡಿನ ಸಂಪರ್ಕವಾದರೆ ರೋಗ ಸುಲಭವಾಗಿ ಹರಡಲು ಸಾಧ್ಯವಾಗುತ್ತದೆ. ಕಪ್ಪು ಮಂಗ ಮತ್ತು ಕೆಂಪು ಮಂಗಗಳೆರಡೂ ಈ ರೋಗಕ್ಕೆ ತುತ್ತಾಗುತ್ತವೆ. ಕ್ಯಾಸನೂರು ಕಾಡಿನ ಕಾಯಿಲೆ ಮನುಷ್ಯರಲ್ಲಿ ಸಾಂಕ್ರಾಮಿಕವಲ್ಲ.

**ರೋಗನಿರ್ಣಯ :** ರೋಗಿಯನ್ನು ವೈರಸ್ ಪ್ರವೇಶಿಸಿದ 4-6 ದಿವಸಗಳ ತರುವಾಯ ಕಾಯಿಲೆಯ ಚಿಹ್ನೆಗಳು ಪ್ರಕಟವಾಗುತ್ತವೆ. ರೋಗನಿರ್ಣಯಕ್ಕೆ ರಕ್ತ ಪರೀಕ್ಷೆ ಅತಿಮುಖ್ಯ. ಪ್ರಯೋಗಶಾಲೆಯಲ್ಲಿ ರೋಗಿಯ ಮೊದಲ ರಕ್ತವನ್ನು (ಅಕ್ಯೂಟ್‌ಬ್ಲಡ್) ಸಾಕಿದ ಆರೋಗ್ಯ ಬಿಳಿ ಇಲಿಗಳ ಸ್ವಿಸ್ ಆಲ್ಬಿನೋ ಮೈಸ್ ಮಿದುಳಿಗೆ ಚುಚ್ಚುವ ಮೂಲಕ ಕೊಡಲಾಗುವುದು. ಅನಂತರ ಇಲಿಗಳಿಗೆ ಆದ ಪರಿಣಾಮದಿಂದ ವೈರಸ್ಸಿನ ಇರುವಿಕೆಯನ್ನು ಬೇರೆ ವಿಶಿಷ್ಟಪರೀಕ್ಷೆಗಳಿಂದ ಗುರುತಿಸಲಾಗುತ್ತದೆ. ರೋಗಿಯ ಎರಡನೆಯ ರಕ್ತದಲ್ಲಿ (ಕನ್‌ವೇಲೆಸೆಂಟ್ ಬ್ಲಡ್) ಪ್ರತಿ ವಸ್ತುಗಳು ಆಂಟಿಬಾಡೀಸ್ ಎಷ್ಟರಮಟ್ಟಿಗೆ ವೃದ್ಧಿಯಾಗಿವೆ ಎಂದು ಕಂಡುಹಿಡಿದು ರೋಗವನ್ನು ಖಚಿತ ಪಡಿಸಬಹುದು. ರೋಗಿಯ ರಕ್ತವನ್ನು ಸಾಗಿಸುವಾಗ ಸದಾಮಂಜಿನಗಡ್ಡೆಯ ಸಂಪರ್ಕದೊಡನೆ ಇರಿಸುವುದು ಅತಿಮುಖ್ಯ. ಇಲ್ಲದಿದ್ದರೆ ವೈರಸ್ ನಶಿಸಿಹೋಗಿ ಗುರುತಿಸಲಾಗುವುದಿಲ್ಲ. ಈ ರೋಗ ತಗುಲಿದ ವ್ಯಕ್ತಿಯಿಂದ ಸುಮಾರು 8-10 ದಿವಸಗಳವರೆಗೆ ವೈರಸ್ಸನ್ನು ಗುರುತಿಸಲಾಗಿದೆ.

**ರೋಗದ ಮುನ್ನರಿವು :** ಸಾಧಾರಣವಾಗಿ ರೋಗಿ ಸಕಾಲದಲ್ಲಿ ಸೂಕ್ತ ಚಿಕಿತ್ಸೆ ಪಡೆದರೆ ಪೂರ್ಣವಾಗಿ ಗುಣಮುಖನಾಗುತ್ತಾನೆ. ಸರಿಯಾದ ಚಿಕಿತ್ಸೆಯಿಲ್ಲದ ರೋಗಿಗಳು ಸೇ.5ರಿಂದ 10 ಜನರು ಸಾವಿಗೀಡಾಗುತ್ತಾರೆ. ಬದುಕಿದವರೆಲ್ಲರೂ ಯಾವ ಕುಂದೂ ಇಲ್ಲದೆ ಗುಣಮುಖರಾಗುವರು.

**ಚಿಕಿತ್ಸಾಕ್ರಮ:** ಈ ರೋಗದ ವೈರಸ್ ಯಾವ ಔಷಧಿಯೂ ಇಲ್ಲದೆ ನಾಶವಾಗುವುದಿಲ್ಲ. ಆದ್ದರಿಂದ ಚಿಕತ್ಸೆ ರೋಗಿಯ ತೊಂದರೆ ನಿವಾರಣೆಗೆ ಮಾತ್ರ.

**ಮುಂಜಾಗರೂಕತೆಯ ಕ್ರಮಗಳು :** ಮುಖ್ಯವಾಗಿ, ಮಂಗಗಳು ಸಾಯುತ್ತಿರುವ ಕಾಡಿಗೆ ಜನರು ಪ್ರವೇಶಿಸಬಾರದು. ಹೋಗಲೇಬೇಕಾದಲ್ಲಿ ಉಣ್ಣಿಗಳನ್ನು ದೂರೀಕರಿಸುವ ಮುಲಾಮನ್ನು ಹಾಕಿಕೊಳ್ಳುವುದು ಮತ್ತು ಮೈತುಂಬ ಬಟ್ಟೆಗಳನ್ನು ಹಾಕಿಕೊಂಡು ಉಣ್ಣಿಗಳು ಕಚ್ಚದಂತೆ ಎಚ್ಚರಿಕೆ ವಹಿಸುವುದು ಅಗತ್ಯ. ಅಂಥ ಕಾಡಿನಿಂದ ಮರಳಿದ ತರುವಾಯ ಸಾಬೂನು ಹಚ್ಚಿ ಮೈ ಉಜ್ಜಿ ಸ್ನಾನ ಮಾಡಬೇಕು. ಎರಡನೆಯದಾಗಿ ರೋಗಬಾರದಂತೆ ಈ ರೋಗದ ಲಸಿಕೆಯ ಚುಚ್ಚುಮದ್ದನ್ನು ತೆಗೆದುಕೊಳ್ಳಬೇಕು. ಲಸಿಕೆಯನ್ನು ಪುಣೆಯ ವೈರಸ್ ಸಂಶೋಧನ ಕೇಂದ್ರದಲ್ಲಿ ತಯಾರಿಸಿ ಪ್ರಯೋಗಾರ್ಥವಾಗಿ ಕೆಲವು ಜನರಿಗೆ ಕೊಡಲಾಗಿದೆ. ಇದು ರೋಗವನ್ನು ತಡೆಯಲು ಯಶಸ್ವಿಯಾದಲ್ಲಿ ಆಗ ಅದನ್ನು ರೋಗ ಬರಬಹುದಾದ ಜನರಿಗೆ ವ್ಯವಸ್ಥಿತ ರೀತಿಯಲ್ಲಿ ಕೊಟ್ಟು ರೋಗವನ್ನು ತಡೆಯಬಹುದು. ಕ್ಯಾಸನೂರು ಕಾಡಿನ ಕಾಯಿಲೆಯನ್ನು ನಿರ್ಮೂಲಿಸಲು ಯಶಸ್ವಿಯಾದ ಕ್ರಮ ಕೈಗೊಳ್ಳಬೇಕಾದರೆ ರೋಗ ಸ್ವಾಭಾವಿಕವಾಗಿ ಹರಡುವ ಬಗೆಯನ್ನು ತಿಳಿಯುವುದು ಅತಿಮುಖ್ಯ. ಈ ರೋಗದಲ್ಲಿ ಕಾಡಿನ ಪಾತ್ರ ಉಂಟು. ರೋಗ ಹರಡುವುದಕ್ಕೆ ಜನರು, ಮಂಗಗಳು, ದನಕರುಗಳು, ಇಲಿಗಳು, ಪಕ್ಷಿಗಳು, ಇತರೇ ಕಾಡುಪ್ರಾಣಿಗಳು ಮತ್ತು ಉಣ್ಣಿಗಳ ಪಾತ್ರಗಳನ್ನು ನಿಗದಿ ಮಾಡಬೇಕು. ಹಲವಾರು ಪ್ರಾಣಿಗಳ ಪರೀಕ್ಷೆ ನಿಮಿತ್ತ ಈ ರೋಗ ಹರಡುವ ಬಗ್ಗೆ ತನಿಖೆ ಸತತವಾಗಿ ನಡೆಯುತ್ತಿದೆ.

**ಸಂಶೋಧನೆಯಲ್ಲಿ ತೊಡಗಿರುವ ಸಂಸ್ಥೆಗಳು :** ಕರ್ನಾಟಕ ಜನಾರೋಗ್ಯ ಇಲಾಖೆಯವರು ಮನುಷ್ಯರಿಗೆ ಸಂಬಂಧಪಟ್ಟ ಪರೀಕ್ಷೆ ಮಾಡುತ್ತಿದ್ದಾರೆ. ಇದಕ್ಕಾಗಿ ಶಿವಮೊಗ್ಗ ಜಿಲ್ಲೆ ಸಾಗರದಲ್ಲಿ ವಿಶೇಷ ಸಿಬ್ಬಂದಿಯಿದೆ. ರೋಗಾಣುಗಳ ಪರೀಕ್ಷೆಯ ನಿಮಿತ್ತ ಶಿವಮೊಗ್ಗದಲ್ಲಿ ಒಂದು ವೈರಸ್ ಪರಿಶೋಧನ ಪ್ರಯೋಗಶಾಲೆಯನ್ನು ಅಮೆರಿಕದ ರಾಕ್‌ಫೆಲರ್ ಫೌಂಡೇಷನ್ ಸಹಾಯದಿಂದ ಸ್ಥಾಪಿಸಲಾಗಿದೆ. ಪುಣೆಯ ವೈರಸ್ ಸಂಶೋಧನ ಕೇಂದ್ರದವರ ವಿಶೇಷ ಸಿಬ್ಬಂದಿಯವರು ಪ್ರಾಣಿಸಂಶೋಧನೆಗಳಲ್ಲಿ ನಿರತರಾಗಿದ್ದಾರೆ. *

**ಕ್ಯಾಸಲ್‌ರಾಕ್:** ಉತ್ತರ ಕನ್ನಡ ಜಿಲ್ಲೆ ಜೊಯಡ ತಾಲ್ಲೂಕಿನಲ್ಲಿರುವ ಸ್ಥಳ. ಜೊಯಡ ನಗರದಿಂದ 70ಕಿಮೀ ದೂರದಲ್ಲಿರುವ ಕಲಂಬುಳಿ ಗ್ರಾಮದಲ್ಲಿದೆ. ಕರಂಚಾಲ್ ಮತ್ತು ಚೌಟಾವಾಡಿಯಲ್ಲಿರುವ ಎರಡು ಕಲ್ಲುಗಳು ಕ್ಯಾಸಲ್ ತರಹ ಕಾಣುತ್ತಿದ್ದುದ್ದರಿಂದ ಬ್ರಿಟಿಷರು ಕ್ಯಾಸಲ್‌ರಾಕ್ ಎಂದು ಹೆಸರಿಟ್ಟರು. ಲೋಂಡ ಮತ್ತು ಮಾರ್ಗೋವ ರೈಲ್ವೆ ನಿಲ್ದಾಣಗಳ ಮಧ್ಯೆ ಕ್ಯಾಸಲ್‌ರಾಕ್ ನಿಲ್ದಾಣ ಬರುತ್ತದೆ. ಇಲ್ಲಿ ಮಾರುತಿ, ದತ್ತಮಂದಿರ, ಲಕ್ಷ್ಮಿ, ಚನ್ನಬಾಯಿ ಮುಂತಾದ ದೇವಸ್ಥಾನಗಳಿವೆ. ಫಾಲ್ಗುಣ ಪಂಚಮಿಯಂದು ಚನ್ನಬಾಯಿ ಜಾತ್ರೆ ನಡೆಯುತ್ತದೆ. ಇಲ್ಲಿರುವ ಗರೀಬ ಶಹಾವಾಲಿ ದರ್ಗಾದಲ್ಲಿ ವಾರ್ಷಿಕ ಉರಸ್ ನಡೆಯುತ್ತದೆ. ಇಲ್ಲಿ 1863ರಲ್ಲಿ ನಿರ್ಮಾಣವಾದ ಹೋಲಿಕ್ರಾಸ್ ಎಂಬ ಚರ್ಚ್ ಇದೆ. ಕ್ಯಾಸಲ್‌ರಾಕ್‌ನಿಂದ 3ಕಿಮೀ ಅಂತರದಲ್ಲಿ ಪಂಡರಿ ನದಿಯ ದಂಡೆಯ ಮೇಲೆ ಮಲ್ಲಿಕಾರ್ಜುನ ದೇವಸ್ಥಾನವಿದೆ. ಶಿವರಾತ್ರಿಯಂದು ಇಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. (ಬಿ.ಎನ್.ಎಂ.)

**ಕ್ರೀಡೆಗಳು :** ಕರ್ನಾಟಕದಲ್ಲಿ ಅನೇಕ ರೀತಿಯ ಜನಪದ ಆಟಗಳು ಹಾಗೂ ಪಾಶ್ಚಾತ್ಯ ಕ್ರೀಡೆಗಳು ಪ್ರಚಲಿತವಾಗಿವೆ. ಜನಪದ ಆಟಗಳು (ನೋಡಿ) ತಲತಲಾಂತರದಿಂದ ರೂಢಮೂಲವಾಗಿ ಬೆಳೆದುಬಂದಂಥವು. ಇವು ಬೆಳೆದು ಬಂದ ಬಗೆಗೆ ಆಧಾರಗಳನ್ನು ಕೊಡುವುದು ಕಷ್ಟ. ಇಂಥ ಆಟಗಳಲ್ಲಿ ಕೆಲವಕ್ಕೆ ಸಾಹಿತ್ಯಕ, ಶಾಸ್ತ್ರೀಯ ಚಾರಿತ್ರಿಕ ಗ್ರಂಥಗಳಲ್ಲಿ ವರ್ಣನೆಯ ಅವಕಾಶ ಸಿಕ್ಕಿದ್ದರೆ ಅನೇಕವಕ್ಕೆ ಅಂಥ ಅವಕಾಶ ದೊರೆಯದೇ ಹೋಗಿರುವುದೂ ಉಂಟು. ಎಷ್ಟೋ ಆಟಗಳು ಅಜ್ಞಾತವಾಗಿ ಹುಟ್ಟಿ ಬೆಳೆದು ಬಳಕೆಗೊಂಡು ಸವೆದು ಕಣ್ಮರೆಯಾಗಿರಬಹುದು. ಕರ್ನಾಟಕದ ಜನಪದ ಆಟಗಳ ವೈಶಿಷ್ಟ್ಯ ಮೆಚ್ಚುವಂಥದು. ಅತ್ಯಂತ ಕಡಿಮೆ ಖರ್ಚು, ಅಧಿಕ ಸಂತೋಷಲಾಭ ಇದು ಎಲ್ಲ ಜನಪದ ಆಟಗಳ ಸಾಮಾನ್ಯ ಗುಣ. ಶ್ರೀಮಂತ ಆಟಗಳಾದ ಚದುರಂಗ, ಪಗಡೆ ಮುಂತಾದ ಆಟಗಳಿಗೂ ಅಲ್ಪ ಬಂಡವಾಳ ಸಾಕು. ಜನಪದ ಆಟಗಳಲ್ಲಿ ಒಳಾಂಗಣ ಮತ್ತು ಹೊರಾಂಗಣ ಆಟಗಳು ಎಂದು ಎರಡು

ವಿಧ. ಒಳಾಂಗಣ ಆಟಗಳನ್ನು ಅವರವರ ವಯೋಗುಣ, ಬುದ್ಧಿಮಟ್ಟಕ್ಕೆ ತಕ್ಕಂತೆ ಸ್ತ್ರೀ ಪುರುಷರೀರ್ವರೂ ಆಡಬಹುದು. ಹೊರಾಂಗಣ ಆಟಗಳಲ್ಲಿ ಕುಂಟೇಬಿಲ್ಲೆ, ಕುಂಟಾಟ, ಕಣ್ಣು ಮುಚ್ಚಾಲೆ (ಅವತೇಗುಮ್ಮನಾಟ), ಉಪ್ಪುಪೆಕಡ್ಡಿ ಇಂಥ ಆಟಗಳನ್ನು ಹೆಣ್ಣು ಮತ್ತು ಗಂಡು ಮಕ್ಕಳಿಬ್ಬರೂ ಆಡಬಹುದು. ಗೋಲಿ, ಗಜ್ಜುಗ, ಚೆಣ್ಣೆಕೋಲು, ಚೆಂಡು, ಬುಗುರಿ, ಮರಕೋತಿ ಇಂಥ ಆಟಗಳನ್ನು ವಿಶೇಷವಾಗಿ ಗಂಡುಮಕ್ಕಳು ಆಡುತ್ತಾರೆ.



ಚಾಮುಂಡಿವಿಹಾರ ಕ್ರೀಡಾಂಗಣ, ಮೈಸೂರು

ಪಾಶ್ಚಾತ್ಯ ವಿದ್ಯಾಭ್ಯಾಸಕ್ರಮ ಕರ್ನಾಟಕದಲ್ಲಿ ಜಾರಿಗೆ ಬಂದಾಗಿನಿಂದ ಶಾಲಾ ಕಾಲೇಜುಗಳಲ್ಲಿ ಪಾಶ್ಚಾತ್ಯ ರೀತಿಯ ಕೆಲವು ಕ್ರೀಡೆಗಳನ್ನು ಪಠ್ಯೇತರ ಚಟುವಟಿಕೆಯಾಗಿ ಪರಿಗಣಿಸಲಾಯಿತು. ಈ ಕ್ರೀಡೆಗಳು ವ್ಯವಸ್ಥಿತವಾಗಿ ಕರ್ನಾಟಕದಲ್ಲಿ ಬಳಕೆಗೆ ಬಂದದ್ದು ಸುಮಾರು 50 ವರ್ಷಗಳ ಹಿಂದೆ. 1927ರಲ್ಲಿ ಆಗಿನ ಮೈಸೂರು ಸರ್ಕಾರ ಒಲಂಪಿಕ್ ಸಮಿತಿಯನ್ನು ನೇಮಕ ಮಾಡಿದ್ದು ಈ ದಿಶೆಯಲ್ಲಿ ಮೊದಲ ಪ್ರಯತ್ನ. ಶಿಕ್ಷಣ ಇಲಾಖೆಯ ನಿರ್ದೇಶಕರು ಅಧ್ಯಕ್ಷರಾಗಿದ್ದ ಈ ಸಮಿತಿ ಮೈಸೂರು ಒಲಂಪಿಕ್ಸ್ ಎಂಬ ಹೆಸರಿನಿಂದ ಹಲವು ಪಂದ್ಯಗಳನ್ನು ನಡೆಸಿತು. ಎ.ಸಿ.ದಾಸ್ ಇದರ ಕಾರ್ಯದರ್ಶಿಯಾಗಿದ್ದರು. ಈ ಸಮಿತಿ ಸು.1947ರವರೆಗೂ ಕಾರ್ಯಪ್ರವೃತ್ತವಾಗಿತ್ತು. ಇದು ನಡೆಸುತ್ತಿದ್ದ ಕ್ರೀಡಾಚಟುವಟಿಕೆಗಳಿಗೆ ಸರ್ಕಾರದ ಪ್ರೋತ್ಸಾಹವೂ ಕ್ರೀಡಾಂಗಣವೊಂದನ್ನು ನಿರ್ಮಿಸಲು ನೆರವೂ ದೊರೆಯಿತು. ಇದರಿಂದಾಗಿ 1946ರಲ್ಲಿ ಬೆಂಗಳೂರಿನಲ್ಲಿ ಕ್ರೀಡಾಂಗಣ ನಿರ್ಮಾಣವಾಯಿತು. ಆ ವರ್ಷ ನಡೆದ 'ಇಂಡಿಯನ್ ಒಲಂಪಿಕ್ ಚಾಂಪಿಯನ್‌ಷಿಪ್' ಪಂದ್ಯ ಈ ಹೊಸ ಕ್ರೀಡಾಂಗಣದಲ್ಲಿಯೇ ನಡೆಯಿತು. ಇಲ್ಲಿಂದ ಮುಂದೆ ಕರ್ನಾಟಕದ ಕ್ರೀಡೇತಿಹಾಸದಲ್ಲಿ ಹೊಸ ಘಟ್ಟ ಆರಂಭವಾಯಿತು. ಸಾರ್ವಜನಿಕರ, ಸಂಘಸಂಸ್ಥೆಗಳ ನೆರವಿನೊಡನೆ ಸರ್ಕಾರದ ಸಹಾಯವೂ ದೊರೆತದ್ದರಿಂದ ಕ್ರೀಡೆಗಳ ಬೆಳವಣಿಗೆಗೆ ಹೊಸ ಹುರುಪು ಬಂತು. ಕ್ರಿಕೆಟ್, ಫುಟ್‌ಬಾಲ್, ವಾಲಿಬಾಲ್ ಇತ್ಯಾದಿ ಕ್ರೀಡೆಗಳು ಹೆಚ್ಚು ಪ್ರಚಾರಗೊಂಡವು. ಪ್ರಸ್ತುತ ಲೇಖನದಲ್ಲಿ ಅವುಗಳ ಸಂಕ್ಷಿಪ್ತ ಇತಿಹಾಸವನ್ನು ಕೊಟ್ಟಿದೆ. (ಪಿ.ಎ.ಪಿ)

ಕರ್ನಾಟಕದಲ್ಲಿ ಕ್ರೀಡೆಗಳ ಪ್ರಾಮುಖ್ಯತೆ ಮತ್ತು ಅವುಗಳ ಪ್ರದರ್ಶನ ಹೊಸದೇನಲ್ಲ. ವಿಜಯನಗರ ಸಾಮ್ರಾಜ್ಯದ ನಾಡಹಬ್ಬ ಆಚರಣೆಯ ಸಂದರ್ಭದಲ್ಲಿ ನಡೆಯುತ್ತಿದ್ದ ಉತ್ಸವಗಳಲ್ಲಿ ಕ್ರೀಡಾಸ್ಪರ್ಧೆಗಳು ಬಹಳಷ್ಟು ಆಕರ್ಷಣೆಗೆ ಒಳಗಾಗಿದ್ದವು. ಕುದುರೆಸವಾರಿ, ಕತ್ತಿವರಸೆ ಹಾಗೂ ಕುಸ್ತಿ ಪ್ರಮುಖ ಆಕರ್ಷಣೀಯ ಸ್ಪರ್ಧೆಗಳಾಗಿದ್ದುವು. ಇವುಗಳಲ್ಲಿ ಕುಸ್ತಿ ತನ್ನ ಜಾಲವನ್ನು ಭಾರತದಾದ್ಯಂತ ಪ್ರಮುಖವಾಗಿ ಇಡೀ ಕರ್ನಾಟಕವನ್ನು ವಿಶೇಷವಾಗಿ ಆಕರ್ಷಿಸುವಲ್ಲಿ ಯಶಸ್ವಿಯಾಯಿತು. ವಿಜಯನಗರದ ಅನಂತರ ಮೈಸೂರು ಅರಸರ ಆಳಿಕೆಯಲ್ಲಿ ಕ್ರಿಡೆಗಳಿಗೆ ಮಹತ್ವದ ಪ್ರೋತ್ಸಾಹ ಲಭ್ಯವಾಗಿತ್ತು. ಜನಸಮೂಹದ ಕ್ರೀಡೆಯಾಗಿ ಕುಸ್ತಿ ಸ್ಪರ್ಧೆಗಳು ಹಬ್ಬ-ಹರಿದಿನವೆನ್ನದೆ ಜಾತ್ರೆಗಳಲ್ಲಿಯೂ ನಡೆಯಲಾರಂಭಿಸಿದವು ಹಾಗೂ ಕುಸ್ತಿಪಟುಗಳಿಗೆ ಬಹುಮಾನಗಳನ್ನು ಬಿರುದು-ಬಾವಲಿಗಳನ್ನಿತ್ತು ಗೌರವಿಸುವ ಸಂಪ್ರದಾಯವು ಹುಟ್ಟಿಕೊಂಡಿತು.

ಈ ಸಂದರ್ಭದಲ್ಲಿ ಕರ್ನಾಟಕದ ಹೆಮ್ಮೆಯ ಕುಸ್ತಿಪಟುಗಳಾಗಿ ಕೊಪ್ಪಲು ಬಾವಯ್ಯ, ಪೈಲ್ವಾನ್ ಪಾಪಯ್ಯ, ನಿಂಬೆಗೂಂಡಿ, ಬಸಪ್ಪ ಇವರು ಕರ್ನಾಟಕದ ಜನತೆಯ ಪ್ರೀತಿಗೆ ಪಾತ್ರರಾಗಿದ್ದರು (ನೋಡಿ: ಗರಡಿ).

**ದಸರ ಕ್ರೀಡೆಗಳು :** ಮೈಸೂರಿನ ಯದುವಂಶದ ಅರಸರು ವಿಜಯನಗರದ ಪತನದ ಅನಂತರ ಅಲ್ಲಿನ ಸಂಸ್ಕೃತಿಯ ಪ್ರತೀಕವಾದ ನಾಡಹಬ್ಬವನ್ನು ಮೈಸೂರಿನಲ್ಲಿ ಪುನಶ್ಚೇತನಗೊಳಿಸಿದರು. ನವರಾತ್ರಿಯ ಹಬ್ಬವೆಂತಲೂ ದಸರ ಉತ್ಸವವೆಂತಲೂ ಪ್ರಾರಂಭವಾಗುವ ಈ ಹಬ್ಬ ಪ್ರತಿದಿನವೂ ಸ್ಪರ್ಧೆಗಳೊಂದಿಗೆ ಮುಕ್ತಾಯವಾಗುತ್ತಿತ್ತು. ವಿಜಯದಶಮಿಯ ಸಂದರ್ಭದಲ್ಲಿ ಅರಸರ ದರ್ಬಾರಿನಲ್ಲಿ ವಿಶೇಷವಾಗಿ ಜಟ್ಟಿಕಾಳಗ ಹಾಗೂ ಕುಸ್ತಿಗಳನ್ನು ಏರ್ಪಡಿಸಲಾಗುತ್ತಿತ್ತು. ಇಷ್ಟಲ್ಲದೆ ಗೆದ್ದವರಿಗೆ ಬಹುಮಾನ ಬಿರುದುಗಳೊಂದಿಗೆ ಸನ್ಮಾನಿಸಲಾಗುತ್ತಿತ್ತು. ಈ ಸಂಬಂಧ ವಿಶೇಷವಾಗಿ ನಡೆಯುತ್ತಿದ್ದ ಕುಸ್ತಿಸ್ಪರ್ಧೆಗೆ ರಾಜ್ಯ ಹಾಗೂ ರಾಷ್ಟ್ರಗಳಿಂದ ಅತ್ಯುತ್ತಮ ಕುಸ್ತಿಪಟುಗಳನ್ನು ಆಹ್ವಾನಿಸಲಾಗುತ್ತಿತ್ತು. ಪ್ರತಿಷ್ಠೆಯ ಪ್ರತೀಕವಾದ ಈ ಸ್ಪರ್ಧೆಗೆ ವಿಶಿಷ್ಟವಾದ ತಯಾರಿಯೊಂದಿಗೆ ಕುಸ್ತಿಪಟುಗಳಿಗಾಗಿ ಆಯ್ಕೆ ನಡೆಯುತ್ತಿದ್ದು ಇದು ಅರಸರ ಸಮ್ಮುಖದಲ್ಲೇ ನಡೆಯುತ್ತಿದ್ದುದ್ದು ಒಂದು ವಿಶೇಷ. ಇಷ್ಟಲ್ಲದೆ ಬೇರೆ ಸೈನಿಕರ ಕವಾಯಿತು ಪ್ರದರ್ಶನಗಳು, ಕತ್ತಿವರಸೆ, ಕುದುರೆ ಸವಾರಿ, ಭಾರ ಎತ್ತುವ ಸ್ಪರ್ಧೆ ಮೊದಲಾದ ಹತ್ತು ಹಲವು ಕ್ರೀಡಾ ಸ್ಪರ್ಧೆಗಳು ಕುಸ್ತಿಯೊಂದಿಗೆ ಸೇರ್ಪಡೆಯಾಗಲಾರಂಭಿಸಿದವು.

ಮೈಸೂರಿನ ಪೈಲ್ವಾನರು ಕೇವಲ ಮೈಸೂರಿಗಷ್ಟೇ ತಮ್ಮ ಪ್ರತಿಷ್ಠೆ ಬೀರಿರಲಿಲ್ಲ. ಇವರು ಉತ್ತರ ಭಾರತದ ಪೈಲ್ವಾನರ ಗಮನವನ್ನು ಕೂಡ ತಮ್ಮ ಕಡೆ ಸೆಳೆದಿದ್ದರೆಂಬುದಕ್ಕೆ ಜಗಜಟ್ಟಿ ಗಾಮ, ಇಮಾಮ್ ಭಕ್ತಿ, ಹಮೀದ್ ಮತ್ತು ಗಾಮನ ಅಣ್ಣನ ಮಕ್ಕಳಾದ ಬೋಲು ಗೂಗಾ, ಅಸ್ಲಂ, ಅಕ್ರಂ ಮತ್ತು ಅಜಾ, ಗುಂಗಾ, ಗಾಮ, ಕಂದ್ರಕ್, ಫಜಲ್, ಅಂತೋಣಿ ಮೊದಲಾದವರು ಮೈಸೂರಿಗೆ ಆಗಾಗ್ಗೆ ಬಂದು ಇಲ್ಲಿನ ಜಟ್ಟಿಗಳೊಡನೆ ಬೆರೆತು ಈ ಕಲೆ ಉನ್ನತ ಮಟ್ಟ ಮುಟ್ಟಲು ಸಹಾಯಕರಾಗಿದ್ದುದೇ ಸಾಕ್ಷಿ. ಇಷ್ಟಲ್ಲದೆ ನಾಲ್ವಡಿ ಕೃಷ್ಣರಾಜ ಒಡೆಯರು 1911ರಲ್ಲಿ ದೆಹಲಿಯ ದರ್ಬಾರಿನಲ್ಲಿ ನಡೆದ ಐದನೆಯ ಜಾರ್ಜ್‌ನ ಕಿರೀಟಧಾರಣಾ ಸಮಾರಂಭಕ್ಕೆ ಮೈಸೂರಿನ ಹೆಸರಾಂತ ಪೈಲ್ವಾನರಾಗಿದ್ದ ಪಾಪಯ್ಯ, ದೊಡ್ಡತಿಮ್ಮಯ್ಯ, ಕೊಪ್ಪಲು ಬಸವಯ್ಯ, ಚೆನ್ನಯ್ಯ, ಕುರೇಶಿ ಮುಂತಾದವರನ್ನು ತಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗಿದ್ದುದು ಪೈಲ್ವಾನರಿಗೆ ಕೊಡುತ್ತಿದ್ದ ಗೌರವಕ್ಕೆ ಸಾಕ್ಷಿ. ಪೈಲ್ವಾನ ಪಾಪಯ್ಯನವರು. ದೆಹಲಿಯ ದರ್ಬಾರಿನಲ್ಲಿಯೂ ಬಹುಮಾನಗಳಿಸಿ ಕರ್ನಾಟಕದ ಕೀರ್ತಿ ಮುಕುಟವನ್ನು ಎತ್ತಿಹಿಡಿದಿದ್ದರು.

**ಕರ್ನಾಟಕದ ಏಕೀಕರಣದ ಅನಂತರ ದಸರ ಕ್ರೀಡಾಕೂಟ :** 1957ರಿಂದ ದಸರ ಕ್ರೀಡೋತ್ಸವ ವ್ಯವಸ್ಥಿತ ರೀತಿಯಲ್ಲಿ ನಡೆಯುತೊಡಗಿದೆ. ವಿಜಯನಗರ ಕಾಲದ ಮಹಾನವಮಿ ದಿಬ್ಬದೆದುರು ನಡೆಯುತ್ತಿದ್ದ ಕ್ರೀಡಾ ವೈಭವ ಈಗಿಲ್ಲವಾದರೂ ಅದೇ ಪರಂಪರೆ, ಸಂಪ್ರದಾಯಗಳು ಮುಂದುವರಿದುಕೊಂಡು ಬಂದುವು. ದಸರ ಕ್ರೀಡೆಗಳು ದೈಹಿಕ ಸಾಮರ್ಥ್ಯದ ಪ್ರದರ್ಶನ ಹಾಗೂ ಮನೋಲ್ಲಾಸಗಳನ್ನು ಜನರಿಗೆ ನೀಡುವಂತಹುದೇ ಆಗಿವೆ. ಕರ್ನಾಟಕದ ಏಕೀಕರಣದ ಬಳಿಕ ರಾಜ್ಯಮಟ್ಟದಲ್ಲಿ ದಸರ ಕ್ರೀಡೆಗಳು ಆರಂಭವಾದುವು. 1960ರಲ್ಲಿ ಸ್ಥಾಪಿತವಾದ ರಾಜ್ಯ ಕ್ರೀಡಾಮಂಡಳಿ 1961ರಿಂದ ದಸರ ಕ್ರೀಡೆಗಳನ್ನು ನಡೆಸುವ ಹೊಣೆ ಹೊತ್ತಿದೆ. ಇದು ಮಂಡಳಿಯ ಪ್ರಧಾನ ಕಾರ್ಯಕ್ರಮಗಳಲ್ಲಿ ಒಂದು. ಮೂರು ದಿನಗಳ ಕಾಲ ನಡೆಯುವ ಈ ಕ್ರೀಡೋತ್ಸವಕ್ಕೆ ರಾಜ್ಯದ ಐದು ವಲಯಗಳಾದ ಮೈಸೂರು, ಬೆಂಗಳೂರು ಗ್ರಾಮಾಂತರ, ಬೆಳಗಾಂವಿ, ಗುಲ್ಬರ್ಗ ಮತ್ತು ಬೆಂಗಳೂರಿನ ನಗರಗಳಿಂದ ಆಯ್ದ ಕ್ರೀಡಾಪಟುಗಳು ಭಾಗವಹಿಸುವರು. ಅಥ್ಲೆಟಿಕ್ಸ್‌ಗಳಲ್ಲದೆ ಫುಟ್‌ಬಾಲ್, ಬ್ಯಾಸ್ಕೆಟ್‌ಬಾಲ್, ಟೆನ್ನಿಸ್, ಹಾಕಿ, ಕಬಡ್ಡಿ, ಖೋ-ಖೋ, ಈಜು, ಭಾರವೆತ್ತುವ ಸ್ಪರ್ಧೆ, ಕುಸ್ತಿ, ವಾಲಿಬಾಲ್, ಬ್ಯಾಡ್ಮಿಂಟನ್ ಹಾಗೂ ಅಂಗಸೌಷ್ಠವದ ಸ್ಪರ್ಧೆಗಳೂ ಜರುಗುತ್ತವೆ.

**ಕ್ರೀಡಾ ಸಂಸ್ಥೆಗಳ ಸ್ಥಾಪನೆ ಹಾಗೂ ಅವು ನಡೆದುಬಂದ ಹಾದಿ : ಕರ್ನಾಟಕದಲ್ಲಿ ಆಟೋಟ (ಅಥ್ಲೆಟಿಕ್ಸ್) :** 1927ರಲ್ಲಿ ಅಂದಿನ ಮೈಸೂರು ಸರ್ಕಾರ ಶಿಕ್ಷಣದಲ್ಲಿ ಪಠ್ಯೇತರ ಚಟುವಟಿಕೆಗಳನ್ನು ರೂಢಿಸಲು ಸಾರ್ವಜನಿಕ ಶಿಕ್ಷಣ ನಿರ್ದೇಶಕರನ್ನು ಅಧ್ಯಕ್ಷರನ್ನಾಗಿ ಎ.ಸಿ.ದಾಸ್‌ರವರನ್ನು ಗೌರವ ಕಾರ್ಯದರ್ಶಿಯನ್ನಾಗಿ ನೇಮಿಸುವುದರ ಮೂಲಕ ಮೈಸೂರು ರಾಜ್ಯದಲ್ಲಿ ಆಟೋಟಗಳಿಗೆ (ಅಥ್ಲೆಟಿಕ್ಸ್) ಚಾಲನೆಯನ್ನು ನೀಡಿತು. ಈ ಸಮಿತಿ 1927 ರಿಂದ 1947ರ ತನಕ ವಾರ್ಷಿಕ ಕ್ರೀಡಾ ಚಾಂಪಿಯನ್‌ಷಿಪ್‌ಗಳನ್ನು ಮೈಸೂರು ಒಲಂಪಿಕ್ಸ್ ಎಂದು ಕರೆಯುವುದರ ಮೂಲಕ ನಡೆಸಲಾಗುತ್ತಿತ್ತು. ಎ.ಸಿ.ದಾಸ್‌ರವರು ಪಟ್ಟ ಪರಿಶ್ರಮಕ್ಕೆ ಪೂರಕವಾದಂತೆ ಹಲವು ಉತ್ಸಾಹೀ ಯುವಕರು ಕೈಜೋಡಿಸಿ ಕೆಲವಾರು ಸ್ಪರ್ಧೆಗಳನ್ನು ಈ ಸಂದರ್ಭದಲ್ಲಿ ನಡೆಸಿದರು. ಎ.ಸಿ.ದಾಸ್‌ರ ಪರಿಶ್ರಮ ಅಥ್ಲೆಟಿಕ್ಸ್‌ನ ಬೆಳವಣಿಗೆಗೆ ಒಂದು ಮೈಲಿಗಲ್ಲಾಗಿ ಪರಿಣಮಿಸಿತು. ಒಲಂಪಿಕ್ ಸಮಿತಿಯ ಕಾರ್ಯದರ್ಶಿಯಾಗಿ ಸತತವಾದ ಪ್ರಯತ್ನದೊಂದಿಗೆ ಬೆಂಗಳೂರಿನ ಕ್ರೀಡಾಂಗಣವನ್ನು ನಿರ್ಮಾಣ ಮಾಡುವಂತೆ ಅಂದಿನ ಮೈಸೂರು ಸರ್ಕಾರಕ್ಕೆ ಒತ್ತಡ ತಂದು ಯಶಸ್ವಿಯಾದದ್ದು ಇವರ ಕ್ರಿಯಾಶೀಲತೆಗೆ ಹಿಡಿದ ಕೈಗನ್ನಡಿ. ಇಡೀ ರಾಜ್ಯಕ್ಕೆ ಅಥ್ಲೆಟಿಕ್ಸ್ ಸಂಸ್ಕೃತಿಯನ್ನು ಪರಿಚಯಿಸುವ ಉದ್ದೇಶದಿಂದ 1946ರಲ್ಲಿ ಅಖಿಲ ಭಾರತ ಒಲಿಂಪಿಕ್ ಚಾಂಪಿಯನ್‌ಷಿಪ್‌ನ್ನು ಸಂಘಟಿಸುವುದರ ಮೂಲಕವೇ ಇಂದಿನ ಕಂಠೀರವ ಕ್ರೀಡಾಂಗಣವನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದರು. 1946ರಲ್ಲಿ ಪ್ರಜಾಪ್ರಭುತ್ವದ ತಳಹದಿಯಡಿ ಮೈಸೂರು ರಾಜ್ಯ ಅಮೆಚೂರ್ ಅಥ್ಲೆಟಿಕ್ಸ್ ಅಸೋಸಿಯೇಷನ್ ಪೊಲೀಸ್ ವರಿಷ್ಠಾಧಿಕಾರಿ ಚಾಂಡಿಯವರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ಇದು ಕರ್ನಾಟಕದ ಕ್ರೀಡಾಬೆಳವಣಿಗೆಯ ದೃಷ್ಟಿಯಲ್ಲಿ ಮಹತ್ತರವಾದ ಹೆಜ್ಜೆ. ಇವರ ಸಹಾಯಕ್ಕಾಗಿ ಬೆಂಗಳೂರು ಪುರಸಭೆ, ಮೈಸೂರು ರಾಜ್ಯ ಕ್ರೀಡಾಪರಿಷತ್ತು ಹಾಗೂ ರಾಜ್ಯದ ಎಲ್ಲ ಶಿಕ್ಷಣ ಸಂಸ್ಥೆಗಳು ಇದರೊಂದಿಗೆ ಸಂಯೋಜಿತಗೊಂಡು ಕಾರ್ಯನಿರ್ವಹಿಸಲು ಮುಂದಾದವು. ಮೈಸೂರು ರಾಜ್ಯ ಅಮೆಚೂರ್ ಅಥ್ಲೆಟಿಕ್ಸ್ ಸಂಸ್ಥೆ ತನ್ನ ಕಾರ್ಯವ್ಯಾಪ್ತಿಯನ್ನು ಎಲ್ಲ ತಾಲ್ಲೂಕು, ಜಿಲ್ಲೆ ಹಾಗೂ ಶಾಲಾ ಕಾಲೇಜುಗಳಿಗೆ ವಿಸ್ತರಿಸುವುದರ ಮೂಲಕವೇ ತನ್ನ ಮೂಲ ಉದ್ದೇಶವಾದ ಕ್ರೀಡಾ ಬೆಳವಣಿಗೆಗೆ ಮುಂದಾಯಿತು.

ಕರ್ನಾಟಕ ಒಲಂಪಿಕ್ಸ್ ಸಂಸ್ಥೆ ತನ್ನ ಕಾರ್ಯವೈಖರಿಯಲ್ಲಿ ಉತ್ತಮ ಸೇವೆ ಸಲ್ಲಿಸುತ್ತ ಬಂದಿದೆ. ಬಹಳಷ್ಟು ಪ್ರಮುಖವಾದ ಕ್ರೀಡಾಕೂಟಗಳನ್ನು ಸಂಘಟಿಸಿದ ಹೆಗ್ಗಳಿಕೆಯೊಂದಿಗೆ ಹಲವಾರು ಕ್ರೀಡಾಪಟುಗಳ ಬೆಳವಣಿಗೆಗೆ ಕಾರಣವಾಗಿದೆ. ಕರ್ನಾಟಕದ ಮಹಿಳೆಯರಾದ ಅಶ್ವಿನಿ ನಾಚಪ್ಪ (ನೋಡಿ), ವಂದನಾರಾವ್, ಏಂಜಲ್ ಮೇರಿ ಜೋಸೆಫ್ (ನೋಡಿ), ರೀತ್ ಅಬ್ರಹಂ, ಎಂ.ಕೆ.ಆಶಾ ಹಾಗೂ ಸುನಿಲ್ ಸುಂದರರಾಜ್ ಶೆಟ್ಟಿ, ಉದಯ್ ಕೆ.ಪ್ರಭು ಮತ್ತು ಈಶನ್ - ಈ ಮೊದಲಾದ ಪುರುಷ ಕ್ರೀಡಾಪಟುಗಳ ಅಭಿವೃದ್ಧಿಗೂ ನೆರವಾಗಿದೆ. (ಎಸ್.ಆರ್.ಯು.)

**ಅಥ್ಲೆಟಿಕ್ಸ್ :** 1952ರಲ್ಲಿ ಮೈಸೂರು ರಾಜ್ಯ ಅಮೆಚೂರ್ ಅಥ್ಲೆಟಿಕ್ಸ್ ಸಂಸ್ಥೆ ಸ್ಥಾಪಿತವಾಯಿತು. ಈ ಸಂಸ್ಥೆಯ ಸ್ಥಾಪನೆಗೆ ಕಾರಣರಾದವರೆಂದರೆ ಕೆ.ಎ.ನೆಟ್ಟಕಲ್ಲಪ್ಪ, ಎ.ಆರ್.ಚಿಕ್ಕಪಾಪಯ್ಯ, ಪಿ.ಐ.ಜೋಸೆಫ್ ಮತ್ತು ಕೆ.ಗುಂಡುರಾವ್. ಸಿ.ಚಾಂಡಿ ಎಂಬುವರು ಈ ಸಂಸ್ಥೆಯ ಮೊದಲ ಅಧ್ಯಕ್ಷರಾದರು. ಈ ಸಂಸ್ಥೆಯ ಉತ್ತೇಜನದಿಂದ ಕೆನೆತ್ ಪೊವೆಲ್, ಡೆರಿಕ್ ಬೂಸ್, ಹೆನ್ರಿ ರೆಬೆಲೋ, ಎ.ಪಿ.ರಾಮಸ್ವಾಮಿ, ಸಿ.ಎಂ.ಮುತ್ತಯ್ಯ, ಬಿರಾದಾರ್, ಉದಯ ಪ್ರಭು ಮೊದಲಾದ ಅನೇಕ ಉತ್ತಮ ಆಟಗಾರರು ಕರ್ನಾಟಕದಲ್ಲಿ ತರಪೇತು ಹೊಂದಿದ್ದರು. 1964ರಲ್ಲಿ ಒಲಂಪಿಕ್ಸ್‌ನಲ್ಲಿ ಕರ್ನಾಟಕದ ಪರವಾಗಿ ಇಬ್ಬರು ಅಥ್ಲೆಟಿಕ್ಸ್ ವಿಭಾಗದಲ್ಲಿ ಭಾರತವನ್ನು ಪ್ರತಿನಿಧಿಸಿದ್ದರು. ಇವರಲ್ಲಿ ಒಬ್ಬರು ಕೆನೆತ್ ಪೊವೆಲ್. ಇವರಿಗೆ ಅರ್ಜುನಪ್ರಶಸ್ತಿ ದೊರೆತಿದೆ. ಇವರು ಒಲಂಪಿಕ್ಸ್, ಕಾಮನ್‌ವೆಲ್ತ್ ಮತ್ತು ಇತರ ಕ್ರೀಡೆಗಳಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸಿದ್ದಾರೆ. ಮಹಿಳೆಯರಲ್ಲಿ ನಿರ್ಮಲಾ ಉತ್ತಯ್ಯ, ಡಯಾನಾ ಸೈಮನ್, ಐರೀನ್ ಸಲ್ಡಾನಾ, ಮಾರಿ ವರ್ಗಿಸ್, ಜಲಜನಾಥನ್ ಮತ್ತು ಏಂಜಲ್ ಮೇರಿ ಭಾರತದ ಪ್ರತಿನಿಧಿಗಳಾಗಿ ಸ್ಪರ್ಧೆಗಳಲ್ಲಿ ಪಾಲುಗೊಂಡಿದ್ದಾರೆ.

**ಬಾಲ್‌ಬ್ಯಾಡ್ಮಿಂಟನ್ :** ತಂಜಾವೂರಿನಲ್ಲಿ ಹುಟ್ಟಿದ್ದೆಂದು ಪ್ರತೀತಿ ಇರುವ ಈ ಆಟ ಕರ್ನಾಟಕದಲ್ಲಿ ಜನಪ್ರಿಯವಾಗಿದೆ. ಮೈಸೂರು ರಾಜ್ಯ ಬಾಲ್‌ಬ್ಯಾಡ್ಮಿಂಟನ್ ಸಂಸ್ಥೆ ಸ್ಥಾಪಿತವಾದದ್ದು 1955ರಲ್ಲಿ. ಈ ಸಂಸ್ಥೆ ಬಾಲ್‌ಬ್ಯಾಡ್ಮಿಂಟನ್ ಫೆಡರೇಷನ್ ಆಫ್ ಇಂಡಿಯಾದ ಸದಸ್ಯತ್ವವನ್ನು ಪಡೆದಿದೆ. ಮುಖ್ಯವಾಗಿ ರಾಜ್ಯಮಟ್ಟದ, ಕೆಲವು ಬಾರಿ ರಾಷ್ಟ್ರಮಟ್ಟದ ಪಂದ್ಯಗಳನ್ನು ನಡೆಸುವ ಈ ಸಂಸ್ಥೆ ಒಂದು ವರ್ಷದಲ್ಲಿ ಪುರುಷರ, ಮಹಿಳೆಯರ ಮತ್ತು ಬಾಲಕ, ಬಾಲಕಿಯರ ವಿಭಾಗಗಳಿಂದ ಸುಮಾರು 300 ಪಂದ್ಯಗಳನ್ನು ವ್ಯವಸ್ಥೆಗೊಳಿಸುತ್ತದೆ. ಸುಮಾರು 100ಕ್ಕೂ ಹೆಚ್ಚು ಕ್ಲಬ್‌ಗಳು ಈ ಸಂಸ್ಥೆಯ ಸದಸ್ಯತ್ವ ಪಡೆದಿವೆ. ಇದಲ್ಲದೆ ರಾಜ್ಯದಲ್ಲಿರುವ ಬೇರೆಬೇರೆ ಕ್ಲಬ್ಬಿನವರು ಮತ್ತು ಶಾಲಾ ಕಾಲೇಜುಗಳೂ ಕೂಡ ರಾಜ್ಯಮಟ್ಟದ ಪಂದ್ಯಗಳನ್ನು ಏರ್ಪಡಿಸುವುದುಂಟು. ರಾಜ್ಯ ಮತ್ತು ರಾಷ್ಟ್ರಮಟ್ಟದ ಅನೇಕ ಪಂದ್ಯಗಳಲ್ಲಿ ರಾಜ್ಯದ ಬ್ಯಾಡ್ಮಿಂಟನ್ ಆಟಗಾರರು ಭಾಗವಹಿಸಿದ್ದಾರೆ. ಪ್ರಸಿದ್ಧ ಬ್ಯಾಡ್ಮಿಂಟನ್ ಆಟಗಾರ್ತಿಯಾದ ಜಯಮ್ಮ ಅವರಿಗೆ ಅರ್ಜುನಪ್ರಶಸ್ತಿ ಬಂದಿದೆ. ಪ್ರಕಾಶ್ ಪಡುಕೋಣೆ ರಾಷ್ಟ್ರೀಯ ಚಾಂಪಿಯನ್ ಆಗಿದ್ದಾರೆ.

**ಬ್ಯಾಸ್ಕೆಟ್ ಬಾಲ್ :** 1891ರಲ್ಲಿ ಅಮೆರಿಕದಲ್ಲಿ ಆರಂಭವಾದ ಈ ಆಟ 1920ರಲ್ಲಿ ಭಾರತದಲ್ಲೂ ಮೊದಲಾಯಿತು. ಕ್ಯಾಪ್ಟನ್ ವಿಜಯಸಾರಥಿ ಮತ್ತು ಎ.ಸಿ.ದಾಸ್ ಇವರ ಪ್ರಯತ್ನದಿಂದ ಈ ಆಟ ಕರ್ನಾಟಕದಲ್ಲಿ ಪ್ರಚಾರಕ್ಕೆ ಬಂತು. 1941ರಲ್ಲಿ ಮೈಸೂರು ರಾಜ್ಯ ಬ್ಯಾಸ್ಕೆಟ್‌ಬಾಲ್ ಸಂಸ್ಥೆ ಸ್ಥಾಪಿತವಾಯಿತು. 1946ರಲ್ಲಿ ಮೈಸೂರು ಪಂಗಡ ರಾಷ್ಟ್ರೀಯಪ್ರಶಸ್ತಿ ಗೆದ್ದಿತ್ತು. 1951ರಲ್ಲಿ ನಡೆದ ಏಷ್ಯನ್ ಕ್ರೀಡೆಗಳಲ್ಲಿ ಕರ್ನಾಟಕದಿಂದ ಲಕ್ಷ್ಮೀನಾರಾಯಣ, ಪಾಪಯ್ಯ ಮತ್ತು ಅಪ್ಪಯ್ಯ ಆಡಿದರು. ಕರ್ನಾಟಕದಲ್ಲಿ ಮಹಿಳಾ ಆಟಗಾರರ ಮಟ್ಟ ಕೂಡ ಉತ್ತಮವಾಗಿದೆ. 1960, 1963, 1964ರಲ್ಲಿ ಮಹಿಳಾ ಆಟಗಾರರೂ ರಾಷ್ಟ್ರೀಯ ಪ್ರಶಸ್ತಿ ಗೆದ್ದದ್ದು ಇಲ್ಲಿ ಉಲ್ಲೇಖನಾರ್ಹ. 1960ರಲ್ಲಿ ಬಾಲಕರ ತಂಡವೂ ರಾಷ್ಟ್ರೀಯ ಪ್ರಶಸ್ತಿಯನ್ನು ಪಡೆದಿತ್ತು.

ರಾಜ್ಯದಲ್ಲಿ ಮಿನಿ ಬ್ಯಾಸ್ಕೆಟ್‌ಬಾಲ್ ಪಂದ್ಯ ಆರಂಭವಾದದ್ದು ಇತ್ತೀಚೆಗೆ. 12 ವರ್ಷಕ್ಕಿಂತ ಕಡಿಮೆ ವಯಸ್ಸಿನ ಬಾಲಕರು ಈ ಆಟವನ್ನು ಆಡಬಹುದಾಗಿದೆ. 1970ರಲ್ಲಿ ಎಸ್.ಎ.ರಂಗದೇವ ಮತ್ತು ಕೆ.ರಾಜಗೋಪಾಲ್ ಬಾಂಕಾಕ್ ಏಷ್ಯನ್ ಕ್ರೀಡೆಗಳಲ್ಲಿ ಕರ್ನಾಟಕದ ಪರವಾಗಿ ಭಾರತವನ್ನು ಪ್ರತಿನಿಧಿಸಿದ್ದರು. ಅದೇವರ್ಷ ಎ.ಸಿ.ಪುಷ್ಪ ಕೌಲಾಲಂಪುರ್‌ನಲ್ಲಿ ನಡೆದ ಏಷ್ಯನ್ ಮಹಿಳೆಯರ ಬ್ಯಾಸ್ಕೆಟ್‌ಬಾಲ್ ಚಾಂಪಿಯನ್‌ಷಿಪ್ ಪಂದ್ಯದಲ್ಲಿ ಭಾಗವಹಿಸಿದ್ದರು. ಅದೇವರ್ಷ ಏಷ್ಯನ್ ಯೂಥ್ ಬ್ಯಾಸ್ಕೆಟ್‌ಬಾಲ್ ಚಾಂಪಿಯನ್‌ಷಿಪ್ ಪಂದ್ಯದಲ್ಲಿ ಬಾಲಕರ ಪರವಾಗಿ ಕರ್ನಾಟಕದಿಂದ ಎ.ಅನಿಲ್‌ಕುಮಾರ್ ಆಡಿದರು. ಬಿ.ಮುನಿಯಪ್ಪ ಭಾರತದ ಪ್ರತಿನಿಧಿಯಾಗಿ ಎರಡನೆಯ ಏಷ್ಯನ್ ಗೇಮ್ಸ್‌ನಲ್ಲಿ ಆಡಿದ್ದರು. (ಸಿ.ಎ.ಪಿ.)

**ಫುಟ್‌ಬಾಲ್ :** ಭಾರತದಲ್ಲಿ ಈ ಆಟ 18ನೆಯ ಶತಮಾನದಲ್ಲಿ ಆರಂಭವಾಯಿತು. ಅಖಿಲ ಭಾರತ ಫುಟ್‌ಬಾಲ್ ಸಂಸ್ಥೆ ಸ್ಥಾಪಿತವಾದ ವರ್ಷವೇ (1937) ಕರ್ನಾಟಕದಲ್ಲೂ ಮೈಸೂರು ರಾಜ್ಯ ಫುಟ್‌ಬಾಲ್ ಸಂಸ್ಥೆ ಸ್ಥಾಪಿತವಾಯಿತು. ಇದಕ್ಕೆ ಮೂಲ ಕಾರಣರಾದವರು ಅಂದಿನ ದೈಹಿಕಶಿಕ್ಷಣ ಅಧಿಕಾರಿಗಳಾಗಿದ್ದ ವೆಂಕಟರಮಣ ಎಂಬುವವರು. 1940ರ ಸುಮಾರಿನಲ್ಲಿ ಕರ್ನಾಟಕದಲ್ಲಿ ಬೆಂಗಳೂರು ಬ್ಲೂಸ್, ಬೆಂಗಳೂರು ಸ್ಪೋರ್ಟಿಂಗ್, ಪೊಲೀಸ್ (ಬೆಂಗಳೂರು ಮತ್ತು ಮೈಸೂರು), ಯುನೈಟೆಡ್ ಫ್ರೆಂಡ್ಸ್ ಮತ್ತು ಇಟಾಲಿಯನ್ ಪ್ರಿಸಿಡನ್ಸ್ ಆಫ್ ವಾರ್ ಮೊದಲಾದ ತಂಡಗಳು ತುಂಬ ಪ್ರಸಿದ್ಧವಾಗಿದ್ದುವು.

ಬ್ರಿಟಿಷ್ ಆಳ್ವಿಕೆಯಲ್ಲಿ ಸೈನ್ಯದ ತುಕಡಿಗಳಲ್ಲಿ ಮನರಂಜನೆ ಹಾಗೂ ದೈಹಿಕ ಸಾಮರ್ಥ್ಯಕ್ಕಾಗಿ ಇದ್ದ ಈ ಕ್ರೀಡೆ, ಮೈಸೂರು ಮತ್ತು ಬೆಂಗಳೂರಿನಲ್ಲಿ ಮೊಟ್ಟ ಮೊದಲು ಪ್ರಾರಂಭವಾಯಿತು. ಬೆಂಗಳೂರು ಫುಟ್‌ಬಾಲ್ ಕಮಿಟಿ ಮತ್ತು ಮೈಸೂರು ಫುಟ್‌ಬಾಲ್ ಕಮಿಟಿ ಎಂಬ ನಾಮಾಂಕಿತಗೊಂಡ ಈ ಎರಡು ಸಮಿತಿಗಳು ಇಡೀ ಫುಟ್‌ಬಾಲ್ ಆಟದ ಹಿಡಿತವನ್ನು ಹೊಂದಿದ್ದುವು. ಕರ್ನಾಟಕದಲ್ಲಿ ಫುಟ್‌ಬಾಲ್‌ಗೆ ಮತ್ತೊಂದು ಸ್ಥಾನವೆಂದರೆ ಕೋಲಾರದ ಚಿನ್ನದ ಗಣಿ. ಇಲ್ಲಿ ಬಹಳಷ್ಟು

ಮೇಲಧಿಕಾರಿಗಳು ಇಂಗ್ಲಿಷ್‌ನವರಿದ್ದುದರಿಂದ ಇಲ್ಲಿಯೂ ಈ ಆಟ ತನ್ನ ಪ್ರಾಬಲ್ಯ ಹೊಂದಿತ್ತು. ಮೈಸೂರಿನಲ್ಲಿ ಈ ಆಟಕ್ಕೆ ರಾಜಾಶ್ರಯ ದೊರೆಯುತ್ತಿತ್ತು. ಆ ಸಂದರ್ಭದಲ್ಲಿ ಹಲವು ಫುಟ್‌ಬಾಲ್ ಕ್ಲಬ್‌ಗಳು ಹುಟ್ಟಿಕೊಂಡವು.

ಇಂದು ಈ ಕ್ಲಬ್‌ಗಳು ತನ್ನ ಗತಕಾಲದ ವೈಭವವನ್ನು ಸಾರಿ ಇತಿಹಾಸದ ಪುಟಗಳನ್ನು ಸೇರಿವೆ. ಹತ್ತಾರು ತಂಡಗಳನ್ನು ಹೊಂದಿದ ಮೈಸೂರು ಸಂಸ್ಥಾನ ತನ್ನದೇ ಆದ ಕೆಲವು ಚಾಂಪಿಯನ್‌ಶಿಪ್‌ಗಳನ್ನು ನಡೆಸುವುದರ ಮೂಲಕ ಆಟಗಾರರ ಮತ್ತು ಪ್ರೇಕ್ಷಕರ ಮೆಚ್ಚುಗೆಗೆ ಪಾತ್ರವಾಗಿತ್ತು. ಫುಟ್‌ಬಾಲ್ ಆಟದ ಈ ಬೆಳೆವಣಿಗೆ ಬೆಂಗಳೂರಿನ ಕೆಲವು ಆಟಗಾರರಿಗೆ ತಮ್ಮದೇ ಆದ ಫುಟ್‌ಬಾಲ್ ಸಂಸ್ಥೆ ಪ್ರಾರಂಭಿಸಬೇಕೆಂಬ ಹಂಬಲ ಕಾಡತೊಡಗಿತು. ಇದಕ್ಕಾಗಿ ಎಲ್ಲ ತಂಡದಿಂದಲೂ ಒಬ್ಬ ಸದಸ್ಯನನ್ನೊಳಗೊಂಡಂತೆ ಕ್ಲಬ್ ಪ್ರಾರಂಭಿಸುವ ಸದುದ್ದೇಶದಿಂದ, ಮದರಾಸಿನ ಜಿಲ್ಲಾ ಕ್ರೀಡಾಸಮಿತಿಯ ಕಾರ್ಯದರ್ಶಿಯರನ್ನು ಸಂಪರ್ಕಿಸಿ ಅವರೊಂದಿಗೆ ಚರ್ಚಿಸಿದ ಅನಂತರ ಈ ಸಂಬಂಧವಾಗಿ ನಿಯಮಾವಳಿಗಳನ್ನು ರೂಪಿಸಲಾಯಿತು. (1933). 1971ರ ವೇಳೆಗೆ ಕರ್ನಾಟಕದಲ್ಲಿ 34 ಫುಟ್‌ಬಾಲ್ ಸಂಸ್ಥೆಗಳಿದ್ದುವು.

ಕರ್ನಾಟಕ ಭಾರತದ ಫುಟ್‌ಬಾಲ್‌ನ ಇತಿಹಾಸದಲ್ಲಿ ಮಹತ್ವ ಸ್ಥಾನವನ್ನು ಅಲಂಕರಿಸಿದ್ದ ದಿನಗಳವು: ಮೈಸೂರಿನ ಹಾಗೂ ಬೆಂಗಳೂರಿನ ತಂಡಗಳಿಂದ ಪ್ರತಿ ವರ್ಷವೂ 2-3 ಆಟಗಾರರು ಪ್ರತಿಷ್ಠಿತ ಬೆಂಗಾಲ್ ತಂಡಗಳಿಗೆ ಆಡುತ್ತಿದ್ದ ಈ ರೀತಿಯ ವಲಸೆಯನ್ನು 1934ರಲ್ಲೇ ನಾವು ಗುರುತಿಸಬಹುದಾಗಿದೆ. ಇಂದಿಗೂ ಈ ಕ್ರಮ ಮುಂದುವರೆಯುತ್ತಿದೆ. ಕರ್ನಾಟಕದ ಆಟಗಾರರಿಲ್ಲದೆ ಭಾರತ ತಂಡವಿಲ್ಲ ಎಂಬ ನಾಣ್ಣುಡಿಗೆ ಬದ್ಧವಾಗಿದ್ದ ಮೈಸೂರು ರಾಜ್ಯದ ಫುಟ್‌ಬಾಲ್ ಆಟಗಾರರು, ಅಂತಾರಾಷ್ಟ್ರೀಯ ಹಾಗೂ ಒಲಂಪಿಕ್‌ಗಳಲ್ಲಿ ತಮ್ಮ ಛಾಪು ಒತ್ತಿದ ವೀರರೂ ಹೌದು. ಇದಕ್ಕೆ ಪೂರಕವಾಗಿ ರಾಷ್ಟ್ರೀಯ ಫುಟ್‌ಬಾಲ್ ಛಾಂಪಿಯನ್‌ಷಿಪ್‌ಗಳಲ್ಲಿ ಮೈಸೂರು ರಾಜ್ಯ ತಂಡ 1946, 1952, 1967 ಮತ್ತು 1969ರಲ್ಲಿ ತನ್ನ ಆಧಿಪತ್ಯವನ್ನು ಪಡೆದು ಇಡೀ ಭಾರತವೇ ನಿಬ್ಬೆರಗಾಗುವಂತೆ ಮಾಡಿತು. ಇಷ್ಟಲ್ಲದೆ ಮೈಸೂರು ರಾಜ್ಯ ರಾಷ್ಟ್ರೀಯ ಪಂದ್ಯಾಟವನ್ನು 1941ರ ವೇಳೆಗೆ, ನಾಲ್ಕು ಬಾರಿ ಪ್ರಾಯೋಜಿಸಿ ಯಶಸ್ಸು ಪಡೆದಿತ್ತು.

ಲಂಡನ್ನಿನಲ್ಲಿ ಜರುಗಿದ (1948) ಒಲಂಪಿಕ್ಸ್‌ನಲ್ಲಿ ಮೊದಲ ಸಲ ಭಾರತ ಭಾಗವಹಿಸಿತು. ಇದುವರೆಗೆ ಒಲಂಪಿಕ್ಸ್‌ನಲ್ಲಿ ಭಾರತದ ಪರವಾಗಿ ಕರ್ನಾಟಕವನ್ನು ಪ್ರತಿನಿಧಿಸಿದ ಕೆಲವರ ಹೆಸರು ಹೀಗಿದೆ: ವರದರಾಜ್ (1948, 1952), ಎಸ್.ಎ.ಬಶೀರ್ (1948), ವಜ್ರವೇಲು (1948), ಎ.ಖಾನ್ (1948), ಜೆ.ಅಂತೋಣಿ (1952), ಎಂ.ಎ.ಸತ್ತಾರ್ (1952), ಜಿ.ಷಣ್ಮುಗಂ (1952), ವೆಂಕಟೇಶ್ (1952), ಕೆಂಪಯ್ಯ (1952), ಕಣ್ಣನ್ (1946, 1952, 1967) -ಈ ವರ್ಷಗಳಲ್ಲಿ ಕರ್ನಾಟಕ ತಂಡ ರಾಷ್ಟ್ರೀಯ ಚಾಂಪಿಯನ್‌ಷಿಪ್ ಪ್ರಶಸ್ತಿ ಪಡೆದಿವೆ. ಇತ್ತೀಚೆಗೆ ಬೆಂಗಳೂರಿನಲ್ಲಿ ಅಂತಾರಾಷ್ಟ್ರೀಯ ಮಟ್ಟದ ಫುಟ್‌ಬಾಲ್ ಕ್ರೀಡಾಂಗಣವೊಂದನ್ನು ನಿರ್ಮಿಸಲಾಗುತ್ತಿದೆ. ಮಹಿಳೆಯರು ಕೂಡ ಈ ಆಟದಲ್ಲಿ ಆಸಕ್ತಿಯುಳ್ಳವರಾಗಿದ್ದಾರೆ. ಭಾರತದ ಅಗ್ರಮಾನ್ಯ ಆಟಗಾರರ ಪಟ್ಟಿಯಲ್ಲಿ ಹಾಗೂ ಭಾರತದ ಫುಟ್‌ಬಾಲ್ ಇತಿಹಾಸದಲ್ಲಿ ಬೆಂಗಳೂರಿನ ಬ್ಲೂಸ್ ಹಾಗೂ ಮೈಸೂರಿನ ಪ್ರೊಶಿಯಲ್ಸ್ ಸೋಶಿಯಲ್ಸ್ ಹೆಸರನ್ನು ಎಂದೆಂದಿಗೂ ಉಳಿಯುವಂತೆ ಮಾಡಿದ ಲಕ್ಷ್ಮೀನಾರಾಯಣ, ರಮಣ, ಧನರಾಜ್, ಅಹಮದ್, ಖಾನ್, ರಾಮನ್, ಟಿ.ಶಣ್ಮುಗನ್, ಅರಮುನಿಗೇಯನ್, ಅಲಪಾತ್ ಅಹಮದ್, ಕೃಷ್ಣೋಜಿರಾವ್ -ಇವರು ಇತರ ಮುಖ್ಯ ಆಟಗಾರರು.

ಜನವರಿ 1969ರಲ್ಲಿ ಕರ್ನಾಟಕ ರಾಜ್ಯ ಫುಟ್‌ಬಾಲ್ ಸಂಸ್ಥೆ ಮಹತ್ತರವಾದ ಸ್ಥಾನವನ್ನು ಗಳಿಸಿದ ಸಂದರ್ಭ. ಬ್ಯಾಂಕಾಕ್‌ನಲ್ಲಿ ನಡೆದ ಏಷ್ಯನ್ ಚಾಂಪಿಯನ್‌ರ ಜೊತೆಯಲ್ಲಿ ಆಟವಾಡಲು ದೊರೆತ ಅವಕಾಶ. ಭಾರತದ ಚಾಂಪಿಯನ್‌ರಾದ ಕರ್ನಾಟಕ ರಾಜ್ಯ ತಂಡಕ್ಕೆ ದೊರೆತ ಆಮಂತ್ರಣವೂ ಹೌದು. ಇದಾದ ಬಳಿಕ ಅಂದಿನ ಕರ್ನಾಟಕದ ಮುಖ್ಯ ಮಂತ್ರಿಗಳಾದ ಡಿ.ದೇವರಾಜ ಅರಸುರವರು ಸ್ವತಃ ಆಸಕ್ತಿ ವಹಿಸಿ ಫುಟ್‌ಬಾಲ್ ಕ್ರೀಡಾಂಗಣ ರೂಪು ಪಡೆಯಲು ಕಾರಣರಾದರು. 1975ರಲ್ಲಿ ಫುಟ್‌ಬಾಲ್ ಕ್ರೀಡಾಂಗಣವನ್ನು ನಾಡಿನ ಜನತೆಗೆ ಅರ್ಪಿಸಲಾಯಿತು. ಈ ಕಾರ್ಯದಲ್ಲಿ ಫುಟ್‌ಬಾಲ್ ಸಂಸ್ಥೆಯ ಪ್ರಧಾನ ಕಾರ್ಯದರ್ಶಿಯವರಾಗಿದ್ದ ಎ.ಟಿ.ವಿಜಯರಂಗಮ್ ಅವರ ಸೇವೆಯೂ ಅಪಾರವಾದದ್ದು.

ಕರ್ನಾಟಕದ ಫುಟ್‌ಬಾಲ್ ಆಟ ಜನಪ್ರಿಯತೆಯನ್ನು ಗಳಿಸಿಕೊಂಡಿತು. ಎಷ್ಟು ಬೆಳೆಯಿತೆಂದರೆ ಕಿಟ್ಟಿಯಂಥ' ಮಹಾನ್ ಫುಟ್‌ಬಾಲ್ ಆಟಗಾರರು ತಯಾರಾದರು. ಕಿಟ್ಟಿಯವರ ಆಟವನ್ನು ಕಣ್ಣಾರೆ ಕಂಡವರು ಅವರ ಆಟ ಈಗಿನ ಬೈಚುಂಗ್‌ಬುಟಿಯ ಅವರನ್ನು ಮೀರಿಸುವಂತಿತ್ತು ಎನ್ನುತ್ತಾರೆ. ವರದರಾಜು ಅವರ ಗೋಲ್ ಕೀಪಿಂಗ್ ವೈಖರಿ, ಬಶೀರ್ ಅವರ ಆಟ, ವೇಲುವಿನ ಬರ್ಜರಿ ಸೆಣಸಾಟ ಕರ್ನಾಟಕದ ಜನಮನದಲ್ಲಿ ಇನ್ನೂ ಉಳಿದಿದೆ.

**ಹಾಕಿ :** 1930ರಲ್ಲಿ ಬೆಂಗಳೂರಿನಲ್ಲಿ ಹಾಕಿ ಸಂಸ್ಥೆ ಸ್ಥಾಪನೆಯಾದಂದಿನಿಂದ ಕರ್ನಾಟಕದಲ್ಲಿ ಹಾಕಿ ಆಟ ಪ್ರಾರಂಭವಾಯಿತು. ಹಾಕಿ ಇತಿಹಾಸದಲ್ಲಿ ಕೊಡಗು ಜಿಲ್ಲೆಗೆ ಅಗ್ರಸ್ಥಾನ ದೊರೆತಿದೆ. ಪೀಟರ್, ಉನ್ನಿಕೃಷ್ಣನ್, ಗೋವಿಂದ, ಗಣೇಶ್, ಕಾಳಯ್ಯ ಇವರು ಭಾರತದ ಪರವಾಗಿ ಒಲಂಪಿಕ್ಸ್‌ಗೆ ಆಡಿದ ಆಟಗಾರರು. ಈ ಆಟ ಮಹಿಳೆಯರಲ್ಲೂ ಜನಪ್ರಿಯವಾಗುತ್ತಿದೆ. ಕರ್ನಾಟಕ ಮಹಿಳಾ ಹಾಕಿ ತಂಡ ಅನೇಕ ಬಾರಿ ರಾಷ್ಟ್ರೀಯ ಹಾಕಿ ಪ್ರಶಸ್ತಿ ಗಳಿಸಿದೆ. ಕರ್ನಾಟಕದ ಉತ್ತಮ ಹಾಕಿ ಆಟಗಾರ್ತಿ ಎಲ್ವಿರಾ ಬ್ರಿಟೊ ಅವರಿಗೆ ಅರ್ಜುನ ಪ್ರಶಸ್ತಿ ದೊರೆತಿದೆ.

ಬ್ರಿಟಿಷರ ಆಗಮನದ ಅನಂತರ ಭಾರತದಲ್ಲಿ ಹಾಕಿ ಆಟಕ್ಕೆ ಪ್ರಾಮುಖ್ಯ ಲಭ್ಯವಾಯಿತು. ಕರ್ನಾಟಕದಲ್ಲಿ ಅದರಲ್ಲೂ ಅಂದಿನ ಮೈಸೂರು ರಾಜ್ಯದ ಪ್ರಮುಖ ನಗರಗಳಾದ ಬೆಂಗಳೂರು ಮತ್ತು ಮೈಸೂರು ಸೇನಾ ತುಕಡಿಗಳ ಕೇಂದ್ರ ಸ್ಥಾನವಾದ ಕಾರಣ ಆ ಎರಡೂ ಕೇಂದ್ರಗಳಲ್ಲಿ ಹಾಕಿ ಆಟ ಪ್ರಬಲವಾಗಿ ಬೆಳೆಯಿತು. ಅದರಲ್ಲೂ ಕೇಂದ್ರ ಸೇನಾ ತುಕಡಿಗಳಿದ್ದ ಬೆಂಗಳೂರು ಆ ಆಟದ ಬೆಳೆವಣಿಗೆಗೆ ಪರೋಕ್ಷವಾಗಿ ಇಂಬು ಕೊಟ್ಟಿತು.

ಬೆಂಗಳೂರು ಹಾಕಿ ಸಂಸ್ಥೆ ಪ್ರಾರಂಭವಾದ ಅನಂತರ (1920) ಇಲ್ಲಿನ ಸೇನಾ ಸಿಪಾಯಿಗಳೊಂದಿಗೆ ಈ ಆಟದ ಪಂದ್ಯಗಳು ಏರ್ಪಾಡಾಗುತ್ತಿದ್ದುವು. 10 ವರ್ಷಗಳ ಅನಂತರ ಸಂಸ್ಥೆ ತನ್ನ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿ, ಮೈಸೂರು ರಾಜ್ಯ ಹಾಕಿ ಸಂಸ್ಥೆ ಎಂದು ನಾಮಕರಣಗೊಂಡಿತು. ಈ ಸಂದರ್ಭದಲ್ಲಿ ಭಾರತದಲ್ಲಿನ ಇತರೆ ಹಾಕಿ ಸಂಸ್ಥೆಗಳ ಕಾರ್ಯವೈಖರಿಯನ್ನು ಅರಿತು ಅದರಲ್ಲೂ ಮುಖ್ಯವಾಗಿ ಪಂಜಾಬ್ ರಾಜ್ಯ ಹಾಕಿ ಸಂಸ್ಥೆಯ ನಿಯಮಾವಳಿಗಳನ್ನು ಅಧ್ಯಯನ ಮಾಡಿದ ಬಳಿಕ ಇಲ್ಲಿ ಜಿಲ್ಲಾ ಹಾಕಿ ಸಂಸ್ಥೆಯನ್ನು ಪ್ರಾರಂಭಿಸಲಾಯಿತು.

ಕರ್ನಾಟಕದ ಮಡಿಕೇರಿ ಹಾಕಿ ಆಟದ ಕೇಂದ್ರಸ್ಥಾನವಾಗಿ ಬದಲಾವಣೆ ಹೊಂದಿತು. ಮೊದಲಿನಿಂದಲೂ ಸೈನ್ಯದಲ್ಲಿ ತಮ್ಮನ್ನು ಹೆಚ್ಚಾಗಿ ತೊಡಗಿಸಿಕೊಂಡ ಈ ಗಂಡು ಭೂಮಿ ಇದಕ್ಕೆ ಮೂಲ ಕಾರಣ. ಅನಂತರದ ದಿನಗಳಲ್ಲಿ ಹಾಕಿ ಆಟವನ್ನು ತಮ್ಮ ಬದುಕಿನ ಒಂದು ಜೀವನ ಶೈಲಿಯನ್ನಾಗಿ ಸ್ವೀಕರಿಸಿದ್ದು. ಇಡೀ ಮಡಿಕೇರಿಯಷ್ಟೇ ಅಲ್ಲದೇ ಸುತ್ತಮುತ್ತಲಿನ ಕೊಡವರಿಗೆ ಹಾಕಿ ಎಂದರೆ ಪಂಚಪ್ರಾಣ. ಸುಮಾರು ಐವತ್ತಕ್ಕೂ ಹೆಚ್ಚು ಆಟಗಾರರು ಭಾರತವನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರತಿನಿಧಿಸಿದ್ದಾರೆ. ಇಷ್ಟೇ ಅಲ್ಲದೆ ದಕ್ಷಿಣ ಕನ್ನಡ, ಬೆಳಗಾಂವಿ, ಧಾರವಾಡ ಜಿಲ್ಲೆಗಳಲ್ಲಿ ಹಾಕಿ ಆಟದ ಪ್ರಭಾವವನ್ನು ಕಾಣಬಹುದು.

ಹಾಕಿ ದಸರ ಕ್ರೀಡಾಕೂಟದ ಮತ್ತೊಂದು ಆಕರ್ಷಕ ಪಂದ್ಯಾವಳಿ ಎನಿಸಿತು. ಇಲ್ಲಿ ರಾಜ್ಯದ ಎಲ್ಲ ಯುವತಂಡಗಳು ಬಂದು ಭಾಗವಹಿಸುವುದು ಎಲ್ಲರ ಗಮನವನ್ನು ಸೆಳೆಯುತ್ತಿತ್ತು.

ಬೆಂಗಳೂರಿನಲ್ಲಿ ತರಬೇತಾದ ಆಟಗಾರರು ಕೇವಲ ಅಂತಾರಾಷ್ಟ್ರೀಯ ಪಂದ್ಯಗಳನ್ನಷ್ಟೇ ಅಲ್ಲದೆ ಒಲಂಪಿಕ್ಸ್‌ನಲ್ಲಿ ಆಡಿದ ಹೆಗ್ಗಳಿಕೆಗೂ ಪಾತ್ರರಾಗಿದ್ದಾರೆ. ಕೆಲವರು ಭಾರತ ತಂಡದ ನಾಯಕರೂ ಆಗಿದ್ದವರು. ಇವರಲ್ಲಿ ಅರ್ಜುನ ಪ್ರಶಸ್ತಿ ವಿಜೇತ ಎಂ.ಪಿ.ಗಣೇಶ್ (ನೋಡಿ) ಭಾರತ

ತಂಡದ ನಾಯಕರಾಗಿ ಒಲಂಪಿಕ್ಸ್‌ನಲ್ಲಿ ಚಿನ್ನದ ಪದಕ ಗಳಿಸಲು ಕಾರಣರಾದರು. ಇದಲ್ಲದೆ ಕಿರಿಯರ ತಂಡದ ಹಾಗೂ ಪುರುಷ ತಂಡದ ತರಬೇತುದಾರರಾಗಿಯೂ ಕಾರ್ಯನಿರ್ವಹಿಸಿದರು.

1965ರಲ್ಲಿ ಪ್ರಥಮ ಮಹಿಳಾ ಆಟಗಾರರಾಗಿ ಅರ್ಜುನ ಪ್ರಶಸ್ತಿಗೆ ಆಯ್ಕೆಯಾದ ಎಲ್ವಿರಾ ಬ್ರಿಟೊ ಕರ್ನಾಟಕದವರೇ ಎಂಬುದು ಹೆಮ್ಮೆಯ ವಿಷಯ. ಇತ್ತೀಚಿನ ಜೂನಿಯರ್ ತಂಡದ ಆಟಗಾರರಾಗಿ ಆಸ್ಟ್ರೇಲಿಯದಲ್ಲಿ ಅತ್ಯುತ್ತಮ ಸಾಧನೆಗೈದ ಚಂಗಪ್ಪ ಕರ್ನಾಟಕದವರು. ಕ್ರಿಕೆಟ್ ಹೊರತುಪಡಿಸಿದರೆ ಅತಿ ಹೆಚ್ಚಿನ ಅರ್ಜುನ ಪ್ರಶಸ್ತಿ ಪಡೆದ ಆಟವೆಂದರೆ ಹಾಕಿ. ಸುಮಾರು ಎಂಟಕ್ಕೂ ಹೆಚ್ಚು ಜನ ಅರ್ಜುನ ಪ್ರಶಸ್ತಿಯನ್ನು ಪಡೆದಿದ್ದಾರೆ. ಇಂದಿಗೂ ಪ್ರತಿವರ್ಷ ನಡೆಯುವ ಕೊಡವರ ಉತ್ಸವದಲ್ಲಿ ಆಕರ್ಷಕವಾದ ಸಂಗತಿ ಎಂದರೆ ಕೊಡವರ ಮಕ್ಕಳ ಹಾಕಿ, ತಮ್ಮ ತಮ್ಮ ಕುಟುಂಬದವರೊಂದಿಗೆ ಸೇರಿ ನಡೆಯುವ ಪಂದ್ಯ ಅಲ್ಲಿನ ಜನತೆ ಹಾಕಿಯನ್ನು ತಮ್ಮ ಸಂಸ್ಕೃತಿಯಲ್ಲಿ ಬೆಸೆದಿರುವುದರ ಸಂಕೇತ. ಕೊಡಗಿನಲ್ಲಿ ಈ ಆಟವನ್ನು ಜನಪ್ರಿಯಗೊಳಿಸಲು ಮತ್ತು ಎಳೆಯ ಪ್ರತಿಭೆಗಳನ್ನು ಗುರುತಿಸಲು ಕರ್ನಾಟಕ ಸರ್ಕಾರ ಕ್ರೀಡಾಶಾಲೆಯನ್ನು ಪ್ರಾರಂಭಿಸಿದೆ. (ಎಸ್.ಆರ್.ಯು.)

**ಕ್ರಿಕೆಟ್ :** ಕರ್ನಾಟಕದಲ್ಲಿ ಕ್ರಿಕೆಟ್ 20ನೆಯ ಶತಮಾನದ ಮೂರನೆಯ ದಶಕದಿಂದಲೂ ಜನಪ್ರಿಯ ಆಟವೆನಿಸಿದೆ. ಬೆಂಗಳೂರಿನಲ್ಲಿರುವ ಕರ್ನಾಟಕ ಸ್ಟೇಟ್ ಕ್ರಿಕೆಟ್ ಅಸೋಸಿಯೇಷನ್ ರಾಜ್ಯದ ಕ್ರಿಕೆಟ್ ಆಟದ ಬಗೆಗಿನ ಎಲ್ಲ ವ್ಯವಹಾರಗಳನ್ನೂ ನಡೆಸುವ ಹೊಣೆ ಹೊತ್ತಿದೆ. ಈ ಸಂಸ್ಥೆ 1933-34ರಲ್ಲಿ ಜೆ.ಸಿ.ರೋಲೋ, ಪಿ.ಮೋದಪ್ಪ, ಟಿ.ಮುರಾರಿ, ವೈ.ವಿ.ಕೆ.ಮೂರ್ತಿ, ಎಂ.ಜಿ.ವಿಜಯಸಾರಥಿ, ಎಂ.ಚಿನ್ನಸ್ವಾಮಿ ಮೊದಲಾದವರ ಮೂಲಪ್ರಯತ್ನದಿಂದ ಜನ್ಮತಾಳಿತು. ಸು.50,000 ರೂ.ಗಳ ಒಂದು ನಿಧಿಯನ್ನು ಸೇರಿಸಿ ದೊಡ್ಡ ಪ್ರಮಾಣದಲ್ಲಿ ಕ್ರಿಕೆಟಿಗೆ ಸಂಬಂಧಿಸಿದಂತೆ ಗ್ರಂಥಾಲಯವೊಂದನ್ನು ಸ್ಥಾಪಿಸುವ ಕೆಲಸವನ್ನು ಸಂಘ ಶ್ರದ್ಧೆಯಿಂದ ನಿರ್ವಹಿಸುತ್ತಿದೆ. ಜೊತೆಗೆ ಬೆಂಗಳೂರಿನ ಮಹಾತ್ಮ ಗಾಂಧೀ ರಸ್ತೆಯಲ್ಲಿರುವ ಗಾಂಧೀ ಪ್ರತಿಮೆಯ ಹಿಂಭಾಗದ ದೊಡ್ಡ ಮೈದಾನದಲ್ಲಿ ಕ್ರಿಕೆಟ್ ಕ್ರೀಡಾಂಗಣವೊಂದನ್ನು ಹೊಸದಾಗಿ ನಿರ್ಮಿಸಿದೆ. 1973-74ರಲ್ಲಿ ಈ ಕ್ರೀಡಾಂಗಣದಲ್ಲಿ ವೆಸ್ಟ್ ಇಂಡೀಸ್ ಮತ್ತು ಭಾರತ ತಂಡಗಳ ನಡುವೆ ಪಂದ್ಯ ನಡೆಯಿತು. ಎಂ.ಜಿ. ವಿಜಯಸಾರಥಿ ಈ ಸಂಸ್ಥೆಯ ಈಗಿನ ಕಾರ್ಯದರ್ಶಿಗಳು. ತಿಮ್ಮಪ್ಪಯ್ಯ ಈ ಸಂಸ್ಥೆಯ ಅಧ್ಯಕ್ಷರು. ಈ ಸಂಘದ ಆಶ್ರಯದಲ್ಲಿ ಅನೇಕ ಉತ್ತಮ ಕ್ರಿಕೆಟ್ ಪಟುಗಳು ಬೆಳಕಿಗೆ ಬಂದಿದ್ದಾರೆ. ಇವರಲ್ಲಿ ಮುಖ್ಯರಾದವರೆಂದರೆ ವಿ.ಸುಬ್ರಹ್ಮಣ್ಯಂ, ಜಿ.ಆರ್.ವಿಶ್ವನಾಥ್, ಇ.ಎ.ಎಸ್.ಪ್ರಸನ್ನ, ಬಿ.ಎಸ್.ಚಂದ್ರಶೇಖರ, ಬಿ.ಕೆ.ಕುಂದರನ್, ಬ್ರಿಜೇಶ್ ಪಟೇಲ್ ಮೊದಲಾದವರು.

ಕರ್ನಾಟಕದ ಕ್ರಿಕೆಟ್ ತಂಡ 1934ರಿಂದಲೂ ರಣಜಿ ಟ್ರೋಫಿಯಲ್ಲಿ ಭಾಗವಹಿಸುತ್ತಿದೆ. 1941ರಲ್ಲಿ ಅದು ಎರಡನೆಯ ಸ್ಥಾನವನ್ನು ಗಳಿಸಿತು. 1973ರಲ್ಲಿ ಇ.ಎ.ಎಸ್. ಪ್ರಸನ್ನ ಅವರ ನಾಯಕತ್ವದಲ್ಲಿ ಜಯಪುರದಲ್ಲಿ ನಡೆದ ರಣಜಿ ಪಂದ್ಯದಲ್ಲಿ ಟ್ರೋಫಿ ಕರ್ನಾಟಕದ ತಂಡದ ವಶವಾಯಿತು. ಕರ್ನಾಟಕದ ಅನೇಕ ಮಂದಿ ಆಟಗಾರರು ಟೆಸ್ಟ್ ಸರಣಿಗಳಲ್ಲಿ ಭಾಗವಹಿಸಿದ್ದಾರೆ. 1911ರಲ್ಲಿ ಬಿ.ಜಯರಾಮ್ ಎಂಬುವರು ಭಾರತದ ಪ್ರತಿನಿಧಿಯಾಗಿ ಇಂಗ್ಲೆಂಡಿನಲ್ಲಿ ಆಡಲು ಹೋಗಿದ್ದರು. ಸುಬ್ರಹ್ಮಣ್ಯಂ, ಎ.ಎಸ್.ಕೃಷ್ಣಸ್ವಾಮಿ, ಕುಂದರನ್, ಬಿ.ಎಸ್.ಚಂದ್ರಶೇಖರ, ಇ.ಎ.ಎಸ್.ಪ್ರಸನ್ನ, ಜಿ.ಆರ್.ವಿಶ್ವನಾಥ್, ಬ್ರಿಜೇಶ್ ಪಟೇಲ್, ಕಿರ್ಮಾನಿ, ಸುಧಾಕರರಾವ್ ಉತ್ತಮ ಮಟ್ಟದ ಟೆಸ್ಟ್ ಆಟಗಾರರು. ಕೊನೆಯ ಆರು ಜನ 1976ರಲ್ಲಿ ನ್ಯೂಜಿಲೆಂಡ್ ಮತ್ತು ವೆಸ್ಟ್ ಇಂಡೀಸ್ ತಂಡಗಳೊಡನೆ ನಡೆದ ಪಂದ್ಯಗಳಲ್ಲಿ ಭಾರತದ ಪರವಾಗಿ ಭಾಗವಹಿಸಿದ್ದರು. ಜಯಪ್ರಕಾಶ್, ವಿಜಯಕೃಷ್ಣ, ಇಮ್ತಿಯಾಜ್ ಅಹ್ಮದ್ ಇವರೂ ಒಳ್ಳೆಯ ಕ್ರಿಕೆಟ್ ಪಟುಗಳಾಗಿದ್ದಾರೆ. ಜಿ.ಆರ್.ವಿಶ್ವನಾಥ್, ಬಿ.ಎಸ್.ಚಂದ್ರಶೇಖರ (ನೋಡಿ) ಮತ್ತು ಇ.ಎ.ಎಸ್. ಪ್ರಸನ್ನ ಅವರಿಗೆ ಪದ್ಮಶ್ರೀ ಪ್ರಶಸ್ತಿ ಬಂದಿದೆ. ಅನಿಲ್ ಕುಂಬ್ಳೆ (ನೋಡಿ), ಜಾವಗಲ್ ಶ್ರೀನಾಥ್ (ನೋಡಿ), ರಾಹುಲ್ ದ್ರಾವಿಡ್ (ನೋಡಿ), ವೆಂಕಟೇಶ ಪ್ರಸಾದ್ ಮೊದಲಾದವರು ಅತರಾಷ್ಟ್ರೀಯ ಟೆಸ್ಟ್‌ಪಂದ್ಯಗಳಲ್ಲಿ ಆಡಿ ಕರ್ನಾಟಕಕ್ಕೆ ಕೀರ್ತಿ ತಂದಿದ್ದಾರೆ.

ಮಹಿಳೆಯರೂ ಇತ್ತೀಚೆಗೆ ಕ್ರಿಕೆಟಿನಲ್ಲಿ ಆಸಕ್ತಿ ಬೆಳೆಸಿ ಕೊಂಡಿರುವುದುಂಟು. ಶಾಂತಾ ರಂಗಸ್ವಾಮಿ ಎಂಬುವರು ಭಾರತದ ಮಹಿಳಾ ತಂಡದ ನಾಯಕತ್ವವನ್ನು ವಹಿಸಿದ್ದಾರೆ. (ಸಿ.ಎ.ಪಿ)

**ಕೊಕ್ಕೊ :** ಈ ಆಟ ಮಹಾರಾಷ್ಟ್ರದ ಮೂಲವನ್ನು ಆಧರಿಸಿದ್ದರೂ ಕರ್ನಾಟಕದಲ್ಲಿ ಈ ಆಟಗಳನ್ನು ಬಹಳ ಹಿಂದಿನಿಂದಲೂ ಆಡುತ್ತ ಬಂದಿರುವ ಉದಾಹರಣೆಗಳಿವೆ. ಪ್ರಾರಂಭದಲ್ಲಿ ವಿವಿಧ ರೀತಿಯ ನಿಯಮಗಳಿಂದ ಕೂಡಿದ ಆಟ ಹಲವು ರೂಪಾಂತರವನ್ನು ಹೊಂದಿದ್ದು 1950ರಲ್ಲಿ. ಮೈಸೂರಿನ ಅರಸು ಬೋರ್ಡಿಂಗ್ ಹೋಮ್‌ನ ಶಾಲೆಯ ವತಿಯಿಂದ ಇದರ ಪಂದ್ಯಾವಳಿಗಳನ್ನು ನಡೆಸಲಾಯಿತು. ಶಾಲಾ ಮಟ್ಟದಲ್ಲಿ ಈ ಆಟವನ್ನು ಪ್ರಾರಂಭಿಸಲು ಮೈಸೂರಿನ ಹಲವು ಕ್ರೀಡಾಸಕ್ತರು ಕಾರಣ. ಪ್ರಾರಂಭದಲ್ಲಿ ಮಹಾರಾಜ ಪ್ರೌಢಶಾಲೆ, ಡಿ.ಬನುಮಯ್ಯ ಪ್ರೌಢಶಾಲೆ, ದಳವಾಯಿ ಪ್ರೌಢಶಾಲೆ ಮತ್ತು ಶಾರದಾವಿಲಾಸ ಪ್ರೌಢಶಾಲೆಗಳೊಳಗೊಂಡಂತೆ ಅರಸು ಬೋರ್ಡಿಂಗ್ ಹೋಂ ಪಂದ್ಯವನ್ನು ನಡೆಸಿದ ದಾಖಲೆ ಲಭ್ಯವಿದೆ. ಇದಾದನಂತರ ಎಂ.ಜಿ.ಎಸ್. ಅಂತರ ಕಾಲೇಜುಗಳ ಕ್ರೀಡಾಕೂಟದಲ್ಲಿ ಇದನ್ನು ಏರ್ಪಡಿಸುವುದರೊಂದಿಗೆ ಅಂತರ ಕಾಲೇಜು ಮತ್ತು ಅಂತರ ವಿಶ್ವವಿದ್ಯಾಲಯಗಳಲ್ಲಿ ಈ ಆಟ ಪ್ರಸಿದ್ಧಿಹೊಂದಿತು. ದಸರ ಕ್ರೀಡಾಕೂಟದ ಮುಖ್ಯ ಆಕರ್ಷಣೆಯಾಗಿ ಕೊಕ್ಕೊ ಮಾರ್ಪಟ್ಟಿತು. ಹಲವು ಸ್ಥಳೀಯ ತಂಡಗಳು ಈ ಆಟವನ್ನು ಕೈಗೆತ್ತಿಗೊಂಡವು (1950-53). ಅವುಗಳಲ್ಲಿ ಮೈಸೂರಿನ ಪಯನೀರ್ಸ್ ಮತ್ತು ತುಮಕೂರಿನ ಪಯನೀರ್ಸ್ ಪ್ರಮುಖವಾದುವು. 1953ರಲ್ಲಿ ಮೈಸೂರು ರಾಜ್ಯ ಕೊಕ್ಕೊ, ಕಬಡ್ಡಿ ಅಸೋಸಿಯೇಷನ್ ಪ್ರಾರಂಭಿಸಲಾಯಿತು.

ಕರ್ನಾಟಕ ರಾಜ್ಯ ಕೊಕ್ಕೊ ಸಂಸ್ಥೆ ಹಲವಾರು ರಾಷ್ಟ್ರೀಯ ಚಾಂಪಿಯನ್ ಷಿಪ್‌ಗಳನ್ನು ತನ್ನ ಮಡಿಲಿಗೇರಿಸಿಕೊಂಡಿದೆ. ಇಷ್ಟಲ್ಲದೆ ಅಖಿಲ ಭಾರತ ವಿಶ್ವವಿದ್ಯಾಲಯ ಚಾಂಪಿಯನ್‌ನಲ್ಲಿ ಮೈಸೂರು ವಿಶ್ವವಿದ್ಯಾನಿಲಯ ತನ್ನ ಸಾಧನೆಯನ್ನು ಗೈದು ಇತಿಹಾಸ ನಿರ್ಮಿಸಿದೆ. ಕರ್ನಾಟಕ ರಾಜ್ಯ ಮಹಿಳಾ ತಂಡ ಹಲವಾರು ಬಾರಿ ರಾಷ್ಟ್ರೀಯ ಚಾಂಪಿಯನ್ ಆಗಿ ಸಾಧನೆಗೈದದ್ದಷ್ಟೇ ಅಲ್ಲದೆ ಎನ್.ಪ್ರಕಾಶ್ ಮತ್ತು ಭಾರ್ಗವಿ ನಾರಾಯಣ್ ಅರ್ಜುನ ಪ್ರಶಸ್ತಿ ವಿಜೇತರಾಗಿ ಈ ಆಟ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಖ್ಯಾತಿಗಳಿಸಲು ಕಾರಣರಾಗಿದ್ದಾರೆ. ಬೆಂಗಳೂರಿನಲ್ಲಿ ಹೊಂಬೇಗೌಡ ಕೊಕ್ಕೊ ಕ್ರೀಡಾಂಗಣ ಸ್ಥಾಪನೆಗೊಂಡು ಈ ಆಟದ ಏಳಿಗೆಗೆ ಕಾರಣವಾಗಿದೆ.

**ವಾಲಿಬಾಲ್ :** ವೈ.ಎಂ.ಸಿ.ಎ. ಮದರಾಸು ಇವರ ಸಹಕಾರದೊಂದಿಗೆ ಈ ಆಟವನ್ನು ಪ್ರಾರಂಭಿಸಲಾಯಿತು. ಇದಕ್ಕೂ ಕೆಲವು ಆಸಕ್ತ ಯುವಕರು ಬೇರೆ ಬೇರೆ ಚಂಡುಗಳ ಸಹಾಯದಿಂದ ಈ ಆಟವನ್ನು ಆಡುತ್ತಿದ್ದುದು ಉಂಟು.

1949ರಲ್ಲಿ ಕರ್ನಾಟಕ ವಾಲಿಬಾಲ್ ಸಂಸ್ಥೆ ಸ್ಥಾಪನೆಯಾಗುವುದರ ಜೊತೆಗೆ ಕರ್ನಾಟಕದಲ್ಲಿ ವಾಲಿಬಾಲ್ ಆಟ ಪ್ರಾರಂಭವಾಯಿತು. 1952ರಲ್ಲಿ ಮದರಾಸಿನಲ್ಲಿ ಪ್ರಾರಂಭವಾದ ರಾಷ್ಟ್ರೀಯ ಮಟ್ಟದ ಕ್ರೀಡೆಯಲ್ಲಿ ಕರ್ನಾಟಕ ಪ್ರಶಸ್ತಿ ಗಳಿಸಿತು. ಕರ್ನಾಟಕದ ಉತ್ತಮ ಆಟಗಾರರಾದ ಅಶ್ವತ್ಥಯ್ಯ, ಶಂಕರನಾರಾಯಣಪ್ಪ ಬಾಲಾಜಿ ಮತ್ತು ಪನೀರ್ ಶೆಲ್ವನ್ ಮೊದಲಾದವರು ಅನೇಕ ಪಂದ್ಯಗಳಲ್ಲಿ ಭಾರತವನ್ನು ಪ್ರತಿನಿಧಿಸಿದ್ದಾರೆ. 1954ರಲ್ಲಿ ಹಾಸನದಲ್ಲಿ ಪ್ರಪ್ರಥಮ ಜಿಲ್ಲಾ ವಾಲಿಬಾಲ್ ಸಂಸ್ಥೆ ಪ್ರಾರಂಭಗೊಂಡಿತು. ಅನಂತರದ ದಿನಗಳಲ್ಲಿ ತುಮಕೂರು, ಮಂಡ್ಯ, ಮೈಸೂರು, ಬೆಂಗಳೂರು ಮತ್ತು ಕೋಲಾರ ಜಿಲ್ಲಾ ವಾಲಿಬಾಲ್ ಸಂಸ್ಥೆಗಳು ತಲೆ ಎತ್ತಿದುವು. ಕರ್ನಾಟಕ ಏಕೀಕರಣದ ಅನಂತರ (1956) ಹೈದ್ರಾಬಾದ್, ಮುಂಬಯಿ ಹಾಗೂ ಮದರಾಸು ರಾಜ್ಯಗಳಲ್ಲಿ ವಿಲೀನವಾಗಿದ್ದ ಕೆಲವು ಜಿಲ್ಲೆಗಳಾದ ಬೆಳಗಾಂವಿ, ಧಾರವಾಡ, ಬಳ್ಳಾರಿ, ರಾಯಚೂರು, ಬಿಜಾಪುರ, ದಕ್ಷಿಣ ಕನ್ನಡ ಮುಂತಾದ ಜಿಲ್ಲೆಗಳು ಜಿಲ್ಲಾ ವಾಲಿಬಾಲ್ ಸಂಸ್ಥೆಗಳನ್ನು ಪ್ರಾರಂಭಿಸಿದುವು. ನೂರಾರು ಕ್ಲಬ್‌ಗಳು ನೊಂದಾಯಿಸಲ್ಪಟ್ಟು ಕರ್ನಾಟಕ ರಾಜ್ಯ ವಾಲಿಬಾಲ್ ಸಂಸ್ಥೆ ಉತ್ತಮವಾದ ಕಾರ್ಯನಿರ್ವಹಿಸುತ್ತ ಬಂದಿದೆ. 1973ರಲ್ಲಿ ಮಹಿಳೆಯರು ವಾಲಿಬಾಲ್ ಆಟಗಳನ್ನು ಆಡಲು ಪ್ರಾರಂಭಿಸಿದರಷ್ಟೆ ಅಲ್ಲದೆ ಕಾಲೇಜುಗಳು,

ಮಹಿಳೆಯರ ವಾಲಿಬಾಲ್ ಕ್ಲಬ್‌ಗಳನ್ನು ಪ್ರಾರಂಭಿಸಿದುವು. ಬೆಂಗಳೂರು ನಗರ ಇದಕ್ಕೆ ಕೇಂದ್ರ ಸ್ಥಾನವಾಗಿ ಮಾರ್ಪಟ್ಟಿತು. ರಾಜ್ಯ ವಾಲಿಬಾಲ್ ಮಹಿಳೆಯರ ಕ್ರೀಡಾ ಕೂಟಗಳು 1973ರ ಅನಂತರ ಪ್ರಾರಂಭಗೊಂಡವು.

**ಕಬಡ್ಡಿ :** ಕರ್ನಾಟಕದಲ್ಲಷ್ಟೇ ಅಲ್ಲದೆ ಭಾರತದಾದ್ಯಂತ ಹಳ್ಳಿಗಾಡಿನ ಮಕ್ಕಳ ನೆಚ್ಚಿನ ಆಟವಾಗಿ ರೂಪುಗೊಂಡ ಕಬಡ್ಡಿ ನೂರಾರು ವರ್ಷಗಳ ಇತಿಹಾಸವನ್ನು ಹೊಂದಿದೆ. 1953ರಲ್ಲಿ ಕೊಕ್ಕೊದ ಜೊತೆ ಜಂಟಿ ಸಂಸ್ಥೆಯಾಗಿ ಪ್ರಾರಂಭವಾದ ಈ ಕಬಡ್ಡಿ ಸಂಸ್ಥೆ 1955ರಲ್ಲಿ ತನ್ನದೇ ಆದ ಸಂಸ್ಥೆಯನ್ನು ಸ್ಥಾಪಿಸಿಕೊಂಡಿತು. 1971ರಲ್ಲಿ ಕರ್ನಾಟಕ ಕಬಡ್ಡಿ ತಂಡ ರಾಷ್ಟ್ರೀಯ ಮಟ್ಟದಲ್ಲಿ ಎರಡನೆಯ ಸ್ಥಾನವನ್ನೂ 1972-1974ರಲ್ಲಿ ಮೊದಲನೆಯ ಸ್ಥಾನವನ್ನೂ ಪಡೆಯಿತು. 1974 ಮತ್ತು 75ರಲ್ಲಿ ಬಾಲಕರ ತಂಡ ರಾಷ್ಟ್ರೀಯ ಪ್ರಶಸ್ತಿ ಗಳಿಸಿತು. ಕರ್ನಾಟಕದಲ್ಲಿ ಕಬಡ್ಡಿ ಆಟಕ್ಕೆ ತವರೂರು ಬೆಂಗಳೂರು. 1962ರಲ್ಲಿ ಸ್ವತಂತ್ರವಾಗಿ ಕರ್ನಾಟಕ ರಾಜ್ಯ ಕಬಡ್ಡಿ ಸಂಸ್ಥೆ ತನ್ನ ಕಾರ್ಯವನ್ನು ಪ್ರಾರಂಭಿಸಿತು. ನೂರಾರು ಕ್ಲಬ್‌ಗಳು ತಮ್ಮ ಸಂಘಗಳನ್ನು ನೊಂದಾಯಿಸುವುದರ ಮೂಲಕವೇ ಕಬಡ್ಡಿ ಆಟ ಒಂದು ಪ್ರಬಲ ಆಟವಾಗಿ ಮಾರ್ಪಟ್ಟಿತು. ಜಾತ್ರೆಗಳಲ್ಲಿ ಹಬ್ಬ ಹರಿದಿನಗಳನ್ನೊಳಗೊಂಡಂತೆ ರಾಜ್ಯೋತ್ಸವ, ರಾಷ್ಟ್ರೀಯ ಹಬ್ಬಗಳು ಹೀಗೆ ಹತ್ತಾರು ಸಂದರ್ಭಗಳಲ್ಲಿ ಈ ಕ್ರೀಡೆಯನ್ನು ಆಡಲು ಪ್ರಾರಂಭಿಸಿದರು. 1979ರಲ್ಲಿ ಮೊಟ್ಟ ಮೊದಲ ಬಾರಿಗೆ ಕರ್ನಾಟಕ ರಾಜ್ಯ ತಂಡ ಮತ್ತು ಬಾಂಗ್ಲಾದೇಶದ ಕಬಡ್ಡಿ ಆಟಗಾರರ ನಡುವೆ ಪಂದ್ಯವನ್ನು ಏರ್ಪಡಿಸಲಾಗಿತ್ತು. 1980ರಲ್ಲಿ ದಕ್ಷಿಣವಲಯ ಮಹಿಳೆಯರ ಕಬಡ್ಡಿ ಪಂದ್ಯಾವಳಿಗಳನ್ನು ಮಂಗಳೂರಿನಲ್ಲಿಯೂ 1983ರಲ್ಲಿ ಮತ್ತೊಮ್ಮೆ ಪುರುಷರ ಮತ್ತು ಮಹಿಳೆಯರ ದಕ್ಷಿಣವಲಯ ಕ್ರೀಡಾಕೂಟವನ್ನು ದಾವಣಗೆರೆಯಲ್ಲಿಯೂ ನಡೆಸಲಾಯಿತು. 2000ದಲ್ಲಿ ಮಂಡ್ಯದಲ್ಲಿ ರಾಷ್ಟ್ರೀಯ ಕಬಡ್ಡಿ ಪಂದ್ಯಾವಳಿಯನ್ನು ಏರ್ಪಡಿಸಲಾಗಿತ್ತು. ಹಲವು ಕನ್ನಡಿಗರು ಭಾರತ ತಂಡವನ್ನು ಪ್ರತಿನಿಧಿಸಿದ್ದಾರೆ. ಭಾರತ ತಂಡದ ನಾಯಕರಾಗಿದ್ದ ಗೋಪಾಲಪ್ಪ, ಮುನಿವೆಂಕಟಪ್ಪ, ರಮೇಶ್ ಮತ್ತು ಸುರೇಶ್ ಸಹೋದರರು ಹಾಗೂ 1998ರ ಅರ್ಜುನ ಪ್ರಶಸ್ತಿ ವಿಜೇತ ಹೊನ್ನಪ್ಪ ಇವರನ್ನು ಹೆಸರಿಸಬಹುದಾಗಿದೆ.

**ಈಜು ಸಂಘ :** ಮೈಸೂರು ರಾಜ್ಯ ಈಜು ಸಂಘ ಪ್ರಾರಂಭಗೊಂಡು ಹಲವು ವರ್ಷಗಳು ಕಳೆದರೂ ಮೊದಲ ಸಾಧನೆ 1960ರಲ್ಲಿ ದೆಹಲಿಯಲ್ಲಿ ನಡೆದ ರಾಷ್ಟ್ರೀಯ ಈಜು ಸ್ಪರ್ಧೆಗಳಲ್ಲಿ ಚಿನ್ನದ ಪದಕ ಪಡೆಯುವುದರೊಂದಿಗೆ ತನ್ನ ಹೆಸರನ್ನು ರಾಷ್ಟ್ರೀಯ ಈಜು ಸ್ಪರ್ಧೆಗಳಲ್ಲಿ ದಾಖಲಿಸಿತು. ಹಲವಾರು ಬೆಳ್ಳಿ ಹಾಗೂ ಕಂಚಿನ ಪದಕಗಳನ್ನು ತಮ್ಮ ಮಡಿಲಿಗೇರಿಸಿದ ಈಜುಗಾರರು ಕರ್ನಾಟಕದ ಹೆಸರನ್ನು ಭಾರತ ಕ್ರೀಡಾ ನಕ್ಷೆಯಲ್ಲಿ ಮಿನುಗುವಂತೆ ಮಾಡಿದರು. ಈ ಸಂಬಂಧ ಈಜನ್ನು ಒಂದು ಆಕರ್ಷಕ ಕ್ರೀಡೆಯನ್ನಾಗಿಸಲು ಬೆಂಗಳೂರಿನ ಮಹಾನಗರಸಭೆಯು ಈಜುಕೊಳಗಳನ್ನು ನವೀಕರಿಸಲಾಯಿತು. ಅನಂತರ 1972 ಹಾಗೂ ಇತ್ತೀಚಿನ ದಿನಗಳಲ್ಲಿ ನಮ್ಮ ಕ್ರೀಡಾಪಟುಗಳ ಸಾಧನೆ ಮಹತ್ತರವಾದದ್ದು. ಶಾಲಾ ಕಾಲೇಜುಗಳಿಂದ ಹಿಡಿದು ವಿಶ್ವವಿದ್ಯಾಲಯ ಹಾಗೂ ರಾಷ್ಟ್ರೀಯ ಕ್ರೀಡಾ ಕೂಟಗಳಲ್ಲಿ ಕರ್ನಾಟಕದ ಈಜುಗಾರರದೇ ಸಿಂಹಪಾಲು. ಹಲವಾರು ಬಾರಿ ರಾಷ್ಟ್ರೀಯ ಚಾಂಪಿಯನ್ನರಾಗಿದ್ದುದಲ್ಲದೆ ಅಂತಾರಾಷ್ಟ್ರೀಯ ಕ್ರೀಡಾಪಟುಗಳಾಗಿ ಮೆರೆದವರು ಹಲವರು. ಅಭಿಜಿತ್, ಹಕೀಮುದ್ದೀನ್, ಸತೀಶ್‌ಕುಮಾರ್ - ಇವರು ಏಷ್ಯನ್ ಕ್ರೀಡಾಕೂಟಗಳಲ್ಲಿ ಪದಕ ಪಡೆದವರು. ಮಹಿಳೆಯರ ಅಂತಾರಾಷ್ಟ್ರೀಯ ಕ್ರೀಡಾಕೂಟಗಳಲ್ಲಿ ಪ್ರಖ್ಯಾತಿ ಪಡೆದವರೆಂದರೆ ಮೇಘನನಾರಾಯಣ್, ಶೀಬಾಟಂಡನ್, ಲಾರೇನ್, ವರ್ಗೀಸ್, ಪುನೀತಗುಪ್ತ, ಸಜಿನಿಶೆಟ್ಟಿ, ನಿಶಾ ಮಿಲೆಟ್, ಕೇಶಮಾ ಮಿಲೆಟ್, ಶಿವರಂಜನಿ, ಅಂಬಿಕಾ ಅಯ್ಯಂಗಾರ್, ಚಿತ್ರ ಮೊದಲಾದವರು. ಇದಲ್ಲದೆ ಬೆಂಗಳೂರೊಂದರಲ್ಲೇ ಅತ್ಯುತ್ತಮ ಅಂತಾರಾಷ್ಟ್ರೀಯ ಮಟ್ಟದ ಹಲವು ಈಜು ಕೊಳಗಳಿರುವುದು ಒಂದು ಮಹತ್ತ್ವದ ಸಾಧನೆ. ಕರ್ನಾಟಕದ ಪ್ರದೀಪ ಅವರು ಭಾರತದಲ್ಲಿ ಗುರುತಿಸಬಹುದಾದ ಒಬ್ಬ ಉದಯೋನ್ಮುಖ ತರಬೇತುದಾರರು. ಈಗಾಗಲೇ ಭಾರತ ತಂಡದ ತರಬೇತುದಾರನಾಗಿ ಕಾರ್ಯನಿರ್ವಹಿಸಿರುವ ಇವರು ಹಲವಾರು ರಾಷ್ಟೀಯ, ಅಂತಾರಾಷ್ಟ್ರೀಯ ಈಜುಗಾರರನ್ನು ನಾಡಿಗೆ ಇತ್ತ ಗೌರವಕ್ಕೆ ಪಾತ್ರರಾಗಿದ್ದಾರೆ.

ಕ್ರೀಡೆಗೆ ಪ್ರೋತ್ಸಾಹ ನೀಡುವ ಸಲುವಾಗಿ ಕರ್ನಾಟಕ ಸರ್ಕಾರ ಕೆಲವು ಪ್ರತ್ಯೇಕ ಇಲಾಖೆ ಹಾಗೂ ಸಂಸ್ಥೆಗಳನ್ನು ಸ್ಥಾಪಿಸಿದೆ. ಈ ಸಂಸ್ಥೆಗಳು ಕ್ರೀಡೆಯ ಪುರೋಭಿವೃದ್ಧಿಗೆ ಕೆಲಸ ಮಾಡುತ್ತಿವೆ.

**ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ :** ಕರ್ನಾಟಕ ಸರ್ಕಾರದ ಅಧೀನದಲ್ಲಿ ಸ್ಥಾಪಿತಗೊಂಡ (1969) ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಪ್ರಾರಂಭದಲ್ಲಿ ಶಿಕ್ಷಣ ಇಲಾಖೆಯೊಂದಿಗೆ ಸಂಯೋಜಿತವಾಗಿ ಕೆಲಸ ನಿರ್ವಹಿಸುತ್ತಿತ್ತು. ಅನಂತರ 1975ರಲ್ಲಿ ಸ್ವತಂತ್ರ ನಿರ್ದೇಶನಾಲಯವನ್ನು ಹೊಂದಿದ್ದರೂ ಕರ್ನಾಟಕ ಕ್ರೀಡಾಪರಿಷತ್ತಿನ ಎಲ್ಲ ನೌಕರರನ್ನೊಳಗೊಂಡಂತೆ ಸಂಪೂರ್ಣವಾದ ಅಧಿಕಾರ ಹಾಗೂ ನಿಯಮಾವಳಿಗಳನ್ನೊಳಗೊಂಡು ಕರ್ನಾಟಕದ ಯುವಜನ ಸೇವಾ ಮತ್ತು ಕ್ರೀಡಾ ಸಚಿವಾಲಯದಲ್ಲಿ ಸ್ವತಂತ್ರವಾಗಿ ಕಾರ್ಯನಿರ್ವಹಿಸಲಾರಂಭಿಸಿತು (1980). ನಿರ್ದೇಶಕರು ಇಲಾಖೆಯ ಮುಖ್ಯಸ್ಥರಾಗಿರುತ್ತಾರೆ. ಇವರು ಯುವಜನರ ಏಳಿಗೆಗಾಗಿ ಸರ್ಕಾರ ರೂಪಿಸಿದ ಕಾರ್ಯಕ್ರಮಗಳನ್ನು ಜಾರಿಗೆ ತರುವ ಹೊಣೆಯನ್ನು ಹೊತ್ತಿದ್ದಾರೆ. ಮೈಸೂರು, ಬೆಂಗಳೂರು, ಬೆಳಗಾಂವಿ, ಗುಲ್ಬರ್ಗ ವಿಭಾಗದಲ್ಲಿ ವಿಭಾಗೀಯ ಜಂಟಿ ನಿರ್ದೇಶಕರುಗಳನ್ನೊಳಗೊಂಡು ಕಾರ್ಯನಿರ್ವಹಿಸುತ್ತಿದೆ. ಇಷ್ಟಲ್ಲದೆ ದಾವಣಗೆರೆ, ಬಳ್ಳಾರಿ, ಬಿಜಾಪುರ, ಕೊಡಗು ಜಿಲ್ಲೆಗಳಲ್ಲಿ ಉಪನಿರ್ದೇಶಕರುಗಳ ಕಚೇರಿಗಳನ್ನೊಳಗೊಂಡಿದೆ. 27 ಜಿಲ್ಲೆಗಳಲ್ಲಿ ಕಚೇರಿಗಳಿವೆ. ಜೊತೆಗೆ ಜಿಲ್ಲಾ ಕೇಂದ್ರಗಳಲ್ಲಿ ವಿವಿಧ ಕ್ರೀಡೆಗಳಲ್ಲಿ ಯುವಕ, ಯುವತಿಯರಿಗೆ ತರಬೇತಿ ಕೊಡಲು ನುರಿತ ತರಬೇತುದಾರರನ್ನು ಇಲಾಖೆ ಹೊಂದಿರುತ್ತದೆ.

**ಕರ್ನಾಟಕ ರಾಜ್ಯ ಕ್ರೀಡಾ ಪರಿಷತ್ತು :** ಕರ್ನಾಟಕ ರಾಜ್ಯ ಕ್ರೀಡಾ ಪರಿಷತ್ತು ರಾಜ್ಯದಲ್ಲಿನ ಕ್ರೀಡೆಗಳ ಆಯಕಟ್ಟಿಗಾಗಿ ಸ್ಥಾಪನೆಗೊಂಡ ಸಂಸ್ಥೆ. ಇದರ ಅಧ್ಯಕ್ಷ ಹಾಗೂ ಸದಸ್ಯರನ್ನು ಸರ್ಕಾರ ನೇಮಿಸುತ್ತಿತ್ತು. ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ನಿರ್ದೇಶಕರು ಇದರ ಸದಸ್ಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದುದುಂಟು. ಆದರೆ, ಕರ್ನಾಟಕ ಸರ್ಕಾರ ಕರ್ನಾಟಕ ಕ್ರೀಡಾ ಪರಿಷತ್ತನ್ನು ಅನೂರ್ಜಿತಗೊಳಿಸಿ 1997-98ರ ಅವಧಿಯಲ್ಲಿ ಕರ್ನಾಟಕ ಕ್ರೀಡಾ ಪ್ರಾಧಿಕಾರವೆಂದು ಪುನಾರಚಿಸಿತು. ಕರ್ನಾಟಕ ಸರ್ಕಾರದ ಯುವಜನ ಸೇವಾ ಮತ್ತು ಕ್ರೀಡಾ ಸಚಿವರು ಅಧ್ಯಕ್ಷರಾಗಿರುವ ಈ ಪ್ರಾಧಿಕಾರದ ಎಲ್ಲ ಕಾರ್ಯಯೋಜನೆಗಳ ಅನುಷ್ಠಾನವನ್ನು ಇದರ ಉಪಾಧ್ಯಕ್ಷರು ನೋಡಿಕೊಳ್ಳುವರು. ಅಧ್ಯಕ್ಷ, ಉಪಾಧ್ಯಕ್ಷ ಹಾಗೂ ಸಮಿತಿಯ ಸದಸ್ಯರುಗಳನ್ನು ಸರ್ಕಾರ ನೇಮಿಸುತ್ತದೆ. ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಸದಸ್ಯರು ಇದಕ್ಕೆ ಸದಸ್ಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಾರೆ.

ಬೆಂಗಳೂರಿನ ಕಂಠೀರವ ಕ್ರೀಡಾಂಗಣದ ಸಮುಚ್ಚಯದಲ್ಲಿ ಕಚೇರಿ ಹೊಂದಿರುವ ಪ್ರಾಧಿಕಾರ ತನ್ನಲ್ಲಿ ನೋಂದಣಿ ಮಾಡಿಕೊಂಡಿರುವ ಕ್ರೀಡಾ ಸಂಸ್ಥೆಗಳಿಗೆ ಅನುದಾನ ಸಂಹಿತೆಯ ಪ್ರಕಾರ ಅನುದಾನವನ್ನು ಬಿಡುಗಡೆ ಮಾಡುತ್ತದೆ. ಇಷ್ಟಲ್ಲದೆ, ಕರ್ನಾಟಕ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ವಿವಿಧ ಕ್ರೀಡಾ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗುವುದು. ದಸರ ಕ್ರೀಡಾಕೂಟ, ಮಹಿಳಾ ಕ್ರೀಡಾಕೂಟಗಳನ್ನೊಳಗೊಂಡಂತೆ ವಿವಿಧ ಕ್ರೀಡೆಗಳಲ್ಲಿ ಸ್ಪರ್ಧೆ, ಪಂದ್ಯಾವಳಿಗಳನ್ನು ಸಂಘಟಿಸಲಾಗುವುದು. ಪ್ರತಿಭಾವಂತ ಕ್ರೀಡಾಪಟುಗಳಿಗೆ ನುರಿತ ಕ್ರೀಡಾತರಬೇತುದಾರರಿಂದ ವಿಶೇಷ ತರಬೇತಿಯನ್ನು ಒದಗಿಸಲಾಗುವುದು. ಇಷ್ಟಲ್ಲದೆ ಪ್ರಾಧಿಕಾರದಿಂದ ನೇಮಕಗೊಂಡಿರುವ ಕ್ರೀಡಾತರಬೇತುದಾರರು ಇಲಾಖೆಯ ಸಹಯೋಗದೊಂದಿಗೆ ಜಿಲ್ಲಾ ಕೇಂದ್ರಗಳಲ್ಲಿನ ಕ್ರೀಡಾ ಪ್ರತಿಭೆಗಳಿಗೆ ಕ್ರೀಡಾ ತರಬೇತಿಯನ್ನು ನೀಡುತ್ತಾರೆ. ಪ್ರತಿ ವರ್ಷ ಅತ್ಯುತ್ತಮ ಕ್ರೀಡಾಪಟುಗಳಿಗೆ ಹಾಗೂ ಕ್ರೀಡಾ ತರಬೇತುದಾರರಿಗೆ ಮತ್ತು ಕ್ರೀಡಾ ಪ್ರೋತ್ಸಾಹಕರಿಗೆ ದಸರ ರಾಜ್ಯ ಕ್ರೀಡಾ ಪ್ರಶಸ್ತಿಗಳನ್ನು ನೀಡಿ ಗೌರವಿಸಲಾಗುತ್ತಿದೆ.

**ಜನರಲ್ ತಿಮ್ಮಯ್ಯ ರಾಷ್ಟ್ರೀಯ ಸಾಹಸ ಅಕಾಡೆಮಿ :** ಶಾಲಾ ಕಾಲೇಜು ಬಾಲಕ-ಬಾಲಕಿಯರಲ್ಲಿ ಹಾಗೂ ರಾಜ್ಯದ ಯುವಜನರಲ್ಲಿ ಸಾಹಸ ಕ್ರೀಡಾ ಚಟುವಟಿಕೆಗಳ ಬಗ್ಗೆ ಅಭಿರುಚಿ ಮೂಡಿಸಲು ಜನರಲ್ ತಿಮ್ಮಯ್ಯ

ರಾಷ್ಟ್ರೀಯ ಸಾಹಸ ಅಕಾಡೆಮಿಯ ವತಿಯಿಂದ ಭೂ, ಜಲ ಮತ್ತು ವಾಯು ಸಾಹಸ ಕ್ರೀಡಾ ಚಟುವಟಿಕೆಗಳ ಶಿಬಿರಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.

ಸಾಹಸ ಕ್ರೀಡಾಚಟುವಟಿಕೆಗಳನ್ನು ನಡೆಸಲು ಅತ್ಯಗತ್ಯವಾಗಿರುವ ಕ್ರೀಡಾ ಸಲಕರಣೆಗಳನ್ನು ನೋಂದಾಯಿತ ಸಾಹಸ ಕ್ರೀಡಾ ಸಂಸ್ಥೆಗಳಿಗೆ ಒದಗಿಸಲಾಗುತ್ತಿದೆ. ರಾಜ್ಯ ಯುವಜನ ಕೇಂದ್ರದ ಹಿಂಭಾಗದಲ್ಲಿ ಸ್ಥಾಪಿತವಾಗಿರುವ ಅಂಗಣದಲ್ಲಿ ಕೃತಕ ಗೋಡೆ ಏರುವ ಸ್ಪರ್ಧೆ ನಡೆಯುತ್ತದೆ. ರಾಜ್ಯದ ನೋಂದಾಯಿತ ಸಾಹಸ ಕ್ರೀಡಾಸಂಸ್ಥೆಗಳ ಸದಸ್ಯರಿಗೆ 700 ಅಡಿಗಿಂತಲೂ ಹೆಚ್ಚಿನ ಎತ್ತರದ ಪರ್ವತಾರೋಹಣ ಮಾಡಿದವರಿಗೆ ಪ್ರೋತ್ಸಾಹ ರೂಪದಲ್ಲಿ ಸಹಾಯಧನ ನೀಡಲಾಗುತ್ತದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆ ರಾಮನಗರದ ಬಳಿ ಹಾಗೂ ಬಾಗಲಕೋಟೆ ಜಿಲ್ಲೆ ಬಾದಾಮಿಯಲ್ಲಿ ಶಿಲಾರೋಹಣ ಸಂಸ್ಥೆ ಮತ್ತು ಕೇಂದ್ರಗಳನ್ನೂ ಹುಬ್ಬಳ್ಳಿಯ ಉಣಕಲ್ ಕೆರೆ ಬಳಿ ಜಲಸಾಹಸ ಕೇಂದ್ರವನ್ನು ಸ್ಥಾಪಿಸಲಾಗಿದೆ. ಉತ್ತರಕನ್ನಡ ಜಿಲ್ಲೆಯ ಸದಾಶಿವನಗರದಲ್ಲಿನ ಜಲಸಾಹಸ ಕ್ರೀಡಾ ಕೇಂದ್ರದಲ್ಲಿ ಯುವಕರಿಗೆ ತರಬೇತಿಯನ್ನು ನೀಡಲಾಗುತ್ತಿದೆ.

**ಕ್ರೀಡಾಯೋಜನೆಗಳು ಹಾಗೂ ಸೌಲಭ್ಯಗಳು :** ಕರ್ನಾಟಕ ಸರ್ಕಾರದಡಿಯಲ್ಲಿ ಕೆಲಸ ನಿರ್ವಹಿಸುವ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಹಾಗೂ ಕ್ರೀಡಾ ಪ್ರಾಧಿಕಾರದಿಂದ ಹಮ್ಮಿಕೊಳ್ಳಲಾದ ಹಲವಾರು ಯೋಜನೆಗಳು ಕೆಳಕಂಡಂತಿವೆ.

**ಕ್ರೀಡಾ ಶಾಲೆಗಳು, ಕ್ರೀಡಾ ವಸತಿ ನಿಲಯಗಳು :** ಗ್ರಾಮೀಣ ಪ್ರದೇಶ ಗಳಲ್ಲಿ ಹುದುಗಿರುವ ಕ್ರೀಡಾ ಪ್ರತಿಭೆಗಳನ್ನು ಗುರುತಿಸಿ ಅವರನ್ನು ಪೋಷಿಸುವ ಮತ್ತು ವಿಕಸನಗೊಳಿಸುವ ಉದ್ದೇಶದಿಂದ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ವತಿಯಿಂದ ಬೆಂಗಳೂರಿನ ವಿದ್ಯಾನಗರದಲ್ಲಿ ಹಾಗೂ ಕೊಡಗು ಜಿಲ್ಲೆಯ ಕೂಡಿಗೆಯಲ್ಲಿ ಕ್ರೀಡಾಶಾಲೆಗಳನ್ನು ಪ್ರಾರಂಭಿಸಲಾಗಿದೆ. ಇದಲ್ಲದೆ ಕ್ರೀಡಾವಸತಿ ನಿಲಯಗಳನ್ನು ಬೆಂಗಳೂರು, ಮೈಸೂರು, ದಾವಣಗೆರೆ, ಬಿಜಾಪುರ, ಬೆಳಗಾಂವಿ ಮತ್ತು ಗುಲ್ಬರ್ಗ ಜಿಲ್ಲಾ ಕೇಂದ್ರಗಳಲ್ಲೂ ನಡೆಸಲಾಗುತ್ತಿದೆ.

**ಕ್ರೀಡಾ ತರಬೇತಿ ಕಾರ್ಯಕ್ರಮಗಳು :** ರಾಜ್ಯದ ಎಲ್ಲ 27 ಜಿಲ್ಲಾ ಕೇಂದ್ರಗಳಲ್ಲಿ ಕೋಚಿಂಗ್ ಕೇಂದ್ರಗಳಿದ್ದು ರಾಜ್ಯ ತರಬೇತಿ ಕೇಂದ್ರ ಬೆಂಗಳೂರಿನಲ್ಲಿದೆ. ಎಲ್ಲಾ ಕೇಂದ್ರಗಳಿಗೆ ಕರ್ನಾಟಕ ಕ್ರೀಡಾ ಪ್ರಾಧಿಕಾರದ ವತಿಯಿಂದ ಕ್ರೀಡಾ ತರಬೇತುದಾರರನ್ನು ನೇಮಕ ಮಾಡಲಾಗಿದ್ದು, ಇವರು ಅಲ್ಲಿಯ ಸ್ಥಳೀಯ ಕ್ರೀಡಾ ಪ್ರತಿಭೆಗಳನ್ನು ಗುರುತಿಸಿ ಅವರಿಗೆ ಸೂಕ್ತ ತರಬೇತಿ ಮತ್ತು ಮಾರ್ಗದರ್ಶನ ನೀಡುವರು. ಇಷ್ಟಲ್ಲದೆ ಭರವಸೆ ಮೂಡಿಸಿದ ಕ್ರೀಡಾ ಪಟುಗಳಿಗೆ ಹೆಚ್ಚಿನ ಮಟ್ಟದ ಪ್ರೋತ್ಸಾಹ ಮತ್ತು ತರಬೇತಿಯನ್ನು ನೀಡಲಾಗುತ್ತಿದೆ.

**ಗ್ರಾಮೀಣ ಕ್ರೀಡಾಕೂಟಗಳು :** ಕರ್ನಾಟಕ ರಾಜ್ಯ ಸೇಕಡ 90ರಷ್ಟು ಗ್ರಾಮೀಣ ಪ್ರದೇಶಗಳನ್ನೊಳಗೊಂಡ ಕ್ರೀಡಾ ಪ್ರತಿಭೆಗಳನ್ನು ಹೊಂದಿದ್ದು ಅವರುಗಳನ್ನು ಗುರುತಿಸಲು ಮತ್ತು ಅವರಿಗೆ ಭಾಗವಹಿಸಲು ಅವಕಾಶ ಕಲ್ಪಿಸಲು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯು ಪ್ರತಿವರ್ಷ ತಾಲ್ಲೂಕು, ಜಿಲ್ಲಾ ಮತ್ತು ರಾಜ್ಯಮಟ್ಟದ ಗ್ರಾಮೀಣ ಕ್ರೀಡಾ ಕೂಟಗಳನ್ನು ಏರ್ಪಡಿಸುತ್ತದೆ.

ರಾಜ್ಯಮಟ್ಟದ ಸ್ಪರ್ಧೆಗಳಲ್ಲಿ ಉತ್ತಮ ಸಾಧನೆ ತೋರಿದ ಕ್ರೀಡಾಪಟುಗಳನ್ನು ರಾಷ್ಟ್ರಮಟ್ಟದ ಕ್ರೀಡಾಕೂಟಕ್ಕೆ ಕಳುಹಿಸಿಕೊಡಲಾಗುವುದು.

**ಮಹಿಳಾ ಕ್ರೀಡಾಕೂಟಗಳು :** ಬಾಲಕಿಯರು ಮತ್ತು ಮಹಿಳೆಯರಲ್ಲಿ ಹುದುಗಿರುವ ಕ್ರೀಡಾ ಪ್ರತಿಭೆಯ ವಿಕಸನಕ್ಕಾಗಿ ಪ್ರತಿವರ್ಷ ತಾಲ್ಲೂಕು, ಜಿಲ್ಲಾ ಮತ್ತು ರಾಜ್ಯ ಮಟ್ಟದಲ್ಲಿ ಮಹಿಳಾ ಕ್ರೀಡಾ ಕೂಟಗಳನ್ನು ನಡೆಸಲಾಗುವುದು. ಆಗ ಉತ್ತಮ ಕ್ರೀಡಾಪಟುಗಳನ್ನು ಪತ್ತೆ ಹಚ್ಚುವ ಕಾರ್ಯವೂ ನಡೆಯುತ್ತದೆ.

ರಾಜ್ಯ ಸರ್ಕಾರಿ ನೌಕರರ ಕ್ರೀಡಾಕೂಟಗಳು ರಾಜ್ಯ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ನೌಕರರ ಕ್ರೀಡಾ ಮನೋಭಾವ ಬೆಳೆಸಲು, ಯುವಜನ ಸೇವೆ ಮತ್ತು ಕ್ರೀಡಾ ಇಲಾಖಾ ವತಿಯಿಂದ ಪ್ರತಿವರ್ಷ ಜಿಲ್ಲಾ ವಿಭಾಗ ಮತ್ತು ರಾಜ್ಯಮಟ್ಟದಲ್ಲಿ ಸರ್ಕಾರಿ ನೌಕರರ ಕ್ರೀಡಾ ಕೂಟಗಳನ್ನು ಏರ್ಪಡಿಸಲಾಗುವುದು.

ಕ್ರೀಡೆಗಳಲ್ಲಿ ವಿಶೇಷ ಆಸಕ್ತಿಯಿರುವ ಸರ್ಕಾರಿ ನೌಕರರಿಗೆ ಇದರಿಂದ ಪ್ರೋತ್ಸಾಹ ದೊರೆಯುವುದಲ್ಲದೆ, ಸರ್ಕಾರಿ ನೌಕರರಿಗೆ ಸೇರಿದ ಅನಂತರ ಕ್ರೀಡೆಗಳಲ್ಲಿ ಭಾಗವಹಿಸುವ ಅವಕಾಶ ವಿರಳವಾದ್ದರಿಂದ ಅವರ ಆಸಕ್ತಿ ಕುಂದದಂತೆ, ಕ್ರೀಡಾ ಆಸಕ್ತಿಯನ್ನು ಬೆಳೆಸಿಕೊಳ್ಳಲು ಅವಕಾಶ ಕಲ್ಪಿಸುವುದಾಗಿದೆ.

**ಶಾಸಕರ ಕ್ರೀಡಾಕೂಟ :** ರಾಜ್ಯದ ಜನಪ್ರತಿನಿಧಿಗಳಾದ ವಿಧಾನಸಭೆ ಮತ್ತು ವಿಧಾನ ಪರಿಷತ್ತಿನ ಸದಸ್ಯರುಗಳಿಗೆ ಕ್ರೀಡೆಗಳಲ್ಲಿ ಹೆಚ್ಚಿನ ಆಸಕ್ತಿಯನ್ನು ಮೂಡಿಸಲು ಹಾಗೂ ಕ್ರೀಡಾ ಪ್ರತಿಭೆ ಇರುವ ಸದಸ್ಯರಿಗೆ ಆಸಕ್ತಿಯನ್ನು ಬೆಳೆಸಲು ಇಲಾಖೆಯ ವತಿಯಿಂದ ಪ್ರತಿವರ್ಷ ಶಾಸಕರ ಕ್ರೀಡಾಕೂಟವನ್ನು ಸಂಘಟಿಸಲಾಗುತ್ತಿದೆ.

### ಕ್ರೀಡಾ ಕಲ್ಯಾಣ ಯೋಜನೆಗಳು

**ಕ್ರೀಡಾ ವಿದ್ಯಾರ್ಥಿವೇತನ :** ಶಿಕ್ಷಣದಲ್ಲಿ ಕ್ರೀಡೆಗಳನ್ನು ಪ್ರೋತ್ಸಾಹಿಸಲು ಪ್ರೌಢಶಾಲೆಗಳಲ್ಲಿನ ವಿದ್ಯಾರ್ಥಿ, ವಿದ್ಯಾರ್ಥಿನಿಯರು ವಿವಿಧ ಕ್ರೀಡಾಕೂಟಗಳಲ್ಲಿ ರಾಜ್ಯ ಮತ್ತು ರಾಷ್ಟ್ರಮಟ್ಟದ ಕ್ರೀಡೆಗಳಲ್ಲಿ ಭಾಗವಹಿಸಿ ಪ್ರಥಮ ಸ್ಥಾನವನ್ನು ಪಡೆದಿದ್ದರೆ, ಅಂಥವರಿಗೆ ಪ್ರೋತ್ಸಾಹ ಮತ್ತು ಉತ್ತೇಜನ ನೀಡಲು ಇಲಾಖೆಯ ವತಿಯಿಂದ ವಾರ್ಷಿಕ ಕ್ರೀಡಾ ವಿದ್ಯಾರ್ಥಿ ವೇತನವನ್ನು ನೀಡಲಾಗುತ್ತಿದೆ.

**ಸಂಕಷ್ಟದಲ್ಲಿರುವ ಕ್ರೀಡಾಪಟುಗಳಿಗೆ ನೆರವು :** ರಾಜ್ಯ, ರಾಷ್ಟ್ರ ಹಾಗೂ ಅಂತಾರಾಷ್ಟ್ರೀಯ ಮಟ್ಟದ ಕ್ರೀಡಾ ಸ್ಪರ್ಧೆಗಳಲ್ಲಿ ವಿಶೇಷ ಸಾಧನೆಗೈದ, ಆರ್ಥಿಕವಾಗಿ ದುಃಸ್ಥಿತಿಯಲ್ಲಿರುವ ಕ್ರೀಡಾಪಟುಗಳಿಗೆ ಇಲಾಖೆಯಿಂದ ಮಾಸಾಶನವನ್ನು ನೀಡಲಾಗುತ್ತಿದೆ. ಸಂಕಷ್ಟದಲ್ಲಿರುವ ಕುಸ್ತಿಪಟುಗಳಿಗೂ ಮಾಸಾಶನ ಸೌಲಭ್ಯವನ್ನು ಕಲ್ಪಿಸಲಾಗಿದೆ.

**ವೃತ್ತಿ ಶಿಕ್ಷಣದ ಪ್ರವೇಶಗಳಲ್ಲಿ ಕ್ರೀಡಾ ಮೀಸಲಾತಿ :** ರಾಜ್ಯ, ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಮಟ್ಟದ ಕ್ರೀಡಾ ಸ್ಪರ್ಧೆಗಳಲ್ಲಿ ಅಪೂರ್ವ ಸಾಧನೆ ಮಾಡಿದ ಕ್ರೀಡಾಪಟುಗಳು ಪಾಲಿಟೆಕ್ನಿಕ್, ಎಂಜಿನಿಯರಿಂಗ್, ವೈದ್ಯಕೀಯ, ದಂತ ವೈದ್ಯಕೀಯಗಳಂತಹ ಇತರೇ ವೃತ್ತಿಪರ ಕೋರ್ಸ್‌ಗಳಿಗೆ ಪ್ರವೇಶ ಬಯಸಿ ಅರ್ಜಿ ಸಲ್ಲಿಸಿದ್ದರೆ ಕ್ರೀಡಾಸಾಧನೆಯ ಆಧಾರದ ಮೇಲೆ ಅವರಿಗೆ ಸೀಟು ಹಂಚಿಕೆ ಮಾಡಲು ಇಲಾಖೆಯಿಂದ ಸಾಮಾನ್ಯ ಪ್ರವೇಶ ಘಟಕದ ವಿಶೇಷಾಧಿಕಾರಿಗಳಿಗೆ ಶಿಫಾರಸ್ಸು ಮಾಡುತ್ತಿದೆ.

ರಾಜೀವ್ ಗಾಂಧಿ ಖೇಲ್ ರತ್ನ ಪ್ರಶಸ್ತಿಗೆ ಹಾಗೂ ದ್ರೋಣಾಚಾರ್ಯ ಪ್ರಶಸ್ತಿಗೆ ಅರ್ಹ ಅಭ್ಯರ್ಥಿಗಳನ್ನು ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆ ಶಿಫಾರಸು ಮಾಡುವುದು.

**ದ್ರೋಣಾಚಾರ್ಯ ಪ್ರಶಸ್ತಿ:** ಈ ಪ್ರಶಸ್ತಿಯನ್ನು ಕೇಂದ್ರ ಸರ್ಕಾರವು 1985 ರಲ್ಲಿ ಸ್ಥಾಪಿಸಿದೆ. ಇದನ್ನು ಯಾವುದೇ ವ್ಯಕ್ತಿ ಅಥವಾ ತಂಡಕ್ಕೆ ತರಬೇತಿಯನ್ನು ನೀಡಿ ಅದು ಅಂತಾರಾಷ್ಟ್ರೀಯ ಕ್ರೀಡಾಕೂಟದಲ್ಲಿ ಅತ್ಯುತ್ತಮ ಸಾಧನೆಯನ್ನು ಸಾಧಿಸಿ ಪದಕ ಪಡೆಯಲು ಕಾರಣವಾದ ತರಬೇತುದಾರರಿಗೆ ನೀಡಲಾಗುತ್ತಿದೆ. ಇದನ್ನು ಪಡೆದವರಿಗೆ ದ್ರೋಣಾಚಾರ್ಯರ ವಿಗ್ರಹ ಮತ್ತು 2,50,000 ರೂ.ಗಳ ನಗದು ಬಹುಮಾನ ಹಾಗೂ ಪ್ರಶಸ್ತಿಯನ್ನು ನೀಡಲಾಗುವುದು.

**ಅರ್ಜುನ ಪ್ರಶಸ್ತಿ :** ಇದು ರಾಷ್ಟ್ರದ ಅತ್ಯುನ್ನತ ಕ್ರೀಡಾ ಪ್ರಶಸ್ತಿ. 1961ರಲ್ಲಿ ಇದನ್ನು ಸ್ಥಾಪಿಸಲಾಗಿದೆ. ಈ ಪ್ರಶಸ್ತಿಯನ್ನು ಪಡೆಯಲು ಕ್ರೀಡಾಪಟುವಿನ ಪ್ರಸ್ತುತ ವರ್ಷದ ಮತ್ತು ಕಳೆದ ಮೂರು ವರ್ಷಗಳ ಸಾಧನೆಯನ್ನು ಪರಿಗಣಿಸಲಾಗುವುದು. ಅವರ ಬದುಕಿನ ಅತ್ಯುತ್ತಮ ಕ್ರೀಡಾ

ಸಾಧನೆಗೆ ಇದನ್ನು ನೀಡಲಾಗುವುದು. ಈ ಪ್ರಶಸ್ತಿ ಕಂಚಿನ ಅರ್ಜುನನ ಪ್ರತಿಮೆಯಿಂದ ಕೂಡಿದ್ದು, ಜೊತೆಯಲ್ಲಿ ಪ್ರಶಸ್ತಿಪತ್ರ ಮತ್ತು ಒಂದೂವರೆ ಲಕ್ಷ ರೂಪಾಯಿಗಳ ನಗದನ್ನು ಹೊಂದಿರುತ್ತದೆ. 1995ರ ಅನಂತರ ಈ ಪ್ರಶಸ್ತಿಯನ್ನು ನೀಡಲಾಗುತ್ತಿದೆ. ಈ ಪ್ರಶಸ್ತಿ ಪಡೆಯಲು ಒಬ್ಬ ಕ್ರೀಡಾ ಪಟು ಒಲಿಂಪಿಕ್, ಏಷ್ಯನ್, ಕಾಮನ್‌ವೆಲ್ತ್ ಮುಂತಾದ ಮನ್ನಣೆ ಪಡೆದ ಆಟಗಳಲ್ಲಿ ಭಾಗವಹಿಸಿದವನಾಗಿರಬೇಕು. ಭಾರತೀಯ ಆಟಗಳಲ್ಲಿ ಮಹತ್ತರವಾದ ಸಾಧನೆಯನ್ನು ಮಾಡಿದವರೂ ಈ ಪ್ರಶಸ್ತಿಗೆ ಅರ್ಹರಾಗಿರುತ್ತಾರೆ.

ಅಂಗವಿಕಲ ಕ್ರೀಡಾಪಟುಗಳು, ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಕ್ರೀಡಾಕೂಟಗಳಲ್ಲಿ ಪ್ರಶಸ್ತಿ ವಿಜೇತರಾಗಿ ಅತ್ಯುತ್ತಮ ಸಾಧನೆಗೈದವರಿಗೂ ಈ ಪ್ರಶಸ್ತಿ ನೀಡಲಾಗುತ್ತದೆ.

**ಏಕಲವ್ಯ ಪ್ರಶಸ್ತಿ :** ಕರ್ನಾಟಕದ ಉದಯೋನ್ಮುಖ ಆಟಗಾರರನ್ನು ಪ್ರೋತ್ಸಾಹಿಸುವ, ಹೆಚ್ಚಿನ ಸಾಧನೆಗೈಯಲು ಪೂರಕವಾದ ಪ್ರಶಸ್ತಿ. ಕರ್ನಾಟಕ ಸರ್ಕಾರದ ಈ ಪ್ರಶಸ್ತಿ ಏಕಲವ್ಯನ ಕಂಚಿನ ಪ್ರತಿಮೆ, ಐವತ್ತು ಸಾವಿರ ರೂಪಾಯಿ ನಗದು ಬಹುಮಾನ ಹಾಗೂ ಪ್ರಶಸ್ತಿ ಪತ್ರವನ್ನೊಳಗೊಂಡಿರುತ್ತದೆ. ಇದು ಕರ್ನಾಟಕದ ಯಾವುದೇ ಕ್ರೀಡಾಪಟು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಕ್ರೀಡಾಕೂಟಗಳಲ್ಲಿ ಗಳಿಸುವ ಸಾಧನೆಯನ್ನು ಅವಲಂಬಿಸಿದೆ. ಕನಿಷ್ಠ ಐದುವರ್ಷಗಳ ಸಾಧನೆಯನ್ನು ಈ ಪ್ರಶಸ್ತಿಗೆ ಪರಿಗಣಿಸಲಾಗುವುದು. ಎಲ್ಲ ವಿಭಾಗದಲ್ಲೂ ಪ್ರಶಸ್ತಿಗಳಿವೆ.

ದೇವರಾಜ್ ಅರಸು ಕ್ರೀಡಾ ಮತ್ತು ಯುವಜನ ಅಭಿವೃದ್ಧಿ ಸಂಸ್ಥೆ ರಾಜ್ಯದಲ್ಲಿ ಯುವಜನ ಸೇವೆ ಹಾಗೂ ಕ್ರೀಡೆಗಳಿಗೆ ಸಂಬಂಧಿಸಿದಂತೆ ತರಬೇತಿ ಕಾರ್ಯಕ್ರಮಗಳನ್ನು ರೂಪಿಸಲು ಹಾಗೂ ಯುವಜನ ಸೇವಾ ಚಟುವಟಿಕೆಗಳ ಬಗ್ಗೆ ಅಧ್ಯಯನ ನಡೆಸಲು ದೇವರಾಜ ಅರಸ್ ಕ್ರೀಡಾ ಮತ್ತು ಯುವಜನ ಅಭಿವೃದ್ಧಿ ಸಂಸ್ಥೆಯನ್ನು ಸ್ಥಾಪಿಸಲಾಗಿದೆ. ವಿವಿಧ ತರಬೇತಿ ಕಾರ್ಯಕ್ರಮಗಳ ರೂಪ ರೇಷೆಗಳನ್ನು ಸಿದ್ಧಪಡಿಸುವುದು ಮತ್ತು ಯುವಜನ ಸೇವಾ ಮತ್ತು ಕ್ರೀಡಾ ಕಾರ್ಯಕ್ರಮಗಳ ಬಗ್ಗೆ ಯೋಜನೆಗಳನ್ನು ಸಿದ್ಧಪಡಿಸುವುದು ಈ ಸಂಸ್ಥೆಯ ಮುಖ್ಯ ಉದ್ದೇಶ. ಈ ಸಂಸ್ಥೆಯು ಇಲಾಖೆಯ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ಸಂಶೋಧನಾ ಮತ್ತು ಅಭಿವೃದ್ಧಿ ಶಾಖೆಯಾಗಿ ಕಾರ್ಯನಿರ್ವಹಿಸುವುದು.

### ಕ್ರೀಡಾ ಸೌಲಭ್ಯಗಳು

**ತಾಲ್ಲೂಕು ಮತ್ತು ಜಿಲ್ಲಾ ಕ್ರೀಡಾಂಗಣಗಳು :** ಕ್ರೀಡಾ ಚಟುವಟಿಕೆಗೆ ಪ್ರೇರಕವಾದ ಕ್ರೀಡಾಂಗಣಗಳು ಮತ್ತು ಸೌಲಭ್ಯಗಳು ಬಲು ಆವಶ್ಯಕ. ಈಗಾಗಲೇ ಎಲ್ಲಾ ತಾಲ್ಲೂಕು ಕೇಂದ್ರಗಳಲ್ಲಿ ಕ್ರೀಡಾಂಗಣ ನಿರ್ಮಾಣಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದ್ದು ಹೊಸ ಜಿಲ್ಲೆಗಳನ್ನು ಹೊರತುಪಡಿಸಿ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿಯೂ ಕ್ರೀಡಾ ಚಟುವಟಿಕೆಗಳು ನಡೆಯುತ್ತಿವೆ.

**ಒಳಾಂಗಣ ಕ್ರೀಡಾಂಗಣ :** ಬೆಂಗಳೂರಿನಲ್ಲಿರುವ ಕಂಠೀರವ ಒಳಾಂಗಣ ಕ್ರೀಡಾಂಗಣ ಮತ್ತು ಕೋರಮಂಗಲ ಒಳಾಂಗಣ ಕ್ರೀಡಾಂಗಣಗಳಲ್ಲಿ ಹಾಗೂ ಮೈಸೂರಿನ ಚಾಮುಂಡಿ ವಿಹಾರ ಕ್ರೀಡಾಂಗಣದಲ್ಲಿ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ವತಿಯಿಂದ ಕ್ರೀಡಾ ಚಟುವಟಿಕೆಗಳನ್ನು ಸಂಘಟಿಸಲಾಗುತ್ತಿದೆ.

**ವಿಶೇಷ ಕ್ರೀಡಾಂಗಣಗಳು :** ಬೆಂಗಳೂರಿನಲ್ಲಿ 4ನೆಯ ರಾಷ್ಟ್ರೀಯ ಕ್ರೀಡೆಗಳನ್ನು ಸಂಘಟಿಸಿದ ಕಾಲಕ್ಕೆ ಕಂಠೀರವ ಒಳಾಂಗಣ ಕ್ರೀಡಾಂಗಣ, ಹೊಂಬೇಗೌಡನಗರ ಕೊಕ್ಕೊ ಕ್ರೀಡಾಂಗಣ, ರಾಜ್ಯ ಫುಟ್‌ಬಾಲ್ ಸಂಸ್ಥೆಯ ಕ್ರೀಡಾಂಗಣವನ್ನು ಬೆಂಗಳೂರಿನಲ್ಲಿ ಹಾಗೂ ಚಾಮುಂಡಿ ವಿಹಾರ ಒಳಾಂಗಣ ಕ್ರೀಡಾಂಗಣವನ್ನು ಮೈಸೂರಿನಲ್ಲಿ ವಿಶೇಷವಾಗಿ ನಿರ್ಮಾಣ ಮಾಡಲಾಗಿದ್ದು ಇಲ್ಲಿ ಕ್ರೀಡಾ ಚಟುವಟಿಕೆಗಳನ್ನು ವ್ಯವಸ್ಥಿತವಾಗಿ ಸಂಘಟಿಸಲಾಗುತ್ತಿದೆ.

### ಅರ್ಜುನ ಪ್ರಶಸ್ತಿ ಪಡೆದ ಕನ್ನಡಿಗರು

| ಹೆಸರು | ವರ್ಷ | ಆಟ |
|---|---|---|
| ಕೆನೆತ್ ಎಲ್. ಪೊವೆಲ್ | 1965 | ಅಥ್ಲೆಟಿಕ್ಸ್ |
| ಎಲ್ವಿರಾ ಬ್ರಿಟೊ | 1965 | ಹಾಕಿ (ಮಹಿಳಾ) |
| ವಿ.ಜೆ.ಪೀಟರ್ | 1966 | ಹಾಕಿ |
| ಉಷಾ ಸುಂದರ್‌ರಾಜ್ | 1966 | ಟೇಬಲ್ ಟೆನ್ನಿಸ್ |
| ಇ.ಎ.ಎಸ್.ಪ್ರಸನ್ನ | 1966 | ಕ್ರಿಕೆಟ್ |
| ಶೋಭಾ ಮೂರ್ತಿ | 1970 | ಬ್ಯಾಡ್ಮಿಂಟನ್ |
| ಪ್ರಕಾಶ ಪಡುಕೋಣೆ | 1972 | ಬ್ಯಾಡ್ಮಿಂಟನ್ |
| ಜಯಮ್ಮ ಶ್ರೀನಿವಾಸ್ | 1972 | ಬ್ಯಾಡ್ಮಿಂಟನ್ |
| ಬಿ.ಎಸ್.ಚಂದ್ರಶೇಖರ್ | 1973 | ಕ್ರಿಕೆಟ್ |
| ಎಂ.ಎ.ಗಣೇಶ್ | 1973 | ಹಾಕಿ |
| ಬಿ.ಪಿ.ಗೋವಿಂದ | 1975 | ಹಾಕಿ |
| ಶಾಂತಾರಂಗಸ್ವಾಮಿ | 1975 | ಮಹಿಳಾ ಕ್ರಿಕೆಟ್ |
| ಜಿ.ಆರ್.ವಿಶ್ವನಾಥ್ | 1977 | ಕ್ರಿಕೆಟ್ |
| ಏಂಜಲ್ ಮೇರಿ ಜೋಸೆಫ್ | 1978 | ಅಥ್ಲೆಟಿಕ್ಸ್ |
| ಸಿ.ಸಿ.ಮಾಚಯ್ಯ | 1978 | ಸ್ನೂಕರ್ |
| ಅರವಿಂದ ಸವೂರ್ | 1978 | ಸ್ನೂಕರ್ |
| ಎಸ್.ಎಂ.ಎಚ್.ಕಿರ್ಮಾನಿ | 1980 | ಕ್ರಿಕೆಟ್ |
| ಎಸ್.ಪ್ರಕಾಶ್ | 1980 | ಕೊಕ್ಕೊ |
| ಸುಧನ್ವ ಎಸ್.ಮಾನೆ | 1985 | ಹಾಕಿ |
| ವಂದನಾರಾವ್ | 1987 | ಅಥ್ಲೆಟಿಕ್ಸ್ |
| ಡಿ.ವಿ.ಪ್ರಸಾದ್ | 1987 | ಚೆಸ್ |
| ಅಶ್ವಿನಿ ನಾಚಪ್ಪ | 1988 | ಅಥ್ಲೆಟಿಕ್ಸ್ |
| ಪಿ.ಕೆ.ಯಶೋಧರ್ | 1988 | ಪವರ್‌ಲಿಫ್ಟಿಂಗ್ |
| ಜೂಡ್ ಫೆಲಿಕ್ಸ್ | 1993 | ಹಾಕಿ |
| ಅನಿಲ್ ಕುಂಬ್ಳೆ | 1995 | ಕ್ರಿಕೆಟ್ |
| ಮಾಲತಿಹೊಳ್ಳ (ಅಂಗವಿಕಲೆ) | 1995 | ಅಥ್ಲೆಟಿಕ್ಸ್ |
| ಶ್ರೀನಾಥ್, ಜಾವಗಲ್ | 1996 | ಕ್ರಿಕೆಟ್ |
| ಕು.ಯು.ಸುಂದರ್‌ರಾಜ್ (ಅಂಗವಿಕಲ) | 1996 | ಟೇಬಲ್ ಟೆನ್ನಿಸ್ |
| ಕಲ್ಲೇಗೌಡ | 1996 | ಕ್ರಿಕೆಟ್ |
| ಎ.ಬಿ.ಸುಬ್ಬಯ್ಯ | 1996 | ಹಾಕಿ |
| ಅಶಿಶ್ ಬಲ್ಲಾಳ್ | 1996 | ಹಾಕಿ |
| ರೀತ್ ಅಬ್ರಹಾಂ | 1997 | ಅಥ್ಲೆಟಿಕ್ಸ್ |
| ಚೇತನ್ ಬಬೂರ್ | 1997 | ಟೇಬಲ್ ಟೆನ್ನಿಸ್ |
| ಮಹದೇವಯ್ಯ (ಅಂಗವಿಕಲ) | 1997 | ಅಥ್ಲೆಟಿಕ್ಸ್ |
| ಎನ್.ಸಿ.ಈಶನ್ | 1998 | ಅಥ್ಲೆಟಿಕ್ಸ್ |
| ರಾಹುಲ್ ದ್ರಾವಿಡ್ | 1998 | ಕ್ರಿಕೆಟ್ |
| ಶೋಭಾ ನಾರಾಯಣ | 1998 | ಕೊಕ್ಕೊ |
| ಸತೀಶ್‌ರೈ | 1998 | ವೇಟ್‌ಲಿಫ್ಟಿಂಗ್ |
| ಹೊನ್ನಪ್ಪ | 1998 | ಕಬಡ್ಡಿ |
| ವೆಂಕಟೇಶ್ ಪ್ರಸಾದ್ | 1999-2000 | ಕ್ರಿಕೆಟ್ |
| ಅಭಿಜಿತ್ | 1999-2000 | ಈಜು |
| ರಮೇಶ್ | 2001-2002 | ಕಬಡ್ಡಿ |

(ಎಸ್.ಆರ್.ಯು.)

**ಕ್ರೈಸ್ತಧರ್ಮ :** ಕರ್ನಾಟಕದಲ್ಲಿ ಕ್ರೈಸ್ತಧರ್ಮದ ಸ್ಪಷ್ಟ ಗುರುತು ಸಿಕ್ಕುವುದು ಪೋರ್ಚುಗೀಸರು ಭಾರತಕ್ಕೆ ಬಂದ ಕಾಲದಿಂದೀಚೆಗೆ, 16ನೆಯ ಶತಮಾನದ ಆದಿಯಿಂದ ರೋಮನ್ ಕ್ಯಾತೊಲಿಕ್ ಪಂಥದವರೂ 19ನೆಯ ಶತಮಾನದ ಆದಿಯಲ್ಲಿ ಪ್ರಾಟೆಸ್ಟಂಟರ ವಿವಿಧ ಪಂಥಗಳವರೂ ಕರ್ನಾಟಕದಲ್ಲಿ ಕ್ರೈಸ್ತಧರ್ಮವನ್ನು ವ್ಯವಸ್ಥಿತವಾಗಿ ಸ್ಥಾಪಿಸಿದರು.

ಇದಕ್ಕಿಂತ ಹಿಂದೆಯೇ ಕ್ರೈಸ್ತಧರ್ಮ ಕರ್ನಾಟಕದಲ್ಲಿ ಇತ್ತು ಎಂಬುದಕ್ಕೆ ಕೆಲವು ಸಾಕ್ಷ್ಯಾಧಾರಗಳು ದೊರೆತಿವೆ. ಕ್ರಿಸ್ತನ ಹನ್ನೆರಡು ಸ್ವಂತ ಶಿಷ್ಯರಲ್ಲಿ ಒಬ್ಬನಾದ ಸೇಂಟ್ ಥಾಮಸ್ ಸು.ಕ್ರಿ.ಶ.52ರಲ್ಲಿ ಗುಡ್ನಾಫಾರ್ ಎಂಬ ರಾಜನ ಆಮಂತ್ರಣದ ಮೇರೆಗೆ ಭಾರತಕ್ಕೆ ಬಂದನೆಂದೂ ಮಜ್ದಾಯ್ ಎಂಬವನ ರಾಜ್ಯದಲ್ಲಿಯೂ ಮತಪ್ರಚಾರ ಮಾಡಿದನೆಂದೂ 3ನೆಯ ಶತಮಾನದ ಸಿರಿಯನ್ ಭಾಷೆಯ ಆ್ಯಕ್ಟ್ಸ್ ಆಫ್ ಸೇಂಟ್ ಥಾಮಸ್‍ನಲ್ಲಿ ಹೇಳಿದೆ. ಗುಡ್ನಾಫಾರ್ ಎಂದರೆ ಮೈಸೂರಿನ ಕುಟ್ನಾಫಾರ್ ಅಥವಾ ಕಂದಪ್ಪ ರಾಜನಿರಬಹುದು ಎಂದು ಕೆಲವು ವಿದ್ವಾಂಸರ ಅಭಿಪ್ರಾಯ. ಮಜ್ದಾಯ್ ರಾಜ ಕೇರಳ ಅಥವಾ ಕೋರಮಂಡಲ್ ಅಥವಾ ಮೈಸೂರಿನವನು ಇರಬಹುದು ಎಂದು ಇನ್ನು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಪರ್ಷಿಯ, ಸಿರಿಯ ಮತ್ತು ಆರ್ಮೇನಿಯ ದೇಶಗಳ ಕ್ರೈಸ್ತ ವರ್ತಕರು ಕನ್ನಡ ಕರಾವಳಿಯಲ್ಲಿ ವ್ಯಾಪಾರಕ್ಕೋಸ್ಕರ ಮತ್ತು ಮತಪ್ರಚಾರಕ್ಕೋಸ್ಕರ ವಸಾಹತುಗಳನ್ನು ಸ್ಥಾಪಿಸಿದ್ದಿರಬಹುದು. ಚೆನ್ನೈ ಸಮೀಪದ ಮೈಲಾಪುರದ ಸೇಂಟ್ ಥಾಮಸನ ಸಮಾಧಿಯ ದೇವಾಲಯಕ್ಕೆ ಉಂಬಳಿಯನ್ನು ಕೊಟ್ಟ ಶಾಸನ ಸಿಕ್ಕಿದೆ. ಇದರಲ್ಲಿ ಬುಕ್ಕರಾಯನ ಹೆಸರಿದೆ. ಇದರ ಕಾಲ 1376 ಎಂದು ಅನುಮಾನಿಸಲಾಗಿದೆ. ಮುಂಬಯಿ ಬಳಿಯ ಕಲ್ಯಾಣ, ಠಾಣಾಗಳಲ್ಲಿ ಮತಪ್ರಚಾರ ಮಾಡುತ್ತಿದ್ದ ಫ್ರಾಯರ್ ಜೋರ್ಡಾನಸ್ 1324ರಲ್ಲಿ ತನ್ನ ಸಹ ಧರ್ಮೋಪದೇಶಕರಿಗೆ ಸಲ್ಲಿಸಿದ ಮನವಿಯ ಫಲವಾಗಿ ಐದು ಮಂದಿ ಡೊಮಿನಿಕನ್ ಸಂನ್ಯಾಸಿಗಳು ಕೆನರಾ (ಕನ್ನಡ ಜಿಲ್ಲೆಗಳು) ಮತ್ತು ಮೈಸೂರು ಪ್ರದೇಶಗಳಿಗೆ ಧರ್ಮಪ್ರಚಾರಕ್ಕಾಗಿ ಬಂದರು. 1328 ರಷ್ಟರಲ್ಲಿ ಈ ಪ್ರದೇಶಗಳಲ್ಲಿ ಒಟ್ಟು 10,000 ಮಂದಿ ಕ್ರೈಸ್ತರಿದ್ದರು. 1483ರಲ್ಲಿ ರತ್ನಖಚಿತವಾದ ಶಿಲುಬೆಯ ಪ್ರತಿಮೆಯೊಂದು ಮಂಗಳೂರಿನ ಬಳಿ ಸಮುದ್ರದಲ್ಲಿ ಸಿಕ್ಕಿತಂತೆ. ಕಾರವಾರದ ಸಮೀಪದ ಅಂಜದೀವ ದ್ವೀಪದಲ್ಲಿ ಪೋರ್ಚುಗೀಸರು ದುರ್ಗವನ್ನು ಕಟ್ಟುವಾಗ ಶಿಲುಬೆಯ ಗುರುತುಳ್ಳ ಕಲ್ಲುಗಳು ಸಿಕ್ಕಿದುವು. 1400ರದು ಎನ್ನಲಾದ ಒಂದು ಕ್ರೈಸ್ತ ಸಮಾಧಿಶಾಸನ ಬೆಂಗಳೂರಿನ ಸಮೀಪದ ಆನೇಕಲ್ಲಿನಲ್ಲಿ ಇದೆ. ದಕ್ಷಿಣ ಕನ್ನಡದ ಕಲ್ಯಾಣಪುರದಲ್ಲಿ ಬಹು ಹಿಂದೆ ಇದ್ದರೆನ್ನಲಾದ ಕ್ರೈಸ್ತರ ಯಾವ ಕುರುಹೂ 16ನೆಯ ಶತಮಾನದ ಹೊತ್ತಿಗೆ ಉಳಿದಿರಲಿಲ್ಲ. ಆದರೆ 1502ರಲ್ಲಿ ವಾಸ್ಕೊಡಗಾಮನ ಎರಡನೆಯ ಪ್ರಯಾಣದ ಕಾಲದಲ್ಲಿ ಮಂಗಳೂರಿನ ಕ್ರೈಸ್ತ ನಿವಾಸಿಗಳು ಒಂದು ರಾಯಭಾರ ನಿಯೋಗವನ್ನು ಪೋರ್ಚುಗೀಸರಲ್ಲಿಗೆ ಕಳಿಸಿದರು ಎಂದು ತಿಳಿದುಬರುತ್ತದೆ. ವಿಜಯನಗರದ ಸಾಮ್ರಾಜ್ಯದಲ್ಲಿ ಕ್ರೈಸ್ತರು ಸೇರಿದಂತೆ ಎಲ್ಲ ಧರ್ಮಗಳ ಜನರು ಸಮಾನ ಸ್ವಾತಂತ್ರ್ಯವನ್ನು ಪಡೆದಿದ್ದರು ಎಂದು ವಿದೇಶೀ ಯಾತ್ರಿಕರು ಬರೆದಿದ್ದಾರೆ. ಇವೆಲ್ಲಾ ಕರ್ನಾಟಕದಲ್ಲಿ ಕ್ರೈಸ್ತ ಧರ್ಮ ಪೋರ್ಚುಗೀಸರು ಬರುವ ಮೊದಲೇ ಇತ್ತೆಂಬುದಕ್ಕೆ ಸಾಕ್ಷಿ.

1510ರಲ್ಲಿ ಗೋವೆ ಪೋರ್ಚುಗೀಸರ ವಶವಾದ ಮೇಲೆ ಅಲ್ಲಿ ಅನೇಕರು ಮತಾಂತರಗೊಂಡರು. 1560ರಲ್ಲಿ ಇಂಕ್ವಿಜಿಷನ್ ಎಂಬ ಧಾರ್ಮಿಕ ನ್ಯಾಯಾಲಯಗಳ ಉಗ್ರಕ್ರಮಗಳನ್ನು ತಪ್ಪಿಸುವುದಕ್ಕೋಸ್ಕರ ಈ ಕ್ರೈಸ್ತರು ಕನ್ನಡ ಜಿಲ್ಲೆಗಳಿಗೆ ಪಲಾಯನ ಮಾಡಿದರು. ಇಕ್ಕೇರಿಯ ನಾಯಕರು ಇವರನ್ನು ಆದರಪೂರ್ವಕ ಬರಮಾಡಿ ಕೃಷಿ ಇತ್ಯಾದಿ ವೃತ್ತಿಗಳಲ್ಲಿ ನಿರತರಾಗುವಂತೆ ಧನಸಹಾಯ ನೀಡಿದರು. ಈ ಜನ ಕ್ರಮೇಣ ಪ್ರತಿಷ್ಠಿತ ವರ್ಗವಾಗಿ ಸ್ಥಾಪಿತವಾದರು. ಶಿವಪ್ಪನಾಯಕನ ರಾಜ್ಯದಲ್ಲಿದ್ದ ಕ್ರೈಸ್ತರ ಸಂಖ್ಯೆಯನ್ನು 6,000 ಎಂದೂ 30,000 ಎಂದೂ ಬೇರೆ ಬೇರೆ ವಿದ್ವಾಂಸರು ನಮೂದಿಸಿದ್ದಾರೆ. 1683ರಲ್ಲಿ ಮರಾಠರು ಗೋವೆಯನ್ನು ಆಕ್ರಮಿಸಿದಾಗಲೂ ಇದೇ ರೀತಿಯಲ್ಲಿ ಕ್ರೈಸ್ತರು ಮತ್ತೊಮ್ಮೆ ಕನ್ನಡ ಜಿಲ್ಲೆಗಳನ್ನು ಪ್ರವೇಶಿಸಿ ನೆಲಸಿದರು. ಸ್ಥಳಾಂತರಗೊಂಡ ಕ್ರೈಸ್ತರಲ್ಲದೆ ಕರ್ನಾಟಕದ ಆಯಾ ಸ್ಥಳಗಳ ಜನರು ಕ್ರೈಸ್ತಧರ್ಮವನ್ನು ಸ್ವೀಕರಿಸಿದುದು ಧರ್ಮಪ್ರಚಾರಕರ ಚಟುವಟಿಕೆಗಳ ಫಲ. 1521ರಲ್ಲಿ ಫ್ರಾನ್ಸಿಸ್ಕನರು ಕನ್ನಡ ಜಿಲ್ಲೆಗಳನ್ನು ಪ್ರವೇಶಿಸಿ ಉಳ್ಳಾಲ, ಫರಂಗಿಪೇಟೆ ಮತ್ತು ಮಂಗಳೂರಿನಲ್ಲಿ ಕ್ರೈಸ್ತ ದೇವಾಲಯಗಳನ್ನು ಸ್ಥಾಪಿಸಿದರು. 1570ರಲ್ಲಿ ಜೆಸ್ವಿಟ್ ಸಂನ್ಯಾಸಿಗಳು ದಕ್ಷಿಣ ಕನ್ನಡದ ಬಸರೂರಿನಲ್ಲಿ ಕ್ರೈಸ್ತ ದೇವಾಲಯವನ್ನು ಕಟ್ಟಿದ್ದರು. ಬೆಳಗಾಂವಿ ಸಮೀಪದ ಖಾನಾಪುರದಲ್ಲಿ 1606ರಲ್ಲೂ ಕಾರವಾರ ಸಮೀಪದ ಸುಂಕೇರಿಯಲ್ಲಿ 1709ರಲ್ಲೂ ಅತ್ತಿಕುರುವಿನಲ್ಲಿ (ಕಿತ್ತೂರು) 1740ರಲ್ಲೂ ಧರ್ಮಪ್ರಚಾರ ಕೇಂದ್ರಗಳು ಸ್ಥಾಪನೆಯಾದವು. ಬಿದನೂರು, ಸೋಂದಾ ರಾಜರ ಅನುಗ್ರಹ ಇವರಿಗೆ ಲಭಿಸಿತ್ತು.

ಇತ್ತ ಮೈಸೂರಿನಲ್ಲಿ 1587ರಲ್ಲಿ ಫ್ರಾನ್ಸಿಸ್ಕನರು ಸುವಾರ್ತೆಗಳನ್ನು ಪ್ರಚಾರ ಮಾಡಿದರು. ರಣಧೀರ ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ ರಾಜನ ಸಹಾನುಭೂತಿಯನ್ನೂ ಗೌರವವನ್ನೂ ಸಂಪಾದಿಸಿದ್ದ ಗೋವೆಯ ಜೆಸ್ವಿಟ್ ಸಂನ್ಯಾಸಿ ಲಿಯೊನಾರ್ಡೊ ಸಿನ್ನಾಮಿ ಮೈಸೂರಿನಲ್ಲಿ ವ್ಯವಸ್ಥಿತ ಧರ್ಮಬೋಧನೆಯನ್ನು ಆರಂಭಿಸಿದ. 1648ರಲ್ಲಿ ಶ್ರೀರಂಗಪಟ್ಟಣವನ್ನು ತಲಪುವ ಮೊದಲು ಕನ್ನಡ ಜಿಲ್ಲೆಗಳಲ್ಲಿ ಇವನ ದುಡಿಮೆ ನಿರೀಕ್ಷಿಸಿದ ಫಲವನ್ನು ಕೊಡಲಿಲ್ಲವಂತೆ. ಭಾರತೀಯ ಸಂನ್ಯಾಸಿಯಂತೆ ವೇಷಭೂಷಣಗಳನ್ನು ಧರಿಸಿ ಕ್ರೈಸ್ತಧರ್ಮವನ್ನು ಸತ್ಯವೇದವೆಂಬ ಹೆಸರಿನಲ್ಲಿ ಪ್ರಚಾರ ಮಾಡಿದ. ಬಸವಪುರ, ರಾಮಪುರ ಮತ್ತು ಶ್ರೀರಂಗಪಟ್ಟಣದಲ್ಲಿ ಹೆಚ್ಚಾಗಿ ಬ್ರಾಹ್ಮಣರು, ಸೋನೆಗಾರರು, ಒಕ್ಕಲು ಮಕ್ಕಳು ಹೊಸ ಧರ್ಮವನ್ನು ಸ್ವೀಕರಿಸಿದರು. ಕೆಲವು ಆಸ್ಥಾನ ಅಧಿಕಾರಿಗಳೂ ಕ್ರೈಸ್ತರಾದರು.



ಮಿಲಿಗ್ರಿಸ್ ಚರ್ಚ್, ಮಂಗಳೂರು

ಹೀಗೆ ಆರಂಭವಾದ ಕ್ರೈಸ್ತಧರ್ಮದ ಚರಿತ್ರೆಯಲ್ಲಿ ಕೆಲವು ಏಳುಬೀಳುಗಳನ್ನು ಗಮನಿಸಬಹುದು. ಮಂಗಳೂರು ಮತ್ತು ಬಾರಕೂರುಗಳಿಂದ ಕ್ರೈಸ್ತಮತ ಒಳನಾಡನ್ನು ಪ್ರವೇಶಿಸಿತು. ಕ್ರೈಸ್ತರು ಸ್ಥಿತಿವಂತರೂ ಆಗಿದ್ದು ಪೋರ್ಚುಗೀಸರ ಬೆಂಬಲವನ್ನು ಪಡೆದವರು ಎಂಬ ಕಾರಣದಿಂದ ರಾಜರ, ಅಧಿಕಾರಿಗಳ ಗೌರವಕ್ಕೆ ಪಾತ್ರರಾಗಿದ್ದರು. ವಿಜಯನಗರದ ಆಸ್ಥಾನದಲ್ಲಿ ನಿಮ್ಮೊ ಪೆಜಿರ್ ಎಂಬ ಸಮರ್ಥನಾದ ಕ್ರೈಸ್ತ ಮಂತ್ರಿ ಇದ್ದನೆಂದು ಹೇಳಲಾಗಿದೆ. ಶಿವಪ್ಪನಾಯಕ ದೇಶೀಯ ಕ್ರೈಸ್ತ ಪುರೋಹಿತ ವರ್ಗವನ್ನು ಸ್ಥಾಪಿಸುವ ವಿಷಯವನ್ನು ಚರ್ಚಿಸಲು ಗೋವೆಗೆ ತನ್ನ ಪ್ರತಿನಿಧಿಗಳನ್ನು ಕಳಿಸಿದ್ದ. ಕನ್ನಡ ಜಿಲ್ಲೆಗಳಲ್ಲಿ 16 ಮತ್ತು 17ನೆಯ ಶತಮಾನಗಳಲ್ಲಿ ಪುರೋಹಿತರ ಅಭಾವದಿಂದಾಗಿ ಕ್ರೈಸ್ತರ ಧಾರ್ಮಿಕ ಕ್ಷೇಮಪಾಲನೆಗೆ ಧಕ್ಕೆಯುಂಟಾಯಿತು. ಫಾದರ್ ಜೋಸೆಫ್ ವಾಜ್ ಎಂಬವನು ಈ ಪರಿಸ್ಥಿತಿಯನ್ನು ಬಹಳ ಮಟ್ಟಿಗೆ ಸುಧಾರಿಸಿದ. ಕರ್ನಾಟಕದಲ್ಲಿರುವ ಕ್ರೈಸ್ತರು ಗೋವೆಯ ಬಿಷಪರ ಅಧಿಕಾರವ್ಯಾಪ್ತಿಗೆ ಒಳಪಟ್ಟಿದ್ದರು.

ಫಾದರ್ ಜೆಯೋಕಿಮ್ ಮಿರಾಂಡಾ ಎಂಬುವನು ಬರೆದ ರಿಗ್ಲೊ ಜೆಜು ಎಂಬ ಕೊಂಕಣಿ ಕಾವ್ಯ, ಫಾದರ್ ಸ್ಟೀವನ್ಸ್ 1614ರಲ್ಲಿ ಬರೆದ ಕ್ರಿಸ್ತಾಂವ್ ಪುರಾಣ ಎಂಬ ಬೃಹತ್ ಕಾವ್ಯ ಇವು ಮಂಗಳೂರಿನಲ್ಲಿ ಜನಪ್ರಿಯವಾದುವು. ಫರಂಗಿಪೇಟೆಯಲ್ಲಿ ಪುರೋಹಿತರ ತರಬೇತಿ ಕೇಂದ್ರ ಸೆಮಿನರಿ ಸ್ಥಾಪಿತವಾಯಿತು. ಜೆಸ್ವಿಟರು ಅಂಕೋಲ, ಸುಪ, ಶಿವೇಶ್ವರಗಳಲ್ಲಿ ಕೆಲಸ ಮಾಡುತ್ತಿದ್ದು, ಜೊಯ್ಡಾದಲ್ಲಿ ಒಂದು ವಿದ್ಯಾಕೇಂದ್ರವನ್ನು ತೆರೆದರು. 1637ರಲ್ಲಿ ಬಿಜಾಪುರವನ್ನು 1666ರಲ್ಲಿ ಕನ್ನಡ ಜಿಲ್ಲೆಗಳನ್ನೂ ವಿಕ್ಯಾರಿಯೆಟ್ ಎಪೊಸ್ಟಾಲಿಕ್ ಎಂಬ ಧರ್ಮಕ್ಷೇತ್ರಗಳನ್ನಾಗಿ ಪೋಪ್ ಸ್ಥಾಪಿಸಿದ. 1759ರಲ್ಲಿ ಪೋರ್ಚುಗಲ್ಲಿನ ಆಧಿಪತ್ಯದಿಂದ ಜೆಸ್ವಿಟರನ್ನು ಬಹಿಷ್ಕರಿಸಿದ್ದಾಗ ಕಾರ್ಮೆಲೈಟ್ ಸಂಸ್ಥೆಯವರು ಅವರ ಕೆಲಸವನ್ನು ಮುಂದುವರಿಸಿದರು. ಇವರ ಕಾರ್ಯಕ್ಷೇತ್ರಕ್ಕೆ ಒಳಪಟ್ಟ ಧಾರವಾಡ ಜಿಲ್ಲೆಯ

ತುಮರಿಕೊಪ್ಪ ಹಳ್ಳಿಯಲ್ಲಿ ಮತಪ್ರಚಾರಕಾರ್ಯ ವಿಶೇಷವಾದ ಯಶಸ್ಸನ್ನು ಗಳಿಸಿತು. ಸಂತ ಮೇರಿಯ ಜೀವನಚರಿತ್ರೆಯನ್ನು ಒಳಗೊಂಡ ಹಳೆಯ ತಾಳೆಗರಿಗಳನ್ನು ಇಲ್ಲಿ ಹಲವರ ಮನೆಗಳಲ್ಲಿ ಕಾಣುವುದು ಅಪರೂಪವಲ್ಲ. 1783ರಲ್ಲಿ ಕನ್ನಡ ಜಿಲ್ಲೆಗಳಲ್ಲಿ ಇಪ್ಪತ್ತೇಳು ಕ್ರೈಸ್ತ ದೇವಾಲಯಗಳಿದ್ದುವು.

ಈ ಮಧ್ಯೆ, ಕ್ರೈಸ್ತಧರ್ಮದ ಪ್ರಚಾರಕ್ಷೇತ್ರಗಳಿಗೆ ಧನಸಹಾಯವನ್ನು ಒದಗಿಸಿದುದಕ್ಕೆ ಪ್ರತಿಯಾಗಿ ಬಿಷಪರನ್ನು ನೇಮಕ ಮಾಡುವುದರಲ್ಲಿ ಪೋರ್ಚುಗೀಸ್ ರಾಜನಿಗೆ ಪೋಪ್ ಅಧಿಕಾರ ಕೊಟ್ಟಿದ್ದ. ಪಾದ್ರೊವಾದೊ ಎಂದು ಈ ಒಪ್ಪಂದಕ್ಕೆ ಹೆಸರು ಬಂದಿತ್ತು. ಕನ್ನಡ ಜಿಲ್ಲೆಗಳೇ ಮೊದಲಾದ ಪ್ರದೇಶಗಳಲ್ಲಿ ಪಾದ್ರೊವಾದೊ ಅಧಿಕಾರ ಮಾನ್ಯವೇ ಪೋಪನ ಧರ್ಮ ಪ್ರಚಾರ ಸಂಸ್ಥೆಯ ಅಧಿಕಾರ ಮಾನ್ಯವೇ ಎಂಬುದರ ಬಗ್ಗೆ ಅನೇಕ ವಿವಾದಗಳು ಎದ್ದವು. ಇತ್ತಂಡದ ಅಧಿಕಾರವ್ಯಾಪ್ತಿಗೆ ಕೆಲವು ಪ್ರದೇಶಗಳು ಸೇರಿದವು. ಈ ಪ್ರಶ್ನೆ 1886ರಲ್ಲಿ ಸಮರ್ಪಕವಾಗಿ ಬಗೆಹರಿಯಿತು.

ಇಂಗ್ಲಿಷರಿಗೆ ಕ್ರೈಸ್ತರು ಸಹಾನುಭೂತಿಯನ್ನು ತೋರಿಸುತ್ತಿದ್ದುದರಿಂದ ಟಿಪ್ಪುಸುಲ್ತಾನ 1784ರಲ್ಲಿ ತನ್ನ ಆಧಿಪತ್ಯದಲ್ಲಿದ್ದ ಕನ್ನಡ ಜಿಲ್ಲೆಗಳು, ಬಿದನೂರು, ಸುಂಕೇರಿ ಪ್ರದೇಶಗಳ ಎಲ್ಲ ಕ್ರೈಸ್ತರನ್ನು ಸಾಮೂಹಿಕವಾಗಿ ಬಂಧಿಸಿ ಶ್ರೀರಂಗಪಟ್ಟಣಕ್ಕೆ ಸಾಗಿಸಿದನೆಂದೂ ಗಂಡಸರು ಹೆಂಗಸರು ಮಕ್ಕಳು ಸೇರಿದಂತೆ ಒಟ್ಟು 30,000 ಕ್ರೈಸ್ತರನ್ನು ಬಂಧಿಸಲಾಯಿತೆಂದೂ ಟಿಪ್ಪುವಿಗೆ ನಿಷ್ಠಾವಂತರಾದ 5,000 ಕ್ರೈಸ್ತರು ಯಾವ ತೊಂದರೆಯನ್ನೂ ಅನುಭವಿಸಲಿಲ್ಲ ಹಾಗೂ ಸೆರೆಯಾಳುಗಳನ್ನು ಬಲಾತ್ಕಾರವಾಗಿ ಮತಾಂತರಗೊಳಿಸಲಾಯಿತಲ್ಲದೆ ಬಗೆಬಗೆಯಲ್ಲಿ ಹಿಂಸಿಸಲಾಯಿತೆಂದೂ ಹೇಳಲಾಗುತ್ತದೆ. ಆದರೆ ಈ ಕ್ರಮದಿಂದ ವಿಶೇಷವಾದ ರಾಜಕೀಯ ಪ್ರಯೋಜನವಾಗಲಿಲ್ಲ ವಾದುದರಿಂದ ಮತ್ತು ಫ್ರೆಂಚ್ ಸರ್ಕಾರದ ಒತ್ತಡದಿಂದ 1789ರಲ್ಲಿ ಕ್ರೈಸ್ತರ ಬಿಡುಗಡೆಯಾಯಿತು. ಕೆಲವರು ಕನ್ನಡ ಜಿಲ್ಲೆಗಳಿಗೆ ಹಿಂದಿರುಗಿ ಬಹಳ ಶ್ರಮಪಟ್ಟು ತಮ್ಮ ಆಸ್ತಿಗಳನ್ನು ಪುನಃ ಪಡೆದರು. ಈ ಕ್ರೈಸ್ತರನ್ನು ಪುನರ್ವಸತಿಗೊಳಿಸುವ ಕೆಲಸದಲ್ಲಿ ಅಬೆಡುಬಾಯಿ ಮತ್ತು ಫಾದರ್ ಫ್ರಾನ್ಸಿಸ್ ಜೇವಿಯರ್ ದೊಡ್ಡಪಾತ್ರವನ್ನು ವಹಿಸಿದರು. ಟಿಪ್ಪುವಿನ ಹಿಂಸಾಚಾರವನ್ನು ತಪ್ಪಿಸಲು 1792ರಲ್ಲಿ ಅನೇಕ ಕ್ರೈಸ್ತರು ಕೊಡಗಿನಲ್ಲಿ ನೆಲಸಿದರು. 1784ರ ಮೊದಲೇ ಕ್ರೈಸ್ತಮತ ಪ್ರಚಾರಕಾರ್ಯ ನಡೆದರೂ ಕೊಡಗಿನಲ್ಲಿ ಆ ಮೊದಲು ಕ್ರೈಸ್ತರಿದ್ದಂತೆ ಕಾಣದು. 1730ರಲ್ಲಿ ರಾಜನ ಆಮಂತ್ರಣವನ್ನು ಸ್ವೀಕರಿಸಿ ಫಾದರ್ ರೆಬೆಲೊ ಎಂಬವನು ಮಡಿಕೇರಿಗೆ ಬಂದಿದ್ದ. ಕ್ರೈಸ್ತರಿಗೆ ಕ್ರೈಸ್ತಧರ್ಮ ಪ್ರಚಾರಕ್ಕೆ ರಕ್ಷಣೆಯನ್ನು ಕೊಡುವುದಾಗಿ ರಾಜ ಆಗ ಆಶ್ವಾಸನೆಯನ್ನು ನೀಡಿದ್ದ.

ಮೈಸೂರು ಪ್ರದೇಶದಲ್ಲಿ ಕ್ರೈಸ್ತಧರ್ಮ ಬಹುಬೇಗನೆ ಹರಡಿತು. 1700ರ ಹೊತ್ತಿಗೆ ಹದಿನೆಂಟು ಮಂದಿ ಮಿಷನರಿಗಳೂ 30,000 ಮಂದಿ ಕ್ರೈಸ್ತರೂ ಇದ್ದರು. ಬಸವಪುರ, ಕಾನಕಾನಹಳ್ಳಿ, ಹಾರುಬರೆ, ಕೆಲಮಂಗಳ ಇವು ಕೆಲವು ಮುಖ್ಯ ಕ್ರೈಸ್ತಧರ್ಮ ಕೇಂದ್ರಗಳಾದವು. ಧರ್ಮಪುರಿಯಿಂದ ಬೆಂಗಳೂರಿಗೆ ಕ್ರೈಸ್ತಮತ ಹಬ್ಬಿತು. ಸಿನ್ನಾಮಿ ಎಂಬುವನು ಕನ್ನಡದಲ್ಲಿ (ಲಿಂಗ್ವ, ಕನರಿಕ, ಮಲಬಾರಿಕ ಎಂದು ಕನ್ನಡವನ್ನು ಅವನು ಹೆಸರಿಸಿದ್ದ) ಧರ್ಮೋಪದೇಶ, ಧರ್ಮೋಪದೇಶ ಸಂಹಿತೆ, ಸಂತರ ಜೀವನ ಚರಿತ್ರೆಗಳು, ಧರ್ಮಸಮರ್ಥನೆ ಮೊದಲಾದ ವಿಷಯಗಳನ್ನು ಕುರಿತು ಪುಸ್ತಕಗಳನ್ನು ಬರೆದ. ನಿಮ್ನವರ್ಗದವರನ್ನು ಮತಾಂತರಗೊಳಿಸಲು ಗೊಡೊರೊ (ಗುಡೂರು) ಮಗ್ಗೆ,ಕಲಗಂಜಿ ಮೊದಲಾದ ಕಡೆಗಳಲ್ಲಿ ಹಲವು ಧರ್ಮೋಪದೇಶಕರು ದುಡಿಯುತ್ತಿದ್ದರು. ಶಿರಾ, ರಾಯಚೂರು, ಕಿತ್ತೂರು, ತುಮರಿಕೊಪ್ಪ, ಸೆಟ್ಟಿಹಳ್ಳಿಗಳಲ್ಲಿ ಕ್ರೈಸ್ತಧರ್ಮ ಪ್ರಚಾರಕಾರ್ಯ 18ನೆಯ ಶತಮಾನದ ಆದಿಭಾಗದಲ್ಲಿ ಭರದಿಂದ ಸಾಗಿತು.

1672ರಲ್ಲಿ ಮೈಸೂರಿನ ರಾಜ ಕೆಲವು ದುರುದ್ದೇಶಿಗಳ ಮಾತುಗಳನ್ನು ಕೇಳಿ ಮಿಷನರಿಗಳನ್ನು ಶ್ರೀರಂಗಪಟ್ಟಣದಿಂದ ಹೊರಗೆ ಹಾಕಿದ್ದ. ಮತ್ತೆ ಅವರಿಗೆ ಪ್ರವೇಶ ದೊರೆತದ್ದು 1684ರಲ್ಲಿ. 1711ರಲ್ಲಿ ಮಾನ್ವೆಲ್ ದೆ ಕೂನ್ಹಾ ಎಂಬ ಜೆಸ್ವಿಟ್ ಸಂನ್ಯಾಸಿಯನ್ನು ಬೆಂಗಳೂರು ಸಮೀಪದ ಕಂಗೊಂಡಿಯಲ್ಲಿ ವಿಧರ್ಮೀಯರು (ದಾಜರೋಗಳು ಎಂದು ಮಿಷನರಿ ವರದಿಗಳು ಇವರನ್ನು ನಿರ್ದೇಶಿಸಿದ್ದಾರೆ), ಹೊಡೆದು ತೀವ್ರವಾಗಿ ಗಾಯಗೊಳಿಸಿದರು. ದೆ ಕೂನ್ಹಾ ಎರಡು ಮೂರು ದಿನಗಳೊಳಗೆ ಅಸು ನೀಗಿದ. ಆನೇಕಲ್ಲಿನಲ್ಲಿ ಇವನ ಸಮಾಧಿ ಇದೆ ಎಂದು ಪ್ರತೀತಿ. ಪೋರ್ಚುಗಲ್ ಆಧಿಪತ್ಯದಿಂದ ಜೆಸ್ವಿಟರನ್ನು ಬಹಿಷ್ಕರಿಸಿದಮೇಲೆ ಮೈಸೂರಿಗೆ ಹೊಸತಾಗಿ ಬಂದ ಧರ್ಮೋಪದೇಶಕರು ಇಲ್ಲವೇ ಇಲ್ಲ ಎನ್ನಬೇಕು. ಆಗ ಇಲ್ಲಿ ದುಡಿಯುತ್ತಿದ್ದ ಹದಿಮೂರು ಜೆಸ್ವಿಟರು ಮತ್ತು ಐವತ್ತೇಳು ಸಹಾಯಕರು ಮೈಸೂರಿನಲ್ಲಿಯೇ ಉಳಿದುಕೊಂಡರು. ಮೈಸೂರು ಪ್ರಾಂತ್ಯವನ್ನು ಕಾರ್ಮೆಲೈಟ್ ಸಂಸ್ಥೆಯವರ ವಶಕ್ಕೆ ಪೋಪ್ ಒಪ್ಪಿಸಿದ. ಆದರೆ ಇವರು ವಹಿಸಿದ ಆಸಕ್ತಿಯ ಚಿಹ್ನೆಯೇನೂ ಕಾಣದು. 1800ರ ಬಳಿಕ ಮೈಸೂರಿನಲ್ಲಿದ್ದ ಸು.25,000 ಕ್ರೈಸ್ತರ ಸಂಖ್ಯೆ ಕಾರಣಾಂತರವಾಗಿ ಬಹಳ ಕ್ಷೀಣಿಸಿತು. ಕೆಲವರು ಸಣ್ಣಪುಟ್ಟ ಸೈನ್ಯಗಳನ್ನು ಸೇರಿ ತಮ್ಮ ಆಚಾರ, ಧರ್ಮವನ್ನು ಕಡೆಗಣಿಸಿದರು. ಇನ್ನು ಕೆಲವರು ಹೆಚ್ಚು ಧಾರ್ಮಿಕ ಸ್ವಾತಂತ್ರ್ಯ ಮತ್ತು ರಕ್ಷಣೆ ಇರುವ ಮದರಾಸು ರಾಜ್ಯದಲ್ಲಿ ನೆಲೆಸಿದರು. ಪ್ಯಾರಿಸಿನ ಫ್ರೆಂಚ್ ಫಾರಿನ್ ಮಿಷನ್ ಸಂಸ್ಥೆಯವರ ಪುರೋಹಿತರು ಮೈಸೂರು ಪ್ರದೇಶದಲ್ಲಿ ಕ್ರೈಸ್ತಧರ್ಮವನ್ನು ರಕ್ಷಿಸಿ, ಊರ್ಜಿತಗೊಳಿಸಿ ಈಗಿರುವ ಸ್ಥಿತಿಗೆ ಕಾರಣರಾದರು.



ಸಂತ ಫಿಲೋಮಿನ ಚರ್ಚ್, ಮೈಸೂರು

ಈವರೆಗೆ ನೋಡಿದ ಚರಿತ್ರೆ ರೋಮನ್ ಕ್ಯಾತೊಲಿಕ್ ಪಂಥದವರದು. ಕರ್ನಾಟಕದಲ್ಲಿ ಪ್ರಾಟೆಸ್ಟಂಟರು ಮತಪ್ರಚಾರ ಮಾಡಿದುದು 1800ರ ಬಳಿಕ. ಕ್ರಿಶ್ಚಿಯನ್ ಫ್ರೆಡರಿಕ್ ಷ್ವಾರ್ಟ್ಜ್ ಎಂಬ ಡೇನಿಶ್ ಲುತೆರನ್ ಮಿಷನರಿ ಮೈಸೂರಿನಲ್ಲಿ ಸುವಾರ್ತೆಗಳನ್ನು ಪ್ರಚಾರ ಮಾಡಿದ ಮೊದಲ ಪ್ರಾಟೆಸ್ಟಂಟ್ ಪಾದ್ರಿ. ಹೈದರ್ ಇವನನ್ನು ಬಹಳವಾಗಿ ಗೌರವಿಸುತ್ತಿದ್ದ. ಲಂಡನ್ ಮಿಷನರಿ ರೇ ಜಾನ್ ಹ್ಯಾಂಡ್ಸ್ ಬಳ್ಳಾರಿಯಲ್ಲಿ (1810), ವೆಸ್ಲಿಯನ್ ಮೆತಡಿಸ್ಟ್ ಮಿಷನರಿ ರೇ ಥಾಮಸ್ ಹಡ್ಸನ್ ಗುಬ್ಬಿಯಲ್ಲಿ (1815), ಬಾಸೆಲ್ ಮಿಷನ್‌ನವರು ಮಂಗಳೂರು (1834) ಮತ್ತು ಧಾರವಾಡ (1837) ಈ ಸ್ಥಳಗಳಲ್ಲಿ ಮಿಷನ್ ನೆಲೆಗಳನ್ನು ಸ್ಥಾಪಿಸಿದರು. ವೆಸ್ಲಿಯನ್ ಮಿಷನ್‌ನವರು ಗುಬ್ಬಿ, ಕುಣಿಗಲು, ತುಮಕೂರು, ಹಾಸನ, ಶಿವಮೊಗ್ಗೆಯಲ್ಲಿ, ಬಾಸೆಲ್ ಮಿಶನ್‌ನವರು ಹುಬ್ಬಳ್ಳಿ, ಬೆಟಗೇರಿ, ಗುಳೇದಗುಡ್ಡ, ಮೈಸೂರು, ಕೋಲಾರ, ಬಿಜಾಪುರಗಳಲ್ಲಿ, ಲಂಡನ್

ಮಿಷನ್‌ನವರು ಬೆಂಗಳೂರು, ಚಿಕ್ಕಬಳ್ಳಾಪುರ, ಗೌರಿಬಿದನೂರುಗಳಲ್ಲಿ ಕಾರ್ಯನಿರತರಾದರು. ಹೆಚ್ಚಾಗಿ ಕೆಳವರ್ಗದ ಜನತೆಗೆ ಕ್ರೈಸ್ತಧರ್ಮವನ್ನು ಇವರು ಬೋಧಿಸಿದರು. ಹ್ಯಾಂಡ್ಸನ್ ಮೊತ್ತಮೊದಲಿಗೆ ಬೈಬಲನ್ನು ಕನ್ನಡಕ್ಕೆ ಭಾಷಾಂತರಮಾಡಿದ.



ಸೋಮವಾರಪೇಟೆ ಚರ್ಚ್

ಕನ್ನಡ ಜಿಲ್ಲೆಗಳು ಬ್ರಿಟಿಷರ ವಶವಾದ ಮೇಲೆ ಗೋವೆಯಿಂದ ಮತ್ತೆ ಪುರೋಹಿತರು ಬರಲಾರಂಭಿಸಿದರು. ಪ್ರತಿಭಾವಂತ ಸ್ಥಳೀಯ ಯುವಕರು ಗೋವೆಯಲ್ಲಿ ತರಬೇತಿಗೊಂಡು ಪುರೋಹಿತರಾಗಿ ಮರಳುತ್ತಿದ್ದರು. 1878ರಲ್ಲಿ ಮಂಗಳೂರು ಮಿಷನ್ ಪ್ರದೇಶವನ್ನು ಜೆಸ್ವಿಟರು ವಹಿಸಿಕೊಂಡರು. 19 ಮತ್ತು 20ನೆಯ ಶತಮಾನಗಳಲ್ಲಿ ಕನ್ನಡ ಜಿಲ್ಲೆಗಳಲ್ಲಿ ಕ್ರೈಸ್ತಧರ್ಮ ಸಮೃದ್ಧವಾಗಿ ಬೆಳೆಯಿತು. ಕರ್ನಾಟಕದ ಇತರ ಭಾಗಗಳಲ್ಲೂ ಇದೇ ಬಗೆಯ ಬೆಳವಣಿಗೆಯನ್ನು ಗುರುತಿಸಬಹುದು.

19ನೆಯ ಶತಮಾನದಿಂದ ಈಚೆಗೆ ಕ್ರೈಸ್ತಧರ್ಮದವರ ಚಟುವಟಿಕೆಗಳು ಧಾರ್ಮಿಕ ವಲಯವನ್ನು ಮೀರಿದುವು. ಈ ಅವಧಿಯಲ್ಲಿ ಹುಟ್ಟಿಬಂದ ಅನೇಕ ಕ್ರೈಸ್ತ ಸಂಸ್ಥೆಗಳು ಕ್ರೈಸ್ತೇತರರಿಗೆ ಪ್ರವೇಶಾವಕಾಶವನ್ನು ಕಲ್ಪಿಸಿಕೊಟ್ಟು ಕರ್ನಾಟಕದ ಜನತೆಗೆ ಸೇವೆ ಸಲ್ಲಿಸಿವೆ. ಶಿಕ್ಷಣಕ್ಷೇತ್ರದಲ್ಲಿ 1879ರಲ್ಲಿ ಮಂಗಳೂರಿನಲ್ಲಿ ಸ್ಥಾಪನೆಯಾದ ಜೆಸ್ವಿಟರ್ ಸೇಂಟ್ ಅಲಾಸಿಯಸ್ ಕಾಲೇಜು, ಎಪೊಸ್ಟಾಲಿಕ್ ಕಾರ್ಮೆಲ್ ಕನ್ಯಾಸ್ತ್ರೀಯರು (ಸಿಸ್ಟರ್ಸ್) ಹೆಣ್ಣುಮಕ್ಕಳಿಗಾಗಿ ತೆರೆದ ಸೇಂಟ್ ಆಗ್ನಿಸ್ ಕಾಲೇಜು ಮತ್ತು ಸೇಂಟ್ ಆ್ಯನ್ಸ್ ಕಾಲೇಜು, 1882ರಲ್ಲಿ ಪ್ಯಾರಿಸಿನ ಫಾರಿನ್ ಮಿಷನ್ ಸಂಸ್ಥೆಯವರು ತೆರೆದ ಸೇಂಟ್ ಜೋಸೆಫ್ ಕಾಲೇಜುಗಳು ಸ್ಮರಣೀಯವಾಗಿವೆ. ಬೆಥನಿ ಕನ್ಯಾಸ್ತ್ರೀಯರೂ ಕರ್ನಾಟಕದಲ್ಲಿ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಾರೆ. ವೈದ್ಯಕೀಯ ಸೇವಾಕ್ಷೇತ್ರದಲ್ಲಿ ಫಾದರ್ ಮುಲ್ಲರ್ 1891ರಲ್ಲಿ ಹೋಮಿಯೋಪತಿ ಚಿಕಿತ್ಸೆಯನ್ನು ಮಂಗಳೂರಿನಲ್ಲಿ ಕಂಕನಾಡಿ ಆಸ್ಪತ್ರೆಯಲ್ಲಿ ಆರಂಭಿಸಿದ. ಬೆಂಗಳೂರಿನಲ್ಲಿ ಗುಡ್ ಶೆಫರ್ಡ್ ಕನ್ಯಾಸ್ತ್ರೀಯರು ನಡೆಸುವ ಸೇಂಟ್ ಮಾರ್ತಾ ಆಸ್ಪತ್ರೆ, ಮೈಸೂರಿನ ವೆಸ್ಲಿಯನ್ ಮಿಷನ್ ಅವರ ಹೋಲ್ಡ್ಸ್‌ವರ್ತ್ ಮೆಮೋರಿಯಲ್ ಆಸ್ಪತ್ರೆ ಉಲ್ಲೇಖಾರ್ಹವಾಗಿವೆ. ಔದ್ಯೋಗಿಕ ತರಬೇತಿಯಲ್ಲಿ ಬಾಸೆಲ್ ಮಿಶನ್‌ನವರ ಕೈಮಗ್ಗದ ನೇಯ್ಗೆ, ಹೆಂಚಿನ ಉದ್ಯಮ, ಅಚ್ಚುಕೂಟ ಪ್ರಖ್ಯಾತವಾದವು. ಜೆಪ್ಪು ಇಂಡಸ್ಟ್ರಿಯಲ್ ವರ್ಕ್‌ಷಾಪ್ ಗಮನಾರ್ಹ. ಇವುಗಳಲ್ಲಿ ಹೆಚ್ಚಿನ ಸಂಸ್ಥೆಗಳು ಈಗಲೂ ನಡೆಯುತ್ತಿವೆ. ಸಾಹಿತ್ಯ ಕ್ಷೇತ್ರದಲ್ಲಿ ಕಿಟ್ಟೆಲ್ ಅವರು ಕನ್ನಡಕ್ಕೆ, ಜೀಗ್ಲರ್ ಅವರು ತುಳು ಭಾಷೆಗೆ, ಮಾಫ್, ಸ್ಟೀವನ್ಸ್ ಅವರು ಕೊಂಕಣಿಗೆ ಸಲ್ಲಿಸಿದ ಸೇವೆ ಅಮೋಘ. ಬೈಬಲ್ ಭಾಷಾಂತರ ಪ್ರಕಟಣೆಯ ಜೊತೆಗೆ, ಪ್ರಾಥಮಿಕ ಮಾಧ್ಯಮಿಕ ವಿದ್ಯಾಭ್ಯಾಸಕ್ಕೆ ಬೇಕಾದ ಪಠ್ಯಪುಸ್ತಕಗಳನ್ನೂ ಪ್ರೌಢ ಸಾಹಿತ್ಯ ಕೃತಿಗಳನ್ನೂ ಬಾಸೆಲ್ ಮಿಶನ್‌ನವರು ಮುದ್ರಿಸಿದರು.

ಕರ್ನಾಟಕದಲ್ಲಿರುವ ಪ್ರಮುಖ ಪ್ರಾಟೆಸ್ಟಂಟ್ ಪಂಥ'ವೆಂದರೆ ಚರ್ಚ್ ಆಫ್ ಸೌತ್ ಇಂಡಿಯ. ವೆಸ್ಲಿ ಮಿಷನ್ನಿನ ಎನ್.ಇ. ತಾಮ್‌ಲಿನ್‌ಸನ್, ರೈಟ್ ರೆವರೆಂಡ್ ಪಿ.ಗುರುಶಾಂತ (ಈ ಎರಡನೆಯವರು ಮೈಸೂರಿನ ಕನ್ನಡಿಗರು) ಮತ್ತು ಲಂಡನ್ ಮಿಷನಿನ ರೇ ಹಿಕ್‌ಲಿಂಗ್ ಇವರ ಮುಂದಾಳುತನದಲ್ಲಿ 1947ರಲ್ಲಿ ಈ ಪಂಥದ ಸ್ಥಾಪನೆಯಾಯಿತು. ವೆಸ್ಲಿಯನ್ ಮಿಷನ್, ಲಂಡನ್ ಮಿಷನ್, ಚರ್ಚ್ ಆಫ್ ಇಂಗ್ಲೆಂಡ್ ಇವುಗಳು ಇದರಲ್ಲಿ ಒಂದುಗೂಡಿವೆ. 1970ರಲ್ಲಿ ಬಾಸೆಲ್ ಮಿಶನ್ ಪಂಥವೂ ಸೇರಿತು. ಧಾರ್ಮಿಕ ನಂಬಿಕೆಗಳಲ್ಲಿ, ಆಚಾರಗಳಲ್ಲಿ, ಆಡಳಿತ ಕ್ರಮದಲ್ಲಿ ಹೊಂದಾಣಿಕೆಯ ಮನೋಭಾವದ ಮೂಲಕ ಏಕರೂಪತೆಯನ್ನು ಸಾಧಿಸುವ ಯಶಸ್ವೀ ಪ್ರಯತ್ನಗಳು ಇಲ್ಲಿ ನಡೆಯುತ್ತಿವೆ. ಇವರಿಗೆ ಸಂಬಂಧಪಟ್ಟಂತೆ ಕರ್ನಾಟಕದಲ್ಲಿ ಮೂರು ಧರ್ಮಪ್ರಾಂತಗಳಿವೆ: (1) ಕೇಂದ್ರ: ಬೆಂಗಳೂರು, ತುಮಕೂರು, ಕೋಲಾರ (2) ಉತ್ತರ: ಹುಬ್ಬಳ್ಳಿ, ಧಾರವಾಡ, ಶಿವಮೊಗ್ಗ, ಬಳ್ಳಾರಿ, ಗುಲ್ಬರ್ಗ, (3) ದಕ್ಷಿಣ: ಮಂಗಳೂರು, ಮಡಿಕೇರಿ, ಹಾಸನ, ಮೈಸೂರು, ಮಂಡ್ಯ. ಈ ಪಂಥ'ಕ್ಕೆ ಸೇರದ ಲೂತರನ್, ಬ್ರದರೆನ್ ಮಿಷನ್, ಪೆಂಟೆಕೋಸ್ಟಲ್ ಮಿಷನ್, ಸೆವೆಂತ್ ಡೇ ಎಡ್ವೆಂಟಿಸ್ಟ್ ಮತ್ತು ಜೆಹೋವಾಸ್ ವಿಟ್‌ನೆಸಸ್ ಎಂಬ ಇತರ ಚಿಕ್ಕಪುಟ್ಟ ಪ್ರಾಟೆಸ್ಟಂಟ್ ಪಂಥ'ಗಳನ್ನೂ ಕರ್ನಾಟಕದಲ್ಲಿ ಅಲ್ಲಲ್ಲಿ ಕಾಣಬಹುದು.

ಕರ್ನಾಟಕದಲ್ಲಿ ಕ್ಯಾತೊಲಿಕರ ಆರು ಸ್ವತಂತ್ರ್ಯ ಧರ್ಮಕ್ಷೇತ್ರಗಳಿವೆ. ಅವು ಬೆಂಗಳೂರು, ಮೈಸೂರು, ಚಿಕ್ಕಮಗಳೂರು, ಮಂಗಳೂರು, ಬಳ್ಳಾರಿ, ಬೆಳಗಾಂವಿ. ಕ್ಯಾತೊಲಿಕರಲ್ಲೂ ಪ್ರಾಟೆಸ್ಟಂಟರಲ್ಲೂ ಕರ್ನಾಟಕದಲ್ಲಿ ಈಗಿರುವ ಧರ್ಮಾಧ್ಯಕ್ಷರೆಲ್ಲ(ಬಿಷಪ್) ಭಾರತೀಯರೇ.

19ನೆಯ ಶತಮಾನದಲ್ಲಿ ಕ್ರೈಸ್ತರು ಸ್ಥಾಪಿಸಿದ ಶಿಕ್ಷಣ, ಸಾಮಾಜಿಕ ಸಂಸ್ಥೆಗಳ ಪ್ರಭಾವ ಇಡೀ ಭಾರತದಲ್ಲಿ ಹರಡಿತು. ಕ್ರೈಸ್ತ ಧಾರ್ಮಿಕ ವಿಷಯಗಳಲ್ಲೂ ಕರ್ನಾಟಕ ಭಾರತದಲ್ಲಿ ಮುಖ್ಯವಾದ ಸ್ಥಾನವನ್ನು ಪಡೆದಿದೆ. ಮಂಗಳೂರಿನ ಸೇಂಟ್ ಜೋಸೆಫ್ ಪಿಟರ್ ಡಯಸೀಜನ್ ಸೆಮಿನರಿಯಲ್ಲಿ ದಕ್ಷಿಣ ಭಾರತದ ನಾನಾ ಭಾಗಗಳಿಗೆ ಬೇಕಾಗುವ ಪುರೋಹಿತರು ತರಬೇತಿಗೊಳ್ಳುತ್ತಾರೆ. ಬೆಂಗಳೂರು ಕ್ರೈಸ್ತ ಧಾರ್ಮಿಕ ಚಟುವಟಿಕೆಗಳ ಬೃಹತ್ ಕೇಂದ್ರವಾಗಿದೆ. ಸಲೇಸಿಯನ್, ರಿಡೆಂಪ್ಟರಿಸ್ಟ್ ಮೊದಲಾದ ಸಂನ್ಯಾಸಿ ಸಂಸ್ಥೆಗಳು, ದೇವಶಾಸ್ತ್ರ ಪೀಠಗಳು, ಬೋಧನ ಶೋಧನಾಂಗಗಳು, ಗ್ರಂಥಾಲಯಗಳು ಇಲ್ಲಿವೆ. ಇಲ್ಲಿನ ಯುನೈಟೆಡ್ ತಿಯೊಲೊಜಿಕಲ್ ಕಾಲೇಜು ಭಾರತದಾದ್ಯಂತ ಪ್ರಾಟೆಸ್ಟಂಟರ ಪುರೋಹಿತರಿಗೆ ತರಬೇತಿ ಕೊಡುತ್ತದೆ. ಕ್ಯಾತೊಲಿಕ್ ಬ್ರದರ್ಸ್‌ಗಳಿಗೆ ಸಿ ಆರ್ ಐ ಇನ್‌ಸ್ಟಿಟ್ಯೂಟ್, ಕನ್ಯಾಸ್ತ್ರೀಯರಿಗೆ ಸುದೀಪ್ ಕೇಂದ್ರಗಳು ಧಾರ್ಮಿಕ ತರಬೇತಿಯನ್ನು ಒದಗಿಸುತ್ತವೆ. ನ್ಯಾಷನಲ್ ಬಿಬ್ಲಿಕಲ್, ಕ್ಯಾಟೆಕೆಟಿಕಲ್ ಅಂಡ್ ಲಿಟರ್ಜಿಕಲ್ ಸೆಂಟರ್, ನ್ಯಾಷನಲ್ ಎಕ್ಯುಮೆನಿಕಲ್ ಸೆಂಟರ್ ಇಂಥ ಸಂಸ್ಥೆಗಳಲ್ಲಿ ಕ್ರೈಸ್ತಧರ್ಮದವರ ಒಕ್ಕೂಟ ಮತ್ತು ಕ್ರೈಸ್ತಧರ್ಮವನ್ನು ಭಾರತೀಯ ಸ್ಥಳೀಯ ಭಾವನೆ ಆಚರಣೆಗಳಿಗೆ ಹೊಂದಿಸಿಕೊಳ್ಳುವ ಬಗೆಗೆ ಅಧ್ಯಯನ ಪ್ರಯೋಗಗಳು ನಡೆಯುತ್ತವೆ. ಪ್ರಾಟೆಸ್ಟಂಟರು ನಡೆಸುವ ಇಂಡಿಯ, ಬರ್ಮ, ಸಿಲೋನ್, ಮತ್ತು ಪಾಕಿಸ್ತಾನಗಳ ಬೈಬಲ್ ಸೊಸೈಟಿ ಸಹ ಬೆಂಗಳೂರಿನಲ್ಲಿದೆ. ಬೈಬಲನ್ನು ದೇಶೀಯ ಭಾಷೆಗಳಿಗೆ ಭಾಷಾಂತರಿಸಿ ಪ್ರಕಟಿಸುವ ಸ್ತುತ್ಯ ಕಾರ್ಯವನ್ನು ಈ ಸಂಸ್ಥೆ ಭಕ್ತಿಶ್ರದ್ಧೆಗಳಿಂದ ನಿರ್ವಹಿಸುತ್ತ ಬಂದಿದೆ. (ಇ.ಎನ್.)

**ಕ್ಲೋಸ್, ಬ್ಯಾರಿ :** 1756-1813. ಮೈಸೂರು ಸಂಸ್ಥಾನದಲ್ಲಿದ್ದ ಪ್ರಥಮ ಬ್ರಿಟಿಷ್ ರೆಸಿಡೆಂಟ್ (1799-1801). 1771ರಲ್ಲಿ ಮದರಾಸು ಸೈನ್ಯವನ್ನು ಸೇರಿ ಬ್ರಿಟಿಷ್ ಈಸ್ಟ್ ಇಂಡಿಯ ಕಂಪನಿಯ ಸೇವೆಯನ್ನು ಪ್ರಾರಂಭಿಸಿದ ಈತ 1780ರ ತಲಚೇರಿ ಕದನದಲ್ಲಿ ಹೈದರನ ಸೈನ್ಯಕ್ಕೆ ಸಿಕ್ಕಿಬಿದ್ದಿದ್ದ. ಅನಂತರ ಬ್ರಿಟಿಷರು ಮತ್ತು ಟಿಪ್ಪುವಿನ ನಡುವೆ ನಡೆದ ಗಡಿನಿರ್ಣಯ ಚರ್ಚೆಯಲ್ಲಿ ಈತ ಭಾಗವಹಿಸಿದ್ದ. 1792 ಮತ್ತು 1799ರಲ್ಲಿ ನಡೆದ ಶ್ರೀರಂಗಪಟ್ಟಣದ ಮುತ್ತಿಗೆಗಳಲ್ಲಿ ಡೆಪ್ಯುಟಿ ಮತ್ತು ಅಸಿಸ್ಟೆಂಟ್ ಅಡ್ಜುಟೆಂಟ್ ಜನರಲ್ ಆಗಿ ಪರಿಣಾಮಕಾರೀ ಪಾತ್ರವಹಿಸಿ ಅಂದಿನ ಮುಖ್ಯಸೈನ್ಯಾಧಿಕಾರಿಯಿಂದ ಪ್ರಶಂಸೆಗಳಿಸಿದ. ಟಿಪ್ಪುವಿನ ಪತನಾನಂತರ ಬ್ರಿಟಿಷರ ವಶಕ್ಕೆ ಬಂದ ಅವನ ರಾಜ್ಯದ ಕೆಲವು ಭಾಗಗಳನ್ನು ಮೈಸೂರು ರಾಜವಂಶದವರಿಗೆ ವಹಿಸಿಕೊಡುವ ಸಲುವಾಗಿ ಗೌರ್ನರ್ ಜನರಲ್ ವೆಲ್ಲೆಸ್ಲಿ ರಚಿಸಿದ ಸಮಿತಿಯ ಸದಸ್ಯನಾಗಿ ಕೆಲಸಮಾಡಿದ (1799). ವೆಲ್ಲೆಸ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಮೈಸೂರು ಸಂಸ್ಥಾನವನ್ನು ಕೊಟ್ಟು, ಅವರ ಆಸ್ಥಾನದಲ್ಲಿ ಕ್ಲೋಸ್‌ನನ್ನು ರೆಸಿಡೆಂಟಾಗಿ ನೇಮಿಸಿದ. 1801ರಲ್ಲಿ ಇವನು ಪುಣೆಗೆ ವರ್ಗವಾದ. ಅಲ್ಲಿ 10 ವರ್ಷಗಳ ಕಾಲ ಸೇವೆ ಸಲ್ಲಿಸಿ ಮೇಜರ್ ಜನರಲ್ ಪದವಿಯನ್ನು ಗಳಿಸಿ (1810) ನಿವೃತ್ತನಾಗಿ (1811) ಇಂಗ್ಲೆಂಡಿಗೆ ಹಿಂದಿರುಗಿದ. ಅಲ್ಲಿ ಬಾರೊನೆಟ್ ಪ್ರಶಸ್ತಿ ಗಳಿಸಿದ. 1813ರಲ್ಲಿ ನಿಧನನಾದ.

ಇವನು ದಕ್ಷ ಆಡಳಿತಗಾರ, ಚಾಣಾಕ್ಷ, ರಾಜಕೀಯ ಮುತ್ಸದ್ದಿ ಎಂದು ಹೆಸರುಗಳಿಸಿದ್ದ. ಭಾರತೀಯರನ್ನು ಸರಿಯಾಗಿ ಅರ್ಥಮಾಡಿಕೊಂಡಿದ್ದ ಹಾಗೂ ಅವರ ಭಾಷೆಗಳನ್ನು ಅರಿತಿದ್ದ ಕೆಲವೇ ಆಡಳಿತಗಾರರಲ್ಲಿ ಅವನೊಬ್ಬ ಎಂದು ವೆಲ್ಲೆಸ್ಲಿ ಹೊಗಳಿದ್ದಾನೆ. ದಿವಾನ್ ಪೂರ್ಣಯ್ಯನವರಿಗೆ ಇವನಲ್ಲಿ ಬಹಳ ವಿಶ್ವಾಸವಿತ್ತು. ಮೈಸೂರು ಸಂಸ್ಥಾನದ ಆಡಳಿತವನ್ನು ಸುವ್ಯವಸ್ಥೆಗೆ ತರಲು ಅವರಿಗೆ ಸಾಧ್ಯವಾದುದು ಇವನ ಸಹಕಾರದಿಂದ.

ಇಂಥ ವ್ಯಕ್ತಿಯ ನೆನಪಿಗಾಗಿ ಪೂರ್ಣಯ್ಯನವರು 1800ರಲ್ಲಿ ಒಂದು ಹೊಸ ಊರನ್ನು ಸ್ಥಾಪಿಸಿ ಕ್ಲೋಸ್‌ಪೇಟೆ ಎಂದು ಹೆಸರಿಟ್ಟರು (ಇದು ಇಂದಿನ ರಾಮನಗರ). (ಕೆ.ಎಸ್.ಎಸ್.)

# ಖ

**ಖಂಡೇರಾವ್, ಜೆ.ಎಸ್. :** 1940. ಹೆಸರಾಂತ ಚಿತ್ರ ಕಲಾವಿದರು. ಗುಲ್ಬರ್ಗದಲ್ಲಿ 1940ರಲ್ಲಿ ಜನಿಸಿದರು. ತಂದೆ ಶಂಕರಪ್ಪ, ತಾಯಿ ಬಸಮ್ಮ. ಇವರ ಪ್ರಾಥಮಿಕ ಶಿಕ್ಷಣ ಗುಲ್ಬರ್ಗದ ಅಸಿಫ್ ಗಂಜ್



ಕನ್ನಡ ಪ್ರಾಥಮಿಕ ಶಾಲೆಯಲ್ಲಿ ನಡೆಯಿತು. ಅನಂತರ ಮುಂಬಯಿಯ ಜೆ.ಜೆ. ಕಲಾ ಶಾಲೆಯಲ್ಲಿ ಡಿಪ್ಲೊಮಾ ಮುಗಿಸಿದರು (1963). ಅನಂತರ ಕರ್ನಾಟಕ ವಿಶ್ವ ವಿದ್ಯಾಲಯದ ಪದವಿ ಪಡೆದು ಗುಲ್ಬರ್ಗದಲ್ಲಿ ದಿ ಐಡಿಯಲ್ ಫೈನ್ ಆರ್ಟ್ಸ್ ಇನ್‌ಸ್ಟಿಟ್ಯೂಟ್ ಎಂಬ ಕಲಾಸಂಸ್ಥೆ ಸ್ಥಾಪಿಸಿದರು. ಅಲ್ಲಿ ನೂರಾರು ಕಲಾವಿದರನ್ನು ರೂಪಿಸಿದ ಹೆಗ್ಗಳಿಕೆ ಇವರದು. ಗುಲ್ಬರ್ಗದಲ್ಲಿ ವಿಶ್ವವಿದ್ಯಾಲಯ ಮಟ್ಟದಲ್ಲಿ ಸ್ನಾತಕೋತ್ತರ ಲಲಿತಕಲಾ ಶಿಕ್ಷಣ ರೂಪು ತಳೆಯುವಲ್ಲಿ ಇವರು ಮಹತ್ತರ ಪಾತ್ರ ವಹಿಸಿದರು.

ಇವರು ಶರಣಬಸವೇಶ್ವರ ಕಾಲೇಜಿನ ಲಲಿತಕಲಾ ಸ್ನಾತಕೋತ್ತರ ಶಿಕ್ಷಣ ವಿಭಾಗದ ನಿರ್ದೇಶಕರಾಗಿಯೂ ವರ್ಣಚಿತ್ರ ವಿಭಾಗದ ಪ್ರವಾಚಕರಾಗಿಯೂ ಸೇವೆಸಲ್ಲಿಸಿದ್ದಾರೆ. ಕಲಾಶಿಕ್ಷಕರಾಗಿ ಮಾತ್ರವಲ್ಲ ಸೃಜನಶೀಲ ಕಲಾವಿದರಾಗಿಯೂ ರಾಷ್ಟ್ರವ್ಯಾಪಿ ಖ್ಯಾತಿ ಗಳಿಸಿದ್ದಾರೆ. ಅನೇಕ ಕಲಾಪ್ರದರ್ಶನಗಳಲ್ಲಿ ಇವರ ಕಲಾಕೃತಿಗಳಿಗೆ ಪುರಸ್ಕಾರ ದೊರೆತಿದೆ. ಅನೇಕ ಕಲಾಶಿಬಿರಗಳಲ್ಲೂ ಇವರು ಭಾಗವಹಿಸಿದ್ದಾರೆ. ಇವರಿಗೆ ಅನೇಕ ಪ್ರಶಸ್ತಿ ಗೌರವಗಳು ಲಭಿಸಿವೆ. ಅವುಗಳಲ್ಲಿ ಮುಖ್ಯವಾದವು - ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ (1988), ರಾಜ್ಯೋತ್ಸವ ಪ್ರಶಸ್ತಿ (1997), ಕರ್ನಾಟಕ ಚಿತ್ರಕಲಾ ಕ್ಷೇತ್ರದಲ್ಲಿಯ ಅನುಪಮ ಸಾಧನೆಗಾಗಿ ಕರ್ನಾಟಕ ಸರ್ಕಾರದ ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ (2002), ಹಂಪಿ ಕನ್ನಡ ವಿಶ್ವವಿದ್ಯಾಲಯ ಇವರಿಗೆ ನಾಡೋಜಪ್ರಶಸ್ತಿ ನೀಡಿ ಗೌರವಿಸಿದೆ. (ಎನ್.ಎಂ.)

**ಖನಿಜಸಂಪತ್ತು :** ಭಾರತದ ಖನಿಜ ಸಂಪತ್ತಿನಲ್ಲಿ ಕರ್ನಾಟಕದ ಪಾತ್ರ ಮುಖ್ಯವಾದದ್ದು. ಭಾರತದಲ್ಲಿ ಉತ್ಪತ್ತಿಯಾಗುವ ಸುಮಾರು ಎಲ್ಲ ಚಿನ್ನವೂ ಕರ್ನಾಟಕದಲ್ಲಿನ ಗಣಿಗಳಿಂದ ಬರುತ್ತಿತ್ತು. ವಿದೇಶದಲ್ಲೆಲ್ಲ ಉತ್ತಮ ದರ್ಜೆಯದೆಂದು ಪ್ರಖ್ಯಾತವಾಗಿರುವ ಕಬ್ಬಿಣದ ಅದುರು ದೊರೆಯುವುದು ಬಳ್ಳಾರಿ ಜಿಲ್ಲೆಯ ಹೊಸಪೇಟೆಯಲ್ಲಿ. ಇದೇ ಅಲ್ಲದೆ ಇನ್ನೂ ಇತರ ಅನೇಕ ಮುಖ್ಯ ಖನಿಜಗಳಿಗೆ ಕರ್ನಾಟಕ ಹೆಸರುವಾಸಿಯಾಗಿದೆ. ಇಲ್ಲಿ ದೊರೆಯುವ ಖನಿಜಗಳನ್ನು ಅವಲಂಬಿಸಿ ಅನೇಕ ಕೈಗಾರಿಕೆಗಳು ದೇಶದ ನಾನಾ ಭಾಗಗಳಲ್ಲಿ ಸ್ಥಾಪಿತವಾಗಿವೆ.

ಕಬ್ಬಿಣ, ಮ್ಯಾಂಗನೀಸ್, ಕ್ರೋಮೈಟ್, ಚಿನ್ನ, ಬೆಳ್ಳಿ, ತಾಮ್ರ, ಬಾಕ್ಸೈಟ್ ಮತ್ತು ಸೀಸ ಈ ಲೋಹದ ಅದುರುಗಳೂ ಬಿಳಿಜೇಡು, ಅಭ್ರಕ, ಕಬ್ಬಿಣದ ಪಿರೈಟೀಸ್ ಈ ಅಲೋಹದ ಅದುರುಗಳೂ ಕರ್ನಾಟಕದ ಖನಿಜ ನಿಕ್ಷೇಪಗಳಲ್ಲಿ ಮುಖ್ಯವಾದವು. ಇವಲ್ಲದೆ ಅನೇಕ ವಿಧವಾದ ಘರ್ಷಕ ಖನಿಜಗಳು, ಅಗ್ನಿ ನಿರೋಧಕ ಅದುರು, ಕಟ್ಟಡ ಹಾಗೂ ಅಲಂಕಾರ ಶಿಲೆಗಳು ಸಹ ಕರ್ನಾಟಕದಲ್ಲಿ ಹೇರಳವಾಗಿ ದೊರೆಯುತ್ತವೆ. ರಾಜ್ಯದ ಭೂವಿಜ್ಞಾನ ಮತ್ತು ಗಣಿ ಇಲಾಖೆ ಹಾಗೂ ಕೇಂದ್ರ ಸರ್ಕಾರದ ಭೂವಿಜ್ಞಾನ ಸರ್ವೇಕ್ಷಣ ಇಲಾಖೆ ಇವು ಸು.19ನೆಯ ಶತಮಾನದಿಂದಲೂ ಕರ್ನಾಟಕದ ಖನಿಜ ನಿಕ್ಷೇಪಗಳನ್ನು ಗುರುತಿಸುವ ಕೆಲಸವನ್ನು ನಡೆಸುತ್ತಿವೆ. ಇತ್ತೀಚೆಗೆ (1971) ಭಾರತದ ಸರ್ವೇಕ್ಷಣ ಸಂಸ್ಥೆಯವರು ಫ್ರಾನ್ಸ್ ದೇಶದ ಸಂಸ್ಥೆಯ ತಾಂತ್ರಿಕ ನೆರವಿನಿಂದ ವೈಮಾನಿಕ ಭೂನಕ್ಷೆಗಳನ್ನು ತಯಾರಿಸುತ್ತಿದ್ದಾರೆ. ಅಲ್ಲದೆ, ತಾಮ್ರ ಮತ್ತು ಇತರ ಅಮೂಲ್ಯ ಲೋಹಗಳ ಅದುರು ನಿಕ್ಷೇಪಗಳ ಪತ್ತೆಗೆ ಗದಗದಿಂದ ನಂಜನಗೂಡುವರೆಗೆ ವೈಮಾನಿಕ ಸರ್ವೇಕ್ಷಣೆಯನ್ನು ಸಹ ನಡೆಸಲಾಗಿದೆ.

ಈ ಲೇಖನದಲ್ಲಿ ವಿವಿಧ ಖನಿಜಗಳು ದೊರೆಯುವ ಸ್ಥಳ, ರೀತಿ ಇತ್ಯಾದಿಗಳ ಸ್ಥೂಲ ವಿವರಣೆಯನ್ನು ನೀಡಲಾಗಿದೆ. ಇತರ ತಾಲ್ಲೂಕು ಮತ್ತು ಜಿಲ್ಲೆಗಳ ಲೇಖನಗಳಲ್ಲೂ ಆಯಾ ಪ್ರದೇಶಗಳಲ್ಲಿ ದೊರಕುವ ಖನಿಜಗಳ ವಿವರಗಳನ್ನು ನೀಡಲಾಗಿದೆ. ಅಲ್ಲದೆ ಈ ಸಂಬಂಧದಲ್ಲಿ ಮುಖ್ಯವಾದ ಹಲವು ಸ್ಥಳಗಳಿಗೂ (ಉದಾ: ಕೆಮ್ಮಣ್ಣುಗುಂಡಿ, ಗುರುಮಠಕಲ್) ಆಯಾ ಶೀರ್ಷಿಕೆಗಳಲ್ಲಿ ಪ್ರತ್ಯೇಕ ಲೇಖನಗಳಿವೆ.

**ಕಬ್ಬಿಣ :** ಕಬ್ಬಿಣದ ಅದುರು ಕರ್ನಾಟಕಕ್ಕೆ ಪ್ರಾಮುಖ್ಯವನ್ನು ಕೊಟ್ಟಿರುವ ಖನಿಜ. ಇದು ಕರ್ನಾಟಕದ ಬಹುಭಾಗಗಳಲ್ಲಿ ಕಬ್ಬಿಣದ ಆಕ್ಸೈಡುಗಳಾದ ಹಿಮಟೈಟ್, ಲೈಮೊನೈಟ್ ರೂಪಗಳಲ್ಲಿ ಸಿಕ್ಕುತ್ತವೆ. ಮುಖ್ಯವಾದ ಅದುರು ನಿಕ್ಷೇಪಗಳು ಚಿಕ್ಕಮಗಳೂರು ಜಿಲ್ಲೆಯ ಬಾಬಾಬುಡನ್ ಬೆಟ್ಟದ ಕೆಮ್ಮಣ್ಣುಗುಂಡಿ, ಕುದುರೆ ಮುಖ ಬೆಟ್ಟದ ಸಾಲು, ಬಳ್ಳಾರಿ ಜಿಲ್ಲೆಯ ಸಂಡೂರು, ತಾಮ್ರಬೆಟ್ಟ, ದೋಣಿ ಮಲೈ - ಈ ಸ್ಥಳಗಳಲ್ಲಿ ಇವೆ. ದೋಣಿಮಲೈ ಗುಡ್ಡಗಳಲ್ಲಿ ದೊರೆಯುವ ಅದುರು ಶೇ.65ಕ್ಕೂ ಹೆಚ್ಚಿನ ಕಬ್ಬಿಣದ ಅಂಶವನ್ನೊಳಗೊಂಡಿದ್ದು ಪ್ರಪಂಚದ ಉತ್ತಮ ಕಬ್ಬಿಣ ಅದುರುಗಳಲ್ಲೊಂದೆಂದು ಪ್ರಖ್ಯಾತಿ ಗಳಿಸಿದೆ. ಬಾಬಾಬುಡನ್‌ಗಿರಿ, ಕುದುರೆಮುಖ, ಆಗುಂಬೆ, ಕೊಡಚಾದ್ರಿ ಮುಂತಾದ ಪಶ್ಚಿಮಘಟ್ಟದ ಶ್ರೇಣಿಗಳಲ್ಲಿ ಅಯಸ್ಕಾಂತ ಸಂಬಂಧವಾದ ಕಬ್ಬಿಣದ ಅದುರು ಹೇರಳವಾಗಿ ದೊರೆಯುತ್ತದೆ. ಇವಲ್ಲದೆ ಚಿತ್ರದುರ್ಗ, ಧಾರವಾಡ, ಉತ್ತರ ಕನ್ನಡ ಮತ್ತು ತುಮಕೂರು ಜಿಲ್ಲೆಯ ಭಾಗಗಳಲ್ಲೂ ಕಬ್ಬಿಣದ ಅದುರಿನ ಹರಹುಗಳು ಇವೆ.

**ಮ್ಯಾಂಗನೀಸ್ :** ಇದರ ನಿಕ್ಷೇಪಗಳು ಶಿವಮೊಗ್ಗ, ಚಿತ್ರದುರ್ಗ, ತುಮಕೂರು, ಬಳ್ಳಾರಿ ಜಿಲ್ಲೆಗಳಲ್ಲಿ ಹರಡಿವೆ. ಅತ್ಯುತ್ತಮ ನಿಕ್ಷೇಪಗಳು ಕುಂಸಿಗೆ ಉತ್ತರದಲ್ಲಿರುವ ಶಂಕರಗುಡ್ಡ, ಮಂಡಗದ್ದೆಗುಡ್ಡಗಳಲ್ಲಿ ಸಿಗುತ್ತವೆ. ಕಬ್ಬಿಣ ಯುಕ್ತವಾದ ಅದುರು ಅಡ್ಡಗಡ್ಡಿ ಮತ್ತು ಹೂಮುಕ್ಕಿಗುಡ್ಡ ಸಾಲುಗಳ ಮೇಲ್ಭಾಗದಲ್ಲಿದೆ. ಸಣ್ಣ ನಿಕ್ಷೇಪಗಳು ಜೋಳದಹಾಳಿಗೆ ಸು.11ಕಿಮೀ ದಕ್ಷಿಣಕ್ಕೆ ಬಂಡಿಗುಡ್ಡದಲ್ಲೂ ಶಿಕಾರಿಪುರದ ಮಾರ್ಕಂಡೆ, ಇಟ್ಟಿಗೆಹಳ್ಳಿ, ಬಳ್ಳೂರು ಮತ್ತು ನಳಿನೀಕೊಪ್ಪ ಈ ಸ್ಥಳಗಳಲ್ಲೂ ಸಿಗುತ್ತವೆ. ಸಿದ್ಧರಹಳ್ಳಿ, ಬಾಳೆಕಟ್ಟೆ (ತರೀಕೆರೆಗೆ 13ಕಿಮೀ ಉತ್ತರದಲ್ಲಿ), ಮಾವಿನಕೆರೆ ಮುಂತಾದ ಪ್ರದೇಶಗಳಲ್ಲಿ ಸಹ ಇವು ಹರಡಿವೆ. ಚಿತ್ರದುರ್ಗದ ಮ್ಯಾಂಗನೀಸ್ ಅದುರು ಕಬ್ಬಿಣ ಮಿಶ್ರವಾದ ಕೆಳದರ್ಜೆಯ ಅದುರು. ಬಳ್ಳಾರಿಯ ಸಂಡೂರು ಬೆಟ್ಟಸಾಲಿನಲ್ಲಿ ಮ್ಯಾಂಗನೀಸ್ ಪೈರೋಲು ಸೈಟು ಖನಿಜರೂಪದಲ್ಲಿ ಹೇರಳವಾಗಿ ದೊರೆಯುತ್ತದೆ. ಇದು ಇಲ್ಲಿನ ಪ್ರದೇಶಗಳಾದ ರಾಮದುರ್ಗ, ಕಣಿವೆಹಳ್ಳಿ, ಕುಮಾರಸ್ವಾಮಿ ಬೆಟ್ಟ ಮುಂತಾದ ಪ್ರದೇಶಗಳಲ್ಲಿ ಸಹ ಸಿಕ್ಕುವುದು. ತುಮಕೂರಿನ ಚಿಕ್ಕನಾಯಕನಹಳ್ಳಿಯಲ್ಲಿ ಹಾಗೂ ಉತ್ತರ ಕನ್ನಡಜಿಲ್ಲೆಯ ಸುಪ, ಯಲ್ಲಾಪುರ, ದಿಗ್ಗಿ, ಕುಂಬಾರವಾಡ ಬಳಿ ಮತ್ತು ಬೆಳಗಾಂವಿ ಜಿಲ್ಲೆಯ ಕೆಲವೆಡೆಗಳಲ್ಲಿ ಒಳ್ಳೆಯ ಮ್ಯಾಂಗನೀಸ್ ಅದುರು ನಿಕ್ಷೇಪಗಳಿವೆ.

**ಕ್ರೋಮೈಟ್ :** ಇದು ಕರ್ನಾಟಕದಲ್ಲಿ ಹೇರಳವಾಗಿದೆ. ಸಿರ ಮಸೂರ ಹಾಗೂ ಹರಳು ಸಂಗ್ರಹಣೆಗಳ ರೂಪದಲ್ಲಿ ಮೈಸೂರು ಜಿಲ್ಲೆಯ ಕಡಕೊಳದ ಬಳಿಯ ಸಿಂಧುವಳ್ಳಿಯಲ್ಲಿ ದೊರೆಯುವುದು. ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಬೈರಾಪುರದಲ್ಲಿ ಈ ಅದುರು ಮುದ್ದೆಯಾಗಿ ಸಿಗುತ್ತದೆ.

**ಚಿನ್ನ :** ಭಾರತದಲ್ಲಿ ಉತ್ಪನ್ನವಾಗುತ್ತಿದ್ದ ಚಿನ್ನದಲ್ಲಿ ಶೇ.90 ಭಾಗ ಕರ್ನಾಟಕ ರಾಜ್ಯದ್ದೇ ಆಗಿತ್ತು. ಕೋಲಾರ ಚಿನ್ನದ ಗಣಿ ಪ್ರದೇಶದ ನಿಕ್ಷೇಪ ಬಹುಮುಖ್ಯವಾದುದು. ಇಲ್ಲಿಯ ವಾರ್ಷಿಕ ಉತ್ಪತ್ತಿ ಸು.4000 ಕೆಜಿ. ರಾಯಚೂರು ಜಿಲ್ಲೆಯ ಹಟ್ಟಿ ಪ್ರದೇಶದಲ್ಲಿ ಸಹ ಸಾಕಷ್ಟು ಚಿನ್ನದ ನಿಕ್ಷೇಪವಿದೆ. ಹೊನ್ನಾಳಿ, ಲಕ್ಕವಳ್ಳಿ, ಕೆಂಪಿನಕೋಟೆ, ಧಾರವಾಡ ಜಿಲ್ಲೆಯ ಗದಗ, ತುಮಕೂರು ಜಿಲ್ಲೆಯ ಬೆಳ್ಳಾರ, ಚಿಕ್ಕಮಗಳೂರು ಮುಂತಾದೆಡೆಗಳಲ್ಲಿ ಹಾಗೂ ಮೈಸೂರು ಮತ್ತು ಹಾಸನ ಜಿಲ್ಲೆಗಳ ಕೆಲವೆಡೆ ಅಲ್ಪಸ್ವಲ್ಪ ಚಿನ್ನದ ನಿಕ್ಷೇಪಗಳಿವೆ. ಶಿವಮೊಗ್ಗ, ಧಾರವಾಡ ಮತ್ತು ಮೈಸೂರು ಜಿಲ್ಲೆಯ ಕೆಲವೆಡೆಗಳಲ್ಲಿ ನದಿಯ ಮೆಕ್ಕಲಿಂದಲೂ ಚಿನ್ನವನ್ನು ಪ್ರತ್ಯೇಕಿಸುವುದು (ಜರಗು ಚಿನ್ನ) ಹಿಂದೆ ರೂಢಿಯಲ್ಲಿತ್ತು. ಸದ್ಯ ಕೋಲಾರದ ಗಣಿಗಳಲ್ಲಿ ದೊರೆಯುವ ಚಿನ್ನದ ಅದುರು ಆರ್ಥಿಕವಾಗಿ ಲಾಭದಾಯಕವಾಗಿಲ್ಲವೆಂಬ ಕಾರಣದಿಂದ ಗಣಿಗಾರಿಕೆಗೆ ಹಿನ್ನೆಡೆಯಾಗಿದೆ.

ಖನಿಜಗಳನ್ನು ಕುರಿತ ಕೆಲವು ಮುಖ್ಯ ವಿವರಗಳು

| ಅದುರು | ಮುಖ್ಯ ನಿಕ್ಷೇಪಗಳು | ಅದುರಿನ ರೂಪು |
|---|---|---|
| ಚಿನ್ನ | ಕೋಲಾರ, ಹಟ್ಟಿ, ಗದಗ, ಬೆಳ್ಳಾರ | ಬೆಣಚು ಸಿರಗಳಲ್ಲಿ ಚಾಲಿತ ನಿಕ್ಷೇಪ |
| ಬೆಳ್ಳಿ | ಕೋಲಾರ, ಹಟ್ಟಿ | ಚಿನ್ನದೊಂದಿಗೆ ಬೆಳ್ಳಿಯೂ ದೊರೆಯುವುದು |
| ಕಬ್ಬಿಣ | ಕೆಮ್ಮಣ್ಣುಗುಂಡಿ, ದೋಣಿಮಲೈ, ಕುದುರೆಮುಖ | ಹಿಮಟೈಟ್,ಮ್ಯಾಗ್ನಟೈಟ್ ಇಲ್ಲವೆ ಮೋನೈಟ್ |
| ಮ್ಯಾಂಗನೀಸ್ | ಸಂಡೂರು, ಶಿವಮೊಗ್ಗ, ಚಿತ್ರದುರ್ಗ, ತುಮಕೂರು | ಆಕ್ಸೈಡ್ ಅಥವಾ ಮಿಶ್ರರೂಪದಲ್ಲಿ ಕಬ್ಬಿಣದೊಂದಿಗೆ |
| ಕ್ರೋಮೈಟ್ | ಬೈರಾಪುರ, ಕಡಕೊಳ, ಸಿಂಧುವಳ್ಳಿ | ಸಿರ, ಮಸೂರ ಇಲ್ಲವೇ ಹರಳು |
| ಕಲ್ನಾರು (ಆಸ್ಬೆಸ್ಟಾಸ್) | ಹೊಳೆನರಸೀಪುರ | ಸಿರ |
| ಬಾಕ್ಸೈಟ್ | ಹಂಗರಿಕೆ, ನವಿಗೆ, ಬೋಕನೂರ್ (ಬೆಳಗಾಂವಿ ಜಿಲ್ಲೆ) | ಮಸೂರ ಇಲ್ಲವೇ ಶೇಷ ನಿಕ್ಷೇಪ |
| ಕುರಂದ (ಕೊರಂಡಂ) | ಹೊಳೆನರಸೀಪುರ, ಮೈಸೂರು, ಶೃಂಗೇರಿ | ಹರಳುರೂಪ ಇಲ್ಲವೇ ಮುದ್ದೆಮುದ್ದೆಗಳಾಗಿ |
| ಡಾಲೋಮೈಟ್ | ಭದ್ರಾವತಿ (ಬಂಡಿಗುಡ್ಡ), ಶಿವಮೊಗ್ಗ (ಶಂಕರಗುಡ್ಡ) | ಮುದ್ದೆ, ಶಿಲಾಪದರು |
| ಬಿಳಿಜೇಡು | ಬಾಗೇಶಪುರ, ತೀರ್ಥಹಳ್ಳಿ | ಪದರು, ಮುದ್ದೆ |
| ಸುಣ್ಣಶಿಲೆ | ಬಂಡಿಗುಡ್ಡ, ಅಮ್ಮಸಂದ್ರ (ತುಮಕೂರು, ಬಾಗಲಕೋಟೆ, ವಾಡಿ ಗುಲ್ಬರ್ಗ), ಸೇಡಂ | ಪದರು, ಮುದ್ದೆ |
| ಮ್ಯಾಗ್ನಸೈಟ್ | ಕಡಕೊಳ, ಸಿಂಧುವಳ್ಳಿ | ಸಿರ,ಮುದ್ದೆ |
| ಬೆಣಚು ಕಲ್ಲು | ಚಿಕ್ಕನಾಯಕನಹಳ್ಳಿ, ಅರಕಿರಿ ಗುಡ್ಡ, ಕೆಂಗೇರಿ, ಗುರುಮಠಕಲ್ | ಸಿರಗಳಲ್ಲಿ, ಮುದ್ದೆಯಾಗಿ |
| ಬಳಪದ ಕಲ್ಲು (ಸೋಪ್ ಸ್ಟೋನ್ ) | ಬಾಣಸಂದ್ರ, ಹಾಸನ, ಮೈಸೂರು | ಮುದ್ದೆಯಾಗಿ |
| ಗ್ರಾನೈಟ್ (ಒರಟು) | ಎಲ್ಲ ಜಿಲ್ಲೆಗಳು - ಮುಖ್ಯವಾಗಿ, ಬೆಂಗಳೂರು ತುಮಕೂರು, ಶಿವಮೊಗ್ಗ ಜಿಲ್ಲೆಗಳು | ಬೆಟ್ಟಗುಡ್ಡಗಳಂತೆ |

**ಬೆಳ್ಳಿ :** ಕೋಲಾರ ಮತ್ತು ಹಟ್ಟಿ ಚಿನ್ನದ ಗಣಿ ಪ್ರದೇಶಗಳಲ್ಲಿ, ಚಿನ್ನದ ಜೊತೆಗೆ ಸ್ವಲ್ಪ ಬೆಳ್ಳಿಯೂ ದೊರೆಯುತ್ತದೆ.

**ತಾಮ್ರ :** ಹಸುರು ವರ್ಣದ ಮ್ಯಾಲಕೈಟ್, ನೀಲ ವರ್ಣದ ಅಜುರೈಟ್ ಮತ್ತು ತಾಮ್ರ, ಕಬ್ಬಿಣ, ಸಲ್ಫೈಡಾದ ಚಾಲ್ಕೊ ಪಿರೈಟೀಸು ಈ ಅದುರುಗಳ ಹಲವಾರು ಸಣ್ಣ ನಿಕ್ಷೇಪಗಳು ಕರ್ನಾಟಕದಲ್ಲಿವೆ. ಇವುಗಳಲ್ಲಿ ಮುಖ್ಯವಾದದ್ದು ಚಿತ್ರದುರ್ಗ ಜಿಲ್ಲೆಯ ಇಂಗಳದಾಳು ನಿಕ್ಷೇಪ. ಇತ್ತಿಚೆಗೆ ಇಲ್ಲಿ ಬಹುಮುಖ ಕಾರ್ಯಾಚರಣೆ ನಡೆಯುತ್ತಿದೆ. ತಾಮ್ರದ ಅದುರು ದಾವಣಗೆರೆ, ಮದ್ದೂರು, ಹಾಸನ ಜಿಲ್ಲೆಯ ಕಲ್ಯಾಡಿ, ಧಾರವಾಡ ಜಿಲ್ಲೆಯ ಕಪ್ಪತಗುಡ್ಡ, ನಂಜನಗೂಡು ಬಳಿಯ ಹುಲ್ಲಹಳ್ಳಿ, ರಾಯಚೂರು ಜಿಲ್ಲೆಯ ತಿಂಥಿಣಿ ಈ ಪ್ರದೇಶಗಳಲ್ಲಿಯೂ ಸ್ವಲ್ಪ ಮಟ್ಟಿಗೆ ದೊರೆಯುತ್ತದೆ.

**ಅಲ್ಯೂಮಿನಿಯಂ:** ಕೆಂಪು ಅಥವಾ ಬೂದು ಬಣ್ಣದ ಜಲಯುತ ಅಲ್ಯೂಮಿನಿಯಂ ಆಕ್ಸೈಡ್ (ಬಾಕ್ಸೈಟ್) ಅದುರಿನ ನಿಕ್ಷೇಪಗಳು ಬೆಳಗಾಂವಿ ಜಿಲ್ಲೆಯಲ್ಲಿ ಹೇರಳವಾಗಿವೆ. ಮುಖ್ಯವಾಗಿ ಬೊಕನೂರಿನ ನವಿಗೆಏಣಾ, ಕರಲೆಬೆಟ್ಟ, ಜಂಜೋಟಿಯ ಉತ್ತರ ವಾಯುವ್ಯಕ್ಕೆ ತಳಾನಿಧಿಘುರ್, ಮೊಗಲ್‌ಘುರ್ ಪ್ರಸ್ಥಭೂಮಿ, ಕಾಸರವಾಡ ಬೆಟ್ಟಪ್ರದೇಶಗಳಲ್ಲಿ ದೊರೆಯುತ್ತವೆ. (ಇಲ್ಲಿಯ ಅದುರನ್ನು ಇಂಡಾಲ್ ಅಲ್ಯೂಮಿನಿಯಂ ಕಾರ್ಖಾನೆಗೆ ಕಳುಹಿಸುತ್ತಿದ್ದಾರೆ). ಈ ಅದುರಿನಲ್ಲಿ ಸೇ.53 ರಷ್ಟು ಅಲ್ಯೂಮಿನಿಯಂ ಇದೆ. ಇತ್ತೀಚೆಗೆ ಲ್ಯಾಟರೈಟ್ ಒಡಗೂಡಿದ ಬಾಕ್ಸೈಟು ನಿಕ್ಷೇಪಗಳನ್ನು ಪಶ್ಚಿಮ ಕರಾವಳಿಯ ಬೈಂದೂರು, ಕುಂದಾಪುರ, ಗೋಕರ್ಣ, ಕುಮಟ ಬಳಿ ಪತ್ತೆಹಚ್ಚಿದ್ದಾರೆ.

**ಇತರ ಲೋಹಗಳು :** ಮೇಲೆ ಕಾಣಿಸಿದ ಮುಖ್ಯ ಲೋಹಗಳಲ್ಲದೆ, ಸೀಸ, ತವರ, ಆಂಟಿಮನಿ ಮುಂತಾದ ಇತರ ಲೋಹ ಖನಿಜಗಳು ಚಿತ್ರದುರ್ಗದ ಬಳಿ ದೊರೆಯುತ್ತವೆ. ಈ ಖನಿಜಗಳು ಹೆಚ್ಚು ಪ್ರಮಾಣದಲ್ಲಿ ದೊರೆಯುವುದಿಲ್ಲವಾದ್ದರಿಂದ ಇಲ್ಲಿ ಹೆಚ್ಚಿನ ಕೆಲಸ ನಡೆದಿಲ್ಲ.

**ಗಂಧಕ :** ಪಿರೈಟ್ ಎಂಬ ಹೊಂಬಣ್ಣದ ಸಲ್ಫೈಡ್ ರೂಪದಲ್ಲಿ ಇದು ದೊರೆಯುತ್ತದೆ. ನಮಗೆ ಬೇಕಾದ ಸಲ್ಫ್ಯೂರಿಕ್ ಆಮ್ಲವನ್ನು ಪಿರೈಟೀಸಿನಿಂದ ಪಡೆಯಬಹುದು.

**ಅಭ್ರಕ :** ಆರ್ಥಿಕವಾಗಿ ಉಪಯುಕ್ತವಾದ ಪಾರದರ್ಶಕ ಹಾಳೆ ಅಥವಾ ಪುಸ್ತಕ ರೂಪದ ಅಭ್ರಕ ಮತ್ತು ವರ್ಮಿಕ್ಯೂಲೈಟ್ ಮೈಕ ಮೈಸೂರು, ಹಾಸನ ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಹೇರಳವಾಗಿ ದೊರೆಯುವುದು. ಮಂದೂರು (ಸಾಲಿಗ್ರಾಮ), ಉಂಡವಾಡಿ, ವಡೆಸಮುದ್ರ, ಪಾಂಡವಪುರ, ತಗಡೂರು, ಮಾವಿನಹಳ್ಳಿಗಳು, ಪ್ರಮುಖ ನಿಕ್ಷೇಪಗಳಿರುವ ಸ್ಥಳಗಳು. ಕೆಳದರ್ಜೆಯ ಪುಟ್ಟ ಹಾಳೆಗಳು ಕೃಷ್ಣರಾಜಪೇಟೆ ಹೊಳೆನರಸೀಪುರ ರಸ್ತೆಯಲ್ಲಿರುವ ಕಬ್ಬೂರು ಮತ್ತು ಸೀತಾಪುರ ಬೆಟ್ಟಗಳಲ್ಲಿ ದೊರೆಯುತ್ತವೆ. ವರ್ಮಿಕ್ಯೂಲೈಟ್ ನಿಕ್ಷೇಪಗಳು ತುಮಕೂರಿನ ನಿಡವಂಡ ಮತ್ತು ಕೊರಟಗೆರೆ ಹಾಗೂ ಕೋಲಾರ ಜಿಲ್ಲೆಯ ಬಂಗಾರಪೇಟೆಗಳಲ್ಲೂ ಇವೆ.

**ಮ್ಯಾಗ್ನಸೈಟ್ :** ಹೆಚ್ಚಿನ ಉಷ್ಣವನ್ನು ತಡೆಯುವ ಇಟ್ಟಿಗೆಗಳ ತಯಾರಿಕೆಗೆ ಉಪಯುಕ್ತವಾದ ಈ ಖನಿಜ ಮೈಸೂರು ತಾಲ್ಲೂಕಿನ ಕಡಕೊಳ ಬಳಿಯ ದೊಡ್ಡ ಕಾನ್ಯ, ದೊಡ್ಡ ಕಾಟೂರು ಪ್ರದೇಶಗಳಲ್ಲಿ ಅತ್ಯಲ್ಪ ಸಿಲಿಕಾಂಶ (ಅಲ್ಟ್ರ ಬೇಸಿಕ್), ಶಿಲೆಯಲ್ಲಿ ಸರ್ಪೆಂಟೀನ್ ಖನಿಜದೊಂದಿಗೆ ಸಿರಗಳೋಪಾದಿಯಲ್ಲಿ ಸಿಕ್ಕುತ್ತವೆ. ಭಾರತದಲ್ಲಿ ಉತ್ಪನ್ನವಾಗುವ ಮ್ಯಾಗ್ನಸೈಟಿನಲ್ಲಿ ಸೇ.10 ಭಾಗ ಕರ್ನಾಟಕದ ಕೊಡಗು ಜಿಲ್ಲೆಯದು.

**ಕಲ್ನಾರು :** ರೇಷ್ಮೆ ಎಳೆಯ ಹೊಳುಪು ಇದ್ದು ನಾರಿನಂತಿರುವ ಕಲ್ನಾರು ನಿಕ್ಷೇಪಗಳು ಹೊಳೆನರಸೀಪುರದಲ್ಲೂ (ಹಾಸನ ಜಿಲ್ಲೆ) ಇನ್ನೊಂದು ಜಾತಿಯ ಕಲ್ನಾರು ಮಾವಿನಹಳ್ಳಿಯಲ್ಲೂ (ಮೈಸೂರು ಜಿಲ್ಲೆ) ಇವೆ. ಚಿಕ್ಕಮಗಳೂರು ಜಿಲ್ಲೆಯ ಕೆಲವೆಡೆಗಳಲ್ಲಿ ಸಹ ಕಲ್ನಾರು ದೊರೆಯುತ್ತದೆ.

**ಗ್ರಾಫೈಟ್ :** ಕೋಲಾರ ಜಿಲ್ಲೆಯ ಬಂಗಾರಪೇಟೆಯ ಗಣಚಾರಪುರದಲ್ಲಿ ದೊರೆಯುತ್ತದೆ. ಮೈಸೂರಿನ ಮಾವಿನಹಳ್ಳಿ, ಕೊರವಳ್ಳಿ ಮತ್ತು ಸರಗೂರುಗಳಲ್ಲಿನ ಪದರಶಿಲೆಗಳಲ್ಲಿ ಸಹ ದೊರೆಯುವುದು.

**ಕಯನೈಟ್ ಮತ್ತು ಸಿಲಿಮನೈಟ್ :** ಈ ಅಗ್ನಿನಿರೋಧಕ ಖನಿಜಗಳು ಮಾರವಳ್ಳಿ (ಹಾಸನ), ಬೆಟ್ಟದ ಬೀಡು (ಮೈಸೂರು) ಮತ್ತು ಹೊಳೆನರಸಿಪುರಗಳಲ್ಲಿ ದೊರೆಯುತ್ತವೆ. ಕಪ್ಪೂರು, ತುಮಕೂರು, ಭೇರ್ಯ (ಕೃಷ್ಣರಾಜನಗರ), ಚಟ್ನಹಳ್ಳಿ (ಮೈಸೂರು), ಬಾಳೆಕಲ್ಲು, ನುಗ್ಗೇಹಳ್ಳಿ, ಮಾರನಹಳ್ಳಿ (ಹಾಸನ) ಇವು ಸಹ ಈ ಖನಿಜ ದೊರೆಯುವ ಸ್ಥಳಗಳು.

**ಕುರಂದ :** ಗಡುಸಿನಲ್ಲಿ ವಜ್ರದ ಅನಂತರದ್ದಾದ ಈ ಖನಿಜ ಪಾರದರ್ಶಕವಾಗಿರಬಹುದು ಇಲ್ಲವೆ ಅಪಾರದರ್ಶಕವಾಗಿರಬಹುದು. ಅಮೂಲ್ಯ ರತ್ನವಾಗಿ ಅಥವಾ ಘರ್ಷಕವಾಗಿ ಉಪಯೋಗವಾಗುವ ಹಲವು ಬಣ್ಣದ ಮತ್ತು ದರ್ಜೆಯ ಕುರಂದ ನಮ್ಮ ದೇಶದಲ್ಲಿ ಹೇರಳವಾಗಿದೆ. ಶೃಂಗೇರಿಘಟ್ಟ (ಶಿವಮೊಗ್ಗ), ಅರಸೀಕೆರೆ (ಹಾಸನ), ಪಾವಗಡ ಮತ್ತು (ಚಿತ್ರದುರ್ಗ), ಮಧುಗಿರಿ (ತುಮಕೂರು), ಗೌರಿಬಿದನೂರು (ಕೋಲಾರ), ಮಂಡ್ಯ, ಹುಣಸೂರು ಮತ್ತು ಹೆಗ್ಗಡದೇವನಕೋಟೆ (ಮೈಸೂರು) ಈ ಸ್ಥಳದಲ್ಲಿ ಕುರಂದದ ವಿವಿಧ ನಿಕ್ಷೇಪಗಳಿವೆ.

**ರತ್ನಗಳು:** ಕರ್ನಾಟಕದಲ್ಲಿ ವಿವಿಧ ರತ್ನಗಳೂ ದೊರೆಯುತ್ತವೆ. ಇವುಗಳಲ್ಲಿ ಮುಖ್ಯವಾದದ್ದು ನೀಲಪಚ್ಚೆ (ಆಕ್ವಮೆರೀನ್). ಇದು ಮೈಸೂರು ಸಮೀಪದ ಬೆಣಚು ಸಿರಗಳಲ್ಲಿ ಮಿಶ್ರ ಬಣ್ಣದ ವಿಧವಾಗಿ ಸಿಕ್ಕುವುದು. ಹಸುರು ಪಚ್ಚೆಗಳು (ಅಮೆಚ್ಯೂರೈನ್) ಬಳ್ಳಾರಿ ಜಿಲ್ಲೆಯ ಬಳ್ಳಾರಿ ಮತ್ತು ಮೋಟ್ರಿಗಳಲ್ಲಿಯೂ ಚಿಕ್ಕಮಗಳೂರು ಜಿಲ್ಲೆಯ ಬೆಳವಾಡಿಯಲ್ಲಿಯೂ ದೊರೆಯುತ್ತವೆ. ಪಾರದರ್ಶಕವಾದ ನೀಲಿ ಮತ್ತು ಕೆಂಪು ಕುರಂದದ ಹರಳುಗಳೇ ಅಮೂಲ್ಯ ರತ್ನಗಳು. ಇವು ಹಾಸನ, ಅರಸೀಕೆರೆ, ಮಧುಗಿರಿ (ತುಮಕೂರು), ಮಂಡ್ಯ, ಹುಣಸೂರು, ಹೆಗ್ಗಡದೇವನಕೋಟೆ ಮತ್ತು ಚಟ್ನಹಳ್ಳಿ (ಮೈಸೂರು) ಇಲ್ಲಿ ಸಿಕ್ಕುತ್ತವೆ. ಗುಲ್ಬರ್ಗದಲ್ಲಿ ಕೆಳದರ್ಜೆಯ ರತ್ನಗಳು, ಜಾಸ್ಪರ್ (ಕೆಂಪು ಬೆಣಚು) ರಕ್ತಮಣಿಗಳಂತೆ ಸಿಗುತ್ತವೆ. ಕಂದು, ಕೆಂಪು ಮತ್ತು ವಿವಿಧ ಛಾಯೆಯ ಮಚ್ಚೆಗಳಿದ್ದು ಆಕರ್ಷಕವಾಗಿರುವ ಈ ಜಾತಿಯ ಅಗ್ಗದ ರತ್ನಗಳೆನಿಸಿರುವ ಕಲ್ಲುಗಳು ಬಳ್ಳಾರಿಯ ತಿಮ್ಮಪ್ಪಘುರ್ ಮತ್ತು ಗುಲ್ಬರ್ಗದ ಗುರುಮಠಕಲ್ ಪ್ರದೇಶದಲ್ಲಿ ದೊರಕುತ್ತವೆ. ಗುಲ್ಬರ್ಗ ಜಿಲ್ಲೆಯಲ್ಲಿ ಬೆಸಾಲ್ಟ್ ಶಿಲೆಯಲ್ಲಿ ಅಮಥಿಸ್ಟ್ ಒಮ್ಮೊಮ್ಮೆ ದೊರೆಯುತ್ತದೆ.

**ಕಟ್ಟಡ ಶಿಲೆಗಳು :** ಕಟ್ಟಡದ ಶಿಲೆಗಳಿಗೆ ಕರ್ನಾಟಕದಲ್ಲಿ ಕೊರತೆ ಇಲ್ಲ. ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲೂ ಹೇರಳವಾಗಿ ಕಣಶಿಲೆಗಳು (ಗ್ರಾನೈಟ್) ಇವೆ. ದೊಡ್ಡಬಳ್ಳಾಪುರದ ಕಣಶಿಲೆಗೆ ಒಳ್ಳೆಯ ಬಣ್ಣವಿದೆ. ಬೆಂಗಳೂರಿನಲ್ಲಿರುವ ವಿಧಾನಸೌಧದ ನಿರ್ಮಾಣ ಈ ಕಲ್ಲಿನಿಂದ ಆಗಿದೆ. ಮೈಸೂರು ಜಿಲ್ಲೆಯಲ್ಲಿ ಇನ್ನೂ ಒಳ್ಳೆಯ ಬಣ್ಣ ಬಣ್ಣದ ಕಟ್ಟಡದ ಶಿಲೆಗಳು ಕರಿಘಟ್ಟ (ಶ್ರೀರಂಗಪಟ್ಟಣ), ಪಾಂಡವಪುರಗಳಲ್ಲಿ ಪಾರ್ಫಿರಿ, ಫೆಲ್‌ಸೈಟುಗಳಾಗಿ ದೊರೆಯುತ್ತವೆ.

**ಸುಣ್ಣಶಿಲೆ:** ಇದು ಕಟ್ಟಡ ಶಿಲೆಯೂ ಹೌದು. ಸಿಮೆಂಟ್ ತಯಾರಿಕೆಗೆ ಮುಖ್ಯ ಕಚ್ಚಾವಸ್ತುವೂ ಹೌದು. ಶಿವಮೊಗ್ಗ, ತುಮಕೂರು, ಚಿತ್ರದುರ್ಗ, ಮೈಸೂರು, ಗುಲ್ಬರ್ಗ ಜಿಲ್ಲೆಗಳಲ್ಲಿ ಸುಣ್ಣಶಿಲೆಯ ನಿಕ್ಷೇಪಗಳಿವೆ. ಶಿವಮೊಗ್ಗ ಜಿಲ್ಲೆಯ ಬಂಡಿಗುಡ್ಡ, ಗುಲ್ಬರ್ಗದ ಶಾಹಬಾದ, ವಾಡಿ, ಸೇಡಂ ಈ ಪ್ರದೇಶ, ಬಿಜಾಪುರ ಜಿಲ್ಲೆಯ ತಾಳೀಕೋಟೆ, ಕಲಾದಗಿ,ಲೋಕಾಪುರಗಳ ಸುತ್ತಮುತ್ತಣ ಪ್ರದೇಶ, ಬೆಳಗಾಂವಿ ಜಿಲ್ಲೆಯ ನಾಗರಗಾಳಿ ಪ್ರದೇಶ, ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ಪ್ರದೇಶ, ತುಮಕೂರಿನ ಅಮ್ಮಸಂದ್ರ

-ಮೊದಲಾದೆಡೆಗಳಲ್ಲಿನ ನಿಕ್ಷೇಪಗಳು ಮುಖ್ಯವಾದವು. ಶಾಹಬಾದ ಮತ್ತು ವಾಡಿಯ ಸುಣ್ಣಶಿಲೆ ಕಡಪ ಕಲ್ಲಿನಂತೆಯೇ ಹಾಸುಗಲ್ಲು ಮತ್ತು ಮೇಲ್ಚಾವಣಿ ಚಪ್ಪಡಿಗಳಾಗಿ ಉಪಯುಕ್ತವಾಗುತ್ತಿದೆ.

**ಬಳಪದ ಕಲ್ಲು** (ಸ್ಟಿಯಟೈಟ್) : ಬಳಪದ ತಯಾರಿಕೆ, ಕುಲುಮೆ ಇಟ್ಟಿಗೆ ಮತ್ತು ಕೆತ್ತನೆ ಕೆಲಸಗಳಿಗೆ ಬಳಸುವ ಬಳಪದ ಕಲ್ಲು ತುಮಕೂರಿನ ನಿಟ್ಟೂರು ಮತ್ತು ಬಾಣಸಂದ್ರ ಸುತ್ತಲಿನಲ್ಲಿ ಹಾಗೂ ಹಾಸನ ಮತ್ತು ಮೈಸೂರು ಜಿಲ್ಲೆಗಳಲ್ಲಿ ಹೇರಳವಾಗಿ ದೊರೆಯುವುದು. ಬೇಲೂರು, ಹಳೇಬೀಡು ದೇವಾಲಯಗಳ ನಿರ್ಮಾಣವಾಗಿರುವುದು ಈ ಕಲ್ಲುಗಳಿಂದ.

**ಗಾಜುಮರಳು ಮತ್ತು ಬೆಣಚು :** ಗಾಜಿನ ತಯಾರಿಕೆಗೆ ಮುಖ್ಯವಾದ ಕಚ್ಚಾವಸ್ತು ಮರಳು ಮತ್ತು ಬೆಣಚು. ಬೆಳ್ಳಿಮರಳೆಂದು ಹೆಸರುಪಡೆದ ಮರಳು ಚಿಕ್ಕನಾಯಕನಹಳ್ಳಿಯಲ್ಲಿ ದೊರೆಯುತ್ತದೆ. ಗುಲ್ಬರ್ಗದ ಅರಕಿರಿ ಗುಡ್ಡದಲ್ಲಿ (ಗುರುಮಠಕಲ್ಲಿಗೆ ಸಮೀಪ) ಬೆಣಚು ಹೇರಳವಾಗಿದೆ.

**ಬಣ್ಣದ ಮಣ್ಣುಗಳು :** ಬಣ್ಣ ತಯಾರಿಕೆಗೆ ಬೇಕಾಗುವ ಬಣ್ಣದ ಮಣ್ಣುಗಳು (ಓಕರ್ಸ್) ಕರ್ನಾಟಕದಲ್ಲಿ ಹೇರಳ ಪರಿಮಾಣದಲ್ಲಿವೆ. ಇವುಗಳಲ್ಲಿ ವಿವಿಧ ಬಣ್ಣಗಳೂ ಇವೆ. ಇವು ಹಳದಿ, ಕೆಂಪು, ಕಂದು, ಹಸುರು ಮುಂತಾದ ಅನೇಕ ಛಾಯೆಯವು. ಚಿತ್ರದುರ್ಗ, ಬಳ್ಳಾರಿ ಮತ್ತು ತುಮಕೂರು ಜಿಲ್ಲೆಯ ಅನೇಕ ಭಾಗಗಳಲ್ಲಿ ರಂಗುರಂಗಾದ ಹಲವು ತರದ ಬಣ್ಣದ ಮಣ್ಣುಗಳು ದೊರೆಯುತ್ತವೆ. ಸಿಮೆಂಟು ನೆಲಕ್ಕೆ ಕೆಂಪು ರಂಗು ಕೊಡಲು ಉಪಯೋಗಕ್ಕೆ ಬರುವ ಕೆಂಪು ಕಾವಿಮಣ್ಣು ಚಿಕ್ಕನಾಯಕನಹಳ್ಳಿಯ ಬಳಿಯ ಗುಡ್ಡಗಳಲ್ಲಿ ಸಿಕ್ಕುತ್ತದೆ. ಹಳದಿ ಮತ್ತು ಕೆಂಪು ಬಣ್ಣದ ಮಣ್ಣುಗಳು ಕೆಮ್ಮಣ್ಣುಗುಂಡಿ, ಸಂಡೂರು, ರಾಮದುರ್ಗ, ಚಿತ್ರದುರ್ಗ, ತುಮಕೂರು, ಹೊಸಪೇಟೆಗಳಲ್ಲಿ ಕಾಣಸಿಗುತ್ತವೆ.

**ಇತರ ಮಣ್ಣುಗಳು :** ಪಿಂಗಾಣಿ ತಯಾರಿಕೆಗೆ ಮೂಲ ಕಚ್ಚಾವಸ್ತುವಾದ ಸುದ್ದೆಮಣ್ಣು ಬೆಂಗಳೂರು ಜಿಲ್ಲೆಯ ಅರ್ಜುನಬೆಟ್ಟಹಳ್ಳಿ ಮತ್ತು ಗೊಲ್ಲಹಳ್ಳಿಗಳಲ್ಲಿ ಸಿಗುತ್ತದೆ. ಬಿಳಿಜೇಡಿನ ತೆರೆದ ಗಣಿಗಳು ಬಾಗೇಶಪುರ, ಕೊಪ್ಪ, ನರಸಿಂಹರಾಜಪುರ, ತೀರ್ಥಹಳ್ಳಿ, ಮಂಡ್ಯ ಮತ್ತು ಮೇಲುಕೋಟೆಗಳಲ್ಲಿ ಇವೆ. ಬಂಗಾರಪೇಟೆಯಲ್ಲೂ ಬಿಳಿಮಣ್ಣಿನ ನಿಕ್ಷೇಪಗಳಿವೆ. ಅಧಿಕ ಕ್ಷಾರಾಂಶವಿರುವ ಮೆದು ಜೇಡು ತುಮಕೂರಿನ ಕರೆಕುರುಬೆ ಮತ್ತು ಜಾನೆಹಾರುಗಳ ಸಮೀಪದಲ್ಲಿ ಹೇರಳವಾಗಿ ದೊರೆಯುತ್ತದೆ. ಬೆಂಗಳೂರಿನ ಸುತ್ತಮುತ್ತ ತಿನ್ನಾಲು ಮತ್ತು ನಂದಗುಡಿಗಳಲ್ಲಿ ಹೊಸಕೋಟೆ ಅಗ್ನಿನಿರೋಧಕ ಜೇಡು ನಿಕ್ಷೇಪಗಳಿವೆ. ಆರ್ಥಿಕ ದೃಷ್ಟಿಯಿಂದ ಚೌಳು ಮಣ್ಣು ಉಪಯುಕ್ತವಾದುದು. ಇದನ್ನು ಎಣ್ಣೆ ಶೋಧಿಸುವ ಮತ್ತು ಶುದ್ಧೀಕರಣ ಕಾರ್ಯಗಳಲ್ಲಿ ಹೆಚ್ಚಾಗಿ ಬಳಸುತ್ತಾರೆ. ಗುಲ್ಬರ್ಗ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನ ಕೊರವಿಯಲ್ಲಿ ಚೌಳುಮಣ್ಣು ನಿಕ್ಷೇಪ ಹೇರಳವಾಗಿದೆ. ಇದಕ್ಕೆ ಕೊರವಿ ಮಣ್ಣೆಂದೇ ಹೆಸರು ಬಂದಿದೆ. ಇದಕ್ಕೆ ವಿದೇಶಗಳಿಂದ ಹೆಚ್ಚು ಬೇಡಿಕೆ ಉಂಟು.

ವಿವಿಧ ಖನಿಜಗಳನ್ನು ಉತ್ಪಾದಿಸುವ ಕಾರ್ಯ ವಿಶೇಷವಾಗಿ ನಡೆದಿದ್ದು ಇದು ಕರ್ನಾಟಕದ ಒಂದು ಪ್ರಮುಖ ಉದ್ಯಮವಾಗಿ ಬೆಳೆಯುತ್ತಿದೆ. 2002-03ನೆಯ ಸಾಲಿಗೆ ಖನಿಜ ವಿಭಾಗಕ್ಕಾಗಿ 651.52 ಲಕ್ಷರೂ.ಗಳನ್ನು ನಿಗದಿಪಡಿಸಲಾಗಿತ್ತು. ರಾಜ್ಯಕ್ಕೆ ಖನೀಜ್ಯೋದ್ಯಮದಿಂದ ವಾರ್ಷಿಕ 9754.50 ಲಕ್ಷರೂ.ಗಳ ಆದಾಯ ಬರುತ್ತಿದೆ (2002). (ನೋಡಿ: ಗಣಿಗಾರಿಕೆ.) (ಬಿ.ಪಿ.ಆರ್.)

**ಖಾಂಡ್ಯ :** ಚಿಕ್ಕಮಗಳೂರು ತಾಲ್ಲೂಕಿನ ಒಂದು ಪ್ರಾಚೀನ ಗ್ರಾಮ. ಬಾಳೆಹೊನ್ನೂರಿನಿಂದ 8ಕಿಮೀ ಈಶಾನ್ಯಕ್ಕೆ ಭದ್ರಾನದಿಯ ಬಲದಂಡೆಯಲ್ಲಿ ಆನೆಬಿದ್ದಹಳ್ಳ ಭದ್ರಾನದಿಯನ್ನು ಕೂಡುವ ಸ್ಥಳದಲ್ಲಿದೆ.

ಈ ಸ್ಥಳದಲ್ಲಿ ಪುರಾಣಪ್ರಸಿದ್ಧ ಮಾರ್ಕಂಡೇಯನ ತಂದೆ ಮಾರ್ಕಂಡ ಮುನಿಯ ಆಶ್ರಮವಿತ್ತು ಎನ್ನಲಾಗಿದೆ. ಈ ಮಾರ್ಕಂಡೇಯನ ಹೆಸರಿನಿಂದಲೇ ಊರಿಗೆ ಖಾಂಡ್ಯ ಎಂಬ ಹೆಸರು ಬಂದಿದೆ. ಅವನ ಸ್ಮರಣಾರ್ಥವಾಗಿ ಇಲ್ಲಿನ ಜನಾರ್ದನ ಮತ್ತು ಮಾರ್ಕಂಡೇಶ್ವರ ದೇವಾಲಯಗಳು ಇಲ್ಲಿ ನಿರ್ಮಾಣವಾದುವು ಎಂದು ಪ್ರತೀತಿ. ಇವಲ್ಲದೆ ಇಲ್ಲಿ ಬೀಕೇಶ್ವರ, ನರಸಿಂಹ ಮೊದಲಾದ ದೇವಾಲಯಗಳಿವೆ. ಇವುಗಳಲ್ಲಿರುವ ಹೊಯ್ಸಳ ಮತ್ತು ವಿಜಯನಗರ ಕಾಲದ ಶಾಸನಗಳು ದೇವಾಲಯದ ಸೇವೆಗಾಗಿ ದಾನಮಾಡಿದ ಮತ್ತು ಜಮೀನು ದತ್ತಿನೀಡಿದ ವಿಷಯಗಳನ್ನು ತಿಳಿಸುತ್ತವೆ. ಇಲ್ಲಿನ ಶಾಸನಾಧಾರಗಳಿಂದ ಈ ಊರು ಸುಮಾರು ಸಾವಿರ ವರ್ಷಕ್ಕೂ ಹಿಂದಿನದೆಂದು ಹೇಳಬಹುದು. ಹೊಯ್ಸಳರ ಕಾಲದಲ್ಲಿ ಇದು ಅಗ್ರಹಾರವಾಗಿತ್ತೆಂದು ತಿಳಿದುಬರುತ್ತದೆ. ಈ ಊರು ಪುಣ್ಯಸ್ಥಳವಾಗಿದ್ದು ಸುತ್ತಮುತ್ತಲ ಪ್ರದೇಶಗಳ ಜನ ಮೃತರ ಅಸ್ಥಿಯನ್ನು ತಂದು ಭದ್ರಾನದಿಯಲ್ಲಿ ವಿಸರ್ಜಿಸುವ ಪದ್ಧತಿಯುಂಟು. (ಡಿ.ಎಸ್.ಜೆ.)

**ಖಾದ್ರಿ ಶಾಮಣ್ಣ :** 1925-1990. ಕನ್ನಡದ ಪ್ರಸಿದ್ಧ ಪತ್ರಿಕೋದ್ಯಮಿ. ಸ್ಪಷ್ಟ, ನೇರ ಮತ್ತು ಹರಿತ ಬರಹಕ್ಕೆ ಹೆಸರಾಗಿದ್ದ ಪತ್ರಕರ್ತ, ಸಂಪಾದಕ. ಇವರು ಬರೆದ ಅಗ್ರಲೇಖನಗಳು ಕನ್ನಡ ಪತ್ರಿಕಾರಂಗಕ್ಕೆ ಹೊಸ ಆಯಾಮವನ್ನು ನೀಡಿದುವು.

ಇವರು ಮಂಡ್ಯ ಜಿಲ್ಲೆಯ ಮೇಲುಕೋಟೆಯಲ್ಲಿ 1925 ಜೂನ್ 6ರಂದು ಜನಿಸಿದರು. ತಂದೆ ಖಾದ್ರಿ ಶ್ರೀನಿವಾಸ ದೇಶಿಕಾಚಾರ್ಯ, ತಾಯಿ ಲಕ್ಷ್ಮಮ್ಮ. ಸೀನಿಯರ್ ಇಂಟರ್‌ಮೀಡಿಯೆಟ್‌ವರೆಗೆ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಅಧ್ಯಯನ ಮಾಡಿದರು. ಸ್ವಾತಂತ್ರ್ಯ ಚಳವಳಿಯಿಂದ ಆಕರ್ಷಿತರಾಗಿ ಶಿಕ್ಷಣವನ್ನು ಪೂರ್ಣಗೊಳಿಸಲಿಲ್ಲ. ಗಾಂಧೀಜಿಯವರ ಕರೆಗೆ ಓಗೊಟ್ಟು ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಿದರು (1942). ಪರಿಣಾಮವಾಗಿ ಬ್ರಿಟಿಷರ ಆಡಳಿತದಲ್ಲಿ ಎರಡು ಬಾರಿ ದೀರ್ಘಾವಧಿ ಸೆರೆವಾಸ ಅನುಭವಿಸಿದರು. ಸೆರೆಮನೆಯಿಂದ ಬಿಡುಗಡೆಯಾದ ಬಳಿಕ 1944ರ ಮಧ್ಯಭಾಗದಲ್ಲಿ ಜನವಾಣಿ ಪತ್ರಿಕೆಯಲ್ಲಿ ಉಪಸಂಪಾದಕರಾಗಿ ಸೇರಿದರು. ಸುಮಾರು ಆರು ತಿಂಗಳು ಕಾಲ ಅಲ್ಲಿದ್ದು ಸ್ವಾತಂತ್ರ್ಯ ಚಳವಳಿಗೆ ಮತ್ತಷ್ಟು ಇಂಬು ಕೊಡುವುದರಲ್ಲಿ ಸಕ್ರಿಯ ಪಾತ್ರವಹಿಸಿದರು. ಅನಂತರ 1944ರ ನವೆಂಬರ್‌ನಲ್ಲಿ ಗಾಂಧೀಜಿಯವರ ಆಶ್ರಮಕ್ಕೆ ತೆರಳಿದರು. ಅಲ್ಲಿ ನಯೀತಾಲೀಂ ಶಿಕ್ಷಣ ಶಿಬಿರದಲ್ಲಿ ತರಬೇತಿ ಪಡೆದರು. ಸೇವಾಗ್ರಾಮದಿಂದ ವಿಶೇಷ ಬಾತ್ಮೀದಾರರಾಗಿ ಕನ್ನಡ ಪತ್ರಿಕೆಗಳಿಗೆ ನಿಯತವಾಗಿ ಸುದ್ದಿವರದಿ ಬರೆಹಗಳನ್ನು ರವಾನಿಸುತ್ತಿದ್ದರು.

ಇವರು ಸೇವಾಗ್ರಾಮದಿಂದ ಹಿಂದಿರುಗಿದ್ದು 1946ರಲ್ಲಿ. ಕರ್ನಾಟಕದಲ್ಲಿ ಎಚ್.ಸಿ.ದಾಸಪ್ಪ ದಂಪತಿಗಳ ಸಾಹಚರ್ಯದಲ್ಲಿ ಕಾರ್ಯ ನಿರ್ವಹಿಸಿದರು. ಅನಂತರ ಕರ್ನಾಟಕ ಕಾಂಗ್ರೆಸ್ ಸೋಷಲಿಸ್ಟ್ ಪಕ್ಷ ಸ್ಥಾಪಿಸುವುದರಲ್ಲಿ ಕಾರ್ಯಶೀಲರಾದರು. ಜಯಪ್ರಕಾಶ್ ನಾರಾಯಣ್ ಮತ್ತು ರಾಮಮನೋಹರ ಲೋಹಿಯಾರಂತಹ ಸಮಾಜವಾದಿ ಧುರೀಣರ ಪ್ರಭಾವ ಆ ವೇಳೆಗಾಗಲೇ ಇವರ ಮೇಲಾಗಿತ್ತು. ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಮುಂಬಯಿಯಲ್ಲಿ ನಡೆಸುತ್ತಿದ್ದ ಜಾಗೃತಿ ಪತ್ರಿಕೆಯ ಸಂಪಾದಕರಾದರು. ಕರ್ನಾಟಕ ಸಮಾಜವಾದೀ ಪತ್ರಿಕೆಯ ಮುಖವಾಣಿಯಾಗಿ ಇದು ಧಾರವಾಡಕ್ಕೆ ಸ್ಥಳಾಂತರಗೊಂಡಿತ್ತು. ಅನಂತರ 1948ರ ಜೂನ್ ತಿಂಗಳಿನಲ್ಲಿ ಈ ಪತ್ರಿಕೆಯನ್ನು ಬೆಂಗಳೂರಿಗೆ ವರ್ಗಾಯಿಸಲಾಯಿತು. ಕರ್ನಾಟಕದಲ್ಲಿ ಅರಸೊತ್ತಿಗೆಯನ್ನು ತೆಗೆಯಬೇಕೆಂಬ ಲೇಖನ ಅದರಲ್ಲಿ ಪ್ರಕಟವಾಯಿತು. ಆಗ ಕೆ.ಸಿ.ರೆಡ್ಡಿಯವರ ಸರ್ಕಾರ ಕೇಳಿದ ಐದು ಸಾವಿರ ರೂಪಾಯಿ ಭದ್ರತಾ ಠೇವಣಿ ಹಣ ಕೊಡಲು ಸಾಧ್ಯವಾಗದೆ ಪತ್ರಿಕೆ ಅವಸಾನ ಕಂಡಿತು. ತರುವಾಯ ಖಾದ್ರಿಯವರು ಪ್ರಜಾವಾಣಿ ಪತ್ರಿಕೆಯಲ್ಲಿ

ಸುದ್ದಿ ಸಂಪಾದಕರಾಗಿ, ಅನಂತರ ಸಹ ಸಂಪಾದಕರಾಗಿ ಕಾರ್ಯ ನಿರ್ವಹಿಸಿದರು. ವಿಮಾನ ಕಾರ್ಖಾನೆಯ ಕಾರ್ಮಿಕರೊಡನೆ ಮುಷ್ಕರದಲ್ಲಿ ಭಾಗವಹಿಸಿ ಜೈಲಿಗೆ ಹೋದ ಕಾರಣ (1950) ಸಹ ಸಂಪಾದಕ ಹುದ್ದೆಯನ್ನು ಕಳೆದುಕೊಳ್ಳಬೇಕಾಯಿತು. ತಾತ್ವಿಕ ಕಾರಣಗಳಿಗಾಗಿ ಸ್ವತಂತ್ರ ಭಾರತದಲ್ಲಿ ಮೂರುಬಾರಿ ಸೆರೆವಾಸ ಅನುಭವಿಸಿದರು. ಸುಮಾರು ಒಂದು ದಶಕ ಕಾಲ ತಮ್ಮನ್ನು ಸಕ್ರಿಯವಾಗಿ ಸಾಮಾಜಿಕ ಮತ್ತು ರಾಜಕೀಯ ಕಾರ್ಯಗಳಲ್ಲಿ ತೊಡಗಿಸಿಕೊಂಡರು (1950-60). ಮಹಾತ್ಮಾಗಾಂಧಿಯವರ ಬರೆಹಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದರು. ವಿನೋಬಾ ಭಾವೆಯವರೊಡನೆ ಭೂದಾನ ಚಳವಳಿಯಲ್ಲಿ ಭಾಗವಹಿಸಿ ರಾಜ್ಯಾದ್ಯಂತ ಪ್ರವಾಸ ಕೈಗೊಂಡರು. ಈ ನಡುವೆ ಸಂಯುಕ್ತ ಕರ್ನಾಟಕ ದಿನಪತ್ರಿಕೆಯ ಬೆಂಗಳೂರು ಆವೃತ್ತಿಯಲ್ಲಿ ಸುದ್ದಿಸಂಪಾದಕರಾಗಿ ಕೆಲಸ ಮಾಡಿದರು (1960-63). ಅನಂತರ ಎಂ.ಎಸ್.ರಾಮಯ್ಯನವರು ಆರಂಭಿಸಿದ ಗೋಕುಲ ವಾರಪತ್ರಿಕೆಯಲ್ಲಿ ಸೇವೆ ಸಲ್ಲಿಸಿದರು (1963-65). ಪ್ರಜಾವಾಣಿ ಪತ್ರಿಕೆಗೆ ಮರಳಿದ (1965) ಇವರು 1974ರವರೆಗೆ ಅದರ ಸುದ್ದಿ ಸಂಪಾದಕರಾಗಿದ್ದರು. ಸಂಯುಕ್ತ ಕರ್ನಾಟಕ ಪತ್ರಿಕಾ ಸಮೂಹದ ಮುಖ್ಯ ಸಂಪಾದಕರಾಗಿ ಸಾರಥ್ಯ ವಹಿಸಿ ಅಲ್ಲಿ ನಾಲ್ಕು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ತುರ್ತು ಪರಿಸ್ಥಿತಿಯ ಕಾಲದಲ್ಲಿ (1977) ಅದನ್ನು ವಿರೋಧಿಸಿದ ತಮ್ಮ ಹಳೆಯ ಸಮಾಜವಾದೀ ಗೆಳೆಯರೊಡನೆ ಸತತ ಸಂಪರ್ಕ ಇರಿಸಿಕೊಂಡಿದ್ದರು.

1978ರ ಜುಲೈನಲ್ಲಿ ಕನ್ನಡಪ್ರಭ ಪತ್ರಿಕೆಯ ಸಂಪಾದಕತ್ವ ವಹಿಸಿಕೊಂಡರು. ಇವರ ಸಂಪಾದಕತ್ವದಲ್ಲಿ ಪತ್ರಿಕೆಯ ಸ್ವರೂಪ ಮತ್ತು ವಿಷಯ ವ್ಯವಸ್ಥೆ ಬದಲಾದವು. ಪತ್ರಿಕೆ ಬಹು ಬೇಗನೇ ಉತ್ಕರ್ಷ ಕಂಡಿತು. ಚುಟುಕು ವಾಕ್ಯಗಳು, ಸತ್ವಯುತ ವಾಕ್ಯರಚನೆ ಮತ್ತು ಕ್ರಿಯಾತ್ಮಕ ಅಭಿಪ್ರಾಯಗಳು, ನಿರ್ಭೀತ ಸಂಪಾದಕೀಯ ಬರೆವಣಿಗೆ ಇವರಿಗೆ ಅಗ್ರಶ್ರೇಣಿಯ ಪತ್ರಿಕಾ ಸಂಪಾದಕ ವರ್ಗದಲ್ಲಿ ಸ್ಥಾನ ದೊರಕುವಂತೆ ಮಾಡಿದವು. ಕನ್ನಡಪ್ರಭ ಪತ್ರಿಕೆ ಸಂಪಾದಕೀಯಗಳಿಗೆ ನವಚೈತನ್ಯ ತುಂಬಿದರು. ಇವರು ನಿಧನರಾಗುವವರೆಗೆ ಈ ಪತ್ರಿಕೆಯ ಸಂಪಾದಕರಾಗಿದ್ದರು.

ಇವರಿಗೆ ಪತ್ರಿಕೋದ್ಯಮದ ಎಲ್ಲ ಪ್ರಕಾರಗಳಲ್ಲೂ ಅಪಾರ ಅನುಭವ ಇದ್ದು ಕನ್ನಡ ಪತ್ರಿಕೋದ್ಯಮಕ್ಕೆ ಅವಿರತ ದುಡಿದು ಅದಕ್ಕೆ ಸೂಕ್ತ ಸ್ಥಾನಮಾನ ಗಳಿಸಿಕೊಟ್ಟರು. ಇವರ ಸಂಪಾದಕೀಯಗಳನ್ನು ಓದುವುದೆಂದರೆ ಒಂದು ಬಗೆಯ ಶಿಕ್ಷಣವೇ ಆಗಿತ್ತು. ಪತ್ರಿಕೋದ್ಯಮ ಶಿಕ್ಷಣದಲ್ಲಿ ಇವರಿಗಿದ್ದ ಒಲವು ಹಲವಾರು ವಿಶ್ವವಿದ್ಯಾನಿಲಯಗಳ ಅಧ್ಯಯನ ಮಂಡಳಿಗಳೊಡನೆ ಸಂಪರ್ಕಕ್ಕೆ ಅನುವು ಮಾಡಿಕೊಟ್ಟಿತ್ತು. ಥಾಮ್ಸನ್ ಫೌಂಡೇಷನ್ ಫೆಲೋ ಆಗಿ ಇಂಗ್ಲೆಂಡ್‌ನ ಕಾರ್ಡಿಫ್‌ನಲ್ಲಿ ಪತ್ರಿಕೆ ತರಬೇತಿ ಪಡೆದಿದ್ದರು. ಅಮೆರಿಕ, ಜರ್ಮನಿ, ಇರಾನ್, ರಷ್ಯ, ಜಪಾನ್ ಮತ್ತಿತರ ರಾಷ್ಟ್ರಗಳಲ್ಲಿ ಪ್ರವಾಸ ಮಾಡಿ ಬಂದರು.

ಇವರು ಒಬ್ಬ ಉತ್ಕಟ ಕನ್ನಡಾಭಿಮಾನಿಯಾಗಿದ್ದರು. ಇವರು ಕರ್ನಾಟಕದ ವಿಧಾನ ಪರಿಷತ್ತಿನ ಸದಸ್ಯರಾಗಿದ್ದ (1984) ಸಂದರ್ಭದಲ್ಲಿ ಪರಿಷತ್ತಿನ ಕಲಾಪಗಳಲ್ಲಿ ಇವರು ತೋರಿಸುತ್ತಿದ್ದ ಆಸಕ್ತಿ ಇತರರಿಗೆ ಮಾದರಿಯಾಗಿತ್ತು. ಮೈಸೂರು ರಾಜ್ಯ ಪತ್ರಕರ್ತರ ಸಂಘದ ಅಧ್ಯಕ್ಷರಾಗಿ (1961-62), ಭಾರತೀಯ ಕಾರ್ಯನಿರತ ಪತ್ರಕರ್ತರ ಒಕ್ಕೂಟದ ರಾಷ್ಟ್ರೀಯ ಮಂಡಳಿಯ ಕಾರ್ಯದರ್ಶಿಯಾಗಿ (1964-65), ಪತ್ರಕರ್ತರ ಸೇವೆಯ ಸ್ಥಿತಿಗತಿಗಳನ್ನು ಸುಧಾರಿಸುವಲ್ಲಿ ತಮ್ಮ ಅಮೂಲ್ಯ ಕೊಡುಗೆ ನೀಡಿದರು. ಇವರು ಕರ್ನಾಟಕ ಪತ್ರಿಕಾ ಅಕಾಡೆಮಿಯ ಅಧ್ಯಕ್ಷರಾಗಿದ್ದರು (1984-87). ಭಾರತ ಸಂಪಾದಕರ ಸಂಘದ ಕಾರ್ಯಕಾರಿ ಸಮಿತಿ ಸದಸ್ಯರಾಗಿಯೂ ಇವರು ಸೇವೆ ಸಲ್ಲಿಸಿದ್ದಾರೆ. ಇವರು 1990 ಮೇ 11ರಂದು ನಿಧನಹೊಂದಿದರು. (ಕೆ.ವಿ.ಎನ್.)

**ಖಾನಾಪುರ :** ಬೆಳಗಾಂವಿ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಅದರ ಕೇಂದ್ರ. ಸಹ್ಯಾದ್ರಿ ಬೆಟ್ಟಗಳ ಪ್ರದೇಶದಲ್ಲಿದ್ದು ಪ್ರಕೃತಿ ಸೌಂದರ್ಯದಿಂದ ಕೂಡಿರುವ ಈ ತಾಲ್ಲೂಕನ್ನು ಉತ್ತರದಲ್ಲಿ ಬೆಳಗಾಂವಿ, ಈಶಾನ್ಯ ಮತ್ತು ಪೂರ್ವದಲ್ಲಿ ಸಂಪಗಾಂವಿ ತಾಲ್ಲೂಕುಗಳು, ಆಗ್ನೇಯದಲ್ಲಿ ಧಾರವಾಡ, ದಕ್ಷಿಣ ಮತ್ತು ನೈಋತ್ಯಕ್ಕೆ ಉತ್ತರ ಕನ್ನಡ ಜಿಲ್ಲೆ, ಪಶ್ಚಿಮದಲ್ಲಿ ಗೋವ, ವಾಯವ್ಯದಲ್ಲಿ ಮಹಾರಾಷ್ಟ್ರ ರಾಜ್ಯ ಸುತ್ತುವರೆದಿದೆ. ಗುಂಜಿ, ಖಾನಾಪುರ, ಬೀಡಿ - ಇವು ಈ ತಾಲ್ಲೂಕಿನ ಹೋಬಳಿಗಳು. ಈ ತಾಲ್ಲೂಕಿನಲ್ಲಿ ಒಟ್ಟು 220 ಗ್ರಾಮಗಳಿವೆ. ತಾಲ್ಲೂಕಿನ ವಿಸ್ತೀರ್ಣ 1,749.1ಚ.ಕಿಮೀ. ಜನಸಂಖ್ಯೆ 2,43,154.

ತಾಲ್ಲೂಕಿನ ವಾಯುವ್ಯ ಭಾಗದಲ್ಲಿ ಎತ್ತರವಾದ ಬೆಟ್ಟಗಳು, ಈಶಾನ್ಯ ಹಾಗೂ ಪೂರ್ವದಲ್ಲಿ ಬಯಲು ಪ್ರದೇಶ, ದಕ್ಷಿಣ ಹಾಗೂ ನೈಋತ್ಯ ಭಾಗದಲ್ಲಿ ದಟ್ಟವಾದ ಕಾಡು ಇವೆ. ತಾಲ್ಲೂಕಿನ ವಾಯುಗುಣ ಹಿತಕರವಾದದ್ದು. ಇಲ್ಲಿಯ ವಾರ್ಷಿಕ ಸರಾಸರಿ ಮಳೆ 2,090.11ಮಿಮೀ. ತಾಲ್ಲೂಕಿನಲ್ಲಿ ಕಪ್ಪುಮಣ್ಣಿನ ಮತ್ತು ಕೆಂಪುಮಣ್ಣಿನ ನುರುಜು ಭೂಮಿ ಇದೆ. ಮಲಪ್ರಭಾ ನದಿ ತಾಲ್ಲೂಕಿನ ಉತ್ತರಾರ್ಧದಲ್ಲಿ ಹರಿದು ಪೂರ್ವಕ್ಕೆ ಸಾಗುತ್ತದೆ. ತಾಲ್ಲೂಕಿನ ಎಲ್ಲ ಕಡೆಗಳಲ್ಲೂ ಬತ್ತದ ಗದ್ದೆಗಳು ಮತ್ತು ಅಲ್ಲಲ್ಲಿ ಹಣ್ಣಿನ ತೋಟಗಳು ಉಂಟು. ಬತ್ತ, ಮೆಣಸಿನಕಾಯಿ ಇಲ್ಲಿನ ಮುಖ್ಯ ಬೆಳೆಗಳಾದರೂ ಜೋಳ, ನವಣೆ, ಗೋದಿ, ಮೆಕ್ಕೆಜೋಳ, ನೆಲಗಡಲೆ, ಹುರುಳಿ, ತೊಗರಿ, ಎಳ್ಳು, ಹತ್ತಿ, ಕಬ್ಬು ಮತ್ತು ತರಕಾರಿಗಳನ್ನೂ ಬೆಳೆಯುತ್ತಾರೆ. ತಾಲ್ಲೂಕಿನ ದಕ್ಷಿಣ ಭಾಗದಲ್ಲಿರುವ ಕಾಡಿನಲ್ಲಿ ಬಿದಿರು, ಸಾಗುವಾನಿ, ಶಿವನಿ, ಮತ್ತಿ ಮುಂತಾದ ಮರಗಳಿವೆ. ಮರಕಡಿಯುವುದು, ಮರಮುಟ್ಟುಗಳ ತಯಾರಿಕೆ, ಉರುವಲು ಕಟ್ಟಿಗೆ ಸಾಗಿಸುವುದು ಇಲ್ಲಿನ ಕೆಲವರ ಮುಖ್ಯ ಉದ್ಯೋಗ. ಜೇಡಿಮಣ್ಣಿನಿಂದ ಪಿಂಗಾಣಿ ಸಾಮಾನುಗಳನ್ನು ತಯಾರಿಸುವದು, ಇಟ್ಟಿಗೆಗಳನ್ನು ಮಾಡುವುದು, ಬಂಡಿಗಳಿಗೆ ಮರದ ಚಕ್ರಗಳನ್ನು ಮಾಡುವುದು ಇಲ್ಲಿನ ಜನರ ಉಪಕಸಬು. (ಎನ್.ಸಿ.ವಿ.)

ಖಾನಾಪುರ ತಾಲ್ಲೂಕಿನ ಲೋಂಡಾ ಒಂದು ಮುಖ್ಯ ರೈಲ್ವೆ ನಿಲ್ದಾಣ. ಇದರ ಸಮೀಪದಲ್ಲಿ ಮ್ಯಾಂಗನೀಸ್ ಗಣಿಗಳಿವೆ. ಬೀಡಿ ಖಾನಾಪುರಕ್ಕೆ ಪೂರ್ವದಲ್ಲಿ 19ಕಿಮೀ ದೂರದಲ್ಲಿದೆ. 1829ರಲ್ಲಿ ಸಂಗೊಳ್ಳಿ ರಾಯಣ್ಣ ಬೀಡಿಯ ಮಾಮಲೆದಾರ್ ಕಚೇರಿಯನ್ನು ಸುಟ್ಟುಹಾಕಿದ. ಬೀಡಿಗೆ 8ಕಿಮೀ ದೂರದಲ್ಲಿ ಹನುಮಂತಗಢದ ಅವಶೇಷವಿದೆ. ಖಾನಾಪುರಕ್ಕೆ 14ಕಿಮೀ ದೂರದಲ್ಲಿರುವ ಡೊಂಗರ್‌ಗಾಂವ್ ಬೆಟ್ಟದ ಮೇಲೆ ಮತ್ಸ್ಯೇಂದ್ರನಾಥನ ಗುಡಿ ಇದೆ. ಖಾನಾಪುರಕ್ಕೆ ದಕ್ಷಿಣದಲ್ಲಿ 14ಕಿಮೀ ದೂರದಲ್ಲಿರುವ ಹಲಶಿಯಲ್ಲಿ (ನೋಡಿ) ಪುರಾತನ ವರಾಹ ಹಾಗೂ ನರಸಿಂಹ ದೇವಾಲಯಗಳಿವೆ. ಬೆಳಗಾಂವಿಯ ದಕ್ಷಿಣಕ್ಕೆ 28ಕಿಮೀ ದೂರದಲ್ಲಿ ಖಾನಾಪುರದ ಉತ್ತರಕ್ಕಿರುವ ಜಾಂಬೋಟಿ ವ್ಯಾಪಾರಸ್ಥಳ. ಖಾನಾಪುರಕ್ಕೆ ವಾಯುವ್ಯದಲ್ಲಿ 30ಕಿಮೀ ದೂರದಲ್ಲಿರುವ ಕಣಕುಂಬಿ ಗ್ರಾಮದ ದೇವಾಲಯಗಳು ಕಣಕುಂಬೇಶ್ವರ ಮತ್ತು ಮಾಹುಲಿದೇವಿ. ಈ ಗ್ರಾಮ ಮಲಪ್ರಭಾ ನದಿಯ ಉಗಮಸ್ಥಾನವೆಂದು ಹೆಸರಾಗಿದೆ. ಖಾನಾಪುರಕ್ಕೆ ಪೂರ್ವದಲ್ಲಿ 11ಕಿಮೀ ದೂರದಲ್ಲಿರುವ ನಂದಗಡ ವ್ಯಾಪಾರಕೇಂದ್ರ. ಇಲ್ಲಿ ಅನೇಕ ಅಕ್ಕಿ ಗಿರಣಿಗಳಿವೆ. ಖಾನಾಪುರದ ವಾಯುವ್ಯಕ್ಕೆ ಸು.13ಕಿಮೀ ದೂರದಲ್ಲಿ ಮಲಪ್ರಭಾ ನದಿಯ ಜಲಪಾತ ಅಸೋಗಾ.

ಖಾನಾಪುರ ಈ ತಾಲ್ಲೂಕಿನ ಕೇಂದ್ರ. ಬೆಳಗಾಂವಿ ನಗರದ ದಕ್ಷಿಣಕ್ಕೆ ಸು.28ಕಿಮೀ ದೂರದಲ್ಲಿದೆ. ಇಲ್ಲಿ ನಗರ ಪಂಚಾಯಿತಿಯಿದೆ. ಜನಸಂಖ್ಯೆ 16,563. ಇದು ಬೆಂಗಳೂರು - ಪುಣೆ ರೈಲುಮಾರ್ಗದಲ್ಲಿ ಲೋಂಡಾ ಮತ್ತು ಬೆಳಗಾಂವಿಗಳ ಮಧ್ಯದಲ್ಲಿರುವ ಒಂದು ಪ್ರಮುಖ ನಿಲ್ದಾಣ. ಇಲ್ಲಿಂದ ಬೆಳಗಾಂವಿ, ದಾಂಡೇಲಿ, ಗೋವೆಗಳಿಗೆ ಬಸ್ಸು ಸೌಕರ್ಯವುಂಟು. ಖಾನಾಪುರ ಸಾಗವಾನಿ ಮರಗಳ ಮತ್ತು ಬಿದಿರುಗಳ ಸಂಗ್ರಹ ಸ್ಥಳ, ವ್ಯಾಪಾರ ಕೇಂದ್ರ. ಇಲ್ಲಿ ಪಿಂಗಾಣಿ ಸಾಮಾನು ಮತ್ತು ಮಂಗಳೂರು ಹೆಂಚು ತಯಾರಿಸುವ ಕಾರ್ಖಾನೆಗಳುಂಟು. *

**ಖಾವಾಸ್ ಖಾನ್ :** ಬಿಜಾಪುರದ ಆದಿಲ್‌ಶಾಹಿವಂಶದ ದೊರೆಗಳ ಒಬ್ಬ ಸರದಾರನಾಗಿದ್ದ ದೌಲತ್‌ಖಾನನ ಬಿರುದು. ಇಬ್ರಾಹಿಮನ ಮರಣಾನಂತರ ಮುಹಮ್ಮದ್ ಖಾನನಿಗೆ ರಾಜ್ಯ ದೊರಕಿಸಿಕೊಡಲು ಇವನು ಬಹುವಾಗಿ ಶ್ರಮಿಸಿದ. ಈ ಕಾರಣಕ್ಕಾಗಿ ಮುಹಮ್ಮದ್ ಖಾನ್ ಈತನಿಗೆ ಖಾವಾಸ್ ಖಾನ್ ಎಂಬ ಬಿರುದು ನೀಡಿ ಇವನನ್ನು ತನ್ನ ಪ್ರಧಾನಿಯನ್ನಾಗಿ ನೇಮಿಸಿಕೊಂಡ. ಇದರಿಂದ ಇವನಿಗೆ ಅಹಂಕಾರ ಬಂತು.

ತನ್ನ ಶಕ್ತಿ ಬೆಳೆಸಿಕೊಳ್ಳಲು ಯತ್ನಿಸಿ ಪ್ರತಿಸ್ಪರ್ಧಿಗಳನ್ನು ಅಡಗಿಸಿದ. ಈತನ ಅಹಂಕಾರವನ್ನು ನೋಡಿ ಮುಹಮ್ಮದ್ ಖಾನನಿಗೂ ಬೇಸರವಾಯಿತು. ಜನಾಭಿಪ್ರಾಯ ಚೆನ್ನಾಗಿಲ್ಲ ಎನ್ನುವುದನ್ನು ಕಂಡುಕೊಂಡ ಖಾವಾಸ್ ಖಾನ್ ಸಮಯ ಸಾಧಿಸಿ, ಬಿಜಾಪುರದ ಮೇಲೆ ದಂಡೆತ್ತಿಬರಲು ದೆಹಲಿಯ ಬಾದಶಹನಾದ ಶಹಜಹಾನನಿಗೆ ಆಮಂತ್ರಣ ಕೊಟ್ಟ. ಮುಂದೆ ಔರಂಗ್‌ಜೇಬನು ಶಿವಾಜಿಯ ವಿರುದ್ಧ ಹೋರಾಡಲು ಜಯಸಿಂಹನ ನೇತೃತ್ವದಲ್ಲಿ ದೊಡ್ಡ ಸೈನ್ಯವೊಂದನ್ನು ಕಳಿಸಿದ. ಆ ಸಮಯಕ್ಕೆ ಖಾವಾಸ್ ಖಾನನೂ ಶಿವಾಜಿಯ ಮೇಲೆ ಏರಿಹೋದ. ಎರಡೂ ಸೈನ್ಯಗಳು ಪರಸ್ಪರ ಸಂಧಿಸುವ ಮುನ್ನವೇ ಶಿವಾಜಿಯ ಸೈನ್ಯಕ್ಕೂ ಖಾವಾಸ್ ಖಾನನ ಸೈನ್ಯಕ್ಕೂ ಒಂದು ದುರ್ಗಮ ಪ್ರದೇಶದಲ್ಲಿ ನಿರ್ಣಾಯಕವಾದ ಯುದ್ಧ ನಡೆಯಿತು. ಖಾವಾಸ್ ಖಾನ್ ಯುದ್ಧದಲ್ಲಿ ಗಾಯಗೊಂಡು ಸತ್ತನೆಂಬ ಸುಳ್ಳು ಸುದ್ದಿ ಹರಡಿತು. ಈ ನಡುವೆ ಶಿವಾಜಿ ಮತ್ತು ಜಯಸಿಂಹರ ಮಧ್ಯೆ ಒಪ್ಪಂದವಾಗಿ ಜಯಸಿಂಹ ಮುಂದುವರಿದು ಬಿಜಾಪುರದವರನ್ನು ಸುಲಿಗೆ ಮಾಡತೊಡಗಿದ.

ಖಾವಾಸ್ ಖಾನನ ವಿರೋಧ‍ದಿಂದಾಗಿ ಆದಿಲ್ ಶಾಹಿಯ ರಾಜ್ಯಭಾರ ಅಸ್ತವ್ಯಸ್ತಗೊಂಡಿತ್ತು. ಇದನ್ನರಿತ ಔರಂಗ್‌ಜೇಬ್ ಆದಿಲ್ ಶಾಹಿಯನ್ನು ಗೆದ್ದು ಬರಲು ತನ್ನ ಸೇನಾಪತಿಗಳಾದ ಬಹದ್ದೂರ್ ಶಹ ಮತ್ತು ದಿಲೇರ್‌ಖಾನರನ್ನು ಕಳುಹಿಸಿದ. 1675 ಅಕ್ಟೋಬರ್ 19ರಂದು ಬಹದ್ದೂರ್ ಶಹನನ್ನು ಖಾವಾಸ್ ಖಾನ್ ಭೀಮಾ ನದಿಯ ದಂಡೆಯ ಮೇಲೆ ಭೇಟಿ ಮಾಡಿದ. ಆದಿಲ್‌ಶಾಹಿ ರಾಜ್ಯವನ್ನು ವೈಯಕ್ತಿಕ ಸ್ವಾರ್ಥಕ್ಕಾಗಿ ದಮನಮಾಡುವುದೇ ಈ ಭೇಟಿಯ ಉದ್ದೇಶವಾಗಿದೆ ಎಂಬ ಶಂಕೆಯಿಂದ ಖಾವಾಸ್ ಖಾನನ ವಿರೋಧಿಯಾದ ಬಹಲೋಲ್ ಖಾನ್ ಈತನನ್ನು ಬಂಕಾಪುರದಲ್ಲಿ ಕೈದುಮಾಡಿಟ್ಟು, ಆಡಳಿತದ ಹೊಣೆಯನ್ನು ತಾನೇ ಕೈಯಲ್ಲಿ ತೆಗೆದುಕೊಂಡ. ಮಹಮ್ಮದ್ ಖಾನನ ಆಜ್ಞೆಯ ಮೇರೆಗೆ ಖಾವಾಸ್ ಖಾನನನ್ನು 1676 ಜನವರಿ 20ರಂದು ಆತನ ವಾಡೆಯಲ್ಲೆ ಹತ್ಯೆ ಮಾಡಲಾಯಿತು. *

**ಖುರ್ಷಿದ್ ಆಲಂ ಖಾನ್ :** 1919-. ಕರ್ನಾಟಕದ ಮಾಜಿ ರಾಜ್ಯಪಾಲ (1991-99). ಕೇಂದ್ರ ಸರ್ಕಾರದ ಮಾಜಿ ಸಚಿವ. ಉತ್ತರ ಪ್ರದೇಶದ ಫರೂಕಾಬಾದ್ ಜಿಲ್ಲೆಯ ಕೈಮ್‌ಗಂಜ್‌ನಲ್ಲಿ 1919 ಫೆಬ್ರವರಿ 5ರಂದು ಜನಿಸಿದರು. ಪ್ರಾರಂಭಿಕ ಶಿಕ್ಷಣದ ಬಳಿಕ ಆಗ್ರ ವಿಶ್ವವಿದ್ಯಾಲಯದ ಪ್ರತಿಷ್ಠಿತ ಸೇಂಟ್ ಜಾನ್ಸ್ ಕಾಲೇಜಿನ ವಿದ್ಯಾರ್ಥಿಯಾಗಿ ಸೇರಿದರು. ಅಲ್ಲಿ ಬಿ.ಎ. ಪದವಿಯನ್ನು ಅತ್ಯುನ್ನತ ಮಟ್ಟದಲ್ಲಿ ಹಾಗೂ ಇತಿಹಾಸ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದರು. ಇವರು ಅಮೆರಿಕ ಸಂಯುಕ್ತಸಂಸ್ಥಾನದ ಪೆನ್ಸಿಲ್ವೇನಿಯ ವಿಶ್ವವಿದ್ಯಾಲಯದ ವಿದ್ಯಾರ್ಥಿಯಾಗಿದ್ದು ಅಲ್ಲಿ ಆಡಳಿತ ಅಧ್ಯಯನದಲ್ಲಿ ಪದವಿ ಪೂರೈಸಿದರು.



ಇವರಿಗೆ ಶಿಕ್ಷಣ ಕ್ಷೇತ್ರದಲ್ಲಿ ವಿಶೇಷ ಆಸಕ್ತಿ ಇತ್ತು. ನವದೆಹಲಿಯ ಜಾಕೀರ್ ಹುಸೇನ್ ಸ್ಮಾರಕ ಕಾಲೇಜಿನ ಆಡಳಿತ ಮಂಡಳಿಯ ಸದಸ್ಯರಾಗಿದ್ದರು. ಫರೀದಾಬಾದಿನ ವೈ.ಎಂ.ಸಿ.ಎ. ಎಂಜನಿಯರಿಂಗ್ ಸಂಸ್ಥೆಯ ಆಡಳಿತ ಮಂಡಳಿಯಲ್ಲೂ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ದೆಹಲಿಯ ಜಮೀಯಾ ಮಿಲಿಯ ಇಸ್ಲಾಮಿಯ ವಿಶ್ವವಿದ್ಯಾಲಯದಲ್ಲಿ ಇವರಿಗೆ ವಿಶೇಷ ಆಸಕ್ತಿಯಿತ್ತು. ಈಗ ಇವರು ದೆಹಲಿಯ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯ ಸದಸ್ಯರಾಗಿದ್ದಾರೆ.

ಲೋಕಸಭೆ ಮತ್ತು ರಾಜ್ಯಸಭೆಯ ಸದಸ್ಯರಾಗಿ 15 ವರ್ಷಗಳ ಕಾಲ ಸೇವೆ ಸಲ್ಲಿಸಿದ ಹೆಗ್ಗಳಿಕೆ ಇವರದು. ಕೇಂದ್ರ ಸರ್ಕಾರದಲ್ಲಿ ವಿದೇಶಾಂಗ, ಪ್ರವಾಸೋದ್ಯಮ, ನಾಗರಿಕ ವಿಮಾನಯಾನ, ಜವಳಿ ಮತ್ತು ವಾಣಿಜ್ಯ ಮೊದಲಾದ ವಿವಿಧ ಖಾತೆಗಳಲ್ಲಿ ಸಚಿವರಾಗಿ ಸೇವೆ ಸಲ್ಲಿಸಿದ್ದಾರೆ. ವಿದೇಶಾಂಗ ಸಚಿವರಾಗಿ ಜಗತ್ತಿನಾದ್ಯಂತ ವ್ಯಾಪಕ ಪ್ರವಾಸ ಕೈಗೊಂಡ ಅನುಭವ ಇವರಿಗಿದೆ. ಹಲವು ಸಂದರ್ಭಗಳಲ್ಲಿ ವಿಶ್ವಸಂಸ್ಥೆ ಮತ್ತು ಭದ್ರತಾ ಮಂಡಳಿಯ ಅಧಿವೇಶನಗಳನ್ನು ಉದ್ದೇಶಿಸಿ ಮಾತನಾಡಿದ ಕೀರ್ತಿ ಇವರದು.

ನವ ದೆಹಲಿ ಮತ್ತು ಲುವಾಂಡಗಳಲ್ಲಿ ಜರುಗಿದ ನಿರ್ಲಿಪ್ತ ರಾಷ್ಟ್ರಗಳ ವಿದೇಶಾಂಗ ಸಚಿವರ ಸಮ್ಮೇಳನದ ಅಧ್ಯಕ್ಷತೆಯನ್ನು ಇವರು ವಹಿಸಿದ್ದರು. ಅಮೆರಿಕ ಸಂಯುಕ್ತಸಂಸ್ಥಾನದ ರಿಪಬ್ಲಿಕನ್ ಪಕ್ಷದ ಸಮಾವೇಶದಲ್ಲಿ ಇವರು ಭಾರತವನ್ನು ಪ್ರತಿನಿಧಿಸಿದ್ದರು.

ಗೋವ ರಾಜ್ಯದ ರಾಜ್ಯಪಾಲರಾಗಿ ನೇಮಕಗೊಂಡಾಗ (1989 ಜುಲೈ 18) ಲೋಕಸಭಾ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದರು. ಕರ್ನಾಟಕದ ರಾಜ್ಯಪಾಲರಾಗಿ ನೇಮಕಗೊಂಡು (1991 ಜನವರಿ 6) ಸತತವಾಗಿ ಎಂಟು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಇವರು ಮಹಾರಾಷ್ಟ್ರ ಮತ್ತು ಕೇರಳದ ಹಂಗಾಮಿ ರಾಜ್ಯಪಾಲರಾಗಿಯೂ ಕಾರ್ಯನಿರ್ವಹಿಸಿದ್ದಾರೆ.

ಇವರಿಗೆ ತೋಟಗಾರಿಕೆ ಮತ್ತು ಓದಿನಲ್ಲಿ ವಿಶೇಷ ಆಸಕ್ತಿ. ಇವರು ಭಾರತದ ರಾಷ್ಟ್ರಪತಿಗಳಾಗಿದ್ದ ಜಾಕೀರ್ ಹುಸೇನ್‌ರ ಅಳಿಯ. ಮಾಜಿ ವಿದೇಶಾಂಗ ಸಚಿವ ಸಲ್ಮಾನ್ ಖುರ್ಷಿದ್ ಇವರ ಪುತ್ರ. *

**ಖೆಡ್ಡ :** ಕಾಡಾನೆಗಳನ್ನು ಸೆರೆಹಿಡಿದು ಪಳಗಿಸಲು ಯೋಜಿಸಿರುವ ಒಂದು ವಿಶೇಷ ಬಗೆಯ ಬೋನು. ಇಂಥ ಬೋನಿಗೆ ಆನೆಗಳನ್ನು ತರುಬಿ ಅನಂತರ ಪಳಗಿಸುವ ವಿಸ್ತಾರವಾದ ಕಾರ್ಯಾಚರಣೆಗೆ ಖೆಡ್ಡ ಕಾರ್ಯಕ್ರಮವೆನ್ನುತ್ತಾರೆ. ಕಾಡಿನಲ್ಲಿ ಆನೆಗಳ ಸಂಖ್ಯೆ ಹೆಚ್ಚಾಗಿ ಅವು ಜನಗಳಿಗೂ ಬೆಳೆಗಳಿಗೂ ಹಾನಿಯುಂಟುಮಾಡತೊಡಗಿದಾಗ ಅವನ್ನು ಹಿಡಿಯಲಾಗುತ್ತದೆ. ಒಂದೋ ಎರಡೊ ಪುಂಡಾನೆಗಳು ತೊಂದರೆ ಕೊಟ್ಟಾಗ ಅವನ್ನು ಬೆದರಿಸಿ ಕಾಡಿನ ಒಳಭಾಗಕ್ಕೆ ಅಟ್ಟುತ್ತಾರೆ; ಇಲ್ಲವೇ ಬೇರೆ ಉಪಾಯವಿಲ್ಲದೆ ಅಪಾಯ ಮಿತಿ ಮೀರಿದಾಗ ಗುಂಡಿಟ್ಟು ಕೊಲ್ಲುತ್ತಾರೆ. ಬಹುಸಂಖ್ಯೆಯಲ್ಲಿ ಅವನ್ನು ಹಿಡಿಯಬೇಕಾದಾಗ ಮಾತ್ರ ಖೆಡ್ಡ ಯೋಜನೆಯನ್ನು ರೂಪಿಸಲಾಗುತ್ತದೆ. ಖೆಡ್ಡ ಎನ್ನುವ ಪದ ಹಿಂದೂಸ್ತಾನಿಯದು. ಸಣ್ಣ ಗುಂಡಿ ಎಂದು ಇದರ ಅರ್ಥ. ಹಿಂದೆ ಕಾಡಾನೆಗಳನ್ನು ಹಿಡಿಯಲು ಕಂದಕಗಳನ್ನು ತೋಡುತ್ತಿದ್ದುದರಿಂದ ಈ ಪದಕ್ಕೆ ಈ ಅರ್ಥ ಬಂದಿದೆ. ಖೆಡ್ಡಕ್ಕೆ ಹಿಂದಿಯಲ್ಲಿ ಬಂಗಡಿ ಎಂದೂ ಕನ್ನಡದಲ್ಲಿ ಆನೆಪಂಗಡಿ ಎಂದೂ ಹೆಸರಿದೆ. ಈಚೆಗೆ ಆನೆಗಳನ್ನು ಹಿಡಿಯಲು ಗುಂಡಿಗಳನ್ನು ತೋಡುತ್ತಿಲ್ಲ. ಏಕೆಂದರೆ ಗುಂಡಿಗೆ ಕೆಡವಿ ಬೀಳಿಸುವ ಆನೆಗೆ ಊನವಾಗಬಹುದು. ಎಷ್ಟೋ ಆನೆಗಳು ಸಾಯಲೂಬಹುದು. ಆದ್ದರಿಂದ ಈಗ ನೆಲಮಟ್ಟದಲ್ಲೇ ದಪ್ಪ ದಿಮ್ಮಿಗಳಿಂದ ದೊಡ್ಡ ಬೋನೊಂದನ್ನು ನಿರ್ಮಿಸಿ ಅದರಲ್ಲಿ ಆನೆಗಳನ್ನು ಬಂಧಿಸುತ್ತಾರೆ. ಈ ವಿಧಾನ ಕರ್ನಾಟಕದ ವೈಶಿಷ್ಟ್ಯಗಳಲ್ಲಿ ಒಂದೆನಿಸಿ ಪ್ರಸಿದ್ಧವಾಗಿದೆ. ಹೈದರ್ ಅಲಿ, ಟಿಪ್ಪುಸುಲ್ತಾನರ ಕಾಲದಿಂದಲೂ ಈ ಕಾರ್ಯ ವಿಧಾನವನ್ನು ಉತ್ತಮಪಡಿಸುತ್ತ ಬರಲಾಗಿದೆ. ಸದ್ಯಕ್ಕೆ ಮೈಸೂರಿನ ಕಾಕನಕೋಟೆ ಕಾಡಿನ ಕಾರಾಪುರ, ಚಾಮರಾಜನಗರ ತಾಲ್ಲೂಕಿನ ಬೂದಿಪಡಗ ಮುಂತಾದ ಸ್ಥಳಗಳಲ್ಲಿ ಖೆಡ್ಡ ಕಾರ್ಯಾಚರಣೆ ನಡೆಯುತ್ತದೆ. ಇದಕ್ಕೆ ಅಪಾರವಾದ ಹಣವೂ ಜನಶಕ್ತಿಯೂ ಬೇಕಾಗುವುದರಿಂದ ಇಂಥ ಕಾರ್ಯಕ್ರಮವನ್ನು ಅಗತ್ಯ ಬಿದ್ದಾಗ ಮಾತ್ರ ಏರ್ಪಡಿಸಲಾಗುತ್ತದೆ.

ನದಿಯ ಒಂದು ಪಕ್ಕದಲ್ಲಿ ಖೆಡ್ಡ ಬೋನು ಇರುತ್ತದೆ. ಅದರ ಸುತ್ತಲೂ 8'-9' ಆಳವಾದ ಕಂದಕ ತೋಡಿರುತ್ತಾರೆ. ಕಾಡಿನಲ್ಲಿ ಹರಡಿ ಹೋಗಿರುವ ಆನೆಗಳನ್ನು ನದಿಯ ಮುಖಾಂತರ ಅಟ್ಟಿ ಖೆಡ್ಡದ ಒಳಕ್ಕೆ ಸೇರಿಸುವುದೇ ಇಷ್ಟೆಲ್ಲ ಏರ್ಪಾಡಿನ ಉದ್ದೇಶ. ಖೆಡ್ಡಕ್ಕೆ ಮೂರು ಪ್ರವೇಶದ್ವಾರಗಳಿರುತ್ತವೆ. ಒಂದೊಂದು ದ್ವಾರದ ಬಳಿಯೂ ಉದ್ದನೆಯ ಕಾಡುಮರಗಳ ಕಂಬಗಳನ್ನು ಆಳವಾಗಿ ಹೂಳಲಾಗಿದ್ದು ಒಂದೊಂದು

ಅಡ್ಡಪಟ್ಟಿಗಳಿರುವ ಒರಟು ಬಗೆಯ ಬಾಗಿಲುಗಳನ್ನು ಅಳವಡಿಸಲಾಗಿರುತ್ತದೆ. ಈ ಬಾಗಿಲುಗಳು ಮೇಲಿನಿಂದ ಕೆಳಕ್ಕೆ ಮುಚ್ಚಿಕೊಳ್ಳುವಂತಿರುತ್ತವೆ. ಇವಕ್ಕೆ ಬಂಗಾಲದ ಕುಸಿಯುವ ಬಾಗಿಲುಗಳು ಎಂದು ಹೆಸರು. ಖೆಡ್ಡದಿಂದ 10-12 ಮೈಲಿಗಳವರೆಗೆ ಓಡಾಡಲು ಅನುಕೂಲವಾಗುವಂತೆ ನೇರ ದಾರಿಗಳನ್ನೂ ಅಡ್ಡದಾರಿಗಳನ್ನೂ ಮಾಡಿರುತ್ತಾರೆ. ಸೆರೆಸಿಕ್ಕುವ ಮೊದಲೂ ಆಮೇಲೂ ಆನೆಗಳಿಗೆ ಅಸಹಜವೆನ್ನಿಸದಂತೆ ಈ ದಾರಿಗಳನ್ನು ಸೊಪ್ಪುಸದೆಗಳಿಂದ ಮುಚ್ಚಿಬಿಡಲಾಗುತ್ತದೆ. ನೇರದಾರಿಗೂ ಅಡ್ಡದಾರಿಗೂ ನಡುವೆ ಏರ್ಪಡುವ ಒಂದೊಂದು ಆವರಣವೂ ಸುಮಾರು 5-10 ಚದರಮೈಲಿ ವಿಸ್ತಾರವಾಗಿದ್ದು ಒಂದೊಂದರಲ್ಲೂ ಒಂದು ವಾರದವರೆಗೆ ಆನೆಗಳಿಗೆ ಸಾಕಾಗುವಷ್ಟು ನೀರು, ಹುಲ್ಲು ಮತ್ತು ಇತರ ಆಹಾರವಸ್ತುಗಳ ಸೌಲಭ್ಯವನ್ನೇರ್ಪಡಿಸಿರುತ್ತಾರೆ. ಆನೆಗಳು ನದಿಯ ಇನ್ನೊಂದು ದಡದಿಂದಲೂ ಬರಬಹುದಾದ ಕಾರಣ ಅಲ್ಲೂ ಇದೇ ಬಗೆಯ ಆವರಣಗಳನ್ನೇರ್ಪಡಿಸಿರುತ್ತಾರೆ.



ಸೆರೆಹಿಡಿದ ಆನೆಗಳನ್ನು ಹಗ್ಗದಿಂದ ಬಂಧಿಸುವುದು

**ಕಾರ್ಯಾಚರಣೆ :** ಆನೆಗಳನ್ನು ಸೆರೆಹಿಡಿಯುವುದಕ್ಕೆ 3 ತಿಂಗಳ ಮುಂಚೆಯೇ ಚಟುವಟಿಕೆ ಆರಂಭವಾಗಿ ಹಲವಾರು ಪೂರ್ವಸಿದ್ಧತೆಗಳನ್ನು ಮಾಡಿಕೊಳ್ಳುತ್ತಾರೆ. ಇಂಥ ಸಿದ್ಧತೆಗಳಲ್ಲಿ ಮುಖ್ಯವಾದವು ಇವು: 1) ಕಂದಕದಲ್ಲಿನ ಮಣ್ಣು, ಕಸ ಮುಂತಾದವನ್ನು ತೆಗೆದುಹಾಕುವುದು. 2) ಬಾಗಿಲುಗಳ ರಿಪೇರಿ ಮತ್ತು ಆವಶ್ಯಕವೆಂದರೆ ಹೊಸ ಬಾಗಿಲುಗಳ ನಿರ್ಮಾಣ. 3) ಆನೆಗಳಿಗೆ ಹಗ್ಗ ಬಿಗಿಯಲು ಅಗತ್ಯವಾದ ಕಿರು ಆವರಣಗಳ ನಿರ್ಮಾಣ. 4) ನದಿಗಿಳಿದ ಆನೆಗಳು ಅಕಸ್ಮಾತ್ ತಪ್ಪಿಸಿಕೊಂಡು ಹೋಗಬಹುದಾದ್ದರಿಂದ ಇಂಥ ಅವಕಾಶವಿರುವೆಡೆಯಲ್ಲೆಲ್ಲ ಬಲವಾದ ಕಂಬಗಳನ್ನು ನೆಟ್ಟು ಅಡ್ಡಿ ಏರ್ಪಡಿಸುವುದು. 5) ದಂಡೆಗಳನ್ನೇರಿ ಆನೆಗಳು ತಪ್ಪಿಸಿಕೊಳ್ಳಬಹುದಾದ್ದರಿಂದ ನದೀದಡವನ್ನು ಕಡಿದಾಗಿರುವಂತೆ ಕೊರೆಯುವುದು. 6) ನದಿಯ ಮೂಲಕ ಆನೆಗಳನ್ನು ಖೆಡ್ಡ ಆವರಣದೊಳಕ್ಕೆ ಓಡಿಸುವ ನಯನಮನೋಹರವಾದ ದೃಶ್ಯವನ್ನು ವೀಕ್ಷಿಸಲು ಹೆಚ್ಚಿನ ಸಂಖ್ಯೆಯಲ್ಲಿ ಬರುವ ಜನಕ್ಕೆ ಅನುಕೂಲವಾಗುವಂತೆ ಎತ್ತರವಾದ ವೇದಿಕೆಗಳನ್ನು ನಿರ್ಮಿಸುವುದು ಮತ್ತು ಹಗ್ಗ ಕಟ್ಟುವ ಆವರಣದ ಸುತ್ತಲೂ ಇದೇ ತೆರನಾದ ವೇದಿಕೆಗಳ ನಿರ್ಮಾಣ. 7) ಖೆಡ್ಡದ ವಿಶೇಷ ಅಧಿಕಾರಿಗಳು ಹಾಗೂ ನೌಕರ ವರ್ಗದವರಿಗೆ ವಸತಿ ಮತ್ತು ಆಹಾರ ಸೌಕರ್ಯವನ್ನು ಕಲ್ಪಿಸುವುದು ಮತ್ತು ಜನಗಳಿಗೆ ಹಾಗೂ ದೊಡ್ಡಿಗೆ ಕೂಡುವ ಆನೆಗಳಿಗೆ ನೀರಿನ ಸೌಲಭ್ಯ ಒದಗಿಸುವುದು. 8) ಆನೆಗಳು ನೀರಿಗೆ ಇಳಿಯಬಹುದಾದ ನದೀಭಾಗಗಳ ಎರಡೂ ಕಡೆ ಬಿದಿರಿನ ತೇಲುಸೇತುವೆಗಳನ್ನು ನಿರ್ಮಿಸುವುದು. ಶಿಕಾರಿಗಾರರು ಇವುಗಳ ಮೇಲೆ ನಿಂತು ಆನೆಗಳು ಅಡ್ಡಾದಿಡ್ಡಿ ಓಡದಂತೆ ನೋಡಿಕೊಳ್ಳುತ್ತಾರೆ. 9) ಕಾಡುರಸ್ತೆಗಳ ರಿಪೇರಿ ಹಾಗೂ ಅಲ್ಲಲ್ಲಿ ಶಿಕಾರಿಗಳನ್ನು ನೇಮಿಸುವುದು. ದಾರಿಗಳನ್ನು ಸರಿಪಡಿಸಿ, ಅವುಗಳ ಅಂತರವನ್ನು ಅಳೆದು, ಗುರುತಿಗೆಂದು 44 ಗಜಗಳಿಗೊಂದರಂತೆ ಗೂಟಗಳನ್ನು ಹೂಳಿ ಅವುಗಳ ಬಳಿ ಸೌದೆ ಪೇರಿಸುವುದು. ಆನೆಗಳ ಹಿಂಡನ್ನು ಓಡಿಸುವಾಗ ಈ ಸ್ಥಳಗಳಲ್ಲಿ ಶಿಕಾರಿಗಳಿದ್ದು ಬೆಂಕಿಯನ್ನು ಹೊತ್ತಿಸಿಕೊಂಡು ಆನೆಗಳು ತಪ್ಪಿಸಿಕೊಳ್ಳದಂತೆ ಕಾಯುತ್ತಾರೆ. 10) ಉಪಾಹಾರ ಗೃಹವನ್ನು ತೆರೆಯುವುದು. 11) ಗಾಯಗೊಳ್ಳುವ ಜನಗಳಿಗೂ ಆನೆಗಳಿಗೂ ಅನುಕೂಲವಾಗುವಂತೆ ವೈದ್ಯಾಲಯಗಳನ್ನು ತೆರೆಯುವುದು. 12) ಅಧಿಕಾರಿಗಳಿಗೆ ಪರಸ್ಪರ ಸಂಪರ್ಕ ಕಲ್ಪಿಸುವ ಸಲುವಾಗಿ ವೈರ್‌ಲೆಸ್ ಕೇಂದ್ರವೊಂದನ್ನು ಆರಂಭಿಸುವುದು.

ಇಷ್ಟೆಲ್ಲ ಸಿದ್ಧತೆಗಳು ಮುಗಿದಮೇಲೆ ಅರಣ್ಯ ಅಧಿಕಾರಿಗಳು ಸ್ಥಳೀಯ ಕಾಡುಕುರುಬರೇ ಮುಂತಾದ ಜನರೊಡನೆ ಕೇರಳ ಹಾಗೂ ಕೊಡಗು ಜಿಲ್ಲೆಯ ಗಡಿಯಲ್ಲಿನ ಉನ್ನತವಾದ ಬೆಟ್ಟಪ್ರದೇಶಗಳಲ್ಲಿ ಕಾವಲುನಿಂತು ಕಾಡಾನೆಗಳ ಸಂಚಾರವನ್ನು ಗಮನಿಸಿ ಹಿಂಡಿನಲ್ಲಿನ ಆನೆಗಳ ಸಂಖ್ಯೆ, ಅವುಗಳು ಹೋಗುವ ದಿಕ್ಕು ಮುಂತಾದವುಗಳ ಬಗ್ಗೆ ಖೆಡ್ಡ ಕಾರ್ಯಾಚರಣೆಯ ಮುಖ್ಯಾಧಿಕಾರಿಗಳಿಗೆ ಮಾಹಿತಿಗಳನ್ನು ಒದಗಿಸುತ್ತಾರೆ. ಎಲ್ಲ ಹಿಂಡುಗಳೂ ಸೆರೆಗೆ ಯೋಗ್ಯವಾಗಿರುವುದಿಲ್ಲ. ಹಿಂಡಿನಲ್ಲಿ ಸಾಕಷ್ಟು ಆನೆಗಳಿರಬೇಕು. ಮುದಿಯಾನೆಗಳೂ ಮರಿಗಳೂ ಹೆಚ್ಚಾಗಿ ಇರಬಾರದು. ಇಂಥ ಹಿಂಡುಗಳನ್ನು ಗುರುತಿಸಿ ಹಿಂಬಾಲಿಸಿ ಖೆಡ್ಡದ ಪರಿಧಿಯೊಳಗಿನ ಯಾವುದಾದರೂ ಒಂದು ಆವರಣದೊಳಗೆ ನುಗ್ಗುವಂತೆ ಮಾಡುವುದು ಇವರ ಕೆಲಸ.

ಸಾಕಷ್ಟು ಸಂಖ್ಯೆಯಲ್ಲಿ ಆನೆಗಳು ಆವರಣವೊಂದಕ್ಕೆ ಬಂದಿವೆಯೆಂಬ ಸುದ್ದಿ ತಿಳಿದು ಅನಂತರ ಖೆಡ್ಡದ ಮುಖ್ಯಾಧಿಕಾರಿ ಅವನ್ನು ಸುತ್ತುವರಿಯುವ ಕಾರ್ಯಚಟುವಟಿಕೆಗಳನ್ನು ಆರಂಭಿಸಲು ಆಜ್ಞಾಪಿಸುತ್ತಾನೆ. ನದಿಯ ಮೂಲಕ ಹಿಂಡನ್ನು ಓಡಿಸಿ ಖೆಡ್ಡ ಆವರಣದೊಳಕ್ಕೆ ಸೇರಿಸುವ ದಿನಕ್ಕೆ 10-15 ದಿನಗಳ ಮುಂಚೆಯೇ ಸುತ್ತುವರಿಯುವ ಈ ಕಾರ್ಯವನ್ನು ಕೈಗೊಳ್ಳುತ್ತಾರೆ. ಇದಕ್ಕೆ ಬೇಕಾಗುವ ಜನರನ್ನು ಸುತ್ತಮುತ್ತಲಿನ ಹಳ್ಳಿಗಳಿಂದ ಕರೆಸಿ ನೇಮಿಸಿಕೊಳ್ಳಲಾಗುತ್ತದೆ. ಇವರನ್ನು ಪ್ರತಿ ಒಂದು ಮೈಲಿಗೆ 40 ಮಂದಿಯಂತೆ ಒಬ್ಬೊಬ್ಬರಿಗೂ 40 ಮೀಟರ್ ಅಂತರವಿರುವಂತೆ ನಿರ್ದಿಷ್ಟ ಪ್ರದೇಶಗಳ ಸುತ್ತ ನಿಲ್ಲಿಸಲಾಗುತ್ತದೆ. ಇವರ ಮೇಲ್ವಿಚಾರಣೆಗೆ ಪ್ರತಿ 40 ಮಂದಿಯ ಗುಂಪಿಗೆ ಒಬ್ಬ ರೇಂಜರ್, ಇಬ್ಬರು ಫಾರೆಸ್ಟರು ನಾಲ್ಕು ಜನ ಕಾಪುಗಾರರು, ನಾಲ್ಕು ಜನ ಯಜಮಾನರು ಇರುತ್ತಾರೆ.

ಅಲ್ಲದೆ ಇವರೆಲ್ಲರ ಮೇಲುಸ್ತುವಾರಿಗೆಂದು ಪ್ರತಿ ಎರಡು ಮೈಲಿಗಳಿಗೊಬ್ಬ ಗೆಜೆಟೆಡ್ ಅಧಿಕಾರಿಯಿರುತ್ತಾನೆ. ಇಡೀ ದಿನ ಹಗಲು ರಾತ್ರಿ ಎನ್ನದೆ ಬೆಂಕಿಯನ್ನು ಹೊತ್ತಿಸಿ ಉರಿಸಲಾಗುತ್ತದೆ. ಬೆಂಕಿಯನ್ನು ಕಂಡರೆ ಬಹಳ ಹೆದರುವ ಕಾಡಾನೆಗಳು ಈ ಹದ್ದನ್ನು ಮೀರಿ ಹೋಗುವುದಿಲ್ಲ. ಅಕಸ್ಮಾತ್ತಾಗಿ ಆನೆಗಳೇನಾದರೂ ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸಿದರೆ ಬಿದಿರಿನ ಕಡಕುಗಳನ್ನು ಅಲ್ಲಾಡಿಸುವುದು, ತಮಟೆ ಬಡಿಯುವುದು ಮುಂತಾದವುಗಳಿಂದ ವಿಪರೀತ ಸದ್ದು ಮಾಡಿ ಅವು ಆವರಣದೊಳಗೇ ಇರುವಂತೆ ಮಾಡಲಾಗುತ್ತದೆ. ಕೆಲವು ಬಾರಿ ಆಕಾಶದ

ಕಡೆಗೆ ಗುಂಡು ಹಾರಿಸಿ ಆನೆಗಳಲ್ಲಿ ಭಯವನ್ನುಂಟುಮಾಡುವುದೂ ಇದೆ. ಹಿಂಡಿನಿಂದ ಒಂದೇ ಒಂದು ಆನೆ ತಪ್ಪಿಸಿಕೊಳ್ಳಲು ಬಿಟ್ಟರೂ ಸಾಕು, ಉಳಿದವನ್ನು ಹತೋಟಿಯಲ್ಲಿಡುವುದು ಬಹಳ ಕಷ್ಟವಾಗುತ್ತದೆ.



ಹೊಸದಾಗಿ ಹಿಡಿದ ಆನೆಗಳನ್ನು ಪಳಗಿದ ಆನೆಗಳ ಸಹಾಯದಿಂದ ಎಳೆದೊಯ್ಯುತ್ತಿರುವುದು

ಹೀಗೆ ಆನೆಗಳನ್ನು ಸುತ್ತುವರಿದು ಹಿಡಿದಿರುವ ಆವರಣ ಸುಮಾರು 20-25 ಚದರ ಕಿಮೀ ವಿಸ್ತಾರವಾಗಿದ್ದು ಸು.32ಕಿಮೀ ಸುತ್ತಳತೆ ಯುಳ್ಳದ್ದಾಗಿರುತ್ತದೆ. ಒಂದು ಆವರಣವನ್ನು ಕಾಯಲು ಸು.900-1000 ಶಿಕಾರಿಗಳು, ಅಧಿಕಾರಿಗಳು ಬೇಕಾಗುತ್ತಾರೆ. ಸುತ್ತುವರಿದ ಜನ ನಿಧಾನವಾಗಿ ಮುಂದುವರಿಯುತ್ತ ಚದುರಿರುವ ಆನೆಗಳನ್ನು ಒಂದೆಡೆ ಸೇರುವಂತೆ ಮಾಡುತ್ತಾರೆ. ಆನೆಗಳನ್ನು ನದಿಗೆ ತರುಬಲು ಗೊತ್ತಾಗಿರುವ ದಿನಕ್ಕೆ ಹಿಂದಿನ ದಿನ ಅವನ್ನು ಕೇವಲ 5 ಚದರ ಕಿಮೀ ಪ್ರದೇಶದಲ್ಲಿ ಗುಂಪುಗೂಡಿಸುತ್ತಾರೆ. ಯಾವುದೇ ಸಂದರ್ಭದಲ್ಲೂ ಇಷ್ಟು ಚಿಕ್ಕ ಪ್ರದೇಶದಲ್ಲಿ ಆನೆಗಳನ್ನು ಒಂದು ದಿನಕ್ಕಿಂತ ಹೆಚ್ಚು ಸಮಯ ಕೂಡಿಡುವಂತಿಲ್ಲ. ಏಕೆಂದರೆ ಮಿತವಾದ ಪ್ರದೇಶದಲ್ಲಿ ಅವಕ್ಕೆ ಮೇವು, ನೀರು ಸಾಕಷ್ಟು ಪ್ರಮಾಣದಲ್ಲಿ ದೊರೆಯುವುದಿಲ್ಲವಾದ್ದರಿಂದ ಅವು ಯಾವ ಬೆದರಿಕೆಗೂ ಜಗ್ಗದೆ ಕಾವಲಿನವರನ್ನು ಘಾಸಿಗೊಳಿಸಿ ಅಲ್ಲಿಂದ ತಪ್ಪಿಸಿಕೊಂಡು ಹೋಗಬಹುದು. ನದಿಯ ಮೂಲಕ ಕಾಡಾನೆಗಳನ್ನು ಖೆಡ್ಡ ಆವರಣಕ್ಕೆ ಓಡಿಸುವ ದಿನ ಮುಂಜಾನೆ ಹೆಚ್ಚು ಗದ್ದಲ ಮಾಡದೆ, ಆನೆಗಳನ್ನು ಸು.1.5 ಚದರ ಕಿಮೀ ಪ್ರದೇಶದೊಳಕ್ಕೆ ಕೂಡಿಡಲಾಗುತ್ತದೆ. ಅನಂತರ ನಿಶ್ಚಿತ ಕಾಲಕ್ಕೆ ಸರಿಯಾಗಿ ಹಲವಾರು ಸಾಕಿದ ಆನೆಗಳ ನೆರವಿನಿಂದ, ಕಾಡಾನೆಗಳನ್ನು ನದಿಗಿಳಿಸಲಾಗುತ್ತದೆ. ಸಾಕಿದ ಆನೆಗಳ ಮೇಲೆ ಬಂದೂಕು ಹಿಡಿದು ಸನ್ನದ್ಧರಾಗಿ ಕುಳಿತ ಅಧಿಕಾರಿಗಳ ನೇತೃತ್ವದಲ್ಲಿ ಪರಿಣತರಾದ ಶಿಕಾರಿಗಳು ಬಿದಿರಿನ ಕಡಕುಗಳು, ತಮಟೆಗಳನ್ನು ಬಡಿದು ಅಪಾರವಾಗಿ ಸದ್ದುಮಾಡುತ್ತ ಬಿದಿರಿನಿಂದ ಮಾಡಿದ ಉರಿಕೊಳ್ಳಿಗಳನ್ನು ಹಿಡಿದು ಬೆದರಿಸುತ್ತ ಹಿಂಡು ನದಿಯ ಕಡೆಗೆ ಸಾಗುವಂತೆ ಮಾಡುತ್ತಾರೆ. 15-20ಮೀಗಳಿಗೆ ಒಂದು ಗುಂಪಿನಂತೆ ಹಲವಾರು ಗುಂಪುಗಳಲ್ಲಿ ಹೀಗೆ ಜನ ಕೂಡಿಕೊಂಡು ಈ ರೀತಿ ಸದ್ದುಗದ್ದಲವೆಬ್ಬಿಸಿದಾಗ ಆನೆಗಳ ಗುಂಪು ನಿರ್ವಾಹವಿಲ್ಲದೆ ನದಿಯೆಡೆಗೆ ನುಗ್ಗುತ್ತದೆ. ಹೀಗೆ ಬೆದರಿದ ಆನೆಗಳು ಒಂದೆಡೆ ಸೇರುತ್ತಿದ್ದಂತೆ ಅಲ್ಲಿ ಮುಂಚೆಯೇ ಸಂಗ್ರಹಿಸಿಡಲಾದ ಸೌದೆಗೆ ಸೀಮೆಎಣ್ಣೆ ಸುರಿದು ಬೆಂಕಿಯಿಡುತ್ತಾರೆ. ಇದರಿಂದ ಮತ್ತಷ್ಟು ಬೆದರಿದ ಆನೆಗಳು ಸರಸರನೆ ನದಿಯ ಕಡೆಗೆ ಧಾವಿಸುತ್ತವೆ. ಆನೆಗಳನ್ನು ಬೆದರಿಸಲು ಆಗಿಂದಾಗ್ಗೆ ಹುಸಿಗುಂಡನ್ನು ಹಾರಿಸುವುದೂ ಅಗತ್ಯಬಿದ್ದರೆ ನಿಜವಾದ ಗುಂಡನ್ನು ಹಾರಿಸುವುದೂ ಉಂಟು. ತುಂಬ ಪುಂಡೇಳುವ ಆನೆಗಳಿಗೆ ಏಟು ಬೀಳುವ ಸಂಭವವೂ ಉಂಟು. ಇಷ್ಟೆಲ್ಲ ಒತ್ತಾಯಕ್ಕೆ ಸಿಕ್ಕ ಆನೆಗಳು ಗತ್ಯಂತರವಿಲ್ಲದೆ ನೀರಿಗಿಳಿಯುತ್ತವೆ. ಅವು ನೀರಿಗಿಳಿದ ತತ್‍ಕ್ಷಣ ಶಿಕಾರಿಗಳೂ ಬೇಟೆಯ ಅಧಿಕಾರಿಗಳೂ ಸಾಕಿದ ಆನೆಗಳ ಮೇಲೆ ಕುಳಿತು ಅವನ್ನು ಸುತ್ತುವರಿದಂತೆ ಹಿಂಬಾಲಿಸುತ್ತಾರೆ. ಈ ರೀತಿ ಕಾಡಾನೆಗಳನ್ನು ನದಿಯಲ್ಲಿ ಅಟ್ಟಿಕೊಂಡು ಹೋಗುವ ದೃಶ್ಯ ಬಹಳ ರಮಣೀಯ ವಾಗಿರುತ್ತದೆ. ನದಿಯ ಆಚೆ ದಡದಲ್ಲಿ ಅಟ್ಟಣೆಗಳ ಮೇಲೆ ಕುಳಿತ ವೀಕ್ಷಕರಿಗೆ ಈ ದೃಶ್ಯ ಸ್ಪಷ್ಟವಾಗಿ ಕಾಣುವಂತಿರುತ್ತದೆ. ನೀರು ಆಳವಾದಾಗ ಲೀಲಾಜಾಲವಾಗಿ ಈಜುವುದು, ಮರಿಗಳು ಕೊಚ್ಚಿಹೋಗದಂತೆ ಅವನ್ನು ಸೊಂಡಿಲಿನಿಂದ ಎತ್ತಿಹಿಡಿದು ಸಾಗಿಸುವುದು. ಭಯದಿಂದ ಘೀಳಿಡುವುದು, ಸೊಂಡಿಲಿನಿಂದ ನೀರೆರಚುವುದು ಮುಂತಾದವು ಬಲು ಆಕರ್ಷಕವಾಗಿರುತ್ತವೆ.

ಹೀಗೆ ಹಂತಹಂತವಾಗಿ ಆನೆಗಳನ್ನು ಅಟ್ಟಿ ಕೊನೆಗೆ ಇರುವ ಒಂದೇ ಪ್ರವೇಶದ್ವಾರದ ಮೂಲಕ ಖೆಡ್ಡ ಆವರಣದೊಳಕ್ಕೆ ಅವನ್ನು ನುಗ್ಗಿಸಿ ಕೂಡಿಡಲಾಗುತ್ತದೆ. ಆನೆಗಳು ನದಿಯಲ್ಲಿ ಸಾಗುವಾಗ ಆಚೀಚೆ ಹೋಗದಂತೆಯೂ ನದಿಯ ದಡವನ್ನು ಹತ್ತಿ ತಪ್ಪಿಸಿಕೊಳ್ಳದಂತೆಯೂ ನದಿಯ ಎರಡು ದಡಗಳುದ್ದಕ್ಕೂ ಜನ ನಿಂತು ಸದ್ದು ಮಾಡುತ್ತಿರುತ್ತಾರೆ. ಖೆಡ್ಡ ಆವರಣದೊಳಕ್ಕೆ ಆನೆಗಳ ಹಿಂಡು ಸಂಪೂರ್ಣವಾಗಿ ನುಗ್ಗಿದೊಡನೆ ಬಾಗಿಲನ್ನು ಮುಚ್ಚಿ ಭದ್ರಪಡಿಸಿಬಿಡುತ್ತಾರೆ. ಕೂಡಲೆ ಕಂದಕದ ಹೊರಭಾಗದ ಬಳಿ 14ಮೀ. ಗಳಿಗೊಬ್ಬನಂತೆ ಆಳುಗಳು ನಿಂತು ಕಾಯತೊಡಗುತ್ತಾರೆ. ಬೆಂಕಿಯನ್ನು ಉರಿಸುವುದು ಮತ್ತು ಬಿದಿರಿನ ಕಡಕುಗಳಿಂದಲೂ ತಮಟೆಗಳಿಂದಲೂ ಗದ್ದಲ ಮಾಡುವುದು ಏಕಪ್ರಕಾರ ನಡೆಯುತ್ತಲೇ ಇರುತ್ತದೆ.

ಆನೆಗಳನ್ನು ಖೆಡ್ಡ ಆವರಣದೊಳಕ್ಕೆ ಸೇರಿಸಿದ ಮೇಲೆ ಅವಕ್ಕೆ ಸಮೃದ್ಧಿಯಾಗಿ ಮೇವನ್ನೂ ನೀರನ್ನೂ ಒದಗಿಸುತ್ತಿದ್ದು ಒಂದೆರಡು ದಿನಗಳ ಅನಂತರ ಇಲ್ಲವೆ ಇನ್ನೂ ಹೆಚ್ಚು ಕಾಲದ ಮೇಲೆ ಅವುಗಳಲ್ಲಿ ಕೆಲವನ್ನು ಆವರಣದಿಂದ ಹೊರಕ್ಕೆ ಬಿಟ್ಟುಕೊಂಡು ಅವುಗಳ ಕಾಲು ಮತ್ತು ಕೊರಳುಗಳಿಗೆ ಭಾರಿ ಭಾರಿ ಹಗ್ಗಗಳನ್ನು ಬಿಗಿದು ಅಲ್ಲಿಂದ ಸಾಗಿಸಿಕೊಂಡು ಹೋಗಿ ಮರಗಳಿಗೆ ಕಟ್ಟಿಹಾಕುವ ಕಾರ್ಯ ನಡೆಯುತ್ತದೆ. ಇದಕ್ಕಾಗಿ ಖೆಡ್ಡ ಆವರಣದ ಬಾಗಿಲಿಂದ ಮುಂದೆ, ಹೊರಭಾಗದಲ್ಲಿ ಕಿರಿದಾದ ಆವರಣವೊಂದನ್ನು ನಿರ್ಮಿಸಲಾಗುತ್ತದೆ. ಈ ಆವರಣಕ್ಕೆ ಹಗ್ಗ ಬಿಗಿಯುವ ಜಾಗ (ರೋಪಿಂಗ್ ಸ್ಟಾಕೇಡ್) ಎಂದು ಹೆಸರು. ಸು.38.1ಮೀ. ಒಳ ಸುತ್ತಳತೆಯುಳ್ಳ ಜಾಗವಿದು. ಇದರ ಸುತ್ತ ಮೂರು ಮೂರು ವರಸೆಗಳಲ್ಲಿ ಭಾರಿ ಮರದ ಕಂಬಗಳನ್ನು ಆಳವಾಗಿ ಹೂಳಲಾಗಿರುತ್ತದೆ. ಇದೇ ಗಾತ್ರದ ಮರಗಳನ್ನು 1.5ಮೀ. ಅಂತರಕ್ಕೊಂದರಂತೆ ಅಡ್ಡಡ್ಡಲಾಗಿ ಹಗ್ಗಗಳಿಂದ ಬಿಗಿದು ಭದ್ರಗೊಳಿಸಿರುತ್ತಾರೆ. ಇದರ ಒಟ್ಟು ಎತ್ತರ ಸು.4.6ಮೀ. ಇರುತ್ತದೆ. ಇದರ ಮೇಲ್ಭಾಗದಲ್ಲಿ ವೀಕ್ಷಕರು ಕುಳಿತು ಆನೆಗಳಿಗೆ ಹಗ್ಗ ಬಿಗಿಯುವ ಸಾಹಸಕಾರ್ಯವನ್ನು ನೋಡಲು ಅನುಕೂಲವಾಗುವಂತೆ 1.8ಮೀ. ಅಗಲದ ಅಟ್ಟಣೆಯೊಂದನ್ನು ನಿರ್ಮಿಸಲಾಗಿರುತ್ತದೆ.

**ಹಗ್ಗಗಳಿಂದ ಬಿಗಿಯುವುದು :** ಒಂದು ಸಲಕ್ಕೆ 4ರಿಂದ 6 ಆನೆಗಳನ್ನು ಬೇರ್ಪಡಿಸಿ, ಹಗ್ಗ ಬಿಗಿಯುವ ಆವರಣದೊಳಕ್ಕೆ ಸಾಗಿಸಲಾಗುತ್ತದೆ. ಕಬ್ಬಿನ ಜಲ್ಲೆ, ಬೆಲ್ಲ, ಸೊಪ್ಪುಸದೆಗಳ ಆಸೆ ತೋರಿಸಿ ಆನೆಗಳನ್ನು ಹಗ್ಗ ಕಟ್ಟುವ ಸ್ಥಳಕ್ಕೆ ಕರದೊಯ್ಯುತ್ತಾರೆ. ಹಗ್ಗ ಬಿಗಿಯುವ ಆವರಣಮುಖದಲ್ಲೂ ದಪ್ಪನಾದ ಬಾಗಿಲು ಇರುತ್ತದೆ. ಆನೆಗಳು ಈ ಆವರಣದೊಳಕ್ಕೆ ಬಂದಕೂಡಲೆ ಬಾಗಿಲನ್ನು ಮುಚ್ಚಿ ಹಗ್ಗದಿಂದ ಬಿಗಿದು ಭದ್ರಮಾಡುತ್ತಾರೆ. ಕಾಡಾನೆಗಳ ಜೊತೆಗೆ 8-10 ಕುಮ್ಕಿ (ಪಳಗಿದ) ಆನೆಗಳನ್ನೂ ಒಳಕ್ಕೆ ಸಾಗಿಸುತ್ತಾರೆ. ಕುಮ್ಕಿ ಆನೆಗಳ ಮೇಲೆ ಪರಿಣತರಾದ ಮಾವುತರು ಕುಳಿತು ಕಾಡಾನೆಗಳನ್ನು ಎಲ್ಲ ದಿಕ್ಕುಗಳಿಂದಲೂ ಒತ್ತಿ ಅವು ಪುಂಡಾಟ ಮಾಡದಂತೆ ನೋಡಿಕೊಳ್ಳುತ್ತಾರೆ. ಕಾಡಾನೆಗಳಿಗೆ ಹಗ್ಗ ಬಿಗಿಯುವ ಕಲೆಯಲ್ಲಿ ವಿಶೇಷ ಶಿಕ್ಷಣ ಹೊಂದಿರುವ ಅನುಭವಶಾಲಿಗಳಾದ ಇನ್ನೂ ಕೆಲವು ಮಾವುತರು ಹಗ್ಗ ಬಿಗಿಯುವ ಆವರಣದ ಕಂಬಗಳಲ್ಲಿನ ಕಿಂಡಿಗಳಲ್ಲಿ ಮರೆಮಾಡಿ ಕೊಂಡಿದ್ದು ಪಳಗಿದ ಆನೆಗಳ ಮಧ್ಯೆ ಇರುವ ಕಾಡಾನೆಗಳ ಹಿಂಗಾಲುಗಳಿಗೆ ಹೆಬ್ಬೆರಳು ಗಾತ್ರದ ನೂಲುಹಗ್ಗಗಳಿಂದ ಹಲವು ವರಸೆಗಳ ತೊಡಕನ್ನು ಬಿಗಿಯುತ್ತಾರೆ. ಈ ಕಾರ್ಯಕ್ಕೆ ಅನುಕೂಲವಾಗಲೆಂದು ಹಗ್ಗಗಳಿಂದ ಸಡಿಲವಾದ ಕುಣಿಕೆಗಳನ್ನು ಮಾಡಿಕೊಂಡು ಮೊದಲೇ ಆವರಣದ ನೆಲದಮೇಲೆ ಹಾಕಲಾಗಿರುತ್ತದೆ. ಕುಮ್ಕಿ ಆನೆಗಳ ಸಹಾಯದಿಂದ ಕಾಡಾನೆಗಳನ್ನು ಒತ್ತರಿಸಿ ಕುಣಿಕೆಗಳೊಳಕ್ಕೆ ಕಾಲಿಡುವಂತೆ ಮಾಡಲಾಗುತ್ತದೆ. ಜಾಗರೂಕತೆಯಿಂದ ಗಮನಿಸುತ್ತಿರುವ ಮಾವುತರು ಅವು ಕಾಲಿಟ್ಟ ತತ್‍ಕ್ಷಣ ಕುಣಿಕೆಗಳನ್ನು ಎಳೆದು ಬಿಗಿಯುತ್ತಾರೆ. ಅನಂತರ ರಟ್ಟೆಗಾತ್ರದ ಹಗ್ಗಗಳನ್ನು ಇದೇ ರೀತಿ ಬಿಗಿಯಲಾಗುತ್ತದೆ. ಆನೆಗೆ ಗೊತ್ತಾಗದೆ ಇರುವಷ್ಟು ಕೈಚಳಕದಿಂದ ಚತುರತೆಯಿಂದ ಈ ಕೆಲಸ ನಡೆಯುತ್ತದಾದರೂ ಬಂಧನಕ್ಕೊಳಗಾಗಬೇಕೆಂಬ ಸುಳಿವನ್ನು ತಿಳಿದು ಆನೆಗಳು ಭಯಾನಕವಾಗಿ

ಘೀಳಿಡುತ್ತ ರೋಷದಿಂದ ಆವರಣದ ಕಂಬಗಳಿಗೆ ಡಿಕ್ಕಿ ಹೊಡೆದು ವಿರೋಧವನ್ನು ಪ್ರದರ್ಶಿಸುತ್ತವೆ. ಕಾಲುಗಳನ್ನು ಕಟ್ಟಿಹಾಕಿದ ಮೇಲೆ ಕುಮ್ಕಿ ಆನೆಗಳ ಸಹಾಯದಿಂದ ಆನೆಗಳ ಕೊರಳಿಗೆ ಹಗ್ಗವನ್ನು ಬಿಗಿಯಲಾಗುತ್ತದೆ. ಕಾಡಾನೆಗಳಿಗೆ ಹಗ್ಗ ಬಿಗಿಯುವ ಕಾರ್ಯ ಬಲು ಜಾಣ್ಮೆಯ ಕೆಲಸ. ಪಳಗಿದ ಆನೆ ಮತ್ತು ಮಾವುತರ ನಡುವೆ ಹೊಂದಾಣಿಕೆಯಿರಬೇಕು. ಯಾವನೊಬ್ಬನೂ ಅಲಕ್ಷ್ಯದಿಂದ ಇರಬಾರದು. ಇಲ್ಲವಾದರೆ ಮಾರಕ ಪರಿಣಾಮಗಳಾಗಬಹುದು.

ಹೀಗೆ ಎಲ್ಲ ಆನೆಗಳನ್ನೂ ಬಂಧಿಸಿದ ಅನಂತರ ಅವನ್ನು ಪಳಗಿದ ಆನೆಗಳಿಗೆ ಕಟ್ಟಿ ಎಳೆದುಕೊಂಡು ಹೋಗಿ, ಹೊರಕ್ಕೆ ಸಾಗಿಸಿ ಒಳ್ಳೆಯ ನೆರಳಿರುವ ಸ್ಥಳಗಳಲ್ಲಿ ದೊಡ್ಡ ಮರಗಳಿಗೆ ಬೇರೆ ಬೇರೆಯಾಗಿ ಕಟ್ಟಿಹಾಕಲಾಗುತ್ತದೆ. ಇಂಥ ಸ್ಥಳಕ್ಕೆ ಪೀಲ್‌ಖಾನ ಎಂದು ಹೆಸರು. ಹೀಗೆ ಆನೆಗಳನ್ನು ಕಟ್ಟಿಹಾಕಿದ ಮೇಲೆ ಅವು ಬಂಧನದಿಂದ ಪಾರಾಗಲು ಎಳೆದಾಡುತ್ತವೆ. ಎಳೆದಾಡುವ ರಭಸದಲ್ಲಿ ಹಗ್ಗಗಳು ಒತ್ತಿ ಕಾಲಿನ ಚರ್ಮ ಕಿತ್ತು ಹುಣ್ಣಾಗುವ ಸಂಭವ ಉಂಟು. ಆಗ ತಕ್ಕ ಚಿಕಿತ್ಸೆಯನ್ನು ನಡೆಸಿ ಆನೆಗಳಿಗೆ ಊನವಾಗದಂತೆ ನೋಡಿಕೊಳ್ಳಲಾಗುತ್ತದೆ. ಅನಂತರ ಸೆರೆಹಿಡಿದ ಆನೆಗಳನ್ನು ಕುಮ್ಕಿ ಆನೆಗಳ ಸಹಾಯದಿಂದ ದಿನವೂ ನದಿ ಇಲ್ಲವೆ ಯಾವುದಾದರೂ ನೀರಿನ ನೆಲೆಗೆ ಕರೆದೊಯ್ದು ಅವು ನೀರಿನಲ್ಲಿ ವಿರಮಿಸುವಂತೆ ಮಾಡಲಾಗುತ್ತದೆ. ಈ ಕಾಲದಲ್ಲಿ ಅವಕ್ಕೆ ಯಥೇಷ್ಟವಾಗಿ ಸೊಪ್ಪನ್ನೂ ಹುಲ್ಲನ್ನೂ ಹಾಕಲಾಗುತ್ತದೆ. ಜೊತೆಗೆ ರಾಗಿಮುದ್ದೆ, ಕಬ್ಬಿನ ಜಲ್ಲೆ, ಬೆಲ್ಲ ಮುಂತಾದುವನ್ನು ತಿನ್ನಿಸುತ್ತಾರೆ. ಕಾಡಾನೆಗಳನ್ನು ಬಂಧಿಸುವ ಕಾರ್ಯ ಮುಗಿದ ದಿನದಿಂದಲೇ ಅವನ್ನು ಪಳಗಿಸುವ ಕಾರ್ಯ ಆರಂಭವಾಗುತ್ತದೆ. ನಿಧಾನವಾಗಿಯೂ ಕ್ರಮಕ್ರಮವಾಗಿಯೂ ನಡೆಯುವ ಈ ಕಾರ್ಯದಲ್ಲಿ ಅನುಭವಿಗಳಾದ ಮಾವುತರು ಬುದ್ಧಿವಂತಿಕೆಯಿಂದ ಚತುರತೆಯಿಂದ ಕಾರ್ಯನಿರ್ವಹಿಸುತ್ತಾರೆ.

ಪಳಗಿಸುವಿಕೆಯಲ್ಲಿ ಎರಡು ವಿಧಾನಗಳುಂಟು. ಒಂದು ವಿಧಾನದಲ್ಲಿ ಹಲವಾರು ಅಂಕಣಗಳುಳ್ಳ ಒಂದು ಮರದ ಕಟಕಟೆಯನ್ನು ಕಟ್ಟಲಾಗುತ್ತದೆ. ಒಂದೊಂದು ಅಂಕಣವೂ ಸೆರೆಹಿಡಿದ ಆನೆಯ ಗಾತ್ರಕ್ಕಿಂತ ಕೊಂಚ ದೊಡ್ಡದಾಗಿರುತ್ತದೆ. ಇದರಲ್ಲಿ ಆನೆ ಮಂಡಿಯೂರಿ ಕುಳಿತುಕೊಳ್ಳಲು ಮತ್ತು ನಿದ್ದೆ ಮಾಡಲು ಮಾತ್ರ ಸಾಕಾಗುವಷ್ಟು ಅವಕಾಶವಿರುತ್ತದೆ. ಇಂಥ ಅಂಕಣದೊಳಕ್ಕೆ ಒಂದು ಆನೆಯನ್ನು ಹೊಗಿಸಿ ಹಲವಾರು ದಿನಗಳು ಅದು ಅಲ್ಲಿಯೇ ಇರುವಂತೆ ಮಾಡಲಾಗುತ್ತದೆ. ಅದಕ್ಕೆ ಮೇವು ಮತ್ತು ನೀರನ್ನು ಅಲ್ಲಿಯೇ ಒದಗಿಸಲಾಗುತ್ತದೆ. ಪ್ರತಿನಿತ್ಯ 3-4 ಜನ ಅಂಕಣದೊಳಕ್ಕೆ ಸೇರಿಸಲ್ಪಟ್ಟ ಆನೆಯ ಮೈಯನ್ನು ತೆಂಗಿನ ಜುಂಗಿನಿಂದ ಉಜ್ಜುತ್ತಾರೆ. ಮಾನವಸ್ಪರ್ಶಕ್ಕೆ ಆನೆ ಒಗ್ಗಿಕೊಳ್ಳಲೆಂಬುದೇ ಇದರ ಉದ್ದೇಶ. ಕ್ರಮೇಣ ಅದರ ಬೆನ್ನಮೇಲೆ ಕುಳಿತುಕೊಳ್ಳುವ ಅಭ್ಯಾಸವೂ ನಡೆಯುತ್ತದೆ. ಅನಂತರ ಪ್ರತಿದಿನವೂ ಆನೆಯನ್ನು ಒಂದೆರಡು ಪಳಗಿದ ಆನೆಗಳ ಸಹಾಯದಿಂದ (ಆದರೆ ಅದಕ್ಕೆ ಇದನ್ನು ಬಂಧಿಸದೆ) ಹೊರತಂದು ಕೊಂಚ ದೂರ ಕರೆದೊಯ್ಯುತ್ತಾರೆ. ಹೀಗೆ 3-4 ತಿಂಗಳುಗಳು ಮಾಡಿದ ಮೇಲೆ ಅದಕ್ಕೆ ಕೆಲವು ಹಗುರವಾದ ಕೆಲಸಗಳನ್ನು ಕೊಟ್ಟು ಮಾಡಿಸುತ್ತಾರೆ. ಕಾಡಾನೆಯ ಎದುರಿನಲ್ಲಿ ಪಳಗಿದ ಆನೆಗಳಿಂದ ಆ ಕೆಲಸವನ್ನು ಮಾಡಿಸಿ ಅದು ಅವನ್ನು ಅನುಕರಿಸುವಂತೆ ಮಾಡುತ್ತಾರೆ.

ಇನ್ನೊಂದು ವಿಧಾನ ಒರಟಾದುದು ಮತ್ತು ಹೆಚ್ಚು ಸಮಯ ಹಿಡಿಯುವಂಥದು. ಇದರಲ್ಲೂ ಮೇಲೆ ಹೇಳಿದ ರೀತಿಯಲ್ಲೇ ಪಳಗಿಸುವ ಕ್ರಮ ನಡೆಯುವುದಾದರೂ ಆನೆಯನ್ನು ಮರಕ್ಕೆ ಕಟ್ಟಿಹಾಕಿರುತ್ತಾರೆ.

ಪ್ರೌಢ ವಯಸ್ಸಿನ ಆನೆಗಳನ್ನು ಪಳಗಿಸಲು 6 ತಿಂಗಳಿನಿಂದ ವರ್ಷದ ವರೆಗೆ ಬೇಕಾಗುತ್ತದೆ. 6' ಗಳಿಗೂ ಕಡಿಮೆ ಎತ್ತರದ ಕಿರಿ ವಯಸ್ಸಿನ ಆನೆಗಳನ್ನು ಪಳಗಿಸಲು 3-4 ತಿಂಗಳು ಸಾಕು. ಹೆಚ್ಚು ವಯಸ್ಸಾದವು ಪಳಗುವುದು ಬಹಳ ಕಷ್ಟ. ಕೆಲವೊಮ್ಮೆ ಪಳಗಿಸಲು ಸಾಧ್ಯವೇ ಇಲ್ಲ ಎನ್ನಬಹುದು. ಇಂಥವನ್ನು ಸಾಮಾನ್ಯವಾಗಿ ಕಾಡಿನೊಳಕ್ಕೆ ಬಿಟ್ಟು ಬಿಡುತ್ತಾರೆ. (ಎನ್.ಎಸ್.ಕೆ.)

**ಖೊಟ್ಟಿಗ** : ರಾಷ್ಟ್ರಕೂಟ ವಂಶದ ದೊರೆ (ಸು.967-72). ಮುಮ್ಮಡಿ ಕೃಷ್ಣನ ತಮ್ಮ ಮತ್ತು ಉತ್ತರಾಧಿಕಾರಿ. ನಿತ್ಯವರ್ಷ ಎಂಬುದು ಇವನ ಬಿರುದು. ಇವನ ಆಳಿಕೆಯ ಆರಂಭ ಸುಗಮವಾಗಿದ್ದರೂ ಅಂತ್ಯದಲ್ಲಿ ಮಹಾ ದುರ್ಘಟನೆಯೊಂದು ಇವನಿಗೆ ಕಾದಿತ್ತು. ಹಿಂದೆ ಮುಮ್ಮಡಿ ಕೃಷ್ಣನಿಂದ ಪರಾಭವಗೊಂಡಿದ್ದ ಪರಮಾರ ರಾಜ ಸೀಯಕ ಸೇಡು ತೀರಿಸಿಕೊಳ್ಳಲು ಹವಣಿಸುತ್ತಿದ್ದ. ಬಲಿಷ್ಠನಾಗಿದ್ದ ಕೃಷ್ಣನ ಮರಣಾನಂತರ ಬಂದ ಈ ಹೊಸ ರಾಜನ ಸತ್ವ ಪರೀಕ್ಷಿಸಲೋ ಎಂಬಂತೆ ಇವನ ರಾಜ್ಯದ ಉತ್ತರ ಗಡಿಗಳ ಮೇಲೆ ದಾಳಿಮಾಡಿದ. ರಾಷ್ಟ್ರಕೂಟ ಸೈನ್ಯ ಅವನಿಗೆ ನರ್ಮದಾ ನದಿಯನ್ನು ದಾಟಲು ಅವಕಾಶ ಕೊಡಲಿಲ್ಲ. ಧೃತಿ ಗೆಡದ ಸೀಯಕ ಬಲ ಕೂಡಿಸಿಕೊಂಡು ಪುನಃ ಪ್ರಯತ್ನಿಸಿದ. ಖೊಟ್ಟಿಗ ತನಗೆ ನೆರವಾಗುವಂತೆ ಗಂಗರಾಜ ಮಾರಸಿಂಹನಿಗೆ ಕರೆಕಳುಹಿಸಿದ. ಮಾರಸಿಂಹನ ನೆರವು ತಲಪುವ ವೇಳೆಗೆ ಸೀಯಕ ರಾಷ್ಟ್ರಕೂಟ ರಾಜಧಾನಿಯಾದ ಮಾನ್ಯಖೇಟವನ್ನು ಆಕ್ರಮಿಸಿ (972) ಲೂಟಿ ಹೊಡೆದು, ರಾಜ್ಯದ ಬೊಕ್ಕಸವನ್ನು ಸೂರೆಮಾಡಿ, ದಫ್ತರ ಕಚೇರಿಯಲ್ಲಿದ್ದ ತಾಮ್ರ ಪಟಗಳನ್ನೂ ಹೊತ್ತುಕೊಂಡು ಹೋದ. ಅನಂತರ ಮಾರಸಿಂಹನ ಹೊಡೆತದಿಂದಲೋ ಅಥವಾ ಸ್ವಇಚ್ಛೆಯಿಂದಲೋ ಪರಮಾರರು ರಾಷ್ಟ್ರಕೂಟ ರಾಜ್ಯದಿಂದ ನಿರ್ಗಮಿಸಿದರು. ಆದರೆ ಈ ಅಪಕೀರ್ತಿ ಮತ್ತು ರಾಜ್ಯಕ್ಕೊದಗಿದ ವಿಪತ್ತಿನಿಂದ ಭಗ್ನಹೃದಯಿಯಾದ ಖೊಟ್ಟಿಗ ಅನತಿಕಾಲದಲ್ಲಿ ಸತ್ತ (972). ಈ ಯುದ್ಧದ ಪರಿಣಾಮವಾಗಿ ಗುಜರಾತಿನ ಉತ್ತರ ಭಾಗ ರಾಷ್ಟ್ರಕೂಟರ ಕೈಬಿಟ್ಟು ಹೋಯಿತು. ಇವನಿಗೆ ಮಕ್ಕಳಿಲ್ಲದ್ದರಿಂದ ಇವನ ತಮ್ಮ ನಿರುಪಮನ ಮಗ ಇಮ್ಮಡಿ ಕರ್ಕ ಅನಂತರ ಪಟ್ಟಕ್ಕೆ ಬಂದ. (ಎಚ್.ವಿ.ಎಸ್.,ಕೆ.ವಿ.ವಿ.)

**ಖೋಲೇಶ್ವರ** : ಸೇವುಣ ಸಿಂಘಣನ (1199-1247) ಮಂತ್ರಿ. ಸಿಂಘಣನ ಸಾಮ್ರಾಜ್ಯವಿಸ್ತಾರ ಕಾರ್ಯದಲ್ಲಿ ಪ್ರಧಾನಪಾತ್ರ ವಹಿಸಿದವ.

ಅಂಬೆಜೋಗೈ ಎಂಬಲ್ಲಿ ದೊರಕಿರುವ ಶಾಸನಗಳು ಖೋಲೇಶ್ವರನ ವಿಷಯಗಳನ್ನು ತಿಳಿಸುತ್ತವೆ. ಈತ ಮೌದ್ಗಲ್ಯ ಗೋತ್ರದ ಬ್ರಾಹ್ಮಣ. ತಂದೆ ತ್ರಿವಿಕ್ರಮ, ತಾಯಿ ಕಾಶ್ಯಪ ಗೋತ್ರದ ಚಂದ್ರಾ. ಸಿಂಘಣ ಗುಜರಾತ್ ದಂಡಯಾತ್ರೆಯನ್ನು ಯೋಜಿಸಿದ ಕಾಲದಲ್ಲಿ ಸೈನ್ಯದ ನೇತೃತ್ವವನ್ನು ವಹಿಸಿದ್ದ ಖೋಲೇಶ್ವರ ಮೊದಲು ಲಾಟ ದೇಶಕ್ಕೆ ನುಗ್ಗಿ (ಸು.1216-17) ಸಿಂಹ ಮತ್ತು ಸಿಂಧುರಾಜರನ್ನು ಕೊಂದು, ಶಂಖ ಎಂಬುವನನ್ನು ಸೆರೆಹಿಡಿದ. ಬ್ರೋಚ್ ನಗರವನ್ನು ವಶಮಾಡಿಕೊಂಡು ಸಮುದ್ರತೀರದಲ್ಲಿ ವಿಜಯಸ್ತಂಭವನ್ನು ಸ್ಥಾಪಿಸಿದ. ಇದರಿಂದ ಉತ್ತೇಜಿತನಾದ ಇವನು ಗುಜರಾತಿಗೆ ನುಗ್ಗುವ ಸನ್ನಾಹ ನಡೆಸಿದ. ಪರಮಾರ ದೊರೆ ದೇವಪಾಲನನ್ನು ಸೋಲಿಸಿ, ಸೇವುಣರಿಗೆ ಅಧೀನನನ್ನಾಗಿ ಮಾಡಿದ. ಅಲ್ಲಿಂದ ಮುಂದೆ ಚಾಳುಕ್ಯ ರಾಜಧಾನಿಗೆ ಮುತ್ತಿಗೆ ಹಾಕಿದ. ದಾರಿಯಲ್ಲಿ ಸೇವುಣ ಸೈನ್ಯ ಸಾಕಷ್ಟು ಕಷ್ಟನಷ್ಟಗಳನ್ನುಂಟುಮಾಡಿತು. ಇಂಥ ಪ್ರಸಿದ್ಧ ಸೇನಾಪತಿಯ ಸೈನ್ಯವನ್ನು ಎದುರಿಸುವುದು ಕಷ್ಟವೆಂದು ತಿಳಿದ ಚಾಳುಕ್ಯ ದಂಡನಾಯಕ ಲವಣಪ್ರಸಾದ ಸೇವುಣರೊಡನೆ ಸಂಧಿ ಮಾಡಿಕೊಂಡ. ಉತ್ತರದ ವಿಜಯಗಳನ್ನು ಪೂರೈಸಿಕೊಂಡು ಹಿಂದಿರುಗುವ ಮಾರ್ಗದಲ್ಲಿ ಇವನು ಅನೇಕ ಸಣ್ಣಪುಟ್ಟ ರಾಜರುಗಳನ್ನೂ ಜಯಿಸಿದ. ಚಾಹಂದದಲ್ಲಿ (ಮಹಾರಾಷ್ಟ್ರದ ಚಾಂದ) ಆಳುತ್ತಿದ್ದ ಪರಮಾರ ದೊರೆ ಭೋಜ, ಭಂಭಗಿರಿಯಲ್ಲಿ (ಮಹಾರಾಷ್ಟ್ರದ ಭಾಮೆರ್) ಆಳುತ್ತಿದ್ದ ಲಕ್ಷ್ಮೀದೇವ, ಕಾಶಿಯ ರಾಮಪಾಲ ಮತ್ತು ಹೆಮ್ಮಡಿ, ನಾಗಣ್ಣ ಮುಂತಾದವರು ಇವನಿಂದ ಪರಾಜಿತರಾದ ರಾಜರು.

ಇವನು ಅಚಲಪುರದಲ್ಲಿ ವಿಷ್ಣುದೇವಾಲಯವನ್ನು ಕಟ್ಟಿಸಿದ. ಬಹುಶಃ ಕೊಲ್ಲಾಪುರ ನಗರವನ್ನು ಅಭಿವೃದ್ಧಿಪಡಿಸಿದ. ಈ ಎಲ್ಲ ಮಹತ್ಕಾರ್ಯಗಳಿಂದ ಇವನು ಸೇವುಣರ ಇತಿಹಾಸದಲ್ಲಿ ಮಾತ್ರವಲ್ಲದೆ ಸಮಕಾಲೀನ ಕರ್ನಾಟಕ ಚರಿತ್ರೆಯಲ್ಲೇ ಅತ್ಯಂತ ಸಮರ್ಥ, ದಕ್ಷ ಮಂತ್ರಿ ಮತ್ತು ಸೇನಾಪತಿ ಎಂದು ಹೇಳಬಹುದು.

ಇವನ ಮಗ ರಾಮ. ಈತ ಇವನ ಮರಣಾನಂತರ ಸು.1240ರಲ್ಲಿ ಗುಜರಾತಿಗೆ ಸೇವುಣ ಸೈನ್ಯವನ್ನು ಕೊಂಡೊಯ್ದು ಅಲ್ಲಿಯ ಯುದ್ಧದಲ್ಲಿ ಮೃತನಾದ. (ಎ.ವಿ.ಎನ್.)

**ಖ್ಯಾಡ್ :** ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕಿನಲ್ಲಿ ಬಾದಾಮಿಯಿಂದ ಆಗ್ನೇಯಕ್ಕೆ 8ಕಿಮೀ ದೂರದಲ್ಲಿ ಮಲಪ್ರಭಾ ನದಿಯ ಎಡದಂಡೆಯ ಮೇಲಿರುವ ಒಂದು ಗ್ರಾಮ. ಇಲ್ಲಿನ ಆದಿಶಿಲಾಯುಗದ ಸಂಸ್ಕೃತಿಯ ನೆಲೆಯಿಂದ ಪ್ರಸಿದ್ಧವಾಗಿದೆ.

ರಾಬರ್ಟ್ ಬ್ರೂಸ್‌ಫುಟ್ 19ನೆಯ ಶತಮಾನದ ಅಂತ್ಯಭಾಗದಲ್ಲಿ ಇಲ್ಲಿ ಶಿಲಾಯುಗಕ್ಕೆ ಸೇರಿದ ಆಯುಧಗಳನ್ನು ಸಂಗ್ರಹಿಸಿದ. 1949-50ರಲ್ಲಿ ಮರು ಸಂಶೋಧನೆ ನಡೆಸಿದಾಗ ಆ ನೆಲೆಯ ಶಿಲಾಯುಗ ಸಂಸ್ಕೃತಿಯ ಪೂರ್ಣ ಮಾಹಿತಿಗಳು ಮತ್ತು ಅವುಗಳ ಕಾಲನಿರ್ದೇಶನಕ್ಕೆ ಸಹಾಯಕವಾದ ಭೂವೈಜ್ಞಾನಿಕ ಆಧಾರಗಳು ತಿಳಿದುಬಂದುವು. ಖ್ಯಾಡ್ ಬಳಿಯಿರುವ ನದಿಯ ತಿರುವಿನಲ್ಲಿ ಸಂಗ್ರಹವಾಗಿರುವ ವಿಸ್ತಾರವಾದ ಉಂಡೆಕಲ್ಲುಗಳ ಸ್ತರಗಳಲ್ಲಿ ನೂರಾರು ಸಂಖ್ಯೆಯಲ್ಲಿ ಕಲ್ಲಿನ ಆಯುಧಗಳು ಕಂಡುಬಂದಿವೆ. ಇಷ್ಟೊಂದು ಅಧಿಕ ಸಂಖ್ಯೆಯಲ್ಲಿ ಆಯುಧಗಳು ದೊರಕುವುದರಿಂದ ಖ್ಯಾಡ್ ಆದಿಶಿಲಾಯುಗದ ಆಯುಧ ತಯಾರಿಕಾ ಕೇಂದ್ರವೆಂದು ಖಚಿತವಾಗುತ್ತದೆ. ಇಲ್ಲಿ ದೊರಕಿದ ಆಯುಧೋಪಕರಣಗಳಲ್ಲಿ ವಿವಿಧ ರೀತಿಯ ಕೈಕೊಡಲಿಗಳು, ಕ್ಲೀವರ್‌ಗಳು, ಚಕ್ಕೆಕಲ್ಲಿನ ಆಯುಧಗಳು, ಹೆರೆಯುವ ಆಯುಧಗಳು ಮುಖ್ಯವಾದವು. ಈ ಪ್ರದೇಶದಲ್ಲಿ ಉಂಡೆಕಲ್ಲಿನಲ್ಲಿ ಮಾಡಿದ ಆಯುಧಗಳಿಗಿಂತ ಚಕ್ಕೆ ಕಲ್ಲುಗಳ ಮೇಲೆ ಮಾಡಿದ ಆಯುಧಗಳು ಅಧಿಕವಾಗಿವೆ. ಇಲ್ಲಿನ ಕಲ್ಲಿನ ಆಯುಧಗಳು ಪೂರ್ವಶಿಲಾಯುಗದ ಅಬ್ಬೆವಿಲಿಯನ್ ಮತ್ತು ಅಷ್ಯೂಲಿಯನ್ ಕೈಕೊಡಲಿ ಸಂಸ್ಕೃತಿಗಳ ಹಂತಕ್ಕೆ ಸೇರುತ್ತವೆ. ಲೆವಾಲಾಸಿಯನ್ ಸಂಸ್ಕೃತಿ ಹಂತಕ್ಕೆ ಸೇರುವ ಚಕ್ಕೆ ಕಲ್ಲಿನ ಆಯುಧಗಳೂ ಇಲ್ಲಿ ವಿಶೇಷವಾಗಿವೆ. (ಬಿ.ಕೆ.ಜಿ.)

**ಖ್ಯಾತ ಕರ್ಣಾಟಕಗಳು :** ಕನ್ನಡ ಭಾಷೆಯ ಶಾಸನ ಸಾಹಿತ್ಯದಲ್ಲಿಯೂ ಕಾವ್ಯಶಾಸ್ತ್ರಾದಿ ಗ್ರಂಥರಾಶಿಯಲ್ಲಿಯೂ ಇತರ ವರ್ಣ ವೃತ್ತಗಳಿಗಿಂತ ಹೆಚ್ಚು ಬಳಕೆಯಾಗಿರುವ ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ, ಉತ್ಪಲಮಾಲೆ, ಚಂಪಕಮಾಲೆ, ಸ್ರಗ್ಧರೆ ಮತ್ತು ಮಹಾಸ್ರಗ್ಧರೆ ಎಂಬ ಆರು ಸಮಚತುಷ್ಪದೀ ವರ್ಣವೃತ್ತಗಳನ್ನು ಈ ಹೆಸರಿಂದ ಕರೆಯುವುದು ರೂಢಿಯಾಗಿದೆ. ಈ ಮಾತಿಗೆ ಮೂಲವಾವುದು ಎಂಬುದು ವಿಚಾರಣೀಯ.

ನಾಗವರ್ಮನ (ಸು.990) ಛಂದೋಂಬುಧಿಯ ಕೆಲವು ಹಸ್ತಪ್ರತಿಗಳಲ್ಲಿ ಸಮವೃತ್ತವಿವರಣೆಯ ದ್ವಿತೀಯಾಧಿಕಾರದ ಅಂತ್ಯಭಾಗದಲ್ಲಿ ಹೀಗೆ ಒಂದು ಪದ್ಯವಿದೆ:

ಗುರುವೊಂದಾದಿಯೊಳುತ್ಪಲಂ ಗುರು ಮೊದಲ್ ಮೂಱಾಗೆ ಶಾರ್ದೂಲಮಾ<br>
ಗುರು ನಾಲ್ಕಾಗಿರಲಂತೆ ಸ್ರಗ್ಧರೆ ಲಘುದ್ವಂದ್ವಂ ಗುರುದ್ವಂದ್ವಮಾ<br>
ಗಿರೆ ಮತ್ತೇಭ ಲಘುದ್ವಯತ್ರಿಗುರುವಿಂದಕ್ಕುಂ ಮಹಾಸ್ರಗ್ಧರಂ<br>
ಹರಿಣಾಕ್ಷೀ ಲಘು ನಾಲ್ಕು ಚಂಪಕಮಿವಾಱುಂ ಖ್ಯಾತ ಕರ್ಣಾಟಕಂ

ಈ ಪದ್ಯದಲ್ಲಿ ಪೂರ್ವೋಕ್ತವಾದ ಆರು ವೃತ್ತಗಳ ಸ್ವರೂಪವನ್ನು ಶೀಘ್ರವಾಗಿ ತಿಳಿಯುವುದಕ್ಕೆ ಅನುಸರಿಸಬಹುದಾದ ಸುಲಭೋಪಾಯವನ್ನು ಸೂಚಿಸಿದೆ. ಆದರೆ ಈ ಪದ್ಯ ಛಂದೋಂಬುಧಿಯ ಮೂಲ ಪಾಠದೊಳಗಿನದಲ್ಲ. ಈಚೆಗೆ ಯಾರೋ ಸೇರಿಸಿದ್ದು ಎಂದು ಊಹಿಸಬಹುದು. ಆ ಕಾಲದಿಂದೀಚೆಗೆ ಮೇಲಿನ ಆರು ವೃತ್ತಗಳಿಗೂ ಖ್ಯಾತ ಕರ್ಣಾಟಕಗಳು ಎಂಬ ಮಾತು ಪ್ರಚಲಿತವಾಗಿರಬೇಕು. ಆ ವೃತ್ತಗಳ ಪ್ರಸಿದ್ಧಿಗೆ ಕೆಲವು ಕಾರಣಗಳಿವೆ. ಕನ್ನಡ ಚಂಪೂಕಾವ್ಯಗಳಲ್ಲಿ ಕಂದ ಮತ್ತು ಗದ್ಯಖಂಡಗಳನ್ನು ಬಿಟ್ಟರೆ, ಬಹುವಿರಳವಾಗಿ ಬರುವ ಕೆಲವು ಅನ್ಯ ವರ್ಣವೃತ್ತಗಳು ಮತ್ತು ದೇಶ್ಯವೃತ್ತಗಳನ್ನು ಬಿಟ್ಟರೆ, ಉಳಿಯುವ ವೃತ್ತಗಳು ಎಂದರೆ ಶಾರ್ದೂಲವಿಕ್ರೀಡಿತಾದಿಗಳೇ. ಚಂಪೂ ಕಾವ್ಯವೆಂದರೆ ಮುಕ್ಕಾಲು ಪಾಲು ಕಂದ, ಕಾಲುಪಾಲು ಈ ಆರು ವೃತ್ತಗಳು ಎಂಬ ಮಾತಿದೆ. ಇಷ್ಟು ಮಾತ್ರವಲ್ಲದೆ, ಕನ್ನಡ ಶಾಸನಗಳಲ್ಲಿಯೂ ವೃತ್ತಕಂದಗಳೋ ವೃತ್ತಗಳೋ ಮಾತ್ರವೇ ಬಳಕೆಯಾಗಿರುವ ಶಾಸ್ತ್ರ ಮತ್ತು ಶತಕಗಳಂಥ ಕೃತಿಗಳಲ್ಲಿಯೂ ಈ ಆರು ವೃತ್ತಗಳಲ್ಲಿ ಯಾವುದಾದರೊಂದನ್ನೋ ಕೆಲವನ್ನೋ ಸಾಮಾನ್ಯವಾಗಿ ಬಳಸಿರುವುದು ಕಂಡುಬರುತ್ತದೆ.

ಖ್ಯಾತ ಕರ್ಣಾಟಕಗಳು ಕನ್ನಡ ಸಾಹಿತ್ಯೋದಯದ ತೀರ ಮೊದಮೊದಲಿನ ಕಾಲದಲ್ಲೇ ಸಂಸ್ಕೃತ ಭಾಷಾಸಾಹಿತ್ಯಗಳ ಪ್ರಭಾವದಿಂದಾಗಿ ರೂಢಿಗೆ ಬಂದು, ನೆಲೆ ನಿಂತು, ಅನಂತರ ಗಾಢವಾಗಿ ವ್ಯಾಪಿಸಿದಂತೆ ತೋರುತ್ತದೆ. ಸುಮಾರು ಏಳನೆಯ ಶತಮಾನದವೆಂದು ಗುರುತಿಸಿರುವ ಶ್ರವಣಬೆಳಗೊಳದ ಶಾಸನಗಳ ಕಾಲಕ್ಕಾಗಲೇ ಈ ವೃತ್ತಗಳೆಲ್ಲ ಕಂಡುಬರುತ್ತವೆ. ಕವಿರಾಜಮಾರ್ಗದಿಂದೀಚಿನ ಕೃತಿಗಳಲ್ಲಿ ಕಾಣುವುದಂತೂ ಸರಿಯೇ. ಸಂಸ್ಕೃತ ಭಾಷಾ ಮಾರ್ಯಾದೆಗೆ ಒಗ್ಗಿದಂಥ ಈ ವೃತ್ತಗಳು ಕನ್ನಡದ ಜಾಯಮಾನಕ್ಕೆ ಕೂಡ ಒಗ್ಗುವಂತಾದುದು ಆ ಭಾಷೆಯ ಮೇಲೆ ಸಂಸ್ಕೃತದ ವರ್ಚಸ್ಸುಎಷ್ಟರ ಮಟ್ಟಿಗೆ ಬಿದ್ದಿತೆನ್ನುವುದನ್ನು ವ್ಯಕ್ತಗೊಳಿಸುತ್ತದೆ.

ಹೆಸರಿನ ರೀತಿಯಿಂದಾಗಿ ಶಾರ್ದೂಲವಿಕ್ರೀಡಿತ- ಮತ್ತೇಭವಿಕ್ರೀಡಿತಗಳು, ಉತ್ಪಲಮಾಲೆ- ಚಂಪಕಮಾಲೆಗಳು, ಸ್ರಗ್ಧರೆ- ಮಹಾಸ್ರಗ್ಧರೆಗಳು ಸಹಜವಾಗಿಯೇ ಜೋಡಿಗೊಳ್ಳುತ್ತವೆ. ಅವು ಪ್ರಾಯಶಃ ಒಂದನ್ನೊಂದು ಹೋಲುವ ಒಂದು ಗುಂಪಿನ ವೃತ್ತಗಳಿರಬಹುದೆಂಬ ಸಂಶಯವನ್ನು ಉಂಟುಮಾಡುತ್ತವೆ. ಅವುಗಳ ಲಕ್ಷಣ ವಿಮರ್ಶೆಯಿಂದ ಆ ಸಂಶಯ ದೂರವಾಗಿ ಪರಸ್ಪರ ಸಂಬಂಧವೂ ಮನವರಿಕೆಯಾಗುತ್ತದೆ. ಅದನ್ನು ಮುಂದೆ ಗಮನಿಸಬಹುದು. ಪ್ರಸ್ತುತ, ವರ್ಣವೃತ್ತದ ಪ್ರಸ್ತಾರ ವಿಧಾನವನ್ನು ಅನ್ವಯಿಸಿ ಆ ವೃತ್ತಗಳ ಲಕ್ಷಣವನ್ನು ಸಂಸ್ಕೃತ ಹಾಗೂ ಕನ್ನಡ - ತೆಲುಗು ಛಂದೋಗ್ರಂಥಗಳಲ್ಲಿ ಸೂತ್ರರೂಪವಾಗಿಯೋ ಲಕ್ಷಣ - ಲಕ್ಷ್ಯಸಮೀಕರಣ ರೂಪವಾಗಿಯೋ ವಿವರಿಸಿರುವುದು ಕಂಡುಬರುತ್ತದೆ. ಶಾರ್ದೂಲವಿಕ್ರೀಡಿತ, ಚಂಪಕಮಾಲೆ ಮತ್ತು ಸ್ರಗ್ಧರೆಗಳ ಲಕ್ಷಣವನ್ನು ಪಿಂಗಲಾದ್ಯರೂ ಮತ್ತೇಭವಿಕ್ರೀಡಿತ, ಉತ್ಪಲಮಾಲೆ ಮತ್ತು ಮಹಾಸ್ರಗ್ಧರೆಗಳ ಲಕ್ಷಣವನ್ನು ಜಯಕೀರ್ತ್ಯಾದ್ಯರೂ ತಂತಮ್ಮ ಛಂದೋಗ್ರಂಥಗಳಲ್ಲಿ ವಿವರಿಸಿದ್ದಾರೆ. ಆದರೆ ಮೊದಲ ಮೂರರ ವಿವರಣೆಗೆ ದೊರೆತಿರುವ ಸ್ಥಾನ ಉಳಿದವುಗಳಿಗಿಲ್ಲ. ಮತ್ತೇಭ ಮೊದಲಾದ ಮೂರು ವೃತ್ತಗಳಿಗೆ ತಕ್ಕ ಪ್ರಾಚುರ್ಯವಾಗಲಿ ಪರಂಪರೆಯಾಗಲಿ ಸಂಸ್ಕೃತ ಸಾಹಿತ್ಯದಲ್ಲಿ ಇಲ್ಲದಿರುವುದೇ ರವಿಕೀರ್ತಿ ಕೃತವಾದ ಐಹೊಳೆಯ ಶಿಲಾಶಾಸನದಲ್ಲಿ (634) ಬರುವ ವರದಾತುಙ್ಗತರಙ್ಗ ರಙ್ಗ ವಿಲಸದ್ಧಂಸಾವಲೀ ಮೇಖಲಾಂ ಎಂಬುದಾಗಿ ಆರಂಭವಾಗುವ ಒಂದು ವೃತ್ತ ಮತ್ತು ವೆಂಕಟಾಧ್ವರಿಯ (1634) ಲಕ್ಷ್ಮೀಸಹಸ್ರನಾಮದೊಳಗಿನ ಕ್ಷಿಪತು ಕ್ಷಿಪ್ರಮನಲ್ಪಮಪ್ರತಿಹತಸ್ತಾಪತ್ರಯಂ ಮಾಮಕಮ್ ಮತ್ತು ಸರ್ವಾಪಕೃತಿಮೇಷಿ ಕಲಯ ಸ್ವತೀವ ಶೀತಾಮ್ ದಯಾಂ ಎಂಬುದಾಗಿ ಆರಂಭವಾಗುವ ಎರಡು ವೃತ್ತಗಳು - ಇವು ಮಾತ್ರ ಮತ್ತೇಭವಿಕ್ರೀಡಿತಗಳೆಂದು ಗುರುತಿಸಲ್ಪಟ್ಟಿವೆ.

ಮತ್ತೇಭವಾದಿಯಾದ ಮೂರು ವೃತ್ತಗಳೂ ಸಂಸ್ಕೃತದಲ್ಲಿ ಪ್ರಸಿದ್ಧವಾಗಿಲ್ಲ ಎನ್ನುವುದು ಸ್ಪಷ್ಟವೇ. ಆದರೆ ಶಾರ್ದೂಲವಾದಿಯಾದ ಮೂರರಲ್ಲಿ ಕೂಡ ಶಾರ್ದೂಲ, ಸ್ರಗ್ಧರೆಗಳು ಮಾತ್ರ ಸಂಸ್ಕೃತದಲ್ಲಿ ಬಹುವ್ಯಾಪ್ತವಾಗಿದ್ದು, ಚಂಪಕಮಾಲೆಗೆ ಆ ಪ್ರಾಮುಖ್ಯವಿಲ್ಲವಾಗಿದೆ. ಚಂಪಕಮಾಲೆಯನ್ನು ಸಂಸ್ಕೃತ ಛಂದೋಗ್ರಂಥಗಳಲ್ಲಿ ಶಶಿವದನಾ, ಚಿತ್ರಲತಾ, ರುಚಿರಾ, ಸರಸೀ, ಸಲಿಲನಿಧಿ, ಸಿದ್ಧಿ, ಧೃತಶ್ರೀ, ಪಂಚಕಾವಲೀ- ಎಂದು ಬೇರೆ ಬೇರೆ ಹೆಸರಿನಲ್ಲಿ ಲಕ್ಷಣಿಸಿದ್ದರೂ ಅದರ ನಿದರ್ಶನಗಳು ಮಾತ್ರ ಸಂಸ್ಕೃತ ಸಾಹಿತ್ಯದಲ್ಲಿ ಬಹು ವಿರಳ. ಇದಕ್ಕೆ ಕಾರಣವೇನೋ ತಿಳಿಯದು. ಪೂರ್ವಚಾಳುಕ್ಯರಾಜ ಮೂರನೆಯ ಗುಣಗ ವಿಜಯಾದಿತ್ಯನ (844-88) ಸಾತಲೂರು ತಾಮ್ರಶಾಸನದೊಳಗಿನ ಅರಿನೃಪವಾಜಿವಾರಣಪದಾತಿ ಮಹಾಭ್ರವಿರಾಮಮಾರುತಃ ಎಂಬ ಹಾಗೂ ಮಾಘಕವಿಯ (ಸು.750) ಶಿಶುಪಾಲವಧೆಯೊಳಗಿನ ತುರಗಶತಾಕುಲಸ್ಯ ಪರಿತಃ ಪರಮೇಕತುರಂಗ ಜನ್ಮನಃ ಎಂಬ ಆರಂಭವಿರುವ ಎರಡು ವೃತ್ತಗಳೂ ವಾಮನ (ಸು.750-800), ರಾಜಶೇಖರ (880-920) ಮುಂತಾದವರ ಅಲಂಕಾರ ಗ್ರಂಥಗಳೊಳಗಿನ ಹಾಗೂ ಅಮಿತಗತಿಯ ಸುಭಾಷಿತ ರತ್ನ ಸಂದೋಹ ಮೊದಲಾದ ಪದ್ಯಸಂಕಲನಗಳೊಳಗಿನ ಸುಮಾರು ಆರೇಳು ವೃತ್ತಗಳೂ ಚಂಪಕಮಾಲೆಯ ನಿದರ್ಶನಗಳಾಗಿ ಗೋಚರಿಸುತ್ತವೆ. ಹೀಗೆ ದೊರೆತ ನಿದರ್ಶನಗಳಲ್ಲಿ ಕೆಲವು ಕಡೆ ಛಂದಸ್ಸು ವ್ಯತ್ಯಾಸವಾಗಿರುವುದೂ ಉಂಟು.

ಕನ್ನಡ ಸಾಹಿತ್ಯದಲ್ಲಿ ಶಾರ್ದೂಲ ವಿಕ್ರೀಡಿತ ಮೊದಲಾಗಿ ಮೇಲಿನ ಆರು ವೃತ್ತಗಳೂ ಸಮಾನವಾಗಿ ಗಣ್ಯವಾಗಿವೆ. ಪ್ರಮಾಣದಲ್ಲಿ ಸ್ವಲ್ಪ ಹೆಚ್ಚುಕಡಿಮೆಗಳಾಗುತ್ತಿದ್ದರೂ ಕನ್ನಡದ ಪ್ರಾಚೀನ ಚಂಪೂಕಾವ್ಯಗಳಲ್ಲಿ ಇವು

ಮೇಲಿಂದ ಮೇಲೆ ಬರುತ್ತವೆ. ಈ ವೃತ್ತಗಳೂ ಕಂದವೂ ಗದ್ಯದೊಂದಿಗೆ ಕೂಡಿ ಚಂಪುವಿನ ಚೌಕಟ್ಟನ್ನು ರೂಪಿಸುತ್ತವೆ.

ಪೂರ್ವೋಕ್ತ ವೃತ್ತಗಳ ಲಕ್ಷಣವನ್ನೂ ಕನ್ನಡ ಕೈಪಿಡಿಯ ಮೂಲಕ ಪ್ರಸಿದ್ಧವಾಗಿರುವ ನೆನಪಿನ ಸೂತ್ರಗಳನ್ನೂ ಹೀಗೆ ಸಂಗ್ರಹಿಸಬಹುದು.

(i) ಶಾರ್ದೂಲ ವಿಕ್ರೀಡಿತ: ಮಸಜಸತತಗ (ಕಣ್ಗೊಪ್ಪಲ್ ಮಸಜಂಸತಂತಗಮುಮಾ ಶಾರ್ದೂಲ ವಿಕ್ರೀಡಿತಂ); ಕ್ರಮವಾಗಿ 12ನೆಯ ಮತ್ತು ಅಲ್ಲಿಂದ 7ನೆಯ ಅಕ್ಷರಕ್ಕೆ ಯತಿ. (ii) ಮತ್ತೇಭವಿಕ್ರೀಡಿತ: ಸಭರನಮಯಲಗ (ಸಭರಂನಂಮಯಲಂಗಮುಂ ಬಗೆಗೊಳಲ್ ಮತ್ತೇಭವಿಕ್ರೀಡಿತಂ); ಕ್ರಮವಾಗಿ 13ನೆಯ ಮತ್ತು ಅಲ್ಲಿಂದ 7ನೆಯ ಅಕ್ಷರಕ್ಕೆ ಯತಿ. (iii) ಉತ್ಪಲಮಾಲೆ ಭರನಭಭರಲಗ (ಉತ್ಪಲ ಮಾಲೆಯಪ್ಪುದು ಭರಂನಭಭಂರಲಗಂ ನೆಗೆಲ್ದಿರಲ್); 11ನೆಯ ಅಕ್ಷರಕ್ಕೆ ಯತಿ (ನಾಗವರ್ಮನ ಛಂದೋಂಬುಧಿ). (iv) ಚಂಪಕಮಾಲೆ: ನಜಭಜಜರ (ನಜಭಜಜಂಜರಂಬಗೆಗೊಳುತ್ತಿರೆ ಚಂಪಕಮಾಲೆಯೆಂದಪರ್); ಕ್ರಮವಾಗಿ 11ನೆಯ ಮತ್ತು ಅಲ್ಲಿಂದ 10ನೆಯ ಅಕ್ಷರಗಳಿಗೆ ಯತಿಯೆಂದು ಪಿಂಗಲ ಕೇದಾರ ಭಟ್ಟರೂ 13ನೆಯ ಅಕ್ಷರಕ್ಕೆ ಎಂದು ನಾಗವರ್ಮನೂ ಹೇಳುತ್ತಾರೆ. (v) ಸ್ರಗ್ಧರೆ: ಮರಭನಯಯಯ (ತೋಱಲ್ ಮಂರಂಭನಂ ಮುಯಗಣಮುಮದೆತಾಂಸ್ರಗ್ಧರಾವೃತ್ತಮಕ್ಕುಂ); ಕ್ರಮವಾಗಿ 7, 7, 7 ನೆಯ ಅಕ್ಷರಗಳಿಗೆ ಯತಿ. (vi) ಮಹಾಸ್ರಗ್ಧರೆ: ಸತತತನಸರರಗ (ಸತತಂನಂಸಂರರಂಗಂ ನೆರೆದೆಸೆಯೆ ಮಹಾ ಸ್ರಗ್ಧರಾವೃತ್ತಮಕ್ಕುಂ); ಕ್ರಮವಾಗಿ 8, 7, 7ನೆಯ ಅಕ್ಷರಗಳಿಗೆ ಯತಿ. (15ನೆಯ ಅಕ್ಷರಕ್ಕೆ ಯತಿಯೆಂದು ನಾಗವರ್ಮ). ಸಂಸ್ಕೃತದಲ್ಲಿ ಯತಿ ನಿಯತ, ಕನ್ನಡದಲ್ಲಿ ಹಾಗೆ ನಿರ್ಬಂಧವಿಲ್ಲ. ನಾಗವರ್ಮ ಬಹುಮಟ್ಟಿಗೆ ಸಂಸ್ಕೃತ ಪರಿಪಾಠಿಯನ್ನು ಅನುಸರಿಸಿ ಖ್ಯಾತಕರ್ಣಾಟಕಗಳಿಗೆ ಯತಿನಿರ್ದೇಶನವನ್ನು ಮಾಡಿದ್ದರೂ ಕವಿಗಳು ಯತಿನಿಯಮವನ್ನು ಬಿಟ್ಟಿದ್ದಾರೆ. ಅಕ್ಷರಗಣ ನಿಯಮದಂತೆ ಪರಿಶೀಲಿಸಿದರೆ ಒಂದೊಂದೂ ವಿಭಿನ್ನ ಲಕ್ಷಣದ ವೃತ್ತಗಳಾಗಿ ತೋರುವ ಖ್ಯಾತ ಕರ್ಣಾಟಕಗಳು, ಗುರುಲಘುಗಳನ್ನು ಗುರುತಿಸಿ, ಧಾಟಿಯನ್ನು ಪರಿಶೀಲಿಸಿದರೆ ಮೂರು ಜೋಡಿಗಳಲ್ಲಿ ಹತ್ತಿರ ಹತ್ತಿರವಾಗುವುದು ಕಂಡುಬರುತ್ತದೆ. ಆ ಮೂರು ಜೋಡಿಗಳು ಇವು: ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತಗಳು; ಉತ್ಪಲಮಾಲೆ, ಚಂಪಕಮಾಲೆಗಳು; ಸ್ರಗ್ಧರೆ, ಮಹಾಸ್ರಗ್ಧರೆಗಳು. ಈ ಅಂಶವನ್ನು ಗಮನಿಸಿ ಉತ್ಪಲ, ಶಾರ್ದೂಲ, ಸ್ರಗ್ಧರೆ ಇವುಗಳ ಮೊದಲಿನ ಗುರುವಿಗೆ ಎರಡು ಲಘುಗಳನ್ನು ಇಟ್ಟು ಚಂಪಕ, ಮತ್ತೇಭ, ಮಹಾಸ್ರಗ್ಧರೆಗಳನ್ನು ಕನ್ನಡಕವಿಗಳು ಮಾಡಿಕೊಂಡಂತೆ ಕಾಣುವುದು ಎಂಬುದಾಗಿ ಒಂದು ಅಭಿಪ್ರಾಯ ವ್ಯಕ್ತಪಟ್ಟಿದೆ. ಸಂಸ್ಕೃತದಲ್ಲಿ ಶಾರ್ದೂಲ ಮತ್ತು ಸ್ರಗ್ಧರೆಗಳು ಗಣ್ಯವೃತ್ತಗಳಾಗಿದ್ದು, ಅವನ್ನು ಕನ್ನಡಕ್ಕೆ ತಂದುಕೊಳ್ಳುವಾಗ ವೈವಿಧ್ಯವನ್ನೂ ಸೌಲಭ್ಯವನ್ನೂ ಹೆಚ್ಚಿಸಿಕೊಳ್ಳಲು ಅವುಗಳ ಆದಿಗುರುವಿಗೆ ದ್ವಿಲಘುವನ್ನಿಟ್ಟು ಆ ಧಾಟಿಯ ಇನ್ನೆರಡು ಹೊಸವೃತ್ತಗಳನ್ನು ಕಲ್ಪಿಸಿಕೊಂಡಿರುವುದು ಸಾಧ್ಯ ಎನ್ನುವುದನ್ನು ಬಲುಮಟ್ಟಿಗೆ ಒಪ್ಪಬಹುದು. ಆದರೆ ಉತ್ಪಲಮಾಲೆ ಸಂಸ್ಕೃತದಲ್ಲಿ ಚಂಪಕಮಾಲೆಯಷ್ಟು ಕೂಡ ಪ್ರಸಿದ್ಧವಾಗಿದ್ದಂತೆ ತೋರದಿರುವುದರಿಂದ ಉತ್ಪಲದ ಆದಿಗುರುವಿಗೆ ದ್ವಿಲಘುವನ್ನಿಟ್ಟು ಚಂಪಕವನ್ನು ಮಾಡಿಕೊಂಡಿದೆಯೆಂದು ತಿಳಿಯುವುದು ಹೇಗೆ ಎಂಬ ಪ್ರಶ್ನೆ ಹುಟ್ಟುತ್ತದೆ. ಚಂಪಕಮಾಲೆಯ ಆದಿ ದ್ವಿಲಘುವಿಗೆ ಗುರುವೊಂದನ್ನಿಟ್ಟು ಉತ್ಪಲಮಾಲೆಯನ್ನೇ ಹೊಸದಾಗಿ ಕಲ್ಪಿಸಿಕೊಂಡಿರಬಹುದು. ಯಾವುದೇ ಪ್ರಭಾವದಿಂದಾಗಲಿ ಕನ್ನಡ ಸಾಹಿತ್ಯದಲ್ಲಿ ಉತ್ಪಲಮಾಲೆ ರೂಢಿಗೆ ಬಂದ ಮೇಲೆ ಅದರ ಆದಿಗುರುವಿಗೆ ದ್ವಿಲಘುವನ್ನಿಟ್ಟು ಚಂಪಕ ಮಾಲೆಯನ್ನು ಮಾಡಿಕೊಂಡಿರಬಹುದು; ಇಲ್ಲವೆ ಉತ್ಪಲಮಾಲೆ, ಚಂಪಕಮಾಲೆಗಳು ಸ್ವತಂತ್ರವಾಗಿ ಕನ್ನಡದಲ್ಲಿ ಕಾಣಿಸಿಕೊಂಡಿರಬಹುದು. ಸು.7ನೆಯ ಶತಮಾನದ ಕನ್ನಡ ಶಾಸನಗಳಲ್ಲಿಯೇ ಈ ಎರಡೂ ವೃತ್ತಗಳು ಬಳಕೆಯಾಗಿರುವುದರಿಂದ, ಯಾವ ವೃತ್ತದಿಂದ ಯಾವುದು ಹುಟ್ಟಿತು ಎಂಬುದನ್ನು ನಿಶ್ಚಯಿಸುವುದು ಕಷ್ಟ.

ಪೂರ್ವಪ್ರಸಿದ್ಧವಾದ ವೃತ್ತಗಳಿಂದ ಆದಿಯ ಅಲ್ಪವ್ಯತ್ಯಾಸದೊಡನೆ ಹೊಸ ವೃತ್ತಗಳನ್ನು ಮಾಡಿಕೊಂಡದ್ದು ಎರಡು ರೀತಿಯ ಪ್ರಯೋಜನಗಳಿಗೆ ದಾರಿಮಾಡಿತು, ಒಂದು ವೈವಿಧ್ಯಸಾಧನೆ; ಇನ್ನೊಂದು ಸೌಕರ್ಯಲಾಭ. ಇದರಿಂದಾಗಿ ಏಕಮುಖವಾದ ನಾದಲಯಗಳಲ್ಲಿ ಬಹುಮುಖತೆ ಬಂತು; ಮೂರು ನಿರ್ದಿಷ್ಟವೃತ್ತಗಳಲ್ಲಿ ನೈಪುಣ್ಯವನ್ನು ಸಾಧಿಸಿದ್ದರಿಂದ ಆರು ಬಗೆಯ ವೃತ್ತಗಳ ನಿರ್ವಹಣೆ ಅನಾಯಾಸವಾಗಿ ಕೈಗೂಡುವಂತಾಯಿತು. ಇಷ್ಟಾಗಿ ಕನ್ನಡಕ್ಕೆ ಹೊಂದಿರತಕ್ಕವು ಎಂದರೆ ಪ್ರಾಯಶಃ ಉತ್ಪಲಮಾಲೆ, ಚಂಪಕಮಾಲೆಗಳೆರಡೇ. ಪ್ರಮಾಣದಲ್ಲಿಯೂ ಉಳಿದವುಗಳಿಗಿಂತ ಇವೇ ಹೆಚ್ಚು ಎನ್ನುವುದು ವಿದ್ವಾಂಸರ ಅಭಿಪ್ರಾಯ. ಉತ್ಪಲಚಂಪಕಗಳಲ್ಲಿ ದೇಶ್ಯಶಬ್ದಗಳ ಸೇರಿಕೆಯೂ ಶಾರ್ದೂಲಾದಿಯಾದ ಉಳಿದವುಗಳಲ್ಲಿ ಸಂಸ್ಕೃತಶಬ್ದಗಳ ಹಾಗೂ ಸಮಾಸಗಳ ಸೇರಿಕೆಯೂ ಸಾಮಾನ್ಯ. ಮೊದಲಿನವು ಮೃದುತರವಾದ ಭಾವಗಳಿಗೆ, ಮತ್ತಿನವು ಘನಗಂಭೀರವಾದ ಭಾವಗಳಿಗೆ ಒಗ್ಗಿರತಕ್ಕುವು ಎಂದು ಕೂಡ ಅಭಿಪ್ರಾಯಪಡಲಾಗಿದೆ. ಆಯಾ ವೃತ್ತಗಳ ಹೆಸರಿಗೂ ಅಲ್ಲಿ ವ್ಯಕ್ತವಾಗುವ ಭಾವ ಭಾವನೆಗಳಿಗೂ ಹೊಂದಿಕೆ ಇದೆಯೆಂದು ಒಮ್ಮೊಮ್ಮೆ ತೋರುತ್ತದೆಯಾದರೂ ಹಾಗೆ ಹೊಂದಿಕೆ ಇಲ್ಲದೆಯೂ ಹೋಗಿರುವುದಕ್ಕೆ ಸಾಕಷ್ಟು ನಿದರ್ಶನಗಳಿವೆ. *

# ಗ

**ಗಂಗರಾಜ :** ಹೊಯ್ಸಳ ವಿಷ್ಣುವರ್ಧನನ ಪ್ರಸಿದ್ಧ ದಂಡನಾಯಕ. ನೃಪಕಾಮನ ಆಳಿಕೆಯಲ್ಲಿ ದಳಪತಿಯಾಗಿದ್ದ ಏಚ ಇವನ ತಂದೆ, ತಾಯಿ ಪೋಚವ್ವೆ. ದಂಡನಾಯಕ ಬಮ್ಮ ಇವನ ಅಣ್ಣ. ಇವನಿಗೆ ಲಕ್ಷ್ಮಿ ಎಂಬ ಹೆಂಡತಿಯೂ ಬೊಪ್ಪನೆಂಬ ಮಗನೂ ಇದ್ದರು.

ಪ್ರಾಯಶಃ ಗಂಗವಂಶದವನಾದ ಈತ ವಿಷ್ಣುವರ್ಧನನ ಬಲಗೈಯಂತಿದ್ದ. ವಿಷ್ಣುವರ್ಧನನೊಡನೆ ಮೊದಲಿನಿಂದಲೂ ಇದ್ದು ಅವನು ಸಿಂಹಾಸನಾರೋಹಣ ಮಾಡಿದ ವೇಳೆಯಲ್ಲಿ ಪ್ರಧಾನ ಪಾತ್ರ ವಹಿಸಿದ್ದ. ಹೊಯ್ಸಳರ ಪರವಾಗಿ ಚೋಳರನ್ನು ಓಡಿಸಿ ತಲಕಾಡನ್ನು ಆಕ್ರಮಿಸಿಕೊಂಡದ್ದು ಗಂಗರಾಜನ ಮಹತ್ಸಾಧನೆ. ಈ ಸಂದರ್ಭದಲ್ಲಿ ಗಂಗರಾಜ ತೋರಿದ ಶೌರ್ಯಸಾಹಸಗಳನ್ನು ಅನೇಕ ಶಾಸನಗಳು ಮುಕ್ತಕಂಠದಿಂದ ಹೊಗಳಿವೆ. ಕೊಂಗು, ಚೆಂಗಿರಿಗಳ ಮೇಲೂ ಸಫಲವಾಗಿ ದಾಳಿ ಮಾಡಿ ಹೊಯ್ಸಳ ರಾಜ್ಯ ವಿಸ್ತರಣೆಗೆ ಕಾರಣನಾದದ್ದಲ್ಲದೆ, ಕಣ್ಣೇಗಾಲದ ಕದನದಲ್ಲಿ ಚಾಳುಕ್ಯರ ಸೈನ್ಯವನ್ನು ಸದೆಬಡಿದು ಹೊಯ್ಸಳರ ಸ್ವತಂತ್ರ ಪತಾಕೆಯನ್ನು ಹಾರಿಸಿದ ಕೀರ್ತಿ ಗಂಗರಾಜನದು. ಗಂಗರಾಜನ ಹಿರಿಮೆ, ಸ್ವಾಮಿನಿಷ್ಠೆ ಮತ್ತು ನಿಸ್ವಾರ್ಥಸೇವೆಗೆ ಮಹಾಸಾಮಂತಾಧಿಪತಿ, ಮಹಾಪ್ರಚಂಡ ದಂಡನಾಯಕ, ದ್ರೋಹ ಘರಟ್ಟ, ಸ್ವಾಮಿದ್ರೋಹ ಘರಟ್ಟ ಎಂಬ ಇವನ ಬಿರುದುಗಳೇ ಸಾಕ್ಷಿಯಾಗಿವೆ.

ಗಂಗರಾಜ ಸಮರ್ಥ ದಂಡನಾಯಕ ಮತ್ತು ಪರಾಕ್ರಮಿಯಷ್ಟೇ ಅಲ್ಲದೆ ಧರ್ಮಿಷ್ಠನೂ ಮಹಾದಾನಿಯೂ ಆಗಿದ್ದ. ಹಲವಾರು ಶಾಸನಗಳು ಈತನ ಜಿನಭಕ್ತಿಯನ್ನು ಪುಷ್ಟೀಕರಿಸುತ್ತವೆ. ಶ್ರವಣಬೆಳಗೊಳದ ಬಳಿ ಜಿನನಾಥಪುರವನ್ನು ನಿರ್ಮಿಸಿ ಅದಕ್ಕೆ ವಿಶೇಷ ದಾನ ಮಾಡಿದ. ತಾನು ಪರಾಕ್ರಮದಿಂದ ವಿಜಯಗಳಿಸಿದ ಸಂದರ್ಭಗಳಲ್ಲಿ ಹೊಯ್ಸಳೇಶ್ವರ ಮೆಚ್ಚುಗೆಯಿಂದ ಕೊಟ್ಟ ದಾನಗಳನ್ನು ತನ್ನ ಗುರುವಾದ ಶುಭಚಂದ್ರಸಿದ್ಧಾಂತ ದೇವನಿಗೆ ಸಮರ್ಪಿಸಿದ. ಅವನ ಇಚ್ಛೆಯಂತೆ ಜೈನದೇವಾಲಯಗಳ ಜೀರ್ಣೋದ್ಧಾರ ಮಾಡಿದ. ಕಣ್ಣೇಗಾಲದ ವಿಜಯಾನಂತರ ತನಗೆ ಕೊಡಲ್ಪಟ್ಟ ಪರಮ ಎಂಬ ಗ್ರಾಮವನ್ನು ತನ್ನ ತಾಯಿ, ಹೆಂಡತಿ ಕಟ್ಟಿಸಿದ ದೇವಸ್ಥಾನಕ್ಕೆ ಧಾರೆಯೆರೆದ; ತಲಕಾಡಿನ ವಿಜಯದ ಮುನ್ನ ಕೊಡಲ್ಪಟ್ಟ ಬಿಂಡಿಗನವಿಲೆ ಎಂಬ ಗ್ರಾಮವನ್ನು ಆ ಪವಿತ್ರ ಸ್ಥಳದ ಉಪಯೋಗಾರ್ಥ

ತನ್ನ ಗುರುವಿಗೆ ಕೊಟ್ಟ. ತಲಕಾಡಿನ ವಿಜಯಾನಂತರ ದೊರೆತ ಗೋವಿಂದವಾಡಿ ಗ್ರಾಮವನ್ನು ಶ್ರವಣಬೆಳಗೊಳದ ಗೊಮ್ಮಟೇಶ್ವರ ದೇವರ ಅರ್ಚನೆಗೆ ಉಂಬಳಿ ಬಿಟ್ಟ. ಗೊಮ್ಮಟನ ಸುತ್ತ ಸುತ್ತಾಲಯವನ್ನು ರಚಿಸಿದ. ಅಲ್ಲದೆ ಅಲ್ಲಿಯು ಶಾಸನ ಬಸದಿ ಮತ್ತು ಕತ್ತಲೆಯ ಬಸದಿಗಳನ್ನೂ ನಿರ್ಮಿಸಿದ. ಈತನ ಧರ್ಮಕಾರ್ಯಗಳಿಂದಾಗಿ ಶ್ರವಣಬೆಳಗೊಳ ಮತ್ತೊಂದು ಕೊಪಣ ಕ್ಷೇತ್ರವಾಯಿತೆಂದು ಶಾಸನಗಳು ಬಣ್ಣಿಸುತ್ತವೆ. ತನ್ನ ಬಂಧುಗಳು ಮೃತರಾದನಂತರ ಅವರ ನೆನಪಿಗಾಗಿ ಚೈತ್ಯ ಮಂಟಪಗಳನ್ನು ಕಟ್ಟಿಸಿದ. ಈತ ಧರ್ಮಪರಾಯಣ, ಸತ್ಯವಾಕ್ಯ, ಭಕ್ತಾಗ್ರೇಸರ, ಅನ್ನ, ವಿದ್ಯಾಭೈಷಜ್ಯದಾನಗಳಲ್ಲಿ ನಿರತ ಎಂದೂ ಇವನು ಕಣ್ಣುಹಾಯಿಸಿದೆಡೆ, ಮನವೆಳೆದೆಡೆ, ತಂಗಿದೆಡೆ ಜೈನಗೃಹಗಳನ್ನು ರಚಿಸುತ್ತಿದ್ದನೆಂದೂ ಶಾಸನಗಳು ಈತನನ್ನು ಹೊಗಳಿವೆ.

ಗಂಗರಾಜ 1133ರಲ್ಲಿ ಮೃತನಾದ. ಇವನ ಜ್ಞಾಪಕಾರ್ಥವಾಗಿ ಹಳೇಬೀಡಿನಲ್ಲಿ ದ್ರೋಹಘರಟ್ಟ ಜಿನಾಲಯವನ್ನು (ಪಾರ್ಶ್ವನಾಥ ಬಸದಿ) ಇವನ ಮಗ ಬೊಪ್ಪ ಕಟ್ಟಿಸಿದ. (ಸಿ.ವಿ.ಆರ್.)

**ಗಂಗ ವಂಶ :** ಕರ್ನಾಟಕದಲ್ಲಿ ಆಳಿದ ಪ್ರಮುಖ ರಾಜವಂಶಗಳಲ್ಲಿ ಒಂದು. ಗಂಗವಂಶದವರಲ್ಲಿ ತಲಕಾಡಿನ ಗಂಗರ ಶಾಖೆ ಅತ್ಯಂತ ಪ್ರಮುಖವಾದುದು. ಅಲ್ಲದೆ ಗಂಗವಂಶದ ಇತರ ಶಾಖೆಗಳೂ ಇದ್ದುವು.

**ತಲಕಾಡಿನ ಗಂಗರು :** ನಾಲ್ಕನೆಯ ಶತಮಾನದ ಮಧ್ಯಭಾಗದಿಂದ 10ನೆಯ ಶತಮಾನದ ಅಂತ್ಯದವರೆಗೆ ಕರ್ನಾಟಕದ ದಕ್ಷಿಣ ಭಾಗವನ್ನು ಆಳಿದ ಗಂಗ ಸಂತತಿಯ ಅರಸರು ಪಶ್ಚಿಮ ಗಂಗರೆಂದೂ ಪ್ರಸಿದ್ಧರಾಗಿದ್ದಾರೆ. ಇವರದು ಕನ್ನಡನಾಡಿನ ಇತಿಹಾಸದಲ್ಲೇ ಅತಿದೀರ್ಘಕಾಲ ಆಳಿಕೆ ನಡೆಸಿದ ಮನೆತನ. ಇವರ ಶಾಸನಗಳು ಕೊಡಗು ಜಿಲ್ಲೆಯಿಂದ ಉತ್ತರ ಆರ್ಕಾಟ್ ಜಿಲ್ಲೆಯವರೆಗೂ ಬಳ್ಳಾರಿ ಜಿಲ್ಲೆಯಿಂದ ಸೇಲಂ ಕೊಯಮತ್ತೂರು ಜಿಲ್ಲೆಗಳವರೆಗೂ ದೊರೆತಿವೆ. ಇವರ ಪ್ರಭುತ್ವ ಅಷ್ಟು ವಿಸ್ತಾರವಾದ ಪ್ರದೇಶದ ಮೇಲೆ ಸ್ಥಾಪಿತವಾಗಿತ್ತು. ಇವರ ರಾಜ್ಯವನ್ನು ಗಂಗವಾಡಿ 96,000 ಎಂದು ಶಾಸನಗಳಲ್ಲಿ ಕರೆಯಲಾಗಿದೆ. ಶಾಂತಿ ಸುಭಿಕ್ಷೆಗಳ ಬೀಡಾದ ಇವರ ನಾಡಿಗೆ ಶ್ರೀರಾಜ್ಯ ಎಂಬ ಅನ್ವರ್ಥನಾಮವಿತ್ತು. ಪ್ರಜಾನುರಾಗಿಗಳು, ರಾಜನೀತಿಕುಶಲರು ಎಂದು ಕರೆದುಕೊಳ್ಳುವ ಈ ವಂಶದ ಅರಸರು ದಕ್ಷಿಣರಾಜ್ಯ ಸಂರಕ್ಷಣಸಮರ್ಥ, ಕೊಂಗುಣಿವರ್ಮ, ಧರ್ಮಮಹಾರಾಜಾಧಿರಾಜ, ಶ್ರೀವಲ್ಲಭ, ಪೆರ್ಮಾನಡಿ ಮೊದಲಾದ ಬಿರುದುಗಳನ್ನು ಧರಿಸಿದ್ದರು. ಮೈಸೂರು ಜಿಲ್ಲೆಯ ತಲಕಾಡು ಇವರ ರಾಜಧಾನಿ. ಕುವಳಾಲ (ಕೋಲಾರ), ನಂದಗಿರಿ (ನಂದಿಬೆಟ್ಟ) ಸಹ ಮೊದಲು ರಾಜಧಾನಿಗಳಾಗಿದ್ದುವು. ಆನೆ ಈ ವಂಶದವರ ರಾಜಲಾಂಛನ. ಗಂಗಮನೆತನದ ರಾಜರು ತಮ್ಮ ಸುದೀರ್ಘ ಆಳಿಕೆಯ ಕಾಲದಲ್ಲಿ ಕಂಚಿಯ ಪಲ್ಲವರು, ಬನವಾಸಿಯ ಕದಂಬರು, ಬಾದಾಮಿಯ ಚಳುಕ್ಯರು, ಮಳಖೇಡದ ರಾಷ್ಟ್ರಕೂಟರು, ಮಧುರೆಯ ಪಾಂಡ್ಯರು, ಉರೈಯೂರಿನ ಚೋಳರು, ಕಲ್ಯಾಣದ ಚಾಳುಕ್ಯರು ಹಾಗೂ ಹೊಯ್ಸಳ ರಾಜಮನೆತನಗಳೊಡನೆ ಒಂದಿಲ್ಲೊಂದು ರೀತಿಯ ರಾಜಕೀಯ ಸಂಬಂಧವನ್ನು ಹೊಂದಿದ್ದರು. ಬಾದಾಮಿಯ ಚಳುಕ್ಯ ಹಾಗೂ ರಾಷ್ಟ್ರಕೂಟ ಸಾರ್ವಭೌಮ ಮನೆತನಗಳೊಡನೆ ಮಧುರ-ಬಾಂಧವ್ಯ ಹೊಂದಿದ್ದು ಆ ಮನೆತನದ ಸಾಮ್ರಾಟರ ಸಹಾಯಕ್ಕೆ ಹಲವು ಮಂದಿ ಗಂಗರಾಜರು ತಮ್ಮ ಸೈನ್ಯಸಮೇತ ಧಾವಿಸಿ ದಕ್ಷಿಣದಲ್ಲಿ ರಾಮೇಶ್ವರದವರೆಗೂ ಉತ್ತರದಲ್ಲಿ ಉಜ್ಜಯಿನಿಯವರೆಗೂ ತಮ್ಮ ಪರಾಕ್ರಮವನ್ನೂ ಕೀರ್ತಿಯನ್ನೂ ವ್ಯಾಪಿಸುವಂತೆ ಮಾಡಿದರು.

ಗಂಗರು ಉತ್ತರ ಭಾರತದ ಇಕ್ಷ್ವಾಕು ಸಂತತಿಗೆ ಸೇರಿದವರೆಂದೂ ಅಯೋಧ್ಯೆಯಿಂದ ಬಂದು ಇಲ್ಲಿ ರಾಜ್ಯ ಸ್ಥಾಪಿಸಿದರೆಂದೂ ಗಂಗಮನೆತನದ ರಾಜರ ಹಲವು ಶಾಸನಗಳಲ್ಲಿ ವರ್ಣಿಸಲಾಗಿದೆ. ಇದೇ ವರ್ಣನೆಯ ಪ್ರಕಾರ ರಾಜ್ಯಸ್ಥಾಪನೆ ಮಾಡಿದ ದಡಿಗ ಮತ್ತು ಮಾಧವರು ಉತ್ತರದಿಂದ ಬರುವಾಗ ಕಡಪ ಜಿಲ್ಲೆಯ ಪೇರೂರು ಎಂಬಲ್ಲಿ ಸಿಂಹನಂದಿ ಎಂಬ ಜೈನಯತಿಯನ್ನು ಸಂದರ್ಶಿಸಿದರೆಂದೂ ಅವರ ರಾಜಕಳೆಯಿಂದ ಆಕರ್ಷಿತನಾದ ಜೈನಯತಿ ತನ್ನ ಇಷ್ಟದೇವತೆಯಿಂದ ವರ ಪಡೆದು ಅವರಿಗೆ ಕುವಲಾಳ ಅಥವಾ ಇಂದಿನ ಕೋಲಾರದ ಬಳಿಯಲ್ಲಿ ಕರ್ಣಿಕಾರ ಪುಷ್ಪದ ಕಿರೀಟವನ್ನು ತನ್ನ ಕೈಯಿಂದಲೇ ತೊಡಿಸಿ ಖಡ್ಗವನ್ನು ದೊರಕಿಸಿಕೊಟ್ಟನೆಂದೂ ಇವರ ರಾಜ್ಯಕ್ಕೆ ಗಂಗವಾಡಿ 96,000 ಎಂದು ಹೆಸರಾಯಿತೆಂದೂ ವಿವರಿಸಲಾಗಿದೆ. ಶಾಸನಗಳಲ್ಲಿ ಗಂಗರು ಕಾಣ್ವಾಯನಸ ಗೋತ್ರದವರೆಂದೂ ಹೇಳಿಕೊಂಡಿರುವುದರಿಂದ ಇವರು ಉತ್ತರದ ಕಣ್ವಸಂತತಿಗೆ ಸೇರಿದ್ದವರಾಗಿರಬಹುದೆಂದೂ ಚರ್ಚಿಸಲಾಗಿದೆ. ಅಲ್ಲದೆ ಗಂಗರಿಗೆ ಕೊಂಗುಣಿವರ್ಮ ಎಂಬ ಬಿರುದಿದ್ದುದರಿಂದ ಪ್ರಾರಂಭದಲ್ಲಿ ಇವರು ತಮಿಳುನಾಡಿನ ಭಾಗವಾದ ಕೊಂಗುನಾಡಿನಲ್ಲಿ ರಾಜ್ಯ ಸ್ಥಾಪಿಸಿರಬೇಕೆಂದೂ ಹಾಗೂ ಕೊಯಮತ್ತೂರು ಜಿಲ್ಲೆಯಲ್ಲಿರುವ ಪೇರೂರು ಮೇಲೆ ಹೆಸರಿಸಿದ ಸ್ಥಳವಾಗಿರಬೇಕೆಂದೂ ತರ್ಕಿಸಲಾಗಿದೆ. ಆದರೆ ಈ ವಿಷಯಗಳು ವಿವಾದಾಸ್ಪದವಾಗಿವೆ. ಇಕ್ಷ್ವಾಕು ಅಥವಾ ಅಯೋಧ್ಯೆಗೆ ಸಂಪರ್ಕ ಕಲ್ಪಿಸುವ ಮಾಹಿತಿ ಮೊದಲು ಕಾಣಿಸುವುದು 11ನೆಯ ಶತಮಾನದ ಒಂದು ಶಾಸನದಲ್ಲಿ. 10-11ನೆಯ ಶತಮಾನಗಳಲ್ಲಿ ಸಾಮಾನ್ಯವಾಗಿ ದಕ್ಷಿಣ ಭಾರತದ ರಾಜಮನೆತನಗಳು ತಮ್ಮ ಉಗಮಕ್ಕೆ ಸಂಬಂಧಿಸಿದ ಕಥೆಗಳನ್ನು ನಿರ್ಮಿಸಿಕೊಂಡ ಕಾಲವಾದ್ದರಿಂದ ಗಂಗಮನೆತನದ ಈ ಕಥೆಯೂ ತದ್ರೀತಿಯದಾಗಿರಬಹುದು. ಸಿಂಹನಂದಿಯ ಹೆಸರು 7ನೆಯ ಶತಮಾನದ ಕೊನೆಯವರೆಗೂ ತಿಳಿದುಬರುವುದಿಲ್ಲ. 963ರ ಕೂಡಲೂರು ತಾಮ್ರ ಶಾಸನದಲ್ಲಿ ಪ್ರಪ್ರಥಮವಾಗಿ ಗಂಗವಂಶ ಮತ್ತು ಸಿಂಹನಂದಿಯ ಸಂಬಂಧದ ಈ ವಿವರಣೆ ಕಂಡುಬರುತ್ತದೆ. ಅಲ್ಲದೆ ಗಂಗವಂಶದ ಪ್ರಾರಂಭದ ಅರಸರೆಲ್ಲ ಹಿಂದೂಧರ್ಮಾನುಯಾಯಿಗಳಾಗಿದ್ದರು. ಮಿಗಿಲಾಗಿ ಅವರ ಆಳಿಕೆ ಪ್ರಾರಂಭದಲ್ಲಿ ಕಾವೇರಿ ನದಿಯ ಬಯಲಿನಲ್ಲಿ ತಲಕಾಡಿನ ಪ್ರದೇಶದಲ್ಲೇ ಸ್ಥಾಪನೆಯಾಯಿತೆಂದೂ ಅನಂತರ ಕೊಂಗು ಮತ್ತು ಕೋಲಾರದವರೆಗೆ ವಿಸ್ತರಿಸಲ್ಪಟ್ಟಿತೆಂದೂ ಶಾಸನಗಳಿಂದ ವೇದ್ಯವಾಗುತ್ತದೆ. ಪ್ರಾರಂಭದ ರಾಜರ ಶಾಸನಗಳು ಮೈಸೂರು ಮತ್ತು ಅಜುಬಾಜಿನ ಜಿಲ್ಲೆಗಳಲ್ಲೇ ದೊರೆತಿವೆ. ಈ ವಂಶದ ಮೂರನೆಯ ರಾಜನಾದ ಹರಿವರ್ಮನ ಒಂದು ಶಾಸನ ತಲಕಾಡು ಅವರ ರಾಜಧಾನಿಯಾಗಿತ್ತೆಂದು ಅಧಿಕೃತವಾಗಿ ತಿಳಿಸುತ್ತದೆ. ಸ್ಥಳಪುರಾಣಗಳ ಪ್ರಕಾರ ತಲಕಾಡು ಆ ಕಾಲದಲ್ಲಿ ದಟ್ಟವಾದ ಅರಣ್ಯಗಳಿಂದ ಕೂಡಿದ್ದು ಗಜಾರಣ್ಯವೆಂದು ಪ್ರಸಿದ್ಧವಾಗಿತ್ತು. ಮದಗಜ ಗಂಗಲಾಂಛನವಾಗಲು ಈ ಸಂಗತಿಯೇ ಕಾರಣವಿರಬೇಕು. ಈ ವಂಶದ ಮೂಲಪುರುಷರು ಕೋಲಾರ, ಬೆಂಗಳೂರು, ಮಂಡ್ಯ, ಮೈಸೂರು ಜಿಲ್ಲೆಗಳ ಪ್ರದೇಶದಲ್ಲಿ ಇಂದಿಗೂ ವ್ಯವಸಾಯವನ್ನವಲಂಬಿಸಿ ಕನ್ನಡವನ್ನೇ ಮಾತೃಭಾಷೆಯಾಗುಳ್ಳ ಹಾಗೂ ಅಧಿಕ ಸಂಖ್ಯೆಯಲ್ಲಿ ವಾಸಿಸುತ್ತಿರುವ ಗಂಗಡಿಕಾರ ಎಂಬ ಗುಂಪಿಗೆ ಸೇರಿದವರು. ಆದ್ದರಿಂದ ಇವರ ರಾಜ್ಯಕ್ಕೆ ಗಂಗವಾಡಿ ಎಂದೂ ಇವರ ಸಂತತಿಗೆ ಗಂಗರೆಂದೂ ಹೆಸರಾಯಿತು ಎಂಬುದು ಅಭಿಪ್ರಾಯ. ಗಂಗಸಂತತಿಯ ರಾಜರು ಹೊಂದಿದ್ದ ಪ್ರಜಾನುರಾಗ, ಅತ್ಯಂತ ದೀರ್ಘವಾದ ಆಳಿಕೆ ಮೊದಲಾದ ಅಂಶಗಳು ಇವರು ಹೊರಗಿನಿಂದ ಬಂದವರಾಗಿರದೆ ಈ ಪ್ರದೇಶದ ನಿವಾಸಿಗಳೇ ಇರಬೇಕೆಂಬುದನ್ನು ಸೂಚಿಸುತ್ತವೆ. ಸಾತವಾಹನರ ಆಳಿಕೆಯ ಪತನ ಹಾಗೂ ಅನಂತರ ಉದ್ಭವಿಸಿದ ರಾಜಕೀಯ ಪರಿಸ್ಥಿತಿಗಳ ಸಂದರ್ಭಗಳನ್ನು ಉಪಯೋಗಿಸಿಕೊಂಡು ಕನ್ನಡ ನಾಡಿನಲ್ಲಿ ಕದಂಬ ಮತ್ತು ಬಾಣರಂತೆ ಗಂಗ ಅರಸರೂ ರಾಜ್ಯ ಸ್ಥಾಪಿಸಿರಬೇಕು. ಇವರು ಪ್ರಾರಂಭದಲ್ಲಿ ವೈದಿಕ ಮತಾವಲಂಬಿಗಳಾಗಿದ್ದು ಶಿವ ಹಾಗೂ ವೈಷ್ಣವೋಪಾಸಕರಾಗಿದ್ದು ಅನಂತರ ಜೈನಧರ್ಮವನ್ನು ಸ್ವೀಕರಿಸಿ ಆಸ್ಥಾನವಿದ್ವಾಂಸರಿಂದ ಸಿದ್ಧಪಡಿಸಲ್ಪಟ್ಟ ಗೋತ್ರ ಹಾಗೂ ಮೂಲಕ್ಕೆ ಸಂಬಂಧಿಸಿದ ಪೌರಾಣಿಕ ವರ್ಣನೆಗಳನ್ನು ಅಂಗೀಕರಿಸಿರಬೇಕು.

**ರಾಜಕೀಯ ಇತಿಹಾಸ :** ಗಂಗ ಅರಸರ ವಂಶಾನುಕ್ರಮ ಮತ್ತು ಕಾಲಾನುಕ್ರಮದ ನಿರ್ಣಯ ಸುಲಭವಲ್ಲ. ಇವರ ಹಲವಾರು ಶಾಸನಗಳು ಕೂಟ ಶಾಸನಗಳೆಂದು ವಿವಾದಗಳಿರುವುದಿಂದಲೂ ಸು.8ನೆಯ ಶತಮಾನದವರೆಗಿನ ಇವರ ಶಾಸನಗಳಲ್ಲಿ ಖಚಿತ ಕಾಲಗಣನೆಯ ಪ್ರಕಾರದ ಕಾಲನಿರ್ದೇಶವಿಲ್ಲದಿರುವುದರಿಂದಲೂ ಈ ಸಂದಿಗ್ಧತೆ ಒದಗಿದೆ. ಈ ಮನೆತನದ ಸುಮಾರು 25 ಮಂದಿ ರಾಜರು ಆಳಿಕೆ ನಡೆಸಿದರು. ಕೊಂಗುಣಿವರ್ಮ (ಸು.325-50) ಈ ಸಂತತಿಯ ಆಳಿಕೆಯ ಸ್ಥಾಪಕ. ಇವನಿಗೆ ದಡಿಗ ಎಂಬ ಹೆಸರೂ ಇದ್ದಂತೆ ತೋರುತ್ತದೆ. ಇವನ ತಮ್ಮ ಒಂದನೆಯ ಮಾಧವ (ಸು.350-75) ಕೊಂಗು ಪ್ರದೇಶವನ್ನು ಗೆದ್ದು ಕೋಲಾರ ಪ್ರದೇಶದಲ್ಲಿ ಆಳುತ್ತಿದ್ದ ಬಾಣರನ್ನು ಸೋಲಿಸಿ ರಾಜ್ಯ

ತಲಕಾಡಿನ ಗಂಗರ ವಂಶಾವಳಿ :

- ಕೊಂಗುಣಿವರ್ಮ ( ಸು. 325 - 50 )
  - ಮಾಧವ I ( ಸು. 350 - 75 )
    - ಆರ್ಯವರ್ಮ ಅಥವಾ ಹರಿವರ್ಮ ಅಥವಾ ಕೃಷ್ಣವರ್ಮ I (ಸು.375-400)
      - ಮಾಧವ II ಸಿಂಹವರ್ಮ ( ಸು. 400 - 20)
      - ವಿಷ್ಣುಗೋಪ ( ಸು. 420 - 40)
        - ಮಾಧವ III ( ಸು. 440- 69)
          - ಅವಿನೀತ ( ಸು. 469- 529)
            - ದುರ್ವಿನೀತ ( ಸು. 529 - 79)
              - ಮುಷ್ಕರ ಸು. ( 579 - 604)
                - ಶ್ರೀವಿಕ್ರಮ (ಸು. 629 - 54)
                  - ಭೂವಿಕ್ರಮ (ಸು. 654 - 79)
                    - ಅರಸಾಣೆ (670 - 79)
                  - ಶಿವಮಾರ I (ಸು. 679 - 725)
                    - ಮಗ, ಹೆಸರು ತಿಳಿದಿಲ್ಲ
                      - ಶ್ರೀಪುರುಷ (ಸು. 725 - 88)
                        - ದುಗ್ಗಮಾರ
                        - ಶಿವಮಾರ II
                          - ಮಾರಸಿಂಹ I (796)
                          - ಪೃಥ್ವೀಪತಿ I
                            - ನನ್ನಿಯ ಗಂಗ
                              - ಪೃಥ್ವಿಯಗಂಗ II
                        - ವಿಜಯಾದಿತ್ಯ
                          - ರಾಚಮಲ್ಲ I (816 - 43)
                            - ನೀತಿಮಾರ್ಗ ಎಱೆಗಂಗ (843 - 70)
                              - ರಾಚಮಲ್ಲ II (870- 919)
                              - ಬೂತುಗ I
                                - ಎಱೆಗಂಗ (886 - 920)
                                  - ನರಸಿಂಹ (920 - 33)
                                  - ರಾಚಮಲ್ಲ III (933 - 36 )
                                  - ಬೂತುಗ II (936 - 61)
                                    - ಮರುಳ (961 - 63 )
                                    - ಮಾರಸಿಂಹ II (963 - 74)
                                      - ರಾಚಮಲ್ಲ (974 - 99)
                                    - ನೀತಿಮಾರ್ಗಗೋವಿಂದರಸ
                        - ಜಯಸಿಂಹ
              - ಪೊಲವೀರ ( ಸು. 604 - 29)
            - ಮಗ, ಹೆಸರು ತಿಳಿದಿಲ್ಲ
      - ವೀರವರ್ಮ

*

ವಿಸ್ತರಿಸಿದ. ದಡಿಗ ಮತ್ತು ಮಾಧವರು ಗಂಗ ರಾಜ್ಯ ಸ್ಥಾಪಕರು ಎಂಬ ಹೇಳಿಕೆ ಸಹ ಇದೆ. ಒಂದನೆಯ ಮಾಧವನ ಮಗ ಹರಿವರ್ಮ (ಸು.375-400) ಅನಂತರ ಅಭಿಷಿಕ್ತನಾದ. ಮಾಧವನಿಗೆ ಮೂವರು ಗಂಡು ಮಕ್ಕಳಿದ್ದರೆಂದೂ ಅವರಲ್ಲಿ ಹರಿವರ್ಮ ತಲಕಾಡಿನಲ್ಲೂ ಕಿರಿಯರಾದ ಕೃಷ್ಣವರ್ಮ ಪರುವಿಯಲ್ಲಿ ಮತ್ತು ಆರ್ಯವರ್ಮ ಕೋಲಾರ ಜಿಲ್ಲೆಯ ಕೈವಾರದಲ್ಲೂ ಸ್ವತಂತ್ರರಾಗಿ ಆಳುತ್ತಿದ್ದರೆಂದು ಕೆಲವು ವಿದ್ವಾಂಸರೂ ಬೇರೆ ಬೇರೆ ಶಾಸನಗಳಲ್ಲಿ ಉಕ್ತವಾಗಿರುವ ಈ ಹೆಸರುಗಳು ಹರಿವರ್ಮನ ಬೇರೆ ಬೇರೆ ನಾಮಾಂಕಿತವಾಗಿರಬೇಕೆಂದು ಮತ್ತೆ ಹಲವು ವಿದ್ವಾಂಸರೂ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಹರಿವರ್ಮನ ಮಗ ಇಮ್ಮಡಿ ಮಾಧವ. ಇವನಿಗೆ ಸಿಂಹವರ್ಮ ಎಂಬ ಹೆಸರೂ ಇತ್ತು. ಇವನು ಪಲ್ಲವ ಸ್ಕಂದವರ್ಮನಿಂದ ಅಭಿಷಿಕ್ತನಾದನೆಂದು ಶಾಸನಗಳು ತಿಳಿಸುತ್ತವೆ. ಗಂಗರಾಜ್ಯವನ್ನು ವಿಸ್ತರಿಸುವಲ್ಲಿ ಇವನ ಪಾತ್ರ ಹಿರಿದು. ಇವನ ತಮ್ಮ ವಿಷ್ಣುಗೋಪ (ಸು.420-40) ಮಾಧವನ ಅನಂತರ ಕೆಲಕಾಲ ರಾಜ್ಯವಾಳಿದ. ಅನಂತರ ವಿಷ್ಣುಗೋಪನ ಮಗ 3ನೆಯ ಮಾಧವ (ಸು.440-69) ಅಥವಾ ತಡಂಗಲ ಮಾಧವ ಆಳಿದ. ಇವನು ಪಲ್ಲವ ಮತ್ತು ಕದಂಬ ರಾಜಮನೆತನಗಳೊಡನೆ ಮೈತ್ರಿಯಿಂದಿದ್ದು ರಾಜ್ಯವನ್ನು ವಿಸ್ತರಿಸಿದ. ಪ್ರಜಾನುರಾಗಕ್ಕೂ ದಕ್ಷ ಆಡಳಿತಕ್ಕೂ ಉದಾರ ಮತೀಯ ನೀತಿಗೂ ಪ್ರಸಿದ್ಧನಾಗಿದ್ದ. ತಡಂಗಲ ಮಾಧವ ಬಹುಶಃ ಕದಂಬ ಕೃಷ್ಣವರ್ಮನ ಸಹೋದರಿಯನ್ನು ವಿವಾಹವಾಗಿದ್ದ. ಇವನ ಮಗ ಅವಿನೀತ (ಸು.469-529) ಅನಂತರ ದೊರೆಯಾದ. ಅವಿನೀತ ಪುನ್ನಾಟ ರಾಜನಾದ ಸ್ಕಂದವರ್ಮನ ಪುತ್ರಿಯಾದ ಜೇಷ್ಠಾದೇವಿಯನ್ನು ವಿವಾಹವಾಗಿದ್ದ.



ಗಂಗರ ಲಾಂಛನ

ಅವಿನೀತನ ತರುವಾಯ ಆಳಿದ ಅವನ ಹಿರಿಯ ಮಗ ದುರ್ವಿನೀತ (ಸು.529-79) ಗಂಗ ಸಂತತಿಯ ಸುಪ್ರಸಿದ್ಧ ಪ್ರಭುಗಳಲ್ಲೊಬ್ಬ. ಅವಿನೀತ ಸಾಯುವ ಮೊದಲು ತನ್ನ ಕಿರಿಯ ರಾಣಿಯ ಪುತ್ರನನ್ನು ಸಿಂಹಾಸನಕ್ಕೆ ಹೆಸರಿಸಿ ಮರಣಹೊಂದಿದ್ದರಿಂದ ದುರ್ವಿನೀತ ತನ್ನ ಹಕ್ಕನ್ನು ಸ್ಥಾಪಿಸಲು ಶ್ರಮಿಸಬೇಕಾಯಿತು. ಸುಮಾರು ಐದು ವರ್ಷಗಳ ಕಾಲ ಯುದ್ಧಗಳು ನಡೆದು ಅಂದರಿ, ಆಲತ್ತೂರು, ಪೊರುಟಿರೆ ಎಂಬ ಕಡೆಗಳಲ್ಲಿ ಬಹುಶಃ ಪಲ್ಲವರನ್ನು ಸೋಲಿಸಿ ರಾಜ್ಯವನ್ನು ವಿಸ್ತರಿಸಿದ. ತನ್ನ ಸಹೋದರನ ಸಹಾಯಕ್ಕೆ ಧಾವಿಸಿದ ಕದಂಬರನ್ನೂ ಸೋಲಿಸಿದ. ಮಾತಾಮಹನಾದ ಸ್ಕಂದವರ್ಮ ಅಪುತ್ರಕನಾಗಿ ಮರಣಹೊಂದಿದ್ದರಿಂದ ಪುನ್ನಾಟ ದೇಶವೂ ಇವನ ಒಡೆತನಕ್ಕೆ ಸೇರಿಕೊಂಡಿತು. ಇವನ ರಾಜ್ಯ ಕೊಯಮುತ್ತೂರಿನಿಂದ ಬಳ್ಳಾರಿ ಜಿಲ್ಲೆಯವರೆಗೂ ಹಬ್ಬಿದ್ದಂತೆ ತೋರುತ್ತದೆ. ಸಮಕಾಲೀನ ದಕ್ಷಿಣ ಭಾರತದಲ್ಲಿ ಈತ ಪ್ರಭಾವಿ ದೊರೆಯಾಗಿದ್ದನಲ್ಲದೆ ವಿದ್ವತ್ಪ್ರೇಮಿಯಾಗಿ ಸ್ವತಃ ಕವಿಯಾಗಿ, ಭಾರವಿ ಮೊದಲಾದ ವಿದ್ವಾಂಸರಿಗೆ ಆಶ್ರಯದಾತನಾಗಿದ್ದ. ದುರ್ವಿನೀತ ಬಾದಾಮಿಯ ಚಳುಕ್ಯರೊಡನೆಯೂ ಸಂಬಂಧ ಬೆಳೆಸಿದ್ದ.

ದುರ್ವಿನೀತನ ಮರಣಾನಂತರ ಅವನ ಮಗ ಮುಷ್ಕರ (ಸು.579-604) ಆಳಿದ. ಇವನು ಕೊಂಗುನಾಡಿನಲ್ಲಿ ತಮ್ಮ ಪ್ರಾಬಲ್ಯವನ್ನು ಸ್ಥಾಪಿಸಲೆತ್ನಿಸಿದ ಪಾಂಡ್ಯ ಚೇರರ ಪ್ರಯತ್ನವನ್ನು ನಿರರ್ಥಕಗೊಳಿಸಿದ. ಅನಂತರ 10ನೆಯ ಶತಮಾನದ ಶಾಸನವೊಂದರ ಪ್ರಕಾರ, ದುರ್ವಿನೀತನ ಇನ್ನೊಬ್ಬ ಮಗ ಪೊಲವೀರ (ಸು.604-29) ಅಧಿಕಾರ ವಹಿಸಿದ. ಕಾಡುವೆಟ್ಟಿ (ಬಹುಶಃ ಪಲ್ಲವರಾಜ) ಮತ್ತು ವಲ್ಲವರಸ (ಬಹುಶಃ ಚಳುಕ್ಯರಾಜ) ಇವರ ಸಹಾಯದಿಂದ ಈತ ರಾಜ್ಯ ಪಡೆದನೆಂದು ಶಾಸನಗಳು ತಿಳಿಸುತ್ತವೆ. ಈ ಹೊರವಂಶಗಳ ಕೈವಾಡಕ್ಕೆ ಕಾರಣವೇನೆಂದು ತಿಳಿದಿಲ್ಲ. ಪೊಲವೀರನ ಅನಂತರ ಮುಷ್ಕರನ ಮಗ ಶ್ರೀವಿಕ್ರಮ (ಸು.629-54), ಅನಂತರ ಇವನ ಮಗ ಭೂವಿಕ್ರಮ (ಸು.654-79) ಆಳಿದರು. ಮುಷ್ಕರ ಸಿಂಧುರಾಜರ ಪುತ್ರಿಯನ್ನು ವರಿಸಿದ್ದ. ಭೂವಿಕ್ರಮ ಪರಾಕ್ರಮಿಯಾಗಿದ್ದು ಪಲ್ಲವರೊಡನೆ ನಿರಂತರವಾಗಿ ಯುದ್ಧಗಳಲ್ಲಿ ತೊಡಗಿದ್ದ. ಬಹುಶಃ ಈ ಕಾಲದಲ್ಲಿ ಗಂಗರು ಚಳುಕ್ಯರ ಸಾಮಂತತ್ವವನ್ನೂ ಅಥವಾ ಸ್ನೇಹವನ್ನೋ ಬೆಳೆಸಿಕೊಂಡಿದ್ದು ಭೂವಿಕ್ರಮ ಚಳುಕ್ಯ-ಪಲ್ಲವ ಯುದ್ಧಗಳಲ್ಲಿ ಭಾಗವಹಿಸಿರಬೇಕು. ಚಳುಕ್ಯ ಒಂದನೆಯ ವಿಕ್ರಮಾದಿತ್ಯನ ರಾಣಿಯಾದ ಗಂಗ ಮಹಾದೇವಿ ಭೂವಿಕ್ರಮನ ಮಗಳು. ಭೂವಿಕ್ರಮ ಪಲ್ಲವರಾಜನನ್ನು ಅನೇಕ ಸಲ ಸೋಲಿಸಿದುದಲ್ಲದೆ ವಿಲಂದೆ ಎಂಬ ಕದನದಲ್ಲಿ ಪಲ್ಲವರಾಜ ಪರಾಜಿತನಾಗಿ ತಲೆತಪ್ಪಿಸಿಕೊಂಡನೆಂದೂ ಪಲ್ಲವರಾಜನ ಕಂಠಿಹಾರವು ಭೂವಿಕ್ರಮನ ವಶವಾಯಿತೆಂದೂ ಶಾಸನಗಳಿಂದ ತಿಳಿದುಬರುತ್ತದೆ.

ಗಂಗದೊರೆ ಭೂವಿಕ್ರಮನಿಗೆ ಕಟ್ಟಾಣೆ ಎಂಬ ಹೆಸರಿತ್ತೆಂದೂ ಆತನ ಮಗ ಅರಸಾಣೆ ಎಂಬಾತನು ಕೆಲವು ಕಾಲ ರಾಜ್ಯವಾಳಿದನೆಂದೂ ಇತ್ತೀಚೆಗೆ ಶೋಧಿತವಾದ ಆಸಂದಿ ಶಾಸನದಿಂದ (ಕಡೂರು 23) ತಿಳಿದುಬರುತ್ತದೆ. ಈ ಅರಸಾಣೆಯು ನೀತಿಶಾಸ್ತ್ರ, ಇತಿಹಾಸ, ಪುರಾಣಗಳಲ್ಲಿ ಪಾರಂಗತನಾಗಿದ್ದನೆಂದು ಹೇಳಲಾಗಿದೆ. ಇವನು ಬಹುಶಃ 670-79ರ ಅವಧಿಯಲ್ಲಿ ಆಳಿರಬಹುದೆಂಬ ಅಭಿಪ್ರಾಯವಿದೆ. ಇದರಿಂದಾಗಿ ಭೂವಿಕ್ರಮನಿಗೆ ಗಂಡು ಮಕ್ಕಳಿರಲಿಲ್ಲವೆಂಬ ಹಿಂದಿನ ವಿದ್ವಾಂಸರ ಅಭಿಪ್ರಾಯವು ಪುನರ್ವಿಮರ್ಶೆಗೆ ಒಳಗಾಗಬೇಕಾಗಿದೆ.

ಭೂವಿಕ್ರಮನ ತಮ್ಮ ಒಂದನೆಯ ಶಿವಮಾರ ಪಟ್ಟಕ್ಕೆ ಬಂದು 679-725 ವರೆಗೆ ಆಳಿದ. ಒಂದನೆಯ ಶಿವಮಾರನ ಕಾಲದಿಂದ ಗಂಗಸಂತತಿಯ ರಾಜರ ಆಳಿಕೆಯನ್ನು ನಿರ್ಧರಿಸಲು ನಿಖರವಾದ ಆಧಾರಗಳು ದೊರೆಯುತ್ತವೆ. ಶಿಷ್ಟಪ್ರಿಯ, ನವಕಾಮ, ಅವನಿಮಹೇಂದ್ರ, ದೇವರಾಜ ಇತ್ಯಾದಿ ಬಿರುದುಗಳನ್ನು ಶಿವಮಾರ ಹೊಂದಿದ್ದ. ರಾಜ್ಯದ ವೈಭವವನ್ನು ಹೆಚ್ಚಿಸಿದ. ಪಲ್ಲವ ಯುವರಾಜನ ಮಕ್ಕಳಾದ ಪಲ್ಲವಾಧಿರಾಜ, ಪಲ್ಲವೇಳಾರಸ, ತುಪ್ಪುರಾಳರಸ ಇತ್ಯಾದಿಗಳು ಇವನ ಸಾಮಂತರಾಗಿದ್ದರು. ಎಜೆಗಂಗ ಎಂಬ ಇನ್ನೊಬ್ಬ ಮಾಂಡಲಿಕನೂ ಇವನ ಅಧೀನದಲ್ಲಿದ್ದ.

ಒಂದನೆಯ ಶಿವಮಾರನ ಅನಂತರ ಅಭಿಷಿಕ್ತನಾದ ಮೊಮ್ಮಗ ಶ್ರೀಪುರುಷ (ಮುತ್ತರಸ, 725-88) ಗಂಗಸಂತತಿಯ ಪ್ರಮುಖರಾಜರಲ್ಲೊಬ್ಬ. ಬಾಲ್ಯದಲ್ಲಿ ಪ್ರಾಂತ್ಯಾಧಿಕಾರಿಯಾಗಿ ಆಡಳಿತ ಶಿಕ್ಷಣ ಪಡೆದಿದ್ದ. 2ನೆಯ ವಿಕ್ರಮಾದಿತ್ಯ ಪಲ್ಲವರ ಮೇಲೆ ಕೈಗೊಂಡ ದಂಡಯಾತ್ರೆಯಲ್ಲಿ ಶ್ರೀಪುರುಷ ಭಾಗವಹಿಸಿದ್ದ. ನಂದಿವರ್ಮ ಪಲ್ಲವಮಲ್ಲನಿಗೂ ಇವನಿಗೂ ಕದನಗಳು ನಡೆದುವು. ಪಲ್ಲವರು ಇವನ ರಾಜ್ಯದಲ್ಲಿ ಕೋಲಾರದವರೆಗೂ ಮುನ್ನುಗ್ಗಿದರು. ಶ್ರೀಪುರುಷ ಅವರನ್ನು ಹಿಂದೂಡಿದ ತನ್ನ ಪರಾಕ್ರಮದ ಸೂಚಕವಾಗಿ ಇವನು ರಣಭಾಜನ, ಭೀಮಕೋಪ, ಪೆರ್ಮ್ಮಾನಾಡಿ ಮೊದಲಾದ ಬಿರುದುಗಳನ್ನು ಧರಿಸಿದ್ದ. 757ರ ಹೊತ್ತಿಗೆ ಚಳುಕ್ಯ ರಾಜ್ಯ ರಾಷ್ಟ್ರಕೂಟರ ಕೈಸೇರಿತು. ಆಗ ರಾಷ್ಟ್ರಕೂಟ ಕೃಷ್ಣ ತನ್ನ ಸಾರ್ವಭೌಮತ್ವವನ್ನು ಶ್ರೀಪುರುಷ ಒಪ್ಪುವನೆಂದು ಆಶಿಸಿದ್ದ. ಶ್ರೀಪುರುಷ ರಾಷ್ಟ್ರಕೂಟರ ಅಸ್ತಿತ್ವವನ್ನೇ ಗಮನಕ್ಕೆ ತಂದುಕೊಳ್ಳಲಿಲ್ಲ. ಚಳುಕ್ಯರ ಪಕ್ಷಪಾತಿಗಳಾಗಿದ್ದ ಗಂಗರನ್ನು ಸೋಲಿಸಲು ರಾಷ್ಟ್ರಕೂಟ ಕೃಷ್ಣ ಯುದ್ಧ ಹೂಡಿದ. ಮೊದಲು ಕೃಷ್ಣನ ಸೈನ್ಯವನ್ನು ಬಳ್ಳಾರಿ ಜಿಲ್ಲೆಯ ಕಂಪಿಲಿಯವರೆಗೂ ಅಟ್ಟಿದ. ನೊಳಂಬವಾಡಿಯ ನೊಳಂಬರು ಶ್ರೀಪುರುಷನ ಸಾಮಂತರಾಗಿದ್ದರು. ಇವರು ಸ್ವಲ್ಪಕಾಲ ರಾಷ್ಟ್ರಕೂಟ ಪ್ರಭುತ್ವವನ್ನು ಒಪ್ಪಿಕೊಂಡಿದ್ದರೂ ಮುಂದೆ ಗೋವಿಂದ ಮತ್ತು ಧ್ರುವರ ನಡುವೆ ನಡೆದ

ಅಂತಃಕಲಹಗಳ ಸಮಯದಲ್ಲಿ ಗಂಗರೊಡನೆ ಸೇರಿದರು. ಶ್ರೀಪುರುಷನೂ ಕೈಬಿಟ್ಟುಹೋಗಿದ್ದ ತನ್ನ ರಾಜ್ಯದ ಕೆಲವು ಪ್ರದೇಶಗಳನ್ನು ಪುನಃ ವಶಪಡಿಸಿಕೊಂಡ. ಶ್ರೀಪುರುಷನ ಆಳಿಕೆ ಇರುವವರೆಗೂ ಗಂಗರಾಜ್ಯ ರಾಷ್ಟ್ರಕೂಟರ ಸ್ವಾಧೀನವಾಗಲಿಲ್ಲ. ಅನೇಕ ಯುದ್ಧಗಳು ನಡೆದರೂ ಇವನು ತನ್ನ ರಾಜ್ಯವನ್ನು ಪರಾಕ್ರಮದಿಂದ ರಕ್ಷಿಸಿದ. ಆಡಳಿತದಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದ. ಇವನ ಕಾಲದಲ್ಲಿ ಗಂಗರಾಜ್ಯ ಸುಭಿಕ್ಷದಿಂದ ಕೂಡಿದ್ದು ಶ್ರೀರಾಜ್ಯ ಎಂಬ ಅನ್ವರ್ಥನಾಮವನ್ನು ಪಡೆದಿತ್ತು. ಶ್ರೀಪುರುಷ ಜ್ಞಾನಪ್ರಿಯನಾಗಿದ್ದು ಅನೇಕ ವಿದ್ವಾಂಸರಿಗೆ ಪ್ರೋತ್ಸಾಹ ನೀಡಿದ್ದ. ಗಜಶಾಸ್ತ್ರ ಎಂಬ ಗ್ರಂಥವನ್ನು ರಚಿಸಿದ.

ಶ್ರೀಪುರುಷನ ಅನಂತರ ಇವನ ಮಗ ಎರಡನೆಯ ಶಿವಮಾರ (ಸೈಗೊಟ್ಟ, ಸು.788-812) ಪಟ್ಟಕ್ಕೆ ಬಂದ. ರಾಷ್ಟ್ರಕೂಟ ಸಿಂಹಾಸನಕ್ಕಾಗಿ ನಡೆದ ಎರಡನೆಯ ಗೋವಿಂದ ಮತ್ತು ಧ್ರುವ ಇವರ ಕಚ್ಚಾಟದಲ್ಲಿ ಶಿವಮಾರ ಹಿರಿಯನಾದ ಗೋವಿಂದನ ಪಕ್ಷವನ್ನು ವಹಿಸಿದ. ಆದರೆ ಜಯಗಳಿಸಿದ ಧ್ರುವ ಶಿವಮಾರನನ್ನು ಸೋಲಿಸಿ ಅವನನ್ನು ಸೆರೆಯಲ್ಲಿಟ್ಟು ತನ್ನ ಮಗ ಕಂಬಯ್ಯನನ್ನು ಗಂಗವಾಡಿಯ ರಾಜ್ಯಪಾಲನಾಗಿ ನೇಮಿಸಿದ. ಧ್ರುವನ ಅನಂತರ ಕಂಬಯ್ಯನಿಗೂ ಅವನ ತಮ್ಮ ಮೂರನೆಯ ಗೋವಿಂದನಿಗೂ ಸಿಂಹಾಸನಕ್ಕೆ ಸ್ಪರ್ಧೆಯಾದ ಸಂದರ್ಭದಲ್ಲಿ ಗೋವಿಂದ ಕಂಬಯ್ಯನನ್ನು ಎದುರಿಸಲು ಶಿವಮಾರನನ್ನು ಸೆರೆಯಿಂದ ಬಿಡುಗಡೆ ಮಾಡಿ ಪುನಃ ಅವನ ರಾಜ್ಯವನ್ನು ಹಿಂದಕ್ಕೆ ಕೊಟ್ಟ. ಆದರೆ ಶಿವಮಾರ ಕಂಬಯ್ಯನ ಪಕ್ಷವನ್ನು ವಹಿಸಿದ. ಗೋವಿಂದ ತನ್ನ ಸಹೋದರನನ್ನು ಶಿಕ್ಷಿಸಿ ಶಿವಮಾರನನ್ನು ಸೋಲಿಸಿ ಪುನಃ ಸೆರೆಯಲ್ಲಿಟ್ಟ. ಶಿವಮಾರ ಅನೇಕ ವರ್ಷ ರಾಷ್ಟ್ರಕೂಟರ ಸೆರೆಮನೆಯಲ್ಲಿದ್ದ. ಕೊನೆಗೆ ಗೋವಿಂದ ತನ್ನ ಆಳ್ವಿಕೆಯ ಕೊನೆಯ ವರ್ಷಗಳಲ್ಲಿ ಕರುಣೆ ತೋರಿ ಅವನನ್ನು ಸೆರೆಯಿಂದ ಬಿಡುಗಡೆ ಮಾಡಿ ಸಿಂಹಾಸನವನ್ನು ಹಿಂದಿರುಗಿಸಿದ. ಈ ಮಧ್ಯೆ ಕೆಲಕಾಲ (ಸು.796) ಶಿವಮಾರನ ಮಗನಾದ ಒಂದನೆಯ ಮಾರಸಿಂಹನೂ ರಾಜನಾಗಿದ್ದಂತೆ ತೋರುತ್ತದೆ. ಎರಡನೆಯ ಶಿವಮಾರನ ಅನಂತರ ಅವನ ತಮ್ಮ ವಿಜಯಾದಿತ್ಯ ಸ್ವಲ್ಪಕಾಲ ರಾಜ್ಯವಾಳಿದ. 816ರಲ್ಲಿ ವಿಜಯಾದಿತ್ಯನ ಮಗನಾದ ಒಂದನೆಯ ರಾಚಮಲ್ಲ ಪಟ್ಟಕ್ಕೆ ಬಂದು 843ರವರೆಗೆ ಆಳಿದ. ಈ ವೇಳೆಗೆ ಗಂಗರಾಜ್ಯದ ಸ್ವಲ್ಪಭಾಗ ರಾಷ್ಟ್ರಕೂಟ ಸೇನಾನಿ ಬಂಕೇಶನ ಅಧೀನದಲ್ಲಿತ್ತು. ರಾಚಮಲ್ಲನೂ ಇವನ ಮಗ ಎಱೆಗಂಗನೂ (ಸು.843-69) ಸ್ವಾತಂತ್ರ್ಯಕ್ಕಾಗಿ ಯತ್ನಿಸಿದರೂ ಯಶಸ್ವಿಯಾಗಲಿಲ್ಲ. ಇವರ ಆಳಿಕೆಯಲ್ಲಿ ರಾಷ್ಟ್ರಕೂಟರಿಗೂ ಗಂಗರಿಗೂ ಅನೇಕ ಯುದ್ಧಗಳು ನಡೆದವು. ಕೊನೆಗೆ ಅಂದಿನ ರಾಷ್ಟ್ರಕೂಟ ದೊರೆ ಒಂದನೆಯ ಅಮೋಘವರ್ಷ ತನ್ನ ಸೇನಾನಿ ಬಂಕೇಶನನ್ನು ಗಂಗರ ವಿರುದ್ಧ ನಿಯೋಜಿಸಿದ. ರಾಜಾಱಾಮಡು ಎಂಬಲ್ಲಿ ಭೀಕರ ಕದನವಾಯಿತಾದರೂ ಅಷ್ಟೇನೂ ಪರಿಣಾಮ ಕಾರಿಯಾಗಲಿಲ್ಲ. ಕೊನೆಗೆ ಅಮೋಘವರ್ಷ ತನ್ನ ಕುಮಾರಿಯಾದ ಚಂದ್ರೊಬ್ಬಲಬ್ಬೆಯನ್ನು ಗಂಗರಾಜಕುಮಾರ ಒಂದನೆಯ ಬೂತುಗನಿಗೆ ವಿವಾಹ ಮಾಡಿಕೊಡುವುದರ ಮೂಲಕ ಗಂಗ ರಾಷ್ಟ್ರಕೂಟರಿಗೆ ಸಂಬಂಧಿಸಿದಂತೆ ಹೊಸ ಅಧ್ಯಾಯ ಪ್ರಾರಂಭವಾಗಿ ಹಗೆತನ ಕೊನೆಗೊಂಡು ಮಿತ್ರತ್ವವುಂಟಾಯಿತು.

ಒಂದನೆಯ ನೀತಿಮಾರ್ಗನ ಹಿರಿಯ ಮಗನಾದ ಎರಡನೆಯ ರಾಚಮಲ್ಲ ಅನಂತರದ ರಾಜನಾಗಿ ಅಭಿಷಿಕ್ತನಾಗಿ ಸು.870ರಿಂದ 919ರ ವರೆಗೂ ತರುವಾಯ ಅವನ ತಮ್ಮನ ಮಗನಾದ ಎರಡನೆಯ ನೀತಿಮಾರ್ಗ ಎಱೆಯಪ್ಪ ಸುಮಾರು 920ರ ವರೆಗೂ ಆಳಿದರು. ಎಱೆಯಪ್ಪ ನೊಳಂಬ ಮಹೇಂದ್ರನನ್ನು ಸೋಲಿಸಿ ಆಶ್ರಿತ ರಾಜನನ್ನಾಗಿ ಮಾಡಿಕೊಂಡ. ಎಱೆಯಪ್ಪನ ತರುವಾಯ ಅವನ ಮಗನಾದ ನರಸಿಂಹದೇವ ಸ್ವಲ್ಪಕಾಲ ರಾಜ್ಯವಾಳಿದ. ಅನಂತರ ಮೂರನೆಯ ರಾಚಮಲ್ಲ 933ರಲ್ಲಿ ರಾಜನಾಗಿ 935ರ ವರೆಗೂ ಆಳಿದ. ಇವನ ತಮ್ಮನಾದ ಬೂತುಗ ರಾಷ್ಟ್ರಕೂಟ ರಾಜಕುಮಾರಿಯನ್ನು ವರಿಸಿ ಮೂರನೆಯ ರಾಚಮಲ್ಲನನ್ನು ಗದ್ದುಗೆಯಿಂದ ಓಡಿಸಿ ತಾನೇ ರಾಜನಾಗಿ 936ರಿಂದ 961ರ ವರೆಗೆ ಆಳಿದ. ಇಮ್ಮಡಿ ಬೂತುಗ ಮತ್ತು ರಾಷ್ಟ್ರಕೂಟ ಮೂರನೆಯ ಕೃಷ್ಣ ಇವರು ಚೋಳ ರಾಜ್ಯವನ್ನು ಮುತ್ತಿದರು. ಬೂತುಗ ಚೋಳಸೈನ್ಯವನ್ನು ಸೋಲಿಸಿ ಒಂದನೆಯ ಪರಾಂತಕನ ಮಗನಾದ ಎರಡನೆಯ ಆದಿತ್ಯನನ್ನು ಯುದ್ಧದಲ್ಲಿ ಕೊಂದ. ಪರಾಕ್ರಮಿಯಾದ ಬೂತುಗ ಗಂಗಸಂತತಿಯ ಪ್ರಸಿದ್ಧ ರಾಜರಲ್ಲೊಬ್ಬ. ಬೂತುಗನಿಗೆ ಗಂಗಗಾಂಗೇಯ, ನನ್ನಿಯಗಂಗ ಮೊದಲಾದ ಬಿರುದುಗಳಿದ್ದವು. ಇವನ ಮರಣಾನಂತರ ಉತ್ತರಾಧಿಕಾರಿಯಾದ ಹಿರಿಯ ಮಗ ಮರುಳದೇವ (ಸು.961-63) ಕೆಲವೇ ದಿನಗಳಲ್ಲಿ ಮರಣ ಹೊಂದಿದ್ದರಿಂದ ಎರಡನೆಯ ಮಾರಸಿಂಹ ಅರಸನಾದ (963-74).

ಈತ ಗಂಗ ಸಂತತಿಯ ಅತ್ಯಂತ ಸಮರ್ಥ ಪ್ರಭುಗಳಲ್ಲೊಬ್ಬ. ರಾಷ್ಟ್ರಕೂಟ ಮೂರನೆಯ ಇಂದ್ರನ ಪರವಾಗಿ ಮಾಳವ, ಗುಜರಾತಿನವರೆಗೂ ಯಶಸ್ವಿಯಾಗಿ ದಂಡಯಾತ್ರೆ ಕೈಗೊಂಡು ಗೂರ್ಜರ ರಾಜಾಧಿರಾಜ ಎಂಬ ಬಿರುದನ್ನು ಪಡೆದು ತನ್ನ ರಾಜ್ಯವನ್ನು ವಿಸ್ತರಿಸಿದ. ನೊಳಂಬರನ್ನು ಸೋಲಿಸಿ ನೊಳಂಬಕುಲಾಂತಕ ಎಂಬ ಬಿರುದನ್ನು ಹೊಂದಿದ್ದ. ರಾಷ್ಟ್ರಕೂಟ ಖೊಟ್ಟಿಗನನ್ನು ಸೋಲಿಸಿ ಮಾನ್ಯಖೇಟವನ್ನು ಆಕ್ರಮಿಸಿದ್ದ ಪರಮಾರ ಸೀಯಕನೊಡನೆ ಶ್ರಮದಿಂದ ಹೋರಾಡಿ ಅವನನ್ನು ಓಡಿಸಿದ. ಆದರೆ ರಾಷ್ಟ್ರಕೂಟ ರಾಜ್ಯ ಚಾಳುಕ್ಯ ಇಮ್ಮಡಿ ತೈಲಪನ ವಶವಾದಾಗ ನಾಲ್ವಡಿ ಇಂದ್ರನಿಗೆ ಬೆಂಬಲವಾಗಿ ನಿಂತು ಅವನಿಗೆ ಬಂಕಾಪುರದಲ್ಲಿ ಪಟ್ಟಗಟ್ಟಿದ. ಆದರೂ ಚಾಳುಕ್ಯ ರಾಜ್ಯ ಪ್ರಬಲವಾಗಿ ಇವನ ಶ್ರಮ ವ್ಯರ್ಥವಾದ್ದರಿಂದ ಕೊನೆಗೆ ಸಲ್ಲೇಖನವಿಧಿಯಿಂದ ಶ್ರವಣಬೆಳಗೊಳದಲ್ಲಿ ನಿಧನನಾದ. ಇವನ ಮಗನಾದ ನಾಲ್ಕನೆಯ ರಾಚಮಲ್ಲ ಸತ್ಯವಾಕ್ಯ (974-99) ಮಾರಸಿಂಹನ ಕಾಲದಿಂದಲೂ ಮಂತ್ರಿಯಾಗಿದ್ದ ಚಾವುಂಡರಾಯನ ನಿಷ್ಠೆ ಮತ್ತು ಸಹಕಾರದಿಂದ ಆ ಕಾಲದಲ್ಲಿ ಉದ್ಭವವಾದ ಅಂತಃಕಲಹಗಳಲ್ಲಿ ಮೇಲ್ಮೆಗಳಿಸಿ ರಾಜನಾದ. ಗಂಗರ ಅನೇಕ ವೈರಿಗಳನ್ನು ಸದೆಬಡಿದ ಚಾವುಂಡರಾಯ ವೈರಿಕುಲಕಾಲದಂಡ, ಭುಜವಿಕ್ರಮ, ಸಮರ ಧುರಂಧರ, ವೀರಮಾರ್ತಾಂಡ ಮೊದಲಾದ ಅನೇಕ ಬಿರುದುಗಳನ್ನು ಧರಿಸಿದ್ದ. ಆದರೆ ಚಾಳುಕ್ಯ ತೈಲಪನು ಗಂಗರನ್ನು ನಿರ್ಮೂಲ ಮಾಡಲು ನಿರ್ಧರಿಸಿ ತುಂಡು ಗಂಗರಸರನ್ನೆಲ್ಲಾ ಸವರಿ ಇವನನ್ನೂ ಅಡಗಿಸಿದ. ರಾಚಮಲ್ಲ ತನ್ನ ರಾಜ್ಯದ ದಕ್ಷಿಣ ಭಾಗವನ್ನು ಮಾತ್ರ ಸು.999ರವರೆಗೆ ಆಳಿದ. ಆದರೆ ಆ ವೇಳೆಗೆ ಪ್ರಬಲರಾಗುತ್ತಿದ್ದ ಚೋಳರು ಆಕ್ರಮಣಕ್ಕೆ ನಾಂದಿಯಾಗಿ ಗಂಗರಾಜ್ಯವನ್ನು ವಶಪಡಿಸಿಕೊಂಡರು. ಗಂಗಸಾಮ್ರಾಜ್ಯ ಕೊನೆಗೊಂಡಿತು. ಅನಂತರ ಕೆಲವು ಗಂಗಸಾಮಂತರು ಚಾಳುಕ್ಯರು ಮತ್ತು ಹೊಯ್ಸಳರ ಅಧೀನದಲ್ಲಿ ಸಣ್ಣ ಪುಟ್ಟ ಪ್ರದೇಶಗಳಲ್ಲಿ ಅಧಿಕಾರಿಗಳಾಗಿ ಇದ್ದುದು ಮಾತ್ರ ಇತಿಹಾಸದಲ್ಲಿ ಕಾಣುತ್ತದೆ.

**ಆಡಳಿತ ವ್ಯವಸ್ಥೆ :** ಗಂಗರ ರಾಜ್ಯ ಕೊಡಗು ಜಿಲ್ಲೆಯಿಂದ ಕೋಲಾರ ಜಿಲ್ಲೆಯವರೆಗೂ ಕೊಯಮತ್ತೂರು-ಸೇಲಂ ಜಿಲ್ಲೆಗಳಿಂದ ಬಳ್ಳಾರಿ, ಧಾರವಾಡ ಜಿಲ್ಲೆಗಳವರೆಗೂ ಇವರ ಪ್ರವರ್ಧಮಾನ ಕಾಲದಲ್ಲಿ ವ್ಯಾಪಿಸಿತ್ತು. ಪ್ರಾರಂಭದಿಂದ ಕೊನೆಯವರೆಗೂ ತಲಕಾಡು ಇವರ ಮುಖ್ಯ ರಾಜಧಾನಿಯಾಗಿತ್ತು. ಚನ್ನಪಟ್ಟಣದ ಬಳಿಯ ಮಂಕುಂದ ಮತ್ತು ನೆಲಮಂಗಲ ತಾಲ್ಲೂಕಿನ ಮಣ್ಣೆ (ಮಾನ್ಯಪುರ) ಹಲವು ಕಾಲ ಉಪರಾಜಧಾನಿಗಳಾಗಿದ್ದವು. ಗಂಗ ಸಂತತಿಯ ರಾಜರು ಆಡಳಿತಕ್ಕೆ ಸಂಬಂಧಿಸಿದಂತೆ ಉದಾತ್ತ ಧ್ಯೇಯಗಳನ್ನು ಹೊಂದಿದ್ದರು. ರಾಜನೀತಿಯಲ್ಲಿ ಪರಿಣತರಾಗಿದ್ದರು. ಪ್ರಜೆಗಳ ಹಿತರಕ್ಷಣೆಗಾಗಿಯೇ ಆಡಳಿತದ ಜವಾಬ್ದಾರಿಯನ್ನು ವಹಿಸಿಕೊಂಡಿದ್ದುದಾಗಿ ಇವರ ಶಾಸನಗಳಲ್ಲಿ ಸಾರಲಾಗಿದೆ. ಮಾಧವ, ಹರಿವರ್ಮ, ಅವಿನೀತ, ದುರ್ವಿನೀತ, ಶ್ರೀಪುರುಷ ಮೊದಲಾದ ಈ ಸಂತತಿಯ ಪೂರ್ವಾರ್ಧದಲ್ಲಿ ಆಳಿದ ರಾಜರು ವೈದಿಕಮತಾವಲಂಬಿಗಳಾಗಿದ್ದರು. ಆದರೂ ಇತರ ಪಂಥಗಳಿಗೂ ಉದಾರ ಪ್ರೋತ್ಸಾಹ ನೀಡಿದರು. ವರ್ಣಾಶ್ರಮ ಧರ್ಮಪರಿಪಾಲನೆ, ಗೋಬ್ರಾಹ್ಮಣಸಂರಕ್ಷಣೆ, ದುಷ್ಟನಿಗ್ರಹ ಶಿಷ್ಟಪರಿಪಾಲನೆ ಮೊದಲಾದ ರಾಜನ ಕರ್ತವ್ಯಗಳನ್ನು ಪಾಲಿಸುವ ಇವರು ತಮ್ಮನ್ನು ಧರ್ಮ ಮಹಾರಾಜ ಎಂದು ಕರೆದುಕೊಂಡಿದ್ದಾರೆ (ರಾಜತ್ವ ವಂಶಪಾರಂಪರ್ಯವಾಗಿತ್ತು. ಹಿರಿಯ ಮಗ ಉತ್ತರಾಧಿಕಾರಿಯಾಗುತ್ತಿದ್ದ). ರಾಜ ರಾಜ್ಯದ ಸರ್ವಶ್ರೇಷ್ಠ ನ್ಯಾಯಮೂರ್ತಿಯಾಗಿದ್ದ. ಸೈನಿಕಪಡೆಯ ಸರ್ವೋಚ್ಚ ದಂಡನಾಯಕನಾಗಿದ್ದು ಯುದ್ಧಗಳಲ್ಲಿ ಸ್ವತಃ ಸೈನ್ಯವನ್ನು ನಡೆಸುತ್ತಿದ್ದ. ದುರ್ವಿನೀತ, ಇಮ್ಮಡಿ ಬೂತುಗ, ಮೂರನೆಯ ಮಾರಸಿಂಹ ಮೊದಲಾದ ಗಂಗರಾಜರು ರಣರಂಗದಲ್ಲಿ ಅಜೇಯರಾಗಿದ್ದರು.

ರಾಜ್ಯದ ಅಭ್ಯುದಯಕ್ಕಾಗಿ ಗಂಗ ಪ್ರಭುಗಳು ಅನೇಕ ಸಾರ್ವಜನಿಕ ಕಾರ್ಯಕ್ರಮಗಳನ್ನು ರೂಪಿಸಿಕೊಂಡಿದ್ದರು. ಜ್ಞಾನವರ್ಧನೆಗಾಗಿ ಅಗ್ರಹಾರಗಳನ್ನು ಸ್ಥಾಪಿಸುತ್ತಿದ್ದರು. ಬ್ರಾಹ್ಮಣ ಮತ್ತು ಜೈನವಿದ್ವಾಂಸರಿಗೆ ಪಕ್ಷಪಾತವಿಲ್ಲದಂತೆ

ಉದಾರ ದಾನದತ್ತಿಗಳನ್ನು ನೀಡುತ್ತಿದ್ದರು. ಈ ಸಂತತಿಯ ಅನೇಕ ಪ್ರಭುಗಳು ಸ್ವತಃ ಪಂಡಿತರೂ ಕವಿಗಳೂ ಆಗಿದ್ದು ಅನೇಕ ಗ್ರಂಥಗಳನ್ನು ರಚಿಸಿದರು. ವ್ಯವಸಾಯಕ್ಕಾಗಿ ಕೆರೆಕಾಲುವೆಗಳನ್ನು ನಿರ್ಮಿಸಿದ್ದರು. ಕ್ರಮಬದ್ಧವಾದ ತೆರಿಗೆಗಳನ್ನು ಮಾತ್ರ ಜಾರಿಗೆ ತರುವುದರ ಮೂಲಕ ವ್ಯಾಪಾರವನ್ನು ಪ್ರೋತ್ಸಾಹಿಸಿದರು. ಗಂಗ ಪ್ರಭುಗಳು ನಿರಂಕುಶಾಧಿಕಾರಿಗಳಾಗಿ ವರ್ತಿಸುತ್ತಿರಲಿಲ್ಲ. ರಾಜನಿಗೆ ಸಹಾಯಕವಾಗಿ ಮಂತ್ರಾಲೋಚನ ಸಭೆಯಿತ್ತು. ಚಾವುಂಡರಾಯ, ಅಸಗಯ್ಯ, ಅಮಾವಾಸಯ್ಯ ಮೊದಲಾದ ಅನೇಕ ಸಚಿವರ ಮತ್ತು ದಂಡನಾಯಕರ ಹೆಸರುಗಳೂ ಅವರ ದಕ್ಷತೆಯೂ ಶಾಸನಗಳಿಂದ ತಿಳಿದುಬರುತ್ತದೆ. ರಾಜ್ಯವನ್ನು ವಿಷಯ (ನಾಡು), ಕಂಪಣ ಮೊದಲಾಗಿ ವಿಂಗಡಿಸಲಾಗಿತ್ತು. ಗ್ರಾಮ ಆಡಳಿತದ ಚಿಕ್ಕ ಘಟಕವಾಗಿತ್ತು. ಗಂಗರಾಜ್ಯ ಗಂಗವಾಡಿ 96,000 ಎಂದು ಕರೆಯಲ್ಪಡುತ್ತಿತ್ತು. ಅದರಲ್ಲಿನ ಹಲವಾರು ಉಪವಿಭಾಗಗಳು, ಪುನ್ನಾಟ 6000, ಕೈವಾರ ವಿಷಯ, ಮುದುಕೊಟ್ಟೂರು ವಿಷಯ, ಕೆರೆಗುಂದನಾಡು 30, ಆವನಿಯನಾಡು 30 ಹಾಗೂ ಪೋಕುಂದ ಎಡೆತೊರೆನಾಡು ಮೊದಲಾದ ವಿಭಾಗಗಳ ಹೆಸರು ಶಾಸನಗಳಲ್ಲಿ ಉಲ್ಲೇಖವಾಗಿವೆ. ಯುವರಾಜ ಮತ್ತು ಇತರ ರಾಜಕುಮಾರರನ್ನು ಪ್ರಾಂತ್ಯಾಧಿಕಾರಿಗಳಾಗಿ ನೇಮಿಸಲಾಗುತ್ತಿತ್ತು. ಗಂಗಮನೆತನದ ರಾಣಿಯರೂ ಆಡಳಿತದಲ್ಲಿ ಭಾಗವಹಿಸುತ್ತಿದ್ದರು. ಶ್ರೀಪುರುಷನ ರಾಣಿಯರು ಪ್ರಾಂತ್ಯಗಳ ಆಡಳಿತಮುಖ್ಯರಾಗಿ ಕರ್ತವ್ಯ ನಿರ್ವಹಿಸುತ್ತಿದ್ದುದಾಗಿ ಶಾಸನಗಳಿಂದ ತಿಳಿದುಬರುತ್ತದೆ. ಗಾವುಣ್ಡ, ಪೆರ್ಗಡೆ ಮೊದಲಾದವರು ಸಣ್ಣ ಘಟಕಗಳ ಅಧಿಕಾರಿಗಳಾಗಿರುತ್ತಿದ್ದರು. ಗ್ರಾಮಸಭೆಗಳು ಊರ್ಜಿತ ಸ್ಥಿತಿಯಲ್ಲಿದ್ದವು. (ಜಿ.ಆರ್.ಆರ್.)

**ಆರ್ಥಿಕ - ಸಾಮಾಜಿಕ ಸ್ಥಿತಿ:** ಈ ಕಾಲದ ಕ್ಷಾತ್ರಸಾಧನೆಗಳನ್ನು ಗಮನಿಸಿದರೆ ಇದಕ್ಕೆ ಪೋಷಕವಾದ ಭದ್ರವಾದ ಸಮೃದ್ಧವಾದ ಆರ್ಥಿಕಸ್ಥಿತಿ ವ್ಯವಸ್ಥೆಗಳು ಇದ್ದಂತೆ ತೋರುತ್ತದೆ. ವ್ಯವಸಾಯ ಮುಖ್ಯವಾದ ಕಸಬಾಗಿತ್ತು. ರಾಜನೂ ಇತರರೂ ಕೆರೆಕಟ್ಟೆಗಳನ್ನು ಕಟ್ಟಿಸಿ ವ್ಯವಸಾಯಕ್ಕೆ ಅನುವಾಗುತ್ತಿದ್ದರು. ಸಾಮಾನ್ಯವಾಗಿ ಪ್ರತಿ ಗ್ರಾಮದಲ್ಲೂ ಒಂದು ಕೆರೆಯಾದರೂ ಇರುತ್ತಿತ್ತು. ಬತ್ತ, ರಾಗಿ, ಜೋಳ, ಹತ್ತಿ ಇತ್ಯಾದಿಗಳು ಮುಖ್ಯ ಬೆಳೆಗಳಾಗಿದ್ದುವು. ತೆಂಗು, ಹಲಸು, ಅಡಕೆ ಮುಂತಾದವುಗಳ ಬೆಳೆ ಹಾಗೂ ಅರಣ್ಯ ಉತ್ಪನ್ನಗಳನ್ನು ರೂಢಿಸುವುದು ಸಹ ಇತ್ತು. ವ್ಯವಸಾಯದ ಜೊತೆಗೆ ಪಶುಸಂಪತ್ತು ರೂಢಿತವಾಗುತ್ತಿತ್ತು. ಮಹಿಷಿ, ಗೋ, ಅಶ್ವ, ಕುಕ್ಕುಟಗಳು ರಾಜ್ಯದಲ್ಲಿ ಸಮೃದ್ಧವಾಗಿದ್ದುವು ಎಂದು ಒಂದು ಶಾಸನ ತಿಳಿಸುತ್ತದೆ. ಆರ್ಥಿಕ ಉತ್ಪಾದನಾ ರಂಗದಲ್ಲಿ ಅನೇಕ ಕಸಬುಗಳು ಅನುಸರಣೆಯಲ್ಲಿದ್ದುವು. ನೇಯ್ಗೆ, ಕಮ್ಮಾರಿಕೆ ಇತ್ಯಾದಿಗಳು ಅವುಗಳಲ್ಲಿ ಮುಖ್ಯ. ದೇಶದಲ್ಲಿ ಭದ್ರವಾದ ಸ್ಥಿತಿ ಇದ್ದುದರಿಂದ ವ್ಯಾಪಾರದ ಹೆಚ್ಚಳವಿತ್ತು. ಆಂತರಿಕ ಹಾಗೂ ಹೊರನಾಡಿನೊಡನೆ ವ್ಯಾಪಾರ ಚೆನ್ನಾಗಿತ್ತೆಂಬುದಕ್ಕೆ ಶಾಸನದಲ್ಲಿ ದೊರಕಿರುವ ಸರಕುಗಳ ಮತ್ತು ತೆರಿಗೆಗಳ ವಿಷಯಗಳಿಂದ ವ್ಯಕ್ತವಾಗುತ್ತದೆ. ಗಂಗರಾಜ್ಯದ ಜನ ಆಗ್ನೇಯ ವಿಷ್ಯ ಮೊದಲಾದ ದೇಶಗಳೊಡನೆಯೂ ಸಂಬಂಧವಿಟ್ಟುಕೊಂಡಿದ್ದಿರಬೇಕೆಂಬುದಕ್ಕೆ ಸಾಂದರ್ಭಿಕ ಸಾಕ್ಷ್ಯಗಳು ದೊರಕುತ್ತವೆ. ರಾಜರು ವಿವಿಧ ಮೌಲ್ಯದ ನಾಣ್ಯಗಳನ್ನು ಹೊರಡಿಸುವುದು, ರಸ್ತೆ, ಸೇತುವೆ ಮೊದಲಾದುವನ್ನು ನಿರ್ಮಿಸುವುದು ಇತ್ಯಾದಿ ಕಾರ್ಯಗಳಿಂದ ವ್ಯಾಪಾರಕ್ಕೆ ಉತ್ತೇಜನ ನೀಡುತ್ತಿದ್ದರು.

ನಾಡಿನ ಹಿಂದು ಸಮಾಜದಲ್ಲಿ ವರ್ಣವ್ಯವಸ್ಥೆ ರೂಢಿಯಲ್ಲಿತ್ತು. ಅಲ್ಲದೆ ಜೈನರೂ ಪ್ರಾಯಶಃ ಸ್ವಲ್ಪ ಸಂಖ್ಯೆಯಲ್ಲಿ ಬೌದ್ಧರೂ ಇದ್ದರು. ಈ ವರ್ಣ ವ್ಯವಸ್ಥೆಯ ಜೊತೆಗೆ ಆರ್ಥಿಕ ಸ್ಥಾನಮಾನಗಳಿಂದಾಗಿ ಸಮಾಜ ಹಲವು ಪಂಗಡ ಜಾತಿಗಳಾಗಿ ವಿಭಜಿತವಾಗಿದ್ದರೂ ಅವುಗಳಲ್ಲಿ ಪರಸ್ಪರಾವಲಂಬನೆ ಇತ್ತು. ಈ ಸಮಾಜ ವ್ಯವಸ್ಥೆಯನ್ನು ಉಳಿಸಲು ಗಂಗರಾಜರು ಶ್ರಮಿಸುತ್ತಿದ್ದರು. ಈ ಅರಸರ ಹಲವು ಶಾಸನಗಳಲ್ಲಿ ಇವರು ಅಧಿರಕ್ಷಿತ ಚಾತುರ್ವರ್ಣಾಶ್ರಮರು ಎಂದು ಕರೆದುಕೊಂಡಿದ್ದಾರೆ. ಈ ಜಾತಿಕುಲಗಳವರು ತಮ್ಮ ತಮ್ಮ ಕರ್ತವ್ಯಗಳನ್ನು ರೂಢಿಸಿಕೊಂಡು ಹೋಗಬೇಕೆಂಬ ಕಲ್ಪನೆ ಈ ಕಾಲದಲ್ಲಿ ಬಲವಾಗಿತ್ತು. ಪಿತೃಪ್ರಧಾನವಾದ ಅವಿಭಕ್ತ ಕುಟುಂಬ ಪದ್ಧತಿ ಈ ಕಾಲದಲ್ಲಿ ಸಾಮಾನ್ಯವಾಗಿತ್ತು. ಸ್ತ್ರೀಯರ ಸ್ಥಾನಮಾನಗಳು ಉತ್ತಮವಾಗಿದ್ದುವು. ಕೆಲವೆಡೆ ಸ್ತ್ರೀಯರೇ ಅಧಿಕಾರಿಗಳಾಗಿರುತ್ತಿದ್ದುದೂ ಸ್ವಂತವಾಗಿ ದಾನಗಳನ್ನು ನೀಡಿರುವುದೂ ಇವರಿಗಿದ್ದ ಉನ್ನತ ಸ್ಥಾನದ ಸೂಚಕವಾಗಿವೆ. ಸತ್ಯಶೀಲತೆ, ಸ್ವಾಮಿನಿಷ್ಠೆ, ಶೌರ್ಯ, ತಾಳ್ಮೆ ಈ ವಿಶಿಷ್ಟ ಗುಣಗಳನ್ನು ರೂಢಿಸಬೇಕೆಂಬುದು ಸಮಾಜಜೀವನದ ಮೌಲ್ಯವಾಗಿತ್ತು. ಕೀಳ್ಗುಂಟೆ, ವೇಳೆವಾಳಿ - ಈ ಪದ್ಧತಿಗಳಲ್ಲಿ ಇಂಥ ಮೌಲ್ಯಗಳ ವೀರಪ್ರತಿಪಾದನೆಯನ್ನು ಕಾಣಬಹುದಾಗಿದೆ. ಸಾಮಾನ್ಯವಾಗಿ ಜನ ಸೊಂಟದಿಂದ ಕೆಳಕ್ಕೆ ಮಾತ್ರ ಬಟ್ಟೆ ಧರಿಸುತ್ತಿದ್ದುದು, ಆಭರಣ ಪ್ರಿಯರಾಗಿದ್ದುದು ಅಂದಿನ ಶಿಲ್ಪಗಳಿಂದ ವ್ಯಕ್ತವಾಗುತ್ತದೆ. ಬೇಟೆ, ಕಂದುಕ ಕ್ರೀಡೆ ಇತ್ಯಾದಿ ಹವ್ಯಾಸಗಳ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿವೆ. *

ಈ ಕಾಲದಲ್ಲಿ ದೇವಾಲಯಗಳು, ಮಠಗಳು ಮತ್ತು ಅಗ್ರಹಾರಗಳು ವಿದ್ಯಾಭ್ಯಾಸದ ಕೇಂದ್ರಗಳಾಗಿದ್ದುವು. ಇಂಥ ಸಂಸ್ಥೆಗಳಲ್ಲಿ ಆಯಾ ಧರ್ಮಕ್ಕೆ ಸಂಬಂಧಿಸಿದ ವಿಶಿಷ್ಟ ವ್ಯಾಸಂಗಕ್ಕೆ ಅವಕಾಶವಿತ್ತು. ವೈದಿಕ ವಿದ್ಯಾಕೇಂದ್ರಗಳಲ್ಲಿ ವೇದಗಳು, ಉಪನಿಷತ್ತುಗಳು, ಪುರಾಣಗಳು, ಧರ್ಮಶಾಸ್ತ್ರಗಳು ಹಾಗೂ ವ್ಯಾಕರಣ, ತರ್ಕ, ವೈದ್ಯ ಮೊದಲಾದ ವಿಷಯಗಳಲ್ಲಿ ವ್ಯಾಸಂಗಕ್ಕೆ ಅವಕಾಶವಿದ್ದಿತ್ತು. ಬೌದ್ಧ, ಜೈನ ಹಾಗೂ ಹಿಂದು ವಿದ್ವಾಂಸರು ತಮ್ಮ ತಮ್ಮ ಧರ್ಮಗಳ ಪ್ರಚಾರದಲ್ಲಿ ತೊಡಗಿದ್ದರಿಂದ ಅವರು ಎಲ್ಲ ಧರ್ಮಗಳ ತತ್ತ್ವವನ್ನೂ ಅಭ್ಯಸಿಸುತ್ತಿದ್ದು ಆಗಾಗ ಪರಸ್ಪರ ವಾದಗಳೂ ನಡೆಯುತ್ತಿದ್ದವು. ಮುಂದುವರಿದ ವ್ಯಾಸಂಗಕ್ಕೆಂದೇ ಮೀಸಲಾದ ಬ್ರಹ್ಮಪುರಿಗಳೂ ಘಟಿಕಾಸ್ಥಾನಗಳೂ ಇದ್ದವು. ಒಂದನೆಯ ಶಿವಮಾರನ ಹಲ್ಲೆಗೆರೆ ಶಾಸನದಲ್ಲಿ ಉಲ್ಲೇಖಿಸಲಾಗಿರುವ ಘಟಿಕಾಸ್ಥಾನದಲ್ಲಿ ವ್ಯಾಸಂಗಕ್ಕೆ ಸಂಬಂಧಿಸಿದ ವಿವರಗಳು ದೊರೆಯುತ್ತವೆ. ಅಂಥ ಸ್ಥಳಗಳಲ್ಲಿ ವೇದಾರ್ಥ, ವಾಕ್ಯಾರ್ಥ, ಶಾಸ್ತ್ರಾರ್ಥಕ್ಕೆ ಸಂಬಂಧಿಸಿದ ವಿಶೇಷ ಜಿಜ್ಞಾಸೆಗಳೂ ಚರ್ಚೆಗಳೂ ನಡೆಯುತ್ತಿದ್ದವು. ವೈಷ್ಣವ ಕಾಳಾಮುಖ ಜೈನ ಹಾಗೂ ಬೌದ್ಧ ಪಂಥಗಳಿಗೆ ಸಂಬಂಧಿಸಿದ ವಿದ್ಯಾಕೇಂದ್ರಗಳು ಸ್ಥಾಪಿತವಾಗಿದ್ದು ಅವುಗಳ ಮೇಲ್ಮೆಗಾಗಿ ಗಂಗರಸರು ವಿಶೇಷ ಪ್ರೋತ್ಸಾಹ ನೀಡಿದರು. ತಲಕಾಡು, ಶ್ರವಣಬೆಳಗೊಳ, ಬಂಕಾಪುರ ಮತ್ತು ಇತರ ಅನೇಕ ಸ್ಥಳಗಳು ಜ್ಞಾನಕೇಂದ್ರಗಳಾಗಿದ್ದವು. ಗಂಗ ಅರಸರೇ ವಿದ್ಯಾಭಿಮಾನಿಗಳಾಗಿದ್ದು, ಆ ಕಾಲದಲ್ಲಿ ಅನೇಕ ಬ್ರಾಹ್ಮಣರಿಗೂ ವಿದ್ವಾಂಸರಿಗೂ ನಿರ್ಬಾಧಿತವಾಗಿ ಪಾಂಡಿತ್ಯವನ್ನು ಮುಂದುವರಿಸಲೋಸುಗ ಅಗ್ರಹಾರಗಳನ್ನು ನಿರ್ಮಿಸಿಕೊಡಲಾಯಿತು. ಹಲವಾರು ಸಂದರ್ಭಗಳಲ್ಲಿ ವಿದ್ವಾಂಸರಿಗೆ ಪ್ರೋತ್ಸಾಹ ನೀಡಲು ಗ್ರಾಮಗಳನ್ನು, ಭೂಮಿಯನ್ನು ಸರ್ವಮಾನ್ಯವಾಗಿ ನೀಡಲಾಗುತ್ತಿತ್ತು.

ಈ ಕಾಲದಲ್ಲಿ ಬೌದ್ಧ ಮತ್ತು ಜೈನಧರ್ಮಗಳು ಕನ್ನಡನಾಡಿನಲ್ಲಿ ಪ್ರಚಾರದಲ್ಲಿದ್ದವು. ವೇದ ಉಪನಿಷತ್ತುಗಳು ಧರ್ಮಶಾಸ್ತ್ರಗಳು ಮತ್ತು ವೇದವಾಙ್ಮಯಕ್ಕೆ ಸೇರಿದ ಇತರ ಕೃತಿಗಳು ಗಂಗರ ಆಳಿಕೆಯ ಪ್ರಾರಂಭದ ಕಾಲದಿಂದಲೂ ಶಾಸನಗಳಲ್ಲಿ ಉಲ್ಲೇಖಿತವಾಗಿವೆ. ಈ ಸಂತತಿಯ ರಾಜರು ಪ್ರಾರಂಭದಿಂದ 8ನೆಯ ಶತಮಾನದ ಉತ್ತರಾರ್ಧದವರೆಗೂ ಹಿಂದುಮತೀಯರಾಗಿದ್ದು ಶೈವ ಮತ್ತು ವೈಷ್ಣವಪಂಥಾವಲಂಬಿಗಳಾಗಿದ್ದರು.

ಜೈನಧರ್ಮವೂ ವೈದಿಕ ಧರ್ಮದಂತೆ ಗಂಗವಾಡಿಯಲ್ಲಿ ಹೆಚ್ಚು ಪ್ರಚಾರದಲ್ಲಿತ್ತು. ಎರಡನೆಯ ಶಿವಮಾರ ಈ ವಂಶದವರಲ್ಲಿ ಜೈನಪಂಥವನ್ನು ಸ್ವೀಕರಿಸಿದ ಪ್ರಪ್ರಥಮ ರಾಜ. ಆ ಕಾಲದಿಂದ ಈ ಧರ್ಮಕ್ಕೆ ಹೆಚ್ಚು ರಾಜಪ್ರೋತ್ಸಾಹ ದೊರಕಿದರೂ ರಾಜರ ಉದಾರ ಧಾರ್ಮಿಕ ನೀತಿಯಿಂದಾಗಿ ಈ ಹಿಂದೆಯೂ ಇದಕ್ಕೆ ಪುರಸ್ಕಾರವಿತ್ತು. ಶ್ರವಣಬೆಳಗೊಳ ಕನ್ನಡ ನಾಡಿನಲ್ಲಿ ಜೈನಧರ್ಮದ ಅತ್ಯಂತ ಪ್ರಸಿದ್ಧ ಕೇಂದ್ರವಾಗಿತ್ತು. ಶಿವಮಾರ ಶ್ರವಣಬೆಳಗೊಳ ಮತ್ತು ಇತರ ಕಡೆಗಳಲ್ಲಿ ಬಸದಿಗಳನ್ನು ಕಟ್ಟಿಸಿದ. ಜೈನ ಸಂನ್ಯಾಸಿ ಮತ್ತು ಸಂನ್ಯಾಸಿನಿಯರ ವಿವರಗಳನ್ನು ಒಳಗೊಂಡಿರುವ ಅನೇಕ ಶಾಸನಗಳು ಈ ಕಾಲದಲ್ಲಿ ಜೈನಧರ್ಮಕ್ಕಿದ್ದ ಹೆಚ್ಚಳದ ಸ್ಥಾನದ ಸೂಚಕವಾಗಿವೆ. ಕೆಲವೆಡೆಗಳಲ್ಲಿ ಗಂಗವಾಡಿ ಜೈನಧರ್ಮದ ಆಗರವೆಂಬ ಮಾತು ಸಹ ಬರುತ್ತದೆ. ಮೂರನೆಯ ಮಾರಸಿಂಹ ಜೈನವಿಧಿಯಾದ ಸಲ್ಲೇಖನವ್ರತದಿಂದ ಮರಣಹೊಂದಿದ. ಅವನ ಕಾಲದ ಶಾಸನಗಳಲ್ಲಿ ಪ್ರಪ್ರಥಮವಾಗಿ ಸಿಂಹನಂದಿ ಹಾಗೂ ಗಂಗರಾಜ್ಯ ಸ್ಥಾಪನೆಗೆ ಸಂಬಂಧಿಸಿದ ಐತಿಹ್ಯ ವರ್ಣಿತವಾಗಿದೆ. ಚಾವುಂಡರಾಯ ಕನ್ನಡನಾಡಿನ ಅಗ್ರಗಣ್ಯ

ಜೈನರಲ್ಲೊಬ್ಬನಾಗಿದ್ದು ಮಂತ್ರಿ ಮತ್ತು ದಂಡನಾಯಕನಾಗಿ ಕೊನೆಯ ಮೂರು ಜನ ಗಂಗ ಪ್ರಭುಗಳಿಗೆ ಸೇವೆ ಸಲ್ಲಿಸಿದ.

**ಲಲಿತಕಲೆ-ಸಾಹಿತ್ಯ :** ಸಂಗೀತ, ನೃತ್ಯ, ಚಿತ್ರಕಲೆ ಇತ್ಯಾದಿಗಳು ಈ ಕಾಲದಲ್ಲಿ ಗಂಗರಾಜ್ಯದಲ್ಲಿ ಪ್ರಚಲಿತವಾಗಿದ್ದ ಬಗ್ಗೆ ಶಾಸನದಲ್ಲಿ ಅಲ್ಪಸ್ವಲ್ಪ ಮಾಹಿತಿಗಳು ದೊರಕಿದರೂ ಹೆಚ್ಚಿನ ವಿಷಯಗಳು ತಿಳಿಯುವುದಿಲ್ಲ. ದೇವಾಲಯಗಳಲ್ಲಿ ದೇವದಾಸಿಯರಿದ್ದು ಸಂಗೀತ, ನೃತ್ಯ ಸೇವೆ ಮಾಡುತ್ತಿದ್ದರು. ರಾಜಾಸ್ಥಾನಗಳು ಈ ಕಲೆಗಳಿಗೆ ಪೋಷಕವಾಗಿದ್ದವಲ್ಲದೆ ರಾಜರೂ ಸ್ವತಃ ಈ ಹಲವು ಕಲೆಗಳಲ್ಲಿ ನಿಷ್ಣಾತರಾಗಿದ್ದರು. ಒಂದು ಶಾಸನದಲ್ಲಿ ಚಿತ್ರನಿರ್ಮಾಣದಲ್ಲಿ ನಿಪುಣನಾಗಿದ್ದವನೊಬ್ಬನ ಪ್ರಸ್ತಾಪ ಬರುತ್ತದೆ. ಅಲ್ಲಲ್ಲಿ ಕೊಳಲು, ಕಟುಮುಖ, ಸಮುದ್ರಘೋಷ, ತ್ರಿವಳಿ ಮೊದಲಾದ ವಾದ್ಯಗಳ ಪ್ರಸ್ತಾಪ ದೊರಕುತ್ತದೆ.

ಗಂಗರ ಆಳಿಕೆಯಲ್ಲಿ ಸಂಸ್ಕೃತ, ಪ್ರಾಕೃತ ಮತ್ತು ಕನ್ನಡ ಭಾಷೆಗಳಲ್ಲಿ ಗ್ರಂಥಗಳು ರಚನೆಯಾದವು. ಗಂಗಪ್ರಭುಗಳು ಜ್ಞಾನಪಕ್ಷಪಾತಿಗಳಾಗಿದ್ದುದಲ್ಲದೆ ಅವರಲ್ಲಿ ಅನೇಕರು ಸ್ವತಃ ವಿಶೇಷ ಪಾಂಡಿತ್ಯ ಹೊಂದಿದ್ದು ಗ್ರಂಥರಚನೆ ಮಾಡಿರುವರು. ಅನೇಕ ರಾಜರು ಕೌಟಿಲ್ಯನ ಅರ್ಥಶಾಸ್ತ್ರ, ಮನುಸ್ಮೃತಿ, ಪುರಾಣಗಳು, ಸಂಗೀತ ಶಾಸ್ತ್ರ ಮತ್ತು ವೈದ್ಯಶಾಸ್ತ್ರಗಳಲ್ಲಿ ವಿಶೇಷ ಪಾಂಡಿತ್ಯ ಹೊಂದಿದ್ದುದಾಗಿ ತಿಳಿದುಬರುತ್ತದೆ. ಇಮ್ಮಡಿ ಮಾಧವ ದತ್ತಕ ಸೂತ್ರಕ್ಕೆ (ಪ್ರಾಯಶಃ ಕಾಮಶಾಸ್ತ್ರ ಗ್ರಂಥ) ವೃತ್ತಿಯನ್ನು ಬರೆದವನೆಂದು ಶಾಸನೋಲ್ಲೇಖವಿದೆ. ದುರ್ವಿನೀತ ಜ್ಞಾನದ ಅನೇಕ ಶಾಖೆಗಳಲ್ಲಿ ಪಾಂಡಿತ್ಯ ಪಡೆದಿದ್ದು ಗುಣಾಢ್ಯನ ವಡ್ಡಕಥೆಯನ್ನು ಸಂಸ್ಕೃತಕ್ಕೆ ತರ್ಜುಮೆ ಮಾಡಿದುದಲ್ಲದೆ ಭಾರವಿಯ ಕಿರಾತಾರ್ಜುನೀಯದ 15 ಸರ್ಗಗಳಿಗೆ ಅಥವಾ 15ನೆಯ ಸರ್ಗಕ್ಕೆ ಟೀಕೆಯನ್ನು ರಚಿಸಿದ. ಶಬ್ದಾವತಾರವನ್ನು ಸಹ ದುರ್ವಿನೀತನೇ ಬರೆದನೆಂಬುದಾಗಿಯೂ ತಿಳಿದುಬರುತ್ತದೆ. ಮಿಗಿಲಾಗಿ ದುರ್ವಿನೀತ ಕನ್ನಡದ ಅತಿಪ್ರಾಚೀನ ಗದ್ಯರಚನೆಕಾರರಲ್ಲಿ ಒಬ್ಬನೆಂದು ಕವಿರಾಜಮಾರ್ಗದಿಂದ ತಿಳಿದುಬರುತ್ತದೆ. ಪ್ರಸಿದ್ಧ ವಿದ್ವಾಂಸರೂ ಕವಿಗಳೂ ಆದ ಪೂಜ್ಯಪಾದ ಮತ್ತು ಭಾರವಿ ದುರ್ವಿನೀತನ ಆಸ್ಥಾನದಲ್ಲಿ ಮನ್ನಣೆ ಪಡೆದಿದ್ದರು. ಶ್ರೀಪುರುಷ ಗಜಶಾಸ್ತ್ರವೆಂಬ ಗ್ರಂಥದ ಕರ್ತೃ. ಶಿವಮಾರ ಗಜಾಷ್ಟಕವೆಂಬ ಕೃತಿಯನ್ನು ರಚಿಸಿದ್ದು, ಇದು ಒನಕೆವಾಡುಗಳಂತೆ ಜನಪ್ರಿಯವಾಗಿತ್ತಂತೆ. ಒಂದನೆಯ ಗುಣವರ್ಮ ಎಱೆಯಪ್ಪನ ಆಸ್ಥಾನ ಕವಿಯಾಗಿದ್ದನೆಂದು ತಿಳಿದುಬರುತ್ತದೆ. ಮೂರನೆಯ ಮಾರಸಿಂಹ ವ್ಯಾಕರಣ, ತರ್ಕ, ತತ್ತ್ವಶಾಸ್ತ್ರ ಮೊದಲಾದವುಗಳಲ್ಲಿ ವಿಶೇಷ ಪರಿಣತಿ ಹೊಂದಿದ್ದ.

ಅನೇಕ ಪ್ರಸಿದ್ಧ ಜೈನ ಆಚಾರ್ಯರೂ ವಿದ್ವಾಂಸರೂ ಆ ಕಾಲದಲ್ಲಿದ್ದು ಉದ್ಗ್ರಂಥಗಳನ್ನು ರಚಿಸಿದರು. ವಿಜಯಕೀರ್ತಿ, ಪೂಜ್ಯಪಾದ, ಅಕಲಂಕ, ಗುಣನಂದಿ, ಅಜಿತಸೇನಾಚಾರ್ಯ, ಚಾವುಂಡರಾಯ ಮೊದಲಾದ ಜೈನ ಆಚಾರ್ಯರು ಮತ್ತು ಕವಿಗಳು ಗಂಗರಾಜರ ಸಮಕಾಲೀನರಾಗಿದ್ದರೆಂದೂ ಹಾಗೂ ಅವರಿಂದ ಪುರಸ್ಕರಿಸಲ್ಪಟ್ಟವರೆಂದೂ ಶಾಸನಗಳಿಂದ ಹಾಗೂ ಅವರು ರಚಿಸಿದ ಕೃತಿಗಳಿಂದ ತಿಳಿದುಬರುತ್ತದೆ. ಚಾವುಂಡರಾಯ ಕನ್ನಡ ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳಲ್ಲಿಯೂ ವ್ಯಾಕರಣ ತರ್ಕ ಗಣಿತಶಾಸ್ತ್ರಗಳಲ್ಲಿಯೂ ವಿಶೇಷ ಪಾಂಡಿತ್ಯ ಹೊಂದಿದ್ದ. ಚಾವುಂಡರಾಯ ಪುರಾಣ ಇವನ ಕೃತಿ. ಛಂದೋಂಬುಧಿಯ ಕರ್ತೃ 1ನೆಯ ನಾಗವರ್ಮನೂ ಈ ಕಾಲದವನು. ಗಂಗರ ಉತ್ತರಾರ್ಧಕಾಲ ಕನ್ನಡ ಸಾಹಿತ್ಯದ ಪ್ರಾರಂಭದಿಸೆಯ ಉತ್ಕೃಷ್ಟ ಕಾಲವಾಗಿತ್ತು. (ಜಿ.ಆರ್.ಆರ್.)

**ವಾಸ್ತುಶಿಲ್ಪ :** ತಲಕಾಡಿನ ಗಂಗರ ಕಾಲದ ವಾಸ್ತುಶಿಲ್ಪದ ಮಾದರಿಗಳು ಹೆಚ್ಚು ಉಳಿದುಬಂದಿಲ್ಲ. ಕೆಲವು ಸಂಪೂರ್ಣವಾಗಿ ನಾಶವಾಗಿದ್ದರೆ ಹಲವು ಮುಂದಿನ ತಲೆಮಾರುಗಳಲ್ಲಿ ಬಹುಮಟ್ಟಿಗೆ ಬದಲಾವಣೆ ಹೊಂದಿವೆ. ಗಂಗರು ಕಟ್ಟಿಸಿದ ಬಸದಿಗಳನ್ನೂ ದೇವಾಲಯಗಳನ್ನೂ ಶಾಸನಗಳೇನೋ ತಿಳಿಸುತ್ತವೆ. ಹರಿವರ್ಮನ ಕಾಲದಲ್ಲಿದ್ದ ಮೂಲಸ್ಥಾನೇಶ್ವರ, ಅವಿನೀತನ ಹೆಸರಿನಲ್ಲಿ ಕಟ್ಟಿಸಿದ್ದಿರಬಹುದಾದ ವಿನೀತೇಶ್ವರ, ಮಾಧವ ಅವಿನೀತರು ದತ್ತಿಬಿಟ್ಟ ಅರ್ಹತಾಯತನ, ಶ್ರೀಪುರುಷನ ಕಾಲದಲ್ಲಿ ಕಂಚಬ್ಬೆ ಕಟ್ಟಿಸಿದ ಜಿನಬಸದಿ, ಇವಲ್ಲದೆ ನೀತಿಮಾರ್ಗೇಶ್ವರ, ಜಗಧರ ನಗರೇಶ್ವರ, ಶಿವಮಾರೇಶ್ವರ, ಶಿವಮಾರನ ಬಸದಿ ಮುಂತಾದ ಹೆಸರುಗಳು ಅವರ ಕಾಲದ ಶಾಸನಗಳಲ್ಲಿವೆ. ಈಗ ಉಳಿದು ಬಂದಿರುವ ಕಟ್ಟಡಗಳಲ್ಲಿ ಕೆಲವು ಅವುಗಳ ವಾಸ್ತು ಮತ್ತು ಶಿಲ್ಪಶೈಲಿಯಿಂದ ಗಂಗರ ಕಾಲಕ್ಕೆ ಸೇರಿದವೆಂದು ನಿರ್ದಿಷ್ಟವಾಗಿ ಹೇಳಬಹುದಾದರೂ ಅವು ಯಾರ ಕಾಲದಲ್ಲಿ ನಿರ್ಮಾಣವಾದುವೆಂದು ತಿಳಿಸಲು ಶಾಸನಾಧಾರಗಳಿಲ್ಲ. ಆದ್ದರಿಂದ ಗಂಗರ ವಾಸ್ತುಶಿಲ್ಪದ ಹುಟ್ಟು ಬೆಳವಣಿಗೆಗಳನ್ನು ಸ್ಪಷ್ಟವಾಗಿ ಚಿತ್ರಿಸಲು ಆಧಾರಗಳು ಸಾಲವು; ಈಗ ಅಳಿದುಳಿದಿರುವ ಕೆಲವು ಅವಶೇಷಗಳಿಂದ ಅವುಗಳ ಸ್ಥೂಲರೂಪರೇಖೆಗಳನ್ನು ಗುರುತಿಸಬಹುದು.

ಗಂಗರ ಮೊದಲ ಕಟ್ಟಡಗಳು ಇಟ್ಟಿಗೆ, ಗಾರೆ, ಮರಗಳಿಂದ ನಿರ್ಮಿತವಾಗಿರಬೇಕು. ಶಿವಮೊಗ್ಗ ಬಳಿಯ ಮಂಡಲಿಯಲ್ಲಿ ದಡಿಗ ಮಾಧವರು ಕಟ್ಟಿಸಿದ್ದ ಬಸದಿಯನ್ನು ಮುಂದೆ ಅವರ ವಂಶದವರು ಮರವೆಸನಾಗಿ ಮಾಡಿ ಪಟ್ಟದ ಬಸದಿಯೆಂದು ಹೆಸರಿಟ್ಟಿದ್ದುದಾಗಿ ಅಲ್ಲಿಯ ಶಾಸನ ತಿಳಿಸುತ್ತದೆ. ಕೋಲಾರ ಜಿಲ್ಲೆಯ ನೊಣಮಂಗಲದಲ್ಲಿ ಪಾಳುದಿಬ್ಬವೊಂದನ್ನಗೆಯುತ್ತಿದ್ದಾಗ ಬೆಳಕಿಗೆ ಬಂದ ಬಸದಿಯೊಂದರಲ್ಲಿ ದೊರೆತ ಎರಡು ತಾಮ್ರಶಾಸನಗಳು ಗಂಗರಾಜ ಮಾಧವ ಮತ್ತು ಅವನ ಮಗ ಅವಿನೀತ ಅರ್ಹತಾಯತನಕ್ಕೆ ದತ್ತಿ ಬಿಟ್ಟ ವಿಷಯವನ್ನು ತಿಳಿಸುತ್ತವೆ. ಅಗಲವಾದ, ಆದರೆ ತೆಳುವಾದ ಇಟ್ಟಿಗೆಗಳಿಂದ ನಿರ್ಮಿತವಾಗಿದ್ದ ಈ ಬಸದಿಯನ್ನು ಊರಿನವರು ಅಗೆದು ಹಾಕಿರುವುದರಿಂದ ಕಟ್ಟಡದ ವಿನ್ಯಾಸ ಹೇಗಿತ್ತೆಂಬುದು ತಿಳಿಯದು. ಗಂಗರ ಕಾಲದ ಇಟ್ಟಿಗೆಯ ಕಟ್ಟಡಗಳನ್ನು ಇವರ ಮುಖ್ಯಪಟ್ಟಣಗಳಲ್ಲೊಂದಾಗಿದ್ದ ಮಣ್ಣೆಯಲ್ಲಿ (ನೋಡಿ) ನೋಡಬಹುದು. ಇಲ್ಲಿ ಕಪಿಲೇಶ್ವರ, ಸೋಮೇಶ್ವರ ದೇವಾಲಯಗಳ ಜೊತೆಗೆ ಇರುವ, ಈಗ ಸೂಳೆಯರ ಗುಡಿ ಎಂದು ಕರೆಯುವ ದೇವಾಲಯ ಮಾರಸಿಂಹನ ದಂಡನಾಯಕ ಶ್ರೀವಿಜಯ ಕಟ್ಟಿಸಿದ 'ತುಂಗಂ ನಿರ್ಮಳಂ ಸ್ವಮಹಸ್ಸಮಂ' ಆದ ಜಿನಾಲಯವಾಗಿರಬೇಕು. ಈಗ ಈ ಎಲ್ಲ ದೇವಾಲಯಗಳೂ ಶಿಥಿಲವಾಗಿವೆ.

ಇವರ ಇಟ್ಟಿಗೆಯ ಕಟ್ಟಡಗಳಲ್ಲಿ ಪ್ರಾಚೀನವೂ ಶ್ರೇಷ್ಠವೂ ಆದದ್ದು ಚಾಮರಾಜನಗರ ತಾಲ್ಲೂಕಿನ ನರಸಮಂಗಲದ (ನೋಡಿ) ರಾಮೇಶ್ವರ ದೇವಾಲಯ. ಇದರ ಕಾಲ ನಿಖರವಾಗಿ ತಿಳಿಯದಾದರೂ ಕಟ್ಟಡದ ರೀತಿ, ಮೂರ್ತಿಗಳ ಕಂಡರಣೆ, ದೇವಾಲಯದ ಕಂಬಗಳು, ಚಾವಣಿ ಮುಂತಾದವನ್ನು ಪರಿಶೀಲಿಸಿದಾಗ ಇದು ಗಂಗರ ಕಾಲದಲ್ಲಿಯೆ ತಕ್ಕಷ್ಟು ಪ್ರಾಚೀನವಾದ್ದೆಂಬುದು ತಿಳಿಯುತ್ತದೆ. ತಳಹದಿ ಮಾತ್ರ ಕಗ್ಗಲ್ಲಿನಲ್ಲಿದ್ದು ಮೇಲಿನ ಕಟ್ಟಡ ಪೂರ್ತಿಯಾಗಿ ಇಟ್ಟಿಗೆ ಗಾರೆಗಳಿಂದ ನಿರ್ಮಿತವಾಗಿದ್ದರೂ ಇದರ ಗರ್ಭಗೃಹ ಮತ್ತು ಅದರ ಮೇಲಿನ ಗೋಪುರ 1,200 ವರ್ಷಗಳಿಗೂ ಹೆಚ್ಚು ಕಾಲದಿಂದ ನಿಂತಿರುವುದಷ್ಟೆ ಅಲ್ಲ, ಅದರ ಮೇಲೆ ಗಚ್ಚಿನಲ್ಲಿ ನಿರ್ಮಿಸಿರುವ ಮೂರ್ತಿಗಳು, ನವುರಾದ ಅಲಂಕರಣ ಕೂಡ ಅಚ್ಚಳಿಯದಿರುವುದು ಸೋಜಿಗದ ಸಂಗತಿ. ಹೊರಗೋಡೆಗಳ ಮೇಲೆ ಜೋಡಿ ಅರೆಗಂಬಗಳು, ಮೂರು ಅಂತಸ್ತುಗಳಲ್ಲಿ ಮೇಲೆದ್ದಿರುವ ಗೋಪುರದಲ್ಲಿ ಪಂಜರ, ಕೂಡುಗಳ ನಡುವೆ ಹಲವು ವಿಧವಾದ ಅಪರೂಪ ಭಂಗಿಗಳಲ್ಲಿರುವ ಗಚ್ಚಿನ ಮೂರ್ತಿಗಳಿವೆ. ಇದರ ಒಟ್ಟು ರಚನೆ ಮಹಾಬಲಿಪುರದ ಧರ್ಮರಾಜರಥದ ಮಾದರಿಯಲ್ಲಿದೆ. ಗಂಟೆ ಮತ್ತು ಕಲಶದಾಕಾರದಲ್ಲಿರುವ ದಪ್ಪ ಕಂಬಗಳಿರುವ ನವರಂಗದ ಚಪ್ಪಟೆಯ ಒಳಚಾವಣಿಯಲ್ಲಿ ದೊಡ್ಡದಾದ ಮಧ್ಯದ ಅಂಕಣದಲ್ಲಿ ಸುತ್ತಲೂ ಅಷ್ಟದಿಕ್ಪಾಲಕರೂ ನಡುವೆ ನಟರಾಜನ ಮೂರ್ತಿಯೂ ಇವೆ. ಒಳಗೋಡೆಯ ಮೇಲ್ತುದಿಯ ಸುತ್ತಲೂ ಹಲವು ಭಂಗಿಗಳಲ್ಲಿರುವ ಕುಬ್ಜರ ಮೂರ್ತಿಗಳು, ಪಂಚತಂತ್ರದ ಕಥೆಗಳು, ರಾಮಾಯಣದ ಕಥೆಗಳು ಇವನ್ನು ಸುಂದರವಾಗಿ ಕಡೆದಿದೆ. ದೇವಾಲಯದ ಒಳಗೂ ಸುತ್ತಲೂ ಚಂಡಿಕೇಶ್ವರ, ಸಪ್ತಮಾತೃಕೆಯರು ಪಂಚಾಯತನ ಮೂರ್ತಿಗಳು ಮೊದಲಾದ ಶಿಲಾಮೂರ್ತಿಗಳಿವೆ.

ಚೋಳರು ಗಂಗವಾಡಿಯನ್ನಾಕ್ರಮಿಸಿಕೊಂಡ ಮೇಲೆ ಅಲ್ಲಿದ್ದ ಹಲವು ಇಟ್ಟಿಗೆಯ ಕಟ್ಟಡಗಳನ್ನು ಬದಲಾಯಿಸಿ ಕಲ್ಲಿನ ದೇವಾಲಯಗಳನ್ನು ನಿರ್ಮಿಸಿದರು. ಕೋಲಾರದ ಪಿಡಾರಿಯಾರ್ ಅಥವಾ ಕೋಲಾರಮ್ಮನ ದೇವಾಲಯ ಮೊದಲು ಇಟ್ಟಿಗೆಯದಾಗಿತ್ತು. ರಾಜೇಂದ್ರಚೋಳನ ಅಪ್ಪಣೆಯ ಮೇಲೆ ಉತ್ತಮಚೋಳ ಬ್ರಹ್ಮಮಾರಾಯ ಆ ಕಟ್ಟಡವನ್ನು ತೆಗೆದು ಕಲ್ಲಿನ ದೇವಾಲಯವನ್ನು ನಿರ್ಮಿಸಿದುದಾಗಿ ಶಾಸನವೊಂದು ತಿಳಿಸುತ್ತದೆ.

ಹೆಗ್ಗಡದೇವನಕೋಟೆ ತಾಲ್ಲೂಕು ಕಿತ್ತೂರಿನ (ನೋಡಿ) ರಾಮೇಶ್ವರ ದೇವಾಲಯ, ತಿಪಟೂರು ತಾಲ್ಲೂಕು ಅರಳಗುಪ್ಪೆಯ (ನೋಡಿ) ಕಲ್ಲೇಶ್ವರ ದೇವಾಲಯ, ಕಡೂರು ತಾಲ್ಲೂಕು ಗರ್ಜಿಯ ಈಶ್ವರ ದೇವಾಲಯ, ತಿಪಟೂರು ತಾಲ್ಲೂಕು ನೊಣವಿನಕೆರೆಯ (ನೋಡಿ) ಗಂಗೇಶ್ವರ, ನೊಳಬೇಶ್ವರ ದೇವಾಲಯಗಳು ಮೊದಲು ಇಟ್ಟಿಗೆಯ ಗೋಡೆಗಳನ್ನು ಹೊಂದಿದ್ದಿರಬೇಕು. ಆ ಗೋಡೆಗಳು ಶಿಥಿಲವಾದಮೇಲೆ ಈಚೆಗೆ ಬೇರೆ ಗೋಡೆಗಳನ್ನು ನಿರ್ಮಿಸಿದ್ದು ಹೊರನೋಟಕ್ಕೆ ತೀರ ಸಾಮಾನ್ಯವಾದ ಕಟ್ಟಡಗಳಂತೆ ಕಾಣುತ್ತವೆ. ಆದರೆ ಅವುಗಳ ಒಳಹೊಕ್ಕಾಗ ಗಂಗರ ವಾಸ್ತುರೀತಿಯ ವೈಶಿಷ್ಟ್ಯ ಸ್ಪಷ್ಟವಾಗುತ್ತದೆ. ಸಣ್ಣ ಪ್ರಮಾಣದ ನವರಂಗ, ತೆರೆದ ಸುಕನಾಸಿ, ಚಿಕ್ಕ ಗರ್ಭಗೃಹ, ಚೌಕನಾದ ಬುಡದ ಮೇಲೆ ಗುಂಡಾಗಿ ಮೇಲೆದ್ದ ಅಷ್ಟು ಎತ್ತರವಲ್ಲದ ತೆಳುಗಂಬಗಳು, ಕಂಬಗಳ ಮೇಲುಬದಿಯಲ್ಲಿ ಕಲಶ ಅಥವಾ ಹೂಜಿಯ ಆಕೃತಿ, ನವರಂಗದ ಮಧ್ಯೆ ದೊಡ್ಡ ಅಂಕಣ ಮತ್ತು ಆ ಅಂಕಣದ ಚಾವಣಿಯಲ್ಲಿ ಮಾತ್ರ ಶಿಲ್ಪಕೃತಿ ಸಾಮಾನ್ಯವಾಗಿ ಅಷ್ಟದಿಕ್ಪಾಲಕರು ಮತ್ತು ಅವರ ನಡುವೆ ಶಿವದೇವಾಲಯವಾದರೆ ನಟರಾಜ, ಜಿನಬಸದಿಯಾದರೆ ಜಿನಮೂರ್ತಿ ಇವು ಸಾಮಾನ್ಯ ಲಕ್ಷಣಗಳು. ಕಿತ್ತೂರಿನಲ್ಲಿ ಪಲ್ಲವರೀತಿಯನ್ನನುಕರಿಸುವ ಸಿಂಹಸ್ತಂಭಗಳು ಕೆಲವಿದ್ದ ಕುರುಹುಗಳಿವೆ. ಗರ್ಜಿಯಲ್ಲಿ ಕಂಬಗಳು ಅಷ್ಟಕೋನಾಕೃತಿಯಲ್ಲಿವೆ. ಚೌಕನಾದ ಬುಡದ ನಾಲ್ಕು ಮುಖಗಳ ಮೇಲೆ ತೆಳುವಾಗಿ ಬಿಡಿಸಿದ ಮೂರ್ತಿಶಿಲ್ಪಗಳು, ಆಕರ್ಷಕವಾಗಿವೆ. ಅರಳಗುಪ್ಪೆಯ ದೇವಾಲಯದ ಒಳಚಾವಣಿಯನ್ನಂತೂ ರೂವಾರಿ ಅತ್ಯಂತ ಸುಂದರವಾಗಿ ಬಿಡಿಸಿದ್ದಾನೆ.



ಶಾಂತಿನಾಥ ಬಸದಿ, ಚಂದ್ರಗಿರಿ, ಶ್ರವಣಬೆಳಗೊಳ

ಗಂಗರ ಕಾಲದಲ್ಲಿ ಗವಿಗಳನ್ನು ಕೊರೆಸಿ ದೇವಾಲಯಗಳನ್ನು ಸ್ಥಾಪಿಸಿದ್ದಕ್ಕೆ ದಾಖಲೆಗಳಿಲ್ಲ. ಮೇಲುಕೋಟೆಯಲ್ಲಿ ಕಗ್ಗಲ್ಲಿನ ಮೊರಡಿಯಲ್ಲಿ ಅರ್ಧ ಮಾತ್ರ ಕೊರೆದಿರುವ ಗವಿ ಇವರ ಕಾಲಕ್ಕೆ ಸೇರಿರಬಹುದಾದರೂ ಗವಿ ಪೂರ್ತಿಯಾಗಿಲ್ಲದಿರುವುದರಿಂದಲೂ ಮೂರ್ತಿಶಿಲ್ಪ ಇಲ್ಲದಿರುವುದರಿಂದಲೂ ಇದನ್ನು ಖಚಿತವಾಗಿ ಹೇಳಲುಬಾರದು. ಆದರೆ ಸ್ವಾಭಾವಿಕ ಗವಿಗಳಲ್ಲಿ ಬಂಡೆಗಳ ಮೇಲೆ ಮೂರ್ತಿಗಳನ್ನು ಬಿಡಿಸಿ ಬಸದಿಗಳನ್ನು ನಿರ್ಮಿಸಿದ ಉದಾಹರಣೆಗಳಿವೆ. ನಂದಿಯ ಬಳಿಯ ಗೋಪಿನಾಥ ಗುಡ್ಡದಲ್ಲಿರುವ ಸ್ವಾಭಾವಿಕ ಗವಿಯ ಮೇಲಣ ಬಂಡೆ ಶಾಸನ 8ನೆಯ ಶತಮಾನಕ್ಕೆ ಸೇರಿದ್ದು. ಶ್ರೀರಾಮ ಅಲ್ಲಿ ಚೈತ್ಯಭವನವನ್ನು ನಿರ್ಮಿಸಿದಂತೆಯೂ ಅನಂತರ ಕುಂತಿ ಅದನ್ನು ಪುನರ್ನವೀಕರಿಸಿದಂತೆಯೂ ಜಿನೇಂದ್ರ ಚೈತ್ಯಸನ್ನಿಧಿಯಿಂದ ಆ ಪರ್ವತ ಪುನೀತವಾದುದಾಗಿಯೂ ಆ ಶಾಸನದಲ್ಲಿ ತಿಳಿಸಿರುವುದರಿಂದ ಗಂಗರ ಕಾಲದಲ್ಲಿ ಅದು ಚೈತ್ಯಾಲಯವಾಗಿದ್ದಿರಬೇಕು. ಇದೇ ರೀತಿ ಚಿತ್ತೂರು ತಾಲ್ಲೂಕಿನ ವಳ್ಳಿಮಲೆಯ ಸ್ವಾಭಾವಿಕ ಗುಹೆಯಲ್ಲಿ ಒಂದನೆಯ ರಾಚಮಲ್ಲ ಬಸದಿಯನ್ನು ಮಾಡಿಸಿದನೆಂದು ಅಲ್ಲಿಯ ಶಾಸನ ತಿಳಿಸುತ್ತದೆ. ಅಲ್ಲಿ ಬಂಡೆಯ ಮೇಲೆ ಕೆಲವು ಜಿನಬಿಂಬಗಳನ್ನು ಬಿಡಿಸಿದೆ. ಶ್ರವಣಬೆಳಗೊಳದ ದೊಡ್ಡ ಬೆಟ್ಟದ ಮೇಲೆ ಬಂಡೆಯನ್ನು ಕೊರೆದು ಅಖಂಡ ದ್ವಾರವೊಂದನ್ನು ಚಾವುಂಡರಾಯ ಮಾಡಿಸಿದ್ದಾನೆ.

ಇಟ್ಟಿಗೆ ಕಟ್ಟಡಗಳ ಜೊತೆಗೆ ಮೊದಲು ಕೆಲವು ಸರಳವಾದ ಕಲ್ಲಿನ ಕಟ್ಟಡಗಳನ್ನೂ ಗಂಗರು ಕಟ್ಟಿಸಿದ್ದಾರೆ. ಅಗಲವಾದ ದೊಡ್ಡ ದೊಡ್ಡ ತೆಳು ಚಪ್ಪಡಿಗಳನ್ನೇ ಗೋಡೆಗೂ ಚಾವಣಿಗೂ ಉಪಯೋಗಿಸಿ ಕಟ್ಟಿರುವ ಈ ದೇವಾಲಯಗಳು ಶಿಲ್ಪ ದೃಷ್ಟಿಯಿಂದ ತೀರ ಸಾಮಾನ್ಯವಾದ ಕಟ್ಟಡಗಳು. ನೆಲಮಂಗಲ ತಾಲ್ಲೂಕಿನ ತೋಟಗೆರೆಯಲ್ಲಿರುವ ಕೇವಲ 5' ಚೌಕ, 5' ಎತ್ತರವಿರುವ ಒಂದೇ ಅಂಕಣದ ಅರ್ಜುನರಾಯನ ಗುಡಿ ಈ ರೀತಿಯಲ್ಲಿದೆ. ಇದು ಶ್ರೀಪುರುಷನ ಕಾಲಕ್ಕಿಂತ ಹಿಂದಿನದ್ದೆಂದು ತೋರುತ್ತದೆ. ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನ ಸಂಪಿಗೆಪುರದಲ್ಲಿರುವ ಶಿವಾಲಯ ಇದೇ ಮಾದರಿಯಲ್ಲಿದೆ. ದೇವಸ್ಥಾನಕ್ಕೆ ಗರ್ಭಗುಡಿ ಸುಕನಾಸಿ ನವರಂಗಗಳಿವೆ. ಇವುಗಳ ಗೋಡೆ ಚಾವಣಿಗಳೆಲ್ಲ ತೆಳುಹಾಸುಗಲ್ಲುಗಳಿಂದ ನಿರ್ಮಿತವಾಗಿವೆ. ಈ ದೇವಾಲಯಗಳಲ್ಲಿರುವ ಪಂಚಾಯತನ ಮೂರ್ತಿಗಳು ಸುಂದರವಾದ ಗಂಭೀರ ಮುಖಮುದ್ರೆಯುಳ್ಳವು. ಇವುಗಳಿಗೆ ಸೇರಿದಂತೆ ಗಂಗರ ಶಾಸನಗಳು ನಿಂತಿವೆ.

ಗಂಗರಿಗೇ ವಿಶಿಷ್ಟವಾದ ವಾಸ್ತುಶೈಲಿ ಇಲ್ಲದಿದ್ದರೂ ಪಲ್ಲವರ ಶೈಲಿಯಿಂದ ಸ್ಫೂರ್ತಿಗೊಂಡು ಮುಂದೆ ಹಲವು ಸುಂದರವಾದ ದೇವಾಲಯಗಳನ್ನೂ ಬಸದಿಗಳನ್ನೂ ಕಲ್ಲಿನಲ್ಲಿ ಕಟ್ಟಿಸಿರುವುದು ಕಂಡುಬರುತ್ತದೆ. ಈ ಗುಂಪಿಗೆ ಸೇರಿದ ಕಟ್ಟಡಗಳಲ್ಲಿ ದೇವನಹಳ್ಳಿ ತಾಲ್ಲೂಕಿನ ಗಂಗಾವಾರದಲ್ಲಿರುವ ತಬ್ಲೇಶ್ವರ ಅಥವಾ ಸೋಮೇಶ್ವರ ದೇವಾಲಯ ಪ್ರಾಚೀನವಾದ್ದೆಂದು ಹೇಳಬಹುದು. ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳಿರುವ ಈ ದೇವಾಲಯ ಸರಳವಾದ್ದು. ಗರ್ಭಗುಡಿಯ ಮೇಲೆ ಚಿಕ್ಕದಾಗಿ ಒಂದೇ ಅಂತಸ್ತುಳ್ಳ ಗೋಪುರ, ಚೌಕಾಕೃತಿಯ ತಳವಿನ್ಯಾಸ, ಹೊರಗೋಡೆಯಲ್ಲಿ ದೂರದೂರದಲ್ಲೊಂದೊಂದು ಅರೆಗಂಬ, ಬುಡದಲ್ಲಿ ಸರಳವಾದ ದಿಂಡುಗಲ್ಲು, ಮೇಲೆ ಕಿರಿದಾದ ಲೋವೆ, ಒಳಗೆ ಕಿರಿದಾದ ಕಂಬಗಳು, ಇವುಗಳೊಂದಿಗೆ ಪ್ರಾಕಾರದ ಅಂಕಣವೊಂದರಲ್ಲಿ ನಿಂತಿರುವ ಪಲ್ಲವ ರೀತಿಯ ಸಿಂಹಸ್ತಂಭ -ಇವು ಅದರ ಪ್ರಾಚೀನತೆಯನ್ನು ಸೂಚಿಸುತ್ತವೆ. ಮಳೂರು ಪಟ್ಟಣದಲ್ಲಿರುವ ನಾರಾಯಣಸ್ವಾಮಿ ದೇವಾಲಯ, ಶ್ರವಣಬೆಳಗೊಳದ ಚಂದ್ರಗುಪ್ತಬಸದಿ -ಇವುಗಳ ಮೇಲೂ ಒಂದೇ ಅಂತಸ್ತಿನ ಗೋಪುರಗಳಿದ್ದರೂ ಗ್ರೀವ ಆಮಲಕಗಳ ಬೆಳೆವಣಿಗೆ ಸ್ಪಷ್ಟವಾಗಿದೆ. ಉಳಿದಂತೆ ಕಟ್ಟಡಗಳು ಸರಳವಾದವು. ತಿರುಮಕೂಡಲು ನರಸೀಪುರ ತಾಲ್ಲೂಕಿನ ಬನ್ನೂರಿನ ಹನುಮಂತೇಶ್ವರ ದೇವಾಲಯದ ಮೂಲ ಗುಡಿ, ಮೈಸೂರು ತಾಲ್ಲೂಕಿನ ವರುಣದ ಬೂತೇಶ್ವರ ದೇವಾಲಯ -ಇವು ತಗ್ಗಾದ ಸರಳವಾದ ದೇವಾಲಯಗಳು. ವರುಣದ ದೇವಾಲಯದಲ್ಲಿ ಗೋಡೆಯ ಮೇಲೆ ಲೋವೆಯ ತಳಭಾಗದಲ್ಲಿ ಅತಿ ತೆಳುವಾಗಿ ಬಿಡಿಸಿರುವ ರಾಮಾಯಣದ ಚಿತ್ರಗಳು ಇರುವುದೊಂದು ವಿಶೇಷ.

ನಂದಿಯ (ನೋಡಿ) ಭೋಗನಂದೀಶ್ವರ ದೇವಾಲಯದ ಮೂಲಗುಡಿ, ಬೆಂಗಳೂರು ಬಳಿಯ ಬೇಗೂರಿನ ನಾಗೇಶ್ವರ ದೇವಾಲಯ, ನಾಗಮಂಗಲ ತಾಲ್ಲೂಕಿನ ಕಂಬದಹಳ್ಳಿಯ ಪಂಚಕೂಟ ಬಸದಿಯಲ್ಲಿನ ಆದೀಶ್ವರ ಬಸದಿ ಮತ್ತು ಶ್ರವಣಬೆಳಗೊಳದ ಚಾವುಂಡರಾಯ ಬಸದಿ ಇವುಗಳಲ್ಲಿ ಗಂಗರ ಕಾಲದ ವಾಸ್ತುಶಿಲ್ಪದ ಪೂರ್ಣವಿಕಾಸವನ್ನು ನೋಡಬಹುದು. ಬಹುಶಃ ಗಂಗವಂಶದ ಜಯತೇಜನ ಕಾಲದಲ್ಲಿ ರತ್ನಾವಳಿ ಕಟ್ಟಿಸಿದ ಭೋಗನಂದಿಯ ಮೂಲದೇವಾಲಯ ಚೌಕವಿನ್ಯಾಸವುಳ್ಳದ್ದಾಗಿತ್ತು. ಇದರಲ್ಲಿ ಗರ್ಭಗೃಹ, ಸುಕನಾಸಿ, ನವರಂಗಗಳು ಮಾತ್ರ ಇದ್ದುವು.

ಹೊರಗೋಡೆಯ ಬುಡದ ದಿಂಡುಗಳ ಮೇಲೆ ಮಕರ, ಆನೆ, ಸಿಂಹ ಮತ್ತು ಕುಬ್ಜರ ಮೂರ್ತಿಗಳು, ಗೋಡೆಯ ಮೇಲೆ ಅರೆಗಂಬಗಳು, ನಡುವೆ ಹೆಚ್ಚು ಅಲಂಕೃತವಾದ ಬಳ್ಳಿಯ ಸುರುಳಿಯಂತೆ ಕೊರೆದ ಜಾಲಂಧ್ರಗಳು, ಒಂದೊಂದು ಸುರುಳಿಯಲ್ಲೂ ನೃತ್ಯಗೀತವಾದ್ಯಗಳಲ್ಲಿ ನಿರತರಾದ ಕುಬ್ಜರು, ಲೋವೆಯ ಮೇಲೆ ಅಲ್ಲಲ್ಲಿ ಕೀರ್ತಿಮುಖಗಳು, ಕುಬ್ಜರ ಸಾಲು, ಕೈಪಿಡಿಯ ಸುತ್ತಲೂ ಪಂಜರ ಗಜಪೃಷ್ಠಾಕೃತಿಗಳು, ಅವುಗಳ ಮುಂಭಾಗದ ಲಾಳದಾಕೃತಿಯ ಕಮಾನುಗಳ ಕೆಳಗೆ ಶಿವಲೀಲೆಗಳು ಮತ್ತು ಇತರ ಮೂರ್ತಿಗಳು ಮೂರು ಅಂತಸ್ತುಗಳಲ್ಲಿ ಮೇಲೆದ್ದಿರುವ ಗೋಪುರ ಇವೆಲ್ಲಾ ಸುಂದರವಾಗಿವೆ. ನವರಂಗದ ಕಂಬಗಳ ಮೇಲೂ ತೆಳುವಾಗಿ ಮೂರ್ತಿಗಳನ್ನು ಬಿಡಿಸಿದೆ. ಚಾವಣಿಯಲ್ಲಿ ಪಲ್ಲವ ಶಿಲ್ಪವನ್ನನುಕರಿಸುವ ಅಷ್ಟದಿಕ್ಪಾಲಕರು ಮತ್ತು ನಡುವೆ ಉಮಾಮಹೇಶ್ವರ ಮೂರ್ತಿಗಳು ಪ್ರಸನ್ನ ಗಂಭೀರ ಭಾವವನ್ನು ವ್ಯಕ್ತಪಡಿಸುತ್ತವೆ. ಪಲ್ಲವರ ಕೊನೆಯ ವರ್ಷಗಳಲ್ಲಿ ಬೆಳೆದು ಬಂದ ವಾಸ್ತುರೀತಿಯನ್ನೇ ಹೋಲುವ ಈ ದೇವಾಲಯದ ಪ್ರತಿರೂಪ ಬೆಂಗಳೂರು ಬಳಿಯ ಬೇಗೂರಿನ ನಾಗೇಶ್ವರ ದೇವಾಲಯವೆನ್ನಬಹುದು. ಗಂಗ ಎಱೆಯಪ್ಪನ ಸಾಮಂತ ನಾಗತ್ತರ ಕಟ್ಟಿಸಿರಬಹುದಾದ ಈ ನಾಗೇಶ್ವರ ದೇವಾಲಯ ಗಾತ್ರದಲ್ಲಿ ಸ್ವಲ್ಪ ಚಿಕ್ಕದು. ಇದರ ಗೋಪುರದ ಒಂದೊಂದು ಅಂತಸ್ತಿನಲ್ಲೂ ಮಧ್ಯದ ಗೂಡುಗಳಲ್ಲಿ ಇರುವ ದಕ್ಷಿಣಮೂರ್ತಿ, ವಿಷ್ಣು, ನರಸಿಂಹ, ಸರಸ್ವತಿ ಮೊದಲಾದ ಮೂರ್ತಿಗಳು ಆಕರ್ಷಕವಾಗಿವೆ.



ಭೋಗನಂದೀಶ್ವರ ದೇವಾಲಯ, ನಂದಿಗ್ರಾಮ

ಕಂಬದಹಳ್ಳಿಯ ಆದಿನಾಥ ಬಸದಿ ಮೂರು ಗರ್ಭಗುಡಿಗಳಿರುವ ಒಂದು ತ್ರಿಕೂಟಾಚಲ. ಹೊರಗೋಡೆಗಳ ನಡುವೆ ಒಂದೊಂದು ಆಳವಿಲ್ಲದ ಗೂಡು, ಅದರ ಎರಡು ಕಡೆಯೂ ಅರೆಗಂಬಗಳು ಇವೆ. ಲೋವೆಯ ಕೆಳಗೆ ಒಂದು ಸಾಲು ಹಂಸಪಕ್ಷಿಗಳೂ ಮೇಲೆ ನೀರ್ಗುದುರೆಗಳ ಸಾಲೂ ಇರುವುದರೊಂದಿಗೆ ಎರಡನೆಯ ಅಂತಸ್ತಿನ ನಾಲ್ಕು ಮೂಲೆಗಳಲ್ಲಿಯೂ ಸಿಂಹಗಳು ಪಂಜನ್ನೆತ್ತಿ ಮಲಗಿವೆ. ತುದಿಯ ಆಮಲಕಗಳಲ್ಲಿ ಒಂದು ಗುಂಡಗೂ ಎರಡನೆಯದು ಚೌಕಾಕಾರವಾಗಿಯೂ ಮೂರನೆಯದು ಅಷ್ಟಮುಖವುಳ್ಳದ್ದಾಗಿಯೂ ಇವೆ. ನವರಂಗದ ಕಂಬಗಳು ತುದಿಯಲ್ಲಿ ಕಲಶವುಳ್ಳ ಅಷ್ಟಕೋನಾಕೃತಿಯವು. ಚಾವಣಿಯ ನಡುವಣ ಅಂಕಣದಲ್ಲಿ ಅಷ್ಟದಿಕ್ಪಾಲಕರ ನಡುವೆ ಧರಣೇಂದ್ರ ಯಕ್ಷನ ಮೂರ್ತಿಯಿದೆ. ಈ ನಡುವಣ ಅಂಕಣದ ಸುತ್ತಲೂ ಚಾವಣಿಗೆ ಹಾಕಿರುವ ಹಾಸುಗಲ್ಲುಗಳು ಹೊರಭಾಗಕ್ಕೆ ಚಾಚುವಾಗ ಅಗಲವಾಗುತ್ತ ಹೋಗುವುದರಿಂದ ಸುತ್ತಲೂ ಕಿರಣಗಳು ಹರಡುವಂತೆ ತೋರುತ್ತವೆ.

ಗಂಗರ ಕಾಲದ ಕಟ್ಟಡಗಳಲ್ಲಿ ಬಹುಶಃ ಕೊನೆಯದೂ ದೊಡ್ಡದೂ ಸುಂದರವಾದ್ದೂ ಆದ ಕಟ್ಟಡವೆಂದರೆ ಶ್ರವಣಬೆಳಗೊಳದ ಚಿಕ್ಕಬೆಟ್ಟದ ಮೇಲಿರುವ ಚಾವುಂಡರಾಯ ಬಸದಿ. ಗೊಮ್ಮಟೇಶ್ವರನ ಪ್ರತಿಷ್ಠೆಯನ್ನು ಮಾಡಿದಾಗಲೇ ಚಾವುಂಡರಾಯ ಈ ಬಸದಿಯನ್ನೂ ಕಟ್ಟಿಸಿರಬೇಕು (ಸು.983). ಎತ್ತರವಾದ ತಳಹದಿಯ ಮೇಲೆ ಗರ್ಭಗೃಹ, ಸುಕನಾಸಿ, ದೊಡ್ಡದಾದ ನವರಂಗ ಇವೆ. ಸರಳವಾದ ಅರೆಗಂಬಗಳು ಮತ್ತು ಗೂಡುಗಳಿಂದ ಹೊರ ಗೋಡೆಗಳು ಅಲಂಕೃತವಾಗಿವೆ. ಮೇಲ್ಭಾಗದಲ್ಲಿ ಲೋವೆಯ ಕೆಳಗಿನ ಹಂಸದ ಸಾಲು, ಲೋವೆಯ ಮುಂಭಾಗದಲ್ಲಿ ಅಲ್ಲಲ್ಲಿ ಅಲಂಕೃತ ಕೀರ್ತಿಮುಖಗಳು, ಮೇಲೆ ನೀರ್ಗುದುರೆಗಳ ಸಾಲು, ಆ ಸಾಲಿನ ಮೇಲೆ ಕೈಪಿಡಿಯ ಶಾಲಾ ಕೂಟ ಪಂಜರಗಳು, ಜಿನರ ಮತ್ತು ಇತರರ ಭಾವಯುಕ್ತವಾದ ಮೂರ್ತಿಗಳು ಇವು ಸರಳವೂ ಸುಂದರವೂ ಆಗಿವೆ. ಗೋಪುರದಲ್ಲಿ ಚೌಕಾಕಾರದ ಇನ್ನೊಂದು ಗುಡಿಯಿದೆ. ಪಾರ್ಶ್ವನಾಥನ ಮೂರ್ತಿಯನ್ನು ಚಾವುಂಡರಾಯನ ಮಗ ಜೊಪ್ಪಣ್ಣ ಇಲ್ಲಿ ಪ್ರತಿಷ್ಠಾಪಿಸಿದ್ದಾನೆ. ಗಂಗರ ಕಾಲದ ಕಟ್ಟಡಗಳಲ್ಲೆಲ್ಲ ತನ್ನ ಮೊದಲಿನ ಸ್ಥಿತಿಯಲ್ಲಿ ಉಳಿದು ಬಂದಿರುವ ಕಟ್ಟಡವೆಂದರೆ ಇದೊಂದೇ.

ಬಹುಕಾಲ ಗಂಗರ ರಾಜಧಾನಿಯಾಗಿದ್ದ ತಲಕಾಡಿನಲ್ಲಿ ಅವರ ಕಾಲದ ಅನೇಕ ಕಟ್ಟಡಗಳು ಇದ್ದಿರಬೇಕು. ಆದರೆ ಅದರ ಬಹುಭಾಗ ಮರಳಿನಲ್ಲಿ ಹೂತುಹೋಗಿರುವುದರಿಂದಲೂ ಉಳಿದುಬಂದಿರುವ ಕೆಲವು ದೇವಾಲಯಗಳು ಹಳೆಯ ಕಾಲದ ಶಿಲ್ಪವನ್ನು ಉಪಯೋಗಿಸಿ ಪುನರ್ನಿರ್ಮಿತವಾಗಿರುವುದರಿಂದಲೂ ಆ ಕಟ್ಟಡಗಳ ವಾಸ್ತು ರೀತಿಯನ್ನು ಈಗ ಅರಿಯಲು ಸಾಧ್ಯವಿಲ್ಲ. ತಲಕಾಡು, ಹೆಮ್ಮಿಗೆ, ತಿರುಮಕೂಡಲು ನರಸೀಪುರ, ಕಿತ್ತೂರು, ಆವನಿ, ಹೆಬ್ಬಟ ಮೊದಲಾದ ಕಡೆ ಗಂಗರ ಕಾಲದವೆಂದು ಖಚಿತವಾಗಿ ಹೇಳಬಹುದಾದ ಶಿಲ್ಪಗಳು, ಕಂಬಗಳು ಇತರ ಅವಶೇಷಗಳು ಚೆಲ್ಲಾಡಿರುವುದರಿಂದ ಅವರ ಕಾಲದ ಅನೇಕ ಕಟ್ಟಡಗಳು ನಾಶವಾಗಿರುವುದು ಸ್ಪಷ್ಟ.

ತಲಕಾಡಿನ ಗಂಗರ ಕಾಲದ ಮೂರ್ತಿಶಿಲ್ಪ ವಾಸ್ತುಶಿಲ್ಪದಂತೆ ಪಲ್ಲವ ಶಿಲ್ಪದಿಂದಲೇ ಸ್ಫೂರ್ತಿಪಡೆದು ಬೆಳೆದಿದ್ದರೂ ತನ್ನದೇ ಆದ ಹಲವು ವಿಶಿಷ್ಟ ಗುಣಗಳನ್ನು ಪಡೆದಿದೆ. ಗಟ್ಟಿಕಲ್ಲಿನ ಮೇಲೆ ತೆಳುವಾಗಿ ಮೂರ್ತಿಗಳನ್ನು ಬಿಡಿಸಿ ಕೇವಲ ಕೆಲವು ರೇಖೆಗಳಿಂದಲೇ ಮೂರ್ತಿಯ ಭಾವವನ್ನು ಅಭಿವ್ಯಕ್ತಗೊಳಿಸುವ ಬೌದ್ಧ ಶಿಲ್ಪದ ರೀತಿಯಿಂದ ಹಿಡಿದು ಗುಂಡಾಗಿ ಪೂರ್ಣರೂಪದಲ್ಲಿ ಬಿಡಿಸಿದ ಮೂರ್ತಿಗಳವರೆಗೂ ಗಂಗ ರೂವಾರಿಗಳು ಕಲೆಯನ್ನು ರೂಢಿಸಿಕೊಂಡಿದ್ದರು. ತೆಳುವುಬ್ಬು ಶಿಲ್ಪವೇ ಆಗಲಿ ಪೂರ್ಣ ಗಂಡುರೂಪವೇ ಆಗಲಿ, ಅವು ತಾಳಲಯಬದ್ಧವಾಗಿದ್ದು, ಸರಳವಾಗಿ ಭಾವಪೂರ್ಣವಾಗಿ ನೈಜತೆಯನ್ನು ಪ್ರತಿಬಿಂಬಿಸುವಂತೆ ಕಂಡರಿಸುವ ರೀತಿ ಅವರಿಗೆ ಸಿದ್ಧಿಸಿತ್ತು. ಆದ್ದರಿಂದಲೇ ಅವರ ಕಾಲದ ಮೂರ್ತಿಶಿಲ್ಪಗಳು ಹೇರಳವಾಗಿಲ್ಲದಿದ್ದರೂ ಇರುವ ಕೆಲವೇ ಆದರೂ ಪ್ರಭಾವಯುಕ್ತವಾಗಿವೆ. ಇದರೊಂದಿಗೆ ಸ್ಥಳೀಯವಾಗಿ ಬೆಳೆಸಿಕೊಂಡಿದ್ದ ಶಿಲ್ಪಶೈಲಿಯಲ್ಲಿ ಅಲ್ಲಲ್ಲಿಯ ರೂವಾರಿಗಳು ಕಂಡರಿಸಿರುವ ಮೂರ್ತಿಶಿಲ್ಪ ಕೆಲಮಟ್ಟಿಗೆ ಒರಟುತನವನ್ನು ಪ್ರದರ್ಶಿಸಿದರೂ ಅದರಲ್ಲಿ ನೈಜತೆಯನ್ನು ಗುರುತಿಸಬಹುದು. ವೀರಗಲ್ಲುಗಳಲ್ಲಿ ಹೆಚ್ಚಾಗಿ ಇಂಥ ಶಿಲ್ಪವನ್ನು ಕಾಣಬಹುದು.



ಚಾವುಂಡರಾಯ ಬಸದಿ, ಶ್ರವಣಬೆಳಗೊಳ

ಗರ್ಜಿಯ ಕಲ್ಲೇಶ್ವರ ದೇವಾಲಯದ ನವರಂಗದ ಕಂಬಗಳ ಬುಡದಲ್ಲಿ ಚೌಕನೆಯ ಮುಖಗಳ ಮೇಲೆ ಇರುವ ತೆಳುವುಬ್ಬು ಶಿಲ್ಪದಲ್ಲಿ ಕಂಡರಿಸಿರುವ ಹಲವು ಮೂರ್ತಿಗಳಲ್ಲಿ ಒಂದು ಬಗೆಯ ರೂಕ್ಷತೆಯಿದೆ. ಆದರೂ ಅದರಲ್ಲಿ ಕ್ರಿಯೆಯಿದೆ, ನೈಜತೆಯಿದೆ. ಮೂರ್ತಿಯ

ಮನೋಭಾವವನ್ನು ಹೊರಬಿಂಬಿಸುವಲ್ಲಿ ರೂವಾರಿ ಯಶಸ್ವಿಯಾಗಿದ್ದಾನೆ. ತೀಕ್ಷ್ಣವಾಗಿ ನರ್ತಿಸುತ್ತಿರುವ ಅಂಧಾರಿ, ಅವನ ಸುತ್ತಲೂ ನೆರೆದಿರುವ ವಾದ್ಯಕಾರರು, ಗಜಾಸುರನನ್ನು ಸೀಳಿ ಲೀಲಾನರ್ತನದಲ್ಲಿ ತೊಡಗಿರುವ ಅಷ್ಟಭುಜಮೂರ್ತಿ ಗಜಾರಿ, ಭೈರವ, ಅರ್ಧನಾರೀಶ್ವರ ಅಥವಾ ಹರಿಹರ, ಒಂದೊಂದೂ ಭಾವಪೂರ್ಣವಾಗಿ ಸತ್ತ್ವಯುತವಾಗಿವೆ. ಇದೇ ರೀತಿ ಆಸಂದಿಯ ವೀರಭದ್ರ ದೇವಾಲಯದ ಮೆಟ್ಟಿಲುಗಳ ಮೇಲೆ ಎರಡು ಪಕ್ಕಗಳಲ್ಲಿಯೂ ನಿಲ್ಲಿಸಿರುವ ಪುರಾತನ ಗಂಗ ದೇವಾಲಯವೊಂದರ ಕಟಾಂಜನಗಳ ಮೇಲೆ ಬಿಡಿಸಿರುವ ನಟರಾಜ ತ್ರಿವಿಕ್ರಮ ಮೂರ್ತಿಗಳೂ ಭಾವ ಭಂಗಿ ಚಲನೆಗಳಲ್ಲಿ ಬಾದಾಮಿ ಚಳುಕ್ಯರ ಶಿಲ್ಪವನ್ನು ನೆನಪಿಗೆ ತರುತ್ತವೆ. ಇವುಗಳಿಗಿಂತಲೂ ತೆಳುವಾಗಿ ರೇಖಾಕೃತಿಯಂತೆಯೇ ಕಾಣುವ ರಾಮಾಯಣದ ಕಥೆಯನ್ನು ಬಿಡಿಸಿರುವ ವಿಶಿಷ್ಟವಾದ ಶಿಲ್ಪವನ್ನು ವರುಣದ ಈಶ್ವರ (ಬೂತೇಶ್ವರ) ದೇವಾಲಯದ ಗೋಡೆಯ ಮೇಲೆ ನೋಡಬಹುದು. ಲೋವೆಯ ಕೆಳಗೆ ದೇವಾಲಯದ ಸುತ್ತಲೂ ಚಿತ್ರಿಸಿರುವ ಒಂದು ಸಾಲು ಪಟ್ಟಿಕೆಯಲ್ಲಿ ಆಯಾ ಸನ್ನಿವೇಶಗಳು ಅರ್ಥವತ್ತಾಗಿ ಪ್ರತಿಬಿಂಬಿತವಾಗಿವೆ. ಕಿರಿದರಲ್ಲೇ ಹಿರಿಯ ಭಾವವನ್ನು ಸೆರೆ ಹಿಡಿದಿರುವ ಜಾಣ್ಮೆ ವ್ಯಕ್ತವಾಗಿದೆ.



ಉಮಾಮಹೇಶ್ವರ, ಅರಳಗುಪ್ಪೆ

ತೆಳುವುಬ್ಬು ಶಿಲ್ಪದಲ್ಲಿ ಬಿಡಿಸಿರುವ ನೂರಾರು ವೀರಗಲ್ಲುಗಳ ಶಿಲ್ಪದ ರೀತಿ ಗಂಗರ ಕಾಲಕ್ಕೆ ವಿಶಿಷ್ಟವಾದ್ದು. ಇವುಗಳಿಗೆ ಮಾದರಿಯಾಗಿ ತುಮಕೂರು ತಾಲ್ಲೂಕು ಹಿರೇಗಂಡುಗದಲ್ಲಿನ ವೀರಗಲ್ಲುಗಳಲ್ಲಿ ದ್ವಂದ್ವಯುದ್ಧದಲ್ಲಿ ನಿರತರಾಗಿರುವ ವೀರರನ್ನು ಶಿಲ್ಪಿಸಿರುವ ರೀತಿಯನ್ನು ನೋಡಬಹುದು. ಕೆಚ್ಚಿನಿಂದ ಮುಂದೆ ನುಗ್ಗಿ ಒಬ್ಬರನ್ನೊಬ್ಬರು ಎದುರಿಸುತ್ತಿರುವ ವೀರರ ಮುಖದಲ್ಲಿ ತೋರುವ ದೃಢತೆ ಸಾಹಸ ಧೈರ್ಯಗಳನ್ನು, ದೇಹಸೌಷ್ಠವಗಳನ್ನು ಆಳವಿಲ್ಲದೆ ಸರಳವಾದ ಶಿಲ್ಪದಲ್ಲಿಯೇ ರೂವಾರಿ ಹೊಮ್ಮಿಸಿದ್ದಾನೆ. ಒಂದು ಯುದ್ಧದ ವಿಸ್ತಾರವಾದ ಚಿತ್ರಣವನ್ನೇ ಬಿಡಿಸಿರುವ ಬೇಗೂರಿನ ವೀರಗಲ್ಲು ಗಂಗರ ಕಾಲದ ಸ್ಥಳೀಯ ಶಿಲ್ಪರೀತಿಗೆ ಸರಳತೆಗೆ ನೈಜತೆಗೆ ಹೆಸರಾಗಿದೆ. ರಣರಂಗದ ತುಂಬ ಏಳುತ್ತಿರುವ, ಬೀಳುತ್ತಿರುವ ಕತ್ತಿ ಬಿಲ್ಲು ಬಾಣಗಳನ್ನು ಹಿಡಿದು ಹೋಗುತ್ತಿರುವ ಹಲವು ಭಂಗಿಯ ಕಾಲಾಳುಗಳು, ಏಟು ತಿಂದು ಸತ್ತವರ ಹೆಣದ ರಾಶಿ, ಅವುಗಳ ನಡುವೆ ಕುದುರೆಯ ಮೇಲೆ ಕುಳಿತ ನಾಗತ್ತರ (ಶಾಸನೋಕ್ತ) ವೀರಾವೇಶದಿಂದ ಹಿಮ್ಮೆಟ್ಟಿಸುತ್ತಿರುವ ಶತ್ರುವಿನ ಆನೆ, ಮೂಲೆಯೊಂದರಲ್ಲಿ ಹೆಣವನ್ನೆತ್ತಿ ಒಯ್ಯುತ್ತಿರುವ ಮರುಳು, ಮೇಲೆ ಸ್ವರ್ಗದಲ್ಲಿ ಕುಳಿತ ವೀರನ ಮುಂದೆ ನಡೆಯುತ್ತಿರುವ ನರ್ತನ ಎಲ್ಲವನ್ನೂ ಸಹಜವಾಗಿ ರಸವತ್ತಾಗಿ ಚಿತ್ರಿಸಿದ್ದು ಬೇರೆಡೆ ಕಾಣಲಾಗದ ವಿವರಗಳು ಇಲ್ಲಿ ಬಂದಿವೆ.

ಗಂಗರ ಕಾಲದ ಶೈವ ಮತ್ತು ಜೈನಮೂರ್ತಿಗಳ ಹಲವು ಪ್ರಕಾರಗಳಿವೆ. ವೈಷ್ಣವ ಮೂರ್ತಿಗಳೂ ಕೆಲವಿವೆ. ಶೈವ ಮೂರ್ತಿಗಳಲ್ಲಿ ಮುಖ್ಯವಾಗಿ ಶಿವ ಲೀಲೆಗಳು, ಸಪ್ತಮಾತೃಕೆಯರು, ಮಹಿಷಾಸುರಮರ್ದಿನಿ, ಪಂಚಾಯತನ ಮೂರ್ತಿಗಳು ಮತ್ತು ನವರಂಗದ ಚಾವಣಿಯಲ್ಲಿ ನಟರಾಜನ ಅಷ್ಟದಿಕ್ಪಾಲಕ ಮೂರ್ತಿಗಳು ಹೆಚ್ಚು ಕಂಡುಬರುತ್ತವೆ. ಕುಣಿಗಲಿನಲ್ಲಿ ಈಚಿನ ದೇವಾಲಯವೊಂದರಲ್ಲಿರುವ ಪುರಾತನವಾದ ಮಹಿಷಾಸುರಮರ್ದಿನಿಯ ಮೂರ್ತಿ ಎಂಟು ಅಥವಾ ಒಂಬತ್ತನೆಯ ಶತಮಾನದ ಗಂಗರ ಶಿಲ್ಪವೈಶಿಷ್ಟ್ಯವನ್ನು ಎತ್ತಿಹಿಡಿಯುತ್ತದೆ. ನಂದಿಯಲ್ಲಿರುವ ಮಹಿಷಾಸುರಮರ್ದಿನಿಯಂತಿರುವ ಒಂದು ಮೂರ್ತಿ ತೆಳುವುಬ್ಬು ಶಿಲ್ಪದಲ್ಲಿದ್ದು ಸ್ಥೂಲ ರೂಪರೇಖೆಗಳನ್ನು ಬಿಡಿಸಿದ್ದರೂ ಆಕರ್ಷಕವಾಗಿವೆ. ನಾಲಗೆಯನ್ನು ಹೊರಚಾಚಿರುವ ಕೋಣನ ತಲೆಯ ಮೇಲೆ ಎಡಗಾಲು ಮೆಟ್ಟಿ ಬಲಗಾಲನ್ನು ಅಡ್ಡಗಾಲು ಹಾಕಿ ತ್ರಿಭಂಗಿಯಲ್ಲಿ ಲೀಲಾವಿನೋದದಿಂದ ನಿಂತಿರುವ ಚತುರ್ಭುಜ ಮೂರ್ತಿಯ ಒಂದು ಕಡೆ ಸಿಂಹ, ಇನ್ನೊಂದು ಕಡೆ ಜಿಂಕೆಯಿದ್ದು ವಿಶಿಷ್ಟವಾಗಿದೆ. ಪಲ್ಲವರ ಚೋಳರ ದೇವಾಲಯಗಳಲ್ಲಿರುವಂತೆ ಗಂಗರ ದೇವಾಲಯಗಳಲ್ಲಿರುವ ಸಪ್ತಮಾತೃಕೆಯರ ಮೂರ್ತಿಗಳು ಬೇರೆ ಬೇರೆಯಾಗಿ ಒಂದು ಸಾಲಿನಲ್ಲಿರುತ್ತವೆ. ನೊಣವಿನಕೆರೆಯ ಗಂಗೇಶ್ವರ, ನೊಣಬೇಶ್ವರ ದೇವಾಲಯಗಳ ಬಳಿ ಇದ್ದ ಇಂಥ ಮೂರ್ತಿಗಳು ತೆಳುವಾಗಿ ಬಿಡಿಸಿದ್ದರೂ ಸತ್ತ್ವಯುಕ್ತವಾಗಿವೆ.

ನರಸಮಂಗಲದ ರಾಮೇಶ್ವರ ದೇವಾಲಯದ ಗೋಡೆ ಗೋಪುರಗಳ ಮೇಲೆ ಇರುವ ಗಚ್ಚಿನ ಮೂರ್ತಿಗಳೂ ದೇವಾಲಯದ ಒಳಗೂ ಹೊರಗೂ ಇರುವ ಸಪ್ತಮಾತೃಕಾ ಪಂಚಾಯತನ ಮೂರ್ತಿಗಳೂ ಪೂರ್ಣರೂಪದಲ್ಲಿ ಬಿಡಿಸಿದ್ದು ವೈಶಿಷ್ಟ್ಯಪೂರ್ಣವಾಗಿ ಕಲೆಯ ಉತ್ತಮ ಗುಣಗಳನ್ನು ಪ್ರದರ್ಶಿಸುತ್ತವೆ. ವಿಶಾಲ ವಕ್ಷಸ್ಥಳ, ತೆಳು ನಡು, ನೀಳವಾದ ಕೈಕಾಲುಗಳು, ಕೆಲವೇ ಆಭರಣಗಳು ಮಂದಹಾಸಯುಕ್ತವಾದ ಗಂಭೀರ ಮುಖಮುದ್ರೆ, ದಪ್ಪ ಕೆಳದುಟಿಗಳು ಇವುಗಳಿಂದ ನೈಜವಾಗಿ ಅತ್ಯಂತ ಆಕರ್ಷಕವಾಗಿರುವ ಈ ಮೂರ್ತಿಗಳಿಗೆ ಸಾಟಿಯನ್ನು ಎಲ್ಲೋರ, ಮಹಾಬಲಿಪುರಗಳಲ್ಲಿ ಮಾತ್ರ ಕಾಣಬಹುದು. ಈ ದೇವಾಲಯದ ನವರಂಗದ ಒಳಚಾವಣಿಯಲ್ಲಿಯೂ ಇದರಂತೆ ನಂದಿಯ ಭೋಗನಂದೀಶ್ವರ ದೇವಾಲಯ, ಮದ್ದೂರಿನ ದೇಶೇಶ್ವರ ದೇವಾಲಯ, ಚಾಮರಾಜನಗರ ತಾಲ್ಲೂಕು ಆಲೂರಿನ ಅರ್ಕೇಶ್ವರ ದೇವಾಲಯ, ಅರಳಗುಪ್ಪೆಯ ಕಲ್ಲೇಶ್ವರ ದೇವಾಲಯ ಮೊದಲಾದ ಗಂಗರ ಕಾಲದ ಹಲವಾರು ದೇವಾಲಯಗಳ ನವರಂಗದ ಚಾವಣಿಗಳಲ್ಲಿಯೂ ನಡುವೆ ನಟರಾಜನನ್ನೂ ಸುತ್ತಲೂ ಅಷ್ಟದಿಕ್ಪಾಲಕರನ್ನೂ ಸುಂದರವಾಗಿ ಬಿಡಿಸಿದೆ. ಇವುಗಳೆಲ್ಲ ಅತ್ಯಂತ ಆಕರ್ಷಕವೂ ಭವ್ಯವೂ ಆದದ್ದೆಂದರೆ ಅರಳಗುಪ್ಪೆಯ (ನೋಡಿ) ಕಲ್ಲೇಶ್ವರ ದೇವಾಲಯದ ಶಿಲ್ಪ. ನಡುವೆ ತೆಳುವಾಗಿ ನೀಳವಾಗಿ ಅಪಸ್ಮಾರವನ್ನು ತುಳಿದು ನೃತ್ಯಮಗ್ನವಾಗಿರುವ ಸಂಧ್ಯಾತಾಂಡವ ಶಿವನ ಆ ನಾಟ್ಯಭಂಗಿ ಅಪೂರ್ವವಾದ್ದು. ಜಟಾಮಕುಟ ಸರ್ಪಕುಂಡಲ ಮತ್ತು ಇತರ ಕೆಲವೇ ಆಭರಣಗಳನ್ನು ಧರಿಸಿ ಮೇಲಿನ ಎರಡು ಕೈಗಳಲ್ಲೂ ತ್ರಿಶೂಲಗಳನ್ನು ಹಿಡಿದು ಲಂಬಹಸ್ತವಾಗಿ ತನ್ನ ಸುತ್ತಲೂ ತ್ರಿಘಟೆ, ತಾಳ ಕೊಳಗಳನ್ನು ಬಾರಿಸುತ್ತಿರುವವರನ್ನು ತಲ್ಲೀನಗೊಳಿಸಿ ನರ್ತಿಸುತ್ತಿರುವ ನಟರಾಜನ ಮುಖದ ಪ್ರಸನ್ನತೆ ಅನುಪಮವಾದ್ದು. ಎಂಟು ಮೂಲೆಗಳಲ್ಲೂ ಈ ಮೂರ್ತಿಯಷ್ಟೇ ಸುಂದರವಾಗಿರುವ ಅಷ್ಟದಿಕ್ಪಾಲಕರು ಸತೀಸಮೇತರಾಗಿ ತಮ್ಮ ತಮ್ಮ ವಾಹನಗಳನ್ನೇರಿ ಮೋಡಗಳ ನಡುವೆ ತೇಲಿ ಹೋಗುತ್ತಿರುವುದು, ನಡುವಿನ ನಾಲ್ಕು ಮೂಲೆಗಳಲ್ಲೂ ಗಂಧರ್ವರು ಹೂವಿನ ದಂಡೆಯನ್ನು ಹಿಡಿದು

ಆಕಾಶದಲ್ಲಿ ಚಿಮ್ಮುತ್ತಿರುವುದು ಆ ಸನ್ನಿವೇಶಕ್ಕೆ ಅತ್ಯಂತ ಸೂಕ್ತವಾಗಿ ಹೊಂದಿಕೊಂಡು, ಕ್ರಿಯಾಶೀಲವಾಗಿ, ಭಾವಪೂರ್ಣವಾಗಿ, ನೋಡುವವರನ್ನು ಮಂತ್ರಮುಗ್ಧರಾಗಿ ಮಾಡುತ್ತದೆ.



ಮಹಿಷಾಸುರಮರ್ದಿನಿ, ವರುಣ

ಗಂಗರ ಕಾಲದ ಜಿನಮೂರ್ತಿಗಳು, ಯಕ್ಷಯಕ್ಷಿಯರು ಚಾವಣಿಯಲ್ಲಿಯ ಅಷ್ಟದಿಕ್ಪಾಲಕಾದಿಗಳನೇಕವು ಉಳಿದುಬಂದಿವೆ. ಕಂಬದಹಳ್ಳಿಯ ಆದಿನಾಥನ ಮೂರ್ತಿ, ಶ್ರವಣಬೆಳಗೊಳದ ಶಾಂತಿನಾಥ, ಚಂದ್ರಪ್ರಭ, ಸುಪಾರ್ಶ್ವನಾಥನ ಮೂರ್ತಿಗಳು, ನಿರಾಭರಣವಾಗಿದ್ದರೂ ತಪೋನಿರತವಾಗಿರುವ, ಅವರ ಮುಖದಲ್ಲಿ ಶಾಂತತೆ, ತೇಜಸ್ಸು, ಓಜಸ್ಸು ಹೊಮ್ಮುವಂತೆ ಕಂಡರಿಸಿರುವ ಶಿಲ್ಪ ಶ್ರೇಷ್ಠವಾದ್ದು. ಯಕ್ಷಯಕ್ಷಿಯರನ್ನಂತೂ ಭಾವಯುಕ್ತವಾಗಿ ಸುಂದರವಾಗಿ ಕಡೆದಿದ್ದಾರೆ. ಚಂದ್ರಗುಪ್ತ ಬಸದಿಯಲ್ಲಿರುವ ನಿಂತಿರುವ ಯಕ್ಷನ ಮೂರ್ತಿ ಈ ರೀತಿಯ ಶಿಲ್ಪಕ್ಕೆ ಉತ್ತಮವಾದ ಉದಾಹರಣೆ.

ಗಂಗರ ಮೂರ್ತಿಶಿಲ್ಪದ ಪರಾಕಾಷ್ಠೆಯನ್ನು ಶ್ರವಣಬೆಳಗೊಳದ ದೊಡ್ಡಬೆಟ್ಟದ ಮೇಲಿರುವ ಗೊಮ್ಮಟೇಶ್ವರನಲ್ಲಿ ನೋಡಬಹುದು. ಚಾವುಂಡರಾಯ ಕಡೆಯಿಸಿದ ಈ ಮೂರ್ತಿ ಸನ್ನಿವೇಶ, ಗಾತ್ರ, ರಚನೆ, ರೀತಿ ಎಲ್ಲದರಲ್ಲಿಯೂ ಅದ್ವಿತೀಯವೆನ್ನಿಸಿಕೊಂಡಿದೆ. ಬಾಹುಬಲಿಯ ಚರಿತ್ರೆಯ ಹಿನ್ನೆಲೆಯಲ್ಲಿ ಈ ಮೂರ್ತಿಯನ್ನು ನೋಡಿದಾಗ ಶಿಲ್ಪಿ ಅದೆಷ್ಟು ಸಂಪೂರ್ಣವಾಗಿ ಯಶಸ್ವಿಯಾಗಿದ್ದಾನೆಂದು ತಿಳಿಯದಿರದು. ಬಾಹುಬಲಿಯ ಪರಿಪೂರ್ಣತ್ಯಾಗ, ಆತ್ಮಸಂಯಮಗಳು, ಪ್ರಪಂಚದ ಕಷ್ಟಕಾರ್ಪಣ್ಯಗಳೆಡೆ ಮರುಕ ಬೆರೆತ ಕಿರುನಗೆಯ ನೋಟ, ಹುತ್ತಬಳ್ಳಿಗಳು ಬೆಳೆದರೂ ಅಲುಗದ ನಿಶ್ಚಲತೆ ಎಲ್ಲವೂ ಆ ಮೂರ್ತಿಯಲ್ಲಿ ಎದ್ದುತೋರುತ್ತವೆ. ಈಜಿಪ್ಟನ್ನು ಬಿಟ್ಟರೆ ಬೇರೆಲ್ಲಿಯೂ ಇಂಥ' ಅದ್ಭುತವಾದ, ಇಷ್ಟು ಪ್ರಭಾವಯುತವಾದ ಶಿಲ್ಪ ಇಲ್ಲ ಎಂದು ಫರ್ಗ್ಯೂಸನ್ ಹೇಳಿದ್ದಾನೆ. ಇಷ್ಟು ಉನ್ನತವಾದ ಮೂರ್ತಿಯಲ್ಲಿ ಇಂಥ ಸೌಂದರ್ಯವೂ ಇಂಥ' ಅತಿಶಯವೂ ಇರುವುದು ಬೇರೆಡೆಯಲ್ಲಿ ಅಸಾಧ್ಯ. ಕ್ಷಿತಿಸಂಪೂಜ್ಯವಾದ ಈ ಗೊಮ್ಮಟೇಶ್ವರ ಜಿನನ ಶ್ರೀರೂಪ ಆತ್ಮೋಪಮವಾದದ್ದೆಂಬುದು ಪ್ರಾಚೀನ ಕವಿವಾಣಿ.

ಮಾನವ ಅಥವಾ ದೇವತೆಗಳ ರೂಪವನ್ನು ಕಂಡರಿಸುವುದರಲ್ಲಷ್ಟೆ ಅಲ್ಲ, ಪ್ರಾಣಿಶಿಲ್ಪಗಳನ್ನು ಕಂಡರಿಸುವುದರಲ್ಲೂ ಅವುಗಳ ರೂಪ ಗುಣ ಸ್ವಭಾವಗಳನ್ನು ಚೆನ್ನಾಗಿ ಸೆರೆ ಹಿಡಿದಿದ್ದಾರೆ ಗಂಗರ ರೂವಾರಿಗಳು. ಕಲ್ಲಿನ ಶಾಸನಗಳ ಮೇಲಿನ ಮತ್ತು ತಾಮ್ರಶಾಸನಗಳ ಮುದ್ರೆಗಳ ಮೇಲಿನ ಆನೆಗಳು, ಅಷ್ಟದಿಕ್ಪಾಲಕರ ವಾಹನಗಳು ಮುಂತಾದವುಗಳಲ್ಲಿ ಇದನ್ನು ನೋಡಬಹುದು.

ಇವರ ಕಾಲದ ಲೋಹಮೂರ್ತಿಗಳು ಹೆಚ್ಚು ಉಳಿದುಬಂದಿಲ್ಲ. ಈಗ ಶ್ರವಣಬೆಳಗೊಳದ ಜೈನಮಠದಲ್ಲಿರುವ ಗಂಗ ನೊಳಂಬ ಕುಲಾಂತಕ ಮಾರಸಿಂಹನ ಅಕ್ಕ ಕುಂದಣಸೋಮಿದೇವಿ ಮಾಡಿಸಿದ ಜಿನಮೂರ್ತಿ ಇಂಥ ಮೂರ್ತಿಗಳಲ್ಲೊಂದು.

**ಶಾಸನಗಳು :** ಸು.700 ವರ್ಷಗಳಷ್ಟು ಕಾಲ ಆಳಿದ ಗಂಗವಂಶದ ರಾಜರ ಶಾಸನಗಳ ಸಂಖ್ಯೆ ಕಡಿಮೆಯೆಂದೇ ಹೇಳಬೇಕು. ಆದರೂ ಅವು ಹಲವು ರೀತಿಯಲ್ಲಿ ಮುಖ್ಯವೂ ವೈವಿಧ್ಯಪೂರ್ಣವೂ ಆದಂಥವು. ಮೊದಮೊದಲ ಗಂಗ ರಾಜರ ಇತಿಹಾಸವನ್ನರಿಯಲು ಇವೇ ಪೂರ್ಣ ಆಧಾರ. ಗಂಗರ ಶಾಸನಗಳು ಸ್ಥೂಲವಾಗಿ ಮೂರು ಬಗೆ 1 ತಾಮ್ರಶಾಸನಗಳು, 2 ಶಿಲಾಶಾಸನಗಳು ಮತ್ತು 3 ವೀರಗಲ್ಲುಗಳು. 8ನೆಯ ಶತಮಾನದವರೆಗೂ ಇವರ ಶಿಲಾಶಾಸನಗಳು ಬಲು ವಿರಳವಾಗಿವೆ. 726ರಲ್ಲಿ ಪಟ್ಟಕ್ಕೆ ಬಂದ ಶ್ರೀಪುರುಷನಿಗಿಂತ ಹಿಂದಿನ ರಾಜರ ಶಿಲಾಶಾಸನಗಳೆಂದರೆ ಕೋಲಾರ ಜಿಲ್ಲೆ ಆವನಿಯಲ್ಲಿ ದೊರೆತಿರುವ ತುಂಡುಶಾಸನ, ಚಿಕ್ಕಮಗಳೂರು ಜಿಲ್ಲೆ ಸಿರಿಗುಂದದ ನಿರ್ವಿನೀತನ ಶಾಸನ, ಕೋಲಾರ ಜಿಲ್ಲೆಯ ಕಲ್ಲೂರಿನ ಶ್ರೀವಿಕ್ರಮನ ಶಾಸನ ಮತ್ತು ತಮಿಳುನಾಡಿನ ತಿರುವಳ್ಳೂರಿನ 1ನೆಯ ಶಿವಮಾರನ ಶಾಸನ ಇವಿಷ್ಟೆ. ಆದರೆ ಇದೇ ಅವಧಿಯಲ್ಲಿ ಗಂಗರ ಹಲವಾರು ತಾಮ್ರ ಶಾಸನಗಳು ದೊರೆತಿವೆ.

ಪ್ರಾಚೀನ ಕನ್ನಡ ಅರಸುಮನೆತನಗಳಲ್ಲಿ ಬಹುಶಃ ಗಂಗರಷ್ಟು ತಾಮ್ರಶಾಸನಗಳನ್ನು ಹಾಕಿಸಿರುವವರು ಬೇರೆ ಇಲ್ಲ. ಇದುವರೆಗೂ ಸುಮಾರು ನೂರಕ್ಕೂ ಮೀರಿ ಅವರ ತಾಮ್ರಶಾಸನಗಳು ದೊರೆತಿವೆ. ಇಮ್ಮಡಿ ಮಾರಸಿಂಹನವರೆಗೂ ಗಂಗರಾಜರು ತಾಮ್ರಶಾಸನಗಳನ್ನು ಹಾಕಿಸಿದ್ದಾರೆ. ಮುಂದಿನ ರಾಜರ ತಾಮ್ರಶಾಸನಗಳು ದೊರೆತಿಲ್ಲ.



ಹರಿವರ್ಮನ ಕಾಲದ್ದೆನ್ನುವ ಒಂದು ಕೂಟಶಾಸನ, ಕೂಡಲೂರು

ಗಂಗರ ತಾಮ್ರಶಾಸನಗಳಿಗೂ ಶಿಲಾಶಾಸನಗಳಿಗೂ ಹಲವು ಮುಖ್ಯವಾದ ವ್ಯತ್ಯಾಸಗಳುಂಟು. ತಾಮ್ರಶಾಸನಗಳು ಬಹುಪಾಲು ಸಂಸ್ಕೃತದಲ್ಲಿವೆ; ಶಿಲಾಶಾಸನಗಳು ಕನ್ನಡದಲ್ಲಿವೆ. ತಾಮ್ರಶಾಸನಗಳಲ್ಲಿ ಒಕ್ಕಣೆ ಹೆಚ್ಚು. ಗಂಗವಂಶದ ಮೂಲ ಪುರುಷ ಕೊಂಗುಣಿವರ್ಮನಿಂದ ಆರಂಭಿಸಿ ಶಾಸನ ಕೊರೆಸಿದ ರಾಜನವರೆಗೂ ಪೀಳಿಗೆಯನ್ನು ಸವಿವರವಾಗಿ

ಕೊಟ್ಟಿರುತ್ತವೆ. ಶಿಲಾಶಾಸನಗಳಲ್ಲಾದರೋ ಹೆಚ್ಚು ವಿಷಯಗಳಿರುವುದಿಲ್ಲ; ಅವನ್ನು ಹಾಕಿಸಿದ ರಾಜರ ಹೆಸರು, ಒಮ್ಮೊಮ್ಮೆ ಅವರ ಬಿರುದುಗಳು, ಶಾಸನದ ಕಾಲ ಮತ್ತು ಉದ್ದೇಶಗಳನ್ನು ಅವು ನೇರವಾಗಿ ಸರಳವಾಗಿ ತಿಳಿಸಿರುತ್ತದೆ; ಆವನಿಯ ತುಂಡುಶಿಲಾಶಾಸನ ಇದಕ್ಕೆ ಅಪವಾದ. ಇದು ತಾಮ್ರ ಶಾಸನಗಳಂತೆ ಸಂಸ್ಕೃತದಲ್ಲಿದೆ: ಗಂಗರ ಪೀಳಿಗೆಯನ್ನು ಕೊಡುತ್ತದೆ. ಆದರೆ ನಡುವೆಯೇ ನಿಂತುಹೋಗುವುದರಿಂದ ಇದು ಯಾರ ಕಾಲದ್ದೆಂದು ಹೇಳಲು ಬಾರದು. ಹೀಗೆಯೇ ಗುಂಡ್ಲುಪೇಟೆ ತಾಲ್ಲೂಕಿನ ಶಾಸನವೊಂದರಲ್ಲಿ ಒಂದೂವರೆ ಶ್ಲೋಕಗಳಲ್ಲಿ ಗಂಗವಂಶದ ಪೀಳಿಗೆಯನ್ನು ಕೊಂಗುಣಿವರ್ಮನಿಂದ ಆರಂಭಿಸಿ ಒಂದನೆಯ ಶಿವಮಾರನವರೆಗೆ ಹೀಗೆ ತಿಳಿಸಿದೆ:

> ಕೊಂಗುಣಿರ್ಮಾಧವಶ್ಚೈವ ಹರಿಶ್ಚ ವಿಷ್ಣುಗೋಪಮಃ
> ಮಾಧವೋಪ್ಯವಿನೀತಶ್ಚ ದುರ್ವಿನೀತಶ್ಚ ಮುಷ್ಕರಃ
> ಶ್ರೀವಿಕ್ರಮಶ್ಚ ದುಗ್ಗಶ್ಚ ಶಿವಮಾರಸ್ತಥೈವ ಚ

ವಳ್ಳಿಮಲೆಯ ಗುಹೆಯೊಂದರಲ್ಲಿ ಇರುವ ಒಂದನೆಯ ರಾಜಮಲ್ಲನ ಶಾಸನದಲ್ಲಿನ ಅವನ ಹಿಂದಿನ ಮೂರು ತಲೆಮಾರುಗಳ ಹೆಸರುಗಳನ್ನು, ಎಂದರೆ ಒಂದನೆಯ ಶಿವಮಾರ, ಅವನ ಮಗ ಶ್ರೀಪುರುಷ, ಅವನ ಮಗ ರಣವಿಕ್ರಮ, ಅವನ ಮಗ ರಾಜಮಲ್ಲ ಎಂದು ತಿಳಿಸುವುದೊಂದು ವಿಶೇಷ. ಉಳಿದಂತೆ ಈ ಪೀಳಿಗೆ ಶಿಲಾಶಾಸನಗಳಲ್ಲಿ ಕಂಡುಬರುವುದಿಲ್ಲ. ಆದ್ದರಿಂದಲೇ ಗಂಗರ ವಂಶಾವಳಿಯನ್ನು ಗುರುತಿಸಲು ಶಿಲಾಶಾಸನಗಳಿಗಿಂತ ಹೆಚ್ಚಾಗಿ ತಾಮ್ರಶಾಸನಗಳೇ ಆಧಾರ.

ಗಂಗರ ತಾಮ್ರಶಾಸನಗಳು ಹೆಚ್ಚಾಗಿದ್ದರೂ ಅವುಗಳ ನೈಜತೆಯ ವಿಷಯದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ರೈಸ್ ತಮಗೆ ದೊರೆತ ತಾಮ್ರಶಾಸನಗಳೆಲ್ಲವನ್ನೂ ಸಾಮಾನ್ಯವಾಗಿ ನೈಜವೆಂದೇ ಪ್ರತಿಪಾದಿಸಿದರೆ, ಫ್ಲೀಟ್ ಮೊದಮೊದಲು ಈ ಎಲ್ಲ ಶಾಸನಗಳೂ ಕೂಟಶಾಸನಗಳೆಂದೇ ಹೇಳಿದರು. ಆದರೆ ಕಡೆಗೆ ಪೆನುಗೊಂಡೆ ತಾಮ್ರಶಾಸನವೇ ಮೊದಲಾದ ಕೆಲವನ್ನಾದರೂ ನೈಜವೆಂದು ಫ್ಲೀಟ್ ಒಪ್ಪಿಕೊಳ್ಳಬೇಕಾಯಿತು. ಈಚೆಗೆ ಗಂಗರ ಹಲವು ತಾಮ್ರಶಾಸನಗಳು ದೊರೆತಿರುವುದರಿಂದ ಇವುಗಳ ತೌಲನಿಕ ಅಧ್ಯಯನದಿಂದ ನೈಜ ಮತ್ತು ಕೂಟ ಶಾಸನಗಳನ್ನು ಬೇರ್ಪಡಿಸುವುದು ಸಾಧ್ಯವಾಗಿದೆ. ಈಗ ಪರಿಶೀಲಿಸಿದಾಗ ಅವುಗಳಲ್ಲಿ ಕೆಲವಾದರೂ ಕೂಟಶಾಸನಗಳಿರಬೇಕೆಂಬುದು ವ್ಯಕ್ತವಾಗುತ್ತದೆ. ಇಂಥ ಶಾಸನಗಳಲ್ಲಿ ಗಂಗರ ವಂಶಾವಳಿಯನ್ನು ಸರಿಯಾಗಿ ಕೊಟ್ಟಿದ್ದರೂ ಲಿಪಿ, ಭಾಷೆ, ಕೊಟ್ಟಿರುವ ಕಾಲ ಮುಂತಾದವುಗಳಲ್ಲಿಯೂ ಶಾಸನಗಳನ್ನು ಕೊರೆದಿರುವ ರೀತಿ, ಹಲಗೆಗಳ ಆಕಾರಗಳಲ್ಲಿಯೂ ಅವು ಹುಟ್ಟಿದುವೆಂದು ಹೇಳಲಾದ ಕಾಲದವಲ್ಲದೆ ಬೇರೆಯ ಕಾಲದವರಾಗಿರುತ್ತವೆ. ಸು.5ನೆಯ ಶತಮಾನದಲ್ಲಿದ್ದ 1ನೆಯ ಮಾಧವನದೆಂದು ತಿಳಿಸುವ ನಂದಿಯ ತಾಮ್ರಶಾಸನದ ಲಿಪಿ ಒಂಬತ್ತನೆಯ ಶತಮಾನದ್ದಕ್ಕಿಂತ ಹಿಂದೆ ಹೋಗಲಾರದು; ಕನ್ನಡ ಬೆರೆತ ಸಂಸ್ಕೃತ ಭಾಷೆ, ಅದರಲ್ಲಿಯ ಹೇರಳವಾದ ವ್ಯಾಕರಣದೋಷಗಳು, ಕಂಡರಿಸಿರುವ ಒರಟು ರೀತಿ ಇವುಗಳನ್ನು ನೋಡಿದಾಗ ಇವು ಗಂಗರ ಆಸ್ಥಾನದಲ್ಲಿದ್ದ ವಿಶ್ವಕರ್ಮರಿಂದ ರಚಿತವಾದವೇ ಎಂಬ ಸಂದೇಹ ಬರುತ್ತದೆ. ತಗಡೂರು, ತಂಜಾವೂರು, ಕೂಡಲೂರುಗಳಲ್ಲಿ ದೊರೆತ ಹರಿವರ್ಮನವೆಂದು ಹೇಳಿಕೊಳ್ಳುವ-ಶಾಸನಗಳು, ಮಡಿಕೇರಿಯಲ್ಲಿ ದೊರೆತ ಅವಿನೀತನ ತಾಮ್ರಶಾಸನ ಮುಂತಾದವನ್ನು ಈ ಗುಂಪಿಗೆ ಸೇರಿಸಬಹುದು. ಗಂಗರ ತಾಮ್ರಶಾಸನಗಳಲ್ಲಿ ಸು.12ರಿಂದ 15ರ ವರೆಗೆ ಇಂಥ' ಕೂಟಶಾಸನಗಳಿರಬಹುದೆಂದು ಈಗ ವಿದ್ವಾಂಸರು ಒಪ್ಪುತ್ತಾರೆ.

ಉತ್ತನೂರು ಎಂಬಲ್ಲಿ ದುರ್ವಿನೀತನ ಮೂವತ್ತನೆಯ ವರ್ಷದ ಆಳಿಕೆಯ ಎರಡು ತಾಮ್ರಶಾಸನಗಳು ದೊರತಿವೆ. ಒಂದನ್ನು ಸುಂದರವಾಗಿ ತಪ್ಪಿಲ್ಲದಂತೆ ಕಂಡರಿಸಲಾಗಿದ್ದು, ಅದು ನೈಜಶಾಸನದ ಎಲ್ಲ ಲಕ್ಷಣಗಳನ್ನೂ ಒಳಗೊಂಡಿದೆ. ಆದರೆ ಈ ಎರಡು ಶಾಸನಗಳಲ್ಲಿಯೂ ಬರುವ ವಿಷಯ ಒಂದೇ. ದಾನದ ವಿಷಯವನ್ನೇ ಎರಡೂ ತಿಳಿಸುತ್ತವೆ. ಆದ್ದರಿಂದ ಕೂಟಶಾಸನವೆಂದು ಕಂಡುಬರುವ ತಾಮ್ರಶಾಸನವನ್ನು ದಾನ ಪಡೆದವರ ವಂಶದವರು ಮುಂದೆ ಯಾವಾಗಲೋ ತಮ್ಮ ದಾಖಲೆಗಾಗಿ ಮೂಲಶಾಸನದಿಂದ ಪ್ರತಿ ಮಾಡಿಸಿಕೊಂಡಿದ್ದಿರಬೇಕೆಂಬುದು ಸ್ಪಷ್ಟ. ಈಗ ಕೂಟಶಾಸನಗಳೆಂದು ಸ್ಪಷ್ಟವಾಗಿರುವ ತಾಮ್ರ ಶಾಸನಗಳಲ್ಲಿ ಕೆಲವಾದರೂ ಇಂಥ ಪ್ರತಿಗಳಾಗಿರಬಹುದು.

ಇವರ ತಾಮ್ರಶಾಸನಗಳು ಮೂರರಿಂದ ಏಳು ಹಲಗೆಗಳವರೆಗೆ ಇರುತ್ತವೆ. ಮೊದಮೊದಲ ಅರಸರ ಶಾಸನಗಳ ಹಲಗೆಗಳ ಅಗಲ ಕಿರಿದಾಗಿದ್ದು ಓಲೆಗರಿಯ ಆಕಾರದಲ್ಲಿವೆ. ಹಲಗೆಯ ಒಂದೊಂದು ಮುಖದಮೇಲೂ ಸ್ಫುಟವಾಗಿ ಹಳಗನ್ನಡ ಲಿಪಿಯಲ್ಲಿ ಕಡೆದ 4 ಅಥವಾ 5 ಪಂಕ್ತಿಗಳಿವೆ. ಮುಂದೆ ಕ್ರಮೇಣ ಹಲಗೆಯ ಅಗಲ ಹೆಚ್ಚಾಗಿದೆ. ಸಾಲುಗಳು ಹೆಚ್ಚಿವೆ. ಒಕ್ಕಣೆ ಬೆಳೆದಿದೆ. ಶಾಸನದ ಹಲಗೆಗಳನ್ನು ಎಡಭಾಗದಲ್ಲಿರುವ ರಂಧ್ರಗಳ ಮೂಲಕ ಹಾದುಹೋಗುವ ಒಂದು ಬಳೆಯಿಂದ ಬಂಧಿಸಿ ಬಳೆಯ ತುದಿಗಳನ್ನು ಜೋಡಿಸಿ ಆನೆಯ ಮುದ್ರೆ ಹಾಕಲಾಗುತ್ತಿತ್ತು. ಲಿಪಿ ಆಯಾ ಶತಮಾನದ ಕನ್ನಡದಲ್ಲಿದ್ದರೂ ಭಾಷೆ ಸಂಸ್ಕೃತ, ಪ್ರೌಢಶೈಲಿಯ ಗದ್ಯ; ಶಾಸನಗಳ ಒಕ್ಕಣೆ ಒಂದೇ ಬಗೆ. ಜೈನ ಶಾಸನಗಳಲ್ಲಿ ಮೊದಮೊದಲಿನ ತಾಮ್ರ ಶಾಸನಗಳು ಪೂರ್ತಿಯಾಗಿ ಸಂಸ್ಕೃತದಲ್ಲಿದ್ದರೂ ದುರ್ವಿನೀತನಿಂದೀಚೆಗೆ ದಾನ ಕೊಟ್ಟ ಗ್ರಾಮದ ಎಲ್ಲೆಯನ್ನು ತಿಳಿಸುವಾಗ ಒಮ್ಮೊಮ್ಮೆ ಕನ್ನಡವನ್ನು ಬಳಸುವ ರೂಢಿ ಬಳಕೆಗೆ ಬಂತು. ಗಂಗ ದುರ್ವಿನೀತನ ಆಳಿಕೆಯ ನಾಲ್ಕನೆಯ ವರ್ಷದ ಪೆಣ್ಣೂರು ತಾಮ್ರಶಾಸನದಲ್ಲಿ ಕೊನೆಯ ಒಂದು ವಾಕ್ಯ ಮಾತ್ರ ಕನ್ನಡದಲ್ಲಿದೆ. ಶಾಸನವನ್ನು ಕಂಡರಿಸಿದ ಚೋಮತ್ತಾಚಾರನಿಗೆ ಕೊಟ್ಟ ದತ್ತಿಯನ್ನು ತಿಳಿಸುವ ಮುಕ್ಕಣ್ಡಕತ್ತು ಮಣಮ್ಮನೆಯುವ್ವಾಟು ಮುಟ್ಟಿಯುನ್ತರಕ್ಕುಮ್ಒಡೆಅನ್ ಎಂಬ ವಾಕ್ಯ ಆ ಕಾಲದ ಕನ್ನಡದ ಸ್ವರೂಪವನ್ನು ಚೆನ್ನಾಗಿ ಪ್ರತಿಬಿಂಬಿಸುತ್ತದೆ.



ಶ್ರೀಪುರುಷನ ಶಾಸನ, ತಲಕಾಡು

ಸಾಮಾನ್ಯವಾಗಿ ಈ ಶಾಸನಗಳು ಆರಂಭವಾಗುವುದು ಸ್ವಸ್ತಿ ಜಿತಂ ಭಗವತಾ ಎಂದು. ಮುಂದೆ ಕೊಂಗುಣಿವರ್ಮನಿಂದ, ತಾಮ್ರಶಾಸನವನ್ನು

ಹಾಕಿಸಿದ ರಾಜನವರೆಗೆ ವಂಶಾವಳಿಯನ್ನು ವಿವರಿಸಿರುತ್ತಾರೆ. ಗ್ರಾಮಗಳನ್ನು ದಾನವಾಗಿ ಕೊಟ್ಟ ವಿಷಯವನ್ನು ನಿರೂಪಿಸುವುದೇ ಹೆಚ್ಚು. ಶಾಸನಗಳನ್ನು ಕೊರೆಯುತ್ತಿದ್ದವನ ಬಗ್ಗೆ ವಿಶ್ವಕರ್ಮಾಚಾರ್ಯ ಎಂಬ ಅಧಿಕಾರದ ಹೆಸರನ್ನೆ ತಿಳಿಸುತ್ತಿದ್ದರೂ ಒಮ್ಮೊಮ್ಮೆ ಅವನ ಹೆಸರನ್ನೂ ಕೊಡುತ್ತಿದ್ದುದುಂಟು.

ಗಂಗರ ತಾಮ್ರಶಾಸನಗಳ ರೀತಿ, ಲಿಪಿಯ ಬೆಳೆವಣಿಗೆ, ಅದರ ಸೌಂದರ್ಯ - ಇವಕ್ಕೆ ಹಲವು ಉದಾಹರಣೆಗಳನ್ನು ಕೊಡಬಹುದು. ಕೃಷ್ಣವರ್ಮನ ಕುಡಿಥಿಯಂ ದಾನಶಾಸನ, ಅವಿನೀತನ ಹೊಸಕೋಟೆಯ ತಾಮ್ರಶಾಸನ, ದುರ್ವಿನೀತನ ಪೆಣ್ಣೂರು ದಾನಶಾಸನ, ಗುಮ್ಮರೆಡ್ಡಿಪುರ ಶಾಸನ, ಸುಂದರವಾದ ಲಿಪಿಯುಳ್ಳ 1ನೆಯ ಶಿವಮಾರನ ಹಲ್ಲೆಗೆರೆ ತಾಮ್ರಶಾಸನ (713), ಶ್ರೀಪುರುಷನ ಆಳಿಕೆಯ ಮೊದಲನೆಯ ವರ್ಷದ ಬಾರದೂರು ದಾನಶಾಸನ, ಇಪ್ಪತ್ತೈದನೆಯ ವರ್ಷದ ಜಾವಳಿ ಶಾಸನ, ಐವತ್ತನೆಯ ವರ್ಷದ ದೇವರಹಳ್ಳಿ ಶಾಸನ, 1ನೆಯ ರಾಚಮಲ್ಲನ ಆಳಿಕೆಯ ಮೊದಲನೆಯ ವರ್ಷದ (819) ಪೆರ್ಜರಂಗಿ ದಾನಶಾಸನ - ಇವು ಕೆಲವು. ಇವುಗಳಲ್ಲೆಲ್ಲ ಮಾರಸಿಂಹನ ಏಳು ಹಲಗೆಗಳಿರುವ ಕೂಡಲೂರು ಶಾಸನ ಮಾದರಿಯಾದ್ದು ಮತ್ತು ಚಾರಿತ್ರಿಕವಾಗಿ ಅಮೂಲ್ಯವಾದ್ದು. 963ರಲ್ಲಿ ಹುಟ್ಟಿದ ಈ ಶಾಸನ ಭಾಷೆ, ಲಿಪಿ ಎಲ್ಲದರಲ್ಲಿಯೂ ಸುಂದರವಾಗಿದೆ. ಚೌಕನಾಗಿರುವ ಇದರ ಆನೆಯ ಮುದ್ರೆಯೂ ಆಕರ್ಷಕವಾಗಿದೆ. ಅದರ ಕೆಳಗೆ ಶ್ರೀಮಾರಸಿಂಘದೇವ ಎಂಬ ರಾಜನ ಅಂಕಿತವೂ ಇದೆ. ಮಾರಸಿಂಹನ ಸಂಪೂರ್ಣವಾದ ವಂಶಾವಳಿಯಿದೆ. ಒಬೊಬ್ಬ ರಾಜನಿಗೂ ದೀರ್ಘವಾದ ವಿವರಗಳುಂಟು. ಇದೇ ಗಂಗರ ಶಾಸನಗಳಲ್ಲೆಲ್ಲ ಅತ್ಯಂತ ವಿಸ್ತಾರವಾದ ಶಾಸನವೆಂದು ಹೇಳಬಹುದು. ಇದೇ ರಾಜನ ಇದೇ ರೀತಿಯ ಇನ್ನೊಂದು ತಾಮ್ರಶಾಸನ ಧಾರವಾಡ ಜಿಲ್ಲೆಯ ಕಾದಲೂರಿನಲ್ಲಿ ದೊರೆತಿದೆ.



ಜೈನ ಚೈತ್ಯಾಲಯ, ಚಿಕ್ಕಹನಸೋಗೆ

ಶ್ರೀಪುರುಷ ಪಟ್ಟಕ್ಕೆ ಬಂದ ವರ್ಷದಿಂದಲೇ ಶಿಲಾಶಾಸನಗಳೂ ವೀರಗಲ್ಲುಗಳೂ ದೊರೆಯಲಾರಂಭಿಸುತ್ತವೆ. ಇವುಗಳ ಸಂಖ್ಯೆ ಮುಂದೆ ಬೆಳೆಯುತ್ತ ಹೋಗುತ್ತದೆ. ಈ ಶಾಸನಗಳೂ ವೀರಗಲ್ಲುಗಳೂ ಹೆಚ್ಚಾಗಿ ಕಗ್ಗಲ್ಲಿನ ಮೇಲೆಯೇ ಇವೆ. ಇವರ ಪ್ರಾಚೀನಶಾಸನಗಳಲ್ಲೊಂದಾದ, ದುರ್ವಿನೀತನ ಸಿರಿಗುಂದದ ಶಾಸನವನ್ನು ಬಳಪದ ಕಲ್ಲಿನ ತೆಳುಹಲಗೆಯ ಮೇಲೆ ಕಂಡರಿಸಿದೆ. ಹಾಗೆಯೇ ಚಾವುಂಡರಾಯನ ಪ್ರತಾಪವನ್ನು ವರ್ಣಿಸುವ ಶಾಸನವಿರುವ ತ್ಯಾಗದ ಬ್ರಹ್ಮದೇವರ ಕಂಬವೂ ಬಳಪದ ಕಲ್ಲಿನದು. ತಲಕಾಡಿನಲ್ಲಿ ದೊರೆತ ಶ್ರೀಪುರುಷನ ರಾಜ್ಯಾಡಳಿತದ ಒಂದನೆಯ ವರ್ಷದ ಶಿಲಾಶಾಸನದಂತೆ ನಯಗೊಳಿಸಿದ ದೊಡ್ಡದಾದ ಶಿಲಾಫಲಕದ ಮೇಲೆ ಸುಂದರವಾಗಿ ಕಂಡರಿಸಿರುವ ಶಾಸನಗಳು ಕೆಲವಿದ್ದರೂ ಸಾಮಾನ್ಯವಾಗಿ ಒರಟು ಬಂಡೆಯ ಮೇಲೋ ಹದಗೊಳಿಸದ ಕಲ್ಲಿನ ಹಲಗೆಗಳ ಮೇಲೋ ಉಬ್ಬುತಗ್ಗುಗಳ ನಡುವೆಯೇ ಕೊರೆದಿರುವುದೇ ಹೆಚ್ಚು. ಆದರೂ ಅಕ್ಷರಗಳು ದೊಡ್ಡವೂ ಆಳವೂ ಆಗಿರುವುದರಿಂದ ಅವನ್ನು ಗುರುತಿಸಲು ಹೆಚ್ಚು ತೊಂದರೆ ಆಗದು. ಇವುಗಳಲ್ಲಿ ಹೆಚ್ಚು ವಿಷಯ ಇರುವುದಿಲ್ಲ. ಭಾಷೆ ಕನ್ನಡವೇ ಆದರೂ ಆಗಿನ ಆಡುನುಡಿಗಳನ್ನು ಹೆಚ್ಚು ಬಳಸುತ್ತಿದ್ದುದರಿಂದಲೋ ಆಗಿನ ಅನೇಕ ಪಾರಿಭಾಷಿಕ ಪದಗಳು ಈಗ ಬಳಕೆಯಲ್ಲಿಲ್ಲದಿರುವುದರಿಂದಲೊ ಬರೆವಣಿಗೆಯಲ್ಲಿ ತಪ್ಪು ಹೆಚ್ಚಾಗಿರುವುದ ರಿಂದಲೋ ಎಷ್ಟೋ ವೇಳೆ ಈ ಶಾಸನಗಳು ಅರ್ಥಕ್ಕೆ ನಿಲುಕುವುದಿಲ್ಲ. ಮದ್ದೂರು ತಾಲ್ಲೂಕಿನ ತಾಯಲೂರು ಶಾಸನ, ಪಾಂಡವಪುರ ತಾಲ್ಲೂಕಿನ ಕ್ಯಾತನಹಳ್ಳಿ ಶಾಸನ ಮುಂತಾದುವುಗಳಲ್ಲಿರುವಂತೆ ಶಾಸನದ ಕಲ್ಲಿನ ಮೇಲೆ ಗಂಗರ ವಂಶಲಾಂಛನವಾದ ಆನೆಯ ಚಿತ್ರವನ್ನು ಬಿಡಿಸಿರುವುದುಂಟು. ಕೊಡಗಿನ ಬಿಳಿಯೂರು ಪೆಗ್ಗೂರುಗಳಲ್ಲಿ ದೊರೆತ ಗಂಗ ಶಾಸನಗಳ ಮೇಲ್ಭಾಗದಲ್ಲಿ ಆನೆಯೊಂದಿಗೆ ಕಲಶ, ದೀಪಸ್ತಂಭ ಮುಕ್ಕೊಡೆಗಳ ಶಿಲ್ಪವನ್ನೂ ನೋಡಬಹುದು.

ಗಂಗರ ಕೆಲವು ಕಂಬಶಾಸನಗಳೂ ಉಂಟು. ಇವುಗಳಲ್ಲಿ ಶ್ರವಣಬೆಳಗೊಳದ ಕೂಗೆಬ್ರಹ್ಮದೇವರ ಕಂಬದ ಬುಡದಲ್ಲಿರುವ ಮಾರಸಿಂಹನ ಶಾಸನ ಗಂಗರ ಶಿಲಾಶಾಸನಗಳಲ್ಲಿಯೇ ಉದ್ದವಾದ್ದೆನ್ನಬಹುದು. ಇದು ಮಾರಸಿಂಹ ತೀರಿಕೊಂಡ ಅನಂತರ ಅವನ ನೆನಪಿಗಾಗಿ ನಿಲ್ಲಿಸಿದ ಶಾಸನಗಂಬ. ಈ ದೊಡ್ಡ ಶಾಸನದಲ್ಲೂ ಮಾರಸಿಂಹನ ವಂಶಾವಳಿಯನ್ನು ತಿಳಿಸಿಲ್ಲ. ತನ್ನ ಜೀವಿತಕಾಲದಲ್ಲಿ ಮಾರಸಿಂಹ ನಡೆಸಿದ ಯುದ್ಧಗಳನ್ನು ಮತ್ತು ಅವನ ಸಾಧನೆಗಳನ್ನು ಹೃದಯಂಗಮವಾಗಿ ಚಿತ್ರಿಸಿದೆ. ತ್ಯಾಗದ ಬ್ರಹ್ಮದೇವರ ಕಂಬ ಇನ್ನೊಂದು. ರಾಚಮಲ್ಲನ ಮಂತ್ರಿ ಚಾವುಂಡರಾಯನ ಗುಣಗಾನ ಮಾಡುವ ಈ ಕಂಬದ ಮೇಲಿನ ಶಾಸನ ಮೊದಲು ಕಂಬದ ನಾಲ್ಕು ಮುಖಗಳಲ್ಲಿತ್ತು. ಈಗ ಮೂರು ಮುಖಗಳ ಮೇಲೆ ಅಳಿಸಿಹೋಗಿದೆ.

ಗಂಗರ ಕಾಲದ ವೀರಗಲ್ಲುಗಳು ತಮ್ಮದೇ ಆದ ವೈಶಿಷ್ಟ್ಯ ಹೊಂದಿವೆ. ಇವರ ಕಾಲದ ದಾನಶಾಸನಗಳಿಗಿಂತ ವೀರಗಲ್ಲಿನ ಶಾಸನಗಳ ಸಂಖ್ಯೆಯೇ ಹೆಚ್ಚೆಂದು ಹೇಳಬಹುದು. ಸಾಂಪ್ರದಾಯಿಕವಾದ, ಮೂರು ಅಂತಸ್ತುಗಳ ವೀರಗಲ್ಲುಗಳು ಕೆಲವಿವೆ. ಅವುಗಳಲ್ಲಿ ಯಳ್ಳಂಬಳಸೆಯ ವೀರಗಲ್ಲು ದೊಡ್ಡದಾಗಿಯೂ ಅತ್ಯಂತ ಸುಂದರವಾಗಿಯೂ ಇದೆ. ಬೂದುಬಣ್ಣದ ಕಗ್ಗಲ್ಲಿನಲ್ಲಿ ಈಗ ತಾನೇ ಕಡೆದು ನಿಲ್ಲಿಸಿರುವಷ್ಟು ಹೊಸದಾಗಿ ಕಾಣಿಸುವ ಈ ವೀರಗಲ್ಲಿನ ಮೊದಲ ಅಂತಸ್ತು ವೀರರು ಯುದ್ಧದಲ್ಲಿ ತೊಡಗಿರುವುದನ್ನೂ ಎರಡನೆಯದು ಅವರು ಅಪ್ಸರೆಯರ ತೋಳತೆಕ್ಕೆಯಲ್ಲಿ ಸ್ವರ್ಗದೆಡೆಗೆ ಹಾರುತ್ತಿರುವುದನ್ನೂ ಮೇಲಿನ ಅಂತಸ್ತುಗಳಲ್ಲಿ ಸ್ವರ್ಗದಲ್ಲಿ ಸುಖಾಸೀನರಾಗಿ ಕುಳಿತಿರುವ ನಾಲ್ವರು ವೀರರನ್ನೂ ಚಿತ್ರಿಸಿದೆ. ಅಡ್ಡಪಟ್ಟಿಕೆಗಳಲ್ಲಿ ಶ್ರೀಪುರುಷ ಶಿವಮಾರ ಮೊದಲಾದವರು ತೀರಿಕೊಂಡ ವಿಷಯವನ್ನು ತಿಳಿಸುವ ಶಾಸನವಿದೆ. ಆದರೂ ಇವರ ವೀರಗಲ್ಲುಗಳು ಒರಟು ಹಾಸುಗಲ್ಲುಗಳ ಮೇಲಿರುವುದೇ ಹೆಚ್ಚು. ಎಷ್ಟೋ ವೇಳೆ ಈ ಹಾಸುಗಲ್ಲುಗಳಿಗೆ ನಿರ್ದಿಷ್ಟವಾದ ಆಕಾರ, ಅಳತೆ ಇರುವುದಿಲ್ಲ. ಬಂಡೆಯಿಂದ ಸಿಡಿಸಿದ ಈ ಹಲಗೆಗಳು ಯಾವ ಆಕಾರದಲ್ಲಿದ್ದರೆ ಹಾಗೆಯೇ ಅವನ್ನು ಕಂಡರಿಸಲು ಉಪಯೋಗಿಸುತ್ತಾರೆ. ಶಿಲ್ಪವನ್ನೂ ಶಾಸನವನ್ನೂ ಕಂಡರಿಸಿರುವ ಮುಖವನ್ನು ಕೂಡ ನಯಗೊಳಿಸಿರುವುದಿಲ್ಲ. ಇದರಲ್ಲಿ ಹೆಚ್ಚು ಭಾಗ ವೀರರ ಆಕೃತಿಗಳಿಗಾಗಿ ಮೀಸಲು; ಒಂದೇ ಅಂತಸ್ತಿನಲ್ಲಿ ಕತ್ತಿಗುರಾಣಿಗಳನ್ನು ಹಿಡಿದ ವೀರರು ಒಬ್ಬರನ್ನೊಬ್ಬರು ಎದುರಿಸುತ್ತಿರವಂತೆಯೋ ಆನೆಕುದುರೆಗಳ ಮೇಲೆ ಕುಳಿತು ಯುದ್ಧಮಾಡುತ್ತಿರುವಂತೆಯೋ ತೆಳುವುಬ್ಬುಶಿಲ್ಪದಲ್ಲಿ ಬಿಡಿಸಿದ್ದು ಭಾವಯುಕ್ತವಾಗಿರುತ್ತದೆ. ಈ ಶಿಲ್ಪದ ಸುತ್ತಲೂ ಯುದ್ಧದ ವಿಷಯವನ್ನು ತಿಳಿಸುವ ಒಂದು ಶಾಸನ ಹಿರೇಗುಂಡುಗಲ್ಲಿನಲ್ಲಿದೆ. ಇಂಥ ಇಪ್ಪತ್ತಕ್ಕೂ ಹೆಚ್ಚು ವೀರಗಲ್ಲುಗಳ ಒಂದು ದೊಡ್ಡ ಗುಂಪೇ ಇದೆ. ರಾಷ್ಟ್ರಕೂಟರಿಗೂ ಗಂಗ ಶ್ರೀಪುರುಷ ಶಿವಮಾರರಿಗೂ ಬೇರೆ ಬೇರೆ ಕಡೆ ನಡೆದ ಯುದ್ಧಗಳಲ್ಲಿ ಮಡಿದ ವೀರರ ಸ್ಮಾರಕವಾಗಿ ಇವು ನಿಂತಿವೆ. ಈಗ ಬೆಂಗಳೂರು ವಸ್ತುಸಂಗ್ರಹಾಲಯದಲ್ಲಿರುವ ಬೇಗೂರಿನದಾದ, ಏಳು ಅಡಿ ಉದ್ದ ಏಳು ಅಡಿ ಅಗಲ ಇರುವ ದೊಡ್ಡದೊಂದು ವೀರಗಲ್ಲು, ಗಂಗ ಎಱೆಯಪ್ಪನಿಗೂ ನೊಳಂಬರ ವೀರ ಮಹೇಂದ್ರನಿಗೂ ನಡೆದ ಯುದ್ಧದಲ್ಲಿ ತುಂಬೆಪಾಡಿಯಲ್ಲಿ ಗಂಗರ ಸಾಮಂತನಾಗಿದ್ದ ನಾಗತ್ತರ ಶತ್ರುವಿನ ಆನೆಯನ್ನೆದುರಿಸಿ ತುಮುಲ ಯುದ್ಧ ಮಾಡಿ ಮಡಿದ ವಿಷಯವನ್ನು ತಿಳಿಸುತ್ತದೆ; ಯುದ್ಧದಲ್ಲಿ ಸತ್ತವೀರರಿಗಷ್ಟೇ ಅಲ್ಲ ರಾಜರಿಗಾಗಿ ವೇಳೆಗೊಂಡು ಸತ್ತ ವೀರರಿಗಾಗಿ ನಿಲ್ಲಿಸಿರುವ ವೀರಗಲ್ಲುಗಳೂ ಹಲವಿವೆ. ನೀತಿಮಾರ್ಗ ಸ್ವರ್ಗಸ್ಥನಾದಾಗ, ಅವನ ಮನೆಮಗತಿಯಾಗಿದ್ದ (ಎಂದರೆ ಮನೆಯಲ್ಲಿ ಹುಟ್ಟಿದವನಂತೆಯೆ ಇದ್ದು ವಂಶಪಾರಂಪರ್ಯವಾಗಿ ಕೆಲಸ

ಮಾಡುತ್ತ ಬಂದ ಮನೆಯಾಳು) ಅಗರಯ್ಯ ಕೀಲ್ಗುಂಠೆಯಾಗಿ ಅವನೊಂದಿಗೆ ಸಾವನ್ನಪ್ಪಿದ್ದ ವಿಷಯವನ್ನು ದೊಡ್ಡಹುಂಡಿಯ ವೀರಗಲ್ಲೊಂದು ತಿಳಿಸುತ್ತದೆ. ಪರ್ಯಂಕದ ಮೇಲೆ ಮಲಗಿರುವ ರಾಜನನ್ನು ತನ್ನ ತೊಡೆಯ ಮೇಲಿರಿಸಿಕೊಂಡು ಅಗರಯ್ಯ ಸಾಯಲು ಸಿದ್ಧವಾಗಿರುವಂತೆ ಆ ಶಾಸನದ ಮೇಲಿರುವ ಶಿಲ್ಪದಲ್ಲಿ ಬಿಡಿಸಿದೆ. ರಾಚಮಲ್ಲ ಕುಂಬಳೆಯಲ್ಲಿ ಸ್ವರ್ಗಸ್ಥನಾದಾಗ ಬೆದನ್ತೆ ರಾಚಯ ಎನ್ನುವವನು ಕಿಚ್ಚು ಹೊಕ್ಕುದನ್ನೂ ಗಂಗ ಚನ್ದಿಯಮ್ಮರಸ ಕಾಲವಾದಾಗ ಕೀಲ್ಗುಂಠೆಯಾದ್ದನ್ನೂ ವೀರಗಲ್ಲುಗಳು ತಿಳಿಸುತ್ತವೆ. ಆತಕೂರಿನಲ್ಲಿ ದೊರೆತ ದೊಡ್ಡದೊಂದು ವೀರಗಲ್ಲು ಸ್ವಾರಸ್ಯವಾದ್ದು. ಗಂಗ ಬೂತುಗ ರಾಷ್ಟ್ರಕೂಟರೊಡನೆ ಸೇರಿ ಚೋಳ ರಾಜಾದಿತ್ಯನ ಮೇಲೆ ತಕ್ಕೋಲದಲ್ಲಿ ಯುದ್ಧ ಮಾಡಿದಾಗ ಮಣಲೆರನೆಂಬ ವೀರ ತೋರಿಸಿದ ಶೌರ್ಯಕ್ಕೆ ಮೆಚ್ಚಿ ಬೇಡಿಕೊ ಎಂದಾಗ, ಕಾಳಿ ಎಂಬ ಬೇಟೆನಾಯಿಯನ್ನು ಮಣಲೆರ ಕೇಳಿ ಪಡೆಯುತ್ತಾನೆ. ಒಮ್ಮೆ ಆ ನಾಯಿಯನ್ನು ಕಾಡುಹಂದಿಯೊಂದರ ಮೇಲೆ ಬಿಟ್ಟಾಗ ನಾಯಿಯೂ ಹಂದಿಯೂ ಒಟ್ಟಿಗೆ ಸಾಯುತ್ತವೆ. ಮಣಲೆರ ಆ ನಾಯಿಗಾಗಿ ವೀರಗಲ್ಲನ್ನು ನಿಲ್ಲಿಸಿ ಅದರ ಪೂಜೆಗಾಗಿ ಭೂಮಿದಾನ ಮಾಡಿದ್ದಾನೆ. ಶಾಸನದ ಮೇಲೆ ನಾಯಿಹಂದಿಗಳು ಕಚ್ಚಾಡುತ್ತಿರುವ ಶಿಲ್ಪವಿದೆ. (ಎಂ.ಎಚ್.)

**ನಾಣ್ಯಗಳು :** ತಲಕಾಡು ಗಂಗರ ನಾಣ್ಯಗಳ ವಿಷಯದಲ್ಲಿ ನಮಗೆ ತಿಳಿದಿರುವ ಮಾಹಿತಿ ಅತ್ಯಲ್ಪ. ಗಂಗರದೆಂದು ಖಚಿತವಾಗಿ ಹೇಳಬಹುದಾದ ಒಂದು ನಾಣ್ಯವೂ ಈವರೆಗೆ ದೊರೆತಿಲ್ಲವೆಂದೇ ಹೇಳಬೇಕು. ಆದರೆ ಗಂಗರು ಆನೆಯನ್ನು ತಮ್ಮ ಲಾಂಛನವನ್ನಾಗಿ ಹೊಂದಿದ್ದರು. ಆದುದರಿಂದ ಬರೆಹವಿಲ್ಲದ ಮತ್ತು ಆನೆಯ ಚಿತ್ರವನ್ನು ಹೊಂದಿರುವ ಚಿನ್ನದ ನಾಣ್ಯಗಳು ಗಂಗರಿಗೆ ಸೇರಿದವೆಂದು ವಿದ್ವಾಂಸರ ಅಭಿಪ್ರಾಯ. ಆದರೆ ಇದರಲ್ಲಿ ಖಚಿತತೆಯಿಲ್ಲ.

ಎಂ.ಎಚ್.ಕೃಷ್ಣ ಅವರು ಐದು ರೀತಿಯ ನಾಣ್ಯಗಳನ್ನು ಗಂಗರವೆಂದು ತಿಳಿಸುತ್ತಾರೆ. ಇವುಗಳು ಚಿನ್ನ ಮತ್ತು ತಾಮ್ರಗಳಲ್ಲಿವೆ. ಸು.58-59, 6 ಮತ್ತು 1.5 ಗ್ರೇನ್ ತೂಗುವ ಮೂರು ದರ್ಜೆಯ ಚಿನ್ನದ ನಾಣ್ಯಗಳಿವೆ. ದೊಡ್ಡ ಚಿನ್ನದ ನಾಣ್ಯಗಳ ಮುಮ್ಮುಖದಲ್ಲಿ ಬಲಭಾಗಕ್ಕೆ ನಿಂತಿರುವ ಸಾಲಂಕೃತ ಆನೆ; ಸೊಂಡಲಿನ ಎರಡು ಪಕ್ಕಗಳಲ್ಲಿಯೂ ಪುಷ್ಪಾಲಂಕಾರ; ಮೇಲ್ಭಾಗದಲ್ಲಿ ದೇವ ಎಂಬ ಕನ್ನಡ ಬರೆಹ, ಹಿಮ್ಮುಖದಲ್ಲಿ ಪುಷ್ಪಾಲಂಕಾರ ಇರುತ್ತವೆ. ಈ ನಾಣ್ಯಗಳು ಕಳಿಂಗದೇಶದಲ್ಲಿ ಆಳಿದ ಗಂಗರ ನಾಣ್ಯಗಳಂತೆಯೇ ಇದ್ದರೂ ಕರ್ನಾಟಕದಲ್ಲಿ ಹೇರಳವಾಗಿ ದೊರೆಯುತ್ತವಾದ್ದರಿಂದ ಇವು ತಲಕಾಡು ಗಂಗರ ನಾಣ್ಯಗಳೆಂದೂ ಇದನ್ನೇ ಕಳಿಂಗದ ಗಂಗರು ಅನುಕರಿಸಿದರೆಂದೂ ಕೃಷ್ಣ ಅಭಿಪ್ರಾಯಪಡುತ್ತಾರೆ. ತಲಕಾಡು ಗಂಗರ ತಾಮ್ರದ ನಾಣ್ಯಗಳು ಚಿನ್ನದ ನಾಣ್ಯಗಳಂತೆಯೇ ಇವೆ. ಇವುಗಳ ಮುಮ್ಮುಖದಲ್ಲಿ ಸಾಲಂಕೃತ ಆನೆ ಮತ್ತು ಹಿಮ್ಮುಖದಲ್ಲಿ ಶ್ರೀಪುರುಷ ಹಾಗೂ ಶ್ರೀ ಶ್ರೀ ನನ್ನಿಯಗಂಗ ಎಂಬ ಬರೆಹ ಕಾಣುತ್ತವೆ. (ಎ.ವಿ.ಎನ್.)

**ಇತರ ಗಂಗರ ಶಾಖೆಗಳು :** ಗಂಗವಾಡಿ ಪ್ರದೇಶ ಚೋಳರ ಸ್ವಾಧೀನವಾದ ಅನಂತರ ಗಂಗ ಮನೆತನಕ್ಕೆ ಸೇರಿದ ಹಲವಾರು ಮಾಂಡಲಿಕರು ಸುತ್ತಲಿನ ಪ್ರದೇಶಗಳಲ್ಲಿ ಅಧಿಕಾರದಲ್ಲಿ ಮುಂದುವರಿದಿದ್ದರು. ಅಂತಹ ಗಂಗರ ಇತರ ಶಾಖೆಗಳಿಗೆ ಸೇರಿದ ಮಾಂಡಲಿಕರನ್ನು ಕುರಿತು ಇಲ್ಲಿ ಪ್ರಸ್ತಾಪಿಸಲಾಗಿದೆ.

**ಕಾದರವಳ್ಳಿಯ ಗಂಗರು :** ಕಲ್ಯಾಣದ ಚಾಳುಕ್ಯ ಇಮ್ಮಡಿ ಜಯಸಿಂಹನ ಮಾಂಡಲಿಕನಾಗಿ ಗಂಗಕುಲಕ್ಕೆ ಸೇರಿದ ಕಂಚರಸ ಬೆಳಗಾಂವಿ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನ ಸುತ್ತಲ ಕಾದರವಳ್ಳಿ 30 ಎಂಬ ಸಣ್ಣ ವಿಭಾಗದಲ್ಲಿ ಅಧಿಕಾರದಲ್ಲಿದ್ದ. ಈತ ಕೊಂಗುಣಿವರ್ಮ, ಗಂಗಮಾರ್ತಾಂಡ ಮುಂತಾದ ಬಿರುದುಗಳನ್ನು ಧರಿಸಿದ್ದ. ಆರನೆಯ ವಿಕ್ರಮಾದಿತ್ಯನ ಅಧೀನದಲ್ಲಿ 1099ರಲ್ಲಿ ಮಹಾಮಂಡಲೇಶ್ವರ, ಕುವಳಾಲಪುರವರೇಶ್ವರ, ಛನ್ನವತಿಸಹಸ್ರಮಂಡಲಾಧಿನಾಯಕ, ಗಂಗಮಾರ್ತಾಂಡ, ಪದ್ಮಾವತೀಲಬ್ಧವರ ಪ್ರಸಾದ ಇತ್ಯಾದಿ ಬಿರುದಿದ್ದ ಅರಿಕೇಸರಿದೇವ ಇದೇ ಕಾದರವಳ್ಳಿ 30ರಮನ್ನೆಯ ಸ್ವಾಮ್ಯವನ್ನಾಳುತ್ತಿದ್ದ.

**ಮಂಡಲಿಯ ಗಂಗರು :** ಶಿವಮೊಗ್ಗ ಜಿಲ್ಲೆಯಲ್ಲಿಯೂ ಗಂಗ ಮನೆತನದ ಶಾಖೆಯೊಂದಕ್ಕೆ ಸೇರಿದ ಮಾಂಡಲಿಕರು ಅಧಿಕಾರದಲ್ಲಿದ್ದರು. ಇವರು ಆಳುತ್ತಿದ್ದ ಪ್ರದೇಶ ಮಂಡಲಿ 1000. ಆರ್‌ಡಿ ವಿಕ್ರಮಾದಿತ್ಯ ಯುವರಾಜನಾಗಿದ್ದಾಗ ಗಂಗವಾಡಿ ಪ್ರದೇಶಗಳೆಲ್ಲಾ ಅವನ ಅಧಿಕಾರಕ್ಕೊಳಪಟ್ಟಿದ್ದುವು. ಆ ಬಳಿಕ ಪುನಃ ಗಂಗಮನೆತನಕ್ಕೆ ಸೇರಿದ ಮಾಂಡಲಿಕರಿಗೆ ಆತ ಅಧಿಕಾರ ವಹಿಸಿದಂತೆ ತೋರುತ್ತದೆ. ಶಿವಮೊಗ್ಗ ತಾಲ್ಲೂಕಿನಲ್ಲಿ ದೊರೆತ ಕೆಲವು ಶಾಸನಗಳಲ್ಲಿ ಈ ಮಾಂಡಲಿಕರ ವಿವರವಾದ ವಂಶಾವಳಿಯನ್ನು ಕೊಡಲಾಗಿದೆ. ಇವರು ಮೂಲ ಗಂಗ ಮನೆತನಕ್ಕೆ ಸೇರಿದವರೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅಯೋಧ್ಯಾಪುರದಲ್ಲಿ ಆಳಿದ ಇಕ್ಷ್ವಾಕುವಂಶಕ್ಕೆ ಸೇರಿದ ಹರಿಶ್ಚಂದ್ರನೆಂಬಾತ ಈ ಮನೆತನದ ಮೂಲ ಪುರುಷ. ಈತನ ಮಗ ಭರತ, ಸೊಸೆ ವಿಜಯಮಹಾದೇವಿ. ಅನಂತರದ 6 ತಲೆಮಾರುಗಳಿಗೆ ಸೇರಿದವರು ಕ್ರಮವಾಗಿ ಗಂಗದತ್ತ, ಭರತ-I, ಗಂಗದತ್ತ-II, ಹರಿಶ್ಚಂದ್ರ-II, ಭರತ-III ಹಾಗೂ ಗಂಗದತ್ತ-III, ಆ ಬಳಿಕ ಈ ಅರಸರು ಅಹಿಚ್ಛತ್ರಪುರದಿಂದ ಆಳತೊಡಗಿದರು. ಅಲ್ಲಿನ ಮೊದಲ ಅರಸ ವಿಷ್ಣುಗುಪ್ತ. ಈತನ ಪತ್ನಿ ಪೃಥ್ವೀಮಹಾದೇವಿ. ಈತನ ಇಬ್ಬರು ಮಕ್ಕಳಲ್ಲಿ ಹಿರಿಯನಾದ ಭಗದತ್ತ ಕಳಿಂಗ ದೇಶದ ರಾಜ್ಯಭಾರ ವಹಿಸಿ ಕಳಿಂಗ ಗಂಗನೆನಿಸಿಕೊಂಡ. ಈತನ ಅನುಜ ಶ್ರೀದತ್ತ. ಅಹಿಚ್ಛತ್ರಪುರದಲ್ಲಿ ಮುಂದುವರಿದಿದ್ದ. ಈತನ ಮನೆತನದ ಪದ್ಮನಾಭನಿಗೆ ರಾಮ, ಲಕ್ಷ್ಮಣರೆಂಬ ಇಬ್ಬರು ಮಕ್ಕಳು. ಉಜ್ಜಯಿನೀಪುರದ ಮಹೀಪಾಲನು ಪದ್ಮನಾಭನ ಮೇಲೆ ದಂಡೆತ್ತಿದಾಗ, ಬಹುಕಾಲ ಮಕ್ಕಳಿಲ್ಲದೆ ಬಳಿಕ ದೈವಕೃಪೆಯಿಂದ ಮಕ್ಕಳನ್ನು ಪಡೆದಿದ್ದ ಪದ್ಮನಾಭ ಅವರನ್ನು ಕಾಪಾಡಲು, ತನ್ನ ಸೋದರಿ ಹಾಗೂ ಮಂತ್ರಿವರ್ಗದವರ ಜೊತೆಗೂಡಿಸಿ ಅವರನ್ನು ದಕ್ಷಿಣಕ್ಕೆ ಕಳುಹಿಸಿದನಂತೆ. ದಡಿಗ ಮತ್ತು ಮಾಧವ ಎಂಬ ಹೆಸರುಗಳನ್ನು ಧರಿಸಿದ್ದ ಈ ರಾಜಕುಮಾರರು ಗಂಗಪೇರೂರಿನಲ್ಲಿ ಸಿಂಹನಂದ್ಯಾಚಾರ್ಯರನ್ನು ಕಂಡರು. ಆ ಯತಿಯ ವರಪ್ರಸಾದದಿಂದ ರಾಜ್ಯವೊಂದನ್ನು ಕಟ್ಟಿದ್ದರು. ಇವರೇ ತಲಕಾಡಿನ ಗಂಗ ಅರಸರು. ಅಲ್ಪಸ್ವಲ್ಪ ವ್ಯತ್ಯಾಸಗಳೊಡನೆ ಈ ಕತೆ ನಾಲ್ಕಾರು ಶಾಸನಗಳಲ್ಲಿ ಕಾಣಿಸಿಕೊಂಡಿದೆ. ತಲಕಾಡಿನ ಗಂಗರ ವಂಶಾವಳಿ ಹೆಚ್ಚು ಕಡಿಮೆ ಸರಿಯಾಗಿದೆ. ಆದರೆ 1ನೆಯ ಶಿವಮಾರನ ಬಳಿಕ ನೀಡಿರುವ ವಂಶಾವಳಿಗಳು ಭಿನ್ನವಾಗಿದ್ದು ಅಲ್ಲಿ ತೊಡಕುಗಳಿವೆ. 1085ರಲ್ಲಿ ತ್ರಿಭುವನಮಲ್ಲ ಭುಜಬಳ ಗಂಗ ಪೆರ್ಮಾಡಿ ಗಂಗವಾಡಿಯ ಮಂಡಲಿ ಸಾಸಿರವನ್ನು ತನ್ನ ಅನುಜನಾದ ಗೋವಿಂದನನೊಂದಿಗೆ ಆಳುತ್ತಿದ್ದ. ನಿದಿಗಿ ಗ್ರಾಮದ ಶಾಸನದಲ್ಲಿ ನೀಡಿರುವ ವಂಶಾವಳಿಯಂತೆ ಈತ ಬಹುಶಃ ಕಲಿಗಂಗನ ಮಗ, ಮಾರಸಿಂಹನ ಮೊಮ್ಮಗ. ಬೂತುಗನಿಗೆ ಮರುಳದೇವ, ಗುತ್ತಿಯ ಗಂಗ ಮತ್ತು ಮಾರಸಿಂಗದೇವನೆಂಬ ಮೂವರು ಮಕ್ಕಳು. ಮೂರನೆಯ ಮಾರಸಿಂಗನೇ ಭುಜಬಳಗಂಗನ ಅಜ್ಜ. ಈ ಭುಜಬಳ ಗಂಗನಿಗೆ ಬರ್ಮದೇವನೆಂಬ ಹೆಸರಿದ್ದಂತೆ ತೋರುತ್ತದೆ. ಈತನ ಪತ್ನಿ ಗಂಗಮಹಾದೇವಿ. 1112ನೆಯ ವರ್ಷದ ಒಂದು ಶಾಸನದಲ್ಲಿ ಈತನಿಗೆ ಗಂಗರಸ, ಮಾರಸಿಂಗ, ಗೊಗ್ಗಿ ಮತ್ತು ಕಲಿಯಂಗ ಎಂಬ ನಾಲ್ವರು ಮಕ್ಕಳಿದ್ದಂತೆ ತಿಳಿದುಬರುತ್ತದೆ. ಪುರಲೆ ಮತ್ತು ಹರಕೆರೆ ಶಾಸನಗಳಲ್ಲಿ ಬಹುಶಃ ಇವರನ್ನೇ ಮಾರಸಿಂಗ, ಸತ್ಯಗಂಗ. ರಕ್ಕಸಗಂಗ ಮತ್ತು ಭುಜಬಳಗಂಗನೆಂದು ಹೆಸರಿಸಿದೆ. ಇವರಲ್ಲಿ ಕೊನೆಯವನ ಪತ್ನಿ ಚಂದಲದೇವಿ. ಬಹುಶಃ ಆಳುಪ ಮನೆತನಕ್ಕೆ ಸೇರಿದಾಕೆ. ಮಗ ಸತ್ಯಗಂಗ. ಈತ ಸು.1132ರಲ್ಲಿ ಎಡೆಹಳ್ಳಿಯ ನೆಲೆವೀಡಿನಲ್ಲಿದ್ದ. ಈತನ ತಾತ ಪೆರ್ಮಾಡಿ (ಬರ್ಮದೇವ) ಹೊಯ್ಸಳ ಎರೆಯಂಗನ ಮಗಳನ್ನು ಮದುವೆಯಾದಂತೆ ಪುರಲೆ ಗ್ರಾಮದ ಈ ಶಾಸನದಿಂದ ತಿಳಿದುಬರುತ್ತದೆ. ಹರಕೆರೆ ಶಾಸನದಲ್ಲಿ ನಾಲ್ಕನೆಯವನಾದ ಭುಜಬಳಗಂಗನ ಮಗನ ಹೆಸರನ್ನು ಮಾರಸಿಂಗದೇವನೆಂದು ಕೊಟ್ಟಿದೆ. ಈತನ ಮಗ ನನ್ನಿಯಗಂಗ. ನಿದಿಗಿ ಗ್ರಾಮದಲ್ಲಿ ಕಾಣಿಸಿಕೊಳ್ಳುವ ನನ್ನಿಯಗಂಗ ಪೆರ್ಮಾಡಿ ಈತನೇ ಆಗಿರಬಹುದು. ಹಿರಿಯೂರಿನ ಇನ್ನೊಂದು ಶಾಸನದಲ್ಲಿ ನನ್ನಿಯ ಗಂಗ ಪೆರ್ಮಾಡಿಯ ಪ್ರಸ್ತಾಪವಿದೆ. ಈತನು ಕಲಿಗಂಗನ ಮಗನೆಂದೂ ಮಾರಸಿಂಗನ ಮೊಮ್ಮಗನೆಂದೂ ಶಾಸನದಲ್ಲಿ ಹೇಳಿದಂತಿದೆ. ಇವುಗಳಲ್ಲಿ ನೀಡಿರುವ ವಂಶಾವಳಿಗಳ ವಿವರಗಳು ಈ ರೀತಿ ತೊಡಕುಗಳನ್ನುಂಟುಮಾಡಿವೆ. ನನ್ನಿಯ ಗಂಗನ ಅನಂತರ ಈ ಶಾಖೆಯ ಯಾರೊಬ್ಬರೂ ಕಾಣಿಸಿಕೊಳ್ಳುವುದಿಲ್ಲ.

**ಆಸಂದಿಯ ಗಂಗರು :** ಕಡೂರು ಜಿಲ್ಲೆ ಆಸಂದಿಯನ್ನು ರಾಜಧಾನಿಯಾಗಿ ಪಡೆದಿದ್ದ ಆಸಂದಿ ನಾಡಿನಲ್ಲಿ ಹೊಯ್ಸಳರ ಮಾಂಡಲಿಕರಾಗಿಯೂ ಕೆಲವರು ಗಂಗರು ಆಳುತ್ತಿದ್ದರು. ಈ ಶಾಖೆಗೆ ಸೇರಿದ ಐವರ ಹೆಸರುಗಳು

ಲಭ್ಯವಾಗಿವೆ. ಗಂಗಾನ್ವಯ ಪ್ರಸೂತ, ಗಂಗಕುಳಮಳ ಮಾರ್ತಾಂಡ. ಕೋಳಾಲಪುರವರಾಧೀಶ್ವರ, ಪದ್ಮಾವತೀದೇವೀಲಬ್ಧವರಪ್ರಸಾದ ಮುಂತಾದ ಗಂಗರ ಬಿರುದುಗಳನ್ನು ಧರಿಸಿದ್ದ ಇವರು ವಿಶಿಷ್ಟವಾಗಿ ಕಣ್ಣಂಬಿನಾಥ, ಅಹವಜತ್ತಲಟ್ಟ ಮುಂತಾದ ಬಿರುದುಗಳನ್ನು ಪಡೆದಿದ್ದರು. ಬೇಡರ ಬಂಕಿ ಕಾಡಿನೊಳಗೆ ಅಗ್ಗದರಾಯ ತಪ್ಪಿಸಿಕೊಂಡು ಓಡಿಹೋದಾಗ, ಈ ಶಾಖೆಯ ಮೊದಲ ಅರಸನಾದ ವೈಜರಸ ತನ್ನ ಅಧಿಪತಿಯಾದ ಪೆರ್ಮಾಡಿಯ ಸಮ್ಮುಖದಲ್ಲಿ ಬಾಣವೊಂದನ್ನು ಬಿಟ್ಟಾಗ ಅದು ತಪ್ಪಿಸಿಕೊಂಡು ಓಡುತ್ತಿದ್ದ ಶತ್ರುವಿನ ಮೆದುಳನ್ನು ಭೇದಿಸಿಕೊಂಡು ಗಗನದಲ್ಲಿ ಹಾರುತ್ತಿದ್ದ ಹದ್ದಿನ ಕಣ್ಣಿಗೂ ಬಡಿಯಿತಂತೆ. ಈತನ ಈ ಸಾಹಸಕ್ಕೆ ಮೆಚ್ಚಿದ ಪೆರ್ಮಾಡಿ ಈತನಿಗೆ ಕಣಂಬು ಎಂಬ ಬಿರುದನ್ನಿತ್ತನೆಂದು ಆಸಂದಿಗ್ರಾಮದ ಶಾಸನದಲ್ಲಿ ಹೇಳಿದೆ. ಸುಮಾರು 9ನೆಯ ಶತಮಾನದ ಅಂತ್ಯದಿಂದ 11-13ನೆಯ ಶತಮಾನದವರೆಗೆ ಆಳಿದ ಈ ಮಾಂಡಲಿಕರ ವಂಶಾವಳಿಯನ್ನು ಹೀಗೆ ಗುರುತಿಸಬಹುದು:

ವೈಜರಸ I (ಪತ್ನಿ, ಅಂಗನಾ ಯಾ ಅಂಗಬ್ಬರಸಿ)
|
ಶ್ರೀನಾಥ (ನಾಡರಸ) (ಪತ್ನಿ, ನಾಗಲಾ)
|
ವೈಜರಸ II (ಪತ್ನಿ, ವೈಜಲದೇವಿ)
|
ಬಮ್ಮರಸ (ಪತ್ನಿ, ಗಂಗಾ)
|
ಕೊಂಗುಳಿವರ್ಮ ನರಸಿಂಹ
|
ವೈಜರಸ III

ಮೊದಲನೆಯ ವೈಜರಸನ ಕಾಲವನ್ನು ರೈಸ್‌ರವರು 1081 ಎಂದು ಗುರುತಿಸಿದ್ದಾರೆ. ಆದರೆ ಕೆಲವು ಶಾಸನಗಳಲ್ಲಿ ನೀಡಿರುವ ತೇದಿಗಳ ವಿವರಗಳು ಸರಿಹೊಂದುವುದಿಲ್ಲ. ನರಸಿಂಹ ಸು.1220ರವರೆಗೂ ಅನಂತರವೂ ಅಧಿಕಾರದಲ್ಲಿದ್ದನೆಂದು ಹೇಳಿದೆ. ಬಹುಶಃ ಆತನ ಮಗನಾಗಿರಬಹುದಾದ ಇನ್ನೊಬ್ಬ ವೈಜರಸನ ಹೆಸರು ಅದೇ ವರ್ಷದಲ್ಲಿ ಹೊರಡಿಸಲಾದ ಶಿವಮೊಗ್ಗ ಜಿಲ್ಲೆಯ ಶಾಸನವೊಂದರಿಂದ ತಿಳಿದು ಬರುತ್ತದೆ. ಆ ಶಾಸನದಲ್ಲಿ ಇನ್ನೊಬ್ಬ ಬಮ್ಮರಸನ ಪ್ರಸ್ತಾಪವಿದ್ದರೂ ಅವರಿಬ್ಬರ ನಡುವಣ ಸಂಬಂಧ ಸ್ಪಷ್ಟವಾಗಿಲ್ಲ.

**ಕೋಲಾರದ ತಮಿಳು ಗಂಗರು :** 12-13ನೆಯ ಶತಮಾನಗಳಲ್ಲಿ ಕೋಲಾರ ಜಿಲ್ಲೆಯಲ್ಲಿ ಅಧಿಕಾರದಲ್ಲಿದ್ದ ಗಂಗ ಮನೆತನದ ಶಾಖೆಯೊಂದಕ್ಕೆ ಸೇರಿದ ಮಾಂಡಲಿಕರು ಶಾಸನಗಳಲ್ಲಿ ಕಾಣಿಸಿಕೊಂಡಿದ್ದಾರೆ. ಕುವಳಾಲಪುರ ಪರಮೇಶ್ವರ, ಗಂಗ ಕುಲೋದ್ಭವ, ಕಾವೇರೀವಲ್ಲಭ, ನಂದಿಗಿರಿನಾಥ' ಇತ್ಯಾದಿ ಬಿರುದಾಂಕಿತರಾದ ಇವರು ತಲಕಾಡಿನ ಗಂಗರೊಡನೆ ಪಡೆದಿದ್ದ ಸಂಬಂಧವೆಂತಹುದೆಂಬುದನ್ನು ಹೇಳಲಾಗದು. ಈ ವಂಶದ ಅರಸರ ಶಾಸನಗಳೆಲ್ಲವೂ ತಮಿಳು ಭಾಷೆಯಲ್ಲಿ ಇವೆ.

ಇವರಲ್ಲಿ ಮೊದಲಿಗ ವೀರಗಂಗ (ಸು.1179-1225) ಮಹಾಮಂಡಲೇಶ್ವರ ಮಾಂಡಲಿಕ ಎನಿಸಿಕೊಂಡು, ನಿಕಿರಿಲಿ ಚೋಳಮಂಡಲದ ಕುವಳಾಲನಾಡು ಮತ್ತು ಆವನಿಯ ನಾಡುಗಳಲ್ಲಿ ಆಳುತ್ತಿದ್ದ. ಇವು ಈಗಿನ ಕೋಲಾರ ಮತ್ತು ಮುಳಬಾಗಲು ತಾಲ್ಲೂಕುಗಳನ್ನೊಳಗೊಂಡ ಪ್ರದೇಶ. ಈತನನ್ನು ಶಾಸನಗಳಲ್ಲಿ ಉತ್ತಮ ಚೋಳಗಂಗ, ಶೆಲ್ವಗಂಗ ಎಂದೂ ಕರೆಯಲಾಗಿದೆ. ಈತ ಹೊಯ್ಸಳ ದಂಡನಾಯಕ ಪೋಲಾಳ್ವನ ಮಗಳನ್ನು ಮದುವೆಯಾದಂತೆ ತೋರುತ್ತದೆ. ಈತನಿಗೆ ಸೋಮಲದೇವಿ ಎಂಬ ಮಗಳೂ ಗಂಗಪೆರುಮಾಳ್ ಎಂಬ ಮಗನೂ ಇದ್ದರು.

ಗಂಗಪೆರುಮಾಳನನ್ನು ಉತ್ತಮಚೋಳಗಂಗ ಗಂಗಪೆರುಮಾಳನೆಂದು ಕರೆಯಲಾಗಿದ್ದು ಈತ ವೀರಗಂಗನ ಮಗನೆಂದು ಶಾಸನಗಳು ಹೇಳಿವೆ. ಈತ ಅಧಿಕಾರಕ್ಕೆ ಬಂದಾಗ ಜಯಂಗೊಂಡ ಚೋಳ ಇಳವಂಜಿರಾಯನ ಆವನಿಯ ನಾಡನ್ನು ತನ್ನ ವಶಪಡಿಸಿಕೊಂಡನಾಗಿ, ಕುವಳಾಲನಾಡು ಮಾತ್ರ ಈತನ ಅಧೀನದಲ್ಲಿ ಉಳಿಯಿತು. ಕುಟ್ಟೇರಿ ಈತನ ರಾಜಧಾನಿ. ಪತ್ನಿಯ ಹೆಸರು ಅರಣವಲ್ಲಿ. ಜಯಂಗೊಂಡ ಚೋಳನೆಂಬಾತನೊಬ್ಬ ಈತನ ಅಧೀನದಲ್ಲಿದ್ದ ಅಧಿಕಾರಿ.

ಈ ಗಂಗಪೆರುಮಾಳನ ಮಗ ವಿಕ್ರಮಗಂಗನೆಂದು ಊಹಿಸಲಾಗಿದೆ. 1225ರಿಂದ 1260ರವರೆಗೆ ಗಂಗಪೆರುಮಾಳ ಆಳಿದ ಬಳಿಕ ವಿಕ್ರಮಗಂಗ ಆತನ ಉತ್ತರಾಧಿಕಾರಿಯಾಗಿ ಅಧಿಕಾರಕ್ಕೆ ಬಂದ. ಆದರೆ ಈತ 2-3 ವರ್ಷಗಳು ಮಾತ್ರ ಆಳಿದಂತೆ ತೋರುತ್ತದೆ. ಗಂಗಕುಲೋದ್ಭವ, ಕಾವೇರೀವಲ್ಲಭ ಮುಂತಾದ ಬಿರುದುಗಳನ್ನು ಹೊಂದಿದ ವೆಟ್ಟುಮ್ಮಾರಬಾಣನೆಂಬಾತ ಉತ್ತಮ ಚೋಳಗಂಗನೆಂದು ಕರೆದುಕೊಂಡ. ಈತನನ್ನು ಒಂದೆರಡು ಶಾಸನಗಳಲ್ಲಿ ಚೋಳ ಗಂಗ, ವೀರಗಂಗನೆಂದು ಕರೆದಿದೆ. ಈತ ವಿಕ್ರಮಗಂಗನ ಮಗನಾಗಿರಬಹುದೆಂಬುದೊಂದು ಊಹೆ.

ಇವರಲ್ಲದೆ ಉತ್ತಮ ಚೋಳಗಂಗ ಪದುಮದೇವ ಮತ್ತು ಆತನ ಮಗ ಗಂಗ ಪೆರುಮಾಳ್ ಎಂಬಿಬ್ಬರು 13ನೆಯ ಶತಮಾನದ ಕೊನೆಯ ಭಾಗದ ಕೆಲವು ಶಾಸನಗಳಲ್ಲಿ ಕಾಣಿಸಿಕೊಂಡಿದ್ದಾರೆ. ಗಂಗಕುಲಕ್ಕೆ ಸೇರಿದ ಇವರು ಮೇಲಿನವರಿಗೆ ಹೇಗೆ ಸಂಬಂಧಿಸಿದವರೆಂಬುದು ತಿಳಿಯದು. (ಬಿ.ಆರ್.ಜಿ.)

**ಗಂಗವಾಡಿ :** ತಲಕಾಡಿನ ಗಂಗ ಅರಸರ ಆಳಿಕೆಗೆ ಬಹುಕಾಲ ಒಳಪಟ್ಟಿದ್ದ ದಕ್ಷಿಣ ಕರ್ನಾಟಕದ ಭಾಗವನ್ನೊಳಗೊಂಡಿದ್ದ ಪ್ರಾಂತ್ಯ. ಗಂಗವಾಡಿ ತೊಂಬತ್ತಾರು ಸಾವಿರ ಎಂದೂ ಪ್ರಸಿದ್ಧವಾಗಿತ್ತು.

ಇದರ ವಿಸ್ತಾರ ಎಷ್ಟಿತ್ತೆಂದು ನಿರ್ದಿಷ್ಟವಾಗಿ ಹೇಳಲು ಬಾರದು. ಈಚಿನ ಶಾಸನಗಳು ಈ ಗಂಗವಾಡಿ 96,000 ಪ್ರಾಂತ್ಯದ ಮೇರೆಯಾಗಿ ಉತ್ತರದಲ್ಲಿ ಮರಂದಲೆ, ಪೂರ್ವಕ್ಕೆ ತೊಂಡನಾಡು ಅಥವಾ ತೊಂಡೈಮಂಡಲ, ಪಶ್ಚಿಮಕ್ಕೆ ಚೇರನಾಡು ಮತ್ತು ಸಮುದ್ರ, ದಕ್ಷಿಣಕ್ಕೆ ಕೊಂಗುದೇಶವಿದ್ದುವೆಂದು ತಿಳಿಸುತ್ತವೆ. ಎಂದರೆ ಸ್ಥೂಲವಾಗಿ ಈಗಿನ ಕೋಲಾರ, ಬೆಂಗಳೂರು, ಮಂಡ್ಯ, ಮೈಸೂರು, ಚಾಮರಾಜನಗರ, ಕೊಡಗು, ಚಿಕ್ಕಮಗಳೂರು ಜಿಲ್ಲೆಗಳನ್ನೂ ಮತ್ತು ಶಿವಮೊಗ್ಗ ಜಿಲ್ಲೆಯ ಕೆಲವು ಭಾಗಗಳನ್ನೂ ಒಳಗೊಂಡಿತ್ತೆಂದು ಹೇಳಬಹುದು. ಈ ಗಂಗವಾಡಿ ಹಲವು ಸಣ್ಣದೊಡ್ಡ ನಾಡುಗಳಾಗಿ ವಿಭಾಗಿತವಾಗಿತ್ತು. ಗಂಗಸಾಸಿರ, ಪುನ್ನಾಡು 6,000, ಕೊಂಗನ್ನಾಡು 8,000, ಮಳೆ 1,000, ಮಂಡಲಿ 1,000, ಕೋಲಾರ 300, ಎಡೆನಾಡು 70, ಅರಿದಾಳ್ಕೆ 70, ಬೆದ್ದೊರೆಗೆರೆ 70, ನಿರ್ಗುಂದ 300, ಸೇರೆನಾಡು, ಬಯಲ್ನಾಡು ಮುಂತಾದ ಅನೇಕ ನಾಡುಗಳ ಹೆಸರು ಶಾಸನಗಳಲ್ಲಿವೆ. ಸುಮಾರು 5ನೆಯ ಶತಮಾನದ ಹೊತ್ತಿಗೆ ಮುಮ್ಮಡಿ ಮಾಧವನ ಕಾಲದ ಒಂದು ಶಾಸನದಲ್ಲಿ ಗಂಗರು ಆಳುತ್ತಿದ್ದ ಭಾಗವನ್ನು ಗಾಂಗೇಯ ರಾಜ್ಯ ಎಂದು ಕರೆದಿದೆ. ಮೊದಲ ಗಂಗರಾಜರ ಒಂದೆರಡು ತಾಮ್ರಶಾಸನಗಳಲ್ಲಿ ಗಂಗವಾಡಿ ಎಂಬ ಹೆಸರು ಕಂಡುಬಂದರೂ ಅವು ಕೂಟಶಾಸನಗಳೆಂದೂ 9ನೆಯ ಶತಮಾನಕ್ಕೆ ಹಿಂದಿನವಲ್ಲವೆಂದೂ ಸಿದ್ಧವಾಗಿದೆ. 8ನೆಯ ಶತಮಾನದಲ್ಲಿ ಶ್ರೀಪುರುಷ ಆಳಲಾರಂಭಿಸಿದಾಗ ಇದನ್ನು ಶ್ರೀರಾಜ್ಯವೆಂದೂ ಷಣ್ಣವತಿ ಸಹಸ್ರ ವಿಷಯವೆಂದೂ ಶಾಸನಗಳು ಹೆಸರಿಸುತ್ತವೆ. ಅವನ ಆಳಿಕೆಯ ಮೊದಲನೆಯ ವರ್ಷದ ಶಾಸನಗಳಲ್ಲಿಯೇ ಈ ಹೆಸರುಗಳಿವೆ. ಇದೇ ಕಾಲದಲ್ಲಿಯೇ ಗಂಗಸಾಸಿರ ಎಂಬ ಹೆಸರೂ ಕಂಡುಬರುತ್ತದೆ. ಇದು ಕೋಲಾರದ ಸುತ್ತಮುತ್ತ ಇದ್ದ ಪ್ರಾಂತ್ಯ. ಗಂಗರು ಮೊದಲು ಕೋಲಾರದಿಂದ ಆಳುತ್ತಿದುದ್ದರಿಂದ ಗಂಗರಾಜ್ಯ ಮೊದಲು ಗಂಗಸಾಸಿರ ರಾಜ್ಯವಾಗಿದ್ದು ಮುಂದೆ ಷಣ್ಣವತಿ ಸಹಸ್ರ ರಾಜ್ಯವಾಗಿ ಬೆಳೆದಿರುವುದು ಸಾಧ್ಯ. ರಾಷ್ಟ್ರಕೂಟ ಧ್ರುವ ಈ ರಾಜ್ಯವನ್ನು ಗೆದ್ದು ತನ್ನ ಮಗ ಕಂಬಯ್ಯನನ್ನು ಮಂಡಲಾಧಿಪತಿಯನ್ನಾಗಿ ನೇಮಿಸಿದಾಗ ಇದನ್ನು ಗಂಗಮಂಡಲ ಎಂದು ಕರೆಯಲಾಯಿತು. ಮುಂದಿನ ಶತಮಾನದಲ್ಲಿ ಈ ಮಂಡಲವನ್ನು ಗಂಗವಾಡಿ ಎಂದು ಕರೆದಿದೆ. ಅವಿಧೇಯನ ಪಂಡರಂಗೆಪಲ್ಲಿ ತಾಮ್ರಶಾಸನದ ಕೊನೆಯಲ್ಲಿರುವ ಒಂದು ಕಿರು ಶಾಸನದಲ್ಲಿ ಸರ್ಬರಸ ಎಂಬುವನು ಕನ್ನವಾಡ, ಗಂಗವಾಡ, ಬಲೆಯವಾಡ ಮತ್ತು ರೇನಾಡಗಳನ್ನು ಆಳುತ್ತಿದ್ದನೆಂದು ಹೇಳಿದೆ. ಗಂಗರ ನೀತಿಮಾರ್ಗ, ಬೂತುಗ, ಇಮ್ಮಡಿ ಮಾರಸಿಂಹರ ಶಾಸನಗಳಲ್ಲಿ ಅವರು ಗಂಗವಾಡಿ 96,000 ವನ್ನು ಆಳುತ್ತಿದ್ದ ಉಲ್ಲೇಖವಿದೆ. ಅವರು ಗಂಗವಾಡಿಯನ್ನಲ್ಲದೆ ಬೆಳ್ವಲ 300,

ಪುರಿಗೆರೆ 300, ಬನವಸೆ 12,000, ಕಿಸುಕಾಡು 70, ಬಾಗೆನಾಡು 70ನ್ನು ಆಳುತ್ತಿದ್ದರು. ಈ ರೀತಿಯ ಉಲ್ಲೇಖಗಳು ಗಂಗವಾಡಿ ಎನ್ನುವುದು ಒಂದು ಗೊತ್ತಾದ ವಿಸ್ತಾರವುಳ್ಳ ಪ್ರಾಂತ್ಯವಾಗಿದ್ದು ಅದು 6,000 ನಾಡಾಗಿತ್ತೆಂಬುದನ್ನು ಸ್ಪಷ್ಟಪಡಿಸುತ್ತವೆ.

ಚೋಳರು ಗಂಗರನ್ನು ಸೋಲಿಸಿ ಗಂಗವಾಡಿಯ ಅನೇಕ ಭಾಗಗಳನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡರೂ ಚಾಳುಕ್ಯರು ಗಂಗವಾಡಿ 96,000ದ ಮೇಲಿನ ತಮ್ಮ ಆಧಿಪತ್ಯವನ್ನು ಹೇಳಿಕೊಳ್ಳುತ್ತಾರೆ. 6ನೆಯ ವಿಕ್ರಮಾದಿತ್ಯ ಯುವರಾಜನಾಗಿ ಗಂಗವಾಡಿ 96,000ವನ್ನು ಬಳ್ಳಿಗಾವೆಯಿಂದ ಆಳುತ್ತಿದ್ದ. ಹೊಯ್ಸಳ ವಿನಯಾದಿತ್ಯನೂ ಇದೇ ಪ್ರಾಂತ್ಯವನ್ನಾಳುತ್ತಿದ್ದಂತೆ ಹೇಳಿಕೊಳ್ಳುತ್ತಾನೆ. ಆದರೆ ವಿಷ್ಣುವರ್ಧನ ತಲಕಾಡಿನಲ್ಲಿ ಆಳುತ್ತಿದ್ದ ಚೋಳ ಪ್ರತಿನಿಧಿಯನ್ನು ಸೋಲಿಸಿ ಓಡಿಸಿದಾಗ ಇಡೀ ಪ್ರಾಂತ್ಯ ಹೊಯ್ಸಳರ ಅಧೀನಕ್ಕೆ ಬಂತು. ಮುಂದೆ ಹೊಯ್ಸಳರು ಆಳುತ್ತಿದ್ದ ಅನೇಕ ಪ್ರಾಂತ್ಯಗಳಲ್ಲಿ ಗಂಗವಾಡಿ 96,000 ಮುಖ್ಯವಾದ ಪ್ರಾಂತ್ಯವಾಗಿತ್ತು. ಹೊಯ್ಸಳರ ಪತನಾನಂತರ ಗಂಗವಾಡಿ ಎಂಬ ಪ್ರಾದೇಶಿಕ ಹೆಸರು ಮರೆಯಾಯಿತು. ಆದರೆ ಈ ಪ್ರಾಂತ್ಯದಲ್ಲಿ ಹಿಂದಿನಿಂದಲೂ ನೆಲಸಿ ಆರಂಭಮಾಡಿಕೊಂಡು ಬರುತ್ತಿರುವ ಒಂದು ವರ್ಗದವರಿಗೆ ಗಂಗಡಿಕಾರರೆಂಬ ಹೆಸರಿದ್ದು, ಇದು ಗಂಗವಾಡಿಯ ನೆನಪನ್ನು ಉಳಿಸಿದೆ. ಗಂಗಡಿಕಾರ ಎಂಬುದು ಗಂಗವಾಡಿಕಾರ ಎಂಬುದರಿಂದ ಬಂದ ರೂಪ. (ಎಂ.ಎಚ್.)

**ಗಂಗವಾರ :** ಬೆಂಗಳೂರು ಜಿಲ್ಲೆ ದೇವನಹಳ್ಳಿ ತಾಲ್ಲೂಕಿನ ಒಂದು ಗ್ರಾಮ. ದೇವನಹಳ್ಳಿಯಿಂದ 16ಕಿಮೀ ದೂರದಲ್ಲಿದೆ. ಈ ಗ್ರಾಮ ತಲಕಾಡಿನ ಗಂಗರ ಕಾಲದಿಂದಲೂ ಚಟುವಟಿಕೆಗಳ ಕೇಂದ್ರವಾಗಿತ್ತು. ಇಲ್ಲಿ ಗಂಗ, ಚೋಳ ಮತ್ತು ಅನಂತರದ ಕಾಲದ ಹಲವಾರು ಶಾಸನಗಳು ದೊರೆತಿವೆ. ಶಾಸನಗಳಲ್ಲಿ ಈ ಊರನ್ನು ಗಂಗಪುರ ಎಂದು ಕರೆದಿದೆ. ಇಲ್ಲಿರುವ ಪ್ರಾಚೀನ ಸೋಮೇಶ್ವರ ದೇವಾಲಯ ಗಂಗ -ಚೋಳ ವಾಸ್ತುಶೈಲಿಯಲ್ಲಿದೆ. ಇದು ಏಕಪುಟದ ದೇವಾಲಯ. ಚೋಳದೊರೆ ರಾಜಾಧಿರಾಜ ಈ ದೇವಾಲಯಕ್ಕೆ ದಾನ ನೀಡಿದ ವಿವರ ಇಲ್ಲಿನ ಶಾಸನದಲ್ಲಿ ಉಲ್ಲೇಖಿತವಾಗಿದೆ. ಸೋಮೇಶ್ವರ ದೇವಾಲಯ ಗರ್ಭಗೃಹ, ತೆರೆದ ಸುಕನಾಸಿ, ನವರಂಗ ಮತ್ತು ಮಂಟಪಗಳಿಂದ ಕೂಡಿದ್ದು ಪಾದಬಂಧ ಅಧಿಷ್ಠಾನವನ್ನು ಹೊಂದಿದೆ. ದೇವಾಲಯದಲ್ಲಿನ ಕಂಬಗಳು ಚತುರಸ್ರ, ಅಷ್ಟಮುಖ ಹಾಗೂ ವೃತ್ತ ದಿಂಡುಗಳನ್ನು ಹೊಂದಿದ ಗಂಗರ ಕಾಲದ ಕಂಬಗಳಂತೆ ಇವೆ. ಸುಕನಾಸಿ ನವರಂಗಕ್ಕೆ ತೆರೆದುಕೊಂಡಿದ್ದು ಇದರ ಎರಡೂ ಗೋಡೆಯಲ್ಲಿ ಎದಿರುಬದಿರಾಗಿ ಎರಡು ಆನೆಗಳನ್ನು ಕೆತ್ತಲಾಗಿದೆ. ದೇವಾಲಯದ ದ್ವಾರಮಂಟಪದ ಎರಡು ಕಂಬಗಳು ಸಿಂಹ ಪೀಠವನ್ನು ಹೊಂದಿರುವುದು ಇಲ್ಲಿನ ವಿಶೇಷವಾಗಿದೆ. ಈ ಮಂಟಪದ ಮೇಲೆ ಕಿರಿದಾದ ದ್ರಾವಿಡ ವಾಸ್ತುವಿನ ಶಾಲ ಗೋಪುರವಿದೆ. 'ಶಾಲ'ದ ಮುಂಭಾಗದಲ್ಲಿ ಸಿಂಹದ ಕೀರ್ತಿಮುಖ ಕಂಡುಬರುತ್ತದೆ. ದೇವಾಲಯದ ಹೊರ ಏರು ವಿನ್ಯಾಸ ಸರಳವಾಗಿದೆ. ವಿಮಾನದಲ್ಲಿ ತಲಗಳಿದ್ದು ಕೀರ್ತಿಮುಖಗಳನ್ನು ಹೊಂದಿದೆ. ದೇವಾಲಯದ ನವರಂಗದಿಂದ ಹೊಂದಿಕೊಂಡಂತೆ ಮತ್ತೊಂದು ಮಂಟಪವಿದ್ದು, ಬಹುಶಃ ಇದು ವಿಷ್ಣು ಗೃಹವಾಗಿದ್ದಂತೆ ತೋರುತ್ತದೆ. ನವರಂಗದಲ್ಲಿ ಕಂಡುಬರುವ ಒಂದು ಪುರುಷವಿಗ್ರಹ, ಬಹುಶಃ ಚೋಳದೊರೆ ರಾಜರಾಜನದಿರಬಹುದು. 1046ರಲ್ಲಿ ರಾಜಾಧಿರಾಜ ಈ ದೇವಾಲಯಕ್ಕೆ ಕೆಲವು ದಾನಗಳನ್ನು ನೀಡಿ ತನ್ನ ಆಳಿಕೆಯ 29ನೆಯ ವರ್ಷದ ನೆನಪಿಗಾಗಿ ಅಶ್ವಮೇಧ ಯಾಗವನ್ನು ಆಚರಿಸಿದ್ದು ಶಾಸನದಿಂದ ತಿಳಿದುಬರುತ್ತದೆ.

ಈ ದೇವಸ್ಥಾನಕ್ಕೆ ಪ್ರಾಕಾರಗಳು ಮತ್ತು ಮೊಗಸಾಲೆಗಳಿದ್ದು ಈಗ ಅವು ಕುಸಿದುಹೋಗಿವೆ. ಮೂಲ ಗರ್ಭಗೃಹ ಪೂರ್ವಾಭಿಮುಖವಾಗಿದ್ದು ಅದರಲ್ಲಿ ಶಿವಲಿಂಗವಿದೆ. ಗರ್ಭಗೃಹದ ಸೂರಿನ ಕೆಳಗೆ ಗೋಡೆಯಲ್ಲಿ ಹಂಸಗಳ ಸಾಲು ಕಂಡುಬರುತ್ತದೆ. ಈಗ ದೇವನಹಳ್ಳಿಯ ವೇಣುಗೋಪಾಲಸ್ವಾಮಿ ದೇವಸ್ಥಾನದ ಮುಂಭಾಗದಲ್ಲಿ ಇಟ್ಟಿರುವ ಎರಡು ವಿಗ್ರಹಗಳು ಇಲ್ಲಿಂದ ತೆಗೆದುಕೊಂಡು ಹೋದವೆಂದು ತಿಳಿದುಬರುತ್ತವೆ. ಮಹಾದ್ವಾರದ ಎದುರು ಬಲಿಪೀಠವಿದೆ. ದೇವಾಲಯದ ಎದುರಿಗೆ ಪಾಳು ಬಿದ್ದಿರುವ ಚೋಳಶೈಲಿಯ ವಿಷ್ಣು ಅಥವಾ ದೇವಿಯ ಗುಡಿ ಇದೆ.

ಊರ ಮುಂಭಾಗದಲ್ಲಿ ಕೆಲವು ವೀರಗಲ್ಲುಗಳಿವೆ. ಅಲ್ಲೇ ಒಂದು ಎತ್ತರದ ಪೀಠದ ಮೇಲೆ ಗಂಗಶೈಲಿಯಲ್ಲಿರುವ ದುರ್ಗಾ ವಿಗ್ರಹವಿದೆ. ಈ ಊರಿನ ಸಮೀಪದ ಚೌಡಪ್ಪನಹಳ್ಳಿಯಲ್ಲಿ ಗೋಪಾಲಕೃಷ್ಣ, ಆಂಜನೇಯ, ಮುತ್ತುರಾಯ ಮತ್ತು ಮಹೇಶ್ವರಮ್ಮನವರ ದೇವಾಲಯಗಳಿವೆ. (ಆರ್.ಎಚ್.ಕೆ.)

**ಗಂಗಾಂಬಿಕೆ :** 12ನೆಯ ಶತಮಾನದ ಶಿವಶರಣೆ ಹಾಗೂ ವಚನಕಾರ್ತಿ. ಬಸವಣ್ಣನವರ ಧರ್ಮಪತ್ನಿ. ಅನುಭಾವಿ ಆದರ್ಶಸತಿ ಎನಿಸಿದ ಈಕೆ ಕಳಚುರಿಯ ಬಿಜ್ಜಳನ ಮಹಾಮಂತ್ರಿ ಬಲದೇವನ ಮಗಳು. ರುದ್ರಮುನಿ ಈಕೆಯ ಗುರು. ಮಹಾಮನೆಯ ಮತ್ತು ಅನುಭವಮಂಟಪದ ಕಾರ್ಯದಲ್ಲಿ ಈಕೆ ಪತಿ ಬಸವಣ್ಣನವರಿಗೆ ತುಂಬ ನೆರವಾಗಿದ್ದಳು. ಈಕೆಯ ಪಾತಿವ್ರತ್ಯ ಮತ್ತು ದಾಸೋಹ ಭಾವಗಳನ್ನು ಬಸವಪುರಾಣದಲ್ಲಿ ಬಣ್ಣಿಸಲಾಗಿದೆ. ಗಂಗಾಪ್ರಿಯ ಕೂಡಲಸಂಗಮದೇವ ಎಂಬುದು ಈಕೆಯ ವಚನಗಳ ಅಂಕಿತ. ಇದುವರೆಗೆ ಈಕೆಯ ಎಂಟು ವಚನಗಳು ದೊರಕಿವೆ. ಬಸವಣ್ಣನವರು ಏಕನಿಷ್ಠೆಯಿಂದ ನಿರ್ವಹಿಸುತ್ತಿದ್ದ ಕೆಲಸಕಾರ್ಯಗಳನ್ನು ಗಂಗಾಂಬಿಕೆ ತನ್ನ ಒಂದು ವಚನದಲ್ಲಿ ಹೀಗೆ ವರ್ಣಿಸಿದ್ದಾಳೆ.

> ಸಾಂದ್ರವಾಗಿ ಹರಗಣಭಕ್ತಿಯ ಮಾಳ್ಪನೆಂತೊ
> ಮಾದಲಾಂಬಿಕಾನಂದನನು
> ಸಾಂದ್ರವಾಗಿ ಬಿಜ್ಜಳನರಮನೆಯ ನ್ಯಾಯನೋಳ್ಪನೆಂತೊ
> ಮಾದರಸನ ಮೋಹದ ಮಗನು ಸಾಂದ್ರವಾಗಿ ಲಿಂಗಾರ್ಚನೆ
> ಲಿಂಗತೃಪ್ತಿ ಅನುಗೆಯ್ದನೆಂತೊ ಗಂಗಾಪ್ರಿಯ ಕೂಡಲಸಂಗಮಶರಣ ಚನ್ನಾ

ಈಕೆಯ ಸಮಾಧಿ ಬಿಜಾಪುರ ಜಿಲ್ಲೆಯ ಕಪ್ಪಡಿಸಂಗಮ ಕ್ಷೇತ್ರಕ್ಕೆ ಹತ್ತಿರದಲ್ಲಿದೆ. *

**ಗಂಗಾದೇವಿ :** ಸು.1360. ಹುಟ್ಟುಕನ್ನಡಿತಿಯಾದ ಈಕೆ ಸಂಸ್ಕೃತ ಕವಯಿತ್ರಿ. ಮಧುರಾವಿಜಯಂ ಎಂಬ ಕಾವ್ಯದ ಕರ್ತೃ. ವಿಜಯನಗರದ ಅರಸು ಒಂದನೆಯ ಬುಕ್ಕರಾಯನ ಸೊಸೆ. ಹಿರಿಯ ಕಂಪಣನ ಹೆಂಡತಿ. ಈಕೆ ಪೂರ್ವಕವಿಗಳಲ್ಲಿ ತನ್ನ ಸಮಕಾಲೀನರಾದ ತಿಕ್ಕಯ, ಅಗಸ್ತ್ಯ, ಗಂಗಾಧರ, ವಿಶ್ವನಾಥ - ಇವರನ್ನು ಸ್ಮರಿಸಿದ್ದಾಳೆ.

ಮಧುರಾವಿಜಯಂ ಸಂಸ್ಕೃತದಲ್ಲಿದ್ದು ಚಂಪೂವಿನಲ್ಲಿ ರಚಿತವಾಗಿದೆ. ಇದಕ್ಕೆ ವೀರಕಂಪಣರಾಯಚರಿತೆ ಎಂಬ ಹೆಸರೂ ಇದೆ. ಈ ಕೃತಿ ಸಮಗ್ರವಾಗಿ ದೊರತಿಲ್ಲ. ಮೊದಲಿನ ಐದು ಮತ್ತು ಏಳನೆಯ ಸರ್ಗಗಳು ಪೂರ್ಣ ದೊರೆತಿವೆ. ಆರು, ಎಂಟು ಹಾಗೂ ಎಂಟರ ಮುಂದಿನ ಸರ್ಗಗಳಲ್ಲಿ ಕೆಲವು ಭಾಗ ಮಾತ್ರ ದೊರತಿವೆ. ಮಧುರಾವಿಜಯಂ ಒಂದು ಐತಿಹಾಸಿಕ ಕಾವ್ಯ. ಕಂಪಣರಾಯ ತನ್ನ ತಂದೆ ಬುಕ್ಕರಾಯನ ಆಜ್ಞಾನುಸಾರ ದಕ್ಷಿಣ ದೇಶಕ್ಕೆ ದಂಡೆತ್ತಿಹೋಗಿ ವನ್ಯರಾಜರನ್ನೂ ರಾಜಗಂಭೀರ (ಪಡವೀಡು) ದುರ್ಗದಲ್ಲಿದ್ದ ಚಂಪರಾಯನನ್ನೂ (ಸಂಭವರಾಯ) ಮಧುರೆಯ ಮಹಮ್ಮದೀಯರನ್ನೂ ಸೋಲಿಸಿದ ಘಟನೆಗಳು (ಕಾಲಾವಧಿ 1360-71) ಈ ಕಾವ್ಯದ ಹಂದರವಾಗಿ ಮೂಡಿಬಂದಿವೆ.

ಗಂಗಾದೇವಿ ತನ್ನ ಕಾವ್ಯವನ್ನು ಮಹಾಕಾವ್ಯ ಸಂಪ್ರದಾಯದಲ್ಲಿ ರಚಿಸಲು ಯತ್ನಿಸಿದ್ದು ಕಾವ್ಯದ ಉದ್ದಕ್ಕೂ ವೀರಕಂಪಣನ ತಂದೆ ಬುಕ್ಕರಾಯನ ವರ್ಣನೆ, ಕಂಪಣನ ಜನನ, ಬಾಲ್ಯ, ಯೌವನ ಹಾಗೂ ಸಾಹಸಮಯ ಘಟನೆಗಳು ಹಾಸುಹೊಕ್ಕಾಗಿವೆ. ಆಸ್ಥಾನದ ವರ್ಣನೆ, ಋತುಗಳ ವರ್ಣನೆ, ವನಕೇಳಿ, ಜಲಕೇಳಿ ಎಲ್ಲವೂ ಹೇರಳವಾಗಿವೆ. ನಗರಾರ್ಣವ ಸರಿದಟವಿಗಳ ವರ್ಣನೆಯನ್ನು ಕವಯಿತ್ರಿ ಬಿಟ್ಟಿಲ್ಲ. ಕಾವ್ಯದಲ್ಲಿ ಹದಿನೆಂಟು ವರ್ಣನೆಗಳೂ ಬರುವಂತೆ ನೋಡಿಕೊಂಡಿದ್ದಾಳೆ. ಇಷ್ಟಾದರೂ ಪರಂಪರಾಗತ ವರ್ಣನೆಗಳಲ್ಲಿಯೂ ಹೊಸ ದೃಷ್ಟಿಯನ್ನು ಬೆರೆಸಿದ್ದಾಳೆ. ಅಲಂಕಾರಗಳ ಬಳಕೆಯಲ್ಲಿ ನಾವೀನ್ಯವಿದೆ. ಹಳೆಯ ಕವಿಸಮಯಗಳೂ ಪ್ರತಿಭಾಮೂಸೆಯಲ್ಲಿ ಮೂಡಿಬಂದಿರುವುದರಿಂದ ಕಾವ್ಯ ರಮಣೀಯವಾಗಿದೆ. ಸರಸೋದಾರ ಪದಗಳು ತನ್ನ ಕಾವ್ಯದಲ್ಲಿ ಮೂಡಿಬಂದಿವೆ ಎನ್ನುವಲ್ಲಿ ಇವಳಿಗೆ ಸಂಸ್ಕೃತ ಭಾಷೆಯ ಮೇಲಿರುವ ಪ್ರಭುತ್ವ ಸುವ್ಯಕ್ತವಾಗುತ್ತದೆ. ಸಾಹಿತ್ಯಕವಾಗಿಯೂ ಚಾರಿತ್ರಿಕವಾಗಿಯೂ ಈ ಕಾವ್ಯಕ್ಕೆ ಮಹತ್ವವಿದೆ. (ಎಂ.ಎಸ್.ಎಸ್.)

**ಗಂಗಾಧರ ಚಿತ್ತಾಲ :** 1923-87. ಕನ್ನಡದ ಕವಿಗಳಲ್ಲೊಬ್ಬರು. ಇವರು ಹುಟ್ಟಿದ್ದು ಉತ್ತರ ಕನ್ನಡ ಜಿಲ್ಲೆ ಕುಮಟ ತಾಲ್ಲೂಕಿನ ಹನೇಹಳ್ಳಿಯಲ್ಲಿ. ವಿಠೋಬಾ-ರುಕ್ಮಿಣಿ ದಂಪತಿಗಳ ಏಳು ಮಕ್ಕಳಲ್ಲಿ ನಾಲ್ಕನೆಯವರಾದ ಇವರು ಕನ್ನಡದ ಪ್ರಸಿದ್ಧ ಕತೆಗಾರ- ಕಾದಂಬರಿಕಾರ ಯಶವಂತ ಚಿತ್ತಾಲರ (ನೋಡಿ) ಅಣ್ಣ. 1940ರಲ್ಲಿ ಮುಂಬಯಿ ವಿಶ್ವವಿದ್ಯಾಲಯದ ಮೆಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ಇಡೀ ಇಲಾಖೆಗೆ (ಹಳೆಯ ಮುಂಬಯಿ ಪ್ರಾಂತ್ಯಕ್ಕೆ) ಮೊದಲನೆಯ ರ್‍ಯಾಂಕ್ ಪಡೆದು, ಅಸಾಮಾನ್ಯ ವಿದ್ಯಾರ್ಥಿ ಎನ್ನಿಸಿಕೊಂಡವರು. ಕುಮಟ, ಧಾರವಾಡ, ಸಾಂಗ್ಲಿಗಳಲ್ಲಿ ಶಿಕ್ಷಣ ಮುಗಿಸಿ ಇಂಗ್ಲಿಷ್ ಸಾಹಿತ್ಯದಲ್ಲಿ ಬಿ.ಎ. ಪದವಿ ಪಡೆದು, ಮುಂದೆ ಭಾರತ ಸರ್ಕಾರದ ಐ.ಎ. ಮತ್ತು ಎ.ಎಸ್. ಪರೀಕ್ಷೆಯಲ್ಲಿ ತೇರ್ಗಡೆಯಾದರು. ಮುಂಬಯಿಯಲ್ಲಿ ಸಹಾಯಕ ಮಹಾಲೇಖಾಪಾಲರಾಗಿ, ಅನಂತರ ಲೆಕ್ಕಪರಿಶೋಧನೆಯ ಉಪನಿರ್ದೇಶಕರಾಗಿ, ಅಮೆರಿಕದ ವಾಷಿಂಗ್‍ಟನ್‍ನಲ್ಲಿ, ಲೆಕ್ಕಪರಿಶೋಧನೆಯ ನಿರ್ದೇಶಕರಾಗಿ ಲಂಡನ್‍ನಲ್ಲಿ ಸೇವೆ ಸಲ್ಲಿಸಿದರು. ಇವರು ಸ್ವಲ್ಪ ಕಾಲ ಭಾರತದ ನಿಯಂತ್ರಕ ಮತ್ತು ಮಹಾಲೇಖಾ ಪರಿಶೋಧಕರ ಪ್ರಧಾನ ಕಾರ್ಯದರ್ಶಿಗಳಾಗಿದ್ದಾಗ ಜಗತ್ತಿನ ಹಲವು ದೇಶಗಳ ರಾಜಧಾನಿಗಳಿಗೆ ಭೇಟಿ ನೀಡುವ ಅವಕಾಶ ಒದಗಿತ್ತು. ಕೊನೆಯಲ್ಲಿ ಪಶ್ಚಿಮ ರೈಲ್ವೆಯ ಲೇಖಾಪರಿಶೋಧನೆ ಖಾತೆಯ ಮುಖ್ಯ ಅಧಿಕಾರಿಗಳಾಗಿ ನಿವೃತ್ತರಾದರು (1977). ಮುಂಬಯಿಯ ಉತ್ತರದ ಉಪನಗರಗಳಲ್ಲಿ ಒಂದಾದ ಬೋರಿವಿಲಿಯಲ್ಲಿ ನೆಲೆಸಿದ್ದ ಇವರು 1987ರಲ್ಲಿ ತಮ್ಮ 64ನೆಯ ವಯಸ್ಸಿನಲ್ಲಿ ನಿಧನಹೊಂದಿದರು.



ಕುಮಟದ 'ಗಿಬ್ ಹಾಯ್‍ಸ್ಕೂಲ್' ನಲ್ಲಿ ವಿದ್ಯಾರ್ಥಿಯಾಗಿದ್ದ ಎಳೆಯ ದಿನಗಳಲ್ಲೇ (1938) ಈ ಅಸಾಧಾರಣ ಭಾವಜೀವಿಯಲ್ಲಿ ಕವಿಯಾಗುವ ಪ್ರತಿಭೆಯ ಚಿಹ್ನೆಗಳನ್ನು ಗುರುತಿಸಿದ ಇವರ ಹಿರಿಯ ಅಣ್ಣ ದಾಮೋದರ ಚಿತ್ತಾಲರು ಕಾವ್ಯದ ಸಲುವಾಗಿಯೇ ಇವರನ್ನು ಕುಮಟದ ಶಾಲೆಯಿಂದ ಬಿಡಿಸಿ ಧಾರವಾಡಕ್ಕೆ ಕರೆತಂದು ಅಲ್ಲಿಯ ಪ್ರಖ್ಯಾತ ಕರ್ನಾಟಕ ಹೈಸ್ಕೂಲಿಗೆ ಸೇರಿಸಿದರು. ಅವರು ನಿರೀಕ್ಷಿಸಿದಂತೆ ದ.ರಾ.ಬೇಂದ್ರೆ, ವಿ.ಕೃ.ಗೋಕಾಕ, ಶ್ರೀರಂಗ, ಆನಂದಕಂದ, ಶಂ.ಬಾ.ಜೋಶಿ ಮೊದಲಾದ ಸಾಹಿತ್ಯ ದಿಗ್ಗಜರು ನೆಲೆಸಿದ ಆಗಿನ ಧಾರವಾಡದ ಸಾಹಿತ್ಯಕ ವಾತಾವರಣ ಇವರ ಕಾವ್ಯಸೃಷ್ಟಿಗೆ ತಕ್ಕ ಉತ್ಸಾಹ ತುಂಬಿತು.

ಇವರು 1942ರ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದಕ್ಕಾಗಿ ಧಾರವಾಡ ಕರ್ನಾಟಕ ಕಾಲೇಜಿನಿಂದ ಉಚ್ಚಾಟನೆಗೊಂಡು ವಿದ್ಯಾರ್ಥಿ ಜೀವನದ ಒಂದು ವರ್ಷ ಕಳೆದುಕೊಂಡರು. ಮುಂಬಯಿಗೆ ಬಂದ ಮೇಲೆ ಎಂ.ಎನ್.ರಾಯ್ ಅವರ 'ರ್‍ಯಾಡಿಕಲ್ ಡೆಮಾಕ್ರೆಟಿಕ್ ಪಾರ್ಟಿ'ಯೊಡನೆ ಸಂಬಂಧ ಪಡೆದುಕೊಂಡರು. ರ್‍ಯಾಡಿಕಲ್ ಸ್ಟೂಡೆಂಟ್ಸ್ ಯೂನಿಯನ್‍ನ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಇವು ಚಿತ್ತಾಲರ ವಿದ್ಯಾರ್ಥಿ ಜೀವನದ ಕೆಲವು ಮಹತ್ವದ ಘಟನೆಗಳು. ಬ್ರಿಟಿಷ್ ಸರಕಾರ ವಿಧಿಸಿದ ಒಂದು ವರ್ಷದ ಶಿಕ್ಷೆ ಮುಗಿಸಿದ ಅನಂತರ ಚಿತ್ತಾಲರು ತಮ್ಮ ಬಿ.ಎ. ಅಭ್ಯಾಸಕ್ಕಾಗಿ ಸಾಂಗ್ಲಿಯ ವಿಲಿಂಗ್ಡನ್ ಕಾಲೇಜು ಸೇರಿದರು. ಅಲ್ಲಿದ್ದಾಗ ವಿ.ಕೃ.ಗೋಕಾಕರ ಹಿರಿತನದಲ್ಲಿ ರೂಪಗೊಂಡಿದ್ದ ಸಾಹಿತಿಗಳ ಕೂಟ ವರುಣಕುಂಜದ ಸಂಪರ್ಕ ಒದಗಿತು. ವಿ.ಜಿ.ಭಟ್ಟ, ಸು.ರಂ.ಎಕ್ಕುಂಡಿ, ಆರ್.ವಿ.ಕುಲಕರ್ಣಿ, ವರದರಾಜ ಹುಯಿಲಗೋಳ ಮೊದಲಾದ ತರುಣ ಸಾಹಿತಿಗಳು ವರುಣಕುಂಜದ ಸದಸ್ಯರಾಗಿದ್ದರು.

ಈ ಎಲ್ಲ ಸಂಗತಿಗಳ ಪ್ರಭಾವದಿಂದ ಪ್ರಾರಂಭದ ವರ್ಷಗಳಲ್ಲಿ ಇವರು ಬರೆದ 25 ಕವಿತೆಗಳ ಕಾಲದ ಕರೆ ಎಂಬ ಸಂಕಲನ 1948ರಲ್ಲಿ ಪ್ರಕಟಗೊಂಡಿತು. ವಿ.ಜಿ.ಭಟ್ಟರು ಆರಂಭಿಸಿದ ಪರ್ಣಕುಟಿಯ ಪ್ರಕಾಶನವಾಗಿ ಹೊರಬಂದ ಚಿತ್ತಾಲರ ಚೊಚ್ಚಲ ಸಂಗ್ರಹವನ್ನು ಕಾವ್ಯ ರಸಿಕರು ಉತ್ಸಾಹದಿಂದ ಬರಮಾಡಿಕೊಂಡರು. ಅವರಲ್ಲೊಬ್ಬರಾದ ಕವಿ ಗೋಪಾಲಕೃಷ್ಣ ಅಡಿಗರು ಈ ಕವಿಯ ಪ್ರಥಮ ಸಂಕಲನವನ್ನು ಕೈಗೆತ್ತಿಕೊಂಡಾಗ ನನಗೆ ಮರುಭೂಮಿಯಲ್ಲಿ ಒಯಸಿಸ್ ಕಂಡವನಷ್ಟೇ ಸಂತೋಷವಾಯಿತೆನ್ನಬೇಕು; ಈ ಕವಿಯ ಮನಸ್ಸನ್ನಾಳುತ್ತಿರುವ ಉದಾತ್ತ ಭಾವಗಳು ಇವರಿಗೆ ಭಾಷೆಯ ಮೇಲೆ ಈಗಾಗಲೇ ದೊರೆತಿರುವ ಪ್ರಭುತ್ವ, ಎಲ್ಲಕ್ಕೂ ಮಿಗಿಲಾಗಿ ಇವರ ಒಂದೊಂದು ನುಡಿಯಲ್ಲೂ ಮಿಡಿಯುತ್ತಿರುವ ಯಥಾರ್ಥತೆ, ಒಂದಿನಿತೂ ಸೋಗಿಲ್ಲದ, ನಟನೆಯಿಲ್ಲದ, ಸುಂದರವಾದ ನಿರಾಳವಾದ ಹಾಡುಗಾರಿಕೆ ಇವುಗಳನ್ನು ಕಂಡು ನಾನು ಬೆರಗಾದೆ. ಇಂಥ ಕವಿಗಳು ಒಬ್ಬಿಬ್ಬರಾದರೂ ಕನ್ನಡದಲ್ಲಿ ಆಗಾಗ ಹುಟ್ಟಿಬರುತ್ತಿರುವುದು ಕನ್ನಡದ ಪುಣ್ಯವೆಂದುಕೊಂಡೆ ಎಂದು ಕೊಂಡಾಡಿದರು. ಈ ಕವಿತೆಗಳ ಮುಖ್ಯವಸ್ತುವನ್ನು ಸಂಗ್ರಹವಾಗಿ ಪರಿಚಯಿಸುತ್ತ ಅವರೇ ಮುಂದುವರಿದು, ಮಾನವ ಜೀವನದ ವಿಶಾಲ ಭೂಮಿಯಿಂದ ಚಿಮ್ಮುವ ರಸದೊರತೆಗಳು ಈ ಕವನಗಳು ಎಂದೂ ಕನ್ನಡ ಲೋಕ ಇಂಥ ಉತ್ತಮ ಕವಿಯ ಕಾವ್ಯವನ್ನು ತನ್ನದಾಗಿ ಮಾಡಿಕೊಳ್ಳಬೇಕು. ಹಾಗೆ ಮಾಡಿಕೊಳ್ಳದಿದ್ದರೆ ಹಾನಿ ಕವಿಗಲ್ಲ, ಜನತೆಗೆ ಎಂದೂ ಹೇಳಿದರು.

ಪ್ರಥಮ ಸಂಕಲನ ಹುಟ್ಟಿಸಿದ ಭರವಸೆಗಳು ಹುಸಿಗೊಳ್ಳದ ಹಾಗೆ ಚಿತ್ತಾಲರು ವಿಪುಲವಾಗಿ ಅಲ್ಲವಾದರೂ ಸಾಕಷ್ಟು ಬರೆದರು. ಮನುಕುಲದ ಹಾಡು (1961), ಹರಿವ ನೀರಿದು (1971), ಸಂಪರ್ಕ (1983) ಎಂಬ ಸಂಗ್ರಹಗಳನ್ನು ಪ್ರಕಟಗೊಳಿಸಿದರು. ಹಲವು ದೇಶಗಳನ್ನು ಸುತ್ತಾಡಿದವನು ನೋಡಿದ ಜಗತ್ತು, ಮಾಗಿದ ಚಿಂತನಶೀಲ ಮನಸ್ಸಿಗೆ ಅರ್ಥ ಹೊಳೆಯಿಸಿದ ಅನ್ಯತ್ವ-ಎಲ್ಲವೂ ಸೃಜನಶೀಲ ಪ್ರತಿಭೆಯ ಸ್ಪರ್ಶಕ್ಕೆ ಜುಮ್ಮುಗುಟ್ಟಿದಾಗ ಸ್ಫುರಿಸಿಕೊಂಡ ಈ ಕವಿತೆಗಳು ಕನ್ನಡ ಕಾವ್ಯಲೋಕವನ್ನು ತಣಿಸಿದವು.

ಮನುಕುಲದ ಹಾಡು ಸಂಗ್ರಹದಲ್ಲಿ 19 ಕವಿತೆಗಳಿವೆ. 'ದುಃಖಗೀತ' ಚಿತ್ತಾಲರ ಉತ್ತಮ ಕವಿತೆಗಳಲ್ಲೊಂದು. ಈ ಕವಿತೆಯ ಹುಟ್ಟಿಗೆ ಪ್ರೇರಣೆಯಿತ್ತ ಅನುಭವವನ್ನು ಕುರಿತು ಕವಿಯೇ ಹೀಗೆ ಹೇಳಿಕೊಂಡಿದ್ದಾರೆ: ಫೆಬ್ರವರಿ 1955ರಲ್ಲಿ ಒಂದು ದಾರುಣವಾದ ದುರಂತ ನಮ್ಮ ಕುಟುಂಬದಲ್ಲಿ ಘಟಿಸಿತು. ನಮ್ಮ ತಂದೆ ಮನೆಯ ಹಿತ್ತಲ ಬಾವಿಯಲ್ಲಿ ಹಾರಿ ದೇಹ ಪರಿತ್ಯಾಗ ಮಾಡಿದರು. ಆ ಅನಾಹುತ ನನ್ನ ಮನಸ್ಸಿನ ಮೇಲೆ ಮಾಡಿದ ಪರಿಣಾಮವೇ ಈ ದುಃಖಗೀತ ಚಿತ್ತಾಲರ ಕಾವ್ಯದ ವಿಮರ್ಶೆಯ ಸಂದರ್ಭದಲ್ಲಿ ವಿಸ್ತೃತ ಚರ್ಚೆಗೆ ಒಳಪಟ್ಟ ಈ ಕವನ ಇವರ ಒಂದು ಶ್ರೇಷ್ಠ ಕವಿತೆ ಎಂದು ಖ್ಯಾತವಾಗಿದೆ. ಇದು ಆಧುನಿಕ ಕನ್ನಡ ಕಾವ್ಯದ ಉತ್ಕೃಷ್ಟ, ಅಭಿಜಾತ, ಕವಿತೆಗಳಲ್ಲೊಂದು. 'ಆಧುನಿಕ ತಾತ್ವಿಕ ಸಂದರ್ಭದಲ್ಲಿ ಜೀವನದ ಅರ್ಥವನ್ನೇ ಆಮೂಲಾಗ್ರವಾಗಿ ಅನ್ವೇಷಿಸುವ ಪ್ರಯತ್ನ ಈ ಕವಿತೆಯಲ್ಲಿದೆ' ಎಂದು ಶಾಂತಿನಾಥ ದೇಸಾಯಿಯವರು ಅಭಿಪ್ರಾಯಪಟ್ಟಿದ್ದಾರೆ. ಹನ್ನೆರಡು ವರುಷಗಳ ಮೇಲೆ, ಫೈಲು, ಕನಸು ತಲೆಯಲ್ಲಿ ತುಂಬಿದಂಥ ಹುಡುಗ, ಖುಶಿ ಇವು ಈ ಸಂಕಲನದಲ್ಲಿರುವ ಇನ್ನು ಕೆಲವು ಅತ್ಯುತ್ತಮ ಕವಿತೆಗಳು.

ಹರಿವ ನೀರಿದು ಸಂಗ್ರಹದಲ್ಲಿ ಹತ್ತು ಕವನಗಳಿವೆ. ಈ ಸಂಗ್ರಹದ ಅತಿ ಮುಖ್ಯ ಕವನವಾದ ಹರಿವ ನೀರಿದು, ದುಃಖಗೀತದ ಹಾಗೆಯೇ ಕನ್ನಡದ ಮಹತ್ವದ ಕವನಗಳಲ್ಲಿ ಒಂದು ಎಂದು ಹಲವು ವಿಮರ್ಶಕರು ಅಭಿಪ್ರಯಪಟ್ಟಿದ್ದಾರೆ. ಈ ಸಂಗ್ರಹದಲ್ಲಿರುವ ಇನ್ನು ಕೆಲವು ಮಹತ್ವದ ಕವಿತೆಗಳೆಂದರೆ ಕಾಮಸೂತ್ರ, ಅಣ್ಣ, ಸುಧೀರ ಹಾಗೂ ತಾಯಿ.

ಸಂಪರ್ಕ ಚಿತ್ತಾಲರ ಕೊನೆಯ ಕವನಸಂಗ್ರಹ. ಕವಿಯ ಕೊನೆಯ ವರ್ಷಗಳಲ್ಲಿ ಇವರನ್ನು ಬಾಧಿಸಿದ್ದ, ಪರಿಹಾರವೇ ಇಲ್ಲದ ಪಾರ್ಕಿನ್ಸನ್ಸ್ ವ್ಯಾಧಿ ಉಲ್ಬಣಾವಸ್ಥೆಗೆ ಹೋದ ಕಾಲದಲ್ಲಿ ಬರೆದ ಕವನಗಳಿವು. ಇಲ್ಲಿ ಹದಿನೆಂಟು ಕವಿತೆಗಳಿವೆ. ಕೀರ್ತಿನಾಥ ಕುರ್ತಕೋಟಿ ಅವರು ಈ ಸಂಗ್ರಹಕ್ಕೆ ಬರೆದ ಮುನ್ನುಡಿಯಲ್ಲಿ ಚಿತ್ತಾಲರ ಸಮಗ್ರ ಕಾವ್ಯಸೃಷ್ಟಿಯ ಆಶಯವನ್ನು ಗುರುತಿಸಿದ್ದಾರೆ. ಚಿತ್ತಾಲರ ಕಾವ್ಯಕ್ಕೆ ಬೆನ್ನೆಲುಬಾಗಿರುವ

ಅದಮ್ಯ ಆಶಾವಾದ, ಎಂಥ ಪ್ರತಿಕೂಲ ಸ್ಥಿತಿಯಲ್ಲಿಯೂ ಬದುಕು ತನ್ನ ಜೀವಸತ್ವವನ್ನು ಪ್ರಕಟಿಸಿಯೇ ತೀರುತ್ತದೆಂಬ ವಾಸ್ತವ ಸತ್ಯ, ಎಂಥ ದುರ್ಭರವಾದ ಪರಿಸ್ಥಿತಿಯಲ್ಲೂ ಜೀವನವಿಮುಖವಾಗದ, ಜೀವನಪರವಾದ ದೃಷ್ಟಿಕೋನ ಚಿತ್ತಾಲರ ಕಾವ್ಯದ ಸಮಗ್ರಲಕ್ಷಣವಾಗಿದೆ ಎಂದಿದ್ದಾರೆ.

ಇವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿತ್ತು. ಇವರನ್ನು ಕುರಿತಂತೆ ಗಂಗಾಧರ ಚಿತ್ತಾಲರ ಕಾವ್ಯಸೃಷ್ಟಿ (ಸಂ: ಶಾಂತಿನಾಥ ದೇಸಾಯಿ, 1987) ಎಂಬ ವಿಮರ್ಶಾಕೃತಿ ಪ್ರಕಟವಾಗಿದೆ. (ವೈ.ಸಿ.)

**ಗಂಗಾಧರ ಮಡಿವಾಳೇಶ್ವರ ತುರಮರಿ :** 1827-77. ಬಾಣನ ಕಾದಂಬರಿಯುನ್ನು ಬಾಣಕವಿಯ ಕಾದಂಬರಿ ಎಂಬ ಹೆಸರಿನಲ್ಲಿ ಹೊಸಗನ್ನಡದಲ್ಲಿ ಬರೆದ ಲೇಖಕರು. ಬೆಳಗಾಂವಿ ಜಿಲ್ಲೆ ತುರಮರಿಯಲ್ಲಿ ಜನಿಸಿದ ಇವರು ಅಥಣಿ ಮಠದ ಮಡಿವಾಳ ಸ್ವಾಮಿಗಳ ಆಶ್ರಯದಲ್ಲಿ ಬೆಳೆದು ಅಭಿವೃದ್ಧಿಗೆ ಬಂದರು. ಕನ್ನಡ ಮತ್ತು ಸಂಸ್ಕೃತಗಳಲ್ಲಿ ಪಾಂಡಿತ್ಯ ಗಳಿಸಿ ಬೆಳಗಾಂವಿಯ ನಾರ್ಮಲ್ ಶಾಲೆಯಲ್ಲಿ ಕನ್ನಡ ಪಂಡಿತರಾದರು. ಅನಂತರ ಸ್ವಲ್ಪ ಕಾಲ ಆ ಶಾಲೆಯ ಉಪಮುಖ್ಯೋಪಾಧ್ಯಾಯರಾಗಿಯೂ ಕೆಲಸ ಮಾಡಿದರು. ಮರಾಠಿಯ ಪ್ರಾಬಲ್ಯವಿದ್ದ ಉತ್ತರ ಕರ್ನಾಟಕದಲ್ಲಿ ಕನ್ನಡದ ಅಭ್ಯಾಸನಿಷ್ಠೆ ಆಗ ತಾನೇ ಆರಂಭವಾಗಿತ್ತು. ಅಂಥ ಸಮಯದಲ್ಲಿ ಇವರು ಕನ್ನಡ ಶಬ್ದಮಂಜರೀ ಕೋಶವನ್ನು ಬರೆದರು. ಕನ್ನಡ ವಾಚನಾಭಿರುಚಿಯನ್ನು ಹೆಚ್ಚಿಸಲು ಕನ್ನಡ ಕವಿತಾಪದ್ಧತಿ, ಕವಿತಾಸಂಗ್ರಹ, ಕೈವಲ್ಯಪದ್ಧತಿ ಟೀಕೆ ಮುಂತಾದ ಪದ್ಯಸಂಗ್ರಹಗಳನ್ನೂ ಪ್ರಕಟಿಸಿದರು. ಬಾಣಕವಿಯ ಕಾದಂಬರಿಯಲ್ಲಿ ಬರುವ, ಆಗ ನನ್ನ ಪಕ್ಕ ಬಲಿತಿದ್ದಿಲ್ಲ. ಗೋಣು ನಿಲ್ಲುತ್ತಿದ್ದಿಲ್ಲ. ನಡೆಯಲಿಕ್ಕೆ ಕಾಲೊಳಗೆ ಕಸುವು ಇದ್ದಿಲ್ಲ. ಆದುದರಿಂದ ಆಗಾಗ ನನ್ನ ಮೋರೆಯು ನೆಲಕ್ಕೆ ಬಡಿಯುವದು; ಅಡಿಗಡಿಗೆ ಹೋಳ ಮೈಯಲ್ಲಿಯಿಂದ ಬೀಳುವೆನು; ಹೊರಳಾಡುತ್ತ ಹೋಗುವುದರಿಂದ ಮೈಯೆಲ್ಲ ಮಣ್ಣಾಯಿತು; ಹೆಜ್ಜೆಜ್ಜೆಗೆ ತೇಕುಹತ್ತಿ ಪಕಪಕ ಬಾಯಿ ಬಿಡಹತ್ತಿದೆನು. ಎಷ್ಟು ಕಷ್ಟವಾದರೂ ಬದುಕಬೇಕೆಂಬ ಆಶೆ ಬಿಡುವುದಿಲ್ಲ. ಈ ರೀತಿಯ ವಾಕ್ಯಗಳು ಇವರ ಓಜಸ್ವೀ ಗದ್ಯಶೈಲಿಯನ್ನು ಪರಿಚಯ ಮಾಡಿಕೊಡುತ್ತವೆ. ಕನ್ನಡ ಗದ್ಯದ ಬೆಳೆವಣಿಗೆಗೆ ತುರಮರಿಯವರ ಕೊಡುಗೆ ಗಣ್ಯವಾದುದು. (ಕೆ.ಕೆ)

**ಗಂಗಾಧರರಾವ್, ಎಂ.ಎನ್. :** 1888-1961. ಕನ್ನಡ ರಂಗ ಭೂಮಿಯ ಪ್ರಸಿದ್ಧ ನಟರು. ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕು ಮೂಕನಹಳ್ಳಿಯಲ್ಲಿ 1888 ಏಪ್ರಿಲ್ 3ರಂದು ಜನಿಸಿದರು. ಬಾಲ್ಯದಲ್ಲೇ ತಂದೆಯನ್ನು ಕಳೆದುಕೊಂಡು ತಾಯಿ ಅಣ್ಣಅತ್ತಿಗೆಯರ ಆಶ್ರಯದಲ್ಲೇ ಬೆಳೆದ ಇವರು 73 ವರ್ಷಗಳ ದೀರ್ಘಜೀವನ ನಡೆಸಿ, ಕನ್ನಡನಾಡಿನ ವಿವಿಧ ಭಾಗಗಳು ಹಾಗೂ ದಕ್ಷಿಣ ಭಾರತದ ವಿವಿಧ ಭಾಗಗಳಲ್ಲಿ ನಾಟಕಪ್ರದರ್ಶನಗಳನ್ನು ನೀಡಿ ಹುಟ್ಟಿದ ಊರಿಗೇ ಹಿಂದಿರುಗಿ ನಿಧನಹೊಂದಿದರು.

ಇವರ ಬಾಲ್ಯಜೀವನ ಸುಖವಾಗಿರಲಿಲ್ಲ. ವಿದ್ಯೆಯೂ ಹತ್ತಲಿಲ್ಲ. ಆದರೆ ಭಜನೆ, ಸಂಗೀತ, ಹರಿಕಥೆ, ನಾಟಕ ಮೊದಲಾದವುಗಳಲ್ಲಿ ಹೆಚ್ಚಿನ ಆಸಕ್ತಿ ಉಂಟಾಯಿತು. ಆತ್ಮೀಯ ಬಂಧು ವೆಂಕಟನಾರಾಯಣ ಜೋಯಿಸರಿಂದ ಸಂಗೀತ, ಗಮಕಗಳ ಪಾಠ ಆಯಿತು. ಪಿಟೀಲು ವಿದ್ವಾನ್ ಪುಟ್ಟಣ್ಣಯ್ಯನವರಿಂದಲೂ ಪಾಠವಾಯಿತು. ಸ್ವಲ್ಪಕಾಲ ಅಧ್ಯಾಪಕವೃತ್ತಿ, ಪೊಲೀಸ್ ಕಛೇರಿಯಲ್ಲಿ ಗುಮಾಸ್ತೆ, ಮತ್ತೆ ಸ್ವಲ್ಪ ದಿನ ವ್ಯವಸಾಯ, ಕೊನೆಗೆ ಮೂಕಿ ಸಿನಿಮಾ ನಡೆಸುವ ಉದ್ಯೋಗ ಕೈಗೊಂಡಿದ್ದರು. ಗುಬ್ಬಿ ಕಂಪನಿ ನಾಟಕಗಳ ಪ್ರಭಾವದಿಂದ ಧರ್ಮಪಾಲಚರಿತ್ರೆ ನಾಟಕದಲ್ಲಿ ಧರ್ಮಪಾಲನ ಪಾತ್ರ ವಹಿಸಿದರು. ಇದೇ ಸಮಯಕ್ಕೆ ಇವರ ಮದುವೆ ಆಯಿತು.

ನಾಟಕದಲ್ಲಿ ಆಸಕ್ತರಾಗಿದ್ದ ರಾಯರು ಮೊದಲಿಗೆ ತುಮಕೂರಿನಲ್ಲಿದ್ದ ಶ್ರೀ ಸೀತಾಮನೋಹರ ನಾಟಕ ಮಂಡಳಿಯನ್ನು ಸೇರಿದರು. ಅನಂತರ ಗುಬ್ಬಿ ಕಂಪನಿಯನ್ನು ಸೇರಿ ಮುಖ್ಯ ಪಾತ್ರಗಳನ್ನು ವಹಿಸಿದರು. ರೌದ್ರ, ವೀರ, ಅದ್ಭುತ, ಭೀಭತ್ಸ ರಸಗಳನ್ನು ಪ್ರತಿಪಾದಿಸುವ ಪಾತ್ರಗಳಲ್ಲಿ ಪ್ರಖ್ಯಾತರಾದರು. ಈ ಪಾತ್ರಗಳಿಗೆ ಒಪ್ಪತಕ್ಕ ಅಂಗಸೌಷ್ಟವ ಹೊಂದಿದ್ದು ಚೆನ್ನಾಗಿ ಹಾಡಲೂ ಬಲ್ಲವರಾಗಿದ್ದರು. ಇವರು ಹೆಚ್ಚು ಕಾಲ ಗುಬ್ಬಿ ಕಂಪನಿಯಲ್ಲಿದ್ದರೂ ಶ್ರೀಭಾರತ ಜನಮನೋಲ್ಲಾಸಿನೀ ನಾಟಕಸಭಾ, ಶ್ರೀಲಕ್ಷ್ಮೀಕಾಂತ ವಿಲಾಸ ನಾಟಕ ಸಭಾ, ಶ್ರೀ ಗುಬ್ಬಿ ಚನ್ನಬಸವೇಶ್ವರ ಕೃಪಾಪೋಷಿತ ಲಲಿತಕಲಾವರ್ಧಿನೀ ನಾಟಕ ಸಭಾ, ಶ್ರೀಶಾಂಭವೀ ಪ್ರಸಾದಿಕ ನಾಟಕ ಮಂಡಳಿ, ಶ್ರೀಕೃಷ್ಣ ಮನೋರಂಜಿನೀ ನಾಟಕ ಸಭಾ, ಗುಬ್ಬಿ ಬಾಲಕಲಾವರ್ಧಿನೀ ನಾಟಕ ಸಭಾ, ಆರು ಜನದ ಕಂಪನಿ, ಶ್ರೀ ಮಂಜುನಾಥೇಶ್ವರಿ ನಾಟಕ ಮಂಡಳಿ, ಶೇಷಕಮಲ ಕಲಾ ಮಂಡಳಿ, ಶ್ರೀಚಾಮುಂಡೇಶ್ವರಿ ಕಂಪನಿಯ ಮಿತ್ರರು ಇವೇ ಮೊದಲಾದ ಕಂಪನಿಗಳಲ್ಲಿ ಮಾಲಿಕರಾಗಿ, ಪಾಲುದಾರರಾಗಿ, ನಟರಾಗಿ ಬೇರೆ ಬೇರೆ ಸ್ಥಾನದಲ್ಲಿ ನಿಂತು ಕೆಲಸ ಮಾಡಿದರು.

ರಾಯರು ಪ್ರಹ್ಲಾದ ಚರಿತ್ರೆಯಲ್ಲಿ ಹಿರಣ್ಯಕಶಿಪು, ಶ್ರೀಕೃಷ್ಣಲೀಲಾ ಮತ್ತು ಕಂಸವಧದಲ್ಲಿ ಕಂಸ, ಯಮಗರ್ವಭಂಗದಲ್ಲಿ ಯಮ,



ಚಂದ್ರಹಾಸದಲ್ಲಿ ದುಷ್ಟಬುದ್ಧಿ ಮೊದಲಾದ ಪಾತ್ರಗಳನ್ನು ಬಹಳ ಉತ್ತಮ ರೀತಿಯಲ್ಲಿ ನಿರ್ವಹಿಸುತ್ತಿದ್ದರು. ಇವರ ಅಭಿನಯ ಕೇವಲ ವೀರಅದ್ಭುತ ರಸಗಳ ಪಾತ್ರ ಚಿತ್ರಣಕ್ಕೇ ಮೀಸಲಾಗಿರಲಿಲ್ಲ. ಇತರ ರಸಗಳನ್ನು ಪ್ರತಿಪಾದಿಸುವ ಪಾತ್ರಗಳನ್ನೂ ಇವರು ಸಮರ್ಪಕವಾಗಿ ನಿರ್ವಹಿಸುತ್ತಿದ್ದರು. ಇವರ ಉತ್ತಮ ಅಭಿನಯವನ್ನು ಮೆಚ್ಚಿ ಸಾರ್ವಜನಿಕರು ರಾಯರಿಗೆ ಅಭಿನಯಕಂಠೀರವ, ನಟ ಭಯಂಕರ, ಅಭಿನಯ ಸಮ್ರಾಟ ಮೊದಲಾದ ಬಿರುದುಗಳನ್ನೂ ವಿವಿಧ ಬಗೆಯ ಉಡುಗೊರೆಗಳನ್ನೂ ಕೊಟ್ಟರು. ರಾಯರ ರೌದ್ರಾಭಿನಯ ಕೆಲವು ವೇಳೆ ರಸಿಕರನ್ನು ರಂಗಮಂದಿರದಲ್ಲೇ ಮೂರ್ಛೆಗೊಳಿಸಿದ್ದೂ ಉಂಟು. ಕಂಪನಿಗಳನ್ನು ನಡಸಿದ ರಾಯರು ರಂಗಸಜ್ಜಿಕೆ, ದೀಪಾಲಂಕಾರ, ರಂಗಸಂಗೀತ, ಉತ್ತಮ ಅಭಿನಯ ಇವೇ ಮೊದಲಾದವುಗಳಿಗೆ ಹೆಚ್ಚಿನ ಗಮನ ನೀಡಿದರು. ರಾಯರು ಬಹಳ ಉದಾರಿಗಳಾಗಿದ್ದರು. ಒಮ್ಮೆ ಇವರು ಬಡಬ್ರಾಹ್ಮಣನೊಬ್ಬನಿಗೆ ಏಳೆಂಟು ತೊಲ ಚಿನ್ನದ ಆಭರಣವನ್ನು ದಾನವಾಗಿ ಕೊಟ್ಟಿದ್ದೂ ಉಂಟು. ಧರ್ಮ ಕಾರ್ಯಗಳಿಗಾಗಿ ಯಾಚಿಸಿದವರಿಗೆ ಸಹಾಯದ ಹಸ್ತವನ್ನು ನೀಡಿದರು. ರಾಯರು ರಂಗಭೂಮಿಯಲ್ಲಿ ಬಹಳ ವರ್ಷ ರಾರಾಜಿಸಿದರೂ ಇವರ ಸ್ವಂತ ಜೀವನ ಹಾಗೂ ಕೊನೆಯದಿನಗಳು ಅಷ್ಟು ಸುಖಮಯವಾಗಿರಲಿಲ್ಲ. ಇವರು 1961 ಮಾರ್ಚ್ 12ರಂದು ನಿಧನಹೊಂದಿದರು. (ಎಸ್.ಎ.)

**ಗಂಗಾಧರರಾವ್, ದೇಶಪಾಂಡೆ :** 1871-1960. ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಕರ್ನಾಟಕದ ನಾಯಕರಲ್ಲೊಬ್ಬರು. ಬೆಳಗಾಂವಿ ಜಿಲ್ಲೆಯ ರಾಯಬಾಗದ ಹತ್ತಿರವಿರುವ ಜಲಾಲಪುರ ಗ್ರಾಮದಲ್ಲಿ 1871 ಮಾರ್ಚ್ 31ರಂದು ಜನಿಸಿದರು. ಬೆಳೆದದ್ದು ಅದರ ಹತ್ತಿರದ ಹುದಲಿಯಲ್ಲಿ. ತಂದೆ ಬಾಳಕೃಷ್ಣ ದೇಶಪಾಂಡೆ. ಬಾಲ್ಯದಲ್ಲಿ ತಂದೆಯಿಂದ ದೊರೆತ ರಾಷ್ಟ್ರೀಯತ್ವದ ಪರಿಕಲ್ಪನೆ, ಮುಂದೆ ಲೋಕಮಾನ್ಯ ಬಾಳಗಂಗಾಧರ ಟಿಳಕರಿಂದ ಪಡೆದ ಕಾಂಗ್ರೆಸ್ ದೀಕ್ಷೆ, ತರುವಾಯ ಮಹಾತ್ಮ ಗಾಂಧಿಯವರ ಅನುಯಾಯಿಯಾಗಿ ಪಡೆದ ಅನುಭವ -ಇವು ಗಂಗಾಧರರಾಯರ ವ್ಯಕ್ತಿತ್ವವನ್ನು ರೂಪಿಸಿದುವು. ಚಿಕ್ಕಂದಿನಲ್ಲಿ ಇವರು ಗೋಪಾಲಕೃಷ್ಣ ಗೋಖಲೆಯವರ ವಿಚಾರಗಳಿಂದಲೂ ಮುಪ್ಪಿನಲ್ಲಿ ರಾಮಭಾವು ರಾನಡೆಯವರ ಆಧ್ಯಾತ್ಮಿಕ ಚಿಂತನೆಗಳಿಂದಲೂ ಪ್ರಭಾವಿತರಾಗಿದ್ದರು.

ಹದಿಮೂರನೆಯ ವಯಸ್ಸಿನಲ್ಲೆ ಗಂಗಾಧರರಾಯರಿಗೆ ಮದುವೆಯಾಯಿತು. ಪುಣೆಯ ಡೆಕ್ಕನ್ ಕಾಲೇಜಿನಲ್ಲಿದ್ದಾಗ ಇವರಿಗೆ ಟಿಳಕ, ಅಗರಕರ ಇವರ ಸಂಪರ್ಕ ಬೆಳೆಯಿತು. ಅಲ್ಲಿಯ ಅನೇಕ ಪ್ರಮುಖ ವ್ಯಕ್ತಿಗಳು ಇವರ ಮಿತ್ರರಾದರು. ಟಿಳಕರ ಲೇಖನಗಳು, ಭಾಷಣಗಳು, ಸಂಪಾದಕೀಯ ನುಡಿಗಳು ಗಂಗಾಧರರಾಯರಲ್ಲಿ ಸ್ಫೂರ್ತಿಯನ್ನೂ ಜಾಗೃತಿಯನ್ನೂ ಉಂಟುಮಾಡಿದವು. ಇದರಿಂದ ಇವರಿಗೆ ಟಿಳಕರ ಸಂಪರ್ಕ ಪಡೆಯುವ ಉತ್ಸುಕತೆಉಂಟಾಯಿತು. ಇವರು ಅದನ್ನು ಸಾಧಿಸಿದರು. ಗೋಪಾಲಕೃಷ್ಣ ಗೋಖಲೆ, ಜಸ್ಟಿಸ್ ರಾನಡೆ ಅವರನ್ನೂ ಕಂಡರು. ಬಿ.ಎ., ಎಲ್.ಎಲ್.ಬಿ. ಪದವಿ ಪಡೆದ ಅನಂತರ ಸ್ವಲ್ಪ ಕಾಲ ಮುಂಬಯಿಯ ಲೋಕಮತ ಎಂಬ ಮರಾಠಿ ಸಾಪ್ತಾಹಿಕದ ಸಂಪಾದಕರಾಗಿದ್ದರು. ತಂದೆಯ ಅಭಿಲಾಷೆಯಂತೆ ಗಂಗಾಧರ ರಾಯರು ವಕೀಲರಾಗಿ ಬೆಳಗಾಂವಿಗೆ ಬಂದ ಮೇಲೆ ಕರ್ನಾಟಕ ಕಾಂಗ್ರೆಸ್ ಕಾರ್ಯಕರ್ತರಾಗಿ ಲೋಕಮಾನ್ಯ ಟಿಳಕರ ಮಾರ್ಗದರ್ಶನದಲ್ಲಿ ಸ್ವಾತಂತ್ರ್ಯಾಂದೋಲನದಲ್ಲಿ ಉದ್ಯುಕ್ತರಾದರು. ಸಂಘಟನೆಯ ಕಾರ್ಯ ಕೈಗೊಂಡರು. ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. ಟಿಳಕರ ನಿಷ್ಠಾವಂತ ಅನುಯಾಯಿಯಾಗಿ ಕಾಂಗ್ರೆಸ್ ಕಾರ್ಯಕ್ಕಾಗಿ ತಮ್ಮನ್ನು ತಾವು ಅರ್ಪಿಸಿಕೊಂಡರು. ಬೆಳಗಾಂವಿಯಲ್ಲಿ 'ಸ್ವದೇಶಿವಸ್ತುಭಂಡಾರ' ಅಂಗಡಿಯನ್ನೂ ಗಣೇಶ ವಿದ್ಯಾಲಯ ಎಂಬ ರಾಷ್ಟ್ರೀಯ ಶಾಲೆಯನ್ನೂ ಪ್ರಾರಂಭಿಸಿದರು. 1906ರ ಸೂರತ್ ಕಾಂಗ್ರೆಸ್ ಅಧಿವೇಶನಕ್ಕೆ ಕರ್ನಾಟಕದಿಂದ ಗೆಳೆಯರೊಡನೆ ಹೋಗಿದ್ದು ಅಲ್ಲಿ ಟಿಳಕರ ಪಕ್ಷದವರಿಗೆ ಬೆಂಬಲವಿತ್ತಿದ್ದರು.



1921ರಲ್ಲಿ ಇವರು ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ಆಯ್ಕೆ ಹೊಂದಿದರು. ಅದೇ ವರ್ಷ ನವಲಗುಂದದಲ್ಲಿ ಭಾಷಣ ಮಾಡಿದ್ದಕ್ಕೆ ರಾಜದ್ರೋಹದ ಆಪಾದನೆಯ ಮೇಲೆ ಬ್ರಿಟಿಷ್ ಸರ್ಕಾರ ಇವರನ್ನು ಬಂಧಿಸಿ ಆರು ತಿಂಗಳ ಕಾರಾಗೃಹಶಿಕ್ಷೆ ವಿಧಿಸಿತು. ಲೋಕಮಾನ್ಯ ಟಿಳಕರಿಂದ ಸ್ವಾತಂತ್ರ್ಯ ಚಳವಳಿಯ ಧುರೀಣತ್ವ ಗಾಂಧೀಜಿಯವರಿಗೆ ಬಂದಮೇಲೆ ಇವರು ಗಾಂಧೀಜಿಯವರಿಗೆ ತಮ್ಮ ನಿಷ್ಠೆಯನ್ನು ತೋರಿ ಅವರ ಅಹಿಂಸಾತ್ಮಕ ಚಟುವಟಿಕೆಗಳಲ್ಲಿ ಭಾಗವಹಿಸತೊಡಗಿದರು. 1922ರಲ್ಲಿ ಮಹಾರಾಷ್ಟ್ರ, ಕರ್ನಾಟಕ ಎರಡೂ ಪ್ರಾಂತ್ಯಗಳಲ್ಲಿ ದೀರ್ಘಸಂಚಾರ ಕೈಕೊಂಡರು. ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸಕ್ಕೆ ಕರ್ನಾಟಕದ ಹೆಸರನ್ನು ಜೋಡಿಸಲು ಕಾರಣರಾದವರಲ್ಲಿ ಇವರೂ ಒಬ್ಬರು. 1923ರಲ್ಲಿ ಮತ್ತೆ ಇದೇ ಬಗೆಯ ಪ್ರವಾಸ ಕೈಗೊಂಡು ಗಾಂಧೀಯವರ ಧ್ಯೇಯಧೋರಣೆಗಳನ್ನು, ಅವರ ಅಹಿಂಸಾತತ್ತ್ವ, ಸ್ವದೇಶೀ ಚಳವಳಿ, ಖಾದೀವ್ರತಗಳನ್ನು ಕುರಿತು ಜನಸಾಮಾನ್ಯರಲ್ಲಿ ತಿಳಿವಳಿಕೆ ಮಾಡಿಕೊಟ್ಟರು. ಇವರು ಅಸ್ಪೃಶ್ಯತಾನಿವಾರಣೆಗೂ ಶ್ರಮಿಸಿದರು.

1924ರಲ್ಲಿ ಗಾಂಧೀಯವರ ಅಧ್ಯಕ್ಷತೆಯಲ್ಲಿ ಬೆಳಗಾಂವಿಯಲ್ಲಿ ಜರುಗಿದ ಕಾಂಗ್ರೆಸ್ ಅಧಿವೇಶನಕ್ಕೆ ಇವರೇ ಸ್ವಾಗತಾಧ್ಯಕ್ಷರು. ಬೆಳಗಾಂವಿ ಕಾಂಗ್ರೆಸ್ಸು ಅಧಿವೇಶನದ ಸ್ಥಳಕ್ಕೆ ವಿಜಯನಗರದ ಹೆಸರನ್ನು ಇಡಲಾಗಿದ್ದು, ಅದು ವಿಜಯನಗರದ ವೈಭವವನ್ನೂ ವಿದ್ಯಾರಣ್ಯರ ಪುಣ್ಯ ಪ್ರಭಾವವನ್ನೂ ನೆನಪಿಗೆ ತಂದುಕೊಟ್ಟಿತು. ಗಾಂಧೀಜಿ ಕರ್ನಾಟಕ ಸಂಚಾರವನ್ನು ಕೈಗೊಂಡಾಗ ಇವರು ಅವರ ಭಾಷಣಗಳನ್ನು ಕನ್ನಡಕ್ಕೆ ಅನುವಾದಿಸಿ ಹೇಳುತ್ತಿದ್ದರು.

ಇವರು ಅಖಿಲ ಭಾರತ ಗ್ರಾಮೋದ್ಯೋಗ ಸಂಘದ ಕರ್ನಾಟಕದ ಪ್ರತಿನಿಧಿಯಾಗಿದ್ದರು.

1930ರ ಉಪ್ಪಿನ ಸತ್ಯಾಗ್ರಹದಲ್ಲಿ ಇವರೇ ಕರ್ನಾಟಕದ ಮೊದಲನೆಯ ಸತ್ಯಾಗ್ರಹಿಯಾಗಿ ಬಂಧಿತರಾದರು. 1932ರಲ್ಲಿ ಹುದಲಿಯಲ್ಲಿ ಇವರು ಗಾಂಧೀ ಸೇವಾ ಸಂಘ ಸಮ್ಮೇಳನವನ್ನು ಯಶಸ್ವಿಯಾಗಿ ನಡೆಸಿದರು. ಪುಂಡಲೀಕ ಕಾತಗಡೆ ಮತ್ತು ಗೋವಿಂದರಾವ ಯಾಳಗಿ ಮುಂತಾದವರು ಈ ಎಲ್ಲ ಕಾರ್ಯಗಳಲ್ಲೂ ಇವರಿಗೆ ಸಹಾಯಕರಾಗಿದ್ದರು. 1938ರಲ್ಲಿ ಇವರು ಮತ್ತೊಮ್ಮೆ ಕರ್ನಾಟಕ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರು. 1941ರ ವೈಯಕ್ತಿಕ ಸತ್ಯಾಗ್ರಹ, 1942ರ ಚಲೇಜಾವ್ ಚಳವಳಿ ಇವುಗಳಲ್ಲಿ ಭಾಗವಹಿಸಿದರು. ಇವರು "ಇದು ಸತ್ಯಾಗ್ರಹವಲ್ಲ, ಜೇಲು ತುಂಬುವುದು ಈ ಚಳವಳಿಯ ಉದ್ದೇಶವಲ್ಲ. ಇದು ಬ್ರಿಟಿಷ್ ಸರ್ಕಾರದ ವಿರುದ್ಧ ಹೂಡಿದ ಬಂಡು ಎಂಬುದನ್ನು ತಿಳಿದು ಪ್ರತಿಯೊಬ್ಬರೂ ತಾವೇ ಮುಖಂಡರಾಗಿ ಈ ಕೊನೆಯ ಹೋರಾಟ ನಡೆಯಿಸಬೇಕು" ಎಂದು ಸಿಂಹಗರ್ಜನೆ ಮಾಡಿ ಜನರನ್ನು ಹುರಿದುಂಬಿಸಿದರು. ಮುಂಬಯಿಯಲ್ಲಿ 8ನೆಯ ಆಗಸ್ಟ್ 1942ರಲ್ಲಿ ಸೇರಿದ್ದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧಿವೇಶನಕ್ಕೆ ಇವರು ಹೋದಾಗ ಅಲ್ಲಿ ಸರ್ಕಾರ ಅವರನ್ನು ಬಂಧಿಸಿತು. 1942ರಿಂದ 1944ರ ವರೆಗೆ ಇವರು ನಾಸಿಕ ಕಾರಾಗೃಹದಲ್ಲಿ ರಾಜಕೀಯ ಕೈದಿಯಾಗಿದ್ದರು. 1945ರಿಂದ 1950ರ ವರೆಗೆ ವಿಧಾಯಕ ಕಾರ್ಯದಲ್ಲಿಯೇ ತೊಡಗಿದ್ದರು.

ದೇಶಕ್ಕೆ ಸ್ವಾತಂತ್ರ್ಯಪ್ರಾಪ್ತಿಯಾದಮೇಲೆ ಇವರು ಅಧಿಕಾರ ಪಡೆಯಲು ಪ್ರಯತ್ನಿಸಲಿಲ್ಲ. ಸ್ವಾತಂತ್ರ್ಯವನ್ನು ಗಳಿಸಿಕೊಟ್ಟವರು ತಾವೇ-ಎಂದು ತಮ್ಮ ಪೀಳಿಗೆಯ ಜನ ಅಹಂಕಾರ ತಾಳಬಾರದೆಂದು ಇವರು ಬೋಧಿಸುತ್ತಿದ್ದರು. ಅಧಿಕಾರಲಾಲಸೆ ಇರಬಾರದೆಂದೂ ಉಪದೇಶಿಸಿದರು. ರಾನಡೆಯವರ ಅನುಯಾಯಿಗಳಾಗಿ ಅಧ್ಯಾತ್ಮಚಿಂತನೆಯಲ್ಲಿ ತಮ್ಮ ಕೊನೆಯ ಜೀವನವನ್ನು ಕಳೆದರು. 1960 ಜುಲೈನಲ್ಲಿ ನಿಧನಹೊಂದಿದರು. (ಎಸ್.ಕಿ.ಕೆ.)

**ಗಂಗಾಧರ ಶಾಸನ** : ಕನ್ನಡದ ಆದಿಕವಿ ಪಂಪನ ಜೀವನ ಪುನಾರಚಿಸುವಲ್ಲಿ ಚರಿತ್ರೆಗೆ ಸಹಾಯಕವಾದ ಒಂದು ಅಪೂರ್ವ ಶಾಸನ. ಪಂಪನ ತಮ್ಮ ಜಿನವಲ್ಲಭನಿಂದ ಕೆತ್ತಿಸಲಾದ ಶಾಸನವಿದು. ಕಂಡರಿಸಿದ ಶಿಲ್ಪಿ ಎರೆಯಮ್ಮ. ಉದ್ದೇಶ ಜಿನವಲ್ಲಭನನ್ನು ಸುತ್ತಿಸುವುದೇ ಆಗಿದ್ದರೂ ಪಂಪನ ಚರಿತ್ರೆಯ ಮೇಲೆ ಇದು ಆನುಷಂಗಿಕವಾಗಿ ವಿಶೇಷ ಬೆಳಕನ್ನು ಬೀರಿದೆ. ಪಂಪನ ಅಜ್ಜ, ತಂದೆ, ತಾಯಿ, ಆಕೆಯ ತವರಿನವರು, ಸೋದರ ಹಾಗೂ ಗುರು ಇವರ ಬಗೆಗೆ ಕೆಲವು ಸ್ಪಷ್ಟ ಹೇಳಿಕೆಗಳನ್ನಿದು ಒಳಗೊಂಡಿದೆ. ಈ ಶಾಸನ ಮೊದಲಬಾರಿಗೆ ತೆಲುಗು ಪತ್ರಿಕೆ ಭಾರತಿಯಲ್ಲಿ 1967ರ ಮಾರ್ಚ್ ತಿಂಗಳಿನಲ್ಲಿ ಆಂಧ್ರಪ್ರದೇಶದ ಪುರಾತತ್ತ್ವ ಶಾಖೆಯ ಸಹಾಯಕ ಸಂಚಾಲಕರಾದ ಎನ್. ವೆಂಕಟರಮಣಯ್ಯನವರಿಂದ ಪ್ರಕಾಶಗೊಂಡಿತು. ಅನಂತರ ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳ ಪತ್ರಿಕೆಗಳಲ್ಲೂ ಕನ್ನಡ ಶಾಸನ ಸಂಪದ ಎಂಬ ಶಾಸನಗಳ ಸಂಗ್ರಹಗ್ರಂಥದಲ್ಲೂ ಅಚ್ಚಾಯಿತು.

ಗಂಗಾಧರ ಶಾಸನ ಆಂಧ್ರಪ್ರದೇಶದ ಕರೀಮ್‌ನಗರ ಜಿಲ್ಲೆಯಲ್ಲಿದೆ. ಕರೀಮ್‌ನಗರದಿಂದ ಜಗತ್ಯಾಲ ತಾಲೂಕಿಗೆ ಹೋಗುವ ದಾರಿಯಲ್ಲಿ ಕುರ್ಕಿಯಾಲ್ ಎಂಬ ಹಳ್ಳಿಯಿಂದ ಪೂರ್ವದಲ್ಲೂ ಗಂಗಾಧರ ಎಂಬ ಹಳ್ಳಿಯಿಂದ ದಕ್ಷಿಣದಲ್ಲೂ ನೇಲ್ಕೊಂಡಪಲ್ಲಿಯೆಂಬ ಹಳ್ಳಿಯಿಂದ ಈಶಾನ್ಯದಲ್ಲೂ ಎಂದರೆ ಈ ಮಧ್ಯದಲ್ಲಿರುವ ಬೆಟ್ಟದಲ್ಲಿ ಈ ಶಾಸನವನ್ನು ಕೊರೆಯಲಾಗಿದೆ. ಕುರ್ಕಿಯಾಲ್ ಎಂಬ ಹಳ್ಳಿಯ ಸೀಮೆಯ ಒಳಗಡೆಯೇ ಇದು ಬರುತ್ತದೆ. ಬೆಟ್ಟದ ಪಕ್ಕದಲ್ಲಿ ವಾಯುವ್ಯದಿಶೆಯಲ್ಲಿ ಪಾತಚೆರುವು ಎಂಬ ಕೆರೆಯೊಂದಿದೆ. ಬಹುಶಃ ಇದುವೆ ಕವಿತಾಗುಣಾರ್ಣವ ತಟಾಕವಾಗಿರಬಹುದೆಂದು ವಿದ್ವಾಂಸರ ಅಭಿಪ್ರಾಯ. ಬೆಟ್ಟಕ್ಕೆ ಈಗ ಬೊಮ್ಮಲ ಗುಟ್ಟವೆಂದು (ಗೊಂಬೆಗಳ ಗುಡ್ಡ) ಹೆಸರು. ಬೆಟ್ಟದ ನಿಡಿದಾದ ದಾರಿಯಲ್ಲಿ ಸು.125' ಏರಿದಮೇಲೆ ಒಂದು ಬೃಹತ್ ಶಿಲೆಯಿದೆ. ಅದರ ಮೇಲೆ ಸು.4' ಎತ್ತರದ ಸ್ತ್ರೀ ಮೂರ್ತಿಯೊಂದನ್ನು ಕೆತ್ತಿದೆ. ಈ ಮೂರ್ತಿಯನ್ನು ಜನಪದರು ಬೊಮ್ಮಲಮ್ಮನೆಂದು (ಚಕ್ರೇಶ್ವರಿ) ಈಗಲೂ ಪೂಜಿಸುತ್ತಾರೆ. ಈ ವಿಷಯ ಆ ವಿಗ್ರಹದ ಪಾದದಲ್ಲಿಯೆ ಕೆತ್ತಲಾಗಿರುವ ಶಾಸನದಲ್ಲಿ ಸ್ಪಷ್ಟವಿದೆ. ಚಕ್ರೇಶ್ವರಿ ಎಂದರೆ ಅದೇ ವೃಷಭಾದ್ರಿಯಲ್ಲಿದ್ದ ವೃಷಭನಾಥ ತೀರ್ಥಂಕರನ ಯಕ್ಷಿಣಿ. ಆ ವೃಷಭನಾಥ ಜಿನಾಲಯ ಎಲ್ಲಿದ್ದಿತೆಂಬುದು ಈಗ ತಿಳಿಯದು. ಚಕ್ರೇಶ್ವರಿಯ ಜೊತೆಗೆ ಇನ್ನೂ

ಕೆಲವು ಪ್ರತಿಮೆಗಳು ಆಕೆಯ ಎಡಕ್ಕೂ ಬಲಕ್ಕೂ ಇವೆ. ಆಕೆಯ ತಲೆಯ ಮೇಲೆಯೇ ಸ್ವಲ್ಪ ಎತ್ತರದಲ್ಲಿ ಎರಡು ದೊಡ್ಡ ಜಿನಬಿಂಬಗಳೂ ಇವೆ. ಇವು ಬಹಳ ಎತ್ತರದ ಮೇಲಿರುವುದರಿಂದ ಬಹುದೂರದವರೆಗೆ ಗೋಚರಿಸುತ್ತವೆ. ಅದರಲ್ಲೂ ನೇಲ್ಕೊಂಡಪಲ್ಲಿಗೆ ಹೆಚ್ಚು ಸ್ಪುಟವಾಗಿ ಕಾಣಿಸುತ್ತವೆ. ಈ ಶಾಸನದ ಪ್ರಕಾರ, ಇಲ್ಲಿರುವ ಎಲ್ಲ ಪ್ರತಿಮೆಗಳನ್ನೂ ಕೆತ್ತಿಸಿದ ವ್ಯಕ್ತಿ, ಪಂಪನ ತಮ್ಮ ಜಿನವಲ್ಲಭ. ಮೊದಲ ಸಲ ಈ ಶಾಸನವನ್ನು ಪ್ರಕಟಿಸಿದ ವ್ಯಕ್ತಿಗಳು ಗಂಗಾಧರವೆಂಬ ಹಳ್ಳಿಯಿಂದ ಶಾಸನವಿರುವ ಎಡೆಗೆ ನೋಡಲು ಹೋದರಾಗಿ ತಮ್ಮ ಲೇಖನದಲ್ಲವರು ಇದನ್ನು ಗಂಗಾಧರ ಶಾಸನ ಎಂದೇ ಹೆಸರಿಸಿದರು. ಇದಕ್ಕೆ ಇನ್ನೊಂದು ಕಾರಣವೂ ಇದೆ. ಗಂಗಾಧರ ಗ್ರಾಮ ಹತ್ತನೆಯ ಶತಮಾನದಲ್ಲಿ ಜೈನಧರ್ಮಿಗಳಿಗೆ ಒಂದು ಕೇಂದ್ರವಾಗಿತ್ತು. ಇದು ಪಂಪನಿಗೆ ಆಶ್ರಯವನ್ನಿತ್ತ ಎರಡನೆಯ ಅರಿಕೇಸರಿಯ ಪ್ರಥಮ ಪುತ್ರನಾದ ವಾಗ್ರಾಜನಿಗೆ ರಾಜಧಾನಿಯೂ ಆಗಿತ್ತು. ಅವನ ಆಸ್ಥಾನದಲ್ಲಿ ಕವಿಯಾಗಿದ್ದ ಸೋಮದೇವಸೂರಿ ಸಂಸ್ಕೃತಕಾವ್ಯವಾದ ಯಶಸ್ತಿಲಕಚಂಪುವನ್ನು ಗಂಗಾಧರದಲ್ಲಿಯೇ ರಚಿಸಿ ಸಮಾಪ್ತಿಗೊಳಿಸಿದ. ಜೈನಧರ್ಮದ ಕೇಂದ್ರವಾಗಿದ್ದ ಗಂಗಾಧರದ ಹತ್ತಿರವೇ ಬೊಮ್ಮಲಗುಟ್ಟ ಇರುವುದರಿಂದ ಕುರ್ಕಿಯಾಲ್ ಗ್ರಾಮ ಅಷ್ಟು ಪುರಾತನವೆಂದು ತೋರದುದರಿಂದ ಈ ಶಾಸನವನ್ನು ಗಂಗಾಧರ ಶಾಸನ ಎಂದಿರುವಲ್ಲಿ ಔಚಿತ್ಯವಿದೆ. ಕೆಲವರು ಇದನ್ನು ಕುರ್ಕಿಯಾಲ ಶಾಸನವೆಂದೂ ಕರೆದಿದ್ದಾರೆ.



ಜಿನವಲ್ಲಭ ಕೆತ್ತಿಸಿದ ಚಕ್ರೇಶ್ವರಿ

ಈ ಶಾಸನದಲ್ಲಿ 14' 5" ಅಳತೆಯ ಪಂಕ್ತಿಗಳು ಹತ್ತು ಮತ್ತು 4' ಅಳತೆಯ ಪಂಕ್ತಿ ಒಂದು ಹೀಗೆ ಒಟ್ಟು ಹನ್ನೊಂದು ಪಂಕ್ತಿಗಳಿವೆ. ಶಾಸನದ ಲಿಪಿ, ಹತ್ತನೆಯ ಶತಮಾನದಲ್ಲಿ ರಾಷ್ಟ್ರಕೂಟ ಹಾಗೂ ಚಾಳುಕ್ಯರ ನಾಡಿನಲ್ಲೊಂದೆಡೆಯಲ್ಲಿ ಈಗಿನ ತೆಲಂಗಾಣ ಪ್ರದೇಶದಲ್ಲಿ ಬಳಕೆಯಲ್ಲಿದ್ದ ಕನ್ನಡ ತೆಲುಗು ಲಿಪಿ. ಅಕ್ಷರಗಳು ಎರಡನೆಯ ಅರಿಕೇಸರಿಯ ವೇಮುಲವಾಡದ ಶಾಸನಾಕ್ಷರಗಳನ್ನು ಹೋಲುತ್ತವೆ. ಕನ್ನಡ, ಸಂಸ್ಕೃತ ಮತ್ತು ತೆಲುಗು ಹೀಗೆ ಮೂರು ಭಾಷೆಗಳನ್ನೂ ಇದರಲ್ಲಿ ಬಳಸಲಾಗಿದೆ. ಧೋರಣೆ ಗದ್ಯ ಪದ್ಯಾತ್ಮಕವಾಗಿದೆ. ಓಂ ನಮಃ ಸಿದ್ಧೇಭ್ಯಃ ಎಂಬ ಸಂಸ್ಕೃತ ವಾಕ್ಯದಿಂದ ಜೈನರ ಪಂಚಪರಮೇಷ್ಠಿಗಳಲ್ಲೊಬ್ಬರಾದ ಸಿದ್ಧರ ಸ್ತುತಿಯೊಂದಿಗೆ ಶಾಸನ ಪ್ರಾರಂಭವಾಗುತ್ತದೆ. ತರುವಾಯ ಒಂದು ದೀರ್ಘ ಕನ್ನಡ ಗದ್ಯ, ಅನಂತರದಲ್ಲಿ ಮೂರು ಸಂಸ್ಕೃತ ವೃತ್ತಗಳು (ಎರಡು ಶಾರ್ದೂಲವಿಕ್ರೀಡಿತ, ಒಂದು ಪೃಥ್ವಿ), ಅನಂತರದಲ್ಲಿ ಆರು ಕನ್ನಡವೃತ್ತಗಳು (ನಾಲ್ಕು ಚಂಪಕಮಾಲಾ, ಒಂದು ಮತ್ತೇಭವಿಕ್ರೀಡಿತ, ಒಂದು ತರಳ), ತರುವಾಯದಲ್ಲಿ ಮೂರು ತೆಲುಗು ಪದ್ಯಗಳು (ಕಂದಗಳು) ಒಂದು ಕೊನೆಗೊಂದು ಕನ್ನಡದ ಸಣ್ಣ ಗದ್ಯಭಾಗವಿದೆ. ಶಿಲ್ಪಿ ಬಹಳ ಜಾಗರೂಕತೆಯಿಂದ ಕೆತ್ತಿದ್ದರೂ ಅಲ್ಲಲ್ಲಿ ಕೆಲವು ತಪ್ಪುಗಳಿವೆ. ತೆಲುಗು ಪದ್ಯಗಳಲ್ಲಿ ಅವು ಅಧಿಕ. ಕಾರಣ ಪ್ರಾಯಃ ಶಿಲ್ಪಿಗೆ ತೆಲುಗುಭಾಷೆಯ ಪರಿಚಯವಿಲ್ಲದ್ದಿರಬಹುದೆಂದು ತೋರುತ್ತದೆ. ಆದರೂ ತೆಲುಗು ಸಾಹಿತ್ಯಕ್ಕೆ ಇದು ಬಹುಮುಖ್ಯವಾದ ಶಾಸನ, ಏಕೆಂದರೆ ತೆಲುಗು ಭಾಷೆಯಲ್ಲಿ ಸದ್ಯಕ್ಕೆ ಇಲ್ಲಿನವೇ ಪ್ರಥಮ ಕಂದಪದ್ಯಗಳು.

ಈ ಶಾಸನ ಜಿನವಲ್ಲಭನ ಪ್ರಶಸ್ತಿಯಾದುದರಿಂದ ಇದರಲ್ಲಿ ಆತನ ವಂಶಚರಿತ್ರೆ, ಗುಣಸಂಪತ್ತಿನ ವೈದುಷ್ಯ ಹಾಗೂ ಮತಾಭಿನಿವೇಶನ ಮುಂತಾದ ವಿಷಯಗಳನ್ನು ವರ್ಣಿಸಲಾಗಿದೆ. ವಿವರ ಹೀಗಿದೆ:

ಜಿನವಲ್ಲಭ ವೆಂಗಿನಾಡ ಸಪ್ತಗ್ರಾಮಗಳೊಳಗಣ ವಂಗಿಪಱುಕಮ್ಮೆ ಬ್ರಾಹ್ಮಣ ಜಮದಗ್ನಿ ಪಂಚಾರ್ಷೇಯ ಶ್ರೀವತ್ಸ ಗೋತ್ರದಲ್ಲಿ ಹುಟ್ಟಿದ ಗುಂಡಿಕಱು ನಿಡುಂಗೊಂಡೆಯ ಅಭಿಮಾನಚಂದ್ರನ ಮೊಮ್ಮಗನಾದ ಭೀಮಪ್ಪಯ್ಯನಿಗೆ ಬೆಳ್ವೊಲದಣ್ಣಿಗೆರೆಯ ಜೋಯಿಸಸಿಂಘನ ಮೊಮ್ಮಗಳಾದ ಅಬ್ಬಣಬ್ಬೆ ಉದರದಲ್ಲಿ ಜನಿಸಿದಾತ. ಕೊಂಡಕುಂದಾನ್ವಯದ ದೇಸಿಗಣದ ಪುಸ್ತಕ ಗುಚ್ಛಕ್ಕೆ ಸೇರಿದ ಪಂಡರಂಗಪಲ್ಲಿಯ ಜಯಣಂದಿಸಿದ್ಧಾಂತಭಟಾರರ ಶಿಷ್ಯ. ಸಬ್ಬಿನಾಡ ನಟ್ಟನಡುವಿದ್ದ ಧರ್ಮಪುರದ ಉತ್ತರ ದಿಗ್ಭಾಗದಲ್ಲಿದ್ದ ವೃಷಭಗಿರಿಯಲ್ಲಿ ಅನಾದಿಕಾಲದಿಂದ ತೀರ್ಥಸ್ಥಳವೆಂದು ಪ್ರಸಿದ್ಧವಾದ ಆ ಪರ್ವತದ ದಕ್ಷಿಣ ದಿಶಾಭಾಗದ ಸಿದ್ಧಶಿಲೆಯಲ್ಲಿ ತಮ್ಮ ಕುಲದೈವವೇ ಮೊದಲಾದ ದೇವತೆಗಳನ್ನೂ ಜಿನಬಿಂಬಗಳನ್ನೂ ಚಕ್ರೇಶ್ವರಿಯನ್ನೂ ಆಕೆಯ ಅಕ್ಕಪಕ್ಕದಲ್ಲಿ ಇನ್ನೂ ಕೆಲವು ಪ್ರತಿಮೆಗಳನ್ನೂ ಈತ ಕೆತ್ತಿಸಿದ. ತ್ರಿಭುವನ ತಿಲಕವೆಂಬ ಜಿನಬಸದಿಯನ್ನು ಕಟ್ಟಿಸಿದ. ಕವಿತಾಗುಣಾರ್ಣವವೆಂಬ ಕೆರೆಯನ್ನೂ ಮದನವಿಳಾಸವೆಂಬ ವನವನ್ನೂ ಮಾಡಿಸಿದ. ಅಣ್ಣ ಅಗ್ರಹಾರವಾಗಿ ಪಡೆದ ಧರ್ಮಪುರವನ್ನೂ ಅದರ ಹತ್ತಿರದ ವೃಷಭಗಿರಿಯಲ್ಲಿ ನಡೆಯುವ ಜೈನಾಭಿಷೇಕೋತ್ಸವವನ್ನೂ ನೋಡಲು ಬರುತ್ತಿದ್ದ ಯಾತ್ರಾರ್ಥಿಗಳಿಗೆ ಸನ್ಮಾನದಾನಗಳನ್ನು ಭೀಮನ ತನುಜನೂ ಪಂಪನ ಅನುಜನೂ ಆದ ಜಿನವಲ್ಲಭ ಮಾಡುತ್ತಿದ್ದ. ಈತ ಸಮ್ಯಕ್ತ್ವ ರತ್ನಾಕರ, ಗುಣಪಕ್ಷಪಾತಿ; ಚತುರ ಕವಿತ್ವರಚನೆಯಲ್ಲಿ ಸುಪ್ರಸಿದ್ಧ. ಮತ್ತೆ ಕಾವ್ಯವನ್ನು ವಿವರಿಸುವಲ್ಲಿ, ಸತ್ಪುರುಷರಿಗೆ ಕಾವ್ಯವನ್ನು ಹೇಳಿಕೊಡುವಲ್ಲಿ, ಸುಶ್ರಾವ್ಯವಾಗಿ ಸಂಗೀತವನ್ನು ಹೇಳುವಲ್ಲಿ, ಸರಾಗವಾಗಿ ಕಾವ್ಯವನ್ನು ವಾಚಿಸುವಲ್ಲಿ ಸಾಟಿಯಿಲ್ಲವೆನಿಸಿ ವಾಗ್ವಧೂವರವಲ್ಲಭನೆಂದು ಕೀರ್ತಿತನಾಗಿದ್ದವ.

ಜೈನಧರ್ಮದಲ್ಲಿ ಅತೀವ ಶ್ರದ್ಧೆಯುಳ್ಳ ಜಿನವಲ್ಲಭ ಜಿನಭವನಗಳನ್ನು ನಿರ್ಮಿಸಿ ದ್ವಿಜರಿಗೆ ಆವಾಸಸ್ಥಾನವಾದ ಆ ದಕ್ಷಿಣ ವೃಷಭಾದ್ರಿಯ ಮೇಲೆ ಜಿನಬಿಂಬಗಳನ್ನೂ ಜೈನ ದೇವತೆಗಳನ್ನೂ ಕೆತ್ತಿಸಿ ಅದನ್ನೊಂದು ಚೈತ್ಯಾಲಯದ ಹಾಗೆ ಮಾಡಿಸಿದ. ಪಂಪ ಆ ಧರ್ಮಪುರವನ್ನು ದತ್ತಿಯಾಗಿ ಪಡೆದಿದ್ದನೆನ್ನುವ ವಿಷಯವನ್ನು ಪ್ರತಿಪಾದಿಸುವುವೆಂದು ಅವು ಗಮನಾರ್ಹ. ವೃಷಭಾದ್ರಿ ಜಿನಧರ್ಮದೊಂದಿಗೆ ನೃಪಕುಲತಿಲಕ ಅರಿಕೇಸರಿ ಹಾಗೂ ಕವಿಕುಲತಿಲಕ ಕವಿತಾಗುಣಾರ್ಣವ ಪಂಪ ಇವರುಗಳ ಬಿರುದುಗಳನ್ನು ಹೊತ್ತು ನಿಂತಿತು.

ಶಾಸನ ಮತ್ತು ವಿಕ್ರಮಾರ್ಜುನವಿಜಯಗಳ ವಂಶಾವಳಿ ಹೀಗಿದೆ:

**ಗಂಗಾಧರ ಶಾಸನ**

ಅಭಿಮಾನಚಂದ್ರ (ಭವ್ಯರತ್ನಾಕರ)
(ಗುಂಡಿಕಱು ನಿಡುಂಗೊಂಡೆಯನಿವಾಸಿ)

ಬೆಳ್ವೊಲದಣ್ಣಿಗೆರೆಯ ಸಿಂಘ
(ಜೋಯಿಸ)

ಭೀಮಪಯ್ಯ
(ಭಾರ್ಯೆ ಅಬ್ಬಣಬ್ಬೆ)

ಪಂಪ | ಜಿನವಲ್ಲಭ (ಸಮ್ಯಕ್ತ್ವ ರತ್ನಾಕರ)

**ವಿಕ್ರಮಾರ್ಜುನವಿಜಯ**

ಮಾಧವ ಸೋಮಯಾಜಿ
(ಈತನ ಊರು ವೆಂಗಿಮಂಡಲದ ವೆಂಗಿಪಱು)

ಅಭಿಮಾನಚಂದ್ರ

ಕೊಮರಯ್ಯ

ಭೀಮ (ಘ.ಪ್ರತಿ)
(ಅಭಿರಾಮದೇವರಾಯ?)

ಪಂಪ

ಶಾಸನದ ಹಾಗೂ ಪಂಪನ ಕೃತಿಯ ವಿವರಗಳನ್ನು ತೌಲನಿಕವಿಮರ್ಶೆಗೆ ಇಟ್ಟರೆ ವ್ಯಕ್ತವಾಗುವ ಅಂಶಗಳಿವು: 1.ಪಂಪನ ಅಜ್ಜನಾದ ಅಭಿಮಾನಚಂದ್ರ ಜೈನ. ಆತ ಗುಂಡಿಕಜ್ಜಿ ನಿಡುಂಗೊಂಡೆಯ ನಿವಾಸಿಯೆಂಬುದು. 2.ಪಂಪನ ತಾಯಿಯಾಗಿರಬಹುದಾದ (?) ಅಬ್ಬಣಬ್ಬೆ, ಬೆಳ್ವೊಲದ ಅಣ್ಣಿಗೆರೆಯ ಜೋಯಿಸ ಸಿಂಘನೆಂಬುವನ ಮೊಮ್ಮಗಳೆಂಬುದು. 3.ಪಂಪ ದತ್ತಿಯಾಗಿ ಪಡೆದ ಅಗ್ರಹಾರವಾದ ಧರ್ಮಪುರ ಸಬ್ಬಿನಾಡ ನಟ್ಟನಡುವೆ ಇದ್ದಿತೆಂಬುದಲ್ಲದೆ ಅದು ಈಗಿನ ಬೊಮ್ಮಲಗುಟ್ಟದ ಪಕ್ಕದಲ್ಲೆಲ್ಲೋ ಇದ್ದಿತೆಂಬುದು. 4.ಪಂಪನಿಗೆ ಅರಿಕೇಸರಿ ಹಾಕಿಕೊಟ್ಟ ಶಾಸನ ಶಿಲಾಶಾಸನವಾಗಿದ್ದು ಅದು ವೃಷಭಾದ್ರಿಯಲ್ಲಿ ಇದ್ದಿತೆಂಬುದು. ಇವೆಲ್ಲ ಹೊಸವಿಷಯಗಳು.

1.ಗುರುಪರಂಪರೆಯಲ್ಲಿ ದೇವೇಂದ್ರ ಮುನಿಗಳ ಹೆಸರಿಲ್ಲದುದು. 2.ಪಂಪನ ಕೃತಿ ಆದಿಪುರಾಣದ ಹೆಸರಿಲ್ಲದುದು.3.ಅಜ್ಜಂದಿರಾದ ಮಾಧವ ಸೋಮಯಾಜಿ ಹಾಗೂ ಕೊಮರಯ್ಯ ಇವರುಗಳ ಹೆಸರಿಲ್ಲದೆ ಇರುವುದು. 4.ಪಂಪನ ಜೀವನಕ್ಕೆ ಸಂಬಂಧಿಸಿದ ವಿಷಯಗಳ ಬಗೆಗೆ, ಆತನ ಇತರ ಬಿರುದುಗಳ ಬಗೆಗೆ ಒಂದಕ್ಷರವೂ ಇಲ್ಲದುದು ಇತ್ಯಾದಿಗಳು ಇಲ್ಲಿನ ಲೋಪಗಳು.

ಪಂಪನ ಅಥವಾ ಜಿನವಲ್ಲಭನ ತಾಯಿಯ ಹೆಸರು ವಬ್ಬಣಬ್ಬೆ ಎಂದೂ ಆಕೆ ಜೋಯಿಸ ಸಿಂಘನ ಮಗಳೆಂದೂ ಜಿನವಲ್ಲಭನ ಗುರುಗಳು ಜಯಗೊಂಡ ಸಿದ್ಧಾಂತ ಭಟಾರರೆಂದೂ ಈ ಶಾಸನವನ್ನು ಮೊದಲ ಬಾರಿ ಪ್ರಕಟಿಸಿದ ವಿದ್ವಾಂಸರು ಓದಿದ್ದರು. ಆದರೆ ಆಕೆಯ ಹೆಸರು ಅಬ್ಬಣಬ್ಬೆ ಎಂದು ಪಿ.ಬಿ.ದೇಸಾಯಿಯವರೂ ಆಕೆ ಜೋಯಿಸಸಿಂಘನ ಮೊಮ್ಮಗಳೆಂದು ಎಂ.ಎಂ. ಕಲ್ಬುರ್ಗಿಯವರೂ ಆತನ ಗುರು ಜಯಣನ್ದಿಸಿದ್ಧಾಂತ ಭಟಾರರೆಂದು ಜಿ.ಎಸ್.ಗಾಯಿ ಅವರೂ ತೀರ್ಮಾನ ಕೊಟ್ಟಿದ್ದಾರೆ. ತಾನು ಪಂಪನ ತಮ್ಮನೆಂದು ಜಿನವಲ್ಲಭ ಸ್ಪಷ್ಟವಾಗಿ ಹೇಳಿಕೊಂಡಿರುವುದರಿಂದ ಆತನ ವಂಶಾವಳಿ ಪಂಪನ ವಂಶಾವಳಿಗೆ ಸರಿಹೋಗುವುದರಿಂದ ಆತನ ಈ ಗಂಗಾಧರ ಶಾಸನ ಕನ್ನಡದ ಶ್ರೇಷ್ಠ ಕವಿಗಳಲ್ಲೊಬ್ಬನಾದ ಪಂಪನ ಚರಿತ್ರೆಯನ್ನು ಬರೆಯುವಲ್ಲಿ ಅಮೂಲ್ಯವಾದ ಸಾಧನವಾಗಿದ್ದು ಸುಮಾರು ಒಂದು ಸಾವಿರ ವರ್ಷ ತಿಳಿಯದಿದ್ದ ವಿಷಯವನ್ನು ತಿಳಿಸಿ ಹೊಸ ಬೆಳಕನ್ನು ಚೆಲ್ಲಿದೆ. ಈ ಶಾಸನವನ್ನು ಭಾರತ ಸರ್ಕಾರ ರಾಷ್ಟ್ರೀಯ ಸ್ಮಾರಕಗಳಲ್ಲೊಂದೆಂದು ಪರಿಗಣಿಸಿದೆ. *

**ಗಂಗಾವತಿ :** ಕೊಪ್ಪಳ ಜಿಲ್ಲೆಯ ಒಂದು ತಾಲ್ಲೂಕು; ಆ ತಾಲ್ಲೂಕಿನ ಕೇಂದ್ರ. ಕೊಪ್ಪಳ, ಯಲಬುರ್ಗಿ, ಕುಷ್ಟಗಿ, ರಾಯಚೂರು ಜಿಲ್ಲೆಯ ಸಿಂಧನೂರು, ಬಳ್ಳಾರಿ ಜಿಲ್ಲೆಯ ಸಿರಗುಪ್ಪ, ಹೊಸಪೇಟೆ ಈ ತಾಲ್ಲೂಕುಗಳು ಗಂಗಾವತಿ ತಾಲ್ಲೂಕನ್ನು ಬಳಸಿವೆ. ಈ ತಾಲ್ಲೂಕಿನ ವಿಸ್ತೀರ್ಣ 1,325.5ಚ.ಕಿಮೀ. ಜನಸಂಖ್ಯೆ 4,05,076. ಒಟ್ಟು ಗ್ರಾಮಗಳು 157. ಗಂಗಾವತಿ, ವೆಂಕಟಗಿರಿ, ಕನಕಗಿರಿ, ನವಲಿ, ಕರಟಗಿ, ಹುಲಿಹೈದರ್, ಸಿದ್ಧಾಪುರ ಮತ್ತು ಮರ್ಲಿ ಇವು ಹೋಬಳಿಗಳು.

ತಾಲ್ಲೂಕಿನ ಬಹುಭಾಗ ವಿಶೇಷವಾಗಿ ಕಪ್ಪುಮಣ್ಣಿನ ಮಟ್ಟಸಭೂಮಿ. ಕೆಲವು ಕೆಂಪುಮಣ್ಣಿನ ಪಟ್ಟಿಗಳೂ ಮಧ್ಯೆ ಮಧ್ಯೆ ಬರುತ್ತವೆ. ಅಲ್ಲಲ್ಲಿ ಕಣಶಿಲೆಯ ಗುಡ್ಡಗಳೂ ಟ್ರಾಪ್‌ಶಿಲೆಯ ಉಬ್ಬುಗಳೂ ಇವೆ. ತಾಲ್ಲೂಕಿನ ಉತ್ತರದಲ್ಲಿರುವ ನಿಶಾನಿಗುಡ್ಡ (580ಮೀ), ಪಶ್ಚಿಮದಲ್ಲಿರುವ ಎಮ್ಮೆಗುಡ್ಡ (821ಮೀ), ಪೂರ್ವದಲ್ಲಿರುವ ಮಾರಿಗುಡ್ಡ (597ಮೀ) ಇವು ಎತ್ತರದ ಬೆಟ್ಟಗಳು. ಈ ತಾಲ್ಲೂಕಿನ ದಕ್ಷಿಣ ಅಂಚಿನಲ್ಲಿ ಈಶಾನ್ಯಾಭಿಮುಖವಾಗಿ ತುಂಗಭದ್ರಾ ನದಿ ಹರಿಯುತ್ತದೆ. ಆದರೆ ತುಂಗಭದ್ರಾ ಜಲಾಶಯದ ಎಡನಾಲೆ ಈ ತಾಲ್ಲೂಕಿನ ಮೂಲಕ ಪ್ರವಹಿಸುವುದರಿಂದ ನೀರಾವರಿ ಉತ್ತಮವಾಗಿದೆ. ವರ್ಷಕ್ಕೆ ಎರಡುಮೂರು ಬೆಳೆಗಳನ್ನು ಬೆಳೆಯುತ್ತಾರೆ. ಕಬ್ಬು, ಬತ್ತ, ಸೇಂಗ, ಔಡಲ, ಜೋಳ ಮುಖ್ಯ ಬೆಳೆಗಳು. ಬತ್ತದ ಗಿರಣಿಗಳೂ ಖಂಡಸಾರಿ ಸಕ್ಕರೆ ಕಾರ್ಖಾನೆಗಳೂ ಬೆಲ್ಲ ತಯಾರಿಕೆ ಕೇಂದ್ರಗಳೂ ಎಣ್ಣೆ ತೆಗೆಯುವ ಮಿಲ್ಲುಗಳೂ ಹೆಚ್ಚಿನ ಸಂಖ್ಯೆಯಲ್ಲಿವೆ ತಾಲ್ಲೂಕಿನಲ್ಲಿ ಔದ್ಯೋಗಿಕ ಬೆಳವಣಿಗೆಯಾಗಿದೆ.

ಆನೆಗೊಂದಿ (ನೋಡಿ) ಮತ್ತು ಕನಕಗಿರಿ (ನೋಡಿ) ತಾಲ್ಲೂಕಿನ ಇತಿಹಾಸ ಪ್ರಸಿದ್ಧ ಸ್ಥಳಗಳು. ಗಂಗಾವತಿಯಿಂದ 9ಕಿಮೀ ಪಶ್ಚಿಮಕ್ಕಿರುವ ಬೆನಕಲ್ ಎಂಬಲ್ಲಿ ನವಶಿಲಾಯುಗದ ಒಂದು ಬೂದಿ ಗುಡ್ಡ, ಬೃಹತ್ ಶಿಲಾ ಸಮಾಧಿ ಸಂಸ್ಕೃತಿ ಕಾಲದ ಹಲವು ಕಲ್ಲುಗೋರಿಗಳು ಮತ್ತು ಬಂಡೆಗಳ ಮೇಲೆ ಚಿತ್ರಿಸಿರುವ ಪ್ರಾಗೈತಿಹಾಸಿಕ ಚಿತ್ರಗಳು ಇವೆ.



ಕನಕಾಚಲ ದೇವಲಯದ ಪ್ರವೇಶದ್ವಾರ, ಕನಕಗಿರಿ

ಗಂಗಾವತಿ ಈ ತಹಶೀಲಿನ ಮುಖ್ಯ ಪಟ್ಟಣ. ಕೊಪ್ಪಳ-ರಾಯಚೂರು ಮಾರ್ಗದಲ್ಲಿ ಕೊಪ್ಪಳದಿಂದ ಸು.48ಕಿಮೀ ಪೂರ್ವಕ್ಕಿದೆ. ಹಿಂದೆ ಇದಕ್ಕೆ ನೀಲಾವತಿ ಎಂಬ ಹೆಸರಿತ್ತೆಂದು ಐತಿಹ್ಯ. ಊರಿನ ದಕ್ಷಿಣಕ್ಕೆ 3ಕಿಮೀ ಅಂತರದಲ್ಲಿ ತುಂಗಭದ್ರಾ ನದಿ ಹರಿಯುತ್ತದೆ. ತುಂಗಭದ್ರಾ ಜಲಾಶಯದಿಂದ ನೀರಾವರಿ ಪ್ರಾರಂಭವಾದ ಮೇಲೆ ಪಟ್ಟಣ ಶೀಘ್ರವಾಗಿ ಪ್ರಗತಿಹೊಂದುತ್ತಿದೆ. ಹಿಂದೆ ಸಣ್ಣ ಹಳ್ಳಿಯಾಗಿದ್ದ ಗಂಗಾವತಿ ಇಂದು ಪಟ್ಟಣವಾಗಿದೆ. ನೆರೆಹೊರೆಯ ಹಿರೇಜಂತಗಲ್, ಹೊಸಹಳ್ಳಿ, ಜಂಗಮರ ಕಲ್ಗುಡಿ, ದೇಸಾಯಿ ಕ್ಯಾಂಪ್, ಹಿರೂರು, ದೊಡ್ಡಹಟ್ಟಿ ಇವು ಈ ಊರಿಗೆ ಸೇರಿವೆ. ಇಲ್ಲಿ ನಗರಸಭೆ ಇದೆ (ಸ್ಥಾಪನೆ 1953). ನಗರದ ಜನಸಂಖ್ಯೆ 93,249.

ಇಲ್ಲಿ ಒಂದು ಕೃಷಿ ಸಂಶೋಧನಾಲಯ ಇದೆ. ಸಮೀಪದ ಬಪ್ಪರಹಟ್ಟಿಯಲ್ಲಿ ಒಂದು ಗ್ರಾಮಸೇವಕ ತರಬೇತಿ ಕೇಂದ್ರವುಂಟು. ಗಂಗಾವತಿಯಲ್ಲಿ ಅಕ್ಕಿ ಗಿರಣಿಗಳೂ ಖಂಡಸಾರಿ ಸಕ್ಕರೆ ಕಾರ್ಖಾನೆಗಳೂ ಇವೆ. ಇದೊಂದು ವಾಣಿಜ್ಯ ಕೇಂದ್ರ. ಬೆಲ್ಲ ಮತ್ತು ಕೆಲವು ಧಾನ್ಯಗಳು ಇಲ್ಲಿಯ ವ್ಯಾಪಾರ ಸರಕುಗಳು.

ಇಲ್ಲಿ ಸಾಮಾನ್ಯ ರೀತಿಯ ನಗರೇಶ್ವರ, ವೆಂಕಟೇಶ್ವರ ದೇವಾಲಯಗಳಿವೆ. ವಿಜಯನಗರದ ರಾಜರಿಂದ ಕಟ್ಟಲಾದುದೆನ್ನಲಾದ ವಿರೂಪಾಕ್ಷ ದೇವಾಲಯ ಹಳೆಯದು. ಮುದ್ದು ಸಂಗಸ್ವಾಮಿಗಳ ಹಳೆಯ ಮಠವೂ ಈ ಊರಿನಲ್ಲಿದೆ. (ಡಿ.ಕೆ., ಎಸ್.ಜಿ.ಕೆ.)

**ಗಂಗಾವಳಿ** [1] **:** ಉತ್ತರ ಕನ್ನಡ ಜಿಲ್ಲೆಯ ಒಂದು ನದಿ. ಮುಂಡಗೋಡಿಗೆ ಉತ್ತರದಲ್ಲಿ ಸುಮಾರು 40ಕಿಮೀ ದೂರದಲ್ಲಿ ಧಾರವಾಡ ಜಿಲ್ಲೆಯಲ್ಲಿ ಉಗಮಿಸುವುದು. ಉತ್ತರ ಕನ್ನಡ ಜಿಲ್ಲೆಯಲ್ಲಿ ಈ ನದಿ ಈಶಾನ್ಯದಿಂದ ನೈರುತ್ಯಕ್ಕೆ ಸುಮಾರು 136ಕಿಮೀ ಹರಿದು ಅಂಕೋಲದಿಂದ 8ಕಿಮೀ ಉತ್ತರಕ್ಕೆ ಕಾಳಿನದಿ ಸಮುದ್ರ ಸೇರುವಲ್ಲಿಂದ ದಕ್ಷಿಣಕ್ಕೆ 32ಕಿಮೀ ದೂರದಲ್ಲಿ ಅರಬ್ಬೀ ಸಮುದ್ರವನ್ನು ಸೇರುವುದು. ಈ ನದಿಯ ಇಕ್ಕೆಲಗಳಲ್ಲಿ ಅರಣ್ಯವಿದೆ. ಯಲ್ಲಾಪುರ ತಾಲ್ಲೂಕಿನ ಮಂಚೇಕೇರಿಯ ಸಮೀಪ ಸುಮಾರು 800' ಧುಮುಕಿ ಮಾಗೋಡು ಜಲಪಾತ (ನೋಡಿ)

ಉಂಟಾಗಿದೆ. ಈ ನದಿಯ ಮೇಲ್ಭಾಗವನ್ನು ಬೇಡ್ತಿ ನದಿಯೆಂದು ಕರೆಯುತ್ತಾರೆ. ಕೆಳಭಾಗ ಗಂಗಾವಳಿಯೆಂದು ಹೆಸರಾಗಿದೆ. ಈ ನದಿಗೆ ಶಿರಸಿಯ ಲಿಂಗದಕೋಣ ಎಂಬಲ್ಲಿ ಹುಟ್ಟಿದ ಶಾಲ್ಮಲಾ ಹೊಳೆ ಸ್ವಾದಿಯ ಸಮೀಪ ಸೋಂದಾ ಹೊಳೆ ಎಂದು ಪ್ರಸಿದ್ಧವಾಗಿ ಬೇಡ್ತಿ ಹೊಳೆಯನ್ನು ಸೇರುತ್ತದೆ. ಶಾಲ್ಮಲಾ ತೀರದಲ್ಲಿ ಸ್ವಾದಿಯ ಅರಸನಾದ ಸದಾಶಿವರಾಯ ಸಾವಿರಾರು ಶಿವಲಿಂಗಗಳನ್ನು ಕಲ್ಲುಬಂಡೆಗಳಲ್ಲಿ ಕೊರೆಯಿಸಿದ್ದಾನೆ. ಇದೊಂದು ಪವಿತ್ರ ಸ್ಥಳ. ಗ್ರಹಣ ಹಾಗೂ ಶಿವರಾತ್ರಿಯ ದಿನ ಸಾವಿರಾರು ಜನರು ಪವಿತ್ರ ಸ್ನಾನಕ್ಕಾಗಿ ಇಲ್ಲಿಗೆ ಬರುತ್ತಾರೆ.

ಶಾಲ್ಮಲಾ ಹಾಗೂ ಬೇಡ್ತಿಗಳು ಒಂದಾಗಿ ಶಿರಸಿ ತಾಲ್ಲೂಕಿನ ಮೆಣಸಿ ಸೀಮೆಯ ಗಡಿಯಲ್ಲಿ ಹರಿಯುತ್ತ ಯಲ್ಲಾಪುರ ತಾಲ್ಲೂಕನ್ನು ಮತ್ತೆ ಸೇರುತ್ತವೆ. ಮೆಣಸಿಯ ಸಮೀಪ ಶಿರಸಿಯಿಂದ 25ಕಿಮೀ ದೂರದಲ್ಲಿ ಗಣೇಶಪಾಲ ಎಂಬ ಸಣ್ಣ ಜಲಪಾತ ಉಂಟಾಗಿ ಅಲ್ಲಿ ನೀರು ಇಬ್ಭಾಗವಾಗಿ ಬೀಳುವುದು. ಇದಕ್ಕೆ ಶಿವಗಂಗಾ ಜಲಪಾತ (ನೋಡಿ) ಎಂಬ ಹೆಸರೂ ಇದೆ. ಮುಂದೆ ಈ ನದಿ ಸಹ್ಯಾದ್ರಿಯ ಅಂಚಿನಲ್ಲಿ, ಅಲ್ಲಿಂದ ಅರಬೈಲ ಘಟ್ಟದಲ್ಲಿ ಹರಿದು ಅಂಕೋಲ ತಾಲ್ಲೂಕನ್ನು ಸೇರುತ್ತದೆ. ಈ ಭಾಗದಲ್ಲಿ ನದಿ ನೀರನ್ನು ಉಪಯೋಗಿಸಿಕೊಂಡು ಬತ್ತ, ಕಬ್ಬು, ಹಸರಣಿಗಿ (ಹೆಸರು), ಉದ್ದು ಹಾಗೂ ಈರುಳ್ಳಿ ಬೆಳೆಯುತ್ತಾರೆ.

ಗಂಗಾವಳಿಗೆ ಉಳುವರೆ ಎಂಬ ಹಳ್ಳಿಯ ಹತ್ತಿರ ಸೇತುವೆಯನ್ನು ಕಟ್ಟಿದ್ದು ಜಿಲ್ಲಾ ಕೇಂದ್ರ ಕಾರವಾರಕ್ಕೂ ಇತರ ತಾಲ್ಲೂಕುಗಳಿಗೂ ಸಾರಿಗೆ ಸಂಪರ್ಕ ಒದಗಿದೆ. (ಜಿ.ಬಿ.ಎನ್.)

**ಗಂಗಾವಳಿ[2] :** ಉತ್ತರ ಕನ್ನಡ ಜಿಲ್ಲೆ ಅಂಕೋಲಕ್ಕೆ 8ಕಿಮೀ ಉತ್ತರದಲ್ಲಿ ಗಂಗಾವಳಿ ನದಿ ಸಮುದ್ರವನ್ನು ಸೇರುವಲ್ಲಿರುವ ಗ್ರಾಮ. ಇದೊಂದು ಚಿಕ್ಕ ಬಂದರು. ಈ ಗ್ರಾಮದಲ್ಲಿ ಗಂಗೆಯ ದೇವಾಲಯವಿದ್ದು ಗಂಗಾಷ್ಟಮಿಯ ದಿನ ವಿಶೇಷ ಪೂಜೆಯಾಗುತ್ತದೆ. ಗಂಗೆಯ ದೇವಾಲಯದ ಸಮೀಪದಲ್ಲಿಯೇ ಕಾಮೇಶ್ವರ ದೇವಾಲಯವಿದೆ. ಈ ದೇವಾಲಯವನ್ನು ವಿಶ್ವಕರ್ಮ ಜ್ಞಾನದಾಹವನ್ನು ಪೂರೈಸಿಕೊಳ್ಳಲು ಕಟ್ಟಿ ಜ್ಞಾನ ಪಡೆದನೆಂಬ ಪ್ರತೀತಿ ಇದೆ. (ಜಿ.ಬಿ.ಎನ್.)

**ಗಂಗೂಬಾಯಿ ಗುಳೇದಗುಡ್ಡ :**-1941 ಕನ್ನಡ ರಂಗಭೂಮಿಯ ಪ್ರಸಿದ್ಧ ಕಲಾವಿದೆ.

ಕನ್ನಡ ರಂಗಭೂಮಿಯ ಇತಿಹಾಸದಲ್ಲಿ ನಾಯಿಕೆಯ ಪಾತ್ರದಲ್ಲಿ ಕಾಣಿಸಿಕೊಂಡ ಮೊದಲ ಮಹಿಳೆಯಾದ ಎಲ್ಲೂಬಾಯಿ ಗುಳೇದಗುಡ್ಡ (ಬಿಜಾಪುರ) ಇವರ ಸಾಕುತಾಯಿ. ಗುರುಲಿಂಗಪ್ಪ ಗಂಗಣ್ಣ ಸಾಕುತಂದೆ. ರಾವಸಾಹೇಬ ಶಿವಮೂರ್ತಿಸ್ವಾಮಿ ಕಣಬರ್ಗಿಮಠ ಅವರ ಕೊಣ್ಣೂರು ಕಾಡಸಿದ್ಧೇಶ್ವರ ಸಂಗೀತ ನಾಟಕ ಮಂಡಳಿ (ಸ್ಥಾಪನೆ 1903) ಗೋಕಾಕದಲ್ಲಿ ಮೊಕ್ಕಾಂ ಮಾಡಿದ್ದಾಗ ಅಲ್ಲಿ ತನ್ನ ಸಾಕುತಂದೆತಾಯಿಗಳ ಜೊತೆ ಶನಿಪ್ರಭಾವ ನಾಟಕದಲ್ಲಿ ಲೋಹಿತಾಶ್ವನ ಪಾತ್ರದಲ್ಲಿ ಪ್ರಥಮ ಬಾರಿಗೆ ರಂಗಭೂಮಿಯ ಮೇಲೆ ಕಾಣಿಸಿಕೊಂಡರು. ಈ ಘಟನೆ ಇವರ ರಂಗಭೂಮಿಯ ಬದುಕಿಗೆ ನಾಂದಿಯಾಯಿತು. ಮುಂದೆ ಸೊಲ್ಲಾಪುರ ದಲ್ಲಿದ್ದಾಗ ಶಂಕರರಾವ್ ಸರನಾಯಕ ಎಂಬ ಪ್ರಸಿದ್ಧ ಹಿಂದುಸ್ಥಾನೀ ಗವಾಯಿಗಳಲ್ಲಿ ಶಾಸ್ತ್ರೀಯ ಸಂಗೀತವನ್ನು ಕಲಿತರು. ಈ ಮೊದಲು ಇವರಿಗೆ ಕಪಿಲೇಶ್ವರ ಬುವಾ ಎಂಬ ಗವಾಯಿಗಳಿಂದ ಶಾಸ್ತ್ರೀಯ ಸಂಗೀತದ ದೀಕ್ಷೆ ದೊರಕಿತ್ತು.

1916ರಲ್ಲಿ ಬೆಳಗಾಂವಿಯಲ್ಲಿ ಗಂಗೂಬಾಯಿ ಅವರಿಂದ ಪ್ರಥಮ ಸಂಗೀತ ಜಲಸಾ ಕಾರ್ಯಕ್ರಮ ಜರುಗಿತು. ಆಗ ಇವರಿಗೆ ಕೇವಲ ಹದಿನೈದು ವರ್ಷ. ಇಷ್ಟರಲ್ಲಿ ಕೊಣ್ಣೂರು ಕಂಪನಿ ನಿಂತುಹೋಗಿತ್ತು, ಇವರಿಗೆ ಸಂಗೀತದ ವ್ಯಾಸಂಗವು ಮುಗಿದಿತ್ತು. ಇನ್ನು ಏನು ಮಾಡಬೇಕೆಂದು ಯೋಚಿಸುತ್ತಿದ್ದರು. ಅದೇ ಸಮಯದಲ್ಲಿ ಆರಂಭವಾದ ವಾಮನರಾವ್ ಮಾಸ್ತರ ಅವರ ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಳಿಯನ್ನು ಪ್ರವೇಶಿಸಿದರು. ಇವರ ಆಗಮನದಿಂದಾಗಿ ವಾಮನರಾಯರ ನಾಟಕ ಮಂಡಳಿ ಊರ್ಜಿತಕ್ಕೆ ಬಂತು. ಆದವಾನಿ ಮೊಕ್ಕಾಂನಲ್ಲಿ ಇವರು ಅಭಿನಯಿಸಿದ ಲಂಕಾದಹನ ನಾಟಕ ಅಸಂಖ್ಯ ಪ್ರಯೋಗಗಳನ್ನು ಕಂಡಿತು. ಇದರಿಂದಾಗಿ ಗಂಗೂಬಾಯಿಯವರ ಕೀರ್ತಿಯೂ ಸಂಬಳವೂ ಹೆಚ್ಚಿದುವು. ಈ ಕಂಪನಿಯಲ್ಲಿದ್ದಾಗ ಆಡುತ್ತಿದ್ದ ಮಹಾನಂದಾ, ಭಕ್ತಪುಂಡಲೀಕ, ಸಂತ ಸಖೂಬಾಯಿ ನಾಟಕಗಳಲ್ಲಿ ವಾಮನರಾವ್ ಮತ್ತು ಗಂಗೂಬಾಯಿ ಇವರ ಜೋಡಿ ರಸಿಕ ಜನರ ಮನಸೆಳೆಯಿತು. ಬೆಂಗಳೂರು ಮೈಸೂರುಗಳಲ್ಲಿಯೂ ಭಕ್ತಪುಂಡಲೀಕ, ಸಂತ ಸಖೂಬಾಯಿ ನಾಟಕಗಳು ಕಂಪನಿಗೆ ಕೀರ್ತಿಯನ್ನೂ ಹಣವನ್ನೂ ದೊರಕಿಸಿಕೊಟ್ಟವು. ಸಂಗೀತದಲ್ಲಿಯೂ ನಿಪುಣತೆ ಹೊಂದಿದ್ದ ವಾಮನರಾವ್ ಮತ್ತು ಗಂಗೂಬಾಯಿಯವರ ಸಂಗೀತವನ್ನು ಮೈಸೂರು ವಾಸುದೇವಾಚಾರ್ಯರೂ ಟಿ.ರಾಘವ ಅವರೂ ತುಂಬ ಮೆಚ್ಚಿಕೊಂಡಿದ್ದರು. ಬಿಡಾರಂ ಕೃಷ್ಣಪ್ಪನವರೂ ಇವರ ಸಂಗೀತ ಕೇಳಿ ಸಂತೋಷ ಪಟ್ಟುಕೊಂಡಿದ್ದರು. ವಾಮನರಾವ್ ಮಾಸ್ತರರ ಕಂಪನಿಯಲ್ಲಿ ದೊರೆತ ಖ್ಯಾತಿ ಲೋಕಪ್ರಿಯತೆಗಳಿಂದಾಗಿ ಗಂಗೂಬಾಯಿ 1926ರಲ್ಲಿ ಶ್ರೀಕೃಷ್ಣ ಸಂಗೀತ ನಾಟಕಮಂಡಲಿ ಎಂಬ ಸ್ವಂತ ಕಂಪನಿಯೊಂದನ್ನು ಪ್ರಾರಂಭಿಸಿದರು. ಖ್ಯಾತ ಹಾರ್ಮೋನಿಯಂ ವಾದಕ ಮತ್ತು ಸಂಗೀತಗಾರ ಗೋವಿಂದರಾವ್ ಟೇಂಬೆ ಅವರ ನಿರ್ದೇಶನದಲ್ಲಿ ಮರಾಠಿ ನಾಟಕ 'ಮಾನಾಪಮಾನ'ವನ್ನು ಕನ್ನಡಕ್ಕೆ ರೂಪಾಂತರ ಮಾಡಿ ಮೂಲದ ಗೀತಗಳ ಧಾಟಿ ಮಟ್ಟುಗಳನ್ನೇ ಇಟ್ಟುಕೊಂಡು ಆಡಿದರು. ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ಉಡುಪಿಗಳಲ್ಲಿ ಈ ಕಂಪನಿಯ ನಾಟಕಗಳು ಜಯಭೇರಿ ಹೊಡೆದವು. ಖ್ಯಾತ ಗಾಯಕರಾದ ಗುರುರಾವ್ ದೇಶಪಾಂಡೆ, ಬಸವರಾಜ ಮನ್ಸೂರ್, ವೆಂಕಟರಾವ್ ರಾಮದುರ್ಗ ಇವರು ಈ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದರು. ಗುಬ್ಬಿ ವೀರಣ್ಣನವರು ತಯಾರಿಸಿದ 'ಸುಭದ್ರಾ' ಚಲನಚಿತ್ರದಲ್ಲೂ ಗಂಗೂಬಾಯಿಯವರು ರಂಗಭೂಮಿಯಲ್ಲಿರುವಾಗಲೇ ರುಕ್ಮಿಣಿ ಪಾತ್ರದಲ್ಲಿ ಕಾಣಿಸಿಕೊಂಡು ಪ್ರಸಿದ್ಧಿಹೊಂದಿದರು. ಇನ್ನೂ ಉಜ್ವಲ ಭವಿಷ್ಯವಿದೆ ಎನ್ನುವಾಗಲೇ 1941 ಡಿಸೆಂಬರ್ 10ರಂದು ಕ್ಷಯರೋಗಕ್ಕೆ ತುತ್ತಾಗಿ ಮರಣಹೊಂದಿದರು. ಅಭಿಜಾತ ಸಂಗೀತ, ಅಭಿನಯ ಕಲೆ, ನೀತಿ ನಿಷ್ಠೆ ಬಿಡದ ಕಲೋಪಾಸನೆ, ಸ್ವಂತ ಕಂಪನಿಯ ದಕ್ಷನಿರ್ವಹಣೆ -ಇವುಗಳಿಗಾಗಿ ಗಂಗೂಬಾಯಿ ಗುಳೇದಗುಡ್ಡ ಅವರ ಹೆಸರು ಅವಿಸ್ಮರಣೀಯವಾದುದು. (ಎನ್.ಕೆ.ಕೆ.)

**ಗಂಗೂಬಾಯಿ ಹಾನಗಲ್ :** 1913-. ಸಂಗೀತ ಕ್ಷೇತ್ರದಲ್ಲಿ ಅಖಿಲ ಭಾರತ ಖ್ಯಾತಿ ಪಡೆದ ಅಗ್ರಗಣ್ಯ ಕಲಾವಿದರಲ್ಲಿ ಒಬ್ಬರು. ಸಂಗೀತದಲ್ಲಿ ಸಾಕಷ್ಟು ಅಭಿರುಚಿ ಮತ್ತು ಪರಿಶ್ರಮವಿದ್ದ ಮನೆತನದಲ್ಲಿ ಹುಟ್ಟಿದವರಾಗಿ ಇವರಿಗೆ ಸಂಗೀತದಲ್ಲಿ ಬಾಲ್ಯದಿಂದಲೂ ಅಪೂರ್ವವಾದ



ಪ್ರವೇಶ ದೊರೆಯಿತು. ಇವರ ತಾಯಿ ಅಂಬಾಬಾಯಿ, ಅಜ್ಜಿ ಕಮಲಾಬಾಯಿ ಯವರೂ ಸಂಗೀತ ಬಲ್ಲವ ರಾಗಿದ್ದು ತಮ್ಮ ಒಲವನ್ನು ಇವರಲ್ಲಿ ಬಿತ್ತಿದರು. ಅಂಬಾಬಾಯಿಯವರು ಕರ್ನಾಟಕ ಸಂಗೀತದಲ್ಲಿ ಪರಿಶ್ರಮ ಪಡೆದಿದ್ದರು ಮಗಳಿಗೆ ಹಿಂದುಸ್ಥಾನೀ ಸಂಗೀತದಲ್ಲಿ ಶಿಕ್ಷಣ ಕೊಡಿಸಿದರು. ಗಂಗೂಬಾಯಿ ಯವರ ಪಾಂಕ್ತ ಸಂಗೀತ ಶಿಕ್ಷಣಕ್ಕೆ ನೆರವಾದವರು ಸೋದರಮಾವ ರಾಯಣ್ಣಾ ಹಾನಗಲ್ ಅವರು. ಸೋದರ ಶೇಷಗಿರಿ ಹಾನಗಲ್ ಅವರು ಮನ್ನಣೆ ಪಡೆದಿರುವ ತಬಲ ವಾದಕರಾಗಿದ್ದರೆ, ಮಗಳು ಕೃಷ್ಣಾ ಹಾನಗಲ್ ಶಾಸ್ತ್ರೀಯ ಹಾಗೂ ಲಲಿತ ಸಂಗೀತದಲ್ಲಿ ಹೆಸರು ಮಾಡಿದ್ದಾರೆ. ಈ ಇಬ್ಬರೂ ಗಂಗೂಬಾಯಿಯವರ ಸಂಗೀತ ಕಛೇರಿಗಳಲ್ಲಿ ಹಿಮ್ಮೇಳ ನುಡಿಸುತ್ತಿದ್ದರು; ಜೊತೆಗೆ ಹಾಡುತ್ತಿದ್ದರು. ಎಳೆವಯಸ್ಸಿನಲ್ಲೇ ಗಂಗೂಬಾಯಿಯವರು ಬೆಳಗಾಂವಿ ಕಾಂಗ್ರೆಸ್ ಅಧಿವೇಶನದಲ್ಲಿ ಸ್ವಾಗತ

ಗೀತೆಯನ್ನು ಹಾಡಿ (1924) ಜನರ ಮೆಚ್ಚುಗೆ ಗಳಿಸಿದರು. ಬಾಲ್ಯದಲ್ಲಿ ಇವರ ಸಂಗೀತ ವಿದ್ಯಾಭ್ಯಾಸ ನಡೆದದ್ದು ಹುಲಗೂರ ಕೃಷ್ಣಾಚಾರ್ಯ, ದತ್ತೋಪಂತ ದೇಸಾಯಿಗಳ ಬಳಿ, ಹುಬ್ಬಳ್ಳಿಯಲ್ಲಿ. ಇಪ್ಪತ್ತರ ಹರಯದಲ್ಲಿ ಗಂಗೂಬಾಯಿಗೆ ಕುಂದಗೋಳದ ಕಿರಾನಾ ಘರಾಣೆಯ ಖ್ಯಾತ ಗಾಯಕ ರಾಮಭಾವು ಕುಂದಗೋಳಕರರ ಕೃಪೆ ಲಭಿಸಿತ್ತು. ಅವರು ಅಂದಿಗೆ ಕರ್ನಾಟಕ ಮಹಾರಾಷ್ಟ್ರಗಳಲ್ಲಿ ಸವಾಯಿ ಗಂಧರ್ವರೆಂದು ಖ್ಯಾತರಾಗಿದ್ದವರು; ಅವರು ಕಿರಾನಾ ಘರಾಣೆಯ ಖ್ಯಾತ ಅಬ್ದುಲ್ ಕರೀಂಖಾನರ ಶಿಷ್ಯರು. ಸ್ವರದ ಕೆಲಸದಲ್ಲಿ ಶ್ರುತಿಪಾವಿತ್ರ್ಯದಲ್ಲಿ ಖ್ಯಾಲ್ ಗಾಯನದ ಸೊಗಸುಗಾರಿಕೆಯಲ್ಲಿ ಕಿರಾನಾ ಘರಾಣಾ ಅಂದಿಗೆ ತನ್ನದೇ ಆದ ಪರಂಪರೆಯನ್ನು ಸ್ಥಾಪಿಸಿತ್ತು. ಗಂಗೂಬಾಯಿ ಹುಬ್ಬಳ್ಳಿಯಲ್ಲಿದ್ದುಕೊಂಡು ದಿನವೂ ಕುಂದಗೋಳಕ್ಕೆ ಹೋಗಿ ಬರುತ್ತ ಸಂಗೀತಾಭ್ಯಾಸ ನಡೆಸಿದರು. ಸಾಧನೆಯಲ್ಲಿ ಗಂಗೂಬಾಯಿಯವರದು ಸೋಲದ ಶ್ರದ್ಧೆ. ಕ್ರಮೇಣ ಪೂರಿಯಾ, ತೋಡಿ, ಅಸಾವರಿ, ಶುದ್ಧಕಲ್ಯಾಣ್, ಮಾಲಕಂಸ, ಮಿಯಾಮಲ್ಹಾರ, ದರ್ಬಾರಿ ಕಾನಡ ಮೊದಲಾದ ರಾಗಗಳನ್ನವರು ಹಸ್ತಗತ ಮಾಡಿಕೊಂಡರು. ಸವಾಯಿ ಗಂಧರ್ವರ ಶಿಷ್ಯೆಯಾಗಿ ಮುಂದೆ ಗಂಗೂಬಾಯಿಯವರು 25 ವರ್ಷ ವಯಸ್ಸಿನಿಂದ ಸ್ವತಂತ್ರವಾಗಿ ಸಂಗೀತ ಕಛೇರಿ ಮಾಡಲಾರಂಭಿಸಿದರು. ಗಂಗೂಬಾಯಿಯವರು ಸ್ವಭಾವತಃ ಸರಳ ಮನೋಧರ್ಮದವರು. ಆಡಂಬರ ಇವರಿಗೆ ಸಲ್ಲದು. ಹೀಗಾಗಿ ದೆಹಲಿ ಮತ್ತು ಕಲ್ಕತ್ತ ಪ್ರಸಾರಕೇಂದ್ರಗಳಲ್ಲಿ ಇವರು ಮೊದಲು ಹಾಡಲು ಹೋದಾಗ ಅಲ್ಲಿಯವರು ಉದಾಸೀನರಾಗಿ ಕಂಡು ಅನಂತರ ತಮ್ಮ ತಪ್ಪಿನ ಅರಿವಾಗಿ ಗಂಗೂಬಾಯಿಯವರನ್ನು ಗೌರವಿಸಿದರು. ಕ್ರಮೇಣ ಇವರು ತಮ್ಮ ಘನವಾದ ಸಂಗೀತದಿಂದ ಎಲ್ಲರ ಗೌರವಕ್ಕೂ ಪಾತ್ರರಾದರು. ಇವರ ಖ್ಯಾತಿ ಹೆಚ್ಚುತ್ತಿದ್ದಂತೆ ಟೈಮ್ಸ್ ಆಫ್ ಇಂಡಿಯ, ಹಿಂದುಸ್ಥಾನ್ ಟೈಮ್ಸ್, ಇಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯ ಮೊದಲಾದ ಪತ್ರಿಕೆಗಳು ಇವರ ಬಗ್ಗೆ ಲೇಖನಗಳನ್ನು ಪ್ರಕಟಿಸಿ ಇವರ ಗಾಯನ ಕಲೆಯನ್ನು ಹೊಗಳಿದವು. ಮುಂಬಯಿಯ ಗ್ರಾಮಫೋನ್ ಕಂಪನಿಯವರು ಇವರ ಗಾಯನಗಳನ್ನು ಮುದ್ರಿಸಿದರು. ಇಂದಿಗೂ ಗಂಗೂಬಾಯಿಯವರ ರಾಮ ಹರೀಕಾ ಭೇದ ನ ಪಾಯೊ ಎಂಬ ಜೋಗಿಯ ರಾಗದ ಹಾಡು ಮತ್ತು ಮಿಯಾಮಲ್ಹಾರದ ಕಹೆ ಲಾಡಲೀ ಎಂಬ ಹಾಡುಗಳನ್ನು ಹಲವರು ಮೆಚ್ಚಿಕೊಂಡಿದ್ದಾರೆ.

ಸ್ವಾತಂತ್ರ್ಯಪೂರ್ವದ ಲಾಹೋರ್ ಮತ್ತು ಪೆಷಾವರ್ ಕೇಂದ್ರಗಳನ್ನೊಳಗೊಂಡಂತೆ ಗಂಗೂಬಾಯಿಯವರು ದೆಹಲಿ, ಕಲ್ಕತ್ತ, ಲಖನೌ, ಬರೋಡ, ಹೈದರಾಬಾದ್ ಮೊದಲಾದ ಪ್ರಸಾರ ಕೇಂದ್ರಗಳಿಂದ ಹಾಡಿದ್ದಾರೆ. ಕಲ್ಕತ್ತ, ಗ್ವಾಲಿಯರ್, ಪ್ರಯಾಗ, ಅಮೃತಸರ, ಕರಾಚಿ, ಗಯ, ಡೆಹ್ರಾಡೂನ್, ಆಗ್ರ ಮೊದಲಾದ ಮಹಾನಗರಗಳಲ್ಲಿ ಇವರು ಸಾರ್ವಜನಿಕ ಸಂಗೀತ ಕಛೇರಿ ನಡೆಸಿದ್ದಾರೆ. ಪ್ರಸಿದ್ಧ ನ್ಯೂ ಥಿಯೇಟರ್ಸ್ ಚಲನಚಿತ್ರ ಸಂಸ್ಥೆಯ ಕಲಾವಿದರಾದ ಸೈಗಲ್, ಕಾನನ್ ಬಾಲ, ಪಹರಿ ಸನ್ಯಾಲ್ ಮೊದಲಾದವರು ಇವರನ್ನು ತುಂಬ ಮೆಚ್ಚಿಕೊಂಡು ಸತ್ಕರಿಸಿದ್ದರು. ಸಂಗೀತ ಕ್ಷೇತ್ರಗಳಲ್ಲಿ ಪ್ರಸಿದ್ಧರೆನಿಸಿದ ಬಡೆ ಗುಲಾಂ ಅಲಿ ಖಾನ್, ಅಲಾಉದ್ದೀನ್ ಖಾನ್, ಸಿದ್ಧೇಶ್ವರೀ ದೇವಿ, ಪಂಡಿತ ರವಿಶಂಕರ್, ಬಿಸ್ಮಿಲ್ಲಾ ಖಾನ್ ಮೊದಲಾದವರು ಗಂಗೂಬಾಯಿಯವರನ್ನು ಪ್ರಶಂಸಿಸಿದ್ದಾರೆ. ಗಂಗೂಬಾಯಿಯವರು ಭಾರತ ಸಾಂಸ್ಕೃತಿಕ ನಿಯೋಗದ ಸದಸ್ಯರಾಗಿ ನೇಪಾಳ, ಪಾಕಿಸ್ತಾನಗಳಿಗೆ ಭೇಟಿಕೊಟ್ಟು ಹಿಂದೂಸ್ಥಾನೀ ಕಚೇರಿ ನೀಡಿದ್ದಾನೆ.

ಇವರ ಅಮೋಘ ಸಂಗೀತಸೇವೆಯನ್ನು ಮನಗಂಡು ಕರ್ನಾಟಕ ಸಂಗೀತ ನಾಟಕ ಅಕಾಡೆಮಿ 1963ರಲ್ಲಿ ಪ್ರಶಸ್ತಿ ಇತ್ತು ಸನ್ಮಾನಿಸಿತು. ಭಾರತ ಸರ್ಕಾರ ಇವರಿಗೆ ಪದ್ಮಭೂಷಣ ಪ್ರಶಸ್ತಿಯಿತ್ತು ಗೌರವಿಸಿದೆ (1972). ಕರ್ನಾಟಕ ಸರ್ಕಾರ ಇವರಿಗೆ ಶ್ರೀ ಕನಕ ಪುರಂದರ ಪ್ರಶಸ್ತಿ ನೀಡಿದೆ (1992). ಇವಲ್ಲದೆ ಇವರಿಗೆ ಭಾರತಾದ್ಯಂತ ದೊರೆತ ಸನ್ಮಾನಪತ್ರಗಳು, ಸುವರ್ಣಪದಕಗಳು, ಇತರ ಕಾಣಿಕೆಗಳು, ಉಡುಗೊರೆಗಳು, ಅಸಂಖ್ಯಾತ. ಕಾಶಿಯ ನಾಗರೀ ಪ್ರಚಾರಿಣೀ ಸಭೆ ಮತ್ತು ಪ್ರಯಾಗದ ಸಂಗೀತ ಸಮಿತಿಗಳು ಇವರಿಗೆ ಭಾರತೀಯ ಕಂಠಶಿರೋಮಣಿ ಹಾಗೂ ಸ್ವರಶಿರೋಮಣಿ ಎಂಬ ಬಿರುದುಗಳನ್ನಿತ್ತಿವೆ. ಇವರಿಗೆ ಹುಬ್ಬಳ್ಳಿಯಲ್ಲಿ ಪೌರಸನ್ಮಾನ ಮಾಡಲಾಯಿತು (2005).

ಗಂಗೂಬಾಯಿಯವರನ್ನು ಸಂಗೀತ ಗಂಗಾದೇವಿ ಎಂದು ಕವಿಯೊಬ್ಬರು ಬಣ್ಣಿಸಿದ್ದಾರೆ. ಇವರು ಕೇಸರಬಾಯಿ ಕೇರಕರ, ಹೀರಾಬಾಯಿ ಬಡೋದೇಕರ, ಮೋಗೂಬಾಯಿ ಕುರಡೀಕರ ಇವರ ಸಾಲಿನಲ್ಲಿ ನಿಂತಿರುವ ಪ್ರಸಿದ್ಧ ಗಾಯಕಿ ಎನಿಸಿದ್ದಾರೆ.

(ಎಸ್.ಕೆ.ಕೆ.)

**ಗಂಗೆ-ಗೌರಿ :** ಕನ್ನಡ ಜನಪದ ಸಾಹಿತ್ಯದ ಜನಪ್ರಿಯ ಕಥನ ಕವನಗಳಲ್ಲೊಂದು. ಇದರಲ್ಲಿ ಗಂಗೆ ಗೌರಿಯರ ಪ್ರೀತಿ ಮುನಿಸು ಸವತಿ ಮಾತ್ಸರ್ಯ ಜಗಳಗಳು ವರ್ಣಿಸಲ್ಪಟ್ಟಿವೆ.

ಪಾರ್ವತಿಯ ತಪೋನಿಷ್ಠೆಗೆ ಮನಸೋತ ಪರಮೇಶ್ವರ ಆಕೆಯನ್ನು ವಿವಾಹವಾದ ಬಳಿಕ ಪ್ರೀತಿಯಿಂದ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆಲಿಂಗಿಸಿಕೊಂಡನೆಂಬುದೂ ಭಗೀರಥನ ತಪಃಫಲವಾಗಿ ಗಂಗೆ ದೇವಲೋಕದಿಂದ ಭೂಮಿಗೆ ಧುಮುಕಲಾರಂಭಿಸಿದಾಗ ಆ ವೇಗವನ್ನು ತಾಳಲು ಭೂಮಿ ಅಸಮರ್ಥಳೆಂಬುದನ್ನು ಗ್ರಹಿಸಿದ ಶಿವ ದೃಢವಾಗಿ ನಿಂತು ಆಕೆಯನ್ನು ತನ್ನ ಜಟಾಕಲಾಪದೊಳಗೆ ತಾಳಿಕೊಂಡನೆಂಬುದೂ ಪುರಾಣಪ್ರಸಿದ್ಧ ವಿಷಯ. ಗೌರಿ ಶಿವನ ಪತ್ನಿ; ಶಿವನ ಎಡತೊಡೆ ಅವಳಿಗೆ ಆಸನ. ಗಂಗೆ ಪ್ರಾಸಂಗಿಕವಾಗಿ ಬಂದವಳು. ಆದರೂ ಅವಳಿಗೆ ಶಿವನ ತಲೆಯ ಮೇಲೆ ಸ್ಥಾನ. ಶಿವನ ಪ್ರೇಮಕ್ಕಾಗಿ ಉಗ್ರವಾದ ತಪಸ್ಸುಮಾಡಿ ಅವನನ್ನು ವರಿಸಿ ಮದುವೆಯಾದ ಪತ್ನಿಗೆ ತನ್ನ ಸಮ್ಮುಖದಲ್ಲೆ ಈ ರೀತಿ ಅನ್ಯಸ್ತ್ರೀಯೊಬ್ಬಳು ತನ್ನ ಪತಿಯ ತಲೆಯ ಮೇಲೆ ಕುಳಿತುಕೊಳ್ಳುವಷ್ಟು ಸ್ವಾತಂತ್ರ್ಯ ಪಡೆಯುವುದು ಸಹ್ಯವಾದೀತೆ ಎಂಬ ಸ್ತ್ರೀಸ್ವಭಾವದ ದೌರ್ಬಲ್ಯವನ್ನು ಆಧಾರವಾಗಿಟ್ಟುಕೊಂಡು.

> ...ಗೌರೀ ಜಹ್ನುಸುತಾಮಸೂಯತಿ; ಕಲಾನಾಥಂ ಕಪಾಲಾನಲಃ|
> ನಿರ್ವಿಣ್ಣಃ ಸ ಪಪೌ ಕುಟುಂಬಕಲಹಾದೀಶೋಪಿ ಹಾಲಾಹಲಂ||

ಕೊಂಕು ನುಡಿಗೆ ಪ್ರಸಿದ್ಧ ಉದಾಹರಣೆಯಾದ ವಿಶಾಖದತ್ತನ ಮುದ್ರಾರಾಕ್ಷಸ ನಾಟಕದ ನಾಂದೀ ಪದ್ಯದಲ್ಲೂ ಗೌರಿಗೆ ಗಂಗೆಯ ಮೇಲಿದ್ದ ಅಸೂಯೆ ಅಭಿವ್ಯಕ್ತವಾಗುತ್ತದೆ.

> ಧನ್ಯಾಕೇಯಂ ಸ್ಥಿತಾ ತೇ ಶಿರಸಿ? ಶಶಿಕಲಾ; ಕಿಂನು ನಾಮೈತದಸ್ಯಾಃ?
> ನಾಮೈವಾಸ್ಯಾಸ್ತದೇತತ್ಪರಿಚಿತಮಪಿ ತೇ ವಿಸ್ಮೃತಂ ಕಸ್ಯ ಹೇತೋಃ|
> ನಾರೀಂಪೃಚ್ಛಾಮಿ ನೇಂದುಂ; ಕಥಯತು ವಿಜಯಾ ನ ಪ್ರಮಾಣಂ ಯದೀಂದುಃ
> ದೇವ್ಯಾ ನಿಹ್ನೋತುಮಿಚ್ಛೋಃ ಇತಿಸುರಸರಿತಂ ಶಾಠ್ಯಮವ್ಯಾದ್ವಿಭೋರ್ವ||

ಶಿವನ ತಲೆಯ ಮೇಲೆ ಸ್ಥಾನ ಪಡೆದಿರುವ ಗಂಗೆಯನ್ನು ನೋಡಿ ಗೌರಿ ತನ್ನಲ್ಲುಂಟಾದ ಅಸೂಯೆಯನ್ನು ಹೊರಗೆಡಹದೆ, ಚುಚ್ಚುನುಡಿಯಿಂದ ಶಿವನನ್ನೇ ಪ್ರಶ್ನಿಸುತ್ತಾಳೆ - ಧನ್ಯಾ ಕೇಯಂ ಸ್ಥಿತಾ ತೇ ಶಿರಸಿ? - ನಿನ್ನ ತಲೆಯ ಮೇಲೆ ಕುಳಿತಿರುವ ಧನ್ಯೆ ಆದ ಈಕೆ ಯಾರು? ಗೌರಿಯ ಅಸೂಯೆ ಅಸಹನೆಗಳನ್ನು ಮನಗಂಡ ಶಿವ, ಗಂಗೆ ತನ್ನ ಜಟೆಯಲ್ಲಿಲ್ಲವೇ ಇಲ್ಲವೊ ಎಂಬಂತೆ, ಗೌರಿ ಕೇಳಿದುದು ತನ್ನ ತಲೆಯ ಮೇಲಿರುವ ಚಂದ್ರ ಕಲೆಯನ್ನುದ್ದೇಶಿಸಿಯೇ ಎಂಬ ಭಾವಬರುವಂತೆ ಉತ್ತರ ಹೇಳುತ್ತಾನೆ, ಶಶಿಕಲೆ ಎಂದು. ಗೌರಿ ಕೇಳುತ್ತಾಳೆ -ಶಶಿಕಲೆ ಎಂಬುದು ಆಕೆಯ ಹೆಸರೇನು? ಶಿವ ಹೇಳುತ್ತಾನೆ: ಹೌದು ಅದು ಅವಳ ಹೆಸರೇ, ಈ ವಿಚಾರ ನಿನಗೆ ಪರಿಚಿತವಾದದ್ದೆ ಆದರೂ ಹೇಗೆ ಮರೆತುಹೋಯಿತು? ಶಿವ ಮಾಡುತ್ತಿರುವ ಈ ಅಪಲಾಪ ಗೌರಿಗೆ ಅರ್ಥವಾಗಿ, ಅವಳು ಗಡಸು ಧ್ವನಿಯಲ್ಲಿ ಹೇಳುತ್ತಾಳೆ. ನಾನು ಚಂದ್ರನನ್ನು (ಕುರಿತು) ಕೇಳುತ್ತಿಲ್ಲ ಹೆಂಗಸನ್ನು ಕುರಿತು ಕೇಳುತ್ತಿದ್ದೇನೆ. ಗೌರಿಯ ಈ ಮಾತಿನ ಅರ್ಥವನ್ನೂ ತಿರುವುಮುರುವು ಮಾಡಿ ಶಿವ ಹೇಳುತ್ತಾನೆ ಹಾಗಾದರೆ ಹೆಂಗಸಾದ (ನಿನ್ನ ಈ ಸಖಿ) ವಿಜಯೆಯೇ ಹೇಳಲಿ, ಇದು ಪ್ರಾಮಾಣಿಕವಾಗಿ ಚಂದ್ರನೇ ಅಲ್ಲವೆ ಎಂಬುದನ್ನು. ಈ ಪ್ರಕಾರವಾಗಿ ಗೌರೀದೇವಿಯಿಂದ ಗಂಗೆಯನ್ನು ಮರೆಯಿಸಬಯಸಿದ ಪರಶಿವನ ಪರಿಜ್ಞಾನ ನಿಮ್ಮನ್ನು ಸಲಹಲಿ ಎಂದು ಕವಿ ಆಶಿಸುತ್ತಾನೆ.

ಇದೇ ಬಗೆಯ, ಆದರೆ ಬೇರೆ ಧಾಟಿಯ ಮತ್ತೊಂದು ಕುಹಕಪೂರ್ಣ ಶ್ಲೋಕದಲ್ಲಿ ಗಂಗೆಯ ಮೇಲೆ ಗೌರಿಗಿದ್ದ ಮಾತ್ಸರ್ಯ ಸ್ಪಷ್ಟವಾಗಿ ಮೂಡಿಬಂದಿದೆ. ಇಲ್ಲೂ ಶಿವ ತನ್ನ ತಲೆಯ ಮೇಲೆ ಗಂಗೆ ಎಂಬ ಯಾವ ಹೆಂಗಸೂ ಇಲ್ಲವೇ ಇಲ್ಲ, ಅಲ್ಲಿರುವುದು ಬರೀ ನೀರು ಎಂದು ಸ್ವಾರಸ್ಯವಾಗಿ ನಿರೂಪಿಸಿ ಗೌರಿಗೆ ತಿಳಿಯಹೇಳಿರುವ ರೀತಿ ಪ್ರತಿಭಾಸಂಪನ್ನವಾಗಿದೆ.

ಮೌಳೌ ಕಿಂನು ಮಹೇಶ? ಮಾನಿನಿ, ಜಲಂ; ಕಿಂ ವಕ್ತ್ರಂ? ಅಂಭೋರುಹಂ;
ಕಿಂ ನೀಲಾಲಕವೇಣಿಕಾ? ಮಧುಕರಾಃ; ಕಿಂಭ್ರೂಲತೇ? ವೀಚಿಕಾಃ;
ಕಿಂ, ನೇತ್ರೇ? ಶಫರೀದ್ವಯಂ; ಕಿಮು ಕುಚೌ? ಪ್ರೇಂಖದ್ರಥಾಂಗದ್ವಯಂ
ಸಾಶಂಕಾಂ ಇತಿ ವಂಚಯನ್ ಗಿರಿಸುತಾಂ ಗಂಗಾಧರಃ ಪಾತು ವಃ||

ಇಲ್ಲಿ ಗೌರಿ ಗಂಗೆಯು ಹೆಸರೆತ್ತದೆಯೇ ಅವಳ ಒಂದೊಂದು ಅವಯವವನ್ನು ನಿರ್ದೇಶಿಸಿ ಶಿವನನ್ನು ಪ್ರಶ್ನಿಸುವ ದಾಟಿ ಗಂಭೀರವಾಗಿದೆ. ಅವಳು ಮೊದಲು ಕೇಳುತ್ತಾಳೆ - ಇದೇನು ನಿನ್ನ ತಲೆಯ ಮೇಲೆ, ಮಹೇಶ? ಶಿವ ಹೇಳುತ್ತಾನೆ ನಿರ್ಲಿಪ್ತನಾಗಿ ನೀರು, ಮಾನಿನಿ. ಇಲ್ಲಿ ಶಿವನಲ್ಲಿ ಏನನ್ನೂ ಮರೆಮಾಚುವ ಪ್ರಸಕ್ತಿಯೇ ಇಲ್ಲ. ಅವನಿಗೆ ಗಂಗೆ ಬರೀ ನೀರು ಅಥ'ವಾ ನದಿ. ಗೌರಿಯ ದೃಷ್ಟಿಯಲ್ಲಿ ಗಂಗೆ ಒಬ್ಬ ರೂಪವತಿಯಾದ ಹೆಂಗಸು, ಆದ್ದರಿಂದಲೇ ಅವಳಿಗೆ ಅಸಹನೆ, ಅಸೂಯೆ. ಶಿವನ ಸಲೀಸಾದ ಉತ್ತರ ಕೇಳಿ ಅವಳು ಪುನಃ ಪ್ರಶ್ನಿಸುತ್ತಾಳೆ (ಈ) ಮುಖವೋ? ಅದು ಕಮಲ. ಈ ನೀಲಕೇಶಗಳ ಜಡೆಯೋ? ಅವು ದುಂಬಿಗಳ ಸಾಲು. ಈ ಎರಡು ಹುಬ್ಬುಗಳು? ಅವು ಅಲೆಗಳು. ಆ ಎರಡು ಕಣ್ಣುಗಳೊ? ಅವು ಎರಡು ಮೀನುಗಳ ಜೋಡಿ. ಆ ಎರಡು ಸ್ತನಗಳು ಅವು ತೂಗಾಡುತ್ತಿರುವ ಚಕ್ರವಾಕಗಳು! ಆಶಂಕೆಗೊಂಡ ಗೌರಿಯನ್ನು ಈ ರೀತಿ ವಂಚಿಸುತ್ತಿರುವ ಗಂಗಾಧರ ನಿಮ್ಮನ್ನು ಸಲಹಲಿ.

ಇದೇ ಬಗೆಯ ಮತ್ತೂ ಒಂದು ಶ್ಲೋಕದ ವಸ್ತುವೂ ಗೌರಿಯ ಅಸೂಯೆಯೇ ಆಗಿದೆ.

ಏಷಾ ತೇ ಹರ! ಕಾ ಸುಗಾತ್ರಿ? ಕತಮಾ? ಮೂರ್ಧ್ನಿ ಸ್ಥಿತಾ; ಕಿಂ ಜಟಾ?
ಹಂಸಃ ಕಿಂ ಭಜತೇ ಜಟಾಂ? ನಹಿ, ಶಶೀ; ಚಂದ್ರೋಜಲಂ ಸೇವತೇ?
ಮುಗ್ಧೇ! ಭೂತಿರಿಯಂ; ಕುತ್ರೋತ್ರ ಸಲಿಲಂ? ಭೂತಿಸ್ತರಂಗಾಯತೇ
ಏವಂ| ಯೋ ವಿನಿಗೂಹತೇ ತ್ರಿಪಥಗಾಂ ಪಾಯಾತ್ಸವಃ ಶಂಕರಃ ||

ಮೇಲಿನ ಶ್ಲೋಕಗಳು ಸಂವಾದರೂಪದಲ್ಲಿದ್ದರೆ ಮುಂದಿನ ಶ್ಲೋಕದಲ್ಲಿ ಗಂಗೆಯನ್ನು ತನ್ನ ತಲೆಯ ಮೇಲೇರಿಸಿಕೊಂಡಿರುವ ಶಿವನನ್ನು ಗೌರಿ ನೇರವಾಗಿಯೇ ಕೋಪದಿಂದ ತರಾಟೆಗೆ ತೆಗೆದುಕೊಳ್ಳುವುದನ್ನು ಕಾಣಬಹುದು.

ಸಂಪ್ರಾಪ್ತಂ ಮಕರಧ್ವಜೇನ ಮಥನಂ ತ್ವತ್ತೋಮದರ್ಥೇ ಪುರಾ
ತದ್ಯುಕ್ತಂ ಬಹುಮಾರ್ಗಗಾಂ ಮಮ ಪುರೋ ನಿರ್ಲಜ್ಜ ವೋಢುಸ್ತವ?
ತಾಮೇನಾಮನುನಯಸ್ವ ಭಾವಕುಟಿಲಾಂ; ಹೇ ಕೃಷ್ಣಕಂಠ ! ಗ್ರಹಂ
ಮುಂಚೇತ್ಯಾಹ ರುಷಾ ಯಮದ್ರಿತನಯಾ (ಲಕ್ಷ್ಮೀಶ್ಚ) ಪಾಯಾತ್ಸ ವಃ ||

ಹಿಂದೆ ನನಗಾಗಿ ಮನ್ಮಥನೂ ನಿನ್ನ ದೆಸೆಯಿಂದ ಕಷ್ಟಕ್ಕೀಡಾದ. ಹಾಗಿರುವಾಗ ಎಲೌ ಲಜ್ಜೆಯಿಲ್ಲದವನೆ! ನನ್ನ ಮುಂದೆಯೇ ಗಂಗೆಯನ್ನು ತಲೆಯ ಮೇಲೆ ಹೊತ್ತುಕೊಂಡಿರುವೆಯಲ್ಲ, ಇದು ನಿನಗೆ ತರವೆ? ಕುಟಿಲ ಪ್ರೇಮದ ಅವಳ ಅನುನಯವನ್ನೇ ಮಾಡು ಓ ನೀಲಕಂಠ! ಬಿಡು ನನ್ನ ಆಲಿಂಗನವನ್ನು ಎಂಬುದಾಗಿ ಗೌರಿ ಕೋಪದಿಂದ ಯಾದವನನ್ನುದ್ದೇಶಿಸಿ ನುಡಿದಳೋ ಆ ಶಿವ ನಿಮ್ಮನ್ನು ಸಲಹಲಿ.

ಶಿಷ್ಟಕವಿಗಳೂ ಜನಪದರೂ ಕಾವ್ಯವನ್ನು ಸೃಷ್ಟಿಸಿದ್ದಾರೆ. ಆದರೆ ಗಂಗೆಗೌರಿಯರ ಸವತಿಮಾತ್ಸರ್ಯದ, ಸವತಿ ಪ್ರೀತಿಯ ಚಿತ್ರಗಳು ಕಾವ್ಯಪುರಾಣಗಳಲ್ಲಿಗಿಂತ ಹೆಚ್ಚು ಯಶಸ್ವಿಯಾಗಿ ಜನಪದ ಸಾಹಿತ್ಯದಲ್ಲಿ ಕಾಣಿಸಿಗುತ್ತವೆ. ಈ ಯಶಸ್ಸಿಗೆ ಕಾರಣ, ಬಹುಶಃ ಇಲ್ಲಿ ಅವರೂ ಜನಪದರಾಗಿಯೇ ಕಾಣಿಸಿಕೊಳ್ಳುವುದಾಗಿರಬಹುದು. ಜನಪದ ಸಾಹಿತ್ಯದಲ್ಲಿ ಗಂಗೆಗೌರಿಯರ ಸಂಬಂಧದ ಬಗ್ಗೆ ಅನೇಕ ಪಾಠಾಂತರಗಳು ಸಿಕ್ಕುತ್ತವೆ. ಅವುಗಳಲ್ಲಿ ಮುಖ್ಯವಾದ ಪಾಠಾಂತರಗಳ ಆಧಾರದಮೇಲೆ ಆ ಇಬ್ಬರ ಜೀವನದ ಕೆಲವು ಚಿತ್ರಗಳನ್ನು ಇಲ್ಲಿ ಕೊಡಲಾಗಿದೆ.

ನೀಲಮ್ಮ ಮೀಯುವಾಗ ನೀರಿನಲ್ಲಿ ಮಲ್ಲಯ್ಯನ ಕಳಸವನ್ನು ಕಾಣುತ್ತಾಳೆ. ಸ್ನಾನಮಾಡಿ ಮಲಗಿದಮೇಲೆ ಅವಳಿಗೆ ಒಂದು ಕನಸು ಬೀಳುತ್ತದೆ. ಮಲ್ಲಯ್ಯ ಕನಸಿನಲ್ಲಿ ಕಾಣಿಸಿಕೊಂಡು ಕನ್ನೆಯರು ಹುಟ್ಟಿದರೆ ತನಗೆ ಕೊಡುವಂತೆ ಕೇಳುತ್ತಾನೆ. ಕನಸೊಡೆದು ಎದ್ದ ಆಕೆ ಹೆಣ್ಣು ಹುಟ್ಟಿದರೆ ಲಿಂಗಕ್ಕೆ ಸಂತೋಷದಿಂದ ಧಾರೆ ಎರೆದೆನೆಂದು ಹಿಗ್ಗುತ್ತಾಳೆ. ಅದರಂತೆ ಅವಳಲ್ಲಿ ಗಿರಿಜೆ ಹುಟ್ಟುತ್ತಾಳೆ. ಅದನ್ನು ತಿಳಿದು ಗಿರಿಯ ಮಲ್ಲಯ್ಯ ಬೆಟ್ಟದಷ್ಟು ಹೊನ್ನನ್ನು ಹೊರಿಸಿಕೊಂಡು ಅವಳನ್ನು ಕೇಳಲು ಬರುತ್ತಾನೆ. ಮಲ್ಲಯ್ಯನ ಮುಂದೆ ಬಣ್ಣದ ಹಚ್ಚಡದ ಬಸವಯ್ಯ ಬಂದು ನಮ್ಮ ಮಠಕ್ಕೆ ಹೆಣ್ಣನ್ನು ಕೊಡಿ ಎಂದು ಕೇಳುತ್ತಾನೆ. ಮಲ್ಲಯ್ಯನ ಬೈರಾಗಿ ಬಾಳನ್ನು ಗಿರಿಜೆಯ ತಂದೆತಾಯಿಯರು ಜರಿಯುತ್ತಾರೆ. ಅದರಿಂದ ಗಿರಿಜೆಗೆ ದುಃಖವಾಗುತ್ತದೆ. ಮಲ್ಲಯ್ಯನಿಗೆ ತನ್ನನ್ನು ಕೊಡಬೇಕೆಂದು ತಾಯಿಯನ್ನು ಒತ್ತಾಯಿಸುತ್ತಾಳೆ. ಮಲ್ಲಯ್ಯನ ಕಷ್ಟಕರ ಜೀವನವನ್ನು ತಾಯಿ ವಿವರಿಸುತ್ತಾಳೆ. ಗಿರಿಜೆ ಎಲ್ಲ ತ್ಯಾಗಕ್ಕೂ ಸಿದ್ಧಳಾಗುತ್ತಾಳೆ. ಕೋಪಗೊಂಡ ತಂದೆತಾಯಿಯರು ಅವಳನ್ನು ಹೊರಗೆ ತಳ್ಳಿಬಿಡುವುದಾಗಿ ಹೆದರಿಸುತ್ತಾರೆ. ಅತ್ತ ಮಲ್ಲಯ್ಯ ಗಿರಿಜೆಯ ಯೋಚನೆಯಲ್ಲಿಯೇ ಮಲಗಿದ್ದು ಅವಳನ್ನು ಗೆದ್ದು ತರಲು ಮತ್ತೆ ಹೊರಡುತ್ತಾನೆ. ಜಂಗಮನ ವೇಷದಲ್ಲಿ ಬಂದ ಅವನು ಕೆರೆಯಲ್ಲಿ ನೀರು ಮೊಗೆಯುತ್ತಿದ್ದ ಗಿರಿಜೆಯನ್ನು ಕಾಣುತ್ತಾನೆ. ಆ ಚಲುವೆಯನ್ನು ಕಂಡು ತನ್ನ ಜಪವನ್ನೇ ಮರೆತುಬಿಡುತ್ತಾನೆ. ಅವರಿಬ್ಬರಲ್ಲಿ ಸರಸ ಸಂಭಾಷಣೆ ನಡೆದು ಪ್ರೇಮಾಂಕುರವಾಗುತ್ತದೆ. ಅವಳನ್ನು ಕೊಡಲು ತಂದೆತಾಯಿಯರೂ ಒಪ್ಪುತ್ತಾರೆ. ಮದುವೆ ವಿಜೃಂಭಣೆಯಿಂದ ನಡೆಯುತ್ತದೆ.

ಇನ್ನೊಂದು ಪಾಠಾಂತರ ಹೀಗಿದೆ: ಭೂಲೋಕದಲ್ಲಿ ಗೌರಿಯ ಅವತಾರವಾದ ಮೇಲೆ ಸುಂದರ ಯುವತಿಯಾಗಿ ಬೆಳೆದುನಿಂತ ಅವಳನ್ನು ಯಾರಿಗೆ ಕೊಡಬೇಕೆಂಬುದು ತಂದೆ ತಾಯಿಗಳಿಗೆ ದೊಡ್ಡ ಸಮಸ್ಯೆಯಾಗಿ ಹೋಯಿತು. ಯಾವ ವರನನ್ನೂ ಅವಳು ಒಪ್ಪದೆ ನಿರಾಶೆಯನ್ನುಂಟು ಮಾಡಿದಳು. ಯಾರಿಗೆ ಕೊಡಲಿ ಎಂದು ತಂದೆ ಮಗಳನ್ನೇ ಕೇಳುತ್ತಾನೆ. ಬ್ರಾಹ್ಮಣನಿಗೆ ಕೊಡಲೆ ಎಂದರೆ ಅವರ ಕಟ್ಟುನಿಟ್ಟಾದ ಜೀವನ ತನಗೆ ಒಗ್ಗದೆಂದು ಹೇಳಿ ನಿರಾಕರಿಸುತ್ತಾಳೆ. ಹೀಗೆಯೇ ಶಿವಭಕ್ತರು, ಕೋಮಟಿಗರು, ಒಕ್ಕಲಿಗರು, ತುರುಕರು, ಕುಂಬಾರರು, ಕುರುಬರು, ನಾಯ್ಕರು, ಗೊಲ್ಲರು ಮುಂತಾದ ವಿವಿಧ ಜಾತಿಯ ವಿವಿಧ ಕಸಬಿನವರನ್ನು ಸೂಚಿಸಿದರೂ ಹಲವು ಕಾರಣಗಳನ್ನು ಹೇಳಿ ಬೇಡವೆನ್ನುತ್ತಾಳೆ. ಕೊನೆಗೆ ಶಿವಗಂಗೆಯ ಸಂನ್ಯಾಸಿ ಮಠದಲ್ಲಿರುವ ಜಂಗಮನಿಗೆ ಕೊಟ್ಟು ಲಗ್ನ ಮಾಡಬಹುದೆಂದು ಮಗಳು ತಿಳಿಸಲು ಅದನ್ನು ಕೇಳಿದ ತಂದೆ ತಾಯಿಯರು ವಿಸ್ಮಯಗೊಳ್ಳುತ್ತಾರೆ. ಜಂಗಮಜೀವನದ ಅಸಹನೀಯವಾದ ಸ್ಥಿತಿಯನ್ನು ವಿವರಿಸುತ್ತಾರೆ. ಆದರೂ ಅವಳು ಕೇಳುವುದಿಲ್ಲ. ಕೋಪಗೊಂಡ ಅವರು ಈಕೆ ನಮ್ಮ ಘನತೆಯನ್ನು ಹಾಳುಮಾಡುವ ಹೆಣ್ಣು ಎಂದುಕೊಂಡು ಕಣ್ಣು ಕಟ್ಟಿ ಕಾಡಿಗೆ ಬಿಡುತ್ತಾರೆ. ಅಲ್ಲಿ ಗೌರಮ್ಮ ಹನ್ನೆರಡು ಬೆಟ್ಟದ ನಡುವೆ ಕುಳಿತು ಶಿವನನ್ನು ಕುರಿತು ತಪಸ್ಸು ಮಾಡುತ್ತಾಳೆ. ಶಿವ ಮುದಿ ಜಂಗಮನ ವೇಷ ಧರಿಸಿ ಜೋಳಿಗೆ ಹಿಡಿದು ಭಿಕ್ಷೆಗೆ ಬರುತ್ತಾನೆ. ಕಾಡಿನಲ್ಲಿ ಅವಳೇನನ್ನು ಕೊಟ್ಟಾಳು? ಕೊನೆಗೆ ಶಿವ ತನ್ನ ನಿಜರೂಪವನ್ನು ತೋರಿ ಅವಳನ್ನು ತನ್ನೊಂದಿಗೆ ಮಠಕ್ಕೆ ಕರೆದುಕೊಂಡು ಹೋಗಿ ಅವಳ ತಂದೆ ತಾಯಿಗಳನ್ನು ಕರೆಸಿ ವಿಜೃಂಭಣೆಯಿಂದ ಮದುವೆ ಮಾಡಿಕೊಳ್ಳುತ್ತಾನೆ.

ಜನಪದ ಸಾಹಿತ್ಯದಲ್ಲಿ ಗಂಗೆ ಕಾಣಿಸಿಕೊಳ್ಳುವುದು ಹೀಗೆ:

ಉಂಡುಟ್ಟು ಮಂಚದ ಮೇಲೆ ಮಲಗಿದ ಗಿರಿಮಾಜಿಗೆ ಕನಸಿನಲ್ಲಿ ಶಿವ ಕಾಣಿಸಿ ಗರ್ಭಿಣಿಯಾದ ಅವಳೊಡಲಲ್ಲಿ ಹೆಣ್ಣುಮಕ್ಕಳು ಹುಟ್ಟಿದರೆ ತನಗೆ ಕೊಡುವಂತೆ ಕೇಳುತ್ತಾನೆ. ಗಿರಿಮಾಜಿಗೆ ನವಮಾಸಗಳು ತುಂಬಿ ದಿನ ಹತ್ತಿರವಾಗಲು ಪತಿ ಗಿರಿರಾಯ ಸೂಲಗಿತ್ತಿ ಸಂಗಮ್ಮನನ್ನು ಹುಡುಕಿ ಕರೆತರುತ್ತಾನೆ. ಎರಡು ಹೆಣ್ಣುಮಕ್ಕಳು ಜನಿಸುತ್ತವೆ. ಆದರೆ ಹಿರಿಯ ಹೆಣ್ಣು ಹುಟ್ಟಿದ ಗಳಿಗೆಯಲ್ಲಿ ಶಕುನ ಸರಿತೋರದೆ, ಹುಟ್ಟಿದ ಮನೆಗೆ ಅವಳು ಕಂಟಕಪ್ರಾಯಳಾಗುವಳೆಂದು ಸಂಗಮ್ಮನೂ ಪುರೋಹಿತರೂ ಹೇಳಿದ ಮೇಲೆ ತೊಟ್ಟಿಲ ಸಮೇತ ಹೊಳೆಗೆ ಬಿಟ್ಟು ಬರುತ್ತಾನೆ, ಗಿರಿರಾಯ. ಮೀನು ಹಿಡಿಯುವಾಗ ಅಂಬಿಗರ ಗಂಗನಿಗೆ ಆ ಮಗು ಸಿಕ್ಕುತ್ತದೆ. ಹೀಗೆ ಗಂಗೆ ಅಂಬಿಗರ ಮನೆಯಲ್ಲಿ ಬೆಳೆದು ದೊಡ್ಡವಳಾಗುತ್ತಾಳೆ.

ಜನಪದ ಸಾಹಿತ್ಯದಲ್ಲಿ ಗಂಗೆ-ಗೌರಿಯರ ಜಗಳ ಒಂದು ಅತಿ ಮೋಜಿನ ಪ್ರಸಂಗವೆನಿಸಿದೆ. ಈ ಜಗಳದಲ್ಲಿ ಸಾಮಾನ್ಯವಾಗಿ ಹಳ್ಳಿಗಳಲ್ಲಿ ಕಂಡುಬರುವ ಇಬ್ಬರು ಹೆಂಗಸರ ಜಗಳ, ಸವತಿಮಾತ್ಸರ್ಯಗಳು ಪ್ರತಿಬಿಂಬಿತವಾಗಿದೆ.

ಗಂಗೆಯನ್ನು ತರುವ ಪೂರ್ವದಲ್ಲಿಯೇ ಗೌರಿಯ ಮುನಿಸು ಪ್ರಾರಂಭವಾಗುತ್ತದೆ. ತೊಳತೊಳತೊಳಗುತ್ತಿರುವ ಗಂಗೆಯನ್ನು ಸ್ವಪ್ನದಲ್ಲಿ ಕಂಡ ಶಿವ ಪಕ್ಕದಲ್ಲಿ ಮಲಗಿದ್ದ ಗೌರಿಗೆ ಹೇಳುತ್ತಾನೆ. ಅವನು ಯಾಕೆ

ಹೇಳುತ್ತಿದ್ದಾನೆಂದು ಅವಳಿಗೆ ಅರ್ಥವಾಗುತ್ತದೆ. 'ಮಕ್ಕಾಳಿರ್‍ಲ್ಲೀಳಿ ಮನೆತುಂಬ' ಎಂದು ವ್ಯಂಗ್ಯವಾಗಿ ನುಡಿದು ಮಗ್ಗುಲಾಗುತ್ತಾಳೆ. ಆದರೆ ಮರುದಿನ ಶಿವ ವೇಷ ಧರಿಸಿ ಹೊರಟೇಬಿಡುತ್ತಾನೆ. ಭೂಲೋಕಕ್ಕೆ ಬಂದ ಶಿವ ನೀರನ್ನು ಮೊಗೆಯುತ್ತಿರುವ ಗಂಗೆಯನ್ನು ಕಂಡು ಜಪ ಮಾಡುತ್ತಿರುವಂತೆ ತಾನು ನಟಿಸುತ್ತಿದ್ದೇನೆಂಬುದನ್ನೂ ಮರೆಯುತ್ತಾನೆ. ಇವನ ಸ್ಥಿತಿಯನ್ನು ಕಂಡ ಗಂಗೆ 'ಜಪವ ಮರಿಸವ್ರ ಮಗಳಲ್ಲ' ಎಂದು ಹಾಸ್ಯ ಮಾಡುತ್ತಾಳೆ. ಹಾಸ್ಯಕ್ಕಿಂತ ಹೆಚ್ಚಾಗಿ ಇಲ್ಲಿ ನಾನು ಬಡವರ ಮನೆಯ ಹುಡುಗಿ ಎಂಬ ದೈನ್ಯದ ಭಾವ ಎದ್ದುಕಾಣುತ್ತದೆ. ಶಿವ ಗಂಗೆಯನ್ನು ತರುತ್ತಿರುವ ಸುದ್ದಿಯನ್ನು ಗಿಣಿರಾಮನಿಂದ ತಿಳಿದು ಗೌರಿ ಅಪ್ಪನ ಮನೆಗೆ ಹೊರಡುತ್ತಾಳೆ. ಅವರು ಬರುವ ಹೊತ್ತಿಗೆ ರಾಡ್ಮುಂಡ್ಗೆ (ಮಂಡಿಗದ್ದಗಳನ್ನು ಸೇರಿಸಿ ಮಲಗುವುದು) ಹಾಕಿ ಮಲಗು ಹೋಗು ಎಂದು ಅಪ್ಪ ಬುದ್ಧಿ ಹೇಳಿ ಕಳಿಸುತ್ತಾನೆ. ಕದ ತೆಗೆಯದೆ ಮಲಗಿದ್ದ ಗೌರಿಯನ್ನು ಹೆದರಿಸಿ ಕದ ತೆಗೆಸುತ್ತಾನೆ ಶಿವ. ಗೌರಿ ಊಟಕ್ಕೆ ಎರಡು ಮಣೆಗಳನ್ನು ಹಾಕುತ್ತಾಳೆ. 'ಇಬ್ಬರುಂಟೇನೆ ಪುರುಷ್ಯರು?' ಎಂದು ಕೇಳಿದ ಶಿವನಿಗೆ 'ಸಿವ್ನ ಕೆಂಜಡೆಯ ಮುಡಿವಳಗೆ ಇರುವ ಸಿವ್ಗಂಗೇಗೆ ಒಂದು, ನಿಮಗೊಂದು' ಎಂದು ಉತ್ತರಿಸುತ್ತಾಳೆ. ಶಿವ ಅಪ್ರತಿಭನಾಗುತ್ತಾನೆ. ಅನಂತರ ಗೌರಿ ಗಂಗೆಗೆ ಹರಸುತ್ತ 'ಅಂಬುಗನ ಮಗಳೆ ಸುಖಬಾಳೊ' ಎನ್ನುತ್ತಾಳೆ. ಅಂಬಿಗನ ಮಗಳು ಎಂದು ಕರೆದಳಲ್ಲ ಎಂದು ಗಂಗೆಗೆ ಚುರುಕ್ ಎನಿಸುತ್ತದೆ. 'ಕೆಂಪೇರ ಜಗಳ ಶಂಖ ಬಾರಿಸಿದ್ಹಂಗೆ' ಮೊದಲಾಗುತ್ತದೆ, ಜಗಳ. ಆಗಾಗ ಇಂಥ ಸಣ್ಣಪುಟ್ಟ ಜಗಳಗಳು ಇದ್ದೇ ಇರುತ್ತವೆ. ಹೀಗೆ ಇರುವಾಗ ಒಮ್ಮೆ ತಾನು ಮುಡಿದು ಮಿಕ್ಕಿದ ಹೂವನ್ನು ಗೌರಿ ಗಂಗೆಗೆ ಕಳಿಸುತ್ತಾಳೆ. ಒಳ್ಳೊಳ್ಳೆ ಹೂವನ್ನೆಲ್ಲ ತಾನು ಮುಡಿದು ಬಾಡಿ ಬತ್ತಿದ ಹೂವನ್ನು ಕಳಿಸಿದ್ದಾಳೆ ಎಂದುಕೊಂಡು ಗಂಗೆ ಅವನ್ನು ಬೀದಿಗೆ ಚೆಲ್ಲುತ್ತಾಳೆ, ಬೇಲಿಗೆ ಎಸೆಯುತ್ತಾಳೆ. ಇದನ್ನೆಲ್ಲ ತಿಳಿದ ಗೌರಿ, ಗಂಗೆ ಬೆಸ್ತರ ಹುಡುಗಿಯೆಂದೂ ಅವಳ ತಂದೆ ಅಣ್ಣಂದಿರು ಮೀನು ಸೀಗಡಿ ಮಾರುವವರೆಂದೂ ಅವಳ ಬಂಧು ಬಳಗ ಸುಣ್ಣ ಸುಡುವವರೆಂದೂ ಜರೆಯುತ್ತಾಳೆ. ಸರಿ, ಪರಸ್ಪರ ಜಡೆ ಹಿಡಿದು ಜಗಳ ಪ್ರಾರಂಭಿಸುತ್ತಾರೆ. ಕುಸ್ತಿಯಲ್ಲಿ ಗಂಗೆ ಕೆಳಗೆ, ಗೌರಿ ಮೇಲೆ. ಜಗಳ ನಡೆಯುತ್ತಿದ್ದಾಗ ಗೌರಿ ಹೊರಗಾಗುತ್ತಾಳೆ. ಮಳೆದೇವರು ಗಾಳಿದೇವರುಗಳನ್ನು ಕರೆದು ಗಂಗೆ ಆಣೆ ಭಾಷೆ ತೆಗೆದುಕೊಳ್ಳುತ್ತಾಳೆ. ಭೂಮಿಯ ಮೇಲಿನ ನೀರನ್ನೆಲ್ಲ ಮಾಯ ಮಾಡುತ್ತಾಳೆ. ಗೌರಿ ನೀರನ್ನು ತರಲು ಮಗನಾದ ಚೆನ್ನವೀರನನ್ನು ಕಳಿಸುತ್ತಾಳೆ. ಹುಡುಕಿ ಹುಡುಕಿ ಸಾಕಾದ ಅವನನ್ನು ಕಾಶಿಗೆ ಹೋಗು ಎನ್ನುತ್ತಾಳೆ ಗೌರಿ. ಕಾಶಿಯಲ್ಲೂ ನೀರಿಲ್ಲ. ಅಲ್ಲಿಂದ ಬಳಲಿ ಬರುವಾಗ ಗಂಗೆ ನೋಡುತ್ತಾಳೆ. ಅಲ್ಲೊಂದು ಹಳ್ಳವನ್ನು ಸೃಷ್ಟಿಮಾಡುತ್ತಾಳೆ. ಆ ಹಳ್ಳದಲ್ಲಿ ಮನ ದಣಿಯ ನೀರು ಕುಡಿದು ಸ್ನಾನ ಮಾಡಿ ಬುತ್ತಿ ಬಿಚ್ಚುತ್ತಾನೆ ವೀರಣ್ಣ. ಎರಡು ಪಾಲುಮಾಡಿ ಚಿಕ್ಕವ್ವನಾದ ಗಂಗೆಗೆ ಒಂದು ಪಾಲನ್ನು ಬಿಟ್ಟು ಉಳಿದದ್ದನ್ನು ತಾನು ಉಣ್ಣುತ್ತಾನೆ. ಆಮೇಲೆ ಹನ್ನೆರಡು ಕಂಬ ಅಡ್ಡೆ ನೀರು ಮೊಗೆದು ಹೆಗಲ ಮೇಲೆ ಹೊತ್ತು ಮೂರು ಹೆಜ್ಜೆ ಹೋಗುವಷ್ಟರಲ್ಲಿ ಸವತಿ ಗೌರಿಗಾಗಿ ನೀರು ಹೋಗುತ್ತಿದೆ ಎಂದು ತಿಳಿದ ಗಂಗೆ ಹಳ್ಳದಲ್ಲಿದ್ದ ಮತ್ತು ಅಡ್ಡೆಯಲ್ಲಿದ್ದ ನೀರನ್ನೆಲ್ಲ ಮಾಯ ಮಾಡುತ್ತಾಳೆ. ಇದು ಗಂಗೆಯ ಮಾಯ ಎಂದು ಅವನಿಗೆ ತಿಳಿದುಹೋಗುತ್ತದೆ. ಮೂವತ್ತು ದಿನದಿಂದ ಊಟ ಇಲ್ಲದೆ ಗೌರಿ ಬಳಲುತ್ತಿದ್ದು ಕೈಲಾಸಗಿರಿಯಲ್ಲಿರುವ ಶಿವನ ಬಳಿಗೆ ಮಗನನ್ನು ಕಳಿಸುತ್ತಾಳೆ. ಶಿವನಿಗೆ ಜಗಳದ ವಿಷಯವನ್ನು ಹೇಳುತ್ತಾನೆ, ವೀರಣ್ಣ. ಶಿವ ಬರುತ್ತಾನೆ. ಗೌರಿ ಹೊರಗೆ ಕೂತಿದ್ದಾಳೆ. ಹಾಲು ಮೊಸರು ತುಪ್ಪ ಜೇನುಗಳ ಅಡ್ಡೆಯನ್ನು ತರಲೇ ಎಂದು ಕೇಳುತ್ತಾನೆ. ಯಾವುದರಿಂದಲೂ ತನ್ನ ಸೂತಕ ಕಳೆಯುವುದಿಲ್ಲ ಎನ್ನುತ್ತಾಳೆ. ಗಂಗೆಯ ಬಳಿಗೆ ಹೋಗು ಎನ್ನುತ್ತಾನೆ. ಸತ್ತರೂ ಆಕೆಯ ಬಳಿಗೆ ಹೋಗಲಾರೆ ಎನ್ನುತ್ತಾಳೆ. ವಿಧಿಯಿಲ್ಲದೆ ಮಗನನ್ನು ಕಳಿಸುತ್ತಾಳೆ. ನಿನಗೆ ಬೇಕಾದರೆ ಒಂದು ಚೆಂಬು ಕೊಡುತ್ತೇನೆ. ನಿನ್ನವ್ವನಿಗೆ ಇಲ್ಲ, ಎನ್ನುತ್ತಾಳೆ ಗಂಗೆ. 'ನಮ್ಮ ಬಾವಿಯಲ್ಲಿ ಕಪ್ಪೆ ಇರುತ್ತವೆ, ಅದು ಕಲಕುನೀರು, ಮೀನು ಇರುತ್ತವೆ. ಅದು ಹೊಲಸುನೀರು' ಎಂದು ಕಟಕಿಯಾಡಿದ ಮೇಲೆ ಬರಿಗೈಯಲ್ಲಿ ಹಿಂದಿರುಗುತ್ತಾನೆ, ವೀರಣ್ಣ. ಪೆಟ್ಟಿಗೆಯಲ್ಲಿದ್ದ ಪಟ್ಟೆಸೀರೆ ಉಟ್ಟುಕೊಂಡು ಆಭರಣಗಳನ್ನೆಲ್ಲ ಧರಿಸಿಕೊಂಡು ಐದು ಜನ ಮಕ್ಕಳನ್ನು ಕರೆದುಕೊಂಡು ಗೌರಿಯೇ ಹೊರಡುತ್ತಾಳೆ. ಎಷ್ಟು ಕೂಗಿದರೂ ಗಂಗೆ ಬಾಗಿಲು ತೆಗೆಯುವುದಿಲ್ಲ. ಉಟ್ಟಿದ್ದ ಪಟ್ಟೆ ಸೀರೆ ಆಭರಣಗಳು ಐದು ಜನ ಮಕ್ಕಳು ಏನು ಬೇಕಾದರೂ ಕೊಡುವೆನೆಂದರೂ ಉತ್ತರ ಬರುವುದಿಲ್ಲ. ಕೊನೆಗೆ ನನ್ನ ಭಾಗದ ಗಂಡನನ್ನು ಕೊಡುತ್ತೇನೆ ಎಂದಾಗ, ಹಾಲು ಅನ್ನ ಮುಟ್ಟಿ ಭಾಷೆ ಮಾಡಿಸಿಕೊಂಡು, ಗಂಗಮ್ಮ ಬಾಗಿಲು ತೆಗೆಯುತ್ತಾಳೆ. ಮಳೆದೇವರು ಗಾಳಿ ದೇವರನ್ನು ಕರೆದು ಆಣೆ ಭಾಷೆ ಬಿಡಿಸುತ್ತಾಳೆ. ಗುಡುಗು ಮಿಂಚುಗಳು ಕಾಣಿಸಿ ಜಡಿಮಳೆ ಸುರಿಯುತ್ತದೆ. ಸೂತಕ ತೀರಿಸಿಕೊಂಡು, ಇಬ್ಬರೂ ಜೊತೆಯಲ್ಲಿ ಈಜಾಡಿ, ಜೊತೆಯಲ್ಲಿ ಹಾಲು ಅನ್ನ ಉಂಡು, ಆಮೇಲೆ ಇವತ್ತು ರಾತ್ರಿ ಶಿವನನ್ನು ಕಳುಹು ಎಂಬ ಗಂಗೆಯ ಮಾತನ್ನು ಕೇಳಿ 'ಎಲ್ಲಾದ್ರೂ ಉಂಟೇನೆ' ಎಂದು ಹೇಳಿ ಮಾತಿಗೆ ತಪ್ಪುತ್ತಾಳೆ. ಗಂಗೆ-ಗೌರಿಯರ ಕೇಶಾಕೇಶಿ ಮತ್ತೆ ಪ್ರಾರಂಭವಾಗುತ್ತದೆ. ಎರಡು ಮೂರು ಪೆಟ್ಟು ತಿಂದ ಗಂಗೆ ಕೈಬೀಸಿ ಮಳೆರಾಯನನ್ನು ಕರೆಯುತ್ತಾಳೆ. ಗಂಗೆ ಮೊಣಕಾಲುದ್ದ ನೀರಲ್ಲಿ ನಿಂತರೆ, ಗೌರಿ ಕೊಚ್ಚಿಹೋಗುತ್ತಾಳೆ. ಬೇಟೆಗೆ ಹೋಗಿದ್ದ ಶಿವ ಬರುತ್ತಾನೆ. ಗಂಗೆಯನ್ನು ಬೆಸ್ತರ ಮನೆಗೆ ಕಳಿಸುತ್ತ 'ವರ್ಷಕ್ಕೊಮ್ಮೆ ಮಾರಿ ಹಬ್ಬದಲ್ಲಿ ನೀನು ಬಾ. ನಡು ಊರಲ್ಲಿ ನಿನ್ನ ಪೂಜಿಸುತ್ತಾರೆ. ಕುರಿಕೋಳಿಗಳ ನಿನಗೆ ಕಡಿತಾರೆ' ಎಂದು ಹೆಳುತ್ತಾನೆ. 'ಬ್ರಾಹ್ಮಣರ ಮನೆಯಲ್ಲಿ ಸೇರಿಕೊ, ವರ್ಷಕೊಮ್ಮೆ ಗೌರಿಹಬ್ಬದಲ್ಲಿ ನೀನು ಬಾ, ಮಲ್ಲಿಗೆ ಹೂವಿನ ಪೂಜೆ ನಿನಗೆ ಮಾಡುತ್ತಾರೆ' ಎಂದು ಗೌರಿಗೆ ಹೇಳಿಕಳಿಸುತ್ತಾನೆ. 'ನಿಮ್ಮಿಬ್ಬರ ಮಧ್ಯದಲ್ಲಿ ಶಿವರಾತ್ರಿ ಹಬ್ಬ. ಆ ಹಬ್ಬದಲ್ಲಿ ನಾ ಬರುತ್ತೀನಿ' ಎಂದು ಶಿವ ಮೂವರಿಗೂ ಮೂರು ಹಬ್ಬ ನಿಯಮಿಸುತ್ತಾನೆ. *

**ಗಂಗೊಳ್ಳಿ :** ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕಿನ ಒಂದು ಊರು. ಕುಂದಾಪುರದ ಉತ್ತರಕ್ಕೆ 3ಕಿಮೀ ದೂರದಲ್ಲಿ (ರಸ್ತೆ 19ಕಿಮೀ) ಗಂಗೊಳ್ಳಿ ನದಿ ಅರಬ್ಬೀಸಮುದ್ರವನ್ನು ಸೇರುವಲ್ಲಿ ಇದೆ. ಇದೊಂದು ವ್ಯಾಪಾರ ಕೇಂದ್ರ. ಇಲ್ಲಿರುವ ಬಂದರಿನ ಮೂಲಕ ಒಳ-ಹೊರ ವ್ಯಾಪಾರ ನಡೆಯುತ್ತದೆ. ಜಲಮಾರ್ಗ ಉಪಯುಕ್ತವಾಗಿದೆ. ಸೆಪ್ಟೆಂಬರ್ ತಿಂಗಳಿಂದ ಎಂಟು ತಿಂಗಳುಗಳ ಕಾಲ ಇಲ್ಲಿಯ ಜನ ಮೀನು, ಇಮಾರತಿ ಕಟ್ಟಿಗೆ, ಸುಣ್ಣದ ಶಿಂಪು ಹಾಗೂ ತೆಂಗಿನ ನಾರಿನಿಂದ ತಯಾರಿಸಲ್ಪಟ್ಟ ವಸ್ತುಗಳ ಸಾಗಾಣಿಕೆಯಲ್ಲಿ ತೊಡಗಿರುತ್ತಾರೆ. ಮೀನುಗಾರಿಕೆ ಇಲ್ಲಿಯ ಮುಖ್ಯ ಉದ್ಯೋಗ.

ರಾಜ್ಯ ಸರ್ಕಾರದ ಯೋಜನೆಯಂತೆ ಇಲ್ಲಿ ಮೀನುಗಾರಿಕೆಗೆ ಯಾಂತ್ರಿಕ ದೋಣಿಗಳನ್ನು ಪೂರೈಸಿದ್ದರಿಂದ ಮೀನಿನ ಉತ್ಪಾದನೆ ಹಾಗೂ ರವಾನೆ ಸುಲಲಿತವಾಗಿದೆ. ಗಂಗೊಳ್ಳಿಯಲ್ಲಿ ಮೂರು ಶೀತಲಗೃಹಗಳನ್ನು ನಿರ್ಮಿಸಲಾಗಿದೆ.

ಗಂಗೊಳ್ಳಿಯ ಬೆಟ್ಟಗಳ ಇಳುಕಲುಗಳಲ್ಲಿ ಗೇಣಸು, ಶುಂಠಿ, ಮೆಣಸು, ಬಯಲು ಪ್ರದೇಶಗಳಲ್ಲಿ ಕಬ್ಬು ಬತ್ತವನ್ನು ಜೊತೆಗೆ ಮಾವು, ಹಲಸು, ಸಪೋಟ, ಬಾಳೆ, ಪಪಾಯಿ ಮತ್ತು ಅನಾನಸುಗಳನ್ನು ಬೆಳೆಯುತ್ತಾರೆ.

ಕುಂದಾಪುರ ಗಂಗೊಳ್ಳಿಯ ನಡುವೆ ಮುಕ್ಕಾಲು ಕಿಮೀ ಸೇತುವೆಯಿದ್ದು ಸಂಚಾರ ಸಂಪರ್ಕ ಸುಲಭವೆನಿಸಿದೆ. ಗಂಗೊಳ್ಳಿಯ ಸುತ್ತ ಅರಣ್ಯವಿದೆ. ಕತ್ತದ ಉದ್ಯೋಗ, ಮೃದುಕಟ್ಟಿಗೆಯಿಂದ ಕಡ್ಡಿಪೆಟ್ಟಿಗೆಯ ತಯಾರಿ ಮತ್ತು ಬಿದಿರಿನ ಕೈಕಸಬುಗಳಿಗೆ ಸಾಕಷ್ಟು ಅವಕಾಶವಿದೆ. ಮೀನಿನ ತಳಿ ಅಭಿವೃದ್ಧಿಯ ಕಾರ್ಯವೂ ಉಂಟು.

ಗಂಗೊಳ್ಳಿ ಪಶ್ಚಿಮ ಸಮುದ್ರತೀರದ ನದೀದಡದಲ್ಲಿರುವ ಸುಂದರ ತಾಣ. ಇಲ್ಲಿ ಬೈಂದೂರು-ಗಂಗೊಳ್ಳಿ ನಡುವೆ ಇರುವ ಮರಸಾಮಿ ಮುಂತಾದ ಆಕರ್ಷಕ ಪ್ರದೇಶಗಳಿವೆ. ಗಂಗಾವಳಿ ಉಪನದಿಗಳ ಮಧ್ಯೆ ಇರುವ ಪುಟ್ಟ ನಡುಗಡ್ಡೆಗಳಲ್ಲಿನ ವನಸಂಪತ್ತು ಹರ್ಷ ತರುವಂಥದು. ಈ ಪ್ರದೇಶ ದೋಣಿಯಾಟಕ್ಕೆ ಉತ್ತಮ ಸ್ಥಳ. ಟಿಪ್ಪುಸುಲ್ತಾನನ ಕಾಲದಲ್ಲಿ ಇದೊಂದು ಬಳಕೆಯ ಬಂದರಾಗಿತ್ತು. ಕುಂದಾಪುರದ ಬಂದರು ಮತ್ತು ಸುಂಕದಕಟ್ಟೆ ಇಲ್ಲಿದೆ. ಕುಂದಾಪುರಕ್ಕೆ ಕಡೆಕೋಡಿ ಎಂಬಲ್ಲಿ ದೀಪಸ್ತಂಭ ಇದೆ. ಗಂಗೊಳ್ಳಿಯಲ್ಲಿ ಆಧುನಿಕ ಪೌರ ಸೌಲಭ್ಯಗಳೆಲ್ಲ ಇವೆ. (ಜಿ.ಬಿ.ಎಸ್.)

**ಗಂಜೀಫ :** ವಿವಿಧ ಆಕಾರಗಳ ಚಿತ್ರ ಹಾಗೂ ಸಂಖ್ಯೆಗಳಿಂದ ಕೂಡಿದ ಕಾಗದದ ಎಲೆಗಳಿರುವ ಕಟ್ಟು; ಮತ್ತು ಇವುಗಳಿಂದ ಆಡುವ ಆಟ. ಗಂಜೀಫು, ಗಂಜೀಫಿ, ಗಂಜೀಫಾ ಎಂದೂ ಇದನ್ನು ಕರೆಯುವುದಿದೆ. ಕ್ರೀಡಾಪತ್ರ, ದೇವರಾಟದ ಎಲೆ ಎಂಬ ಹೆಸರುಗಳೂ ಪ್ರಚಾರದಲ್ಲಿದೆ. ಒಂದು ಬಗೆಯ ಇಸ್ಪೀಟ್ ಎಂದೂ ಹೇಳಬಹುದು. ಪಾರಸಿ ಮತ್ತು ಹಿಂದಿಯಲ್ಲಿ ಇದು ಗಂಜೀಫಾ; ಮರಾಠಿಯಲ್ಲಿ ಗಂಜೀಫ್; ಪಾರಸಿ

ಭಾಷೆಯಲ್ಲಿ ಗಂಜ್ ಎಂದರೆ ಹಣ; ಗಂಜೀಫಾ ಎಂದರೆ ಹಣವನ್ನು ಪಣವಾಗಿ ಇಟ್ಟು ಆಡುವ ಆಟ. ಈ ಆಟದ ಎಲೆಗಳ ಮೇಲೆ ಬಿಡಿಸಲಾಗುತ್ತಿದ್ದ ಚಿತ್ರಗಳನ್ನು ಅನುಸರಿಸಿ ವಿಕಾಸಗೊಂಡಿರುವ ಕಲಾ ಪ್ರಕಾರವನ್ನು ಗಂಜೀಫಾ ಕಲೆ ಎಂದು ಕರೆಯಲಾಗಿದೆ. ಪ್ರಾಚೀನ ಭಾರತದಲ್ಲಿ ಹುಟ್ಟಿದ ಈ ಆಟವನ್ನು ಇತರ ದೇಶಗಳವರು ಮಾರ್ಪಡಿಸಿಕೊಂಡು ಬೇರೆಬೇರೆ ಹೆಸರುಗಳಿಂದ ಕರೆದರು. ಗಂಜೀಫದ ಎಲೆಗಳು ಆಯತಾಕಾರ, ವೃತ್ತಾಕಾರ, ಮೊಟ್ಟೆಯಾಕಾರಗಳಲ್ಲಿವೆ.



ಗಂಜೀಫ ಕಲೆಯಲ್ಲಿ ಶುಶ್ರುತ: ಕಣ್ಣು ಪರೀಕ್ಷೆ

ಮೈಸೂರು ಶೈಲಿಯ ಗಂಜೀಫದ್ದೂ ಆಯತಾಕಾರ ಮತ್ತು ವೃತ್ತಾಕಾರ. ಈ ಕ್ರೀಡಾಪತ್ರವನ್ನು ವಿಶೇಷ ಚಮತ್ಕಾರಗಳೊಂದಿಗೆ ಕೆಲವೊಮ್ಮೆ ಇಷ್ಟಬಂದಂತೆ ಊಹಿಸಿ ಆಡಬಹುದಾಗಿದೆ. ಮುಮ್ಮಡಿ ಕೃಷ್ಣರಾಜ ಒಡೆಯರ್ (1794-1868) ಶ್ರೀತತ್ವನಿಧಿ ಗ್ರಂಥವನ್ನು ಕೈಯಲ್ಲಿ ಬರೆದು ಕಲಾವಿದರಿಂದ ಇದಕ್ಕೆ ಚಿತ್ರಗಳನ್ನು ಬರೆಯಿಸಿದರು. ಇದರಲ್ಲಿ ಸರ್ವಸಾಮ್ರಾಜ್ಯಪೇಟಿಕಾ ಎಂಬ 600 ಎಲೆಗಳ ಸುಂದರ ಆಟದ ವರ್ಣನೆಯನ್ನೊಳಗೊಂಡ, ಆಟಕ್ಕೆ ಬೇಕಾದ ಚಕ್ರವರ್ತಿಗಳ ಹೆಸರುಗಳ ಶ್ಲೋಕಗಳಿವೆ. ಈ ಪ್ರತಿ ಮೈಸೂರಿನ ಪ್ರಾಚ್ಯ ವಸ್ತುಸಂಶೋಧನಾಲಯದ ಗ್ರಂಥಾಲಯದಲ್ಲಿದೆ. ಗಂಜೀಫ ಕಟ್ಟಿನಲ್ಲಿಯ ಸುಂದರ ಕಲಾಕೃತಿಗಳು ಹೆಚ್ಚಿನವರಿಗೆ ತಿಳಿದಿರಲಿಲ್ಲ. ದುರ್ಗಾ ಸಪ್ತಶತೀ, ರಾಮಾಯಣ, ಶಿವಪುರಾಣ, ಮಹಾಭಾರತ, ಭಾಗವತ ಮುಂತಾದವುಗಳಿಂದ ಚಿತ್ರಗಳನ್ನು ಆಯ್ಕೆ ಮಾಡಿ ಬೇರೆ ಬೇರೆ ಆಟಗಳನ್ನು ನಿರ್ಮಿಸಿದ್ದಾರೆ. ಗಂಜೀಫ ಎಲೆಗಳಲ್ಲಿನ ಕಲಾಕೃತಿಗಳು ವಿಶೇಷವಾದವು. ಮೈಭಾಗಗಳು ಉಬ್ಬಾಗಿವೆ. ಆಭರಣದ ಜಾಗ ತಗ್ಗಾಗಿದೆ. ಚಿನ್ನದ ತಗ್ಗಾದ ಆಭರಣ ಜಾಗವೂ ಉಬ್ಬಿರುವ ಮೈಭಾಗವೂ ಹೆಚ್ಚು ಆಟವಾಡಿದರೂ ಸವೆತವಾಗದಿರಲಿ ಎಂದು ವಿಶೇಷ ತಂತ್ರದೊಂದಿಗೆ ಸೂಕ್ಷ್ಮ ಚಿಕಣಿ ಚಿತ್ರಗಳಿಂದ ಕೂಡಿವೆ. ಒಂದೊಂದು ಎಲೆಯನ್ನೂ ನಾಜೂಕಾಗಿ ಸುಂದರವಾಗಿ ಬಿಡಿಸಲಾಗಿದೆ. ಭಾರತದ ಗಂಜೀಫಗಳಲ್ಲಿ ಮೈಸೂರು ಗಂಜೀಫ ತುಂಬಾ ಸುಂದರ.

ಬಂಗಾಲದ ವಿಷ್ಣುಪುರದ ಗಂಜೀಫ ಚಿತ್ರಗಳನ್ನು ಬಟ್ಟೆಗೆ ಮಣ್ಣಿನೊಡನೆ ಅಂಟನ್ನು ಮಿಶ್ರಣ ಮಾಡಿ ದಪ್ಪವಾಗಿ ಮಾಡಿ ಚಿತ್ರಿಸುತ್ತಾರೆ. ಭಾರತದಲ್ಲೇ ದೊಡ್ಡಗಾತ್ರದ ಗಂಜೀಫ ವಿಷ್ಣುಪುರದ್ದು. ದಶಾವತಾರದ ಗಂಜೀಫ ಇಲ್ಲಿ ಪ್ರಸಿದ್ಧವಾಗಿದೆ.

ಒರಿಸ್ಸದ ಗಂಜೀಫ ಮೈಸೂರು ಚಿತ್ರಗಳಿಗಿಂತ ತೆಳುವಾಗಿವೆ. ಇಲ್ಲಿಯ ನವಗುಂಜಾರ ಗಂಜೀಫದ 96 ಎಲೆಗಳು ವಿಶೇಷತೆಯಿಂದ ಕೂಡಿವೆ. ಒರಿಸ್ಸದಲ್ಲಿ ಸಂಪ್ರದಾಯಬದ್ಧವಾದ, ಇಂದಿಗೂ ಜೀವಂತ ವಿರುವಂತೆ ಭಾಸವಾಗುವ ಬೇರೆಬೇರೆ ಆಟಗಳ ಕಟ್ಟನ್ನು ತಯಾರಿಸುತ್ತಾರೆ. ಜೊತೆಗೆ ಗಂಜೀಫ ಇಡಲು ಗಂಜೀಫ ಪೆಟ್ಟಿಗೆಯನ್ನೂ ತಯಾರಿಸುತ್ತಾರೆ. ಪೆಟ್ಟಿಗೆಯ ಸುತ್ತ ಆಟದಲ್ಲಿನ ಚಿತ್ರಗಳನ್ನು ರಚಿಸಿರುತ್ತಾರೆ. ಈ ಚಿತ್ರ ಸಂಪುಟಗಳು ಅಲ್ಲಿ ಸುಲಭ ಬೆಲೆಯಲ್ಲಿ ದೊರೆಯುತ್ತವೆ.

ರಾಜಸ್ತಾನದಲ್ಲಿ ಚಿಕ್ಕಚಿಕ್ಕ ಗಂಜೀಫ ಮಾಡುತ್ತಾರೆ. ಇಲ್ಲಿನ ಎಲೆಗಳಲ್ಲಿ ಮೊಗಲ್ ಶೈಲಿ ವಿಶೇಷ. ಪತ್ರಗಳ ಹಿಂಭಾಗದಲ್ಲೂ ಚಿತ್ರ ಬಿಡಿಸಿರುವುದನ್ನು ಮೊಗಲ್ ಗಂಜೀಫದಲ್ಲಿ ಕಾಣಬಹುದಾಗಿದೆ. ಶ್ರೀರಂಗಪಟ್ಟಣದ ಮೊಗಲ್ ಗಂಜೀಫಗಳ ಹಿಂಭಾಗದಲ್ಲಿ ಚಿತ್ರಗಳಿವೆ. ಕುಸುರಿ ಕೆಲಸದಿಂದ ಕೂಡಿದ ಈ ಎಲೆಗಳು ರಾಜಸ್ತಾನದವುಗಳಂತೆ ಚಿಕ್ಕ ಚಿಕ್ಕವಾಗಿ ಒಂದೂವರೆ ಇಂಚು ವೃತ್ತದಲ್ಲಿರುತ್ತವೆ. ರಾಜಸ್ತಾನದ ಗಂಜೀಫ ಸಾಂಪ್ರದಾಯಿಕ ಚಿಕಣಿ ಚಿತ್ರಗಳಷ್ಟು ಸುಂದರವಾಗಿರುವುದಿಲ್ಲ.

ಸಾವಂತವಾಡಿಯ ಮರಾಠ ಗಂಜೀಫಗಳು ತೆಳು ಕಾಗದದಲ್ಲಿ ಮಾಡಿದವು. ಇಲ್ಲಿನ ಗಂಜೀಫ ಚಿತ್ರಗಳು ಹೆಚ್ಚು ಪಾರ್ಶ್ವ ಭಂಗಿಯಲ್ಲಿವೆ. ಪುಣೆಯಲ್ಲಿ ಹಿಂದೆ ದಶಾವತಾರದ 120 ಎಲೆಗಳನ್ನು ಮುದ್ರಿಸಿ ಮಾರುತ್ತಿದ್ದರು. ಪುಟ್ಟವಾದ ಈ ಎಲೆಗಳು ಆಟಕ್ಕೆ ಉಪಯೋಗಿಸಲು ಅನುಕೂಲಕರವಾಗಿರುತ್ತವೆ. ಕರ್ನಾಟಕದಲ್ಲಿಯೂ ಹಿಂದೆ ಇವು ಹೆಚ್ಚಾಗಿ ದೊರೆಯುತ್ತಿದ್ದವು.

ಕಾಶ್ಮೀರ ಗಂಜೀಫ ಅಲ್ಲಿನ ಪ್ರಕೃತಿ ಸೌಂದರ್ಯದಿಂದ ಕೂಡಿರುತ್ತಿತ್ತು. ಚಿತ್ತಾರಗಳಲ್ಲಿ ಬಟ್ಟೆಯನ್ನು ಹೆಚ್ಚಾಗಿ ಚಿತ್ರಿಸುತ್ತಿದ್ದ ತೆಳುವರ್ಣಗಳನ್ನೂ ಧಾರಾಳವಾಗಿ ಬಳಸಲಾಗುತ್ತಿತ್ತು. ದಶಾವತಾರ ಪ್ರಸಿದ್ಧವಾಗಿತ್ತು. ಇಂದು ಅಲ್ಲಿ ಗಂಜೀಫ ನಶಿಸಿ ಹೋಗಿದೆ.

ನೇಪಾಳದ ದಶಾವತಾರ ಗಂಜೀಫ ಹಿಂದೆ ದೊರೆಯುತ್ತಿತ್ತು. ಇಲ್ಲಿನ ಗಂಜೀಫ ಎಲೆಗಳ ಸುತ್ತ ಕೈವಾರದಿಂದ ವೃತ್ತವನ್ನೆಳೆಯದೆ ಹಸ್ತದಿಂದ ಹಾಕಲಾಗುತ್ತಿತ್ತು. ದಶಾವತಾರವನ್ನು ವಿಶೇಷ ರೀತಿಯಿಂದ ಕಥೆಯೊಡನೆ ಚಿತ್ರಿಸಲಾಗಿತ್ತು. ಇವನ್ನು ವಿರಳವಾಗಿ ಇಂದಿಗೂ ಅಲ್ಲಿ ಕಾಣಬಹುದು.



ಆಟದ ಎಲೆಯ ಒಂದು ಮಾದರಿ

ಮೊಗಲ್ ಶೈಲಿಯ ಗಂಜೀಫ ಕುಸುರಿ ಕೆಲಸದೊಡನೆ ಅತ್ಯಂತ ನಾಜೂಕಾಗಿ ನಿರ್ಮಾಣವಾಗುತ್ತಿತ್ತು. ಹಳೆಯ ಸಾಂಪ್ರದಾಯಿಕ ಬಣ್ಣವನ್ನು ಉಪಯೋಗಿಸದೆ ಆಧುನಿಕ ತೈಲ ವರ್ಣವನ್ನು ಇವರು ಬಳಸುತ್ತಾರೆ.

ಕೆಲವು ಕಡೆ ತೈಲವರ್ಣವನ್ನು ನೀರಿನ ಪುಡಿ ಬಣ್ಣಗಳ ಮಿಶ್ರಣದಿಂದ ತುಂಬಾ ಹೊಳಪು ಬರುವಂತೆ ಮಾಡುತ್ತಾರೆ.



ವೈದ್ಯರಿಂದ ರೋಗಿಯ ಪರೀಕ್ಷೆ

ಕ್ರೀಡಾಪತ್ರ ನಮ್ಮ ದೇಶದ ಹಲವಾರು ಕಡೆ ಇತ್ತು. ತಮಿಳುನಾಡು, ಕೇರಳ ಮುಂತಾದೆಡೆ ಇದು ಕ್ರಮೇಣ ನಶಿಸಿಹೋಯಿತು. ಲಂಡನ್ನಿನ ವಿಕ್ಟೋರಿಯಾ ಅಂಡ್ ಆಲ್ಬರ್ಟ್ ವಸ್ತುಸಂಗ್ರಹಾಲಯದಲ್ಲಿ ವಿವಿಧ ಬಗೆಯ ಗಂಜೀಫಗಳನ್ನು ಪ್ರದರ್ಶಿಸಲಾಗಿದೆ. ಭಾರತದ ಗಂಜೀಫ ಕಲೆ ಬಗ್ಗೆ ಒಂದು ಪುಸ್ತಕವನ್ನೂ ಅದು ಪ್ರಕಟಿಸಿದೆ. (ಆರ್.ಬಿ.)

**ಗಂಡಭೇರುಂಡ :** ಎರಡು ತಲೆಗಳುಳ್ಳ ಒಂದು ಪೌರಾಣಿಕ ಪಕ್ಷಿ. ಚೂಪು ಕೊಕ್ಕಿನ ತಲೆಗಳನ್ನು ಎರಡು ದಿಕ್ಕುಗಳಿಗೆ ತಿರುಗಿಸಿಕೊಂಡು ರೆಕ್ಕೆಪುಕ್ಕಗಳನ್ನು ಹರಡಿಕೊಂಡಂತೆ ತೋರಿಸುವ ಈ ಪಕ್ಷಿಯ ಚಿತ್ರ ಹಿಂದಿನಿಂದಲೂ ಪ್ರಭುತ್ವಲಾಂಛನವಾಗಿ ಕರ್ನಾಟಕದ ಹಲವು ರಾಜವಂಶಗಳಲ್ಲಿ ಪ್ರಚಲಿತವಾಗಿತ್ತು. ಇದು ಇಂದಿಗೂ ಕರ್ನಾಟಕದ ಸರ್ಕಾರದ ರಾಜ್ಯಮುದ್ರೆಯಲ್ಲಿ ಉಳಿದುಕೊಂಡಿದೆ.

ಈ ಪಕ್ಷಿಯ ಕಲ್ಪನೆ ಬಹು ಪ್ರಾಚೀನವಾದುದು. ಇದರ ಭೌಗೋಳಿಕ ವ್ಯಾಪ್ತಿಯೂ ವಿಶಾಲ. ತುರ್ಕಿ ಮತ್ತು ಇರಾಕ್ ದೇಶಗಳಲ್ಲಿ ದೊರಕಿರುವ, ಕ್ರಿ.ಪೂ.1000ಕ್ಕಿಂತಲೂ ಮುಂಚಿನ, ಕೆಲವು ಹಿಟ್ಟೈಟ್ ಕಲಾಕೇಂದ್ರಗಳಲ್ಲಿ ಗಂಡಭೇರುಂಡ ಶಿಲ್ಪಿತವಾಗಿದೆ. ಆದರೆ ಇದಕ್ಕೂ ಹಿಂದೆ ಈಜಿಪ್ಟ್, ಸುಮೇರಿಯ ಮತ್ತು ಆರ್ಯ ಸಂಸ್ಕೃತಿಗಳಲ್ಲಿ ಪ್ರಚಲಿತವಾಗಿದ್ದ, ರೆಕ್ಕೆಯಿಂದ ಕೂಡಿದ ಸೂರ್ಯಚಕ್ರವೂ ಜೀವವೃಕ್ಷವೂ ಈ ಕಲ್ಪನೆಗೆ ಮೂಲವೆಂದೂ ಇವು ಸಂಯೋಜನೆಗೊಂಡು ಗಂಡಭೇರುಂಡ ರೂಪುಗೊಂಡಿತೆಂದೂ ಅಭಿಪ್ರಾಯವಿದೆ. ಈಜಿಪ್ಟ್, ಅಸ್ಸೀರಿಯ ಮೊದಲಾದ ದೇಶಗಳಲ್ಲಿ ಇದು ಫಲವಂತಿಕೆಯ ಆರಾಧನೆಗೆ (ಫರ್ಟಿಲಿಟಿ ಕಲ್ಟ್) ಸಂಬಂಧಪಟ್ಟ ಚಿಹ್ನೆಯಾಗಿತ್ತು ಎಂದು ಊಹಿಸಲಾಗಿದೆ. ಸಿಥಿಯನರಿಂದ ಇದು ರಷ್ಯ, ಜರ್ಮನಿ ಮೊದಲಾದ ದೇಶಗಳಿಗೆ ಹರಡಿತೆಂದು ಕೆಲವರ ನಂಬಿಕೆ. ಭಾರತ ಉಪಖಂಡಕ್ಕೆ ಸಂಬಂಧಿಸಿದಂತೆ ತಕ್ಷಶಿಲೆಯಲ್ಲಿ ದೊರಕಿರುವ ಕ್ರಿಸ್ತಶಕಾರಂಭ ಕಾಲದ ಒಂದು ಶಿಲ್ಪ ಅತ್ಯಂತ ಪ್ರಾಚೀನವಾದುದು.

ವಿಷ್ಣುವಿನ ವಾಹನನಾದ ಗರುಡ, ಋಗ್ವೇದದಲ್ಲಿ ಬರುವ ಎರಡು ಹಕ್ಕಿಗಳು -ಇವುಗಳಿಂದ ಎರಡು ತಲೆಗಳುಳ್ಳ ಗಂಡಭೇರುಂಡ ಪಕ್ಷಿ ವಿಕಾಸಗೊಂಡಿರಬಹುದೆಂದೂ ಊಹಿಸಲಾಗಿದೆ. ವಿಷ್ಣು ನರಸಿಂಹಾವತಾರವನ್ನು ಎತ್ತಿ ಹಿರಣ್ಯಕಶಿಪುವನ್ನು ಸಂಹಾರ ಮಾಡಿದಮೇಲೂ ಅವನ ಕೋಪ ಶಮನವಾಗದೆ ಇದ್ದು, ಅವನಿಂದ ಇಡೀ ವಿಶ್ವವೇ ನಾಶವಾದೀತೆಂಬ ಅಂಜಿಕೆ ಮೂಡಿದಾಗ ದೇವತೆಗಳ ಪ್ರಾರ್ಥನೆಯಂತೆ ಶಿವ ಶರಭಾವತಾರ ಎತ್ತಿ ನರಸಿಂಹನನ್ನು ಎದುರಿಸಿದ. ಆಗ ವಿಷ್ಣು ಶರಭನನ್ನು ಅಡಗಿಸಲು ಗಂಡಭೇರುಂಡನಾದನೆಂದು ಪುರಾಣಗಳ ಹೇಳಿಕೆ. ಇದು ಶರಭಕ್ಕಿಂತ ಹೆಚ್ಚು ಶಕ್ತಿಯುತವಾದ್ದೆಂದೂ ಶರಭವೇ ಇದಕ್ಕೆ ಆಹಾರವೆಂದೂ ಹೇಳಲಾಗಿದೆ. ಗಂಡಭೇರುಂಡ ಶಕ್ತಿಯ ಪರಾಕಾಷ್ಠೆಯ ಚಿಹ್ನೆಯೆನಿಸಿದೆ. ಬಹುಶಃ ಇದೇ ಕಾರಣದಿಂದ ತಮ್ಮ ಪ್ರಭುತ್ವದ ಪರಮಶಕ್ತಿಯ ಸಂಕೇತವಾಗಿರುವಂತೆ ರಾಜರು ಗಂಡಭೇರುಂಡವನ್ನು ರಾಜಚಿಹ್ನೆಯಾಗಿ ಬಳಸಿಕೊಂಡಿರಬಹುದು.

ಶಿವಮೊಗ್ಗ ಜಿಲ್ಲೆ ಬಳ್ಳಿಗಾವೆಯಲ್ಲಿ ಇದ್ದ ಪ್ರತಿಮೆ ಕರ್ನಾಟಕದ ಗಂಡಭೇರುಂಡ ಶಿಲ್ಪಗಳಲ್ಲಿ ಅತ್ಯಂತ ಪ್ರಾಚೀನವಾದುದು. ಎತ್ತರವಾದ ಸ್ತಂಭವೊಂದರ ಮೇಲೆ ನಿಂತಿದ್ದ ಈ ಶಿಲ್ಪ ಸುಮಾರು ಮಾನವ ಪ್ರಮಾಣವಾದ್ದು. ದೇಹ ಮನುಷ್ಯಾಕಾರದ್ದಾಗಿದ್ದು ಕಂಠದಿಂದ ಮೇಲೆ ಗಿಡುಗ ಪಕ್ಷಿಯದರ ರೀತಿಯ ಎರಡು ತಲೆಗಳಿವೆ. ಇದು ರಾಕ್ಷಸರನ್ನು ನುಂಗುತ್ತಿರುವಂತೆ ಚಿತ್ರಿಸಲಾಗಿದೆ. ಈ ಸ್ತಂಭದ ಅಡಿಯಲ್ಲಿರುವ ಶಾಸನದಲ್ಲಿ ಇದನ್ನು ಭೇರುಂಡೇಶ್ವರ ದೇವರೆಂದು ಹೆಸರಿಸಿದೆ. ಕಲ್ಯಾಣದ ಚಾಳುಕ್ಯರ ಮಹಾಮಂಡಲೇಶ್ವರನಾಗಿದ್ದ ಚಾಮುಂಡರಾಯರಸ ಶಕ 969ರಲ್ಲಿ (1047) ಇದನ್ನು ಸ್ಥಾಪಿಸಿದನೆಂದು ಅದೇ ಶಾಸನದಿಂದ ತಿಳಿಯುತ್ತದೆ.



ಬಳ್ಳಿಗಾವೆಯ ಭೇರುಂಡೇಶ್ವರ

ಹೊಯ್ಸಳ ಶಿಲ್ಪದಲ್ಲಿಯ 'ನಾಶದ ಸರಪಣಿ'ಯ ಶಿಲ್ಪಗಳಲ್ಲಿ ಗಂಡಭೇರುಂಡಕ್ಕೆ ಉಚ್ಚ ಸ್ಥಾನವನ್ನು ನೀಡಲಾಗಿದೆ. ಬೇಲೂರಿನ ಕೇಶವ

ದೇವಾಲಯ (1117) ಮತ್ತು ಕೋರವಂಗಲದ ಬೂಚೇಶ್ವರ ದೇವಾಲಯಗಳಲ್ಲಿ (1173) ಇದನ್ನು ನೋಡಬಹುದು. ಜಿಂಕೆಯನ್ನು ನುಂಗುತ್ತಿರುವ ಹೆಬ್ಬಾವನ್ನು ಆನೆಯೊಂದು ತನ್ನ ಸೊಂಡಿಲಿನಲ್ಲಿ ಸಿಕ್ಕಿಸಿಕೊಂಡಿದೆ. ಆನೆಯನ್ನು ಸಿಂಹವೂ ಸಿಂಹವನ್ನು ಶರಭವೂ ಶರಭವನ್ನು ಗಂಡಭೇರುಂಡವೂ ಕೊಲ್ಲುತ್ತಿವೆ.



ಗಂಡಭೇರುಂಡ ಈಚಿನ ಒಂದು ಕಲಾಕೃತಿ

ಕರ್ನಾಟಕದಲ್ಲಿ ಗಂಡಭೇರುಂಡವನ್ನು ಲಾಂಛನವಾಗಿ ಬಳಸಲು ಆರಂಭವಾದದ್ದು ಬಹುಶಃ 13ನೆಯ ಶತಮಾನದ ಅಂತ್ಯದಲ್ಲಿ. ಹೊಯ್ಸಳ 3ನೆಯ ನರಸಿಂಹ (1253-92) ಮತ್ತು 3ನೆಯ ಬಲ್ಲಾಳ (1292-1342) ಇವರ ಕಾಲದ ಕೆಲವು ಶಿಲಾಶಾಸನಗಳ ಮೇಲೆ ಗಂಡಭೇರುಂಡವನ್ನು ಬಿಡಿಸಲಾಗಿದೆ. ವಿಜಯನಗರದ ಸಮ್ರಾಟನಾಗಿದ್ದ ಅಚ್ಯುತರಾಯನ (1530-42) ಚಿನ್ನದ ಮತ್ತು ತಾಮ್ರದ ನಾಣ್ಯಗಳ ಮೇಲೆ ಗಂಡಭೇರುಂಡದ ಮುದ್ರೆಯಿದೆ. ನಾಣ್ಯಗಳ ಮುಮ್ಮುಖದಲ್ಲಿ ಗಂಡಭೇರುಂಡ ತನ್ನ ಬೆನ್ನು ಕಾಣುವಂತೆ ಮೇಲಕ್ಕೆ ಹಾರುತ್ತಿರುವುದನ್ನು ತೋರಿಸಿದೆ. ಸೊಂಡಿಲು ಬಾಲಗಳನ್ನೆತ್ತಿಕೊಂಡಿರುವ ಭಯಗ್ರಸ್ತವಾದ ಆನೆಗಳನ್ನು ಆ ಪಕ್ಷಿ ತನ್ನೆರಡು ಕೊಕ್ಕುಗಳಲ್ಲೂ ಕಾಲುಗಳಲ್ಲೂ ಸಿಕ್ಕಿಸಿಕೊಂಡಿದೆ.

ವಿಜಯನಗರ ಚಕ್ರಾಧಿಪತ್ಯದ ಪತನವಾದ ಅನಂತರ ಅನೇಕ ಪಾಳೆಯಗಾರರು ಸ್ವತಂತ್ರರಾಗಿ ಆಳಿದರಷ್ಟೆ. ಮಧುರೆಯ ನಾಯಕರೂ ಕೆಳದಿಯ ನಾಯಕರೂ ಗಂಡಭೇರುಂಡವನ್ನು ಮುಂದುವರಿಸಿಕೊಂಡು ಬಂದರು. 16ನೆಯ ಶತಮಾನಕ್ಕೆ ಸೇರಿದ ಕೆಳದಿಯ ವೀರಭದ್ರ ದೇವಾಲಯದ ಭುವನೇಶ್ವರಿಯಲ್ಲಿರುವ ಗಂಡಭೇರುಂಡಶಿಲ್ಪ ವಿಜಯನಗರದ ಗಂಡಭೇರುಂಡದಂತೆಯೇ ತನ್ನ ಕಾಲುಗಳಲ್ಲಿ ಆನೆಗಳನ್ನು ಸಿಕ್ಕಿಸಿಕೊಂಡಿದೆ. ಬಲಗಡೆಯ ಕಾಲಿಗೆ ಸಿಕ್ಕಿಸಿಕೊಂಡಿರುವ ಆನೆಯ ಸೊಂಡಿಲಿನಿಂದ ಮನುಷ್ಯನೊಬ್ಬ ತೂಗಾಡುತ್ತಿದ್ದಾನೆ. ಗಂಡಭೇರುಂಡ ತನ್ನ ಎರಡು ಕೊಕ್ಕುಗಳಲ್ಲಿಯೂ ಹರಿತವಾದ ಉಗುರುಗಳಿಂದ ತಮ್ಮ ಕಾಲುಗಳಿಂದ ಆನೆಗಳನ್ನು ಎತ್ತಿಕೊಂಡಿರುವ ಸಿಂಹಗಳನ್ನು ಕಚ್ಚಿಕೊಂಡಿದೆ. ಈ ಗಂಡಭೇರುಂಡ ಶಿಲ್ಪ ಒಂದು ಶ್ರೇಷ್ಠ ಕಲಾಕೃತಿ.

ಮೈಸೂರು ರಾಜರು ವಿಜಯನಗರದ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಾಗ ತಮ್ಮ ಧ್ವಜದ ಮೇಲೆ ಗಂಡಭೇರುಂಡವನ್ನು ಪ್ರತಿಷ್ಠಾಪಿಸಿಕೊಂಡರು. ಮೈಸೂರು ಅರಸರ ಲಾಂಛನದಲ್ಲಿ ಮಧ್ಯದಲ್ಲಿ ಗಂಡಭೇರುಂಡವೂ ಮೂರು ಪಂಜಾಗಳನ್ನೂರಿ ಮುಂದಿನ ಬಲಪಂಜವನ್ನೆತ್ತಿ ಬಲಕ್ಕೆ ನೋಡುತ್ತ ನಡೆಯುವಂತಿರುವ ಸಿಂಹವೂ ಯಾಳಿಗಳೂ ಇದ್ದುವು. ಮೈಸೂರು ರಾಜ್ಯ ನಿರ್ಮಾಣದೊಡನೆ ಆ ಲಾಂಛನವೂ ಉಳಿದುಬಂದು, ಇಂದಿನ ಕರ್ನಾಟಕ ಸರ್ಕಾರದ ಲಾಂಛನದಲ್ಲಿ, ಭಾರತದ ಲಾಂಛನದ ಕೆಳಗಡೆ ಎರಡು ಸಿಂಹಗಳ ಮಧ್ಯದಲ್ಲಿರುವ ಫಲಕದಲ್ಲಿ ವಿರಾಜಿತವಾಗಿದೆ. *

**ಗ'ಜಾಂಕುಶ' :** ಕನ್ನಡ ಸಾಹಿತ್ಯದಲ್ಲಿ ಗಜಾಂಕುಶನೆಂದೂ ಗಜಗನೆಂದೂ ಪ್ರಸಿದ್ಧಿ ಪಡೆದ ವ್ಯಕ್ತಿಯ ನಿಜನಾಮ ನಾರಾಯಣ. ಇಂಡಿ ತಾಲ್ಲೂಕಿನ ಸಾಲೊಟಗಿಯ ಶಿಲಾಲೇಖನದಲ್ಲಿ ಈತನನ್ನು ನಾರಾಯಣ ಗಜಾಂಕುಶನೆಂದು ಕರೆಯಲಾಗಿದೆ. ಈತ ಮಾನ್ಯಖೇಟದ 2ನೆಯ ಕೃಷ್ಣನಿಗೆ (878-914) ಮಂತ್ರಿಯೂ ಸಂಧಿವಿಗ್ರಹಿಯೂ ಆಗಿದ್ದು ಆತನಿಗೆ ಬಲಗೈಯಂತಿದ್ದ. ಈತನ ಊರು ಮಾಹಿಷವಿಷಯದ ಕಾಂಚನ ಮುದುವೊಟಿಲ್. ದಾಮಪಾರ್ಯ ಈತನ ತಂದೆ. ಕೌಂಡಿಣ್ಯ ಗೋತ್ರದ ವಾಜಸನೇಯ ಕಾಣ್ವ ಶಾಖಾಧ್ಯಾಯಿಯಾದ ಈ ನಾರಾಯಣ ಗಜಾಂಕುಶ ರಾಜವಿದ್ಯೆಯಲ್ಲಿ ಪಾರಂಗತನೂ ಕವಿಗಳಲ್ಲಿ ಮುಖ್ಯನೂ ಪ್ರಿಯಂವದನೂ ಧರ್ಮರತನೂ ಆಗಿದ್ದ. ಸಾಲೊಟಗಿಯಲ್ಲಿ ಈತ ವಿಶಾಲವಾದ ಶಾಲೆಯೊಂದನ್ನು ಸ್ಥಾಪಿಸಿದ. ಅದು ಘಟಿಕಾ ಸ್ಥಾನವಾಗಿದ್ದಿತು. ಈ ಶಾಲೆಗೆ ಪಾವಿಟ್ಟಿಗೆ (ಸಾಲೊಟಗಿ) ಗ್ರಾಮದ ಪ್ರಭುವಾದ ಚಕ್ರಾಯುಧಬುಧ ದತ್ತಿಬಿಟ್ಟ ವಿಷಯ ಶಾಸನದಲ್ಲಿ ನಿರೂಪಿತವಾಗಿದೆ.

ಗಜಾಂಕುಶನನ್ನು ದುರ್ಗಸಿಂಹ (ಸು.1031), ಶ್ರೀಧರಾಚಾರ್ಯ, ನಯಸೇನ, ರುದ್ರಭಟ್ಟ, ಆಚಣ್ಣ, ಆಂಡಯ್ಯ, ಕುಮುದೇಂದು, ನಾಗರಾಜ, ಮಧುರ, ಪಾರ್ಶ್ವಪಂಡಿತ, ವಾಣೀವಲ್ಲಭ ಮೊದಲಾದ ಕವಿಗಳು ಸ್ತುತಿಸಿದ್ದಾರೆ. ಇವನ ಕೃತಿಗಳಲ್ಲಿ ಉದಾತ್ತಯಶ, ಅರ್ಥಗೌರವ, ಸದರ್ಥದೃಷ್ಟಿ, ಶೌರ್ಯ, ಒಳ್ಪು, ಪ್ರಿಯಚಿತ್ತವೃತ್ತಿ, ಬಿನ್ನಣ ಮೊದಲಾದ ಗುಣಗಳಿವೆಯೆಂದು ಪ್ರಶಂಸಿಸಿದ್ದಾರೆ. ಈತನ ಕೃತಿಗಳನ್ನು ಪ್ರಮಾಣ ಗ್ರಂಥಗಳೆಂದು 2ನೆಯ ನಾಗವರ್ಮ, ಕೇಶಿರಾಜ, ಮಲ್ಲಿಕಾರ್ಜುನ ಮೊದಲಾದವರು ಮನ್ನಿಸಿದ್ದಾರೆ. ಇಷ್ಟಾದರೂ ಇದುವರೆವಿಗೂ ಈತನ ಯಾವುದೇ ಕೃತಿ ಉಪಲಬ್ಧವಿಲ್ಲ. ಕಾವ್ಯಾವಲೋಕನದಲ್ಲಿ ಈತನ ಕೃತಿಯೊಂದರ ಒಂದು ಪದ್ಯ ಉದ್ಧೃತವಾಗಿದೆ. ದುರ್ಗಸಿಂಹ ಗಜಾಂಕುಶನನ್ನು

'ತ್ರಿಜಗನ್ನುತವಾಗ್ವಿಭವದಿನಜಂಗೆ ನೂರ್ಮಡಿಯೆನಿಪ್ಪ ಪೆಂಪಂ ತಳೆದಂ
ವಿಜಿತಾರಿ ದಂಡನಾಯಕ ಗಜಾಂಕುಶಂ ಕುಶಲವಾಂಛಿತಪ್ರಿಯಶೌರ್ಯಂ'

ಎಂದು ಸ್ಮರಿಸಿರುವುದರಿಂದ ಈತ ದಂಡನಾಯಕನೂ ದೊಡ್ಡ ಕವಿಯೂ ಆಗಿದ್ದನೆಂಬುದರಲ್ಲಿ ಸಂಶಯವಿಲ್ಲ. ಕವಿಕಾಮ (ಸು.1200) ತನ್ನ 'ಶೃಂಗಾರರತ್ನಾಕರ'ದಲ್ಲಿ ತನಗಿಂತ ಹಿಂದೆ ಇದ್ದ 'ಶೃಂಗಾರ' ಕರ್ತೃಗಳ ಹೆಸರುಗಳನ್ನು ಹೇಳಿರುವ ಪದ್ಯದಲ್ಲಿ ನಾರಾಯಣ ಎಂಬ ಹೆಸರಿನ ಉಲ್ಲೇಖವಿದೆ. ಈ ನಾರಾಯಣನೇ ಗಜಾಂಕುಶನಾಗಿದ್ದು ಈತ ಸ್ಮರಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥವೊಂದನ್ನು ರಚಿಸಿರಬೇಕು.

ಗಜಾಂಕುಶ ತೆಲುಗು ಭಾಷೆಯಲ್ಲೂ ಗ್ರಂಥ ರಚಿಸಿರಬಹುದಾಗಿ ವಿದ್ವಾಂಸರು ಊಹಿಸುತ್ತಾರೆ. ಏಕೆಂದರೆ ಪ್ರಾಚೀನ ತೆಲುಗು ಕವಿಗಳ ಬಗ್ಗೆ ಬರೆಯುತ್ತ ತೆಲುಗು ಕವಿ ಮಡಿಕಿ ಸಿಂಗ (ಸು.1400) 'ಸಕಲನೀತಿಸಮ್ಮತಮು' ಎಂಬ ತನ್ನ ಗ್ರಂಥದಲ್ಲಿ ಗಜಾಂಕುಶ ಎಂಬ ಒಬ್ಬ ಕವಿ ಇದ್ದಂತೆ ತಿಳಿಸಿದ್ದಾನೆ. ತೆಲುಗು ಛಂದೋಗ್ರಂಥ ಕವಿಗಜಾಂಕುಶಮು ಎಂಬುದು ಈತನ ಸಂಸ್ಕೃತ ಕೃತಿಯ ಅನುವಾದವಾಗಿರಬಹುದು ಎಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಗಜಾಂಕುಶನೆಂಬೊಬ್ಬ ಬೇರೆ ಜೈನಕವಿ ಇದ್ದನೆನ್ನುವವರೂ ಇದ್ದಾರೆ. ಇದು ಸರಿಯಲ್ಲ, ಎಲ್ಲರಿಂದಲೂ ಮಾನಿತನಾದ ವ್ಯಕ್ತಿ ಬ್ರಾಹ್ಮಣಕವಿ ಗಜಾಂಕುಶನೊಬ್ಬನೇ ಎನ್ನುವ ಅಭಿಪ್ರಾಯದವರೂ ಇದ್ದಾರೆ. ಹಾಗೆಯೇ ಕನ್ನಡ ಕವಿಗಳು ಸ್ತುತಿಸಿರುವ ಗಜಾಂಕುಶನೂ ಶಾಸನೋಕ್ತ ನಾರಾಯಣ ಗಜಾಂಕುಶನೂ ಭಿನ್ನರೆಂಬ ಅಭಿಪ್ರಾಯವೂ ಇದೆ. (ಎಸ್.ಜೆ.ಎ.)

**ಗಜೇಂದ್ರಗಡ :** ಗದಗ ಜಿಲ್ಲೆ ರೋಣ ತಾಲ್ಲೂಕಿನಲ್ಲಿರುವ ಒಂದು ಐತಿಹಾಸಿಕ ಸ್ಥಳ ಮತ್ತು ಪಟ್ಟಣ. ಹುಬ್ಬಳ್ಳಿ ಸೊಲ್ಲಾಪುರ ರೈಲುಮಾರ್ಗದ ಮೇಲೆ ಇರುವ ಮಲ್ಲಾಪುರ ರೈಲ್ವೆ ನಿಲ್ದಾಣದ ಪೂರ್ವಕ್ಕೆ ಸು.35ಕಿಮೀ ದೂರದಲ್ಲಿದೆ. ಜನಸಂಖ್ಯೆ 28,227. ಪಟ್ಟಣ ಪುರಸಭೆ ಆಡಳಿತವಿದ್ದು ಪೌರಸೌಲಭ್ಯಗಳಿವೆ.

ಊರ ಬದಿಯಲ್ಲಿರುವ ಬೆಟ್ಟವೊಂದರ ಮೇಲಿರುವ ಗಜೇಂದ್ರಗಡ ಕೋಟೆಯನ್ನು ಶಿವಾಜಿ ಕಟ್ಟಿಸಿದ. ಕೋಟೆಯ ಒಳಭಾಗದಲ್ಲಿ ಒಂದು ಮದ್ದಿನ ಮನೆಯೂ ಎರಡು ಕೊಳಗಳೂ ಇವೆ. ಈ ಊರಿನಲ್ಲಿರುವ ವಿರೂಪಾಕ್ಷ ದೇವಾಲಯ ಜೀರ್ಣಸ್ಥಿತಿಯಲ್ಲಿದೆ. ಅದರ ಸಭಾಮಂಟಪ ಅಪೂರ್ಣವಾಗಿದೆ. ದೇವಾಲಯದ ದ್ವಾರದ ಮೇಲೆ ಸರಸ್ವತಿ ವಿಗ್ರಹವಿದೆ. ಊರಿನ ಹೊರಗೆ ದುರ್ಗಾದೇವಿಯ ದೇವಾಲಯವಿದೆ. ಇದು ಗೋಳಾಕಾರದ ಮುಚ್ಚಿಗೆಯಿಂದಲೂ ದುಂಡನೆಯ ಕಂಬಗಳಿಂದಲೂ ಕೂಡಿದೆ. ಊರಿನ ಸ್ಮಶಾನದ ಹತ್ತಿರ ಇರುವ ಹೊಲದಲ್ಲಿ ಒಂದು ರಾಮಲಿಂಗ ದೇವಾಲಯವಿದೆ. ಅದರಲ್ಲಿ ಮಂಟಪವೂ ದುಂಡನೆಯ ಕಂಬಗಳೂ ಉಂಟು. ನೇಕಾರರ ಕೇರಿಯಲ್ಲಿ ರಾಮ ದೇವಾಲಯವಿದೆ. ಈ ದೇವಸ್ಥಾನ ಅಪೂರ್ಣವಾಗಿದ್ದರೂ ಒಳ್ಳೆಯ ಸ್ಥಿತಿಯಲ್ಲಿದೆ. ಇಲ್ಲಿರುವ ಪಾಂಡುರಂಗ ದೇವಾಲಯ ಪಾಳು ಬಿದ್ದಿದೆ. ಗಜೇಂದ್ರಗಡದ ಸಮೀಪದಲ್ಲಿರುವ ದೊಡ್ಡ ಗವಿ ಒಂದು ಯಾತ್ರಾ ಸ್ಥಳವೆಂದು ಪರಿಗಣಿಸಲಾಗಿದೆ. ಇದರ ಸಮೀಪದಲ್ಲೇ ಸದಾ ಪ್ರವಹಿಸುವ ಎರಡು ತೀರ್ಥಗಳೂ ಸುಮಾರು 15' ಎತ್ತರದ ಎರಡು ದೀಪಸ್ತಂಭಗಳೂ ಇವೆ. ಬಳಿಯಲ್ಲಿರುವ ವೀರಭದ್ರ ಗುಡಿಯ ಬಾಗಿಲುವಾಡದ ಮೇಲೆ ಗಾರೆಯಲ್ಲಿ ರಚಿಸಿದ ವರ್ಣಮಯ ಮೂರ್ತಿಗಳುಂಟು. ಗುಡಿಯ ಮುಂಭಾಗದಲ್ಲಿ ಅಂತರಗಂಗೆ ಎಂಬ ಸಣ್ಣ ಕೊಳವಿದೆ. ವೀರಭದ್ರನ ಗುಡಿಯಲ್ಲಿರುವ ಗವಿಯ ಉತ್ತರಕ್ಕೆ ಮತ್ತೆರಡು ಗವಿಗಳಿವೆ. ಇವೆರಡರ ಮಧ್ಯದಲ್ಲಿ ಗೋಡೆಯಿದೆ. ಈ ಗವಿಗಳಲ್ಲಿ ಎಣ್ಣೆಗೊಂಡ ಮತ್ತು ಅರಸರಗೊಂಡ ಎಂಬ ಎರಡು ತೀರ್ಥಗಳುಂಟು. ಕಲ್ಲೇಶ್ವರ ದೇವಸ್ಥಾನದಲ್ಲೂ ಪಾತಾಳಗಂಗೆಯೆಂಬ ಹೊಂಡ ಇದೆ. ಇಲ್ಲಿನ ಕಾಲಕಾಲೇಶ್ವರ ದೇವಸ್ಥಾನದಲ್ಲಿ ಚಾಳುಕ್ಯ ನಾಲ್ಕನೆಯ ಸೋಮೇಶ್ವರ, ಯಾದವ ಸಿಂಘಣ ಮತ್ತು ವಿಜಯನಗರದ ಇಮ್ಮಡಿ ಹರಿಹರರ ಆಳಿಕೆಗಳ ಕಾಲದ ನಾಲ್ಕು ಶಾಸನಗಳುಂಟು. (ಎಚ್.ಆರ್.ಆರ್.ಬಿ.)



**ಗಜೇಶ ಮಸಣಯ್ಯ :** 12ನೆಯ ಶತಮಾನದಲ್ಲಿದ್ದ ಶಿವಶರಣ ಹಾಗೂ ವಚನಕಾರ. ಅಕ್ಕಲಕೋಟೆಯ ಸಮೀಪದಲ್ಲಿರುವ ಕರಜಿಗೆ ಈತನ ಜನ್ಮಸ್ಥಳ. ಈತ ಮನವಳ್ಳಿಯಲ್ಲಿ ಸಮಾಧಿಸ್ಥನಾದನೆಂದು ಪ್ರತೀತಿ. ಇವನ ಕುರುಹಾಗಿ ಗಜೇಶ್ವರ, ಮಸಣಯ್ಯ ಎಂಬ ಹೆಸರಿನ ಎರಡು ದೇವಾಲಯಗಳುಂಟು. ಇವುಗಳಲ್ಲಿ ಒಂದು ಕರಜಿಗೆಯಲ್ಲೂ ಇನ್ನೊಂದು ಅಳಂದ ತಾಲ್ಲೂಕಿನ ಮನವಳ್ಳಿಯಲ್ಲೂ ಇವೆ. ಈತ ಒಮ್ಮೆ ಗುರುದರ್ಶನಕ್ಕೆಂದು ಹೊರಟು, ದಾರಿಯಲ್ಲಿ ಸಿಕ್ಕಿದ ಹೊಳೆಯಲ್ಲಿ ಶಿವಪೂಜಾಮಗ್ನನಾಗಿರಲು, ಭಯಂಕರವಾದ ಮಳೆ ಬಂದು, ಹೊಳೆ ಉಕ್ಕಿ, ಗಜೇಶ ಮಸಣಯ್ಯನಿದ್ದೆಡೆಯಲ್ಲಿ ಇಬ್ಭಾಗವಾಗಿ ಹರಿಯಿತೆಂಬ ಐತಿಹ್ಯವಿದೆ.

ಈತ ಮಹಾಲಿಂಗ ಗಜೇಶ್ವರ ಎಂಬ ಅಂಕಿತವನ್ನಿಟ್ಟುಕೊಂಡು ವಚನಗಳನ್ನು ಬರೆದಿದ್ದಾನೆ. ಇದುವರೆಗೆ 62 ವಚನಗಳು ದೊರೆತಿವೆ. ಇವು ಸತಿಪತಿಭಾವದಿಂದ ಕೂಡಿದವುಗಳಾಗಿವೆ. ಇಲ್ಲಿನ ನುಡಿಗಳಲ್ಲಿ ತೀಕ್ಷ್ಣತೆಯಿದೆ; ಧ್ವನಿಯಲ್ಲಿ ಮಾರ್ದವತೆಯಿದೆ; ಭಾಷೆಯಲ್ಲಿ ಮೋಹಕತೆಯಿದೆ; ಭಕ್ತಿಯ ಪರಾಕಾಷ್ಠತೆಯಿದೆ. ಈತನ ವಚನಗಳನ್ನು ಹಿಂದಣ ಎಲ್ಲ ವಚನ ಸಂಗ್ರಹಕಾರರೂ ಉದಾಹರಿಸುತ್ತ ಬಂದಿರುವುದು ಇವುಗಳ ಹಿರಿಮೆಗೆ ಸಾಕ್ಷಿಯಾಗಿದೆ. (ಬಿ.ಎಸ್.ಎಸ್.)

**ಗಣದಾಸಿ ವೀರಣ್ಣ :** ಸು.1160. ಶಿವಶರಣ ಹಾಗೂ ವಚನಕಾರ. ಅಲ್ಲಮಪ್ರಭು, ಬಸವೇಶ್ವರ, ಅಕ್ಕಮಹಾದೇವಿ ಮೊದಲಾದ ಮಹಾಶರಣಶರಣೆಯರ ಸಮಕಾಲೀನ. ಪಾಲ್ಕುರಿಕೆ ಸೋಮನಾಥನ (ಸು.1299) 'ಸಹಸ್ರಗಣನಾಮ'ದಲ್ಲಿ ಈತನ ಹೆಸರು ಉಲ್ಲೇಖಿತವಾಗಿರುವುದರಿಂದ ಅಮರಗಣದಲ್ಲಿ ಪೂಜ್ಯಸ್ಥಾನವನ್ನು ಪಡೆದುಕೊಂಡಿದ್ದನೆಂದು ತಿಳಿಯುತ್ತದೆ. ಈತ ಹಲವಾರು ವಚನಗಳನ್ನು ಬರೆದಿದ್ದಾನೆ. ನಮ್ಮ ಶಾಂತ ಕೂಡಲಸಂಗಮದೇವ ಎಂಬುದು ಈತನ ವಚನಗಳ ಅಂಕಿತ. ಇವನ ವಚನಗಳಲ್ಲಿ ಆಳವಾದ ಚಿಂತನೆ ಹಾಗೂ ಅನುಭವ ಘನೀಭೂತವಾಗಿದೆ. 'ಗಾಳಿಯಿಲ್ಲದ ದೀಪದಂತೆ' ಈತನ ವಚನಗಳು ಅರ್ಥಶ್ರೀಮಂತಿಕೆಯಿಂದ ಸದಾ ಪ್ರಜ್ವಲಿಸುತ್ತವೆ. ಭಾವದೃಢತೆ ವಚನಗಳಲ್ಲಿ ವ್ಯಕ್ತವಾಗಿ ಈತನ ವ್ಯಕ್ತಿತ್ವಕ್ಕೆ ಸ್ಪಷ್ಟವಾದ ನಿಲುವನ್ನು ಕೊಡುತ್ತದೆ. (ಸಿ.ಕೆ.ಎನ್.)

**ಗಣಿಗಾರಿಕೆ :** ಕರ್ನಾಟಕದಲ್ಲಿ ಗಣಿ ಉದ್ಯಮ ಬಹು ಪ್ರಾಚೀನವಾದುದು. ಕ್ರಿ.ಪೂ.3-2ನೆಯ ಸಹಸ್ರಮಾನಗಳ ಅವಧಿಯಲ್ಲಿ ಕರ್ನಾಟಕದಲ್ಲಿ ಪ್ರಚಲಿತವಾಗಿದ್ದ ನವಶಿಲಾಯುಗದ ಸಂಸ್ಕೃತಿಯ ಹಲವು ನೆಲೆಗಳಲ್ಲಿ ಚಿನ್ನದ ವಸ್ತುಗಳು ದೊರಕಿವೆ. ಹಟ್ಟಿ, ಕೋಲಾರ ಮೊದಲಾದ ಚಿನ್ನದ ಗಣಿ ಪ್ರದೇಶಗಳಲ್ಲಿ ಹಿಂದೆ ಚಿನ್ನ ತೆಗೆಯಲು ತೋಡಲಾಗಿದ್ದ ಕುಳಿಗಳೂ ಅವುಗಳ ಬಳಿಯಲ್ಲಿ ಹಲವೆಡೆ ನವಶಿಲಾಯುಗದ ಮಣ್ಣಿನ ಮಡಕೆಗಳ ಅವಶೇಷಗಳೂ ದೊರಕಿವೆ. ಅಲ್ಲದೆ ಹರಪ್ಪ, ಮೊಹೆಂಜೊದಾರೋಗಳಲ್ಲಿ ದೊರೆತಿರುವ ಚಿನ್ನದ ವಸ್ತುಗಳ ವಿಶ್ಲೇಷಣೆಯಿಂದ ಅವು ಕರ್ನಾಟಕದ ಚಿನ್ನದ ಗಣಿಗಳಿಂದ ಬಂದಿರಬೇಕೆಂದು ವಿಜ್ಞಾನಿಗಳು ನಿಷ್ಕರ್ಷಿಸಿದ್ದಾರೆ. ಕ್ರಿ.ಪೂ.2000ದ ಹೊತ್ತಿಗಾಗಲೇ ಕರ್ನಾಟಕದಲ್ಲಿ ಚಿನ್ನವನ್ನು ಗಣಿಗಳಿಂದ ತೆಗೆಯಲಾಗುತ್ತಿತ್ತು ಹಾಗೂ ಅದರ ಉತ್ಪಾದನೆ ಬೇರೆ ದೇಶಗಳಿಗೂ ಕಳುಹಿಸುವಷ್ಟು ಪ್ರಮಾಣದಲ್ಲಿತ್ತು ಎಂಬುದಕ್ಕೆ ಸಾಕ್ಷ್ಯಗಳಿವೆ. ಅಂದಿನಿಂದಲೂ ಚಿನ್ನದ ಗಣಿಗಾರಿಕೆ ಮುಂದುವರಿದುಕೊಂಡು ಬಂದಿದೆ. 19ನೆಯ ಶತಮಾನದ ಉತ್ತರಾರ್ಧ ಮತ್ತು 20ನೆಯ ಶತಮಾನದ ಆದಿಭಾಗದಲ್ಲಿ ಆಧುನಿಕ ಭೂವಿಜ್ಞಾನಿಗಳು ಚಿನ್ನದ ನಿಕ್ಷೇಪಗಳ ಅನ್ವೇಷಣೆಯನ್ನು ನಡೆಸಿದಾಗ ಕರ್ನಾಟಕದ ಹುನಗುಂದ, ಹೊನ್ನಾವರ, ಹೊನ್ನಾಳಿ, ಪುಂಗಾಮೆ ಮುಂತಾದ ಸ್ಥಳಗಳಲ್ಲಿ ಪ್ರಾಚೀನರು ಚಿನ್ನಕ್ಕಾಗಿ ತೋಡಿದ್ದ ಗಣಿಗಳು ಕಂಡುಬಂದುವು. ಹೊನ್ನು, ಪೊನ್ನು ಪದಗಳನ್ನು ಒಳಗೊಂಡ ಅನೇಕ ಸ್ಥಳನಾಮಗಳು ಬಹುತೇಕ ಹಿಂದೆ ಚಿನ್ನ ಉತ್ಪಾದನೆ ನಡೆಯುತ್ತಿದ್ದ ಸ್ಥಳಗಳೇ ಆಗಿವೆ. ಕೋಲಾರ ಜಿಲ್ಲೆಯ ಉರಿಗಾಂ, ತುಮಕೂರು ಜಿಲ್ಲೆಯ ಅಜ್ಜನಹಳ್ಳಿ ಮತ್ತು ಬೆಳ್ಳಾರ, ಮೈಸೂರು ಜಿಲ್ಲೆಯ ಅಂಬಳೆ, ವಳಗೆರೆ ಮತ್ತು ನರಸಯ್ಯನ ಪಾಳ್ಯ, ಚಿತ್ರದುರ್ಗ ಜಿಲ್ಲೆಯ ಅಜ್ಜನಹಳ್ಳಿ ಮತ್ತು ಹೊನ್ನೆಮರಡಿ, ಶಿವಮೊಗ್ಗ ಜಿಲ್ಲೆಯ ಕುದುರೆಕೊಂಡ, ನ್ಯಾಮತಿ ಮತ್ತು ಪಲವನಹಳ್ಳಿ ಹಾಸನ ಜಿಲ್ಲೆಯ ಕೆಂಪಿನಕೋಟೆ ಮತ್ತು ಎಳವಾರೆ, ಧಾರವಾಡ ಜಿಲ್ಲೆಯ ಕಪ್ಪತಗುಡ್ಡ, ಚಿನ್ನಮುಳಗುಂದ ಮತ್ತು ಹೊಸೂರು, ಗುಲ್ಬರ್ಗ ಜಿಲ್ಲೆಯ ಮಂಗಳೂರು, ರಾಯಚೂರು ಜಿಲ್ಲೆಯ ಮಸ್ಕಿ, ಬುದಿನಿ ಮತ್ತು ವಂದಲಿ ಹಾಗೂ ಚಿಕ್ಕಮಗಳೂರು ಜಿಲ್ಲೆಯ ಜಲಗಾರಗುಂಡಿ ಮತ್ತು ಸಿದ್ದರಹಳ್ಳಿ ಈ ಸ್ಥಳಗಳಲ್ಲೂ ಚಿನ್ನಕ್ಕಾಗಿ ತೋಡಿದ ಗಣಿ ಕುರುಹುಗಳಿವೆ. ಪ್ರಾಚೀನ ಕಾಲದ ಗಣಿಗಾರರು ಕರ್ನಾಟಕದಲ್ಲಿದ್ದ ವಿವಿಧ ಭಾಗಗಳ ಕಲ್ಲು ಹರಹುಗಳನ್ನು ಪರೀಕ್ಷಿಸಿ, ಅಲ್ಲಲ್ಲ ಚಿನ್ನ

ದೊರೆಯುವ ಸಾಧ್ಯತೆಯನ್ನು ಅಳೆದಿದ್ದರು. ಅಂತಹ ಸ್ಥಳಗಳಲ್ಲೆಲ್ಲ ಹಲವಾರು ಅಡಿಗಳವರೆಗೆ ಅಗೆದು ಚಿನ್ನ ತೆಗೆದಿದ್ದಾರೆ. ಅಂತಹ ಪ್ರಾಚೀನ ಗಣಿಗಳಲ್ಲಿ ಹಟ್ಟಿಯ ಗಣಿ ಅತ್ಯಂತ ಆಳವಾಗಿತ್ತು (ಸು.640). ಶಿಸ್ಟ್ ಪ್ರದೇಶದಲ್ಲಿ ಬೆಣಚು ಹೊಡೆಗಳು ಇದ್ದರೂ ಅವುಗಳ ಸಮೀಪದಲ್ಲಿ ಪ್ರಾಚೀನ ಕಾಲದ ಗಣಿ ಕೆಲಸದ ಕುರುಹುಗಳಿಲ್ಲದಿದ್ದರೆ, ಅಲ್ಲಿ ಚಿನ್ನ ದೊರಕುವ ಸಾಧ್ಯತೆಯಿಲ್ಲ. ದೊರಕಿದರೂ ಆರ್ಥಿಕವಾಗಿ ಲಾಭದಾಯಕವಾಗುವಷ್ಟಿರುವುದಿಲ್ಲ. ಹಿಂದೆ ಚಿನ್ನದ ಗಣಿಗಳಿದ್ದ ಪ್ರದೇಶಗಳನ್ನು ಬಿಟ್ಟು ಬೇರೆ ಎಲ್ಲಿಯೂ ಚಿನ್ನದ ನಿಕ್ಷೇಪವಿರುವ ಶಿಲಾಸ್ತರಗಳನ್ನು ಗುರುತಿಸಲಾಗಿಲ್ಲ ಎಂದು ಕರ್ನಾಟಕದ ಚಿನ್ನದ ನಿಕ್ಷೇಪಗಳ ಬಗ್ಗೆ ಒಬ್ಬ ಆಧುನಿಕ ಅನ್ವೇಷಕರು ಹೇಳಿರುವುದು ಪ್ರಾಚೀನ ಕಾಲದ ಗಣಿ ಉದ್ಯಮದ ವ್ಯಾಪಕತೆಯನ್ನು ಸೂಚಿಸುತ್ತದೆ.

ಇದೇ ರೀತಿಯಲ್ಲಿ ಇತರ ಲೋಹಗಳು ಬಳಕೆಗೆ ಬಂದ ತಾಮ್ರಶಿಲಾಯುಗ (ಕ್ರಿ.ಪೂ.2ನೆಯ ಸಹಸ್ರಮಾನ) ಮತ್ತು ಕಬ್ಬಿಣದ ಯುಗ (ಕ್ರಿ.ಪೂ.1ನೆಯ ಸಹಸ್ರಮಾನ) ಈ ಕಾಲಗಳಲ್ಲೂ ಚಿನ್ನವಲ್ಲದೆ ಈ ಲೋಹಗಳ ಗಣಿಗಾರಿಕೆಯೂ ಬೆಳೆಯಿತು. ಚಿತ್ರದುರ್ಗ ಜಿಲ್ಲೆಯ ಇಂಗಳದಾಳು, ಗುಲ್ಬರ್ಗ ಜಿಲ್ಲೆಯ ತಿಂಥಿಣಿ, ಹಾಸನ ಜಿಲ್ಲೆಯ ಕಲ್ಯಾಡಿ ಮೊದಲಾದೆಡೆಗಳಲ್ಲಿ ತಾಮ್ರದ ಅದುರಿಗಾಗಿ ತೆಗೆದ ಕುಳಿಗಳು, ಅವುಗಳ ಸಂಸ್ಕರಣಕ್ಕಾಗಿ ಉಪಯೋಗಿಸುತ್ತಿದ್ದ ಮೂಸೆಗಳು ಮತ್ತು ಇತರ ಮಡಕೆಗಳು ಬೆಳಕಿಗೆ ಬಂದಿವೆ. ಕರ್ನಾಟಕದ ಕಬ್ಬಿಣ ಯುಗದ ಬೃಹತ್ ಶಿಲಾಸಮಾಧಿಗಳಲ್ಲಿ ಅನೇಕ ಕಬ್ಬಿಣದ ಆಯುಧಗಳನ್ನು ಶವಾವಶೇಷಗಳೊಡನೆ ಹೂತಿರುವುದು ಕಂಡುಬಂದಿದೆ. ಆ ಆಯುಧಗಳ ಸಂಖ್ಯೆಯನ್ನೇ ಗಮನಿಸಿದರೆ ಕಬ್ಬಿಣ ಈ ದೇಶದಲ್ಲಿ ಅಗ್ಗವಾದ ಲೋಹವಾಗಿತ್ತು, ಅದರ ಉತ್ಪನ್ನ ವಿಶೇಷವಾಗಿ ಆಗುತ್ತಿದ್ದಿರಬೇಕು ಎಂಬುದು ಸ್ಪಷ್ಟವಾಗುತ್ತದೆ. ಬಳ್ಳಾರಿ ಜಿಲ್ಲೆಯ ಕುಡುತಿನಿ ಬಳಿ ಕಬ್ಬಿಣದ ಅದುರನ್ನು ತೆಗೆದು ಸಂಸ್ಕರಿಸಲಾಗುತ್ತಿತ್ತೆಂದು ಹೇಳಲಾಗಿದೆ.

ಕರ್ನಾಟಕದ ಗಣಿಗಳಿಂದ ಕ್ರಿಸ್ತಶಕಾರಂಭದ ಹೊತ್ತಿಗೆ ಉತ್ತಮ ರತ್ನಗಳನ್ನು ಅಗೆದು ತೆಗೆಯುವ ಕಾರ್ಯವೂ ನಡೆಯುತ್ತಿತ್ತು. 2ನೆಯ ಶತಮಾನದಲ್ಲಿದ್ದ ಗ್ರೀಕ್ ಭೂಗೋಳಕಾರ ಟಾಲೆಮಿ ಪುನ್ನಾಟ ದೇಶದಲ್ಲಿ (ದಕ್ಷಿಣ ಕರ್ನಾಟಕ, ಕಾವೇರಿ ಕಪಿನಿಗಳ ಮಧ್ಯವರ್ತಿ ಪ್ರದೇಶ) ದೊರಕುತ್ತಿದ್ದ ವೈಡೂರ್ಯ ರೋಮ್‌ಗೆ ರಫ್ತಾಗುತ್ತಿತ್ತೆಂದು ತಿಳಿಸಿದ್ದಾನೆ.

ಹೀಗೆ ಕ್ರಿಸ್ತಪೂರ್ವ ಮತ್ತು ಕ್ರಿಸ್ತಶಕಾರಂಭದ ಕಾಲದಿಂದಲೂ ಬೆಳೆದು ಬಂದಿದ್ದ ಗಣಿ ಉದ್ಯಮ ಮುಂದಿನ ಶತಮಾನಗಳಲ್ಲೂ ಮುಂದುವರಿಯಿತು. ಚಾಳುಕ್ಯ ಸೋಮೇಶ್ವರ ರಚಿಸಿದ ಮಾನಸೋಲ್ಲಾಸ ಎಂಬ ಗ್ರಂಥದಲ್ಲಿ (12ನೆಯ ಶತಮಾನ) 'ಖನಿಶಾಸ್ತ್ರ'ದ ಬಗ್ಗೆ ವಿವರಗಳನ್ನು ನೀಡಿದ್ದಾನೆ. ಖನಿಜಗಳ ದೊರೆಯುವಿಕೆಯನ್ನು ತೀರ್ಮಾನಿಸಲು ಅನೇಕ ತಂತ್ರ ವಿಧಾನಗಳನ್ನು ನಿರೂಪಿಸಿದ್ದಾನೆ. ಚಿನ್ನ ಬೆಳ್ಳಿ ಅಮೂಲ್ಯ ರತ್ನಗಳು ದೊರೆಯುವ ಸ್ಥಳಗಳನ್ನು ರಕ್ಷಿತ ಪ್ರದೇಶವಾಗಿ ಕಾಯ್ದುಕೊಳ್ಳಬೇಕೆಂದು ಸೂಚಿಸಿದ್ದಾನೆ. ಆ ಕಾಲದಲ್ಲಿ ಗಣಿಗಳ ಮೇಲ್ವಿಚಾರಣೆಗಾಗಿ 'ಖನ್ಯಾಧಿಕಾರಿ' ಎಂಬ ಅಧಿಕಾರಿ ಇರುತ್ತಿದ್ದ. ಬೇಲೂರಿನ ಒಂದು ಶಾಸನದಲ್ಲಿ ಆಕರ ಮಂಡಲಿಕ ಎಂಬ ಗಣಿ ಮೇಲ್ವಿಚಾರಣೆಗಾಗಿ ಇದ್ದ ಅಧಿಕಾರಿಯ ಉಲ್ಲೇಖವಿದೆ. ಧಾರವಾಡ ಜಿಲ್ಲೆಯ ಕೆಲವು ಭಾಗಗಳಲ್ಲಿ ಹಾಗೂ ತುಂಗಾ, ಭದ್ರಾ ನದಿಯ ದಡಗಳಲ್ಲಿನ ಮೆಕ್ಕಲಿನಿಂದ ಚಿನ್ನವನ್ನು ಶೇಖರಿಸಲಾಗುತ್ತಿತ್ತು (ಜರಗು ಚಿನ್ನ). ಗದಗಿನಲ್ಲಿ ದೊರೆತ 12ನೆಯ ಶತಮಾನದ ಒಂದು ಶಾಸನದಲ್ಲಿ ಜರಗು ಚಿನ್ನದ ಮೇಲಿನ ತೆರಿಗೆಯ ಪ್ರಸ್ತಾಪವಿದೆ. ಬಳ್ಳಾರಿ ಜಿಲ್ಲೆಯ ಪ್ರದೇಶ ಪ್ರಶಸ್ತ ವಜ್ರಗಳ ಉತ್ಪಾದನೆಗೆ ಪ್ರಸಿದ್ಧವಾಗಿತ್ತು. ಗುಬ್ಬಿ, ಚಿಕ್ಕನಾಯಕನಹಳ್ಳಿ, ಚನ್ನಪಟ್ಟಣ, ಮಾಗಡಿ ಪ್ರದೇಶಗಳಲ್ಲಿ ಕಬ್ಬಿಣದ ಗಣಿಗಾರಿಕೆ ಇತ್ತು. ಮಳೆಯಿಂದ ಹರಿದು ಬಂದ ಮರಳಿನಿಂದ ಕಪ್ಪು ಮರಳನ್ನು ಬೇರ್ಪಡಿಸಿ ಕಬ್ಬಿಣದ ತಯಾರಿಕೆಗೆ ಉಪಯೋಗಿಸಲಾಗುತ್ತಿತ್ತು ಎನ್ನಲಾಗಿದೆ. ಚಿಕ್ಕನಾಯಕನಹಳ್ಳಿ ಪ್ರದೇಶದಲ್ಲಿ ಗಣಿಗಳಿಂದ ಕಬ್ಬಿಣದ ಅದುರನ್ನು ತೆಗೆಯಲಾಗುತ್ತಿತ್ತು. ಆದಿಲ್‌ಶಾಹೀ ಅರಸರ ಕಾಲದಲ್ಲೂ ಉತ್ತರ ಕರ್ನಾಟಕದ ಕೆಲವೆಡೆಗಳಲ್ಲಿ ಕಬ್ಬಿಣದ ಅದುರನ್ನು ತೆಗೆಯಲಾಗುತ್ತಿತ್ತು. ನೀಲಮಣಿ, ಪದ್ಮರಾಗ ಮೊದಲಾದ ಅಮೂಲ್ಯ ಕಲ್ಲುಗಳನ್ನು ತೆಗೆಯಲಾಗುತ್ತಿತ್ತು. ಅವರ ರಾಜ್ಯದಲ್ಲಿದ್ದ ವಜ್ರ ಗಣಿಗಳ ಬಗ್ಗೆ ವಿಶೇಷ ಉಲ್ಲೇಖಗಳು ಕಂಡುಬರುತ್ತವೆ. ಟಿಪ್ಪು ಸುಲ್ತಾನ್ ಗಣಿ ಉದ್ಯಮವನ್ನು ವಿಶೇಷವಾಗಿ ಪ್ರೋತ್ಸಾಹಿಸುತ್ತಿದ್ದ ಎನ್ನಲಾಗಿದೆ. ಇವನ ಕಾಲದಲ್ಲಿ ಕರ್ನಾಟಕದಲ್ಲಿ ತಯಾರಾದ ಉಕ್ಕಿನ ವಸ್ತುಗಳು ವಿದೇಶಗಳಿಗೂ ರಫ್ತಾಗುತ್ತಿದ್ದುವು. ಆದರೆ ಕರ್ನಾಟಕ ವಿದೇಶೀಯರ ಆಳಿಕೆಗೆ ಒಳಪಟ್ಟಾಗಿನಿಂದ ಇತರ ಎಲ್ಲ ಉದ್ಯಮಗಳಂತೆ ಗಣಿಗಾರಿಕೆಯೂ ಅವನತಿ ಹೊಂದಿತು.

ಗಣಿ ಕೈಗಾರಿಕೆ ಮತ್ತೆ ತಲೆಯೆತ್ತಿದುದು 1874ರ ಸುಮಾರಿಗೆ. ಲಾವೆಲ್ ಎಂಬಾತ 5,000 ಪೌಂಡು ಬಂಡವಾಳ ಹೂಡಿ ಉರಿಗಾಂ ಬಳಿ ಚಿನ್ನದ ಗಣಿ ತೋಡಲು ಸಣ್ಣದೊಂದು ಕಂಪನಿಯನ್ನು ಪ್ರಾರಂಭಿಸಿದ. ಮೊದಲ ದಿವಸಗಳಲ್ಲಿ ಅನೇಕ ಎಡರುತೊಡರುಗಳನ್ನು ಅನುಭವಿಸಿದರೂ 1881ರ ಸುಮಾರಿಗೆ ಕೆಲಸ ಒಂದು ಸ್ಥಿಮಿತಕ್ಕೆ ಬಂತು. ಗಣಿ ಕೆಲಸದಲ್ಲಿ ನುರಿತ ಜಾನ್ ಟೇಲರ್ ಕಂಪನಿ ಕೆಲಸದ ಜವಾಬ್ದಾರಿಯನ್ನು ವಹಿಸಿಕೊಂಡಿತು. 1892ರಿಂದೀಚೆಗೆ ಆಧುನಿಕ ರೀತಿಯಲ್ಲಿ ಗಣಿಗಾರಿಕೆ ಕರ್ನಾಟಕದಲ್ಲಿ ಮೊದಲಾಯಿತೆಂದು ಹೇಳಬಹುದು.

ಈಗ ಕರ್ನಾಟಕದ ನಾನಾ ಭಾಗಗಳಲ್ಲಿ ಅನೇಕ ರೀತಿಯ ಖನಿಜಗಳನ್ನು ಉತ್ಪಾದಿಸುವ ಕಾರ್ಯ ನಡೆಯುತ್ತಿದೆ. ರಾಜ್ಯದಲ್ಲಿ ಒಟ್ಟು ಸುಮಾರು 223 ಕೆಲಸ ನಡೆಯುತ್ತಿರುವ ಗಣಿಗಳಿವೆ. 50,000ಕ್ಕೂ ಹೆಚ್ಚು ಜನರು ಗಣಿಗಾರಿಕೆಯಲ್ಲಿ ತೊಡಗಿದ್ದಾರೆ. ವರ್ಷಂಪ್ರತಿ ಕೋಟ್ಯಂತರ ರೂಪಾಯಿ ಬೆಲೆಬಾಳುವ ಖನಿಜೋತ್ಪತ್ತಿ ರಾಜ್ಯದಲ್ಲಿ ನಡೆಯುತ್ತಿದೆ. ಪ್ರತಿ ಜಿಲ್ಲೆಯೂ ವಿಶಿಷ್ಟ ಖನಿಜಗಳಿಗೆ ಹೆಸರಾಗಿದೆ. ಕೋಲಾರ ಮತ್ತು ರಾಯಚೂರುಗಳು ಚಿನ್ನಕ್ಕೆ ಹೆಸರಾದರೆ, ಬಳ್ಳಾರಿ, ಚಿಕ್ಕಮಗಳೂರು, ಚಿತ್ರದುರ್ಗ, ಧಾರವಾಡ ಮೊದಲಾದವು ಕಬ್ಬಿಣದ ಅದುರುಗೆ ಪ್ರಸಿದ್ಧವಾಗಿವೆ. ಹಾಸನದಲ್ಲಿ ಕ್ರೋಮೈಟ್, ಬೆಳಗಾಂವಿಯಲ್ಲಿ ಬಾಕ್ಸೈಟ್ ಅಧಿಕವಾಗಿ ಸಿಗುತ್ತವೆ. ಮ್ಯಾಂಗನೀಸ್ ಅದುರು ಬೆಳಗಾಂವಿ, ಬಳ್ಳಾರಿ, ಉತ್ತರಕನ್ನಡ, ಶಿವಮೊಗ್ಗ, ತುಮಕೂರುಗಳಲ್ಲಿ ಹೇರಳವಾಗಿದೆ. ಕೋಲಾರ, ರಾಯಚೂರುಗಳು ಬೆಳ್ಳಿಗೂ ಆಸರೆ, ಕಲ್ನಾರು ಅದಿರು ಹಾಸನ, ಚಿಕ್ಕಮಗಳೂರುಗಳಲ್ಲಿ ದೊರೆಯುತ್ತದೆ. ಕೆಯೋಲಿನ್‌ಗೆ ಬೆಳಗಾಂವಿ, ಬೆಂಗಳೂರು, ತುಮಕೂರು ಕೋಲಾರಗಳು ಮುಖ್ಯ ಆಗರಗಳಾಗಿವೆ. ಬಣ್ಣದ ಮಣ್ಣು ಚಿಕ್ಕಮಗಳೂರು, ಹಾಸನಗಳಲ್ಲಿ ಸಿಗುತ್ತದೆ. ಡಾಲೋಮೈಟ್ ಚಿತ್ರದುರ್ಗ, ತುಮಕೂರು, ಶಿವಮೊಗ್ಗಗಳಲ್ಲಿದೆ. ಕಯಾನೈಟ್ ಚಿಕ್ಕಮಗಳೂರು, ಹಾಸನ ಜಿಲ್ಲೆಗಳಲ್ಲಿದೆ. ತಾಮ್ರದ ಗಣಿಗಳಿಗೆ ಚಿತ್ರದುರ್ಗ ಮುಖ್ಯ ಆಕರ, ಖನಿಜ ಸಂಪತ್ತು ಮತ್ತು ಗಣಿಗಾರಿಕೆಯಲ್ಲಿ ಭಾರತದಲ್ಲಿ ಕರ್ನಾಟಕ ಪ್ರಮುಖ ಸ್ಥಾನ ಗಳಿಸಿದೆ. ಕೆಲವು ಮುಖ್ಯ ಗಣಿ ಉದ್ಯಮಗಳ ಸ್ಥೂಲ ಪರಿಚಯವನ್ನು ಕೆಳಗೆ ನೀಡಲಾಗಿದೆ.

**ಚಿನ್ನ :** 1880ರಿಂದ 1915ರವರೆಗೆ ಕರ್ನಾಟಕದ ನಾನಾ ಭಾಗಗಳಲ್ಲಿ ಚಿನ್ನಕ್ಕಾಗಿ ಶೋಧನೆ ನಡೆಯಿತು. ಹಾಸನ ಜಿಲ್ಲೆಯ ಕೆಂಚನಕೋಟೆ, ಚಿತ್ರದುರ್ಗದಲ್ಲಿನ ಅಜ್ಜನಹಳ್ಳಿ, ಧಾರವಾಡ ಜಿಲ್ಲೆಯ ಗದಗಿನ ಹತ್ತಿರ, ತುಮಕೂರು ಜಿಲ್ಲೆಯ ಬೆಳ್ಳಾರ, ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ, ಕುದುರೆಕೊಂಡ, ಮೈಸೂರು ಜಿಲ್ಲೆಯ ಅಂಬಳೆ, ವಳಗೆರೆ ಈ ಸ್ಥಳಗಳಲ್ಲಿ ಆಳವಾದ ಗಣಿಗಳನ್ನು ತೋಡಲಾಯಿತು. ಆದರೆ ನಾನಾ ಕಾರಣಗಳಿಂದ ಕೈಗಾರಿಕೆ ಮುಂದುವರಿಯದೆ ಒಂದನೆಯ ಮಹಾಯುದ್ಧದ ಸುಮಾರಿಗೆ ಈ ಎಲ್ಲ ಕಡೆಗಳಲ್ಲೂ ಗಣಿ ಕೆಲಸ ನಿಂತುಹೋಯಿತು.

ಕೋಲಾರ ಜಿಲ್ಲೆಯ ಉರಿಗಾಂ ಮತ್ತು ರಾಯಚೂರು ಜಿಲ್ಲೆಯ ಹಟ್ಟಿ ಈ ಸುತ್ತಲಿನ ಪ್ರದೇಶದಲ್ಲಿ ಮಾತ್ರ ಕೈಗಾರಿಕೆ ನಿಲ್ಲದೆ ಇದುವರೆಗೂ ನಡೆದುಕೊಂಡು ಬಂದಿತು. 1903ರಲ್ಲಿ ವಿದ್ಯುತ್ತಿನ ಸಹಾಯ ಕೋಲಾರದ ಗಣಿಗಳಿಗೆ ದೊರೆತುದರ ಫಲವಾಗಿ ಗಣಿ ಕೆಲಸ ವಿಶೇಷವಾಗಿ ಏಳಿಗೆ ಹೊಂದಲು ಸಾಧ್ಯವಾಯಿತು. ಗಣಿಯ ಆಡಳಿತವನ್ನು 1956ರಲ್ಲಿ ಮೈಸೂರು ಸರ್ಕಾರ, 1962ರಿಂದ ಭಾರತ ಸರ್ಕಾರದ

ಕೋಲಾರ ಗೋಲ್ಡ್ ಮೈನಿಂಗ್ ಅಂಡರ್‌ಟೇಕಿಂಗ್ಸ್ ಸಂಸ್ಥೆ ವಹಿಸಿಕೊಂಡಿದ್ದುವು. 1972ರಿಂದ ಈ ಸಂಸ್ಥೆ ಭಾರತ ಗೋಲ್ಡ್ ಮೈನ್ಸ್ ಪ್ರೈವೇಟ್ ಲಿ. ಎಂದಾಯಿತು. (ಬಿ.ಪಿ.ಆರ್.)

ಈಗ ಮೈಸೂರು, ಛಾಂಪಿಯನ್ ರೀಫ್ಸ್ ಮತ್ತು ನಂದಿದುರ್ಗ ಈ ಮೂರು ಗಣಿಗಳಲ್ಲಿ ಮಾತ್ರ ಚಿನ್ನದ ಅದುರಿನ ಉತ್ಪನನ ನಡೆಯುತ್ತಿದೆ. ಈ ಶತಮಾನದ ಮಧ್ಯಕಾಲದವರೆಗೂ ಉತ್ಪಾದಕ ಗಣಿಗಳ ಕೆಲಸದ ಅಧಿಕ ಭಾಗ ಛಾಂಪಿಯನ್ ಸಿರವೆಂಬ ಹೆಸರಿನ ಒಂದು ಪ್ರಧಾನವಾದ ಸಿರದ ಜಾಡನ್ನು ತೋಡಿ ಚಿನ್ನ ತೆಗೆಯುವುದರಲ್ಲಿ ನಿರತವಾಗಿತ್ತು. ಈ ಸಿರದ ಅದುರಿನ ನಾಲೆಯ ನಿಕ್ಷೇಪಗಳು ಕಡಿಮೆಯಾಗುತ್ತ ಬರಲು ಮೇಲುಮೈಯಲ್ಲಿ ಹಳಬರು ತೋಡಿರುವ ಜಾಡುಗಳನ್ನು ಗಮನಿಸಿ ಚಿನ್ನವಿರಬಹುದಾದ ಎಡೆಗಳನ್ನು ಹುಡುಕಿ ಗಣಿಯ ಸ್ವಾಮ್ಯದ ನೆಲದ ಉತ್ತರ ಮತ್ತು ಪಶ್ಚಿಮದ ಕಡೆಗಳಲ್ಲಿ ಓರಿಯಂಟಲ್ ಸಿರ ಎಂಬ ಮತ್ತೊಂದು ಲಾಭಕರವಾದ ಸಿರದ ನಾಲೆಯಿರುವುದನ್ನು ಕಂಡುಹಿಡಿಯಲಾಯಿತು. ಈ ಓರಿಯಂಟಲ್ ಸಿರವನ್ನೇ ಬಹುವಿಸ್ತಾರವಾಗಿ ಅಭಿವೃದ್ಧಿಗೊಳಿಸಲಾಯಿತು.

ಪ್ರಪಂಚದ ಅಳತೆಯಿಂದ ನೋಡಿದರೆ ಕೋಲಾರದ ಚಿನ್ನದ ಗಣಿಯ ಪ್ರದೇಶದಲ್ಲಿ ದೊರೆಯುವ ಚಿನ್ನ ಅಲ್ಪ ಪರಿಮಾಣದ್ದು. ಆದರೆ ಬೇರೆ ಅನೇಕ ಕಾರಣಗಳಿಂದ ಇದಕ್ಕೆ ಪ್ರಾಧಾನ್ಯ ದೊರೆತಿದೆಯಲ್ಲದೆ ಖ್ಯಾತಿಯೂ ಬಂದಿದೆ. ಈ ದೊಡ್ಡ ಉಪಖಂಡದಲ್ಲಿ ಇದೊಂದರಲ್ಲೇ ಚಿನ್ನ ನಿರಂತರವಾಗಿ ದೊರೆಯುತ್ತಿದ್ದದ್ದು. ಇದರಷ್ಟು ಆಳಕ್ಕೆ ಪ್ರಪಂಚದಲ್ಲೇ ಮತ್ತಾವ ಗಣಿಯೂ ಇಳಿದಿಲ್ಲ; ನೆಲದ ಮಟ್ಟದಿಂದ ಇದು 10,500'ಗಳಷ್ಟು ಕೆಳಕ್ಕೆ ಹೋಗಿದೆ. ವಾಯುನಿಯಂತ್ರಣ, ರಾಟೆಯ ಯಂತ್ರಗಳು ಮುಂತಾದ ಅತ್ಯಾಧುನಿಕ ಗಣಿಕೆಲಸದ ಕೆಲವು ಪದ್ಧತಿಗಳನ್ನು ಇಲ್ಲಿ ಅಳವಡಿಸಲಾಗಿದೆ. ಗಣಿಗಳು ಆಳವಾಗಿರುವುದರಿಂದಲೂ ನೆಲದ ಒತ್ತಡ ಬಹಳ ಹೆಚ್ಚಾಗಿರುವುದರಿಂದಲೂ ಪದೇಪದೇ ಸಂಭವಿಸುವ ಬಂಡೆಗಳ ಸಿಡಿತಗಳನ್ನು ಹತೋಟಿಯಲ್ಲಿಟ್ಟುಕೊಂಡು ಅವುಗಳ ದುಷ್ಪರಿಣಾಮಗಳನ್ನು ಮಿತಗೊಳಿಸಲು ಕೆಳನೆಲದ ಗಣಿ ಕೆಲಸಗಳಿಗೆ ಈಡುಗಳನ್ನು ಕಟ್ಟುವ ಒಂದು ಸುವ್ಯವಸ್ಥೆಯನ್ನು ಗಣಿಗಳು ಏರ್ಪಡಿಸಿಕೊಂಡಿದ್ದುವು. ಇಲ್ಲಿ ನಡೆಸಿರುವ ಸಿಡಿತಗಳ ಶೋಧನೆ ಪ್ರಪಂಚದ ಎಲ್ಲ ಭಾಗಗಳಲ್ಲೂ ಇರುವ ಗಣ್ಯ ಗಣಿ ಎಂಜಿನಿಯರುಗಳ ಗಮನವನ್ನು ಸೆಳೆದುವು. ನೆಲವನ್ನು ತುಂಬ ಆಳವಾಗಿ ತೋಡಿದಾಗ ಅಲ್ಲಿ ವಾತಾವರಣ ಸ್ಪರ್ಶವೇ ಇಲ್ಲದ ಬಂಡೆಗಳ ಸುತ್ತ 56.6ಸೆ. ಉಷ್ಣತೆ ಇದ್ದುದು ಕಂಡು ಬಂದಿತು. ಅದರ ಪರಿಣಾಮವಾಗಿ ಅಲ್ಲಿ ಕೆಲಸಮಾಡಲು ಸಹಜವಾಗಿಯೇ ಬಲು ಕಷ್ಟವೆನಿಸಿತು. ಇದಕ್ಕಾಗಿ ಅಮೋನಿಯ ಕೂಲರ್ ನಮೂನೆಯ ವಾಯುಸಂಸ್ಕರಣ (ಏರ್‌ಕಂಡಿಷನಿಂಗ್) ಯಂತ್ರಗಳನ್ನು ಮೇಲು ನೆಲದಲ್ಲಿ ಸ್ಥಾಪಿಸಿ ಸುತ್ತಣ ಗಾಳಿಯನ್ನು 15.1ಸೆ. ಇಳಿಸಿ ಅದನ್ನು ಗಣಿಯ ತೋಡುದಾರಿಗಳ ಮೂಲಕ ಕೆಳಕ್ಕೆ ಒತ್ತಿ ತನ್ಮೂಲಕ ಗಣಿಯೊಳಗಿನ ಗಾಳಿಯ ಉಷ್ಣತೆಗಳನ್ನು ತಡೆದುಕೊಳ್ಳುವಷ್ಟು ಮಟ್ಟಕ್ಕೆ ತರಲಾಯಿತು. ಕೆಲಸಮಾಡುವ ಜಾಗಗಳಿಗೆ ಬಿಡುವುದಕ್ಕೆ ಮುಂಚೆ ಗಾಳಿಯನ್ನು ಇನ್ನೂ ತಂಪಿಸುವುದಕ್ಕಾಗಿ ಒಂದು ಗಣಿಯಲ್ಲಿ ಫ್ರಿಯಾನ್ ಎಂಬುದನ್ನು ಉಷ್ಣತಾಶಾಮಕ ಮಾಧ್ಯಮವಾಗಿ ಬಳಸಿಕೊಂಡು ಎರಡನೆಯ ದರ್ಜೆಯ ಮತ್ತೊಂದು ತಂಪಿಸುವ ಯಂತ್ರವನ್ನು ನೆಲದ ಮಟ್ಟಕ್ಕೆ 8000' ಗಳಷ್ಟು ಆಳಕ್ಕೆ ಇಳಿಸಲಾಯಿತು. ಇಷ್ಟು ಏರ್ಪಾಡುಗಳನ್ನು ಮಾಡಿದರೂ ಕೆಲಸದ ಕೆಲವು ಜಾಗಗಳಲ್ಲಿ ಪರಿಸರದ ಪರಿಸ್ಥಿತಿಗಳು ಬಹಳ ತೀವ್ರವಾಗಿರುವುದು ಕಂಡುಬಂತು. ಶುಷ್ಕ ಮತ್ತು ಆರ್ದ್ರ ಬಲ್ಬ್ ಉಷ್ಣತೆಗಳನ್ನು (ಡ್ರೈ ಅಂಡ್ ವೆಟ್) ಬಲ್ಬ್ ಟೆಂಪರೇಚರ್ಸ್ ಪರಿಣಾಮಕಾರಿಯಾಗಿ ಕೆಳಕ್ಕಿಳಿಸಲು ಸಣ್ಣ ಜಾಗಗಳನ್ನು ತಂಪಿಸುವ ಪ್ರತ್ಯೇಕ ಯಂತ್ರಗಳನ್ನು ಸ್ಥಾಪಿಸಬೇಕಾದ ಘಟ್ಟವನ್ನು ಮುಟ್ಟಲಾಯಿತು.

ಆಳದ ಗಣಿ ಕೆಲಸಕ್ಕಾಗಿ ತೋಡಿದ ಪ್ರದೇಶಕ್ಕೆ ಊರೆಕಟ್ಟುವ ಸಮಸ್ಯೆಯೂ ಹುಟ್ಟಿಕೊಂಡಿತು. ಆಳವಿಲ್ಲದ ಹಿಂದಿನ ಗಣಿಗಳಿಂದ ಪ್ರಾರಂಭಿಸಿ ಇಂದಿನ ಹೇರಾಳದ ಗಣಿಕೆಲಸದ ಪರಿಸ್ಥಿತಿಯ ವರೆಗೆ ಬಗೆಬಗೆಯಾದ ಊರೆಕಟ್ಟುವ ವಿಧಾನಗಳು ವಿಕಾಸಹೊಂದಿದುವು. ಮೊದಲು ಊರೆಗಳೇ ಇರಲಿಲ್ಲ. ಬಳಿಕ ಅಲ್ಲಲ್ಲಿ ಮರದ ದಿಮ್ಮಿಗಳನ್ನು ಊರೆಗೋಲಾಗಿ ನೆಡುತ್ತಿದ್ದರು. ಬಳಿಕ ಕ್ರಿಬ್ ಸೆಟ್ಟುಗಳಿಂದ ಹಿಡಿದು, ಕ್ರಿಬ್ ಸೆಟ್ಟುಗಳಿಗೆ ಶುಷ್ಕ ಕಲ್ಲುಚೂರುಗಳಿಂದ ತುಂಬಿರುವ ಅರೆಗಟ್ಟಿ ಊರೆಗಳು ಮತ್ತು ಪಿಗ್‌ಸ್ಟೈಗಳು, ಕೊನೆಗೆ ಸಂಪೂರ್ಣವಾಗಿ ಬೆಣಚುಕಲ್ಲು ಕಟ್ಟಡದ ಗೋಡೆಗಳು ಈ ರೀತಿಯಲ್ಲಿ ನಡೆದಿದೆ, ಊರೆಗಳ ವಿಕಾಸ. ಈಚಿನ ವರ್ಷಗಳಲ್ಲಿ ಅರೆಯುವಾಗ ತೆಗೆದುಹಾಕಿದ ಕಳಪೆಯ ದೂಳಿನ ಅಂಟು ತೆಗೆದು ನೀರು ಬೆರೆಸಿ ಮರಳು ತುಂಬುವ ವಿಧಾನವೊಂದನ್ನು ಅಷ್ಟು ಆಳವಿಲ್ಲದ ಗಣಿ ಕೆಲಸದ ಕಡೆಗಳಲ್ಲಿ ಜಯಪ್ರದವಾಗಿ ಬಳಸಲಾಯಿತು. ಮರದ ದಿಮ್ಮಿಯ ಕ್ರಿಬ್ ಸೆಟ್ಟುಗಳನ್ನೂ 90 ಪೌಂಡುಗಳ ಅಂಡಾಕಾರದ ರೈಲ್ ಕಮಾನುಗಳನ್ನೂ ಅದುರು ಮತ್ತು ಇತರ ಸಾಮಾನುಗಳನ್ನೂ ಮೇಲಕ್ಕೆಳೆದು ಇಳಿಸುವುದಕ್ಕೂ ಪ್ರಯಾಣದ ಹಾದಿಗಳಿಗೂ ಉಪಯೋಗಿಸಲಾಯಿತು. ಈ ಉದ್ಯಮಕ್ಕೆ ಬೇಕಾದ ಜಲವಿದ್ಯುಚ್ಛಕ್ತಿ ಕಾವೇರಿ ನದಿಯ ಮೇಲಿರುವ ಶಿವಸಮುದ್ರದಿಂದ 144ಕಿಮೀ ಹಾಯ್ದು ಬರುತ್ತಿತ್ತು. ಈ ಶಕ್ತ್ಯುತ್ಪಾದಕ ಯಂತ್ರಾಗಾರವನ್ನು ಕೋಲಾರದ ಗಣಿಯ ಉದ್ಯಮಕ್ಕೆ ವಿದ್ಯುಚ್ಛಕ್ತಿಯನ್ನು ಒದಗಿಸುವುದಕ್ಕಾಗಿಯೇ ಸ್ಥಾಪಿಸಲಾಯಿತು. ಭಾರತದಲ್ಲಿ ಮೊದಮೊದಲು ಸ್ಥಾಪಿತವಾದ ಯಂತ್ರಾಗಾರಗಳ ಪೈಕಿ ಇದೊಂದು. ಪಾಲಾರ್ ನದಿಗೆ ಸು.11ಕಿಮೀ ದೂರದಲ್ಲಿರುವ ಬೇತಮಂಗಲದಲ್ಲಿನ ಕಟ್ಟೆಯಿಂದ ಈ ಉದ್ಯಮಕ್ಷೇತ್ರಕ್ಕೆ ಶುದ್ಧ ನೀರನ್ನು ಒದಗಿಸಲಾಯಿತು. ಕಂಪನಿಗಳು ಸುಸಜ್ಜಿತವಾದ ಆಸ್ಪತ್ರೆಯನ್ನು ನಡೆಸುತ್ತಿದ್ದುವು. ಸ್ಥಳೀಯ ಮಕ್ಕಳಿಗೆ ವಿದ್ಯಾಭ್ಯಾಸಕ್ಕಾಗಿ ಈ ಊರಿನಲ್ಲಿ ಅನೇಕ ಶಾಲೆಗಳೂ ಕಾಲೇಜುಗಳೂ ಪಾಲಿಟೆಕ್ನಿಕ್‌ಗಳೂ ಆರಂಭವಾದುವು. ಜೀವನದ ಇತರ ಸೌಕರ್ಯಗಳನ್ನೂ ಆವಶ್ಯಕತೆಗಳನ್ನೂ ಗಣಿಪ್ರದೇಶದಲ್ಲಿ ಒದಗಿಸಲಾಯಿತು. ಕರ್ನಾಟಕದ ಗಣಿಗಾರಿಕೆಯ ಕ್ಷೇತ್ರದಲ್ಲಿ ಕೋಲಾರದ ಚಿನ್ನದ ಗಣಿಗಳು ಬಹಳ ಚೆನ್ನಾಗಿ ವ್ಯವಸ್ಥಿತವಾಗಿ ಬೆಳೆದುವು. ಆದರೆ ಈಗ ಗಣಿಗಾರಿಕೆ ಮಾಡುವುದು ಆರ್ಥಿಕವಾಗಿ ಲಾಭದಾಯಕ ವಲ್ಲವೆಂಬ ಅಂಶ ಪ್ರಮುಖ ಪರಿಶೀಲನಾ ವಿಷಯವಾಗಿದ್ದು ಈ ಗಣಿಗಳನ್ನು ಮುಚ್ಚಲಾಯಿತು.

ರಾಯಚೂರು ಜಿಲ್ಲೆಯಲ್ಲಿರುವ ಹಟ್ಟಿ ಸಣ್ಣ ಪ್ರಮಾಣದಲ್ಲಿ ಮೊದಲಾದರೂ ದಿನೇ ದಿನೇ ಏಳಿಗೆ ಹೊಂದುತ್ತ ಬಂದು ಉತ್ತಮ ದರ್ಜೆಯ ಗಣಿ ಎಂದು ಹೆಸರು ಪಡೆದುಕೊಂಡಿತು. ಇಲ್ಲಿ 1947ರಿಂದೀಚೆಗೆ ಆಧುನಿಕ ರೀತಿಯಲ್ಲಿ ಕೆಲಸ ಮೊದಲಾಯಿತು. ಗಣಿಗಳು ಮೂರು ಸಾವಿರ ಅಡಿ ಆಳ ಇಳಿದಿವೆ. ವರ್ಷಂಪ್ರತಿ ಮೂರು ಕೋಟಿ ರೂಪಾಯಿ ಬಾಳುವ ಬಂಗಾರ ಉತ್ಪತ್ತಿಯಾಗುತ್ತಿದೆ. ಇಲ್ಲಿನ ಉತ್ಪತ್ತಿಯನ್ನು ದ್ವಿಗುಣಗೊಳಿಸಲು ಯೋಜನೆ ರೂಪಿತವಾಯಿತು.

ಈಚಿನ ವರ್ಷಗಳಲ್ಲಿ ಚಿನ್ನದ ಬೆಲೆ ಏರಿರುವ ಕಾರಣ ರಾಜ್ಯದಲ್ಲಿರುವ ಇತರ ಗಣಿಗಳನ್ನು ಊರ್ಜಿತಗೊಳಿಸಿ ಇನ್ನೂ ಹೆಚ್ಚಿನ ಚಿನ್ನವನ್ನು ಪಡೆಯುವ ಸಾಧ್ಯತೆ ಇದೆ. ಚಿನ್ನದ ಜೊತೆಗೆ ವರ್ಷಂಪ್ರತಿ ಲಕ್ಷಾಂತರ ರೂಪಾಯಿ ಬೆಲೆ ಬಾಳುವ ಬೆಳ್ಳಿ ಕೂಡ ದೊರೆಯುತ್ತದೆ.

**ಕಬ್ಬಿಣ :** ಕರ್ನಾಟಕದಲ್ಲಿ ಉತ್ಪುಷ್ಟವಾದ ಕಬ್ಬಿಣದ ಅದುರು ವಿಶೇಷವಾಗಿ ಹರಡಿದ್ದರೂ ದೊಡ್ಡ ಪರಿಮಾಣದಲ್ಲಿ ಕೈಗಾರಿಕೆ ಬೆಳೆದದ್ದು ಈಚಿನ ವರ್ಷಗಳಲ್ಲಿ ಮಾತ್ರ. ಬಾಬಾಬುಡನ್ ಬೆಟ್ಟಗಳಲ್ಲಿರುವ ಕೆಮ್ಮಣ್ಣು ಗುಂಡಿಯಲ್ಲಿ ದೊರೆಯುವ ಅದುರಿನಿಂದ ಭದ್ರಾವತಿಯಲ್ಲಿ ಗಣಿ ಕೆಲಸ ಪ್ರಾರಂಭವಾಯಿತು. ದೊರೆತ ಕಬ್ಬಿಣದ ಅದುರನ್ನು ಸಮೀಪದಲ್ಲಿರುವ 1923ರ ಸುಮಾರಿಗೆ ಭದ್ರಾವತಿಯಲ್ಲಿ ಕರಗಿಸಿ ಬೀಡುಕಬ್ಬಿಣ ತಯಾರಿಸಲಾಯಿತು. ದಕ್ಷಿಣ ಭಾರತದಲ್ಲಿ ಕಬ್ಬಿಣ ಕೈಗಾರಿಕೆಗೆ ಇದೇ ಮೊದಲ ಪ್ರಯತ್ನ. ಈಗ ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆ ಕರ್ನಾಟಕದ ಮುಖ್ಯ ಖನಿಜ ಕೈಗಾರಿಕೆಯೆಂದು ಹೆಸರುವಾಸಿಯಾಗಿದೆ.

ಈಚಿನ ವರ್ಷಗಳಲ್ಲಿ ಕಬ್ಬಿಣದ ಅದುರನ್ನು ಹೇರಳವಾಗಿ ರಫ್ತುಮಾಡಲಾಗುತ್ತಿದೆ. 1956ರಿಂದ ಈಚೆಗೆ ಕಬ್ಬಿಣ ಕೈಗಾರಿಕೆಯಲ್ಲಿ ವಿಶೇಷ ಚಟುವಟಿಕೆ ಕಾಣುತ್ತಿದೆ. 1956ರಲ್ಲಿ ಅದುರಿನ ಉತ್ಪಾದನೆ ಮೂರು ಲಕ್ಷ

ಟನ್‌ಗಳಿತ್ತು. ಹದಿನೈದು ವರ್ಷಗಳಲ್ಲಿ ಉತ್ಪನ್ನ ಹತ್ತರಷ್ಟು ಹೆಚ್ಚಿತು. ಕರ್ನಾಟಕದಲ್ಲಿ 1971ರಲ್ಲಿ ಕಬ್ಬಿಣದ ಅದುರಿನ ಒಟ್ಟು ಉತ್ಪಾದನೆ 35 ಲಕ್ಷ ಟನ್ನುಗಳಿಗೂ ಹೆಚ್ಚಿತು. ಮುಖ್ಯವಾದ ಗಣಿಗಳಿರುವುದು ಬಳ್ಳಾರಿ ಜಿಲ್ಲೆಯ ಸಂಡೂರು ಗುಡ್ಡಗಳಲ್ಲಿ. ಇಲ್ಲಿಂದ ವರ್ಷಂಪ್ರತಿ ನಲವತ್ತು ಲಕ್ಷ ಟನ್‌ಗಳಷ್ಟು ಉತ್ತಮವಾದ ಅದುರು ವಿದೇಶಗಳಿಗೆ, ಮುಖ್ಯವಾಗಿ ಜಪಾನ್ ದೇಶಕ್ಕೆ ರಫ್ತಾಗುತ್ತಿದೆ. ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ, ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ, ಉತ್ತರ ಕನ್ನಡ ಜಿಲ್ಲೆಯ ಅನುಮೋಡ ಈ ಸುತ್ತಲಿನಲ್ಲಿ ಕಬ್ಬಿಣ ಅದುರಿನ ಅನೇಕ ಗಣಿಗಳಿವೆ. ಕುದುರೆ ಮುಖದ ಬಳಿ ದೊರೆಯುವ ಅಯಸ್ಕಾಂತ ಸಂಬಂಧವಾದ ಕಬ್ಬಿಣದ ಅದುರನ್ನು ಪಡೆದು ಪುಡಿಮಾಡಿ, ಆಯಸ್ಕಾಂತಶಕ್ತಿಯಿಂದ ಕಬ್ಬಿಣದ ಸಾರವನ್ನು ಪ್ರತ್ಯೇಕಿಸಿ, ಅದನ್ನು ಕೊಳವೆಗಳ ಮೂಲಕ ಮಂಗಳೂರು ಬಂದರಿಗೆ ರವಾನಿಸಿ, ಹೊರದೇಶಗಳಿಗೆ, ವಿಶೇಷವಾಗಿ ಜಪಾನ್‌ಗೆ ರಫ್ತುಮಾಡುವ ಬೃಹದ್ ಯೋಜನೆ ನಡೆಯುತ್ತಿದ್ದು, ಅದು ಏಷ್ಯಖಂಡದಲ್ಲೇ ಅತ್ಯಂತ ಬೃಹತ್ ಕಬ್ಬಿಣ ಅದುರು ಯೋಜನೆ ಎನ್ನಿಸಿಕೊಂಡಿದೆ. ಪರಿಸರಕ್ಕೆ ಇದರಿಂದ ಆಗಬಹುದಾದ ಹಾನಿಯ ಬಗ್ಗೆ ವಿವಾದವೂ ಸೃಷ್ಟಿಯಾಗಿದೆ.

**ಮ್ಯಾಂಗನೀಸ್ :** ಭೂಶೋಧನ ಇಲಾಖೆಯ ಪರಿಶ್ರಮದಿಂದ ಹೊಸ ದಾಗಿ ಬೆಳಕಿಗೆ ಬಂದ ಖನಿಜಗಳಲ್ಲಿ ಮ್ಯಾಂಗನೀಸ್ ಅದುರು ಮುಖ್ಯವಾದುದು. ಮೊದಲಿಗೆ ಯುರೋಪಿಯನರು ಶಿವಮೊಗ್ಗದ ಕುಂಸಿಯ ಬಳಿ ದೊಡ್ಡ ಪರಿಮಾಣದಲ್ಲಿ ಗಣಿಗಳನ್ನು ತೋಡಿ ವರ್ಷಂಪ್ರತಿ 50,000 ಟನ್ನಿಗೂ ಹೆಚ್ಚು ಅದುರನ್ನು ತಮ್ಮ ದೇಶಗಳಿಗೆ ತೆಗೆದುಕೊಂಡು ಹೋದರು. ಅದೇ ಸುಮಾರಿಗೆ ನಮ್ಮ ದೇಶೀಯರೂ ಗಣಿ ಕೆಲಸಕ್ಕೆ ಕೈಹಾಕಿ ಸಣ್ಣ ಪರಿಮಾಣದಲ್ಲಿ ಗಣಿಗಳನ್ನು ತೆಗೆದರು. ಈಗಲೂ ಮುಖ್ಯವಾಗಿ ತುಮಕೂರು, ಚಿತ್ರದುರ್ಗ, ಬಳ್ಳಾರಿ, ಉತ್ತರ ಕನ್ನಡ, ಶಿವಮೊಗ್ಗ ಜಿಲ್ಲೆಗಳಲ್ಲಿ ನೂರಕ್ಕೂ ಹೆಚ್ಚು ಮ್ಯಾಂಗನೀಸ್ ಗಣಿಗಳು ಕೆಲಸ ಮಾಡುತ್ತಿವೆ. ಮುಖ್ಯವಾದ ಗಣಿಗಳು ಬಳ್ಳಾರಿ ಜಿಲ್ಲೆಯ ಸಂಡೂರು, ಕುಮಾರಸ್ವಾಮಿ, ರಾಮನದುರ್ಗ ಬೆಟ್ಟಗಳಲ್ಲಿ, ಶಿವಮೊಗ್ಗ ಜಿಲ್ಲೆಯ ಕುಂಸಿ, ಶಂಕರಗುಡ್ಡ, ತುಪ್ಪೂರು ಬಳಿ, ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ, ಉತ್ತರ ಕನ್ನಡ ಜಿಲ್ಲೆಯ ಜೊಯ್ಡ, ಯಲ್ಲಾಪುರ, ಕುಂಬಾರವಾಡ ಬಳಿ ಇವೆ. ಕುಮಾರಸ್ವಾಮಿ ಬೆಟ್ಟದ ಒಂದು ಗಣಿ ವರ್ಷಂಪ್ರತಿ ಸುಮಾರು ಎರಡು ಲಕ್ಷ ಟನ್‌ಗಳನ್ನು ಉತ್ಪಾದಿಸುತ್ತಿದೆ.

ಉತ್ಪತ್ತಿಯಾದ ಮ್ಯಾಂಗನೀಸ್ ಅದುರಿನ ಬಹುಭಾಗ ಗೋವ ಮತ್ತು ಕಾರವಾರ ಬಂದರುಗಳಿಂದ ವಿದೇಶಗಳಿಗೆ ರಫ್ತಾಗಿ ಹೋಗುತ್ತಿದೆ. ಸ್ವಲ್ಪಮಟ್ಟಿಗೆ ದಾಂಡೇಲಿ ಬಳಿಯ ಫೆರೊ-ಮ್ಯಾಂಗನೀಸ್ ಕಾರ್ಖಾನೆಯಲ್ಲಿ ಉಪಯೋಗವಾಗುತ್ತಿದೆ.

**ಕ್ರೋಮೈಟ್ :** ಕಬ್ಬಿಣ ಕೈಗಾರಿಕೆಯಲ್ಲಿ ಕ್ರೋಮೈಟ್ ಮುಖ್ಯವಾದ ಖನಿಜ. ಹಾಸನ ಜಿಲ್ಲೆಯ ಬೈರಾಪುರದ ಬಳಿ ಈ ಖನಿಜವನ್ನು ಪಡೆಯುವುದಕ್ಕೆ ಕೂಪಗಳನ್ನೂ ಸುರಂಗಗಳನ್ನೂ ತೋಡಲಾಗಿದೆ. ಗಣಿಗಳು ಸುಮಾರು ಐನೂರು ಅಡಿ ಆಳದವರೆಗೆ ಇಳಿದಿವೆ. ಮೈಸೂರು ಜಿಲ್ಲೆಯ ಕಡಕೊಳದ ಬಳಿಯೂ ಒಂದು ಗಣಿ ಇದೆ.

**ತಾಮ್ರ :** 1965ರಿಂದೀಚೆಗೆ ಚಿತ್ರದುರ್ಗ ಬಳಿಯ ಇಂಗಳದಾಳು, (ನೋಡಿ) ಅರಸೀಕೆರೆ ತಾಲ್ಲೂಕಿನ ಕಲ್ಯಾಡಿ ಈ ಸ್ಥಳಗಳಲ್ಲಿ ಹೆಚ್ಚಿನ ಪರಿಶೋಧನೆ ನಡೆದು ಹೊಸದಾಗಿ ಗಣಿಕೈಗಾರಿಕೆ ಪ್ರಾರಂಭವಾಗಿದೆ. ಇಂಗಳದಾಳಿನ ಬಳಿ ಚಿತ್ರದುರ್ಗ ತಾಮ್ರದ ಕಂಪನಿ ಕೆಲಸ ಮಾಡುತ್ತಿದೆ. ಗಣಿ ನೆಲಮಟ್ಟದಿಂದ ಆರುನೂರು ಅಡಿಯವರೆಗೆ ಇಳಿದಿದೆ. ಹಾಸನ ಜಿಲ್ಲೆ ಕಲ್ಯಾಡಿಯಲ್ಲಿ 1972 ರಿಂದ ಕೆಲಸ ಮೊದಲಾಗಿದೆ. ಇದೇ ರೀತಿ ಗುಲ್ಬರ್ಗ ಜಿಲ್ಲೆಯ ತಿಂಥಿಣಿ ಹತ್ತಿರವೂ ನಂಜನಗೂಡಿನ ಕಲ್ಕುಂದದ ಬಳಿಯೂ ತಾಮ್ರಕ್ಕಾಗಿ ಗಣಿಗಳನ್ನು ತೋಡುವ ಉದ್ದೇಶವಿದೆ. ಈಗ ಭಾರತದ ಕೈಗಾರಿಕೆಗಳಿಗೆ ಬೇಕಾಗುವ ತಾಮ್ರವನ್ನು ಬಹು ಬೆಲೆ ಕೊಟ್ಟು ವಿದೇಶದಿಂದ ಆಮದು ಮಾಡಿಕೊಳ್ಳುತ್ತಿದೆ. ಈ ಎಲ್ಲ ಗಣಿಗಳಿಂದಲೂ ತಾಮ್ರದ ಸಾರ ಉತ್ಪಾದನೆಯಾದರೆ ಕುಲುಮೆಗಳನ್ನು ಕಟ್ಟಿ ತಾಮ್ರಲೋಹವನ್ನು ಪಡೆಯಲು ಸಹಾಯವಾಗಬಹುದು.

**ಸುಣ್ಣಕಲ್ಲು :** ಕರ್ನಾಟಕದ ಗಣಿ ಉದ್ಯಮದಲ್ಲಿ ಸುಣ್ಣ ಕಲ್ಲಿನ ಗಣಿಗಳು ಪ್ರಮುಖ ಸ್ಥಾನವನ್ನು ಪಡೆದಿವೆ. ಬಿಜಾಪುರ, ಬೆಳಗಾಂವಿ ಮತ್ತು ಗುಲ್ಬರ್ಗ ಜಿಲ್ಲೆಯಲ್ಲಿ ಉತ್ತಮ ದರ್ಜೆಯ ಸುಣ್ಣಕಲ್ಲು ವಿಶೇಷ ಪ್ರಮಾಣದಲ್ಲಿ ದೊರೆಯುತ್ತದೆ. ಈ ಸುಣ್ಣಕಲ್ಲಿನ ಆಧಾರದ ಮೇಲೆ ನಾಲ್ಕು ದೊಡ್ಡ ಸಿಮೆಂಟ್ ಕಂಪನಿಗಳು ಸ್ಥಾಪನೆಯಾಗಿವೆ. ಅಸೋಸಿಯೇಟೆಡ್ ಸಿಮೆಂಟ್ ಕಂಪನಿಯವರ ಸಿಮೆಂಟ್ ಕಾರ್ಖಾನೆಗಳು ಶಾಹಬಾದ ಮತ್ತು ವಾಡಿ ಬಳಿ ಇವೆ. ಬಾಗಲಕೋಟೆಯಲ್ಲಿ ಇನ್ನೊಂದು ದೊಡ್ಡ ಸಿಮೆಂಟ್ ಕಾರ್ಖಾನೆಯಿದೆ. ಗುಲ್ಬರ್ಗ ಜಿಲ್ಲೆಯ ಸೇಡಂ ಬಳಿ ಸಿಮೆಂಟ್ ಕಾರ್ಪೊರೇಷನ್ ಆಫ್ ಇಂಡಿಯ ಅವರು ಒಂದು ಕಾರ್ಖಾನೆಯನ್ನು ಕಟ್ಟಿದ್ದಾರೆ. ಭದ್ರಾವತಿಯ ಬಳಿಯಿರುವ ಬಂಡಿಗುಡ್ಡದಲ್ಲಿ ದೊರೆಯುವ ಸುಣ್ಣಕಲ್ಲಿನಿಂದ ಭದ್ರಾವತಿಯಲ್ಲಿ ಸಿಮೆಂಟ್ ತಯಾರಿಸುತ್ತಾರೆ. ಚಿಕ್ಕನಾಯಕನಹಳ್ಳಿಯ ಬಳಿ ದೊರೆಯುವ ಸುಣ್ಣಕಲ್ಲಿನಿಂದ ಅಮ್ಮಸಂದ್ರದ ಬಳಿ ಮೈಸೂರು ಸಿಮೆಂಟ್ ಕಂಪನಿಯವರು ಸಿಮೆಂಟು ಉತ್ಪಾದಿಸುತ್ತಾರೆ. ಅಲ್ಲದೆ ಇನ್ನೂ ಕೆಲವು ಸಿಮೆಂಟ್ ಕಾರ್ಖಾನೆಗಳನ್ನು ಸ್ಥಾಪಿಸುವ ಅವಕಾಶವಿದೆ. ಬಿಜಾಪುರ ಜಿಲ್ಲೆಯ ತಾಳೀಕೋಟೆ, ಗುಲ್ಬರ್ಗ ಜಿಲ್ಲೆಯ ಬಿಜಾಪುರ, ಬೆಳಗಾಂವಿ, ಜಿಲ್ಲೆಯ ನಾಗರಗಾಳಿ, ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ಈ ಸ್ಥಳಗಳ ಬಳಿ ದೊರೆಯುವ ಸುಣ್ಣಕಲ್ಲನ್ನು ಅವಲಂಬಿಸಿ ಸಿಮೆಂಟ್ ಕಾರ್ಖಾನೆಗಳನ್ನು ಸ್ಥಾಪಿಸಬಹುದಾಗಿದೆ. ವರ್ಷಂಪ್ರತಿ 23 ಲಕ್ಷ ಟನ್ ಸುಣ್ಣಕಲ್ಲನ್ನು ಗಣಿಗಳಿಂದ ತೆಗೆಯಲಾಗುತ್ತಿದೆ. ಸಿಮೆಂಟ್ ತಯಾರಿಕೆ ಕರ್ನಾಟಕದ ಮುಖ್ಯ ಖನಿಜ ಕೈಗಾರಿಕೆಗಳಲ್ಲೊಂದಾಗಿದೆ.

ಸಿಮೆಂಟಿಗೆ ಅಲ್ಲದೆ, ಕಟ್ಟಡ ಕಲ್ಲಿಗಾಗಿ ಶಾಹಬಾದ ಬಳಿಯ ಸುಣ್ಣಕಲ್ಲಿನ ಹಲಗೆಗಳು ವಿಶೇಷವಾಗಿ ಬಳಕೆಯಾಗುತ್ತಿವೆ. ಸುಣ್ಣಕಲ್ಲು ತೆಳ್ಳನೆಯ ಹಾಳೆಗಳಾಗಿ ಬಿಟ್ಟುಕೊಳ್ಳುತ್ತದೆ. ಇದರಿಂದ ಉತ್ತಮ ಬಗೆಯ ಕಲ್ಲುಹಲಗೆಗಳನ್ನೂ ಚದುರ ಬಿಲ್ಲೆಗಳನ್ನೂ ತೆಗೆಯಬಹುದು. ನುಣುಪು ಮಾಡಿದ ತಿಳಿನೀಲಿ ಬಣ್ಣದ ಕಲ್ಲುಗಳಿಂದ ಹಾಸಿದ ನೆಲ ಬಹು ರಮ್ಯವಾಗಿ ಕಂಗೊಳಿಸುತ್ತದೆ. ಶಾಹಬಾದಿನ ಹಾಸುಗಲ್ಲುಗಳು ಭಾರತದಲ್ಲೆಲ್ಲ ಪ್ರಸಿದ್ಧವಾಗಿವೆ. ಶಾಹಬಾದ, ವಾಡಿ ಈ ಸುತ್ತಣ ಪ್ರದೇಶದಲ್ಲಿ ಚಪ್ಪಡಿ ತೆಗೆಯುವ ಅನೇಕ ಗಣಿಗಳಿವೆ.

**ಅಲ್ಯುಮಿನಿಯಂ :** ದೇಶದ ಕೈಗಾರಿಕೆಯ ಪ್ರಗತಿಯಲ್ಲಿ ಅಲ್ಯುಮಿನಿಯಂ ಲೋಹ ಮುಖ್ಯ ಸ್ಥಾನ ಪಡೆದುಕೊಂಡಿದೆ. ಅಲ್ಯುಮಿನಿಯಂ ಅದುರನ್ನು ಈಗ ಸದ್ಯದಲ್ಲಿ ಬೆಳಗಾಂವಿಯ ಬಳಿ ತೆಗೆಯಲಾಗುತ್ತಿದ್ದು, 30,000 ಟನ್ ಲೋಹ ವರ್ಷಂಪ್ರತಿ ಉತ್ಪತ್ತಿಯಾಗುತ್ತಿದೆ. ಇದನ್ನು ದ್ವಿಗುಣಗೊಳಿಸಿ 60,000 ಟನ್ ಉತ್ಪಾದಿಸಲು ಯೋಜನೆ ರೂಪಿತವಾಗಿದೆ.

ಅಲ್ಯುಮಿನಿಯಂ ಲೋಹವನ್ನು ಪಡೆಯುವುದಕ್ಕೆ ಹೇರಳವಾದ ವಿದ್ಯುಚ್ಛಕ್ತಿ ಬೇಕು. ಕಾಳಿ, ವರಾಹಿ, ಅಘನಾಶಿನಿ, ಬೇಡ್ತಿ ಮುಂತಾದ ವಿದ್ಯುತ್ ಯೋಜನೆಗಳು ಕಾರ್ಯರೂಪಕ್ಕೆ ಬಂದು ಸುಲಭ ದರದಲ್ಲಿ ಹೇರಳವಾಗಿ ವಿದ್ಯುಚ್ಛಕ್ತಿ ದೊರೆಯುವುದಾದರೆ, ಪಶ್ಚಿಮ ಕರಾವಳಿಯಲ್ಲಿ ದೊರೆಯುವ ಬಾಕ್ಸೈಟಿನಿಂದ ಅಲ್ಯುಮಿನಿಯಂ ಲೋಹವನ್ನು ದೊಡ್ಡ ಪ್ರಮಾಣದಲ್ಲಿ ಉತ್ಪಾದಿಸಬಹುದು ಎಂದು ನಂಬಲಾಗಿದೆ.

**ಇತರ ಖನಿಜಗಳು :** ಈ ಹಿಂದೆ ವಿವರಿಸಿದ ಮುಖ್ಯ ಖನಿಜಗಳಲ್ಲದೆ ಇತರ ಖನಿಜಗಳಿಗಾಗಿ ಅನೇಕ ಸಣ್ಣ ಗಣಿಗಳು ರಾಜ್ಯದಾದ್ಯಂತ ಹರಡಿವೆ. ಪಿಂಗಾಣಿ ತಯಾರಿಕೆಗೆ ಬೇಕಾಗುವ ಸುದ್ದೆಮಣ್ಣು, ಬೆಣಚು, ಫೆಲ್‌ಸ್ಪಾರ್, ಕೆಂಪು ಕಾವಿ ಮಣ್ಣು, ಗಡಸುತನಕ್ಕೆ ಹೆಸರಾಗಿರುವ ಕುರಂದ, ಗಾರ್ನೆಟ್, ಅತಿಯಾದ ಕಾವನ್ನು ತಡೆಯಬಲ್ಲ ಮಾಗ್ನಟೈಟ್ - ಈ ಖನಿಜಗಳಿಗಾಗಿ ಅನೇಕ ಗಣಿಗಳಿವೆ.

ಬೆಂಗಳೂರು ಸುತ್ತಮುತ್ತ ದೊರೆಯುವ ಸುದ್ದೆಮಣ್ಣು, ಫೆಲ್‌ಸ್ಪಾರ್ ಮತ್ತು ಬೆಣಚುಕಲ್ಲನ್ನು ಉಪಯೋಗಿಸಿ ಬೆಂಗಳೂರಿನ ಸರ್ಕಾರಿ ಪಿಂಗಾಣಿ

ಕಾರ್ಖಾನೆ ಅನೇಕ ಬಗೆಯ ಪಿಂಗಾಣಿ ಸಾಮಾನುಗಳನ್ನು ತಯಾರಿಸಿ ಹೊರಗೆ ಕಳುಹಿಸುತ್ತಿದೆ. ಭೂಮಿಯಲ್ಲಿ ದೊರೆಯುವ ಸುದ್ದೆಮಣ್ಣನ್ನು ತೊಳೆದು ಕಲ್ಮಶಗಳೆಲ್ಲವನ್ನೂ ತೆಗೆದು ಶುದ್ಧಪಡಿಸುವುದಕ್ಕಾಗಿ ಹಾಸನ ಜಿಲ್ಲೆಯ ಬಾಗೇಶಪುರದ ಹತ್ತಿರ ಮತ್ತು ಶಿವಮೊಗ್ಗ ಜಿಲ್ಲೆಯ ದೇವಂಗಿಯ ಬಳಿ ಸುದ್ದೆಮಣ್ಣನ್ನು ಶುದ್ಧಿಪಡಿಸುವ ಕಾರ್ಖಾನೆ ಇದೆ. ಬಂಗಾರಪೇಟೆಯ ಸುತ್ತ ದೊರೆಯುವ ಬಿಳಿಯ ಮಣ್ಣಿನಿಂದ ಆಟದ ಗೋಲಿಗಳನ್ನೂ, ಬರೆಯುವ ಬಳಪಗಳನ್ನೂ ವಿಶೇಷವಾಗಿ ತಯಾರು ಮಾಡುತ್ತಾರೆ. ಇಲ್ಲಿ ತಯಾರಾಗುವ ಬಳಪಗಳು ಭಾರತದ ಮೂಲೆಮೂಲೆಗೂ ಹೋಗುತ್ತವೆ. ಪಿಂಗಾಣಿ ಪದಾರ್ಥಗಳನ್ನಲ್ಲದೆ ಬೆಣಚು ಕಲ್ಲಿನಿಂದ ಗಾಜಿನ ಸಾಮಾನುಗಳನ್ನೂ ಫೆರೊಸಿಲಿಕಾನ್ ಎಂಬ ಮಿಶ್ರ ಲೋಹವನ್ನೂ ತಯಾರಿಸಲಾಗುತ್ತಿದೆ.

ಅರಸೀಕೆರೆ ಹತ್ತಿರದ ಕಲ್ಯಾಡಿ ಮತ್ತು ಹೊಳೆನರಸೀಪುರದ ಮಾವಿನಕೆರೆ ಹತ್ತಿರ ಕುರಂಗದ ಕಲ್ಲಿಗಾಗಿ ಗಣಿ ಕೆಲಸ ನಡೆಯುತ್ತಿದೆ.

ಕಡಕೊಳದ ಬಳಿ ಮ್ಯಾಗ್ನಸೈಟ್ ಗಣಿಗಳಿವೆ. ಇವನ್ನು ಜಂಷೆಡ್‌ಪುರದ ಒಂದು ಕಂಪನಿ ನಡೆಸುತ್ತಿದೆ.

**ಕಟ್ಟಡದ ಕಲ್ಲುಗಳು :** ಖನಿಜಗಳಿಗಾಗಿಯೇ ಅಲ್ಲದೆ ಕಟ್ಟಡದ ಕಲ್ಲಿಗಾಗಿ ಕಲ್ಲುಬಂಡೆಗಳನ್ನು ಒಡೆದು, ನೈಜ ಕಲ್ಲಾಗಿ ಇಲ್ಲವೆ ಹಾಸುಬಂಡೆಗಳಾಗಿ, ಕಲ್ಲಾಗಿ ಮಾರಾಟ ಮಾಡುವ ಕೈಗಾರಿಕೆ ದೇಶದಲ್ಲೆಲ್ಲ ಹರಡಿದೆ. ಅನೇಕ ಜನರು ಈ ಕೈಗಾರಿಕೆಯಲ್ಲಿ ನಿರತರಾಗಿದ್ದಾರೆ.

ದಕ್ಷಿಣ ಕರ್ನಾಟಕದ ಕಟ್ಟಡದ ಕಲ್ಲುಗಳು ಬಹು ಪ್ರಸಿದ್ಧಿಯಾದುವು. ಸಾವಿರ ವರ್ಷಕಾಲ ಅಚ್ಚಳಿಯದೆ ಸ್ವಚ್ಛವಾಗಿ ಉಳಿದಿರುವ ಗೊಮ್ಮಟೇಶ್ವರ ಮೂರ್ತಿ ಕರ್ನಾಟಕದಲ್ಲಿ ಸಾಮಾನ್ಯವಾಗಿ ಸಿಗುವ ಕಣಶಿಲೆಯಿಂದ (ಗ್ರಾನೈಟ್) ಕಡೆದದ್ದು. ಬೆಂಗಳೂರು ನಗರದ ಅನೇಕ ಭವ್ಯವಾದ ಕಟ್ಟಡಗಳು ಈ ಕಲ್ಲಿನವೇ. ಬೆಂಗಳೂರು, ಮೈಸೂರುಗಳಂತಹ ದೊಡ್ಡ ನಗರಗಳ ಬೆಳೆವಣಿಗೆ ಅಧಿಕವಾದಂತೆ ಮತ್ತು ಹೆದ್ದಾರಿಗಳ ನಿರ್ಮಾಣ ಹೆಚ್ಚಿದಂತೆ ಕಲ್ಲುಗಣಿಗಾರಿಕೆ ವಿಪರೀತವಾಗಿ ಬೆಳೆದಿದೆ. ಪರಿಸರವಾದಿಗಳು ಆತಂಕ ಪಡುವಷ್ಟು ಕಲ್ಲು ಕೋರೆಗಳ ಸಂಖ್ಯೆ ಹೆಚ್ಚಿದೆ. ಮರಳನ್ನು ತೆಗೆದು ಮಾರುವುದೂ ಹೆಚ್ಚಿದೆ. ಮೈಸೂರು ನಗರದ ಸುತ್ತ ದೊರೆಯುವ ಕೆಲವು ಕಲ್ಲುಗಳು ಅತ್ಯಂತ ರಮಣೀಯವಾದುವು. ಅವುಗಳ ಬಣ್ಣ ಮತ್ತು ಹೊಳಪು ಅಸಾಧಾರಣ. ಈ ಕಲ್ಲುಗಳಿಂದ ಮೈಸೂರಿನ ಅರಮನೆಯ ಅನೇಕ ಭಾಗಗಳನ್ನು ಅಲಂಕರಿಸಿದ್ದಾರೆ. ಶ್ರೀರಂಗಪಟ್ಟಣದಲ್ಲಿರುವ ಹೈದರ್, ಟಿಪ್ಪು ಇವರ ಗೋರಿಗಳ ಸುತ್ತಲೂ ಕನ್ನಡಿಯಂತಿರುವ ಕರಿಕಲ್ಲಿನ ಕಂಬಗಳು ತುರುವೇಕೆರೆ ತಾಲ್ಲೂಕಿನ ಕರಿಕಲ್ಲು ಗುಡ್ಡದಲ್ಲಿ ದೊರೆಯುವ ಕರಿಕಲ್ಲಿನಿಂದ ತಯಾರಾದುವು. ಶ್ರೀರಂಗಪಟ್ಟಣ ಮತ್ತು ಮಂಡ್ಯದ ಹತ್ತಿರವೂ ಬೆಂಗಳೂರಿನ ದಕ್ಷಿಣಕ್ಕೆ ಕನಕಪುರದ ದಾರಿಯಲ್ಲೂ ಚಾಮರಾಜನಗರ ಜಿಲ್ಲೆಯಲ್ಲೂ ಸುಂದರವಾದ ಬಗೆಬಗೆಯ ಬಣ್ಣದ ಕಲ್ಲುಗಳು ಸಿಕ್ಕುತ್ತವೆ. ನುಣುಪು ಮಾಡಿದ ಕಲ್ಲುಗಳನ್ನು ಹೊರ ದೇಶಗಳಿಗೆ ಕಳುಹಿಸುತ್ತಿದ್ದಾರೆ. ನುಣುಪು ಗ್ರಾನೈಟ್ ಕಲ್ಲನ್ನು ತೆಗೆದು ರಫ್ತು ಮಾಡುವುದು ದೊಡ್ಡ ಉದ್ಯಮವಾಗಿ ಬೆಳೆದಿದೆ.

**ಗಣಿಗಾರಿಕೆಯ ಭವಿಷ್ಯ :** ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಕೋಲಾರದ ಚಿನ್ನದ ಗಣಿಯೊಂದನ್ನು ಬಿಟ್ಟು ಬೇರೆ ಯಾವ ಖನಿಜ ಕೈಗಾರಿಕೆಯೂ ದೇಶದಲ್ಲಿರಲಿಲ್ಲ. 1900ರ ಸುಮಾರಿಗೆ ಮೈಸೂರು ಭೂಶೋಧನ ಇಲಾಖೆ ಖನಿಜಗಳಿಗಾಗಿ ಅನ್ವೇಷಣೆ ಮೊದಲುಮಾಡಿತು. ಎಪ್ಪತ್ತೈದು ವರ್ಷಗಳಲ್ಲಿ ಅನೇಕ ಬಗೆಯ ಖನಿಜಗಳನ್ನು ದೇಶದ ನಾನಾ ಭಾಗಗಳಲ್ಲಿ ಪತ್ತೆ ಮಾಡಲಾಯಿತು. ಈ ಖನಿಜಗಳನ್ನವಲಂಬಿಸಿ ಅನೇಕ ಕೈಗಾರಿಕೆಗಳು ತಲೆಯೆತ್ತಿದುವು. ಪ್ರಕೃತಿದತ್ತವಾದ ಖನಿಜ ಸಂಪತ್ತನ್ನು ಎಷ್ಟು ಜಾಣ್ಮೆಯಿಂದ ದೇಶದ ಅಭಿವೃದ್ಧಿಗೆ ಉಪಯೋಗಿಸಿ ಕೊಳ್ಳಲಾಗುತ್ತದೆಯೋ ಅಷ್ಟೇ ಪ್ರಮಾಣದಲ್ಲಿ ದೇಶ ಏಳಿಗೆಯ ದಾರಿಯಲ್ಲಿ ಮುಂದುವರಿಯಲು ಸಾಧ್ಯವಾಗುತ್ತದೆ ಎಂದು ನಂಬಲಾಗಿದೆ. ಚಿನ್ನದ ಗಣಿಗಾರಿಕೆಗೆ ಮಾಮೂಲಿ ಗಣಿಗಳಲ್ಲಲ್ಲದೆ ಚಿತ್ರದುರ್ಗದ ಅಜ್ಜನಹಳ್ಳಿ, ಹಾಸನ ಜಿಲ್ಲೆಯ ಕೆಂಪಿನಕೋಟೆ, ಗದಗಿನ ಕಬುಲಿಯತ ಕಟ್ಟೆ, ತರೀಕೆರೆಯ ಬಿಳಿಯ ಸಿದ್ದರ ಹಳ್ಳಿ -ಈ ಪ್ರದೇಶಗಳಲ್ಲಿ ಸಾಧ್ಯವಿದೆಯೆನಿಸಿದ್ದು ಈ ಅವಧಿಯಲ್ಲಿ.

ಕಬ್ಬಿಣದ ಅದುರಿನ ಕೈಗಾರಿಕೆ ಮುಂದಿನ ವರ್ಷಗಳಲ್ಲಿ ಹೆಚ್ಚು ಅಭಿವೃದ್ಧಿ ಹೊಂದುತ್ತದೆ. ರಫ್ತಿಗಾಗಿಯೇ ಅಲ್ಲದೆ, ಆಂತರಿಕ ಬೇಡಿಕೆಗಾಗಿ ಹೇರಳವಾಗಿ ಕಬ್ಬಿಣದ ಅದುರು ಬೇಕಾಗುತ್ತದೆ. ಕುದುರೆಮುಖ ಬಳಿ ದೊರೆಯುವ ಕೆಳದರ್ಜೆ ಕಬ್ಬಿಣಕಲ್ಲಿನಿಂದ ಉತ್ತಮ ಕಬ್ಬಿಣಪುಡಿಯನ್ನು ತಯಾರಿಸಿ ರಫ್ತುಮಾಡುವ ಉದ್ಯಮ ಬೃಹತ್ತಾಗಿ ಬೆಳೆದಿದೆ.

ತಾಮ್ರಕ್ಕಾಗಿ ನಡೆಯುತ್ತಿರುವ ಶೋಧನೆಗಳು ಯಶಸ್ವಿಯಾಗಿ, ದೇಶದ ಅಗತ್ಯದ ಬಳಕೆಗೆ ಬೇಕಾಗುವ ತಾಮ್ರವನ್ನು ದೇಶದಲ್ಲಿಯೇ ಪಡೆಯಲು ಸಾಧ್ಯವಾಗುತ್ತದೆಂದು ಊಹಿಸಬಹುದು. ಪಶ್ಚಿಮ ಕರಾವಳಿಯಲ್ಲಿ ದೊರೆಯುವ ಬಾಕ್ಸೈಟ್ ಆಧಾರದ ಮೇಲೆ ಬೃಹತ್ತಾಗಿ ಅಲ್ಯುಮಿನಿಯಂ ಲೋಹ ಕೈಗಾರಿಕೆ ರೂಪುಗೊಳ್ಳುವುದು ಸಾಧ್ಯವೆನಿಸಿದೆ.

ಒಂದು ದೇಶದಲ್ಲಿ ವ್ಯಾಪಾರ, ವಾಣಿಜ್ಯ, ಕೈಗಾರಿಕೆ ಏಳಿಗೆ ಹೊಂದಬೇಕಾದರೆ ಅದಕ್ಕೆ ಖನಿಜಗಳು ಮೂಲ ಆಧಾರ. ಕರ್ನಾಟಕದಲ್ಲಿ ಉಪಯುಕ್ತವಾದ ಅನೇಕ ಖನಿಜಗಳು ದೊರೆಯುತ್ತವೆ. ವಿವಿಧ ಖನಿಜಗಳನ್ನು ಗಣಿಗಾರಿಕೆಯ ಮೂಲಕ ತೆಗೆಯುವುದರಿಂದ ರಾಜ್ಯಕ್ಕೆ ಬರುತ್ತಿರುವ ವರಮಾನ ಹೆಚ್ಚಿದೆ. ಖನಿಜಗಳನ್ನು ಕಚ್ಚಾಮಾಲಿನಂತೆ ಹೊರದೇಶಗಳಿಗೆ ರಫ್ತು ಮಾಡುವುದರಿಂದ ದೇಶದ ಏಳಿಗೆಯಾಗುವುದಿಲ್ಲ; ಬುದ್ಧಿ ಬೆಳೆಯುವುದಿಲ್ಲ; ಉದ್ಯೋಗಾವಕಾಶ ಹೆಚ್ಚುವುದಿಲ್ಲ. ಇವು ಹೆಚ್ಚಬೇಕಾದರೆ ಖನಿಜಗಳನ್ನು ಅವಲಂಬಿಸಿದ ಅನೇಕ ಕೈಗಾರಿಕೆಗಳು ಹುಟ್ಟುವಂತಾಗಬೇಕು. ಕಚ್ಚಾಮಾಲುಗಳ ರಫ್ತು ನಿಂತು ಲೋಹ ಉತ್ಪಾದನೆ ಹೆಚ್ಚಾಗಬೇಕು. ಇದು ಸಾರ್ವಜನಿಕ ಅಭಿಪ್ರಾಯ ಮತ್ತು ತಜ್ಞರ ಮತ. ಈ ದಾರಿಯಲ್ಲಿ ಕರ್ನಾಟಕ ಮುಂದೆ ಮುಂದೆ ಹೆಜ್ಜೆ ಇಡುವ ಸೂಚನೆಗಳು ಕಾಣುತ್ತಿವೆ. ಗಣಿಗಾರಿಕೆ ನಿಯಂತ್ರಣ ಮತ್ತು ಪರಿಸರ ಸಂರಕ್ಷಣೆಗಾಗಿ ಸಹ ಯೋಜನೆಗಳನ್ನು ರೂಪಿಸಲಾಗಿದೆ. (ಬಿ.ಪಿ.ಆರ್.)

**ಗಣೇಕಲ್ ಸಂಗವಿಭು :** ಹತ್ತೊಂಬತ್ತನೆಯ ಶತಮಾನದಲ್ಲಿದ್ದ ವೀರಶೈವ ಕವಿ. ಭುವನೈಕನಾಯಕೀಶತಕ, ಬಸವಶತಕ, ಪಂಪಾಶತಕ, ಕುಮಾರವಿಜಯ ಎಂಬ ಗ್ರಂಥಗಳ ಕರ್ತೃ. ಇವನಿಗೆ ಸಂಗಪ್ಪ ಎಂಬ ಹೆಸರೂ ಇದೆ. ಈತ ತನ್ನ ಹುಟ್ಟೂರನ್ನಾಗಲಿ ಗಣೇಕಲ್ಲಿನ ವಿಚಾರವನ್ನಾಗಲಿ ಸ್ಪಷ್ಟವಾಗಿ ತನ್ನ ಕಾವ್ಯಗಳಲ್ಲಿ ಹೇಳಿಕೊಂಡಿಲ್ಲ. ಆದರೆ ಕುಮಾರವಿಜಯದಲ್ಲಿನ ಕೆಲವು ಆಧಾರಗಳ ಮೇಲೆ ಈತ ಆದವಾನಿ ತಾಲ್ಲೂಕಿನ ನಂದವಾರ ಗ್ರಾಮದ ನಾಡಗೌಡ ಮನೆತನದವನಾಗಿದ್ದು, ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ಗಣೇಕಲ್ ನಾಡಗೌಡರ ಮನೆತನದ ಹೆಣ್ಣನ್ನು ಮದುವೆಯಾಗಿ ಸಂಸ್ಥಾನದ ರಾಜ್ಯಕಾರಭಾರ ಮಾಡುತ್ತ ತನ್ನ ಜೀವಿತದ ಬಹು ಕಾಲವನ್ನು (1832-56) ಗಣೇಕಲ್ಲಿನಲ್ಲಿ ಕಳೆದು ತನ್ನ ಕಾವ್ಯಗಳನ್ನು ರಚಿಸಿರಬೇಕೆಂದು ಹೇಳಬಹುದು. ಈ ಕಾವ್ಯಗಳ ಹಸ್ತಪ್ರತಿಗಳೆಲ್ಲ ಇವನ ಹುಟ್ಟೂರಾದ ನಂದವಾರದ ಪರಿಸರದಲ್ಲಿ ಸಿಗದೆ ರಾಯಚೂರು ಜಿಲ್ಲೆಯಲ್ಲಿಯೇ ದೊರೆತಿವೆ. ಗಣೇಕಲ್ ಸುತ್ತಣ ಪ್ರದೇಶದಲ್ಲಿ ಈತ ರಚಿಸಿದ ಶತಕಗಳನ್ನೂ ಚಂಪೂಕಾವ್ಯಗಳನ್ನೂ ಓದುವ ಪರಿಪಾಠವಿದೆ. ಲಕ್ಷ್ಮೀಶ ನನ್ನ ತಮ್ಮ, ಷಡಕ್ಷರಿ ಅಣ್ಣ ಎಂದು ಈತ ಹೇಳಿಕೊಂಡಿರುವುದನ್ನು ನೋಡಿದರೆ ಈ ಇಬ್ಬರು ಜನಪ್ರಿಯ ಕವಿಗಳ ಕಾವ್ಯಗಳನ್ನು ಈತ ವಿಶೇಷವಾಗಿ ಅಭ್ಯಾಸ ಮಾಡಿ ಮೈಗೂಡಿಸಿ ಕೊಂಡಿದ್ದನೆಂದು ತೋರುತ್ತದೆ.

ಕುಮಾರವಿಜಯದಲ್ಲಿ ಮಹಾಕಾವ್ಯದ ಲಕ್ಷಣಗಳೆಲ್ಲ ಇವೆ. ಸತ್ಕವಿ ಕಾಳಿದಾಸ ತಾ ಪೇಳಿದ ಸತ್ಕಥಾಸರಣಿ ವೈಖರಿಯಂ ಬಣ್ಣಿಪೆಂ ಎಂದು ಕುಮಾರಸಂಭವದತ್ತ ಕವಿ ಬೆರಳು ಮಾಡಿ ತೋರಿಸಿದರೂ ಇದು ಕಾಳಿದಾಸನ ಯಥಾವತ್ ಅನುವಾದವಲ್ಲ. ಶತಕಗಳಲ್ಲಿ ಶುಷ್ಕನೀತಿಯಿಲ್ಲ; ಹೇಳುವುದನ್ನು ರಸವತ್ತಾಗಿ ಹೇಳಿದ್ದಾನೆ.

ಭುವನೈಕನಾಯಕಿಶತಕದಲ್ಲಿ ಪಾರ್ವತಿಯ ವರ್ಣನೆ ಮಾಡುವುದರಲ್ಲಿ ಕವಿಯ ಭಕ್ತಿಗೌರವಗಳ ಜೊತೆಗೆ ಅವನ ದೃಷ್ಟಿ ಆಕೆಯ ಅಲೌಕಿಕ ಸೌಂದರ್ಯವನ್ನೂ ಕಂಡಿದೆ. ಪಂಪಾಶತಕವಂತೂ ತುಂಬಿ ಹರಿಯುವ ಪ್ರವಾಹದಂತೆ ನಿರರ್ಗಳವಾಗಿ ಸಾಗುತ್ತದೆ. ಕವಿ ತನ್ನ ಕಾವ್ಯಗಳಲ್ಲಿ ಸಂಸ್ಕೃತಭೂಯಿಷ್ಠವಾದ ಭಾಷೆಯಷ್ಟೇ ಸಮರ್ಥವಾಗಿ ಅಚ್ಚಗನ್ನಡ ಮತ್ತು ಪ್ರಾದೇಶಿಕ ಶಬ್ದಗಳನ್ನು ಸುಂದರವಾಗಿ ಬಳಸಿದ್ದಾನೆ. ಷಡಕ್ಷರಿಯ ಕಾಲಕ್ಕೆ ನಿಂತುಹೋಗಿದ್ದ ಚಂಪೂಯುಗವನ್ನು ತನ್ನವರೆಗೂ ನಡೆಸಿಕೊಂಡು ಬಂದ ಕೀರ್ತಿ ಸಂಗವಿಭುವಿಗೆ ಸಲ್ಲುತ್ತದೆ. (ಜಿ.ಆರ್.ಪಿ.)

**ಗಣೇಶ್, ಎಂ. ಪಿ. :** 1946-. ಒಲಂಪಿಕ್ಸ್‌ನಲ್ಲಿ ಭಾಗವಹಿಸಿದ ಪ್ರಸಿದ್ಧ ಹಾಕಿ ಆಟಗಾರ. 1946 ಜುಲೈ 8ರಂದು ಮಡಿಕೇರಿಯಲ್ಲಿ ಜನಿಸಿದರು. ಪ್ರಾರಂಭದ ದಿನಗಳಲ್ಲಿ ಫುಟ್‌ಬಾಲ್ ಆಟವನ್ನು ಆಡುತ್ತಿದ್ದ ಇವರು 1964ರಲ್ಲಿ ಸೈನ್ಯಕ್ಕೆ ಸೇರಿದ ಅನಂತರ ಹಾಕಿ ಆಟವನ್ನು ಮೈಗೂಡಿಸಿಕೊಂಡರು. ರಾಷ್ಟ್ರೀಯ ಹಾಕಿ ಚಾಂಪಿಯನ್‌ಶಿಪ್‌ನಲ್ಲಿ ಸರ್ವಿಸಸ್ ತಂಡದ ಆಟಗಾರರಾಗಿ 1968-73ರ ತನಕ ಮುಂಬಯಿಯನ್ನು ಪ್ರತಿನಿಧಿಸಿದರು. ಆಟದ ಶೈಲಿ ಹಾಗೂ ಸಾಧನೆಯಿಂದಾಗಿ 1970ರಲ್ಲಿ ಭಾರತ ಹಾಕಿ ತಂಡದ ಆಟಗಾರರಾಗಿ ಆಯ್ಕೆಗೊಂಡರು. ಇವರು ಏಷ್ಯನ್ ಕ್ರೀಡೆಗಳಲ್ಲಿ ಎರಡು ಬಾರಿ ಭಾರತವನ್ನು ಪ್ರತಿನಿಧಿಸಿದರು. 1970ರಲ್ಲಿ ಬಾಂಕಾಕ್, 1974ರಲ್ಲಿ ತೆಹರಾನ್ ಈ ಎರಡೂ ಸಂದರ್ಭಗಳಲ್ಲಿ ಭಾರತ ತಂಡ ಪಾಕಿಸ್ತಾನಕ್ಕೆ ಸೋತು ಬೆಳ್ಳಿಯ ಪದಕದೊಂದಿಗೆ ಹಿಂದಿರುಗಿತು. 1969ರಿಂದ 74ರ ತನಕ ಹಲವಾರು ಪ್ರದರ್ಶನ ಹಾಗೂ ಟೆಸ್ಟ್ ಪಂದ್ಯಾಟಗಳನ್ನು ಆಡಿದ ಇವರು 1971ರಲ್ಲಿ ಬಾರ್ಸಿಲೋನದಲ್ಲಿ ನಡೆದ ಮೊದಲನೆಯ ವಿಶ್ವಕಪ್ ಪಂದ್ಯಾಟದಲ್ಲಿ ಆಟಗಾರರಾಗಿ ಭಾಗವಹಿಸಿ ಭಾರತಕ್ಕೆ ಕಂಚಿನ ಪದಕವನ್ನು ತಂದುಕೊಟ್ಟರು. 1972ರ ವಿಶ್ವಕಪ್ ಪಂದ್ಯಾಟದಲ್ಲಿ ಮತ್ತೊಮ್ಮೆ ಭಾರತ ಬೆಳ್ಳಿಯ ಪದಕ ಪಡೆಯಲು ನೆರವಾದರು. ಇವರು 1972ರ ಮ್ಯೂನಿಚ್ ಒಲಂಪಿಕ್ಸ್‌ನಲ್ಲಿ ಭಾರತ ತಂಡದ ಆಟಗಾರರಾಗಿದ್ದರು. ಭಾರತಕ್ಕೆ ಆಗ ಕಂಚಿನ ಪದಕ ದೊರಕಿತು. ಇಷ್ಟಲ್ಲದೆ 1972ರ ವಿಶ್ವ 11ರ ತಂಡದಲ್ಲಿ ಇವರು ಸ್ಥಾನ ಗಳಿಸಿದ್ದರು. 1970-74ರ ತನಕ ಏಷ್ಯ 11ರ ತಂಡದ ಆಟಗಾರರಾಗಿದ್ದರು.

ಗಣೇಶ್ ಒಬ್ಬ ಒಳ್ಳೆಯ ತರಬೇತುದಾರರು. 1974-77ರಲ್ಲಿ ಇವರು ಇಟಲಿಯ ತಂಡವೊಂದಕ್ಕೆ ತರಬೇತುದಾರರಾಗಿ ಸೇವೆ ಸಲ್ಲಿಸಿದರು. ಇವರು 1980ರ ಮಾಸ್ಕೋ ಒಲಂಪಿಕ್ ತಂಡದ ಹಾಕಿ ತರಬೇತುದಾರರಾಗಿದ್ದರು. ಆಗ ಭಾರತಕ್ಕೆ ಚಿನ್ನದ ಪದಕ ದೊರಕಿತು. ಭಾರತದ ಕಿರಿಯರ ತಂಡಕ್ಕೆ ಇವರು 1981-85ರಲ್ಲಿ ರಾಷ್ಟ್ರೀಯ ತರಬೇತುದಾರರಾಗಿದ್ದರು.

ಕರ್ನಾಟಕ ಸರ್ಕಾರ 1981ರಲ್ಲಿ ಇವರನ್ನು ಕ್ರೀಡೆಯ ಬೆಳೆವಣಿಗೆಗಾಗಿ ವಿಶೇಷ ಅಧಿಕಾರಿಯಾಗಿ ನೇಮಿಸಿತು. ಅನಂತರ 1986ರಲ್ಲಿ ಭಾರತೀಯ ಕ್ರೀಡಾ ಪ್ರಾಧಿಕಾರದ ಉಪನಿರ್ದೇಶಕರಾಗಿ, ಪ್ರಾಂತೀಯ ನಿರ್ದೇಶಕರಾಗಿ (1991), ದೈಹಿಕ ಶಿಕ್ಷಣದ ಕಾರ್ಯನಿರ್ವಾಹಕ ನಿರ್ದೇಶಕರಾಗಿ (1996) ಜವಾಬ್ದಾರಿಯನ್ನು ಹೊತ್ತು ಕೆಲಸ ನಿರ್ವಹಿಸಿದರು. ಪ್ರಸ್ತುತ ದೆಹಲಿಯ ಭಾರತೀಯ ಕ್ರೀಡಾಪ್ರಾಧಿಕಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು ಬೆಂಗಳೂರು ವಿಶ್ವವಿದ್ಯಾಲಯದಿಂದ ಇಂಗ್ಲಿಷಿನಲ್ಲಿ ಎಂ.ಎ. ಪದವಿಯನ್ನೂ ಅಳಗಪ್ಪ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿಯನ್ನೂ ಪಡೆದಿದ್ದಾರೆ.

ಇವರಿಗೆ ಕರ್ನಾಟಕ ಸರ್ಕಾರದ ಹಲವು ಪ್ರಶಸ್ತಿಗಳು ಮತ್ತು ಭಾರತ ಸರ್ಕಾರದ ಅರ್ಜುನ ಪ್ರಶಸ್ತಿಯೂ (1973) ಲಭಿಸಿವೆ. (ಎಸ್.ಆರ್.ಯು)

**ಗದಗ :** ಕರ್ನಾಟಕ ರಾಜ್ಯದ ಒಂದು ಜಿಲ್ಲೆ, ತಾಲ್ಲೂಕು ಹಾಗೂ ಅವುಗಳ ಆಡಳಿತ ಕೇಂದ್ರ. 1997ರ ಜಿಲ್ಲಾ ಮರುವಿಂಗಡಣಾ ಯೋಜನೆಯ ಮೇರೆಗೆ ಧಾರವಾಡ ಜಿಲ್ಲೆಯ ಐದು ತಾಲ್ಲೂಕುಗಳನ್ನು ಬೇರ್ಪಡಿಸಿ ಗದಗ ಜಿಲ್ಲೆಯನ್ನು ರಚಿಸಲಾಯಿತು. ಗದಗ, ರೋಣ, ನರಗುಂದ, ಮುಂಡರಗಿ ಮತ್ತು ಶಿರಹಟ್ಟಿ - ಇವು ತಾಲ್ಲೂಕುಗಳು. ಜಿಲ್ಲೆಯ ಉತ್ತರಕ್ಕೆ ಬಾಗಲಕೋಟೆ, ದಕ್ಷಿಣಕ್ಕೆ ಹಾವೇರಿ, ಪೂರ್ವಕ್ಕೆ ಕೊಪ್ಪಳ ಹಾಗೂ ಬಳ್ಳಾರಿ, ಪಶ್ಚಿಮಕ್ಕೆ ಧಾರವಾಡ ಮತ್ತು ಬೆಳಗಾಂವಿ ಜಿಲ್ಲೆಗಳು ಇದರ ಮೇರೆಗಳು. ಜಿಲ್ಲೆಯ ವಿಸ್ತೀರ್ಣ 4,657ಚ.ಕಿಮೀ. ಹೋಬಳಿಗಳು 11, ಗ್ರಾಮಗಳು 312. ಜನಸಂಖ್ಯೆ 8,59,042.

ಕರ್ನಾಟಕದ ಉತ್ತರ ಮಧ್ಯ ಭಾಗದಲ್ಲಿರುವ ಈ ಜಿಲ್ಲೆಯು ಪಶ್ಚಿಮದಿಂದ ಪೂರ್ವದತ್ತ ಇಳಿಜಾರಾಗಿರುವ ಪ್ರದೇಶವನ್ನು ಹೊಂದಿದೆ. ಜಿಲ್ಲೆ ಪಾರಂಪರಿಕವಾಗಿ ಬೆಳವಲನಾಡೆಂದು ಪ್ರಸಿದ್ಧವಾಗಿದೆ. ಇದು ಫಲವತ್ತಾದ ಕಪ್ಪುಮಣ್ಣಿನಿಂದ ಕೂಡಿದ್ದು ಸಾಧಾರಣ ಬೆಟ್ಟಗುಡ್ಡಗಳಿಂದ ಕೂಡಿದೆ. ಮುಂಡರಗಿ ತಾಲ್ಲೂಕಿನ ಕಪ್ಪತಗುಡ್ಡ, ನರಗುಂದ ಮತ್ತು ಗಜೇಂದ್ರಗಡದಲ್ಲಿ ಮತ್ತು ಗದಗದ ಬಳಿ ಬೆಟ್ಟಸಾಲುಗಳಿವೆ. ಈ ಬೆಟ್ಟಶ್ರೇಣಿಯ ಅತ್ಯಂತ ಹೆಚ್ಚಿನ ಎತ್ತರ 937ಮೀ. ಈ ಶ್ರೇಣಿ ಗದಗದಿಂದ ಆಗ್ನೇಯದಲ್ಲಿ 48ಕಿಮೀ ಉದ್ದವಾಗಿ ಹಬ್ಬಿ ಎರಡು ತುದಿಗಳಲ್ಲೂ ಸು.6ಕಿಮೀ ಅಗಲವಿದೆ. ಮಧ್ಯದಲ್ಲಿ 16ಕಿಮೀ ಅಗಲವಾಗಿ ವ್ಯಾಪಿಸಿದೆ. ಧಾರವಾಡ ಬಂಡೆಗಳಿಂದ ರಚಿತವಾಗಿರುವ ಪಳೆಯುಳಿಕೆಯ ಬೆಟ್ಟಗಳು ಗದಗದಿಂದ ದಕ್ಷಿಣಕ್ಕೆ ತುಂಗಭದ್ರಾದ ಕಡೆ ಹರಡಿವೆ. ಇಲ್ಲಿ ಕಣಿವೆಗಳು, ಕಂದರಗಳು ಹೆಚ್ಚು. ಎತ್ತರದ ಪ್ರದೇಶಗಳು ಬೋಳಾಗಿವೆ ಅಲ್ಲಿ ದಟ್ಟವಾಗಿ ಹುಲ್ಲು ಬೆಳೆಯುತ್ತದೆ. ಇಲ್ಲಿನ ಭೂಮಿಯ ಫಲವತ್ತತೆ ಪೂರ್ವಕ್ಕೆ ಬಂದಂತೆಲ್ಲ ಕಡಿಮೆಯಾಗಿದೆ. ಜಿಲ್ಲೆಯ ಒಟ್ಟು ಅರಣ್ಯ ಪ್ರದೇಶ 3,264 ಹೆಕ್ಟೇರ್.

ಜಿಲ್ಲೆಯ ಬಹುಭಾಗ ಪ್ರಾಚೀನ ಬೆಣಚುಕಲ್ಲು ಮತ್ತು ಪದರ ಶಿಲೆಗಳಿಂದ ಕೂಡಿದೆ. ಇವು ಅಗ್ನಿ ಮತ್ತು ಜಲಶಿಲೆಗಳ ಸಂಯೋಗದಿಂದ ರೂಪಾಂತರ ಹೊಂದಿ ಪಸರಿಸಿವೆ. ಪದರ ಶಿಲೆ, ಗ್ರಾನೈಟ್ ಮತ್ತು ಬೆಣಚುಕಲ್ಲು ಶಿಲಾ ವರ್ಗವು ಎಲ್ಲ ದಿಕ್ಕುಗಳಲ್ಲೂ ಹರಡಿದೆ. ಮ್ಯಾಂಗನೀಸ್ ಇಲ್ಲಿನ ಪ್ರಮುಖ ಅದಿರುಗಳಲ್ಲೊಂದು. ಕಪ್ಪತಗುಡ್ಡದಿಂದ ಪ್ರಾರಂಭವಾದ ದೋಣಿ ಸಾಲಿನಲ್ಲಿ ತಾಮ್ರದ ಅದಿರಿನ ಅಂಶ ಕಂಡು ಬಂದಿದೆ. ಸೊರಟೂರು ಮತ್ತು ಜಲ್ಲಿಗೇರಿಗಳಲ್ಲಿ ಪೈರೈಟ್ಸ್ ಇದೆ. ಕಪ್ಪತ್ತ ಗುಡ್ಡ ಸಾಲಿನಲ್ಲಿ ಕಬ್ಬಿಣದ ಅದುರು ಹೆಚ್ಚು ಪ್ರಮಾಣದಲ್ಲಿದೆ. ಇಲ್ಲಿ ಹೆಮಟೈಟ್ ನಿಕ್ಷೇಪಗಳಿವೆ. ಆದರೆ ಆರ್ಥಿಕ ದೃಷ್ಟಿಯಿಂದ ಇದು ಹೆಚ್ಚು ಲಾಭಕರವಾಗಿಲ್ಲ. ಚಿನ್ನದ ಅದುರು ಅಲ್ಲಲ್ಲಿ ಕಂಡುಬಂದರೂ ಅಷ್ಟು ಸಾಂದ್ರವಾಗಿಲ್ಲ. ಜಿಲ್ಲೆಯ ಕೆಲವೆಡೆ ಬಳಪದ ಕಲ್ಲು ಕಂಡುಬರುತ್ತದೆ. ಜಿಲ್ಲೆಯ ಕೆಲವು ಕಡೆಗಳಲ್ಲಿ ಹೆಮಟೈಟ್ ನಿಕ್ಷೇಪಗಳು ಕಂಡುಬಂದಿವೆ.

ಇಲ್ಲಿನ ಮಣ್ಣು ವಿವಿಧ ಪ್ರಕಾರದ ವಿಭಜಿತ ಶಿಲಾ ಮಿಶ್ರಣದಿಂದ ಕೂಡಿದೆ. ಹುಳಕೆರೆ, ಎರೆ, ಕೆಂಪು ಮಸಾರಿ, ಮಡಿಕಟ್ಟು, ಮತ್ತು ರೇವೆ ಮಣ್ಣುಗಳು ಸೇರಿವೆ. ರೋಣ, ಗದಗ, ಶಿರಹಟ್ಟಿ ಮತ್ತು ಮುಂಡರಗಿ ತಾಲ್ಲೂಕುಗಳಲ್ಲಿ ಮರಳುಮಿಶ್ರಿತ ಮಣ್ಣು ಕಂಡುಬರುತ್ತದೆ. ರೋಣ ಮತ್ತು ನರಗುಂದ ತಾಲ್ಲೂಕುಗಳಲ್ಲಿ ಮಲಪ್ರಭಾ ನದಿಯ ಬಲದಂಡೆಯುದ್ದಕ್ಕೂ ಶಿರಹಟ್ಟಿ ಮತ್ತು ಮುಂಡರಗಿ ತಾಲ್ಲೂಕುಗಳಲ್ಲಿ ತುಂಗಭದ್ರಾ ನದಿಯ ಎಡದಂಡೆಯುದ್ದಕ್ಕೂ ರೇವೆಮಣ್ಣು ಹರಡಿದೆ. ಕಪ್ಪು ಮಣ್ಣು ಫಲವತ್ತಾಗಿದೆ. ಇದು ಜಿಲ್ಲೆಯ ರೋಣ, ಗದಗ, ನರಗುಂದ ಮತ್ತು ಮುಂಡರಗಿ ತಾಲ್ಲೂಕುಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

ವಾಯುಗುಣ: ಬೇಸಗೆಯಲ್ಲಿ (ಏಪ್ರಿಲ್-ಮೇ) ಅಧಿಕ ಉಷ್ಣಾಂಶವಿರುವುದನ್ನು ಬಿಟ್ಟರೆ ಉಳಿದಂತೆ ಹಿತಕರವಾಗಿರುತ್ತದೆ. ಕೆಲವು ವೇಳೆ ಆ ಅವಧಿಯಲ್ಲಿ 40.4ಸೆ. ನಿಂದ 39.6ಸೆ. ವರೆಗೂ ಇರುತ್ತದೆ. ಜೂನ್ ತಿಂಗಳಲ್ಲಿ ಮುಂಗಾರು ಮಳೆ ಪ್ರಾರಂಭವಾದಾಗ ಉಷ್ಣಾಂಶ ತಗ್ಗುತ್ತದೆ. ಸಾಮಾನ್ಯವಾಗಿ ಜೂನ್-ನವೆಂಬರ್‌ಗಳಲ್ಲಿ ವಾರ್ಷಿಕ ಮಳೆಯ ಅಧಿಕ ಭಾಗ ಬೀಳುತ್ತದೆ. ಸರಾಸರಿ ವಾರ್ಷಿಕ ಮಳೆ 612.30ಮಿಮೀ. ಇದು ಸಾಧಾರಣ ಮಳೆ ಪ್ರದೇಶ. ಮುಂಗಾರು ಮಾರುತದ ಅವಧಿಯಲ್ಲಿ ಬೀಳುವ ಮಳೆ ಹಿಂಗಾರು ಮಾರುತದ ಅವಧಿಗಿಂತ ಸ್ವಲ್ಪ ಹೆಚ್ಚಾಗಿರುತ್ತದೆ. ಹಿಂಗಾರಿನಲ್ಲಿ ಚಂಡಮಾರುತದ ಮಳೆಗಳು

ಬೀಳುವುದುಂಟು. ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಮುಂಗಾರು ಅಧಿಕವಾಗಿ ಬಿದ್ದರೆ ಪೂರ್ವ ಭಾಗದಲ್ಲಿ ಹಿಂಗಾರು ಬೀಳುತ್ತದೆ. ಸರಾಸರಿ ಲೆಕ್ಕದಲ್ಲಿ ಪಶ್ಚಿಮ ಭಾಗದಲ್ಲಿ ಮಳೆ ಸರಾಸರಿ ಸ್ವಲ್ಪ ಅಧಿಕ.

ಜಿಲ್ಲೆಯಲ್ಲಿ ಯಾವ ಪ್ರಮುಖ ನದಿಯೂ ಹರಿಯುವುದಿಲ್ಲ. ತುಂಗಭದ್ರಾ ನದಿ ದಕ್ಷಿಣದ ಅಂಚಿನಲ್ಲಿ ಹರಿದರೆ ಮಲಪ್ರಭಾ ನದಿ ಉತ್ತರದ ಅಂಚಿನಲ್ಲಿ ಹರಿಯುತ್ತದೆ. ಶಿರಹಟ್ಟಿ ಮತ್ತು ಮುಂಡರಗಿ ತಾಲ್ಲೂಕುಗಳಿಗೂ ಬಳ್ಳಾರಿ ಜಿಲ್ಲೆಗೂ ಮೇರೆಯಾಗಿ ತುಂಗಭದ್ರಾ ನದಿ ಹರಿಯುತ್ತದೆ. ಶಿರಹಟ್ಟಿ ಹಳ್ಳ ಮತ್ತು ಹಿರೇಹಳ್ಳಗಳು ಈ ಜಿಲ್ಲೆಯಲ್ಲಿ ಹುಟ್ಟಿ ಆಗ್ನೇಯಾಭಿಮುಖವಾಗಿ ಹರಿದು ತುಂಗಭದ್ರಾ ನದಿಯನ್ನು ಸೇರಿಕೊಳ್ಳುತ್ತವೆ. ಮಲಪ್ರಭಾ ನದಿ ಈ ಜಿಲ್ಲೆಗೂ ಬಾಗಲಕೋಟೆ ಜಿಲ್ಲೆಗೂ ಸರಹದ್ದಾಗಿ ಹರಿಯುತ್ತದೆ. ನರಗುಂದ ತಾಲ್ಲೂಕಿನ ಲಕ್ಮಾಪುರದ ಬಳಿ ಜಿಲ್ಲೆಗೆ ತಾಗಿ ಹರಿದು ರೋಣ ತಾಲ್ಲೂಕಿನ ಹಡಗಲಿ ಗ್ರಾಮದವರೆಗೂ ಮುಂದುವರಿಯುತ್ತದೆ. ಮಲಪ್ರಭಾ ನದಿಗೆ ಈ ಜಿಲ್ಲೆಯ ಮೂಲಕ ಹರಿಯುವ ಮುಖ್ಯ ಉಪನದಿಗಳಲ್ಲೊಂದಾದ ಬೆಣ್ಣೆಹಳ್ಳ ರೋಣ ತಾಲ್ಲೂಕಿನ ಮೆಣಸಿಗೆಯ ಬಳಿ ಅದನ್ನು ಸೇರುತ್ತದೆ. ಈ ಹೊಳೆಗೆ ಗೂಗಿಹಳ್ಳ, ತುಪರಿಹಳ್ಳ, ಹಂದಿಗನ ಹಳ್ಳಗಳು ಕೂಡಿಕೊಳ್ಳುತ್ತವೆ. ಇನ್ನೊಂದು ಹಿರೇಹಳ್ಳ. ಅದನ್ನು ಉತ್ತರಾಭಿಮುಖವಾಗಿ ಗದಗ ಮತ್ತು ರೋಣ ತಾಲ್ಲೂಕುಗಳಲ್ಲಿ ಹರಿದು ಬೇಲೆರಿಯ ಹತ್ತಿರ ಮಲಪ್ರಭಾ ನದಿಯನ್ನು ಸೇರುತ್ತದೆ. ಪವಡಿ ಬಳಿ ಹರಿಯುವ ಆಲೂರು ಹಳ್ಳ ಈ ನದಿಗೆ ಸೇರುವ ಉಪಹಳ್ಳ.



ತೋಂಟದಾರ್ಯ ಮಠ, ಗದಗ

**ವ್ಯವಸಾಯ ಮತ್ತು ನೀರಾವರಿ :** ಈ ಜಿಲ್ಲೆಯಲ್ಲಿ ಸೇ.70 ಮಂದಿ ವ್ಯವಸಾಯವನ್ನು ಅವಲಂಬಿಸಿದ್ದಾರೆ. ಪಶ್ಚಿಮ ಕರಾವಳಿಯಿಂದ ಬೀಸುವ ಮುಂಗಾರು ಮಾರುತಗಳು ಇಲ್ಲಿಯ ವ್ಯವಸಾಯಕ್ಕೆ ಹೆಚ್ಚು ಅನುಕೂಲಕರವಾಗಿವೆ. ಈಶಾನ್ಯ ಮಾರುತಗಳಿಂದ ಹಿಂಗಾರು ಮಳೆ ಜಿಲ್ಲೆಯ ಎಲ್ಲ ಭಾಗಗಳಿಗೆ ಸಾಧಾರಣವಾಗಿ ಬೀಳುತ್ತದೆ. ಇಲ್ಲಿನ ವ್ಯವಸಾಯದ ಜಮೀನು, ಮಳೆ ಮಾರುತಗಳನ್ನು ಅವಲಂಬಿಸಿದೆ. ಒಣ ಬೆಳೆಗಳು ಬೆಳೆಯುವ ಜಿರಾಯತು ಜಮೀನು ಮತ್ತು ನೀರಾವರಿ ಬೆಳೆ ಬೆಳೆಯುವ ಬಾಗಾಯತು ಜಮೀನುಗಳೆಂದು ಇಲ್ಲಿಯ ಬೇಸಾಯದ ನೆಲವನ್ನು ವಿಂಗಡಿಸಬಹುದು. ಈ ಜಿಲ್ಲೆಯಲ್ಲಿ ಪ್ರಾಚೀನ ಕಾಲದಲ್ಲಿ ಕಟ್ಟಿದ ಅನೇಕ ಕೆರೆಗಳು ಮತ್ತು ಜಲಾಶಯಗಳು ಇಂದಿಗೂ ಉಪಯುಕ್ತವಾಗಿವೆ. ಶಿರಹಟ್ಟಿ ತಾಲ್ಲೂಕಿನ ಮಜ್ಜೂರು, ಮಾಗಡಿ, ಶಿಟ್ಟಿಕೇರಿ, ಮುಂಡರಗಿ ತಾಲ್ಲೂಕಿನ ಡಂಬಳ ಕೆರೆಗಳು ಹೆಸರಿಸಬಹುದಾದಂಥವು. ಮಲಪ್ರಭಾ ಬಲದಂಡೆ ಯೋಜನೆಯಿಂದ ನರಗುಂದ, ಗದಗ ಮತ್ತು ರೋಣ ತಾಲ್ಲೂಕುಗಳಿಗೆ ನೀರಾವರಿ ಸೌಲಭ್ಯ ದೊರಕುತ್ತದೆ. ತುಂಗಭದ್ರಾ ನದಿಯಿಂದ ತೀರ ಪ್ರದೇಶದ ಜಮೀನುಗಳಿಗೆ ನೀರಾವರಿ ಅನುಕೂಲ ಒದಗಿದೆ. ಜಿಲ್ಲೆಯಲ್ಲಿ ಕಾಲುವೆಗಳಿಂದ 34,621 ಕೆರೆಗಳಿಂದ 2,030 ಮತ್ತು ಬಾವಿಗಳಿಂದ 7,373 ಹೆಕ್ಟೇರ್ ಪ್ರದೇಶ ನೀರಾವರಿಗೆ ಒಳಪಟ್ಟಿದೆ. ಈ ಜಿಲ್ಲೆಯು ಎಲ್ಲ ತಾಲ್ಲೂಕುಗಳಲ್ಲೂ ವಿಶೇಷವಾಗಿ ಜೋಳ ಬೆಳೆಯುತ್ತದೆ. ಬೆಳವಲನಾಡು ಗೋದಿ, ಜೋಳ, ಹತ್ತಿ, ಗೋವಿನಜೋಳಕ್ಕೆ (ಮೆಕ್ಕೆಜೋಳ) ಪ್ರಸಿದ್ಧ. ಗದಗನ್ನು ರಾಜ್ಯದ ಗೋದಿಯ ಕಣಜವೆಂದು ಕರೆಯುತ್ತಾರೆ. ಶಿರಹಟ್ಟಿ ತಾಲ್ಲೂಕಿನಲ್ಲಿ ಎಳ್ಳನ್ನು ಬೆಳೆಯುತ್ತಾರೆ. ಹೆಸರು, ಕಡಲೆ, ಹುರುಳಿ, ತೊಗರಿ ಮುಂತಾದ ಬೆಳೆಗಳು ಸಾಮಾನ್ಯವಾಗಿ ಜಿಲ್ಲೆಯ ಎಲ್ಲ ಭಾಗಗಳಲ್ಲೂ ಬೆಳೆಯುತ್ತವೆ. ಎಣ್ಣೆ ಕಾಳುಗಳನ್ನೂ ಮುಖ್ಯವಾಗಿ ಶೇಂಗಾವನ್ನೂ ಶಿರಹಟ್ಟಿ, ಮುಂಡರಗಿ, ರೋಣ ತಾಲ್ಲೂಕುಗಳಲ್ಲಿ ಬೆಳೆದರೆ, ಕುಸುಬೆ, ಎಳ್ಳು, ಔಡಲ ಇವು ಬೆಳವಲನಾಡಿನಲ್ಲಿ ವಿಶೇಷವಾಗಿ ಬೆಳೆಯುತ್ತವೆ. ಜಿಲ್ಲೆಯ ಕಪ್ಪು ಮಣ್ಣಿನ ಪ್ರದೇಶದಲ್ಲಿ ಹೆಚ್ಚಾಗಿ ಹತ್ತಿ ಬೆಳೆಯುವುದು. ನೀರಾವರಿ ಪ್ರದೇಶದಲ್ಲಿ ಬತ್ತ ಬೆಳೆಯುತ್ತಾರೆ. ದ್ರಾಕ್ಷಿ, ಪೇರಲ, ಬೋರೆ, ಮಾವು, ಬಾಳೆ, ನಿಂಬೆ, ಬದನೆ, ಬೆಂಡೆ, ಹೀರೆ, ಪಡುವಲ, ಬಟಾಟೆ, ಗೆಣಸು, ಈರುಳ್ಳಿ ಮೊದಲಾದವು ಈ ಜಿಲ್ಲೆಯಲ್ಲಿ ಬೆಳೆಯುತ್ತವೆ. ಗೋದಿಯನ್ನು 35,181, ಮುಸುಕಿನ ಜೋಳವನ್ನು 18,063, ಜೋಳವನ್ನು 84,427, ಸಜ್ಜೆಯನ್ನು 1,190 ಹೆಕ್ಟೇರುಗಳಲ್ಲಿ ಬೆಳೆಯಲಾಗುತ್ತದೆ (1998-99).

**ಕೈಗಾರಿಕೆ :** ಜಿಲ್ಲೆಯಲ್ಲಿ ಗ್ರಾಮೀಣ ಸಂಪನ್ಮೂಲ ಬಳಸಿಕೊಂಡು ಅಸ್ತಿತ್ವಕ್ಕೆ ಬಂದ ಕೈಗಾರಿಕೆಗಳೇ ಹೆಚ್ಚು. ಕೈಮಗ್ಗ, ಕಂಬಳಿ ನೇಯುವುದು, ಬೀಡಿ ಕಟ್ಟುವುದು, ಬಿದಿರು ವಸ್ತುಗಳು, ಚುರಮರಿ (ಮಂಡಕ್ಕಿ) ಅವಲಕ್ಕಿ ಮತ್ತು ರೇಷ್ಮೆ ಇವುಗಳ ತಯಾರಿಕೆ, ಚರ್ಮ ಹದ ಮಾಡುವುದು. ವಿದ್ಯುತ್ ಮಗ್ಗಗಳಿಂದ ಸೀರೆ, ಕುಪ್ಪಸ ತಯಾರಿಕೆ ಕುಂಬಾರಿಕೆ ಮುಂತಾದ ವಿವಿಧ ಉದ್ದಿಮೆಗಳಲ್ಲಿ ಸಾವಿರಾರು ಜನ ನಿರತರಾಗಿದ್ದಾರೆ. ಗದಗ, ನರಗುಂದ ಇವು ಹತ್ತಿಯ ಉದ್ದಿಮೆಗೆ ಪ್ರಸಿದ್ಧ. ಗದಗದಲ್ಲಿ ಬಟ್ಟೆ ತಯಾರಿಸುವ ಕಾರ್ಖಾನೆಯಿದೆ. ನರಗುಂದ, ಹುಲಕೋಟಿ, ಲಕ್ಷ್ಮೇಶ್ವರಗಳಲ್ಲಿ ನೂಲಿನ ಗಿರಣಿಗಳಿವೆ. ಮೇಲಿನ ಎಲ್ಲ ಸ್ಥಳಗಳಲ್ಲೂ ಹತ್ತಿ ಹಿಂಡುವ ಕಾರ್ಖಾನೆಗಳಿವೆ. ಗದಗ ಜಿಲ್ಲೆ ಕೈಮಗ್ಗದ ಬಟ್ಟೆಗಳಿಗೂ ಪ್ರಸಿದ್ಧ. ರೋಣ ತಾಲ್ಲೂಕಿನಲ್ಲಿ ಖಾದಿ ಬಟ್ಟೆ ತಯಾರಾಗುತ್ತದೆ. ಗದಗ, ಬೆಟಗೇರಿ, ಗಜೇಂದ್ರಗಡ, ಶಿರೋಳ ಇವು ಕೈಮಗ್ಗದ ಸೀರೆ, ಕುಪ್ಪಸ ಮುಂತಾದವುಗಳಿಗೆ ಪ್ರಸಿದ್ಧ. ಗಜೇಂದ್ರಗಡ, ಶಿರೋಳಗಳಲ್ಲಿ ಕಣಗಳು (ರವಿಕೆಬಟ್ಟೆ) ಪ್ರಸಿದ್ಧ. ನರಗುಂದ ಗುಡಾರ ತಯಾರಿಸುವುದಕ್ಕೆ ಪ್ರಸಿದ್ಧ. ತಂಬಳೆ, ಲಕ್ಕುಂಡಿ, ಕೊಣ್ಣೂರುಗಳಲ್ಲಿ ಕಂಬಳಿ ತಯಾರಿಸುವ ಉದ್ಯಮವಿದೆ. ಗದಗದಲ್ಲಿ ಹಿತ್ತಾಳೆ ಪಾತ್ರೆ ತಯಾರಿಸುತ್ತಾರೆ.

ಗ್ರಾಮೋದ್ಯಮಗಳಾದ ಗಾಣದ ಎಣ್ಣೆ, ಸೋಪು, ಚರ್ಮ ಹದಮಾಡುವುದು, ಖಾದಿ ಬಟ್ಟೆ ತಯಾರಿಕೆ ಗದಗ, ರೋಣ, ನರಗುಂದ ಇವುಗಳಲ್ಲಿ ಹರಡಿದೆ. ಗದಗಶಹರು ಮುದ್ರಣ ಕ್ಷೇತ್ರದಲ್ಲಿ ಪ್ರಮುಖವಾಗಿದೆ. ತಿಜೋರಿ, ಕಪಾಟು, ಕುರ್ಚಿ, ಮೇಜು, ಮುಂತಾದವುಗಳ ತಯಾರಿಕೆ ಗದಗ, ನರಗುಂದದಲ್ಲಿ ಹೆಚ್ಚು. ಜಿಲ್ಲೆಯಲ್ಲಿ 31 ಬಟ್ಟೆ ಗಿರಣಿಗಳಿವೆ. 5 ರಾಸಾಯನಿಕ ಕಾರ್ಖಾನೆಗಳಿವೆ. 20 ಎಂಜಿನಿಯರಿಂಗ್ ಕೇಂದ್ರಗಳು, 50 ಇತರ ಉದ್ದಿಮೆಗಳಿವೆ. 24 ಕೈಗಾರಿಕಾ ಕೇಂದ್ರಗಳಿದ್ದರೆ 5 ಕೈಗಾರಿಕಾ ಎಸ್ಟೇಟ್‌ಗಳಿವೆ. ಈ ಉದ್ಯಮಗಳ ಒಟ್ಟು ಉದ್ಯೋಗಿಗಳು 15,448. ಹತ್ತಿಯ ಕೈಮಗ್ಗದ ಬಟ್ಟೆಗಳು, ಮೆಣಸಿನಕಾಯಿ, ಶೇಂಗಾ, ಗೋದಿ, ಜೋಳ ಮುಂತಾದವು ಈ ಜಿಲ್ಲೆಯ ಪ್ರಮುಖ ರಫ್ತು ವಸ್ತುಗಳಾಗಿವೆ. ಮನೆ ಕಟ್ಟುವ ಸಾಮಗ್ರಿಗಳು, ಯಂತ್ರಗಳು, ಔಷಧಿ, ಇಂಧನ, ದಿನಬಳಕೆಯ ಸಾಮಗ್ರಿಗಳು, ಅಲಂಕಾರ ವಸ್ತುಗಳು, ಏಲಕ್ಕಿ, ಕಾಫಿಬೀಜ, ಹೊಗೆಸೊಪ್ಪು ಮೊದಲಾದವು ಹೆಚ್ಚಾಗಿ ಹೊರಗಡೆಯಿಂದ ಬರುತ್ತವೆ. ಗದಗ, ಲಕ್ಷ್ಮೇಶ್ವರ ನಗರಗಳು ಬೆಳವಣಿಗೆಯಾದಂತೆಲ್ಲ ಜಿಲ್ಲೆಯ ವಾಣಿಜ್ಯ ಚಟುವಟಿಕೆ ಹೆಚ್ಚುತ್ತಿದೆ. ಜಿಲ್ಲೆಯಲ್ಲಿ ಒಟ್ಟು 22 ನಿಯಂತ್ರಿತ ಮಾರುಕಟ್ಟೆಗಳಿವೆ. ವಾಣಿಜ್ಯ ವ್ಯಾಪಾರಗಳಿಗೆ ಸಂಬಂಧಿಸಿದಂತೆ ವಿವಿಧ

ಸಂಸ್ಥೆಗಳು ಸ್ಥಾಪಿತವಾಗಿವೆ. ಗದಗಿನಲ್ಲಿರುವ ಚೇಂಬರ್ ಆಫ್ ಕಾಮರ್ಸ್ ಸಂಸ್ಥೆ ಆರ್ಥಿಕ ಚಟುವಟಿಕೆಗಳಲ್ಲಿ ಮುಖ್ಯ ಪಾತ್ರ ವಹಿಸುತ್ತಿದೆ.



ಸರಸ್ವತಿ ದೇವಾಲಯ, ಗದಗ

ಈ ಜಿಲ್ಲೆಯಲ್ಲಿ ಹಣಕಾಸು ಮತ್ತು ಬ್ಯಾಂಕಿಂಗಿಗೆ ಸಂಬಂಧಿಸಿದ ವಿವಿಧ ಸಂಸ್ಥೆಗಳಿವೆ. ಕರ್ನಾಟಕ ರಾಜ್ಯ ಹಣಕಾಸು ನಿಗಮ ವಿವಿಧ ಸಂಘ ಸಂಸ್ಥೆಗಳಿಗೆ ಮತ್ತು ಕೈಗಾರಿಕೆಗಳಿಗೆ ಹಣಕಾಸಿನ ನೆರವನ್ನು ನೀಡುತ್ತದೆ. ಸಹಕಾರ ವ್ಯವಸ್ಥೆಯಿಂದ ರೈತರಿಗೆ, ಕೈಕಸಬಿನವರಿಗೆ ಆರ್ಥಿಕ ನೆರವು ದೊರೆಯುತ್ತಿದೆ. ಜಿಲ್ಲೆಯಲ್ಲಿ 44 ವಾಣಿಜ್ಯ ಬ್ಯಾಂಕ್‌ಗಳು, 35 ಗ್ರಾಮೀಣ ಬ್ಯಾಂಕ್‌ಗಳು ಇವೆ (2001). ಧಾರವಾಡ, ಗದಗ ಮತ್ತು ಹಾವೇರಿ ಜಿಲ್ಲೆಗಳು ಸೇರಿ 101 ಸಹಕಾರಿ ನಗರ ಬ್ಯಾಂಕ್‌ಗಳಿವೆ. 232 ಇತರ ಸಹಕಾರ ಬ್ಯಾಂಕ್‌ಗಳಿವೆ. 17 ಭೂ ಅಭಿವೃದ್ಧಿ ಬ್ಯಾಂಕ್‌ಗಳಿವೆ. 514 ಸಾಲ ಸಹಕಾರ ಸಂಘಗಳಿವೆ.

**ಸಾರಿಗೆ ಸಂಪರ್ಕ :** ಗದಗದಿಂದ ವಿವಿಧ ತಾಲ್ಲೂಕುಗಳಿಗೆ ಮತ್ತು ಜಿಲ್ಲೆಯ ಹೊರ ಊರುಗಳಿಗೆ ರಸ್ತೆ ಮಾರ್ಗಗಳಿವೆ. 46ಕಿಮೀ ರಾಷ್ಟ್ರೀಯ ಹೆದ್ದಾರಿ, 203ಕಿಮೀ ರಾಜ್ಯ ಹೆದ್ದಾರಿ, 663ಕಿಮೀ ಜಿಲ್ಲಾ ಮುಖ್ಯ ರಸ್ತೆಗಳಿವೆ. ಜಿಲ್ಲೆಯಲ್ಲಿ ಗ್ರಾಮೀಣ ರಸ್ತೆಗಳೂ ಸೇರಿದಂತೆ ಇವುಗಳ ಒಟ್ಟು ಉದ್ದ 2,594ಕಿಮೀ. ಈ ಜಿಲ್ಲೆಯೊಂದಿಗೆ ಹೊರಗಿನ ಸಂಪರ್ಕ ಕಲ್ಪಿಸುವ ಕೆಲವು ಮುಖ್ಯ ರೈಲುಮಾರ್ಗಗಳಿವೆ. ಹುಬ್ಬಳ್ಳಿ ಬೆಂಗಳೂರು ರೈಲು ಮಾರ್ಗ ಈ ಜಿಲ್ಲೆಯಲ್ಲಿ ಗದಗದ ಮೂಲಕ ಹಾಯ್ದು ಹೋಗುತ್ತದೆ. ಹುಬ್ಬಳ್ಳಿಯಿಂದ ಗುಂತಕಲ್ಲು, ಸೊಲ್ಲಾಪುರ ಗೋವ ಕಡೆಗಳಿಗೆ ರೈಲುಮಾರ್ಗಗಳಿವೆ. ಗದಗ ಕರ್ನಾಟಕದ ದೊಡ್ಡ ರೈಲು ಜಂಕ್ಷನ್‌ಗಳಲ್ಲೊಂದಾಗಿದೆ. ಜಿಲ್ಲೆಯಲ್ಲಿ 62ಕಿಮೀ ಬ್ರಾಡ್‌ಗೇಜ್ ಮತ್ತು 50ಕಿಮೀ ಮೀಟರ್ ಗೇಜ್ ರೈಲು ಮಾರ್ಗವಿದೆ (2001).

**ಶಿಕ್ಷಣ :** ಗದಗ ಜಿಲ್ಲೆ ಹಿಂದೆ ಧಾರವಾಡ ಜಿಲ್ಲೆಯ ಭಾಗವಾಗಿತ್ತು. ಜಿಲ್ಲಾ ಕೇಂದ್ರ ಧಾರವಾಡ, ಹುಬ್ಬಳ್ಳಿ ಇವು ಉತ್ತರ ಕರ್ನಾಟಕದಲ್ಲೇ ಹೆಚ್ಚು ಶೈಕ್ಷಣಿಕ ಸೌಲಭ್ಯಗಳನ್ನು ಹೊಂದಿದ್ದ ಸ್ಥಳಗಳು. ಅಲ್ಲಿನ ಕರ್ನಾಟಕ ಕಾಲೇಜು, ಕೃಷಿ ಶಿಕ್ಷಣ ಕಾಲೇಜು, ಎಂಜಿನಿಯರಿಂಗ್ ಮತ್ತು ವೈದ್ಯಕೀಯ ಕಾಲೇಜುಗಳಿಂದ ಗದಗ ಜಿಲ್ಲೆಯ ವಿದ್ಯಾರ್ಥಿಗಳು ಉಪಯೋಗ ಪಡೆಯುತ್ತಿದ್ದಾರೆ. 1950ರಲ್ಲಿ ಸ್ಥಾಪಿತವಾದ ಕರ್ನಾಟಕ ವಿಶ್ವವಿದ್ಯಾಲಯ ಉನ್ನತ ಶಿಕ್ಷಣದ ಅನುಕೂಲವನ್ನು ಒದಗಿಸಿತು. ಗದಗ-ಬೆಟಗೇರಿ ಪುರಸಭೆಯ ವ್ಯಾಪ್ತಿಯಲ್ಲಿ ಮತ್ತು ಇತರೆಡೆ ಕಾಲೇಜುಗಳು, ಕಿರಿಯ ಕಾಲೇಜುಗಳು ಸ್ಥಾಪಿತವಾಗಿವೆ. ಜಿಲ್ಲೆಯ ಒಟ್ಟು ಸಾಕ್ಷರತಾ ಪ್ರಮಾಣ ಶೇ.66.27. ಪುರುಷರ ಸಾಕ್ಷರತೆ ಶೇ.79.55, ಸ್ತ್ರೀಯರ ಸಾಕ್ಷರತೆ ಶೇ.52.58. ಜಿಲ್ಲೆಯಲ್ಲಿ 697 ಪ್ರಾಥಮಿಕ ಶಾಲೆಗಳೂ 170 ಪ್ರೌಢ ಶಾಲೆಗಳೂ 35 ಪದವಿಪೂರ್ವ ಕಾಲೇಜುಗಳೂ 23 ಸಾಮಾನ್ಯ ಶಿಕ್ಷಣ ಕಾಲೇಜುಗಳೂ 8 ಪಾಲಿಟೆಕ್ನಿಕ್‌ಗಳೂ 2 ಎಂಜನಿಯರಿಂಗ್ ಕಾಲೇಜುಗಳೂ 4 ಭಾರತೀಯ ವೈದ್ಯ ಶಿಕ್ಷಣ ಸಂಸ್ಥೆಗಳೂ ಇವೆ. ಮಕ್ಕಳ ಪೋಷಣೆ ಮತ್ತು ಶಿಕ್ಷಣಕ್ಕಾಗಿ ಜಿಲ್ಲೆಯಲ್ಲಿ 826 ಅಂಗನವಾಡಿ ಕೇಂದ್ರಗಳನ್ನು ತೆರೆಯಲಾಗಿದೆ (2000-01).

ಜಿಲ್ಲೆಯಲ್ಲಿ ಆರೋಗ್ಯ ಸೌಲಭ್ಯಗಳು ಅಭಿವೃದ್ಧಿಗೊಂಡಿವೆ. 7 ಸರ್ಕಾರಿ ಆಸ್ಪತ್ರೆಗಳು, 2 ಭಾರತೀಯ ವೈದ್ಯ ಪದ್ಧತಿ ಆಸ್ಪತ್ರೆಗಳು ಇವೆ. 29 ಪ್ರಾಥಮಿಕ ಆರೋಗ್ಯ ಕೇಂದ್ರಗಳು, 6 ಪ್ರಾಥಮಿಕ ಆರೋಗ್ಯ ಘಟಕಗಳಿವೆ. ಜನಾರೋಗ್ಯ ರಕ್ಷಣೆಗಾಗಿ ಸರ್ಕಾರ ಕೆಲವು ಯೋಜನೆಗಳನ್ನು ಹಮ್ಮಿಕೊಂಡಿದೆ. ಕುಡಿಯುವ ನೀರು ಸರಬರಾಜಿಗಾಗಿ 2,793 ಕೊಳವೆ ಬಾವಿಗಳನ್ನು ಕೊರೆಸಲಾಗಿದೆ. 387 ಕೊಳವೆನೀರು ಸರಬರಾಜು ಯೋಜನೆಗಳನ್ನು ಕಾರ್ಯಗತಗೊಳಿಸಲಾಗಿದೆ. 296 ನೀರು ಸರಬರಾಜು ಯೋಜನೆಗಳು ಅನುಷ್ಠಾನಗೊಂಡಿವೆ. ನಿರ್ಮಲ ಗ್ರಾಮ ಯೋಜನೆ ಅಡಿಯಲ್ಲಿ 1,853 ಶೌಚಾಲಯಗಳನ್ನು ನಿರ್ಮಿಸಲಾಗಿದೆ. ಕೊಳಚೆ ಅಭಿವೃದ್ಧಿ ಯೋಜನೆ ಅಡಿಯಲ್ಲಿ 152 ಮನೆಗಳನ್ನು ನಿರ್ಮಿಸಲಾಗಿದೆ (2000-01). ಹಸುರು ಯೋಜನೆಯಲ್ಲಿ 9.14 ಲಕ್ಷ ಮರಗಳನ್ನು ನೆಡಲಾಗಿದೆ.

**ಇತಿಹಾಸ ಮತ್ತು ಸಂಸ್ಕೃತಿ :** ಈ ಜಿಲ್ಲೆ ಪ್ರಾಚೀನ ಕಾಲದಿಂದ ಜನ ವಸತಿ ಹೊಂದಿದ್ದ ಪ್ರದೇಶ. ತುಂಗಭದ್ರಾ, ಮಲಪ್ರಭಾ ನದಿಗಳ ದಂಡೆಯಲ್ಲಿ ಪ್ರಾಗೈತಿಹಾಸಿಕ ಕಾಲದಿಂದಲೂ ಜನವಸತಿಯಿದೆ. ಈ ಜಿಲ್ಲೆಯಲ್ಲಿನ ರೋಣ ತಾಲ್ಲೂಕಿನ ಮೆಣಸಗಿ, ಶಿರಹಟ್ಟಿ ತಾಲ್ಲೂಕಿನ ಕೊಂಚಿಗೇರಿ, ನಿಟ್ಟೂರು ಮುಂತಾದ ಸ್ಥಳಗಳಲ್ಲಿ ಪುರಾತನ ಶಿಲಾಯುಗದ ಶಿಲಾಯುಧಗಳು ದೊರಕಿವೆ.



ವೀರನಾರಯಣ ದೇವಸ್ಥಾನ, ಗದಗ

ನವ ಶಿಲಾಯುಗದ ಸಂಸ್ಕೃತಿಗಳಿಗೆ ಸಂಬಂಧಿಸಿದ ಅನೇಕ ನೆಲೆಗಳು ನರಗುಂದ ತಾಲ್ಲೂಕಿನ ಅರಿಶಿನಗೋಡಿ, ಬೈರನಹಟ್ಟಿ, ಹಾಳಗುಪ್ಪ, ಕರಗೋವಿನಕುಪ್ಪ, ಲಿಂಗಧಾಳ ಮತ್ತು ಶಿರೋಳ, ರೋಣ ತಾಲ್ಲೂಕಿನ

ಮಣ್ಣೂರು, ಮೆಣಸಗಿ, ನಿಡಗುಂದಿ, ನಿಡಗುಂದಿಕೊಪ್ಪ, ಸವಡಿ, ಶಿರಹಟ್ಟಿ ತಾಲ್ಲೂಕಿನ ಬಲ್ಲೆರು ಮೊದಲಾದ ಸ್ಥಳಗಳಲ್ಲಿ ಬೆಳಕಿಗೆ ಬಂದಿವೆ. ರೋಣ ತಾಲ್ಲೂಕಿನ ಹಿರೇಹಾಳದಲ್ಲಿ ನವಶಿಲಾ ಸಂಸ್ಕೃತಿ ಅಂಶಗಳು ಬೆಳಕಿಗೆ ಬಂದಿವೆ. ಇಲ್ಲಿಯೇ ದಕ್ಷಿಣ ಭಾರತದ ಕಬ್ಬಿಣ ಯುಗಕ್ಕೆ ಸಂಬಂಧಿಸಿದ ವಾಸದ ನೆಲೆ ದೊರೆತಿದೆ. ಇಂಥ ನೆಲೆಗಳನ್ನು ನರಗುಂದ ತಾಲ್ಲೂಕಿನ ಕೊಪ್ಪ, ರೋಣ ತಾಲ್ಲೂಕಿನ ಉಣಚಗೇರಿ ಮುಂತಾದೆಡೆಗಳಲ್ಲಿ ಕಾಣಬಹುದು. ಉಣಚಗೇರಿಯಲ್ಲಿ ಹಳ್ಳವೊಂದರ ಪಕ್ಕದಲ್ಲಿ ತುಂಡು ಎಲುಬುಗಳಿದ್ದ ಅನೇಕ ಮಡಕೆ ಸಮಾಧಿಗಳನ್ನು ಗುರುತಿಸಲಾಗಿದೆ. ಈ ಸ್ಥಳಗಳಲ್ಲಿ ನುರುಜು ಕೂಡಿದ ಶಿಲಾವೃತ್ತಗಳು ಇವೆ. ಬೃಹತ್ ಶಿಲಾಸಮಾಧಿ ಕಾಲದ ಶಿಲಾವೃತ್ತಗಳನ್ನು ರೋಣ ತಾಲ್ಲೂಕಿನ ಗಜೇಂದ್ರಗಡ, ಉಣಚಗೇರಿ, ಈ ಸ್ಥಳಗಳಲ್ಲಿ ಗುರುತಿಸಲಾಗಿದೆ. ಈ ಪ್ರದೇಶದಲ್ಲಿ ಇವುಗಳನ್ನು ಪಾಂಡವರ ಮನೆ, ಪಾಂಡವರ ಕಟ್ಟೆ ಎಂದು ಕರೆಯುವ ರೂಢಿ. ಆದಿಕಾಲದಲ್ಲಿ ಪ್ರಚಲಿತವಿದ್ದ ಕೆಂಪು ಮಡಕೆಗಳು, ಗಾಜಿನ ಮಣಿ ಇತ್ಯಾದಿ ವಸ್ತು ದೊರಕಿರುವ ಅನೇಕ ನೆಲೆಗಳಿವೆ. ಮುಂಡರಗಿ ತಾಲ್ಲೂಕಿನ ಶೀರೆನಹಳ್ಳಿ, ರೋಣ ತಾಲ್ಲೂಕಿನ ಬೆಣಚಕಟ್ಟೆ, ಹಿರೇಹಾಳ, ಕಂಟೋಜಿ, ಶಿರಹಟ್ಟಿ, ಬಟ್ಟೂರು, ಹೊಳಲಾಪುರ, ಹುಲ್ಲೂರು, ಜೀರೆಮಾದಾಪುರ, ಲಕ್ಷ್ಮೇಶ್ವರ, ನವೆಭಾವನೂರು, ನಿಟ್ಟೂರು, ಸಂಕದಾಳ, ಯಳವತ್ತಿ, ಬೆಳ್ಳಟ್ಟಿ, ಚವತಾಳ್, ಇಟಗಿ, ನಾಗರಮಡುವು, ತಂಗೋಡ ಹೀಗೆ ಇಲ್ಲಿನ ನೆಲೆಗಳನ್ನು ಗುರುತಿಸಬಹುದು. ಶಿರಹಟ್ಟಿ ತಾಲ್ಲೂಕಿನ ಇಟಗಿಯ ನೆಲೆಯಲ್ಲಿ ವೈದಿಕ ಯಜ್ಞಗಳಲ್ಲಿ ಉಪಯೋಗಿಸಲಾಗುತ್ತಿದ್ದ ಉಖಾಪಾತ್ರ ಎಂಬ ವಿಶಿಷ್ಟ ರೀತಿಯ ಮಣ್ಣಿನ ಪಾತ್ರೆ ದೊರೆತಿರುವುದು ಕುತೂಹಲಕಾರಿ.

ಇತರೆ ಅನೇಕ ಸ್ಥಳಗಳಂತೆ ಇಲ್ಲಿನ ವಿವಿಧ ಸ್ಥಳಗಳಿಗೂ ಪೌರಾಣಿಕ ಹಿನ್ನೆಲೆಯಿದೆ. ಗದಗ ತಾಲ್ಲೂಕಿನ ಲಕ್ಕುಂಡಿಯನ್ನು ಶ್ರೀರಾಮ ಸ್ಥಾಪಿಸಿದನೆಂದು ಪ್ರತೀತಿ. ಅದು ರಾಮರ ದತ್ತಿ ಅಗ್ರಹಾರವಾಗಿತ್ತು. ಅಲ್ಲಲ್ಲಿ ಪಾಂಡವರ ಕಟ್ಟೆಗಳ ಬಗ್ಗೆ ಕೇಳಿಬರುತ್ತದೆ.

**ಇತಿಹಾಸ :** ಇತಿಹಾಸ ಕಾಲದಲ್ಲಿ ಮೌರ್ಯರು ಮತ್ತು ಸಾತವಾಹನರು ಈ ಜಿಲ್ಲೆಯನ್ನು ಆಳಿದ್ದು ಐತಿಹಾಸಿಕ ಆಧಾರಗಳಿಂದ ತಿಳಿದುಬರುತ್ತದೆ. ಮುಂದೆ ಮೂರನೆಯ ಶತಮಾನದಿಂದ ಆಳಿಕೆ ನಡೆಸಿದ ಬನವಾಸಿಯ ಕದಂಬರು ತಮ್ಮ ರಾಜ್ಯವನ್ನು ಇಲ್ಲಿಯವರೆಗೂ ವಿಸ್ತರಿಸಿದ್ದರು. ಬಾದಾಮಿ ಚಳುಕ್ಯರು 5-8ನೆಯ ಶತಮಾನದಲ್ಲಿ ಆಳಿದರು. ಆಗ ಇದು ಅವರ ಸಾಮ್ರಾಜ್ಯದ ಹೃದಯಭಾಗದಲ್ಲಿದ್ದಿತು. ಈ ಸಾಮ್ರಾಜ್ಯ ವ್ಯವಸ್ಥೆ ಮುಂದೆ ಅಧಿಕಾರಕ್ಕೆ ಬಂದ ರಾಷ್ಟ್ರಕೂಟರು ಮತ್ತು ಕಲ್ಯಾಣಿ ಚಾಳುಕ್ಯರ ಕಾಲದ ವರೆಗೂ ಮುಂದುವರಿಯಿತು. ಆಗ ಈ ಪ್ರದೇಶ ಬೆಳವಲ 300, ಕಿಸುಕಾಡು 70, ಪುರಿಗೆರೆ 300 ಮುಂತಾದ ಹೆಸರುಗಳಿಂದ ಪ್ರಸಿದ್ಧವಾಗಿದ್ದಿತು.

ಈ ಪ್ರಾಂತ ಐತಿಹಾಸಿಕ ಮಹತ್ವ ಪಡೆದಿದ್ದು ಸಾಮಾನ್ಯವಾಗಿ ಇದನ್ನು ಸಾಮ್ರಾಟರ ಮನೆತನದ ಸದಸ್ಯರು ಮತ್ತು ರಕ್ತಸಂಬಂಧಿಗಳು ಆಳುತ್ತಿದ್ದರು. ಅವರನ್ನು ಮಾಂಡಲಿಕ ಅಥವಾ ಮಹಾಮಂಡಲೇಶ್ವರ ರೆಂದು ಕರೆಯಲಾಗುತ್ತಿತ್ತು. ರಾಷ್ಟ್ರಕೂಟರ ಕಾಲದಲ್ಲಿ ಗಂಗರು ಮತ್ತು ರಾಷ್ಟ್ರಕೂಟ ಮನೆತನಗಳ ಅನ್ಯೋನ್ಯತೆಯಿಂದ ಗಂಗರಾಜರು ಈ ಪ್ರಾಂತ್ಯವನ್ನು ಕೆಲಕಾಲ ಆಳಲು ಅವಕಾಶವಾಯಿತು. ರಾಷ್ಟ್ರಕೂಟರು ಶತ್ರುಗಳಿಂದ ಪೀಡನೆಗೊಳಗಾಗಿದ್ದಾಗ ಗಂಗ ಇಮ್ಮಡಿ ಬೂತುಗ (936-61) ಅವರ ಸಹಾಯಕ್ಕೆ ಹೋದ. ಇದರಿಂದ ಸುಪ್ರೀತನಾದ ರಾಷ್ಟ್ರಕೂಟ ಮುಮ್ಮಡಿ ಅಮೋಘವರ್ಷ ತನ್ನ ಮಗಳು ರೇವಕ ನಿಮ್ಮಡಿಯನ್ನು ಕೊಟ್ಟು ವಿವಾಹ ಮಾಡಿದ. ಮೂರನೆಯ ಕೃಷ್ಣನ ವಿರುದ್ಧ ದಂಗೆಯೆದ್ದ ಲಲ್ಲೆಯನನ್ನು ಬೂತುಗ ನಿರ್ಮೂಲ ಮಾಡಿದ. ರಾಷ್ಟ್ರಕೂಟರ ಶತ್ರುವಾಗಿದ್ದ ಚೋಳ ಯುವರಾಜನಾದ ರಾಜಾದಿತ್ಯನನ್ನು ಬೂತುಗ ರಣರಂಗದಲ್ಲಿ ಕೊಂದು ಸಾಮ್ರಾಜ್ಯದ ಪ್ರತಿಷ್ಠೆಯನ್ನು ಹೆಚ್ಚಿಸಿದ. ಇದರಿಂದ ಬೂತುಗನಿಗೆ ಪುರಿಗೆರೆ 300, ಬೆಳ್ವೊಲ 300, ಕಿಸುಕಾಡು 70 ಮತ್ತು ಬಾಗೆನಾಡು 70 ಪ್ರಾಂತಗಳನ್ನು ಕೊಡಲಾಯಿತು. ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಈ ಪ್ರದೇಶ ಸಾಮ್ರಾಜ್ಯದ ಹಿಡಿತದಿಂದ ಬಿಡುಗಡೆಗೊಳ್ಳತೊಡಗಿತು.

ದ್ವಾರಸಮುದ್ರದಲ್ಲಿ ಹೊಯ್ಸಳರು, ದೇವಗಿರಿಯಲ್ಲಿ ಸೇವುಣರು ಪ್ರಬಲರಾಗಿ ರಾಜ್ಯ ವಿಸ್ತರಣೆ ಮಾಡಿದಾಗ ಹಿಂದಿನ ಸಾಮ್ರಾಜ್ಯ ವ್ಯವಸ್ಥೆ ಹೋಗಿ ಪ್ರಾಂತೀಯ ರಾಜ್ಯಗಳು ಹುಟ್ಟಿಕೊಂಡುವು. ಹೊಯ್ಸಳ ವಿಷ್ಣುವರ್ಧನ ತನ್ನ ರಾಜ್ಯದ ವಿಸ್ತರಣೆಯ ವಿಜಯಯಾತ್ರೆಯಲ್ಲಿ ಬೆಳುವಲ, ಅಣ್ಣಿಗೆರೆ, ಗದಗ ಮುಂತಾದ ಪಟ್ಟಣಗಳನ್ನು ವಶಪಡಿಸಿಕೊಂಡು ಮಲಪ್ರಭಾ ನದಿಯವರೆಗೂ ಸೈನ್ಯವನ್ನು ಮುನ್ನಡೆಸಿದ. ಲೊಕ್ಕಿಗುಂಡಿ ಇವನ ಅಧೀನದಲ್ಲಿತ್ತು. ವಿಷ್ಣುವರ್ಧನ ಗದಗದಲ್ಲಿ ಪಂಚನಾರಾಯಣ ದೇವಾಲಯಗಳಲ್ಲೊಂದನ್ನು ಕಟ್ಟಿಸಿದ. ಈ ಕಾಲದಲ್ಲೇ ಕಲ್ಯಾಣಿ ಚಾಳುಕ್ಯರು ಕಟ್ಟಿಸಿದ ಮೂರು ದೇವಾಲಯಗಳು ಗದಗದಲ್ಲಿವೆ. 11-12ನೆಯ ಶತಮಾನದಲ್ಲಿ ಗದಗ ಉತ್ಕರ್ಷದಲ್ಲಿದ್ದ ಪಟ್ಟಣವಾಗಿತ್ತು. ಕುಮಾರವ್ಯಾಸ (ನೋಡಿ) ಗದಗಿನ ವೀರನಾರಾಯಣನಿಂದ ಸ್ಫೂರ್ತಿ ಪಡೆದು ಕರ್ಣಾಟ ಭಾರತ ಕಥಾಮಂಜರಿಯನ್ನು (ಕುಮಾರವ್ಯಾಸ ಭಾರತ) ರಚಿಸಿದ್ದು ಸುಪರಿಚಿತವಾಗಿದೆ.



ತ್ರಿಕೂಟೇಶ್ವರ ದೇವಾಲಯ, ಗದಗ

ಹೊಯ್ಸಳರು ಮತ್ತು ಸೇವುಣರ ನಡುವಿನ ಸಂಘರ್ಷದ ಸ್ಥಳವಾಗಿದ್ದ ಈ ಜಿಲ್ಲೆಯು ಸೊರಟೂರಿನಲ್ಲಿ ಹೊಯ್ಸಳ ಎರಡನೆಯ ಬಲ್ಲಾಳನ ಸೈನ್ಯಕ್ಕೂ ಸೇವುಣ ಭಿಲ್ಲಮನ ಸೈನ್ಯಕ್ಕೂ ನಿರ್ಣಾಯಕ ಯುದ್ಧ ನಡೆದು ಸೇವುಣರನ್ನು ಕೃಷ್ಣಾ ನದಿಯ ಆಚೆಗೆ ಹಿಮ್ಮೆಟ್ಟಿಸಲಾಯಿತು. ಮುಂದೆಯೂ ಈ ಪ್ರದೇಶ ಸೇವುಣ ಹೊಯ್ಸಳರ ಸ್ಪರ್ಧೆಯ ತಾಣವಾಗಿತ್ತು. ವಿಜಯನಗರದ ಆಡಳಿತ ಕಾಲದಲ್ಲಿ ಇದು ವಿಜಯನಗರದ ಒಂದು ಪ್ರಾಂತವಾಯಿತು. 1565ರ ತಾಳಿಕೋಟೆ ಯುದ್ಧದ ತರುವಾಯ ಬಿಜಾಪುರದ ಸುಲ್ತಾನಶಾಹಿ ರಾಜ್ಯ ಈ ಜಿಲ್ಲೆಯ ಮೇಲೆ ಹತೋಟಿ ಸಾಧಿಸಲು ಮುಂದಾಯಿತು. ಈಗಿನ ದಾವಣಗೆರೆ ಜಿಲ್ಲೆಯಲ್ಲಿರುವ ಹರಪನಹಳ್ಳಿಯಲ್ಲಿ ಅಸ್ತಿತ್ವಕ್ಕೆ ಬಂದ ಪಾಳೆಯಪಟ್ಟಿನ ನಾಯಕರು ಬಿಜಾಪುರದ ಸುಲ್ತಾನರಿಗೆ ಕಪ್ಪ ಕೊಟ್ಟುಕೊಂಡು ಈ ಜಿಲ್ಲೆಯ ಕೆಲವು ಪ್ರದೇಶಗಳೂ ಸೇರಿಕೊಂಡಂತೆ ಆ ಪ್ರದೇಶವನ್ನು ಆಳಿಕೊಂಡು ಬಂದರು. ಮುಂದೆ ಔರಂಗಜೇಬ್ ಬಿಜಾಪುರ ರಾಜ್ಯವನ್ನು ನಾಶಪಡಿಸಿದ ಅನಂತರ ಮೊಗಲ್ ಸುಬೇದಾರನೊಬ್ಬ ಸಮೀಪದ ಸವಣೂರಿನಲ್ಲಿ ನೆಲೆಯೂರಿದ. ಆಗ ಈ ಜಿಲ್ಲೆಯ ಬಹು ಭಾಗಗಳು ಮೊಗಲರ ಅಧಿಕಾರಕ್ಕೆ ಬಂದವು. ಅಂತಿಮವಾಗಿ ಸವಣೂರು ಪ್ರಾಂತ್ಯ ಮರಾಠರ ಕೈಗೂ ತರುವಾಯ ಬ್ರಿಟಿಷರ ಕೈಗೂ ಬಂತು.

1830ರಲ್ಲಿ ಧಾರವಾಡ ಜಿಲ್ಲೆಯು ರಚನೆಯಾಗಿ ಈ ಪ್ರದೇಶ ಮುಂಬಯಿ ಪ್ರಾಂತ್ಯಕ್ಕೆ ಸೇರಿತು. 1857-58ರಲ್ಲಿ ನರಗುಂದದ ಬಾಬಾ

ಸಾಹೇಬ, ಮುಂಡರಗಿ ಭೀಮರಾಯ (ನೋಡಿ) - ಇವರು ಬ್ರಿಟಿಷರ ವಿರುದ್ಧದ ದಂಗೆಯಲ್ಲಿ ಭಾಗವಹಿಸಿದ್ದರು. ಭೀಮರಾಯ ಇನಾಂದಾರರ ಮನೆತನಕ್ಕೆ ಸೇರಿದವನಾಗಿದ್ದು ಸುತ್ತಮುತ್ತಲ ಜಮೀನ್ದಾರರನ್ನು ಸಂಘಟಿಸಿ ರೈತರ ಬೆಂಬಲ ಪಡೆದು ಡಂಬಳ, ಗದಗ ಮತ್ತು ಕೊಪ್ಪಳಗಳನ್ನು ವಶಪಡಿಸಿಕೊಂಡ. ನರಗುಂದದ ಬಾಬಾಸಾಹೇಬ (ನೋಡಿ) ಇವನಿಗೆ ನೆರವಾಗಿ ದಂಗೆಯೆದ್ದ. ಬಾಬಾಸಾಹೇಬ ಬ್ರಿಟಿಷ್ ದಳಪತಿ ಮ್ಯಾನ್ಸನ್‍ನನ್ನು ಸುರೇಬಾನದಲ್ಲಿ ಎದುರಿಸಿ ಹತ್ಯೆ ಮಾಡಿದ. ಬ್ರಿಟಿಷರು ಸೈನ್ಯಬಲದಿಂದಲೂ ಯುಕ್ತಿಯಿಂದಲೂ ಈ ಇಬ್ಬರು ಬಂಡಾಯಗಾರರನ್ನು ಹತ್ಯೆಗೈದರು. ಮುಂಬಯಿ ಪ್ರಾಂತದಲ್ಲಿ ಧಾರವಾಡ ಜಿಲ್ಲೆಗೆ ಸೇರಿದ್ದ ಈ ಜಿಲ್ಲೆಯ ಕೆಲವು ಭಾಗಗಳಲ್ಲಿ ಸಣ್ಣಪುಟ್ಟ ಸಂಸ್ಥಾನಗಳು ಅಸ್ತಿತ್ವದಲ್ಲಿದ್ದವು. ಅವು ಸ್ವಾತಂತ್ರ್ಯಾನಂತರ ಧಾರವಾಡ ಜಿಲ್ಲೆಯ ಭಾಗವಾದವು. ಧಾರವಾಡ ಜಿಲ್ಲೆ ಭಾಷಾವಾರು ಪ್ರಾಂತ ರಚನೆಯಾದಾಗ ವಿಶಾಲ ಮೈಸೂರು ರಾಜ್ಯಕ್ಕೆ ಸೇರಿತು.



ತ್ರಿಕೂಟೇಶ್ವರ ದೇವಾಲಯದ ಗೋಪುರ, ಗದಗ

ಇತಿಹಾಸಕಾಲದಲ್ಲಿ ಈ ಜಿಲ್ಲೆಯಲ್ಲಿ ಸಂಸ್ಕೃತಿ ಮತ್ತು ಕಲೆಗಳಿಗೆ ಪ್ರಸಿದ್ಧವಾದ ಅನೇಕ ಊರುಗಳು ಇದ್ದುವು. ಅವುಗಳಲ್ಲಿ ಗದಗ, ಲಕ್ಷ್ಮೇಶ್ವರ ಮತ್ತು ಲಕ್ಕುಂಡಿಗಳು ಪ್ರಮುಖವಾದವು. ಗದಗದಲ್ಲಿ ಚಾಳುಕ್ಯ ಶೈಲಿಯ ಮೂರು ದೇವಾಲಯಗಳಿವೆ. ಅವುಗಳಲ್ಲಿ ತ್ರಿಕೂಟೇಶ್ವರ ದೇವಾಲಯ ಅತ್ಯಲಂಕರಣದಿಂದಲೂ ವಿಸ್ತಾರದಿಂದಲೂ ಕೂಡಿದೆ. ಹೊಯ್ಸಳ ವಿಷ್ಣುವರ್ಧನ ನಿರ್ಮಿಸಿದ ವೀರನಾರಾಯಣ ದೇವಾಲಯ ಜಕಣಾಚಾರಿಯಿಂದ ನಿರ್ಮಿಸಲ್ಪಟ್ಟಿತೆಂದು ಐತಿಹ್ಯವಿದೆ. ಗದಗದಿಂದ 11ಕಿಮೀ ದೂರದಲ್ಲಿರುವ ಲಕ್ಕುಂಡಿ ಪ್ರಾಚೀನ ಕಾಲದಲ್ಲಿ ಲೊಕ್ಕಿಯಗುಂಡಿ ಎಂದು ಪ್ರಸಿದ್ಧವಾಗಿತ್ತು. ಬೆಳ್ವೊಲದ 18 ಅಗ್ರಹಾರಗಳಲ್ಲಿ ಇದೂ ಒಂದು. ದಾನ ಚಿಂತಾಮಣಿ ಅತ್ತಿಮಬ್ಬೆ ಇಲ್ಲಿ ಬ್ರಹ್ಮಜಿನಾಲಯವನ್ನು ಕಟ್ಟಿಸಿದಳು. ಶಿರಹಟ್ಟಿ ತಾಲ್ಲೂಕಿನ ಲಕ್ಷ್ಮೇಶ್ವರ (ನೋಡಿ) ಇತಿಹಾಸ ಕಾಲದಲ್ಲಿ ಪುಲಿಗೆರೆ, ಪುರಿಗೆರೆ, ಪುಲಿಕರ ಎಂಬ ಹೆಸರುಗಳಿಂದ ಪ್ರಸಿದ್ಧವಾಗಿತ್ತು. 11ನೆಯ ಶತಮಾನದಲ್ಲಿ ಲಕ್ಷ್ಮರಸನೆಂಬಾತ ಇಲ್ಲಿ ಲಕ್ಷ್ಮೇಶ್ವರ ದೇವಾಲಯವನ್ನು ಕಟ್ಟಿಸಿದ್ದರಿಂದ ಈ ಊರಿಗೆ ಅದೇ ಹೆಸರು ಬಂದಿರಬೇಕೆಂಬ ಅಭಿಪ್ರಾಯವಿದೆ. ಮುಂಡರಗಿ ತಾಲ್ಲೂಕಿನ ಡಂಬಳ (ನೋಡಿ) ಇನ್ನೊಂದು ಪ್ರಾಚೀನ ಧಾರ್ಮಿಕ ಕೇಂದ್ರ. ಇಲ್ಲಿ ಬೌದ್ಧ ವಿಹಾರಗಳು, ಚೈತ್ಯಾಲಯಗಳು ಮತ್ತು ದೇವಾಲಯಗಳು ಇವೆ. ಅವುಗಳಲ್ಲಿ ದೊಡ್ಡ ಬಸಪ್ಪ ದೇವಾಲಯ ಪ್ರಸಿದ್ಧವಾದದ್ದು.

ಇದಲ್ಲದೆ ಶಿರಹಟ್ಟಿ ತಾಲ್ಲೂಕಿನ ದೇವಿಗಾಳ, ಸೊರಟೂರು, ಶ್ರೀಮಂತಗಡಕೋಟೆ, ಗುದಗೇರಿ, ಯೆಲವತ್ತಿ, ರೋಣ ತಾಲ್ಲೂಕಿನ ಗಜೇಂದ್ರಗಡ, ಸವಡಿ, ಸುದಿ, ಗದಗ ತಾಲ್ಲೂಕಿನ ಹೊಂಬಳ, ಮೂಲಗುಂದ, ನಾಗಾವಿ, ನೀಲಗುಂದ, ನರಗುಂದ ತಾಲ್ಲೂಕಿನ ಕೊಣ್ಣೂರು, ಮುಂಡರಗಿ ತಾಲ್ಲೂಕಿನ ಕೊರಳಹಳ್ಳಿ, ಆಲೂರು, ತಾಮ್ರಗುಂಡಿ, ಬಿದರಹಳ್ಳಿ, ನಾಗರಹಳ್ಳಿ - ಇವು ದೇವಾಲಯಗಳು, ಕವಿ ಕಲಾವಿದರು, ಕೋಟೆಗಳು ಮುಂತಾದವಕ್ಕೆ ಹೆಸರಾಗಿವೆ.

ರಾಜ್ಯದ ಇತರ ಭಾಗಗಳಂತೆ ಇಲ್ಲಿಯೂ ಜನಪದ ಸಂಸ್ಕೃತಿ ಪಸರಿಸಿದೆ. ಬಸಪ್ಪ, ಭಂಡಪ್ಪ, ದ್ಯಾಮವ್ವ, ದುರ್ಗವ್ವ, ರೇಣುಕ, ಹುಲಿಗೆವ್ವ, ಜೋತಿಬಾ, ಖಂಡೋಬಾ - ಇಲ್ಲಿನ ಜನಪದ ದೇವತೆಗಳು. ಸಂಗೀತಗಾರರಾದ ಪಂಡಿತ ಭೀಮಸೇನ ಜೋಶಿ, ಪುಟ್ಟರಾಜ ಗವಾಯಿ ಸಾಹಿತಿಗಳಾದ ಹುಯಿಲಗೋಳ ನಾರಾಯಣರಾಯ, ಎನ್.ಕೆ.ಕುಲಕರ್ಣಿ, ಆಲೂರ ವೆಂಕಟರಾಯ, ಸಂ.ಶಿ.ಭೂಸನೂರ ಮಠ, ಗಿರಡ್ಡಿ ಗೋವಿಂದರಾಜ, ಆರ್.ಸಿ.ಹಿರೇಮಠ, ಜಿ.ಬಿ.ಜೋಶಿ, ಕೀರ್ತಿನಾಥ ಕುರ್ತಕೋಟಿ, ಶಾಂತಕವಿ, ಗರೂಡ ಸದಾಶಿವರಾಯ, ಮಹಾಂತೇಶಶಾಸ್ತ್ರೀ, ಎಚ್.ಎಸ್.ಹೂಗಾರ, ಸಿದ್ಧರಾಮ ಜಂಬಲದಿನ್ನಿ, ಚಿತ್ರಕಲೆಯ ಟಿ.ಪಿ.ಅಕ್ಕಿ, ಎಂ.ಎ.ಚಟ್ಟಿ ಮೊದಲಾದವರು ಈ ಜಿಲ್ಲೆಯವರು. (ಸಿ.ವಿ.ಕೆ.)

**ತಾಲ್ಲೂಕು ಮತ್ತು ಮುಖ್ಯ ಪಟ್ಟಣ :** ಇದು ಗದಗ, ರೋಣ, ಮುಂಡರಗಿ, ನರಗುಂದ ತಾಲ್ಲೂಕುಗಳನ್ನೊಳಗೊಂಡ ಉಪವಿಭಾಗದ ಕೇಂದ್ರವೂ ಆಗಿದೆ. ಈ ತಾಲ್ಲೂಕನ್ನು ಆಗ್ನೇಯದಲ್ಲಿ ಮುಂಡರಗಿ, ದಕ್ಷಿಣದಲ್ಲಿ ಶಿರಹಟ್ಟಿ, ತಾಲ್ಲೂಕುಗಳೂ ಪಶ್ಚಿಮದಲ್ಲಿ ಧಾರವಾಡ ಜಿಲ್ಲೆ ಮತ್ತು ನವಲಗುಂದ, ಉತ್ತರದಲ್ಲಿ ರೋಣ ಮತ್ತು ಪೂರ್ವದಲ್ಲಿ ಕೊಪ್ಪಳ ಜಿಲ್ಲೆ ಸುತ್ತುವರಿದಿವೆ. ತಾಲ್ಲೂಕಿನ ವಿಸ್ತೀರ್ಣ 1,098.5 ಚ.ಕಿಮೀ. ಜನಸಂಖ್ಯೆ 2,06,908. ಗದಗ, ಬೆಟಗೇರಿ ಎರಡು ಹೋಬಳಿಗಳಿದ್ದು ಒಟ್ಟು 57 ಗ್ರಾಮಗಳಿವೆ.

ತಾಲ್ಲೂಕಿನ ಹೆಚ್ಚು ಭಾಗ ಎರೆಮಣ್ಣಿನ ಪ್ರದೇಶ. ಅಲ್ಲಲ್ಲಿ ಧಾರವಾಡ ಶಿಲಾಶ್ರೇಣಿಗೆ ಸೇರಿದ ಕಲ್ಲಿನ ಗುಡ್ಡಗಳೂ ಇವೆ. ಅದರಲ್ಲೂ ಗದಗದಿಂದ ದಕ್ಷಿಣ ಪ್ರದೇಶ ಈ ರೀತಿಯದು. ಈ ಭಾಗದ ಕಪ್ಪತ ಗುಡ್ಡ ಶ್ರೇಣಿಯಲ್ಲಿ ಚಿನ್ನದ ನಿಕ್ಷೇಪವಿದೆ. ತಾಲ್ಲೂಕು ದಕ್ಷಿಣದಿಂದ ವಾಯವ್ಯ, ಉತ್ತರಕ್ಕೆ ಇಳಿಜಾರಾಗಿದೆ. ದೊಡ್ಡ ನದಿಗಳಾವುವೂ ಇಲ್ಲ. ವಾರ್ಷಿಕ ಸರಾಸರಿ ಮಳೆ ಸು.635ಮಿಮೀ. ಕಪ್ಪತಗುಡ್ಡ ಭಾಗದ ಕುರುಚಲ ಗಿಡಗಳ ಪ್ರದೇಶವನ್ನು ಬಿಟ್ಟರೆ ಮಿಕ್ಕ ಎರೆಭೂಮಿ ಪ್ರದೇಶ ಫಲವತ್ತಾದುದು. ಹೆಚ್ಚಿನ ವ್ಯವಸಾಯ ಮಳೆಯ ಆಧಾರದಿಂದ. ಬಾವಿಗಳ ಸಂಖ್ಯೆಯೂ ಕಡಿಮೆ. ತಾಲ್ಲೂಕಿನಲ್ಲಿ 2,49,821 ಎಕರೆ ಭೂಮಿ ಆಬಾದಿನಲ್ಲಿದೆ. ಬೀಳುಭೂಮಿ 21,348 ಎಕರೆಗಳು (1951). ಹತ್ತಿ, ಜೋಳ, ಗೋದಿ ತಾಲ್ಲೂಕಿನ ಮುಖ್ಯ ಬೆಳೆಗಳು. ಸೇಂಗಾ ಮತ್ತು ದ್ವಿದಳ ಧಾನ್ಯಗಳನ್ನು ಬೆಳೆಯುತ್ತಾರೆ.

ಗದಗ ತಾಲ್ಲೂಕು ಸು.14ನೆಯ ಶತಮಾನದವರೆಗೆ ಬೆಳುವಲ 300 ಎಂಬ ಪ್ರಾಚೀನ ವಿಭಾಗದಲ್ಲಿತ್ತು. ಉತ್ತಮ ಶಿಲ್ಪಗಳಿಂದ ಕೂಡಿದ ಶಂಕರಲಿಂಗಪ್ಪ ದೇವಾಲಯವಿರುವ, 11ರಿಂದ 16ನೆಯ ಶತಮಾನಗಳಲ್ಲಿ ಅಗ್ರಹಾರವಾಗಿದ್ದ ಹೊಂಬಳ, ಪ್ರಾಚೀನ ವಿದ್ಯಾಕೇಂದ್ರವೆನಿಸಿದ್ದ 11-12ನೆಯ ಶತಮಾನದ ದೇವಾಲಯಗಳಿರುವ ಕೋಟುಮಚಿಗಿ, ಬೌದ್ಧ ನಾಗಾರ್ಜುನನ ಸಂಬಂಧವಿತ್ತೆಂದು ಹೇಳುವ ನಾಗಾವಿ, 12ನೆಯ ಶತಮಾನದ ಶಾಸನಗಳು ಮತ್ತು ನಾರಾಯಣ ದೇವಾಲಯವಿರುವ ನೀಲಗುಂದ, ಪ್ರಾಚೀನ ಅಗ್ರಹಾರ ಸೊರಟೂರು ಮುಂತಾದ ಹಲವು ಚಾರಿತ್ರಿಕ ಸ್ಥಳಗಳು ಈ ತಾಲ್ಲೂಕಿನಲ್ಲಿವೆ. *

ಲಕ್ಕುಂಡಿ (ನೋಡಿ) ಅನೇಕ ದೇವಾಲಯಗಳಿಂದ ಪ್ರಸಿದ್ಧವಾಗಿದೆ. ಕವಿ ನಯಸೇನನಿಗೆ ಸಂಬಂಧಿಸಿದೆಯೆಂಬುದು ಹಾಗೂ ಅಜಿತಪುರಾಣ ಬರೆಯಿಸಿ ರನ್ನನಿಗೆ ಆಶ್ರಯ ನೀಡಿದ ಅತ್ತಿಮಬ್ಬೆಯ ಸಂಪರ್ಕ ವಿದ್ದಿತೆಂಬುದು ಈ ತಾಲ್ಲೂಕಿನ ಮುಳಗುಂದದ ಖ್ಯಾತಿ. ಗದಗದಿಂದ 9ಕಿಮೀ ದೂರವಿರುವ ಬೆಳದಡಿಯಲ್ಲಿ ಶ್ರೀರಾಮಚಂದ್ರನ ದೇವಾಲಯ ಮತ್ತು 16ಕಿಮೀ ದೂರದಲ್ಲಿ ತಿರುಪತಿಯೆಂದು ಖ್ಯಾತಿ ಗಳಿಸಿರುವ

ವೆಂಕಟಾಪುರದಲ್ಲಿ ವೆಂಕಟರಮಣ ಹಾಗೂ ಮಹಾಲಕ್ಷ್ಮಿಯ ದೇವಾಲಯ ಮತ್ತು ಬ್ರಹ್ಮಾನಂದರ ಸಮಾಧಿ ಇವೆ.

ಈ ತಾಲ್ಲೂಕಿನ ಆಡಳಿತ ಕೇಂದ್ರ ಮತ್ತು ಮುಖ್ಯ ಪಟ್ಟಣವಾದ ಗದಗ ಹುಬ್ಬಳ್ಳಿ-ಗುಂತಕಲ್ಲು ರೈಲುಮಾರ್ಗದಲ್ಲಿ ಹುಬ್ಬಳ್ಳಿಗೆ 59ಕಿಮೀ ಪೂರ್ವಕ್ಕಿದೆ. ಪಕ್ಕದ ಬೆಟಗೇರಿಯನ್ನೂ ಸೇರಿಸಿ ಗದಗ-ಬೆಟಗೇರಿ ಪುರಸಭೆ ಇಲ್ಲಿ ವ್ಯವಸ್ಥಿತವಾಗಿದೆ. ಗದಗ-ಬೆಟಗೇರಿಯ ಜನಸಂಖ್ಯೆ 95,426. ಹಲವು ಶಾಲೆಗಳು, ಒಂದು ಕಾಲೇಜು, ಆಸ್ಪತ್ರೆಗಳು ಇತ್ಯಾದಿ ನಗರ ಸಾಮಾನ್ಯವಾದುವೆಲ್ಲ ಇಲ್ಲಿವೆ. ಗದಗ ಅರಳೆ ವ್ಯಾಪಾರ ಕೇಂದ್ರ. ಇದರ ದೊಡ್ಡ ಮಾರುಕಟ್ಟೆ, ವಖಾರುಗಳು ಇಲ್ಲಿವೆ. ಅರಳೆ ಉತ್ಪನ್ನ ಮತ್ತು ವ್ಯಾಪಾರದಲ್ಲಿ ಕರ್ನಾಟಕ ರಾಜ್ಯದ ಈಜಿಪ್ಟ್ ಎಂದು ಹೇಳುವಷ್ಟು ಪ್ರಸಿದ್ಧವಾಗಿದೆ. ಅರಳೆ ಸಂಸ್ಕರಿಸುವ ಕಾರ್ಖಾನೆಗಳು ಸ್ಥಾಪಿತವಾಗಿವೆ. ಬಟ್ಟೆ ಮತ್ತು ದವಸದ ಮಾರುಕಟ್ಟೆಗಳೂ ಇವೆ. ಇದು ತಾಲ್ಲೂಕಿನ ಪ್ರಮುಖ ವಾಣಿಜ್ಯ ಕೇಂದ್ರವಾಗಿ ಬೆಳೆದಿದೆ. ಕೈಮಗ್ಗ ಮತ್ತು ಯಂತ್ರಮಗ್ಗಗಳಿಂದ ನೇಯ್ಗೆ ಉದ್ಯಮ ಪ್ರಮುಖವಾಗಿದೆ. ಎಣ್ಣೆ ತೆಗೆಯುವುದು, ನೂಲು ಉತ್ಪಾದನೆ, ಬೀಡಿ ಕಟ್ಟುವುದು ಇತರ ಉದ್ಯಮಗಳು. ದಕ್ಷಿಣ ಮಧ್ಯ ರೈಲ್ವೆಯಲ್ಲಿ ಗದಗ ಒಂದು ಕೂಡುನಿಲ್ದಾಣ. ಇಲ್ಲಿಂದ ಸೊಲ್ಲಾಪುರಕ್ಕೆ ಮೀಟರ್‌ಗೇಜಿನ ರೈಲುಮಾರ್ಗ ಇದೆ. ಗದಗದಲ್ಲೊಂದು ಸಣ್ಣ ರೈಲ್ವೆ ಕಾರ್ಯಾಗಾರವುಂಟು.



ಅನಂತನಾಥ ಬಸದಿ, ಲಕ್ಷ್ಮೇಶ್ವರ

ಇಲ್ಲಿನ ಸ್ಥಳಪುರಾಣದ ಪ್ರಕಾರ ಗದಗಿನ ಪೂರ್ವ ಹೆಸರು ಕ್ರತುಪುರ. ಈಗ ಊರಿನ ಹೆಸರು ಗದಗ್, ಗದುಗು ಎಂದು ಹಿಂದಿನ ರೀತಿಗಳಲ್ಲಿ ಬಳಕೆಯಲ್ಲಿದೆ. ಗದುಗೆಂಬ ಹೆಸರು ಇಲ್ಲಿರುವ ತೋಂಟದಾರ್ಯರ (ಸಿದ್ಧಲಿಂಗೇಶ್ವರರ) ಗದ್ದುಗೆಯಿಂದ ಬಂದಿರಬಹುದೆಂದೂ ಒಂದು ಹೇಳಿಕೆ. ಗಜಗ, ಕಲ್ಲುಗ, ಗಟ್ಟಿಗು ಇತ್ಯಾದಿ ಹೆಸರುಗಳಿಂದ ಬಂದಿರಬಹುದೆಂಬ ಅಭಿಪ್ರಾಯವೂ ಇದೆ. ಗದಗ ಒಂದು ಕಾಲದಲ್ಲಿ ಮಹಾ ಅಗ್ರಹಾರವಾಗಿ ಮೆರೆದ ಪಟ್ಟಣವೆಂಬುದು ಇಲ್ಲಿ ದೊರೆತಿರುವ ಚಾಳುಕ್ಯ, ಹೊಯ್ಸಳ, ಯಾದವ, ವಿಜಯನಗರ ಕಾಲದ ಹಲವು ಶಾಸನಗಳಿಂದ ತಿಳಿಯುತ್ತದೆ. ಬ್ರಹ್ಮನ ಮಾನಸಪುತ್ರರಲ್ಲಿ ಒಬ್ಬನಾದ ಕ್ರತು ಗದಗಿನ ಸಮೀಪದಲ್ಲಿರುವ ಕಪ್ಪತಗುಡ್ಡದಲ್ಲಿ ತಪಸ್ಸು ಮಾಡಿದ. ಕಪೋತರೋಮ ಎಂಬ ರಾಕ್ಷಸನ ಕಿರುಕುಳವನ್ನು ತಪ್ಪಿಸಲು ದೇವರು ವೀರನಾರಾಯಣನ ರೂಪದಲ್ಲಿ ಕಾಣಿಸಿಕೊಂಡು ರಾಕ್ಷಸನನ್ನು ವಧಿಸಿದ. ಕ್ರತುವಿನ ಪ್ರಾರ್ಥನೆಯಂತೆ ನಾರಾಯಣ ಇಲ್ಲಿಯೇ ಉಳಿದ. ಜನಮೇಜಯ ಸರ್ಪಯಾಗ ಮಾಡಿದ ಅಗ್ರಹಾರವೇ ಗದಗ. ರಾಷ್ಟ್ರಕೂಟ 3ನೆಯ ಇಂದ್ರನ ಒಂದು ಶಾಸನ (918) ಇಲ್ಲಿನ ಶಾಸನಗಳಲ್ಲಿ ಅತಿ ಪ್ರಾಚೀನವಾದುದು.

ಇಲ್ಲಿ ಕಲ್ಯಾಣ ಚಾಳುಕ್ಯ ಶೈಲಿಯ ಮೂರು ದೇವಾಲಯಗಳು ಇವೆ. ಪ್ರಮುಖವಾದುದು ತ್ರಿಕೂಟೇಶ್ವರ ದೇವಾಲಯ. ಮೂಲತ ದ್ವಿಕೂಟವಾಗಿದ್ದ ಈ ದೇವಾಲಯದ ಪೂರ್ವಾಭಿಮುಖವಾಗಿರುವ ಗರ್ಭಗುಡಿಯಲ್ಲಿ ಪಾಣಿಪೀಠದ ಮೇಲೆ ಮೂರು ಲಿಂಗಗಳಿವೆ. ಗರ್ಭಗುಡಿಯ ಮುಂದೆ ಅರ್ಧಮಂಟಪ ಮತ್ತು ಅದರ ಮುಂದೆ ತೆರೆದ ಮಹಾಮಂಟಪ ಇವೆ. ಮಹಾಮಂಟಪದಲ್ಲಿ ಚಾವಣಿ ಮತ್ತು ದೂಲಗಳ ಮಧ್ಯೆ ಜಾಲಂಧ್ರಗಳಿವೆ. ಕಂಬಗಳು ಮತ್ತು ಅನೇಕ ಅಲಂಕರಣ ಶಿಲ್ಪಗಳು ಸುಂದರವಾಗಿವೆ. ಶಿಖರ ಈಚಿನದು. ತ್ರಿಕೂಟೇಶ್ವರ ಗುಡಿಯ ಆವರಣದಲ್ಲೇ ದಕ್ಷಿಣಕ್ಕೆ ಇರುವ ಸರಸ್ವತೀಗುಡಿ ಚಿಕ್ಕದು. ಗರ್ಭಗುಡಿ ಮತ್ತು ತೆರೆದ ಮಂಟಪ ಮಾತ್ರ ಇವೆ. ಬಹುಸೂಕ್ಷ್ಮವಾಗಿ ಕೆತ್ತಿರುವ ವಿನ್ಯಾಸಗಳಿರುವ ಇಲ್ಲಿನ ಕಂಬಗಳು ಇಡೀ ಚಾಳುಕ್ಯ ಸಂಪ್ರದಾಯದಲ್ಲೇ ಬಹುಸುಂದರ ರಚನೆಗಳೆಂದು ಪ್ರಸಿದ್ಧವಾಗಿವೆ. ಹಾಗೆಯೇ ಭುವನೇಶ್ವರಿ ಮತ್ತು ಗೋಡೆಗಳಲ್ಲಿನ ಕುಸುರಿ ಕೆಲಸವೂ ಚೆನ್ನಾಗಿವೆ. ಇಲ್ಲಿನ ಆಳೆತ್ತರದ, ಕುಳಿತ ಭಂಗಿಯ ಸರಸ್ವತೀ ವಿಗ್ರಹ ಮುರಿದಿದ್ದರೂ ಅದರಲ್ಲಿರುವ ಸಹಜ ಸುಂದರ ಪ್ರಮಾಣ, ಭಾವಲಾಲಿತ್ಯ, ವಸ್ತ್ರ ಆಭರಣಗಳ ಕೆತ್ತನೆಯ ನವಿರು ಕೆಲಸ ಇವುಗಳಿಂದಾಗಿ ಮೋಹಕವಾಗಿದೆ. ಊರ ಮಧ್ಯದಲ್ಲಿರುವ ಸೋಮೇಶ್ವರ ಅತ್ಯಲಂಕರಣದಿಂದ ಕೂಡಿದ ಇನ್ನೊಂದು ಚಾಳುಕ್ಯ ಶೈಲಿಯ ಗುಡಿ.

ಕನ್ನಡ ಮಹಾಭಾರತದ ಕರ್ತೃ ಕುಮಾರವ್ಯಾಸನ ಪ್ರೇರಕ ದೈವವೆಂದು ಪ್ರಸಿದ್ಧವಾಗಿರುವ ವೀರನಾರಾಯಣಸ್ವಾಮಿಯ ದೇವಸ್ಥಾನ 1117ರಲ್ಲಿ ಹೊಯ್ಸಳ ವಿಷ್ಣುವರ್ಧನ ನಿರ್ಮಿಸಿದ ಪಂಚನಾರಾಯಣ ದೇವಾಲಯಗಳಲ್ಲಿ ಒಂದೆಂದೂ ಜಕಣಾಚಾರಿಯಿಂದ ನಿರ್ಮಿಸಲ್ಪಟ್ಟಿತೆಂದೂ ಐತಿಹ್ಯ. "ಕೃತಪುರಮಹಾತ್ಮೆಯ" ಪ್ರಕಾರ ಕೃತಮುನಿಯ ರಕ್ಷಣೆಗಾಗಿ ಬದರಿಯಿಂದ ನಾರಾಯಣ ಬಂದು ಇಲ್ಲಿ ನೆಲಸಿದ. 11-12ನೆಯ ಶತಮಾನದ ಕೆಲವು ಹಳೆಯ ಭಾಗಗಳಿದ್ದರೂ ಇಂದು ಇದು ಬಹುವಾಗಿ ನವೀಕೃತವಾಗಿದೆ. ಇತ್ತೀಚೆಗೆ ದೇವಸ್ಥಾನ ಜೀರ್ಣೋದ್ಧಾರವಾಗಿತ್ತು (1962). ದೇವಸ್ಥಾನದ ಸುತ್ತ ಸುಮಾರು 300' ಉದ್ದ 200' ಅಗಲದ ಪ್ರಾಕಾರ ಇದೆ. ಪೂರ್ವದ್ವಾರದ ಮೇಲೆ ಎತ್ತರವಾದ ಗೋಪುರ ಇದೆ. ಒಳ ಅಂಗಣ 50' ಉದ್ದ 20' ಅಗಲ ಇದೆ. ಇಲ್ಲಿರುವ ಮಧ್ಯದ ನಾಲ್ಕು ಕಂಬಗಳಲ್ಲಿ ದಶಾವತಾರ ಚಿತ್ರಗಳಿವೆ. ನರಸಿಂಹ ವಿಗ್ರಹವಿರುವ ಇಲ್ಲಿನ ಎರಡನೆಯ ಕಂಬ ಕುಮಾರವ್ಯಾಸ ಕಂಬವೆಂದು ಪ್ರಸಿದ್ಧವಾಗಿದೆ. ಕುಮಾರವ್ಯಾಸ ಇಲ್ಲಿ ಕುಳಿತು ವೀರನಾರಾಯಣನಿಂದ ಸ್ಫೂರ್ತಿ ಪಡೆದು ಕನ್ನಡ ಭಾರತವನ್ನು ರಚಿಸಿದನೆಂದು ಹೇಳಲಾಗಿದೆ. ಗರ್ಭಗುಡಿಯ ಮೇಲಿನ ವಿಮಾನ ಸುಮಾರು 20' ಎತ್ತರವಿದೆ. ವಿಮಾನ ಹನ್ನೊಂದು ಹಂತಗಳಿಂದಾದುದು. ಗರ್ಭಗುಡಿಯಲ್ಲಿ ಕಪ್ಪು ಶಿಲೆಯ ಪ್ರಭಾವಳಿ ಸಹಿತವಾಗಿ 8' ಎತ್ತರವಿರುವ ವೀರನಾರಾಯಣಸ್ವಾಮಿಯ ಮೂರ್ತಿ ಇದೆ. ಮೂರ್ತಿಯ ಎತ್ತರ ಸುಮಾರು $5^1/_4$' ಪ್ರಭಾವಳಿಯಲ್ಲಿ ದಶಾವತಾರ ಚಿತ್ರಗಳನ್ನು ಕೆತ್ತಲಾಗಿದೆ. ಸ್ವಾಮಿಯ ಬಲಗೈಯಲ್ಲಿ ಚಕ್ರ, ಎಡಗೈಯಲ್ಲಿ ಶಂಖ, ಮತ್ತೊಂದು ಅಭಯಹಸ್ತ ಇವೆ. ಎಡಗೈಯಲ್ಲಿ ಬೆಂಡು ಇವೆ. ದೇವಾಲಯದಲ್ಲಿ ಗರ್ಭಗುಡಿಯಿಂದ ಬಲಕ್ಕೆ ಶ್ರೀ ರಾಘವೇಂದ್ರಸ್ವಾಮಿಯವರ ಬೃಂದಾವನ, ಕುಮಾರವ್ಯಾಸಮಂಟಪ ಮತ್ತು ಲಕ್ಷ್ಮೀನರಸಿಂಹ, ಈಶ್ವರ ಮತ್ತು ಹನುಮಂತ ದೇವಾಲಯಗಳು ಇವೆ. ವರ್ಷದಲ್ಲಿ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳೂ ಉಪನ್ಯಾಸಗಳೂ ಭಾರತವಾಚನ ಇತ್ಯಾದಿ ಕಾರ್ಯಕ್ರಮಗಳೂ ನಡೆಯುತ್ತಿರುತ್ತವೆ. ಶ್ರಾವಣ ಬಹುಳ ಬಿದಿಗೆಯಲ್ಲಿ ರಾಘವೇಂದ್ರಸ್ವಾಮಿಗಳ ಆರಾಧನೆ, ಪುಷ್ಯ ಶುದ್ಧ ಚತುರ್ದಶಿ ಅಥವಾ ಹುಣ್ಣಿಮೆಯಂದು ಕುಮಾರವ್ಯಾಸ ಜಯಂತಿ ವಿಜೃಂಭಣೆಯಿಂದ ನಡೆಯುತ್ತವೆ. ಗದಗಿನಲ್ಲಿ ತೋಂಟದ ಸಿದ್ಧಲಿಂಗೇಶ್ವರ ಮಠವಿದೆ. ಇಲ್ಲಿನ ತೋಂಟದಾರ್ಯರ ಜಾತ್ರೆ ಬಹುಜನರನ್ನು ಆಕರ್ಷಿಸುತ್ತದೆ. ಜೋಡು ಹನುಮಾನ್, ಶಂಕರಲಿಂಗ, ದುರ್ಗಾ, ವೀರಭದ್ರ, ವಿಠೋಬ ಮುಂತಾದವು ಈ ಪಟ್ಟಣದ ಇತರ ದೇವಸ್ಥಾನಗಳು. (ಪಿ.ವಿ.ಆರ್.)

**ಗದ್ದಗಿಮಠ, ಬಿ.ಎಸ್. :** 1917-1960. ಕನ್ನಡ ಜಾನಪದ ಕ್ಷೇತ್ರದಲ್ಲಿ ಕೆಲಸ ಮಾಡಿದ ಆದ್ಯರಲ್ಲೊಬ್ಬರು. ಬಿಜಾಪುರ ಜಿಲ್ಲೆ ಕೆರೂರಿನಲ್ಲಿ 1917 ಜನವರಿ 17ರಂದು ಜನಿಸಿದರು. ಇವರ ತಂದೆ ಜನಪದ ಗೀತೆಗಳನ್ನು ಹಾಡುವುದರಲ್ಲಿ ಪ್ರಸಿದ್ಧರಾಗಿದ್ದರು. ಇಂಥ ಪರಿಸರದಲ್ಲಿ ಬೆಳೆದ ಇವರನ್ನು ಜಾನಪದ ಕ್ಷೇತ್ರ ಆಕರ್ಷಿಸಿತು. ಕನ್ನಡದಲ್ಲಿ ಎಂ.ಎ. ಪದವಿ ಪಡೆದಮೇಲೆ, ಉತ್ತರ ಕರ್ನಾಟಕದ ನಾನಾ ಭಾಗಗಳಲ್ಲಿ ಸಂಚರಿಸಿ ಜನಪದ ಗೀತೆಗಳನ್ನು ಸಂಶೋಧಿಸಿ, ಸಂಗ್ರಹಿಸಿ ಕನ್ನಡ ಜನಪದ ಗೀತೆಗಳು ಎಂಬ ಪ್ರೌಢ ಪ್ರಬಂಧವನ್ನು ಬರೆದು ಕರ್ನಾಟಕ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಪಡೆದರು. (1955). ಕರ್ನಾಟಕದಲ್ಲಿ ಜಾನಪದ ಕ್ಷೇತ್ರದಲ್ಲಿ ಪಿಎಚ್.ಡಿ. ಪದವಿ ಪಡೆದ ಪ್ರಥಮರೂ ಇವರೇ.



ಜನಪದ ಸಾಹಿತ್ಯ ಕ್ಷೇತ್ರವನ್ನು ಅಭಿವೃದ್ಧಿಪಡಿಸಲು ಇವರು ಬಹುವಾಗಿ ಶ್ರಮಿಸಿದರು. ಜನಪದ ಗೀತೆಗಳನ್ನು, ನಾಡಪದಗಳನ್ನು ಸಂಗ್ರಹಿಸಿ ಪ್ರಕಟಿಸಿದರು. ಅದಕ್ಕಾಗಿ ಜನಪದ ಕಾವ್ಯಮಾಲೆ ಎಂಬ ಒಂದು ಮಾಲೆಯನ್ನು ಆರಂಭಿಸಿದರು. ಇವರು ಪ್ರಕಟಿಸಿರುವ ಗ್ರಂಥಗಳಿವು: ನಾಲ್ಕು ನಾಡ ಪದಗಳು, ಕಂಬಿಯ ಹಾಡುಗಳು, ಜನತಾಗೀತಗಳು ಲೋಕಗೀತಗಳು, ಕುಮಾರರಾಮನ ದುಂದುಮೆಗಳು. ಇವರು ಸ್ವತಃ ಜನಪದ ದಾಟಿಯಲ್ಲಿ ಗೀತೆಗಳನ್ನು ಸೊಗಸಾಗಿ ಹಾಡುತ್ತಿದ್ದರು.

ಇವರು ಬೆಳಗಾಂವಿಯ ಲಿಂಗರಾಜ ಕಾಲೇಜಿನಲ್ಲಿ ವ್ಯಾಯಾಮ ಶಿಕ್ಷಕರಾಗಿ ಸ್ವಲ್ಪಕಾಲ ಕೆಲಸಮಾಡಿದರು. ಅನಂತರ ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟಣ ವಿಭಾಗದಲ್ಲಿ ಸಹಾಯಕ ನಿರ್ದೇಶಕರಾಗಿ ನೇಮಕಗೊಂಡರು. ಆ ಹುದ್ದೆಯಲ್ಲಿದ್ದಾಗಲೇ 1960ರ ಅಕ್ಟೋಬರ್ 30ರಂದು ಹೃದಯಾಘಾತದಿಂದ ನಿಧನಹೊಂದಿದರು.

ಕನ್ನಡ ಜನಪದ ಗೀತಗಳು ಎಂಬ ಇವರ ಪ್ರೌಢಪ್ರಬಂಧವನ್ನು ಇವರ ನಿಧನಾನಂತರ ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿತು (1963). ತರೀಕೆರೆಯಲ್ಲಿ 1967ರಲ್ಲಿ ನಡೆದ ಅಖಿಲ ಕರ್ನಾಟಕ ಪ್ರಥಮ ಜಾನಪದ ಸಮ್ಮೇಳನದ ಸಭಾಮಂಟಪಕ್ಕೆ ಇವರ ಹೆಸರಿಡಲಾಗಿತ್ತು. (ಸಿ.ಕೆ.ಎನ್.)

**ಗಬ್ಬೂರು :** ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ಒಂದು ಗ್ರಾಮ, ಐತಿಹಾಸಿಕ ಸ್ಥಳ. ಹೋಬಳಿ ಕೇಂದ್ರ. ದೇವದುರ್ಗಕ್ಕೆ ಆಗ್ನೇಯದಲ್ಲಿ, ರಾಯಚೂರು ಮಾರ್ಗದಲ್ಲಿದೆ. ಈ ಗ್ರಾಮಕ್ಕೆ ಗೊಬ್ಬೂರು ಎಂಬ ಹೆಸರೂ ಇದೆ. ಇದು 12-13ನೆಯ ಶತಮಾನಗಳಲ್ಲಿ ಗೋಪುರಗ್ರಾಮ ಎಂಬ ಹೆಸರಾಗಿದ್ದ ಅಗ್ರಹಾರ ಮತ್ತು ವಿದ್ಯಾಕ್ಷೇತ್ರವಾಗಿತ್ತು. ಇಲ್ಲಿ ಚಂಡಿ ದರ್ವಾಜ ಎಂಬ ಹಳೆಯ ದ್ವಾರವೂ ಅನೇಕ ದೇವಾಲಯಗಳೂ ಶಿಲಾಶಾಸನಗಳೂ ಇವೆ. ಮಲೇಶಂಕರ, ವೆಂಕಟೇಶ್ವರ, ಈಶ್ವರ, ಬಂಗಾರ ಬಸಪ್ಪ ಮತ್ತು ಹನುಮಂತ ದೇವಾಲಯಗಳು ಮುಖ್ಯವಾದವು. ಮಲೇಶಂಕರ ದೇವಾಲಯದ ಮುಂದೆ ದೊಡ್ಡ ಕಲ್ಯಾಣಿ ಇದೆ. ವೆಂಕಟೇಶ್ವರ ದೇವಾಲಯದಲ್ಲಿಯ ಹೊರಭಾಗದ ಕೆತ್ತನೆಯ ಕೆಲಸ ಮತ್ತು ಕಲ್ಲಿನಲ್ಲಿ ಕೊರೆದ ಆನೆಗಳು ನೋಡತಕ್ಕವು. ಇದರ ಪೂರ್ವಕ್ಕೆ ಇರುವ ಕಲ್ಯಾಣಿಯನ್ನು ಸಾತ್ ಬಾವಡಿ ಎಂದು ಕರೆಯುತ್ತಾರೆ. ಗಣ್ಣಿಗುಡಿಮಠದ ಮಹಾದ್ವಾರದ ಕೆತ್ತನೆ ಕೆಲಸ ಬಹಳ ಸುಂದರವಾಗಿದೆ. ಒಂದು ಕಾಲದಲ್ಲಿ ಊರ ಸುತ್ತಲೂ ಇದ್ದ ಕೋಟೆಯ ಅವಶೇಷಗಳು ಕಾಣಸಿಗುತ್ತವೆ. ಆರನೆಯ ಚಾಳುಕ್ಯ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ್ದ ಸು.1109ರ ಶಾಸನದ ಪ್ರಕಾರ (ಈ ಶಾಸನ ಇಂದು ಹೈದರಾಬಾದಿನಲ್ಲಿರುವ ಪುರಾತತ್ತ್ವ ವಸ್ತುಸಂಗ್ರಹಾಲಯದಲ್ಲಿದೆ) ಬ್ರಹ್ಮಜಿನಾಲಯವೆಂಬ ಜೈನ ಮಂದಿರವೊಂದು ಇಲ್ಲಿದ್ದಿತ್ತು. ಅಂದು ಈ ಊರಿಗೆ ಹಿರಿಯ ಗೊಬ್ಬೂರು ಎಂದು ಹೆಸರಿತ್ತೆಂದು ತಿಳಿದುಬರುತ್ತದೆ. ಬಂಗಾರ ಬಸಪ್ಪನ ಗುಡಿಯಲ್ಲಿ ಒಂದು ಶಾಸನವೂ ಗಣೇಶನ ಮತ್ತು ಎರಡು ನಂದಿಗಳ ವಿಗ್ರಹಗಳೂ ಇವೆ. ಜೇಡರ ದಾಸಿಮಯ್ಯನ ಶಿಷ್ಯ ಮತ್ತು ಪುತ್ರ ಇಲ್ಲಿಯ ಗಜೇಶ್ವರ ದೇವರಿಗೆ ದತ್ತಿ ಕೊಟ್ಟಿರುವ ಉಲ್ಲೇಖ ಇಲ್ಲಿಯ ಇನ್ನೊಂದು ಶಾಸನದಲ್ಲಿದೆ. (ಜೆ.ಆರ್.ಪಿ.)

**ಗಮಕ ಕಲೆ :** ಕಾವ್ಯಗಳ ವಿವಿಧ ಛಂದೋಶೈಲಿಯ ಜಾಡನ್ನು ಹಿಡಿದು ಕಥಾನಕ ರೀತಿಗನುಗುಣವಾಗಿ ರಮ್ಯವಾಗಿ ರಸವತ್ತಾಗಿ ವಾಚಿಸಿ ಅರ್ಥಭಾವರಸಗಳನ್ನು ಶ್ರೋತೃಗಳಿಗೆ ಮನದಟ್ಟುಮಾಡುವ ಈ ಕಲೆ ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಬೆಳೆದುಬಂದಿದೆ. ಕವಿ (ಸಂಗ್ರಹ) ಗಮಕಿ ವಾದಿ ವಾಗ್ಮಿ ಎಂಬ ಪದಗಳು ಸಾಹಿತ್ಯದಲ್ಲಿ ಬಹಳ ಹಿಂದಿನಿಂದ ರೂಢಿಯಲ್ಲಿವೆ. ರಾಜರ ಆಸ್ಥಾನಗಳಲ್ಲಿ ಕವಿಗಮಕಿಗಳಿಗೂ ವಾದಿವಾಗ್ಮಿಗಳಿಗೂ ಪ್ರಮುಖ ಸ್ಥಾನವಿತ್ತು. ಪಂಪನ ವಿಕ್ರಮಾರ್ಜುನ ವಿಜಯದಲ್ಲಿ ಬರುವ

> ಕವಿ ಗಮಕಿ ವಾದಿ ವಾಗ್ಮಿ
> ಪ್ರವರರ ಪಂಡಿತರ ನೆಗಟ್ದಮಾತಱಿವರಸ
> ಬ್ಬವದರೊಡನಂತೊಸೆದ
> ನ್ನವಾಸದೋಲಗದೊಳಿರ್ಪನಾಗಳ್ ಹರಿಗಂ

ಎಂಬ ಪದ್ಯ ಮೇಲಿನ ಮಾತಿಗೆ ಸೂಚಕವಾಗಿ ಇದೆ. ಶಾಂತಿಪುರಾಣದಲ್ಲಿ ಪೊನ್ನ ತನ್ನನ್ನು

> ಇದಿರ್ಗೆ ಬರೆ ಪೊನ್ನಿಗಂ ಕಿಡಿ
> ಸದಿರಂ ಕವಿ ಗಮಕಿ ವಾದಿ ವಾಗ್ಮಿಗಳ ಕವಿ
> ತ್ವದ ಗಮಕತ್ವದ ವಾದಿ
> ತ್ವದ ವಾಗ್ಮಿತ್ವದ ಪೊಡರ್ಪುಮಂ ದರ್ಪಮುಮಂ

ಎಂದು ಹೊಗಳಿಕೊಂಡಿದ್ದಾನೆ. ಇದರಿಂದ ಕೆಲವೊಮ್ಮೆ ಕವಿಗಳಾದವರು ಗಮಕಿಗಳೂ ಆಗಿರುತ್ತಿದ್ದರೆಂಬ ಮಾತು ಸ್ಪಷ್ಟವಾಗುತ್ತದೆ. ಅಂದಿನ ಸಮಾಜದಲ್ಲಿ ಕವಿಯನ್ನು ಬಿಟ್ಟರೆ ಗಮಕಿಗೆ ಪ್ರಮುಖ ಸ್ಥಾನ ದೊರೆತಿತ್ತು. ಕನ್ನಡ ಶಾಸನಗಳಲ್ಲಿ ಗಮಕ ಹಾಗೂ ಗಮಕಿಯನ್ನು ಕುರಿತು ಸಾಕಷ್ಟು ಉಲ್ಲೇಖಗಳು ದೊರೆಯುತ್ತವೆ. 1068ರ ಒಂದು ಶಾಸನ ಮಹಾಮಂಡಳೇಶ್ವರ ಗಂಗರಸನನ್ನು ಕವಿಗಮಕಿವಾದಿವಾಗ್ಮಿಪ್ರಿಯ ಎಂದು ಕರೆದಿದೆ. 1255ರ ಶಾಸನದಲ್ಲಿ ತ್ರೈವಿದ್ಯಬಾಳಚಂದ್ರ ಎಂಬುವನು ಕವಿತ್ವ ಗಮಕತ್ವ ವಾದಿತ್ವ ವಾಗ್ಮಿತ್ವಗಳಲ್ಲಿ ಅನುಪಮ ಪಾಂಡಿತ್ಯವನ್ನು ಹೊಂದಿದ್ದನೆಂದು ಹೇಳಿದೆ. ಈ ಕಲೆಯಲ್ಲಿ ಪುರುಷರಲ್ಲದೆ ಸ್ತ್ರೀಯರೂ ನಿಪುಣೆಯರಾಗಿರುತ್ತಿದ್ದರು. 1533ರ ಅಚ್ಯುತರಾಯನ ಕಾಲದ ಒಂದು ಶಾಸನ ತಿರುಮಲಮ್ಮ ಎಂಬುವಳು ಕವಯಿತ್ರಿಯಾಗಿದ್ದುದಲ್ಲದೆ ಪ್ರಸಿದ್ಧ ಗಮಕಿಯೂ ಆಗಿದ್ದಳೆಂದು ತಿಳಿಸುತ್ತದೆ. ದೇವಸ್ಥಾನಗಳಲ್ಲಿ ಪುರಾಣಗಳನ್ನು ಓದಲು (ಗಮಕಿಸು) ದತ್ತಿಗಳನ್ನು ಕೊಟ್ಟಿದ್ದಕ್ಕೆ ಶಾಸನಗಳಲ್ಲಿ ಉಲ್ಲೇಖ ಕಂಡುಬರುತ್ತದೆ. ತಾಳಗುಂದದ ದೇವಾಲಯದಲ್ಲಿರುವ ಒಂದು ಶಾಸನದಲ್ಲಿ ಪುರಾಣ ಹೇಳುವವರಿಗಾಗಿ ದತ್ತಿ ಕೊಟ್ಟಿರುವ ವಿಷಯ ಉಲ್ಲೇಖವಾಗಿದೆ.

*

ಈ ಕಲೆಯ ಬಗ್ಗೆ ಕನ್ನಡ ಕಾವ್ಯಗಳಲ್ಲಿಯೂ ಉಲ್ಲೇಖ ಕಂಡುಬರುತ್ತವೆ. ಪ್ರಾಚೀನ ಗ್ರಂಥಗಳಲ್ಲಿ ಕವಿರಾಜಮಾರ್ಗದಲ್ಲಿನ ಉಲ್ಲೇಖವನ್ನು ಗಮನಿಸಬಹುದು:

> ವೀರರಸಂ ಸ್ಫುಟೋಕ್ತಿಯಿನುದಾರತಮಂ ಕರುಣಾರಸಂ ಮೃದೂ
> ಚ್ಚಾರಣೆಯಿಂದಮದ್ಭುತರಸಂ ನಿಬಿಡೋಕ್ತಿಗಳಿಂದಮಲ್ತೆ ಶೃಂ|

ಗಾರರಸಂ ಸಮಂತು ಸುಕುಮಾರತರೋಕ್ತಿಗಳಿಂದಂ ಪ್ರಸನ್ನಗಂ
ಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತದಿಂ||

ಎಂಬ ಪದ್ಯದಲ್ಲಿ ರಸೋತ್ಪತ್ತಿಯನ್ನುಂಟುಮಾಡುವುದೇ ಗಮಕದ ಲಕ್ಷಣವೆಂದು ಹೇಳಿದೆ. (ಕೆ.ಟಿ.ಆರ್.ಐ.)

ಆದಿಪುರಾಣ, ಪಂಚತಂತ್ರ, ನಂಬಿಯಣ್ಣನ ರಗಳೆ, ಮೋಹನತರಂಗಿಣಿ, ಕುಮಾರವ್ಯಾಸಭಾರತ, ಜೈಮಿನಿಭಾರತ, ಹರಿಶ್ಚಂದ್ರಕಾವ್ಯ, ವಿವೇಕಚಿಂತಾಮಣಿ, ಸೊಬಗಿನಸೋನೆ, ರಾಜಶೇಖರವಿಳಾಸ, ಪ್ರಭುಲಿಂಗಲೀಲೆ, ಗಿರಿಜಾಕಲ್ಯಾಣ, ಕಂಠೀರವ ನರಸರಾಜವಿಜಯ, ಭರತೇಶವೈಭವ ಮೊದಲಾದ ಕಾವ್ಯಗಳಲ್ಲಿ ಗಮಕ ಕಲೆಯು ಪ್ರಸ್ತಾಪವಿದೆ. ಶಾಂತಿನಾಥನ ಸುಕುಮಾರಚರಿತೆಯಲ್ಲಿ ನಾಗಶ್ರೀ ಎಂಬುವಳು ಕಾವ್ಯವನ್ನು ಜನ ಮೆಚ್ಚುವಂತೆ ಓದಿದಳು ಎಂಬುದರ ವರ್ಣನೆಯಿದೆ. ಭರತೇಶವೈಭವದಲ್ಲಿ ಭರತನ ಮುಂದೆ ಕನ್ಯೆಯೊಬ್ಬಳು ಕಾವ್ಯವನ್ನು ಹೀಗೆ ಓದಿದಳಂತೆ:

ಪಡಲಿಗೆಗಿಟ್ಟು ಹೊತ್ತಗೆಯ ದಾರವನೊತ್ತಿ
ಸಡಲಿಸಿ ಕಿರಿದೋಲೆಗಳನು|
ಎಡಗೈಯೊಳಾಂತೋದಿದಳು ಬಲಗೈಯಿಂದ
ಮಿಡಿವುತ ಭಾರಿ ದಂಡಿಗೆಯ||

ಅಲ್ಲದೆ ಭರತನ ಆಸ್ಥಾನದಲ್ಲಿ ಸಂಗೀತಗೋಷ್ಠಿ ನಡೆಯುತ್ತಿದ್ದಾಗ ಭೂಪಾಳಿ, ಧನ್ಯಾಸಿ, ಮಲಹರಿ ಮೊದಲಾದ ರಾಗಗಳಲ್ಲಿ ವೀಣೆ, ದಂಡಿಗೆ (ತಂಬೂರಿ) ನುಡಿಸುತ್ತ ಜಿನನನ್ನು ಕುರಿತು ಹಾಡುವ ಚಿತ್ರ ಮನೋಜ್ಞವಾಗಿದೆ. ಕಂಠೀರವ ನರಸರಾಜವಿಜಯದಲ್ಲಿ. ನಾಟ್ಯಶಾಲೆಯಲ್ಲಿ ಒಬ್ಬಳು ನಾರಿ ಭಾಗವತವಿಲಾಸದ ಪುಣ್ಯಕಥೆಗಳ ಭಾಸುರಗಾನರಸದೊಳೋದಿ ಬಹುಸಂತೋಷವನಿತ್ತಳರಸನಿಗೆ, ಮತ್ತೊರ್ವಳು ಭಾರತದ ಕಥೆಯ ಬಲು ಬಿತ್ತರದಲ್ಲಿ ನಲವಿಂದ ಬತ್ತೀಸರಾಗದೊಳೋದಿ ಭೂಪಾಲನ ಚಿತ್ತಕ್ಕೆ ಬಂದಳು, ಕಾಮಿನಿಯೋರ್ವಳು ನಗುತಾಗ ಹರುಷದೆ ರಾಮಾಯಣ ಪುಣ್ಯಕಥೆ'ಯ ಪ್ರೇಮದೊಳೋದಿ ಕಂಠೀರವನರಸೇಂದ್ರಭೂಪಾಲನ ಮೆಚ್ಚಿಸಿದಳು ಎಂಬ ಈ ಮಾತುಗಳಿಂದ ಸ್ತ್ರೀಯರೂ ಗಮಕಿಗಳಾಗಿದ್ದು ಆಸ್ಥಾನದಲ್ಲಿ ರಾಜರ ಆಶ್ರಯದಲ್ಲಿರುತ್ತಿದ್ದರೆಂಬ ವಿಷಯ ವಿದಿತವಾಗುತ್ತದೆ.

ಕುಮಾರವ್ಯಾಸ ಗಾಯಕನ ಲಕ್ಷಣವನ್ನು ಹೀಗೆ ವರ್ಣಿಸಿದ್ದಾನೆ:

ಗ್ರಾಮ ಮೂರರ ಸಂಚರಣೆಗಳ
ಸೀಮೆಯಲಿ ಸರಿಗಮ ಪದನಿಗಳ
ನೇಮ ತಪ್ಪದೆ ಹರಣ ಭರಣದ ಹೆಂಪುತಿರುಪುಗಳ|
ಕೋಮಲಿತ ಶಾರೀರ ಹೃದಯದ
ರಾಮಣೀಯಕ ರಚನೆಯಲಿ ಸ
ನಾಮನೆನಿಸುವನೆ ಗಾಯಕನರಸ ಕೇಳೆಂದ||

ಈ ಎಲ್ಲ ಲಕ್ಷಣಗಳೂ ಗಮಕಿಗೂ ಸಲ್ಲತಕ್ಕವೇ. ಗಮಕದಲ್ಲಿ ಸಂಗೀತ ಗೌಣ. ಸಾಹಿತ್ಯದ ಸೊಬಗನ್ನು ವ್ಯಕ್ತಪಡಿಸಲು ಎಷ್ಟು ಸಂಗೀತ ಬೇಕೋ ಗಮಕಕ್ಕೆ ಅಷ್ಟು ಸಾಕು.

ನಿಜಗುಣ ಶಿವಯೋಗಿ ಗಮಕಿಗಳ ಲಕ್ಷಣವನ್ನು ಹೀಗೆ ನಿರೂಪಿಸಿದ್ದಾನೆ:

ಗಾನತಾನಮಾನಂಗಳಂ ತೋರಿ ಯತಿಚರಣಾರ್ಥೋಲೇಖಾದಿ ಸಾಂದರ್ಭಿಕ
ಮಿಶ್ರವರಿತು, ಪದಸಂವ್ಯಕ್ತಿಗೈದು ಕೇಳ್ವರಿಗಿಂಪುಗೊಳಿಸಿ ಮೃದು
ಮಧುರ ವ್ಯಕ್ತ ವರ್ಣೋಚ್ಚಾರಣದಿಂ ಭಾವಸೂಚಕರಾದ
ಗಮಕಿಗಳಿಂದುದ್ಗೀತರಾಗಿ

ಷಡಕ್ಷರಿ ಗಮಕದ ರೂಪರೇಖೆಗಳನ್ನು ವರ್ಣಿಸಿರುವ ರೀತಿಯಿದು:

ಕವಿ ವಿಬುಧರ ಕಿವಿಯೊಳ್ ಸೂ
ಸುವ ನವರಸಮಿಳಿದು ತಿಳಿವಿ ತನುವಂ ಮನಮಂ|
ಕವಿದು ಪೊರಸೂಸಿತೆನೆ ಪೊ
ಣ್ಮುವ ಸುಖಬಾಷ್ಪಂ ತುಳುಂಕೆ ಪೇಳ್ವುದು ಕೃತಿಯಂ

ಲಕ್ಷ್ಮೀಶ ಗಮಕದ ವಿಚಾರವಾಗಿ ಕೆಲವು ಅಭಿಪ್ರಾಯಗಳನ್ನು ನೀಡಿದ್ದಾನೆ. ಲವಕುಶರು ವಾಲ್ಮೀಕಿ ರಾಮಾಯಣವನ್ನು ಓದಿದ ರೀತಿಯನ್ನು ತಿಳಿಸಿ, ಆ ಕಾಲದಲ್ಲಿ ಗಮಕದ ಅಭಿಪ್ರಾಯಗಳನ್ನು ಕ್ರೋಡೀಕರಿಸಿ ಗಮಕದ ಲಕ್ಷಣಗೀತಗಳನ್ನೇ ತನ್ನ ಕಾವ್ಯದಲ್ಲಿ ಕವಿ ಪರ್ಯಾಯವಾಗಿ ಸೂಚಿಸಿರುವಂತೆ ತೋರುತ್ತದೆ. ಅಲ್ಲದೆ ಆತ ಕಾವ್ಯವನ್ನು ಓದುವಾಗ ಈ ವಿಷಯಗಳನ್ನು ಗಮನಿಸಬೇಕೆಂದು ಸೂಚನೆ ನೀಡಿದ್ದಾನೆ:

ಚತುರ ಪದಗತಿಯ ಸರಸಧ್ವನಿಯ ವರ್ಣಶೋ
ಭಿತದಲಂಕಾರದ ಸುಲಕ್ಷಣದ ಲಾಲಿತ|
ಶ್ರುತಿರಂಜನದ ವಿಶೇಷಾರ್ಥ ಸಂಚಿತದ ವಿಸ್ತಾರದಿಂ ಪೊಸತೆನಿಸುವ
ನುತ ಸತ್ಕವಿ ಪ್ರೌಢತರ ಸುಪ್ರಬಂಧದಂತೆ|| (ಕೆ.ಟಿ.ಆರ್.ಐ.)

ಇನ್ನು ಇಡೀ ಕಾವ್ಯವನ್ನು ಓದಿ ಪರಿಣತರಾಗಿದ್ದ ಗಮಕಿಗಳಿಗೆ ಆ ಕಾವ್ಯದ ಹೆಸರಿನೊಂದಿಗೆ ಅವರನ್ನು ನಿರ್ದೇಶಿಸಿರುವುದು ಕಂಡುಬರುತ್ತದೆ. ಬಸವಪುರಾಣವನ್ನು ಓದುವುದರಲ್ಲಿ ನಿಷ್ಣಾತನಾಗಿದ್ದ ಉದಯಗಿರಿಯ ವರದಾನಿ ರಾಮಯ್ಯನಿಗೆ ಬಸವಪುರಾಣ ರಾಮಯ್ಯನೆಂಬ ಹೆಸರಿತ್ತೆಂದು ಶಿವತತ್ತ್ವಚಿಂತಾಮಣಿಯಿಂದ ತಿಳಿದುಬರುತ್ತದೆ. ಗುಬ್ಬಿಯ ಮಲ್ಲಣಾರ್ಯ ಬಸವಪುರಾಣವನ್ನು ಸುಂದರವಾಗಿ ಹಾಡುತ್ತಿದ್ದುದರಿಂದ ಬಸವಪುರಾಣದ ಮಲ್ಲಣಾರ್ಯ ಎಂಬ ಹೆಸರು ರೂಢಿಯಲ್ಲಿತ್ತೆಂದು ತಿಳಿಯುತ್ತದೆ. ಹರಿಶ್ಚಂದ್ರ ಸಾಂಗತ್ಯ, ಸಾನಂದ ಗಣೇಶ ಸಾಂಗತ್ಯಗಳ ಕರ್ತೃವಾದ ಗಿರಿಯನಿಗೆ ಓದುವ ಗಿರಿಯ ಎಂಬ ಹೆಸರಿತ್ತು. ವಚನಗಳನ್ನು ಗಮಕ ಶೈಲಿಯಲ್ಲಿ ಓದುತ್ತಿದ್ದರೆಂಬುದಕ್ಕೆ ಸಿದ್ಧರಾಮಚಾರಿತ್ರ, ಶೂನ್ಯಸಂಪಾದನೆ, ಪ್ರೌಢದೇವರಾಯನ ಕಾವ್ಯ ಮೊದಲಾದ ಕಾವ್ಯಗಳಲ್ಲಿ ಸಾಕ್ಷಿಗಳು ದೊರೆಯುತ್ತವೆ. ಬಸವಣ್ಣನವರ—

ತಾಳಮಾನಸರಿಸವ ನಾನರಿಯೆ
ಓಜೆ ಬಜಾವಣೆ ಲೆಕ್ಕವನರಿಯೆ
ಅಮೃತಗಣ ದೇವಗಣವನರಿಯೆ
ಕೂಡಲಸಂಗಮದೇವಾ ನಿನಗೆ ಕೇಡಿಲ್ಲವಾಗಿ
ಆನು ಒಲಿದಂತೆ ಹಾಡುವೆ

ಎಂಬ ವಚನ ಮೇಲಿನ ಮಾತಿಗೆ ಪುಷ್ಟಿ ನೀಡುತ್ತದೆ. ಗಮಕಿಗಳು ಹೇಗೆ ಹಾಡಬೇಕು ಎಂಬುದನ್ನು ನೀತಿಸಾರದಲ್ಲಿ ಈ ರೀತಿ ಹೇಳಿದೆ:

ಎಡರದೆ ತಡೆಯದೆ ತಲೆಯಂ
ಕೊಡಹದೆ ಕುಡುವಹಿಲಜಾಡ್ಯವೆನಿಸದೆ ರಸಮಂ
ಕೆಡಸದೆ ಸರ್ವರ ಚಿತ್ತ
ಕ್ಕೊಡಂಬಡಲೋದುವನೆ ಗಮಕಿ ಕನ್ನಡ ಜಾಣಾ

ಸಂಭಾಷಣೆಯನ್ನೇ ಜೀವಾಳವಾಗುಳ್ಳ ನಾಟಕದಲ್ಲಿಯೂ ಗಮಕ ಕಲೆಗೆ ಮಹತ್ವದ ಸ್ಥಾನವಿದೆ. ನಾಟಕ ನೋಡುವ ಸಹೃದಯರ ಮನಸ್ಸಿಗೆ ಒಂದೆಡೆ ರಂಗಪರಿಕರಗಳು, ವೇಷಭೂಷಣಗಳು ಸಂತೋಷವನ್ನುಂಟುಮಾಡಿದರೆ ಇನ್ನೊಂದೆಡೆ ನಟರ ಹಾವಭಾವ ಭಂಗಿ ಮಾತುಗಾರಿಕೆಯ ಕೌಶಲ ಗತ್ತು ಮೊದಲಾದವು ಮನರಂಜಿಸುತ್ತವೆ. ಪಾತ್ರಗಳು ಸಹೃದಯರನ್ನು ರಂಜಿಸಬೇಕಾದರೆ ನಟನಿಗೆ ಈ ಕಲೆಯ ಅಭ್ಯಾಸ ಸ್ವಲ್ಪವಾದರೂ ಇರಬೇಕು. ಕನ್ನಡ ರಂಗಭೂಮಿಯಲ್ಲಿ ಟೈಗರ್ ವರದಾಚಾರ್ಯ, ಗರುಡನಗಿರಿ ನಾಗೇಶರಾಯ ಮೊದಲಾದವರು ಕಂದಪದ್ಯಗಳನ್ನು ಸೊಗಸಾಗಿ ಹಾಡುತ್ತಿದ್ದರಂತೆ. ಷಟ್ಪದಿಗಳನ್ನು ಹಾಡುವುದರಲ್ಲಿ ಆಸ್ಥಾನ ವಿದ್ವಾನ್ ಬೆಳಕವಾಡಿ ಶ್ರೀನಿವಾಸ ಅಯ್ಯಂಗಾರ್ಯರೂ ಚಿಕ್ಕರಾಮರಾಯರೂ ಸಿದ್ಧಹಸ್ತರಾಗಿದ್ದರಂತೆ. ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು ಭಾರತವಾಚನದಲ್ಲಿ ನಿಸ್ಸೀಮರಾಗಿದ್ದರೆಂದು ತಿಳಿದುಬರುತ್ತದೆ. ಯಕ್ಷಗಾನದಲ್ಲಿ ಹಾಡುವವನನ್ನು ಭಾಗವತನೆಂದು ಕರೆದರೂ ಗಮಕದ ಅಂಶ ಅವನ ಹಾಡುಗಾರಿಕೆಯಲ್ಲಿ ಕಂಡುಬರುತ್ತದೆ. ಜನಪದ ಗೀತೆಗೂ ಗಮಕಕ್ಕೂ ಇರುವ ನಿಕಟಸಂಬಂಧವನ್ನು ಗುರುತಿಸಬಹುದು. ಇಲ್ಲಿಯ ಹಾಡುಗಾರಿಕೆಯಲ್ಲಿ ಲಯ ಸ್ವಚ್ಛಂದವಾಗಿದ್ದು ಗಮಕದ ಸ್ವರೂಪ ಕಂಡುಬರುತ್ತದೆ.

ಕನ್ನಡದ ಹಲವಾರು ಕಾವ್ಯಗಳನ್ನು ಒಂದು ಕಾಲಕ್ಕೆ ಹಳ್ಳಿಹಳ್ಳಿಯಲ್ಲೂ ವಾಚನ ಮಾಡಿಸುತ್ತಿದ್ದರು. ಗದುಗಿನ ಭಾರತ, ಜೈಮಿನಿಭಾರತ ಅಂದು ಹೆಚ್ಚು ಜನಪ್ರಿಯವಾಗಿದ್ದವೆಂದು ತಿಳಿಯುತ್ತದೆ. ಶ್ರೀರಾಮಾಯಣದರ್ಶನಂ ಕಾವ್ಯವನ್ನು ಗಮಕಿಗಳು ಸೊಗಸಾಗಿ ಹಾಡುತ್ತಿದ್ದಾರೆ. ಕರ್ನಾಟಕದ ಗಮಕಿಗಳಲ್ಲಿ ಕೃಷ್ಣಗಿರಿ ಕೃಷ್ಣರಾಯ, ಕಳಲೆ ಸಂಪತ್ಕುಮಾರಾಚಾರ್ಯ, ಭಾರತದ ಬಿಂದೂರಾಯ, ಕೆ.ಟಿ.ರಾಮಸ್ವಾಮಿ ಅಯ್ಯಂಗಾರ್ಯ, ಎಚ್.ಕೆ.ರಾಮಸ್ವಾಮಿ, ಚಂದ್ರಶೇಖರಯ್ಯ, ರಾಘವೇಂದ್ರ ರಾಯ, ಶಕುಂತಲಾಬಾಯಿ, ಕೌಶಿಕ ಮೊದಲಾದವರು ಪ್ರಸಿದ್ಧ ಗಮಕಿಗಳು. *

**ಗರಡಿ :** ಕುಸ್ತಿ ಮೊದಲಾದ ಅಂಗಸಾಧನೆಗಳಿಗಾಗಿ ಗೊತ್ತಾದ ಸ್ಥಳ. ಆ ಸ್ಥಳವಿರುವ ಮನೆ. ಗರಡಿಗಾಗಿ ಮನೆ ಇರುವುದು ಹೆಚ್ಚಾಗಿ ದಕ್ಷಿಣ ಭಾರತದಲ್ಲೆ. ಉತ್ತರದವರು ಬಯಲಲ್ಲಿಯೆ ಕುಸ್ತಿ ಮುಂತಾದವನ್ನು ಅಭ್ಯಾಸ ಮಾಡುತ್ತಾರೆ. ಗರಡಿ ಮನೆಯೊಳಗೆ ಕುಸ್ತಿ ಕಲಿಯುವ ಸ್ಥಳಕ್ಕೆ ಮಟ್ಟಿ ಎಂದೂ ಸ್ಪರ್ಧೆಯಲ್ಲಿ ಭಾಗವಹಿಸಿ ಕುಸ್ತಿ ಮಾಡುವ ಸ್ಥಳಕ್ಕೆ ಅಖಾಡ (ಗೋದಾ) ಎಂದೂ ಕರೆಯುತ್ತಾರೆ. ಗರಡಿ ಮಾಡುವುದು ಎಂದರೆ ಸಾಧನೆ ಮಾಡುವುದು, ವ್ಯಾಯಾಮ ಮಾಡುವುದು ಎಂಬುದಷ್ಟೇ ಅಲ್ಲದೆ ಕುಸ್ತಿ ಮಾಡುವುದು ಎಂಬ ಅರ್ಥವೂ ರೂಢಿಯಲ್ಲಿದೆ. ವಿರಾಟಪರ್ವದಲ್ಲಿ ಬರುವ ಮಲ್ಲಯುದ್ಧವನ್ನಿಲ್ಲಿ ನೆನೆಯಬಹುದು. ಭೀಮ, ದುರ್ಯೋಧನ, ಕೀಚಕ ಮೊದಲಾದವರು ಮಲ್ಲಯುದ್ಧದಲ್ಲಿಯೂ ಸಿದ್ಧಹಸ್ತರಾಗಿದ್ದರು. ಪಂಪನ ಆದಿಪುರಾಣದಲ್ಲಿ ವರ್ಣಿತವಾಗಿರುವ ಭರತ ಬಾಹುಬಲಿಗಳ ಮಲ್ಲಯುದ್ಧ ಪ್ರಸಂಗ ಅತ್ಯಂತ ಪ್ರಸಿದ್ಧವಾದುದು. ಹಿಂದಿನ ಕಾಲದಲ್ಲಿ ಕುಸ್ತಿ ಕಲೆಗೆ ಬಹಳ ಪ್ರೋತ್ಸಾಹವಿತ್ತು. ರಾಜಮಹಾರಾಜರುಗಳೇ ಈ ಕಲೆಯಲ್ಲಿ ಪರಿಣಿತಿ ಹೊಂದಿದ್ದರಲ್ಲದೆ ಪ್ರಖ್ಯಾತ ಪೈಲ್ವಾನರುಗಳನ್ನು ಸಾಕಿಕೊಂಡು ಈ ಕಲೆಗೆ ಪ್ರೋತ್ಸಾಹವೀಯುತ್ತಿದ್ದರು. ಸಂಗೊಳ್ಳಿ ರಾಯಣ್ಣ, ಮೈಸೂರಿನ ರಣಧೀರ ಕಂಠೀರವ ನರಸಿಂಹರಾಜ ಒಡೆಯರ್ ಮೊದಲಾದವರು ಈ ಕಲೆಯಲ್ಲಿ ಅಸಾಧಾರಣ ಚತುರತೆಯನ್ನು ಸಂಪಾದಿಸಿದ್ದರು. ರಣಧೀರ ಕಂಠೀರವ ನರಸಿಂಹರಾಜ ಒಡೆಯರು ಮಾರುವೇಷದಲ್ಲಿ ಹೋಗಿ ತಿರುಚ್ಚಿರಾಪಳ್ಳಿ ಜಟ್ಟಿಯನ್ನು ಸೋಲಿಸಿದ ಕಥೆ ಇತಿಹಾಸಪ್ರಸಿದ್ಧ. ಹಿಂದಿನ ಕಾಲದಲ್ಲಿ ಸೈನಿಕರಿಗೆ ಕಡ್ಡಾಯವಾಗಿ ಗರುಡಿ ಶಿಕ್ಷಣವನ್ನು ಕೊಡಲಾಗುತ್ತಿತ್ತು. ಮದಕರಿನಾಯಕರ ಕಾಲದಲ್ಲಿದ್ದ ಗರಡಿ ಮನೆಗಳನ್ನು ಚಿತ್ರದುರ್ಗದ ಕೋಟೆಯಲ್ಲಿ ನಾವು ಇಂದೂ ಕಾಣಬಹುದಾಗಿದೆ. ಹಳ್ಳಿಯಾದರೆ ಒಂದು. ಊರೆಂದರೆ ನಾಲ್ಕೈದು ಗರಡಿ ಮನೆಗಳಿದ್ದ ಕಾಲವೊಂದಿತ್ತು.



ಮಟ್ಟಿಪೂಜೆ

ಹಿಂದಿನ ಕಾಲದ ಗರಡಿ ಮನೆಗಳು ವಿಶಾಲವಾಗಿರದೆ ಚಿಕ್ಕವಾಗಿರುತ್ತಿದ್ದುವು. ದೂರದಿಂದ ನೋಡಿಯೇ ಸುಲಭವಾಗಿ ಅವನ್ನು ಪತ್ತೆಮಾಡಬಹುದಾಗಿತ್ತು. ಗರಡಿಯ ಹೊರ ಗೋಡೆಗಳ ಮೇಲೆ ಕೆಮ್ಮಣ್ಣಿನ ದೊಡ್ಡದೊಡ್ಡ ಹಾಗೂ ಉದ್ದುದ್ದ ಪಟ್ಟೆಗಳನ್ನು ಹಾಕಿರುತ್ತಿದ್ದರು. ಹಾಗೂ ಗರಡಿಯ ಮುಂದೆ ದಪ್ಪದಪ್ಪ ಕಲ್ಲುಗುಂಡುಗಳನ್ನು ಇಟ್ಟಿರುತ್ತಿದ್ದರು. ಬಾಗಿಲಿನಲ್ಲಿ ಗರುಡನ ಅಥವಾ ಹನುಮಂತನ ಚಿತ್ರಪಟವಿರುತ್ತಿತ್ತು. ಗರಡಿ ಮನೆಗಳಿಗೆ ಎಲ್ಲೋ ಒಂದು ಸಣ್ಣ ಕಿಟಕಿ ಇದ್ದರೆ ಅದೇ ಹೆಚ್ಚು. ಒಳಗಡೆ ಹೆಚ್ಚು ಗಾಳಿ, ಬೆಳಕು ಪ್ರವೇಶ ಮಾಡುತ್ತಿರಲಿಲ್ಲ.



ಪೈಲ್ವಾನ್ ಪಾಪಯ್ಯ

ಬಾಗಿಲು ಚಚ್ಚೌಕವಾಗಿದ್ದು ಸುಮಾರು 2½ ಅಡಿ ಅಗಲ ಹಾಗೂ 2½ ಅಡಿ ಎತ್ತರವಿರುತ್ತಿತ್ತು. ಆ ಮನೆಗೆ ಆ ಬಾಗಿಲು ತುಂಬ ಚಿಕ್ಕದೆಂದೇ ಹೇಳಬೇಕು. ಅಲ್ಲದೆ ಅದರ ದಪ್ಪ ½' ಇರುತ್ತಿತ್ತಾಗಿ ಅದನ್ನು ತಳ್ಳಿಕೊಂಡು ಒಳಗೆ ಹೋಗಬೇಕಾದರೆ ಸಾಕಷ್ಟು ತಾಕತ್ತು ಇರಬೇಕಾಗುತ್ತಿತ್ತು. ಈ ಬಾಗಿಲಿನ ಇನ್ನೊಂದು ವೈಶಿಷ್ಟ್ಯವೆಂದರೆ ಮುಂಭಾಗದಲ್ಲಿ ಬೀಗ ಹಾಕಿಕೊಳ್ಳಲು ಚಿಲಕವಿರುತ್ತಿರಲಿಲ್ಲ. ಆದರೆ ಒಳಗಡೆಯಿಂದ ಬಾಗಿಲನ್ನು ಹಾಕಿಕೊಳ್ಳಲು ಅಗಳಿ ಇರುತ್ತಿತ್ತು. ಸಾಧಾರಣವಾಗಿ ಒಂದೇ ಊರಿನಲ್ಲಿ 3, 4 ಗರಡಿ ಮನೆಗಳಿದ್ದು ಅವಕ್ಕೆಲ್ಲ ಹೆಸರಾಂತ ಉಸ್ತಾದರ ನಾಮಕರಣವಿರುತ್ತಿತ್ತು. ಅಲ್ಲದೆ ಒಂದು ಗರಡಿಯವರಿಗೂ ಇನ್ನೊಂದು ಗರಡಿಯವರಿಗೂ ಪೈಪೋಟಿಯಲ್ಲದೆ ವಿರೋಧವೂ ಇರುತ್ತಿತ್ತು. ಹೀಗೆ ವಿರೋಧವಿದ್ದುದರಿಂದಲೇ ಗರಡಿ ಮನೆಗಳಿಗೆ ಬಾಗಿಲಿನ ಮುಂಭಾಗದಲ್ಲಿ ಬೀಗ ಹಾಕಿಕೊಳ್ಳಲು ಚಿಲಕವಿರುತ್ತಿರಲಿಲ್ಲ. ಕಾರಣ ಗರಡಿ ಮನೆಯೊಳಗೆ ಸಾಧನೆ ನಡೆಸುತ್ತಿರುವಾಗ, ಆಗದವರು ಚಿಲಕ ಹಾಕಿ ಹೊರಟುಬಿಟ್ಟರೆ ಒಳಗಡೆ ಇದ್ದವರು ಗಾಳಿ ಬೆಳಕು ಇಲ್ಲದೆ ಅಲ್ಲಿಯೇ ಸಾಯಬೇಕಾಗುತ್ತಿತ್ತು. ಸಾಧನೆ ಮಾಡುವಾಗ ಉಸ್ತಾದ್ (ಗುರು) ತನ್ನ ಶಾಗಿರ್ದು(ಶಿಷ್ಯ) ಪೈಲ್ವಾನರುಗಳಿಗೆ ಹೇಳಿಕೊಡುವ ಡಾವುಗಳನ್ನು ಅವನ ಎದುರಾಳಿಗಳು ಯಾರಾದರೂ ಬಂದು ನೋಡಿಕೊಳ್ಳಬಹುದೆಂಬ ಕಾರಣದಿಂದ ಬಹುಶಃ ಒಳಗಡೆಯಿಂದ ಬಾಗಿಲನ್ನು ಹಾಕಿಕೊಳ್ಳಲು ಅಗಳಿ ಇರುತ್ತಿತ್ತು. ಗರಡಿ ಮನೆಯೊಳಗೆ ಪ್ರವೇಶ ಮಾಡಿದ್ದೇ ಆದರೆ ಗುಹೆಯೊಳಗೆ ಪ್ರವೇಶ ಮಾಡಿದ ಅನುಭವವಾಗುತ್ತಿತ್ತು.

ಗರಡಿ ಮನೆಗಳು ಚಿಕ್ಕವಾಗಿದ್ದು ಗಾಳಿ ಬೆಳಕು ಪ್ರವೇಶ ಮಾಡದಂತಿದ್ದುದಕ್ಕೆ ಇನ್ನೊಂದು ಕಾರಣವೆಂದರೆ ಮೈ ಬೆವರು ಶೀಘ್ರವಾಗಿ

ಹೊರಬೀಳಬೇಕೆಂಬುದೇ ಆಗಿತ್ತು. ಹೆಣ್ಣುಮಕ್ಕಳಾರೂ ಗರಡಿಮನೆಯನ್ನು ಪ್ರವೇಶಮಾಡಬಾರದು ಎಂಬ ನಿಯಮವಿತ್ತು. ಒಂದು ವೇಳೆ ಪ್ರವೇಶ ಮಾಡಿದರೆ ಅಂಥವರ ತಲೆಗೂದಲೆಲ್ಲ ಉದುರಿಹೋಗುತ್ತದೆ ಎಂಬ ನಂಬಿಕೆಯೂ ಇತ್ತು. ಬಹಶಃ ಸಾಧನೆ ಮಾಡುವ ಪೈಲ್ವಾನನಿಗೆ ಹೆಂಗಸಿನ ದೃಷ್ಟಿ ತಗಲಬಾರದು, ಆತ ಆಕೆಯ ಬಲೆಗೆ ಬೀಳಬಾರದು ಎಂಬುದು ಈ ಕಟ್ಟಳೆಯ ಉದ್ದೇಶವೆಂದು ತೋರುತ್ತದೆ.

ಹಿಂದೆ ಗರಡಿಮನೆಗಳು ಹೊರಗಡೆಯಿಂದ ಬಂದ ಪೈಲ್ವಾನರುಗಳಿಗೆ ಇಳಿದುಕೊಳ್ಳುವ ವಸತಿಗೃಹಗಳೂ ಆಗಿದ್ದುವು. ಕೊಲ್ಹಾಪುರದ ಕಡೆಯ ಗರಡಿಮನೆಗಳಲ್ಲಿಯಂತೂ ವಸತಿ ಸೌಕರ್ಯದ ಜೊತೆ ಊಟದ ಸೌಕರ್ಯವೂ ಇರುತ್ತಿತ್ತು.

ಈಗೀಗ ಕಟ್ಟುತ್ತಿರುವ ಗರಡಿಗಳನ್ನು ವ್ಯಾಯಾಮಶಾಲೆಗಳು ಎಂದು ಕರೆಯುತ್ತಾರೆ. ಇವು ವಿಶಾಲವಾಗಿದ್ದು ಗಾಳಿ ಬೆಳಕು ಹೆಚ್ಚು ಬರುವಂತಿರುತ್ತವೆ. ವ್ಯಾಯಾಮ ಶಾಲೆಯಲ್ಲಿ ಸುತ್ತಲೂ ಎತ್ತರವಾದ ನಿಲುಗನ್ನಡಿಗಳನ್ನು ನಿಲ್ಲಿಸಿರುತ್ತಾರೆ. ಹೀಗಿರುವುದರಿಂದ ಸಾಧನೆ ಮಾಡುವವರಿಗೆ ತಮ್ಮ ದೇಹದ ಅಂಗಾಂಗಗಳನ್ನು ಪೂರ್ಣವಾಗಿ ನೋಡಿಕೊಳ್ಳುವ ಅವಕಾಶವಿರುತ್ತದೆ. ಇಂಥ ವ್ಯಾಯಾಮಶಾಲೆಗಳಲ್ಲಿ ಕುಸ್ತಿಗಿಂತ ದೇಹದ ಅಂಗಸೌಷ್ಠವಕ್ಕೆ ಹೆಚ್ಚು ಪ್ರಾಧಾನ್ಯವಿರುತ್ತದೆ. ಮೈಸೂರು ಮತ್ತು ಮಹಾರಾಷ್ಟ್ರದಲ್ಲಿ ಸುವ್ಯವಸ್ಥಿತವಾದ ಗರಡಿ ಮನೆಗಳಿವೆ. ಈಗ ವ್ಯಾಯಾಮ ಶಾಲೆಗೆ ಹೋದರೆ ದೇಹದ ಅಂಗಾಂಗಗಳ ಕಾಂತಿಯನ್ನು ಹೆಚ್ಚಿಸಿಕೊಳ್ಳಲು ಬೇಕಾದ ವ್ಯಾಯಾಮ ಮಾಡಿಕೊಂಡು ಬರಬಹುದು; ಕುಸ್ತಿ ಮಾಡಬೇಕೆಂಬ ನಿಯಮವೇನಿಲ್ಲ. ಅಂತೆಯೇ ಈಗಿನ ವ್ಯಾಯಾಮ ಶಾಲೆಗಳಲ್ಲಿ ದೇಹದ ಅಂಗಗಾಂಗಳನ್ನು ಸುದೃಢವಾಗಿಸಲು ಬೇಕಾದ ವ್ಯಾಯಾಮ ಸಾಮಗ್ರಿಗಳನ್ನು ಕಾಣಬಹುದು. ಸಂಗೀತದ ಹಿನ್ನೆಲೆಯಲ್ಲಿ ವ್ಯಾಯಾಮ ಮಾಡುವ ಪದ್ಧತಿಯೂ (ಏರೋಬಿಕ್ಸ್) ಇತ್ತೀಚೆಗೆ ಪ್ರಚಲಿತವಾಗಿದೆ.

ಪ್ರಾಚೀನಕಾಲದಿಂದಲೂ ಗರಡಿ ಕಲೆ ಕರ್ನಾಟಕದಲ್ಲಿ ಪ್ರಚಲಿತವಿದ್ದರೂ ಅದಕ್ಕೊಂದು ನಿರ್ದಿಷ್ಟ ನೆಲೆ ದೊರೆತದ್ದು ವಿಜಯನಗರ ಅರಸರ ಕಾಲದಲ್ಲಿ. ಮೈಸೂರಿನಲ್ಲಿ ಸು.1610ರಲ್ಲಿ ಆರಂಭವಾದ ನವರಾತ್ರಿ ಉತ್ಸವದ ಕುಸ್ತಿಕಲೆ ಕೊನೆಯ ಅರಸರಾದ ಜಯಚಾಮರಾಜೇಂದ್ರ ಒಡೆಯರ್ ಕಾಲದವರೆಗೂ ಮೈಸೂರು ಸಂಸ್ಥಾನದಲ್ಲಿ ಅನೂಚಾನವಾಗಿ ನಡೆಯುತ್ತಾ ಬಂತು. 1970ರಲ್ಲಿ ಮಹಾರಾಜರ ಮಾನ್ಯತೆ ರದ್ದಾಗಿ ಕುಸ್ತಿ ಕಲೆಯೂ ನಿಂತಿತು. ಆದರೆ ಇಲ್ಲಿ ಮಹಾರಾಜರು ನಡೆಸುತ್ತಿದ್ದ ವಿಜಯದಶಮಿಯನ್ನು ಸರ್ಕಾರ ನಾಡಹಬ್ಬವಾಗಿ ಆಚರಿಸಲಾರಂಭಿಸಿತು. ಸಾಂಪ್ರದಾಯಿಕವಾಗಿ ನಡೆದುಬರುತ್ತಿದ್ದ ಕುಸ್ತಿಯನ್ನು ಕರ್ನಾಟಕ ಕ್ರೀಡಾ ಪರಿಷತ್ತಿಗೆ ವಹಿಸಲಾಯಿತು. ಮಹಾರಾಜರು ಕುಸ್ತಿ ಪಂದ್ಯಗಳಿಗೆ ನೀಡುತ್ತಿದ್ದ ರಾಜಧನ ರದ್ದಾದ ಬಳಿಕ ಸರ್ಕಾರವೇ ಹಣವನ್ನು ಭರಿಸುತ್ತ ಬಂದಿದೆ.



ಮಲ್ಲಕಂಬ ಕಸರತ್ತು

ಮೈಸೂರಿನ ಅಲಂಕಾರ್ ಹೋಟೆಲ್ ಮಾಲಿಕರಾಗಿದ್ದ ಎಂ.ಗೋವಿಂದಪ್ಪ, ಅಶೋಕ ಹೋಟೆಲ್ ಮಾಲಿಕರಾಗಿದ್ದ ಬಿ.ಪುಟ್ಟಪ್ಪ, ಆರ್.ಗುರು ಮತ್ತು ಅನೇಕ ಪೈಲ್ವಾನರು, ಉಸ್ತಾದರು, ಖಲೀಫರು ಕುಸ್ತಿ ಕಲೆಯ ಅಭಿವೃದ್ಧಿಗಾಗಿ ಶ್ರಮಿಸಿದ್ದಾರೆ. ಮೈಸೂರಿನ ಪೊಲೀಸ್ ಅಧಿಕಾರಿಯಾಗಿದ್ದ ಡಿ.ಎನ್.ಮುನಿಕೃಷ್ಣ ಚನ್ನಯ್ಯ ಕುಸ್ತಿ ಅಖಾಡಕ್ಕೆ



ಕೆ.ವಿ.ಅಯ್ಯರ್ ಅವರ ದೇಹದಾರ್ಢ್ಯ ಪ್ರದರ್ಶನ

ಹೊಸ ರೂಪ ದೊರೆಯುವಂತೆ ಮಾಡಿದರು (1988). 1961ರಿಂದ 1967ರ ವರೆಗೆ ಪ್ರತಿ ಭಾನುವಾರ ನಾಡ ಕುಸ್ತಿಗಳು ಮೈಸೂರು ಗರಡಿ ಸಂಘದ ವತಿಯಿಂದ ನಡೆಯುತ್ತಿದ್ದುವು. ಆದರೆ ಈಗ ದಸರ ಸಂದರ್ಭದಲ್ಲಿ ಮಾತ್ರ ನಡೆಯುತ್ತಿವೆ.

ಮೈಸೂರು ದಸರ ಕುಸ್ತಿ ಮೂಲತಃ ವಿಜಯನಗರ ಕಾಲದಿಂದಲೂ ಬೆಳೆದು ಬಂದಿದೆ. ವಿಜಯನಗರದ ಅರಸರ ಪತನಾನಂತರ ದಸರ ಕುಸ್ತಿಯನ್ನು ಬೆಳೆಸಿಕೊಂಡು ಅದಕ್ಕೆ ಪ್ರೋತ್ಸಾಹ ಕೊಟ್ಟು ಕುಸ್ತಿ ಕಲೆ ಅಳಿಯದಂತೆ ನಡೆಸಿಕೊಂಡು ಬಂದವರು ಮೈಸೂರು ರಾಜವಂಶದವರು. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ದಸರ ಕುಸ್ತಿಯನ್ನು ಜಗನ್ಮೋಹನ ಅರಮನೆಯಲ್ಲಿ, ಅನಂತರ ಅರಮನೆಯ ಮುಂದೆ ನಡೆಸಲಾಗುತಿತ್ತು. ಪ್ರತಿ ವರ್ಷ ದಸರ ಮಹೋತ್ಸವದ ಕಾಲದಲ್ಲಿ ಕುಸ್ತಿ ಕಲೆಗಾಗಿ ಅರಮನೆಯ ನಿಧಿಯಿಂದ ಹಣ ತೆಗೆದಿರಿಸಲಾಗುತ್ತಿತ್ತು. ಭಾರತದ ನಾನಾ ಭಾಗಗಳಿಂದ ಪೈಲ್ವಾನರನ್ನು ಕರೆಸಿ ಕುಸ್ತಿ ಪಂದ್ಯ ಏರ್ಪಡಿಸಿ ಜಯಶಾಲಿಗಳಾದವರಿಗೆ ಸೂಕ್ತ ಬಹುಮಾನಗಳನ್ನು ಕೊಟ್ಟು ಪ್ರೋತ್ಸಾಹಿಸಲಾಗುತ್ತಿತ್ತು.

ಮೈಸೂರಿನ ಸಾಹುಕಾರ ಚನ್ನಯ್ಯ ಮತ್ತು ಪೈಲ್ವಾನ್ ಶಿವನಂಜಪ್ಪನವರು 1958ರಲ್ಲಿ ಗರಡಿ ಸಂಘವನ್ನು ಸ್ಥಾಪಿಸಿದರು. ಮೈಸೂರು ಪುರಸಭೆ ದೊಡ್ಡಕೆರೆ ಮೈದಾನದಲ್ಲಿ ನಿವೇಶನವೊಂದನ್ನು ಗರಡಿ ಸಂಘಕ್ಕೆ ನೀಡಿತು. ಅಲ್ಲಿ ಕುಸ್ತಿ ಅಖಾಡವನ್ನು ನಿರ್ಮಿಸಲಾಯಿತು (1962). ಈ ಅಖಾಡವನ್ನು ಅಂದಿನ ಮೈಸೂರಿನ ರಾಜ್ಯಪಾಲರಾಗಿದ್ದ ಜಯಚಾಮರಾಜೇಂದ್ರ ಒಡೆಯರ್ ಉದ್ಘಾಟಿಸಿದರು. ಈ ಅಖಾಡದ ಸಂಸ್ಥಾಪಕರಾದ ಚನ್ನಯ್ಯ ನವರ ನೆನಪಿನಲ್ಲಿ ಚನ್ನಯ್ಯ ಕುಸ್ತಿ ಅಖಾಡ ಎಂದು ನಾಮಕರಣ ಮಾಡಲಾಗಿದೆ. ಅಂದಿನಿಂದ ದಸರ ಕುಸ್ತಿಗಳು ಈ ಅಖಾಡದಲ್ಲೇ ನಡೆಯುತ್ತಿವೆ.

1962ರ ದಸರ ಕುಸ್ತಿಯಲ್ಲಿ ಪೈಲ್ವಾನ್ ರಾಮದಾಸ, ಪೈಲ್ವಾನ್ ದೊಡ್ಡಲಿಂಗ, ಪೈಲ್ವಾನ್ ಕುಚೇಲಯ್ಯ ಇವರು ಚಿನ್ನದ ಪದಕ ಸ್ವೀಕರಿಸಿದರು. ಕುಸ್ತಿ ಪಂದ್ಯಗಳ ಗುತ್ತಿಗೆದಾರರೂ ಪ್ರೋತ್ಸಾಹಕರೂ ಆದ ಎಂ.ಗೋವಿಂದಪ್ಪ, ಬಿ.ಪುಟ್ಟಪ್ಪ, ಇವರನ್ನೂ ಸನ್ಮಾನಿಸಿ



ಶಂಕರ್ ಚಕ್ರವರ್ತಿ

ಅವರಿಗೆ ಸುವರ್ಣ ಪದಕ ನೀಡಲಾಯಿತು. 1975ರಲ್ಲಿ ಮೈಸೂರು ನಗರದ ಗಣ್ಯ ವ್ಯಕ್ತಿಗಳಿಂದ ಆರ್ಥಿಕ ನೆರವು ಪಡೆದು ದೊಡ್ಡಕೆರೆ ಮೈದಾನದಲ್ಲಿ ಕ್ರೀಡಾಂಗಣವೊಂದನ್ನು ನಿರ್ಮಿಸಲಾಯಿತು. 1975ರಿಂದ ಮೈಸೂರು ದಸರ ಕುಸ್ತಿಯನ್ನು ಕರ್ನಾಟಕ ರಾಜ್ಯ ಸರ್ಕಾರ ನಡೆಸಿಕೊಂಡು ಬರುತ್ತಿದೆ. ಕುಸ್ತಿ ಪಟುವಿನ ತೂಕ ಹಾಗೂ ವಯಸ್ಸಿನಾಧಾರದ ಮೇಲೆ ಅನೇಕ ವಿಭಾಗಗಳಾಗಿ ವಿಂಗಡಿಸಿ ಪ್ರಶಸ್ತಿಗಳನ್ನು ಕೊಡಲಾಗುತ್ತಿದೆ. 58-65ಕೆಜಿಯ ದಸರ ಕಿಶೋರ್ ಪ್ರಶಸ್ತಿ, 69ಕೆಜಿಯ ದಸರಾ ಕುಮಾರ್ ಪ್ರಶಸ್ತಿ, 79ಕೆಜಿಯ ದಸರ ಕೇಸರಿ ಪ್ರಶಸ್ತಿ ಮತ್ತು 85ಕೆಜಿವರೆಗೆ ದಸರ ಕಂಠೀರವ ಪ್ರಶಸ್ತಿಯನ್ನು ನೀಡಲಾಗುತ್ತಿದೆ.

ಮೈಸೂರಿನ ಪ್ರಸಿದ್ಧ ಗರಡಿ ಮನೆಯಾದ ಅಹಮ್ಮದ್ ಸಾಹೇಬ್ ಗರಡಿಯ ಪೈಲ್ವಾನ್ ಪಾಪಯ್ಯ ಕರ್ನಾಟಕ ಕುಸ್ತಿ ಕಲೆಗೆ ಹೆಸರು ತಂದು ಕೊಟ್ಟವರು. ದೆಹಲಿಯಲ್ಲಿ ಕುಸ್ತಿ ಪ್ರದರ್ಶನ ನೀಡಿ ಕುಸ್ತಿ ಕಂಠೀರವ ಎಂಬ ಬಿರುದನ್ನು ಮತ್ತು ಬಂಗಾರದ ಪದಕವನ್ನು ಇವರು ಪಡೆದಿದ್ದರು (1911). ಶ್ರೀನಿವಾಸಣ್ಣನ ಬಂಡೀಕೇರಿ ಗರಡಿಯ ಚಿಕ್ಕಯ್ಯ, ಪೈಲ್ವಾನ್ ಸ್ಟಾರ್ ರಾಮು, ಸಾಬೂಲಾಲ್ ಮುಂತಾದವರು ಹಿಂದೆ ಕರ್ನಾಟಕಕ್ಕೆ ಕೀರ್ತಿ ತಂದ ಹೆಸರಾಂತ ಕುಸ್ತಿಪಟುಗಳಾಗಿದ್ದರು. ಕರ್ನಾಟಕದ ಪೈಲ್ವಾನ್ ಚಂಬಾ ಮುದ್ನಾಲ್ ಭಾರತಕೇಸರಿ ಪ್ರಶಸ್ತಿ ಪಡೆದಿದ್ದಾರೆ. ಪೈಲ್ವಾನ್ ಬಸಪ್ಪ ಪೂಜಾರಿ, ಪೈಲ್ವಾನ್ ಮಠಪತಿ, ಫಾರೂಕ್ ಅವರು ಕರ್ನಾಟಕ ಕೇಸರಿ ಬಿರುದನ್ನು ಪಡೆದಿದ್ದರು. ಪೈಲ್ವಾನ್ ಚಿನ್ನ, ಅರ್ಜುನ ಖಾನಾಪುರ, ಚಂದ್ರು ಕುರುವಿನಕೊಪ್ಪ, ಪೈಲ್ವಾನ್ ರುದ್ರ ಮೂಗ, ಪೈಲ್ವಾನ್ ಮುಕುಂದ, ಟೈಗರ್ ಬಾಲಾಜಿ, ಚಂದ್ರಶೇಖರ್, ಮೈಸೂರು ಪಾಲಹಳ್ಳಿ ವಿಜೇಂದ್ರ ಮುಂತಾದವರು. ಕರ್ನಾಟಕದ ಹೆಸರಾಂತ ಕುಸ್ತಿಪಟುಗಳು. ಮಹಾಪೂರ್ ಕೇಸರಿ ಪ್ರಶಸ್ತಿ, ಕರ್ನಾಟಕ ಕುಮಾರ್, ದಸರ ಕಂಠೀರವ ದಸರ ಕೇಸರಿ, ದಸರ ಕುಮಾರ್ ಮುಂತಾದ ಬಿರುದುಗಳನ್ನು ಮೈಸೂರಿನ ಶಂಕರ್ ಚಕ್ರವರ್ತಿ ಪಡೆದಿದ್ದಾರೆ.

**ಮಟ್ಟಿ :** ಗರಡಿಮನೆಯಲ್ಲಿ ಅತ್ಯಂತ ಪ್ರಧಾನವಾದ ಭಾಗವೆಂದರೆ ಮಟ್ಟಿ. ಅಂದರೆ ಕುಸ್ತಿ ಮಾಡುವ ಸ್ಥಳ. ಈ ಮಟ್ಟಿ ಕನಿಷ್ಠ 14' ಇರುವ ಒಂದು ಚೌಕ. ಇಂಥ ಮಟ್ಟಿಯಲ್ಲಿ ಒಂದು ಜೊತೆ ಅಥವಾ ಎರಡು ಜೊತೆ ಜಟ್ಟಿಗಳು ಕುಸ್ತಿ ಮಾಡಬಹುದು. ಕುಸ್ತಿ ಮಾಡುವ ಸ್ಥಳವನ್ನು ಸುಮಾರು ಒಂದು ಅಡಿ ಆಳದವರೆಗೂ ಹುಡಿಮಣ್ಣಿನಿಂದ ತುಂಬಿರಬೇಕು. ಇದಕ್ಕೆ ಕೆಮ್ಮಣ್ಣು ಶ್ರೇಷ್ಠ. ಉತ್ತಮದರ್ಜೆಯ ಮೃದುವಾದ ಮಣ್ಣನ್ನು ತುಂಬುವುದರಿಂದ ಚರ್ಮಕ್ಕೆ ತಗಲುವ ಅಪಾಯಗಳು ಕಡಿಮೆ. ಮಣ್ಣಿನಲ್ಲಿ ಸಣ್ಣ ಸಣ್ಣ ಮರಳು ಮತ್ತು ನುರುಜುಗಲ್ಲುಗಳಿಲ್ಲದಂತೆ ಮಾಡಲು ಮಣ್ಣನ್ನು ಜರಡಿ ಆಡಿಸಿರುತ್ತಾರೆ.

ಕೆಮ್ಮಣ್ಣು 100 ಚೀಲ, ಜೇಕಿನಗೆಡ್ಡೆಯ ಪುಡಿ 10 ಚೀಲ, ಕರ್ಪೂರ, ಕುಂಕುಮ 20 ಪೌಂಡುಗಳು, ಟಿಂಕ್ಚರ್ 46 ಪೌಂಡು, ದೇವದಾರು ಎಣ್ಣೆ 20 ಪೌಂಡು, ಗಂಧದ ಹುಡಿ 20 ಪೌಂಡು, ಅತ್ತರು 20 ತೊಲ, ಎಳ್ಳೆಣ್ಣೆ 20 ಮಣ - ಇವೇ ಮೊದಲಾದ ಸಾಮಗ್ರಿಗಳನ್ನು ಬೆರಸಿದ ಮಟ್ಟಿ ಆರೋಗ್ಯದಾಯಕವೆಂಬುದು ಸಾಂಪ್ರದಾಯಿಕ ನಂಬಿಕೆ. ಲಡತ್ ಮಾಡಿ ಮುಗಿದ ಮೇಲೆ ಪೈಲ್ವಾನರು ಈ ಮಟ್ಟಿಯಲ್ಲಿ ಉದುದ್ದವಾದ ಗುಂಡಿಯನ್ನು ತೆಗೆದು, ಕತ್ತನ್ನು ಮಾತ್ರ ಹೊರಗೆಬಿಟ್ಟು ಅದರಲ್ಲಿ ಮಲಗಿಕೊಳ್ಳುತ್ತಾರಲ್ಲದೆ ದೇಹದ ತುಂಬ ಮಣ್ಣನ್ನು ಮುಚ್ಚಿಸಿಕೊಳ್ಳುತ್ತಾರೆ. ಹೀಗೆ ಮಟ್ಟಿಯಲ್ಲಿ ಮಲಗಿ ವಿಶ್ರಾಂತಿ ಪಡೆಯುವುದರಿಂದ ದೇಹದ ಕಾವೆಲ್ಲವೂ ಆರಿಹೋಗುತ್ತದೆ. ಅಲ್ಲದೆ ಶರೀರಕ್ಕೆ ತಂಪೊದಗಿ, ಒಂದು ರೀತಿಯ ಕಾಂತಿಯುಂಟಾಗುತ್ತದೆ. ಇದಕ್ಕೆ ಮಟ್ಟಿ ತೆಗೆದುಕೊಳ್ಳುವುದೆಂದು ಹೇಳುತ್ತಾರೆ. ಮಲ್ಲಾಡಿಹಳ್ಳಿಯ ಅನಾಥ ಸೇವಾಶ್ರಮದಲ್ಲಿ ರಾಘವೇಂದ್ರ ಸ್ವಾಮಿಗಳು ಹಲವಾರು ಆಯುರ್ವೇದಿಯ ಔಷಧಿಗಳನ್ನು ಬೆರಸಿದ ಮಟ್ಟಿಯನ್ನು ರೋಗಚಿಕಿತ್ಸೆಗಾಗಿ ಬಳಸುತ್ತಿದ್ದರು. ಹೀಗೆ ಮಟ್ಟಿ ತೆಗೆದುಕೊಳ್ಳುವುದೂ ಒಂದೇ, ಒಂದು ಸೇರು ಹಾಲು ಕುಡಿಯುವುದೂ ಒಂದೇ ಎಂದು ನಂಬಿಕೆ. ಕುಸ್ತಿ ಮಾಡುವಾಗ ಪೈಲ್ವಾನರಿಗೆ ಅಕಸ್ಮಾತ್ ಗಾಯಗಳೇನಾದರೂ ಆದರೆ ಅವರು ಯಾವ ವೈದ್ಯನ ಬಳಿಗೂ ಹೋಗುವುದಿಲ್ಲ. ಗಾಯದ ಮೇಲೆ ಈ ಮಟ್ಟಿಯ ಮಣ್ಣನ್ನು ಮೆತ್ತುತ್ತಾರೆ. ನವರಾತ್ರಿಯಲ್ಲಿ ಈ ಮಟ್ಟಿಗೆ ಹೊಸ ಮಣ್ಣು ಸೇರಿಸಿ ಉಸ್ತಾದರೆಲ್ಲ ಸೇರಿ ಪೂಜೆ ಮಾಡುತ್ತಾರೆ. ವರಮಹಾಲಕ್ಷ್ಮಿ ಹಬ್ಬದ ದಿನ ಹೊಸ ಮಣ್ಣು ತರುವುದು ವಾಡಿಕೆ. ತಂದ ಮಣ್ಣನ್ನು ಪೂಜಿಸುತ್ತಾರೆ. ಕುಸ್ತಿಯ ಸ್ಪರ್ಧೆ ಇರುವ ದಿವಸ ಮಟ್ಟಿಯ ಮಣ್ಣನ್ನು ಒಂದೆಡೆ ದೊಡ್ಡ ರಾಶಿಯಾಗಿ ಏರುಹಾಕಿ ಅದರೊಂದಿಗೆ ಸ್ಪರ್ಧೆಯಲ್ಲಿ ಭಾಗವಹಿಸುವ ಪೈಲ್ವಾನರುಗಳ ಕಾಚ, ಹನುಮಾನ್ ಚಡ್ಡಿ, ವ್ಯಾಯಾಮ ಸಾಮಗ್ರಿಗಳೆಲ್ಲವನ್ನೂ ಇಟ್ಟು ಪೂಜೆ ಮಾಡುತ್ತಾರೆ. ಆ ದಿವಸ ಗರಡಿಮನೆಯಲ್ಲಿ ಯಾರೂ ಕುಸ್ತಿ ಮಾಡುವುದಿಲ್ಲ. ಕುಸ್ತಿ ಮುಗಿದ ಮಾರನೆಯ ದಿವಸವೆ ಏರು ಹಾಕಿದ ಮಟ್ಟಿಯ ಮಣ್ಣನ್ನು ಒಡೆದು ದೈನಂದಿನ ಸಾಧನೆ ನಡೆಸುತ್ತಾರೆ.

**ವ್ಯಾಯಾಮಸಾಮಗ್ರಿಗಳು :** ಹಿಂದಿನ ಕಾಲದಲ್ಲಿ ಗರಡಿಮನೆಗಳಲ್ಲಿ ವ್ಯಾಯಾಮಸಾಮಗ್ರಿಗಳು ಹೆಚ್ಚು ಇರುತ್ತಿರಲಿಲ್ಲ. ದಂಡೆ ಒತ್ತುವುದು. ಬಸ್ಕಿ ಹೊಡೆಯುವುದು ಮತ್ತು ಮಟ್ಟಿ ಕುರಾಯಿಸುವುದು ಇವಿಷ್ಟೇ ಅಂದಿನ ಪ್ರಧಾನ ವ್ಯಾಯಾಮಗಳಾಗಿದ್ದುವು. ಅಲ್ಲಿನ ಸಾಮಾನ್ಯ ವ್ಯಾಯಾಮ ಸಾಮಗ್ರಿಗಳೆಂದರೆ ಡಂಬೆಲ್ಸ್, ಲೋಡು (ಗದೆ), ಬಳಪದ ಕಲ್ಲಿನಿಂದ ಮಾಡಿದ್ದು ಕುತ್ತಿಗೆಗೆ ಸಿಕ್ಕಿಸಿಕೊಳ್ಳುವ ಗಾಲಿ, ರಂಧ್ರವಿರುವ ಕಬ್ಬಿಣದ ಗುಂಡು, ಮಲ್ಲಗಂಬ, ದಂಡೆ ಹೊಡೆಯುವಾಗ ಹಿಡಿದುಕೊಳ್ಳಲು ಉಪಯೋಗಿಸುವ, ಮರದಿಂದ ಮಾಡಿದ ಕೈಹಿಡಿಗಳು, ಮಣೆ, ಮಟ್ಟಿ ಕುರಾಯಿಸುವ ದೊಡ್ಡ ಗುದ್ದಲಿ - ಮೊದಲಾದುವು. ಈ ಎಲ್ಲ ವ್ಯಾಯಾಮಸಾಮಗ್ರಿಗಳೂ ಕುಸ್ತಿಕಲೆಗೆ ಸಹಾಯಕವಾಗುವಂಥವು.

ಪೈಲ್ವಾನರುಗಳ ಆರಾಧ್ಯದೈವವೆಂದರೆ ಮೌಲಾಲಿ ಮತ್ತು ಹನುಮಂತ. ಆದ್ದರಿಂದಲೆ ಎಲ್ಲ ಗರಡಿಮನೆಗಳಲ್ಲೂ ಹನುಮಂತ ಮತ್ತು ಮೌಲಾಲಿ ದೇವರುಗಳನ್ನು ಕಾಣಬಹುದು. ಮೌಲಾಲಿ ಆಕಾರವಿಲ್ಲದ ದೇವರು. ಸಾಮಾನ್ಯವಾಗಿ ಗರಡಿಮನೆಗಳಲ್ಲಿ ಕೆಳಗಡೆ ಮೂರು ಗುಂಡು, ಮೇಲ್ಗಡೆ ಒಂದು ಗುಂಡನ್ನು ಇಟ್ಟು ಇದನ್ನೆ ಮೌಲಾಲಿ ದೇವರೆಂದು ಪೂಜಿಸುತ್ತಾರೆ. ಕುಸ್ತಿ ಇರುವ ದಿವಸ ಪೈಲ್ವಾನರು ಅಖಾಡವನ್ನು ಪ್ರವೇಶಿಸುವಾಗ ಯಾಲಿ ಮೌಲಾಲಿ, ಯಾಲಿ ಮದಾತ್, ಯಾಲಿ ಉಸ್ತಾದ್, ಜೈ ಭಜರಂಗಬಲಿ ಮುಂತಾದ ಘೋಷಣೆಗಳನ್ನು ಕೂಗುತ್ತಾರೆ. ಇತ್ತೀಚೆಗೆ ಹಿಂಕಣ್ಣು ಮುಂಕಣ್ಣು ಲಾಗ ಹಾಕಿಕೊಂಡು ಬರುವುದೂ ರೂಢಿಯಲ್ಲಿದೆ. ಜಟ್ಟಿಗಳ ಅಧಿದೇವತೆ ನಿಂಬಜಾದೇವಿ.

**1 ಮಲ್ಲಕಂಬ :** ಮಲ್ಲಕಂಬಗಳಲ್ಲಿ ಮೂರು ವಿಧ: (i). ನೇಣು ಮಲ್ಲಕಂಬ (ii). ಹುಗಿದಿರುವ ಮಲ್ಲಕಂಬ (iii). ಬೆತ್ತದ ಮಲ್ಲಕಂಬ. ಇವುಗಳ ಮೆಲೆ ವ್ಯಾಯಮ ಮಾಡುವುದರಿಂದ ತೊಡೆಗಳಿಗೆ ಅಸಾಧಾರಣವಾದ ಶಕ್ತಿ ಹಾಗೂ ಬಿಗಿ ಬರುತ್ತದಲ್ಲದೆ ದೇಹವನ್ನು ಹೇಗೆ ಬೇಕೋ ಹಾಗೆ ಮಣಿಸುವುದಕ್ಕೆ ಸಾಧ್ಯವಾಗುತ್ತದೆ.

ದಾದಾ ಬಾಲಂಭಟ್ಟ ಎಂಬಾತ ಮಲ್ಲಕಂಬದ ಮೇಲೆ ವ್ಯಾಯಾಮ ಮಾಡುವುದನ್ನು ಕಂಡುಹಿಡಿದ. ಇದಕ್ಕೆ ಸಂಬಂಧಿಸಿದಂತೆ ಕಥೆಯೊಂದಿದೆ. ಪ್ರಖ್ಯಾತ ಜಟ್ಟಿಯೊಬ್ಬನ ಸವಾಲನ್ನು ಎದುರಿಸಿ ಅವನ ಜೊತೆ ಕುಸ್ತಿ ಮಾಡಲು ಒಪ್ಪಿಕೊಂಡ ಬಾಲಂಭಟ್ಟ ಅವನನ್ನು ಸೋಲಿಸುವ ಬಗೆಯನ್ನು ಕುರಿತು ತೀವ್ರವಾಗಿ ಯೋಚಿಸತೊಡಗಿದ.ಈ ಯೋಚನೆ ಯಲ್ಲಿರುವಾಗಲೇ ಒಂದು ದಿವಸ ಅವನಿಗೆ ಒಂದು ಕನಸು ಬಿತ್ತು. ಕನಸಿನಲ್ಲಿ ಕೋತಿಯೊಂದು ಮರದ ಕೊಂಬೆಯ ಮೆಲೆ ಲಾಗ ಹಾಕುತ್ತಾ ಅನೇಕ ರೀತಿಯ ಕಸರತ್ತು ಮಾಡುತ್ತಿರುವುದನ್ನು ಕಂಡ. ಅದು ಅವನಿಗೊಂದು ಸೂಚನೆಯನ್ನೊದಗಿಸಿತು. ಮಾರನೆಯ ದಿನವೇ ನುಣುಪಾದ ಮರದ ಕಂಬವನ್ನು ತಂದು ನೆಲದಲ್ಲಿ ನೆಟ್ಟು ಅದರ ಮೇಲೆ ಕಸರತ್ತು ಮಾಡಲು ಪ್ರಾರಂಭಿಸಿದ. ಆದ್ದರಿಂದಾಗಿ ಆತ ತನ್ನ ಎದುರಾಳಿಯನ್ನು ಸುಲಭವಾಗಿ ಸೋಲಿಸಿದ. ಮಲ್ಲಕಂಬದ ಮೇಲೆ ನಡೆಸುವ ವಿವಿಧ ಚಟುವಟಿಕೆಗಳ ಸ್ಪರ್ಧೆಯನ್ನು ಈಗಲೂ ಮಹಾರಾಷ್ಟ್ರದಲ್ಲಿ ನಡೆಸುತ್ತಾರೆ.

**2 ಡಂಬೆಲ್ಲುಗಳು:** ವಿವಿಧ ತೂಕಗಳ ಡಂಬೆಲ್ಲುಗಳನ್ನು ಎರಡೂ ಕೈಯಲ್ಲಿ ಹಿಡಿದುಕೊಂಡು ದೀರ್ಘಶ್ವಾಸ ಎಳೆದುಕೊಂಡು ಕೈಗಳನ್ನು ಒಂದಾದ ಮೇಲೆ ಒಂದರಂತೆ ಮೇಲೆತ್ತಿ, ನಿಧಾನವಾಗಿ ಉಸಿರುಬಿಡುತ್ತ ಕೆಳಗೆ ಇಳಿಸಬೇಕು. ಈ ವ್ಯಾಯಾಮದಿಂದ ಮುಂಗೈ ಮತ್ತು ತೋಳುಗಳಿಗೆ ಬಲ ಬರುತ್ತದೆ.

**3 ಗದೆ ಅಥವಾ ಲೋಡು:** ವಿವಿಧ ತೂಕಗಳ ಗದೆಗಳಿರುತ್ತವೆ. ಸಮ ತೂಕವುಳ್ಳ ಎರಡು ಗದೆಗಳನ್ನು ಎರಡೂ ಕೈಗಳಲ್ಲಿ ಹಿಡಿದುಕೊಂಡು ಮೂಗಿನ ನೇರದಲ್ಲಿ ನಿಲ್ಲಿಸಿಕೊಳ್ಳಬೇಕು. ಅನಂತರ ಒಂದು ಕೈಯಲ್ಲಿ ಹಿಡಿದಿರುವ ಗದೆಯನ್ನು ಮೂಗಿನ ನೇರದಲ್ಲಿಯೆ ನಿಲ್ಲಿಸಿಕೊಂಡು, ಇನ್ನೊಂದು ಕೈಯಲ್ಲಿರುವ ಗದೆಯನ್ನು ತಲೆಯ ಮೇಲೆ ಎತ್ತಿ ಬೆನ್ನ ಹಿಂದೆ ಇಳಿಸಿ ಅನಂತರ ಮೊದಲಿದ್ದ ಸ್ಥಾನಕ್ಕೇ, ಅಂದರೆ ಮುಂಭಾಗದಿಂದ ಮೇಲೆತ್ತಿ ಮೂಗಿನ ನೇರಕ್ಕೇ ನಿಲ್ಲಿಸಿ ಕೊಳ್ಳಬೇಕು. ತತ್ಕ್ಷಣವೇ ಮತ್ತೊಂದು ಕೈಯಲ್ಲಿರುವ ಗದೆಯನ್ನು ತಲೆಯ ಮೇಲೆ ಎತ್ತಿ ಬೆನ್ನ ಹಿಂದೆ ಇಳಿಸಿ ಮುಂದುಗಡೆಯಿಂದ ಮೂಗಿನ ನೇರಕ್ಕೆ, ತಂದು ನಿಲ್ಲಿಸಿಕೊಳ್ಳಬೇಕು. ಹೀಗೆ ಒಂದಾದ ಮೇಲೊಂದರಂತೆ, ಗದೆಗಳನ್ನು ತಿರುಗಿಸಬೇಕು. ಇದರಿಂದ ಮುಂಗೈ ಮತ್ತು ತೋಳುಗಳಿಗೆ ಅಸಾಧಾರಣ ಶಕ್ತಿಬರುತ್ತದೆ.



ಮಲ್ಲಕಂಬದ ಅಭ್ಯಾಸದಲ್ಲಿರುವ ಕುಸ್ತಿಪಟು

**4 ಗಾಲಿ :** ಸಿಮೆಂಟಿನ ಈ ಗಾಲಿ 1½' ಸುತ್ತಳತೆಯದಾಗಿದ್ದು ತುಂಬ ಭಾರವಾಗಿರುತ್ತದೆ. ಇದರ ಮಧ್ಯೆ ತಲೆ ನುಗ್ಗುವಷ್ಟು ರಂಧ್ರವೊಂದಿರುತ್ತದೆ. ಈ ಗಾಲಿಯನ್ನು ನಿಲ್ಲಿಸಿಕೊಂಡು, ಕುಕ್ಕುರುಗಾಲಿನಲ್ಲಿ ಕುಳಿತು ರಂಧ್ರದ ಮಧ್ಯೆ ತಲೆಯನ್ನು ತೂರಿಸಿ ಗಾಲಿಯನ್ನು ಕುತ್ತಿಗೆಗೆ ಸಿಗಿಸಿಕೊಂಡು ಮೇಲೇಳಬೇಕು. ಮೇಲೆದ್ದು ಗರಡಿಮನೆಯ ಒಳಭಾಗದಲ್ಲಿಯೇ ಒಂದೆರಡು ನಿಮಿಷ ಸುತ್ತಾಡಬೇಕು. ಹೀಗೆ ಮಾಡುವುದರಿಂದ ಕುತ್ತಿಗೆಗೆ ಬಲ ಬರುತ್ತದೆ.

**5 ಗುಂಡು :** ಇದು ಭಾರವಾದ ಕಬ್ಬಿಣದ್ದಾಗಿದ್ದು ಮಧ್ಯೆ ಒಂದು ಅಂಗುಲ ಅಥವಾ ಎರಡು ಅಂಗುಲಗಳಷ್ಟು ಅಗಲವಾದ ರಂಧ್ರವಿರುತ್ತದೆ. ಈ ರಂಧ್ರದ ಮಧ್ಯೆ ದಪ್ಪನಾದ ಕೋಲೊಂದನ್ನು ತಳ್ಳಿ ಕೈಯಿಂದ ಆ ಕೋಲನ್ನು ಹಿಡಿದು ಮುಂಗೈ ತ್ರಾಣದಿಂದ ಆ ಗುಂಡನ್ನು ಮೇಲೆತ್ತಬೇಕು. ಹೀಗೆ ಮಾಡುವುದರಿಂದ ಕೈಗಳಿಗೆ ಬಲ ಬರುತ್ತದೆ.

**6 ಗುದ್ದಲಿ :** ಇದು ವ್ಯವಸಾಯದ ಗುದ್ದಲಿಗಿಂತ ಆಕಾರದಲ್ಲಿ ದೊಡ್ಡದಾಗಿದ್ದು, ಭಾರವಾಗಿರುತ್ತದೆ. ಪ್ರತಿಯೊಬ್ಬ ಪೈಲ್ವಾನನೂ ಕುಸ್ತಿ ಮಾಡಿಯಾದ ಮೇಲೆ ಈ ಗುದ್ದಲಿಯಿಂದ ಮಟ್ಟಿಯನ್ನು ಪೂರ್ತಿ ಕುರಾಯಿಸುತ್ತಾನೆ. ಇದರಿಂದ ಎದೆ ವಿಶಾಲವಾಗುತ್ತದೆ. ಮುಂಗೈಗಳು, ತೋಳುಗಳು ಮತ್ತು ಸೊಂಟಕ್ಕೆ ಹೆಚ್ಚಿನ ಶಕ್ತಿ ಬರುವುದಲ್ಲದೆ ದಮ್ಮುಕಸ್ತು ನಿಲ್ಲುತ್ತದೆ. *

**ಗರುಡಗಂಬ :** ದೇವಾಲಯಗಳ ಮುಂದಿರುವ ಕಲ್ಲಿನ ಧ್ವಜಸ್ತಂಭ ಅಥವಾ ದೀಪಸ್ತಂಭ. ಗರುಡಗಂಬಗಳನ್ನು ನಿಲ್ಲಿಸುವ ಪದ್ಧತಿ ವಿಜಯನಗರ ಕಾಲದಿಂದೀಚೆಗೆ ಬಂದಂತೆ ತೋರುತ್ತದೆ. ಬೇಲೂರಿನ ಕೇಶವ ದೇವಾಲಯದ ಮುಂದೆ ಇರುವ ಖಗಧ್ವಜಸ್ತಂಭವನ್ನು ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ಜಕ್ಕನೃಪ ನಿಲ್ಲಿಸಿದ. ವಿಷ್ಣು ದೇವಾಲಯಗಳ ಮುಂದಿನ ಈ ಕಂಬಗಳು ಗರುಡಧ್ವಜಗಳನ್ನು ಸೂಚಿಸುತ್ತವೆ. ಶಿವದೇವಾಲಯಗಳ ಮುಂದೆ ನಿಲ್ಲಿಸಿರುವ ಕಂಬಗಳನ್ನೂ ಗರುಡ ಗಂಬಗಳೆಂದೇ ಕರೆಯುವ ವಾಡಿಕೆಯಿದೆ.

ವಿಜಯನಗರ ಕಾಲದಿಂದೀಚೆಗೆ ನಿಲ್ಲಿಸಿರುವ ಇಂಥ ಕಂಬಗಳು ಧ್ವಜಸ್ತಂಭ ಅಥವಾ ದೀಪಸ್ತಂಭಗಳಾಗಿರಬಹುದು. ಆದರೆ ಹೊಯ್ಸಳರ ಕಾಲದಲ್ಲಿ ಶಿವ ದೇವಾಲಯಗಳ ಬಳಿ ನಿಲ್ಲಿಸುತ್ತಿದ್ದ ಕೆಲವು ವಿಶಿಷ್ಟವಾದ ಕಂಬಗಳಿಗೆ ಗರುಡಗಂಬಗಳೆಂಬ ಹೆಸರು ಬಂದಿರಬೇಕು. ಆ ಕಾಲದಲ್ಲಿ ರಾಜನಿಗೆ ನಿಷ್ಠರಾಗಿ, ಅವನ ಪ್ರಾಣರಕ್ಷಣೆಯೇ ತಮ್ಮ ಕರ್ತವ್ಯವೆಂದು ತಿಳಿದು, ರಾಜನ ಮರಣಾನಂತರ ಆತ್ಮಾರ್ಪಣೆ ಮಾಡಿಕೊಳ್ಳುತ್ತಿದ್ದ ಲೆಂಕರಿಗೆ ಗರುಡರೆಂಬ ಹೆಸರಿತ್ತು. ಸ್ವಾಮಿನಿಷ್ಠೆಯಲ್ಲಿ ತಾವು ಗರುಡನಿಗಿಂತ ಕಡಿಮೆಯೇನೂ ಅಲ್ಲವೆಂದು ಇವರು ಭಾವಿಸುತ್ತಿದ್ದುದರಿಂದ ಬಹುಶಃ ಇವರಿಗೆ ಈ ಹೆಸರು ಬಂದಿರಬೇಕು. ಸ್ವಾಮಿಗಾಗಿ ಸತ್ತವರ ನೆನಪಿಗಾಗಿ ಕಂಬಗಳನ್ನು ನಿಲ್ಲಿಸಿ ಶಾಸನ ಹಾಕಿಸುತ್ತಿದ್ದದ್ದುಂಟು. ಆನೆಯ ಮೇಲೆ ಕುಳಿತು ಗರುಡನೊಂದಿಗೆ ಸೆಣಸುತ್ತಿರುವ ಲೆಂಕರ ಮೂರ್ತಿಗಳನ್ನು ಹೊತ್ತ ಮೂರು ಕಂಬಗಳು ಆಗ್ರಹಾರ ಬಾಚಹಳ್ಳಿಯ ಹುಣಸೇಶ್ವರ ದೇವಾಲಯದ ಮುಂದೆ ಇವೆ. ಇಮ್ಮಡಿ ಬಲ್ಲಾಳನ ಮರಣಾನಂತರ ಗರುಡನಾದ ಕುವರಲಕ್ಷ್ಮ ಮತ್ತು ಅವನನ್ನು ಅನುಸರಿಸಿದ ಸಾವಿರ ಲೆಂಕರು ಮತ್ತು ಅವರ ಹೆಂಡಿರ ನೆನಪಿಗಾಗಿ ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದ ಬಳಿ ಕಂಬವನ್ನು ನಿಲ್ಲಿಸಲಾಗಿದೆ. ಹೊಯ್ಸಳ ದೇವಾಲಯದಲ್ಲಿ ಈಗ ಊರೆಕಂಬವಾಗಿರುವ ಪ್ರೌಢದೇವರಾಯ ಕಂಬ ರವಳಬೋವನೆಂಬ ಗರುಡನೊಬ್ಬನ ನೆನಪಿಗಾಗಿ ನಿಲ್ಲಿಸಿದ್ದು.



ಗದುಗಿನ ವೀರನಾರಾಯಣ ದೇವಾಲಯದ ಎದುರಿನ ಗರುಡಗಂಬ

ಬಸರಾಳಿನಲ್ಲಿ ಮಲ್ಲಿಕಾರ್ಜುನ ದೇವಾಲಯದ ಮುಂದಿನ ಕಂಬದ ಮೇಲೆ ಶಾಸನವಿಲ್ಲದಿದ್ದರೂ ಮೇಲಿನಿಂದ ಹಾರಿ ಪ್ರಾಣತ್ಯಾಗ ಮಾಡಲು ಸಿದ್ಧನಾಗಿರುವ ಗರುಡನ, ಅವನನ್ನು ಅನುಸರಿಸುತ್ತಿರುವ ಅವನ ಹೆಂಡತಿಯ ಮೂರ್ತಿಗಳಿರುವುದರಿಂದ ಅದು ಗರುಡಗಂಬವೆಂದು ಸ್ಪಷ್ಟ. ಗರುಡ ಗಂಬಗಳ ಮೇಲೆ ದೀಪ ಹಚ್ಚಿಡುವ ಪದ್ಧತಿಯೂ ಕೆಲವೆಡೆ ಇತ್ತು. ದೇವಾಲಯಗಳಲ್ಲಲ್ಲದೆ ಕಾಡಿನಲ್ಲಿ ದೇವರಕಾರ್ಯ ನಡೆಯುವ ಸ್ಥಳಗಳಲ್ಲಿ ಬನಗಳಲ್ಲಿ ಈ ಸ್ತಂಭಗಳು ಕಂಡುಬರುತ್ತವೆ. ಒಂದು ಗ್ರಾಮದ ನಿರ್ಮಾಣದ ಕುರುಹಾಗಿಯೂ ಈ ಸ್ತಂಭಗಳನ್ನು ನೆಡುತ್ತಿದ್ದರು. *

**ಗರುಡನಗಿರಿ :** ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕಿನಲ್ಲಿ ಬಾಣಾವರ ದಿಂದ 11ಕಿಮೀ ಈಶಾನ್ಯದಲ್ಲಿರುವ ಒಂದು ಗಿರಿದುರ್ಗ. ಸಮುದ್ರ ಮಟ್ಟದಿಂದ 1,057ಮೀ ಎತ್ತರದಲ್ಲಿದೆ. ಇದರ ಮೊದಲ ಹೆಸರು ನೊಣಬನಕಲ್ಲು. ಮೈಸೂರಿನ ಅರಸರು ತಮ್ಮ ರಾಜ್ಯದ ಗಡಿರಕ್ಷಣೆಗಾಗಿ 1660ರಲ್ಲಿ ಇಲ್ಲಿ ಕೋಟೆ ಕಟ್ಟಿಸಿದಾಗ ಗರುಡನಗಿರಿ ಎಂಬ ಹೆಸರು ಬಂತು. ಚಿನಕುರುಳಿ ಯುದ್ಧದಲ್ಲಿ ಹೈದರ್ ಅಲಿಯನ್ನು ತ್ರಿಯಂಬಕ ಮಾಮ ಸೋಲಿಸಿದ ಮೇಲೆ 1770ರಲ್ಲಿ ಈ ಕೋಟೆ ಮರಾಠರ ವಶಕ್ಕೆ ಬಂತು. ಅನಂತರ ಶಾಂತಿಸಂಧಾನವಾಗಿ ಗರುಡನಗಿರಿ ಮತ್ತೆ ಮೈಸೂರು ರಾಜ್ಯಕ್ಕೆ ಸೇರಿತು. ಟಿಪ್ಪು ಸುಲ್ತಾನನ ಮರಣದ ಅನಂತರ ಬ್ರಿಟಿಷರ ವಶವಾಗಿ, ಸ್ವಲ್ಪ ಕಾಲ ಮೈಸೂರು ಸೈನ್ಯದ ಠಾಣ್ಯವಾಗಿತ್ತು. *

**ಗರುಡರು :** ವಿಶೇಷವಾಗಿ ಕನ್ನಡನಾಡಿನಲ್ಲಿ, ಅದರಲ್ಲೂ ಹೊಯ್ಸಳರ ಕಾಲದಲ್ಲಿ, ರಾಜರಿಗೆ ನೆಚ್ಚಿನ ಬಂಟರಾಗಿ, ಅವರಿಗಾಗಿ ಪ್ರಾಣವನ್ನೇ ಪಣವಾಗಿಟ್ಟು ಕಾದುತ್ತಿದ್ದು, ಅವರು ಸತ್ತಾಗ ಆತ್ಮಾರ್ಪಣೆ ಮಾಡಿಕೊಳ್ಳುತ್ತಿದ್ದ ವಿಶಿಷ್ಟ ಅಂಗರಕ್ಷಕರು. ಕರ್ನಾಟಕದ ಇತಿಹಾಸದ ವಿವಿಧ ಕಾಲಗಳಲ್ಲಿದ್ದ ಅಂಕಕಾರರು, ಲೆಂಕರು ಮತ್ತು ವೇಳೆಕಾರರಂತೆ ಇವರು ಕೂಡ ಅದೇ ಬಗೆಯ ಯೋಧರು. ಕರ್ನಾಟಕದ ಹೊರಗಡೆಯೂ ರಾಜರು ಇಂಥ ನಿಷ್ಠಾವಂತ ಸೇವಕರನ್ನು ನೇಮಿಸಿಕೊಳ್ಳುವ ಪದ್ಧತಿ ಇತ್ತು. ಕೇರಳದಲ್ಲಿ ಈ ಪದ್ಧತಿ ಇತ್ತೆಂಬುದು ಮಾರ್ಕೊಪೋಲೋನ ಬರೆವಣಿಗೆಗಳಿಂದ ಗೊತ್ತಾಗುತ್ತದೆ.

ವಿಷ್ಣುವಾಹನನಾದ ಗರುಡನಂತೆ ಇವರಿಗೆ ತಮ್ಮ ಪ್ರಭುವಿನಲ್ಲಿ ಅನನ್ಯ ಭಕ್ತಿನಿಷ್ಠೆಗಳಿದ್ದುದರಿಂದ ಇವರು ಗರುಡರೆಂದು ಹೆಸರಾದರು. ಗರುಡಪಟ್ಟವನ್ನು ಸ್ವೀಕರಿಸಲು ಸಾಮಾನ್ಯವಾಗಿ ಅನೇಕರು ಮುಂದೆ ಬರುತ್ತಿದ್ದರು. ಅವರ ನಿಯಮ, ನಿಷ್ಠೆ ಹಾಗೂ ಪರಾಕ್ರಮಗಳನ್ನು ಗಮನಿಸಿ ಅರ್ಹರಾದವರಿಗೆ ರಾಜ ಅನುಮತಿ ನೀಡುತ್ತಿದ್ದ. ಗರುಡಪಟ್ಟವನ್ನು ಸ್ವೀಕರಿಸಿದವರು ಮೊಣಕಾಲಿನ ಮೇಲೆ ತೊಡರೊಂದನ್ನು ಧರಿಸುತ್ತಿದ್ದರು. ತಮ್ಮ ಪ್ರಭುವಿಗೆ ಸೋಲೊದಗದಂತೆ ರಕ್ಷಿಸಲು ಇವರು ವೀರಪ್ರತಿಜ್ಞೆ ಮಾಡುತ್ತಿದ್ದರು.

ಗರುಡರ ಪರಾಕ್ರಮ, ಸಾಧನೆ ಮತ್ತು ಪ್ರಾಣತ್ಯಾಗಗಳಿಗೆ ಸಂಬಂಧಿಸಿದ ಅನೇಕ ಪ್ರಸಂಗಗಳು ಕನ್ನಡ ಶಾಸನಗಳಲ್ಲಿ ದೊರೆಯುತ್ತವೆ. ಸು.865ರಲ್ಲಿ ನೀತಿಮಾರ್ಗ ಗಂಗರಾಜ ಮರಣಹೊಂದಿದಾಗ ಆತನ ಗರುಡರಾಗಿದ್ದ ರಾಸೇಯ ಮತ್ತು ಬೇಬಿಯಮ್ಮ(ಣ್ಣ)ರು ಪ್ರಾಣಾರ್ಪಣೆ ಮಾಡಿದರು. ರಾಷ್ಟ್ರಕೂಟ ಕಾಲದಲ್ಲೂ ಈ ಪದ್ಧತಿಯಿತ್ತು. ಹೊಯ್ಸಳ ಚಕ್ರವರ್ತಿ ಇಮ್ಮಡಿ ವೀರಬಲ್ಲಾಳನ ಅಂಗರಕ್ಷಕ ದಳದ ಅಧಿಪತಿಯಾಗಿದ್ದ ಕುವರಲಕ್ಷ್ಮನ ಹೆಸರು ಉಲ್ಲೇಖಾರ್ಹವಾದ್ದು. ಕುವರಲಕ್ಷ್ಮನೂ ಇವನ ವೀರಪತ್ನಿ ಸುಗ್ಗಲದೇವಿಯೂ ಇವನ ಅಧೀನದಲ್ಲಿದ್ದ ಯೋಧರೂ ಗರುಡರಾಗಿದ್ದರು. ತಮ್ಮ ದೊರೆಗಾಗಿ ಬದುಕುವುದಾಗಿ, ಅವನಿಗಾಗಿ ಸಾಯುವುದಾಗಿ ಅವರು ಪ್ರತಿಜ್ಞೆ ಮಾಡಿದ್ದರು. ವೀರಲಕ್ಷ್ಮನಿಗೂ ಅವನ ಪ್ರಭುವಾದ ಬಲ್ಲಾಳ ದೊರೆಗೂ ನಡುವೆ ಯಾವ ಭಿನ್ನಭಾವವೂ ಇರಲಿಲ್ಲ. ದೊರೆ ಅವನನ್ನು ತನ್ನ ಮಗನಂತೆಯೇ ಸಾಕಿದ. ತನ್ನ ಕೀರ್ತಿಯಲ್ಲೂ ದೊರೆತನದ ಮರ್ಯಾದೆಯಲ್ಲೂ ಅವನೂ ಪಾಲ್ಗೊಳ್ಳುವಂತೆ ಮಾಡಿದ. ದೊರೆ 1220ರಲ್ಲಿ ಮರಣಹೊಂದಿದಾಗ ಕುವರಲಕ್ಷ್ಮನೂ ಅವನ ಪತ್ನಿಯೂ ಅವನ ಸಾವಿರ ಯೋಧರ ಪಡೆಯೊಡನೆ ಪ್ರಾಣಾರ್ಪಣೆ ಮಾಡಿದರೆಂದು ಹಳೇಬಿಡಿನ ಶಾಸನದಿಂದ ತಿಳಿದುಬರುತ್ತದೆ. ಹೊಯ್ಸಳ ವೀರ ಸೋಮೇಶ್ವರನ ಮರಣದೊಡನೆ ಅವನ ಗರುಡನಾದ ಕಾಮೇಯ ನಾಯಕ ಪ್ರಾಣಾರ್ಪಣೆ ಮಾಡಿಕೊಂಡ.

ಆ ಕಾಲದಲ್ಲಿ ಈ ಪದ್ಧತಿಗೆ ಧಾರ್ಮಿಕ ಬೆಂಬಲವಿತ್ತು. ಶ್ರದ್ಧೆ ಮತ್ತು ನಿಷ್ಠೆಯಿಂದ ತಮ್ಮ ಪ್ರಮಾಣವಚನಕ್ಕೆ ಬದ್ಧರಾಗಿ ಆತ್ಮಾರ್ಪಣೆ ಮಾಡಿಕೊಳ್ಳುವುದರಿಂದ ತಮಗೆ ವೀರಸ್ವರ್ಗ ಲಭಿಸುವುದೆಂದು ಗರುಡರು ನಂಬಿದ್ದರು. ಗರುಡರ ಸ್ಮರಣಾರ್ಥವಾಗಿ ವೀರಗಲ್ಲುಗಳನ್ನು ನೆಡಿಸುತ್ತಿದ್ದದ್ದುಂಟು. ಗರುಡಗಂಬಗಳೆಂಬ ಹೆಸರು ಇವರಿಂದ ಬಂದಿರಬಹುದೆಂದು ಹೇಳಲಾಗಿದೆ (ನೋಡಿ: ಗರುಡಗಂಬ). *

**ಗರೂಡ ಸದಾಶಿವರಾವ್ :** 1879-1954. ರಂಗಭೂಮಿಯ ಸುಪ್ರಸಿದ್ಧ ನಟ, ನಾಟಕಕಾರ, ರಂಗನಿರ್ಮಾಪಕ, ಗರೂಡ ಎಂಬುದು ಮನೆತನದ ಹೆಸರು. ತಂದೆ ಕೊಪ್ಪಳದ ಗುರುನಾಥ ಶಾಸ್ತ್ರಿಗಳು. ಎಳೆತನದಲ್ಲಿ ತಾಯಿಯನ್ನು ಕಳೆದುಕೊಂಡ ಇವರು ಕಲಬುರ್ಗಿಯಲ್ಲಿ ಸೋದರಮಾವನ ಮನೆಯಲ್ಲಿ ಬೆಳೆದರು. ಮೊದಲಿನಿಂದ ಸಂಗೀತ ಸಾಹಿತ್ಯಗಳ ಕಡೆ ಒಲವಿದ್ದ ಇವರು

ಕನ್ನಡ ನಾಟಕ ಮಂಡಳಿಯ ಸತ್ಯ ಹರಿಶ್ಚಂದ್ರ ನಾಟಕ ನೋಡಿ ದಾಗ, ಹೆಚ್ಚು ಸಂಸ್ಕಾರ ಗೊಂಡಿದ್ದ ಅಂದಿನ ಮರಾಠೀ ನಾಟಕಗಳೊಂದಿಗೆ ಆ ಕನ್ನಡ ನಾಟಕವನ್ನು ಹೋಲಿಸಿ ಹೀಯಾಳಿಸಿದ ಗೆಳೆಯರ ಮೇಲೆ ಹುರುಡು ಗಟ್ಟಿ, ಪರಿಷ್ಕಾರ ಗೊಂಡ ಕನ್ನಡ ನಾಟಕವನ್ನು ರಚಿಸಿ ಪ್ರಯೋಗಿಸುವುದಾಗಿ ಪಣ ತೊಟ್ಟು, ಮಾರ್ಕಂಡೇಯ ಎಂಬ ತಮ್ಮ ಮೊದಲ ನಾಟಕವನ್ನು ಬರೆದು, ಶಿವ ಪ್ರಾಸಾದಿಕ ನಾಟಕ ಮಂಡಳಿ ಯನ್ನು ಕಟ್ಟಿ ಪ್ರಯೋಗಿಸಿ ಕಲ್ಬುರ್ಗಿಯ ಪ್ರೇಕ್ಷಕರನ್ನು ಮೆಚ್ಚಿಸಿದರು (1894). ಎರಡನೆಯ ನಾಟಕ ಬಂಧವಿಮೋಚನೆ. ಮುಂದೆ ಹನ್ನೆರಡು ವರ್ಷಗಳ ಕಾಲ ನಾಟಕಕಾರರಾಗಿ, ನಾಟ್ಯಶಿಕ್ಷಕರಾಗಿ ಕಲ್ಬುರ್ಗಿ, ಹೊಂಬಳ, ಕೊಪ್ಪಳ, ಬಿಜಾಪುರ, ಧಾರವಾಡಗಳ ಹಲವಾರು ನಾಟಕ ಸಂಸ್ಥೆಗಳಲ್ಲಿ ದುಡಿದರು.

ಕೊಣ್ಣೂರು ನಾಟಕ ಮಂಡಳಿಯ ವ್ಯವಸ್ಥಾಪಕ ಶಿವಮೂರ್ತಿಸ್ವಾಮಿ ಕಣಬರಗೀಮಠ ಅವರ ನೆರವಿನಿಂದ 1919ರಲ್ಲಿ ಗರೂಡರು ಶ್ರೀ ದತ್ತಾತ್ರೇಯ ಸಂಗೀತ ನಾಟಕ ಮಂಡಳಿಯನ್ನು ಕಟ್ಟಿದರು. ತಾವೇ ರಂಗನಾಟಕಗಳನ್ನು ರಚಿಸಿ, ಕಲಾವಿದರನ್ನು ಹುಡುಕಿ, ಆರಿಸಿ ಕರೆತಂದು, ನಿಷ್ಕೃಷ್ಟವಾದ ಶಿಕ್ಷಣ ಕೊಟ್ಟು ಸಾರ್ಥಕಪ್ರಯೋಗಗಳನ್ನು ಮಾಡಿದರು. ಮುಂದಿನ ಮೂರು ದಶಕಗಳಲ್ಲಿ ದತ್ತಾತ್ರೇಯ ಮಂಡಳಿ ಕನ್ನಡ ನಾಡಿನ ಎಲ್ಲ ಮುಖ್ಯಪಟ್ಟಣಗಳಲ್ಲಿ ನಾಟಕಗಳನ್ನು ಆಡಿದುದಲ್ಲದೆ, ಮಹಾರಾಷ್ಟ್ರದ ಪುಣೆ, ಸಾಂಗಲಿ, ಕೊಲ್ಹಾಪುರಗಳಲ್ಲಿ ಪ್ರವಾಸ ಮಾಡಿ ಯಶಸ್ಸನ್ನು ಗಳಿಸಿತು. ಮನೋಜ್ಞವಾದ ಅಭಿನಯ ಕಲೆ ಹಾಗೂ ಶುದ್ಧ ಸಾಹಿತ್ಯಕ ನಾಟಕಗಳಿಂದಾಗಿ ಅತ್ಯಂತ ಪ್ರಸಿದ್ಧಿಗೆ ಬಂತು.

ಗರೂಡರು ಒಟ್ಟಾರೆ ಐವತ್ತನಾಲ್ಕು ರಂಗನಾಟಕಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಚೌತಿಯ ಚಂದ್ರ, ವತ್ಸಲಾಹರಣ, ಶಕ್ತಿವಿಲಾಸ, ಪಾದುಕಾಪಟ್ಟಾಭಿಷೇಕಗಳಂಥ ಪೌರಾಣಿಕ ನಾಟಕಗಳೂ ಎಚ್ಚಮನಾಯಕನಂಥ ಐತಿಹಾಸಿಕ ನಾಟಕವೂ ವಿವೇಕವಿಜಯ, ಬಲ ಸಿಂಹತಾರಾದಂಥ ಕಾಲ್ಪನಿಕ ಕಥಾವಸ್ತುವನ್ನು ಆಧರಿಸಿದ ನಾಟಕಗಳೂ ವಿಷಮ ವಿವಾಹ, ಉಗ್ರ ಕಲ್ಯಾಣ ದಂಥ ಸಾಮಾಜಿಕ ನಾಟಕ ಗಳೂ ಮಹಾತ್ಮಾ ಕಬೀರ ಮೊದಲಾಗಿ ಸಂತ ಜೀವನ ದರ್ಶನವನ್ನು ಪ್ರತಿಬಿಂಬಿಸಿದ ನಾಟಕಗಳೂ ಇವೆ. ಇವು ವೈಯಕ್ತಿಕವಾಗಿ ಗರೂಡರಿಗೆ ಅಪಾರವಾದ ಕೀರ್ತಿಯನ್ನೂ ಇವರ ಮಂಡಳಿಗೆ ಯಶಸ್ಸನ್ನೂ ತಂದುಕೊಟ್ಟವು.



ಇವರು ಹುಟ್ಟು ನಟರು. ಅಭಿನಯಕಲೆಯನ್ನೂ ಧ್ವನಿ ಬಳಕೆಯನ್ನೂ ಅವಿರತವಾಗಿ ಅಭ್ಯಸಿಸಿ ಆ ಕಲೆಗಳಿಗೆ ಶಾಸ್ತ್ರದ ಮಹತಿಯನ್ನು ಕೊಟ್ಟವರು. ಅಶೋಕ, ದಶರಥ, ಎಚ್ಚಮನಾಯಕ, ಕಬೀರದಾಸ ಮೊದಲಾಗಿ ಇವರು ಅಭಿನಯಿಸಿದ ಭೂಮಿಕೆಗಳು ಅಭಿನಯಕೇಸರಿ, ಕರ್ನಾಟಕ ನಾಟಕಾಲಂಕಾರ ಎಂಬ ಪ್ರಶಸ್ತಿಗಳನ್ನು ಇವರಿಗೆ ಗಳಿಸಿಕೊಟ್ಟವು.

ಇವರ ನಾಟಕಗಳಲ್ಲಿ, ಪ್ರದರ್ಶನಗಳಲ್ಲಿ, ಸಂಗೀತಕ್ಕಿಂತ ಹೆಚ್ಚಾಗಿ ಅಭಿನಯಕ್ಕೆ ಪ್ರಾಧಾನ್ಯ. ರಾಷ್ಟ್ರಪ್ರೇಮ ಹಾಗೂ ಭಾರತೀಯ ಸಂಸ್ಕೃತಿಯ ಉದಾತ್ತತೆಯ ಸೆಳಕುಗಳು ಇವರ ನಾಟಕಗಳಲ್ಲಿ ಹಾಸುಹೊಕ್ಕಾಗಿದ್ದವು. ಎಂದೇ ಅಂದಿನ ವಿಮರ್ಶಕರ ಕಣ್ಣಿನಲ್ಲಿ ಗರೂಡರು ನಟರಾಗಿ, ನಾಟಕಕಾರರಾಗಿ, ದೇಶಸೇವಕರಾಗಿ, ಧರ್ಮಪ್ರಸಾರಕರಾಗಿ ಕನ್ನಡ ರಂಗಭೂಮಿಗೆ ದೇಗುಲದ ಪಾವಿತ್ರ್ಯವನ್ನು ತಂದುಕೊಟ್ಟ ದ್ರಷ್ಟಾರರಾದರು. (ಎಚ್.ಕೆ.ಆರ್.)

**ಗಳಗನಾಥ [1] :** ಹಾವೇರಿ ಜಿಲ್ಲೆ ಹಾವೇರಿ ತಾಲ್ಲೂಕಿನಲ್ಲಿರುವ ಒಂದು ಪುಣ್ಯಕ್ಷೇತ್ರ. ಸುಂದರ ತಾಣ. ವರದಾ ಮತ್ತು ತುಂಗಭದ್ರಾ ನದಿಗಳ ಸಂಗಮಸ್ಥಳದಲ್ಲಿದೆ.

ಇಲ್ಲಿರುವ ಗಳಗೇಶ್ವರ ದೇವಸ್ಥಾನದಿಂದ ಈ ಸ್ಥಳಕ್ಕೆ ಗಳಗನಾಥ ಎಂಬ ಹೆಸರು ಬಂದಿದೆ. ಈ ದೇವಾಲಯವನ್ನು ಗಳಗೇಶ್ವರ ಮುನಿ ಸ್ಥಾಪಿಸಿದರೆಂದು ಪ್ರತೀತಿ. ಈ ದೇವಾಲಯ 80' ಉದ್ದ 40' ಅಗಲವಿದೆ.



ಗಳಗೇಶ್ವರ ಮಂದಿರ

ಇದರ ಮೇಲ್ಛಾವಣಿಯನ್ನು ನಾಲ್ಕು ಸುಂದರವಾದ ಸ್ತಂಭಗಳು ಅಂದವಾಗಿ ಎತ್ತಿ ಹಿಡಿದಿವೆ. ದೇವಾಲಯದ ಸುತ್ತಲೂ ಗೋಡೆಯ ಮೇಲೆ ಪೌರಾಣಿಕ ಕಥೆಗಳನ್ನು ಕೆತ್ತಲಾಗಿದೆ. ಈ ದೇವಾಲಯದ ಕಟ್ಟಡದ ವೈಶಿಷ್ಟ್ಯವೆಂದರೆ ಇದರ ಅಡಿಪಾಯ. ಇದರ ಆಕಾರ ಪಿರಮಿಡ್‌ನಂತಿದೆ. ನದಿಯ ನೆರೆಹಾವಳಿಯಿಂದ ಈ ದೇವಾಲಯವನ್ನು ರಕ್ಷಿಸಲು ಗೋಡೆಗಳನ್ನು ಕಟ್ಟಲಾಗಿದೆ. ಇಲ್ಲಿ ಒಂದು ಹನುಮಂತದೇವರ ಗುಡಿಯೂ ಇದೆ. ಈ ಊರಲ್ಲಿ ಕಲ್ಯಾಣ ಚಾಳುಕ್ಯರ ಆರು ಶಾಸನಗಳು ದೊರೆತಿವೆ. ಹೊಯ್ಸಳ ವಿಷ್ಣುವರ್ಧನ ಇಲ್ಲಿಂದ ದಾನಮಾಡಿದ ಸಂಗತಿ ತಿಳಿದುಬರುತ್ತದೆ. ಈ ಗ್ರಾಮದ ಸಮೀಪದಲ್ಲಿ ಅನೇಕ ಬೃಹತ್ ಶಿಲಾ ಸಮಾಧಿಗಳು ಬೆಳಕಿಗೆ ಬಂದಿವೆ. ಕನ್ನಡದ ಪ್ರಸಿದ್ಧ ಕಾದಂಬರಿಕಾರರಾದ ಗಳಗನಾಥರು (ನೋಡಿ) ಈ ಸ್ಥಳದವರು. (ಎಸ್.ಎಸ್.ಬಿ.)

**ಗಳಗನಾಥ [2] :** 1869-1942 ಕನ್ನಡದ ಹೊಸ ಹುಟ್ಟಿನ ಕಾಲದ ಪ್ರಾರಂಭದಲ್ಲಿ ತಮ್ಮ ವಿಪುಲವಾದ ಬರೆವಣಿಗೆಯಿಂದ ನಾಡಿನಲ್ಲಿ ಕನ್ನಡ ಭಾಷಾ ಜಾಗೃತಿಯನ್ನುಂಟುಮಾಡಿದ ಪ್ರಸಿದ್ಧ ಲೇಖಕರು. ಇವರ ಪೂರ್ಣ ಹೆಸರು ವೆಂಕಟೇಶ ತಿರಕೋ ಕುಲಕರ್ಣಿ ಗಳಗನಾಥ. ವೆಂಕಣ್ಣ, ವೆಂಕಟೇಶ ಎಂಬುವು ಮನೆತನದ ಹೆಸರುಗಳು. ಹಾವೇರಿ ಜಿಲ್ಲೆಯ ಹಾವೇರಿ ತಾಲ್ಲೂಕಿನ ಗಳಗನಾಥ' ಎಂಬ ಹಳ್ಳಿಯಲ್ಲಿ ಇವರು 1869 ಜನವರಿ 5ರಂದು ಜನಿಸಿದರು. ಇವರ ತಂದೆ ಊರಿನ ಕುಲಕರ್ಣಿಯಾಗಿದ್ದರು. ಗಳಗನಾಥ'ರಿಗೆ ಬಾಲ್ಯದಲ್ಲೇ ಸಂಸ್ಕೃತ ಅಧ್ಯಯನಮಾಡುವ ಅವಕಾಶ ದೊರೆಯಿತು. ವರದಾ ಹಾಗೂ ತುಂಗಭದ್ರಾ ನದಿಗಳ ಸಂಗಮ ಸ್ಥಾನದ ಹತ್ತಿರ ರಮಣೀಯ ಸ್ಥಳದಲ್ಲಿರುವ ಗಳಗನಾಥದ ಗಳಗೇಶ್ವರ ದೇವಾಲಯ ಇವರ ಪ್ರಥಮ ಪಾಠಶಾಲೆಯಾಯಿತಲ್ಲದೆ ಅಲ್ಲಿ ಇವರಿಗೆ ಅಕ್ಕರೆಯ ಗುರುಕುಲ ಶಿಕ್ಷಣ ದೊರೆತು ಪ್ರಾಥಮಿಕ ಶಾಲೆಯ ಅಭ್ಯಾಸ ನಡೆಯಿತು. ಹಾವನೂರಿನಲ್ಲಿ ಮುಲ್ಕಿ ಪರೀಕ್ಷೆ ಮುಗಿಸಿದ ಅನಂತರ ಶಿಕ್ಷಕನಾಗಬೇಕೆಂಬ ಹಂಬಲದಿಂದ ಇವರು ಧಾರವಾಡ ಟ್ರೇನಿಂಗ್ ಕಾಲೇಜಿಗೆ ಸೇರಿದರು (1886). ಕಾಲೇಜಿನ ಎಲ್ಲ ಪರೀಕ್ಷೆಗಳಲ್ಲೂ ಮೇಲ್ತರಗತಿಯಲ್ಲಿ ತೇರ್ಗಡೆ ಹೊಂದಿ ಮೂರು ವರ್ಷದ ಶಿಕ್ಷಕ ತರಬೇತಿಯನ್ನು ಮುಗಿಸಿ (1889) ಶಿಕ್ಷಕರಾಗಿ ಕೆಲಸಕ್ಕೆ ಸೇರಿದರು. ಉತ್ತಮ ಶಿಕ್ಷಕರೆಂದು ಹೆಸರು ಗಳಿಸಿದರು.

ಗಳಗನಾಥರು ನರೇಂದ್ರದಲ್ಲಿ ಶಿಕ್ಷಕರಾಗಿದ್ದಾಗ ಪ್ರಬುದ್ಧ ಪದ್ಮನಯನೆ ಎಂಬ ತಮ್ಮ ಮೊದಲ ಕಾದಂಬರಿಯನ್ನು ರಚಿಸಿದರು (1898). ಈ ಕಾದಂಬರಿ ಇವರ ಸಾಹಿತ್ಯಕ ಜೀವನಕ್ಕೆ ಹೊಸ ತಿರುವು ಕೊಟ್ಟಿತು. ಆದರೆ ಪ್ರಾಪಂಚಿಕ ಜೀವನದಲ್ಲಿ ಅದೇ ಘಟ್ಟದಲ್ಲಿ ಇವರಿಗೆ ಅಪಾರ ದುಃಖವನ್ನುಂಟುಮಾಡಿದ ಘಟನೆಗಳು ಜರುಗಿದುವು. ಇವರ ಮೊದಲನೆಯ ಹೆಂಡತಿ ಜೀವೂಬಾಯಿ ತೀರಿಕೊಂಡರು. ಇದಾದ ಕೆಲವೇ ದಿನಗಳಲ್ಲಿ ಇವರ ತಂದೆಯವರೂ ತೀರಿಕೊಂಡರು. ಮೊದಲನೆಯ ಹೆಂಡತಿಗೆ ಮಕ್ಕಳಿರಲಿಲ್ಲವಾಗಿ ಗಳಗನಾಥರು ಮುಂದೆ ಎರಡನೆಯ ವಿವಾಹ ಮಾಡಿಕೊಂಡರು. ಎರಡನೆಯ

ಹೆಂಡತಿ ಗಂಗೂಬಾಯಿಯವರಿಗೂ ಬಹಳ ದಿನಗಳವರೆಗೆ ಮಕ್ಕಳಿರಲಿಲ್ಲ. ಅನಂತರ ಇವರಿಗೆ ಎರಡು ಹೆಣ್ಣುಮಕ್ಕಳಾದವು. ಈ ಮಧ್ಯೆ ಗಳಗನಾಥರು ಮುಖ್ಯೋ ಪಾಧ್ಯಾಯರಾಗಿದ್ದರು. ಗುತ್ತಲ ದಲ್ಲಿರುವಾಗ ಆಯ್ದ ಕೆಲವೇ ಮುಖ್ಯೋಪಾಧ್ಯಾಯರ ಗುಂಪಿನ ಸದಸ್ಯರಾಗಿ ಮುಂಬಯಿ ಪ್ರಾಂತ್ಯ ದಲ್ಲಿ ಸಂಚಾರಮಾಡಿಬಂದರು. ಗುತ್ತಲದಲ್ಲಿರುವಾಗಲೆ ಇವರ ಜೀವನ ಇನ್ನೊಂದು ತಿರುವು ಪಡೆಯಿತು. ನೌಕರಿಯ ಸೇವಾ ವಧಿ ಇನ್ನೂ ಹತ್ತು ವರುಷ ಇರುವಾಗಲೇ ನೌಕರಿ ಬಿಟ್ಟು (1912) ಅಗಡಿಯ ಶೇಷಾಚಲ ಸ್ವಾಮಿಗಳ ಸನ್ನಿಧಾನದಲ್ಲಿ ಆಶ್ರಮ ಮಾದರಿಯ ಶಾಲೆಯನ್ನು ಸ್ಥಾಪಿಸಿದರು. ಇದೇ ಸಂದರ್ಭದಲ್ಲಿ ಶೇಷಾಚಲ ಪ್ರೆಸ್ ಸ್ಥಾಪಿತವಾಯಿತು. ಇವರು ಸದ್ಬೋಧಚಂದ್ರಿಕೆ ಎಂಬ ಮಾಸಿಕವನ್ನು ಹೊರತಂದರು. ಈ ಪತ್ರಿಕೆ ಆಗ 7,000 ಚಂದಾದಾರರನ್ನು ಹೊಂದಿತ್ತು. ಇದರಲ್ಲಿ ಗಳಗನಾಥ'ರ ಅನೇಕ ಸಾಹಿತ್ಯಕೃತಿಗಳು ಧಾರಾವಾಹಿಯಾಗಿ ಪ್ರಕಟವಾದವು. ಮರಾಠಾ ಇತಿಹಾಸ, ರಜಪೂತ ಇತಿಹಾಸ ಮತ್ತು ಕನ್ನಡಿಗರ ಇತಿಹಾಸವನ್ನು ಸಾಮಗ್ರಿ ಯಾಗಿಟ್ಟುಕೊಂಡು ಹನ್ನೆರಡು ವರ್ಷಗಳ ಅವಧಿಯಲ್ಲಿ 20 ಕಾದಂಬರಿಗಳು ಹೊರಬಂದುವು.



ಶೇಷಾಚಲ ಸ್ವಾಮಿಗಳು ದೈವಾಧೀನರಾದ ಅನಂತರ ಗಳಗನಾಥರು ಹಾವೇರಿಗೆ ಬಂದು ಹೊಸದೊಂದು ಪಾಠಶಾಲೆ ಮತ್ತು ಪ್ರೆಸ್ ಪ್ರಾರಂಭಿಸಿ 1919ರಲ್ಲಿ ಸದ್ಗುರು ಎಂಬ ಹೊಸ ಮಾಸಿಕವನ್ನು ಹೊರಡಿಸಿದರು. ಇದೆಲ್ಲಕ್ಕಾಗಿ ಮಾಡಿದ ಸಾಲ ಮಾತ್ರ ಇವರ ಜೀವನದುದ್ದಕ್ಕೂ ಬೆಳೆದುಬಂತು. 1929ರಲ್ಲಿ ಇವರ ಷಷ್ಟ್ಯಬ್ದಿ ಸಮಾರಂಭ ಜರುಗಿತು. ಸಾಲ ತೀರಿಕೆಗಾಗಿ ಅನಂತರವೂ ಇವರು ಪುಸ್ತಕಗಳನ್ನು ಬರೆದು ಅಚ್ಚು ಮಾಡಿಸಿ ಕನ್ನಡನಾಡಿನ ಮೂಲೆಮೂಲೆಗಳಲ್ಲಿ ಸುತ್ತಾಡಿ ಗ್ರಂಥಗಳನ್ನು ತಲೆಯ ಮೇಲೆ ಹೊತ್ತು ಮಾರಿದರು. ಇವರು ಕ್ಯಾನ್ಸರ್ ರೋಗಕ್ಕೆ ಬಲಿಯಾಗಿ 1942 ಏಪ್ರಿಲ್ 22ರಂದು ಬೆಂಗಳೂರಿನ ವಿಕ್ಟೋರಿಯ ಆಸ್ಪತ್ರೆಯಲ್ಲಿ ತಮ್ಮ ನಿಧನಹೊಂದಿದರು.

ಗಳಗನಾಥರ ಜೀವನದಲ್ಲಿ ಧಾರವಾಡ ಮಹತ್ತ್ವದ ಸ್ಥಾನವನ್ನು ಪಡೆದಿದೆ. ಅದು ಇವರನ್ನು ಸಾಹಿತಿಯನ್ನಾಗಿ ರೂಪಿಸಿದ ಕ್ಷೇತ್ರ. ಟ್ರೇನಿಂಗ್ ಕಾಲೇಜಿನ ವಾತಾವರಣ ಇವರಿಗೆ ತುಂಬ ಅನುಕೂಲಕರವಾಗಿತ್ತು. ಪಂಡಿತರಾದ ಕಿತ್ತೂರ ಅಯ್ಯನವರು, ಧೊಂಡೋ ನರಸಿಂಹ ಮುಳಬಾಗಲ ಅವರು ತಮ್ಮ ಪ್ರಭಾವ ಬೀರಿ ಗಳಗನಾಥರಿಗೆ ಕನ್ನಡ ಕಲಿಸಿದರು. ಅದೇ ಪ್ರಕಾರ ಪ್ರಭಾವ ಬೀರಿದವರು ರೊದ್ದ ಶ್ರೀನಿವಾಸರಾಯರು ಹಾಗೂ ಕರಂದೀಕರರು. ಕರಂದೀಕರರ ಅಚ್ಚುಕಟ್ಟು, ಶಿಸ್ತು, ಗಳಗನಾಥ'ರಿಗೂ ಬಂದುವು. ಆ ಸಮಯದಲ್ಲಿ ಅಪ್ರತ್ಯಕ್ಷವಾಗಿ ಇವರ ಜೀವನದ ಮೇಲೆ ಪ್ರಭಾವ ಬೀರಿದ ಮರಾಠಿ ವ್ಯಕ್ತಿಗಳೆಂದರೆ ಲೋಕಮಾನ್ಯ ಟಿಳಕ ಹಾಗೂ ಹರಿ ನಾರಾಯಣ ಆಪ್ಟೆ ಅವರು.

ಆಗ ಉತ್ತರ ಕರ್ನಾಟಕದಲ್ಲಿ ಟಿಳಕ ಹಾಗೂ ಆಪ್ಟೆಯವರ ಹೆಸರುಗಳು ಮನೆಮಾತಾಗಿದ್ದುವು. ಟಿಳಕರ ಕೇಸರಿ, ಆಪ್ಟೆಯವರ ಕರಮಣೂಕ ಪತ್ರಿಕೆಗಳು ಹೆಚ್ಚು ಪ್ರಚಾರದಲ್ಲಿದ್ದುವು. ಕನ್ನಡ ಪತ್ರಿಕೆಗಳ ಅಭಾವದಿಂದಾಗಿ ಕನ್ನಡಿಗರು ಮರಾಠಿ ಪತ್ರಿಕೆಗಳನ್ನೇ ಓದುತ್ತಿದ್ದರು. ಇಷ್ಟೇ ಅಲ್ಲದೆ ಪೇಶ್ವೆ ಕಾಲದ ರಾಜಭಾಷೆಯಾದ ಮರಾಠಿ ತನ್ನ ರಾಜಕೀಯ ಮುದ್ರೆಯನ್ನೊತ್ತಿ ತನ್ನದೇ ಆದ ವಿಶಿಷ್ಟ ಪ್ರಭಾವವನ್ನು ಬೀರುತ್ತಿತ್ತು. ಈ ಎರಡು ಪತ್ರಿಕೆಗಳನ್ನೂ ಗಳಗನಾಥರು ತಪ್ಪದೆ ಓದುತ್ತಿದ್ದರಲ್ಲದೆ ತಮ್ಮ ಗೆಳೆಯರೊಂದಿಗೆ ಅದರಲ್ಲಿನ ವಿಷಯಗಳನ್ನು ಚರ್ಚಿಸುತ್ತಿದ್ದರು. ಟಿಳಕರ ವಿಚಾರಧಾರೆ ಇವರ ಮನಸ್ಸನ್ನು ಸಂಪೂರ್ಣ ಆಕರ್ಷಿಸಿತ್ತು. ಅಷ್ಟೇ ಸತ್ತ್ವಶಾಲಿಯಾಗಿ ಆಪ್ಟೆಯವರ ಕಾದಂಬರಿಗಳಲ್ಲಿಯ ಕಲ್ಪನಾವೈಭವದ ವೈಖರಿ ಮನಸ್ಸನ್ನು ಬೆರಗುಗೊಳಿಸುತ್ತಿತ್ತು. ಆ ಭಾಗದ ಕನ್ನಡ ಜನತೆ ಮರಾಠಿ ವ್ಯಾಮೋಹದಲ್ಲಿದ್ದುದು ಇವರಿಗೆ ಕಂಡುಬಂತು. ಟಿಳಕರ ವಿಚಾರಧಾರೆಯನ್ನೂ ಆಪ್ಟೆಯವರ ಕಾದಂಬರಿ ಕಥೆಗಳನ್ನೂ ಕನ್ನಡದಲ್ಲಿಯೇ ಹೇಳಿ ಕನ್ನಡಿಗರ ವಾಚನಾಭಿರುಚಿಯನ್ನು ಬೆಳೆಸುವ ಉತ್ಕಟ ಆಶೆ ಮೂಡಿತು. ಅದೇ ಕಾಲಕ್ಕೆ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದವರು ಕನ್ನಡ ಗ್ರಂಥಕರ್ತರಿಗೆ ಬಹುಮಾನ ಕೊಡುವ ಪರಿಪಾಠವನ್ನು ಹಾಕಿದರು. ಆ ಸಂದರ್ಭದಲ್ಲಿ ಇವರು ಬರೆದ ಪ್ರಥಮ ಕಾದಂಬರಿ ಪ್ರಬುದ್ಧ ಪದ್ಮನಯನೆಗೆ ಬಹುಮಾನ ದೊರಕಿತು. ಹೀಗೆ 1898ರಲ್ಲಿ ಆರಂಭವಾದ ಇವರ ಬರೆವಣಿಗೆ 1942ರ ವರೆಗೂ ಅವ್ಯಾಹತವಾಗಿ ಸಾಗಿತು. ನರೇಂದ್ರ, ಶಿರಗುಪ್ಪ, ಅಗಡಿ, ಹಾವೇರಿ ಮೊದಲಾದ ಸ್ಥಳಗಳಲ್ಲಿ ಇವರು ನೆಲೆನಿಂತು ಕನ್ನಡಕ್ಕಾಗಿ ದುಡಿದರು. ಸರಳತೆ, ಅನುಕಂಪ, ಗುರಿಯನ್ನು ಸಾಧಿಸುವಲ್ಲಿ ನಿಸ್ಸೀಮ ತ್ಯಾಗ, ಉಜ್ಜ್ವಲ ಸ್ವಾಭಿಮಾನ, ಮಡಿವಂತ ಜೀವನ ಮೊದಲಾದುವುಗಳಿಗೆ ಸಂಕೇತವಾಗಿದ್ದ ಗಳಗನಾಥರು ಶುಚಿಯಾದದ್ದನ್ನೇ ನೋಡಿದರು, ಮಾಡಿದರು, ಬರೆದರು. ಪ್ರಾಥಮಿಕ ಶಾಲೆಯ ಕಿರುಬಯಲಿನಲ್ಲಿಯೇ ತಮ್ಮ ಶಕ್ತಿಯನ್ನು ಸಂಪೂರ್ಣ ವ್ಯಯಗೊಳಿಸದೆ ಅಲ್ಲಿಗೆ ಸಲ್ಲುವಷ್ಟನ್ನು ಸಲ್ಲಿಸಿ ಹೊರಜಗತ್ತಿಗೂ ಜಾಗೃತಚೇತನ ಶಕ್ತಿಯನ್ನು ಒದಗಿಸಿದರು.

ಬಂಗಾಲಿ ಸಾಹಿತ್ಯಕ್ಕೆ ಬಂಕಿಮ್‌ಚಂದ್ರ, ಮರಾಠಿ ಸಾಹಿತ್ಯಕ್ಕೆ ಹರಿ ನಾರಾಯಣ ಆಪ್ಟೆ ಯಾವ ಬಗೆಯ ಸೇವೆಯನ್ನು ಸಲ್ಲಿಸಿದರೋ ಅದೇ ಬಗೆಯ ಸೇವೆಯನ್ನು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿದವರಲ್ಲಿ ಗಳಗನಾಥರು ಪ್ರಮುಖರು. ಇವರು ವಿಶೇಷವಾಗಿ ಹರಿ ನಾರಾಯಣ ಆಪ್ಟೆಯವರ ಗ್ರಂಥಗಳನ್ನು ಅನುವಾದಿಸಿಕೊಟ್ಟು ಕನ್ನಡಿಗರಿಗೆ ಕಾದಂಬರಿ ಸಾಹಿತ್ಯದ ಪರಿಚಯ ಮಾಡಿಸಿದರು. ಮರಾಠಿ ಸಾಹಿತ್ಯ ಕ್ಷೇತ್ರದಲ್ಲಿ ಯುಗಪ್ರವರ್ತಕ ಲೇಖಕರಾದ ಆಪ್ಟೆಯವರ ಕಥಾನಕಪ್ರಾಧಾನ್ಯ, ವ್ಯಕ್ತಿದರ್ಶನ, ಮೂರ್ತಿಮಂತ ಪ್ರಸಂಗವರ್ಣನೆ, ವೈಚಿತ್ರ್ಯ ಮತ್ತು ಅದ್ಭುತಗಳ ನಿರೂಪಣೆಯಲ್ಲಿ ಪಳಗಿದ ಚಿತ್ತಾಕರ್ಷಕ ಶೈಲಿಯನ್ನೇ ಗಳಗನಾಥರೂ ಅನುಸರಿಸಿದರು. ಅನುಸರಣೆ ಇದ್ದರೂ ಅದು ಸಂಪೂರ್ಣ ಅನುಕರಣೆಯಲ್ಲ. ಒಂದು ಉದಾತ್ತವಾದ ಭಾವನೆಯಿಂದ ದಿವ್ಯವಾದ ಆದರ್ಶದಿಂದ, ಅದ್ಭುತವಾದ ದೃಷ್ಟಿಯಿಂದ ಜನರಲ್ಲಿ ಪ್ರೇಮ, ದಯೆ, ತ್ಯಾಗ, ಸ್ವಾತಂತ್ರ್ಯಸ್ವಾಭಿಮಾನಗಳು ಒಡಮೂಡಬೇಕು, ನೆಲೆನಿಲ್ಲಬೇಕು, ಬೆಳಗಬೇಕು ಎಂಬ ಹೆಗ್ಗುರಿಯಿಂದ ಗಳಗನಾಥರು ಸಾಹಿತ್ಯವನ್ನು ಸೃಜಿಸಿದರು. ಪ್ರಾಯಶಃ ಇದೇ ಕಾರಣದಿಂದ ಇವರು ಸಮಕಾಲೀನ ಚಿತ್ರಣವನ್ನು ಕೊಡುವ ಸಾಮಾಜಿಕ ಕಾದಂಬರಿ ರಚನೆಗೆ ತೊಡಗಲಿಲ್ಲವೆಂದು ತೋರುತ್ತದೆ.

ಗಳಗನಾಥ'ರು ರಚಿಸಿದ ಸಾಹಿತ್ಯ ವಿಪುಲವಾದುದು, ವೈವಿಧ್ಯ ಮಯವಾದುದು. ಇದನ್ನು ಕಾದಂಬರಿ, ಪೌರಾಣಿಕ ಕಥೆ, ಚರಿತ್ರೆ ಹಾಗೂ ನಿಬಂಧಗಳೆಂದು ವಿಂಗಡಿಸಬಹುದು. ಇವರ 24 ಕಾದಂಬರಿಗಳು, 9 ಪೌರಾಣಿಕ ಕಥೆಗಳು, 3 ಸತ್ಪುರುಷ ಚರಿತ್ರೆಗಳು, 8 ನಿಬಂಧಗಳು (ಪ್ರಬಂಧಗಳು) ಪ್ರಕಟಗೊಂಡಿವೆ. ಮಹಾಭಾರತದ 18 ಪರ್ವಗಳಲ್ಲಿ ಮೊದಲಿನ ಎರಡು ಪರ್ವಗಳು ಅಚ್ಚಾಗಿವೆ. ಮಿಕ್ಕಿನ ಪರ್ವಗಳು ಅಚ್ಚಾಗಿಲ್ಲ. ಕಲಿಕುಠಾರದ 2ನೆಯ ಭಾಗ ಮತ್ತು ಬಿಚ್ಚುಗತ್ತಿಯ 2ನೆಯ ಭಾಗ ಅಚ್ಚಾಗಿಲ್ಲ. ಕಾದಂಬರಿಗಳಲ್ಲಿ ಆರು ಸ್ವತಂತ್ರ, ಮಿಕ್ಕವು ಅನುವಾದಿತ. ಅನುವಾದಿತ ಕಾದಂಬರಿಗಳನ್ನು ಅನುವಾದಗಳೆಂದು ಹೇಳುವುದಕ್ಕಿಂತ ರೂಪಾಂತರಗಳೆಂದು ಕರೆಯುವುದೇ ಹೆಚ್ಚು ಸಮಂಜಸ. ಏಕೆಂದರೆ ಕಮಲಕುಮಾರಿ ಕೃತಿಯೊಂದೇ ಶಬ್ದಶಃ ಅನುವಾದ.

ಕಾಲಾನುಕ್ರಮವಾಗಿ ಹೊರಬಂದ ಗಳಗನಾಥರ ಕೃತಿಗಳ ಪಟ್ಟಿ ಹೀಗಿದೆ:

**ಕಾದಂಬರಿಗಳು :** 1.ಪದ್ಮನಯನೆ ಅಥವಾ ಪ್ರಬುದ್ಧ ಪದ್ಮನಯನೆ ಸ್ವತಂತ್ರ ರಮ್ಯಾದ್ಭುತ ಕಾದಂಬರಿ. 2.ಕಮಲಕುಮಾರಿ ಮರಾಠಿ ಇತಿಹಾಸಕ್ಕೆ ಸಂಬಂಧಪಟ್ಟ ಆಪ್ಟೆಯವರ ಕೃತಿ. ಗಡ ಆಲಾ ಪಣ ಸಿಂಹ ಗೇಲಾ (ಕೋಟೆ ಕೈವಶವಾಯಿತು ಆದರೆ ಸಿಂಹ ಹೋಯಿತು) ಇದಕ್ಕೆ ಮೂಲ. 3.ಮೃಣಾಲಿನಿ ಅಥವಾ ರಾಣಿ ಮೃಣಾಲಿನಿ. ಇದು ಬಂಕಿಮ ಚಂದ್ರರ ಮೃಣಾಲಿನಿ ಕೃತಿಯ ಮರಾಠಿ ಅನುವಾದದ ಅನುವಾದ. 4.ವೈಭವ: ಇದು ಮೌರ್ಯರ ಇತಿಹಾಸಕ್ಕೆ ಸಂಬಂಧಪಟ್ಟಿದೆ. ಚಾಣಕ್ಯನ ಕಾರಸ್ಥಾನ ಇದರ ಇನ್ನೊಂದು ಹೆಸರು. ಈ ಕಥೆ ಮುದ್ರಾರಾಕ್ಷಸ (ಸಂಸ್ಕೃತ) ಹಾಗೂ ಕೆಂಪುನಾರಾಯಣನ ಮುದ್ರಾಮಂಜೂಷಗಳಿಂದ ಭಿನ್ನವಾಗಿದೆ. 5.ಕುಮುದಿನಿ

ಅಥವಾ ಬಾಲಕ್ಕೆ ಬಡಿದಾಟ: ಇದು ಗಳಗನಾಥರ ಎರಡನೆಯ ಸ್ವತಂತ್ರ ಕಾದಂಬರಿ ಹಾಗೂ ಕರ್ನಾಟಕ ಇತಿಹಾಸಕ್ಕೆ ಸಂಬಂಧಪಟ್ಟ ಮೊದಲ ಕಾದಂಬರಿ (1913). ಚಂದ್ರಗಿರಿಯಲ್ಲಿ ಬಾಳಿದ ವಿಜಯನಗರದ ರಾಜಮನೆತನದ ಚಿತ್ರವೇ ಇದರ ವಸ್ತು. 6. ಈಶ್ವರೀಸೂತ್ರ: ಉಷಃಕಾಲ ಎಂಬ ಮರಾಠಿ ಗ್ರಂಥ'ದ ಅನುವಾದ. ಮರಾಠರ ಇತಿಹಾಸಕ್ಕೆ ಸಂಬಂಧಪಟ್ಟಿದೆ. 7. ಕ್ಷಾತ್ರತೇಜ: ಇದು ಮರಾಠಿ ಕೃತಿ ರೂಪನಗರೇಚಿ ರಾಜಕನ್ಯಾ ಎಂಬುದರ ಅನುವಾದ, ರಜಪೂತರ ಇತಿಹಾಸಕ್ಕೆ ಸಂಬಂಧಪಟ್ಟಿದೆ; ರಜಪೂತರ ಕ್ಷಾತ್ರ ತೇಜಸ್ಸನ್ನೇ ಎತ್ತಿ ತೋರುತ್ತದೆ 8. ಧರ್ಮರಹಸ್ಯ ಅಥವಾ ಸತ್ಸಮಾಗಮಪ್ರಭಾವ: ಇದಕ್ಕೆ ಮೂಲ ಮರಾಠಿಯ ಸಮ್ರಾಟ ಅಶೋಕ, ಅಶೋಕ ಅಥವಾ ಆರ್ಯಾವೃತ್ತಾಂತಲಾ ಪಹಿಲಾ ಎಂಬ ಎರಡು ಕೃತಿಗಳು. ಚಕ್ರವರ್ತಿ ರಾಜಾ ಚಂಡಾಶೋಕ ಧರ್ಮಾಶೋಕನಾದುದೇ ಇದರ ವಸ್ತು. 9. ಸತ್ವಸಾರ ಅಥವಾ ಶೌರ್ಯಸಂಜೀವಿನಿ: ರಜಪೂತರ ಇತಿಹಾಸಕ್ಕೆ ಸಂಬಂಧಪಟ್ಟಿದೆ. ಇದು ಗಳಗನಾಥರ 3ನೆಯ ಸ್ವತಂತ್ರ ಕಾದಂಬರಿ. ಮೇವಾಡದ ಪ್ರತಾಪಸಿಂಹನ ಕಥೆಯೇ ಇದರ ವಸ್ತು. 10. ತಿಲೋತ್ತಮೆ ಅಥವಾ ಸರಸಪ್ರೇಮ: ಅಕ್ಬರನ ಕಾಲದಲ್ಲಿದ್ದ ರಾಣಾ ಮಾನಸಿಂಗನ ಮಗ ಜಗತ್ಸಿಂಗನ ಪ್ರೇಮಕಥೆ. ರಜಪೂತರ ಇತಿಹಾಸಕ್ಕೆ ಸಂಬಂಧಪಟ್ಟಿದೆ. 11. ಕನ್ನಡಿಗರ ಕರ್ಮಕಥೆ: ವಿಜಯನಗರದ ಪತನವನ್ನು ಸೂಚಿಸುವ ಕಾದಂಬರಿ. ಇದಕ್ಕೆ ಮೂಲ ವಜ್ರಾಘಾತ ಎಂಬ ಮರಾಠಿ ಕೃತಿ. 12. ಶಿವಪ್ರಭುವಿನ ಪುಣ್ಯ: ಮರಾಠಿ ಐತಿಹಾಸಿಕ ಕಾದಂಬರಿಯ ಅನುವಾದ. ಶಿವಾಜಿಯ ಅನಂತರದಲ್ಲಿ ಆತನ ಮನೆಯಲ್ಲಿ ನಡೆದ ಘಟನೆಗಳೇ ಇದರ ವಸ್ತು. 13. ಕುರುಕ್ಷೇತ್ರ: ಇದು ಪಾಣೀಪತಜಾ ಮೋಹಿಮ್ ಎಂಬುದರ ಅನುವಾದ. ಪೇಶ್ವೆಗಳ ಇತಿಹಾಸಕ್ಕೆ ಸಂಬಂಧಪಟ್ಟಿದೆ. 14. ಮರಾಠರ ಅಭ್ಯುದಯ: ಇದು ಶಿವಾಜಿ ಅಫಜಲಖಾನನನ್ನು ಕೊಂದ ಕಥೆಯನ್ನು ವಿವರಿಸುತ್ತದೆ. ಮರಾಠಿಯಿಂದ ಅನುವಾದಿತ. 15. ಛತ್ರಪತಿ: ಛತ್ರಪತಿ ಶಿವಾಜಿಯ ಕಥೆಗೆ ಸಂಬಂಧಿಸಿದೆ. 16. ಮಾಧವ ಕರುಣಾವಿಲಾಸ: ಗಳಗನಾಥರ ನಾಲ್ಕನೆಯ ಸ್ವತಂತ್ರ ಕಾದಂಬರಿ. ಇದು ತಮ್ಮ ಹಿರಿಯ ಕೃತಿಯೆಂದು ಅವರೇ ಹೇಳಿಕೊಂಡಿದ್ದಾರೆ. ಕನ್ನಡ ಜನತೆಯಲ್ಲಿ ಜಾಗೃತಿಯನ್ನುಂಟುಮಾಡಿದ ಮಹಾಕೃತಿಯಿದು. ವಿಜಯನಗರ ರಾಜ್ಯಸ್ಥಾಪನೆಯ ವಿಷಯ ಇದರ ವಸ್ತು. 17. ಗೃಹಕಲಹ: ಮರಾಠಿ ಕೃತಿಯ ಅನುವಾದ. ಮರಾಠರ ಇತಿಹಾಸಕ್ಕೆ ಸಂಬಂಧಪಟ್ಟಿದೆ. 18. ರಾಣಾ ರಾಜಸಿಂಹ: ರಜಪೂತ ಇತಿಹಾಸಕ್ಕೆ ಸಂಬಂಧಿಸಿದ ಮರಾಠಿ ಕೃತಿಯ ಅನುವಾದ. 19. ಧಾರ್ಮಿಕ ತೇಜ ಅಥವಾ ಪರಹಿತದಕ್ಷತಾ: ಇದೂ ರಜಪೂತರ ಇತಿಹಾಸಕ್ಕೆ ಸಂಬಂಧಿಸಿದೆ. ಬುಂದೇಲ ಖಂಡದ ರಾಜಾ ಛತ್ರಸಾಲನ ಕಥೆ. ಮರಾಠಿಯಿಂದ ಅನುವಾದಿತ. 20. ಸಂಸಾರಸುಖ: ಮರಾಠಿಯಿಂದ ಅನುವಾದಿತ, ಮುಗಲರ ಇತಿಹಾಸಕ್ಕೆ ಸಂಬಂಧಪಟ್ಟಿದೆ. 21. ಸ್ವರಾಜ್ಯ ಸುಗಂಧ: ಅನುವಾದಿತ ಕೃತಿ. ಮರಾಠರ ಇತಿಹಾಸಕ್ಕೆ ಸಂಬಂಧಿಸಿದೆ. 22. ಸತ್ಯಾದರ್ಶ 23. ದುರ್ಗದ ಬಿಚ್ಚುಗತ್ತಿ: ಚಿತ್ರದುರ್ಗದ ನಾಯಕರ ಇತಿಹಾಸಕ್ಕೆ ಸಂಬಂಧಪಟ್ಟಿದೆ (ಇದು ಗಳಗನಾಥರ ಐದನೆಯ ಸ್ವತಂತ್ರ ಕಾದಂಬರಿ. ಒಂದನೆಯ ಭಾಗ ಮಾತ್ರ ಅಚ್ಚಾಗಿದೆ.) 24. ಭಗವತೀ ಕಾತ್ಯಾಯಿನಿ: ಪೌರಾಣಿಕ ಕಾದಂಬರಿ, ಗಳಗನಾಥರ ಆರನೆಯ ಸ್ವತಂತ್ರ ಕಾದಂಬರಿ.

**ಪೌರಾಣಿಕ ಕಥೆಗಳು :** 1.ಗಿರಿಜಾಕಲ್ಯಾಣ. 2.ಉತ್ತರರಾಮಚರಿತ್ರ. 3.ನಳ ಚರಿತ್ರ. 4.ಚಿದಂಬರಚರಿತ್ರ. 5.ಭಾಗವತಾಮೃತ 6.ಶೈವ ಸುಧಾರ್ಣವ. 7.ತುಲಸೀರಾಮಾಯಣ. 8.ಮಹಾಭಾರತ (ಆದಿಪರ್ವ ಮತ್ತು ಸಭಾಪರ್ವ ಮಾತ್ರ ಅಚ್ಚಾಗಿವೆ).

**ಸತ್ಪುರುಷರ ಚರಿತ್ರೆಗಳು :** 1.ನಿರ್ಯಾಣ ಮಹೋತ್ಸವ. 2.ಸದ್ಗುರು ಪ್ರಭಾವ 3. ಕಲಿಕುಠಾರ (1ನೆಯ ಭಾಗ ಮಾತ್ರ ಅಚ್ಚಾಗಿದೆ).

**ನಿಬಂಧಗಳು :** 1.ದಾಂಪತ್ಯ, 2.ಕುಟುಂಬ, 3.ಸುಂದರಲೇಖ ಸಮುಚ್ಚಯ, 4.ನಿಬಂಧಶಿಕ್ಷಣ, 5.ಕನ್ಯಾಶಿಕ್ಷಣ, 6.ರಾಜನಿಷ್ಠೆ, 7.ಶ್ರೇಷ್ಠ ಸದುಪದೇಶ, 8.ಬ್ರಾಹ್ಮಣಪ್ರಾಪ್ತಿ ಸಾಧನೆ.

ಕಲ್ಪಕತೆ, ಭಾವೋದ್ರೇಕ, ಐತಿಹಾಸಿಕ ವ್ಯಕ್ತಿಗಳ ಮೂಲಕ ವೀರ ಸಾಹಸ ರಸಿಕತೆ, ಸಾಧುಸಂತರ ಪಾತ್ರಗಳ ಮೂಲಕ ಸದುಪದೇಶ - ಇವನ್ನು ಕನ್ನಡ ಜನತೆಗೆ ಗಳಗನಾಥರು ತಮ್ಮ ಹಲವಾರು ಕೃತಿಗಳ ಮೂಲಕ ಒದಗಿಸಿದ್ದಾರೆ. ಇವರ ಕೃತಿಗಳಲ್ಲಿ ಮಾನವೀಯ ಹೋರಾಟ ರಾಷ್ಟ್ರೀಯತೆಯಲ್ಲಿ ಪರ್ಯವಸಾನವಾಗಿ ಈಶ್ವರೀಭಾವದತ್ತ ನಡೆಯುತ್ತದೆ. ಕೃತಿಗಳಲ್ಲಿ ಸಮಕಾಲೀನ ರಾಜಕೀಯ ಆಂದೋಲನಗಳ ಪ್ರಭಾವ ಇಲ್ಲದಿದ್ದರೂ ಸನಾತನ ಧರ್ಮದ ಪುನರುಜ್ಜೀವನದ ಹೆಬ್ಬಯಕೆ ಇತ್ತೆಂಬುದು ಸ್ಪಷ್ಟವಿದೆ. ಈ ಅಂಶ ಗಳಗನಾಥರ ಜೀವನಕಾಲದ ಭಾರತೀಯ ಸಾಹಿತ್ಯದ ಲಕ್ಷಣವೇ ಆಗಿತ್ತು. ಆದ್ದರಿಂದ ಅವು ಆಗಿನ ಕಾಲಕ್ಕೆ ತಕ್ಕಂತೆ ಜನರ ಮನೋಧರ್ಮವನ್ನು ಸಂಸ್ಕಾರಗೊಳಿಸಿದ, ಜಾಗೃತಿಯನ್ನುಂಟುಮಾಡಿದ ಕೃತಿಗಳಾದವು.

ಗಳಗನಾಥರು ಸಂಸ್ಕೃತ ಭಾಷೆ ಹಾಗೂ ಸಾಹಿತ್ಯಗಳಲ್ಲಿ ವಿಶೇಷ ಅಭಿಮಾನವುಳ್ಳವರಾಗಿದ್ದರೂ ಸಂಸ್ಕೃತ ಶಬ್ದಗಳ ಜಡಪ್ರಯೋಗಗಳಿಗೆ ಮರುಳಾಗದೆ, ಔಚಿತ್ಯವರಿತು ಉಪಯೋಗಿಸಿ ಅದಕ್ಕೆ ತಿರುಳ್ಗನ್ನಡ ಶಬ್ದಗಳನ್ನೂ ಕೆಲವು ಸಲ ಮನೆಮಾತುಗಳ ಪಡೆನುಡಿಗಳನ್ನೂ ಗಾದೆಮಾತುಗಳನ್ನೂ ಬೆರಸಿ ಹಾಳತವಾದ ಶೈಲಿಯೊಂದನ್ನು ಸೃಷ್ಟಿಸಿದರು. ಅಷ್ಟೇ ಅಲ್ಲ, ಉತ್ತರ, ಮಧ್ಯ, ದಕ್ಷಿಣ ಕನ್ನಡಗಳಿಗೆ ಸಮಾನ ಬೆಲೆ ಕೊಟ್ಟು ಎಲ್ಲರಿಗೂ ಅರ್ಥವಾಗಬಲ್ಲ ಕನ್ನಡ ಒಂದೇ ಎಂಬುದನ್ನು ತಮ್ಮ ಕೃತಿಗಳ ಮೂಲಕ ವ್ಯಕ್ತಪಡಿಸಿದರು. ಮೈಸೂರಿನ ಮಹಾರಾಜ ಕಾಲೇಜಿನ ಕರ್ಣಾಟಕ ಸಂಘ ಇವರಿಗೆ ಅರ್ಪಿಸಿದ ಮಾನಪತ್ರವೇ ಇದಕ್ಕೆ ಸಾಕ್ಷಿ. (ಕೆ.ಎಸ್.ಡಿ.)

**ಗಾಂವಕರ, ಎಸ್.ಡಿ. :** 1925-96. ಕರ್ನಾಟಕ ವಿಧಾನ ಪರಿಷತ್ತಿನ ಮಾಜಿ ಸಭಾಪತಿ, ಶಿಕ್ಷಣ ತಜ್ಞ, ರಾಜಕಾರಣಿ. ಸಖಾರಾಮ ದತ್ತಾತ್ರೇಯ ಗಾಂವಕರ ಇವರ ಪೂರ್ತಿ ಹೆಸರು. ಉತ್ತರ ಕನ್ನಡ ಜಿಲ್ಲೆ ಕಾರವಾರ ತಾಲ್ಲೂಕಿನ ಹನಕೋನದಲ್ಲಿ 1925 ಸೆಪ್ಟಂಬರ್ 2ರಂದು ಜನಿಸಿದರು. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಕಾರವಾರದಲ್ಲಿ ಪಡೆದರು. ಅನಂತರ ಧಾರವಾಡದ ಕರ್ನಾಟಕ ಕಾಲೇಜು, ಬೆಳಗಾಂವಿಯ ಆರ್.ಎಲ್.ಕಾನೂನು ಕಾಲೇಜಿನಲ್ಲಿ ಶಿಕ್ಷಣಪಡೆದರು. ಕಾರವಾರದಲ್ಲಿ ವಕೀಲ ವೃತ್ತಿ ಪ್ರಾರಂಭಿಸಿ (1952) ಅಪಾರ ಯಶಸ್ಸು ಗಳಿಸಿ ಜನಪ್ರಿಯರಾದರು.

ಕಾರವಾರ ನಗರಸಭೆಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. 26ನೆಯ ವಯಸ್ಸಿನಲ್ಲೇ ಇವರು ತಾವೊಬ್ಬ ದಕ್ಷ ಆಡಳಿತಗಾರರೆಂಬುದನ್ನು ತೋರಿಸಿದರು. ರಾಜಕೀಯ, ಸಾರ್ವಜನಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಕೆಲಸಗಳಲ್ಲಿ ಉತ್ಸಾಹದಿಂದ ದುಡಿಯುವುದು ಇವರ ಜಾಯ



ಮಾನವಾಗಿತ್ತು. ಕೆಲಕಾಲ ಇವರು ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಮಿತಿಯ ಕಮಿಶನರ್ ಆಗಿ ದುಡಿದರು (1960-72). ಉತ್ತರ ಕನ್ನಡ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ, ಬೋಟ ಬಿಲ್ಡಿಂಗ್ ಯಾರ್ಡ್ ಸಮಿತಿಯ ಸದಸ್ಯ, ಜಿಲ್ಲಾ ಸಹಕಾರಿ ಬ್ಯಾಂಕಿನ ನಿರ್ದೇಶಕ, ಕೊಂಕಣ ಮರಾಠಾ ಶಿಕ್ಷಣ ಸಂಸ್ಥೆಯ ಅಧ್ಯಕ್ಷ, ಕೆನರಾ ಬ್ಯಾಂಕ್ ನಿರ್ದೇಶಕ, ಜನತಾ ಕೋ ಆಪರೇಟೀವ್ ಸ್ಟೋರ್ಸ್ ಸಂಸ್ಥಾಪಕ, ಬಾಡದ ಶಿವಾಜಿ ಶಿಕ್ಷಣ ಸಂಸ್ಥೆಯ ಅಧ್ಯಕ್ಷ - ಹೀಗೆ ಬಹುಮುಖವಾಗಿ ಸೇವೆ ಸಲ್ಲಿಸಿದರು. ಮಹಾರಾಷ್ಟ್ರದ ಕೊಲಾಬಾದಲ್ಲಿ ಸಿವಿಲ್ ನ್ಯಾಯಾಧೀಶರಾಗಿ ಇವರನ್ನು ನೇಮಿಸಲಾಯಿತು (1961). ಕೆಲವು ತಿಂಗಳುಗಳಲ್ಲಿಯೆ ರಾಜಕೀಯ, ರಂಗಪ್ರವೇಶಿಸಿ ರಾಜೀನಾಮೆ ನೀಡಿದರು.

ಇವರು ಕಾಂಗ್ರೆಸ್ ಪಕ್ಷದಿಂದ ಕರ್ನಾಟಕ ವಿಧಾನಸಭೆಗೆ ಪ್ರಥಮ ಬಾರಿಗೆ ಆಯ್ಕೆಯಾದರು (1957). ವಿಧಾನಸಭೆಯಲ್ಲಿ ಕಾರವಾರ ಕ್ಷೇತ್ರವನ್ನು

ಪ್ರತಿನಿಧಿಸಿದ್ದರು (1962-74). ವಿಧಾನ ಪರಿಷತ್ತಿನ ಉಪಸಭಾಪತಿಗಳಾಗಿದ್ದ (1966-68) ಇವರು, ಅನಂತರ ವಿಧಾನ ಪರಿಷತ್ತಿನ ಸಭಾಪತಿಗಳಾಗಿಯೂ ಸೇವೆ ಸಲ್ಲಿಸಿದರು (1972-74). ಸಭಾಪತಿ ಹುದ್ದೆಯನ್ನು ಅತ್ಯಂತ ಸಮರ್ಥವಾಗಿ ನಿರ್ವಹಿಸಿದರು. ಮೂರನೆಯ ಬಾರಿಗೆ ವಿಧಾನ ಪರಿಷತ್ತಿನ ಸದಸ್ಯರಾಗಿ ಆಯ್ಕೆಗೊಂಡು (1996) ನಿಧನಹೊಂದುವವರೆಗೂ ಕಾರ್ಯನಿರ್ವಹಿಸಿದರು.

ಆಫ್ರಿಕದ ಮಲಾವಿಯಲ್ಲಿ ನಡೆದ ಜಾಗತಿಕ ಸಂಸದೀಯ ಸಮ್ಮೇಳನದಲ್ಲಿ ನಿಯೋಗದ ಸದಸ್ಯರಾಗಿ ಭಾಗವಹಿಸಿದರು (1972). ರೋಟರಿ ಸಂಸ್ಥೆಯ ಸದಸ್ಯರಾಗಿ ಯುರೋಪ್, ಅಮೆರಿಕ ಮೊದಲಾದ ರಾಷ್ಟ್ರಗಳಲ್ಲಿ ಪ್ರವಾಸ ಕೈಗೊಂಡರು. ಇವರು ಶ್ರೇಷ್ಠ ಸಂಸದೀಯ ಪಟುವೆಂದು ಹೆಸರು ಗಳಿಸಿದ್ದರು. ತಮ್ಮ ಸ್ವಂತ ಪ್ರತಿಭೆಯಿಂದ ಉನ್ನತ ಸ್ಥಾನ ಗಳಿಸಿದ ಇವರು 1996 ಮೇ 21ರಂದು ನಿಧನಹೊಂದಿದರು. ಕುಸುಮಾ ಇವರ ಧರ್ಮಪತ್ನಿ. ಇವರಿಗೆ ಎರಡು ಗಂಡು ಎರಡು ಹೆಣ್ಣು ಮಕ್ಕಳು. (ಆರ್.ಜಿ.ಆರ್.)

**ಗಾಂವಕಾರ, ಸ.ಪ. :** 1887-1972. ಸ್ವಾತಂತ್ರ್ಯ ಹೋರಾಟಗಾರ, ಶಿಕ್ಷಣತಜ್ಞ, ದಕ್ಷ ಆಡಳಿತಗಾರ, ಸಮಾಜ ಸುಧಾರಕ ಮತ್ತು ಕವಿ. ಸಣ್ಣಪ್ಪ ಪರಮೇಶ್ವರಪ್ಪ ಗಾಂವಕಾರ ಇವರ ಪೂರ್ಣ ಹೆಸರು. ಉತ್ತರ ಕನ್ನಡ ಜಿಲ್ಲೆ ಕುಮಟ ತಾಲ್ಲೂಕಿನ ತೊರ್ಕೆ ಗ್ರಾಮದಲ್ಲಿ 1887 ಜನವರಿ 11ರಂದು ಜನಿಸಿದರು. ಏಳು ಗಂಡು ಮಕ್ಕಳ ಪೈಕಿ ಇವರು ನಾಲ್ಕನೆಯವರು. ಪ್ರಾಥಮಿಕ ಶಿಕ್ಷಣದ ಅನಂತರ ಉಪಾಧ್ಯಾಯ ವೃತ್ತಿಗೆ ತರಬೇತು ಪಡೆದರು. ಅನಂತರ ತದಡಿಯಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರಾದರು. ಈ ವೃತ್ತಿಯಲ್ಲಿ ನಿರತರಾಗಿದ್ದಾಗಲೆ ಇವರು ಖಾಸಗಿಯಾಗಿ ವ್ಯಾಸಂಗ ಮಾಡಿ ಧಾರವಾಡದಲ್ಲಿ ಮೆಟ್ರಿಕ್ಯುಲೇಷನ್ ಮುಗಿಸಿದರು.



ಧಾರವಾಡ ಸಾಂಗ್ಲಿ ಗಳಲ್ಲಿ ಶಿಕ್ಷಣ ಮುಂದುವರಿಸಿ ನಲ್ವತ್ತನೆಯ ವರ್ಷಕ್ಕೆ ಬಿ.ಎ.ಪದವೀಧರರಾದರು. ಅನಂತರ ಇವರಿಗೆ ಹುಬ್ಬಳ್ಳಿಯ ಸ್ಕೂಲ್ ಬೋರ್ಡಿನ ಆಡಳಿತಾಧಿಕಾರಿಯ ಹುದ್ದೆ ದೊರಕಿತು. 12 ವರ್ಷ ಈ ಹುದ್ದೆ ನಿರ್ವಹಿಸಿ ನಿವೃತ್ತರಾದರು. ಅನಂತರ ಗಾಂಧಿಯವರ ಪ್ರಭಾವಕ್ಕೊಳಗಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಸೆರೆಮನೆವಾಸ ಅನುಭವಿಸಿದರು. ಸ್ವಾತಂತ್ರ್ಯಾನಂತರ ಮುಂಬಯಿ ಪ್ರಾಂತ್ಯದಲ್ಲಿ ಖೇರ್ ಮುಖ್ಯಮಂತ್ರಿತ್ವದಲ್ಲಿ ಸ್ಥಾಪಿತವಾದ ಕಾಂಗ್ರೆಸ್ ಸರ್ಕಾರದಲ್ಲಿ ಇವರು ಉಪಮಂತ್ರಿಗಳಾಗಿ ದುಡಿದರು. ಇವರ ಮನಸ್ಸು ಅಸ್ಪೃಶ್ಯತಾ ನಿವಾರಣೆ ಮತ್ತು ದೀನದಲಿತೋದ್ಧಾರ, ಮಹಿಳಾ ಶಿಕ್ಷಣಗಳ ಕಡೆಗೆ ಹರಿಯಿತು. ಉತ್ತರಕನ್ನಡ ಜಿಲ್ಲೆಯ ಹಿಂದುಳಿದ ಜನಾಂಗವಾದ ಹಾಲಕ್ಕಿಒಕ್ಕಲಿಗರ ಏಳ್ಗೆಗಾಗಿ ಶ್ರಮಿಸಿದರು. ವಾಚನಾಲಯ, ವಿದ್ಯಾರ್ಥಿ ವಸತಿ ಸೌಕರ್ಯ, ರೈತರ ಸಂಘಟನೆ, ಪ್ರೌಢಶಾಲೆ ಸ್ಥಾಪನೆ ಮುಂತಾದ ಹಲವು ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದರು. ಅಂಕೋಲದಲ್ಲಿ ಕಾಲೇಜು ಸ್ಥಾಪನೆಯಾಗಲು ಇವರೂ ಕಾರಣರು. ಗಾಂಧೀ ತತ್ತ್ವ ಮತ್ತು ಜೀವನವಿಧಾನಗಳ ಶಿಕ್ಷಣ ಪ್ರಚಾರಗಳಿಗಾಗಿ ಇವರು ಗಾಂಧಿನಿವಾಸವನ್ನು ಸ್ಥಾಪಿಸಿದರು. ಇವರಿಗೆ ಅರವಿಂದರ ತತ್ತ್ವದಲ್ಲೂ ವಿಶೇಷವಾದ ಆಸಕ್ತಿ ಇತ್ತು. ಮತಾಂತರ ಹೊಂದಿದ ಹಿಂದುಗಳನ್ನು ಪುನಃ ಹಿಂದುಮತಕ್ಕೆ ಸೇರಿಸಿಕೊಳ್ಳಬೇಕೆಂಬ ಆರ್ಯಸಮಾಜದ ವಿಚಾರದಲ್ಲಿ ಇವರಿಗೆ ಶ್ರದ್ಧೆ ಇತ್ತು. ಇವರು ಸ್ವಲ್ಪಕಾಲ ಆರ್ಯಸಮಾಜದ ಕಾರ್ಯಕರ್ತರಾಗಿದ್ದರು.

ಇವರು ಕವಿಗಳೂ ಹೌದು. ಮುಗಿಲು ಎಂಬುದು ಇವರ ಮೊದಲ ಕವನಸಂಕಲನ. ರವೀಂದ್ರನಾಥ ಠಾಕೂರರ ಗೀತಾಂಜಲಿಯನ್ನು ಸರಳ ಶೈಲಿಯಲ್ಲಿ ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಪ್ರಕೃತಿ-ಪ್ರೀತಿ, ಪ್ರೇರಣೆ-ಶೋಧನೆ ಇವು ಇವರ ಇನ್ನೆರಡು ಕವನಸಂಕಲನಗಳು. *

**ಗಾಣಗಾಪುರ** (ದೇವರ ಗಾಣಗಾಪುರ) **:** ಗುಲ್ಬರ್ಗ ಜಿಲ್ಲೆ ಅಫ಼ಜಲಪುರ ತಾಲ್ಲೂಕಿನ ಒಂದು ಊರು - ರಾಯಚೂರು. ಪುಣೆ ರೈಲುಮಾರ್ಗದಲ್ಲಿರುವ ಗಾಣಗಾಪುರ ರೈಲ್ವೆ ನಿಲ್ದಾಣದಿಂದ 16ಕಿಮೀ ದಕ್ಷಿಣಕ್ಕೆ ಭೀಮಾ ಮತ್ತು ಅಮರಜ ನದಿಗಳ ಸಂಗಮದ ಹತ್ತಿರ ಇದೆ.

ಶ್ರೀಗುರುಚರಿತ್ರೆ ಎಂಬ ಗ್ರಂಥದಲ್ಲಿ ಇದನ್ನು ಗಾಣಗಾಭವನ, ಗಂಧರ್ವಭವನ, ಗಂಧರ್ವಪುರ ಎಂಬುದಾಗಿ ಕರೆಯಲಾಗಿದೆ. ದತ್ತ ಸಂಪ್ರದಾಯದ ಪ್ರಸಿದ್ಧ ಸಂತರಾದ ನರಸಿಂಹ ಸರಸ್ವತಿಯವರು ವಾಡಿ ಎಂಬ ಊರಿನಿಂದ ಇಲ್ಲಿಗೆ ಬಂದು 23ವರ್ಷ ನೆಲೆಸಿದ್ದು ತಮ್ಮ ಸಂಪ್ರದಾಯವನ್ನು ಬೆಳೆಸಿದರು.

ಇಲ್ಲಿ ನರಸಿಂಹ ಸರಸ್ವತಿಯವರ ಮಠ ಇದೆ. ಮಠದ ಆವರಣದಲ್ಲಿ ಮಹಾದೇವ ಪಾರ್ವತಿಯರ ಮೂರ್ತಿಯೂ ಅಶ್ವತ್ಥವೃಕ್ಷದ ಪೊದರಿನಲ್ಲಿ ನಾಗನಾಥ, ಹನುಮಂತ ಮೂರ್ತಿಗಳೂ ತುಲಸಿ ಬೃಂದಾವನವೂ ಇವೆ. ಮಠಕ್ಕೆ ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಮಹಾದ್ವಾರಗಳಿವೆ. ಮಠದಲ್ಲಿರುವ ಗುರುಪಾದುಕೆ ಮುಖ್ಯ ಆಕರ್ಷಣೆ. ಗರ್ಭಗುಡಿಯ ಮಧ್ಯದಲ್ಲಿ ಇಟ್ಟಿರುವ ಪಾದುಕೆಗಳನ್ನು ಭಕ್ತಾದಿಗಳು ಬೆಳ್ಳಿಯ ಕಿಟಕಿ ಮೂಲಕ ನೋಡುವರು. ಈ ಪಾದುಕೆಗಳನ್ನು ನಿರ್ಗುಣ ಪಾದುಕೆಗಳೆಂದೂ ವಾಡಿಯಲ್ಲಿರುವ ಪಾದುಕೆಗಳನ್ನು ಮನೋಹರ ಪಾದುಕೆಗಳೆಂದೂ ಕರೆಯುತ್ತಾರೆ.

ಇಲ್ಲಿರುವ ಸಂಗಮೇಶ್ವರ ದೇವಾಲಯದ ಎದುರು ನರಸಿಂಹ ಸರಸ್ವತಿಯವರ ತಪೋಭೂಮಿ ಇದೆ. ನದೀಸಂಗಮದಿಂದ ಊರಿಗೆ ಬರುವಾಗ ಷಟ್‍ಕುಲತೀರ್ಥ, ನರಸಿಂಹತೀರ್ಥ, ಚಕ್ರತೀರ್ಥ, ಮನ್ಮಥತೀರ್ಥ, ಭಾಗೀರಥೀತೀರ್ಥ, ಪಾಪವಿನಾಶಿನೀತೀರ್ಥ, ಕೋಟಿತೀರ್ಥ ಮತ್ತು ರುದ್ರಪಾದತೀರ್ಥಗಳು ಸಿಕ್ಕುತ್ತವೆ. ದತ್ತಜಯಂತಿ ಮತ್ತು ನರಸಿಂಹ ಸರಸ್ವತಿಯವರ ಪುಣ್ಯತಿಥಿಯಂದು ಗಾಣಗಾಪುರಕ್ಕೆ ಸಾವಿರಾರು ಮಂದಿ ಭಕ್ತರು ಬರುತ್ತಾರೆ. (ಡಿ.ಕೆ.; ಎಸ್.ಜಿ.ಕೆ.)

**ಗಾಣದ ಕನ್ನಪ್ಪ :** ಹನ್ನೆರಡನೆಯ ಶತಮಾನದ ಶಿವಶರಣ ಹಾಗೂ ವಚನಕಾರ. ಇವನಿಗೆ ಗಾಳದ ಕನ್ನಪ್ಪ ಎಂಬ ಹೆಸರೂ ಇದೆ. ಕಲ್ಯಾಣದಲ್ಲಿದ್ದ ಈತ ತನ್ನ ಮಡದಿ ರೇಚವ್ವೆಯೊಡನೆ ಮೀನು ಹಿಡಿದು ಮಾರಿ ಬಂದ ಹಣದಿಂದ ಜಂಗಮದಾಸೋಹ ನಡೆಸುತ್ತಿದ್ದ. ದಂಪತಿಗಳಿಬ್ಬರೂ ಬಸವೇಶ್ವರನ ಸನ್ನಿಧಿಯಲ್ಲಿ ನಡೆಯುತ್ತಿದ್ದ ಶಿವಾನುಭವ ಸದ್ಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದು ಲಿಂಗಭಕ್ತಿಯುಳ್ಳವರಾಗಿ, ಷಟ್ಸ್ಥಲಾಚರಣೆಯಲ್ಲಿ ನಿರತರಾಗಿದ್ದರು.

ಕನ್ನಪ್ಪ ಗುಪ್ತಭಕ್ತಿಯುಳ್ಳ ಶರಣ. ಒಂದು ದಿನ ಇವನಿಗೆ ಗಣಪರ್ವ ಮಾಡಬೇಕೆಂಬ ಇಚ್ಛೆಯಾಗಿ ಲಿಂಗಪೂಜೆಯಲ್ಲಿ ನಿರತನಾಗಿರುವಾಗ ನಿನಗೇನು ಬೇಕು, ಬೇಡ ಎಂಬ ಶಬ್ದಗಳು ಕಿವಿಗೆ ತಾಕಿದವು. ಕನ್ನಪ್ಪ ಸುವರ್ಣಮತ್ಸ್ಯವೊಂದು ಬೇಕೆಂದು ಉಚ್ಚರಿಸಿದ. ಅನಂತರ ಮೀನು ಹಿಡಿಯಲು ಹೋದಾಗ ಇವನ ಬಯಕೆ ಫಲಿಸಿತು. ಸುವರ್ಣಮತ್ಸ್ಯವನ್ನು ಮಾರಿಬಂದ ಹಣದಿಂದ ಪ್ರಸಾದವಿನಿಯೋಗಕ್ಕೆ ಸಿದ್ಧಗೊಳಿಸಿ ಜಂಗಮರನ್ನು ಆಹ್ವಾನಿಸಿದ. ಅವರು ಕನ್ನಪ್ಪನ ಮನೆಯಲ್ಲಿನ ಮೀನಿನ ವಾಸನೆ ತಾಳಲಾರದೆ ಬಸವಣ್ಣನವರ ಮನೆಗೆ ಹೊರಟುಬಂದರು. ಆಗ ಕನ್ನಪ್ಪ ಬಸವಣ್ಣನ ಮನೆಗೆ ಬಂದು ಜಂಗಮರನ್ನು ಆಹ್ವಾನಿಸಲು, ಜಂಗಮರು ಇವನನ್ನು ಬೈದು, ಮನೆಯೆಲ್ಲಾ ಹೊಲಸು ನಾತವೆಂದು ಭಂಗಿಸಿ ಇವನ ಲಿಂಗವನ್ನು ಕಿತ್ತೆಸೆದರು. ಅನಂತರ ಅವರು ಬಸವಣ್ಣನ ಮನೆಯಲ್ಲೇ ಆರೋಗಣೆಗೆಂದು ಕುಳಿತು ಲಿಂಗಾರ್ಚನೆಗೆ ತೊಡಗಿದಾಗ ಸೆಜ್ಜೆಗಳಲ್ಲಿ ಅವರ ಲಿಂಗವೇ ಇಲ್ಲದಂತಾಯಿತು. ಬಸವಣ್ಣ ವಿಷಯ ತಿಳಿದು ಕನ್ನಪ್ಪನಲ್ಲಿಗೆ ಬಂದು ಜಂಗಮರ ತಪ್ಪನ್ನು ಮನ್ನಿಸಬೇಕೆಂದೂ ಅವರ ಲಿಂಗಗಳನ್ನು ಕೊಡಿಸಬೇಕೆಂದೂ ಕೇಳಿದ. ಅದಕ್ಕೆ ಕನ್ನಪ್ಪ ತಾನೀಗ ತ್ರಿಪುರಾಂತಕೇಶ್ವರನ

ಕೆರೆಗೆ ಹೋಗುತ್ತಿದ್ದೇನೆಂದೂ ಜಂಗಮರೂ ಅಲ್ಲಿಗೆ ಬರಲೆಂದೂ ಹೇಳಿ ಕೆರೆಯ ಬಳಿ ಬಂದು ಶಿವನನ್ನು ಧ್ಯಾನಿಸತೊಡಗಿದ. ಇವನ ಧ್ಯಾನದಿಂದ ಕಣ್ಮರೆಯಾಗಿದ್ದ ಜಂಗಮರ ಲಿಂಗಗಳೆಲ್ಲವೂ ನೀರಿನಲ್ಲಿ ತೇಲಿಬಂದವು. ಆಗ ಜಂಗಮರು ಕನ್ನಪ್ಪನಿಗೆ ವಂದಿಸಿ, ತಮ್ಮ ಅಪರಾಧವನ್ನು ಮನ್ನಿಸಬೇಕೆಂದು ಕೇಳಿಕೊಂಡು ಆತನನ್ನೇ ತಮ್ಮ ಗುರುವೆಂದು ಸ್ವೀಕರಿಸಿದರು. ಇದು ಕನ್ನಪ್ಪ ಮೆರೆದನೆನ್ನಲಾದ ಪವಾಡ. ಕಿಕ್ಕೇರಿಯ ಆರಾಧ್ಯ ನಂಜುಂಡನ ಭೈರವೇಶ್ವರಕಾವ್ಯದ ಕಥಾಮಣಿಸೂತ್ರರತ್ನಾಕರ (ಸು.1550), ಸಂಪಾದನೆಯ ಪರ್ವತೇಶ್ವರನ ಚತುರಾಚಾರ್ಯಪುರಾಣ, ಉತ್ತರ ದೇಶದ ಬಸವಲಿಂಗದೇವನ ಭೈರವೇಶ್ವರ ಕಾವ್ಯದ ಕಥಾಸಾಗರ - ಈ ಗ್ರಂಥಗಳಲ್ಲಿ ಇವನ ಕಥೆ ನಿರೂಪಿತವಾಗಿದೆ.

ಇದುವರೆಗೆ ಈತನ 10 ವಚನಗಳು ದೊರೆತಿವೆ. ಕೆಲವು ಬೆಡಗಿನ ವಚನಗಳಂತಿವೆ. ಗುಹೇಶ್ವರ ನಲ್ಲಯ್ಯ, ಗುಹೇಶ್ವರನ ಶರಣ ಅಲ್ಲಮ, ಕನ್ನಯ್ಯಪ್ರಿಯ ಅಲ್ಲಮ ಎಂಬುವು ಇವನ ವಚನಗಳ ಅಂಕಿತ. ಇವನ ವಚನಶೈಲಿಯ ಮಾದರಿಗಾಗಿ ಒಂದು ವಚನವನ್ನು ಉದಾಹರಿಸಿದೆ:

> ನಾ ಬಂದುದಕ್ಕೆ ಮಾಡಿದೆ. ನೀ ಕಳುಹಿದವರ ಕೊಂದೆ. ನೀವಿರಿಸಿದಂತಿದ್ದ ಎನಗಿನ್ನು ಬಂಧಮೋಕ್ಷವೇಕೆ? ಕನ್ನಯ್ಯಪ್ರಿಯ ಗುಹೇಶ್ವರನ ಶರಣ ಅಲ್ಲಮನಲ್ಲಿ ಲೇಪವಾದವಂಗೆ. (ಆರ್.ಎಸ್.ವಿ.)

**ಗಾದೆ :** ಜನಪದ ಸಾಹಿತ್ಯದ ಬಹು ಮುಖ್ಯ ಪ್ರಕಾರಗಳಲ್ಲೊಂದು. ಗಾದೆ ಎಂಬ ಪದ ಸಂಸ್ಕೃತದ ಗಾಥಾ ಎಂಬುದರ ನೇರ ತದ್ಭವವಾಗಿರಬಹುದು. ಇಲ್ಲವೆ ಪ್ರಾಕೃತದ 'ಗಾಹೆ' ಎಂಬ ಪದದ ರೂಪಾಂತರವಾಗಿರಬಹುದು. ಗಾದೆಗೆ ಸಂವಾದಿಯಾಗಿ ಸಾಮತಿ, ಸೂಕ್ತಿ, ಸೂತ್ರ, ಲೋಕೋಕ್ತಿ, ಪ್ರಾಚೀನೋಕ್ತಿ, ಸಾರೋಕ್ತಿ, ಉದ್ಧರಣೆ, ಹೇಳಿಕೆ, ವಿಧಿ, ನಿಯಮ, ಪ್ರಮಾಣ, ನಾಣ್ನುಡಿ ಮುಂತಾದ ಪದಗಳು ಬಳಕೆಯಲ್ಲಿದ್ದರೂ ಗಾದೆ ಶಬ್ದವೇ ಹೆಚ್ಚು ಪ್ರಚಾರದಲ್ಲಿದೆ.

ಗಾದೆಯ ಲಕ್ಷಣಗಳನ್ನು ಒಂದೇ ಮಾತಿನಲ್ಲಿ ಸೂತ್ರೀಕರಿಸಿ ಹೇಳುವುದು ಕಷ್ಟಸಾಧ್ಯವಾದ ಕೆಲಸ. ಏಕೆಂದರೆ ಗಾದೆಯ ವಸ್ತುವ್ಯಾಪ್ತಿ ಅನಂತವಾದುದು. ಆಡು ಮುಟ್ಟದ ಸೊಪ್ಪಿಲ್ಲ ಎಂಬಂತೆ ಗಾದೆ ತನ್ನೊಳಗುಮಾಡಿಕೊಳ್ಳದ ವಿಷಯಗಳಿಲ್ಲ. ಅದು ಒಂದು ರೀತಿಯಲ್ಲಿ ಜನಸಾಮಾನ್ಯರ ವಿಶ್ವಕೋಶ. ಪರಂಪರಾನುಗತವಾಗಿ ಬರುವ ಜ್ಞಾನದಿಂದ ಯಾರೋ ಒಬ್ಬ ಅನುಭವಿ ವಿವೇಕಿ ನುಡಿದ ಸಾಮಯಿಕ ಸೊಲ್ನುಡಿ ಜನತೆಯ ಅಂಗೀಕಾರ ಮುದ್ರೆಯನ್ನು ಪಡೆದು, ಪರಿಮಿತ ವಲಯದಲ್ಲಿ ಮೊದಲು ಸಲುವಳಿ ಪಡೆಯುತ್ತದೆ. ಅನಂತರ ಅದರ ಸತ್ತ್ವಕ್ಕೂ ಸ್ವಾರಸ್ಯಕ್ಕೂ ಸತ್ಯತೆಗೂ ಮಾರುಹೋಗುವಂಥ ಇತರ ಜನರೂ ಅದನ್ನು ಬಳಸತೊಡಗುತ್ತಾರೆ. ಹೀಗಾಗಿ ಅದು ಒಂದು ಸಮಾಜದ ಸಾರ್ವಜನಿಕ ಸ್ವತ್ತಾಗಿ ಚಲಾವಣೆಯಾಗುತ್ತದೆ. ಸಂಕ್ಷಿಪ್ತತೆ ಅಥವಾ ಸಂಕೀರ್ಣತೆ, ವಿವೇಚನೆ, ತೀಕ್ಷ್ಣತೆ ಅಥವಾ ಒಗಚುತನ ಹಾಗೂ ಜನಪ್ರಿಯತೆ ಗಾದೆಯ ನಾಲ್ಕು ಪ್ರಮುಖ ಲಕ್ಷಣಗಳು. ಪ್ರತಿಯೊಂದು ಗಾದೆಯೂ ಒಂದು ರೀತಿಯಲ್ಲಿ ಬಿಡಿ ಕವಿತೆ. ಅದರಲ್ಲಿ ಛಂದೋಬದ್ಧತೆ, ಪ್ರಾಸಾನುಪ್ರಾಸ ಆಲಂಕಾರಿಕ ಅಭಿವ್ಯಕ್ತಿ, ಕಾವ್ಯದ ಬಿಗುಪು, ಬಂಧುರತೆ, ಸೂಚ್ಯಭಾವ ವ್ಯಂಗ್ಯ ವೈಚಾರಿಕತೆಗಳು ಸಹಜವಾಗಿ ರೂಪುಗೊಂಡಿರುತ್ತವೆ. ಸಾಹಿತ್ಯದ ಸಮಸ್ತ ಚಟುವಟಿಕೆಗಳನ್ನೂ ಸೃಜನಾತ್ಮಕ ಶಕ್ತಿಯನ್ನೂ ಒಳಗೊಂಡಿರುವ ಗಾದೆಯ ಭಾಷೆ ಸಾಂಕೇತಿಕ. ಭಾವ ಬಹುಮಟ್ಟಿಗೆ ರೂಪಕ. ಇವುಗಳಲ್ಲದೆ ನಾಟಕೀಯತೆ ಹಾಗೂ ಸಮತೋಲ ಗುಣಗಳೂ ಗಾದೆಯಲ್ಲಿ ಗೋಚರಿಸುತ್ತವೆ. ಗಾದೆಗಳು ಮಾನವಸ್ವಭಾವಕ್ಕೆ ಒಡ್ಡಿದ ಪ್ರತೀಕಗಳಾಗಿವೆ; ಸಮಾಜದ ಪ್ರತಿಬಿಂಬಗಳಾಗಿವೆ; ಸಂಸ್ಕೃತಿಯ ಪ್ರತಿನಿಧಿಗಳಾಗಿವೆ. ಏಕೆಂದರೆ ಅವುಗಳಲ್ಲಿ ಬದುಕಿನ ಎಲ್ಲ ಕ್ಷೇತ್ರಗಳ ಅನುಭವಗಳಿಗೂ ಅಭಿವ್ಯಕ್ತಿ ದೊರೆತಿದೆ. ರೀತಿನೀತಿ, ನಂಬಿಕೆ, ನಡಾವಳಿ, ಆಚಾರವಿಚಾರಗಳೆಲ್ಲವನ್ನೂ ಅವು ಒಳಗೊಂಡಿವೆ. 'ಗಾದೆ ವೇದಕ್ಕೆ ಸಮ' ಎಂಬ ಗಾದೆಯೇ ಅವುಗಳ ಅಗ್ಗಳಿಕೆಯನ್ನು ಎತ್ತಿ ಹೇಳುತ್ತದೆ. 'ಊಟಕ್ಕೆ ಮೊದಲು ಉಪ್ಪಿನಕಾಯಿ; ಮಾತಿಗೆ ಮೊದಲು ಗಾದೆ' ಎಂಬ ಗಾದೆಯೇ ಗಾದೆಗಳ ತೀವ್ರಾವಶ್ಯಕತೆಯನ್ನು ಒತ್ತಿ ಹೇಳುತ್ತದೆ. ಗಾದೆಯಿಲ್ಲದ ಭಾಷೆಯಿಲ್ಲ; ಭಾಷೆಯಿಲ್ಲದ ಜನಾಂಗವಿಲ್ಲ. ಗಾದೆಗಳ ಮಹತ್ತ್ವವನ್ನು ಅರಿತುಕೊಂಡ; ಯಾವ ವ್ಯಕ್ತಿಯೂ ಅವುಗಳ ಸೌಂದರ್ಯ, ಸಾರ್ಥಕತೆ, ಜೀವಂತಿಕೆಗಳನ್ನು ಮೆಚ್ಚದಿರಲಾರ. ಗಾದೆ ಜೀವನಕ್ಕೆ ಕೇವಲ ವ್ಯಂಜಕ ಮನರಂಜಕ ಸೂಕ್ತಿ ಮಾತ್ರವಲ್ಲ; ಅದು ಸಾರ್ಥಕ ಜೀವನಸೂತ್ರ ಹಾಗೂ ವಿವೇಕದ ದಾರಿದೀಪ. ಗಾದೆ ಬೋಧಿಸುವ ಸನ್ಮಾರ್ಗವಿಡಿದು ನಡೆದರೆ ಒಬ್ಬನ ಬಾಳು ಭವ್ಯವೂ ಬೆಲೆಯುಳ್ಳದ್ದೂ ಆಗುವುದರಲ್ಲಿ ಸಂದೇಹವಿಲ್ಲ. ಸಮಾಜದಲ್ಲಿ ಗಾದೆಗಳಿಗೆ ಎಂದಿನಿಂದಲೂ ಮಹತ್ತ್ವ ಸಲ್ಲುತ್ತ ಬಂದಿದೆ. ಗಾದೆಗಳು ವಿದ್ಯಾವಂತರಲ್ಲದ ಆದರೆ ಆಳವಾದ ಜೀವನಾನುಭವವನ್ನುಳ್ಳ ಜನಪದರಿಗೆ ತಮ್ಮ ಅಭಿಪ್ರಾಯಗಳನ್ನು ಮನಮುಟ್ಟುವಂತೆ ಹೇಳಲು ತುಂಬ ಸಹಕಾರಿಯಾಗಿವೆ.

ನಿರಂತರ ಚಲಾವಣೆಯೇ ಗಾದೆಯ ಜೀವಂತಿಕೆ ಹಾಗೂ ಶಾಶ್ವತ ಮೌಲ್ಯದ ಮುಖ್ಯ ಕುರುಹು. ಗಾದೆಗಳ ಭಂಡಾರ ನಿಂತ ನೀರಿನ ಮಡುವಿನಂತಲ್ಲ; ಅಪಾರ ಸಾಗರದಂತೆ. ಅದರಲ್ಲಿ ಹಳೆಯ ಹೊಸ ಗಾದೆಗಳ ಸಮ್ಮಿಳನ, ಹುಟ್ಟು, ಸಾವು ನಿತ್ಯವಾಗಿರುತ್ತದೆ. ತಿಳಿಹಾಸ್ಯ, ಕಟುವ್ಯಂಗ್ಯ, ವಿಡಂಬನೆ, ಅನ್ಯೋಕ್ತಿ ಹಾಗೂ ಪಕ್ಷಿಪ್ರಾಣಿ ಪದಾರ್ಥಗಳ ಹೋಲಿಕೆ ಇತ್ಯಾದಿಗಳ ಮುಖಾಂತರ ಗಾದೆಗಳು ವಿವೇಕ ಜಾಗೃತಿಗೊಳಿಸುತ್ತವೆ. ಅವು ಸದಾ ಒಳ್ಳೆಯ ಬುದ್ಧಿಯನ್ನು ಹೇಳುತ್ತಿರಬೇಕೆಂಬ ನಿಯಮವಿದ್ದರೂ ಅಪವಾದಗಳುಂಟು. ಒಟ್ಟಾರೆ ಗಾದೆಗಳು ಮೂರ್ತಿಶಿಲ್ಪದಂತೆ ಸೂಕ್ಷ್ಮ ಹಾಗೂ ಸಂಕೀರ್ಣ ಸ್ವಭಾವವುಳ್ಳ ಸುಭಾಷಿತಗಳು ಎನ್ನಬಹುದು.

ಗಾದೆಗಳ ಬಗ್ಗೆ ಕನ್ನಡದ ಪ್ರಸಿದ್ಧ ವಿದ್ವಾಂಸರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಸ್ಥೂಲವಾಗಿ ಹೀಗೆ ಕ್ರೋಡೀಕರಿಸಬಹುದು: 'ತಲೆತಲಾಂತರದಿಂದ ಶೇಖರವಾಗಿರುವ ಅನುಭವವು ಯಾವನಾದರೊಬ್ಬನ ಬಾಯಲ್ಲಿ ಮಾತಾಗಿ ಹೊರಬೀಳುವುದು. ಜನ ಆ ಮಾತಿನ ಸೊಬಗಿಗೂ ಅದರ ಹಿಂದಿರುವ ಅನುಭವಕ್ಕೂ ಮೆಚ್ಚಿ ಅದನ್ನು ನಾಣ್ಯವಾಗಿ ಸಂಗ್ರಹಿಸುವರು. ಜ್ಞಾತಾಜ್ಞಾತವಾಗಿ ಅದನ್ನು ಸಾಧ್ಯವಾದಂತೆಲ್ಲ ಅವರಿವರೆನ್ನದೆ ತಿದ್ದುವರು; ಉಜ್ಜಿ ಹೊಳಪಿಕ್ಕುವರು. ಹೀಗೆ ಸಿದ್ಧವಾದ ಮೊಹರೆವಾಕ್ಯವು ಗಾದೆ' ಎಂದು ದೇವುಡು ನರಸಿಂಹಶಾಸ್ತ್ರಿ ಬರೆದಿದ್ದಾರೆ.

ಗಾದೆ ಸಾವಿರ ಮಾತಿನ ಸರದಾರ. ಗಾದೆಮಾತುಗಳೆಂದರೆ ಅಚ್ಚುಕಟ್ಟಾದ ನಿರ್ಣಯಗಳಲ್ಲ; ವಿವೇಕಜಾಗೃತಿ ಉಂಟು ಮಾಡುವ ಸುಭಾಷಿತಗಳು. ಅವು ಒಂದು ಬಗೆಯ ವಕ್ರೋಕ್ತಿಗಳು. ಅವುಗಳ ಧ್ವನಿತಾರ್ಥ ಹಿಡಿಯಲು ವ್ಯಾವಹಾರಿಕ ಜ್ಞಾನದಷ್ಟೇ ಪಾರಮಾರ್ಥಿಕ ತಿಳಿವಳಿಕೆಯೂ ಬೇಕು. ಗಾದೆಗಳು ಧರ್ಮ ಅರ್ಥ ಕಾಮಗಳ ವಿವೇಕಕ್ಕಾಗಿ ನೀಡಿದ ಸೂಕ್ತಿಗಳು. ಗಾದೆಗಳು ಹೊಸ ಸುಭಾಷಿತಗಳ ಮಸೆಗಲ್ಲು; ವಿವೇಕದ ಒರೆಗಲ್ಲು ಎಂದಿದ್ದಾರೆ ದ.ರಾ.ಬೇಂದ್ರೆ.

ಗಾದೆಗಳು ಜೀವನದ ಅನುಭವಗಳಿಂದ ಜನಿತವಾದ ಜಾಣ್ಮೆಯನ್ನು ಸ್ವಾರಸ್ಯವಾಗಿ ಬಹಳ ಕಡಿಮೆ ಪದಗಳಲ್ಲಿ ಅಡಕಮಾಡಿ ಹೇಳುತ್ತವೆ. ಗಾದೆಯ ಮಾತು ಎಂದರೆ ಸಾವಿರಕ್ಕೊಂದು ಮಾತು. ಕಿರಿದರಲ್ಲಿ ಹಿರಿದಾದ ಅರ್ಥವನ್ನು ಅದು ತುಂಬಿಕೊಂಡಿದೆ. ಬಿಂದಿಗೆಯಲ್ಲಿ ಕಡಲನ್ನು ತುಂಬಿದಂತೆ ಲೋಕಾನುಭವ, ಸಂಸ್ಕೃತಿ, ನೀತಿ - ಇವುಗಳ ತ್ರಿವೇಣಿಸಂಗಮವನ್ನು ಅಲ್ಲಿ ಕಾಣಬಹುದು ಎಂಬುದು ಎಂ.ಮರಿಯಪ್ಪಭಟ್ಟರ ಮಾತು.

ಒಂದು ಗುಂಪಿನ ಜಾಣ್ಮೆ, ಜೀವನಾನುಭವ, ಅಭಿವ್ಯಕ್ತಿಯ ನವುರು ಗಾದೆಗಳಲ್ಲಿಯ ಹಾಗೆ ಸ್ಪಷ್ಟವಾಗಿ ಜನಪದ ಸಾಹಿತ್ಯದ ಮಿಕ್ಕೆಲ್ಲೂ ಗೋಚರಿಸುವುದಿಲ್ಲ. ಏಕೆಂದರೆ ಗಾದೆ ವಿಶಾಲವಾದ ಜೀವನಾನುಭವದ ಆಧಾರದಿಂದ ರೂಪಗೊಂಡ ಸಂಕ್ಷಿಪ್ತ ಅಭಿವ್ಯಕ್ತಿಯಾಗಿದೆ ಎನ್ನುತ್ತಾರೆ ಹಾ.ಮಾ.ನಾಯಕ.

ಗಾದೆಗಳು ಜನತೆಯ ಸಂಸ್ಕೃತಿಯ ಶಿಲಾಶಾಸನಗಳು. ಅವುಗಳಲ್ಲಿ ಐತಿಹಾಸಿಕ, ಸಾಮಾಜಿಕ, ಪೌರಾಣಿಕ ಅಂಶಗಳು ಕೆತ್ತಲ್ಪಟ್ಟಿವೆ. ಗಾದೆಗಳ ಭಂಡಾರ ಒಂದು ಜನಾಂಗದ ವಿಶ್ವಕೋಶ ಎಂಬುದು ಟಿ.ವೆಂಕಟರಮಣಯ್ಯನವರ ನುಡಿ.

ಅತ್ಯುತ್ತಮವಾದ ಸಹಜ ಗಾದೆಯೊಂದು ಅದು ಹುಟ್ಟಿದ ಸಮಾಜದ ಸಾಂಸ್ಕೃತಿಕ ಐತಿಹಾಸಿಕ ಹಾಗೂ ಧಾರ್ಮಿಕ ಅಂಶಗಳನ್ನು ಗರ್ಭೀಕರಿಸಿಕೊಂಡು ರೂಪುಗೊಂಡಿರುತ್ತದೆ. ಕನ್ನಡದ ಉದ್ದಾಮ ಕವಿಗಳೆಲ್ಲರೂ ತಮ್ಮ ಕೃತಿಗಳಲ್ಲಿ ಇಂಥ ಗಾದೆಗಳನ್ನು ಬಳಸಿಕೊಂಡಿದ್ದಾರೆ. ನಯಸೇನ, ಬಸವಣ್ಣ, ಹರಿದಾಸರು, ಸರ್ವಜ್ಞ ಮುಂತಾದ ಜನತಾಕವಿಗಳು ಜನಪದ ಗಾದೆಗಳನ್ನು ಸೂರೆಮಾಡಿ

ತಮ್ಮ ಕೃತಿಗಳಲ್ಲಿ ಅತ್ಯಂತ ಸಾರ್ಥಕವಾಗಿ ಬಳಸಿಕೊಂಡು, ಗಾದೆಗಳಿಗೂ ತಮ್ಮ ಕೃತಿಗಳಿಗೂ ಅಮರತ್ವ ಒದಗಿಸಿದ್ದಾರೆ.

ಜ್ಞಾನದ ಆಗರವೂ ಅನುಭವದ ಸಾಗರವೂ ಆದ ಗಾದೆಗಳಲ್ಲಿ ಅನೇಕ ಪ್ರಕಾರಗಳುಂಟು. ಸ್ಥೂಲವಾಗಿ ಅವನ್ನು ಗ್ರಂಥಸ್ಥ ಗಾದೆಗಳು, ಜನಬಳಕೆಯ ಕಂಠಸ್ಥ ಗಾದೆಗಳು ಎಂದು ವಿಂಗಡಿಸಿಕೊಳ್ಳಬಹುದು. ಗ್ರಂಥಸ್ಥ ಗಾದೆಗಳು ಲೇಖಕರ ಗಮನವನ್ನು ಸೆಳೆದುಕೊಂಡು ಅವರ ಗ್ರಂಥಗಳಲ್ಲಿ ಅನೇಕ ಮಾರ್ಪಾಟುಗಳನ್ನು ಹೊಂದಿ ಅಥವಾ ತಮ್ಮ ಮೂಲಸ್ವರೂಪದಲ್ಲೇ ಸೇರ್ಪಡೆಗೊಂಡಂಥವು. ಮತ್ತು ಹೆಚ್ಚಾಗಿ ವಿದ್ಯಾವಂತರ ವರ್ಗದಲ್ಲಿ ಪ್ರಚಾರದಲ್ಲಿರುವಂಥವು. ಇವುಗಳಲ್ಲಿ ಒಂದು ತೆರನಾದ ಏಕರೂಪತೆ, ನಾವೀನ್ಯ ಹಾಗೂ ಬೆಡಗು ಕಾಣಬರುತ್ತದೆ. ಇಂಥ ಅನೇಕ ಗಾದೆಗಳನ್ನು ಪ್ರತಿಭಾವಂತರಾದ ಕವಿಗಳು ತಾವೇ ಸೃಷ್ಟಿಸಿಕೊಂಡು ಬಳಸಿರಬಹುದು ಅಥವಾ ಪ್ರಚಲಿತವಿರುವ ಗಾದೆಗಳನ್ನು ಆರಿಸಿಕೊಂಡು ಅವುಗಳನ್ನು ತಮ್ಮ ಅಗತ್ಯಕ್ಕೆ ತಕ್ಕಂತೆ ಮಾರ್ಪಡಿಸಿಕೊಂಡು ತಮ್ಮ ಕೃತಿಗಳಲ್ಲಿ ಅಳವಡಿಸಿಕೊಂಡಿರಬಹುದು. ಹೇಗೆ ಮಾಡಿದ್ದರೂ ಗ್ರಂಥಸ್ಥ ಗಾದೆಗಳು ಸಂಸ್ಕಾರಗೊಂಡ ಮುತ್ತುರತ್ನಗಳಿದ್ದಂತೆ.

ಗ್ರಂಥಸ್ಥವಾಗದ, ಆದರೆ ಜನಸಾಮಾನ್ಯರ ಆಡುನುಡಿಯಲ್ಲಿ ಧಾರಾಳವಾಗಿ ಬಳಕೆಯಲ್ಲಿರುವ ಗಾದೆಗಳಲ್ಲಿ ಬಹುಪಾಲಿನವು ಹುಟ್ಟುಗಾದೆಗಳು. ಇವು ಪ್ರಾಚೀನತೆ ಹಾಗೂ ಪ್ರಭಾವದ ದೃಷ್ಟಿಯಿಂದ ಅತ್ಯಂತ ಮಹತ್ವವುಳ್ಳವು. ಇವನ್ನು ಯಾರು ಯಾವಾಗ ಸೃಷ್ಟಿಸಿದರೆಂಬುದನ್ನು ಕಂಡುಹಿಡಿಯಲಾಗುವುದಿಲ್ಲ. ಹೀಗೆ ಜನಸಾಮಾನ್ಯರ ಆಡುನುಡಿಯಲ್ಲಿ ಪರಂಪಾರನುಗತವಾಗಿ ಬಳಕೆಯಲ್ಲಿರುವ ಗಾದೆಗಳನ್ನು ಜನಪದ ಗಾದೆಗಳೆನ್ನಬಹುದು. ಅವು ಹುಟ್ಟಿದ ಹಿನ್ನೆಲೆಯಲ್ಲಿರುವ ಒಂದು ಬಗೆಯ ಒರಟುತನ ಅವುಗಳಲ್ಲಿ ಎದ್ದುಕಾಣುತ್ತದೆ. ಆದರೆ ಜನಪದ ಗಾದೆಗಳೆಲ್ಲ ಅಸಂಸ್ಕೃತವಾದ ಅನಾಗರಿಕರ ಅಶ್ಲೀಲ ನುಡಿಗಳೆನ್ನುವಂತಿಲ್ಲ. ವಾಸ್ತವವಾಗಿ ಒಂದು ಭಾಷೆಯಲ್ಲಿ ರೂಢಿಯಲ್ಲಿರುವ ಗಾದೆಗಳಲ್ಲಿ ಬಹುಪಾಲಿನವು ಜನಪದರಿಂದ ಸೃಷ್ಟಿಸಲ್ಪಟ್ಟವೆಂಬುದು ಅವುಗಳ ಸಮರ್ಥ ವಿಶ್ಲೇಷಣೆಯಿಂದ ಮಾತ್ರ ತಿಳಿದುಬರುತ್ತದೆ. ಮೇಲಿನ ವಿಭಜನೆಯಲ್ಲಿ ಮತ್ತೆ ಗಾದೆಗಳನ್ನು ವ್ಯಾವಸಾಯಿಕ ಗಾದೆಗಳು, ವೈದ್ಯ ಕುರಿತ ಗಾದೆಗಳು, ವೃತ್ತಿಸೂಚಕ ಗಾದೆಗಳು, ನೀತಿಬೋಧಕ ಗಾದೆಗಳು, ನಗೆ ಗಾದೆಗಳು ಇತ್ಯಾದಿಯಾಗಿ ವಿಂಗಡಿಸುತ್ತ ಹೋಗಲು ಸಾಧ್ಯವಿದೆ. ಐತಿಹಾಸಿಕ ಹಾಗೂ ಪೌರಾಣಿಕ ಪ್ರಸಂಗಗಳನ್ನು ಸೂಚಿಸುವ ಗಾದೆಗಳೂ ಇಲ್ಲಿ ಕಾಣಸಿಗುತ್ತವೆ. ಆದರೆ ಸಾಮಾಜಿಕ, ಧಾರ್ಮಿಕ ಪರಿಸರವನ್ನು ಸೂಚಿಸುವ ಗಾದೆಗಳ ಸಂಖ್ಯೆ ಹೆಚ್ಚು. (ಪಿ.ಕೆ.ಆರ್.;ಎನ್.ಟಿ.)

ಈ ಹಿನ್ನೆಲೆಯಲ್ಲಿ ಕನ್ನಡ ಗಾದೆಗಳ ವಸ್ತು, ವ್ಯಾಪ್ತಿ, ವೈಶಿಷ್ಟ್ಯಗಳನ್ನು ಸ್ಥೂಲವಾಗಿ ಪರಿಶೀಲಿಸಬಹುದು. ಒಂದು ಗಾದೆ ತಲೆಮಾರಿನಿಂದ ತಲೆಮಾರಿಗೆ, ವ್ಯಕ್ತಿಯಿಂದ ವ್ಯಕ್ತಿಗೆ ಇಳಿದು ಉಳಿದುಬರುವಲ್ಲಿ ಪ್ರಾಸ ಅಥವಾ ಲಯಬದ್ಧತೆ ಬಹು ಮುಖ್ಯ ಕಾರಣವಾಗುತ್ತದೆ.

ಎಳೀಲಾರದ ಎತ್ತು ಮೆಳೇ ಮೇಲೆ ಬಿತ್ತು

ಎಂಬ ಈ ಗಾದೆಯಲ್ಲಿ ಆದಿಪ್ರಾಸ ಹಾಗೂ ಅಂತ್ಯಪ್ರಾಸ ಎರಡೂ ಇದ್ದು ಕೇಳುಗನ ಸ್ಮರಣೆಯಲ್ಲುಳಿಯಲು ಸಹಾಯಕವಾಗಿದೆ. ಕೋಗಿಲೆಯಂತದೂ ಕಾಲಬಂದಂಗೆ ಕಾಗೆ ಗೂಡಲ್ಲಿ ಕತೆ ಹಾಕ್ತದೆ, ಮುದ್ದಾದ ಮುದಿಗಂಡ ಮೂರನೆಯೋಳಿಗೆ ಎಂಬ ಗಾದೆಗಳಲ್ಲಿ ಕಂಡುಬರುವ ಕಕಾರ ಮಕಾರಗಳ ಅನುಪ್ರಾಸ ನೆನಪಿನಲ್ಲುಳಿಯಲು ಅನುವಾಗಿದೆ. ಉಪಮೆ, ರೂಪಕ, ಅತ್ಯುಕ್ತಿ, ವಿರೋಧಾಭಾಸ ಮುಂತಾದ ಅಲಂಕಾರವಿಶೇಷಗಳ ಮೂಲಕ ಒಂದು ಅನುಭವವನ್ನು ಮನದಲ್ಲಿ ಅಚ್ಚೊತ್ತಿದಂತೆ ಮೂಡಿಸುವುದು ಗಾದೆಯ ಇನ್ನೊಂದು ಗುಣ. ಅಂಥ ಒಂದು ಗಾದೆಯನ್ನು ಇಲ್ಲಿ ಗಮನಿಸಬಹುದು:

ಅತ್ತೆ ಮನೇಲಿ ಹೆಂಗಿದ್ದಿ ಮಗಳೆ ಅಂದ್ರೆ
ಮುಳ್ಳಾಗೆ ಹಾದಿ ನಡೆದಂಗೆ
ಮೊಳಕೈಗೆ ಚಿಲಕ ಹೊಡೆದಂಗೆ

ಪ್ರೀತಿಯಿಂದ ಸಾಕಿದ ಮಗಳು ಮದುವೆಯಾದ ಮೇಲೆ ಗಂಡನ ಮನೆಯಲ್ಲಿ ಕೆಲವು ದಿನ ಇದ್ದು ತೌರಿಗೆ ಬಂದಿರುತ್ತಾಳೆ. ಬಹುದಿನಗಳಿಂದ ಅಗಲಿದ್ದ ತಾಯಿಗೆ ಮಗಳು ಅತ್ತೆಯ ಮನೆಯಲ್ಲಿ ಹೇಗಿದ್ದಳು ಎಂಬುದನ್ನು ತಿಳಿದುಕೊಳ್ಳುವ ಕಾತರ, ಕುತೂಹಲ; ಮಗಳನ್ನು ಕೇಳುತ್ತಾಳೆ. ಆದರೆ ಮಗಳಿಂದ ಬಂದ ಉತ್ತರ ಮಾತ್ರ ಮಾರ್ಮಿಕವಾಗಿದೆ. ಇಲ್ಲಿ ಬಳಸಿರುವ ಎರಡು ಉಪಮೆಗಳು ಆಕೆ ಅನುಭವಿಸಿದ ಕಷ್ಟಪರಂಪರೆಯನ್ನು ಧ್ವನಿಪೂರ್ಣವಾಗಿ ಸಮರ್ಥವಾಗಿ ಚಿತ್ರಿಸುತ್ತವೆ. ಕೆಲವು ಗಾದೆಗಳು ಸಂಸ್ಕೃತಿಯ ಹಿನ್ನೆಲೆಯಲ್ಲಿ ಹುಟ್ಟಿದ್ದು ಆಯಾ ಸಂಸ್ಕೃತಿಯ ಗುಣಾವಗುಣಗಳನ್ನು ಪ್ರತಿಬಿಂಬಿಸುತ್ತವೆ. ತಿರ್ಕೊಂಡು ತಿಂದ್ರು ಕರ್ಕೊಂಡು ಉಣ್ಣು; ಹೂವ ಹಂಚಿ ಮುಡಿ, ಹಣ್ಣ ಹಂಚಿ ತಿನ್ನು ಎಂಬ ಗಾದೆಗಳು ಒಳ್ಳೆಯದು ಎಲ್ಲರಿಗೂ ದೊರಕಬೇಕು, ಯಾವಾಗಲೂ ಒಬ್ಬರಿಗೊಬ್ಬರು ನೆರವಾಗಬೇಕು ಎನ್ನುವ ಅಂಶವನ್ನೂ ಜನಸಾಮಾನ್ಯರ ತ್ಯಾಗಗುಣವನ್ನೂ ನಮ್ಮ ನೆಲದ ಸಂಸ್ಕೃತಿಯನ್ನೂ ಪ್ರತಿನಿಧಿಸುತ್ತವೆ. ತಲೆ ಬಿಟ್ಟು ಸಾಸೇವು ಇಕ್ತಾರ ಎಂಬ ಗಾದೆ ಹಿರಿಯನನ್ನು ಬಿಟ್ಟು ಕಿರಿಯನಿಗೆ ಮದುವೆ ಮಾಡಬಹುದೆ? ಎನ್ನುವ ಅರ್ಥವನ್ನೊಳಗೊಂಡಿರುವುದರ ಜೊತೆಗೆ ಕ್ರಮಬದ್ಧವಾದ ಹಂತಗಳನ್ನು ಅನುಸರಿಸಬೇಕು, ಮೊದಲು ಹಿರಿಯದಕ್ಕೆ ಹೆಚ್ಚು ಬೆಲೆಯುಳ್ಳದ್ದಕ್ಕೆ ಮಹತ್ತ್ವ ನೀಡಬೇಕು ಎಂಬ ಅಂಶವನ್ನು ಪರ್ಯಾಯವಾಗಿ ಸೂಚಿಸುತ್ತದೆ. ಅಕ್ಕೀ ಮೇಲಾಸೆ ನೆಂಟರ ಮೇಲೆ ಪ್ರೀತಿ ಎಂಬ ಗಾದೆ ಮನಸ್ಸಿಲ್ಲದ ಮನಸ್ಸಿನಿಂದ ಉಪಚರಿಸುವ ಜನರನ್ನು ಕುರಿತು ಹಂಗಿಸಿ ಹೇಳಿದ್ದಾಗಿದೆ. ಜೊತೆಗೆ ಮನೆಗೆ ಬಂದ ಅತಿಥಿಗಳನ್ನು ಪ್ರೀತಿಯಿಂದ ಉಪಚರಿಸಬೇಕು ಎಂಬ ಗೃಹಸ್ಥಧರ್ಮದ ಮರ್ಮವನ್ನು ಈ ಗಾದೆ ಧ್ವನಿಸುತ್ತದೆ. ಅಲ್ಪನಿಗೆ ಐಶ್ವರ್ಯ ಬರೋವತ್ಗೆ ಅರ್ಧ ರಾತ್ರೀಲಿ ಕೊಡೇ ಹಿಡಿಸಿಕಂಡನಂತೆ ಎನ್ನುವ ಗಾದೆ ಧಿಡೀರನೆ ಸಾಹುಕಾರನಾದ ವ್ಯಕ್ತಿಯೊಬ್ಬನ ಡಾಂಭಿಕತನವನ್ನೂ ಅವನ ಕುಸಂಸ್ಕೃತಿಯನ್ನೂ ಪ್ರತಿಬಿಂಬಿಸಿದೆ. ಕೀತ ಬೆಳ್ಳಿಗೆ ಉಚ್ಚೆ ಉಯ್ಯೋ ಅಂದ್ರೆ ಜಲ್ಮಾಲ್ ಕಟ್ಟಿ ಆರ್ತಿಂಗ್ಳಾಯ್ತು ಅಂದ್ನಂತೆ. ಈ ಗಾದೆ ವ್ಯಕ್ತಿಯೊಬ್ಬನ ಜಿಪುಣತನದ ಪರಾಕಾಷ್ಠೆಯನ್ನೂ ಅವನ ಸ್ವಾರ್ಥಮನೋಭಾವವನ್ನೂ ಎತ್ತಿಹಿಡಿಯುತ್ತದೆ. ಮನುಷ್ಯ ಸ್ವಾರ್ಥಿ ನಿಜ. ಆದರೆ ಆತನಲ್ಲಿ ಪರೋಪಕಾರ ಗುಣ ಸ್ವಲ್ಪವಾದರೂ ಇರಬೇಕು ಎಂಬ ಅಂಶವನ್ನು ಉಪಮೆಯ ಮೂಲಕ ಗಾದೆ ಸೂಚಿಸುತ್ತದೆ. ಮೇಲುನೋಟಕ್ಕೆ ಗಾದೆ ಅಶ್ಲೀಲವೆನಿಸಬಹುದು. ಆದರೆ ಒಳನೋಟ ಅರ್ಥಗರ್ಭಿತವಾಗಿದೆ. ಬಂಜೆಮನೆ ಚಂದ ಬಸ್ತೀಗುಡಿ ಚಂದ ಎನ್ನುವ ಗಾದೆಯಲ್ಲಿ ಹೊರನೋಟಕ್ಕೆ ಎರಡು ಮನೆಗಳ ಸ್ವಚ್ಛತೆಯನ್ನೂ ಸುಂದರತೆಯನ್ನೂ ಕುರಿತು ಆಡುವಂತೆ ತೋರಿದರೂ ಆಂತರಿಕವಾಗಿ ನೆಮ್ಮದಿಯಿಲ್ಲದ ಬದುಕನ್ನೂ ಸಂತೋಷವನ್ನೂ ಕುರಿತು ಹೇಳಿದುದಾಗಿದೆ. ಬಂಜೆಯ ಮನೆ ಸುಂದರ ವಾಗಿದ್ದೂ ಅಲ್ಲಿ ನಲಿವಿಲ್ಲ. ಸಂತೋಷವಿಲ್ಲ. ಕಾರಣ ಅವಳಿಗೆ ಮಕ್ಕಳಿಲ್ಲ. ಬಸದಿ ಅಥವಾ ಗುಡಿಯಲ್ಲಿರುವ ದೇವರ ಸಾನ್ನಿಧ್ಯ ಸುಂದರವಾಗಿರುವುದರ ಜೊತೆಗೆ ಶುಭದಾಯಕವೂ ಆಗಿರುತ್ತದೆ. ಮನಸ್ಸಿಗೆ ನೆಮ್ಮದಿಯನ್ನೂ ಆನಂದವನ್ನೂ ಅದು ನೀಡುತ್ತದೆ. ಒಂದು ವಸ್ತು ಸುಂದರವಾಗಿದ್ದರೆ ಸ್ವಚ್ಛವಾಗಿದ್ದರೆ ಸಾಲದು, ಅದು ಒಳಿತನ್ನುಂಟು ಮಾಡುವುದಾಗಿರಬೇಕು, ಸಂತೋಷವನ್ನು ಕೊಡುವಂಥದ್ದಾಗಬೇಕು ಎಂಬ ಅಂಶವೂ ಈ ಗಾದೆಯಿಂದ ಧ್ವನಿತವಾಗುತ್ತದೆ. ಬದುಕಿದರೆ ಬಾಯ್ ಬಡ್ಕತರೆ; ಕೆಟ್ಟರೆ ತಿಗಾ ಬಡ್ಕತರೆ ಎಂಬ ಗಾದೆ ಹೊಟ್ಟೆಕಿಚ್ಚಿನ ಜನರ, ಅಸೂಯಾಪರರ ಬದುಕಿನ ರೀತಿಯನ್ನು ಹೇಳುತ್ತದೆ. ಅಂಥವರು ಇನ್ನೊಬ್ಬರಿಗೆ ಒಳಿತಾದರೆ ಸಹಿಸಲಾರರು, ಕೆಡುಕಾದರೆ ಅದನ್ನು ಕಂಡು ಸಂತೋಷಪಡುವರು. ಇವರಿಂದ ಸಮಾಜಕ್ಕಾಗಲಿ ನೆರೆಹೊರೆಯವರಿಗಾಗಲಿ ಎಂದೂ ಒಳಿತಾಗುವುದಿಲ್ಲ. ಪ್ರಪಂಚದಲ್ಲಿ ಈ ಮನೋಭಾವದ ಜನರೇ ಸುತ್ತಮುತ್ತ ಹೆಚ್ಚು. ಅವರಿಂದ ದೂರ ಇರಬೇಕು ಎಂದು ಈ ಗಾದೆ ಎಚ್ಚರಿಕೆ ನೀಡುತ್ತದೆ.

ಸಾಹಿತ್ಯಕ ದೃಷ್ಟಿಯಿಂದಲೂ ಗಾದೆಗಳು ಗಮನಾರ್ಹವಾಗಿವೆ. ಅರೀದುಡುಗ ಆರಂಭಮಾಡಿ ವಡೇ ವಲ ಕೂದು ಮೆದೇ ಆಕ್ದ ಎಂಬ ಗಾದೆಯನ್ನು ಗಮನಿಸಬಹುದು. ಬೇಸಾಯದ ತಿಳಿವಳಿಕೆಯಿಲ್ಲದ, ವಿವೇಕವಿಲ್ಲದ ಎಳೆಯ ಪ್ರಾಯದ ಹುಡುಗನ ಆತುರ, ಅಚಾತುರ್ಯ, ಅದರಿಂದಾದ ನಷ್ಟ ಮೊದಲಾದವನ್ನು ಗಾದೆ ಧ್ವನಿಪೂರ್ಣವಾಗಿ ಚಿತ್ರಿಸಿದೆ. ವಿವೇಕವಿಲ್ಲದ ಹುಡುಗ ಸಲ್ಲದ ಕೆಲಸ ಮಾಡಿದನೆಂದು ವಾಚ್ಯವಾಗಿ ಹೇಳದೆ 'ವಡೇ ವಲ ಕೂದು ಮೆದೇ ಆಕ್ದ' ಎಂದು ಸೂಚ್ಯವಾಗಿ

ಹೇಳುವಲ್ಲಿ ಗಾದೆಯಲ್ಲಿ ಸಾಹಿತ್ಯಕ ಸೊಗಸು ಕಂಡುಬರುತ್ತದೆ. ಬಡವನೆಂಡ್ತಿ ಬೇಲೀ ಉವ್ವ (ಹೂವು). ಈ ಗಾದೆ ಬಡವನ ಹೆಂಡತಿಯ ಸೌಂದರ್ಯವನ್ನೂ ಅವಳ ಅಸಹಾಯಕತೆಯನ್ನೂ ಬಡತನ ಬಡವರಿಗೆ ಎಂಥ ಶಾಪ ಎಂಬುದನ್ನೂ ಸುಂದರವಾಗಿ ಹೇಳುತ್ತದೆ. ಬೇಲಿಯಲ್ಲಿ ಬಿಟ್ಟಿರುವ ಹೂ ದಾರಿಹೋಕರಿಗೆ ಹೇಗೆ ಸುಲಭವಾಗಿ ದೊರೆಯುತ್ತದೆಯೋ ಅದನ್ನು ಹೇಗೆ ಯಾರು ಬೇಕಾದರೂ ಕೊಯ್ದು ಮುಡಿಯುವಲ್ಲಿ ಯಾವ ನಿರ್ಬಂಧವೂ ಇಲ್ಲವೋ ಹಾಗೆಯೇ ಬಡವನ ಹೆಂಡತಿಯ ಪಾಡು ಎಂಬುದನ್ನು ಬೇಲಿ ಉವ್ವ ಎಂಬ ಉಪಮಾನದೊಂದಿಗೆ ಹೇಳಿರುವ ರೀತಿ ಅನನ್ಯವಾಗಿದೆ. ಇಂಥ ಗಾದೆಗಳಲ್ಲಿ ಸಾಹಿತ್ಯಕಾಂಶ ಮಡುಗಟ್ಟಿದೆ.

ವೃತ್ತಿಗೆ ಸಂಬಂಧಿಸಿದ ಗಾದೆಗಳಲ್ಲಿ ಬೇಸಾಯ ಕುರಿತ ಗಾದೆಗಳು ಕನ್ನಡದಲ್ಲಿ ಅಪಾರವಾಗಿ ದೊರೆಯುತ್ತವೆ. ಈ ಗಾದೆಗಳಲ್ಲಿ ರೈತರ ಬೇಸಾಯ ಕ್ರಮ, ಮಳೆಯ ಗುಣಸ್ವಭಾವ, ಮಳೆಗಳ ಬಗೆ, ಪರಿಣಾಮ, ಉಪಯೋಗ ಮೊದಲಾದ ಸಂಗತಿಗಳು ಅನುಭವದ ಹರಳಾಗಿ ಮೂಡಿಬಂದಿವೆ. ಆದದ್ದು ಆದ್ರಿ ಮಳೇಲಿ ಚೆಲ್ಲು; ಮಿಕ್ಕಿದ್ದು ಮಿಕ್ಸಿರಿ (ಮೃಗಶಿರ) ಮಳೇಲಿ ಚೆಲ್ಲು ಎಂಬ ಗಾದೆಯಲ್ಲಿ ಯಾವ ಮಳೆಯಲ್ಲಿ ಹೆಚ್ಚು ಬಿತ್ತಬೇಕು ಎನ್ನುವ ಅಂಶ ಸೂಚಿತವಾಗಿದೆ. ಉತ್ತರೆ ಮಳೆ ಉಯ್ದರೆ ಉತ್ತೆತ್ತು ಉಕ್ಕೆ ದೋಣೇಲಿ ನೀರ್ ಕುಡಿತದೆ; ಉತ್ತರೆ ಮಳೆ ಉಯ್ದರೆ ಉತ್ತೆತ್ತು ನೀರಿಗೆ ಬೀಳ್ತದೆ ಎಂಬ ಈ ಎರಡು ಗಾದೆಗಳು, ಉತ್ತರೆ ಮಳೆಯ ಬಿರುಸು, ಸಮೃದ್ಧಿ ಹಾಗೂ ಆ ಕಾಲದ ಬಿಸಿಲ ಝಳವನ್ನು ಸೂಚಿಸುತ್ತವೆ. ಎತ್ತು ಮಾರು ಮಿಂಚಿದರೆ ಕುರ್ತೇಟು ಮಳೆ ಎನ್ನುವ ಗಾದೆ ಮಳೆಯ ಬಗ್ಗೆ ಜನಪದರಿಗಿರುವ ನಂಬಿಕೆಯೊಂದನ್ನು ಸೂಚಿಸುತ್ತದೆ. ಜೊತೆಗೆ ಜನಪದರು ಹೇಗೆ ಸೂಕ್ಷ್ಮವಾಗಿ ವಾತಾವರಣದ ಬದಲಾವಣೆಯನ್ನು ಗಮನಿಸಿ ಅರಿಯಬಲ್ಲರು ಎಂಬುದಕ್ಕೆ ನಿದರ್ಶನವಾಗಿದೆ. ಅಸಲೇ ಮಳೆ ಕೈತುಂಬ ಬೆಳೆ; ಆರಿದ್ರೆ ಇಲ್ದಿದ್ರೆ ದರಿದ್ರ ಕಂಡಿತ ಎಂಬ ಗಾದೆ ಆಯಾ ಮಳೆಯಿಂದ ರೈತರಿಗೆ ಆಗುವ ಲಾಭನಷ್ಟಗಳನ್ನು ತಿಳಿಸುತ್ತದೆ. ಕೆಬ್ಬೆ ಹೊಲಮಾಡಿದರೆ ಕಿಬ್ಬೊಟ್ಟೆಗೂ ಹಿಟ್ಟು ಸಿಗಲ್ಲ ಎಂಬ ಗಾದೆ ಬೇಸಾಯದ ಮರ್ಮವನ್ನು ಹೇಳುತ್ತದೆ. ಕೆಂಪುಮಣ್ಣಿನಿಂದ ಕೂಡಿದ ಹೊಲಕ್ಕೆ ಹೆಚ್ಚು ನೀರು ಬೇಕು, ಸಾಲದ್ದಕ್ಕೆ ಭೂಮಿಯೂ ಗಟ್ಟಿ. ಉಳುವುದಾಗಲಿ ಬೆಳೆಯುವುದಾಗಲಿ ತೀರ ಕಷ್ಟದ ಕೆಲಸ. ಅಂಥ ಭೂಮಿಯನ್ನು ಸಾಗುವಳಿ ಮಾಡಬಾರದು ಎಂದು ಎಚ್ಚರಿಕೆಯನ್ನು ಈ ಗಾದೆ ನೀಡುತ್ತದೆ. ಬೇಸಾಯ ವಿಷಯ ಕುರಿತಂತೆ ಹುಟ್ಟಿಕೊಂಡ ಗಾದೆ ಕೆಲವೊಮ್ಮೆ ಪ್ರಾದೇಶಿಕವೂ ಆಗಿರಬಹುದು. ಅನುರಾಧೆ ಮಳೆ ಬಂದರೆ ನಮ್ಮ ರಾಗಿ ನಮ್ಮದು ಎಂಬ ಒಂದು ಗಾದೆ ರಾಗಿ ಹೆಚ್ಚು ಬೆಳೆಯುವ ಪ್ರದೇಶದಲ್ಲಿ ಹುಟ್ಟಿಕೊಂಡದ್ದು ಎಂದು ಹೇಳಬಹುದು. ಹಾಗೆಯೇ ಸ್ವಾತಿಮಳೆ ಬಿದ್ರೆ ಮುತ್ತಿನಂಥ ಜೋಳ ಎಂಬ ಗಾದೆ ಜೋಳವನ್ನು ಹೆಚ್ಚಾಗಿ ಬೆಳೆವ ಪ್ರದೇಶದಲ್ಲಿ ಹುಟ್ಟಿಕೊಂಡದ್ದಿರಬಹುದು.

ಹಾಸ್ಯವನ್ನು ವಸ್ತುವಾಗುಳ್ಳ ಗಾದೆಗಳಲ್ಲಿ ಹಾಸ್ಯ ಕೆಲವೊಮ್ಮೆ ನವಿರಾಗಿ ಮೊನಚಾಗಿ ವಿಡಂಬನಾತ್ಮಕವಾಗಿ ನಿರೂಪಿತವಾಗಿರುವುದುಂಟು. ಕೆಲವೊಮ್ಮೆ ನಗಿಸುವುದೇ ಗಾದೆಯ ಉದ್ದೇಶವಾಗಿಬಿಡಬಹುದು. ಸಾಯ್ತೀನಿ ಸಾಯ್ತೀನಿ ಅಂತಾ ಸಾವ್ರ ಕೋಳಿ ತಿಂದ, ಮುತ್ತಿನಂಗೆ ಅವನೇ ನನ್ನ ಮುದಿಗಂಡ; ಮುತ್ತಿನಂಥ ಗಂಡ ಮೂರನೆಯವಳಿಗೆ; ಗಂಜೀಗೇ ಗತಿ ಇಲ್ಲ ನಂಜಿಕೋ ಬುಲಾವ್; ಸೆಟ್ಟರೆ ನಿಮ್ಮ ಮಗ ಬಿದ್ದ ಅಂದರೆ ಫಾಯಿದೆ ಕಾಣದೆ ಬಿದ್ದಿರಲಾರ ಎಂದಂತೆ; ಕೈಲಿ ಕಿಸೀದ ಗಂಡ ಮಲಗೋ ಹೊತ್ತಿಗೆ ಸರಿಯಾಗಿ ಮುನಿಸಿಕೊಂಡ; ಹೆಡ್ಡಾ ನಿನಗೆ ಹೆಣ್ಣು ಯಾರು ಕೊಟ್ಟಾರು ಅಂದ್ರೆ ನಮ್ಮನೇಲೇ ನಾಲ್ಕೈದವೆ; ಮದುವೆ ಆಗೋ ಗಂಡಿಗೆ ಅದೇ ಇಲ್ಲ ಅಂದಂಗೆ; ಯಾಲಕ್ಕಿ ಅಂತ ನನ್ನಳಿಯ ಏಳು ಮುದ್ದೆ ಉಂಡ ಮೊದಲಾದ ಗಾದೆಗಳು ಈ ಮಾದರಿಯವು. ನೀತಿಬೋಧೆ ಗಾದೆಯ ಮುಖ್ಯ ಉದ್ದೇಶಗಳಲ್ಲೊಂದು. ಜಲ ನೋಡಿ ಬಾವಿ ತೆಗಿ, ಕುಲ ನೋಡಿ ಹೆಣ್ಣು ತತ್ತ, ಕುಲ ಬಿಟ್ಟರೂ ಛಲ ಬಿಡಬಾರದು. ಆಳಾಗಿ ದುಡಿ ಅರಸಾಗಿ ಉಣ್ಣು ಎಂಬ ಗಾದೆಗಳಲ್ಲಿ ಈ ಅಂಶ ಪ್ರಖರವಾಗಿದೆ.

ಕೆಲವೊಮ್ಮೆ ಗಾದೆಗಳು ಇತಿಹಾಸವನ್ನು ವಸ್ತುವಾಗಿಸಿಕೊಂಡಿರಬಹುದು. ಹಳ್ಳೀದೇವರ ತಲೆ ಹೊಡೆದು ದಿಳ್ಳೀ ದೇವರ ಡೊಳ್ಳು ಬೆಳೆಸಿದ ಎಂಬ ಗಾದೆ ಮುಸ್ಲಿಂ ರಾಜರು ದಂಡಯಾತ್ರೆ ನಡೆಸಿ ಕೊಳ್ಳೆಹೊಡೆದು ಲೂಟಿ ಮಾಡಿ ಸಂಪತ್ತು ದೋಚಿಕೊಂಡು ಹೋಗಿ ದೆಹಲಿಗೆ ತುಂಬಿಕೊಂಡದ್ದನ್ನು ತಿಳಿಸುವಂತಿದೆ.

ಕುಂತು ಕುಣಿಗಲು ಗೆದ್ದ<br>
ನಿಂತು ಮಾಗಡಿ ಗೆದ್ದ<br>
ಮಾತಿಲ್ಲದೆ ಗೆದ್ದ ಮದುರೇನ

ಎಂಬ ಗಾದೆ ಮಾಗಡಿ ಕೆಂಪೇಗೌಡನಿಗೆ ಸಂಬಂಧಪಟ್ಟದ್ದು. ಇಲ್ಲಿ ಮದುರೆ ಯಾವುದು ಎಂಬ ಸಮಸ್ಯೆ ಉಂಟಾಗುತ್ತದೆ. ಗಾದೆಗಳು ಚಾರಿತ್ರಿಕ ಸಂಶೋಧನೆಗಳಿಗೂ ಸಹಾಯಕವಾಗಬಲ್ಲವು. ಸಂಶೋಧನೆ ನಡೆದರೆ ಗಾದೆಗಳು ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲುವ ಸಾಮರ್ಥ್ಯ ಹೊಂದಿವೆ.

ಪುರಾಣ ಪುಣ್ಯಕಥೆಗಳ ಪರಿಚಯದಿಂದ ಅವು ತಮ್ಮ ಮೇಲೆ ಬೀರಿದ ಪ್ರಭಾವದಿಂದ ಕನ್ನಡದಲ್ಲಿ ಹಲವಾರು ಪೌರಾಣಿಕ ಗಾದೆಗಳು ಸೃಷ್ಟಿಯಾಗಿವೆ. ಅಳಿಲಸೇವೆ ಮಳಲಭಕ್ತಿ, ಅಂಕೆಯಿಲ್ಲದ ಕಪಿ ಲಂಕೆ ಸುಟ್ಟಿತು. ಹೆಣ್ಣಿನಿಂದ ರಾವಣ ಕೆಟ್ಟ, ಮಣ್ಣಿನಿಂದ ಕೌರವ ಕೆಟ್ಟ, ಗಾಂಧಾರಿ ಗರ್ಭ ಗುದ್ದಿಕಂಡಂಗೆ, ಸಾರಂಗಧರನ ಕೈಕಾಲ್ ಕಡಿಸ್ದೋಳು, ಎಂಟನೇ ಶನಿ ಹೆಗಲೇರಿಕಂಡಂಗೆ ಈ ಗಾದೆಗಳು ರಾಮಾಯಣ, ಮಹಾಭಾರತ, ಸಾರಂಗಧರನ ಕಥೆ, ಶನಿಮಹಾತ್ಮೆ ಮೊದಲಾದ ಕಥೆಗಳ ಅರಿವಿನಿಂದ ಹುಟ್ಟಿಕೊಂಡವಾಗಿವೆ.

ಗಾದೆಗಳು ಪ್ರಾಣಿವಿಜ್ಞಾನಿಗಳಿಗೆ, ಸಮಾಜಶಾಸ್ತ್ರಜ್ಞರಿಗೆ, ಮಾನವ ಶಾಸ್ತ್ರಜ್ಞರಿಗೆ ಭಾಷಾವಿಜ್ಞಾನಿಗಳಿಗೆ ಸಂಶೋಧನೆಗೆ ಸಾಮಗ್ರಿಯನ್ನೊದಗಿಸಬಲ್ಲವು.

ಅಮ್ಮ ಪಟ್ಟಕ್ಕೆ ಬರುವಾಗ್ಗೆ ಅಪ್ಪ ಚಟ್ಟಕ್ಕೆ<br>
ಆಡೋ ಹುಡುಗಿಗೊಂದು ಕಾಡೋ ಕೂಸು

ಈ ಎರಡು ಗಾದೆಗಳು ಹಿಂದೆ ನಮ್ಮ ಸಮಾಜದಲ್ಲಿ ಅನುಷ್ಠಾನದಲ್ಲಿದ್ದ ಬಾಲ್ಯವಿವಾಹಪದ್ಧತಿಯ ಮೇಲೆ ಬೆಳಕು ಚೆಲ್ಲುತ್ತವೆ. ಅಂಬಲಿ ಕುಡಿದೋನು ಮಡಕೆ ಹೊತ್ತಾನೆ ಎಂಬ ಗಾದೆಯಲ್ಲಿ ಮಡಕೆ ಪದ ಭಾಷಾವಿಜ್ಞಾನದೃಷ್ಟಿಯಿಂದ ಗಮನಾರ್ಹವಾಗಿದೆ. ಈ ಪದ ಮೂಲತಃ ತೆಲುಗು ಭಾಷೆಯದು. ಅಲ್ಲಿ ಮಡಕಾ ಅಂದರೆ ನೇಗಿಲು ಎಂದರ್ಥ. ತೆಲುಗಿನ ಸಂಪರ್ಕವಿರುವ ಹಿಂದೂಪುರ, ಮಧುಗಿರಿಯ ಕಡೆ ನೇಗಿಲಿಗೆ ಮಡಕೆ ಎಂಬ ಪದವನ್ನು ಬಳಸುತ್ತಾರೆ. ಆ ಪ್ರದೇಶಗಳಲ್ಲಿ ಕನ್ನಡ ಭಾಷೆಯ ಮೇಲೆ ತೆಲುಗಿನ ಪ್ರಭಾವ ಎಷ್ಟರಮಟ್ಟಿಗೆ ಆಗಿದೆ ಎಂಬುದಕ್ಕೆ ನಿದರ್ಶನವಾಗಿದೆ. ಕೊತ್ತಿ ಕೊಂದ ಪಾಪ ತಿತ್ತಿ ಹೊಕ್ಕರೂ ಬಿಡದು ಎಂಬ ಗಾದೆಯಲ್ಲೂ ಅಷ್ಟೆ. ತಿತ್ತಿ ಎಂಬ ಪದ ತಿರುಪತಿ - ತಿರುಪ್ತಿ > ತಿರಿಪ್ತಿ > ತಿಪ್ತಿ > ತಿರ್ತಿ > ತಿತ್ತಿ ಆಗಿರುವಂತೆ ತೋರುತ್ತದೆ. ಬಾಳೆಗೆ ಗೊನೆ ಚೇಳಿಗೆ ಬಸಿರು ಎಂಬ ಗಾದೆ ಪ್ರಾಣಿವಿಜ್ಞಾನದ ದೃಷ್ಟಿಯಿಂದ ಗಮನಾರ್ಹವಾಗಿದೆ. ಚೇಳು ಬಸಿರಾದರೆ ಮರಿ ಹಾಕಿದ ಮೇಲೆ ಸಾಯುತ್ತದೆ ಎಂಬುದು ಜನಪದರ ನಂಬಿಕೆ. ವಾಸ್ತವವಾಗಿ ವೈಜ್ಞಾನಿಕವಾಗಿ ಇದು ಎಷ್ಟರಮಟ್ಟಿಗೆ ಸತ್ಯ ಅಥವಾ ಇಲ್ಲ ತಿಳಿಯಬೇಕಾಗಿದೆ. ಹಾವು ತನ್ನ ಮೊಟ್ಟೆ ತಾನೆ ತಿಂದ್ಹಂಗೆ ಎಂಬುದು ಇಂಥದೇ ಸಮಸ್ಯೆಯುಳ್ಳ ಇನ್ನೊಂದು ಗಾದೆ. ಈ ತೆರನ ಗಾದೆಗಳು ಕನ್ನಡದಲ್ಲಿ ಹಲವಾರಿವೆ. ಈ ಎಲ್ಲ ದೃಷ್ಟಿಯಿಂದಲೂ ಗಾದೆಗಳ ಅಧ್ಯಯನ ಕಾರ್ಯ ವ್ಯಾಪಕವಾಗಿ ನಡೆಯಬೇಕಾಗಿದೆ.

ಕನ್ನಡದಲ್ಲಿ ಸುಮಾರು ಐವತ್ತು ಸಾವಿರಕ್ಕೂ ಹೆಚ್ಚು ಗಾದೆಗಳಿವೆಯೆಂದು ಅಂದಾಜು ಮಾಡಬಹುದಾಗಿದೆ. ಕನ್ನಡ ಗಾದೆಗಳ ಸಂಗ್ರಹಕಾರ್ಯಕ್ಕೆ ಸುಮಾರು ಒಂದೂಕಾಲು ಶತಮಾನಗಳ ಇತಿಹಾಸವಿದ್ದು ಇದುವರೆಗೆ ಹಲವು ಗಾದೆಗಳ ಸಂಕಲನಗಳು ಪ್ರಕಟವಾಗಿವೆ.

1852ರಲ್ಲಿ ಮಂಗಳೂರಿನಿಂದ ಪ್ರಕಟವಾದ ಕನ್ನಡ ಗಾದೆಗಳು ಕನ್ನಡದ ಪ್ರಪ್ರಥಮ ಗಾದೆಗಳ ಸಂಕಲನ. ಗುಣ ಸಂಖ್ಯೆಗಳೆರಡರಲ್ಲೂ ಮಹತ್ತ್ವದ್ದೆನಿಸಿದ ಈ ಗ್ರಂಥದಲ್ಲಿ 3,457 ಗಾದೆಗಳಿವೆ. ಈ ಕೃತಿ ಗಾದೆಗಳನ್ನು ಸಂಗ್ರಹಿಸುವ ಕಡೆ ಕನ್ನಡಿಗರ ಗಮನ ಸೆಳೆಯಿತು. ಗಾದೆಗಳನ್ನು ಅಕಾರಾದಿಯಾಗಿ ಸಂಕಲಿಸಿ ಪ್ರಕಟಿಸುವ ಕ್ರಮಕ್ಕೂ ಈ ಕೃತಿಯೇ ಮಾರ್ಗದರ್ಶಕವೆನ್ನಬಹುದು. ಅನಂತರ 1874ರಲ್ಲಿ ಮಂಗಳೂರಿನ ಬಾಸೆಲ್

ಮಿಶನ್ ಬುಕ್ ಎಂಡ್ ಟ್ರಾಕ್ಟ್ ಡಿಪಾಜಿಟರಿಯವರಿಂದ ಪ್ರಕಟವಾದ ಸಹಸ್ರಗಾಥಾಮೃತ ಕಲಶವು ಒಂದು ಸಾವಿರ ಸುಂದರ ಗಾದೆಗಳ ಸಂಕಲನ. ಇದೇ ಪ್ರಕಾಶಕರ ಆಶ್ರಯದಲ್ಲಿ ಶದ್ರಾಚ್ ಐಮನ್ ಮತ್ತು ಉಭಯದ ನರಸಿಂಹರಾವ್ ಅವರು ಸಂಪಾದಿಸಿದ ಪಾಪ್ಯುಲರ್ ಕೆನರೀಸ್ ಪ್ರಾವರ್ಬ್ಸ್ ಅಂಡ್ ದೇರ್ ಇಂಗ್ಲಿಷ್ ಈಕ್ವಿವಲೆಂಟ್ಸ್ ಎಂಬ ಕೃತಿ 1894ರಲ್ಲಿ ಪ್ರಕಟವಾಯಿತು. ಈ ಸಮಯದಲ್ಲೇ ಹಣಮಂತ ಗೋವಿಂದ ಜೋಶಿ ಅವರ ಸಾಮತಿ ಸಂಗ್ರಹ-ಕನ್ನಡ ಗಾದೆಗಳೂ ಅವುಗಳ ಸಮಾನಾರ್ಥಕ ಇಂಗ್ಲಿಷ್ ನುಡಿಗಳೂ ಎಂಬ ಕೃತಿ ಬೆಳಗಾಂ ಸಮಾಚಾರ್ ಪ್ರೆಸ್‌ನಿಂದ ಪ್ರಕಟವಾಯಿತು. ಇದು 1906ರಲ್ಲಿ ಮರುಮುದ್ರಣವನ್ನು ಕಂಡಿತು. ಇದೇ ಅವಧಿಯಲ್ಲಿ ಕನ್ನಡ ನಿಘಂಟೊಂದನ್ನು ಪ್ರಕಟಿಸಿದ ಕಿಟ್ಟೆಲ್ ಅವರು ಗಾದೆಗಳ ಸಂಗ್ರಹಕಾರರಾಗಿಯೂ ದುಡಿದಿರುವುದು ಮಹತ್ತ್ವದ ವಿಷಯವಾಗಿದೆ. ಅನಂತರ ಬಾಸೆಲ್ ಬುಕ್ ಅಂಡ್ ಟ್ರಾಕ್ಟ್ ಡಿಪಾಜಿಟರಿಯ 'ತ್ರೀ ಹಂಡ್ರೆಡ್ ಕೆನರೀಸ್ ಪ್ರಾವರ್ಬ್ಸ್' ಎಂಬ ಸಂಕಲನ 1903ರಲ್ಲಿ ಪ್ರಕಟವಾಯಿತು. 1911ರಲ್ಲಿ ಮೈಸೂರಿನ ಕ್ರೌನ್ ಪ್ರೆಸ್‌ನಿಂದ ಪ್ರಕಟವಾದ 'ನೂತನ ಸಹಸ್ರಗಾಥಾ ಕುಸುಮ ಮಂಜರಿ' ಒಂದು ಸಾವಿರ ಗಾದೆಗಳನ್ನುಳ್ಳ ಸಂಗ್ರಹ. ಈ ಕೃತಿಯ ಸಂಗ್ರಹಕಾರರು ಸಿ.ಸಿಂಗಪ್ಪ. ಸುಮಾರು 300 ಕನ್ನಡ ಗಾದೆಗಳನ್ನು ಇಂಗ್ಲಿಷಿನ ಸಮಾನಾರ್ಥಕ ಗಾದೆಗಳೊಡನೆ ಬಾಸೆಲ್ ಮಿಶನ್ ಬುಕ್ ಅಂಡ್ ಟ್ರಾಕ್ಟ್ ಡಿಪಾಜಿಟರಿ ಪ್ರಕಾಶನದಿಂದ ಎ ಹ್ಯಾಂಡ್ ಬುಕ್ ಆಫ್ ಕೆನರೀಸ್ ಪ್ರಾವರ್ಬ್ಸ್ ವಿತ್ ಇಂಗ್ಲಿಷ್ ಈಕ್ವಿವಲೆಂಟ್ಸ್ ಎಂಬ ಹೆಸರಿನಿಂದ ಯು.ಬಿ.ನರಸಿಂಗರಾವ್ ಅವರು ಸಂಗ್ರಹಿಸಿ ಪ್ರಕಟಿಸಿದರು. 1500 ಕನ್ನಡ ಗಾದೆಗಳನ್ನು ಅವುಗಳ ಉದ್ದೇಶ ವಿವರಣೆಯೊಂದಿಗೆ ಕರ್ನಾಟಕ ಲೋಕೋಕ್ತಿ ನಿಧಾನ ಎಂಬ ಹೆಸರಿನಿಂದ 1919ರಲ್ಲಿ ಕೆನರೀಸ್ ಮಿಶನ್ ಬುಕ್ ಅಂಡ್ ಟ್ರಾಕ್ಟ್ ಡಿಪಾಜಿಟರಿಯವರು ಪ್ರಕಟಿಸಿದರು. ಈ ಕೃತಿ 1912ರಲ್ಲಿ ಪ್ರಕಟವಾಗಿದ್ದ ಕೃತಿಯ ಪುನರ್‌ಮುದ್ರಣ. ಇವಿಷ್ಟು ಕ್ರೈಸ್ತ ಮಿಷನರಿಗಳಿಂದ ಹೊರಬಂದ ಗಾದೆಯ ಸಂಕಲನಗಳು. ಈ ಸಂದರ್ಭದಲ್ಲಿ ಕನ್ನಡ ಗಾದೆಗಳನ್ನು ಸಂಗ್ರಹಿಸಿ ಪ್ರಕಟಿಸಿದಂತೆಯೇ ಬಾಸೆಲ್ ಮಿಶನರಿಯವರೇ ಕೊಡಗು ಭಾಷೆಯ ಗಾದೆಗಳನ್ನು ಮೊಟ್ಟಮೊದಲಿಗೆ ಸಂಗ್ರಹಿಸಿ ಕನ್ನಡ ಲಿಪಿಯಲ್ಲಿ 'ಕೊಡವ ಪಡಿಮ' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದು (1886) ಗಮನಾರ್ಹ ಸಂಗತಿಯಾಗಿದೆ.

ಅನಂತರ 1944ರಲ್ಲಿ ಪ್ರಕಟವಾದ ಎಚ್.ಎಸ್. ಅಚ್ಚಪ್ಪನವರ 'ಕನ್ನಡ ಗಾದೆಗಳು' ಒಂದು ಅಪೂರ್ವ ಸಂಗ್ರಹ. ಹಾಗೆಯೇ ಬೆಂಗಳೂರಿನ ಸತ್ಯಶೋಧನ ಪ್ರಕಟನ ಮಂದಿರದಿಂದ 1956ರಲ್ಲಿ ಪ್ರಕಟವಾದ ಜಂಗಮಕೋಟೆ ಕೃಷ್ಣಶಾಸ್ತ್ರಿಗಳ ಗಾದೆಗಳ ಭಂಡಾರ ಎಂಬ ಕೃತಿ ಇನ್ನೊಂದು ಮಹತ್ತ್ವದ ಸಂಗ್ರಹವಾಗಿದೆ. ಇದರಲ್ಲಿ 3,872 ಗಾದೆಗಳನ್ನು ವಿಷಯಾನುಸಾರ ವರ್ಗೀಕರಿಸಿ ಕೆಲವು ಗಾದೆಗಳಿಗೆ ವಿವರಣೆ ವ್ಯಾಖ್ಯಾನಗಳನ್ನು ಕೊಡಲಾಗಿದೆ. ಇದರಲ್ಲಿ ಕೆಲವು ಸಂಸ್ಕೃತ ಸೂಕ್ತಿಗಳೂ ಸೇರಿವೆ. ಸಂಸ್ಕೃತ ಸೂಕ್ತಿಗಳನ್ನು ಕನ್ನಡಕ್ಕೆ ಅನುವಾದಿಸಿ ಕೊಟ್ಟಿರುವುದಾಗಿ ಹೇಳಿರುವುದರಿಂದ ಕೆಲವೊಮ್ಮೆ ಕನ್ನಡದ ನಿಜವಾದ ಗಾದೆಗಳು ಯಾವುವು, ಕೃತಕ ಗಾದೆಗಳು ಯಾವುವು ಎಂಬ ಸಮಸ್ಯೆ ಎದುರಾಗುತ್ತದೆ. ಇದೇ ವರ್ಷದಲ್ಲಿ ಪಡುವಾರಿ ಸುಬ್ಬಣ್ಣಶೆಟ್ಟಿಯವರ ಗಾದೆಗಳ ಗುಚ್ಛ, ಕೆ. ವೆಂಕಟರಾಯಾಚಾರ್ಯರ ಸೂಕ್ತಿಗಳು ಮತ್ತು ಬೇಬಿ ಸರೋಜಿನಿಯವರ ಗಾದೆಗಳು ಮತ್ತು ಜ್ಞಾನೋಕ್ತಿಗಳು ಎಂಬ ಸಂಕಲನಗಳು ಪ್ರಕಟವಾಗಿವೆ. ಅನಂತರ ಕುರಾಡಿ ಸೀತಾರಾಮ ಅಡಿಗರ 'ಕನ್ನಡ ಗಾದೆಗಳು' 1957ರಲ್ಲಿ ಪ್ರಕಟವಾಯಿತು. ಇದರಲ್ಲಿ 387 ಗಾದೆಗಳಿವೆ. ಎಂ.ಸಂಜೀವಶೆಟ್ಟಿಯವರ 'ನಾಡುನುಡಿಗಳು' ಎರಡು ಭಾಗಗಳಾಗಿ ಪ್ರಕಟವಾಗಿದ್ದು (1954) ಭಾಗ ಒಂದರಲ್ಲಿ 225 ಗಾದೆಗಳೂ ಭಾಗ ಎರಡರಲ್ಲಿ 234 ಗಾದೆಗಳೂ ಇವೆ.

ಬೆಂಗಳೂರಿನ ಸುದರ್ಶನಂ ಅಂಡ್ ಕಂಪನಿ ಪ್ರಕಟಿಸಿದ (1960) ಎಚ್.ಎಂ.ರಾಮಾರಾಧ್ಯರ ಗಾದೆಗಳ ಗೀತಗಳು ಗಾದೆಗಳನ್ನು ಪೋಣಿಸಿ ಕಟ್ಟಿದ ಸುಂದರ ಹಾಡುಗಳ ಸಂಕಲನ. ಇವರು ಗಾದೆಗಳನ್ನು ಬಳಸಿಕೊಂಡು ಗೀತಗಳು ಹಾಗೂ ನಾಟಕಗಳನ್ನು ರಚಿಸುವ ವಿಶಿಷ್ಟ ಪ್ರಯೋಗಗಳನ್ನು ನಡೆಸಿದ್ದಾರೆ. ಗಾದೆಗಳನ್ನು ಜೋಡಿಸಿ ರಚಿಸಿದ ದೀಪ ನುಂಗೊ ಅತ್ತೆಗೆ ದೀವಟಿಗೆ ನುಂಗೊ ಸೊಸೆ ಎಂಬ ಇವರ ನಾಟಕ ಹೊನ್ನ ಬಿತ್ತೇವು ಹೊಲಕೆಲ್ಲ ಎಂಬ ಗ್ರಂಥದಲ್ಲಿ ಪ್ರಕಟವಾಗಿದೆ. ಈ ನಾಟಕದ ಪ್ರಯೋಗ ತಂತ್ರ ಅತ್ಯಂತ ಕುತೂಹಲಕಾರಿಯಾಗಿದೆ. ಗಮನಿಸಬಹುದಾದ ಮತ್ತೊಂದು ಕೃತಿಯೆಂದರೆ ದಕ್ಷಿಣ ಭಾರತ ಭಾಷಾ ಸಂಸ್ಥೆ ಪ್ರಕಟಿಸಿದ ನಾಲ್ ನುಡಿ-ನಾಣ್ಣುಡಿ (1962). ಇದರಲ್ಲಿ ಕನ್ನಡ, ತೆಲುಗು, ತಮಿಳು, ಮಲಯಾಳಂ ಭಾಷೆಗಳಲ್ಲಿನ 467 ಸಮಾನ ಗಾದೆಗಳನ್ನು ಎಂ.ಮರಿಯಪ್ಪಭಟ್ಟ, ಎನ್.ವೆಂಕಟರಾವ್, ಆರ್‌ಪಿ.ಸೇತುಪಿಳ್ಳೆ, ಎಸ್.ಕೆ.ನಾಯರ್ ಅವರು ಕ್ರಮವಾಗಿ ಸಂಕಲಿಸಿದ್ದಾರೆ. ಟಿ.ವಿ.ವೆಂಕಟರಮಣಯ್ಯನವರ ಕನ್ನಡ ಗಾದೆಗಳ ಕೋಶ 1963ರಲ್ಲಿ ಪ್ರಕಟವಾಯಿತು. ಇದು 4,234 ಗಾದೆಗಳನ್ನೊಳಗೊಂಡಿದ್ದು, ವಿಷಯಾನುಸಾರವಾಗಿ ಗಾದೆಗಳನ್ನು ವಿಭಜಿಸಿರುವ ಈ ಕೃತಿ ಉಲ್ಲೇಖನೀಯ ಸಂಗ್ರಹವಾಗಿದೆ. (1964, ಮರುಮುದ್ರಣ), ಪುತ್ತಿಗೆ ಶ್ರೀನಿವಾಸರಾಯರ ಕನ್ನಡ ತುಳು ಗಾದೆಗಳು ಎಂಬ ಸಂಕಲನ 1967ರಲ್ಲಿ ಪ್ರಕಟವಾಯಿತು.

ಜಾನಪದ ಸ್ನಾತಕೋತ್ತರ ಮಟ್ಟದ ಒಂದು ಅಧ್ಯಯನ ವಿಷಯವಾಗಿ ವಿಶ್ವವಿದ್ಯಾನಿಲಯದ ಮೆಟ್ಟಿಲೇರಿದ ತರುವಾಯ ಗಾದೆಗಳ ಸಂಗ್ರಹಣೆ, ಸಂಪಾದನೆ, ವಿಶ್ಲೇಷಣೆ, ಪ್ರಕಟಣೆಗಳಲ್ಲಿ ಹೊಸ ಚೇತನವುಂಟಾಯಿತೆನ್ನಬಹುದು. ಸಂಗ್ರಹಕಾರರು ಗ್ರಾಮಾಂತರ ಪ್ರದೇಶಗಳನ್ನು ಪ್ರವೇಶಿಸಿ ಕೃಷಿಗೆ ತೊಡಗಿದುದರ ಫಲವಾಗಿ ಅಜ್ಞಾತವಲಯದಲ್ಲಿ ಹುದುಗಿದ್ದ ಅಪೂರ್ವ ಗಾದೆಗಳು ಬೆಳಕಿಗೆ ಬಂದವು. ಈ ಬಗೆಯ ಜಾನಪದ ದೃಷ್ಟಿಯಿಂದ ಗಾದೆಗಳ ಸಂಗ್ರಹಕಾರ್ಯ ನಡೆಸಿದ ಕೀರ್ತಿ ರಾಗೌ ಅವರಿಗೆ ಸಲ್ಲುತ್ತದೆ. 1968ರಲ್ಲಿ ಪ್ರಕಟವಾದ ಇವರ ನಮ್ಮ ಗಾದೆಗಳು ಸಂಕಲನ ಹಲವಾರು ದೃಷ್ಟಿಗಳಿಂದ ಮಹತ್ತ್ವದ ಕೃತಿಯಾಗಿದೆ. ರಾಗೌ ಅವರು ಈವರೆಗೆ, 2,200 ಗಾದೆಗಳನ್ನು ಬೆಳಕಿಗೆ ತಂದಿದ್ದಾರೆ. ಈ ಸಂಕಲನ ಗಾದೆಗಳ ಸ್ವರೂಪಲಕ್ಷಣಾದಿಗಳನ್ನು ಕುರಿತ ವಿದ್ವತ್‌ಪೂರ್ಣ ಪ್ರಸ್ತಾವನೆ, ಇದು ಅತ್ಯುಪಯುಕ್ತ ಮಾಹಿತಿಗಳಿಂದ ಕೂಡಿದ್ದು ಈ ಕ್ಷೇತ್ರದಲ್ಲಿ ಕೆಲಸಮಾಡುವವರಿಗೆ ದಾರಿದೀಪವಾಗಿದೆ. ಇದೇ ಲೇಖಕರ ಮತ್ತೊಂದು ಶ್ರೇಷ್ಠ ಸಂಕಲನ ಕಿಟ್ಟೆಲ್ ಕೋಶದ ಗಾದೆಗಳು (1969). ಇದರಲ್ಲಿ ಕಿಟ್ಟೆಲ್ ಕೋಶದಲ್ಲಿ ಉದಾಹರಿಸಿರುವ 4,260 ಗಾದೆಗಳನ್ನು ಅಕಾರಾದಿಯಾಗಿ ಜೋಡಿಸಿದೆ.

1969ರಲ್ಲಿ ಪ್ರಕಟವಾದ ಅಚ್ಚಪ್ಪನವರ 'ಗ್ರಂಥಸ್ಥ ಗಾದೆಗಳು' ಕವಿರಾಜ ಮಾರ್ಗದಿಂದ ಮುದ್ದಣನ ವರೆಗಿನ ಕೆಲವು ಕಾವ್ಯಗಳಿಂದ ಆಯ್ದ ಗಾದೆಗಳು, ಉದ್ಧರಣೆಗಳು, ಸಾಮತಿಗಳು, ಜಾಣ್ಣುಡಿಗಳು, ಸೂಕ್ತಿಗಳು, ರೂಪಕಗಳು ಇತ್ಯಾದಿಗಳನ್ನೊಳಗೊಂಡ ಸಂಕಲನ.

1971ರಲ್ಲಿ ಮಂಗಳೂರಿನ ಪಲಚಂವಿ ಪ್ರಕಾಶನದಿಂದ ಪ್ರಕಟವಾಗಿರುವ ಬಿ.ಎ.ವಿವೇಕ ರೈ ಅವರ ತುಳು ಗಾದೆಗಳು ಉಲ್ಲೇಖನೀಯ ಕೃತಿ. ಇದರಲ್ಲಿ 704 ತುಳು ಗಾದೆಗಳಿಗೆ ಸಂವಾದಿಯಾದ ಕನ್ನಡ ಗಾದೆ ಇಲ್ಲವೇ ಅರ್ಥವಿವರಣೆಯನ್ನು ಕೊಡಲಾಗಿದೆ. ವಿಸ್ತಾರವಾದ ಪ್ರಸ್ತಾವನೆ, ತುಳು ಕನ್ನಡ ಅರ್ಥಕೋಶಗಳು ಕೃತಿಯ ಮೌಲ್ಯವನ್ನು ಹೆಚ್ಚಿಸಿವೆ. ಬಸಯ್ಯ ವಿರೂಪಾಕ್ಷಯ್ಯ ಮಠದ ಅವರ ಸಾವಿರ ಮಾತಿನ ಸರದಾರ ಎಂಬ ಸಂಕಲನ ಶ್ರೀ ಗುರುಲಿಂಗ ಜಂಗಮ ಗ್ರಂಥ ಪ್ರಸಾರಕ ಸಂಘ, ಹಳ್ಳಿಗುಡಿ, ಗದಗ ತಾಲ್ಲೂಕದಿಂದ ಪ್ರಕಟವಾಗಿದೆ (1972). ಇದರಲ್ಲಿ ಒಂದು ಸಾವಿರ ಗಾದೆಗಳಿವೆ. ಇದೇ ವರ್ಷ ಪ್ರಕಟವಾದ ಎಸ್.ವಿ.ಪರಮೇಶ್ವರಭಟ್ಟರ 'ನೆನಪಿಗೆ ಬಂದ ಗಾದೆಗಳು' 200 ಗಾದೆಗಳ ಸಂಕಲನ. ತುಳು ಗಾದೆಗಳ ಸಂಗ್ರಹಕಾರ್ಯದಲ್ಲಿ ತೊಡಗಿದ ಮತ್ತೊಬ್ಬರು ಬಿ.ದೂಮಪ್ಪ ಮಾಸ್ಟರ್. 1973ರಲ್ಲಿ ಪ್ರಕಟವಾದ ಇವರ ಮಾದಿರನ ಗಾದೆ ಎಂಬ ಸಂಕಲನದಲ್ಲಿ ಸಾವಿರ ಗಾದೆಗಳಿವೆ. ಇವುಗಳನ್ನು ಕನ್ನಡ ಲಿಪಿಯಲಿ ಗೀತರೂಪದಲ್ಲಿ ಪೋಣಿಸಿದೆ. ಚೌಡೇಗೌಡ ಬೀಡನಹಳ್ಳಿ ಅವರ ಪ್ರಾದೇಶಿಕ ಗಾದೆಗಳು 1973ರಲ್ಲಿ ಪ್ರಕಟವಾಯಿತು. ಗಾದೆಗಳ ಸಂಕಲನ ಗ್ರಂಥಗಳಲ್ಲಿ ಇನ್ನೊಂದು ಮಹತ್ತ್ವದ ಕೃತಿ ಎಂದರೆ ಸುಧಾಕರ ಅವರ ನಮ್ಮ ಸುತ್ತಿನ ಗಾದೆಗಳು ವಿಸ್ತಾರವಾದ ಪ್ರಸ್ತಾವನೆಯೊಂದಿಗೆ ಕನ್ನಡ ಅಧ್ಯಯನ ಸಂಸ್ಥೆಯಿಂದ ಪ್ರಕಟವಾಗಿದೆ (1973). ಕಾಳೇಗೌಡ ನಾಗವಾರ ಅವರ

ಬೀದಿಮಕ್ಕಳು ಬೆಳೆದೊ ಒಂದು ಉತ್ತಮ ಸಂಕಲನ. ಮೈಲಹಳ್ಳಿ ರೇವಣ್ಣ ಅವರ ದೀಪದ ಕೆಳಗೆ ಕತ್ತಲೆ ಎಂಬ 1412 ಗಾದೆಗಳ ಸಂಕಲನ ಇತ್ತೀಚಿನ ಕೃತಿ (2003).

ಜನಪದ ಗಾದೆಗಳಂತೆ ಅನೇಕ ಸ್ವತಂತ್ರ ಗಾದೆಗಳೂ ರಚಿತವಾಗಿವೆ. ಅವುಗಳಲ್ಲಿ ಹೆಚ್ಚು ಗಾದೆಗಳು ಅನುಕರಣೆಯಿಂದ ಮೂಡಿದವಾಗಿವೆ. ಉದಾ: ಊರಿಗೆ ಬಂದವಳು ನೀರಿಗೆ ಬರೋದಿಲ್ಲವೆ ಎಂಬ ಗಾದೆಗೆ ಸಂವಾದಿಯಾಗಿ ಸಿಟಿಗೆ ಬಂದವಳು ಸಿನಿಮಾಕ್ಕೆ ಬರೋದಿಲ್ಲವೆ ಇತ್ಯಾದಿ. ಇಂಥ ಗಾದೆಗಳನ್ನು ನಾ.ಕಸ್ತೂರಿ, ಎಸ್.ವಿ. ಪರಮೇಶ್ವರಭಟ್ಟ, ಎಚ್.ಜೆ.ಲಕ್ಕಪ್ಪಗೌಡ ಮೊದಲಾದವರು ರಚಿಸಿದ್ದಾರೆ.

ಗಾದೆಗಳ ಸಂಗ್ರಹಕಾರ್ಯದ ಜೊತೆಗೆ ವಿಮರ್ಶೆ ವಿಶ್ಲೇಷಣೆಗಳ ಕಾರ್ಯವೂ ನಡೆದಿದೆ. ಈ ಸಾಲಿನ ಮೊದಲ ಸ್ತುತ್ಯ ಪ್ರಯತ್ನವೆಂದರೆ ಪ್ರಹ್ಲಾದ ಕುಲಕರ್ಣಿಯವರ ನಾಣ್ನುಡಿ ಎಂಬ ಕೃತಿ (1936). ಗಾದೆಗಳ ಉಗಮ, ವಿಕಾಸ, ಸ್ವರೂಪಗಳ ಅಧ್ಯಯನದ ಆವಶ್ಯಕತೆಯನ್ನು ಇಷ್ಟು ಹಿಂದೆಯೇ ಅರಿತುಕೊಂಡದ್ದು ಶ್ರೀಯುತರ ವೈಶಿಷ್ಟ್ಯವಾಗಿದೆ. ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾದ ಎ.ಕೆ.ರಾಮನುಜನ್ ಅವರ ಗಾದೆಗಳು (1955) ಎಂಬ ಚಿಕ್ಕ ಪುಸ್ತಕ ಗಾದೆಗಳ ವೈಚಾರಿಕ ಅಧ್ಯಯನದ ಆವಶ್ಯಕತೆಯನ್ನು ಎತ್ತಿ ತೋರಿಸುತ್ತದೆ. ಅನಂತರ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದಿಂದ ಪ್ರಕಟವಾದ ನಂ.ತಪಸ್ವೀಕುಮಾರ್ ಅವರ 'ಕನ್ನಡ ಗಾದೆಗಳ ಸಮೀಕ್ಷೆ' ಒಂದು ವಿದ್ವತ್ಪೂರ್ಣ ಕೃತಿ (1972). ಈ ಕೃತಿಯಲ್ಲಿ ಗಾದೆಗಳ ಹುಟ್ಟು, ಬೆಳೆವಣಿಗೆ, ಸ್ವರೂಪ, ಸಾಹಿತ್ಯಕ, ಸಾಮಾಜಿಕ ಮೌಲ್ಯಗಳನ್ನು ಸಮರ್ಪಕ ರೀತಿಯಲ್ಲಿ ವಿವೇಚಿಸಲಾಗಿದೆ. ಇಷ್ಟಲ್ಲದೆ ಗಾದೆಗಳನ್ನು ಕುರಿತ ಹಲವಾರು ಲೇಖನಗಳು ವಿವಿಧ ಲೇಖಕರ ಕೃತಿಗಳಲ್ಲಿ, ಪತ್ರಿಕೆಗಳಲ್ಲಿ ಚೆದುರಿಹೋಗಿವೆ. ಗಾದೆಗಳನ್ನು ಕುರಿತಂತೆ ನಾನಾದೃಷ್ಟಿಕೋನದ ಅಧ್ಯಯನ ಅಗತ್ಯ ಎಂಬುದನ್ನು ಈ ಲೇಖನಗಳು ತೋರಿಸಿಕೊಟ್ಟಿವೆ. (ಪಿ.ಕೆ.ಆರ್.)

**ಗಾಳಿ :** ಜನಪದ ನಂಬಿಕೆಗಳ ಪ್ರಕಾರ ಜನರಿಗೆ ಕೇಡುಂಟುಮಾಡುವ ಒಂದು ಕ್ಷುದ್ರ ಶಕ್ತಿ. ಗಾಳಿಯನ್ನು ಪೀಡೆ, ಪಿಶಾಚಿ, ದೆವ್ವ, ದಯ್ಯ, ಜಕ್ಕಣಿ, ರಾಹು, ಗಾಳಿಸೋಂಕು ಮುಂತಾದ ಹೆಸರಿನಿಂದಲೂ ಕರೆಯುತ್ತಾರೆ. ಅಕಾಲಮರಣಕ್ಕೆ ತುತ್ತಾದವರು, ಜೀವನದಲ್ಲಿ ಜಿಗುಪ್ಸೆಹೊಂದಿ ಆತ್ಮಹತ್ಯೆ ಮಾಡಿಕೊಂಡವರು, ಅತೃಪ್ತಿಯಿಂದ ಸತ್ತವರು ಅಥವಾ ಉತ್ತರಕ್ರಿಯಾದಿಗಳು ಕ್ರಮಬದ್ಧವಾಗಿ ನಡೆಯದೆ ಹೂಳಲ್ಪಟ್ಟವರು ಗಾಳಿಯಾಗಿ ಕಾಡುತ್ತಾರೆ ಎಂಬ ನಂಬಿಕೆಯಿದೆ. ಸಾಮಾನ್ಯವಾಗಿ ಸ್ತ್ರೀಯರಿಗೆ ಪುರುಷಗಾಳಿ, ಪುರುಷರಿಗೆ ಸ್ತ್ರೀಗಾಳಿ ಹಿಡಿಯುತ್ತದೆಂದು ಹೇಳುವುದುಂಟು. ಸ್ತ್ರೀಯರಿಗೆ ಸ್ತ್ರೀಗಾಳಿ, ಪುರುಷರಿಗೆ ಪುರುಷಗಾಳಿ ಹಿಡಿದರೆ ಹೆಚ್ಚು ಅಪಾಯವಂತೆ. ಹುಣಿಸೇಮರ, ಆಲದಮರ, ಹಾಗೂ ಶ್ಮಶಾನದ ಸುತ್ತಮುತ್ತಲಿನ ಪ್ರದೇಶ ಗಾಳಿಯ ವಾಸಸ್ಥಾನ. ಈ ಜಾಗದಲ್ಲಿ ಮಟಮಟ ಮಧ್ಯಾಹ್ನದಲ್ಲಿ ಒಬ್ಬರೇ ಇದ್ದಾಗ ಗಾಳಿ ಅವರನ್ನು ಹಿಡಿಯುತ್ತದೆಯಂತೆ. ಅಮಾವಾಸ್ಯೆ ಮತ್ತು ಹುಣ್ಣಿಮೆ ದಿವಸಗಳಲ್ಲಿ ಇದು ಜಾಸ್ತಿ.

ಗಾಳಿಗೆ ಇಂಥದೇ ನಿಶ್ಚಿತರೂಪವೆಂಬುದಿಲ್ಲ. ಕುರಿ, ನಾಯಿ, ಬೆಕ್ಕು ಮುಂತಾದ ಯಾವುದಾದರೊಂದು ಪ್ರಾಣಿರೂಪದಲ್ಲಿ ಬಂದು ವ್ಯಕ್ತಿಯ ಕಾಲಿನ ಮಧ್ಯದಲ್ಲಿ ನುಸುಳಿಹೋದಂತಾಗುವುದು, ಪಕ್ಕದಲ್ಲಿ ಹಾದು ಹೋಗುವುದು, ಇದ್ದಕ್ಕಿದ್ದಂತೆ ಹಾಗೆಯೇ ದೊಡ್ಡದಾಗಿ ಬೆಳೆಯುವುದು ಅಥವಾ ಆ ಕ್ಷಣದಲ್ಲೇ ಮಾಯವಾಗುವುದು, ಇಲ್ಲವೇ ಅಕ್ಕಪಕ್ಕದಲ್ಲಿದ್ದ ಮರವನ್ನು ಜೋರಾಗಿ ಅಲ್ಲಾಡಿಸಿ ಒಂದು ರೀತಿಯ ಭಯೋತ್ಪಾದಕ ಶಬ್ದವನ್ನುಂಟುಮಾಡುವುದು ಈ ಮೊದಲಾದ ಬಾಹ್ಯಾಚರಣೆಗಳ ಮೂಲಕ ಮನುಷ್ಯರನ್ನು ಗಾಳಿ ಹಿಡಿಯುವುದೆಂದು ನಂಬಿಕೆ. ಗಾಳಿ ಹಿಡಿದಾಗ ಹಿಡಿದ ವ್ಯಕ್ತಿಗೆ ಆ ಸ್ಥಳದಲ್ಲೇ ಮೈ ನಡುಗಿದಂತಾಗಿ ಜ್ವರ ಬರುವುದು, ಅನಂತರ ಚೇಷ್ಟೆ ಪ್ರಾರಂಭವಾಗುವುದು- ಇದ್ದಕ್ಕಿದ್ದಂತೆ ಹುಚ್ಚನಂತೆ ಓಡಾಡುವುದು, ವಿಚಿತ್ರವಾಗಿ ಕೂಗಾಡುವುದು, ಮೈಕೈಗಳನ್ನು ಕುಣಿಸುವುದು, ಆ ಸಮಯದಲ್ಲಿ ನಾಲ್ಕಾರು ಮಂದಿ ಹಿಡಿದುಕೊಂಡರೂ ಬಗ್ಗದಿರುವುದು, ವಿಚಿತ್ರ ರೀತಿಯಲ್ಲಿ ವರ್ತಿಸುವುದು, ತನಗೆ ಬರದ ಭಾಷೆಯಲ್ಲಿ ನಿರರ್ಗಳವಾಗಿ ಮಾತನಾಡುವುದು ಮೊದಲಾದ ಕ್ರಿಯೆಗಳು ನಡೆಯುತ್ತವೆ. ಗಾಳಿಯ ಉಪಶಮನವಾದ ಅನಂತರ ಗಾಳಿ ಹಿಡಿದ ಸಂದರ್ಭದಲ್ಲಿ ತಾನೇನು ಮಾಡಿದೆನೆಂಬ ಪರಿವೆ ಆ ವ್ಯಕ್ತಿಗೆ ಇರುವುದಿಲ್ಲ. ಗಾಳಿ ಸ್ವಜನರನ್ನೂ ಅನ್ಯರನ್ನೂ ಹಿಡಿಯುತ್ತವಂತೆ. ಒಟ್ಟಿನಲ್ಲಿ ಗಾಳಿಗೆ ಯಾರಾದರೊಬ್ಬರ ಆಶ್ರಯ ಬೇಕಾಗಿರುತ್ತದೆ.

ಮುತ್ತೈದೆಯರು ಆಕಸ್ಮಿಕವಾಗಿಯಾಗಲಿ ದುರ್ಮರಣ ಕ್ಕೊಳಗಾಗಿಯಾಗಲಿ ಸತ್ತರೆ ಗಾಳಿಯಾಗುವರಂತೆ. ಇವರನ್ನು ಜಕ್ಕಣಿಯರು ಎಂದು ಕರೆಯುತ್ತಾರೆ. ಗಾಳಿಯಾದ ಇವರ ಆತ್ಮಕ್ಕೆ ತೃಪ್ತಿಯನ್ನುಂಟು ಮಾಡಲು ಮತ್ತು ಕುಟುಂಬದವರಿಗೆ ಕೆಡಕುಂಟಾಗದಿರಲೆಂದು ವರ್ಷಕ್ಕೊಂದು ಸಾರಿ ಮುತ್ತೈದೆ ಪೂಜೆಯನ್ನು ಹೂವು ವೀಳ್ಯದೊಂದಿಗೆ ಆಚರಿಸಿ ಆ ದಿವಸ ಮುತ್ತೈದೆಯರಿಗೆ ಹೂವು ಅರಿಶಿನ ಕುಂಕುಮ ಫಲ ತಾಂಬೂಲ ಕೊಟ್ಟು ಪೂಜಿಸುವುದರೊಂದಿಗೆ ವಿಶೇಷ ಅಡುಗೆ ಮಾಡಿ ಊಟ ಹಾಕುವುದರಿಂದ ಉಪಶಮನ ಮಾಡಿಕೊಳ್ಳುವುದುಂಟು.

ಗಾಳಿಗಳಲ್ಲಿ ಹಲವು ರೀತಿಗಳುಂಟು: ಅರಿವಿಲ್ಲದ ಗಾಳಿ, ಅರಿವಿನ ಗಾಳಿ ಅರಿವಿನ ಗಾಳಿಯಾದರೆ ಗಾಳಿ ಮೈ ಮೇಲೆ ಬಂದ ತರ್ಕ್ಷಣ ಮಾತಾಡುತ್ತದೆ. ಅರಿವಿಲ್ಲದ ಗಾಳಿಯಾದರೆ ಮಾತಾಡುವುದಿಲ್ಲ. ಮಾತನಾಡದ ಗಾಳಿಯಿಂದ ಅಪಾಯ ಹೆಚ್ಚು ಎಂದು ನಂಬಿಕೆ. ಕೊಳ್ಳಿ ದೆವ್ವ ಅಥವಾ ಪ್ಯಾಕೊಳ್ಳಿ ದೆವ್ವ ಎಂಬ ಒಂದು ಗಾಳಿ ಓಡಾಡುವಾಗ ಪಂಜಿನಂತೆ ಬೆಂಕಿ ಉರಿಯುತ್ತಿರುತ್ತದಂತೆ. ದೆವ್ವಗಳಲ್ಲಿ ಕೆಲವು ಸೌಮ್ಯಸ್ವಭಾವದವಾಗಿದ್ದು ಅವು ಸುಮ್ಮನೆ ಮನುಷ್ಯನನ್ನು ದಾರಿ ತಪ್ಪಿಸುವುದು ಇಲ್ಲವೇ ಸ್ವಲ್ಪ ಹೆದರಿಕೆಯನ್ನುಂಟುಮಾಡುವ ಚೇಷ್ಟೆಯಷ್ಟೇ ಮಾಡಿ ಕೈ ಬಿಡುತ್ತವೆಯಂತೆ. ಇವುಗಳಿಂದ ಪ್ರಾಣಕ್ಕೆ ಅಪಾಯವಿಲ್ಲ. ಮೈಮೇಲೆ ದೆವ್ವ ಬಂದಾಗ ಅದನ್ನು ಬಿಡಿಸುವುದಕ್ಕೆ ಜನ ಕೆಲವು ವಿಶಿಷ್ಟ ಆಚರಣೆಗಳಲ್ಲಿ ತೊಡಗುತ್ತಾರೆ. ದೆವ್ವ ಮೈಮೇಲೆ ಬಂದ ವ್ಯಕ್ತಿಯ ಮುಂದೆ ಕುಳಿತು ಅವನಿಗೆ ಅಥವಾ ಅವಳಿಗೆ ಅನೇಕ ರೀತಿಯ ಪ್ರಶ್ನೆಗಳನ್ನು ಕೇಳುತ್ತಾರೆ. ಆಗ ದೆವ್ವ ಕೆಲವು ವೇಳೆ ಸರಿಯಾದ ಉತ್ತರವನ್ನು ಹೇಳಿ ತನ್ನ ಪೂರ್ವೋತ್ತರಗಳನ್ನು ತಿಳಿಸುವುದರೊಂದಿಗೆ ತಾನು ಬಂದಿರುವ ಉದ್ದೇಶವನ್ನು ತಿಳಿಸಿ, ತಾನು ಬಿಟ್ಟುಹೋಗಬೇಕಾದರೆ ಮಾಡಬೇಕಾದ ಕ್ರಿಯೆಗಳನ್ನು ತಿಳಿಸುತ್ತದೆ. ಗಾಳಿ ಬಿಡಿಸುವ ಕ್ರಿಯೆ ಸಾಮಾನ್ಯವಾಗಿ ಊರಿನ ಗ್ರಾಮದೇವತೆಯ ಗುಡಿಯಲ್ಲಿ ಅಥವಾ ಅಲ್ಲಿನ ಯಾವುದಾದರೊಂದು ಪ್ರಮುಖ ದೇವಸ್ಥಾನದಲ್ಲಿ ನಡೆಯುತ್ತದೆ. ಮಂತ್ರವಿದ್ಯೆಯನ್ನು ಕಲಿತ ವ್ಯಕ್ತಿ ಆ ಕ್ರಿಯೆಗಳನ್ನು ನಡೆಸಿಕೊಡುತ್ತಾನೆ. ದೆವ್ವ ಬಿಟ್ಟುಹೋದ ಗುರುತಿಗಾಗಿ ಕಲ್ಲು ಹುಯ್ಯುವುದು ಎಂಬ ಕಾರ್ಯ ನಡೆಯುತ್ತದೆ. ಸುಮಾರು ಎರಡು ಅಡಿ ಉದ್ದ ಒಂದೂವರೆ ಅಡಿ ಅಗಲವಿರುವ ಕಲ್ಲಿನ ಮೇಲೆ ಮನುಷ್ಯನ ಆಕೃತಿಯನ್ನು ಹೋಲುವ ರೇಖೆಯನ್ನು ಬಿಡಿಸಿ ಅದನ್ನು ದೇವಸ್ಥಾನದ ಒಂದು ಪಕ್ಕದಲ್ಲಿ ನೆಟ್ಟು ಪೂಜೆಮಾಡಿ ದೆವ್ವ ಬಯಸಿದ ಬಟ್ಟೆಬರೆ ಭಕ್ಷ್ಯ ಮೊದಲಾದವುಗಳನ್ನು ಇಟ್ಟು ಗಾಳಿ ಹಿಡಿದಿರುವ ವ್ಯಕ್ತಿಯನ್ನು ಆ ಸ್ಥಳಕ್ಕೆ ಕರೆದುಕೊಂಡು ಹೋಗಿ ಪೂಜಿಸಿ ದೆವ್ವ ಬಿಟ್ಟು ಹೋದ ಗುರುತಿಗಾಗಿ ದೆವ್ವ ಹಿಡಿದ ವ್ಯಕ್ತಿಯ ತಲೆಕೂದಲನ್ನು ಕಿತ್ತು ಕಲ್ಲಿನ ಮೇಲೆ ಇಡುತ್ತಾರೆ. ಇಷ್ಟೆಲ್ಲ ಕಾರ್ಯಗಳನ್ನು ದೆವ್ವ ಬಿಡಿಸುವಿಕೆಯಲ್ಲಿ ಪರಿಣತಿ ಪಡೆದ ವ್ಯಕ್ತಿ ನಿರ್ವಹಿಸುತ್ತಾನೆ. ಕೆಲವು ವೇಳೆ ಗಾಳಿ ಹೆಚ್ಚು ತಕರಾರು ಮಾಡಿದರೆ ಅಂಥದನ್ನು ಬಿಡಿಸಲು ದಕ್ಷರಾದ ಮಾಂತ್ರಿಕರನ್ನು ಕರೆಸಿ ವಿಧಿವತ್ತಾಗಿ ಉಗ್ರಸ್ವರೂಪದ ಪೂಜೆಯನ್ನು ಮಾಡಿಸುವುದೂ ಉಂಟು. ಇಂಥ ಪೂಜೆಗಳನ್ನು ಅಮಾವಾಸ್ಯೆಯ ದಿನದಂದು ಶ್ಮಶಾನದಲ್ಲಿ ನಡೆಸುತ್ತಾರೆ. ಇದಕ್ಕೆ ಸಾಕಷ್ಟು ಹಣ ವೆಚ್ಚವಾಗುವುದುಂಟು.

ಕೆಲವು ಸಂದರ್ಭಗಳಲ್ಲಿ ಅವಿವಾಹಿತರಾಗಿ ಸತ್ತವರು ಗಾಳಿಯಾಗಿ ಬಂದು ಯಾರದಾದರೂ ಹೆಗಲೇರಿ ತಾನು ಬಿಟ್ಟು ಹೋಗಬೇಕಾದರೆ ಅವರೊಂದಿಗೆ ಮದುವೆ ಮಾಡಿಕೊಡಬೇಕೆಂದು ಒತ್ತಾಯಪಡಿಸುತ್ತವೆಯಂತೆ. ಆಗ ಈಡು ಕಟ್ಟುವುದು ಎಂಬ ಕ್ರಿಯೆ ನಡೆಯುತ್ತದೆ. ನಾಲ್ಕಾಣೆಯನ್ನು ಗಾಳಿ ಬಂದ ವ್ಯಕ್ತಿಯ ಮೇಲೆ ದೇವರ ಹೆಸರಿನಲ್ಲಿ ಮೂರು ಬಾರಿ ನಿವಾಳಿಸಿ ಆ ಹಣವನ್ನು ಜೋಪಾನವಾಗಿ ಇಡುತ್ತಾರೆ. ಇದಕ್ಕೆ ಮುಡುಪು ಕಟ್ಟುವುದು ಎಂದೂ ಕರೆಯುತ್ತಾರೆ. ಆಗ ಗಾಳಿ ಸಮಾಧಾನ ಸ್ಥಿತಿಗೆ ಬರುತ್ತದೆಯಂತೆ; ಅನಂತರ ಗಾಳಿ ಹೇಳಿರುವ ವಾಯಿದೆ

ಮುಗಿಯುವುದರೊಳಗೆ ಎಲ್ಲಿಯಾದರೂ ಈ ಗಾಳಿಯಂತೆ ಆಗಿರುವ ಮತ್ತೊಂದು ಮನೆಯವರನ್ನು (ಅಂದರೆ ಹುಡುಗನಾಗಿದ್ದರೆ ಹುಡುಗಿ, ಹುಡುಗಿಯಾಗಿದ್ದರೆ ಹುಡುಗ) ಹುಡುಕಿ ಎರಡು ಮನೆಯವರು ಪರಸ್ಪರ ಒಪ್ಪಿಗೆ ಪಡೆದು ಶಾಸ್ತ್ರೋಕ್ತವಾಗಿ ಮಾಮೂಲಿ ಮದುವೆಯಂತೆಯೇ ಒಂದು ಶುಭದಿವಸ ಮದುವೆಗೆ ಬೇಕಾದ ಸಾಮಾನುಗಳನ್ನೆಲ್ಲ ಉಪಯೋಗಿಸಿ ಎರಡು ಮಣೆಗಳನ್ನಿಟ್ಟು ಅವುಗಳ ಮೇಲೆ ಪುರುಷ ಮತ್ತು ಸ್ತ್ರೀಯರು ಧರಿಸುವ ಬಟ್ಟೆಗಳನ್ನಿಟ್ಟು ಮಂಗಲ ಕಾರ್ಯವನ್ನು ಮಾಡುವಂತೆಯೇ ಎಲ್ಲ ಕಾರ್ಯಗಳನ್ನೂ ಕ್ರಮವಾಗಿ ಮಾಡುತ್ತಾರೆ. ಆಗ ಗಾಳಿಯು ಬಿಡುಗಡೆ ಯಾಗುತ್ತದೆಂದು ನಂಬಿಕೆಯಿದೆ.

ಗಾಳಿ ಬಿಡಿಸಲು ಹಲವಾರು ಕಡೆಗಳಲ್ಲಿ ಹಲವಾರು ವಿಧಾನಗಳನ್ನು ಅನುಸರಿಸುತ್ತಾರೆ. ಗಾಳಿಗಳಲ್ಲಿ ವೈವಿಧ್ಯ ಇರುವಂತೆಯೇ ಅವುಗಳ ಬಿಡಿಸುವಿಕೆಯಲ್ಲಿಯೂ ಅನೇಕ ವಿಧಾನಗಳಿವೆ. ಕರ್ನಾಟಕದಲ್ಲಿ ಮಹದೇಶ್ವರ ಬೆಟ್ಟ, ಧರ್ಮಸ್ಥಳ, ಬಿಜಾಪುರದ ಗೋಲಗುಂಬಜ್ ಮೊದಲಾದ ಪುಣ್ಯಕ್ಷೇತ್ರಗಳಲ್ಲಿ ಗಾಳಿ ಬಿಡಿಸುವ ಪರಿಪಾಠ ಇಂದಿಗೂ ಕಂಡುಬರುತ್ತದೆ.

ಗಾಳಿ ಸಾಮಾನ್ಯವಾಗಿ ಯಾರಿಗೂ ಗೋಚರಿಸುವುದಿಲ್ಲ. ಬಹಳ ಅಪರೂಪವಾಗಿ ಯಾರಿಗಾದರೂ ಕಂಡರೆ ಕಂಡವರಿಗೆ ಅಪಾಯ ಇಲ್ಲವೇ ಅಂಥವರು ವಿಶೇಷ ಗುಣವುಳ್ಳ ಕಣ್ಣಿನವರೆಂದು ತಿಳಿಯುವುದುಂಟು.

ಇಂದಿಗೂ ಅನೇಕರಲ್ಲಿ ಗಾಳಿಯ ಬಗ್ಗೆ ನಂಬಿಕೆ, ಹೆದರಿಕೆ ಇದ್ದು, ಭಯಭಕ್ತಿಯಿಂದ ಪೂಜೆಮಾಡುವವರ ಸಂಖ್ಯೆಯೂ ಸಾಕಷ್ಟು ಪ್ರಮಾಣದಲ್ಲಿ ಇರುವುದು ಕಂಡುಬರುತ್ತದೆ. ಗಾಳಿ ಬಿಡಿಸುವ ಅಥ'ವಾ ಅದರ ಉಪದ್ರವವನ್ನು ನಿವಾರಿಸುವ ಅನೇಕ ಮಾಂತ್ರಿಕರು ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ಹಾಗೂ ಮಾಡರಹಳ್ಳಿಯಲ್ಲಿದ್ದರು. ಈಗ ಅವರ ಸಂಖ್ಯೆ ಬಹಳಷ್ಟು ಕಡಿಮೆಯಾಗಿದ್ದು ಅನೇಕರು ತಮ್ಮ ವಿದ್ಯೆಯನ್ನು ಬಿಟ್ಟು ಬೇರೆ ಬೇರೆ ವೃತ್ತಿಯನ್ನು ಅವಲಂಬಿಸುತ್ತಿದ್ದಾರೆ. (ಟಿ.ಎಸ್.ಆರ್.)

**ಗಿರಿ, ವಿ.ವಿ. :** 1894-1980. ಭಾರತದ ಮಾಜಿ ರಾಷ್ಟ್ರಪತಿ (1969-74). ವರಾಹಗಿರಿ ವೆಂಕಟಗಿರಿ ಎಂಬುದು ಇವರ ಪೂರ್ಣ ಹೆಸರು. ಒರಿಸ್ಸದ ಗಂಜಾಂ ಜಿಲ್ಲೆಯ ಬರ್ಹಾಂಪುರದಲ್ಲಿ 1894 ಆಗಸ್ಟ್ 10ರಂದು ಏಳು ಗಂಡು ಐದು ಹೆಣ್ಣುಮಕ್ಕಳ ಸಂಸಾರದಲ್ಲಿ ಎರಡನೆಯ ಮಗನಾಗಿ ಜನಿಸಿದರು. ಇವರ ತಂದೆ ಜೋಗಯ್ಯ ಪಂತುಲು ವಕೀಲರು; ರಾಜಕಾರಣದಲ್ಲೂ ಅವರಿಗೆ ಆಸಕ್ತಿಯಿತ್ತು. ತಮ್ಮ ಮಗ ತಮ್ಮಂತೆಯೇ ವಕೀಲನಾಗಬೇಕೆಂಬುದು ಅವರ ಬಯಕೆಯಾಗಿತ್ತು. ಬಾಲ್ಯದಲ್ಲಿ ಗಿರಿಯವರಿಗೆ ಮಾರ್ಗದರ್ಶನ ನೀಡಿದವರು ಶಿಕ್ಷಕ ರಾಮಲಿಂಗಂ. ಆಗಿನ ಅವರ ಚಟುವಟಿಕೆಗಳು ಗಾಂಧೀಜಿವರ ಸತ್ಯಾಗ್ರಹವೇ



ಮುಂತಾದ ಅನಂತರದ ಚಳವಳಿಗಳಲ್ಲಿ ಭಾಗವಹಿಸಲು ಗಿರಿಯವರಿಗೆ ಪೂರ್ವಭಾವಿ ಸಿದ್ಧತೆಯನ್ನೊದಗಿಸಿದುವು. ಗಿರಿಯವರು ಮದರಾಸಿನಲ್ಲಿ ಕೇಂಬ್ರಿಜ್ ಸೀನಿಯರ್ ಪರೀಕ್ಷೆ ಮಾಡಿ ಅನಂತರ ಐರ್ಲೆಂಡಿನ ಡಬ್ಲಿನ್ ರಾಷ್ಟ್ರೀಯ ವಿದ್ಯಾಲಯವನ್ನು ಸೇರಿ ಕಿಂಗ್ಸ್ ಇನ್‌ನಲ್ಲಿ ಬ್ಯಾರಿಸ್ಟರ್ ಆದರು. ಇವರು ಬಿ.ಎ. ಪದವಿಗೆ ಸಾಹಿತ್ಯ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಸಂವಿಧಾನ, ನ್ಯಾಯ, ಅಂತಾರಾಷ್ಟ್ರೀಯ ಕಾನೂನುಗಳನ್ನು ಆರಿಸಿಕೊಂಡಿದ್ದರು. ಅಲ್ಲಿ ಅನೇಕ ಭಾರತೀಯ ವಿದ್ಯಾರ್ಥಿಗಳು ಸೇರಿ ಕ್ರಾಂತಿಕಾರಿ ಸಂಘವನ್ನು ಸ್ಥಾಪಿಸಿಕೊಂಡರು. ರಾಷ್ಟ್ರಪ್ರೇಮವನ್ನು ತೋರಿಸಲು ವಿದೇಶೀ ಅರಿವೆಗಳನ್ನು ಸುಟ್ಟುಹಾಕಿದರು. ಐರ್ಲೆಂಡು ಇಂಗ್ಲೆಂಡಿನಿಂದ ಸ್ವತಂತ್ರವಾಗಲು ಹೋರಾಟದ ಹವಣಿಕೆಯಲ್ಲಿದ್ದದ್ದನ್ನು ಕಂಡಾಗ ಗಿರಿಯವರಿಗೆ ಭಾರತ ಐರ್ಲೆಂಡ್‌ಗಳ ಆಶೋತ್ತರಗಳಲ್ಲಿದ್ದ ಸಾಮ್ಯ ಗೋಚರವಾಯಿತು. ಐರ್ಲೆಂಡಿನವರು ಇಂಗ್ಲೆಂಡಿನವರಿಗಿಂತ ಹೆಚ್ಚಾಗಿ ಭಾರತೀಯರನ್ನು ಗೌರವಿಸುತ್ತಿದ್ದದ್ದನ್ನು ಗಿರಿಯವರು ಗಮನಿಸಿದರು. ಐರ್ಲೆಂಡಿನ ನಾಯಕ ಡ ವಲೇರ ಅವರನ್ನು ಗಿರಿಯವರು ಸಂದರ್ಶಿಸಿದರು.

ಗಿರಿಯವರು 1914ರಲ್ಲಿ ಗಾಂಧೀಜಿಯವರನ್ನು ಲಂಡನ್ನಿನಲ್ಲಿ ಸಂದರ್ಶಿಸಿದರು. ಗಾಂಧೀಜಿಯವರ ಎಲ್ಲ ವಿಚಾರಗಳನ್ನೂ ಉದಾಹರಣೆಗೆ ಅಹಿಂಸೆಯನ್ನು, ಆಗ ಗಿರಿಯವರು ಒಪ್ಪುತ್ತಿರಲಿಲ್ಲವಾದರೂ ಗಾಂಧೀಜಿಯವರಿಂದ ಬಹುಮಟ್ಟಿಗೆ ಪ್ರಭಾವಿತರಾದರು. ಯುದ್ಧದಲ್ಲಿ ಬ್ರಿಟಿಷರಿಗೆ ನೆರವಾಗಲು ಗಾಂಧೀಜಿಯವರ ಮಾತಿನಂತೆ ಗಿರಿಯವರು ರೆಡ್ ಕ್ರಾಸ್ ಸಂಸ್ಥೆ ಸೇರಿದ್ದರೂ ಅನಂತರ ವಿಚಾರ ಮಾಡಿದಾಗ ತಾವು ಅದಕ್ಕೆ ಸೇರಿದ್ದು ತಪ್ಪೆನಿಸಿ ಕೂಡಲೇ ಗಾಂಧೀಜಿಯವರಿಗೆ ಪತ್ರ ಬರೆದು ಆ ಸಂಸ್ಥೆಯಿಂದ ಬಿಡುಗಡೆ ಹೊಂದಿದರು. ಈ ಕ್ರಮ ಆಗ ಕಾನೂನುಬಾಹಿರವಾಗಿತ್ತಾದರೂ ಗಿರಿಯವರು ಹೆದರಲಿಲ್ಲ.

1916ರಲ್ಲಿ ಲಂಡನ್ನಿನಲ್ಲಿ ಜರುಗಿದ ಈಸ್ಟರ್ ದಂಗೆಯ ಅನಂತರ ಸಂಭವಿಸಿದ ದುರ್ಘಟನೆಗಳ ವಿಶೇಷ ಪರಿಣಾಮ ಗಿರಿಯವರ ಮೇಲಾಯಿತು. ಬಂದರು, ಗಣಿ ಮತ್ತು ರೈಲ್ವೆಗಳ ಸುಸಂಘಟಿತ ಕಾರ್ಮಿಕರು ಮುಷ್ಕರದ ಮೂಲಕ ಏನು ಮಾಡಬಲ್ಲರೆಂಬುದು ಗಿರಿಯವರಿಗೆ ಮನವರಿಕೆಯಾಯಿತು. ಭಾರತಕ್ಕೆ ಮರಳಿದ ಮೇಲೆ ಇದೇ ರೀತಿ ಕಾರ್ಮಿಕ ಶಕ್ತಿಯನ್ನು ಸಂಘಟಿಸಿ ಅದನ್ನು ರಾಜಕೀಯ ಹೋರಾಟದಲ್ಲಿ ಬಳಸಿಕೊಳ್ಳಬೇಕೆಂದು ನಿರ್ಧರಿಸಿದರು. ಆ ವೇಳೆಗಾಗಲೇ ಬ್ರಿಟಿಷ್ ಸರ್ಕಾರಕ್ಕೆ ಇವರ ಮೇಲೆ ಸಂಶಯ ಬಂದಿತ್ತು. ಆಗಿನ ಸೆಕ್ರೆಟರಿ ಆಫ್ ಸ್ಟೇಟ್ ಚೇಂಬರ್ಲಿನ್ ಕಾಮನ್ಸ್ ಸಭೆಯಲ್ಲಿ ಹೇಳಿಕೆ ಕೊಡುತ್ತ. ಗಿರಿಯವರಿಗೂ ಐರಿಷ್ ನಾಯಕರಿಗೂ ಸಂಪರ್ಕವಿದೆಯೆಂದು ಘೋಷಿಸಿದ. ಇದರ ಪರಿಣಾಮವಾಗಿ ಗಿರಿಯವರಿಗೆ ಅಮೇರಿಕಕ್ಕೆ ಹೋಗಲು ರಹದಾರಿ ಸಿಗಲಿಲ್ಲ. ಸ್ವದೇಶಕ್ಕೆ ಮರಳಿದರು. 1917ರಲ್ಲಿ ಸರಸ್ವತೀಬಾಯಿಯವರೊಡನೆ ಗಿರಿಯವರ ವಿವಾಹವಾಯಿತು. ಸರಸ್ವತೀಬಾಯಿ ಗಿರಿಯವರು ಬಳ್ಳಾರಿ ಜಿಲ್ಲೆಯವರು.

ಕಾರ್ಮಿಕ ಕ್ಷೇತ್ರವೆಂದರೇನೆಂಬುದು ಇನ್ನೂ ತಿಳಿಯದಿದ್ದ ಆ ಸಮಯದಲ್ಲಿ ಗಿರಿಯವರು ಆ ಕ್ಷೇತ್ರದಲ್ಲಿ ಪದಾರ್ಪಣೆ ಮಾಡಿದರು. 1915ರಲ್ಲಿಯೇ ಸರ್ವೆಂಟ್ಸ್ ಆಫ್ ಇಂಡಿಯ ಸೊಸೈಟಿಯ ಸದಸ್ಯರಾಗಿ ಸೇರಿದ್ದ ಇವರು ಮಹಾತ್ಮ ಗಾಂಧೀಜಿಯವರ ಸಾಬರಮತಿ ಆಶ್ರಮದಲ್ಲೂ ಕೆಲವು ದಿನ ಇದ್ದರು.

ಇವರು ಭಾರತಕ್ಕೆ ಮರಳಿದ ಅನಂತರ ಆಗ ಸುಪ್ರಸಿದ್ಧ ಬ್ಯಾರಿಸ್ಟರರೂ ರಾಜಕಾರಣಿಯೂ ಆಗಿದ್ದ ಟಿ.ಪ್ರಕಾಶಂ ಅವರನ್ನು ವೃತ್ತಿಸಂಬಂಧವಾಗಿ ಭೇಟಿಮಾಡಿದರು. ಗಿರಿಯವರು ಅಡ್ವೊಕೇಟ್ ಆಗಿ ಸೇರಿದಾಗ ಗಂಜಾಮಿನ ಜಿಲ್ಲಾ ನ್ಯಾಯಾಧೀಶ ಇವರಿಗೆ ಮುನ್ಸಿಫ್ ಸ್ಥಾನ ಕೊಡಿಸುವುದಾಗಿ ಹೇಳಿದನೆಂದೂ ಇವರ ಕ್ರಾಂತಿಕಾರಿ ವಿಚಾರಗಳನ್ನು ಅರಿತ ಮೇಲೆ ಆತ ಹೆದರಿದನೆಂದೂ ಹೇಳಲಾಗಿದೆ. ಗಿರಿಯವರು ವಕೀಲವೃತ್ತಿಯಲ್ಲಿ ಐದು ವರ್ಷ ಕಳೆಯುವುದರೊಳಗಾಗಿ ಸ್ವಾತಂತ್ರ್ಯ ಹೋರಾಟ ಇವರನ್ನು ಸೆಳೆಯಿತು. 1916ರಲ್ಲಿ ಇವರು ಲಖನೌದಲ್ಲಿ ಸೇರಿದ್ದ ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿದರು. 1921ರಲ್ಲಿ ಸತ್ಯಾಗ್ರಹ ಚಳವಳಿಯಲ್ಲಿ ಗಂಜಾಮಿನಲ್ಲಿ ಸತ್ಯಾಗ್ರಹ ಹೂಡಿ ಬಂಧಿತರಾದರು. ಇವರು ಜೈಲಿನಲ್ಲಿದ್ದಾಗ ರಾಜಕೀಯ ಧುರೀಣರ ಸ್ನೇಹವನ್ನು ಗಳಿಸಿಕೊಳ್ಳುವ ಅವಕಾಶ ಸಿಕ್ಕಿತು. ಕಾರಾಗೃಹದ ಸುಧಾರಣೆಗಾಗಿ ಅದರ ಒಳಗೆ ಸಂಘಟನೆ, ಆಂದೋಲನಗಳನ್ನು ಪ್ರಾರಂಭಿಸಿದರು.

ಕಾರಾಗೃಹದಿಂದ ಹೊರಬಂದ ಕೂಡಲೇ ಖರಗ್‌ಪುರದ ರೈಲ್ವೆ ಕಾರ್ಮಿಕ ನಿಯೋಗವೊಂದು ಗಿರಿಯವರನ್ನು ಸಂದರ್ಶಿಸಿ ತಮ್ಮ ಸಂಘವನ್ನು ಸಂಘಟಿಸಬೇಕೆಂದು ಕೋರಿತು. ಕೂಡಲೇ ಗಿರಿಯವರು ಒಪ್ಪಿಕೊಂಡು ಬಂಗಾಲ - ನಾಗಪುರ ರೈಲ್ವೆ ಸಂಘವನ್ನು ಸ್ಥಾಪಿಸಿದರು. ಒಂದೇ ದಶಕದಲ್ಲಿ ಈ ಸಂಘ ದೊಡ್ಡದಾಗಿ ಬೆಳೆಯಿತು. ಇಲ್ಲಿ ಗಿರಿ ಅವರು ಅತ್ಯಂತ

ಯಶಸ್ವಿಯಾದ ಮುಷ್ಕರವನ್ನು ಸಂಘಟಿಸಿದರು. ಈ ಸಂದರ್ಭದಲ್ಲಿ ಸು.60,000 ಕಾರ್ಮಿಕರು ಒಂದು ತಿಂಗಳ ಕಾಲ ಕೆಲಸಕ್ಕೆ ಹಾಜರಾಗದಿದ್ದಾಗ ಅವರ ಕುಟುಂಬಗಳ ರಕ್ಷಣೆ ಪೋಷಣೆಗಳ ವ್ಯವಸ್ಥೆಯ ಪ್ರತಿಯೊಂದು ವಿವರವನ್ನೂ ಗಿರಿಯವರು ಪ್ರತ್ಯಕ್ಷ ಪ್ರವಾಸ, ಭೇಟಿಗಳಿಂದ ನಿಯಂತ್ರಿಸಿದರು. ಇಂಥ ಬೃಹತ್ ಮುಷ್ಕರವನ್ನು ಗೌರವಯುತವಾಗಿ ನಿರ್ವಹಿಸಿ, ಕಾರ್ಮಿಕ ಸಂಘಟನೆಯ ಸಾಮರ್ಥ್ಯ ಆಡಳಿತವರ್ಗಕ್ಕೆ ಗೊತ್ತಾಗುವಂತೆ ಮಾಡಿದರು. ಆ ಸಂಘವನ್ನು ಸರ್ಕಾರ ಮನ್ನಿಸಬೇಕಾಯಿತು. ಇವರು ಅಖಿಲ ಭಾರತ ರೈಲ್ವೆ ಕೆಲಸಗಾರರ ಫೆಡರೇಷನ್ನಿನ ಅಧ್ಯಕ್ಷರಾಗಿದ್ದರು. ಎರಡು ಬಾರಿ ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ಸಿನ ಅಧ್ಯಕ್ಷರಾಗಿಯೂ ಇದ್ದರು. 1927ರಲ್ಲಿ ಜಿನೀವದಲ್ಲಿ ಸೇರಿದ್ದ ಅಂತಾರಾಷ್ಟ್ರೀಯ ಕಾರ್ಮಿಕ ಸಮ್ಮೇಳನದಲ್ಲಿ ಇವರು ಭಾರತದ ಕಾರ್ಮಿಕರ ನಿಯೋಗಿಯಾಗಿ ಭಾಗವಹಿಸಿದ್ದರು. 1927-30ರ ಅವಧಿಯಲ್ಲಿ ಹಲವು ಮುಷ್ಕರಗಳನ್ನು ಸಂಘಟಿಸಿದರಾದರೂ ಇವರು ಮುಷ್ಕರಗಳನ್ನು ಎಂದೂ ಸ್ವಾಗತಿಸುತ್ತಿರಲಿಲ್ಲ. ಕಾರ್ಮಿಕರು ಅನಿವಾರ್ಯ ಪರಿಸ್ಥಿತಿಯಲ್ಲಿ ಮಾತ್ರ, ಮಾಲೀಕರಿಗೆ ಮುನ್ಸೂಚನೆ ಕೊಟ್ಟು, ಸಂಧಾನದ ಎಲ್ಲ ಪ್ರಯತ್ನಗಳೂ ವಿಫಲವಾದಾಗ, ಮುಷ್ಕರ ಹೂಡಬೇಕೆಂಬುದು ಇವರ ಮತ. ಕಾರ್ಮಿಕ ಕ್ಷೇತ್ರದಲ್ಲಿ ಗಿರಿಯವರಿಗೆ ಎಂ.ಎನ್.ಜೋಶಿಯವರು, ಮಾರ್ಗದರ್ಶಕರಾಗಿದ್ದರು.

ತಮ್ಮ ತಂದೆ ಕೇಂದ್ರ ವಿಧಾನ ಪರಿಷತ್ತಿನಲ್ಲಿ ಸದಸ್ಯರಾಗಿದ್ದರೂ (1927-30) ಗಿರಿಯವರು ವಿಧಾನ ಸಭಾ ಪ್ರವೇಶಕ್ಕಾಗಿ ಪ್ರಯತ್ನ ಮಾಡಿದವರಲ್ಲ. ಆದರೆ ಕಾರ್ಮಿಕರ ಹಿತ ಪಾರ್ಲಿಮೆಂಟರಿ ಚಟುವಟಿಕೆಗಳಿಂದ ಸಾಧಿತವಾಗುವುದೆಂದು ಅನ್ನಿಸಿದ ಅನಂತರ ಸದಸ್ಯಸ್ಥಾನಕ್ಕಾಗಿ ಪ್ರಯತ್ನಿಸಿದರು. 1934ರಲ್ಲಿ ಕೇಂದ್ರ ವಿಧಾನ ಸಭೆಗೆ ಚುನಾಯಿತರಾದರು (1934-37). ಆಗ ಇವರು ಕಾರ್ಮಿಕರ ಸಮಸ್ಯೆಗಳತ್ತ ಸರ್ಕಾರದ ಗಮನ ಸೆಳೆಯಲು ಯತ್ನಿಸಿದರು. ಭಾರತದಲ್ಲೇ ರೈಲ್ವೆ ಎಂಜಿನ್‌ಗಳನ್ನು ತಯಾರಿಸುವುದು ಉಳಿತಾಯದ ಮಾರ್ಗವೆಂದು ಆಗಲೇ ಸೂಚಿಸಿದ್ದರು. ಭಾರತದಲ್ಲಿ ಆರ್ಥಿಕ ಯೋಜನೆಗಳ ಮಾತು ಹೊಸದಾಗಿದ್ದ ಆ ಕಾಲದಲ್ಲಿ ಗ್ರಾಮೀಣ ಪ್ರಗತಿಗಾಗಿ ಆರ್ಥಿಕ ಯೋಜನೆಯೊಂದನ್ನು ರೂಪಿಸಿ ಕೇಂದ್ರ ವಿಧಾನ ಮಂಡಲದ ಮುಂದೆ ಗಿರಿಯವರು ಮಂಡಿಸಿದ್ದರು. ಕೈಗಾರಿಕೆಗಳ ವ್ಯಾಜ್ಯಗಳಲ್ಲಿ ಸಂಧಾನದ ಸಾಧನಗಳಾಗಿ ಮಂಡಳಿಗಳು ಇರಬೇಕೆಂದು ಆಗ ವಾದಿಸಿದ್ದ ಪರಿಣಾಮವಾಗಿ ಇಂದು ಆ ಬಗ್ಗೆ ಅನೇಕ ಕಾನೂನುಗಳಾಗಿ ಕಾರ್ಮಿಕ ಸಂಸ್ಥೆಗಳು ವಿಪುಲ ಸೌಲಭ್ಯ ಪಡೆದಿವೆ.

1937-39ರಲ್ಲಿ ಮದರಾಸಿನಲ್ಲಿ ಕಾರ್ಮಿಕ, ಕೈಗಾರಿಕೆ ಮತ್ತು ಸಹಕಾರ ಮಂತ್ರಿಯಾಗಿದ್ದ ಗಿರಿಯವರು ಕಾರ್ಮಿಕ ನೀತಿಯನ್ನು ಸ್ಪಷ್ಟೀಕರಿಸುತ್ತ ಮಾಲೀಕರ, ಕಾರ್ಮಿಕರ ಮತ್ತು ಸರ್ಕಾರದ ತ್ರಿಪಕ್ಷ ಸಮ್ಮೇಳನವನ್ನು ಕರೆದರು. ಆಗ ಆ ಪ್ರಾಂತ್ಯದ ಮುಖ್ಯಮಂತ್ರಿಯಾಗಿದ್ದ ರಾಜಗೋಪಾಲಾಚಾರಿಯವರು ಇದನ್ನು ಗಿರಿಯವರ ದರ್ಬಾರ್ ಎಂದು ನಗೆಯಾಡಿದ್ದರು. ಆಗಿನ ರಾಜ್ಯಪಾಲರೂ ಇದರ ಬಗ್ಗೆ ತಾತ್ಸಾರಭಾವ ತಳೆದಿದ್ದರು. ಭಾರತೀಯ ವಲಸೆಗಾರರ ಸಮಸ್ಯೆಯನ್ನೂ ಇವರು ಆಗ ಕೈಗೆತ್ತಿಕೊಂಡರು. 1938ರಲ್ಲಿ ಕಾಂಗ್ರೆಸ್ ರಚಿಸಿದ ರಾಷ್ಟ್ರೀಯ ಯೋಜನಾ ಆಯೋಗಕ್ಕೆ ಇವರು ಸಂಚಾಲಕರಾದರು. ಭಾರತದ ಪಂಚವಾರ್ಷಿಕ ಯೋಜನೆಗಳ ಭಾವನೆ ರೂಪುಗೊಂಡದ್ದು ಆಗ.

ಪ್ರಕಾಶಂ ಅವರು ಮದರಾಸಿನಲ್ಲಿ ರಚಿಸಿದ ಸರ್ಕಾರದಲ್ಲೂ ಇವರು ಮಂತ್ರಿಯಾಗಿದ್ದರು (1946-47). ಅನಂತರ ಇವರು ಸಿಂಹಳದಲ್ಲಿ ಭಾರತದ ಹೈಕಮಿಷನರಾಗಿದ್ದರು (1947-51). ಲೋಕಸಭಾ ಸದಸ್ಯರಾಗಿದ್ದರು (1952-57). ಕೇಂದ್ರ ಸರ್ಕಾರದ ಕಾರ್ಮಿಕ ಮಂತ್ರಿಯಾಗಿಯೂ ಇದ್ದರು (1952-54). ಕಾರ್ಮಿಕ ನೀತಿಯ ವಿಚಾರವಾಗಿ ಭಿನ್ನಾಭಿಪ್ರಾಯ ಬಂದುದರಿಂದ ಆ ಸ್ಥಾನಕ್ಕೆ ರಾಜೀನಾಮೆ ಸಲ್ಲಿಸಿದರು. 1958ರಲ್ಲಿ ಸಾಮಾಜಿಕ ಕಾರ್ಯದ ಭಾರತೀಯ ಸಮ್ಮೇಳನದ ಚುನಾಯಿತ ಅಧ್ಯಕ್ಷರಾಗಿದ್ದರು. ಕಾರ್ಮಿಕ ಅರ್ಥಶಾಸ್ತ್ರದ ಭಾರತೀಯ ಸಂಘದ ಸ್ಥಾಪಕ ಅಧ್ಯಕ್ಷರಾಗಿದ್ದರು. ಭಾರತೀಯ ಕಾರ್ಮಿಕ ಸಂಘ ಚಳವಳಿ, ಕಾರ್ಮಿಕ ಅರ್ಥಶಾಸ್ತ್ರ ಇವುಗಳ ಬೆಳವಣಿಗೆಗೆ ಗಿರಿಯವರು ಬಹಳಮಟ್ಟಿಗೆ ಕಾರಣ.

ಇವರು 1958-60ರಲ್ಲಿ ಉತ್ತರ ಪ್ರದೇಶಕ್ಕೂ 1961-65ರಲ್ಲಿ ಕೇರಳಕ್ಕೂ 1965-67ರಲ್ಲಿ ಮೈಸೂರು ರಾಜ್ಯಕ್ಕೂ ರಾಜ್ಯಪಾಲರಾಗಿದ್ದರು. 1967 ಮೇ 13 ರಿಂದ 1969 ಮೇ 3ರ ವರೆಗೆ ಭಾರತದ ಉಪರಾಷ್ಟ್ರಪತಿಯಾಗಿಯೂ ರಾಜ್ಯಸಭೆಯ ಅಧ್ಯಕ್ಷರಾಗಿಯೂ ಇದ್ದರು. ಆಗ ಜಾಕಿರ್ ಹುಸೇನ್ ನಿಧನರಾದ್ದರಿಂದ ಅವರ ಸ್ಥಾನವನ್ನು ವಹಿಸಿಕೊಂಡರು. ಮುಂದೆ ರಾಷ್ಟ್ರಪತಿ ಹುದ್ದೆಗೆ ಸ್ಪರ್ಧಿಸಿ ಜಯಶೀಲರಾಗಿ ಭಾರತದ ರಾಷ್ಟ್ರಪತಿಯಾಗಿ ಐದು ವರ್ಷಗಳ ಕಾಲ ಆ ಹುದ್ದೆಯನ್ನು ಅಲಂಕರಿಸಿ 1974 ಆಗಸ್ಟ್ 23ರಂದು ನಿವೃತ್ತರಾದರು. 1975ರಲ್ಲಿ ಇವರಿಗೆ ಭಾರತರತ್ನ ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಗಿರಿಯವರು ಒಳ್ಳೆಯ ಲೇಖಕ, ವಾಗ್ಮಿ. ಇಂಡಸ್ಟ್ರಿಯಲ್ ರಿಲೇಷನ್ಸ್ (1956), ಲೇಬರ್ ಪ್ರಾಬ್ಲಮ್ಸ್ ಇನ್ ಇಂಡಿಯನ್ ಇಂಡಸ್ಟ್ರಿ (1958) ಮುಂತಾದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಇವು ಇಂದಿಗೂ ಆಯಾ ಕ್ಷೇತ್ರಗಳಲ್ಲಿ ಪ್ರಮಾಣ ಗ್ರಂಥಗಳಾಗಿವೆ. 1980ರಲ್ಲಿ ಇವರು ನಿಧನಹೊಂದಿದರು (ಜೆ.ಆರ್.ಪಿ.)

**ಗಿರೀಶ್ ಕಾರ್ನಾಡ :** 1938-. ಜ್ಞಾನಪೀಠ ಪ್ರಶಸ್ತಿ ಪಡೆದ ಕನ್ನಡ ನಾಟಕಕಾರ, ನಟ, ಚಲನಚಿತ್ರನಿರ್ದೇಶಕ. 1938 ಮೇ 19ರಂದು ಜನಿಸಿದರು. ತಂದೆ ರಘುನಾಥ ಕಾರ್ನಾಡ್, ವೈದ್ಯರು. ತಾಯಿ ಕೃಷ್ಣಬಾಯಿ. ಗಿರೀಶ್ ಕಾರ್ನಾಡ್‌ರು 1958ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಗಣಿತಶಾಸ್ತ್ರ ಮತ್ತು ಸಂಖ್ಯಾಕಲನಶಾಸ್ತ್ರದಲ್ಲಿ ಬಿ.ಎ. ಪದವಿ ಗಳಿಸಿದರು. ಅನಂತರ ಮುಂಬಯಿಯಲ್ಲಿ ಎಂ.ಎ. ವಿದ್ಯಾರ್ಥಿಯಾಗಿದ್ದಾಗ ರೋಡ್ಸ್ ವಿದ್ಯಾರ್ಥಿವೇತನ ಪಡೆದು ಇಂಗ್ಲೆಂಡಿಗೆ ಪ್ರಯಾಣ ಮಾಡಿದರು. 1963ರಲ್ಲಿ ಆಕ್ಸ್‌ಫರ್ಡಿನ ಬಿ.ಎ. ಪದವಿ ಸಂಪಾದಿಸಿದರು. ಇಂಗ್ಲೆಂಡಿನಲ್ಲಿ ಆಕ್ಸ್‌ಫರ್ಡ್ ಯೂನಿಯನ್ನಿನ ಅಧ್ಯಕ್ಷರೂ ಇದ್ದರು. ಯೂನಿಯನ್ನಿಗೆ ಪ್ರಪ್ರಥಮವಾಗಿ ಮಹಿಳೆಯರಿಗೂ ಪ್ರವೇಶ ದೊರಕಿದ್ದು ಕಾರ್ನಾಡರ ಅಧ್ಯಕ್ಷತೆಯ ಅವಧಿಯಲ್ಲಿ. ಕಾರ್ನಾಡರು ಇಂಗ್ಲೆಂಡಿನಿಂದ ಭಾರತಕ್ಕೆ ಹಿಂದಿರುಗಿದ ಮೇಲೆ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ ಸಂಸ್ಥೆಯ ಮದರಾಸು ಶಾಖೆಯಲ್ಲಿ ಉಪವ್ಯವಸ್ಥಾಪಕರಾದರು (1963-69); ಅನಂತರ ಅದರ ವ್ಯವಸ್ಥಾಪಕರಾದರು (1969-70).



ಇವರು ಹವ್ಯಾಸಿ ರಂಗಭೂಮಿಯ ಒಳ್ಳೆಯ ನಟರೆಂದೂ ನಾಟಕ ಲೇಖಕರೆಂದೂ ಹೆಸರುಗಳಿಸಿದ್ದಾರೆ. ಇವರು 1961 ರಲ್ಲಿ ಪ್ರಕಟಿಸಿದ ಯಯಾತಿ ನಾಟಕ ಹಲವು ಬಾರಿ ರಂಗಭೂಮಿಯ ಮೇಲೆ ಪ್ರದರ್ಶಿತವಾಗಿ ಪ್ರೇಕ್ಷಕರ ಮೆಚ್ಚುಗೆ ಗಳಿಸಿತು. ಪುರಾಣದ ಯಯಾತಿಯನ್ನು ಆಧುನಿಕ ದೃಷ್ಟಿಕೋನದಿಂದ ಪರಿವೀಕ್ಷಿಸಿ ಅವನ

ಬಾಳಿನ ದುರಂತತೆಯನ್ನು ಎತ್ತಿ ತೋರುವ ಯಯಾತಿಯ ತಂತ್ರ ಅತ್ಯಂತ ಯಶಸ್ವಿಯಾಗಿದೆ. ಭಾರತೀಯ ಇತಿಹಾಸದ ವಾದಗ್ರಸ್ತ ಸುಲ್ತಾನರಲ್ಲೊಬ್ಬನ ಬಾಳಿನ ಸುತ್ತ ಹೆಣೆದಿರುವ 'ತುಘಲಕ್' ನಾಟಕವೂ (1964) ನವೀನ ತಂತ್ರದಿಂದ ಕೂಡಿ, ಅವನ ಬಾಳಿನ ಕಥೆಗೆ ಹೊಸ ಆಯಾಮವೊಂದನ್ನು ನೀಡುತ್ತದೆ. ಅದು ಕನ್ನಡದಲ್ಲಿ ಮಾತ್ರವಲ್ಲದೆ ಇಂಗ್ಲಿಷ್, ಹಿಂದಿ ಮತ್ತು ಮರಾಠಿಯಲ್ಲೂ ರಂಗಪ್ರಯೋಗಗೊಂಡು ಆ ಭಾಷೆಗಳ ಪ್ರೇಕ್ಷಕರ ಮೆಚ್ಚುಗೆಗೆ ಪಾತ್ರವಾಗಿದೆ. ಮಾ ನಿಷಾದ (1964), ಹಯವದನ (1977), ಅಂಜುಮಲ್ಲಿಗೆ (1980), ಹಿಟ್ಟಿನ ಹುಂಜ (1980), ನಾಗಮಂಡಲ (1988), ತಲೆದಂಡ (1990), ಅಗ್ನಿ ಮತ್ತು ಮಳೆ (1995), ಟಿಪ್ಪುವಿನ ಕನಸುಗಳು ಇವು ಕಾರ್ನಾಡರು ಬರೆದ ಇತರ ನಾಟಕಗಳು. ಇವರ ಯಯಾತಿಗೆ ರಾಜ್ಯಪ್ರಶಸ್ತಿಯೂ (1961) ತುಘಲಕ್‌ಗೆ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿಯೂ (1969) ಲಭಿಸಿವೆ. 1971ರಲ್ಲಿ ಭಾರತೀಯ ಭಾಷೆಗಳಲ್ಲಿ ಸೃಷ್ಟಿಯಾದ ನಾಟಕಗಳ ಪೈಕಿ ಅತ್ಯುತ್ಕೃಷ್ಟವಾದದ್ದೆಂದು ಭಾರತೀಯ ನಾಟ್ಯ ಸಂಘದ ಬಹುಮಾನ ಗಳಿಸಿದ ಹಯವದನದಲ್ಲಿ ಯಕ್ಷಗಾನದ ತಂತ್ರವನ್ನು ಯಶಸ್ವಿಯಾಗಿ ಅಳವಡಿಸಲಾಗಿದೆ. ಕಾರ್ನಾಡರು ನಾಟಕಗಳಿಗೆ ಆಯ್ದುಕೊಳ್ಳುವ ವಸ್ತು ಪುರಾಣ, ಇತಿಹಾಸ, ಜನಪದಗಳಾದರೂ ಅವರ ಕೃತಿಗಳಲ್ಲಿ ಸಮಕಾಲೀನ ಸಮಸ್ಯೆ ಸಂವೇದನಗೆಳನ್ನು ಅರ್ಥೈಸುವ ಪ್ರಾಮಾಣಿಕ ಪ್ರಯತ್ನ ಗಮನಾರ್ಹ.

ಗಿರೀಶ್ ಕಾರ್ನಾಡರು ಹೆಚ್ಚು ಪ್ರಸಿದ್ಧಿ ಪಡೆದದ್ದು ಯು.ಆರ್.ಅನಂತಮೂರ್ತಿಯವರ ಸಂಸ್ಕಾರ ಕಾದಂಬರಿಯನ್ನು ಆಧರಿಸಿ ತಯಾರಿಸಲಾದ ಅದೇ ಹೆಸರಿನ ಕನ್ನಡ ಚಲನಚಿತ್ರದಿಂದಾಗಿ. ಸಂಸ್ಕಾರದ ಚಿತ್ರಕಥಾ ಲೇಖಕರೂ ಅದರಲ್ಲಿ ಪ್ರಾಣೇಶಾಚಾರ್ಯನ ಪಾತ್ರ ವಹಿಸಿದವರೂ ಗಿರೀಶ್‌ಕಾರ್ನಾಡರೇ. ತುಂಬ ವಾದಗ್ರಸ್ತವಾದ ಈ ಚಿತ್ರ ಮೊದಲು ಭಾರತದ ಸೆನ್ಸಾರ್ ಬೋರ್ಡಿನಿಂದ ಬಹಿಷ್ಕೃತವಾಗಿ ಅನಂತರ ಒಪ್ಪಿಗೆಯ ಮುದ್ರೆ ದೊರಕಿಸಿಕೊಂಡಿತು. ಇದು ಅನೇಕ ವಿಮರ್ಶಕರ ಮೆಚ್ಚುಗೆ ಗಳಿಸಿತಲ್ಲದೆ, 1971ರ ಶ್ರೇಷ್ಠ ಚಿತ್ರವೆಂದು ರಾಷ್ಟ್ರಪತಿಗಳ ಸ್ವರ್ಣಪದಕ ಗಳಿಸಿತು. ಬಿ.ವಿ.ಕಾರಂತರ ಸಹಯೋಗದಲ್ಲಿ ಇವರು ನಿರ್ದೇಶಿಸಿದ ಎಸ್.ಎಲ್.ಭೈರಪ್ಪನವರ ವಂಶವೃಕ್ಷ ಕಾದಂಬರಿ ಆಧಾರಿತ ಚಿತ್ರವೂ ತುಂಬ ಯಶಸ್ಸು ಗಳಿಸಿತು. ಇದರ ಚಿತ್ರಕಥೆಯನ್ನು ಬರೆದವರೂ ಕಾರ್ನಾಡರೇ. ಇದರಲ್ಲೂ ಕಾರ್ನಾಡರು ಪಾತ್ರವಹಿಸಿದ್ದಾರೆ. ಇದಕ್ಕೆ ರಾಜ್ಯ ಪ್ರಶಸ್ತಿಯೂ ಫಿಲ್ಮ್‌ಫೇರ್ ಪ್ರಶಸ್ತಿಯೂ ದೊರಕಿವೆ. ಇವರು ನಿರ್ದೇಶಿಸಿರುವ ಇನ್ನೊಂದು ಚಿತ್ರ ಶ್ರೀಕೃಷ್ಣ ಆಲನಹಳ್ಳಿಯವರ ಕಾಡು ಕಾದಂಬರಿಯನ್ನು ಆಧರಿಸಿದ್ದು. ಉತ್ಸವ್ ಇವರು ನಿರ್ದೇಶಿಸಿದ ಹಿಂದಿ ಚಿತ್ರ. ನಿಶಾಂತ್ ಎಂಬ ಹಿಂದಿ ಚಿತ್ರದಲ್ಲಿ ಕಾರ್ನಾಡರು ಅಭಿನಯಿಸಿದ್ದಾರೆ. ಕುವೆಂಪು ಅವರ ಕಾನೂರು ಹೆಗ್ಗಡತಿ ಕಾದಂಬರಿಯನ್ನು ಆಧರಿಸಿ ಅದೇ ಹೆಸರಿನ ಚಿತ್ರವನ್ನು ನಿರ್ದೇಶಿಸಿ, ಅಭಿನಯಿಸಿದ್ದಾರೆ (1999). ಇವರ ನಾಟಕಗಳು ವಿದೇಶಗಳಲ್ಲೂ ಪ್ರದರ್ಶಿಸಲ್ಪಟ್ಟಿವೆ. ಇವು ಅನೇಕ ಭಾಷೆಗಳಿಗೆ ಭಾಷಾಂತರಗೊಂಡಿವೆ.

ಸಾಹಿತ್ಯ, ರಂಗಭೂಮಿ, ಚಲನಚಿತ್ರ - ಇವುಗಳ ನಡುವೆ ನಿಕಟಬಾಂಧವ್ಯ ಇದ್ದಾಗಲೇ ಹೊಸಹೊಸ ಪ್ರಯೋಗಗಳು ಸಾಧ್ಯವೆಂದೂ ಬಂಗಾಲದಲ್ಲಿ ಇವು ಮೂರೂ ಪರಸ್ಪರ ಪೂರಕವಾಗಿರುವುದರಿಂದಲೇ ಅಲ್ಲಿಯ ಚಲನಚಿತ್ರ ನವ್ಯತೆಯ ಹಾದಿ ಹಿಡಿದಿದೆಯೆಂದೂ ಭಾವಿಸಿರುವ ಕಾರ್ನಾಡರು ಈ ಮೂರೂ ಕ್ಷೇತ್ರಗಳಲ್ಲಿ ಕೆಲಸ ಮಾಡಿದ್ದಾರೆ. ಗಣಿತಶಾಸ್ತ್ರದ ಶಿಸ್ತಿನಂತೆಯೇ ರಂಗಕರ್ಮ ಕೂಡ ಎಂಬುದು ಕಾರ್ನಾಡರ ನಂಬುಗೆ. ಸ್ವತಃ ಗಣಿತಶಾಸ್ತ್ರದ ವಿದ್ಯಾರ್ಥಿಯಾಗಿ, ವಿದೇಶಯಾತ್ರೆ ಮಾಡಿ ಅಲ್ಲಿಯ ರಂಗಭೂಮಿ, ಚಿತ್ರರಂಗವನ್ನು ವೀಕ್ಷಿಸಿರುವ ಗಿರೀಶ ಕಾರ್ನಾಡರು ಕನ್ನಡ ರಂಗಭೂಮಿ ಹಾಗೂ ಚಲನಚಿತ್ರ ಕ್ಷೇತ್ರದಲ್ಲೂ ನವ್ಯ ವಿಧಾನವನ್ನು ಪ್ರಯೋಗಿಸಿ ಯಶಸ್ವಿಯಾಗಿದ್ದಾರೆ. ತೆರೆಯ ಮೇಲೆ ಪ್ರಸಿದ್ಧರಾದ ಮತ್ತು ಹಣ ದೊರಕಿಸುವ ಭರವಸೆ ಇರುವ ನಟನಟಿಯರನ್ನು ಬಿಟ್ಟು ತಾವು ಚಿತ್ರೀಕರಿಸಲಿರುವ ಕಥೆಗೆ ಸೂಕ್ತರಾದವರನ್ನು ಅಭಿನಯಕ್ಕೆ ಆರಿಸಿಕೊಳ್ಳುವುದೂ ವೇಷಭೂಷಣಗಳಿಗಾಗಲಿ ಚಿತ್ರನಿರ್ಮಾಣ ಶಾಲೆಯ ಪೂರ್ವಸಿದ್ಧ ದೃಶ್ಯ ಸಂಯೋಜನೆಗಾಗಲಿ ಪ್ರಾಮುಖ್ಯ ಕೊಡದೆ ಹೊರಾಂಗಣದ ಸಹಜ ಪರಿಸರದಲ್ಲಿ ನೇರವಾಗಿ ಚಿತ್ರ ತೆಗೆಯುವುದೂ ಇವರು ಸಾಮಾನ್ಯವಾಗಿ ಅನುಸರಿಸುವ ಕ್ರಮ. ಇವರು ಸ್ವಲ್ಪ ಕಾಲ ಪುಣೆಯ ಭಾರತೀಯ ಚಲನಚಿತ್ರ ಮತ್ತು ದೂರದರ್ಶನ ಸಂಸ್ಥೆಯ ನಿರ್ದೇಶಕರಾಗಿದ್ದರು. ಇವರು ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿಯೂ ಕಾರ್ಯನಿರ್ವಹಿಸಿದ್ದಾರೆ. ಇವರಿಗೆ ಪದ್ಮಶ್ರೀ (1974), ಪದ್ಮಭೂಷಣ (1992), ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿ(1976) ಮತ್ತು ಜ್ಞಾನಪೀಠ ಪ್ರಶಸ್ತಿಗಳೂ (1998) ದೊರಕಿವೆ. (ಎಚ್.ಎಸ್.ಕೆ.)

**ಗಿರೀಶ್ ಕಾಸರವಳ್ಳಿ :** ಕನ್ನಡದ ಹೊಸ ಅಲೆಯ ಚಿತ್ರ ನಿರ್ದೇಶಕ. ಶಿವಮೊಗ್ಗ ಜಿಲ್ಲೆ ಕಾಸರವಳ್ಳಿಯಲ್ಲಿ ಜನಿಸಿದರು. ಶಿವಮೊಗ್ಗದಲ್ಲಿ ಪ್ರಾರಂಭಿಕ ಶಿಕ್ಷಣ ಪಡೆದರು. ಅನಂತರ ಚಲನಚಿತ್ರ ನಿರ್ದೇಶನದ ಬಗೆಗೆ ಆಸಕ್ತಿ ಹೊಂದಿ ಪುಣೆಯ ಚಲನಚಿತ್ರ ಸಂಸ್ಥೆಯಲ್ಲಿ ನಿರ್ದೇಶನದ ಡಿಪ್ಲೊಮಾ ತರಗತಿಗೆ ಸೇರಿದರು. ತರಬೇತಿಯ ಅವಧಿಯಲ್ಲಿ 'ಅವಶೇಷ' ಕಿರುಚಿತ್ರ ನಿರ್ದೇಶಿ ಸಿದರು. ಈ ಚಿತ್ರ ಅತ್ಯುತ್ತಮ ಪ್ರಯೋಗಾತ್ಮಕ ಚಿತ್ರವೆಂದು ಪ್ರಶಸ್ತಿ ಗಳಿಸಿತು (1975). ಬೆಂಗಳೂರಿನ ಆದರ್ಶ ಚಲನ ಚಿತ್ರ ಸಂಸ್ಥೆಯ ಪ್ರಾಂಶುಪಾಲರಾಗಿಯೂ ಸ್ವಲ್ಪಕಾಲ ಇವರು ಸೇವೆಸಲ್ಲಿಸಿದರು. ಅನಂತರ ಇವರು ಬಿ.ವಿ.ಕಾರಂತರೊಂದಿಗೆ ಚೋಮನ ದುಡಿ, ಸಿ.ಆರ್.ಸಿಂಹರೊಂದಿಗೆ ಕಾಕನಕೋಟೆ ಚಿತ್ರಗಳಲ್ಲಿ ಸಹಾಯಕ ನಿರ್ದೇಶಕರಾಗಿ ಅನುಭವ ಗಳಿಸಿದರು. ಯು.ಆರ್.ಅನಂತಮೂರ್ತಿಯವರ ಕಥೆ ಆಧಾರಿತ ಘಟಶ್ರಾದ್ಧ ಇವರು ಸ್ವತಂತ್ರವಾಗಿ ನಿರ್ದೇಶಿಸಿದ ಮೊದಲ ಚಿತ್ರ (1977). ಈ ಚಿತ್ರ ಸ್ವರ್ಣಕಮಲ ರಾಷ್ಟ್ರಪ್ರಶಸ್ತಿ ಗಳಿಸಿತು.



ಅನಂತರ ಇವರು ನಿರ್ದೇಶಿಸಿದ ಹಲವು ಚಿತ್ರಗಳು ರಾಜ್ಯ ಮತ್ತು ರಾಷ್ಟ್ರಪ್ರಶಸ್ತಿಗಳನ್ನು ಗಳಿಸಿದವು. ಆಕ್ರಮಣ (1980), ಮೂರು ದಾರಿಗಳು (1981), ತಬರನ ಕಥೆ (1987), ಬಣ್ಣದವೇಷ (1988), ಮನೆ (1990), ಕ್ರೌರ್ಯ, ತಾಯಿಸಾಹೇಬ (1996), ದ್ವೀಪ (2002, ಹಸೀನಾ (2005) -- ಇವು ಇವರು ನಿರ್ದೇಶಿಸಿದ ಪ್ರಮುಖ ಚಿತ್ರಗಳು.

ತಬರನ ಕಥೆ (ಪೂರ್ಣಚಂದ್ರ ತೇಜಸ್ವಿ), ಬಣ್ಣದವೇಷ (ಸುಂದರ ನಾಡಕರ್ಣಿ), ತಾಯಿಸಾಹೇಬ (ರಂ.ಶಾ.) ಹಾಗೂ ದ್ವೀಪ (ನಾ.ಡಿಸೋಜ) ಚಿತ್ರಗಳೂ ಇವರಿಗೆ ಸ್ವರ್ಣಕಮಲ ಪ್ರಶಸ್ತಿ ತಂದುಕೊಟ್ಟಿವೆ. ಇವರು ನಿರ್ದೇಶಿಸಿದ ಹಸೀನಾ ಚಿತ್ರಕ್ಕೆ (ಕಥೆ: ಭಾನುಮುಷ್ತಾಕ್) ಅತ್ಯುತ್ತಮ ಸಾಮಾಜಿಕ ಸಂದೇಶವುಳ್ಳ ಚಿತ್ರವೆಂದು ರಾಷ್ಟ್ರಪ್ರಶಸ್ತಿ ಬಂದಿದೆ (2005). ಸಮಾಜ ಅರ್ಥವಂತಿಕೆಯ ಚಿತ್ರ ನಿರ್ಮಾಣದೊಂದಿಗೆ ಗಿರೀಶ್ ಕಾಸರವಳ್ಳಿ ಸೃಜನಶೀಲ ನಿರ್ದೇಶಕರಾಗಿ ಉಳಿದಿದ್ದಾರೆ. ಇವರ ಪತ್ನಿ ವೈಶಾಲಿ. ಅವರು ಕೂಡ ರಂಗಭೂಮಿ ನಟಿ. ಚಲನಚಿತ್ರಗಳಲ್ಲಿ ಅಭಿನಯಿಸುವುದರೊಂದಿಗೆ ಕಿರುತೆರೆಯ ಧಾರಾವಾಹಿಗಳನ್ನು ನಿರ್ದೇಶಿಸುತ್ತಿದ್ದಾರೆ.. (ಜಿ.ಎಂಯು.)

**ಗೀಗೀ ಪದ :** ಉತ್ತರ ಕರ್ನಾಟಕದಲ್ಲಿ ಪ್ರಚಲಿತವಾಗಿರುವ ಗೀಯ ಗೀಯ ಗೀಗೀ ಹರೇ ಗೀಯ ಗಾS ಎಂಬ ಪಲ್ಲವಿಯೊಂದಿಗೆ ಹಾಡುವ ಒಂದು ಜನಪದ ಗೀತಸಂಪ್ರದಾಯ. ಈ ಗೀಗೀ ಪದದ ಜನನವಾದುದು 1875ರಲ್ಲಿ. ಮೊದಲಿನಿಂದಲೂ ರಾಯಬಾಗ ತಾಲ್ಲೂಕಿನ ಚಿಂಚಲಿ ಗ್ರಾಮದ ಮಾಯಾಮ್ಮನ ಜಾತ್ರೆಯಲ್ಲಿ ಕನ್ನಡ ಲಾವಣಿಕಾರರೂ ಮರಾಠಿ ಲಾವಣಿಕಾರರೂ ಕೂಡಿ ವಾದದ ಲಾವಣಿಗಳನ್ನು ಹಾಡುತ್ತಿದ್ದರು. 1875ರ ಮಾಯಮ್ಮನ ಜಾತ್ರೆಯಲ್ಲಿ ಮರಾಠಿ ಲಾವಣಿಕಾರರು ಡಪ್ಪು ಉಪಯೋಗಿಸಿ ಲಾವಣಿ ಹಾಡಿದರು. ಅದೇ ದಿನ ರಾತ್ರಿ ಕನ್ನಡಿಗರು ಡಪ್ಪು, ತುಂತುಣಿ, ತಾಳ ಬಾರಿಸಿ ಮೇಳ ಮಾಡಿದರು. ತುಂತುಣಿ, ತಾಳ ಬಾರಿಸುವವರು ಗೀಗೀ ದನಿ ಎಳೆದರು. ಈ ರಚನೆ ಮಾಡಿದವರಲ್ಲಿ

ತೇರದಾಳ ಅಣ್ಣು ಯಂಕಾರಾಮ ಮುಖ್ಯನಾದವ. ಇವನೇ ಗೀಗೀ ಶ್ರುತಿ ಹಾಕಿ, ಶ್ರುತಿದೇವ (ಗಣಪತಿ) ಶ್ರುತಿದೇವಿ (ಸರಸ್ವತಿ) ಎಂದು ಹಾಡಿ ಗೀಗೀ ಪದಗಳ ಜನಕನೆಂದು ಕರೆಯಿಸಿಕೊಂಡ. ಅನಂತರ ಚಿಂಚಲಿ ಜಾತ್ರೆಯಲ್ಲಿ ಹಾಡುಗಳನ್ನು ಕೇಳಲು ಜನ ಕೂಡುವ ಸ್ಥಳ (ನಾಕಾಕಟ್ಟೆ) ಗೀಗೀಕಟ್ಟೆ ಎಂದು ಹೆಸರಾಯಿತು. ಗೀಗೀ ಮೇಳದವರಿಗೆ ಚಿಂಚಲಿ ಮೂಲಸ್ಥಳವಾಯಿತು. ಕನ್ನಡ ಲಾವಣಿಯೇ ಗೀಗೀ ಪದವಾಗಿ ಮಾರ್ಪಟ್ಟಿತು. ಅನಂತರ ಕನ್ನಡ ಗೀಗೀ ಪದ ಮರಾಠಿ ಜೀಜೀ ಪದಗಳ ಹುಟ್ಟಿಗೆ ಕಾರಣವಾಯಿತು.



ಗೀಗೀ ಮೇಳ

ಗೀಗೀ ಪದಗಳಲ್ಲಿ ಮುಖ್ಯ ಗೀಗೀ ಹಾಡುಗಾರ 'ಡಪ್ಪಿಗೆ' ಗತ್ತಿನ ಕಡಿತ (ಪೆಟ್ಟು) ಹಾಕಿ ಪದ ಹಾಡುತ್ತಾನೆ. ಅವನ ಹಿಂದೆ ತುಂತುಣಿ ಹಾಗೂ ತಾಳ ಹಿಡಿದ ಇಬ್ಬರು ತಾಳ ಮತ್ತು ಲಯಗಳನ್ನೊಳಗೊಂಡ ಗೀಗೀ ದನಿ ಬೀರುತ್ತಾರೆ. ಜನಾಕರ್ಷಣೆಗಾಗಿ ರಮ್ಯವಾಗಿ ಡಪ್ಪು, ತುಂತುಣಿ ಮತ್ತು ತಾಳ ನುಡಿಸುತ್ತಾರೆ. ಡಪ್ಪು ವರ್ತುಲಾಕಾರದ 2"-3" ದಪ್ಪವಾದ, 4'-5' ಪರಿಘವಿರುವ ಗಾಲಿಗೆ ಮತ್ತು ಅದಕ್ಕಿಂತ ಸಣ್ಣದಾದ ಕಬ್ಬಿಣದ ವರ್ತುಲಕ್ಕೆ ಸೇರಿದಂತೆ ಆಡಿನ ಚರ್ಮದಿಂದ ಹಲಗೆ ತಯಾರಿಸಿ ಎಡಗೈಯಲ್ಲಿ ಹಿಡಿದು ಬಲಗೈಯಿಂದ ಹದರು ಹಚ್ಚಿ ಬೆರಳು ಆಡಿಸಿ ಬಡಿದು ನಾದ ಹೊರಡಿಸುವ ವಾದ್ಯ. ತುಂತುಣಿ ಮರದ ತುಂಡಿನ 1" ಸಿಲಿಂಡರಿನಾಕಾರದ್ದಾಗಿದ್ದು, ಹಿಂಬದಿಗೆ ಮೇಕೆಯ ಆಡಿನ ಚರ್ಮವನ್ನು ಬಿಗಿದು ಒಂದು ಗಜ ಬಿದರಿನ ತುಂಡನ್ನು ಸಿಲಿಂಡರಿಗೆ ಜೋಡಿಸಿ, ಅದರ ತುದಿಯಲ್ಲಿ ಒಂದು ಬೆಣೆಯನ್ನು ಕೂರಿಸಿ ತಂತಿಯನ್ನು ಬೆಣೆಗೂ ಹಿಂಬದಿಯ ಚರ್ಮದ ಮಧ್ಯಕ್ಕೂ ಜೋಡಿಸಿ ತಯಾರಿಸಿದ, ಬಲಗೈಯಲ್ಲಿ ಹಿಡಿದ ಕಡ್ಡಿಯಿಂದ ತಂತಿಯನ್ನು ಮಿಡಿದು ನಾದ ಹೊಮ್ಮಿಸುವ ವಾದ್ಯ. ಗೀಗೀ ಮೇಳದವರಿಗೆ ಚಾಲು ನುಡಿತ, ಏರು ನುಡಿತಗಳೂ ಮುಖ್ಯ. ಇಳುವಿನಲ್ಲಿ ಸೌಮ್ಯ ಸಂಗೀತವಿರುತ್ತದೆ. ಒಮ್ಮೇಳವಾಗಿ (ಸಂಗಡಿಗರು) ಹಾಡುವುದು, ಬಾರಿಸುವುದು ಸಾಗುತ್ತದೆ.

ಗೀಗೀ ಮೇಳದಲ್ಲಿ ಮೊದಲಿಗೆ ಹರದೇಶಿ (ತುರಾಯಿ) ಗೀಗೀ ಮೇಳ, ನಾಗೇಶಿ (ಕಲ್ಕಿ) ಗೀಗೀ ಮೇಳ ಎಂದು ಗಂಡು-ಹೆಣ್ಣಿನ ವಾದದ ಮೇಳಗಳು ಪ್ರಾರಂಭವಾದವು. ಗಂಡಸರ ಪಂಗಡ ಪುರುಷನನ್ನು (ಶಿವ) ಹೆಚ್ಚುಮಾಡಿ ಹಾಡುವುದು, ಹೆಂಗಸರ ಪಂಗಡ ಸ್ತ್ರೀಯನ್ನು (ಶಕ್ತಿ) ಹೆಚ್ಚುಮಾಡಿ ಹಾಡುವುದು ಸಂಪ್ರದಾಯವಾಯಿತು. 1925ರಿಂದ ಈಚೆಗೆ ಗೀಗೀ ಮೇಳದವರು ಲೌಕಿಕ ಹಾಡುಗಾರರಾಗಿ ಮಾರ್ಪಟ್ಟರು. ರಾಷ್ಟ್ರೀಯ ಗೀಗೀಮೇಳಗಳು ಹುಟ್ಟಿಕೊಂಡವು. ಭಾರತದೇಶ, ದೇಶದ ಜನ, ದೇಶದ ಸ್ಥಿತಿ, ಸಂಸ್ಕೃತಿ, ರೀತಿ, ನೀತಿ ಇತ್ಯಾದಿ ಕುರಿತು ಗೀಗೀ ಪದಗಳು ಪ್ರಾರಂಭವಾದವು. ಇಂಥ ಗೀಗೀಮೇಳಗಳಲ್ಲಿ ಹುಲಕುಂದ ಗೀಗೀ ಮೇಳ ಮುಖ್ಯವಾದ್ದು. ಹುಲಕುಂದದ ಭೀಮಸಿಂಗ ಕವಿ, ಶಿವಲಿಂಗ, ಪಾಂಡುರಂಗ, ಚನಬಸು, ಕಂದಭೀಮಸಿಂಗ ಇವರು ಗೀಗೀ ಗಂಗೋತ್ರಿಯನ್ನೇ ಹರಿಸಿದರು. ತಿಗಡೊಳ್ಳಿ ಗೀಗೀಮೇಳ, ಹೊಸೂರು ಗೀಗೀ ಮೇಳ, ಹೊಸಕೋಟೆ ತಮ್ಮಣ್ಣನ ಗೀಗೀಮೇಳ, ಗೋಕಾಂವಿ ಗೀಗೀ ಮೇಳ, ಬಿದರೆ ಗೀಗೀ ಮೇಳ, ರಾಯಚೂರು ಗೀಗೀ ಮೇಳ, ಬೆಳಗಾಂವಿ ಗೀಗೀ ಮೇಳ, ಬಿಜಾಪುರ ಗೀಗೀಮೇಳ, ಕಲಬುರ್ಗಿ ಗೀಗೀಮೇಳ, ಚಿತ್ರದುರ್ಗ ಗೀಗೀಮೇಳ, ಬೆಂಗಳೂರು ಗೀಗೀಮೇಳ, ಇತ್ಯಾದಿ ಮೇಳಗಳು ಹುಟ್ಟಿಕೊಂಡು ರಾಷ್ಟ್ರದ ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಜನಜಾಗೃತಿಯನ್ನುಂಟುಮಾಡಿದವು. ಜ್ಞಾನಪ್ರಸಾರಕಾರ್ಯ ಕೈಗೊಂಡವು. ಇಂದು ಕರ್ನಾಟಕದಲ್ಲಿ ಎರಡು ನೂರಕ್ಕೂ ಹೆಚ್ಚು ಗೀಗೀ ಮೇಳಗಳಿವೆಯೆಂದು ತಿಳಿದುಬರುತ್ತದೆ.

ಗೀಗೀ ಪದದ ಹಾಡುಗಾರರು ಸ್ತೋತ್ರ ಪದಗಳು, ಪೌರಾಣಿಕ ಪದಗಳು, ಐತಿಹಾಸಿಕ ಪದಗಳು, ಚಾರಿತ್ರಿಕ ಪದಗಳು, ಆರ್ಥಿಕ ಪದಗಳು, ಸಾಮಾಜಿಕ ಪದಗಳು, ನೈತಿಕ ಪದಗಳು, ಹಾಸ್ಯದ ಪದಗಳು, ಒಗಟಿನ ಪದಗಳು ಇತ್ಯಾದಿಗಳನ್ನು ಹಾಡುತ್ತಾರೆ. ಪದಗಳ ಮುಕ್ತಾಯದಲ್ಲಿ ಹಾಡು ರಚಿಸಿದ ಕವಿಯ ಊರು ಹೆಸರುಗಳಿರುತ್ತವೆ. ಗೀಗೀ ಪದಗಳು ಜನಮನವನ್ನು ತಿದ್ದುವ, ಜ್ಞಾನ ಹೆಚ್ಚಿಸುವ, ನೀತಿ ತಿಳಿಸುವ, ವೈಚಾರಿಕ ಜನಪದ ಪರಂಪರೆಯ ಗೀತೆಗಳಾಗಿವೆ. ಈ ಪದಗಳಲ್ಲಿ ಜಾನಪದ ಶಬ್ದಸಂಪತ್ತು ಬಹುವಾಗಿವೆ. ಉತ್ತರ ಕರ್ನಾಟಕದಲ್ಲಿ ಗೀಗೀ ಮೇಳ ಕಟ್ಟಿಕೊಂಡು ಗೀಗೀ ಪದ ಹಾಡುವವರು ಹೆಚ್ಚಾಗಿ ಹರಿಜನ ಮಹಿಳೆಯರು. ಸ್ತ್ರೀಪಂಗಡದಲ್ಲಿ ಒಬ್ಬರು ಮುಮ್ಮೇಳ ಹಾಡುಗಾರ್ತಿಯೂ ಹಿಮ್ಮೇಳಕ್ಕೆ ಈರ್ವರು ಪುರುಷರೂ ಇರುತ್ತಾರೆ. ಈ ಕಲೆ ಅವರ ಹೆಮ್ಮೆಯ ಪರಂಪರೆಯಾಗಿದೆ. ಹಾಡುಗಾರರು ತಮಗೆ ಸುಂದರವಾಗಿ ಕಾಣುವ ಇಷ್ಟವಾದ ಉಡುಗೆ ತೊಡುಗೆಗಳನ್ನು ಧರಿಸುತ್ತಾರೆ.

ಗೀಗೀ ಪದಗಳನ್ನು ಚೌಡಿಕೆಯವರೂ ಗೊಂದಲಿಗರೂ ಸಿದ್ಧಕ ಸಿದ್ಧಿಗಳೂ (ಜಾತಿಗಾರರು) ಕರ್ಬಲ್ ಹಾಡುಗಾರರೂ ಹಾಡತೊಡಗಿದ್ದಾರೆ.

ಹುಲಕುಂದ ಭೀಮಕವಿಯ ಸರ್ವೋದಯ ಗ್ರಾಮೀಣ ಜನಪದ ಗೀತೆಗಳು (1962), ಹುಬ್ಬಳ್ಳಿಯ ಕರಡಿ ಪ್ರಕಾಶಕರ 3-4 ಗೀಗೀ ಪದಗಳ ಸಣ್ಣ ಪುಸ್ತಕಗಳು ಈ ಸಾಹಿತ್ಯವನ್ನು ಕುರಿತು ಪ್ರಕಟಗೊಂಡಿವೆ. (ಎನ್.ಎನ್.ಎಸ್.)

**ಗೀತಪ್ರಿಯ :** 1931- ಕನ್ನಡ ಚಲನಚಿತ್ರ ನಿರ್ದೇಶಕ, ಗೀತೆ ಹಾಗೂ ಸಂಭಾಷಣೆಯ ರಚನಕಾರ. ಇವರ ನಿಜವಾದ ಹೆಸರು ಲಕ್ಷ್ಮಣರಾವ್ ಮೋಹಿತೆ. 1931ರಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ತಂದೆ ರಾಮರಾವಣ ಮೋಹಿತೆ, ತಾಯಿ ಲಕ್ಷ್ಮೀಬಾಯಿ. ಬೆಂಗಳೂರಿನ ಮಲ್ಲೇಶ್ವರಂ ಪ್ರೌಢಶಾಲೆಯಲ್ಲಿ ಓದಿದ ಇವರಿಗೆ ಕವಿ ಹೊಯಿಸಳರು ಗುರುಗಳಾಗಿದ್ದರು. ಇಂಟರ್‌ಮೀಡಿಯಟ್‌ನಲ್ಲಿ ಜಿ.ಪಿ.ರಾಜರತ್ನಂ ಗುರುಗಳಾಗಿ ದೊರೆತರು. ಸಾಹಿತ್ಯ ದಿಗ್ಗಜಗಳ ಪರಿಚಯ ಪ್ರಭಾವಗಳಿಂದಾಗಿ ಸುಪ್ತವಾಗಿದ್ದ ಇವರ ಸಾಹಿತ್ಯ ರಚನಾಶಕ್ತಿಗೆ ಇಂಬು ದೊರೆಯಿತು. ಪ್ರೌಢಶಾಲೆಯ ದಿನಗಳಲ್ಲೇ ಪದ್ಯ, ಇವರು ನಾಟಕಗಳನ್ನು ಬರೆಯಲಾರಂಭಿಸಿದರು. ಇವರ ರಚನೆಗಳು ಅಂದಿನ ತಾಯಿನಾಡು ಪತ್ರಿಕೆಯಲ್ಲಿ ಬೆಳಕು ಕಂಡವು. ಶಾಲಾದಿನಗಳಲ್ಲಿಯೇ ಉರ್ದು ಶಾಯರಿಗಳು ಇವರನ್ನು ವಿಶೇಷವಾಗಿ ಆಕರ್ಷಿಸಿದವು. ನಾಟಕದತ್ತ ಒಲವು ಬೆಳೆದು ಹವ್ಯಾಸಿ ಕಲಾವಿದರ ಒಡನಾಟ ಒದಗಿ ಬಂತು. ಆ ವೇಳೆಯಲ್ಲಿ ಇವರು

ಬರೆದ ಮದ್ವೆ ಮಾರ್ಕೆಟ್ ನಾಟಕ ಅಂದಿನ ದಿನಗಳಲ್ಲಿ ಅತ್ಯಂತ ಜನಪ್ರಿಯತೆ ಗಳಿಸಿತು. ತಾವೇ ನಾಟಕಗಳಲ್ಲಿ ಕೂಡ ಅಭಿನಯಿಸಿದರು.

ಹೆಸರಾಂತ ಬಿ.ಆರ್.ಕೃಷ್ಣಮೂರ್ತಿಯವರು ಶ್ರೀರಾಮಪೂಜಾ ಚಿತ್ರಕ್ಕೆ ಗೀತರಚನಾಕಾರರಾಗಿ ಇವರನ್ನು ನಿಯೋಜಿಸಿದರು. ಮೋಹಿತೆಯವರಿಗೆ ಗೀತಪ್ರಿಯ ಎಂಬ ಕಾವ್ಯನಾಮ ಇಟ್ಟವರು ಸಂಗೀತ ಸಂಯೋಜಕ



ವಿಜಯಭಾಸ್ಕರ್. ಹೀಗೆ ಗೀತಪ್ರಿಯರಾಗಿ ಇವರು ಚಿತ್ರಗಳಿಗೆ ಗೀತರಚನೆಯ ಜವಾಬ್ದಾರಿ ಹೊತ್ತರು. ಭಾಗ್ಯ ಚಕ್ರ (1956) ಎಂಬುದು ಇವರು ಸಂಭಾಷಣೆ ಹಾಗೂ ಹಾಡು ಗಳನ್ನು ರಚಿಸಿದ ಮೊದಲ ಚಿತ್ರ. ಇವರಲ್ಲಿ ಅಡಗಿದ್ದ ನಿರ್ದೇಶಕ ನನ್ನು ಗುರುತಿಸಿದವರು ಕರ್ನಾಟಕ ಫಿಲಂಸ್ ಸಂಸ್ಥೆ ಯಲ್ಲಿದ್ದ ಎಂ.ವಿ.ವೆಂಕಟಾ ಚಲಂ. ಅವರು ತಮ್ಮ ಮಣ್ಣಿನ ಮಗ ಚಿತ್ರದ ನಿರ್ದೇಶನದ ಹೊಣೆಗಾರಿಕೆ ಯನ್ನು ಇವರಿಗೆ ವಹಿಸಿದರು (1968). ಬೆಂಗಳೂರಿನ ಕಪಾಲಿ ಚಿತ್ರ ಮಂದಿರದಲ್ಲಿ ಶತದಿನೋತ್ಸವ ಕಂಡ ಪ್ರಥಮ ಕನ್ನಡ ಚಿತ್ರವೆಂಬ ಹೆಗ್ಗಳಿಕೆಗೆ ಈ ಚಿತ್ರ ಪಾತ್ರವಾಯಿತು. ಎಂ.ಪಿ.ಶಂಕರರ ಕಾಡಿನ ರಹಸ್ಯ (1969) ಇವರು ನಿರ್ದೇಶಿಸಿದ ಎರಡನೆಯ ಚಿತ್ರ. ಅದೇ ವರ್ಷ ಮದುವೆ, ಮದುವೆ, ಮದುವೆ, ಎಂಬ ಹಾಸ್ಯ ಚಿತ್ರವನ್ನೂ ಇವರು ನಿರ್ದೇಶಿಸಿದರು. ಇವರು ನಿರ್ದೇಶಿಸಿದ ಬಹುತೇಕ ಚಿತ್ರಗಳ ಸಾಹಿತ್ಯವನ್ನು ರಚಿಸಿದವರು ಇವರೇ. ಹಿಂದಿ, ಮರಾಠಿ, ಉರ್ದು, ಕನ್ನಡ ಭಾಷೆಗಳಲ್ಲಿ ಇವರಿಗಿರುವ ಪರಿಣತಿಯಿಂದಾಗಿ ಕವಿಯಾಗಿ, ಸಾಹಿತಿಯಾಗಿ ತಮ್ಮ ಕಲ್ಪನೆಗಳಿಗೆ ಈ ಚಲನಚಿತ್ರಗಳು ಒಂದು ಯಶಸ್ವಿ ಮಜಲಾಗಿ ಪರಿಣಮಿಸಿದುವು. ಪುಟಾಣಿ ಏಜೆಂಟ್ 1 2 3, ಪ್ರಚಂಡ ಪುಟಾಣಿಗಳು ಇವರ ನಿರ್ದೇಶನದಲ್ಲಿ ಮೂಡಿಬಂದ ಮಕ್ಕಳ ಚಿತ್ರಗಳು. ಪುಟಾಣಿ ಏಜೆಂಟ್ 1 2 3 ಇವರದೇ ನಿರ್ದೇಶನದಲ್ಲಿ ಅನ್ಮೋಲ್ ಸಿತಾರೆ ಎಂಬ ಹೆಸರಿನಲ್ಲಿ ಹಿಂದಿ ಚಲನಚಿತ್ರವಾಗಿ ಪುನರ್‌ನಿರ್ಮಾಣ ಗೊಂಡಿದೆ. ಇವಲ್ಲದೆ ಕನ್ನಡ ಕಾದಂಬರಿಗಳನ್ನು ಆಧರಿಸಿ ಅನೇಕ ಚಲನಚಿತ್ರಗಳನ್ನು ಇವರು ನಿರ್ದೇಶಿಸಿದ್ದಾರೆ. ಯಾವ ಜನ್ಮದ ಮೈತ್ರಿ, ಬೆಸುಗೆ, ಬೆಳುವಲದ ಮಡಿಲಲ್ಲಿ, ಹೊಂಬಿಸಿಲು, ಸುವರ್ಣಸೇತುವೆ ಅವುಗಳಲ್ಲಿ ಮುಖ್ಯವಾದವು.

ಇವರಿಗೆ ಅನೇಕ ಗೌರವ, ಪ್ರಶಸ್ತಿ, ಸನ್ಮಾನಗಳು ದೊರೆತಿವೆ. ಪುಟ್ಟಣ್ಣ ಕಣಗಾಲ್ ಪ್ರಶಸ್ತಿ (1992-93), ಕರ್ನಾಟಕ ಚಲನಚಿತ್ರ ನಿರ್ದೇಶಕರ ಸಂಘದ ಕೆ.ಸಿ.ಎನ್.ಪ್ರಶಸ್ತಿ (1993), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1992), ಸಿಂಗಾನಲ್ಲೂರು ಪುಟ್ಟಸ್ವಾಮಯ್ಯ ರಾಜಕುಮಾರ್ ಪ್ರಶಸ್ತಿ (1996-97) -ಇವು ಕೆಲವು ಮುಖ್ಯ ಪ್ರಶಸ್ತಿಗಳು. (ಎಚ್.ಆರ್.ಎಲ್.)

**ಗೀತರೂಪಕಗಳು :** ಕಾವ್ಯನಾಟಕವನ್ನು ಗೀತರೂಪಕವೆನ್ನಬಹುದು. ಶಿವರಾಮ ಕಾರಂತ ಮತ್ತು ಪು.ತಿ.ನರಸಿಂಹಾಚಾರ್ಯರು ಕನ್ನಡದಲ್ಲಿ ಆಧುನಿಕ ಗೀತರೂಪಕಗಳ ಮೂಲ ಪುರುಷರು. ಗೀತಗಳ ಹಾಡುವಿಕೆಯನ್ನು ಕಾರಂತರು ಹಿಂದುಸ್ತಾನೀ ಸಂಗೀತ ಪದ್ಧತಿ ಯಲ್ಲಿರಿಸಿದ್ದಾರೆ. ಇವರ ರೂಪಕಗಳನ್ನು ಸಂಗೀತ ರಹಿತವಾಗಿ ಓದಿದಲ್ಲಿ ನೀರಸವಾಗಿ ಕಾಣಿಸಬಹುದು. ಆದರೆ ರಂಗಭೂಮಿಯ ಮೇಲೆ, ಪ್ರದರ್ಶನದಲ್ಲಿ ಇವು ಸಂಗೀತದೊಡನೆ ಸೇರಿದಾಗ ಸತ್ತ್ವಪೂರ್ಣವಾದ ಹಾಡುಗಳಾಗಿ ಪರಿಣಮಿಸುತ್ತವೆ; ಸಂಗೀತದೊಂದಿಗೆ ಸಮರಸವಾಗಿ ಬೆರೆಯುತ್ತವೆ; ಸಾಹಿತ್ಯ ಸಂಗೀತಗಳೆರಡರ ಸಂಗಮವಾದ ಅದ್ಭುತ ರಸಲೋಕವೊಂದನ್ನು ಕಾಣಿಸುತ್ತವೆ. ಗೀತರೂಪಕಗಳ ಎಲ್ಲ ಪ್ರಕಾರಗಳಿಗೂ ಕಾರಂತರ ರೂಪಕಗಳಲ್ಲಿ ಉದಾಹರಣೆಗಳಿವೆ. ಲವಕುಶ, ಸಾವಿತ್ರಿ ಸತ್ಯವಾನ ರೂಪಕಗಳು ಗಂಭೀರವಾದ ಪೌರಾಣಿಕ ಕಥಾವಸ್ತುವನ್ನೊಳಗೊಂಡವು. ಬುದ್ಧೋದಯ, ಕಿಸಾಗೌತಮಿಗಳು ಚಾರಿತ್ರಿಕ ರೂಪಕಗಳು. ಮುಕ್ತದ್ವಾರವೆಂಬುದು ನರ್ತನಸಹಿತವಾದ ನೇಪಥ್ಯಮೇಳ ಗಾನವನ್ನೊಳಗೊಂಡ, ವಿಚಾರಪೂರ್ಣವಾದ ಸುಂದರ ಕಲ್ಪನೆ. ಸೋಮಿಯ ಸೌಭಾಗ್ಯ, ಯಾರೋ ಅಂದರು ರೂಪಕಗಳ ವಸ್ತು ಶೈಲಿಗಳು ಜನಪದದವು. ಸುಲಿಗೆಗೆ ಇಲ್ಲವು ಸಾವು ಎಂಬುದು ವಿಡಂಬನಾತ್ಮಕ ಪ್ರಹಸನ. ಪು.ತಿ.ನರಸಿಂಹಾಚಾರ್ಯರ ಗೀತರೂಪಕಗಳಲ್ಲಿನ ಹಾಡುಗಳು ಕಾವ್ಯಸೌರಭವನ್ನು ಸೂಸುತ್ತಿರುವ ಸುಂದರ ಕವನಗಳು. ಕರ್ನಾಟಕ ಸಂಗೀತಜ್ಞಾನದ ಹಿನ್ನೆಲೆಯಲ್ಲಿ ಹಾಡುಗಳೆಲ್ಲವನ್ನೂ ಛಂದೋಬದ್ಧ ಸಂಗೀತ ಕೃತಿಗಳನ್ನನುಸರಿಸಿ ಇವರು ರಚಿಸಿದ್ದಾರೆ. ಇವರ ರೂಪಕಗಳಲ್ಲಿನ ಕೆಲವು ಬಿಡಿಗೀತಗಳನ್ನು ರಾಗತಾಳನಿಬದ್ಧವಾದ ಸಂಗೀತಕೃತಿಗಳಂತೆಯೇ ಹಾಡಲು ಸಾಧ್ಯ; ಮಾತ್ರವಲ್ಲ, ಹಾಗೆ ಹಾಡಿದಾಗ ಅವುಗಳ ಶೋಭೆಗೂ ಕೊರತೆಯಾಗುವುದಿಲ್ಲ. ಈ ಗೀತರೂಪಕಗಳನ್ನು ಓದುಗಬ್ಬವಾಗಿ, ಸಂಗೀತರಹಿತವಾಗಿ ಹಾಡಿದಾಗಲೂ ಅವುಗಳ ಅನುಪಮ ಸೌಂದರ್ಯದ ಅರಿವಾಗುತ್ತದೆ. ಕವಿಯ ಚಿಂತನಫಲವಾದ ವಿಶ್ಲೇಷಣೆ ವಿಶೇಷಾರ್ಥಗಳು ಮನಮುಟ್ಟುತ್ತವೆ. ರಂಗಭೂಮಿಯ ಮೇಲೆ ಈ ರೂಪಕಗಳನ್ನು ಅಭಿನಯಿಸುವಾಗಲಂತೂ ಅವಕ್ಕೆ ಇನ್ನೂ ಹೆಚ್ಚಿನ ಶೋಭೆಯುಂಟಾಗುತ್ತದೆ. ಆದರೆ ಕವಿಯ ಪ್ರತಿಭಾಮೂಲವಾದ ಚಿಂತನವೈಶಿಷ್ಟ್ಯಗಳನ್ನು ಮಾತ್ರ ಮೊದಲೊಮ್ಮೆ ಗೀತರೂಪಕಗಳನ್ನು ಓದಿರದ ಪ್ರೇಕ್ಷಕರು ಸಂಪೂರ್ಣವಾಗಿ ಅರಿತು ಅನುಭವಿಸುವುದು ಕಷ್ಟಸಾಧ್ಯ. ಆದುದರಿಂದ ಪು.ತಿ.ನ. ಅವರ ಗೀತರೂಪಕಗಳು ರಂಗಪ್ರದರ್ಶನದಲ್ಲಿ ಸಂಗೀತಕ್ಕೆ ಅತ್ಯುತ್ತಮವಾಗಿ ಅಳವಡುವ ಕೃತಿಮಾಲಿಕೆಗಳಾಗಿ ಪರಿಣಮಿಸಲೂ ಸಾಧ್ಯವಿದೆ. ಇವರ ಹಂಸದಮಯಂತಿ, ಗೋಕುಲನಿರ್ಗಮನ ಇವು ಶ್ರವ್ಯ ಗೀತರೂಪಕಗಳ ದೃಷ್ಟಿಯಿಂದ ಅತ್ಯುತ್ತಮವಾದವು. ಡಿ.ವಿ.ಗುಂಡಪ್ಪನವರ ಭಸ್ಮಾಸುರ ಮೋಹಿನಿ, ಗೀತ ಶಾಕುಂತಲ ಎಂಬೆರಡು ಗೀತರೂಪಕಗಳೂ ಇದೇ ವರ್ಗಕ್ಕೆ ಸೇರುವಂಥವು. *

**ಗೀತಾ ನಾಗಭೂಷಣ :** 1942 - ಕನ್ನಡದ ಹೆಸರಾಂತ ದಲಿತ ಲೇಖಕಿ. ಇವರು ಗುಲ್ಬರ್ಗ ಜಿಲ್ಲೆ ಸಾವಳಗಿ ಗ್ರಾಮದಲ್ಲಿ 1942 ಮಾರ್ಚ್ 25ರಂದು ಜನಿಸಿದರು. ತಂದೆ ಶಾಂತಪ್ಪ, ತಾಯಿ ಶರಣಮ್ಮ. ಬಿ.ಎಡ್. ಹಾಗೂ ಕನ್ನಡ ಎಂ.ಎ. ಪದವಿ ಪಡೆದು ಅಧ್ಯಾಪಕಿಯಾಗಿ, ಕಾಲೇಜಿನಲ್ಲಿ ಪ್ರಾಚಾರ್ಯರಾಗಿ ಮೂರು ದಶಕಗಳಿಗೂ ಹೆಚ್ಚು ಕಾಲ ಸೇವೆ



ಸಲ್ಲಿಸಿ 35ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಇವರು 26 ಕಾದಂಬರಿ ಗಳನ್ನೂ 5 ನಾಟಕ ಗಳನ್ನೂ 2 ಕಥಾ ಸಂಕಲನಗಳನ್ನೂ ಪ್ರಕಟಿಸಿದ್ದಾರೆ. ತಾವರೆಯ ಹೂ ಇವರ ಮೊದಲ ಕಾದಂಬರಿ (1968). ಚಿಂದಿನ ಚಿಗುರು (1969), ಸಪ್ತವರ್ಣದ ಸ್ವಪ್ನ (1973), ಪ್ರೀತಿಸಿದ್ದು ನಿನ್ನನ್ನೇ (1986), ನಿನ್ನ ತೋಳುಗಳಲ್ಲಿ (1987), ನನ್ನ ನಿನ್ನ ನಡುವೆ (1992), ಆಸರೆಗಳು (1996), ಅಭಿಮಾನ (1998) - ಈ ಕೃತಿಗಳು ಮಧ್ಯಮ ವರ್ಗದ ಬದುಕಿನ ಪ್ರೀತಿ, ಪ್ರಣಯ ಮತ್ತು ಕೌಟುಂಬಿಕ ಸಮಸ್ಯೆಗಳ ಸುತ್ತ ಹೆಣೆದ ಜನಪ್ರಿಯ ಸ್ವರೂಪದ ಕಾದಂಬರಿಗಳು. ಹಸಿ ಮಾಂಸ ಮತ್ತು ಹದ್ದುಗಳು (1978), ಮಾಪುರ, ತಾಯಿಯ ಮಕ್ಕಳು (1978), ಆಘಾತ (1980), ಚಿಕ್ಕಿಯ ಹರೆಯದ ದಿನಗಳು (1983), ನೀಲಗಂಗಾ (1986), ದುಮ್ಮಸು (1994), ದಂಗೆ (1997), ಬದುಕು (2001) - ಈ ಕಾದಂಬರಿಗಳಲ್ಲಿ ಸ್ತ್ರೀಪ್ರಪಂಚದ ದುರಂತ ಚಿತ್ರಗಳಿವೆ.

ಜಾತಿವ್ಯವಸ್ಥೆಯ ಅಮಾನವೀಯ ಆಚರಣೆಗಳಿಂದ ಅಪಮಾನಿತರಾದ ದಲಿತವರ್ಗದ ತಾಪತಲ್ಲಣಗಳನ್ನೂ ಬಡತನ, ಪರೌಢ್ಯ, ಲೈಂಗಿಕ ಹಿಂಸೆಗಳಿಂದ ನೊಂದ ಶೋಷಿತ ಸ್ತ್ರೀಯರ ಸಂಕಟ ಸಮಸ್ಯೆಗಳನ್ನೂ ಅವುಗಳಲ್ಲಿ ಸೂಕ್ಷ್ಮತೆ ಭಾವತೀವ್ರತೆಯೊಂದಿಗೆ ಕಲಾತ್ಮಕವಾಗಿ ಅನಾವರಣಗೊಳಿಸಿದೆ. ಅಪೂರ್ವ ಸೃಜನಶೀಲತೆ, ಸಾಮಾಜಿಕ ಕಾಳಜಿ ಇವರ ಕಥೆ ಕಾದಂಬರಿಗಳ ಅನನ್ಯತೆ. ದಲಿತಸಂವೇದನೆ, ಸ್ತ್ರೀಪರತೆ, ಪ್ರತಿಭಟನೆ ಮತ್ತು ಪರಿಷ್ಕಾರದ ಆಶಯಗಳು ಇವರ ಕೃತಿಗಳ ಜೀವಪರ ನೆಲೆಯನ್ನು ಗಟ್ಟಿಗೊಳಿಸಿವೆ.

ಜ್ವಲಂತ (1989), ಅವ್ವ ಮತ್ತು ಇತರ ಕಥೆಗಳು (1993) ಇವು ಕಥಾ ಸಂಕಲನಗಳು. ಜೋಗಿಣಿ ಎಂಬುದು ಕೆಳವರ್ಗದ ಮಹಿಳೆಯರ ಲೈಂಗಿಕ ಶೋಷಣೆಯ ಸುತ್ತ ಹೆಣೆದ ನಾಟಕ. ಅವ್ವ, ಸತ್ತ ಹೆಣ್ಣಿನ ಸುತ್ತ, ಜೀವನಚಕ್ರ, ನೀಲಗಂಗಾ - ಇವು ಮುಗ್ಧ ಗ್ರಾಮೀಣ ಮಹಿಳೆಯರ ಭಾವನಾತ್ಮಕ ಸಂಘರ್ಷಗಳನ್ನೂ ಅವರ ಜ್ವಲಂತ ಸಮಸ್ಯೆಗಳನ್ನೂ ಬಿಂಬಿಸುವ ಇತರ ನಾಟಕಗಳು.

ಅಲೆಮಾರಿ ಜನಾಂಗವಾದ ದುರಗ ಮುರಗಿಯವರನ್ನು ಕುರಿತಂತೆ ಇವರು ಸಂಶೋಧನೆ ನಡೆಸಿ ದುರಗ ಮುರಗಿಯವರ ಸಂಸ್ಕೃತಿ (1993) ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ. ಖೇಮಣ್ಣ (1998) ಇವರ ಒಂದು ಸಂಪಾದಿತ ಕೃತಿ.

ಇವರ ಹಸಿ ಮಾಂಸ ಮತ್ತು ಹದ್ದುಗಳು ಕಾದಂಬರಿಗಳು ಮರಾಠಿಗೆ ಅನುವಾದಗೊಂಡಿವೆ. ಹೆಣ್ಣಿನ ಕೂಗು ಎಂಬ ಹೆಸರಿನಲ್ಲಿ ಕನ್ನಡದಲ್ಲಿ ಚಲನಚಿತ್ರವಾಗಿವೆ. ಇವರ ಅನೇಕ ಕಥೆಗಳು ತೆಲುಗು ಮತ್ತು ತಮಿಳಿಗೆ ಭಾಷಾಂತರಗೊಂಡಿವೆ.

ಇವರ ಸಾಹಿತ್ಯ ಸೇವೆಗಾಗಿ ಅನೇಕ ಪ್ರಶಸ್ತಿಗಳು ದೊರಕಿವೆ. ಕನ್ನಡ ಸಾಹಿತ್ಯ ಪರಿಷತ್ತಿನ ಮಲ್ಲಿಕಾ ಪ್ರಶಸ್ತಿ, ಬಿ.ಸರೋಜಾದೇವಿ ಪ್ರಶಸ್ತಿ, ಗುಲ್ಬರ್ಗದ ಎಸ್.ಆರ್.ಪಾಟೀಲ ಪ್ರತಿಷ್ಠಾನದ ಕಾಯಕರತ್ನ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ವಿಶೇಷ ಗೌರವ ಪ್ರಶಸ್ತಿ (1995), ಕರ್ನಾಟಕರಾಜ್ಯೋತ್ಸವ ಪ್ರಶಸ್ತಿ (1998) ಮತ್ತು ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ (2002) ಇವರಿಗೆ ಲಭ್ಯವಾಗಿವೆ. ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ನಾಡೋಜ ಗೌರವಕ್ಕೆ ಇವರು ಪಾತ್ರರಾಗಿದ್ದಾರೆ (2004). ಇವರ ಬದುಕು ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಲಭಿಸಿದೆ (2004). ಇವರು ಈಗ ಕರ್ನಾಟಕ ಸಾಹಿತ್ಯ ಅಕಡೆಮಿಯ ಅಧ್ಯಕ್ಷರಾಗಿದ್ದಾರೆ (2005). (ಎಸ್‌ಎಚ್‌ಎ.ಐ.)

**ಗುಂಜಿ:** ಬೆಳಗಾಂವಿ ಜಿಲ್ಲೆ ಖಾನಾಪುರ ತಾಲ್ಲೂಕಿನ ಒಂದು ಗ್ರಾಮ. ಖಾನಾಪುರದಿಂದ 13ಕಿಮೀ ದೂರದಲ್ಲಿ ಬೆಳಗಾಂವಿ ಪಣಜಿ ಹೆದ್ದಾರಿಯಲ್ಲಿದೆ. ಇಲ್ಲಿ ಕಮಲೇಶ್ವರ, ಗಣಪತಿ, ರಾವಳನಾಥ, ಮಾವೂಲಿದೇವಿ ಮುಂತಾದ ದೇವಾಲಯಗಳಿವೆ. ಕಮಲೇಶ್ವರ ದೇವಾಲಯದ ಗರ್ಭಗುಡಿ ಮಾತ್ರ ಪುರಾತನವಾದ್ದು, ಶಿವಲಿಂಗ ಪೀಠ ತರುವಾಯದ ಚಾಳುಕ್ಯ ಶೈಲಿಯಲ್ಲಿದೆ. ಗಣಪತಿ ದೇವಾಲಯವನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದೆ. ಈ ದೇವಾಲಯದ ಗರ್ಭಗುಡಿಯಲ್ಲಿ ಚಾಳುಕ್ಯ ಶೈಲಿಯ ಶಿವಲಿಂಗ ಮತ್ತು ವಿಷ್ಣು ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದೆ. ರಾವಳನಾಥ ದೇವಾಲಯ ಇತ್ತೀಚಿನ ಸಿಮೆಂಟ್ ಕಟ್ಟಡವಾಗಿದ್ದು ಸೊಗಸಾಗಿದೆ. ಈ ದೇವಾಲಯದ ಮುಂದೆ ಐದು ವೀರಗಲ್ಲುಗಳಿವೆ. ದೊಡ್ಡದಾದ ಶಿವಲಿಂಗವನ್ನೊಳಗೊಂಡ ಶಿವ ದೇವಾಲಯವೂ ಊರ ಹೊರವಲಯದಲ್ಲಿದೆ. ದಸರ ಮಹೋತ್ಸವದಲ್ಲಿ ಈ ದೇವಾಲಯ ಮತ್ತು ರಾವಳನಾಥ ದೇವಾಲಯದಲ್ಲಿ 5 ದಿನಗಳಕಾಲ ಹಬ್ಬವನ್ನು ಆಚರಿಸಲಾಗುತ್ತದೆ. ಈ ಊರಲ್ಲಿ ಖಾಜಿ ಪೀರ್‌ರ ದರ್ಗಾ ಇದೆ. ಗುಂಜಿಗೆ ಸು.5ಕಿಮೀ ಅಂತರದಲ್ಲಿರುವ ಕಿರವಾಲಿ ಎಂಬ ಸ್ಥಳ ನಾಥಪಂಥದ ಒಂದು ಪ್ರಾಚೀನ ಕೇಂದ್ರವಾಗಿತ್ತು. ಅಲ್ಲಿ ಗೋರಖನಾಥ ಮಠವಿದೆ; ಕಾಲಭೈರವನ ಉಪಾಸನೆ ನಡೆಯುತ್ತದೆ. ನಾಥ'ಪಂಥ'ಕ್ಕೆ ಸೇರಿದ ಮತ್ಸ್ಯೇಂದ್ರನಾಥ ಮಠ ಗುಂಜಿಗೆ ಸು.7ಕಿಮೀ ದೂರದ ದೊಂಗುಗಾಂವ್‌ನಲ್ಲಿದೆ. (ಎಂ.ಬಿ.ಎಚ್.)

**ಗುಂಡಪ್ಪ :** 1898-1969. ಪ್ರಸಿದ್ಧ ನಾಟ್ಯಾಚಾರ್ಯರು. ಖ್ಯಾತ ನರ್ತಕ ಮನೆತನಕ್ಕೆ ಸೇರಿದವರು.

ಇವರ ಮುತ್ತಜ್ಜಿ ರಂಗನಾಯಕಮ್ಮ ಪ್ರಖ್ಯಾತ ಕಲಾವಿದೆಯಾಗಿದ್ದು ಮೈಸೂರು ಅರಸರಿಂದ ಸನ್ಮಾನಿತರಾಗಿದ್ದರು. ಅಜ್ಜಿ ರಂಗಮ್ಮನವರು ನಾಟಕ ಕಲೆಯಲ್ಲಿ ನಿಪುಣರಾಗಿದ್ದು, ಬಸವನಹಳ್ಳಿಯ ಶ್ರೀರಂಗನಾಥಸ್ವಾಮಿ ದೇವಾಲಯದಲ್ಲಿ ನಾಟ್ಯಸೇವೆಯನ್ನು ಸಲ್ಲಿಸುತ್ತಿದ್ದರು. ಗುಂಡಪ್ಪನವರು ರೆಟ್ಟಪ್ಪನವರಲ್ಲಿ ಸುಮಾರು ಹನ್ನೆರಡು ವರ್ಷ ನೃತ್ಯಾಭ್ಯಾಸ ಮಾಡಿ ಗುರುಗಳ ಸಂಗಡ ಪ್ರದರ್ಶನಗಳಲ್ಲಿ ಭಾಗವಹಿಸಿ, ಅನುಭವ ಪಡೆದರು. ನಾಟ್ಯಾಚಾರ್ಯರಾಗಿ ಅನೇಕ ಶಿಷ್ಯರಿಗೆ ನೃತ್ಯವನ್ನು ಕಲಿಸಿ ಜನಪ್ರಿಯರಾಗಿದ್ದರು. (ಯು.ಎಸ್.ಕೆ.)

**ಗುಂಡಪ್ಪ, ಎಲ್. :** 1903-86. ಹೆಸರಾಂತ ಭಾಷಾಂತರಕಾರ, ಲೇಖಕ. 1903 ಜನವರಿ 8ರಂದು ಹಾಸನ ಜಿಲ್ಲೆ ಮತಿಘಟ್ಟದಲ್ಲಿ ಜನಿಸಿದರು. ಬೆಳವಾಡಿ, ಚಿಕ್ಕಮಗಳೂರು, ಮೈಸೂರುಗಳಲ್ಲಿ ಓದಿ ಕನ್ನಡ ಎಂ.ಎ. ಪದವಿ ಪಡೆದ ಇವರು ಬಿ.ಎಂ.ಶ್ರೀ. ಅವರ ನೇರ ಪ್ರಭಾವಕ್ಕೆ ಒಳಗಾದರು. ಕನ್ನಡದ ಜೊತೆಗೆ ತಮಿಳನ್ನೂ ಕಲಿತರು. ಇವೆರಡೂ ಭಾಷೆಗಳ ಸೋದರ ಸಂಬಂಧವನ್ನು ಚೆನ್ನಾಗಿ ಅರಿತುಕೊಂಡಿದ್ದರು. ಸಂಸ್ಕೃತ ಇಂಗ್ಲಿಷುಗಳನ್ನೂ ಬಲ್ಲವರಾಗಿದ್ದ ಇವರು ಸೃಜನಾತ್ಮಕ ಸಾಹಿತ್ಯ ರಚಿಸುವ ಸಾಮರ್ಥ್ಯ ತಮಗಿದೆಯೆಂದು ವಿದ್ಯಾರ್ಥಿ ದಶೆಯಲ್ಲೇ ತೋರಿಸಿಕೊಂಡರೂ ಅನುವಾದ ಸಂಪಾದನೆಗಳ ಕ್ಷೇತ್ರದಲ್ಲೇ ವಿಶೇಷವಾಗಿ ದುಡಿದರು.

ಬಿ.ಎಂ.ಶ್ರೀ. ಅವರ ಮಾರ್ಗದರ್ಶನದಲ್ಲಿ ಹಾಗೂ ಪಿ.ಎಂ.ಸೋಮಸುಂದರಂ ಅವರ ನೇತೃತ್ವದಲ್ಲಿ ತಮಿಳನ್ನು ಆಳವಾಗಿ



ಅಭ್ಯಾಸ ಮಾಡಿದ ಇವರು ತಮಿಳಿನಿಂದ ಅನೇಕ ಉತ್ತಮ ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ತಿರುಕ್ಕುರಳ್, ಮಣಿಮೇಕಲೈ, ಶಿಲಪ್ಪದಿಗಾರಂ, ಅವ್ವೈಯಾರ್ ಎಂಬ ಕೃತಿಗಳು, ಉಲಗನೀತಿ, ಭಾರತಿಯವರ ಕವಿತೆಗಳು, ಶೇಕ್ಕಿಳಾರರ ಪೆರಿಯಪುರಾಣ, ನಾಲ್ಮಣಿ ಕಡುಕು ಇವು ಗುಂಡಪ್ಪನವರ ಕೆಲವು ಪ್ರಸಿದ್ಧ ಅನುವಾದಗಳು. ಸ್ವಾಮಿನಾಥ ಅಯ್ಯರರ ನನ್ನ ಚರಿತ್ರೆಯನ್ನೂ ವರದರಾಜನ್ನರ ತಮಿಳು ಸಾಹಿತ್ಯ ಚರಿತ್ರೆಯನ್ನೂ ಇವರು ಕನ್ನಡಿಸಿದ್ದಾರೆ. ತಮಿಳು-ಕನ್ನಡ ಬಾಂಧವ್ಯಕ್ಕೆ ಶ್ರಮಿಸಿದ್ದಕ್ಕಾಗಿ ಇವರಿಗೆ ನಾಗರಕೋಯಿಲಿನಲ್ಲಿ ಬಂಗಾರದ ಪದಕ ನೀಡಿ ಗೌರವಿಸಲಾಗಿತ್ತು. ಸೊಹ್ರಾಬ್ ರುಸ್ತುಂ ಕಥನ ಕವನದ ಅನುವಾದಕ್ಕಾಗಿ ಬಿ.ಎಂ.ಶ್ರೀ. ರಜತ ಮಹೋತ್ಸವ ಪದಕ, ಇತರ ಸಾಧನೆಗಳಿಗಾಗಿ ಗಾಂಧಿ ಶತಮಾನೋತ್ಸವ ಸ್ವರ್ಣ ಪದಕ, ದೇವರಾಜ ಬಹದ್ದೂರ್ ಬಹುಮಾನ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ಇವರಿಗೆ ಲಭಿಸಿವೆ. ಇವರು ಕನ್ನಡಿಸಿ ಪ್ರಕಟಿಸಿದ ಟಾಲ್‌ಸ್ಟಾಯಿಯ ಕಥೆಗಳೂ ಭಾಸನ ಏಕಾಂಕ ನಾಟಕಗಳೂ ಸ್ವಪ್ನವಾಸವದತ್ತ ನಾಟಕವೂ ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಗಳಾಗಿವೆ. ನಾಡಪದಗಳು, ಭಾರತ ಕಥಾಮಂಜರಿ, ಕನ್ನಡ ವ್ಯಾಕರಣ ಪಾಠಗಳು, ಥಾಮಸ್ ಆಲ್ವ ಎಡಿಸನ್, ಫ್ಲಾರೆನ್ಸ್ ನೈಟಿಂಗೇಲ್-ಇವು ಇವರು ರಚಿಸಿದ ಕೆಲವು ಗದ್ಯಕೃತಿಗಳು. ಇವರು ಸಂಪಾದಿಸಿದ ಪಂಪನ ಆದಿಪುರಾಣ ಸಂಗ್ರಹವೂ ಉಲ್ಲೇಖನೀಯ. ಪ್ರಾಚೀನ ಕಾವ್ಯಗಳನ್ನು ಸಂಗ್ರಹಿಸಿ ಸಂಪಾದಿಸುವವರಿಗೆ ಇದು ಒಳ್ಳೆಯ ಮಾದರಿ. ಈ ಕೃತಿಗೆ ಇವರು ಬರೆದಿರುವ ಸುಮಾರು ಎಂಬತ್ತು ಪುಟಗಳ ಪೀಠಿಕೆ ಇವರ ವಿದ್ವತ್ತಿಗೆ ಸಾಕ್ಷಿ. ಇವರು ಅಧ್ಯಾಪಕರಾಗಿಯೂ ಹೆಸರು ಗಳಿಸಿದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇವರು ಹಲವು ವರ್ಷಗಳ ಕಾಲ ಕನ್ನಡ ಸಾಹಿತ್ಯವನ್ನು ಬೋಧಿಸಿದರು. ಬೆಳ್ಳಾವೆ ವೆಂಕಟನಾರಾಯಣಪ್ಪನವರ ಸಂಪಾದಕತ್ವದಲ್ಲಿ ಆರಂಭವಾದ ಇಂಗ್ಲಿಷ್-ಕನ್ನಡ

ನಿಘಂಟಿನ ಸಹಾಯಕ ಸಂಪಾದಕರಾಗಿಯೂ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟಿನ ಸಂಪಾದಕರಾಗಿಯೂ ಕೆಲವು ವರ್ಷ ಕೆಲಸಮಾಡಿದರು. ಇವರು 1986ರಲ್ಲಿ ನಿಧನಹೊಂದಿದರು. (ಎಚ್.ಎಸ್.ಕೆ.)

**ಗುಂಡಪ್ಪ, ಡಿ.ವಿ. :** 1889-1975. ಡಿ.ವಿ.ಜಿ. ಎಂಬ ಮೂರಕ್ಷರದ ಸಂಕ್ಷಿಪ್ತನಾಮದಿಂದ ಪ್ರಸಿದ್ಧರಾಗಿದ್ದ ಸಾಹಿತಿ, ಪತ್ರಿಕೋದ್ಯಮಿ ಮತ್ತು ಸಾರ್ವಜನಿಕ ಸೇವಕರು. ಹುಟ್ಟಿದ್ದು ಕೋಲಾರ ಜಿಲ್ಲೆ ಮುಳಬಾಗಿಲಿನಲ್ಲಿ. ತಂದೆ ದೇವನಹಳ್ಳಿ ವೆಂಕಟರಮಣಯ್ಯ, ತಾಯಿ ಅಲಮೇಲಮ್ಮ. ಹುಟ್ಟೂರಿನಲ್ಲಿದ್ದು ಆಂಗ್ಲೋ-ವರ್ನಾಕುಲರ್ ಶಾಲೆಯಲ್ಲಿ ಲೋವರ್ ಸೆಕೆಂಡರಿ ವರೆಗೆ ವ್ಯಾಸಂಗ ಮಾಡಿ, ಅನಂತರ ಮೈಸೂರು ಮತ್ತು ಕೋಲಾರ ಪ್ರೌಢಶಾಲೆಗಳಲ್ಲಿ ಮೆಟ್ರಿಕ್ಯುಲೇಷನ್‌ವರೆಗೆ ಶಿಕ್ಷಣ ಪಡೆದರು. ಉದ್ಯೋಗ ಅರಸಿಕೊಂಡು ಬೆಂಗಳೂರಿಗೆ ಬಂದ ಗುಂಡಪ್ಪನವರು ಪತ್ರಿಕಾ ಪ್ರಪಂಚದ ಕಡೆಗೆ ಆಕರ್ಷಿತರಾದರು.



ಬೆಂಗಳೂರಿನ ಸೂರ್ಯೋದಯ ಪ್ರಕಾಶಿಕಾ ವಾರಪತ್ರಿಕೆಯಲ್ಲಿ ಎರಡು ವರ್ಷ ಕೆಲಸ ಮಾಡಿದ (1905-06) ಇವರು ಅನಂತರ ಭಾರತಿ ಎಂಬ ಕನ್ನಡ ದಿನಪತ್ರಿಕೆಯನ್ನು ಸ್ವತಃ ಆರಂಭಿಸಿ (1907) ಒಂದು ವರ್ಷಕಾಲ ನಡೆಸಿದರು. ಮೈಸೂರು ಸ್ಟ್ಯಾಂಡರ್ಡ್, ನಡೆಗನ್ನಡಿ, ಮೈಸೂರು ಮೇಲ್, ಇಂಡಿಯನ್ ರಿವ್ಯು ಮುಂತಾದ ಪತ್ರಿಕೆಗಳಿಗೆ ಇವರು ಮೂರು ವರ್ಷಕಾಲ (1908-11) ಲೇಖನಗಳನ್ನು ಬರೆದರು. ಮೈಸೂರುಟೈಮ್ಸ್ ಎಂಬ ವಾರಾರ್ಧ ಪತ್ರಿಕೆಗೆ ಸಹ ಸಂಪಾದಕರಾಗಿದ್ದ (1909-10) ಇವರು ಅನಂತರ ಇಂಗ್ಲಿಷ್‌ನಲ್ಲಿ ಕರ್ನಾಟಕ ಎಂಬ ವಾರಾರ್ಧ ಪತ್ರಿಕೆಯನ್ನು ಪ್ರಾರಂಭಿಸಿ (1921) ಒಂದು ವರ್ಷಕಾಲ ನಡೆಸಿದರು.

ಭಾರತದ ನೂತನ ಸಂಸ್ಥಾನಗಳಲ್ಲಿ ದೇಶೀಯ ಸಂಸ್ಥಾನಗಳ ಹಾಗೂ ಸಂಸ್ಥಾನದ ಪ್ರಜೆಗಳ ಸ್ಥಾನಮಾನಗಳೇನಿರಬೇಕೆಂಬುದನ್ನು ಕುರಿತು ಗುಂಡಪ್ಪನವರು ಗಾಢವಾದ ಅಧ್ಯಯನ ನಡೆಸಿ ಇಂಗ್ಲಿಷ್ ಮತ್ತು ಕನ್ನಡದಲ್ಲಿ ಅನೇಕ ಲೇಖನಗಳನ್ನು ಬರೆದರಲ್ಲದೆ ಪ್ರಮುಖರಿಗೆ ಮನವಿಗಳನ್ನೂ ಸಲ್ಲಿಸಿದ್ದರು. ಅಂಥವುಗಳಲ್ಲಿ ಬಿಕನೀರ್ ಮಹಾರಾಜರಿಗೆ (1917), ಮಾಂಟೆಗು ಅವರಿಗೆ (1928) ಮತ್ತು ಬಟ್ಲರ್ ಸಮಿತಿಗೆ (1928) ಸಲ್ಲಿಸಿದ ಮನವಿಗಳನ್ನು ಸ್ಮರಿಸಬಹುದು. ಇದೇ ವಿಷಯವನ್ನು ಕುರಿತು ಇಂಗ್ಲಿಷ್‌ನಲ್ಲಿ ದಿ ಪ್ರಾಬ್ಲಮ್ ಆಫ್ ಇಂಡಿಯನ್ ನೇಟಿವ್ ಸ್ಟೇಟ್ಸ್ (1917), ದಿ ಗೌರ್ನಮೆಂಟ್ ಆಫ್ ಇಂಡಿಯ ಅಂಡ್ ದಿ ಇಂಡಿಯನ್ ಸ್ಟೇಟ್ಸ್ (1926), ಸ್ಟೇಟ್ಸ್ ಅಂಡ್ ದೇರ್ ಪೀಪಲ್ ಇನ್ ದಿ ಇಂಡಿಯನ್ ಕಾನ್‌ಸ್ಟಿಟ್ಯೂಷನ್ (1931) -ಈ ಪುಸ್ತಕಗಳನ್ನು ರಚಿಸಿದ್ದರು. ತಿರುವಾಂಕೂರಿನಲ್ಲಿ 1929ರಲ್ಲಿ ನಡೆದ ದಕ್ಷಿಣ ಭಾರತ ದೇಶೀಯ ಪ್ರಜೆಗಳ ಸಮ್ಮೇಳನಕ್ಕೆ ಅಧ್ಯಕ್ಷರಾಗಿದ್ದ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರಿಗೆ ಗುಂಡಪ್ಪನವರು ಕಾರ್ಯದರ್ಶಿಗಳಾಗಿ ಕೆಲಸ ಮಾಡಿದರು.

ಗುಂಡಪ್ಪನವರು ಸಲ್ಲಿಸಿದ ಸಾರ್ವಜನಿಕ ಸೇವೆಯೂ ಗಣ್ಯವಾದುದು. ಬೆಂಗಳೂರಿನಲ್ಲಿ ಪಾಪ್ಯುಲರ್ ಎಜ್ಯುಕೇಷನ್ ಲೀಗ್, ಸೋಷಿಯಲ್ ಸರ್ವಿಸ್ ಲೀಗ್ (1915-20), ಪ್ರಜಾಜನಪರಿಷತ್ತು (ಮೈಸೂರು ಪೀಪಲ್ಸ್ ಕನ್‌ವೆನ್‌ಷನ್ 1919), ದೇಶೀಯ ಸಂಸ್ಥಾನಗಳ ಪ್ರಜಾಪರಿಷತ್ತು (ಸ್ಟೇಟ್ಸ್ ಪೀಪಲ್ಸ್ ಕಾನ್‌ಫರೆನ್ಸ್ 1931), ಎರಡನೆಯ ಮಹಾಯುದ್ಧ ಸಮಯದಲ್ಲಿ ಸೆಲ್ಫ್ ಪ್ರೊಟೆಕ್ಷನ್ ಲೀಗ್ (1938-39) ಮೊದಲಾದ ಹತ್ತಾರು ಸಾರ್ವಜನಿಕ ಸಂಘಸಂಸ್ಥೆಗಳ ಮುಖ್ಯ ಪ್ರವರ್ತಕರಾಗಿದ್ದರು. ಬೆಂಗಳೂರು ಪುರಸಭೆಯ ಸದಸ್ಯರಾಗಿ (1912), ಮೈಸೂರು ಸಂಸ್ಥಾನ ಶಾಸನ ಪರಿಷತ್ತಿನ ಸದಸ್ಯರಾಗಿ (1926-40), ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯರಾಗಿ (1927-43), ಕೌನ್ಸಿಲ್ ಸದಸ್ಯರಾಗಿ (1933-39), ಮಿರ್ಜಾ ಸರ್ಕಾರ ರಚಿಸಿದ್ದ ರಾಜ್ಯಾಂಗ ಸುಧಾರಣಾ ಸಮಿತಿಯ ಸದಸ್ಯರಾಗಿ (1939) ಇವರು ಸೇವೆ ಸಲ್ಲಿಸಿದರು. ಜನತೆಯಲ್ಲಿ ರಾಷ್ಟ್ರಪ್ರಜ್ಞೆಯನ್ನು ಜಾಗೃತಗೊಳಿಸಬೇಕೆಂಬ ಉದ್ದೇಶದಿಂದ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯನ್ನು ಸ್ಥಾಪಿಸಿದ (1945) ಇವರು, ತಮ್ಮ ಜೀವನದ ಕೊನೆಯವರೆಗೂ ಈ ಸಂಸ್ಥೆಯ ಸ್ಥಾಪಕ ಕಾರ್ಯದರ್ಶಿಗಳಾಗಿದ್ದು, ಅದರ ಬಹುಮುಖ ಅಭಿವೃದ್ಧಿಗಾಗಿ ದುಡಿದರು. ಈ ಸಂಸ್ಥೆಯ ಮುಖಪತ್ರ ಪಬ್ಲಿಕ್ ಅಫೇರ್ಸ್‌ಗೂ ಇವರು ಸ್ಥಾಪಕ ಸಂಪಾದಕರಾಗಿದ್ದರು (1949-75).

ಸಾಹಿತ್ಯ, ಸಾರ್ವಜನಿಕ ಮತ್ತು ರಾಜಕೀಯಾದಿ ವಿಭಿನ್ನ ಕ್ಷೇತ್ರಗಳಲ್ಲಿ ಇಪ್ಪತ್ತನೆಯ ಶತಮಾನದ ಪ್ರಾರಂಭದಿಂದ ಏಳು ದಶಕಗಳಷ್ಟು ದೀರ್ಘಕಾಲ ಡಿ.ವಿ.ಜಿ. ನಡೆಸಿದ ವ್ಯವಸಾಯ ಗಮನಾರ್ಹವಾದುದು. ಸತತವಾದ ಪತ್ರಿಕೋದ್ಯಮ, ವಿಪುಲ ಸಾಹಿತ್ಯಸೃಷ್ಟಿ, ಸಂಗೀತಾದಿ ಕಲಾಭಿಜ್ಞತೆ, ರಾಜಕೀಯ ಚರ್ಚೆ, ಸಮಾಜಸೇವೆ, ಹತ್ತಾರು ಸಂಸ್ಥೆಗಳ ನೇತೃತ್ವ, ಇವೆಲ್ಲಕ್ಕೂ ಹಿನ್ನೆಲೆಯಾಗಿ ಉದ್ದಾಮ ಪಾಂಡಿತ್ಯ, ಪ್ರತಿಭೆ, ಶ್ರದ್ಧೆ, ಆದರ್ಶನಿಷ್ಠೆ, ಉದಾರಚಿಂತನೆ, ಪೂರ್ವಸಂಪ್ರದಾಯಕ್ಕೂ ಸಾಂಪ್ರತಲೋಕದ ರೀತಿನೀತಿಗೂ ಸ್ನೇಹಸೇತುವಾಗಿ ಅವೆರಡಕ್ಕೂ ವಿರಸ ಬಾರದಂಥ ಒಂದು ಜೀವನದರ್ಶನವನ್ನು ಜನತೆಗೆ ಕಾಣಿಸುವ ಉತ್ಸಾಹ, ತಮ್ಮ ಪ್ರತಿಭಾ ಸಂಪತ್ತನ್ನು ಬದಿಗಿರಿಸಿ ಸಮಾಜದ ಎಲ್ಲ ವರ್ಗಗಳಲ್ಲೂ ಸರಸವಾಗಿ ಬೆರೆತುಕೊಳ್ಳುತ್ತಿದ್ದ ಸಹೃದಯತೆ ಮೊದಲಾದ ಕಾರಣಗಳಿಂದ ಡಿ.ವಿ.ಜಿ. ಕನ್ನಡ ಜನತೆಯ ಅಕ್ಕರೆಗೆ, ಅಭಿಮಾನಕ್ಕೆ ಪಾತ್ರರಾಗಿದ್ದರು.

ವಸಂತಕುಸುಮಾಂಜಲಿ (1922), ನಿವೇದನ (1924) ಮುಂತಾದ ಕಾವ್ಯ ಮಾಲೆಗಳು; ಜೀವನಸೌಂದರ್ಯ ಮತ್ತು ಸಾಹಿತ್ಯ (1932), ಸಾಹಿತ್ಯ ಶಕ್ತಿ (1950) ಮುಂತಾದ ವೈಚಾರಿಕ ಪ್ರಬಂಧಸಂಚಯಗಳು ಅನುವಾದದ ಆಕಾರ ತಳೆದಿದ್ದರೂ ನೂತನ ಕಾವ್ಯದಂತೆ ಸೊಗಯಿಸುವ ಉಮರನ ಒಸಗೆ (1930), ಷೇಕ್ಸ್‌ಪಿಯರನ ಮ್ಯಾಕ್‌ಬೆತ್ ನಾಟಕದ ಪದ್ಯಾನುವಾದ (1936), ಶ್ರೀರಾಮಕಥೆಯ ನೆವದಿಂದ ಧರ್ಮದ್ವೈಧ ಕ್ಲೇಶಗಳಿಗೆ ಪರಿಹಾರವನ್ನು ವಿವೇಚಿಸುವ ಶ್ರೀರಾಮಪರೀಕ್ಷಣಂ (1945), ಬೇಲೂರು ಚೆನ್ನಕೇಶವ ದೇವಾಲಯದ ಮದನಿಕೆಯರ ಶೃಂಗಾರವಿಲಾಸಗಳ ಸಂಗೀತ ಚಿತ್ರಣವಾದ ಅಂತಃಪುರಗೀತೆ (1950), ಶಾಕುಂತಲ ನಾಟಕದ ಸಂದರ್ಭಗಳ ಸಂಗೀತಾನುವಾದ ಗೀತಶಾಕುಂತಲ (1960) ಈ ಪದ್ಯಕಾವ್ಯಗಳು, ಉತ್ತಮ ಜೀವಿತದ ನಡೆವಳಿಕೆಗಳನ್ನು ವರ್ಣಿಸುವ ಬಾಳಿಗೊಂದು ನಂಬಿಕೆ (1950), ಸಂಸ್ಕೃತಿ (1953) ಮುಂತಾದ ಪ್ರಬಂಧಗಳು; ರಂಗಾಚಾರ್ಲು (1911), ಗೋಪಾಲ ಕೃಷ್ಣ ಗೋಖಲೆ (1915), ವಿದ್ಯಾರಣ್ಯರು ಮತ್ತು ಅವರ ಸಮಕಾಲೀನರು (1922) ಮುಂತಾದ ಜೀವನಚರಿತ್ರೆಗಳು; ರಾಜ್ಯಶಾಸ್ತ್ರ (1951), ರಾಜ್ಯಾಂಗದ ತತ್ತ್ವಗಳು (1954) ಮೊದಲಾದ ಶಾಸ್ತ್ರಗ್ರಂಥಗಳು; ಪ್ರವೃತ್ತಿ ನಿವೃತ್ತಿ ಸಮನ್ವಯವನ್ನೂ ಜೀವೋತ್ಕರ್ಷವನ್ನೂ ಪ್ರತಿಪಾದಿಸುವ ಪುರುಷಸೂಕ್ತ (1953) ಮತ್ತು ಈಶೋಪನಿಷತ್ತು (1953) - ಈ ಮೊದಲಾದವು ಇವರ ಸಾಹಿತ್ಯ ಕೃತಿಗಳು.

ಭೋಗೇಚ್ಛೆ ಪಾಪವಲ್ಲ. ಜೀವನದಲ್ಲಿ ಉಲ್ಲಾಸಕ್ಕೆ ಮಹತ್ವದ ಸ್ಥಾನ ಸಲ್ಲುತ್ತದೆ. ಸೌಂದರ್ಯಾನುಭವ ಆತ್ಮೋತ್ಕರ್ಷಕ್ಕೆ ಸಾಧಕವೇ ಆಗಬಲ್ಲದು ಎಂಬುದು ಶೃಂಗಾರಮಂಗಳಂ ಎಂಬ (1970) ಪದ್ಯಮಾಲಿಕೆಯ ಆಶಯ. ಈ ವಿಚಾರಧಾರೆ ಶ್ರೀಕೃಷ್ಣಪರೀಕ್ಷಣಂ (1971) ಎಂಬ ಗೀತರೂಪಕದಲ್ಲಿಯೂ ಪ್ರಕಟವಾಗಿದೆ.

ಡಿ.ವಿ.ಜಿ. ತಮ್ಮ ಅನುಭವಗಳನ್ನು ನೆನಪುಗಳ ರೂಪದಲ್ಲಿ ಸು.1953-75ರಲ್ಲಿ ಪತ್ರಿಕೆಗಳಲ್ಲಿ ಲೇಖನಗಳ ಮಾಲೆಯಾಗಿ ಪ್ರಕಟಿಸಿದರು. ಆ ಲೇಖನಗಳೆಲ್ಲ ಜ್ಞಾಪಕಚಿತ್ರಶಾಲೆ ಎಂಬ ಹೆಸರಿನಲ್ಲಿ 6 ಸಂಪುಟಗಳಲ್ಲಿ ಪ್ರಕಟವಾಗಿವೆ. ಹತ್ತಾರು ಮಂದಿ ಪ್ರಸಿದ್ಧಪುರುಷರ, ವಿದ್ವದ್ರಸಿಕರ ಹಾಗೂ ಸಾಮಾನ್ಯರ ವೃತ್ತಿ ವೈಲಕ್ಷಣ್ಯಗಳ ಚಿತ್ರಣಗಳಿಂದಲೂ ಹಾಸ್ಯ ಸನ್ನಿವೇಶಗಳಿಂದಲೂ ತುಂಬಿ ಡಿ.ವಿ.ಜಿ.ಯವರ ಸ್ವಾರಸ್ಯ ಗ್ರಹಣಪಟುತೆಗೂ ಕಥನಕೌಶಲಕ್ಕೂ ಇವು ನಿದರ್ಶನವಾಗಿವೆ.

ಇವರು ರಚಿಸಿದ ಮಂಕುತಿಮ್ಮನ ಕಗ್ಗ (1948) ಹೊಸಗನ್ನಡದ ಅತ್ಯಂತ ಜನಪ್ರಿಯ ಪದ್ಯಕಾವ್ಯಗಳಲ್ಲೊಂದು. ಇದರಲ್ಲಿ ಜೀವನಾನುಭವದ ರಸಪಾಕ ಸೂತ್ರರೂಪವಾಗಿ ಹೊರಹೊಮ್ಮಿದೆ. ಜೀವನದ ಆಘಾತವಗಳನ್ನೆದುರಿಸುವುದರಲ್ಲಿ ಒಂದು ಸ್ಥೈರ್ಯವನ್ನೂ ನಯೋಪಾಯವನ್ನೂ ಬೋಧಿಸುವ ಕಗ್ಗದ ಸೂಚ್ಯುಕ್ತಿಗಳು ಮನಃಸ್ಪರ್ಶಿಯೂ ಅವಿಸ್ಮರಣೀಯವೂ ಆಗಿದ್ದು ಡಿ.ವಿ.ಜಿ.ಯವರಿಗೆ ಆಧುನಿಕ ಸರ್ವಜ್ಞ ಎಂಬ ಅಬಿಧಾನವನ್ನು ತಂದುಕೊಟ್ಟಿವೆ. ಯಾವುದೇ ಕಾರಣದಿಂದ ಮನ ಕುಗ್ಗಿದವರಿಗೆ ಒಲ್ಲೆನೆನದಿರು ಬಾಳನ್ ಒಲವದೇನೆನ್ನದಿರು ಉಲ್ಲಾಸಕೆಡೆಮಾಡು ನಿನ್ನಿನಾದನಿತು ನಿಲ್ಲು ಕೆಚ್ಚೆದೆಯಿಂದಲನ್ಯಾಯಗಳನಳಿಸೆ ಎಲ್ಲಕಂ ಸಿದ್ಧನಿರು-ಮಂಕುತಿಮ್ಮ ಮುಂತಾದ ಸ್ನೇಹವಚನಗಳು ಧೈರ್ಯೋತ್ಸಾಹಪ್ರದಗಳಾಗಿವೆ. ಹುಲ್ಲಾಗು ಬೆಟ್ಟದಡಿ ಮನೆಗೆ ಮಲ್ಲಿಗೆಯಾಗು ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ ಬೆಲ್ಲಸಕ್ಕರೆಯಾಗು ದೀನದುರ್ಬಲರಿಂಗೆ ಎಲ್ಲರೊಳಗೊಂದಾಗು ಮಂಕುತಿಮ್ಮ ಎಂಬ ಪದ್ಯ ಮಾನವ ಪರೋಪ ಕಾರಿಯಾಗಿದ್ದು ಜೀವನದಲ್ಲಿ ಬರುವ ಎಲ್ಲ ಕಷ್ಟಸುಖಗಳಿಗೂ ಮೈಯೊಡ್ಡಿ ಸಾರ್ಥಕವಾಗಿ ಬದುಕಬೇಕೆಂಬುದನ್ನು ವ್ಯಕ್ತಪಡಿಸುತ್ತದೆ. ಮಂಕು ಮುನಿಯನ ಕಗ್ಗ ಎಂಬುದು ಇದೇ ಬಗೆಯ ಇನ್ನೊಂದು ಕೃತಿ.

ಇಂಥದೇ ಚಿಂತನಧೋರಣೆ ಡಿ.ವಿ.ಜಿ.ಯವರ ಶ್ರೀಮದ್ಭಗವದ್ಗೀತಾ ತಾತ್ಪರ್ಯ ಅಥವಾ ಜೀವನಧರ್ಮಯೋಗ (1966) ಎಂಬ ಉಪನ್ಯಾಸ ಗ್ರಂಥದಲ್ಲಿ ಶಾಸ್ತ್ರ ಪರಿಷ್ಕೃತಿಯಿಂದ ವಿಸ್ತರಿಸಲ್ಪಟ್ಟಿದೆ. ಲೋಕಜೀವನ ಗೌರವಾರ್ಹ, ಸಮ್ಯಗ್ಜೀವನವೇ ಭಗವದಾರಾಧನೆ -ಇದು ಭಗವದ್ಗೀತೆಯ ಪ್ರಧಾನೋಪದೇಶವೆಂದಿದ್ದಾರೆ. ಅಂತರಂಗ ಬಹಿರಂಗ ಸಾಮರಸ್ಯವೂ ದ್ವೈತ ಅದ್ವೈತಾದಿ ವಿವಿಧ ಮತ ಸಾಮರಸ್ಯವೂ ಸಾಧ್ಯ ಹಾಗೂ ಅವಶ್ಯವೆಂದು ಡಿ.ವಿ.ಜಿ. ಪ್ರತಿಪಾದಿಸಿದ್ದಾರೆ.

ದೇವರನ್ನು ಕುರಿತ ಒಂದು ವಿಚಾರಲಹರಿಯುನ್ನು ಹರಿಸುವ ದೇವರು (1975), ಕಾವ್ಯಸ್ವಾರಸ್ಯ (1975) ಇವು ಡಿ.ವಿ.ಜಿ. ಅವರ ಕೊನೆಗಾಲದ ಕೃತಿಗಳು.

ಬಾಗಲಕೋಟೆಯಲ್ಲಿ 1928ರಲ್ಲಿ ಸಮಾವೇಶಗೊಂಡ ಅಖಿಲ ಕರ್ನಾಟಕ ವೃತ್ತ ಪತ್ರಿಕಾಕರ್ತರ ಪ್ರಥಮ ಸಮ್ಮೇಳನಕ್ಕೆ ಇವರು ಅಧ್ಯಕ್ಷರಾಗಿದ್ದುದಲ್ಲದೆ, ಮೈಸೂರು ಸಂಸ್ಥಾನದ ಪತ್ರಿಕೋದ್ಯೋಗಿಗಳ ಸಂಘದ ಪ್ರಥಮಾಧ್ಯಕ್ಷರಾಗಿಯೂ ಕೆಲಸ ಮಾಡಿದ್ದರು. ಮಡಿಕೇರಿಯಲ್ಲಿ 1932ರಲ್ಲಿ ಸೇರಿದ್ದ 18ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಡಿ.ವಿ.ಜಿ. ಅಧ್ಯಕ್ಷರಾಗಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದ (1933-37) ಇವರು ವಸಂತ ಸಾಹಿತ್ಯೋತ್ಸವ, ಗಮಕ ತರಗತಿ, ಗ್ರಂಥಪ್ರದರ್ಶನ ಮುಂತಾದ ನಾಲ್ಕಾರು ನೂತನ ಯೋಜನೆಗಳನ್ನು ಆರಂಭಿಸಿದರು. ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದೊಂದಿಗೆ ನಿಕಟ ಸಂಬಂಧವನ್ನಿಟ್ಟುಕೊಂಡಿದ್ದ (1928-44) ಇವರು 1944ರಲ್ಲಿ ನಡೆದ ಆ ಸಂಘದ ರಜತೋತ್ಸವಕ್ಕೆ ಅಧ್ಯಕ್ಷರಾಗಿದ್ದರು. ಇವರ ಬಹುಮುಖಸೇವೆಗಾಗಿ ಮೈಸೂರು ವಿಶ್ವವಿದ್ಯಾನಿಲಯ ಇವರಿಗೆ ಗೌರವ ಡಾಕ್ಟರೇಟ್ (ಡಿ.ಲಿಟ್.) ಪದವಿಯನ್ನಿತ್ತು ಗೌರವಿಸಿದೆ (1961). ಶ್ರೀಮದ್ಭಗವದ್ಗೀತಾತಾತ್ಪರ್ಯ ಎಂಬ ಇವರ ಕೃತಿಗೆ 1967ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭ್ಯವಾಗಿದೆ.

ಇವರು 1975, ಅಕ್ಟೋಬರ್ 7ರಂದು ಬೆಂಗಳೂರಿನಲ್ಲಿ ನಿಧನಹೊಂದಿದರು. (ಎಸ್.ಆರ್.ಆರ್.)

**ಗುಂಡೂರಾವ್, ಆರ್ :** 1937-93. ಕರ್ನಾಟಕದ ಮಾಜಿ ಮುಖ್ಯ ಮಂತ್ರಿ. ಕೊಡಗಿನ ಕುಶಾಲನಗರದಲ್ಲಿ 1937 ಸೆಪ್ಟೆಂಬರ್ 27ರಂದು ಜನಿಸಿದರು. ತಂದೆ ಕೆ.ರಾಮರಾವ್ ಶಾಲಾ ಮಾಸ್ತರರಾಗಿದ್ದರು. ತಾಯಿ ಚೆನ್ನಮ್ಮ. ಇಂಟರ್‌ವರೆಗೆ ವಿದ್ಯಾಭ್ಯಾಸ ಮಾಡಿದ ಗುಂಡೂರಾವ್ ಸಹಕಾರ ಕ್ಷೇತ್ರದಲ್ಲಿ ಉದ್ಯೋಗಿಯಾಗಿ ಸ್ವಲ್ಪಕಾಲ ದುಡಿದರು. ಶಕ್ತಿ ಎಂಬ ಪತ್ರಿಕೆಯಲ್ಲಿ ಪತ್ರಕರ್ತರಾಗಿ ಸೇವೆ ಸಲ್ಲಿಸಿದರು. ಕಾಂಗ್ರೆಸ್ ಪಕ್ಷದ ಕಾರ್ಯಕರ್ತರಾಗಿ ಕೊಡಗಿನಲ್ಲಿ ಜನಪ್ರಿಯರಾದ ಇವರು ಕುಶಾಲನಗರದ ಪುರಸಭಾ ಅಧ್ಯಕ್ಷರಾದರು (1965). 1969ರಲ್ಲಿ ಕಾಂಗ್ರೆಸ್ ಇಬ್ಭಾಗವಾದಾಗ ಬೆಂಗಳೂರಿಗೆ ಬಂದರು. ವೀರೇಂದ್ರ ಪಾಟೀಲರು ಮುಖ್ಯಮಂತ್ರಿಯಾಗಿ ಅಧಿಕಾರದ ಚುಕ್ಕಾಣಿ ಹಿಡಿದಾಗ ಗುಂಡೂರಾಯರು ಯುವನಾಯಕರಾಗಿ ತಮ್ಮನ್ನು ಗುರುತಿಸಿಕೊಂಡರು. ಟೋಕಿಯೊದಲ್ಲಿ ಎಕ್ಸ್‌ಪೋ 70ರ ಪ್ರದರ್ಶನದಲ್ಲಿ ಭಾಗವಹಿಸಲು ಆಯ್ಕೆಯಾದ ವಿದ್ಯಾರ್ಥಿ ಪ್ರತಿನಿಧಿಗಳ ಆಯ್ಕೆಯಲ್ಲಿ ಅನ್ಯಾಯ ನಡೆದಿದೆ ಎಂದು ಚಳವಳಿಯ ನಾಯಕತ್ವ



ವಹಿಸಿದ ಇವರು ವೀರೇಂದ್ರ ಪಾಟೀಲರ ಸರ್ಕಾರಕ್ಕೆ ಅಡ್ಡಿಯನ್ನುಂಟುಮಾಡಿದರು. ಸೋಮವಾರಪೇಟೆ ಕ್ಷೇತ್ರದಿಂದ ವಿಧಾನಸಭೆಗೆ ಸ್ಪರ್ಧಿಸಿ ಆಯ್ಕೆಯಾದರು (1972). ಆಗ ಡಿ.ದೇವರಾಜ ಅರಸು ಅವರ ಸಂಪುಟದಲ್ಲಿ ಸಮಾಚಾರ ಹಾಗೂ ಯುವಜನ ಸೇವಾ ಖಾತೆಯ ಸಚಿವರಾದ ಗುಂಡೂರಾಯರು 1975ರಲ್ಲಿ ವಸತಿ ಮತ್ತು ಯುವಜನ ಸೇವೆಯ ಸಚಿವರಾದರು. 1978ರಲ್ಲಿ ವಿಧಾನಸಭೆಗೆ ಮತ್ತೆ ಸೋಮವಾರಪೇಟೆ ಕ್ಷೇತ್ರದಿಂದಲೇ ಆಯ್ಕೆಯಾಗಿ ಸಾರಿಗೆ ಹಾಗೂ ಪ್ರವಾಸೋದ್ಯಮ ಸಚಿವರಾದರು. ಎಪ್ಪತ್ತರ ದಶಕದಲ್ಲಿ ಇಂದಿರಾಗಾಂಧಿ ಅವರ ಪರ ನಿಂತ ಗುಂಡೂರಾಯರು ವಿರೋಧ ಪಕ್ಷದ ನಾಯಕರಾದರು; ಸಂಜಯ ಗಾಂಧಿಯವರ ನಿಕಟವರ್ತಿಗಳಾಗಿದ್ದರು. ಕರ್ನಾಟಕದಲ್ಲಿ ಇಂದಿರಾ ಕಾಂಗ್ರೆಸ್ ಪಕ್ಷವನ್ನು ಕಟ್ಟುವಲ್ಲಿ ಇವರು ಪ್ರಮುಖ ಪಾತ್ರ ವಹಿಸಿದರು. ರಾಜ್ಯಾದ್ಯಂತ ಪ್ರವಾಸ ಕೈಗೊಂಡು ಶ್ರೀಸಾಮಾನ್ಯನಿಗೆ ಹತ್ತಿರವಾದರು. 1980ರ ಜನವರಿ 12ರಂದು ಕರ್ನಾಟಕದ ಒಂಬತ್ತನೆಯ ಮುಖ್ಯಮಂತ್ರಿಯಾದರು. ರಾಜ್ಯದ ಮುಖ್ಯ ಮಂತ್ರಿಯಾದ ಅತ್ಯಂತ ಕಿರಿಯ ರಾಜಕಾರಣಿ ಎನಿಸಿಕೊಂಡರು.

ಏಳನೆಯ ವಿಧಾನಸಭಾ ಚುನಾವಣೆಯಲ್ಲಿ (1982) ಪರಾಭವಗೊಂಡ ಇವರು ಅನಂತರವೂ ಸಕ್ರಿಯ ರಾಜಕಾರಣದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ರಾಷ್ಟ್ರ ರಾಜಕಾರಣದತ್ತ ತಮ್ಮ ಒಲವನ್ನು ತೋರಿದ ಇವರು ಬೆಂಗಳೂರು ದಕ್ಷಿಣ ಕ್ಷೇತ್ರದಿಂದ ಸ್ಪರ್ಧಿಸಿ ಲೋಕಸಭೆಗೆ ಆಯ್ಕೆಯಾದರು (1989).

ನೇರ ನಡೆನುಡಿಯ ಸ್ನೇಹ ವ್ಯಕ್ತಿತ್ವದ ಅಪರೂಪದ ರಾಜಕಾರಣಿ ಎಂಬ ಖ್ಯಾತಿಗೆ ಗುಂಡೂರಾಯರು ಪಾತ್ರರಾಗಿದ್ದರು. ತಮ್ಮ ಅಧಿಕಾರದ ಅವಧಿಯಲ್ಲಿ ಇವರು ಹಲವಾರು ಜನೋಪಯೋಗಿ ಕಾರ್ಯಕ್ರಮಗಳನ್ನು ಜಾರಿಗೆ ತಂದರು. ಕೃಷ್ಣಾ ನದಿಗೆ ಕಾಲುವೆ, ರೈತರ ಪಂಪ್‌ಸೆಟ್‌ಗಳಿಗೆ ರಿಯಾಯ್ತಿಯ ವಿದ್ಯುತ್ ಯೋಜನೆ, ವಿಧಾನ ಸೌಧದ ಆವರಣದಲ್ಲಿ ಅಂಬೇಡ್ಕರ್ ಪ್ರತಿಮೆಯ ಸ್ಥಾಪನೆ, ಬೆಂಗಳೂರಿನಲ್ಲಿ ಮೆಡಿಕಲ್ ಕಾಲೇಜು ಆರಂಭ, ಬೆಂಗಳೂರಿನ ಮೆಜೆಸ್ಟಿಕ್ ಬಸ್ ನಿಲ್ದಾಣದ ಯೋಜನೆ, ಮೈಸೂರಿನ ಕಲಾಮಂದಿರದ ನಿರ್ಮಾಣ, ಕಾವೇರಿ ಕುಡಿಯುವ ನೀರು ಎರಡನೆಯ ಹಂತದ ಯೋಜನೆಯ ಜಾರಿ, ವಿಶ್ವಕನ್ನಡ ಸಮ್ಮೇಳನ ನಡೆಸಿ ಆ ನೆನಪಿನಲ್ಲಿ ಸುಲಭ ಬೆಲೆಯಲ್ಲಿ ಕನ್ನಡ ಪುಸ್ತಕ ಪ್ರಕಟಣೆ ಇವೇ ಮುಂತಾದ ಇವರ ಗುರುತರ ಗುಣಾತ್ಮಕ ಕಾರ್ಯಗಳು ಮುಖ್ಯವೆನಿಸಿವೆ. ಇವರು ಸ್ವಲ್ಪ ಕಾಲ ಅನಾರೋಗ್ಯಪೀಡಿತರಾಗಿದ್ದು ಲಂಡನ್ನಿನಲ್ಲಿ ಚಿಕಿತ್ಸೆ ಪಡೆಯುತ್ತಿದ್ದ ಸಂದರ್ಭದಲ್ಲಿಯೇ 1993 ಆಗಸ್ಟ್ 22ರಂದು ನಿಧನಹೊಂದಿದರು. ಯುವರಾಜಕಾರಣಿ ದಿನೇಶ್ ಗುಂಡೂರಾವ್ ಇವರ ಮಗ. (ಎಸ್.ಬಿಎಚ್ಎ.)

**ಗುಂಡ್ಲುಪೇಟೆ :** ಚಾಮರಾಜನಗರ ಜಿಲ್ಲೆಯ ಒಂದು ತಾಲ್ಲೂಕು ಹಾಗೂ ಅದರ ಮುಖ್ಯಸ್ಥಳ. ಈ ತಾಲ್ಲೂಕಿನ ದಕ್ಷಿಣದಲ್ಲಿ ಕೇರಳ ಮತ್ತು ತಮಿಳುನಾಡು, ಪೂರ್ವದಲ್ಲಿ ಚಾಮರಾಜನಗರ, ಉತ್ತರದಲ್ಲಿ ನಂಜನಗೂಡು, ಪಶ್ಚಿಮಉತ್ತರದಲ್ಲಿ ಹೆಗ್ಗಡದೇವನಕೋಟೆ ತಾಲ್ಲೂಕು ಇವು ಸುತ್ತುವರಿದಿವೆ. ಕಸಬೆ, ಹಂಗಳ, ಬೇಗೂರು ಮತ್ತು ತೆರಕಣಾಂಬಿ

ಹೋಬಳಿಗಳು ಗ್ರಾಮಗಳು 162. ತಾಲ್ಲೂಕಿನ ವಿಸ್ತೀರ್ಣ 14,062ಚ.ಕಿಮೀ. ಜನಸಂಖ್ಯೆ 2,12,895.



ಪರವಾಸುದೇವ ದೇವಾಲಯ, ಗುಂಡ್ಲುಪೇಟೆ

ತಾಲ್ಲೂಕಿನ ದಕ್ಷಿಣ ಹಾಗೂ ಪಶ್ಚಿಮ ಭಾಗ ಅರಣ್ಯ ಮತ್ತು ಬೆಟ್ಟಗುಡ್ಡಗಳಿಂದ ಆವೃತವಾಗಿದೆ. ಬಂಡೀಪುರ ಮತ್ತು ಬೇರಂಬಾಡಿ ರಕ್ಷಿತ ಅರಣ್ಯಗಳು ಇರುವುದು ಇಲ್ಲಿಯೇ. ಈ ತಾಲ್ಲೂಕಿನ ಪೂರ್ವ ಮತ್ತು ಉತ್ತರ ಭಾಗಗಳಲ್ಲಿ ಜನವಸತಿ ಹೆಚ್ಚು. ಈ ಜನವಸತಿ ಪ್ರದೇಶಗಳು ಮತ್ತು ಅರಣ್ಯಗಳ ನಡುವೆ ತಾಲ್ಲೂಕಿನ ಪಶ್ಚಿಮ ಮತ್ತು ದಕ್ಷಿಣ ಮೇರೆಗಳಿಗೆ ಸಮಾನಾಂತರವಾಗಿ ಹಬ್ಬಿರುವ ಒಂದು ಬೆಟ್ಟಸಾಲಿದೆ. ಎರಡು ದಿಕ್ಕುಗಳ ಈ ಬೆಟ್ಟದ ಹರವುಗಳು ಗೋಪಾಲಸ್ವಾಮಿ ಬೆಟ್ಟದಲ್ಲಿ ಸಂಧಿಸುತ್ತವೆ. ತಾಲ್ಲೂಕಿನ ದಕ್ಷಿಣ ಗಡಿಯಲ್ಲಿ ಮೋಯರ್ ನದಿ ಹರಿಯುತ್ತದೆ. ಇದೇ ಕರ್ನಾಟಕ ಮತ್ತು ತಮಿಳುನಾಡಿನ ಈ ಭಾಗದ ಗಡಿ ರೇಖೆ. ತಾಲ್ಲೂಕಿನ ಮುಖ್ಯ ನದಿ ಗುಂಡ್ಲುಹೊಳೆ. ಈ ನದಿ ತಾಲ್ಲೂಕಿನ ಮಧ್ಯದಲ್ಲಿ ದಕ್ಷಿಣದಿಂದ ಉತ್ತರಕ್ಕೆ ಹರಿಯುತ್ತದೆ. ಮುಂದೆ ನಂಜನಗೂಡಿನಲ್ಲಿ ಕಪಿಲಾ ನದಿಯನ್ನು ಸೇರುತ್ತದೆ. ತಾಲ್ಲೂಕಿನಲ್ಲಿ ಎರೆಮಣ್ಣು ಇದೆ. ಹೆಚ್ಚು ಭಾಗ ನುರುಜುಭೂಮಿ, ಮಳೆ ಕಡಿಮೆ. ಜೋಳ ಮುಖ್ಯ ಬೆಳೆ. ರಾಗಿ, ಅವರೆ, ಹರಳು ಇತ್ಯಾದಿಗಳ ವ್ಯವಸಾಯ ಸಹ ಇದೆ. ಕೆರೆಗಳಿಂದ ಸ್ವಲ್ಪಮಟ್ಟಿಗೆ ಬತ್ತದ ಬೆಳೆ ಆಗುತ್ತದೆ. ತೋಟಗಳೂ ಇವೆ. ಇಲ್ಲಿಯ ವೀಳ್ಯದ ಎಲೆ ಪ್ರಸಿದ್ಧ.

ಗುಂಡ್ಲುಪೇಟೆ ಈ ತಾಲ್ಲೂಕಿನ ಕೇಂದ್ರ. ಗುಂಡ್ಲುಹೊಳೆಯ ಎಡದಂಡೆಯ ಮೇಲಿರುವ ಈ ಊರು ಮೈಸೂರು - ಉದಕಮಂಡಲ (ಊಟಿ) ಹೆದ್ದಾರಿಯಲ್ಲಿ ಮೈಸೂರಿನ ದಕ್ಷಿಣಕ್ಕೆ 61ಕಿಮೀ ದೂರದಲ್ಲಿದೆ. ಗುಂಡ್ಲುಪೇಟೆಯಿಂದ ಪೂರ್ವಕ್ಕಿರುವ ಚಾಮರಾಜನಗರಕ್ಕೆ, ಪಶ್ಚಿಮದೆಡೆ ಕೇರಳದ ಸುಲ್ತಾನ ಬತ್ತೇರಿ ಮತ್ತು ಮುಂದೆ ಕಣ್ಣಾನೂರಿಗೆ, ವಾಯುವ್ಯದಲ್ಲಿ ಹೆಗ್ಗಡದೇವನಕೋಟೆ ಕಡೆಗೆ ರಸ್ತೆಗಳಿವೆ. ಜನಸಂಖ್ಯೆ 26,368.

ಈ ಊರಿನ ಪ್ರಾಚೀನನಾಮ ವಿಜಯಪುರ. ಇದು ತೆರಕಣಾಂಬಿ ಅರಸರ ವಶದಲ್ಲಿ ಬಹಳ ಕಾಲ ಇತ್ತೆಂದು ತೋರುತ್ತದೆ. 1674ರಲ್ಲಿ ಮೈಸೂರಿನ ಚಿಕ್ಕದೇವರಾಜ ಒಡೆಯರು ಈ ಸ್ಥಳ ಬೆಳೆಯಲು ಕಾರಣ. ಇವರು ತಮ್ಮ ಬಾಲ್ಯವನ್ನು ಗುಂಡ್ಲುಪೇಟೆಯ ಸಮೀಪದಲ್ಲಿನ ಹಂಗಳದಲ್ಲಿರುವ ಒಂದು ಕೋಟೆಯಲ್ಲಿ ಬಂಧನದಲ್ಲಿ ಕಳೆಯುತ್ತಿದ್ದಾಗ ಇವರ ತಂದೆ ವಿಧಿವಶರಾಗಲು ಅವರ ಅಂತ್ಯಕ್ರಿಯೆಯನ್ನು ವಿಜಯಪುರದ ಬಳಿ ಇರುವ ಗುಂಡ್ಲುಹೊಳೆ ಬಳಿ ನೆರವೇರಿಸಿ ಮತ್ತೆ ಸೆರೆಮನೆಗೆ ಹಿಂದಿರುಗಿದರು. ಕಾಲಾನಂತರ ತಂದೆಯ ಅಂತ್ಯಕ್ರಿಯೆ ನಡೆದ ಸ್ಥಳದ ಬಳಿ ಒಂದು ಅಗ್ರಹಾರವನ್ನು ಕಟ್ಟಿಸಿ, ವಿಜಯಪುರದ ಕೋಟೆಯನ್ನು ವಿಸ್ತರಿಸಿ ಭದ್ರಪಡಿಸಿ, ತಂದೆಯ ಸಮಾಧಿಯ ಮೇಲೆ ಪರವಾಸುದೇವ ದೇವಾಲಯವನ್ನು ಕಟ್ಟಿಸಿದರು. ಅಂದಿನಿಂದ ವಿಜಯಪುರ ಪೇಟೆ ಸ್ಥಳವಾಗಿ ಬೆಳೆದು ಗುಂಡ್ಲುಪೇಟೆ ಎಂಬ ಹೆಸರನ್ನು ಗಳಿಸಿತು. ಈಗ ಅಗ್ರಹಾರವಾಗಲಿ ಕೋಟೆಯಾಗಲಿ ಉಳಿದಿಲ್ಲ. ಪರವಾಸುದೇವ ದೇವಾಲಯ ಟಿಪ್ಪು ಸುಲ್ತಾನನ ಆಳಿಕೆಯವರೆಗೂ ಉತ್ತಮ ಸ್ಥಿತಿಯಲ್ಲಿತ್ತು. ಅನಂತರದ ವರ್ಷಗಳಲ್ಲಿ ಸರಿಯಾದ ರಕ್ಷಣೆಯಿಲ್ಲದೆ ಪಾಳುಬಿದ್ದಿದೆ. ಕಣಶಿಲೆಯಿಂದ ಕಟ್ಟಿರುವ ಈ ದೇವಾಲಯ ಸಾಕಷ್ಟು ವಿಶಾಲವಾಗಿದ್ದು ಗರ್ಭಗೃಹ, ಪ್ರದಕ್ಷಿಣಾಪಥ, ಸುಕನಾಸಿ, ವಿಶಾಲವಾದ ಮತ್ತು ಚೌಕಟ್ಟಾದ 13 ಕಂಬಗಳಿರುವ ನವರಂಗ ಮತ್ತು ಅದಕ್ಕೆ ಉತ್ತರ ಹಾಗೂ ದಕ್ಷಿಣದ ಕಡೆ ಒಂದೊಂದು ಸಣ್ಣ ಕೋಣೆ ಇವೆ. ದೇವಾಲಯದ ಮುಂದುಗಡೆ ಒಂದು ಮುಖಮಂಟಪವಿತ್ತು. ಈಚೆಗೆ ಅದನ್ನು ವಿಜಯನಾರಾಯಣ ದೇವಾಲಯದ ಮುಂಭಾಗಕ್ಕೆ ಸ್ಥಳಾಂತರಿಸಲಾಗಿದೆ. ದೇವಾಲಯದ ವಿನ್ಯಾಸ, ಅಲಂಕೃತವಾದ ಸುಕನಾಸಿಯ ದ್ವಾರ, ಶಿಲ್ಪಗಳು ಮತ್ತು ಕಂಬಗಳು ವಾಸ್ತುಶಿಲ್ಪದ ದೃಷ್ಟಿಯಿಂದ ವಿಶೇಷವಾದದ್ದು. ಈ ದೇವಾಲಯದ ಎಡಪಾರ್ಶ್ವದಲ್ಲಿ ಪರವಾಸುದೇವನ ದೇವಿಯಾದ ಕಮಲವಲ್ಲಿಯ ದೇವಾಲಯವಿದೆ. ಈ ಎರಡೂ ದೇವಾಲಯಗಳ ವಿಗ್ರಹಗಳನ್ನು ಈಗ ವಿಜಯನಾರಾಯಣ ದೇವಾಲಯಕ್ಕೆ ಸ್ಥಳಾಂತರಿಸಲಾಗಿದೆ.

ವಿಜಯನಾರಾಯಣ ದೇವಾಲಯ ಕೋಟೆಯ ಒಳಗಿದೆ. ಇದನ್ನು ಹೊಯ್ಸಳ ವಿಷ್ಣುವರ್ಧನ ಕಟ್ಟಿಸಿದನೆಂದು ಪ್ರತೀತಿ. ಆದರೆ ಇದು ವಿವಿಧ ಹಂತಗಳ ರಚನೆ. ಮುಖಮಂಟಪ ಈಚಿನದು. ನವರಂಗದ ಮೇಲ್ಛಾವಣಿ ವಿಜಯನಗರ ಶೈಲಿಯಂತೆ ಒಳಭಾಗದಲ್ಲಿ ಸಮತಟ್ಟಾಗಿದ್ದು ಮಧ್ಯದಲ್ಲಿ



ಪರವಾಸುದೇವ, ವಿಜಯನಾರಾಯಣ ದೇವಾಲಯ, ಗುಂಡ್ಲುಪೇಟೆ

ಕಮಲವನ್ನು ಕೆತ್ತಲಾಗಿದೆ. ನವರಂಗದ ದಕ್ಷಿಣ ಭಾಗದಲ್ಲಿ ಈಗ ಮೂರು ಕೋಣೆಗಳನ್ನು ಮಾಡಿ ಪರವಾಸುದೇವ ಮತ್ತು ಆತನ ಪತ್ನಿಯರ ವಿಗ್ರಹಗಳನ್ನು ಮತ್ತು ಆಳ್ವಾರರ ವಿಗ್ರಹಗಳನ್ನು ಇಡಲಾಗಿದೆ. 13-14ನೆಯ ಶತಮಾನಕ್ಕೆ ಸೇರಿದ ಮೂಲ ವಿಜಯನಾರಾಯಣ ದೇವಾಲಯ ತಲಕಾಡಿನ ವೈದ್ಯೇಶ್ವರ ದೇವಾಲಯದಂತೆ ಮೂಲತಃ ಗರ್ಭಗೃಹ ಮತ್ತು

ಸುಕನಾಸಿಯನ್ನು ಮಾತ್ರ ಹೊಂದಿತ್ತು. ಅನಂತರ ಶ್ರೀರಂಗಪಟ್ಟಣ ಹಾಗೂ ತೊಣ್ಣೂರಿನಲ್ಲಿರುವಂತೆ ಮುಚ್ಚಿರುವ ಪ್ರದಕ್ಷಿಣಾಪಥವನ್ನು ಕಲ್ಪಿಸಲಾಯಿತು. ಗರ್ಭಗೃಹದ ದ್ವಾರ ಪರವಾಸುದೇವ ದೇವಾಲಯದಲ್ಲಿರುವಂತೆಯೇ ಸುಂದರವಾಗಿದೆ. ಇಲ್ಲಿಯ ಮೂರ್ತಿ ಅಭಯ ಮುದ್ರೆಯಲ್ಲಿ ನಿಂತಿದ್ದು ಬಲಗೈಯಲ್ಲಿ ಕಮಲವನ್ನು ಹಿಡಿದಿದೆ. ಇದರ ಹಿಂಭಾಗದಲ್ಲಿರುವ ತೋರಣದಲ್ಲಿ ದಶಾವತಾರವನ್ನು ಕೆತ್ತಲಾಗಿದ್ದು ಈ ಶಿಲ್ಪ ಹೊಯ್ಸಳರ ಶಿಲ್ಪರಚನೆಯ ಅನುಕರಣೆಯಂತೆ ಕಾಣುತ್ತದೆ. ಇದು ವಿಜಯನಗರದ ಆರಂಭ ಕಾಲಕ್ಕೆ ಸೇರಿದ್ದೆಂದು ಹೇಳಬಹುದು. ಇಲ್ಲಿಯ ಪರವಾಸು ದೇವ ವಿಗ್ರಹ ಸುಂದರವೂ ಸರಳವೂ ಆಗಿದೆ. ತಲೆಯ ಮೇಲ್ಭಾಗ ದಲ್ಲಿ ಬಿಚ್ಚಿರುವ ಹೆಡೆಯುಳ್ಳ ಆದಿಶೇಷನ ಸುರುಳಿಯ ಮೇಲೆ ಶಂಖಚಕ್ರ ಧಾರಿಯಾದ ವಾಸುದೇವ ಸುಖಾಸೀನನಾಗಿದ್ದಾನೆ. ಪರವಾಸುದೇವನ ಉತ್ಸವಮೂರ್ತಿಯೂ ಒಳ್ಳೆಯ ಶಿಲ್ಪ. ಹಸ್ತಿನಾವತಿಯಲ್ಲಿದ್ದ ಈ ವಿಗ್ರಹ ವನ್ನು ಶಿವಸಮುದ್ರಕ್ಕೆ ತಂದು ಅನಂತರ ಇಲ್ಲಿಗೆ ತರಲಾಯಿತೆಂದು ಪ್ರತೀತಿ.

ಈ ದೇವಾಲಯಕ್ಕೆ ಒಂದೂವರೆ ಕಿಮೀ ಈಶಾನ್ಯದಲ್ಲಿ ರಾಮೇಶ್ವರ ದೇವಾಲಯವಿದೆ. ಈಗ ಶಿಥಿಲವಾಗಿರುವ ಈ ಗುಡಿಯನ್ನು 1337ರಲ್ಲಿ ಕುಮಾರ ಕಂಪಣ್ಣನೆಂಬುವನು ಕಟ್ಟಿಸಿದ. ಇದರ ರಚನೆ ತಲಕಾಡಿನ ವೈದ್ಯೇಶ್ವರ ದೇವಾಲಯದಂತಿದೆ. ಚೌಕಟ್ಟಾದ ಗರ್ಭಗೃಹ, ಸುಕನಾಸಿ, ನಾಲ್ಕು ಕಂಬಗಳಿರುವ ನವರಂಗ ಮತ್ತು ಪೂರ್ವ ಹಾಗೂ ದಕ್ಷಿಣ ದಿಕ್ಕುಗಳಲ್ಲಿ ಕೈಸಾಲೆ ಹಾಗೂ ಪ್ರವೇಶ ದ್ವಾರಗಳಿವೆ. ಈ ದೇವಾಲಯುವನ್ನು ಕಣಶಿಲೆಯಿಂದ ಕಟ್ಟಿ ಗೋಪುರವನ್ನು ಮಾತ್ರ ಇಟ್ಟಿಗೆಯಿಂದ ರಚಿಸಲಾಗಿದೆ. ದೇವಾಲಯದ ಅಧಿಷ್ಠಾನ ಪಟ್ಟಿಕೆಗಳ ಮೇಲೆ ಅನೇಕ ಕನ್ನಡ ಶಾಸನಗಳಿವೆ. (ಎಂ.ಎಸ್.ಕೆ.)

**ಗುಟ್ಟಹಳ್ಳಿ :** ಕೋಲಾರ ಜಿಲ್ಲೆ ಬಂಗಾರಪೇಟೆ ತಾಲ್ಲೂಕಿನ ಒಂದು ಗ್ರಾಮ. ಕೋಲಾರದ ಆಗ್ನೇಯಕ್ಕೆ ಸು.29ಕಿಮೀ ದೂರದಲ್ಲಿ, ಕೋಲಾರ ಚಿನ್ನದಗಣಿ ಮುಳಬಾಗಲು ಮಾರ್ಗದ ಬಳಿ ಇದೆ.

ಇದು ಭೃಗುಮಹರ್ಷಿಗಳ ತಪೋಭೂಮಿಯಾಗಿತ್ತೆಂದು ಪ್ರತೀತಿ. ಗ್ರಾಮದ ಬಳಿಯಲ್ಲಿ ಸು.40ಮೀ. ಎತ್ತರದ ಒಂದು ಚಿಕ್ಕ ಬೆಟ್ಟ ಇದೆ. ಬೆಟ್ಟದ ಮೇಲೆ ವೆಂಕಟರಮಣಸ್ವಾಮಿ ದೇವಾಲಯವಿದೆ. ಈ ಸ್ಥಳ ಬಂಗಾರ ತಿರುಪತಿ, ಚಿನ್ನ ತಿರುಪತಿ ಎಂದೂ ಪ್ರಸಿದ್ಧವಾಗಿದೆ. ಮಾರ್ಗದಲ್ಲಿ ವರಾಹಸ್ವಾಮಿ, ಲಕ್ಷ್ಮಿ, ವಿಘ್ನೇಶ್ವರ ಮತ್ತು ವೀರ ಆಂಜನೇಯ ದೇವಾಲಯಗಳಿವೆ. ಬೆಟ್ಟದ ಮೇಲೆ ಹತ್ತಿ ಹೋಗಿ ಪೂರ್ವಭಾಗದ ಆರು ಕಿಂಡಿಗಳ ಕಿಟಕಿಯ ಮೂಲಕ ದೇವರ ದರ್ಶನ ಮಾಡಬೇಕು. ವೆಂಕಟರಮಣನ ಮೂರ್ತಿ ಚಿಕ್ಕದಿದ್ದರೂ ಆಕರ್ಷಕವಾಗಿದೆ. ಪುಷ್ಕರಣಿಯ ಆಗ್ನೇಯಕ್ಕೆ ವಿಷ್ಣುಪಾದಗಳು, ನವಿಲುತೀರ್ಥ, ಪಾಪನಾಶನ, ಪವಿತ್ರ ಕಾವೇರಿ ಮುಂತಾದವುಗಳಿವೆ. ಈ ಊರಿಗೆ ಸಮೀಪದಲ್ಲಿ ಆಗ್ನೇಯಕ್ಕಿರುವ ಮತ್ತೊಂದು ಗುಡ್ಡದ ಮೇಲೆ ಅಲಮೇಲುಮಂಗಮ್ಮನವರ ದೇವಾಲಯವಿದೆ.

ಪ್ರತಿ ವರ್ಷ ಮಾಘ ಶುದ್ಧ ಪೂರ್ಣಿಮೆಯಂದು ಒಂದು ವಾರ ಕಾಲ ವಿಶೇಷ ಪೂಜೆ ಮತ್ತು ಜಾತ್ರೆ ನಡೆಯುತ್ತದೆ. ಬ್ರಹ್ಮೋತ್ಸವ ಈ ಸಂದರ್ಭದಲ್ಲಿ ವಿಶೇಷ ಆಕರ್ಷಣೆ. ಶ್ರಾವಣ ಶನಿವಾರಗಳು, ಶಿವರಾತ್ರಿ ಮತ್ತು ತೆಪ್ಪೋತ್ಸವಗಳಲ್ಲಿ ವಿಶೇಷ ಪೂಜೆಗಳು ನಡೆಯುತ್ತವೆ. ಇತರ ದಿನಗಳಿಗಿಂತ ಶನಿವಾರಗಳಲ್ಲಿ ಭಕ್ತರು ಹೆಚ್ಚು ಸೇರುತ್ತಾರೆ. ಈ ಕ್ಷೇತ್ರದಲ್ಲಿ ಆರು ಕಲ್ಯಾಣಮಂಟಪಗಳಿದ್ದು ಅವು ವಿವಾಹಕಾರ್ಯಗಳಿಗೆ ಅನುಕೂಲವಾಗಿವೆ. (ಎ.ಬಿ.ಬಿ.)

**ಗುಡಿಕೋಟೆ :** ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲ್ಲೂಕಿನಲ್ಲಿ ಕಸಬೆ ಯಿಂದ 28ಕಿಮೀ ಪೂರ್ವಕ್ಕಿರುವ ಗ್ರಾಮ, ಹೋಬಳಿ ಕೇಂದ್ರ.

ಇದು ಹಿಂದೆ ಒಂದು ಪಾಳೆಯಪಟ್ಟಿನ ಕೇಂದ್ರವಾಗಿದ್ದು ಪಾಳೆಯಗಾರರ ಕಾಲದಲ್ಲಿ ಕಟ್ಟಿದ ಕೋಟೆ ಊರಿಗೆ ತಾಗಿ ನಿಂತ ಬೆಟ್ಟದ ಮೇಲೆ ಇದೆ. ಆ ಕೋಟೆಗೆ ಹೊಂದಿಸಿರುವ ಬಂಡೆಗಳ ಗಾತ್ರ ಬೆರಗುಗೊಳಿಸುವಂತಹುದು. ಬ್ರೂಸ್‌ಫೂಟ್ ಎಂಬಾತ ಇದರ ವಿಷಯವಾಗಿ ಬರೆಯುತ್ತ ದಕ್ಷಿಣ ಭಾರತದ ಯಾವ ಕೋಟೆಯಲ್ಲಿಯೂ ಇಷ್ಟು ಭಾರಿ ಬಂಡೆಗಳನ್ನು ತಾನು ಕಂಡಿಲ್ಲವೆನ್ನುತ್ತಾನೆ. ಈ ಬೆಟ್ಟವೇರಲು ಅನೇಕ ಕಡಿದಾದ ಒಳದಾರಿಗಳಿವೆ. ಬೆಟ್ಟದ ಮೇಲೆ ಎರಡು ಭಿನ್ನ ರೀತಿಯ ಬಾವಿಗಳಿವೆ. ತೊಟ್ಟಿಲುಬಾವಿ ಎಂದು ಕರೆಯುವ ಒಂದರ ಬಾಯಿ ದೋಣಿಯಂತಿದೆ. ಇನ್ನೊಂದು 35' ಚದುರದ ಚೌಕನೆಯದು. ಇದರ ಒಳಮೈ ಸೈಜುಗಲ್ಲುಗಳಿಂದ ನಿರ್ಮಿತವಾಗಿದೆ. ಅದನ್ನು ನಿರ್ಮಿಸಿರುವ ತಾಣ ಸ್ವಾರಸ್ಯಕರವಾಗಿದೆ. ನೋಡಿದಾಗ ಗೂಡಿನೊಳಗೆ ಬಾವಿ ತೋಡಿಸಿದಂತೆ ಭಾಸವಾಗುತ್ತದೆ. ಏಕೆಂದರೆ ಬಾವಿಯ ಮೇಲೆ ಮುಂಚಾವಣಿಯಂತೆ ಚಾಚಿ ನಿಂತಿರುವ ಬಂಡೆಗಳ ಕೂಡುವಿಕೆ ಹಾಗೆ ಇದೆ. ಈ ಚಾಚುಬಂಡೆಗಳು ತೂಗುಬಂಡೆಗಳಂತೆ ಗೋಚರಿಸುತ್ತವೆ. ಗ್ರಾಮದಲ್ಲಿ ಕೆಲವು ಚಿಕ್ಕ ದೇವಸ್ಥಾನಗಳಿವೆ. ಇಲ್ಲಿಯ ಪಾಳೆಯಗಾರ ಕಟ್ಟಿಸಿದನೆನ್ನಲಾದ ಬೊಮ್ಮಲಿಂಗನ ಕೆರೆಯ ಬಳಿ ಅನೇಕ ನಾಗರಕಲ್ಲುಗಳೂ ಇವೆ. ಕೆಲವು ನಾಗರಕಲ್ಲುಗಳು 6' ಎತ್ತರ ಇವೆ.

ಗುಡಿಕೋಟೆಯ ಪಾಳೆಯಗಾರರು ಬೇಡ ಕುಲದವರು. ಇವರು ಅಸ್ತಿತ್ವಕ್ಕೆ ಬಂದ ತರುಣದಲ್ಲಿಯೇ (ಸು.16ನೆಯ ಶತಮಾನ) ಗುಡಿಕೋಟೆಗೆ ಹೊಂದಿದ ಸುತ್ತಮುತ್ತಲಿನ ಗ್ರಾಮಗಳನ್ನು ಅಧೀನಕ್ಕೆ ತಂದುಕೊಂಡು ಪಾಳೆಯಪಟ್ಟನ್ನು ವಿಸ್ತರಿಸಿದರು. ಇವರು ಚಿತ್ರದುರ್ಗದ ಪಾಳೆಯಗಾರರಿಗೆ ಅಧೀನರಾಗಿದ್ದರೆಂದು ತಿಳಿದುಬರುತ್ತದೆ. ಬಿಳಿಚೋಡು ಮನೆತನಕ್ಕೆ ಸೇರಿದ ಚಿತ್ರದುರ್ಗದ ಪಾಳೆಯಗಾರ 1ನೆಯ ಭರಮಪ್ಪನಾಯಕನ ಹೆಂಡತಿ ಬಂಗಾರವ್ವ ನಾಗಿತಿ ಗುಡಿಕೋಟೆ ಪಾಳೆಯಗಾರರ ಸಂತತಿಯವಳು. ಕೈಬಿಟ್ಟುಹೋಗಿದ್ದ ಅಣಜಿ ಕೋಟೆಯನ್ನು ಹರಪನಹಳ್ಳಿ ಪಾಳೆಯಗಾರರಿಂದ ಗೆದ್ದುಕೊಳ್ಳಲು ಗುಡಿಕೋಟೆ ಪಾಳೆಯಗಾರರು ಭರಮಪ್ಪನಾಯಕನಿಗೆ ನೆರವಾಗಿದ್ದರು. ಈ ಪಾಳೆಯಪಟ್ಟು 1777ರಲ್ಲಿ ಹೈದರ್ ಅಲಿಯಿಂದ ನಾಶವಾಯಿತು. ಎರಡು ಶತಮಾನಗಳ ಕಾಲ ಅಸ್ತಿತ್ವದಲ್ಲಿದ್ದರೂ ಅವರ ಪೀಳಿಗೆಯ ಬಗೆಗಿನ ಹೆಚ್ಚಿನ ದಾಖಲೆಗಳು ಉಪಲಬ್ಧವಾಗಿಲ್ಲ. ಚೀರನೂರು ಗ್ರಾಮದಲ್ಲಿ ದೊರೆತ ಎರಡು ಶಾಸನಗಳಿಂದ ಒಂದಿಬ್ಬರು ಪಾಳೆಯಗಾರರ ಹೆಸರು ಅವರು ಆಳಿದ ಕಾಲ ತಿಳಿದುಬರುತ್ತದೆ. 1676ರಲ್ಲಿ ಸೊಂಡೂರು ರಾಜಪ್ಪನಾಯಕ ಪಾಳೆಯಗಾರನಾಗಿದ್ದ. ಚೆಲಿಮಿನಾಯಕ ವಿಧಿಸಿದ್ದ ತಲೆಹೊರೆ, ಗಾಡಿಹೊರೆ, ಮಿತಸಂತಾನ ಮತ್ತು ನಾಯಿಂದ ತೆರಿಗೆಗಳಿಗೆ ಈ ರಾಜಪ್ಪ ನಾಯಕ ಚೇಕದಕೆರೆ, ಚಿಕೇರು ವಿಭಾಗದಲ್ಲಿ ಶಾಶ್ವತವಾದ ವಿನಾಯಿತಿ ಕೊಟ್ಟ. ಇವನ ಮಗ ಇಮ್ಮಡಿ ರಾಜಪ್ಪನಾಯಕ 1690ರಲ್ಲಿ ಪಾಳೆಯಗಾರನಾಗಿದ್ದನೆಂದೂ ಅವನಿಗೊಬ್ಬ ಸೋದರನಿದ್ದನೆಂದೂ ತಿಳಿದುಬರುತ್ತದೆ. ಈ ಪಾಳೆಯಗಾರರ ಹೆಸರಿನೊಂದಿಗೆ ಸಂಡೂರು ಎಂದು ಸೇರಿರುವುದರಿಂದ ಮೂಲತಃ ಇವರು ಸಂಡೂರಿನವರಿರಬಹುದು ಎಂದು ಊಹಿಸುವ ಅವಕಾಶವಿದೆ. (ಸಿ.ಕೆ.ಎನ್.)

**ಗುಡಿಗಾರ ವಿಠ್ಠಲ ರಾಮಚಂದ್ರ ಶೆಟ್ಟಿ :** 1930-2002. ಗಂಧದ ಕೆತ್ತನೆಯ ಪ್ರಸಿದ್ಧ ಶಿಲ್ಪಿ. ಉತ್ತರ ಕನ್ನಡ ಜಿಲ್ಲೆಯ ಕುಮಟದಲ್ಲಿ



ಖ್ಯಾತ ಗುಡಿಗಾರ ವಂಶದಲ್ಲಿ 1930ರಲ್ಲಿ ಜನಿಸಿದರು. ತಂದೆ ರಾಮಚಂದ್ರ ಶೆಟ್ಟಿ, ಇವರ ಅಜ್ಜ ನಾರಾಯಣ ಹೂವಯ್ಯ ಶೆಟ್ಟಿ, ಅಜ್ಜನ ಅಣ್ಣ ಗಣಪತಿ ಶೆಟ್ಟಿ ಗುರುಗಳಾಗಿ ತಮ್ಮ ವಿದ್ಯೆಯನ್ನು ಬಾಲಕ ಗುಡಿ ಗಾರನಿಗೆ ಧಾರೆ ಎರೆದರು. 4ನೆಯ ತರಗತಿ ವಿದ್ಯಾಭ್ಯಾಸ ಮುಗಿಸಿದ ಬಳಿಕ 10ನೆಯ ವಯಸ್ಸಿನಲ್ಲಿಯೇ ಕೆತ್ತನೆ ಕೆಲಸದಲ್ಲಿ ತಮ್ಮನ್ನು ತೊಡ ಗಿಸಿಕೊಂಡರು. ಇವರು ಶಿಲ್ಪಕೆತ್ತನೆಯ ತರಬೇತಿಯನ್ನು ಮುಂಬಯಿಯ ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್ (1955) ಹಾಗೂ ಮೈಸೂರಿನ ಚಾಮರಾಜೇಂದ್ರ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್‌ನಲ್ಲಿ (ಈಗ ಕಾವಾ) ನಡೆಸಿದರು. ಅಂತಾರಾಷ್ಟ್ರೀಯ ವಾಣಿಜ್ಯ

ಮೇಳದಲ್ಲಿ ಪ್ರದರ್ಶಿಸಿದ ಇವರ ಕಲಾಕೃತಿಗಳಿಂದಾಗಿ ರಾಷ್ಟ್ರಮಟ್ಟದಲ್ಲಿ ಗುರುತಿಸಲ್ಪಟ್ಟರು (1958). ರಾಷ್ಟ್ರಪತಿ ಜಾಕಿರ್ ಹುಸೇನರಿಂದ ವಿಶ್ವಕರ್ಮ ಕಲಾಕೃತಿಗೆ ರಾಷ್ಟ್ರಪತಿ ಪ್ರಶಸ್ತಿ ಪಡೆದರು (1969). 1970ರಲ್ಲಿ ರಾಜ್ಯಪ್ರಶಸ್ತಿ ಪಡೆದರು. 1971ರಲ್ಲಿ ಬೆಂಗಳೂರಿನಲ್ಲಿ ನಡೆದ ಪ್ರದರ್ಶನದಲ್ಲಿ ಇವರು ನಿರ್ಮಿಸಿದ ಎಂಟು ಅಡಿ ಎತ್ತರದ ಗಾಂಧೀಜಿಯ ಮೂರ್ತಿ ಎಲ್ಲರ ಗಮನ ಸೆಳೆಯಿತು. ದೆಹಲಿಯಲ್ಲಿ ಜರುಗಿದ ಕಾಂಗ್ರೆಸಿನ ಅಖಿಲ ಭಾರತ ಕಲಾ ಮತ್ತು ಕೈಗಾರಿಕಾ ಬೃಹತ್ ಪ್ರದರ್ಶನದಲ್ಲಿ ಕಾರ್ಯನಿರತ ಕಲಾವಿದರಾಗಿ ದುಡಿದರು (1971). ಏಷ್ಯ ಉತ್ಸವದಲ್ಲಿ ಅನೇಕ ಪ್ರಾತ್ಯಕ್ಷಿಕೆಗಳನ್ನು ನೀಡಿದರು (1972). 1972ರಲ್ಲಿ ಉತ್ತಮ ಸೇವಾ ಪ್ರಶಸ್ತಿ ಪಡೆದರು. ಭಾರತ ಸರ್ಕಾರ ಇವರನ್ನು ಪಶ್ಚಿಮ ಜರ್ಮನಿಗೆ ಕಳಿಸಿತು (1976). ಜರ್ಮನಿಯಲ್ಲಿ ಜರುಗಿದ ಭಾರತೀಯ ಕರಕುಶಲ ಸಪ್ತಾಹದಲ್ಲಿ ಕಲಾಕೃತಿಗಳ ಪ್ರದರ್ಶನಕ್ಕೆ ಇವರನ್ನು ಆಹ್ವಾನಿಸಲಾಗಿತ್ತು (1978). ಜಪಾನಿ ಮಾದರಿಯ ಮೂರ್ತಿಗಳನ್ನು (ಜಪಾನ ಬುದ್ಧ, ಸೂರ್ಯದೇವ) ನಿರ್ಮಿಸಿಕೊಟ್ಟು ಜಪಾನಿನಲ್ಲೂ ಪ್ರಸಿದ್ಧಿ ಪಡೆದರು (1984). ಇವರು ರಚಿಸಿದ ಕ್ರಿಸ್ತನ ಜೀವಿತಕ್ಕೆ ಸಂಬಂಧಿಸಿದ ಲಾಸ್ಟ್ ಸಪ್ಪರ್ (ಅಂತಿಮ ಭೋಜನ) ದೊಡ್ಡಫಲಕ ಈಗಲೂ ಗೋವ ಚರ್ಚಿನಲ್ಲಿ ಪ್ರದರ್ಶಿತವಾಗಿದೆ.

ಕರ್ನಾಟಕ ಸರಕಾರ ಶಿಲ್ಪಕಲೆಗಾಗಿ ನೀಡುವ ಅಮರಶಿಲ್ಪಿ ಜಕಣಾಚಾರಿ ಪ್ರಶಸ್ತಿ (1978) ನೀಡಿ ಇವರನ್ನು ಗೌರವಿಸಿದೆ. ಲಲಿತಕಲಾ ಅಕಾಡೆಮಿ ಇವರಿಗೆ ರಾಜ್ಯ ಪ್ರಶಸ್ತಿ ನೀಡಿದೆ (1993). ಇವರು 2002 ಆಗಸ್ಟ್ 19ರಂದು ನಿಧನಹೊಂದಿದರು. ಅಮೂಲ್ಯ ಗುಡಿಗಾರಿಕೆಯ ಕಲೆಯನ್ನು ಇವರ ಮಕ್ಕಳಾದ ಅರುಣ, ಉದಯ, ಸಂಜಯ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. (ಆರ್.ಜಿ.ಆರ್.)

**ಗುಡಿಗಾರಿಕೆ :** ಗಂಧದ ಮರ, ಬೆಂಡು, ಕೆಲಮಟ್ಟಿಗೆ ಮಣ್ಣು- ಇವುಗಳ ಕುಶಲಕೆಲಸಕ್ಕೆ ಈ ಹೆಸರಿದೆ. ಮರದ ಕುಶಲ ಕೈಗಾರಿಕೆ ವಾಸ್ತುಶಿಲ್ಪಗಳಷ್ಟೇ ಪ್ರಾಚೀನವಾದುದು. ಅರಮನೆಗಳ, ದೇವಸ್ಥಾನಗಳ, ಹಳೆಯ ಕಾಲದ ಮನೆಗಳ ಮಹಾದ್ವಾರ, ಮೊದಲ ಬಾಗಿಲು, ಛತ್ತು, ರಥ, ಕಿಟಕಿಯ ಚೌಕಟ್ಟುಗಳು ಮೊದಲಾದುವನ್ನು ಚಿತ್ರವಿಚಿತ್ರವಾಗಿ ಕೆತ್ತಿ



ಭಾರತ ಭಾಗ್ಯವಿಧಾತರು. ತಯಾರಿಸಿದವರು -ಶಾಂಬಾ ಅನಂತ ಶೇಟ ಗುಡಿಗಾರ, ಕುಮಟ

ಅಲಂಕರಣ ಮಾಡುವುದು ಹಿಂದಿನಿಂದ ಬಂದಿರುವ ಸಂಪ್ರದಾಯ. ಗಂಧದ ಮರದಲ್ಲಿ ಕೆತ್ತನೆಯ ಕೌಶಲವನ್ನು ತೋರಿಸುವ ಒಂದು ಸಾಂಪ್ರದಾಯಿಕ ಕಾಯಕಕ್ಕೆ ಸಂಬಂಧಿಸಿದವರನ್ನು ಈಗ ಗುಡಿಗಾರರೆನ್ನುತ್ತಾರೆ.

ಕನ್ನಡ ನಾಡಿನ ಗುಡಿಗಾರರು ಗೋವದಿಂದ ಬಂದವರು. ಶಿವಮೊಗ್ಗ ಜಿಲ್ಲೆಯ ಸೊರಬ, ಸಾಗರ ತಾಲ್ಲೂಕುಗಳಲ್ಲಿಯೂ ಉತ್ತರ ಕನ್ನಡದ ಶಿರಸಿ, ಕುಮಟ, ಹೊನ್ನಾವರ, ಸಿದ್ದಾಪುರ ತಾಲ್ಲೂಕುಗಳಲ್ಲಿಯೂ ಇವರು ನೆಲೆಸಿದ್ದಾರೆ. ಜಡೆ, ಬಿಳಿಗೋಡು, ತವಂದೆ, ಜಿಂಗಿಕೊಪ್ಪ, ತಾಳಗುಪ್ಪ,



ಗಂಧದಮೂರ್ತಿಗಳ ಕೆತ್ತನೆ

ಹೊನ್ನೆಕೇರಿ, ಬನವಾಸಿ, ಕೊಪ್ಪ, ಇಸಳೂರ, ಹೆಬ್ಬಳ್ಳಿ, ಖರ್ಲೂ, ಬೀಳಗಿ, ಹೆರೂರಗಳಲ್ಲಿನವರು ಗುಡಿಗಾರಿಕೆಯನ್ನೂ ಕೃಷಿಯನ್ನೂ ಒಟ್ಟಾಗಿ ನಡೆಸಿಕೊಂಡು ಬಂದಿದ್ದಾರೆ. ಕುಮಟ ಹೊನ್ನಾವರಗಳಲ್ಲಿ ಇವರನ್ನು ಶೆಟ್ಟಿಗಳೆಂದು ಕರೆಯುತ್ತಾರೆ. ಸಾಗರ ಸೊರಬಗಳಲ್ಲಿ ವೃತ್ತಿಯಿಂದಲೇ ಇವರನ್ನು ಗುರುತಿಸಬೇಕಾಗುತ್ತದೆ. ಶೆಟ್ಟಿಗಳ ಮನೆಮಾತು ಕೊಂಕಣಿಯಾದರೆ ಉಳಿದವರದು ಕನ್ನಡ.

ಗುಡಿಗಾರರಲ್ಲಿ ಗಂಡಸರು ಗಂಧದ ಕೆಲಸವನ್ನೂ ಹೆಂಗಸರು ಬೆಂಡಿನ ಕೆಲಸವನ್ನೂ ಮಾಡುತ್ತಾರೆ. ಬೆಂಡಿನಿಂದ ಹೂ, ಹೂಮಾಲೆ, ಗುಚ್ಛಗಳನ್ನು ಹೆಂಗಸರು ಮಾಡಿದರೆ ಬಾಸಿಂಗ, ಮೊಗ್ಗಿನ ತುರಾಯಿಗಳನ್ನು ಗಂಡಸರೇ ಮಾಡುತ್ತಾರೆ. ಪ್ರತಿವರ್ಷ ಶ್ರಾವಣ ಭಾದ್ರಪದ ಮಾಸಗಳಲ್ಲಿ ಗುಡಿಗಾರರು ಗಣಪತಿಯನ್ನು ಮಾಡಿ ಮಾರುತ್ತಾರೆ. ಇದೂ ಬಾಸಿಂಗ ತಯಾರಿಕೆಯೂ ತಕ್ಕಮಟ್ಟಿಗೆ ಆದಾಯ ತರುವ ಬಾಬ್ತುಗಳು. ಗಂಧದ ಮರ, ಆನೆದಂತ, ಉಸುಕಿನ ಕಾಗದ, ಮೇಣದ ಪಾಲೀಷು -ಇವು ಗುಡಿಗಾರರ ಕಚ್ಚಾ ಸಾಮಗ್ರಿಗಳು. ತಮ್ಮ ಕೆಲಸದಲ್ಲಿವರು ಗರಗಸ, ಉಜ್ಜುಗೊರಡು, ನಾನಾತರದ ಚಾಣ, ಮೊಳೆ, ತಿರುಪುಮೊಳೆ, ಮರದುಗಳನ್ನು (ಹಿಂಜಸ್) ಬಳಸುತ್ತಾರೆ. ಮೊದಲು ತಾವು ಮಾಡಬಯಸಿದ ಕಲಾಕೃತಿಗೆ ಅಳತೆಗನುಗುಣವಾಗಿ ಮರವನ್ನು ಕತ್ತರಿಸಿಕೊಳ್ಳುತ್ತಾರೆ. ಆಮೇಲೆ ಆ ತುಂಡಿಗೆ ಸಾಮಾನ್ಯ ಕಲಾಕೃತಿಯ ರೂಪಕೊಟ್ಟು ತದನಂತರ ಅದನ್ನು ಸೂಕ್ಷ್ಮ ಕೆತ್ತನೆಯಿಂದ ತಿದ್ದುತ್ತಾರೆ. ಕೊನೆಯಲ್ಲಿ ಉಸುಕಿನ ಕಾಗದ ಮತ್ತು ಮೇಣದ ಪಾಲೀಷಿನಿಂದ ಹೊಳಪು ಕೊಡುತ್ತಾರೆ.

ಗುಡಿಗಾರರ ಕೃತಿಗಳು ವಾಸ್ತು ಮತ್ತು ಶಿಲ್ಪದ ಸಾಂಪ್ರದಾಯಿಕ ಶೈಲಿಯನ್ನು ಹೋಲುತ್ತವೆ. ರಾಮಾಯಣ, ಮಹಾಭಾರತ, ಹಿಂದು ಪುರಾಣಗಳು ಇವರ ಆಕರಗಳು. ದೇವರ ಮೂರ್ತಿಗಳು, ಒಡವೆಯ ಪೆಟ್ಟಿಗೆಗಳು, ಫೋಟೋ ಚೌಕಟ್ಟುಗಳು, ವ್ಯಾಸಪೀಠ, ಕಾಗದವನ್ನು ಕತ್ತರಿಸುವ ಚಾಕುಗಳು, ಬೀಸಣಿಕೆಗಳು, ವಿಸಿಟಿಂಗ್ ಕಾರ್ಡುಗಳು, ಆನೆ, ಹೂಮಾಲೆ ಇತ್ಯಾದಿಗಳನ್ನು ಇವರು ಸಾಮಾನ್ಯವಾಗಿ ತಯಾರಿಸುತ್ತಾರೆ.



ಮುರಲೀಧರ, ಗಂಧ ಹಾಗೂ ಹಸ್ತಿದಂತದ ಸೂಕ್ಷ್ಮ ಕಲಾಕೃತಿ. ತಯಾರಿಸಿದವರು- ಶಾಂಬಾ ಅನಂತ ಶೇಟ ಗುಡಿಗಾರ, ಕುಮಟ

ಈಗೀಗ ಆಧುನಿಕ ಬೇಡಿಕೆಗಳನ್ನು ಗಮನಿಸಿ ಹೊಸ ಹೊಸ ವಸ್ತುಗಳನ್ನು ಸಿದ್ಧಪಡಿಸಿಕೊಡುತ್ತಿದ್ದಾರೆ. ಗುಡಿಗಾರಿಕೆಯಲ್ಲಿ ಕಚ್ಚಾವಸ್ತುವಿನ ಕಿಮ್ಮತ್ತಿಗೂ ಕಲಾಕೃತಿಯ ಬೆಲೆಗೂ ನೇರವಾದ ಸಂಬಂಧವಿಲ್ಲ. ಹತ್ತು ರೂಪಾಯಿಯ ಕಿಮ್ಮತ್ತಿನ ಗಂಧದ ಮರದಿಂದ ಇನ್ನೂರು ರೂಪಾಯಿ ಬೆಲೆಯವರೆಗಿನ ಕಲಾ ಕೃತಿಯನ್ನು ನಿರ್ಮಿಸಬಲ್ಲವರಿದ್ದಾರೆ. ಗುಡಿಗಾರರು ಸ್ವತಂತ್ರ ವೃತ್ತಿಯವರು. ಕೇವಲ ಕೆಲವೇ ಕೆಲಸಗಾರರನ್ನು ನಿಯಮಿಸಿಕೊಳ್ಳುತ್ತಾರೆ. ಬೆಂಗಳೂರು, ಮೈಸೂರು, ತಮಿಳುನಾಡು, ಮುಂಬೈ, ಕೋಲ್ಕತ, ದೆಹಲಿಗಳು ಗುಡಿಗಾರರ ಮಾರುಕಟ್ಟೆಗಳು. ನೂರಕ್ಕೆ ಅರುವತ್ತರಷ್ಟು ಗುಡಿಗಾರರಿಗೆ ಸ್ವಂತ ಜಮೀನಿದ್ದು ಅವರು ಕೃಷಿ ಮಾಡುತ್ತಾರೆ. ಇವರ ಕಲಾಕೃತಿಗಳ ವ್ಯಾಪಾರ ಸಹಕಾರಿ ಸಂಘಗಳ ಮುಖಾಂತರವೂ ನೇರವಾಗಿಯೂ ಆಗುತ್ತದೆ. ಶಿವಮೊಗ್ಗ, ಕುಮಟಗಳಲ್ಲಿ ಗುಡಿಗಾರರ ತರಬೇತಿಗಾಗಿ ಆರ್ಟಿಸಾನ್ ಟ್ರೇನಿಂಗ್ ಇನ್‌ಸ್ಟಿಟ್ಯೂಟ್ ಎಂಬ ಸಂಸ್ಥೆಗಳಿರುವುವಲ್ಲದೆ, ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ ಮತ್ತು ಮುಂಬಯಿಯ ಜೆ.ಜೆ.ಸ್ಕೂಲ್ ಆಫ್ ಆರ್ಟ್ಸ್ ಸಂಸ್ಥೆಗಳಲ್ಲೂ ತರಬೇತಿಯ ಅವಕಾಶವುಂಟು. ಗುಡಿಗಾರರ ಕಲಾಕೌಶಲ ಜಗತ್ಪ್ರಸಿದ್ಧವಾಗಿದೆ. 1871ರಲ್ಲಿ ಅಂತಾರಾಷ್ಟ್ರೀಯ ವಾರ್ಷಿಕ ಪ್ರದರ್ಶನದಲ್ಲಿ ಇವರ ಕಲಾಕೃತಿಗಳು ಪ್ರದರ್ಶಿಸಲ್ಪಟ್ಟಿವೆ. ಪ್ಯಾರಿಸ್‌ನಲ್ಲಿ ನಡೆದ ಜಾಗತಿಕ ವಸ್ತುಪ್ರದರ್ಶನದಲ್ಲಿ ಕೆಲವು ಕೃತಿಗಳು ಬೆಳ್ಳಿಯ ಪದಕಗಳನ್ನು ಪಡೆದಿವೆ. ಇತ್ತೀಚೆಗೆ ಈ ಉದ್ಯೋಗ ಲಾಭದಾಯಕವಿಲ್ಲದ್ದರಿಂದ ಹೊಸ ಪೀಳಿಗೆ ನೌಕರಿಯನ್ನು ಸೇರತೊಡಗಿದೆ. ಇಂದು ಈ ಉದ್ಯೋಗದಲ್ಲಿರುವವರು ಅಭಿಮಾನದಿಂದ ಮಾತ್ರ ಈ ಕಲೆಯನ್ನು ನಡೆಯಿಸಿಕೊಂಡು ಹೋಗುತ್ತಿದ್ದಾರೆ. ಆಲ್ ಇಂಡಿಯ ಹ್ಯಾಂಡಿಕ್ರಾಫ್ಟ್ ಬೋರ್ಡ್ ಈ ಕೈಕಸಬನ್ನು ಸಂರಕ್ಷಿಸುವುದಕ್ಕಾಗಿ ಶ್ರಮಿಸುತ್ತಿದೆ. ಅಂತಾರಾಷ್ಟ್ರೀಯ ಮಟ್ಟದಲ್ಲಿ ಉತ್ತರ ಕನ್ನಡ ಜಿಲ್ಲೆಯ ಗುಡಿಗಾರರು ಹೆಸರು ತಂದುಕೊಟ್ಟಿದ್ದಾರೆ. ಭಾರತದ ರಾಷ್ಟ್ರಪತಿ ಭವನದಲ್ಲಿರುವ ಆಲಂಕಾರಿಕ ಪೀಠೋಪಕರಣಗಳನ್ನು ಕಲಾತ್ಮಕವಾಗಿ ಸೃಷ್ಟಿಸಿದವರು ಗುಡಿಗಾರರು. ಅಮೆರಿಕದ ಮಾಜಿ ಅಧ್ಯಕ್ಷ ಐಸೆನ್ ಹಾವರ್ ಹಾಗೂ ಇಂಗ್ಲೆಂಡಿನ ರಾಣಿ ಎಲಿಜಬೆತ್ ಭಾರತಕ್ಕೆ ಭೇಟಿನೀಡಿದಾಗ ಗಂಧದ ಕೆತ್ತನೆಯ ಕಲಾಕೃತಿಗಳನ್ನು ಕಾಣಿಕೆಯಾಗಿ ನೀಡಲಾಗಿದೆ. ಹೊನ್ನಾವರದ ಎಸ್.ವೆಂಕಪ್ಪ, ಸೊರಬದ ಹಿರಿಯಣ್ಣಪ್ಪ, ಕುಮಟದ ವಾಮನ ಸುಬ್ರಾಯ ಸೇಟ್, ಅದೇ ಊರಿನ ಸುಬ್ರಾಯ ರಾಮಚಂದ್ರ ಸೇಟ್ ಮತ್ತು ಶಂಬಾ ಅನಂತ ಸೇಟ್, ಸಿದ್ದಾಪುರದ ವೆಂಕಟಗಿರಿ ಚಿದಂಬರ ಚಿತ್ರಕ್ ಮೊದಲಾದವರು ಗುಡಿಗಾರಿಕೆಯಲ್ಲಿ ಪ್ರಸಿದ್ಧರು. *

**ಗುಡಿಬಂಡೆ :** ಕೋಲಾರ ಜಿಲ್ಲೆಯ ವಾಯುವ್ಯ ಭಾಗದಲ್ಲಿ ಚಿಕ್ಕಬಳ್ಳಾಪುರ ಉಪವಿಭಾಗಕ್ಕೆ ಸೇರಿದ ಒಂದು ತಾಲ್ಲೂಕು. ಜಿಲ್ಲೆಯ ಅತ್ಯಂತ ಚಿಕ್ಕ ತಾಲ್ಲೂಕು. ಹಿಂದೆ ಬಾಗೇಪಲ್ಲಿಯ ಉಪತಾಲ್ಲೂಕಾಗಿತ್ತು. ದಕ್ಷಿಣದಲ್ಲಿ ಚಿಕ್ಕಬಳ್ಳಾಪುರ, ಪೂರ್ವದಲ್ಲಿ ಶಿಡ್ಲಘಟ್ಟ ಮತ್ತು ಬಾಗೇಪಲ್ಲಿ, ಪಶ್ಚಿಮದಲ್ಲಿ ಗೌರಿಬಿದನೂರು ತಾಲ್ಲೂಕುಗಳು, ಉತ್ತರದಲ್ಲಿ ಸ್ವಲ್ಪ ದೂರದವರೆಗೆ ಆಂಧ್ರಪ್ರದೇಶದ ಗಡಿ ಇವುಗಳಿಂದ ಸುತ್ತುವರಿಯಲ್ಪಟ್ಟಿದೆ. ತಾಲ್ಲೂಕಿನ ವಿಸ್ತೀರ್ಣ 222ಚ.ಕಿಮೀ. ಕಸಬೆ ಮತ್ತು ಸೋಮೇನಹಳ್ಳಿ ಹೋಬಳಿಗಳು. ಒಟ್ಟು ಗ್ರಾಮಗಳು 105. ಜನಸಂಖ್ಯೆ 48,940.

ತಾಲ್ಲೂಕು ಹೆಚ್ಚುಮಟ್ಟಿಗೆ ಕಣಶಿಲೆಯ ಬೆಟ್ಟಗಳ ಪ್ರದೇಶ. ಭೂಮಿ ಉತ್ತರಕ್ಕೆ ಇಳಿಜಾರಾಗಿದ್ದು ಅನೇಕ ಏರು ತಗ್ಗುಗಳಿಂದ ಕೂಡಿದೆ. ನಂದಿಬೆಟ್ಟದ ಉತ್ತರದಲ್ಲಿ ಅವಲುಕೊಂಡ ಎಂಬಲ್ಲಿ ಹುಟ್ಟುವ ಕುಶಾವತಿ ನದಿ ಈ ತಾಲ್ಲೂಕಿನ ಮೂಲಕ ಉತ್ತರಕ್ಕೆ ಹರಿದು ಮುಂದೆ ಚಿತ್ರಾವತಿ ನದಿಯನ್ನು ಸೇರಿಕೊಳ್ಳುತ್ತದೆ. ತಾಲ್ಲೂಕಿನ ಮುಖ್ಯ ಕೆರೆಯಾಗಿರುವ ಬೈರಸಾಗರಕ್ಕೆ ಇದೇ ಮುಖ್ಯ ಆಸರೆ. ಈ ಕೆರೆಯ ಎರಡು ನಾಲೆಗಳಲ್ಲಿ ಒಂದು ಸುಮಾರು 2.5ಕಿಮೀ ದೂರದವರೆಗೂ ಮತ್ತೊಂದು 6.5ಕಿಮೀ ದೂರದವರೆಗೂ ಸಾಗುತ್ತದೆ. ಈ ತಾಲ್ಲೂಕಿನಲ್ಲಿ ನುರುಜುಗಲ್ಲಿನಿಂದ, ಕಲ್ಲುಗಳಿಂದ ಕೂಡಿದ ಭೂಪ್ರದೇಶವೇ ಹೆಚ್ಚು. ಈ ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ 733.84ಮಿಮೀ. ಮಳೆ ಕಡಿಮೆಯಾದರೂ ಕೆರೆ ಬಾವಿಗಳ ಆಸರೆಯಿಂದ ನೆಲಗಡಲೆ, ರಾಗಿ, ಬತ್ತ, ಕಬ್ಬು, ಆಲೂಗೆಡ್ಡೆ, ಈರುಳ್ಳಿ, ಮೆಣಸಿನಕಾಯಿ ಮತ್ತು ದ್ವಿದಳ ಧಾನ್ಯಗಳನ್ನು ಬೆಳೆಯುತ್ತಾರೆ. ಗುಡಿಬಂಡೆಯ ಸುತ್ತಮುತ್ತಲೂ ಹುಣಿಸೆ ಮರಗಳನ್ನು ಹೆಚ್ಚಾಗಿ ಕಾಣಬಹುದು. ಮೈದಾನ ಪ್ರದೇಶಗಳಲ್ಲಿ ಮಾವಿನ ತೋಪುಗಳಿವೆ. ಪಶುಸಂಪತ್ತಿನ ಅಭಿವೃದ್ಧಿಗೆ ಹೆಚ್ಚು ಗಮನ ನೀಡಲಾಗುತ್ತಿದ್ದು, ಗುಡಿಬಂಡೆಯಲ್ಲಿ ತಾಲ್ಲೂಕುಮಟ್ಟದ ಒಂದು ಪಶುವೈದ್ಯಾಲಯವೂ ಯಲ್ಲೋಡಿನಲ್ಲಿ ಗ್ರಾಮಮಟ್ಟದ ಪಶುವೈದ್ಯಾಲಯವೂ ಇವೆ.

ಗುಡಿಬಂಡೆ ತಾಲ್ಲೂಕು ಬೆಲ್ಲ ಮತ್ತು ಕಲ್ಲುಸಕ್ಕರೆ ತಯಾರಿಕೆಗೆ, ರೇಷ್ಮೆನೇಯ್ಗೆ ಮತ್ತು ಕೊಟ್ಟಣದ ಅಕ್ಕಿಗೆ ಪ್ರಸಿದ್ಧ. ಗೌರಿಬಿದನೂರು ಮತ್ತು ಚಿಕ್ಕಬಳ್ಳಾಪುರದ ರೈಲು ನಿಲ್ದಾಣಗಳೇ ಈ ತಾಲ್ಲೂಕಿಗೆ ಹತ್ತಿರವಿರುವ ರೈಲುಸಂಪರ್ಕ. ಗುಡಿಬಂಡೆಯಿಂದ ಸುತ್ತಲ ಮುಖ್ಯ ಸ್ಥಳಗಳಿಗೆ ಉತ್ತಮ ಮಾರ್ಗಗಳಿವೆ. *

ಗುಡಿಬಂಡೆ ಈ ತಾಲ್ಲೂಕಿನ ಮುಖ್ಯ ಸ್ಥಳ. ನಂದಿದುರ್ಗ ಬೆಟ್ಟಸಾಲಿನಲ್ಲಿ ಕೋಲಾರದ ವಾಯವ್ಯಕ್ಕೆ 95ಕಿಮೀ ದೂರದಲ್ಲಿದೆ. ಗುಡಿಯಿಂದ ಕೂಡಿದ ಬಂಡೆಯೊಂದರ ದಕ್ಷಿಣದ ಬುಡದಲ್ಲಿ ಈ ಪಟ್ಟಣವಿರುವುದರಿಂದ ಇದಕ್ಕೆ ಗುಡಿಬಂಡೆ ಎಂಬ ಹೆಸರು ಬಂದಿದೆ. ಜನಸಂಖ್ಯೆ 8,794. ಈ ಸುತ್ತಲ ಪ್ರದೇಶಕ್ಕೆ ಇದೇ ವ್ಯಾಪಾರಕೇಂದ್ರ.

ಔರಂಗಜೇಬನ ಕರ್ನಾಟಕ ಭಾಗದ ಫೌಜುದಾರ ಖಾಸಿಂಖಾನ್ ದೊಡ್ಡಬಳ್ಳಾಪುರವನ್ನು ವಶಪಡಿಸಿಕೊಂಡಮೇಲೆ ಗುಡಿಬಂಡೆ ಮತ್ತು ಅದರ ಸುತ್ತಲಿನ ಅರಣ್ಯ ಭಾಗಗಳನ್ನು ಹಾವಳಿ ಬೈರೇಗೌಡನಿಗೆ ಕೊಟ್ಟ. ಹಾವಳಿ ಬೈರೇಗೌಡ ಮಕ್ಕಳಿಲ್ಲದೆ ಮೃತಪಟ್ಟ. ಅವನ ಮೈದುನ ರಾಮೇಗೌಡ ಉತ್ತರಾಧಿಕಾರಿಯಾದ. 1689ರಲ್ಲಿ ಗುಡಿಬಂಡೆ ಚಿಕ್ಕಬಳ್ಳಾಪುರದ ಪಾಳೆಯಗಾರ ಬೈಚೇಗೌಡನ ವಶವಾಯಿತು.

ಹಾವಳಿ ಬೈರೇಗೌಡ ಮೊದಲು ಹಳೆಯ ಗುಡಿಬಂಡೆಯ ಕೋಟೆಯನ್ನೂ ಅನಂತರ ಈಗಿನ ಬಂಡೆಯ ತಳದ ಗುಡಿಬಂಡೆ ಪಾಳೆಯವನ್ನೂ ಸ್ಥಾಪಿಸಿದ. ಕೋಟೆಯ ಭಾಗದಲ್ಲಿ ಈಗಲೂ ಅನೇಕ ಬಂಡೆದ್ವಾರಗಳು, ಬಂಡೆಗಳಲ್ಲಿ ಬಿಡಿಸಿದ ಸೋಪಾನಗಳು, ಸಿಹಿನೀರಿನ ದೋಣೆಗಳು, ಗುಡಿಗಳು, ಹಗೇವುಗಳು, ಮದ್ದಿನ ಉಗ್ರಾಣಗಳು ಇವೆ. ಕೋವಿಯ ಮದ್ದನ್ನು ತಯಾರಿಸಲು ಉಪಯೋಗಿಸುತ್ತಿದ್ದ ಬೀಸುವ ಕಲ್ಲು ಸಹ ಇದೆ.

ಈ ಊರಿನ ಹೆಸರಿಗೆ ಕಾರಣವಾದ ಬಂಡೆಯ ಮೇಲಿರುವ ಗುಡಿ ಅಹೋಬಲ ಓಬಲ ನರಸಿಂಹಸ್ವಾಮಿಯದು. ಇದೊಂದು ನೈಸರ್ಗಿಕ ಗವಿ. ಗವಿಯು ಗರ್ಭಗುಡಿ ಮತ್ತು ಹೊರ ಅಂಕಣವೆಂದು ಎರಡಾಗಿ ವಿಂಗಡಿತವಾಗಿದೆ. ಹೊರ ಅಂಕಣದ ಮಂಟಪದ ದ್ವಾರದಲ್ಲಿ ದ್ವಾರಪಾಲಕ ವಿಗ್ರಹಗಳೂ ಮಂಟಪದ ಉತ್ತರದ ಗೋಡೆಯ ಮೇಲೆ ವಾಮನ, ರಾಮ, ವರಾಹ ಮತ್ತು ಉಗ್ರನರಸಿಂಹಸ್ವಾಮಿಯ ಉಬ್ಬುಚಿತ್ರಗಳೂ ಇವೆ. ಗರ್ಭಗುಡಿಯಲ್ಲಿ ವಿಗ್ರಹದ ಬದಲು ಉದ್ಭವ ಶಿಲೆ ಇದೆ. ಗವಿಯ ಸುತ್ತಲೂ ಕಲ್ಲಿನ ಗೋಡೆ ಇದೆ. ಗುಡಿಬಂಡೆಯಲ್ಲಿ ಎರಡು ಜಿನಾಲಯಗಳೂ ಇವೆ. (ಎಚ್.ಪಿ.ಕೆ.)

**ಗುಡಿಸಿಲು ಕೈಗಾರಿಕೆಗಳು :** ಗುಡಿಸಿಲಿನಲ್ಲಿ ನಡೆಸುವ ಕೈಗಾರಿಕೆಗಳು, ಕುಟೀರ ಕೈಗಾರಿಕೆಗಳು (ಕಾಟೆಜ್ ಇಂಡಸ್ಟ್ರೀಸ್). ಇದು ನಾಗರಿಕತೆಯಷ್ಟೇ ಹಳೆಯದು. ಮನುಷ್ಯ ಸ್ವರಕ್ಷಣೆಗಾಗಿ ಮತ್ತು ಬೇಟೆಗಾಗಿ ಆಯುಧಗಳನ್ನೂ ಉಪಕರಣಗಳನ್ನೂ ತಯಾರಿಸತೊಡಗಿದಾಗ ಈ ಕೈಗಾರಿಕೆಯ ಉದಯವಾಯಿತು. ಅವನು ಮುಂದೆ ಉಡುಪು, ವ್ಯವಸಾಯದ ಉಪಕರಣ ಮುಂತಾದುವನ್ನು ತಯಾರಿಸಲು ಪ್ರಾರಂಭಿಸಿದಾಗ ಇದು ಬೆಳೆಯಿತು. ಪುರಾತನ ನಾಗರಿಕತೆ ಬೆಳೆದಂತೆ ನಾನಾ ಉಪಯುಕ್ತ ಮತ್ತು ಭೋಗ ವಸ್ತುಗಳ ಕೈಗಾರಿಕೆಗಳಿಗೆ ರಾಜರಿಂದಲೂ ಚಕ್ರವರ್ತಿಗಳಿಂದಲೂ ಶ್ರೀಮಂತರಿಂದಲೂ ಪೋಷಣೆ ಒದಗಿತು. ಹೀಗೆ ತಯಾರಿಸಿದ ಸರಕುಗಳು ದೂರದ ಮಾರುಕಟ್ಟೆಗಳಲ್ಲಿ ವಿಕ್ರಯವಾಗುತ್ತಿದ್ದುವು. ಆದರೆ ಕೈಗಾರಿಕಾ ಕ್ರಾಂತಿಯಾದ ಮೇಲೆ ಉಂಟಾದ ತ್ವರಿತ ಮತ್ತು ವ್ಯಾಪಕವಾದ ಕೈಗಾರಿಕೀಕರಣ ಗೃಹ ಕೈಗಾರಿಕೆಗಳ ಕ್ಷೀಣ ದಶೆಗೆ ಕಾರಣವಾಯಿತು. ಆದರೂ ಈ ಕೈಗಾರಿಕೆಗಳು ಸಂಪೂರ್ಣವಾಗಿ ಕಣ್ಮರೆಯಾಗಿಲ್ಲ. ಕೆಲವು ಕಾರಣಗಳಿಂದಾಗಿ ಅವು ಇಂದಿಗೂ ಉಳಿದುಬಂದಿವೆ. ಕೆಲವು ಉಪಯುಕ್ತ ವಸ್ತುಗಳಿಗೆ ಬೇಡಿಕೆ ಸ್ಥಳೀಯವೂ ಪರಿಮಿತವೂ ಆಗಿರುತ್ತದೆ. ಅಂಥ ವಸ್ತುಗಳನ್ನು ದೊಡ್ಡ ಕೈಗಾರಿಕೆಗಳಲ್ಲಿ ಬೃಹದ್ಗಾತ್ರದಲ್ಲಿ ಉತ್ಪಾದನೆ ಮಾಡುವುದು ಸಾಧ್ಯವಿಲ್ಲ. ಗುಡಿಸಿಲು ಕೈಗಾರಿಕೆಗಳಲ್ಲಿ ಅವನ್ನು ಸಣ್ಣ ಗಾತ್ರದಲ್ಲಿ ಉತ್ಪಾದಿಸಬಹುದು. ಅದೂ ಅಲ್ಲದೆ ಗೃಹ ಕೈಗಾರಿಕೆಗಳು ಜನಗಳ ರುಚಿ ಮತ್ತು ಬೇಡಿಕೆಗಳಿಗೆ ಅನುಗುಣವಾಗಿ ಸರಕುಗಳನ್ನು ತಯಾರಿಸುತ್ತವೆ. ಈ ಕಾರಣಗಳಿಂದಾಗಿ ಗುಡಿಸಿಲು ಕೈಗಾರಿಕೆಗಳು ಈಗಿನ ಬೃಹತ್ ಕೈಗಾರಿಕಾ ಪ್ರಪಂಚದಲ್ಲೂ ಜೀವಂತವಾಗಿ ಉಳಿದಿವೆ. ಕೆಲವು ವಿಶಿಷ್ಟ ಕ್ಷೇತ್ರಗಳಲ್ಲಿ ಪ್ರವರ್ಧಮಾನವಾಗಿವೆ. ಈಚೆಗೆ ಸರ್ಕಾರಗಳು ಇವಕ್ಕೆ ಉತ್ತೇಜನ ನೀಡುತ್ತಿವೆ. ಇದಕ್ಕೆ ನಾನಾ ಕಾರಣಗಳುಂಟು. 1 ಈ ಕೈಗಾರಿಕೆಗಳು ಶ್ರಮಜೀವಿಗಳ ಹೆಚ್ಚಳವಿರುವ ಮತ್ತು ಕಡಿಮೆ ಬಂಡವಾಳವಿರುವ ದೇಶಗಳಿಗೆ ಚೆನ್ನಾಗಿ ಹೊಂದಿಕೊಳ್ಳುತ್ತವೆ. 2 ಇವು ಸ್ಥಳೀಯವಾಗಿ ದೊರೆಯುವ ಕಚ್ಚಾಸಾಮಗ್ರಿ ಮತ್ತು ಕುಶಲತೆಯನ್ನು ಉಪಯೋಗಿಸಿಕೊಂಡು ಅನೇಕ ಉಪಯುಕ್ತ ಮತ್ತು ಅನುಭೋಗ ವಸ್ತುಗಳನ್ನು ತಯಾರಿಸುವುದರಿಂದ ದೇಶದ ಆರ್ಥಿಕ ಪ್ರಗತಿಗೆ ಸಹಾಯ ಮಾಡುತ್ತವೆ. 3 ಗುಡಿಸಿಲು ಕೈಗಾರಿಕೆಗಳು ಮನೆಯಲ್ಲೇ ಇರುವ ಮುದುಕರು, ಕುರುಡರು ಮತ್ತು ಮಕ್ಕಳುಗಳ ಸೇವೆಯನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಳ್ಳಲು ಸಹಾಯಕವಾಗುತ್ತದೆ. ಸಮಾನ ಆರ್ಥಿಕ ಅವಕಾಶ ಕಲ್ಪಿಸುವುದಕ್ಕೂ ರಾಷ್ಟ್ರದ ವರಮಾನ ಮತ್ತು ಸಂಪತ್ತಿನ ಸಮಾನ ಹಂಚಿಕೆಗೂ ಕೆಲವು ದೇಶಗಳು ಗುಡಿಸಿಲು ಕೈಗಾರಿಕೆಗಳನ್ನು ಉತ್ತೇಜಿಸುತ್ತಿವೆ. ಈ ರಂಗಗಳಲ್ಲಿ ಗೃಹಕೈಗಾರಿಕೆಗಳು ವ್ಯಾಪಕವಾಗಿ ಕಂಡುಬರುತ್ತವೆ. ಪುಸ್ತಕಗಳನ್ನು ಹೊಲಿಯುವುದು, ನೂಲಿಗೆ ಬಣ್ಣ ಕಟ್ಟುವುದು, ಬಟ್ಟೆಬರೆಗಳ ತಯಾರಿಕೆ; ಬೀಜಗಳಿಂದ ಎಣ್ಣೆ ತೆಗೆಯುವುದು, ಚಿನ್ನ, ಬೆಳ್ಳಿ ಮತ್ತು ಇತರ ಆಭರಣಗಳ ತಯಾರಿಕೆ, ಚರ್ಮವಸ್ತುಗಳ ತಯಾರಿಕೆ, ಚಾಪೆ ಹೆಣೆಯುವುದು, ಸಂಗೀತ ಸಾಧನಗಳ ತಯಾರಿಕೆ, ವ್ಯವಸಾಯೋಪಕರಣಗಳ ತಯಾರಿಕೆ, ಮಣ್ಣಿನ ಕೆಲಸ ಮತ್ತು ಕುಂಬಾರಿಕೆ, ಬಿದಿರು ಮತ್ತು ಬೆತ್ತದ ಸಾಮಾನುಗಳ ತಯಾರಿಕೆ, ಜಮಖಾನದ ತಯಾರಿಕೆ, ಮಣ್ಣಿನ ಪ್ರತಿಮೆಗಳ ತಯಾರಿಕೆ, ತಾಮ್ರದ ಸಾಮಾನುಗಳ ತಯಾರಿಕೆ, ಗರಿಯಿಂದ ಸಾಮಾನುಗಳ ತಯಾರಿಕೆ, ಆಟದ ಸಾಮಾನುಗಳು ಮತ್ತು ಬೊಂಬೆ ಮಾಡುವುದು, ರಬ್ಬರ್ ವಸ್ತುಗಳು ಮತ್ತು ರಬ್ಬರ್ ಅಚ್ಚುಗಳು, ಕಸೂತಿ ಕೆಲಸ ಇತ್ಯಾದಿ.



ಬುಟ್ಟಿ ಹೆಣಿಗೆ

ಗುಡಿಸಿಲು ಕೈಗಾರಿಕೆಗಳಲ್ಲಿ ತೊಡಕಿಲ್ಲದ ಮತ್ತು ಸಾಮಾನ್ಯವಾದ ಉತ್ಪಾದನ ತಂತ್ರಗಳನ್ನು ಉಪಯೋಗಿಸುತ್ತಾರೆ. ಅನೇಕ ಕೈಗಾರಿಕೆಗಳಲ್ಲಿ ಹಳೆಯ ಕಾಲದ ಯಂತ್ರ ಸಲಕರಣೆಗಳಿಂದ ಉತ್ಪಾದನ ಕಾರ್ಯ ನಡೆಯುತ್ತದೆ. ಕೆಲವರು ಸುಧಾರಿಸಿದ ಉತ್ಪಾದನ ಕ್ರಮ ಮತ್ತು ಉಪಕರಣಗಳನ್ನು ಬಳಸುವುದೂ ವಾಡಿಕೆಯಲ್ಲಿದೆ. ಈ ಕೈಗಾರಿಗಕೆಗಳು ತಾಂತ್ರಿಕ ಪ್ರಗತಿಯಿಂದ ಸಂಪೂರ್ಣವಾಗಿ ವಂಚಿತವಾಗಿಯೇನೂ ಇಲ್ಲ. ಆದರೆ ನವೀನ ಉತ್ಪಾದನ ವಿಧಾನಗಳನ್ನು ಅಳವಡಿಸುವುದರಲ್ಲಿ ನಿಧಾನ ಹೆಚ್ಚು. ಕೆಲವು ಕೈಗಾರಿಕೆಗಳಲ್ಲಿ ವಿದ್ಯುಚ್ಛಕ್ತಿಯನ್ನು ಬಳಸುವುದುಂಟು. ಆಧುನಿಕ ಕಾರ್ಖಾನೆಗಳೊಂದಿಗೆ ಹೊಂದಿಕೊಂಡು ಉತ್ಪಾದನ ಕಾರ್ಯನಿರತವಾದ ಗುಡಿಸಿಲು ಕೈಗಾರಿಕೆಗಳೂ ಇವೆ. ಗಿರಣಿಯ ನೂಲನ್ನು ಬಳಸಿಕೊಂಡು ಮಗ್ಗದಲ್ಲಿ ಬಟ್ಟೆ ನೇಯುವುದು ಒಂದು ಉದಾಹರಣೆ. ಕಮ್ಮಾರಿಕೆಯಲ್ಲಿ ತಿರುಗು ಯಂತ್ರದ ಬಳಕೆ ಹೆಚ್ಚುತ್ತಿದೆ. ಹೀಗೆ ನಿಧಾನವಾಗಿಯಾದರೂ ತಾಂತ್ರಿಕ ಪ್ರಗತಿ ಗುಡಿಸಿಲು ಕೈಗಾರಿಕೆಗಳ ಉತ್ಪಾದನ ಕ್ರಮವನ್ನು ಬದಲಾಯಿಸುತ್ತಿದೆ.

ಅನೇಕ ಗುಡಿಸಿಲು ಕೈಗಾರಿಕೆಗಳಲ್ಲಿ ವಿಶೇಷ ಕುಶಲತೆಯ ಆವಶ್ಯಕತೆಯಿರುವುದಿಲ್ಲ. ಅನೇಕ ಉಪಯುಕ್ತ ಸರಕುಗಳನ್ನು ಸಾಧಾರಣವಾದ ಕುಶಲತೆಯಿಂದಲೇ ಉತ್ಪಾದಿಸಬಹುದು. ಉದಾ: ಬೆತ್ತದ ಕುಕ್ಕೆ, ಹೆಡಗೆ, ಮೊರ ಎಣೆಯುವುದು. ಆದರೆ ಕೆಲವು ಕೈಗಾರಿಕೆಗಳಲ್ಲಿ ಉನ್ನತ ಮಟ್ಟದ ಕುಶಲತೆ ಮತ್ತು ಕೆಲಸಗಾರಿಕೆ ಅಗತ್ಯವಾಗುತ್ತದೆ. ಉದಾ: ಬೆತ್ತದ ಪೀಠೋಪಕರಣಗಳು ವಂಶಪಾರಂಪರ್ಯವಾದ ಕೌಶಲದ ಬಲದಿಂದ ನಡೆಯುವ ಕೈಗಾರಿಕೆಗಳೂ ಉಂಟು. ಕುಶಲ ಕರ್ಮಿ ತನ್ನ ಮಕ್ಕಳಿಗೆ ತರಬೇತಿ ಕೊಟ್ಟು ಅವರನ್ನು ಆ ಕೆಲಸದಲ್ಲಿ ನಿಪುಣರನ್ನಾಗಿ ಮಾಡುತ್ತಾನೆ.

ಈ ಕಾರಣದಿಂದಾಗಿ ಕೆಲವು ಉತ್ಪಾದನ ವಿಧಾನಗಳು ಮತ್ತು ಕೌಶಲಗಳು ಕೆಲವೇ ಕುಟುಂಬಗಳಿಗೆ ಸೀಮಿತವಾಗಿರುತ್ತವೆ. ಈಚಿನ ವರ್ಷಗಳಲ್ಲಿ ಕೆಲವು ವೃತ್ತಿ ಸಂಸ್ಥೆಗಳು ಗುಡಿಸಿಲು ಕೈಗಾರಿಕೆಯಲ್ಲಿ ತೊಡಗಿರುವ ಮತ್ತು ತೊಡಗುವ ಕೆಲಸಗಾರರಿಗೆ ತರಬೇತು ಒದಗಿಸುತ್ತಿವೆ. ಆದಾಗ್ಯೂ ಇದು ಸಾಕಷ್ಟು ವ್ಯಾಪಕವಾಗಿಲ್ಲ. ಗುಡಿಸಿಲು ಕೈಗಾರಿಕೆಯಲ್ಲಿ ತೊಡಗಿರುವ ಬಹಳ ಜನ ಯಾವ ವಿಧವಾದ ವ್ಯವಸ್ಥಿತ ತರಬೇತನ್ನೂ ಪಡೆದಿಲ್ಲದಿರುವುದೇ ಸಾಮಾನ್ಯವಾಗಿದೆ.



ಬೆತ್ತದಿಂದ ಕುರ್ಚಿ ತಯಾರಿಕೆ

ಎಲ್ಲ ಗುಡಿಸಿಲು ಕೈಗಾರಿಕೆಗಳಿಗೂ ಸಾಮಾನ್ಯವಾದ ಕೆಲವು ಸಮಸ್ಯೆಗಳುಂಟು. ಬಂಡವಾಳದ ಅಭಾವ ಒಂದು ಮುಖ್ಯ ಸಮಸ್ಯೆ. ಈ ಕೈಗಾರಿಕೆಗಳಿಗೆ ಅಲ್ಪ ಬಂಡವಾಳವೇ ಸಾಕಾದರೂ ಅಷ್ಟು ಬಂಡವಾಳವನ್ನು ಕೂಡ ಅನೇಕ ಉತ್ಪಾದಕರು ಹೊಂದಿಸಿಕೊಳ್ಳಲು ಅಸಮರ್ಥರಾಗಿರುತ್ತಾರೆ. ಬೃಹತ್ ಕೈಗಾರಿಕೆಗಳಂತೆ ಇದಕ್ಕೂ ಅಲ್ಪಾವಧಿ ಮತ್ತು ದೀರ್ಘಾವಧಿ ಸಾಲಗಳು ಬೇಕಾಗುತ್ತವೆ. ಉಪಕರಣಗಳು, ಯಂತ್ರಗಳು ಮತ್ತು ಕಟ್ಟಡಗಳಿಗಾಗಿ ದೀರ್ಘಾವಧಿ ಸಾಲಗಳು ಅಗತ್ಯ. ಕಚ್ಚಾ ಸಾಮಗ್ರಿಯನ್ನು ಕೊಳ್ಳಲು, ತಯಾರಾದ ಪದಾರ್ಥಗಳನ್ನು ಮತ್ತು ತಯಾರಿಕೆಗೆ ಬೇಕಾದ ವಸ್ತುಗಳನ್ನು ಶೇಖರಿಸಲು ಮಾರಾಟ ಮಾಡಲು ಮತ್ತು ಕೆಲಸಗಾರರಿಗೆ ಕೂಲಿ ಕೊಡಲು ಅಲ್ಪಾವಧಿ ಸಾಲ ಬೇಕಾಗುತ್ತದೆ. ಗುಡಿಸಿಲು ಕೈಗಾರಿಕೆಗಳು ಸಂಘಟಿತ ಉದ್ಯಮಗಳಲ್ಲವಾದ್ದರಿಂದ ಬಂಡವಾಳ ಒದಗಿಸುವುದು ಮತ್ತು ಸಾಲ ಪಡೆಯುವುದು ಸುಲಭವಲ್ಲ. ಬ್ಯಾಂಕುಗಳು ಮತ್ತು ಇತರ ಸಂಸ್ಥೆಗಳಿಂದ ಹಣ ಪಡೆಯಲು ಇವು ಅಗತ್ಯವಾದ ಆಧಾರ ಮತ್ತು ಆಸ್ತಿ ಒದಗಿಸಲಾರವು. ಈ ಕಾರಣಗಳಿಂದಾಗಿ ಇವು ಸಂಘಟಿತ ಸಂಸ್ಥೆಗಳಿಂದ ಹಣ ಪಡೆಯುವುದು ಕಷ್ಟ. ಗುಡಿಸಿಲು ಕೈಗಾರಿಕೆಗಳಲ್ಲಿ ತೊಡಗಿರುವವರಿಗೆ ಅಗತ್ಯವಾದ ಬಂಡವಾಳ ಬಹುತೇಕ ಒದಗುತ್ತಿರುವುದು ಲೇವಾದೇವಿಗಾರರು ಮತ್ತು ವರ್ತಕರಿಂದ. ಸ್ನೇಹಿತರಿಂದ ಮತ್ತು ಸಂಬಂಧಿಕರಿಂದ ಹಣ ಪಡೆಯುವುದೂ ಸಾಮಾನ್ಯ. ಕೆಲವು ದೇಶಗಳಲ್ಲಿ ಸರ್ಕಾರಗಳು ಪರಿಮಿತ ಗಾತ್ರದಲ್ಲಿ ಈ ಕೈಗಾರಿಗೆಗಳಿಗೆ ಹಣ ಸಹಾಯ ಮಾಡುತ್ತವೆ. ಕೆಲವು ಪರಿಸ್ಥಿತಿಗಳಲ್ಲಿ ಸಹಕಾರ ಸಂಘಗಳು ಹಣವನ್ನೂ ಕಚ್ಚಾ ಸಾಮಾಗ್ರಿಯನ್ನೂ ಒದಗಿಸುತ್ತವೆ. ಭಾರತದಲ್ಲಿ ಈಗ ವಾಣಿಜ್ಯ ಬ್ಯಾಂಕುಗಳು ಮತ್ತು ಸಹಕಾರಿ ಬ್ಯಾಂಕುಗಳು ಇವಕ್ಕೆ ಹಣ ಒದಗಿಸಲು ಆಸಕ್ತಿ ವಹಿಸುತ್ತಿವೆ. ಇಷ್ಟಾದರೂ ಗುಡಿಸಿಲು ಕೈಗಾರಿಕೆಗಳ ಹಣಕಾಸಿನ ಸ್ಥಿತಿ ತೃಪ್ತಿಕರವಾಗಿಲ್ಲವೆಂದೇ ಹೇಳಬೇಕು.

ಕಚ್ಚಾ ಸಾಮಗ್ರಿಯನ್ನು ಹೊಂದಿಸಿಕೊಳ್ಳುವುದು ಗುಡಿಸಿಲು ಕೈಗಾರಿಕೆಗಳ ಮತ್ತೊಂದು ಮುಖ್ಯ ಸಮಸ್ಯೆ. ವಿವಿಧ ವಸ್ತುಗಳ ತಯಾರಿಕೆಯಲ್ಲಿ ತೊಡಗಿರುವ ಅವಕ್ಕೆ ನಾನಾ ಬಗೆಯ ಕಚ್ಚಾ ಸಾಮಗ್ರಿಗಳು ಬೇಕಾಗುತ್ತವೆ. ಇವನ್ನು ಖರೀದಿಸಲು ಬೃಹತ್ ಕೈಗಾರಿಕೆಗಳಿಗಿರುವಷ್ಟು ಸಾಲ ಸೌಲಭ್ಯ ಮತ್ತು ಬಂಡವಾಳ ಕ್ರೋಡೀಕರಣ ಗುಡಿಸಲು ಕೈಗಾರಿಕೆಗಳಿಗೆ ಇರುವುದಿಲ್ಲ. ಕೈಗಾರಿಕೆಯ ಉತ್ಪಾದಕರು ತಮಗೆ ಅಗತ್ಯವಾದ ಕಚ್ಚಾ ಸಾಮಗ್ರಿಯನ್ನು ವರ್ತಕರಿಂದಲೋ ದಳ್ಳಾಳಿಗಳ ಮೂಲಕವೋ ಪಡೆಯುತ್ತಾರೆ. ತಾವು ತಯಾರಿಸಿದ ವಸ್ತುಗಳನ್ನು ಸಾಮಾನ್ಯವಾಗಿ ಅವರಿಗೇ ಮಾರುತ್ತಾರೆ. ಕೆಲವು ವೇಳೆ ಕಚ್ಚಾಸಾಮಾಗ್ರಿಯನ್ನು ಸ್ಥಳೀಯ ವರ್ತಕರಿಂದ ಉದ್ದರಿಯ ಮೇಲೆ ಪಡೆಯುತ್ತಾರೆ. ತಯಾರಿಸಿದ ವಸ್ತುಗಳನ್ನು ಮಾರಿದ ಮೇಲೆ ಅವರಿಗೆ ಹಣ ಸಂದಾಯ ಮಾಡುತ್ತಾರೆ. ಕಚ್ಚಾಸಾಮಗ್ರಿಯ ಮತ್ತು ಉತ್ಪಾದನೆಗೆ ಅಗತ್ಯವಾದ ಇತರ ವಸ್ತುಗಳ ಪೂರೈಕೆ ಸಾಕಾಗದೆ ಗುಡಿಸಿಲು ಕೈಗಾರಿಕೆಗಳ ಉತ್ಪಾದನೆ ಆಗಾಗ್ಗೆ ನಿಲ್ಲುವುದು ಸಾಮಾನ್ಯ.

ಗುಡಿಸಿಲು ಕೈಗಾರಿಕೆಗಳಲ್ಲಿ ಉತ್ಪಾದಿಸಿದ ಪದಾರ್ಥಗಳನ್ನು ಮಾರಲು ವ್ಯವಸ್ಥಿತಮಾರುಕಟ್ಟೆಗಳಿಲ್ಲ. ಅವುಗಳ ಉತ್ಪಾದಕರು ಬೃಹದ್ಗಾತ್ರದ ಕೈಗಾರಿಕೆಗಳಂತೆ, ತಮ್ಮ ಸರಕುಗಳ ಮಾರಾಟಕ್ಕೆ ಸೂಕ್ತವಾದ ಮತ್ತು ಸಂಘಟಿತವಾದ ಏರ್ಪಾಡು ಮಾಡಲು ಶಕ್ತರಲ್ಲ. ಅನೇಕ ವೇಳೆ ಸರಕುಗಳನ್ನು ನೇರವಾಗಿ ತಾವೇ ತಮ್ಮ ಹಳ್ಳಿಯ ಅಥವಾ ಸುತ್ತಮುತ್ತಲಿನ ಹಳ್ಳಿಗಳ ಗ್ರಾಹಕರಿಗೆ ವಿಕ್ರಯಿಸುತ್ತಾರೆ. ಕೆಲವರು ಹತ್ತಿರದ ಸಂತೆಗಳಿಗೆ ಸರಕುಗಳನ್ನು ತೆಗೆದುಕೊಂಡು ಹೋಗಿ ವಿಕ್ರಯಿಸುತ್ತಾರೆ. ಹಲವೊಮ್ಮೆ ಸರಕುಗಳನ್ನು ಪಟ್ಟಣಗಳಲ್ಲಿಯ ಸಗಟು ವ್ಯಾಪಾರಿಗೋ ಚಿಲ್ಲರೆ ವ್ಯಾಪಾರಿಗೋ ವಿಕ್ರಯಿಸುವುದುಂಟು. ಮಾರಾಟಕ್ಕೆ ದಳ್ಳಾಳಿಗಳನ್ನು ಅಥವಾ ಬಂಡವಾಳಗರನ್ನು ಆಶ್ರಯಿಸುವ ಸಂದರ್ಭಗಳಿಲ್ಲದಿಲ್ಲ. ಈ ಗುಡಿಸಲು ಕೈಗಾರಿಕೆಗಳು ಮತ್ತು ಕರಕುಶಲ ಕರ್ಮಿಗಳನ್ನು ಪ್ರೋತ್ಸಾಹಿಸಲು 1991ರಲ್ಲಿ ಕರ್ನಾಟಕ ಸರ್ಕಾರ ಒಂದು ಯೋಜನೆಯನ್ನು ಸರ್.ಎಂ.ವಿಶ್ವೇಶ್ವರಯ್ಯನವರ ಹೆಸರಿನಲ್ಲಿ ಜಾರಿಗೆ ತಂದಿದೆ. ಇದರಿಂದ ಗುಡಿಸಲು ಮತ್ತು ಗ್ರಾಮೀಣ ಕೈಗಾರಿಕೆಗಳಿಗೆ ಒಂದು ಸಾಂಸ್ಥಿಕಸ್ಥಾನ ಲಭಿಸಿದ್ದು ಅವುಗಳಲ್ಲಿ ತೊಡಗಿರುವವರಿಗೆ ತರಬೇತಿ, ಉದ್ಯೋಗ ಮತ್ತು ಧನ ಸಹಾಯ ದೊರೆಯಲು ಅವಕಾಶಗಳು ಕಲ್ಪಿತವಾಗಿವೆ.



ಲೋಹದ ಪಾತ್ರೆ ತಯಾರಿಕೆ

ಗುಡಿಸಿಲು ಕೈಗಾರಿಕೆಗಳು ಪ್ರಾಚೀನ ಕಾಲದಿಂದಲೂ ಬಂದಿವೆ. ಬ್ರಿಟಿಷರ ಕಾಲದಲ್ಲಿ ಯಂತ್ರೋದ್ಯಮ ಕೈಗಾರಿಕೆಗಳ ಪೈಪೋಟಿಯಿಂದ ಇವು ಕ್ಷೀಣಸ್ಥಿತಿಗೆ ಬಂದಿದ್ದುವು. ಸ್ವಾತಂತ್ರ್ಯದ ಅನಂತರ ಕೇಂದ್ರ ಸರ್ಕಾರ ಮತ್ತು ಸ್ಥಳೀಯ ಸರ್ಕಾರಗಳು ಗೃಹಕೈಗಾರಿಕೆಗಳಿಗೆ ಉತ್ತೇಜನ ನೀಡಿ ಅವುಗಳ ಅಭಿವೃದ್ಧಿಗೆ ನಾನಾ ರೀತಿಯಲ್ಲಿ ಶ್ರಮಿಸುತ್ತಿವೆ. ಈ ಕೈಗಾರಿಕೆಗಳು ನಾನಾವಿಧವಾದ ಉಪಯುಕ್ತವಾದ ಮತ್ತು ಭೋಗ ವಸ್ತುಗಳನ್ನು ತಯಾರಿಸುತ್ತಿವೆ. ಗುಡಿಸಿಲು ಕೈಗಾರಿಕೆಗಳು ಮನೆಗೆಲಸದ ಪದಾರ್ಥಗಳಾದ ಕೊಡಗಳು, ನೀರಿನ ಹೂಜಿಗಳು, ಲೋಟಗಳು, ತಟ್ಟೆಗಳು ಮೊದಲಾದವನ್ನು ಹಿತ್ತಾಳೆ ಮತ್ತು ತಾಮ್ರದಿಂದ ತಯಾರಿಸುತ್ತಿವೆ. ಚಿನಿವಾರಿಕೆ ಭಾರತದ ಅತಿ ಪ್ರಾಚೀನ ಗುಡಿಸಿಲು ಕೈಗಾರಿಕೆ; ಇವು ಹಳ್ಳಿ, ಪಟ್ಟಣ ಮತ್ತು ನಗರಗಳಲ್ಲಿ ವ್ಯಾಪಿಸಿದೆ. ಇವು ಚಿನ್ನ ಮತ್ತು ಬೆಳ್ಳಿಯಿಂದ ಅನೇಕ ವಿಧವಾದ ಒಡವೆಗಳನ್ನು ತಯಾರಿಸುತ್ತಿವೆ. ಅಗರಬತ್ತಿ ಮತ್ತು ಧೂಪ ಸರಕು ಕೈಗಾರಿಕೆ ಕೆಲವು

ಸಂಸಾರಗಳಲ್ಲಿ ಮಾತ್ರ ಕಾಣಬರುತ್ತದೆ. ಅವುಗಳಲ್ಲಿ ಮುಸಲ್ಮಾನರವೇ ಹೆಚ್ಚು. ಶ್ರೀಗಂಧದ ಕೆತ್ತನೆ ಕೆಲಸ ಮತ್ತೊಂದು ಚಿರಪರಿಚಿತ ಗೃಹಕೈಗಾರಿಕೆ, ಸುಂದರ ಚಿತ್ರಗಳು, ದೇವರ ಮತ್ತು ಇತರ ಪ್ರತಿಮೆಗಳು ಶ್ರೀಗಂಧದ ಮರದಿಂದ ತಯಾರಾಗುತ್ತವೆ. ಇನ್ನು ಕೆಲವು ಗೃಹ ಕೈಗಾರಿಕೆಗಳು ಬೊಂಬು ಮತ್ತು ಬೆತ್ತದ ಕೆಲಸಗಳಲ್ಲಿ ತೊಡಗಿವೆ. ಅವು ಉಪಯುಕ್ತವಾದ ನಾನಾ ರೀತಿಯ ಬುಟ್ಟಿಗಳು, ಕುರ್ಚಿಗಳು, ಅಚ್ಚುಮಣೆಗಳು ಮತ್ತು ಮಂಚಗಳನ್ನು ಸಹ ತಯಾರಿಸುತ್ತವೆ. ಕೊಂಬಿನ ಬಾಚಣಿಗೆ, ಹೂವಿನ ಕುಂಡಗಳು, ಅಳತೆಕೋಲುಗಳು, ಆಟದ ಸಾಮಾನುಗಳು, ಹಕ್ಕಿಗಳು, ಬೂದಿ ಹರಿವಾಣಗಳು ಮುಂತಾದ ಉಪಯುಕ್ತವಾದ ಸಾಮಾನುಗಳ ತಯಾರಿಕೆಯೂ ಗುಡಿಸಿಲು ಕೈಗಾರಿಕೆಯೇ. ಗ್ರಾಮಪ್ರದೇಶದಲ್ಲಿ ಅನೇಕ ಗುಡಿಸಿಲು ಕೈಗಾರಿಕೆಗಳುಂಟು. ಅವುಗಳಲ್ಲಿ ಬಹುಪಾಲು ಕೃಷಿ ಉಪಕರಣಗಳ ತಯಾರಿಕೆಯಲ್ಲಿ ತೊಡಗಿವೆ. *

**ಗುಡೇಅಂಗಡಿ :** ಉತ್ತರ ಕನ್ನಡ ಜಿಲ್ಲೆ ಕುಮಟ ತಾಲ್ಲೂಕಿನಲ್ಲಿರುವ ಗ್ರಾಮ. ಕುಮಟ ಅಘನಾಶಿನಿಗಳ ಮಧ್ಯೆ ಕುಮಟದಿಂದ 8ಕಿಮೀ ದೂರದಲ್ಲಿದೆ. ಈ ಊರಿನ ಪೂರ್ವಕ್ಕೆ ಅಘನಾಶಿನಿ ನದಿ ಹಾಗೂ ಪಶ್ಚಿಮಕ್ಕೆ ಅರಬ್ಬೀಸಮುದ್ರ ಇದೆ. ಇದರ ಮಧ್ಯದಲ್ಲಿ ಗುಡ್ಡದ ಮೇಲೆ ಬಾಡದ ಕಾಂಚಿಕಾಂಬ ದೇವಸ್ಥಾನ ಇದೆ. ಕಂಚಿದೇಶದಿಂದ ಈ ದೇವರ ಮೂರ್ತಿಯನ್ನು ತರಿಸಿದ್ದರಿಂದ ಅದಕ್ಕೆ ಈ ಹೆಸರು ಬಂತೆಂದು ತಿಳಿದುಬರುತ್ತದೆ. ಗೋಕರ್ಣದ ಕಲಭ ಎಂಬ ಅರಸ ಇದನ್ನು ಸ್ಥಾಪಿಸಿದನೆಂಬ ಪ್ರತೀತಿಯಿದೆ. ಇಲ್ಲಿಯ ಪ್ರಕೃತಿಸೌಂದರ್ಯ ಮನ ಮೋಹಕವಾದುದು. ಸೂರ್ಯೋದಯ ಹಾಗೂ ಸೂರ್ಯಾಸ್ತ ಅಪೂರ್ವವಾದ ದೃಶ್ಯಾವಳಿಗಳನ್ನು ನೀಡುತ್ತದೆ. 1981ರಲ್ಲಿ ಕಾಂಚಿಕಾಂಬ ದೇವಾಲಯದ ಕಟ್ಟಡವನ್ನು ಸಿಮೆಂಟ್‌ನಿಂದ ನಿರ್ಮಿಸಲಾಗಿದೆ. 1982ರಲ್ಲಿ ದೇವಿಯ ಮೂರ್ತಿಯನ್ನು ಪುನಃ ಪ್ರತಿಷ್ಠಾಪಿಸಲಾಯಿತು. ದೇವಾಲಯದ ಒಳಗೆ ಬಲಭಾಗದಲ್ಲಿ ಬಲಮುರಿ ಗಣಪತಿ, ಎಡಭಾಗದಲ್ಲಿ ಲಿಂಗ ಇದೆ.



ಕಾಂಚಿಕಾಂಬಪರಮೇಶ್ವರಿದೇವಿ

ಈ ಸ್ಥಳದಲ್ಲಿ ಚೈತ್ರ ಪೂರ್ಣಿಮೆಯಂದು ಜಾತ್ರೆ ನಡೆಯುತ್ತದೆ. ಜಾತ್ರೆಯ ದಿನಗಳಲ್ಲಿ ನಡೆಯುವ ಹೂವಿನ ಕುಣಿತ ಇಲ್ಲಿಯ ಒಂದು ವಿಶೇಷ. ಇಲ್ಲಿರುವ ರಥ ಆಕರ್ಷಕವೂ ಸುಂದರವೂ ಆಗಿದೆ. ಅಮ್ಮನವರ ಗುಡ್ಡದ ಕೆಳಗೆ ಹಿರೇಹೊಸಬದ ಕಲ್ಪ ಋಷಿ ಸ್ಥಾಪಿಸಿದ್ದೆಂದು ಹೇಳಲಾದ ಒಂದು ಗುಡಿಯಿದೆ. ಬಾಡದಲ್ಲಿ ಜೇಷ್ಠಪುರ ದುರ್ಗೆ ಅಥವಾ ಜಗದಾಂಬಾ ದೇವಾಲಯವಿದೆ. ಗುಡೇಅಂಗಡಿ-ಬಾಡ ಸಮುದ್ರ ತೀರ ಶುಭ್ರವಾಗಿದ್ದು ಆಕರ್ಷಕವಾಗಿದೆ. ಬಾಡದ ಸಮೀಪದ ಊರಾದ ಕಾಗಾಲದಲ್ಲಿ ಗೌಡಸಾರಸ್ವತರ ದೇವಕಿ ಕೃಷ್ಣ ದೇವಾಲಯವಿದೆ. ಏಪ್ರಿಲ್‌ನಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ. ಕಾಗಾಲ ಮತ್ತು ಅಘನಾಶಿನಿ ನಡುವೆ ಗುಡ್ಡದ ಮೇಲೆ ಒಂದು ಕೋಟೆಯಿದ್ದು ಅದರಲ್ಲಿ ಗವಿ ಇದೆ. ಈ ಸ್ಥಳದಲ್ಲಿ ಎರಡು ಮಸೀದಿ ಮತ್ತು ಒಂದು ದರ್ಗಾ ಇವೆ.

ಗುಡೇಅಂಗಡಿಯಲ್ಲಿ ಸೀಗಡಿ ಮೀನಿನ ತಳಿ ಅಭಿವೃದ್ಧಿ ಕೇಂದ್ರವಿದೆ. (ಎಸ್.ಎಚ್‌ಇ.)

**ಗುಡ್ನಾಪುರ :** ಉತ್ತರ ಕನ್ನಡ ಜಿಲ್ಲೆ ಶಿರಸಿ ತಾಲ್ಲೂಕಿನಲ್ಲಿ ಬನವಾಸಿಯ ವಾಯವ್ಯಕ್ಕೆ ಸು.5ಕಿಮೀ ದೂರದಲ್ಲಿರುವ ಗ್ರಾಮ. ಆದ್ಯ ಕದಂಬರ ಕಾಲದಲ್ಲಿ ಇದು ಬನವಾಸಿ ರಾಜಧಾನಿಯ ಭಾಗವಾಗಿದ್ದಂತೆ ತೋರುತ್ತದೆ. ಇಲ್ಲಿನ ವೀರಭದ್ರ ದೇವಾಲಯದ ಬಳಿ ಸು.20 ಅಡಿ ಉದ್ದದ ಭಗ್ನವಾದ ಒಂದು ಕಲ್ಲಿನ ಕಂಬವಿದ್ದು ಇದು ಬುಡದಲ್ಲಿ ಸು.16 ಅಡಿಗಳವರೆಗೂ ಚೌಕಾಕಾರವಾಗಿದ್ದು ಮೇಲೆ ಅಷ್ಟಕೋನವಾಗಿದೆ.



ಅರಮನೆ ಮತ್ತು ದೇವಾಲಯದ ಆವರಣ

ಕಂಬದ ಮೇಲ್ಭಾಗ ಒಡೆದು ಹಾಳಾಗಿರುವುದರಿಂದ ಇಡೀ ಕಂಬದ ಉದ್ದ ಎಷ್ಟಿತ್ತು ಎಂದು ಹೇಳಲಾಗದು. ಕಂಬದ ನಾಲ್ಕೂ ಮುಖಗಳಲ್ಲಿ ಶಾಸನವೊಂದನ್ನು ಕೆತ್ತಿದೆ. ಇದು ಕದಂಬ ರವಿವರ್ಮನ (ಸು.485-519) ಶಾಸನ. ಇದರಿಂದ ಕದಂಬ ಮಯೂರಶರ್ಮನ ತಂದೆ ಬಂಧುಷೇಣ, ತಾತ ವೀರಶರ್ಮ ಎಂಬ ಹೊಸ ವಿಷಯಗಳು ತಿಳಿದುಬಂದಿವೆ. ಶಾಸನದಲ್ಲಿ ರವಿವರ್ಮ ಮನ್ಮಥನಿಗಾಗಿ ಜಿನಾಲಯವೊಂದನ್ನು ಕಟ್ಟಿದ್ದನೆಂದು ಹೇಳಿರುವುದರಿಂದ ಈ ಕಾಮಜಿನಾಲಯ ಬಾಹುಬಲಿಯ ಆಲಯವೆಂಬುದು ಖಚಿತವಾಗಿದ್ದು ಇದರಿಂದ ಬಾಹುಬಲಿಯ ಕಲ್ಪನೆ ಮತ್ತು ಒಂದು ದೇವಾಲಯ 6ನೆಯ ಶತಮಾನದಲ್ಲಿಯೇ ಇದ್ದಿತು ಎಂಬುದೂ ತಿಳಿದುಬರುತ್ತದೆ. ಪ್ರಸ್ತುತ ಶಾಸನದಲ್ಲಿ ಗುಡ್ನಾಪುರವನ್ನು ಗುಡ್ಡತಟಾಕ ಎಂದು ಕರೆಯಲಾಗಿದೆ. ಈಗಲೂ ಗುಡ್ನಾಪುರಕ್ಕೆ ಹೊಂದಿದಂತೆ, ಆ ಭಾಗದಲ್ಲಿಯೆ ದೊಡ್ಡದೆನಿಸಿದ ಕೆರೆಯಿದೆ. ಇದೇ ಆ ಗುಡ್ಡ ತಟಾಕವೆನ್ನಬಹುದು. ಇದರಿಂದ ಗುಡ್ನಾಪುರದ ಇತಿಹಾಸ ಸು.15 ಶತಮಾನಗಳಷ್ಟಾದರೂ ಪ್ರಾಚೀನವೆನ್ನಬಹುದು.

ಶಾಸನವಲ್ಲದೆ ಇಲ್ಲಿ ಇತರ ಅಪೂರ್ವ ವಿಗ್ರಹಗಳು ದೊರೆತಿವೆ. ಕೆರೆಯ ಸಮೀಪದಲ್ಲಿ ಕೆಸರಿನಲ್ಲಿ ಹುಗಿದುಹೋಗಿದ್ದ ಒಂದು ಜಿನವಿಗ್ರಹ ಮತ್ತೊಂದು ಅಲಂಕೃತ ಪುರುಷವಿಗ್ರಹ ದೊರೆತಿವೆ. ಜಿನಮೂರ್ತಿ ಯೋಗಾಸನದಲ್ಲಿದೆ. ಆದರೆ ಅದರ ಶಿರ ಮತ್ತು ಬಾಹುಗಳು ಈಗ ಅಲಭ್ಯ. ಪುರುಷವಿಗ್ರಹ ಭವ್ಯವಾಗಿ ಅಲಂಕೃತ ಕಿರೀಟವನ್ನು, ಹಾರಗಳನ್ನು

ಧರಿಸಿದೆ. ಅಲ್ಲದೆ ಇನ್ನೊಂದು ಸ್ತ್ರೀವಿಗ್ರಹವೂ ಕುಬ್ಜವಿಗ್ರಹವೂ ಗ್ರಾಮದಲ್ಲಿ ದೊರೆತಿವೆ. ಕುಬ್ಜವಿಗ್ರಹ ಸ್ಥೂಲವಾದ ದುಂಡು ಶರೀರದ ಪುರುಷನದು. ಉಬ್ಬಿದ ಹೊಟ್ಟೆ, ಕುತ್ತಿಗೆ ಕಾಣಿಸದೆ ದೇಹಕ್ಕೆ ಅಂಟಿದಂತಿರುವ ತಲೆ, ಹೊಟ್ಟೆ ಮೊಳಕಾಲವರೆಗೂ ಜೋತು ಬಿದ್ದಂತಿದ್ದು ಕಾಲುಗಳು ಪ್ರತ್ಯೇಕವಾಗಿ ಕಾಣಿಸದಿರುವುದು, ಮೇಲೆಕ್ಕೆತ್ತಿ ಕಟ್ಟಿದ ಗುಂಗುರುಕೂದಲು, ಕಚ್ಚೆಹಾಕಿ ಧೋತರ ಉಟ್ಟು ಹಲವು ಎಳೆಗಳ ಹಾರವನ್ನು ಧರಿಸಿರುವುದು ಈ ಲಕ್ಷಣಗಳನ್ನುಳ್ಳ ಈ ವಿಗ್ರಹ ಸು.3-5ನೆಯ ಶತಮಾನಕ್ಕೆ ಸೇರಿದ ಬೌದ್ಧ ಯಕ್ಷನ ವಿಗ್ರಹವಿರಬಹುದೆಂಬುದೊಂದು ಊಹೆ. ಪುರುಷ ಮತ್ತು ಸ್ತ್ರೀ ವಿಗ್ರಹಗಳು ಭೋಗಾಸನದಲ್ಲಿವೆ. ಸ್ತ್ರೀ ವಿಗ್ರಹ ಎರಡು ಕಂಠಾಭರಣಗಳನ್ನೂ ನಾಲ್ಕು ಹಾರಗಳನ್ನೂ ಧರಿಸಿದೆ. ಇದರ ತಲೆಯ ಹಿಂದಿನ ಪ್ರಭಾಮಂಡಲದ ಹಿಂಬದಿಯಲ್ಲಿ ಸಿಂಹಮುಖವನ್ನು ಕೆತ್ತಿದ್ದು ಅದರ ಬಾಯಿಂದ ಐದು ಎಳೆಗಳ ಮಣಿಸರ ಇಳಿಬಿದ್ದಿದೆ. ಈ ವಿಗ್ರಹಗಳು ಬಾದಾಮಿಯ ಚಳುಕ್ಯರ ಶಿಲ್ಪಗಳನ್ನು ಹೋಲುತ್ತವೆಂದೂ ಇವು ಇಲ್ಲಿನ ಶಾಸನದಲ್ಲಿ ಹೇಳಲಾದ ಮನ್ಮಥ'ರತಿಯರ ವಿಗ್ರಹಗಳೆಂದೂ ಹೇಳಲಾಗಿದೆ. ಇದೇ ಗ್ರಾಮದಲ್ಲಿ ಒಂದೇ ಕಲ್ಲಿನಲ್ಲಿ ಮಾಡಿದ ರತಿಮನ್ಮಥ'ರ ವಿಗ್ರಹ ವೀರಭದ್ರ ದೇವಾಲಯದಲ್ಲಿ ದೊರೆತಿದ್ದು, ಮನ್ಮಥನ ಕೈಯಲ್ಲಿ ಕಬ್ಬಿನ ಜಲ್ಲೆ, ರತಿಯ ಕೈಯಲ್ಲಿ ಕಮಲದ ದಂಟು ಕಾಣಿಸುತ್ತದೆ. ಇದು ಸು.11-12ನೆಯ ಶತಮಾನದ ವಿಗ್ರಹ. (ಬಿ.ಆರ್.ಜಿ.)

**ಗುಡ್ಲು ಕೂಡೋ ಶಾಸ್ತ್ರ :** ಹೆಣ್ಣುಮಕ್ಕಳು ಮೈನೆರೆದಾಗ (ಋತುಮತಿಯಾದಾಗ) ಜನಪದರು ಮಾಡುವ ಶಾಸ್ತ್ರ. ಗೋಡೆಗೆ ಎರಡು ಮೂರು ಬೊಂಬುಗಳನ್ನು ಒರಗಿಸಿ, ಅದಕ್ಕೆ ಅಡ್ಡಲಾಗಿ ಗಳುಗಳನ್ನು ಬಿಗಿದು ಅವುಗಳ ಮೇಲೆ ಅತ್ತಿ, ಆಲ, ಹಲಸು ಈ ಮೂರು ಬಗೆಯ ಮರದ ಸೊಪ್ಪನ್ನು ಹೊದಿಸಿ ಒಳಗೆ ನೆಲ್ಲುಹುಲ್ಲನ್ನು ಹರಡಿ, ಹುಲ್ಲಿನ ಮೇಲೆ ಈಚಲ ಚಾಪೆಯನ್ನು ಹಾಸಿ ಮಾಡುವ ಕೊಠಡಿಯಂಥ ರಚನೆಗೆ ಗುಡ್ಲು ಎನ್ನುತ್ತಾರೆ. ಸಾಮಾನ್ಯವಾಗಿ ಗುಡ್ಲು ತಯಾರಿಸುವವನು ಮೈನೆರೆದ ಹೆಣ್ಣಿನ ಸೋದರಮಾವ. ಹೆಣ್ಣು ಮೈನೆರೆದ ದಿನ ಹೆಣ್ಣಿನ ತಾಯಿಯನ್ನುಳಿದು ಇತರ ಮುತ್ತೈದೆಯರು ಸ್ನಾನ ಮಾಡಿಸಿ (ಮೊದಲ ದಿನ ತಾಯಿ ನೀರು ಹಾಕಿದರೆ ಕೆಟ್ಟದ್ದು ಎಂಬ ನಂಬಿಕೆ ಇದೆ) ಗುಡ್ಲಿಗೆ ಕೂರಿಸಿ, ಎಳ್ಳು ಹುರಿದು ಬೆಲ್ಲ ಕೊಬ್ಬರಿತುರಿ ಕುಟ್ಟಿ ಮಾಡಿದ ಚಿಗಳಿ, ಅಕ್ಕಿಯ ಹಿಟ್ಟು ಹುರಿದು ಬೆಲ್ಲದ ಪಾಕದಲ್ಲಿ ಕಲಸಿ ಮಾಡಿದ ತಂಬಿಟ್ಟು, ಬಾಳೆಹಣ್ಣು, ಕೊಬ್ಬರಿ, ಎಲೆ, ಅಡಕೆ ಮೊದಲಾದವುಗಳನ್ನು ಹೆಣ್ಣುಮಗಳ ಮಡಿಲಿಗೆ ತುಂಬಿ ಅವುಗಳನ್ನು ತಿನ್ನಲು ಆದೇಶಿಸುತ್ತಾರೆ. ಮೈನೆರೆದ ಹೆಣ್ಣನ್ನು ಮೊದಲ ರಾತ್ರಿ ಮಲಗಲು ಬಿಡುವುದಿಲ್ಲ. ಆ ರಾತ್ರಿ ಬೀದಿಯ ಹೆಂಗಳೆಯರು ಮನರಂಜನೆಗಾಗಿ ಹಾಡುತ್ತ ಸ್ವಾರಸ್ಯಕರ ಮಾತುಕತೆ ನಡೆಸುತ್ತ ಕಾಲ ಕಳೆಯುತ್ತಾರೆ.

ಅನಂತರ ಮೈನೆರೆದ ಹೆಣ್ಣಿಗೆ ದಿನ ಬಿಟ್ಟು ದಿನ ಸ್ನಾನ ಮಾಡಿಸುತ್ತಾರೆ. ಮೊದಲು ಮೂರು ದಿನ ಹೆಣ್ಣು ಗುಡ್ಲಿನ ಒಳಗೇ ಕಳೆಯಬೇಕು. ಆಮೇಲೆ ಬೆಚ್ಚನೆಯ ಕೊಠಡಿ, ಹನ್ನೊಂದು ದಿನದ ತನಕ ಸೂತಕ. ಸೂತಕ ಕಳೆಯುವ ತನಕ ಹೆಣ್ಣು ಹೊರಗೆ ಬರುವಂತಿಲ್ಲ. ಅಲ್ಲಿಯವರೆಗೂ ಆಕೆಗೆ ಅನ್ನ, ಬೆಲ್ಲ, ತುಪ್ಪ - ಇವುಗಳಿಂದ ತಯಾರಿಸಿದ ಊಟ. ಉದ್ದು, ಅಕ್ಕಿ, ಗೋದಿ, ಮೆಂತ್ಯ ಈ ನಾಲ್ಕನ್ನೂ ಸೇರಿಸಿ ಮಾಡಿದ ಮೆಂತ್ಯದ ಹಿಟ್ಟು ಮೊದಲಾದ ಪುಷ್ಟಿಕರವಾದ ಆಹಾರ ನೀಡುತ್ತಾರೆ. ಈ ಅವಧಿಯಲ್ಲಿ ಮೈನೆರೆದ ಹೆಣ್ಣಿನ ಹೆಚ್ಚಿನ ಆಹಾರವೆಂದರೆ ಚಿಗಳಿ ಮತ್ತು ಕೊಬ್ಬರಿ. ಎಲೆ ಅಡಿಕೆಯನ್ನೂ ಈ ಸಂದರ್ಭದಲ್ಲಿ ಹೆಣ್ಣು ವಿಶೇಷವಾಗಿ ಉಪಯೋಗಿಸಬೇಕಾಗುತ್ತದೆ.

ಹನ್ನೊಂದನೆಯ ದಿನ ಸೂತಕದ ಕಡೆಯ ದಿನ. ಅಂದು ಸುಣ್ಣಬಣ್ಣ ಬಳಿದು, ಗುಡಿಸಿ ಸಾರಿಸಿದ ಮನೆಯಲ್ಲಿ ಹಬ್ಬದ ವಾತಾವರಣವಿರುತ್ತದೆ. ಕೆಲವು ಕಡೆ ಜೋಯಿಸರನ್ನು ಕರೆಸಿ ಹೆಣ್ಣನ್ನು ಕಳಸದ ಮುಂದೆ ಕೂರಿಸಿ ಕಳಸಕ್ಕೆ ಪೂಜೆ ಮಾಡಿಸುವುದುಂಟು. ದಾಸಯ್ಯನ ಒಕ್ಕಲಾಗಿದ್ದರೆ ಪೂಜೆಗೆ ದಾಸಯ್ಯನನ್ನು ಕರೆಯುತ್ತಾರೆ. ದಾಸಯ್ಯನ ಒಕ್ಕಲಲ್ಲದಿದ್ದರೆ, ಸ್ನಾನಮಾಡಿಸಿದ ಅನಂತರ ಹೆಣ್ಣನ್ನು ಬಾವಿಯ ಬಳಿ ಕರೆದೊಯ್ದು ಆಕೆಯಿಂದ ಗಂಗೆಪೂಜೆ ಮಾಡಿಸಿ, ಮನೆಗೆ ಕರೆದೊಯ್ಯುತ್ತಾರೆ. ಆ ದಿನ ಬಂಧುಜನರಿಗೆ ಔತಣದ ಏರ್ಪಾಡಿರುತ್ತದೆ. (ಕೆ.ಆರ್.)

**ಗುಣಚಂದ್ರ :** ಸು.1650. ಜೈನಕವಿ, ಛಂದಸ್ಸಾರ ಎಂಬ ಶಾಸ್ತ್ರ ಗ್ರಂಥದ ಕರ್ತೃ. ಈತನ ಬಗ್ಗೆ ಹೆಚ್ಚಿನ ವಿಷಯವೇನೂ ತಿಳಿದುಬರುವುದಿಲ್ಲ.

ಛಂದಸ್ಸಾರ ಕನ್ನಡದ ಸಂಕ್ಷಿಪ್ತ ಛಂದೋಗ್ರಂಥ'. ಇದರಲ್ಲಿ ಸಂಜ್ಞಾಪ್ರಕರಣ, ಮಾತ್ರಾಛಂದೋಲಕ್ಷಣ, ಸಮವೃತ್ತ ಪ್ರಕರಣ, ಸಂಕೀರ್ಣ ಪ್ರಕರಣ, ತಾಳವೃತ್ತಾ ಪ್ರಕರಣ ಎಂಬ ಐದು ಅಧಿಕಾರಗಳಿವೆ. ಪ್ರಥಮಾಧಿಕಾರದಲ್ಲಿ ಲಘುಗುರುಗಳು ಗಣಸ್ವರೂಪ ಯತಿಪ್ರಾಸ ಇವುಗಳ ವಿಚಾರವನ್ನು ಕಂದದಲ್ಲಿ ಹೇಳಿದೆ. ದ್ವಿತೀಯಾಧಿಕಾರದಲ್ಲಿ ಆರ್ಯಾ, ಗೀತಿ ಮತ್ತು ಕಂದಗಳನ್ನೂ ಶರಕುಸುಮಾದಿ ಷಟ್ಪದೀ ಭೇದಗಳನ್ನೂ ಲಕ್ಷಣ ಲಕ್ಷ್ಯಪೂರ್ವಕವಾಗಿ ವಿವರಿಸಿದೆ. ತೃತೀಯಾಧಿಕಾರದಲ್ಲಿ ಉಕ್ತಾದಿಯಾಗಿ ಉತ್ಕೃತಿಯವರೆಗೆ ಇರುವ 26 ಛಂದಸ್ಸುಗಳಲ್ಲಿ ಹುಟ್ಟುವ ವರ್ಣಸಮವೃತ್ತಗಳಲ್ಲಿ ಕೆಲವನ್ನು ಸೂತ್ರಪದ್ಧತಿಯಿಂದ ಲಕ್ಷಣಿಸಿದೆ. ಚತುರ್ಥಾಧಿಕಾರದಲ್ಲಿ ದಂಡಕೆ, ಆರ್ಯಾ, ಗೀತಿ, ವೈತಾಳೀಯ, ಅನುಷ್ಟುಭ್ ಷೋಡಶಮಾತ್ರಾ ದ್ವಿಪಾದಾದಿ ಮಾತ್ರಾವೃತ್ತಗಳನ್ನು ಇವುಗಳೊಂದೊಂದರ ಭೇದಗಳನ್ನೂ ಲಕ್ಷಣ - ಲಕ್ಷ್ಯ ಪದ್ಧತಿಯಿಂದಲೂ ಸೂತ್ರಪದ್ಧತಿಯಿಂದಲೂ ವಿವರಿಸಿದೆ. ಇಲ್ಲಿಯೇ ದ್ರುತಮಧ್ಯಾದಿಯಾದ ಅರ್ಧಸಮವೃತ್ತ ಭೇದಗಳನ್ನೂ ಪದಚತುರೂರ್ಧ್ವಾದಿ ವಿಷಮ ವೃತ್ತಕ್ರಮವಾಗಿ ಭೇದಗಳನ್ನೂ ಸೂತ್ರ ಮತ್ತು ಲಕ್ಷಣ ಲಕ್ಷ್ಯಪದ್ಧತಿಗಳಿಂದ ವಿವರಿಸಿದೆ. ಕಡೆಯಲ್ಲಿ ಷಟ್ಪ್ರತ್ಯಯ ವಿಚಾರವಿದೆ. ಕೊನೆಯ ಅಧಿಕಾರದಲ್ಲಿ ಧ್ರುವತಾಳ ಮೊದಲಾದ ತಾಳಗಳನ್ನು ಕುರಿತ ವಿಷಯಗಳ ಪ್ರಸ್ತಾಪವಿದೆ. ದ್ವಿಪದಿ, ಮಾತ್ರೆಗಳ ತ್ರಿಪದಿ, ರಗಳೆಯ ಮೂರು ಭೇದಗಳು ಲಾವಳಿ(ಣಿ), ಸೀಸಪದ್ಯ ಇವುಗಳ ಸಂಕ್ಷಿಪ್ತ ವಿಚಾರದೊಡನೆ ಗ್ರಂಥ' ಮುಗಿದಿದೆ. ವಿಷಯ ಮತ್ತು ನಿರೂಪಣೆ ಎರಡರಲ್ಲಿಯೂ ಈ ಗ್ರಂಥ ಸಂಸ್ಕೃತ ಛಂದಶ್ಶಾಸ್ತ್ರದ ಮಾದರಿಯಲ್ಲಿದೆ. ಸಂಸ್ಕೃತ ಛಂದಸ್ಸಿನ ವಿಷಯದಲ್ಲಿ ಕೇದಾರಭಟ್ಟನ 'ವೃತ್ತರತ್ನಾಕರ'ದ ಅನುಸರಣೆಯಿದೆ. ಕನ್ನಡ ಛಂದಸ್ಸಿನ ಅಂಶವೃತ್ತಗಳ ಪ್ರಸ್ತಾಪವೇ ಈ ಗ್ರಂಥ'ದಲ್ಲಿ ಬಿಟ್ಟು ಹೋಗಿರುವುದು ವಿಚಾರಣೀಯ ಅಂಶ. ಮಾತ್ರಾಷಟ್ಪದಿ, ರಗಳೆಯ ಪ್ರಭೇದ ಮೊದಲಾದವುಗಳ ಪ್ರಸ್ತಾಪವಿರುವುದು ಗಮನಾರ್ಹವಾಗಿದೆ. ನಾಗವರ್ಮನ 'ಛಂದೋಂಬುಧಿ'ಯ ಪರಿಷ್ಕಾರ ವಿಶದತೆಗಳು ಗುಣಚಂದ್ರನ ಛಂದಸ್ಸಾರದಲ್ಲಿ ಕಾಣದಿದ್ದರೂ ಆ ಗ್ರಂಥದ ಬಳಿಕ ಗಣ್ಯವಾಗಿರುವ ಪ್ರಾಚೀನ ಕನ್ನಡ ಛಂದೋಗ್ರಂಥವೆಂದರೆ ಇದೊಂದೇ ಎಂದು ಹೇಳಬಹುದು. (ಎಸ್.ಎಸ್.ಎಂ.;ಟಿ.ವಿ.ವಿ.)

**ಗುಣನಂದಿ :** ಸು.900. ಪಂಪಪೂರ್ವಯುಗದ ಜೈನಕವಿ ಹಾಗೂ ಯತಿ. ಇವನು ಸಾಹಿತ್ಯ ವಿದ್ಯಾಪತಿಯೆಂದೂ ಪಂಡಿತನೆಂದೂ ಚಾರಿತ್ರ ಚಕ್ರೇಶ್ವರನೆಂದೂ ತರ್ಕವ್ಯಾಕರಣಾದಿ ಶಾಸ್ತ್ರನಿಪುಣನೆಂದೂ ಈತನಿಗೆ ಮುನ್ನೂರು ಜನ ಶಿಷ್ಯರಿದ್ದರೆಂದೂ ಅವರಲ್ಲಿ ದೇವೇಂದ್ರಮುನಿ ಪ್ರಖ್ಯಾತನಾದವನೆಂದೂ (ಈ ದೇವೇಂದ್ರ ಸೈದ್ಧಾಂತಿಕನೇ ಪಂಪನ ಗುರುವಾಗಿರಬೇಕು) ಶ್ರವಣಬೆಳಗೊಳದ ಕೆಲವು ಶಾಸನಗಳಿಂದ ತಿಳಿದುಬರುತ್ತದೆ. ಈ ಕವಿಯ ಗುಣವಿಶೇಷಗಳನ್ನು ಕುರಿತು ಕನ್ನಡದ ಹಲವಾರು ಕವಿಗಳು ಕೊಂಡಾಡಿದ್ದಾರೆ. ಭಟ್ಟಾಕಳಂಕ ಈತನನ್ನು ಭಗವಾನ್ ಗುಣನಂದಿ ಎಂದು ಕರೆದು ಗೌರವಿಸಿದ್ದಾನೆ. ಮಲ್ಲಿಕಾರ್ಜುನ ತನ್ನ ಸಂಕಲನ ಗ್ರಂಥ'ದಲ್ಲಿ ಜನ್ನನ ದೇಸಿ ಪಂಪನ ಗುಣಂ ಗುಣನಂದಿಯ ತೊಂಡು .......... ನೆಲಸಿರ್ಪುವೀ ಸುಕವಿಮಲ್ಲನ ಕಾವ್ಯವಿಳಾಸಗೇಹದೊಳ್ ಎಂದು ಗುಣನಂದಿಯ ಕಾವ್ಯಗುಣವನ್ನು ಹೊಗಳಿದ್ದಾನೆ. ಪಂಪರನ್ನರ ಜೊತೆಗೆ ಗುಣನಂದಿಯ ಹೆಸರು ಉಲ್ಲೇಖಿತವಾಗಿರುವುದರಿಂದ ಈತ ಪ್ರಸಿದ್ಧ ಕವಿಯಾಗಿರಬೇಕೆಂದು ತೋರುತ್ತದೆ. ಕೇಶಿರಾಜ ತನ್ನ ವ್ಯಾಕರಣಗ್ರಂಥದಲ್ಲಿ ಸುಮಾರ್ಗಮಿದರೊಳೆ ಲಕ್ಷ್ಯಂ ಎಂದು ಹೇಳಿದ ಪ್ರಮಾಣಪುರುಷರಲ್ಲಿ ಗುಣನಂದಿಯ ಹೆಸರೂ ಇದೆ. ಅಲ್ಲದೆ ಇದೇ ಗ್ರಂಥದ ಸಂಧಿಪ್ರಕರಣದಲ್ಲಿ ಪಿರಿಯರ್ ಸಲಿಪರ್ ಎಂದು ಆರಂಭವಾಗುವ ಒಂದು ಸೂತ್ರಕ್ಕೆ (34) ಪ್ರಯೋಗವಾಗಿ (2) 'ಚುರ್ಚಿದವೊಲ್ ಬಿಸಿಲಳುರೆ ಕಿಮುಟ್ಟಿದಲತೆಯಂತೆ ನೊಂದು ಗುಣನಂದಿ' ಎಂಬ ಸಾಲುಗಳನ್ನು ಉದಾಹರಣೆಯಾಗಿ ಕೊಟ್ಟಿದ್ದಾನೆ. ಇದು ಗುಣನಂದಿಯ ಯಾವುದೋ ಗ್ರಂಥದಿಂದ ಆರಿಸಿದ ಪದ್ಯಭಾಗವಾಗಿರಬಹುದು. ನಂಜುಂಡಕವಿ ತನ್ನ ರಾಮನಾಥಚರಿತೆಯಲ್ಲಿ ಇಂಪು ವಡೆದ ಕವಿತಾರಸಲಹರಿಯ ಸೊಂಪಿನಿಂಪಾದಿಗಳೆರ್ದೆಗೆ ಕಂಪನವನು

ಪುಷ್ಟಿಸುವ ಗುಣನಂದಿಯು ನಾಂ ಪೊಗಟುವೆ ಬಲಗೊಂಬೆ ಎಂದು ಗುಣನಂದಿಯ ವಾಕ್‌ಪಟುತ್ವವನ್ನು ಪ್ರಶಂಸಿಸಿದ್ದಾನೆ. ಇಷ್ಟಾದರೂ ಗುಣನಂದಿಯ ಕನ್ನಡ ಗ್ರಂಥಗಳಾವುವು ಎಂಬುದು ತಿಳಿದುಬಂದಿಲ್ಲ. ಈತ ಸಂಸ್ಕೃತದಲ್ಲಿ ಪೂಜ್ಯಪಾದನ ಜೈನೇಂದ್ರವ್ಯಾಕರಣಕ್ಕೆ ಪ್ರಕ್ರಿಯಾವತಾರವೆಂಬ ವ್ಯಾಖ್ಯಾನ ಗ್ರಂಥವನ್ನು ಬರೆದಿರುವಂತೆ ವಿದ್ವಾಂಸರು ಊಹಿಸಿದ್ದಾರೆ. (ಪಿ.ವಿ.ಪಿ.)

**ಗುಣಭದ್ರ :** ಸು. 9ನೆಯ ಶತಮಾನ. ಜೈನ ಕವಿ. ಉತ್ತರಪುರಾಣ ಎಂಬ ಗ್ರಂಥದ ಕರ್ತೃ. ಆದಿಪುರಾಣಕಾರರಾದ ಜಿನಸೇನರ ಶಿಷ್ಯ; ತ್ರಿಷಷ್ಟಿ ಶಲಾಕಾಪುರುಷರ ಚರಿತ್ರೆಯನ್ನು ವಿಸ್ತಾರವಾಗಿ ವರ್ಣಿಸಬೇಕೆಂಬ ಬಯಕೆಯಿಂದ ಜಿನಸೇನರು ಮಹಾಪುರಾಣವನ್ನು ಆರಂಭಿಸಿದರು; ರಾಷ್ಟ್ರಕೂಟ ಅರಸನಾದ ನೃಪತುಂಗ (ಸು.814-78) ಇವರ ಆಶ್ರಯದಲ್ಲಿದ್ದಾಗ 42 ಪರ್ವಗಳ 15,000 ಶ್ಲೋಕಗಳನ್ನು ಇವರು ರಚಿಸಿದರೂ ಮರಣಕಾಲಕ್ಕೆ ಮೊದಲನೆಯ ತೀರ್ಥಂಕರನಾದ ಆದಿನಾಥನ ಚರಿತ್ರೆಯೇ ಇನ್ನೂ ಮುಗಿದಿರಲಿಲ್ಲ; ಅಷ್ಟು ಬೃಹತ್ತಾದ ಕಲ್ಪನೆ ಜಿನಸೇನರದು. ಗುರುಗಳು ಆರಂಭಿಸಿದ ಮಹಾಕಾರ್ಯವನ್ನು ಸಮರ್ಥವಾಗಿ ಮುಗಿಸಿದ ಮಹಾಕೀರ್ತಿ ಶಿಷ್ಯ ಗುಣಭದ್ರನದು. ಉಳಿದ 23 ತೀರ್ಥಂಕರರ ಚರಿತ್ರೆಯನ್ನೂ ಜೀವಂಧರನೇ ಮುಂತಾದವರ ವೃತ್ತಾಂತವನ್ನೂ ಶಲಾಕಾಪುರುಷರ ಜೀವನವನ್ನೂ ಸಂಕ್ಷಿಪ್ತವಾದರೂ ಸಮಗ್ರವಾಗಿ ನಿರೂಪಿಸಿ, ಮುಂದಿನ ಜೈನಪುರಾಣಕಾರರೆಲ್ಲರಿಗೂ ಏಕಮಾನ್ಯ ಆಕರಗ್ರಂಥವೆನಿಸಿದ ಉತ್ತರಪುರಾಣವನ್ನು ಈತ ಕರ್ನಾಟಕದಲ್ಲಿಯೇ ಬರೆದು ಮುಗಿಸಿದ. ಮುನಿ ಸುವ್ರತನ ಚರಿತ್ರೆಯ ಅಂಗವಾಗಿ ಜೈನ ರಾಮಾಯಣದ ಕಥಾ ಭಾಗವೂ ಇಲ್ಲಿಯೇ ಬರುತ್ತದೆ. ಪ್ರಹೀಣಕಾಲದ ಅಭಿರುಚಿಯನ್ನು ಗಮನಿಸಿ, ಈತ ಅತಿವಿಸ್ತಾರಕ್ಕೆ ಹೋಗಿಲ್ಲ.

ಆದಿಪುರಾಣದ ಕಡೆಯ 4 ಪರ್ವ (ಮತ್ತು ಮೂರು ಶ್ಲೋಕಗಳು) ಮತ್ತು ಉತ್ತರಪುರಾಣದ ಸು.8000 ಶ್ಲೋಕಗಳು ಗುಣಭದ್ರನ ರಚನೆ. ಈತನಿಗೆ ಗುರುಭಕ್ತಿ ಅಪಾರ. ಕಬ್ಬಿನಂತೆ ಪೂರ್ವಾರ್ಧವು ರಸವತ್ತಾಗಿರುತ್ತದೆ ಅದರಂತೆಯೇ ಉತ್ತರಾರ್ಧವು ಆಗಿರಲಿ; ನನ್ನ ಮಾತು ಸವಿಯಾಗಿದ್ದರೆ ಅದಕ್ಕೆ ಗುರುಗಳ ಮಹಿಮೆಯೇ ಕಾರಣ ಎಂದು ಹೇಳಿಕೊಂಡಿದ್ದಾನೆ. ಉತ್ತರಪುರಾಣದಲ್ಲಿ ಕಥಾಭಾಗಕ್ಕೆ, ಘಟನಾಬಾಹುಲ್ಯಕ್ಕೆ ಪ್ರಾಧಾನ್ಯವಿದ್ದರೂ ವರ್ಣನಾಚಮತ್ಕಾರ ಕಡಿಮೆಯಾಗಿಲ್ಲ. ಜಿನಸೇನರ ಸಮಕ್ಕೆ ಬಾರದಿದ್ದರೂ ಇವನ ಕವಿತಾಗುಣದಲ್ಲಿ ಪ್ರಸನ್ನತೆ, ಮಾಧುರ್ಯಗಳಿವೆ. ಧಾರ್ಮಿಕ ಪುರಾಣವೆಂಬ ದೃಷ್ಟಿಯಿಂದ ಇದು ಪೂಜ್ಯ ಗ್ರಂಥವಾಗಿರುವುದಷ್ಟೇ ಅಲ್ಲ ಕಥಾಗಾತ್ರದ ದೃಷ್ಟಿಯಿಂದಲೂ ಗೌರವಾಸ್ಪದವಾಗಿದೆ. ಕಾವ್ಯಸೌಂದರ್ಯದ ದೃಷ್ಟಿಯಿಂದಲೂ ಆದರಣೀಯವಾಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ಈ ಗ್ರಂಥ ಸಂಸ್ಕೃತ, ಪ್ರಾಕೃತ, ಅಪಭ್ರಂಶ, ಕನ್ನಡ, ತಮಿಳು, ಗುಜರಾತಿ ಮುಂತಾದ ಭಾರತೀಯ ಭಾಷೆಗಳಲ್ಲೆಲ್ಲ ಮುಂದಿನ ಜೈನಕಾವ್ಯಕಾರರಿಗೆ ಉಪಜೀವ್ಯವಾದ ಆಧಾರಗ್ರಂಥವೆಂಬ ಅದ್ವಿತೀಯ ಪುರಸ್ಕಾರಕ್ಕೆ ಪಾತ್ರವಾಗಿದೆ.

ಆತ್ಮಾನುಶಾಸನ ಈತನ ಮತ್ತೊಂದು ಧರ್ಮ ನೀತಿವೈರಾಗ್ಯಪರ ಚಿಕ್ಕ ಸಂಸ್ಕೃತ ಗ್ರಂಥ. ಇದರಲ್ಲಿ 272 ಸಂಸ್ಕೃತದ ವಿವಿಧ ವೃತ್ತದಲ್ಲಿಯ ಪದ್ಯಗಳಿವೆ. ಇದರ ಮೇಲೆ ಪ್ರಭಾಚಂದ್ರನ ಸಂಸ್ಕೃತ ಟೀಕೆ ಉಪಲಬ್ಧವಿದೆ. ಇದು ಹಲವು ಭಾಷೆಗಳಲ್ಲಿ ಅನುವಾದಿತವಾಗಿದೆ.

ಉತ್ತರಪುರಾಣದ ಪ್ರಶಸ್ತಿಯಲ್ಲಿ ಶಕ ವರ್ಷ 820ರಲ್ಲಿ ಸಮಾಪ್ತವಾದ ಉಲ್ಲೇಖವಿದೆ. ಮುಂದೆ ರಾಷ್ಟ್ರಕೂಟ ಅರಸ ಅಕಾಲವರ್ಷ, ಬಂಕಾಪುರದ ಅವನ ಸಾಮಂತ ಲೋಕಾದಿತ್ಯರ ಪ್ರಶಂಸೆಯಿದೆ. ಈ ಕಾಲನಿರ್ದೇಶನ ಪುರಾಣರಚನಾ ಕಾಲಕ್ಕೆ ಅನ್ವಯಿಸುವುದೋ ಇಲ್ಲವೆ ಲಿಪೀಕರಣದ ಸಮಾಪ್ತಿಕಾಲಕ್ಕೆ ಅನ್ವಯಿಸುವುದೋ ಸ್ಪಷ್ಟವಿಲ್ಲ. *

**ಗುಣವರ್ಮ I :** ಸು.900. ಜೈನಕವಿ. ಹರಿವಂಶ ಮತ್ತು ಶೂದ್ರಕ ಎಂಬ ಕಾವ್ಯಗಳ ಕರ್ತೃ. ಮಹೇಂದ್ರಾಂತಕ, ಗಂಗಚಕ್ರಾಯುಧಾಂಕ, ಗಂಗರರ್ಜುನ, ಕಾಮುದ ಮೊದಲಾದ ಬಿರುದುಗಳುಳ್ಳ ಗಂಗರಾಜ ಎಱೆಯಪ್ಪ (886-920) ಈತನ ಆಶ್ರಯದಾತನಾಗಿದ್ದಂತೆ ತಿಳಿದುಬರುತ್ತದೆ. ಎರಡನೆಯ ನಾಗವರ್ಮ (ಸು.1042), ನಯಸೇನ, ರುದ್ರಭಟ್ಟ, ಪಾರ್ಶ್ವಪಂಡಿತ, 2ನೆಯ ಗುಣವರ್ಮ ಮೊದಲಾದ ಕವಿಗಳು ಇವನನ್ನು ಸ್ಮರಿಸಿದ್ದಾರೆ. ಪಾರ್ಶ್ವಪಂಡಿತನ 'ಗುಣವರ್ಮಂ ಸತ್ಕವಿತಾಗುಣಮುಂ ಭವ್ಯತ್ವಗುಣಮುಮಾತ್ಮ ಯಶೋರಕ್ಷಣಮೆನೆ ಮೆಚ್ಚಿದಂ ಪೆಸರಂ ಪ್ರಣೂತಮನೆ ಪೇೞ್ದ ನೇಮಿನಾಥಾನ್ವಯಮಂ' ಎಂಬ ಪದ್ಯದಿಂದ ಈತ ನೇಮಿನಾಥಪುರಾಣವನ್ನು (ಹರಿವಂಶ) ಬರೆದಂತೆ ತಿಳಿದುಬರುತ್ತದೆ. ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಈಂದ ಪುಲಿಯಾವೊಲಿರ್ದಳ್ ಎಂಬ ಗುಣವರ್ಮನ ಹರಿವಂಶಪ್ರಯೋಗಂ ಎಂಬ ಉಲ್ಲೇಖವಿರುವುದರಿಂದ (ಸೂತ್ರ 128) ಈ ಮಾತು ಮೇಲಿನ ಹೇಳಿಕೆಗೆ ಪೋಷಕವಾಗಿದೆ. 2ನೆಯ ನಾಗವರ್ಮ ತನ್ನ ಭಾಷಾಭೂಷಣದಲ್ಲಿ

ಎನಿತ್ತೆನಿತ್ತಂಬುಜಪತ್ರನೇತ್ರೆಯಾ
ಘನಸ್ತನಂಗಳ್ ಬಳೆಗುಂ ಕಿರಾತೆಯಾ
ಅನಿತ್ತನಿತ್ತಂ ವನದೊಳ್ ವನೇಚರಂ
ತನತ್ತು ಬಿಲ್ಲಾನದನೊತ್ತಿ ಕೀಸುಗಂ

ಎಂಬ ಪದ್ಯವನ್ನು ಉದಾಹರಿಸಿ 'ತಥಾ ಗುಣವರ್ಮ ಕವೇರ್ಭುವನೈಕವೀರಸ್ಯ ಪ್ರಯೋಗ' ಎಂದು ಹೇಳಿದ್ದಾನೆ. ಈ ಪದ್ಯ ಗುಣವರ್ಮನ ಯಾವ ಗ್ರಂಥದಿಂದ ಉದ್ಧೃತವಾಗಿದೆಯೋ ತಿಳಿಯದು. ನಾಗವರ್ಮ ಹೇಳುವುದನ್ನು ನೋಡಿದರೆ ಗುಣವರ್ಮನಿಗೆ ಭುವನೈಕವೀರ ಎಂಬ ಬಿರುದಿದ್ದಂತೆ ತಿಳಿಯುತ್ತದೆ. ಅಲ್ಲದೆ ನಾಗವರ್ಮ ತನ್ನ ಗ್ರಂಥದಲ್ಲಿ ಇನ್ನೊಂದೆಡೆ ಅಧ್ವನ್ ಶಬ್ದಕ್ಕೆ ಪ್ರಯೋಗ ಹೇಳುವಾಗ ಗುಣವರ್ಮನ ಹೆಸರನ್ನು ಉಲ್ಲೇಖಿಸಿದ್ದಾನೆ. ಇದರಿಂದ ಈತ ಲಕ್ಷಣಗ್ರಂಥಕರ್ತೃವೂ ಆಗಿದ್ದಂತೆ ತೋರುತ್ತದೆ. ಇಷ್ಟಾದರೂ ಇದುವರೆವಿಗೂ ಇವನ ಯಾವುದೇ ಕೃತಿ ದೊರೆತಿಲ್ಲ. ಆದರೆ ಅಭಿನವವಾದಿವಿದ್ಯಾನಂದನ (ಸು.1550) ಸಂಕಲನಗ್ರಂಥವಾದ ಕಾವ್ಯಸಾರದಲ್ಲಿ ಗುಣವರ್ಮನ ಶೂದ್ರಕದಿಂದ ಆಯ್ದುವೆಂದು ಹೇಳುವ ಪದ್ಯಗಳೂ ಹರಿವಂಶದ ಒಂದು ಪದ್ಯವೂ ಇವೆ. ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವ (ಸು.1250) ಗ್ರಂಥದಲ್ಲೂ ಕೆಲವು ಪದ್ಯಗಳು ಸಂಕಲನಗೊಂಡಿವೆ. ಈ ಪದ್ಯಗಳಲ್ಲಿ ಸಂಸ್ಕೃತ ಪದಗಳು ಹೆಚ್ಚಾಗಿವೆ. ಅಲ್ಲಲ್ಲಿ ತಿರುಳ್ಗನ್ನಡ ನುಡಿಗಳೂ ಬೆರೆತಿವೆ. ಸಮುದ್ರ, ಪುರ, ನಾಯಕನ ಜನನ, ಸೂರ್ಯ, ಚಂದ್ರ, ಮಾಗಿ, ಕಾನನ, ಬೇಟೆ, ಬೇಟ, ಸ್ತ್ರೀಸೌಂದರ್ಯ, ಸಂಭೋಗ, ವೇಶ್ಯಾವಾಟಿಕೆ, ಯುದ್ಧಯಜ್ಞ, ಯುದ್ಧವಿಜಯ ಮೊದಲಾದ ವರ್ಣನೆಗಳು ಪ್ರೌಢವಾಗಿ ನಿರೂಪಿತವಾಗಿವೆ. ಕೆಲವು ಪದ್ಯಗಳಲ್ಲಿ ಕವಿಯ ಪ್ರತಿಭೆ, ಕಲ್ಪನಾಶಕ್ತಿ ಮಿಂಚಿರುವುದು ಕಂಡುಬರುತ್ತದೆ. ಬೆಳಗಪ್ಪ ಜಾವದಲ್ಲಿ ಚಳಿ ಹತ್ತಲು ಅದನ್ನು ತಡೆಯಲಾರದೆ ಭೂವನಿತೆ ತೊಟ್ಟ ಹೊಸ ಕುಪ್ಪಸದ ಮೇಲಿನ ಸೀಮುರ್ತಿನಂತೆ ನೆಲದ ಮೇಲಿನ ಹನಿಗಳು ಇದ್ದುವು ಎಂಬ ಒಂದು ವರ್ಣನೆ ಮನೋಹರವಾಗಿದೆ. ಪದ್ಯಗಳಲ್ಲದೆ ಶೂದ್ರಕ ಕಾವ್ಯಭಾಗದಿಂದ ಆಯ್ದ ಒಂದು ಗದ್ಯಭಾಗವೂ ಕಾವ್ಯಸಾರದಲ್ಲಿ ದೊರೆತಿದೆ. ಇದರಿಂದ ಗುಣವರ್ಮನ ಕೃತಿಗಳು ಚಂಪೂ ಕಾವ್ಯಗಳಾಗಿದ್ದಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಕೆಲವು ಈ ಪದ್ಯಗಳಲ್ಲಿ ಪರೋಕ್ಷವಾಗಿ ಗಂಗರಾಜ ಎರೆಯಪ್ಪನನ್ನು ಹೊಗಳಿರುವುದನ್ನು ನೋಡಿದರೆ ಶೂದ್ರಕಕಾವ್ಯ ಈ ರಾಜನನ್ನು ಕುರಿತದ್ದಾಗಿರಬೇಕೆಂದು ಊಹಿಸಲು ಅವಕಾಶವಿದೆ. ಇದು ನ್ಯಾಯವಾಗಿದ್ದಲ್ಲಿ ಪಂಪರನ್ನರಿಗೆ, ಲೌಕಿಕ ಮತ್ತ ಆಗಮಿಕ (ಧಾರ್ಮಿಕ) ಕಾವ್ಯಸಂಪ್ರದಾಯಕ್ಕೆ ಗುಣವರ್ಮನೇ ಮಾರ್ಗದರ್ಶಿಯಾದನೆಂದು ಹೇಳಬಹುದು. ಇವನ ಕಾವ್ಯಗಳು ದೊರಕುವ ವರೆವಿಗೂ ಇದಮಿತ್ಥಂ ಎಂದು ಏನನ್ನೂ ಹೇಳುವಂತಿಲ್ಲ. ಈಗ ದೊರೆತಿರುವಷ್ಟು ಸಾಮಗ್ರಿಯಿಂದ ಗುಣವರ್ಮ ಪಂಪಪೂರ್ವಯುಗದ ಪ್ರೌಢಕವಿ ಎಂದು ಮಾತ್ರ ಹೇಳಬಹುದು. (ಎಚ್.ಕೆ.ಜೆ.,ಕೆ.ವಿ.)

**ಗುಣವರ್ಮ II :** ಸು.1215. ಜೈನಕವಿ. ಪುಷ್ಪದಂತ ಪುರಾಣ ಮತ್ತು ಚಂದ್ರನಾಥಾಷ್ಟಕಗಳ ಕರ್ತೃ.

ಕವಿ ತನ್ನ ಕೃತಿರಚನೆಯ ಕಾಲದ ಬಗೆಗೆ ತನ್ನ ಬರೆಹಗಳಲ್ಲೆಲ್ಲೂ ನೇರವಾದ ನಿರ್ದೇಶನವನ್ನು ಮಾಡಿಲ್ಲ. ಆದರೆ ಈತ 13ನೆಯ ಶತಮಾನದ ಪೂರ್ವಭಾಗದಲ್ಲಿ ಜೀವಿಸಿದ್ದನೆಂಬುದಕ್ಕೆ ಆಧಾರಗಳುಂಟು. 13ನೆಯ ಶತಮಾನದ ಪ್ರಾರಂಭದ ದಶಕಗಳಲ್ಲಿದ್ದ ಜನ್ನನನ್ನು ಈತ ಸ್ಮರಿಸಿರುವುದರಿಂದಲೂ 13ನೆಯ ಶತಮಾನದ ಮಧ್ಯಭಾಗದಲ್ಲಿದ್ದ

ಮಲ್ಲಿಕಾರ್ಜುನ ತನ್ನ ಸೂಕ್ತಿಸುಧಾರ್ಣವದಲ್ಲಿ ಈತನ ಪದ್ಯಗಳನ್ನು ಉದ್ಧರಿಸಿರುವುದರಿಂದಲೂ ಈತನ ಕಾಲ 13ನೆಯ ಶತಮಾನದ ಪೂರ್ವಭಾಗವೆಂದು ನಿಸ್ಸಂದೇಹವಾಗಿ ಹೇಳಬಹುದು. ಈತ ತನ್ನ ಪುಷ್ಪದಂತ ಪುರಾಣದಲ್ಲಿ ಆದರಪೂರ್ವಕವಾಗಿ ಹೆಸರಿಸಿದ ಗುರು ಮುನಿಚಂದ್ರ ಹಾಗೂ ಪೋಷಕ ಶಾಂತಿವರ್ಮ ಹೆಸರುಗಳು 1229ರಲ್ಲಿ ರಚಿತವಾದ ಸೌಂದತ್ತಿಯ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಈ ಸಂಗತಿಯೂ ಮೇಲೆ ಸೂಚಿಸಿದ ಕಾಲನಿರ್ಣಯಕ್ಕೆ ಪುಷ್ಟಿ ಕೊಡುತ್ತದೆ.

ಪುಷ್ಪದಂತ ಪುರಾಣ ಜೈನ ಸಂಪ್ರದಾಯದಂತೆ ರಚಿತವಾದ ಪುರಾಣಕಾವ್ಯ. ಚಂಪೂಕೃತಿ. ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಒಂಬತ್ತನೆಯವನಾದ ಪುಷ್ಪದಂತನ ಚರಿತ್ರೆ ಈ ಪುರಾಣಕಾವ್ಯದ ಕಥಾವಸ್ತು. ಈ ಕಥಾವಸ್ತು ಗಾತ್ರದಲ್ಲಿ ಕಿರಿದು. ಆದರೆ ಕಥಾನಾಯಕ ಉನ್ನತನೆಂಬ ಕಾರಣದಿಂದ ಕವಿ ಅದನ್ನು ವಿಸ್ತರಿಸಿ 14 ಆಶ್ವಾಸಗಳಾಗಿ ವಿಸ್ತರಿಸಿದ್ದಾನೆ. ಪೋಷಕನೂ ನಾಡಪ್ರಭುವೂ ಆಗಿದ್ದ ಶಾಂತಿವರ್ಮನಿಗೆ ಅದನ್ನು ವಿನಯಪೂರ್ವಕ ಸಮರ್ಪಿಸಿದ್ದಾನೆ. ಗ್ರಂಥದ ಆರಂಭದಲ್ಲಿ ಕುಂದಕುಂದಚಾರ್ಯನಿಂದ ಹಿಡಿದು ಸ್ವಗುರುವಾದ ಮುನಿಚಂದ್ರನ ವರೆಗಿನ ತನ್ನ ಗುರುಪರಂಪರೆಯನ್ನು ಅರುಹಿದ್ದಾನೆ. ಪೂರ್ವದಲ್ಲಿ ಕೃತಿರಚನೆ ಮಾಡಿದಂತೆ ತಿಳಿದುಬಂದ ಸಮಂತಭದ್ರ, ಪೂಜ್ಯಪಾದ, ಕವಿಪರಮೇಷ್ಠಿಗಳ ಹೆಸರುಗಳು ಈ ಗುರುಪರಂಪರೆಯಲ್ಲಿ ಸಮಾವೇಶವಾಗಿರುವುದು ಗಮನಾರ್ಹವಾಗಿದೆ. ಪೂರ್ವದ ಕವಿಗಳಲ್ಲಿ ಪಂಪ, ಪೊನ್ನ, ರನ್ನ, ನಾಗವರ್ಮ, ನಾಗಚಂದ್ರ, ನೇಮಿಚಂದ್ರರನ್ನು ಮಾತ್ರವಲ್ಲದೆ ಹೆಚ್ಚು ಕಡಿಮೆ ಸಮಕಾಲೀನನಾಗಿರ ಬಹುದಾದ ಜನ್ನಕವಿಯನ್ನೂ ಸ್ಮರಿಸಿದ್ದಾನೆ.

ಗುಣವರ್ಮನ ಕಾವ್ಯಬಂಧ ಪ್ರೌಢವಾಗಿದೆ. ಪ್ರಾಸಬದ್ಧವಾಗಿದೆ. ಭಾಷಾಸರಣಿ ತಿಳಿಗನ್ನಡವನ್ನು ಹಿತವಾಗಿ ಒಳಗೊಂಡಿದೆ. ಮೃದುಪದಗತಿಯಲ್ಲಿ ಸುರುಚಿರ ಅರ್ಥವೂ ಅಲ್ಲಲ್ಲಿ ಸೂಸಿದೆ. ಪ್ರಕೃತಿ ವರ್ಣನೆ ಋತುವರ್ಣನೆಗಳು ಮನೋಹರವಾಗಿವೆ. 13ನೆಯ ಶತಮಾನದ ಹೊತ್ತಿಗಾಗಲೆ ಇಳಿಮುಖವಾಗಿದ್ದ ಚಂಪೂ ಶೈಲಿಯನ್ನು ಮತ್ತೆ ಸಮರ್ಥವಾಗಿ ಕೈಗೆತ್ತಿಕೊಂಡ ಕೀರ್ತಿ ಗುಣವರ್ಮನಿಗೆ ಸಲ್ಲುತ್ತದೆ.

ಚಂದ್ರನಾಥಾಷ್ಟಕದಲ್ಲಿ ಮಹಾಸ್ರಗ್ಧರಾವೃತ್ತದಲ್ಲಿ ರಚಿತವಾದ ಸ್ತುತಿಪದ್ಯಗಳಿವೆ. ಕೊಲ್ಹಾಪುರದ ತ್ರಿಭುವನತಿಲಕ ಜಿನಾಲಯದ ಚಂದ್ರನಾಥನಲ್ಲಿ ಕವಿ ತಳೆದ ಭಕ್ತಿ ಅವುಗಳಲ್ಲಿ ಅಭಿವ್ಯಕ್ತವಾಗಿದೆ. ಚಂದ್ರನಾಥಾಷ್ಟಕದ ಪ್ರತಿ ಪದ್ಯದ ಕೊನೆಯಲ್ಲೂ ಚಂದ್ರನಾಥನ ಹೆಸರು ಬಂದಿದೆಯಲ್ಲದೆ ಎಂಟು ಪದ್ಯಗಳ ಕೊನೆಯಲ್ಲಿ ಬರುವ ಒಂಬತ್ತನೆಯ ಪದ್ಯ ಮಾಟ್ಕಿ, ಭವ್ಯರ್ಗೆ ಸೌಖ್ಯಾವಹಮುಂ ಕೊಲ್ಹಾಪುರಶ್ರೀ ತ್ರಿಭುವನಾಲಂಕೃತಂ ಚಂದ್ರನಾಥಂ ಎಂದು ಕೊನೆಗೊಳ್ಳುತ್ತದೆ. (ಎಚ್.ಕೆ.ಜೆ.)

**ಗುತ್ತವಂಶ :** 11-13ನೆಯ ಶತಮಾನಗಳಲ್ಲಿ ಧಾರವಾಡ, ಉತ್ತರ ಕನ್ನಡ, ಶಿವಮೊಗ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಕೆಲವು ಭಾಗಗಳನ್ನು ಆಳುತ್ತಿದ್ದ ಒಂದು ಸಾಮಂತ ರಾಜಮನೆತನ. ಈ ವಂಶದವರ ರಾಜಧಾನಿ ಗುತ್ತವೊಳಲು (ಧಾರವಾಡ ಜಿಲ್ಲೆ ಹಾವೇರಿ ತಾಲ್ಲೂಕಿನ ಗುತ್ತಲ್).

ಗುತ್ತರ ಉಗಮ ಅಸ್ಪಷ್ಟ. ಈ ವಂಶದವರಿಗೆ ಚಂದ್ರಗುಪ್ತವಂಶೋದ್ಭವ, ಪಾಟಲೀಪುರವರಾಧೀಶ್ವರ, ಗುಪ್ತವಂಶ ತ್ರಿನೇತ್ರ, ಉಜ್ಜಯಿನೀಪುರವರಾಧೀಶ್ವರ, ವಿಕ್ರಮಾದಿತ್ಯವಂಶೋದ್ಭವ ಮುಂತಾದ ಬಿರುದುಗಳಿರುವುದರಿಂದ ಗುತ್ತ ಎನ್ನುವ ಪದ ಗುಪ್ತ ಎಂಬ ಸಂಸ್ಕೃತ ಪದದಿಂದ ಬಂದಿದ್ದು, ಇವರಿಗೂ ಮಗಧದ ಗುಪ್ತರಿಗೂ ಸಂಬಂಧವಿರಬೇಕೆಂದು ಕೆಲವರ ಮತ. ಮತ್ತೆ ಕೆಲವರ ಪ್ರಕಾರ ಇವರು ಮೌರ್ಯ ದೊರೆ ಚಂದ್ರಗುಪ್ತನ ವಂಶದವರು. ಮಗಧದ ಗುಪ್ತರು ಕಣ್ಮರೆಯಾದ ಹಲವು ಶತಮಾನಗಳ ಅನಂತರ ಈ ಗುತ್ತರು ಇತಿಹಾಸದಲ್ಲಿ ಕಾಣಿಸಿಕೊಳ್ಳುತ್ತಾರಾದ್ದರಿಂದ ಈ ಎರಡು ವಂಶಗಳಿಗೂ ಸಂಬಂಧ ಕಲ್ಪಿಸುವುದು ಕಷ್ಟ. ಆದುದರಿಂದ ಈ ಗುತ್ತರು ಕರ್ನಾಟಕದವರೇ ಆಗಿದ್ದು ತಮ್ಮ ಘನತೆಯನ್ನು ಹೆಚ್ಚಿಸಿಕೊಳ್ಳುವುದ ಕ್ಕೋಸ್ಕರ ಭವ್ಯಪರಂಪರೆಯನ್ನು ಹೊಂದಿದ್ದ ಗುಪ್ತರೊಡನೆ ಸಂಬಂಧವನ್ನು ಕಲ್ಪಿಸಿಕೊಂಡಿರಬಹುದು.

ಮಹಾಗುಪ್ತ ಅಥವಾ ಮಾಗುತ್ತ (ಸು.11ನೆಯ ಶತಮಾನ) ಗುತ್ತವಂಶದ ಮೊದಲನೆಯ ದೊರೆ. ಇವನು ಚಾಳುಕ್ಯರ ಸಾಮಂತ ನಾಗಿದಿರಬೇಕು. ಅನಂತರ ಪಟ್ಟವೇರಿದ ಇವನ ಮಗ ಮೊದಲನೆಯ ಗುತ್ತ (ಸು.1090-1108) ಹಾನಗಲ್ಲಿನ ಕದಂಬರನ್ನು ಸೋಲಿಸಿ ಅವರ ರಾಜ್ಯದ ಕೆಲವು ಭಾಗಗಳನ್ನು ವಶಪಡಿಸಿಕೊಂಡ. ಇವನ ಮಗನಾದ ಮಲ್ಲಿದೇವ (ಸು.1108-39) ಬನವಾಸಿಯ ರಾಜ್ಯಪಾಲ ಗೋವಿಂದರಸನ ಆಶ್ರಯದಲ್ಲಿ ಆಳುತ್ತಿದ್ದ. ಇವನಿಗೆ ಜೋಯಿದೇವ I ಎಂಬ ತಮ್ಮನಿದ್ದ. ಇವನ ತಂಗಿ ಬಾಚಲದೇವಿ ನೂಱುಂಬಾಡದ ಕದಂಬ ಬೀರದೇವನನ್ನು ಲಗ್ನವಾಗಿದ್ದಳು. ಮಲ್ಲಿದೇವನ ಅನಂತರ ಬಂದ ಮೊದಲನೆಯ ವಿಕ್ರಮಾದಿತ್ಯನ (ಸು.1139-70) ಆಳಿಕೆಯ ಉತ್ತರಾರ್ಧದಲ್ಲಿ ಚಾಳುಕ್ಯರ ಪ್ರಾಬಲ್ಯ ಕುಸಿದುದರಿಂದ, ಈತ ಕಳಚುರ್ಯರ ಸಾಮಂತನಾಗಿರಬೇಕು. ಇವನು ಹೊಯ್ಸಳರಿಗೆ ಸೇರಿದ್ದ ಬನವಾಸಿ ಪ್ರಾಂತ್ಯದ ಕೆಲವು ಭಾಗಗಳನ್ನು ತನ್ನದನ್ನಾಗಿ ಮಾಡಿಕೊಂಡ. ಇವನ ಮರಣಾನಂತರ ಇವನ ಮಗ ಎರಡನೆಯ ಜೋಯಿದೇವ (1170-83) ಕಳಚುರ್ಯರ ಆಶ್ರಯದಲ್ಲಿ ಮಹಾಮಂಡಳೇಶ್ವರನಾಗಿದ್ದು, ನಾಗರಖಂಡ ನಾಡಿನ ಕೆಲವು ಭಾಗಗಳನ್ನೂ ತನ್ನ ಆಧಿಪತ್ಯಕ್ಕೆ ಸೇರಿಸಿಕೊಂಡ. ಇಷ್ಟರಲ್ಲಿಯೇ ಕಳಚುರ್ಯರ ಪ್ರಾಬಲ್ಯ ಕಡಿಮೆಯಾಗಿ ಚಾಳುಕ್ಯರು ಮತ್ತೆ ಶಕ್ತಿಯುತರಾದುದನ್ನು ಗಮನಿಸಿದ ಜೋಯಿದೇವ ಮತ್ತೆ ಚಾಳುಕ್ಯರ ಸಾಮಂತನಾದ. ಇವನ ಅನಂತರ ಪಟ್ಟವೇರಿದ ಇವನ ಸಹೋದರ ಎರಡನೆಯ ಗುತ್ತನ ಮಗನಾದ ಎರಡನೆಯ ವಿಕ್ರಮಾದಿತ್ಯ (1183-1233) ಗುತ್ತವಂಶದ ಪ್ರಮುಖ ದೊರೆ. ಇವನ ಕಾಲದಲ್ಲಿ ಚಾಳುಕ್ಯರ ಅವನತಿಯಾಗಿದ್ದು, ಹೊಯ್ಸಳರೂ ಸೇವುಣರೂ ಪರಸ್ಪರ ಕಲಹದಲ್ಲಿ ನಿರತರಾಗಿದ್ದುದರಿಂದ ವಿಕ್ರಮಾದಿತ್ಯ ಸ್ವತಂತ್ರನಾಗಿ ರಾಜ್ಯಭಾರ ಮಾಡಲು ಪ್ರಾರಂಭಿಸಿದ. ವಿಕ್ರಮಾದಿತ್ಯನಿಗೆ ಪಟ್ಟಮಹಾದೇವಿ ಎಂಬ ರಾಣಿಯಿಂದ ತುಳುವಲದೇವಿ ಎಂಬ ಮಗಳೂ ಜೋಯಿದೇವ III ಮತ್ತು ವಿಕ್ರಮಾದಿತ್ಯ III ಎಂಬ ಗಂಡು ಮಕ್ಕಳೂ ಇದ್ದರು. ಪಾಂಡ್ಯವಂಶದ ಸೋವಲದೇವಿ ಇವನ ಇನ್ನೊಬ್ಬ ಪತ್ನಿ. ತಂದೆಯ ಮರಣಾನಂತರ ಪಟ್ಟಕ್ಕೆ ಬಂದ ಮೂರನೆಯ ಜೋಯಿದೇವ (ಸು.1238-48) ಸೇವುಣ ಸಿಂಘಣನ ಮಂತ್ರಿಯಾದ ಬೀಚನಿಂದ ಪರಾಜಿತನಾಗಿ ಸಾಮಂತ ಸ್ಥಿತಿಗಿಳಿದು, ಗುತ್ತವೊಳಲಿನಲ್ಲಿ ಸೇವುಣರ ಪ್ರತಿನಿಧಿಯಾಗಿ ಬಂದ ದಂಡನಾಯಕ ಚಿಕ್ಕದೇವನಿಗೆ ವಿಧೇಯನಾಗಿ ಆಳಿದ. ಇವನ ಅನಂತರ ಇವನ ತಮ್ಮನಾದ ಮೂರನೆಯ ವಿಕ್ರಮಾದಿತ್ಯ (ಸು.1248-59) ಸೇವುಣ ಕೃಷ್ಣನ ಆಶ್ರಯದಲ್ಲಿ ಮಹಾಮಂಡಳೇಶ್ವರನಾಗಿದ್ದ. ಇವನಿಗೆ ಮೈಳಲದೇವಿ ಎಂಬ ರಾಣಿಯೂ ವಿಕ್ರಮಾದಿತ್ಯ IV, ಗುತ್ತದೇವ III, ಹರಿಯದೇವ ಮತ್ತು ಜೋಯಿದೇವ IV ಎಂಬ ಮಕ್ಕಳೂ ಇದ್ದರು. ಅನಂತರ ಮೂರನೆಯ ಗುತ್ತದೇವ (1250-80) ರಾಜನಾದ. ಸ್ವಲ್ಪ ಕಾಲದಲ್ಲಿಯೆ ಸೇವುಣರ ಮೇಲೆ ದಂಗೆಯೆದ್ದರೂ ಸೇವುಣ ಕೃಷ್ಣನಿಂದ ಅಡಗಿಸಲ್ಪಟ್ಟು ಸಾಮಂತನಾಗಿಯೇ ಮುಂದುವರಿಯಬೇಕಾಯಿತು. ಇವನ ಕಾಲದಲ್ಲಿ ಸಾಳುವ ತಿಕ್ಕಮನೆಂಬ ಶ್ರೇಷ್ಠ ಸೇವುಣ ಸೇನಾಧಿಪತಿಯ ನೇತೃತ್ವದಲ್ಲಿ ಸೇವುಣ ಸೈನ್ಯ ಹೊಯ್ಸಳರ ಮೇಲೆ ಯುದ್ಧ ಮಾಡುವ ಮಾರ್ಗದಲ್ಲಿ ಗುತ್ತರ ರಾಜಧಾನಿ ಗುತ್ತವೊಳಲಿನಲ್ಲಿ ತಂಗಿದ್ದಾಗ ಈತ ಸೇವುಣ ಸೈನ್ಯಕ್ಕೆ ಬೇಕಾದ ಅನುಕೂಲಗಳನ್ನೆಲ್ಲ ಮಾಡಿಕೊಟ್ಟ. ಮೂರನೆಯ ಗುತ್ತನ ಅನಂತರ, ಇವನ ತಮ್ಮ ಜೋಯಿದೇವನ ಮಗನಾದ ಐದನೆಯ ವಿಕ್ರಮಾದಿತ್ಯ ಸೇವುಣ ರಾಮಚಂದ್ರನ ಆಶ್ರಯದಲ್ಲಿ ಆಳುತ್ತಿದ್ದ. ಇವನ ರಾಣಿ ಪದ್ಮಲದೇವಿ ಶಿವದೇವಾಲಯವೊಂದಕ್ಕೆ ದಾನಗಳನ್ನು ಕೊಟ್ಟ ವಿಚಾರವಿರುವ 1283ರ ಒಂದು ಶಾಸನವೇ ಗುತ್ತರ ಬಗ್ಗೆ ಸಿಗುವ ಕೊನೆಯ ಉಲ್ಲೇಖ. ಸೇವುಣರಾಜ್ಯ ಮುಹಮ್ಮದೀಯರ ಕೈಗೆ ಸಿಕ್ಕಿ ನಾಶವಾದ ಅನಂತರ ಗುತ್ತರೂ ನಾಶವಾಗಿರಬೇಕೆಂದು ತೋರುತ್ತದೆ.

ಗುತ್ತರ ವಂಶಾವಳಿ :

ಮಾಗುತ್ತ

ಗುತ್ತ I (ಸು.1090 - 1108)

ಮಲ್ಲಿದೇವ (ಸು.1108 - 39) — ಜೋಯಿದೇವ I (1124) — ಬಾಚಲದೇವಿ (ಗಂಡ, ನೊಳಂಬಾಡದ ಕದಂಬ ಬೀರದೇವ)

ವಿಕ್ರಮಾದಿತ್ಯ I (ಸು.1139-70 : ಪತ್ನಿ, ಸರಿಯಾದೇವಿ) — ಲಳಿಯಾದೇವಿ (ಗಂಡ, ನೊಳಂಬಾಡದ ಕದಂಬ ಕೇತರಸ II)

ಜೋಯಿದೇವ II (ಸು.1170-83) — ಗುತ್ತ II (ಪತ್ನಿ, ಪದ್ಮಲದೇವಿ) — ಬಾಚಲದೇವಿ (ಗಂಡ, ಲಳಿಯಾದೇವಿಯ ಮಗ ಪಾಂಡ್ಯ)

ವಿಕ್ರಮಾದಿತ್ಯ II (1183-1233) :ಪತ್ನಿಯರು, ಪಟ್ಟಮಹಾದೇವಿ ಮತ್ತು ಪಾಂಡ್ಯವಂಶದ ಸೋವಲದೇವಿ) — ವಿಜಯಮಹಾದೇವಿ (ಗಂಡ, ಸಾಂತಳಿಗೆ ಮಂಡಳದ ಸಿಂಗಿದೇವ)

ತುಳುವಲದೇವಿ (ಗಂಡ, ಸಿಂಗಿದೇವನ ಮಗ ಬಲ್ಲಾಳ) — ಜೋಯಿದೇವ III (ಸು.1238-48) — ವಿಕ್ರಮಾದಿತ್ಯ III (ಸು. 1248-59 : ಪತ್ನಿ, ಮೈಳಲದೇವಿ)

ವಿಕ್ರಮಾದಿತ್ಯ — ಗುತ್ತ III (ಸು.1259-80) — ಹರಿಯದೇವ — ಜೋಯಿದೇವ IV

ವಿಕ್ರಮಾದಿತ್ಯ V (1283: ಪತ್ನಿ, ಪದ್ಮಲದೇವಿ)

(ಎ.ವಿ.ಎನ್.)

**ಗುಪ್ತ,ಬಿ.ಎನ್. :** ಕರ್ನಾಟಕದ ಹಿರಿಯ ಪತ್ರಿಕೋದ್ಯಮಿ. ಬೈಸಾನಿ ನರಸಿಂಹೇಶ್ವರ ಗುಪ್ತ ಇವರ ಪೂರ್ಣಹೆಸರು. ಆಂಧ್ರಪ್ರದೇಶದ ಚಿತ್ತೂರಿನಲ್ಲಿ 1895 ಡಿಸೆಂಬರ್ 16ರಂದು ಜನಿಸಿದರು. ಮದರಾಸಿನಲ್ಲಿ ವಿದ್ಯಾಭ್ಯಾಸ ಮಾಡಿ ಕರ್ನಾಟಕದಲ್ಲಿ ಅನೇಕ ಕನ್ನಡ ಪತ್ರಿಕೆಗಳ ಹುಟ್ಟು ಬೆಳವಣಿಗೆಗಳಿಗೆ ಕಾರಣರಾದ ಇವರು ಪತ್ರಿಕೋದ್ಯಮ ಕ್ಷೇತ್ರದಲ್ಲಿ ಹಲವಾರು ಪ್ರಯೋಗಗಳನ್ನೂ ಸಾಹಸಗಳನ್ನೂ ಮೆರೆದರು. ಇವರು ಮದರಾಸಿನಲ್ಲಿ ಅನಿಬೆಸೆಂಟರ ಪತ್ರಿಕೋದ್ಯಮ ಕಾಲೇಜಿನಲ್ಲಿ ಶಿಕ್ಷಣ ಪಡೆದು ಮದರಾಸಿನಲ್ಲೇ ನ್ಯೂಇಂಡಿಯ (ದಿನಪತ್ರಿಕೆ) ಮತ್ತು ಕಾಮನ್ ವೀಲ್ (ವಾರಪತ್ರಿಕೆ) ಈ ಪತ್ರಿಕೆಗಳ ಸಂಪಾದಕೀಯ ವಿಭಾಗಗಳಲ್ಲಿ ಕೆಲಸ ಮಾಡುತ್ತಿದ್ದರು. ಅನಂತರ ಬೆಂಗಳೂರಿನಲ್ಲಿ ನೆಲೆಸಿದರು. ಆಗಿನ ಮೈಸೂರು ಸಂಸ್ಥಾನದ ರಾಜಕೀಯ ಕ್ಷೇತ್ರಕ್ಕೆ ದುಮುಕಿ ಪ್ರಜಾಪಕ್ಷ ಸ್ಥಾಪನೆಗೆ ದುಡಿದರು. ಮೈಸೂರಿನ ಪ್ರಥಮ ರಾಜಕೀಯ ಪಕ್ಷವೂ ಜವಾಬ್ದಾರಿ ಸರ್ಕಾರದ ಬೇಡಿಕೆಯನ್ನು ಪ್ರಥಮವಾಗಿ ಮಂಡಿಸಿದ್ದೂ ಆದ ಪ್ರಜಾಪಕ್ಷವನ್ನು ಬೆಳೆಸುವುದಕ್ಕಾಗಿ ಪ್ರಜಾಮತ ವಾರಪತ್ರಿಕೆಯನ್ನು ಪ್ರಕಟಿಸಲು ಗುಪ್ತ ನಿರ್ಧರಿಸಿದರು. ಆದರೆ ಮಿರ್ಜಾ ಇಸ್ಮಾಯಿಲ್ ದಿವಾನರಾಗಿದ್ದ ಮೈಸೂರು ಸರ್ಕಾರ ಅದಕ್ಕೆ ಅನುಮತಿ ಕೊಡಲಿಲ್ಲ. ಗುಪ್ತ ಅವರು ಮದರಾಸಿಗೆ ಹೋಗಿ 1929ರಲ್ಲಿ ಪ್ರಜಾಮತ ಪ್ರಾರಂಭಿಸಿದರಲ್ಲದೆ ಎರಡು ವರ್ಷಗಳ ಅನಂತರ (1931) ಜನವಾಣಿ ದಿನಪತ್ರಿಕೆಯನ್ನು ಪ್ರಾರಂಭಿಸಿದರು. ಜನವಾಣಿಯಲ್ಲಿ ಪ್ರಕಟವಾದ ಒಂದು ಲೇಖನದಿಂದಾಗಿ ಆ ಪತ್ರಿಕೆ ನಿಂತುಹೋಯಿತು. ಅಷ್ಟರಲ್ಲಿ ಮಿರ್ಜಾ ಅವರು ಆ ಪತ್ರಿಕೆಗಳನ್ನು ಬೆಂಗಳೂರಿನಲ್ಲಿ ಪ್ರಕಟಿಸಲು ಅನುಮತಿ ನೀಡಿದ್ದರಿಂದ ಅವೆರಡೂ ಬೆಂಗಳೂರಿನಿಂದ ಪ್ರಕಟವಾಗಲಾರಂಭಿಸಿದುವು (1933). ಬೆಂಗಳೂರಿಗೆ ಹಿಂದಿರುಗಿದ ಕೂಡಲೆ ಇವರು ಮೈಸೂರು ಕಾಂಗ್ರೆಸ್ ಸ್ಥಾಪನೆಗಾಗಿ ಹೋರಾಡಲು ಪ್ರಾರಂಭಿಸಿದರು. ತಾವೇ ಹಿಂದೆ ಸ್ಥಾಪಿಸಿದ್ದ ಪ್ರಜಾಪಕ್ಷದ ವಿರುದ್ಧವಾಗಿ ಅಭ್ಯರ್ಥಿಗಳನ್ನು ನಿಲ್ಲಿಸಬೇಕಾಯಿತು. ಇವರ ರಾಜಕೀಯ ಚಟುವಟಿಕೆಗಳಿಗೆ ಹೆದರಿ, ಗುಪ್ತರು ಮೈಸೂರಿನವರಲ್ಲವೆಂಬ ಕಾರಣವನ್ನು ನೀಡಿ, ಇಪ್ಪತ್ನಾಲ್ಕು ಗಂಟೆಗಳೊಳಗಾಗಿ ಸಂಸ್ಥಾನವನ್ನು ಬಿಟ್ಟು ಹೋಗುವಂತೆ ಮೈಸೂರು ಸರ್ಕಾರ ಆಜ್ಞೆ ಮಾಡಿತು. ಇವರು ಹುಬ್ಬಳ್ಳಿಗೆ ತೆರಳಿ (1936) ಅಲ್ಲಿಂದ ಪ್ರಜಾಮತವನ್ನು ಪ್ರಕಟಿಸಲು ಪ್ರಾರಂಭಿಸಿದರು (ಆ ವೇಳೆಗೆ ಜನವಾಣಿಯನ್ನು ಇವರು ಬೇರೆಯವರಿಗೆ ಕೊಟ್ಟಿದ್ದರು.) ಸಂಸ್ಥಾನದೊಳಕ್ಕೆ ಪ್ರಜಾಮತ ಬರಕೂಡದೆಂದು ಮೈಸೂರು ಸರ್ಕಾರ ಬಹಿಷ್ಕಾರ ಹಾಕಿತು. ಸಂಸ್ಥಾನದ ಹೊರಗೆ ಪ್ರಜಾಮತವೆಂಬ ಹೆಸರಿನಲ್ಲೇ ಪತ್ರಿಕೆ ನಡೆಯುತ್ತಿದ್ದರೂ ಇನ್ನೊಂದು ಹೆಸರಿನಲ್ಲಿ ಆ ಪತ್ರಿಕೆಯ ಸಂಚಿಕೆಗಳನ್ನು ಮೈಸೂರು ಸಂಸ್ಥಾನಕ್ಕೆ ಕಳುಹಿಸಲು ಗುಪ್ತ ಪ್ರಾರಂಭಿಸಿದರು. ಆ ಹೆಸರಿನ ಪತ್ರಿಕೆಗೂ ಸರ್ಕಾರ ಬಹಿಷ್ಕಾರ ಹಾಕಿತು.



ಮತ್ತೆ ಪತ್ರಿಕೆಯ ಹೆಸರನ್ನು ಬದಲಾಯಿಸಲಾಯಿತು. ಮತ್ತೆ ಸರ್ಕಾರದ ಬಹಿಷ್ಕಾರ, ಮತ್ತೆ ಹೆಸರಿನ ಬದಲಾವಣೆ; ಹೀಗೆಯೇ ಸಾಗಿತ್ತು. 1938ರಲ್ಲಿ ಮಿರ್ಜಾ ಅವರು ಮತ್ತೆ ಗುಪ್ತ ಅವರನ್ನು ಬೆಂಗಳೂರಿಗೆ ಆಹ್ವಾನಿಸಿದರು. ಬೆಂಗಳೂರಿಗೆ ಹಿಂದಿರುಗಿದ ಮೇಲೆ ಗುಪ್ತರು ಜನವಾಣಿಯನ್ನು ಪಡೆದುಕೊಂಡರು. ಬಹಿಷ್ಕಾರಗಳಿಂದಾಗಿ ಪ್ರಜಾಮತ ಪತ್ರಿಕೆ ಸ್ಥಳಾಂತರವಾಗುತ್ತಿದ್ದರೂ ಒಂದು ವಾರವೂ ಅದು ನಿಲ್ಲದೆ ಪ್ರಕಟವಾಗುತ್ತಿತ್ತು. 1948ರಲ್ಲಿ ಗುಪ್ತರು ಇವೆರಡು ಪತ್ರಿಕೆಗಳನ್ನೂ ಮಾರಿದರು. ಪ್ರಜಾಮತ ಆ ವೇಳೆಗೆ 36,000 ಪ್ರತಿಗಳ ಪ್ರಸಾರ ಸಂಖ್ಯೆಯನ್ನು ಮುಟ್ಟಿದ್ದ ಪ್ರಥಮ ಕನ್ನಡ ವಾರಪತ್ರಿಕೆಯಾಗಿತ್ತು. ಅನಂತರ 1959ರಲ್ಲಿ ಇವರು ಜನಪ್ರಗತಿ ವಾರಪತ್ರಿಕೆಯನ್ನು ಕೊಂಡರು. 1961ರಲ್ಲಿ ಮಲ್ಲಿಗೆ ಮಾಸಪತ್ರಿಕೆಯನ್ನು ಸ್ಥಾಪಿಸಿದರು. 1971ರವರೆಗೂ ನಡೆಸಿಕೊಂಡುಬಂದು ಅನಂತರ ಅದನ್ನು ಬೇರೆಯವರಿಗೆ ವಹಿಸಿಕೊಟ್ಟರು.

ಗುಪ್ತರು ಪತ್ರಿಕೋದ್ಯಮ, ರಾಜಕೀಯವಲ್ಲದೆ ವಾಣಿಜ್ಯ ಕ್ಷೇತ್ರಗಳಲ್ಲಿಯೂ ಕೆಲಸ ಮಾಡಿದವರು. 1942ರಿಂದ 1946ರವರೆಗೆ ಇವರು ಮೈಸೂರಿನ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರು (1945-49), ಇವರು ಬೆಂಗಳೂರು ಪುರಸಭೆಯ ಸದಸ್ಯರಾಗಿ (1942-46) ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ (1948) ಹಾಗೂ ಅಕಾಡೆಮಿಕ್ ಕೌನ್ಸಿಲ್‌ನ (1949) ಸದಸ್ಯರಾಗಿ, ಕಾಂಗ್ರೆಸ್ ಪಕ್ಷದ ಉಪನಾಯಕರಾಗಿ ಸೇವೆಸಲ್ಲಿಸಿದರು. ಮೈಸೂರು ಬ್ಯಾಂಕಿನ ಮತ್ತು ಅನೇಕ ಕೈಗಾರಿಕೆ ಮತ್ತು ವಾಣಿಜ್ಯ ಸಂಸ್ಥೆಗಳ ನಿರ್ದೇಶಕರಾಗಿದ್ದರು. ಚಲನಚಿತ್ರ ಕ್ಷೇತ್ರದಲ್ಲಿ ವಿಜಯಾ ಟಾಕೀಸ್ ಡಿಸ್ಟ್ರಿಬ್ಯೂಟರ್ಸ್‌ನ ಪಾಲುದಾರರಾಗಿದ್ದರು. ಇದರ ಒಡೆತನದಲ್ಲಿ ಕೆಲವು ಚಿತ್ರಮಂದಿರಗಳೂ ಇದ್ದುವು. ಇವರ ಪ್ರಗತಿ ಪ್ರಕಟನಾಲಯ ಎಂಬತ್ತಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದೆ. ಇವರು ಜಪಾನ್ ಮತ್ತು ಐರೋಪ್ಯ ದೇಶಗಳ ಪ್ರವಾಸ ಮಾಡಿದ್ದರು. ಇವರು ಅಖಿಲ ಭಾರತ ಉತ್ಪಾದಕ ಸಂಘದ ಉಪಾಧ್ಯಕ್ಷರಾಗಿಯೂ ಅದರ ರಾಜ್ಯಶಾಖೆಯ ಅಧ್ಯಕ್ಷರಾಗಿಯೂ ಇದ್ದರು. ಇವರು ವಿಶ್ವೇಶ್ವರಯ್ಯ ತಾಂತ್ರಿಕ ವಸ್ತುಸಂಗ್ರಹಾಲಯ ಸ್ಥಾಪನೆಗೆ ಮುಖ್ಯ ಕಾರಣರು.

ಗುಪ್ತರದು ಧರ್ಮಕಾರ್ಯಗಳಿಗೆ ಪ್ರಸಿದ್ಧವಾದ ವಂಶ. ಇವರ ತಾತ ಮದರಾಸಿನ ಬೈಸಾನಿ ಮಾಧವಚೆಟ್ಟಿ ಚಾರಿಟೀಸಿನ ಸ್ಥಾಪಕರು. ಗುಪ್ತರು ಅದರ ಅಧ್ಯಕ್ಷರಾಗಿದ್ದರು. 1970ರಲ್ಲಿ ಇವರು ಜನ್ಮಭೂಮಿ ಟ್ರಸ್ಟ್ ಸ್ಥಾಪಿಸಿ ಪತ್ರಿಕೋದ್ಯಮ ಮತ್ತು ಕನ್ನಡ ಸಾಹಿತ್ಯಗಳ ಬೆಳೆವಣಿಗೆಗೆ ಪೋಷಕರಾದರು. ಮೈಸೂರು, ಬೆಂಗಳೂರು ವಿಶ್ವವಿದ್ಯಾನಿಲಯಗಳಿಗೆ ಗುಪ್ತರು ಅನೇಕ ದತ್ತಿಗಳನ್ನು ನೀಡಿದ್ದಾರೆ. *

**ಗುಬ್ಬಿ :** ತುಮಕೂರು ಜಿಲ್ಲೆಯ ಒಂದು ತಾಲ್ಲೂಕು, ತಾಲ್ಲೂಕಿನ ಕೇಂದ್ರ. ತುಮಕೂರು ಉಪವಿಭಾಗಕ್ಕೆ ಸೇರಿರುವ ಈ ತಾಲ್ಲೂಕಿನ ಪೂರ್ವಕ್ಕೆ ತುಮಕೂರು, ಪಶ್ಚಿಮಕ್ಕೆ ತಿಪಟೂರು, ತುರುವೇಕೆರೆ, ಚಿಕ್ಕನಾಯಕನಹಳ್ಳಿ, ಉತ್ತರಕ್ಕೆ ಶಿರಾ ಹಾಗೂ ದಕ್ಷಿಣಕ್ಕೆ ಕುಣಿಗಲು ತಾಲ್ಲೂಕುಗಳಿವೆ. 1886ರವರೆಗೆ ಈ ಪ್ರದೇಶ ಕಡಬ ತಾಲ್ಲೂಕಿನಲ್ಲಿತ್ತು. ತಾಲ್ಲೂಕಿನ ವಿಸ್ತೀರ್ಣ 1,221ಚ.ಕಿಮೀ. ಗುಬ್ಬಿ, ಚಂದ್ರಶೇಖರಪುರ, ಚೇಳೂರು, ಹಾಗಲವಾಡಿ, ನಿಟ್ಟೂರು ಮತ್ತು ಕಡಬ ಹೋಬಳಿಗಳು; ಗ್ರಾಮಗಳ ಸಂಖ್ಯೆ 346. ಜನಸಂಖ್ಯೆ 2,56,144.

ಶಿಂಷಾ ನದಿ ಈ ಪ್ರದೇಶದಲ್ಲಿ ಹರಿದು (ತಾಲ್ಲೂಕಿನಲ್ಲಿ ಈ ನದಿಯ ಉದ್ದ ಸು.34ಕಿಮೀ) ಕಲ್ಲೂರು ಸಮೀಪದಲ್ಲಿ ನಾಗಾ ನದಿಯೊಂದಿಗೆ ಕೂಡಿ ದಕ್ಷಿಣದತ್ತ ಮುಂದೆ ಸಾಗಿದೆ. ಇಲ್ಲಿನ ವಾಯುವ್ಯ ಪ್ರದೇಶದಲ್ಲಿ ಕೆಲವು ಬೆಟ್ಟಗಳಿವೆ. ಉಳಿದ ಪ್ರದೇಶವೆಲ್ಲ ಮಟ್ಟವಾದ ಬಯಲುನಾಡಾಗಿದ್ದು ನೀರಿನ ಅನುಕೂಲತೆಯನ್ನು ಪಡೆದಿದ್ದು ಕೆಂಪು ಮಣ್ಣಿನಿಂದ ಕೂಡಿದೆ. ಸರಾಸರಿ ವಾರ್ಷಿಕ ಮಳೆ 703.39ಮಿಮೀ. ಬತ್ತ, ಜೋಳ, ರಾಗಿ, ಕಡಲೆ, ತೆಂಗು – ಇವು ತಾಲ್ಲೂಕಿನ ಮುಖ್ಯ ಬೆಳೆಗಳು. ಇತರ ಬೆಳೆಗಳು ಹತ್ತಿ, ಹುಣಿಸೆಹಣ್ಣು ಮತ್ತು ಮೆಣಸಿನಕಾಯಿ.

ತಾಲ್ಲೂಕಿನ ಕೇಂದ್ರ ಮತ್ತು ಏಕೈಕ ದೊಡ್ಡ ಊರು ಗುಬ್ಬಿ. ಬೆಂಗಳೂರು-ಪುಣೆ ರೈಲ್ವೆ ಮತ್ತು ಬೆಂಗಳೂರು-ಶಿವಮೊಗ್ಗ ಹಾದಿಯ ನಡುವೆ ಇದ್ದು ತುಮಕೂರಿನಿಂದ 20ಕಿಮೀ ದೂರದಲ್ಲಿದೆ. ಗುಬ್ಬಿಯಲ್ಲಿ ಪುರಸಭೆ ಇದೆ (ಸ್ಥಾಪನೆ 1909). ಜನಸಂಖ್ಯೆ 16,802. ಇದು ಸುತ್ತಣ ಪ್ರದೇಶಕ್ಕೆಲ್ಲ ಮುಖ್ಯವಾದ ವ್ಯಾಪಾರ ಕೇಂದ್ರ. ಬಟ್ಟೆ, ಕಂಬಳಿ, ಅಡಕೆ, ತೆಂಗಿನಕಾಯಿ, ಬೆಲ್ಲ, ಹುಣಿಸೆಹಣ್ಣು, ಬತ್ತ, ರಾಗಿ, ಅರಗು ಮುಂತಾದ ಪದಾರ್ಥಗಳ ವಹಿವಾಟು ನಡೆಯುತ್ತದೆ. ಇಲ್ಲೊಂದು ನಿಯಂತ್ರಿತ ಮಾರುಕಟ್ಟೆಯೂ ಇದೆ. ಈ ಊರಿಗೆ ವಿದ್ಯುತ್ ಸೌಕರ್ಯ 1934ರಲ್ಲಿ ಬಂತು.

ಈ ಊರಿಗೆ ಅಮರಗುಂಡ, ಚಟಕಪುರ ಎಂಬ ಹೆಸರುಗಳೂ ಇದ್ದುವು. ಗುಬ್ಬಿಯನ್ನು ಸು.500 ವರ್ಷಗಳ ಹಿಂದೆ ಮೈಸೂರಿನ ಸಾಮಂತನಾಗಿದ್ದ ಹೊಸಹಳ್ಳಿ ಗೌಡ ಸ್ಥಾಪಿಸಿದನಂತೆ. ಈ ಪ್ರದೇಶ ಅಮರಗುಂಡ ಮಲ್ಲಿಕಾರ್ಜುನನ ಪವಿತ್ರ ಸ್ಥಳ. ಗೋಸಲ ಚೆನ್ನಬಸವೇಶ್ವರ, ಮಲ್ಲಣಾರ್ಯ ಮುಂತಾದ ವೀರಶೈವ ಆಚಾರ್ಯರು ಇಲ್ಲಿದ್ದರು. ಮಲ್ಲಿಕಾರ್ಜುನನು ಪುರಾಣಗಳನ್ನು ಓದುತ್ತಿರುವಾಗ ಸದಾ ಆಲಿಸುತ್ತಿದ್ದ ಎರಡು ಗುಬ್ಬಚ್ಚಿಗಳು ಅವನು ಪುರಾಣವನ್ನು ಓದಿ ಮುಗಿಸಿದ ದಿವಸ ಪ್ರಾಣಬಿಟ್ಟವು. ಆದ್ದರಿಂದ ಈ ಪ್ರದೇಶಕ್ಕೆ ಗುಬ್ಬಿ ಎಂಬುದಾಗಿ ಹೆಸರು ಬಂದಿತು ಎಂಬ ಐತಿಹ್ಯವಿದೆ. ಮಲ್ಲಿಕಾರ್ಜುನ ದೇವಾಲಯದಲ್ಲಿ ಗುಬ್ಬಚ್ಚಿಗಳದೆನ್ನಲಾದ ಸಮಾಧಿಯೊಂದಿದೆ. ಶ್ರೀರಾಮ ಈ ಪ್ರದೇಶದಲ್ಲಿ ಕೆಲವು ಸಮಯವಿದ್ದನೆಂದೂ ನಂಬಿಕೆ.



ಚೆನ್ನಬಸವೇಶ್ವರ ದೇವಾಲಯ

ಗುಬ್ಬಿಯಲ್ಲಿ ಗದ್ದೆಮಲ್ಲೇಶ್ವರ ದೇವಾಲಯವಿದೆ. ಇದರಲ್ಲಿ ಮೂರು ಗರ್ಭಗೃಹಗಳಿದ್ದು ಮೊದಲನೆಯದರಲ್ಲಿ ದಕ್ಷಿಣಾಮೂರ್ತಿ, ಎರಡನೆಯದರಲ್ಲಿ ಪಾರ್ವತಿ ಮತ್ತು ಕೊನೆಯದರಲ್ಲಿ ವೀರಭದ್ರ ಮೂರ್ತಿಗಳಿವೆ. ವೈಲಪ್ಪ ಅಥವಾ ಓಹಿಲಪ್ಪ ದೇವಸ್ಥಾನದಲ್ಲಿ ಭಕ್ತ ಓಹಿಲನ ವಿಗ್ರಹವಿದೆ. ಚೆನ್ನಬಸವೇಶ್ವರ ದೇವಾಲಯ ದೊಡ್ಡದು. ಹೊಸಹಳ್ಳಿಯ ಪಾಳೆಯಗಾರ ಮುಮ್ಮಡಿ ಹೊನ್ನಪ್ಪಗೌಡನ ಕಾಲದಲ್ಲಿದ್ದ ಗುಬ್ಬಿಯಪ್ಪ ಅಥವಾ ಚನ್ನಬಸವಯ್ಯ ಎಂಬ ವೀರಶೈವ ಗುರುವಿನ ಗದ್ದುಗೆ ಇಲ್ಲಿದೆ. ಇಲ್ಲಿ ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ಜನಾರ್ದನ ಮತ್ತು ಬ್ಯಾಟರಾಯಸ್ವಾಮಿ ದೇವಾಲಯಗಳೂ ಗುಬ್ಬಿಯಲ್ಲಿವೆ. ಗುಬ್ಬಿ ರೈಲುನಿಲ್ದಾಣದ ಬಳಿ ಇರುವ ಚಿದಂಬರಾಶ್ರಮದಲ್ಲಿ ದತ್ತಾತ್ರೇಯ ಮಂದಿರ ಮತ್ತು ಗುರುಕುಲ ಇವೆ. 15 ಹಾಗೂ 16ನೆಯ ಶತಮಾನಗಳಲ್ಲಿ ಈ ಊರು ಸಾಹಿತ್ಯ ಚಟುವಟಿಕೆಯ ಕೇಂದ್ರವಾಗಿತ್ತು. ಇಲ್ಲಿ ಗುಬ್ಬಿಯ ಮಲ್ಲಣ್ಣ (ನೋಡಿ), ಗುಬ್ಬಿಯ ಮಲ್ಲಣಾರ್ಯ, (ನೋಡಿ) ಪ್ರಭುಗ, ಶಾಂತೇಶ ಮೊದಲಾದ ವೀರಶೈವ ಕವಿಗಳಿದ್ದರು. ನಾಟಕ ಪಿತಾಮಹ ಗುಬ್ಬಿವೀರಣ್ಣ (ನೋಡಿ) ಇದೇ ಊರಿನವರು. (ಎಚ್.ಪಿ.ಕೆ.)

**ಗುಬ್ಬಿಯ ಮಲ್ಲಣಾರ್ಯ :** ಸು.1513. ವೀರಶೈವ ಕವಿ. ಭಾವ ಚಿಂತಾರತ್ನ ಮತ್ತು ವೀರಶೈವಾಮೃತ ಮಹಾಪುರಾಣ ಎಂಬ ಷಟ್ಪದಿ ಕಾವ್ಯಗಳ ಕರ್ತೃ. ಗುಬ್ಬಿ ಈತನ ಜನ್ಮಸ್ಥಳ. ಈತನ ವಂಶಪರಂಪರೆ ಮತ್ತು ಗುರುಪರಂಪರೆ ಪ್ರಖ್ಯಾತವಾದುದು. ಈ ಪರಂಪರೆಯಲ್ಲಿ ಬಂದ ಪ್ರತಿಯೊಬ್ಬರೂ ಸಿದ್ಧಾಂತ ಕೋವಿದರೂ ಪ್ರಕಾಂಡ ಪಂಡಿತರೂ ವಿವಿಧ

ಭಾಷಾವಿಶಾರದರೂ ಆಗಿದ್ದುದು ಕಂಡುಬರುತ್ತದೆ. ವೀರಶೈವಾಮೃತ ಮಹಾ ಪುರಾಣದಲ್ಲಿ ಕವಿ ತನ್ನ ವಂಶಪರಂಪರೆಯನ್ನು ಹೀಗೆ ಹೇಳಿಕೊಂಡಿದ್ದಾನೆ. ಅಮರಗುಂಡದ ಮಲ್ಲಿಕಾರ್ಜುನನ ಶಿಷ್ಯ ಗುರುಭಕ್ತ. ಈ ಗುರುಭಕ್ತನ ಮಗ ದೇಶಿಕಪಟ್ಟವರ್ಧನ ಸೌಂದರ್ಯಮಲ್ಲಿಕಾರ್ಜುನ ಪಂಡಿತ. ಈತನ ಮಗ ನಾಗನಾಥಾರ್ಯ. ಈ ನಾಗನಾಥಾರ್ಯನ ಮಗ ಅಮರಗುಂಡಾರ್ಯ. ಈ ವಂಶದಲ್ಲಿ ಹುಟ್ಟಿದವನು ಗುಬ್ಬಿಯ ಮಲ್ಲಣ್ಣ ಗಣಭಾಷ್ಯರತ್ನಮಾಲೆಯ ಕರ್ತೃ. ಈತನ ಮಗ ಗುರುಭಕ್ತ, ಇವನ ಹೆಂಡತಿ ಸಪ್ಪೆಯಮ್ಮ ಇವರ ಮಗನೇ ಗುಬ್ಬಿಯ ಮಲ್ಲಣಾರ್ಯ.

ಸಿದ್ಧಮಲ್ಲೇಶ ಹಾಗೂ ಶಿವಗಂಗೆಯ ಶಾಂತನಂಜೇಶ್ವರ ಈತನಿಗೆ ಗುರುಗಳಾಗಿದ್ದಂತೆ ತಿಳಿದುಬರುತ್ತದೆ. ಕಾವ್ಯದಲ್ಲಿ ಸಪ್ಪೆಯ ಲಿಂಗಣಾಚಾರ್ಯರನ್ನೂ ಬಿಟ್ಟ ಮುಂಡೆಯಾ ಪ್ರಭುವನ್ನೂ ಸ್ತುತಿಸಿದ್ದಾನೆ. ಇವರಲ್ಲಿ ಸಪ್ಪೆಯ ಲಿಂಗಣಾಚಾರ್ಯ ತನಗೆ ವಿದ್ಯಾದಾನವನ್ನು ಮಾಡಿದಂತೆ ಹೇಳಿಕೊಂಡಿದ್ದಾನೆ. ಗುಮ್ಮಳಾಪುರದ ಶಾಂತೇಶ ಗುರುವರದನಡಿದಳೆದು ನಾನೊಱೆದ ಕೃತಿ ಎಂದಿರುವುದರಿಂದ ಈತನೂ ಕವಿಗೆ ಗುರುವಾಗಿದ್ದಂತೆ ತೋರುತ್ತದೆ. ಗುಬ್ಬಿಯ ಮಲ್ಲಣಾರ್ಯ ಸಂಸ್ಕೃತ ಕನ್ನಡ ಭಾಷೆಗಳೆರಡರಲ್ಲೂ ಪರಿಣತನಾಗಿದ್ದಂತೆಯೂ ಬಸವಪುರಾಣವನ್ನು ಅರ್ಥೈಸುವುದರಲ್ಲಿ ಪ್ರಖ್ಯಾತನಾಗಿದ್ದಂತೆಯೂ ತಿಳಿದುಬರುತ್ತದೆ. ಈತನಿಗೆ ಬಸವಪುರಾಣದ ಮಲ್ಲಣಾರ್ಯ ಎಂಬ ಹೆಸರಿದ್ದಂತೆಯೂ ತಿಳಿದುಬರುತ್ತದೆ. ಚೇರಮಾಂಕ, ಸಿದ್ಧನಂಜೇಶ, ಷಡಕ್ಷರದೇವ ಮೊದಲಾದ ಕವಿಗಳು ಈತನನ್ನು ಸ್ತುತಿಸಿದ್ದಾರೆ. ಗುಬ್ಬಿಯ ಮಲ್ಲಣಾರ್ಯ ಹಲವಾರು ಶಾಸ್ತ್ರಗಳಲ್ಲಿ ಪಾರಂಗತನಾಗಿದ್ದಂತೆ ಚೇರಮಾಂಕನ (ಸು.1526) ವೇದಾಂತ ಸಿದ್ಧಾಂತ ಲಕ್ಷಣ ವೈದ್ಯಭರತ ಸಾಮುದ್ರಿಕ ಜ್ಯೋತಿಷಾಲಂಕಾರ ಸರಸಗೀತಂ ವಾದ್ಯಶಕುನ ಸದ್ವ್ಯಾಕರಣ ಸೂಪ ರತಿಶಾಸ್ತ್ರದೊಳಗೆ ಪರಿಣತನು ಎಂಬ ಮಾತುಗಳಿಂದ ವ್ಯಕ್ತಪಡುತ್ತದೆ. ಕವಿ ತನ್ನ ಕಾವ್ಯದಲ್ಲಿ ಪಾಲ್ಕುರಿಕೆ ಸೋಮ, ಪದ್ಮರಸ, ಹರಿಹರ ಮೊದಲಾದ ಪೂರ್ವಕವಿಗಳನ್ನು ಸ್ತುತಿಸಿದ್ದಾನೆ. ಭಾವಚಿಂತಾರತ್ನವನ್ನು 1513ರಲ್ಲೂ ವೀರಶೈವಾಮೃತ ಮಹಾಪುರಾಣವನ್ನು 1530ರಲ್ಲೂ ಬರೆದು ಮುಗಿಸಿದಂತೆ ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ.

ಭಾವಚಿಂತಾರತ್ನ ವಾರ್ಧಕ ಷಟ್ಪದಿಯಲ್ಲಿದೆ. ಇದರಲ್ಲಿ 9 ಸಂಧಿಗಳೂ 371 ಪದ್ಯಗಳೂ ಇವೆ. ಈ ಕಾವ್ಯಕ್ಕೆ ಸತ್ಯೇಂದ್ರಚೋಳ ಕಥೆ ಎಂಬ ಹೆಸರೂ ಇದ್ದಂತೆ ತಿಳಿದುಬರುತ್ತದೆ. ಈ ಕಾವ್ಯದಲ್ಲಿ ಪಂಚಾಕ್ಷರಿಯ ಮಹಿಮೆಯನ್ನು ನಿರೂಪಿಸಲಾಗಿದೆ. ಇದನ್ನು ನಾಗವಲ್ಲಿಯ ಶಿವಪೂಜೆಯಾರ್ಯರ ಆಜ್ಞೆಯಂತೆ ರಚಿಸಿದುದಾಗಿ ಹೇಳಿಕೊಂಡಿದ್ದಾನೆ.

> ತರುಣಿ ಪೊರೆದಣುಗನಶ್ವದ ಖುರದ ಹತಿಯಿಂದೆ
> ಹರಭಕ್ತನಳಿಯಲದ ಕೇಳ್ದು ಕೊಲೆಯುಂದಮಂ
> ಪರಿಕಿಸಿ ನಿಜಾತ್ಮಜಂ ಮೊದಲಳ್ತಿಗೆಂದ ನುಡಿಗಾ ಮುದ್ದುಮಗನ ತಲೆಯ।
> ಅರಸುವೆಡೆಯೊಳು ಮತ್ತೆ ಭಕ್ತವಧೆಯೆಂದು ನಿಜ
> ಶಿರದೊಡನೆ ತಱಿದೆಂಟು ತಲೆಗಳಂ ಪಡೆದು ಶಂ
> ಕರನೂರ್ಗೆ ಪೋದ ಸತ್ಯೇಂದ್ರಚೋಳನ ಕತೆಯನಿದ ಬೆಳಸಿ ಕೃತಿಮಾಳ್ಪೆನು।

ಇದು ಕಥಾವಸ್ತು. ತಿರುಜ್ಞಾನಸಂಬಂಧರು ಕುಲಚ್ಚರೆಯಗೆ ಪಂಚಾಕ್ಷರೀ ಮಹಿಮೆಯನ್ನು ತಿಳಿಸುವುದಕ್ಕಾಗಿ ದ್ರಾವಿಡದಲ್ಲಿ ಹೇಳಿದ ಸತ್ಯೇಂದ್ರಚೋಳನ ಕಥೆಯನ್ನು ತಾನು ಕನ್ನಡದಲ್ಲಿ ಹೇಳಿರುವುದಾಗಿ ಕವಿ ತಿಳಿಸುತ್ತಾನೆ. ಭಾವಚಿಂತಾರತ್ನವನ್ನು ಆಧರಿಸಿ ಷಡಕ್ಷರಿದೇವ ರಾಜಶೇಖರವಿಳಾಸ ಎಂಬ ಕಾವ್ಯವನ್ನು ಬರೆದಿದ್ದಾನೆ.

ವೀರಶೈವಾಮೃತ ಮಹಾಪುರಾಣ ವಾರ್ಧಕ ಷಟ್ಪದಿಯಲ್ಲಿದೆ. ಇದರಲ್ಲಿ 8 ಕಾಂಡಗಳೂ 136 ಸಂಧಿಗಳೂ 7099 ಪದ್ಯಗಳೂ ಇವೆ. ಹಲಗೆಯಾರ್ಯರ ಆಜ್ಞೆಯಂತೆ ತಾನು ಈ ಕೃತಿಯನ್ನು ರಚಿಸಿದುದಾಗಿ ಕವಿ ಹೇಳಿಕೊಂಡಿದ್ದಾನೆ. ಈ ಕಾವ್ಯ ಒಂದು ವೀರಶೈವ ಸಿದ್ಧಾಂತ ಕೋಶದಂತಿದ್ದು ಇದರಲ್ಲಿ ಶಿವನ ಪಂಚವಿಂಶತಿ ಲೀಲೆಗಳೂ ಪುರಾತನ ನೂತನ ಶರಣರ ಕಥೆಗಳೂ ನಿರೂಪಿತವಾಗಿವೆ. ವೇದಾಗಮ ಪುರಾಣೇತಿಹಾಸ ಸ್ಮೃತಿಗಳಿಂದ ಹಲವಾರು ಸಂಸ್ಕೃತ ಶ್ಲೋಕಗಳನ್ನು ಉದ್ಧರಿಸಿ ಅನುವಾದಿಸಿ ಕೊಡಲಾಗಿದೆ. ಈತನ ತರುವಾಯ ಬಂದ ಸಿದ್ಧನಂಜೇಶ ತಾನು ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣದಿಂದ ನೂತನ ಪುರಾತನರ ಕಥೆಗಳನ್ನು ಸಂಗ್ರಹಿಸಿ ಅವುಗಳನ್ನು ತನ್ನ ಗುರುರಾಜಚಾರಿತ್ರದಲ್ಲಿ ನಿರೂಪಿಸಿದಂತೆ ಹೇಳಿಕೊಂಡಿದ್ದಾನೆ. (ಎನ್.ಬಿ.)

**ಗುಬ್ಬಿಯ ಮಲ್ಲಣ್ಣ:** ಸು.1475. ವೀರಶೈವ ಕವಿ. ವಚನ ವಾಙ್ಮಯವನ್ನು ಪುನರುಜ್ಜೀವನ ಮಾಡಿದವರಲ್ಲಿ ಗಣ್ಯನಾದವ. ಗಣಭಾಷ್ಯ ರತ್ನಮಾಲೆ, ವಾತುಲತಂತ್ರಟೀಕೆ ಎಂಬ ಗ್ರಂಥಗಳ ಕರ್ತೃ. ರಾಮಸ್ತವರಾಜ ಎಂಬ ಒಂದು ತೆಲುಗು ಗ್ರಂಥವನ್ನೂ ಈತ ಬರೆದಿರಬಹುದೆಂದು ಊಹಿಸಲಾಗಿದೆ. ಇವನಿಗೆ ಮಲ್ಲಣಾಚಾರ್ಯ, ಮಲ್ಲಣಾರ್ಯ ಎಂಬ ಹೆಸರುಗಳಿದ್ದಂತೆ ತಿಳಿದುಬರುತ್ತವೆ. ಗುಬ್ಬಿ ಈತನ ಜನ್ಮಸ್ಥಳ. ತಂದೆ ಅಮರಗುಂಡದ ಅಮರಗುಂಡಾರ್ಯ, ಗುರು ಚೆನ್ನಬಸವರಾಜೇಂದ್ರ. ಭಾವ ಚಿಂತಾರತ್ನದ ಕರ್ತೃ ಗುಬ್ಬಿಯ ಮಲ್ಲಣಾರ್ಯ ಈತನ ಮೊಮ್ಮಗ.

ಕವಿಯ ಪೂರ್ವಜರು ವೀರಶೈವ ಧರ್ಮಕ್ಕೂ ಕನ್ನಡ ಸಾಹಿತ್ಯಕ್ಕೂ ಸಾಕಷ್ಟು ಸೇವೆ ಸಲ್ಲಿಸಿದ್ದಾರೆ. ಮಲ್ಲಣ್ಣನನ್ನು ಶಾಂತಲಿಂಗದೇಶಿಕ, ಗೂಳೂರು ಸಿದ್ಧವೀರಣಾಚಾರ್ಯ, ಬೋಳಬಸವೇಶ, ಹಲಗೆಯಾಚಾರ್ಯ ಮೊದಲಾದವರು ಸ್ತುತಿಸಿದ್ದಾರೆ. ಈತನ ಮರಿಮಗನಾದ ಶಾಂತೇಶನ ಸಿದ್ದೇಶ್ವರಪುರಾಣದಿಂದ ಗುಬ್ಬಿಯ ಮಲ್ಲಣ್ಣ ತೋಂಟದ ಸಿದ್ಧಲಿಂಗಯತಿಯ (ಸು.1470) ಶಿಷ್ಯನಾಗಿದ್ದಂತೆ ತಿಳಿದುಬರುತ್ತದೆ. ಮಲ್ಲಣ್ಣ ಹಾಗೂ ಈತನ ಗುರು ಚೆನ್ನಬಸವರಾಜೇಂದ್ರನನ್ನು 101 ಸ್ಥಲಗಳಾಗಿ ವಿಂಗಡಿಸಿ ಒಂದೊಂದು ಸ್ಥಲದ ಪರಿಚಯವನ್ನೂ ಮೊದಲು ಮಾಡಿಕೊಟ್ಟು ಅನಂತರ ಅವುಗಳಿಗೆ ವೇದ ಪುರಾಣ ಇತಿಹಾಸಗಳಿಂದ ಪ್ರಮಾಣಗಳನ್ನೂ ಪುರಾತನರ ಕನ್ನಡ ವಚನಗಳನ್ನೂ ಉದಾಹರಿಸಿ ವಿವರಿಸಿದ್ದಾನೆ. ಇದರಲ್ಲಿ ಅಂಗಸ್ಥಲ 44, ಲಿಂಗಸ್ಥಲ 45, ನಿರಂಗಲಿಂಗ ಸ್ಥಲ 12 ಎಂಬ ಮೂರು ವಿಭಾಗಗಳಿವೆ. ಅಂಗಸ್ಥಲದಲ್ಲಿ 234 ಶ್ಲೋಕಗಳೂ 225 ವಚನಗಳೂ ಲಿಂಗಸ್ಥಲದಲ್ಲಿ 195 ಶ್ಲೋಕಗಳೂ 193 ವಚನಗಳೂ ನಿರಂಗಲಿಂಗಸ್ಥಲದಲ್ಲಿ 51 ಶ್ಲೋಕಗಳೂ 67 ವಚನಗಳೂ ಇವೆ. ಇವೆಲ್ಲ 38 ಜನ ಶಿವಶರಣರ ವಚನಗಳಿಂದಲೂ 53 ಸಂಸ್ಕೃತ ಗ್ರಂಥಗಳಿಂದಲೂ ಉದಾಹೃತವಾಗಿವೆ. ಈ ಕ್ರಮ ಮೊಟ್ಟ ಮೊದಲಿಗೆ ಮಲ್ಲಣ್ಣನಲ್ಲಿ ಕಂಡುಬಂದಿದ್ದು, ಇದು ಕವಿಯ ಸ್ವೋಪಜ್ಞತೆಗೆ ಸಾಕ್ಷಿಯಾಗಿದೆ. ಗಣಭಾಷ್ಯರತ್ನ ಮಾಲೆಯನ್ನು ಕುರಿತು ಇದು ಪರಮ ವೀರಶೈವ ಸಿದ್ಧಾಂತ ತತ್ತ್ವಜ್ಞಾನ, ಇದು ವೀರಶೈವ ಪ್ರತಿಷ್ಠಾಪನಾಚಾರ್ಯ, ಇದು ದಿವ್ಯವೇದಾಂತ ಶಿರೋಮಣಿ, ಇದು ಸಮಸ್ತ ಶಾಸ್ತ್ರ ಮುಖ್ಯ ಮುಖದರ್ಪಣ, ಇದು ಮಹಾಜ್ಞಾನಪ್ರವರ್ಧನ, ಪರಮಾನುಭವಸಂಬೋಧ, ಇದು ಸರ್ವಾಚಾರ ಸಂಪನ್ನರ ಸಮಾರೂಢ ಸಂಗ್ರಹ, ಇದು ಪರಮ ರಾಜಯೋಗ ಸಾಧ್ಯ ಸನ್ನಿಧಾನ, ಇದು ರಸಾಮೃತ ಪ್ರಸನ್ನ ಪ್ರಸಾದ, ಇದು ಅಜ್ಞಾನತಿಮಿರಾಂಜನವಪ್ಪ ಮಹಾಪ್ರಸಂಗ ಎಂದು ವಿಶ್ಲೇಷಿಸಿ ಹೇಳಿಕೊಂಡಿದ್ದಾನೆ. ಸರಳತೆ ಈತನ ಶೈಲಿಯ ಲಕ್ಷಣವಾಗಿದೆ.

> ಅರ್ಥಾನಾಮರ್ಜನೇ ದುಃಖ ವರ್ಧಿತಾನಾಂ ಚ ರಕ್ಷಣೇ।
> ನಾಶೇ ದುಃಖಂ ವ್ಯಯೇ ದುಃಖಮರ್ಥಾತ್ಪುಂಸಃ ಕುತಃ ಸುಖಮ್॥
> (ಸ್ಥಲ 10-2)

> ಧನವ ಗಳಿಸುವಲ್ಲಿ ದುಃಖವು, ಅದನ್ನು ರಕ್ಷಿಸುವಲ್ಲಿ ದುಃಖವು
> ನಾಶವಾಗಿ ಹೋದರೂ ದುಃಖವು, ವೆಚ್ಚಮಾಡಿದಲ್ಲಿಯೂ
> ದುಃಖವು. ಈ ಪ್ರಕಾರವಾದ ಅರ್ಥದಿಂದ ಮನುಷ್ಯನಿಗೆ
> ಸುಖವೆಲ್ಲಿಯದು?

ವಾತುಲತಂತ್ರಟೀಕೆ ಎಂಬುದು ವಾತುಲತಂತ್ರ ಎಂಬ ಸಂಸ್ಕೃತ ಶೈವಾಗಮ ಗ್ರಂಥಕ್ಕೆ ಬರೆದ ಕನ್ನಡ ಟೀಕೆ. ಈ ಕೃತಿಯಲ್ಲಿ ತತ್ತ್ವಭೇದ, ವರ್ಣಭೇದ, ಚಕ್ರಭೇದ, ವರ್ಗಭೇದ, ಮಂತ್ರಭೇದ, ಪ್ರಣವಭೇದ, ಅಂಗಭೇದ, ಬ್ರಹ್ಮಭೇದ, ಮಂತ್ರಾಜಾತ, ಮಂತ್ರಕೀಲಕ ಎಂಬ ದಶಪಟಲಗಳಿವೆ. ಈ ಗ್ರಂಥಗಳಿಂದ ಕವಿಗೆ ಕನ್ನಡ ಹಾಗೂ ಸಂಸ್ಕೃತ ಭಾಷೆಗಳ ಮೇಲೆ ಹಿಡಿತವಿತ್ತೆಂಬುದು ವಿದಿತವಾಗುತ್ತದೆ. ಶ್ರೇಷ್ಠ ಸಂಕಲನಕಾರನಾಗಿ, ಉತ್ತಮ ಟೀಕಾಕಾರನಾಗಿ, ವಚನ ವಾಙ್ಮಯಕ್ಕೆ ಮಲ್ಲಣ್ಣನಿಂದ ಸಂದ ವಿಶಿಷ್ಟ ಸೇವೆ ಗಣನೀಯವಾದದ್ದು. (ವೈ.ಸಿ.ಬಿ)

**ಗುಬ್ಬಿ ವೀರಣ್ಣ :** ಸು.1890-1972. ಕನ್ನಡ ರಂಗಭೂಮಿಗೆ ತಮ್ಮ ಪ್ರಯೋಗಶೀಲತೆಯಿಂದ ವೈವಿಧ್ಯವನ್ನೂ ವಿಸ್ತಾರವನ್ನೂ ತಂದುಕೊಟ್ಟ ಪ್ರಸಿದ್ಧ ನಟರು, ನಿರ್ದೇಶಕರು. ತಮ್ಮ ಐದನೆಯ ವಯಸ್ಸಿನಲ್ಲಿ ಐದು ರೂಪಾಯಿಗಳ ಸಂಬಳಕ್ಕೆ ಗುಬ್ಬಿ ಶ್ರೀ ಚೆನ್ನಬಸವೇಶ್ವರ ಕೃಪಾಪೋಷಿತ ನಾಟಕ ಸಂಘದಲ್ಲಿ ಕೆಲಸಕ್ಕೆ ಸೇರಿ, ಕ್ರಮೇಣ ಅದರ ಮಾಲೀಕರಾಗಿ, ತಮ್ಮ ಪ್ರತಿಭಾವಿಲಾಸದಿಂದ ಆ ಸಂಸ್ಥೆಯನ್ನು ಕನ್ನಡ ರಂಗಭೂಮಿಯ ಪ್ರಾತಿನಿಧಿಕ ಸಂಸ್ಥೆಯನ್ನಾಗಿ ಬೆಳೆಸಿದ ವೀರಣ್ಣನವರು ಐದು ದಶಕಗಳಿಗೂ ಹೆಚ್ಚು ಕಾಲ ನಿಷ್ಠೆಯಿಂದ ರಂಗಭೂಮಿಯ ಸೇವೆ ಮಾಡಿದವರು.

ತುಮಕೂರು ಜಿಲ್ಲೆ ಗುಬ್ಬಿಯಲ್ಲಿ ವೀರಣ್ಣನವರ ಜನನ. ತಂದೆ ಗುಬ್ಬಿ ಹಂಪಣ್ಣ, ತಾಯಿ ರುದ್ರಾಂಬೆ. ವೀರಣ್ಣನವರಿಗೆ ಇಬ್ಬರು ಅಕ್ಕಂದಿರು. ವೀರಣ್ಣನವರ ತಾಯಿಯವರ ಆರೋಗ್ಯ ಸರಿಯಾಗಿರದಿದ್ದುದರಿಂದ ತಂದೆ ಎರಡನೆಯ ಮದುವೆಯಾದರು. ಇದರ ಪರಿಣಾಮವಾಗಿ ಹಂಪಣ್ಣನವರು ಮೊದಲ ಹೆಂಡತಿ ಮತ್ತು ಮಕ್ಕಳನ್ನು ಅಲಕ್ಷಿಸಿದರು. ವೀರಣ್ಣ ನವರ ತಾಯಿ ಕೂಲಿನಾಲಿ ಮಾಡಿ ಮಕ್ಕಳನ್ನು ಸಾಕಬೇಕಾದ ಸ್ಥಿತಿ ಬಂತು. ಆಗ ವೀರಣ್ಣನವರ ಚಿಕ್ಕಪ್ಪನವರಾದ ವೀರಣ್ಣ ಎನ್ನುವ ವರು ಇವರನ್ನು ಕರೆದುಕೊಂಡು ಹೋಗಿ ಗುಬ್ಬಿ ನಾಟಕ ಕಂಪನಿಗೆ ಸೇರಿಸಿದರು. ಅದರ ಮಾಲೀಕರಾಗಿದ್ದ ಚಂದಣ್ಣನವರು ಹುಡುಗನಿಗೆ ಚಿಕ್ಕ ಪಾತ್ರಗಳನ್ನು ಕೊಡಲು ಪ್ರಾರಂಭಿಸಿದರು. ಧರ್ಮಪಾಲ ಚರಿತ್ರೆಯಲ್ಲಿ ಸಿರಿಯಾಳ ಕುಮಾರ, ಹರಿಶ್ಚಂದ್ರ ನಾಟಕದಲ್ಲಿ ಲೋಹಿತಾಶ್ವ, ಪಾಂಡವವಿಜಯ ನಾಟಕದಲ್ಲಿ ಮಾಯಾ ಇಂತಹ ಪಾತ್ರಗಳು ಇವರಿಗೆ ಸಿಕ್ಕಿದವು.



ಗುಬ್ಬಿ ಕಂಪನಿ ನಾಟಕ ಸಂಸ್ಥೆಯನ್ನು ಕಟ್ಟಿದವರು ಗುಬ್ಬಿ ಗ್ರಾಮದ ಕೆಲವು ರಸಿಕರು. ಚಂದಣ್ಣ ಎನ್ನುವವರು ಇದರ ಮುಂದಾಳು. ಇವರು ಪ್ರದರ್ಶಿಸಿದ ಪ್ರಥಮ ನಾಟಕ ಕುಮಾರರಾಮ ಎಂಬ ಯಕ್ಷಗಾನ. ಈ ನಾಟಕ ನಡೆಯುತ್ತಿದ್ದ ದಿನ ಆ ದಾರಿಯಲ್ಲಿ ಹಾದು ಹೋಗುತ್ತಿದ್ದ ಚಾಮರಾಜೇಂದ್ರ ಒಡೆಯರ್ ಅವರು ನಾಟಕವನ್ನು ನೋಡಿ ಪ್ರೋತ್ಸಾಹದ ಮಾತುಗಳನ್ನಾಡಿದರು. ಇದರಿಂದ ಪ್ರೋತ್ಸಾಹಗೊಂಡ ಕಂಪನಿಯವರು ಅನಂತರ ಚೋರಕಥೆ, ಜಗನ್ಮೋಹನ ಚರಿತ್ರೆ, ಗುಲೇಬಕಾವಲಿ, ಪಾಂಡವವಿಜಯ, ಸತ್ಯ ಹರಿಶ್ಚಂದ್ರ, ಇಂದ್ರಸಭಾ, ಧರ್ಮಪಾಲಚರಿತ್ರೆ, ಸತ್ಯವರ್ಮಚರಿತ್ರೆ ಇತ್ಯಾದಿ ನಾಟಕಗಳನ್ನು ಪ್ರದರ್ಶಿಸಿ ಹೆಸರು ಗಳಿಸಿದರು. ದಾವಣಗೆರೆಯಲ್ಲಿ ಈ ನಾಟಕ ಕಂಪನಿ ಮೊಕ್ಕಾಂ ಮಾಡಿದ್ದಾಗ ಮಾಲೀಕ ಚಂದಣ್ಣನವರು ತೀರಿಕೊಂಡರು. ಮೂವತ್ತು ವರ್ಷಗಳಿಂದ ನಡೆದು ಬಂದಿರುವ ಸಂಸ್ಥೆ ನಿಂತುಹೋಗಬಾರದೆಂದು ನಿರ್ಧರಿಸಿದ ಊರಿನ ಜನ ಕಂಪನಿಯ ಒಡೆತನವನ್ನು ಇವರಿಗೆ ಮತ್ತು ಚಂದಣ್ಣನವರ ಅಣ್ಣನ ಮಗ ನಾಗರಾಜಯ್ಯನವರಿಗೆ ವಹಿಸಿದರು. ಇವರಿಬ್ಬರೂ 1917 ಜುಲೈ 13ರಂದು ಕಂಪನಿಯ ಮಾಲೀಕರಾದರು. ಆದರೆ ಕೆಲವು ದಿನಗಳ ಅನಂತರ ನಾಗರಾಜಯ್ಯನವರ ಸಹಕಾರ ದೊರೆಯದಿದ್ದುದರಿಂದ ಇವರು ಅವರ ಪಾಲಿನ ಹಣವನ್ನು ಕೊಟ್ಟು ಸಂಪೂರ್ಣವಾಗಿ ತಾವೇ ಮಾಲೀಕರಾದರು.

ಗುಬ್ಬಿ ಕಂಪನಿಯ ನಿಜವಾದ ಇತಿಹಾಸ ಪ್ರಾರಂಭವಾದದ್ದು ವೀರಣ್ಣನವರು ಈ ಸಂಸ್ಥೆಯ ಮಾಲೀಕರಾದ ಮೇಲೆಯೇ. ಯಜಮಾನರಾದ ಕೂಡಲೇ ಇವರು ಗಮನ ಹರಿಸಿದ್ದು ಉತ್ತಮ ನಾಟಕಗಳ ಕಡೆಗೆ. ಅದಕ್ಕಾಗಿ ಬೆಳ್ಳಾವೆ ನರಹರಿಶಾಸ್ತ್ರೀಯವರಿಂದ ಕೃಷ್ಣಲೀಲಾ, ಶ್ರೀಕೃಷ್ಣ ಪಾರಿಜಾತ, ಜಲಂಧರ, ಕೃಷ್ಣಗಾರುಡಿ ಮೊದಲಾದ ನಾಟಕಗಳನ್ನು ಬರೆಸಿ ಪ್ರದರ್ಶಿಸಿದರು. ರಂಗಸಜ್ಜಿಕೆಯಲ್ಲೂ ಅನೇಕ ಸುಧಾರಣೆಗಳನ್ನು ತಂದು ಅದನ್ನು ಶ್ರೀಮಂತಗೊಳಿಸಿದರು. ಹೀಗಾಗಿ ಆ ದಿನಗಳಲ್ಲಿ ಪ್ರತಿ ಪ್ರದರ್ಶನಕ್ಕೆ ಸಾವಿರ ರೂಪಾಯಿ ವರಮಾನ ಬರುವಂತಾಯಿತು. ಸಂಸ್ಥೆಯ ಸುವರ್ಣ ಮಹೋತ್ಸವವನ್ನು 1934ರಲ್ಲಿ ಅದ್ದೂರಿಯಿಂದ ಆಚರಿಸಿದ ವೀರಣ್ಣನವರು ಈ ಸಂದರ್ಭಕ್ಕಾಗಿಯೇ ಬಿ.ಪುಟ್ಟಸ್ವಾಮಯ್ಯನವರಿಂದ ಕುರುಕ್ಷೇತ್ರ ನಾಟಕವನ್ನು ಬರೆಸಿ ಪ್ರದರ್ಶಿಸಿದರು. ರಂಗಸಜ್ಜಿಕೆ, ವೇಷಭೂಷಣಗಳಿಗಾಗಿ ಎಪ್ಪತ್ತು ಸಾವಿರ ರೂಪಾಯಿಗಳನ್ನು ವೆಚ್ಚ ಮಾಡಿದರು. ಪ್ರಯೋಗದಲ್ಲಿ ಜೀವಂತಿಕೆಯನ್ನು ತರುವುದಕ್ಕಾಗಿ ನಿಜವಾದ ಆನೆ, ಕುದುರೆಗಳನ್ನೇ ರಂಗದ ಮೇಲೆ ತರಲು ಪ್ರಾರಂಭಿಸಿದರು. ಕುರುಕ್ಷೇತ್ರ ನಾಟಕವನ್ನು ದಿನಕ್ಕೆ ಮೂರು ಬಾರಿ ಪ್ರದರ್ಶಿಸಿ ಪ್ರತಿ ಪ್ರದರ್ಶನದಲ್ಲೂ ಹೊಸತನವನ್ನು ತಂದರು. ಅದುವರೆಗೆ ನಾಟಕ ಕಂಪನಿಗಳು ವಾರಕ್ಕೆ ಮೂರು ಅಥವಾ ನಾಲ್ಕು ದಿನ ನಾಟಕಗಳನ್ನಾಡುತ್ತಿದ್ದರೆ ಹೆಚ್ಚು. ಗುಬ್ಬಿ ಕಂಪನಿ ಪ್ರದರ್ಶಿಸಿದ ಇನ್ನೊಂದು ಪ್ರಸಿದ್ಧ ನಾಟಕ ಬಿ.ಪುಟ್ಟಸ್ವಾಮಯ್ಯನವರಿಂದ ರಚಿತವಾದ ದಶಾವತಾರ. ಬೆಂಗಳೂರು ನಗರದಲ್ಲಿಯೇ ಈ ನಾಟಕ ನೂರಾ ಇಪ್ಪತ್ತೆಂಟು ಪ್ರದರ್ಶನಗಳನ್ನು ಕಂಡಿತು.

ನಾಟಕಕಾರರ ಮಾರ್ಗದರ್ಶನದಲ್ಲಿಯೇ ನಾಟಕದ ರಿಹರ್ಸಲ್ ನಡೆಯುವಂತೆ ವೀರಣ್ಣನವರು ವ್ಯವಸ್ಥೆ ಮಾಡಿದ್ದು, ಪ್ರಯೋಗದ ದೃಷ್ಟಿಯಿಂದ ಗಮನಾರ್ಹ. ವೃತ್ತಿರಂಗಭೂಮಿಯಲ್ಲಿ ಈ ಬಗೆಯ ಪ್ರಯೋಗ ಅದೇ ಮೊದಲು. ಪ್ರತಿಭಾವಂತ ನಾಟಕಕಾರರನ್ನು ಪತ್ತೆಮಾಡಿ ಅವರು ಪ್ರಯೋಗದಲ್ಲಿ ಪಾಲ್ಗೊಳ್ಳುವಂತೆ ಮಾಡಿದ್ದಲ್ಲದೆ, ಪ್ರತಿಭಾವಂತ ನಟರನ್ನು ಗುರುತಿಸಿ ತಮ್ಮ ಸಂಸ್ಥೆಗೆ ಸೇರಿಸಿಕೊಂಡು ಪ್ರೋತ್ಸಾಹಿಸಿದರು. ಇವರಿಂದ ಅನೇಕ ನಟರು ಬೆಳಕಿಗೆ ಬಂದರು. ಸಿ.ಬಿ.ಮಲ್ಲಪ್ಪ, ನಟಭಯಂಕರ ಗಂಗಾಧರರಾಯ, ಜಿ.ನಾಗೇಶರಾಯ, ಆರ್.ನಾಗೇಂದ್ರರಾಯ, ಗುರುಮೂರ್ತಪ್ಪ, ಹೊನ್ನಪ್ಪ ಭಾಗವತರ್, ರಾಘವೇಂದ್ರರಾವ್, ವಾಸುದೇವ ಗಿರಿಮಾಜಿ, ರಾಮಚಂದ್ರಶಾಸ್ತ್ರಿ, ಬಿ.ಆರ್. ಪಂತುಲು, ಸುಬ್ಬಯ್ಯ ನಾಯ್ಡು, ಜಿ.ವಿ.ಅಯ್ಯರ್, ರಾಜಕುಮಾರ್, ಟಿ.ಎನ್.ಬಾಲಕೃಷ್ಣ, ನರಸಿಂಹರಾಜು, ಸುಂದರಮ್ಮ, ಅಶ್ವತ್ಥಮ್ಮ, ಬಿ.ಜಯಮ್ಮ, ಬಿ.ವಿ.ಕಾರಂತ ಮೊದಲಾದ ಹೆಸರಾಂತ ಕಲಾವಿದರು ಒಂದಲ್ಲ ಒಂದು ಕಾಲದಲ್ಲಿ ಗುಬ್ಬಿ ಕಂಪನಿಯಲ್ಲಿದ್ದವರೇ.

ಗುಬ್ಬಿ ನಾಟಕ ಸಂಸ್ಥೆ ಪ್ರದರ್ಶಿಸಿದ ಗುಲೇಬಕಾವಲಿ, ಸದಾರಮೆ, ಕುರುಕ್ಷೇತ್ರ, ಅಕ್ಕಮಹಾದೇವಿ, ಸಂಪೂರ್ಣರಾಮಾಯಣ, ಕೃಷ್ಣಾಲೀಲಾ, ರಾಜಾ ಗೋಪಿಚಂದ, ದಶಾವತಾರ, ಅಣ್ಣ ತಮ್ಮ, ಲವಕುಶ ಮೊದಲಾದ ನಾಟಕಗಳು ಕರ್ನಾಟಕದಲ್ಲಿ ಮಾತ್ರವಲ್ಲದೆ ಆಂಧ್ರ ತಮಿಳುನಾಡುಗಳಲ್ಲಿಯೂ ಅಪಾರ ಯಶಸ್ಸನ್ನು ಗಳಿಸಿದವು. ಇವರು ಕಂಪನಿಯ ಸಮಸ್ತ ವ್ಯವಹಾರಗಳನ್ನು ನೋಡಿಕೊಳ್ಳುವುದರ ಜೊತೆಗೆ ಅನೇಕ ನಾಟಕಗಳಲ್ಲಿ ಪ್ರಮುಖ ಪಾತ್ರಗಳನ್ನು ವಹಿಸುತ್ತಿದ್ದರು. ಇವರ ಹಾಸ್ಯ ಪಾತ್ರಗಳನ್ನು ನೋಡಿ ಜನ ಹುಚ್ಚೆದ್ದು ಕುಣಿಯುತ್ತಿದ್ದರು. ಸದಾರಮೆಯಲ್ಲಿ ಕಳ್ಳ, ಆದಿಮೂರ್ತಿ; ಪ್ರಭಾಮಣಿವಿಜಯದಲ್ಲಿ ವಿಲೋಚನ; ಗುಲೇಬಕಾವಲಿಯಲ್ಲಿ ಮುತ್ತುಸ್ವಾಮಿ ಮತ್ತು ಕುರುಡು ದೊಂಬಿದಾಸ; ಪ್ರಹ್ಲಾದ ಚರಿತ್ರೆಯಲ್ಲಿ ಸಾಬಿ ಈ ಪಾತ್ರಗಳು ಇವರಿಗೆ ಅಪಾರ ಜನಪ್ರಿಯತೆಯನ್ನು ತಂದುಕೊಟ್ಟವು.

ಮಕ್ಕಳಿಗಾಗಿ ಮಕ್ಕಳಿಂದಲೇ ನಾಟಕಗಳನ್ನು ಆಡಿಸುವ ಉದ್ದೇಶದಿಂದ ಇವರು ಬಾಲಕಲಾವಿವರ್ಧಿನಿ ಎನ್ನುವ ಸಂಸ್ಥೆಯನ್ನು ಕಟ್ಟಿ, ಎಂಟರಿಂದ ಹದಿನಾಲ್ಕು ವರ್ಷದೊಳಗಿನ ಮಕ್ಕಳನ್ನು ಕಲೆಹಾಕಿ ಸಾವಿತ್ರಿ, ಕಬೀರಲೀಲೆ ಮುಂತಾದ ನಾಟಕಗಳನ್ನಾಡಿಸಿದರು. ಇದೇ ಸಮಯದಲ್ಲಿ ಚಿಕ್ಕೋಡಿಯ ಶಿವಲಿಂಗಸ್ವಾಮಿ ಎನ್ನುವವರು ಒಂದು ನಾಟಕ ಸಂಸ್ಥೆಯನ್ನು ಕಟ್ಟಿ, ವಿಪರೀತ ನಷ್ಟಕ್ಕೊಳಗಾಗಿ ವೀರಣ್ಣನವರ ಬಳಿಗೆ ಬಂದರು. ಆ ನಾಟಕ ಸಂಸ್ಥೆಯನ್ನು ವೀರಣ್ಣನವರೇ ವಹಿಸಿಕೊಂಡು ಅದನ್ನು ಒಂದು ವ್ಯವಸ್ಥೆಗೆ ತಂದು ಅಭಿವೃದ್ಧಿಪಡಿಸಿ ಅನಂತರ ಶಿವಲಿಂಗ ಸ್ವಾಮಿಯವರಿಗೆ ವಹಿಸಿಕೊಟ್ಟರು.

ವೀರಣ್ಣನವರು ಚಿತ್ರರಂಗದಲ್ಲಿಯೂ ಗಮನಾರ್ಹ ಕೆಲಸ ಮಾಡಿದ್ದಾರೆ. 1930ರಲ್ಲಿಯೇ ಇವರು ತಮ್ಮ ಕಂಪನಿಗಾಗಿ ಜಾಹೀರಾತು ಮಾಡಲು ಚಿತ್ರ ಮಾಧ್ಯಮವನ್ನು ಉಪಯೋಗಿಸಿಕೊಂಡರು, ಅದು ಮೂಕಿ

ಚಿತ್ರಗಳ ಕಾಲ. 1931ರಲ್ಲಿ ದೇವುಡು ಮತ್ತಿತರೊಡನೆ ಸೇರಿ ಹಿಸ್ ಲವ್ ಅಫೇರ್ (ನಿರ್ದೇಶಕರು: ಬೆಲ್ಜಿಯಂನ ಆಲ್‌ಗುಡ್) ಮತ್ತು ಕಳ್ಳರ ಕೂಟ ಎನ್ನುವ ಚಿತ್ರಗಳನ್ನು ತಯಾರಿಸಿದ್ದರು. ಟಾಕಿ ಯುಗ ಪ್ರಾರಂಭವಾದ ಮೇಲೆ 1942ರಲ್ಲಿ ವೀರಣ್ಣನವರು ಕೆಲವು ಮಿತ್ರರೊಡನೆ ಸೇರಿ ಕರ್ನಾಟಕ ಫಿಲ್ಮ್ಸ್ ಸಂಸ್ಥೆಯನ್ನು ಪ್ರಾರಂಭಿಸಿ, ಹೇಮರೆಡ್ಡಿ ಮಲ್ಲಮ್ಮ, ಗುಣಸಾಗರಿ, ಸದಾರಮೆ, ಬೇಡರ ಕಣ್ಣಪ್ಪ ಮೊದಲಾದ ಉತ್ತಮ ಚಿತ್ರಗಳನ್ನು ತಯಾರಿಸಿದರು. ಇವರ ಚಿತ್ರಗಳ ಮೂಲಕ ಅನೇಕ ನಿರ್ದೇಶಕರು, ಕಲಾವಿದರು ಬೆಳಕಿಗೆ ಬಂದರು.

ರಂಗಭೂಮಿ ಮತ್ತು ಚಿತ್ರರಂಗ ಕ್ಷೇತ್ರಗಳಲ್ಲಿ ತಮ್ಮ ಅಸಾಧಾರಣ ಪ್ರತಿಭೆಯನ್ನು ಮೆರೆದ ಇವರಿಗೆ ಬಗೆಬಗೆಯ ಗೌರವಪ್ರಶಸ್ತಿಗಳು ಲಭಿಸಿದವು. ನಾಲ್ವಡಿ ಕೃಷ್ಣರಾಜ ಒಡೆಯರ್ ಅವರಿಂದ ವರ್ಸೆಟೈಲ್ ಕಾಮೆಡಿಯನ್ ಎಂದು ಕರೆಸಿಕೊಂಡರು. ಜಯಚಾಮರಾಜ ಒಡೆಯರ್ ಅವರು 1942ರಲ್ಲಿ ನಾಟಕರತ್ನ ಎಂಬ ಬಿರುದಿತ್ತು ಗೌರವಿಸಿದರು. ಬೆಂಗಳೂರಿನ ಜನತೆ ಇವರನ್ನು ವಿನೋದರತ್ನಾಕರ ಎಂದು ಕರೆದು ಸನ್ಮಾನಿಸಿತು. ಕೇಂದ್ರ ಸರ್ಕಾರದಿಂದ ಪದ್ಮಶ್ರೀ ಪ್ರಶಸ್ತಿ ಪಡೆದಿದ್ದ ಇವರನ್ನು ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಿ.ಲಿಟ್.ಪದವಿ ನೀಡಿ ಗೌರವಿಸಿತು (1970).

ವೀರಣ್ಣನವರು ತಮ್ಮ ಎಂಬತ್ತೆರಡನೆಯ ವಯಸ್ಸಿನಲ್ಲಿ ಬೆಂಗಳೂರಿನಲ್ಲಿ 1972 ಅಕ್ಟೋಬರ್ 18ರಂದು ನಿಧನಹೊಂದಿದರು. ಇವರ ನೆನಪಿಗಾಗಿ ಕರ್ನಾಟಕ ಸರ್ಕಾರ ಗುಬ್ಬಿವೀರಣ್ಣ ಪ್ರಶಸ್ತಿಯನ್ನು ಸ್ಥಾಪಿಸಿದೆ (1994). ಕನ್ನಡ ರಂಗಭೂಮಿಗೆ ಅಪೂರ್ವ ಸೇವೆ ಸಲ್ಲಿಸಿದವರಿಗೆ ಈ ಪ್ರಶಸ್ತಿಯನ್ನು ನೀಡಲಾಗುತ್ತಿದೆ. (ಬಿ.ವಿ.ವಿಎ.)

**ಗುಮಟೆಪದ :** ಉತ್ತರ ಕನ್ನಡ ಜಿಲ್ಲೆಯಲ್ಲಿ ಗೀತವಾದನ ನೃತ್ಯಗಳಿಂದ ಕೂಡಿ ಪ್ರಚಲಿತವಿರುವ ಒಂದು ಜನಪ್ರಿಯ ಜನಪದ ಕಲೆ. ಗುಮಟೆ ವಾದ್ಯದ ಗತ್ತಿಗೆ ಅಳವಡಿಸಿಕೊಂಡು ಪದವನ್ನು ಹೇಳುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಈ ಪದಗಳನ್ನು ಗಂಡಸರ ಪದಗಳು ಎಂದೂ ಕರೆಯುತ್ತಾರೆ. ಗುಮಟೆ ಮಣ್ಣಿನ ಕುಂಭದಿಂದ ತಯಾರಿಸಿದ ಒಂದು ಬಗೆಯ ವಾದ್ಯ. ಇದರ ಒಂದು ಬದಿಗೆ ಕೊಡದ ಬಾಯಿಯ ಆಕಾರದ ತೆರಪು ಇದ್ದು ಇನ್ನೊಂದು ಬದಿಗೆ ಚಾಪದ (ಉಡ) ಚರ್ಮದಿಂದ ಮುಚ್ಚಿದ ಅಗಲ ಬಾಯಿ ಇರುತ್ತದೆ.



ವಾದ್ಯ ನುಡಿಸುತ್ತಿರುವ ಗುಮಟೆ ಕಲಾವಿದರು

ಗುಮಟೆಯಲ್ಲಿ ಮೂರು ಬಗೆ: 1 ಗುಮಟೆಯ ಪಾಂಗು. ಚವತಿಯ ಹಬ್ಬದಲ್ಲಿ ದೇವತಾಸ್ತುತಿ ಪದಗಳನ್ನು ಹಾಡುತ್ತ ಸಂಬಾಳ ತಾಳ ಮುಂತಾದ ವಾದ್ಯಪರಿಕರಗಳ ಜೊತೆಯಲ್ಲಿ ಬಾರಿಸುವ ಈ ವಾದ್ಯ ಸುಮಾರು ಒಂದೂಕಾಲು ಅಡಿ ಉದ್ದವಾಗಿದ್ದು ಗೋಲಾಕಾರವಾಗಿರುತ್ತದೆ. 2. ಕೋಲುಗುಮಟೆ, ಕೋಲುಪದ ಹೇಳುವ ಸುಗ್ಗಿಯ ಕಾಲದಲ್ಲಿ ಜಾಗಟೆ (ಜಮಟೆ ಅಥವಾ ದೆಂವಟೆ), ಕಂಸಾಳೆ (ಕಚಾಳ ಅಥವಾ ಕಶಾಳ) - ಇವುಗಳ ಜೊತೆಯಲ್ಲಿ ಬಡಿಯುವ ಈ ವಾದ್ಯ ಸುಮಾರು ಮೂರು ಅಡಿ ಉದ್ದವಾಗಿರುತ್ತದೆ. ಇದರ ಸಪ್ಪಳ ಎಲ್ಲ ಬಗೆಯ ಗುಮಟೆಗಳಿಗೂ ಹಿರಿದು. 3. ಗುಮಟೆ. ಗುಮಟೆಯ ಪದಮಾಡುವ ಕಾಲಕ್ಕೆ ಕಂಸಾಳೆಯ ಜೊತೆಯಲ್ಲಿ ಹೊಡೆಯುವ ಈ ವಾದ್ಯ ಸುಮಾರು ಎರಡೂವರೆ ಅಡಿ ಉದ್ದವಾಗಿರುತ್ತದೆ. ಗುಮಟೆಪದ ಮಾಡಲು ನಾಲ್ಕು ಜನ ಗುಮಟೆ ಬಡಿಯುವವರು, ಒಬ್ಬ ಕಂಸಾಳೆ ಬಾರಿಸುವವ, ಒಬ್ಬ ಕುಣಿಯುವುದರಲ್ಲಿ ಪಳಗಿರುವವ - ಹೀಗೆ ಕಡಿಮೆ ಎಂದರೆ ಆರು ಜನ ಬೇಕು. ಇವರಲ್ಲಿ ಅನುಭವಿಕನಾದವನೊಬ್ಬ ಎಲ್ಲರ ಜೊತೆಯಲ್ಲಿ ಗುಮಟೆ ಹೊಡೆಯುತ್ತ ಮೊತ್ತಮೊದಲು ತನ್ನ ಇಷ್ಟದೇವತೆಯನ್ನು ನೆನೆಯುತ್ತ 'ಶರಣು' ಪದದ ಸೊಲ್ಲನ್ನು ಗುಮಟೆ ಗತ್ತಿಗೆ ಅಳವಡಿಸಿಕೊಂಡು ಹಾಡುತ್ತಾನೆ. ಅವನ ಎತ್ತುಗಡೆಯ ಸೊಲ್ಲು ಮುಗಿದ ಕೂಡಲೆ ಉಳಿದವರೂ ಗುಮಟೆಯನ್ನು ಬಾರಿಸುತ್ತ ತಾಳಲಯಬದ್ಧವಾಗಿ ಹಾಡುತ್ತಾರೆ. ಶರಣು ಪದ ಮುಗಿದ ಮೇಲೆ ಪೌರಾಣಿಕ, ಸಾಮಾಜಿಕ, ಐತಿಹಾಸಿಕ ವಿಷಯವಸ್ತುವನ್ನೊಳಗೊಂಡ ದೀರ್ಘ ಪದಗಳನ್ನು ಹಾಡುತ್ತ ಹೋಗುತ್ತಾರೆ. ಕಂಸಾಳೆ ಬಾರಿಸುವವನು ಹಾಡಬೇಕೆಂಬ ನಿಯಮವಿಲ್ಲ. ಹಿಮ್ಮೇಳದ ಮುಂದೆ ಗುಮಟೆ ಪದದ ತಾಳಲಯಕ್ಕೆ ತಕ್ಕ ರೀತಿಯಲ್ಲಿ ಗೆಜ್ಜೆ ಕಟ್ಟಿ ಕುಣಿಯುವವರೂ ಪದವನ್ನು ಹೇಳುವುದಿಲ್ಲ. ಇವನು ಗುಮಟೆಪದದ ಕಾವು ಏರಿದಾಗ ಮಾತ್ರ ಅದಕ್ಕೆ ತಕ್ಕಂತೆ ರಭಸದಿಂದ ಕುಣಿದು 'ಚಬಾಚ್' ಎನ್ನುತ್ತ ತನ್ನ ಮೆಚ್ಚಿಗೆ ವ್ಯಕ್ತಪಡಿಸುತ್ತಾನೆ. ಒಮ್ಮೊಮ್ಮೆ ಗುಮಟೆ ಪದಕ್ಕೆ ಇನ್ನೂ ಹೆಚ್ಚಿನ ರಂಗೇರಿಸುವ ಉದ್ದೇಶದಿಂದ ಮಧ್ಯದಲ್ಲಿ 'ಹಗರಣವೇಶ'ಗಳನ್ನು ತರುವ ಪದ್ಧತಿ ಕೆಲವೆಡೆ ಇದೆ. ಗುಮಟೆ ಬಾರಿಸುವಾಗ ಅದರ ಒಲಿಯ (ಉಲಿ) ಮಾಧುರ್ಯ ಹೆಚ್ಚಿಸುವ ಸಲುವಾಗಿ ಚರ್ಮದ ಬದಿಯ ಬಾಯನ್ನು ಬೆಂಕಿಯಿಂದ ಕಾಸಿ ಕಾಸಿ ಇಡುತ್ತಾರೆ. ಪದಗಳ ಬೇರೆ ಬೇರೆ ರಸಭಾವಗಳಿಗೆ ತಕ್ಕಂತೆ ಗುಮಟೆ ಬಡಿಯುವ ಸುಮಾರು ಹತ್ತು ಬಗೆಯ ಕೈಗಳಿವೆ (ವಿಧಾನ). ಗುಮಟೆ ಪದದ ಒಂದು ಉದಾಹರಣೆ:

ಇಲ್ಲಿ ನಾಮೇ ಹೊಡೆದಾ ಗುಮಟೇಯೋ  
  ಪಟ್ಣದಲ್ಲಿ ಗೋವಿಂದಾಗರ್ಗಾಲೋ  
ಇಲ್ಲಿ ನಾಮೇ ಹೇಳಿದ ಪದನಾವೇ  
  ಗಿರಿಯಾಮೆನೇ ತಿಮ್ಮಪ್ಪಗರಗಾಲೋ

ಗುಮಟೆ ಕಲೆಗಾರರು ತಮ್ಮ ಬಿಡುವಿನ ವೇಳೆಯಲ್ಲಿ ಗುಮಟೆ ಪದ ಹಾಡಿ ತಾವೂ ಸಂತೋಷಪಟ್ಟು ಇತರರಿಗೂ ಮನರಂಜನೆ ಒದಗಿಸುತ್ತಾರೆ. ಇವರು ಬೆಂಕಿಯ ಹೊಡತಲ ಪಂಜು ತಯಾರಿಸಿ ಅದರ ಬೆಳಕಿನಲ್ಲಿ ನಡುರಾತ್ರಿಯವರೆಗೆ ಕೆಲವೊಮ್ಮೆ ನಸುಕು ಹರಿಯುವವರೆಗೆ ಗುಮಟೆಪದ ಮಾಡುವುದುಂಟು. (ಎನ್.ಆರ್.ಎನ್.)

**ಗುಮ್ಮನಾಯಕನ ಪಾಳ್ಯದ ಪಾಳೆಯಗಾರರು :** 13-17ನೆಯ ಶತಮಾನಗಳಲ್ಲಿ ಕೋಲಾರ ಜಿಲ್ಲೆ ಬಾಗೇಪಲ್ಲಿ ತಾಲ್ಲೂಕು ಮತ್ತು ಅದರ ಸುತ್ತ ಹೊಂದಿಕೊಂಡಿದ್ದ ನೆರೆ ಪ್ರದೇಶಗಳನ್ನೆಲ್ಲ ಒಳಗೊಂಡಿದ್ದ ಪ್ರದೇಶವನ್ನು ಆಳಿದ ಪಾಳೆಯಗಾರರು. ಇವರು ವೇಕರಿ ಮನೆತನದವರು, ಹಾಲುವ್ಯಾಕರ ಕ್ಷತ್ರಿಯ ಜಾತಿಯವರು, ಅಚ್ಯುತ ಗೋತ್ರ ನಾರಾಯಣಸೂತ್ರದ ಯಜುಶ್ಯಾಖಾನುವರ್ತಿಗಳು ಇವರ ಮನೆ ದೇವರು ಖಾದ್ರಿ ನರಸಿಂಹಸ್ವಾಮಿ ಎಂದು ಇವರ ದಾಖಲೆಗಳಿಂದ ತಿಳಿಯುತ್ತದೆ. ಈ ಪಾಳೆಯಗಾರರ ಇತಿಹಾಸದ ಬಗ್ಗೆ ದೊರಕುವ ಮಾಹಿತಿಗಳು ಅನೇಕ ಅಸಾಂಗತ್ಯ ಅಂಶಗಳಿಂದ ಕೂಡಿದೆ. ಹೊಸ ಸಂಶೋಧನೆಗಳಿಂದಷ್ಟೇ ಇದರ ಪುನರ್‌ರಚನೆ ಸಾಧ್ಯ. ಈ ಮನೆತನದ ಇತಿಹಾಸವನ್ನು ಸದ್ಯಕ್ಕೆ ಹೀಗೆ ನಿರೂಪಿಸಲಾಗಿದೆ.

ಕಡಪ ಜಿಲ್ಲೆಯ ದೊಡ್ಡ ಪಾಳ್ಯದವರಾದ ನರಸಿಂಹನಾಯಕ ಮತ್ತು ಅವನ ಸೋದರ ಖಾದ್ರಿಪತಿನಾಯಕರು ವಲಸೆ ಬಂದು ಮೊದಲು ಶಿಡ್ಲಘಟ್ಟ ತಾಲ್ಲೂಕಿನ ಯುಗುವಕೋಟೆಯಲ್ಲಿ ನೆಲೆಸಿದರು. ಖಾದ್ರಿ ಪತಿನಾಯಕ ಸಮೀಪದ ಪಾತಪಾಳ್ಯದಲ್ಲಿದ್ದ ಶ್ರೀಮಂತ ಸೋದರರಾದ ಗುಮ್ಮರೆಡ್ಡಿ, ಲಕ್ಕರೆಡ್ಡಿಯವರ ನೆರವಿನಿಂದ ಅಲ್ಲಿ ಕೋಟೆ ಕಟ್ಟಿ ಪಾತಪಾಳ್ಯ ಮತ್ತು ಭೈರವನ ಬೆಟ್ಟ ಪ್ರಾಂತ್ಯವನ್ನು ಆಳತೊಡಗಿದ. ಖಾದ್ರಿಪತಿನಾಯಕ ಪ್ರಧಾನವಾಗಿ ಭೂ ಅಭಿವೃದ್ಧಿಗೆ ಹೆಚ್ಚು ಗಮನ ಕೊಟ್ಟು ಕೆರೆಕಟ್ಟೆಗಳನ್ನು ನಿರ್ಮಿಸಿ ಕಾಡುಗಳನ್ನು ನೆಲಸಮ ಮಾಡಿ ದೇವರಾಜ ಪಳ್ಳಿ ಮೊದಲಾದ ಅನೇಕ ಹೊಸ ಹಳ್ಳಿಗಳನ್ನು ಸ್ಥಾಪಿಸಿದ. ಇವನು ತೀರಿಕೊಂಡಮೇಲೆ (ಸು.1272) ಅಧಿಕಾರಕ್ಕೆ ಬಂದ ಇವನ ಮಗ

ಚೆನ್ನಮ್ಮನಾಯಕ (ಸು.1272-96) ತಮ್ಮ ಪಾಳೆಯಪಟ್ಟು ಸ್ಥಾಪನೆಗೆ ನೆರವಾದ ಶ್ರೀಮಂತ ಗುಮ್ಮರೆಡ್ಡಿ, ಲಕ್ಕರೆಡ್ಡಿಯವರ ಹೆಸರು ಶಾಶ್ವತವಾಗಿರಬೇಕೆಂಬ ಇಚ್ಛೆಯಿಂದ ತಮ್ಮ ಪಾಳೆಯಕ್ಕೆ ಗುಮ್ಮನಾಯಕನ ಪಾಳ್ಯವೆಂದು ಹೆಸರಿಟ್ಟ. ಕಲ್ಯಾಣದುರ್ಗದಲ್ಲಿ ಒಂದು ಕೋಟೆಯನ್ನು ಕಟ್ಟಿದ್ದಲ್ಲದೆ ಗುತ್ತಪಾಳ್ಯ, ಮದ್ದಪಲ್ಲಿ ಮತ್ತು ಸುತ್ತಣ ಭಾಗಗಳಲ್ಲಿ ಗೆದ್ದ. ಕೆರೆಕಟ್ಟೆಗಳನ್ನೂ ದೇವಾಲಯಗಳನ್ನೂ ಕಟ್ಟಿಸಿದ. ಮಹಾನಾಯಕಾಚಾರ್ಯ ಎಂಬ ಬಿರುದನ್ನೂ ಧರಿಸಿದ. ಇವನ ಮಗ ಗುಮ್ಮನಾಯಕನ (ಸು.1296-1364) ಕಾಲದಲ್ಲಿ ಆನೆಗೊಂದಿಯ ತಿರುಮಲರಾಯ ದಂಡೆತ್ತಿಬಂದಾಗ, ಅವನಿಗೆ ಹಣ ನೀಡಿದ್ದಲ್ಲದೆ ಅವನ ಸಾಮಂತನಾಗಿರಲು ಒಪ್ಪಿದ. ಮುಂದಿನ ರಾಜರೂ ಕಡೆಯವರೆಗೆ ವಿಜಯನಗರದ ಅರಸರಿಗೆ ನಿಷ್ಠಾವಂತರಾಗಿದ್ದರು. ಗುಮ್ಮನಾಯಕನ ಮಗ ಲಕ್ಕನಾಯಕನ (ಸು.1314-46) ಅನಂತರ ಆಳಿದ ಕದಿರಪ್ಪನಾಯಕ (ಸು.1363-88) ಸ್ಮರಣೀಯ ಕೆಲಸಗಳನ್ನು ಮಾಡಿದ. ಇವನ ಕಾಲದಲ್ಲಿ ಆಡಳಿತ ಸುಧಾರಣೆ ಆಗಿ ಅದಕ್ಕೆ ಒಂದು ಸುವ್ಯವಸ್ಥಿತ ರೂಪ ಬಂತು. ಜೊತೆಗೆ ಭೂ ಅಭಿವೃದ್ಧಿಯ ದೃಷ್ಟಿಯಿಂದ ಅವನು ಭೂಸಂಬಂಧದ ಅನೇಕ ಕಾಯದೆಗಳನ್ನು ರೂಪಿಸಿದ. ಗ್ರಾಮ ಗ್ರಾಮಕ್ಕೆ ಗ್ರಾಮಾಧಿಕಾರಿಗಳನ್ನು ನೇಮಿಸಿದ ಮತ್ತು ಅನೇಕ ಹೊಸ ಗ್ರಾಮಗಳನ್ನು ಸ್ಥಾಪಿಸಿದ. ಇವನು ಆಂಧ್ರದ ಪಾಳೆಯಗಾರರನ್ನು ಗೆಲ್ಲಲು ವಿಜಯನಗರದ ಅರಸನಿಗೆ ಸಹಾಯಮಾಡಿದ್ದ. ಆತ ಇವನಿಗೆ ಮಾನ್ಯ ಜಹಗೀರುಗಳನ್ನಿತ್ತ. ಇವನ ಅನಂತರ ಸಿಂಗಪ್ಪನಾಯಕ (ಸು.1388-1457) ಮತ್ತು ದೊಡ್ಡ ವಸಂತನಾಯಕ (1457-67) ಆಳಿದರು. 3ನೆಯ ವಸಂತನಾಯಕ ವಿಜಯನಗರದ ಮಲ್ಲಿಕಾರ್ಜುನನ ಪರವಾಗಿ ಗುಲ್ಬರ್ಗದ ಮೇಲೆ ದಾಳಿಯಿಟ್ಟು ಅಲ್ಲಿನ ಸುಲ್ತಾನನನ್ನು ಕೊಂದು ಅರಸನಿಂದ ಮತ್ತಷ್ಟು ಪ್ರದೇಶಗಳನ್ನು ಬಹುಮಾನವಾಗಿ ಪಡೆದ. ಇವನ ಅನಂತರ ಆಳಿದ ಮಾಸಲನಾಯಕನು ಪಾತಪಾಳ್ಯ ಮೊದಲಾದ ಅನೇಕ ನೆರೆಪ್ರಾಂತ್ಯದ ಪ್ರದೇಶಗಳನ್ನು ಗೆದ್ದುಕೊಂಡು ರಾಜ್ಯ ವಿಸ್ತರಿಸಿಕೊಂಡ. ತರುವಾಯದ ಪಾಳೆಯಗಾರ ಇಮ್ಮಡಿ ಕದಿರಪ್ಪನಾಯಕ (1482-1508) ವಿಜಯನಗರದ ನವರಾತ್ರಿ ಉತ್ಸವದಲ್ಲಿ ಕಠಾರಿ ಇದಿರಿಸುವ ಶೂರನಿಗೆ ಆಹ್ವಾನ ಬಂದಾಗ ಎದೆಯೊಡ್ಡಿ ತನ್ನ ಸ್ಥೈರ್ಯವನ್ನು ಸ್ಥಾಪಿಸಿ ಸನ್ಮಾನಿತನಾಗಿ ಉಂಬಳಿ ಇನಾಮನ್ನೂ ಶ್ವೇತಛತ್ರಚಾಮರ ಮೊದಲಾದ ಗೌರವರಕ್ಷೆಯನ್ನೂ ದೊರಕಿಸಿಕೊಂಡ. ಅನಂತರ ಮುಮ್ಮಡಿ ವಸಂತನಾಯಕ (1584 -1614) ಮತ್ತು ನಾಲ್ಕನೆಯ ನರಸಿಂಹನಾಯಕ (1614-44) ವಿಜಯನಗರದ ಸಾಮಂತರಾಗಿ ಆಳಿದರು. ಅನಂತರದ ಬಂಗಾರ ತಿಮ್ಮನಾಯಕ (ಸು.1680-1723), ಮೂರನೆಯ ಕದಿರಪ್ಪನಾಯಕ ಮುಂತಾದವರು ಮುಗಲರು ಹಾಗೂ ಮರಾಠರಿಗೆ ಕಪ್ಪ ಒಪ್ಪಿಸುತ್ತ ತಮ್ಮ ಅಧಿಕಾರವನ್ನು ಉಳಿಸಿಕೊಂಡಿದ್ದರು. ಕೊನೆಯ ದೊರೆ ನರಸಿಂಹನಾಯಕ ತನ್ನ ಆಡಳಿತ ವ್ಯವಸ್ಥೆಗೆ ಸಾನಿ ನರಸಿಂಹಯ್ಯ ಎಂಬ ದಳವಾಯಿಯನ್ನು ನೇಮಿಸಿಕೊಂಡ. ಆತ ದಕ್ಷನಾದರೂ ಅಧಿಕಾರಲಾಲಸೆಗೆ ಒಳಗಾಗಿ ಸರ್ವಾಧಿಕಾರಿಯಂತೆ ವರ್ತಿಸಿದ. ಆ ಸಮಯದಲ್ಲಿ ನಾಯಕನ ಹಿರಿಯ ಪತ್ನಿ ರಾಮಕ್ಕ ಆಡಳಿತಸೂತ್ರವನ್ನು ದಳವಾಯಿಯಿಂದ ಹಿಂತೆಗೆದುಕೊಳ್ಳಲು ಬಳ್ಳಾಪುರದ ಪಾಳೆಯಗಾರರ ನೇತೃತ್ವದಲ್ಲಿ ಒಂದು ಸ್ನೇಹಕೂಟವನ್ನು ಗುಟ್ಟಾಗಿ ಸ್ಥಾಪಿಸಿ ಸಾನಿ ನರಸಿಂಹಯ್ಯನ ಉಚ್ಚಾಟನೆಗೆ ಸಂಚುಮಾಡಿದಳು. ಅದು ಫಲಿಸಿ ಅವನು ಅಧಿಕಾರ ತ್ಯಜಿಸಿದರೂ ಕೆಲವೇ ದಿನಗಳಲ್ಲಿ ಪಾಳ್ಯ ಹೈದರನ ದಾಳಿಗೆ ತುತ್ತಾಯಿತು. ನಾಯಕ ಮತ್ತು ನಾಯಕಿ ಸೆರೆಯಾದರು. ಆದರೆ 3ನೆಯ ಮೈಸೂರು ಯುದ್ಧದ ಕಾಲದಲ್ಲಿ ನರಸಿಂಹನಾಯಕ ಆಂಗ್ಲರ ನೆರವನ್ನು ಬೇಡಿದ. ನಾಲ್ಕನೆಯ ಮೈಸೂರು ಯುದ್ಧದ ಕಾಲದಲ್ಲಿ ಅವರ ಸಹಾಯದಿಂದ ತನ್ನ ಪಾಳೆಯಪಟ್ಟನ್ನು ಪಡೆದರೂ ಶೀಘ್ರದಲ್ಲೇ ಆಂಗ್ಲರ ವಚನಭ್ರಷ್ಟತೆಯಿಂದ ಪುನಃ ಅಧಿಕಾರ ಕಳೆದುಕೊಂಡು ಕೆಲವು ದಿನಗಳಲ್ಲೇ ನಿಧನಹೊಂದಿದ. (ಸಿ.ಕೆ.ಎನ್.)

**ಗುಮ್ಮಳಾಪುರದ ಸಿದ್ಧಲಿಂಗೇಶ್ವರ :** 15ನೆಯ ಶತಮಾನದ ಕೊನೆಯ ಭಾಗದಲ್ಲಿದ್ದ ವೀರಶೈವ ಕವಿ. ಶೂನ್ಯಸಂಪಾದನೆಯ ಸಂಕಲನಕಾರರಲ್ಲೊಬ್ಬ. ತೋಂಟದ ಸಿದ್ಧಲಿಂಗಶಿವಯೋಗಿಯ ಶಿಷ್ಯ. ತಮಿಳುನಾಡಿನಹೊಸೂರು ತಾಲ್ಲೂಕಿನ ಗುಮ್ಮಳಾಪುರ ಇವನ ಜನ್ಮಸ್ಥಳ. 15-16ನೆಯ ಶತಮಾನಗಳಲ್ಲಿ ಇದು ವೀರಶೈವ ಧರ್ಮದ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಶೂನ್ಯಸಂಪಾದನೆಯನ್ನು ಮೊಟ್ಟಮೊದಲು ನಿರ್ಮಿಸಿದ ಶಿವಗಣಪ್ರಸಾದಿ ಮಹಾದೇವಯ್ಯ ಇದೇ ಸ್ಥಳದವನಾಗಿದ್ದಿರಬೇಕೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಶೂನ್ಯಸಂಪಾದನೆ ವಚನಗಳ ಸಂಕಲನ ಗ್ರಂಥ. ಮಹಾದೇವಯ್ಯನ ಶೂನ್ಯ ಸಂಪಾದನೆಯಲ್ಲಿ ಸಿದ್ಧರಾಮನಿಗೆ ದೀಕ್ಷೆಯಾದ ಪ್ರಸಂಗ ಇಲ್ಲದಿರುವುದನ್ನು ಕಂಡು ಕೆಂಚವೀರಣ್ಣೊಡೆಯ (ಪುರಾತನರ ವಚನವಿಡಿದು ಸಾವಿರದ ಏಳುನೂರು ವಚನಗಳಿಂದ) ವರ್ಣಿಸಿದ ದೀಕ್ಷಾಕ್ರಮವನ್ನು ಪರಿಷ್ಕರಿಸಿ ತನ್ನ ಕೃತಿಯನ್ನು ನಿರ್ಮಿಸಿದುದಾಗಿ ಸಿದ್ಧಲಿಂಗೇಶ್ವರ ಹೇಳಿಕೊಂಡಿದ್ದಾನೆ. ಇವನ ಶೂನ್ಯ ಸಂಪಾದನೆಯ ಪ್ರಾರಂಭದ ಧಾಟಿ ಮತ್ತು ಧ್ವನಿ ಹಿಂದಿನ ಸಂಕಲನಗಳಿಗಿಂತ ಬೇರೆಯಾಗಿರುವುದು ಕಂಡುಬರುತ್ತದೆ. ಹಿಂದಿನ ಸಂಕಲನಕಾರರು ಹೇಳಿದ ಪ್ರಭುದೇವರ ಜನ್ಮವೃತ್ತಾಂತವನ್ನು ಇವನು ಸೂಚ್ಯವಾಗಿ ಖಂಡಿಸಿ ಅವನ ಮತ್ತು ಬಸವಾದಿ ಶರಣರ ಕಾರಣಿಕತ್ವವನ್ನು ಸ್ಥಾಪಿಸಿದ್ದಾನೆ. ಉಳಿದ ಮುಖ್ಯಾಂಶಗಳಲ್ಲೆಲ್ಲ ಶಿವಗಣಪ್ರಸಾದಿಯನ್ನೇ ಅನುಸರಿಸಿದ್ದಾನೆ. ಹಿಂದಿನ ಸಂಪಾದನೆಗಳಲ್ಲಿಲ್ಲದ ಒಂದೆರಡು ಹೊಸ ಪ್ರಸಂಗಗಳನ್ನೂ (ಆಯ್ದಕ್ಕಿ ಮಾರಯ್ಯ ಮತ್ತು ಗೋರಕ್ಷನ ಪ್ರಸಂಗ) ಸೇರಿಸಿದ್ದಾನೆ. ಔಚಿತ್ಯವರಿತ ಪರಿಷ್ಕಾರಕುಶಲತೆ ಇವನ ಶೂನ್ಯಸಂಪಾದನೆಯಲ್ಲಿ ಪ್ರಧಾನವಾಗಿ ಎದ್ದುಕಾಣುತ್ತದೆ. ಈತ ಸಂಕಲನಗ್ರಂಥವನ್ನಲ್ಲದೆ ಬೋಳಬಸವೇಶ್ವರಾ ನಿಮ್ಮ ಧರ್ಮ ನಿಮ್ಮ ಧರ್ಮ ಎಂಬ ಅಂಕಿತವನ್ನಿಟ್ಟುಕೊಂಡು ಸ್ವತಂತ್ರ ವಚನಗಳನ್ನು ಬರೆದಿದ್ದಾನೆ. ಇವನ ಷಟ್ಸ್ಥಲದ ಲಿಂಗಾಂಗ ಸಂಬಂಧದ ನಿರ್ವಚನ ಎಂಬುದರಲ್ಲಿ ವೀರಶೈವ ಸಿದ್ಧಾಂತವನ್ನು ಬೋಧಿಸುವ 15 ವಚನಗಳಿವೆ. (ಎಚ್.ಟಿ.ಎಸ್.)

**ಗುರುದತ್ತ :** 1925-64. ಹಿಂದಿ ಚಿತ್ರರಂಗದಲ್ಲಿ ಪ್ರಸಿದ್ಧಿಯ ಶಿಖರವೇರಿದ ನಟ, ನಿರ್ದೇಶಕ ಹಾಗೂ ನಿರ್ಮಾಪಕ. ಕನ್ನಡಿಗರಾದ



ಇವರು 1925 ಜುಲೈ 9ರಂದು ಮೈಸೂರಿನಲ್ಲಿ ಜನಿಸಿದರು. ಪ್ರಾಥಮಿಕ ಶಿಕ್ಷಣ ಕೊಲ್ಕತ್ತದಲ್ಲಿ ಪೂರೈಸಿದರು. ಅನಂತರ ಹೆಸರಾಂತ ನೃತ್ಯ ಪಟು ಉದಯಶಂಕರರ ಬಳಿ ನೃತ್ಯಾಭ್ಯಾಸ ಮಾಡಿದರು. ಪ್ರಭಾತ ಸ್ಟುಡಿಯೋದಲ್ಲಿ ನೃತ್ಯಸಂಯೋಜಕರಾಗಿ ಚಲನಚಿತ್ರರಂಗ ಪ್ರವೇಶಿಸಿದರು. ಅಲ್ಲಿ ಹಿಂದಿ ಚಿತ್ರರಂಗದ ಹೆಸರಾಂತ ನಟ ದೇವಾನಂದರ ಪರಿಚಯ ಗೆಳೆತನ ಲಭಿಸಿತು. ಹಮ್ ಏಕ್ ಹೈ ಚಿತ್ರದ ನೃತ್ಯ ಸಂಯೋಜಕರಾಗಿ ಕೆಲಸ ಮಾಡಿದರು (1946). ಮುಂದೆ ಇವರು ಬಾಂಬೆ ಟಾಕೀಸ್ ಸೇರಿದರು. ಸಹ ನಿರ್ದೇಶಕರಾಗಿ ಲಖರಾನಿ (1945), ಮೋಹನ (1947), ಗರ್ಲ್ಸ್ ಸ್ಕೂಲ್ (1949), ಸಂಗ್ರಾಮ (1950) ಚಲನ ಚಿತ್ರಗಳಲ್ಲಿ ಕೆಲಸ ಮಾಡಿದರು. ದೇವಾನಂದ್ 1950ರಲ್ಲಿ ನವಕೇತನ ಸಂಸ್ಥೆ ಆರಂಭಿಸಿದರು. ಹಿಂದೆ ಇವರಿಗೆ ಕೊಟ್ಟ ಮಾತಿನಂತೆ ತಮ್ಮ ಪ್ರಥಮ ನಿರ್ಮಾಣದ ಚಿತ್ರ ನಿರ್ದೇಶಿಸಲು ಅವಕಾಶ ಕಲ್ಪಿಸಿದರು. ಗುರುದತ್ ನಿರ್ದೇಶಿಸಿದ ಪ್ರಥಮ ಚಿತ್ರ ಬಾಜಿ (1951). ಇದು ಇವರಿಗೆ ಒಳ್ಳೆಯ ಹೆಸರು ತಂದುಕೊಟ್ಟಿತು. ಅನಂತರ ಜಾಲ್ ಚಿತ್ರವನ್ನು ನಿರ್ದೇಶಿಸಿದರು (1952). ಇದೊಂದು ಹೊಸ ಬಗೆಯ ಕುತೂಹಲ ಮೂಡಿಸುವ ಚಿತ್ರ. ಅದಾದ ಬಳಿಕ ಸೈಲಾಬ್ ಎಂಬ ಚಿತ್ರ ನಿರ್ದೇಶಿಸಿದರು (1956).

ನಿರ್ಮಾಪಕ, ನಟ, ನಿರ್ದೇಶಕರಾಗಿ ತಮ್ಮನ್ನು ತೊಡಗಿಸಿಕೊಂಡು ಎಚ್.ಜಿ. ಫಿಲ್ಮ್ಸ್ ಲಾಂಛನದಲ್ಲಿ ಬಾಜ್ ಚಿತ್ರ ನಿರ್ಮಿಸಿದರು (1953). ಇದರಲ್ಲಿ ಗೀತಾಬಾಲಿಯೊಂದಿಗೆ ತಾವೇ ನಾಯಕರಾಗಿ ಅಭಿನಯಿಸಿದರು. ಅನಂತರ ಇವರು ಹಲವು ಚಿತ್ರಗಳನ್ನು ನಿರ್ದೇಶಿಸಿ ಕೆಲವು ಚಿತ್ರಗಳಲ್ಲಿ

ನಟಿಸಿದರು. ಅವುಗಳಲ್ಲಿ ಮುಖ್ಯವಾದುವು. ಆರ್‌ಪಾರ್ (1954), ಮಿಸ್ಟರ್ ಅಂಡ್ ಮಿಸೆಸ್ 55 (1955), ಸಿ.ಐ.ಡಿ. (1956), ಪ್ಯಾಸಾ (1957), ಟ್ವೆಲ್ವ್ ಕ್ಲಾಕ್ (1958), ಚೌದವಿಕಾ ಚಾಂದ್ (1960), ಸಾಹೀಬ್ ಬೀಬಿ ಔರ್ ಗುಲಾಮ್ (1962), ಸೌತೆಲಾಭಾಯಿ (1962), ಬಹುರಾನಿ (1963), ಭರೋಸಾ (1963), ಸಾಂಜ್ ಔರ್ ಸವೇರಾ (1964), ಸುಹಾಗನ್ (1964). ಇವೆಲ್ಲವೂ ಗುರುದತ್ತರ ಜನಪ್ರಿಯತೆಯನ್ನು ಶಿಖರಕ್ಕೇರಿಸಿದ ಚಿತ್ರಗಳು.

ಬಾಜಿ ಚಿತ್ರದಿಂದ ಒಂದೊಂದೇ ಮೆಟ್ಟಿಲೇರುತ್ತ ಯಶಸ್ವಿ ಶಿಖರಕಂಡ ಇವರು ಬಾಜಿ ಚಿತ್ರದ ರೆಕಾರ್ಡಿಂಗ್ ಸಮಯದಲ್ಲಿ ಗಾಯಕಿ ಗೀತಾರಾಯ್ ಅವರ ಪ್ರೇಮದ ಬಲೆಯಲ್ಲಿ ಸಿಲುಕಿ ಅವರನ್ನು ವಿವಾಹವಾದರು (1953 ಮೇ 26). ಗುರುದತ್ ನಿರ್ಮಿಸಿದ ಚಿತ್ರಗಳು ಭಾರತೀಯ ಚಿತ್ರರಂಗದಲ್ಲಿ ತಮ್ಮದೇ ಆದ ಛಾಪು ಮೂಡಿಸಿವೆ. ಪ್ಯಾಸಾ, ಕಾಗಜ್ ಕೆ ಫೂಲ್, ಸಾಹೀಬ್ ಬೀಬಿ ಔರ್ ಗುಲಾಮ್ ಮೊದಲಾದುವು ಉತ್ತಮ ಹಾಡು, ಅಭಿನಯ, ನಿರ್ದೇಶನಗಳಿಂದ ಹೆಸರು ಮಾಡಿದುವು. ಸಾಹೀಬ್ ಬೀಬಿ ಔರ್ ಗುಲಾಮ್ ರಾಷ್ಟ್ರಪತಿಗಳ ರಜತ ಪದಕ ಪಡೆಯಿತು.

ಕಲಾತ್ಮಕತೆ ಮತ್ತು ತಾಂತ್ರಿಕ ಶ್ರೀಮಂತಿಕೆ ಗುರುದತ್ತರ ಚಿತ್ರಗಳ ಜೀವಾಳ. ನೆರಳು ಬೆಳಕುಗಳನ್ನು ಕ್ಯಾಮರದಲ್ಲಿ ಸೆರೆಹಿಡಿಯುವ ಚಾಕಚಕ್ಯತೆ, ಕ್ಯಾಮರ ಕಣ್ಣಿನಲ್ಲಿರುವ ಶಕ್ತಿಯ ಸದ್ಬಳಕೆ, ಹಾಡು ಅಭಿನಯಗಳ ಸಮತೂಕ ನಿರ್ವಹಣೆ, ಪ್ರತಿಯೊಂದು ಫ್ರೇಮಿನಲ್ಲೂ ಜೀವ ತುಂಬುವ ಜಾಣ್ಮೆ, ಜೀವನದ ವಾಸ್ತವತೆಯನ್ನು ಚಿತ್ರಿಸುವ ಕಲೆಗಾರಿಕೆ ಇವೇ ಇವರ ಚಿತ್ರಗಳು ಜನಪ್ರಿಯವಾಗಲು ಕಾರಣವಾದುವು. ಇವರ ಚಿತ್ರಗಳು ಇಂದಿಗೂ ತಾಜಾತನ ಉಳಿಸಿಕೊಂಡಿವೆ. ಖ್ಯಾತಿಯ ಉತ್ತುಂಗದಲ್ಲಿರುವಾಗಲೇ ಜೀವನದಲ್ಲಿ ಜುಗುಪ್ಸೆಗೊಂಡು 1964 ಅಕ್ಟೋಬರ್ 10ರಂದು ಆತ್ಮಹತ್ಯೆ ಮಾಡಿಕೊಂಡರು. (ಎಸ್.ಎಂ.ಕೆ.)

**ಗುರುಪುರ :** ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕಿನ ಒಂದು ಗ್ರಾಮ. ಮಂಗಳೂರಿಗೆ 16ಕಿಮೀ ದೂರದಲ್ಲಿ ಈಶಾನ್ಯ ದಿಕ್ಕಿನಲ್ಲಿ ಗುರುಪುರ ನದಿಯ ದಡದಲ್ಲಿದೆ. ಕೆಳದಿ ಅರಸರ ಕಾಲದಲ್ಲಿ ಈ ಊರು ಪ್ರಾಮುಖ್ಯ ಪಡೆದಿತ್ತು. ಇಲ್ಲಿ ಅವರು ಕಟ್ಟಿಸಿದ ವೀರಶೈವ ಗುರುಮಠದಿಂದ ಈ ಊರಿಗೆ ಗುರುಪುರ ಎಂಬ ಹೆಸರು ಬಂತು. ಈಗ ಮಠ ಜೀರ್ಣಾವಸ್ಥೆಯಲ್ಲಿದ್ದರೂ ಹಳೆಯ ಕಟ್ಟಡದ ಶಿಲ್ಪಸೌಂದರ್ಯವನ್ನು ಗುರುತಿಸಬಹುದು. ಮಠದ ಆವರಣದಲ್ಲಿ ನೀಲಕಂಠ ದೇವಾಲಯವಿದೆ. ವರದರಾಜ ವೆಂಕಟರಮಣ ದೇವಾಲಯವೂ ಇಲ್ಲಿದೆ. ಪ್ರತಿವರ್ಷ ಕಾರ್ತೀಕ ಮಾಸದಲ್ಲಿ ದೀಪೋತ್ಸವ ನಡೆಯುತ್ತದೆ. ಗುರು ಮಠಕ್ಕೆ ಸಮೀಪದಲ್ಲೇ ಬಡವರಿಗೆ ಗಂಜಿ ದಾನ ಮಾಡುತ್ತಿದ್ದ ಗಂಜಿಮಠದ ಅವಶೇಷಗಳಿವೆ. (ಎಂ.ಆರ್.ಎ.)

**ಗುರುಬಸವ :** ಸು.1430. ವೀರಶೈವ ಕವಿ. ಯೋಗಾಂಗವಿಭೂಷಣ, ಸದ್ಗುರುರಹಸ್ಯ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭಗೀತೆ, ಅವಧೂತ ಗೀತೆ, ಮನೋವಿಜಯ ಎಂಬ ಏಳು ಕಾವ್ಯಗಳನ್ನು ಬರೆದಿರುವುದರಿಂದ ಈತ ಸಪ್ತಕಾವ್ಯಗಳ ಗುರುಬಸವ ಎಂದು ಪ್ರಸಿದ್ಧನಾಗಿದ್ದಾನೆ. ಇವನು ಕೆಲವು ಸ್ವರವಚನಗಳನ್ನು ರಚಿಸಿರುವುದಾಗಿಯೂ ತಿಳಿದುಬರುತ್ತದೆ. ಈತ ವಿಜಯನಗರದ ಪ್ರೌಢದೇವರಾಯನ (1424-46) ಕಾಲದಲ್ಲಿದ್ದಂತೆ ಚೆನ್ನಬಸವ ಪುರಾಣದಿಂದ ತಿಳಿಯುತ್ತದೆ. ಗುರುಬಸವ ತನ್ನ ಕಾವ್ಯಗಳಲ್ಲಿ ಎಲ್ಲಿಯೂ ಸ್ವವಿಷಯವನ್ನು ಹೇಳಿಕೊಂಡಿಲ್ಲ. ಆದರೆ ಚೆನ್ನಬಸವ ಪುರಾಣದಲ್ಲಿ ಬರುವ ಕೆಲವು ಪದ್ಯಗಳಲ್ಲಿ ಗುರುಬಸವನ ಅರಮನೆಗೆ ಕರಸ್ಥಲನಾಗಿದೇವ ಬಂದು ಈತನಿಗೆ ಅನುಭಾವದ ಅರಿವನ್ನು ಮಾಡಿಕೊಟ್ಟಂತೆಯೂ ಗುರುಬಸವ ಪ್ರೌಢರಾಯನ ಆಸ್ಥಾನದಲ್ಲಿ ಪರವಾದಿಗಳೊಡನೆ ವಾದಕ್ಕೆ ನಿಂತು ಅವರನ್ನು ಸೋಲಿಸಿದಂತೆಯೂ ನಿರೂಪಿತವಾಗಿದೆ. ಈ ಸಂಗತಿಗಳಿಂದ ಗುರುಬಸವ ಬಹಳ ಪ್ರಭಾವಶಾಲಿಯೂ ಮಹಿಮಾಶಾಲಿಯೂ ಆಗಿದ್ದು ಸರ್ವರಿಂದಲೂ ಪೂಜ್ಯತೆಯನ್ನು ಪಡೆದಿದ್ದ ವ್ಯಕ್ತಿಯಾಗಿದ್ದಿರಬೇಕೆಂಬ ಅಂಶ ಸ್ಪಷ್ಟವಾಗುತ್ತದೆ. ಆದುದರಿಂದ ಈತನ ಸಪ್ತಕಾವ್ಯಗಳಲ್ಲಿ ಒಂದಾದ ಮನೋವಿಜಯಕ್ಕೆ ವ್ಯಾಖ್ಯಾನವನ್ನು ಬರೆದ ವಿರಕ್ತ ತೋಂಟದಾರ್ಯ ಗುರುಬಸವನನ್ನು ಭಕ್ತಜನಮನೋಮಂದಿರ, ಶಿವಯೋಗಿಜನ ಸೇವಿತಚರಣಾರವಿಂದ, ಷಟ್ಸ್ಥಲಜ್ಞಾನಪ್ರಭಾಪುಂಜರಂಜಿತಾಂತರಂಗ, ವೀರಶೈವ ಮತಸ್ಥಾಪನಾಚಾರ್ಯ ಮುಂತಾಗಿ ಹೊಗಳಿದ್ದಾನೆ.

ಗುರುಬಸವನ ಸಪ್ತಕಾವ್ಯಗಳೂ ಗುರುಶಿಷ್ಯಸಂವಾದ ರೂಪದಲ್ಲಿವೆ. ಇವುಗಳಲ್ಲಿ ವೀರಶೈವ ವೇದಾಂತವನ್ನು ಪ್ರತಿಪಾದಿಸಲಾಗಿದ್ದು ಲಿಂಗಾಂಗಸಾಮರಸ್ಯದ ತಿರುಳನ್ನು ಸಾಮಾನ್ಯ ಜನಕ್ಕೂ ತಿಳಿಯುವಂತೆ ನಿರೂಪಿಸಲಾಗಿದೆ. ಮನೋವಿಜಯ ಕುಸುಮ ಷಟ್ಪದಿಯಲ್ಲಿದೆ. ಇದರಲ್ಲಿ 9 ಪ್ರಕರಣಗಳೂ 355 ಪದ್ಯಗಳೂ ಇವೆ. ಸುವಿವೇಕನೆಂಬ ಜ್ಞಾನಿ ಸಂಸಾರಕ್ಕೆ ಅಲಸಿ ಗುರುಮುಖಾಂತರ ಸ್ವಸ್ವರೂಪಾವಿರ್ಭಾವವನ್ನು ಪಡೆದ ಮಾರ್ಗವನ್ನು ವಿವರಿಸಲಾಗಿದೆ. ಕಲ್ಯಾಣೇಶ್ವರ, ಯೋಗಾಂಗವಿಭೂಷಣ ಇವೆರಡೂ ಪರಿವರ್ಧಿನಿ ಷಟ್ಪದಿಯಲ್ಲಿವೆ. ಕಲ್ಯಾಣೇಶ್ವರದಲ್ಲಿ 102 ಪದ್ಯಗಳಿದ್ದು ಇದರಲ್ಲಿ ಲಿಂಗಾಂಗಸಾಮರಸ್ಯದ ರಹಸ್ಯವನ್ನು ನಿರೂಪಿಸಲಾಗಿದೆ. ಯೋಗಾಂಗವಿಭೂಷಣದಲ್ಲಿ 6 ಸಂಧಿಗಳೂ 278 ಪದ್ಯಗಳೂ ಇವೆ. ಇದರಲ್ಲಿ ಯೋಗಾಭ್ಯಾಸಕ್ರಮ, ಯೋಗವಿಧಾನ ಅವುಗಳ ಅನುಸಂಧಾನ, ಯೋಗಾಸನ ಮುಂತಾದ ವಿಷಯಗಳನ್ನು ಹೇಳಿದೆ. ಸ್ವರೂಪಾಮೃತ, ಸದ್ಗುರುರಹಸ್ಯ ಭಾಮಿನೀಷಟ್ಪದಿಯಲ್ಲಿವೆ. ಸ್ವರೂಪಾಮೃತದಲ್ಲಿ ಮೂರು ಪರಿಚ್ಛೇದಗಳೂ 77 ಪದ್ಯಗಳೂ ಇವೆ. ಜೀವ ಮತ್ತು ಪರಮಾತ್ಮ ಇವುಗಳ ಸ್ವರೂಪವನ್ನು ಈ ಕಾವ್ಯದಲ್ಲಿ ಸ್ವಾರಸ್ಯವಾಗಿ ವಿವರಿಸಲಾಗಿದೆ. ಸದ್ಗುರುರಹಸ್ಯದಲ್ಲಿ ಒಂಬತ್ತು ಉಪದೇಶಗಳೂ 237 ಪದ್ಯಗಳೂ ಇವೆ. ವೃಷಭಗೀತೆ 101 ಪದ್ಯಗಳನ್ನು ಒಳಗೊಂಡಿದ್ದು ಭೋಗಷಟ್ಪದಿಯಲ್ಲಿದೆ. ಬಸವೇಶ್ವರನ ಸ್ತುತಿರೂಪವಾಗಿದೆ. ಜೊತೆಗೆ ವೀರಶೈವಧರ್ಮವನ್ನೂ ಪ್ರತಿಪಾದಿಸುತ್ತದೆ. ಅವಧೂತಗೀತೆಯಲ್ಲಿ 101 ಹಾಡುಗಳಿವೆ. ಇದರಲ್ಲಿ ಅವಧೂತನ ಲಕ್ಷಣವನ್ನು ವಿವರಿಸಿರುವುದಲ್ಲದೆ ವಿರಕ್ತಿಯನ್ನೂ ಬೋಧಿಸಲಾಗಿದೆ. ಈ ಕಾವ್ಯಗಳ ಅವಲೋಕನದಿಂದ ಗುರುಬಸವ ಶ್ರೇಷ್ಠ ಅನುಭಾವಿ ಎಂಬ ವಿಷಯ ವ್ಯಕ್ತವಾಗುತ್ತದೆ. ಗಹನವಾದ ವೇದಾಂತ ವಿಷಯಗಳನ್ನು ಗುರುಶಿಷ್ಯ ಸಂವಾದ ರೂಪದಲ್ಲಿ ಸುಲಭ ಶೈಲಿಯಲ್ಲಿ ನಿರೂಪಿಸಿರುವ ದೃಷ್ಟಿಯಿಂದ ಈತ ಒಳ್ಳೆಯ ಬೋಧಕ ಎಂಬ ಹೊಗಳಿಕೆಗೆ ಪಾತ್ರನಾಗಿದ್ದಾನೆ. (ಎಸ್.ಬಿ.)

**ಗುರುಮಠಕಲ್ :** ಗುಲ್ಬರ್ಗ ಜಿಲ್ಲೆ ಯಾದಗಿರಿ ತಾಲ್ಲೂಕಿನಲ್ಲಿ ಯಾದಗಿರಿಯಿಂದ ಈಶಾನ್ಯಕ್ಕೆ ಸು.40ಕಿಮೀ ದೂರದಲ್ಲಿರುವ ಊರು. ಹೋಬಳಿ ಕೇಂದ್ರ. ಪುರಸಭೆಯ ಆಡಳಿತಕ್ಕೆ ಒಳಪಟ್ಟಿದೆ. ಜನಸಂಖ್ಯೆ 16,927.

ಗುರುಮಠಕಲ್ ಪ್ರಸಿದ್ಧವಾಗಿರುವುದು ಈ ಸುತ್ತಿನ ಪ್ರದೇಶದ ಭೂ ವೈಜ್ಞಾನಿಕ ವೈಶಿಷ್ಟ್ಯಗಳಿಂದ. ಕರ್ನಾಟಕ ಹಾಗೂ ಆಂಧ್ರಪ್ರದೇಶದ ಗಡಿ ಪ್ರದೇಶದಲ್ಲಿರುವ ಈ ಭಾಗದಲ್ಲಿ ಕ್ರಿಟೇಷಿಯಸ್ ಯುಗದ ಬೆಸಾಲ್ಟ್ ಶಿಲೆಗಳ ನಡುವೆ ದೊರಕುವ ಅಂತಃಸ್ತರಗಳು ಅನೇಕ ಭೂವಿಜ್ಞಾನಿಗಳ ಗಮನವನ್ನು ಸೆಳೆದಿವೆ. ಈ ಪ್ರದೇಶದಲ್ಲಿ ಮೂರು ಭೂವೈಜ್ಞಾನಿಕ ಕಲ್ಪಗಳಿಗೆ ಸೇರಿದ ಶಿಲೆಗಳಿವೆ. ಅವು 1.ನೀಣೆಕಲ್ಲು- ಪುರಾತನ ಅಥವಾ ಪ್ರೀ ಕೇಂಬ್ರಿಯಲ್ ಕಲ್ಪ. 2.ಬೆಸಾಲ್ಟ್ ಹಾಗೂ ಜಲಜನ್ಯ ಅಂತಃಸ್ತರಗಳು- ಕ್ರಿಟೇಷಿಯಸ್ ಕಲ್ಪ. 3.ಲ್ಯಾಟರೈಟ್- ನವೀನ ಕಲ್ಪ.

ಪುರಾತನ ಕಲ್ಪದ ಶಿಲೆಗಳು ನೀಣೆಕಲ್ಲು ಹಾಗೂ ಗ್ರಾನೈಟ್ ಶಿಲೆಗಳನ್ನು ಹೊಂದಿದ್ದು, ಬೆಸಾಲ್ಟ್ ಶಿಲೆಗಳ ತಳಪಾಯವಾಗಿದೆ. ಅನೇಕ ಪೆಗ್‌ಮೆಟೈಟ್ ಮತ್ತು ಡಾಲರೈಟ್ ಶಿಲೆಗಳು ಗ್ರಾನೈಟ್ ಮತ್ತು ನೀಣೆಕಲ್ಲನ್ನು ಭೇದಿಸುತ್ತವೆ. ಕ್ರಿಟೇಷಿಯಸ್ ಯುಗದ ಬೆಸಾಲ್ಟ್ ಪದರಪದರವಾಗಿದ್ದು, ಈ ಪ್ರದೇಶದ ಬಿಡುಭಾಗವನ್ನು ಆಕ್ರಮಿಸುತ್ತದೆ. ಜಲಜನ್ಯ ಅಂತಃಸ್ತರಗಳ ದೊರೆಯುವಿಕೆ ಯಾವಾಗಲೂ ಬೆಸಾಲ್ಟ್ ಶಿಲೆಗಳಿಗೆ ಸೀಮಿತವಾಗಿರುತ್ತದೆ. ಬೆಸಾಲ್ಟ್ ಶಿಲೆಗಳ ಮೇಲ್ಭಾಗವು ನಿರಂತರವಾದ ಭೂವೈಜ್ಞಾನಿಕ ಕ್ರಿಯೆಗಳಿಗೊಳಗಾಗಿ ಲ್ಯಾಟರೈಟ್ ಆಗಿ ಪರಿವರ್ತನೆ ಹೊಂದಿದೆ.

ಗುರುಮಠಕಲ್ ಪ್ರದೇಶದಲ್ಲಿ 27 ಅಂತಃಸ್ತರಗಳಿದ್ದು ಬಹುತೇಕ ಎಲ್ಲ ಸ್ತರಗಳೂ ಪಳೆಯುಳಿಕೆಗಳಾಗಿವೆ. ಸಸ್ಯ ಹಾಗೂ ಪ್ರಾಣಿಗಳ

ಅವಶೇಷಗಳು ಹೆಚ್ಚಾಗಿ ಇರುವುದು ಹಾಗೂ ಅತ್ಯಂತ ವಿರಳವಾದ ಮತ್ತು ಅಪರೂಪವಾದ ಪಳೆಯುಳಿಕೆಗಳು ದೊರಕಿರುವುದು ಗಮನಾರ್ಹ. ಆಮೆಯ ಅವಶೇಷ, ಎಲೆಗಳ ಪ್ರತಿರೂಪ, ಸರೀಸೃಪಗಳ ಹಲ್ಲುಗಳು ಇಲ್ಲಿ ದೊರಕುವ ಪಳೆಯುಳಿಕೆಗಳಲ್ಲಿ ವಿಶೇಷ ಸ್ಥಾನವನ್ನು ಪಡೆದಿವೆ.

ಈ ಪ್ರದೇಶದಲ್ಲಿ ದೊರಕುವ ರೂಪಾಂತರ ಹೊಂದಿದ ಜ್ವಾಲಾ ಮುಖಿಯ ಬೂದಿ (ವಾಲ್ಕೆನಿಕ್ ಆ್ಯಷ್) ಮತ್ತು ಇಗ್ನಿಂಬ್ರೈಟ್ ಅಗ್ನಿಪರ್ವತಕ್ಕೆ ಕುರುಹಾಗಿವೆ. ಇಲ್ಲಿ ದೊರಕುವ ಬೆಣಚುಕಲ್ಲು ಮತ್ತು ಫೆಲ್ಡ್ ಸ್ಪಾರ್ ನಿಕ್ಷೇಪ ಕೈಗಾರಿಕೆಯ ದೃಷ್ಟಿಯಿಂದ ಗಮನಾರ್ಹವಾದದ್ದು. ಈ ಪ್ರದೇಶದ ಸುತ್ತ ಮುತ್ತ ಶಿಲಾಯುಗದ ಕಲ್ಲಿನ ಆಯುಧಗಳು ಸಹ ದೊರಕಿವೆ. (ಟಿ.ಆರ್.ಎಸ್.)

**ಗುರುಲಿಂಗವಿಭು :** ಸು.1550. ವೀರಶೈವ ಕವಿ. ಭಿಕ್ಷಾಟನಚರಿತೆ ಎಂಬ ಕಾವ್ಯದ ಕರ್ತೃ. ಈತ ತನ್ನನ್ನು ಕವಿರಾಯ ಎಂದೂ ಆಶು ಮಧುರಂ ಚಿತ್ರವಿಸ್ತಾರವೆಂದೆಂಬ ನಾಲ್ಕು ಬಗೆಯ ವಿರಚಿಸಲು ಬಲ್ಲ ವಸ್ತುಕ ಕವೀಂದ್ರರ ವರ್ಣಕ ಕವೀಶ್ವರರ ಕರ್ಣಾಭರಣ ಎಂದೂ ಕರೆದುಕೊಂಡಿರುವುದರಿಂದ ಭಿಕ್ಷಾಟನ ಚರಿತ್ರೆಯನ್ನಲ್ಲದೆ ಇತರ ಕೃತಿಗಳನ್ನು ಬರೆದಿರುವಂತೆ ತೋರುತ್ತದೆ. ಆದರೆ ಈತನ ಇತರ ಕೃತಿಗಳು ಸಿಕ್ಕಿಲ್ಲ. ಕಾವ್ಯದಲ್ಲಿ ಕವಿ ಸ್ವವಿಷಯಗಳೇನನ್ನೂ ಹೇಳಿಕೊಂಡಿಲ್ಲ. ಪೂರ್ವಕವಿಗಳಲ್ಲಿ ಬಸವ, ಚೆನ್ನಬಸವ, ಅಲ್ಲಮ, ರೇವಣ್ಣಾರ್ಯ, ಮಡಿವಾಳಮಾಚಿದೇವ, ಸಿದ್ಧರಾಮ, ಮಾದಿರಾಜರನ್ನು ಸ್ಮರಿಸಿದ್ದಾನೆ.

ಭಿಕ್ಷಾಟನಚರಿತೆ ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿದೆ. ಇದರಲ್ಲಿ 3 ಸಂಧಿಗಳೂ 155 ಪದ್ಯಗಳೂ ಇವೆ. ಶಿವ ತನ್ನ ಭಿಕ್ಷಾಪಾತ್ರೆಯಾದ ಬ್ರಹ್ಮಕಪಾಲವನ್ನು ಹಿಡಿದು ದ್ವಾರಕೆಗೆ ಬಂದು ಅದನ್ನು ತುಂಬುವಂತೆ ಕೃಷ್ಣನಿಗೆ ಹೇಳಲು, ಆತ ತನ್ನ ತಲೆಯ ರಕ್ತದಿಂದ ಕಪಾಲವನ್ನು ತುಂಬಲಾರದೆ ಭಾರತ ಯುದ್ಧವನ್ನುಂಟುಮಾಡಿ ಅಲ್ಲಿಯ ರಕ್ತಪ್ರವಾಹದಿಂದ ತುಂಬಿದ ಎಂಬುದು ಕಾವ್ಯದ ಕಥಾವಸ್ತು. ಈ ಕಥೆಯನ್ನು ಸೂತನು ನೈಮಿಶಾರಣ್ಯದಲ್ಲಿ ಸನಕಾದಿ ಮುನಿಗಳಿಗೆ ಹೇಳಿದಂತೆ ಉಕ್ತವಾಗಿದೆ. ಕವಿ ಸಂಸ್ಕೃತ ಭಿಕ್ಷಾಟನಚರಿತೆಯನ್ನು ಆಧರಿಸಿ ಈ ಕಾವ್ಯವನ್ನು ಬರೆದಿರಬಹುದೆಂದು ಊಹಿಸಲಾಗಿದೆ. ಕಾವ್ಯದಲ್ಲಿ ಅಲ್ಲಲ್ಲಿ ಸಂಸ್ಕೃತ ಶ್ಲೋಕಗಳೂ ಉದ್ಧೃತವಾಗಿವೆ. ಈ ಕಾವ್ಯಕ್ಕೆ ಒಂದು ಕನ್ನಡ ವ್ಯಾಖ್ಯಾನವಿದ್ದು ಇದು ತುಂಬ ಪ್ರೌಢವಾಗಿದೆ. ಈ ವ್ಯಾಖ್ಯಾನದ ಕರ್ತೃ ಯಾರು ಎಂಬುದು ತಿಳಿದಿಲ್ಲ. (ಎನ್.ಬಿ.)

**ಗುರುಶಾಂತಶಾಸ್ತ್ರಿ, ಶಿರಸಿ :** ಗಣ್ಯವಿದ್ವಾಂಸರು. ಮೂಲತಃ ಉತ್ತರ ಕನ್ನಡ ಜಿಲ್ಲೆ ಶಿರಸಿಯವರು. ಇವರು ವಿದ್ಯಾಭ್ಯಾಸಕ್ಕಾಗಿ ಮೈಸೂರಿಗೆ ಬಂದು ಪಿ.ಆರ್.ಕರಿಬಸವ ಶಾಸ್ತ್ರಿಗಳಲ್ಲಿ ಕನ್ನಡ ಮತ್ತು ವೇದ ವೇದಾಂತ ವಿದ್ಯಾಭ್ಯಾಸ ಮಾಡಿ ಅರಮನೆಯಲ್ಲಿ ವಿದ್ವಾಂಸರಾದರು. ಅನಂತರ ಬೆಂಗಳೂರು ಚಾಮರಾಜ ಸಂಸ್ಕೃತ ಕಾಲೇಜಿನಲ್ಲಿ ವೀರಶೈವ ದರ್ಶನದ ಪ್ರಾಧ್ಯಾಪಕರಾಗಿಯೂ ಕೆಲಸ ಮಾಡಿದರು.

ಇವರು ಕನ್ನಡದಲ್ಲಿ ಲಿಂಗಧಾರಣಚಂದ್ರಿಕೆ, ವೀರಶೈವಾನಂದ ಚಂದ್ರಿಕೆ, ಸಚಿತ್ರ ರೇಣುಕವಿಜಯ, ಉಪನ್ಯಾಸ ಸಂಗ್ರಹ, ಶಿವಲಿಂಗಾರ್ಚನ ಪ್ರಯೋಗ ಮೊದಲಾದ ಗ್ರಂಥಗಳನ್ನು ಬರೆದಿದ್ದಾರೆ. ಈಶಾವಾಸ್ಯ, ಕೇನ ಮತ್ತು ಸಿದ್ಧಾಂತ–ಈ ಮೂರು ಉಪನಿಷತ್ತುಗಳಿಗೆ ಉಮಚಿಗಿ ಶಂಕರಶಾಸ್ತ್ರಿಗಳು ಬರೆದಿದ್ದ ವ್ಯಾಖ್ಯಾನವನ್ನು ಅನುಸರಿಸಿ ಕನ್ನಡದಲ್ಲಿ ಭಾವಪ್ರಕಾಶ ಎಂಬ ತಾತ್ಪರ್ಯವನ್ನು ಬರೆದಿದ್ದಾರೆ. ಸಂಸ್ಕೃತ ನ್ಯಾಯಶತಕಕ್ಕೆ ಕನ್ನಡದಲ್ಲಿ ಟೀಕೆಯನ್ನು ರಚಿಸಿದ್ದಾರೆ. ಏಕೋತ್ತರಶತಸ್ಥಲ, ತತ್ತ್ವಪ್ರಕಾಶ, ಶತಸೂತ್ರ ರತ್ನ, ಶ್ರೀಕರಭಾಷ್ಯ ಮತ್ತು ಕ್ರಿಯಾಸಾರ–ಈ ಗ್ರಂಥಗಳನ್ನು ಇವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಮೈಸೂರಿನಿಂದ ಪ್ರಕಟವಾಗುತ್ತಿದ್ದ ಪಂಚಾಚಾರ್ಯ ಪ್ರಭಾ ಎಂಬ ಪತ್ರಿಕೆಗೆ ಇವರು ಕೆಲವು ಕಾಲ ಸಂಪಾದಕರಾಗಿದ್ದರು. ಮಹಾ ವಿದ್ವಾಂಸರೂ ಸರಳ ಜೀವಿಗಳೂ ಆಗಿದ್ದ ಇವರಿಗೆ ಅಂದಿನ ಮೈಸೂರು ಮಹಾರಾಜರು ಪಂಡಿತರತ್ನಂ ಎಂಬ ಬಿರುದನ್ನು ನೀಡಿ ಗೌರವಿಸಿದ್ದರು. (ಬಿ.ಎಸ್.)

**ಗುಲ್ಬರ್ಗ :** ಕರ್ನಾಟಕದ ಒಂದು ವಿಭಾಗ; ಜಿಲ್ಲೆ; ತಾಲ್ಲೂಕು– ಅವುಗಳ ಆಡಳಿತ ಕೇಂದ್ರ ಮತ್ತು ನಗರ. ಗುಲ್ಬರ್ಗ, ರಾಯಚೂರು, ಬೀದರ್, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳು ಗುಲ್ಬರ್ಗ ವಿಭಾಗಕ್ಕೆ ಒಳಪಟ್ಟಿವೆ.

**ಜಿಲ್ಲೆ :** ಗುಲ್ಬರ್ಗ ಜಿಲ್ಲೆ ಕರ್ನಾಟಕದ ಉತ್ತರ ಭಾಗದಲ್ಲಿದೆ. 1956ರಲ್ಲಿ ಭಾರತದ ರಾಜ್ಯಗಳ ಮರುವಿಂಗಡಣೆಯಾದಾಗ ಹೈದರಾಬಾದ್ ಕರ್ನಾಟಕ ಪ್ರದೇಶದಿಂದ ಅಂದಿನ ಮೈಸೂರು ರಾಜ್ಯಕ್ಕೆ ಸೇರಿದ ಮೂರು ಜಿಲ್ಲೆಗಳಲ್ಲಿ ಒಂದು. ಈ ಜಿಲ್ಲೆಯ ಉಳಿದೆರಡು ಜಿಲ್ಲೆಗಳು ಬೀದರ್ ಮತ್ತು ರಾಯಚೂರು. ಉತ್ತರದಲ್ಲಿ ಬೀದರ್ ಮತ್ತು ಮಹಾರಾಷ್ಟ್ರದ ಉಸ್ಮಾನಾಬಾದ್ ಜಿಲ್ಲೆ, ಪೂರ್ವದಲ್ಲಿ ಆಂಧ್ರ ಪ್ರದೇಶ, ದಕ್ಷಿಣದಲ್ಲಿ ರಾಯಚೂರು ಜಿಲ್ಲೆ, ಪಶ್ಚಿಮದಲ್ಲಿ ಬಿಜಾಪುರ ಮತ್ತು ಮಹಾರಾಷ್ಟ್ರ ಇವು ಗುಲ್ಬರ್ಗ ಜಿಲ್ಲೆಯನ್ನು ಸುತ್ತುವರಿದಿವೆ. ಜಿಲ್ಲೆಯನ್ನು ಗುಲ್ಬರ್ಗ ಮತ್ತು ಯಾದಗಿರಿ ಎಂದು ಎರಡು ಉಪವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಗುಲ್ಬರ್ಗ ಉಪವಿಭಾಗದಲ್ಲಿ ಚಿತ್ತಾಪುರ, ಅಫಜಲಪುರ, ಗುಲ್ಬರ್ಗ, ಅಳಂದ ಮತ್ತು ಸೇಡಂ ತಾಲ್ಲೂಕುಗಳೂ ಯಾದಗಿರಿ ಉಪವಿಭಾಗದಲ್ಲಿ ಚಿಂಚೋಳಿ, ಯಾದಗಿರಿ, ಜೇವರ್ಗಿ, ಶಾಹಪುರ ಮತ್ತು ಸುರಪುರ ತಾಲ್ಲೂಕುಗಳೂ ಇವೆ. 48 ಹೋಬಳಿಗಳೂ 1,386 ಗ್ರಾಮುಗಳೂ 12 ಪಟ್ಟಣಗಳೂ ಇರುವ ಗುಲ್ಬರ್ಗ ಜಿಲ್ಲೆಯ ವಿಸ್ತೀರ್ಣ 16,224ಚ.ಕಿಮೀ. ಜನಸಂಖ್ಯೆ 31,24,858. ವಿಸ್ತೀರ್ಣದಲ್ಲಿ ಇದು ರಾಜ್ಯದ ಮೊದಲನೆಯ ಜಿಲ್ಲೆಯಾದರೂ ಜನಸಂಖ್ಯೆಯಲ್ಲಿ ಮೂರನೆಯದು.

ಜಿಲ್ಲೆಯ ಹೆಚ್ಚಿನ ಭಾಗ ದಖನ್ ಟ್ರ್ಯಾಪ್ ಶಿಲಾಪ್ರದೇಶ. ಜಿಲ್ಲೆಯ ಮಧ್ಯದ ಭಾಗದಲ್ಲಿ ಸ್ವಲ್ಪಮಟ್ಟಿಗೆ ಭೀಮಾವರ್ಗಕ್ಕೆ ಸೇರಿದ ಸುಣ್ಣಕಲ್ಲು ಮತ್ತು ಶೇಲ್ ಪದರಗಳಿವೆ.ದಕ್ಷಿಣ ಮತ್ತು ಪೂರ್ವದ ಅಂಚಿನ ಕೆಲವೆಡೆಗಳಲ್ಲಿ ಬಹು ಪ್ರಾಚೀನವಾದ ಪೆನಿನ್ಸುಲರ್ ನೈಸ್ ಮತ್ತು ಧಾರವಾಡ ವರ್ಗಕ್ಕೆ ಸೇರಿದ ಶಿಲೆಗಳು ಕಂಡುಬರುತ್ತವೆ. ಗುಲ್ಬರ್ಗ ಜಿಲ್ಲೆ ದಖನ್ ಪ್ರಸ್ಥಭೂಮಿಯ ಭಾಗ. ಉತ್ತರದಿಂದ ದಕ್ಷಿಣಕ್ಕೆ ಇಳಿಜಾರಾಗಿದೆ. ಇಡೀ ಜಿಲ್ಲೆ ಸಾಮಾನ್ಯವಾಗಿ ಸಮುದ್ರಮಟ್ಟದಿಂದ 300ರಿಂದ 600ಮೀ. ಎತ್ತರದಲ್ಲಿದೆ. ಯಾದಗಿರಿ ಮತ್ತು ಸೇಡಂ ತಾಲ್ಲೂಕಗಳಲ್ಲಿ ಮಾತ್ರ ಕೆಲವು ಭಾಗಗಳು 600ಮೀಗಿಂತ ಎತ್ತರವಾಗಿವೆ. ಅಳಂದ ಮತ್ತು ಯಾದಗಿರಿ ತಾಲ್ಲೂಕುಗಳ ನೆಲ ಏರುತಗ್ಗುಗಳಿಂದ ಕೂಡಿದೆ. ಗುಲ್ಬರ್ಗ ಜಿಲ್ಲೆಯಲ್ಲಿ ಎತ್ತರವಾದ ಬೆಟ್ಟಗಳಿಲ್ಲ. ವಾಯುವ್ಯದಲ್ಲಿ ಪ್ರವೇಶಿಸುವ ಚಿಕ್ಕ ಬೆಟ್ಟಗಳ ಶ್ರೇಣಿಯೊಂದು ಆಗ್ನೇಯಾಭಿಮುಖವಾಗಿ ಸು.90ಕಿಮೀ ದೂರ ಸಾಗಿದೆ. ಶಾಹಪುರ ತಾಲ್ಲೂಕಿನಲ್ಲಿ ಶಾಹಪುರ ಪಟ್ಟಣದ ಬದಿಯಲ್ಲಿ ಮಹಮ್ಮದಪುರ ಬೆಟ್ಟ ಹಬ್ಬಿದೆ. ಸುರಪುರ, ಯಾದಗಿರಿ ಮತ್ತು ಸೇಡಂ ತಾಲ್ಲೂಕುಗಳಲ್ಲೂ ಅಷ್ಟೇನೂ ಎತ್ತರವಿಲ್ಲದ ಕೆಲವು ಬೆಟ್ಟಗಳುಂಟು. ಸುರಪುರ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿರುವ ಕನ್ನಳ್ಳಿ ಮಂಗಳೂರು ಹತ್ತಿರದ ಬೆಟ್ಟದ ಬದಿಯಲ್ಲಿ ಹಿಂದೆ ಚಿನ್ನಕ್ಕಾಗಿ ಪೂರ್ವೇಕ್ಷಣೆ ಮಾಡಿದ್ದುಂಟು. ತಿಂಥಿಣಿ ಹಳ್ಳಿಯ ಸುತ್ತ ತಾಮ್ರನಿಕ್ಷೇಪಗಳಿವೆ. ಯಾದಗಿರಿ, ಸುರಪುರ ತಾಲ್ಲೂಕುಗಳಲ್ಲಿ ಗಾಜಿನ ಕೈಗಾರಿಕೆಗೆ ಉಪಯುಕ್ತವಾದ ಕಣಶಿಲೆ, ಯಾದಗಿರಿಯಲ್ಲಿ ಅಗೇಟ್ ಮತ್ತು ಮರಳು, ಸುರಪುರ ತಾಲ್ಲೂಕಿನಲ್ಲಿ ತೋರಮಲ್ಲಿ, ಗುಲ್ಬರ್ಗದಲ್ಲಿ ಜಿಪ್ಸಂ, ಸುರಪುರ ತಾಲ್ಲೂಕಿನಲ್ಲಿ ಕ್ಯಲ್ಕೇರಿಯಸ್ ಪುಡಿ, ಚಿಂಚೋಳಿ ತಾಲ್ಲೂಕಿನಲ್ಲಿ ಫುಲ್ಲರ್ಸ್ ಅರ್ತ್ ಸಿಗುತ್ತವೆ. ಸಿಮೆಂಟ್ ಕೈಗಾರಿಕೆಗೆ ಉಪಯುಕ್ತವಾದ ಸುಣ್ಣಕಲ್ಲು ಜಿಲ್ಲೆಯ ಹಲವೆಡೆಗಳಲ್ಲುಂಟು. ಸಾಬೂನುಗಲ್ಲು ಯಾದಗಿರಿಯಲ್ಲೂ ಲವಣ ಸುರಪುರದಲ್ಲೂ ದೊರಕುತ್ತವೆ. ಕಟ್ಟಡಗಳಿಗೆ ಉಪಯೋಗಿಸುವ ಉತ್ತಮವಾದ ಕಲ್ಲು ಜಿಲ್ಲೆಯಲ್ಲಿ ಹೇರಳವಾಗಿ ದೊರಕುತ್ತದೆ.

ಜಿಲ್ಲೆಯ ಮುಖ್ಯ ನದಿಗಳು ಕೃಷ್ಣಾ ಮತ್ತು ಭೀಮಾ. ಬೆಳಗಾಂವಿ ಜಿಲ್ಲೆಯಲ್ಲಿ ಕರ್ನಾಟಕವನ್ನು ಪ್ರವೇಶಿಸುವ ಕೃಷ್ಣಾ ನದಿ ಈ ಜಿಲ್ಲೆಯ ದಕ್ಷಿಣ ಎಲ್ಲೆಯಾಗಿ ಹರಿದು ಗುಲ್ಬರ್ಗ ಜಿಲ್ಲೆಯನ್ನು ರಾಯಚೂರು ಜಿಲ್ಲೆಯಿಂದ ಬೇರ್ಪಡಿಸುತ್ತದೆ. ಗುಲ್ಬರ್ಗ ಜಿಲ್ಲೆಯಲ್ಲಿ ಈ ನದಿಯ ಉದ್ದ ಸು.160ಕಿಮೀ. ಸುರಪುರ ತಾಲ್ಲೂಕಿನ ನಾರಾಯಣಪುರದಿಂದ ಸು.3ಕಿಮೀ ಕೆಳಗೆ ಈ ನದಿಯ 60ಮೀ. ಎತ್ತರದ ಜಲದುರ್ಗ ಜಲಪಾತವಿದೆ. ಭೀಮಾ ನದಿ ಮಹಾರಾಷ್ಟ್ರದಿಂದ ಕರ್ನಾಟಕವನ್ನು

ಪ್ರವೇಶಿಸಿ, ಬಿಜಾಪುರ ಜಿಲ್ಲೆಯ ಎಲ್ಲೆಯ ಉದ್ದಕ್ಕೆ ಸ್ವಲ್ಪ ದೂರ ಹರಿದು ಅನಂತರ ಗುಲ್ಬರ್ಗ ಜಿಲ್ಲೆಯನ್ನು ಹೊಕ್ಕು 219ಕಿಮೀ ದೂರ ಸಾಗಿ ಕೃಷ್ಣಾ ನದಿಗೆ ಸೇರುವುದು. ಮಹಾರಾಷ್ಟ್ರದಲ್ಲಿ ಹುಟ್ಟಿ ಅಫಜಲಪುರ ತಾಲ್ಲೂಕಿನಲ್ಲಿ 24ಕಿಮೀ ದೂರ ಹರಿದು ಅಫಜಲಪುರಕ್ಕೆ ಪಶ್ಚಿಮದಲ್ಲಿ ಭೀಮಾನದಿಯನ್ನು ಸೇರುವ ಬೋರಿ, ಮಹಾರಾಷ್ಟ್ರದಲ್ಲಿ ಉಗಮಿಸಿ ಆಳಂದ ತಾಲ್ಲೂಕಿನಲ್ಲಿ ಗುಲ್ಬರ್ಗ ಜಿಲ್ಲೆಯನ್ನು ಹೊಕ್ಕು ಜಿಲ್ಲೆಯಲ್ಲಿ 88ಕಿಮೀ ದೂರ ಹರಿದು ಅಫ್‌ಜಲಪುರ ತಾಲ್ಲೂಕಿನ ಗಾಣಗಾಪುರದ ಬಳಿ ಭೀಮಾನದಿಗೆ ಸೇರುವ ಅಮರಜ ನದಿ, ಆಂಧ್ರ ಪ್ರದೇಶದಿಂದ ಗುಲ್ಬರ್ಗ ಜಿಲ್ಲೆಯನ್ನು ಪ್ರವೇಶಿಸಿ ಸು.64ಕಿಮೀ ದೂರ ಹರಿದು ಚಿತ್ತಾಪುರದ ಹುನಗುಂಟ ಗ್ರಾಮದ ಬಳಿ ಭೀಮೆಯನ್ನು ಕೂಡುವ ಕಾಗಿಣಾ ನದಿ, ಮಹಾರಾಷ್ಟ್ರದಲ್ಲಿ ಹುಟ್ಟಿ ಗುಲ್ಬರ್ಗ ಜಿಲ್ಲೆಯನ್ನು ಪ್ರವೇಶಿಸಿ ಕಾಗಿಣಾ ನದಿಯನ್ನು ಸೇರುವ ಮುಲ್ಲಾಮಾರಿ ಇವು ಜಿಲ್ಲೆಯ ಇತರ ನದಿಗಳು. ಇಡೀ ಜಿಲ್ಲೆ ಕೃಷ್ಣಾ ಮತ್ತು ಭೀಮಾ ನದಿಗಳ ಜಲಾನಯನ ಭೂಮಿ.

ಗುಲ್ಬರ್ಗ ಜಿಲ್ಲೆಯ ವಾಯುಗುಣ ಶುಷ್ಕ ಮತ್ತು ಆರೋಗ್ಯಕರ. ಇಲ್ಲಿಯ ಹವಾಗುಣ ದಖಿನ್ ಪ್ರಸ್ಥಭೂಮಿಯ ಮಾದರಿಯದೆ ಆಗಿದೆ. ಫೆಬ್ರವರಿಯಿಂದ ಜೂನ್ ಆರಂಭದವರೆಗೆ ಬೇಸಗೆ. ಅಲ್ಲಿಂದ ಮುಂದೆ ಸೆಪ್ಟೆಂಬರ್ ಅಂತ್ಯದ ವರೆಗೆ ಮಳೆಗಾಲ. ಜಿಲ್ಲೆಯ ವಾರ್ಷಿಕ ಸರಾಸರಿ ಮಳೆ 715.5ಮಿಮೀ. ಡಿಸೆಂಬರಿನಿಂದ ಫೆಬ್ರವರಿಯವರೆಗೆ ಚಳಿಗಾಲ. ಆಗಿನ ಮಧ್ಯಕ ದೈನಿಕ ಗರಿಷ್ಠ ಉಷ್ಣತೆ 14.8°ಸೆಂ. (58.6°ಫ್ಯಾ.) ಮೇ ಅತ್ಯಂತ



ಉಷ್ಣತೆಯ ತಿಂಗಳು. ಆಗಿನ ಮಧ್ಯಕ ದೈನಿಕ ಗರಿಷ್ಠ ಉಷ್ಣತೆ 40.6°ಸೆಂ 105.1°ಫ್ಯಾ). ಕೆಲವು ಸಾರಿ ಹಗಲಿನ ಉಷ್ಣತೆ 45°ಸೆಂ. (113°ಫ್ಯಾ) ವರೆಗೂ ಏರುವುದುಂಟು.

ಗುಲ್ಬರ್ಗ ಜಿಲ್ಲೆಯಲ್ಲಿ ಎರಡು ಬಗೆಯ ಕಾಡುಗಳನ್ನು ಕಾಣಬಹುದು. ಈಶಾನ್ಯ ಭಾಗದ ಪರ್ಣಪಾತಿ ಕಾಡು ಒತ್ತಾಗಿದ್ದು ತೇಗ, ಬೀಟೆ, ನಲ್ಲಮಡ್ಡಿ, ಹುರಗಲು ಮರಗಳಿಂದ ಕೂಡಿದೆ. ಆಗ್ನೇಯ ಭಾಗದಲ್ಲಿರುವ ಕುರುಚಲು ಕಾಡು ಸೌದೆಗೆ ಮಾತ್ರ ಉಪಯುಕ್ತ. ಜಿಲ್ಲೆಯ ಒಟ್ಟು ಅರಣ್ಯ ಪ್ರದೇಶ 696ಚ.ಕಿಮೀ. ಇದು ಇಡೀ ಜಿಲ್ಲೆಯ ಸೇ.4ರಷ್ಟು. ಇದರಲ್ಲಿ ಸೇ.41ರಷ್ಟು ಭಾಗ ಚಿಂಚೋಳಿ ತಾಲ್ಲೂಕಿನಲ್ಲೇ ಇದೆ. ಚೌಬೀನೆ, ಸೌದೆ, ಬೀಡಿ ಎಲೆ, ಚರ್ಮ ಹದಮಾಡಲು ಉಪಯೋಗಿಸುವ ತೊಗಟೆ, ಸೀತಾಫಲ, ಜೇನು ಮೇಣ, ಹಣ್ಣು,ರಾಳ, ಗೋಂದು, ಹುಳಿ, ಸೀಗೆ ಇವು ಕೆಲವು ಅರಣ್ಯೋತ್ಪನ್ನಗಳು ಜಿಲ್ಲೆಯ ನೈಸರ್ಗಿಕ ಸಸ್ಯಸಂಪತ್ತು ಅಷ್ಟೇನೂ ಸಮೃದ್ಧವಾಗಿಲ್ಲ.

ಗುಲ್ಬರ್ಗ ಜಿಲ್ಲೆಯಲ್ಲಿ ವನ್ಯಮೃಗಗಳು ಹೆಚ್ಚಾಗಿಲ್ಲ. ಕಾಡುಗಳಲ್ಲಿ ಕೆಲವು ಕಡೆ ಚಿರತೆಗಳೂ ಕಿರುಬಗಳೂ ಉಂಟು. ಹುಲಿಗಳು ಕಾಣಬರುವುದಿಲ್ಲ. ಚಿಂಚೋಳಿಯ ಕಾಡುಗಳಲ್ಲಿ ಕರಡಿಗಳಿದ್ದು, ಅವುಗಳಿಂದ ಪೈರುಗಳಿಗೆ ಹಾನಿಯಾಗುತ್ತಿರುತ್ತದೆ. ಕತ್ತೆಕಿರುಬ, ತೋಳ, ಕಾಡುನಾಯಿ, ಜಿಂಕೆ, ನರಿ ಇವೆ. ಗಿಣಿ, ಮೈನಾ, ಮರಕುಟುಕ, ನವಿಲು, ಗೂಬೆ, ಹದ್ದು, ಹಾಡುವಕ್ಕಿ ಮತ್ತು ಪಾರಿವಾಳಗಳು ಬಹುತೇಕ ವಿರಳವಾಗುತ್ತಿವೆ. ಗೋಸುಂಬೆ, ಚೇಳು, ಚಿಪ್ಪುಹಂದಿ, ನಾಗರಹಾವು, ಮಂಡಲದಹಾವು ಮೊದಲಾದ ಪ್ರಾಣಿಗಳನ್ನು ಕಾಣಬಹುದು.



ಶರಣಬಸವೇಶ್ವರ ದೇವಾಲಯ, ಗುಲ್ಬರ್ಗ

ಅಚ್ಚಕಪ್ಪಿನ, ಸಾಧಾರಣ ಕಪ್ಪಿನ, ಕೆಂಪುಮರಳು ಮಿಶ್ರಿತ ಜೇಡಿಯ, ಜಂಬಿನ ಮತ್ತು ಮೆಕ್ಕಲಿನ ಮಣ್ಣುಗಳು ಜಿಲ್ಲೆಯಲ್ಲಿವೆ. ಒಳಬೇಸಾಯಕ್ಕೆ ಸಹಾಯಕವಾದ ಕಪ್ಪುಮಣ್ಣು ಗುಲ್ಬರ್ಗ, ಜೇವರ್ಗಿ, ಚಿತ್ತಾಪುರ, ಸೇಡಂ, ಚಿಂಚೋಳಿ ಮತ್ತು ಸುರಪುರ ತಾಲ್ಲೂಕುಗಳಲ್ಲಿ ಕಾಣಬಹುದು. ಕೆಲವು ಕಡೆಗಳಲ್ಲಿ ಕಪ್ಪು ಮತ್ತು ಕೆಂಪು ಮಣ್ಣುಗಳು ಮಿಶ್ರಿತವಾಗಿವೆ. ಎತ್ತರದ ಪ್ರದೇಶಗಳಲ್ಲಿ ಕೆಂಪು ಮಣ್ಣು ಸಾಧಾರಣ. ಬಾವಿ ಮತ್ತು ಹೊಳೆಗಳ ನೀರಾವರಿ ಸೌಲಭ್ಯವಿದೆ. ಕೃಷ್ಣಾ ಮೇಲ್ದಂಡೆ ಯೋಜನೆಯಿಂದ ಗುಲ್ಬರ್ಗ ಜಿಲ್ಲೆಗೂ ಪ್ರಯೋಜನವಾಗುತ್ತಿದೆ. ಯಾದಗಿರಿ ತಾಲ್ಲೂಕಿನ ಹತ್ತಿ ಕುಣಿ ಹೊಳೆಯ ನೀರು ಬೇಸಾಯಕ್ಕೆ ಒದಗಿಬಂದಿದೆ. ಚಂದ್ರಂಪಳ್ಳಿ, ಭೀಮಾನದಿ, ಅಮರಜ, ಬೆಣ್ಣೆತೊರೆ, ಮುಲ್ಲಾಮಾರಿ, ಮುಧೋಳ, ಕಾಗಿಣಾ, ಇಂದನಕಲ್ ಇವು ಜಿಲ್ಲೆಯಲ್ಲಿ ಕಾರ್ಯಗತವಾಗಲಿರುವ, ಆಗುತ್ತಿರುವ ಕೆಲವು ನೀರಾವರಿ ಯೋಜನೆಗಳು. ಜಿಲ್ಲೆಯಲ್ಲಿ ಜೋಳ, ತೊಗರಿ, ಸೇಂಗಾ, ಬತ್ತ, ಹತ್ತಿ, ಗೋದಿ ಮತ್ತು ದ್ವಿದಳ ಧಾನ್ಯಗಳನ್ನೂ ಬೆಳೆಯಲಾಗುತ್ತಿದೆ. ಈ ಮುಖ್ಯ ಬೆಳೆಗಳ ಜೊತೆಗೆ ಜಿಲ್ಲೆಯಲ್ಲಿ ಬಾರ್ಲಿ, ಮುಸುಕಿನ ಜೋಳ, ರಾಗಿ, ಹೆಸರು, ತೊಗರಿ, ಕಬ್ಬು, ಹರಳು, ಎಳ್ಳು, ಮೆಣಸಿನಕಾಯಿ, ಈರುಳ್ಳಿ ಮುಂತಾದುವನ್ನು ಬೆಳೆಯುತ್ತಾರೆ.

ಒಳನಾಡಿನಲ್ಲಿ ಮೀನು ಸಾಕುವ ಹಾಗೂ ಬೆಳೆಸುವ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ. ಗುಲ್ಬರ್ಗದ ಕೆರೆಗಳಲ್ಲಿ ಮೀನುಗಳನ್ನು ಅಭಿವೃದ್ಧಿ ಗೊಳಿಸಲಾಗುತ್ತಿದೆ. ಯಾದಗಿರಿ ವಿಭಾಗದಲ್ಲಿ ಈ ಕಾರ್ಯ ಆರಂಭವಾಗಿದೆ. ಜಿಲ್ಲೆಯಲ್ಲಿ ಪಶುಪಾಲನೆಯೂ ವ್ಯವಸಾಯದ ಒಂದು ಅಂಗವಾಗಿ ಮುಂದುವರಿಯುತ್ತಿದೆ.



ಪ್ರಾಚೀನ ಗೋರಿಗಳು, ಗುಲ್ಬರ್ಗ

ಜಿಲ್ಲೆಯಲ್ಲಿ ಬಹಳ ಜನ ಬೇಸಾಯವನ್ನು ಅವಲಂಬಿಸಿದ್ದಾರೆ. ಗೃಹೋದ್ಯೋಗಗಳಲ್ಲಿ ನೇಕಾರಿಕೆ ಮುಖ್ಯ. ಯಾದಗಿರಿಯಲ್ಲಿ ಕಂಬಳಿಗಳನ್ನು ನೇಯುತ್ತಾರೆ. ಹಿತ್ತಾಳೆ ಪಾತ್ರೆ, ಸೀಗೆ, ಮಸಾಲೆ, ಗಂಧದೆಣ್ಣೆ, ಬೀಡಿ ಕಟ್ಟುವುದು – ಇವು ಇಲ್ಲಿಯ ಕೆಲವು ಹಳೆಯ ಕೈಗಾರಿಕೆಗಳು. ವಿದ್ಯುತ್ತಿನ ಬಳಕೆ ಹೆಚ್ಚಿದಂತೆ ಜಿಲ್ಲೆಯಲ್ಲಿ ಹೊಸ ಕೈಗಾರಿಕೆಗಳು ಬೆಳೆದುಬಂದಿವೆ. ಅನೇಕ ಸಣ್ಣ ಪ್ರಮಾಣದ ಆಧುನಿಕ ಕೈಗಾರಿಕೆಗಳು ಜಿಲ್ಲೆಯ ನಗರಗಳಲ್ಲಿ ಹರಡಿ ವಿಸ್ತರಿಸುತ್ತಿವೆ. ಅವುಗಳಲ್ಲದೆ ವ್ಯವಸಾಯ ಮತ್ತು ಗೃಹೋಪಕರಣಗಳ ಉತ್ಪಾದನೆಯ ಘಟಕಗಳು ಇವೆ. ಮರದ ಪೀಠೋಪಕರಣಗಳ, ಮರ ಕೊಯ್ಯುವ ಕಾರ್ಖಾನೆ, ಚರ್ಮ ಹದ ಮಾಡುವುದು, ಚರ್ಮದ ಪಾದರಕ್ಷೆ, ಚೀಲ ಮುಂತಾದವುಗಳ ತಯಾರಿಕೆಯು ಇಲ್ಲಿದೆ. ಜಿಲ್ಲೆಯಲ್ಲಿ 129 ಕಾರ್ಖಾನೆಗಳು, 11 ಕೈಗಾರಿಕಾ ಪ್ರದೇಶಗಳು, 140 ಕೈಗಾರಿಕಾ ಶೆಡ್ಡುಗಳು ಇವೆ. ಜಿಲ್ಲೆಯಲ್ಲಿ ಸಣ್ಣ ಕೈಗಾರಿಕೆಗಳ ತರಬೇತಿ ಕೇಂದ್ರಗಳಿದ್ದು ಸೂಕ್ತ ತರಬೇತಿ ಮತ್ತು ಮಾರ್ಗದರ್ಶನ ಮಾಡುತ್ತಿವೆ.

ಗುಲ್ಬರ್ಗ, ಸೇಡಂ, ಯಾದಗಿರಿ, ಶಾಹಪುರ, ಸುರಪುರ, ಶಾಹಬಾದ್, ನಲವಾರ, ಚಿತ್ತಾಪುರ ಮತ್ತು ಸಯ್ಯಾಪುರಗಳಲ್ಲಿ ನಿಯಂತ್ರಿತ ಮಾರುಕಟ್ಟೆಗಳಿವೆ. ಜಿಲ್ಲೆಯಲ್ಲಿ ಅನೇಕ ಬ್ಯಾಂಕುಗಳಿದ್ದು ವಾಣಿಜ್ಯೋದ್ಯಮಿಗಳಿಗೆ ಆರ್ಥಿಕ ನೆರವು ದೊರೆಯುತ್ತಿವೆ. ಶಾಹಬಾದಿನ ಸಿಮೆಂಟ್ ಕಾರ್ಖಾನೆ, ಗುಲ್ಬರ್ಗದ ಜವಳಿ ಗಿರಣಿ, ಎಣ್ಣೆ ಗಿರಣಿ - ಇವು ಕೆಲವು ದೊಡ್ಡಕೈಗಾರಿಕೆಗಳು. ಇವಲ್ಲದೆ ಸಣ್ಣ ಗಾತ್ರದ ಅನೇಕ ಆಧುನಿಕ ಉದ್ಯಮಗಳಿವೆ.

ಗುಲ್ಬರ್ಗ ಜಿಲ್ಲೆಯಲ್ಲಿ ಎರಡು ಬ್ರಾಡ್‌ಗೇಜ್ ರೈಲು ಮಾರ್ಗಗಳಿವೆ. ಗುಲ್ಬರ್ಗ ನಗರದ ಮೂಲಕ ಹಾದುಹೋಗುವ ಮುಂಬಯಿ- ರಾಯಚೂರು ಮಾರ್ಗವೊಂದು; ವಾಡಿಯಿಂದ ಸಿಕಂದರಾಬಾದಿಗೆ ಇನ್ನೊಂದು. ಯಾದಗಿರಿ, ವಾಡಿ, ಶಾಹಬಾದ, ಗುಲ್ಬರ್ಗ ಮುಖ್ಯ ನಿಲ್ದಾಣಗಳು. ವಾಡಿ - ಸಿಕಂದರಾಬಾದ್ ಮಾರ್ಗದಲ್ಲಿ ವಾಡಿ, ಚಿತ್ತಾಪುರ, ಮಳಖೇಡ ರೋಡ್, ಸೇಡಂ - ಇವು ಮುಖ್ಯ ನಿಲ್ದಾಣಗಳು. ಹುಮನಾಬಾದ್- ಗುಲ್ಬರ್ಗ, ಗುಲ್ಬರ್ಗ-ಶಾಹಪುರ, ಜೇವರ್ಗಿ- ಜೆರಟ್ಗಿ, ಖಾನಾಪುರ- ಲಿಂಗಸುಗೂರು, ಶಾಹಪುರ- ಹತ್ತಿಗುಡೂರ್, ಗುಲ್ಬರ್ಗ- ಕೊಡಂಗಲ್, ಗುಲ್ಬರ್ಗ- ಅಳಂದ, ಅಳಂದ- ವಾಗ್ದಾರಿ ರಸ್ತೆಗಳು ರಾಜ್ಯ ಹೆದ್ದಾರಿಗಳು. ಇವಲ್ಲದೆ ಜಿಲ್ಲಾ ಮತ್ತು ಗ್ರಾಮಾಂತರ ರಸ್ತೆಗಳೂ ಇವೆ.

*

ಗುಲ್ಬರ್ಗ ಜಿಲ್ಲೆ 9ನೆಯ ಶತಮಾನದಲ್ಲಿ ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ಪಾತ್ರ ವಹಿಸಿತ್ತು. ಈ ಜಿಲ್ಲೆಯಲ್ಲಿ ಸೇಡಂ ತಾಲ್ಲೂಕಿನಲ್ಲಿರುವ ಮಳಖೇಡ ರಾಷ್ಟ್ರಕೂಟ ಅರಸರ ರಾಜಧಾನಿಯಾಗಿದ್ದು ಮಾನ್ಯಖೇಟವೆಂದು ಪ್ರಸಿದ್ಧಿ ಹೊಂದಿತ್ತು. ಕಲ್ಯಾಣದ ಚಾಳುಕ್ಯರು ಹತ್ತನೆಯ ಶತಮಾನದ ಅಂತ್ಯಭಾಗದಿಂದ ಆಳತೊಡಗಿದಾಗ ಅವರು ತಮ್ಮ ರಾಜಧಾನಿಯನ್ನು ಜಿಲ್ಲೆಯ ಕಲ್ಯಾಣಕ್ಕೆ ಬದಲಾಯಿಸಿಕೊಂಡರು. 11-12ನೆಯ ಶತಮಾನಗಳ ಶಾಸನಗಳಲ್ಲಿ ಗುಲ್ಬರ್ಗ ಕಲುಂಬರಗಿ, ಕಲುಂಬರಗ ಎಂಬ ಹೆಸರುಗಳಲ್ಲಿ ಖ್ಯಾತಿ ಹೊಂದಿತ್ತು. ಆಳಂದ ತಾಲ್ಲೂಕು ಮತ್ತು ಪರಿಸರದ ಪ್ರದೇಶಗಳು ಅಂದು ಆಳಂದೆ ಸಾಸಿರವೆಂಬ ಪ್ರಾಂತ್ಯದಲ್ಲಿ ಸೇರಿದ್ದುವು. ಕಲ್ಯಾಣದ ಚಾಳುಕ್ಯರ ಅಧೀನರಾಗಿ ಬಾಣ ವಂಶಕ್ಕೆ ಸೇರಿದ ಗೊಂಕರಸ ಮುಂತಾದ ಹಲವಾರು ಸಣ್ಣ ಮಂಡಲದ ಅಧಿಪತಿಗಳು ಚಿತ್ತಾಪುರ ತಾಲ್ಲೂಕಿನ ಪರಿಸರದಲ್ಲಿ ಆಳುತ್ತಿದ್ದರೆಂದು ಇತ್ತೀಚಿನ ಶಾಸನಗಳಿಂದ ತಿಳಿದುಬಂದಿದೆ.



ಬಂದೇ ನವಾಜ್ ದರ್ಗಾ, ಗುಲ್ಬರ್ಗ

ಮಹಮ್ಮದ್ ಬಿನ್ ತುಗಲಕ್ ದೆಹಲಿಯ ಸುಲ್ತಾನನಾಗಿದ್ದಾಗ ದಕ್ಷಿಣಕ್ಕೆ ದಂಡಯಾತ್ರೆ ಮಾಡಿ ವಾರಂಗಲಿನಲ್ಲಿ ಆಳಿದ ಕಾಕತೀಯರನ್ನು ಸೋಲಿಸಿ ಅವರ ರಾಜ್ಯವನ್ನು ಕಸಿದುಕೊಂಡಾಗ ಗುಲ್ಬರ್ಗ ಸಹ ಸುಲ್ತಾನರ ಅಧೀನಕ್ಕೆ ಒಳಪಟ್ಟಿತು. ಇದು 13ನೆಯ ಶತಮಾನದ ಅಂತ್ಯದಿಂದ 45 ವರ್ಷಗಳ ಕಾಲ ಇತ್ತು. ಆದರೆ ಅಲಾಉದ್ದೀನ್ ಹಸನ್ ಗಂಗು ಬಹಮನ್ ಷಾ 1347ರಲ್ಲಿ ಬಹಮನೀ ರಾಜ್ಯವನ್ನು ಸ್ಥಾಪಿಸಿದಾಗ ಗುಲ್ಬರ್ಗ ಅವನ ರಾಜಧಾನಿಯಾಯಿತು. 1424ರವರೆಗೂ ರಾಜಧಾನಿಯಾಗಿ ಇದು ಮೆರೆಯಿತು. ಬಹಮನೀ ರಾಜ್ಯ ಐದು ಭಾಗಗಳಾಗಿ ಒಡೆದಾಗ ಇದರ ಸ್ವಲ್ಪಭಾಗ ಬಿದರೆಯ ಬರೀದ್ ಶಾಹೀ ಸುಲ್ತಾನರ ಅಧೀನದಲ್ಲೂ ಸ್ವಲ್ಪ ಭಾಗ ಬಿಜಾಪುರದ ಆದಿಲ್‌ಶಾಹೀ ಸುಲ್ತಾನರ ಅಧೀನದಲ್ಲೂ ಇತ್ತು.

ಔರಂಗಜೇಬ್ ದಕ್ಷಿಣದ ದಂಡಯಾತ್ರೆ ಕೈಗೊಂಡಾಗ ಗುಲ್ಬರ್ಗ ಅವನ ಕೈವಶವಾಯಿತು. ಔರಂಗಜೇಬನ ಮರಣಾನಂತರ ಮುಗಲ ಸಾಮ್ರಾಜ್ಯದಲ್ಲಿ ಅಂತಃಕಲಹಗಳು ಸಂಭವಿಸಿದಾಗ ಅಲ್ಲಿಯ ರಾಜಕೀಯದಲ್ಲಿ ಬೇಸತ್ತ ಸುಬೇದಾರ ಆಸಫ್ ಜಾ ದಕ್ಷಿಣದ ಪ್ರಾಂತ್ಯಾಧಿಪತಿಯಾಗಿ ಬಂದು ಇಲ್ಲಿ ಸ್ವತಂತ್ರನಾದ. ಇದು ಹೈದರಾಬಾದಿನ ನಿಜಾಂ ವಂಶದ ನಾಂದಿಯಾಯಿತು. ಆ ಸಮಯದಲ್ಲಿ ಸುರಪುರ, ಶಾಹಾಪುರ, ಜೇವರಗಿ ತಾಲ್ಲೂಕುಗಳ ಭಾಗ ಸುರಪುರದ ನಾಯಕರ ಆಡಳಿತದಲ್ಲಿ ಸ್ವತಂತ್ರವಾದ ಸಂಸ್ಥಾನವಾಯಿತು. ಗುಲ್ಬರ್ಗದ ಇತರ ಭಾಗಗಳು ನಿಜಾಂ ರಾಜ್ಯಕ್ಕೆ ಸೇರಿದುವು. 1707-1857ರ ವರೆಗೆ ಸ್ವತಂತ್ರವಾಗಿ ಸುರಪುರದಲ್ಲಿ ಆಳಿದ ಬೇಡರ ಮನೆತನದ ರಾಜಾ ವೆಂಕಟಪ್ಪನಾಯಕ 1857ರ ಕ್ರಾಂತಿಯಲ್ಲಿ ಭಾಗವಹಿಸಿದ. ಬ್ರಿಟಿಷರು ಅವನನ್ನು ದಮನಮಾಡಿ ಅವನಿಂದ ಕಸಿದುಕೊಂಡ ರಾಜ್ಯವನ್ನು ನಿಜಾಮನಿಗೆ ವಹಿಸಿಕೊಟ್ಟರು.

ನಿಜಾಮರ ಸಂಸ್ಥಾನದ ಮುಖ್ಯಮಂತ್ರಿಯಾಗಿದ್ದ ಸಾಲಾರ್ ಜಂಗ್ ಕೈಗೊಂಡ ಆಡಳಿತ ಸುಧಾರಣೆಗಳಲ್ಲಿ ಸಂಸ್ಥಾನದಲ್ಲಿ ಹಲವಾರು ಜಿಲ್ಲೆಗಳು ಅಸ್ತಿತ್ವಕ್ಕೆ ಬಂದುವು. ಆ ಸಂದರ್ಭದಲ್ಲಿ ಗುಲ್ಬರ್ಗ ಸುರಪುರ ಜಿಲ್ಲೆಯ ಒಂದು ಭಾಗವಾಯಿತು. ಗುಲ್ಬರ್ಗವನ್ನು ಒಂದು ಪ್ರತ್ಯೇಕವಾದ ಜಿಲ್ಲೆಯಾಗಿ ಪರಿವರ್ತಿಸಿದ್ದು 1873ರಲ್ಲಿ. ಅಂದಿನಿಂದ ಆ ಜಿಲ್ಲೆಗೆ ಸಂಬಂಧಿಸಿದಂತೆ ಅನೇಕ ಬದಲಾವಣೆಗಳಾದುವು. 1956ರಲ್ಲಿ ಕೋಡಂಗಲ್ ಮತ್ತು ತಾಂಡೂರ್ ತಾಲ್ಲೂಕುಗಳು ಆಂಧ್ರಪ್ರದೇಶಕ್ಕೆ ಸೇರಿದುವು. ಉಳಿದ ತಾಲ್ಲೂಕುಗಳನ್ನು ಮೈಸೂರು ರಾಜ್ಯಕ್ಕೆ ಸೇರಿಸಲಾಯಿತು.

ಗುಲ್ಬರ್ಗ ಜಿಲ್ಲೆಯ ಮಳಖೇಡ ರಾಷ್ಟ್ರಕೂಟರ ರಾಜಧಾನಿಯಾಗಿತ್ತು. ಕವಿರಾಜಮಾರ್ಗದ ಕರ್ತೃ ಇಲ್ಲಿಯವನು. ಕವಿ ಪೊನ್ನ, ವಚನಕಾರ ದೇವರ ದಾಸಿಮಯ್ಯ ಇವರೂ ಈ ಜಿಲ್ಲೆಯವರು. ಲಕ್ಷ್ಮೀಶಕವಿಯ ಸ್ಥಳ ಈ ಜಿಲ್ಲೆಯ ಸುರಪುರ ತಾಲ್ಲೂಕಿನಲ್ಲಿರುವ ದೇವಪುರವೇ ಎಂಬುದು ಒಂದು ಅಭಿಪ್ರಾಯ. ದ್ವೈತಮತಸ್ಥಾಪಕರಾದ ಮಧ್ವಾಚಾರ್ಯರ ನಾಲ್ವರು ಪ್ರಮುಖ ಶಿಷ್ಯರ ಪೈಕಿ ಒಬ್ಬರಾದ ಅಕ್ಷೋಭ್ಯತೀರ್ಥರ ಶಿಷ್ಯರಾದ ಜಯತೀರ್ಥರು ಮಳಖೇಡದಲ್ಲಿ ನೆಲಸಿದ್ದರು. ಮಧ್ವಾಚಾರ್ಯರ ಗ್ರಂಥಗಳಿಗೆ ಟೀಕೆಗಳನ್ನು ಬರೆದು ಟೀಕಾಚಾರ್ಯರೆಂದು ಪ್ರಸಿದ್ಧರಾಗಿರುವ ಇವರ ಬೃಂದಾವನ ಇಲ್ಲಿದೆ. ಮಹಾಪುರಾಣ, ನಯಕುಮಾರಚರಿತ ಮುಂತಾದ ಅಪಭ್ರಂಶ ಕಾವ್ಯಗಳ ಕರ್ತೃವಾದ ಪುಷ್ಪದಂತ ಕವಿಗೂ ಇದು ನೆಲೆವೀಡಾಗಿತ್ತು. (ಬಿ.ಆರ್.ಜಿ.)

ಈ ಜಿಲ್ಲೆಯಲ್ಲಿ ಪುರಾತತ್ತ್ವ ಅವಶೇಷಗಳು ವಿಪುಲವಾಗಿವೆ. ಸುರಪುರದ ಬಳಿಯಲ್ಲಿ ಆದಿಶಿಲಾಯುಗದ ನೆಲೆಯೊಂದು ದೊರಕಿದೆ. ಅದೇ ತಾಲ್ಲೂಕಿನ ಗುಳ್ಬಾಳ ಎಂಬಲ್ಲಿ ಮತ್ತೊಂದು ನೆಲೆಯನ್ನೂ ಸಂಶೋಧಿಸಲಾಗಿದೆ. ಮಧ್ಯ ಶಿಲಾಯುಗದ ಅನೇಕ ನೆಲೆಗಳು ಗುಲ್ಬರ್ಗ ಜಿಲ್ಲೆಯ ಸುರಪುರ ತಾಲ್ಲೂಕಿನ ತುಮಕೂರು, ಭೀಮಾಸೇತುವೆ ಮುಂತಾದೆಡೆಗಳಲ್ಲಿ ಕಂಡುಬಂದಿವೆ. ಅಲ್ಲದೆ ಅಫಜಲಪುರ ತಾಲ್ಲೂಕಿನ ಉಡಚಣ ಮತ್ತು ಸೇಡಂ ತಾಲ್ಲೂಕಿನ ಮಳಖೇಡ ಈ ಸ್ಥಳಗಳಲ್ಲೂ ಈ ರೀತಿಯ ಕೆಲವು ಆಯುಧಗಳು ದೊರೆತಿವೆ. ಗುಳ್ಬಾಳ ಮತ್ತು ಸಮೀಪದ ಹಲವು ನೆಲೆಗಳಲ್ಲಿ ಇನ್ನೊಂದು ರೀತಿಯ ಶಿಲಾಯುಗ ಸಂಸ್ಕೃತಿ ಬೆಳಕಿಗೆ ಬಂದಿದೆ. ಈ ಘಟ್ಟದ ಆಯುಧಗಳು ನದಿದಡದಲ್ಲಿರುವ ಪ್ರಾಕ್ಕಾಲೀನ ಹರಹುಗಳಲ್ಲಿ ಮಧ್ಯಶಿಲಾ ಮತ್ತು ಉತ್ತರ ಶಿಲಾಯುಗದ ಆಯುಧಗಳು ದೊರಕುವ ಸ್ತರಗಳ ನಡುವಣ ಸ್ತರಗಳಲ್ಲಿ ದೊರಕಿವೆ. ಸೂಕ್ಷ್ಮಶಿಲಾಯುಗದ ಅನೇಕ ನೆಲೆಗಳು ಈ ಜಿಲ್ಲೆಯ ಸುರಪುರ ತಾಲ್ಲೂಕಿನ ಹುಣಸಿಹೊಳಿ, ಆಳಂದ ತಾಲ್ಲೂಕಿನ ಜವಳಿ, ಶಾಹಾಪುರ, ಇಕ್ಕಳ್ಕಿ ಮುಂತಾದ ಗ್ರಾಮಗಳ ಬಳಿ ದೊರಕಿವೆ. ನವಶಿಲಾಯುಗದ ಸಂಸ್ಕೃತಿ ಕೂಡ ಗುಲ್ಬರ್ಗ ಜಿಲ್ಲೆಯಲ್ಲಿ ಹರಡಿತ್ತು. ಸುರಪುರ ತಾಲ್ಲೂಕಿನ ಕೊಡೇಕಲ್ಲು ಎಂಬಲ್ಲಿ ಈ ಕಾಲದ ಒಂದು ಬೂದಿ ರಾಶಿಯ ಪರೀಕ್ಷೆಯಿಂದ ಇಲ್ಲಿಯ ನವಶಿಲಾಯುಗ ಸಂಸ್ಕೃತಿ ಕ್ರಿ.ಪೂ. 2500ರ ಸುಮಾರಿನಲ್ಲೇ ಪ್ರಚಲಿತವಾಗಿತ್ತೆಂದು ತಿಳಿದುಬಂದಿದೆ. ಈ ಘಟ್ಟದ ಜನ ವ್ಯವಸಾಯ ಮತ್ತು ಪಶುಪಾಲನೆಗಳನ್ನು ಸಾಧಿಸಿದ್ದರೂ ಸಾರಂಗ, ಜಿಂಕೆ ಮುಂತಾದ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದರೆಂದು ಆಗ ಮೀನುಗಾರಿಕೆ ಸಾಮಾನ್ಯವಾಗಿತ್ತೆಂದೂ ಗೊತ್ತಾಗಿದೆ. ಕೊಡೇಕಲ್ಲು ಅಲ್ಲದೆ ಮುಳ್ಳೂರು, ತೀರ್ಥ, ಕಕ್ಕೇರಿ, ಬೆನಕನ ಹಳ್ಳಿ ಮುಂತಾದೆಡೆಗಳಲ್ಲೂ ಸಮಕಾಲೀನ ಬೂದಿಯ ರಾಶಿಗಳಿವೆ. ಇವಲ್ಲದೆ ಆ ಕಾಲದ ಜನ ನೆಲೆಸಿದ್ದ ಕೆಲವು ನೆಲೆಗಳು ಕೂಡ ಬೀರನೂರು,

ಕನ್ನೆಕೋಳೂರು, ಬೂದನಾಳು ಮುಂತಾದೆಡೆ ಬೆಳಕಿಗೆ ಬಂದಿವೆ. ಹಾವಿನಮೆಟ್ಟಿ, ಕಿರದಹಳ್ಳಿ, ಮಂಗಳೂರು, ಮಾಕನಗವಿ ಮುಂತಾದೆಡೆಗಳಲ್ಲಿ ಪ್ರಾಚೀನ ಕಾಲದಲ್ಲಿ ಚಿನ್ನದ ಗಣಿಗಳಿದ್ದ ಕುರುಹುಗಳಿವೆ. ಆದರೆ ಇವು ಯಾವ ಕಾಲದವೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ.



ಶರಣಬಸವೇಶ್ವರ ದೇವಾಲಯದಲ್ಲಿನ ನಾಗಶಿಲ್ಪ, ಗುಲ್ಬರ್ಗ

ಗುಲ್ಬರ್ಗ ಜಿಲ್ಲೆ ಅಲ್ಲಿಯ ಕಬ್ಬಿಣಯುಗದ ಬೃಹತ್ ಶಿಲಾಸಮಾಧಿಗಳ ಸಂಸ್ಕೃತಿಯ ಅವಶೇಷಗಳಿಗೆ ಹಿಂದಿನಿಂದಲೂ ಪ್ರಸಿದ್ಧವಾಗಿದೆ. ಸುರಪುರ, ಶಾಹಪುರ ಮತ್ತು ಜೇವರಗಿ ತಾಲ್ಲೂಕುಗಳಲ್ಲಿ ಹಗರಟಗಿ, ರಾಜನಕೋಳೂರು, ಚಿಕ್ಕನಹಳ್ಳಿ, ವಿಭೂತಿಹಳ್ಳಿ, ಇಜೇರಿ, ಕೊಲ್ಲೂರು, ಜೇವರಗಿ ಮುಂತಾದೆಡೆಗಳಲ್ಲಿ ಈ ಸಂಪ್ರದಾಯದ ಅನೇಕ ಸಮಾಧಿಗಳನ್ನು ಗುರುತಿಸಲಾಗಿದೆ. ಅವಶೇಷಗಳನ್ನು ಹೂತಿರುವ ಅಥವಾ ಅವಶೇಷಗಳನ್ನು ಜಾಡಿಗಳಲ್ಲಿ ಶೇಖರಿಸಿ ಹೂತಿರುವ ಗುಣಿಗಳ ಸುತ್ತ ರಚಿಸಿದ ಶಿಲಾ ವರ್ತುಲಗಳು ಅಥವಾ ತೊಟ್ಟಿಗಳು ಕಂಡುಬಂದಿವೆ. ಜೇವರಗಿ ಮತ್ತು ಸುತ್ತಲಿನ ಪ್ರದೇಶದಲ್ಲಿ ಹಲವೆಡೆ ದೊಡ್ಡ ಕಲ್ಲುಗಳನ್ನು ಅನೇಕ ಸಮಾನಾಂತರ ಸಾಲುಗಳಲ್ಲಿ ನೆಟ್ಟಿರುವುದು ಕಂಡುಬಂದಿದೆ. ಪ್ರಾಚೀನ ಕಾಲದ ಈ ಶಿಲಾ ಸಾಲುಗಳು ಶವಸಂಸ್ಕಾರ ವಿಧಿಗೆ ಸಂಬಂಧಿಸಿದ್ದೋ ಅಲ್ಲವೋ ಹೇಳುವುದು ಕಷ್ಟ.

ಉತ್ತರ ಭಾರತದಲ್ಲಿ ಕ್ರಿಸ್ತಪೂರ್ವದ ಕೊನೆಯ ಸಹಸ್ರಮಾನದ ಉತ್ತರಾರ್ಧದಲ್ಲಿ ಪ್ರಚಲಿತವಿದ್ದ ಔತ್ತರೇಯ ಕಪ್ಪು ಹೊಳಪಿನ ಮಡಕೆ ಚೂರು ಆಳಂದ ತಾಲ್ಲೂಕಿನಲ್ಲಿ ಕಂಡುಬಂದಿವೆ. ಅಲ್ಲದೆ 1940ರ ಸುಮಾರಿನಲ್ಲಿ ಗುಲ್ಬರ್ಗ ತಾಲ್ಲೂಕಿನ ಹೆಬ್ಬಾಳ ಗ್ರಾಮದಿಂದ 225 ಬೆಳ್ಳಿಯ ಒತ್ತು ಮುದ್ರೆಯ ನಾಣ್ಯಗಳು ದೊರಕಿದುವು. ನಾಣ್ಯಗಳು ಮತ್ತು ಔತ್ತರೇಯ ಹೊಳಪಿನ ಬಕ್ಕರೆಗಳು ಗುಲ್ಬರ್ಗ ಜಿಲ್ಲೆ ಮೌರ್ಯ ಸಾಮ್ರಾಜ್ಯದ ಭಾಗವಾಗಿದ್ದ ಕಾಲದಲ್ಲಿ ಬಂದವುಗಳಾಗಿರಬೇಕು. ಆದರೆ ತತ್ಕಾಲೀನ ಶಾಸನಗಳಾಗಲಿ ವಾಸ್ತು ಅವಶೇಷಗಳಾಗಲಿ ಈವರೆಗೆ ದೊರಕಿಲ್ಲ.

ಮೌರ್ಯ ಮತ್ತು ಸಾತವಾಹನ ಯುಗಕ್ಕೆ ಸಂಬಂಧಿಸಿದ ಕೆಲವು ನೆಲೆಗಳು ಆಳಂದ ಮತ್ತು ಚಿತ್ತಾಪುರ ತಾಲ್ಲೂಕುಗಳಲ್ಲಿವೆ. ಚಿತ್ತಾಪುರ ತಾಲ್ಲೂಕಿನ ಭೀಮಾನದಿಯ ಎಡದಂಡೆಯಲ್ಲಿರುವ ಸನ್ನತಿ ಇವುಗಳ ಪೈಕಿ ಪ್ರಸಿದ್ಧವಾದ್ದು. ಸನ್ನತಿ ಒಂದು ಬೌದ್ಧ ಕೇಂದ್ರವೂ ಪ್ರಾಯಶಃ ಸ್ಥಳೀಯ ಮಾಂಡಲಿಕನೊಬ್ಬನ ರಾಜಧಾನಿಯೂ ಆಗಿದ್ದಂತೆ ತೋರುತ್ತದೆ. ಸನ್ನತಿಯಲ್ಲಿ ದೊರಕಿರುವ ಅಶೋಕನ ಶಾಸನಗಳು ಈ ಜಿಲ್ಲೆಯಲ್ಲಿ ಇದುವರೆಗೆ ದೊರಕಿರುವ ಶಾಸನಗಳಲ್ಲಿ ಅತ್ಯಂತ ಪ್ರಾಚೀನವಾದುವು. ಸಾತವಾಹನರ ಕಾಲದ ಶಾಸನಗಳೂ ದೊರೆತಿವೆ.

ನಾಗಾಯಿ (ನೋಡಿ) ಹಿಂದು, ಜೈನ ಮತ್ತು ಇಸ್ಲಾಂ ಸಂಸ್ಕೃತಿಗಳಿಗೆ ಸಂಬಂಧಿಸಿದ ವಸ್ತು ಅವಶೇಷಗಳಿಗೆ ಪ್ರಸಿದ್ಧವಾಗಿದೆ.

ಸನ್ನತಿಯಲ್ಲಿ (ನೋಡಿ) ಬಾದಾಮಿ ಚಳುಕ್ಯರ ಕಾಲದ ಒಂದು ಶಾಸನ ದೊರಕಿದೆ. ಇದರಲ್ಲಿ ಚಳುಕ್ಯ ರಾಜವಂಶದ ಕೊನೆಗಾಲ ಅಥವಾ ಅನಂತರದ ಸಂಧಿಕಾಲದಲ್ಲಿದ್ದ ಕೆಲವು ತದ್ವಂಶೀಯರ ಹೆಸರುಗಳಿವೆ. ಕಲ್ಯಾಣದ ಚಾಳುಕ್ಯರ, ಕಳಚುರಿಗಳ ಮತ್ತು ದೇವಗಿರಿ ಯಾದವರ ಕಾಲದ ಸುಮಾರು ಇನ್ನೂರಕ್ಕೂ ಹೆಚ್ಚಿನ ಶಾಸನಗಳು ಬೆಳಕಿಗೆ ಬಂದಿವೆ. ಈ ಕಾಲದ ಅನೇಕ ದೇವಾಲಯಗಳು ನಾಗಾವಿ, ಮಳಖೇಡ, ಕಾಳಗಿ, ನಿಂಬರ್ಗಿ, ಚಿಂಚಹನಸೂರು, ಪಡಸಾವಳಿ ಮುಂತಾದೆಡೆಗಳಲ್ಲಿವೆ. ಇವೆಲ್ಲ ಸಮಕಾಲೀನ ಚಾಳುಕ್ಯ ಶೈಲಿಯಲ್ಲಿ ಉತ್ತಮ ರಚನಾವಿನ್ಯಾಸದೊಡನೆ ಕಡೆದ ಹೊಳಪಿನ ದುಂಡುಕಂಬಗಳಿಂದ ಕೂಡಿದ್ದು ಸುಂದರ ಶಿಲ್ಪಗಳಿಂದ ಅಲಂಕೃತವಾಗಿರುವ ಕಟ್ಟಡಗಳು.

ಬಹಮನೀಯರ ರಾಜಧಾನಿಯಾಗಿದ್ದ ಗುಲ್ಬರ್ಗ ನಗರವಲ್ಲದೆ ಈ ಜಿಲ್ಲೆಯ ಇತರ ಭಾಗಗಳಲ್ಲೂ ಇಸ್ಲಾಮೀ ವಾಸ್ತುಶೈಲಿಯ ಅನೇಕ ಕಟ್ಟಡಗಳಿವೆ. ಇವುಗಳಲ್ಲಿ ಫಿರೋಜಾಬಾದ್, ಚಿಂಚೋಳಿ ಮತ್ತು ಚಿತ್ತಾಪುರ ಕೋಟೆಗಳನ್ನು ಹೆಸರಿಸಬಹುದು. ಫಿರೋಜಾಬಾದಿನಲ್ಲಿ 1406ರಲ್ಲಿ ಕಟ್ಟಿದ ಒಂದು ಮಸೀದಿಯಿದೆ. ಸುಲ್ತಾನಾ ಫಾತಿಮಾ ಎಂಬವಳು ಗೋಗಿ ಗ್ರಾಮದ ಕಾಲಿ ಮಸೀದಿಯನ್ನು ಕಟ್ಟಿಸಿದಳು (ಸು.1500). ಇದು ಒಂದು ಸುಂದರ ಕಟ್ಟಡ. ಈ ಮಸೀದಿಯ ಬಳಿಯಲ್ಲಿ ಕೆಲವು ಆದಿಲ್‍ಶಾಹೀ ಅರಸರ ಸಮಾಧಿಗಳುಂಟು. ಶಾಹಪುರ ತಾಲ್ಲೂಕಿನ ಕಡೇಚೂರ್ ಎಂಬಲ್ಲಿರುವ ಮಸೀದಿ, ಯಾದಗಿರಿ ತಾಲ್ಲೂಕಿನ ದೋರನಹಳ್ಳಿ ಮಸೀದಿ ಇವು ಬಿಜಾಪುರದ ಆದಿಲ್‍ಶಾಹೀ ಅರಸರ ಕಾಲದ ಇತರ ಮುಖ್ಯ ಕಟ್ಟಡಗಳು. ಚಿಂಚೋಳಿಯಲ್ಲಿರುವ ಒಂದು ಇಗರ್ಜಿ ಪೋರ್ಚುಗೀಸರು ಕಟ್ಟಿಸಿದ್ದೆಂದು ಹೇಳಲಾಗಿದೆ (ಆದರೆ ಈಗ ಇರುವುದು ಈ ಇಗರ್ಜಿಯ ನವೀಕೃತ ರೂಪ).



ಜುಮ್ಮಾ ಮಸೀದಿ, ಗುಲ್ಬರ್ಗ

ಮುಸ್ಲಿಂ ಅರಸರ ಕಾಲದ ಅನೇಕ ಪಾರಸೀ ಮತ್ತು ಅರಬ್ಬೀ ಶಾಸನಗಳು ಗುಲ್ಬರ್ಗ ಜಿಲ್ಲೆಯಲ್ಲಿವೆ. ಇವುಗಳಲ್ಲಿ ಗುಲ್ಬರ್ಗ ಕೋಟೆಯಲ್ಲಿ ದೊಡ್ಡ ಮಸೀದಿಯಲ್ಲಿರುವ ರಫಿಯ ಶಾಸನ, ಚಿಂಚೋಳಿಯಲ್ಲಿ ನಸ್ತಾಲಿಕ್ ಲಿಪಿಯಲ್ಲಿರುವ ಶಾಸನ, ಆಳಂದಿನಲ್ಲಿರುವ ಫರ್ಹಾದ್ ಖಾನನ ಶಾಸನ (1656-57), ಮಳಖೇಡದ ಅರಬ್ಬೀ ಶಾಸನ (1469-70)

ಉಲ್ಲೇಖಾರ್ಹವಾದವು. ಈ ಕಾಲದ ಬಹಮನೀ, ಆದಿಲ್‌ಶಾಹೀ, ಕುತುಬ್‌ಶಾಹೀ, ಮುಗಲ್ ಮತ್ತು ನಿಜಾಮ್ ಶಾಹಿ ಅರಸರ ನಾಣ್ಯಗಳು ಗುಲ್ಬರ್ಗ ಜಿಲ್ಲೆಯಲ್ಲಿ ದೊರಕಿವೆ. (ಎಸ್.ಎನ್.)

**ತಾಲ್ಲೂಕು :** ಜಿಲ್ಲೆಯ ಮಧ್ಯ ಮತ್ತು ಉತ್ತರ ಭಾಗದಲ್ಲಿರುವ ಈ ತಾಲ್ಲೂಕನ್ನು ಪೂರ್ವದಲ್ಲಿ ಚಿಂಚೋಳಿ, ಚಿತ್ತಾಪುರ ತಾಲ್ಲೂಕುಗಳೂ, ದಕ್ಷಿಣದಲ್ಲಿ ಜೇವರಗಿ, ಪಶ್ಚಿಮದಲ್ಲಿ ಅಳಂದ ಮತ್ತು ಅಫ಼ಜಲಪುರ ತಾಲ್ಲೂಕುಗಳೂ ಉತ್ತರದಲ್ಲಿ ಬೀದರ್ ಜಿಲ್ಲೆಯೂ ಸುತ್ತುವರೆದಿವೆ. ಈ ತಾಲ್ಲೂಕಿನ ದಕ್ಷಿಣದಲ್ಲಿ ಹರಿಯುವ ಭೀಮಾ ನದಿ ಈ ತಾಲ್ಲೂಕನ್ನು ಜೇವರಗಿ ತಾಲ್ಲೂಕಿನಿಂದ ಬೇರ್ಪಡಿಸಿದೆ. ಔರಾದ, ಗುಲ್ಬರ್ಗ, ಕಮಲಾಪುರ, ಮಹಗಾಂವ್, ಪರ್ವತಾಬಾದ್ ಮತ್ತು ಪಟ್ಟಣ ಈ ಆರು ಹೋಬಳಿಗಳೂ 144 ಗ್ರಾಮಗಳೂ ಇವೆ. ಈ ತಾಲ್ಲೂಕಿನ ವಿಸ್ತೀರ್ಣ 1,731.6ಚ.ಕಿಮೀ. ಜನಸಂಖ್ಯೆ 6,82,792.

ತಾಲ್ಲೂಕಿನ ಹೆಚ್ಚು ಭಾಗ ಬೂದು ಮತ್ತು ಕಪ್ಪುಮಿಶ್ರಿತ ಅಥವಾ ಆಳವಾದ ಕಪ್ಪುಮಣ್ಣು ಇರುವ ಮಟ್ಟಸ ಪ್ರದೇಶ. ಹೆಚ್ಚಿನ ಬೆಟ್ಟಗಳಾಗಲಿ ಏರುತಗ್ಗುಗಳಾಗಲೀ ಇಲ್ಲ. ಕೆಲವು ಭಾಗಗಳಲ್ಲಿ ಮರಳು ಮಿಶ್ರಿತ ಕೆಂಪುಮಣ್ಣಿನ ಭೂಮಿ ಕಂಡುಬರುತ್ತದೆ. ತಾಲ್ಲೂಕಿನ ಸರಾಸರಿ ವಾರ್ಷಿಕ ಮಳೆ 753.30ಮಿಮೀ. ತಾಲ್ಲೂಕಿನಲ್ಲಿ ಜೋಳ, ಸೇಂಗಾ, ಸಜ್ಜೆ, ಗೋದಿ, ತೊಗರಿ, ಹತ್ತಿ, ಮೆಣಸಿನಕಾಯಿ ಬೆಳೆಯುತ್ತಾರೆ. ವ್ಯವಸಾಯದ ಜೊತೆಗೆ ಪಶುಪಾಲನೆಯೂ ಇದ್ದು ಅವುಗಳ ರಕ್ಷಣೆಗೆ ಸರ್ಕಾರಿ ಪಶುವೈದ್ಯಾಲಯಗಳಿವೆ.

ತಾಲ್ಲೂಕಿಗೆ ರೈಲು ಸಂಪರ್ಕವೂ ಇವೆ, ಜಿಲ್ಲೆಯ ಎಲ್ಲ ಭಾಗಗಳೂ ವಾಹನ ಸಂಪರ್ಕ ಪಡೆದಿವೆ. ತಾಲ್ಲೂಕಿನಲ್ಲಿ ಬ್ಯಾಂಕ್, ವಿದ್ಯುತ್, ಅಂಚೆ-ತಂತಿ, ದೂರವಾಣಿ ಮುಂತಾದ ಸೌಲಭ್ಯಗಳಿವೆ.

**ಪಟ್ಟಣ :** ಗುಲ್ಬರ್ಗ ವಿಭಾಗದ, ಜಿಲ್ಲೆಯ, ತಾಲ್ಲೂಕಿನ ಮತ್ತು ಹೋಬಳಿಯ ಆಡಳಿತ ಕೇಂದ್ರ. ಇತಿಹಾಸಪ್ರಸಿದ್ಧ ನಗರ, ವಿದ್ಯಾಕೇಂದ್ರ. ಚೆನ್ನೈ-ಮುಂಬಯಿ ಬ್ರಾಡ್‌ಗೇಜ್ ರೈಲು ಮಾರ್ಗದಲ್ಲಿದ್ದು ಬೆಂಗಳೂರಿನಿಂದ 626ಕಿಮೀ ದೂರದಲ್ಲಿದೆ. ಜನಸಂಖ್ಯೆ 4,27,929.

ಗುಲ್ಬರ್ಗ ನಗರಕ್ಕೆ ಕಲ್ಬುರ್ಗಿ ಎಂಬ ಹೆಸರು ಸ್ಥಳೀಕರಲ್ಲಿ ಹೆಚ್ಚು ಪ್ರಚಾರದಲ್ಲಿದೆ. 11ನೆಯ ಶತಮಾನದ ಶಾಸನಗಳಲ್ಲಿ ಕಲುಂಬರಗೆ ಎಂದು ಹೆಸರಿಸಲಾಗಿದೆ. ರಾಯವಾಚಕಮು ಎಂಬ ತೆಲುಗು ಗ್ರಂಥದಲ್ಲಿ ಮತ್ತು ಕೆಳದಿನೃಪವಿಜಯದಲ್ಲಿ ಕಲುಬರಿಗ ಎಂಬ ರೂಪ ಕಾಣಿಸಿಕೊಳ್ಳುತ್ತದೆ. ಕಲುಂಬರಗ ಎಂಬ ಪ್ರಾಚೀನ ರೂಪವೇ ಕಲ್ಬುರ್ಗಿಯಾಗಿ ರೂಪಾಂತರಗೊಂಡಿರಬೇಕು. ಗುಲ್ಬರ್ಗ ಎಂಬ ಪದ ಮುಹಮ್ಮದಿಯರ ಆಳಿಕೆಯಲ್ಲಿ ಪ್ರಚಾರಕ್ಕೆ ಬಂತು. ಗುಲ್ಬರ್ಗ ಎಂದರೆ ಹೂದೋಟ.

ಗುಲ್ಬರ್ಗ ನಗರ ಅಲೆಯಂತೆ ಏರಿಳಿತಗಳಿಂದ ಕೂಡಿದ ಕರಿ ಎರೆ ಮಣ್ಣಿನ ಪ್ರದೇಶದಲ್ಲಿ ಸು.16ಚ.ಕಿಮೀ ವಿಸ್ತಾರದಲ್ಲಿ ಹಬ್ಬಿದೆ. ಇಲ್ಲಿರುವ ಮನೆಗಳಲ್ಲಿ ಹೆಚ್ಚಿನವು ಕಲ್ಲುಕಟ್ಟಡಗಳು. ರೈಲ್ವೆ ನಿಲ್ದಾಣ ಹಳೆಯ ನಗರದಿಂದ ಸ್ವಲ್ಪ ದೂರದಲ್ಲಿದೆ. ಅಲ್ಲಿಂದ ಪೇಟೆಬೀದಿಗೂ ನಗರದ ವಿವಿಧ ಎಡೆಗಳ ನಡುವೆಯೂ ನಗರ ಬಸ್ ಓಡಾಟ ವ್ಯವಸ್ಥೆ ಉಂಟು. ರೈಲ್ವೆ ನಿಲ್ದಾಣದ ಸುತ್ತ ಒಂದು ಹೊಸ ವಿಸ್ತರಣ ಬೆಳೆದಿದೆ. ಶಾಹಪುರ ರಸ್ತೆಯ ಬಳಿಯಲ್ಲಿ ಸರ್ಕಾರಿ ಕಚೇರಿಗಳೂ ಸರ್ಕಾರಿ ನೌಕರರ ವಸತಿಗೃಹಗಳೂ ಇವೆ. ರೈಲ್ವೆ ನಿಲ್ದಾಣದಿಂದ ಒಂದೂವರೆ ಕಿಮೀ ದೂರದೊಳಗೆ ಐವಾನ್ ಎ ಶಾಹೀ ಬಂಗಲೇ ಇದೆ. ಸರ್ಕಾರಿ ಪಾಲಿಟೆಕ್ನಿಕ್, ಎಂಜಿನಿಯರಿಂಗ್ ಕಾಲೇಜು ಮತ್ತು ವಿದ್ಯಾರ್ಥಿನಿಲಯ ಕಟ್ಟಡಗಳು ರೈಲು ನಿಲ್ದಾಣದ ಬಳಿಯಲ್ಲೇ ಇವೆ.

ರೈಲ್ವೆ ನಿಲ್ದಾಣದಿಂದ 4ಕಿಮೀ ದೂರದಲ್ಲಿರುವ ನೆಹ್ರೂಗಂಜ್ ಮುಖ್ಯ ವ್ಯಾಪಾರ ಕೇಂದ್ರ. ಇಲ್ಲಿ ಅನೇಕ ಅಂಗಡಿಗಳೂ ಉಪಾಹಾರಗೃಹಗಳೂ ಇವೆ. ಕಾರಾಗೃಹ ಇರುವುದು ಮುಖ್ಯ ಪೇಟೆಬೀದಿಯ ರಸ್ತೆಯ ಬದಿಯಲ್ಲಿ. ಸ್ಟೇಷನ್ ಬಜಾರ್ ಸುತ್ತ ಮತ್ತು ಜಗತ್ ವಿಭಾಗದಲ್ಲಿ ಚಾಳ್‌ಗಳು (ವಾಸಗೃಹಗಳು) ಇವೆ. ಈಚೆಗೆ ಹೊಸಹೊಸ ವಿಸ್ತರಣಗಳು ಬೆಳೆಯುತ್ತಿವೆ. ರೈಲ್ವೆ ನಿಲ್ದಾಣದಿಂದ ಮುಖ್ಯ ಪೇಟೆಬೀದಿಗೆ ಹೋಗುವ ಮಾರ್ಗದಲ್ಲಿರುವ ಮಹಬೂಬ್ ಗುಲ್ಷನ್ ಒಂದು ಸುಂದರ ಉದ್ಯಾನ. ಐವಾನ್ ಎ ಶಾಹೀಯ ಸುತ್ತ ಒಂದು ಉದ್ಯಾನವಿದೆ.

ನಗರ ಔದ್ಯಮಿಕವಾಗಿಯೂ ಬೆಳೆಯಲಾರಂಭಿಸಿದೆ. ಇಲ್ಲಿನ ಎಂ.ಎಸ್.ಕೆ ಮಿಲ್ಸ್ ಎಂಬ ಹತ್ತಿ ಗಿರಣಿ ಕಾರ್ಖಾನೆಗಳಲ್ಲಿ ದೊಡ್ಡದು. ಅಲ್ಲದೆ ಬೇಳೆ ತಯಾರಿಸುವುದು, ಮರ ಕುಯ್ಯುವುದು, ಎಣ್ಣೆ ತೆಗೆಯುವುದು, ಬೀಡಿ ತಯಾರಿಕೆ ಮೊದಲಾದ ಇತರ ಉದ್ಯಮಗಳೂ ಇಲ್ಲಿವೆ.

ಗುಲ್ಬರ್ಗ ರೈಲು ನಿಲ್ದಾಣದ ಬಳಿಯಲ್ಲೇ ಬಸ್ ನಿಲ್ದಾಣ ಇದೆ. ಇಲ್ಲಿಂದ ಜಿಲ್ಲೆಯ ಎಲ್ಲ ತಾಲ್ಲೂಕು ಕೇಂದ್ರಗಳಿಗೂ ರಾಜ್ಯದ ಮತ್ತು ಹೊರಗಿನ ಮುಖ್ಯ ಸ್ಥಳಗಳಿಗೂ ವಾಹನ ಸಂಪರ್ಕವಿದೆ. ಸುತ್ತಣ ಪ್ರದೇಶದೊಳಗಿನ ಉತ್ತಮ ಸಂಪರ್ಕದಿಂದಾಗಿ ಗುಲ್ಬರ್ಗ ವ್ಯಾಪಾರ ಕೇಂದ್ರವೂ ಆಗಿದೆ.



ಬಸವೇಶ್ವರ ಆಸ್ಪತ್ರೆ, ಗುಲ್ಬರ್ಗ

ಗುಲ್ಬರ್ಗದಲ್ಲಿ ಅನೇಕ ಶಾಲಾಕಾಲೇಜುಗಳೂ ಆಸ್ಪತ್ರೆ ಮುಂತಾದವೂ ಉಂಟು. ಸರ್ಕಾರಿ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜು, ಶರಣಬಸವೇಶ್ವರ ಕಾಲೇಜು, ಸೇಠ್ ಶಂಕರಲಾಲ್ ಲಾಹೋಟಿ ಲಾ ಕಾಲೇಜು, ಎಂಜಿನಿಯರಿಂಗ್ ಕಾಲೇಜು, ವೈದ್ಯಕೀಯ ಕಾಲೇಜು – ಇವು ಕೆಲವು ಮುಖ್ಯ ಶಿಕ್ಷಣ ಸಂಸ್ಥೆಗಳು. ಗುಲ್ಬರ್ಗ ವಿಶ್ವವಿದ್ಯಾಲಯ (ನೋಡಿ) ಇಲ್ಲಿ ಸ್ಥಾಪಿತವಾಗಿದೆ (1980). ಗುಲ್ಬರ್ಗ ನಗರ ಎಲ್ಲ ಆಧುನಿಕ ಸೌಕರ್ಯಗಳನ್ನೂ ಹೊಂದಿದೆ.

ಶರಣಬಸವೇಶ್ವರ ದೇವಾಲಯ ಮತ್ತು ಖ್ವಾಜಾ ಬಂದೇ ನವಾಜರ ದರ್ಗಾ ಗುಲ್ಬರ್ಗದ ಪ್ರಮುಖ ಧಾರ್ಮಿಕ ಕೇಂದ್ರಗಳು. ಶರಣಬಸವೇಶ್ವರ ದೇವಾಲಯ ಇತ್ತೀಚಿನದಾದರೂ ಬಹು ಸುಂದರವಾಗಿ ರಚಿತವಾಗಿರುವ ವಾಸ್ತುಕೃತಿ. ಇಲ್ಲಿ ಪ್ರಸಿದ್ಧ ವೀರಶೈವ ಸಂತರಾದ ಶರಣಬಸವೇಶ್ವರರ ಗೌರವಾರ್ಥ ವರ್ಷಂಪ್ರತಿ ಚೈತ್ರ ಬಹುಳ ಪಂಚಮಿಯಿಂದ ಹದಿನೈದು ದಿನಗಳ ಕಾಲ ಜಾತ್ರೆ ನಡೆಯುತ್ತದೆ. ಖ್ವಾಜಾ ಬಂದೇ ನವಾಜರ ದರ್ಗಾದಲ್ಲಿ ಪ್ರತಿವರ್ಷ ಜಿಕೈದಾ ತಿಂಗಳಿನಲ್ಲಿ ಮೂರು ದಿನಗಳ ಕಾಲ ಉರುಸ್ ನಡೆಯುತ್ತದೆ. ಈ ಎರಡು ಸಂದರ್ಭಗಳಲ್ಲೂ ಲಕ್ಷ ಲಕ್ಷ ಸಂಖ್ಯೆಯಲ್ಲಿ ಭಕ್ತಾದಿಗಳು ಸೇರುತ್ತಾರೆ. *

ಸಾಹಿತ್ಯ ಮತ್ತು ಜಾನಪದ ಕ್ಷೇತ್ರಕ್ಕೆ ಈ ಜಿಲ್ಲೆ ಅಪೂರ್ವ ಕೊಡುಗೆ ನೀಡಿದೆ. ಕಡಿದಾಳ ಕೃಷ್ಣರಾವ್, ಎಂ.ಎಸ್.ಲಠ್ಠೆ, ಪಿ.ಕೆ.ಖಂಡೋಬ ಚೆನ್ನಣ್ಣ ವಾಲೀಕಾರ, ತವಗ ಭೀಮಸೇನರಾವ್, ಗೀತಾ ನಾಗಭೂಷಣ, ಶೈಲಜಾ ಉಡಚಣ, ಎ.ಕೆ.ರಾಮೇಶ್ವರ, ಸೀತಾರಾಮ ಜಾಗಿರದಾರ ಇವರನ್ನು ಹೆಸರಿಸಬಹುದು.

ಗುಲ್ಬರ್ಗದಲ್ಲಿ ಅನೇಕ ಐತಿಹಾಸಿಕ ಸ್ಮಾರಕಗಳಿವೆ. ಇದು ಬಹಮನೀ ಅರಸರ ಮೊದಲ ರಾಜಧಾನಿಯಾಗಿದ್ದರಿಂದ ಕರ್ನಾಟಕದಲ್ಲಿರುವ ಭಾರತೀಯ ಇಸ್ಲಾಮೀ ಸಂಪ್ರದಾಯದಲ್ಲಿರುವ ಮೊದಲ ಕೃತಿಗಳೆಲ್ಲ ಈ

ನಗರದಲ್ಲೇ ಇವೆ. ಆ ಕಾಲದಲ್ಲಿ ಕಟ್ಟಲಾದ ಗುಲ್ಬರ್ಗ ನಗರದ ಕೋಟೆ 15 ಬುರುಜುಗಳನ್ನೂ 20 ತುಪಾಕಿ ಗೋಪುರಗಳನ್ನೂ ಅಳವಡಿಸಿಕೊಂಡು ನಗರವನ್ನು ಸುತ್ತುವರಿದಿರುವ ಬೃಹತ್ ಕಲ್ಲುಕಟ್ಟಡ. ರಾಜ ಗುಲ್‍ಚಂದ್ ಎಂಬ ಹಿಂದು ದೊರೆ ಇದನ್ನು ಮೊದಲು ಕಟ್ಟಿದನೆಂಬುದು ಸ್ಥಳಪ್ರತೀತಿ. ಈತ ಚರಿತ್ರೆಗೆ ತಿಳಿಯದಿರುವ ವ್ಯಕ್ತಿಯಾದರೂ ಗುಲ್ಬರ್ಗ ನಗರ ಇಸ್ಲಾಮೀ ಆಳಿಕೆಯ ಪೂರ್ವದಲ್ಲೂ ಒಂದು ಮುಖ್ಯ ನಗರ ವಾಗಿದ್ದಿರಬೇಕೆಂಬುದು ಅಲ್ಲಿ ಕಂಡುಬಂದಿರುವ ಅನೇಕ ಹಿಂದು ದೇವಾಲಯಗಳ ಅವಶೇಷಗಳಿಂದಲೂ ಒಂದೆರಡು ಶಾಸನಗಳಿಂದಲೂ ತಿಳಿಯುತ್ತದೆ. ಇಲ್ಲಿಯ ಕೋಟೆ ಅಲಾಉದ್ದೀನ್ ಹಸನ್ ಬಹಮನೀಯ (1347-58) ಕಾಲದಲ್ಲಿ ವಿಸ್ತಾರಗೊಂಡಿತ್ತು.

ಗುಲ್ಬರ್ಗ ಕೋಟೆಯೊಳಗಿರುವ ದೊಡ್ಡ ಮಸೀದಿ ಅಪರೂಪ ಶೈಲಿಯಲ್ಲಿರುವ ದೊಡ್ಡ ಕಟ್ಟಡ. 216' ಉದ್ದ ಮತ್ತು 176' ಅಗಲದ ಈ ಕಟ್ಟಡವು 6 ಕಂಬಗಳು ಮೇಲೆ ಎತ್ತಿದ ಅನೇಕ ಗುಮ್ಮಟಗಳಿಂದ ಪೂರ್ಣವಾಗಿ ಆಚ್ಛಾದಿತವಾಗಿದೆ. ಈ ಮಸೀದಿಯನ್ನು ಮಹಮದ್ ಷಾ ಬಹಮನೀಯ ಆಳಿಕೆಯಲ್ಲಿ 1376ರಲ್ಲಿ ಕಟ್ಟಲಾಯಿತೆಂದೂ ಇದರ ಶಿಲ್ಪಿ ಇರಾನಿನ ಕ್ಯಾಸ್ಪಿನ್‍ನ ನಿವಾಸಿ ರಫಿ ಎಂಬವನೆಂದೂ ಇಲ್ಲಿಯ ಒಂದು ಶಾಸನದಿಂದ ಗೊತ್ತಾಗುತ್ತದೆ. ಈ ಮಸೀದಿಯ ವಿಶಿಷ್ಟ ವಿನ್ಯಾಸವನ್ನು ಆಧರಿಸಿ ಇದು ಸ್ಪೇನಿನ ಕಾರ್ಡೋವದ ಪ್ರಸಿದ್ಧ ಮಸೀದಿಯನ್ನು ಹೋಲುತ್ತದೆ ಎಂದು ಹೇಳುವುದು ರೂಢಿ. ಈ ಮಸೀದಿಯಲ್ಲಿ ಪ್ರಾರ್ಥನಾ ಕೊಠಡಿ ಇರುವ ಪಶ್ಚಿಮ ಭಾಗ ಉಳಿದ ಭಾಗಕ್ಕಿಂತ ಎತ್ತರವಾಗಿದ್ದು ಅದರ ಮೇಲೆ ದೊಡ್ಡ ಗುಮ್ಮಟಗಳಿವೆ. ಮುಂಭಾಗದ



ಕೋಟೆ ಮಸೀದಿ, ಗುಲ್ಬರ್ಗ

ಹಜಾರದ ಗುಮ್ಮಟಗಳು ಇವಕ್ಕಿಂತ ಕುಳ್ಳು. ಇಲ್ಲಿ ಉಪಯೋಗಿಸಿರುವ ಗುಮ್ಮಟಗಳು ಪಾರಸೀ ಮಾದರಿಯವು. ಗುಲ್ಬರ್ಗ ನಗರದ ಷಾ ಬಜಾರ್ ಮಸೀದಿ ಈ ಕಾಲದ ಇನ್ನೊಂದು ಉಲ್ಲೇಖಾರ್ಹ ಕಟ್ಟಡ. ಇದನ್ನು ಒಂದನೆಯ ಮಹಮ್ಮದ್ ಷಾ ಬಹಮನೀಯ (1358-75) ಕಾಲದಲ್ಲಿ ಕಟ್ಟಿರಬೇಕೆಂದು ಊಹಿಸಲಾಗಿದೆ. ಈ ಮಸೀದಿಯ ಮುಂಭಾಗದ ಇಕ್ಕಡೆಗಳಲ್ಲಿ ಒಂದೊಂದು ಎತ್ತರವಾದ ಮಿನಾರುಗಳೂ ಕಮಾನಿನ ಪ್ರವೇಶದ್ವಾರವೂ ಒಳಗೆ ತೆರೆದ ಅಂಗಳವೂ ಅದರ ಹಿಂದೆ ಪ್ರಾರ್ಥನಾ ಹಜಾರವೂ ಇವೆ.

ಗುಲ್ಬರ್ಗ ಕೋಟೆಯ ದಕ್ಷಿಣ ದ್ವಾರದ ಬಳಿ ತುಗಲಕ್ ಶೈಲಿಯಲ್ಲಿ ಕಟ್ಟಿದ ಕೆಲವು ಸಮಾಧಿಗಳು ಉಳಿದಿವೆ. ಅವುಗಳಲ್ಲಿ ಮೂರನ್ನು ಬಹಮನೀ ವಂಶದ ಮೊದಲ ಮೂವರು ಅರಸರವೆಂದು ಗುರುತಿಸಲಾಗಿದೆ. ಅಲಾ ಉದ್ದೀನ್ ಹಸನ್ ಬಹಮನೀಯ (1347-58) ಸಮಾಧಿ ಈ ಗುಂಪಿನ ಪಶ್ಚಿಮದ ಕೊನೆಯಲ್ಲಿದೆ. ಇದು 4' ಎತ್ತರದ ಜಗತಿಯ ಮೇಲೆ ಕಟ್ಟಲಾಗಿರುವ 40' 6" ಚೌಕದ ಕಟ್ಟಡ. ಇದು ಕಲ್ಲು ಮತ್ತು ಗಾರೆಯಿಂದ ಎತ್ತಲಾದ ಹಜಾರ. ಇದರ ಗೋಡೆಗಳು 20' ಎತ್ತರವಾಗಿವೆ. ಮೇಲೆ ಹೋದಂತೆ ಒಳಬಾಗುವ ರೀತಿಯ ಓರೆಯ ಹೊರಮೈಯನ್ನುಳ್ಳವಾಗಿವೆ. ಚಾವಣಿಯ ಗುಮ್ಮಟ ಸುಮಾರು ಮಟ್ಟಸವಾದ್ದು. ಒಳ ಹಜಾರದಲ್ಲಿ ಗುಮ್ಮಟದ ನೇರ ಕೆಳಗೆ ಮೂರು ಸಮಾಧಿಶಿಲೆಗಳಿವೆ. ಅವುಗಳಲ್ಲಿ ಒಂದು ಅಲಾ ಉದ್ದೀನನದೆಂದು ಹೇಳಲಾಗುತ್ತದೆ. ಅಲಾ ಉದ್ದೀನನ ಮಗ 1ನೆಯ ಮಹಮ್ಮದ್ ಷಾ ಮತ್ತು ಮುಂದಿನ ಅರಸ 2ನೆಯ ಮಹಮ್ಮದ್ ಷಾ ಇವರ ಸಮಾಧಿಗಳೂ ಇಲ್ಲಿವೆ.

ಗುಲ್ಬರ್ಗದ ಬಳಿ ಇರುವ ಹಫ್ತ್ ಗುಂಬಜ್ ಎಂಬ ಏಳು ಸಮಾಧಿಗಳ ಸಮೂಹ, ಊರ ಒಳಗಿರುವ ಖ್ವಾಜಾ ಬಂದೇ ನವಾಜ್ ದರ್ಗಾ ಮತ್ತು ಚೋರ್ ಗುಂಬಜ್ ಈ ಕಾಲದ ಇಲ್ಲಿಯ ಇತರ ಗಮನಾರ್ಹ ಕಟ್ಟಡಗಳು. 15ನೆಯ ಶತಮಾನದ ಖಲಂದರ್ ಖಾನನ ಮಸೀದಿ ಉತ್ತಮ ಪ್ರಮಾಣ, ಸರಳ ಅಲಂಕರಣ ಇವುಗಳಿಂದಾಗಿ ಸುಂದರವಾಗಿ ಎದ್ದುಕಾಣುವ ಕಟ್ಟಡ. ಇದು ಚಿಕ್ಕದಾದರೂ ವಿನ್ಯಾಸ ಮತ್ತು ಸೌಂದರ್ಯದಲ್ಲಿ ಕೈರೋದ ಜಾಮಿ ಅಜರ್ ಮಸೀದಿಯನ್ನು ಹೋಲುತ್ತದೆಯೆಂದು ಹೇಳಲಾಗಿದೆ. ಗುಲ್ಬರ್ಗದಲ್ಲಿ ಈಗ ಹಿರಾಪುರ್ ಮಸೀದಿ ಎನಿಸಿಕೊಂಡಿರುವ ಮಸೀದಿಯನ್ನು ಚಾಂದಬೀಬಿ 1585ರಲ್ಲಿ ಕಟ್ಟಿಸಿದಳು. ವಿಶಿಷ್ಟ ಶೈಲಿಯ ಕಮಾನುಗಳನ್ನುಳ್ಳ ಒಂದು ಮನೋಹರ ಕೃತಿ ಇದು. 1687ರಲ್ಲಿ ಔರಂಗಜೇಬ್ ಖ್ವಾಜಾ ಬಂದೇ ನವಾಜ್ ದರ್ಗಾದ ಬಳಿ ಒಂದು ಮಸೀದಿಯನ್ನು ಕಟ್ಟಿಸಿದ. ಇಲ್ಲಿ ಉಪಯೋಗಿಸಲಾಗಿರುವ ಉದ್ದನೆಯ ಅಲಂಕೃತ ಮಿನಾರುಗಳು, ಶಿಲ್ಪಿತ ಚಜ್ಜಾಗಳು ಮುಂತಾದ ವಾಸ್ತು ಅಂಶಗಳಿಂದ ಈ ಕಟ್ಟಡ ದಕ್ಷಿಣ ಭಾರತದಲ್ಲಿ ಹಿಂದು ಶೈಲಿಗಳ ಕೈಯಲ್ಲಿ ಬೆಳೆದ ಇಸ್ಲಾಮೀ ಸಂಪ್ರದಾಯದ ಶೈಲಿಯ ಉತ್ತಮ ಉದಾಹರಣೆಯಾಗಿದೆಯೆಂದು ಹೇಳಲಾಗಿದೆ. (ಎಸ್.ಎನ್.)

**ಗುಲ್ಬರ್ಗ ವಿಶ್ವವಿದ್ಯಾಲಯ** : ಕರ್ನಾಟಕ ರಾಜ್ಯದ ವಿಶ್ವವಿದ್ಯಾಲಯ ಗಳಲ್ಲೊಂದು. ಗುಲ್ಬರ್ಗದಲ್ಲಿ ಆಡಳಿತ ಕೇಂದ್ರ ಮತ್ತು ಶಿಕ್ಷಣ ಸಂಸ್ಥೆಗಳನ್ನು ಹೊಂದಿದೆ. ಹೈದರಾಬಾದ್ ಕರ್ನಾಟಕ ಪ್ರದೇಶ ಆರ್ಥಿಕವಾಗಿ ಹಿಂದುಳಿದ ಪ್ರದೇಶವಾದರೂ ಸಾಹಿತ್ಯ, ಸಂಸ್ಕೃತಿ, ಕಲೆಗಳ ದೃಷ್ಟಿಯಿಂದ ತುಂಬ ಸಂಪದ್ಭರಿತವಾದದ್ದು. ಹಿಂದೆ ಈ ಪ್ರದೇಶದ ಜನ ಉನ್ನತ ಶಿಕ್ಷಣ ಪಡೆಯಬೇಕಾದರೆ ಹೈದರಾಬಾದಿಗೋ ಇಲ್ಲವೇ ದೂರದ ಧಾರವಾಡಕ್ಕೋ ಹೋಗಬೇಕಾಗುತ್ತಿತ್ತು. ಈ ಭಾಗದ ಶಿಕ್ಷಣತಜ್ಞರು, ಸಮಾಜಸೇವಕರು ಹಾಗೂ ರಾಜಕೀಯ ಮುಂದಾಳುಗಳ ಪ್ರಯತ್ನಗಳಿಂದ 1980 ಸೆಪ್ಟೆಂಬರ್ 10ರಂದು ಗುಲ್ಬರ್ಗ ವಿಶ್ವವಿದ್ಯಾಲಯ ಸ್ವತಂತ್ರ ವಿಶ್ವವಿದ್ಯಾಲಯವಾಗಿ ಅಸ್ತಿತ್ವಕ್ಕೆ ಬಂತು. ಇದಕ್ಕೂ ಮೊದಲು ಕರ್ನಾಟಕ ವಿಶ್ವವಿದ್ಯಾಲಯದ ಅಧೀನದಲ್ಲಿ ಸ್ನಾತಕೋತ್ತರ ಕೇಂದ್ರವನ್ನು 1970ರಲ್ಲಿ ಗುಲ್ಬರ್ಗದಲ್ಲಿ ಪ್ರಾರಂಭ ಮಾಡಲಾಗಿತ್ತು. ಕನ್ನಡ, ರಸಾಯನ ವಿಜ್ಞಾನ, ಗಣಿತ ವಿಜ್ಞಾನ, ಇಂಗ್ಲಿಷ್ ಹಾಗೂ ರಾಜ್ಯಶಾಸ್ತ್ರ—ಈ ಐದು ವಿಷಯಗಳಲ್ಲಿ ಸ್ನಾತಕೋತ್ತರ ವಿಭಾಗಗಳಿದ್ದವು. ಈಗ 34 ವಿಭಾಗಗಳಿವೆ. ಗುಲ್ಬರ್ಗ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಬೀದರ್, ಬಳ್ಳಾರಿ, ಕೊಪ್ಪಳ, ರಾಯಚೂರು ಹಾಗೂ ಗುಲ್ಬರ್ಗ—ಈ ಐದು ಜಿಲ್ಲೆಗಳು ಒಳಪಟ್ಟಿವೆ. ಈ ವಿಶ್ವವಿದ್ಯಾಲಯದ ಕಕ್ಷೆಯಲ್ಲಿ 147 ಕಾಲೇಜುಗಳಿವೆ. ಇವುಗಳಲ್ಲಿ 35 ಕಾಲೇಜುಗಳು ಸರ್ಕಾರದ ಅನುದಾನ ಪಡೆದಿವೆ. ಇನ್ನುಳಿದ 112 ಕಾಲೇಜುಗಳು ಅನುದಾನ ಪಡೆಯದೇ ಸ್ವತಂತ್ರವಾಗಿ ಕಾರ್ಯನಿರ್ವಹಿಸುತ್ತಿವೆ. ಈ ಎಲ್ಲ ಕಾಲೇಜುಗಳಲ್ಲಿ 40000 ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದರು (2003). ಬೀದರ್, ರಾಯಚೂರು, ಸಂಡೂರು, ಹಾಗೂ ಬಳ್ಳಾರಿಗಳಲ್ಲಿ ಈ ವಿಶ್ವವಿದ್ಯಾಲಯದ ಕಕ್ಷೆಗೆ ಒಳಪಟ್ಟ ಸ್ನಾತಕೋತ್ತರ ಕೇಂದ್ರಗಳಿವೆ. ಶೈಕ್ಷಣಿಕವಾಗಿ ಹಿಂದುಳಿದಿರುವ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಸ್ಥಾಪನೆಗೊಂಡ ಈ ವಿಶ್ವವಿದ್ಯಾಲಯ ಈಗ ಈ ಭಾಗದ ಜನರ ಬೌದ್ಧಿಕ ಮಟ್ಟವನ್ನು ಹೆಚ್ಚಿಸುವ ಮೂಲಕ ಈ ಭಾಗದ ಶೈಕ್ಷಣಿಕ ಅಭಿವೃದ್ಧಿಗೆ ಶ್ರಮಿಸುತ್ತಿದೆ.

ಗುಲ್ಬರ್ಗ ವಿಶ್ವವಿದ್ಯಾಲಯದಲ್ಲಿ ಆರು ವಿದ್ವನ್ಮಂಡಳಿ ನಿಕಾಯಗಳಿವೆ. ಕಲಾನಿಕಾಯದಲ್ಲಿ ಕನ್ನಡ, ಇಂಗ್ಲಿಷ್, ಹಿಂದಿ, ಉರ್ದು, ಮರಾಠಿ, ಸಂಸ್ಕೃತ ವಿಭಾಗಗಳಿವೆ. ವಾಣಿಜ್ಯ ಹಾಗೂ ವ್ಯಾಪಾರ ನಿರ್ವಹಣೆ ನಿಕಾಯದಲ್ಲಿ ವಾಣಿಜ್ಯ ಹಾಗೂ ವ್ಯಾಪಾರ ನಿರ್ವಹಣೆ ವಿಭಾಗಗಳಿವೆ. ಶಿಕ್ಷಣ ನಿಕಾಯದಲ್ಲಿ ಶಿಕ್ಷಣ ಹಾಗೂ ದೈಹಿಕಶಿಕ್ಷಣ ವಿಭಾಗಗಳಿವೆ. ಕಾನೂನು ನಿಕಾಯ ಕಾನೂನು ವಿಭಾಗವನ್ನು ಹೊಂದಿದೆ. ವಿಜ್ಞಾನ ಹಾಗೂ

ತಂತ್ರಜ್ಞಾನ ನಿಕಾಯದಲ್ಲಿ ಆನ್ವಯಿಕ ವಿದ್ಯುನ್ಮಾನವಿಜ್ಞಾನ, ಜೀವರಸಾಯನವಿಜ್ಞಾನ, ಜೀವತಂತ್ರಜ್ಞಾನ, ಸಸ್ಯವಿಜ್ಞಾನ, ರಸಾಯನವಿಜ್ಞಾನ, ಗಣಕವಿಜ್ಞಾನ, ಭೂವಿಜ್ಞಾನ, ಮಿನರಲ್ ಪ್ರಾಸೆಸಿಂಗ್, ಭೂಗರ್ಭವಿಜ್ಞಾನ, ಔದ್ಯೋಗಿಕ ರಸಾಯನವಿಜ್ಞಾನ, ಉಪಕರಣ ತಂತ್ರಜ್ಞಾನ, ಗಣಿತವಿಜ್ಞಾನ, ಸೂಕ್ಷ್ಮಾಣುಜೀವವಿಜ್ಞಾನ, ಭೌತವಿಜ್ಞಾನ ಸಂಖ್ಯಾವಿಜ್ಞಾನ, ಸಕ್ಕರೆತಂತ್ರಜ್ಞಾನ, ಪ್ರಾಣಿವಿಜ್ಞಾನ ಈ ವಿಭಾಗಗಳಿವೆ. ಸಮಾಜವಿಜ್ಞಾನ ನಿಕಾಯದಲ್ಲಿ ಅರ್ಥಶಾಸ್ತ್ರ, ಇತಿಹಾಸ, ಗ್ರಂಥಾಲಯ ಹಾಗೂ ಮಾಹಿತಿವಿಜ್ಞಾನ, ರಾಜ್ಯಶಾಸ್ತ್ರ, ಮನೋವಿಜ್ಞಾನ, ಸಮಾಜಕಾರ್ಯ, ಸಮಾಜಶಾಸ್ತ್ರ, ಮಹಿಳಾ ಅಧ್ಯಯನ ವಿಭಾಗಗಳಿವೆ.



ರಾಷ್ಟ್ರಕೂಟ ಮಹಾದ್ವಾರ, ಗುಲ್ಬರ್ಗ ವಿಶ್ವವಿದ್ಯಾಲಯ

ಗುಲ್ಬರ್ಗ ವಿಶ್ವವಿದ್ಯಾಲಯ ಜೀವತಂತ್ರಜ್ಞಾನ ವಿಭಾಗ, ಸೂಕ್ಷ್ಮಾಣುಜೀವವಿಜ್ಞಾನ ಹಾಗೂ ಮಹಿಳಾ ಅಧ್ಯಯನ ವಿಭಾಗಗಳನ್ನು ತೆರೆದ ರಾಜ್ಯದ ಪ್ರಪ್ರಥಮ ವಿಶ್ವವಿದ್ಯಾಲಯವೆನಿಸಿದೆ. ಈ ವಿಶ್ವವಿದ್ಯಾಲಯದ ಸಂಶೋಧನೆಯ ಫಲವಾದ ಕಬ್ಬಿನ ಹೊಸ ತಳಿಯನ್ನು ಈ ಪ್ರದೇಶದಲ್ಲಿ ಈಗ ಬೆಳೆಯಲಾಗುತ್ತಿದೆ. ಬೀದರ್‌ನಲ್ಲಿ ಪ್ರಾರಂಭಗೊಂಡಿರುವ ಸಕ್ಕರೆ ತಂತ್ರಜ್ಞಾನ ವಿಭಾಗ ಒಂದು ಮಾದರಿ ವಿಭಾಗವಾಗಿ ಬೆಳೆಯುತ್ತಿದೆ. ರಸಾಯನವಿಜ್ಞಾನ, ಪ್ರಾಣಿವಿಜ್ಞಾನ ಹಾಗೂ ಸೂಕ್ಷ್ಮಾಣುಜೀವವಿಜ್ಞಾನ, ಆನ್ವಯಿಕ ವಿದ್ಯುನ್ಮಾನ ವಿಭಾಗಗಳಲ್ಲಿ ನಡೆದಿರುವ ಸಂಶೋಧನೆಗಳು ಅನೇಕ ಸಂಶೋಧಕರ ಗಮನ ಸೆಳೆದಿವೆ. ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ಆನ್ವಯಿಕ ವಿದ್ಯುನ್ಮಾನ ವಿಭಾಗಗಳು ಅನೇಕ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ವಿಚಾರ ಸಂಕಿರಣಗಳನ್ನು ನಡೆಸಿವೆ.

ಇದುವರೆಗೆ ಈ ವಿಶ್ವವಿದ್ಯಾಲಯದಿಂದ 450 ವಿದ್ಯಾರ್ಥಿಗಳು ಪಿಎಚ್.ಡಿ. ಪದವಿ ಪಡೆದಿದ್ದಾರೆ. ಸದ್ಯ 150 ವಿದ್ಯಾರ್ಥಿಗಳು ಎಂ.ಫಿಲ್. ಪದವಿ ಹಾಗೂ 400 ವಿದ್ಯಾರ್ಥಿಗಳು ಪಿಎಚ್.ಡಿ. ಪದವಿಗಾಗಿ ಸಂಶೋಧನೆ ನಡೆಸಿದ್ದಾರೆ. 22 ಜನ ಗಣ್ಯ ವ್ಯಕ್ತಿಗಳಿಗೆ ಈ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪದವಿ ನೀಡಿದೆ. ಪರದೇಶಗಳ ಶೈಕ್ಷಣಿಕ ಸಂಸ್ಥೆಗಳ ಸಹಯೋಗದೊಡನೆ ಈ ವಿಶ್ವವಿದ್ಯಾಲಯದ ಸಂಶೋಧಕರು ತಮ್ಮ ಸಂಶೋಧನೆ ನಡೆಸಿದ್ದಾರೆ. ಶ್ರೀ ಗಳಂಗಳಪ್ಪ ಪಾಟೀಲ ಬಸವಾದಿ ಶರಣ ಸಾಹಿತ್ಯ ಕೇಂದ್ರ, ಅಂಬೇಡ್ಕರ್ ಪೀಠ ಹಾಗೂ ಎಸ್.ಎಸ್. ಪಾಟೀಲ ಸೈನ್ಸ್ ಕ್ರಿಯೇಟಿವಿಟಿ ಸೆಂಟರ್ ಇವು ಸ್ಥಾಪನೆಗೊಂಡು ಕಾರ್ಯನಿರ್ವಹಿಸುತ್ತಿವೆ. ಈ ವಿಶ್ವವಿದ್ಯಾಲಯದ ಕಕ್ಷೆಗೆ ಒಳಪಟ್ಟ 21 ಕಾಲೇಜುಗಳಲ್ಲಿ ಯುಜಿಸಿ ನೆರವಿನಿಂದ ವೃತ್ತಿಪರ ಕೋರ್ಸುಗಳು ನಡೆಯುತ್ತಿವೆ.

ಗುಲ್ಬರ್ಗ ವಿಶ್ವವಿದ್ಯಾಲಯ 860 ಎಕರೆ ವಿಸ್ತಾರವಾದ ಪ್ರದೇಶದಲ್ಲಿ ವ್ಯಾಪಿಸಿದ್ದು ಸುಸಜ್ಜಿತ ಕಟ್ಟಡಗಳನ್ನು ಹೊಂದಿದೆ. ವಿಶ್ವವಿದ್ಯಾಲಯದ ಬಹುತೇಕ ಎಲ್ಲ ವಿಭಾಗಗಳು ಸ್ವತಂತ್ರ ಕಟ್ಟಡಗಳನ್ನು ಹೊಂದಿವೆ. ಗಣಕವಿಜ್ಞಾನ ವಿಭಾಗ ಅತ್ಯಾಧುನಿಕ ಗಣಕ ಯಂತ್ರಗಳನ್ನು ಹೊಂದಿದೆ. ಗ್ರಂಥಾಲಯದಲ್ಲಿ ಸೌಲಭ್ಯಗಳು ಸಾಕಷ್ಟಿದ್ದು 2 ಲಕ್ಷ ಗ್ರಂಥಗಳನ್ನು ಹೊಂದಿದೆ. ಗ್ರಂಥಾಲಯ ಇಂಟರನೆಟ್ ಸೌಲಭ್ಯ ಹೊಂದಿದ್ದು ವಿದ್ಯಾರ್ಥಿಗಳಿಗೆ ಬಹು ಉಪಯೋಗಿಯಾಗಿದೆ. ಶಿಕ್ಷಕ ಹಾಗೂ ಶಿಕ್ಷಕೇತರರಿಗೆ ವಸತಿಗೃಹಗಳು, ವಿದ್ಯಾರ್ಥಿ ಹಾಗೂ ವಿದ್ಯಾರ್ಥಿನಿಯರಿಗೆ ವಸತಿನಿಲಯಗಳ ಸೌಲಭ್ಯವಿದೆ. ದೈಹಿಕಶಿಕ್ಷಣ ವಿಭಾಗ ವಿಶ್ವವಿದ್ಯಾಲಯದ ಹೆಮ್ಮೆಯ ಹಾಗೂ ಬೃಹತ್ ವಿಭಾಗವಾಗಿದೆ. ಹೊರಾಂಗಣ ಹಾಗೂ ಒಳಾಂಗಣ ಕ್ರೀಡಾ ಭವನಗಳಿವೆ. ರಾಷ್ಟ್ರೀಯ ಸೇವಾ ಯೋಜನೆ ವಿದ್ಯಾರ್ಥಿಗಳು ತಮ್ಮ ವ್ಯಕ್ತಿತ್ವ ರೂಪಿಸಿಕೊಳ್ಳುವಲ್ಲಿ ಮಹತ್ವದ ಪಾತ್ರ ವಹಿಸುತ್ತಲಿದೆ. ಪರಿಶಿಷ್ಟಜಾತಿ ಹಾಗೂ ಪರಿಶಿಷ್ಟ ಪಂಗಡಗಳ ವಿದ್ಯಾರ್ಥಿ ವರ್ಗದ ಸರ್ವತೋಮುಖ ಬೆಳವಣಿಗೆಗೆ ವಿಶ್ವವಿದ್ಯಾಲಯದಲ್ಲಿ ವಿಶೇಷ ಸೌಲಭ್ಯಗಳನ್ನು ಕಲ್ಪಿಸಿಕೊಡಲಾಗಿದೆ.

**ವ್ಯಾಸಂಗ ವಿಸ್ತರಣೆ, ಸಂಶೋಧನೆ ಮತ್ತು ಪ್ರಕಟಣೆ :** ಕನ್ನಡ ಅಧ್ಯಯನ ಸಂಸ್ಥೆ ಮೊದಲು ಸ್ಥಾಪನೆಗೊಂಡ ಈ ವಿಶ್ವವಿದ್ಯಾಲಯದ ದೊಡ್ಡ ವಿಭಾಗವಾಗಿದ್ದು ಈ ಭಾಗದ ಸಾಹಿತ್ಯಕ ಸಾಂಸ್ಕೃತಿಕ ಬೆಳವಣಿಗೆಗೆ ಚಾಲನೆ ನೀಡುತ್ತ ಬಂದಿದೆ. ಸಂಸ್ಥೆಯಲ್ಲಿ ಹಸ್ತಪ್ರತಿ ಭಂಡಾರವಿದೆ. ಈ ಸಂಸ್ಥೆಯ ಕಟ್ಟಡದಲ್ಲಿಯೇ ಶ್ರೀ ಗಳಂಗಳಪ್ಪ ಪಾಟೀಲ ಬಸವಾದಿ ಶರಣ ಸಾಹಿತ್ಯ ಕೇಂದ್ರ ಹಾಗೂ ಪ್ರಸಾರಾಂಗ ವಿಭಾಗಗಳಿವೆ. ಬಸವಾದಿ ಶರಣ ಸಾಹಿತ್ಯ ಕೇಂದ್ರ ಈವರೆಗೆ ಹನ್ನೆರಡು ಗ್ರಂಥಗಳನ್ನು ಪ್ರಕಟಿಸಿದೆ. ಪ್ರಸಾರಾಂಗ ವಿಶ್ವವಿದ್ಯಾಲಯದ ಶೈಕ್ಷಣಿಕ ಪ್ರಗತಿಯ ಮುಖವಾಣಿ. ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಶಿಕ್ಷಕರಿಗೂ ಹಳ್ಳಿಯ ಸಾಮಾನ್ಯ ಜನರಿಗೂ ಸಂಬಂಧವೇರ್ಪಡಿಸಿ ಶೈಕ್ಷಣಿಕ ವಾತಾವರಣವನ್ನು ಸ್ಥಾಪಿಸುವಲ್ಲಿ ಇದು ಮಹತ್ವದ ಕಾರ್ಯ ಮಾಡುತ್ತಿದೆ. ಈವರೆಗೆ 240 ಪುಸ್ತಕಗಳನ್ನು ಪ್ರಕಟಿಸಿದೆ (2003). ವಿಶ್ವವಿದ್ಯಾಲಯದಲ್ಲಿ ಹದಿಮೂರು ದತ್ತಿಗಳನ್ನು ಸ್ಥಾಪಿಸಲಾಗಿದೆ. ಪ್ರತಿ ವರ್ಷ ಈ ದತ್ತಿ ಉಪನ್ಯಾಸಗಳನ್ನು ಏರ್ಪಡಿಸಲಾಗುತ್ತದೆ. ವಿಶ್ವವಿದ್ಯಾಲಯದ ವತಿಯಿಂದ ಕಲಾಗಂಗಾ, ಜ್ಞಾನಗಂಗಾ, ವಿಜ್ಞಾನಗಂಗಾ ಎಂಬ ಮೂರು ಸಂಶೋಧನ ಪತ್ರಿಕೆಗಳನ್ನು ಪ್ರಸಾರಾಂಗ ಪ್ರಕಟಿಸುತ್ತಿದೆ. ಒಂದು ವಾರ್ತಾ ಪತ್ರವೂ ಪ್ರಕಟವಾಗುತ್ತಿದೆ. ಹೈದರಾಬಾದ್–ಕರ್ನಾಟಕ ಭಾಗದ ಶ್ರೇಷ್ಠ ಲೇಖಕರಿಗೆ, ಕಥೆಗಾರರಿಗೆ, ಪುಸ್ತಕ ಪ್ರಕಾಶಕರಿಗೆ ಹಾಗೂ ಚಿತ್ರಕಲಾವಿದರಿಗೆ ಪ್ರತಿವರ್ಷ ಕನ್ನಡ ರಾಜ್ಯೋತ್ಸವದ ಅಂಗವಾಗಿ ಪ್ರಶಸ್ತಿ ಪತ್ರ ಹಾಗೂ ಗೌರವಧನ ನೀಡಿ ಪ್ರೋತ್ಸಾಹಿಸುವ ಒಂದು ವಿಶಿಷ್ಟ ಕಾರ್ಯಕ್ರಮವನ್ನು ಪ್ರಸಾರಾಂಗ ನಡೆಸಿಕೊಂಡು ಬರುತ್ತಿದೆ. ಈ ಪದ್ಧತಿ ಬೇರೆ ವಿಶ್ವವಿದ್ಯಾಲಯಗಳಲ್ಲಿ ಇಲ್ಲ.



ಕಾರ್ಯಸೌಧ, ಗುಲ್ಬರ್ಗ ವಿಶ್ವವಿದ್ಯಾಲಯ

**ಸ್ನಾತಕೋತ್ತರ ಕೇಂದ್ರಗಳು :** ಬಳ್ಳಾರಿ, ಸಂಡೂರು, ರಾಯಚೂರು, ಹಾಗೂ ಬೀದರ್‌ಗಳಲ್ಲಿ ಸ್ನಾತಕೋತ್ತರ ಕೇಂದ್ರಗಳಿವೆ. ಬೀದರ್ ಸ್ನಾತಕೋತ್ತರ ಕೇಂದ್ರದಲ್ಲಿ ಸಕ್ಕರೆ ತಂತ್ರಜ್ಞಾನ ಹಾಗೂ ಉರ್ದು ವಿಭಾಗಗಳಿವೆ. ರಾಯಚೂರು ಕೇಂದ್ರದಲ್ಲಿ ಕನ್ನಡ ವಿಭಾಗ, ಉಪಕರಣ ತಂತ್ರಜ್ಞಾನ, ಗಣಕವಿಜ್ಞಾನ, ಆನ್ವಯಿಕ ಗಣಕವಿಜ್ಞಾನದ ಸ್ನಾತಕೋತ್ತರ ಡಿಪ್ಲೊಮಾ ವಿಭಾಗವಿದೆ. ಬಳ್ಳಾರಿ ಸ್ನಾತಕೋತ್ತರ ಕೇಂದ್ರದಲ್ಲಿ ಎಂಬಿಎ

ಹಾಗೂ ಔದ್ಯೋಗಿಕ ರಸಾಯನವಿಜ್ಞಾನ ವಿಭಾಗಗಳಿವೆ. ಸ್ನಾತಕೋತ್ತರ ವಿಭಾಗಗಳ ಜೊತೆಗೆ ಸಂಡೂರು ಸ್ನಾತಕೋತ್ತರ ಕೇಂದ್ರದಲ್ಲಿ ಕನ್ನಡ, ಭೂ ವಿಜ್ಞಾನ, ಖನಿಜ ಸಂಸ್ಕರಣ ಹಾಗೂ ಬಿಎಸ್ಸಿ ಕೋರ್ಸುಗಳನ್ನು ತೆರೆಯಲಾಗಿದೆ. ಭೂ ವಿಜ್ಞಾನ ವಿಭಾಗ ಉನ್ನತ ಸಂಶೋಧನ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

**ಪ್ರಶಸ್ತಿ ಹಾಗೂ ಗೌರವಗಳು :** ಗುಲ್ಬರ್ಗ ವಿಶ್ವವಿದ್ಯಾಲಯ ಯು.ಜಿ.ಸಿ.ಯ ನ್ಯಾಕ್ ಸಮಿತಿಯಿಂದ ಮೌಲ್ಯಮಾಪನಕ್ಕೊಳಗಾಗಿದ್ದು ನಾಲ್ಕು ನಕ್ಷತ್ರ ಸ್ಥಾನ ಪಡೆದಿದೆ. ಅನೇಕ ಶಿಕ್ಷಕರು ಹಾಗೂ ಶಿಕ್ಷಕೇತರ ಸಿಬ್ಬಂದಿ ವ್ಯಾಸಂಗ ಮತ್ತು ಸಂಶೋಧನೆಯಲ್ಲಿ ಉತ್ತಮ ಕೊಡುಗೆಗೆ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಗೌರವ, ಪ್ರಶಸ್ತಿಗಳನ್ನು ಸ್ವೀಕರಿಸಿದ್ದಾರೆ. 1999ರಲ್ಲಿ ಸಾರ್ಕ್ ಯುವಜನ ಸಮ್ಮೇಳನವನ್ನು ಈ ವಿಶ್ವವಿದ್ಯಾಲಯ ಯಶಸ್ವಿಯಾಗಿ ನಡೆಸಿತು. ಎನ್.ಎಸ್.ಎಸ್. ಘಟಕ ಇಂದಿರಾ ಗಾಂಧಿ ಯುವಜನ ರಾಷ್ಟ್ರೀಯ ಪುರಸ್ಕಾರವನ್ನು ಪಡೆದಿದೆ. ಎಂ.ನಾಗರಾಜ (1980-84) ಈ ವಿಶ್ವವಿದ್ಯಾಲಯದ ಮೊದಲ ಕುಲಪತಿ. ಅನಂತರ ಹಾ.ಮಾ.ನಾಯಕ (1984-87), ಕೆ.ಎಚ್.ಚೆಲುವರಾಜು (1987-90), ಎನ್.ರುದ್ರಯ್ಯ (1990-96), ಎಂ.ಮುನಿಯಮ್ಮ (1996-99), ಜಿ.ಎಸ್.ಪಾಟೀಲ (1999, ಹಂಗಾಮಿ ಕುಲಪತಿ), ಎಂ.ವಿ.ನಾಡಕರ್ಣಿ (1999-2002) ಕುಲಪತಿಯಾಗಿ ಸೇವೆ ಸಲ್ಲಿಸಿದ್ದಾರೆ. ಈಗಿನ ಕುಲಪತಿ ವಿ.ಬಿ.ಕುಟಿನೊ (2002). *

**ಗುಲ್ವಾಡಿ ವೆಂಕಟರಾವ್ :** 1844-1907. ಕನ್ನಡದ ಆದ್ಯ ಸ್ವತಂತ್ರ ಸಾಮಾಜಿಕ ಕಾದಂಬರಿಕಾರರು. ಇಂದಿನ ಉಡುಪಿ ಜಿಲ್ಲೆಯ ಕುಂದಾಪುರದ ಗುಲ್ವಾಡಿ ಇವರ ಹುಟ್ಟೂರು. ಸಾರಸ್ವತ ಬ್ರಾಹ್ಮಣ ಮನೆತನದಲ್ಲಿ ಹುಟ್ಟಿದ ಗುಲ್ವಾಡಿಯವರು ಬಿ.ಎ. ಪದವೀಧರರಾದ ಅನಂತರ ಪೊಲೀಸ್ ಖಾತೆಯನ್ನು ಸೇರಿದರು. ಇವರದು ಆ ವೃತ್ತಿಗೆ ತಕ್ಕ ಭೀಮಕಾಯ, ಗಂಭೀರ ಮುಖಮುದ್ರೆ. ಪೊಲೀಸ್ ಕೆಲಸದಿಂದ ನಿವೃತ್ತರಾದ ಮೇಲೆ ಸಾಹಿತ್ಯ ರಚನೆಯಲ್ಲಿ ತೊಡಗಿದರು. ಇಂದಿರಾಬಾಯಿ ಅಥವಾ ಸದ್ಧರ್ಮ ವಿಜಯ ಇವರ ಮೊದಲ ಕಾದಂಬರಿ (1898). ಭಾಗೀರಥಿ, ಸೀಮಂತಿನೀ (1907) ಇವು ಇವರ ಇತರ ಕಾದಂಬರಿಗಳು. ಲಾಡುಪ್ರಿಯಾಚಾರ್ಯ (1899) ಎಂಬುದು ಇವರ ಒಂದು ವಿಡಂಬನಾತ್ಮಕ ಬರೆಹ. ಇವರು ಮಿತ್ರೋದಯ ಎಂಬ ಪತ್ರಿಕೆಯನ್ನು ನಡೆಸುತ್ತಿದ್ದುದಾಗಿಯೂ ತಿಳಿಯುತ್ತದೆ.

ಗುಲ್ವಾಡಿಯವರು ಬಾಳಿದ ಕಾಲದಲ್ಲಿ ಭಾರತೀಯ ಸಮಾಜ ಸನಾತನ ಆವರಣದಿಂದ ಹೊರಬಿದ್ದು, ಪಾಶ್ಚಾತ್ಯ ನಾಗರಿಕತೆಯತ್ತ ಸಾಗುತ್ತಿತ್ತು. ಈ ಘರ್ಷಣೆಯಲ್ಲಿ ಈ ಲೇಖಕರದು ಮಧ್ಯಮಾರ್ಗ. ಸನಾತನ ಧರ್ಮದಲ್ಲಿ, ಗುರುಪೀಠಗಳಲ್ಲಿ ಇವರಿಗೆ ಅಚಲ ನಿಷ್ಠೆಯಿತ್ತೆಂಬುದೇನೋ ನಿಜ. ಆ ಮನೋಭಾವದಿಂದಲೇ ಇವರು ದಕ್ಷಿಣಕನ್ನಡ ಜಿಲ್ಲೆಯ ಹಲವೆಡೆ ದೇವಸ್ಥಾನಗಳ ಜೀರ್ಣೋದ್ಧಾರ ಕಾರ್ಯವನ್ನು ನಡೆಸಿದರು. ಆದರೆ ಪ್ರಾಮಾಣಿಕತೆಯೇ ಜೀವನದ ಉಸಿರಾಗಿದ್ದ ಇವರಿಗೆ ಹಲವು ಗುರುಪೀಠಗಳ ಡಂಭಾಚಾರ ಸರಿಬರಲಿಲ್ಲ. ಹೊಸ ಶಿಕ್ಷಣದ ಪುರಸ್ಕರ್ತರಾಗಿ ಹಲವು ಶಿಕ್ಷಣ ಮಂದಿರಗಳನ್ನು ಪುನರುಜ್ಜೀವಗೊಳಿಸಿದರು. ಸ್ತ್ರೀಯರ ಏಳ್ಗೆ ಮುಂತಾದ ವಿಷಯಗಳಲ್ಲಿ ಇವರಿಗೆ ಸಹಜವಾದ ಕಳಕಳಿ ಇತ್ತು.

ಹಳತು-ಹೊಸತರ ಸಂಘರ್ಷ ಇವರ ಇಂದಿರಾಬಾಯಿ ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಪೊಲೀಸ್ ಖಾತೆಯಲ್ಲಿದ್ದಾಗಿನ ಲೋಕಾನುಭವ ಇಲ್ಲಿ ಸಾಹಿತ್ಯವಾಗಿ ರೂಪುಗೊಂಡಿದೆ. ಇಂದಿರೆಯ ತಂದೆತಾಯಿಗಳು ಸ್ವಾರ್ಥಪರರು. ತಮಗೆ ಆಗದವರನ್ನು ವಿಷಹಾಕಿ ಕೊಲ್ಲಿಸುವುದಕ್ಕೂ ಹೇಸರು. ಒಬ್ಬ ವ್ಯಸನಿಯೊಡನೆ ಮಗಳ ಮದುವೆ ಮಾಡಿಸಿದ್ದರ ಫಲವಾಗಿ ಇಂದಿರ ಬಾಲವಿಧವೆಯಾಗಿ ಅಮೃತ ರಾಯನೆಂಬುವನ ಆಶ್ರಯದಲ್ಲಿ ನಿಲ್ಲುತ್ತಾಳೆ. ಆತನ ಪೋಷಣೆಯಲ್ಲಿ ಆಕೆಯೂ ಭಾಸ್ಕರನೆಂಬ ಅನಾಥ ಹುಡುಗನೊಬ್ಬನೂ ವಿದ್ಯೆ ಕಲಿಯುತ್ತಾರೆ. ಕೊನೆಗೆ ಭಾಸ್ಕರನೊಡನೆ ಇಂದಿರೆಯ ಮರುಮದುವೆಯಾಗುತ್ತದೆ. ಈ ಸಂಬಂಧದಿಂದ ನಿಜವಾದ, ಸದ್ಧರ್ಮದ ವಿಜಯವಾಯಿತೆಂದು ತೋರಿಸಲಾಗಿದೆ. ಕಥೆಯಲ್ಲಿನ ಘಟನೆಗಳು ವಾಸ್ತವಾಂಶದಿಂದ ಕೂಡಿದುವಾಗಿದ್ದು ಯಾವ ದೃಷ್ಟಿಯಿಂದ ನೋಡಿದರೂ ಕಾದಂಬರಿ ಆಧುನಿಕ ಸಮಾಜದ ಕಥನವೆನ್ನಿಸಿಕೊಳ್ಳುತ್ತದೆ. ಈ ಕಾದಂಬರಿಯನ್ನು ಮೆಚ್ಚಿ, ದಕ್ಷಿಣ ಕನ್ನಡದಲ್ಲಿ ಜಿಲ್ಲಾಧಿಕಾರಿಯಾಗಿದ್ದ ಕೌಚ್‌ಮನ್ ಎಂಬಾತ ಇದನ್ನು ಇಂಗ್ಲಿಷಿಗೆ ಭಾಷಾಂತರಿಸಿ ಪ್ರಕಟಿಸಿದ್ದಾನೆ. (ಎಸ್.ಎಚ್.)

**ಗುಳೇದಗುಡ್ಡ :** ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕಿನ ಒಂದು ಪಟ್ಟಣ; ಹೋಬಳಿ ಕೇಂದ್ರ. ಬಾದಾಮಿಯ ಈಶಾನ್ಯಕ್ಕೆ 23ಕಿಮೀ ದೂರದಲ್ಲೂ ಗುಳೇದಗುಡ್ಡ ರೋಡ್ ರೈಲು ನಿಲ್ದಾಣಕ್ಕೆ 10ಕಿಮೀ ದೂರದಲ್ಲೂ ಇದೆ. ಜನಸಂಖ್ಯೆ 33,991.

ಬಾದಾಮಿ ತಾಲ್ಲೂಕಿನಲ್ಲಿ ಗುಳೇದಗುಡ್ಡ ಅಭಿವೃದ್ಧಿ ಹೊಂದುತ್ತಿರುವ ಒಂದು ಪಟ್ಟಣ. ಇಲ್ಲಿ ತಯಾರಾಗುವ ಕುಪ್ಪುಸದ ಕಣಗಳು, ಭಾರತದಲ್ಲೆಲ್ಲ ಪ್ರಸಿದ್ಧಿಪಡೆದಿವೆ. ಇಳಕಲ್ಲ ಸೀರೆ, ಅಮೀನಗಡದ ಕರದಂಟು, ಗುಳೇದಗುಡ್ಡದ ಕಣ ಇದು ಉತ್ತರ ಕರ್ನಾಟಕದಲ್ಲಿ ಮನೆಮಾತು. ಇಲ್ಲಿ ತಯಾರಾಗುವ ಹತ್ತಿ ಮತ್ತು ರೇಷ್ಮೆ ಬಟ್ಟೆಗಳು ಸೊಲ್ಲಾಪುರ, ಮುಂಬಯಿ, ಪುಣೆ, ಅಹಮದ್‌ನಗರಗಳಿಗೆ ಸಾಗುತ್ತವೆ. ಗುಳೇದಗುಡ್ಡದ ಹತ್ತಿರ ಬೆಲೆಬಾಳುವ ಕಲ್ಲುಗಣಿಗಳುಂಟು.

ಗುಳೇದಗುಡ್ಡ ಪಟ್ಟಣ ಹಿಂದೆ ಇಲ್ಲಿರುವ ಬೆಟ್ಟದ ಮೇಲಿತ್ತು. ಈಗಲೂ ಅಲ್ಲಿ ಪಟ್ಟಣದ ಅವಶೇಷಗಳನ್ನು ಕಾಣಬಹುದು. 1580ರಲ್ಲಿ ಬಿಜಾಪುರದ ಎರಡನೆಯ ಇಬ್ರಾಹೀಂ ಆದಿಲ್ ಷಾ ಇಲ್ಲಿ ಕೋಟೆ ಕಟ್ಟಿಸಿದ. 1705ರಲ್ಲಿ ಇಂದಿನ ಪಟ್ಟಣದ ಸ್ಥಾಪನೆಯಾಯಿತು. 1787ರಲ್ಲಿ ಟಿಪ್ಪುವಿನ ಅಧೀನಕ್ಕೆ ಬಂತು. ಅನಂತರ ಮರಾಠರು ಇದನ್ನು ಲೂಟಿ ಮಾಡಿದಾಗ ಇಲ್ಲಿಯ ನಿವಾಸಿಗಳನೇಕರು ಪಟ್ಟಣ ಬಿಟ್ಟು ಓಡಿ ಹೋದರು. ದೇಸಾಯಿಮನೆತನದ ಪ್ರಭಾವದಿಂದಾಗಿ ಅವರು ಮತ್ತೆ ಇಲ್ಲಿಗೆ ಬಂದು ನೆಲೆಸಿದರು. ಮತ್ತೆ ನರಸಿಂಹನೆಂಬುವವನು ಈ ನಗರವನ್ನು ಲೂಟಿ ಮಾಡಿದ. ಜನ ಪುನಃ ಓಡಿಹೋದರು. 1818ರಲ್ಲಿ ದೇಸಾಯಿ ಪರಿವಾರದವರ ಒತ್ತಾಯ ಮತ್ತು ಸಹಯೋಗದಿಂದಾಗಿ ಜನರಲ್ ಮನ್ರೋ ಜನವಾಸಕ್ಕೆ ಅನುಕೂಲಮಾಡಿಕೊಟ್ಟ. *

**ಗೂಳೂರು :** ತುಮಕೂರು ಜಿಲ್ಲೆ ತುಮಕೂರು ತಾಲ್ಲೂಕಿನ ಒಂದು ಗ್ರಾಮ. ತುಮಕೂರಿಗೆ ದಕ್ಷಿಣದಲ್ಲಿ ಸು.4ಕಿಮೀ ದೂರದಲ್ಲಿದೆ.



ಗೂಳೂರು ಗಣಪತಿ

ಇದರ ಸಮೀಪದಲ್ಲಿರುವ ಪ್ರಸಿದ್ಧವಾದ ಕೈದಾಳ ಕ್ಷೇತ್ರ ಸೇರಿದಂತೆ ಇದು ಕ್ರೀಡಾಪುರವೆಂಬ ಹೆಸರಿನ ಪ್ರಾಚೀನ ರಾಜಧಾನಿ

ಯಾಗಿತ್ತೆಂದು ಪ್ರತೀತಿ. ವಿಜಯನಗರದ ಹಾಗೂ ಮೈಸೂರು ಅರಸರ ಕೆಲವು ಶಾಸನಗಳಲ್ಲಿ ಗೂಳೂರು ಸೀಮೆ ಉಕ್ತವಾಗಿರುವುದರಿಂದ ಇದು ಹಲವು ಹಳ್ಳಿಗಳನ್ನೊಳಗೊಂಡ ಒಂದು ಆಡಳಿತ ವಿಭಾಗವಾಗಿತ್ತೆಂದು ತೋರುತ್ತದೆ. ಸಂಸ್ಕೃತದಲ್ಲಿ ಈ ಗ್ರಾಮಕ್ಕೆ ನಂದೀಪುರವೆಂಬ ಹೆಸರಿತ್ತೆಂದು ತಿಳಿದುಬರುತ್ತದೆ. ಶೂನ್ಯಸಂಪಾದನೆ ಮತ್ತು ಅನಾದಿ ವೀರಶೈವ ಸಂಗ್ರಹಗಳ ಕರ್ತೃ ಸಿದ್ಧವೀರಣಾಚಾರ್ಯ, ಸಂಪಾದನೆ ಪರ್ವತೇಶ್ವರ ಮತ್ತು ವಿರಕ್ತ ತೋಂಟದಾರ್ಯ ಮುಂತಾದ ಕವಿಗಳು ಇಲ್ಲಿಯವರು. ಎಡೆಯೂರು ಸಿದ್ಧಲಿಂಗೇಶ್ವರರು ಸ್ವಲ್ಪ ಕಾಲ ಇಲ್ಲಿ ತಂಗಿದ್ದರೆಂಬ ಪ್ರತೀತಿ ಇದೆ.

ಗೂಳೂರು ಬೃಹದ್ ಗಣೇಶ ವಿಗ್ರಹದಿಂದಾಗಿ ಹೆಚ್ಚು ಪ್ರಸಿದ್ಧಿ ಪಡೆದಿದೆ. ಪ್ರತಿವರ್ಷ ಭಾದ್ರಪದ ಚತುರ್ಥಿಯಂದು ಸಾಮಾನ್ಯ ಎತ್ತರದ ಮಣ್ಣಿನ ಗಣೇಶ ವಿಗ್ರಹವೊಂದನ್ನು ಸ್ಥಾಪಿಸಿ, ಅದಕ್ಕೆ ಪ್ರಾಣಪ್ರತಿಷ್ಠೆ ಮಾಡಿ ಪೂಜಿಸಲಾಗುತ್ತದೆ. ಪ್ರಾಣಪ್ರತಿಷ್ಠೆ ಮಾಡಿದ ಚಿಕ್ಕ ಗಣೇಶಮೂರ್ತಿ ಈ ವಿಗ್ರಹದ ಹೊಟ್ಟೆಯೊಳಗಿರುತ್ತದೆ. ಬೃಹದ್ ಗಣೇಶ ವಿಗ್ರಹದ ಎತ್ತರ ಸುಮಾರು ಎಂಟು ಅಡಿಗಳು. ಇದನ್ನು ತಯಾರಿಸಲು ಸುಮಾರು ಎರಡು ತಿಂಗಳ ಕಾಲಾವಕಾಶ ಬೇಕಾಗುತ್ತದೆ. ರಚನೆಯ ಕಾರ್ಯ ಮುಗಿದ ಅನಂತರ ಸುಮಾರು ಒಂದು ತಿಂಗಳ ಕಾಲ ಅದಕ್ಕೆ ಪೂಜೆಪುನಸ್ಕಾರಗಳು ನಡೆಯುತ್ತವೆ. ಹತ್ತಾರು ಕಡೆಗಳಿಂದ ಜನ ಈ ವಿಗ್ರಹದ ದರ್ಶನ ಪಡೆಯಲು ಬರುತ್ತಾರೆ. ನವೆಂಬರ್ - ಡಿಸೆಂಬರ್‌ನಲ್ಲಿ ಈ ಗಣೇಶನ ಜಾತ್ರೆ ನಡೆಯುತ್ತದೆ. ಎಲ್ಲ ಕಾರ್ಯಕಲಾಪಗಳು ಮುಗಿದ ಅನಂತರ ವಿಜೃಂಭಣೆಯಿಂದ ಊರಲ್ಲಿ ಮೆರವಣಿಗೆ ಮಾಡಿ ಮೂರ್ತಿಯನ್ನು ಕೆರೆಯಲ್ಲಿ ವಿಸರ್ಜಿಸಲಾಗುತ್ತದೆ. (ಎಚ್.ಎಂ.ಎನ್.ಆರ್.)

**ಗೂಳೂರು ಸಿದ್ಧವೀರಣ್ಣೊಡೆಯ :** ಸು.1600. ವೀರಶೈವಕವಿ. ಶೂನ್ಯಸಂಪಾದನೆಯ ಸಂಕಲನಕಾರರಲ್ಲೊಬ್ಬ. ತುಮಕೂರು ತಾಲ್ಲೂಕಿನ ಗೂಳೂರು ಈತನ ಜನ್ಮಸ್ಥಳ ಹಾಗೂ ಕಾರ್ಯಕ್ಷೇತ್ರ. ಸಾಹಿತ್ಯಕ್ಷೇತ್ರದಲ್ಲಿ ಶೂನ್ಯಸಂಪಾದನೆಯನ್ನು ಮತ್ತೊಮ್ಮೆ ಪರಿಷ್ಕರಿಸಿದ್ದು ಇವನ ಮುಖ್ಯ ಕಾರ್ಯ. ಶಿವಗಣಪ್ರಸಾದಿ ಮಹಾದೇವಯ್ಯನಿಂದ ರಚಿತವಾಗಿದ್ದ ಈ ಕೃತಿ ಆ ವೇಳೆಗಾಗಲೇ ಕೆಂಚವೀರಣ್ಣೊಡೆಯ (ಹಲಗೆಯದೇವ) ಮತ್ತು ಗುಮ್ಮಳಾಪುರದ ಸಿದ್ಧಲಿಂಗಯತಿಗಳಿಂದ ಪುನರ್ನಿರ್ಮಾಣವನ್ನು ಪಡೆದಿತ್ತು. ಈತ ಇದನ್ನು ಮತ್ತೊಮ್ಮೆ ಕೈಗೆತ್ತಿಕೊಂಡು ಇದಕ್ಕೆ ಅತ್ಯಂತ ಪರಿಷ್ಕೃತ ರೂಪವನ್ನು ಕೊಟ್ಟ. ಇವನ ಶೂನ್ಯಸಂಪಾದನೆಯಲ್ಲಿ ಮೊಟ್ಟಮೊದಲು ನಮ್ಮ ಗಮನವನ್ನು ಸೆಳೆಯುವ ಅಂಶವೆಂದರೆ ಕೃತಿಯನ್ನು ಸಂಧಿಗಳನ್ನಾಗಿ ವಿಭಾಗಿಸಿ ಸಂಪಾದನೆ ಅಥವಾ ಉಪದೇಶ ಎಂದು ಅವುಗಳನ್ನು ಹೆಸರಿಸಿದ್ದು. ಒಂದೊಂದು ಉಪದೇಶದ ಪ್ರಾರಂಭದಲ್ಲೂ ಒಂದು ಕಂದಪದ್ಯವನ್ನು ಬರೆದು ಆ ಸಂಧಿಯಲ್ಲಿ ಬರುವ ಪ್ರಮುಖ ವಿಷಯವನ್ನು ಸೂಚಿಸುತ್ತಾನೆ. ಆಶ್ವಾಸದ ಕೊನೆಯಲ್ಲಿ ಸಮಾಪ್ತಿಯ ಗದ್ಯವನ್ನು ಬರೆದು ಉಪದೇಶದ ಹೆಸರು ಹಾಗೂ ಅದುವರೆಗೂ ಬಳಸಿದ ಸಂಖ್ಯೆಯನ್ನು ಕೊಟ್ಟಿದ್ದಾನೆ. ಮೊದಲನೆಯ ಮೂರು ಶೂನ್ಯಸಂಪಾದನೆಗಳಲ್ಲಿ ಈ ವಿಭಾಗಕ್ರಮವಿಲ್ಲ. ಇವನ ಕೃತಿಯಲ್ಲಿ ಇಪ್ಪತ್ತೊಂದು ಉಪದೇಶಗಳಿವೆ. ಹಿಂದಿನವರಲ್ಲಿ ಇಲ್ಲದಿರುವ ಎರಡು ಸನ್ನಿವೇಶಗಳನ್ನು (ಮೋಳಿಗೆ ಮಾರಯ್ಯ ಮತ್ತು ಘಟ್ಟಿವಾಳಯ್ಯ) ಹೊಸದಾಗಿ ಸೇರಿಸಿದ್ದಾನೆ. ಒಟ್ಟಿನಲ್ಲಿ ಶಿವಗಣ ಪ್ರಸಾದಿ ಮಹಾದೇವಯ್ಯ ಯಾವ ಮಹೋದ್ದೇಶವನ್ನಿಟ್ಟುಕೊಂಡು ಶೂನ್ಯ ಸಂಪಾದನೆಯನ್ನು ಮೊಟ್ಟಮೊದಲು ಸಂಭಾಷಣೆಯ ರೂಪದಲ್ಲಿ ಸಂಗ್ರಹಿಸಿದ್ದನೋ ಅದು ಇತರ ಶೂನ್ಯಸಂಪಾದನೆಗಾರರ ಕೈಯಲ್ಲಿ ವಿಕಾಸಗೊಂಡು ಇವನಲ್ಲಿ ಪೂರ್ಣತೆಯನ್ನು ಪಡೆಯಿತೆಂದು ಹೇಳಬಹುದು. (ಎಚ್.ಟಿ.ಎಸ್.)

**ಗೃಹಕೈಗಾರಿಕೆಗಳು :** ಮನೆಯನ್ನೇ ಕೈಗಾರಿಕಾ ಸ್ಥಳವಾಗಿ ಉಪಯೋಗಿಸಿಕೊಂಡು ಸಾಮಾನ್ಯ ಬಳಕೆ ವಸ್ತುಗಳನ್ನು ಮನೆಯವರೆಲ್ಲ ಪಾಲ್ಗೊಂಡು ತಮ್ಮ ಬಿಡುವಿನ ಸಮಯದಲ್ಲಿ ಉತ್ಪಾದನೆಯಲ್ಲಿ ತೊಡಗುತ್ತಾರೆ. ಕರ್ನಾಟಕ ಗೃಹಕೈಗಾರಿಕೆಗಳು ಹಿಂದಿನಿಂದಲೂ ಪ್ರಸಿದ್ಧ. ಅವುಗಳಲ್ಲಿ ಕುಂಬಾರಿಕೆ, ನೇಯ್ಗೆ, ಬಿದಿರು ಮತ್ತು ಬೆತ್ತದ ಸಾಮಾನುಗಳ ತಯಾರಿಕೆ, ಚಾಪೆ ಹೆಣಿಗೆ, ಚರ್ಮ ವಸ್ತುಗಳ ತಯಾರಿಕೆ, ನೂಲಿಗೆ ಬಣ್ಣ ಕಟ್ಟುವುದು, ಬಟ್ಟೆ ತಯಾರಿಕೆ, ಪುಸ್ತಕಗಳನ್ನು ಹೊಲಿಯುವುದು, ಬೀಜಗಳಿಂದ ಎಣ್ಣೆ ತೆಗೆಯುವುದು, ಚಿನ್ನಬೆಳ್ಳಿ ಮತ್ತು ಇತರ ಆಭರಣಗಳ, ಸಂಗೀತ ವಾದ್ಯಗಳ, ವ್ಯವಸಾಯೋಪಕರಣಗಳ, ಜಮಖಾನದ, ಮಣ್ಣಿನ ಪ್ರತಿಮೆಗಳ ಮತ್ತು ತಾಮ್ರಕಂಚು ಹಿತ್ತಾಳೆ ಸಾಮಾನುಗಳ ತಯಾರಿಕೆ, ಆಟದ ಸಾಮಾನುಗಳ ಅಲಂಕಾರ ವಸ್ತುಗಳ ರಬ್ಬರ್ ವಸ್ತುಗಳ ಮತ್ತು ಅಚ್ಚುಗಳ ತಯಾರಿಕೆ, ರಟ್ಟುಕಟ್ಟುವುದು, ಕಸೂತಿ ವಸ್ತುಗಳ ಉತ್ಪಾದನೆ ಮುಂತಾದ ಹಲವಾರು ಕೈಗಾರಿಕೆಗಳಿವೆ. ಅವುಗಳ ಉತ್ಪಾದನೆಗಳೊಂದಿಗೆ



ಸಹಕರಿಸುವ ನೂರಾರು ಉಪಕೈಗಾರಿಕೆಗಳೂ ಉಂಟು. ಉದಾಹರಣೆಗೆ ಚರ್ಮೋದ್ಯೋಗಕ್ಕೆ ಬೇಕಾದ ಸುಣ್ಣ, ನೂಲಿಗೆ ಬೇಕಾಗುವ ಬಣ್ಣ ಇತ್ಯಾದಿ. ಇವು ಅಲ್ಪಪ್ರಮಾಣ ದಲ್ಲಾದರೂ ತಯಾರಾಗಬಹುದು, ಇಲ್ಲವೆ ಭಾರಿ ಉದ್ಯಮವೇ ಆಗಿರಬಹುದು. ಗೃಹ ಕೈಗಾರಿಕಾ ವಸ್ತುಗಳ ಉತ್ಪಾದನೆಯ ಜೊತೆಯಲ್ಲಿ ಇತರ ವಸ್ತುಗಳೂ ನಮಗೆ ದೊರಕುತ್ತವೆ. ಉದಾಹರಣೆಗೆ ಎಣ್ಣೆ ಉತ್ಪಾದನೆಯ ಜೊತೆಯಲ್ಲಿ ಹಿಂಡಿ, ಅಕ್ಕಿ ಕುಟ್ಟುವುದರಿಂದ ತೌಡು ಇತ್ಯಾದಿಗಳನ್ನು ಹೆಸರಿಸ ಬಹುದು. ಗೃಹಕೈಗಾರಿಕೆಗಳು ಇತರ ಸಹವಸ್ತು ಗಳನ್ನು ಉತ್ಪಾದಿಸು ವುದಲ್ಲದೆ ಹಿರಿಯ ಕೈಗಾರಿಕೋದ್ಯಮಕ್ಕೆ ಕಚ್ಚಾಮಾಲನ್ನೂ ಉಪಯುಕ್ತ ವಸ್ತುಗಳನ್ನೂ ತಯಾರಿಸಿ ರಾಜ್ಯದ ಕೈಗಾರಿಕೋದ್ಯಮದ ಬೆಳವಣಿಗೆಗೆ ಸಹಕಾರಿಯಾಗಿದೆ.

ಈ ಎಲ್ಲ ಉದ್ಯಮಗಳಿಗೆ ಬೇಕಾಗುವ ಪ್ರಾಕೃತಿಕ ಕಚ್ಚಾವಸ್ತುಗಳು ಕರ್ನಾಟಕದಲ್ಲಿ ಹೇರಳವಾಗಿವೆ. ಮರದ, ಬಿದಿರಿನ ಮತ್ತು ನಾರಿನ ಉದ್ಯಮಕ್ಕೆ ಕರ್ನಾಟಕದ ಕಾಡುಗಳಲ್ಲಿ ಉತ್ತಮ ಮರಗಳು, ಬಿದಿರು, ನಾರಿನ ಕತ್ತಾಳೆ ಇವು ದೊರೆಯುತ್ತವೆ. ಕಬ್ಬಿಣಕ್ಕೂ ಕೊರತೆ ಇಲ್ಲ. ಕುಂಬಾರಿಕೆಗೆ ಬೇಕಾಗುವ ಜೇಡಿ ಮತ್ತು ಇತರ ಮಣ್ಣುಗಳು ರಾಜ್ಯದ ಅನೇಕ ಕಡೆ ಹೇರಳವಾಗಿ ದೊರೆಯುವುದು. ಜೇನುಸಾಕಣೆಗೆ ವಿಶಾಲವಾದ



ಲೋಹ ಕಲಾಕೃತಿ

ಕಾಡುಗಳೂ ಉದ್ಯಾನವನಗಳೂ ಇವೆ. ಪಶುಸಂಪತ್ತು ಸಮೃದ್ಧಿಯಾಗಿದ್ದು ಚರ್ಮೋದ್ಯೋಗಕ್ಕೆ ಅನುಕೂಲವಾಗಿದೆ. ನಾನಾ ತರಹದ ಎಣ್ಣೆಬೀಜಗಳು ಉದಾಹರಣೆಗೆ, ಹೊಂಗೆ, ಬೇವು, ಹರಳು, ನೆಲಗಡಲೆ, ಎಳ್ಳು, ಹುಚ್ಚೆಳ್ಳು ಇತ್ಯಾದಿಗಳು ಬೆಳೆಯುವುದರಿಂದ ತೈಲೋದ್ಯಮಕ್ಕೆ ಅನುಕೂಲವಿದೆ. ಬತ್ತ ರಾಜ್ಯದ ಒಂದು ಮುಖ್ಯ ಬೆಳೆಯಾಗಿದ್ದು ಕೊಟ್ಟಣದ ಅಕ್ಕಿ ಉದ್ಯಮ ನಡೆದುಕೊಂಡು ಹೋಗುತ್ತಿದೆ. ಕಬ್ಬು ರಾಜ್ಯದ ಇನ್ನೊಂದು ಪ್ರಮುಖ ಬೆಳೆಯಾಗಿದ್ದು, ಬೆಲ್ಲ ಮತ್ತು ಖಂಡಸಾರಿ ಉದ್ಯಮಕ್ಕೂ ಸಿಪ್ಪೆ ಕಾಗದ

ತಯಾರಿಕೆಗೂ ಬರುತ್ತದೆ. ಅಖಾದ್ಯ ತೈಲಗಳ ಉತ್ಪತ್ತಿಯೂ ಸಾಕಷ್ಟು ಇದ್ದು ಈ ತೈಲಗಳನ್ನು ಸಾಬೂನು ತಯಾರಿಕೆಗೆ ಉಪಯೋಗಿಸುತ್ತಾರೆ. ಕಂಬಳಿ ತಯಾರಿಕೆಗೆ ಸಾಕಷ್ಟು ಉಣ್ಣೆಯ ಪೂರೈಕೆ ಇದೆ. ಕತ್ತಾಳೆ ಮುಂತಾದವುಗಳಿಂದ ನಾರಿನ ಉತ್ಪತ್ತಿಯಾಗುತ್ತದೆ.



ಬಣ್ಣದ ಆಟಿಕೆಗಳು

ಆಂದಿನ ಮೈಸೂರು ಸರ್ಕಾರ ಪಟ್ಟಣ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಗೃಹಕೈಗಾರಿಕೆಗಳನ್ನು ಉಳಿಸಿಬೆಳೆಸುವ ದೃಷ್ಟಿಯಿಂದ 1916ರಲ್ಲಿ ಗೃಹಕೈಗಾರಿಕಾ ಸಂಸ್ಥೆಯನ್ನು ಸ್ಥಾಪಿಸಿತು. ಈ ಯೋಜನೆ ನಿಧಾನಗತಿಯಲ್ಲಿ ಸಾಗಿದ್ದು 1939ರಲ್ಲಿ ಒಂದು ವ್ಯಾಪಕ ಯೋಜನೆ ಸಿದ್ಧಪಡಿಸಿ ಜಾರಿಗೊಳಿಸಲಾಯಿತು. ಇದರಂತೆ ಮಾದರಿ ಮಡಕೆಕುಡಿಕೆಗಳ ತಯಾರಿಕೆ, ಗುಂಡಿ ಮತ್ತು ಚರ್ಮ ವಸ್ತುಗಳ ತಯಾರಿಕೆ ಇವೇ ಮೊದಲಾಗಿ 17 ಬಗೆಯ ಗೃಹಕೈಗಾರಿಕೆಗಳು ಸ್ಥಾಪನೆಯಾದವು. ಜೊತೆಗೆ ರಾಜ್ಯದ ಕೆಲವು ಭಾಗಗಳಲ್ಲಿ ತರಬೇತಿ ಕೇಂದ್ರಗಳು ಸ್ಥಾಪಿತವಾದವು. ಮುಂದೆ ಕೈಗಾರಿಕೋದ್ಯಮದ ಬೆಳವಣಿಗೆಗೆ ಮತ್ತು ನಿರುದ್ಯೋಗ ನಿವಾರಣೆಗೆ ಗೃಹಕೈಗಾರಿಕೆಗಳ ಅಭಿವೃದ್ಧಿ ಅಗತ್ಯವೆಂಬುದನ್ನು ಮನಗಂಡು ಸರ್ಕಾರ ಕೆಲವು ಮಂಡಳಿಗಳನ್ನು ಸ್ಥಾಪಿಸಿತು. ಅವುಗಳಲ್ಲಿ ಮುಖ್ಯವಾದವು ಅಖಿಲ ಭಾರತ ಖಾದಿ ಗ್ರಾಮೋದ್ಯೋಗ ಆಯೋಗ, ಅಖಿಲ ಭಾರತ ಕೈಮಗ್ಗದ ಮಂಡಳಿ, ಅಖಿಲ ಭಾರತ ಕುಶಲ ಕೈಗಾರಿಕೆಗಳ ಮಂಡಳಿ, ಅಖಿಲ ಭಾರತ ತೆಂಗಿನ ನಾರಿನ ಕೈಗಾರಿಕಾಭಿವೃದ್ಧಿ ಮಂಡಳಿ ಮತ್ತು ಕೇಂದ್ರ ರೇಷ್ಮೆ ಮಂಡಳಿ ಇತ್ಯಾದಿ. ಇವೆಲ್ಲವೂ ರಾಜ್ಯ ಮಟ್ಟದಲ್ಲಿ ತಮ್ಮ ಮಂಡಳಿಗಳನ್ನು ಹೊಂದಿದ್ದು ಸಂಬಂಧಿಸಿದ ಕೈಗಾರಿಕಾಭಿವೃದ್ಧಿಗೆ ಶ್ರಮಿಸುತ್ತಿವೆ. ಈ ಮಂಡಳಿಗಳ ಮೂಲಕ ಸರ್ಕಾರ ಗೃಹಕೈಗಾರಿಕೆಗಳಿಗೆ ಆರ್ಥಿಕ ನೆರವನ್ನು ಸಾಲ ಮತ್ತು ಸಹಾಯಧನದ ಜೊತೆಗೆ ತಾಂತ್ರಿಕ ಸಹಾಯ ಮತ್ತು ತರಬೇತಿಸೌಲಭ್ಯಗಳನ್ನು ಒದಗಿಸಿಕೊಡುವುದರ ಮೂಲಕ ಗೃಹಕೈಗಾರಿಕೆಗಳ ಬೆಳವಣಿಗೆಯನ್ನು ಪ್ರೋತ್ಸಾಹಿಸುತ್ತಿದೆ.

ಪ್ರಾಚೀನ ಕಾಲದಿಂದ ಗೃಹಕೈಗಾರಿಕೆಗಳು ದೇಶದ ಆರ್ಥಿಕ ಚಟುವಟಿಕೆಯ ಮುಖ್ಯ ಅಂಗವಾಗಿದ್ದುವು. ಆದರೆ ಬ್ರಿಟಿಷರ ಆಡಳಿತ ಕಾಲದಲ್ಲಿ ಭಾರತದ ಇತರ ಕಡೆಗಳಂತೆಯೇ ಕರ್ನಾಟಕ ರಾಜ್ಯದ ಗೃಹಕೈಗಾರಿಕೆಗಳು ಸರಿಯಾದ ಪ್ರೋತ್ಸಾಹ ದೊರಕದೆ ಥಳುಕಿನ ಇಂಗ್ಲಿಷ್ ವಸ್ತುಗಳೊಡನೆ ಸ್ಪರ್ಧಿಸಲಾರದೆ ಹಿಂದೆ ಬೀಳಬೇಕಾಯಿತು. ಸ್ವಾತಂತ್ರ್ಯಾನಂತರ ಗೃಹಕೈಗಾರಿಕೆಗಳು ಚೇತರಿಸಿಕೊಂಡವು. ಗ್ರಾಮಾಂತರ ಪ್ರದೇಶಗಳಲ್ಲಿ ನಿರುದ್ಯೋಗಿಗಳಾಗಿರುವ ಮತ್ತು ಸಾಕಷ್ಟು ಉದ್ಯೋಗ ಇಲ್ಲದಿರುವ ಜನರಿಗೆ ನೆರವಾಗುವ ಉದ್ದೇಶದ ಯೋಜನೆಯಂತೆ 1950ರಲ್ಲಿ ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ಯೋಜನೆಯನ್ನು ಜಾರಿಗೊಳಿಸಿ ಅದರ ಉತ್ತಮ ಫಲಿತಾಂಶಗಳಿಂದ ಮುಂದೆ ಇಡೀ ಕರ್ನಾಟಕ ರಾಜ್ಯಕ್ಕೆ ವಿಸ್ತರಿಸಲಾಯಿತು. ಈ ಯೋಜನೆಯನ್ವಯ ಅಸ್ತಿತ್ವದಲ್ಲಿದ್ದ ಕೈಗಾರಿಕೆಗಳನ್ನು ವಿಸ್ತರಿಸಲು ಹಾಗೂ ಹೊಸ ಕೈಗಾರಿಕೆಗಳನ್ನು ಸ್ಥಾಪಿಸಲು ಸಾಮೂಹಿಕ ಗ್ರಾಮ ಅಭಿವೃದ್ಧಿ ಸಮಿತಿಗಳನ್ನು 1952ರಲ್ಲಿ ರಚಿಸಲಾಯಿತು. ಗ್ರಾಮಾಂತರ ಕೈಗಾರಿಕಾ ಸಹಕಾರ ಸಂಸ್ಥೆಗಳನ್ನು ಪ್ರಾರಂಭಿಸಲಾಯಿತು. ಇವು ಗ್ರಾಮಾಂತರ ಪ್ರದೇಶಗಳ ಕಸಬುದಾರರಿಗೆ ಮತ್ತು ಉದ್ಯಮಗಳಿಗೆ ಬಲು ಪ್ರಯೋಜನಕಾರಿಯಾದವು. ಈಗ ಈ ಕಾರ್ಯಕ್ರಮಗಳನ್ನು ಪಂಚವಾರ್ಷಿಕ ಯೋಜನೆಗಳಲ್ಲಿ ವಿಲೀನಗೊಳಿಸಲಾಗಿದೆ.

ಎರಡನೆಯ ಯೋಜನೆಯಲ್ಲಿ ಕೈಗಾರಿಕಾ ಕ್ಷೇತ್ರಗಳನ್ನು ನಿರ್ಮಿಸಲಾಯಿತು. ಏಕೆಂದರೆ ಗ್ರಾಮಾಂತರ ಗೃಹಕೈಗಾರಿಕೆಗಳು ಬೆಳೆದು ಸಣ್ಣ ಕೈಗಾರಿಕೆಗಳ ಮಟ್ಟಕ್ಕೆ ಬರುವುದರಿಂದ ಅವುಗಳ ಅಭಿವೃದ್ಧಿಗೆ ಮೈಸೂರು, ಬೆಂಗಳೂರು, ಹುಬ್ಬಳ್ಳಿ, ರಾಮನಗರ, ಹರಿಹರ, ಬೆಳಗಾಂವಿ, ಮಂಗಳೂರು, ಗುಲ್ಬರ್ಗಗಳಲ್ಲಿ ಕೈಗಾರಿಕಾ ಕ್ಷೇತ್ರಗಳನ್ನು ನಿರ್ಮಾಣ ಮಾಡಲಾಯಿತು. 1959ರಲ್ಲಿ ಮೈಸೂರು ಸಣ್ಣ ಕೈಗಾರಿಕೆ ಮತ್ತು ಕರಕುಶಲ ಕಸಬುಗಳ ಮಂಡಳಿಯನ್ನು ರಚಿಸಲಾಯಿತು. ಬಲೆನೇಯ್ಗೆ, ಗಂಧದ ಕೆತ್ತನೆ, ದಂತದ ಕೆತ್ತನೆ, ಲೋಹಸಾಮಗ್ರಿ, ಮರದ ಆಟದ ಬೊಂಬೆ ತಯಾರಿಕೆ ಮುಂತಾದ ನಾನಾ ಕಸಬುಗಳು ಉಳಿದು ಕೈಗಾರಿಕೆಗಳು ಅಭಿವೃದ್ಧಿ ಹೊಂದಲು ಸರ್ಕಾರ ಹಲವಾರು ಉತ್ತೇಜನಗಳನ್ನು ಕೈಗೊಂಡಿತು. ಅವುಗಳೆಂದರೆ ಸಾಧ್ಯಾಸಾಧ್ಯತೆಯ ವರದಿ ಸಿದ್ಧಪಡಿಸಲು ಸಹಾಯ, ತೆರಿಗೆ ವಿನಾಯಿತಿ, ವ್ಯಾಪಾರ ತೆರಿಗೆ ರಿಯಾಯಿತಿ, ಅಕ್ಟ್ರಾಯ್ ರಿಯಾಯಿತಿ ಮತ್ತು ಉತ್ಪನ್ನಗಳನ್ನು ಸರ್ಕಾರ ಖರೀದಿ ಮಾಡುವುದು, ಕೈಗಾರಿಕಾ ಶಿಕ್ಷಣ ಕೇಂದ್ರಗಳನ್ನು ತೆರೆದು ಉಚಿತ ಶಿಕ್ಷಣ ಕೊಟ್ಟು ಗೃಹಕೈಗಾರಿಕೆಗಳಿಗೆ ತರಬೇತಿ ಪಡೆದ ಕುಶಲಕರ್ಮಿಗಳನ್ನು ಒದಗಿಸುವುದು ಇದರಲ್ಲಿ ಸೇರಿದೆ.

ಖಾದಿ ಗ್ರಾಮೋದ್ಯೋಗ ಮಂಡಳಿ ಗೃಹಕೈಗಾರಿಕೆಗಳ ತರಬೇತಿ ಶಿಬಿರಗಳನ್ನೂ ನಡೆಸುವುದಲ್ಲದೆ ಕೆಲವು ಕಡೆ ತರಬೇತಿ ಕೇಂದ್ರಗಳನ್ನೂ ತೆರೆದಿದೆ.



ಬಣ್ಣದ ಬುಟ್ಟಿಗಳು

ಕರ್ನಾಟಕದಲ್ಲಿ ಕೈಗಾರಿಕೀಕರಣ ನಡೆದಂತೆ ಗೃಹಕೈಗಾರಿಕೆಗಳ ಸ್ವರೂಪ ಬದಲಾಯಿತು ಮತ್ತು ವಿಸ್ತರಿಸಿತು. ಈ ಬೆಳವಣಿಗೆಯಿಂದ ಕೆಲವು ಗೃಹಕೈಗಾರಿಕೆಗಳು ಇತ್ತೀಚೆಗೆ ಅಭಿವೃದ್ಧಿ ಹೊಂದುತ್ತಿವೆ. ಅವುಗಳೆಂದರೆ ಊಟದ ಎಲೆ ಹಾಗೂ ದೊನ್ನೆ ತಯಾರಿಕೆ, ಬಳಪಕಲ್ಲಿನಿಂದ ಸಾಮಾನುಗಳನ್ನು ತಯಾರಿಸುವುದು, ಹುಲ್ಲಿನಿಂದ ಹಲಗೆ, ಹಾಸುಗಳು ಹಾಗೂ ಪ್ಯಾಕಿಂಗ್ ಪದಾರ್ಥಗಳನ್ನು ತಯಾರಿಸುವುದು, ಹಿತ್ತಾಳೆ ತಾಮ್ರ ಮುಂತಾದವುಗಳಿಂದ ಗೃಹೋಪಯೋಗಿ ಪದಾರ್ಥಗಳ ತಯಾರಿಕೆ, ಜಾನುವಾರು ಮತ್ತು ಕೋಳಿ ಆಹಾರ ತಯಾರಿಕೆ, ಬ್ರೆಡ್ ತಯಾರಿಕೆ, ರುಬ್ಬಿದ ಕಾಗದದಿಂದ ಸಾಮಾನುಗಳ ತಯಾರಿಕೆ, ಮಸಾಲೆಪುಡಿ, ಉಪ್ಪಿನಕಾಯಿ, ಹಪ್ಪಳ, ಖಾರದಪುಡಿ ವಿವಿಧ ತಿನಿಸುಗಳು ಮುಂತಾದವುಗಳ ತಯಾರಿಕೆ, ಹಲ್ಲಿನ ಪುಡಿ, ತಿಲಕ, ನಕ್ಕಿ, ಸುಗಂಧ ದ್ರವ್ಯಗಳ ತಯಾರಿಕೆ, ಮೇಣದ ಮತ್ತು ಗೋಂದಿನ ಉದ್ಯಮ, ಸೀಸದಕಡ್ಡಿ, ಸ್ಲೇಟುಗಳ ತಯಾರಿಕೆ ಸೀರೆಗಳಿಗೆ ಫಾಲ್ಸ್ ಹಾಕುವುದು, ಎಂಬ್ರಾಯಿಡರಿ ಮಾಡುವುದು ಸಿದ್ಧ ಉಡುಪುಗಳ ತಯಾರಿಕೆ ಸ್ಕ್ರೀನ್ ಪ್ರಿಂಟಿಂಗ್ ಮುಂತಾದವುಗಳೆಲ್ಲ ಗೃಹಕೈಗಾರಿಕೆಗಳಾಗಿ ಬೆಳೆಯುತ್ತಿವೆ.

ಇಷ್ಟಾದರೂ ರಾಜ್ಯದ ಗೃಹಕೈಗಾರಿಕೆಗಳು ನಾವು ಅಪೇಕ್ಷಿಸಿರುವಂತೆ ನಡೆಯುತ್ತಿಲ್ಲ. ಪ್ರಗತಿ ಸಾಧಿಸುತ್ತಿಲ್ಲವೆಂಬ ಮಾತಿದೆ. ಅದಕ್ಕೆ ಮುಖ್ಯ ಕಾರಣಗಳೆಂದರೆ ಬಂಡವಾಳದ ಅಭಾವ, ಕಚ್ಚಾಸಾಮಗ್ರಿಯ ಕೊರತೆ, ಉತ್ಪಾದಿಸಿದ ವಸ್ತುಗಳನ್ನು ಲಾಭದಾಯಕವಾಗಿ ಮಾರಾಟಮಾಡಲು ಆಗದಿರುವುದು, ಇತರ ಆಧುನಿಕ ತಯಾರಿಕಾ ಉದ್ಯಮಗಳೊಡನೆ ಸ್ಪರ್ಧಿಸಲು ಸಾಧ್ಯವಾಗದಿರುವುದು ಮುಂತಾದವು. ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುವುದರಲ್ಲಿನ ವೈಫಲ್ಯವೂ ಹಿನ್ನೆಡೆಗೆ ಕಾರಣವಾಗಿದೆ. ಉದಾಹರಣೆಗೆ ಕರ್ನಾಟಕದಲ್ಲಿ ಎಣ್ಣೆಬೀಜಗಳ ಸಂಗ್ರಹ ತೃಪ್ತಿದಾಯಕವಾಗಿಲ್ಲ. ಜೊತೆಗೆ ತಯಾರಿಕಾಘಟ್ಟದಲ್ಲಿ ಉತ್ಪತ್ತಿಯಾಗುವ ಇತರ ವಸ್ತುಗಳನ್ನು ದುರುಪಯೋಗಪಡಿಸಿಕೊಳ್ಳುವುದು, ಬೆಲ್ಲ ತಯಾರಿಕೆಯ ಸಮಯದಲ್ಲಿ ಕಬ್ಬಿನ ರಸ ತೆಗೆದ ಅನಂತರ ಅದರ ಸಿಪ್ಪೆಯನ್ನು ಒಲೆಗೆ ಉರುವಲಾಗಿ ಉಪಯೋಗಿಸಿ ಕಾಗದ ತಯಾರಿಕೆಗೆ ಬೇಕಾದ ಉತ್ಕೃಷ್ಟ ವಸ್ತುವನ್ನು ಹಾಳು ಮಾಡುವುದು, ಕೆಲವೊಂದು ದಂಟುಗಳನ್ನು ವ್ಯರ್ಥವಾಗಿ ಹೊರಗೆ ಹಾಕುವುದು; ಹೊಗೆಸೊಪ್ಪಿನ ದಂಟು - ಇತ್ಯಾದಿ.



ಕೈಯಿಂದ ಹೊಲಿದ ಪಾದರಕ್ಷೆಗಳು

ಆದಾಗ್ಯೂ ಕರ್ನಾಟಕ ರಾಜ್ಯ ಇಂದು ಕರಕುಶಲ ವಸ್ತುಗಳ ತಯಾರಿಕೆಯಲ್ಲಿ ಅಗ್ರಪಂಕ್ತಿಯಲ್ಲಿದೆ. ಹಿತ್ತಾಳೆ ಕುಸರಿಕೆಲಸ, ಬೀಟೆ ಮತ್ತು ಗಂಧದ ಮರ ಕುಸರಿ ಕೆಲಸ, ಕೊಂಬುಗಳ ಕೆತ್ತನೆ, ದಂತ ಕೆತ್ತನೆಗಳಲ್ಲಿ ಮುಂಚೂಣಿಯಲ್ಲಿದೆ. ಕರಕುಶಲ ವಸ್ತುಗಳ ಅಭಿವೃದ್ಧಿನಿಗಮ ಈ ನಿಟ್ಟಿನಲ್ಲಿ ಪ್ರೋತ್ಸಾಹ ನೀಡುತ್ತಿದೆ. ರಾಜ್ಯದಲ್ಲಿ ಈಗ 2,45,826 ಸಣ್ಣ ಪ್ರಮಾಣದ ಕೈಗಾರಿಕಾ ಘಟಕಗಳಿವೆ. ಇವುಗಳಿಗೆ ಹೂಡಿರುವ ಬಂಡವಾಳ 43,569 ಕೋಟಿ ರೂ.ಗಳು. 14,69,388 ಉದ್ಯೋಗಿಗಳಿದ್ದಾರೆ (1997-98), ಖಾದಿ ಮತ್ತು ಗ್ರಾಮೋದ್ಯೋಗ ನಿಗಮವು ಖಾದಿ ಮತ್ತು ಗ್ರಾಮ ಕೈಗಾರಿಕೆಗಳಿಗೆ ಪ್ರೋತ್ಸಾಹನೀಡುತ್ತಿದ್ದು 1.4 ಲಕ್ಷ ಕುಶಲಕರ್ಮಿಗಳು ಇದರ ಪ್ರಯೋಜನ ಪಡೆದಿದ್ದಾರೆ. ಪಾರಂಪರಿಕ ಕುಶಲ ಕಲೆಗಳನ್ನು ಪುನಶ್ಚೇತನಗೊಳಿಸಲು 1991 ಅಕ್ಟೋಬರ್ 2ರಂದು ಸರ್.ಎಂ. ವಿಶ್ವೇಶ್ವರಯ್ಯನವರ ಹೆಸರಿನಲ್ಲಿ 'ವಿಶ್ವ' ಯೋಜನೆ ಪ್ರಾರಂಭಿಸಲಾಯಿತು. ಕಚ್ಚಾವಸ್ತುಗಳ ಅಭಾವ ನೀಗುವುದು, ಸೂಕ್ತ ಮಾರುಕಟ್ಟೆ ಒದಗಿಸುವುದು, ಯುವಕರಿಗೆ ಕರಕುಶಲ ಉದ್ಯಮದಲ್ಲಿ ತರಬೇತಿ ನೀಡುವುದು ಈ ಯೋಜನೆಯ ಗುರಿ. ಬೃಹತ್ ಉದ್ಯಮಗಳು ಮತ್ತು ತಂತ್ರಜ್ಞಾನದ ಬೆಳವಣಿಗೆಯಿಂದಾಗಿ ಈ ಕ್ಷೇತ್ರ ಈಗ ದೊಡ್ಡ ಸವಾಲುಗಳನ್ನು ಎದುರಿಸುತ್ತಿದೆ. (ಡಿ.ಜಿ.)

**ಗೃಹ ಮತ್ತು ಗೃಹಾಲಂಕರಣ :** ಕರ್ನಾಟಕದಲ್ಲಿ ಗೃಹಗಳನ್ನು ರಚಿಸುವ ಪದ್ಧತಿ ಆರಂಭವಾದುದು ಸು.4,500 ವರ್ಷಗಳ ಪೂರ್ವದಲ್ಲಿ, ನವಶಿಲಾಯುಗದ ಕಾಲದಲ್ಲಿ. ಆ ಹಿಂದಿನ ಕಾಲಘಟ್ಟದಲ್ಲಿ ಬೇಟೆಗಾರ ಜನಾಂಗಗಳು ಮಾತ್ರ ಈ ನಾಡಿನಲ್ಲಿ ಇದ್ದರಾಗಿ, ವಲಸೆಗಾರರಾದ ಆ ಕಾಲದ ಜನ ಮನೆಗಳನ್ನು ಕಟ್ಟಿಕೊಂಡು ಒಂದೆಡೆ ನಿಲ್ಲುವ ಅವಕಾಶ ಇದ್ದಿರುವುದು ಕಡಿಮೆ. ನವಶಿಲಾಯುಗದ ಕಾಲದಲ್ಲಾದರೋ ವ್ಯವಸಾಯ ಬಳಕೆಗೆ ಬಂದುದರಿಂದ ಮನೆಗಳನ್ನು ಕಟ್ಟಿ ನೆಲೆಸುವುದು ಆವಶ್ಯಕವಾಯಿತು. ಆದರೆ ಆ ಕಾಲದಲ್ಲಿದ್ದ ಮನೆಗಳು ಯಾವ ರೀತಿಯವು ಎಂಬ ಬಗ್ಗೆ ಸಾಕಷ್ಟು ಮಾಹಿತಿಗಳು ದೊರಕುವುದಿಲ್ಲ. ಧಾರವಾಡ ಜಿಲ್ಲೆಯ ಹಳ್ಳೂರು, ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆ ಮತ್ತು ಸಂಗನಕಲ್ಲು, ರಾಯಚೂರು ಜಿಲ್ಲೆಯ ಮಸ್ಕಿ ಮತ್ತು ಪಿಕ್ಲಿಹಾಳು, ಮೈಸೂರು ಜಿಲ್ಲೆಯ ಹೆಮ್ಮಿಗೆ ಮೊದಲಾದೆಡೆಗಳಲ್ಲಿ ನಡೆದಿರುವ ಉತ್ಖನನಗಳಿಂದ ಕೆಲವು ಸೂಚನೆಗಳು ದೊರಕುತ್ತವೆ. ಈ ಎಲ್ಲ ಸ್ಥಳಗಳಲ್ಲೂ ಕಂಬಗಳಿಗಾಗಿ ಮಾಡಿದ ಗುಳಿಗಳು ಕಂಡುಬಂದಿರುವುದರಿಂದ ಆ ಕಾಲದಲ್ಲಿ ಮರದ ಕಂಬಗಳನ್ನು ನೆಟ್ಟು ಎತ್ತಿದ ಗುಡಿಸಲುಗಳ ರಚನೆ ಸಾಮಾನ್ಯವಾಗಿತ್ತು ಎಂದು ಹೇಳಬಹುದು. ಸಂಗನಕಲ್ಲಿನ ಉತ್ಖನನದಲ್ಲಿ ಬಿದಿರಿನ ಪಡಿಯಚ್ಚನ್ನೊಳಗೊಂಡ ಮಣ್ಣಿನ ಭಾಗಗಳು ದೊರೆತಿವೆ. ಸೀಳಿದ ಬೊಂಬಿನ ಜಾಳಿಗೆಗಳನ್ನು ನಾಲ್ಕರಿಂದ ಆರು ಅಡಿಗಳಷ್ಟು ಎತ್ತರದ ಗೋಡೆಗಳ ಮೇಲೆ ನಿಲ್ಲಿಸಿ ಆ ಜಾಳಿಗೆಗಳಿಗೆ ಮಣ್ಣನ್ನು ಮೆತ್ತಲಾಗಿತ್ತು. ಅಲ್ಲಿ ದೊರೆತಿರುವ ಅತಿದೊಡ್ಡ ಗುಡಿಸಲು 18' ವ್ಯಾಸವುಳ್ಳದ್ದು. ತೆಕ್ಕಲಕೋಟೆಯಲ್ಲಿ ತಗ್ಗುದಿಣ್ಣೆಗಳನ್ನು ಕಲ್ಲುಮಣ್ಣಿನಿಂದ ಮಟ್ಟಸಮಾಡಿ 10'-12' ವ್ಯಾಸದ ವೃತ್ತಾಕಾರದ ತಳವಿನ್ಯಾಸವುಳ್ಳ ಏಕಕೋಣೆಯ ಗುಡಿಸಲುಗಳನ್ನು ನಿರ್ಮಿಸುತ್ತಿದ್ದರೆಂಬುದು ತಿಳಿದುಬಂದಿದೆ. ಅಲ್ಲಿನ ಗೋಡೆಗಳು ಬರಿಯ ಬಿದಿರುದಬ್ಬೆ ಅಥವಾ ಕಡ್ಡಿ ಸೊಪ್ಪುಗಳಿಂದ ಮಾಡಿದ ತಡಿಕೆಗಳೋ ಇಲ್ಲವೆ ಅವುಗಳ ಮೇಲೆ ಮಣ್ಣು ಮೆತ್ತಿದ ತಡಿಕೆ ಗೋಡೆಗಳೋ ಆಗಿರುತ್ತಿದ್ದುವು. ಗೋಡೆಯ ಸುತ್ತ ದಪ್ಪ ಕಲ್ಲುಗುಂಡುಗಳನ್ನು ಜೋಡಿಸಿ ಹೊರಗಿನ ನೀರು ಒಳ ಬರದಂತೆ ಮಾಡಿರುವ ವ್ಯವಸ್ಥೆಯೂ ಕಂಡುಬಂದಿದೆ. ಸುಮಾರು ಇದೇ ವೈಶಿಷ್ಟ್ಯಗಳುಳ್ಳ ಗುಡಿಸಲುಗಳನ್ನು ಇತ್ತೀಚಿನ ಬೋವ ಜನಾಂಗದವರು ಆ ಪ್ರದೇಶದಲ್ಲಿ ರಚಿಸುತ್ತಾರಾಗಿ, ಅವು ಆ ಕಾಲದಿಂದಲೂ ಉಳಿದುಬಂದಿರುವ ಮಾದರಿಗಳಾಗಿರಬಹುದೆಂಬ ಊಹೆಯ ಮೇಲೆ ನವಶಿಲಾಯುಗದ ಕಾಲದ ಗುಡಿಸಲುಗಳಲ್ಲೂ ಬೋವ ಗುಡಿಸಲುಗಳಂತೆ ಚೂಪು ತುದಿಯ ಅರ್ಧಶಂಖುವಿನಾಕಾರದ ಹುಲ್ಲು- ಸೊಪ್ಪಿನ ಚಾವಣಿಯನ್ನು ನಿರ್ಮಿಸಲಾಗುತ್ತಿರಬೇಕೆಂದು ಊಹಿಸಲಾಗಿದೆ. ಹಳ್ಳೂರಿನಲ್ಲಿಯೂ ವೃತ್ತಾಕಾರದ ಗುಡಿಸಿಲಿನ ಅವಶೇಷಗಳು ದೊರತಿವೆ. ಸುಮಾರು 10' ವ್ಯಾಸದ ಈ ಗುಡಿಸಿಲಿನ ಮಧ್ಯಭಾಗದಲ್ಲಿ ಎರಡು ಗುಳಿಗಳಿದ್ದವು. ಬಹುಶಃ ವೃತ್ತಾಕಾರದ ಮೇಲ್ಛಾವಣಿಯನ್ನು ಈ ಗುಳಿಗಳಲ್ಲಿ ನೆಟ್ಟಿದ್ದ ಕಂಬಗಳ ಮೇಲೆ ಹೊದಿಸಲಾಗಿತ್ತೆಂದು ತೋರುತ್ತದೆ. ಹೆಮ್ಮಿಗೆಯಲ್ಲಿ ನಡೆದ ಉತ್ಖನನದಿಂದ ಸುಮಾರು ಆಯಾಕಾರದ ತಳವಿನ್ಯಾಸದ ಪುಟದ ಗೋಡೆಗಳಿದ್ದ ಏಕ ಕೋಣೆಯ ಮನೆಗಳನ್ನು ಕಟ್ಟುವ ರೂಢಿಯೂ ಇದ್ದಿರಬೇಕೆಂದು ತಿಳಿದುಬರುತ್ತದೆ.

ನವಶಿಲಾಯುಗದ ಅನಂತರ ಕ್ರಿ.ಪೂ.1ನೆಯ ಸಹಸ್ರಮಾನದಲ್ಲಿ ಬಂದ ಕಬ್ಬಿಣದ ಯುಗದಲ್ಲಿ ಇದ್ದ ಮನೆಗಳ ಸ್ವರೂಪ ತಿಳಿದಿಲ್ಲ. ಕೆಲವು ನೆಲೆಗಳಲ್ಲಿ ಕಂಬದ ಗುಳಿಗಳು ಮಾತ್ರ ಕಂಡುಬಂದಿವೆ. ಈ ಕಾಲದ ಸಮಾಧಿಗಳಲ್ಲಿ ಕಲ್ಲಿನ ತುಂಡುಗಳನ್ನು ಬಳಸಿ ಗೋಡೆಗಳನ್ನು ಕಟ್ಟುವ, ಕಲ್ಲುಚಪ್ಪಡಿಗಳನ್ನು ಉಜ್ಜಿ ನಯಮಾಡುವ ತಂತ್ರ ಇದ್ದುದಕ್ಕೆ ಮಾಹಿತಿಗಳು ದೊರಕುತ್ತವೆ. ಆದರೆ ಕಲ್ಲನ್ನು ಮನೆಗಳ ನಿರ್ಮಾಣಕ್ಕೆ ಉಪಯೋಗಿಸುತ್ತಿದ್ದ ಬಗ್ಗೆ ಇದುವರೆಗೆ ಯಾವ ಕುರುಹೂ ಬೆಳಕಿಗೆ ಬಂದಿಲ್ಲ. (ಬಿ.ಆರ್.ಜಿ.)

ಕರ್ನಾಟಕದಲ್ಲಿ ಮನೆಗಳನ್ನು ಕಟ್ಟಲು ಇಟ್ಟಿಗೆಯನ್ನು ಬಳಸಲು ಆರಂಭವಾದುದು ಕ್ರಿಸ್ತಶಕಾರಂಭದ ಆಸುಪಾಸಿನಲ್ಲಿ. ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿಯ ಉತ್ಖನನದಲ್ಲಿ ಈ ಕಾಲದ ಪದರಗಳಲ್ಲಿ ಇಟ್ಟಿಗೆಯ ತುಂಡುಗಳು ದೊರೆತಿವೆ. ಕರ್ನಾಟಕದ ಎಲ್ಲೆಯಿಂದ ಅನತಿದೂರದಲ್ಲಿರುವ ಕೊಲ್ಹಾಪುರದ ಬ್ರಹ್ಮಪುರಿ ಪ್ರದೇಶದಲ್ಲಿ ಮತ್ತು ಇತ್ತೀಚೆಗೆ ಬೆಳಗಾಂವಿ ಸಮೀಪದ ವಡಗಾಂವ ಮಾಧವಪುರದಲ್ಲಿ ನಡೆದ ಉತ್ಖನನಗಳಿಂದ ಕ್ರಿಸ್ತಶಕ 1-2ನೆಯ ಶತಮಾನಗಳಲ್ಲಿ ಕಟ್ಟಿರಬಹುದಾದ ಇಟ್ಟಿಗೆಯ ಮನೆಗಳ ಅವಶೇಷಗಳು ದೊರಕಿವೆ. ಈ ಕಾಲದಲ್ಲಿ ಹೆಚ್ಚಿನ ಅಡಿಪಾಯವೇನೂ ಇಲ್ಲದೆ ಗೋಡೆಗಳನ್ನು ಕಟ್ಟಲಾಗುತ್ತಿತ್ತು. ಬಂಧಕ ಸಾಮಗ್ರಿಯಾಗಿ ಮಣ್ಣು ಬಳಕೆಯಾಗುತ್ತಿತ್ತು. ಮನೆಗಳಲ್ಲಿ ಆಯಾಕಾರದ ಎರಡು ಅಥವಾ ಮೂರು ಕೋಣೆಗಳು, ನಡುಮನೆ ಇರುತ್ತಿದ್ದುವು. ಮನೆಯ ಒಟ್ಟು ತಳವಿನ್ಯಾಸ ಸಹ ಆಯಾ ಮನೆಗಳ ಮೇಲೆ ಮರದ ಇಳಿಹಂದರವನ್ನು ಮಾಡಿ ಚಪ್ಪಟೆಯ ಮಣ್ಣು ಹೆಂಚುಗಳನ್ನು ಒಂದರಮೇಲೊಂದು ಕೂಡುವಂತೆ ಜೋಡಿಸಿ ಅವನ್ನು ಬಹುಶಃ ತಂತಿ ಅಥವಾ ಹಗ್ಗದಿಂದ ಬಂಧಿಸಿ ಚಾವಣಿಗಳನ್ನು

ನಿರ್ಮಿಸುವ ಪದ್ಧತಿ ರೂಢಿಗೆ ಬಂದಿತು. ಈ ಕಾಲದಲ್ಲಿ ಬಳಕೆಯಲ್ಲಿದ್ದ ಗೃಹಾಲಂಕರಣದ ವಿಷಯ ಅಸ್ಪಷ್ಟ.



ಬೋವ ಜನರ ವೃತ್ತಾಕಾರದ ಗುಡಿಸಲುಗಳು, ತೆಕ್ಕಲಕೋಟೆ

ಕ್ರಿಸ್ತಶಕಾರಂಭದಿಂದ 18-19ನೆಯ ಶತಮಾನದವರೆಗೆ ಕರ್ನಾಟಕದಲ್ಲಿದ್ದ ಮನೆಗಳ ಸ್ವರೂಪವನ್ನು ತಿಳಿಯಲು ಸಾಕಷ್ಟು ವಾಸ್ತು ಆಧಾರಗಳಿಲ್ಲ. ಹಳೇಬೀಡಿನಲ್ಲಿ ನಡೆದ ಉತ್ಖನನದಿಂದ ಇಟ್ಟಿಗೆ ಮತ್ತು ಕಲ್ಲನ್ನು ಉಪಯೋಗಿಸಿ ಕಟ್ಟಿದ ಹೊಯ್ಸಳ ಕಾಲದ ಕೆಲವು ಗೋಡೆಗಳ ಅವಶೇಷಗಳು ಕಂಡುಬಂದಿದ್ದುವು. ಅಲ್ಲದೆ ಚಪ್ಪಟೆ ಹೆಂಚು ಸಹ ಉಪಯೋಗದಲ್ಲಿದ್ದಂತೆ ಕಂಡುಬಂದಿತು. ಬೃಹತ್ತಾದ ಕಲ್ಲು ಮತ್ತು ಇಟ್ಟಿಗೆಯ ಕಟ್ಟಡಗಳು ಮತ್ತು ಸುಣ್ಣಗಾರೆ ಇಸ್ಲಾಮಿ ಅರಸರ ಆಳಿಕೆಯಲ್ಲಿ ಸು.14-15ನೆಯ ಶತಮಾನದಾರಭ್ಯ ರೂಢಿಗೆ ಬಂದು ಅಂದಿನಿಂದ ಕರ್ನಾಟಕದ ಎಲ್ಲೆಡೆಯೂ ಪ್ರಚಾರಗೊಂಡಿತು. ಗುಲ್ಬರ್ಗ, ಬಿಜಾಪುರ, ಹಂಪೆ, ಬೀದರ್ ಮುಂತಾದ ಸ್ಥಳಗಳಲ್ಲಿ ವಿಶಾಲವಾದ ಕೊಠಡಿಗಳು, ದೊಡ್ಡ ಅಂಗಳಗಳು, ಬುರುಜು, ಚಾವಣಿಗಳು ಇವುಗಳನ್ನು ಒಳಗೊಂಡಿದ್ದ ಬಹುಮಟ್ಟಿಗೆ ಆಯಾಕಾರದ ತಳವಿನ್ಯಾಸವುಳ್ಳ ದೊಡ್ಡ ಅರಮನೆ ಮತ್ತು ಶ್ರೀಮಂತರ ಮನೆಗಳ ಅವಶೇಷಗಳು ಉಳಿದುಬಂದಿವೆ. ಇವೆಲ್ಲ ಕಲ್ಲು ಮತ್ತು ಸುಣ್ಣಗಾರೆಯಲ್ಲಿ ಕಟ್ಟಿದ್ದವು. 14-16ನೆಯ ಶತಮಾನಗಳ ಅವಧಿಗೆ ಸೇರಿದವು. ಗೋಡೆಗಳಿಗೆ ಗಾರೆಯನ್ನು ಬಳಿಯುವುದು ರೂಢಿಯಲ್ಲಿತ್ತು. ಬೀದರ್, ಬಿಜಾಪುರ - ಈ ಸ್ಥಳಗಳಲ್ಲಿ ನಯವಾದ ಬಣ್ಣ ಬಣ್ಣದ ಗಾಜಿನ ಲೇಪದ ಮೆರುಗು ಬಿಲ್ಲೆಗಳಿಂದ ಅಲಂಕರಿಸಲಾಗಿರುವ ಕಟ್ಟಡಗಳು ಇವೆ. ಜೊತೆಗೆ ಭಿತ್ತಿಯ ಮೇಲೆ ವರ್ಣಚಿತ್ರಗಳೂ ಇದ್ದಿರಬಹುದು. *

ಪ್ರಾಚೀನ ಕರ್ನಾಟಕದ ಗೃಹ ಮತ್ತು ಗೃಹಾಲಂಕರಣಕ್ಕೆ ಸಂಬಂಧಿಸಿದ ವಿಷಯಗಳು ಕೆಲವಾರು ಪ್ರಾಚೀನ ಕಾವ್ಯಗಳಲ್ಲೂ ಕಂಡುಬರುತ್ತವೆ. ಇವುಗಳಲ್ಲಿ ಹೆಚ್ಚಿನವು ಅರಮನೆ ಮತ್ತು ಶ್ರೀಮಂತರ ಮನೆಗಳಿಗೆ ಸಂಬಂಧಿಸಿದವು. ಅಲ್ಲದೆ ಹಲವೆಡೆ ವರ್ಣನೆಗಳು ಸ್ಥಿತಿಗಿಂತಲೂ ಕವಿಕಲ್ಪನೆಗಳಾಗಿರುವ ಸಾಧ್ಯತೆಯೂ ಇದೆ. ಉದಾಹರಣೆಗೆ, ಕೆಲವು ಕಾವ್ಯಗಳಲ್ಲಿ ದೊರೆಯುವ ವಜ್ರ, ಪಚ್ಚೆ, ಮಾಣಿಕ್ಯದ ಪುಡಿಗಳಿಂದ ರಂಗವಲ್ಲಿ ಹಾಕುತ್ತಿದ್ದರೆಂಬ ವರ್ಣನೆ ವರ್ತಮಾನ ಉತ್ಪ್ರೇಕ್ಷೆಯಾಗದಿರದು. ದೇಪರಾಜನ ಸೊಬಗಿನ ಸೋನೆಯಲ್ಲಿ ಬರುವ ಚದುರದೇಶದ ಸಸಿವೊಳಲೆಂಬ ಪಟ್ಟಣದ ವರ್ಣನೆ ಹೀಗಿದೆ: ಅಲ್ಲಿನ ರಾಜಬೀದಿ ಮುತ್ತಿನ ರಂಗವಲ್ಲಿಯಿಂದಲೂ ಹೊನ್ನಿನ ತೋರಣದಿಂದಲೂ ಶೋಭಾಯಮಾನವಾಗಿತ್ತು. ಆ ಪೊಳಲ ಬೀದಿ ಬೀದಿಗಳಲ್ಲಿಯೂ ರನ್ನದ ಉಪ್ಪರಿಗೆಗಳು, ರೇಷ್ಮೆಯ ಬಾವುಟಗಳು, ಚಿನ್ನದ ನವಿಲ ಉಯ್ಯಾಲೆಗಳು, ಕನ್ನಡಿ ಬಿಗಿದ ತೋರಣಗಳು ಕಂಗೊಳಿಸುತ್ತಿದ್ದುವು. ಶೃಂಗಾರ ಪೇಟೆ, ಸೂಳೆಗೇರಿ, ಮಾತುಳನ ಅರಮನೆಯು ಹೆಬ್ಬಾಗಿಲು ತನಗೆ ಸರಿಸಾಟಿ ಮತ್ತೊಂದಿಲ್ಲವೆಂಬಂತೆ ಮೆರೆಯುತ್ತಿದ್ದುವು. ಬಣ್ಣಬಣ್ಣದ ಉಪ್ಪರಿಗೆ ಮನೆಗಳು, ಮಣಿಮಯವಾದ ಬಾಗಿಲುಗಳು, ಗಜಶಾಲೆ, ಹಯಶಾಲೆಗಳು ಅಂದಿನ ವೈಶಿಷ್ಟ್ಯಗಳಾಗಿದ್ದುವು. ಅಲ್ಲಿ ಗೋಡೆಯನ್ನು ಕೊರೆದು ಹಲವು ಹಕ್ಕಿಗಳ ಗೂಡುಗಳೂ ಬಾಗಿಲುಸಹಿತವಾದ ಹಲವಾರು ಪಂಜರಗಳೂ ಸವಡಿದಂತದ ಬಳೆಗಳೂ ಹೊಸ ಮಾಣಿಕ್ಯದ ಪಾದಪೀಠಗಳಲ್ಲಿ ಸೇರಿಸಿದ್ದ ಇಂದ್ರನೀಲದ ಪುತ್ರಿಕೆ, ಮುತ್ತಿನ ಮೈದೊಡವು, ಹೊನ್ನರನ್ನದ ಬಟ್ಟಲುಗಳು, ಲತಾವನಗಳು, ರನ್ನದ ಜಗಲಿಗಳು, ತಳಿರುಯ್ಯಾಲೆಗಳು ರನ್ನದಿಂದ ಕಂಡರಿಸಿದ ದಾರಿಗಳು, ಮುತ್ತಿನ ಗೊಂಡೆಯಗಳು, ಚಿತ್ರದ ಮೇಲ್ಕಟ್ಟು, ಮಕರಂದ ಮಾಲೆಗಳಿಂದ ಅಲಂಕೃತವಾಗಿತ್ತು. ಕೆಲವು ಕಾವ್ಯಗಳಲ್ಲಿ ಹಬ್ಬಹರಿದಿನಗಳಲ್ಲಿ ಮನೆಗಳನ್ನು ಕಸ್ತೂರಿ ಕುಂಕುಮ ಪನ್ನೀರುಗಳ ಸಾರಣೆ, ಕಾರಣೆ, ಬಳೆಗಳಿಂದ ಅಲಂಕರಿಸುತ್ತಿದ್ದರು. ಪಚ್ಚೆಯಹಾರದ ಮಕರಂದ ತೋರಣಗಳನ್ನು ಕಟ್ಟುತ್ತಿದ್ದರು. ಸುಗಂಧದ್ರವ್ಯಗಳ ಪರಿಮಳ ಭಾರದಿಂದ ಬಿರುಗಾಳಿಯೂ ಕುಸಿದುಹೋಗುತ್ತಿತ್ತು ಎಂಬ ವರ್ಣನೆಗಳಿವೆ. ಗೋವಿಂದ ವೈದ್ಯನ ಪ್ರಕಾರ ಕಂಠೀರವ ನರಸರಾಜನ ಅರಮನೆಗೆ ಎಷ್ಟೋ ನೆಲೆಯುಪ್ಪರಿಗೆಗಳಿದ್ದುವಂತೆ. ಅವುಗಳಲ್ಲಿಯೂ ಜಯಸಿರಿ, ಭಾಗ್ಯಸಿರಿ, ಶಾರದಲಕ್ಷ್ಮಿ, ಧೈರ್ಯಲಕ್ಷ್ಮಿಯರ ಮುಖಾಬ್ಜದಂತೆ ಅವು ಮೆರೆಯುತ್ತಿದ್ದುವಂತೆ. ಈ ಧವಳದುಪ್ಪರಿಗೆಗಳ ಅಂತರಾಂತರದ ಭಿತ್ತಿಯಲಿ...... ಮೋಹರಸವ ಸೂಸುತ ಚೆಲ್ವಾಂತ ಪುತ್ಥಳಿಗಳು ಶೋಭಿಸುತ್ತಿದ್ದುವಂತೆ. ಅಲ್ಲದೆ ಈ ಪುತ್ಥಳಿಗಳು ಭಾರತ ರಾಮಾಯಣ ಭಾಗವತ ಕಥಾಸಂದರ್ಭಗಳನ್ನು ಪ್ರದರ್ಶಿಸುವಂತಿದ್ದುವಲ್ಲದೆ ಶೃಂಗಾರರಸಪೂರಿತವಾದ ಕಾವ್ಯನಾಟಕದಲ್ಲಿಯ ಕಥೆಯ ಸೂಚಕಗಳಾಗಿದ್ದ ಸ್ಮರಧೀರನ ಬಲದಂತೆ, ಅರಸಂಚೆ, ಸೋಗೆನವಿಲು, ಬಣ್ಣದ ಕೋಗಿಲೆ, ಗಿಳಿ, ಚಕ್ರವಾಕ ಮುಂತಾದ ಪಕ್ಷಿಗಳ ಗೊಂಬೆಗಳು ಅಲ್ಲಿ ಶೋಭಿಸುತ್ತಿದ್ದುವಂತೆ. ಹರ್ಮ್ಯಗಳಲ್ಲಿ ಆನೆ, ವರಾಹ, ಕಾಡುಕೋಣ, ಹೆಬ್ಬುಲಿ, ಸಿಂಹ, ಹರಿಣ, ಭೇರುಂಡ ಮುಂತಾದ ಬಗೆಬಗೆಯ ಪ್ರತಿಮೆಗಳು ಸುಶೋಭಿಸುತ್ತಿದ್ದುವಂತೆ. ಅರಮನೆಯೊಳಗೆ ಪ್ರವೇಶದೊಡನೆ ಮೊದಲನೆಯದಾಗಿ ಚಿನ್ನದ ತಗಡುಗಳಲ್ಲಿ ಹುದುಗಿ ನಿಂತಿದ್ದಂತೆ ಕಾಣುವ ಕಂಬಗಳು ಮತ್ತು ಪಟ್ಟೋಳಿಯ (ರೇಷ್ಮೆಬಟ್ಟೆ) ಸರಗೊಂಡೆಯದ ಲೋವೆಯಿಂದ ಅಲಂಕರಿಸಲ್ಪಟ್ಟ ಹಿರಿಯ ಹಜಾರ, ಅಲ್ಲಿಂದ ಮುಂದೆ ಸುರಪನ ಆಸ್ಥಾನಮಂಟಪದ ಪರಿವಿಡಿಯನ್ನೇ ಸೋಲಿಸಿಬಿಡುವಷ್ಟು ಅಂದದ ಚಿತ್ರಶಾಲೆ ಲಕ್ಷ್ಮಿವಿಲಾಸ, ಅದರ ಮುಂದೆ ಒಂದೆಡೆ ದುರ್ಗಾಮಂಟಪ, ಮತ್ತೊಂದೆಡೆ ಗಿರಿಜಾಕಲ್ಯಾಣದ ಕಥೆಯ ಚಾರುತರದ ಚೆಲ್ವಬಿತ್ತರಗಳಂತೆ ಅರಗಿಳಿ ನವಿಲು ಕೋಗಿಲೆ ಕೊಂಚೆ ಕೊಳರ್ವಕ್ಕಿ ಮೊದಲಾದ ಹಕ್ಕಿಗಳ ಪ್ರಣಯಜೀವನವನ್ನೂ ಸುರನಾರಿಯರ ವಿಲಾಸಗಳನ್ನೂ ರೂಪಿಸಿರುವ ಪುತ್ಥಳಿಗಳಿರುವ ಶಾರದಾಮಂಟಪ, ಅದರ ಬಳಿಯಲ್ಲಿಯೇ ಇಂದಿರಾಮಂದಿರ, ಮುಂದೆ ಬಂಗಾರ ಚೌಕಿ, ಮತ್ತೂ ಮುಂದೆ ಮದನವಿಲಾಸ ಇದ್ದುವಂತೆ. ಅರಮನೆಗಳಲ್ಲಿ ಮಣಿಮಯಭವನಗಳೂ ನವರತ್ನದ ತೊಟ್ಟಿಗಳೂ ನಾಟಕಶಾಲೆಗಳೂ ಭೋಜನಶಾಲೆ ಒಳಬೊಕ್ಕಸ ಪೂರ್ಣಭಂಡಾರ ಪೊನ್ನನಿಳಯ ಉಗ್ರಾಣಪಾಕಗಳ ಗೃಹ ಆಯುಧಶಾಲೆಗಳು ಇದ್ದುವಲ್ಲದೆ ಬಿಳಿ ಮತ್ತು ಕೆನ್ನೀರ ಮತ್ತು ಕಟ್ಟಾಣಿತೋರಣದ ಮುತ್ತು ಮೊದಲಾದ ಜಾತಿ ಮುತ್ತುಗಳು, ಸಣ್ಣ ಪವಳ ಕೈಕಟ್ಟಿನ ಪವಳ ಬಣ್ಣಸರದ ಪವಳ ಇವುಗಳಂಥ ಪವಳದ ಪಸರಗಳಿಂದ ಕಣ್ಣು ಕೋರೈಸುವಂತೆ ಗೃಹಾಲಂಕಾರ ಮಾಡುತ್ತಿದ್ದರೆಂದು ಕನ್ನಡ ಕಾವ್ಯಗಳಿಂದ ತಿಳಿಯುತ್ತದೆ. ಕಸ್ತೂರಿ, ಸೇವಂತಿಗೆ, ದುಂಡುಮಲ್ಲಿಗೆ, ಜಾಜಿ, ಸಂಪಿಗೆ ಮೊದಲಾದ ಹೂಗಳಿಂದ ಮನೆಗಳನ್ನು ಅಲಂಕರಿಸುತ್ತಿದ್ದರಂತೆ. ಸೂಳೆಗೇರಿಯ ಸಾಲುಭವನದ ಮಳಿಗೆಗಳೊಳಗೆ ಗಿಳಿಯ ಪಂಜರ, ಪಾರಿವಾಳಗಳ ಪೊಂಗೂಡು, ಕಳಕಂಠಕೇಕಿಯ ದೇಹಿ ಇವುಗಳೆಲ್ಲ ರಾರಾಜಿಸುತ್ತಿದ್ದುವಂತೆ.

ಕನಕದಾಸರು ತಾವು ಕಂಡ ವಿಜಯನಗರದ ವರ್ಣನೆಯಲ್ಲಿ ಹೊಂದಗಡಿನ ಹೊದಕೆಯು ಮನೆ ಬಹಳ ನೇರ (ಎಂದರೆ ತುಂಬ ಅಚ್ಚುಕಟ್ಟಾದುವುಗಳು) ಮನೆಗಳಿಗೆ ಅಂದವಡೆದ ಪಟ್ಟಸಾಲೆಗಳು, ಮುಂದೆಸೆಯಲಿ ತುಳಸಿಯ ಮಂಟಪ - ಎಂದು ಬ್ರಾಹ್ಮಣರ ಕೇರಿಯ ಮನೆಗಳನ್ನು ವರ್ಣಿಸಿದ್ದಾರೆ. ಅರಮನೆ ಸುಂದರವಾಗಿತ್ತು. ಮುಗಿಲನ್ನು ಮುಟ್ಟುವ ಕೋಟೆ ಹೆಬ್ಬಾಗಿಲನ್ನು ಒಳಗೊಂಡಿತ್ತು. ಮುತ್ತಿನ ಚಾವಡಿಯನ್ನು ಮಕರತೋರಣ, ಮಣಿನಿಕರ ಹಿಂಗುಬ್ಬ ಇವುಗಳಿಂದ ಅಲಂಕರಿಸಲಾಗಿತ್ತು. ಜಂತದ ಚಾವಡಿಯಲ್ಲಿ ರಾಜ ಕುಳಿತಿರುವನು ಎಂದು ಅರಮನೆಯನ್ನು ವರ್ಣಿಸಿದ್ದಾರೆ. ಡೊಮಿಂಗೋ ಪೇಯಿಸ್ ಎಂಬುವನು ಈ ಅರಮನೆಯ ದಿವಾನಖಾನೆಯಾದ ಈ ಜಂತದ ಚಾವಡಿಯಲ್ಲಿನ ಕಂಬಗಳು ಮಾತ್ರ

ಕಲ್ಲಿನದಾಗಿದ್ದು, ಗೋಡೆಕಂಬ ಜಂತಿ ಹಲಗೆ ಮೊದಲಾದ ಎಲ್ಲವನ್ನೂ ದಂತದಿಂಲೇ ನಿರ್ಮಿಸಿರುವುದಾಗಿಯೂ ಹೇಳಿದ್ದಾನೆ. ಅಲ್ಲದೆ ಅದರ ತೊಲೆ, ನಾಗವಂದಿಗೆಗಳ ಮೇಲೆ ಗುಲಾಬಿಯ ಹೂಗಳನ್ನೂ ಕಮಲಗಳನ್ನೂ ಕೊರೆಯಲಾಗಿದ್ದು, ಅವುಗಳೂ ದಂತದಿಂದಲೇ ನಿರ್ಮಿತವಾಗಿದ್ದು ಬಹುಸುಂದರವೂ ಅಮೂಲ್ಯವೂ ಆಗಿದ್ದ 'ಇಂಥ' ಅಲಂಕರಣ ಮತ್ತೆಲ್ಲಿಯೂ ನೋಡಲಿಕ್ಕೆ ದೊರೆಯಲಾರದೆಂದು ಹೇಳುತ್ತಾನೆ.

ಹಿಂದೆ ಅವಿಭಕ್ತ ಕುಟುಂಬ ಪದ್ಧತಿ ರೂಢಿಯಲ್ಲಿದ್ದುದರಿಂದ ದೊಡ್ಡ ದೊಡ್ಡ ಮನೆಗಳು ಸಾಮಾನ್ಯವಾಗಿ ಇದ್ದಿರಬಹುದು. ಈಗಲೂ ಉತ್ತರ ಕರ್ನಾಟಕದ ಕೆಲವೆಡೆ ಉಳಿದುಬಂದಿರುವ ವಾಡೆಗಳಲ್ಲಿ ಪ್ರಾಚೀನ ಮಾದರಿಯ ಶ್ರೀಮಂತರ ಮನೆಗಳ ಸ್ವರೂಪವನ್ನು ಗುರುತಿಸಬಹುದು. ಅವುಗಳಲ್ಲಿ ವಿಶಾಲ ಪಡಸಾಲೆ, ಅಡುಗೆಮನೆ, ದೇವರಮನೆ, ಉಗ್ರಾಣ, ತೊಟ್ಟಿಮನೆಗಳಿರುತ್ತಿದ್ದುವು. ಊಟದ ಮನೆ ವಿಶಾಲವಾಗಿರುತ್ತಿತ್ತು. ಮಾಡು ಹೆಂಚಿನದು. ಕೊಟ್ಟಿಗೆಗಳು ಪ್ರತ್ಯೇಕವಾಗಿರುತ್ತಿದ್ದುವು.



ಉತ್ತರ ಕನ್ನಡ ಜಿಲ್ಲೆಯ ಐನಕೈ ಸೋಗೆ ಮನೆ

ಇಂದು ಉಳಿದಿರುವ ಹೆಚ್ಚಿನ ವಾಡೆಗಳು 19ನೆಯ ಶತಮಾನದವು. ಸಹಜವಾಗಿ ಇಲ್ಲಿನ ಗೃಹಾಲಂಕರಣ ಆ ಕಾಲಕ್ಕೆ ಒಗ್ಗುವಂಥದ್ದು. ಮನೆಗಳಲ್ಲಿ ಬಾಗಿಲುವಾಡ, ಕಂಬ, ಲೋವೆ ಮುಂತಾದ ಮರದ ಭಾಗಗಳೆಲ್ಲ ಸುಂದರವಾದ ಕೆತ್ತನೆಗಳಿಂದ ಕೂಡಿರುತ್ತವೆ. ಮುಖ್ಯದ್ವಾರದ ಇಕ್ಕೆಲಗಳ ತೋಳುಗಳಲ್ಲೂ ಮೇಲುಗಡೆ ಜಿಗಿಯುತ್ತಿರುವ ಕುದುರೆ ಮುಂತಾದ ಮರದ ಬೊಂಬೆಗಳನ್ನು ಅಳವಡಿಸಲಾಗಿರುತ್ತದೆ. ಪಡಸಾಲೆಯಲ್ಲಿ ಸಾಮಾನ್ಯವಾಗಿ ಆಗಂತುಕರಿಗಾಗಿ ಒಂದು ಮಂಚ ಇಡುವುದು ಅಥವಾ ಜಮಖಾನ ಹಾಸಿ ಹುಲ್ಲಿನ ಅಥವಾ ಹತ್ತಿಯ ದಿಂಬುಗಳನ್ನಿಡುವುದು ರೂಢಿ. ಬಾಗಿಲಿಗೆ ಮಣಿಮಯವಾದ ತೋರಣ ಇರುತ್ತದೆ. ಗೋಡೆಗಳಲ್ಲಿ ರವಿವರ್ಮನ ಚಿತ್ರಪಟಗಳು ಮತ್ತೆ ಕೆಲವು ಮನೆಗಳಲ್ಲಿ ಕಾಡುಕೋಣ, ಜಿಂಕೆ ಹುಲಿ ಆನೆ ಇವುಗಳ ಕೊಂಬು ಹಾಗೂ ಚರ್ಮ ಇವುಗಳಿಂದ ಅಲಂಕರಿಸುವ ರೂಢಿ ಕಾಣಬಹುದು. ಸಗಣಿಯಿಂದ ಸಾರಿಸಿದ ನೆಲ, ನೆಲದ ಅಂಚಿನ ಗೋಡೆಗೆ ತಾಗಿದಂತೆ ಸುಣ್ಣ ಹಾಗೂ ಕೆಂಪು ಮಣ್ಣಿನ ದಪ್ಪ ದಪ್ಪ ಗೆರೆಯ ಕಾರಣೆ (ಕರೆ), ಗೋಡೆಗಳಿಗೆ ದಪ್ಪ ಬಣ್ಣ ಇವು ಇಲ್ಲಿ ಸಾಮಾನ್ಯ. (ಎಂ.ಜೆ.ಬಿ.)

ಪ್ರಾಚೀನ ಕರ್ನಾಟಕದಲ್ಲಿ ಜನಸಾಮಾನ್ಯರ ಮನೆಗಳು ಯಾವ ರೀತಿಯಲ್ಲಿ ಇದ್ದುವು ಎಂಬುದನ್ನು ತಿಳಿಯಲು ಯಾವ ರೀತಿಯ ಆಧಾರಗಳೂ ದೊರಕುವುದಿಲ್ಲ. ಆದರೆ ಜನಪದ ಸಂಪ್ರದಾಯ ಹಿಂದಿನಿಂದಲೂ ಇದ್ದು ಈಗಲೂ ಹೆಚ್ಚು ಬದಲಾವಣೆ ಇಲ್ಲದೆ ಉಳಿದುಬಂದಿದೆಯಾಗಿ, ಈಗಿನ (ಇತ್ತೀಚಿನ ಬೆಳವಣಿಗೆಗಳ ವಿನಾ) ಗ್ರಾಮೀಣ ಗೃಹಗಳ ಸ್ವರೂಪವೇ ಅಂದಿನಿಂದಲೂ ಪ್ರಚಲಿತವಾಗಿರಬೇಕೆಂದು ತಿಳಿಯಬಹುದು. ಗ್ರಾಮೀಣ ಗೃಹಗಳು ಬಹು ಸರಳಕೃತಿಗಳು.ಇವು ಸಾಮಾನ್ಯವಾಗಿ ಚಿಕ್ಕವೂ ವೈವಿಧ್ಯರಹಿತವೂ ಆಗಿರುತ್ತವೆ. ಇವುಗಳಲ್ಲಿ ಅಲಂಕರಣವೂ ಕನಿಷ್ಠ.

ಜನಪದ ಗೃಹಗಳ ಒಂದು ವೈಶಿಷ್ಟ್ಯವೆಂದರೆ ಇವುಗಳ ರಚನೆಯಲ್ಲಿ ಕಂಡುಬರುವ ಪರಿಸರದ ಗಾಢಪ್ರಭಾವ. ಇದನ್ನು ಗೃಹ ರಚನೆಗೆ ಉಪಯೋಗಿಸುವ ವಸ್ತುಗಳಲ್ಲೂ ಮತ್ತು ರಚನೆಯ ಆಕಾರದಲ್ಲೂ ಕಾಣಬಹುದು. ಗೃಹಗಳ ರಚನೆಗೆ ಆಯಾ ಸ್ಥಳದಲ್ಲಿ ಸಿಕ್ಕುವ ತುಟ್ಟಿಯಲ್ಲದ ವಸ್ತುಗಳನ್ನಷ್ಟೇ ಆರಿಸಿಕೊಂಡಿರುವುದಲ್ಲದೆ, ಆಯಾ ಪ್ರದೇಶದ ಹವಾಗುಣಕ್ಕನುಗುಣವಾಗಿ ಸ್ವರೂಪವೂ ಇರುತ್ತದೆ. ಈ ದೃಷ್ಟಿಯಿಂದ ಜನಪದ ಗೃಹಗಳಲ್ಲಿ ಸ್ವಲ್ಪಮಟ್ಟಿಗೆ ಪ್ರಾದೇಶಿಕ ಭಿನ್ನತೆ ಕಂಡುಬರುತ್ತದೆ.

ಕರ್ನಾಟಕದ ಕರಾವಳಿ ಮತ್ತು ಮಲೆನಾಡು ಪ್ರದೇಶಗಳಲ್ಲಿ ಹೆಚ್ಚು ಮಳೆ ಬೀಳುವುದರಿಂದ ಇಲ್ಲಿಯ ಜನಪದ ನಿವಾಸಗಳಲ್ಲಿ ಗೋಡೆಗಳು ಕುಳ್ಳಾಗಿ ಇದ್ದು ಚಾವಣಿ ಹೆಚ್ಚು ಇಳಿಜಾರಾಗಿ ಅದರ ಸೂರು ಗೋಡೆಗಿಂತ ತುಂಬ ಮುಂಚಾಚಿರುವಂತೆ ಕಟ್ಟಲಾಗಿರುತ್ತದೆ. ಮಳೆಯ ಇರುಚಲು ಗೋಡೆಗಳ ಮೇಲೆ ಬೀಳಬಾರದೆಂಬುದೇ ಇದರ ಉದ್ದಿಶ್ಯ. ಗೋಡೆಗಳು ಸಾಮಾನ್ಯವಾಗಿ ಮಣ್ಣು ಅಥವಾ ಜಂಬಿಟ್ಟಿಗೆಯವು. ಚಾವಣಿಗಳು (ಇತ್ತೀಚೆಗೆ ಮಂಗಳೂರು ಹೆಂಚು ಬಳಕೆಗೆ ಬಂದಿದೆ) ವಿಶೇಷತಃ ಬಿದಿರು ಅಥವಾ ಮರದಜಂತಿ ಹಂದರದ ಮೇಲೆ ಹುಲ್ಲು, ಗರಿಗಳನ್ನು ಮುಚ್ಚಿಮಾಡಿದವು. ಇಲ್ಲಿಯ ಮನೆಗಳಲ್ಲಿ ಇದ್ದಿಲು ಮುಂತಾದ ಸಾಮಗ್ರಿಗಳನ್ನು ಬೆರಸಿ ಅರೆದು ಮಾಡಿದ ನಯಗಾರೆಯನ್ನು ನೆಲ ಮತ್ತು ಗೋಡೆಯ ಕೆಳಮಟ್ಟಗಳಿಗೆ ಹಚ್ಚುವ ರೂಢಿ ಇದೆ. ಕೆಂಪು ಕಾರಣೆಯ ಸರಳ ಅಲಂಕರಣವೂ ಉಂಟು. ಮನೆಗಳ ಮುಂದೆ ಹೆಬ್ಬಾಗಿಲ ಇಕ್ಕೆಲದಲ್ಲಿ ಜಗಲಿ, ಒಳಗೆ ಹಜಾರ ಮತ್ತು ವಿವಿಧ ಗೃಹಉದ್ದೇಶಗಳಿಗಾಗಿ ಬಳಸಲು ಬೇರೆ ಬೇರೆ ಕೋಣೆಗಳಿರುತ್ತವೆ. ಬಹು ಸರಳವಾದ ಗುಡಿಸಲುಗಳು ಆಕಾಶದಲ್ಲಿ ಸುಮಾರು ಇದೇ ರೀತಿಯಿದ್ದರೂ ಒಳ ಆವರಣದಲ್ಲಿ ಹೆಚ್ಚು ವಿಂಗಡಣೆಗಳಿರುವುದಿಲ್ಲ.

ಉತ್ತರ ಕರ್ನಾಟಕದ ಬಯಲು ಪ್ರದೇಶ ಹಾಗೂ ದಕ್ಷಿಣ ಕರ್ನಾಟಕದ ಮಳೆ ಕಡಿಮೆ ಇರುವ ಚಿತ್ರದುರ್ಗ, ಕೋಲಾರ, ತುಮಕೂರು, ಬೆಂಗಳೂರು ಜಿಲ್ಲೆಗಳು ಮತ್ತು ಅವುಗಳ ಸುತ್ತಲ ಪ್ರದೇಶಗಳಲ್ಲಿ ಆಯಾಕಾರದ ಮಾಳಿಗೆ ಮನೆಗಳು ವಿಶೇಷ. ಇವುಗಳ ಗೋಡೆಗಳು ಹೆಚ್ಚು ಮಟ್ಟಿಗೆ ಮಣ್ಣಿನವು. ಕಲ್ಲು ವಿಶೇಷವಾಗಿ ದೊರಕುವ ಕೆಲವೆಡೆಗಳಲ್ಲಿ ಕಲ್ಲುಚೂರುಗಳನ್ನು ಜೋಡಿಸಿ ಮಾಡಿದ ಗೋಡೆಗಳೂ ಇರುತ್ತವೆ. ಹೆಬ್ಬಾಗಿಲು ಕಿರಿದು ಮತ್ತು ಕುಳ್ಳು. ಒಳಭಾಗದಲ್ಲಿ ಆವಶ್ಯಕತೆಗೆ ತಕ್ಕಂತೆ ಕೋಣೆಗಳೂ ಹಜಾರವೂ ಇರುತ್ತವೆ. ಗೋಡೆಗಳ ಮೇಲೆ ತೊಲೆ ಮತ್ತು ಅಡ್ಡಜಂತಿಗಳನ್ನು ಇಟ್ಟು ಹಂದರ ಮಾಡಿ, ಮೇಲೆ ಕಡ್ಡಿ ಸೊಪ್ಪುಗಳನ್ನು ಜೋಡಿಸಿ, ಅದರ ಮೇಲೆ ಮಣ್ಣನ್ನು ದಪ್ಪಗೆ ಹರವಿ ಮಾಡಿದ ಚಾವಣಿ ಇರುತ್ತದೆ. ಗೋಡೆಗಳು ಇರುಚಲಿನಿಂದ ನೆನೆಯದಂತೆ, ಅವುಗಳ ಮೇಲಂಚಿನಲ್ಲಿ ಮುಂಚಾಚುವ ಲೋವೆ ಕಲ್ಲುಗಳನ್ನೋ ಭೂತಾಳೆ ಪಟ್ಟೆಗಳನ್ನೋ ಜೋಡಿಸಿರುತ್ತಾರೆ. ಮೇಲೆ ಹರವಿದ ಮಣ್ಣು ಮಳೆಯಿಂದ ಕೊಚ್ಚಿಹೋಗದಂತಿರಲೂ ಬಿದ್ದ ನೀರು ಕಟ್ಟಡಕ್ಕೆ ಅಪಾಯವಾಗದಂತೆ ಒಂದೆಡೆಯಿಂದ ಹರಿದುಹೋಗಲೂ ಸುತ್ತಂಚಿನಲ್ಲಿ ಮಣ್ಣುದಿಂಡನ್ನೂ ಅಲ್ಲಲ್ಲಿ ಮಣ್ಣಿನ ದೋಣಿಗಳನ್ನೂ ಒದಗಿಸಿರುತ್ತಾರೆ. ಈ ಕಟ್ಟಡಗಳಿಗೆ ಕಿಟಕಿಗಳಿರುವುದಿಲ್ಲವಾದರೂ ಇದಕ್ಕೆ ಅಪವಾದಗಳೂ ಇಲ್ಲದಿಲ್ಲ. ಮನೆಗಳಿಗೆ ಮಣ್ಣುಗಾರೆ, ಸುಣ್ಣ, ಕಾರಣೆಯ ಪರಿಷ್ಕರಣವಿರುತ್ತದೆ. ಕೋಲಾರ, ಬೆಂಗಳೂರು ಮತ್ತು ಸುತ್ತಲಿನ ಪ್ರದೇಶಗಳಲ್ಲಿ ಗ್ರಾನೈಟ್ ಚಪ್ಪಡಿಗಳು ಬಹುವಾಗಿ ದೊರಕುವುದರಿಂದ ಇಲ್ಲಿಯ ಮಾಳಿಗೆ ಮನೆಗಳಲ್ಲಿ ಮಣ್ಣಿನ ಬದಲು ಈ ಕಲ್ಲಿನ ಉಪಯೋಗವೇ ಹೆಚ್ಚು. ಮೊದಲು ಕಲ್ಲಿನ ಕಂಬಗಳನ್ನು ನೆಟ್ಟು, ಅದೇ ಕಲ್ಲಿನ ತೊಲೆಗಳನ್ನು ಜೋಡಿಸಿ, ಮೇಲೆ ಚಪ್ಪಡಿಗಳನ್ನು ಹಾಸುವ ಪದ್ಧತಿ ಇಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಮಳೆ ಕಡಿಮೆ ಬೀಳುವ ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ಮಾಳಿಗೆ ಮನೆಗಳಲ್ಲದೆ ವೃತ್ತಾಕಾರದ ತಳವಿನ್ಯಾಸವಿರುವ ಗುಡಿಸಲುಗಳೂ ಇವೆ. ಇವು ವಿಶೇಷವಾಗಿ ಒಂದೇ ಕೋಣೆಯವು. ಗೋಡೆ ಮಣ್ಣಿನದು. ಮೇಲೆ ಬಿದಿರಿನ ಅಥವಾ ಕಡ್ಡಿಗಳ ಹಂದರದ ಮೇಲೆ ಹುಲ್ಲು ಮುಚ್ಚಿದ ಶಂಕುತಲೆಯಾಕಾರದ ಚಾವಣಿ ಇರುತ್ತದೆ.

ದಕ್ಷಿಣ ಕರ್ನಾಟಕದ ಜಿಲ್ಲೆಗಳಲ್ಲಿನ ಜನಪದ ನಿವಾಸಗಳು ಸಾಮಾನ್ಯವಾಗಿ ಆಯಾಕಾರದ ಮಣ್ಣುಗೋಡೆಯ ಮನೆಗಳು. ಇವುಗಳಲ್ಲೂ ಮುಂದೆ ಬಾಗಿಲಿನ ಇಕ್ಕೆಲಗಳಲ್ಲಿ ಜಗಲಿ, ಒಳಗೆ ಹಜಾರ ಮತ್ತು ಅನೇಕ

ಕೋಣೆಗಳಿರುತ್ತವೆ. ದೊಡ್ಡ ಮನೆಗಳಲ್ಲಿ ಪುಟದ ಗೋಡೆ (ಅಂದರೆ ಕಲಸಿದ ಮಣ್ಣಿನ ದಪ್ಪ ಉಂಡೆಗಳನ್ನು ಒಂದರ ಮೇಲೊಂದು ಪೇರಿಸಿ ಎತ್ತಿದ ಗೋಡೆ) ಸಾಮಾನ್ಯ. ಬಹು ಎತ್ತರವಾದ ಗೋಡೆಗಳ ಆವಶ್ಯಕತೆ ಇದ್ದಾಗ ಅಥವಾ ಚಿಕ್ಕ ಮನೆಗಳನ್ನು ಕಟ್ಟುವಾಗ ತಡಿಕೆಗೋಡೆಯನ್ನು ಅಂದರೆ, ಬಿದಿರಿನ ಕಂಬಗಳಿಗೆ ಬಿಗಿದ ಬಿದಿರು ದಬ್ಬೆಗಳ ಹಂದರದ ಮೇಲೆ ಕಲಸಿದ ಮಣ್ಣನ್ನು ಮೆತ್ತಿ ಮಾಡಿದ ತೆಳುಗೋಡೆಯನ್ನು ಅಳವಡಿಸುವುದುಂಟು. ಮನೆಗಳ ಚಾವಣಿ ಸಾಮಾನ್ಯವಾಗಿ ಇಪ್ಪಾರು, ಪಕ್ಕದ ಗೋಡೆಗಳ ಎತ್ತರದ ಭಾಗದಲ್ಲಿ ಒಂದು ಬೆಮ್ಮರವನ್ನು ಇಟ್ಟು, ಹಾರು ಎರಡೂ ಕಡೆ ಇಳಿಜಾರಾಗಿರುವಂತೆ ಮಾಡಲಾಗಿರುತ್ತದೆ. ಈ ಹಾರುಗಳು ಬೊಂಬು, ಗಳುಗಳಿಂದ ಆದ ಹಂದರಗಳು, ತೆಂಗಿನ ಗರಿಯಿಂದ ಹೆಣೆದ ಮಟ್ಟಾಳೆಯನ್ನು ಅಥ’ವಾ ಮಣ್ಣಿನ ಅರೆಕೊಳವೆ ಆಕೃತಿಯ ನಾಡಹೆಂಚುಗಳನ್ನು ಮೇಲೆ ಮುಚ್ಚಲು ಉಪಯೋಗಿಸಲಾಗುತ್ತದೆ. ಕೆಲವೆಡೆ ಸೋಗೆ ಮತ್ತು ಹುಲ್ಲನ್ನೂ ಬಳಸುವುದುಂಟು. ಮಣ್ಣಿನ ತಡಿಕೆ ಅಥವಾ ಪುಟದ ಗೋಡೆಗಳನ್ನು ಆಯಾಕಾರದಲ್ಲಿ ಕಟ್ಟಿ ಒಂದು ಗೋಡೆಯನ್ನು ಎತ್ತರಕ್ಕೆ ಮಾಡಿ ಅದಕ್ಕೆ ಸಮಕೋನದಲ್ಲಿರುವ ಗೋಡೆಗಳನ್ನು ಇಳಿಜಾರಾಗಿರುವಂತೆ ರೂಪಿಸಿ ಇದರ ಮೇಲಿನ ಚಾವಣಿ ಒಂದೇ ಕಡೆಗೆ ಇಳಿಜಾರಾಗಿರುವಂತೆ ಮಾಡಿದ ಒಪ್ಪಾರು ಕಟ್ಟಡಗಳೂ ಅಲ್ಲಲ್ಲಿ ಕಂಡುಬರುತ್ತವೆ. ಆದರೆ ಇಂಥ ಕಟ್ಟಡಗಳನ್ನು ದನ, ಎಮ್ಮೆಗಳನ್ನು ಕಟ್ಟಲು ಕೊಟ್ಟಿಗೆಯಾಗಿ ಉಪಯೋಗಿಸುವುದೇ ಹೆಚ್ಚು. ಒಂದು ವಿಶಿಷ್ಟ ರೀತಿಯ ವಿಶೇಷವಾಗಿ ಸ್ವಲ್ಪ ಸ್ಥಿತಿವಂತರಿಗೇ ಸೇರಿದ ತೊಟ್ಟಿಮನೆಗಳು ಕರ್ನಾಟಕದ ಹಲವೆಡೆಗಳಲ್ಲಿವೆ. ಇವು ರಚನಾವಿಧಾನದಲ್ಲಿ ಇತರವಂತೆಯೇ ಇದ್ದರೂ ವಿನ್ಯಾಸ ಮಾತ್ರ ಸ್ವಲ್ಪ ವ್ಯತ್ಯಾಸವಾಗಿರುತ್ತದೆ. ಇವುಗಳಲ್ಲಿ ಆಯ ಅಥವಾ ಚೌಕತಳ ವಿನ್ಯಾಸವಿದ್ದು ಮಧ್ಯೆ ಒಂದು ತೆರೆದ (ಮುಚ್ಚು ಇಲ್ಲದ) ತೊಟ್ಟಿ ಇರುತ್ತದೆ. ತೊಟ್ಟಿಯ ಸುತ್ತಲೂ ಪಡಸಾಲೆ, ಅದರ ಸುತ್ತಲೂ ಕೋಣೆಗಳನ್ನು ವ್ಯವಸ್ಥೆ ಮಾಡಲಾಗಿರುತ್ತದೆ. ಮುಂದೆ ಮುಂಬಾಗಿಲಿನ ಇಕ್ಕೆಲಗಳಲ್ಲಿ ಜಗಲಿಗಳಿರುತ್ತವೆ. ಈ ತೊಟ್ಟಿ ಮನೆಗಳು ವಿಶಾಲವಾಗಿದ್ದು, ಒಂದು, ಎರಡು ಅಥ’ವಾ ಮೂರು ಅಂಕಣಗಳ ತೊಟ್ಟಿಮನೆಗಳು ಇತ್ಯಾದಿಯಾಗಿ ವಿವಿಧ ಪರಿಮಾಣಗಳಲ್ಲಿರುತ್ತವೆ. (ಎಸ್.ಎನ್.)

ಜನಪದ ಗೃಹಾಲಂಕರಣ ಬಹು ಸರಳ. ಸುಣ್ಣ ತೊಡೆಯುವುದು ಸಾಮಾನ್ಯವಾಗಿ ಎಲ್ಲೆಡೆಯೂ ಕಂಡುಬರುತ್ತದೆ. ವರ್ಷಕ್ಕೊಮ್ಮೆ ಅಥವಾ ಹಬ್ಬಹರಿದಿನಗಳಲ್ಲಿ ನೀರಿನಲ್ಲಿ ಸುಣ್ಣವನ್ನು ಗಟ್ಟಿಯಾಗಿ ಕಲೆಸಿ, ಸಣ್ಣಕುಂಚದಿಂದ ತೊಟ್ಟಿಯ ಅಂಚು, ಗೋಡೆಯ ಕೆಳಭಾಗ ಕಂಬದ ಕೆಳಗೆ ನೆಲವನ್ನು ಬಿಟ್ಟು ಒಂದಂಗುಲ ಎತ್ತರಕ್ಕೆ ಒಂದೆರಡು ಇಂಚು ಅಗಲದ ಪಟ್ಟಿಗಳನ್ನೆಳೆಯುವ ರೂಢಿ ಅಲ್ಲಲ್ಲಿ ಕಂಡುಬರುತ್ತದೆ. ಹಳ್ಳಿಗಳಲ್ಲಿ ಇದಕ್ಕೆ ಕಿರುಸುಣ್ಣ ಎಂದು ಹೇಳುತ್ತಾರೆ. ಚಂದ್ರದಿಂದ ರಂಗೋಲಿ ಬಿಡುವುದು ಹಳ್ಳಿಗರ ಗೃಹಾಲಂಕರಣದ ಮತ್ತೊಂದು ವಿಧಾನ. ಚಂದ್ರವನ್ನು ನೀರಿನಲ್ಲಿ ಕರಗಿಸಿ, ತೊಟ್ಟಿ ಮನೆಗಳಲ್ಲಿ ಈಚಲುಗರಿಯ ಸೋಗೆಗಳಿಂದ ಮಾಡಿದ ಕುಂಚದ ಮೂಲಕ ಅಚ್ಚುಕಟ್ಟಾಗಿ ಎರಡೆರಡು ಎಳೆಗಳನ್ನು ಎಳೆಯುತ್ತಾರೆ. ಗ್ರಾಮಾಂತರ ಜನ ಇದನ್ನು ಕಾರ್ಲಿ (ಕರೆ) ಬಿಡುವುದು ಎನ್ನುತ್ತಾರೆ. ಕೆಮ್ಮಣ್ಣಿನಿಂದ ಹೊಸ್ತಿಲು ಸಾರಿಸುವುದು ಅವರ ಗೃಹಾಲಂಕರಣದ ಮತ್ತೊಂದು ವಿಧಾನ. ಧೂಳಿನಂತಿರುವ ಕೆಮ್ಮಣ್ಣನ್ನು ನೀರಿನಲ್ಲಿ ಗಟ್ಟಿಯಾಗಿ ಕಲಸಿ ಮನೆಯ ಹೊಸ್ತಿಲು ಮತ್ತು ಬಾಗಿಲಿನ ಚೌಕಟ್ಟಿನ ತಳಭಾಗಗಳಿಗೆ ಆರು ಅಂಗುಲ ಎತ್ತರಕ್ಕೆ, ಸಾರಿಸುತ್ತಾರೆ. ನೆಲಕ್ಕೆ ಸಗಣಿ ಸಾರಿಸುವುದು ಹೆಚ್ಚು. ಮಲೆನಾಡು ಮತ್ತು ಕರಾವಳಿ ಪ್ರದೇಶದಲ್ಲಿ ಮಣ್ಣಿನ ನೆಲಕ್ಕೆ ಒಂದಂಗುಲ ಎತ್ತರಕ್ಕೆ ಮರಳು ಹಾಗೂ ಮಣ್ಣು ತುಂಬಿ, ಅದರ ಮೇಲೆ ಗೇರುಬೀಜದ ಎಣ್ಣೆಯನ್ನು ಬಳಿದು ಸಾರಣೆ ಮಾಡುತ್ತಾರೆ. ಅನಂತರ ಸಾಕಷ್ಟು ತೆಂಗಿನ ಹೂವನ್ನು ತೆಗೆದು, ತೆಂಗಿನ ಸಿಪ್ಪೆಯ ಸಹಾಯದಿಂದ ನೆಲವನ್ನು ಉಜ್ಜಿದರೆ, ನೆಲವು ಕರ್ರಗಿನ ಸಿಮೆಂಟಿನಂತೆ ಮಿರುಗುತ್ತದೆ. ಇದು ಗುಡಿಸಿಲುಗಳ ಅಂದವನ್ನು ಹೆಚ್ಚಿಸುತ್ತದೆ.

ಕೆಲವೆಡೆ ಗೊಂಬೆಗಳಿಂದ ಮನೆಗಳನ್ನು ಸಿಂಗರಿಸುವ ರೂಢಿ ಇದೆ. ಮಣ್ಣಿನಿಂದ ಮಾಡಿ ಬಣ್ಣ ಹಚ್ಚಿದ ಗಿಳಿ, ಆನೆ, ಬಸವ, ಹುಲಿ, ಜಿಂಕೆ ಮುಂತಾದ ಗೊಂಬೆಗಳನ್ನು ನಡುವೆ ಕೃಷ್ಣ, ಅಕ್ಕಪಕ್ಕದಲ್ಲಿ ಮರದ ಗಿಳಿಗಳು, ಹಾಗೆಯೇ ಬಸವ, ಹುಲಿಮುಖ, ಆನೆಮುಖ, ಜಿಂಕೆಮುಖ ಹೀಗೆ ಸಾಲಾಗಿ ಗೋಡೆಗಳಿಗೆ ನೇತುಹಾಕಿ ಗೃಹವನ್ನು ಅಲಂಕರಿಸುತ್ತಾರೆ. ಕೆಲವು ಮನೆಗಳಲ್ಲಿ ಮರದಿಂದ ಮಾಡಿದ ಕುದುರೆಮುಖವನ್ನು ಗೋಡೆಗೆ ಅಂಟಿಸಿ ಅದರ ಅಕ್ಕಪಕ್ಕಗಳಲ್ಲಿ ಗಿಳಿಗಳನ್ನು ಅಂಟಿಸುವುದುಂಟು. ಜಿಂಕೆಕೊಂಬನ್ನು ನಯಗೊಳಿಸಿ ಒಳ್ಳೆಯ ಮರದ ಹಲಗೆಯಲ್ಲಿ ಪ್ರಾಣಿಮುಖದ ಆಕಾರ ಬರುವಂತೆ ರೂಪಿಸಿ ಅದರಲ್ಲಿ ಕೊಂಬನ್ನು ಸೇರಿಸಿ ಗೋಡೆಗೆ ತೂಗುಹಾಕುವುದುಂಟು. ಮೂರು ಗಿಳಿಗಳನ್ನೊಳಗೊಂಡ ನಿಲುವನ್ನು ಗೋಡೆಗೆ ತೂಗುಹಾಕುವುದೂ ಉಂಟು. ಬೇಟೆಯ ಹವ್ಯಾಸವುಳ್ಳವರ ಮನೆಗಳಲ್ಲಿ ಹುಲಿ, ಸಿಂಹಗಳ ಚರ್ಮವನ್ನೂ ಕಾಡುಕೋಣದ ಕೊಂಬು, ಆನೆಯ ದಂತ ಇವುಗಳನ್ನೂ ಗೋಡೆಗೆ ತೂಗುಹಾಕುವುದುಂಟು. ಬತ್ತದ ಗೊನೆಗಳು ಚೆನ್ನಾಗಿ ಮಾಗಿದಾಗ, ತೆನೆಗಳನ್ನು ಕತ್ತರಿಸಿ, ಅವುಗಳನ್ನು ಒಂದೇ ಸಮನಾಗಿ ಜೋಡಿಸಿ, ಹೆಣೆದು ಗಂಟೆಯಾಕಾರದ ಗುಚ್ಛವನ್ನು ತಯಾರಿಸಿ ದೇವರ ಕೋಣೆಯಲ್ಲಿ ದೇವರ ಪಟದ ಆ ಕಡೆ ಈ ಕಡೆಗಳಲ್ಲಿ ತೂಗಿಸುವುದುಂಟು. ಬತ್ತದ ತೆನೆಗಳನ್ನು ಕೆಳಗೆ ತೂಗುಬಿಟ್ಟು, ಒಂದಕ್ಕೊಂದು ಹೆಣೆದು ಬತ್ತದ ತೋರಣವನ್ನು ಮಾಡಿ ಬಾಗಿಲಿಗೆ ಕಟ್ಟುವುದೂ ಉಂಟು. ಹಳ್ಳಿಗಳಲ್ಲಿ ಇದನ್ನು ಬಾಗಿಲು ಬತ್ತ ಎನ್ನುತ್ತಾರೆ.



ಹಸುರು ಗಿಡಗಳ ಮೂಲಕ ಕಂಗೊಳಿಸುತ್ತಿರುವ ಒಳ ಗೃಹಾಲಂಕರಣ

ಸ್ವಲ್ಪ ಅನುಕೂಲವಂತರ ಮನೆಗಳಲ್ಲಿ ಬಳೆಗಳ ಚೂರು ಹಾಗೂ ಸಣ್ಣ ದೊಡ್ಡ ಮಣಿಗಳಿಂದ ಬಾಗಿಲುತೋರಣವನ್ನು ಮಾಡಿ ಬಾಗಿಲಿಗೆ ಕಟ್ಟಿ ಅದರ ಸರಪಳಿಗಳನ್ನು ಚಿತ್ರಪಟಗಳ ಮೇಲೆ ತೂಗಬಿಡುವುದು. ಬಣ್ಣಬಣ್ಣದ ಸಣ್ಣ ಮಣಿಗಳಿಂದ ಮಾಡಿದ ಸರಸ್ವತಿ, ಲಕ್ಷ್ಮಿ, ಕಾಮಧೇನು, ಪಟ್ಟದ ಆನೆ, ಪಟ್ಟದ ಕುದುರೆ ಮುಂತಾದ ರಚನೆಗಳನ್ನೊಳಗೊಂಡಂತೆ ವಿವಿಧ ನಮೂನೆಯ ಚಿತ್ತಾಕರ್ಷಕ ತಟ್ಟೆಗಳನ್ನು ಗೋಡೆಗಳಲ್ಲಿ ಅಲಂಕಾರಕ್ಕಾಗಿ ತೂಗುಹಾಕುವುದು. ಕಸೂತಿ ಹಾಕಿದ ಕೊಕ್ಕೆ ಸೂಜಿಯಿಂದ ಹೆಣೆದ ಪರದೆಗಳನ್ನು ಬಾಗಿಲುಗಳಿಗೆ ಇಳಿಬಿಡುವುದು. ಮುಖ್ಯ ಹಜಾರಗಳಲ್ಲಿ ಕೆತ್ತನೆ ಕೆಲಸಗಳಿಂದ ಅಲಂಕರಿಸಿದ ಅತ್ಯುತ್ತಮ ಮರದಿಂದ ಮಾಡಿದ ಆಕರ್ಷಕ ಚಿತ್ರಗಳನ್ನು ಬಿಡಿಸಿದ ಚೌಕದ ಹಲಗೆಯನ್ನು ಮಾಡಿಗೆ ಮೊಳೆಗಳಿಂದ ಕೂರಿಸುವುದು, ಕುಸುರಿ ಕೆಲಸದ ಕಂಬಗಳಿಗೆ ಬೆಳ್ಳಿಯ ಹೂಗಳನ್ನು ಅಂಟಿಸುವುದು, ಹಿತ್ತಾಳೆಯ ರೇಕುಗಳನ್ನು ಬಿಚ್ಚಿ ಎಳೆಯುವುದು ಮುಂತಾದವನ್ನು ಕಾಣಬಹುದು. (ಎಂ.ಜೆ.ಬಿ.)

ಕರ್ನಾಟಕಕ್ಕೆ ಐರೋಪ್ಯ ಸಂಪರ್ಕ ಒದಗಿಬಂದ ಕಾಲದಿಂದ ಇಲ್ಲಿನ ಗೃಹನಿರ್ಮಾಣದ ತಂತ್ರ ಮತ್ತು ಸ್ವರೂಪದಲ್ಲಿ ಅನೇಕ ಬದಲಾವಣೆಗಳು ಕಾಣಿಸಿಕೊಂಡುವು. ಟಿಪ್ಪುಸುಲ್ತಾನನ ಕಾಲದಲ್ಲಿ ಶ್ರೀರಂಗಪಟ್ಟಣದಲ್ಲಿ ಕಟ್ಟಿದ ಅವನ ಅರಮನೆ, ಬೆಂಗಳೂರಿನ ಅರಮನೆ ಮುಂತಾದೆಡೆಗಳಲ್ಲಿನ ಐರೋಪ್ಯ ರೀತಿಯ ಪಾವಟಿಗೆ, ಟೆರೆಸ್ ಚಾವಣಿ ಇವುಗಳು ಬಹುಶಃ ಫ್ರೆಂಚ್ ತಂತ್ರಜ್ಞರ ಮೂಲಕ ಬಳಕೆಗೆ ಬಂದಿತ್ತು. ಆದರೆ ಐರೋಪ್ಯ ಗೃಹನಿರ್ಮಾಣತಂತ್ರದ ಪ್ರಭಾವ ದಿನೇ ದಿನೇ ವರ್ಧಿಸಲಾರಂಭವಾದುದು 19ನೆಯ ಶತಮಾನದ ಆದಿಭಾಗದಿಂದ. ಶ್ರೀರಂಗಪಟ್ಟಣ, ಬೆಂಗಳೂರು, ಮೈಸೂರು, ಮಂಗಳೂರು, ಬಳ್ಳಾರಿ, ಬೆಳಗಾಂವಿ ಪಟ್ಟಣಗಳಲ್ಲಿ ಎಲ್ಲಾ ರೀತಿಯ ದೊಡ್ಡ ಗೃಹಗಳು ಹೆಚ್ಚು ಮಟ್ಟಿಗೆ ಐರೋಪ್ಯ ಅಧಿಕಾರಿಗಳಿಗೆ ನಿರ್ಮಿತವಾದುವು. ಮೈಸೂರು, ಬೆಂಗಳೂರು ಮೊದಲಾದೆಡೆಗಳಲ್ಲಿ ಈ ರೀತಿಯ ಮನೆಗಳನ್ನು ಕಟ್ಟುವುದು ಉನ್ನತಸ್ಥಾನದ ಒಂದು ಚಿಹ್ನೆಯಾಗಿ ಅನೇಕ ಸ್ಥಳೀಯ ಶ್ರೀಮಂತರೂ ಆ ವಿಧಾನಗಳನ್ನು ಅನುಕರಿಸಲಾರಂಭಿಸಿದರು. ಹಿಂದಿನ ಕಾಲದಲ್ಲಿ ಮನೆಗಳ ಮುಂದೆ ಜಗಲಿಗಳಿದ್ದು ಅವು ಬೀದಿಯೆಡೆಗೆ ತೆರೆದುಕೊಂಡಂತಿದ್ದ ಕಟ್ಟಡಗಳು ಬಹುಸಾಮಾನ್ಯವಾಗಿದ್ದರೆ, ಈಗ ದೊಡ್ಡ ಸುತ್ತುಗೋಡೆ ಇರುವ ಆವರಣದ ಮಧ್ಯದಲ್ಲಿ ಮನೆಯನ್ನು ನಿರ್ಮಿಸಿ ಸುತ್ತಲೂ ತೋಟ ಬೆಳೆಸುವ ಅಥ'ವಾ ಮನೆಯ ಮುಂದೆ ಸ್ವಲ್ಪ ಜಾಗವನ್ನು ಬಿಟ್ಟು ಕಾಂಪೌಂಡ್ ಕಟ್ಟಿ, ಮನೆ ರಸ್ತೆಯಿಂದ ಸ್ವಲ್ಪ ಹಿಂದೆ ಇರುವಂತೆ ಕಟ್ಟುವ ಸಂಪ್ರದಾಯ ವಿಶೇಷವಾಗಿ ಬೆಳೆಯಿತು. ಗೃಹರಚನೆಯಲ್ಲಿ ವರಾಂಡ, ದೊಡ್ಡ ಹಜಾರ, ಅಡುಗೆಕೋಣೆ, ಓದುವ ಕೋಣೆ, ಮಲಗುವ ಕೋಣೆ ಹೀಗೆ ಪ್ರತ್ಯೇಕ ಉದ್ದೇಶಗಳಿಗಾಗಿ ಪ್ರತ್ಯೇಕ ಕೋಣೆಗಳನ್ನು ದೊಡ್ಡದಾಗಿ ಅಳವಡಿಸುವ ರೂಢಿ ಬಂತು. ತೊಟ್ಟಿ ಮನೆಗಳಿಗೆ ಬದಲಾಗಿ ಪೂರ್ಣ ಮುಚ್ಚಿದ ಮಾಳಿಗೆಯ ಮನೆಗಳನ್ನು ಕಟ್ಟುವುದೂ ಜಂತಿಗಳನ್ನು ಗೋಡೆಗಳ ಮೇಲೆ ಅಡ್ಡಡ್ಡವಾಗಿ ಹಾಸಿ ಮೇಲೆ ಇಟ್ಟಿಗೆ ಚದರಗಳನ್ನು ಒತ್ತಾಗಿ ಜೋಡಿಸಿ ಮಾಡಿದ ಮಟ್ಟುಚಾವಣಿಯನ್ನು (ಮದ್ರಾಸ್ ಟೆರೇಸ್) ಹಾಕುವುದೂ ರೂಢಿಗೆ ಬಂದುವು. ಕೆಲವೆಡೆ ಎರಡು ಮೂರು ಅಂತಸ್ತಿನ ಮನೆಗಳೂ ರಚಿತವಾದುವು. ಮನೆಗಳ ಮುಂಭಾಗದಲ್ಲಿ ಐರೋಪ್ಯ ರೀತಿಯ ಡೋರಿಕ್, ಕೋರಿಂಥಿಯನ್ ಮೊದಲಾದ ಕಂಬಗಳನ್ನು ಅಳವಡಿಸಿರುವುದೂ ಅಲ್ಲಲ್ಲಿ ಕಂಡುಬರುತ್ತದೆ. 19ನೆಯ ಶತಮಾನದ ಗೃಹನಿರ್ಮಾಣದಲ್ಲಿ ಕಂಡುಬಂದ ಇನ್ನೊಂದು ಮುಖ್ಯ ಬದಲಾವಣೆ ಮಂಗಳೂರು ಹೆಂಚಿನ ಅಳವಡಿಕೆ. ಬಾಸೆಲ್ ಮಿಶನ್‌ರವರಿಂದ 1865ರಲ್ಲಿ ಮಂಗಳೂರಿನಲ್ಲಿ ಮೊದಲ ಮಂಗಳೂರು ಹೆಂಚು ಕಾರ್ಖಾನೆ ಪ್ರಾರಂಭವಾಯಿತು. ಇದಕ್ಕೆ ಸ್ವಲ್ಪ ಮುಂಚೆಯೇ ಪ್ಲೆಬಿತ್ ಎಂಬ ಆಂಗ್ಲರು ಮಂಗಳೂರು ಹೆಂಚನ್ನು ತಯಾರಿಸುವ ಕಾರ್ಯಕ್ರಮವನ್ನು ಕೈಗೊಂಡಿದ್ದರು. ಮಂಗಳೂರಿನ ಹಲವು ಕಾರ್ಖಾನೆಗಳು ಹೆಂಚು ತಯಾರಿಕೆಯನ್ನು ತಯಾರಿಸಲಾರಂಭಿಸಿದ ಕಾಲದಿಂದ ಕರ್ನಾಟಕದ ಎಲ್ಲೆಡೆಯೂ ಇದು ಬಳಕೆಗೆ ಬಂತು. ಅನಂತರ ಬೆಂಗಳೂರು ಮೊದಲಾದ ಇತರೆಡೆಗಳಲ್ಲೂ ಇಂಥ ಕಾರ್ಖಾನೆಗಳು ಸ್ಥಾಪಿತವಾದವು.

20ನೆಯ ಶತಮಾನದಲ್ಲಿ ಕಬ್ಬಿಣ, ಸಿಮೆಂಟ್, ಮೊಸಾಯಿಕ್, ಟೈಲ್ಸ್, ಗ್ರಾನೈಟ್, ಮಾರ್ಬಲ್ ಮೊದಲಾದ ಹೊಸ ರಚನಾ ಸಾಮಗ್ರಿಗಳು ಬಳಕೆಗೆ ಬಂದುದರಿಂದ ಮನೆಗಳ ರಚನಾ ತಂತ್ರವೂ ಸ್ವರೂಪವೂ ಅಗಾಧವಾಗಿ ಬದಲಾವಣೆಯಾಗಿದೆ. ಐರೋಪ್ಯ ನಾಗರಿಕತೆಯ ಪ್ರಭಾವವೂ ಈ ಕಾಲದಲ್ಲಿ ಹೆಚ್ಚಾದುದರಿಂದ ಜನರ ಜೀವನ ವಿಧಾನವೂ ಬದಲಾಗುತ್ತ ಬಂದು ಅದಕ್ಕೆ ಹೊಂದಿಕೊಳ್ಳುವ ರೀತಿಯಲ್ಲಿ ಮನೆಗಳ ನಿರ್ಮಾಣ ಮಾಡುವುದು ಇಂದಿನ ಪ್ರವೃತ್ತಿ. ಮನೆಗಳನ್ನು ಕಟ್ಟುವುದೇ ಒಂದು ಉದ್ಯಮವಾಗಿ ವಿನ್ಯಾಸಕಾರರು, ಕಟ್ಟುವವರು ಇವರ ಒಂದು ತಾಂತ್ರಿಕವರ್ಗ ಬೆಳೆದಿದೆ. ಮನೆಗಳ ನವೀನತೆ ವೈವಿಧ್ಯಗಳ ಎಡೆಗೆ ಗಮನ ಹೆಚ್ಚಾಗಿದೆ. ಇದರ ಜೊತೆಯಲ್ಲೇ ದೊಡ್ಡ ಪಟ್ಟಣಗಳ ಬೆಳವಣಿಗೆ, ಜನಸಂಖ್ಯೆಯ ಹೆಚ್ಚಳ ಇತ್ಯಾದಿ ಕಾರಣಗಳಿಂದ ದೊಡ್ಡ ದೊಡ್ಡ ಕಟ್ಟಡಗಳಲ್ಲಿ ಫ್ಲಾಟ್ ರೀತಿಯ ಮನೆಗಳನ್ನು ರಚಿಸುವುದು, ದೊಡ್ಡ ಮನೆಗಳನ್ನು ವಿಂಗಡಿಸಿ ವಠಾರಗಳನ್ನು ಮಾಡುವುದು, ಹಿಮ್ಮನೆಗಳನ್ನು ಜೋಡಿಸುವುದು ಇವೂ ಹೆಚ್ಚಾಗುತ್ತಿವೆ. ಈ ಬದಲಾವಣೆಗಳು ದೊಡ್ಡ ಪಟ್ಟಣ ನಗರಗಳಲ್ಲಿ ಹೆಚ್ಚು. ಗ್ರಾಮಾಂತರ ಪ್ರದೇಶಗಳಲ್ಲಿ ಹಳೆಯ ಜನಪದ ಸಂಪ್ರದಾಯ ಇನ್ನೂ ಸಾಕಷ್ಟು ಉಳಿದಿದೆ. *

ಆಧುನಿಕ ಗೃಹಾಲಂಕರಣ ಸಂಪ್ರದಾಯದಲ್ಲೂ ಸಾಕಷ್ಟು ಬದಲಾವಣೆಗಳಾಗಿವೆ. ಈಗ ಗೃಹಾಲಂಕರಣ ವಿದ್ಯೆ (ಇಂಟೀರಿಯರ್ ಡೆಕೊರೇಷನ್) ಶಾಸ್ತ್ರರೂಪವಾಗಿ ಬೆಳೆದಿದೆ. ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ಡಿಪ್ಲೊಮಾ ಮತ್ತು ಪದವಿ ಶಿಕ್ಷಣಗಳ ಪಠ್ಯವಿಷಯವೂ ಆಗಿದೆ. ಮನೆಯನ್ನು ಶುಚಿಯಾಗಿಡುವುದು, ಪುಷ್ಪಗಳ ಜೋಡಣೆ, ಮನೆಯ ಅಲಂಕರಣ ಮುಂತಾದುವುಗಳನ್ನು ಗೃಹವಿಜ್ಞಾನ ಶಿಕ್ಷಣದಲ್ಲಿ ಕಲಿಸುತ್ತಾರೆ. ಇಂದಿನ ಜನ ಅನೇಕ ಮಹಾನಗರಗಳನ್ನು ಕಂಡಿರುತ್ತಾರೆ. ಅಲ್ಲಿನ ಗೃಹಾಲಂಕರಣ ವಿಧಾನಗಳಲ್ಲಿ ಅತ್ಯುತ್ತಮವಾದುದನ್ನು ಆಯ್ದುಕೊಂಡು ತಮ್ಮ ಗೃಹಗಳ ಅಲಕಂರಣಕ್ಕಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆ.



ಮಂಗಳೂರಿನ ವೃತ್ತಾಕಾರದ ವಿಶಿಷ್ಟ ಆಧುನಿಕ ಮಹಡಿಮನೆ

ಸರಳತೆ ಹಾಗೂ ಶುಭ್ರತೆಗೆ ಈಗ ಆದ್ಯತೆ. ಶ್ರೀಮಂತರಾದವರು ಬೆಲೆಬಾಳುವ ಪೀಠೋಪಕರಣಗಳು ಮತ್ತು ನೂತನ ಅಲಂಕರಣ ವಿಧಾನಗಳಿಂದ ಗೃಹವನ್ನು ಅಲಂಕರಿಸುತ್ತಾರೆ. ಮಧ್ಯಮವರ್ಗದವರು, ಬಡವರು ತಮ್ಮ ಮನೆಗಳನ್ನು ತಮ್ಮದೇ ಆದ ರೀತಿಯಲ್ಲಿ ಸರಳವಾಗಿ ಅಲಂಕರಿಸುತ್ತಾರೆ. ಮಧ್ಯಮವರ್ಗದ ಮನೆಗಳಲ್ಲಿ ವರಾಂಡದಲ್ಲಿ ಕೆಲವಾರು ಕುರ್ಚಿಗಳನ್ನೂ ನಡುವೆ ಒಂದು ಚಿಕ್ಕ ಟೀಪಾಯಿ ಅಥವಾ ಮೇಜನ್ನು ಇಡುತ್ತಾರೆ. ಮೇಜಿನ ಮೇಲೆ ಕಸೂತಿ ಕೆಲಸ ಮಾಡಿದ ಅಥ'ವಾ ಬಣ್ಣಬಣ್ಣದ ಬಟ್ಟೆಯನ್ನು ಹಾಸುತ್ತಾರೆ. ಗೋಡೆಗೆ ಸ್ವಾಗತ ಬಯಸುವಂಥ ಚಿತ್ರಪಟವನ್ನು ತೂಗುಹಾಕುತ್ತಾರೆ. ಮನೆಯ ಪಡಸಾಲೆಯಲ್ಲಿ ಸುತ್ತಲೂ ನಾಲ್ಕು ಬೆತ್ತದ ಕುರ್ಚಿಗಳಲ್ಲಿ ಮೆತ್ತಗಿನ ದಿಂಬುಗಳನ್ನೂ ಇಟ್ಟು ನಡುವೆ ಒಂದು ಟೀಪಾಯಿಯನ್ನಿಡುತ್ತಾರೆ. ಗೋಡೆಯಲ್ಲಿ ಕೊರೆದು ಮಾಡಿದ

ಕಪಾಟಿನಲ್ಲಿ ಕೆಲವಾರು ಸುಂದರ ಗೊಂಬೆಗಳನ್ನು ಓರಣವಾಗಿಡುತ್ತಾರೆ. ಒಂದು ಮೂಲೆಯಲ್ಲಿ ರೇಡಿಯೊ ಸ್ಟ್ಯಾಂಡು, ಅದರ ಕೆಳಗಡೆ ಪುಸ್ತಕಗಳನ್ನಿಡುವ ಅಲಮಾರಿನಲ್ಲಿ ಒಪ್ಪವಾಗಿ ಪುಸ್ತಕಗಳನ್ನು ಜೋಡಿಸಿಡುತ್ತಾರೆ. ಅದರ ಮೇಲ್ಭಾಗದಲ್ಲಿ ಹಾಗೂ ಎರಡು ಗೋಡೆಗಳು ಸೇರುವೆಡೆಯಲ್ಲಿ ಗೊಂಬೆಗಳನ್ನಿಡುವ ಪೀಠವನ್ನಿರಿಸುತ್ತಾರೆ. ಅದರ ಮೇಲ್ಭಾಗದಲ್ಲೊಂದು ಹೂದಾನಿಯನ್ನಿರಿಸುತ್ತಾರೆ. ಅಷ್ಟೇ ಸುಂದರವಾದ ಪ್ರಕೃತಿಸೌಂದರ್ಯದ ಫೋಟೋ ಕ್ಯಾಲೆಂಡರ್‌ಗಳನ್ನೂ ತೂಗುಹಾಕುವುದುಂಟು. ಮತ್ತೆ ಕೆಲವರು ಮಧ್ಯದ ಗೋಡೆಯ ಹತ್ತಿರ ಮಂಚವೊಂದನ್ನು ಹಾಕಿ, ಅದರ ಮೇಲೆ ಮೆತ್ತಗಿನ ಹಾಸಿಗೆಯನ್ನು ಹಾಸುತ್ತಾರೆ. ಮಂಚದ ಒಂದು ತುದಿಯಲ್ಲಿ ಒಂದು ಕಪಾಟನ್ನು ಇನ್ನೊಂದು ಪಕ್ಕದಲ್ಲಿ ಮತ್ತೊಂದು ಕಪಾಟನ್ನಿಟ್ಟು, ಒಂದರಲ್ಲಿ ಕಲಾಪೂರ್ಣ ವಸ್ತುಗಳನ್ನೂ ಮತ್ತೊಂದರಲ್ಲಿ ಪುಸ್ತಕಗಳನ್ನೂ ಇಡುತ್ತಾರೆ. ದೇವರ ಮನೆ ಇದ್ದರೆ ಅದನ್ನು ಸುಂದರವಾಗಿ ಆಲಂಕರಿಸುತ್ತಾರೆ. ಇದರಲ್ಲಿ ಒಂದು ಜಗಲಿ, ಅದರ ಮೇಲೆ ಸುಂದರವಾದ ಮಂಟಪ, ಅದರಲ್ಲಿ ಆಯಾ ಜನರ ಆರಾಧ್ಯ ದೇವರು, ಮಂಟಪದ ಎರಡು ಬದಿಯಲ್ಲಿ ಸದಾ ಉರಿಯುತ್ತಿರುವ ನಂದಾದೀಪಗಳು, ಸುತ್ತ ರಂಗವಲ್ಲಿ ಈ ವ್ಯವಸ್ಥೆ ಸಾಮಾನ್ಯ. ಸುಂದರವಾದ ಬಣ್ಣ ಬಣ್ಣದ ಪುಷ್ಪಗಳಿಂದ ಹೂವಿನ ಹಾರಗಳಿಂದ ದೇವರನ್ನು ಶೃಂಗರಿಸುತ್ತಾರೆ. ಊಟದ ಮನೆಯನ್ನು ಈಗ ಹೆಚ್ಚು ಹೆಚ್ಚು ಅಲಂಕಾರಿಕವಾಗಿ ಇಡುತ್ತಾರೆ. ಮಧ್ಯದಲ್ಲಿ ಊಟದ ಮೇಜು ಕುರ್ಚಿಗಳನ್ನಿಟ್ಟು, ಅದರ ಮೇಲೆ ಅಲಂಕಾರದ ದೃಷ್ಟಿಯಿಂದ ಸುಂದರವಾದ ಬೊಂಬೆಯನ್ನಿಡುತ್ತಾರೆ. ಎರಡೂ ಗೋಡೆಗಳು ಸೇರುವ ಕಡೆಗಳಲ್ಲಿ ಒಂದು ನಿಲುವನ್ನಿಟ್ಟು ಅದರ ಮೇಲೂ ಗೊಂಬೆಗಳನ್ನಿಡುತ್ತಾರೆ. ಗೋಡೆಯಲ್ಲಿ ಸುಂದರವಾದ ಪ್ರಕೃತಿ ಸೌಂದರ್ಯವನ್ನೋ ಪುಷ್ಪಸೌಂದರ್ಯವನ್ನೊ ಬೀರುವ ಚಿತ್ರಪಟವನ್ನೂ ತೂಗುಹಾಕುತ್ತಾರೆ. ಮಲಗುವ ಕೋಣೆಗಳನ್ನು ಆಕರ್ಷಕವಾದ ರೀತಿಯಲ್ಲಿ ಅಲಂಕರಿಸುತ್ತಾರೆ. ಕಣ್ಣಿಗೆ ತಂಪನ್ನೀಯಬಲ್ಲ ತಿಳಿನೀಲಿ ಬಣ್ಣವನ್ನು ಗೋಡೆಗೆ ಬಳಿಯುತ್ತಾರೆ. ಸುಂದರವಾದ ಪರದೆಗಳನ್ನು ಇಳಿಬಿಡುತ್ತಾರೆ. ಗೋಡೆಗೆ ಸುಂದರವಾದ ಕೆತ್ತನೆ ಕೆಲಸದ ಕುಸುರಿಕೆಲಸದ ವಾಲ್ ಪ್ಲೇಟನ್ನು ತೂಗಿಸುತ್ತಾರೆ. ಉತ್ತಮವಾದ ಮರದ ಮಂಚದ ಮೇಲೆ ಮೆತ್ತನೆಯ ಹಾಸಿಗೆ, ನೆಲಕ್ಕೆ ರತ್ನಗಂಬಳಿ, ಬಾಗಿಲಿನಲ್ಲಿ ಕಾಲೊರಸು ಚಾಪೆ, ಮಂಚಕ್ಕೆ ಒಂದು ಸೊಳ್ಳೆಪರದೆ, ಮಕ್ಕಳ ತೊಟ್ಟಿಲಿದ್ದರೆ ಅದಕ್ಕೂ ಸೊಳ್ಳೆಪರದೆಯನ್ನೂ ತೂಗುಬಿಟ್ಟು ಅದರ ಮೇಲಿನ ತಟ್ಟೆಗಳಿಗೆ ಪಕ್ಷಿಗಳ ಬಟ್ಟೆಯ ಗೊಂಬೆಯನ್ನು ಗಿಲಿಗಿಲಿ ಶಬ್ದಮಾಡುವ ಆಟಿಕೆಗಳನ್ನು ತೂಗಿಸುತ್ತಾರೆ. ಕೆಲವೊಂದು ಭಾವಚಿತ್ರಗಳು, ಪಕ್ಕದಲ್ಲೊಂದು ಸ್ಟ್ಯಾಂಡು ಅದರ ಮೇಲೆ ಟಿ.ವಿ. ರೇಡಿಯೋ, ಮಂಚದ ತಲೆಯ ಭಾಗದಲ್ಲಿ ಸ್ಟೂಲಿನ ಮೇಲೆ ಗೋಡೆಬಣ್ಣದ ಟೇಬಲ್ ಲ್ಯಾಂಪ್, ಇನ್ನೊಂದು ಪಕ್ಕದಲ್ಲಿ ಕನ್ನಡಿಯುಳ್ಳ ಬೀರು, ಪ್ರಸಾಧನಸಾಮಗ್ರಿಗಳು, ಇತ್ಯಾದಿಯಾಗಿ ಸಜ್ಜುಗೊಳಿಸುವುದು ಸಾಮಾನ್ಯ.



ಮಲಗುವ ಕೋಣೆ

ಇಂದಿಗೂ ಹೆಚ್ಚಿನ ಮನೆಗಳಲ್ಲಿ ರಂಗವಲ್ಲಿ ಗೃಹಾಲಂಕಾರ ಸಾಧನಗಳಲ್ಲಿ ಬಹುಮುಖ್ಯ. ದೇವರಮನೆಯಲ್ಲಿ, ಮುಂಬಾಗಿಲ ಹೊಸ್ತಿಲಿನಲ್ಲಿ, ಮನೆಯ ಪ್ರವೇಶ ದ್ವಾರದಲ್ಲಿ ರಂಗವಲ್ಲಿ ಹಾಕುವುದಕ್ಕೆ ಧಾರ್ಮಿಕ ಹಿನ್ನೆಲೆಯಿದ್ದರೂ ಅದು ಮನೆಗೊಂದು ಅಲಂಕಾರವನ್ನೂ ಶೋಭೆಯನ್ನೂ ನೀಡುತ್ತದೆ. ಕರ್ನಾಟಕದಲ್ಲಿ ಸಾಮಾನ್ಯವಾಗಿ ಎಲ್ಲ ಮನೆಗಳಲ್ಲೂ ಮುಂಜಾನೆ ಗುಡಿಸಿ ಸಾರಿಸಿ, ಅಕ್ಕಿಹಿಟ್ಟು ಸುಣ್ಣಕಲ್ಲಿನ ಪುಡಿ - ಇವುಗಳಿಂದ ರಂಗವಲ್ಲಿಯನ್ನು ಹಾಕಿ ಅಲಂಕರಿಸುತ್ತಾರೆ. ಹಬ್ಬಹರಿದಿನಗಳಲ್ಲಿ ಬಣ್ಣಬಣ್ಣದ ಪುಡಿಗಳಿಂದ ರಂಗವಲ್ಲಿಯನ್ನು ಹಾಕುತ್ತಾರೆ. ಮನೆಯಂಗಳ ಹಾಗೂ ದೇವರ ಕೋಣೆಯಲ್ಲಿ ನಿತ್ಯವೂ ರಂಗವಲ್ಲಿ ಹಾಕುವುದಾದರೆ, ಅತಿಥಿಗಳು ಆಗಮಿಸಿದಾಗ ಊಟದ ಮನೆಯನ್ನೂ ಪಡಸಾಲೆಯನ್ನೂ ನೂರಾರು ಬಗೆಯ ನಾನಾ ರಂಗಿನ ಪುಡಿಗಳ ರಂಗವಲ್ಲಿಯಿಂದ ಅಲಂಕರಿಸುವುದುಂಟು. ನಗರ ಪ್ರದೇಶಗಳಲ್ಲಿನ ಮನೆಗಳ ಮುಂಭಾಗ ಸಿಮೆಂಟಿನದಾಗಿರುವುದರಿಂದ ನೀರು ಹಾಕಿ ತೊಳೆದರೆ ಸಾಕಾಗುತ್ತದೆ. ಆದರೆ ಗ್ರಾಮಾಂತರ ಪ್ರದೇಶಗಳಲ್ಲಿ ಮಣ್ಣಿನ ನೆಲವಾದುದರಿಂದ ಅದನ್ನು ಗುಡಿಸಿ, ಪ್ರತಿನಿತ್ಯವೂ ಸಗಣಿಯಿಂದ ಸಾರಿಸಿ ಬಿಳಿಯ ಬಣ್ಣದ ರಂಗವಲ್ಲಿಯನ್ನು ಹಾಕುತ್ತಾರೆ. ಕೆಂಪು ನೆಲ, ಹಸುರು ಸಾರಣೆ ಇವುಗಳ ಹಿನ್ನೆಲೆಯಲ್ಲಿ ಬಿಳಿಬಣ್ಣದ ರಂಗವಲ್ಲಿ ಬಹು ಸುಂದರವಾಗಿ ಕಾಣುತ್ತದೆ. ಅದರಲ್ಲೂ ಮನೆಯಂಗಳದಲ್ಲಿ ರಂಗವಲ್ಲಿ ಹಾಕಿ, ಅದರ ನಡುವೆ ಸ್ವಲ್ಪ ಸಗಣಿಯನ್ನಿಟ್ಟು, ಅದರ ಮೇಲೆ ಕುಂಬಳದ ಪುಷ್ಪಗಳನ್ನಿಟ್ಟರೆ ಅನಿಷ್ಟ ಪರಿಹಾರವಾಗುತ್ತದೆ ಎಂಬ ನಂಬಿಕೆಯಿಂದ ಕೆಲವರು ಹೀಗೆ ಅಲಂಕರಿಸುವುದುಂಟು. ಇದು ಮತ್ತಷ್ಟು ಸುಂದರವಾಗಿರುತ್ತದೆ. ಮತ್ತೆ ಕೆಲವರು ಆಯಾ ವಾರಗಳಿಗನುಗುಣವಾಗಿ ಸೋಮವಾರ ಶಿವಪೀಠ, ಮಂಗಳವಾರ ಕಾಲಪೀಠ, ಬುಧವಾರ ಸ್ವಸ್ತಿಕೆ ಹೀಗೆ ಹಾಕುತ್ತಾರೆ. ಇದು ವೈವಿಧ್ಯಮಯವಾಗಿರುತ್ತದೆ. ಪಂಚಮಿ, ನವರಾತ್ರಿ, ಸೀಗೆ ಹುಣ್ಣಿಮೆ, ದೀಪಾವಳಿ, ಯುಗಾದಿ ಮುಂತಾದ ವರ್ಷದ ಹಬ್ಬಗಳಲ್ಲಿಯಂತೂ ಮಹಿಳೆಯರು ಬಹು ಸುಂದರವಾದ ರಂಗವಲ್ಲಿಗಳನ್ನಿಟ್ಟು ಮನೆಯನ್ನು ಅಲಂಕರಿಸುತ್ತಾರೆ. ನಾಗಪಂಚಮಿಯಂದು ದುಂಡಗಿನ ಅಥವಾ ಚೌಕಾಕಾರದಲ್ಲಿ ಜೋಡುನಾಗಗಳ ರಂಗವಲ್ಲಿಯನ್ನೆಳೆದರೆ, ಸೀಗೆ ಹುಣ್ಣಿಮೆಯಂದು ಮನೆಯಲ್ಲಿರುವ ಬುಟ್ಟಿಗಳನ್ನು ಕೆಂಪುಮಣ್ಣಿನಿಂದ ಅಥವಾ ಸಗಣಿಯಿಂದ ಸಾರಿಸಿ, ಅದರ ಸುತ್ತಲೂ ಚುಕ್ಕಿಗಳನ್ನಿಟ್ಟು ಸುಣ್ಣದಿಂದ ರಂಗವಲ್ಲಿ ತೆಗೆಯುತ್ತಾರೆ. ದೀಪಾವಳಿಯಂದು ಮನೆಯ ಮುಂದೆ ರಂಗವಲ್ಲಿಗಳ ಪೈಪೋಟಿಯೇ ನಡೆಯುತ್ತದೆಯೇನೋ ಎಂಬಂತೆ ಬಣ್ಣ ಬಣ್ಣದ ರಂಗವಲ್ಲಿಗಳನ್ನು ಹಾಕುತ್ತಾರೆ. ಲಕ್ಷ್ಮೀ ಪೂಜೆಯಂದು ಲಕ್ಷ್ಮಿಗೆ ಪ್ರಿಯವಾದ ಕಮಲದ ರಂಗವನ್ನೂ ಸುಣ್ಣದಿಂದ ಕೋಟೆಯನ್ನೂ ಬಿಡಿಸುವುದುಂಟು. ಚೈತ್ರಮಾಸದ ಗೌರಿಯ ಮುಂದೆಯೂ ಹೀಗೆ ರಂಗವಲ್ಲಿ ಹಾಕುತ್ತಾರೆ. ಈಗೀಗ ನಗರದ ಮಹಿಳೆಯರು ಬಿಳೀಪೆಯಿಂಟಿನಿಂದ ಮನೆಯ ವರಾಂಡ, ಪಡಸಾಲೆ ಇವುಗಳ ಸುತ್ತಲೂ ಗೋಡೆಯ ಉದ್ದಕ್ಕೆ ಎಲೆಬಳ್ಳಿಗಳ ರಂಗವಲ್ಲಿಯನ್ನು ಹಾಕುವುದುಂಟು.

ಸ್ವಲ್ಪ ಅನುಕೂಲವಂತರು ಜಲಸಸ್ಯಗಳನ್ನೂ ಜಲಚರಗಳನ್ನೂ ಇಡುವುದಕ್ಕಾಗಿ ಮಾಡಿದ ಅಕ್ವೇರಿಯಂ ಎಂಬ ಮೀನು ತೊಟ್ಟಿ ಅಥವಾ ಕೊಳವನ್ನು ಮನೆಯ ವರಾಂಡದಲ್ಲಿರಿಸಿ ಅದು ಕಾಣುವಂತೆ ಬಣ್ಣಬಣ್ಣದ ದೀಪಗಳಿಂದ ಅಲಂಕರಿಸುತ್ತಾರೆ. ಸುಂದರವಾದ ಗಿಳಿ ಅಥವಾ ಪಕ್ಷಿ ಪಂಜರವನ್ನು ವರಾಂಡದಲ್ಲಿ ತೂಗುಹಾಕುವುದೂ ವಾಡಿಕೆಯಾಗಿದೆ.

ಚಿತ್ರಪಟಗಳನ್ನೂ ಗೃಹಾಲಂಕರಣದ ಸಾಧನಗಳನ್ನಾಗಿ ಉಪಯೋಗಿಸುತ್ತಾರೆ. ಕೌಟುಂಬಿಕ ಚಿತ್ರಗಳನ್ನು ಪಡಸಾಲೆಯಲ್ಲೂ ಪ್ರಕೃತಿಸೌಂದರ್ಯದ ಚಿತ್ರಪಟಗಳನ್ನು ವರಾಂಡದಲ್ಲೂ ತೂಗುಹಾಕುತ್ತಾರೆ. ಮನೆಮಕ್ಕಳ ಫೋಟೋಗಳನ್ನು ಫ್ರೇಮಿನೊಳಗಿಟ್ಟು ಮೇಜಿನ ಮೇಲಾಗಲಿ, ಬೀರುವಿನ ಮೇಲಾಗಲಿ ಇಡುವುದುಂಟು. ಫಲಪುಷ್ಪಗಳ, ನೈಸರ್ಗಿಕ ಸೌಂದರ್ಯದ ವಾಲ್ ಪ್ಲೇಟ್‌ಗಳನ್ನು ತೂಗಿಸುತ್ತಾರೆ. ಹಾಗೆಯೇ ಬೆಲೆಬಾಳುವ ಪೀಠೋಪಕರಣಗಳನ್ನು ಆಧುನಿಕ ರೀತಿಯಲ್ಲಿ ಅಲಂಕರಿಸಿ, ಮನೆಯಲ್ಲಿರುವ ಕನ್ನಡಿ, ಚಿತ್ರಪಟಗಳು, ಹೂದಾನಿಗಳು, ಗೊಂಬೆಗಳು ಮೊದಲಾದುವುನ್ನು ವ್ಯವಸ್ಥಿತವಾಗಿರಿಸಿ ಮನೆಯನ್ನು ಅಲಂಕರಿಸುವುದುಂಟು.

ಅತ್ಯಾಧುನಿಕ ಪ್ರವೃತ್ತಿಯವರು ಕಿಟಕಿ ಬಾಗಿಲುಗಳಿಗೆ ಸುಂದರವಾದ ಪರದೆಗಳನ್ನು ಹಾಕುವುದರಲ್ಲಿಯೂ ತಮ್ಮ ಅಭಿರುಚಿಯನ್ನು ವ್ಯಕ್ತಪಡಿಸುತ್ತಾರೆ. ಪ್ರಶಾಂತ ವಾತಾವರಣದ ಅಪೇಕ್ಷೆಯುಳ್ಳವರೂ ತಿಳಿಬಣ್ಣಗಳ ಪರದೆಗಳನ್ನು ಉಪಯೋಗಿಸಿದರೆ, ಉತ್ಸಾಹಮಯವಾದ ವಾತಾವರಣವನ್ನು ಬಯಸುವವರು ದಟ್ಟವಾದ ಬಣ್ಣಗಳನ್ನು

ಉಪಯೋಗಿಸುವರು. ಮತ್ತೆ ಕೆಲವರು ಗೋಡೆಯ ಬಣ್ಣಗಳಿಗೆ ಹೊಂದಿಕೆಯಾಗಬಲ್ಲ ಪರದೆಗಳನ್ನು ಬಳಸುತ್ತಾರೆ. ಕೆಲವಟ್ಟಿಗೆ ದಟ್ಟ, ಕೆಲವಟ್ಟಿಗೆ ತಿಳಿ, ಕೆಲವಟ್ಟಿಗೆ ಪ್ರಕಾಶಹೀನ ಕೆಲವಟ್ಟಿಗೆ ಪ್ರಕಾಶಮಾನ ಎಂಬ ಉಕ್ತಿಗನುಗುಣವಾಗಿ ಗೋಡೆಯ ಬಣ್ಣಗಳಿಗೆ ಹೊಂದಿಕೆಯಾಗುವಂತೆ ಕಿಟಕಿ ಮೇಜುಗಳ ಹೊದಿಕೆ, ಬಾಗಿಲು ಕಿಟಕಿ ಪರದೆಗಳನ್ನು ಆರಿಸಿರುತ್ತಾರೆ. ಬಾಗಿಲುಗಳಿಗೆ ಇಳಿಬಿಟ್ಟ ಪರದೆಗಳನ್ನು ಎರಡು ಭಾಗಗಳಾಗಿ ಕತ್ತರಿಸಿ ಹೊಲಿದು ನಿರಿಗೆ ತೆಗೆದು, ಅರ್ಧಅರ್ಧ ಭಾಗವನ್ನು ಪ್ಲಾಸ್ಟಿಕ್ ಮಣಿಗಳಿಂದ ಮತ್ತು ರಿಬ್ಬನ್‌ಗಳಿಂದ ಕಟ್ಟುವುದೂ ಉಂಟು. ಸೋಫಾದ ಮೇಲೆ ಇರಿಸುವ ಒರಗುದಿಂಬಿಗೆ ಸುತ್ತಲೂ ನಿರಿಗೆ ಕಟ್ಟಿ ಹೊಲಿದ ಚೀಲವನ್ನು ಹಾಕಿ ನಡುವೆ ಸುಂದರವಾದ ಕಸೂತಿ ಕೆಲಸವನ್ನು ಮಾಡುತ್ತಾರೆ.



ಅಲಂಕೃತಗೋಡೆ

ಗೃಹಾಲಂಕಾರದಲ್ಲಿ ಹೂಗಳ ಪಾತ್ರ ಬಹಳ ಹಿರಿದು. ಅರಳಿದ ಹೂಗಳನ್ನು ಹಸುರೆಲೆಗಳನ್ನು ಹೂದಾನಿಗಳಲ್ಲಿಟ್ಟು ಅಲಂಕರಿಸಿ ಮೇಜಿನ ಮೇಲಿಡುವುದು ಹೆಚ್ಚಾಗಿ ಬಳಕೆಗೆ ಬರುತ್ತಿದೆ. ಹೂಗಳನ್ನು ಒಂದೆಡೆಯಲ್ಲಿ, ತರಕಾರಿಗಳನ್ನು ಒಂದೆಡೆಯಲ್ಲಿ ಜೋಡಿಸುವುದು, ಹೂದಾನಿಗಳಲ್ಲಿ ಅಚ್ಚುಕಟ್ಟಾಗಿ ಹೂಗಳನ್ನು ಜೋಡಿಸುವುದು ಒಂದು ಕಲೆಯೇ ಆಗಿದೆ. ಜಪಾನೀಯ ಹೂವಿನ ಅಲಂಕಾರದ ಪ್ರಭಾವ ಅಲ್ಲಲ್ಲಿ ಕಾಣುತ್ತದೆ. ಇಕೆಬಾನಾ ಕಲೆ ಪ್ರಚಾರಗೊಳ್ಳುತ್ತಿದೆ.

ಮನೆಯ ಸೊಬಗು ಹೆಚ್ಚಿಸಲು ಮನೆ ಮುಂದೆ ಸುಂದರವಾದ ಕೈ ತೋಟ ಮಾಡುವುದು, ಅಲಂಕಾರಿಕ ಸಸ್ಯಗಳು ಮತ್ತು ಹೂವಿನ ಗಿಡಗಳನ್ನು ಕುಂಡಗಳಲ್ಲಿ ಜೋಡಿಸುವುದು, ಅಲಂಕಾರಿಕ ಕುಂಡಗಳಲ್ಲಿ ಇಳಿಬೀಳುವ ಸಸ್ಯಗಳನ್ನು ಇಟ್ಟು ಮನೆಯ ಮುಂದೆ ಚಾವಣಿಗೆ ತೂಗುಹಾಕುವುದು ರೂಢಿಯಲ್ಲಿದೆ. (ಎಂ.ಜೆ.ಬಿ.)

**ಗೇರಸಪ್ಪೆ ಶಾಂತಪ್ಪಯ್ಯ :** ಹತ್ತೊಂಬತ್ತನೆಯ ಶತಮಾನದಲ್ಲಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಆಗಿಹೋದ ಪ್ರಸಿದ್ಧ ಯಕ್ಷಗಾನ ಕವಿ. ಉತ್ತರ ಕನ್ನಡ ಜಿಲ್ಲೆಯ ಗೇರಸಪ್ಪೆ ಈತನ ಜನ್ಮಸ್ಥಳ. ತನ್ನ ಬಾಲ್ಯವನ್ನು ಅಲ್ಲೇ ಕಳೆದ. ಅನಂತರ ಮಂಗಳೂರಿನಲ್ಲಿ ಉನ್ನತ ವಿದ್ಯಾಭ್ಯಾಸವನ್ನು ಪಡೆದು ಕ್ರಮೇಣ ಅಲ್ಲೆ ಜಿಲ್ಲಾ ನ್ಯಾಯಾಧೀಶನಾಗಿ ನೇಮಕಗೊಂಡ. ಈತನ ಮನೆಯಮಾತು ಕೊಂಕಣಿ. ಮಂಗಳೂರು ತಾಲ್ಲೂಕಿನ ಬಂಟ್ವಾಳದಲ್ಲಿ ವೈವಾಹಿಕ ಸಂಬಂಧ ಬೆಳೆಸಿದ. ಹೆಂಡತಿ ಕಾವೇರಮ್ಮ. ಈತ ನಿವೃತ್ತಿ ಹೊಂದುವ ವರೆಗೂ ಮಂಗಳೂರಿನಲ್ಲಿಯೇ ವಾಸವಾಗಿದ್ದ. ಅನಂತರ ಬಂಟ್ವಾಳಕ್ಕೆ ಬಂದು ಅಲ್ಲಿ ತನ್ನ ಇಡೀ ಆಯುಷ್ಯವನ್ನು ಕಳೆದ. 1850-70ರ ಮಧ್ಯಕಾಲದಲ್ಲಿ ಸ್ವರ್ಗಸ್ಥನಾದನೆಂದೂ ಈತನಿಗೆ ಗಂಡುಸಂತತಿ ಇರಲಿಲ್ಲವೆಂದೂ ತಿಳಿದುಬರುತ್ತದೆ.

ಈತ ಕರ್ಣಪರ್ವ, ಪುತ್ರಕಾಮೇಷ್ಟಿ, ಸೀತಾ ಕಲ್ಯಾಣ, ಅತಿಕಾಯ, ಮೈರಾವಣ ಕಾಳಗ, ಸುರಥ ಸುಧನ್ವ ಕಾಳಗ, ರಾವಣದಿಗ್ವಿಜಯ, ಜರಾಸಂಧ ಕಾಳಗ, ಏಕಾದಶೀಪ್ರಸಂಗ ಮೊದಲಾದ ಅನೇಕ ಯಕ್ಷಗಾನ ಕೃತಿಗಳನ್ನು ರಚಿಸಿದ್ದಾನೆ. ಇವನ ಎಲ್ಲ ಕೃತಿಗಳಲ್ಲಿ ಕ್ಷೇಮಪುರೀಶ, ಶರಪುರಾಧಿಪ ಎಂಬ ಅಂಕಿತವಿದ್ದು ಗೇರಸಪ್ಪೆಯ ವೆಂಕಟರಮಣದೇವರನ್ನೂ ಮಂಗಳೂರಿನ ಪ್ರಸಿದ್ಧ ಶರವುಗಣಪತಿಯನ್ನೂ ಸ್ಮರಿಸಿದ್ದಾನೆ. ಇವನ ಕೃತಿಗಳಲ್ಲಿ ಹೆಚ್ಚಿನವು ಅಚ್ಚಾಗಿವೆ. ಇವು ಬಯಲಾಟಕ್ಕೆ ಹೆಚ್ಚು ಪ್ರಶಸ್ತವಾಗಿದ್ದು ಇಂದಿಗೂ ವಿಶೇಷ ಪ್ರಚಾರದಲ್ಲಿವೆ.

ಶಾಂತಪ್ಪಯ್ಯ ಕೃತಿರಚನೆಯಲ್ಲಿ ಮಾತ್ರವಲ್ಲದೆ ಯಕ್ಷಗಾನ ವೇಷಧಾರಿಗಳನ್ನು (ನಟರು) ತರಬೇತು ಮಾಡುವುದರಲ್ಲಿಯೂ ಕಿರೀಟ ಮೊದಲಾದ ವೇಷಭೂಷಣಗಳನ್ನು ತಯಾರಿಸುವುದರಲ್ಲಿಯೂ ಪರಿಶ್ರಮ ಉಳ್ಳವನಾಗಿದ್ದು ತನ್ನ ಇಡೀ ಜೀವಮಾನವನ್ನು ಯಕ್ಷಗಾನ ಸೇವೆಗೆ ಮುಡಿಪಾಗಿರಿಸಿ ಅಪಾರ ಕೀರ್ತಿಗೆ ಪಾತ್ರನಾಗಿದ್ದಾನೆ. (ಕೆ.ಕೆ.ಬಿ.)

**ಗೇರುಸೊಪ್ಪೆ :** ಉತ್ತರ ಕನ್ನಡ ಜಿಲ್ಲೆ ಹೊನ್ನಾವರ ತಾಲ್ಲೂಕಿನಲ್ಲಿರುವ ಇತಿಹಾಸ ಪ್ರಸಿದ್ಧ ಗ್ರಾಮ. ಹೊನ್ನಾವರದಿಂದ 26ಕಿಮೀ ಪೂರ್ವದಲ್ಲಿ ಗೇರುಸೊಪ್ಪೆ ಜಲಪಾತದಿಂದ 30ಕಿಮೀ ಪಶ್ಚಿಮದಲ್ಲಿ ಶರಾವತಿ ನದಿಯ ದಂಡೆಯ ಮೇಲಿದೆ. ಇದು 14-16ನೆಯ ಶತಮಾನಗಳಲ್ಲಿ ಸಾಳುವ ವಂಶದ ಅರಸರ ರಾಜಧಾನಿಯಾಗಿತ್ತು. ಕ್ಷೇಮಪುರ, ಭಲ್ಲಾತಕೀಪುರ ಮತ್ತು ನಗಿರೆ ಎಂಬ ಹೆಸರುಗಳಿಂದ ಪ್ರಸಿದ್ಧಿ ಪಡೆದಿತ್ತು. ಅಂದು ವೈಭವದ ಅತ್ಯುನ್ನತಿಯನ್ನು ಕಂಡಿದ್ದ ಗೇರುಸೊಪ್ಪೆ ಇಂದು ಚಿಕ್ಕ ಗ್ರಾಮ. ಆದರೆ ರಾಜಧಾನಿಯ ಹಲವು ಅವಶೇಷಗಳು ಗೇರುಸೊಪ್ಪೆಯಲ್ಲೂ ಇಲ್ಲಿಂದ ಸು.2ಕಿಮೀ ದೂರದಲ್ಲಿರುವ ನಗಿರೆ ಬಸ್ತಿಕೇರಿಯಲ್ಲೂ ಉಳಿದಿವೆ.



ಚತುರ್ಮುಖ ಬಸದಿ

ರಾಣಿ ಚೆನ್ನಭೈರಾದೇವಿಯ (1548-99) ಕಾಲದಲ್ಲಿ ಕಟ್ಟಲಾದ ಗೇರುಸೊಪ್ಪೆಯ ಚತುರ್ಮುಖ ಬಸದಿ ಇವುಗಳಲ್ಲಿ ಮುಖ್ಯವಾದುದು. ಚತುರ್ಮುಖ ಬಸದಿ ವಾಸ್ತುಶಿಲ್ಪದ ದೃಷ್ಟಿಯಿಂದ ಗಮನಾರ್ಹವಾದುದು. ಈ ಬಸದಿಯ ನಾಲ್ಕು ದಿಕ್ಕಿನಲ್ಲಿ ನಾಲ್ಕು ಬಾಗಿಲುಗಳು ಹಾಗೂ ನಾಲ್ಕು ಬೇರೆ ಬೇರೆ ತೀರ್ಥಂಕರರ ವಿಗ್ರಹಗಳು ಇವೆ. ಪಾರ್ಶ್ವನಾಥ ಬಸದಿಯಲ್ಲಿ ಪರ್ಯಂಕಾಸನದಲ್ಲಿರುವ ಪಾರ್ಶ್ವನಾಥ ತೀರ್ಥಂಕರರ ಸುಂದರ ಮೂರ್ತಿಯಿದೆ. ಮೂರ್ತಿಯ ಪ್ರಭಾವಳಿಯಲ್ಲಿ ತೀರ್ಥಂಕರ ಬಿಂಬಗಳನ್ನು ಪರ್ಯಂಕಾಸನದಲ್ಲಿರುವಂತೆ ಕೆತ್ತಲಾಗಿದೆ. ಅದರಲ್ಲೇ ಚಾಮರಧಾರಿಯರು ಸರ್ವಾಲಂಕಾರಭೂಷಿತೆಯರಾಗಿ ಕಾಣುತ್ತಾರೆ. ಜಿನನ ತಲೆಯ ಮೇಲೆ ಏಳು ಹೆಡೆಯ ಸರ್ಪವಿದೆ. ಅದರ ಮೇಲೆ ಮನೋಹರವಾದ ಮುಕ್ಕೊಡೆಯಿದೆ. ಈ ಬಸದಿಯಲ್ಲಿ ಪದ್ಮಾವತಿ ಮತ್ತು ಜ್ವಾಲಾಮಾಲಿನಿ ಯಕ್ಷಿಯರ ಮೂರ್ತಿಗಳಿವೆ. ಈ ಬಸದಿಯ ಶಿಲ್ಪಗಳ ಸೂಕ್ಷ್ಮಕುಸುರಿಕೆಲಸ ಶಿಲ್ಪಿಯ ಕಲಾಪ್ರೌಢಿಮೆಯನ್ನೂ ನಿರ್ಮಾಪಕರ ಸೌಂದರ್ಯ ಪ್ರಜ್ಞೆಯನ್ನೂ ವ್ಯಕ್ತಪಡಿಸುತ್ತವೆ.

ಗೇರುಸೊಪ್ಪೆಯಲ್ಲಿ ದೊರೆತಿರುವ ಶಾಸನಗಳಿಂದ ಅಲ್ಲಿನ ಬಸದಿಗಳ ಬಗ್ಗೆ ಹೆಚ್ಚಿನ ವಿವರಗಳು ತಿಳಿದುಬರುತ್ತವೆ. ಗೇರುಸೊಪ್ಪೆ ನಗರಗೇರಿ

ಬಳಿಯ ಜೈನ ಬಸದಿಯು 1421ರ ಶಾಸನದಿಂದ ಪಾರ್ಶ್ವನಾಥ' ದೇವರಸೇವೆಗೆ ಮತ್ತು ಬಸದಿಯ ಜೀರ್ಣೋದ್ಧಾರಕ್ಕೆ ಪದ್ಮಣ್ಣರಸ ಭೂಮಿಯನ್ನು ದಾನ ಮಾಡಿದ ವಿಚಾರ ತಿಳಿದುಬರುತ್ತದೆ. ಶ್ರೀದೇವೇಂದ್ರಸೂರಿಯ ಉಪದೇಶದಿಂದ ಓಜಣಶ್ರೇಷ್ಠಿಯ ಪುತ್ರ ಕಲ್ಲಪ್ಪಶ್ರೇಷ್ಠಿಯ ಮಗ ಅಜಣ ನೇಮಿಜಿನಬಿಂಬವನ್ನು ಮಾಡಿಸಿದ ಎಂಬ ವಿಚಾರ ನಗರಗೇರಿ ಬಸದಿಯ ಜಿನಬಿಂಬದ ಪಾದಪೀಠದಲ್ಲಿರುವ ಬರೆಹದಿಂದ ತಿಳಿದುಬರುವುದು. ವರ್ಧಮಾನ ಬಸದಿ ಪಕ್ಕದಲ್ಲಿರುವ 1378ರ ಒಂದು ಶಾಸನ ಹೊನ್ನಪ್ಪ ಶ್ರೇಷ್ಠಿ ದಾನಬಿಟ್ಟಿದ್ದನ್ನೂ ಅವನಿಗೆ ಸೋಮಣ್ಣ ಮತ್ತು ಕಾಮಣ್ಣ ಎಂಬ ದಂಡನಾಯಕರೊಡನೆ ಇದ್ದ ಬಂಧುತ್ವವನ್ನೂ ತಿಳಿಸುತ್ತದೆ. ಗೇರುಸೊಪ್ಪೆಯಲ್ಲಿ ಅನಂತತೀರ್ಥಂಕರರ ಚೈತ್ಯಾಲಯವೊಂದಿದ್ದ ವಿಷಯ 1392ರ ಒಂದು ಶಾಸನದಿಂದ ವ್ಯಕ್ತವಾಗುತ್ತದೆ. ಈ ಬಸದಿಯನ್ನು ಯೋಜಣಶ್ರೇಷ್ಠಿಯ ಪತ್ನಿ ರಾಮಕ್ಕ ಎಂಬುವಳು ಕಟ್ಟಿಸಿದ್ದಳು. ಯೋಜಣಶ್ರೇಷ್ಠಿ ತನ್ನ ತಂದೆ ಕಲ್ಲಪ್ಪ ಶ್ರೇಷ್ಠಿಯ ಪ್ರೇರಣೆಯಿಂದ ಕ್ಷೇಮಪುರದಲ್ಲಿ (ಗೇರುಸೊಪ್ಪೆ) ದ್ವಿತಲವಾಗಿ ಒಂದು ಚೈತ್ಯಾಲಯವನ್ನು ಕಟ್ಟಿಸಿ ಕೆಳಗಿನ ನೆಲೆಯಲ್ಲಿ ನೇಮಿಜಿನೇಶ್ವರನ ಪ್ರತಿಮೆಯನ್ನೂ ಮೇಲಿನ ನೆಲೆಯಲ್ಲಿ ಗೊಮ್ಮಟೇಶ್ವರ ಬಿಂಬವನ್ನೂ ಪ್ರತಿಷ್ಠಾಪಿಸಿದ. ಆ ಚೈತ್ಯಾಲಯ ಯೋಜಣಶ್ರೇಷ್ಠಿಯ ಕೀರ್ತಿಯ ಮೂರ್ತಿಯಂತೆ, ಪುಣ್ಯದ ಪುಂಜದಂತೆ ಇತ್ತು ಎಂದು ಒಂದು ಶಾಸನ ತಿಳಿಸುತ್ತದೆ.

ಚೆನ್ನಭೈರಾದೇವಿಯ ಆಡಳಿತದಲ್ಲಿ ಮೆಣಸಿನ ವ್ಯಾಪಾರದಿಂದ ಶ್ರೀಮಂತವಾಗಿದ್ದ ಗೇರುಸೊಪ್ಪೆಯ ಮೇಲೆ ಇಕ್ಕೇರಿಯ ಹಿರಿಯ ವೆಂಕಟಪ್ಪನಾಯಕನ ಕಣ್ಣು ಬಿದ್ದು ಆ ರಾಜ್ಯದ ಮೇಲೆ ಯುದ್ಧಹೂಡಿ ಚೆನ್ನಭೈರಾದೇವಿಯನ್ನು ಸೋಲಿಸಿ ಗೇರುಸೊಪ್ಪೆಯನ್ನು ಸಂಪೂರ್ಣವಾಗಿ ಧ್ವಂಸ ಮಾಡಿದ. (ಎಸ್.ಪಿ.)

**ಗೊಂದಲಿಗರು :** ಅಂಬಾಭವಾನಿಯ ಹೆಸರಿನಲ್ಲಿ ಗೊಂದಲ ಹಾಕುವುದನ್ನೇ ಪ್ರಧಾನವೃತ್ತಿಯನ್ನಾಗಿ ಮಾಡಿಕೊಂಡಿರುವ ಒಂದು ಸಮುದಾಯ. ಇವರು ಬಿಜಾಪುರ, ಬೆಳಗಾಂವಿ, ಧಾರವಾಡ, ಶಿವಮೊಗ್ಗ, ಗುಲ್ಬರ್ಗ, ಬೀದರ್, ಬಳ್ಳಾರಿ ಜಿಲ್ಲೆಗಳಲ್ಲಿ ಮತ್ತು ಮೈಸೂರು, ಮಂಡ್ಯ, ಜಿಲ್ಲೆಯ ಕೆಲವೆಡೆಗಳಲ್ಲಿ ಕಂಡುಬರುತ್ತಾರೆ. ಈ ಸಮುದಾಯವನ್ನು ಗೋಂಧಳಿ, ಗೊಂದಲಿ ಎಂಬ ಹೆಸರಿನಿಂದಲೂ ಗುರುತಿಸುವುದುಂಟು. ಮೂಲತಃ ಇವರು ಮಹಾರಾಷ್ಟ್ರಕ್ಕೆ ಸೇರಿದವರು. ಗೋಂಧಳಿ ಅಥವಾ ಗೊಂದಲಿ ಎಂಬ ಹೆಸರು ಇವರಿಗೆ ಯಾಕೆ ಬಂತು ಎಂಬ ಬಗ್ಗೆ ಖಚಿತವಾದ ಆಧಾರವಿಲ್ಲ. ಗೊಂದಲಿಗ ಎಂದರೆ ಪಾರ್ವತಿಯ ಹೆಸರಿನಲ್ಲಿ ಹಾಡುವುದನ್ನೇ ವೃತ್ತಿಯನ್ನಾಗಿ ಮಾಡಿಕೊಂಡವ ಇತ್ಯಾದಿ ಅರ್ಥಗಳನ್ನು ಕೋಶಗಳು ಹೇಳುತ್ತವೆ. ಬಿಜಾಪುರದ ಹಿರಿಯ ಗೊಂದಲಿ ವಕ್ತೃಗಳು ಗೊಂದಲಿಗ ಎಂಬುದಕ್ಕೆ ಹೀಗೆ ಹೇಳುತ್ತಾರೆ: ಧಾಂದಲೆಯೆಬ್ಬಿಸು ಅಂದ್ರ ಏನು ಗೊಂದಲ ನಡದದಪ್ಪ ಅಂತಾರ, ಹಂಗs ನಮದೂ ಗೊಂದಲಾನೇ ಐತಿ. ಗೊಂದ್ಲ ಹಾಕೂ ಮುಂದ ಸಂಬಾಳ ಬಡಿಯೂದು ಚೌಡಿಕಿ ಬಾರಿಸೂದು ಪತ್ತೆ ಹಾಕೂದು ಜೊತೇಲೇ ದೇವಿಸ್ತುತಿಯಾಗಿ ಹಾಡೂದು ಇದೆಲ್ಲಾ ಗೊಂದ್ಲಾನೇ ಆಗ್ತೈತಿ ನೋಡ್ರಿ. ಅದಕ್ಕೆ ಗೊಂದಲ ಅಂಬು ಹೆಸರು ಬಂತ್ರಿ.

ಜಮದಗ್ನಿ ಮತ್ತು ಆತನ ಹೆಂಡತಿ ರೇಣುಕೆ ಈ ಸಮುದಾಯದ ಸ್ಥಾಪಕರೆಂದು ಪ್ರತೀತಿ. ಅಂಬಾಭವಾನಿ (ತುಳಜಾಭವಾನಿ) ಇವರ ಕುಲದೇವತೆ. ಮಹಾರಾಷ್ಟ್ರದ ತುಳಜಾಪುರ ಈ ದೇವತೆಯ ಮೂಲಸ್ಥಾನ.

**ಗೊಂದಲಿಗರಲ್ಲಿ ಎರಡು ಗೋತ್ರಗಳಿವೆ:** ಸ್ವಗೋತ್ರ ಮತ್ತು ಭಿನ್ನಗೋತ್ರ. ಸ್ವಗೋತ್ರದ ಗುಂಪಿನಲ್ಲಿ ಬ್ರಾಹ್ಮಣ, ಧನಗರ, ಮರಾಠ, ಕಂಬಾರ, ಕದಮ್‌ರಾಯ್, ರೇಣುಕಾರಾಯ್, ಮಾಲಿ, ಅಕರ್ಮಾಸೆ ಎಂಬ ಎಂಟು ವಿಭಾಗಗಳಿವೆ. ಭಿನ್ನಗೋತ್ರದ ಬುಡಕಟ್ಟಿನಲ್ಲಿ ಗಾಯಿಕವಾಡ, ಪವಾರ್ ಮುಂತಾದ ಹನ್ನೆರಡು ಬಗೆಯ ಉಪಗೋತ್ರಗಳಿವೆ. ಉಪಗೋತ್ರ ಅಥವಾ ಪಂಗಡ ಬೇರೆ ಬೇರೆ ಆಗಿದ್ದರೆ ಇವರ ನಡುವೆ ಕೊಡುಕೊಳ್ಳುವ ವ್ಯವಹಾರ ಇರುವುದಿಲ್ಲ. ಈಗ ಎದ್ದು ಕಾಣುವ'ಪಂಥ'ವು ಮೂರು ಪಂಗಡಗಳು ಮಾತ್ರ: ಬುಡುಬುಡಿಕೆಯವರು, ಗೊಂಧಳಿಗರು, ಜೋಷಿಗರು.

ಗೊಂದಲಿಗರಲ್ಲಿ ಬಳಕೆಯಲ್ಲಿರುವ ಕೆಲವು ಸಂಪ್ರದಾಯಗಳು ಹೀಗಿವೆ: ಮಗು ಹುಟ್ಟಿದ ಐದು ದಿನಕ್ಕೆ ಐದ್ದೀಶಿ ಎಂಬ ಪದ್ಧತಿಯನ್ನು ಆಚರಿಸುತ್ತಾರೆ. ಹಣೆಬರೆಹ ಬರೆಯುವ ಸಟವ್ವೈ ಎಂಬ ದೇವತೆ ಮಗುವಿನ ಹಣೆಯಲ್ಲಿ ಒಳ್ಳೆಯದನ್ನು ಬರೆಯಲಿ ಎಂಬ ಉದ್ದೇಶದಿಂದ ಆ ದಿನ ಹೊಸ ಮೊರ ಮತ್ತು ಹೊಸ ಸಟವ್ವೈ ದೇವಿಯ ಮೂರ್ತಿಯನ್ನು ಕೊಂಡು ತಂದು ಪೂಜಿಸಿ ನಾಲ್ಕಾರು ಮಂದಿಗೆ ಊಟ ಹಾಕಿ ಓಣಿಯ ಜನಕ್ಕೆ ಬೆಲ್ಲ ಕೊಬ್ಬರಿ ಹಂಚುತ್ತಾರೆ. ಹನ್ನೆರಡನೆಯ ದಿನ ತೊಟ್ಟಿಲಿಗೆ ಹಾಕುವುದು, ಹೆಸರಿಡುವುದು, ಜೋಗುಳ ಹಾಡುವುದು ರೂಢಿಯಲ್ಲಿದೆ.

ಹೆಣ್ಣು ಮೈನೆರೆದಾಗ ಆಕೆಗೆ ಹಾಕುವ ಚಪ್ಪರವನ್ನು ಇವರು ಮಕರ ಎನ್ನುತ್ತಾರೆ. ಈ ಸಂದರ್ಭದಲ್ಲಿ ಹೆಣ್ಣಿನ ಆರೈಕೆ ಸಾಮಾನ್ಯ. ಗೊಂದಲಿಗರಲ್ಲಿ ಮೊದಲಿಗೆ ತೊಟ್ಟಿಲು ವಿವಾಹ, ಬಾಲ್ಯ ವಿವಾಹ ಪದ್ಧತಿಗಳು ಜಾರಿಯಲ್ಲಿದ್ದು ಈಗ ವಧುವಿಗೆ ಪ್ರಾಪ್ತ ವಯಸ್ಸಾಗುವವರೆಗೆ ಕಾಯುವ ಪದ್ಧತಿ ಇದೆ. ಇವರಲ್ಲಿ ಸಾಮಾನ್ಯವಾಗಿ ಮೂರು ದಿನಗಳ ಮದುವೆ ಜಾರಿಯಲ್ಲಿದೆ. ಮದುವೆ ನಡೆಯುವುದು ವರನ ಮನೆಯಲ್ಲಿ. ಮುಹೂರ್ತದ ಕಾರ್ಯ ಸಂಜೆಯ ಹೊತ್ತು ನಡೆಯುತ್ತದೆ.



ಗೊಂದಲಿಗರ ಮೇಳ

ಮೊದಲ ದಿನ ಮೈಗೆ ಅರಿಶಿನ ಹಚ್ಚುವ ಮುಂಚೆ ಗಂಡಿನ ಹೊಸ ಶಲ್ಯದ ತುದಿಗೆ ತೆಂಗಿನಕಾಯಿಯನ್ನೂ ಹೆಣ್ಣಿನ ಸೆರಗಿನ ತುದಿಗೆ ಅಡಕೆಯನ್ನೂ ಕಟ್ಟುತ್ತಾರೆ. ಕಂಕಣ ಕಟ್ಟುವುದಕ್ಕೆ ಯಾವಾಗಲೂ ಕವಲೊಡೆದಿರುವ ಅರಿಶಿನದ ತುಂಡನ್ನು ಬಳಸುತ್ತಾರೆ. ಕವಲೊಡೆದಿರುವ ಸಣ್ಣತುಂಡು ಮಗು ಎಂಬ ನಂಬಿಕೆಯಿದೆ. ಎರಡನೆಯ ದಿನ ಮಧ್ಯಾಹ್ನ ಸೋಲಿಗೆ ನೀರಿನ ಸ್ನಾನ. ಈ ಸ್ನಾನವನ್ನು ಸಮಾಜ ಅಥವಾ ಪಂಚರು ಹೆಣ್ಣುಗಂಡುಗಳಿಗೆ ಬಳುವಳಿಯಾಗಿಯೂ ಮಾಡಿಸಬಹುದು. ಇದೇ ರಾತ್ರಿ ತಮ್ಮ ಕುಲದೇವತೆ ಅಂಬಾಭವಾನಿಗೆ ಗೊಂದಲ ಹಾಕುತ್ತಾರೆ (ಇದು ಆ ಮನೆಯಲ್ಲಿ ಹಿಂದಿನಿಂದ ನಡೆದು ಬಂದಿದ್ದರೆ ಮಾತ್ರ), ಮೂರನೆಯದಿನ ಮುಂಜಾನೆ ಕುಲದೇವತೆಗೆ ಬಲಿ ಕೊಡುವುದು, ತೊಟ್ಟಿಲು ತೂಗುವ ಶಾಸ್ತ್ರ, ಬಲಿಯ ಊಟ ಇವುಗಳೊಂದಿಗೆ ಮದುವೆ ಮುಗಿಯುತ್ತದೆ. ಗೊಂದಲಿಗರಲ್ಲಿ ಮದುವೆಯಾದವರು ಮಾತ್ರ ಹೆಣ ಹೊರುವ ಮತ್ತು ಸಂಸ್ಕಾರ ಮಾಡುವ ಹಕ್ಕು ಪಡೆದಿರುತ್ತಾರೆ. ಮದುವೆಯಾಗದೆ ಸತ್ತರೆ ಹೆಣವನ್ನು ಎಕ್ಕದ ಗಿಡದೊಂದಿಗೆ ಮದುವೆ ಮಾಡುತ್ತಾರೆ. ಹನ್ನೆರಡು ಅಥವಾ ಕೆಳಗಿನ ವಯಸ್ಸಿನಲ್ಲಿ ಮದುವೆ ಆಗದೆ ಸತ್ತರೆ ಅಂತಹವರನ್ನು ಸಾಮಾನ್ಯವಾಗಿ ಹೂಳುತ್ತಾರೆ. ಮದುವೆ ಆಗಿದ್ದು ಸತ್ತರೆ ಕಡಿಮೆ ವಯಸ್ಸಿನವರಾಗಿದ್ದರೂ ಸುಡುತ್ತಾರೆ. ಮಕ್ಕಳು ಸತ್ತರೆ ಮೊರ ಬಳಸದೆ ಒಡ್ಡಿದ ಕೈಗಳಿಂದಲೇ ಒಯ್ದು ಶ್ಮಶಾನವಲ್ಲದ, ಹುತ್ತವಿಲ್ಲದ ಕಡೆ ಹೂಳುತ್ತಾರೆ.

**ಗೊಂದಲಿಗರ ನ್ಯಾಯದ ರೀತಿನೀತಿಗಳು :** ನಡೆದ ಸಂಗತಿಯನ್ನು ಫಿರ್ಯಾದಿ ಓಣಿಯ ಜನಕ್ಕೆ ತಿಳಿಸುತ್ತಾನೆ. ಆಗ ಪಂಚರು ಕೂಡಿ ವಿಚಾರ ಮಾಡುತ್ತಾರೆ. ಕೋರ್ಟಿಗೆ ಹೋದ ಸಂದರ್ಭಗಳು ಬಹಳ ಕಡಿಮೆ. ಆರೋಪಿಯ ಮತ್ತು ಫಿರ್ಯಾದಿಯ ಹೇಳಿಕೆಗಳನ್ನು ಪಂಚರು ಬರೆಹದ ಮೂಲಕ ತೆಗೆದುಕೊಂಡು ಸಹಿ ಮಾಡಿಸಿಕೊಳ್ಳುತ್ತಾರೆ. ಸಹಿ ಹಾಕಿದ ಮೇಲೆ ಅವರು ಪಂಚರ ಅಭಿಪ್ರಾಯದಂತೆ ನಡೆದುಕೊಳ್ಳಲೇಬೇಕು. ಘಟನೆ ನಡೆದ ಸ್ಥಳಕ್ಕೆ ಪಂಚರು ಖುದ್ದು ಭೇಟಿ ನೀಡಿ ಅಕ್ಕಪಕ್ಕದವರಿಂದ

ನಡೆದದ್ದೇನೆಂದು ವಿಚಾರಿಸಿ, ಆರೋಪಿ ಮತ್ತು ಫಿರ್ಯಾದಿಗಳು ನೀಡಿರುವ ಹೇಳಿಕೆಗಳ ಸತ್ಯಾಸತ್ಯತೆಗಳನ್ನು ವಿಮರ್ಶಿಸಿ, ಯಾರಿಗೆ ಏನು ದಂಡ ಹಾಕಬೇಕು ಎಂದು ತೀರ್ಮಾನಿಸುತ್ತಾರೆ. ದಂಡನೆಗೆ ಒಳಗಾದವರು ತಮ್ಮ ಪಾಲಿನ ದಂಡವನ್ನು ಕೊಡಲೇಬೇಕಾಗುತ್ತದೆ. ಕೊಡದಿದ್ದರೆ ಅಂಥವರಿಗೆ ಅವರ ಸಮಾಜದಲ್ಲಿ ಯಾವ ಸ್ಥಾನವೂ ಇರುವುದಿಲ್ಲ.

ಗೊಂದಲಿಗರು ಅನೇಕ ಹಬ್ಬಗಳನ್ನು ಆಚರಿಸುತ್ತಾರೆ. ಮೊಹರಂ ಮತ್ತು ಹೋಳಿ ಹಬ್ಬಗಳಲ್ಲಿ ಇವರು ಕಟ್ಟುವ ವೇಷಗಳನ್ನು ಸೋಂಗು ತೆಗೆಯುವುದು ಎನ್ನುವರು. ಹಣಗಳಿಕೆ ಈ ವೇಷಗಳ ಪ್ರಧಾನ ಉದ್ದೇಶ. ದೀಪಾವಳಿಯಲ್ಲಿ ಲಕ್ಷ್ಮೀಪೂಜೆ ಮಾಡುತ್ತಾರೆ. ದಸರ ಸಮಯದಲ್ಲಿ ನಡೆಯುವ ಅಂಬಾಭವಾನಿಯ ಪೂಜೆ ಇವರ ದೊಡ್ಡ ಹಬ್ಬ. ಇದು ಹತ್ತು ದಿನ ನಡೆಯುತ್ತದೆ. ಕಡೆಯ ದಿನ ದಕ್ಷಿಣ ದಿಕ್ಕಿನಲ್ಲಿ ಊರಿನಿಂದ ಹೊರಕ್ಕೆ ಹೋಗಿ, ಬನ್ನಿಪೂಜೆ ಮಾಡಿ ಬನ್ನಿ ಹರಿಯುವುದು, ಬನ್ನಿಯ ಎಲೆಯನ್ನೋ ಹೂವನ್ನೋ ತಂದು ಪ್ರತಿಮನೆಗೂ ಬಂಗಾರ ತಗೊಳ್ಳಿ ಎಂದು ಹೇಳಿ ಕೊಡುವುದು ಮೊದಲಾದ ಕಾರ್ಯಗಳು ನಡೆಯುತ್ತವೆ. ಆಷಾಢದ ಕೊನೆಯಲ್ಲಿ ಅಥವಾ ಶ್ರಾವಣದ ಮೊದಲಲ್ಲಿ ನಡೆಯುವ ದುರ್ಗವ್ವನ ಹಬ್ಬ ಇವರಿಗೆ ವಿಶಿಷ್ಟವಾದದ್ದು. ಅಂದು ಈ ದೇವತೆಗೆ ಹೋತವನ್ನೋ ಉಣ್ಣೆಗುರಿಯನ್ನೋ ಬಲಿಗಾಗಿಯೇ ಮೀಸಲಾಗಿರುವ ದೊಡ್ಡ ಮಚ್ಚಿನಿಂದ ಒಂದೇ ಏಟಿಗೆ ಪ್ರಾಣಿಯ ನಡುದೇಹಕ್ಕೆ ಹೊಡೆದು ವಿಶಿಷ್ಟ ರೀತಿಯಲ್ಲಿ ಬಲಿ ಕೊಡುತ್ತಾರೆ. ಮೊದಲಿಗೆ ದುರ್ಗವ್ವನ ಸ್ಥಿರಗುಡಿಯ ಮುಂದೆ ಕೋಣವನ್ನು ಬಲಿ ಕೊಡುವ ಪದ್ಧತಿ ಇತ್ತು. ಈಗ ಕುರಿಯ ಬಲಿ ಮಾತ್ರ ನಡೆಯುತ್ತದೆ.

ಗೊಂದಲ ಹಾಕುವುದು ಸಾಮಾನ್ಯವಾಗಿ ಅಂಬಾಭವಾನಿಯ ಮುಂದೆ ನಿಂತು. ಇದಕ್ಕೆ ಮೂವರು ಸೇರುತ್ತಾರೆ. ಶಿವಮೊಗ್ಗ ಜಿಲ್ಲೆಯ ಗೊಂದಲಿಗರು ಗೊಂದಲ ಹಾಕಲು ಇಬ್ಬರು ಮಾತ್ರ ಉದ್ಯುಕ್ತರಾಗುವುದು ಮತ್ತು ಕುಳಿತೇ ಹಾಕುವುದು ರೂಢಿಯಲ್ಲಿದೆ. ಐವತ್ತು ಅರುವತ್ತು ಅಡಿ ಉದ್ದದ ಬಟ್ಟೆಯ ಮುಂಡಾಸು, ಕಾಲತನಕ ಇರುವ ಉದ್ದನೆಯ ಅಂಗಿ, ನಡುವಿಗೆ ಕವಡೆಪಟ್ಟಿ, ಕಾಲಿನಲ್ಲಿ ಗೆಜ್ಜೆ, ಎದೆಯ ಮೇಲೆ ಕತ್ತರಿಯಾಕಾರದ ಕವಡೆಪಟ್ಟಿಯ ನಡುವೆ ದೇವಿಯ ವಿಗ್ರಹ ಇವು ಗೊಂದಲ ಹಾಕುವ ಸಂದರ್ಭದಲ್ಲಿ ಬಳಸುತ್ತಿದ್ದ ವೇಷ ಭೂಷಣಗಳು. ಈಗ ಸಾಮಾನ್ಯವಾಗಿ ದೈನಂದಿನ ವೇಷದಲ್ಲೇ ಕೆಲಸ ನಡೆದು ಹೋಗುತ್ತದೆ. ಕೇವಲ ವಿಶಿಷ್ಟ ಸಂದರ್ಭಗಳಲ್ಲಿ ಮಾತ್ರ ಸಂಪ್ರದಾಯಸ್ಥ ವೇಷದಲ್ಲಿ ಗೊಂದಲ ಹಾಕುತ್ತಾರೆ.

ಗೊಂದಲದಲ್ಲಿ ಭಾಗವಹಿಸುವ ಮೂವರಲ್ಲೂ ಒಂದೊಂದು ವಾದ್ಯ ಇರುತ್ತದೆ. ಸಂಬಾಳ (ಜೋಡಿ ತಬಲ), ಚೌಡಿಕೆ ಹಾಗೂ ಪತ್ತ ಅಥವಾ ತಾಳ. ಪತ್ತ ಹಿಡಿಯುವವನೇ ಮುಖ್ಯ ಕಥೆಗಾರ. ಕೆಲವು ಸಲ ಪತ್ತ ಸಂಬಾಳಕ್ಕೆ ಸೇರಿಕೊಂಡಿರುತ್ತದೆ. ಆಗ ಮುಖ್ಯ ಕಥೆಗಾರನಿಗೆ ಕಥೆ ಹೇಳುವುದೊಂದೇ ಕೆಲಸ. ಗಣಪತಿ ಸ್ತೋತ್ರದಿಂದ ಗೊಂದಲ ಪ್ರಾರಂಭವಾಗುತ್ತದೆ. ದೇವೀಸ್ತೋತ್ರ ಅದನ್ನು ಅನುಸರಿಸುತ್ತದೆ. ಸ್ತೋತ್ರಗಳು ಕನ್ನಡ ಮತ್ತು ಮರಾಠಿ ಭಾಷೆಗಳಲ್ಲಿರುತ್ತವೆ. ಸಂಬಾಳದ ಲಯಬದ್ಧವಾದ ಸದ್ದಿನೊಂದಿಗೆ ತಾಳಕ್ಕೆ ತಕ್ಕಂತೆ ಮೂವರು ವಿಶಿಷ್ಟ ರೀತಿಯಲ್ಲಿ ಮೈಮರೆತು ಕುಣಿಯುತ್ತಾರೆ. ಹಾಡಿನ ಚರಣದ ಕಡೆಯಲ್ಲಿ ಎಳೆಯುವ ದೀರ್ಘ ರಾಗಕ್ಕೆ ಮೂವರೂ ಶಕ್ತಿ ಮೀರಿದ ದನಿಯನ್ನು ಸೇರಿಸುವಾಗ ಚಲನೆ ಸ್ತಬ್ಧವಾಗುತ್ತದೆ. ಈ ಹೊತ್ತಿಗೆ ಅವರು ಯಾವುದೋ ಒಂದು ವಿಶಿಷ್ಟ ಭಂಗಿಯಲ್ಲಿ ನಿಂತಿರುತ್ತಾರೆ. ಆ ದನಿ ಮುಗಿದ ಅನಂತರ ಸಂಬಾಳದ ಎಚ್ಚರದೊಡನೆ ಕ್ರಮಬದ್ಧವಾಗಿ ಕುಣಿತ ಮತ್ತೆ ಪ್ರಾರಂಭವಾಗುತ್ತದೆ. ಸ್ತೋತ್ರಗಳು ಮುಗಿಯುತ್ತಿದ್ದಂತೆ ಚತುರ ಸಂಭಾಷಣೆಯ ಮೂಲಕ ಕಥೆ ಆರಂಭವಾಗಿ ಉದ್ದಕ್ಕೂ ನಾಟಕೀಯವಾಗಿಯೇ ಸಾಗುತ್ತದೆ. ಬೆಳಕು ಹರಿಸಲೇಬೇಕೆಂಬ ನಿಯಮ ಇರುವುದರಿಂದ ಕಥೆಯ ಗಾತ್ರಕ್ಕೆ ತಕ್ಕಂತೆ ನಡುನಡುವೆ ಮನರಂಜನೆಗಾಗಿ ನೀತಿಯನ್ನು ಸಾರುವ ಲಾವಣಿಗಳನ್ನು ಹಾಡಲಾಗುತ್ತದೆ.

ಗೊಂದಲ ಹಾಕುವಾಗ ಹೇಳುವ ಕಥೆಗಳು, ಕಥೆಗಳಿಗೆ ಹೊಂದಿಕೊಂಡು ನಡು ನಡುವೆ ಬರುವ ಹಾಡುಗಳು, ಕೆಲವು ಲಾವಣಿಗಳು, ಮರಾಠಿಯಲ್ಲಿ ಮಾತ್ರ ಸಿಗುವ ಜೋಗುಳದ ಹಾಡುಗಳು, ಹೆಣ್ಣು ಮಕ್ಕಳು ಪಂಚಮಿಯಲ್ಲಿ ಹಾಡುವ ಹಾಡುಗಳು - ಇವನ್ನುಳಿದು ಇವರಲ್ಲಿ ಗಾದೆ, ಒಗಟು, ಶಿಶುಪ್ರಾಸ ಮುಂತಾದ ಯಾವುದೇ ಜನಪದ ಸಾಹಿತ್ಯ ದೊರೆಯುವುದಿಲ್ಲ.

ಗೊಂದಲಿಗರ ಕಥೆಗಳು ಸಾಮಾನ್ಯವಾಗಿ ಸಂಕೀರ್ಣ ಗುಣಗಳನ್ನೊಳಗೊಂಡಿದ್ದು, ಸಂಕೀರ್ಣ ಜನಪದ ಕಥೆಗಳ ವಿಭಾಗಕ್ಕೆ ಸೇರುವಂಥವು. ಬಿಜಾಪುರ ಜಿಲ್ಲೆಯಲ್ಲಿ ಸಂಗ್ರಹಿಸಲಾಗಿರುವ ಗೊಂದಲಿಗರ ಕಥೆಗಳು ಹಾಗೂ ಶಿವಮೊಗ್ಗ ಜಿಲ್ಲೆಯ ಗೊಂದಲಿಗರ ಕಥೆಗಳು ಎಂಬ ಎರಡು ಸಂಕಲನಗಳು ಕನ್ನಡದಲ್ಲಿ ಪ್ರಕಟವಾಗಿವೆ.

ಈಗ ಬಹುಪಾಲು ಗೊಂದಲಿಗರು ಅಲ್ಲಲ್ಲಿ ನೆಲೆ ನಿಂತಿದ್ದಾರೆ. ವ್ಯಾಪಾರ ಮತ್ತು ನೌಕರಿಗಳಲ್ಲಿ ಹೆಚ್ಚು ಜನ ತೊಡಗಿದ್ದಾರೆ. ಅಲ್ಲೊಬ್ಬರು ಇಲ್ಲೊಬ್ಬರು ಒಕ್ಕಲುತನ ಮಾಡುತ್ತಾರೆ. ಕೆಲವು ಮಂದಿ ಇನ್ನೂ ಭಿಕ್ಷಾಟನೆಯಲ್ಲಿ ಜೀವನ ಸಾಗಿಸುತ್ತಿದ್ದಾರೆ. (ಕೆ.ಆರ್.)

**ಗೊಂಬೆಗಳು** : ಆಟಿಕೆಗಳಲ್ಲಿ ಬಹು ಮುಖ್ಯವಾದ ಒಂದು ವಿಭಾಗ. ಗೊಂಬೆಗಳಲ್ಲಿ ಮನುಷ್ಯರ ಆಕೃತಿಗಳಂತೆ ಮೃಗ, ಪಕ್ಷಿ, ಗಿಡಮರಗಳ ಆಕೃತಿಗಳನ್ನೂ ಕಾಣಬಹುದು. ಜನಪದ ಸಾಹಿತ್ಯ ಮತ್ತು ವಸ್ತುಗಳ ಸಂಗ್ರಹ ಕಾರ್ಯ ನಡೆದಂತೆಲ್ಲ ಹಿಂದಿನ ಕಾಲದ ಆಟಿಕೆಗಳನ್ನು ಉತ್ಖನನ ಮಾಡಿ ವಸ್ತುಸಂಗ್ರಹಾಲಯಗಳಲ್ಲಿ ಕೂಡಿಡುತ್ತ ಬರಲಾಗಿದೆ.



ಯಕ್ಷಗಾನದ ಸೂತ್ರದ ಗೊಂಬೆಗಳು

ಗೊಂಬೆಗಳ ತಯಾರಿಕೆ ಭಾರತದ ಒಂದು ಪ್ರಾಚೀನ ಕೈಗಾರಿಕೆ ಎಂಬುದನ್ನು ಐತಿಹಾಸಿಕ ಸಂಶೋಧನೆಗಳು ತೋರಿಸಿಕೊಟ್ಟಿವೆ. ಇತಿಹಾಸ ಪೂರ್ವ ಯುಗಕ್ಕೆ ಸೇರಿದ ಹರಪ್ಪ, ಮೊಹೆಂಜೊದಾರೋಗಳಲ್ಲಿ ದೊರೆತಿರುವ ಆಟದ ಸಾಮಾನುಗಳಲ್ಲಿ ಗೊಂಬೆಗಳಿಗೆ ಒಂದು ವಿಶಿಷ್ಟ ಪ್ರಾಮುಖ್ಯವಿದೆ.

ಭಾರತದ ಸಂಸ್ಕೃತಿಯಲ್ಲಿ ಗೊಂಬೆಗಳಿಗೇ ಒಂದು ಪ್ರಮುಖ ಸ್ಥಾನವಿತ್ತು. ಪ್ರಾಚೀನ ಕಾಲದಲ್ಲಿಯೇ ಭಾರತೀಯರು ಒಂದು ಉನ್ನತ ಸಂಸ್ಕೃತಿಯನ್ನು ಬೆಳೆಸಿಕೊಂಡು ಕಲಾಪೂರ್ಣವಾದ ಜೀವನವನ್ನು ನಡೆಸಿದರು. ಆಧುನಿಕ ಕಾಲದಲ್ಲಿ ಊಹಿಸಲೂ ಆಗದಂಥ ಅದ್ಭುತ ಕಲೆಗಾರಿಕೆ ಆಗಿನ ಗೊಂಬೆಗಳಲ್ಲಿ ಕಾಣಬರುತ್ತದೆ.

ಕರ್ನಾಟಕದ ಜನಪದ ಕಲೆಗಳನ್ನು ತೆಗೆದುಕೊಂಡರೆ ಅಲ್ಲಿ ವಿಶಿಷ್ಟವಾದ ಗೊಂಬೆಗಳನ್ನು ಗಮನಿಸಬಹುದಾಗಿದೆ. ತೊಗಲು ಬೊಂಬೆಗಳು, ಸೂತ್ರದ ಗೊಂಬೆಗಳು, ಕೀಲುಗೊಂಬೆಗಳು - ಇವು ಮುಖ್ಯವಾದವು. ಕಿಳ್ಳೇಕ್ಯಾತರ ತೊಗಲ ಗೊಂಬೆಗಳ ಆಟ ಅತಿ ಪ್ರಾಚೀನ ಕಾಲದಿಂದ ಬೆಳೆದುಬಂದ ಕಲೆ. ಈ ಕಲೆ ಭಾರತದ ಒಳಗೂ ಹೊರಗೂ ಪ್ರಚಾರದಲ್ಲಿದೆ. ಇದು ಮಹಾರಾಷ್ಟ್ರದಲ್ಲಿ ಪ್ರಾರಂಭವಾಯಿತೆಂದು ತಿಳಿದುಬರುತ್ತದೆ. ಅಲ್ಲಿಂದ ಇದು ಕರ್ನಾಟಕ, ಆಂಧ್ರದ ರಾಯಲಸೀಮೆ ಮತ್ತು ತಮಿಳುನಾಡುಗಳಿಗೆ ಪಸರಿಸಿತು.

ಈ ಗೊಂಬೆಗಳ ರಚನೆ ವಿಶಿಷ್ಟವಾದುದು. ಹುಲ್ಲೆಯ ಕರು ಇಲ್ಲವೆ ಎಳೆಯ ಆಡುಗಳ ಹದಮಾಡಿದ ಚರ್ಮದಿಂದ ಇವನ್ನು ಮಾಡುತ್ತಾರೆ. ಇವನ್ನು ಗೊಂಬೆರಾಮರು ಪೂಜಾವಸ್ತುಗಳೆಂದೇ ತಿಳಿದು ಪೂಜಿಸುತ್ತಾರೆ (ನೋಡಿ: ತೊಗಲು ಗೊಂಬೆ ಆಟ).

ಸೂತ್ರದ ಗೊಂಬೆ (ಪುತಲಿ ಗೊಂಬೆ) ಆಟವೂ ಬಹಳ ಹಿಂದಿನಿಂದಲೂ ಬೆಳೆದು ಬಂದ ಒಂದು ಅಪೂರ್ವ ಜನಪದ ಕಲೆ. ಈ

ಆಟ ತೊಗಲು ಗೊಂಬೆಯಾಟದಿಂದ ಕೆಲವು ರೀತಿಯಲ್ಲಿ ಬೇರೆಯಾಗಿದೆ. ಈ ಗೊಂಬೆಗಳು ಮರದಲ್ಲಿ ತಯಾರಾದವು (ನೋಡಿ: ಸೂತ್ರದ ಬೊಂಬೆಯಾಟ). ಪ್ರಪಂಚದ ಎಲ್ಲೆಡೆಯೂ ಸೂತ್ರದ ಬೊಂಬೆ ಆಟ ಇದ್ದಂತೆ ತೋರುತ್ತದೆ. ಗ್ರೀಕರು ಈ ಆಟಗಳಿಂದ ಮನರಂಜನೆ ಪಡೆಯುತ್ತಿದ್ದರು. ಚೀನ, ಇಂಗ್ಲೆಂಡ್‌ಗಳಲ್ಲೂ ಈ ಕಲೆ ಇತ್ತೆಂದು ಹೇಳಲಾಗಿದೆ. ಫ್ರಾನ್ಸ್‌ನಲ್ಲಿ ಈಗಲೂ ಈ ಆಟಗಳನ್ನು ನಡೆಸಲಾಗುತ್ತಿದೆ. ಅಮೆರಿಕ, ಲ್ಯಾಟಿನ್ ಅಮೆರಿಕ ಭಾಗಗಳಲ್ಲಿ ಇಟಲಿ ಜನ ಆಗಾಗ ಹೋಗಿ ಈ ಆಟ ಪ್ರದರ್ಶಿಸಿ ಬರುವುದುಂಟು. ಭಾರತದಲ್ಲಿ ಈ ಆಟಕ್ಕೆ ಹಿಂದಿದ್ದ ಪುರಸ್ಕಾರ ಈಗ ದೊರಕದ ಕಾರಣ ಈ ಕಲೆ ಕ್ಷೀಣ ದೆಸೆಯಲ್ಲಿದೆ.



ಚನ್ನಪಟ್ಟಣ್ಣದ ಗೊಂಬೆಗಳು

ಗೌರಿಗೊಂಬೆಗಳೂ ದಸರ ಗೊಂಬೆಗಳೂ ಭಾರತದಲ್ಲಿ ಈಗಲೂ ಅನೇಕ ನಗರಗಳ, ಪಟ್ಟಣಗಳ, ಗ್ರಾಮಗಳ ಮನೆಮನೆಗಳಲ್ಲಿ ಉಳಿದು ಬಂದಿವೆ. ಹಬ್ಬಗಳಲ್ಲಿ ಅವನ್ನು ಓರಣವಾಗಿ ಕೂರಿಸಿ ಪೂಜಿಸುವುದು ಮುಂದುವರಿದಿದೆ. ಈ ಗೊಂಬೆಗಳನ್ನು ಮರದ ಹೊಟ್ಟಿನಲ್ಲಿ ಇಲ್ಲವೆ ಜೇಡಿಮಣ್ಣಿನಿಂದ ಮಾಡಿರುತ್ತಾರೆ. ಚಂದನದ ಬೊಂಬೆಗಳೂ ಉಂಟು. ಈ ಗೊಂಬೆಗಳಿಗೆ ಬಟ್ಟೆ, ಆಭರಣಗಳನ್ನು ಜೋಡಿಸಿ ಅಲಂಕರಿಸಿ ಸುತ್ತಾರೆ. ದಸರೆಯ ಗೊಂಬೆ ಪ್ರದರ್ಶನ ಮನೆಯವರಿಗೊಂದು ಕಲಾ ಪ್ರದರ್ಶನಾವಕಾಶವನ್ನು ಒದಗಿಸುತ್ತದೆ. ಜೊತೆಗೆ ಗೊಂಬೆಗಳ ಎದುರು ಹೆಣ್ಣುಮಕ್ಕಳು ಕೋಲಾಟವಾಡುವ ಸಂಪ್ರದಾಯ ಹಿಂದಿನಿಂದ ನಡೆದು ಬಂದಿದೆ.

ಗ್ರಾಮಗಳಿಂದ ಗ್ರಾಮಗಳಿಗೆ ಸಾಗುವ ಮಾರಮ್ಮ, ಉಡುಗೋಲಜ್ಜಿಗಳ ಮರದ ವಿಗ್ರಹಗಳನ್ನು ಇಂದಿಗೂ ನೋಡಬಹುದಾಗಿದೆ. ಒಂದು ಊರಿನ ಗಡಿಯಿಂದ ಮತ್ತೊಂದು ಊರಿನ ಗಡಿಗೆ ಮಾರಮ್ಮನ ವಿಗ್ರಹವನ್ನು ಆಯಾ ಊರಿನ ಜನ ಸಾಗಿಸಿಕೊಂಡು ಹೋಗುತ್ತಾರೆ. ಹೀಗೆ ನೂರಾರು ಮೈಲಿಗಳ ಆಚೆ ಪ್ರಯಾಣ ಬೆಳೆಸಿ ಕೊನೆಗೆ ಸಮುದ್ರದಲ್ಲೊ ಕೆರೆಯಲ್ಲೊ ಅದನ್ನು ವಿಸರ್ಜನೆ ಮಾಡುತ್ತಾರೆ. ಊರಿಗೆ ಬರುವಂಥ ಪ್ಲೇಗು, ಕಾಲರ ಮುಂತಾದ ರೋಗ ರುಜಿನಗಳು ಸಾಮೂಹಿಕವಾಗಿ ಈ ದೇವತೆಯ ಮೂಲಕವಾಗಿ ಸಾಗಿ ಹೋಗಲಿ ಎಂಬರ್ಥದಲ್ಲಿ ಈ ದೈವವನ್ನು ರಚಿಸಿ, ಪೂಜಿಸಿ, ಸಾಗಿಸುವ ಜನಪದ ನಂಬಿಕೆ ಕರ್ನಾಟಕದಲ್ಲಿ ಬಹಳ ಹಿಂದಿನಿಂದಲೂ ಬೆಳೆದು ಬಂದಿದೆ.

ಗ್ರಾಮಗಳ ದೇವಾಲಯಗಳಲ್ಲಿ ತಲೆಭೂತ ಕೈಭೂತ ಸೋಮ ಮುಂತಾದ ದೈವದ ಮೂರ್ತಿಗಳನ್ನು ಕಾಣಬಹುದಾಗಿದೆ. ಆಯಾ ಗ್ರಾಮಗಳಲ್ಲಿ ಇರುವ ಕುಶಲ ಕರ್ಮಿಗಳು ಇವನ್ನು ಬಹಳ ಕಲಾತ್ಮಕವಾಗಿ ರಚಿಸಿಕೊಡುತ್ತಾರೆ. ಸಿರಿಯಾಳ ಷಷ್ಠಿ, ಗೋಕುಲಾಷ್ಟಮಿ, ಗಣಪತಿ ಮಹೋತ್ಸವ ಮೊದಲಾದ ಹಬ್ಬಗಳಲ್ಲಿ ಮನೆಯವರೇ ಎರೆಯ ಮಣ್ಣಿನಿಂದ ಆಯಾ ವಿಗ್ರಹಗಳನ್ನು ಮಾಡುವ ಹವ್ಯಾಸ ಇನ್ನೂ ಅನೇಕ ಕಡೆ ಉಳಿದು ಬಂದಿದೆ. ರಥೋತ್ಸವ ಮತ್ತು ಜಾತ್ರೆಗಳ ಸಮಯದಲ್ಲಿ ಹಳ್ಳಿಯ ಕಸಬುದಾರರು ಬೊಂಬೆಗಳನ್ನು ಮಾಡಿ ಬಣ್ಣ ಕಟ್ಟಿ ಮಾರಾಟಕ್ಕೆ ಇಡುವುದನ್ನು ಇಲ್ಲಿ ನೆನೆಯಬಹುದು. ಬಹುಮಟ್ಟಿನ ಹಳ್ಳಿಯ ಮಕ್ಕಳಿಗೆ ಇಲ್ಲಿ ಸಿಗುವ ರಾಟೆ, ಕಿಸಗಾಲು ಗೊಂಬೆ, ಅಂಬೆಗಾಲು ಕೃಷ್ಣ, ಪೀಪಿ, ಕುದುರೆ, ಗಿಣಿ, ಗುಬ್ಬಿ, ರಾಜ, ರಾಣಿ - ಈ ವಸ್ತುಗಳೇ ಬಹು ಪ್ರಿಯವಾದ ಆಟದ ಸಾಮಾನುಗಳು.

ಈಚೆಗೆ ಬಿದಿರ ಬೊಂಬಿನಿಂದ, ಅರಗಿನಿಂದ, ಬಟ್ಟೆಗಳಿಂದ, ಕಪ್ಪೆಚಿಪ್ಪಿನಿಂದ ನಾನಾ ನಮೂನೆಯ ಗೊಂಬೆಗಳನ್ನು ರಚಿಸಲಾಗುತ್ತಿದೆ. ಭಾರತದ ಸರ್ಕಾರ ಈ ಗೊಂಬೆ ಕಲೆಯ ಉಳಿವಿಗೆ ಬಹಳ ಪ್ರೋತ್ಸಾಹ ನೀಡಿ ನೆರವಾಗುತ್ತಿದೆ.

ವಿಜ್ಞಾನ ಬೆಳೆದಂತೆಲ್ಲ ಕೈಕೆಲಸ ಹಿಂದಾಗಿ ಯಂತ್ರಗಳು ಪ್ರಾಮುಖ್ಯಕ್ಕೆ ಬರುತ್ತಿವೆಯಷ್ಟೆ. ಅದರ ಪರಿಣಾಮವಾಗಿ ಪ್ಲಾಸ್ಟಿಕ್, ರಬ್ಬರ್ ಮೊದಲಾದವನ್ನು ಬಳಸಿಕೊಂಡು ಯಂತ್ರದಿಂದ ತಯಾರಿಸಿದ ಬಹು ಮುದ್ದಾದ ಗೊಂಬೆಗಳು ಈಗ ಜನಪ್ರಿಯವಾಗುತ್ತಿವೆ. ಕರ್ನಾಟಕ ದಲ್ಲಿ ಚನ್ನಪಟ್ಟಣದ ಬೊಂಬೆಗಳು ಅತ್ಯಂತ ಪ್ರಸಿದ್ಧವಾಗಿವೆ. (ನೋಡಿ: ಚನ್ನಪಟ್ಟಣ). *

**ಗೊಗ್ಗಯ್ಯ :** ಉತ್ತರ ಕರ್ನಾಟಕದಲ್ಲಿ ಕಂಡುಬರುವ ಧಾರ್ಮಿಕ ವೃತ್ತಿಗಾಯಕರು. ಮೈಲಾರಲಿಂಗದೇವರ ಸೇವಕರು ಹಾಗೂ ಸಂನ್ಯಾಸಿಗಳು. ಬೆಳಗಾಂವಿ ಜಿಲ್ಲೆಯಲ್ಲಿ ಇವರನ್ನು ಒಗ್ಗಯ್ಯ (ವಗ್ಗಯ್ಯ) ಎಂದೂ ಧಾರವಾಡ ಜಿಲ್ಲೆಯಲ್ಲಿ ಗೊರವ, ಗೊರವಪ್ಪ, ಗೋರಪ್ಪ ಎಂದೂ ಕರೆಯುತ್ತಾರೆ. ಮಹಾರಾಷ್ಟ್ರದಲ್ಲಿ ಇವರನ್ನು ವಾಘ್ಯಾ - ಮುರಳಿ ಎಂದು ಕರೆಯುವರು. ಗೊಗ್ಗಯ್ಯ ಎಂಬ ಶಬ್ದ ಗುರು (ಗೊರವ) ಶಬ್ದದಿಂದ ಬಂದಿದ್ದು ಇದಕ್ಕೆ ಅರ್ಪಿಸಿಕೊಂಡವನು, ಜೀವದಾಸ ಎಂಬ ಅರ್ಥಗಳಿರುವಂತೆ ತಿಳಿಯುತ್ತದೆ.

ಕುರುಬ ಸಮುದಾಯದವರಲ್ಲಿ ಗೊಗ್ಗಯ್ಯಗಳು ಹೆಚ್ಚು. ಲಿಂಗಾಯತರು ಮತ್ತು ಕ್ಷತ್ರಿಯರಲ್ಲಿ ಗೊಗ್ಗಯ್ಯಗಳಿದ್ದರೂ ಇವರ ಸಂಖ್ಯೆ ಕಡಿಮೆ. ಪ್ರತಿಯೊಬ್ಬ ಗೊಗ್ಗಯ್ಯನೂ ದೀಕ್ಷೆ ಹೊಂದಿದವನಾಗಿರುತ್ತಾನೆ.



ಗೊಗ್ಗಯ್ಯಗಳ ಗುಂಪು

ಕೆಲವರು ಮಲ್ಲಾರಿಗೆ ಬೇಡಿಕೊಂಡು ಹೆತ್ತ ಹಿರಿಯ ಮಗನನ್ನು ಗೊಗ್ಗಯ್ಯನನ್ನಾಗಿ ಬಿಡುವುದುಂಟು. ಗೊಗ್ಗಯ್ಯಗಳಲ್ಲಿ ಸಂಸಾರಿಗಳೂ ಆಜನ್ಮಬ್ರಹ್ಮಚಾರಿಗಳೂ ಇದ್ದಾರೆ.

ಗೊಗ್ಗಯ್ಯಗಳಿಗೆ ವಿಶಿಷ್ಟವಾದ ವೇಷವಿದೆ. ಕರಿಯ ಕಂಬಳಿಯಿಂದ ಹೊಲೆದು ಮಾಡಿದ ಉದ್ದನೆಯ ತೋಳುಗಳುಳ್ಳ ನಿಲುವಂಗಿ ತೊಡುತ್ತಾರೆ. ಈ ನಿಲುವಂಗಿಯ ಎದೆ ಮತ್ತು ಬೆನ್ನ ಮೇಲೆ ಸೂರ್ಯಚಂದ್ರರ ಹಾಗೂ ತಾರೆಗಳ ಚಿತ್ರಗಳನ್ನು ಕಲಾತ್ಮಕವಾಗಿ ಬಿಡಿಸಿರುತ್ತಾರೆ. ಕೊರಳಲ್ಲಿ ತೂಗುಹಾಕಿಕೊಳ್ಳಲು ಸಹಾಯಕವಾಗುವಂತೆ ಹುಲಿಯ ಚರ್ಮದಿಂದ ಮಾಡಿದ ಭಂಡಾರದ ಚೀಲವಿರುತ್ತದೆ. ಕೆಲವರು ಕೊರಳಿಗೆ ಕವಡೆಯ ಸರವನ್ನು ತೂಗುಹಾಕಿಕೊಂಡಿರುವುದುಂಟು. ಜೊತೆಗೆ ಕಂಚಿನ ದೋಣಿಯನ್ನೂ (ಭಿಕ್ಷಾಪಾತ್ರೆ) ಬಗಲಿಗೆ ತೂಗುಹಾಕಿಕೊಂಡಿರುತ್ತಾರೆ (ಎಲ್ಲಿಯೇ ಹೋದರೂ ಇವರಿಗೆ ಈ ದೋಣಿಯಲ್ಲೆ ಊಟ ಆಗಬೇಕು). ಇವುಗಳ ಜೊತೆಗೆ ಧೋತರ, ಉದ್ದನೆಯ ಒಳಅಂಗಿ, ತಲೆಗೆ ರುಮಾಲು, ಅದರ ಮೇಲೆ ಉಣ್ಣೆಯ ಸಣ್ಣ ಪೇಟಾ ಇರುತ್ತವೆ. ಹಣೆಗೆ ಸದಾ ಭಂಡಾರ ಹಚ್ಚಿರುತ್ತಾರೆ. ಕೈಯಲ್ಲಿ ಗಂಟೆ, ತ್ರಿಶೂಲ, ದೀವಟಿಗೆ, ಸರ್ಪದ ಆಕಾರದ ಕಟ್ಟಿಗೆ (ಕೋಲು) ಹಿಡಿಯುವುದುಂಟು. ಭಿಕ್ಷಾಟನೆಯ ವೇಳೆಯಲ್ಲಿ ಇವರು ಕಾಲಲ್ಲಿ ಏನನ್ನೂ ಮೆಟ್ಟುವುದಿಲ್ಲ. ಈ ವೇಳೆಯಲ್ಲಿ ಭಿಕ್ಷಾಟನೆಯೊಂದಿಗೆ ಶಿವನ ಅವತಾರ ಹೇಳುವುದು, ಹಾಡು ಹಾಡುವುದು, ಹರತ್ ಮಲ್ಲಯ್ಯ ಪರುತ್ ಮಲ್ಲಯ್ಯ ಎಂದು ಕೂಗುವುದು ಮೈಲಾರ, ಮೈಲಾರಲಿಂಗ, ಮೈಲಾರದೇವರು, ಮಲ್ಲಾರಿ, ಮಾರ್ತಾಂಡ, ಭೈರವ, ಖಂಡೋಬಾ, ಮಲ್ಲಿಕಾರ್ಜುನ, ಮುಂತಾದ ಹೆಸರುಗಳಿಂದ ಸ್ತುತಿಸುವುದು - ಈ ಮುಂತಾದ ಕಾರ್ಯ ನಡೆಯುತ್ತದೆ.

ಮಲ್ಲಾಸುರನನ್ನು ಕೊಂದು ಶಿವ ಮಲ್ಲಾರಿಯಾದುದು ಗೊಗ್ಗಯ್ಯಗಳು ಹೇಳುವ ಮತ್ತು ಹಾಡುವ ಮುಖ್ಯ ಕಥೆ. ಹಾಡುವುದಲ್ಲದೆ ಇವರು ಮಲ್ಲಯ್ಯನ ನೃತ್ಯ ಎಂಬ ಒಂದು ಬಗೆಯ ನೃತ್ಯವನ್ನೂ ಮಾಡುತ್ತಾರೆ. ಇದು ಶಿವನ ತಾಂಡವನೃತ್ಯದಂತೆ ರೌದ್ರವಾಗಿರುತ್ತದೆ. ಕೆಲವು ಕಡೆ ಈ ನೃತ್ಯವನ್ನು ಒಗ್ಗಯ್ಯಗಳ ಕಾದಾಟ ಎಂದು ಕರೆಯುತ್ತಾರೆ. ಕಾದಾಟದಲ್ಲಿ ಏಳಕೋಟಿ ಏಳಕೋಟಿ ಎಂಬ ಧ್ವನಿಯನ್ನು ಮಾಡಿ ಗೊಗ್ಗಯ್ಯಗಳು ಹಾಡುವುದು ಕೂಗುವುದು ಉಂಟು. ನೃತ್ಯದ ಮಧ್ಯದಲ್ಲಿ ವೀರಾವೇಶದಿಂದ ಕಬ್ಬಿಣದ ಸರಪಳಿಯನ್ನು ಹರಿಯುತ್ತಾರೆ; ಮತ್ತೆ ಅದನ್ನು ಕೂಡಿಸುತ್ತಾರೆ. ಮದುವೆ ಹಾಗೂ ಇನ್ನಿತರ ಮಂಗಳಕಾರ್ಯಗಳಲ್ಲಿ ರಾತ್ರಿ ವೇಳೆ ಈ ನೃತ್ಯದ ಏರ್ಪಾಟಿರುತ್ತದೆ. ಇಂಥ' ಪ್ರದರ್ಶನಗಳಿಂದ ಗೊಗ್ಗಯ್ಯಗಳಿಗೆ ಹೆಚ್ಚಿನ ಕಾಣಿಕೆ ದೊರೆಯುತ್ತದೆ.

ಮಲ್ಲಾರಿಯ ಕ್ಷೇತ್ರಕ್ಕೆ ಮೈಲಾರ ಕ್ಷೇತ್ರವೆಂದು ಕರೆಯುತ್ತಾರೆ. ಕರ್ನಾಟಕದಲ್ಲಿ ಆನೆಗೊಂದಿ (ಕೊಪ್ಪಳ ಜಿಲ್ಲೆ), ಕಾರಿಮನಿ, ಮಂಗಸೂಳಿ (ಬೆಳಗಾಂವಿ ಜಿಲ್ಲೆ), ಕುಬಟೂರು (ಶಿವಮೊಗ್ಗ ಜಿಲ್ಲೆ), ದೇವರಗುಡ್ಡ (ಹಾವೇರಿ ಜಿಲ್ಲೆ), ಮೈಲಾರಲಿಂಗ (ದೇವೀಹೊಸೂರ), ಮೈಲಾರ (ಬಳ್ಳಾರಿ ಜಿಲ್ಲೆ), ಮೈಲಾಪುರ (ಬೀದರ್ ಜಿಲ್ಲೆ) ಮುಂತಾದ ಕಡೆಗಳಲ್ಲಿ ಇಂಥ ಕ್ಷೇತ್ರಗಳಿವೆ. ಪ್ರತಿ ಕ್ಷೇತ್ರದಲ್ಲೂ ಗೊಗ್ಗಯ್ಯಗಳಿದ್ದಾರೆ. ಇವರಿಗೆ ಆಯಾ ಕ್ಷೇತ್ರದಲ್ಲಿ ನಿಶ್ಚಿತವಾದ ಊರುಗಳನ್ನೂ ಮನೆತನಗಳನ್ನೂ ಗೊತ್ತುಮಾಡಿರುತ್ತಾರೆ. ಪ್ರತಿವರ್ಷ ಆಯಾ ಊರು ಮನೆಗಳಿಗೆ ಹೋಗಿ ಗೊಗ್ಗಯ್ಯಗಳು ಭಿಕ್ಷೆ ತರುತ್ತಾರೆ. (ಎನ್.ಎನ್.ಎಸ್.)

**ಗೊಮ್ಮಟೇಶ್ವರ :** ಆದಿತೀರ್ಥಂಕರ ವೃಷಭನಾಥನ (ಪುರದೇವ) ಕಿರಿಯ ಮಗ. ಭರತನ ತಮ್ಮ. ಬಾಹುಬಲಿ ಪರ್ಯಾಯನಾಮ. ಭುಜಬಲಿ, ಕುಕ್ಕುಟೇಶ್ವರ ಇತರ ಹೆಸರುಗಳು.

ಬಾಹುಬಲಿಯ ಬಗ್ಗೆ ಜೈನ ಪರಂಪರೆಯಲ್ಲಿ ಬರುವ ಕಥೆ ಈ ರೀತಿ ಇದೆ. ಆದಿತೀರ್ಥಂಕರ ಸಂಸಾರದ ಅಸಾರತೆಯನ್ನು ಕಂಡು ತಪಸ್ಸಿಗೆ ಹೊರಡುವ ಮುನ್ನ ಹಿರಿಯ ಮಗ ಭರತನಿಗೆ ರಾಜ್ಯಾಭಿಷೇಕಮಾಡಿ ಬಾಹುಬಲಿ ಮತ್ತು ಅವನ ತಮ್ಮಂದಿರಿಗೆ ಬೇರೆ ಬೇರೆ ರಾಜ್ಯಗಳನ್ನು ಕೊಟ್ಟ. ಬಾಹುಬಲಿಗೆ ಪೌದನಪುರದ ರಾಜ್ಯ ಪ್ರಾಪ್ತವಾಯಿತು. ಹೀಗಿರುವಲ್ಲಿ ಭರತ ತನ್ನ ಭಂಡಾರದಲ್ಲಿ ಉದಯಿಸಿದ ಚಕ್ರರತ್ನವನ್ನು ಮುಂದಿಟ್ಟುಕೊಂಡು ಸಮಸ್ತ ಭೂಮಂಡಲವನ್ನೂ ಗೆದ್ದು ಚಕ್ರವರ್ತಿಯಾಗಿ ಹಿಂದಿರುಗಿದಾಗ ಅವನ ತಮ್ಮಂದಿರೇ ಅವನಿಗೆ ಇನ್ನೂ ವಶವಾಗದುದನ್ನು ಕಂಡು ಅವರಿಗೆ ನಿರೂಪವನ್ನು ಕಳುಹಿಸಿದ. ಆದರೆ ಅವರೆಲ್ಲರೂ ಅವನಿಗೆ ವಶವಾಗದೆ ರಾಜ್ಯವನ್ನು ಬಿಟ್ಟು ತಪೋನಿರತರಾದರು. ಸ್ವಾಭಿಮಾನಿಯಾದ ಬಾಹುಬಲಿಯಾದರೋ ತಂದೆ ಕೊಟ್ಟ ರಾಜ್ಯದಲ್ಲಿ ತಾನಿರುವುದಾದ್ದರಿಂದ ಭರತ ಯುದ್ಧದಲ್ಲಿ ಸೋಲಿಸಿ ಬೇಕಾದರೆ ಆ ರಾಜ್ಯವನ್ನು ಪಡೆದುಕೊಳ್ಳಬಹುದೆಂದು ತಿಳಿಸಿದ. ಅಂತೆಯೇ ಇಬ್ಬರಿಗೂ ದ್ವಂದ್ವಯುದ್ಧ ನಡೆದು, ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧ ಈ ಮೂರರಲ್ಲಿಯೂ ಬಾಹುಬಲಿಯೇ ಗೆದ್ದ.



ಶ್ರವಣಬೆಳಗೊಳದ ಗೊಮ್ಮಟೇಶ್ವರ

ಇದರಿಂದ ಕುಪಿತನಾದ ಭರತ ನ್ಯಾಯಾನ್ಯಾಯವನ್ನು ವಿವೇಚಿಸದೆ ಬಾಹುಬಲಿಯ ಮೇಲೆ ಚಕ್ರರತ್ನವನ್ನು ಪ್ರಯೋಗಿಸಿದ. ಆದರೆ ಬಾಹುಬಲಿಗೆ ಇದರಿಂದ ಏನೂ ಆಗಲಿಲ್ಲ. ಕೊನೆಗೆ ಭರತ ಸೋತ. ಬಾಹುಬಲಿ ಗೆದ್ದರೂ ತನ್ನ ಅಣ್ಣನನ್ನು ಸೋಲಿಸಿ ರಾಜ್ಯವನ್ನು ಆಕ್ರಮಿಸಿಕೊಳ್ಳುವುದಕ್ಕಿಂತ ಸಂಸಾರವನ್ನು ತ್ಯಜಿಸುವುದು ಲೇಸೆಂದು ಬಗೆದು ತಾನು ಆಗತಾನೇ ಗೆದ್ದಿದ್ದ ಚಕ್ರಾಧಿಪತ್ಯವನ್ನೂ ತನ್ನ ರಾಜ್ಯವನ್ನೂ ಭರತನಿಗೊಪ್ಪಿಸಿ ಘೋರವಾದ ತಪಸ್ಸಿನಲ್ಲಿ ನಿರತನಾದ. ಹೀಗೆ ನಿಶ್ಚಲನಾಗಿ ಪ್ರತಿಮಾಯೋಗದಿಂದ ಕಠಿಣ ತಪೋನಿರತನಾಗಿ ನಿಂತ ಬಾಹುಬಲಿಯ ಸುತ್ತಲೂ ಹುತ್ತ ಬೆಳೆದು ಬಳ್ಳಿಗಳು ಇವನ ದೇಹವನ್ನು ಆವರಿಸಿದುವು. ಕುಕ್ಕುಟ ಸರ್ಪಗಳು ಹರಿದಾಡಲಾರಂಭಿಸಿದವು. ತಾನು ಕೊಟ್ಟ ಭೂಮಿಯಲ್ಲಿಯೇ ತಪಸ್ಸಿಗೆ ನಿಲ್ಲಬೇಕಾಯಿತಲ್ಲ ಎನ್ನುವ ಒಂದು ಅಭಿಮಾನ ಅವನಲ್ಲಿ ಬಾಧಿಸುತ್ತಿದ್ದುದರಿಂದ ಇಷ್ಟು ಘೋರ ತಪಸ್ಸಿನಲ್ಲಿದ್ದರೂ ಬಾಹುಬಲಿಗೆ ಕೇವಲಜ್ಞಾನ ಲಭಿಸಲಿಲ್ಲ. ಅನಂತರ ಭರತನೇ ಅವನ ಕಾಲಿಗೆರಗಿ ಆ ಮನಃ ಕಷಾಯವನ್ನು ಬಿಡುವಂತೆ ಬೇಡಿಕೊಂಡಾಗ ಕೇವಲಜ್ಞಾನ ಉಂಟಾಯಿತು. ಕೇವಲಿಯಾದ ಈತನ ಪ್ರತಿಮೆಯನ್ನು ಭರತ ಪೌದನಪುರದಲ್ಲಿ ಪ್ರತಿಷ್ಠಾಪಿಸಿದ.

ಬಾಹುಬಲಿಯ ಕಲ್ಪನೆ ಕರ್ನಾಟಕದಲ್ಲಿ ಬಹು ಜನಪ್ರಿಯವಾಗಿದೆ. ಅನೇಕ ಜೈನಕವಿಗಳು ಈ ಕಥೆಯನ್ನೂ ಬಾಹುಬಲಿಯದೆ ಹಿರಿಯ

ಗುಣಗಳನ್ನೂ ತಮ್ಮ ಕೃತಿಗಳಲ್ಲಿ ಅಳವಡಿಸಿದ್ದಾರೆ. ಇವನ ಅತಿಶಯವಾದ ಗುಣಗಳನ್ನು ಕವಿ ಬೊಪ್ಪಣ ಪಂಡಿತ ಹೀಗೆ ವರ್ಣಿಸಿದ್ದಾನೆ:

ಅನುಪಮರೂಪನೇ ಸ್ಮರನುದಗ್ರನೆ ನಿರ್ಜಿತಚಕ್ರಿ ಮತ್ತುದಾ
ರನೆ ನೆಲೆಗೆಲ್ದುಮಿತ್ತನಖಿಳೋರ್ವಿಯನತ್ಯಭಿಮಾನಿಯೇ ತಪಃ
ಸ್ಥನುಮೆರಡಂಘ್ರಿಯಿತ್ತೆಳೆಯೊಳಿರ್ದಪುದೆಂಬನನೂನಬೋಧನೇ
ವಿನಿಹತಕರ್ಮಬಂಧನನೆ ಬಾಹುಬಲೀಶನಿದೇನುದಾತ್ತನೋ

ಬಾಹುಬಲಿಗಿರುವ ಗೊಮ್ಮಟೇಶ್ವರ ಎಂಬ ಪರ್ಯಾಯ ನಾಮವೂ ಕರ್ನಾಟಕದ ಕಾಣಿಕೆಯೆಂದೇ ಕಾಣುತ್ತದೆ. ಗೊಮ್ಮಟ ಎಂದರೆ ಸುಂದರ ಎಂದು ಅರ್ಥ. ಸುಂದರಕಾಯನಾಗಿದ್ದ ಬಾಹುಬಲಿಗೆ ಮನ್ಮಥ ಎಂಬ ಹೆಸರೂ ಇತ್ತು. ಮನ್ಮಥ ಎಂಬ ಪದದ ತದ್ಭವವೇ ಗೊಮ್ಮಟ ಎಂದು ಒಂದು ಅಭಿಪ್ರಾಯ. ಶ್ರವಣಬೆಳಗೊಳದ ಮೂರ್ತಿಯ ನಿರ್ಮಾಣದ ಕಾಲಕ್ಕಿಂತ ಮುಂಚೆ ಬಾಹುಬಲಿಗೆ ಎಲ್ಲಿಯೂ ಗೊಮ್ಮಟನೆಂಬ ಹೆಸರು ಕಾಣಿಸದೆಂದೂ ಶ್ರವಣಬೆಳಗೊಳದ ಮೂರ್ತಿಯ ನಿರ್ಮಾಣಕ್ಕೆ ಕಾರಣನಾದ ಚಾಮುಂಡರಾಯನಿಗೆ ಗೊಮ್ಮಟನೆಂಬ ಹೆಸರಿದ್ದು ಆತ ಪ್ರತಿಷ್ಠಾಪಿಸಿದ ಬಾಹುಬಲಿ ಮೂರ್ತಿಗೆ ಗೊಮ್ಮಟೇಶ್ವರನೆಂಬ ಹೆಸರು ಅನಂತರ ಬಂದಿದೆ ಎಂಬುದು ಇನ್ನೊಂದು ಅಭಿಪ್ರಾಯ. ಅದು ಹೇಗಿದ್ದರೂ ಬಾಹುಬಲಿಯ ಮೂರ್ತಿಗಳು ಎಲ್ಲಿದ್ದರೂ ಅವಕ್ಕೆಲ್ಲ ಈಗ ಗೊಮ್ಮಟೇಶ್ವರ ಎಂಬ ಹೆಸರೇ ಸಿದ್ಧವಾಗಿದೆ.

ಗೊಮ್ಮಟೇಶ್ವರನ ಮೂರ್ತಿಗಳನ್ನು ಸ್ಥಾಪಿಸುವುದರಲ್ಲಿ ಕರ್ನಾಟಕ ಹೆಚ್ಚು ಉತ್ಸುಕತೆಯನ್ನು ತೋರಿದೆ. ಉತ್ತರ ಭಾರತ ಮತ್ತಿತರೆಡೆಗಳಲ್ಲಿ ಬಾಹುಬಲಿಯ ಮೂರ್ತಿ ಗವಿಗಳಲ್ಲೋ ಬಸದಿಗಳಲ್ಲೋ ಹಲವು ಶಿಲ್ಪಗಳ ಜೊತೆಯಲ್ಲಿ ಸಾಮಾನ್ಯ ರೀತಿಯಲ್ಲಿ ಅಲ್ಪಸಂಖ್ಯೆಯಲ್ಲಿ ಕಂಡುಬಂದರೆ ಕರ್ನಾಟಕದಲ್ಲಿ ಇದರ ನಿರೂಪಣೆ ಗಮನಾರ್ಹ ರೀತಿಯಲ್ಲಿ ಕಾಣುತ್ತದೆ. ಬೆಟ್ಟಗಳ ಮೇಲೆ ಎತ್ತರದ ಗೊಮ್ಮಟೇಶ್ವರ ವಿಗ್ರಹಗಳನ್ನು ಸ್ಥಾಪಿಸಿರುವುದಂತೂ ಕರ್ನಾಟಕದ ಒಂದು ವೈಶಿಷ್ಟ್ಯ.

ಬಾಹುಬಲಿ ಮೂರ್ತಿಯ ಪ್ರತಿಷ್ಠಾಪನೆಯ ಮೊದಲ ಉಲ್ಲೇಖ ಕದಂಬ ರವಿವರ್ಮನ ಗುಡ್ನಾಪುರ ಶಾಸನದಲ್ಲಿದೆ (ಸು.500). ಆ ಶಾಸನದಲ್ಲಿ ಗೊಮ್ಮಟೇಶ್ವರ ಎಂಬ ಹೆಸರಿಲ್ಲ. ಆದರೆ ಅದು ಮನ್ಮಥ'ದೇವಾಲಯದ ಸ್ಥಾಪನೆಯನ್ನು ತಿಳಿಸಿ ಮುಂದೆ ಅದನ್ನೇ ಕಾಮಜಿನಾಲಯ ಎಂದು ಕರೆಯಲಾಗಿರುವುದರಿಂದ ಅದು ಗೊಮ್ಮಟನ ದೇವಾಲಯವಿರಬೇಕೆಂಬ ಸೂಚನೆಯಿದೆ.

ಭಾರತದಲ್ಲಿ ಇದುವರೆಗೆ ಗುರುತಿಸಲಾಗಿರುವ ಗೊಮ್ಮಟ ವಿಗ್ರಹಗಳಲ್ಲಿ ಅತಿ ಪ್ರಾಚೀನವಾದ ವಿಗ್ರಹ ಕಂಡುಬಂದಿರುವುದು ಕರ್ನಾಟಕದಲ್ಲಿಯೇ. ಈ ವಿಗ್ರಹ ಬಾದಾಮಿಯಲ್ಲಿದೆ. ಅಲ್ಲಿನ ಜೈನ ಗುಹೆಯಲ್ಲಿ ಗುಹೆಯ ಪಡಸಾಲೆಯಲ್ಲಿ ಎಡಗಡೆ ಉಬ್ಬುಶಿಲ್ಪವಾಗಿ ಕೆತ್ತಲಾಗಿದೆ. ಇದು ಬಾದಾಮಿಯ ಚಳುಕ್ಯರ ಕಾಲದ ಶಿಲ್ಪ. ನಿರ್ಮಾಣದ ಕಾಲ ಸು.7ನೆಯ ಶತಮಾನದ ಆದಿಭಾಗ. ಸು.7.5' ಎತ್ತರವಿರುವ ಕಾಯೋತ್ಸರ್ಗ ಭಂಗಿಯಲ್ಲಿರುವ ವಿಗ್ರಹದ ಪಾದದ ಬಳಿಯಲ್ಲಿ ಹಾವುಗಳು ಹರಿದಾಡುತ್ತಿರುವ ಹುತ್ತವನ್ನು ಬಿಡಿಸಲಾಗಿದೆ. ಮಾಧವೀಲತೆಗಳು ಕೈಕಾಲುಗಳನ್ನು ಸುತ್ತಿಕೊಂಡಿವೆ. ತಲೆಗೂದಲು ಭುಜದ ವರೆಗೂ ಇಳಿದಂತಿರುವುದು ಈ ಶಿಲ್ಪದ ಗಮನಾರ್ಹ ಅಂಶ. ಕಾಲಾನುಕ್ರಮದಲ್ಲಿ ಮುಂದಿನದು ಐಹೊಳೆಯ ಮೇಣಬಸದಿಯಲ್ಲಿದೆ. ಇದರ ಕಾಲ ಸು.7ನೆಯ ಶತಮಾನದ ಮಧ್ಯಭಾಗ. ಇದೂ ಕಾಯೋತ್ಸರ್ಗ ಭಂಗಿಯಲ್ಲಿದ್ದು ಬಳ್ಳಿಗಳಿಂದ ಸುತ್ತುವರಿಯಲ್ಪಟ್ಟಿದೆ. ಕಾಲುಗಳ ಬಳಿಯಲ್ಲಿ ಸರ್ಪಗಳಿವೆ. ಮೂರ್ತಿಯ ಅಕ್ಕಪಕ್ಕದಲ್ಲಿ ಸರ್ವಾಂಲಕಾರಭೂಷಿತ ಸ್ತ್ರೀಯರಿಬ್ಬರು ಬಳ್ಳಿಗಳನ್ನು ಹಿಡಿದುಕೊಂಡಿದ್ದಾರೆ. ಇವರನ್ನು ಬಾಹುಬಲಿಯ ಸೋದರಿಯರೆಂದು ಊಹಿಸಲಾಗಿದೆ.

ಸು.9ನೆಯ ಶತಮಾನದಲ್ಲಿ ಬಹುಶಃ ಅಮೋಘವರ್ಷ ನೃಪತುಂಗನ ಆಳಿಕೆಯಲ್ಲಿ ಕೊರೆಯಿಸಲಾದ ಎಲ್ಲೋರದ ಎಲ್ಲ ಜೈನಗುಹೆಗಳಲ್ಲೂ ಗೊಮ್ಮಟೇಶ್ವರನ ವಿಗ್ರಹಗಳು ಕಂಡುಬರುತ್ತವೆ. ಇಲ್ಲಿನ ವಿಶೇಷವೆಂದರೆ ಒಂದು ಪಕ್ಕದಲ್ಲಿ ಗೊಮ್ಮಟಮೂರ್ತಿ ಇದ್ದರೆ ಮತ್ತೊಂದು ಪಕ್ಕದಲ್ಲಿ ಪಾರ್ಶ್ವನಾಥ ತೀರ್ಥಂಕರನ ಮೂರ್ತಿಯಿರುವುದು. ಈ ಸಂಪ್ರದಾಯವನ್ನು ಬಾದಾಮಿಯ ಜೈನಗುಹೆಯಲ್ಲೇ ಕಾಣಬಹುದು. ಚಿಕ್ಕ ಕೈಲಾಸವೆಂದು ಪ್ರಸಿದ್ಧವಾಗಿರುವ 30ನೆಯ ಗುಹೆಯಲ್ಲಿ ಎರಡು ಗೊಮ್ಮಟ ವಿಗ್ರಹಗಳಿವೆ. 31ನೆಯ ಗುಹೆಯ ಪಡಸಾಲೆಯ ಬಲಭಾಗದ ಗೋಡೆಯಲ್ಲೊಂದು ಗೊಮ್ಮಟೇಶ್ವರ ಮೂರ್ತಿಯನ್ನು ಬಿಡಿಸಲಾಗಿದೆ.



ವೇಣೂರಿನ ಗೊಮ್ಮಟೇಶ್ವರ

ಇಲ್ಲಿ ಮೂರ್ತಿಯ ಬಲಗಡೆ ಆಕಾಶದಲ್ಲಿ ಗಂಧರ್ವನೊಬ್ಬ ಹಾರವನ್ನು ಹಿಡಿದಿದ್ದಾನೆ. ಎಡಗಡೆ ಆಕಾಶದಲ್ಲಿ ದಂಪತಿಗಳು ಮತ್ತು ಹಾರ ಹಿಡಿದಿರುವ ಗಂಧರ್ವರನ್ನು ಕೊರೆಯಲಾಗಿದೆ. ಮೂರ್ತಿಯ ಸಮೀಪದಲ್ಲಿ ಸ್ತ್ರೀಯರಿಬ್ಬರು ನಮಸ್ಕಾರ ಮುದ್ರೆಯಲ್ಲಿ ಕಾಣುತ್ತಾರೆ. ಇಂದ್ರಸಭೆಯೆಂದು ಪ್ರಖ್ಯಾತವಾಗಿರುವ 32ನೆಯ ಗುಹೆಯಲ್ಲಿ ಆರು ಗೊಮ್ಮಟಮೂರ್ತಿಗಳು ಇವೆ. ಎಲ್ಲೋರದಲ್ಲಿರುವ ಗೊಮ್ಮಟ ಮೂರ್ತಿಗಳಲ್ಲೆಲ್ಲಾ ಅತ್ಯಂತ ಸುಂದರವೂ ಗಮನಾರ್ಹವೂ ಆದ ಒಂದು ಮೂರ್ತಿ ಈ ಗುಹೆಯಲ್ಲಿದೆ. ಮೂರ್ತಿಯ ದೇಹ ಬಳ್ಳಿಗಳಿಂದ ಸುತ್ತುವರಿಯಲ್ಪಟ್ಟಿದೆ. ಸುತ್ತಮುತ್ತ ಸಕಲಜೀವರಾಶಿಗಳು ಕಂಡುಬರುತ್ತವೆ. ಇವುಗಳಲ್ಲಿ ಜಿಂಕೆ ಸರ್ಪ ಇಲಿ ಚೇಳುಗಳೆ ಅಲ್ಲದೆ ನಾಯಿಯೊಂದನ್ನು ಸ್ಪಷ್ಟವಾಗಿ ಗುರುತಿಸಬಹುದು. ಬಲಭಾಗದಲ್ಲಿ ಪುರುಷನೊಬ್ಬನಿದ್ದಾನೆ. ಅಕ್ಕಪಕ್ಕದಲ್ಲಿ ಸ್ತ್ರೀಯರಿಬ್ಬರ ಪ್ರತಿಮೆಗಳನ್ನು ಕಾಣಬಹುದು. ಪುರುಷ ಪ್ರತಿಮೆ ಅಣ್ಣನಾದ ಭರತನೆಂದೂ ಸ್ತ್ರೀಯರ ಪ್ರತಿಮೆಗಳು ಸಹೋದರಿಯರಾದ ಬ್ರಾಹ್ಮೀ ಮತ್ತು ಸುಂದರಿಯರೆಂದೂ ಅರ್ಥೈಸಲಾಗಿದೆ. ಇದು ಮನಃಕಷಾಯವನ್ನು ಬಿಡು ಎಂದು ಬಾಹುಬಲಿಯನ್ನು ಪ್ರಾರ್ಥಿಸುವ ಸಂದರ್ಭವನ್ನು ಚೆನ್ನಾಗಿ ಹೋಲುತ್ತದೆ. 33ನೆಯ ಗುಹೆಯಲ್ಲಿ ಎರಡು, 34ನೆಯ ಗುಹೆಯಲ್ಲಿ ಒಂದು ಗೊಮ್ಮಟಮೂರ್ತಿಯಿದೆ. ಹೀಗೆ ಎಲ್ಲೋರದ ಗುಹೆಗಳಲ್ಲಿ ಸುಮಾರು ಹನ್ನೆರಡು ಗೊಮ್ಮಟಮೂರ್ತಿಗಳು ಕಂಡುಬರುತ್ತವೆ. ವಿಗ್ರಹಗಳನ್ನು

ಶಿಲಾಭಿತ್ತಿಯಲ್ಲಿ ಕೊರೆದಿರುವುದರಿಂದ ಅದೇ ಭಿತ್ತಿಯಲ್ಲಿ ಆಕಾಶದಲ್ಲಿ ಗಂಧರ್ವರು ಹಾರವನ್ನು ಹಿಡಿದಿರುವುದನ್ನು ತೋರಿಸಿರುವುದು, ಗುಂಗುರು ಗುಂಗುರಾದ ತಲೆಗೂದಲು ಕೆಲವು ವಿಗ್ರಹಗಳಲ್ಲಿ ಭುಜದವರೆಗೂ ಇನ್ನು ಕೆಲವು ಕಡೆ ಮುಂಭಾಗದಲ್ಲಿ ಭುಜದಿಂದ ಇಳಿದು ಕಂಕುಳ ಹತ್ತಿರದವರೆಗೂ ಇರುವಂತೆ ತೋರಿಸುವುದು, ಗೊಮ್ಮಟನ ಅಕ್ಕಪಕ್ಕದಲ್ಲಿ ಸ್ತ್ರೀಯರಿಬ್ಬರು ಮತ್ತು ಮುಂಭಾಗದಲ್ಲಿ ಪುರುಷ ಇರುವಂತೆ ಕೆತ್ತಿರುವುದು ಈ ಎಲ್ಲೋರಾದ ಗೊಮ್ಮಟ ವಿಗ್ರಹಗಳ ವೈಶಿಷ್ಟ್ಯಗಳು.

ಶ್ರವಣಬೆಳಗೊಳದ ಗೊಮ್ಮಟ ವಿಗ್ರಹ ಲೋಕಪ್ರಸಿದ್ಧವಾಗಿದೆ. ಇದು ವಿಶ್ವದ ಶಿಲ್ಪಕಲೆಗೆ ಕರ್ನಾಟಕದ ಅನುಪಮ ಕಾಣಿಕೆ. ಪ್ರಾಚೀನ ಶಿಲ್ಪಗಳಲ್ಲಿ ಪ್ರಪಂಚದಲ್ಲೇ ಅತ್ಯಂತ ಎತ್ತರವಾದ ಏಕಶಿಲಾ ಪೂರ್ಣಶಿಲ್ಪ. ಬೆಟ್ಟದ ತುದಿಯಲ್ಲಿ ಎದ್ದುನಿಂತಿದ್ದ ಕೋಡುಗಲ್ಲಿನಿಂದ ಈ ವಿಗ್ರಹವನ್ನು ಕೆತ್ತಲಾಗಿರುವುದು ಈ ವಿಗ್ರಹದ ವಿಶೇಷ. ಈ ವಿಗ್ರಹದ ಎತ್ತರದ ಬಗ್ಗೆ ಬೇರೆ ಬೇರೆ ಅಭಿಪ್ರಾಯಗಳಿದ್ದುವು. ಈಚೆಗೆ ಅಳತೆ ಮಾಡಿರುವ ಪ್ರಕಾರ ಇದರ ಪ್ರಮಾಣದ ವಿವರಗಳು ಹೀಗಿವೆ: ಒಟ್ಟು ಮೂರ್ತಿಯ ಎತ್ತರ 58', ಕಿವಿಯ ಕೆಳಭಾಗದವರೆಗಿನ ಎತ್ತರ 51', ಕಿವಿಯ ಕೆಳಭಾಗದಿಂದ ನೆತ್ತಿಯವರೆಗಿನ ಎತ್ತರ ಸು.6'6", ಪಾದದ ಉದ್ದ 8'3", ಕಾಲ ಹೆಬ್ಬೆರಳಿನ ಉದ್ದ 2'9", ತೊಡೆಯ ಉದ್ದ 10', ಕಿಬ್ಬೊಟ್ಟೆಯ ಅಡ್ಡಳತೆ 10', ಸೊಂಟದ ಅಡ್ಡಳತೆ 30', ಭುಜಗಳ ನಡುವೆ ಇರುವ ವಿಸ್ತಾರ 23½', ಕುತ್ತಿಗೆಯ ಕೆಳಭಾಗದಿಂದ ಕಿವಿಯವರೆಗೆ 2'7", ತೋರುಬೆರಳಿನ ಉದ್ದ 3'9", ನಡುಬೆರಳಿನ ಉದ್ದ 5', ಅನಾಮಿಕದ ಉದ್ದ 4'8", ಕಿರುಬೆರಳಿನ ಉದ್ದ 3'2". ಕಾಯೋತ್ಸರ್ಗಭಂಗಿಯಲ್ಲಿ ನಿಂತಿರುವ ಈ ಗೊಮ್ಮಟನ ಪ್ರತಿಮೆ ಬೃಹತ್ತಾಗಿರುವಷ್ಟೇ ಸುಂದರವೂ ಆಗಿದೆ. ಕೆಳಗೆ ತಾವರೆಯ ದಳಗಳನ್ನು ಕೆತ್ತಿದ್ದ ತಾವರೆಹೂವಿನ ಪೀಠದ ಮೇಲೆ ಮೂರ್ತಿ ನಿಂತಂತೆ ಕಾಣುತ್ತದೆ. ಪಾದಗಳ ಬಳಿ ಹುತ್ತ ಬೆಳೆದಂತೆ ಕೆತ್ತಲಾಗಿದೆ. ಹುತ್ತದ ಬಾಯಿಗಳಲ್ಲಿ ಸರ್ಪಗಳು ಓಡಾಡುತ್ತಿವೆ. ಬಳ್ಳಿಗಳು ಕಾಲನ್ನು ಸುತ್ತಿಕೊಂಡು ಹಬ್ಬಿ ಕೈಗಳಲ್ಲಿ ಬೆಳೆದು ಭುಜಗಳಲ್ಲಿ ಕೊನೆಗೊಂಡಿವೆ. ತಲೆಯಲ್ಲಿನ ಕೂದಲುಗಳು ಗುಂಗುರುಗುಂಗುರಾಗಿವೆ. ಆದರೆ ಇದು ಭುಜದವರೆಗೆ ಇಳಿದಿಲ್ಲ. ಹುತ್ತ ಹಬ್ಬಿ ಹಾವುಗಳು ಹರಿದಾಡಿದರೂ ಬಳ್ಳಿಗಳು ಬೆಳೆದು ತಬ್ಬಿಕೊಂಡರೂ ಅವಿಚಲವಾದ ಮನಸ್ಸನ್ನೂ ತಪಸ್ಸಿನ ದೃಢತೆಯನ್ನೂ ಮೂರ್ತಿಯ ಮುಖಭಾವದಲ್ಲಿ ಮೂಡಿಸಲಾಗಿದೆ. ಅದರಲ್ಲಿಯೂ ಕಷ್ಟಕಾರ್ಪಣ್ಯಗಳಿಂದ ತುಂಬಿರುವ ಪ್ರಪಂಚದ ಕಡೆ ಮರುಕದಿಂದ ಕಿರುನಗೆ ಸೂಸುತ್ತಿರುವಂತೆ ತೋರುವ ಮುಖದ ಭಾವ ವರ್ಣನಾತೀತವಾದುದು. ತ್ಯಾಗವೈರಾಗ್ಯಗಳು ಹೊರಹೊಮ್ಮುತ್ತಿರುವ ಈ ಮೂರ್ತಿಯ ಗಾಂಭೀರ್ಯ ಆಕರ್ಷಣೀಯ, ಅನುಪಮ. ಈ ವಿಗ್ರಹದ ಔನ್ನತ್ಯ, ಸೌಂದರ್ಯ ಮತ್ತು ಅತಿಶಯಗಳನ್ನು ಕುರಿತು ಬೊಪ್ಪಣಕವಿ ಹೀಗೆ ಹೇಳಿದ್ದಾನೆ:

> ಅತಿತುಂಗಾಕೃತಿಯಾದೊಡಾಗದದರೊಳ್ ಸೌಂದರ್ಯಮೌನ್ನತ್ಯಮುಂ
> ನುತ ಸೌಂದರ್ಯಮುಮಾಗೆ ಮತಿತ್ತಶಯಂ ತಾನಾಗದೌನ್ನತ್ಯಮುಂ
> ನುತ ಸೌಂದರ್ಯಮುಮಾರ್ಜಿತಾತಿಶಯಮುಂ ತನ್ನಲ್ಲಿ ನಿಂದಿರ್ದುವೇಂ
> ಕ್ಷಿತಿಸಂಪೂಜ್ಯಮೊ ಗೊಮ್ಮಟೇಶ್ವರಜಿನಶ್ರೀರೂಪಮಾತ್ಮೋಪಮಂ

ಗಂಗ ರಾಚಮಲ್ಲನ ಮಂತ್ರಿಯಾದ ಚಾವುಂಡರಾಯ ಈ ಮೂರ್ತಿಯ ನಿರ್ಮಾಪಕ. ಈ ಬಾಹುಬಲಿ ಮೂರ್ತಿಯ ಪಕ್ಕದಲ್ಲಿರುವ 10ನೆಯ ಶತಮಾನದ ಮೂರು ಶಾಸನಗಳು ಚಾಮುಂಡರಾಯ ಮಾಡಿಸಿದ ಎಂದು ಸ್ಪಷ್ಟವಾಗಿ ತಿಳಿಸುತ್ತವೆ. 978ರಲ್ಲಿ ಚಾವುಂಡರಾಯನೇ ಬರೆದಿರುವ 'ಚಾವುಂಡರಾಯ ಪುರಾಣ'ದಲ್ಲಿ ತನ್ನ ಜೀವನ, ಸಾಹಸಕಾರ್ಯ, ಯುದ್ಧಕೌಶಲ ಇತ್ಯಾದಿ ಸ್ವಕೀಯ ವಿಚಾರಗಳನ್ನು ಹೇಳಿಕೊಂಡಿದ್ದರೂ ಅದರಲ್ಲಿ ಗೊಮ್ಮಟವಿಗ್ರಹ ನಿರ್ಮಾಣದ ಪ್ರಸ್ತಾಪವಿಲ್ಲದಿರುವುದರಿಂದ 978ಕ್ಕೆ ಮುಂಚೆ ಈ ವಿಗ್ರಹದ ನಿರ್ಮಾಣವಾಗಿಲ್ಲವೆಂದು ಹೇಳಬಹುದು. ಈಗಿರುವ ಆಧಾರಗಳ ಮೇಲೆ ಇದನ್ನು ಸು.983ರಲ್ಲಿ ಕೆತ್ತಿಸಿ ಮುಗಿಸಿರಬೇಕೆಂದು ತಿಳಿಯಲಾಗಿದೆ. ಚಾಮುಂಡರಾಯನ ತಾಯಿ ಕಾಳಲದೇವಿ



ಗೊಮ್ಮಟಗಿರಿಯ ಗೊಮ್ಮಟಮೂರ್ತಿ

ಪೌದನಪುರದ ಬಾಹುಬಲಿಯನ್ನು ನೋಡಲು ಅಪೇಕ್ಷಿಸಿದಳು. ದೂರದ ದುರ್ಗಮ ಪೌದನಪುರಕ್ಕೆ ಹೋಗುವುದು ಕಷ್ಟವಾಗಿದ್ದುದರಿಂದ ತನ್ನ ತಾಯಿಯ ಇಚ್ಛೆಯನ್ನು ಪೂರೈಸಲು ಚಾವುಂಡರಾಯ ಬೆಳ್ಗೊಳದಲ್ಲಿ ಇದನ್ನು ಮಾಡಿಸಿದನೆಂದು ಐತಿಹ್ಯವಿದೆ. ಪಂಚಬಾಣನೆಂಬ ಕವಿಯ ಪ್ರಕಾರ ಬಾಹುಬಲಿ ಶಿಲಾಮೂರ್ತಿಯಾಗಿ ಚಾಮುಂಡರಾಯನಿಗೆ ಕಾಣಿಸಿದ. ಚಾವುಂಡರಾಯ 983ರಲ್ಲಿ ಈ ಮೂರ್ತಿಯನ್ನು ಪ್ರತಿಷ್ಠಾಪಿಸಿದ.

ಶ್ರವಣಬೆಳಗೊಳದ ಗೊಮ್ಮಟಮೂರ್ತಿ ಜನರ ಚಿತ್ತವನ್ನು ಆಕರ್ಷಿಸಿ ಮುಂದೆ ಇದೇ ರೀತಿಯ ಹಲವು ಕೃತಿಗಳು ನಿರ್ಮಾಣವಾಗುವುದಕ್ಕೆ ಸ್ಫೂರ್ತಿಯಾಯಿತು. ಉಡುಪಿ ಜಿಲ್ಲೆಯ ಕಾರ್ಕಳದಲ್ಲಿ ಊರಿನ ಬಳಿಯಲ್ಲೇ ಇರುವ ಗೊಮ್ಮಟಮೂರ್ತಿ ಈ

ರೀತಿಯದು. ಈ ಮೂರ್ತಿಯ ಎತ್ತರ 1.4ಮೀ. ಭೈರವರಸನ ಮಗ ವೀರಪಾಂಡ್ಯ 1432ರಲ್ಲಿ ಇದನ್ನು ಮಾಡಿಸಿ ಪ್ರತಿಷ್ಠಾಪಿಸಿದ. ಇದರ ರಚನೆಯ ಕಥೆಯನ್ನು ಚದುರ ಚಂದ್ರಮನೆಂಬ ಕವಿ 'ಕಾರ್ಕಳದ ಗೊಮ್ಮಟೇಶ್ವರ ಚರಿತ್ರೆ' (1646) ಎಂಬ ಸಾಂಗತ್ಯಕೃತಿಯಲ್ಲಿ ಹೇಳಿದ್ದಾನೆ. ಶ್ರೀಗುರು ಲಲಿತಕೀರ್ತಿ ಭಟ್ಟಾರಕರ ಆಶೀರ್ವಾದದೊಡನೆ ವಜ್ರಶಿಲೆಯ ಅನ್ವೇಷಣೆಯಿಂದ ಹಿಡಿದು ಮೂರ್ತಿಯನ್ನು ಬೆಟ್ಟದ ಮೇಲಕ್ಕೆ ಸಾಗಿಸಿದ್ದನ್ನು ಕಣ್ಣಿಗೆ ಕಟ್ಟುವಂತೆ ವಿವರಿಸಿದ್ದಾನೆ. ಮೂರ್ತಿಯ ಸ್ಥೂಲರೂಪ ಸಿದ್ಧವಾದ ಮೇಲೆ ಅದನ್ನು ಕಬ್ಬಿಣದ ದಪ್ಪ ಕೀಲುಗಳಿರುವ ಇಪ್ಪತ್ತು ಗಾಲಿಗಳಿಂದ ಬಂಡಿಯೊಂದನ್ನು ಮಾಡಿಸಿ ಹತ್ತು ಸಾವಿರ ಸನ್ನೆಗಳಿಂದ ಮೂರ್ತಿಯನ್ನು ಬಂಡಿಗೆ ಸಾಗಿಸಿ ಸಾವಿರಾರು ಜನ ಸೇರಿ ಎಳೆದರು. ಅದು ಒಂದು ಮಾರು ಮಾತ್ರ ಸಾಗಿತಂತೆ. ಮಾರನೆಯ ದಿನ ಸಾವಿರ ರಾಟೆಗಳನ್ನು ಮಾಡಿಸಿ ದೇವನ ಬಂಡಿ ಬೆಟ್ಟವೇರುವಂತೆ ಮದ್ದಾನೆಗಳಿಂದ ನೂಕಿಸಿದಾಗ ಆ ದಿನ ಅದು ಏಳೆಂಟು ಮಾರು ಸರಿಯಿತಂತೆ. ಹೀಗೆ ಒಂದು ತಿಂಗಳ ಪರ್ಯಂತ ಸಾಗಿಸಿದಮೇಲೆ ಆ ಮೂರ್ತಿ ಬೆಟ್ಟದ ತುದಿಯನ್ನು ತಲುಪಿತು. ಅಲ್ಲಿ ಎಪ್ಪತ್ತೆರಡು ಕಂಬಗಳ ಸೊಗಸಾದ ಚಪ್ಪರದ ಮೇಲೆ ಮೂರ್ತಿಯನ್ನು ಮಲಗಿಸಿ ಸೂಕ್ಷ್ಮ ಕೆಲಸವನ್ನು ಮಾಡಲಾಯಿತು. ಇದಕ್ಕೆ ಒಂದು ವರ್ಷ ಹಿಡಿಯಿತು. ಅನಂತರ ಆ ವಿಗ್ರಹದ ಪ್ರತಿಷ್ಠಾಪನೆಯಾಯಿತು.



ಧರ್ಮಸ್ಥಳದ ಗೊಮ್ಮಟೇಶ್ವರ: ಶಿಲ್ಪಿ ರಂಜಾಳ ಗೋಪಾಲ ಶೆಣೈ

ದಕ್ಷಿಣ ಕನ್ನಡ ಜಿಲ್ಲೆಯ ವೇಣೂರಿನಲ್ಲಿ ಮತ್ತೊಂದು ಗೊಮ್ಮಟ ಮೂರ್ತಿ ಇದೆ. ಇದರ ಎತ್ತರ 35'. 1604ರಲ್ಲಿ ತಿಮ್ಮಣ್ಣ ಅಜಿಲ ಎಂಬುವನು ಚಾವುಂಡರಾಯನಂತೆ ತಾನೂ ತನ್ನ ರಾಜ್ಯದಲ್ಲಿ ಗೊಮ್ಮಟನನ್ನು ಕೆತ್ತಿಸಿ ಕೀರ್ತಿವಂತನಾಗಬೇಕೆಂದು ಇದನ್ನು ಮಾಡಿಸಿದ. ಇದೇ ಸಮಯದಲ್ಲಿ ಕಾರ್ಕಳದಲ್ಲಿ ರಾಜ್ಯಭಾರಮಾಡುತ್ತಿದ್ದ ಇಮ್ಮಡಿ ಭೈರವರಾಯ ಕಾರ್ಕಳದಲ್ಲಿರುವಂತೆ ಬೇರೆಲ್ಲೂ ಗೊಮ್ಮಟ ಮೂರ್ತಿಗಳು ಪ್ರತಿಷ್ಠಾಪನೆಯಾಗಬಾರದೆಂದೂ ವೇಣೂರಿನಲ್ಲಿ ಸಿದ್ಧವಾದ ಮೂರ್ತಿಯನ್ನು ಕಾರ್ಕಳಕ್ಕೆ ಒಪ್ಪಿಸಬೇಕೆಂದೂ ಇಲ್ಲದಿದ್ದರೆ ಯುದ್ಧವನ್ನು ಎದುರಿಸಬೇಕೆಂದೂ ತಿಳಿಸಿದ್ದರಿಂದ ತಿಮ್ಮಣ್ಣ ಅಜಿಲನು ಪ್ರತಿಮೆಯನ್ನು ಮರಳಿನಲ್ಲಿ ಹೂತು ಯುದ್ಧಮಾಡಿ ವಿಜಯಿಯಾಗಿ ಅನಂತರವೇ ಪ್ರತಿಮೆಯನ್ನು ಪ್ರತಿಷ್ಠೆ ಮಾಡಿಸಿದನಂತೆ. ಮೈಸೂರು ಜಿಲ್ಲೆಯಲ್ಲಿ ಮೈಸೂರಿಗೆ 25ಕಿಮೀ ವಾಯುವ್ಯದಲ್ಲಿ ಕಾವೇರಿಯ ದಕ್ಷಿಣಕ್ಕೆ ಶ್ರವಣಗುಡ್ಡ ಎಂದು ತಿಳಿಯಲಾಗುತ್ತಿದ್ದ ಗೊಮ್ಮಟಗಿರಿಕ್ಷೇತ್ರದಲ್ಲಿ 5.5ಮೀ. ಎತ್ತರದ ಗೊಮ್ಮಟಮೂರ್ತಿಯಿದೆ. ಇಲ್ಲಿ ಸು.30.48ಮೀ. ಎತ್ತರದ ಬಂಡೆಯೊಂದರ ಮೇಲೆ ಮೂರ್ತಿಯ ಸ್ಥಾಪನೆಯಾಗಿದೆ. ದೂರದಿಂದ ನೋಡಿದರೆ ಈ ಬೆಟ್ಟ ಒಂದು ದೊಡ್ಡ ರಥದಂತೆ ಕಾಣಿಸುತ್ತದೆ. ಈ ಬೆಟ್ಟದ ಮೇಲೆ ಗೊಮ್ಮಟಮೂರ್ತಿಯನ್ನು ಯಾರು ಯಾವಾಗ ಸ್ಥಾಪಿಸಿದರೆಂಬುದಕ್ಕೆ ಶಾಸನವಾಗಲೀ ದಾಖಲೆಯಾಗಲಿ ಇದುವರೆಗೆ ಸಿಕ್ಕಿಲ್ಲ. ಪೂರ್ವಾಭಿಮುಖವಾಗಿರುವ ಈ ಮೂರ್ತಿಯಲ್ಲಿ ಕೈಗಳು ಸರ್ಪಗಳು ಬಿಚ್ಚಿದ ಹೆಡೆಯ ಮೇಲೆ ಸೋಕಿದಂತಿರುವುದು ಬೇರಾವ ಗೊಮ್ಮಟಮೂರ್ತಿಗಳಲ್ಲೂ ಇಲ್ಲದಿರುವುದು ವೈಶಿಷ್ಟ್ಯವಾಗಿದೆ.

ಕೃಷ್ಣರಾಜಸಾಗರ ಜಲಾಶಯದ ಉತ್ತರಕ್ಕೆ ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕಿನ ಮಾವಿನಕೆರೆ ಗ್ರಾಮದ ಹತ್ತಿರದ ಬಸ್ತಿಹಳ್ಳಿಯಲ್ಲಿ 18' ಎತ್ತರದ ಒಂದು ಗೊಮ್ಮಟಮೂರ್ತಿಯಿದೆ. ಈ ಮೂರ್ತಿಗೆ ಗೂಡಿನಂಥ' ಒಂದು ಗುಡಿಯನ್ನು ಕಟ್ಟಿದ್ದಾರೆ. ಇದರ ಸುತ್ತಮುತ್ತ ಗಂಗರ ಕಾಲಕ್ಕೆ ಸೇರುವ ಶಿಥಿಲವಾದ ಮೂರ್ತಿಗಳೂ ವಿಷ್ಣುವರ್ಧನನ ಕಾಲದ ಬಸದಿಯ ಅವಶೇಷವೂ ಕಂಡುಬರುತ್ತವೆ. ಈ ಗೊಮ್ಮಟಮೂರ್ತಿಯನ್ನು ವಿಷ್ಣುವರ್ಧನನ ಕಾಲದಲ್ಲಿ ಆತನ ದಂಡನಾಯಕ ಪುಣಿಸಮಯ್ಯ ಪ್ರತಿಷ್ಠಾಪಿಸಿದಂತೆ ತೋರುತ್ತದೆ.

ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಬಸ್ತಿ ತಿಪ್ಪೂರಿನ ಬಳಿಯಿರುವ ದೊಡ್ಡ ಬೆಟ್ಟದ ಮೇಲೆ ಸು.10' ಎತ್ತರದ ಗೊಮ್ಮಟ ಪ್ರತಿಮೆಯೊಂದಿದೆ. ಇದು ಸಾಮಾನ್ಯ ರೀತಿಯ ಶಿಲ್ಪ. ಸ್ಥಾಪನೆಯ ಕಾಲ ತಿಳಿದಿಲ್ಲ.

ದಕ್ಷಿಣ ಕನ್ನಡ ಜಿಲ್ಲೆಯ ಧರ್ಮಸ್ಥಳದಲ್ಲಿ ಒಂದು ಗೊಮ್ಮಟ ವಿಗ್ರಹವನ್ನು ಅಲ್ಲಿನ ಧರ್ಮಾಧಿಕಾರಿ ವೀರೇಂದ್ರ ಹೆಗ್ಗಡೆಯವರು ಮಾಡಿಸಿ ಸ್ಥಾಪಿಸಿದ್ದಾರೆ. ಶಿಲ್ಪಿ ರಂಜಾಳ ಗೋಪಾಲ ಶೆಣೈ ಅವರು 1967ರಲ್ಲಿ ಇದರ ನಿರ್ಮಾಣ ಕಾರ್ಯವನ್ನು ಪ್ರಾರಂಭಿಸಿ 1973ರಲ್ಲಿ ಮುಗಿಸಿದರು. ಶಿಲ್ಪರಚನೆಗೆ ಉಪಯೋಗಿಸಿರುವ ಈ ಶಿಲೆಯ ಒಟ್ಟು ಉದ್ದ 52'. ಇದರಲ್ಲಿ 6' ಭೂಮಿಗಿಳಿಯುವ ಬೇರು, 7' ವಿಗ್ರಹದ ಪೀಠ, ಮೂರ್ತಿ ಅಂಗುಷ್ಠದಿಂದ ನೆತ್ತಿಯವರೆಗೆ 39' ಎತ್ತರವಿದೆ. 170 ಟನ್ ತೂಕದ ಈ ಶಿಲಾಮೂರ್ತಿಯನ್ನು ಕಾರ್ಕಳದಲ್ಲಿ ಮಾಡಿಸಿ ಧರ್ಮಸ್ಥಳಕ್ಕೆ ಸಾಗಿಸಲಾಗಿದೆ. ಅಲ್ಲಿ ಬಾಹುಬಲಿ ವಿಹಾರದಲ್ಲಿ ಸ್ಥಾಪಿತವಾಗಿದೆ. ಧರ್ಮಸ್ಥಳದ ಈ ಗೊಮ್ಮಟಮೂರ್ತಿಯಲ್ಲಿ ಕೆಲವು ವಿಶೇಷಗಳು ಕಂಡುಬರುತ್ತವೆ. ಈ ಮೂರ್ತಿಯಲ್ಲಿ ತಲೆಗೂದಲು ಭುಜದವರೆಗೂ ಇಳಿಬಿದ್ದಿದೆ. ಎರಡು ಪಾದಗಳ ಮೇಲೆಯೂ ಹಾವಿನ ಮರಿಗಳು ಹತ್ತುತ್ತಿವೆ. ಮೂರ್ತಿಯ ಮೇಲೆ ಮಲ್ಲಿಗೆ ಬಳ್ಳಿಯ ಜೊತೆಯಲ್ಲಿ ಮಲ್ಲಿಗೆಯ ಹೂವನ್ನು ಬಿಡಿಸಲಾಗಿದೆ. ಮೂರ್ತಿಯ ಎಡಬಲಗಳಲ್ಲಿ ಕಾಲುಗಳ ಬಳಿಯಲ್ಲಿ ಸೇರುವ ಎರಡು ಪ್ರತ್ಯೇಕ ಶಿಲೆಗಳಲ್ಲಿ ಮಾವಿನಮರ, ಗಿಣಿ, ಮಂಗ, ಜೇನುಗೂಡು ಇತ್ಯಾದಿಗಳನ್ನು ಕೆತ್ತಲಾಗಿದೆ.

ಈ ಗೊಮ್ಮಟಮೂರ್ತಿಗಳು ಭಾರತೀಯ ಶಿಲ್ಪಕಲೆಗೆ ಕರ್ನಾಟಕದ ಮಹತ್ತ್ವಪೂರ್ಣ ಕೊಡುಗೆಯಾಗಿವೆ. (ಎಸ್.ಸಿ.;ಎಂ.ಎಚ್.)

**ಗೊರವರ ಕುಣಿತ :** ಗೊರವರೆಂಬ ಧಾರ್ಮಿಕ ವೃತ್ತಿಗಾಯಕರು ತಮ್ಮ ಆರಾಧ್ಯದೈವವಾದ ಮೈಲಾರಲಿಂಗನ ಮಹಿಮೆಯನ್ನು ಕುರಿತು ಇಡೀ ರಾತ್ರಿ ನಡೆಸುವ ಮೇಳ. ಆಗ ಹಾಡುವುದರ ಜೊತೆಯಲ್ಲಿ ಕುಣಿಯುವುದೂ ಉಂಟು. ಈ ಮೇಳವನ್ನು ಗೊರವರ ಮೇಳ ಎಂದು ಕರೆಯುತ್ತಾರೆ. ಮೇಳ ನಡೆಸಲು ಕನಿಷ್ಟಪಕ್ಷ ಮೂವರಿರುತ್ತಾರೆ. ಮುಖ್ಯ ಗಾಯಕ ಮಧ್ಯೆ ಕುಳಿತು ಮೈಲಾರಲಿಂಗನ ಮಹಿಮೆಯನ್ನು ಡಮರುಗ ಬಾರಿಸುತ್ತ ನಿರೂಪಿಸುತ್ತಾನೆ. ಉಳಿದವರು ಇವನ ಸುತ್ತ ನಿಂತು ಇವನಿಗೆ ಹಿಮ್ಮೇಳ ನೀಡುತ್ತಾರೆ. ಮೇಳ ನಡೆಯುವಾಗ ತಮ್ಮ ವಾದ್ಯಗಳನ್ನು (ಡಮರುಗ, ಪಿಳ್ಳಂಗೋವಿ) ಬಾರಿಸುತ್ತ ಕುಣಿಯುತ್ತಾರೆ.

**ಗೊರೂರು ರಾಮಸ್ವಾಮಿ ಅಯ್ಯಂಗಾರ್ :** 1904-91. ಆಧುನಿಕ ಕನ್ನಡ ಸಾಹಿತ್ಯಕ್ಕೆ ಆಳ ವಿಸ್ತಾರಗಳನ್ನೂ ವೈವಿಧ್ಯ ವೈಶಿಷ್ಟ್ಯಗಳನ್ನೂ ತಂದುಕೊಟ್ಟ ಗಣ್ಯಲೇಖಕರಲ್ಲೊಬ್ಬರು; ಸುಪ್ರಸಿದ್ಧ ಪ್ರಬಂಧಕಾರರು, ಗಾಂಧೀವಾದಿ.

ಗೊರೂರು ಎಂಬ ಸಂಕ್ಷಿಪ್ತ ನಾಮದಿಂದಲೇ ಕನ್ನಡ ಸಾಹಿತ್ಯದಲ್ಲಿ ಚಿರಪರಿಚಿತರು. ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕಿನ ಗೊರೂರು ಗ್ರಾಮದಲ್ಲಿ 1904 ಜುಲೈ 4ರಂದು ಜನಿಸಿದರು. ಇವರ ತಂದೆ ಶ್ರೀನಿವಾಸ ಅಯ್ಯಂಗಾರ್. ತಾಯಿ ಲಕ್ಷ್ಮಮ್ಮ. ಹನ್ನೆರಡು ಮಕ್ಕಳ ದೊಡ್ಡ ಸಂಸಾರದಲ್ಲಿ ಗೊರೂರರವರು ತಮ್ಮ ತಂದೆತಾಯಿಗಳಿಗಾದ ಗಂಡುಮಕ್ಕಳಲ್ಲಿ ಎರಡನೆಯವರು. ಅಜ್ಜಿಯವರಿಗೆ ತಂದೆ ಹೇಳುತ್ತಿದ್ದ



ಮಹಾಭಾರತ ಪುರಾಣಗಳನ್ನು ಬಾಲ್ಯದಲ್ಲಿಯೇ ಕೇಳಿ ಅವುಗಳಿಂದ ಪ್ರಭಾವಿತರಾದರು. ತಮ್ಮ ಹಳ್ಳಿಯಲ್ಲಿಯೇ ಕನ್ನಡ ಇಂಗ್ಲಿಷ್ ಲೋಯರ್ ಸೆಕೆಂಡರಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ, ಪ್ರೌಢ ವಿದ್ಯಾಭ್ಯಾಸ ಮಾಡಲು ಹಾಸನದ ಸರ್ಕಾರಿ ಹೈಸ್ಕೂಲನ್ನು ಸೇರಿದರು. ಹೈಸ್ಕೂಲಿನಲ್ಲಿ ಐದನೆಯ ಫಾರಂನಲ್ಲಿದ್ದಾಗ ಗಾಂಧೀಜಿಯವರ ಅಸಹಕಾರ ಚಳವಳಿಯಿಂದ ಆಕರ್ಷಿತರಾಗಿ, ಇಂಗ್ಲಿಷ್ ವಿದ್ಯೆಗೆ ಶರಣು ಹೊಡೆದು, ಗಾಂಧೀಜಿಯ ಆಶ್ರಮವನ್ನು ಸೇರಿ ಗುಜರಾತ್ ವಿದ್ಯಾಪೀಠದ ವಿದ್ಯಾರ್ಥಿಯಾದರು. ಗಾಂಧೀಜಿಯವರ ನಿಕಟ ಸಂಪರ್ಕ ಪಡೆದು ದೇಶಸೇವೆ ಮಾಡಲು ತಕ್ಕ ಯೋಗ್ಯತೆಯನ್ನು ಗಳಿಸಿ, ಮದರಾಸಿನ ಲೋಕಮಿತ್ರ ಎಂಬ ಕನ್ನಡ ಪತ್ರಿಕೆಯ ಉಪಸಂಪಾದಕರಾಗಿ, ಆಂಧ್ರಪತ್ರಿಕೆ, ಭಾರತಿ ಪತ್ರಿಕೆಗಳಿಗೆ ಕನ್ನಡ ಸಮಾಚಾರ ಲೇಖಕರಾಗಿ ಕೆಲವು ಕಾಲ ಕೆಲಸ ಮಾಡಿ, ಕೆಂಗೇರಿಯ ಗುರುಕುಲಾಶ್ರಮವನ್ನು ಸೇರಿದರು. ಆ ಗುರುಕುಲ ಸಾಬರಮತಿ ಆಶ್ರಮದ ಮಾದರಿಯಲ್ಲಿ ನಡೆಯುತ್ತಿತ್ತು. ಹರಿಜನರನ್ನು ಮೇಲಕ್ಕೆತ್ತುವುದೇ ಅದರ ಮುಖ್ಯೋದ್ದೇಶವಾಗಿತ್ತು. ಈ ಕಾರ್ಯವನ್ನು ಇವರು ಇಲ್ಲಿ ಸಮರ್ಥವಾಗಿ ನಡೆಸಿದರು. ಅನಂತರ ಬೆಂಗಳೂರಿಗೆ ಬಂದು ಅಖಿಲಭಾರತ ಚರಕ ಸಂಘದ ಖಾದಿ ವಸ್ತ್ರಾಲಯವನ್ನು ನಡೆಸುವ ಹೊಣೆಯನ್ನು ಹೊತ್ತರು. ಈ ಶತಮಾನದ ಮೂರು ನಾಲ್ಕನೆಯ ದಶಕಗಳು ರಾಷ್ಟ್ರೀಯ ಚಳವಳಿಗೆ ಹೆಸರಾಗಿರುವಂತೆ, ಕನ್ನಡ ಸಾಹಿತ್ಯದ ನವೋದಯಕ್ಕೂ ಹೆಸರಾಗಿವೆ. ಬೆಂಗಳೂರಿನ ಆವರಣ ಇವರಿಗೆ ಅನೇಕ ಪ್ರಮುಖ ದೇಶಸೇವಕರನ್ನು ಪರಿಚಯ ಮಾಡಿಕೊಟ್ಟಂತೆ, ಸೀತಾತನಯ, ಜಿ.ಕೆ.ರಾಮಸ್ವಾಮಿಯೆಂಬ ಹೆಸರುಗಳಿಂದ ಬರೆಯುತ್ತಿದ್ದ ಇವರಿಗೆ ಆ ಕಾಲದ ಸುಪ್ರಸಿದ್ಧ ಸಾಹಿತಿಗಳ ಸಾನ್ನಿಧ್ಯವನ್ನೂ ಗ್ರಂಥರಚನೆಗೆ ಒಳ್ಳೆಯ ಪ್ರೋತ್ಸಾಹವನ್ನೂ ದೊರಕಿಸಿಕೊಟ್ಟಿತು. ಗೊರೂರರವರಿಗೆ ಒಳ್ಳೆಯ ಹೆಸರನ್ನು ತಂದುಕೊಟ್ಟ ಹಳ್ಳಿಯ ಚಿತ್ರಗಳು (1930), ನಮ್ಮ ಊರಿನ ರಸಿಕರು (1932) ಈ ಕೃತಿಗಳು ಪ್ರಕಟವಾದದ್ದು ಈ ಕಾಲದಲ್ಲಿಯೇ. ಅಲ್ಲಿಂದ ಇವರ ವೈವಿಧ್ಯಮಯ ಸಾಹಿತ್ಯರಚನೆ ಅವ್ಯಾಹತವಾಗಿ ಸಾಗಿತು. 1933ರಲ್ಲಿ ಇವರು ತಮ್ಮ ಸ್ವಂತ ಗ್ರಾಮಕ್ಕೆ ಹಿಂದಿರುಗಿ, ಅಲ್ಲಿ ಮೈಸೂರು ಗ್ರಾಮ ಸೇವಾ ಸಂಘವನ್ನು ಸ್ಥಾಪಿಸಿ ಖಾದಿಪ್ರಚಾರ, ಹರಿಜನೋದ್ಧಾರ, ವಯಸ್ಕರ ಶಿಕ್ಷಣ, ಗ್ರಾಮ ಕೈಗಾರಿಕೆಗಳು ಮುಂತಾದ ರಚನಾತ್ಮಕ ಕಾರ್ಯಕ್ರಮಗಳನ್ನು ಕೈಗೊಂಡರು. 1942ರಲ್ಲಿ ಮಹಾತ್ಮ ಗಾಂಧಿಯವರ ನೇತೃತ್ವದಲ್ಲಿ ನಡೆದ 'ಚಲೇಜಾವ್' ಚಳವಳಿಯಲ್ಲಿ ಭಾಗವಹಿಸಿ ಸೆರೆಮನೆವಾಸ ಅನುಭವಿಸಿದರು. ಭಾರತಕ್ಕೆ ಸ್ವಾತಂತ್ರ್ಯ ಬಂದಮೇಲೆ, ಮೈಸೂರಿನಲ್ಲಿ ಪ್ರಜಾಸರ್ಕಾರ ಸ್ಥಾಪನೆಗಾಗಿ ನಡೆದ ಚಳವಳಿಯಲ್ಲೂ ಭಾಗವಹಿಸಿದರು. ಈ ಚಳವಳಿಯಲ್ಲಿ ಭಾಗವಹಿಸಿದ್ದ ಇವರ ಹಿರಿಯ ಮಗ 17 ವರ್ಷದ ರಾಮಚಂದ್ರ ತುಮಕೂರಿನಲ್ಲಿ ಪೊಲೀಸಿನವರ ಗುಂಡಿಗೆ ಬಲಿಯಾದ. ಮೈಸೂರಿನಲ್ಲಿ ಪ್ರಜಾಸರ್ಕಾರ ಸ್ಥಾಪಿತವಾದಮೇಲೆ ಗೊರೂರರು ಸುಮಾರು ಹನ್ನೆರಡು ವರ್ಷಕಾಲ ರಾಜ್ಯದ ವಿಧಾನ ಪರಿಷತ್ತಿನ ಸದಸ್ಯರಾಗಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸಭೆಯ ಸದಸ್ಯರೂ ಆಗಿದ್ದರು. ತಮ್ಮ ಈ ಅಧಿಕಾರದ ಅವಧಿಯಲ್ಲಿ ಮೈಸೂರು ಸರ್ಕಾರ ಸಾಧಿಸಿದ ಕರ್ನಾಟಕ ಏಕೀಕರಣಕ್ಕೆ ಬೆಂಬಲವನ್ನು ನೀಡಿದರಲ್ಲದೆ, ಕನ್ನಡದ ಸರ್ವತೋಮುಖವಾದ ಬೆಳೆವಣಿಗೆಗೂ ಶ್ರಮಿಸಿದರು. ತಮ್ಮ ಹಳ್ಳಿಯಲ್ಲಿದ್ದುಕೊಂಡೇ ಬಹುಕಾಲ ಸಾಹಿತ್ಯರಚನೆಯಲ್ಲಿ ತೊಡಗಿದರು.

ಇವರು ಅರ್ಧಶತಮಾನದ ಕಾಲ ಕನ್ನಡ ಸಾಹಿತ್ಯ ಸೇವೆ ನಡೆಸಿದರು. ಹೊಸಗನ್ನಡ ಸಾಹಿತ್ಯದಲ್ಲಿ ನಿರ್ಮಲವಾದ, ತಿಳಿಯಾದ ಹಾಸ್ಯವನ್ನು ಹರಿಯಬಿಟ್ಟವರೆಂಬ ಕೀರ್ತಿಗೆ ಇವರು ಭಾಜನರಾಗಿದ್ದಾರೆ. ಹೆಚ್ಚು ಕಡಿಮೆ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಇವರು ಕೃತಿಗಳನ್ನು ರಚಿಸಿದ್ದಾರೆ. ಪುಸ್ತಕರೂಪದಲ್ಲಿ ಪ್ರಕಟವಾಗದ ಇವರ ಕವನಗಳು ಪತ್ರಿಕೆಗಳಲ್ಲಿ ಅಭಿನಂದನ ಗ್ರಂಥಗಳಲ್ಲಿ ಚದುರಿಹೋಗಿರುವ ಬಿಡಿಲೇಖನಗಳನ್ನು ಬಿಟ್ಟರೆ, ಇವರು ರಚಿಸಿದ ಕೃತಿಗಳ ಸಂಖ್ಯೆ 47. ಇವರ ಸಾಹಿತ್ಯವನ್ನು ಕಥೆ, ಕಾದಂಬರಿ, ಪ್ರಬಂಧ, ಜೀವನಚರಿತ್ರೆ ಮೊದಲಾದ ಪ್ರಕಾರಗಳನ್ನೊಳಗೊಂಡ ಶುದ್ಧಸಾಹಿತ್ಯ, ಅನುವಾದಸಾಹಿತ್ಯ, ಗಾಂಧೀಸಾಹಿತ್ಯವೆಂದು ಮೂರು ವಿಧವಾಗಿ ವಿಂಗಡಿಸಬಹುದು. ಇವರ ಮೊದಲನೆಯ ಪುಸ್ತಕ 'ಭಾರತದ ಸ್ವಾತಂತ್ರ್ಯ' ಪ್ರಕಟವಾಗಿದ್ದು 1930ರಲ್ಲಿ. ಇನ್ನೊಂದು ಮುಖ್ಯಕೃತಿ ಜನಪದ ಜೀವನ ಮತ್ತು ದರ್ಶನ (1974). ಇವರು ರಚಿಸಿರುವ ಹೇಮಾವತಿ (1948) ಎಂಬ ಕಾದಂಬರಿ ಹರಿಜನೋದ್ಧಾರ ಸಮಸ್ಯೆಗೆ ಸಂಬಂಧಿಸಿದ್ದು. ಯಾವುದೋ ಕ್ಷಣದಲ್ಲಿ ಜಾರಿಬಿದ್ದ ಹೆಣ್ಣು, ಎಚ್ಚೆತ್ತು ಉದ್ಧಾರವಾದ ಕಥೆ ಊರ್ವಶಿ ಕಾದಂಬರಿಯಲ್ಲಿದೆ. ತಿಳಿಯಾದ ಹಾಸ್ಯಲೇಖಕರೆಂದು ಇವರಿಗೆ ಕೀರ್ತಿ ತಂದ ಹಳ್ಳಿಯ ಚಿತ್ರಗಳು ಮತ್ತು ನಮ್ಮ ಊರಿನ ರಸಿಕರು ಎಂಬ ಪ್ರಬಂಧ ಗ್ರಂಥಗಳು ವೈದಿಕ ಮತ್ತು ಜನಪದ ಸಂಸ್ಕೃತಿಯನ್ನು ಮೈಗೂಡಿಸಿಕೊಂಡ ಸರಳ ನಿಃಸ್ಪೃಹ ಸಂತೃಪ್ತ ಗ್ರಾಮಜೀವನವನ್ನು ಚಿತ್ರಿಸುತ್ತವೆ. ಮೆರವಣಿಗೆ ಇವರ ಪ್ರಬಂಧಗಳಲ್ಲೆಲ್ಲ ಅತಿ ದೊಡ್ಡ ಗ್ರಂಥ. ಇದರಲ್ಲಿ ಹಾರುವರಿಂದ ಹಿಡಿದು ಹರಿಜನರವರೆಗಿನ ಎಲ್ಲ ರೀತಿಯ ಜನರನ್ನೂ ವಿವಿಧ ರೀತಿನೀತಿಯ ಅಧಿಕಾರಿ ವರ್ಗವನ್ನೂ ಅವರ ಗುಣದೋಷಗಳೊಡನೆ ಸಹಾನುಭೂತಿಯ ಕಣ್ಣಿನಿಂದ ನೋಡಿದ್ದಾರೆ. ಇವರ ಮಿಕ್ಕ ಪ್ರಬಂಧಗಳಲ್ಲಿ ಗರುಡಗಂಬದ ದಾಸಯ್ಯ (1965), ಹೇಮಾವತಿಯ ತೀರದಲ್ಲಿ ಮತ್ತು ಇತರ ಪ್ರಬಂಧಗಳು (1967), ಬೆಟ್ಟದ ಮನೆಯಲ್ಲಿ ಮತ್ತು ಇತರ ಪ್ರಬಂಧಗಳು (1972), ಕಥೆಗಳು ಮತ್ತು ವಿನೋದ ಚಿತ್ರಗಳು, ಬೈಲುಹಳ್ಳಿಯ ಸರ್ವೆ-ಈ ಗ್ರಂಥಗಳನ್ನು ಹೆಸರಿಸಬಹುದು. ಗೊರೂರರ ಪ್ರಬಂಧಗಳು ಯಾವಾಗ ಸಣ್ಣಕಥೆಗಳಾಗುತ್ತವೆಯೆಂದು ಹೇಳುವುದು ಕಷ್ಟ. ಇವರ ಪ್ರಬಂಧಗಳಲ್ಲಿ ಕಥೆ ಹುದುಗಿರುತ್ತದೆ. ಕಥೆ ಪ್ರಬಂಧದ ಆಕಾರವನ್ನೂ ತಾಳಬಹುದು. ಇವರ ಸಣ್ಣಕಥೆಗಳಲ್ಲಿ ವೈಯಾರಿ, ಶಿವರಾತ್ರಿ, ಕಮ್ಮಾರ, ವೀರಭದ್ರಾಚಾರಿ, ಉಸುಬು, ಕನ್ಯಾಕುಮಾರಿ ಮತ್ತು ಇತರ ಕತೆಗಳು, ಗೋಪುರದ ಬಾಗಿಲು, ಬೆಸ್ತರ ಕರಿಯ, ಬೂತಯ್ಯನ ಮಗ ಅಯ್ಯು ಮುಖ್ಯವಾದುವು. ತಮಿಳಿನಿಂದ ಕನ್ನಡಕ್ಕೆ ತಂದಿರುವ ಕೊನಷ್ಟೆ ಕಥೆಗಳಲ್ಲಿ ತಿಳಿಯಾದ ಹಾಸ್ಯ ಮಿನುಗುತ್ತದೆ. ಘನವಾದ ಭಾವನೆ ಮತ್ತು ವಸ್ತುಗಳನ್ನೊಳಗೊಂಡ ಕೆ.ಎಂ.ಮುನ್ಷಿಯವರ ಭಗವಾನ್ ಕೌಟಿಲ್ಯ, ರಾಮಚಂದ್ರ ಠಾಕೂರರ ರಾಜ ನರ್ತಕಿ, ವಿ.ಎಸ್.ಖಾಂಡೇಕರ ಅವರ ಕ್ರೌಂಚವಧೆ, ಟಾಲ್‌ಸ್ಟಾಯ್ ಅವರ ಕಾಸಕ್ಸ್ - ಈ ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಗೊರೂರರ ಗಾಂಧೀ ಸಾಹಿತ್ಯದ ಅನುವಾದಗಳಲ್ಲಿ ಆತ್ಮಕಥೆ ಅಥವಾ ನನ್ನ ಸತ್ಯಾನ್ವೇಷಣೆ, ಪೂರ್ಣಸ್ವದೇಶಿ, ಭಾಷಣಗಳು ಮತ್ತು ಹೇಳಿಕೆಗಳು -ಇವುಗಳನ್ನು ಮುಖ್ಯವಾಗಿ ಹೆಸರಿಸಬಹುದು. ಮಹಾತ್ಮ ಗಾಂಧೀಯವರ ದಕ್ಷಿಣಯಾತ್ರೆ, ಭಾರತ ಭಾಗ್ಯವಿಧಾತ -ಇವು ಗಾಂಧೀಜಿಯವರನ್ನು ಕುರಿತು ಇವರು ಬರೆದ ಸ್ವತಂತ್ರ ಕೃತಿಗಳು. ನಮ್ಮ ನಾಡಿನ ಹಲವು ಉದ್ಯಂಥಗಳನ್ನು ಕುರಿತ ವಿಮರ್ಶೆಗಳ ಸಂಗ್ರಹ, ಸಾಹಿತ್ಯ ರಶ್ಮಿ (1963) ಮತ್ತು ಸಾಹಿತ್ಯದ ಸ್ವರೂಪ, ಕಾಲಕಾಲಕ್ಕೆ ವೃದ್ಧಿಗೊಂಡು ನವೋದಯ ಕಾಲದ ಆರಂಭದಲ್ಲಿ ಹೊರಬಿದ್ದ ಹಳ್ಳಿಯ ಹಾಡುಗಳು(1938) ಸೊಗಸಾದ ಜನಪದ ಸಾಹಿತ್ಯದ ತ್ರಿಪದಿಗಳ ಸಂಗ್ರಹವಾದರೆ, ಹಳ್ಳಿಯ ಬಾಳು (1943) ಜನಪದ ಸಾಹಿತ್ಯದ ಮೇಲಿನ ಸೊಗಸಾದ ವ್ಯಾಖ್ಯಾನ.

ಆಗ್ನೇಯಕ್ಕೆ ಇರುವ ಕೋಟಿತೀರ್ಥ ಅತ್ಯಂತ ದೊಡ್ಡದು ಹಾಗೂ ಪ್ರಸಿದ್ಧವಾದದ್ದು. ಶಿವರಾತ್ರಿಯಂದು ದೇಶದ ನಾನಾ ಭಾಗಗಳಿಂದ ಬರುವ ಭಕ್ತರು ಈ ತೀರ್ಥದಲ್ಲಿ ಸ್ನಾನ ಮಾಡುತ್ತಾರೆ. ಈ ತೀರ್ಥದ ಆವರಣದೊಳಗೆ ಕಾಲಭೈರವೇಶ್ವರ, ಗರುಡ, ಅನಿರುದ್ಧ, ಅಗಸ್ತ್ಯೇಶ್ವರ, ವಸಿಷ್ಠೇಶ್ವರ ಮುಂತಾದ ಗುಡಿಗಳಿವೆ. ಅಲ್ಲದೆ ವೈಷ್ಣವ ಹಾಗೂ ಶಾಕ್ತಪಂಥೀಯ ದೇವತಾಮಂದಿರಗಳೂ ಇವೆ. ಇಂದೋರಿನ ರಾಣಿ ಅಹಲ್ಯಾಬಾಯಿ ಹೋಳ್ಕರ್ ಕಟ್ಟಿಸಿದಳೆಂದು ಹೇಳಲಾದ ಅಹಲ್ಯಾಬಾಯಿ ಗುಡಿ ಮತ್ತು ಛತ್ರ ಗಮನಾರ್ಹ.ಇದರ ಛಾವಣಿಯಲ್ಲಿರುವ ನಾಗಬಂಧ ವೈಶಿಷ್ಟ್ಯಪೂರ್ಣ. ಸು.6-7ನೆಯ ಶತಮಾನದ್ದೆಂದು ನಂಬಲಾದ ಗಣಪತಿ ವಿಗ್ರಹ ಕರ್ನಾಟಕದ ಪ್ರಾಚೀನ ಗಣೇಶ ವಿಗ್ರಹಗಳಲ್ಲೊಂದಾಗಿದೆ.

ಭಾರತದ ಶೈವತೀರ್ಥಕ್ಷೇತ್ರಗಳಲ್ಲಿ ಒಂದಾದ ಗೋಕರ್ಣ ಪ್ರೇಕ್ಷಣೀಯ ಪ್ರವಾಸಿ ಕೇಂದ್ರವೂ ಹೌದು. ಪ್ರತಿವರ್ಷ ಫಾಲ್ಗುಣ ಶುದ್ಧ ಪಾಡ್ಯದಂದು ನಡೆಯುವ ರಥೋತ್ಸವ ಹಾಗೂ ಶಿವರಾತ್ರಿ ಜಾತ್ರೆ ಅತ್ಯಂತ ಪ್ರಸಿದ್ಧ.

ಕಾಲೇಜು, ಸಂಸ್ಕೃತ ಪಾಠಶಾಲೆ ಮುಂತಾದ ಶೈಕ್ಷಣಿಕ ಸಂಸ್ಥೆಗಳೂ ಇಲ್ಲಿವೆ. ಖ್ಯಾತ ವೇದ ವಿದ್ವಾಂಸರಾದ ಮಹರ್ಷಿ ದೇವರಾತ (ನೋಡಿ) ಈ ಊರಿನಲ್ಲಿದ್ದರು. ಈ ಊರಿಗೆ ಭೂಮಾರ್ಗ ಮತ್ತು ಜಲಮಾರ್ಗಗಳೆರಡರಿಂದಲೂ ಹೋಗಬಹುದಾಗಿದೆ. ಗೋಕರ್ಣಕ್ಕೆ 3ಕಿಮೀ ದೂರದ ತದಡಿ ಬಂದರಿಗೆ ಉಗಿಹಡಗಿನಿಂದ ಹೋಗಬಹುದು. ಅನಂತರ ದೋಣಿಯ ಮೂಲಕ ಪ್ರವಾಸ. ಕಾರವಾರ ತಲುಪಿ ಕರಾವಳಿ ಹಾದಿಯಲ್ಲೂ ಅಥವಾ ಹುಬ್ಬಳ್ಳಿಯಿಂದ ರಸ್ತೆ ಮಾರ್ಗವಾಗಿಯೂ ಗೋಕರ್ಣವನ್ನು ತಲುಪಬಹುದು. ಈ ಊರಿನ ಸಮೀಪದ ಓಂ ಬೀಚ್ ಪ್ರೇಕ್ಷಣೀಯ ಸ್ಥಳಗಳಲ್ಲಿ ಒಂದು. (ಎಚ್.ಆರ್.ಆರ್.ಬಿ.,ಎಸ್.ಕೆ.ಬಿ.)

**ಗೋಕಾಕ** : ಬೆಳಗಾಂವಿ ಜಿಲ್ಲೆಯ ಒಂದು ತಾಲ್ಲೂಕು. ಆ ತಾಲ್ಲೂಕು ಮತ್ತು ಹೋಬಳಿ ಕೇಂದ್ರ. ಈ ತಾಲ್ಲೂಕಿನ ಪೂರ್ವಕ್ಕೆ ಬಿಜಾಪುರ ಜಿಲ್ಲೆ, ಆಗ್ನೇಯದಲ್ಲಿ ರಾಮದುರ್ಗ, ದಕ್ಷಿಣದಲ್ಲಿ ಸವದತ್ತಿ, ನೈಋತ್ಯಕ್ಕೆ ಬೈಲಹೊಂಗಲ ಮತ್ತು ಬೆಳಗಾಂವಿ, ಪಶ್ಚಿಮಕ್ಕೆ ಹುಕ್ಕೇರಿ, ವಾಯವ್ಯಕ್ಕೆ ಚಿಕ್ಕೋಡಿ ಮತ್ತು ಉತ್ತರದಲ್ಲಿ ರಾಯಬಾಗ ತಾಲ್ಲೂಕುಗಳು ಇವೆ. ಗೋಕಾಕ ತಾಲ್ಲೂಕಿನಲ್ಲಿ ಅರಭಾವಿ, ಗೋಕಾಕ ಮತ್ತು ಕೌಜಲಗಿ ಹೋಬಳಿಗಳಿದ್ದು ಒಟ್ಟು 104 ಹಳ್ಳಿಗಳೂ 2 ಪಟ್ಟಣಗಳೂ ಇವೆ. ತಾಲ್ಲೂಕಿನ ವಿಸ್ತೀರ್ಣ 1,539.7ಚ.ಕಿಮೀ. ಜನಸಂಖ್ಯೆ 5,25,865.

ತಾಲ್ಲೂಕಿನ ಪಶ್ಚಿಮ ಭಾಗ ಗುಡ್ಡಗಾಡು. ಉಳಿದ ಭಾಗ ಸಮತಟ್ಟಾಗಿದೆ. ಗೋಕಾಕ ಪಟ್ಟಣದ ಬಳಿ ಇರುವ ನಾರಾಯಣಗುಡ್ಡ ತಾಲ್ಲೂಕಿನ ಅತ್ಯಂತ ಎತ್ತರದ ಸ್ಥಳ. ಘಟಪ್ರಭಾ ಮತ್ತು ಮಾರ್ಕಂಡೇಯ ಈ ತಾಲ್ಲೂಕಿನಲ್ಲಿ ಹರಿಯುವ ನದಿಗಳು. ಘಟಪ್ರಭಾ ನದಿ ಈ ತಾಲ್ಲೂಕಿನ ಮಧ್ಯದಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತದೆ. ಈ ನದಿಯ ಗೋಕಾಕ ಧಬಧಬೆ ಜಲಪಾತ ಪಟ್ಟಣದ ವಾಯುವ್ಯಕ್ಕೆ ಸು.12ಕಿಮೀ ದೂರದಲ್ಲಿದೆ. ಗೋಕಾಕದ ಬಳಿ ಇರುವ ಪಂಚಮಿಗುಡ್ಡದಲ್ಲಿ ಹಲವು ಬಗೆಯ ಶಿಲೆಗಳು ದೊರಕುತ್ತವೆ. ಗೋಕಾಕದ್ದು ಉಷ್ಣ ವಾಯುಗುಣ. ವಾರ್ಷಿಕ ಸರಾಸರಿ ಮಳೆ 589.08ಮಿಮೀ. ಭೂಮಿ ಕಪ್ಪು ಮತ್ತು ಕಪ್ಪು ಮಿಶ್ರಿತ ಕೆಂಪು ಮಣ್ಣಿನದು. ಹತ್ತಿ, ಜೋಳ ಇಲ್ಲಿಯ ಮುಖ್ಯ ಬೆಳೆಗಳು. ಬೇಳೆ ಕಾಳುಗಳೂ ಬೆಳೆಯುತ್ತವೆ. ಗೋಕಾಕ ಧಬಧಬೆಯ ಬಳಿ ಒಂದು ಜವಳಿ ಗಿರಣಿ ಮತ್ತು ಸಣ್ಣ ಗಾತ್ರದ ಒಂದು ವಿದ್ಯುದುತ್ಪಾದನ ಕೇಂದ್ರ ಇವೆ. ಇಲ್ಲಿ ನಿರ್ಮಿಸಲಾದ ಜಲಾಶಯದಿಂದ ಸುತ್ತಣ ಪ್ರದೇಶಕ್ಕೆ ನೀರಾವರಿ ಸೌಲಭ್ಯವೂ ಒದಗಿದೆ. ಧಬಧಬೆಯ ಹತ್ತಿರ ಒಂದು ತೂಗುಸೇತುವೆಯುಂಟು.

ಈ ತಾಲ್ಲೂಕಿನ ಪಶ್ಚಿಮದ ಎಲ್ಲೆಯುದ್ದಕ್ಕೂ ಬೆಳಗಾಂವಿ ಪುಣೆ ರೈಲುಮಾರ್ಗ ಹಾದುಹೋಗಿದೆ. ತಾಲ್ಲೂಕಿನಲ್ಲಿ ಉತ್ತಮ ರಸ್ತೆಗಳಿವೆ. ಈ ತಾಲ್ಲೂಕಿನ ಕೆಲವು ಮುಖ್ಯ ಸ್ಥಳಗಳಲ್ಲಿ ಅಂಕಲಗಿ ಗೋಕಾಕಕ್ಕೆ ನೈಋತ್ಯದಲ್ಲಿದೆ. ಇಲ್ಲಿಯ ಲಕ್ಷ್ಮಿಗುಡಿ ಮತ್ತು ವಿರಕ್ತಮಠ ಪ್ರಸಿದ್ಧವಾದವು. ಗೋಕಾಕ ಪಟ್ಟಣಕ್ಕೆ ಈಶಾನ್ಯದಲ್ಲಿ 11ಕಿಮೀ ದೂರದಲ್ಲಿರುವ ಕಲ್ಲೋಳಿಯಲ್ಲಿ (ನೋಡಿ) 1218ರ ಒಂದು ಜೈನಬಸದಿಯೂ ಒಂದು ಮಾರುತಿ ದೇವಾಲಯವೂ ಇವೆ. ಈ ತಾಲ್ಲೂಕಿನ ಕುಲಗೋಡದ ಬಲಭೀಮನ ದೇವಾಲಯ, ಕೌಜಲಗಿಯ ಹನುಮಂತ ದೇವರ ದೇವಾಲಯ ಪ್ರಸಿದ್ಧವಾದವು. ಬೈರನಹಳ್ಳಿಯ ರಾಮಮಂದಿರ, ರಾಮತೀರ್ಥ ಮತ್ತು ಇಲ್ಲಿ ನಡೆಯುವ ಶ್ರಾವಣಮಾಸದ ಜಾತ್ರೆ ಪ್ರಸಿದ್ಧ. ಯಾದವಾಡದ ಬಸವಣ್ಣನ ದೇವಾಲಯ, ಸುಣಧೋಳಿಯ ಜಡಿಯಪ್ಪನ ಮಂದಿರ ಹೆಸರಾದವು.

**ಪಟ್ಟಣ** : ಬೆಳಗಾಂವಿಗೆ ಈಶಾನ್ಯದಲ್ಲಿ 68ಕಿಮೀ ದೂರದಲ್ಲೂ ದಕ್ಷಿಣ ರೈಲ್ವೆ ಮಾರ್ಗದ ಗೋಕಾಕ ರೋಡ್ ನಿಲ್ದಾಣದಿಂದ 15ಕಿಮೀ ದೂರದಲ್ಲೂ ಇದೆ. ಜನಸಂಖ್ಯೆ 67,166. ಬಣ್ಣದ ಆಟಿಕೆಗಳಿಗೂ ಕರದಂಟು ಎಂಬ ಸಿಹಿ ಖಾದ್ಯಕ್ಕೂ ಈ ಊರು ಪ್ರಸಿದ್ಧ. ಗೋಕಾಕದ ಆಟಿಕೆ ಕೈಗಾರಿಕೆ 150 ವರ್ಷಗಳಷ್ಟು ಹಳೆಯದಾಗಿದ್ದು ಇಲ್ಲಿ ತಯಾರಾಗುವ ಆಟಿಕೆಗಳು ಹೊರದೇಶಗಳಿಗೂ ಮುಖ್ಯವಾಗಿ ಅಮೆರಿಕಕ್ಕೆ ನಿರ್ಯಾತವಾಗುತ್ತವೆ. ಆದರೆ ಈಗ ಈ ಕಸಬುದಾರರ ಸಂಖ್ಯೆ ಕಡಿಮೆಯಾಗಿದೆ. ಅವರಿಗೆ ಉತ್ತೇಜನ ನೀಡಲು ಒಂದು ಸಹಕಾರ ಸಂಘವುಂಟು. ಬಟ್ಟೆ ನೇಯುವ ಮತ್ತು ಅದಕ್ಕೆ ಬಣ್ಣ ಹಾಕುವ ಕಸಬುಗಳು ಉತ್ತಮ ಸ್ಥಿತಿಯಲ್ಲಿದ್ದು ಕ್ರಮೇಣ ನಶಿಸಿದ್ದುವು. ಸರ್ಕಾರ ಇವಕ್ಕೆ ಈಚೆಗೆ ಪ್ರೋತ್ಸಾಹ ನೀಡುತ್ತಿದೆ. (ಎನ್.ಸಿ.ವಿ.)

ಚಿದಂಬರೇಶ್ವರರ ಶಿಷ್ಯರಾದ ಬೋಕೆಮಹಾರಾಜರು ಗೋಕಾಕದವರು. ಗಳಗನಾಥರು ತಮ್ಮ ಮಹಾಭಾರತದ ಆದಿಪರ್ವವನ್ನು ಇಲ್ಲಿಯ ವೆಂಕಟೇಶ್ವರ ಗುಡಿಯಲ್ಲಿ ಕುಳಿತು ಬರೆದರು. ಆದಿಶಂಕರಾಚಾರ್ಯರ ದೊಡ್ಡ ಗುಡಿ ಇಲ್ಲಿದೆ. ಅಖಿಲಭಾರತ ಖ್ಯಾತಿಯ ಚಿತ್ರಗಾರರಾದ ಸಾಂಬಪ್ಪ ಚಿತ್ರಗಾರ, ಶಂಕರಪ್ಪ ಚಿತ್ರಗಾರ ಗೋಕಾಕದವರು. ಅವರು ತಯಾರಿಸಿದ ಗಣಪತಿಗಳು ಅನೇಕ ರಾಜ್ಯಗಳಲ್ಲಿ ಪ್ರಸಿದ್ಧಿ ಪಡೆದಿವೆ. ಇಲ್ಲಿ ಪುರಸಭಾಡಳಿತವಿದೆ.

ಗೋಕಾಕಕ್ಕೆ ಸಾಕಷ್ಟು ಪ್ರಾಚೀನ ಇತಿಹಾಸವುಂಟು. 1047ರ ಒಂದು ಶಾಸನದಲ್ಲಿ ಈ ಸ್ಥಳವನ್ನು ಗೋಕಾಗೆ ಎಂದು ಉಲ್ಲೇಖಿಸಿದೆ. ಇಲ್ಲಿರುವ ಬೆಟ್ಟದ ಮೇಲಿನ ಕೋಟೆಯನ್ನು ಬಿಜಾಪುರದ ಆದಿಲ್‌ಶಾಹೀ ಸುಲ್ತಾನನೊಬ್ಬ ಕಟ್ಟಿಸಿದ್ದೆಂದು ಪ್ರತೀತಿ. 1685ರಲ್ಲಿ ಈ ಊರು ಅಂದಿನ ಸ್ಥಳೀಯ ಸರ್ಕಾರದ ಕೇಂದ್ರವಾಗಿತ್ತು. 1717-54ರಲ್ಲಿ ಸವಣೂರು ನವಾಬರ ಅಧೀನಕ್ಕೆ ಒಳಪಟ್ಟಿತ್ತು. ಆಗ ಇಲ್ಲಿ ಹಲವು ಮಸೀದಿಗಳ ನಿರ್ಮಾಣವಾಯಿತು. ಅನಂತರ ಮತ್ತೆ ಮರಾಠ ವಂಶವೊಂದರ ವಶಕ್ಕೆ ಬಂದ ಈ ಪಟ್ಟಣ ಗೋವಿಂದರಾವ್ ಪಟವರ್ಧನರ ನಿಧನಾನಂತರ 1836ರಲ್ಲಿ ಇಂಗ್ಲಿಷರ ವಶವಾಯಿತು. *

**ಗೋಕಾಕ ಧಬಧಬೆ** : ಬೆಳಗಾಂವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಘಟಪ್ರಭಾ ನದಿಯ ಒಂದು ಸುಂದರ ಜಲಪಾತ. ಗೋಕಾಕ ಪಟ್ಟಣದ



ಗೋಕಾಕ ಧಬಧಬೆಯ ಒಂದು ರಮ್ಯ ನೋಟ

ವಾಯುವ್ಯಕ್ಕೆ 12ಕಿಮೀ ದೂರದಲ್ಲಿದೆ. ಗೋಕಾಕ ರೋಡ್ ರೈಲ್ವೆ ನಿಲ್ದಾಣದಿಂದ 5ಕಿಮೀ ದೂರದಲ್ಲಿದೆ. ಜಲಪಾತ ಕುದುರೆಲಾಳದಾಕಾರವಿದ್ದು

ಪ್ರಕಾರ ವಿಭಿನ್ನತೆಯು ಗುರುತಿಸುವ ಪುರಾಣದರ್ಶನವಾಗಿದೆ (ಎಪಿಕ್ ವಿಷನ್). ವ್ಯಕ್ತಿವ್ಯಕ್ತಿಗಳ ಸ್ತೋತ್ರಾರ್ಹ ಗುಣಗಳನ್ನು ಅದು ಬಣ್ಣಿಸಿದರೂ ತನ್ನ ವಿಮರ್ಶಕ ಗುಣವನ್ನು ಬಿಡದೆ, ತನ್ನ ವ್ಯಕ್ತಿಗತ ಮನೋಧರ್ಮದ ಬೆಳೆವಣಿಗೆಯಲ್ಲಿ ಅವರನ್ನು ಪಾಲುಗಾರರನ್ನಾಗಿ ಮಾಡುತ್ತದೆ. ಊರ್ಣನಾಭದಲ್ಲಿ (1961) ಮತ್ತೆ ತಾಂತ್ರಿಕ ಪ್ರಯೋಗಶೀಲತೆ, ಇಂದಿಲ್ಲ ನಾಳೆ (1965) ಎಂಬ ಕೃತಿಯಲ್ಲಿ ಮತ್ತೆ ಚಂಪೂ ಪ್ರಯೋಗ, ತ್ರಿಶಂಕುವಿನ ಪ್ರಜ್ಞಾಪ್ರಭಾತ (1965) ಮತ್ತು ಪುಣ್ಯ ಭೂಮಿಗಳಲ್ಲಿ (1966) ಮತ್ತೆ ಬುದ್ಧಿಭಾವಗಳ ಎರಕ ಕಂಡುಬಂದಿವೆ. ಭಾವರಾಗ ಎಂಬ ಗ್ರಂಥ (1969) ಪಯಣವೆಂಬ ಸಂಗ್ರಹದ ಕೋಮಲ ಭಾವಪರತೆಯನ್ನು ಛಂದಸ್ಸಿನ ಶಾಸನಕ್ಕೆ ಸಮರ್ಥವಾಗಿ ಇಳಿಸಿದ ಕವಿಪ್ರತಿಭೆ ಇನ್ನೂ ಯಾವ ಹೊಸ ದಾರಿ ತುಳಿದೀತೆಂಬ ನೇಮುಕಗಳನ್ನು ಕಾಣಿಸುವುದಿಲ್ಲ. ಕೊನೆಯು ದಿನ (1970), ಭಾಗವತ ನಿಮಿಷಗಳು (1972), ಸಿಮ್ಲಾ ಸಿಂಪೋನಿ (1973) - ಇವು ಇವರ ಇತರ ಕವನ ಸಂಕಲನಗಳು. ಗೋಕಾಕರೇ ಹುಟ್ಟು ಹಾಕಿದ ನವ್ಯಕಾವ್ಯದಿಂದ ಪ್ರಬುದ್ಧಗೊಂಡ ಹೊಸ ಪೀಳಿಗೆಯ ವಿಮರ್ಶಕರ ಕಣ್ಣಿಗೆ ಅವರ ಚಿಂತನಪರ ಕಾವ್ಯವೊಂದೇ ಕಂಡದ್ದು ವಿಪರ್ಯಾಸಕ್ಕೆ ಕಾರಣವಾಗಿದೆ. ಇವರ ಇಜ್ಜೋಡು (1934) ಲೋಕಾನುಭವದಿಂದ ತುಂಬಿದ ಮಾರ್ಗದರ್ಶಿ ಕಾದಂಬರಿಗಳಲ್ಲೊಂದು. ಇದೇ ಕಾದಂಬರಿ ಅನಂತರ ಬೆಳೆದು ಸಮರಸವೇ ಜೀವನ (1967) ಎಂಬ ಮಹಾ ಕಾದಂಬರಿಯಾಯಿತು. 1,268 ಪುಟಗಳಷ್ಟು ದೊಡ್ಡದಾಗಿರುವ ಈ ಕಾದಂಬರಿ ತನ್ನ ವೈಶಾಲ್ಯಕ್ಕೆ ಕ್ಷೇತ್ರಬಾಹುಳ್ಯಕ್ಕೆ ಪಾತ್ರ ಬಾಹುಳ್ಯಕ್ಕೆ ಅಗತ್ಯವಾದ ಸಂವಿಧಾನ ಕೌಶಲವನ್ನೂ ಜೀವನಾನುಭವವನ್ನೂ ದರ್ಶನವನ್ನೂ ಪ್ರದರ್ಶಿಸುತ್ತದೆ.

ದ್ಯಾವಾಪೃಥಿವೀಯಲ್ಲಿ ಪರಸ್ಪರ ಪೂರಕವಾದ ನೀರದ ಮತ್ತು ಇಳಾಗೀತವೆಂಬ ಎರಡು ಭಾಗಗಳಿವೆ. ನೆಲದಲ್ಲಿ ನಿಂತು ಆಕಾಶವನ್ನು ಕಂಡ ಪರಿ ನೀರದದಲ್ಲಿ ಅಭಿವ್ಯಕ್ತವಾಗಿದ್ದರೆ ಆಕಾಶದಿಂದ ನೆಲದತ್ತ ಹಾಯಿಸಿದ ದೃಷ್ಟಿ ಇಳಾಗೀತದಲ್ಲಿ ಕಾಣುತ್ತದೆ. ನೀರದದಲ್ಲಿ ಮೋಡ ಕಾಮರೂಪಿಯಾಗಿ ಮರ್ತ್ಯಜೀವನಕ್ಕೊಡ್ಡಿದ ಬಹುಬಗೆಯ ಪ್ರತಿಮೆಯಾಗಿ ನಾನಾರ್ಥವ್ಯಂಜಕವಾಗಿ ಕಾಣಿಸಿಕೊಳ್ಳುತ್ತದೆಯಲ್ಲದೆ ಒಮ್ಮೊಮ್ಮೆ ಒಂದೊಂದು ತತ್ತ್ವವನ್ನು ಪ್ರಕಟಿಸುತ್ತದೆ. ಇಳಾಗೀತದಲ್ಲಿ ಕವಿ ಬೆಳಗಾಂವಿಯಿಂದ ದೆಹಲಿಯವರೆಗೆ ವಿಮಾನಯಾನ ಮಾಡಿದಾಗ ಕಂಡ ಭೌಗೋಳಿಕ ದೃಶ್ಯಗಳು ವಿವಿಧ ಪ್ರತಿಮೆಗಳಾಗಿ ಬರುತ್ತವೆ. ಒಟ್ಟು ಕೃತಿಯ ಉದ್ದಕ್ಕೂ ಕವಿಯ ಕಲ್ಪನಾ ವಿಲಾಸ, ಚಿಂತನಪರತೆ, ಪುರಾಣಪರಿಜ್ಞಾನ, ಆಧ್ಯಾತ್ಮಿಕ ಶ್ರದ್ಧೆ, ವೈಜ್ಞಾನಿಕ ದೃಷ್ಟಿ ವೇದ್ಯವಾಗುತ್ತವೆ.

ವಿಶ್ವಮಾನವನಾಗಿ, ಬ್ರಹ್ಮರ್ಷಿಯಾಗಿ, ವೇದ ದ್ರಷ್ಟಾರನಾಗಿ ಕ್ಷತ್ರಿಯದೊರೆಯಾಗಿ ಮಹಾಯೋಗಿಯಾಗಿ ಬದುಕಿ ಬಾಳಿದ ವಿಶ್ವಾಮಿತ್ರ ಪಾತ್ರವನ್ನು ಕೇಂದ್ರವಾಗಿಟ್ಟುಕೊಂಡು, ಆರ್ಯದಸ್ಯು ಸಂಸ್ಕೃತಿಗಳ ಸಂಗಮ ಹಾಗೂ ಸಂಘರ್ಷಗಳನ್ನು ಭಾರತ ಸಿಂಧುರಶ್ಮಿ ಎಂಬ ಮಹಾಕಾವ್ಯದಲ್ಲಿ ಚಿತ್ರಿಸಿದ್ದಾರೆ. ಈ ಮಹಾಕಾವ್ಯ ಸರಳ ರಗಳೆಯ ಛಂದಸ್ಸಿನಲ್ಲಿ ರಚಿತವಾಗಿದೆ.

ಗೋಕಾಕರ ವಿಮರ್ಶಾಪ್ರಜ್ಞೆ ಕೇವಲ ಇಂಗ್ಲಿಷ್ ವಿಮರ್ಶೆಗೆ ಎಂದೂ ಮಾರು ಹೋಗಿಲ್ಲ. ಕನ್ನಡ ನೆಲದಿಂದ ಅದು ಪುನಃ ಪುನಃ ಶಕ್ತಿ ಪಡೆದಿದೆಯಲ್ಲದೆ ಮಾರ್ಗದರ್ಶಿಯೂ ಆಗಿದೆ. ಕನ್ನಡದಲ್ಲಿ ವಿಮರ್ಶೆಯು ಕೃತಿಗಳು ವಿರಳವಾಗಿದ್ದ ಸಂದರ್ಭದಲ್ಲಿ ಕವಿಕಾವ್ಯ ಮಹೋನ್ನತಿ (1956) ಎಂಬ ಇವರ ಕೃತಿ ಬಂತು. ರಸಕಾವ್ಯ ಪ್ರಗಲ್ಭಗೊಂಡಾಗ -ಇಂದಿನ ಕನ್ನಡ ಕಾವ್ಯದ ಗೊತ್ತುಗುರಿಗಳು (1946) ಎಂಬ ಗ್ರಂಥ ಬಂತು. ನವ್ಯಕಾವ್ಯ ಬಲಿತು ತನ್ನನ್ನೇ ತಾನು ಅರಿಯಲು ಯತ್ನಿಸುತ್ತಿದ್ದಾಗ ನವ್ಯತೆ ಹಾಗೂ ಕಾವ್ಯ ಜೀವನ (1955) ಎಂಬ ಕೃತಿ ರಚಿತವಾಯಿತು. ವಿಶ್ವಮಾನವದೃಷ್ಟಿ (1971), ಸೌಂದರ್ಯ ಮೀಮಾಂಸೆ (1973), ಆಂಗ್ಲ ಸಾಹಿತ್ಯ ನೀಡಿದ ಸ್ಫೂರ್ತಿ (1973), ಅರ್ಪಣದೃಷ್ಟಿ (1973) ಮೊದಲಾದ ಕೃತಿಗಳಲ್ಲಿ ನಾವು ಗೋಕಾಕರ ವೈಚಾರಿಕ ನಿಲವನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಹೀಗೆ ಸಾಮಯಿಕ ಪ್ರಜ್ಞೆ ಗೋಕಾಕರ ವಿಮರ್ಶೆಯ ಗುಣವಾಗಿದೆ. ಗೋಕಾಕರು ಜನನಾಯಕ (1939), ವಿಮರ್ಶಕ ವೈದ್ಯ (1947), ಯುಗಾಂತರ (1947), ಮುನಿದ ಮಾರಿ (1970) ನಾಟಕಗಳನ್ನು ರಚಿಸಿದ್ದಾರೆ. ಆದರೆ ಇವೆಲ್ಲ ಪ್ರಯೋಗಶೀಲ ನಾಟಕಗಳು. ಇವು ಹೆಚ್ಚಿನ ಯಶ ಪಡೆದುಕೊಳ್ಳಲಿಲ್ಲ.

ಗೋಕಾಕರು ಇಂಗ್ಲಿಷ್‌ನಲ್ಲೂ ಕೃತಿರಚನೆ ಮಾಡಿದ್ದಾರೆ. ದಿ ಸಾಂಗ್ ಆಫ್ ಲೈಫ್ (1947), ಇನ್ ಲೈಫ್ಸ್ ಟೆಂಪಲ್ (1965) - ಇವು ಇವರ ಕಾವ್ಯ ಸಂಕಲನಗಳು. ನರಹರಿ ಪ್ರಾಫೆಟ್ ಆಫ್ ನ್ಯೂ ಇಂಡಿಯಾ (1972) ಎಂಬುದು ಇವರ ಇಂಗ್ಲಿಷ್ ಕಾದಂಬರಿ. ಇವರು ಇಂಗ್ಲಿಷಿನಲ್ಲಿ ಕಾವ್ಯವಿಮರ್ಶೆ ಮಾಡುವಲ್ಲಿ, ಸ್ವತಂತ್ರ ಭಾರತದಲ್ಲಿ ಇಂಗ್ಲಿಷ್ ನಿರ್ವಹಿಸಬೇಕಾದ ಕಾರ್ಯವನ್ನು ನಿಟ್ಟುಗೊಳಿಸುವಲ್ಲಿ ದಿ ಪೊಯಿಟಿಕ್ ಅಪ್ರೋಚ್ ಟು ಲಾಂಗ್ವೇಜ್ (1952), ಇಂಗ್ಲಿಷ್ ಇನ್ ಇಂಡಿಯ, ಇಟ್ಸ್ ಪ್ರಸೆಂಟ್ ಅಂಡ್ ಫ್ಯೂಚರ್ (1962), ಇಂಡಿಯ ಅಂಡ್ ವರ್ಲ್ಡ್ ಕಲ್ಚರ್ (1972), ಎಸ್ಸೇಸ್ ಇನ್ ಇಂಡೊ ಆಂಗ್ಲಿಯನ್ ಲಿಟರೇಚರ್ (1973) ಎಂಬ ಗ್ರಂಥಗಳನ್ನು ರಚಿಸಿದ್ದಾರೆ. (ಎಸ್.ಎಂ.ಪಿ.)

ದಿ ಗೋಲ್ಡನ್ ಟ್ರೆಶರಿ ಆಫ್ ಇಂಡೋ ಆಂಗ್ಲಿಯನ್ ಪೊಯಿಟ್ರಿ ಎಂಬ ಒಂದು ಕಾವ್ಯ ಸಂಕಲನ ಇವರ ಸಂಪಾದಕತ್ವದಲ್ಲಿ ಪ್ರಕಟವಾಗಿದೆ (1970). ದ.ರಾ.ಬೇಂದ್ರೆ ಹಾಗೂ ಅರವಿಂದರನ್ನು ಕುರಿತು ಇಂಗ್ಲಿಷ್‌ನಲ್ಲಿ ಡಿ.ಆರ್.ಬೇಂದ್ರೆ, ಪೊಯೆಟ್ ಅಂಡ್ ಸೀರ್ (1973), ಶ್ರೀ ಅರವಿಂದೊ, ಸೀರ್ ಅಂಡ್ ಪೊಯೆಟ್ (1973) ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ತಮ್ಮ ಬದುಕಿನುದ್ದಕ್ಕೂ ಇಂಗ್ಲಿಷ್ ಭಾಷಾ ಸಾಹಿತ್ಯದ ನಿಕಟ ಸಂಬಂಧಿಗಳಾಗಿದ್ದರೂ ಗೋಕಾಕರ ಪ್ರತಿಭೆ ಮೊದಲಿಂದ ಕೊನೆಯವರೆಗೆ ಕನ್ನಡದತ್ತ ಒಲಿದಿತ್ತು. ಇವರು 1992 ಏಪ್ರಿಲ್ 28ರಂದು ನಿಧನರಾದರು.

ಗೋಕಾಕರು ಇಂಗ್ಲೆಂಡಿಗೆ ಮೂರು ಬಾರಿ ಹೋಗಿ ಬಂದುದಲ್ಲದೆ ಜಪಾನಿಗೂ (1957) ಅಮೆರಿಕ ಸಂಯುಕ್ತಸಂಸ್ಥಾನಗಳಿಗೂ (1958) ಬೆಲ್ಜಿಯಮ್ಮಿಗೂ (1959) ಪೂರ್ವ ಆಫ್ರಿಕಕ್ಕೂ (1961) ಭೇಟಿ ಕೊಟ್ಟಿದ್ದರು. ಕವಿಗಳೂ ವಿಮರ್ಶಕರೂ ಶಿಕ್ಷಣತಜ್ಞರೂ ಆದ ಇವರನ್ನು ಕನ್ನಡನಾಡು ಅನೇಕ ಬಗೆಯಲ್ಲಿ ಗೌರವಿಸಿದೆ. ರಾಯಚೂರು ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷತೆ (1934), ಮುಂಬಯಿ ಸಾಹಿತ್ಯ ಸಮ್ಮೇಳನ ಕವಿಗೋಷ್ಠಿಯ ಅಧ್ಯಕ್ಷತೆ (1950), ಬಳ್ಳಾರಿಯಲ್ಲಿ ನಡೆದ 40ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ (1958), ಪಿ.ಇ.ಎನ್. ಅಧಿವೇಶನ (1957) ಮತ್ತು ಅಂತಾರಾಷ್ಟ್ರೀಯ ಕವಿಮೇಳಗಳ (1955) ಸದಸ್ಯತ್ವ, ದ್ಯಾವಾಪೃಥಿವೀ ಕೃತಿಗಾಗಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಬಹುಮಾನ ಹಾಗೂ ಪದ್ಮಶ್ರೀ ಪ್ರಶಸ್ತಿ (1961), ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿ (1967), ಯೂನಿವರ್ಸಿಟಿ ಆಫ್ ಪೆಸಿಫಿಕ್ ವಿಶ್ವವಿದ್ಯಾಲಯದ (ಅಮೆರಿಕ) ಗೌರವ ಡಾಕ್ಟರೇಟ್ ಪದವಿ, ವಿನಾಯಕ ವಾಙ್ಮಯ ಪ್ರಶಸ್ತಿ ಗ್ರಂಥ ಸಮರ್ಪಣೆ (1969) ಇತ್ಯಾದಿ ಗೌರವಗಳು ಇವರಿಗೆ ಸಂದಿವೆ. ಇವರ ಭಾರತ ಸಿಂಧುರಶ್ಮಿ ಮಹಾಕಾವ್ಯಕ್ಕೆ 1990ರ ಜ್ಞಾನಪೀಠ ಪ್ರಶಸ್ತಿ ಲಭಿಸಿದೆ. *

**ಗೋಗಿ :** ಗುಲ್ಬರ್ಗ ಜಿಲ್ಲೆ ಶಾಹಪುರ ತಾಲ್ಲೂಕಿನಲ್ಲಿ ಕಸಬೆಯಿಂದ 11ಕಿಮೀ ಪಶ್ಚಿಮಕ್ಕೆ ಸಿಂದಗಿ ರಸ್ತೆಯಲ್ಲಿರುವ ದೊಡ್ಡ ಗ್ರಾಮ. ಆದಿಲ್‌ಶಾಹೀ ಅರಸರ ಕಾಲದ ಅನೇಕ ವಾಸ್ತುಕೃತಿಗಳಿಂದ ಪ್ರಸಿದ್ಧವಾಗಿದೆ. ಊರಿಗೆ ಸ್ವಲ್ಪ ದೂರದಲ್ಲಿ ಹೆದ್ದಾರಿಗೆ ಸಮೀಪವಾಗಿ ಇರುವ ಕಾಲಿ ಮಸೀದಿ ಸುಂದರವಾದ ಪ್ರಮುಖ ಕೃತಿ. ಇಬ್ರಾಹೀಂ ಆದಿಲ್‌ಷಾನ (1580-1627) ಮಗಳು ಸುಲ್ತಾನಾ ಫಾತಿಮಾ ಇದನ್ನು ಕಟ್ಟಿಸಿದಳೆಂಬ ಹೇಳಿಕೆಯಿದ್ದರೂ ಶೈಲಿಯನ್ನು ನೋಡಿದಲ್ಲಿ 15ನೆಯ ಶತಮಾನದ ಕಡೆಯ ಭಾಗದಲ್ಲಿ ಇದರ ನಿರ್ಮಾಣವಾಗಿರಬೇಕೆಂದು ತೋರುತ್ತದೆ. ಮಸೀದಿಯ ಮುಖಭಾಗದ ಕಮಾನುಗಳಲ್ಲಿ ಹಲವು ಕಾರ್ನಿಸುಗಳ ಅಲಂಕರಣವಿದೆ. ಪ್ರಾರ್ಥನಾಮಂದಿರದ ಒಳಚಾವಣಿ ಗೋಲಾಕೃತಿಯಲ್ಲಿದ್ದು ಅಕ್ಕಪಕ್ಕಗಳಲ್ಲಿ ಜಾಲಕಾಲಂಕರಣವಿದೆ. ಮುಂದಿನ ಗೋಡೆ ಎರಡು ಅಂತಸ್ತುಗಳಲ್ಲಿ ಮೇಲೆದ್ದು ಮೇಲಂತಸ್ತಿನಲ್ಲಿ ಮುಂದೊಂದು ಅಲಂಕೃತ ಅಡ್ಡಗೋಡೆ ಅದರ ಎರಡು ಕಡೆಯೂ ಕಿರುಗಂಬ ಮತ್ತು ಕಮಾನು. ಮೇಲೆ ಸಾಲಾಗಿ ಚಾಚುಪೀಠಗಳು, ಅವುಗಳನ್ನು ನೆಮ್ಮಿಕೊಂಡು ಇಳಿಜಾರು ಲೋವೆಗಳು ಇದ್ದು ಮೇಲಿನ ಪಾಗಾರಕ್ಕೆ ಕೆಳಗೆ ಒಂದು ಸಾಲು ಕಿರುಕಮಾನುಗಳ ಅಲಂಕರಣ, ಮೇಲೆ ಎಲೆಬಳ್ಳಿಗಳಾಕೃತಿಯಲ್ಲಿ ಬಿಡಿಸಿರುವ ತೆನೆಯ ಸಾಲು, ನಡುವೆ ಒಂದೊಂದು ಮಿನರೆಟ್ಟು ಇವೆ. ಮಿಹ್ರಾಬಿನ ಮೇಲೆ ಎತ್ತರವಾದ ಆದರೆ ಸಣ್ಣದಾದ ಒಂದು ಗೊಮ್ಮಟವೂ ಅದರ ಮೇಲೆ ಲೋಹ

ಕೊಡುವಿಕೆ ಸಸ್ಯ ಸಂರಕ್ಷಣೆಯ ಕ್ರಮಗಳೆಲ್ಲ ನೀರಾವರಿ ಗೋದಿಗೆ ಇರುವಂತೆಯೆ ಇವೆ. ಎಕರೆಗೆ 3-5 ಕ್ವಿಂಟಾಲು ಇಳುವರಿ ಪಡೆಯಬಹುದು.

ಗೋದಿಯ ಬೇಸಾಯಕ್ಕೆ ಹೆಚ್ಚು ಕಾಲ ತನಿ ಇರಬಹುದಾದಂಥ ಜೇಡಿ ಅಥವಾ ಎರೆಮಣ್ಣು ಉತ್ತಮ. ಆದ್ದರಿಂದಲೇ ಕರ್ನಾಟಕದ ಉತ್ತರದ ಜಿಲ್ಲೆಗಳಲ್ಲಿ ಇದರ ಬೇಸಾಯ ಹೆಚ್ಚು. ಈ ಪ್ರದೇಶದಲ್ಲಿ ಮಳೆಯ ವಾರ್ಷಿಕ ಮೊತ್ತ 508-1016ಮಿಮೀ. ಭೂಮಿಯಲ್ಲಿ ಪೊಟ್ಯಾಷ್ ಅಂಶ ಹೆಚ್ಚಾಗಿರುತ್ತದೆ. ಕೊಂಚಮಟ್ಟಿಗೆ ಚಿತ್ರದುರ್ಗ ಮತ್ತು ಮೈಸೂರು ಜಿಲ್ಲೆಗಳಲ್ಲಿ ಈ ರೀತಿಯ ಮಣ್ಣು ಅಲ್ಲಲ್ಲಿ ಇದೆ. (ಕೆ.ಆರ್.ಜಿ.)

**ಗೋಪಾಲ ಅಯ್ಯಂಗಾರ್, ಎ.ಆರ್.:** 1909 - ಭಾರತದ ಪ್ರತಿಭಾನ್ವಿತ ಜೀವಶಾಸ್ತ್ರ ವಿಜ್ಞಾನಿ. ಆನೇಕಲ್ಲು ರಾಮಸ್ವಾಮಿ ಅಯ್ಯಂಗಾರ್ ಗೋಪಾಲ ಅಯ್ಯಂಗಾರ್ ಎಂಬುದು ಇವರ ಪೂರ್ಣ ಹೆಸರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ವಿದ್ಯಾಭ್ಯಾಸ ಮಾಡಿ, ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಸಸ್ಯಶಾಸ್ತ್ರದ ಅಧ್ಯಾಪಕರಾಗಿದ್ದರು (1933-38). ಅನಂತರ ಅಮೆರಿಕದ ಟೊರಾಂಟೋ ವಿಶ್ವವಿದ್ಯಾಲಯದಲ್ಲಿ ವಿನ್ಸೆಂಟ್ ಮ್ಯಾಸೆ ಫೆಲೊ ಆಗಿಯೂ (1938-39) ಬೋಧನೆ ಮತ್ತು ಸಂಶೋಧನ ಫೆಲೊ ಆಗಿಯೂ (1939-41) ಇದ್ದು ಪಿಎಚ್.ಡಿ. ಪಡೆದು (1941), ಅದೇ ವಿಶ್ವವಿದ್ಯಾಲಯದಲ್ಲಿ ಹಿರಿಯ ಬೋಧಕ ಸಹ ಸಂಶೋಧಕರಾಗಿದ್ದರು (1941-45). ಮುಂದೆ ಸೆಯಿಂಟ್ ಲೂಯಿಯಲ್ಲಿ ಬರ್ನಾರ್ಡ್ ಚರ್ಮ ಮತ್ತು ಅರ್ಬುದ ರೋಗಗಳ ಆಸ್ಪತ್ರೆಯಲ್ಲಿ ಕೆಟರಿಂಗ್ ಸಂಶೋಧನ ಫೆಲೊ ಮತ್ತು ವಾಷಿಂಗ್‌ಟನ್ ವಿಶ್ವವಿದ್ಯಾನಿಲಯದ ಸಂಶೋಧಕ ಸಹೋದ್ಯೋಗಿಯಾಗಿ ಇದ್ದರು (1945-47). ಅನಂತರ ಮುಂಬಯಿಯ ಟಾಟಾ ಮೆಮೋರಿಯಲ್ ಆಸ್ಪತ್ರೆಯಲ್ಲಿ ಮುಖ್ಯ ಸಂಶೋಧನ ಜೀವಕೋಶ ತಜ್ಞರಾಗಿ ಸೇವೆ ಸಲ್ಲಿಸಿ (1947-48) ಅದೇ ಆಸ್ಪತ್ರೆಯಲ್ಲಿ ಪರಮಾಣುಶಕ್ತಿ ನಿಯೋಗ ಅಂಗದ ಜೀವಕೋಶ ವಿಭಾಗದ ಮುಖ್ಯಸ್ಥರಾಗಿದ್ದರು (1948-51). ಅನಂತರ ಲೇಡಿ ಟಾಟಾ ಸಂಸ್ಥೆಯ ಇಂಟರ್ ನ್ಯಾಷನಲ್ ಫೆಲೋ ಆಗಿ ಲಂಡನ್ನಿನ ಚೆಸ್ಟರ್ ಬಿಯಾಟಿ ಸಂಶೋಧನ ಸಂಸ್ಥೆ ಮತ್ತು ರಾಯಲ್ ಕ್ಯಾನ್ಸರ್ ಆಸ್ಪತ್ರೆ ಹಾಗೂ ಸ್ಲಾಕ್ ಹೋಮ್‌ನ ಜೀವಕೋಶ ಸಂಶೋಧನೆ ಮತ್ತು ತಳಿಶಾಸ್ತ್ರದ ಕಾಲೋಲಿರಿಸ್ಕ ಸಂಸ್ಥೆಯಲ್ಲಿ ಸ್ವಲ್ಪ ಕಾಲವಿದ್ದರು. ಅನಂತರ ಮುಂಬಯಿಯ ಪರಮಾಣುಶಕ್ತಿ ಇಲಾಖೆಯ ಜೀವಶಾಸ್ತ್ರ ವಿಭಾಗದ ಸಹನಿರ್ದೇಶಕ (1953-55), ಉಪ ಮುಖ್ಯ ವಿಜ್ಞಾನಾಧಿಕಾರಿ (1955-59), ಜೀವಶಾಸ್ತ್ರ ಮತ್ತು ವೈದ್ಯಕೀಯ ವಿಭಾಗಗಳ ಮುಖ್ಯ ವಿಜ್ಞಾನಾಧಿಕಾರಿ ಮತ್ತು ಮುಖ್ಯಸ್ಥ (1960-62) -ಈ ಹುದ್ದೆಗಳನ್ನು ನಿರ್ವಹಿಸಿ 1962-67ರಲ್ಲಿ ಟ್ರಾಂಬೆಯ ಪರಮಾಣುಶಕ್ತಿ ಸಂಸ್ಥೆಯಲ್ಲಿ ಜೀವಶಾಸ್ತ್ರ ವಿಭಾಗದ ನಿರ್ದೇಶಕರಾಗಿದ್ದರು. ಮುಂದೆ 1968-71ರಲ್ಲಿ ಭಾಭಾ ಪರಮಾಣು ಸಂಶೋಧನ ಕೇಂದ್ರದಲ್ಲಿ ಜೀವಶಾಸ್ತ್ರ ವೈದ್ಯಕೀಯ ವಿಭಾಗದ ನಿರ್ದೇಶಕರಾಗಿಯೂ ಅನಂತರ ಪರಮಾಣುಶಕ್ತಿ ಇಲಾಖೆಯ ಸಲಹೆಗಾರರಾಗಿಯೂ ಇದ್ದರು (1971-76). ಅನಂತರ ಪಶ್ಚಿಮ ಜರ್ಮನಿಯ ಹೊನ್ನೋವರ್ ವಿಶ್ವವಿದ್ಯಾಲಯದ ಬಯೋಫಿಸಿಕ್ಸ್ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿದ್ದರು (1976).

ಜೀವಕೋಶ ಶಾಸ್ತ್ರದ ಮೂಲ ಮತ್ತು ಔಚಿತ್ಯಗಳ ವಿಚಾರವಾಗಿ, ಜೀವಕೋಶ ತಳಿಶಾಸ್ತ್ರ, ಜೀವಕೋಶ ರಸಾಯನಶಾಸ್ತ್ರ, ಅರ್ಬುದ ಸಂಶೋಧನೆ, ವಿಕಿರಣ ಜೀವಶಾಸ್ತ್ರ, ಮುಖ್ಯ ಫಸಲು ಸಸ್ಯಗಳ ಮೇಲೆ ವಿಕೃತಿ ಸಂಶೋಧನೆ ಮತ್ತು ಮನುಷ್ಯನ ಮೇಲೆ ವಿಕಿರಣ ಪ್ರಭಾವ ಇವುಗಳ ಸಂಬಂಧವಾಗಿ ಇವರು ಬರೆದಿರುವ ಲೇಖನಗಳು ಅಂತಾರಾಷ್ಟ್ರೀಯ ಖ್ಯಾತಿಗಳಿಸಿವೆ. ಈವರೆಗೆ ಸುಮಾರು 58ಕ್ಕೂ ಹೆಚ್ಚು ವಿದ್ವತ್ಪೂರ್ಣ ಲೇಖನಗಳನ್ನು ಬರೆದಿದ್ದಾರೆ. ಅನೇಕ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ವಿದ್ವತ್ ಸಮ್ಮೇಳನಗಳಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸಿದ್ದಾರೆ.

ಇವರು ಇಂಡಿಯನ್ ಅಕಾಡೆಮಿ ಆಫ್ ಸೈನ್ಸಸ್, ಇಂಡಿಯನ್ ನ್ಯಾಷನಲ್ ಸೈನ್ಸ್ ಅಕಾಡೆಮಿ, ಫೈಕೊಲಾಜಿಕಲ್ ಸೊಸೈಟಿಗಳ ಫೆಲೋ, ಅಮೆರಿಕನ್ ಅಸೋಸಿಯೇಷನ್ ಫಾರ್ ಸೆಲ್ ಬಯಾಲಜಿಯ ಸದಸ್ಯ, ಸೊಸೈಟಿ ಆಫ್ ನ್ಯೂಕ್ಲಿಯರ್ ಮೆಡಿಸಿನ್‌ನ ಗೌರವ ಪೋಷಕ, ಇಂಟರ್ ನ್ಯಾಷನಲ್ ಯೂನಿಯನ್ ಫಾರ್ ಪ್ಯೂರ್ ಮತ್ತು ಅಪ್ಲೈಡ್ ಬಯೊಫಿಸಿಕ್ಸ್ ಮಂಡಲಿಯ ಸದಸ್ಯರೂ ಆಗಿದ್ದರು. ಯುನೈಟೆಡ್ ನೇಷನ್ ಸೈಂಟಿಫಿಕ್ ಕಮಿಟಿ ಆನ್ ದಿ ಎಫೆಕ್ಟ್ ಆಫ್ ಅಟಾಮಿಕ್ ರೇಡಿಯೇಷನ್ಸ್‌ಗೆ 1956ರಿಂದ ಭಾರತದ ಪ್ರತಿನಿಧಿಯಾಗಿದ್ದರು.

ಇವರಿಗೆ ಟೊರಾಂಟೊ ವಿಶ್ವವಿದ್ಯಾಲಯದ ಎಲಿಜಬೆತ್ ಆನ್ ವಿಂಗರ್ ಕೋರ್‌ಬಿನ್ ಬಹುಮಾನ (1941), ಜೆ.ಎಚ್.ಭಾಭಾ ಬಹುಮಾನ(1948), ಪದ್ಮಶ್ರೀ (1967), 1968-71ರಲ್ಲಿ ಭಾಭಾ ಪರಮಾಣು ಸಂಶೋಧನ ಕೇಂದ್ರದಿಂದ ಪ್ರತಿಭಾನ್ವಿತ ಗೌರವ. 1970ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಿ.ಎಸ್ಸಿ. ಟೊರಾಂಟೊ ವಿಶ್ವವಿದ್ಯಾನಿಲಯದ ಗೌರವ ಡಿ.ಎಸ್ಸಿ., (1972) ಇವು ಲಭಿಸಿವೆ. (ಎನ್.ವಿ.ಎ.)

**ಗೋಪಾಲಕೃಷ್ಣ ಅಡಿಗ, ಎಂ. :** 1918-92. ನವ್ಯಸಾಹಿತ್ಯದ ಶ್ರೇಷ್ಠ ಕವಿ ಹಾಗೂ ವಿಮರ್ಶಕರು. ಇಂದಿನ ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕಿನ ಮೊಗೇರಿಯಲ್ಲಿ 1918 ಫೆಬ್ರವರಿ 18ರಂದು ಜನಿಸಿದರು. ಇವರು 1942ರಲ್ಲಿ ಮೈಸೂರಿನಲ್ಲಿ ಬಿ.ಎ. ಆನರ್ಸ್ ಮುಗಿಸಿ ಅದೇ ವರ್ಷ ಚಿತ್ರದುರ್ಗದ ಪ್ರೌಢಶಾಲೆಯೊಂದರಲ್ಲಿ ಕೆಲಸಕ್ಕೆ ಸೇರಿದರು. ಅಲ್ಲಿದ್ದ ಕಾಲಾವಧಿ ಕೇವಲ ಮೂರು ತಿಂಗಳು. ಅನಂತರ 1943ರಲ್ಲಿ ದಾವಣಗೆರೆ ಪ್ರೌಢಶಾಲೆಯಲ್ಲಿ ಮೂರು ತಿಂಗಳ ಕಾಲ ಕೆಲಸಮಾಡಿ ಅದೇ ವರ್ಷ ಬೆಂಗಳೂರಿನ ಮಲ್ಲೇಶ್ವರಂ ಪ್ರೌಢಶಾಲೆಯಲ್ಲಿ ಕೆಲಸಮಾಡಿ, ಕೆಲಸಕ್ಕೆ ರಾಜೀನಾಮೆ ನೀಡಿದರು. 1944ರಲ್ಲಿ ಬೆಂಗಳೂರು ಆಕಾರಾ ಕಚೇರಿಯ ಪಿಂಚಣಿ ಖಾತೆಯಲ್ಲಿ ನಾಲ್ಕು ತಿಂಗಳ ಕಾಲ ಗುಮಾಸ್ತರಾಗಿ ಕೆಲಸಮಾಡಿದರು. ಅನಂತರ ಗಾಂಧೀನಗರದ ಪ್ರೌಢ ಶಾಲೆಯಲ್ಲಿ ಸುಮಾರು



ಒಂದೂವರೆ ವರ್ಷಗಳ ಕಾಲ ಅಧ್ಯಾಪಕರಾಗಿ ಕೆಲಸ ಮಾಡಿದರು. 1946ರಲ್ಲಿ ತುಮಕೂರಿನ ಆರ್.ಎನ್. ಪ್ರೌಢ ಶಾಲೆಯಲ್ಲಿ ಒಂದು ವರ್ಷ ಇದ್ದರು. 1947ರಲ್ಲಿ ಮದುವೆಯಾದರು. ಇದೇ ವರ್ಷ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಇಂಗ್ಲಿಷ್ ಎಂ.ಎ. ವಿದ್ಯಾರ್ಥಿಯಾಗಿ ವ್ಯಾಸಂಗಕ್ಕೆ ತೊಡಗಿದರಾದರೂ ಅದನ್ನು ಮುಗಿಸಲಿಲ್ಲ. ಅನಂತರ 1948-52ರವರೆಗೆ ಮೈಸೂರಿನ ಶಾರದಾ ವಿಲಾಸ ಕಾಲೇಜಿನಲ್ಲಿ ಇಂಗ್ಲಿಷ್ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದರು. 1952ರಲ್ಲಿ ಎಂ.ಎ. ಮುಗಿಸಿದರು. 1952-54ರವರೆಗೆ ಕುಮಟ ಕೆನರಾ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿ ದುಡಿದರು. ಅನಂತರ ಮೈಸೂರಿನ ಸೇಂಟ್ ಫಿಲೋಮಿನ ಕಾಲೇಜಿನಲ್ಲಿ ಇಂಗ್ಲಿಷ್ ಉಪನ್ಯಾಸಕರಾಗಿ ಕೆಲಸ ಮಾಡಿದ್ದರು (1954-64). 1964ರಲ್ಲಿ ಸಾಗರದ ಲಾಲ್‌ಬಹದ್ದೂರ್ ಕಾಲೇಜಿನ ಪ್ರಿನ್ಸಿಪಾಲರಾದರು. 1968ರಲ್ಲಿ ಆ ಹುದ್ದೆಗೆ ರಾಜೀನಾಮೆ ನೀಡಿದರು. ಅನಂತರ ಉಡುಪಿಯ ಪೂರ್ಣಪ್ರಜ್ಞ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿ ಕೆಲವು ಕಾಲ ದುಡಿದರು. ನ್ಯಾಷನಲ್ ಬುಕ್ ಟ್ರಸ್ಟಿನ ನಿರ್ದೇಶಕರಾಗಿಯೂ ಇವರು ಸ್ವಲ್ಪಕಾಲ ಇದ್ದರು. 1971ರಲ್ಲಿ ಜನಸಂಘದ ಅಭ್ಯರ್ಥಿಯಾಗಿ ಲೋಕಸಭೆಗೆ ಸ್ಪರ್ಧಿಸಿ ಸೋತರು. 1974ರಲ್ಲಿ ಅಮೆರಿಕ ವಿಶ್ವವಿದ್ಯಾಲಯಗಳಿಗೆ ವಿಶೇಷ ಉಪನ್ಯಾಸ ಕೊಡಲು ಹೋಗಿಬಂದರು. ಕನ್ನಡ ವಿಮರ್ಶೆಗೆ ಹೊಸ ಆಯಾಮವನ್ನು ಜೋಡಿಸಿದ ಸಾಕ್ಷಿ ಎಂಬ ತ್ರೈಮಾಸ ಪತ್ರಿಕೆಯ ಸಂಪಾದಕರಾಗಿಯೂ ಕೆಲಸಮಾಡಿದರು. ಇವರು ಸಿಮ್ಲಾದಲ್ಲಿ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ಡ್ ಸ್ಟಡೀಸ್‌ನಲ್ಲಿ ರೀಸರ್ಚ್ ಫೆಲೋ ಆಗಿಯೂ ಕೆಲಸ ಮಾಡಿದರು (1975).

ಕಾದಂಬರಿಗಳನ್ನು ಬರೆದಿದ್ದಾರೆ. ಹುಲ್ಲಿನ ದಳಗಳು, ಸುವರ್ಣಕೀಟ, ಭೂಗರ್ಭಯಾತ್ರೆ, ರೈತರ ಹುಡುಗಿ, ಜನತೆಯ ಶತ್ರು, ದೆವ್ವದ ಸುವರ್ಣ ಕೀಟ, ಮುಕ್ತಾಫಲ, ಇತಿಹಾಸ ಚಕ್ರ ಇವು ಇವರ ಅನುವಾದ ಕೃತಿಗಳು. ಇದನ್ನು ಬಯಸಿರಲಿಲ್ಲ ಎಂಬುದು ಇವರ ಇನ್ನೊಂದು ಕವನ ಸಂಗ್ರಹ(1975). ಆಯ್ದ ಪ್ರಬಂಧಗಳು, ಕಾವ್ಯಜಗತ್ತು (1986) ಇವರ ಇತರ ಪ್ರಮುಖ ಕೃತಿಗಳು. ನೆನಪಿನಗಣಿಯಿಂದ ಎಂಬುದು ಇವರ ಆತ್ಮಕಥೆ. ಇವರಿಗೆ ಅನೇಕ ಗೌರವ ಮತ್ತು ಪ್ರಶಸ್ತಿಗಳು ಲಭ್ಯವಾಗಿವೆ. ವರ್ಧಮಾನ ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1973-1974) ಕುಮಾರ್ ಆಶಾನ್ ಪ್ರಶಸ್ತಿ (1979), ಕಬೀರ್ ಸಮ್ಮಾನ ಪ್ರಶಸ್ತಿ (1985), ಲಭಿಸಿದೆ. ಧರ್ಮಸ್ಥಳದಲ್ಲಿ ಜರುಗಿದ 51ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ಇವರು ವಹಿಸಿದ್ದರು (1979). ಇವರು 1992 ನವೆಂಬರ್ 14ರಂದು ನಿಧನಹೊಂದಿದರು. ಇವರ ಸುವರ್ಣ ಪುತ್ಥಳಿ ಕೃತಿಗೆ ಮರಣೋತ್ತರವಾಗಿ ಪ್ರತಿಷ್ಠಿತ ಪಂಪ ಪ್ರಶಸ್ತಿ ನೀಡಲಾಗಿದೆ (1993). (ಎಸ್‌ಯು.ಎನ್.)

**ಗೋಪಾಲಕೃಷ್ಣರಾವ್, ಕೆ. :** 1906-67. ಸಂಪ್ರದಾಯದ ಕಥೆಗಾರರಲ್ಲಿ ಪ್ರಸಿದ್ಧರು. ಜನ್ಮಸ್ಥಳ ಬೆಂಗಳೂರು. ಬೆಂಗಳೂರು ನ್ಯಾಷನಲ್ ಹೈಸ್ಕೂಲು ಮತ್ತು ಸೆಂಟ್ರಲ್ ಕಾಲೇಜುಗಳಲ್ಲಿ ವ್ಯಾಸಂಗಮಾಡಿ ಪದವೀಧರರಾದರು. ಅಠಾರಾ ಕಚೇರಿಯಲ್ಲಿ ಗುಮಾಸ್ತರಾಗಿ ತಮ್ಮ ವೃತ್ತಿಜೀವನವನ್ನು ಆರಂಭಿಸಿದರು. ಅನಂತರ ಕೆ.ಹನುಮಂತಯ್ಯನವರು ಮುಖ್ಯಮಂತ್ರಿಗಳಾಗಿದ್ದಾಗ ಅವರ ಆಪ್ತಕಾರ್ಯದರ್ಶಿಗಳಾಗಿ ಕೆಲಸಮಾಡಿದರು. ಚಿಕ್ಕಂದಿನಲ್ಲಿಯೇ ಸಾಹಿತ್ಯದಲ್ಲಿ ಅಭಿರುಚಿಯನ್ನು ಬೆಳೆಸಿಕೊಂಡಿದ್ದ ಇವರು ಆರಂಭದಲ್ಲಿ ಇಂಗ್ಲಿಷ್‌ನಲ್ಲಿ ಕವನಗಳನ್ನು ಬರೆದರು. ಅನಂತರ



ಟಿ.ಎಸ್.ವೆಂಕಣ್ಣಯ್ಯ ಮತ್ತು ಎ.ಆರ್.ಕೃಷ್ಣಶಾಸ್ತ್ರಿಗಳ ಪ್ರಭಾವಕ್ಕೆ ಒಳಗಾಗಿ ಕನ್ನಡದಲ್ಲಿ ಬರೆಯಲಾರಂಭಿಸಿದರು. ಸಣ್ಣಕಥೆಗಳ ಜೊತೆಗೆ ನಾಟಕ, ಪ್ರಬಂಧ ಮತ್ತು ಅನುವಾದ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಇವರ ಆರು ಕಥಾಸಂಗ್ರಹಗಳು ಪ್ರಕಟವಾಗಿವೆ. ಉಡುಗೊರೆ, ಬಂಗಾರದ ಡಾಬು, ನಟಿ, ಸೋತು ಗೆದ್ದವರು, ರಾಜಾಯಿ, ಆಯ್ದ ಹತ್ತು ಕಥೆಗಳು. ಕೆನ್ಸಿಂಗ್‌ಟನ್ ಮತ್ತು ಹರಿದಾಸ ಸಾಹಿತ್ಯ ಎಂಬುವು ಇವರ ಎರಡು ಪ್ರಬಂಧ ಸಂಕಲನಗಳು. ಕುಮಾರಕೃಪ, ಗುರುಗೀತೆ ಎಂಬುವು ಇವರ ಕವನಸಂಕಲನಗಳು. ಅಪರಾಧಿ, ಆಸೆ ನಿರಾಶೆ, ಕನ್ಯಾರ್ಥಿ, ಚಿರಸಮಸ್ಯೆ ಮತ್ತು ಪಾರ್ಕಿನ ಲಚುಮಿ ಇವು ಇವರ ಏಕಾಂಕ ನಾಟಕ ಸಂಗ್ರಹಗಳು. ಇಂಗ್ಲಿಷ್‌ನಲ್ಲಿ ಸಿಸ್ಟರ್ ಎಂಬ ಒಂದು ಏಕಾಂಕ ನಾಟಕವನ್ನು ಪ್ರಕಟಿಸಿದ್ದಾರೆ. ಇವರ ಹಲವು ಸಣ್ಣಕಥೆಗಳು ಇಂಗ್ಲಿಷ್‌ಗೆ ಭಾಷಾಂತರಗೊಂಡಿವೆ.

ಇವರ ಸಾರ್ವಜನಿಕ ಸೇವೆಯೂ ಗಣ್ಯವಾದುದು. ವಿದ್ಯಾರ್ಥಿಯಾಗಿದ್ದಾಗಲೇ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಕಾರ್ಯದರ್ಶಿಯಾಗಿದ್ದರು. ಬೆಂಗಳೂರಿನಲ್ಲಿ ಸಾಹಿತಿಗಳ ಸಂಘ ಎಂಬ ಒಂದು ಸಂಘವನ್ನು ಸ್ಥಾಪಿಸಿ, ಸಾಹಿತ್ಯಕ ಚರ್ಚೆಗಳಿಗೆ ವೇದಿಕೆಯನ್ನು ಒದಗಿಸಿದರಲ್ಲದೆ ಅದರ ಆಶ್ರಯದಲ್ಲಿ ಸಣ್ಣಕಥೆಗಾರರ ಮೂರು ಸಮ್ಮೇಳನಗಳನ್ನು ನಡೆಸಿದರು. ಕನ್ನಡ ಸಾಹಿತ್ಯ ಪರಿಷತ್ತಿಗೆ ಇವರು ಐದು ವರ್ಷಗಳ ಕಾಲ ಗೌರವ ಕಾರ್ಯದರ್ಶಿಯಾಗಿದ್ದರು (1956-61). ಜೀವನ ಮಾಸಪತ್ರಿಕೆಗೆ ಕೆಲವು ವರ್ಷಗಳ ಕಾಲ ಸಂಪಾದಕರಾಗಿದ್ದರು. ಇವರು 1967 ಅಕ್ಟೋಬರ್ 8ರಂದು ಬೆಂಗಳೂರಿನಲ್ಲಿ ನಿಧನಹೊಂದಿದರು. (ಟಿ.ಎಸ್.ಎಸ್.)

**ಗೋಪಾಲಗೌಡ, ಶಾಂತವೇರಿ :** 1923-72. ಕರ್ನಾಟಕದಲ್ಲಿ ಸಮಾಜವಾದಿ ಚಿಂತನೆಗಳನ್ನು ಹುಟ್ಟುಹಾಕಿದ ಪ್ರಸಿದ್ಧ ಸಮಾಜವಾದಿ ಧುರೀಣ, ಕರ್ನಾಟಕದ ಏಕೀಕರಣಕ್ಕಾಗಿ ಹೋರಾಡಿದ ಯುವ ನಾಯಕ



ಹಾಗೂ ಉಜ್ವಲ ವಾಗ್ಮಿ. ಇವರು ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕಿನ ಆರಗ ಎಂಬ ಗ್ರಾಮದ ಬಡ ರೈತ ಕುಟುಂಬದಲ್ಲಿ ಹುಟ್ಟಿದರು. ಆ ಗ್ರಾಮದ ಶಾಂತವೇರಿ ಮನೆ ಎಂಬ ಸ್ಥಳದಲ್ಲಿ ಇವರ ಮನೆ ಇದ್ದುದರಿಂದ ಇವರ ಹೆಸರಿನೊಂದಿಗೆ ಶಾಂತವೇರಿ ಸೇರಿಕೊಂಡಿತು. ಬಹುಶಃ ಇವರ ಮನೆತನದ ಹಿರಿಯರು ಅಲ್ಲಿಂದ ಬಂದವರಿರಬೇಕು. ತಂದೆ ಕೊಲ್ಲೂರಯ್ಯಗೌಡರು ಅಂಚೆ ಇಲಾಖೆಯಲ್ಲಿ ಅಂಚೆ ಬಟವಾಡೆ ಮಾಡುವ ಪೇದೆಯಾಗಿದ್ದರು. ಬಡತನದ ಕಷ್ಟ ಕಾರ್ಪಣ್ಯಗಳನ್ನು ಸಹಿಸಿಕೊಂಡು ಆರಗ, ತೀರ್ಥಹಳ್ಳಿ ಮತ್ತು ಶಿವಮೊಗ್ಗದಲ್ಲಿ ವಿದ್ಯಾಭ್ಯಾಸ ಮಾಡಿದರು. ಶಿವಮೊಗ್ಗದಲ್ಲಿ ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯ ಪಾತ್ರವಹಿಸಿದ ಇವರು ವಿದ್ಯಾರ್ಥಿ ಕಾಂಗ್ರೆಸ್ಸಿನ ಮುಂಚೂಣಿಯಲ್ಲಿದ್ದರು. 1946ರಲ್ಲಿ ಶಿವಮೊಗ್ಗದಲ್ಲಿ ಸೇರಿದ್ದ ಅಖಿಲ ಕರ್ನಾಟಕ ವಿದ್ಯಾರ್ಥಿ ಕಾಂಗ್ರೆಸ್ ಸಮ್ಮೇಳನದ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಮೈಸೂರಿನ ಆಗಿನ ರಾಜಕೀಯ ಧುರೀಣರಲ್ಲಿ ಅನೇಕರು ಕರ್ನಾಟಕದ ಏಕೀಕರಣದ ಬಗ್ಗೆ ಅಡ್ಡ ಗೋಡೆಯ ಮೇಲಿನ ನಿಲುವು ತಾಳಿದಾಗ ಶಿವಮೊಗ್ಗದಲ್ಲಿ ಸಮಾವೇಶಗೊಂಡಿದ್ದ ವಿದ್ಯಾರ್ಥಿ ಸಮ್ಮೇಳನ ಕರ್ನಾಟಕದ ಏಕೀಕರಣವನ್ನು ಪ್ರತಿಪಾದಿಸಿತು. ಕನ್ನಡ ಮಾತನಾಡುವ ಜನರಿರುವ ಎಲ್ಲ ಪ್ರದೇಶಗಳನ್ನು ಒಳಗೊಂಡ ಕರ್ನಾಟಕ ರಾಜ್ಯ ರೂಪಿತವಾಗಬೇಕೆಂದೂ ಮೈಸೂರಿನ ಮಹಾರಾಜರ ಹುದ್ದೆ ರದ್ದಾಗಬೇಕೆಂದೂ ಆ ಸಮ್ಮೇಳನ ನಿರ್ಣಯ ಮಾಡಿತು. ಆಗಿನಿಂದಲೇ ಇವರು ಶಿವಮೊಗ್ಗದ ಇತರ ಯುವಕ ಮುಖಂಡರೊಡನೆ ಸೇರಿ ಕರ್ನಾಟಕದ ಏಕೀಕರಣಕ್ಕಾಗಿ ಸತತವಾಗಿ ಶ್ರಮಿಸಿದರು. ಶಿವಮೊಗ್ಗ ಜಿಲ್ಲೆಯ ಈ ಯುವಕ ತಂಡದವರೇ ರಾಜ್ಯದಲ್ಲಿ ಸಮಾಜವಾದಿ ಪಕ್ಷದ ಸಂಘಟನೆಯಲ್ಲಿ (1948) ಪ್ರಮುಖ ಪಾತ್ರ ವಹಿಸಿದರು. ಶಾಂತವೇರಿ ಗೋಪಾಲಗೌಡರು ಈ ಗೆಳೆಯರ ಬಳಗಕ್ಕೆ ಮುಂದಾಳಾಗಿದ್ದರು.

ಸಮಾಜವಾದಿ ಪಕ್ಷ ಗೇಣಿದಾರರ ಹಿತರಕ್ಷಣೆಗಾಗಿ ಹೋರಾಟ ಮಾಡುವ ನಿರ್ಧಾರ ಕೈಗೊಂಡ ಮೇಲೆ ಶಿವಮೊಗ್ಗ ಜಿಲ್ಲೆಯ ಕಾಗೋಡಿನಲ್ಲಿ ನಡೆದ ಪ್ರಥಮ ಹೋರಾಟ (1951) ಬಹುದಿನಗಳ ಕಾಲ ಉಗ್ರವಾಗಿ ನಡೆಯಿತು. ಗೋಪಾಲಗೌಡರು ಸತ್ಯಾಗ್ರಹದ ನಾಯಕರುಗಳಲ್ಲೊಬ್ಬರಾಗಿದ್ದು ಗೇಣಿದಾರರ ಜ್ವಲಂತ ಸಮಸ್ಯೆ ಬಗ್ಗೆ ರಾಜ್ಯದ ಜನರ ಹಾಗೂ ಪ್ರಭುತ್ವದ ಗಮನವನ್ನು ಸೆಳೆದರು. ಸಮಾಜವಾದಿ ಧುರೀಣ ರಾಮಮನೋಹರ ಲೋಹಿಯಾ ಅವರು ಕಾಗೋಡು ಸತ್ಯಾಗ್ರಹದಲ್ಲಿ ಭಾಗವಹಿಸಿ ಬಂಧಿಸಲ್ಪಟ್ಟಿದ್ದರು. ಇವರಿಗೆ ಲೋಹಿಯಾರವರ ನಿಕಟ ಪರಿಚಯವಾಯಿತು. ಲೋಹಿಯಾರವರ ವಿಚಾರ ದರ್ಶನವೂ ಇವರ ಮೇಲೆ ತುಂಬ ಪ್ರಭಾವ ಬೀರಿತು. ಇವರು ರಾಜ್ಯಮಟ್ಟದಲ್ಲಿ ಸಮಾಜವಾದಿ ಪಕ್ಷದ ಅಧ್ಯಕ್ಷರಾಗಿ ಅನೇಕ ವರ್ಷಗಳ ಕಾಲ ಕೆಲಸ ಮಾಡಿದರು. ಅಖಿಲ ಭಾರತ ಸಮಾಜವಾದಿ ಪಕ್ಷದ ಲೋಹಿಯಾ ಪಂಗಡದ ಕಾರ್ಯಕಾರಿ ಸಮಿತಿಯ ಸದಸ್ಯರೂ ಆಗಿದ್ದರು. ಆ ಪಕ್ಷದ ಮುಖಪತ್ರಿಕೆ 'ಮ್ಯಾನ್‌ಕೈಂಡ್'ನ ಸಂಪಾದಕ ಮಂಡಳಿಯ ಸದಸ್ಯರೂ ಆಗಿದ್ದರು.

1952ರಲ್ಲಿ ನಡೆದ ಚುನಾವಣೆಯಲ್ಲಿ ಸಾಗರ - ಹೊಸನಗರ ಕ್ಷೇತ್ರದಿಂದ ಅಂದಿನ ಮೈಸೂರು ರಾಜ್ಯ ವಿಧಾನ ಸಭೆಗೆ ಚುನಾಯಿತರಾಗಿದ್ದರು. 1960ರಲ್ಲಿ ಗೋವ ವಿಮೋಚನ ಚಳವಳಿಯಲ್ಲಿ ಭಾಗವಹಿಸಿದರು. 1962 ಮತ್ತು 1967ರ ಚುನಾವಣೆಗಳಲ್ಲಿ ತೀರ್ಥಹಳ್ಳಿ

ಪದವಿಗಳಿಸಿದರು. ಮನಶ್ಶಾಸ್ತ್ರದಲ್ಲಿ ಹೆಚ್ಚು ಅಭಿರುಚಿಯುಂಟಾದ ಕಾರಣ ಅದೇ ವಿಶ್ವವಿದ್ಯಾಲಯುದಲ್ಲಿ ಆ ವಿಷಯುದ ಮೇಲೆ ತಮ್ಮ ವ್ಯಾಸಂಗವನ್ನು ಮುಂದುವರಿಸಿ ಅಲ್ಲಿನ ಮನಶ್ಶಾಸ್ತ್ರ ಪ್ರಾಧ್ಯಾಪಕರಾಗಿದ್ದ ಸಿ.ಸ್ಪಿಯರ್‌ಮನ್ ಎಂಬುವರ ನಿರ್ದೇಶನದಲ್ಲಿ ಪಿಎಚ್.ಡಿ. ಪದವಿ ಪಡೆದರು.

ಭಾರತಕ್ಕೆ ಹಿಂತಿರುಗಿದ ಮೇಲೆ ಇವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಮನಶ್ಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿ (1924) 20 ವರ್ಷ ಸೇವೆಸಲ್ಲಿಸಿ ಮುಂದೆ ಮೈಸೂರಿನ ಮಹಾರಾಜ ಕಾಲೇಜಿನ ಪ್ರಧಾನ ಆಡಳಿತಗಾರರಾದರು. ಇವರ ಆಸಕ್ತಿ ಮತ್ತು ಶ್ರದ್ಧೆಯ ಪರಿಣಾಮವಾಗಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪ್ರಾಯೋಗಿಕ ಮನಶ್ಶಾಸ್ತ್ರ ಶಾಖೆ ಸ್ಥಾಪಿತವಾಯಿತು. ತತ್ತ್ವಶಾಸ್ತ್ರದ ಒಂದು ಭಾಗವಾಗಿದ್ದ ಮನಶ್ಶಾಸ್ತ್ರಕ್ಕೆ ಒಂದು ಪ್ರತ್ಯೇಕ ಸ್ಥಾನಮಾನವನ್ನು ದೊರಕಿಸಿಕೊಡಲು ಮತ್ತು ಮನಶ್ಶಾಸ್ತ್ರಕ್ಕೆ ವೈಜ್ಞಾನಿಕ ವಿಧಾನಗಳನ್ನು ಅನ್ವಯಿಸಲು ಇವರು ಬಹಳ ಶ್ರಮಿಸಿದರು. ಇದಲ್ಲದೆ ಭಾರತದ ಪ್ರಾಚೀನ ಮನಶ್ಶಾಸ್ತ್ರದ ಮೂಲತತ್ತ್ವಗಳ ಸಿಂಧುತ್ವವನ್ನು ಆಧುನಿಕ ಪ್ರಯೋಗ ಪರೀಕ್ಷಾ ಪದ್ಧತಿಗಳಿಂದ ಸ್ಥಿರೀಕರಿಸಿ ಆ ವಿಭಾಗದಲ್ಲೂ ಸಂಶೋಧನೆ ನಡೆಸಿದರು. ಪ್ರಾಣಿಗಳ ವರ್ತನೆ, ಅಪರಾಧ ಸಂಶೋಧನೆ, ಅತೀಂದ್ರಿಯ ಪ್ರತ್ಯಕ್ಷ, ಕಲಿಕೆಯ ರೀತಿಗಳು, ಅವಳಿಜವಳಿ ಮಕ್ಕಳ ಬುದ್ಧಿಶಕ್ತಿ, ಉಪಲಬ್ಧ ಗುಣಾರ್ಜನೆ, ಬಾಲಾಪರಾಧ, ಅನೃತ ಶೋಧನೆ, ದರ್ಪಣ ಲೇಖನ, ಭಾವನಾ ರಚನೆ, ಕಾರ್ಯವಿಶ್ಲೇಷಣ, ಉತ್ಕಾಂಕ್ಷೆಯ ಮಟ್ಟ, ಕೈಚಳಕ, ಸಹಜ ಸಾಮರ್ಥ್ಯ ಪರೀಕ್ಷೆ, ಪ್ರತಿಕ್ರಿಯೆಯ ವೇಗ ಮೊದಲಾದ ವಿಷಯಗಳಲ್ಲಿ ವಿದ್ಯಾರ್ಥಿಗಳು ನಡೆಸಿದ ಹಲವಾರು ಸಂಶೋಧನೆಗಳಿಗೆ ಯುಕ್ತ ಸಲಹೆ ನೀಡಿದರು. ಅಲ್ಲದೆ ಇಂಥ ಸಂಶೋಧನೆಗೆ ಬೇಕಾಗಬಹುದಾದ ಅನೇಕ ಉಪಕರಣಗಳನ್ನೂ ತಾವೇ ಸಿದ್ಧಪಡಿಸಿಕೊಂಡರೆಂಬ ವಿಷಯ ಗಮನಾರ್ಹವಾದುದು. ಇವರ ಸಂಶೋಧನ ಬರೆಹಗಳು ಇಂಗ್ಲೆಂಡಿನ ಮುಖ್ಯ ಪತ್ರಿಕೆಗಳಲ್ಲಿ ಪ್ರಕಟಗೊಂಡವು. ಅಲ್ಲದೆ ಇವರು ಆಲ್ ಇಂಡಿಯ ಸೈನ್ಸ್ ಕಾಂಗ್ರೆಸ್ಸಿನ ಅನೇಕ ವಾರ್ಷಿಕ ಕೂಟಗಳಲ್ಲಿ ಭಾಗವಹಿಸಿ ಇವರು ತಮ್ಮ ಸಂಶೋಧನೆಗಳ ಬಗ್ಗೆ ವಿಚಾರಗಳನ್ನು ಮಂಡಿಸಿದರು.

ಮನಶ್ಶಾಸ್ತ್ರದಲ್ಲಿ ಹೇಗೋ ಹಾಗೆ ಶಿಕ್ಷಣಕ್ಕೆ ಸಂಬಂಧಪಟ್ಟ ವಿಷಯಗಳಲ್ಲೂ ಅಪಾರ ಆಸಕ್ತಿ ಹೊಂದಿದ್ದ ಇವರು ಮೈಸೂರಿನಲ್ಲಿ ಮೊದಲ ಬಾರಿಗೆ ಆದರ್ಶ ಶಿಶುವಿಹಾರವೊಂದು ಸ್ಥಾಪಿತವಾಗಲು ಸಹಕರಿಸಿದರು. 1952ರಲ್ಲಿ ಪ್ಯಾರಿಸ್ ನಗರದಲ್ಲಿ ನಡೆದ ವಿಶ್ವಸಮ್ಮೇಳನವೊಂದರಲ್ಲಿ ಭಾಗವಹಿಸಿ ತಾವು ನಡೆಸಿದ ಶಿಶು ಶಿಕ್ಷಣ ವಿಷಯದಲ್ಲಿನ ಪ್ರಯೋಗಪದ್ಧತಿಗಳನ್ನು ಕುರಿತು ಮಾತನಾಡಿ ಮೆಚ್ಚುಗೆ ಸಂಪಾದಿಸಿದರು.

ಭಾರತದಲ್ಲಿ ಮೊಟ್ಟಮೊದಲಿಗೆ ಬಾನುಲಿ ಕೇಂದ್ರವೊಂದನ್ನು ಸ್ವಂತ ಖರ್ಚಿನಿಂದ ಸ್ಥಾಪಿಸಿದ (1935) ಕೀರ್ತಿ ಗೋಪಾಲಸ್ವಾಮಿಯವರದು. ಈ ಸಂಸ್ಥೆಯಿಂದ ಮೈಸೂರು ನಗರದ ಕೀರ್ತಿ ಹೆಚ್ಚಿತು. ಇಂದು ಪ್ರಚಲಿತವಾಗಿರುವ ಆಕಾಶವಾಣಿ ಎಂಬ ಹೆಸರನ್ನು ಕೊಟ್ಟವರೂ ಇವರೇ. ನಾಡಿನಲ್ಲಿ ವಿದ್ಯೆ, ಸಂಸ್ಕೃತಿ, ಕಲೆ, ಜ್ಞಾನ, ಪ್ರಸಾರವಾಗಬೇಕೆಂಬ ಇವರ ಹಿರಿಯಾಸೆ ಆಕಾಶವಾಣಿಯಿಂದ ನೆರವೇರಿತು.

ಮೈಸೂರು ಮಹಾರಾಜ ಕಾಲೇಜಿನ ಮುಖ್ಯಸ್ಥ ಹುದ್ದೆಯಿಂದ ವಿಶ್ರಾಂತರಾದ ಮೇಲೆ (1952) ಮೈಸೂರು ಸರ್ಕಾರ ಇವರನ್ನು ಬೆಂಗಳೂರಿನ ಮಾನಸಿಕರೋಗ ಆಸ್ಪತ್ರೆಯಲ್ಲಿ 1938ರಲ್ಲಿ ಸ್ಥಾಪಿತವಾಗಿದ್ದ ಮನೋರೋಗಚಿಕಿತ್ಸಾಮನಶ್ಶಾಸ್ತ್ರ ಶಾಖೆಯೊಂದಿಗೆ ಒಂದು ಸಂಶೋಧನ ಶಾಖೆಯನ್ನೂ ಏರ್ಪಡಿಸಲು ಆಹ್ವಾನಿಸಿ ಆ ಶಾಖೆಯ ಮೊದಲ ನಿರ್ದೇಶಕರನ್ನಾಗಿ ನೇಮಿಸಿತು. ಈಗಿನ ನಿಮ್ಹಾನ್ಸ್ (ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಮೆಂಟಲ್‌ಹೆಲ್ತ್ ಅಂಡ್ ನ್ಯೂರೊ ಸೈನ್ಸ್) ಎಂಬ ಸಂಸ್ಥೆಗೆ ಗೋಪಾಲಸ್ವಾಮಿಯವರು ಸ್ಥಾಪಿಸಿದ ಶಾಖೆ ಅಡಿಗಲ್ಲಾಯಿತು. ಮನಶ್ಶಾಸ್ತ್ರದ ವ್ಯಾಸಂಗ ವಿಶ್ಲೇಷಣೆಗಳು ಮಾನವನ ಮಾನಸಿಕ ಆರೋಗ್ಯಕ್ಕೆ, ಪ್ರಗತಿಗೆ ಸಾಧಕವಾಗಬೇಕು ಎಂಬ ಹಿರಿಯ ಉದ್ದೇಶವನ್ನು ಇವರು ತಮ್ಮ ಜೀವನದುದ್ದಕ್ಕೂ ಸಾಧಿಸಲು ಶ್ರಮಿಸಿದರು. ಈ ಸಾಧನೆ ಇವರಿಗೆ ಅಂತಾರಾಷ್ಟ್ರೀಯ ಖ್ಯಾತಿಯನ್ನು ತಂದುಕೊಟ್ಟಿತು. (ಪಿ.ಕೆ.ವಿ.)

**ಗೋಪಾಲಸ್ವಾಮಿ ಬೆಟ್ಟ :** ಚಾಮರಾಜನಗರ ಜಿಲ್ಲೆಯಲ್ಲಿ ಗುಂಡ್ಲುಪೇಟೆಯಿಂದ 15ಕಿಮೀ ನೈಋತ್ಯಕ್ಕಿರುವ ಬೆಟ್ಟ. ಸುಂದರ ತಾಣ, ಐತಿಹಾಸಿಕ ಸ್ಥಳ. ಸಮುದ್ರಮಟ್ಟದಿಂದ 1446ಮೀ ಎತ್ತರವಿದೆ.



ಹಿಮವದ್ ಗೋಪಾಲಸ್ವಾಮಿ ದೇವಸ್ಥಾನ

ಶಿಖರವನ್ನೇರಲು 5ಕಿಮೀ ಮಾರ್ಗ ಸವೆಸಬೇಕಾಗುತ್ತದೆ. ಬೆಟ್ಟದಲ್ಲಿ ಅನೇಕ ನೀರುಬುಗ್ಗೆಗಳಿದ್ದು ಜಲಾಂಶ ಅಧಿಕವಾಗಿದೆ. ಬೆಟ್ಟ ಸದಾ ಹಸಿರುಮಯವಾಗಿರುತ್ತದೆ. ವರ್ಷದ ಬಹುಕಾಲ ಮಂಜುಮೋಡಗಳಿಂದ ಮುಸುಕಿರುವುದರಿಂದ ಇದು ಹಿಮವದ್ ಗೋಪಾಲಸ್ವಾಮಿ ಬೆಟ್ಟ ಎಂದೇ ಪ್ರಸಿದ್ಧವಾಗಿದೆ. ಹವಾಮಾನ ಚೆನ್ನಾಗಿರುವಾಗ ಮೈಸೂರು ಮತ್ತು ವೈನಾಡು ಪ್ರದೇಶಗಳ ಮನೋಹರ ದೃಶ್ಯವನ್ನು ಕಾಣಬಹುದು.

ಬೆಟ್ಟದ ಮೇಲುಭಾಗವನ್ನು ಸುತ್ತುವರಿದಿದ್ದ ಹಳೆಯ ಕೋಟೆ ಮತ್ತು ಕಂದಕದ ಅವಶೇಷಗಳನ್ನು ದೂರದಿಂದಲೇ ಗುರುತಿಸಬಹುದು. ಕೋಟೆಯ ಒಳಭಾಗದಲ್ಲಿ ಗೋಪಾಲಸ್ವಾಮಿ ದೇವಾಲಯವಿದೆ. ಇದು ಹೊಯ್ಸಳ 3ನೆಯ ಬಲ್ಲಾಳನ ಮಂತ್ರಿ ಮಾಧವ ದಣ್ಣಾಯಕನಿಂದ ನಿರ್ಮಾಣವಾದುದು (ಸು.1300). ಇಲ್ಲಿ ವರ್ಷಕ್ಕೊಮ್ಮೆ ರಥೋತ್ಸವ ನಡೆಯುತ್ತದೆ.

ಪುರಾಣಗಳಲ್ಲಿ ಈ ಬೆಟ್ಟವನ್ನು ಕಮಲಾದ್ರಿ, ದಕ್ಷಿಣ ಗೋವರ್ಧನಗಿರಿ ಎಂದು ಕರೆಯಲಾಗಿದೆ. ಈ ಪ್ರದೇಶಕ್ಕೆ ಬೆಟ್ಟದಕೋಟೆ, ಮೂಡಣ ಕೋಟೆ ಎಂಬ ಹೆಸರುಗಳೂ ಇದ್ದುವು. ಇಲ್ಲಿಯ ಕೋಟೆಯನ್ನು ಕಟ್ಟಿದವನು ಸೋಮಣ್ಣ ಡಣಾಯಕನೆಂದು ಒಂದು ಹೇಳಿಕೆ. ಪ್ರಾಯಶಃ ಇದೂ ಮಾಧವ ದಣ್ಣಾಯಕನ ಕಾಲದ್ದು. 15-17ನೆಯ ಶತಮಾನಗಳಲ್ಲಿ ಇದು ಕೋಟೆಸೀಮೆ ಎಂಬ ಪಾಳೆಯಪಟ್ಟಿನ ಮುಖ್ಯ ಸ್ಥಳವಾಗಿತ್ತು. ಆ ಸೀಮೆಯ ಅರಸುಗಳ ಅನುಕ್ರಮ ಹೀಗಿದೆ: ಇಮ್ಮಡಿ ರಾಜ ಒಡೆಯ - ನಂಜರಾಜ ಒಡೆಯ (1489)- ದೇವರಾಜ ಒಡೆಯ(1503)- ಗೋವಣ್ಣ ಒಡೆಯ (1504)- ದೇವೊಡೆಯ (1512)- ಸಿಂಗಪ್ಪ ಒಡೆಯ - ಚೆನ್ನರಾಯ ಒಡೆಯ (1517) - ಕೋಟೆ ಒಡೆಯ (1513) - ಮಾಧವ ನಾಯಕ (1530-48) - ದೊಡ್ಡ ಮಲ್ಲರಾಯ ಒಡೆಯ (1559)- ಲಿಂಗರಾಜ ಒಡೆಯ (1650-54) - ನಂಜರಾಜ ಒಡೆಯ (1569). (ಆರ್.ಟಿ.ಎಸ್.)

**ಗೋರ್ಡನ್, ಜೇಮ್ಸ್ ಡೇವಿಡ್‌ಸನ್ :** 1835-89. ಮೈಸೂರು ಸಂಸ್ಥಾನದಲ್ಲಿದ್ದ ಬ್ರಿಟಿಷ್ ರೆಸಿಡೆಂಟ್ (1881-83). ತಂದೆ ಎವಿಲಿನ್ ಮೆಡೋಸ್. ಗೋರ್ಡನ್ 1852-54ರವರೆಗೆ ಹೈಲಿಬರಿಯಲ್ಲಿ ಶಿಕ್ಷಣ ಪಡೆದು 1854ರಲ್ಲಿ ಬಂಗಾಲದಲ್ಲಿ ಸಿವಿಲ್ ಸರ್ವೀಸ್‌ನಲ್ಲಿ ನೇಮಕಗೊಂಡ. 1866-73ರ ಅವಧಿಯಲ್ಲಿ ಗೌರ್ನರ್ ಜನರಲ್ ಲಾರ್ಡ್ ಲಾರೆನ್ಸ್‌ನ ಆಪ್ತಕಾರ್ಯದರ್ಶಿಯಾಗಿದ್ದ. 1873ರಲ್ಲಿ ಮೈಸೂರಿನ ಜುಡಿಷಿಯಲ್ ಕಮಿಷನರ್ ಆಗಿಯೂ 1878ರಲ್ಲಿ ಚೀಫ್ ಕಮಿಷನರ್ ಆಗಿಯೂ ನೇಮಕಗೊಂಡು 1881ರಲ್ಲಿ ರೆಸಿಡೆಂಟ್ ಆಗಿ ಬಡ್ತಿಪಡೆದ.

ಧ್ರುವ ಈ ಅವಕಾಶವನ್ನು ಉಪಯೋಗಿಸಿಕೊಂಡು ರಾಜ್ಯಾಡಳಿತದ ಸೂತ್ರವನ್ನು ಕಸಿದುಕೊಳ್ಳಲು ಹವಣಿಸಿದ. ಅಣ್ಣನನ್ನು ಧಿಕ್ಕರಿಸಿ ತನ್ನ ಹೆಸರಿನಲ್ಲಿಯೇ ಶಾಸನವನ್ನು ಹೊರಡಿಸಲು ಪ್ರಾರಂಭಿಸಿದ. ಇದನ್ನರಿತ ಗೋವಿಂದ ಧ್ರುವನನ್ನು ಅಧಿಕಾರ ಸ್ಥಾನದಿಂದ ತಳ್ಳಿ ತಾನೇ ಅಧಿಕಾರವನ್ನು ವಹಿಸಿಕೊಂಡ. ಧ್ರುವ ಅಣ್ಣನ ವಿರುದ್ಧ ದಂಗೆ ಎದ್ದ. ಗೋವಿಂದ ಕಂಚಿ, ಗಂಗವಾಡಿ, ವೆಂಗಿ, ಮಾಳವ ಮೊದಲಾದ ರಾಜರುಗಳ ನೆರವನ್ನು ಯಾಚಿಸಿ ಧ್ರುವನೊಡನೆ ಯುದ್ಧಕ್ಕೆ ಸಿದ್ಧನಾದ. ಆದರೆ ರಾಷ್ಟ್ರಕೂಟ ವೈರಿಗಳತ್ತ ಇವನು ನೆರವಿಗೆ ಕೈಚಾಚಿದ್ದರಿಂದ ಇವನ ಮಂತ್ರಿ ಸಾಮಂತರೂ ಧ್ರುವನ ಪಕ್ಷ ವಹಿಸಿದರು. ವೆಂಗಿಯ ವಿಷ್ಣುವರ್ಧನ ಧ್ರುವನ ಮಾವನಾದುದರಿಂದ ಗೋವಿಂದನ ನೆರವಿಗೆ ಬರಲಿಲ್ಲ. ಉಳಿದ ರಾಜರ ಸಹಾಯ ಬರುವುದಕ್ಕೆ ಮೊದಲೇ ಧ್ರುವ ಗೋವಿಂದನನ್ನು ಸೋಲಿಸಿ ರಾಜ್ಯಾಧಿಕಾರವನ್ನು ಕಿತ್ತುಕೊಂಡು ರಾಷ್ಟ್ರಕೂಟ ಸಾಮ್ರಾಜ್ಯದ ಅಧಿಪತಿಯಾದ. ಗೋವಿಂದ 780ರಲ್ಲಿ ಯುದ್ಧರಂಗದಲ್ಲೇ ಅಸುನೀಗಿರಬೇಕೆಂದು ತೋರುವುದು. (ಎಸ್.)

**ಗೋವಿಂದ III :** ರಾಷ್ಟ್ರಕೂಟ ವಂಶದ ಪ್ರಖ್ಯಾತ ರಾಜ (ಸು.793-814). ಧ್ರುವನ ಮೂರನೆಯ ಮಗ. ಪ್ರಭೂತವರ್ಷ, ಜಗತ್ತುಂಗ, ಜನವಲ್ಲಭ, ಕೀರ್ತಿನಾರಾಯಣ, ಜಗತ್‌ರುದ್ರ, ತ್ರಿಭುವನಧವಳ ಎಂಬ ಬಿರುದುಗಳನ್ನು ಹೊಂದಿದ್ದ. ತನ್ನ ತಂದೆ ಧ್ರುವನ ಇಚ್ಛೆಯಂತೆ ಅವನ ಅನಂತರ ರಾಷ್ಟ್ರಕೂಟ ಸಿಂಹಾಸನವನ್ನೇರಿದ. ಇವನು ರಾಜನಾದಮೇಲೆ ಇವನ ಅಣ್ಣ ರಣಾವಲೋಕ ಸ್ತಂಭ ಸ್ವಲ್ಪಕಾಲ ತೆಪ್ಪಗಿದ್ದರೂ ತಮ್ಮನ ಏಳಿಗೆಯನ್ನು ಸಹಿಸಲಿಲ್ಲ. ತನ್ನನ್ನು ಬಿಟ್ಟು ತಮ್ಮನಿಗೆ ತಂದೆ ಪಟ್ಟಗಟ್ಟಿದುದರಿಂದ ಮೊಳೆತ ಅಸೂಯೆ ಹೆಮ್ಮರವಾಗಿ ಬೆಳೆಯತೊಡಗಿತು. ತಮ್ಮನಿಂದ ಅಧಿಕಾರವನ್ನು ಕಸಿದುಕೊಳ್ಳಲು ಕಂಚಿಯವರೆಗಿನ ಹನ್ನೆರಡು ಮಂದಿ ಸಾಮಂತರನ್ನು ಒಂದುಗೂಡಿಸಿ ಗೋವಿಂದನ ವಿರೋಧವಾಗಿ ಒಂದು ಮಹತ್ತರ ಕೂಟವನ್ನು ರಚಿಸಿದ. ಅವರಲ್ಲಿ ಕಂಚಿಯ ದಂತಿಗ, ನೊಳಂಬವಾಡಿಯ ಚಾರುಪೊನ್ನೇರ ಮತ್ತು ಬನವಾಸಿಯ ಕತ್ತಿಯರ ಮುಖ್ಯರು. ಅಲ್ಲದೆ ಗೋವಿಂದನ ಕೆಲವರು ಮಂತ್ರಿಗಳೂ ಸ್ತಂಭನ ಪರವಾಗಿದ್ದರು. 788ರಲ್ಲಿ ಗಂಗರಾಜ ಶ್ರೀಪುರುಷ ಮರಣಹೊಂದಿದಾಗ ಅವನ ಅನಂತರ ಪಟ್ಟಕ್ಕೆ ಬರಬೇಕಾಗಿದ್ದ ಶಿವಮಾರ ರಾಷ್ಟ್ರಕೂಟ ಕಾರಾಗೃಹದಲ್ಲಿ ಬಂದಿಯಾಗಿದ್ದ. ಗೋವಿಂದ ರಣಾವಲೋಕನನ್ನು ಸದೆಬಡಿಯುವುದಕ್ಕೆ ಅನುಕೂಲವಾಗಲೆಂದು ಶಿವಮಾರನನ್ನು ಬಿಡುಗಡೆಮಾಡಿ ಅವನ ರಾಜ್ಯಕ್ಕೆ ಕಳುಹಿಸಿಕೊಟ್ಟ. ಆದರೆ ಶಿವಮಾರ ರಣಾವಲೋಕ ಸ್ತಂಭನ ಪಕ್ಷಕ್ಕೆ ಸೇರಿಕೊಂಡ. ಗೋವಿಂದ ಸ್ತಂಭನ ದಂಗೆಯನ್ನಡಗಿಸಲು ನಿರತನಾದ. ಸ್ತಂಭನಿಗೆ ಮಿತ್ರರಾಜರಿಂದ ಸಹಾಯ ಬರುವುದಕ್ಕೆ ಮೊದಲೇ ಅವನನ್ನು ಸೆರೆಹಿಡಿದ. ಆದರೆ ಅವನ ತಪ್ಪನ್ನು ಕ್ಷಮಿಸಿ ಪುನಃ ಗಂಗವಾಡಿಯ ಮಾಂಡಲಿಕನನ್ನಾಗಿ ನೇಮಿಸಿದ. ಶಿವಮಾರನನ್ನು ಪುನಃ ಕಾರಾಗೃಹಕ್ಕೆ ತಳ್ಳಿದ. ಅನಂತರ ಗೋವಿಂದ ಕಂಚಿಯ ದಂತಿಗನ ಮೇಲೆ ದಂಡೆತ್ತಿಹೋಗಿ ಅವನನ್ನು ಸೋಲಿಸಿದ; ನೊಳಂಬವಾಡಿಯ ಚಾರುಪೊನ್ನೇರ ಶರಣಾಗತನಾದ. 796ರ ಹೊತ್ತಿಗೆ ಗೋವಿಂದ ಇವೆಲ್ಲ ದಿಗ್ವಿಜಯಗಳನ್ನು ನಿರ್ವಹಿಸಿ ದಕ್ಷಿಣಾಪಥದ ಏಕೈಕ ಪ್ರಭುವಾದ.

ಇತ್ತ ತನ್ನ ಅಧಿಕಾರ ನಿರ್ಬಾಧಿತವಾದ ಮೇಲೆ ಗೋವಿಂದ ತನ್ನ ದೃಷ್ಟಿಯನ್ನು ಉತ್ತರ ಭಾರತಕ್ಕೆ ಹರಿಸಿದ (ಸು.798-800), ಗೋವಿಂದನ ತಂದೆ ಧ್ರುವ ಉತ್ತರ ಭಾರತದ ದಂಡಯಾತ್ರೆಯಿಂದ ಹಿಂತಿರುಗಿ ಬಂದಮೇಲೆ ಬಂಗಾಲದ ಧರ್ಮಪಾಲ ಕನೂಜನ್ನು ಗೆದ್ದುಕೊಂಡು ಚಕ್ರಾಯುಧನನ್ನು ಕನೂಜಿನ ರಾಜನನ್ನಾಗಿ ಮಾಡಿ ತಾನು ಉಚ್ಛ್ರಾಯಸ್ಥಿತಿಗೆ ಏರಿದ್ದ. ಆದರೆ ಸ್ವಲ್ಪಕಾಲದಲ್ಲಿಯೇ ಗೂರ್ಜರ ಪ್ರತೀಹಾರ ರಾಜ ಇಮ್ಮಡಿ ನಾಗಭಟ ಪುನಃ ಕನೂಜನ್ನು ಗೆದ್ದುಕೊಂಡು ಚಕ್ರಾಯುಧನನ್ನು ಓಡಿಸಿದನಲ್ಲದೆ, ಆತನ ಸಹಾಯಕ್ಕೆ ಬಂದ ಧರ್ಮಪಾಲನನ್ನೂ ಹಿಮ್ಮೆಟ್ಟಿಸಿದ್ದ. ಈ ಸಮಯದಲ್ಲಿ ಗೋವಿಂದ ಕನೂಜಿನ ಮೇಲೆ ದಂಡೆತ್ತಿಹೋದ. ನಾಗಭಟನಿಗೂ ಮತ್ತು ಗೋವಿಂದನಿಗೂ ಪ್ರಾಯಶಃ ಝಾನ್ಸಿ, ಗ್ವಾಲಿಯರ್ ಪ್ರಾಂತ್ಯಗಳ ನಡುವೆ ಯುದ್ಧವಾಯಿತು. ಚಕ್ರಾಯುಧ, ಧರ್ಮಪಾಲ ಇಬ್ಬರೂ ಗೋವಿಂದನಿಗೆ ಶರಣಾದರು. ಅನಂತರ ಗೋವಿಂದನ ಸೈನ್ಯ ಹಿಮಾಲಯದ ತಪ್ಪಲಿನವರೆಗೂ ದಂಡೆತ್ತಿ ಹೋಗಿ ನಾನಾ ರಾಜವಂಶಗಳ ರಾಜರನ್ನು ಸದೆಬಡಿದು, ಕರ್ನಾಟಕದ ಕೀರ್ತಿ ಪ್ರತಾಪಗಳನ್ನು ಹಿಮಾಲಯಪರ್ಯಂತ ಹರಡಿತು. ಗೋವಿಂದ ಕೈಗೊಂಡ ಉತ್ತರ ಭಾರತದ ದಂಡಯಾತ್ರೆ ಕೇವಲ ದಿಗ್ವಿಜಯ ರೂಪವಾಗಿತ್ತು. ಕೀರ್ತಿ ಮತ್ತು ಕೋಶವೃದ್ಧಿಯಾಯಿತೆ ವಿನಾ ರಾಜ್ಯವಿಸ್ತಾರವೇನೂ ಆದಂತೆ ತೋರುವುದಿಲ್ಲ. ಈ ಹಿಂದಿನಿಂದಲೂ ರಾಷ್ಟ್ರಕೂಟಾಧೀನದಲ್ಲಿದ್ದ ಮಾಳವ ಗುಜರಾತ್ ಪ್ರದೇಶಗಳನ್ನು ಭದ್ರಪಡಿಸಿಕೊಳ್ಳಲೋಸುಗ ಸಮರ್ಥ ಯೋಧನಾಗಿದ್ದ ತನ್ನ ತಮ್ಮ ಇಂದ್ರನಿಗೆ ಆ ಪ್ರಾಂತ್ಯಗಳ ಅಧಿಕಾರವನ್ನು ವಹಿಸಿದ. ಈ ದಂಡಯಾತ್ರೆಯಿಂದ ಹಿಂದಿರುಗುತ್ತಿದ್ದಾಗ ಮಾಳವದೇಶದ ಶ್ರೀಭವನ ಎಂಬಲ್ಲಿ ತಂಗಿದ್ದ. ಆಗ ಮಗ ಅಮೋಘವರ್ಷ (ನೃಪತುಂಗ) ಜನಿಸಿದ.

ಗೋವಿಂದ ದೀರ್ಘಕಾಲ ರಾಜಧಾನಿಯಿಂದ ಹೊರಗೆ ಇದ್ದ ಅವಕಾಶವನ್ನು ಉಪಯೋಗಿಸಿಕೊಂಡು ದಕ್ಷಿಣದ ಪಲ್ಲವ, ಪಾಂಡ್ಯ, ಕೇರಳ, ಗಂಗರಾಜರು ಗೋವಿಂದನ ಪ್ರಭುತ್ವವನ್ನು ಮುರಿಯಲು ಸಿದ್ಧತೆ ಮಾಡತೊಡಗಿ ರಾಷ್ಟ್ರಕೂಟರ ಕೆಲವು ಪ್ರಾಂತ್ಯಗಳನ್ನು ಆಕ್ರಮಿಸಿದರು. ಈ ವಾರ್ತೆಯನ್ನು ಕೇಳಿದೊಡನೆಯೇ ಈತ ತುಂಗಭದ್ರಾ ತಟಕ್ಕೆ ಧಾವಿಸಿ (ಸು.802) ಅಲ್ಲಿ ಬೀಡುಬಿಟ್ಟಿದ್ದ ದಕ್ಷಿಣ ರಾಜರ ಸೈನ್ಯಗಳನ್ನು ಪರಾಭವಗೊಳಿಸಿದ. ಅನೇಕ ಗಂಗಸೇನಾಧಿಕಾರಿಗಳನ್ನು ಮರುಕ ತೋರಿಸದೆ ಬಲಿ ತೆಗೆದುಕೊಂಡ. ಈ ವಿಜಯದ ಅನಂತರ ಪಲ್ಲವರ ರಾಜಧಾನಿಯಾದ ಕಂಚಿಯನ್ನು ಸೂರೆಮಾಡಿ ಸ್ವಾಧೀನಪಡಿಸಿಕೊಂಡ. ಅನಂತರ ಪಾಂಡ್ಯ, ಕೇರಳ ರಾಜರುಗಳನ್ನು ಸೋಲಿಸಿದ. ಗೋವಿಂದ ಕಂಚಿಯ ರಾಜ್ಯವನ್ನು ಜಯಿಸಿದನೆಂಬ ಸುದ್ದಿಯನ್ನು ಕೇಳಿದೊಡನೆಯೆ ಸಿಂಹಳದ ರಾಜ ತಾನಾಗಿಯೇ ವಿನಮ್ರನಾಗಿ ಬಂದು ಗೋವಿಂದನಿಗೆ ತನ್ನ ಹಾಗೂ ತನ್ನ ಅಮಾತ್ಯನ ಪ್ರತಿಮೆಗಳನ್ನು ಕಪ್ಪವಾಗಿ ಸಲ್ಲಿಸಿದ.

ನಾಲ್ವಡಿ ವಿಷ್ಣುವರ್ಧನ ಜೀವಿಸಿರುವವರೆಗೂ ಪೂರ್ವ ಚಾಳುಕ್ಯ ಮತ್ತು ರಾಷ್ಟ್ರಕೂಟರ ಸಂಬಂಧ ಸ್ನೇಹದಿಂದ ಕೂಡಿತ್ತು. ಅವನ ಅನಂತರ ಪಟ್ಟಕೆ ಬಂದ ಇಮ್ಮಡಿ ವಿಜಯಾದಿತ್ಯ ಸಾಮಂತನಾಗಿರಲು ಒಪ್ಪದೆ ಪ್ರತ್ಯಕ್ಷವಾಗಿ ಗೋವಿಂದನನ್ನು ವಿರೋಧಿಸತೊಡಗಿದ. ಈ ನಡುವೆ ವಿಜಯಾದಿತ್ಯನಿಗೂ ಅವನ ತಮ್ಮ ಭೀಮನಿಗೂ ಪಟ್ಟಕ್ಕಾಗಿ ಹೋರಾಟ ಪ್ರಾರಂಭವಾಯಿತು. ಭೀಮ ಗೋವಿಂದನ ಮೊರೆಹೊಕ್ಕ. ಗೋವಿಂದ ಸೇನಾಸಮೇತನಾಗಿ ವೆಂಗಿಗೆ ನಡೆದು ವಿಜಯಾದಿತ್ಯನನ್ನು ಸೋಲಿಸಿ ವೆಂಗಿ ರಾಜ್ಯವನ್ನು ಗಳಿಸಿಕೊಟ್ಟ.

ಸು.810ರಲ್ಲಿ ಗಂಗರಾಜ್ಯದ ಮಾಂಡಲಿಕನಾಗಿದ್ದ ರಣಾವಲೋಕಸ್ತಂಭ ಸತ್ತ. ಗೋವಿಂದ ತನ್ನ ತಮ್ಮ ಇಂದ್ರನ ಜ್ಯೇಷ್ಠಪುತ್ರನಾದ ದಂತಿವರ್ಮನನ್ನು ಗಂಗರಾಜ್ಯದ ಮಾಂಡಲಿಕನಾಗಿ ನೇಮಿಸಿದ. ಆದರೆ ದಂತಿವರ್ಮ ಅಕಾಲ ಮರಣಕ್ಕೆ ತುತ್ತಾದ್ದರಿಂದ ಕೊನೆಗೆ ಗೋವಿಂದ ಅದುವರೆಗೆ ಸೆರೆಯಲ್ಲಿದ್ದ ಶಿವಮಾರನನ್ನು ಬಿಡುಗಡೆಮಾಡಿ ಗಂಗರಾಜ್ಯವನ್ನು ಅವನಿಗೇ ಮರಳಿ ನೀಡಿದ.

ಭಾರತದ ಇತಿಹಾಸದ ಪುಟಗಳಲ್ಲಿ ಗಣ್ಯಸ್ಥಾನ ಪಡೆದಿರುವ ರಾಜರುಗಳಲ್ಲಿ ಗೋವಿಂದನೂ ಒಬ್ಬ. ಇವನ ರಾಜಕೀಯ ಪ್ರಭಾವ ಕನೂಜಿನಿಂದ ಕನ್ಯಾಕುಮಾರಿಯವರೆಗೂ ವ್ಯಾಪಿಸಿದ್ದಿತು. ಇವನ ಕೊನೆಗಾಲ ಶಾಂತಿ, ಸಮೃದ್ಧಿಯ ಕಾಲ. ಆ ದಿನಗಳಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯ ಪ್ರಾಬಲ್ಯ, ಘನತೆ, ಗೌರವಗಳ ಉತ್ತುಂಗ ಶಿಖರವನ್ನು ಮುಟ್ಟಿತ್ತು.

ಸು.814ರಲ್ಲಿ ಇವನ ಅವಸಾನವಾಯಿತು. ಗಾಮುಂಡಬ್ಬೆ ಈತನ ಪತ್ನಿ. ಅಮೋಘವರ್ಷ ನೃಪತುಂಗ ಈತನ ಮಗ. (ಎಸ್.)

**ಗೋವಿಂದ IV :** ರಾಷ್ಟ್ರಕೂಟ ದೊರೆ (930-35). 3ನೆಯ ಇಂದ್ರನ ಕಿರಿಯ ಮಗ. ಪ್ರಭೂತವರ್ಷ, ಸುವರ್ಣವರ್ಷ, ನೃಪತುಂಗ, ನೃಪತಿತ್ರಿನೇತ್ರ, ಸಾಹಸಾಂಕ, ರಟ್ಟಕಂದರ್ಪ ಎಂಬುವು ಇವನ ಬಿರುದುಗಳು. ನಾಲ್ವಡಿ ಗೋವಿಂದ ಅಣ್ಣನಾದ ಇಮ್ಮಡಿ ಅಮೋಘವರ್ಷನನ್ನು ಪ್ರಾಯಶಃ

**ಗೋವಿಂದನಾರಾಯಣ್ :** 1917-. ಕರ್ನಾಟಕದ ಮಾಜಿ ರಾಜ್ಯಪಾಲರು (1977-83). ಉತ್ತರ ಪ್ರದೇಶದ ಮೈನ್‌ಪುರಿಯಲ್ಲಿ 1917ರಲ್ಲಿ ಹುಟ್ಟಿದರು. ತಂದೆ ರಾಮ್‌ನಾರಾಯಣ್, ತಾಯಿ ರಾಜ್‌ರಾಣಿ.

ಇವರು ಅಲಹಾಬಾದ್ ವಿಶ್ವವಿದ್ಯಾಲಯದಿಂದ ಬಿ.ಎಸ್‌ಸಿ. (ಆನರ್ಸ್) ಮತ್ತು ಎಂ.ಎಸ್‌ಸಿ. ಪದವಿ ಪಡೆದರು. ಅನಂತರ



ಆಕ್ಸ್‌ಫರ್ಡಿನ ಬಲಿಯೋಲ್ ಕಾಲೇಜಿನಲ್ಲಿ ಅಧ್ಯಯನ ಮಾಡಿ ಭಾರತೀಯ ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಐ.ಎ.ಎಸ್ ಅಧಿಕಾರಿಯಾಗಿ ಭಾರತ ಸರ್ಕಾರದ ಸೇವೆಗೆ ಸೇರಿದರು. ಅನೇಕ ವರ್ಷಗಳ ಕಾಲ ಉತ್ತರ ಪ್ರದೇಶದಲ್ಲಿ ಕೆಲಸಮಾಡಿದರು. ಭಾರತದ ಸ್ವಾತಂತ್ರ್ಯದ ಪ್ರಶ್ನೆ ತೀವ್ರವಾಗಿ ಚರ್ಚಿತವಾಗುತ್ತಿದ್ದಾಗ ಇವರು ಜಿಲ್ಲಾ ದಂಡಾಧಿಕಾರಿಯಾಗಿ ಸೇವೆ ಸಲ್ಲಿಸಿದರು (1945-47). ಸ್ವಾತಂತ್ರ್ಯಾನಂತರ ಉತ್ತರ ಪ್ರದೇಶ ಸರ್ಕಾರದಲ್ಲಿ ಗೃಹಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದರು (1948-51).

ನೇಪಾಲದೊಂದಿಗೆ ಸ್ವತಂತ್ರ ಭಾರತದ ಸಂಬಂಧ ರೂಪುಗೊಳ್ಳುತ್ತಿದ್ದ ಕಾಲದಲ್ಲಿ ಇವರ ಸೇವೆಯನ್ನು ಆ ದೇಶಕ್ಕೆ ಎರವಲಾಗಿ ನೀಡಲಾಗಿತ್ತು. ಮೂರು ವರ್ಷಗಳ ಕಾಲ ಇವರು ನೇಪಾಲದ ರಾಜರ ಸಲಹೆಗಾರ ಮತ್ತು ಕಾರ್ಯದರ್ಶಿಯಾಗಿದ್ದರು (1951-53). ಈ ಅವಧಿ ಪೂರೈಸಿದ ಬಳಿಕ ಉತ್ತರ ಪ್ರದೇಶಕ್ಕೆ ಹಿಂದಿರುಗಿ ಆ ರಾಜ್ಯದ ಮರಾಮತ್, ವಿದ್ಯುತ್ತು ಮತ್ತು ಸಮಾಚಾರ ಖಾತೆಗಳ ಕಾರ್ಯದರ್ಶಿಯಾಗಿ, ಸಮಾಚಾರ ಖಾತೆಯ ನಿರ್ದೇಶಕರಾಗಿ ಕೆಲಸ ಮಾಡಿದರು. ಅಭಿವೃದ್ಧಿ, ಯೋಜನೆ, ಅರ್ಥಶಾಸ್ತ್ರ, ಅಂಕಿಅಂಶ ಮುಂತಾದ ವಿಚಾರಗಳಲ್ಲೂ ಇವರಿಗೆ ಅಪಾರ ಅನುಭವವಿತ್ತು. ಇವರು ಅಭಿವೃದ್ಧಿ ಕಮಿಷನರ್ ಆಗಿಯೂ ನಾನಾ ಇಲಾಖೆಗಳಲ್ಲಿ ಕಾರ್ಯದರ್ಶಿಯಾಗಿಯೂ ಇದ್ದರಲ್ಲದೆ (1955-58) ಉತ್ತರ ಪ್ರದೇಶದ ಮುಖ್ಯ ಕಾರ್ಯದರ್ಶಿಯಾಗಿ (1958-61) ಕೆಲಸ ಮಾಡಿದರು. ರಾಜ್ಯ ವ್ಯಾಪಾರ ಕಾರ್ಪೊರೇಷನ್ನಿನ ವ್ಯವಸ್ಥಾಪಕ ನಿರ್ದೇಶಕರಾಗಿದ್ದ ಇವರು ಅದೇ ಸಂಸ್ಥೆಯ ರಾಷ್ಟ್ರಮಟ್ಟದ ಅಧ್ಯಕ್ಷರಾಗಿದ್ದರು. ಇವರು ಭಾರತದ ಖನಿಜ ಮತ್ತು ಲೋಹ ವ್ಯಾಪಾರ ಕಾರ್ಪೊರೇಷನ್ನಿನ ಅಧ್ಯಕ್ಷರಾಗಿದ್ದರು. (1963-66). ಕೇರಳದಲ್ಲಿ ರಾಷ್ಟ್ರಪತಿ ಆಡಳಿತ ಘೋಷಿತವಾಗಿದ್ದಾಗ ಅಲ್ಲಿಯ ರಾಜ್ಯಪಾಲರ ಸಲಹೆಗಾರರಾಗಿ ಕಾರ್ಯನಿರ್ವಹಿಸಿದರು (1965).

ರಾಜ್ಯ ಸರ್ಕಾರದ ಸೇವಾಕ್ಷೇತ್ರದಿಂದ ರಾಷ್ಟ್ರಮಟ್ಟದ ಸೇವೆಗೆ ಇವರು ನಿಯೋಜಿತರಾದರು. ಕೇಂದ್ರ ಸರ್ಕಾರದ ಕುಟುಂಬ ಯೋಜನಾ ಇಲಾಖೆಯ ಕಾರ್ಯದರ್ಶಿಯಾಗಿ (1966), ಆರೋಗ್ಯ ಮತ್ತು ಕುಟುಂಬಯೋಜನಾ ಸಚಿವಾಲಯದ ಕಾರ್ಯದರ್ಶಿಯಾಗಿ (1967-68) ಸೇವೆ ಸಲ್ಲಿಸಿದರು. ರಕ್ಷಣಾ ಉತ್ಪಾದನ ವಿಭಾಗದ ಕಾರ್ಯದರ್ಶಿಯಾಗಿದ್ದ (1968-70) ಇವರು ಗೃಹಸಚಿವಾಲಯದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದರು (1971-73). ಬಳಿಕ ರಕ್ಷಣಾ ಸಚಿವಾಲಯದಲ್ಲಿ ಕಾರ್ಯದರ್ಶಿಯಾಗಿ ನೇಮಕಗೊಂಡು ಆ ಹುದ್ದೆಯಲ್ಲೇ ನಿವೃತ್ತರಾದರು.

ಸಾರ್ವಜನಿಕ ಜೀವನದಲ್ಲಿ ಅತ್ಯಂತ ಸಂಪನ್ನರೂ ಅಪಾರ ಅನುಭವಿಯೂ ಆಗಿದ್ದ ಇವರು ಆಡಳಿತದ ಎಲ್ಲ ತೊಡಕುಗಳನ್ನೂ ಸೂಕ್ಷ್ಮಗಳನ್ನೂ ಬಲ್ಲವರಾಗಿದ್ದರು. 1977ರಲ್ಲಿ ಕರ್ನಾಟಕದ ರಾಜ್ಯಪಾಲರಾಗಿ ನೇಮಕಗೊಂಡು ರಾಜ್ಯದ ಅಭಿವೃದ್ಧಿಯಲ್ಲಿ ಕೈಜೋಡಿಸಿದರು. ಚಂದ್ರಾ ಇವರ ಪತ್ನಿ. (ಎಚ್.ಎಸ್.ಕೆ.)

**ಗೋವಿಂದ ಪೈ,ಎಂ. :** 1883-1963. ರಾಷ್ಟ್ರಕವಿ ಪ್ರಶಸ್ತಿಗೆ ಭಾಜನರಾಗಿದ್ದ ಪ್ರಸಿದ್ಧ ಕವಿಗಳು ಮತ್ತು ಸಂಶೋಧಕರು. 1883 ಮಾರ್ಚ್ 23ರಂದು ಮಂಗಳೂರಿನಲ್ಲಿ ಜನಿಸಿ ಕಡಲ ಕರೆಯ ಮಂಜೇಶ್ವರದಲ್ಲಿ ಬೆಳೆದರು. ಕನ್ನಡ ನಾಡುನುಡಿಗಳ ಏಳಿಗೆಗೆ, ಏಕೀಕರಣಕ್ಕೆ ಕೆಲಸ ಮಾಡಿದವರಲ್ಲಿ ಇವರು ಬಹಳ ಮುಖ್ಯರು. ಆಸ್ತಿ ಮನೆ ಎಲ್ಲ ಮಂಜೇಶ್ವರದಲ್ಲಿದ್ದುದರಿಂದ ಅಲ್ಲಿಯೇ ಇವರು ನೆಲೆನಿಂತರಾದರೂ ಇವರ ಹೆಸರಿನ ಮೊದಲಿಗೆ ಇರುವ ಎಂ. ಎಂಬುದು ಮಂಗಳೂರಿನ ಪ್ರತೀಕವೇ ಹೊರತು ಮಂಜೇಶ್ವರದ್ದಲ್ಲ. ಇವರು ಗೌಡ ಸಾರಸ್ವತ ಸಮಾಜದ ಮಂಗಳೂರಿನ ಬಾಬ ಪೈ ಮನೆತನಕ್ಕೆ ಸೇರಿದವರು.

ಇವರ ಆರಂಭದ ವ್ಯಾಸಂಗ ಮಂಗಳೂರಿನಲ್ಲಿ ನಡೆಯಿತು. ಪಂಜೆ ಮಂಗೇಶರಾಯರು ಇವರ ವಿದ್ಯಾಗುರುಗಳಲ್ಲೊಬ್ಬರು. ಮಂಗಳೂರಿನಲ್ಲಿ ನಡೆಯುತ್ತಿದ್ದ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಚುರುಕು ಬುದ್ಧಿಯ ಮತ್ತು ಭಾವುಕ ಮನೋಧರ್ಮವುಳ್ಳ ಇವರ ಮೇಲೆ ವಿಶೇಷ ಪರಿಣಾಮ ಬೀರಿದುವು. ಜೊತೆಗೆ ಅಲ್ಲಿದ್ದ ಬಾಸೆಲ್ ಮಿಶನ್ ಪುಸ್ತಕ ಭಂಡಾರದಿಂದಲೂ ಪ್ರಭಾವಿತರಾದರು. ಇದರಿಂದಾಗಿ ಇವರು ಹೆಚ್ಚು ಹೆಚ್ಚು ಪುಸ್ತಕಗಳನ್ನು ಸಂಗ್ರಹಿಸುವ ಮತ್ತು ಸತತವಾಗಿ ವ್ಯಾಸಂಗಮಾಡುವ ಅಭ್ಯಾಸವನ್ನು ರೂಢಿಸಿಕೊಂಡರು. ಮುಂದೆ ಇವರು ಪ್ರೌಢವಿದ್ಯಾಭ್ಯಾಸಕ್ಕೆಂದು ಮದರಾಸಿಗೆ ತೆರಳಿದರಾದರೂ ತಂದೆಯ ತೀವ್ರಕಾಯಿಲೆಯಿಂದಾಗಿ, ಅನಂತರ ಹಠಾತ್ತನೆ ಒದಗಿದ ಅವರ ಮರಣದಿಂದಾಗಿ ಬಿ.ಎ. ಪದವಿಯನ್ನು ಪಡೆಯಲಾಗಲಿಲ್ಲ.

ತಂದೆ ತೀರಿಕೊಂಡಮೇಲೆ ಇವರು ಸಂಸಾರದ ಹೊಣೆ ಹೊತ್ತು ಊರಿನಲ್ಲಿಯೇ ನಿಂತರು. ಆದರೆ ಇವರ ಸಾಂಸಾರಿಕ ಜೀವನ ಅಂಥ ಸುಖಮಯವೇನೂ ಆಗಲಿಲ್ಲ. ದಾಂಪತ್ಯ ಜೀವನದ ಹರೆಯದಲ್ಲಿಯೆ ಪತ್ನಿಯನ್ನು ಕಳೆದುಕೊಂಡರು. ಮತ್ತೆ ಮದುವೆಯಾಗಲಿಲ್ಲ. ಮಕ್ಕಳಿಲ್ಲವೆಂದೂ ವ್ಯಥೆಪಡಲಿಲ್ಲ. ತಮ್ಮ ಕುಟುಂಬದಲ್ಲಿಯೇ ಬೆಳೆಯುತ್ತಿದ್ದ ತಮ್ಮನ ಮಕ್ಕಳಲ್ಲಿಯೇ ಅಕ್ಕರೆಯನ್ನು ತೋರಿಸುತ್ತ ಅವರನ್ನು ಬೆಳೆಸಿದರು. ಕಿರಿಯ ಸೋದರ ಸುಬ್ಬರಾಯ ಪೈಗಳು ಅಣ್ಣನಿಗೆ ನೆರವಾಗುತ್ತ ಮನೆಗೆ ಬಂದ ಅತಿಥಿಗಳ ಸತ್ಕಾರಾದಿ ಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದರು.

ಇವರ ಮೊತ್ತಮೊದಲಿನ ಲೇಖನ 1900ರಲ್ಲಿ ಸುವಾಸಿನಿ ಪತ್ರಿಕೆಯಲ್ಲಿ ಪ್ರಕಟವಾಯಿತು. 1962ರಲ್ಲಿ ಪ್ರಕಟಗೊಂಡ ಮಂಜೇಶ್ವರ ದೇವಾಸ್ಥಾನದ ಮೇಲಿನ ಲೇಖನ ಇವರ ಕೊನೆಯ ಬರೆವಣಿಗೆಯಾಯಿತು. ಹೀಗೆ ಸುಮಾರು 62 ವರ್ಷಗಳವರೆಗೆ ಸತತವಾಗಿ ವಾಙ್ಮಯ ಸೇವೆಯಲ್ಲಿ ತೊಡಗಿದ್ದು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ಇವರು ಬರೆದದ್ದು ಗಾತ್ರದಲ್ಲಿ ಸ್ವಲ್ಪವೇ ಆದರೂ ಇವರ ಬರೆವಣಿಗೆ ಪ್ರೌಢವೂ ವಿದ್ವತ್ಪೂರ್ಣವೂ ಮೌಲಿಕವೂ ಆಗಿದೆ.

ಸಂಶೋಧನೆ, ಪ್ರಬಂಧ, ಕವಿತೆ ಮತ್ತು ನಾಟಕ ಈ ಮಾರ್ಗಗಳಲ್ಲಿ ಇವರ ಸಾಹಿತ್ಯ ವಾಹಿನಿ ಪ್ರವಹಿಸಿದೆ. ಸುವಾಸಿನಿ ಎಂಬ ಇವರ ಕವನ ಅದೇ ಹೆಸರಿನ ಪತ್ರಿಕೆಯಲ್ಲಿ ಪ್ರಕಟವಾಗಿ (1900) ಆ ಪತ್ರಿಕೆ ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಮೊದಲ ಬಹುಮಾನ ಪಡೆಯಿತು. ಅನಂತರ ನವೀನ ಚಂದ್ರಸೇನರ ಬಂಗಾಲಿ ಕೃಷ್ಣಚರಿತೆಯ ಗದ್ಯಾನುವಾದ (1909), ಮತ್ತು ಸಿಗಾಲಸುತ್ತ ಎಂಬ ಬೌದ್ಧ ಸೂತ್ರಗಳ ಕನ್ನಡ ಅನುವಾದಗಳು (1911) ಸ್ವದೇಶಾಭಿಮಾನಿ ಪತ್ರಿಕೆಯಲ್ಲಿ ಪ್ರಕಟವಾದುವು. ಇವರ ಕವನ ಸೃಷ್ಟಿಯೂ ಧರ್ಮ ಮತ್ತು ಚರಿತ್ರೆಗೆ ಸಂಬಂಧಿಸಿದ ವ್ಯಾಸಂಗವೂ ಒಟ್ಟೊಟ್ಟಿಗೆ ಸಾಗಿದವು. ಇದೇ ಕಾಲಕ್ಕೆ (1911) ಪ್ರಾಸವನ್ನು ಇಟ್ಟು, ಬಿಟ್ಟು ಪದ್ಯಗಳನ್ನು ರಚಿಸುವ ಹಲವು ಪ್ರಯೋಗಗಳನ್ನು ಇವರು ಕೈಗೊಂಡರು. ಆ ಮುಂದೆ, ಮಂಜೇಶ್ವರಕ್ಕೆ ಬರುತ್ತಿದ್ದ ಬುದ್ಧಿಜೀವಿಗಳೊಡನೆ ಪ್ರಾಕ್ತನ ವಿಷಯಗಳನ್ನು ಚರ್ಚಿಸುವುದರಲ್ಲಾಗಲಿ, ಕವಿಚರಿತ್ರಕಾರರೇ ಮೊದಲಾದವರೊಡನೆ ಪತ್ರವ್ಯವಹಾರದಲ್ಲಾಗಲಿ ತೊಡಗಿದ್ದರಾದರೂ ಸಂಶೋಧನಾತ್ಮಕ ಬರೆವಣಿಗೆಗೆ ಇನ್ನೂ ತೊಡಗಿರಲಿಲ್ಲ. 1924ರ ಬೆಳಗಾಂವಿ ಸಾಹಿತ್ಯ ಸಮ್ಮೇಳನದ ಕಾಲಕ್ಕೆ ಇವರು ಒಬ್ಬ ಉದಯೋನ್ಮುಖ ಕವಿ ಎಂಬ ಹೆಸರನ್ನು ಮಾತ್ರ ಗಳಿಸಿದ್ದರು.

ಪೈಗಳ ಸಂಶೋಧನಾತ್ಮಕ ಬರವಣಿಗೆ ಪ್ರಾರಂಭವಾದದ್ದು 1924ರಲ್ಲಿ. ಮುಂದಣ ಒಂದೊಂದು ವರ್ಷಕ್ಕೆ ಸುಮಾರು ಏಳೆಂಟು ಸಂಶೋಧನ ವಿಷಯಗಳನ್ನು ಆರಿಸಿಕೊಂಡು ಬರೆಯುತ್ತ ಹೋದರು.



ಭಾರತೀಯ ಇತಿಹಾಸಕಾರರಿಗೆ ಹೆಚ್ಚು ಹಿಡಿಸಬಹುದಾದ ಲೇಖನಗಳನ್ನು ಇಂಗ್ಲಿಷಿನಲ್ಲಿ ಬರೆದರು. ಅರಸು ಮನೆತನಗಳ ವಂಶಾವಳಿ, ಕವಿ ಕಾವ್ಯಗಳ ಕಾಲನಿರ್ಣಯ ಈ ಕೆಲಸದ ಮಧ್ಯೆ ಕವಿತಾರಚನೆ ಈ ಪರಿಪಾಠ 1945ರವರೆಗೆ ನಡೆಯಿತು. ಕವಿತೆ ಮತ್ತು ಸಂಶೋಧನೆ ಇವೆರಡರಲ್ಲಿ ನಿಶ್ಚಿತವಾದ ಯಾವ ಕ್ರಮವನ್ನೂ ತಾವು ಅನುಸರಿಸಿದವರಲ್ಲ ಎಂಬ ಮಾತನ್ನು ಪೈಯವರೇ ತಮ್ಮ ಆತ್ಮಕಥನದಲ್ಲಿ ಹೇಳಿಕೊಂಡಿದ್ದಾರೆ. ಗಿಳಿವಿಂಡು ಕವನಸಂಗ್ರಹ 1930ರಲ್ಲಿ ಪ್ರಕಟವಾಯಿತು. ಪೈ ಅವರು ನಾಟಕ ಕ್ಷೇತ್ರದಲ್ಲಿ ವ್ಯವಸಾಯ ಮಾಡಲು ಮನಸ್ಸನ್ನು ತೊಡಗಿಸಿದ್ದು 1927-47ರಲ್ಲಿ. ಹೀಗೆ 1927ರಿಂದ 1947ರ ವರೆಗಿನ 20 ವರ್ಷಗಳ ಅವಧಿ ಪೈಗಳ ಬರವಣಿಗೆಯ ಉಚ್ಛ್ರಾಯಕಾಲ ಎಂದು ಹೇಳಬಹುದು. ಅನಂತರವೂ ಬರವಣಿಗೆ ಮುಂದೆ ಸಾಗಿತಾದರೂ ಅದರ ಗತಿ ಮಂದವಾಯಿತು. 1953ರ ಹೊತ್ತಿಗೆ, ಎಂದರೆ ಪೈ ಅವರ 70ನೆಯ ವಯಸ್ಸಿನ ಸುಮಾರಿಗೆ ಲೇಖನ ವ್ಯವಸಾಯ ತೀರ ಕುಂಠಿತವಾಯಿತು.

ಪೈಗಳ ಸಂಶೋಧನ ಕ್ಷೇತ್ರ ಇತಿಹಾಸ, ಹಳಗನ್ನಡ ಕವಿಕಾವ್ಯ, ಹೊಸಗನ್ನಡ ಸಾಹಿತ್ಯ ಇವಕ್ಕೆ ಸಂಬಂಧಿಸಿದೆ. ಇತಿಹಾಸಕ್ಕೆ ಸಂಬಂಧಿಸಿದ ಲೇಖನಗಳಲ್ಲಿ ತಮ್ಮ ಪೂರ್ವಜರಾದ ಗೌಡ ಸಾರಸ್ವತರ ಮೂಲಕ್ಕೆ ಸಂಬಂಧಿಸಿದ ಸಂಶೋಧನೆ ಅತ್ಯಂತ ಮಹತ್ತ್ವಪೂರ್ಣವಾದುದು. ಹಲವು ಪುರಾಣಗಳನ್ನೂ ಶಾಸನಗಳನ್ನೂ ಕೂಲಂಕಷವಾಗಿ ಪರಿಶೀಲಿಸಿ ಸಾರಸ್ವತರ ಉಲ್ಲೇಖ ಎಲ್ಲೆಲ್ಲಿ ಬಂದಿದೆ ಎಂಬುದನ್ನು ಗುರುತಿಸಿ ಫ್ಲ್ಯಾಷಸ್ ಫ್ರಮ್ ದಿ ಪಾಸ್ಟ್ ಎಂಬ ಲೇಖನವನ್ನು ಬರೆದರು. ಅದೇ ಮುಂದೆ ಮತ್ತಷ್ಟು ಘನೀಭೂತವಾಗಿ ನಮ್ಮ ಹಿರಿಯರನ್ನು ಕುರಿತು ಎಂಬ ಲೇಖನದಲ್ಲಿ ನಿರ್ಣಯಾತ್ಮಕ ರೂಪ ತಾಳಿತು. ಸಾರಸ್ವತರು ಮೂಲತಃ ಪಂಜಾಬ್‍ನ ಸರಸ್ವತೀ ನದಿತೀರದವರೆಂದು ಸಾಧಾರಣವಾಗಿ ಈ ಲೇಖನದಲ್ಲಿ ಹೇಳಿದುದಲ್ಲದೆ, ಕೊಂಕಣಿ ಭಾಷೆಯ ಮೂಲದ ಬಗ್ಗೆಯೂ ಆಳವಾದ ಸಂಶೋಧನೆಯನ್ನು ನಡೆಸಿ ಅದು ಮರಾಠಿ ಜನ್ಯವಲ್ಲ ಮಾಗಧೀ ಪ್ರಾಕೃತದಿಂದ ಜನಿಸಿದ ಭಾಷೆ ಎಂಬುದನ್ನು ಇವರು ಸ್ಥಾಪಿಸಿದ್ದಾರೆ. ಅಷ್ಟೇ ಅಲ್ಲದೆ ಮರಾಠಿಯೂ ಈಚಿನ ಕಾಲದ್ದಾದ ಮಹಾರಾಷ್ಟ್ರ ಪ್ರಾಕೃತದಿಂದ ಹುಟ್ಟಿದ್ದಾದುದರಿಂದ ಕೊಂಕಣಿ ಭಾಷೆ ಮರಾಠಿಗಿಂತಲೂ ಪ್ರಾಚೀನ ಎಂದೂ ಮಂಜೇಶ್ವರದ ಅನಂತೇಶ್ವರ ದೇವಾಲಯವೂ ಮೂಲತಃ ಸಾರಸ್ವತರ ದೇವಸ್ಥಾನವೇ ಎಂದೂ ಇವರ ಅನಿಸಿಕೆ.

ಪೈಗಳ ಇನ್ನೊಂದು ಪ್ರಮುಖ ಸಂಶೋಧನೆ ತುಳುನಾಡಿನ ಇತಿಹಾಸವನ್ನು ಕುರಿತದ್ದು. 1927ರಲ್ಲಿ ಮೊದಲು ರೂಪುಗೊಂಡು ಕೊನೆಗೆ 1974ರಲ್ಲಿ ತುಳುನಾಡು ಪೂರ್ವಸ್ಮೃತಿ ಎಂಬ ಹೆಸರಿನಲ್ಲಿ ಪ್ರಚುರಗೊಂಡ ಲೇಖನದಲ್ಲಿ ಇವರ 20 ವರ್ಷಗಳ ಸತತ ಸಂಶೋಧನೆಯ ಸಾರವಿದೆ. ಇದರಲ್ಲಿ ತುಳುನಾಡ ಹೆಸರಿನ ಉತ್ಪತ್ತಿ, ಪ್ರಾಚೀನತೆಗಳನ್ನು ಕುರಿತು ವಿಚಾರ ಮಾಡುತ್ತ 2ನೆಯ ಶತಮಾನದಿಂದ 15ನೆಯ ಶತಮಾನದವರೆಗೆ ಆಳಿದ ಆಳುಪರೆಂಬ ರಾಜಮನೆತನದ ಇತಿಹಾಸವನ್ನು ಹೇಳಿರವುದಲ್ಲದೆ ಇವರಲ್ಲಿ ಪ್ರಮುಖವಾದ ಭೂತಾಳ ಪಾಂಡ್ಯ ಆಳುಪ ಮನೆತನದವನೇ ಎಂಬುದನ್ನು ನಿರ್ಧರಿಸಿದ್ದಾರೆ. ಅಲ್ಲಿನ ಧಾರ್ಮಿಕ ಇತಿಹಾಸವನ್ನು ವಿವರವಾಗಿ ತಿಳಿಸುತ್ತಾ ನಾಥಸಂಪ್ರದಾಯದ ಪ್ರಭಾವವನ್ನೂ ಅಲ್ಲಿನ ಶಿವಲಿಂಗಕ್ಕೆ ಮಂಜುನಾಥ ಎಂದು ಹೆಸರು ಬರಲು ಈ ಸಂಪ್ರದಾಯದ ಪ್ರಭಾವವೇ ಕಾರಣವೆಂಬುದನ್ನೂ ಹೇಳಿದ್ದಾರೆ. ತುಳುನಾಡಿನಲ್ಲಿ ಜನಿಸಿದ ಮಧ್ವಾಚಾರ್ಯ, ರತ್ನಾಕರವರ್ಣಿ, ಪಾರ್ತಿಸುಬ್ಬ, ಮುದ್ದಣ ಮೊದಲಾದ ವ್ಯಕ್ತಿಗಳ ವಿಷಯದಲ್ಲಿದ್ದ ಸಂದಿಗ್ಧತೆಗಳನ್ನು ಪರಿಹರಿಸಿದ್ದಾರೆ.

ಕರ್ನಾಟಕಕ್ಕೆ ಸಂಬಂಧಿಸಿದ ವಿಷಯದಲ್ಲಿ ಹೆಚ್ಚಿನ ಸಂಶೋಧನೆ ನಡೆಸಿ ದಕ್ಷಿಣಕ್ಕೆ ಭದ್ರಬಾಹು ಮುನಿಯೊಂದಿಗೆ ಬಂದ ದೊರೆ ಚಂದ್ರಗುಪ್ತ ಮೌರ್ಯನಲ್ಲ; ಮಧ್ಯ ಭಾರತದ ಉಜ್ಜಯಿನಿಯಲ್ಲಿ ರಾಜ್ಯಭಾರ ಮಾಡುತ್ತಿದ್ದ ಸಂಪ್ರತಿ ಚಂದ್ರಗುಪ್ತ ಎಂದು ನಿರ್ಣಯಿಸಿ ಆತ ಕರ್ನಾಟಕಕ್ಕೆ ಬಂದ ಕಾಲ ಕ್ರಿ.ಪೂ.300 ಅಲ್ಲ ಕ್ರಿ.ಪೂ.520 ಎಂದೂ ಇವರೇ ಪ್ರಪ್ರಥಮವಾಗಿ ಕರ್ನಾಟಕಕ್ಕೆ ಕಾಲಿರಿಸಿದ ಜೈನರು ಎಂದೂ ಇವರು ದಿಗಂಬರ ಶಾಖೆಯವರೆಂದೂ ಇವರು ನಿರ್ಣಯಿಸಿದ್ದಾರೆ. ಅನಂತರ ಟಾಲೆಮಿಯ ಪುಸ್ತಕದಲ್ಲಿ ಬಂದಿರುವ ಕರ್ನಾಟಕದ ಊರುಗಳನ್ನು ಗುರುತಿಸಿದ್ದಾರೆ. ಕೆಲವು ಪ್ರಾಚೀನ ಕರ್ನಾಟಕದ ರಾಜಮನೆತನಗಳ, ಮುಖ್ಯವಾಗಿ ಸಾತವಾಹನ, ಪುನ್ನಾಟ, ಗಂಗ ಮತ್ತು ಕದಂಬರ ಇತಿಹಾಸವನ್ನು ಅಧಿಕೃತವಾಗಿ ಸಂಶೋಧಿಸಿ ಬರೆದಿದ್ದಾರೆ.



ಗೋವಿಂದಪೈ ಅವರ ಕೈಬರೆಹದ ಒಂದು ಮಾದರಿ

ಕರ್ನಾಟಕವಷ್ಟೇ ಅಲ್ಲದೆ ಭಾರತೀಯ ಇತಿಹಾಸಕ್ಕೂ ಸಂಬಂಧಿಸಿದಂತೆ ಸಂಶೋಧನೆ ನಡೆಸಿ, ಸೆಲ್ಯೂಕಸನನ್ನು ಸೋಲಿಸಿದ ಚಂದ್ರಗುಪ್ತ ಬಸಿಲೆಸ್ ಎಂಬ ಬಿರುದನ್ನೂ ಪಡೆದಿದ್ದಿರಬೇಕೆಂದೂ ಅದನ್ನು ವಿಶಾಖದತ್ತ ತನ್ನ ಮುದ್ರಾರಾಕ್ಷಸ ನಾಟಕದಲ್ಲಿ ವೃಷ (ಶೂದ್ರ) ಎಂದು ತಪ್ಪಾಗಿ ಗ್ರಹಿಸಿ ಅದನ್ನು ಚಾಣಕ್ಯನ ಬಾಯಲ್ಲಿ ಹೇಳಿಸಿರುವನೆಂದೂ ಹೇಳಿದ್ದಾರೆ. ಅಲ್ಲದೆ ಭಾರತ, ಗ್ರೀಕ್ ಸಂಬಂಧವನ್ನು ಬೆಸ್ನಗರ ಎಂಬಲ್ಲಿಯ ಗರುಡಗಂಬದ ಮೇಲಿದ್ದ ಪ್ರಾಕೃತ ಭಾಷೆಯ ಶಾಸನದಿಂದ (ಕ್ರಿ.ಪೂ.105) ನಿರ್ಧರಿಸಿದ್ದಾರೆ. ಇದರ ಜೊತೆಗೆ ಹೊರಗಿನಿಂದ ಭಾರತಕ್ಕೆ ಕ್ರಿಸ್ತಶಕದ ಆರಂಭದಲ್ಲಿ ಬಂದು ಆಳಿದ ಮೋಬಸ್ ರಾಜನಿಂದ (ಕ್ರಿ.ಪೂ.105) ಆರಂಭವಾದ ಶಕರಾಜರ ಆಳಿಕೆಯ ಮತ್ತು ಅವರ ಯುದ್ಧಯಾತ್ರೆಗಳ ಕಾಲಗಳನ್ನು ನಿರ್ಧರಿಸಿದ್ದಾರೆ. ಶಕರಾಜನನ್ನು ಸೋಲಿಸಿ ಕ್ರಿ.ಶ.78ರಲ್ಲಿ ಸಾತವಾಹನ ಶಕಯುಗವನ್ನು ಸ್ಥಾಪಿಸಿದಂತೆ ಕ್ರಿ.ಶ.136-137 ಗುಪ್ತ ವಲ್ಲಭೀ ಯುಗಗಳು ಒಂದೇ ಎಂದು ಆಲ್ಬರೂನಿ ಹೇಳಿದ ಕಾಲ ತಪ್ಪೆಂದೂ ಕ್ರಿ.ಶ.272 ರಂದು ಆರಂಭವಾದ ಗುಪ್ತಯುಗ 366 ರಲ್ಲಿ ಲುಪ್ತವಾದ ಮೇಲೆಯೇ ವಲ್ಲಭೀಯುಗ ಆರಂಭವಾಯಿತೆಂದೂ ಹೊಸ ಅಭಿಪ್ರಾಯವನ್ನು ಮಂಡಿಸಿದ್ದಾರೆ. ಪ್ರಾಚೀನ ಭಾರತದಲ್ಲಿ ರಾಜ್ಯವಾಳಿದ

ವಿಂಧ್ಯಪ್ರದೇಶದ ವಾಕಾಟಕರ (174-515) ಮತ್ತು ದಕ್ಷಿಣದ ಪಲ್ಲವರ (87-900) ಚರಿತ್ರೆಯನ್ನು ಬರೆದಿದ್ದಾರೆ. ಧಾರ್ಮಿಕ ವಿಷಯಗಳಲ್ಲಿನ ಸಂಶೋಧನೆಯಲ್ಲಿಯೂ ಇವರ ಶುದ್ಧ ಐತಿಹಾಸಿಕ ದೃಷ್ಟಿಯನ್ನು ಕಾಣಬಹುದು. ಆಯಾ ಮತಧರ್ಮಗಳ ಜಿಜ್ಞಾಸೆಗೆ ತೊಡಗದೆ ಜೈನ, ಬೌದ್ಧ, ವೀರಶೈವ ಇವುಗಳಿಗೆ ಸಂಬಂಧಿಸಿದಂತೆ ಕೆಲವು ಐತಿಹಾಸಿಕ ಅಂಶಗಳನ್ನೂ ವ್ಯಕ್ತಿಗಳ ಜೀವನ ಕಾಲಗಳನ್ನೂ ಕುರಿತು ಇವರು ಪ್ರೌಢವಾಗಿ ವಿಚಾರ ನಡೆಸಿದ್ದಾರೆ. ಗೊಮ್ಮಟೇಶ್ವರ, ಪಾರ್ಶ್ವನಾಥ ತೀರ್ಥಂಕರ, ತೀರ್ಥಂಕರರಲ್ಲಿ ಕೊನೆಯವನಾದ ಮಹಾವೀರ ಇವರ ವಿಷಯದಲ್ಲಿ ಸಂಶೋಧನೆ ನಡೆಸಿ ಆ ಬಗ್ಗೆ ಅತ್ಯಂತ ನಿರ್ದಿಷ್ಟವಾಗಿ ಕಾಲ, ತಿಥಿಗಳನ್ನು ಕೊಟ್ಟಿದ್ದಾರೆ. ಬೌದ್ಧಧರ್ಮದ ವಿಷಯದಲ್ಲಿ ಬುದ್ಧನ ಚರಿತ್ರೆ ಮತ್ತು ಅವನ ಬದುಕಿನ ಕೆಲವು ಪ್ರಮುಖ ಘಟನೆಗಳ ಕಾಲನಿರ್ಣಯ ಮಾಡಿದ್ದಾರೆ. ವೀರಶೈವ ಧರ್ಮದಲ್ಲಿ ಬಸವೇಶ್ವರನ ಉಲ್ಲೇಖವಿರುವ ಹತ್ತಾರು ಶಾಸನಗಳನ್ನೂ ವಿಶೇಷವಾಗಿ ಅರ್ಜುನವಾಡ ಶಿಲಾಶಾಸನವನ್ನೂ ಕೂಲಂಕಷವಾದ ವಿವೇಚನೆಗೆ ಒಳಪಡಿಸಿ ಬಸವೇಶ್ವರ ವಂಶಾವಳಿ ಹಾಗೂ ಅವರ ಜೀವನದ ಮಹತ್ತ್ವದ ಘಟನೆಗಳ ಕಾಲವನ್ನು ನಿರ್ಣಯಿಸಿದ್ದಾರೆ. ಜೊತೆಗೆ ದೇವರ ದಾಸಿಮಯ್ಯ ಹಾಗೂ ರೇವಣಸಿದ್ಧ, ಮರುಳಸಿದ್ಧ, ಏಕೋರಾಮಿತಂದೆ, ಮಲ್ಲಿಕಾರ್ಜುನ ಪಂಡಿತಾರಾಧ್ಯರ ಕಾಲನಿರ್ಣಯ ಮಾಡಿದ್ದಾರೆ.

ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನೂ ಕುರಿತು ಹೇಳುತ್ತ ಹಲ್ಮಿಡಿ ಶಾಸನದ ಕಾಲವನ್ನು ಇವರು ಬಹಳ ಹಿಂದಕ್ಕೆ ತೆಗೆದುಕೊಂಡು ಹೋಗುತ್ತಾರೆ. ಕನ್ನಡ ಸಾಹಿತ್ಯದ ಆರಂಭವನ್ನು ಕ್ರಿಸ್ತಶಕದ ಆರಂಭಕ್ಕೆ ಕೊಂಡೊಯ್ಯುತ್ತಾರೆ. ಕನ್ನಡದ ಪ್ರಾಚೀನತೆಯನ್ನು ಕುರಿತು ಹೇಳುವಾಗ ಗ್ರೀಕ್ ಪ್ರಹಸನದಲ್ಲಿರುವ ವಾಕ್ಯಗಳನ್ನು ಕನ್ನಡವೆಂದು ಗುರುತಿಸಿ ಚರ್ಚೆ ಮಾಡಿದ್ದಾರೆ. ಕನ್ನಡದಲ್ಲಿ ಪ್ರಮುಖರಾದ ಪಂಪ, ರನ್ನ, ನಾಗಚಂದ್ರ, ಕುಮಾರವ್ಯಾಸ, ಲಕ್ಷ್ಮೀಶ, ಶಿಶುಮಾಯಣ, ಸೋಮರಾಜ, ರತ್ನಾಕರವರ್ಣಿ, ಪಾರ್ತಿಸುಬ್ಬ, ಮುದ್ದಣ ಮೊದಲಾದ ಕವಿಗಳ ಜೀವನ, ಸ್ಥಳ, ಕಾಲಾದಿ ವಿಷಯಗಳನ್ನು ಚರ್ಚಿಸಿದ್ದಾರೆ. ಕರ್ಣ ಮುಂತಾದ ಪಾತ್ರಗಳ ರಸವಿಮರ್ಶೆ ಮಾಡಿದ್ದಾರೆ. ಷಟ್ಪದಿ ಛಂದಸ್ಸನ್ನು ಕುರಿತು ಬರೆದಿದ್ದಾರೆ. ಹೊಸಗನ್ನಡ ಸಾಹಿತ್ಯದ ಪ್ರಕಾರಗಳಾದ ಸಣ್ಣಕಥೆ, ಶಿಶುಸಾಹಿತ್ಯ, ಕಾದಂಬರಿ, ಪ್ರಬಂಧಗಳ ಆದಿಗ್ರಂಥಗಳ ಹೆಸರನ್ನೂ ಕಾಲವನ್ನೂ ತಿಳಿಸಿದ್ದಾರೆ. ಕಿಟ್ಟೆಲ್, ಎಂ.ಎನ್.ಕಾಮತ್, ಪಂಜೆ, ಎನ್.ಎಸ್.ಕಿಲ್ಲೆ, ಬಿ.ಎಂ.ಶ್ರೀಕಂಠಯ್ಯ, ಎಂ.ಆರ್.ಶ್ರೀ ಮೊದಲಾದವರ ವ್ಯಕ್ತಿಚಿತ್ರಗಳನ್ನು ಕೊಡುತ್ತ ಈ ವ್ಯಕ್ತಿಗಳು ಕನ್ನಡ ಸಾಹಿತ್ಯಕ್ಕೆ ನೀಡಿದ ಕಾಣಿಕೆಯೇನು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಕೊನೆಗೆ ತಮ್ಮ ಆತ್ಮಕಥನವನ್ನೂ ಗುರುತಿಸಿದ್ದಾರೆ. ಇಷ್ಟೇ ಅಲ್ಲದೆ ಅನೇಕ ಪುಸ್ತಕಗಳಿಗೆ ಮುನ್ನುಡಿಗಳನ್ನು ಬರೆದಿದ್ದಾರೆ. ಪುಸ್ತಕ ವಿಮರ್ಶೆಯನ್ನೂ ಮಾಡಿದ್ದಾರೆ.

ಇವರ ವಿದ್ವತ್ತು, ಬಹುಭಾಷಾಜ್ಞಾನ ಅಗಾಧವಾದುದು; ಕೌತುಕವನ್ನುಂಟುಮಾಡುವಂಥದ್ದು. ಕನ್ನಡ, ಕೊಂಕಣಿ, ತುಳು, ಇಂಗ್ಲಿಷ್, ಮರಾಠಿ, ಮಲೆಯಾಳಂ, ಸಂಸ್ಕೃತ, ಪ್ರಾಕೃತ, ಪಾಲಿ, ಅರ್ಧಮಾಗಧಿ, ಹಿಂದಿ, ಉರ್ದು, ತಮಿಳು, ತೆಲುಗು, ಒರಿಯ, ಬಂಗಾಲಿ, ಜಪಾನಿ, ಗ್ರೀಕ್, ಲ್ಯಾಟಿನ್, ಪರ್ಷಿಯನ್ ಮುಂತಾದ ಭಾಷೆಗಳಲ್ಲಿ ಪರಿಣತಿಯನ್ನು ಪಡೆದು ಆಯಾ ವಿಷಯಗಳನ್ನು ಆಯಾ ಭಾಷೆಗಳಲ್ಲಿಯೇ ಅಧ್ಯಯನಮಾಡಿ ಸಂಶೋಧನೆ ನಡೆಸಿದ್ದಾರೆ. ಇವರು ಮಂಡಿಸುವ ನಿರ್ಣಯಗಳನ್ನೆಲ್ಲ ಒಪ್ಪುವುದು ಕಷ್ಟವಾದರೂ ಇವರ ವಿವೇಚನಾಸಾಮರ್ಥ್ಯ, ಹರಿತವಾದ ತರ್ಕಸರಣಿ, ಇತಿಹಾಸಪ್ರಜ್ಞೆ, ವಸ್ತುನಿಷ್ಠೆ ಮುಂತಾದ ಗುಣಗಳನ್ನು ಇವರ ಸಂಶೋಧನೆಗಳಲ್ಲಿ ಧಾರಾಳವಾಗಿ ಕಾಣಬಹುದು. ಇವರ ಸೃಷ್ಟ್ಯಾತ್ಮಕ ಸಾಹಿತ್ಯವೂ ಅದ್ಭುತವಾಗಿದೆ. 1947ರ ಅನಂತರ ಇವರು ನಾಟಕ ರಚನೆಗೆ ಕೈಹಾಕಿ ಏಕಲವ್ಯನನ್ನು ಕುರಿತು ಹೆಬ್ಬೆರಳು ಎಂಬ ಪದ್ಯಾತ್ಮಕ ಏಕಾಂಕವನ್ನೂ 1942ರ ಚಳವಳಿಯನ್ನು ಆಧಾರವಾಗಿಟ್ಟುಕೊಂಡು ಚಿತ್ರಭಾನು ಎಂಬ ಗದ್ಯನಾಟಕವನ್ನೂ ಬರೆದಿದ್ದಾರೆ. ಇವುಗಳ ಜೊತೆಗೆ ಜಪಾನಿನ ಎಂಟು ನೋ ನಾಟಕಗಳನ್ನು ಕನ್ನಡಕ್ಕೆ ತಂದಿದ್ದಾರಲ್ಲದೆ ಈ ವಿಶಿಷ್ಟ ನಾಟಕ ಪ್ರಕಾರದ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ತಾಯಿ ಎಂಬುದು ಇವರಿಂದ ರಚಿತವಾದ ಒಂದೇ ಒಂದು ಸಾಮಾಜಿಕ ಏಕಾಂಕ ನಾಟಕ. ಇವೆರಡು ಪ್ರಕಾರಗಳಿಗಿಂತ ಇವರ ಕಾವ್ಯಸೃಷ್ಟಿ ಉತ್ತಮವೆನ್ನಲಾಗಿದೆ. 1900ರಿಂದ ಕೊನೆಗಾಲದವರೆಗೆ ಇವರು ರಚಿಸಿದ ಸಣ್ಣದೊಡ್ಡ ಕವನಗಳ ಸಂಖ್ಯೆ 180. ಇವರ ಗಿಳಿವಿಂಡು ಕವನ ಸಂಕಲನದಲ್ಲಿ 45 ಭಾವಗೀತೆಗಳೂ ನಂದಾದೀಪದಲ್ಲಿ 37 ಕವನಗಳೂ ನಾಡಿನ ವಿವಿಧ ಪತ್ರಿಕೆಗಳಲ್ಲಿ 95 ಕವನಗಳೂ ಅಚ್ಚಾಗಿವೆ. ಇವರ ಕಾವ್ಯಸೃಷ್ಟಿಯಲ್ಲಿ ಯೇಸುವಿನ ಅಂತ್ಯವನ್ನು ಚಿತ್ರಿಸುವ ಗೊಲ್ಗೊಥಾ ಮತ್ತು ಬುದ್ಧನ ಕಡೆಯ ದಿನಗಳನ್ನು ಚಿತ್ರಿಸುವ ವೈಶಾಖಿ ಎಂಬ ಎರಡು ನೀಳ್ಗವನಗಳು ಮುಖ್ಯವಾದವು. ಭಕ್ತಿ, ಪ್ರೇಮಭಾವನೆ, ಜೀವನ ವಿವೇಕ, ಸ್ನೇಹಸೌಹಾರ್ದ, ಸ್ವಾತಂತ್ರ್ಯಪ್ರೇಮ -ಇವು ಇವರ ಕಾವ್ಯಸೃಷ್ಟಿಯ ಸ್ಫೂರ್ತಿಗಳಾಗಿವೆ. ಅಸಂದಿಗ್ಧವಾದ ಭಾಷೆ, ಅಚ್ಚಗನ್ನಡ ಪದಪ್ರಯೋಗ, ಹೊಸ ಪದಸೃಷ್ಟಿ, ಭಾಷೆಯಲ್ಲಿನ ಪ್ರಾದೇಶಿಕ ಬನಿ ಇವುಗಳಿಂದಾಗಿ ಇವರ ಸಾಹಿತ್ಯ ಗಮನಾರ್ಹವಾಗಿದೆ.

ಹಿಂದಿನ ಮದರಾಸು ಸರ್ಕಾರ ಇವರಿಗೆ ರಾಷ್ಟ್ರಕವಿ ಪ್ರಶಸ್ತಿಯನ್ನಿತ್ತು (1949) ಗೌರವಿಸಿತು. ಇವರು 1950ರಲ್ಲಿ ಮುಂಬಯಿಯಲ್ಲಿ ಸೇರಿದ 34ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಿದ್ದರು.

ಗೋವಿಂದ ಪೈಗಳು ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯಾಚಾರ್ಯರುಗಳಲ್ಲಿ ಅಗ್ರಪಂಕ್ತಿಗೆ ಸೇರಿದವರು. ಪಾಂಡಿತ್ಯದಿಂದ, ಸಂಶೋಧನೆಯಿಂದ ನಯವಿನಯಗಳಿಂದ, ಸರಳತೆಯಿಂದ ಜನತೆಯ ಸ್ನೇಹ ಗೌರವಗಳನ್ನಿವರು ಸಂಪಾದಿಸಿದರು. ತನು ಕನ್ನಡ, ಮನ ಕನ್ನಡ, ನುಡಿ ಕನ್ನಡ ಎಂದು ಹಾಡಿದ ರಾಷ್ಟ್ರಕವಿಯಾದ ಇವರ ವ್ಯಕ್ತಿತ್ವ ಘನವಾದುದು. ಇವರು ಉತ್ಕಟ ಕನ್ನಡಾಭಿಮಾನಿಗಳು. ತಾವು ಬೆಳೆದು ಬಾಳಿದ ಮಂಜೇಶ್ವರದ ನೆಲ ಕನ್ನಡ ನಾಡಿಗೆ ಸೇರಲಿಲ್ಲವಲ್ಲ ಎಂಬ ಕೊರಗು ಇವರನ್ನು ಕೊನೆಯವರೆಗೂ ಬಾಧಿಸುತ್ತಿತ್ತು. ಇವರು 1963 ಸೆಪ್ಟೆಂಬರ್ 6ರಂದು ನಿಧನಹೊಂದಿದರು. ಇವರ ನೆನಪನ್ನು ಚಿರಸ್ಥಾಯಿಯನ್ನಾಗಿಸಲು ಉಡುಪಿಯ ಮಹಾತ್ಮಗಾಂಧಿ ಸ್ಮಾರಕ ಕಾಲೇಜಿನಲ್ಲಿ ಅದರ ಅಂಗ ಸಂಸ್ಥೆಯಾಗಿ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ (ನೋಡಿ) ಸ್ಥಾಪಿಸಲಾಗಿದೆ. ಈ ಸಂಸ್ಥೆ ಗೋವಿಂದ ಪೈ ಅವರ ಪ್ರಯೋಗ, ಗೋವಿಂದ ಪೈ ಸಂಶೋಧನೆ ಸಂಪುಟ ಮತ್ತು ಇಂಡಿಯಾನ ಎಂಬ ಇವರ ಆಂಗ್ಲ ಲೇಖನಗಳ ಸಂಗ್ರಹವನ್ನೂ ಪ್ರಕಟಿಸಿದೆ. (ಬಿ.ಎನ್.ಪಿ.)

**ಗೋವಿಂದ ವೈದ್ಯ :** ಸು.1648. ಬ್ರಾಹ್ಮಣಕವಿ. ಕಂಠೀರವನರಸರಾಜವಿಜಯ ಎಂಬ ಕಾವ್ಯದ ಕರ್ತೃ. ಈತ ಕಂಠೀರವ ನರಸರಾಜ ಒಡೆಯರ ಆಸ್ಥಾನಕವಿಯಾಗಿದ್ದ. ಶ್ರೀರಂಗಪಟ್ಟಣದ ರಂಗನಾಥಸ್ವಾಮಿಯ ಪಾದಭಕ್ತನಾದ ಶ್ರೀನಿವಾಸಪಂಡಿತ ಈತನ ತಂದೆ. ವೇದಾಧ್ಯಯನಸಂಪನ್ನನಾದ ತಾನು ಪ್ರಕಾಂಡಪಂಡಿತನೆಂದು ಹೇಳಿಕೊಂಡಿದ್ದಾನೆ.

ಕಂಠೀರವನರಸರಾಜವಿಜಯ ಸಾಂಗತ್ಯದಲ್ಲಿ ರಚಿತವಾಗಿದೆ. ಇದರಲ್ಲಿ 26 ಸಂಧಿಗಳೂ 2870 ಪದ್ಯಗಳೂ ಇವೆ. ಈ ಕೃತಿಯನ್ನು ತಾನು ದಳವಾಯಿ ನಂಜರಾಜೇಂದ್ರನ ಪ್ರೇರಣೆಯಿಂದ 1648ರಲ್ಲಿ ರಚಿಸಿದುದಾಗಿಯೂ ಭಾರತಿನಂಜ ಎಂಬುವನು ಆಸ್ಥಾನದಲ್ಲಿ ಈ ಕಾವ್ಯವನ್ನು ಓದಿದುದಾಗಿಯೂ ಗ್ರಂಥಾಂತ್ಯದಲ್ಲಿ ಹೇಳಿಕೊಂಡಿದ್ದಾನೆ. ಇದೊಂದು ಇತಿಹಾಸಕಾವ್ಯ. ಮೈಸೂರು ಅರಸರ ವಂಶದಲ್ಲಿ ಪ್ರಸಿದ್ಧ ಪುರುಷನೆನಿಸಿದ ರಣಧೀರ ಕಂಠೀರವ ನರಸರಾಜನ ಪ್ರಭುತ್ವ, ಪ್ರಜಾನುರಾಗ, ಧರ್ಮಾಚರಣೆ, ಪೌರುಷಾದಿ ಸದ್ಗುಣಗಳ ಬಣ್ಣನೆ ಇದರ ವಸ್ತು. ಅಂದಿನ ನರಸಿಂಹನೇ ಇಂದು ಕಲಿಯುಗದ ದನುಜರನ್ನು ಸಂಹರಿಸಲು ಮನುಜಾವತಾರಿಯಾಗಿ ನರಸರಾಜೇಂದ್ರನ ರೂಪದಲ್ಲಿ ಅವತರಿಸಿದ್ದಾನೆ ಎಂದು ಕವಿ ತನ್ನ ಒಡೆಯನ ಕೀರ್ತಿಯನ್ನು ಎತ್ತಿಹಿಡಿದಿದ್ದಾನೆ.

ಈತನ ಶೈಲಿ ಸರಳವೂ ಕವಿತಾಶಕ್ತಿ ಸಾಧಾರಣಮಟ್ಟದ್ದೂ ಆಗಿದೆ. ಕಾವ್ಯ ರಚನೆಯಲ್ಲಿ ಪ್ರತಿಭೆಗೆ ಮಿಗಿಲಾಗಿ ಪಾಂಡಿತ್ಯವನ್ನೂ ಸ್ವಾನುಭವಕ್ಕೆ ಬದಲಾಗಿ ಸಂಪ್ರದಾಯಶರಣತೆಯನ್ನೂ ಕಾಣಬಹುದು. ವೀರರಸಪ್ರಧಾನವಾದ ಈ ಕಾವ್ಯವನ್ನು ಶೃಂಗಾರಮಯವನ್ನಾಗಿಸಲು ಕವಿ ತುಂಬ ಶ್ರಮಿಸಿರುವಂತಿದೆ. ಕೆಲವು ಕಡೆ ಔಚಿತ್ಯ ಮೀರಿದ ಶೃಂಗಾರವರ್ಣನೆ ದಾಳಿ ನಡೆಸಿದೆ. ಮದನ ಮೋಹಿನಿ ಪ್ರಸಂಗ ಮತ್ತು ವೇಶ್ಯಾವಾಟಿಕಾ ವರ್ಣನೆ ಇವು ಮೇಲಿನ ಹೇಳಿಕೆಗೆ ನಿದರ್ಶನಗಳು. ಅಲ್ಲಲ್ಲಿ ಉರ್ದು ಪದಗಳನ್ನು ಧಾರಾಳವಾಗಿ ಬಳಸಿದ್ದಾನೆ. ಕಾವ್ಯದಲ್ಲಿ ಕವಿ ತನ್ನ ಕಾಲದ ಜನಜೀವನವನ್ನೂ ರಾಜಕೀಯವನ್ನೂ ವಿಸ್ತಾರವಾಗಿ ಹಿಡಿದಿಟ್ಟಿರುವುದರಿಂದ ಈತನಿಗಿದ್ದ

ಸಮಕಾಲೀನ ಹಾಗೂ ಇತಿಹಾಸಪ್ರಜ್ಞೆ ವೇದ್ಯವಾಗುತ್ತದೆ. ನಂಜುಂಡನ ಕಾವ್ಯದ ಪ್ರಭಾವ ಈತನ ಕಾವ್ಯದ ಮೇಲೆ ನಿಚ್ಚಳವಾಗಿ ಮೂಡಿರುವುದು ಕಂಡುಬರುತ್ತದೆ. ತನ್ನ ಕಾವ್ಯ ಸೊಕ್ಕುಜವ್ವನೆಯರ ತೆಕ್ಕೆಯ ಸವಿಯಂದದೆ ಸಕ್ಕರೆಚಿಲುಪಾಲಿನಂತೆ ಸವಿಯನ್ನು ನೀಡುತ್ತದೆ ಎಂದಿದ್ದರೂ ಕಾವ್ಯದೃಷ್ಟಿಗಿಂತ ಹೆಚ್ಚು ಐತಿಹಾಸಿಕ ಮಹತ್ತ್ವ ಈ ಗ್ರಂಥಕ್ಕಿದೆ ಎನ್ನಬಹುದು. (ಎಸ್.ಎಸ್.ಎಂ.)

**ಗೋವಿಂದಸ್ವಾಮಿ, ಬಿ.ಆರ್. :** 1917-66. ಪ್ರಸಿದ್ಧ ಪಿಟೀಲು ವಿದ್ವಾಂಸರು. 1971 ಏಪ್ರಿಲ್ 10ರಂದು ಚಿಕ್ಕಬಳ್ಳಾಪುರದಲ್ಲಿ ಜನಿಸಿದರು. ತಂದೆ ರಾಮಯ್ಯ, ತಾಯಿ ನಾಗಮ್ಮ. ಇವರ ತಂದೆಯವರು ಮೃದಂಗವಿದ್ವಾಂಸರೂ ಚಿಕ್ಕಪ್ಪ ಗಾಯಕರೂ ಪಿಟೀಲುವಾದಕರೂ ಆಗಿದ್ದರು. ಮೊದಲು ಚಿಕ್ಕಪ್ಪನವರ ಹತ್ತಿರ ವಿದ್ಯಾಭ್ಯಾಸ ಆರಂಭವಾಯಿತು. ಅವರೇ ಮೊದಲ ಗುರು. ಅನಂತರ ಮೃದಂಗವಿದ್ವಾನ್ ಎಚ್. ಪುಟ್ಟಾಚಾರಿಯವರ ಹತ್ತಿರ ವಿದ್ಯಾಭ್ಯಾಸ ಮುಂದುವರಿಸಿ ಸಂಗೀತಸಾಧನೆ ಮಾಡಿದರು.

ಇವರು ಬಿ.ಎಸ್.ರಾಜಅಯ್ಯಂಗಾರ್ ಮತ್ತು ಪುಟ್ಟಾಚಾರಿಯವರೊಂದಿಗೆ ಭಾರತದ ಪ್ರವಾಸದಲ್ಲಿ ಸಿಕಂದರಾಬಾದ್, ಪುಣೆ, ಮುಂಬಯಿ, ನಾಗಪುರ, ಮದರಾಸು, ದೆಹಲಿ ಮತ್ತು ವಾರಾಣಸಿ ಈ ಮುಂತಾದ ಕಡೆ ಕಚೇರಿ ಮಾಡಿ ಹೆಸರುಗಳಿಸಿದರು. ಬೆಂಗಳೂರಿನಲ್ಲಿ ಇವರು ಹೆಚ್ಚು ಜನಪ್ರಿಯರಾದರು. ಟೈಗರ್‌ವರದಾಚಾರ್, ಅರಿಯಕುಡಿ ರಾಮನುಜ ಅಯ್ಯಂಗಾರ್ ಮುಂತಾದ ಹಿರಿಯ ವಿದ್ವಾಂಸರಿಗೆ ಪಿಟೀಲು ನುಡಿಸಿ ಒಳ್ಳೆಯ ಹೆಸರುಗಳಿಸಿದರು. ಕಿರಿಯ ವಿದ್ವಾಂಸರೊಡನೆಯೂ ಪಿಟೀಲು ನುಡಿಸಿ ಅವರನ್ನು ಪ್ರೋತ್ಸಾಹಿಸುತ್ತಿದ್ದರು. ವಾರಾಣಸಿಯ ವಿಶ್ವೇಶ್ವರನ ಸನ್ನಿಧಿಯಲ್ಲಿ ದಕ್ಷಿಣೋತ್ತರ ಸಂಗೀತವಿದ್ವಾಂಸರ ಮಹಾಸಭೆಯ ಅಧ್ಯಕ್ಷರಾಗಿದ್ದ ಪಂಡಿತ ಮದನ ಮೋಹನ ಮಾಳವೀಯರು ಇವರ ಪಿಟೀಲು ವಾದನವನ್ನು ಮೆಚ್ಚಿ ಹೊಗಳಿದರು. ನಾಲ್ವಡಿ ಕೃಷ್ಣರಾಜ ಒಡೆಯರ ಸಮ್ಮುಖದಲ್ಲಿ ಪಿಟೀಲು ನುಡಿಸಿ ಅವರ ಮೆಚ್ಚುಗೆ ಪಡೆದರು. ಗದ್ವಾಲ ಸಂಸ್ಥಾನದ ರಾಜರ ಸಮ್ಮುಖದಲ್ಲಿ ಅನೇಕ ಸಾರಿ ಅವರ ಆಮಂತ್ರಣದ ಮೇಲೆ ಹೋಗಿ ಪಿಟೀಲು ನುಡಿಸಿದರು. ಜಯಚಾಮರಾಜ ಒಡೆಯರು ಇವರ ಪಾಂಡಿತ್ಯವನ್ನು ಮೆಚ್ಚಿ ಬಂಗಾರದ ಪದಕವನ್ನಿತ್ತು ಸನ್ಮಾನಿಸಿದ್ದರು.

ಗೋವಿಂದಸ್ವಾಮಿಯವರು ಪ್ರಣವನಾದ ಕಲಾವಿಚಕ್ಷಣ ಎಂಬುದಾಗಿ ಸಂಗೀತ ವಿದ್ವಾಂಸರಿಂದ ಕರೆಸಿಕೊಂಡರು. 1966 ಜನವರಿ 25ರಂದು ನಿಧನಹೊಂದಿದರು. ಇವರು 1962ರಲ್ಲಿ ಸುಧಾ ಸಂಗೀತ ಶಾಲೆಯನ್ನು ಸ್ಥಾಪಿಸಿದ್ದು ಅನಂತರ ಇವರ ಮಗ ನಡೆಸಿಕೊಂಡು ಬಂದರು. (ಬಿ.ಜಿ.ವಿ.)

**ಗೋವಿನ ಹಾಡು :** ಕನ್ನಡಿಗರಿಗೆ ಸುಪರಿಚಿತವಾದ ಜನಪದ ಕಥನ ಕವನ. ಮಕ್ಕಳಿಂದ ಮುದುಕರವರೆಗೆ ಸರ್ವರನ್ನೂ ತಣಿಸುವ ಕಾವ್ಯಗುಣವನ್ನುಳ್ಳ ಈ ಗೀತೆ ಕನ್ನಡ ಸಾಹಿತ್ಯದ ಒಂದು ಅಪೂರ್ವ ಕವಿತೆ. ಈ ಕಾವ್ಯದ ಸೊಬಗು ಅದರ ಸರಳತೆಯಲ್ಲಿದೆ. ಬಿಟ್ಟ ಬಾಣದಂತೆ ಕಥೆ ಆರಂಭವಾಗಿ ಕೇಳುವವರ, ಓದುವವರ ಹೃದಯವನ್ನು ಸೂರೆಗೊಳ್ಳುತ್ತದೆ.

ಧರಣಿಮಂಡಲ ಮಧ್ಯದೊಳಗೆ
ಮೆರೆವುದೈವತ್ತಾರು ದೇಶದಿ
ಇರುವ ಕಾಳಿಂಗನೆಂಬ ಗೊಲ್ಲನ
ಪರಿಯ ನಾನೆಂತು ಪೇಳ್ವೆನು

ಎಂದು ನೇರವಾಗಿ ಆರಂಭವಾಗಿ ನಮ್ಮನ್ನು ಕಥೆಯ ಆವರಣದೊಳಗೆ ತಂದು ನಿಲ್ಲಿಸುತ್ತದೆ.

ಅರುಣಾದ್ರಿಗಿರಿಯ ಮಧ್ಯೆ ಕಾಳಿಂಗನೆಂಬ ಗೊಲ್ಲ ಗೋವುಗಳನ್ನು ಸಾಕುತ್ತಿದ್ದ. ಅವನು ಎದ್ದು ಸ್ನಾನ ಮಾಡಿ ಹಣೆಗೆ ತಿಲಕವಿಟ್ಟು ಪ್ರೀತಿಯಿಂದ ಗೋವುಗಳನ್ನು ಗಂಗೆ, ಗೌರಿ, ತುಂಗಭದ್ರೆ, ಕಾಮಧೇನು ಎನ್ನುತ ಕರೆದು ಅವುಗಳ ಮೈದಡವಿ ಹಾಲು ಕರೆದು ಮತ್ತೆ ಸುತ್ತಲ ವನಕ್ಕೆ ಮೇಯಲು ಬಿಟ್ಟಿರುತ್ತಿದ್ದ. ಇವನ ಹಸುಗಳಲ್ಲಿ ಪುಣ್ಯಕೋಟಿ ಎಂಬುದು ಒಂದು. ಒಂದುದಿನ ಹಸುಗಳೆಲ್ಲ ದೊಡ್ಡಿಗೆ ಹಿಂದಿರುಗುತ್ತಿರುವಾಗ ಹಸಿದ ಅರ್ಭುತನೆಂಬ ವ್ಯಾಘ್ರ ಪುಣ್ಯಕೋಟಿಯನ್ನು ಅಡ್ಡಗಟ್ಟಿತು. ಸಾವಿಗೆ ಅಂಜದ ಪುಣ್ಯಕೋಟಿ ಒಂದು ಸಾರಿ ದೊಡ್ಡಿಗೆ ಹೋಗಿ ಅಲ್ಲಿರುವ ತನ್ನ ಕಂದನನ್ನು ಕಂಡು, ಮೊಲೆಯುಣಿಸಿ ಹಿಂದಿರುಗುತ್ತೇನೆಂದು ಹುಲಿರಾಯನನ್ನು ಪ್ರಾರ್ಥಿಸಿತು. ಮೊದಮೊದಲು ಹುಲಿ ಪುಣ್ಯಕೋಟಿಯ ಮಾತನ್ನು ನಂಬದೆ, ಕೊನೆಗೆ ಒಪ್ಪಿ ಹಸುವನ್ನು ಬಿಟ್ಟುಕೊಟ್ಟಿತು. ಪುಣ್ಯಕೋಟಿ ದೊಡ್ಡಿಗೆ ಬಂದು ತನ್ನ ಕಂದನಿಗೆ ಮೊಲೆಕೊಟ್ಟು ನಡೆದ ವಿಷಯ ತಿಳಿಸಿ ಕೊಟ್ಟ ಭಾಷೆಗೆ ತಪ್ಪಲಾರೆನು, ಕೆಟ್ಟ ಯೋಚನೆ ಮಾಡಲಾರೆನು ನಿಷ್ಠೆಯಿಂದಲಿ ಪೋಪೆನಲ್ಲಿಗೆ ಕಟ್ಟಕಡೆಗಿರು ಖಂಡಿತ ಎಂದು ತನ್ನ ಕರುವಿಗೆ ಬುದ್ಧಿಮಾತು ಹೇಳಿ ಉಳಿದ ಹಸುಗಳಿಗೆ ತನ್ನ ಕಂದನನ್ನು ಕಾಪಾಡಿಕೊಳ್ಳಿರೆಂದು ಪ್ರಾರ್ಥಿಸಿ ಹುಲಿಯೆಡೆಗೆ ಬಂತು. ಹುಲಿರಾಯ ತನ್ನ ಗವಿಯ ಬಾಗಿಲಿಗೆ ಬಂದು ನಿಂತ ಪುಣ್ಯಕೋಟಿಯನ್ನು ಕಂಡು ಬೆರಗಾಯಿತು. ನನ್ನ ದೇಹದ ರಕ್ತ ಮಾಂಸವನ್ನು ತಿಂದು ಹಸಿವನ್ನು ಇಂಗಿಸಿಕೋ ಎಂದು ಪುಣ್ಯಕೋಟಿ ಹುಲಿರಾಯನಿಗೆ ಹೇಳಿದಾಗ, ಪುಣ್ಯಕೋಟಿಯ ಪ್ರಾಮಾಣಿಕತೆ ಮತ್ತು ಸ್ವಾರ್ಥತ್ಯಾಗಕ್ಕೆ ಹುಲಿರಾಯ ಮಣಿದು ನೀನು ನನ್ನ ಒಡಹುಟ್ಟಿದವಳಿದ್ದಂತೆ ನಿನ್ನ ಕೊಂದು ತಿಂದರೆ ಹರಿ ಮೆಚ್ಚುವುದಿಲ್ಲ. ಇದುವರೆಗೂ ನಾನು ಮಾಡಿರುವ ಪಾಪ ಸಾಕು, ನಿನ್ನಿಂದ ನನಗೆ ಜ್ಞಾನೋದಯವಾಯಿತೆಂದು ಹೇಳಿ ಪ್ರಾಣತ್ಯಾಗ ಮಾಡಿತು.

ಸತ್ಯ ಅಹಿಂಸೆಗಳ ಮುಂದೆ ಅಸತ್ಯ ಹಿಂಸೆ ನಾಶವಾಗಿ ಹೋಗುತ್ತವೆಂಬ ಬೋಧನೆ ಇರುವ ಗೋವಿನ ಹಾಡು ಎಲ್ಲರ ಮೆಚ್ಚುಗೆ ಪಡೆದಿದೆ. ಈ ಕವನದ ಸುಂದರ ವರ್ಣನೆಗಳು, ಹೃದಯದಲ್ಲಿ ತುಮುಲವನ್ನು ಹುಟ್ಟಿಸುವ ಮಾತುಗಳು, ಸನ್ನಿವೇಶಗಳು, ಕಥನದ ಓಜಸ್ಸು ಇವುಗಳಿಂದ ಇದು ಕನ್ನಡದ ಉತ್ತಮ ಕಥನ ಕವನಗಳಲ್ಲೊಂದಾಗಿದೆ.

ಇದರ ಕರ್ತೃ ಯಾರೋ ತಿಳಿಯದು. ಕವಿ ಮದ್ದೂರಿನವನೆಂದೂ ಅಲ್ಲಿನ ನರಸಿಂಹಭಕ್ತನೆಂದೂ ಕೃತಿ ಸು.1800ರ ಅನಂತರ ರಚಿತವಾಗಿರಬೇಕೆಂದೂ ಸಂಸ್ಕೃತ ಇತಿಹಾಸ ಸಮುಚ್ಚಯ ಎಂಬ ಗ್ರಂಥದ 30ನೆಯ ಅಧ್ಯಾಯದಲ್ಲಿ ಬರುವ ಬಕುಲೋಪಾಖ್ಯಾನ ಈ ಕಾವ್ಯಕ್ಕೆ ಮೂಲವಿರಬೇಕೆಂದೂ ವಿದ್ವಾಂಸರ ಮತ. ಡಿ.ಎಲ್.ನರಸಿಂಹಾ ಚಾರ್ಯರು ಇದನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಅವರ ಪ್ರಕಾರ ಇದರಲ್ಲಿರುವ 137 ಪದ್ಯಗಳಲ್ಲಿ 114 ಮೂಲ ಕವಿಕೃತ; ಉಳಿದವು ಪ್ರಕ್ಷಿಪ್ತ. (ಪಿ.ವಿ.ಸಿ.)

**ಗೋಸಲ ಚನ್ನಬಸವೇಶ್ವರ :** 15ನೆಯ ಶತಮಾನದಲ್ಲಿ ಜೀವಿಸಿದ್ದ ಒಬ್ಬ ಶಿವಯೋಗಿ. ಈತ ಮಹಾತಪಸ್ವಿಯೆಂದೂ ಅನೇಕ ಪವಾಡಗಳನ್ನು ಮೆರೆದನೆಂದೂ ಸ್ಥಳಪುರಾಣದಿಂದ ತಿಳಿದುಬರುತ್ತದೆ. ಈತನ ಗುರು ಪರಂಪರೆ ವಿಖ್ಯಾತವಾದುದು. ಈತ ಕ್ಷೇತ್ರಜ್ಞ ಸುಮನೋವಾದ ಎಂಬ ಗ್ರಂಥವನ್ನು ರಚಿಸಿದ್ದಾನೆ. ಇದರಲ್ಲಿ ವೀರಶೈವ ಷಟ್ಸ್ಥಲ ಸಿದ್ಧಾಂತವನ್ನು ವಿವಿಧ ಷಟ್ಪದಿಯಲ್ಲಿ ನಿರೂಪಿಸಲಾಗಿದೆ. ನಿರಂಜನ ವಂಶ ರತ್ನಾಕರದಲ್ಲಿ ಈತನ ವಿಷಯವನ್ನು ವಿಸ್ತಾರವಾಗಿ ಪ್ರಸ್ತಾಪಿಸಲಾಗಿದೆ. ತುಮಕೂರು ಜಿಲ್ಲೆ ಗುಬ್ಬಿಯಲ್ಲಿ ಈತ ನಿರ್ವಯಲಾದ. ಈತನ ಗದ್ದಿಗೆಯ ಮೇಲೆ ದೇವಸ್ಥಾನವನ್ನು ಕಟ್ಟಿದ್ದಾರೆ. ಇದು ಗುಬ್ಬಿ ಚನ್ನಬಸವೇಶ್ವರ ಎಂಬ ಹೆಸರಿನ ಪ್ರಖ್ಯಾತ ದೇವಾಲಯವಾಗಿ ಸುತ್ತಮುತ್ತಲಿನ ಭಕ್ತರನ್ನು ಆಕರ್ಷಿಸಿದೆ. ಈತನ ಗುರು ಗೋಸಲ ಸಿದ್ದೇಶ್ವರ ಈತನ ಸಮಾಧಿ ತುಮಕೂರು ಜಿಲ್ಲೆಯ ಸಿದ್ಧರ ಬೆಟ್ಟದಲ್ಲಿದೆ. ಎಡೆಯೂರು ಸಿದ್ಧಲಿಂಗೇಶ್ವರರು ಗೋಸಲ ಚನ್ನಬಸವೇಶ್ವರನ ಶಿಷ್ಯ. ಈತನ ಸಮಾಧಿ ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕಿನ ಎಡೆಯೂರಿನಲ್ಲಿದೆ. *

**ಗೋಳಗುಮ್ಮಟ :** ಬಿಜಾಪುರದಲ್ಲಿರುವ ವಿಶ್ವವಿಖ್ಯಾತ ಕಟ್ಟಡ. ಆದಿಲ್‌ಶಾಹೀ ವಂಶದ ಮಹಮ್ಮದ್ (1627-56) ತನಗಾಗಿ ಕಟ್ಟಿಸಿಕೊಂಡ ಸ್ಮಾರಕ.

ಇದೊಂದು ಸರಳ ವಿನ್ಯಾಸದ ದೈತ್ಯಾಕಾರದ ಕಟ್ಟಡ. ಇದರ ಹೊರ ಅಳತೆ 205' x 205', ಎತ್ತರ 198.6'. ಈ ಕಟ್ಟಡದಲ್ಲಿ ನಾಲ್ಕು ಗೋಡೆಗಳಿಂದ ಆವೃತವಾಗಿ, ಮೇಲು ಗುಮ್ಮಟದಿಂದ ಆಚ್ಛಾದಿತವಾಗಿರುವ ಒಂದು ದೊಡ್ಡ ಹಜಾರ ಮಾತ್ರ ಇದೆ. 135' 5" ಚೌಕವಾಗಿದ್ದು, 18,337.67 ಚದರ ಅಡಿ ಪ್ರದೇಶವನ್ನು ಆಕ್ರಮಿಸಿರುವ ಈ ಹಜಾರ ಕಂಬಗಳಿಲ್ಲದೆ ಆಚ್ಛಾದಿತವಾಗಿರುವ ಹಜಾರಗಳಲ್ಲಿ, ಜಗತ್ತಿನಲ್ಲೇ ಅತ್ಯಂತ ದೊಡ್ಡದು. ಹಜಾರದ ಸುತ್ತಲಿನ ನಾಲ್ಕು ಗೋಡೆಗಳು ಮೊದಲು ಮೂರು ಮೂರು ಕಮಾನುಗಳನ್ನೊಳಗೊಂಡಿದ್ದುವು. ಅನಂತರದಲ್ಲಿ ಉತ್ತರದ

ಗೋಡೆಯು ಮಧ್ಯದೊಂದನ್ನು ಬಿಟ್ಟು ಉಳಿದ ಕಮಾನುಗಳನ್ನು ಗೋಡೆಗಳಿಂದ ಮುಚ್ಚಲಾಗಿದ್ದು, ದಕ್ಷಿಣದ ಮಧ್ಯ ಕಮಾನಿನಲ್ಲಿ ಮಾತ್ರ ಒಂದು ಪ್ರವೇಶದ್ವಾರಕ್ಕೆ ಅವಕಾಶ ಮಾಡಲಾಗಿದೆ. ಒಳಭಾಗದಲ್ಲಿ ಈ ಗೋಡೆಗಳಿಗೆ ಒತ್ತಿದಂತೆಯೇ ಮೇಲೆದ್ದು, ಅಡ್ಡಡ್ಡವಾಗಿ ಪರಸ್ಪರ ಛೇದಿಸುವ ಎಂಟು ಕಮಾನುಗಳನ್ನು ಅಳವಡಿಸಲಾಗಿದೆ. ನೆಲದಿಂದ ಸುಮಾರು 100' ಎತ್ತರದಲ್ಲಿ ಇವುಗಳ ತಲೆಬಿಂದುಗಳಿಂದ ಒಂದು ಅಷ್ಟಕೋನ ನಿರ್ಮಾಣವಾಗಿದೆ. ಇವುಗಳ ಮೇಲೆ ದುಂಡುಗುಮ್ಮಟವನ್ನು ಕೂರಿಸಲಾಗಿದೆ.

ನೆಲ ಚೌಕವಾಗಿದ್ದರೂ ಮೇಲೆ ದುಂಡುಗುಮ್ಮಟವನ್ನಿಡಲು ಪರಸ್ಪರ ಛೇದಿಸುವ ಕಮಾನುಗಳನ್ನು ಆಸರೆಯಾಗಿ ನಿರ್ಮಿಸಿರುವ ತಂತ್ರ ವಾಸ್ತು ರಚನಾ ರೀತಿಯಿಂದ ವಿಶಿಷ್ಟವಾದ್ದು. ಈ ಕಮಾನುಗಳ ಮೇಲೆ, ಗುಮ್ಮಟದ ಬುಡದಲ್ಲಿ, ಅದರ ದುಂಡು ಒಳಗೋಡೆಗೆ ಹೊಂದಿಕೊಂಡಂತೆ ವರ್ತುಲಾಕಾರವಾಗಿ ಹಬ್ಬಿರುವ 11' ಅಗಲದ ಒಂದು ಚಾಚು ಗ್ಯಾಲರಿ ಇದೆ. ಈ ಗ್ಯಾಲರಿ ನೆಲದಿಂದ 109' 6" ಮೇಲಿದೆ. ಈ ಮಟ್ಟದಿಂದ ಗುಮ್ಮಟದ ತಲೆ 68' 6" ಎತ್ತರದಲ್ಲಿದೆ. ಎಂದರೆ ಹಜಾರದ ಒಳಗೆ ನೆಲದಿಂದ ಗುಮ್ಮಟದ ನೆತ್ತಿಯವರೆಗಿನ ಎತ್ತರ 178'.



ಗುಮ್ಮಟದ ವ್ಯಾಸ 24' 5", ಏಷ್ಯ ಖಂಡದಲ್ಲೇ ಅತಿ ದೊಡ್ಡದಾದ ಗುಮ್ಮಟವಿದು. ಗೋಡೆಗಳ ರಚನೆಯಲ್ಲಿ ಸಾಮಾನ್ಯ ಕಲ್ಲುತುಂಡುಗಳನ್ನು ಗಾರೆಯೊಡನೆ ಹುದುಗಿಸಿ, ಒಳಹೊರ ಮೈಗಳಲ್ಲಿ ಹಲವೆಡೆ ತೆಳುಚಪ್ಪಡಿಗಳನ್ನು ಅಂಟಿಸಿ ಮೇಲೆ ಗಾರೆ ಬಳಿಯಲಾಗಿದೆ. ಮೇಲೆ ಹೋದಂತೆ ಸ್ವಲ್ಪಸ್ವಲ್ಪವಾಗಿ ಒಳಚಾಚುವ ಇಟ್ಟಿಗೆಯ ವರ್ತುಲಗಳನ್ನು ಒಂದರ ಮೇಲೊಂದರಂತೆ ಪೇರಿಸಿ ಗುಮ್ಮಟವನ್ನು ರಚಿಸಲಾಗಿದೆ. ಇಲ್ಲಿ ಉಪಯೋಗಿಸಿರುವ ಬಿಗಿ ಗಾರೆಯಿಂದಾಗಿ ಗುಮ್ಮಟ ಕಾಂಕ್ರೀಟಿನಲ್ಲಿ ಮಾಡಿದ ಬೋರಲಿಟ್ಟ ದೊಡ್ಡ ಬಟ್ಟಲಿನಂತೆ ಒಂದೇ ಘನವಾಗಿ ಭದ್ರವಾಗಿ ನಿಂತಿದೆ. ಗುಮ್ಮಟದ ಗೋಡೆಯು ದಪ್ಪ 10', ಅದರ ಹೊರವ್ಯಾಸ 144'.

ಕಟ್ಟಡದ ಹೊರಗಿನ ನಾಲ್ಕು ಮೂಲೆಗಳಿಗೆ ಸೇರಿದಂತಿರುವ ಷಟ್ಕೋಣಾಕೃತಿಯ ಗೋಪುರಗಳ ಒಳಗಿರುವ ಮೆಟ್ಟಲುಗಳಿಂದ ಚಾವಣಿಯ ಮೇಲೇರಿ, ಗುಮ್ಮಟದಲ್ಲಿ ಕೊರೆದಿರುವ ಎಂಟು ಸಣ್ಣ ದ್ವಾರಗಳ ಮೂಲಕ ಒಳಗಿನ ಚಾಚುಗ್ಯಾಲರಿಗೆ ಹೋಗಬಹುದು. ಇಲ್ಲಿ ವಿಶಾಲವಾದ ಆಚ್ಛಾದನ ಗುಮ್ಮಟದಿಂದ ಶಬ್ದತರಂಗಗಳು ಪ್ರತಿಧ್ವನಿಸಿ ವಿಶಿಷ್ಟ ಪರಿಣಾಮ ಉಂಟುಮಾಡುತ್ತವೆ. ಮಾತು, ಚಪ್ಪಾಳೆ ಅಥವಾ ಯಾವುದೇ ಶಬ್ದವನ್ನು ಇಲ್ಲಿ ಒಮ್ಮೆ ಹೊಮ್ಮಿಸಿದರೆ ಸುಮಾರು ಹತ್ತಕ್ಕೂ ಹೆಚ್ಚು ಸಲ ಅದು ಸ್ಪಷ್ಟವಾಗಿ ಪ್ರತಿಫಲಿಸುವುದಲ್ಲದೆ ಎಷ್ಟೇ ಸಣ್ಣ ಶಬ್ದವನ್ನು ಒಂದೆಡೆ ಉಂಟುಮಾಡಿದರೂ ಈ ಗ್ಯಾಲರಿಯ ಯಾವುದೇ ಭಾಗದಲ್ಲಿರುವರಿಗೂ ಅದೇ ಶಬ್ದ ಸ್ಪಷ್ಟವಾಗಿ ಗೋಡೆಯಿಂದ ಹೊರಬೀಳುವಂತೆ ಕೇಳುತ್ತದೆ. ಈ ಆಶ್ಚರ್ಯಕರ ವೈಶಿಷ್ಟ್ಯದಿಂದಾಗಿ ಇದು ಪಿಸುಗುಟ್ಟುವ ಗ್ಯಾಲರಿ ಎಂದು ಪ್ರಸಿದ್ಧವಾಗಿದೆ. ಕಟ್ಟಡದ ಹೊರಮೈಯ ವಿನ್ಯಾಸ ಸುಂದರವಾಗಿ ರೂಪಿತವಾಗಿದೆ. ಕಮಾನುಗಳನ್ನೊಳಗೊಂಡ ಎತ್ತರದ ಗೋಡೆಗಳ ಮೇಲೆ ಚಾವಣಿಯ ಮಟ್ಟದಲ್ಲಿ ಚಾಚು ಕಪೋತವಿದೆ. ಅದರ ಅಡಿಯಲ್ಲಿ ತೂಗಾಡುವ ಬಾಳೆಮೋತೆ ಅಲಂಕರಣವಿರುವ ಗಂಧವಾರಣಗಳುಂಟು. ಎತ್ತರದಲ್ಲಿ ಕಟ್ಟಡದ ಸುತ್ತ ಹಬ್ಬಿರುವ ಈ ಅಲಂಕರಣ ಗೋಡೆಗಳ ಬರಿಮೈ ವೈಶಾಲ್ಯವನ್ನು ಖಂಡಿಸಿ ಅಲಂಕೃತ ಕಂಠಹಾರದಂತೆ ಸುಂದರವಾಗಿ ಜೋಡಣೆಗೊಂಡಿದೆ. ಅದರ ಮೇಲೆ ಸಣ್ಣ ಕಮಾನುಗಳ ಸಾಲೂ ಅದಕ್ಕೂ ಮೇಲೆ ಚೂಪು ಪಟ್ಟೆಗಂಬಗಳ ಸಾಲೂ ಇವೆ. ಕಟ್ಟಡದ ನಾಲ್ಕೂ ಮೂಲೆಗಳಿಗೆ ಹೊಂದಿಕೊಂಡಂತಿರುವ ಷಡ್ಭುಜ ಗೋಪುರಗಳನ್ನು ಏಳು ಅಂತಸ್ತುಗಳಲ್ಲಿ ಎತ್ತಲಾಗಿದೆ. ಒಂದೊಂದು ಮುಖದಲ್ಲೂ ಚೂಪು ತುದಿಯ ಕಮಾನಿನ ಕಿಟಕಿಗಳನ್ನಿಡಲಾಗಿದೆ. ಈ ಗೋಪುರದ ಮೇಲ್ಭಾಗದಲ್ಲಿ ಚಿಕ್ಕ ಗುಮ್ಮಟಗಳಿವೆ. ಇವು ಚಾವಣಿಯ ಮಟ್ಟಕ್ಕಿಂತಲೂ ಮೇಲಿವೆ. ವಿಶಾಲ ಚಾವಣಿಯ ಮೇಲೆ ಮಧ್ಯದಲ್ಲಿರುವ ಬೃಹತ್ ಗುಮ್ಮಟ ಅರೆಗೋಳಾಕಾರದ್ದು. ಇದರ ತಳ ಕೂಡ ಮೀನಾರುಗಳ ಮೇಲಿರುವ ಚಿಕ್ಕ ಗುಮ್ಮಟಗಳಂತೆ ಪದ್ಮದಳಗಳಿಂದ ಸುತ್ತುವರಿಯಲ್ಪಟ್ಟಿದೆ. ಅಲ್ಲದೆ ಗೋಡೆಗಳ ಮೇಲೆಲ್ಲ ಗಾರೆಯಲ್ಲಿ ಅನೇಕ ಬಗೆಯ ವಿನ್ಯಾಸಗಳ ಅಲಂಕಾರವಿದೆ. ಈ ವಾಸ್ತು ಮತ್ತು ಅಲಂಕರಣ ಪರಸ್ಪರ ಪೂರಕವಾಗಿ, ಗೋಳಗುಮ್ಮಟವನ್ನು ಮೋಹಕ ಕೃತಿಯನ್ನಾಗಿ ಮಾಡಿವೆ. ಈ ಕಟ್ಟಡವನ್ನು ಹತ್ತಿರದಿಂದ ನೋಡುವವರಿಗೆ, ಇದರ ದೈತ್ಯಾಕಾರದ ಎದುರು ತಮ್ಮ ವಾಮನತ್ವದ ಅನುಭವವಷ್ಟೇ ಆದರೂ ದೂರದಿಂದ ನೋಡಿದಲ್ಲಿ ಈ ಸೌಂದರ್ಯದ ಸ್ವರೂಪ ಸ್ಪಷ್ಟವಾಗುತ್ತದೆ.

ಗೋಳಗುಮ್ಮಟದ ಒಳಹಜಾರದ ಮಧ್ಯೆ ದೊಡ್ಡ ಚೌಕಕಟ್ಟೆಯ ಮೇಲೆ ಮಹಮ್ಮದ್‌ನ ಮತ್ತು ಅವನ ಸಮೀಪ ಸಂಬಂಧಿಗಳ ಕೃತಕ

ಗೋರಿಗಳಿವೆ. ನಿಜವಾದ ಗೋರಿಗಳು ಇದರ ಕೆಳಗೆ ನೆಲಮಾಳಿಗೆಯಲ್ಲಿವೆ. ಮಹಮ್ಮದ್ ತನ್ನ ಆಳಿಕೆಯ ಉತ್ತರಾರ್ಧದಲ್ಲಿ ಈ ಕಟ್ಟಡವನ್ನು ಕಟ್ಟಲಾರಂಭಿಸಿ, ತನ್ನ ಕೊನೆಗಾಲದವರೆಗೂ ಮುಂದುವರಿಸಿದ. ಆದರೆ ಆ ಹೊತ್ತಿಗೂ ಕಟ್ಟಡದ ಗಾರೆಯ ಅಲಂಕರಣ ಮುಗಿದಿರಲಿಲ್ಲವಾಗಿ ಆ ಭಾಗಗಳು ಇಂದೂ ಅಪೂರ್ಣವಾಗಿಯೇ ಉಳಿದಿವೆ. ಮಹಮ್ಮದ್ ತನ್ನ ಗೋರಿಗಾಗಿ ಬಹಳ ಆಸ್ಥೆ ವಹಿಸಿದ್ದನೆಂದೂ ತನ್ನ ದೇಹವನ್ನು ಪವಿತ್ರ ಸ್ಥಳದಲ್ಲಿ ಹುಗಿಯಬೇಕೆಂಬ ಉದ್ದಿಶ್ಯದಿಂದ ಇರಾಕಿನಲ್ಲಿ ಹುಸೇನರ ಸಮಾಧಿ ಇರುವ ಕರ್ಬಲಾದಿಂದ ಮಣ್ಣನ್ನು ತರಿಸಿಕೊಂಡಿದ್ದನೆಂದೂ ತಿಳಿದುಬಂದಿದೆ. ತನ್ನ ಸಮಾಧಿಗಾಗಿ ಈ ದೊರೆ ತಳೆದಿದ್ದ ಅಸೀಮ ಆಸಕ್ತಿಯಿಂದಾಗಿ ಜಗತ್ತಿನ ಉತ್ತಮ ವಾಸ್ತುರಚನೆಯೊಂದು ಮೈತಳೆಯಿತು.

ವಿನ್ಯಾಸದಲ್ಲಿ ಗೋಳಗುಮ್ಮಟ ಬಹಳ ಸರಳವಾಗಿದ್ದರೂ ಇದರ ಬೃಹದಾಕಾರ, ವಿವಿಧ ಭಾಗಗಳ ಹಿತಪ್ರಮಾಣ, ಮಿತ ಅಲಂಕರಣ ಮತ್ತು ಚತುರ ರಚನಾತಂತ್ರ - ಇವುಗಳಿಂದಾಗಿ ಆದಿಲ್‌ಶಾಹೀ ವಾಸ್ತು ಶಿಲ್ಪಗಳ ಉಚ್ಚತಮ ಸಾಹಸದ ಸಾಧನೆಯೆಂದು ಇದು ಪರಿಗಣಿತವಾಗಿದೆ. ಭಾರತೀಯ ವಾಸ್ತುರಂಗದಲ್ಲಿ ಒಂದು ಅನುಪಮ ಕೃತಿಯಾಗಿ, ಲೋಕ ವಿಖ್ಯಾತವಾಗಿ ಕರ್ನಾಟಕದ ಹೆಮ್ಮೆಯ ಸಾಧನೆಗಳಲ್ಲಿ ಒಂದೆನಿಸಿದೆ. (ಎಸ್.ಎಸ್.)

**ಗೌರಿಬಿದನೂರು** : ಕೋಲಾರ ಜಿಲ್ಲೆಯ ವಾಯವ್ಯದಲ್ಲಿರುವ ಒಂದು ತಾಲ್ಲೂಕು; ಅದರ ಮುಖ್ಯ ಪಟ್ಟಣ. ಈ ತಾಲ್ಲೂಕನ್ನು ಪಶ್ಚಿಮದಲ್ಲಿ ತುಮಕೂರು ಜಿಲ್ಲೆಯ ಕೊರಟಗೆರೆ ಮತ್ತು ಮಧುಗಿರಿ ತಾಲ್ಲೂಕುಗಳು, ಉತ್ತರದಲ್ಲಿ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆಯ ಹಿಂದೂಪುರ ತಾಲ್ಲೂಕು, ಪೂರ್ವದಲ್ಲಿ ಗುಡಿಬಂಡೆ ಮತ್ತು ಚಿಕ್ಕಬಳ್ಳಾಪುರ ತಾಲ್ಲೂಕುಗಳು ದಕ್ಷಿಣದಲ್ಲಿ ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕು ಸುತ್ತುವರೆದಿವೆ. ಈ ತಾಲ್ಲೂಕಿನ ವಿಸ್ತೀರ್ಣ 874ಚ.ಕಿಮೀ. ಗೌರಿ ಬಿದನೂರು, ಹೊಸೂರು, ಮಂಚೇನಹಳ್ಳಿ, ನಗರಗೆರೆ, ದಾರಿನಾಯಕನಪಾಳ್ಯ, ತೊಂಡೆಬಾವಿ -ಇವು ಇಲ್ಲಿಯ ಹೋಬಳಿಗಳು. ತಾಲ್ಲೂಕಿನಲ್ಲಿ ಎರಡು ಪಟ್ಟಣಗಳು ಮತ್ತು 236 ಗ್ರಾಮಗಳಿವೆ. ಜನಸಂಖ್ಯೆ 2,71,068.

ತಾಲ್ಲೂಕಿನ ಆಗ್ನೇಯ ದಿಕ್ಕಿನಿಂದ ಉತ್ತರ ದಿಕ್ಕಿಗೆ ಉತ್ತರಪಿನಾಕಿನಿ ನದಿ ಹರಿಯುತ್ತದೆ. ತಾಲ್ಲೂಕಿನ ಹೆಚ್ಚಿನ ಭಾಗ ಈ ನದೀಕಣಿವೆ ಪ್ರದೇಶ. ಪೂರ್ವದ ನಂದಿದುರ್ಗ ಗಿರಿಶ್ರೇಣಿ, ಪಶ್ಚಿಮದ ಮಾಕಳಿದುರ್ಗದಿಂದ ಆರಂಭವಾಗುವ ಗಿರಿಪಂಕ್ತಿ ಇವುಗಳ ನಡುವೆ ತಾಲ್ಲೂಕು ಇದೆ. ಉತ್ತರಪಿನಾಕಿನಿಯ ಒಂದು ಉಪನದಿ ಕುಮುದ್ವತಿ. ಬೆಂಗಳೂರು ಜಿಲ್ಲೆಯ ಮಾಕಳಿದುರ್ಗದ ಪಶ್ಚಿಮದಲ್ಲಿ ಉಗಮಿಸಿ, ದಕ್ಷಿಣೋತ್ತರವಾಗಿ ಈ ತಾಲ್ಲೂಕಿನ ಮೂಲಕ ಹರಿದು, ಮಧುಗಿರಿ ತಾಲ್ಲೂಕನ್ನು ಪ್ರವೇಶಿಸುತ್ತದೆ. ಈ ನದಿಗಳಲ್ಲದೆ ಮಾಕಳಿದುರ್ಗದ ಪೂರ್ವದಿಂದ ಎರಡು ಸಣ್ಣ ಹೊಳೆಗಳು ಈ ತಾಲ್ಲೂಕಿನಲ್ಲಿ ಹರಿಯುತ್ತವೆ. ಒಂದು ತೊಂಡೆಬಾವಿ ಹೋಬಳಿಯ ಮೂಲಕ ಹರಿದು ಮಧುಗಿರಿ ತಾಲ್ಲೂಕನ್ನು ಪ್ರವೇಶಿಸುತ್ತದೆ. ಮತ್ತೊಂದು ತೊಂಡೆಬಾವಿ ಹೋಬಳಿಯ ಮೂಲಕವೇ ಹರಿದು ಬೊಮ್ಮಸಂದ್ರಕ್ಕೆ ಪೂರ್ವದಲ್ಲಿ ಉತ್ತರಪಿನಾಕಿನಿಯನ್ನು ಕೂಡುತ್ತದೆ. ಈ ತಾಲ್ಲೂಕಿನ ತೊಂಡೆಬಾವಿಯ ಬಳಿ ಫೆಲ್‌ಸ್ಪಾರ್ ಸಿಗುವುದಲ್ಲದೆ ಮಾವಿನ ಹಳ್ಳಿಯ ಬಳಿ ಪಚ್ಚೆ, ಕೆಂಪು ಇವುಗಳ ಜಾತಿಗೆ ಸೇರಿದ ಕುರಂಗದಕಲ್ಲು ನಿಕ್ಷೇಪಗಳಿರುವುದು ಕಂಡುಬಂದಿದೆ.

ಗೌರಿಬಿದನೂರು ಅಕ್ಕಪಕ್ಕದ ತಾಲ್ಲೂಕಗಳಿಗಿಂತ ತಗ್ಗಿನಲ್ಲಿದ್ದು ಇಲ್ಲಿಯ ಮಣ್ಣು ಸಡಿಲ ಮತ್ತು ಫಲವತ್ತಾಗಿದೆ. ವ್ಯವಸಾಯಕ್ಕೆ ಅನುಕೂಲವಾಗಿ ನಾಲೆಗಳೂ ಕೆರೆಗಳೂ ಬಾವಿಗಳೂ ಇದ್ದು ನೀರಾವರಿ ಸೌಕರ್ಯವಿದೆ. ವಾರ್ಷಿಕ ಸರಾಸರಿ ಮಳೆ 614.53ಮಿಮೀ. ಬತ್ತ, ಕಬ್ಬು, ಅರಿಸಿನ, ತೆಂಗು, ಅಡಕೆ ಮುಖ್ಯ ಬೆಳೆಗಳು. ಮೆಣಸಿನಕಾಯಿ, ಈರುಳ್ಳಿ ಮುಂತಾದವು ತೋಟದ ಬೆಳೆಗಳು ಮಾವು ಮುಂತಾದ ಹಣ್ಣುಗಳನ್ನೂ ಬೆಳೆಯುವರು. ಬೆಟ್ಟಪ್ರದೇಶದಲ್ಲಿ ಮರಸೇಬು ವಿಶೇಷ.

ವ್ಯವಸಾಯದ ಜೊತೆಗೆ ಪಶುಪಾಲನೆಯೂ ಬೆಳೆದುಕೊಂಡು ಬಂದಿದ್ದು ಅದರ ಅಭಿವೃದ್ಧಿ ರಕ್ಷಣೆಯ ಅಂಗವಾಗಿ ತಾಲ್ಲೂಕಿನ ಮಂಚೇನಹಳ್ಳಿ, ದಾರಿನಾಯಕನಪಾಳ್ಯ ಮತ್ತು ಗೌರಿಬಿದನೂರುಗಳಲ್ಲಿ ತಾಲ್ಲೂಕು ಮತ್ತು ಗ್ರಾಮಮಟ್ಟದ ಪಶುವೈದ್ಯಾಲಯಗಳಿವೆ.

ಬೆಂಗಳೂರು-ಗುಂತಕಲ್ ರೈಲುಮಾರ್ಗ ತಾಲ್ಲೂಕಿನ ಮಧ್ಯ ಭಾಗದಲ್ಲಿ ದಕ್ಷಿಣೋತ್ತರವಾಗಿ ತೊಂಡೆಬಾವಿ, ಗೌರಿಬಿದನೂರು ಮತ್ತು ದೊಡ್ಡಕುರುಗೋಡು ಮೂಲಕ ಹಾದುಹೋಗುತ್ತದೆ. ಗೌರಿಬಿದನೂರು ಪಟ್ಟಣದಿಂದ ಗುಡಿಬಂಡೆ, ಚಿಕ್ಕಬಳ್ಳಾಪುರ, ಹಿಂದೂಪುರ ಮುಂತಾದ ಸ್ಥಳಗಳಿಗೂ ತೊಂಡೆಬಾವಿಯಿಂದ ಮಧುಗಿರಿಗೂ ರಸ್ತೆಗಳುಂಟು.

ತಾಲ್ಲೂಕಿನಲ್ಲಿ ಸಕ್ಕರೆ ಕಾರ್ಖಾನೆ, ಸಿಮೆಂಟ್ ಕೊಳವೆಗಳ ತಯಾರಿಕೆ, ಮರಕೊಯ್ಯುವ ಕಾರ್ಖಾನೆಗಳ ಜೊತೆಗೆ ಕೈಮಗ್ಗದ ಬಟ್ಟೆ ತಯಾರಿಕೆಯೂ ಉಂಟು. ವ್ಯಾಪಾರ ವಾಣಿಜ್ಯಾಭಿವೃದ್ಧಿಗೆ ಸಹಕಾರಿಯಾಗಿ ತಾಲ್ಲೂಕುಗಳಲ್ಲಿ ಬ್ಯಾಂಕುಗಳಿವೆ.

ಈ ತಾಲ್ಲೂಕಿನ ವಿದುರಾಶ್ವತ್ಥದಲ್ಲಿ ವರ್ಷಕ್ಕೊಮ್ಮೆ ಚೈತ್ರಶುದ್ಧ ಪೂರ್ಣಿಮೆಯಂದು ಪ್ರಾರಂಭವಾಗಿ ಒಂದು ವಾರ ಕಾಲ ನಡೆಯುವ ಅಶ್ವತ್ಥನಾರಾಯಣ ಸ್ವಾಮಿಯ ಜಾತ್ರೆ ಪ್ರಸಿದ್ಧ. ಆಗ ದನಗಳ ಜಾತ್ರೆಯೂ ಸೇರುತ್ತದೆ. ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ ಚಳವಳಿಗಾರರು 1938 ಎಪ್ರಿಲ್ 25ರಂದು ಪ್ರತಿಬಂಧಕಾಜ್ಞೆಯನ್ನು ಉಲ್ಲಂಘಿಸಿ ಕಾಂಗ್ರೆಸ್ ಧ್ವಜವನ್ನು ಆರೋಹಣ ಮಾಡಿದಾಗ ಪೊಲೀಸರ ಗುಂಡಿಗೆ ತುತ್ತಾಗಿ ಹತ್ತುಮಂದಿ ಮಡಿದಿದ್ದು ವಿದುರಾಶ್ವತ್ಥಕ್ಕೆ (ನೋಡಿ) ಸಂಬಂಧಿಸಿದ ಮರೆಯಲಾಗದ ನೆನಪು. ಈ ತಾಲ್ಲೂಕಿನ ಇತರ ಮುಖ್ಯ ಗ್ರಾಮಗಳಾದ ಗುಮ್ಮನಾಯಕನ ಪಾಳ್ಯ ಈಗ ಹೋಬಳಿ ಕೇಂದ್ರವಾಗಿದ್ದು 1882ರ ವರೆಗೆ ತಾಲ್ಲೂಕಿನ ಆಡಳಿತ ಕೇಂದ್ರವಾಗಿತ್ತು. ಹಿಂದೆ ಅಲ್ಲೊಂದು ಪಾಳೆಯಪಟ್ಟು ಸಹ ಇತ್ತು (ನೋಡಿ: ಗುಮ್ಮನಾಯಕನ ಪಾಳ್ಯದ ಪಾಳೆಯಗಾರರು). ಹೊಸೂರು ಗೌರಿಬಿದನೂರಿಗೆ ನೈಋತ್ಯದಲ್ಲಿ 10ಕಿಮೀ ದೂರದಲ್ಲಿದೆ. ಹೊಯ್ಸಳ ದೊರೆ ಮೂರನೆಯ ಬಲ್ಲಾಳ ಇದನ್ನು ವಶಪಡಿಸಿಕೊಂಡು ಹೊಸವೀಡು ಎಂದು ಹೆಸರಿಸಿದ್ದನೆಂದೂ ವಿಜಯನಗರ ರಾಜ್ಯದ ಗಡಿಯಲ್ಲಿದ್ದು ಅರಸರ ವಾಸಸ್ಥಾನವಾಗಿತ್ತೆಂದೂ ತಿಳಿದುಬರುತ್ತದೆ. ಮಂಚೇನಹಳ್ಳಿ ಗೌರಿಬಿದನೂರಿಗೆ ಪೂರ್ವದಲ್ಲಿ 14ಕಿಮೀ ದೂರದಲ್ಲಿ ಉತ್ತರ ಪಿನಾಕಿನಿ ನದಿಯ ಬಲದಂಡೆಯ ಮೇಲಿದೆ. ಇದು ಹೋಬಳಿಕೇಂದ್ರ, ಇಲ್ಲಿ ಪುರಸಭೆಯಿದೆ. ನಗರಗೆರೆ, ತೊಂಡೆಬಾವಿ ಈ ಹೋಬಳಿ ಕೇಂದ್ರಗಳು ತಾಲ್ಲೂಕಿನ ಇತರ ದೊಡ್ಡ ಸ್ಥಳಗಳು.

ಗೌರಿಬಿದನೂರು ಈ ತಾಲ್ಲೂಕಿನ ಮತ್ತು ಹೋಬಳಿಯ ಆಡಳಿತ ಕೇಂದ್ರ. ಕೋಲಾರಕ್ಕೆ ವಾಯುವ್ಯದಲ್ಲಿ 95ಕಿಮೀ ದೂರದಲ್ಲಿ ಬೆಂಗಳೂರಿನಿಂದ 75ಕಿಮೀ ದೂರದಲ್ಲಿ ಉತ್ತರ ಪಿನಾಕಿನಿ ನದಿಯ ಎಡದಂಡೆಯ ಮೇಲಿದೆ. ಬೆಂಗಳೂರು ಗುಂತಕಲ್ ರೈಲುಮಾರ್ಗದಲ್ಲಿ ಇದೊಂದು ನಿಲ್ದಾಣ. ದೊಡ್ಡಬಳ್ಳಾಪುರ ಹಿಂದೂಪುರ ರಸ್ತೆ ಇದರ ಮೂಲಕ ಸಾಗುತ್ತದೆ. ಜನಸಂಖ್ಯೆ 30,530.

ಹಿಂದೆ ವಿದುರನ ವಾಸಸ್ಥಳವಾಗಿದ್ದು ಇದಕ್ಕೆ ವಿದುರೂರು ಎಂಬ ಹೆಸರಿತ್ತೆಂದೂ ಹೇಳಲಾಗಿದೆ. ಹಿಂದೆ ಗೌರಿಬಿದನೂರು ಪಟ್ಟಣ ದಾರಿನಾಯ್ಕನಪಾಳ್ಯದ ಒಡೆಯನ ವಶದಲ್ಲಿತ್ತು. ಆತ ತನ್ನ ಮಗಳಾದ ಗೌರಿಗೆ ಇದನ್ನು ಬಳುವಳಿಯಾಗಿ ಕೊಟ್ಟ. ವಿದುರೂರು ಎಂಬ ಹೆಸರಿಗೆ ಆಕೆಯ ಹೆಸರೂ ಸೇರಿಕೊಂಡು ಇದು ಗೌರಿವಿದುರೂರು ಎನಿಸಿಕೊಂಡಿತು. ಅನಂತರ ಮುಸ್ಲಿಮರು ಇದನ್ನು ಗೋರಿ ಬಿದನೂರು ಎಂದು ಕರೆದರು. ಇದರ ಬಳಿಯಲ್ಲಿ ನಿರ್ಮಿಸಲಾಗಿದ್ದ ಗೋರಿಗಳಿಂದಾಗಿ ಇದಕ್ಕೆ ಈ ಹೆಸರು ಬಂತು. ಉತ್ತರಪಿನಾಕಿನಿ ನದಿಯ ಆಚೆಯ ದಡದಲ್ಲಿ, ಹಿರೇಬಿದನೂರಿನಲ್ಲಿ, ಬಿಜಾಪುರದ ಒಬ್ಬ ಶ್ರೀಮಂತನಾಗಿದ್ದ ಹುಸೇನ್ ಷಾ ಮರ್ಜಾನ ಮತ್ತು ಕುಟುಂಬದವರ ಗೋರಿಗಳಿವೆ. ಗೌರಿಬಿದನೂರಿನಲ್ಲಿ ಅದೇ ಕಾಲದ ಜಲಾಲ್ ಬಖಾರಿ ವಲಿಯ ದರ್ಗಾ ಇದೆ.

ಗೌರಿಬಿದನೂರಿನಲ್ಲಿ ನವಗ್ರಹ ಮತ್ತು ವೆಂಕಟರಮಣ ದೇವಾಲಯಗಳಿದ್ದು ವೆಂಕಟರಮಣ ದೇವಸ್ಥಾನದ ವಿಗ್ರಹ 4' ಎತ್ತರವಿದೆ. ರೈಲುಮಾರ್ಗ ನಿರ್ಮಾಣವಾದಂದಿನಿಂದ ಗೌರಿಬಿದನೂರು ಪ್ರವರ್ಧಮಾನವಾಗಿ ವ್ಯಾಪಾರ ವಾಣಿಜ್ಯ ಕೇಂದ್ರವಾಗಿದೆ. ಇಲ್ಲಿ ಒಂದು ಸಕ್ಕರೆ ಕಾರ್ಖಾನೆ ಇದೆ. ಗೌರಿಬಿದನೂರಿನಲ್ಲಿ ಭಾಭಾ ಪರಮಾಣುಶಕ್ತಿ ಸಂಶೋಧನ ಸಂಸ್ಥೆಗೆ ಸೇರಿದ ಭೂಕಂಪನಮಾಪನ ಕೇಂದ್ರವಿದೆ. ಈ ಪಟ್ಟಣಕ್ಕೆ ಪುರಸಭಾಡಳಿತವಿದೆ. *

**ಗೌರೀಶ ಕಾಯ್ಕಿಣಿ :** 1912-2002. ಕನ್ನಡದಲ್ಲಿ ವೈಚಾರಿಕ ಬರೆಹಗಳಿಗಾಗಿ ಹೆಸರಾದ ಲೇಖಕ. ಇವರು 1912 ಸೆಪ್ಟೆಂಬರ್ 12ರಂದು ಉತ್ತರ ಕನ್ನಡ ಜಿಲ್ಲೆ ಗೋಕರ್ಣದಲ್ಲಿ ಜನಿಸಿದರು. ತಂದೆ ವಿಠ್ಠಲರಾವ್



ವೆಂಕಟರಾವ್ ಕಾಯ್ಕಿಣಿ, ತಾಯಿ ಸೀತಾ ಬಾಯಿ. ಇವರಪ್ರಾಥಮಿಕ ವ್ಯಾಸಂಗ ಗೋಕರ್ಣದಲ್ಲಿ, ಮಾಧ್ಯಮಿಕ ಶಿಕ್ಷಣ ಕುಮಟೆಯ ಗಿಬ್ ಹೈಸ್ಕೂಲಿನಲ್ಲಿ ಆಯಿತು. ಮುಂದೆ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಇಂಟರ್‌ಮೀಡಿಯೇಟ್ ವರೆಗೆ ಓದಿದರು. ಅನಂತರ ಬಂಕಿಕೊಡ್ಲಿನ ಆನಂದಾಶ್ರಮ ಹೈಸ್ಕೂಲಿನಲ್ಲಿ ಶಿಕ್ಷಕರಾಗಿ ಸೇರಿಕೊಂಡು ಎಸ್.ಟಿ.ಸಿ. ಶಿಕ್ಷಕರ ತರಬೇತಿಯಲ್ಲಿ ಮುಂಬಯಿ ಪ್ರಾಂತ್ಯಕ್ಕೆ ಪ್ರಥಮರಾಗಿ ತೇರ್ಗಡೆ ಹೊಂದಿದರು (1945). ಅದೇ ಸಮಯ ಹಿಂದಿ ವಿಶಾರದ ಪರೀಕ್ಷೆಯಲ್ಲಿಯೂ ಉತ್ತೀರ್ಣರಾದರು. ಬಂಕಿಕೊಡ್ಲು ಆನಂದಾಶ್ರಮ ಗೋಕರ್ಣದ ಭದ್ರಕಾಳಿ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿ ದುಡಿದು (1937-76) ನಿವೃತ್ತರಾದರು. 1973ರಲ್ಲಿ ಇವರಿಗೆ ಆದರ್ಶ ಶಿಕ್ಷಕ ಪ್ರಶಸ್ತಿ ಬಂತು.

ಎಳೆವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡ ಇವರು ಬೆಳೆದದ್ದು ತಾಯಿಯ ತವರು ಮನೆಯಲ್ಲಿ; ಮನೆಯ ಸಾಂಪ್ರದಾಯಿಕ ವಾತಾವರಣದಲ್ಲಿ, ತಾಯಿ ಮತ್ತು ದೊಡ್ಡಮ್ಮನವರ ಪ್ರೀತಿಯಲ್ಲಿ. ಮನೆಗೆ ಬರುತ್ತಿದ್ದ ಶಾಂಡಿಲ್ಯ ಮಹಾರಾಜರೆಂಬ ಋಷಿಗಳ ಮಾರ್ಗದರ್ಶನದಲ್ಲಿ ಕುಂಭೇಶ್ವರ ಮಾಸ್ತರ್, ಎನ್.ಎಸ್.ಕಾಮತರಂತಹ ಗುರುಗಳು ನೀಡಿದ ಪ್ರೋತ್ಸಾಹದಲ್ಲಿ ಬೆಳೆದರು. ಮನೆಯಲ್ಲಿ ಓದುತ್ತಿದ್ದ ಮರಾಠಿ ಧಾರ್ಮಿಕ ಗ್ರಂಥಗಳಿಂದಲೂ ಧಾರ್ಮಿಕ ವಿಧಿವಿಧಾನಗಳಿಂದಲೂ ಶಾಂಡಿಲ್ಯ ಮಹಾರಾಜರ ವಿದ್ವತ್ಪೂರ್ಣ ಪ್ರವಚನದಿಂದಲೂ ಗೌರೀಶರಲ್ಲಿ ಓದುವ ಅಭಿರುಚಿ ಬೆಳೆಯಿತು. ಇವರು ಮೊದಲು ಮರಾಠಿಯ ಭಕ್ತಿಗೀತೆಗಳನ್ನು ಆಧರಿಸಿ ತಮ್ಮದೇ ಆದ ಭಕ್ತಿಗೀತೆ, ರಾಷ್ಟ್ರೀಯ ಸ್ಫೂರ್ತಿಗೀತೆ, ಭಾವಗೀತೆಗಳನ್ನು ರಚಿಸತೊಡಗಿದರು. ಮರಾಠಿಯಲ್ಲಿ ಶಾಂಡಿಲ್ಯ ಪ್ರೇಮಸುಧಾ ಎಂಬ ಭಕ್ತಿಗೀತೆಗಳ ಸಂಗ್ರಹ ಪ್ರಕಟಿಸಿದ್ದರು. ಅನಂತರ 'ನಂದಿನಿ' ಪತ್ರಿಕೆಯಲ್ಲಿ ಸಂತ ಮೀರಾಬಾಯಿಯನ್ನು ಕುರಿತು ಒಂದು ಕಥೆ ಬರೆದರು. ಮುಂದೆ 'ನಂದಿನಿ'ಯಲ್ಲಿ ಅನೇಕ ಲೇಖನಗಳನ್ನು ಬರೆದರು.

ಮಿಂಚಿನ ಬಳ್ಳಿಯ ಬುರ್ಲಿ ಬಿಂದುಮಾಧವಾಚಾರ್ಯರ ಒತ್ತಾಸೆಯಿಂದ ಮನೋವಿಜ್ಞಾನದ ರೂಪರೇಖೆಗಳು ಎಂಬ ಗ್ರಂಥ ಬರೆದರು. ಇದು ಇವರ ಮೊದಲ ಕನ್ನಡ ಗ್ರಂಥ (1941). ಅಂದಿನ ದಿನಗಳಲ್ಲಿ ಕನ್ನಡ ನಾಟಕಗಳ ಅಗತ್ಯವನ್ನು ಮನಗಂಡು ಭೂಕೈಲಾಸ, ಆಶಾನಿರಾಶಾ, ಅಧಃಪಾತ, ಚಂದ್ರಗ್ರಹಣ, ತ್ರಿದಂಡಿ ಸನ್ಯಾಸ, ರಾಜ್ಯಾರೋಹಣ, ಸ್ವಯಂಸೇವಕ, ಮಾಡಿದ್ದೊಂದು ಆದದ್ದೊಂದು, ಚಿದಂಬರ ರಹಸ್ಯ, ಬೆಳ್ಳಿಯ ಬಟ್ಟಲು ಎಂಬ ನಾಟಕಗಳನ್ನು ಕನ್ನಡಕ್ಕೆ ತಂದರು. ಇವುಗಳಲ್ಲಿ ಬೆಳ್ಳಿಯ ಬಟ್ಟಲು ಇಂಗ್ಲಿಷಿನಿಂದಲೂ ಉಳಿದವು ಮರಾಠಿಯಿಂದಲೂ ಅನುವಾದಗೊಂಡಿವೆ. ಈ ನಾಟಕಗಳು ರಂಗಭೂಮಿಗೆ ಬಂದರೂ ಪುಸ್ತಕ ರೂಪದಲ್ಲಿ ಪ್ರಕಟವಾಗಲಿಲ್ಲ.

ಇವರು ಇಂಗ್ಲಿಷ್, ಸಂಸ್ಕೃತ, ಹಿಂದಿ, ಮರಾಠಿ, ಕನ್ನಡ, ಕೊಂಕಣಿ ಭಾಷೆಯ ಕೃತಿಗಳನ್ನೂ ಕಾರಂತ, ಬೇಂದ್ರೆ, ಶಂಬಾ, ಮಾಸ್ತಿ, ಶ್ರೀರಂಗ, ಗೋಕಾಕರ ಕನ್ನಡ ಕೃತಿಗಳನ್ನೂ ಓದಿ ಜ್ಞಾನಕ್ಷಿತಿಜವನ್ನು ವಿಸ್ತರಿಸಿಕೊಂಡರು. ಗಾಂಧಿವಾದ, ಮಾರ್ಕ್ಸವಾದ, ಎಂ. ಎನ್. ರಾಯ್‌ವಾದ, ಲೋಹಿಯಾವಾದಗಳನ್ನೂ ಅರವಿಂದ ತತ್ವಗಳನ್ನೂ ರಾಮಕೃಷ್ಣ ಪರಮಹಂಸ ಮತ್ತು ವಿವೇಕಾನಂದರ ವಿಚಾರಗಳನ್ನೂ ಕುರಾನ್, ಬೈಬಲ್‌ಗಳನ್ನೂ ಪಾಶ್ಚಾತ್ಯ, ಪೌರಸ್ತ್ಯ ತತ್ವಾದರ್ಶನಗಳನ್ನೂ ಅಭ್ಯಸಿಸಿ ತಮ್ಮದೇ ಆದ ವೈಚಾರಿಕ ನಿಲುವನ್ನು ರೂಪಿಸಿಕೊಂಡರು.

'ಗಂಡು ಹೆಣ್ಣು' (ವಿಲ್ ಡ್ಯುರಾಂಟನ ಕೃತಿಯ ಆಧಾರ), ಮಾರ್ಕ್ಸ್‌ವಾದ, ವಿಚಾರವಾದ, ನಾಸ್ತಿಕನು ಮತ್ತು ದೇವರು, ಭಾರತೀಯ ಸಂಪ್ರದಾಯಗಳು ಮತ್ತು ಕುಟುಂಬ, ಸ್ವಾತಂತ್ರ್ಯೋತ್ತರ ವಿಚಾರ ಸಾಹಿತ್ಯ, ಪ್ರಜ್ಞಾನೇತ್ರದ ಬೆಳಕಿನಲ್ಲಿ, ಕಟಾಕ್ಷ, ಚೆನ್ನವೀರ ಕಣವಿಯವರ ಕಾವ್ಯದೃಷ್ಟಿ, ಕಂಪಿನಕರೆ (ಬೇಂದ್ರೆ ಕಾವ್ಯದೃಷ್ಟಿ), ವಾಲ್ಮೀಕಿ ತೂಕಡಿಸಿದಾಗ ಮೊದಲಾದ ವೈಚಾರಿಕ ವಿಮರ್ಶೆಯ ಗ್ರಂಥಗಳನ್ನು ಬರೆದರು. ಅನೇಕ ಜೀವನ ಚರಿತ್ರೆ, ವ್ಯಕ್ತಿಚಿತ್ರಗಳನ್ನು ರಚಿಸಿದರು.

ಇವರು ಅನುವಾದ ಕ್ಷೇತ್ರದಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿದ್ದರು. ಮಲೆನಾಡಿಗರು (ಥಾಮಸ್ ಹಾರ್ಡಿ), ಮಣ್ಣಿನ ಮನುಷ್ಯ, ಬರ್ಲಿನ್ ಬಂತು ಗಂಗೆಯ ತಡಿಗೆ (ಬವಾದಖೇರ್) ಎಂಬ ಮೂರು ಕಾದಂಬರಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಇವುಗಳಲ್ಲಿ ಮೊದಲನೆಯದು ಇಂಗ್ಲಿಷ್ ಕೃತಿ, ಎರಡನೆಯದು ಒರಿಯಾ, ಕೊನೆಯದು ಮರಾಠಿ.

'ಒಲವಿನ ಒಗಟು' ಇವರ ಪ್ರಥಮ ಪ್ರಕಟಿತ ನಾಟಕ. ಇಂಗ್ಲಿಷ್, ಕನ್ನಡ, ಮರಾಠಿ, ಕೊಂಕಣಿ ಭಾಷೆಗಳಲ್ಲಿ ಇವರು 55ಕ್ಕೂ ಮಿಕ್ಕು ಗ್ರಂಥಗಳನ್ನು ಬರೆದಿದ್ದಾರೆ. ನ್ಯಾಶನಲ್ ಇಂಟಿಗ್ರೇಶನ್ ಇನ್ ಆ್ಯಕ್ಶನ್, ಸರ್.ಎಂ. ವಿಶ್ವೇಶ್ವರಯ್ಯ, ಶಾಮರಾವ್ ವಿಠ್ಠಲ ಕಾಯ್ಕಿಣಿ, ಕಾಸ್ಟ್ ಆ್ಯಂಡ್ ಕಾಸ್ಟಿಸಂ: ಇಟ್ಸ್ ಕಾಸ್ ಆ್ಯಂಡ್ ಕ್ಯೂರ್, ಇನ್‌ಫ್ಲ್ಯೂಯೆನ್ಸ್ ಆಫ್ ಕನ್ನಡ ಆನ್ ಕೊಂಕಣಿ - ಇವು ಇವರ ಇಂಗ್ಲಿಷ್ ಕೃತಿಗಳು (ಕೊನೆಯ ಎರಡು ಕೃತಿಗಳು ಪ್ರಕಟವಾಗಿಲ್ಲ.)

ಮೈಸೂರು ವಿಶ್ವವಿದ್ಯಾನಿಲಯಕ್ಕಾಗಿ ಇವರು ದಿ ಸರ್ವೆ ಆಫ್ ಹ್ಯೂಮನ್ ಡೆಸ್ಟಿನಿ ಮತ್ತು ಕರ್ನಾಟಕ ವಿಶ್ವವಿದ್ಯಾಲಯಕ್ಕಾಗಿ ದಿ ಫ್ಯೂಚರ್ ಪೊಯಿಟ್ರಿ ಬೈ ಅರಬಿಂದೊ ಎಂಬ ಎರಡು ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟಿದ್ದಾರೆ. ಇವರು ಸುಮಾರು ನಲವತ್ತು ಗೌರವ ಗ್ರಂಥಗಳಿಗೆ, ಸ್ಮರಣ ಸಂಚಿಕೆಗಳಿಗೆ ನೂರಾರು ಲೇಖನಗಳನ್ನು ಬರೆದಿದ್ದಾರೆ. ಕನ್ನಡದ ಅಂಕಣ ಬರೆಹಗಾರರಲ್ಲಿ ಕಾಯ್ಕಿಣಿಯವರೂ ಒಬ್ಬರು. 'ಜನಸೇವಕ' ಪತ್ರಿಕೆಗಾಗಿ ಇವರು ಪ್ರತಿವಾರವೂ ಮೂರು ಅಂಕಣ ಬರೆಯುತ್ತಿದ್ದರು (1955-72). ವಾರದ ಉಪ್ಪಿನಕಾಯಿ ಎಂಬ ಅಂಕಣದಲ್ಲಿ ಅಡಿಗೆಭಟ್ಟ ಎಂಬ ಕಾವ್ಯನಾಮದಿಂದಲೂ ವಾರದ ವಿಶ್ವ ಎಂಬ ಅಂಕಣದಲ್ಲಿ ವೈಶ್ವಾನರ ಎಂಬ ಕಾವ್ಯನಾಮದಿಂದಲೂ ಸಾಹಿತ್ಯದರ್ಪಣ ಅಂಕಣವನ್ನು ಜಿ.ವಿ.ಕೆ. ಎಂಬ ಹೆಸರಿನಲ್ಲೂ ಬರೆಯುತ್ತಿದ್ದರು. ಬೆಳಕು (ಧಾರವಾಡ), ನಾಗರಿಕ (ಕಾರವಾರ) ಪತ್ರಿಕೆಗಳ ಪ್ರಧಾನ ಸಂಪಾದಕರಾಗಿದ್ದರು. ಜನಪ್ರಗತಿ, ಸಮನ್ವಯ (ಶಿರಸಿ), ಕರಾವಳಿ ಗ್ರಾಮ ವಿಕಾಸ, ಕಸ್ತೂರಿ, ಗ್ರಾಮ ಜೀವನ ಮತ್ತು ಸಂಯುಕ್ತ ಕರ್ನಾಟಕ ಪತ್ರಿಕೆಗಳಲ್ಲಿಯೂ ಇವರು ಅಂಕಣಗಳನ್ನು ಬರೆದಿದ್ದಾರೆ. ಇವರ ಅಪ್ರಕಟಿತ ಕೃತಿಗಳು ಹಾಗೂ ಲೇಖನಗಳ ರಾಶಿ ಅಪಾರವಾಗಿವೆ.

ಇವರು ಪ್ರೋಗ್ರೆಸ್ ಮೈಸೂರ್ ಸಂಪಾದಕ ಮಂಡಳಿ, ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗದ ಸಲಹಾ ಸಮಿತಿ, ಆಕಾಶವಾಣಿ ಸಲಹಾ ಸಮಿತಿ ಇವುಗಳ ಸದಸ್ಯರೂ ಕನ್ನಡ ಜಿಲ್ಲಾ ಲೇಖಕ, ಪ್ರಕಾಶಕ, ಪತ್ರಕರ್ತರ ಸಂಘದ ಅಧ್ಯಕ್ಷರೂ ಆಗಿದ್ದರು. ಇವರಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವ ಗೌರವ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ, ವರ್ಧಮಾನ ಪ್ರಶಸ್ತಿ, ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಶಂಬಾ ವಿಚಾರ ವೇದಿಕೆಯ ಸಂಶೋಧನ ಪ್ರಶಸ್ತಿ, ಉಗ್ರಾಣ ಮಂಗೇಶರಾವ್ ಪ್ರಶಸ್ತಿಗಳು ದೊರಕಿವೆ.

ಇವರ ಪತ್ನಿ ಶಾಂತಾ. ಇವರ ಪುತ್ರ ಜಯಂತ ಕಾಯ್ಕಿಣಿಯವರು ಕನ್ನಡದ ಹೊಸಪೀಳಿಗೆಯ ಮಹತ್ವದ ಲೇಖಕರಾಗಿದ್ದಾರೆ. ಗೌರೀಶರು ಗೋಕರ್ಣದಲ್ಲಿ 2002 ನವೆಂಬರ್ 14ರಂದು ನಿಧನಹೊಂದಿದರು.

(ಎಸ್.ಎಂ.ಕೆ.)

**ಗ್ರಂಥಾಲಯಗಳು :** ಆಧುನಿಕ ಸಮಾಜ ಇಂದು ನಿರಂತರ ಉನ್ನತಿಗಾಗಿ ಜ್ಞಾನಸಂಪತ್ತನ್ನು ಅವಲಂಬಿಸಿರುವುದರಿಂದ ಗ್ರಂಥಾಲಯ, ಮಾಹಿತಿ ಕೇಂದ್ರ, ಪರಾಮರ್ಶನ ಕೇಂದ್ರ, ದತ್ತಾಂಶ ಕೇಂದ್ರ, ವಿದ್ಯುನ್ಮಾನ ಆಧಾರಿತ ಮಾಹಿತಿ ವಿನಿಮಯ ಜಾಲ ಇತ್ಯಾದಿಗಳ ಆವಶ್ಯಕತೆ ದಿನೇ ದಿನೇ ಹೆಚ್ಚುತ್ತಿದ್ದು, ಆಗಿಂದಾಗ್ಗೆ ಕಂಡುಬರುವ ಬದಲಾವಣೆಗಳಿಗೆ ಅನುಗುಣವಾಗಿ ಇವು ಸಹ ವೈಜ್ಞಾನಿಕವಾಗಿ ಪರಿವರ್ತನೆಗೊಳ್ಳುತ್ತಲಿವೆ. ಹೆಚ್ಚುತ್ತಿರುವ ಬೇಡಿಕೆಯನ್ನು ಪೂರೈಸಲು ಗ್ರಂಥಾಲಯಗಳು ವ್ಯವಸ್ಥಿತ ರೀತಿಯಲ್ಲಿ ಕಾರ್ಯನಿರ್ವಹಿಸುವುದು ಅನಿವಾರ್ಯ. ಮೂಲತಃ ಗ್ರಂಥಾಲಯದ ಕಾರ್ಯಗಳೆಂದರೆ ಜ್ಞಾನ ಸಂಗ್ರಹಣೆ, ಜ್ಞಾನ ವರ್ಗೀಕರಣ, ಜ್ಞಾನ ಪ್ರಸರಣೆ ಮತ್ತು ಜ್ಞಾನ ಸಂರಕ್ಷಣೆ. ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಗ್ರಂಥಭಂಡಾರಗಳನ್ನು ಬೆಳೆಸುವ ಕಾರ್ಯ ನಡೆಯುತ್ತ ಬಂದಿದೆ. ಈಗ ಈ ಕಾರ್ಯ ವಿಶೇಷವಾಗಿ ಸಾಗುತ್ತಿದೆ.

ಜ್ಞಾನ ಪ್ರಸಾರಕ್ಕೆ ಗ್ರಂಥಾಲಯಗಳು ಇಂದು ಆಧುನಿಕ ತಂತ್ರಜ್ಞಾನವನ್ನು ಬಳಸಿಕೊಂಡು ಹಲವಾರು ರೀತಿಯಲ್ಲಿ ಸೇವಾ ಸೌಲಭ್ಯಗಳನ್ನು ಕಲ್ಪಿಸುತ್ತಿವೆ. ಬಹು ಮುಖ್ಯವಾಗಿ ವಿದ್ಯುನ್ಮಾನ ಗ್ರಂಥ ಪತ್ರಿಕೆಗಳನ್ನು ಒಳಗೊಂಡ 'ಡಿಜಿಟಲ್ ಲೈಬ್ರರಿ' ಮತ್ತು ಆನ್‌ಲೈನ್ ಸಂಪರ್ಕ ಒದಗಿಸುವ ದತ್ತಾಂಶ/ಮಾಹಿತಿ ಕೇಂದ್ರಗಳು ಹೆಚ್ಚುತ್ತಲಿವೆ. ತಂತ್ರಜ್ಞಾನ ಬಳಸಿಕೊಳ್ಳುತ್ತಿರುವುದರಿಂದ ಗ್ರಂಥಾಲಯ ಮತ್ತು ಮಾಹಿತಿ ಕೇಂದ್ರಗಳು ಓದುಗರ ಅಗತ್ಯಕ್ಕೆ ತಕ್ಕಂತೆ ಮಾಹಿತಿಯನ್ನು ನಿಖರವಾಗಿ ಹಾಗೂ ತ್ವರಿತವಾಗಿ ನೀಡಲು ಸಾಧ್ಯವಾಗುತ್ತಿದೆ. ಈ ಸಂದರ್ಭದಲ್ಲಿ ದೇಶ ಮತ್ತು ಕಾಲದ ಅಡಚಣೆಗಳಿರುವುದಿಲ್ಲ. ಪ್ರಚಲಿತ ಜ್ಞಾನವನ್ನು ಎಲ್ಲೇ ಇರಲಿ, ಯಾವಾಗಲೇ ಇರಲಿ ಸರಾಗವಾಗಿ ಪಡೆದುಕೊಳ್ಳಬಹುದು.

ಜ್ಞಾನವನ್ನು ಅರಸಿ ಬರುವವರ ದೃಷ್ಟಿಯಿಂದ ಗ್ರಂಥಾಲಯಗಳನ್ನು ಸಾಂಪ್ರದಾಯಿಕವಾಗಿ ನಾಲ್ಕು ವಿಧಗಳಾಗಿ ವಿಂಗಡಿಸಬಹುದು.

1 ಸಾರ್ವಜನಿಕ ಗ್ರಂಥಾಲಗಳು 2 ಶೈಕ್ಷಣಿಕ ಗ್ರಂಥಾಲಯಗಳು 3 ಸಂಶೋಧನಾತ್ಮಕ ಅಥವಾ ವಿಶಿಷ್ಟ ಗ್ರಂಥಾಲಯಗಳು ಮತ್ತು 4 ರಾಷ್ಟ್ರೀಯ ಗ್ರಂಥಾಲಯಗಳು.

ಗ್ರಂಥಾಲಯಗಳು ತನ್ನದೇ ಆದ ಜ್ಞಾನ ಸಂಗ್ರಹ ಹಾಗೂ ಆರ್ಥಿಕ ಸಂಪನ್ಮೂಲ ಆಧರಿಸಿ ಕಾರ್ಯನಿರ್ವಹಿಸುವ ಕಾಲ ದೂರವಾಗುತ್ತಿದೆ. ಈಗ "ಸಂಪನ್ಮೂಲ ವಿನಿಮಯ"ಕ್ಕಾಗಿ ವಿಶ್ವದಾದ್ಯಂತ ಮಾಹಿತಿ ವಿನಿಮಯ ಜಾಲಗಳು ಮತ್ತು "ಗ್ರಂಥಾಲಯಗಳ ಒಕ್ಕೂಟ" ನಿರ್ಮಾಣವಾಗಿವೆ. ಇಂತಹ ಸಂಪನ್ಮೂಲ ವಿನಿಮಯ ಕಾರ್ಯಕ್ರಮದಿಂದಾಗಿ ಇತರ ಗ್ರಂಥಾಲಯಗಳಲ್ಲಿ ಲಭ್ಯವಿರುವ ಜ್ಞಾನ ಸಂಗ್ರಹ ಹೆಚ್ಚು ಬಳಕೆಯಾಗುತ್ತದೆ ಮತ್ತು ಆರ್ಥಿಕ ಹಾಗೂ ಸಿಬ್ಬಂದಿ ಕೊರತೆ ತಕ್ಕಮಟ್ಟಿಗೆ ನೀಗುವುದು.

ಈ ಲೇಖನದಲ್ಲಿ ಕರ್ನಾಟಕದಲ್ಲಿ ಗ್ರಂಥಾಲಯಗಳು ಬೆಳೆದುಬಂದ ಇತಿಹಾಸ, ಗ್ರಂಥಾಲಯಗಳ ಒಕ್ಕೂಟ ಹಾಗೂ ಸಂಘ-ಸಂಸ್ಥೆಗಳನ್ನು ಕುರಿತು ಸ್ಥೂಲ ಪರಿಚಯ ಮಾಡಿಕೊಡಲಾಗಿದೆ.

**ಇತಿಹಾಸ :** ಪ್ರಾಚೀನ ಕಾಲದಲ್ಲಿ ಮಾನವ ತನ್ನ ಅನುಭವ ಹಾಗೂ ತಿಳುವಳಿಕೆಯನ್ನು ತಾಳೆಗರಿ, ಭೂರ್ಜ್ವಪತ್ರ, ಜೇಡಿಮಣ್ಣಿನ ಫಲಕ, ಚರ್ಮ, ಶಿಲೆ ಮತ್ತು ತಾಮ್ರ ಇತ್ಯಾದಿಗಳ ಮೇಲೆ ಬರೆದು ದಾಖಲಿಸುತ್ತಿದ್ದನು. ವೇದಗಳನ್ನು ಪ್ರಾರಂಭದಲ್ಲಿ ಮೌಖಿಕ ಪರಂಪರೆಯಲ್ಲಿ ಹೇಳುವ ಪಾಠಕರಿದ್ದರು. ತರುವಾಯ ಅದು ಲಿಖಿತರೂಪಕ್ಕೆ ಬಂದಿತು. ಮಹಾಭಾರತ ಮತ್ತು ರಾಮಾಯಣಗಳ ಕಾಲಕ್ಕಾಗಲೇ ಲಿಖಿತ ರೂಪದಲ್ಲಿ ಮಾಹಿತಿಗಳು ದೊರೆಯುತ್ತಿದ್ದದ್ದು ಕಂಡುಬರುತ್ತದೆ. ಕ್ರಿ.ಪೂ. ಸಹಸ್ರಮಾನದಲ್ಲಿ ಗ್ರಂಥಗಳು ಕಾಣಿಸಿಕೊಂಡವೆಂದು ಹೇಳಬಹುದು. ಇಂತಹ ಪ್ರಾಚೀನ ಮಾಹಿತಿ ಆಕರಗಳನ್ನು ಕರ್ನಾಟಕದಲ್ಲಿ ಅಗ್ರಹಾರ, ಧಾರ್ಮಿಕ ಮಠ, ಆಶ್ರಮ, ಮಂದಿರ ಮುಂತಾದ ವಿದ್ಯಾಕೇಂದ್ರಗಳಲ್ಲಿ ಸಂಗ್ರಹಿಸಲಾಗುತ್ತಿತ್ತು, ಅವುಗಳ ಸಂಗ್ರಹಕ್ಕಾಗಿಯೇ ಗ್ರಂಥಭಂಡಾರಗಳಿರುತ್ತಿದ್ದುವು. 11-12ನೆಯ ಶತಮಾನದಲ್ಲಿ ನಾಗಾಯಿ ಎಂಬಲ್ಲಿ ಪ್ರಸಿದ್ಧ ವಿದ್ಯಾಕೇಂದ್ರವಿತ್ತೆಂದು ಅಲ್ಲಿ ದೊರೆತ ಶಾಸನದಿಂದ (1058) ತಿಳಿದುಬರುತ್ತದೆ. ನಾಗವಾಹ ಅಗ್ರಹಾರವನ್ನು ಮಾಧವ ಮಂತ್ರಿಗೆ ಚಾಳುಕ್ಯ ತ್ರೈಲೋಕ್ಯಮಲ್ಲದೇವ ದತ್ತಿಯಾಗಿ ಕೊಟ್ಟನೆಂದೂ ಮಾಧವ ಮಂತ್ರಿ ಅಲ್ಲಿ ಮೂರು ಮಹಾವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ ಅಲ್ಲಿನ ಗ್ರಂಥಾಲಯಕ್ಕೆ ಆರು ಮಂದಿ ಸರಸ್ವತಿ ಭಂಡಾರಿಗಳನ್ನು ನಿಯಮಿಸಿ ಪ್ರತಿ ಭಂಡಾರಿಗನಿಗೆ ಇಪ್ಪತ್ತು ಮಹತ್ತರ ಭೂಮಿಯನ್ನು ಉಂಬಳಿ ಬಿಟ್ಟಿದ್ದನೆಂದೂ ಆ ಶಾಸನ ತಿಳಿಸುತ್ತದೆ. ಅನೇಕ ಜೈನ ಬಸದಿಗಳು ಮತ್ತು ಪ್ರಮುಖವಾಗಿ ಮೂಡಬಿದರೆ, ಉಡುಪಿ, ಮೇಲುಕೋಟೆ, ಶೃಂಗೇರಿ, ಮೈಸೂರು, ಧಾರವಾಡ, ಹುಬ್ಬಳ್ಳಿ, ನಂಜನಗೂಡು ಮುಂತಾದ ಸ್ಥಳಗಳಲ್ಲಿನ ಮಠ ಮಂದಿರಗಳಲ್ಲಿ ಹಿಂದಿನಿಂದಲೂ ಸಂಗ್ರಹಿಸಿಕೊಂಡು ಬಂದ ಹಸ್ತಪ್ರತಿ ಸಂಗ್ರಹವನ್ನೂ ಈಗಲೂ ಕಾಣಬಹುದು. ಇಮ್ಮಡಿ ಬುಕ್ಕರಾಯ ಶೃಂಗೇರಿಯ ಗ್ರಂಥ'ಭಂಡಾರದ ಗ್ರಂಥ'ಪಾಲಕನಾಗಿದ್ದ ನರಸಿಂಹಭಾರತಿ ಒಡೆಯ ನೆಂಬುವವನನ್ನು ದಕ್ಷಿಣ ಕನ್ನಡ ಜಿಲ್ಲೆಯ ಪೆರಡೂರು ಎಂಬಲ್ಲಿ ಗ್ರಂಥಾಲಯದ ಪುನರ್ವ್ಯವಸ್ಥೆಗಾಗಿ ನಿಯಮಿಸಿದನೆಂದು ಒಂದು ಶಾಸನ ಹೇಳುತ್ತದೆ. 12ನೆಯ ಶತಮಾನದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಪ್ರಾರಂಭಗೊಂಡ ವಚನಸಾಹಿತ್ಯದ ಹಸ್ತಪ್ರತಿಗಳನ್ನು ವಚನ ಭಂಡಾರದಲ್ಲಿ ಸಂಗ್ರಹಿಸಲಾಗುತ್ತಿತ್ತು. ಸಾರ್ವಜನಿಕರ ಉಪಯೋಗಕ್ಕಾಗಿ ಆ ವಚನ ಭಂಡಾರಗಳಲ್ಲಿ ವಾಚನ, ಶ್ರವಣ ಹಾಗೂ ವಿಚಾರ ಮಂಥ'ನ ಕಾರ್ಯಕ್ರಮಗಳು ಏರ್ಪಡುತ್ತಿದ್ದುವು. ಶಾಂತರಸ ಎಂಬುವವನು ಸ್ವತಃ ವಚನಕಾರನಾಗಿದ್ದನಲ್ಲದೆ ವಚನ ಭಂಡಾರಿಯೂ ಆಗಿದ್ದನೆಂದು ತಿಳಿದುಬರುತ್ತದೆ.

ಕರ್ನಾಟಕದ ಹಲವು ಮಹಮ್ಮದೀಯ ಅರಸರು ಹಾಗೂ ಆಸ್ಥಾನದ ಅಧಿಕಾರಿ ವರ್ಗ ಪರಾಮರ್ಶನಕ್ಕಾಗಿ ಅರಮನೆಗಳಲ್ಲಿ ಮತ್ತು ವಿದ್ಯಾಸಂಸ್ಥೆಗಳಲ್ಲಿ ಗ್ರಂಥಾಲಯವನ್ನು ತೆರೆದಿದ್ದರೆಂಬುದಕ್ಕೆ ಇತಿಹಾಸದಲ್ಲಿ ಸಾಕಷ್ಟು ಪುರಾವೆಗಳಿವೆ. 1472ರಲ್ಲಿ ಮಹ್ಮೂದ್ ಗಾವಾನ್ (ನೋಡಿ) ಬೀದರಿನಲ್ಲಿ ಕಟ್ಟಿಸಿದ ಮದರಸದ ಅವಶೇಷ ಈಗಲೂ ಕಾಣಸಿಗುತ್ತದೆ. ಈ ವಿದ್ಯಾಲಯದ ಸುಪ್ರಸಿದ್ಧ ವಿಜ್ಞಾನಿಗಳು ಹಾಗೂ ತತ್ತ್ವಜ್ಞಾನಿಗಳು ಎರಡು ಸಾವಿರ ಅತ್ಯುತ್ತಮ ಗ್ರಂಥಗಳನ್ನು ಸಂಗ್ರಹಿಸಿಟ್ಟಿದ್ದರು. ಬಿಜಾಪುರದ ಸುಲ್ತಾನ ಇಬ್ರಾಹೀಂ ಆದಿಲ್ ಷಾ ತನ್ನ ಅರಮನೆಯ ಪ್ರಾಂಗಣದಲ್ಲಿ ಪ್ರತ್ಯೇಕ ಗ್ರಂಥಾಲಯವನ್ನು ಹೊಂದಿದ್ದನೆಂದು ಅದರಲ್ಲಿ ಪಾರಸೀ ಮತ್ತು ಅರಬ್ಬೀ ಭಾಷೆಗಳ ಅಮೂಲ್ಯ ಗ್ರಂಥಗಳಿದ್ದವೆಂದೂ ತಿಳಿದುಬರುತ್ತದೆ. ಶ್ರೀರಂಗಪಟ್ಟಣದ ಟಿಪ್ಪುಸುಲ್ತಾನ್ ಕೂಡ ಸ್ವತಃ ಗ್ರಂಥ ಪ್ರೇಮಿಯೂ ವಿದ್ಯಾಭಿಮಾನಿಯೂ ಆಗಿದ್ದು ಉತ್ತಮ ಗ್ರಂಥಾಲಯವನ್ನು ಬೆಳೆಸಿದ್ದನೆಂದು ತಿಳಿದುಬರುತ್ತದೆ. ಆತನ ಸಂಗ್ರಹದಲ್ಲಿ 2000ಕ್ಕೂ ಮೀರಿ ಧಾರ್ಮಿಕ ಗ್ರಂಥಗಳಿದ್ದವು. ಸು.9000 ರೂಪಾಯಿ ಬೆಲೆಯುಳ್ಳ, ಔರಂಗಜೇಬನಿಗೆ ಸೇರಿದ ಕುರಾನ್ ಗ್ರಂಥ'ದ ಒಂದು ಪ್ರತಿ ಟಿಪ್ಪುವಿನ ಗ್ರಂಥಾಲಯದಲ್ಲಿತ್ತು. ಶ್ರೀರಂಗಪಟ್ಟಣದ ಪತನಾನಂತರ ಟಿಪ್ಪುವಿನ ಈ ಗ್ರಂಥ ಸಂಗ್ರಹ ಬ್ರಿಟಿಷರ ಕೈವಶವಾಯಿತು. ಇಂದಿಗೂ ಟಿಪ್ಪುವಿನ ಸಂಗ್ರಹದಲ್ಲಿದ್ದ ಅನೇಕ ಗ್ರಂಥಗಳು ಲಂಡನ್ನಿನ ಇಂಡಿಯಾ ಆಫೀಸ್ ಲೈಬ್ರರಿಯಲ್ಲಿವೆ.



ಅಕ್ಷರ ಗ್ರಂಥಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಈ ಗ್ರಂಥ'ಭಂಡಾರಗಳು ವಿಶೇಷವಾಗಿ ವ್ಯಕ್ತಿ-ಸಂಸ್ಥೆಗಳ ಸ್ವಂತ ಸ್ವತ್ತಾಗಿದ್ದು ಅದನ್ನು ಸಾರ್ವಜನಿಕ ಗ್ರಂಥಾಲಯಗಳೆಂದು ಹೇಳಲಾಗುವುದಿಲ್ಲ.

ಹೆಚ್ಚಿನ ಗ್ರಂಥಾಲಯಗಳ ಅಭಿವೃದ್ಧಿ, ಉಳಿವು ವ್ಯಕ್ತಿ-ಸಂಸ್ಥೆಗಳ ಆಸಕ್ತಿಯ ಮೇಲಷ್ಟೇ ಅವಲಂಬಿತವಾಗಿದ್ದವು.

ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಿಂದ ಸಾರ್ವತ್ರಿಕ ವಿದ್ಯಾಭ್ಯಾಸ ಚೆನ್ನಾಗಿ ಬೇರೂರುತ್ತಿದ್ದಂತೆ ಗ್ರಂಥಾಲಯಗಳನ್ನು ಸ್ಥಾಪಿಸಿ ಸಾರ್ವಜನಿಕರಿಗೆ ಓದಲು ಅವಕಾಶ ಮಾಡಿಕೊಡುವ ಸಾರ್ವಜನಿಕ ಗ್ರಂಥಾಲಯ ಪದ್ಧತಿ ಬೆಳೆಯಿತು. ಕಿರಿಯರಲ್ಲಿ ಹಾಗೂ ವಿದ್ಯಾರ್ಥಿಗಳಲ್ಲಿ ಓದುವ ಹವ್ಯಾಸ ಬೆಳೆಸಲು ಶಾಲಾ ಗ್ರಂಥಾಲಯಗಳು ಅತ್ಯಂತ ಸಹಕಾರಿಯಾದುವು. ಹೀಗೆ ಬೆಳೆದ ಅಭಿರುಚಿಯನ್ನು ನಿರಂತರ ತಣಿಸಲು ಸಾರ್ವಜನಿಕ ಗ್ರಂಥಾಲಯಗಳು ಅವಶ್ಯವಾದವು. ಸಾರ್ವಜನಿಕರ ಪ್ರಯತ್ನ ಹಾಗೂ ಸರ್ಕಾರದ ಪ್ರೋತ್ಸಾಹದಿಂದ ಗ್ರಂಥಾಲಯಗಳು ಬಹು ಸಂಖ್ಯೆಯಲ್ಲಿ ಹುಟ್ಟಿಕೊಂಡವು.

ಜೆ.ಡಿ.ಇನ್‌ವೇರಾರಿಟಿ ಅವರು 1848ರಲ್ಲಿ ಬೆಳಗಾಂವಿಯಲ್ಲಿ ಪ್ರಾರಂಭಿಸಿದ ಗ್ರಂಥಾಲಯವೇ ಪ್ರಾಯಶಃ ಕರ್ನಾಟಕದ ಮೊಟ್ಟಮೊದಲ ಸಾರ್ವಜನಿಕ ಗ್ರಂಥಾಲಯ. 1870ರ ಸುಮಾರಿಗೆ ಇದೇ ಜಿಲ್ಲೆಯ ಚಿಕ್ಕೋಡಿ, ನಿಪ್ಪಾಣಿ, ಅಥಣಿ, ಖಾನಾಪುರ, ಗೋಕಾಕ, ಸವದತ್ತಿಗಳಲ್ಲೂ ಗ್ರಂಥಾಲಯಗಳು ಸಾರ್ವಜನಿಕರಿಗಾಗಿ ತೆರೆದಿದ್ದವು. ಬಿಜಾಪುರ ಜಿಲ್ಲೆಯ ಬಾಗಲಕೋಟೆ, ಬೀಳಗಿ, ಇಂಡಿ, ಬಿಜಾಪುರ ನಗರ ಮತ್ತು ಮುದ್ದೇಬಿಹಾಳ ಇವೇ ಮುಂತಾದೆಡೆ ಸಾರ್ವಜನಿಕರಿಂದಲೂ ಪುರಸಭೆಯ ಆರ್ಥಿಕ ನೆರವಿನಿಂದಲೂ ಗ್ರಂಥಾಲಯಗಳು ಪ್ರಾರಂಭಗೊಂಡವು. ಉತ್ತರ ಕನ್ನಡದ ಕುಮಟ, ಹಳಿಯಾಳ, ಕಾರವಾರ, ಶಿರಸಿಗಳಲ್ಲೂ ಸ್ಥಳೀಯ ಸಾರ್ವಜನಿಕ ಗ್ರಂಥಾಲಯಗಳು ಸ್ಥಾಪಿತವಾದವು.

ಧಾರವಾಡದಲ್ಲಿ 1854ರಲ್ಲಿ ಜನರೇ ಸೇರಿ ಚಂದಾ ಸಂಗ್ರಹಿಸಿ ಗ್ರಂಥಾಲಯವನ್ನು ಸ್ಥಾಪಿಸಿದರು. ಹತ್ತು ವರ್ಷಗಳ ಬಳಿಕ ಹುಬ್ಬಳ್ಳಿಯ ಜನರೂ ಇಂಥ ಗ್ರಂಥಾಲಯವೊಂದನ್ನು ಸ್ಥಾಪಿಸಿದರು. ಸಾರ್ವಜನಿಕರಿಂದ ವಸೂಲಾದ ಚಂದಾ ಹಣ ಮಾತ್ರವಲ್ಲದೆ ಪುರಸಭೆ ಕೂಡ ಸಹಾಯಧನ ನೀಡಲು ಮುಂದೆ ಬಂದಿತು. ಧಾರವಾಡ, ಹುಬ್ಬಳ್ಳಿ ನಗರಗಳ ಗ್ರಂಥಾಲಯಗಳು ಯಶಸ್ವಿಯಾದುದನ್ನು ನೋಡಿ 1873ರಲ್ಲಿ ರಾಣೆಬೆನ್ನೂರಿನ ಜನ ವಂತಿಗೆಯನ್ನು ಸಂಗ್ರಹಿಸಿ ಆ ಹಣದ ಮೇಲೆ ಶೇಖರವಾಗುವ ಬಡ್ಡಿಯ ಹಣವನ್ನವಲಂಬಿಸಿ ನಡೆಯುವಂತೆ ಗ್ರಂಥಾಲಯವನ್ನು ಪ್ರಾರಂಭಿಸಿದರು. ಹೀಗೆ ಪ್ರಾರಂಭವಾದ ಗ್ರಂಥಾಲಯ ಚಳವಳಿ ಕ್ರಮೇಣ ಮುಂಬಯಿ ಕರ್ನಾಟಕದ ಇತರ ಪ್ರದೇಶಗಳಿಗೂ ವ್ಯಾಪಿಸಿತು. 1876-1882ರವರೆಗೆ ಆರು ವರ್ಷಗಳ ಅವಧಿಯಲ್ಲಿ ಶಿರಹಟ್ಟಿ, ಗದಗ, ಹಾವೇರಿ, ನರಗುಂದ, ನವಲಗುಂದಗಳಲ್ಲೂ ಸಾರ್ವಜನಿಕರೇ ಸೇರಿ ಹಣ ಕೂಡಿಸಿ ಗ್ರಂಥಾಲಯಗಳನ್ನು ಸ್ಥಾಪಿಸಿದರು. ಕುಂದಗೋಳದಲ್ಲಿ ಜಿ.ಎಸ್. ಖೇರೆ ಮತ್ತಿತರರ ಉತ್ಸಾಹ, ಪರಿಶ್ರಮಗಳ ಫಲವಾಗಿ ಡೈಮಂಡ್ ಜ್ಯೂಬಿಲಿ ಗ್ರಂಥಾಲಯ ಪ್ರಾರಂಭಗೊಂಡಿತು.

ಮುಂಬಯಿ ಕರ್ನಾಟಕದಲ್ಲಿ ಗ್ರಂಥಾಲಯ ಚಳವಳಿ ವ್ಯಾಪಕವಾಗಿ ಬೆಳೆಯಿತು. 1890ರಲ್ಲಿ ಧಾರವಾಡದಲ್ಲಿ ಸ್ಥಾಪನೆಯಾದ ಕರ್ನಾಟಕ ವಿದ್ಯಾವರ್ಧಕ ಸಂಘ ಜನತೆಯಲ್ಲಿ ಓದುವ ಅಭಿರುಚಿ ಬೆಳೆಯಲು ಗ್ರಂಥಾಲಯ ಮತ್ತು ವಾಚನಾಲಯಗಳನ್ನು ತೆರೆಯುವುದು, ಸಂಘದ ಪ್ರಕಟಣೆಗಳನ್ನು ಉಚಿತವಾಗಿ ಗ್ರಂಥಾಲಯಗಳಿಗೆ ನೀಡುವುದೇ ಮೊದಲಾದ ಚಟುವಟಿಕೆಗಳಿಂದ ಗ್ರಂಥಾಲಯ ಚಳವಳಿಯಲ್ಲಿ ಪ್ರಮುಖಪಾತ್ರ ವಹಿಸಿತು. ಈ ಚಳವಳಿಗೆ 1914ರಲ್ಲಿ ಪ್ರಾರಂಭಗೊಂಡ ಕರ್ನಾಟಕ ಇತಿಹಾಸ ಸಂಶೋಧನ ಸಂಘದ ಕೊಡುಗೆಯೂ ಗಣನೀಯವಾಗಿದೆ.

1920ರಲ್ಲಿ ದಿವಾನ್ ವಿ.ಪಿ.ಮಾಧವರಾಯರ ಅಧ್ಯಕ್ಷತೆಯಲ್ಲಿ ಧಾರವಾಡದಲ್ಲಿ ಸೇರಿದ ಅಖಿಲ ಕರ್ನಾಟಕ ರಾಜಕೀಯ ಸಮ್ಮೇಳನ ಕರ್ನಾಟಕದಾದ್ಯಂತ ವ್ಯವಸ್ಥಿತ ರೀತಿಯಲ್ಲಿ ಗ್ರಂಥಭಂಡಾರಗಳನ್ನು ಸ್ಥಾಪಿಸಬೇಕೆಂಬ ನಿರ್ಧಾರವನ್ನು ಕೈಗೊಂಡಿತ್ತು. ಆದರೆ ಗಾಂಧೀಜಿಯವರು ಕೈಗೊಂಡ ಅಸಹಕಾರ ಚಳವಳಿ ದೇಶದಾದ್ಯಂತ ವ್ಯಾಪಿಸಿದ ಹಿನ್ನೆಲೆಯಲ್ಲಿ ಸಮ್ಮೇಳನ ಕೈಗೊಂಡ ಈ ನಿರ್ಧಾರ ಕೈಗೂಡುವುದು ದುಸ್ತರವಾಯಿತು. 1924ರಲ್ಲಿ ಬೆಳಗಾಂವಿಯಲ್ಲಿ ಜರುಗಿದ ಅಖಿಲಭಾರತ ಕಾಂಗ್ರೆಸ್ ಸಮ್ಮೇಳನದ ಅಂಗವಾಗಿ ಅಖಿಲಭಾರತ ಗ್ರಂಥಾಲಯ ಸಮ್ಮೇಳನ ಸಿ.ಆರ್.ದಾಸ್ ಅವರ ಅಧ್ಯಕ್ಷತೆಯಲ್ಲಿ ಏರ್ಪಟ್ಟಿತು. ಧಾರವಾಡದಲ್ಲಿ (1929, 1948, 1958), ಕುಂದಗೋಳದಲ್ಲಿ (1952) ಹಾಗೂ ಕುಮಟದಲ್ಲಿ(1953) ಅಖಿಲ ಕರ್ನಾಟಕ ಗ್ರಂಥಾಲಯ ಸಮ್ಮೇಳನಗಳು ನಡೆದವು. 1929ರ ಅಖಿಲ ಕರ್ನಾಟಕ ಗ್ರಂಥಾಲಯ ಸಮ್ಮೇಳನದ ಫಲಶ್ರುತಿಯೆಂಬಂತೆ ಕರ್ನಾಟಕ ಗ್ರಂಥಾಲಯ ಸಂಘದ ಉದಯವಾಯಿತು. ಕುಮಟ ಮೊದಲಾದೆಡೆ ಕನ್ನಡ ಪುಸ್ತಕ ಪ್ರದರ್ಶನಗಳನ್ನೇರ್ಪಡಿಸಿತು. 1939ರಲ್ಲಿ ಮುಂಬಯಿ ಸರ್ಕಾರವು ನಿರಕ್ಷರತಾ ನಿವಾರಣೆ ಕಾರ್ಯಕ್ರಮ ಹಮ್ಮಿಕೊಂಡಿತು. ಇದರಿಂದ ಗ್ರಂಥಗಳ ಮುದ್ರಣಕ್ಕೆ ಪ್ರೋತ್ಸಾಹ ದೊರೆಯಿತು. 1948ರಲ್ಲಿ ಕರ್ನಾಟಕ ಪ್ರಾದೇಶಿಕ ಗ್ರಂಥಾಲಯ ತೆರೆಯಲ್ಪಟ್ಟು ಅದರ ಜವಾಬ್ದಾರಿಯನ್ನು ಕರ್ನಾಟಕ ವಿದ್ಯಾವರ್ಧಕ ಸಂಘ ಹೊತ್ತುಕೊಂಡಿತು. ಈ ಗ್ರಂಥಾಲಯದಲ್ಲಿ ಅತ್ಯಪೂರ್ವ ಗ್ರಂಥಸಂಗ್ರಹವಿತ್ತು. ಇದೊಂದು ಕಾಪಿರೈಟ್ ಗ್ರಂಥಾಲಯ (1967ರಲ್ಲಿ ಈ ಗ್ರಂಥಾಲಯದ 17,000 ಗ್ರಂಥಗಳು ಬೆಂಗಳೂರಿನ ಕೇಂದ್ರ ಗ್ರಂಥಾಲಯಕ್ಕೂ ಉಳಿದವು ಧಾರವಾಡ ನಗರ ಕೇಂದ್ರ ಗ್ರಂಥಾಲಯಕ್ಕೂ ವರ್ಗಾವಣೆಗೊಂಡವು).

ಹೈದರಾಬಾದ್ ಕರ್ನಾಟಕದಲ್ಲಿ ಪರ್ಷಿಯನ್ ಭಾಷೆಗೆ ಅಧಿಕೃತ ಸ್ಥಾನಮಾನವಿದ್ದುದರಿಂದ ಕನ್ನಡ ಹಿನ್ನಡೆ ಅನುಭವಿಸಿತು. 1955ರ ಹೈದರಾಬಾದ್ ಗ್ರಂಥಾಲಯ ಅಧಿನಿಯಮ ಸಾರ್ವಜನಿಕ ಗ್ರಂಥಾಲಯಗಳ ಅಭಿವೃದ್ಧಿಗೆ ಇಂಬುಕೊಟ್ಟರೂ ಏಕೀಕರಣದವರೆಗೂ ಗ್ರಂಥಾಲಯಗಳು ಶಾಲಾ ಕಾಲೇಜುಗಳಿಗೆ ಸೀಮಿತವಾದವು. 1799ರಿಂದ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಬಳ್ಳಾರಿ ಜಿಲ್ಲೆಗಳು ಮದರಾಸು ಪ್ರಾಂತ್ಯದ ಭಾಗವಾಗಿದ್ದುದರಿಂದ ಇಲ್ಲಿ ಪಾಶ್ಚಾತ್ಯ ಶಿಕ್ಷಣ ಕ್ರಮಕ್ಕೆ ಹೆಚ್ಚಿನ ಆದ್ಯತೆ ದೊರೆಯಿತು. 1948ರಲ್ಲಿ ಜಾರಿಗೆ ಬಂದ ಮದರಾಸು ಗ್ರಂಥಾಲಯ ಅಧಿನಿಯಮ ಸಾರ್ವಜನಿಕ ಗ್ರಂಥಾಲಯ ವ್ಯವಸ್ಥೆ ಬೆಳೆಯಲು ಕಾರಣವಾಯಿತು.

ಮಂಗಳೂರಿನ ಅಲೋಸಿಯಸ್ ಕಾಲೇಜು, ಗವರ್ನಮೆಂಟ್ ಕಾಲೇಜು, ಉಡುಪಿಯ ಮಹಾತ್ಮಗಾಂಧೀ ಮೆಮೋರಿಯಲ್ ಕಾಲೇಜು - ಇವು ಬಹಳ ಕಾಲದಿಂದಲೂ ಕ್ರಮಬದ್ಧವಾಗಿ ಬೆಳೆದುಬಂದುದರಿಂದ ಉತ್ತಮ ಗ್ರಂಥಭಂಡಾರಗಳನ್ನು ಪಡೆದಿವೆ. ಉಡುಪಿಯ ಕರ್ನಾಟಕ ಸಂಘ, ಕಲಾವೃಂದಗಳು ಉತ್ತಮ ಗ್ರಂಥಗಳನ್ನೂ ಹೊಂದಿವೆ. ಕಲಾವೃಂದ ಸಾರ್ವಜನಿಕರಿಂದ ದೇಣಿಗೆಯನ್ನು ಸಂಗ್ರಹಿಸಿ ಸ್ವಂತ ಗ್ರಂಥಾಲಯವೊಂದನ್ನು ಮುಖ್ಯವಾಗಿ ಮಹಿಳೆಯರ ಮತ್ತು ಮಕ್ಕಳ ಬಿಡುವಿನವೇಳೆಯ ಸದುಪಯೋಗಕ್ಕಾಗಿ ತೆರೆದಿದೆ. ಮಹಾತ್ಮ ಗಾಂಧೀ ಕಾಲೇಜಿನ ಗ್ರಂಥಾಲಯ ವಿಶಾಲವಾದ ಕಟ್ಟಡವನ್ನು ಹೊಂದಿದ್ದು ಎಲ್ಲಾ ವಿಷಯ ಕುರಿತು ಸಾಕಷ್ಟು ಗ್ರಂಥಸಂಗ್ರಹವನ್ನು ಹೊಂದಿದೆ. ರಾಷ್ಟ್ರಕವಿ ದಿವಂಗತ ಗೋವಿಂದ ಪೈ ಅವರ 7000ಕ್ಕೂ ಮಿಕ್ಕಿದ ಗ್ರಂಥಗಳ ಸಂಗ್ರಹ ಈಗ ಈ ಕಾಲೇಜಿನಲ್ಲಿ ಸಂಶೋಧಕರಿಗಾಗಿ ಲಭ್ಯವಿದೆ. ಯಕ್ಷಗಾನ, ಕಲೆ ಹಾಗೂ ಸಾಹಿತ್ಯ ವಿಚಾರಗಳಲ್ಲಿ ಅಮೂಲ್ಯ ಗ್ರಂಥಗಳು ಈ ಕಾಲೇಜಿನ ಸಂಗ್ರಹದಲ್ಲಿವೆ. 1970ರಲ್ಲಿ ಉಡುಪಿಯಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಗ್ರಂಥಾಲಯ ಸಂಘ ಪ್ರಾರಂಭಗೊಂಡಂದಿನಿಂದ ಕು.ಶಿ.ಹರಿದಾಸಭಟ್ಟರ ಮುಂದಾಳುತನದಲ್ಲಿ ಆಗಾಗ್ಗೆ ವಿಚಾರಗೋಷ್ಠಿಗಳನ್ನೂ ಪುಸ್ತಕ ಮಾರಾಟ ಹಾಗೂ ಪ್ರದರ್ಶನಗಳನ್ನೂ ಏರ್ಪಡಿಸಿ ಗ್ರಂಥಾಲಯಗಳ ವೈವಿಧ್ಯಮಯ ಚಟುವಟಿಕೆಗಳ ಬಗೆಗೆ ಮಾಹಿತಿಯೊದಗಿಸಿ ಈ ಭಾಗದ ಜನರಲ್ಲಿ ಓದುವ ಹವ್ಯಾಸ ಮತ್ತು ಚಿಂತನಶಕ್ತಿ ಬೆಳೆಯುವಂತೆ ಮಾಡಿತು. ಮಂಗಳೂರಿನ ಕಾರ್ನಾಡು ಸದಾಶಿವರಾವ್ ಸ್ಮಾರಕ ಗ್ರಂಥಾಲಯವೂ (ಈಗ ಜಿಲ್ಲಾ ಕೇಂದ್ರ ಗ್ರಂಥಾಲಯ) ಸಾರ್ವಜನಿಕರಿಗೆ ಅತ್ಯುಪಯುಕ್ತವಾದ ಗ್ರಂಥಾಲಯವೆಂದು ಪರಿಗಣಿಸಲ್ಪಟ್ಟಿದೆ. ಕೊಡಗು ಜಿಲ್ಲೆಯಲ್ಲಿ ಮಡಿಕೇರಿ ಕ್ಲಬ್ ಗ್ರಂಥಾಲಯಗಳ ಮತ್ತು ವಾಚನಾಲಯಗಳ ಸ್ಥಾಪನೆಗೆ ಶ್ರಮಿಸಿತು. ಅಲ್ಲಿ 1954ರಲ್ಲಿ ಮಹಾತ್ಮಗಾಂಧೀ ಸಾರ್ವಜನಿಕ ಗ್ರಂಥಾಲಯ ಪ್ರಾರಂಭವಾಯಿತು.

ಹಿಂದಿನ ಮೈಸೂರು ಸಂಸ್ಥಾನದ ಭಾಗದಲ್ಲಿ ಸಾರ್ವಜನಿಕ ಶೈಕ್ಷಣಿಕ ಚಟುವಟಿಕೆಗಳು ಚೆನ್ನಾಗಿ ಬೆಳೆದರೂ ಗ್ರಂಥಾಲಯಗಳ ಮಹತ್ವದ ಅರಿವನ್ನು ತಂದುಕೊಟ್ಟವರು ಸರ್ ಎಂ.ವಿಶ್ವೇಶ್ವರಯ್ಯನವರು. 1913ರಲ್ಲಿ ಅವರು ರಾಜ್ಯದಲ್ಲಿ ರಚನಾತ್ಮಕವಾಗಿ ಗ್ರಂಥಾಲಯ ಚಳವಳಿಯನ್ನು ಪ್ರಾರಂಭಿಸುವ ಶಿಕ್ಷಣ ಸಮಿತಿಯ ಶಿಫಾರಸುಗಳನ್ನು ಸರ್ಕಾರದ ಗಮನಕ್ಕೆ ತಂದರು. ಸಮಿತಿಯ ಕೆಲವು ಶಿಫಾರಸುಗಳು ಇಂತಿವೆ: 1. ರಾಜ್ಯದಾದ್ಯಂತ ವ್ಯವಸ್ಥಿತ

ಗ್ರಂಥಾಲಯ ಜಾಲವೊಂದನ್ನು ನಿರ್ಮಿಸುವುದು ಮತ್ತು ಗ್ರಂಥಾಲಯ ವ್ಯವಸ್ಥೆಯನ್ನು ಬಲಗೊಳಿಸಲು, ಪ್ರತ್ಯೇಕವಾದ ಸಾರ್ವಜನಿಕ ಗ್ರಂಥಾಲಯ ವಿಭಾಗವನ್ನು ತೆರೆಯುವುದು 2 ರಾಜ್ಯದ ರಾಜಧಾನಿಯಲ್ಲಿ ಕೇಂದ್ರ ಗ್ರಂಥಾಲಯ ನೆಲೆಗೊಂಡು ಅದರ ಆಶ್ರಯದಲ್ಲಿ ಜಿಲ್ಲೆ, ತಾಲ್ಲೂಕುಗಳಲ್ಲಿ ಶಾಖೆಗಳನ್ನು ವಿಸ್ತರಿಸುವುದು 3 ಆಗ ಅಸ್ತಿತ್ವದಲ್ಲಿದ್ದ ಸಾರ್ವಜನಿಕ ಗ್ರಂಥಾಲಯಗಳನ್ನು ಸ್ಥಳೀಯ ಗ್ರಂಥ'ವಿತರಣಾ ಕೇಂದ್ರಗಳಾಗಿ ಮಾರ್ಪಡಿಸುವುದು. ವಿಶ್ವೇಶ್ವರಯ್ಯನವರ ಪ್ರಯತ್ನದ ಫಲವಾಗಿ ಶಿಕ್ಷಣ ಸಮಿತಿಯ ಶಿಫಾರಸುಗಳು ಸರ್ಕಾರದಿಂದ ಅಂಗೀಕರಿಸಲ್ಪಟ್ಟವು. 1914ರಲ್ಲಿ ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ಸಾರ್ವಜನಿಕ ಗ್ರಂಥಾಲಯಗಳು ಪ್ರಾರಂಭಗೊಂಡವು. ಅಂದಿನ ಮೈಸೂರು ಸಂಸ್ಥಾನದ ಯುವರಾಜರಾಗಿದ್ದ ನರಸಿಂಹರಾಜ ಒಡೆಯರಿಂದ ಮೈಸೂರು ನಗರದ ಸಾರ್ವಜನಿಕ ಗ್ರಂಥಾಲಯದ ಪ್ರಾರಂಭೋತ್ಸವ ಜರುಗಿತು (20-7-1914).ಜನರಿಗಾಗಿ ಉಚಿತ ವಾಚನಾಲಯ ಹಾಗೂ ಪುಸ್ತಕಗಳನ್ನು ಇಲ್ಲಿ ಒದಗಿಸಲಾಯಿತು. ಈ ಗ್ರಂಥಾಲಯಗಳು ವ್ಯವಸ್ಥಿತವಾಗಿ ನಡೆಯಲು ಸ್ಥಳೀಯ ಗ್ರಂಥಾಲಯ ಸಮಿತಿಗಳನ್ನು ನೇಮಿಸಿ ಪ್ರತಿವರ್ಷ ಧನಸಹಾಯವನ್ನೂ ನೀಡಿತು. ನಗರ ಮಿತಿಯಿಂದ ದೂರ ವಾಸಿಸುವವರಿಗಾಗಿ ಪುಸ್ತಕಗಳನ್ನು ಒದಗಿಸಲು ವಾಹನ ಸೌಕರ್ಯವನ್ನೇರ್ಪಡಿಸಬೇಕೆಂದು ಸಮಿತಿ ನಿರ್ಧಾರ ಮಾಡಿತು.

ಖ್ಯಾತಿವೆತ್ತ ವಿದ್ಯಾಸಂಸ್ಥೆಗಳಾದ ಮೈಸೂರಿನ ಮಹಾರಾಜ ಕಾಲೇಜು ಹಾಗೂ ಬೆಂಗಳೂರಿನ ಸೆಂಟ್ರಲ್ ಕಾಲೇಜು, 1916ರಲ್ಲಿ ಸ್ಥಾಪನೆಯಾದ ಮೈಸೂರು ವಿಶ್ವವಿದ್ಯಾನಿಲಯ, 1911ರಲ್ಲಿ ವೈಜ್ಞಾನಿಕ ವಿಷಯಗಳ ಶಿಕ್ಷಣಕ್ಕಾಗಿ ಬೆಂಗಳೂರಿನಲ್ಲಿ ಸ್ಥಾಪನೆಗೊಂಡ ಭಾರತೀಯ ವಿಜ್ಞಾನಸಂಸ್ಥೆ, ಇವುಗಳಲ್ಲಿ ಪ್ರತ್ಯೇಕ ಗ್ರಂಥಾಲಯಗಳು ಬೆಳೆದು ಉನ್ನತ ಶಿಕ್ಷಣದ ಸಾಧನೆಯಲ್ಲಿ ಗ್ರಂಥಗಳ ಆವಶ್ಯಕತೆಯನ್ನು ಪೂರೈಸುವ ಸಂಸ್ಥೆಗಳಾಗಿ ರೂಪುಗೊಂಡವು.

ಕರ್ನಾಟಕದ ಗ್ರಂಥಾಲಯ ಚಳವಳಿಯ ಇತಿಹಾಸದಲ್ಲಿ ಮೈಸೂರಿನ ವಯಸ್ಕರ ಶಿಕ್ಷಣ ಸಮಿತಿಯ ಪಾತ್ರ ಹಿರಿದು. 1941ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ವಿದ್ಯಾರ್ಥಿಗಳ ಸಂಘದಿಂದ ಸ್ಥಾಪಿತವಾದ ವಯಸ್ಕರ ಅಕ್ಷರ ಪ್ರಚಾರ ಸಮಿತಿಯಿಂದ ಬೆಳೆದು ಮಹತ್ವಪೂರ್ಣ ಕೆಲಸಗಳನ್ನು ಮಾಡುತ್ತಿರುವ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಗ್ರಾಮಾಂತರ ಪ್ರದೇಶಗಳಲ್ಲಿ ವಿದ್ಯಾವಂತರು ಮತ್ತು ಅಲ್ಪಸ್ವಲ್ಪ ಓದುಬರೆಹ ಕಲಿತವರು ತಮ್ಮ ಜ್ಞಾನಾಸಕ್ತಿಯನ್ನು ಮುಂದುವರಿಸಲು ಸಾಧ್ಯವಾಗುವಂತೆ ಜಿಲ್ಲೆಗೊಂದು ಕೇಂದ್ರ ಗ್ರಂಥಾಲಯ ಮತ್ತು ಉಚಿತ ವಾಚನಾಲಯವನ್ನೂ ಸ್ಥಾಪಿಸಿತು. ಗ್ರಾಮ ಪ್ರದೇಶಗಳಲ್ಲಿ ಪುಸ್ತಕ ಭಂಡಾರಗಳನ್ನು ಸ್ಥಾಪಿಸಿರುವ ವಯಸ್ಕರ ಶಿಕ್ಷಣ ಸಮಿತಿ ರಾಜ್ಯದ ಗ್ರಾಮ ಗ್ರಂಥಾಲಯಗಳ ಬೆಳವಣಿಗೆಗೆ ನಾಂದಿ ಹಾಕಿತು. 1941ರಲ್ಲಿ ಮಂಡ್ಯ ಜಿಲ್ಲೆಯ ಸಂತೆಬಾಚಹಳ್ಳಿಯಲ್ಲಿ ಮೊದಲ ಗ್ರಾಮ ಗ್ರಂಥಾಲಯ ಪ್ರಾರಂಭವಾಯಿತು. 1954ರ ಹೊತ್ತಿಗೆ ರಾಜ್ಯದಾದ್ಯಂತ 2156 ಗ್ರಾಮ ಗ್ರಂಥಾಲಯಗಳೂ 10 ಕೇಂದ್ರ ಗ್ರಂಥಾಲಯಗಳೂ ಕೆಲಸ ಮಾಡುತ್ತಿದ್ದುವು. 2002ರಲ್ಲಿನ ಅಂಕಿ ಅಂಶಗಳು ಹೀಗಿವೆ: 27 ಜಿಲ್ಲಾ ಕೆಂದ್ರ ಗ್ರಂಥಾಲಯಗಳು, 16 ನಗರ ಕೇಂದ್ರ ಗ್ರಂಥಾಲಯಗಳು, 2660 ಗ್ರಾಮೀಣ ಪಂಚಾಯಿತಿ ಗ್ರಂಥಾಲಯಗಳು ಮತ್ತು 154 ಪುಸ್ತಕ ವಿತರಣಾ ಕೇಂದ್ರಗಳು ಹಾಗೂ 11 ಸಂಚಾರಿ ಗ್ರಂಥಾಲಯಗಳು ಅಸ್ತಿತ್ವದಲ್ಲಿವೆ.

**ಗ್ರಂಥಾಲಯ ಅಧಿನಿಯಮ :** 1957ರಲ್ಲಿ ಕೇಂದ್ರ ಸರ್ಕಾರ ನೇಮಿಸಿದ ಸಮಿತಿ ರಾಷ್ಟ್ರಮಟ್ಟದಲ್ಲಿ ಗ್ರಂಥಾಲಯ ಚಳವಳಿ ಪ್ರತ್ಯೇಕವಾಗಿ ಬೆಳೆಯಲು ಒಂದು ಸಮಗ್ರ ಕಾಯಿದೆಯ ಅಗತ್ಯವಿದೆ ಎಂದು ಶಿಫಾರಸು ಮಾಡಿತು. ಇದರ ಅನ್ವಯ ವಿವಿಧ ರಾಜ್ಯಗಳು ತಮ್ಮದೇ ಆದ ಕಾಯಿದೆಗಳನ್ನು ರಚಿಸಿದವು. ಪ್ರಸಿದ್ಧ ಗ್ರಂಥಾಲಯ ತಜ್ಞರಾದ ರಂಗನಾಥನ್ ಅವರ ಸಲಹೆಗಳ ಮೇರೆಗೆ ರಚಿತವಾದ ಸಮಿತಿ ರಾಜ್ಯಕ್ಕೊಂದು ಸಾರ್ವಜನಿಕ ಗ್ರಂಥಾಲಯ ಅಧಿನಿಯಮದ ರೂಪರೇಷೆಯನ್ನು ತಯಾರಿಸಿತು. ಇದಕ್ಕೆ 1965ರಲ್ಲಿ ಸರ್ಕಾರದ ಮನ್ನಣೆಯೂ ದೊರೆತು 1966 ಏಪ್ರಿಲ್ ತಿಂಗಳ ಒಂದನೆಯ ತಾರೀಖಿನಿಂದ ಮೈಸೂರು (ಕರ್ನಾಟಕ) ರಾಜ್ಯದಲ್ಲಿ ಅನುಷ್ಠಾನಕ್ಕೆ ಬಂದಿತು. ರಾಜ್ಯದಲ್ಲಿನ ನಗರ ಹಾಗೂ ಗ್ರಾಮಾಂತರ ಪ್ರದೇಶದಲ್ಲಿ ವ್ಯಾಪಕವಾದ ಗ್ರಂಥಾಲಯ ಸೇವೆಯನ್ನು ಉಚಿತವಾಗಿ ಸರ್ವರಿಗೂ ಒದಗಿಸುವುದೇ ಈ ಅಧಿನಿಯಮದ ಪರಮಗುರಿ. ರಾಜಧಾನಿ ಬೆಂಗಳೂರಿನಲ್ಲಿ ಕೇಂದ್ರ ಗ್ರಂಥಾಲಯ, ಪ್ರತಿ ನಗರದಲ್ಲೂ ನಗರ ಕೇಂದ್ರ ಗ್ರಂಥಾಲಯ ಮತ್ತದರ ಶಾಖೆಗಳು, ಜಿಲ್ಲೆಗೊಂದರಂತೆ ಕೇಂದ್ರ ಗ್ರಂಥಾಲಯ ಹಾಗೂ ಅದರ ಶಾಖೆಗಳೂ ಸೇರಿ ಸಮಗ್ರ ಕರ್ನಾಟಕಕ್ಕೆ ಸಾರ್ವಜನಿಕ ಗ್ರಂಥಾಲಯಗಳ ಸಂಘಟಿತ ರಚನಾ ವ್ಯವಸ್ಥೆಗೆ ಅಧಿನಿಯಮದಲ್ಲಿ ಅವಕಾಶ ನೀಡಲಾಯಿತು. ಕರ್ನಾಟಕ ರಾಜ್ಯದ ಸಾರ್ವಜನಿಕ ಗ್ರಂಥಾಲಯದ ವ್ಯವಸ್ಥೆಯನ್ನು ಈ ಮುಂದಿನಂತೆ ರೂಪಿಸಲಾಯಿತು: ರಾಜ್ಯ ಕೇಂದ್ರ ಗ್ರಂಥಾಲಯ, ನಗರ ಕೇಂದ್ರ ಗ್ರಂಥಾಲಯ, ಜಿಲ್ಲಾ ಕೇಂದ್ರ ಗ್ರಂಥಾಲಯ, ತಾಲ್ಲೂಕು ಗ್ರಂಥಾಲಯ, ಗ್ರಾಮ ಗ್ರಂಥಾಲಯ. ಕೇಂದ್ರ ಗ್ರಂಥಾಲಯದ ನಿರ್ವಹಣಾ ವೆಚ್ಚವನ್ನು ಸರ್ಕಾರವೇ ಭರಿಸುವುದು. ಆಡಳಿತ ಸುಸೂತ್ರವಾಗುವಂತೆ ರಾಜ್ಯ ಗ್ರಂಥಾಲಯ ಪ್ರಾಧಿಕಾರವೊಂದನ್ನು ನಿಯಮಿಸಲಾಯಿತು. ನಗರ ಹಾಗೂ ಜಿಲ್ಲೆಗಳ ಕೇಂದ್ರ ಗ್ರಂಥಾಲಯ ಹಾಗೂ ಅವುಗಳ ಆಡಳಿತಕ್ಕಾಗಿಯೂ ಪ್ರತ್ಯೇಕ ಪ್ರಾಧಿಕಾರ ವರ್ಗಗಳಿದ್ದು ಪ್ರತ್ಯೇಕ ಆರ್ಥಿಕ ಸಂಪನ್ಮೂಲಗಳೂ ಒದಗುವಂತೆ ಮಾಡಲಾಗುತ್ತಿದೆ. ಗ್ರಂಥಾಲಯ ತೆರಿಗೆಯನ್ನು ಕಂದಾಯದ ಭಾಗವಾಗಿ ಸೇರಿಸಲಾಗಿದೆ.

ಮೈಸೂರು ಸಾರ್ವಜನಿಕ ಗ್ರಂಥಾಲಯ ಅಧಿನಿಯಮ ಜಾರಿಯಾದೊಡನೆ ಬೆಂಗಳೂರಿನ ಕೆ.ಶೇಷಾದ್ರಿ ಅಯ್ಯರ್ ಸ್ಮಾರಕ ಕಟ್ಟಡವನ್ನು ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡು ಅದನ್ನು ರಾಜ್ಯ ಕೇಂದ್ರ ಗ್ರಂಥಾಲಯವಾಗಿ ಮಾರ್ಪಡಿಸಿತು. ಹೀಗೆ ಕ್ರಮೇಣ ಮೈಸೂರಿನ ಸರ್.ಎಂ. ವಿಶ್ವೇಶ್ವರಯ್ಯ ಟೆಕ್ನಿಕಲ್ ಇನ್‌ಸ್ಟಿಟ್ಯೂಟಿನ ಕಟ್ಟಡದಲ್ಲಿದ್ದ ಸಾರ್ವಜನಿಕ ಗ್ರಂಥಾಲಯ, ಮಡಿಕೇರಿಯ ಮಹಾತ್ಮ ಗಾಂಧೀ ಸಾರ್ವಜನಿಕ ಗ್ರಂಥಾಲಯ ಮತ್ತು ಮಂಗಳೂರಿನ ಕಾರ್ನಾಡು ಸದಾಶಿವರಾವ್ ಸ್ಮಾರಕ ಗ್ರಂಥಾಲಯ ಇವುಗಳನ್ನು ತೆಗೆದುಕೊಂಡು ಅನುಕ್ರಮವಾಗಿ ನಗರ ಹಾಗೂ ಜಿಲ್ಲಾ ಕೇಂದ್ರ ಗ್ರಂಥಾಲಯಗಳೆಂದು ಸಾರಿತು. ಮಾತ್ರವಲ್ಲದೆ ಚಿತ್ರದುರ್ಗ, ಹಾಸನ, ಚಿಕ್ಕಮಗಳೂರು, ತುಮಕೂರು, ಕೋಲಾರ (ಚಿಂತಾಮಣಿ), ಬಿಜಾಪುರ, ಗುಲ್ಬರ್ಗ, ಬೆಳಗಾಂವಿ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲೂ ಕ್ರಮೇಣ ಜಿಲ್ಲಾ ಗ್ರಂಥಾಲಯಗಳು ಆರಂಭಗೊಂಡು ಶಾಖೆಗಳು ಹಾಗೂ ಗ್ರಂಥ ವಿತರಣ ಕೇಂದ್ರಗಳನ್ನು ಅಲ್ಲಲ್ಲಿ ಸ್ಥಾಪಿಸಿ ಗ್ರಂಥಾಲಯ ಚಳವಳಿ ಸಮಗ್ರ ಕರ್ನಾಟಕಕ್ಕೆ ಹಬ್ಬುವಂತೆ ನೋಡಿಕೊಳ್ಳಲಾಗಿದೆ. ಈಗ ಮಂಡಲ ಗ್ರಂಥಾಲಯಗಳು, ಗ್ರಾಮ ಗ್ರಂಥಾಲಯಗಳು ವ್ಯಾಪಕವಾಗಿ ಅಸ್ತಿತ್ವಕ್ಕೆ ಬಂದಿವೆ.

ರೋಗಿಗಳಿಗೆ ಮತ್ತು ಕೈದಿಗಳಿಗೆ ಚಿತ್ತಶಾಂತಿ, ಸನ್ಮಾರ್ಗ ಪ್ರವೃತ್ತಿಯನ್ನುಂಟುಮಾಡಲು ಆಸ್ಪತ್ರೆಗಳಲ್ಲೂ ಜೈಲುಗಳಲ್ಲೂ ಗ್ರಂಥ ಭಂಡಾರಗಳನ್ನು ತೆರೆಯಲಾಗಿದೆ. ನಗರದಿಂದ ದೂರದಲ್ಲಿರುವ ಹಳ್ಳಿಗಳಿಗೆ ಪುಸ್ತಕಗಳನ್ನು ಕೊಂಡೊಯ್ದು ಓದುಗರಿಗೆ ಮುಟ್ಟಿಸಿ ಸಾಹಿತ್ಯಾಭಿರುಚಿಯನ್ನು ಹೆಚ್ಚಿಸುವ ಸಲುವಾಗಿ ಮೈಸೂರಿನಲ್ಲಿ ಮೋಟಾರು ವಾಹನವನ್ನು ಬಳಸಿ ಸಂಚಾರಿ ಗ್ರಂಥಾಲಯವನ್ನು ಪ್ರಾರಂಭಿಸಲಾಗಿದೆ (1975).

ಭಾರತದಲ್ಲಿ ಗ್ರಂಥಾಲಯ ಬೆಳವಣಿಗೆಗೆ ಉತ್ತೇಜನ ನೀಡವುದಕ್ಕೋಸ್ಕರವಾಗಿ ರಾಜಾರಾಮ್ ಮೋಹನರಾಯ್ ಗ್ರಂಥಾಲಯ ಪ್ರತಿಷ್ಠಾನ ಎಂಬ ಸ್ವಾಯತ್ತ ಸಂಸ್ಥೆಯನ್ನು 1972ರಲ್ಲಿ ಸ್ಥಾಪಿಸಲಾಯಿತು. ಕೇಂದ್ರ ಸರ್ಕಾರದ ಶಿಕ್ಷಣ ಮಂತ್ರಿ ಈ ಪ್ರತಿಷ್ಠಾನದ ಅಧ್ಯಕ್ಷರು. ಜಿಲ್ಲಾ ಗ್ರಂಥಾಲಯಗಳನ್ನು ಕೇಂದ್ರವಾಗಿರಿಸಿಕೊಂಡು ಗ್ರಂಥಾಲಯ ಜಾಲಗಳನ್ನು ನಿರ್ಮಿಸಿ ತನ್ಮೂಲಕ ಪ್ರತಿಯೊಬ್ಬರಿಗೂ ಗ್ರಂಥಾಲಯ ಸೌಲಭ್ಯ ದೊರಕಿಸಿಕೊಡುವುದು ಇದರ ಮುಖ್ಯ ಉದ್ದೇಶಗಳಲ್ಲೊಂದಾಗಿದೆ. ದೇಶದ ಎಲ್ಲ ಜಿಲ್ಲೆಗಳೂ ಈ ಯೋಜನೆಯ ವ್ಯಾಪ್ತಿಯಲ್ಲಿ ಬರುತ್ತವೆ. ರಾಜ್ಯ ಗ್ರಂಥಾಲಯ ಪ್ರಾಧಿಕಾರ ಈ ಪ್ರತಿಷ್ಠಾನದ ಸಂಪನ್ಮೂಲದಿಂದ ಗ್ರಂಥಗಳನ್ನು ಖರೀದಿಸಿ ವಿವಿಧ ಗ್ರಂಥಾಲಯಗಳಿಗೆ ವಿತರಿಸುವ ಯೋಜನೆ ಜಾರಿಯಲ್ಲಿದೆ. ಈ ಪ್ರತಿಷ್ಠಾನ ಕರ್ನಾಟಕ ರಾಜ್ಯದಲ್ಲಿ ಸು.5-10 ಸಾವಿರ ಜನಸಂಖ್ಯೆಯಿರುವ ಗ್ರಾಮಪ್ರದೇಶಗಳಲ್ಲಿ ಮಂಡಲ ಗ್ರಂಥಾಲಯ ಸ್ಥಾಪನೆಗೆ ಉತ್ತೇಜನ ನೀಡುವ ಉದ್ದೇಶದಿಂದ ಆರ್ಥಿಕ ಸಹಾಯ ನೀಡಲು ಮುಂದೆ ಬಂದಿದೆ. ರಾಜ್ಯದ ನೂರಾರು ಗ್ರಂಥಾಲಯ ಘಟಕಗಳ ನಿರ್ವಹಣೆಗಾಗಿ ಪ್ರತಿಷ್ಠಾನ ತನ್ನ ನಿಧಿಯಿಂದಲೇ ಧನಸಹಾಯವನ್ನು ಮಾಡುತ್ತಿದೆ.

**ವಿಶಿಷ್ಟ ಗ್ರಂಥಾಲಯಗಳು :** ಜನಸಾಮಾನ್ಯರಲ್ಲಿ ಓದುವ ಪ್ರವೃತ್ತಿಯನ್ನು ಬೆಳೆಸಲು ಅವರಿಗೆ ಸಾಮಾನ್ಯ ಜ್ಞಾನವನ್ನು ನೀಡಲು ಸಾರ್ವಜನಿಕ ಗ್ರಂಥಾಲಯಗಳು ಇದ್ದಂತೆ ಶುದ್ಧ ವಿಜ್ಞಾನ, ತಾಂತ್ರಿಕ ವಿಜ್ಞಾನ, ಸಮಾಜ ವಿಜ್ಞಾನ ಹಾಗೂ ಮಾನವಿಕ ವಿಜ್ಞಾನದ ನಾನಾ ವಿಭಾಗಗಳಲ್ಲಿ ವಿಶೇಷ ಜ್ಞಾನವನ್ನು ಪಡೆದವರಿಗೂ ಸಂಶೋಧನಾಸಕ್ತರಿಗೂ ಅವಶ್ಯವಾಗಿ ವಿಶಿಷ್ಟ ಗ್ರಂಥಾಲಯಗಳಿರಬೇಕು. ಕೈಗಾರಿಕಾ ಸಂಸ್ಥೆಗಳು, ಬೃಹತ್ ಸಂಶೋಧನ ಕೇಂದ್ರಗಳು, ಪ್ರಯೋಗಶಾಲೆಗಳು, ಸರ್ಕಾರದ ಕಾರ್ಯಾಂಗ ಹಾಗೂ ಶಾಸಕಾಂಗಗಳು, ಕೇಂದ್ರ ಅಥವಾ ರಾಜ್ಯ ಸರ್ಕಾರದ ಸ್ವಾಮ್ಯದಲ್ಲಿರುವ ವೈಜ್ಞಾನಿಕ ಸಂಸ್ಥೆಗಳು ಇವೇ ಮೊದಲಾದುವುಗಳ ಗ್ರಂಥಾಲಯಗಳು ವಿಶಿಷ್ಟ ಗ್ರಂಥಾಲಯಗಳೆಂದು ಕರೆಯಲ್ಪಡುತ್ತಿವೆ. ಮುಖ್ಯವಾಗಿ ಇವುಗಳನ್ನು ಎರಡು ವಿಧಗಳಾಗಿ ವಿಂಗಡಿಸಲಾಗಿದೆ. 1 ಕೈಗಾರಿಕಾ ಗ್ರಂಥಾಲಯಗಳು ಮತ್ತು 2 ಸಂಶೋಧನ ಗ್ರಂಥಾಲಯಗಳು.



ನಗರ ಕೇಂದ್ರಗ್ರಂಥಾಲಯ, ಮೈಸೂರು

ಬೆಂಗಳೂರಿನಲ್ಲಿ ಹಿಂದೂಸ್ಥಾನ್ ಏರೋನಾಟಿಕ್ಸ್, ಹಿಂದೂಸ್ಥಾನ ಮಷಿನ್ ಟೂಲ್ಸ್ ಮತ್ತು ಭಾರತ್ ಎಲೆಕ್ಟ್ರಾನಿಕ್ಸ್ ಈ ಮೂರು ಸಂಸ್ಥೆಗಳಲ್ಲಿ ವಿಶೇಷ ಗ್ರಂಥಾಲಯಗಳಿವೆ. 1965ರಲ್ಲಿ ಬೆಂಗಳೂರಿನಲ್ಲಿ ಪ್ರಾರಂಭಗೊಂಡ ಸೆಂಟ್ರಲ್ ಮಷೀನ್ ಟೂಲ್ಸ್ ಇನ್‌ಸ್ಟಿಟ್ಯೂಟಿನಲ್ಲಿ ಎಂಜಿನಿಯರಿಂಗ್ ಕೈಗಾರಿಕಾ ಸಂಸ್ಥೆಗಳಿಗೆ ಉತ್ಪಾದನ ತಂತ್ರ ಹಾಗೂ ಯಂತ್ರಸಾಧನಗಳ ಕುರಿತು ತಿಳಿವಳಿಕೆ ಕೊಡುವ ಪುಸ್ತಕಗಳು, ನಿಯತಕಾಲಿಕೆಗಳು, ವರದಿಗಳು, ಮಾನದಂಡಗಳು, ಹಕ್ಕುಸ್ವಾಮ್ಯಗಳು, ವಾಣಿಜ್ಯ ವಿಷಯಿಕ ವಿವರಪಟ್ಟಿಗಳು, ಇವುಗಳ ದೊಡ್ಡ ಸಂಗ್ರಹವಿರುವ ಗ್ರಂಥಾಲಯ ಇದೆ. ರಾಜ್ಯದ ಕೈಗಾರಿಕಾ ಸಂಸ್ಥೆಗಳಿಗೂ ಸಂಶೋಧಕರಿಗೂ ಯಂತ್ರೋಪಕರಣಗಳ ಕುರಿತು ಮಾಹಿತಿಯನ್ನೊದಗಿಸಲು ಈ ಸಂಸ್ಥೆ ಪ್ರಲೇಖನ ಸೇವೆಯನ್ನು ಒದಗಿಸುತ್ತದೆ. ತಾಂತ್ರಿಕ ವಿವರಣೆಯನ್ನು ಸ್ಥೂಲವಾಗಿ ನೀಡುವ ಪ್ರಕಟಣೆಗಳನ್ನು ತನ್ನ ಸ್ವಂತ ನಿಯತಕಾಲಿಕೆಗಳ ಮೂಲಕ ಪ್ರಕಟಿಸುತ್ತದೆ. ಸಾರಾಂಶ ಪ್ರಕಟಣೆ, ವಿಷಯಸೂಚಿಗಳನ್ನು ತಯಾರಿಸುವುದು ಇವೇ ಮೊದಲಾದ ಸೇವೆಗಳನ್ನೂ ಈ ಗ್ರಂಥಾಲಯ ಒದಗಿಸುತ್ತದೆ. ಮಷೀನ್ ಟೂಲ್ಸ್‌ಗಳನ್ನು ಕುರಿತು ರಷ್ಯನ್, ಜರ್ಮನ್, ಫ್ರೆಂಚ್ ಹಾಗೂ ಇತರ ವಿದೇಶಿ ಭಾಷೆಗಳಲ್ಲಿ ಪ್ರಕಟವಾದ ಪುಸ್ತಕಗಳನ್ನು ವರದಿಗಳನ್ನೂ ಇಂಗ್ಲಿಷ್ ಭಾಷೆಗೆ ಅನುವಾದಗೊಳಿಸುತ್ತದೆ. ಕೇಂದ್ರೀಯ ಆಹಾರ ಸಂಶೋಧನ ಸಂಸ್ಥೆ, ರಾಷ್ಟ್ರೀಯ ವಾಯುಯಾನ ವಿಜ್ಞಾನ ಸಂಸ್ಥೆ, ಮೈಸೂರು ಶಾಸಕಾಂಗದ ಗ್ರಂಥಾಲಯ, ಡಿಫೆನ್ಸ್ ಫುಡ್ ರೀಸರ್ಚ್ ಲ್ಯಾಬೋರೇಟರಿ ಗ್ರಂಥಾಲಯ, ರಾಮನ್ ರಿಸರ್ಚ್ ಇನ್‌ಸ್ಟಿಟ್ಯೂಟ್ -ಇವು ಪ್ರಮುಖವಾದ ಸಂಶೋಧನಾತ್ಮಕ ಗ್ರಂಥಾಲಯಗಳು.

ಪ್ರೌಢ ವ್ಯಾಸಂಗ ಹಾಗೂ ಸಂಶೋಧನ ಗ್ರಂಥಾಲಯಗಳ ಪೈಕಿ ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯ ಗ್ರಂಥಾಲಯವನ್ನು ಹೆಸರಿಸಬಹುದು. ಕೈಗಾರಿಕಾ ಕ್ಷೇತ್ರದಲ್ಲಿ ಕರ್ನಾಟಕ ರಾಜ್ಯ ಮುನ್ನಡೆಯಲು ಸಹಕಾರಿಯಾಗುವಂತೆಯೂ ಉನ್ನತ ಮಟ್ಟದ ಸಂಶೋಧನೆಗಳನ್ನು ನಡೆಸಲು ಸಾಧ್ಯವಾಗುವಂತೆಯೂ ಈ ಸಂಸ್ಥೆ ಸ್ಥಾಪಿತವಾಯಿತು (1909). ಇದರೊಂದಿಗೆ ಸುಸಜ್ಜಿತ ಗ್ರಂಥಾಲಯವೂ ಬೆಳೆಯಿತು. ಈ ಸಂಸ್ಥೆಯು 1959ರಲ್ಲಿ ತನ್ನ ಸುವರ್ಣ ಮಹೋತ್ಸವ ಸ್ಮರಣಾರ್ಥವಾಗಿ ಯು.ಜಿ.ಸಿ. ನೆರವಿನೊಂದಿಗೆ ಗ್ರಂಥಾಲಯಕ್ಕಾಗಿ ಆಧುನಿಕವಾದ ಕಟ್ಟಡವನ್ನು ನಿರ್ಮಿಸಿತು. ಈ ಸಂಸ್ಥೆ ಲಕ್ಷಾಂತರ ಗ್ರಂಥಗಳ ಸಂಗ್ರಹ ಹೊಂದಿದ್ದು ಪ್ರತಿ ತಿಂಗಳೂ 1900 ಸಂಶೋಧನಾತ್ಮಕ ನಿಯತ ಕಾಲಿಕಗಳನ್ನು ತರಿಸುತ್ತದೆ. ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಕಟವಾಗುವ ಎಲ್ಲ ತಾಂತ್ರಿಕ ವರದಿಗಳೂ ಮಾಸಿಕಗಳೂ ಪೇಟೆಂಟ್‌ಗಳೂ ಸಂಶೋಧನ ಪ್ರಬಂಧಗಳೂ ಮುಂತಾದ ಅತ್ಯುಪಯುಕ್ತ ಗ್ರಂಥಗಳನ್ನು ಈ ಸಂಸ್ಥೆಯಲ್ಲಿ ಸಂಗ್ರಹಿಸಲಾಗುತ್ತದೆ. ಅತ್ಯಾಧುನಿಕ ಸಲಕರಣೆಗಳು ಮತ್ತು ಗ್ರಂಥಸೂಚಿಗಳಿವೆ. ಗ್ರಂಥಸೂಚಿಯನ್ನು ಇಲ್ಲಿ ಸಿದ್ಧಪಡಿಸಲಾಗುತ್ತದೆ.

**ವಿಶ್ವವಿದ್ಯಾನಿಲಯ ಗ್ರಂಥಾಲಯ :** ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಾಲಯ 1918ರಲ್ಲಿ ಪ್ರಾಚ್ಯ ಮತ್ತು ಸಂಸ್ಕೃತ ಗ್ರಂಥಭಂಡಾರವಿದ್ದ ಕಟ್ಟಡದಲ್ಲೇ ಕೇವಲ 2311 ಪುಸ್ತಕ ಸಂಗ್ರಹದೊಡನೆ ಪ್ರಾರಂಭವಾಯಿತು. ಈಗ ವಿಶ್ವವಿದ್ಯಾನಿಲಯ ವ್ಯವಸ್ಥೆಯಲ್ಲಿ ಒಟ್ಟು 18 ಗ್ರಂಥಾಲಯಗಳಿವೆ: 3 ಸ್ನಾತಕೋತ್ತರ ಕೇಂದ್ರ ಗ್ರಂಥಾಲಯಗಳು, 5 ವಿಶ್ವವಿದ್ಯಾನಿಲಯದ ಕಾಲೇಜು ಗ್ರಂಥಾಲಯಗಳು, 5 ಸಂಶೋಧನ ವಿಭಾಗಗಳ ಗ್ರಂಥಾಲಯಗಳು ಮತ್ತು 5 ಸ್ನಾತಕೋತ್ತರ ವಿಭಾಗಗಳ ಗ್ರಂಥಾಲಯಗಳಿವೆ. ಹೀಗೆ ವಿಶ್ವವಿದ್ಯಾನಿಲಯದ ಅಂಗಸಂಸ್ಥೆಗಳ 18 ಗ್ರಂಥಾಲಯಗಳಲ್ಲಿನ ಒಟ್ಟು ಗ್ರಂಥ ಸಂಗ್ರಹ 9 ಲಕ್ಷಕ್ಕೂ ಮೀರಿದೆ. ಪ್ರಾಚ್ಯ ವಿದ್ಯಾ ಸಂಶೋಧನಾಲಯ ಸು.82,000 ಕೃತಿಗಳನ್ನು ಹೊಂದಿದ್ದು ತತ್ತ್ವಶಾಸ್ತ್ರ ಹಾಗೂ ಸಂಸ್ಕೃತ ವಿದ್ವಾಂಸರಿಗೆ ಅಪರೂಪದ ಹಸ್ತಪ್ರತಿಗಳು ಇಲ್ಲಿ ದೊರೆಯುತ್ತವೆ. ಸು.29,000 ಹಸ್ತಪ್ರತಿಗಳ ಸಂಪುಟಗಳು ಹಾಗೂ 33,000 ಗ್ರಂಥಸಂಗ್ರಹವನ್ನು ಈ ಸಂಸ್ಥೆ ಹೊಂದಿದ್ದು ಶೈಕ್ಷಣಿಕ ಮತ್ತು ಸಂಶೋಧನ ಚಟುವಟಿಕೆಗಳಿಗೆ ಮಾಹಿತಿ ನೀಡುತ್ತಲಿದೆ. ಮಾನಸಗಂಗೋತ್ರಿಯಲ್ಲಿರುವ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಗ್ರಂಥಾಲಯ 30 ಸಾವಿರಕ್ಕೂ ಹೆಚ್ಚು ಗ್ರಂಥಗಳನ್ನು ಹೊಂದಿದೆ. ಇಲ್ಲಿನ ಕನ್ನಡ ಹಸ್ತಪ್ರತಿ ವಿಭಾಗದಲ್ಲಿ ಪ್ರಾಚೀನ ಓಲೆಗರಿಯ ಮತ್ತು ಕಾಗದದ ಕೈಬರೆಹದ ಹಸ್ತಪ್ರತಿಗಳು ಮೈಕ್ರೊಫಿಲಂಗಳು ಸೇರಿ ಒಟ್ಟು 10 ಸಾವಿರ ಪ್ರತಿಗಳ ಸಂಗ್ರಹವಿದೆ.



ಮೈಸೂರು ವಿಶ್ವವಿದ್ಯಾನಿಲಯ ಗ್ರಂಥಾಲಯ, ಮಾನಸಗಂಗೋತ್ರಿ

ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಗ್ರಂಥಾಲಯ ಮಾನಸ ಗಂಗೋತ್ರಿಯ ವಿಶಾಲವಾದ ಮತ್ತು ಸುಂದರವಾದ ಪರಿಸರದಲ್ಲಿ ಸ್ಥಾಪಿತವಾಗಿದ್ದು ಇಲ್ಲಿನ ಸಂಗ್ರಹ ಈಗ 5.6ಲಕ್ಷ ಆಕರಗಳಿಗೂ ಮೀರಿದೆ. ಪ್ರಚಲಿತವಾಗಿ ಮಾಹಿತಿ ಸೇವೆಯನ್ನು ಆಧರಿಸಿ ಗ್ರಂಥಾಲಯವನ್ನು ಎರಡು ವಿಭಾಗಗಳಾಗಿ ವಿಂಗಡಿಸಲಾಗಿದೆ. (1) ಸಾಂಪ್ರದಾಯಿಕ ಆಕರಗಳ ವಿಭಾಗ ಮತ್ತು (2) ಮಾಹಿತಿ ತಂತ್ರಜ್ಞಾನ ವಿಭಾಗ, ಸಾಂಪ್ರದಾಯಿಕ ಆಕರಗಳ ವಿಭಾಗ ಪ್ರಮುಖವಾಗಿ ನಿಯತಕಾಲಿಕೆ, ಪ್ರಲೇಖ ಮತ್ತು ಪರಾಮರ್ಶನ, ಗ್ರಂಥ ಎರವಲು, ಕನ್ನಡ ಗ್ರಂಥ ಸಂಗ್ರಹ, ಪುಸ್ತಕ ಪರಿಗ್ರಹಣೆ ಮತ್ತು ಇತರ ಭಾಷಾ ಸಂಗ್ರಹಗಳೆಂಬ ವಿಭಾಗಗಳಾಗಿವೆ. ತಾಂತ್ರಿಕ ವಿಭಾಗ ಅಂತರ್ಜಾಲ, ಸಿಡಿ ರಾಂ ದತ್ತಾಂಶಗಳು, ಪರಿವಿಡಿ ಸೇವೆ ಮತ್ತು ಮಲ್ಟಿಮೀಡಿಯಾ ಅಡಕ ತಟ್ಟೆಗಳ ಸಂಗ್ರಹ ಹೊಂದಿದೆ.

ವಿಶ್ವವಿದ್ಯಾನಿಲಯ ಗ್ರಂಥಾಲಯವು 22 ಅಂತರ್ಜಾಲ ಸೌಲಭ್ಯ ಕಲ್ಪಿಸಲ್ಪಟ್ಟ ಗಣಕ ಯಂತ್ರಗಳನ್ನು ಹೊಂದಿದ್ದು, ಎಲ್ಲಾ ಶೈಕ್ಷಣಿಕ ಸಿಬ್ಬಂದಿ, ಸಂಶೋಧನ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳು ಈ ಸೌಲಭ್ಯವನ್ನು ಬಳಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. ಸಾಫ್ಟ್ ವೇರ್ ಟೆಕ್ನಾಲಜಿ ಪಾರ್ಕ್ ಆಫ್ ಇಂಡಿಯಾ ಅವರು ಒದಗಿಸಿರುವ 128 K ಸಾಮರ್ಥ್ಯದ ಅಂತರ್ಜಾಲ ಸಂಪರ್ಕ ಪಡೆದುಕೊಂಡಿದೆ. ಮಾಹಿತಿ ತಂತ್ರಜ್ಞಾನ ವಿಭಾಗವು ಇಷ್ಟೇ ಅಲ್ಲದೆ, ಆಧುನಿಕ ಫ್ಯಾಕ್ಸ್ ಡೇಟಾ ಪ್ರೊಜೆಕ್ಟರ್, ಇ ಮೇಲ್, ಲೇಸರ್, ಸ್ಕ್ಯಾನಿಂಗ್ ಮುಂತಾದ ಸೌಲಭ್ಯ ಸಹ ಹೊಂದಿದೆ.

ಗ್ರಂಥಾಲಯವು ಪ್ರಮುಖವಾಗಿ ಸಿಡಿ ರಾಂ ದತ್ತಾಂಶ ಕೋಶಿಯ ಸಂಗ್ರಹವನ್ನು 1993 ರಿಂದ ನಿರಂತರ ಅಭಿವೃದ್ಧಿಪಡಿಸುತ್ತ ಬಂದಿದ್ದು ಇಲ್ಲಿಯವರೆಗೆ ಸು.27 ವಿವಿಧ ವಿಷಯಗಳನ್ನು ಕುರಿತಾದ ಸಂಗ್ರಹವಿದೆ. ಅದರಲ್ಲೂ ಸಂಶೋಧನ ವಿದ್ಯಾರ್ಥಿಗಳು ತಮ್ಮ ಕ್ಷೇತ್ರದಲ್ಲಿ ಕಳೆದ 10 ಅಥವಾ 20 ವರ್ಷಗಳಿಂದ ಇಲ್ಲಿಯವರೆಗೆ ಏನೇನು, ಎಲ್ಲೆಲ್ಲಿ ಸಂಶೋಧನೆ ನಡೆದಿದೆ ಎಂಬುದಾಗಿ ವಿವರ ಹಾಗೂ ಸಾರಾಂಶವನ್ನು ಕೆಲವೇ ನಿಮಿಷಗಳಲ್ಲಿ ಪಡೆಯಬಹುದಾಗಿದೆ. ಹಿಂದೆ ಇದೇ ಕಾರ್ಯಕ್ಕೆ ಸಾರಾಂಶ ನಿಯತಕಾಲಿಕೆಗಳನ್ನು ತಿರುವುಹಾಕಿ ಮಾಹಿತಿ ಸಂಗ್ರಹಿಸಬೇಕಾಗಿದ್ದು ಸು.4 ತಿಂಗಳಿಂದ 6 ತಿಂಗಳವರೆಗೆ ಸಮಯ ಹಿಡಿಯುತ್ತಿತ್ತು.

ಗ್ರಂಥಾಲಯವು ಹಲವಾರು ವಿಸ್ತರಣಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ತನ್ನ ಸದಸ್ಯರ ಬೇಡಿಕೆಗೆ ಮತ್ತು ಸಾರ್ವಜನಿಕರ ಆವಶ್ಯಕತೆಗೆ ತಕ್ಕಂತೆ ಸ್ಪಂದಿಸುತ್ತಲಿದೆ. 1993 ರಿಂದ 2002ವರೆಗೆ 48 ಪುಸ್ತಕ ಪ್ರದರ್ಶನಗಳು, 18 ವಿಶೇಷ ಉಪನ್ಯಾಸಗಳು, 14 ಪ್ರಾಯೋಗಿಕ ಕಾರ್ಯಾಗಾರಗಳು, 7 ರಾಷ್ಟ್ರೀಯ ಪುಸ್ತಕವಾರ ಪ್ರಯುಕ್ತ ಚರ್ಚಾಸ್ಪರ್ಧೆ ಮತ್ತು ಪರಾಮರ್ಶನ ಆಕರಗಳ ಪ್ರದರ್ಶನಗಳನ್ನು ಏರ್ಪಡಿಸಿತ್ತು. ಈ ಎಲ್ಲಾ ಸೇವಾ ಸೌಲಭ್ಯಗಳನ್ನು ಸಾರ್ವಜನಿಕರಿಗೂ ಸಹ ವಿಸ್ತರಿಸಿರುವುದು ವಿಶೇಷ ಸಂಗತಿ. ಗ್ರಂಥಾಲಯದ ಪ್ರಲೇಖ ಮತ್ತು ಪರಾಮರ್ಶನ ವಿಭಾಗವು ಸಂದರ್ಭ ಆಕರಗಳು, ಮಹಾಪ್ರಬಂಧಗಳು, ಸರ್ಕಾರಿ ಪ್ರಕಟಣೆಗಳು, ಮೈಸೂರು ಸಂಸ್ಥಾನದ ಆಡಳಿತ ವರದಿಗಳು, ಮೈಸೂರು ಇತಿಹಾಸಕ್ಕೆ ಸಂಬಂಧಿಸಿದ ಅಪರೂಪ ಗ್ರಂಥಗಳು ಹೀಗೆ ಅತ್ಯಂತ ಉಪಯುಕ್ತ ಸಂಗ್ರಹವನ್ನು ಹೊಂದಿದೆ. 1990 ರಿಂದ ಅಂತರ ಗ್ರಂಥಾಲಯ ಚಟುವಟಿಕೆಗಳಿಗೆ ಉತ್ತೇಜನ ದೊರೆತು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದಲ್ಲದೆ ಕೆಲವಾರು ಪ್ರಕಟಣೆಗಳನ್ನು ಮತ್ತು ಸಂಕಲನಗಳನ್ನೂ ಹೊರತಂದಿದೆ.

ಮೈಸೂರು ವಿಶ್ವವಿದ್ಯಾನಿಲಯದ ಅನಂತರದಲ್ಲಿ ಧಾರವಾಡದಲ್ಲಿ ಸ್ಥಾಪಿಸಲಾದ ಕರ್ನಾಟಕ ವಿಶ್ವವಿದ್ಯಾಲಯ ಸಹ ಬೃಹತ್ ಗ್ರಂಥಾಲಯ ವ್ಯವಸ್ಥೆಯನ್ನು ಹೊಂದಿದೆ. ಬೆಂಗಳೂರು ವಿಶ್ವವಿದ್ಯಾಲಯ ಗ್ರಂಥಾಲಯ 1965ರಲ್ಲಿ ಪ್ರಾರಂಭಗೊಂಡು ಈಗ ಸಾಕಷ್ಟು ಬೆಳೆದಿದೆ. ಅನಂತರದಲ್ಲಿ ಮಂಗಳೂರು, ಗುಲ್ಬರ್ಗ, ಕುವೆಂಪು, ಹಂಪಿ ಕನ್ನಡ ವಿಶ್ವವಿದ್ಯಾನಿಲಯ ಮತ್ತು ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯಗಳಲ್ಲಿಯೂ ಗ್ರಂಥಾಲಯಗಳು ರೂಪಿತಗೊಂಡಿವೆ. ಈ ವಿಶ್ವವಿದ್ಯಾನಿಲಯಗಳ ಗ್ರಂಥಾಲಯಗಳು ಅಪಾರ ಸಂಖ್ಯೆಯ ಮುದ್ರಿತ ಮತ್ತು ಗಣಕೀಕೃತ ಮಾಹಿತಿ ದಾಖಲೆಗಳನ್ನು ಹೊಂದಿದೆ.

**ಗ್ರಂಥಾಲಯಗಳ ಒಕ್ಕೂಟ :** ಯಾವುದೇ ಗ್ರಂಥಾಲಯ ಬೃಹತ್ ಸಂಗ್ರಹ ಮತ್ತು ಉತ್ತಮ ಆರ್ಥಿಕ ವ್ಯವಸ್ಥೆಯನ್ನು ಹೊಂದಿದ್ದರೂ ಬಳಕೆದಾರರ ಪೂರ್ಣ ಬೇಡಿಕೆಯನ್ನು ಪೂರೈಸುವುದು ಕಷ್ಟ. ವಿವಿಧ ಆಯಾಮಗಳಲ್ಲಿ ಮಾಹಿತಿಯ ಉತ್ಪಾದನೆ, ಅದರ ನಿರ್ವಹಣೆ, ನಿಯಂತ್ರಣ ಮತ್ತು ವಿತರಣೆ ಇವುಗಳನ್ನು ಪರಸ್ಪರ ಸಹಕಾರದ ಮೂಲಕ, ಮಾಹಿತಿ ಸಂಪನ್ಮೂಲಗಳ ವಿನಿಮಯದಿಂದ ಈ ಸವಾಲನ್ನು ಎದುರಿಸಬಹುದಾಗಿದೆ. ಕೇವಲ ಮಾಹಿತಿ ಸಂಪನ್ಮೂಲಗಳ ವಿನಿಮಯವಲ್ಲದೇ ಎಲ್ಲಾ ಸದಸ್ಯಗ್ರಂಥಾಲಯಗಳಲ್ಲಿ ದೊರೆಯುವಂತಹ ಮೂಲಭೂತ ಸೌಕರ್ಯಗಳನ್ನು ಹಾಗೂ ಕೌಶಲ್ಯಯುತ ಮಾನವ ಸಂಪನ್ಮೂಲವನ್ನು ಕೂಡ ಪರಸ್ಪರ ವಿನಿಮಯ ಮಾಡಿಕೊಳ್ಳಬಹುದಾಗಿದೆ. ಇದರಿಂದ ವೈಯಕ್ತಿಕ ಗ್ರಂಥಾಲಯಗಳ ವೆಚ್ಚವನ್ನು ಕಡಿಮೆ ಮಾಡಬಹುದು. ಮತ್ತು ಗ್ರಂಥಗಳ ಬಳಕೆಯನ್ನು ಗರಿಷ್ಠಗೊಳಿಸಬಹುದು. ಕೆಳಗಿನ ಪ್ರಮುಖ ಕಾರಣಗಳಿಂದಾಗಿ ಇತ್ತೀಚೆಗೆ ಮಾಹಿತಿ ಸಂಪನ್ಮೂಲಗಳ ವಿನಿಮಯ ತುಂಬಾ ಆವಶ್ಯಕವಾಗಿದೆ.

* ಅಗಾಧ ಮಾಹಿತಿ ಪ್ರಕಟಣೆ
* ಸಾಕಷ್ಟು ಹಣಕಾಸಿನ ವ್ಯವಸ್ಥೆ ಇಲ್ಲದಿರುವುದು
* ವಿದೇಶಿ ವಿನಿಮಯದ ದರ ಮತ್ತು ಪ್ರಕಟಣೆಯ ವೆಚ್ಚ ರಂತರವಾಗಿ ಹೆಚ್ಚುತ್ತಿರುವುದು
* ಸಮಗ್ರ ಹಾಗೂ ಆಧಾರಬದ್ಧ ಮಾಹಿತಿ ಸಂಪನ್ಮೂಲಗಳಿಗಾಗಿ ಬಳಕೆದಾರರ ಬೇಡಿಕೆ ಹೆಚ್ಚುತ್ತಿರುವುದು
* ಉತ್ತಮ ಹಾಗೂ ಶೀಘ್ರ ಸಾಮರ್ಥ್ಯವುಳ್ಳ ಪರಿಣಾಮಕಾರಿ ತಂತ್ರಜ್ಞಾನದ ಅಭಿವೃದ್ಧಿ
* ಅಂತರ್ ವಿಷಯ ಮತ್ತು ಬಹು ವಿಷಯ ಕ್ಷೇತ್ರಗಳ ಉಗಮ

1990ರಲ್ಲಿ ಮೈಸೂರು ನಗರ ಗ್ರಂಥಾಲಯಗಳ ಒಕ್ಕೂಟವು (ಮೈಸೂರ್ ಸಿಟಿ ಲೈಬ್ರರಿಸ್ ಕನ್‌ಸೋರ್ಟಿಯಮ್) ಅಸ್ತಿತ್ವಕ್ಕೆ ಬಂದಿತು. ಮಾಹಿತಿ ಆಕರಗಳು ಮತ್ತು ಮೂಲಭೂತ ಸೌಲಭ್ಯಗಳ ವಿನಿಮಯದ ಉದ್ದೇಶಕ್ಕಾಗಿ ಕೆಲವು ಬುದ್ಧಿಜೀವಿಗಳು, ವಿಶ್ವವಿದ್ಯಾನಿಲಯದ ಕುಲಪತಿಗಳು, ಸಂಶೋಧನ ಸಂಸ್ಥೆಗಳ ನಿರ್ದೇಶಕರು ಮತ್ತು ಮೈಸೂರು ನಗರದ ಕೆಲವು ಗ್ರಂಥಪಾಲಕರು ಈ ಮೇಲಿನ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಹಲವು ಬಾರಿ ಸಭೆ ಸೇರಿ ಈ ಒಕ್ಕೂಟವನ್ನು ರಚಿಸಿದರು. ಸಂಸ್ಕೃತದಲ್ಲಿ 'ಜ್ಞಾನಮೇವ ಪರಶಕ್ತಿ', ಒಕ್ಕೂಟದ ಸೂಕ್ತಿಯಾಗಿದೆ. ಮೈಸೂರು ನಗರದ ಗ್ರಂಥಾಲಯಗಳ ನಡುವೆ ಹೆಚ್ಚಿನ ಸಮನ್ವಯ ಸಾಧನೆ, ಮೂಲಭೂತ ಸೌಕರ್ಯಗಳ ಅಭಿವೃದ್ಧಿ, ಸಂಶೋಧನೆ, ನಿಯತಕಾಲಿಕಗಳ ಪ್ರಕಟಣೆ, ತರಬೇತಿ ತರಗತಿಗಳನ್ನು ನಡೆಸುವುದು ಮೊದಲಾದ ಕ್ರಮಗಳ ಮೂಲಕ ಗ್ರಂಥಾಲಯ ಜಾಲದ ವಿಸ್ತರಣೆ ಹಾಗೂ ಪುನಶ್ಚೇತನ ಇದರ ಮುಖ್ಯ ಉದ್ದೇಶಗಳಾಗಿವೆ.

1985ರಿಂದ ನ್ಯಾಷನಲ್ ಇನ್‌ಫರ್‌ಮೇಷನ್ ಸಿಸ್ಟಮ್ ಫಾರ್ ಸೈನ್ಸ್ ಅಂಡ್ ಟೆಕ್ನಾಲಜಿ (ಎನ್‌ಐಎಸ್‌ಎಸ್‌ಎಟಿ) ಭಾರತದ ವಿವಿಧ ಭಾಗಗಳಲ್ಲಿರುವ ಗ್ರಂಥಾಲಯಗಳಲ್ಲಿ ದೊರೆಯುವ ಸಂಪನ್ಮೂಲಗಳನ್ನು ವಿನಿಮಯ ಮಾಡಿಕೊಳ್ಳುವ ಸಲುವಾಗಿ ಭಾರತದಲ್ಲಿ ಗ್ರಂಥಾಲಯ ಜಾಲಗಳನ್ನು ರೂಪಿಸಲು ಮತ್ತು ಅಭಿವೃದ್ಧಿಪಡಿಸಲು ಪ್ರಯತ್ನವನ್ನು ಮಾಡುತ್ತಲಿದೆ. ಸಂಪನ್ಮೂಲಗಳನ್ನು ವಿನಿಮಯ ಮಾಡಿಕೊಳ್ಳಲು ಹೊಸ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುವುದು ತುಂಬಾ ಆವಶ್ಯಕವಾಗಿದೆ. ಈ ದೃಷ್ಟಿಯನ್ನಿಟ್ಟುಕೊಂಡು ಅದರ ಬಳಕೆದಾರರಿಗೆ ಪರಿಣಾಮಕಾರಿಯಾಗಿ ಮಾಹಿತಿ ಸೌಲಭ್ಯಗಳನ್ನು ಒದಗಿಸಲು 1995ರಲ್ಲಿ 'ಮೈಸೂರು ಲೈಬ್ರರಿ ನೆಟ್‌ವರ್ಕ್' ಸ್ಥಾಪಿಸಲಾಯಿತು (ಮೈಲಿಬ್‌ನೆಟ್). ಹೇಳಬೇಕೆಂದರೆ ಮೈಸೂರು ಗ್ರಂಥಾಲಯ ಜಾಲದ ಚಟುವಟಿಕೆಗಳು ಮೈಸೂರು ನಗರ ಗ್ರಂಥಾಲಯ ಒಕ್ಕೂಟದ ಮೂಲ ಉದ್ದೇಶಗಳಿಗೆ ಸಹಾಯಕವಾಗಿದೆ. ಇದು ಮುಖ್ಯವಾಗಿ ತರಬೇತಿ ಕಾರ್ಯಕ್ರಮಗಳು, ಪ್ರಯೋಗ ಮತ್ತು ಮಂಡನೆಗೆ ಸಂಬಂಧಿಸಿದಂತೆ ಮಾಹಿತಿ ಮತ್ತು ತಂತ್ರಜ್ಞಾನವನ್ನು ಸಂಘಟಿಸುವುದಕ್ಕೆ ಸಂಬಂಧಪಟ್ಟದ್ದಾಗಿದೆ. ಎರಡನೆಯದಾಗಿ ಮೈಸೂರು ನಗರ ಗ್ರಂಥಾಲಯಗಳಲ್ಲಿ ದೊರೆಯುವ ವೈಜ್ಞಾನಿಕ ಮತ್ತು ತಂತ್ರಜ್ಞಾನ ಮಾಹಿತಿ ಸಂಪನ್ಮೂಲಗಳಿಗೆ ಸಂಬಂಧಿಸಿದಂತೆ ಹಲವಾರು ರಚನಾತ್ಮಕ ಕಾರ್ಯಗಳನ್ನು ಕೈಗೆತ್ತಿಕೊಂಡಿದೆ.

"ಎಂಸಿಎಲ್‌ಸಿ ನ್ಯೂಸ್"ನ ಪ್ರಕಟಣೆಗೆ ಸಂಬಂಧಿಸಿದಂತೆ ಕೆಲವು ಸಲಹೆಗಳನ್ನು ನೀಡುವುದಕ್ಕಾಗಿ ಒಂದು ಸಂಪಾದಕೀಯ ಸಮಿತಿಯನ್ನು ರಚಿಸಲಾಗಿದೆ. ಮೈಸೂರು ವಿಶ್ವವಿದ್ಯಾನಿಲಯ ಗ್ರಂಥಾಲಯದ ಗ್ರಂಥಪಾಲಕರು ಈ ಸಮಿತಿಯ ಅಧ್ಯಕ್ಷರು. ಇವರಿಗೆ ಸಹಾಯ ಮಾಡಲು ಏಳು ಸದಸ್ಯರನ್ನೊಳಗೊಂಡ ಒಂದು ತಂಡವಿದೆ. ಎಂಸಿಎಲ್‌ಸಿ ನ್ಯೂಸ್ ಮುಖ್ಯವಾಗಿ ಸದಸ್ಯ ಸಂಸ್ಥೆಗಳ ಗ್ರಂಥಾಲಯಗಳ ಸೇವೆಗಳು, ಸಂಗ್ರಹಣೆ, ಕಾರ್ಯಗಳು ಮತ್ತು ಉದ್ದೇಶಗಳನ್ನು ಒಳಗೊಂಡಿರುತ್ತದೆ. ಅಲ್ಲದೆ ಮಾಹಿತಿ

ತಂತ್ರಜ್ಞಾನದ ಉಪಯೋಗ, ಸಾಫ್ಟ್‌ವೇರ್ ಕಾರ್ಯಕ್ರಮಗಳು ಮಾಹಿತಿಜಾಲ ವಿಳಾಸಗಳು, ಒಕ್ಕೂಟ ಹಿಂದೆ ಹಮ್ಮಿಕೊಂಡಿದ್ದ ಕಾರ್ಯಕ್ರಮಗಳು, ಮುಂದೆ ಹಮ್ಮಿಕೊಳ್ಳುವ ಕಾರ್ಯಕ್ರಮಗಳು, ಯೋಜನೆಗಳು ಮತ್ತು ಮಾನವ ಸಂಪನ್ಮೂಲ ಅಭಿವೃದ್ಧಿಗೆ ಸಂಬಂಧಪಟ್ಟಂತಹ ಕಾರ್ಯಕ್ರಮಗಳ ಸುದ್ದಿಯನ್ನೊಳಗೊಂಡಿರುತ್ತದೆ.

ಒಕ್ಕೂಟವು ನಿಯಕಾಲಿಕೆಗಳ ಪಟ್ಟಿ ಮತ್ತು ಸ್ಥಳೀಯ ತಜ್ಞರ ಮಾರ್ಗದರ್ಶಕಗಳ ಆವಶ್ಯಕತೆಯನ್ನು ಗುರುತಿಸಲು ಸೂಕ್ತವಾಗಿವೆ. ಇಂಥ ಆವಶ್ಯಕತೆಗಳನ್ನು ಪೂರೈಸಲು ಅದು ನಿರ್ದೇಶಕಗಳನ್ನು ಹೊರತಂದಿದೆ. ಹಲವಾರು ಸಂಸ್ಥೆಗಳು ಗುತ್ತಿಗೆಯ ಆಧಾರದ ಮೇಲೆ ಅಂತರ್ಜಾಲ ಸೌಲಭ್ಯವನ್ನು ಮತ್ತು ಸಿಡಿ ರಾವ್ ವರ್ಕ್ ಸ್ಟೇಷನ್‌ಗಳನ್ನು ಸ್ಥಾಪಿಸಿಕೊಂಡಿವೆ. ಹೊಸ ಬದಲಾವಣೆ ಮತ್ತು ಅಭಿವೃದ್ಧಿಗೆ ಸಂಬಂಧಪಟ್ಟಂತೆ ಒಕ್ಕೂಟ ಕಾಲಕಾಲಕ್ಕೆ ಏರ್ಪಡಿಸುವ ವಿಚಾರ ಸಂಕಿರಣ, ಕಾರ್ಯಾಗಾರ, ವಿಶೇಷ ಉಪನ್ಯಾಸಗಳ ಮೂಲಕ ಮಾಹಿತಿಯನ್ನು ಒದಗಿಸಲಾಗುತ್ತದೆ. ಹೆಚ್ಚಿನದಾಗಿ ಒಕ್ಕೂಟವು ಲೈಬ್ರರಿ ಆಟೋಮೇಷನ್ ಸಾಫ್ಟ್ ವೇರ್ ಪ್ಯಾಕೇಜ್ ಕುರಿತು ಏರ್ಪಡಿಸಿದ ಕಾರ್ಯಾಗಾರಗಳು ವೃತ್ತಿಪರರಿಗೆ ಬಹಳಷ್ಟುಮಟ್ಟಿಗೆ ಅನುಕೂಲವಾಗಿದೆ.

**ಗ್ರಂಥಾಲಯ ಸಂಘ :** ಗ್ರಂಥಾಲಯಗಳ ಉದ್ದೇಶ, ಕಾರ್ಯನಿರ್ವಹಣೆ ಮತ್ತು ಉಪಯುಕ್ತತೆಗಳು ಎಲ್ಲ ವರ್ಗದ ಜನರಿಗೂ ತಿಳಿಯುವಂತಾಗ ಬೇಕು. ನಗರ, ಪಟ್ಟಣಗಳಲ್ಲಿ ಮಾತ್ರವಲ್ಲದೆ, ಹಳ್ಳಿಯವರೆಗೂ ಅದರ ಶಾಖೆಗಳು ಹಬ್ಬಬೇಕು. ಗ್ರಂಥಾಲಯಗಳೊಳಗೆ ಪರಸ್ಪರ ಸಹಕಾರಭಾವ ಬೆಳೆಯಬೇಕು. ಗ್ರಂಥಪಾಲಕರೊಳಗೆ ಪರಸ್ಪರ ವೈಚಾರಿಕತೆ ಬೆಳೆದುಬರಬೇಕು. ಇವೆಲ್ಲ ಉದ್ದೇಶಗಳನ್ನಿರಿಸಿಕೊಂಡು 1962ರ ಆಗಸ್ಟ್ ತಿಂಗಳ 10ರಂದು ಬೆಂಗಳೂರಿನಲ್ಲಿ ಅನೇಕ ಗ್ರಂಥಪಾಲಕರು, ಗ್ರಂಥಾಲಯ ಪ್ರೇಮಿಗಳೂ ಒಂದೆಡೆ ಸಮಾವೇಶಗೊಂಡಾಗ ಮೈಸೂರು ಗ್ರಂಥಾಲಯದ ಸಂಘ ಸ್ಥಾಪನೆಯಾಯಿತು. ಅಂದು ಮೈಸೂರಿನ ಶಾಸನಸಭೆಯ ಅಧ್ಯಕ್ಷರಾಗಿದ್ದ ವೈಕುಂಠ ಬಾಳಿಗರನ್ನು ಮೈಸೂರು ಗ್ರಂಥಾಲಯ ಸಂಘದ ಅಧ್ಯಕ್ಷರನ್ನಾಗಿ ಚುನಾಯಿಸಲಾಯಿತು. ಭಾರತದ ಗ್ರಂಥಾಲಯ ಚಳವಳಿಯ ಪಿತಾಮಹ ಎಸ್.ಆರ್.ರಂಗನಾಥನ್‌ರವರನ್ನು ಗ್ರಂಥಾಲಯ ವಿಜ್ಞಾನದಲ್ಲಿ ಅವರ ಮಹತ್ವಪೂರ್ಣ ಕೊಡುಗೆಗಳ ನೆನಪಿಗಾಗಿ ಪೋಷಕರನ್ನಾಗಿ ಆರಿಸಲಾಯಿತು. ರಾಜ್ಯದ ಹೆಸರು ಕರ್ನಾಟಕವೆಂದು ಪುನರ್ ನಾಮಕರಣಗೊಂಡಾಗ ಈ ಸಂಘವನ್ನು ಕರ್ನಾಟಕ ಗ್ರಂಥಾಲಯ ಸಂಘವೆಂದು ಹೆಸರಿಸಲಾಯಿತು. ಮೇಲೆ ತಿಳಿಸಿದ ಉದ್ದೇಶಗಳಲ್ಲದೆ ಈ ಸಂಘ ಗ್ರಂಥಾಲಯ ವಿಜ್ಞಾನದಲ್ಲಿ ತರಬೇತು ನೀಡುವುದು, ಸಾರ್ವಜನಿಕ ಗ್ರಂಥಾಲಯ ವ್ಯವಸ್ಥೆಯ ಆಡಳಿತ ಹಾಗೂ ಸಂವರ್ಧನೆ ಸುಸೂತ್ರವಾಗುವಂತೆ ರಾಜ್ಯ ಶಾಸನಗಳನ್ನು ರಚಿಸುವಂತೆ ಪ್ರೇರೇಪಿಸುವುದು, ಗ್ರಂಥಾಲಯ ಸೇವೆ ಹಾಗೂ ಗ್ರಂಥಾಲಯ ವಿಜ್ಞಾನ ವಿಷಯದಲ್ಲಿ ಪುಸ್ತಕಗಳನ್ನೂ ನಿಯತಕಾಲಿಕೆಗಳನ್ನೂ ಸಂಗ್ರಹಿಸಿ ಉತ್ತಮವಾದೊಂದು ಗ್ರಂಥಾಲಯವನ್ನು ನಡೆಸುವುದು, ವಿವಿಧ ವಿಷಯಗಳ ಗ್ರಂಥಸೂಚಿ, ಪ್ರಲೇಖನ ಪಟ್ಟಿ ಮೊದಲಾದವುಗಳನ್ನು ಕಾಲಕಾಲಕ್ಕೆ ಪ್ರಕಟಿಸುವುದು - ಇವೇ ಮೊದಲಾದ ಅಪೇಕ್ಷಣೀಯ ಹಾಗೂ ಅತ್ಯಗತ್ಯವಾದ ಉದ್ದೇಶಗಳನ್ನಿರಿಸಿಕೊಂಡಿದೆ.

ಈ ಸಂಘದ ಚಟುವಟಿಕೆ ಕೆಲ ಸಮಯ ಸ್ಥಗಿತಗೊಂಡಿದ್ದರಿಂದ 1989ರಲ್ಲಿ ಕರ್ನಾಟಕ ಗ್ರಂಥಾಲಯ ಸಂಘವನ್ನು (ಕಲಾ) ಮತ್ತೆ ಹೊಸದಾಗಿ ಸ್ಥಾಪಿಸಲಾಯಿತು. ಇದರ ಪ್ರಧಾನ ಕಛೇರಿ ಬೆಂಗಳೂರಿನಲ್ಲಿದೆ. ಇದರ ಮೂಲ ಉದ್ದೇಶ ನವೀನ ಪ್ರವೃತ್ತಿಗಳನ್ನು ಗ್ರಂಥಪಾಲಕರ ಗಮನಕ್ಕೆ ತಂದು ತಿಳುವಳಿಕೆ ಮೂಡಿಸುವುದೇ ಆಗಿದೆ. ಇದಕ್ಕಾಗಿ ನಿರಂತರ ವಿಶೇಷ ಉಪನ್ಯಾಸಗಳು, ಕಾರ್ಯಾಗಾರಗಳು ಹಾಗೂ ವಿಚಾರಗೋಷ್ಠಿಗಳನ್ನು ನಡೆಸಲಾಗುತ್ತದೆ. ಕರ್ನಾಟಕದಲ್ಲಿರುವ ಎಲ್ಲಾ ಗ್ರಂಥಾಲಯ ಗ್ರಂಥಪಾಲಕರ ಸಂಘ ಸಂಸ್ಥೆಗಳು ಕರ್ನಾಟಕ ಗ್ರಂಥಾಲಯ ಸಂಘದ ವ್ಯಾಪ್ತಿಯಲ್ಲಿ ಕಾರ್ಯಚಟುವಟಿಕೆಗಳನ್ನು ನಡೆಸಬೇಕೆಂಬುದು ವಿವಿಧ ಚಿಂತಕರ ದೃಷ್ಟಿಕೋನ.

ಮೈಸೂರಿನಲ್ಲಿ ಮೈಸೂರು ಗ್ರಂಥಪಾಲಕರ ಹಾಗೂ ಮಾಹಿತಿ ವಿಜ್ಞಾನಿಗಳ ಸಂಘ (ಎಂವೈಎಲ್ಐಎಸ್ಎ) 2001ರಲ್ಲಿ ಸ್ಥಾಪನೆಗೊಂಡಿದೆ. ಈ ಸಂಘ ಅತ್ಯಂತ ಉತ್ಸಾಹದಿಂದಲೂ ಪರಿಣತಿಯಿಂದಲೂ ಕಾರ್ಯಕ್ರಮಗಳನ್ನು ರೂಪಿಸಿ ಮಾಹಿತಿ ತಂತ್ರಜ್ಞಾನ ಅಳವಡಿಕೆ ಮತ್ತು ಸಾಂಪ್ರದಾಯಿಕ ಗ್ರಂಥಾಲಯಗಳ ಅಭಿವೃದ್ಧಿಗೆ ಶ್ರಮಿಸುತ್ತಲಿದೆ. ಸಂಶೋಧಕರು, ಬೋಧಕ ವರ್ಗದವರು, ವಿದ್ಯಾರ್ಥಿಗಳು, ಗ್ರಂಥಪಾಲಕರು ಹಾಗೂ ಮಾಹಿತಿ ವಿಜ್ಞಾನಿಗಳು ಈ ಸಂಘದ ಸದಸ್ಯರಾಗಿದ್ದಾರೆ.

**ಗ್ರಂಥಾಲಯ ಶಿಕ್ಷಣ :** ಸರ್.ಎಂ.ವಿಶ್ವೇಶ್ವರಯ್ಯನವರ ಸಲಹೆಯಂತೆ 1920 ರಷ್ಟು ಹಿಂದೆಯೇ ಗ್ರಂಥಪಾಲಕರಿಗಾಗಿ ತರಬೇತು ನೀಡಲು ಶಾಲೆಯೊಂದನ್ನು ಬೆಂಗಳೂರಿನಲ್ಲಿ ಪ್ರಾರಂಭಿಸಲಾಯಿತು. ಎಸ್.ಆರ್. ರಂಗನಾಥನ್ ಅವರ ಆದೇಶದಂತೆ 1962ರಲ್ಲಿ ಮೈಸೂರು ಸರ್ಕಾರ ಸರ್ಕಾರಿ ಗ್ರಂಥಾಲಯ ತರಬೇತಿ ಶಾಲೆಯನ್ನು ಪ್ರಾರಂಭಿಸಿತು. ಇಲ್ಲಿ ರಾಜ್ಯದ ಗ್ರಂಥಾಲಯ ಸಿಬ್ಬಂದಿಗಳಿಗೂ ರಾಜ್ಯದ ಪ್ರೌಢಶಾಲೆಗಳಿಂದ ಕಳುಹಿಸಲ್ಪಟ್ಟ ಅಧ್ಯಾಪಕರಿಗೂ ತರಬೇತಿ ನೀಡಲಾಗುತ್ತಿತ್ತು. ಉಪಾಧ್ಯಾಯರುಗಳಿಗೆ ಆರು ವಾರಗಳ, ಗ್ರಂಥಪಾಲಕರಿಗೆ ಹನ್ನೆರಡು ವಾರಗಳ ಅವಧಿಯ ಶಿಕ್ಷಣವನ್ನು ನೀಡಲಾಗುತ್ತಿತ್ತು. ಮಹಿಳೆಯರಿಗಾಗಿ ಪಿ.ಯು.ಸಿ. ಶಿಕ್ಷಣ ಕನಿಷ್ಠ ಅರ್ಹತೆಯಾಗಿದ್ದು ಎರಡು ವರ್ಷಾವಧಿಯ ಡಿಪ್ಲೊಮಾ ಶಿಕ್ಷಣವನ್ನು 1961ರಲ್ಲಿ ಬೆಂಗಳೂರಿನ ಮಹಿಳಾ ತಾಂತ್ರಿಕ ಶಿಕ್ಷಣ ಶಾಲೆಯಲ್ಲಿ ಪ್ರಾರಂಭಿಸಲಾಯಿತು. ಅನಂತರ ಮಂಗಳೂರಿನಲ್ಲೂ ಈ ಹಂತದ ಶಿಕ್ಷಣವನ್ನು ಪ್ರಾರಂಭಿಸಲಾಯಿತು. ಕನಿಷ್ಠ ಮೆಟ್ರಿಕ್ ಅಥವಾ ಎಸ್.ಎಸ್.ಎಲ್.ಸಿ. ವಿದ್ಯಾರ್ಹತೆಯುಳ್ಳವರಿಗಾಗಿ ಮೂರು ತಿಂಗಳ ಅವಧಿಯ ಗ್ರಂಥಾಲಯ ವಿಜ್ಞಾನದಲ್ಲಿ ಸರ್ಟಿಫಿಕೇಟ್ ಶಿಕ್ಷಣವನ್ನು ರಾಜ್ಯ ಸಾರ್ವಜನಿಕ ಗ್ರಂಥಾಲಯ ವಿಭಾಗ ನೀಡುತ್ತಲಿದೆ. ಇದಲ್ಲದೆ ವೃತ್ತಿ ಶಿಕ್ಷಣ ಇಲಾಖೆ ಅನೇಕ ಜಿಲ್ಲೆಗಳಲ್ಲಿ 2 ವರ್ಷ ಅವಧಿಯ ಡಿಪ್ಲೊಮಾ ಕೋರ್ಸ್‌ಗಳನ್ನು ನಡೆಸುತ್ತಿದೆ. ಕರ್ನಾಟಕ ವಿಶ್ವವಿದ್ಯಾಲಯ ಗ್ರಂಥಾಲಯ ವಿಜ್ಞಾನದಲ್ಲಿ 1962ರಿಂದ ಪದವಿ ಶಿಕ್ಷಣವನ್ನು ಮತ್ತು 1965ರಿಂದ ಸ್ನಾತಕೋತ್ತರ ಪದವಿ ಶಿಕ್ಷಣವನ್ನು ನೀಡತೊಡಗಿತು. 1965ರ ಸುಮಾರಿಗೆ ಮೈಸೂರು ವಿಶ್ವವಿದ್ಯಾನಿಲಯ ಗ್ರಂಥಾಲಯ ವಿಜ್ಞಾನದಲ್ಲಿ ಬಿ.ಲಿಬ್.ಎಸ್ಸಿ. ಮತ್ತು ಎಂ.ಲಿಬ್.ಎಸ್ಸಿ ಪದವಿ ಶಿಕ್ಷಣಗಳನ್ನು ಪ್ರಾರಂಭಿಸಿತು.

ಇತ್ತೀಚೆಗೆ ಜ್ಞಾನದ ಅಗಾಧ ಬೆಳವಣಿಗೆಯಿಂದಾಗಿ ಮತ್ತು ಮಾಹಿತಿ ತಂತ್ರಜ್ಞಾನದ ಅಳವಡಿಕೆಯಿಂದಾಗಿ ಬಹುತೇಕ ವಿಶ್ವವಿದ್ಯಾನಿಲಯಗಳಲ್ಲಿ ಸ್ಥಾಪಿಸಲಾಗಿರುವ ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗಗಳು ಎರಡು ವರ್ಷಗಳ ಅವಧಿಯ ಎಂ.ಎಲ್.ಐ.ಎಸ್ಸಿ ಕೋರ್ಸ್ ನೀಡುತ್ತವೆ. ಈಗ ಮಾಸ್ಟರ್ ಪದವಿ ಮತ್ತು ಪಿಎಚ್.ಡಿ. ಕಾರ್ಯಕ್ರಮಗಳನ್ನು ನೀಡುತ್ತಲಿರುವ ವಿಶ್ವವಿದ್ಯಾನಿಲಯಗಳೆಂದರೆ ಮೈಸೂರು ವಿಶ್ವವಿದ್ಯಾನಿಲಯ, ಬೆಂಗಳೂರು ವಿಶ್ವವಿದ್ಯಾಲಯ, ಮಂಗಳೂರು ವಿಶ್ವವಿದ್ಯಾಲಯ ಹಾಗೂ ಕುವೆಂಪು ವಿಶ್ವವಿದ್ಯಾಲಯ. ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ ವಿಭಾಗಗಳು ಪ್ರಚಲಿತ ಬೆಳವಣಿಗೆಗೆ ಹಾಗೂ ಗ್ರಂಥಾಲಯ ಓದುಗರ ಬೇಡಿಕೆ ಈಡೇರಿಸುವ ಸಲುವಾಗಿ ಬಹುಮಟ್ಟಿಗೆ ತಮ್ಮ ಪಠ್ಯಕ್ರಮದಲ್ಲಿ ತಂತ್ರಜ್ಞಾನದ ಅಳವಡಿಕೆಯ ಅಂಶಗಳನ್ನು ಸೇರಿಸುವಲ್ಲಿ ಹೆಚ್ಚಿನ ಗಮನ ಹರಿಸಿವೆ.

ಗ್ರಂಥಾಲಯ ವಿಜ್ಞಾನದ ಪ್ರಮುಖ ಸ್ತರವಾದ ಪ್ರಲೇಖನಶಾಸ್ತ್ರದಲ್ಲಿ ವಿಶೇಷ ಶಿಕ್ಷಣವೀಯಲು ರಂಗನಾಥನ್‌ರವರ ಪ್ರಯತ್ನದ ಫಲವಾಗಿ 1962ರ ಜನವರಿಯಲ್ಲಿ ಭಾರತೀಯ ಸಾಂಖ್ಯಿಕೀಯ ಸಂಸ್ಥೆ ಬೆಂಗಳೂರಿನಲ್ಲಿ ಪ್ರಲೇಖ ಸಂಶೋಧನ ಮತ್ತು ತರಬೇತಿ ಕೇಂದ್ರವನ್ನು ಪ್ರಾರಂಭಿಸಿತು. ಈ ತರಬೇತಿಯ ಅವಧಿ ಇಪ್ಪತ್ತು ತಿಂಗಳದಾಗಿದ್ದು ಮೊದಲ 12 ತಿಂಗಳ ಶಿಕ್ಷಣಾವಧಿಯಲ್ಲಿ ವಿದ್ಯಾರ್ಥಿಗಳು ಪೂರ್ಣಕಾಲ ಕೇಂದ್ರದಲ್ಲೇ ಇರಬೇಕಾಗುತ್ತದೆ. ಮುಂದಿನ ಎಂಟು ತಿಂಗಳಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿ ಯಾವುದಾದರೊಂದು ನಿರ್ದಿಷ್ಟ ವಿಷಯ ಕುರಿತು ವರದಿ ಅಥವಾ ಪ್ರೌಢಪ್ರಬಂಧವನ್ನು ಸಲ್ಲಿಸಬೇಕಾಗುತ್ತದೆ.

ಮೈಸೂರಿನಲ್ಲಿರುವ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯವು 2004-05ರ ಶಿಕ್ಷಣ ವರ್ಷದಿಂದ ಗ್ರಂಥಾಲಯ ಮಾಹಿತಿ ವಿಜ್ಞಾನದಲ್ಲಿ ಪದವಿ ಶಿಕ್ಷಣ ನೀಡುವುದಕ್ಕೆ ಮುಂದಾಗಿದೆ. ಮೈಸೂರು ಹಾಗೂ ಮಂಗಳೂರಿನಲ್ಲಿ ಯು.ಜಿ.ಸಿ.ಯ ನೆರವಿನಿಂದ ವಿಶ್ವವಿದ್ಯಾನಿಲಯ ಪ್ರಾರಂಭಿಸಿರುವ ಅಭ್ಯಾಸ ಕೇಂದ್ರಗಳೂ ಉತ್ತಮ ರೀತಿಯಲ್ಲಿ ಕಾರ್ಯವೆಸಗುತ್ತಿದ್ದು ವಿದ್ಯಾರ್ಥಿಗಳಿಗೆ ಪಠ್ಯಪುಸ್ತಗಳನ್ನೂ ಆಕರ ಗ್ರಂಥಗಳನ್ನೂ ಒದಗಿಸುತ್ತಿವೆ.

(ಸಿ.ಪಿ.ಆರ್.,ಎನ್.ಬಿ.ಪಿ.)

**ಗ್ರಾಮಗಳು :** ಕರ್ನಾಟಕದಲ್ಲಿ 2001ರ ಜನಗಣತಿ ಅಂಕಿಸಂಖ್ಯೆಗಳ ಪ್ರಕಾರ ಬೇಚಿರಾಕ್ ಗ್ರಾಮಗಳೂ ಸೇರಿ 29483 ಗ್ರಾಮಗಳಿವೆ. ರಾಜ್ಯದ ಜನಸಂಖ್ಯೆಯು ಸೇ.66 ಜನ ಗ್ರಾಮಗಳಲ್ಲಿ ವಾಸಿಸುತ್ತಿದ್ದಾರೆ. ಭಾರತದ ಇತರ ರಾಜ್ಯಗಳಂತೆ ಕರ್ನಾಟಕವೂ ಗ್ರಾಮಗಳ ರಾಜ್ಯ. ಈ ಗ್ರಾಮಗಳು ದೇಶವ್ಯವಸ್ಥೆಯಲ್ಲಿ ಪ್ರಮುಖವಾದ ಸ್ಥಾನವನ್ನು ಹೊಂದಿರುವ ಕಾರಣದಿಂದ ಈ ಲೇಖನದಲ್ಲಿ ಚಾರಿತ್ರಿಕ, ಆರ್ಥಿಕ, ಸಾಮಾಜಿಕ ಹೀಗೆ ನಾನಾ ದೃಷ್ಟಿಕೋನಗಳಿಂದ ಅವುಗಳ ಸ್ಥೂಲ ಪರಿಚಯ ಮಾಡುವ ಪ್ರಯತ್ನ ಮಾಡಲಾಗಿದೆ.

ನಮ್ಮ ಗ್ರಾಮಗಳು ಪ್ರಾಚೀನ ಕಾಲದಿಂದಲೂ ಪರಂಪರಾಗತವಾಗಿ ಹಲವು ವ್ಯವಸ್ಥೆ ಕಟ್ಟುಪಾಡುಗಳಲ್ಲಿ ನಡೆದುಕೊಂಡುಬಂದುವಾಗಿವೆಯಾದರೂ ಇತ್ತೀಚಿನ ದಿನಗಳಲ್ಲಿ ಪ್ರಚಲಿತವಾಗಿರುವ ಪ್ರಜಾಪ್ರಭುತ್ವ ತತ್ವಗಳು, ದೇಶದ ಬದಲಾದ ರಾಜಕೀಯ ವ್ಯವಸ್ಥೆ, ಭೂಸುಧಾರಣೆ ಮತ್ತು ಸಾಮಾಜಿಕ ಸುಧಾರಣಾ ಕಾರ್ಯಕ್ರಮಗಳು ಮೊದಲಾದವುಗಳಿಂದ ಅವು ಅನೇಕ ರೀತಿಯಲ್ಲಿ ಬದಲಾವಣೆಯನ್ನು ಹೊಂದುತ್ತಿವೆ. ಈ ಪರಿವರ್ತನಾ ಘಟ್ಟದಲ್ಲಿ ಹಲವೆಡೆ ಹಳೆಯ ಸಂಪ್ರದಾಯ ಮತ್ತು ಸ್ಥಿತಿಗತಿಗಳು ಮುಂದುವರೆದಿರುವುದೂ ಮತ್ತೆ ಕೆಲವೆಡೆ ಹೊಸ ಪ್ರವೃತ್ತಿಗಳು ರೂಪಿತವಾಗುತ್ತಿರುವುದೂ ಕಂಡುಬರುತ್ತದೆ. ಸಹಜವಾಗಿ ಇವೆರಡೂ ಘಟ್ಟಗಳು ಇಲ್ಲಿ ಪ್ರಸ್ತಾಪಿತವಾಗಿವೆಯಾದರೂ ಹೊಸ ಪ್ರವೃತ್ತಿಗಳು ಮುನ್ನಡೆಯಲ್ಲಿವೆಯೆಂಬುದು ಗಮನಾರ್ಹ.

**ಇತಿಹಾಸ :** ಪ್ರಾಗೈತಿಹಾಸಿಕಯುಗದಲ್ಲಿ ಜನ ಇನ್ನೂ ಬೇಟೆಯಿಂದ ಜೀವನ ನಿರ್ವಹಿಸುತ್ತಿದ್ದಾಗ ಅವರು ಬೇಟೆಗಾಗಿ ಸ್ಥಳದಿಂದ ಸ್ಥಳಕ್ಕೆ ವಲಸೆ ಹೋಗುತ್ತಿದ್ದರಾಗಿ ವ್ಯವಸ್ಥಿತವಾದ ಗ್ರಾಮಗಳಿರುವ ಸಾಧ್ಯತೆ ಇರಲಿಲ್ಲ. ಅನಂತರ ಬಹುಕಾಲ ಒಂದೆಡೆ ನೆಲಸುವ ಗ್ರಾಮಗಳು ಎನ್ನಬಹುದಾದ ತಾಣಗಳು ಪ್ರಾರಂಭವಾದವು. ವ್ಯವಸಾಯ, ಪಶುಪಾಲನೆ ಈ ವೃತ್ತಿಗಳು ಬಳಕೆಗೆ ಬಂದ ನವಶಿಲಾಯುಗದ ಕಾಲದಲ್ಲಿ, ಅಂದರೆ ಸು. ಕ್ರಿ.ಪೂ. 2500ರ ಆಸುಪಾಸಿನಲ್ಲಿ ಕರ್ನಾಟಕದಲ್ಲಿ ಈ ಘಟ್ಟದ ಹಲವು ಗ್ರಾಮನೆಲೆಗಳು ಬಯಲುಸೀಮೆಯ ಭಾಗಗಗಳಲ್ಲಿ ವಿಶೇಷವಾಗಿ ಕಂಡುಬಂದಿವೆ. ರಾಯಚೂರು ಜಿಲ್ಲೆಯ ಪಿಕ್ಲಿಹಾಳು, ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆ, ಸಂಗನಕಲ್ಲು, ಧಾರವಾಡ ಜಿಲ್ಲೆಯ ಹಳ್ಳೂರು, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಮೈಸೂರು ಜಿಲ್ಲೆಯ ತಿರುಮಕೂಡಲುನರಸೀಪುರ ಮತ್ತು ಹೆಮ್ಮಿಗೆ ಮೊದಲಾದೆಡೆಗಳಲ್ಲಿ ನಡೆದಿರುವ ಆ ನೆಲೆಗಳ ಉತ್ಖನನಗಳಿಂದ ಆಗಿನ ಗ್ರಾಮಗಳ ಸ್ವರೂಪದ ಬಗ್ಗೆ ಕೆಲವು ಮಾಹಿತಿಗಳು ದೊರಕಿವೆ (ಆಯಾ ಶೀರ್ಷಿಕೆಗಳು ಹಾಗೂ ಪ್ರಾಗಿತಿಹಾಸ ಲೆಖನಗಳನ್ನು ನೋಡಿ). ಕ್ರಿ.ಪೂ.1ನೆಯ ಸಹಸ್ರಮಾನದ ಹೊತ್ತಿಗೆ ಕರ್ನಾಟಕದಲ್ಲಿ ಕಬ್ಬಿಣದ ಬಳಕೆ ಪ್ರಾರಂಭವಾದ್ದರಿಂದ ಹಾಗೂ ಬಹುಶಃ ಜನಸಂಖ್ಯೆಯ ಹೆಚ್ಚಳವೂ ಆಗುತ್ತ ಬಂದುದರಿಂದ ಗ್ರಾಮಗಳ ಸಂಖ್ಯೆ ಹೆಚ್ಚಾದಂತೆ ಕಾಣುತ್ತದೆ. ಮಲೆನಾಡು ಮತ್ತು ಪಶ್ಚಿಮ ಕರಾವಳಿಯ ಪ್ರದೇಶಗಳಲ್ಲಿ ಗ್ರಾಮಗಳು ಹುಟ್ಟಿಕೊಂಡಿದ್ದು ಬಹುಶಃ ಈ ಕಾಲದಲ್ಲೇ. ಆಗ ಬಳಕೆಗೆ ಬಂದಿದ್ದ ಕಬ್ಬಿಣದ ಆಯುಧಗಳಿಂದ ಕಾಡನ್ನು ಕಡಿದು ನೆಲವನ್ನು ಹದಮಾಡಿಕೊಂಡು ಹೆಚ್ಚು ಭೂಮಿಯನ್ನು ಆಬಾದಿಗೆ ತರುವ ಕೆಲಸ ಸುಲಭವಾದದ್ದೂ ಇದಕ್ಕೆ ಕಾರಣ. ಈ ಕಾಲದ ಗ್ರಾಮನೆಲೆಗಳು ನೂರಾರು ಸಂಖ್ಯೆಯಲ್ಲಿ ಕರ್ನಾಟಕದ ಸುಮಾರು ಎಲ್ಲ ಪ್ರದೇಶಗಳಲ್ಲೂ ಬೆಳಕಿಗೆ ಬಂದಿವೆ. ತದಾರಭ್ಯ ಚಾರಿತ್ರಿಕ ಕಾಲದಲ್ಲಿ ಜನಜೀವನ ಸುಗಮವಾಗುತ್ತ ಬಂದು ಜನಸಂಖ್ಯೆಯ ಏರಿಕೆ ಗತಿ ತೀವ್ರವಾಗಿ ನಡೆಯುತ್ತಿದ್ದಿತಾಗಿ ಗ್ರಾಮಗಳು ವಿಸ್ತಾರಗೊಂಡುವಲ್ಲದೆ, ಅವುಗಳ ಸಂಖ್ಯೆಯೂ ದಿನೇ ದಿನೇ ವರ್ಧಿಸುತ್ತ ಬಂದುವು. ಚಾರಿತ್ರಿಕ ಕಾಲದಲ್ಲಿ ಹೊಸ ಹೊಸ ಗ್ರಾಮಗಳನ್ನು ನಿರ್ಮಾಣ ಮಾಡಿ, ಅಲ್ಲಿ ಕೆರೆಕಟ್ಟೆಗಳನ್ನು ಕಟ್ಟಿಸಿ ಜನರನ್ನು ವಸತಿ ಹೂಡಲು ರಾಜರೂ ಪ್ರೋತ್ಸಾಹಿಸುತ್ತಿದ್ದರು. ಈ ರೀತಿಯಲ್ಲಿ ಹೊಸತಾಗಿ ಸ್ಥಾಪಿತವಾದ ಅನೇಕ ಗ್ರಾಮಗಳ ಬಗ್ಗೆ ಶಾಸನಗಳಲ್ಲಿ, ಅದರಲ್ಲೂ ವಿಶೇಷವಾಗಿ ಹೊಯ್ಸಳ ರಾಜರ ಶಾಸನಗಳಲ್ಲಿ ಮಾಹಿತಿಗಳು ದೊರಕುತ್ತವೆ. ಇತ್ತೀಚಿನ ದಿನಗಳವರೆಗೂ ಹೊಸ ಗ್ರಾಮಗಳ ಸ್ಥಾಪನೆ ನಡೆದುಕೊಂಡು ಬಂದಿದೆ.

ಕರ್ನಾಟಕದಲ್ಲಿ ಗ್ರಾಮಗಳು ಬೆಳೆದು ಬಂದ ಇತಿಹಾಸವನ್ನು ರೂಪಿಸಲು ಅನೇಕ ರೀತಿಯ ಸಾಮಗ್ರಿಗಳು ದೊರಕುತ್ತವೆ. ಶಾಸನಗಳು, ಸ್ಥಳೀಯ ಐತಿಹ್ಯಗಳು ಒಂದು ರೀತಿಯ ದಾಖಲೆಗಳಾದರೆ, ಗ್ರಾಮದ ಹೆಸರುಗಳೇ ಬಹಳಷ್ಟು ವಿಷಯಗಳನ್ನು ನೀಡಬಲ್ಲುವು. ಉದಾಹರಣೆಗೆ ಮೂಲ ಕನ್ನಡ ಪದಗಳನ್ನೊಳಗೊಂಡ ಹೆಸರುಗಳು ಹಲವು ಕಾಲದಲ್ಲಿ ಪ್ರಚಲಿತವಾಗಿದ್ದರೆ, ಬೇರೆ ಬೇರೆ ಕಾಲದಲ್ಲಿ ಹುಟ್ಟಿಕೊಂಡ ಗ್ರಾಮಗಳಲ್ಲಿ ಆಯಾ ಕಾಲಗಳಲ್ಲಿ ಶಿಷ್ಟಭಾಷೆಗಳಾಗಿದ್ದ ಪ್ರಾಕೃತ, ಸಂಸ್ಕೃತ, ಉರ್ದು, ಇಂಗ್ಲಿಷ್ ಇತ್ಯಾದಿ ಮೂಲಗಳಿಂದ ಹುಟ್ಟಿದ ಹೆಸರುಗಳನ್ನು ಅಲ್ಲಲ್ಲಿ ಗುರುತಿಸಬಹುದು. ಅಲ್ಲದೆ ಈ ಹೆಸರುಗಳಲ್ಲಿನ ಮೂಲನಾಮವನ್ನುಳ್ಳ ಪೂರ್ವಭಾಗ, ವಸತಿಸೂಚಕ ಉತ್ತರಭಾಗ (ಹಳ್ಳಿ, ಕೊಪ್ಪ) ಇತ್ಯಾದಿಗಳ ವೈವಿಧ್ಯತೆಯಲ್ಲಿ ಗ್ರಾಮಗಳ ಭೌಗೋಳಿಕ ಪರಿಸರ, ಅವುಗಳ ಚಾರಿತ್ರಿಕ ಹಿನ್ನೆಲೆ, ಅನೇಕ ವೇಳೆ ಅವು ಹುಟ್ಟಿಕೊಂಡಿರಬಹುದಾದ ಕಾಲ ಇತ್ಯಾದಿಗಳನ್ನೆಲ್ಲಾ ಗುರುತಿಸಬಹುದು. ಆದರೆ ಈ ದಿಶೆಯಲ್ಲಿ ಕರ್ನಾಟಕದಲ್ಲಿ ನಡೆದಿರುವ ಕಾರ್ಯ ಅಲ್ಪ. ಕರ್ನಾಟಕದ ಗ್ರಾಮ ನಾಮಗಳಲ್ಲಿ ಹಳ್ಳಿ, ಪಲ್ಲಿ, ಗಾಂವ್, ಕೊಪ್ಪ(ಲು), ಪಾಳ್ಯ, ಹಟ್ಟಿ, ಹುಂಡಿ, ಬೀಡು, ನಾಡು, ಗೂಡು, ವಾಡಿ, ಪಾಡಿ, ಕೇರಿ, ಆವರ, ಊರು, ಪುರ, ಕೋಟೆ, ದುರ್ಗ, ಗಡ, ಪೇಟೆ, ಪಟ್ಟಣ, ಹೊಳಲು, ಅಬಾದ್, ಬಾಗ್, ಬುರ್ಗ, ಮಂಗಲ, ಸಂತೆ, ಕುಂದ, ಬೆಟ್ಟ, ಅದ್ರಿ, ಗುಡ್ಡ, ಕಲ್ಲು, ಘಾಟ್, ಕಣಿವೆ, ಕೆರೆ, ಸಮುದ್ರ (ಸಂದ್ರ), ಕೊಳ, ಕುಂಟೆ, ಕಟ್ಟೆ, ತೊರೆ, ಸಂಗಮ, ಅವೆ, ಆರು, ಕುಪ್ಪೆ, ಹಾಳು, ಜಾಲ, ಆಲ ಮೊದಲಾದ ಉತ್ತರನಾಮಗಳು ಸಾಮಾನ್ಯವಾಗಿ ಕಂಡುಬರುತ್ತವೆ. *

**ಸ್ವರೂಪ :** ಗ್ರಾಮಗಳಲ್ಲಿ ವಾಸಿಸುವ ಜನರ ಮುಖ್ಯ ಜೀವನಾಧಾರ ಕಸಬು ವ್ಯವಸಾಯವೇ ಆದುದರಿಂದ ಗ್ರಾಮಗಳ ರಚನೆ ಈ ಕಸಬಿಗೆ ಪೂರಕವಾಗಿರುತ್ತದೆ. ಸಾಮಾನ್ಯವಾಗಿ ಎತ್ತರವಾದ ಸಮತಟ್ಟಿನ ಪ್ರದೇಶಗಳಲ್ಲಿ ಗ್ರಾಮ ರಚನೆಗೊಳ್ಳುತ್ತದೆ. ಸುತ್ತಮುತ್ತ ಸಾಗುವಳಿಗೆ ಆವಶ್ಯಕವಾದ ಫಲವತ್ತಾದ ಭೂಮಿಯನ್ನು ಆಯ್ಕೆಮಾಡಿಕೊಳ್ಳಲಾಗುತ್ತದೆ. ಕರ್ನಾಟಕದ ಹೆಚ್ಚು ವ್ಯವಸಾಯ ಮಳೆಯನ್ನೇ ಅವಲಂಬಿಸಿದ್ದರೂ ನೀರಿನ ಸೌಕರ್ಯಕ್ಕಾಗಿ ಕೆರೆ, ಕುಂಟೆ, ಬಾವಿಗಳನ್ನು ರಚಿಸಿಕೊಳ್ಳುವುದುಂಟು. ಸಾಮಾನ್ಯವಾಗಿ ಒಂದೊಂದು ಗ್ರಾಮದಲ್ಲಿಯೂ ಒಂದೊಂದು ಕೆರೆ ಇರುತ್ತದೆ. ಬಾವಿಗಳನ್ನು ಆವಶ್ಯಕತೆಗೆ ಅನುಗುಣವಾಗಿ ರಚಿಸಿಕೊಳ್ಳಲಾಗುತ್ತದೆ. ಗ್ರಾಮಗಳಲ್ಲಿ ಮನೆಗಳ ಸಂಖ್ಯೆ ನಿರ್ದಿಷ್ಟವಾಗಿರುವುದಿಲ್ಲ. ಮಲೆನಾಡಿನ ಗ್ರಾಮಗಳಲ್ಲಿ ಒಂದು ಮನೆಯೋ ನಾಲ್ಕಾರು ಮನೆಗಳೋ ಒಂದು ಗ್ರಾಮವಾಗಬಹುದು. ಬಯಲುಸೀಮೆಯ ಗ್ರಾಮಗಳಲ್ಲಿ ಇಪ್ಪತ್ತು ಮೂವತ್ತರಿಂದ ಏಳುನೂರು ಎಂಟುನೂರರವರೆಗೆ ಮನೆಗಳಿರಬಹುದು. ತಾಂಡ ಎನ್ನುವುದು ಒಂದು ಹಳ್ಳಿಗೆ ಉಪಗ್ರಹದಂತೆ, ಅದರ ಭಾಗದಂತೆ ಅಂಟಿಕೊಂಡಿರುವ ಸಣ್ಣ ಬೀಡನ್ನು ಸೂಚಿಸುತ್ತದೆ. ಕೆಲವು ಕಡೆ ಇದನ್ನೇ ಹಟ್ಟಿ ಎಂದು ಕರೆಯುತ್ತಾರೆ. ಹಟ್ಟಿಗಳು ಪ್ರತ್ಯೇಕ ಸಣ್ಣ ಹಳ್ಳಿಗಳೂ ಆಗಿರುವುದುಂಟು. ತಾಂಡ ಅಥವಾ ಹಟ್ಟಿಗಳಲ್ಲಿ ಬಹಳ ಹಿಂದುಳಿದ ಜನ ವಾಸಿಸುತ್ತಾರೆ. ಹಳ್ಳಿ ಸಣ್ಣ ಊರನ್ನು ಸೂಚಿಸಿದರೆ ಗ್ರಾಮ ಹಳ್ಳಿಗಿಂತ ದೊಡ್ಡದಾಗಿರುವ ಊರನ್ನು ಸೂಚಿಸುತ್ತದೆ ಎಂದು ಹೇಳಬಹುದು. ದೊಡ್ಡ ಗ್ರಾಮ ಒಂದು ರೀತಿಯಲ್ಲಿ ಹಳ್ಳಿಗೂ ಪಟ್ಟಣಕ್ಕೂ ಮಧ್ಯಸ್ಥವಾಗಿರುವ ಊರು. ಗ್ರಾಮದಲ್ಲಿ 200ರಿಂದ 400ರವರೆಗೆ ಮನೆಗಳಿದ್ದರೆ ದೊಡ್ಡ ಗ್ರಾಮದಲ್ಲಿ 500ರಿಂದ 1000ದವರೆಗೆ ಮನೆಗಳಿರಬಹುದು. ಇದು ಬಹು ಸ್ಥೂಲವಾದ ಕ್ರಮ.

ದೂರಕ್ಕೆ ಗ್ರಾಮ ಮರಗಳ ಗುಂಪಿನಂತೆ ತೋರಿಬರುತ್ತದೆ. ಹತ್ತಿರ ಹೋಗುತ್ತಿದ್ದಂತೆ ಮೊದಲು ಹೊಲಗಳು, ಅನಂತರ ಗ್ರಾಮಸ್ಥರು ತಮ್ಮ ಧಾನ್ಯಗಳನ್ನು ಒಕ್ಕಿಕೊಳ್ಳುವ ಮತ್ತು ದನಗಳಿಗೆ ಮೇವು ಸಂಗ್ರಹಿಸಿಟ್ಟಿರುವ ಕಣ ಹಾಗೂ ಹುಲ್ಲು ಹಿತ್ತಿಲುಗಳು, ಅಲ್ಲೇ ಗೊಬ್ಬರದ ಗುಂಡಿಗಳು,

ತಿಪ್ಪೆಗಳು ಕಾಣಿಸಿಕೊಳ್ಳುತ್ತವೆ. ಊರಿಗೆ ಅನೇಕ ಪ್ರವೇಶ ದ್ವಾರಗಳಿದ್ದರೂ ಶಿಷ್ಟಾಚಾರದ (ಉದಾ: ಮದುವೆ) ಸಂದರ್ಭಗಳಲ್ಲಿ ಹೊರಗಿನ ಜನರ ಪ್ರವೇಶವಾಗುವುದು ಊರಬಾಗಿಲು ಅಥವಾ ಅಗಸೆಯ ಮೂಲಕವಾಗಿಯೇ. ಇದೇ ಊರಿನ ಅಧಿಕೃತ ಪ್ರವೇಶದ್ವಾರ ಮತ್ತು ಅದರ ಸೂಚಕವಾಗಿ ಆ ದ್ವಾರದ ಅಕ್ಕಪಕ್ಕದಲ್ಲಿ ಎರಡು ಕರು (ಕರಿ) ಗಲ್ಲುಗಳನ್ನು ನೆಟ್ಟಿರುತ್ತಾರೆ. ಒಳಗೆ ಬಂದರೆ ಅಲ್ಲೇ ಊರಿನ ಮುಖ್ಯ ದೇವಾಲಯ ಅದರ ಸಮೀಪದ ಬಯಲು, ಊರಿನಲ್ಲಿ ನಾಟಕ ಮುಂತಾದವು ನಡೆಯುವ ಜಾಗ. (ಎಂ.ಸಿ.)

ಸಾಮಾನ್ಯವಾಗಿ ಪ್ರತಿ ಗ್ರಾಮದಲ್ಲಿಯೂ ಊರೊಳಗೆ ಬಾವಿ, ಚಾವಡಿ, ಗ್ರಾಮದೇವತೆಯ ಗುಡಿ, ಇತರ ದೇವರುಗಳ ಗುಡಿ ಇರುತ್ತವೆ. ಊರಿಗೆ ತೀರಸಮೀಪದಲ್ಲಿ ಕೆರೆ ಇರುತ್ತದೆ. ಕೆಲವೊಮ್ಮೆ ಪಕ್ಕದಲ್ಲೇ ಮರದ ತೋಪು ಇರುತ್ತದೆ. ಗ್ರಾಮಗಳಲ್ಲಿಯ ಗೃಹರಚನೆಯಲ್ಲಿ ನಿರ್ದಿಷ್ಟ ನಿಯಮವಿರುವಂತೆ ಕಂಡುಬರುವುದಿಲ್ಲ. ಊರ ಜನ ಬೇಕಾದಂತೆ ಮನೆ ಕಟ್ಟಿಕೊಳ್ಳಬಹುದು. ಹಾಗಾಗಿ ಗ್ರಾಮಗಳಲ್ಲಿಯ ಗೃಹಗಳ ರಚನೆಯಿಂದ ಹಲವಾರು ಅನಾನುಕೂಲಗಳಾಗುತ್ತವೆ. ರಸ್ತೆಗಳ ನಿರ್ಮಾಣ ಕಷ್ಟವಾಗುತ್ತದೆ. ಮನೆ ಕಟ್ಟುವಿಕೆಯಲ್ಲಿ ಒಂದಕ್ಕೂ ಇನ್ನೊಂದಕ್ಕೂ ನಡುವೆ ಇರುವ ಅಂತರದ ಪ್ರದೇಶವನ್ನು ಓಣಿ ಅಥವಾ ಸೊಂಪಲು ಎನ್ನುವುದು ರೂಢಿ. ಗ್ರಾಮರಚನೆಯಲ್ಲಿ ಕಂಡುಬರುವ ಗಮನಾರ್ಹವಾದ ಇನ್ನೊಂದು ಅಂಶವೆಂದರೆ ಗ್ರಾಮ ವಿಭಜನಾಕ್ರಮ. ಗ್ರಾಮಗಳಲ್ಲಿ ಎಲ್ಲ ಜಾತಿಮತ ವರ್ಗ ಪಂಗಡಗಳ ಜನರೂ ಒಟ್ಟಿಗೇ ವಾಸಿಸಬೇಕಾಗಿರುವುದರಿಂದ ಅವರ ಸಾಮಾಜಿಕ ರೀತಿನೀತಿಗಳು ಭಿನ್ನವಾಗಿರುತ್ತವೆಯಾದುದರಿಂದ ಅವರು ಪ್ರತ್ಯೇಕ ಹಾಗೂ ಸ್ವತಂತ್ರ ಜೀವನ ಸಾಗಿಸಲು ಕೇರಿಗಳು ರೂಪುಗೊಂಡವು. ಈ ಕೇರಿಗಳು ಜಾತಿಯ ಆಧಾರದ ಮೇಲೆ ರಚನೆಯಾಗುತ್ತಿದ್ದುದೇ ಹೆಚ್ಚು. ಉದಾ: ಬ್ರಾಹ್ಮಣ ಕೇರಿ, ಕುಂಬಾರಕೇರಿ, ಒಕ್ಕಲಿಗಕೇರಿ, ಹರಿಜನಕೇರಿ ಇತ್ಯಾದಿ. ಹರಿಜನಕೇರಿ, ಸಾಮಾನ್ಯವಾಗಿ ಊರ ಹೊರಗೆ ಸುಮಾರು ದೂರದಲ್ಲಿರುತ್ತದೆ. ಆಯಾಯ ಕೇರಿಗಳ ಬೀದಿಯನ್ನು ಆಯಾಯ ಜಾತಿಗಳ ಹೆಸರಿನಿಂದಲೆ ಕರೆಯುವುದು ವಾಡಿಕೆ, ಬ್ರಾಹ್ಮಣರು ವಾಸಿಸುವ ಕೇರಿಯ ಬೀದಿಗೆ ಬ್ರಾಹ್ಮಣರ ಬೀದಿ, ಕುಂಬಾರದಕ್ಕೆ ಕುಂಬಾರ ಬೀದಿ ಇತ್ಯಾದಿ.

**ಆರ್ಥಿಕ ವ್ಯವಸ್ಥೆ :** ಗ್ರಾಮಗಳ ಆರ್ಥಿಕ ಜೀವನ ಹೆಚ್ಚಾಗಿ ವ್ಯವಸಾಯ ದಿಂದ ಬರುವ ಉತ್ಪನ್ನವನ್ನೇ ಅವಲಂಬಿಸಿದೆ. ಜೊತೆಗೆ ಕುರಿ ಕೋಳಿ ಹಂದಿ ಸಾಕಣೆ, ಪಶುಸಂಗೋಪನೆ ಮುಂತಾದ ಉಪಕಸಬು ಗಳಿಂದಲೂ ಗ್ರಾಮೀಣರು ಹಣ ಸಂಪಾದಿಸುವುದುಂಟು. ಜೀವನಾವಶ್ಯಕತೆಗಳು, ಜೀವನವಿಧಾನಗಳು ಗ್ರಾಮಗಳಲ್ಲಿ ಅಷ್ಟೊಂದು ಜಟಿಲವಲ್ಲ. ಪ್ರತಿಯೊಂದು ಗ್ರಾಮವೂ ಸ್ವಯಂಪರಿಪೂರ್ಣವಾಗಿ ತನ್ನ ಕಾಲಿನ ಮೇಲೆ ತಾನು ನಿಲ್ಲುತ್ತಿದ್ದಿತ್ತು. ಗ್ರಾಮದ ಉಪಯೋಗಕ್ಕೆ ಬೇಕಾದ ಕಚ್ಚಾಮಾಲು, ಅಲ್ಲಿಯೇ ಬೆಳೆದು, ಅವುಗಳನ್ನು ಜನತೆಗಾಗಿ ಸಿದ್ಧಪಡಿಸುವ ಕೆಲಸಗಾರರೂ ಉದ್ಯೋಗಗಳೂ ಅಲ್ಲಿಯೇ ಸೃಷ್ಟಿಯಾಗುತ್ತಿದ್ದವು. ರೈತ ಎಲ್ಲ ಬೆಳೆಗಳನ್ನೂ ಬೆಳೆಯುತ್ತಿದ್ದ. ಅವನು ಬೆಳೆದ ಹತ್ತಿಯನ್ನು ನೂಲುವವರು ನೂತು, ನೇಯ್ಗೆಯವರಿಗೆ ಕೊಡುತ್ತಿದ್ದರು. ಅವರು ಎಲ್ಲರಿಗೂ ವಸ್ತ್ರಗಳನ್ನು ಒದಗಿಸುತ್ತಿದ್ದರು. ರೈತ ಬೆಳೆದ ಎಣ್ಣೆ ಬೀಜಗಳನ್ನು ಗಾಣಿಗರು ಅರೆದು ಎಣ್ಣೆ ಒದಗಿಸುತ್ತಿದ್ದರು. ಕುಂಬಾರ ಮಣ್ಣಿನಿಂದ ಮಡಕೆಗಳನ್ನು ಮಾಡಿಕೊಡುತ್ತಿದ್ದ. ಮನೆಯ ಮಾಡಿಗೆ ಹೊದಿಸಲು ಹೆಂಚುಗಳನ್ನು ಸುಟ್ಟುಕೊಡುತ್ತಿದ್ದ. ಕುರುಬರು ಕುರಿ ಸಾಕಿ, ತುಪ್ಪಟದಿಂದ ಕಂಬಳಿ ನೇಯುವವರು ನೇಯುತ್ತಿದ್ದರು. ತೋಟಿ, ನೀರ್ಗಂಟಿಗಳು ಕೆರೆಯ ನೀರಿನ ಹಂಚಿಕೆ ಎಲ್ಲ ಭೂಮಿಗೂ ಸರಿಯಾಗಿ ಆಗುವಂತೆ ನೋಡಿಕೊಳ್ಳುತ್ತಿದ್ದರು. ಉಪಾದ್ರು (ಉಪಾಧ್ಯಾಯರು) ಮಠದಲ್ಲಿ ಹುಡುಗರಿಗೆ ಪಾಠ ಹೇಳುತ್ತಿದ್ದರು. ಶ್ಯಾನುಭೋಗರು ಭೂಮಿಯ ಆಸ್ತಿಪಾಸ್ತಿಯ ಲೆಕ್ಕಪತ್ರ ಬರೆಯುತ್ತಿದ್ದರು. ಊರಿನ ರಕ್ಷಣೆಗಾಗಿ ಪೊಲೀಸ್ ಪಟೇಲರು (ಕಂದಾಚಾರ) ಇರುತ್ತಿದ್ದರು. ಅಟ್ಟವಣೆಯವರು, ಹಣಕಾಸಿನವರು ಆ ಬಾಬಿನ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಜೋಯಿಸ, ಅಗಸ, ಶಾನುಭೋಗ, ಪೂಜಾರಿ, ತಳವಾರ (ತಲಾರಿ, ಅಂದರೆ ಊರೊಟ್ಟಿನ ಕೆಲಸಗಾರ), ಕುಳವಾಡಿ (ಗ್ರಾಮನೌಕರ) ಇವರೆಲ್ಲ ಸಮಾಜಕ್ಕೆ ತಮತಮಗೆ ನಿಯಮಿತವಾಗಿದ್ದ ಕೆಲಸಗಳನ್ನು ಮಾಡುತ್ತಿದ್ದರು. ಹೀಗೆ ಗ್ರಾಮದ ಆವಶ್ಯಕತೆಗಳೆಲ್ಲ ಗ್ರಾಮದಲ್ಲಿ ಗ್ರಾಮದವರಿಂದಲೇ ಪೂರೈಸಲ್ಪಟ್ಟು ಪ್ರತಿ ಗ್ರಾಮವೂ ತನ್ನ ಪಾಡಿಗೆ ತಾನು ಸಂಪೂರ್ಣ ಸ್ವಾವಲಂಬಿಯಾಗಿದ್ದಿತು.

ಇದಕ್ಕೆ ಸಹಕಾರಿಯಾಗಿದ್ದ ವ್ಯವಸ್ಥೆಗೆ ಬಾರಾಬಲೂತಿ ಕ್ರಮ ಎಂದು ಹೆಸರಿದ್ದಿತು. ಪಟೇಲ, ಕುಳವಾಡಿ, ತೋಟಿ, ತಳಾರಿ (ತಳವಾರ), ನೂಲುವವರು, ನೇಯುವವರು, ಕುರುಬರು, ಗೋವಳರು, ಅಗಸರು, ಬೆಸ್ತರು, ಕ್ಷೌರಿಕರು, ಬಡಗಿ, ಕಮ್ಮಾರ, ನೀರ್ಗಂಟಿ, ಅಟ್ಟವಣೆ, ಕಂದಾಚಾರ ಇವರೇ ಗ್ರಾಮಕ್ಕೆ ಆವಶ್ಯಕವಾದ ಜನ. ಸಾಧಾರಣವಾಗಿ ಸರಳಜೀವನ ಪದ್ಧತಿಯಿಂದ ಆ ಕಾಲಕ್ಕೆ ಗ್ರಾಮದ ಸೇವೆಗೆ ಇಷ್ಟು ಜನ ಸಾಕಾಗುತ್ತಿದ್ದರು. ಗ್ರಾಮರಕ್ಷಣೆ ಮಂತಾದುವಕ್ಕೆ ಗೌಡರು, ಊರಿನ ಯಜಮಾನರು ಇರುತ್ತಿದ್ದರು. ಈ ಎಲ್ಲ ಕಸಬುದಾರರೂ ಆ ಕಾಲದಲ್ಲಿ ವಂಶಪಾರಂಪರ್ಯವಾಗಿ ಇರುತ್ತಿದ್ದರು. ಪಟೇಲರ ಮಗ ಪಟೇಲ, ಕುಳವಾಡಿಯ ಮಗ ಕುಳವಾಡಿ, ತೋಟಿಯ ಮಗ ತೋಟಿ, ನೀರ್ಗಂಟಿಯ ಮಗ ನೀರ್ಗಂಟಿ ಹೀಗೆ ವಂಶಪಾರಂಪರ್ಯವಾದ ವಿದ್ಯೆ ಎಂಬ ಮಾತು ಪ್ರಶಂಸೆಯ ಮಾತಾಗಿತ್ತು. ಆಯಾ ಕಸಬಿನ ನೈಪುಣ್ಯ ಅವನ ವಂಶದಲ್ಲಿ ಹರಿದು ಬರುತ್ತಿದ್ದಿತ್ತು ಅಥವಾ ಅದನ್ನು ಆತ ರೂಢಿಸಿಕೊಳ್ಳುತ್ತಿದ್ದ. ಈ ಕ್ರಮದಲ್ಲಿ ಸಣ್ಣ ಘಟಕವಾದ ಗ್ರಾಮದ ವ್ಯವಸ್ಥೆ ಬಹಳ ಅಚ್ಚುಕಟ್ಟಾಗಿ ನಡೆಯುತ್ತಿದ್ದಿತು. ಇಂಥ ಪದ್ಧತಿಯ ಗ್ರಾಮ ಆಡಳಿತವನ್ನು ಪಾಶ್ಚಾತ್ಯ ವಿದ್ವಾಂಸರನೇಕರು ಮೆಚ್ಚಿ, ಅವು ಪ್ರಾಚೀನ ಗ್ರೀಕರ ಗ್ರಾಮ ಘಟಕಕ್ಕೆ (ಗಿಲ್ಡ್) ಸಮಾನವಾಗಿ ಗ್ರಾಮದ ಬೆಳವಣಿಗೆ, ರಕ್ಷಣೆ, ಸೌಖ್ಯ ಎಲ್ಲದರ ಹೊಣೆಯನ್ನೂ ತುಂಬ ಸಮರ್ಪಕವಾಗಿ ನಿರ್ವಹಿಸಿದುವೆಂದೂ ಪಟ್ಟಣಗಳ ಶೋಷಣೆಗೆ ಗುರಿಯಾಗದ ಗ್ರಾಮ ಸ್ವರಾಜ್ಯ, ಸುವರ್ಣಯುಗ ಅದೆಂದೂ ಅಭಿಪ್ರಾಯಪಟ್ಟಿದ್ದಾರೆ.

ಈ ಪದ್ಧತಿ ನಮ್ಮ ನಾಡಿನ ಪರಿಸ್ಥಿತಿ ಮತ್ತು ಆವಶ್ಯಕತೆಗಳಿಂದ ಸ್ವಾಭಾವಿಕವಾಗಿ ಬೆಳೆದು ಬಂತು. ಗ್ರಾಮದ ಆವಶ್ಯಕತೆಗಳನ್ನರಿತು ಗ್ರಾಮೀಣರು ಗ್ರಾಮಗಳನ್ನು ಸ್ವಾವಲಂಬಿಯಾಗಿ ಮಾಡಿದರು. ಆವಶ್ಯಕತೆ ಹೆಚ್ಚಿದಂತೆ, ಕಚ್ಚಾಮಾಲು ದೊರೆತಂತೆ ಅವರು ಹೊಸ ಹೊಸ ಉದ್ಯೋಗಗಳನ್ನೂ ಸಹ ಕಲ್ಪಿಸಿಕೊಂಡರು.

ಬಾರಾಬಲೂತಿ ಪದ್ಧತಿಯಲ್ಲಿ ಒಂದು ಗ್ರಾಮಕ್ಕೆ, ಒಂದು ಉದ್ಯೋಗಕ್ಕೆ ಆ ಕಸಬಿನ ಒಬ್ಬನೇ ಇರಬೇಕೆಂಬ ನಿಯಮವಿರಲಿಲ್ಲ. ಜನತೆಯ ಆವಶ್ಯಕತೆಗೆ, ಜನಸಂಖ್ಯೆಗೆ ಅನುಗುಣವಾಗಿ ಕಸಬುದಾರರಿರುತ್ತಿದ್ದರು. ಇವರೆಲ್ಲರೂ ತಮ್ಮ ಕುಲಕ್ರಮಾಗತವಾದ ಕಸಬುಗಳೊಂದಿಗೆ ಬೇಸಾಯವನ್ನೂ ಮಾಡುತ್ತಿದ್ದರು. ತಮ್ಮ ಕುಲಕಸಬನ್ನು ಬಿಟ್ಟು ಬೇರೆ ಕಸಬಿಗೆ ಹೋಗಬಾರದು. ಎಂಬ ನಿಯಮವೇನು ಇರಲಿಲ್ಲ. ಹಾಗೆ ಹೋಗುತ್ತಿದ್ದವರೂ ಇರುತ್ತಿದ್ದರು. ಆದರೆ ಗ್ರಾಮಜೀವನ ಇಂದಿನಷ್ಟು ಸಂಕೀರ್ಣವೂ ಗೊಂದಲಮಯವೂ ಆಗಿರಲಿಲ್ಲವಾದುದರಿಂದ, ಸಿದ್ಧವಾಗಿದ್ದ ತನ್ನ ಮನೆತನದ ಉದ್ಯೋಗವನ್ನು ಆ ಮುಂದಿನ ವ್ಯಕ್ತಿ ಹಿಡಿದು ಸಾಗುತ್ತಿದ್ದ. ಹೀಗೆ ಈ ಎಲ್ಲ ಕಸಬುದಾರರೂ ಗ್ರಾಮದ ಆವಶ್ಯಕತೆಯಿಂದ ಹುಟ್ಟಿಕೊಂಡವರಾಗಿದ್ದರು. ಅವರೆಲ್ಲ ಒಂದೊಂದು ಜಾತಿಗಳಲ್ಲಿ, ಆದರೆ ಕಾಲಕ್ರಮದಲ್ಲಿ ಒಂದೊಂದು ಉದ್ಯೋಗದವರು ಒಂದೊಂದು ಜಾತಿ ಎಂದು ಪರಿಗಣಿತವಾದಂತೆ ತೋರುತ್ತದೆ. ಯಾವ ಉದ್ಯೋಗವನ್ನೂ ಯಾವನೂ ಮಾಡಲು ಆಕ್ಷೇಪಣೆ ಇದ್ದಂತೆ ತೋರುವುದಿಲ್ಲ. ಆದರೆ ಗ್ರಾಮ ಘಟಕಗಳು ಚಿಕ್ಕವಾಗಿದ್ದುದರಿಂದ, ಕಸಬುದಾರರು ಹೆಚ್ಚುತ್ತ ಹೋದಂತೆ ಗ್ರಾಮ ಘಟಕಗಳು ಸ್ವಾಭಾವಿಕವಾಗಿ ಬೆಳೆಯುತ್ತ ನಡೆದವು. ಆದುದರಿಂದ ಕಸಬುದಾರರು ತಮ್ಮ ಕಸಬನ್ನು ಬಿಟ್ಟು ಬೇರೆ ಕಸಬನ್ನು ಅವಲಂಬಿಸಬೇಕಾದ ಆವಶ್ಯಕತೆ ಜನಗಳಿಗೆ ಬರಲಿಲ್ಲ.

ಸಮಾಜದ ಎಲ್ಲ ಸೇವಕರನ್ನೂ ಸಾಕುವ, ರಕ್ಷಿಸುವ ಹೊಣೆ ಮುಖ್ಯವಾಗಿ ವ್ಯವಸಾಯಗಾರರಾದ ಗ್ರಾಮದ ಜನರದಾಗಿತ್ತು. ಆಗ ಹಣದ ಚಲಾವಣೆ ಅಷ್ಟಾಗಿ ಇರಲಿಲ್ಲ. ಹಣ ದೊರೆತರೂ ಗ್ರಾಮಸ್ಥರು ತಾವು ಬೆಳೆದ ಪದಾರ್ಥಗಳನ್ನೇ ಕಸಬುದಾರರಿಗೆ ಕೊಡುತ್ತಿದ್ದರು. ಆದ್ದರಿಂದ, ಅವರಿಗೆ ಹಣವನ್ನು ಹೊಂದಿಸಿಕೊಳ್ಳುವ ಕಷ್ಟ ಇರುತ್ತಿರಲಿಲ್ಲ. ಗ್ರಾಮದ ಪ್ರತಿ ರೈತನೂ ತನ್ನ ಮನೆಯಲ್ಲಿದ್ದ ಜನ, ತನಗೆ ಕಸಬುದಾರರಿಂದ ಆಗಬೇಕಾಗಿದ್ದ ಕೆಲಸ ಇವುಗಳ ಲೆಕ್ಕಾಚಾರವನ್ನಿಟ್ಟುಕೊಂಡು ವರ್ಷಕ್ಕೆ ಇಷ್ಟು ರಾಗಿ ಬತ್ತ ಎಂದು ಕಮ್ಮಾರ, ಕುಂಬಾರ, ತೋಟಿ, ತಳವಾರ, ನೀರ್ಗಂಟಿ, ಕುರುಬ, ನೇಕಾರ, ಉಪಾಧ್ರಿ, ಜೋಯಿಸ, ಅಗಸ, ಕ್ಷೌರಿಕ, ಬಡಗಿ ಇವರಿಗೆ ಸುಗ್ಗಿಯ ಕಾಲದಲ್ಲಿ ಕಣದಲ್ಲಿಯೇ ಅಳೆದು ಕೊಟ್ಟುಬಿಡುತ್ತಿದ್ದ. ಇದಕ್ಕೆ ಮಿರಾಸೆ ಅಥ'ವಾ ಮಾಮೂಲು ಹಡದೆ ಎಂದು ಹೆಸರು. ಈ ಮಾಮೂಲಿನ ದರ, ಸಾಮಾನ್ಯ ಮಾಮೂಲು ಯಾವುದು ಎಷ್ಟು, ವಿಶೇಷವಾದ ಕಾರ್ಯಗಳಿಗಾಗಿ ಎಷ್ಟು ಇವನ್ನೆಲ್ಲ ಗ್ರಾಮಸ್ಥರು ಎಲ್ಲ ಕಸಬುದಾರರೊಂದಿಗೂ ಸಮಾಲೋಚಿಸಿ, ಕಸಬುದಾರನ ಜೀವನದ ಆವಶ್ಯಕತೆಯನ್ನೂ ಗಮನಿಸಿ ನಿರ್ಣಯಿಸುತ್ತಿದ್ದರು. ಹೀಗೆ ವರ್ಷಕ್ಕೆ ಒಂದು ಸಲವೆಂದು ಆಯವನ್ನು (ಮಿರಾಸೆ) ಗೊತ್ತುಮಾಡುತ್ತಿದ್ದರು. (ಜಿ.ಆರ್.ಐ.)

ಈ ಪದ್ಧತಿ ಚಾಳುಕ್ಯ ಪೂರ್ವಕಾಲದಿಂದಲೂ ಪ್ರಚಲಿತವಿದೆ. ಆಯವನ್ನು ಧಾನ್ಯರೂಪದಲ್ಲಿ ಕೊಡಬೇಕಾಗಿತ್ತು. ಸಾಂಪ್ರದಾಯಿಕವಾಗಿ ಹನ್ನೆರಡು ಆಯಗಾರರನ್ನು (ಆಯ ಪಡೆಯುವ ಹಕ್ಕುಳ್ಳ ಊಳಿಗದವರು) ಉಲ್ಲೇಖಿಸಿದ್ದರೂ ಬೇರೆ ಬೇರೆ ಗ್ರಾಮಗಳಲ್ಲಿ ಈ ಸಂಖ್ಯೆ ಹೆಚ್ಚು ಕಡಿಮೆಯಿರಬಹುದು. ಆಯಗಾರರ ಸೇವೆಯನ್ನು ಪಡೆಯುವ ರೈತ ಕುಟುಂಬಗಳು ಆಯದ ಕುಲ. ಇವರು ಸಂಪ್ರದಾಯದಂತೆ ಆಯ ಕೊಡುತ್ತಿದ್ದರು. ಅರಸರು ಅಥ'ವಾ ಪಾಳೆಯಗಾರರು ಆಯಗಾರರಿಗೆ ಊರಲ್ಲಿದ್ದು ಊಳಿಗವ ನಡೆಸಿದರೆ ಇನಾಂ ಭೂಮಿಯನ್ನು ಕೊಡುವ ಸಂಪ್ರದಾಯವೂ ಇತ್ತು. ಜಾತಿ ತಾರತಮ್ಯ ಹಾಗೂ ಊಳಿಗ ಉಪಯುಕ್ತತೆಯ ಮೇಲಿಂದ ಆಯದ ಪ್ರಮಾಣ ನಿರ್ಧಾರವಾಗುತ್ತಿತ್ತು. ಕೆಲವು ಮೇಲ್ಜಾತಿಯ ಆಯಕಾರರನ್ನು ಬಿಟ್ಟರೆ ಉಳಿದವರು ಹೊಲಕ್ಕೆ ಬಂದು ರಾಶಿಯಿಂದಲೆ ತಮ್ಮ ಪಾಲನ್ನು ಪಡೆಯಬೇಕು. ಜೀವನ ನಿರ್ವಹಣೆಗಾಗಿ ಇವರು ಬೇರೆ ಕೆಲಸವನ್ನೂ ಮಾಡಿ ಗಳಿಸಬಹುದು.ಆಯದ ಕುಲದವರ ಸ್ಥಿತಿಗತಿಗಳನ್ನು ಅನುಸರಿಸಿ ಆಗೀಗ ಆಯದ ಪ್ರಮಾಣ ಹೆಚ್ಚಾಗುತ್ತಿತ್ತು ಅಥವಾ ಮಾಫಿಯಾಗುತ್ತಿತ್ತು. ಏನಿದ್ದರೂ ಅದು ಗ್ರಾಮೀಣ ಸಮಾಜಕ್ಕೆ ಆರ್ಥಿಕ ಭದ್ರತೆಯನ್ನೂ ಸಾಂಪ್ರದಾಯಿಕ ಉದ್ಯೋಗವನ್ನೂ ಕೊಟ್ಟಿತಲ್ಲದೆ ಪರಸ್ಪರಾವಲಂಬನೆ, ಸಹಕಾರಗಳನ್ನು ಕಲಿಸಿತು. ಹಣದ ಬಳಕೆ, ಸ್ಪರ್ಧೆ, ಜಾತಿಪದ್ಧತಿಯಲ್ಲಾದ ಬದಲಾವಣೆಗಳಿಂದ ಆಯ ಪದ್ಧತಿ ಇಂದು ಹಿಂದೆ ಬೀಳುತ್ತಿದೆ. (ಎಚ್.ವಿ.ಎಸ್.)

ಕಾಲಕ್ರಮದಲ್ಲಿ ಹಳ್ಳಿಗಳಲ್ಲೂ ಜೀವನ ಹೆಚ್ಚು ಹೆಚ್ಚು ಸಂಕೀರ್ಣವಾಗುತ್ತ ಬಂದಂತೆ ಹಳೆಯ ಕಟ್ಟುಪಾಡುಗಳು ಸಡಿಲವಾದುವು. ಬಾರಾಬಲೂತಿಯಂತೆ ಮಾಡುತ್ತಿದ್ದ ಕಸಬುಗಳನ್ನು ಈಗ ಯಾರು ಬೇಕಾದರೂ ಮಾಡಬಹುದು. ಹಳ್ಳಿಗಳಲ್ಲಿ ಕೆಲವು ಕಸಬುಗಳನ್ನು ಉದಾಹರಣೆಗೆ ಕುಂಬಾರ, ಅಗಸ, ಕ್ಷೌರಿಕ, ತೋಟಿ, ತಳವಾರ ಮುಂತಾದವುಗಳನ್ನು ಹಿಂದಿನಂತೆ ಇವರೇ ಇನ್ನೂ ಮಾಡುತ್ತಿದ್ದಾರೆ. ಕೆಲವೆಡೆಗಳಲ್ಲಿ ಬದಲಾವಣೆಗಳು ಕಾಣಿಸಿಕೊಂಡಿವೆ. ಆದರೆ ಈಗ ಹಿಂದಿದ್ದ ಮಾಮೂಲು ಮಿರಾಸೆ ವರ್ಷಕ್ಕೊಂದು ಸಲ ಧಾನ್ಯ ಕೊಡುವ ಪದ್ಧತಿ ಅನೇಕ ಕಡೆ ತಪ್ಪಿಹೋಗಿದೆ (ಪೂರ್ತಿ ಇಲ್ಲವೆನ್ನುವಂತೆ ಇಲ್ಲ. ಕೆಲವು ಮಲೆನಾಡ ಹಳ್ಳಿಗಳಲ್ಲಿ ಅದರ ಅವಶೇಷ ಇನ್ನೂ ಇದೆ). ಇತರ ಕಸಬುದಾರರಂತೆ ಇವರೂ ಕೆಲಸಕ್ಕೆ ಇಷ್ಟು ಕೂಲಿ ಎಂದು ತೆಗೆದುಕೊಂಡು ಕೆಲಸಮಾಡುತ್ತಾರೆ. ಒಂದು ಕ್ಷೌರದ ಅಂಗಡಿ, ಬಟ್ಟೆ ಮಡಿ ಮಾಡುವ ಅಂಗಡಿ ಎಂದು ಇಟ್ಟರೂ ಹೆಚ್ಚಾಗಿ ಹಿಂದಿನಿಂದ ಮಾಡುತ್ತ ಬಂದಿರುವವರೇ ಇಡುತ್ತಾರೆ. ಪ್ರಾಯಶಃ ಈ ಉದ್ಯೋಗಗಳಿಂದ ಸ್ಥಿರವಾದ ಹೆಚ್ಚು ಲಾಭ ಇಲ್ಲದುದರಿಂದ ವಂಶಪಾರಂಪರ್ಯವಾದ ಕೆಲಸಗಾರರ ಹೊರತು, ಬೇರೆಯವರು ಇವುಗಳಿಗಾಗಿ ಮುಂದೆ ಬರುತ್ತಿರಲಿಲ್ಲ.

ಆದರೆ ಇತ್ತೀಚೆಗಿನ ದಿನಗಳಲ್ಲಿ ಅನೇಕ ಸಾಮಾಜಿಕ ಬದಲಾವಣೆಗಳ ಪ್ರಭಾವ ಹಳ್ಳಿಗಳ ಜೀವನ ಕ್ರಮದಲ್ಲಿಯೂ ಬದಲಾವಣೆಗಳನ್ನೂ ಸಂಘರ್ಷ ಸಾಮಾಜಿಕ ಸ್ಥಿತಿಯನ್ನೂ ಹುಟ್ಟುಹಾಕಿದೆ.

ಯಾಂತ್ರೀಕರಣ, ಗ್ರಾಮಕೈಗಾರಿಕೆಗಳ ದೊಡ್ಡ ಶತ್ರು. ಉದಾಹರಣೆಗೆ ಎಳ್ಳನ್ನು ಬೆಳೆದ ರೈತ ಹಳ್ಳಿಯ ಗಾಣಿಗನಿಂದ ಗಾಣ ಆಡಿಸಿಕೊಳ್ಳುತ್ತಿದ್ದ. ಅವನ ಉಪಯೋಗಕ್ಕೆ ಎಣ್ಣೆಯೂ ದನಗಳಿಗೆ ಹಿಂಡಿಯೂ ಸಿಕ್ಕುತ್ತಿದ್ದಿತು. ಈಗ ಪಟ್ಟಣದ ಎಣ್ಣೆ ಕಾರ್ಖಾನೆ ಆ ಕಸಬನ್ನು ಸಂಪೂರ್ಣವಾಗಿ ನಾಶಮಾಡದಿದ್ದರೂ ಅದರ ಪ್ರಾಮುಖ್ಯತೆಯನ್ನು ಕಡಿಮೆ ಮಾಡಿದೆ. ಇತರ ಕೈಗಾರಿಕೆಗಳ ಸ್ಥಿತಿಯೂ ಇದೇ ರೀತಿ ಇದೆ. (ಜಿ.ಆರ್.ಐ.)

**ಗ್ರಾಮಾಡಳಿತ :** ಕರ್ನಾಟಕದ ಗ್ರಾಮಗಳಲ್ಲಿ ಪ್ರಾಚೀನ ಕಾಲದಿಂದಲೂ ಬಹುಮಟ್ಟಿನ ಸ್ವಾಯತ್ತತೆ ಇತ್ತು. ಅಶೋಕ ಮತ್ತು ಸಾತವಾಹನರ ಕಾಲದ ಶಾಸನಗಳಲ್ಲಿ ಅಲ್ಲದಿದ್ದರೂ ಮುಂದಿನ 6ನೆಯ ಶತಮಾನದ ಗಂಗಶಾಸನಗಳಲ್ಲಿಯೂ ಅನಂತರ ಪಲ್ಲವ, ನೊಳಂಬ, ಚಾಳುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ ಶಾಸನಗಳಲ್ಲೂ ಪ್ರಜಾಸತ್ತಾತ್ಮಕವಾದ ಗ್ರಾಮಾಡಳಿತ ಸುಸ್ಪಷ್ಟವಾಗಿ ಗೋಚರವಾಗುತ್ತದೆ. ಕೇಂದ್ರದಲ್ಲಿ ರಾಜನೇ ಪ್ರಭುವಾದರೂ ಗ್ರಾಮದ ಮಟ್ಟದಲ್ಲಿ ಊರು, ಒಕ್ಕಲು ಅಥ'ವಾ ಮಹಾಜನರು ಊರಿನ ಗೌಡ ಅಥ'ವಾ ಅಗ್ರಹಾರದ ಊರೊಡೆಯರ (ಪ್ರಭುಮುನ್ನೆಯ) ಅಧ್ಯಕ್ಷತೆಯಲ್ಲಿ ಸಭೆ ಸೇರಿ ನಿರ್ಣಯಗಳನ್ನು ತೆಗೆದುಕೊಳ್ಳುತ್ತಿದ್ದರು. ಕೆಲವೊಮ್ಮೆ ಗ್ರಾಮದ ಸಮಸ್ತರೂ (ಪ್ರಜೆ, ಹಲವು ಹದಿನೆಂಟು ಜಾತಿಯವರು, ಹಿಟ್ಟಿನವರು) ಈ ಸಭೆಯಲ್ಲಿ ಇರುತ್ತಿದ್ದರು. ಗಾವುಂಡ ಅಥವಾ ಊರೊಡೆಯನಲ್ಲದೆ ರಾಜಪ್ರತಿನಿಧಿಯಾದ ಅಧಿಕಾರಿಯೂ ಅಲ್ಲಿ ಹಾಜರಿರುತ್ತಿದ್ದ. ಗ್ರಾಮಸಭೆಗಳು ದಾನ ಅಥ'ವಾ ದತ್ತಿಗಳನ್ನು ಸ್ವೀಕರಿಸುತ್ತಿದ್ದುವು. ಅವುಗಳ ಸದ್ವಿನಿಯೋಗಕ್ಕೆ ವ್ಯವಸ್ಥೆ ಮಾಡುತ್ತಿದ್ದುವು. ಗೋಷ್ಠಿಗಳನ್ನು ಅಥ'ವಾ ವಿಶ್ವಸ್ಥರನ್ನು ನೇಮಕ ಮಾಡುತ್ತಿದ್ದುವು. ವಿವಾದಗಳನ್ನು ಇತ್ಯರ್ಥ ಮಾಡುತ್ತಿದ್ದುವು. ಗ್ರಾಮದ ದೇವಸ್ಥಾನ, ಕೆರೆ, ಶಾಲೆ ಅತಿಥಿಗೃಹ, ಅರವಟ್ಟಿಗೆಗಳ ನಿರ್ಮಾಣ ಮತ್ತು ಮೇಲ್ವಿಚಾರಣೆಗಳು ಅವುಗಳ ವ್ಯಾಪ್ತಿಗೆ ಸೇರಿದ್ದುವು. ಹಾಗೆಯೇ ಅನಾಥ'ರಿಗೆ ಹಾಗೂ ಸಂಕಟಪೀಡಿತರಿಗೆ ನೆರವು ಕೊಡುವುದೂ ಅವುಗಳ ಕೆಲಸವಾಗಿತ್ತು.

ಗಾಮುಂಡ, ಗಾವುಂಡ, ಗೌಡ, ಪಟೇಲ, ಪಾಟೀಲನೆಂದು ಕರೆಯಲ್ಪಡುತ್ತಿದ್ದ ಅಧಿಕಾರಿ ಗ್ರಾಮಾಡಳಿತೆಯ ಸೂತ್ರಧಾರನಾಗಿರುತ್ತಿದ್ದ. ಇವನು ರಾಜನಿಂದ ಅಥವಾ ಅವನ ಅಧಿಕಾರಿಗಳಿಂದ ನಿಯುಕ್ತನಿರಬಹುದು ಅಥ'ವಾ ಗ್ರಾಮಸ್ಥರಿಂದ ನೇಮಕಹೊಂದಿ ಪ್ರಭುತ್ವದ ಸಮ್ಮತಿ ಪಡೆದಿರಬಹುದೆಂದು ಶಾಸನಗಳು ತಿಳಿಸುತ್ತವೆ. ಈತ ಗ್ರಾಮಸ್ಥರ ಪ್ರತಿನಿಧಿ; ಹಾಗೇಯೇ ಸರ್ಕಾರದ ಪ್ರತಿನಿಧಿಯೂ ಹೌದು. ಕಂದಾಯ ವಸೂಲಿ ಮಾಡುವುದು, ಚಿಕ್ಕಪುಟ್ಟ ವಿವಾದಗಳನ್ನು ಬಗೆ ಹರಿಸುವುದೂ ಶಾಂತಿ ಸುವ್ಯವಸ್ಥೆಗಳನ್ನು ನೋಡಿಕೊಳ್ಳುವುದೂ ಇವನ ಹೊಣೆ. ಭೂಮಿ ಅಳೆಯುವುದು, ಕಂದಾಯದ ಲೆಕ್ಕಪತ್ರ ಇಡುವುದು ಹಾಗೂ ಭೂದಾಖಲೆಗಳನ್ನು ಇಡುವುದು – ಇವು ಸೇನಬೋವ, ಶ್ಯಾನುಭೋಗ, ಕರಣಿಕ, ಗಣಕ, ಮಧ್ಯಸ್ಥ, ಲೇಖಕ, ಕುಲಕರ್ಣಿ ಎಂದು ಕರೆಯುತ್ತಿದ್ದ ಇನ್ನೊಬ್ಬ ಅಧಿಕಾರಿಯ ಕೆಲಸ. ಇವರಿಬ್ಬರೂ ಸರ್ಕಾರದಿಂದ ಇನಾಂ ಭೂಮಿಗಳನ್ನು ಪಡೆಯುವುದಲ್ಲದೆ ಭೂಕಂದಾಯದ ಒಂದಂಶವನ್ನು ಪಡೆಯುತ್ತಿದ್ದರು. ಸ್ಥಳೀಯ ಪದ್ಧತಿಗಳಿಗೆ ಅನುಸರಿಸಿ ಕೆಲವೊಮ್ಮೆ ಸಂತೆಯ ತಲೆಪಟ್ಟಿಯಲ್ಲೂ ಜಮೀನು ವಿಕ್ರಯ ಅಥವಾ ವರ್ಗಾವಣೆಯ ಕಾಲದಲ್ಲೂ ಧಾನ್ಯಸಂಗ್ರಹ ಕಾಲದಲ್ಲೂ ಒಂದಿಷ್ಟು ಸಂಭಾವನೆ ಪಡೆಯುತ್ತಿದ್ದರು. ಇವರ

ಅಧಿಕಾರ ಪಿತ್ರಾರ್ಜಿತವಾಗಿ ಬರುತ್ತಿತ್ತು. ಈ ಅಧಿಕಾರವನ್ನು ಮಾರಲೂ ಇವರಿಗೆ ಪರವಾನಿಗೆ ಇರುತ್ತಿತ್ತು.

ಗ್ರಾಮಕ್ಕೆ ಪ್ರತ್ಯೇಕವಾದ ನ್ಯಾಯಾಡಳಿತ ವ್ಯವಸ್ಥೆ ಇರಲಿಲ್ಲವೆಂಬುದು ನಿಜವಾದರೂ ಮಹಾಜನರೂ ಗೌಡ ಅಥವಾ ಊರೊಡೆಯರೂ ಈ ಕೆಲಸ ನಿರ್ವಹಿಸುತ್ತಿದ್ದರು. ಯುಕ್ತ, ಅಯುಕ್ತ ಅಥವಾ ನಿಯುಕ್ತರೆಂಬ ರಾಜಪ್ರತಿನಿಧಿಗಳೂ ಕೆಲವೊಮ್ಮೆ ಸಹಾಯಕ್ಕೆ ಬರುತ್ತಿದ್ದರೆಂದು ಶಾಸನಗಳು ಹೇಳುತ್ತವೆ. ಹೆಚ್ಚಾಗಿ ಪಂಚನಿರ್ಣಯದ ಮೂಲಕ ತೀರ್ಪು ಕೊಡಲಾಗುತ್ತಿತ್ತು. ಒಮ್ಮೊಮ್ಮೆ ದಿವ್ಯಗಳನ್ನು ಏರ್ಪಡಿಸಿ ಯಾರು ತಪ್ಪಿತಸ್ಥರೆಂದು ನಿರ್ಣಯ ಕೊಡುತ್ತಿದ್ದರು. ಗಡಿ, ಆಸ್ತಿ, ವ್ಯವಹಾರಗಳಲ್ಲಿ ಸ್ಥಳೀಯ ಆಚಾರ ರೂಢಿಗಳಿಗೆ ಅನುಗುಣವಾಗಿ ನ್ಯಾಯ ನಿರ್ಣಯವಾಗುತ್ತಿತ್ತು.

ಗ್ರಾಮಾಡಳಿತದ ಕೆಳಮಟ್ಟದಲ್ಲಿ ತೋಟಿ, ತಳವಾರ, ಊಳಿಗ, ನೀರ್ಗಂಟಿ, ಓಲೆಕಾರ ಇತ್ಯಾದಿ ಹೆಸರಿನ ಸೇವಕರಿದ್ದರು. ಗಡಿಗಳನ್ನು ಕಾಯುವುದು ಹಾಗೂ ಶಾಂತಿಸುವ್ಯವಸ್ಥೆ ಕಾಪಾಡುವುದು ಇವರ ಕೆಲಸ. ಇದೇ ರೀತಿ ಇತರರಿಗೂ ನಿರ್ದಿಷ್ಟ ಕೆಲಸಗಳಿದ್ದುವು. ಗೌಡನ ಕೈಕೆಳಗಿದ್ದರೂ ಇವರು ಇಡೀ ಗ್ರಾಮದ ಸೇವಕರು. ಈ ಹುದ್ದೆಗಳೆಲ್ಲ ವಂಶಪಾರಂಪರ್ಯವಾಗಿ ಬರುತ್ತಿದ್ದುವು. ಇತ್ತೀಚೆಗೆ ಈ ವ್ಯವಸ್ಥೆ ಬದಲಾಗುತ್ತಿದೆ. (ಎಚ್.ವಿ.ಎನ್.)

**ಸಾಮಾಜಿಕ ವ್ಯವಸ್ಥೆ :** ಕರ್ನಾಟಕದ ಎಲ್ಲ ಗ್ರಾಮಗಳಲ್ಲಿ ಎದ್ದುಕಾಣುವ ಅಂಶವೆಂದರೆ ಜಾತಿವ್ಯವಸ್ಥೆ ಮತ್ತು ಸಾಮಾಜಿಕ ತರತಮಗಳ ಅನುಕ್ರಮಣಿಕೆ. ಗ್ರಾಮದಲ್ಲಿ ಒಬ್ಬ ವ್ಯಕ್ತಿಯ ಸಾಮಾಜಿಕ ಪ್ರತಿಷ್ಠೆ, ಸ್ಥಾನಮಾನ ಆತ ಸೇರುವ ಜಾತಿಯಿಂದ ನಿರ್ಧಾರಿತವಾಗುತ್ತದೆ. ಆರ್ಥಿಕವಾಗಿ ಆತ ಹೆಚ್ಚು ಸ್ಥಿತಿವಂತನಾಗಿದ್ದರೆ ಆ ಸ್ಥಾನಮಾನ ಇನ್ನೂ ಹೆಚ್ಚು ಗೌರವಾರ್ಹವಾಗುತ್ತದೆ. ಆರ್ಥಿಕವಾಗಿ ಸ್ಥಿತಿವಂತನಾದ ವ್ಯಕ್ತಿ ಆತ ಯಾವುದೇ ಜಾತಿಯವನಾಗಿರಲಿ ಗ್ರಾಮದಲ್ಲಿ ಪ್ರಭಾವೀವ್ಯಕ್ತಿಯಾಗುತ್ತಾನೆ. ಆತನನ್ನು ಜನ ಹೆಚ್ಚು ಗೌರವದಿಂದ ಕಾಣುತ್ತಾರೆ. ಅಷ್ಟೇ ಅಲ್ಲ ಆತ ಊರಿನ ಆಗುಹೋಗುಗಳಲ್ಲಿ ಪ್ರಮುಖ ಪಾತ್ರವಹಿಸುತ್ತಾನೆ. ಉದಾಹರಣೆಗೆ, ಎಲ್ಲ ಜಾತಿಗಳಿಗಿಂತ ಮೇಲಿರುವವನು ಬ್ರಾಹ್ಮಣ. ಅಲ್ಲಿಂದ ಕೆಳಗೆ ಬಂದರೆ ವೀರಶೈವ. ವೀರಶೈವರಲ್ಲೇ ಅನೇಕ ಉಪಶಾಖೆಗಳು ಸಾಮಾಜಿಕ ಅನುಕ್ರಮಣಿಕೆಯಲ್ಲಿರುತ್ತವೆ. ಉದಾಹರಣೆಗೆ, ಪೌರೋಹಿತ್ಯ ಕಾರ್ಯವನ್ನು ಮಾಡುವ ಜಂಗಮರದು ಉಪಶಾಖೆಗಳಲ್ಲಿ ಮೊದಲನೆಯದು. ಉಳಿದ ಭಕ್ತರಲ್ಲಿ ದೇವರ ಪೂಜೆ ಮಾಡುವ ಪೂಜಾರಿ ಅನಂತರ ಬರುತ್ತಾನೆ. ಬಣಜಿಗ, ಒಕ್ಕಲುತನದವ ಇವರಲ್ಲಿ ಯಾರು ಮೇಲು ಎಂಬ ಬಗ್ಗೆ ಎಲ್ಲಾ ಕಡೆಯಲ್ಲೂ ಏಕಾಭಿಪ್ರಾಯ ಇರುವುದಿಲ್ಲ. ಊರಿನಲ್ಲಿ ಯಾರು ಪ್ರಬಲರೋ ಅವರೇ ಶ್ರೇಷ್ಠರಾಗಬಹುದು. ನೇಯ್ಗೆಯವರು, ಕ್ಷೌರದವರು, ಕುಂಬಾರ (ಇವರೆಲ್ಲ ಲಿಂಗಾಯಿತರೇ) ಇವರು ಒಂದು ಕ್ರಮದಲ್ಲಿ ಬರುತ್ತಾರೆ. ಲಿಂಗಾಯಿತರನ್ನು ಬಿಟ್ಟರೆ ಊರಿನ ಅಕ್ಕಸಾಲಿ, ಬಡಗಿ, ಕಮ್ಮಾರ ಬರುತ್ತಾರೆ. ಇವರೆಲ್ಲ ಒಂದೇ ಜಾತಿಯವರಾದರೂ ತರತಮದಲ್ಲಿ ಆ ಅನುಕ್ರಮದಲ್ಲಿ ಬರುತ್ತಾರೆ. ಅಕ್ಕಸಾಲಿಗ ಚಿನ್ನದ ಕೆಲಸ ಮಾಡುವುದರಿಂದ ಅವನು ಉಳಿದವರಿಗಿಂತ ಶ್ರೇಷ್ಠನಾಗುತ್ತಾನೆ. ಬಡಗಿಗಿಂತ ಕುಮ್ಮಾರನದು ಕೈಮೈ ಕೊಳಕಾಗುವ ಕೆಲಸ. ಆದ್ದರಿಂದ ಕಮ್ಮಾರ ಬಡಗಿಗಿಂತ ಕೆಳಗೆ ಬರುತ್ತಾನೆ ಇತ್ಯಾದಿ. ಮುಸಲ್ಮಾನ, ಕುರುಬ, ಬೇಡ, ಹೊಲೆಯ ಇವರುಗಳು ಮಾಂಸಾಹಾರಿಗಳಾದುದರಿಂದ ಇನ್ನೂ ಕೆಳಗೆ ಬರುತ್ತಾರೆ. ಮಾಂಸಾಹಾರ ಮಾಡುವ ಜಾತಿಯಲ್ಲೇ ಯಾರಾದರೂ ಮಾಂಸ ಬಿಟ್ಟಿದ್ದರೆ ಆತ ತಾನು ಶ್ರೇಷ್ಠನೆಂದು ಹೇಳಿಕೊಳ್ಳುವುದೂ ಉಂಟು. ಒಂದು ಜಾತಿಗೂ ಇನ್ನೊಂದು ಜಾತಿಗೂ ಮದುವೆಯ ವ್ಯವಹಾರವಿರುವುದೇ ಇಲ್ಲ. ಹೆಣ್ಣು ಕೊಟ್ಟು ಹೆಣ್ಣು ತರುವಾಗ ತಮ್ಮ ಜಾತಿ, ಉಪಜಾತಿಯನ್ನೇ ನೋಡುತ್ತಾರೆ. ಆಕಸ್ಮಾತ್ ಬೇರೆ ಬೇರೆ ಉಪಜಾತಿಗಳಲ್ಲೆ ಮದುವೆ ನಡೆದರೆ ಅದೊಂದು ಸುದ್ದಿ ಆಗುತ್ತದೆ. ಜನ ಅದನ್ನು ಪ್ರಿಯವಾಗಿ ನೋಡುವುದಿಲ್ಲ. ಜಾತಿಜಾತಿಗಳ ಮಧ್ಯೆ ವಿವಾಹ ಗ್ರಾಮಗಳಲ್ಲಿ ನಡೆಯುವುದೇ ಇಲ್ಲ ಎನ್ನುವಷ್ಟರಮಟ್ಟಿಗೆ ಅಪರೂಪ. ವಿವಾಹನಿಯಮ ಅಷ್ಟೊಂದು ಕಟ್ಟುನಿಟ್ಟಾಗಿರುತ್ತದೆ. ಒಬ್ಬ ಲಿಂಗಾಯಿತ ಮತದ ನಿಯಮಕ್ಕೆ ವಿರುದ್ಧವಾಗಿ ಮಾಂಸಾಹಾರ, ಮದ್ಯಪಾನ ಮಾಡುತ್ತಿದ್ದಾನೆಂದು ತಿಳಿದೂ ಜನ ಅವನ ಮನೆಗೆ ಹೋಗಬಹುದು. ತಮ್ಮ ಮನೆಯ ಒಳಕ್ಕೂ ಬಿಟ್ಟುಕೊಳ್ಳಬಹುದು. ಅವನಿಗೆ ಬಹಳ ಹೆಚ್ಚೆಂದರೆ ಅವನ ಹೆಣ್ಣುಮಕ್ಕಳ ವಿವಾಹ ಸ್ವಲ್ಪ ಕಷ್ಟವಾಗಬಹುದು (ಅವನು ಶ್ರೀಮಂತನಾಗಿದ್ದರೆ ಅದೂ ಕಷ್ಟವಾಗಲಾರದು). ಆದರೆ ಬೇರೆ ಜಾತಿಯಲ್ಲಿ ಹೆಣ್ಣು ತಂದು ಕೊಳ್ಳುವುದನ್ನಾಗಲಿ ಕೊಡುವುದನ್ನಾಗಲಿ ಗ್ರಾಮದ ಜನ ಸಹಿಸರು. ಒಂದು ಪಕ್ಷ ಈ ರೀತಿಯ ವಿವಾಹ ನಿಯಮವನ್ನು ಗ್ರಾಮದ ಯಾವನೇ ವ್ಯಕ್ತಿ ಅತಿಕ್ರಮಿಸಿ ನಡೆದರೆ ಅವನಿಗೆ ಗ್ರಾಮದಲ್ಲಿ ಯಾವುದೇ ಗೌರವವಾಗಲೀ ಬೆಲೆಯಾಗಲಿ ದೊರೆಯುವುದಿಲ್ಲ. ಆತ ಒಂಟಿಯಾಗಿಯೇ ಉಳಿಯಬೇಕಾಗುತ್ತದೆ. ಇಂಥ ಭಯವಿರುವುದರಿಂದ ಗ್ರಾಮದಲ್ಲಿ ಈ ಜಾತಿ ವ್ಯವಸ್ಥೆ ಗಟ್ಟಿಯಾಗಿಯೇ ಉಳಿದುಬಿಡುತ್ತದೆ.

ಹೀಗೆ ಜಾತಿವ್ಯವಸ್ಥೆ ಗ್ರಾಮಗಳನ್ನು ಒಡೆದು ಹೋಳು ಮಾಡಿರುವಂತೆ ಕಂಡರೂ ಸೂಕ್ಷ್ಮವಾಗಿ ಗಮನಿಸಿದರೆ ನಿಜವಾದ ಚಿತ್ರ ಅಂಥ ಗಾಬರಿ ಹುಟ್ಟಿಸುವಂಥದೇನೂ ಆಗಿಲ್ಲ. ಬೇರೆ ಬೇರೆ ಜಾತಿಯ ಜನ ಸೌಹಾರ್ದದಿಂದ ನಡೆದುಕೊಳ್ಳುವುದು ಗ್ರಾಮಗಳಲ್ಲಿ ಸಾಮಾನ್ಯ ನಿಯಮ (ಅಪವಾದಗಳೆಂಬಂತೆ ಘರ್ಷಣೆಗಳೂ ಉಂಟು). ಕುರುಬ, ಬೇಡರ ದೇವರ ಉತ್ಸವಗಳಿಗೆ ಉಳಿದ ಮೇಲು ಜಾತಿಯ ಜನರೂ ಅಷ್ಟೇ ಉತ್ಸಾಹದಿಂದ ಬರುವುದುಂಟು. ಮುಸಲ್ಮಾನರ ಉತ್ಸವಗಳಲ್ಲಿ ಹಿಂದುಗಳೂ ಪಾಲುಗೊಳ್ಳುತ್ತಾರೆ. ಊರಿನಲ್ಲಿ ಯಾರದೋ ಮನೆಯಲ್ಲಿ ಮದುವೆ ಆದರೆ, ಸಾವು ಸಂಭವಿಸಿದರೆ ಅದು ಇಡೀ ಊರಿಗೆ ಸಂಬಂಧಿಸಿದ ಸಂಗತಿಯಾಗುತ್ತದೆ. ಬೇರೆ ಬೇರೆ ಜನರ ಸಹಕಾರ ಬಂದು ಕೂಡಿ ಕೆಲಸಗಳು ನಡೆದುಹೋಗುತ್ತವೆ.

ಗ್ರಾಮದ ಬಹುಮುಖ್ಯವಾದ ಭಾಗವೆಂದರೆ ಊರಿನ ದೇವಾಲಯ. ಗ್ರಾಮದಲ್ಲಿ ಕರಿಯಪ್ಪ, ಮಾರವ್ವ, ಮಾಸ್ತಮ್ಮ, ಹನುಮಂತ ಮುಂತಾದ ಸಣ್ಣ ದೇವರಿಗೆ ದೇವಾಲಯಗಳಿದ್ದರೂ ಎಲ್ಲಕ್ಕಿಂತ ಮುಖ್ಯವಾಗಿರುವ ಒಂದು ದೇವಾಲಯವಿರುತ್ತದೆ. ಆ ದೇವಾಲಯದ ಸುತ್ತ ಊರಿನ ಎಲ್ಲಾ ಚಟುವಟಿಕೆಗಳೂ ಹಬ್ಬಿಕೊಂಡಿರುತ್ತವೆ. ಆ ದೇವರು ಜನರ ಕಷ್ಟದ ಸಮಯದಲ್ಲಿ ಸುಖದ ದಿನಗಳಲ್ಲಿ ತಮ್ಮನ್ನು ನೋಡಿಕೊಳ್ಳುವವನು ಎಂದು ಜನ ನಂಬುತ್ತಾರೆ. ಮನೆಯಲ್ಲಿ ತೀವ್ರಕಾಯಿಲೆಯಾದರೆ, ದನಕ್ಕೆ ಜ್ವರ ಬಂದರೆ, ಮೇಯಲು ಹೋಗಿದ್ದ ದನ ಮನೆಗೆ ಬಾರದೆ ಇದ್ದರೆ, ಹೊಲದಲ್ಲಿ ಬಾವಿ ತೋಡಿಸಲು, ಮದುವೆ ನಿಶ್ಚಯ ಮಾಡಲು ದೇವರ ಅಪ್ಪಣೆ ಬೇಕು. ಊರಿನಲ್ಲಿ ಜಗಳವಾದರೆ ಪಂಚಾಯ್ತಿ ನಡೆಸುವುದು ದೇವಾಲಯದಲ್ಲಿ. ದೇವರ ರಥೋತ್ಸವ ಗ್ರಾಮೀಣರ ಬಾಳಿನಲ್ಲಿ ಬಹುಮುಖ್ಯ ಘಟನೆ. ಅಂದು ಗ್ರಾಮೀಣರು ನೂರಾರು ನೆಂಟರಿಷ್ಟರೊಂದಿಗೆ ಸೇರಿ ದೇವರ ಉತ್ಸವದಲ್ಲಿ ಪಾಲ್ಗೊಳ್ಳುತ್ತಾರೆ. ಈ ಉತ್ಸವ ಅವರಿಗೆ ಮನರಂಜನೆಯನ್ನು ನೀಡುತ್ತದೆ.

ಹಬ್ಬಹರಿದಿನಗಳನ್ನು ಗ್ರಾಮಗಳ ಜನ ಸಂಭ್ರಮದಿಂದ ಆಚರಿಸುತ್ತಾರೆ. ವರ್ಷವಿಡೀ ದುಡಿದು ಬಳಲಿದ ಜನಕ್ಕೆ ಅಂದು ವಿಶ್ರಾಂತಿಯ ಜೊತೆಗೆ ಮನರಂಜನೆಯೂ ದೊರಕುತ್ತದೆ. ಯುಗಾದಿ, ದೀಪಾವಳಿ, ಗೌರಿ, ಸಂಕ್ರಾಂತಿ, ಶಿವರಾತ್ರಿ ಮುಂತಾದ ಪ್ರಮುಖ ಹಬ್ಬಗಳಲ್ಲಿ ಊರ ಜನ ಮಿಂದು ಮಡಿಯುಟ್ಟು ಊರಿನ ಗ್ರಾಮದೇವತೆಗಳ ಗುಡಿಗಳಿಗೆ ಪೂಜೆಪುನಸ್ಕಾರ ಮಾಡಿಸುತ್ತಾರೆ. ದೇವಸ್ಥಾನಗಳನ್ನು ದುರಸ್ತು ಮಾಡಿಸುವುದು, ಬಣ್ಣಹೊಡೆಸುವುದು ಮೊದಲಾದ ಕಾರ್ಯಗಳು ಜರುಗುತ್ತವೆ. ಹಬ್ಬದ ದಿನ ಗ್ರಾಮದ ಜನ ಪರ ಊರುಗಳಿಂದಲೂ ನೆಂಟರಿಷ್ಟರನ್ನು ಆಹ್ವಾನಿಸುವುದುಂಟು. ಬಂದವರಿಗೆ ಪ್ರೀತಿಯ ಆದರಾತಿಥ್ಯ ಸತ್ಕಾರಗಳು ನಡೆಯುತ್ತವೆ. ಯುಗಾದಿ ಹಬ್ಬದ ದಿನ ಸಂಜೆ ಎಲ್ಲರೂ ದೇವಾಲಯದ ಸುತ್ತ ನೆರೆದು ಚಂದ್ರದರ್ಶನ ಮಾಡುತ್ತಾರೆ. ಸಾಮಾನ್ಯವಾಗಿ ಒಂದೇ ಬಗೆಯಾಗಿರುವ ಗ್ರಾಮೀಣರ ಬಾಳಿನ ಬೇಸರವನ್ನು ಇಂಥ ಹಬ್ಬಗಳು ಹೋಗಲಾಡಿಸುತ್ತವೆ. ಅಂದು ಹೊಸ ಬಟ್ಟೆ ತೊಡುತ್ತಾರೆ. ಸಿಹಿ ಊಟ ಮಾಡುತ್ತಾರೆ. ವಿಶ್ರಾಂತಿಯನ್ನು ಅನುಭವಿಸುತ್ತಾರೆ. ಗ್ರಾಮಗಳಲ್ಲಿ ಹಬ್ಬದ ದಿನಗಳು ಉಳಿದ ದಿನಗಳಿಂದ ಪ್ರತ್ಯೇಕವಾಗಿ ಎದ್ದುನಿಲ್ಲುತ್ತವೆ.

ಮದುವೆ ಗ್ರಾಮಗಳ ಜನರನ್ನು ಒಟ್ಟಿಗೆ ಬೆಸೆಯುವ ಇನ್ನೊಂದು ಸಾಂಸ್ಕೃತಿಕ ಚಟುವಟಿಕೆಯಾಗಿದೆ. ನಾಲ್ಕೈದು ದಿನಗಳವರೆಗೆ, ಕೆಲವೊಮ್ಮೆ ಅದಕ್ಕೂ ಹೆಚ್ಚು ದಿನ ನಡೆಯುವ ಈ ಕಾರ್ಯ ಗ್ರಾಮೀಣರ ಬದುಕನ್ನು ಪರಸ್ಪರ ನಿಕಟಗೊಳಿಸುತ್ತದೆ; ಒಂದಾಗುವಂತೆ ಪ್ರೇರೇಪಿಸುತ್ತದೆ. ದೇವರ ಉತ್ಸವ, ಹಬ್ಬ ಇವುಗಳನ್ನು ತಮ್ಮ ಮನರಂಜನೆಗಾಗಿಯೂ ಬಳಸಿಕೊಳ್ಳುವಂತೆ ಮದುವೆಗಳನ್ನೂ ಬಳಸಿಕೊಳ್ಳುತ್ತಾರೆ. ಗ್ರಾಮಗಳಲ್ಲಿ ಮದುವೆ ಯಾರದೇ ಮನೆಯಲ್ಲಿ ಆಗಲಿ ಪ್ರತಿಯೊಂದು ಮನೆಯವರು ಅದಕ್ಕೆ ಸಹಕರಿಸುತ್ತಾರೆ. ಚಪ್ಪರ ಮುಂಗಟ್ಟು ಕಟ್ಟುವುದರಿಂದ ಹಿಡಿದು ಹೆಣ್ಣುಗಂಡುಗಳನ್ನು ಮನೆದುಂಬಿಸಿಕೊಳ್ಳುವವರೆಗೂ ಎಲ್ಲ ಹಂತಗಳಲ್ಲಿಯೂ ಸಹಕಾರ ಇದ್ದೇ ಇರುತ್ತದೆ. ಮದುವೆ ಯಾರ ಮನೆಯಲ್ಲಿ ನಡೆಯುತ್ತದೆಯೋ ಆ ವ್ಯಕ್ತಿ ಊರಿಗೆ ಊಟ ಹಾಕಿಸಬೇಕಾಗುತ್ತದೆ. ಸೌದೆ ನೀರುನಿಡಿ ಮೊದಲಾದವುಗಳ ವ್ಯವಸ್ಥೆಗೆ ಗ್ರಾಮದ ಜನ ನೆರವು ನೀಡುತ್ತಾರೆ. ಆ ಜಾತಿ ಈ ಜಾತಿಯವರೆನ್ನದೆ ಎಲ್ಲ ಜಾತಿಯ ಜನರೂ ಇಂಥ ಸಮಾರಂಭಗಳಲ್ಲಿ ಭಾಗವಹಿಸುತ್ತಾರೆ. ಹೀಗೆ ಪರಸ್ಪರ ಆತ್ಮೀಯ ಸಂಬಂಧ ಅವರಲ್ಲಿ ಏರ್ಪಡುತ್ತದೆ. ಇತ್ತೀಚಿನ ದಿನಗಳಲ್ಲಿ ಯಾವುದೇ ಅಬ್ಬರ, ಆಡಂಬರ, ಶಾಸ್ತ್ರಗಳಿಲ್ಲದ ಸರಳವಿವಾಹಗಳು ಜನಪದರಲ್ಲಿ ಅನುಷ್ಠಾನಕ್ಕೆ ಬರುತ್ತಿವೆ.

ಗ್ರಾಮಗಳ ಬಾಲಕ ಬಾಲಕಿಯರ ಮನರಂಜನೆಗಳಲ್ಲಿ ಮರಕೋತಿಯಾಟ, ಚಿಣ್ಣಿದಾಂಡು, ಚೆಂಡು, ಗೋಲಿ, ಗಜ್ಜುಗ, ಎಳ್ಳುಮಣೆ, ಕುಂಟೆ ಪಿಲ್ಲಿ, ಪಿಲ್ಲಿ, ಚೌಕಾಬಾರ, ಪಗಡೆ, ಕಣ್ಣುಮುಚ್ಚಾಲೆ, ಕುಸ್ತಿ— ಇವು ಮುಖ್ಯವಾದವು. ದೊಡ್ಡವರಿಗೆ ಕೋಲಾಟ, ಕುಸ್ತಿ, ತೆಂಗಿನಕಾಯಿ ಒಡೆಯುವಂಥ ಸಾಹಸಗಳು ಮುಖ್ಯವಾದುವು. ಬಾಲಕರು ಹಾಗೂ ದೊಡ್ಡವರು ಒಗಟುಗಳನ್ನು ಹೇಳುವುದರಲ್ಲಿ ಬಿಡಿಸುವುದರಲ್ಲಿ ಸಂತೋಷವನ್ನು ಅನುಭವಿಸಿರುತ್ತಾರೆ. ಹಿಂದೆ ರಾತ್ರಿಯೆಲ್ಲಾ ಬಯಲಾಟಗಳು ನಡೆಯುತ್ತಿದ್ದವು. ಈಗ ಅವು ಮಾಯವಾಗುತ್ತಿವೆ. ಆಗಾಗ್ಗೆ ಸಣ್ಣ ನಾಟಕ ಕಂಪನಿಗಳು ಬಂದು ಹೋಗುವುದುಂಟು. ಊರಿನ ಯುವಕರೇ ಸೇರಿ ನಾಟಕಗಳನ್ನು ಕಲಿತು ಆಡುವುದೂ ಉಂಟು. ಹೆಂಗಸರು ಬೀಸುವುದರ ಜೊತೆಜೊತೆಯಲ್ಲೇ ಹಾಡಿದರೆ ರೈತರು ಸುಗ್ಗಿಮಾಡುವ ಕೆಲಸದ ಶ್ರಮವನ್ನು ಹಾಡುಗಳ ಮೂಲಕ ಕಡಿಮೆ ಮಾಡಿಕೊಳ್ಳುತ್ತಾರೆ.

**ನಾಗರಿಕತೆಯ ಪ್ರಭಾವ :** ಐವತ್ತು ಅರವತ್ತು ವರ್ಷಗಳ ಹಿಂದೆ ನಿಜವಾಗಿದ್ದ ಮೇಲಿನ ವಿಷಯಗಳು ಈಗಲೂ ತಕ್ಕಮಟ್ಟಿಗೆ ನಿಜವಾಗಿದ್ದರೂ ಆಧುನಿಕ ನಾಗರಿಕತೆಯ ಪ್ರವೇಶವಾಗಿ ಗ್ರಾಮೀಣ ಜನರ ಜೀವನ ಕ್ರಮದಲ್ಲಿ ಅನೇಕ ಮಾರ್ಪಾಟುಗಳಾಗಿವೆ. ಹಿಂದೆ ಗ್ರಾಮಗಳಲ್ಲಿ ವ್ಯಕ್ತಿ ಗುಂಪಿನ ಭಾಗವಾಗಿ ಬದುಕುತ್ತಿದ್ದ. ಈ ದಿನ ಅವನು ತನ್ನ ವ್ಯಕ್ತಿತ್ವದ ಅರಿವನ್ನು ಪಡೆಯಲು ಯತ್ನಿಸುತ್ತಿದ್ದಾನೆ. ಊರೂರಿಗೆ ಬಸ್ಸುಗಳು ತಿರುಗುತ್ತಿದ್ದು ಅವು ಪಟ್ಟಣ ಮತ್ತು ಗ್ರಾಮಗಳನ್ನು ಹತ್ತಿರ ತಂದಿವೆ. ಬಸ್ಸು, ಲಾರಿ, ಟ್ರಾಕ್ಟರುಗಳು ರೈತರ ಸರಕನ್ನು ಸುಲಭವಾಗಿ ಪೇಟೆಗೆ ಕೊಂಡೊಯ್ಯುತ್ತವೆ. ಪಟ್ಟಣದ ಸಂಪರ್ಕದಿಂದ ಅವನು ಹೆಚ್ಚುಹೆಚ್ಚಾಗಿ ಹೊರಪ್ರಪಂಚದ ಬಗ್ಗೆ ಅರಿವನ್ನು ಪಡೆಯುತ್ತಿದ್ದಾನೆ. ವಿದ್ಯುಚ್ಛಕ್ತಿಯ ಜೊತೆಗೆ ರೇಡಿಯೋ ದೂರದರ್ಶನ ಬಂದಿದೆ. ಮನೆಯಲ್ಲಿ ಮದುವೆಯಾದರೆ ಧ್ವನಿವರ್ಧಕಗಳನ್ನು ತರಿಸುವುದುಂಟು. ಹಿಂದಿನ ಹಳ್ಳಿಯ ಹಾಡುಗಳ, ಬಯಲಾಟದ ಹಾಡುಗಳ ಜಾಗದಲ್ಲಿ ಇಂದು ಸಿನಿಮಾ ಹಾಡುಗಳು ಕೇಳಿಬರುತ್ತವೆ. ಸಿನಿಮಾ ಗ್ರಾಮೀಣರ ಮೇಲೆಯೂ ಸಾಕಷ್ಟು ಪ್ರಭಾವ ಬೀರಿವೆ. ವಿದ್ಯಾವಂತರ ಸಂಖ್ಯೆ ಕ್ರಮೇಣ ಬೆಳೆಯುತ್ತಿದೆ. ರೈತರಿಗೆ ತಮ್ಮ ಮಕ್ಕಳು ಓದಿ ಮುಂದಕ್ಕೆ ಬರಬೇಕೆಂಬ ಆಸೆ ಬಂದಿದೆ. ಗ್ರಾಮಗಳಲ್ಲಿ ಪ್ರೌಢಶಾಲೆಗಳಿವೆ. ದೊಡ್ಡದೊಡ್ಡ ಗ್ರಾಮಗಳಿಗೆ ಜೂನಿಯರ್ ಕಾಲೇಜುಗಳು ಬಂದಿವೆ. ಹೀಗಾಗಿ ರೇಡಿಯೋದಂತೆಯೇ ದೂರದರ್ಶನವೂ ಕೇಬಲ್ ಟಿ.ವಿ.ಜಾಲವೂ ವೃತ್ತಪತ್ರಿಕೆಗಳೂ ಮೂಲೆಮೂಲೆಯ ಹಳ್ಳಿಗಳನ್ನು ಸೇರಿವೆ. ಇವೆಲ್ಲ ಗ್ರಾಮಗಳ ಚಹರೆಯನ್ನೇ ಬದಲಾಯಿಸಿವೆ. ಗ್ರಾಮೀಣ ಜನರ ದೃಷ್ಟಿಯನ್ನೂ ಬದಲಾಯಿಸಿದೆ. ಹೆಚ್ಚಿದ ನೀರಾವರಿ, ಸುಧಾರಿಸಿದ ಬೇಸಾಯ ಕ್ರಮ, ಕೃತಕ ಗೊಬ್ಬರ ಮೊದಲಾದವುಗಳಿಂದ ಆಹಾರ ಉತ್ಪಾದನೆ ಹೆಚ್ಚಿದೆ. ಬೆಳೆದುದಕ್ಕೆ ಹೆಚ್ಚಿನ ಬೆಲೆಯೂ ರೈತರಿಗೆ ದೊರಕುತ್ತಿದೆ. ಇದರಿಂದ ಹಿಂದಿಗಿಂತ ಇಂದಿನ ರೈತರ ಕೈಲಿ ಹೆಚ್ಚು ಹಣ ಓಡಾಡುತ್ತಿದೆ. ಹಿಟ್ಟಿನ ಗಿರಣಿಗಳು ಬಂದು ಬೀಸುವ ಕಲ್ಲುಗಳು ತತ್ಸಂಬಂಧವಾದ ಹಾಡುಗಳು ಮರೆಯಾಗುತ್ತಿವೆ. ದೊಡ್ಡ ದೊಡ್ಡ ಗ್ರಾಮಗಳಲ್ಲಿ ಉನ್ನತ ಶಿಕ್ಷಣ ಪಡೆದ ವೈದ್ಯರಿರುವ ಆಸ್ಪತ್ರೆಗಳಿರುವುದರಿಂದ ಜನರಿಗೆ ಹಿಂದಿಗಿಂತ ಹೆಚ್ಚು ಸುಲಭವಾಗಿ ವೈದ್ಯಕೀಯ ಸಹಾಯ ದೊರಕುತ್ತಿದೆ. ಅಡುಗೆ ಅನಿಲ ಅಸಂಖ್ಯ ಮನೆಗಳ ಅಡುಗೆ ಮನೆಯಲ್ಲಿ ಉರಿಯುತ್ತಿದೆ. ಗೋಬರ್ ಗ್ಯಾಸ್ ಉತ್ಪಾದನೆಯೂ ಹಲವಾರು ಮನೆಗಳ ಇಂಧನ ಪೂರೈಕೆಯ ಪ್ರಧಾನ ಸಾಧನವಾಗಿದೆ. ಉತ್ತಮ ರಸ್ತೆ ವ್ಯವಸ್ಥೆ ಮತ್ತು ಸಾರಿಗೆ ವ್ಯವಸ್ಥೆ ಕಲ್ಪಿಸಲು ಸರ್ಕಾರ ವಿಶ್ವಬ್ಯಾಂಕ್ ನೊರೆ ಹೊಕ್ಕಿದ್ದು ಹೊಸ ರಸ್ತೆಗಳ ನಿರ್ಮಾಣಕಾರ್ಯ ಮತ್ತು ಅಗಲೀಕರಣ ಕಾರ್ಯಗಳು ಕಾರ್ಯಗತವಾಗುತ್ತಿವೆ.

ಹಿಂದೆ ಗ್ರಾಮದ ಸ್ಥಳೀಯ ವಿದ್ಯಮಾನ ಆಗುಹೋಗುಗಳು ಊರಿನ ಹಿರಿಯರ ಹಿಡಿತದಲ್ಲಿರುತ್ತಿದ್ದವು. ಈಗ ಚುನಾವಣೆಯ ಮೂಲಕ ಪ್ರತಿನಿಧಿಗಳು ಗ್ರಾಮಪಂಚಾಯಿತಿಗೆ ಆರಿಸಿ ಬರುತ್ತಾರೆ. ಸಾರ್ವತ್ರಿಕ ಚುನಾವಣೆಗಳ ಮೂಲಕ ದೇಶದ ರಾಜಕೀಯ ಪಕ್ಷಗಳು ಗ್ರಾಮೀಣರ ಜೀವನರಂಗವನ್ನು ಪ್ರವೇಶಿಸಿವೆ. ಜನರಲ್ಲಿ ರಾಜಕೀಯ ಅರಿವು ಮೂಡಿದೆ. ಗ್ರಾಮಪಂಚಾಯಿತಿಯಿಂದ ಹಿಡಿದು ಜಿಲ್ಲಾ ಪಂಚಾಯಿತಿವರೆಗೂ ಮೀಸಲಾತಿ ವ್ಯವಸ್ಥೆ ಬಂದಿರುವುದು (ನೋಡಿ: ಸ್ಥಳೀಯ ಸಂಸ್ಥೆಗಳು) ಸಮಾಜದ ವಿವಿಧ ಸ್ತರದ ಜನಸಮುದಾಯ ಆಡಳಿತ ಮತ್ತು ಅಧಿಕಾರದ ಚುಕ್ಕಾಣಿ ಹಿಡಿಯುವ ಸಂದರ್ಭ ಸೃಷ್ಟಿಯಾಗಿದೆ.

ಆಧುನೀಕರಣ ಗ್ರಾಮಗಳನ್ನು ಪ್ರವೇಶಿಸಿರುವುದು ಮೇಲ್ನೋಟಕ್ಕೆ ಕಾಣುವಂಥದು. ಆದರೂ ಅಲ್ಲಿ ಗುಪ್ತವಾಗಿ, ಗಟ್ಟಿಯಾಗಿ ಪ್ರಾಚೀನ ಪರಂಪರೆ ಕೆಳಗೆ ಕುಳಿತಿದೆ. ಪಟ್ಟಣದಷ್ಟು ಬೇಗ ಗ್ರಾಮ ತನ್ನ ಪ್ರಾಚೀನ ಪರಂಪರೆಯನ್ನು ಬಿಟ್ಟುಕೊಡಲಾರದು ಎನಿಸುತ್ತದೆ. ಗ್ರಾಮೀಣರ ದೃಷ್ಟಿ ಎಷ್ಟೇ ಲೌಕಿಕವಾಗಿದ್ದರೂ ಅದು ಸಂಪೂರ್ಣವಾಗಿ ತನ್ನ ಹಿಂದಿನ ಸ್ವರೂಪವನ್ನು ಕಳೆದುಕೊಂಡಿದೆಯೆಂದು ಹೇಳುವುದು ಕಷ್ಟ. ಹಳೆಯ ಹಾಗೂ ಹೊಸದರ ಸಾಮರಸ್ಯ ಸುಗಮವಾಗಿ ಸಾಗಿ ತನ್ನದೇ ಆದ ಒಂದು ಹೊಸ ನೀತಿ ಮತ್ತು ವ್ಯವಸ್ಥೆಯನ್ನು ಕಾಣುವ ಹಾದಿಯಲ್ಲಿ ನಮ್ಮ ಗ್ರಾಮಗಳು ಮುನ್ನಡೆಯುತ್ತಿವೆ. (ಎಂ.ಪಿ.)

**ಗ್ರಾಮದೇವತೆಗಳು :** ಗ್ರಾಮಕ್ಕೆ ಒಳಿತನ್ನುಂಟುಮಾಡುವ, ಜನಪದರಲ್ಲಿ ಭಯಭಕ್ತಿಗಳನ್ನು ಹುಟ್ಟಿಸುವ ಪ್ರತಿಯೊಂದು ಗ್ರಾಮಕ್ಕೂ ಒಂದು ಗ್ರಾಮದೇವತೆ ಇರುತ್ತದೆ. ಇದೇ ಗ್ರಾಮದ ಮುಖ್ಯ ದೈವ. ಈ ದೈವವನ್ನು ಪ್ರತಿಯೊಂದು ಗ್ರಾಮದವರು ತಮ್ಮ ಗ್ರಾಮಕ್ಕಾಗಿ ಸೃಷ್ಟಿಸಿ ಸ್ಥಾಪಿಸಿ ಪೂಜಿಸಲು ಪ್ರಾರಂಭ ಮಾಡಿದುದರಿಂದ ಇದಕ್ಕೆ ಗ್ರಾಮದೇವತೆಯೆಂದು ಹೆಸರಾಯಿತು. ಭಾರತದಲ್ಲಿ ಸಾಮಾನ್ಯವಾಗಿ ಪ್ರತಿಯೊಂದು ಗ್ರಾಮಕ್ಕೂ ಒಂದು ಗ್ರಾಮದೇವತೆಯೂ ದೇವಸ್ಥಾನವೂ ಇವೆ. ಹಳ್ಳಿಗಳು ಅತಿ ಚಿಕ್ಕವೂ ಹತ್ತಿರದಲ್ಲಿರುವವೂ ಆದಾಗ, ಎರಡು ಮೂರು ಹಳ್ಳಿಗಳಿಗೆ ಮಧ್ಯಸ್ಥವಾಗಿ ಎಲ್ಲರಿಗೂ ಹತ್ತಿರವಾಗುವ ಸ್ಥಳದಲ್ಲಿ ಒಂದು ಗ್ರಾಮದೇವತೆಯ ದೇವಾಲಯ ಸ್ಥಾಪಿತವಾಗಿರುತ್ತದೆ. ನೂರಕ್ಕೆ ತೊಂಬತ್ತೊಂಬತ್ತು ದೇವಾಲಯಗಳು ಊರ ಹೊರಗಿರುತ್ತವೆ.

ಈ ದೇವಾಲಯಗಳು ಸ್ಥಾಪಿತವಾದ ಕಾಲ ಯಾವುದು ಎಂಬುದಕ್ಕೆ ಐತಿಹಾಸಿಕ ಆಧಾರಗಳು ದೊರೆತಿರುವುದು ಅತಿ ಸ್ವಲ್ಪ. ಆದರೆ ಜನಪದದಲ್ಲಿ ರೂಢಿಯಲ್ಲಿರುವ ಮತ್ತು ಕೆಲವು ಗ್ರಾಮದೇವತೆಗಳ ದೇವಾಲಯವನ್ನು ಕುರಿತ ಐತಿಹ್ಯಗಳಿಂದ ಸಂಗ್ರಹಿತವಾದ ಅಂಶಗಳು ಹೀಗಿವೆ: ಆದಿಮಾನವನಿಗೆ ತಾನು ಕಂಡ ಜಗತ್ತಿನ ಬಗ್ಗೆ ಒಂದು ಬಗೆಯ ವಿಸ್ಮಯವೂ ಭಯವೂ ಮೊದಲು ಉಂಟಾಗಿರಬೇಕು. ಕ್ರಮೇಣ ಅವನು ಅಂಥ ಸೃಷ್ಟಿವೈಚಿತ್ರ್ಯಕ್ಕೆ ಕಾರಣಕರ್ತನಾದ ದೈವ ಒಂದಿರಬೇಕು ಎಂಬ ಭಾವನೆಯನ್ನು ಬೆಳೆಸಿಕೊಂಡನೆಂದು ಕಾಣುತ್ತದೆ. ಗ್ರಾಮದೇವತೆ ಮತ್ತು ಇತರ ಉಪದೇವತೆಗಳ ಕಲ್ಪನೆಯ ಅನಂತರ ಮೂಡಿದ್ದು ದೇವರ ಕಲ್ಪನೆ; ಪ್ರಪಂಚಕ್ಕೆಲ್ಲ ಹೊಣೆಗಾರ; ಅವನಿಗೆ ಕೈತುಂಬ ಕೆಲಸವಾದ್ದರಿಂದ

ಆತ ಯಾವ ಕಡೆ ಅಂತ ನೋಡುತ್ತಾನೆ? ತಮ್ಮ ಕಡೆ ಗಮನಿಸುವುದಕ್ಕೆ ಅವನಿಗೆ ಹೊತ್ತು ಎಲ್ಲಿದೆ? ಆದ್ದರಿಂದ ತಾವು ದೇವರಿಗೂ ತಮಗೂ ನಡುವೆ ಒಬ್ಬ ಮಧ್ಯಸ್ಥನನ್ನು ಸಣ್ಣ ದೇವರನ್ನು ಏರ್ಪಡಿಸಿಕೊಂಡು ಅವನನ್ನು ತೃಪ್ತಿಪಡಿಸಿ, ಅವನ ಮೂಲಕ ಜಗತ್ಕರ್ತನನ್ನು ಒಲಿಸಿಕೊಳ್ಳುವುದು ಸುಲಭ ಎಂಬ ಭಾವನೆ ಬಲಿತಂತೆಲ್ಲ ಊರಿಗೊಂದು ಗ್ರಾಮದೇವತೆ ಸೃಷ್ಟಿಯಾಗಿರಬೇಕು. ಗ್ರಾಮಘಟಕಗಳು ಪ್ರಾರಂಭವಾದಂದಿನಿಂದಲೇ ಗ್ರಾಮದೇವತೆಯೂ ಅಸ್ತಿತ್ವಕ್ಕೆ ಬಂತು ಎಂದು ಹೇಳಬಹುದು. ಆದ್ದರಿಂದ ಗ್ರಾಮದೇವತೆಯ ಕಲ್ಪನೆ ಅತ್ಯಂತ ಪ್ರಾಚೀನ ಕಾಲಕ್ಕೆ ಅಂದರೆ ಆರ್ಯರು, ಅನಾರ್ಯರು, ಉಪನಿಷತ್ತು, ವೇದ, ಎಲ್ಲವುಗಳ ಹಿಂದಲ ಕಾಲಕ್ಕೆ ಸೇರಿದುದೆಂದು ಹೇಳಬಹುದು. ರಾಮಾಯಣ ಕಾಲಕ್ಕೂ ಹಿಂದಿನಿಂದಲೇ ಈ ದೇವತೆ ಇದ್ದಿರಬೇಕು. ಸೀತೆ ಗಂಗೆಯನ್ನು ದಾಟುವಾಗ ಗಂಗೆಯನ್ನು ಹೀಗೆ ಪ್ರಾರ್ಥಿಸುತ್ತಾಳೆ; 'ನಿನ್ನ ತೀರದಲ್ಲಿರುವ ದೇವತೆಗಳಿಗೆ ಅನೇಕ ನೈವೇದ್ಯಗಳನ್ನೂ ಮಾಡಿಸುವೆನು. ನಿನಗೆ ಸಂತೋಷವಾಗುವ ಮರ್ಯಾದೆಯಲ್ಲಿ ಸಾವಿರ ಸುರಾಘಟಗಳನ್ನೂ ಅನೇಕ ಮಾಂಸೋಪಹಾರಗಳನ್ನೂ ಬಲಿಯಾಗಿ ಕೊಡುವೆನು'. ಸೀತೆ ಹೇಳಿರುವ ಈ ದೇವತೆಗಳು ಗಂಗಾತೀರದ ಗ್ರಾಮದೇವತೆಗಳೆಂದು ಊಹಿಸಲು ಅವಕಾಶವಿದೆ.



ಮಾವಿನಕೆರೆ ಚೌಡೇಶ್ವರಿ

ಹಳ್ಳಿಯ ರೈತರು ವಿವಾಹಗಳಲ್ಲಿ ಗ್ರಾಮದೇವತೆಗೆ ಮೊದಲ ವೀಳ್ಯ ಎತ್ತುತ್ತಾರೆ. ಈ ವೀಳ್ಯ ಎಂಬುದನ್ನು ಸಹ ಆರ್ಯರು ದ್ರಾವಿಡರಿಂದ ಅಂಗೀಕರಿಸಿದುದರಿಂದ, ಗ್ರಾಮದೇವತೆಯ ಮೂಲ ತುಂಬ ಪ್ರಾಚೀನ ಕಾಲಕ್ಕೆ ಹೋಗುತ್ತದೆಂಬುದರಲ್ಲಿ ಸಂದೇಹವಿಲ್ಲ. ಅನಂತರದ ವರ್ಷಗಳಲ್ಲಿ ಎಷ್ಟರಮಟ್ಟಿಗೆ ಗ್ರಾಮದ ಅವಿಭಾಜ್ಯ ಅಂಗವಾಯಿತೆಂದರೆ, ಸರ್ಕಾರದವರು ಪ್ರತಿಯೊಂದು ಗ್ರಾಮಕ್ಕೂ ಗ್ರಾಮದೇವತೆಗೂ ಉಂಬಳಿ ಜಮೀನನ್ನು ಕಡ್ಡಾಯವಾಗಿ ಬಿಟ್ಟು ಅದನ್ನು ಗ್ರಾಮದ ಬಾರಾಬಲೂತಿ ಲೆಕ್ಕದಲ್ಲಿ ಸೇರಿಸಿದ್ದಾರೆ. ಹೀಗೆ ಪ್ರಾಚೀನ ಕಾಲದಿಂದ ಅರ್ವಾಚೀನ ಕಾಲದ ವರೆಗೆ ಗ್ರಾಮದೇವತೆ ಜನಪದ ಜೀವನದಲ್ಲಿ ಅವಿಭಾಜ್ಯವಾಗಿ ಸೇರಿಕೊಂಡು ಬಂದಿದೆ.

ಜನತೆಯ ದೃಷ್ಟಿಯಲ್ಲಿ ಗ್ರಾಮದೇವತೆಯ ಮಟ್ಟ ಅತಿ ಹೆಚ್ಚಿನದೂ ಅಲ್ಲ, ಅತಿ ಕಡಿಮೆಯದೂ ಅಲ್ಲ. ಅದರ ಕಾರ್ಯ, ಪ್ರಭಾವ, ದೃಷ್ಟಿ ಒಂದು ಗ್ರಾಮಕ್ಕೆ ಮಾತ್ರ ಸೀಮಿತವಾದದ್ದು. ಅಂದರೆ ಆ ಗ್ರಾಮದ ಹಿತರಕ್ಷಣೆಗಂತೂ ಗ್ರಾಮದೇವತೆಯೇ ಸಾರ್ವಭೌಮ. ಗ್ರಾಮದಲ್ಲಿ ಯಾರೊಬ್ಬರೂ ಅದರ ಪ್ರಭಾವದಿಂದ ಹೊರಗಿರಲು ಸಾಧ್ಯವೂ ಇಲ್ಲ, ಅವಕಾಶವೂ ಇಲ್ಲ. ಗ್ರಾಮಕ್ಕೆ ಯಾವ ಶುಭ ದೊರಕಬೇಕಾದರೂ ಅದನ್ನು ಉಂಟುಮಾಡುವುದು, ಯಾವ ಅಪಾಯ ಒದಗಿದರೂ ಅದನ್ನು ತಪ್ಪಿಸುವುದು ಗ್ರಾಮದೇವತೆಯ ಹೊಣೆಗಾರಿಕೆ. ರೈತರ ಮನೆಯಲ್ಲಿ ಯಾರಿಗೋ ರೋಗ ಬರುತ್ತದೆ, ಎಮ್ಮೆ ಉಚ್ಚುತ್ತದೆ, ಹಾಲು ಕೊಡುವುದಿಲ್ಲ, ಗೊಬ್ಬರ ಎಷ್ಟೇ ಹಾಕಿದರೂ ಹೊಲಗದ್ದೆಗಳಲ್ಲಿ ಪೈರು ನೆರೆಯ ಜಮೀನಿನಲ್ಲಿರುವಷ್ಟು ಫಲಭರಿತವಾಗುವುದಿಲ್ಲ, ಆಗ ರೈತ ಗ್ರಾಮದೇವತೆಗೆ ಒಂದು ಹರಕೆ ಹೊರುತ್ತಾನೆ. ಕಾರ್ಯ ದೊಡ್ಡದಾಗಿದ್ದರೆ ಅಂದರೆ ಮನೆಯ ಯಜಮಾನನಿಗೆ ಗುಣವಾಗದ ರೋಗ ಬಂದಿದ್ದರೆ, ಇಲ್ಲವೆ ದೊಡ್ಡ ಜಮೀನಿನ ವ್ಯಾಪಾರ ಕುದುರಬೇಕಾದರೆ, ಇಲ್ಲವೆ ಕೋರ್ಟು ವ್ಯಾಜ್ಯ ಗೆಲ್ಲಬೇಕಾದರೆ ಆತ ಗ್ರಾಮದೇವತೆಗೆ ತೋರಿಸುವ ಬಲಿಯ ಆಸೆ ಕೋಳಿಯಿಂದ ಕುರಿಯವರೆಗೆ ಹೋಗುತ್ತದೆ. ಹೀಗೆ ಪ್ರತಿಯೊಬ್ಬರೂ ತಮ್ಮ ಕಷ್ಟಗಳಿಗಾಗಿ ಗ್ರಾಮದೇವತೆಯನ್ನು ಮೊರೆಹೋಗಲೇಬೇಕು. ಗ್ರಾಮದೇವತೆ ಸರಿಯಾಗಿ ತನ್ನ ಕರ್ತವ್ಯವನ್ನು ಮಾಡಿ, ರೈತನಿಗೆ ಸಂತೃಪ್ತಿಯನ್ನುಂಟುಮಾಡದಿದ್ದರೆ ರೈತ ದೇವತೆಯನ್ನು ಸುಮ್ಮನೆ ಬಿಡುವುದಿಲ್ಲ. ಸಾಧಾರಣವಾಗಿ ಪ್ರತಿ ಗ್ರಾಮದವರೂ ತಮ್ಮ ಗ್ರಾಮದೇವತೆಗೆ ಹರಕೆ ಮಾಡಿಕೊಳ್ಳುವುದು ವಾಡಿಕೆ. ಆ ವಿಷಯದಲ್ಲಿ ಗ್ರಾಮದವರದು ಬಹುಮಟ್ಟಿಗೆ ಕಟ್ಟುನಿಟ್ಟು. ಗ್ರಾಮದೇವತೆ, ಒಂದು ಗ್ರಾಮಕ್ಕೆ ಸೇರಿದ್ದರಿಂದ, ಅದರ ಅನುಗ್ರಹ ಆ ಗ್ರಾಮದವರಿಗೇ ಮೀಸಲು. ಗ್ರಾಮದವರೂ ಅವಳನ್ನೇ ನಂಬಿ ಸಕಲಕ್ಕೂ ಅವಳನ್ನೇ ಯಾಚಿಸಿ ಪಡೆಯಬೇಕೆಂಬುದು ಸಾಮಾನ್ಯ ನಿಯಮ. ಆದರೆ ಹಳ್ಳಿಗಾಡಿನ ಮನುಷ್ಯ, ತುಂಬ ವ್ಯವಹಾರಸ್ಥನಾಗಿರುವುದರಿಂದ ಆತ ತನ್ನ ದೇವರನ್ನೂ ಪರೀಕ್ಷಿಸುತ್ತಾನೆ. ತನ್ನೂರ ಗ್ರಾಮದೇವತೆಗೆ ಮಾಡಿಕೊಂಡ ಹರಕೆ ಒಂದು ಸಲ ಎರಡು ಸಲ ವಿಫಲವಾದರೆ, ಆತ ದೇವತೆಯ ಮುಂದೆ ನಿಂತು, ಸಾರ್ವಜನಿಕ ಹೇಳಿಕೆಯನ್ನು ಕೊಡುವವನಂತೆ ಗಟ್ಟಿಯಾಗಿ, ನಾನು ನಿನಗೆ ಇಂಥಿಂಥ ಹರಕೆಗಳನ್ನು ಮಾಡಿಕೊಂಡೆ. ಯಾವುದೂ ಫಲಿಸಲಿಲ್ಲ. ಎಲ್ಲದರಲ್ಲಿಯೂ ನನಗೆ ಕೆಡುಕೇ ಉಂಟಾಯಿತು. ನನ್ನ ಹರಕೆಯನ್ನೆಲ್ಲ ನೀನು ತಿಂದು ನನ್ನ ಕೈಬಿಟ್ಟು ಬಿಟ್ಟೆ. ನಿನ್ನಲ್ಲಿ ಶಕ್ತಿಯೇ ಇಲ್ಲ. ನಾನು ಬೇರೆ ಅಮ್ಮನಿಗೆ ಹೋಗುತ್ತೇನೆ. ಹಟ್ಟಿ ಲಕ್ಕಮ್ಮನಿಗೆ ಹೋಗುತ್ತೇನೆ. ಹೊನ್ನಾಲಮ್ಮ, ಬಾಚಳ್ಳಿ ಅಮ್ಮ, ಕಿಕ್ಕೇರಿ ಅಮ್ಮ ಇವರಿಗೆ ಹೋಗುತ್ತೇನೆ. ನನ್ನ ಮೇಲೆ ತಪ್ಪಿಲ್ಲ. ನೀನೇ ಒದ್ದು ನೂಕಿದೆ ಎಂದು ಸಾರಿ ಹೇಳಿ, ಬೇರೆ ಊರಿನ, ಅವನ ದೃಷ್ಟಿಯಲ್ಲಿ ಪ್ರಬಲವೆಂದು ತೋರಿದ ಮತ್ತೊಂದು ದೇವತೆಗೆ ಹರಕೆ ಹೊರುತ್ತಾನೆ. ಕೆಲವು ವೇಳೆ ಮೂಗೂರು ತಿಬ್ಬಾದೇವಿ, ಉತ್ತನಹಳ್ಳಿ ಉರುಕಾಳಿ, ಗೊಂಡನಹಳ್ಳಿ ಗೊತ್ತುಕಾಳಿ, ಎಲ್ಲಕಿಂತ ಹೆಚ್ಚಾಗಿ ಏಳುನಾಲಗೆ ದುರ್ಗಿ ಇವರೆಡೆಗೆ ಧಾವಿಸುತ್ತಾನೆ. ಹೀಗೆ ಮಾಡುವುದು ಕೇವಲ ಅಪರೂಪವಾದ ಮತ್ತು ವಿಶೇಷವಾದ ಸಂದರ್ಭದಲ್ಲಿ ಮಾತ್ರ. ಸಾಮಾನ್ಯ ಕಾಲದಲ್ಲಿ ರೈತ ತನ್ನ ಊರ ದೇವರನ್ನು ಬಿಟ್ಟು ಇತರ ದೇವರಿಗೆ ಹರಕೆ ಹೊತ್ತರೆ ಊರಿನವರು ಸುಮ್ಮನಿರುವುದಿಲ್ಲ. ಹಾಗೆಯೇ ಬೇರೆ ಊರಿನವರೂ ತಮ್ಮೂರ ದೇವರಿಗೆ ಬಂದು ಹರಕೆ ಹೊತ್ತರೆ ಸಾಧಾರಣವಾಗಿ ಸುಮ್ಮನಿರುವುದಿಲ್ಲ. ಆದರೆ ಒಂದೂರಿನ ದೇವರಿಗಿಂತ ಮತ್ತೊಂದೂರಿನ ದೇವರು ಹೆಚ್ಚು ಪ್ರಬಲ, ಫಲದಾಯಕ ಎಂದು ತೋರಿದರೆ, ಪ್ರಾಪಂಚಿಕ ವಿಷಯದಲ್ಲಿ ತಿಳಿವಳಿಕಸ್ಥ ಜನರಾದ ರೈತರು ಆ ದೇವರಿಗೆ ಹೋಗುವವರನ್ನು ತಪ್ಪಿಸುವುದಿಲ್ಲ. ಈ ವಿಷಯದಲ್ಲಿ

ಹಳ್ಳಿಯ ನಿಯಮ ಹಿಂದಲ ಕಾಲದ ಗ್ರಾಮ ಘಟಕ ಪದ್ಧತಿಯಂತೆ. ಒಂದು ವಿಶೇಷ ಸಂದರ್ಭಕ್ಕಾಗಿ ರೈತ ಬೇರೆ ಊರಿನ ದೇವರಿಗೆ ಹರಕೆ ಹೊತ್ತರೂ ಅದು ಆ ಸಂದರ್ಭವಷ್ಟಕ್ಕೆ ಮಾತ್ರ. ಉಳಿದ ಅವನ ಎಲ್ಲ ಆಗುಹೋಗುಗಳಿಗೂ ಅವನು ತನ್ನ ಗ್ರಾಮದೇವತೆಯನ್ನು ಮಾತ್ರವೇ ಶರಣು ಹೋಗಬೇಕೆಂಬುದು ನಿಯಮ.

ಗ್ರಾಮದೇವತೆಯಷ್ಟೇ ಅದರ ಪೂಜಾರಿಯೂ ಆರ್ಷೇಯ. ಗ್ರಾಮದೇವತೆ ಪ್ರಾಣಿಬಲಿಯನ್ನು ಅಪೇಕ್ಷಿಸುವ ದೇವರಾದರೂ ಇದರ ಪೂಜಾರಿ ಸಾಧಾರಣವಾಗಿ ವೀರಶೈವ ತಮಡಿ (ಅರ್ಚಕ) ಆಗಿರುತ್ತಾನೆ. ಆ ತಮಡಿ ಸಿಕ್ಕದಿದ್ದಲ್ಲಿ ದೇವರಿಗೆ ಹರಕೆಯನ್ನಾಗಲಿ ಬಲಿಯನ್ನಾಗಲಿ ಒಪ್ಪಿಸಬೇಕಾದ ಭಕ್ತ, ಅಂಥ ತಮಡಿ ಬೇರೆ ಗ್ರಾಮದಲ್ಲಿದ್ದರೂ ಹೋಗಿ ಕರೆದುಕೊಂಡು ಬಂದು, ಅವನ ಹಸ್ತದಿಂದಲೇ ಪೂಜೆ ನೆರವೇರಿಸುತ್ತಾನೆ. ಪೂಜಾರಿಗೆ ಕೆಲಸವೂ ಹೆಚ್ಚಿಗೆ ಇಲ್ಲ. ಭಕ್ತ ಬಲಿಗೆ ತಂದಿರುವ ಕೋಳಿ, ಕುರಿ ಅಥವಾ ಆಡಿನ ಮೇಲೆ ಪೂಜೆ ಮಾಡಿದ ದೇವರ ತೀರ್ಥವನ್ನು ಪ್ರೋಕ್ಷಿಸುವುದಷ್ಟೇ ಅವನ ಕೆಲಸ. ಮುಂದಿನ ಕ್ಷಣದಲ್ಲಿಯೇ ಭಕ್ತರು ಪ್ರಾಣಿಯ ಕತ್ತನ್ನು ಕತ್ತರಿಸಿಹಾಕುತ್ತಾರೆ. ಮೊಸರನ್ನ ನೆನೆಯಕ್ಕಿ ನೆನೆಗಡಲೆ ಪನಿವಾರ ಮುಂತಾದ ತಳಿಗೆಗಳನ್ನು ಸುಮಂಗಲಿಯರು ತಂದು ಒಪ್ಪಿಸುವಾಗ ಪೂಜಾರಿ ಇಲ್ಲದಿದ್ದರೂ ನಡೆಯುತ್ತದೆ.

ಗ್ರಾಮದೇವತೆ ಒಂದು ವಿಗ್ರಹವೇ ಆಗಿರಬೇಕೆಂಬ ನಿಯಮವಿಲ್ಲ. ಅನೇಕ ವೇಳೆ ಅದೊಂದು ಬರಿಯ ಕಲ್ಲೂ ಆಗಿರಬಹುದು; ಇನ್ನೂ ಕೆಲವು ವೇಳೆ ನಾಲ್ಕಾರು ಗುಂಡುಕಲ್ಲುಗಳನ್ನು ಒಂದರ ಮೇಲೆ ಒಂದನ್ನು ಜೋಡಿಸುತ್ತಾರೆ. ಕಲ್ಲಿನ ಮೇಲೆ ಏನಾದರೂ ಮೂಗು ಬಾಯಿ ಕಣ್ಣುಗಳನ್ನು ಕೊರೆದಿದ್ದರೂ ಗೊತ್ತಾಗುವುದಿಲ್ಲ. ಕಲ್ಲೆಲ್ಲ ಪೂರ್ತ ಎಣ್ಣೆ ಅರಸಿನ ಕುಂಕುಮದಿಂದ ಮೆತ್ತಿ ಹೋಗಿರುತ್ತದೆ.

ಪ್ರಾಚೀನ ಆದಿಮಾನವ ಪೂಜಿಸಿದ ಶಕ್ತಿದೇವತೆಯೇ ಇಂದಿನ ಗ್ರಾಮದೇವತೆ ಎಂದು ಭಾವಿಸಬಹುದು. ಕರ್ನಾಟಕದ ಕೆಲವು ಊರುಗಳಲ್ಲಿ ಈ ದೇವತೆಯನ್ನು ಉಡಿಸಲಮ್ಮ ಎಂಬ ಹೆಸರಿನಿಂದಲೂ ಕರೆಯುತ್ತಾರೆ.

ಎಲ್ಲ ಗ್ರಾಮಗಳಲ್ಲೂ ಸಾಧಾರಣವಾಗಿ ಗ್ರಾಮದೇವತೆ ಇರುವುದು ಮಾಮೂಲು. ಆದರೂ ಗ್ರಾಮದೇವತೆಗಳು ಇಲ್ಲದ ಗ್ರಾಮಗಳೂ ಉಂಟು. ಮಾರಿಯಮ್ಮನೇ ಗ್ರಾಮದೇವತೆಯಾಗುತ್ತಾಳೆ. ಆಕೆ ಗ್ರಾಮದೇವತೆಗಿಂತ ಸ್ವಲ್ಪ ಹೆಚ್ಚಿನ ಮಟ್ಟದ ಶಕ್ತಿದೇವತೆಯೆ ಹೊರತು ಚಂಡಿ ಚಾಮುಂಡಿ ಕಾಳಿಕಾ ದುರ್ಗಿ ಮುಂತಾದ ದೇವತೆಗಳಿಗೂ ಮಾರಿಯಮ್ಮನಿಗೂ ಸಂಬಂಧವಿಲ್ಲ. ಹಿಂದೆ ಮಾರಿಹಬ್ಬದಲ್ಲಿ ಕೋಣವನ್ನು ಬಲಿಕೊಡುವ ಪದ್ಧತಿಯೂ ರೂಢಿಯಲ್ಲಿತ್ತೆಂದು ತಿಳಿದುಬರುತ್ತದೆ.

ಹಳ್ಳಿ ದೊಡ್ಡದಾಗಿದ್ದರೆ, ಗ್ರಾಮದೇವತೆಗೆ ವರ್ಷಕ್ಕೆ ಒಂದು ಬಾರಿ ಬಂಡಿಹಬ್ಬ ಅಥವಾ ರಥೋತ್ಸವ ನಡೆಯುತ್ತದೆ. ಈ ಹಬ್ಬವನ್ನು ಹಸಿರು ಬಂಡಿ ಎಂದೂ ಕರೆಯುತ್ತಾರೆ. ಹಸಿರು ಎಲೆ ಚಿಗರುಗಳ ತೋರಣ, ತೆಂಗಿನ ಗರಿ, ಅಡಕೆ, ಹೊಂಬಾಳೆ ಇವುಗಳಿಂದ ಬಂಡಿಯನ್ನು ಅಲಂಕರಿಸುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಈ ಹಬ್ಬ ನಡೆಯುವುದು ಸಾಧಾರಣವಾಗಿ ಮಂಗಳವಾರ. ಹಬ್ಬವನ್ನು ಬಹಳ ವೈಭವದಿಂದ ಆಚರಿಸುತ್ತಾರೆ. ಸುತ್ತಮುತ್ತಲ ಹಳ್ಳಿಗಳಲ್ಲೆಲ್ಲ ಮೊದಲೇ ತಮಟೆ ಹೊಡೆದು ಸಾರಿಸುತ್ತಾರೆಯಾದ್ದರಿಂದ ಬಾಳೆ ಕಂಬಗಳು ಲೆಕ್ಕವಿಲ್ಲದಷ್ಟು ಬಂದು ಬೀಳುತ್ತವೆ. ಗ್ರಾಮದೇವತೆಯ ವಿಗ್ರಹವನ್ನು ತಾತ್ಕಾಲಿಕವಾಗಿ ಮಣ್ಣಿನಲ್ಲಿ ಬಹು ಸುಂದರವಾಗಿ ನಿರ್ಮಿಸಿರುತ್ತಾರೆ. ಅಕ್ಕಿ, ತೆಂಗಿನಕಾಯಿ ರಾಶಿರಾಶಿ ಬಿದ್ದಿರಲಾಗಿ ಗ್ರಾಮದೇವತೆ 'ಒಕ್ಲೂನ ಹಾಸ್ಕೊಂಡು ಒಕ್ಲೂನ ಹೊದ್ದು, ಕಿವಿಯಲ್ಲಿ ಮುತ್ತಿಕ್ಕಿದ ಓಲೆ ತೊಟ್ಟು ಕಿಡಗಣ್ಣಿಯಾಗಿ' ಮೆರೆಯುತ್ತಾಳೆ. ಭಕ್ತರು ಬಾಗಿಲಿಗೆ ಛತ್ರಿ ಏರಿಸುತ್ತಾರೆ. ಏಳೂರು ಸಿಡಿಗಳು ಬರುತ್ತವೆ. ಹೆಡಗೇಲಿ ಹಣ್ಣು, ಗಡಿಗೇಲಿ ತುಪ್ಪ, ಇಡಗಾಯಿಗಳು, ಕುರಿಗಳ ಸಾಲು ಮಡಲಕ್ಕಿ ಎಲ್ಲ ಬರುತ್ತವೆ. ಕೆಲವರು ಊರುಗಳಲ್ಲಿ ಕೊಂಡವನ್ನು ಸಹ ಹಾಯುತ್ತಾರೆ. ಮೆರವಣಿಗೆಯಲ್ಲಿ ದೊಡ್ಡ ದೊಡ್ಡ ಪಂಜುಗಳು ಉರಿಯುತ್ತವೆ. ಭಕ್ತರು ಭಕ್ತಿಯಿಂದ ದೇವತೆಯ ಹಾಡನ್ನು ಹಾಡುತ್ತಾರೆ. ದೇವತೆಯ ಮಹಿಮೆಯನ್ನು ಬಣ್ಣಿಸಲೂ ಅಸದಳ, 'ಸಾಸಿವೆ ಕಾಳಷ್ಟು ರೇಸಿಮೆ ಉಟುಕೊಂಡು ಏಸೊಂದುಯ್ದುವಳೆ ನೆರಿಗೇಯ, ತಾಯವ್ವ ಕೋಟೆಗೆ ಬೀಸವ್ವೆ ಕುಡಿಸೆರಗ' (ಅಮ್ಮ ಧರಿಸಿರುವುದು ಸಾಸಿವೆ ಕಾಳಿನಷ್ಟು ರೇಸಿಮೆ. ಆದರೆ ತನ್ನ ಮಹಿಮೆಯಿಂದ ಅದರಿಂದಲೇ ವಿಶಾಲವಾದ ನೆರಿಗೆಯನ್ನು ರಚಿಸಿಕೊಂಡು ಕೋಟೆವರೆಗೆ ನೆರಿಗೆಯನ್ನು ಬೀಸುತ್ತಾಳೆ). ಬಂಡಿಯ ಮೇಲೆ ಮೆರವಣಿಗೆ ಹೋಗುತ್ತಿರಬೇಕಾದರೆ, ಬಿಸಿಲಿನಲ್ಲಿ ಓಲೆ ಹೊಳೆಯುತ್ತದೆ. ಆಚೆ ಈಚೆ ದಾಸ ಮತ್ತು ಪುರುಷ (ಧಾರ್ಮಿಕ ಪೂಜಕರು) ಇರುತ್ತಾರೆ. ದಾಸ, ಹೆಗಲಮೇಲೆ ಕಿರುಗಂಟೆ ಕಟ್ಟಿದ ಒಂದು ಒನಕೆ, ಎಡಕಂಕುಳಲ್ಲಿ ಕಡಾಸು, ಬವನಾಸಿ, ಬಲಕಂಕುಳಲ್ಲಿ ತುತ್ತೂರಿ ಭಾಂಕಿ ಶಂಖ, ಎದೆಯ ಮೇಲೆ ಆನೆಯ ವಿಗ್ರಹ ಬಲಗೈಯಲ್ಲಿ ಜಾಗಟೆ ಹಿಡಿದಿರುತ್ತಾರೆ. ಪುರುಷ, ಭೈರವನ ಶಿಷ್ಯ. ಆತ ಕಬ್ಬಿಣದ ದೊಡ್ಡ ತ್ರಿಶೂಲ, ಬೆಳ್ಳಿಯ ಸಣ್ಣ ತ್ರಿಶೂಲಗಳನ್ನು ಸೇರಿಸಿದ ನವಿಲುಗರಿ ಕಂತೆಯನ್ನು ಹೆಗಲ ಮೇಲೆ ಇಟ್ಟುಕೊಂಡು ಕಂಕುಳಲ್ಲಿ ವಿಭೂತಿ ಚೀಲ, ಕೈಯಲ್ಲಿ ಜಿಂಕೆಯ ಕೊಂಬಿನ ವಾದ್ಯ, ತೀರ್ಥದ ಬಟ್ಟಲು ಇವನ್ನು ಹಿಡಿದಿರುತ್ತಾನೆ. ಸುಮಂಗಲಿಯರು ಐರಣಿ ಪಂಚಕಲಶ ಹೊತ್ತು ನಡೆಯುವರು. ಒಬ್ಬ ಆಚಾರಿ ಬಣ್ಣ ಹಾಕಿದ ಮರದ ಕುದುರೆಯ ಒಂದು ಕತ್ತನ್ನು ಕಂಕುಳಲ್ಲಿ ಹಿಡಿದುಕೊಂಡು ಕುಣಿಯುತ್ತಾನೆ. ಹಿಂದೆ ಒಂದು ಸಲ ಬಸವ, ಈಶ್ವರನ ಸನ್ನಿಧಿಗೆ ಹೋಗಿ ಹಿಂದಿರುಗದೆ ಇದ್ದುದರಿಂದ ಭೂಲೋಕದ ಆಚಾರಿಗಳು (ಬಡಗಿ) ಒಂದು ಕೀಲುಕುದುರೆ ಮಾಡಿ ಈಶ್ವರನ ಬಳಿಗೆ ಕೊಂಡುಹೋಗಿ ಅದರಿಂದಲೇ ಬೇಸಾಯ ಮಾಡುವುದಾಗಿ ಹೇಳಿದರಂತೆ. ಸೃಷ್ಟಿ ಒಮ್ಮುಖವಾಗಿರಲಿ ಎಂದು ಯೋಚಿಸಿ ಈಶ್ವರ ಬಸವನನ್ನು ಭೂಲೋಕಕ್ಕೆ ಕಳಿಸಿದನೆಂದು ಒಂದು ಜನಪದ ಕಥೆ ಇದೆ.

ಗ್ರಾಮದೇವತೆಗೆ ಅಪಾರ ಹರಕೆಗಳು ಬರುತ್ತವೆ. ಹರಕೆ ಹೊತ್ತವರೆಲ್ಲ ತಮ್ಮ ತಮ್ಮ ಮತಿಗನುಗುಣವಾಗಿ ಹರಕೆ ಒಪ್ಪಿಸುತ್ತಾರೆ. ಆಡು, ಕುರಿ, ಅಸಂಖ್ಯಾತ ಕೋಳಿಗಳು ಬಲಿಯಾಗುತ್ತವೆ. ಭಕ್ತರು ಮಾಲೆ, ಕಣ್ಕಪ್ಪು ಎಲ್ಲವನ್ನೂ ಅಮ್ಮನಿಗೆ ತಂದು ಒಪ್ಪಿಸುತ್ತಾರೆ. ತಾಯಂದಿರು ಮಗುವಿಗೆ ಹೆಸರಿಡು ಎಂದು ಬೇಡುತ್ತಾರೆ. ಕೋಲಾಟ, ದೊಣ್ಣೆವರಸೆ, ಪಟ್ಟಾವರಸೆ, ರಮಡೋಲು, ವಾದ್ಯ, ಬಾಣಬಿರುಸು — ಎಲ್ಲ ನಡೆಯುತ್ತವೆ. ಬಂಡಿಹಬ್ಬಕ್ಕೂ ಹಂದಿಮಾಂಸಕ್ಕೂ ಗಂಟು. ಸೋನೆಮಳೆ ಆಗ ತಾನೇ ಪ್ರಾರಂಭವಾಗುವುದರಿಂದ ಅದರ ಪ್ರಭಾವದಿಂದ ಹಂದಿಮಾಂಸಕ್ಕೆ ಒಂದು ಸೊಗಡೂ ರುಚಿಯೂ ಬರುತ್ತದೆಂದು ಜನಪದರ ನಂಬಿಕೆ. ಆದ್ದರಿಂದಲೇ ಬಂಡಿಹಬ್ಬದಂದು ಊರಿನ ಜನಸಂಖ್ಯೆಗನುಗುಣವಾಗಿ ಹಂದಿಮಾಂಸದ ಊಟವೇರ್ಪಡಿಸುತ್ತಾರೆ. ಅನಂತರ ತಮಟೆಗಳ ರಣವಾದ್ಯದ ಗತ್ತಿಗನುಗುಣವಾಗಿ ಕೈಯಲ್ಲಿ ಕೆಂಪು ವಸ್ತ್ರದ ಚೌಕಗಳನ್ನು ಹಿಡಿದುಕೊಂಡು ಆಯಾಸವಾಗುವವರೆಗೆ ವೀರಕುಣಿತವನ್ನು ಕುಣಿಯುತ್ತಾರೆ. ಕೊಂಬು ಕಹಳೆ ತುತ್ತೂರಿ ಭಾಂಕಿ ಕುಣಿಮಿಣಿ ತಾಳ ತಮಟೆ ಮೋರಿಗಳ ಕೋಲಾಹಲದೊಂದಿಗೆ ಕುಣಿತ ಕೊನೆಯಾಗುತ್ತದೆ.

ಎಲ್ಲ ಕಡೆಯೂ ಗ್ರಾಮದೇವತೆ ಪ್ರಾಣಿಬಲಿ ಪಡೆಯುವ ದೇವತೆಯಾಗಿರುವುದಿಲ್ಲ. ದೇವೀರಮ್ಮ ಸಪ್ತಮಾತೃಕೆಯರು ಮತ್ತಿತರ ದೇವತೆಗಳು ಫಲಪುಷ್ಪಗಳಿಗೆ ತೃಪ್ತಿಪಡುತ್ತವೆ. ಮಲೆನಾಡಿನ ಗ್ರಾಮದೇವತೆಗಳಿಗೆ ವಸಂತ ಕಾಲದಲ್ಲಿ ವಿಶೇಷವಾದ ಸುಗ್ಗಿಹಬ್ಬ ನಡೆಯುತ್ತದೆ. ಈ ದೇವತೆಗಳು ಫಲಪುಷ್ಪ, ದೂಪಾರತಿ ಮಾತ್ರ ಸ್ವೀಕರಿಸುವವು. ಕೆಲವೊಮ್ಮೆ ಕುಲದೇವತೆಯೂ ಗ್ರಾಮದೇವತೆಯಾಗಿ ಪರಿವರ್ತಿತವಾಗುವುದಿದೆ. ಭೈರವ ಅಥವಾ ಕಾಲಭೈರವ ಅನೇಕ ಕಡೆ ಗ್ರಾಮದೇವತೆ ಸ್ಥಾನ ಪಡೆದಿದ್ದಾನೆ. ಇವನಿಗೆ ಸ್ಥಳಪತಿರಾಯ ಎಂಬ ಹೆಸರೂ ಇದೆ. ಅದು ಆಡುಮಾತಿನಲ್ಲಿ ತಲಪಟ್ರಾಯ ಆಗಿದೆ. ಜೆಟ್ಟಿಗ ಎಂಬ ದೈವವೂ ಗ್ರಾಮದೇವತೆ ಆಗಿರುವುದುಂಟು.

ಹೀಗೆ ಮಾನವನ ಕಲ್ಪನೆಯ, ಆವಶ್ಯಕತೆಯ, ಅತ್ಯಂತ ಪ್ರಾಚೀನ ಶಕ್ತಿದೇವತೆಯಾದ ಗ್ರಾಮದೇವತೆ ಜನರ ಬಾಳಿಗೆ ಪೌರುಷ, ಸಾಹಸ, ಕಷ್ಟ ಸಹಿಷ್ಣುತೆ, ದುಷ್ಟ ನಿಗ್ರಹ, ಶಿಷ್ಟ ಪರಿಪಾಲನ ಶಕ್ತಿಗಳನ್ನು ನೀಡಿ ಜನತೆಯನ್ನು ರಕ್ಷಿಸಿಕೊಂಡು ಬರುತ್ತಿದೆ ಎಂಬುದು ಜನಪದರ ನಂಬಿಕೆ. *

# ಘ

**ಘಟಪ್ರಭಾ [1] :** ಬೆಳಗಾಂವಿ ಜಿಲ್ಲೆ ಗೋಕಾಕ ತಾಲ್ಲೂಕಿನಲ್ಲಿ ಗೋಕಾಕದ ವಾಯುವ್ಯಕ್ಕೆ 14ಕಿಮೀ ದೂರದಲ್ಲೂ ಬೆಳಗಾಂವಿಯಿಂದ 48ಕಿಮೀ ದೂರದಲ್ಲೂ ಇರುವ ಒಂದು ಸ್ಥಳ. ದಕ್ಷಿಣ ಮಧ್ಯ ರೈಲ್ವೆಯ ಮೇಲೆ ಬೆಳಗಾಂವಿ ಮತ್ತು ಮೀರಜ್‌ಗಳ ನಡುವಿನ ಒಂದು ನಿಲ್ದಾಣ.

ಮೊದಮೊದಲು ಇದು ಮಲ್ಲಾಪುರವೆಂಬ ಬೇಚಿರಾಕ್ ಹಳ್ಳಿ. ಇತ್ತೀಚೆಗೆ ಭರದಿಂದ ಬೆಳೆಯುತ್ತಿರುವ ನಗರ. ಕರ್ನಾಟಕ ಆರೋಗ್ಯಧಾಮ ಸ್ಥಾಪನೆಯಾದ ಅನಂತರ ಇಲ್ಲಿಯ ಆರೋಗ್ಯಕರ ಹವೆ, ನೀರಿನಲ್ಲಿರುವ ಉತ್ತಮ ಗುಣಾಂಶದಿಂದ ನಾಡಿನ ಶ್ರೀಮಂತರು ಈ ಆರೋಗ್ಯಧಾಮದ ಕಡೆಗೆ ಆಕರ್ಷಿತರಾದರು. ಘಟಪ್ರಭೆಯ ಎಡದಂಡೆಯ ಕಾಲುವೆಯ ಕೆಲಸ ತ್ವರಿತ ಗತಿಯಿಂದ ನಡೆದ ಅನಂತರ 1950ರ ಸುಮಾರಿಗೆ ಇದು ಘಟಪ್ರಭಾ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಕರ್ನಾಟಕ ಆರೋಗ್ಯಧಾಮ, ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆ. ಪಿ.ಡಬ್ಲ್ಯೂ.ಡಿ ಕಾಲೋನಿ, ಮಲ್ಲಾಪುರ ಧೂಪದಾಳ ಸ್ಟೇಷನ್ ಮೊದಲಾದುವುಗಳನ್ನು ಸೇರಿಸಿ 1959ರಲ್ಲಿ ಪಟ್ಟಣ ಪಂಚಾಯತ್ ಸ್ಥಾಪಿಸಲಾಯಿತು.

ಕರ್ನಾಟಕ ಆರೋಗ್ಯಧಾಮ, ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆ ಇವೆರಡು ಈ ನಗರದ ಮುಖ್ಯಸಂಸ್ಥೆಗಳು. ಕರ್ನಾಟಕ ಆರೋಗ್ಯಧಾಮ ಜಿ.ಆರ್. ಕೊಕಟನೂರರಿಂದ 1935 ಮೇ 5ರಂದು ಸ್ಥಾಪನೆಗೊಂಡು 127 ಎಕರೆ ವಿಶಾಲವಾದ ಆವರಣದಲ್ಲಿ ಬೆಳೆದಿದೆ. ಹಳ್ಳಿಗರಿಗೆ ಆರೋಗ್ಯದ ಬಗೆಗೆ ಉಪಯುಕ್ತ ಸೇವೆಸಲ್ಲಿಸುತ್ತಿದೆ. ರಾಷ್ಟ್ರೀಯ ಸೇವಾದಳದ ಸ್ಥಾಪಕರಾಗಿ ಕಾರ್ಯಮಾಡಿದ ಎನ್.ಎಸ್.ಹರ್ಡೀಕರರು (ನೋಡಿ) ಜೀವನಾಡಿಯಾಗಿ ಇದರ ಸರ್ವತೋಮುಖ ಬೆಳವಣಿಗೆಗಾಗಿ ಶ್ರಮಿಸಿದರು. ಅನಂತರ ಎಂ.ಕೆ.ವೈದ್ಯರು ಇದರ ಮುಖಂಡತ್ವವನ್ನು ವಹಿಸಿಕೊಂಡರು. ಸಾರ್ವಜನಿಕ ಆಸ್ಪತ್ರೆ, ಹೆರಿಗೆ ಆಸ್ಪತ್ರೆ, ದಾಯಿಗಳ ಶಿಕ್ಷಣ ಕೇಂದ್ರ, ಕ್ಷಯರೋಗ ಚಿಕಿತ್ಸಾಕೇಂದ್ರ -ಇವು ಈ ಸಂಸ್ಥೆಯ ಅಂಗಗಳಾಗಿವೆ. ಹಳ್ಳಿಗರಿಗೆ ಅತ್ಯಲ್ಪ ವೆಚ್ಚದಲ್ಲಿ ವೈದ್ಯಕೀಯ ಸೇವೆ ಸಲ್ಲಿಸುವುದೇ ಇದರ ಹೆಗ್ಗುರಿ. ಅತ್ಯಾಧುನಿಕ ಯಂತ್ರೋಪಕರಣಗಳಿವೆ. ಮಹಿಳಾಮಂಡಳವಿದೆ. ಉದ್ಯೋಗ ಕೇಂದ್ರವಿದೆ. ಇದೇ ಮಾದರಿಯ ಮೇಲೆ ಭಾರತದಲ್ಲಿಯೇ ಪ್ರಪ್ರಥಮವಾಗಿ ಸಹಕಾರಿ ತಳಹದಿಯ ಮೇಲೆ ರೂಪಗೊಂಡ ಇನ್ನೊಂದು ಹೆಮ್ಮೆಯ ಸಂಸ್ಥೆ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆ, ಹುಬ್ಬಳ್ಳಿಯ ಮೂರುಸಾವಿರ ಮಠದ ಜಗದ್ಗುರು ಶ್ರೀ ಗುರುಸಿದ್ಧೇಶ್ವರ ರಾಜಯೋಗೀಂದ್ರ ಮಹಾಸ್ವಾಮಿಗಳಿಂದ 1951 ನವೆಂಬರ್ 13ರಂದು ಸ್ಥಾಪನೆಗೊಂಡು ಬೃಹದಾಕಾರವಾಗಿ ಬೆಳೆದುನಿಂತಿದೆ. ನಿಲ್ದಾಣದಿಂದ ಸಮೀಪದಲ್ಲಿಯೇ ಗುಡ್ಡದ ಓರೆಯಲ್ಲಿ ಆಧುನಿಕ ಪದ್ಧತಿಯಲ್ಲಿ ಕಟ್ಟಲಾಗಿರುವ ಆಕರ್ಷಕ ಸುಸಜ್ಜಿತ ಕಟ್ಟಡಗಳಿಂದ ಕೂಡಿದೆ. ಜಿಲ್ಲೆಯಲ್ಲಿಯೇ ಹೆಸರಾದ ಸುಸಜ್ಜಿತ ಪ್ರವಾಸಿಮಂದಿರ ಇದೆ.

ಈ ಸ್ಥಳದಲ್ಲಿ ಪ್ರತಿ ಮಂಗಳವಾರ ಸಂತೆಯಾಗುತ್ತದೆ. ಇದು ಗೋವಿನಜೋಳದ ವ್ಯಾಪಾರಕ್ಕೆ ಪ್ರಸಿದ್ಧಿ ಹೊಂದಿದೆ. ಜಿಲ್ಲೆಯಲ್ಲಿ ಘಟಪ್ರಭಾದ ಸಮೀಪದಲ್ಲಿ ಅರಭಾವಿ ಪುಣ್ಯಾರಣ್ಯವೆನಿಸಿದ ದುರದುಂಡೇಶ್ವರ ಮಠ, ಗೋಕಾಕ ಧಬಧಬೆ (ನೋಡಿ) ಮೊದಲಾದ ಪ್ರೇಕ್ಷಣೀಯ ಸ್ಥಳಗಳಿವೆ. ಜಿಲ್ಲಾ ಹಾಗೂ ತಾಲ್ಲೂಕು ಸ್ಥಳಗಳಿಂದ ಘಟಪ್ರಭಾಕ್ಕೆ ಹೋಗಿಬರಲು ಸಾರಿಗೆ ಸೌಕರ್ಯ ಸೌಲಭ್ಯಗಳು ಸಾಕಷ್ಟಿವೆ. (ಎಸ್.ಎಸ್.ಬಿ.)

**ಘಟಪ್ರಭಾ [2] :** ಬೆಳಗಾಂವಿ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಹರಿಯುವ ಕರ್ನಾಟಕದ ಮುಖ್ಯ ನದಿಗಳಲ್ಲಿ ಒಂದು. ಬೆಳಗಾಂವಿ ನಗರಕ್ಕೆ 40ಕಿಮೀ ಪಶ್ಚಿಮದಲ್ಲಿ ಸಹ್ಯಾದ್ರಿ ಶ್ರೇಣಿಯ ಅಂಚಿನಲ್ಲಿ ರಾಮಘಟ್ಟದಲ್ಲಿ ಉಗಮಿಸಿ, ಪೂರ್ವಾಭಿಮುಖವಾಗಿ ಹರಿದು, ಬಾಗಲಕೋಟೆ ಜಿಲ್ಲೆಯನ್ನು ಪ್ರವೇಶಿಸಿ ಬಾಗಲಕೋಟೆ ಮತ್ತು ಬಿಜಾಪುರ ಜಿಲ್ಲೆಯ ಸರಹದ್ದಿನಲ್ಲಿ ನೀತಿಮುನಿ ಬಳಿ ಕೃಷ್ಣೆಯನ್ನು ಕೂಡಿಕೊಳ್ಳುವ ಈ ನದಿಯ ಉದ್ದ 305ಕಿಮೀ. ಬೆಳಗಾಂವಿ ಜಿಲ್ಲೆಯಲ್ಲಿ ಹುಕ್ಕೇರಿ ಗೋಕಾಕ ತಾಲ್ಲೂಕುಗಳ ಮೂಲಕ 193ಕಿಮೀ ದೂರ ಹರಿದ ಮೇಲೆ ಮುಧೋಳ ನಗರಕ್ಕೆ ಪಶ್ಚಿಮದಲ್ಲಿ ಬಾಗಲಕೋಟೆ ಜಿಲ್ಲೆಯನ್ನು ಪ್ರವೇಶಿಸಿ ಮುಧೋಳ ಮತ್ತು ಬಾಗಲಕೋಟೆ ತಾಲ್ಲೂಕುಗಳ ಮೂಲಕ ಸು.112ಕಿಮೀ ದೂರ ಪ್ರವಹಿಸುತ್ತದೆ. ಬೆಳಗಾಂವಿ ಜಿಲ್ಲೆಯ ಕಾನೂರ, ಅಡಕೂರು, ದಡ್ಡಿ, ವಂಟಮುರಿ, ಘೋಡಗೇರಿ, ಕೊಣ್ಣೂರ, ಧೂಪದಾಳ, ಗೋಕಾಕ, ಹುಣಶ್ಯಾಳ, ಸುಣದೇಳಿ ಊರುಗಳೂ ಬಾಗಲಕೋಟೆ ಜಿಲ್ಲೆಯ ಬಾಗಲಕೋಟೆ, ಚಿಮ್ಮಲಗಿಗಳೂ ಈ ನದಿಯ ತೀರದಲ್ಲಿವೆ. ಗೋಕಾಕದ ಬಳಿಯ ಜಲಪಾತದ ಎತ್ತರ 52ಮೀ. ಅಲ್ಲೊಂದು ಕಟ್ಟೆ ಕಟ್ಟಿ ನದಿಯ ನೀರನ್ನು ಸಾಗುವಳಿಗೂ ವಿದ್ಯುತ್ತಿನ ಉತ್ಪಾದನೆಗೂ ಬಳಸಿಕೊಳ್ಳಲಾಗುತ್ತಿದೆ. ಗೋಕಾಕ ಗುಡ್ಡದ ಕಣಿವೆಯ ಪ್ರದೇಶದಲ್ಲಿ ಹರಿಯುವ ನದಿಯ ನೋಟ ಸುಂದರವಾದದ್ದು. ಪೂರ್ವದ ಶಿವಪುರ ಗ್ರಾಮ, ಪಶ್ಚಿಮದ ಸುಲ್ತಾನಪುರ ಗ್ರಾಮಗಳ ನಡುವೆ ಹರಿದು ನದಿ ಗೋಕಾಕ ಪ್ರವೇಶಿಸುತ್ತದೆ. ಗೋಕಾಕ ಜಲಪಾತದ ಕೆಳಗೆ 3ಕಿಮೀ ದೂರದಲ್ಲಿ ಗೋಕಾಕ ಪಟ್ಟಣಕ್ಕೆ ಅರ್ಧ ಕಿಮೀ ದೂರದಲ್ಲಿ ಈ ನದಿಗೆ ಮಾರ್ಕಂಡೇಯ ನದಿ ಬಂದು ಕೂಡಿಕೊಳ್ಳುತ್ತದೆ. ಬಾಗಲಕೋಟೆ ಜಿಲ್ಲೆಯ ಹೆರಕಲ್ ಬಳಿ ಈ ನದಿಯಿಂದಾದ ಕೊರಕಲು ನೋಡಲು ಅತಿ ರಮ್ಯ. ಘಟಪ್ರಭಾ ನದಿ ಕೃಷ್ಣೆಯನ್ನು ಸೇರುವೆಡೆಯಲ್ಲಿ ಅದರ ಮುಖ 91.44ಮೀ. ಅಗಲವಾಗಿದೆ.



ಹಿಡಕಲ್ ಅಣೆಕಟ್ಟು

ಹಿರಣ್ಯಕೇಶಿ, ತಾಮ್ರಪರ್ಣಿ ಇವು ಘಟಪ್ರಭಾ ನದಿಯ ಮುಖ್ಯ ಉಪನದಿಗಳು. ಘಟಪ್ರಭಾ ನದಿಗೆ ಸಮೃದ್ಧವಾದ ಜಲಸಂಪನ್ಮೂಲವಿದೆ. 1270-5080ಮಿ.ಮೀ. ಮಳೆ ಬೀಳುವ ಮಲೆನಾಡ ವಿಶಾಲ ಜಲಾನಯನ ಪ್ರದೇಶವಿದೆ. ಇದರಲ್ಲಿ ವಾರ್ಷಿಕವಾಗಿ ಹರಿಯುವ ನೀರಿನ ಸರಾಸರಿ ಪರಿಮಾಣ 12,100 ಕೋಟಿ ಘನ ಅಡಿಗಳು. ಆದರೆ ಮಳೆಗಾಲದ ತರುವಾಯ ನದಿ ಕೃಶವಾಗತೊಡಗಿ ಸಣ್ಣ ತೊರೆಯಂತಾಗಿ ಬೇಸಗೆಯಲ್ಲಿ ಬಹಳಮಟ್ಟಿಗೆ ಬತ್ತಿಯೇ ಹೋಗುತ್ತದೆ.

**ಘಟಪ್ರಭಾ ಯೋಜನೆ :** ಘಟ್ಟ ಪ್ರದೇಶದಲ್ಲಿ ಮಳೆ ನಿಯತವಾಗಿಯೂ ವಿಪುಲವಾಗಿಯೂ ಬೀಳುವುದಾದರೂ ಘಟಪ್ರಭಾ ನದಿಯ ಪೂರ್ವಭಾಗದ

ಬಯಲಿನಲ್ಲಿ ತೀರ ಕಡಿಮೆ ಮಳೆಯಾಗುತ್ತದೆ. ಬೆಳಗಾಂವಿ ಜಿಲ್ಲೆಯ ಪೂರ್ವ ಭಾಗವೂ ಬಾಗಲಕೋಟೆ ಬಿಜಾಪುರ ಜಿಲ್ಲೆಗಳೂ ಅನಾವೃಷ್ಟಿ ಪ್ರದೇಶಗಳಾಗಿದ್ದು ಪದೇ ಪದೇ ಕ್ಷಾಮ ಮತ್ತು ಅಭಾವ ಪರಿಸ್ಥಿತಿಗಳಿಗೆ ಒಳಗಾಗುವುದರಿಂದ ಅಲ್ಲಿ ಹರಿಯುವ ನದಿತೊರೆಗಳ ಜಲ ಸಂಪತ್ತನ್ನು ಉಪಯೋಗಿಸಿಕೊಂಡು ಭಾರಿ ಪ್ರಮಾಣದಲ್ಲಿ ನೀರಾವರಿ ಸೌಲಭ್ಯಗಳನ್ನು ಒದಗಿಸಿ ಜಲಾಭಾವವನ್ನು ಪರಿಹರಿಸಲು ಯೋಜಿಸಲಾಯಿತು.

ಗೋಕಾಕ ಜಲಪಾತದ ಔನ್ನತ್ಯದ ಅನುಕೂಲವನ್ನು ಪಡೆದುಕೊಂಡು ಘಟಪ್ರಭಾ ನದಿಯನ್ನು ನೀರಾವರಿಗೆ ಬಳಸಿಕೊಳ್ಳುವ ಒಂದು ಯೋಜನೆ 1852ರಷ್ಟು ಹಿಂದೆಯೇ ರೂಪುಗೊಂಡಿತು. ಜಲಪಾತದ ಮೇಲಕ್ಕೆ 3ಕಿಮೀ ದೂರದಲ್ಲಿ ಒಂದು ಗೊತ್ತಾದ ಸ್ಥಳದಿಂದ ನಾಲೆಯನ್ನು ತೆಗೆಯಲು ಯೋಜನೆಗಳನ್ನು ತಯಾರಿಸಲಾಯಿತು. 1877ರಲ್ಲಿ ಹಿಂದಿನ ಮುಂಬಯಿ ಸರ್ಕಾರ ಕ್ಷಾಮಪರಿಹಾರ ಕಾರ್ಯದ ಅಂಗವಾಗಿ ಜಲಪಾತಕ್ಕೆ ಮೇಲೆ 4ಕಿಮೀ ದೂರದಲ್ಲಿ ಧೂಪದಾಳದ ಬಳಿ ಘಟಪ್ರಭಾ ನದಿಗೆ ಅಡ್ಡಲಾಗಿ ಒಡ್ಡು ನಿರ್ಮಿಸಲು ಹಾಗೂ ಅಲ್ಲಿಂದ 24ಕಿಮೀ ಉದ್ದ ಗೋಕಾಕ ನಾಲೆಯನ್ನು ರಚಿಸುವ ಯೋಜನೆಯೊಂದಕ್ಕೆ ಒಪ್ಪಿಗೆ ನೀಡಿ ಆ ಕೆಲಸವನ್ನು 15 ಲಕ್ಷ ರೂಪಾಯಿ ವೆಚ್ಚದಲ್ಲಿ 1897ರ ಹೊತ್ತಿಗೆ ಪೂರ್ಣ ಗೊಳಿಸಲಾಯಿತು. ಈ ಯೋಜನೆಯ ಮುಂದುವರಿಕೆಯಾಗಿ ಜಲಾಶಯವೊಂದನ್ನು ನಿರ್ಮಿಸಿ ನದಿಯ ಎರಡು ದಂಡೆಗಳಿಂದಲೂ ನಾಲೆಗಳನ್ನು ತೆಗೆಯುವ ದಡ್ಡಿ ಕಟ್ಟೆಯೋಜನೆಯನ್ನು 1924ರಲ್ಲಿ ತಯಾರಿಸಲಾಯಿತಾದರೂ ಇದು ಹೆಚ್ಚು ಲಾಭಕರವಲ್ಲವೆಂಬ ಕಾರಣದಿಂದಾಗಿ ಈ ಯೋಜನೆ ಕಾರ್ಯರೂಪಕ್ಕೆ ಬರಲಿಲ್ಲ.

1924ರಲ್ಲಿ ಆಗಿನ ಮುಂಬಯಿ ಸರ್ಕಾರ ಘಟಪ್ರಭಾ ಎಡದಂಡೆ ನಾಲೆಯ ಯೋಜನೆಯನ್ನು ಸಿದ್ಧಗೊಳಿಸಿತು. ಘಟಪ್ರಭಾ ಮತ್ತು ಕೃಷ್ಣಾನದಿಗಳ ನಡುವಣ ಭೂಮಿಯನ್ನು ನೀರಾವರಿಗೆ ಒಳಪಡಿಸುವ ನಾಲಾ ವ್ಯವಸ್ಥೆಯೊಂದನ್ನು ರಚಿಸಬೇಕೆಂಬುದು ಉದ್ದೇಶವಾಗಿತ್ತು. ನದಿಯ ಎಡದಂಡೆಯಲ್ಲಿ ರಚಿಸಲು ಉದ್ದೇಶಿಸಿದ್ದು ಈ ವ್ಯವಸ್ಥೆಯಲ್ಲಿ 118ಕಿಮೀ ಉದ್ದದ ಒಂದು ಮುಖ್ಯ ನಾಲೆಯನ್ನೂ 5 ಶಾಖಾನಾಲೆಗಳನ್ನೂ ನಿರ್ಮಿಸಬೇಕೆಂದು ಯೋಜಿಸಲಾಗಿತ್ತು. ಆದರೆ ಕಾರಣಾಂತರಗಳಿಂದ ಆಗ ಈ ಯೋಜನೆಯನ್ನು ಬಿಡಬೇಕಾಯಿತು. ಈ ಯೋಜನೆಯನ್ನು ಪರಿಷ್ಕರಿಸುವ ಕೆಲಸವನ್ನು 1947ರಲ್ಲಿ ಕೈಗೊಳ್ಳಲಾಯಿತು. ಇದಕ್ಕಾಗಿ ನಡೆಸಲಾದ ದೀರ್ಘ ಪರಿಶೀಲನೆಯ ಅನಂತರ ಘಟಪ್ರಭಾ ನದಿಗೆ ಅಡ್ಡಲಾಗಿ ಹಡಲ್ಗದ ಬಳಿಯಲ್ಲೂ ಹಿರಣ್ಯಕೇಶಿ ನದಿಗೆ ಅಡ್ಡಲಾಗಿ ಅಜ್ರಾ ಬಳಿಯಲ್ಲೂ ಎರಡು ಜಲಾಶಯಗಳನ್ನು ನಿರ್ಮಿಸುವ ಯೋಜನೆಗಳು ಸಿದ್ಧವಾದುವು.

1956ರಲ್ಲಿ ಆದ ರಾಜ್ಯ ಪುನರ್ವಿಂಗಡಣೆಯ ಪರಿಣಾಮವಾಗಿ ಜಲಾಶಯಗಳು ಮಹಾರಾಷ್ಟ್ರದಲ್ಲೂ ನಾಲೆಗಳು ಕರ್ನಾಟಕದಲ್ಲೂ ಬರುವಂತಾಯಿತು. ಆದ್ದರಿಂದ ಸ್ವಾಭಾವಿಕವಾಗಿಯೇ ಇದರ ಬಗ್ಗೆ ಎರಡೂ ರಾಜ್ಯಗಳ ನಡುವೆ ದೀರ್ಘ ಸಮಾಲೋಚನೆಗಳು ನಡೆದವು. ಜಲಾಶಯದಿಂದ ನೆರೆಯ ರಾಜ್ಯದ ಜಮೀನುಗಳು ಮುಳುಗಡೆಯಾಗುವುದನ್ನು ತಪ್ಪಿಸಲು ಹಡಲ್ಗದ ಕಟ್ಟೆಯ ನಿವೇಶನಕ್ಕೆ ಕೆಳಗಡೆಯಲ್ಲಿ ಜಲಾಶಯ ನಿರ್ಮಾಣಕ್ಕೆ ಅನುಕೂಲವಾದ ಮತ್ತೊಂದು ಸ್ಥಳವನ್ನು ಕಂಡುಹಿಡಿಯುವುದು ಅಪೇಕ್ಷಣೀಯವೆನಿಸಿ ಹಿಡಕಲ್ ಬಳಿಯಲ್ಲಿ ನದಿಗೆ ಅಡ್ಡಲಾಗಿ ಕಟ್ಟೆ ಕಟ್ಟಲು ನಿರ್ಧರಿಸಲಾಯಿತು. ಈ ಜಲಾಶಯದ ಉದ್ದ 4,575ಮೀ. ಮತ್ತು ಎತ್ತರ 55ಮೀ. ಜಲಾಶಯ ಪೂರ್ಣಗೊಂಡಿದೆ.

ಘಟಪ್ರಭಾ ಯೋಜನೆಯನ್ನು ಒಟ್ಟು ನಾಲ್ಕು ಹಂತಗಳಲ್ಲಿ ಈಡೇರಿಸಲು ಯೋಜಿಸಲಾಯಿತು. ಘಟಪ್ರಭಾ ಎಡದಂಡೆ ಕಾಲುವೆ 70ಕಿಮೀ ಉದ್ದವಿದ್ದು ಎರಡು ಶಾಖೆಗಳನ್ನು ಹೊಂದಿದೆ. ಇದರ ನೀರಾವರಿ ಸಾಮರ್ಥ್ಯ 86,860 ಹೆಕ್ಟೇರ್‌ಗಳು. ಎರಡನೆಯ ಹಂತದಲ್ಲಿ ಎಡದಂಡೆ ಕಾಲುವೆಯನ್ನು 71ರಿಂದ 114ಕಿಮೀ ಉದ್ದದವರೆಗೆ ವಿಸ್ತರಿಸಲಾಯಿತು. ಇದರ ನೀರಾವರಿ ಸಾಮರ್ಥ್ಯ 52,520 ಹೆಕ್ಟೇರ್‌ಗಳು. ಮೂರನೆಯ ಹಂತದ ಯೋಜನೆ ಘಟಪ್ರಭಾ ಬಲದಂಡೆ ನಿರ್ಮಾಣ. ಇದರ ಉದ್ದ 192ಕಿಮೀಗಳು. ಈ ಜಲಾಶಯದಿಂದ 114ಕಿಮೀ ಉದ್ದದ ಎಡದಂಡೆಯ ನಾಲೆ ನಿರ್ಮಿಸಿದ್ದು. ಈ ಜಲಾಶಯದಿಂದ ಬೆಳಗಾಂವಿ ಜಿಲ್ಲೆಯ ಚಿಕ್ಕೋಡಿ, ಹುಕ್ಕೇರಿ, ಅಥಣಿ, ರಾಯಬಾಗ, ಗೋಕಾಕ, ಸವದತ್ತಿ ಮತ್ತು ರಾಮದುರ್ಗ ತಾಲ್ಲೂಕಗಳಲ್ಲೂ ಬಾಗಲಕೋಟೆ ಜಿಲ್ಲೆಯ ಜಮಖಂಡಿ, ಮುಧೋಳ, ಬೀಳಗಿ, ಬಾಗಲಕೋಟೆ ಮತ್ತು ಹುನುಗುಂದ ತಾಲ್ಲೂಕುಗಳಲ್ಲೂ ಒಟ್ಟು 3.04 ಲಕ್ಷ ಹೆಕ್ಟೇರ್ ಭೂಮಿಗೆ ಪ್ರಯೋಜನವಾಗಿದೆ.

ಮೂರನೆಯ ಹಂತದ ಯೋಜನೆಗೆ 2000ದ ಹೊತ್ತಿಗೆ 425 ಕೋಟಿ ರೂಪಾಯಿಗಳನ್ನು ವ್ಯಯಿಸಲಾಗಿತ್ತು. ಈ ಯೋಜನೆಯು ಪೂರ್ಣಗೊಂಡಾಗ 1,78,064 ಹೆಕ್ಟೇರ್‌ಗಳಿಗೆ ನೀರಾವರಿ ಸೌಲಭ್ಯ ಒದಗುತ್ತದೆ. ನಾಲ್ಕನೆಯ ಹಂತದ ಯೋಜನೆಯಲ್ಲಿ ಎತ್ತರ ಮಟ್ಟದಲ್ಲಿ ಎಡದಂಡೆ ಕಾಲುವೆ ನಿರ್ಮಿಸುವುದು. ಇದರ ನೀರಾವರಿ ಸಾಮರ್ಥ್ಯ 60,000 ಹೆಕ್ಟೇರ್‌ಗಳು. ಈ ಪ್ರದೇಶದ ಬಹುಭಾಗದಲ್ಲಿ ಮುಂಗಾರು ಬೆಳೆಯ ಕೆಲವು ಕಡೆಗಳಲ್ಲಿ ಹಿಂಗಾರು ಫಸಲನ್ನೂ ಪಡೆಯಬಹುದು. ಈಗ 0.91-1.22ಮೀ. ಆಳದ ಕಪ್ಪುಮಣ್ಣು ಇರುವೆಡೆಗಳಲ್ಲಿ ಹತ್ತಿ ಬೆಳೆಯುತ್ತಾರೆ. ಈ ಪ್ರದೇಶದಲ್ಲಿ ಮಿಶ್ರತಳಿಯ ಮೆಕ್ಕೆಜೋಳ, ಸಜ್ಜೆ, ಜೋಳ, ಹತ್ತಿ, ದ್ವಿದಳ ಧಾನ್ಯಗಳು, ನೆಲಗಡಲೆ, ಸೂರ್ಯಕಾಂತಿ, ಗೋದಿ, ಕಬ್ಬು ಬೆಳೆಯಬಹುದಾಗಿದೆ. *

**ಘಟಿಕೋತ್ಸವ :** ವಿಶ್ವವಿದ್ಯಾನಿಲಯದ ಅಥವಾ ಇತರ ಅಂಗೀಕೃತ ಉನ್ನತ ಶಿಕ್ಷಣ ಸಂಸ್ಥೆಗಳ ಅಧ್ಯಯನ ಘಟಕವೊಂದರ ಶಿಕ್ಷಣವನ್ನು ಯಶಸ್ವಿಯಾಗಿ ಮುಗಿಸಿದ ವಿದ್ಯಾರ್ಥಿಗಳಿಗೆ ಅಥವಾ ಯಾವುದಾದರೂ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ ಅಥವಾ ಪಾಂಡಿತ್ಯ ಸಾಧಿಸಿದ ಖ್ಯಾತ ವ್ಯಕ್ತಿಗಳಿಗೆ, ಪದವಿ ಅಥವಾ ಪ್ರಶಸ್ತಿಯನ್ನು ನೀಡಲು ಏರ್ಪಡಿಸುವ ಸಾಂಪ್ರದಾಯಿಕ ಸಮಾರಂಭ (ಕಾನ್ವೋಕೇಷನ್).



ಘಟಿಕೋತ್ಸವದ ಮೆರವಣಿಗೆ

ಭಾರತದ ಇತರೆಡೆಗಳಂತೆ ಕರ್ನಾಟಕದಲ್ಲೂ ಘಟಿಕೋತ್ಸವ ಇಂಗ್ಲಿಷ್ ಸಂಪ್ರದಾಯದಂತೆ ನಡೆಯುತ್ತದೆ. ಕರ್ನಾಟಕದ ಎಲ್ಲ ವಿಶ್ವವಿದ್ಯಾನಿಲಯಗಳಲ್ಲೂ ಸಾಮಾನ್ಯವಾಗಿ ಘಟಿಕೋತ್ಸವದಲ್ಲಿ ಏಕರೀತಿಯ ಕಾರ್ಯಕ್ರಮವನ್ನು ಅನುಸರಿಸಲಾಗುತ್ತಿದೆ. ಸಮಾರಂಭಕ್ಕೆ ಬರತಕ್ಕ ವಿದ್ಯಾರ್ಥಿಗಳು ಆಯಾ ಪದವಿಗೆ ಗೊತ್ತುಮಾಡಿರುವ ಬಣ್ಣದ ಮೇಲುಹೊದಿಕೆ (ಗೌನು), ಲಾಂಛನವಸ್ತ್ರ (ಹುಡ್)ಗಳನ್ನು ಧರಿಸಿಕೊಂಡು ಬರಬೇಕೆಂಬ ನಿಯಮವುಂಟು. ಸಮಾರಂಭಕ್ಕೆ ರಾಷ್ಟ್ರದ ವರಿಷ್ಠ ನಾಯಕರೊಬ್ಬರು ಆಹ್ವಾನಿತರಾಗಿ ಬಂದು ನೂತನ ಪದವೀಧರರನ್ನುದ್ದೇಶಿಸಿ ಭಾಷಣ ಮಾಡುವರು.

ಸಮಕಾಲೀನ ಸನ್ನಿವೇಶಕ್ಕೆ ತಕ್ಕಂತೆ ಘಟಿಕೋತ್ಸವ ಸಮಾರಂಭದಲ್ಲಿ ಹಲವು ಮಾರ್ಪಾಡುಗಳು ಜಾರಿಗೆ ಬರುತ್ತಿವೆ. ಮೈಸೂರು ವಿಶ್ವವಿದ್ಯಾನಿಲಯ ಸ್ನಾತಕೋತ್ತರ ಪದವೀಧರರಿಗೆ ಏರ್ಪಡಿಸುವ ಘಟಿಕೋತ್ಸವದ ಜೊತೆಗೆ ಕಾಲೇಜುಗಳು ತಮ್ಮ ತಮ್ಮ ವಿದ್ಯಾರ್ಥಿಗಳಿಗೆ ಪ್ರತ್ಯೇಕ ಸಮಾರಂಭಗಳನ್ನು ಏರ್ಪಡಿಸಿ ಪದವಿಗಳನ್ನು ವಿತರಣೆ ಮಾಡುತ್ತಿರುವುವು.

ಗೈರುಹಾಜರಿಯಲ್ಲಿ ಪದವಿ ಸ್ವೀಕರಿಸಲು ಅವಕಾಶವಿತ್ತು. ವಿಶ್ವವಿದ್ಯಾನಿಲಯಗಳು ಅಂಚೆಯ ಮೂಲಕ ಪ್ರಶಸ್ತಿಪತ್ರ ಕಳಿಸಿ ಕೊಡುವ ವ್ಯವಸ್ಥೆಯನ್ನೂ ಮಾಡುತ್ತಿವೆ. ಈಚೆಗೆ ಪಾಶ್ಚಾತ್ಯ ಸಂಪ್ರದಾಯದ ಪೋಷಾಕಿಗೆ ಬದಲು ಭಾರತೀಯ ಸಂಪ್ರದಾಯದ ಉಡುಪನ್ನು



ಮಿರ್ಜಾ ಇಸ್ಮಾಯಿಲ್ ಮತ್ತು ಎಂ.ವಿಶ್ವೇಶ್ವರಯ್ಯನವರಿಗೆ ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಾಕ್ಟರೇಟ್ ಪದವಿ ನೀಡುತ್ತಿರುವ ಸಂದರ್ಭ

ಧರಿಸಬಹುದಾದ ಅವಕಾಶ ಕಲ್ಪಿಸಲಾಗಿದೆ. ಬಿಳಿಯ ಉಡುಪನ್ನು ಅದರ ಮೇಲೆ ಆಯಾ ಪದವಿಯ ಗುರುತಿನ ಬಣ್ಣದ ಬಿಲ್ಲೆಗಳನ್ನೂ ಧರಿಸಬೇಕೆಂದು ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾನಿಲಗಳು ನಿಯಮ ರೂಪಿಸಿವೆ. ಉಡುಪಿನ ನಿಯಮವನ್ನು ಪೂರ್ಣವಾಗಿ ತೆಗೆದುಹಾಕುವ ಪ್ರವೃತ್ತಿಯೂ ಕಂಡುಬರುತ್ತಿದೆ. ಕೆಲವು ವಿಶ್ವವಿದ್ಯಾನಿಲಯಗಳು ಪದವೀಧರರ ಬಾಹುಳ್ಯತೆಯನ್ನು ಗಮನಿಸಿ ಸ್ನಾತಕೋತ್ತರ ಪದವೀಧರರಿಗೆ ಮಾತ್ರ ಘಟಿಕೋತ್ಸವ ನಡೆಸುವ ಪದ್ಧತಿಯನ್ನು ರೂಢಿಗೆ ತರುತ್ತಿವೆ. (ಎನ್.ಎಸ್.ವಿ.)

**ಘಟ್ಟಿವಾಳಯ್ಯ :** ಹನ್ನೆರಡನೆಯ ಶತಮಾನದ ಶಿವಶರಣ ಹಾಗೂ ವಚನಕಾರ. ಹುಟ್ಟು ಹೆಸರು ಮುದ್ದಣ. ಈತ ಭಕ್ತನಾಗಿ ಮದ್ದಳೆ ಬಾರಿಸುತ್ತ ಶಿವಾನುಭವವನ್ನು ಸಾರುವ ನರ್ತನ ಕಾಯಕವನ್ನು ಕೈಕೊಂಡು ಕಡುತರ ಆಚರಣೆಗಳನ್ನು ಪಾಲಿಸುತ್ತಿದ್ದುದರಿಂದ ಘಟ್ಟಿವಾಳಯ್ಯ ಎಂಬ ಹೆಸರಾಯಿತು. ಇವನು ವಿವಾಹಿತ. ಹೆಂಡತಿ ಇವನೊಡನೆ ಬಾಳ್ವೆ ಮಾಡಲಿಲ್ಲ. ಗಂಡನ ಆಧ್ಯಾತ್ಮಿಕತೆ ಹಿಡಿಸದಾಯಿತು. ಸಂಪತ್ತು ಮತ್ತು ಸುಖಾನುಭಾವಕ್ಕೆ ಮನಸೋತ ಸತಿಯ ಈ ನಡತೆಯಿಂದ ಘಟ್ಟಿವಾಳಯ್ಯನ ಮನಸ್ಸು ಸಂಪೂರ್ಣವಾಗಿ ವೈರಾಗ್ಯದತ್ತ ತಿರುಗಿತು. ಹೊನ್ನು ಭೂಪಾಲರಿಗೆ, ಹೆಣ್ಣೊಲಿದಕಾಮುಕಗೆ, ಮಣ್ಣು ಬಲವಂತಗಲ್ಲದೆ ಬರಿಯ ಭ್ರಾಂತಿಯಲ್ಲಿ ಕಣ್ಣುಗೆಟ್ಟರೆ ಬರುವುದೇ? ಎನ್ನ ಧನ ಜ್ಞಾನವೆಂಬಾಗಮದ ವಚನ ನಿನ್ನರಿದುಕೋ ಎಂದು ತನಗೆ ತಾನು ಸಂತೈಸಿಕೊಂಡು ವೈರಾಗ್ಯಪರನಾದ. ತರುವಾಯ ಕಲ್ಯಾಣದತ್ತ ಪಯಣಮಾಡಿದ. ಅಲ್ಲಿ ಬಸವಣ್ಣನವರ ದಾಸೋಹದ ಆಸೆಗಾಗಿ ನೆರೆದಿದ್ದ ಕಪಟ ಜಂಗಮರನ್ನು ಕಂಡು ಮುಸುರೆ ಗಡಿಗೆಯ ನೊಣಗಳೆಂದು ನಿಷ್ಠುರವಾಗಿ ನುಡಿದು ಅವರ ಕೋಪಕ್ಕೆ ಪಾತ್ರನಾದ. ಅವರು ಇವನ ಇಷ್ಟಲಿಂಗವನ್ನು ಕಿತ್ತುಕೊಂಡರು. ಘಟ್ಟಿವಾಳಯ್ಯ ಒಂದು ಬೆಟ್ಟವನ್ನೆ ಇಷ್ಟಲಿಂಗವಾಗಿ ಧರಿಸಿ ಬಸವಣ್ಣನ ಮನೆಯ ಬಾಗಿಲಲ್ಲಿ ಕುಳಿತ. ಆಗ ಅದರಿಂದ ಮನೆಯ ಪ್ರವೇಶಕ್ಕೆ ಅಡಚಣೆಯುಂಟಾಗಲು ಜಂಗಮರು ಇಷ್ಟಲಿಂಗವನ್ನು ಹಿಂದಿರುಗಿಸಿದರು. ಬೆಟ್ಟ ಇಷ್ಟಲಿಂಗದಲ್ಲಿ ಲೀನವಾಯಿತು – ಇದು ಈತ ಮೆರೆದನೆನ್ನಲಾದ ಪವಾಡ. ಆಚಾರಕ್ಕಿಂತಲೂ ಸ್ವಾನುಭವ ದೊಡ್ಡದೆಂದು ಘಟ್ಟಿವಾಳಯ್ಯ ಜಂಗಮರಿಗೆ ಸಾರಿ ಹೇಳಿದ. ಇವನ ಸದಾಚಾರದ ಪ್ರಭಾವದಿಂದ ಕಪಟಾಚಾರಿಗಳೂ ಪ್ರಾಮಾಣಿಕ ಜಂಗಮರಾದರು. ನರ್ತನ ಕಾಯಕದಲ್ಲಿ ತೊಡಗಿರುವಾಗಲೇ ಒಂದು ದಿನ ಈತ ನಿಧನಹೊಂದಿದ.

ಅಂದಿನ ಶರಣರ ನಡುವೆ ಈತ ಗಮನಾರ್ಹವಾದ ಸ್ಥಾನವನ್ನು ಗಳಿಸಿಕೊಂಡಿದ್ದ. ಅಲ್ಲಮಪ್ರಭು ಇವನನ್ನು ಕುರಿತು 'ಅಂಗದ ಮೇಲಣ ಲಿಂಗಕ್ಕಿಂತ ಅಂಗದೊಳಗಣ ಲಿಂಗವು ಹಿಂಗದಂತಿರಬೇಕು ಘಟ್ಟಿವಾಳಯ್ಯನಂತೆ' ಎಂದೂ 'ಕೂಡಲ ಚನ್ನಸಂಗಾ ನಿನ್ನ ಶರಣ ಘಟ್ಟಿವಾಳಯ್ಯನಲ್ಲದೆ ನೆರೆ ಅರಿವವರಾರೋ' ಎಂದು ಚೆನ್ನಬಸವಣ್ಣನೂ ಲೆಕ್ಕವಿಲ್ಲದ 'ಆಸೆ ಮನದೊಳಗೆ ಹೊಕ್ಕು ತಿರುಗಾಡುತಿಹ ಚಿಕ್ಕಮಕ್ಕಳಿಗೆಲ್ಲಿಯದೋ ನಿರ್ವಾಣ ಘಟ್ಟಿವಾಳಂಗಲ್ಲದೆ' ಎಂದು ಮೋಳಿಗೆ ಮಾರಯ್ಯನೂ ಮೆಚ್ಚುಗೆಯ ನುಡಿಗಳನ್ನಾಡಿದ್ದಾನೆ. ಅದೃಶ್ಯಕವಿ ಇವನನ್ನು ದೃಢಶರಣಸೀಮಂತಮಣಿ ಎಂದು ಕೊಂಡಾಡಿದ್ದಾನೆ.

ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಎಂಬ ಅಂಕಿತದಿಂದ ಈತ ವಚನಗಳನ್ನು ರಚಿಸಿದ್ದಾನೆ. ಇವನ ವಚನಗಳಲ್ಲಿ ಸತ್ಯ ನಿಷ್ಠುರತೆ ಮತ್ತು ಸದಾಚಾರಗಳು ಎದ್ದು ಕಾಣುತ್ತವೆ. ಉದಾಹರಣೆಗಾಗಿ ಒಂದು ವಚನ:

ಕಾಯ ಜೀವವನರಿದೆನೆಂಬುವರೆಲ್ಲರೂ ಹೋದರಲ್ಲಾ ಹೊಲಬುದಪ್ಪಿ
ಹೊನ್ನು ಹೆಣ್ಣು ಮಣ್ಣಿಗೆ ಹೋರಿಯಾಡುವರೆಲ್ಲರು
ಬಸವಣ್ಣನ ಬಾಗಿಲಲ್ಲಿ ಬಂಧಿತರಾಗಿ ನೊಂದವರಿಗೇಕೆ
ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ

ಈತ ಒಂದು ಕಾಲಜ್ಞಾನವನ್ನೂ ಬರೆದಿದ್ದಾನೆ. ಇದರಲ್ಲಿ 7ಸಂಧಿಗಳೂ 393 ಪದಗಳೂ ಇವೆ. ಉದಾಹರಣೆಗೆ ಒಂದು ಪದ:

ಅತ್ತೆಯ ಮಾತ ಸೊಸೆ ಕೇಳಳಮ್ಮ
ಅತ್ತೆಯನೆ ಒತ್ತಿ ದುರ್ಭಾಷೆಯಮ್ಮ
ಪತಿವ್ರತವು ಕೆಟ್ಟುಹೋದೀತಮ್ಮ
ಇನ್ನು ಪತಿಯ ಮಾತನು ಸಡ್ಡೆಗೊಳ್ಳರಮ್ಮ (ಬಿ.ವಿ.ವಿ.ಬಿ.)

**ಘನಮಠದಾರ್ಯ ನಾಗಭೂಷಣ :** 1828-84. ಘನಮಠದ ಶಿವಯೋಗಿ ಎಂದೂ ಪ್ರಸಿದ್ಧನಾಗಿದ್ದ ಶಿವಶರಣ. ಈತ ಆಂಧ್ರಪ್ರದೇಶದ ಹೈದರಾಬಾದ್ ಜಿಲ್ಲೆಯ ದೋರ್ವಾಡ ಎಂಬ ಗ್ರಾಮದಲ್ಲಿ ಜನಿಸಿದ. ತಂದೆ ವೀರಯ್ಯ, ತಾಯಿ ವೀರಾಂಬೆ. ಈತನ ಹುಟ್ಟು ಹೆಸರು ನಾಗಭೂಷಣ. ತನ್ನ ಎಳೆಯ ವಯಸ್ಸಿನಲ್ಲೇ ದೀಕ್ಷೆ ಪಡೆದು ಹನ್ನೆರಡನೆಯ ವಯಸ್ಸಿನಲ್ಲಿ ಘನಮಠದ ಚರವರ್ಯ ಸದ್ಗುರುಗಳ ಕೃಪೆಗೆ ಪಾತ್ರನಾದ. ತೆಲುಗು ದೇಶದಿಂದ ಬಂದವನಾದುದರಿಂದ ಕನ್ನಡನಾಡನ್ನು ಪ್ರವೇಶಿಸಿದಾಗ ಈತ ಭಾಷಾಸಮಸ್ಯೆಯನ್ನು ಎದುರಿಸಬೇಕಾಯಿತು. ಬಸವಾದಿ ಪ್ರಮಥರ ವಚನಸಾಹಿತ್ಯದಲ್ಲಿ ಆಳವಾದ ಜ್ಞಾನವನ್ನು ಪಡೆಯಬೇಕೆಂಬ ಉತ್ಕಟ ಬಯಕೆ ಈತನನ್ನು ನಡುವಯಸ್ಸಿನಲ್ಲಿ ಕನ್ನಡ ಕಲಿಯಲು ಪ್ರೇರೇಪಿಸಿತು. ಯರಗೋಳಮಠದ ರೇವಣಸಿದ್ಧಯ್ಯ ಎಂಬವರಲ್ಲಿ ವಿಧಿಪೂರ್ವಕವಾಗಿ ಕನ್ನಡ ಕಲಿತುದಲ್ಲದೆ ಕಾವ್ಯ ಪುರಾಣಗಳ ಸಾರವನ್ನೂ ವಚನಗಳ ತಿರುಳನ್ನೂ ಗ್ರಹಿಸಿದ. ಬಸವಣ್ಣನವರ ದಿವ್ಯ ಜೀವನ ಈತನ ಬಾಳನ್ನೆಲ್ಲ ಆವರಿಸಿತ್ತು. ಹಾಗಾಗಿ ಕಲ್ಯಾಣದ ಸುತ್ತಮುತ್ತಲಿನ ಪ್ರದೇಶಗಳಾದ ಗುಲ್ಬರ್ಗ, ಬಿಜಾಪುರ, ರಾಯಚೂರು ಜಿಲ್ಲೆಗಳಲ್ಲಿ ಹೆಚ್ಚಾಗಿ ಸಂಚಾರಮಾಡಿದ. ಚಿತ್ತಾಲಿ, ಸಂಗಮೇಶ್ವರ, ತಾಳಿಕೋಟೆ, ಬಾಗೇವಾಡಿ, ಬಳ್ಳಾರಿ, ಸೊನ್ನಲಾಪುರ, ಕುಂಟೋಜಿ, ಹುನಗುಂದ, ಇಳಕಲ್ಲು ಮೊದಲಾದ ಊರುಗಳನ್ನು ಸಂಚರಿಸಿದನೆಂಬುದಕ್ಕೆ ಆಧಾರಗಳು ಸಿಗುತ್ತವೆ. ಹೋದಲ್ಲೆಲ್ಲ ಈತನ ಹೆಗಲ ಮೇಲೆ ಬಸವಣ್ಣನವರ ವಚನಗಳ ಒಂದು ಕಟ್ಟು ಸದಾ ಇರುತ್ತಿತ್ತಂತೆ. ಹೀಗೆ ಸು.35 ವರ್ಷಗಳ ಕಾಲ ದೇಶಸಂಚಾರಮಾಡಿ ಪುರಾಣ ಪ್ರವಚನದ ಮೂಲಕ ಜನರಲ್ಲಿ ಧಾರ್ಮಿಕ ಜಾಗೃತಿಯನ್ನುಂಟುಮಾಡಿದ. ಈತನಿಗೆ ಕಾವ್ಯರಚನೆಯ ಸಾಮರ್ಥ್ಯವಿತ್ತಾಗಿ ಅನೇಕ ಹಾಡುಗಳನ್ನು ಕಟ್ಟಿ ಹಾಡಿದುದಲ್ಲದೆ ಭಕ್ತಿಸುಧಾಸಾರ ಎಂಬ ಗ್ರಂಥವನ್ನು ರಚಿಸಿದನೆಂದು ತಿಳಿದುಬರುತ್ತದೆ.

ಶಿವಜ್ಞಾನ, ಶಿವಾನುಭವ, ತತ್ತ್ವಬೋಧನೆ ಈತನ ವ್ಯಕ್ತಿತ್ವದ ಒಂದು ಮುಖವಾದರೆ ರೈತರ ಕ್ಷೇಮಾಭ್ಯುದಯ ಇನ್ನೊಂದು ಮುಖವಾಗಿತ್ತು. ವ್ಯವಸಾಯದ ವಿವಿಧ ಸಮಸ್ಯೆಗಳ ಅರಿವು ಈತನಿಗೆ ಚೆನ್ನಾಗಿತ್ತು. ವಿಶೇಷವಾಗಿ ಬಾವಿ ತೋಡುವಾಗ ರೈತರು ಈತನ ಸಲಹೆಯನ್ನು ಪಡೆಯುತ್ತಿದ್ದರಂತೆ. ಈತ ವ್ಯವಸಾಯದಲ್ಲಿದ್ದ ತನ್ನ ಅಪಾರ ಜ್ಞಾನ ವ್ಯರ್ಥವಾಗಬಾರದೆಂದು ಭಾವಿಸಿ ತನ್ನ ಶಿಷ್ಯರಲ್ಲಿ ಒಬ್ಬನಾದ

ಸಿದ್ಧರಾಮಪ್ಪ ಕುನ್ನಾಳ ಎಂಬಾತನಿಂದ ಕೃಷಿಜ್ಞಾನ ಪ್ರದೀಪಿಕೆ ಎಂಬ ಗ್ರಂಥವನ್ನು ಬರೆಯಿಸಿದ. ಇದರಲ್ಲಿ ಹೊಲಗದ್ದೆತೋಟಗಳನ್ನು ಕುರಿತ ಬೋಧಪ್ರದ ನಿರೂಪಣೆಯಿದೆ.

ಶಿವಯೋಗಿ ತನ್ನ ಅಂತ್ಯಕಾಲದಲ್ಲಿ ಲಿಂಗಸುಗೂರು ತಾಲ್ಲೂಕಿನ ಸಂತೆಕೆಲ್ಲೂರು ಗ್ರಾಮದಲ್ಲಿ ತಂಗಿದ್ದಾಗ ಶಂಕರಪ್ಪಗೌಡ ಎಂಬಾತನ ಮನೆಯಲ್ಲಿ ಕರುಣಪ್ರಸಾದ ಸಮಯದಲ್ಲಿ ಈತನಿಗೂ ನೀರಡಗುಂಭದ ಚನ್ನಬಸವಸ್ವಾಮಿಗೂ ವಾದ ನಡೆಯಿತು. ಅನಂತರ 1884ರಲ್ಲಿ ಇಬ್ಬರೂ ಒಟ್ಟಾಗಿ ಲಿಂಗೈಕ್ಯರಾದರೆಂದು ತಿಳಿದುಬರುತ್ತದೆ. ಈತನ ಜೀವನದ ಕುರುಹಾಗಿ ಈಗ ಕುಂಟೋಜಿಯಲ್ಲಿ ಈತನ ಪಾದುಕೆಗಳೂ ಸಂತೆಕೆಲ್ಲೂರಿನಲ್ಲಿ ಈತನ ಗದ್ದುಗೆಯೂ ಉಳಿದಿವೆ. ಕೃಷಿಜ್ಞಾನ ಪ್ರದೀಪಿಕೆ ಫ.ಗು. ಹಳಕಟ್ಟಿಯವರಿಂದ ಸಂಪಾದಿತವಾಗಿ ಅಚ್ಚಾಗಿದೆ (1936.) (ಬಿ.ವಿ.ವಿ.ಬಿ.)

**ಘನಲಿಂಗದೇವ :** ಸು.1480. ವೀರಶೈವ ವಚನಕಾರ. ತೋಂಟದ ಸಿದ್ಧಲಿಂಗೇಶ್ವರನ ಶಿಷ್ಯ. ಈತ ಸುತ್ತೂರು ವೀರಸಿಂಹಾಸನಮಠದ ಗುರು ವರ್ಗಕ್ಕೆ ಸೇರಿದವನೆಂದೂ ಆ ಮಠದ ಹನ್ನೊಂದನೆಯ ಅಧಿಪತಿಯಾಗಿದ್ದನೆಂದೂ ತಿಳಿದುಬಂದಿದೆ. ತನ್ನ ಗುರುವಿನೊಡನೆ ಒಂದಾಗಿ, ಅವರು ಕೈಕೊಂಡ ಕಾರ್ಯವನ್ನು ಪರಿಪೂರ್ಣಗೊಳಿಸಲು ಯತ್ನಿಸಿದ. 'ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನ' ಎಂಬ ಅಂಕಿತದಿಂದ ವಚನಗಳನನ್ನು ಬರೆದಿದ್ದಾನೆ. 63 ವಚನಗಳು ದೊರೆತಿವೆ. ಇವನ ಒಂದೊಂದು ವಚನದಲ್ಲೂ ಮಾತಿನ ಮೋಡಿ, ಜ್ಞಾನದ ಕಿಡಿ ವೀರಶೈವದ ಮತದ ಸಾರ ಇದೆ. ಕೆಲವು ವಚನಗಳು ಭಾವಗೀತೆಯ ಅನುಭವ ತೀವ್ರತೆಯಿಂದ ಕೂಡಿವೆ. ಇವುಗಳಲ್ಲಿ ವಿಡಂಬನೆಯ ಆತ್ಮಶೋಧನೆಯ ಗುಣಗಳು ಕಂಡುಬರುತ್ತವೆ. 'ಪುರಾತನರ ಗೀತವನೋದಿ ಪುರಾತನರ ಮಕ್ಕಳಾದ ಬಳಿಕ ಕಿರಾತರ ಮಕ್ಕಳಂತೆ ಮನಬಂದ ಪರಿಯಲ್ಲಿ ನಡೆಯಬಾರದು; ಕಪಿ ಕಳ್ಳ ಕುಡಿದು ಕಡಲ ದಾಂಟುವೆನೆಂದು ಲಂಘಿಸಿ, ನಡುನೀರಿನಲ್ಲಿ ಬಿದ್ದು, ಮೀನು ಮೊಸಳೆಗೆ ಆಹಾರವಾದಂತಾಯಿತಯ್ಯ ಎನ್ನಬಾಳು. ನಡೆಗೂ ನುಡಿಗೂ ತಾಳ ಮೇಳವಿಲ್ಲದಿದ್ದರೆ ಏತರ ಬಾಳು ? ಹುಲಿ ಆಕಳ ವೇಷ ತೊಟ್ಟಂತೆ; ಕುನ್ನಿಗೆ ರನ್ನದ ಹಲ್ಲಣವ ಹಾಕಿದಂತೆ, ಹಂದಿಯ ತಂದು ಅಂದಣವ ಸೇರಿಸಿದಂತೆ, ಎನಗೊಲಿದು ಶಿವಲಾಂಛನವ ಕೊಟ್ಟ ಕಾರಣವೇನಯ್ಯ ಗುರುವೆ – ಈ ಮೊದಲಾದ ವಚನಗಳು ಅನುಭವಸಂಪತ್ತಿಯಿಂದ ಕೂಡಿದ್ದು ಸುಂದರವಾಗಿವೆ. ಇವನ ವಚನಗಳಲ್ಲಿ ಚುಚ್ಚೂಮೆಚ್ಚೂ ಇಚ್ಛೆಗೆ ಬಂದುದನ್ನು ಬಿಚ್ಚಿ ಹೇಳುವ ಹದ ಕಂಡು ಬರುತ್ತದೆ. ಅಂತೆಯೇ ಇವನ ಶೈಲಿ ವಜ್ರದಂತೆ ಕಠೋರವೂ ಪುಷ್ಪದಂತೆ ಮೃದುಮಧುರವೂ ಆಗಿದೆ. (ಎಂ.ಎಸ್.ಎಸ್.)

**ಘಾಟಿ ಸುಬ್ರಹ್ಮಣ್ಯ :** ಬೆಂಗಳೂರು ಜಿಲ್ಲೆಯ ಪ್ರಸಿದ್ಧ ಯಾತ್ರಾ ಸ್ಥಳ. ದೊಡ್ಡಬಳ್ಳಾಪುರಕ್ಕೆ 12ಕಿಮೀ ದೂರದಲ್ಲಿದೆ. ಇದು ಘಟ್ಟಗಳ ಮಧ್ಯ ಇರುವುದರಿಂದ ಇದಕ್ಕೆ ಈ ಹೆಸರು ಬಂದಿದೆ.



ಘಾಟಿ ಸುಬ್ರಹ್ಮಣ್ಯ ದೇವಾಲಯ

ಇಲ್ಲಿಯ ದೇವರು ಸುಬ್ರಹ್ಮಣ್ಯೇಶ್ವರ. ಸಂತಾನವಿಲ್ಲದವರು ಘಾಟಿಸುಬ್ರಹ್ಮಣ್ಯಕ್ಕೆ ಬಂದು ನಾಗರಪ್ರತಿಷ್ಠೆ ಮಾಡುತ್ತಾರೆ. ಈಗ ಸುತ್ತಮುತ್ತಲಿನ ಪ್ರದೇಶದವರು ತಮ್ಮ ಚೌಲಸಂಸ್ಕಾರವನ್ನು ಇಲ್ಲಿ ನಡೆಸುತ್ತಾರೆ. ಈಗ ಉಪನಯನಗಳೂ ವಿವಾಹಗಳೂ ನಡೆಯುತ್ತಿವೆ. ನಾಗರಪಂಚಮಿ, ಸುಬ್ಬರಾಯನ ಷಷ್ಠಿಗಳಂದು ಇಲ್ಲಿ ವಿಶೇಷಪೂಜೆ ಮತ್ತು ಉತ್ಸವಗಳು ನಡೆಯುತ್ತವೆ. ಇದೇ ಸಮಯದಲ್ಲಿ ದನಗಳ ದೊಡ್ಡ ಜಾತ್ರೆ ನೆರೆಯುತ್ತದೆ. ಈ ಕ್ಷೇತ್ರಕ್ಕೆ ವಾಹನ ಸೌಕರ್ಯವಿದೆ. ಯಾತ್ರಿಕರು ಇಳಿದುಕೊಳ್ಳಲು ಛತ್ರಗಳಿವೆ. *

**ಘೋರ್ಪಡೆ, ಎಂ. ವೈ. :** 1931-. ಹೆಸರಾಂತ ವನ್ಯಜೀವಿ ಛಾಯಾಚಿತ್ರಗ್ರಾಹಕ, ಕೈಗಾರಿಕೋದ್ಯಮಿ, ಪ್ರಮುಖ ರಾಜಕಾರಣಿ. ಕರ್ನಾಟಕದ ಮಾಜಿ ಸಚಿವ, ಸಂಡೂರು ಮ್ಯಾಂಗನೀಸ್ ಐರನ್ ಓರ್ಸ್ ಲಿ. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು. ಅರ್ಥಶಾಸ್ತ್ರ, ಯೋಜನೆ, ಶಿಕ್ಷಣ, ಕೈಗಾರಿಕೆ, ವ್ಯವಸಾಯ ಮತ್ತು ಕೃಷಿ ವಿಷಯಗಳಲ್ಲಿ ಇವರು ವಿಶೇಷ ಆಸಕ್ತಿ ಹೊಂದಿದ್ದಾರೆ.



ಮುರಾರಿರಾವ್ ಯಶವಂತರಾವ್ ಘೋರ್ಪಡೆ ಇವರ ಪೂರ್ತಿ ಹೆಸರು. ಇವರು 1931 ಡಿಸೆಂಬರ್ 7ರಂದು ಬೆಂಗಳೂರಿನಲ್ಲಿ ಜನಿಸಿದರು. ಇವರದು ಸಂಡೂರಿನ ರಾಜಮನೆತನ, ಇವರ ಹಿರಿಯರು ಇತಿಹಾಸದಲ್ಲಿ ಪ್ರಮುಖ ಪಾತ್ರ ವಹಿಸಿದವರು. ಬಾಲ್ಯದ ಶಿಕ್ಷಣ ಸಂಡೂರಿನಲ್ಲಿ ಆಯಿತು. ಬೆಂಗಳೂರಿನ ಸೆಂಟ್‌ಜೋಸೆಫ್ ಕಾಲೇಜಿನಿಂದ ಪದವಿ (1950) ಗಳಿಸಿದ ಅನಂತರ ಇಂಗ್ಲೆಂಡಿನ ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಿಂದ ಎಕನಾಮಿಕ್ಸ್ ಟ್ರೈಪೋಸ್ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದು (1952) ಕೃಷಿ ಮತ್ತು ಕೈಗಾರಿಕೋದ್ಯಮವನ್ನು ವೃತ್ತಿಯನ್ನಾಗಿಸಿಕೊಂಡರು.

1954ರಲ್ಲಿ ಕಾಂಗ್ರೆಸ್ ಪಕ್ಷವನ್ನು ಸೇರಿದ ಇವರು ಗ್ರಾಮೀಣ ಅಭಿವೃದ್ಧಿಯಲ್ಲಿ ವಿಶೇಷ ಆಸಕ್ತಿ ತೋರಿದರು. ಸಂಡೂರು ಪಟ್ಟಣ ಪಂಚಾಯಿತಿ ಮತ್ತು ಸಹಕಾರ ಸಂಘದ ಅಧ್ಯಕ್ಷರಾಗಿದ್ದರು (1958). 1959ರ ಉಪಚುನಾವಣೆಯಲ್ಲಿ ಮೊದಲಬಾರಿಗೆ ಸಂಡೂರು ಕ್ಷೇತ್ರದಿಂದ ಕರ್ನಾಟಕ ವಿಧಾನಸಭೆ ಪ್ರವೇಶಿಸಿದರು. ಅನಂತರ ಆರು ಬಾರಿ ವಿಧಾನಸಭೆಗೆ ಆಯ್ಕೆಯಾಗಿದ್ದಾರೆ. ವಿಧಾನ ಮಂಡಲದ ಅನೇಕ ಸಮಿತಿಗಳಲ್ಲಿ ಅಧ್ಯಕ್ಷರಾಗಿ, ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. ಕರ್ನಾಟಕದ ಅರ್ಥಸಚಿವರಾಗಿದ್ದ ಇವರು (1972-77) ಅಖಿಲ ಭಾರತ ಮಟ್ಟದ ಪಂಚಾಯತ್ ರಾಜ್ ಹಣಕಾಸು ಅಧ್ಯಯನ ಸಮಿತಿ (1963), ರಾಷ್ಟ್ರೀಯ ಯೋಜನ ಪರಿಷತ್ (1965) ಮತ್ತು ನ್ಯಾಷನಲ್ ಕ್ರೆಡಿಟ್ ಸಮಿತಿಗಳ ಸದಸ್ಯರಾಗಿದ್ದರು (1968).

1986ರಲ್ಲಿ ನಡೆದ ಉಪಚುನಾವಣೆಯಲ್ಲಿ ರಾಯಚೂರು ಕ್ಷೇತ್ರದಿಂದ ಆಯ್ಕೆಯಾಗಿ ಲೋಕಸಭೆಯನ್ನು ಪ್ರವೇಶಿಸಿದರು. 1990 ಮೇ -ಅಕ್ಟೋಬರ್‌ವರೆಗೆ ಹಾಗೂ ನವೆಂಬರ್ 1992ರಿಂದ ಮೇ 1994ರವರೆಗೆ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರಾಗಿದ್ದರು. ವಿಧಾನಸಭೆಗೆ ಪುನರ್ ಆಯ್ಕೆಯಾದ (1999) ಇವರು ಎಸ್.ಎಂ.ಕೃಷ್ಣ ಅವರ ನಾಯಕತ್ವದ ಮಂತ್ರಿಮಂಡಲದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರಾಗಿ ಕಾರ್ಯನಿರ್ವಹಿಸುತ್ತಿದ್ದರು (2003).

ಛಾಯಾಗ್ರಹಣ ಇವರ ಪ್ರಮುಖ ಹವ್ಯಾಸಗಳಲ್ಲೊಂದು. ಛಾಯಾಗ್ರಹಣದಲ್ಲಿನ ಇವರ ಪ್ರತಿಭೆಗೆ ಸಂದ ಗೌರವಗಳು ಹಲವಾರು. ಫೆಲೋಷಿಪ್ ಆಫ್ ದಿ ರಾಯಲ್ ಫೋಟೋಗ್ರಾಫಿಕ್ ಸೊಸೈಟಿ ಆಫ್

ಗ್ರೇಟ್ ಬ್ರಿಟನ್ (ಎಫ್.ಆರ್.ಸಿ.ಎಸ್.), ಎಕ್ಸ್‌ಲೆನ್ಸ್ ಫೆಡರೇಷನ್ ಇಂಟರ್‌ನ್ಯಾಷನಲ್ ಡೆ ಲ ಆರ್ಟ್ ಫ್ಲೋಟೋಗ್ರಾಫಿಕ್ ಇ.ಎಫ್.ಐ.ಎ.ಪಿ. (1976) ಲಭಿಸಿವೆ. ಅಂತಾರಾಷ್ಟ್ರೀಯ ಮಟ್ಟದ ಅತ್ಯುನ್ನತ ಪ್ರಶಸ್ತಿ ಮಾಸ್ಟರ್ ಫೆಡರೇಷನ್ ಇಂಟರ್ ನ್ಯಾಷನಲ್ ಡೆ ಲ ಆರ್ಟ್ ಫೋಟೋಗ್ರಾಫಿಕ್ ವನ್ಯ ಜೀವಿ ಛಾಯಾಗ್ರಹಣಕ್ಕೆ ಪ್ರಪಂಚದಲ್ಲೇ ಮೊಟ್ಟಮೊದಲಿಗೆ ಇವರಿಗೆ ಸಂದ ಪ್ರಶಸ್ತಿ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1985), ಛಾಯಾಗ್ರಹಣಕ್ಕಾಗಿ ಲಲಿತ ಕಲಾ ಅಕಾಡೆಮಿ ಪ್ರಶಸ್ತಿ (1994) ಇವರಿಗೆ ದೊರಕಿದ ಇತರ ಪ್ರಶಸ್ತಿಗಳಾಗಿವೆ.

ಸನ್‌ಲೈಟ್ ಅಂಡ್ ಷಾಡೋಸ್ (1983), ಡೆವೆಲಪ್‌ಮೆಂಟ್‌ಎಥೋಸ್ ಅಂಡ್ ಎಕ್ಸ್‌ಪೀರಿಯನ್ಸ್ ದಿ ಗ್ರಾಂಡ್ ರೆಸಿಸ್ಟೆನ್ಸ್, ಪರಮಾಚಾರ್ಯ ಆಫ್ ಕಂಚಿ ಎ ಸ್ಪಿರಿಚ್ಯುಯಲ್ ಅಂಡ್ ಹ್ಯೂಮನ್ ರಿಲೇಶನ್‌ಶಿಪ್ ಎಂಬ ಕೃತಿಗಳನ್ನು ರಚಿಸಿದ್ದಾರಲ್ಲದೇ ಹಣಕಾಸು, ರಾಜಕೀಯ ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಪ್ರಬುದ್ಧ ಲೇಖನಗಳನ್ನು ಬರೆದಿದ್ದಾರೆ. ಪರಮಾಚಾರ್ಯ ಆಫ್ ಕಂಚಿ ಎಂಬ ಪುಸ್ತಕ ತಮಿಳು ಮತ್ತು ಕನ್ನಡ ಭಾಷೆಗಳಿಗೆ ಅನುವಾದವಾಗಿದೆ. (ಎಸ್.ಎನ್.ಜಿ.)

# ಚ

**ಚಂಗಾಳ್ವ ವಂಶ :** ದಕ್ಷಿಣ ಕರ್ನಾಟಕದ ಈಗಿನ ಪಿರಿಯಾಪಟ್ಟಣ, ಹುಣಸೂರು, ಕೃಷ್ಣರಾಜನಗರ ತಾಲ್ಲೂಕುಗಳು ಹಾಗೂ ಕೊಡಗಿನ ಸೋಮವಾರಪೇಟೆ ತಾಲ್ಲೂಕಿನ ಭಾಗಗಳನ್ನು ಒಳಗೊಂಡಿದ್ದ ಚಂಗನಾಡನ್ನು ಆಳುತ್ತಿದ್ದ ಒಂದು ಚಿಕ್ಕ ರಾಜಮನೆತನ. ತಮ್ಮನ್ನು ಯಾದವರೆಂದೂ ಚಂದ್ರವಂಶಜರೆಂದೂ ಇವರು ಕರೆದುಕೊಂಡಿದ್ದಾರೆ. ಕೊಂಗಾಳ್ವರಂತೆ ಚಂಗಾಳ್ವರು ಕೂಡ ಚೋಳರಿಂದ ಪ್ರತಿಷ್ಠಾಪಿತರಾದ ಮಾಂಡಳಿಕರಿರಬೇಕೆಂದು ಊಹಿಸಲು ಅವಕಾಶವಿದೆ. ಚೋಳ ಪಂಚವ ಮಹಾರಾಯ ಹನಸೋಗೆಯಲ್ಲಿ ಚಂಗಾಳ್ವರನ್ನು ಸೋಲಿಸಿದನೆಂಬ ಹೇಳಿಕೆಯೂ ಇದೆ. ಈ ವಂಶದ ಮೊದಲ ಶಾಸನೋಲ್ಲೇಖಿತ ರಾಜನಾದ ನನ್ನಿ ಚಂಗಾಳ್ವ (ಸು.1034) ರಾಜೇಂದ್ರ ಚೋಳ ಎಂಬ ಹೆಸರನ್ನೂ ಹೊಂದಿದ್ದು ಇದು ಅವನ ಚೋಳ ಮಾಂಡಳಿಕತ್ವದ ಸೂಚಕವಾಗಿದೆ. ಜೈನನಾದ ನನ್ನಿ ಚಂಗಾಳ್ವ ಹನಸೋಗೆಯ ಬಸದಿಯನ್ನು ಜೀರ್ಣೋದ್ಧಾರಮಾಡಿದಂತೆ ತಿಳಿಯುತ್ತದೆ. ಹನ್ನೊಂದರಿಂದ ಹದಿಮೂರನೆಯ ಶತಕದವರೆಗೆ ಹೊಯ್ಸಳರೊಡನೆ ಸೆಣಸುತ್ತಲಿದ್ದ ಈ ವಂಶದ ರಾಜರು ಮುಂದೆ ಹೊಯ್ಸಳರ ಮಾಂಡಳಿಕರೂ ಆದರು. ಮಹಾದೇವ (1090), ಉದಯಾದಿತ್ಯ (1097), ಅನ್ನದಾನಿ (1106), ಮುಂತಾದ ದೊರೆಗಳು ಶಾಸನಗಳಲ್ಲಿ ಉಲ್ಲೇಖಿತರಾಗಿದ್ದು ಇವರಿಗೆ ಚೋಳವಂಶದ ರಾಜರ ಹೆಸರುಗಳೂ ಇವೆ. ಹೊಯ್ಸಳ ನರಸಿಂಹ 1145ರಲ್ಲಿ ಒಬ್ಬ ಚಂಗಾಳ್ವನನ್ನು ಕೊಂದು ಚಂಗನಾಡನ್ನು ವಶಪಡಿಸಿಕೊಂಡ. ಹನ್ನೆರಡನೆಯ ಶತಮಾನದ ಕೊನೆಗೆ ಇವರು ತಮ್ಮ ರಾಜಧಾನಿಯನ್ನು ಹುಣಸೂರು ಪ್ರದೇಶದಿಂದ ಕೊಡಗಿನ ಪಲ್ಪರೆಗೆ ಬದಲಾಯಿಸಿದರು. ಈ ಶತಮಾನದ ಕೊನೆಗಿದ್ದ ಮಹಾದೇವನೆಂಬ ಚಂಗಾಳ್ವ ಹೊಯ್ಸಳರಿಂದ ಕೊಲ್ಲಲ್ಪಟ್ಟರೂ ಪೆಮ್ಮವೀರನೆಂಬುವನು ಈ ಕಲಹವನ್ನು ಮುಂದುವರಿಸಿದ. ಆದರೆ ಮುಂದೆ ಆತ ಹೊಯ್ಸಳರಿಗೆ ತಲೆಬಾಗಬೇಕಾಯಿತು. ಹದಿಮೂರನೆಯ ಶತಮಾನದ ಮಧ್ಯದಲ್ಲಿ ಸೋಮದೇವ ಮತ್ತು ಬೊಪ್ಪದೇವ ಎಂಬಿಬ್ಬರು ಹೊಯ್ಸಳರ ಮಾಂಡಳಿಕರಾಗಿ ಜಂಟಿಯಾಗಿ ಆಳುತ್ತಿದ್ದರು. ಆಗ ಅವರು ಕೊಡಗಿನ ಸಿದ್ದಾಪುರ ಬಳಿಯ ಶ್ರೀರಂಗಪಟ್ಟಣಕ್ಕೆ ರಾಜಧಾನಿಯನ್ನು ಬದಲಾಯಿಸಿದ್ದರು. ಮುಂದೆ ಮಲ್ಲಿದೇವ ಹಾಗೂ ಅವನ ಮಗ ಹರಿಹರದೇವ ಇವರ ಆಳಿಕೆಯ ವಿಚಾರ ಶಾಸನಗಳಲ್ಲಿ ಬಂದರೂ 1300ರ ಅನಂತರ ಎರಡು ಶತಮಾನಗಳ ಕಾಲದಲ್ಲಿ ಇವರ ಶಾಸನಗಳು ದೊರಕುವುದಿಲ್ಲ.

16ನೆಯ ಶತಮಾನದಲ್ಲಿ ಆಳುತ್ತಿದ್ದ ನಂಜರಾಜ (ಸು.1502-33) ತನ್ನ ಹಿಂದಣ ಪಿರಿಯಣ್ಣ ರಂಗ, ನಾಗ ಮುಂತಾದ ದೊರೆಗಳ ವಿಚಾರ ಹೇಳಿದ್ದಾನೆ. ಚಂಗಾಳ್ವರು ವೀರಶೈವರು. ಪಿರಿಯಾಪಟ್ಟಣ ತಾಲ್ಲೂಕು ಬೆಟ್ಟದಪುರದ ಮಲ್ಲಿಕಾರ್ಜುನ ಇವರ ಆರಾಧ್ಯದೈವ. ನಂಜರಾಜ ಕೊಡಗಿನಲ್ಲಿ ನಂಜರಾಜ ಪಟ್ಟಣವನ್ನು ಸ್ಥಾಪಿಸಿ ಆಳಲಾರಂಭಿಸಿದ. ಇವನಿಂದ ಮುಂದಿನವರು ನಂಜರಾಜ ಪಟ್ಟಣದ ಅಧೀಶ್ವರರೆಂದು ಕರೆದುಕೊಂಡಿದ್ದಾರೆ. ನಂಜರಾಜನ ಮಗ ನಂಜುಂಡ ಇವನ ಅನಂತರ ಬಂದ ಶ್ರೀಕಂಠರಾಜ (1540) ಚಕ್ರವರ್ತಿ ಬಿರುದುಗಳನ್ನು ಧರಿಸಿದ್ದ. ಮುಂದೆ ವೀರರಾಜ ಒಡೆಯ (1559-80), ಪಿರಿಯ ರಾಜದೇವ ರುದ್ರಗಣ (1586-1607) ಇವರು ಶಾಸನೋಲ್ಲೇಖಿತ ದೊರೆಗಳಾಗಿದ್ದು, ಕೊನೆಯಾತ ಪಿರಿಯಾಪಟ್ಟಣವನ್ನು ಕಟ್ಟಿದ. ವಿಜಯನಗರಕ್ಕೆ ಮಾಂಡಳಿಕರಾಗಿದ್ದ ಇವರ ವಂಶದಲ್ಲಿ ನಂಜರಾಜಯ್ಯದೇವ (1612), ಕೃಷ್ಣಾರಾಜಯ್ಯದೇವ ಹಾಗೂ ವೀರರಾಜಯ್ಯ (1619-44) ಇವರುಗಳು ಆಳಿದರು. (ಎಸ್.ಕೆ.)

ವೀರರಾಜಯ್ಯನ ಕಾಲದಲ್ಲಿ ಮೈಸೂರಿನ ಕಂಠೀರವ ನರಸರಾಜ ಒಡೆಯರ್ ಪಿರಿಯಾಪಟ್ಟಣದ ಮೇಲೆ ಯುದ್ಧ ಹೂಡಿದ. ನಂಜುಂಡ ಮೊದಲಿಯಾರನೆಂಬ ಪಾಳೆಯಗಾರ ವೀರರಾಜಯ್ಯನ ಬೆಂಬಲಕ್ಕೆ ನಿಂತು ನರಸರಾಜನನ್ನು ವಿರೋಧಿಸಿದ. ಒಂದು ವರ್ಷ ಕಾಲ ಮೈಸೂರು ಸೇನೆ ಪಿರಿಯಾಪಟ್ಟಣದ ಕೋಟೆಯನ್ನು ಮುತ್ತಿತ್ತು. ಎರಡೂ ಕಡೆಯೂ ಭಾರಿ ಹೋರಾಟ ನಡೆಯಿತು. ಕೋಟೆ ನರಸರಾಜನ ಕೈಸೇರುವುದು ಖಚಿತವೆಂದು ಕಂಡಾಗ, ವೀರರಾಜ ತನ್ನ ಪತ್ನಿ ಪುತ್ರರನ್ನು ತಾನೇ ಕೊಂದು, ಮೈಸೂರಿನ ಸೈನ್ಯವನ್ನು ವೀರಾವೇಶದಿಂದ ಎದುರಿಸುತ್ತ ಮಡಿದ. ಪಿರಿಯಾಪಟ್ಟಣ 1644ರಲ್ಲಿ ಮೈಸೂರಿನ ಅರಸರ ವಶವಾಯಿತು. ಅಂತೆಯೆ, ಚಂಗಾಳ್ವ ವಂಶವೂ ಕೊನೆಗೊಂಡಿತು (ಈ ಕೊನೆಯ ಪಿರಿಯಾಪಟ್ಟಣದ ದುರಂತದ ಬಗ್ಗೆ ಕೆಲವು ಜನಪದ ಕಥನಗಳಿವೆ). ಅದರಲ್ಲಿ ಪಿರಿಯಾಪಟ್ಟಣದ ಕಾಳಗ ಅತ್ಯಂತ ಪ್ರಸಿದ್ಧವಾದುದು.

ಜಯನೃಪಕಾವ್ಯದ ಕರ್ತೃ ಮಂಗರಸ ತನ್ನ ತಂದೆ ಚಂಗಾಳ್ವರ ಮಂತ್ರಿಯಾಗಿದ್ದನೆಂದು ಹೇಳಿಕೊಂಡಿದ್ದಾನೆ. ಇದೇ ಸಚಿವಕುಲದ ನಂಜುಂಡನು ಕುಮಾರರಾಮ ಚರಿತೆಯ ಕರ್ತೃ. ರಾಮವಿಜಯ ಕಾವ್ಯವನ್ನು ಬರೆದ ಜೈನಕವಿ ದೇವಪ್ಪನು ನಂಜುಂಡರಾಜನ ಸಚಿವನಾಗಿದ್ದ. (ಕೆ.ಎಸ್.ಎಸ್.)

**ಚಂದಪುರ :** ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ಒಂದು ಸಣ್ಣ ಹಳ್ಳಿ. ಇಲ್ಲಿ ಮುಗಲರ ಶೈಲಿಯ ಒಂದು ಮಸೀದಿಯಿದೆ. ಈ ಮಸೀದಿಯನ್ನು ಔರಂಗಜೇಬನ ಕಾಲದಲ್ಲಿ, ಹಿಜರಿ 1084ರಲ್ಲಿ (1673) ಖಾಜಾ ಉಸ್ಮಾನ ಎಂಬುವನು ಕಟ್ಟಿಸಿದನೆಂದು ಪರ್ಷಿಯನ್ ಭಾಷೆಯಲ್ಲಿ ಬರೆದ ಇಲ್ಲಿನ ಶಾಸನ ತಿಳಿಸುತ್ತದೆ. ಹಿಜರಿ 1082ರಲ್ಲಿ ಔರಂಗಜೇಬ್ ಬಿದರೆ ಮೊದಲಾದ ಸ್ಥಳಗಳನ್ನು ಗೆದ್ದುಕೊಂಡ. (ಎಸ್.ಜಿಎ.)

**ಚಂದಮಾಮ :** ಚೆನ್ನೈನಿಂದ ಪ್ರಕಟವಾಗುತ್ತಿರುವ ಮಕ್ಕಳ ಮಾಸ ಪತ್ರಿಕೆ. ಈ ಪತ್ರಿಕೆ ಹಲವು ಭಾಷೆಗಳಲ್ಲಿ ಪ್ರಕಟವಾಗುತ್ತಿದೆ. ಕನ್ನಡದಲ್ಲಿ 1948ರಲ್ಲಿ ಪ್ರಕಟಣೆ ಆರಂಭವಾಯಿತು.

ಮಕ್ಕಳಲ್ಲಿ ಓದುವ ಅಭ್ಯಾಸವನ್ನು ಬೆಳೆಸುವುದೂ ದೇಶದ ಭವ್ಯ ಪರಂಪರೆಯನ್ನೂ ಪ್ರಾಚೀನ ಸಂಸ್ಕೃತಿ ಮತ್ತು ನೈತಿಕ

ಮೌಲ್ಯಗಳನ್ನೂ ಕಥೆಗಳ ಮತ್ತು ಇತಿಹಾಸ ವೃತ್ತಾಂತದ ನಿರೂಪಣೆಯ ಮೂಲಕ ಪರಿಚಯ ಮಾಡಿಕೊಡುವುದೂ ಪತ್ರಿಕೆಯ ಉದ್ದೇಶಗಳು. ಆಕರ್ಷಕ ಬಣ್ಣಬಣ್ಣದ ಚಿತ್ರಗಳಿಂದೊಡಗೂಡಿದ ದೇಶವಿದೇಶಗಳ ಕಥೆಗಳು, ಇಂದ್ರಿಯಗ್ರಹಣ ಮತ್ತು ಕಲ್ಪನಾಶಕ್ತಿಯನ್ನು ಕುದುರಿಸುವ ಛಾಯಾಚಿತ್ರ ಶೀರ್ಷಿಕೆ ಸ್ಪರ್ಧೆ - ಇವು ಈ ಪತ್ರಿಕೆಯ ವೈಶಿಷ್ಟ್ಯಗಳು. ಪತ್ರಿಕೆಯ ಸ್ಥಾಪಕರು ಬಿ.ನಾಗಿರೆಡ್ಡಿ ಮತ್ತು ಚಕ್ರಪಾಣಿ. (ಪಿ.)

**ಚಂದಲ ದೇವಿ :** ಕರ್ನಾಟಕದಲ್ಲಿ ಆಳಿದ ರಾಣಿಯರಲ್ಲಿ ಈ ಹೆಸರಿನವರು ಹಲವರಿದ್ದಾರೆ. ಬಹುಶಃ ಚಂದ್ರಲೇಖಾ ಎಂಬ ಮೂಲ ಸಂಸ್ಕೃತ ರೂಪದ ಹೆಸರು. ಚಂದಲದೇವಿ, ಚಂದಲಕಬ್ಬೆ, ಚಂದ್ರಿಕಾದೇವಿ, ಚಂದಲೆ, ಚಂದವ್ವೆ, ಚಂಡಾಂಬಿಕಾ, ಚಂದ್ರಾಂಬಿಕೆ, ಚಂದಿಕಬ್ಬೆ ಇತ್ಯಾದಿ ರೂಪಗಳಲ್ಲಿ ಕಾಣಿಸಿಕೊಂಡಿದೆ. ಚಂದಲದೇವಿ ಮತ್ತು ಆ ಹೆಸರಿನ ರೂಪಾಂತರಗಳಿದ್ದವರಲ್ಲಿ ಕೆಲವರನ್ನು ಕುರಿತ ವಿವರಣೆಯನ್ನು ಇಲ್ಲಿ ಕೊಡಲಾಗಿದೆ.

ಕಲ್ಯಾಣದಲ್ಲಿ ಆಳಿದ ಚಾಳುಕ್ಯ ಸೋಮೇಶ್ವರನ ಪತ್ನಿ ಚಂದಲಕಬ್ಬೆ ಅಥವಾ ಚಂದ್ರಿಕಾದೇವಿ. ನಿಂಬರಗಿ ಶಾಸನದಲ್ಲಿ (1047-48) ಈಕೆಯನ್ನು ಆತನ ಪಿರಿಯರಸಿ ಎಂದು ಕರೆಯಲಾಗಿದೆ.

ಹೆಚ್ಚು ಖ್ಯಾತಿ ಹೊಂದಿದವಳು ಆರನೆಯ ವಿಕ್ರಮಾದಿತ್ಯನ ಪಟ್ಟಮಹಿಷಿ ಎನಿಸಿದ ಚಂದಲದೇವಿ ಅಥವಾ ಚಂದ್ರಲೇಕೆ. ಅನುಪಮ ಸುಂದರಿ ಎನಿಸಿದ್ದ ಈಕೆ ಶಿಲಾಹಾರ ಮನೆತನಕ್ಕೆ ಸೇರಿದವಳೆಂದೂ ಸ್ವಯಂವರ ಸಭೆಯಲ್ಲಿ ವಿಕ್ರಮಾದಿತ್ಯನನ್ನು ವರಿಸಿದಳೆಂದೂ ಬಿಲ್ಹಣ ತನ್ನ ವಿಕ್ರಮಾಂಕದೇವಚರಿತದಲ್ಲಿ ತಿಳಿಸಿದ್ದಾನೆ. ಈಕೆ ಅರಸನ ವಿಶೇಷವಾದ ಪ್ರೀತಿಗೆ ಪಾತ್ರಳಾಗಿದ್ದುದಲ್ಲದೆ ಆತನಿಗೆ ಆಡಳಿತದಲ್ಲಿ ಸಹಾಯಕಳಾಗಿಯೂ ಇದ್ದಳು. ರಾಜಧಾನಿಗೆ ಸಮೀಪದಲ್ಲಿದ್ದ ಅಳಂದೆ ಸಾಸಿರ ಎಂಬ ಪ್ರಾಂತ್ಯದ ಆಡಳಿತದ ಹೊಣೆ ಈಕೆಯದಾಗಿತ್ತು. ಈಕೆ ಅಳಂದೆ ಸಾಸಿರ ಪ್ರಮುಖವನೇಕಭತ್ತಗ್ರಾಮಂಗಳುಮಂ ಅರಸುಗೆಯ್ಯುತ್ತಿದ್ದಳೆಂದು ಶಾಸನಗಳಲ್ಲಿ ಹೇಳಿದೆ. ಈಕೆಯನ್ನು ನೃತ್ಯವಿದ್ಯಾಧರಿ, ಸಕಳಕಳಾಧರಿ, ಅಭಿನವಸರಸ್ವತಿ ಎಂದೆಲ್ಲ ವರ್ಣಿಸಲಾಗಿದೆ. ಸೋಮಭೂಪ, ಜಯಕರ್ಣ, ಕುಮಾರತೈಲರು ಈಕೆಯ ಮಕ್ಕಳು. ಇವರಲ್ಲಿ ಸೋಮಭೂಪನೇ ಮುಂದೆ ಭೂಲೋಕಮಲ್ಲ ಸೋಮೇಶ್ವರನೆಂಬ ಹೆಸರಿನಿಂದ ಆಳಿದ. ಎರಡನೆಯ ಕಳಚುರಿ ಬಿಜ್ಜಳ ಈಕೆಯ ಮೊಮ್ಮಗನೆಂದು ವಳಸಂಗದ ಶಾಸನದಿಂದ ತಿಳಿದಿದೆ. ಆದ್ದರಿಂದ ಬಿಜ್ಜಳನ ತಾಯಿಯಾದ ನಾಗಲದೇವಿ ಚಂದಲದೇವಿಯ ಮಗಳೆಂದು ಊಹಿಸಲಾಗಿದೆ.

ಹೊಯ್ಸಳ ವಿಷ್ಣುವರ್ಧನನ ಪತ್ನಿಯರಲ್ಲಿ ಚಂದಲದೇವಿ ಎಂಬವಳೂ ಒಬ್ಬಳು. ಈಕೆ ಕೊಂಗಾಳ್ವ ಮನೆತನಕ್ಕೆ ಸೇರಿದವಳು ಎಂದು ಹೇಳಲಾಗಿದೆಯಾದರೂ ಇದು ಸಂದೇಹಾಸ್ಪದವಾಗಿದೆ.

ಕೂಂಡಿ ಪ್ರಾಂತ್ಯಾಧಿಕಾರಿಯಾಗಿ ಆಳಿದ ಸವದತ್ತಿಯ ರಟ್ಟ ಮನೆತನದ 1ನೆಯ ಲಕ್ಷ್ಮೀದೇವನ ಪತ್ನಿ ಹಾಗೂ 4ನೆಯ ಕಾರ್ತವೀರ್ಯನ ತಾಯಿಯ ಹೆಸರು ಸಹ ಚಂದಲದೇವಿ. ಯಾದವಕುಲಕ್ಕೆ ಸೇರಿದ ರಾಜ ಎಂಬುವನ ಪುತ್ರಿಯಾದ ಈಕೆಗೆ ಮಲ್ಲಿಕಾರ್ಜುನನೆಂಬ ಇನ್ನೊಬ್ಬ ಮಗ ಇದ್ದ. ಶಾಸನದಲ್ಲಿ ಈಕೆಯನ್ನು ಚಂದ್ರಿಕೆ, ಚಂದ್ರಿಕಾದೇವಿ ಎಂದೂ ಕರೆಯಲಾಗಿದೆ.

16ನೆಯ ಶತಮಾನದ ಮಧ್ಯಭಾಗದಲ್ಲಿ ಘಟ್ಟದ ಕೆಳಗಣ ಮತ್ತು ಘಟ್ಟದ ಮೇಲಣ ತುಳು ರಾಜ್ಯವನ್ನು ಆಳುತ್ತಿದ್ದ ಕಳಸ ಕಾರ್ಕಳದ ಒಡೆಯನಾಗಿದ್ದ ವೀರಪಾಂಡ್ಯಪ್ಪೊಡೆಯನ ತಾಯಿ ಚಂದಲದೇವಿ. ಈಕೆ ಕೆರವಸೆ ರಾಜ್ಯಕ್ಕೆ ಸೇರಿದ ರಾಜಕುಮಾರಿಯಾಗಿದ್ದಳು. (ಬಿ.ಆರ್.ಜಿ.)

**ಚಂದಾವರಕರ, ನಾರಾಯಣ ಗಣೇಶ :** 1855-1923. ಪ್ರಸಿದ್ಧ ನ್ಯಾಯವಾದಿ, ರಾಜಕಾರಣಿ, ಸಮಾಜಸುಧಾರಕ, ಶಿಕ್ಷಣತಜ್ಞ, ಮುಂಬಯಿ ಉಚ್ಚ ನ್ಯಾಯಾಲಯದಲ್ಲಿ ನ್ಯಾಯಮೂರ್ತಿಯೂ ಇಂದೂರು ಸಂಸ್ಥಾನದಲ್ಲಿ ಸ್ವಲ್ಪ ಕಾಲ ಪ್ರಧಾನಮಂತ್ರಿಯೂ ಆಗಿದ್ದವರು. ಉತ್ತರ ಕನ್ನಡ ಜಿಲ್ಲೆ ಹೊನ್ನಾವರದಲ್ಲಿ 1855 ಡಿಸೆಂಬರ್ 2ರಂದು ಜನಿಸಿದರು. ಚಿಕ್ಕಂದಿನಲ್ಲಿ ಮುಂಬಯಿಗೆ ತೆರಳಿ ಅಲ್ಲಿ ತಮ್ಮ ಸೋದರಮಾವನ ಆಶ್ರಯದಲ್ಲಿ ವಿದ್ಯಾಭ್ಯಾಸ ಮುಂದುವರಿಸಿದರು. ಎಲ್ಫಿನ್‌ಸ್ಟನ್ ಪ್ರೌಢಶಾಲೆ ಮತ್ತು ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಅಲ್ಲಿ ಪ್ರಾಧ್ಯಾಪಕರಾಗಿದ್ದ ಭಂಡಾರ್‌ಕರ್, ಪರಮಾನಂದ್, ರಾನಡೆ, ತೆಲಾಂಗ್ ಮತ್ತು ಫಿರೋಜ್ ಷಾ ಮೆಹತಾರಂಥ ಮಹೋಪಾಧ್ಯಾಯರ ಪ್ರಭಾವಕ್ಕೆ ಒಳಗಾದರು. ಬಿ.ಎ. ಪದವಿ ಪಡೆದರು (1876). ಅನಂತರ 1878ರಲ್ಲಿ ತೆಲಾಂಗರ ಸಲಹೆಯ ಮೇರೆಗೆ ಇಂದು ಪ್ರಕಾಶ ಎಂಬ ದ್ವಿಭಾಷಾ ವಾರ ಪತ್ರಿಕೆಯ ಸಂಪಾದಕತ್ವ ವಹಿಸಿಕೊಂಡು ಹತ್ತು ವರ್ಷಗಳಿಗೂ ಹೆಚ್ಚು ಕಾಲ ಕೆಲಸ ಮಾಡಿ ಆ ಪತ್ರಿಕೆಯ ಖ್ಯಾತಿಗೆ ಕಾರಣರಾದರು. ಪತ್ರಿಕೋದ್ಯಮದ ಜೊತೆಗೆ ಇವರು ನ್ಯಾಯಶಾಸ್ತ್ರದ ಅಧ್ಯಯನಮಾಡಿ ಪದವಿ ಪಡೆದು (1881) ವಕೀಲವೃತ್ತಿಯನ್ನಾರಂಭಿಸಿದರಲ್ಲದೆ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಿದರು. 1885ರಲ್ಲಿ ಬ್ರಿಟನ್ನಿನ ಮಹಾಚುನಾವಣೆಗಳ ಸಮಯದಲ್ಲಿ



ಅಲ್ಲಿಯ ನಾಗರಿಕರಲ್ಲಿ ಭಾರತದ ಬಗ್ಗೆ ತಿಳಿವಳಿಕೆ ಮೂಡಿಸಲು ತೆರಳಿದ ಮೂವರು ಪ್ರತಿನಿಧಿಗಳ ನಿಯೋಗದಲ್ಲಿ ಇವರು ಒಬ್ಬರಾಗಿದ್ದು ಬ್ರಿಟನ್ನಿನಲ್ಲಿ ಮೂರು ತಿಂಗಳುಗಳ ಕಾಲ ಪ್ರವಾಸ ಮಾಡಿದರು. ಭಾರತಕ್ಕೆ ಹಿಂದಿರುಗಿದ ಮೇಲೆ ರಾನಡೆಯವರು ಸ್ಥಾಪಿಸಿದ ಭಾರತ ರಾಷ್ಟ್ರೀಯ ಸಾಮಾಜಿಕ ಸಮ್ಮೇಳನದ ಕಾರ್ಯದಲ್ಲಿ ಅವರಿಗೆ ನೆರವು ನೀಡುತ್ತಿದ್ದರಲ್ಲದೆ ರಾನಡೆಯವರು ನಿಧನರಾದ ಮೇಲೆ (1901) ಸಂಸ್ಥೆಯ ಪ್ರಧಾನ ಕಾರ್ಯದರ್ಶಿಯಾಗಿ ಎರಡು ದಶಕಗಳ ಕಾಲ ಸಮಾಜ ಸುಧಾರಣೆ, ಹಿಂದುಳಿದ ವರ್ಗಗಳ ಮತ್ತು ಕಾರ್ಮಿಕರ ಕ್ಷೇಮಾಭಿವೃದ್ಧಿ ಇವುಗಳಿಗಾಗಿ ಶ್ರಮಿಸಿದರು. ವಕೀಲ ವೃತ್ತಿಯಲ್ಲೂ ಶ್ರದ್ಧೆ, ನಿರಂತರ ಶ್ರಮ, ವಾಕ್ಪಟುತ್ವ ಇವುಗಳಿಂದಾಗಿ ಇವರು ಮುಂಬಯಿ ಉಚ್ಚನ್ಯಾಯಾಲಯದ ನ್ಯಾಯವಾದಿಗಳಲ್ಲಿ ಅಗ್ರಶ್ರೇಣಿಯನ್ನು ಪಡೆದರಲ್ಲದೆ ಆ ನ್ಯಾಯಾಲಯದಲ್ಲಿ ನ್ಯಾಯಾಧೀಶರಾಗಿ ನೇಮಕಗೊಂಡರು (1901). 1912ರಲ್ಲಿ ಈ ಅಧಿಕಾರದಿಂದ ನಿವೃತ್ತರಾದ ಮೇಲೆ ಎರಡು ವರ್ಷಕಾಲ ಇಂದೂರು ಸಂಸ್ಥಾನದ ಪ್ರಧಾನಮಂತ್ರಿಯಾಗಿದ್ದು ದಕ್ಷವಾಗಿ ಆಡಳಿತ ನಿರ್ವಹಿಸಿದರು.

ಇವರು ಮುಂಬಯಿ ನಗರದ ಸಾಮಾಜಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಒಳ್ಳೆಯ ಮಾರ್ಗದರ್ಶಿಯಂತಿದ್ದರು. ಬೊಂಬಾಯಿ ಪ್ರೆಸಿಡೆನ್ಸಿ ಸಮಾಜ ಸುಧಾರಣಾ ಸಂಘ, ದಲಿತೋದ್ಧಾರ ಸಂಸ್ಥೆ, ಸಮಾಜ ಸೇವಾ ಲೀಗ್, ರಾಯಲ್ ಏಷ್ಯಾಟಿಕ್ ಸೊಸೈಟಿಯ ಮುಂಬಯಿ ಶಾಖೆ, ಪ್ರಾರ್ಥನಾ ಸಮಾಜ ಮತ್ತು ವಿದ್ಯಾರ್ಥಿ ಸಹೋದರ ಸಮೂಹ ಮೊದಲಾದ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರು. ಇವರು ಮುಂಬಯಿ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿಯೂ ನಾಲ್ಕು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದರು. ಭಾರತ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯ ಸ್ಥಾಪನೆಯ ಕಾಲದಿಂದಲೂ ಅದರಲ್ಲಿ ಆಸಕ್ತಿ ಹೊಂದಿದ್ದ ಇವರು ಲಾಹೋರಿನಲ್ಲಿ ಅದರ ವಾರ್ಷಿಕ ಅಧಿವೇಶನದ ಅಧ್ಯಕ್ಷರಾಗಿದ್ದರು (1900). ಕಾಂಗ್ರೆಸ್ಸಿನಲ್ಲಿ ಎರಡು ಬಣಗಳೇರ್ಪಟ್ಟಾಗ ಸುರೇಂದ್ರನಾಥ ಬ್ಯಾನರ್ಜಿ ಮತ್ತು ಸಂಗಡಿಗರೊಡನೆ ಮಿತವಾದಿಗಳ ಸಮ್ಮೇಳನದ ನಾಯಕರಾಗಿದ್ದರು. ಇವರು ನೀಡುತ್ತಿದ್ದ ಸಲಹೆಗಳನ್ನು ಗಾಂಧೀಜಿಯವರೂ ಅನೇಕ ವೇಳೆ ಪುರಸ್ಕರಿಸುತ್ತಿದ್ದರು.

ಮಾಂಟೆಗೊ ಚೆಲ್ಸ್‌ಫರ್ಡ್ ಸುಧಾರಣೆಗಳು 1921ರಲ್ಲಿ ಭಾರತದಾದ್ಯಂತ ಜಾರಿಗೆ ಬಂದಾಗ ಮುಂಬಯಿ ವಿಧಾನ ಪರಿಷತ್ತಿನ

ಪ್ರಥಮ ಖಾಸಗಿ ಅಧ್ಯಕ್ಷರಾಗಿ ನೇಮಿಸಲ್ಪಟ್ಟು ತಮ್ಮ ಕೊನೆಯ ದಿನಗಳವರೆಗೂ ಆ ಪೀಠವನ್ನಲಂಕರಿಸಿದ್ದರು. ರಾಷ್ಟ್ರೀಯ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ನಿರಂತರವಾಗಿ ಸೇವೆ ಸಲ್ಲಿಸಿದ ಇವರು 1923 ಮೇ 14ರಂದು ಬೆಂಗಳೂರಿನಲ್ಲಿ ನಿಧನ ಹೊಂದಿದರು. *

**ಚಂದಿಮರಸ :** ಶಿವಶರಣ ಹಾಗೂ ವಚನಕಾರ. ಬಾಗೇವಾಡಿ ತಾಲ್ಲೂಕಿನ ಚಿಮ್ಮಲಿಗೆ ಈತನ ಜನ್ಮಸ್ಥಳ. ಇವನಿಗೆ ಸಿಮ್ಮಲಿಗೆ ಚೆನ್ನಯ್ಯ, ಚೆನ್ನರಾಮ, ಚಂದಯ್ಯ ಎಂಬ ಹೆಸರುಗಳೂ ಇವೆ. ಭೋಗಜೀವನವನ್ನುಳಿದು ಆಧ್ಯಾತ್ಮಿಕತೆಗೆ ತನ್ನನ್ನೇ ಅರ್ಪಿಸಿಕೊಂಡ ಇವನು ನಿಜಗುಣರಿಂದ ದೀಕ್ಷೆಯನ್ನು ಪಡೆದು ಧರ್ಮಪ್ರಸಾರಕಾರ್ಯವನ್ನು ಆರಂಭಿಸಿದನೆಂದು ತಿಳಿಯುತ್ತದೆ. ಸಿಮ್ಮಲಿಗೆ ಚೆನ್ನರಾಮಾ ಎಂಬುದು ಈತನ ವಚನಗಳ ಅಂಕಿತ. ಇದುವರೆಗೆ ಈತನ ಸುಮಾರು 18ಕ್ಕೂ ಹೆಚ್ಚು ವಚನಗಳು ದೊರೆತಿವೆ. ಈಚೆಗೆ ದೊರೆತ 15 ವಚನಗಳು ಸರ್ವಪುರಾತನರ ವಚನಗಳು ಎಂಬ ಸಂಕಲನ ಗ್ರಂಥದಲ್ಲಿ ಪ್ರಕಟವಾಗಿವೆ. ಘನಲಿಂಗದೇವ ತನ್ನ ವಚನವೊಂದರಲ್ಲಿ ನಿಜಗುಣ ಚಂದಿಮರಸರು ಕರಸ್ಥಲದ ನಾಗಿದೇವರೊಳಗಾದ ಎಲ್ಲ ವಿರಕ್ತರು ಅವಕ್ರಿಯೆಯಲ್ಲಿ ಆಚರಿಸಿ ಲಿಂಗೈಕ್ಯರಾದರು ಎಂದು ನುಡಿದ ಭವ ಹೇತುಗಳು ನೀವು ಕೇಳಿರೋ' ಎಂದು ಈತನ ಮಹಾತ್ಮ್ಯವನ್ನು ಹೊಗಳಿದ್ದಾನೆ. ಸಿದ್ಧನಂಜೇಶ ತನ್ನ ಗುರುರಾಜಚಾರಿತ್ರದಲ್ಲಿ (9-58) ಗಣಸಹಸ್ರವನ್ನು ಹೇಳುವಾಗ ಹೆಸರಿಸಿರುವ ಸಿಮ್ಮಲಿಗೆ ಚೆಂದಯ್ಯ ಈತನೆ. ಈತನ ವಚನಗಳನ್ನು ನೋಡಿದರೆ ಇವನು ಒಳ್ಳೆಯ ಅನುಭಾವಿಯೂ ವಚನಕಾರನೂ ಆಗಿದ್ದನೆಂಬುದು ಸ್ಪಷ್ಟವಾಗುತ್ತದೆ. ಈತನ ಸಮಾಧಿ ಮತ್ತು ಇವನ ಹೆಸರಿನ ಗುಡಿ ಚಿಮ್ಮಲಿಗೆಯಲ್ಲಿವೆ. (ಟಿ.ಆರ್.ಎಂ.)

**ಚಂದ್ರಕವಿ :** ಸು.1430. ವಿಜಯನಗರದ ಅರಸ ಪ್ರೌಢದೇವರಾಯನ (1410-46) ಆಸ್ಥಾನದಲ್ಲಿದ್ದ ವೀರಶೈವ ಕವಿ. ಈತನಿಗೆ ಚಂದ್ರಶೇಖರ ಎಂಬ ಹೆಸರೂ ಇದೆ. ಈತ ಪಂಪಾ ವಿರೂಪಾಕ್ಷಾಸ್ಥಾನವರ್ಣನೆ, ಗುರುಮೂರ್ತಿಶಂಕರಶತಕ ಎಂಬ ಗ್ರಂಥಗಳನ್ನು ರಚಿಸಿದ್ದಾನೆ. ಇವು ಗಾತ್ರದಲ್ಲಿ ಕಿರಿದಾದರೂ ಕವಿತಾಪ್ರೌಢಿಮೆಯಲ್ಲಿ ಹಿರಿದಾಗಿವೆ. ಈತ ಅಷ್ಟಭಾಷೆಗಳಲ್ಲಿ ಪ್ರವೀಣನಾಗಿದ್ದನೆಂದು ತಿಳಿದುಬರುತ್ತದೆ. ತನ್ನ ಗ್ರಂಥಗಳ ಆರಂಭದಲ್ಲಿ ಆಶ್ರಯದಾತನಾದ ಪ್ರೌಢದೇವರಾಯನನ್ನೂ ಮಹಾಪ್ರಧಾನನಾದ ಗುರುರಾಯನನ್ನೂ ಸ್ತುತಿಸಿದ್ದಾನೆ. ತನ್ನನ್ನು ವಚಸ್ಸುಧಾಸಾಗರ, ಕವೀಶ್ವರ, ಎಂದು ಸಂಬೋಧಿಸಿಕೊಂಡಿದ್ದಾನೆ.

ಪಂಪಾವಿರೂಪಾಕ್ಷಾಸ್ಥಾನವರ್ಣನೆ ಚಂಪೂಕಾವ್ಯ. ಹಂಪೆಯ ವಿರೂಪಾಕ್ಷನ ಆಸ್ಥಾನವನ್ನು ವರ್ಣಿಸುತ್ತದೆ. ಇದರಲ್ಲಿ 61 ಪದ್ಯಗಳೂ 34 ವಚನಗಳೂ ಇವೆ. ಕಾವ್ಯಾರಂಭದಲ್ಲಿ ಹಂಪೆಯ ವಿರೂಪಾಕ್ಷ, ಸಿದ್ಧಿವಿನಾಯಕ, ವಾಗ್ದೇವಿಯರ ಪ್ರಾರ್ಥನೆಯಾದ ಬಳಿಕ ಪ್ರೌಢದೇವರಾಯ ಮತ್ತು ಗುರುರಾಯರ ಸ್ತುತಿ ಇದೆ. ಕವಿ ಇದನ್ನು ಗುರುರಾಯನ ಆಣತಿಯಂತೆ ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ. ಈ ಚಿಕ್ಕ ಕಾವ್ಯದ ವಸ್ತು ಈಶ್ವರನ ಆಸ್ಥಾನ ವರ್ಣನೆ. ಆದರೆ ಅಷ್ಟಾದಶವರ್ಣನೆಯಿದ್ದು ಉಪಮೆ ಉತ್ಪ್ರೇಕ್ಷೆ ರೂಪಕ ಅತಿಶಯೋಕ್ತಿ ಮೊದಲಾದ ಅಲಂಕಾರಗಳಿಂದ ಕೂಡಿ ಮನೋಹರವಾಗಿದೆ.

ಗುರುಮೂರ್ತಿಶಂಕರಶತಕ ವೃತ್ತಗಳಲ್ಲಿದೆ. ಸಚಿವೇಂದ್ರನಾದ ಗುರುರಾಯನ ಆಜ್ಞಾನುಸಾರ ಭಕ್ತಿ ವಿರಕ್ತಿ ಮುಕ್ತಿಗಳಿಗೆ ಬೀಜವಾಗುವಂತೆ ಇದನ್ನು ರಚಿಸಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. ಕಾವ್ಯಾರಂಭದಲ್ಲಿ ಶಿವಸ್ತುತಿ ಇದೆ. ಈ ಶತಕದ ಪ್ರತಿವೃತ್ತವೂ ಗುರುಮೂರ್ತಿಶಂಕರ ಎಂದು ಮುಗಿಯುತ್ತದೆ. *

**ಚಂದ್ರಕೀರ್ತಿ[1]:** ಸು.1400. ಜೈನಕವಿ. ಪರಮಾಗಮಸಾರ ಎಂಬ ಗ್ರಂಥದ ಕರ್ತೃ. ಈ ಕೃತಿ ಕಂದವೃತ್ತಗಳಲ್ಲಿ ರಚಿತವಾಗಿದ್ದು ಆತ್ಮಸ್ವರೂಪ, ವೈರಾಗ್ಯ ಮುಂತಾದ ವಿಷಯಗಳನ್ನೊಳಗೊಂಡಿದೆ. ಇದರಲ್ಲಿ 132 ಕಂದವೃತ್ತಗಳಿವೆ. ತನ್ನ ಗ್ರಂಥಕ್ಕೆ ಆ ಹೆಸರು ಬರಲು ಕಾರಣವನ್ನು ಕವಿ ಹೀಗೆ ವಿವರಿಸಿದ್ದಾರೆ - ಪರಮ ಜಿನೇಶ್ವರ ಮತದೊಳ್ | ಪರಿಕಿಸಿ ಸಾರಾಯಮಪ್ಪುವಂ ಕೊಂಡು ಕರಂ || ವಿರಚಿಸಿತಪ್ಪುದಜಿಂದಂ | ಪರಮಾಗಮಸಾರಮಾದುದೀ ಕೃತಿಯಂದಂ

ಮುನಿಪತಿ ದರ್ಶನಶುದ್ಧಂ
ವಿನುತಯಶಂ ಶೀಲರತ್ನನಚಳಿತಧೈರ್ಯಂ
ಮನಸಿಜಮದಕರಿಸಿಂಹಂ
ವಿನಯನಿಧಾನಂ ಸರಸ್ವತೀಮುಖತಿಲಕಂ

ಯಮನಿಯಮಧ್ಯಾನಯುತಂ
ಸಮಚಿತ್ತಂ ತತ್ತ್ವವೇದಿ ವೈರಾಗ್ಯಯುತಂ
ಶಮಿತ ಕಷಾಯಂ ನಿಸ್ಪೃಹ
ನಮಲಂ ಭವ್ಯಂ ಸರಸ್ವತೀಮುಖತಿಲಕಂ

ಎಂಬ ಎರಡು ಪದ್ಯಗಳಲ್ಲಿ ಕವಿ ತನ್ನ ಗುಣಾತಿಶಯಗಳನ್ನು ಹೇಳಿಕೊಂಡಿದ್ದಾನೆ. ಸರಸ್ವತೀಮುಖತಿಲಕಂ, ಕವಿಜನಮಿತ್ರ ಎಂಬುವು ಈತನ ಬಿರುದುಗಳಿದ್ದಿರಬಹುದು. *

**ಚಂದ್ರಕೀರ್ತಿ[2] :** ಬೌದ್ಧಮತದ ಮಹಾಯಾನ ಪಂಗಡಕ್ಕೆ ಸೇರಿದ ವಿದ್ವಾಂಸ. ಕ್ರಿ.ಶ. ಸು.7ನೆಯ ಶತಮಾನದ ಪೂರ್ವಾರ್ಧದಲ್ಲಿ ಇದ್ದವನೆಂದು ವಿದ್ವಾಂಸರ ಅಭಿಪ್ರಾಯ. ಪ್ರಸಿದ್ಧ ವಿದ್ವಾಂಸ ಸತೀಶಚಂದ್ರ ವಿದ್ಯಾಭೂಷಣರು ಈತನನ್ನು ಶ್ರೀಶಂಕರಾಚಾರ್ಯರ ಸಮಕಾಲೀನನೆಂದು ಭಾವಿಸುತ್ತಾರೆ.

ಈತನ ವೈಯಕ್ತಿಕ ಜೀವನಕ್ಕೆ ಸಂಬಂಧಪಟ್ಟಂತೆ ಹೆಚ್ಚಿನ ಮಾಹಿತಿಗಳು ಸಿಗುವುದಿಲ್ಲ. ಆದ್ದರಿಂದಲೇ ವಿದ್ವಾಂಸರಲ್ಲಿ ಈತನ ಬಗ್ಗೆ ಭಿನ್ನಾಭಿಪ್ರಾಯವಿದೆ. ಬೌದ್ಧ ವಿದ್ವಾಂಸ ಆರ್ಯದೇವ ಈತನೇ ಎಂದು ಈವರೆಗೂ ಭಾವಿಸಲಾಗಿತ್ತು. ಆದರೆ ಇತ್ತೀಚೆಗೆ ಇದನ್ನು ನಿರಾಕರಿಸಲಾಗಿದೆ. ಏಕೆಂದರೆ ಚಂದ್ರಕೀರ್ತಿಯೇ ಆರ್ಯದೇವನನ್ನೂ ಮತ್ತು ಆತನ ಗ್ರಂಥಗಳಾದ ಶತಕ-ಚತುಶತಕ, ಶತಕಶಾಸ್ತ್ರ ಮತ್ತು ಆರ್ಯಪದೀಯಗಳನ್ನು ತನ್ನ ಗ್ರಂಥವಾದ ಮಾಧ್ಯಮಿಕವೃತ್ತಿ ಎನ್ನುವ ಗ್ರಂಥದಲ್ಲಿ ಸ್ಮರಿಸಿದ್ದಾನೆ.

ಚಂದ್ರಕೀರ್ತಿ ಬರೆದ ಮತ್ತೊಂದು ಸ್ವತಂತ್ರ ಗ್ರಂಥವೆಂದರೆ ಮಾಧ್ಯಮಿಕಾವತಾರ. ಇದು ಮೂಲದಲ್ಲಿ ಸಂಸ್ಕೃತ ಗ್ರಂಥ. ಈಗ ಲಭ್ಯವಾಗಿರುವುದು ಟಿಬೆಟನ್ ಲಿಪಿಯಲ್ಲಿ. ಮಹಾಯಾನ ಬೌದ್ಧಮತದ ವಿಚಾರವಾಗಿ ಈ ಗ್ರಂಥ ಅಧಿಕಾರವಾಣಿಯಿಂದ ಹೇಳುವುದಲ್ಲದೆ ಆ ಮತದ ಅಧ್ಯಯನಕ್ಕೆ ಈ ಗ್ರಂಥ ಅತ್ಯುತ್ತಮ ಪ್ರಸ್ತಾವನೆಯಾಗಿದೆ ಎಂದು ವಿದ್ವಾಂಸರ ಅಭಿಪ್ರಾಯ. ಈತನ ಮತ್ತೊಂದು ಗ್ರಂಥ ನಾಗಾರ್ಜುನನ ಮಾಧ್ಯಮಿಕ ಸೂತ್ರಗಳ ಮೇಲಿನ ಪ್ರಪನ್ನಪದ ಎನ್ನುವ ಸಂಸ್ಕೃತ ಭಾಷ್ಯ. *

**ಚಂದ್ರಗಿರಿ :** ಶ್ರವಣಬೆಳಗೊಳದ ಎರಡು ಬೆಟ್ಟಗಳಲ್ಲಿ ಒಂದು. ಇದನ್ನು ಚಿಕ್ಕ ಬೆಟ್ಟವೆಂದೂ ಕರೆಯುತ್ತಾರೆ. ಮತ್ತೊಂದು ಬೆಟ್ಟ ಇಂದ್ರಗಿರಿ. ಚಂದ್ರಗಿರಿ ಶಿಖರದ ಎತ್ತರ ಸಮುದ್ರಮಟ್ಟದಿಂದ 3,052'. ಈ ಬೆಟ್ಟದ ಮೇಲೆ 13 ಬಸದಿಗಳಿವೆ. ಎಲ್ಲವೂ ದ್ರಾವಿಡ ಶೈಲಿಯಲ್ಲಿ ಕಟ್ಟಿದ್ದವು. ಇದರಲ್ಲಿ ಕೆಲವು 8 ನೆಯ ಶತಮಾನದಷ್ಟು ಪುರಾತನವಾದವು. ಶಾಂತಿನಾಥ ಬಸದಿ, ಪಾರ್ಶ್ವನಾಥ ಬಸದಿ, ಚಂದ್ರಗುಪ್ತ ಬಸದಿ, ಚಂದ್ರಪ್ರಭ ಬಸದಿ, ಚಾವುಂಡರಾಯ ಬಸದಿ - ಇವು ಇಲ್ಲಿರುವ ಬಸದಿಗಳಲ್ಲಿ ಕೆಲವು. ಕೂಗೆ ಬ್ರಹ್ಮದೇವರ ಕಂಬ, ಮಹಾನವಮಿ ಮಂಟಪ, ಭರತೇಶ್ವರ ವಿಗ್ರಹ, ಇರುವೆ ಬ್ರಹ್ಮದೇವರ ಗುಡಿ, ಕಂಚಿನ ದೊಣೆ, ಲಕ್ಕಿದೊಣೆ, ಭದ್ರಬಾಹು ಗುಹೆ, ಚಾವುಂಡರಾಯನ ಬಂಡೆ - ಇವೂ ಪ್ರೇಕ್ಷಣೀಯ.

ಉತ್ತರಭಾರತದಲ್ಲಿ ಕ್ಷಾಮ ಸಂಭವಿಸಿದಾಗ ಭದ್ರಬಾಹುಮುನಿಯ ನೇತೃತ್ವದಲ್ಲಿ ಜೈನಸಂಘ ದಕ್ಷಿಣಕ್ಕೆ ವಲಸೆ ಬಂದು ಶ್ರವಣಬೆಳಗೊಳದಲ್ಲಿ ಬೀಡುಬಿಟ್ಟ ವಿಷಯವನ್ನೊಳಗೊಂಡ ಪ್ರಸಿದ್ಧ ಶಾಸನ ಇರುವುದು ಚಂದ್ರಗಿರಿ ಬೆಟ್ಟದ ಮೇಲೆಯೇ, ಚಂದ್ರಗುಪ್ತ ಮೌರ್ಯ ತನ್ನ ಕೊನೆಗಾಲವನ್ನು

ಇಲ್ಲಿಯೇ ಕಳೆದನೆಂದು ನಂಬಲಾಗಿದೆ. ಈ ಬೆಟ್ಟದ ಬಂಡೆಗಳ ಮೇಲಣ ಶಾಸನಗಳು ಕನ್ನಡ ಲಿಪಿ, ಭಾಷೆ, ಸಾಹಿತ್ಯ ಕುರಿತ ವಿಚಾರಗಳ ಮೇಲೆ ವಿಶೇಷವಾದ ಬೆಳಕು ಬೀರುತ್ತವೆ. *

**ಚಂದ್ರಗಿರಿ ಅಂಬು :** 1919-99. ಯಕ್ಷಗಾನ ತೆಂಕುತಿಟ್ಟಿನ ಪ್ರಸಿದ್ಧ ನಟ. ಕೇರಳದ ಕಾಸರಗೋಡು ಸಮೀಪದ ಚಂದ್ರಗಿರಿಯಲ್ಲಿ ಮಲಯಾಳೀ ಗಾಣಿಗ ಮನೆತನದಲ್ಲಿ 1919ರಲ್ಲಿ ಜನಿಸಿದರು. ಇವರ ತಂದೆ ಜೋಯಿ ಮತ್ತು ತಾಯಿ ಕುಂಞಮ್ಮ. ಮೂರನೆಯ ತರಗತಿಯವರೆಗೆ ಸಾಂಪ್ರದಾಯಿಕ ಶಿಕ್ಷಣ ಗಳಿಸಿದರು. ಮುಲ್ಕಿ ಮೇಳದಲ್ಲಿದ್ದ ಆರಿಕ್ಕಾಡಿ ಅಯ್ಯಪ್ಪ ಎಂಬವರಿಂದ ಬಣ್ಣದ ವೇಷಗಾರಿಕೆಯ ಕೌಶಲಗಳನ್ನು ಕಲಿತರು. ಅನಂತರ ಕಲಾ ವ್ಯವಸಾಯದಲ್ಲಿ ಕಲಿತದ್ದೇ ಹೆಚ್ಚು. ರಾವಣ, ಮಹಿರಾವಣ, ಯಮ, ನರಕಾಸುರ, ತಾರಕಾಸುರ, ಮಹಿಷಾಸುರ, ಭೀಮ, ಘಟೋತ್ಕಚ, ಸಮಸಪ್ತಕರು, ಶೂರ್ಪನಖಿ, ಪೂತನಿ, ಅಜಮುಖಿ ಮೊದಲಾದ ಪ್ರಮುಖ ರಾಕ್ಷಸ ವೇಷಗಳಲ್ಲಿ ಮಿಂಚಿದರು. ಕಟೀಲಿನ ಶ್ರೀ ದುರ್ಗಾ ಪರಮೇಶ್ವರಿ ಮೇಳದಲ್ಲಿ ಹದಿನೆಂಟು ವರ್ಷಗಳ ಕಾಲ ದುಡಿದರು. ಮುಲ್ಕಿ, ಕೊರಕೋಡು, ಕುಂಡಾವು ಮೊದಲಾದ ಇನ್ನಿತರ ಹಲವು ಮೇಳಗಳಲ್ಲಿ ದುಡಿದು ನಿವೃತ್ತರಾದರು (1987). ಅನಂತರ ಶ್ರೀ ಧರ್ಮಸ್ಥಳ ಮೇಳದಲ್ಲಿ ಕಲಾವ್ಯವಸಾಯ ಮುಂದುವರಿಸಿದರು. ಕನ್ನಡ ಮತ್ತು ತುಳು ಎರಡೂ ಭಾಷೆಗಳ ಯಕ್ಷಗಾನ ಪ್ರಸಂಗಗಳಲ್ಲಿ ಪಾತ್ರನಿರ್ವಹಿಸಿದ ಕೀರ್ತಿ ಇವರದು. ಯಕ್ಷಗಾನ ಕಲಾವಿದರು ತಮ್ಮ ವೇಷಗಳಿಗೆ ತಾವೇ ಚುಟ್ಟಿ (ಮುಖವರ್ಣ) ಬರೆಯುವುದು ರೂಢಿ. ತಮ್ಮ ಕವಲು ಚುಟ್ಟಿ, ಪಂಚವರ್ಣದ ಚುಟ್ಟಿ, ಮಲ್ಲಿಗೆ ಚುಟ್ಟಿಗಳಿಂದ ಪ್ರಸಿದ್ಧರಾಗಿದ್ದ ಇವರು ವರ್ಣಮಯ ವೇಷಭೂಷಣ, ಮುಖವರ್ಣಿಕೆ, ಜೀವತುಂಬಿದ ಅಭಿನಯಗಳಿಂದಾಗಿ ಅಚ್ಚಳಿಯದ ಪ್ರಭಾವಬೀರಿದರು.

ಇವರಿಗೆ ಹಲವಾರು ಪ್ರಶಸ್ತಿಗಳು ಲಭಿಸಿವೆ. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ, ಕೇರಳ ಸಂಗೀತ ನಾಟಕ ಅಕಾಡೆಮಿ ಪುರಸ್ಕಾರ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಯಕ್ಷಗಾನ ಕಲಾಭೂಷಣ ಬಿರುದು, ಉಡುಪಿಯ ಯಕ್ಷಗಾನ ಕಲಾರಂಗದ ಡಾ.ಬಿ.ಬಿ.ಶೆಟ್ಟಿ ಪ್ರಶಸ್ತಿ ಇವು ಕೆಲವು ಮುಖ್ಯ ಪ್ರಶಸ್ತಿಗಳು. ಇವರು 1999 ನವೆಂಬರ್ 25ರಂದು ನಿಧನರಾದರು. (ಪೀ.ಎ.)

**ಚಂದ್ರಗುತ್ತಿ :** ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಒಂದು ಹೋಬಳಿ ಕೇಂದ್ರ. ಐತಿಹಾಸಿಕ ಮತ್ತು ಯಾತ್ರಾಸ್ಥಳ. ಸೊರಬದಿಂದ ಪಶ್ಚಿಮಕ್ಕೆ 16ಕಿಮೀ ದೂರದಲ್ಲಿ ವರದಾ ನದಿಯ ದಡದಲ್ಲಿದೆ.

ಈ ಊರನ್ನು ಹಿಂದೆ ಚಂದ್ರಗುಪ್ತಿ, ಚಂದ್ರಗುಪ್ತಪುರ, ಚಂದ್ರಗುತ್ತಿಪುರ ಎಂದು ಕರೆಯುತ್ತಿದ್ದರೆಂದು ಹಲವು ಶಾಸನಗಳಿಂದ ಗೊತ್ತಾಗುತ್ತದೆ. ಈ ಊರಿನ ಬಹು ಎತ್ತರದ ಗುಡ್ಡ ಚಂದ್ರನ ಹಾದಿಯಲ್ಲಿ ಅಡ್ಡಬಂದಿದ್ದರಿಂದಾಗಿ ಇದಕ್ಕೆ ಚಂದ್ರಗುತ್ತಿಯೆಂದು ಹೆಸರು ಬಂತೆಂದೂ ಜರಾಸಂಧ ಮತ್ತು ಕೃಷ್ಣ ಇಲ್ಲಿ ಯುದ್ಧ ಮಾಡುತ್ತಿದ್ದಾಗ ಕೃಷ್ಣ ಅಡಗಿ ಕುಳಿತುಬಿಟ್ಟನೆಂದೂ ಜರಾಸಂಧ ಅವನನ್ನು ಹುಡುಕಲಾರದೇ ಇಡೀ ಗುಡ್ಡವನ್ನೇ ಎತ್ತಿದ್ದನ್ನು ಕಂಡು ಚಂದ್ರ ನಕ್ಕನೆಂದೂ ಸ್ಥಳಪುರಾಣ. 864ಮೀ. ಎತ್ತರವಿರುವ ಈ ಬೆಟ್ಟದಲ್ಲಿ ಕಲ್ಲನ್ನು ತೆಗೆಯುವ ಉದ್ಯಮ ಅನೇಕ ವರ್ಷಗಳಿಂದ ನಡೆದು ಬಂದಿದೆ. ಇದು ಚಂದ್ರಗುತ್ತಿ ಕಲ್ಲು ಎಂದು ಪ್ರಸಿದ್ಧವಾಗಿದೆ.

ಚಂದ್ರಗುತ್ತಿ ಬನವಾಸಿ ಕದಂಬರ ಪ್ರಾಚೀನ ನಿವಾಸವಾಗಿತ್ತೆಂದೂ ಗುಡ್ಡದ ಬುಡದಲ್ಲಿರುವ ನಗರವನ್ನು ತ್ರಿನೇತ್ರ ಕದಂಬ ಸ್ಥಾಪಿಸಿದನೆಂದೂ ಪ್ರತೀತಿ. ಇದಕ್ಕೆ ಪ್ರಾಮುಖ್ಯ ಬಂದದ್ದು ಹಲವು ಶತಮಾನಗಳ ಅನಂತರ, ವಿಜಯನಗರದ ಅರಸರ ಕಾಲದಲ್ಲಿ. ವಿಜಯನಗರ ಸಾಮ್ರಾಜ್ಯದ 1ನೆಯ ಹರಿಹರನ ಕಾಲದಲ್ಲಿ (1336-56) ಮಾರಪ್ಪನೆಂಬುವನು ಪಶ್ಚಿಮ ಕೊಂಕಣದ ಮಲೆ ರಾಜ್ಯವನ್ನು ಆಳುತ್ತಿದ್ದಾಗ ಚಂದ್ರಗುತ್ತಿಪುರ ಆತನ ಆಡಳಿತ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಅನಂತರ ಇಮ್ಮಡಿ ಹರಿಹರನ ಕಾಲದಲ್ಲಿ (1377-1404) ಮಹಾ ಪ್ರಧಾನಿಯಾದ ಮಲ್ಲಪೊಡೆಯ ಗುತ್ತಿದುರ್ಗದ (ಚಂದ್ರಗುತ್ತಿ) ಪ್ರಾಂತ್ಯಾಧಿಕಾರಿಯಾಗಿದ್ದನೆಂದು ಕಂಡುಬರುತ್ತದೆ. 13-16ನೆಯ ಶತಮಾನಗಳಲ್ಲಿ ಪಶ್ಚಿಮ ಕರಾವಳಿಯಲ್ಲಿ ಪೋರ್ಚುಗೀಸರು ವಿಜಯನಗರದ ಅರಸರೊಡನೆ ವ್ಯಾಪಾರ ವ್ಯವಹಾರಗಳನ್ನು ಅಧಿಕಗೊಳಿಸಿದ ಕಾರಣ ಈ ಭಾಗದ ಅನೇಕ ನಗರಗಳು ಪೇಟೆಗಳೆನಿಸಿ, ವೇಂಠೆಗಳಾಗಿ, ಪ್ರಾಂತ್ಯಗಳಾಗಿ ಮಾರ್ಪಟ್ಟುವು. ಚಂದ್ರಗುತ್ತಿಯೂ ಇದೇ ಹೆಸರಿನ ವೇಂಠೆಯ ಆಡಳಿತ ಕೇಂದ್ರವಾಗಿತ್ತು. ಈ ಊರು ಸ್ವಲ್ಪ ಕಾಲ ಇಕ್ಕೇರಿ ನಾಯಕರ ವಶದಲ್ಲಿತ್ತು. 18ನೆಯ ಶತಮಾನದಲ್ಲಿ ಬಿಳಗಿಯ ಸೋಮಶೇಖರನಾಯಕ ಚಂದ್ರಗುತ್ತಿಯನ್ನು ಧ್ವಂಸ ಮಾಡಿದನೆಂದು ತಿಳಿದುಬರುತ್ತದೆ. ಅನಂತರ ಪರಶುರಾಮಭಾವು ಮತ್ತು ಧುಂಡಿಯಾ ಎಂಬ ಇಬ್ಬರು ಅಧಿಕಾರಿಗಳು ಕೆಲವು ತಿಂಗಳುಗಳ ಕಾಲ ಇಲ್ಲಿ ಆಡಳಿತ ನಡೆಸಿದರೆನ್ನಲು ಆಧಾರಗಳಿವೆ.



ರೇಣುಕಾಂಬ ದೇವಾಲಯ, ಪಿ.ಆರ್.ತಿಪ್ಪೇಸ್ವಾಮಿಯವರ ಜಲವರ್ಣ ಚಿತ್ರ

ಚಂದ್ರಗುತ್ತಿಯಲ್ಲಿ ಅನೇಕ ಪ್ರೇಕ್ಷಣೀಯ ಸ್ಥಳಗಳುಂಟು. ಗುತ್ಯಮ್ಮ ಅಥ'ವಾ ಅಮ್ಮನವರು ಎಂದು ಕರೆಯಲಾಗುವ ರೇಣುಕಾಂಬೆಯ ದೇವಾಲಯ ಗುಡ್ಡದ ಬುಡದಲ್ಲಿದೆ. ಪರಶುರಾಮ ತನ್ನ ತಾಯಿಯಾದ ರೇಣುಕೆಯನ್ನು ಕಡಿಯಲು ಅಟ್ಟಿಸಿಕೊಂಡು ಬಂದಾಗ ನೈಸರ್ಗಿಕವಾದ ಈ

ಗುಹಾಲಯದಲ್ಲಿ ಆಕೆ ಅವಿತು ಕುಳಿತಿದ್ದಳೆಂದು ಜನಪದ ನಂಬಿಕೆ. ಈ ಗುಹಾಲಯದ ಮುಂಭಾಗದಲ್ಲಿ ಸುಕನಾಸಿಯೂ ಅದಕ್ಕೆ ಹೊಂದಿಕೊಂಡು ನವರಂಗವೂ ಇವೆ. ಇದು ಬಹುಶಃ ವಿಜಯನಗರ ಕಾಲದ ಕಟ್ಟಡ. ಇಲ್ಲಿ ಸರಸ್ವತಿಯದೆಂದು ಹೇಳಲಾದ ಒಂದು ವಿಗ್ರಹವಿದೆ. ಅದರ ಎರಡೂ ಕಡೆ ಎರಡು ರುಂಡಗಳನ್ನು ಕೆತ್ತಿರುವುದು ಗಮನಾರ್ಹ. ನವರಂಗದಲ್ಲಿ ಹಾಸಿದ ಚಪ್ಪಡಿಗಳ ಮೇಲೆ ಅನೇಕ ಭಕ್ತರು ಹೆಸರುಗಳನ್ನು ಬರೆಯಿಸಿದ್ದಾರೆ. ಅವುಗಳಲ್ಲಿ ಕೆಲವು ಹೆಸರುಗಳು ಪಾಳೆಯಗಾರರವು. ಈ ದೇವಾಲಯದ ಸಮೀಪದಲ್ಲಿ ಇರುವುದು ಮಾತಂಗಿ ದೇವಾಲಯ. ಇದರ ಸುತ್ತಮುತ್ತ ಮಾಸ್ತಿಕಲ್ಲುಗಳೂ ವೀರಗಲ್ಲುಗಳೂ ಇವೆ. ಇಲ್ಲಿರುವ ಸು. 75ಸೆಂಮೀ ಎತ್ತರದ ಪರಶುರಾಮ ವಿಗ್ರಹ ಮುಖ್ಯವಾದ್ದು. ಗುಡ್ಡವನ್ನೇರುತ್ತಿದ್ದಂತೆ ಕಾಣಬರುವುದು ತಾವರೆಕೆರೆ. ಅದರ ಪಕ್ಕದಲ್ಲಿ ವಿಜಯನಗರ ಕಾಲದ ಕೋಟೆಕೊತ್ತಲಗಳಿವೆ. ಅಲ್ಲಿಂದ ಸು.30ಮೀ. ಮೇಲೇರಿದಾಗ ಸಿಗುವ ಇನ್ನೊಂದು ಗುಹೆಯಲ್ಲಿ ದಂಡಿನ ದುರ್ಗಿ ಎಂಬ ಸುಂದರವಾದ ಮಹಿಷಮರ್ದಿನಿಯ ವಿಗ್ರಹವುಂಟು. ಈ ಗುಹೆಯ ಮುಂಭಾಗದಲ್ಲಿನ ಒಂದು ಕಗ್ಗಲ್ಲಿನ ಫಲಕದ ಮೇಲೆ ಇಬ್ಬರು ಭಕ್ತರು ದುರ್ಗಿಯ ಪಾದಕ್ಕೆ ತಮ್ಮ ಶಿರಗಳನ್ನು ಸಮರ್ಪಿಸುತ್ತಿರುವಂತೆ ಚಿತ್ರಿಸಲಾಗಿದೆ. ಅಲ್ಲಿಂದ ಮುಂದೆ ಸಾಗಿದರೆ ದೊಡ್ಡ ಫಿರಂಗಿ, ಕೋಟೆಯ ಬುರುಜುಗಳು, ಪಾಳುಬಿದ್ದ ಮಸೀದಿ ಮುಂತಾದ ಅನೇಕ ಪ್ರಾಚೀನ ಅವಶೇಷಗಳು ಕಂಡುಬರುತ್ತವೆ.

ಸೌದೆಭವಾನಿ ತೀರ್ಥ, ಶಂಕರಲಿಂಗ ತೀರ್ಥ ಎಂಬ ಎರಡು ಬಾವಿಗಳ ಪಕ್ಕದಲ್ಲಿ ಕೆಲವು ಶಾಸನಗಳಿವೆ. ಗುಡ್ಡದ ತುದಿಯಲ್ಲಿ ಒಂದು ದೇವಾಲಯದ ತಳಪಾಯವಿದೆ. ಇದು ಚಂದ್ರಮೌಳೀಶ್ವರ ದೇವಾಲಯ. ಇದರಿಂದಾಗಿ ಈ ಊರಿಗೆ ಚಂದ್ರಗುತ್ತಿಯೆಂದು ಹೆಸರು ಬಂದಿರಬಹುದು. ಚಂದ್ರಗುತ್ತಿಯಲ್ಲಿ ಕಂಡುಬರುವ ಇತರ ದೇವಾಲಯಗಳಲ್ಲಿ ಶೂಲದ ಬೀರಪ್ಪನ ಗುಡಿ, ಭೈರವ ದೇವಾಲಯ ಮತ್ತು ಶಿವಾಲಯ ಮುಖ್ಯವಾದುವು. ಶೂಲದ ಬೀರಪ್ಪನ ಗುಡಿಯಲ್ಲಿ ಭಕ್ತರು ಒಪ್ಪಿಸಿದ ಸಾವಿರಾರು ತ್ರಿಶೂಲಗಳ ರಾಶಿಯಿದೆ.

ಹಿಂದೆ ಚಂದ್ರಗುತ್ತಿಯ ರೇಣುಕಾಂಬೆಯ ಜಾತ್ರೆಯಲ್ಲಿ ಕೋಣ ಬಲಿ ಇತ್ತು. ಬೆತ್ತಲೆಸೇವೆ, ಉರುಳುಸೇವೆಗಳು ನಡೆಯುತ್ತಿದ್ದವು. ಇತ್ತೀಚೆಗೆ ಬಲಿಯನ್ನು ಮತ್ತು ಬೆತ್ತಲೆಸೇವೆಯನ್ನು ನಿಷೇಧಿಸಲಾಗಿದೆ. (ಎಚ್.ಆರ್.ಆರ್.ಬಿ.)

**ಚಂದ್ರಭಟ್ಟ :** ಕನ್ನಡ ಸಾಹಿತ್ಯದಲ್ಲಿ ಚಂದ್ರಭಟ್ಟ ಎಂಬ ಹೆಸರು ಕೆಲವು ಕೃತಿಗಳಲ್ಲಿ ಮತ್ತು ಶಾಸನಗಳಲ್ಲಿ ಕಂಡುಬರುತ್ತವೆ. ಈಗ ಉಪಲಬ್ಧವಿರುವ ಪ್ರಮಾಣಗಳಿಂದ ಚಂದ್ರಭಟ್ಟ ಎಂಬ ಇಬ್ಬರು ಕವಿಗಳು ಇದ್ದುದು ತಿಳಿಯುತ್ತದೆಯೇ ಹೊರತು ಅವರು ಯಾವ ಗ್ರಂಥಗಳನ್ನು ಬರೆದಿದ್ದಾರೆಂಬುದು ಖಚಿತವಾಗಿ ತಿಳಿಯುವುದಿಲ್ಲ.

ಸು.1025ರಲ್ಲಿದ್ದ ದುರ್ಗಸಿಂಹ ಪೂರ್ವಕವಿಗಳನ್ನು ಹೇಳುವಾಗ ಕನ್ನಡ ಕವಿಗಳ ಸಾಲಿನಲ್ಲಿ ಒಬ್ಬ ಚಂದ್ರನನ್ನು (ಭಟ್ಟ) ಹೆಸರಿಸುತ್ತಾನೆ. 1049ರಲ್ಲಿದ್ದ ಶ್ರೀಧರಾಚಾರ್ಯ ತನ್ನ ಜಾತಕತಿಲಕದಲ್ಲಿ ಪೂರ್ವಕವಿಗಳನ್ನು ನೆನೆಯುವಾಗ ಅಂಬುಜಾರಿ (ಅಂಬುಜ + ಅರಿ = ಚಂದ್ರ) ಎಂಬ ಹೆಸರನ್ನು ಹೇಳುತ್ತಾನೆ. ದುರ್ಗಸಿಂಹ ಮತ್ತು ಶ್ರೀಧರಾಚಾರ್ಯರು ಹೇಳುವ ಚಂದ್ರನೇ ಚಂದ್ರಭಟ್ಟ ಎಂದು ಹೇಳಬಹುದಾದರೆ ಈತನ ಕಾಲ ಸು.1300 ಅಥವಾ ಅದಕ್ಕಿಂತ ಸ್ವಲ್ಪ ಹಿಂದೆ ಆಗಬಹುದು.

ಸು.1185ರಲ್ಲಿದ್ದ ರುದ್ರಭಟ್ಟ, ಸು.1260ರಲ್ಲಿದ್ದ ಕೇಶಿರಾಜ ಮತ್ತು ಸು.1300ರಲ್ಲಿದ್ದ ಅಟ್ಟಕವಿ ಇವರ ಕೃತಿಗಳಲ್ಲಿ ಚಂದ್ರಭಟ್ಟ ಎಂಬ ಹೆಸರು ಸ್ಪಷ್ಟವಾಗಿ ಕಾಣಿಸುತ್ತದೆ. ರುದ್ರಭಟ್ಟ ಪೂರ್ವಕವಿಗಳನ್ನು ಹೇಳುವಾಗ ಚಂದ್ರಭಟ್ಟನ ಜತಿ .... ಮತ್ಕೃತಿಯೊಳಿರ್ಕೆ ಎನ್ನುತ್ತಾನೆ. ಚಂದ್ರಭಟ್ಟನ... ಸುಮಾರ್ಗಮಿದಱೊಳೆ ಲಕ್ಷ್ಯಂ ಎಂದು ಶಬ್ದಮಣಿದರ್ಪಣದಲ್ಲಿ ಕೇಶಿರಾಜ ಹೇಳಿದ್ದಾನೆ. ಅಟ್ಟಕವಿ ತನ್ನ ಅಟ್ಟಮತದಲ್ಲಿ ಚಂದಿರಭಟ್ಟರ ದಯೆಯಿಂ ಸಂದೆಯ ಮಣಮಿಲ್ಲದಂತು ಕಲ್ಪುದುಮಱೆಯಂ ಎಂದು ಹೇಳಿದ್ದಾನೆ. ಅಟ್ಟಕವಿಯ ಈ ಮಾತಿನ ಆಧಾರದಿಂದ, ಚಂದ್ರಭಟ್ಟ ಮಳೆಗೆ ಸಂಬಂಧಿಸಿದಂತೆ ಒಂದು ದೃಷ್ಟಿ ಶಾಸ್ತ್ರಗ್ರಂಥವನ್ನು ಬರೆದಿರಬಹುದು. ರುದ್ರಭಟ್ಟ ಮತ್ತು ಕೇಶಿರಾಜರು ಹೇಳುವ ಜತಿ ಮತ್ತು ಸುಮಾರ್ಗಗಳಿಂದ ಖ್ಯಾತನಾದ ಚಂದ್ರಭಟ್ಟ ಮತ್ತು ಅಟ್ಟಕವಿ ಹೇಳುವ ಚಂದ್ರಭಟ್ಟ ಒಬ್ಬನೇ ಇರಬಹುದು.

ಧಾರವಾಡ ಜಿಲ್ಲೆಯ ಹೊಟ್ಟೂರಿನ ರಾಜವಲ್ಲಭ ಬರೆದ ಶಾಸನವೊಂದನ್ನು ಚಂದ್ರಭಟ್ಟ ವಿಸ್ತರಿಸಿ ತಿದ್ದಿ ಬರೆದುದು ಆ ಶಾಸನದ ಅಂತ್ಯಪದ್ಯದಿಂದ ತಿಳಿಯುತ್ತದೆ. ಈ ಶಾಸನದಲ್ಲಿ ಚಂದ್ರಭಟ್ಟನಿಗೆ ವಾಕ್ಪತಿ ಎಂಬ ವಿಶೇಷಣವಿದೆ. ಶಾಸನದ ಕಾಲ 1067. ಮತ್ತೊಂದು ಶಾಸನ ಇದೇ ಧಾರವಾಡ ಜಿಲ್ಲೆಯ ಗದಗು ತಾಲ್ಲೂಕಿನ ಕೋಟವುಮಚಗಿ ಗ್ರಾಮಕ್ಕೆ ಸೇರಿದ್ದು, ಇದರ ಕಾಲ 1099. ಈ ಶಾಸನದ ಕೊನೆಯ ಭಾಗದಲ್ಲಿ ಅಪೂರ್ಣವಾಗಿರುವ ಒಂದು ಕಂದಪದ್ಯ ಚಂದ್ರಭಟ್ಟ ಕವಿ ವಿರಚಿಸಿದಂ ಎಂದು ಹೇಳುತ್ತದೆ.

ರುದ್ರಭಟ್ಟ, ಕೇಶಿರಾಜ ಮತ್ತು ಅಟ್ಟಕವಿಗಳು ಹೇಳಿರುವ ಚಂದ್ರಭಟ್ಟ ಹಾಗೂ ಶಾಸನಗಳಲ್ಲಿ ಕಂಡುಬರುವ ಚಂದ್ರಭಟ್ಟ ಒಬ್ಬನೇ ಆಗಿರುವ ಸಾಧ್ಯತೆಗಳೇ ಹೆಚ್ಚು. ಈ ಚಂದ್ರಭಟ್ಟ ಮತ್ತು ದುರ್ಗಸಿಂಹ, ಶ್ರೀಧರಾಚಾರ್ಯ ಇವರು ಹೇಳಿದ ಚಂದ್ರ (ಭಟ್ಟ) ಇವರಿಬ್ಬರೂ ಬೇರೆ ಬೇರೆ ಎಂದು ಹೇಳಬಹುದು. *

**ಚಂದ್ರಭಾಗಾದೇವಿ, ಯು.ಕೆ. :** 1921-97. ಕರ್ನಾಟಕದ ಸುಪ್ರಸಿದ್ಧ ಭರತನಾಟ್ಯ ಕಲಾವಿದೆ. 1921 ಆಗಸ್ಟ್ 11ರಂದು ದಕ್ಷಿಣ ಕನ್ನಡ ಜಿಲ್ಲೆ ಪುತ್ತೂರಿನಲ್ಲಿ ಜನಿಸಿದರು. ತಂದೆ ಪಡುಕೋಣೆ ರಮಾನಂದರಾಯರು ಹುಚ್ಚು ಬೆಳುದಿಂಗಳಿನ ಹೂಬಾಣಗಳು ಎಂಬ ಹಾಸ್ಯಕೃತಿಯಿಂದ ಪ್ರಸಿದ್ಧರಾದವರು. ತಾತ ಮೊಳಹಳ್ಳಿ ಶಿವರಾಯರು. ಅವರ ಮಗಳಾದ ಸೀತಾದೇವಿಯವರು ಚಂದ್ರಭಾಗಾದೇವಿಯವರ ತಾಯಿ. ಶಿಶುನಾಳ ಶರೀಫ್ ಪ್ರಶಸ್ತಿ ಪಡೆದಿರುವ ಜಯವಂತಿ ಹಿರೇಬೆಟ್ (ನೋಡಿ) ಚಂದ್ರಭಾಗಾದೇವಿಯವರ ತಂಗಿ.

ಚಂದ್ರಭಾಗಾದೇವಿಯವರು ಬಾಲ್ಯದಲ್ಲೇ ಶಿವರಾಮ ಕಾರಂತರಲ್ಲಿ ಫ್ರೀಸ್ಟೈಲ್ ನೃತ್ಯಾಭ್ಯಾಸ ಮಾಡಿದರು. ಇವರು ಇಂಟರ್ ಮೀಡಿಯಟನ್ನು ಪಾಲ್ಘಾಟಿನ ವಿಕ್ಟೋರಿಯ ಕಾಲೇಜ್‌ನಲ್ಲಿ ಓದಿ ಅನಂತರ ಬೆಂಗಳೂರಿನ ಮಹಾರಾಣಿ ಕಾಲೇಜಿನಲ್ಲಿ ಬಿ.ಎಸ್ಸಿ. ತರಗತಿಗಳಿಗೆ ಸೇರಿದರು. ಅಲ್ಲಿ



ಯು.ಎಸ್.ಕೃಷ್ಣರಾಯರು ರಸಾಯನ ವಿಜ್ಞಾನದ ಅಧ್ಯಾಪಕರಾಗಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿ ಹಬ್ಬದ ಸಂದರ್ಭದಲ್ಲಿ ಗುರು ಕೃಷ್ಣರಾಯರು ಮಾಡಿದ ಭರತನಾಟ್ಯವನ್ನು ಕಂಡು ಅವರಿಗೆ ಮಾರುಹೋಗಿ ಅವರನ್ನು ವರಿಸಿದರು (1941). ಇವರು ಜೋಡಿಯಾಗಿ ನೃತ್ಯ ಪ್ರದರ್ಶನ ನೀಡಲಾರಂಭಿಸಿದಾಗ ಕೃಷ್ಣರಾಯರ ಗುರು ಕೋಲಾರದ ಕೃಷ್ಣಪ್ಪನವರು ಚಂದ್ರಭಾಗಾದೇವಿಯವರಿಗೆ ಮೈಸೂರು ಶೈಲಿಯ ಭರತನಾಟ್ಯ ಪಾಠ ಹೇಳಿಕೊಟ್ಟರು. ಅನಂತರ ಪತಿ ಕೃಷ್ಣರಾಯರೇ ಗುರುವಾದರು. ಮುಂದೆ ಪಂದನಲ್ಲೂರು ಮೀನಾಕ್ಷಿ ಸುಂದರಂ ಅವರಿಂದ ಪಂದನಲ್ಲೂರು ಶೈಲಿಯ ಭರತನಾಟ್ಯ ಕಲಿತರು.

ಚಂದ್ರಭಾಗಾದೇವಿ ಹಾಗೂ ಯು.ಎಸ್. ಕೃಷ್ಣರಾವ್ (ನೋಡಿ) ದಂಪತಿಗಳು ನೃತ್ಯಕಲೆಗಾಗಿ ತಮ್ಮ ಬದುಕನ್ನೇ ಮುಡಿಪಾಗಿಟ್ಟವರು. ಚಂದ್ರಭಾಗಾದೇವಿಯವರು ಭಾರತೀಯ ವಿದ್ಯಾಭವನದ ನೃತ್ಯಶಾಲೆಯಲ್ಲಿ ನೃತ್ಯಪ್ರಾಧ್ಯಾಪಕರಾಗಿದ್ದರು. ನೃತ್ಯದ ಬಗ್ಗೆ ಅನೇಕ ಉಪನ್ಯಾಸ ಹಾಗೂ ಪ್ರಾತ್ಯಕ್ಷಿಕೆಗಳನ್ನು ನೀಡಿ ಹಲವಾರು ಲೇಖನ ಹಾಗೂ ಪುಸ್ತಕಗಳನ್ನೂ

ಬರೆದಿದ್ದಾರೆ. ತಮ್ಮ ಮನೆಯಲ್ಲೇ ಒಂದು ನೃತ್ಯ ಪ್ರಸರಣ ಕೇಂದ್ರವನ್ನು ತೆರೆದು ಅದರ ವತಿಯಿಂದ ಅನೇಕ ನೃತ್ಯ ಪ್ರದರ್ಶನಗಳಿಗೆ ಅನುವು ಮಾಡಿಕೊಟ್ಟಿದ್ದಾರೆ.

ಇವರು ಭಾರತದಲ್ಲಿ ನೂರಾರು ನೃತ್ಯಕಾರ್ಯಕ್ರಮವನ್ನು ನೀಡಿದ್ದಾರೆ. ಲಂಡನ್ನಿನ ವಿಷ್ವ ಸಂಗೀತ ವಲಯ ಸಂಸ್ಥೆಯಲ್ಲಿ ನೃತ್ಯ ಕಾರ್ಯಕ್ರಮವನ್ನು ನೀಡಲು, ನೃತ್ಯವನ್ನು ಕಲಿಸಲು, ಉಪನ್ಯಾಸ ನೀಡಲು ಮತ್ತು ನೃತ್ಯ ಸಂಯೋಜಿಸಲು ಈ ದಂಪತಿಗಳನ್ನು ಆಗಿನ ಮೈಸೂರು ಸರ್ಕಾರ ಇಂಗ್ಲೆಂಡಿಗೆ ಕಳುಹಿಸಿತ್ತು. ಇದಲ್ಲದೆ ಇವರು ಐರ್ಲೆಂಡ್, ಪಶ್ಚಿಮ ಜರ್ಮನಿ, ಫ್ರಾನ್ಸ್, ಬೆಲ್ಜಿಯಂ, ಅಮೆರಿಕ, ಹಾಂಕಾಂಗ್, ಬ್ಯಾಂಕಾಕ್, ಸಿಂಗಪುರ, ಕೌಲಾಲಂಪುರ, ಕೊಲೊಂಬೊ ಮುಂತಾದ ಹಲವೆಡೆ ಪ್ರವಾಸಮಾಡಿ ಕಾರ್ಯಕ್ರಮ ನೀಡಿದ್ದಾರೆ. ಆ ದೇಶಗಳ ದೂರದರ್ಶನಗಳಲ್ಲಿ ಕೂಡ ನೃತ್ಯ ಪ್ರದರ್ಶನ, ಉಪನ್ಯಾಸ ನೀಡಿದ್ದಾರೆ. ಕೆನಡದ ಮಾಂಟ್ರಿಯಲ್‌ನಲ್ಲಿರುವ ಕಲಾಭಾರತಿ ಸಂಸ್ಥೆಯ ಆಹ್ವಾನದ ಮೇರೆಗೆ ಭಾರತೀಯ ಪರಂಪರೆಯ ನೃತ್ಯ ಹಾಗೂ ಅದರ ಬೆಳೆವಣಿಗೆಯ ಬಗ್ಗೆ ಉಪನ್ಯಾಸ ನೀಡಿ, ಅಲ್ಲಿಯ ವಿದ್ಯಾರ್ಥಿಗಳಿಗೆ ಚಂದ್ರಭಾಗಾದೇವಿಯವರು ನೃತ್ಯ ತರಬೇತಿ ನೀಡಿದ್ದಾರೆ.

ಈ ದಂಪತಿಗಳು ಕನ್ನಡದಲ್ಲಿ ಬರೆದ ಆಧುನಿಕ ಭಾರತದಲ್ಲಿ ನೃತ್ಯಕಲೆ ಎಂಬ ಪುಸ್ತಕವನ್ನು ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿದೆ. ಇದನ್ನು ಲಾಸ್ಯರಂಜನ ಎಂಬ ಹೆಸರಿನಲ್ಲಿ ಇಂಗ್ಲಿಷಿಗೆ ಅನುವಾದಿಸಿದ್ದಾರೆ. ಜೊತೆಗೆ ನೃತ್ಯರಂಗದಲ್ಲಿ ತಮ್ಮ ಪ್ರವಾಸಾನುಭವವನ್ನೂ ಕನ್ನಡದಲ್ಲಿ ಬರೆದಿದ್ದಾರೆ. ಶ್ರೀಕೃಷ್ಣಪ್ರೇಮ ಪುಷ್ಪಾಂಜಲಿ ಮತ್ತು ವಿಷ್ಣುದಿಗಂಬರ ಭಾತ್ಕಂಡೆಯವರನ್ನು ಕುರಿತು ಕಿರು ಪುಸ್ತಿಕೆಗಳನ್ನೂ ಬರೆದಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದ ಬಿ.ಎ. ತರಗತಿಯ ಪಠ್ಯಪುಸ್ತಕವಾಗಿ ಕನ್ನಡದಲ್ಲಿ ನೃತ್ಯಕಲೆ ಎಂಬ ಪುಸ್ತಕವನ್ನು ಈ ದಂಪತಿಗಳು ರಚಿಸಿದ್ದಾರೆ. ಎ ಪನೋರಮ ಆಫ್ ಡ್ಯಾನ್ಸಸ್ ಎಂಬುದು ಇವರ ಇನ್ನೊಂದು ಕೃತಿ. ಇವರು ಅನೇಕ ಸಹಾಯಾರ್ಥ ನೃತ್ಯ ಪ್ರದರ್ಶನ ನೀಡಿದ್ದಾರೆ. ಇಂದ್ರಾಣಿ ರೆಹಮಾನ್, ಸೋನಾಲ್ ಮಾನ್‌ಸಿಂಗ್, ಸುಧಾರಾಣಿ ರಘುಪತಿ, ಪ್ರತಿಭಾಪ್ರಹ್ಲಾದ್, ರೇವತಿಸತ್ಯು ಮತ್ತು ಕಾಮದೇವ್ - ಇವರ ಶಿಷ್ಯರಲ್ಲಿ ಪ್ರಸಿದ್ಧರಾದವರು.

ಐವತ್ತೈದು ವರ್ಷಗಳಿಗೂ ಹೆಚ್ಚು ಕಾಲ ಈ ದಂಪತಿಗಳು ನೀಡಿದ ಪ್ರದರ್ಶನಗಳ ಸಂಖ್ಯೆ 1500 ಕ್ಕೂ ಅಧಿಕ. ರತಿ-ಮನ್ಮಥ, ರಾಧೆ-ಕೃಷ್ಣ, ಶಿವಲೀಲೆ — ಹೀಗೆ ಇವರ ನಾಟ್ಯ ಪಾತ್ರಗಳು ಹಲವು. ಗೆಜ್ಜೆಯ ಹೆಜ್ಜೆನುಡಿ ಎಂಬ ಕೃತಿ ಅನುಭವ ಕಥನ. ಇದಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ಇವರ ನೃತ್ಯ ಸೇವೆಗಾಗಿ ಸರ್ಕಾರ ಹಾಗೂ ಸಂಘ ಸಂಸ್ಥೆಗಳಿಂದ ಇವರಿಗೆ ಪ್ರಶಸ್ತಿ - ಗೌರವಗಳು ಸಂದಿವೆ. ಅವುಗಳಲ್ಲಿ ಮುಖ್ಯವಾದವು ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಪ್ರಶಸ್ತಿ(1980), ರಾಜ್ಯೋತ್ಸವ ಪ್ರಶಸ್ತಿ (1985), ಭಾರತ ರಾಷ್ಟ್ರಪತಿಗಳಿಂದ ಕಲ್ಕತ್ತದಲ್ಲಿ ಪಡೆದ ರಾಷ್ಟ್ರೀಯ ಪ್ರಶಸ್ತಿ (1986), ಇವರ ನೃತ್ಯಕಲೆ ಕೃತಿಗೆ ಸಂಗೀತನೃತ್ಯ ಅಕಾಡೆಮಿ ಪ್ರಶಸ್ತಿ ಸಂದಿದೆ. ಹಲವಾರು ಸಂಘ ಸಂಸ್ಥೆಗಳು ಇವರನ್ನು ಗೌರವಿಸಿವೆ. ಕೆನಡದ ಮಾಂಟ್ರಿಯಲ್‌ನ ಕಲಾಭಾರತಿ ಸಂಸ್ಥೆ ಇವರನ್ನು ಸನ್ಮಾನಿಸಿದೆ. ಗಾಯನ ಸಮಾಜ, ಗಾನಕಲಾಪರಿಷತ್ತು, ಕರ್ನಾಟಕ ನೃತ್ಯಕಲಾಪರಿಷತ್ತು, ನೂಪುರ ದೂರದರ್ಶನ ಪ್ರಶಸ್ತಿ ಇವರಿಗೆ ಲಭಿಸಿವೆ. ಮದರಾಸಿನ ಕಲೈ ಮಗಳ್ ಸಭಾ, ಶ್ರೀ ಭರತಾಲಯ ಸಂಸ್ಥೆಗಳೂ ಸನ್ಮಾನಿಸಿವೆ. ಚಂದ್ರಭಾಗಾದೇವಿಯವರು ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಅಧ್ಯಕ್ಷರೂ ಆಗಿದ್ದರು (1995-97). ಇವರು 1997 ಏಪ್ರಿಲ್ 14ರಂದು ನಿಧನರಾದರು. (ಎಚ್.ಆರ್.ಎಲ್.)

**ಚಂದ್ರರಾಜ :** ಸು.1025. ಬ್ರಾಹ್ಮಣ ಕವಿ. ಮದನತಿಲಕ ಎಂಬ ಕಾಮಶಾಸ್ತ್ರ ಗ್ರಂಥದ ಕರ್ತೃ. ಚಾಳುಕ್ಯ ಚಕ್ರವರ್ತಿ 2ನೆಯ ಜಯಸಿಂಹನ (ಜಗದೇಕಮಲ್ಲ 1015-44) ಮಾಂಡಲಿಕನಾಗಿದ್ದ ರೆಂಚ ಅಥವಾ ರೇಚಿಗ ಈತನ ಆಶ್ರಯದಾತ. 2ನೆಯ ಚಾವುಂಡರಾಯ (ಸು.1025) ಮತ್ತು ದುರ್ಗಸಿಂಹ (ಸು.1031) ಈ ಕವಿಯ ಸಮಕಾಲೀನರು. ಚಂದ್ರರಾಜ ಪೂರ್ವಕವಿಗಳಲ್ಲಿ ಯಾರನ್ನೂ ಸ್ಮರಿಸಿಲ್ಲ. ವ್ಯಾಕರಣ, ಗಣಿತ, ಅರ್ಥಶಾಸ್ತ್ರ, ಕಾಮಶಾಸ್ತ್ರ, ಹಯಶಾಸ್ತ್ರ, ತರ್ಕಶಾಸ್ತ್ರ, ಅಲಂಕಾರ, ಕಾವ್ಯ, ನಾಟಕ, ನೃತ್ಯ, ಗೀತ, ಅದ್ವೈತ, ಗಾಂಧರ್ವ ವಿದ್ಯೆ, ಇಂದ್ರಜಾಲ, ವೈದ್ಯ, ವಾದ್ಯ, ಶಕುನ ಮುಂತಾದವುಗಳಲ್ಲಿ ತಾನು ಪರಿಣತನಾಗಿದ್ದಂತೆ ಹೇಳಿಕೊಂಡಿದ್ದಾನೆ. ಕವಿತಾಮಹಾರ್ಣವ, ಪ್ರತ್ಯಕ್ಷ ಕಂದರ್ಪ ಎಂಬುವು ಈತನ ನೆಚ್ಚಿನ ಬಿರುದುಗಳು.

ಮದನತಿಲಕ ಕನ್ನಡದಲ್ಲಿ ರಚಿತವಾದ ಮೊತ್ತಮೊದಲ ಕಾಮಶಾಸ್ತ್ರ ಗ್ರಂಥ. ವಿವಿಧ ಜಾತಿಯ ಸ್ತ್ರೀಪುರುಷರಿಗೆ ಸಂಬಂಧಿಸಿದ ಕಾಮತತ್ತ್ವಗಳ ನಿರೂಪಣೆಯೇ ಇಲ್ಲಿಯ ವಸ್ತು. ವಾತ್ಸ್ಯಾಯನ ಮೊದಲಾದವರು ಸಂಸ್ಕೃತ ಭಾಷೆಯಲ್ಲಿ ಬರೆದಿರುವ ಹಲವು ಕಾಮಶಾಸ್ತ್ರ ಗ್ರಂಥ'ಗಳಿಂದ ಉಚಿತವಾದಷ್ಟು ಅಂಶಗಳನ್ನು ಸಂಗ್ರಹಿಸಿಯೂ ಸ್ವಕೀಯವಾಗಿ ಕೆಲವಂಶಗಳನ್ನು ಹೊಸದಾಗಿ ಸೇರಿಸಿಯೂ ಈ ಗ್ರಂಥ' ರಚಿತವಾಗಿದೆ ಎಂದು ಹೇಳಬಹುದು. ಇದರಲ್ಲಿ 18 ಅಧಿಕರಣಗಳೂ ನಾನಾ ಛಂದಸ್ಸಿನ 500 ಪದ್ಯಗಳೂ ಇವೆಯೆಂದು ಕವಿಯ ಹೇಳಿಕೆ. ಆದರೆ ಈಗ ದೊರೆತು ಅಚ್ಚಾಗಿರುವ ಗ್ರಂಥ'ದಲ್ಲಿ 11 ಅಧಿಕರಣಗಳಿವೆ. ಇದು ಗದ್ಯಪದ್ಯಗಳ ಸಮ್ಮಿಶ್ರ ಕೃತಿಯಾದರೂ ಪದ್ಯಗಳ ಸಂಖ್ಯೆಯೇ ಹೆಚ್ಚಾಗಿದೆ. ಇದರಲ್ಲಿ ಸು.50 ರಷ್ಟು ಪದ್ಯಜಾತಿಗಳನ್ನು ಬಳಸಿದೆ. ಸಂಸ್ಕೃತ ವರ್ಣವೃತ್ತಗಳಲ್ಲಿ ಸಮ, ಅರ್ಧಸಮ, ವಿಷಮ ಮತ್ತು ಮಾಲಾವೃತ್ತಗಳ ಪರಿಚಿತಾಪರಿಚಿತ ಪದಿಗಳನ್ನೂ ಶ್ಲೋಕವನ್ನೂ ಕನ್ನಡ ಪದ್ಯಜಾತಿಗಳಲ್ಲಿ ತ್ರಿಪದಿ, ಅಕ್ಕರ, ಚೌಪದಿ' ಮುಂತಾದ ಮಟ್ಟುಗಳನ್ನೂ ಕಂದವನ್ನೂ ಬಳಸಲಾಗಿದೆ. ಯಾವುದಾದರೊಂದು ಪದ್ಯಮೂಲದಿಂದ ಬೇರೆ ಬೇರೆ ಬಗೆಯ ಛಂದಸ್ಸುಗಳ ಪದ್ಯಗಳನ್ನು ಹೊರಡಿಸಬಹುದೆಂದು ಅಲ್ಲಲ್ಲಿ ಸೂಚಿಸಿದೆ. ಈ ದೃಷ್ಟಿಯಿಂದ ಪೃಥ'ಮಾಧಿಕಾರದ ವನಮಂಜರಿಯೆಂಬೊಂದು ಸಂಸ್ಕೃತ ವರ್ಣಸಮ ವೃತ್ತದಿಂದ 84 ವಿಧವಾದ ಪದ್ಯಗಳನ್ನು ಮಾಡಬಹುದೆಂದು ಹೇಳಿರುವುದು ಕುತೂಹಲಕರವಾಗಿದೆ. ಅಚ್ಚಕನ್ನಡದ ಮಟ್ಟುಗಳಲ್ಲಿ ಅನ್ಯತ್ರ ಪ್ರಾಯಶಃ ನಿದರ್ಶನಗಳು ದೊರೆಯದ ಎಡೆಯಕ್ಕರ ನಡುವಣಕ್ಕರಗಳಿಗೆ ಇಲ್ಲಿ ನಿದರ್ಶನಗಳು ದೊರೆಯುವುದೂ ಅಂಶಗಣಾತ್ಮಕ ಷಟ್ಪದಿ ಚೌಪದಿಗಳಿಗೆ ಮೊದಲ ಉದಾಹರಣೆಗಳು ಕಂಡುಬರುವುದೂ ಈ ಕೃತಿಯ ಮಹತ್ತ್ವವನ್ನು ಹೆಚ್ಚಿಸಿದೆ. ಚಿತ್ರಕವಿತ್ವದಲ್ಲಿ ಚಕ್ರ, ಮುರಜ, ಪಣವ, ಗೋಮೂತ್ರಿಕೆ ಮುಂತಾಗಿ ಸು.16 ಭೇದಗಳನ್ನು ಹೇಳಲಾಗಿದೆ. ಹಾಗೆಯೇ ಕಂದಪದ್ಯದಲ್ಲಿ ಆದಿಯಮಕದ ಕಂದ, ಕಿರ್ಗೊತ್ತಿನ ಕಂದ ಮುಂತಾಗಿ ಸು.11 ವಿಧಗಳನ್ನು ನಿರೂಪಿಸಲಾಗಿದೆ. ವಸ್ತುವಿನ ದೃಷ್ಟಿಯಿಂದ ಚಂದ್ರರಾಜನ ಮದನತಿಲಕ ಬಹು ಸಾಮಾನ್ಯವಾಗಿ ತೋರಿದರೂ ಚಿತ್ರಕವಿತ್ವ ಮತ್ತು ಅದಕ್ಕಿಂತ ಮಿಗಿಲಾಗಿ ವಿವಿಧ ಛಂದೋಪ್ರಯೋಗಗಳ ದೃಷ್ಟಿಯಿಂದ ಕನ್ನಡ ಸಾಹಿತ್ಯದ ಉಪಯುಕ್ತ ಕೃತಿಗಳಲ್ಲಿ ಒಂದಾಗಿದೆ. ಇದರ ಕೆಲವು ಪದ್ಯಗಳು ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ ಉದ್ಧೃತವಾಗಿವೆ. (ಟಿ.ವಿ.ವಿ.)

**ಚಂದ್ರವಳ್ಳಿ :** ಚಿತ್ರದುರ್ಗ ಜಿಲ್ಲೆಯಲ್ಲಿ ಚಿತ್ರದುರ್ಗದ ಪಶ್ಚಿಮಕ್ಕೆ ಬೆಟ್ಟದ ಬುಡದಲ್ಲಿ ಇರುವ ಪ್ರಾಕ್ತನ ನಿವೇಶನ. ಪ್ರಾಗೈತಿಹಾಸಿಕ ಕಾಲದಿಂದಲೂ ಇಲ್ಲಿ ಜನವಸತಿಯಿದ್ದು, ಇತಿಹಾಸ ಕಾಲದಲ್ಲಿ ವಿಜಯನಗರದ ಕಾಲದವರೆಗೂ ಇಲ್ಲಿ ಊರು ಬೆಳೆದು ಬಂದಿದ್ದಂತೆ ತೋರುತ್ತದೆ. ಹುಲೆಗುಂದಿ, ನೇರಲಗೊಂದಿ, ಬಾರಲಗೊಂದಿಗಳೆಂಬ ಬೆಟ್ಟದ ಕಣಿವೆ ಪ್ರದೇಶಗಳೂ ಅಂಕಲೆಮಠವಿರುವ ಗವಿಗಳೂ ಸುತ್ತ ಮುತ್ತಲ ಗುಡ್ಡಗಳೂ ಇಲ್ಲಿ ನಿರಂತರವಾಗಿ ಪ್ರವಹಿಸುತ್ತಿದ್ದ ಹಳ್ಳವೂ ಪ್ರಾಚೀನ ಕಾಲದಲ್ಲಿ ಜನವಸತಿಗೆ ಅನುಕೂಲವಾಗಿದ್ದುವು. ಆದ್ದರಿಂದಲೇ ಇಲ್ಲಿ ನವಶಿಲಾಯುಗದ ಜನರಿದ್ದ ಕುರುಹುಗಳೂ ಕಂಡುಬಂದಿವೆ.

ಈ ನಿವೇಶನ ಮೊದಲು ಬೆಳಕಿಗೆ ಬಂದದ್ದು ಸು.120 ವರ್ಷಗಳ ಹಿಂದೆ ನೀರಿನ ಕಾಲುವೆಯೊಂದನ್ನು ತೋಡುತ್ತಿದ್ದಾಗ ಅಲ್ಲಿ ದೊರೆತ ಸೀಸದ ನಾಣ್ಯಗಳಿಂದ. ಆರ್.ನರಸಿಂಹಾಚಾರ್ಯರು ಮೊದಲ ಬಾರಿಗೆ ಇಲ್ಲಿ ಕೆಲವು ಕುಳಿಗಳನ್ನು ತೋಡಿ ಇಲ್ಲಿ ದೊರೆತ ನಾಣ್ಯಗಳು, ಮಣ್ಣಿನ ಪಾತ್ರೆಗಳು, ಮಣಿಗಳು ಮೊದಲಾದವನ್ನು 1909ರಲ್ಲಿ ವರದಿಮಾಡಿ ಅದರ ಪ್ರಾಮುಖ್ಯತೆಯನ್ನು ಪ್ರಕಟಿಸಿದರು. 20 ವರ್ಷಗಳ ತರುವಾಯ ಎಂ.ಎಚ್.ಕೃಷ್ಣ ಅವರು ವಿಸ್ತಾರವಾದ ಭೂ ಶೋಧನೆಯನ್ನು ಕೈಗೊಂಡರು. 30ಕ್ಕೂ ಹೆಚ್ಚು ಕಡೆ ಉತ್ಖನನ ನಡೆಸಿದರು.

ಇದರಿಂದ ಇಲ್ಲಿ ಅನೇಕ ಕಟ್ಟಡಗಳ ಅವಶೇಷಗಳು, ನಾಣ್ಯಗಳು, ಆಭರಣಗಳು, ಮಣಿಗಳು, ರೇಖಾಚಿತ್ರ ಮತ್ತು ಇತರ ಅಲಂಕರಣಗಳಿಂದ ಕೂಡಿದ ಮೃಣ್ಪಾತ್ರೆಗಳ ತುಂಡುಗಳು, ಕಬ್ಬಿಣದ ಮತ್ತು ಇತರ ಮನೆ ಬಳಕೆಯ ವಸ್ತುಗಳು ಹೇರಳವಾಗಿ ಕಂಡುಬಂದುವು. ಗೌತಮೀಪುತ್ರ, ವಿಳಿವಾಯಕುರ, ಮಹಾರಠಿ ಸಡಕಣ ಕಲಲಯ, ಶ್ರೀಯಜ್ಞ ಸಾತಕರ್ಣಿ, ಮುಡಾನಂದ ಮೊದಲಾದ ಸಾತವಾಹನ ಅರಸರ, ಮಾಂಡಲಿಕರ ಸೀಸದ ಮತ್ತು ಮಿಶ್ರಲೋಹದ ಹಲವಾರು ನಾಣ್ಯಗಳ ಜೊತೆಗೆ ರೋಮ್ ಚಕ್ರವರ್ತಿಗಳಾದ ಅಗಸ್ಟಸ್ ಮತ್ತು ಟೈಬೀರಿಯಸರ ನಾಣ್ಯಗಳಿದ್ದುವು. ಇವಲ್ಲದೆ ಕೃಷ್ಣ ಅವರು ಎರಡು ಕಡೆ ಭೂಮಿಯೊಳಗೆ ಬೃಹತ್ ಶಿಲಾಸಮಾಧಿಯ ಕಲ್ಲಿನ ಶವಪೆಟ್ಟಿಗೆಯನ್ನೂ ಕಂಡರು. ಪುನಃ 1947ರಲ್ಲಿ ಮಾರ್ಟಿಮರ್ ವೀಲರ್ ಅವರ ನೇತೃತ್ವದಲ್ಲಿ ಭಾರತ ಸರ್ಕಾರದ ಮತ್ತು ಮೈಸೂರು ಸರ್ಕಾರದ ಪುರಾತತ್ತ್ವ ಇಲಾಖೆಗಳು ಇಲ್ಲಿ ಒಟ್ಟಾಗಿ ಹೆಚ್ಚು ವೈಜ್ಞಾನಿಕವಾದ ಉತ್ಖನನ ನಡೆಸಿದುವು.

ಈ ಎಲ್ಲ ಉತ್ಖನನಗಳ ಫಲವಾಗಿ ಇಲ್ಲಿ ಮುಖ್ಯವಾಗಿ ಎರಡು ಸಂಸ್ಕೃತಿಗಳ ಅವಶೇಷಗಳಿದ್ದುದು ಸ್ಪಷ್ಟವಾಯಿತು. ಒಂದು ಪ್ರಾಗೈತಿಹಾಸಿಕ ಯುಗದ ಬೃಹತ್ ಶಿಲಾಸಮಾಧಿಯ ಸಂಸ್ಕೃತಿ, ಇನ್ನೊಂದು ಇತಿಹಾಸದ ಆರಂಭಕಾಲದ ಸಂಸ್ಕೃತಿ. ಮೊದಲನೆಯದು ಅಷ್ಟು ವ್ಯಾಪಕವಾಗಿಲ್ಲದೆ ಅದರ ಕೊನೆಯ ಹಂತದ ಅವಶೇಷಗಳು ಮಾತ್ರ ಕೆಳಗಿನ ಪದರಗಳಲ್ಲಿ ಸ್ವಲ್ಪಮಟ್ಟಿಗೆ ಕಂಡುಬಂದುವು. ಎರಡನೆಯ ಸಂಸ್ಕೃತಿ ಹೆಚ್ಚು ವ್ಯಾಪಕವಾಗಿ, ಬಹುಮುಖವಾಗಿ ಬೆಳೆದು ಹರಡಿದ್ದುದು ಸ್ಪಷ್ಟವಾಗಿದೆ. ಈ ಸಂಸ್ಕೃತಿ



ಚಂದ್ರವಳ್ಳಿ ಉತ್ಖನನದಲ್ಲಿ ದೊರೆತ ಪ್ರಾಚ್ಯಾವಶೇಷಗಳು

ಕ್ರಿ.ಪೂ. ಸು.3ನೆಯ ಶತಮಾನದಲ್ಲಿ ಆರಂಭವಾಗಿ ಕ್ರಿ.ಶ.3ನೆಯ ಶತಮಾನದವರೆಗೂ ಬೆಳೆದುಬಂದಂತೆ ತೋರುತ್ತದೆ. ಇಲ್ಲಿ ದೊರೆತ ಸಾತವಾಹನ ಅರಸರ ಸೀಸದ, ಮಿಶ್ರಲೋಹದ ನಾಣ್ಯಗಳ ಜೊತೆಗೆ ರೋಮ್ ನಾಣ್ಯಗಳು, ರೂಲೆಟೆಡ್ ಮೃಣ್ಪಾತ್ರೆಗಳು ದೊರೆತಿರುವುದು ಇದರ ಕಾಲವನ್ನು ಗೊತ್ತುಪಡಿಸಲು ಸಹಕಾರಿಯಾಗಿದೆ. ಸುಟ್ಟ ಇಟ್ಟಿಗೆಗಳಿಂದ ದೊಡ್ಡ ಮನೆಗಳನ್ನು ಕಟ್ಟುತ್ತಿದ್ದುದ್ದು, ಕಪ್ಪು, ಕೆಂಪು ಬಣ್ಣದ ಮಡಕೆಗಳ ಮೇಲೆ ಬಿಳಿಯ ಬಣ್ಣದಿಂದ ರೇಖಾಚಿತ್ರಗಳನ್ನು ಬಿಡಿಸುವುದು ಮತ್ತು ಅವುಗಳ ಕಂಠಗಳ ಮೇಲೆ ಬಗೆಬಗೆಯ ಅಲಂಕರಣಗಳನ್ನು ಕೊರೆದಿರುವುದು, ಪ್ರಶಸ್ತ ಶಿಲೆಗಳಲ್ಲಿ, ದಂತ, ಶಂಖ ಮೊದಲಾದವುಗಳಲ್ಲಿ ಮಾಡಿದ ಮಣಿಗಳು ಮತ್ತು ಗಾಜಿನ ದಂತದ ಬಳೆಗಳು, ಸೀಸದ ನಾಣ್ಯಗಳು ಈ ಸಂಸ್ಕೃತಿಯ ಹೆಗ್ಗುರುತುಗಳಾಗಿವೆ.

ಕದಂಬ ಮಯೂರಶರ್ಮ ಇಲ್ಲಿ ಒಂದು ಕೆರೆಯನ್ನು ಕಟ್ಟಿಸಿದ್ದನೆಂಬುದು ಇಲ್ಲಿ ದೊರೆತ ಶಾಸನವೊಂದರಿಂದ ತಿಳಿಯುತ್ತದೆ. (ಎಂ.ಎಚ್.)

**ಚಂದ್ರಶೇಖರ ಅಯ್ಯರ್, ಕೆ.ಎಸ್. :** 1869-1964. ಹಿರಿಯ ತಲೆಮಾರಿನ ನ್ಯಾಯವಾದಿ. ಬೆಂಗಳೂರಿನ ಗಾಯನ ಸಮಾಜದ ಸ್ಥಾಪಕರು. 1869 ಆಗಸ್ಟ್ 2ರಂದು ಜನಿಸಿದರು. ತಂದೆ ಎ.ಶಂಕರಯ್ಯ ತ್ರಿಚೂರಿನಲ್ಲಿ



ಜಿಲ್ಲಾ ನ್ಯಾಯಾಧೀಶರಾಗಿದ್ದರು. ಚಂದ್ರಶೇಖರ ಅಯ್ಯರ್ ಮೆಟ್ರಿಕ್‌ನಲ್ಲಿ ಉತ್ತೀರ್ಣರಾದ ಬಳಿಕ (1884) ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಿಂದ ಬಿ.ಎ. ಪದವಿ ಗಳಿಸಿದರು. ಆಗ ಇಂಗ್ಲಿಷ್ ಭಾಷೆಯಲ್ಲಿನ ಪ್ರೌಢಿಮೆಗೆ ಚಿನ್ನದ ಪದಕವನ್ನೂ ಸಂಸ್ಕೃತ ಭಾಷಾ ಪ್ರೌಢಿಮೆಗೆ ಬಹುಮಾನವನ್ನೂ ಗಳಿಸಿದರು. ಕಾನೂನು ಪದವಿಯನ್ನು 1892ರಲ್ಲಿ ಪೂರೈಸಿದರು. ಅನಂತರ ಮೈಸೂರ್ ಸಿವಿಲ್ ಸರ್ವೀಸ್ ಪರೀಕ್ಷೆಯನ್ನು ತೆಗೆದುಕೊಂಡು ಪ್ರಥಮ ಸ್ಥಾನದಲ್ಲಿ ಉತ್ತೀರ್ಣರಾದರು. ಅಸಿಸ್ಟೆಂಟ್ ಕಮಿಷನರ್ ಆಗಿ ತಮ್ಮ ವೃತ್ತಿ ಜೀವನ ಪ್ರಾರಂಭಿಸಿದರು. ಪಾರ್ವತಿ ಅಮ್ಮಾಳ್ ಎಂಬುವವರು ಇವರ ಪತ್ನಿ. ಬೆಂಗಳೂರಿನ ಉಚ್ಚ ನ್ಯಾಯಾಲಯದಲ್ಲಿ ಕೆಲಸ ಕಲಿತರು. ಹಾಸನದಲ್ಲಿ ಕೆಲಕಾಲ ಮುನ್ಸಿಫರಾಗಿದ್ದು ಬಳಿಕ ಕಂದಾಯ ಇಲಾಖೆ ಸೇರಿದರು.

ಅಯ್ಯರ್ ಅವರ ಕಾರ್ಯದಕ್ಷತೆಯನ್ನು ಗಮನಿಸಿದ ಮೈಸೂರಿನ ಆಗಿನ ದಿವಾನರಾಗಿದ್ದ ಶೇಷಾದ್ರಿ ಅಯ್ಯರ್ ಇವರನ್ನು ಸರ್ಕಾರಿ ಸಚಿವಾಲಯಕ್ಕೆ ಕರೆತಂದರು. ಅಲ್ಲಿ ಶಾಸನ ಸಭೆಯ ಕಾರ್ಯಕಲಾಪಗಳ ಬಗ್ಗೆ ಅಧ್ಯಯನ ನಡೆಸಲು ಇವರನ್ನು ನಿಯೋಜಿಸಲಾಯಿತು. ಕಾನೂನು ರೂಪಿಸುವಲ್ಲಿ ಇವರು ಪರಿಣತಿ ಪಡೆದರು. ಹೊಸದಾಗಿ ರಚಿತವಾದ ಡೆಪ್ಯೂಟಿ ಸೆಕ್ರೆಟರಿ ಹುದ್ದೆಗೆ ಇವರನ್ನು ನೇಮಿಸಲಾಯಿತು. ಅನಂತರ ಕಂದಾಯ ಮತ್ತು ಜನರಲ್ ಸೆಕ್ರೆಟರಿ ಹುದ್ದೆಗೆ ಬಡ್ತಿ ದೊರೆಯಿತು (1906). ಇವರಿಗೆ ನ್ಯಾಯಾಂಗದಲ್ಲಿ ವಿಶೇಷ ಒಲವು ಇದ್ದುದರಿಂದ ಬೆಂಗಳೂರಿನ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿ ನೇಮಕಗೊಂಡರು. 1922ರಲ್ಲಿ ಮುಖ್ಯ ನ್ಯಾಯಾಧೀಶರಾಗಿ ಬಡ್ತಿ ಪಡೆದರು. ಇವರ ಸಾಧನೆಗಾಗಿ ಮೈಸೂರಿನ ಮಹಾರಾಜರು ರಾಜಧರ್ಮ ಪ್ರವೀಣ ಬಿರುದು ನೀಡಿದರು (1921). ಬ್ರಿಟಿಷ್ ಸರ್ಕಾರ ಇವರಿಗೆ ದಿವಾನ್ ಬಹದ್ದೂರ್ ಬಿರುದು ನೀಡಿತು (1923).

ಮುಖ್ಯ ನ್ಯಾಯಾಧೀಶರಾಗಿದ್ದರೂ ಭಾರತದ ಅಂದಿನ ರಾಜಕೀಯ ವಿದ್ಯಮಾನಗಳು ಇವರನ್ನು ಕೆರಳಿಸಿದ್ದವು. ಇವರ ಮೇಲೆ ಅನಿಬೆಸೆಂಟ್‌ರ ದಟ್ಟ ಪ್ರಭಾವವಾಗಿತ್ತು. ಭಾರತಗೀತಂ ಎಂಬ ಸಂಸ್ಕೃತ ದೇಶಭಕ್ತಿ ಗೀತೆ ರಚಿಸಿದ್ದರು. ಈ ಗೀತೆಯನ್ನು ಮೊದಲಿಗೆ ಇಂಗ್ಲಿಷ್‌ನಲ್ಲಿ 'ಸಾಂಗ್ ಆಫ್ ಇಂಡಿಯಾ ದಿ ಮದರ್ ಲ್ಯಾಂಡ್' ಎಂದು ಬರೆದು ಅನಂತರ ಸಂಸ್ಕೃತಕ್ಕೆ ಭಾಷಾಂತರಿಸಿ ಪ್ರಕಟಿಸಿದರು. ಈ ಗೀತೆಯನ್ನು ಪಿಟೀಲು ವಾದಕರಾಗಿದ್ದ ಟಿ.ತಾಯಪ್ಪನವರ ಸಹಾಯದಿಂದ ಯುಕ್ತ ರಾಗಗಳೊಂದಿಗೆ ಸಂಗೀತಕ್ಕೆ ಅಳವಡಿಸಿದರು. ಭಾರತೀಯರ ಮನದಲ್ಲಿ ಧೈರ್ಯ ತುಂಬಿ ಬ್ರಿಟಿಷರ ವಿರುದ್ಧ ಹೋರಾಟಕ್ಕೆ ಅಣಿಗೊಳಿಸುವ ಪ್ರಯತ್ನ ಈ ಕವಿತೆಯಲ್ಲಿದೆ.

ಇವರು ನಿವೃತ್ತರಾದ ಬಳಿಕ ಸಮಾಜ ಸೇವೆಗೆ ತಮ್ಮನ್ನು ಸಮರ್ಪಿಸಿಕೊಂಡರು. ರಾಜ್ಯ ಸ್ಕೌಟ್ ಚಳವಳಿಯ ಮುಂಚೂಣಿಯ ನಾಯಕರಾಗಿ ದುಡಿದರು. ಬೆಂಗಳೂರಿನ ಸಿಟಿ ಇನ್‌ಸ್ಟಿಟ್ಯೂಟ್ ಸ್ಥಾಪಿಸಿದರು.

ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್‌ಗೆ ನಾಮಕರಣ ಸದಸ್ಯರಾಗಿ ಸೇವೆ ಸಲ್ಲಿಸಿದರು. ಥಿಯಾಸಫಿಕಲ್ ಸೊಸೈಟಿಯ ಸದಸ್ಯರಾಗಿದ್ದರು. ಕರ್ನಾಟಕ ಸಂಗೀತದಲ್ಲಿ ವಿಶೇಷ ಒಲವಿದ್ದ ಇವರು ಬೆಂಗಳೂರಿನ ಗಾಯನ ಸಮಾಜದ ಸ್ಥಾಪಕರಲ್ಲೊಬ್ಬರು.

ಇವರನ್ನು ಸರ್ಕಾರ ವಿವಿಧ ತಜ್ಞರ ಸಮಿತಿಯ ಅಧ್ಯಕ್ಷರನ್ನಾಗಿಯೂ ನೇಮಿಸಿತ್ತು. ಹಿಂದು ಕಾನೂನಿನಲ್ಲಿ ಮಹಿಳೆಯರ ಸ್ಥಾನಮಾನ ಉತ್ತಮಪಡಿಸುವ ಕುರಿತಾದ ಸಮಿತಿಗೆ ಇವರು ಅಧ್ಯಕ್ಷರಾಗಿದ್ದರು (1931). ಸಹಕಾರ ಚಳವಳಿ ಸಮಿತಿ, ಕಾರಾಗೃಹ ಸುಧಾರಣಾ ಸಮಿತಿಯ ಅಧ್ಯಕ್ಷರಾಗಿಯೂ (1941) ಇವರು ಕೆಲಸ ಮಾಡಿದರು. ಇವರು 1964ರಲ್ಲಿ ನಿಧನರಾದರು. *

**ಚಂದ್ರಶೇಖರ, ಎಂ. ಎಸ್. :** 1924 -. ಹಿರಿಯ ಚಿತ್ರಕಲಾವಿದ. 1924 ಜೂನ್ 16ರಂದು ಮೈಸೂರಿನಲ್ಲಿ ಜನಿಸಿದರು. ಮೈಸೂರಿನ ಚಾಮರಾಜೇಂದ್ರ ಇನ್‌ಸ್ಟಿಟ್ಯೂಟ್‌ನಲ್ಲಿ ತಮ್ಮ ಕಲಾ ಶಿಕ್ಷಣವನ್ನು ಯಶಸ್ವಿಯಾಗಿ ಪೂರೈಸಿದರು (1941). ಇವರು ರಚಿಸಿದ ಅಜಂತಾ ಗುಹಾ



ಚಿತ್ರಗಳು ಇವರಿಗೆ ಪ್ರಖ್ಯಾತಿಯನ್ನು ತಂದುಕೊಟ್ಟಿವೆ. ದೇಶವಿದೇಶಗಳಲ್ಲಿಯೂ ಇವರು ಅನೇಕ ಕಲಾಪ್ರದರ್ಶನಗಳನ್ನು ಏರ್ಪಡಿಸಿ, ಕರ್ನಾಟಕದ ಕಲಾ ಪ್ರೌಢಿಮೆಯನ್ನು ಮೆರೆದಿದ್ದಾರೆ. ಕೈರೋ, ವಾರ್ಸಾ, ಇಸ್ತಾನ್‌ಬುಲ್, ಅಮೆರಿಕ ಮೊದಲಾದೆಡೆಗಳಲ್ಲಿ ಇವರ ಕಲಾಕೃತಿಗಳ ಪ್ರದರ್ಶನ ನಡೆದಿದೆ. ಇವರ ಕಲಾಕೃತಿಗಳು ದೇಶ ವಿದೇಶದ ಕಲಾಭವನಗಳಲ್ಲಿ, ಸರ್ಕಾರದ ಮುಖ್ಯ ಸೌಧಗಳಲ್ಲಿ, ಕಚೇರಿಗಳಲ್ಲಿ ಮತ್ತು ಕಲಾಭಿಮಾನಿಗಳ ಮನೆಗಳಲ್ಲಿ ಸೇರ್ಪಡೆಗೊಂಡಿವೆ. ಇವರು ಅನೇಕ ಕಲಾ ಕಾರ್ಯಾಗಾರ, ಕಲಾ ಶಿಬಿರಗಳಲ್ಲಿ ಭಾಗಿಯಾಗಿದ್ದಾರೆ. ಕರ್ನಾಟಕ ಚಿತ್ರಕಲಾ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಳಿಯ ಸದಸ್ಯರಾಗಿ ಮತ್ತು ಉಪಾಧ್ಯಕ್ಷರಾಗಿ, ಧರ್ಮಸ್ಥಳದ ಧರ್ಮೋತ್ಥಾನ ಟ್ರಸ್ಟಿನ ಸಲಹೆಗಾರರಾಗಿ, ಕೇರಳದಲ್ಲಿಯ ತಿರುವನಂತಪುರದ ವಿಧಾನ ಮಂಡಲದಲ್ಲಿನ ಭಿತ್ತಿ ಚಿತ್ರಗಳ ಸಲಹೆಗಾರರಾಗಿ ದುಡಿದಿದ್ದಾರೆ. ಇವರಿಗೆ ಅನೇಕ ಪ್ರಶಸ್ತಿ ಪುರಸ್ಕಾರಗಳು ಲಭಿಸಿವೆ. ಅವುಗಳಲ್ಲಿ ಮುಖ್ಯವಾದವು: ಮೈಸೂರು ದಸರ ಕಲಾ ಪ್ರದರ್ಶನ (1948 ಮತ್ತು 1955), ಭೂಪಾಲ್ ಮಹಾರಾಜ್ ಬಹುಮಾನ, ಅಮೃತಸರ (1956), ಕರ್ನಾಟಕ ಲಲಿತ ಕಲಾ ಅಕಾಡೆಮಿ ಪ್ರಶಸ್ತಿ (1982), ಐಫ್ಯಾಕ್ಸ್ ಪ್ರಶಸ್ತಿ (1952), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1995), ವೆಂಕಟಪ್ಪ ಪ್ರಶಸ್ತಿ (2000). ಅಜಂತಾ ಗುಹೆಗಳಲ್ಲಿ ಹಿರಿಯ ಕಲಾವಿದರಾಗಿ ಸೇವೆ ಸಲ್ಲಿಸಿದ ಇವರು ಈಗ ನಿವೃತ್ತರಾಗಿದ್ದಾರೆ. *

**ಚಂದ್ರಶೇಖರ ಕಂಬಾರ :** 1937-. ಪ್ರಸಿದ್ಧ ಕವಿ, ನಾಟಕಕಾರ, ಜಾನಪದ ತಜ್ಞ, ಚಲನಚಿತ್ರ ನಿರ್ದೇಶಕ, ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಕುಲಪತಿ. ಇವರು 1937 ಜನವರಿ 2ರಂದು ಬೆಳಗಾಂವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಘೋಡಗೇರಿಯಲ್ಲಿ ವಿಶ್ವಕರ್ಮವಂಶದ ಒಂದು ಸಾಮಾನ್ಯ ಬಡ ಕುಟುಂಬದಲ್ಲಿ ಹುಟ್ಟಿದರು. ಇವರ ವಿದ್ಯಾಭ್ಯಾಸ ನಡೆದದ್ದು ಗೋಕಾಕ, ಬೆಳಗಾಂವಿ ಮತ್ತು ಧಾರವಾಡಗಳಲ್ಲಿ. ಅಮೆರಿಕದ ಶಿಕಾಗೊ ವಿಶ್ವವಿದ್ಯಾಲಯದಲ್ಲಿ ದಿ ಆರಿಜಿನ್ ಅಂಡ್ ಡೆವಲಪ್‌ಮೆಂಟ್ ಆಫ್ ಕನ್ನಡ ಲಿಟರೇಚರ್ ಎಂಬ ವಿಷಯದ ಬಗ್ಗೆ ಸಂಶೋಧನೆ ನಡೆಸಿ ಪಿಎಚ್.ಡಿ. ಪದವಿ ಗಳಿಸಿದರು (1968-69). ಇದೇ ವಿಷಯದಲ್ಲಿ ಫುಲ್‌ಬ್ರೈಟ್ ವಿದ್ವಾಂಸರೆನಿಸಿಕೊಂಡರು. ಅನಂತರ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿ, ಪ್ರವಾಚಕರಾಗಿ, ಪ್ರಾಧ್ಯಾಪಕರಾಗಿ ಸೇವೆಸಲ್ಲಿಸಿದರು (1971-91). ಜರ್ಮನಿ, ಬರ್ಲಿನ್, ಮಾಸ್ಕೋ, ನ್ಯೂಯಾರ್ಕ್, ಶಿಕಾಗೊ ಮುಂತಾದೆಡೆ ಪ್ರವಾಸ ಮಾಡಿ ಭಾರತೀಯ ರಂಗಭೂಮಿ ಹಾಗೂ ಜಾನಪದದ ಬಗ್ಗೆ ವಿಶೇಷ ಉಪನ್ಯಾಸಗಳನ್ನು ನೀಡಿದರು.

ಕಂಬಾರರರು ಕಾವ್ಯ, ನಾಟಕ, ಕಾದಂಬರಿ ಮತ್ತು ಜಾನಪದ ಕ್ಷೇತ್ರದಲ್ಲಿ ಹಲವಾರು ಕೃತಿಗಳನ್ನು ನೀಡುವುದರ ಮೂಲಕ ಆಧುನಿಕ ಕನ್ನಡ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆ ನೀಡಿದವರಾಗಿದ್ದಾರೆ. ಮುಗುಳು, ಹೇಳತೇನ ಕೇಳ, ತಕರಾರಿನವರು, ಸಾವಿರದ ನೆರಳು, ಬೆಳ್ಳಿಮೀನು, ಅಕ್ಕಕ್ಕು ಹಾಡುಗಳೇ ಮೊದಲಾದ ಕವನಸಂಕಲನಗಳನ್ನೂ ಚಾಳೇಶ ಮತ್ತು ನಾರ್ಸಿಸಸ್, ಬೆಂಬತ್ತಿದ ಕಣ್ಣು, ಹುಲಿಯ ನೆರಳು, ಬೆಪ್ಪತಕ್ಕಡಿ, ಬೋಳೇಶಂಕರ, ಪುಷ್ಪರಾಣಿ, ತುಕ್ರನಕನಸು, ಸಿರಿಸಂಪಿಗೆ, ಋಷ್ಯಶೃಂಗ,



ಚಾಳೇಶ, ಜೋಕುಮಾರಸ್ವಾಮಿ, ಕಿಟ್ಟಿಯಕಥೆ, ಜೈಸಿದ್ಧನಾಯಕ, ಆಲಿಬಾಬ, ಕಾಡುಕುದುರೆ, ನಾಯೀಕಥೆ, ಖರೋಖರ, ಮಹಾಂತರ (ಭಾರತಾಂಬೆ), ಹರಕೆಯ ಕುರಿ ಇತ್ಯಾದಿ ನಾಟಕಗಳನ್ನೂ ಕರಿಮಾಯಿ, ಸಿಂಗಾರವ್ವ ಮತ್ತು ಅರಮನೆ, ಜೀಕೆ ಮಾಸ್ತರ ಪ್ರಣಯ ಪ್ರಸಂಗ, ಅಣ್ಣತಂಗಿ ಎಂಬ ಕಾದಂಬರಿಗಳನ್ನೂ ಪ್ರಕಟಿಸಿದ್ದಾರೆ. ಬಣ್ಣೀಸಿ ಹಾಡವ್ವ ನನ ಬಳಗ, ಉತ್ತರ ಕರ್ನಾಟಕದ ಜಾನಪದ ರಂಗಭೂಮಿ ಬಯಲಾಟಗಳು, ಸಂಗ್ಯಾಬಾಳ್ಯಾ, ಲಕ್ಷಾಪತಿರಾಜನ ಕಥೆ, ಮಾತಾಡೊ ಲಿಂಗವೇ, ಬೇಡರಹುಡುಗ ಮತ್ತು ಗಿಳಿ, ಕಾಸಿಗೊಂದು ಸೇರು, ನಮ್ಮ ಜಾನಪದ - ಮೊದಲಾದ ಜಾನಪದ ಸಂಗ್ರಹ, ಸಂಪಾದನೆ ಸಂಶೋಧನಾತ್ಮಕ ಕೃತಿಗಳನ್ನು ಹೊರತರುವುದರ ಮೂಲಕ ಜಾನಪದದಲ್ಲಿ ಹುದುಗಿರುವ ಘನತೆಯನ್ನೂ ಅದರ ಶ್ರೇಷ್ಠತೆಯನ್ನೂ ಎತ್ತಿ ಹಿಡಿದಿದ್ದಾರೆ. ತಕರಾರಿನವರು, ಜೈಸಿದ್ಧನಾಯಕ, ಸಿಂಗಾರವ್ವ ಮತ್ತು ಅರಮನೆ, ಬೇಡರಹುಡುಗ ಮತ್ತು ಗಿಳಿ - ಈ ಪುಸ್ತಕಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನಗಳು ಸಂದಿವೆ. ಭಾರತದ ಶ್ರೇಷ್ಠ ನಾಟಕಗಳಿಗೆ ನೀಡಲಾಗುವ ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿಯನ್ನು ಜೋಕುಮಾರಸ್ವಾಮಿ ಪಡೆದುಕೊಂಡಿದೆ. ಜೈಸಿದ್ಧನಾಯಕ, ನಾಟಕಕ್ಕೆ ವರ್ಧಮಾನ ಪ್ರಶಸ್ತಿ ದೊರೆತಿದೆ. ಸಿರಿಸಂಪಿಗೆ ಎಂಬ ನಾಟಕಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭ್ಯವಾಗಿದೆ (1991). ಇವರ ಅನೇಕ ನಾಟಕಗಳು ಇಂಗ್ಲಿಷ್ ಮತ್ತು ಭಾರತೀಯ ಭಾಷೆಗಳಿಗೂ ಅನುವಾದಗೊಂಡು ಪ್ರದರ್ಶಿಸಲ್ಪಟ್ಟಿವೆ. ಇವರ ಚಕೋರಿ ಎಂಬ ಆಧುನಿಕ ಮಹಾಕಾವ್ಯ ವಿಮರ್ಶಾವಲಯದಲ್ಲಿ ಹೆಚ್ಚು ಚರ್ಚೆಗೆ ಒಳಪಟ್ಟಿದೆ.

ಕಂಬಾರರ ಸಾವಿರದ ನೆರಳು ಕವನ ಸಂಕಲನಕ್ಕೆ ಕೇರಳದ ಕುಮಾರನ್ ಆಶನ್ ಪ್ರಶಸ್ತಿ (1982) ದೊರಕಿದೆ. 1975ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಇವರ ಕನ್ನಡ ರಂಗಭೂಮಿಯ ಸಾಧನೆಗಳನ್ನು ಗುರುತಿಸಿ ತನ್ನ ವಜ್ರಮಹೋತ್ಸವ ಸಂದರ್ಭದಲ್ಲಿ ಸನ್ಮಾನಿಸಿ ಗೌರವಿಸಿತು. ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸಿರುವ ಭಾರತೀಯ ಭಾಷೆಗಳಲ್ಲಿಯೇ ಮೊಟ್ಟಮೊದಲನೆಯದಾದ ಕನ್ನಡ ಜಾನಪದ ವಿಶ್ವಕೋಶವನ್ನು ಇವರು ಸಂಪಾದಿಸಿಕೊಟ್ಟರು. ಉತ್ತಮ ನಟರಾಗಿ, ಕಲಾವಿದರಾಗಿ, ಗಾಯಕರಾಗಿ ಹೆಸರಾದ ಕಂಬಾರರು ಹಲವಾರು ಸಂಘ ಸಂಸ್ಥೆಗಳಲ್ಲಿ ಸದಸ್ಯರಾಗಿಯೂ ಪದಾಧಿಕಾರಿಗಳಾಗಿಯೂ ಸೇವೆಸಲ್ಲಿಸಿದ್ದಾರೆ. 1992ರಲ್ಲಿ ಸ್ಥಾಪನೆಯಾದ ಹಂಪೆಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಮೊದಲ ಕುಲಪತಿಯಾದ ಕೀರ್ತಿ ಇವರದು (1992-98). ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಸದಸ್ಯರಾಗಿ (1980-83), ಮೈಸೂರಿನ ಕರ್ನಾಟಕ ನಾಟಕ ರಂಗಾಯಣದ ಸದಸ್ಯರಾಗಿ (1987-91), ಕೇಂದ್ರ ಸಾಹಿತ್ಯ ಅಕಾಡೆಮಿ

ಸದಸ್ಯರಾಗಿ (1988-91), ಕೇಂದ್ರ ಸಂಗೀತ ನಾಟಕ ಅಕಾಡೆಮಿ ಸದಸ್ಯರಾಗಿ ಇವರು ಸೇವೆಸಲ್ಲಿಸಿದ್ದಾರೆ. ಇವರು ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿದ್ದರು (1983-86). ಅಕಾಡೆಮಿಯ ರಂಗ ಚಳವಳಿಯನ್ನು ಗ್ರಾಮೀಣ ನೆಲೆಗೆ ಕೊಂಡೊಯ್ದರು ಹಾಗೂ ಬೆಳೆಸಿದರು. ದೆಹಲಿಯ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾ (ಎನ್.ಎಸ್.ಡಿ.) ಸಂಸ್ಥೆಯ ಅಧ್ಯಕ್ಷರಾಗಿಯೂ ಕಂಬಾರರು ಸೇವೆಸಲ್ಲಿಸಿದ್ದಾರೆ. ಅಮೆರಿಕನ್ ಓರಿಯಂಟಲ್ ಸೆಂಟರ್ (ನ್ಯೂಯಾರ್ಕ್), ಇಂಟರ್ ನ್ಯಾಷನಲ್ ಥಿಯೇಟರ್ ಇನ್‌ಸ್ಟಿಟ್ಯೂಟ್ (ಬರ್ಲಿನ್), ಮಾಸ್ಕೋ (ಜೆ.ಜೇಡ್), ಜಪಾನಿನ ಅಕ್ಟಿಕಾ (1992) ಮತ್ತು ಭಾರತದ ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ಹಾಗೂ ಶೈಕ್ಷಣಿಕ ಸಂಸ್ಥೆಗಳಲ್ಲಿ ಭಾರತೀಯ ಜಾನಪದ ಮತ್ತು ರಂಗಭೂಮಿಯನ್ನು ಕುರಿತಂತೆ ಇವರು ವಿಶೇಷ ಉಪನ್ಯಾಸಗಳನ್ನು ನೀಡಿದ್ದಾರೆ.

1979ರಲ್ಲಿ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ಜರುಗಿದ ಕವಿಗೋಷ್ಠಿಯ ಅಧ್ಯಕ್ಷತೆಯನ್ನೂ 1993ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ಜರುಗಿದ ರಂಗಭೂಮಿ ಮತ್ತು ಸಾಹಿತ್ಯ ಕುರಿತಾದ ರಾಜ್ಯಮಟ್ಟದ ಸಮ್ಮೇಳನದ ಅಧ್ಯಕ್ಷತೆಯನ್ನೂ ಕಂಬಾರರು ವಹಿಸಿಕೊಂಡಿದ್ದರು. ನವದೆಹಲಿ, ಭೂಪಾಲ್‌ಗಳಲ್ಲಿ ನಡೆದ ವಿಶ್ವಕವಿ ಸಮ್ಮೇಳನದಲ್ಲಿಯೂ ಭಾಗವಹಿಸಿರುವ ಇವರು ದೆಹಲಿಯ ರಾಷ್ಟ್ರೀಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು (1997). ಕಂಬಾರರಿಗೆ ದೊರಕಿರುವ ಪ್ರಶಸ್ತಿಗಳೂ ಗೌರವಗಳೂ ಹಲವಾರು. ಕೋಲ್ಕತ್ತದ ನಂಟಕಾರ್ ಸನ್ಮಾನ (1987), ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ (1987), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1988), ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1989), ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ (1983), ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ (1993), ಪಂಪ ಪ್ರಶಸ್ತಿ, ಕಬೀರ್ ಸಮ್ಮಾನ್ (2002) ಮೊದಲಾದವನ್ನು ಇಲ್ಲಿ ಉಲ್ಲೇಖಿಸಬಹುದು.

ಚಲನಚಿತ್ರ ರಂಗದಲ್ಲಿಯೂ ಇವರ ಸಾಧನೆ ಅಪಾರವಾದುದು. 5 ಚಲನಚಿತ್ರಗಳನ್ನೂ 8 ಸಾಕ್ಷ್ಯ ಚಿತ್ರಗಳನ್ನೂ ಇವರು ಸಿದ್ಧಪಡಿಸಿದ್ದಾರೆ. ಹಲವಾರು ಚಿತ್ರಗಳಿಗೆ, ಸಾಕ್ಷ್ಯಚಿತ್ರಗಳಿಗೆ ಸಂಗೀತ ಸಂಯೋಜನೆಯನ್ನು ಮಾಡಿದ್ದಾರೆ. ಇವರ ಋಷ್ಯಶೃಂಗ, ಕಾಡುಕುದುರೆ, ಹರಕೆಯ ಕುರಿ ನಾಟಕಗಳು ಚಲನಚಿತ್ರಗಳಾಗಿ ಹೆಸರಾಗಿವೆ. 1978ರಲ್ಲಿ ಕಾಡುಕುದುರೆ ಚಲನಚಿತ್ರ ಭಾರತೀಯ ಪನೋರಮಾವನ್ನು ಪ್ರವೇಶಿಸಿತು. ಉತ್ತಮ ಹಿನ್ನೆಲೆ ಗಾಯನಕ್ಕಾಗಿಯೂ ಈ ಚಿತ್ರ ರಾಷ್ಟ್ರಪ್ರಶಸ್ತಿ ಪಡೆಯಿತು. ಜೀಕೆ ಮಾಸ್ತರರ ಪ್ರಣಯ ಪ್ರಸಂಗ ಟೆಲಿ ಚಿತ್ರವಾಗಿ ಪ್ರಶಸ್ತಿ ಪಡೆದಿದೆ. 1981ರಲ್ಲಿ 'ಸಂಗೀತ' ಚಿತ್ರಕ್ಕೆ ಅತ್ಯುತ್ತಮ ಚಲನಚಿತ್ರವೆಂದು ರಾಜ್ಯ ಪ್ರಶಸ್ತಿ ಬಂದಿದೆ. ಕರಿಮಾಯಿ, ಸಿಂಗಾರೆವ್ವ ಮತ್ತು ಅರಮನೆ - ಈ ಕಾದಂಬರಿಗಳು ಚಲನಚಿತ್ರಗಳಾಗಿವೆ. ಸಿಂಗಾರವ್ವ ಅತ್ಯುತ್ತಮ ಚಿತ್ರವೆಂದು ರಾಷ್ಟ್ರಪ್ರಶಸ್ತಿ ಪಡೆದಿದೆ (2003). (ಜಿ.ಆರ್.ಟಿ.)

**ಚಂದ್ರಶೇಖರ, ಬಿ.ಎಸ್. :** 1945-. ಭಾರತದ ಪ್ರಸಿದ್ಧ ಕ್ರಿಕೆಟ್ ಆಟಗಾರು; ಬೋಲರ್. ಭಗವತ್ ಸುಬ್ರಹ್ಮಣ್ಯ ಚಂದ್ರಶೇಖರ್ ಇವರ ಪೂರ್ಣ ಹೆಸರು.

ಬಾಲ್ಯದಲ್ಲಿ ಪೋಲಿಯೊ ರೋಗಕ್ಕೆ ಗುರಿಯಾಗಿದ್ದ ಚಂದ್ರಶೇಖರ್ ಮುಂದೆ ವಿಶ್ವದ ಅಸಾಧಾರಣ ಬೋಲರ್‌ಗಳಲ್ಲಿ ಒಬ್ಬರಾದರು. ಬಲಗೈನಿಂದ ಬೋಲ್ ಮಾಡುವ ಇವರು ಪರಿಣಾಮಕಾರಿ ಲೆಗ್‌ಸ್ಪಿನ್ ಬೋಲರ್ ಆಗಿದ್ದಾರೆ. ಮಧ್ಯೆ ಮಧ್ಯೆ ಗೂಗ್ಲಿ ಬೋಲ್‌ಗಳನ್ನು ಕೂಡ ಹಾಕುತ್ತಿದ್ದರು. 1971ರ ಇಂಗ್ಲೆಂಡ್ ಪ್ರವಾಸಾನಂತರ ಕರಾರುವಾಕ್ಕಾದ ಲೆಂಗ್ತ್ ಮತ್ತು ಗುರಿಯನ್ನು ಸಾಧಿಸಿಕೊಂಡಿದ್ದರು.

ಬೆಂಗಳೂರಿನ ನ್ಯಾಷನಲ್ ಹೈಸ್ಕೂಲಿನಲ್ಲಿದ್ದಾಗ ಕ್ರಿಕೆಟ್ ಆಡಲು ಪ್ರಾರಂಭಿಸಿದ ಇವರು ವೈ.ಎಸ್. ರಾಮಸ್ವಾಮಿ ಸ್ಮಾರಕ ಕ್ರಿಕೆಟ್ ಟೂರ್ನ್‌ಮೆಂಟ್‌ನಲ್ಲಿ ಭಾಗವಹಿಸಿ, ಮೂರು ಪಂದ್ಯಗಳಲ್ಲಿ 17 ವಿಕೆಟ್ ಗಳಿಸುವ ಮೂಲಕ ಬೆಳಕಿಗೆ ಬಂದರು. 1963-64ರಲ್ಲಿ ಜ್ಯೂನಿಯರ್ ಕ್ರಿಕೆಟ್‌ನಿಂದ ಟೆಸ್ಟ್ ಹಂತಕ್ಕೆ ಏರಿದರು. ಇವರು ಬೆಂಗಳೂರು ವಿಶ್ವವಿದ್ಯಾಲಯದ ಕ್ರಿಕೆಟ್ ಟೀಮಿನ ನಾಯಕರೂ ಆಗಿದ್ದರು. ವಿಜ್ಞಾನದ ಪದವೀಧರರಾಗಿದ್ದ ಇವರು ಸಿಂಡಿಕೇಟ್ ಬ್ಯಾಂಕ್‌ನಲ್ಲಿ ಅಧಿಕಾರಿಯಾಗಿದ್ದರು.

1963 ನವೆಂಬರ್ 14ರಂದು ಬೆಂಗಳೂರಿನಲ್ಲಿ ನಡೆದ ರಣಜಿ ಟ್ರೋಫಿ ಪಂದ್ಯದಲ್ಲಿ ಕೇರಳದ ವಿರುದ್ಧ ಕರ್ನಾಟಕ ರಾಜ್ಯದ ಟೀಮಿನಲ್ಲಿ ಚಂದ್ರಶೇಖರ್ ಪ್ರಥಮ ಬಾರಿಗೆ ಸೇರಿಕೊಂಡರು. ಇವರು ಭಾಗಿಯಾದ ಪ್ರಥಮ ಟೆಸ್ಟ್ ಪಂದ್ಯ 1964 ಜನವರಿ 21ರಂದು ಮುಂಬಯಿಯಲ್ಲಿ ಇಂಗ್ಲೆಂಡ್ ವಿರುದ್ಧ ನಡೆದ ಎರಡನೆಯ ಟೆಸ್ಟ್.

ಮುಂಬಯಿಯಲ್ಲಿ ವೆಸ್ಟ್ ಇಂಡಿಸ್ ವಿರುದ್ಧ ನಡೆದ (1966-67) ಪಂದ್ಯದಲ್ಲಿ 235 ರನ್ ಕೊಟ್ಟು 11 ವಿಕೆಟ್‌ಗಳನ್ನೂ ದೆಹಲಿಯಲ್ಲಿ ಇಂಗ್ಲೆಂಡ್ ವಿರುದ್ಧ ನಡೆದ (1972-73) ಟೆಸ್ಟ್ ಪಂದ್ಯದಲ್ಲಿ 79 ರನ್ ಕೊಟ್ಟು 8 ವಿಕೆಟ್‌ಗಳನ್ನೂ ಪಡೆದಿರುವುದು ಇವರ ಅತ್ಯುತ್ತಮ ಬೋಲಿಂಗ್ ಸಾಧನೆಗಳು.

1971 ಆಗಸ್ಟ್ 24ರಂದು ಇಂಗ್ಲೆಂಡ್ ವಿರುದ್ಧ ಭಾರತಕ್ಕೆ ನಾಲ್ಕು ವಿಕೆಟ್‌ಗಳ ಜಯ ತಂದುಕೊಟ್ಟ ಐತಿಹಾಸಿಕ ಓವಲ್ ಟೆಸ್ಟ್‌ನಲ್ಲಿ ಇವರು 114 ರನ್‌ಗಳಿಗೆ 8 ವಿಕೆಟ್ ತೆಗೆದುಕೊಂಡಿದ್ದರು (ಮೊದಲ ಇನ್ನಿಂಗ್ಸ್‌ನಲ್ಲಿ 76ಕ್ಕೆ 2, ಎರಡನೆಯ ಇನ್ನಿಂಗ್ಸ್‌ನಲ್ಲಿ 38ಕ್ಕೆ 6).

ಭಾರತದ ತಂಡ ಆಸ್ಟ್ರೇಲಿಯದಲ್ಲಿ ಪ್ರವಾಸ ಮಾಡುತ್ತಿದ್ದಾಗ (1967-68) ಪ್ರವಾಸದ ಮುಕ್ತಾಯದಲ್ಲಿ ಭಾರತಕ್ಕೆ ಹಿಂದಿರುಗಿದ ಚಂದ್ರಶೇಖರ್ ಮುಂದಿನ ಕೆಲವು ಪಂದ್ಯಗಳಲ್ಲಿ ಭಾಗವಹಿಸಲಿಲ್ಲ.

1973 ಫೆಬ್ರವರಿ 11ರಂದು ನಡೆದ ಪಂದ್ಯದ ಎರಡನೆಯ ಇನ್ನಿಂಗ್ಸ್‌ನಲ್ಲಿ ಇಂಗ್ಲೆಂಡಿನ ಸ್ಕೋರು 37ರನ್ ಆಗಿದ್ದಾಗ 8ರನ್ ಮಾಡಿದ್ದ ಇಂಗ್ಲೇಂಡಿನ ವಿಕೆಟ್ ಕೀಪರ್ ಆಲನ್ ನಾಟ್ ಚಂದ್ರಶೇಖರ್ ಅವರ ಬೋಲಿಂಗಿಗೆ ಬಲಿಯಾದರು. ಈ ವಿಕೆಟ್ ಪತನ ಹೊಸ ವಿಕ್ರಮವನ್ನು ಸ್ಥಾಪಿಸಿತು. ಈ ವಿಕೆಟನ್ನು ಪಡೆಯುವುದರ ಮೂಲಕ ಚಂದ್ರಶೇಖರ್ 1972-73ರ ಇಂಗ್ಲೆಂಡ್ ವಿರುದ್ಧದ ಸರಣಿಯಲ್ಲಿ 662 ರನ್ನುಗಳಿಗೆ 35 ವಿಕೆಟ್ಟುಗಳನ್ನು ಗಳಿಸಿ ಹೊಸ ವಿಕ್ರಮವನ್ನು ಸ್ಥಾಪಿಸಿದಂತಾಯಿತು. 1951-52ರಲ್ಲಿ ವಿನೂ ಮಂಕಡ್ 571 ರನ್ನುಗಳಿಗೆ 34 ಇಂಗ್ಲೆಂಡ್ ವಿಕೆಟ್ಟುಗಳನ್ನೂ ಸುಭಾಷ್ ಗುಪ್ತೆ 1955-56ರಲ್ಲಿ 669 ರನ್ನುಗಳಿಗೆ 34 ನ್ಯೂಜೀಲೆಂಡ್ ವಿಕೆಟ್ಟುಗಳನ್ನೂ ಪಡೆದು ಸ್ಥಾಪಿಸಿದ್ದ ವಿಕ್ರಮಗಳು ಇದರಿಂದ ಹಿಂದಾದವು. ಈ ಸರಣಿಯಲ್ಲಿ ಚಂದ್ರಶೇಖರ್ ಇನ್ನೂ ಒಂದು ವಿಕ್ರಮವನ್ನು ಸ್ಥಾಪಿಸಿ ಹಿಂದಿನ ವಿನೂ ಮಂಕಡ್ ಅವರ ವಿಕ್ರಮವನ್ನು ಮುರಿದರು. ವಿನೂ ಮಂಕಡ್ 11 ಟೆಸ್ಟ್ ಪಂದ್ಯಗಳಲ್ಲಿ 1,249 ರನ್‌ಗಳಿಗೆ 54 ಇಂಗ್ಲೆಂಡ್ ವಿಕೆಟ್‌ಗಳನ್ನು ಪಡೆದಿದ್ದರೆ ಚಂದ್ರಶೇಖರ್ 15 ಟೆಸ್ಟ್‌ಗಳಲ್ಲಿ 1,815 ರನ್‌ಗಳಿಗೆ ಇಂಗ್ಲೆಂಡಿನ 74 ವಿಕೆಟ್‌ಗಳನ್ನು ಪಡೆದಿದ್ದರು.



1974 ಜನವರಿ 14ರಂದು ಮದರಾಸಿನಲ್ಲಿ ನಡೆದ ಟೆಸ್ಟ್ ಪಂದ್ಯದ ಎರಡನೆಯ ಇನ್ನಿಂಗ್ಸ್‌ನಲ್ಲಿ ಅಮಿಸ್ ಅವರನ್ನು ಔಟ್ ಮಾಡಿದ ಚಂದ್ರಶೇಖರ್ ಅಧಿಕೃತ ಟೆಸ್ಟ್‌ಗಳಲ್ಲಿ ವಿಕೆಟ್‌ಗಳ ಶತಕವನ್ನು ಪೂರ್ಣಗೊಳಿಸಿದರು. ಇದು ಚಂದ್ರಶೇಖರ್ ಅವರ 22ನೆಯ ಅಧಿಕೃತ ಟೆಸ್ಟ್. ಇದರಿಂದ 1972-73ರ ಇಂಗ್ಲೆಂಡ್ ವಿರುದ್ಧದ ಸರಣಿಯಲ್ಲಿ (ಇದು ಮೂರನೆಯ ಟೆಸ್ಟ್) 25 ವಿಕೆಟ್‌ಗಳ ಸಂಖ್ಯೆಯನ್ನು ಇವರು ದಾಟಿದರು.

ಆಸ್ಟ್ರೇಲಿಯದ ಸಿಡ್ನಿ ಮತ್ತು ಮೆಲ್ಬೋರ್ನ್‌ನಲ್ಲಿ ನಡೆದ (1977-78) ಟೆಸ್ಟ್ ಪಂದ್ಯಗಳಲ್ಲಿ ಭಾರತದ ಗೆಲುವಿಗೆ ಇವರ ಕಾಣಿಕೆಯೂ ಅಪಾರವಾಗಿತ್ತು. ಚಂದ್ರಶೇಖರ್ ಅವರು ಒಟ್ಟು 58 ಟೆಸ್ಟ್ ಪಂದ್ಯಗಳಲ್ಲಿ ಆಡಿ 10 ಪಂದ್ಯಗಳ ಗೆಲುವಿನ ರೂವಾರಿಯಾಗಿದ್ದರು. ಬರ್ಮಿಂಗ್ ಹ್ಯಾಮ್‌ನಲ್ಲಿ ನಡೆದ ಭಾರತ ಇಂಗ್ಲೆಂಡ್ ವಿರುದ್ಧದ ಟೆಸ್ಟ್ ಪಂದ್ಯವೇ ಇವರ ಕೊನೆಯ ಪಂದ್ಯ (1979). ಕ್ರಿಕೆಟ್ ಜೀವನದ ನಿವೃತ್ತಿಯ ಅನಂತರ ಕಾರು ಅಪಘಾತವೊಂದರಲ್ಲಿ ತಮ್ಮ ಎರಡು ಕಾಲುಗಳ ಸ್ವಾಧೀನವನ್ನು ಕಳೆದುಕೊಂಡರು. ಇವರು ಸಂಗೀತ ಪ್ರಿಯರು. ಹಿಂದಿ ಗಾಯಕ ಮುಖೇಶ್ ಅವರ ಹಾಡುಗಳೆಂದರೆ ಇವರಿಗೆ ಎಲ್ಲಿಲ್ಲದ ಪ್ರೀತಿ.

ಆಕ್ಲೆಂಡ್‌ನಲ್ಲಿ ನಡೆದ ಭಾರತ ನ್ಯೂಜಿಲೆಂಡ್ ವಿರುದ್ಧದ ಒಂದು ದಿನದ ಅಂತಾರಾಷ್ಟ್ರೀಯ ಪದ್ಯದಲ್ಲಿ ಇವರು ಭಾಗವಹಿಸಿದ್ದರು (1975-76). (ಬಿ.ವಿ.ಎಂ.)

**ಚಂದ್ರಶೇಖರಶಾಸ್ತ್ರಿ, ವೈ. :** 1892-1997. ಕನ್ನಡ ಮತ್ತು ಸಂಸ್ಕೃತ ಪಂಡಿತರು. ಕರ್ನಾಟಕ ಏಕೀಕರಣವೇ ಕನ್ನಡಿಗರ ಜೀವಾಳ ಎಂಬ ಘೋಷಣೆ ಸೃಷ್ಟಿಸಿದವರು. ಅಭಿಮಾನಿಗಳ ದೃಷ್ಟಿಯಲ್ಲಿ 'ಏಕೀಕರಣದ ಶಾಸ್ತ್ರಿ' ಎಂದು ಕರೆಸಿಕೊಂಡವರು. ಗೋಕಾಕ ಚಳವಳಿಯಲ್ಲೂ ಇವರು



ಪಾಲ್ಗೊಂಡಿದ್ದರು. ತೆಲುಗು ಮರಾಠಿ ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪರಿಶ್ರಮವುಳ್ಳವರು. ಬಳ್ಳಾರಿ ಜಿಲ್ಲೆಯ ಹೊಳಲು ಗ್ರಾಮದ ಹಿರಿಯ ಮಠದಲ್ಲಿ ಹುಟ್ಟಿದರು. ತಂದೆ ಹಿರೇಮಠದ ಪಟದಯ್ಯ, ತಾಯಿ ಬಸಮ್ಮ. ಹಾವೇರಿ ಮತ್ತು ಗದಗಗಳಲ್ಲಿ ಆರಂಭದ ವ್ಯಾಸಂಗವನ್ನು ಮುಗಿಸಿ, ಕಾಶಿ ಮತ್ತು ಕಲ್ಕತ್ತಗಳಲ್ಲಿ ಸಂಸ್ಕೃತವನ್ನು ವಿಶೇಷವಾಗಿ ಅಧ್ಯಯನ ಮಾಡಿ ವ್ಯಾಕರಣ ತೀರ್ಥ ಎಂಬ ಪದವಿ ಪಡೆದರು (1924). ಯಾದಗಿರಿಯ ಶಂಕರ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿ ಕೆಲಸಮಾಡಿದ ಶಾಸ್ತ್ರಿಗಳು (1924-31) ಅನಂತರ ಹುಬ್ಬಳ್ಳಿಯ ಶ್ರೀ ಜಗದ್ಗುರು ಗಂಗಾಧರ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು (1931-38). ಹುಬ್ಬಳ್ಳಿಯ ಮೂರುಸಾವಿರ ಮಠದ ಗಂಗಾಧರ ಗ್ರಂಥಮಾಲೆಯ ಮುಖ್ಯ ಚಾಲಕರಾಗಿದ್ದ ಇವರು ಅನೇಕ ಗ್ರಂಥಗಳನ್ನು ಪರಿಶೋಧಿಸಿ ಪರಿಷ್ಕರಿಸಿ ಪ್ರಕಟಿಸಿದ್ದಾರೆ.

ಇವರ ಲೇಖನ ವ್ಯವಸಾಯ 1919ರಲ್ಲಿ ಆರಂಭವಾಯಿತು. ಸಾಹಿತ್ಯ, ಸಂಸ್ಕೃತಿ, ಧರ್ಮ ಮುಂತಾದ ಹಲವು ವಿಷಯಗಳ ಮೇಲೆ ಇವರು ಸಾವಿರಕ್ಕೂ ಹೆಚ್ಚು ಲೇಖನಗಳನ್ನು ಬರೆದಿದ್ದಾರೆ. ವೀರಶೈವ ಸಾಹಿತ್ಯವನ್ನು ಶ್ರದ್ಧೆಯಿಂದ ಅಧ್ಯಯನ ಮಾಡಿರುವ ಇವರು ಬಸವತತ್ತ್ವ ರತ್ನಾಕರ ಎಂಬ ಗ್ರಂಥವನ್ನು ರಚಿಸಿದ್ದಾರೆ. 28 ಅಧ್ಯಾಯಗಳುಳ್ಳ ಈ ಬೃಹದ್ಗ್ರಂಥ 1961ರಲ್ಲಿ ಪ್ರಕಟವಾಯಿತು. ಬಸವಣ್ಣನವರನ್ನು ಕುರಿತು ಅನೇಕ ವಿಚಾರಗಳನ್ನು ಈ ಗ್ರಂಥದಲ್ಲಿ ಸಂಗ್ರಹಿಸಿದ್ದಾರಲ್ಲದೆ, ಹಿಂದು ಧರ್ಮಕ್ಕೂ ವೀರಶೈವ ಧರ್ಮಕ್ಕೂ ಇರುವ ಸೈದ್ಧಾಂತಿಕ ಸಮಸ್ಯೆಗಳ ವಿಶ್ಲೇಷಣೆಯನ್ನು ಮಾಡಿದ್ದಾರೆ. ಚಾಣಕ್ಯ ನೀತಿ ದರ್ಪಣ, ರೇಣುಕವಿಜಯ, ಮೃತ್ಯುಂಜಯ ಶಿವಯೋಗಿಗಳ ಚರಿತ್ರೆ —ಇವು ಶಾಸ್ತ್ರಿಗಳ ಇತರ ಗ್ರಂಥಗಳು.

ಶಾಸ್ತ್ರಿಗಳ ಬಹುಮುಖ ಸೇವೆಯನ್ನು ಮನ್ನಿಸಿ ರಾಷ್ಟ್ರದ ವಿವಿಧ ಸಂಘ ಸಂಸ್ಥೆಗಳು ಇವರಿಗೆ ವಿದ್ಯಾಲಂಕಾರ, ವಿದ್ಯಾವಾರಿಧಿ ಮುಂತಾದ ಬಿರುದುಗಳನ್ನಿತ್ತು ಸನ್ಮಾನಿಸಿವೆ. ಧಾರವಾಡದಲ್ಲಿ 1940ರಲ್ಲಿ ನಡೆದ 25ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಇವರನ್ನು ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಲಾಯಿತು. ಮೈಸೂರು ರಾಜ್ಯ ಸಾಹಿತ್ಯ ಅಕಾಡೆಮಿ 1966ರಲ್ಲಿ ಇವರನ್ನು ಸನ್ಮಾನಿಸಿತು. ಕನ್ನಡ ಸಾಹಿತ್ಯ ಪರಿಷತ್ತಿನ ಅತ್ಯುಚ್ಚ ಗೌರವ ಸದಸ್ಯತ್ವ ಸಂದಿತು. ಚಿದಾನಂದಮೂರ್ತಿ ಪ್ರಶಸ್ತಿಯನ್ನು ಇವರು ಪಡೆದರು (1996). ಹಂಪಿ ಕನ್ನಡ ವಿಶ್ವವಿದ್ಯಾಲಯ ಇವರಿಗೆ ಮರಣೋತ್ತರ ನಾಡೋಜ ಪದವಿ ನೀಡಿ ಗೌರವಿಸಿದೆ (1997). ಶಾಸ್ತ್ರಿಯವರ ಬದುಕು ಬರೆಹ ಕುರಿತಂತೆ 'ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿ' ಎಂಬ ಪುಸ್ತಕ ಪ್ರಕಟವಾಗಿದೆ (1999). ಇವರು 1997 ಅಕ್ಟೋಬರ್ 24ರಂದು ನಿಧನಹೊಂದಿದರು. (ಬಿ.ಪಿ.)

**ಚಂದ್ರಶೇಖರ, ಸಿ. ಆರ್. :** 1948-. ಹೆಸರಾಂತ ಮನೋವೈದ್ಯ, ಸಂಶೋಧಕ ಹಾಗೂ ಲೇಖಕ. 1948 ಡಿಸೆಂಬರ್ 12ರಂದು ಬೆಂಗಳೂರು ಜಿಲ್ಲೆ ಚನ್ನಪಟ್ಟಣದಲ್ಲಿ ಜನಿಸಿದರು. ತಂದೆ ರಾಜಣ್ಣಾಚಾರ್, ತಾಯಿ ಸರೋಜಮ್ಮ. ತಂದೆ ಮುದ್ರಣಾಲಯದ ಮಾಲೀಕರು. ತಮ್ಮ ಪ್ರಾಥಮಿಕ ಹಾಗೂ ಪ್ರೌಢಶಾಲಾ ವಿದ್ಯಾಭ್ಯಾಸವನ್ನು ಚನ್ನಪಟ್ಟಣದ ಸರ್ಕಾರಿ ಶಾಲೆಯಲ್ಲಿ ಪಡೆದರು. 10ನೆಯ ತರಗತಿಯಲ್ಲಿ ತಾಲ್ಲೂಕಿಗೆ ಪ್ರಥಮ ಸ್ಥಾನ ಗಳಿಸಿದರು. ಚಿಕ್ಕಂದಿನಿಂದಲೇ ಇವರಿಗೆ ಪಠ್ಯೇತರ ಚಟುವಟಿಕೆಗಳಲ್ಲಿ ಅತ್ಯಂತ ಆಸಕ್ತಿಯಿತ್ತು. ಚರ್ಚಾಸ್ಪರ್ಧೆ, ಪ್ರಬಂಧ ಸ್ಪರ್ಧೆಗಳಲ್ಲಿ ಭಾಗವಹಿಸುವುದು, ಕಥೆ ಕಾದಂಬರಿಗಳನ್ನು ಓದುವುದು, ಕವನಗಳ ರಚನೆ ಇವರ ಹವ್ಯಾಸಗಳಾಗಿದ್ದವು. 1967ರಲ್ಲಿ ಕಾಲೇಜ್ ಮ್ಯಾಗಝೀನ್‌ನಲ್ಲಿ ಇವರ ಪ್ರಥಮ ಲೇಖನ ಪ್ರಕಟವಾಯಿತು.

ಇವರು ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ ಓದಿ ಎಂ.ಬಿ.ಬಿ.ಎಸ್. ಪದವಿಯನ್ನು ಎಂಟನೆಯ ಸ್ಥಾನದೊಂದಿಗೆ ಪಡೆದರು (1973). ಇವರ ಪ್ರಥಮ ಆರೋಗ್ಯ ಲೇಖನ ಪ್ರಜಾಮತ ವಾರ ಪತ್ರಿಕೆಯಲ್ಲಿ ಪ್ರಕಟವಾಯಿತು. ಹೆಸರಾಂತ ವೈದ್ಯ ಹಾಗೂ ಲೇಖಕ ಡಿ.ಎಸ್. ಶಿವಪ್ಪನವರ ಪ್ರೋತ್ಸಾಹ ಹಾಗೂ ಮಾರ್ಗದರ್ಶನದಿಂದ ಇವರು ಸಾಹಿತ್ಯಾಸಕ್ತಿ ಬೆಳೆಸಿಕೊಂಡರು. ಬೆಂಗಳೂರಿನ ಮಾನಸಿಕ (ನಿಮ್ಹಾನ್ಸ್) ಆಸ್ಪತ್ರೆಯಲ್ಲಿ ಆನರರಿ ಸೀನಿಯರ್ ರೆಸಿಡೆಂಟ್ ವೈದ್ಯರಾಗಿ ನೇಮಕಗೊಂಡರು (1974). ಅನಂತರ ಇಲ್ಲಿಯೇ ಡಿ.ಪಿ.ಎಂ. ಪದವಿಗೆ ತರಬೇತಿ ಪಡೆದರು (1975). ಅನಂತರ ಐ.ಸಿ.ಎಂ.ಆರ್.ನಲ್ಲಿ ಸಂಶೋಧನ ಸಹಾಯಕರಾಗಿ ನೇಮಕವಾದರು (1977). ನಿಮ್ಹಾನ್ಸ್‌ನ ಮನೋವೈದ್ಯಕೀಯ ವಿಭಾಗದಲ್ಲಿ ಎಂ.ಡಿ. ಪದವಿ ಪಡೆದರು (1979). ಅನಂತರ ಅಲ್ಲಿಯೇ ಮನೋವೈದ್ಯಕೀಯ ವಿಭಾಗದಲ್ಲಿ ವೈದ್ಯಾಧಿಕಾರಿ, ಉಪನ್ಯಾಸಕ, ಸಹಾಯಕ ಪ್ರಾಧ್ಯಾಪಕ ಮುಂತಾಗಿ ನಾನಾ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದರು. 1994ರಿಂದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಉದ್ಯೋಗದ ಜೊತೆಗೆ ಇವರು ಅನೇಕ ಸಮುದಾಯ ಪರ ಕಾರ್ಯಗಳಲ್ಲಿ ತಮ್ಮನ್ನು



ತೊಡಗಿಸಿಕೊಂಡಿದ್ದಾರೆ. ಅವುಗಳಲ್ಲಿ ಮುಖ್ಯವಾದುವು ಹೀಗಿವೆ: ಸಮುದಾಯ ಮಾನಸಿಕ ಆರೋಗ್ಯ ಘಟಕಗಳಲ್ಲಿ ರೋಗಿಗಳ ಆರೈಕೆ, ಸರ್ವೇಕ್ಷಣೆ, ಸಂಶೋಧನೆ ಮತ್ತು ಶಿಕ್ಷಣ; ವೈದ್ಯಾಧಿಕಾರಿಗಳಿಗೆ ತರಬೇತಿ, ಉಪನ್ಯಾಸ, ಪ್ರಾತ್ಯಕ್ಷಿಕೆ. ಇದಲ್ಲದೇ ಅಂಗನವಾಡಿ ಕಾರ್ಯಕರ್ತೆಯರು, ಶಾಲಾ ಉಪಾಧ್ಯಾಯರು ಮತ್ತು ಗ್ರಾಮೀಣ ಮುಖಂಡರಿಗೂ ತರಬೇತಿ ನೀಡಿದ್ದಾರೆ. 1982ರಲ್ಲಿ ಪ್ರಾರಂಭವಾದ ರಾಷ್ಟ್ರೀಯ ಮಾನಸಿಕ ಆರೋಗ್ಯ ಕಾರ್ಯಕ್ರಮದ ಅಡಿಯಲ್ಲಿ ಮಾನಸಿಕ ಆರೋಗ್ಯ ಕಾರ್ಯಕ್ರಮ ರೂಪಿಸಲು ಭಾರತದ ಹಲವು ರಾಜ್ಯಗಳಲ್ಲಿ ಅನೇಕ ತರಬೇತಿ ಕಾರ್ಯಕ್ರಮಗಳನ್ನು ನಡೆಸಿಕೊಟ್ಟಿದ್ದಾರೆ.

ಅವಿರತವಾಗಿ ನಿಮ್ಹಾನ್ಸ್ ಮನೋವೈದ್ಯ ವಿಭಾಗದಲ್ಲಿ ವಯಸ್ಕರ ವಿಭಾಗದಲ್ಲಿ 1990ರಿಂದ ಮಾನಸಿಕ ಆರೋಗ್ಯ ಕಾರ್ಯಕ್ರಮಗಳ ನಿರ್ವಹಣೆಯ ಬಗ್ಗೆ ತಜ್ಞ ವೈದ್ಯಾಧಿಕಾರಿಯಾಗಿ, ಆಡಳಿತಾಧಿಕಾರಿಯಾಗಿ

ಕಾರ್ಯಕ್ರಮ ನಿರ್ವಾಹಕರಿಗೆ ತರಬೇತಿ ನೀಡಿದ್ದಾರೆ. ಇದಲ್ಲದೆ ಕಾಲೇಜು ಶಿಕ್ಷಕರಿಗೆ ಆಪ್ತ ಸಲಹೆ ಸಮಾಧಾನ ನೀಡುವ ಕಾರ್ಯಕ್ರಮವನ್ನೂ ನಿರ್ವಹಿಸಿದ್ದಾರೆ.

ಇವರು ಕೈಗೊಂಡಿರುವ ಸಂಶೋಧನ ವಿಷಯಗಳು ಹಲವು. ಅವುಗಳಲ್ಲಿ ಮುಖ್ಯವಾದವು: ಶೃಂಗೇರಿ ಸಮೀಪ ತ್ಯಾವಣ ಶಾಲೆಯಲ್ಲಿ ಮಕ್ಕಳ ಮೇಲೆ ಭೂತಗಣಗಳು ಬಂದು ಕಾಡಿಸುತ್ತವೆ ಎಂಬ ಸಮಸ್ಯೆಯ ಮನೋವೈಜ್ಞಾನಿಕ ಅಧ್ಯಯನ; ಗುಲ್ಬರ್ಗ, ಬೀದರ್ ಜಿಲ್ಲೆಗಳಲ್ಲಿ ನಡೆಯುತ್ತಿದೆ ಎನ್ನಲಾದ ಬಾನಾಮತಿ ಪ್ರಕರಣಗಳ ಅಧ್ಯಯನ; ಪಾಂಡಿಚೇರಿಯ ಬಳಿ ಗ್ರಾಮವೊಂದರಲ್ಲಿ ಶಾಲಾ ಮಕ್ಕಳ ಮೇಲೆ ಕೋಪಗೊಂಡ ಗ್ರಾಮದೇವತೆಯ ಮೂಲಕ ದೆವ್ವ ಬರುತ್ತದೆ ಎಂಬ ಪ್ರಕರಣದ ಸತ್ಯಾಸತ್ಯತೆಯ ಅಧ್ಯಯನ (1984).

ಹಲವಾರು ಮಾನಸಿಕ ಸಮಸ್ಯೆಗಳ ಅಧ್ಯಯನಗಳನ್ನೂ ಸರ್ವೇಕ್ಷಣೆಗಳನ್ನೂ ನಡೆಸಿರುವ ಇವರು ವಿಶ್ವ ಆರೋಗ್ಯ ಸಂಸ್ಥೆಯ ಅಂತಾರಾಷ್ಟ್ರೀಯ ಕಾರ್ಯಕ್ರಮದಲ್ಲೂ ಪಾಲ್ಗೊಂಡಿದ್ದಾರೆ. ಶಾರೀರಿಕ ನೋವು ಮುಂತಾದ ತೊಂದರೆಗಳು ಇರುವ ಸೊಮೆಟೋ ಫಾರಂ ಡಿಸಾರ್ಡರ್ ಬಗ್ಗೆ ವಿಶ್ವ ಆರೋಗ್ಯ ಸಂಸ್ಥೆಯ ಅಂತಾರಾಷ್ಟ್ರೀಯ ಅಧ್ಯಯನದಲ್ಲಿ ಭಾಗವಹಿಸಿದ್ದರು. ಬೆಂಗಳೂರಿನಲ್ಲಿ ಇಂತಹ 300 ರೋಗಿಗಳ ವಿವರವಾದ ಅಧ್ಯಯನವನ್ನು ನಡೆಸಿದ್ದಾರೆ.

ಇವರು ವೈದ್ಯಕೀಯ ಮನೋವಿಜ್ಞಾನದ ಲೇಖಕರಾಗಿಯೂ ಪ್ರಸಿದ್ಧರಾಗಿದ್ದಾರೆ. ಕನ್ನಡದಲ್ಲಿ 120ಕ್ಕೂ ಹೆಚ್ಚು ಮನೋವೈಜ್ಞಾನಿಕ ಪುಸ್ತಕಗಳನ್ನೂ ಆಂಗ್ಲಭಾಷೆಯಲ್ಲಿ 20 ಪುಸ್ತಕಗಳನ್ನೂ ರಚಿಸಿದ್ದಾರೆ. ಐದು ಮನೋವೈಜ್ಞಾನಿಕ ಕಾದಂಬರಿಗಳನ್ನೂ ನಾಲ್ಕು ನಾಟಕಗಳನ್ನೂ ಬರೆದಿದ್ದಾರೆ. ಇವರ ಪುಸ್ತಕಗಳು ತೆಲುಗು ಮತ್ತು ಗುಜರಾತಿ ಭಾಷೆಗೆ ಭಾಷಾಂತರಗೊಂಡಿವೆ. ಇವರು ಬರೆದಿರುವ ಪುಸ್ತಕಗಳು ಸಾಮಾನ್ಯ ಆರೋಗ್ಯ, ಲೈಂಗಿಕ ವಿಜ್ಞಾನ, ಏಡ್ಸ್ ವೈಚಾರಿಕತೆ ಮುಂತಾಗಿ ಅನೇಕ ಉಪಯುಕ್ತ ವಿಷಯಗಳನ್ನೊಳಗೊಂಡಿವೆ. ಇವರು ದೇಶೀಯ ಹಾಗೂ ಅಂತಾರಾಷ್ಟ್ರೀಯ ವೈಜ್ಞಾನಿಕ ನಿಯತಕಾಲಿಕೆಗಳು ಹಾಗೂ ಪತ್ರಿಕೆಗಳಲ್ಲಿ ಬರೆದಿರುವ ಲೇಖನಗಳ ಸಂಖ್ಯೆ 700ಕ್ಕೂ ಹೆಚ್ಚು. ಹಲವು ದೇಶಗಳಲ್ಲಿ ನಡೆದ ಅನೇಕ ಅಂತಾರಾಷ್ಟ್ರೀಯ ವಿಚಾರಗೋಷ್ಠಿ ಮತ್ತು ಕಾರ್ಯಾಗಾರಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಭಾಗವಹಿಸಿದ್ದಾರೆ.

ಇವರ ಸಾಧನೆ, ಸಾಮಾಜಿಕ ಸೇವೆ ಮತ್ತು ಸಾಹಿತ್ಯಕ ರಚನೆಗಳಿಗೆ ಅನೇಕ ಪ್ರಶಸ್ತಿ ಬಹುಮಾನಗಳು ಲಭಿಸಿವೆ. ಅವುಗಳಲ್ಲಿ ಮುಖ್ಯವಾದುವು: ಕನ್ನಡ ವಾರಪತ್ರಿಕೆ ಸುಧಾ ಏರ್ಪಡಿಸಿದ್ದ ಕಾದಂಬರಿ ಸ್ಪರ್ಧೆಯಲ್ಲಿ ಮನೆ-ಮನಸ್ಸು ಕೃತಿಗೆ ವಿಶೇಷ ಬಹುಮಾನ (1982), ಬುದ್ಧಿಮಾಂದ್ಯತೆ ಪುಸ್ತಕಕ್ಕೆ ಭಾರತೀಯ ಮನೋವೈದ್ಯ ಸಂಘದ (ಕರ್ನಾಟಕ ಶಾಖೆ) ಎಸ್.ಎಸ್. ಜಯರಾಂ ಪ್ರಶಸ್ತಿ (1983), ಬಾನಾಮತಿ ಪುಸ್ತಕಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಎಚ್.ನರಸಿಂಹಯ್ಯನವರ ದತ್ತಿ ಬಹುಮಾನ (1983) – ಇವುಗಳನ್ನು ಹೆಸರಿಸಬಹುದು. ದಾವಣಗೆರೆಯಲ್ಲಿ ಕನ್ನಡ ವೈದ್ಯ ಸಾಹಿತ್ಯ ಪರಿಷತ್ತಿನ 4ನೆಯ ಸಮ್ಮೇಳನದಲ್ಲಿ ಇವರನ್ನು ಸನ್ಮಾನಿಸಲಾಯಿತು (1998). (ಎಸ್‌ಯು.ಎಂ.)

**ಚಂದ್ರಸಾಗರವರ್ಣಿ :** ಸು.1810; ಜೈನಕವಿ. ತುಮಕೂರು ಜಿಲ್ಲೆ ತೋವಿನಕೆರೆ ಈತನ ಜನ್ಮಸ್ಥಳ. ಅಜ್ಜ ಚಂದ್ರನಾಥ, ತಂದೆ ಚಂದಣ್ಣ, ತಾಯಿ ಪೊಂಬೂಜಿಯಮ್ಮ. ಈತನಿಗೆ ಚಂದ್ರನಾಥ, ಗುಟ್ಟಬ್ರಹ್ಮ, ಪದ್ಮಮ್ಮಣ್ಣ ಎಂಬ ಮೂವರು ಸಹೋದರರು ಇದ್ದಂತೆ ತಿಳಿದುಬರುತ್ತದೆ. ಲಕ್ಷ್ಮೀಸೇನ ಈತನ ಗುರು. ಕವಿಯ ಪೂರ್ವಾಶ್ರಮದ ಹೆಸರು ಬ್ರಹ್ಮ, ಬ್ರಹ್ಮಣಾಂಕ ಎಂದಿತ್ತು. ಜೈನದೀಕ್ಷೆ ಪಡೆದ ಮೇಲೆ ಚಂದ್ರಸಾಗರವರ್ಣಿಯಾದ. ಕದಂಬ ಪುರಾಣ, ಚಂದನೆಯ ಕಥೆ, ಜಿನಭಕ್ತಿಸಾರ, ಜಿನಮುನಿ, ಪರಶುರಾಮ ಭಾರತ, ಪುರಾಣ ಸ್ತೋತ್ರ, ಬೆಟ್ಟವರ್ಧನ ಚರಿತ್ರೆ, ಬ್ರಹ್ಮಶತಕೋಶ, ಭವ್ಯಾಮೃತ, ಮುಲ್ಲಾಶಾಸ್ತ್ರ, ಜಿನರಾಮಾಯಣ, ರುದ್ರಯಕ್ಷಗಾನ, ವಾಸುದೇವ ಪಾರಿಜಾತ, ಶಬ್ದಾರ್ಥ ಮಂಜರಿ, ಸ್ಮರಕೊರವಂಜಿ, ಹಿಮಶೀತಳನ ಕಥೆ, ಬಿಜ್ಜಳರಾಯ ಪುರಾಣ-ಮೊದಲಾದ ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಸ್ಮರ ಕೊರವಂಜಿ, ಬ್ರಹ್ಮಶತಕೋಶ, ರುದ್ರಯಕ್ಷಗಾನ ಎಂಬ ಕೃತಿಗಳು ಉಪಲಬ್ಧವಿಲ್ಲ. ಪರಶುರಾಮ ಭಾರತವನ್ನು 1810ರಲ್ಲೂ ಜಿನಮುನಿಯನ್ನು 1814ರಲ್ಲೂ ಬರೆದಂತೆ ಕವಿ ಹೇಳಿಕೊಂಡಿದ್ದಾನೆ.

ಪುರಾಣಸ್ತೋತ್ರ ಹಾಗೂ ಜಿನಮುನಿ ವಾರ್ಧಕ ಷಟ್ಪದಿಯಲ್ಲಿವೆ. ಜಿನಮುನಿಯಲ್ಲಿ 50 ಸಂಧಿಗಳೂ 2551 ಪದ್ಯಗಳೂ ಇವೆ. ಪಂಚಮಿಯ ಉಪವಾಸ ಮಹಿಮೆಯಿಂದ ನಾಗದತ್ತ ಸ್ವರ್ಗದಲ್ಲಿ ನಾಗಕುಮಾರನಾಗಿ ಜನ್ಮಹೊಂದಿ ಸಕಲ ವೈಭೋಗಗಳನ್ನು ಅನುಭವಿಸಿ ಅಪವರ್ಗ ಸುಖವನ್ನು ಪಡೆದುದು ಇದರ ವಸ್ತು. ಮುಲ್ಲಾಶಾಸ್ತ್ರ ಭಾಮಿನೀಷಟ್ಪದಿಯಲ್ಲಿದೆ. ಇದರಲ್ಲಿ 8 ಆಶ್ವಾಸಗಳೂ 400 ಪದ್ಯಗಳೂ ಇವೆ. ಈ ಗ್ರಂಥವನ್ನು ತೋವಿನಕೆರೆಯ ಬಸದಿಯಲ್ಲಿ ಬರೆದಂತೆ ಕವಿ ಹೇಳಿಕೊಂಡಿದ್ದಾನೆ. ಇಂದ್ರನು ಗೌತಮನೆಂಬ ಬ್ರಾಹ್ಮಣನಿಗೆ ಗಣಧರ ಪದವಿಯನ್ನು ಕೊಡಲು, ಕುಪಿತನಾದ ಪಾರ್ಶ್ವನಾಥ ಮುಲ್ಲಾಶಾಸ್ತ್ರವನ್ನು ಪ್ರಚಾರಮಾಡಿದುದು ಇದರ ವಸ್ತು. ಈ ಕೃತಿ ಮಹಮ್ಮದೀಯ ಧರ್ಮದ ಬಗ್ಗೆ ವಿವರಗಳನ್ನು ತನ್ನದೇ ಆದ ರೀತಿಯಲ್ಲಿ ಕೊಟ್ಟು ವಸ್ತುವಿನ ದೃಷ್ಟಿಯಿಂದ ವಿಶಿಷ್ಟವಾಗಿ ನಿಲ್ಲುತ್ತದೆ. ಕದಂಬ ಪುರಾಣದಲ್ಲಿ ಭಾಮಿನೀಷಟ್ಪದಿಯ 199 ಪದ್ಯಗಳಿವೆ. ಕೆಲವು ಸಾಂಗತ್ಯಗಳೂ ಇವೆ. ಹಿಮಶೀತಳನ ಕಥೆ ಸಾಂಗತ್ಯದಲ್ಲಿದ್ದು, ಇದರಲ್ಲಿ 87 ಪದ್ಯಗಳಿವೆ. ಈ ಕಾವ್ಯಕ್ಕೆ ಅಕಳಂಕ ಚರಿತೆ ಎಂಬ ಹೆಸರೂ ಇದೆ. ಅಕಳಂಕನೆಂಬ ಗುರು ಬೌದ್ಧರನ್ನು ಹಿಮಶೀತಳನ ಸಭೆಯಲ್ಲಿ ವಾದದಲ್ಲಿ ಸೋಲಿಸಿ ಸಿಂಹಳ ದ್ವೀಪಕ್ಕೆ ಕಳಿಸಿದುದು ಇಲ್ಲಿಯ ವಸ್ತು. ಪರಶುರಾಮ ಭಾರತ 24 ಅಧ್ಯಾಯ, 1369 ಪದ್ಯಗಳನ್ನು ಒಳಗೊಂಡಿದ್ದು ಭಾಮಿನೀಷಟ್ಪದಿಯಲ್ಲಿದೆ. ಜೈನ ಗ್ರಂಥಕ್ಕನುಸಾರವಾಗಿ ರಾಮಾಯಣವನ್ನು ಹೇಳುವ ಜಿನರಾಮಾಯಣ 86 ಆಶ್ವಾಸ ಹಾಗೂ 5021 ಭಾಮಿನೀಷಟ್ಪದಿಗಳನ್ನುಳ್ಳ ಕಾವ್ಯ. ಚಂದನೆಯ ಕಥೆ ಒಂದು ಯಕ್ಷಗಾನ. ಈತನ ಕೃತಿಗಳನ್ನು ಓದಿದಾಗ ಈತ ಪ್ರತಿಭಾವಂತನೆಂದೂ ಸಮಕಾಲೀನ ಪ್ರಜ್ಞೆಯುಳ್ಳವನೆಂದೂ ತಿಳಿಯುತ್ತದೆ. ಭಾಷೆಯ ದೃಷ್ಟಿಯಿಂದ ವಿಶಿಷ್ಟವಾದ ವಸ್ತು, ವೈವಿಧ್ಯವುಳ್ಳ ಕೃತಿಗಳನ್ನು ಈತ ನೀಡಿದ್ದಾನೆ. (ಜಿ.ಜಿ.ಎಂ.)

**ಚಂದ್ರಾದಿತ್ಯ :** ಬಾದಾಮಿ ಚಳುಕ್ಯ ವಂಶದ ರಾಜಕುಮಾರ. ಇಮ್ಮಡಿ ಪುಲಕೇಶಿಯ (610-42) ಹಿರಿಯ ಮಗ. ಈತ ಮಹಾರಾಜ ಮತ್ತು ಪೃಥ್ವೀವಲ್ಲಭ ಎಂಬ ಬಿರುದುಗಳನ್ನು ಧರಿಸಿದ್ದ. ಈತನೂ ಇವನ ಅರಸಿ ವಿಜಯ ಭಟ್ಟಾರಿಕಾ ರತ್ನಗಿರಿ ಜಿಲ್ಲೆಯ ಸಾವಂತವಾಡಿಯಲ್ಲಿ ಇದ್ದುಕೊಂಡು, ಕೊಂಕಣ ಭಾಗದ ವಿಷಯವನ್ನು ಏಳನೆಯ ಶತಮಾನದ ನಡುವಿನಲ್ಲಿ, ಚಳುಕ್ಯ ಸಾಮಂತರಾಗಿ ಆಳುತ್ತಿದ್ದರು. ವಿಜಯ ಭಟ್ಟಾರಿಕಾ (ವಿಜ್ಜಿಕೆ) ಪ್ರಸಿದ್ಧ ಸಂಸ್ಕೃತ ಕವಯಿತ್ರಿಯೂ ಆಗಿದ್ದಳು. ಚಂದ್ರಾದಿತ್ಯನಿಗೆ ಆದಿತ್ಯವರ್ಮ, ವಿಕ್ರಮಾದಿತ್ಯ ಮತ್ತು ಧರಾಶ್ರಯ ಜಯಸಿಂಹ ಎಂಬ ತಮ್ಮಂದಿರು ಇದ್ದರು. ಅಂಬೇರಾ ಎನ್ನುವವಳು ತಂಗಿ. ಇಮ್ಮಡಿ ಪುಲಕೇಶಿಯ ಅನಂತರ ಚಂದ್ರಾದಿತ್ಯ ಪಟ್ಟಕ್ಕೆ ಬರದೆ, ಇವನ ತಮ್ಮ ವಿಕ್ರಮಾದಿತ್ಯ ಪಟ್ಟಕೆ ಬಂದಂತೆ ತೋರುವುದರಿಂದ, ಚಂದ್ರಾದಿತ್ಯ ಎಷ್ಟು ಕಾಲ ಬದುಕಿದ್ದನೆಂದು ತಿಳಿಯದು. (ಪಿ.ಕೆ.ಎಸ್.)

**ಚಂದ್ರೇಗೌಡ, ಡಿ.ಬಿ. :** 1936-. ವಿಧಾನ ಸಭೆಯ ಮಾಜಿ ಸಭಾಪತಿ, ಕರ್ನಾಟಕ ರಾಜ್ಯದ ಮಾಜಿ ಸಚಿವ, ವಿರೋಧ ಪಕ್ಷದ ನಾಯಕ, ಲೋಕಸಭಾ ಸದಸ್ಯರೂ ಆಗಿದ್ದವರು.

ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕಿನ ದಾರದಹಳ್ಳಿ ಗ್ರಾಮದಲ್ಲಿ 1936 ಆಗಸ್ಟ್ 26ರಂದು ಜನಿಸಿದರು. ತಂದೆ ಡಿ.ಎ. ಬೈರೇಗೌಡ, ತಾಯಿ ಪುಟ್ಟಮ್ಮ. ಬಿ.ಎಸ್‌ಸಿ. ಪದವಿ, ಕಾನೂನು ಪದವಿ ಪಡೆದ ಅನಂತರ ವಕೀಲ ವೃತ್ತಿಯನ್ನು ಕೈಗೊಂಡರು. ಸ್ವಾತಂತ್ರ್ಯ ಹೋರಾಟದಿಂದ ಪ್ರಭಾವಿತರಾದ ಚಂದ್ರೇಗೌಡರು ಪಠ್ಯೇತರ ಚಟುವಟಿಕೆಗಳಲ್ಲಿ ಆಸಕ್ತಿ ತಳೆದು ಸಾರ್ವಜನಿಕ ಚಟುವಟಿಕೆಗಳಲ್ಲಿ ವಿದ್ಯಾರ್ಥಿ ದೆಸೆಯಿಂದಲೂ ತಮ್ಮನ್ನು ತೊಡಗಿಸಿಕೊಂಡಿದ್ದರು.

ಗೌಡರು ಪ್ರಜಾ ಸಮಾಜವಾದಿ ಪಕ್ಷದ ಮೂಲಕ ರಾಜಕೀಯ ರಂಗ ಪ್ರವೇಶಿಸಿದರು. ಅನಂತರ ಆಡಳಿತ ಕಾಂಗ್ರೆಸ್ ಪಕ್ಷಕ್ಕೆ ಸೇರಿ

1971ರಲ್ಲಿ ಚಿಕ್ಕಮಗಳೂರು ಕ್ಷೇತ್ರದಿಂದ ಲೋಕಸಭಾ ಸದಸ್ಯರಾದರು. 1973ರಲ್ಲಿ ರಾಜ್ಯ ಯುವ ಕಾಂಗ್ರೆಸ್‌ನ ಅಧ್ಯಕ್ಷರಾದರು. 1977ರ ಲೋಕಸಭಾ ಚುನಾವಣೆಯಲ್ಲಿ ಅದೇ ಕ್ಷೇತ್ರದಿಂದ ಮರು ಆಯ್ಕೆಗೊಂಡರು. 1978ರಲ್ಲಿ ಪಕ್ಷದ ಆದೇಶದಂತೆ ಶ್ರೀಮತಿ ಇಂದಿರಾ ಗಾಂಧಿಯವರಿಗಾಗಿ ತಮ್ಮ ಲೋಕಸಭಾ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದರು. ಅದೇ ವರ್ಷ ರಾಜ್ಯದ ವಿಧಾನ ಪರಿಷತ್ತಿನ ಸದಸ್ಯರಾದರು. ಅನಂತರ ಡಿ.ದೇವರಾಜ ಅರಸು ಸಂಪುಟದಲ್ಲಿ ಸಣ್ಣ ನೀರಾವರಿ ಸಚಿವರಾದರು (1979). ಡಿ.ದೇವರಾಜ ಅರಸು ಅವರು ಕಾಂಗ್ರೆಸ್‌ನಿಂದ ದೂರವಾಗಿ ಕರ್ನಾಟಕ ಕಾಂಗ್ರೆಸ್ ಪಕ್ಷ ವನ್ನು ಸ್ಥಾಪಿಸಿದಾಗ ಚಂದ್ರೇಗೌಡರು ಆ ಪಕ್ಷಕ್ಕೆ ಸೇರಿದರು. ತರುವಾಯ ಮೇಲ್ಮನೆಯ ವಿರೋಧ ಪಕ್ಷದ ನಾಯಕರಾದರು.



1980ರ ದಶಕದ ಪ್ರಾರಂಭದಲ್ಲಿ ನಡೆದ ರೈತ ಹೋರಾಟದಲ್ಲೂ ನರಗುಂದದಿಂದ ಬೆಂಗಳೂರಿಗೆ ನಡೆದ ರೈತ ಜಾಥಾದಲ್ಲೂ ಇವರು ಸಕ್ರಿಯವಾಗಿ ಭಾಗವಹಿಸಿದರು. 1983ರ ವಿಧಾನಸಭಾ ಚುನಾವಣೆಯಲ್ಲಿ ಜನತಾರಂಗ ಒಕ್ಕೂಟದ ಮೂಲಕ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ಕ್ಷೇತ್ರದಿಂದ ಸ್ಪರ್ಧಿಸಿ ಆಯ್ಕೆಯಾದರು. ರಾಮಕೃಷ್ಣಹೆಗಡೆಯವರ ಸರ್ಕಾರದಲ್ಲಿ ವಿಧಾನಸಭಾಪತಿಯಾದರು. ಈ ವಿಧಾನ ಸಭೆಯಲ್ಲಿ ಆಳುವ ಪಕ್ಷ ಸ್ವಶಕ್ತಿಯಿಂದ ಸಮಗ್ರ ಬಹುಮತ ಹೊಂದಿರದಿದ್ದುದರಿಂದ ಸಭೆಯ ಕಲಾಪ ನಿರ್ವಹಣೆ ಒಂದು ಸವಾಲಿನ ಕೆಲಸವೇ ಆಗಿತ್ತು. ಎರಡು ವರ್ಷಗಳ ಕಾಲ ಸಭೆಯನ್ನು ಯಶಸ್ವಿಯಾಗಿ ನಿರ್ವಹಿಸಿ ದಕ್ಷ ಸಭಾಪತಿಗಳಲ್ಲಿ ಒಬ್ಬರೆನಿಸಿದರು.

1985ರಲ್ಲಿ ವಿಧಾನಸಭೆಗೆ ನಡೆದ ಮಧ್ಯಕಾಲೀನ ಚುನಾವಣೆಯಲ್ಲಿ ಇವರು ಸೋಲನ್ನನುಭವಿಸಿದರು. ಆದರೆ ಇವರ ಪಕ್ಷ ಅಧಿಕಾರಕ್ಕೆ ಬಂದಿದ್ದರಿಂದ ಇವರು ನೀರಾವರಿ ಸಲಹಾ ಸಮಿತಿಯ ಅಧ್ಯಕ್ಷರಾದರು. ಅನಂತರ ರಾಜ್ಯಸಭಾ ಸದಸ್ಯರಾದರು. 1989ರ ಚುನಾವಣೆಯಲ್ಲಿ ಮತ್ತೆ ತೀರ್ಥಹಳ್ಳಿ ಕ್ಷೇತ್ರದಿಂದ ಸ್ಪರ್ಧಿಸಿ ವಿಧಾನ ಸಭೆಗೆ ಚುನಾಯಿತರಾದರು. ಆಗ ಕಾಂಗ್ರೆಸ್ ಪಕ್ಷ ಅಧಿಕಾರಕ್ಕೆ ಬಂತು. ಇವರು ರಾಜ್ಯಸಭಾ ಸ್ಥಾನಕ್ಕೆ ರಾಜೀನಾಮೆ ನೀಡಿ ವಿರೋಧ ಪಕ್ಷದ ನಾಯಕರಾಗಿ ಆಯ್ಕೆಯಾದರು. ರಾಜ್ಯ ಜನತಾದಳದ ಕಾರ್ಯಭಾರಿ ಅಧ್ಯಕ್ಷರೂ ಆಗಿದ್ದರು. ಮುಂದೆ ಜನತಾದಳವನ್ನು ತೊರೆದು ಕಾಂಗ್ರೆಸ್ ಪಕ್ಷ ಸೇರಿದರು.

1999ರ ವಿಧಾನಸಭಾ ಚುನಾವಣೆಯಲ್ಲಿ ಶೃಂಗೇರಿ ಕ್ಷೇತ್ರದಿಂದ ಸ್ಪರ್ಧಿಸಿ ಗೆದ್ದರು. ಎಸ್.ಎಂ.ಕೃಷ್ಣ ಅವರ ಸಂಪುಟದಲ್ಲಿ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರಾಗಿದ್ದರು. ಇವರಿಗೆ ಉತ್ತಮ ವಾಗ್ಮಿ ಮತ್ತು ಬುದ್ಧಿಜೀವಿ ರಾಜಕಾರಣಿ ಎಂಬ ಹೆಸರಿದೆ. (ಡಿ.ಎಸ್.ಜೆ.)

**ಚಂದ್ರೋಬ್ಬಲಬ್ಬೆ :** ಗಂಗವಂಶದ ದೊರೆ ನೀತಿಮಾರ್ಗ ಎರೆಗಂಗನ (843-70) ಮಗ ಬೂತುಗನ ರಾಣಿ ; ರಾಷ್ಟ್ರಕೂಟ ದೊರೆ ಅಮೋಘವರ್ಷನ ಮಗಳು.ನೀತಿಮಾರ್ಗ ಎರೆಗಂಗನಿಗೆ ಹಿಂದೆ ಗಂಗರಾಜ್ಯವನ್ನು ರಾಚಮಲ್ಲ ಆಳುತ್ತಿದ್ದಾಗ ರಾಷ್ಟ್ರಕೂಟರ ಸೇನಾನಿ ಬಂಕೇಶ ಗಂಗ ರಾಜ್ಯದ ಒಂದು ಭಾಗವನ್ನು ಆಕ್ರಮಿಸಿದ್ದ. ಈ ಭಾಗವನ್ನು ಪುನಃ ವಶಪಡಿಸಿಕೊಳ್ಳುವುದರಲ್ಲಿ ರಾಚಮಲ್ಲ ಜಯಪ್ರದನಾಗಲಿಲ್ಲ. ನೀತಿಮಾರ್ಗ ಎರೆಗಂಗ ರಾಜಾರಾಮುಡು ಎಂಬ ಸ್ಥಳದಲ್ಲಿ ಬಂಕೇಶನೊಡನೆ ನಡೆಸಿದ ಕದನ ನಿರ್ಣಾಯಕವಾಗಲಿಲ್ಲ. ಗಂಗರನ್ನು ಅಡಗಿಸಲು ಸಾಧ್ಯವಿಲ್ಲವೆಂಬುದನ್ನು ಅರಿತ ರಾಷ್ಟ್ರಕೂಟ ದೊರೆ ಅಮೋಘವರ್ಷ ಚಂದ್ರೋಬ್ಬಲಬ್ಬೆಯನ್ನು ಗಂಗರಾಜಕುಮಾರ ಬೂತುಗನಿಗೆ ವಿವಾಹ ಮಾಡಿಕೊಟ್ಟು ಗಂಗರೊಂದಿಗೆ ಸಂಬಂಧ ಬೆಳೆಸಿದ. ಚಂದ್ರೋಬ್ಬಲಬ್ಬೆ ಅತ್ಯಂತ ಸುಂದರಿಯೂ ಗುಣವತಿಯೂ ಆಗಿದ್ದಳೆಂದೂ ನಾಟ್ಯಕಲೆಯಲ್ಲಿ ವಿಶೇಷ ಪರಿಶ್ರಮ ಪಡೆದಿದ್ದಳೆಂದೂ ಶಾಸನಗಳು ತಿಳಿಸುತ್ತವೆ.ಗಂಗರಾಜ ಎರೆಗಂಗ (886-920) ಚಂದ್ರೋಬ್ಬಲಬ್ಬೆಯ ಮಗ. *

**ಚಕ್ರನದಿ :** ಉಡುಪಿ ಜಿಲ್ಲೆಯ ಒಂದು ನದಿ. ಪಶ್ಚಿಮ ಘಟ್ಟಗಳಿಗೆ ಸೇರಿದ ಕುಟಚಾದ್ರಿ ಕೊಡಚಾದ್ರಿ ಶಿಖರದ ಸಮೀಪದಲ್ಲಿ ಇದರ ಉಗಮ. ಕೊಲ್ಲೂರು ಅಥವಾ ಸೌಪರ್ಣಿಕಾ ನದಿಯೂ ಈ ಸ್ಥಳದಲ್ಲಿಯೇ ಉಗಮಿಸುವುದು. ಚಕ್ರನದಿಯ ಮೂಲದ ಬುಗ್ಗೆಯಲ್ಲಿ ನೀರು ಚಕ್ರಾಕಾರವಾಗಿ ಸುತ್ತುತ್ತಿರುವುದರಿಂದ ನದಿಗೆ ಈ ಹೆಸರು ಬಂತೆಂದು ಪ್ರತೀತಿ. ಒಮ್ಮೆ ಈ ಮಾರ್ಗವಾಗಿ ಸೀತಾರಾಮಲಕ್ಷ್ಮಣರು ಬರುತ್ತಿದ್ದಾಗ ಸೀತೆಗೆ ಬಾಯಾರಿಕೆಯಾದ್ದರಿಂದ ರಾಮ ತನ್ನ ಕೋದಂಡದ ಒಂದು ತುದಿಯನ್ನು ನೆಲದ ಮೇಲೆ ಒತ್ತಿ ನೀರು ಚಿಮ್ಮುವಂತೆ ಮಾಡಿದನೆಂದು ಐತಿಹ್ಯ.

ಪಶ್ಚಿಮ ಘಟ್ಟದಲ್ಲಿ ಹುಟ್ಟುವ ಈ ನದಿ ಕುಂದಾಪುರ ತಾಲ್ಲೂಕಿನ ಭಾಗದಲ್ಲಿ ಸು.45ಕಿಮೀ ದೂರ ಪಶ್ಚಿಮಾಭಿಮುಖವಾಗಿ ಹರಿದು ಗಂಗೊಳ್ಳಿಯ ಉತ್ತರ ಭಾಗದಲ್ಲಿ ಕೊಲ್ಲೂರು ನದಿಯನ್ನು ಸೇರುತ್ತದೆ. ನದಿ ಮಾರ್ಗ ಏರುತಗ್ಗುಗಳಿಂದ ಕೂಡಿದ್ದು ಮಳೆಗಾಲದಲ್ಲಿ ನೀರಿನ ರಭಸ ಹೆಚ್ಚಾಗಿರುತ್ತದೆ. ನದಿಯ ಇಕ್ಕಡೆಗಳಲ್ಲೂ ಫಲವತ್ತಾದ ಬಯಲುಗಳಿವೆ. ಹಳ್ಳಿಹೊಳೆ, ಉಪ್ಪಾರು ಮತ್ತು ಬಾಚ್ಯ ಮೊದಲಾದ ಊರುಗಳಿಗೆ ಈ ನದಿ ನೀರುಣಿಸುತ್ತದೆ. ನದಿಗೆ ಹದಿನೈದು ಕಡೆ ಸಣ್ಣ ಕಟ್ಟೆಗಳನ್ನು ಕಟ್ಟಿ ನೀರನ್ನು ವ್ಯವಸಾಯಕ್ಕೆ ಉಪಯೋಗಿಸಿಕೊಳ್ಳಲಾಗುತ್ತಿದೆ. (ಟಿ.ಪಿ.ಎಸ್.ಆರ್.)

**ಚಚಡಿ :** ಬೆಳಗಾಂವಿ ಜಿಲ್ಲೆ ಬೈಲಹೊಂಗಲ ತಾಲ್ಲೂಕಿನ ಒಂದು ಊರು. ಬೈಲಹೊಂಗಲದಿಂದ 18ಕಿಮೀ ದೂರದಲ್ಲಿದೆ. ಮೊದಲು ಇದು ಪರಸಗಡ ತಾಲ್ಲೂಕಿಗೆ ಸೇರಿದ್ದ ಸ್ಥಳವಾಗಿತ್ತು. ಈ ಊರಿನ ಪ್ರಾಚೀನತೆಯನ್ನು ಹೇಳುವ ಹಲವಾರು ದಾಖಲೆಗಳು ಲಭ್ಯವಾಗಿವೆ. 1202ರ ರಟ್ಟ ಅರಸ ಕಾರ್ತವೀರ್ಯನ ಕಾಲದ ಶಾಸನ ತಿಳಿಸುವಂತೆ ಈ ಊರ ಹೆಸರು 'ಚಚ್ಚಕಿ'. ಇದೊಂದು ಮಹಾ ಅಗ್ರಹಾರವಾಗಿತ್ತು. ಇಲ್ಲಿ ಚಾಳುಕ್ಯೋತ್ತರ ವಾಸ್ತುಶೈಲಿಯಲ್ಲಿ ನಿರ್ಮಾಣವಾದ ವಿಶಾಲವಾದ ಸಂಗಮೇಶ್ವರ ದೇವಾಲಯವಿದೆ. ಇದರಲ್ಲಿ ಗರ್ಭಗೃಹ, ನವರಂಗ, ನಂದಿಮಂಟಪಗಳಿವೆ. ನವರಂಗದ ಮರದ ಬಾಗಿಲಿನಿಂದ ನಂದಿಮಂಟಪಕ್ಕೆ ಹೋಗಲು ದಾರಿ ಇದೆ. ನವರಂಗದಲ್ಲಿ ಒಂದು ಶಾಸನವಿದೆ. ಮೊಗಸಾಲೆಯ ಹೊರಭಾಗದಲ್ಲಿ ವಿಷ್ಣು, ದುರ್ಗಾ, ಶಿವ ಮುಂತಾದ ದೇವತೆಗಳ ಚಿತ್ರಗಳನ್ನು ಕೆತ್ತಲಾಗಿದೆ. ಹಿಂಬದಿಯ ಗೋಡೆಯ ಮೇಲೆ ಸುಂದರ ಕೆತ್ತನೆಗಳಿವೆ. ಗುಡಿಯ ಹಿಂಭಾಗದಲ್ಲಿ ಭಗ್ನಗೊಂಡ ಎರಡು ವೀರಗಲ್ಲುಗಳಿವೆ. ರಟ್ಟ ಕಾರ್ತವೀರ್ಯನು ವೇಣುಗ್ರಾಮವನ್ನು ಆಳುತ್ತಿದ್ದಾಗ ಊರೊಡೆಯ ಮಾಮರಸ ಮತ್ತು ಅಗ್ರಹಾರದ ಮಹಾಜನರು ದೇವಾಲಯಕ್ಕಾಗಿ ನಿವೇಶನವನ್ನು ದಾನ ನೀಡಿದ ವಿಷಯ 1202ರ ಶಾಸನದಿಂದ ತಿಳಿದುಬರುತ್ತವೆ. ಸಂಗಮೇಶ್ವರ ದೇವರ ಜಾತ್ರೆ ಕೊನೆಯ ಶ್ರಾವಣ ಸೋಮವಾರದಂದು ಜರುಗುತ್ತದೆ. ಸಂಗಮೇಶ್ವರ ಗುಡಿಯ ಎದುರು ಶಿವಲಿಂಗವುಳ್ಳ ಗುಡಿ ಇದೆ. ಅದಕ್ಕೆ ರಾಮಲಿಂಗವೆಂದು ಕರೆಯುತ್ತಾರೆ. ಇದರ ಪಕ್ಕದಲ್ಲಿಯೇ ಕೋಟೆಯಿಂದ ಆವೃತವಾದ ದೇಸಾಯಿ ಅವರ ವಾಡೆ ಇದೆ. ಒಳಗಡೆ ನಾರಾಯಣಸ್ವಾಮಿ ದೇವಸ್ಥಾನವಿದೆ. ಇದಕ್ಕೆ ತ್ರಿಕೂಟಾಚಲವೆಂದೂ ಕರೆಯುವುದುಂಟು. ಗರ್ಭಗೃಹದ ನಡುವೆ ಶಿವಲಿಂಗವಿದೆ. ಎಡಕ್ಕೆ ಬಲಕ್ಕೆ ಶಿವ, ವಿಷ್ಣು, ಷಣ್ಮುಖರ ಮೂರ್ತಿಗಳಿವೆ. ವಿಶಾಲವಾದ ನವರಂಗದ ಎದುರು ಭಾಗಶಃ ಹೂತುಹೋಗಿರುವ ಒಂದು ಶಾಸನವಿದೆ. ಮಹಾಮಂಡಲೇಶ್ವರ ಕನ್ನಕೈರರಸ ಮತ್ತು ಕೊಂಗಜರಸರು ಕೋಟೆಯೊಳಗಿನ ಭೋಗೀಶ್ವರ ದೇವರಿಗಾಗಿ ನಗರಪ್ರಮುಖನಿಗೆ ಕೆಲವು ಕಾಣಿಕೆಗಳನ್ನು ಕೊಟ್ಟರೆಂದು ತಿಳಿದುಬರುತ್ತದೆ.

ಕೋಟೆಯ ನಾರಾಯಣಸ್ವಾಮಿ ಮೂರ್ತಿಯ ಮೇಲ್ಛಾವಣಿಗೆ ಸೇರಿದಂತೆ ಒಂದು ಶಾಸನವಿದೆ. ಮುದ್ದಯ್ಯನೆಂಬುವವನಿಂದ ಗುಡಿ ನವೀಕರಣವಾದ ವಿಷಯ ಅದರಲ್ಲಿದೆ. ದ್ಯಾಮವ್ವ, ಯಲ್ಲಮ್ಮ, ಬಸವಣ್ಣ ಇಲ್ಲಿನ ಇತರ ಗುಡಿಗಳು. ಬಸದಿ, ಮಸೀದಿ, ದರ್ಗಾಗಳೂ

ಇಲ್ಲಿವೆ. ಅಡಿವಪ್ಪಸ್ವಾಮಿಯ ಮಠ ಇಲ್ಲಿದೆ. ಮಠದ ಹತ್ತಿರ ಲಕ್ಷ್ಮಮ್ಮ ಮತ್ತು ಬನಶಂಕರಿಯ ಚಿಕ್ಕ ಗುಡಿಗಳಿವೆ. ದ್ಯಾಮವ್ವನ ಗುಡಿಯಲ್ಲಿ ಒಂದು ಮೀಟರ್ ಎತ್ತರದ ಚಾಳುಕ್ಯ ಭೈರವನ ಮೂರ್ತಿ ಇದೆ. ಬಕ್ರೀದ್ ಸಮಯದಲ್ಲಿ ದಿಲಾರ್ ಪೀರ್ ದರ್ಗಾದ 'ಉರಸು' ಜರುಗುವುದು. ಕೋಟೆಯೊಂದಿಗೆ ದುಸ್ಥಿತಿಯಲ್ಲಿರುವ ಚಚಡಿ ದೇಸಾಯಿಗಳ ವಾಡೆ ಹಾಗೂ ಅರಮನೆಗಳು ಇವೆ. ಈ ಸ್ಥಳ ಪ್ರಾಚೀನ ವೈಭವಕ್ಕೆ ಈಗಲೂ ಸಾಕ್ಷಿಯಾಗಿದೆ. (ಆರ್.ಎಂ.)

**ಚಟಚಟನಹಳ್ಳಿ :** ಹಾಸನ ಜಿಲ್ಲೆ ಬೇಲೂರು ತಾಲ್ಲೂಕಿನಲ್ಲಿ ಹಳೇಬೀಡಿನಿಂದ ಈಶಾನ್ಯಕ್ಕೆ ಸು.4ಕಿಮೀ ದೂರದಲ್ಲಿರುವ ಗ್ರಾಮ. ಇಲ್ಲಿರುವ ಚಟ್ಟೇಶ್ವರ ದೇವಾಲಯ ಹೊಯ್ಸಳ ಕಾಲದ ರಚನೆ. ಹೊಯ್ಸಳ ಅರಸ ಇಮ್ಮಡಿ ಬಲ್ಲಾಳನ ಕೈಕೆಳಗೆ ಅಧಿಕಾರಿಯಾಗಿದ್ದ ಚಟ್ಟದಂಡನಾಯಕ ಸು.1200ರಲ್ಲಿ ಇದನ್ನು ಕಟ್ಟಿಸಿದ. ಇದಕ್ಕೆ ದತ್ತಿ ನೀಡಿದ ವಿಷಯವನ್ನು ತಿಳಿಸುವ ಶಾಸನಗಳು ದೇವಾಲಯದ ಆವರಣದಲ್ಲಿವೆ.

ದಕ್ಷಿಣಾಭಿಮುಖವಾಗಿರುವ ಈ ದೇವಾಲಯ ತ್ರಿಕೂಟಾಚಲ, ಚೌಕಾಕಾರದ ತಳವಿನ್ಯಾಸವುಳ್ಳ ಮೂರು ಗರ್ಭಗೃಹಗಳಿಂದ ಕೂಡಿದೆ. ಅಧಿಷ್ಠಾನದ ಮೇಲೆ ಐದು ದಿಂಡುಗಳಿದ್ದು, ಅವು ಕೆತ್ತನೆಗಳೇನೂ ಇಲ್ಲದೆ ಸರಳವಾಗಿವೆ. ಗೋಡೆಗಳ ಮೇಲೂ ಕೆತ್ತನೆ ಇಲ್ಲ. ಮೂಲೆಗಳಲ್ಲಿ ಚಿಕ್ಕದಾದ ಚೌಕನೆಯ ಅರೆಗಂಬಗಳಿವೆ. ಲೋವೆಕಲ್ಲುಗಳು ಸಹ ಸರಳವಾಗಿವೆ. ಇಲ್ಲಿಯ ಮೂರು ಗೋಪುರಗಳಲ್ಲಿ ಉತ್ತರದ್ದು ಬಿದ್ದು ಹೋಗಿದ್ದು, ಉಳಿದೆರಡು ಶಿಲ್ಪವಿಲ್ಲದ ಅನಲಂಕೃತ ಕಿರುಗೋಪುರಗಳ ಮೂರು ಅಂತಸ್ತನ್ನು ಹೊಂದಿವೆ. ಪಶ್ಚಿಮದ ಗೋಪುರದ ಕೆಲವು ಪಟ್ಟಿಕೆಗಳ ಮೇಲೆ ಯಕ್ಷರು, ತಾಂಡವೇಶ್ವರ ಮುಂತಾದ ಶಿಲ್ಪಗಳಿವೆ. ಮುಖಮಂಟಪದ ಎರಡೂ ಕಡೆ ಕಲ್ಲಿನ ಜಗತಿ ಇದ್ದು ಕೆತ್ತನೆ ಇಲ್ಲದ ಕಟಾಂಜನದಿಂದ ಕೂಡಿದೆ.

ಕಚ್ಚುಕಚ್ಚಾದ ಅರೆಗಂಬಗಳು, ಶೈವ ದ್ವಾರಪಾಲಕರು ಮತ್ತು ಗಜಲಕ್ಷ್ಮಿ ಇರುವ ನವರಂಗ ದ್ವಾರ ಸರಳವಾಗಿವೆ. ನವರಂಗದ ಭುವನೇಶ್ವರಿಯಲ್ಲಿ ಪದ್ಮ ಹಾಗೂ ಅಷ್ಟಕೋನದ ನಕ್ಷತ್ರಾಕೃತಿಯ ಸುಂದರ ಶ್ರೀಚಕ್ರವನ್ನು ಕೆತ್ತಿದೆ. ಮಧ್ಯದ ನಾಲ್ಕು ಕಂಬಗಳು ದಪ್ಪಗಿದ್ದು ಘಂಟಾಕೃತಿಯದ್ದಾಗಿವೆ. ಹೆಚ್ಚಿನ ಕೆತ್ತನೆ ಇಲ್ಲ. ಇಲ್ಲಿ ಮೂಷಕ ಹಾಗೂ ಸಿಂಹಪೀಠಗಳ ಮೇಲೆ ಗಣೇಶ ಹಾಗೂ ಮಹಿಷಾಸುರಮರ್ದಿನಿಯ ವಿಗ್ರಹಗಳು, ಇದ್ದುವು. ಈಗ ಬೇರೆಲ್ಲಿಂದಲೋ ತಂದಿಟ್ಟಿರುವ ವೀರಭದ್ರ ಮತ್ತು ಭೈರವ ಮೂರ್ತಿಗಳು ಆ ಸ್ಥಾನಗಳಲ್ಲಿವೆ. ಚಿಕ್ಕ ನಂದಿಯೊಂದೂ ಇದೆ. ನವರಂಗದ ಗೂಡುಗಳೆಲ್ಲ ಈಗ ಖಾಲಿಯಾಗಿವೆ.



ಚಟ್ಟೇಶ್ವರ ದೇವಾಲಯ

ಚಟ್ಟೇಶ್ವರ ಲಿಂಗವಿರುವ ಮುಖ್ಯ ಗರ್ಭಗೃಹ ನವರಂಗದ ಎಡಭಾಗಕ್ಕಿದೆ. ಇದಕ್ಕೆ ಮಾತ್ರ ದ್ವಾರವಿರುವ ಸುಕನಾಸಿ ಇದೆ. ಸುಕನಾಸಿಯ ಮುಂದೆ ಚೌಕನೆಯ ಜಾಲಂಧ್ರ ಮತ್ತು ದ್ವಾರಪಾಲ ಹಾಗೂ ಬಾಗಿಲ ಮೇಲೆ ಗಜಲಕ್ಷ್ಮಿಮೂರ್ತಿ ಇವೆ. ಗರ್ಭಗೃಹದ ದ್ವಾರದ ಮೇಲೂ ದ್ವಾರಪಾಲ, ಗಜಲಕ್ಷ್ಮಿ ಮೂರ್ತಿಗಳಿವೆ. ಉತ್ತರದ ಗರ್ಭಗೃಹ ನವರಂಗ ದ್ವಾರಕ್ಕೆ ಮುಖ ಮಾಡಿಕೊಂಡಿದೆ. ಇದು ತೆರೆದ ಸುಕನಾಸಿಯನ್ನು ಹೊಂದಿದೆ. ಗರ್ಭಗೃಹದಲ್ಲಿ ಗರುಡಪೀಠದ ಮೇಲೆ ನಿಂತಿರುವ ಆರು ಅಡಿ ಎತ್ತರದ ಭಗ್ನ ವಿಷ್ಣು ವಿಗ್ರಹ ಇದೆ. ಈ ಮೂರ್ತಿ ದೇವಿ ಮತ್ತು ಚಾಮರಧಾರಿಣಿ ಸಹಿತವಾಗಿದೆ. ತೋರಣದಲ್ಲಿ ದಶಾವತಾರವನ್ನು ಕೆತ್ತಿದೆ. ಪೂರ್ವ ಗರ್ಭಗೃಹಕ್ಕೂ ತೆರೆದ ಸುಕನಾಸಿ ಇದೆ. ಗರ್ಭಗೃಹದ್ವಾರ ಸರಳವಾಗಿದೆ. ಒಳಗೆ ಸೊಗಸಾದ ಸೂರ್ಯ ವಿಗ್ರಹವಿದೆ. ಇದರ ಪ್ರಭಾವಳಿಯಲ್ಲಿ ದ್ವಾದಶಾದಿತ್ಯರನ್ನು ಬಿಡಿಸಿದೆ. ಪೀಠದ ಮೇಲೆ ಸಪ್ತಾಶ್ವಗಳನ್ನು ಬಿಡಿಸಿದೆ. ಇದು ಕರ್ನಾಟಕದ ಅಪರೂಪದ ಸೂರ್ಯಮೂರ್ತಿಗಳಲ್ಲೊಂದು.

ಚಟ್ಟೇಶ್ವರ ದೇವಾಲಯದ ನೈಋತ್ಯಕ್ಕೆ ಮುಖಮಂಟಪ, ನವರಂಗದ್ವಾರ ಹಾಗೂ ಭಾಗಶಃ ಗೋಡೆಗಳುಳ್ಳ ವಿಷ್ಣು ದೇವಾಲಯವೊಂದಿದೆ. 1200ಕ್ಕೆ ಸೇರುವ ಶಾಸನವೊಂದು ಇದರ ಮುಂಭಾಗದಲ್ಲಿದೆ. ಗೋಡೆಗಳ ಮೇಲೆ ಕೆಲವು ವೈಷ್ಣವ ಮೂರ್ತಿಗಳು ಉಳಿದುಕೊಂಡಿವೆ. (ಎಚ್.ಎಂ.ಎನ್.ಆರ್.)

**ಚತುರ್ಮುಖ ಬೊಮ್ಮರಸ :** ಸು.1500. ವೀರಶೈವ ಕವಿ. ರೇವಣ ಸಿದ್ದೇಶ್ವರಪುರಾಣ ಎಂಬ ಕಾವ್ಯದ ಕರ್ತೃ. ವರಾಯಣ ಈತನ ತಂದೆ. ರೇವಣ ಸಿದ್ದೇಶ್ವರನ ವಂಶದಲ್ಲಿ ಹುಟ್ಟಿದ ಒಬ್ಬ ಬಾಲಸಿದ್ದೇಶ್ವರನನ್ನು ಕಾವ್ಯದಲ್ಲಿ ವಿಶೇಷವಾಗಿ ಸ್ತುತಿಸಿರುವುದರಿಂದ ಆತನೇ ಕವಿಯ ಗುರುವಾಗಿದ್ದಿರಬೇಕೆಂದು ತೋರುತ್ತದೆ. ಅವನ ಆಜ್ಞಾನುಸಾರವಾಗಿ ಕವಿ ತಾನು ಕಾವ್ಯವನ್ನು ಬರೆದಂತೆ ಹೇಳಿಕೊಂಡಿದ್ದಾನೆ. ಪೂರ್ವಕವಿಗಳಲ್ಲಿ ಹರೀಶ್ವರ, ಮಗ್ಗೆಯ ಮಾಯಿದೇವ, ಕೆರೆಯ ಪದ್ಮರಸ, ಪಾಲ್ಕುರಿಕೆ ಸೋಮನಾಥ-ಇವರನ್ನು ಸ್ಮರಿಸಿದ್ದಾನೆ. ಶೈವಾಗಮಜ್ಞ, ಕವಿಸಭಾಮಾಣಿಕ್ಯದೀಪ ಈತನ ಬಿರುದುಗಳು.

ರೇವಣಸಿದ್ದೇಶ್ವರಪುರಾಣ ವಾರ್ಧಕ ಷಟ್ಪದಿಯಲ್ಲಿದೆ. ಇದರಲ್ಲಿ 13 ಸಂಧಿಗಳೂ 565 ಪದ್ಯಗಳೂ ಇವೆ. ರೇವಣಸಿದ್ದೇಶ್ವರನ ಚರಿತೆ ಕಾವ್ಯದ ವಸ್ತು. ಶ್ರೀಶನನು ಕಾಂಚಿಯೊಳು ನುಡಿಸಿ ಚೋಳಂಗೆ ಕನ್ಯಾಸಮೂಹದ ಬಂಧನವ ಬಿಡಿಸಿ ಬಿಜ್ಜಳಮಹೀಶನಿಂ ಪೂಜೆಗೊಂಡಾದಿಶೈವಾಚಾರ್ಯನಾಗಿ ಲಂಕಾಪುರದೊಳು ಈಶ ಕೋಟಿತ್ರಯದ ಹದಿಟೆಗೊಯ್ದೊಲವಿಂ ವಿಭೀಷಣನ ಪಾಲಿಸಿದ ಎಂಬುದು ಇಲ್ಲಿನ ಕಥಾಸಾರ. ಈ ಕಾವ್ಯ ಶಾಂತ ಮಲ್ಲೇಶ್ವರನ ಅಂಕಿತದಲ್ಲಿ ರಚಿತವಾಗಿದೆ. ಅಲ್ಲದೆ ಈ ಗ್ರಂಥಕ್ಕೂ ಬೊಮ್ಮರಸನ ಸೌಂದರ ಪುರಾಣಕ್ಕೂ ಆದಿಭಾಗದಲ್ಲಿ ಬಹುಮಟ್ಟಿಗೆ ಹೋಲಿಕೆ ಕಂಡುಬರುತ್ತದೆ. ಈ ಹೋಲಿಕೆಯಿಂದ ಇವರಿಬ್ಬರು ಹತ್ತಿರದ ಬಂಧುಗಳಾಗಿರಬೇಕೆಂದು ಊಹಿಸಲು ಅವಕಾಶವಿದೆ. ಹರಿಹರನ ರಗಳೆ ಮತ್ತು ಈಶಾನ್ಯಗುರು ಸಂಸ್ಕೃತದಲ್ಲಿ ರಚಿಸಿದ ರೇವಣಸಿದ್ಧ ಚರಿತೆ - ಇವು ಇವನ ಕಾವ್ಯಕ್ಕೆ ಆಕರಗಳಾಗಿರಬಹುದು. *

**ಚತುರ್ವೇದಿ, ಟಿ.ಎನ್. :** 1928-. ಕರ್ನಾಟಕದ ರಾಜ್ಯಪಾಲರು (2004). ಉತ್ತರ ಪ್ರದೇಶದ ಕನೂಜ್‌ನಲ್ಲಿ 1928 ಜನವರಿ 18ರಂದು ಜನಿಸಿದರು. ಕನೂಜ್, ಕಾನ್‌ಪುರಗಳಲ್ಲಿ ಪ್ರಾರಂಭಿಕ ಶಿಕ್ಷಣ ಮುಗಿಸಿದರು. ಅನಂತರ ಅಲಹಾಬಾದ್‌ಗೆ ತೆರಳಿ ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ ಮತ್ತು ಎಲ್.ಎಲ್.ಬಿ. ಪದವಿಗಳನ್ನು ಪೂರೈಸಿದರು. ಹಿಂದಿ ಸಾಹಿತ್ಯದಲ್ಲಿ ವಿಶಾರದ ಗಳಿಸಿದರು. ಶೈಕ್ಷಣಿಕ ಅರ್ಹತೆ ಪಡೆದ ಬಳಿಕ ಭಾರತ ಆಡಳಿತ ಸೇವೆ (ಐ.ಎ.ಎಸ್.) ಸೇರಿದರು (1950). ರಾಜಸ್ಥಾನ ರಾಜ್ಯ ಸೇವೆಗೆ ನಿಯುಕ್ತರಾದರು. ರಾಜಸ್ಥಾನದಲ್ಲಿದ್ದಾಗ ಇವರು ಕಲೆಕ್ಟರ್, ಜಿಲ್ಲಾ ಮ್ಯಾಜಿಸ್ಟ್ರೇಟ್, ವಿವಿಧ ಇಲಾಖೆಗಳ ಕಾರ್ಯದರ್ಶಿ, ಮುಖ್ಯಮಂತ್ರಿಯವರ ಕಾರ್ಯದರ್ಶಿ, ರಾಜ್ಯ ಕೈಗಾರಿಕೆ ಮತ್ತು ಆಡಳಿತ ಮಂಡಳಿಯ ಅಧ್ಯಕ್ಷ - ಹೀಗೆ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದರು. ಭಾರತ ಸರ್ಕಾರಕ್ಕೆ ಎರವಲು ಸೇವೆಯಲ್ಲಿ ಇವರು ಜಂಟಿ ಕಾರ್ಯದರ್ಶಿ; ನ್ಯಾಷನಲ್ ಅಕಾಡೆಮಿ ಆಫ್ ಅಡ್ಮಿನಿಸ್ಟ್ರೇಷನ್ ಮುಖ್ಯ ಕಾರ್ಯದರ್ಶಿ, (ದೆಹಲಿ ಆಡಳಿತ), ಇಂಡಿಯನ್ ಇನ್ವೆಸ್ಟ್‌ಮೆಂಟ್ ಸೆಂಟರಿನ ಕಾರ್ಯ ನಿರ್ವಾಹಕ ನಿರ್ದೇಶಕ ಹಾಗೂ ಚಂಡೀಘಡದ ಮುಖ್ಯ ಆಯುಕ್ತರಾಗಿ ಕಾರ್ಯನಿರ್ವಹಿಸಿದರು. ಇಂಡಿಯನ್ ಇನ್‌ಸ್ಟಿಟ್ಯೂಟ್

ಆಫ್ ಪಬ್ಲಿಕ್ ಅಡ್ಮಿನಿಸ್ಟ್ರೇಷನ್ನಿನ ನಿರ್ದೇಶಕರಾಗಿಯೂ ಇವರು ಕೆಲಸ ನಿರ್ವಹಿಸಿದ್ದಾರೆ.

ಭಾರತ ಸರ್ಕಾರದಲ್ಲೂ ಇವರು ಹಲವು ಹುದ್ದೆಗಳಲ್ಲಿ ಸೇವೆಸಲ್ಲಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದವು: ಶಿಕ್ಷಣ (ಈಗ ಮಾನವ



ಸಂಪನ್ಮೂಲ ಅಭಿವೃದ್ಧಿ ಇಲಾಖೆ), ಗೃಹ, ನ್ಯಾಯಾಂಗ ಮತ್ತು ಕಾನೂನು, ಸಂಸ್ಕೃತಿ ಮತ್ತು ಕ್ರೀಡಾ ಇಲಾಖೆಗಳ ಕಾರ್ಯದರ್ಶಿಗಳ ಹುದ್ದೆ. ಇವರು ತಮ್ಮ ಐ.ಎ.ಎಸ್. ಹುದ್ದೆಗೆ 1984ರಲ್ಲಿ ರಾಜೀನಾಮೆ ನೀಡಿದರು. ಬಳಿಕ ಭಾರತದ ಆಡಿಟರ್ ಜನರಲ್ ಆಗಿ 6 ವರ್ಷ ಸೇವೆಸಲ್ಲಿಸಿದರು. ಸರ್ಕಾರಿ ಸೇವೆಯಲ್ಲಿದ್ದಾಗ ಇವರು ಹಲವು ಆಯೋಗಗಳು, ಸಮಿತಿಗಳು, ಕಾರ್ಯಪಡೆ (ಟಾಸ್ಕ್‌ಫೋರ್ಸ್)ಗಳಲ್ಲಿಯೂ ದುಡಿದರು. ಹೀಗೆ ಸದಸ್ಯ ರಾಗಿದ್ದಾಗ ಇವರು ಸಾಮಾಜಿಕ ಕಲ್ಯಾಣ, ಆಡಳಿತದ ಅಭಿವೃದ್ಧಿ, ಶಿಕ್ಷಣಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಅಮೂಲ್ಯ ಸಲಹೆ ನೀಡಿದರು.

ಸಾರ್ವಜನಿಕ ಸೇವೆಯನ್ನೇ ವೃತ್ತಿಯಾಗಿಸಿಕೊಂಡ ಇವರು ರಾಜ್ಯಸಭೆಗೆ ಚುನಾಯಿತರಾದರು (1992). ಅಲ್ಲಿಂದ ಮುಂದೆ ಹಣಕಾಸು, ಸಾರ್ವಜನಿಕ ಲೆಕ್ಕಪತ್ರ (1994-95), ವಿದೇಶಾಂಗ ಕಲಾಪ (1995), ರಾಜಭಾಷಾ (1996-97) ಮೊದಲಾದ ಸಮಿತಿಗಳ ಸದಸ್ಯರಾಗಿ ಕಾರ್ಯನಿರ್ವಹಿಸಿದರು. 1998ರಲ್ಲಿ ರಾಜ್ಯಸಭೆಗೆ ಪುನರಾಯ್ಕೆಗೊಂಡರು. ಅನಂತರದಲ್ಲಿ ರಕ್ಷಣಾ ಸಚಿವಾಲಯದ ಸಲಹಾ ಸಮಿತಿ (1998), ರಕ್ಷಣಾ ಸ್ಥಾಯಿ ಸಮಿತಿ (2000), ಯುನೆಸ್ಕೋದ ಕಾರ್ಯನಿರ್ವಾಹಕ ಮಂಡಲಿ (2001), ಸಂಸತ್‌ಭವನ ಸಂಕೀರ್ಣದ ರಕ್ಷಣಾ ಜಂಟಿಸಮಿತಿ (2001), ಭಾರತೀಯ ಸಮಾಜ ವಿಜ್ಞಾನ ಸಂಶೋಧನ ಪರಿಷತ್ತು ಮೊದಲಾದ ವಿವಿಧ ಸಮಿತಿಗಳಲ್ಲಿ ಸದಸ್ಯರಾಗಿ ದುಡಿದ ಅಪಾರ ಅನುಭವ ಇವರದು. ಪೇಟೆಂಟ್ಸ್ ಮಸೂದೆಯ ಜಂಟಿ ಸಮಿತಿ (1999), ಹಿಂದಿ ಭವನ್ (2001), ಸಾರ್ವಜನಿಕ ಗ್ರಂಥಾಲಯ (ದೆಹಲಿ, 2002) ಮತ್ತಿತರೆಡೆ ಅಧ್ಯಕ್ಷರಾಗಿಯೂ ಇವರು ಕಾರ್ಯನಿರ್ವಹಿಸಿದ್ದಾರೆ.

ಸಾರ್ವಜನಿಕ ಸೇವೆಯ ವಿವಿಧ ಕ್ಷೇತ್ರಗಳಲ್ಲಿ ಸೇವೆಸಲ್ಲಿಸಿದ ಇವರು ಕರ್ನಾಟಕದ ರಾಜ್ಯಪಾಲರಾಗಿ ನೇಮಕಗೊಂಡರು (2002 ಆಗಸ್ಟ್ 21). ಬರೆಹಗಾರರೂ ಆಗಿರುವ ಇವರು ಟ್ರಾನ್ಸ್‌ಫರ್ ಆಫ್ ಟೆಕ್ನಾಲಾಜಿ ಅಮಾಂಗ್ ಡೆವಲಪಿಂಗ್ ಕಂಟ್ರೀಸ್, ಕಂಪಾರೆಟೀವ್ ಪಬ್ಲಿಕ್ ಅಡ್ಮಿನಿಸ್ಟ್ರೇಷನ್ ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಇಂಡಿಯನ್ ಜರ್ನಲ್ ಆಫ್ ಪಬ್ಲಿಕ್ ಅಡ್ಮಿನಿಸ್ಟ್ರೇಷನ್ ಪತ್ರಿಕೆಯ ಸಂಪಾದಕರಾಗಿಯೂ ಕಾರ್ಯನಿರ್ವಹಿಸಿದ್ದಾರೆ (1970-98). *

**ಚದುರಂಗ :** 1916-98. ಚದುರಂಗ ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಕನ್ನಡ ಸಾಹಿತಿ, ಸಣ್ಣಕಥೆಗಾರ, ಕಾದಂಬರಿಕಾರ, ನಾಟಕಕಾರ. ಇವರ ನಿಜನಾಮ ಎಂ.ಎಸ್. ಸುಬ್ರಹ್ಮಣ್ಯರಾಜೇ ಅರಸ್. ಇವರು ಮೈಸೂರು ಜಿಲ್ಲೆ ಹುಣಸೂರು ತಾಲ್ಲೂಕು ಕಲ್ಲಹಳ್ಳಿಯಲ್ಲಿ 1916 ಜನವರಿ 1ರಂದು ಜನಿಸಿದರು. ಜಯನೃಪಕಾವ್ಯ, ಸೂಪಶಾಸ್ತ್ರ - ಮುಂತಾದ ಕೃತಿಗಳನ್ನು ರಚಿಸಿದ ಮಂಗರಸ ಕವಿ ಚದುರಂಗರ ವಂಶದ ಪೂರ್ವಿಕರಲ್ಲಿ ಒಬ್ಬನೆಂದು ಹೇಳಲಾಗುತ್ತದೆ. ಇವರ ಹಿರಿಯ ಅಣ್ಣನವರಿಗೆ ಮೈಸೂರು ರಾಜಮನೆತನದ ಸಂಬಂಧವಿದ್ದದ್ದರಿಂದ ಇವರಿಗೆ ಸಹಜವಾಗಿಯೇ ಅರಮನೆಯ ಸಂಪರ್ಕ ಒದಗಿತ್ತು. ಮೈಸೂರಿನ ರಾಯಲ್‌ಶಾಲೆ, ಬೆಂಗಳೂರಿನ ಇಂಟರ್‌ಮೀಡಿಯಟ್ ಕಾಲೇಜು, ಮೈಸೂರು ಮಹಾರಾಜ ಕಾಲೇಜುಗಳಲ್ಲಿ ವ್ಯಾಸಂಗ ಮಾಡಿ ಬಿ.ಎ. ಪದವಿ ಪಡೆದ ಇವರು ಕಾನೂನು ಮತ್ತು ಸ್ನಾತಕೋತ್ತರ ಶಿಕ್ಷಣಕ್ಕಾಗಿ ಪುಣೆಗೆ ಹೋದರು. ಆದರೆ ಶಿಕ್ಷಣವನ್ನು ಪೂರ್ಣಗೊಳಿಸಲಿಲ್ಲ.

ಸ್ವಾತಂತ್ರ್ಯ ಚಳವಳಿ, ಗಾಂಧೀವಾದ, ಮಾರ್ಕ್ಸ್‌ವಾದ, ಎಂ.ಎನ್. ರಾಯ್ ವಿಚಾರಧಾರೆ, ಡೋಂಗಿ ಬಾಬಾಗಳ ವಿರುದ್ಧದ ಚಳವಳಿಗಳು ಮುಂತಾದ ಸಂಘಟನೆಗಳೂ ತತ್ತ್ವಗಳೂ ಇವರ ಮೇಲೆ ತುಂಬ ಪ್ರಭಾವ ಬೀರಿದವು. ಇವರು ಖಾದಿ ಪ್ರೇಮಿಯಾಗಿ ಅರಮನೆಯ ಪರಿಸರದ ಅಸಮಾಧಾನಕ್ಕೂ ಕಾರಣರಾದರು. ಸಂಪ್ರದಾಯಕ್ಕೆ ವಿರುದ್ಧವಾಗಿ ರೀತಿಯಲ್ಲಿ ತಾವು ಮೆಚ್ಚಿದವರನ್ನು ವಿವಾಹವಾದರು. ಮೈಸೂರನ್ನು ಬಿಟ್ಟು ಸ್ವಂತಸ್ಥಳ ಕಲ್ಲಹಳ್ಳಿಯನ್ನು ಸೇರಿ (1952) ಕೃಷಿಕ ಜೀವನವನ್ನು ಆರಂಭಿಸಿದರು.

ಬಾಲ್ಯದ ದಿನಗಳಲ್ಲಿ ಅರಮನೆಯ ಮಹಿಳಾ ಕಾರ್ಯಕರ್ತೆಯರು ಹೇಳುತ್ತಿದ್ದ ಕಥೆಗಳನ್ನು ಆಲಿಸುತ್ತಿದ್ದ ಇವರಿಗೆ ಕಥೆಗಾರಿಕೆ ಸಹಜವಾಗಿಯೇ ಸಿದ್ಧಿಸಿತು. ಇವರ ತಾಯಿಯವರೂ ಇವರಿಗೆ ಎಷ್ಟೋ ಕಥೆಗಳನ್ನು ಹೇಳುತ್ತಿದ್ದರು. ಚದುರಂಗರು ಮೊದಮೊದಲು ಕವಿತೆಗಳನ್ನು ಬರೆದರು. ಕಾಲೇಜು ಪತ್ರಿಕೆಗಳಲ್ಲಿ ಇವರ ಕವಿತೆಗಳು ಬೆಳಕು ಕಂಡವು. ನವೋದಯದ ಪ್ರಸಿದ್ಧ ಬರೆಹಗಾರರಾದ ಮಾಸ್ತಿವೆಂಕಟೇಶ ಅಯ್ಯಂಗಾರ್ ಮತ್ತು ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಪ್ರಭಾವದಿಂದಾಗಿ ಇವರ ಮನಸ್ಸು ಗದ್ಯದತ್ತ ತಿರುಗಿತು. ಗ್ರಾಮೀಣ ಪರಿಸರದ ಬದುಕಿನ ಬಗ್ಗೆ ವಿಶೇಷ ಒಲವು ಉಂಟಾಯಿತು. ಮುಖ್ಯವಾಗಿ ಟಾಲ್‌ಸ್ಟಾಯ್, ಮ್ಯಾಕ್ಸಿಂಗಾರ್ಕಿ, ದಾಸ್ತೋವಸ್ಕಿ, ಬಾಲ್ಜಾಕ್, ಆಲ್ಬರ್ಟ್ ಕಾಮೂ ಮೊದಲಾದ ಬರೆಹಗಾರರೂ ಪ್ರಭಾವ ಬೀರಿದರು.

ಬೆಂಗಳೂರಿನ 'ಛಾಯಾ' ಪತ್ರಿಕೆಯಲ್ಲಿ ಕಥೆಗಳನ್ನು ಪ್ರಕಟಿಸುವುದರ ಮೂಲಕ ಚದುರಂಗರು ಕನ್ನಡಿಗರ ಗಮನ ಸೆಳೆದರು. ಸ್ವಪ್ನಸುಂದರಿ ಕಥಾಸಂಕಲನ 1948ರಲ್ಲಿ ಪ್ರಕಟವಾಯಿತು. ಶವದಮನೆ (1950), ಇಣುಕುನೋಟ (1950), ಬಂಗಾರದ ಗೆಜ್ಜೆ (1951), ಮೀನಿನ ಹೆಜ್ಜೆ



(1958), ಕ್ಯಾಟೆ (1992), ಮೃಗಯಾ (1998), ಬಣ್ಣದ ಬೊಂಬೆ - ಇವು ಇವರ ಇತರ ಕಥಾ ಸಂಕಲನಗಳು. ನವೋದಯದಿಂದ ಹಿಡಿದು ದಲಿತ ಬಂಡಾಯದವರೆಗಿನ ಸಾಹಿತ್ಯದ ಎಲ್ಲ ಪಂಥಗಳನ್ನೂ ಚಳವಳಿಗಳನ್ನೂ ಚದುರಂಗರು ಕಂಡಿದ್ದರಾದರೂ ಇವರು ಯಾವೊಂದು ನಿರ್ದಿಷ್ಟ ಪಂಥಕ್ಕೆ ಕಟ್ಟುಬೀಳಲಿಲ್ಲ. ಆ ಎಲ್ಲ ಪ್ರಭಾವಗಳನ್ನೂ ಜೀರ್ಣಿಸಿಕೊಂಡರು. "ಶವದ ಮನೆ' ಇವರ ಅತ್ಯಂತ ಜನಪ್ರಿಯ ಕಥೆಗಳಲ್ಲಿ ಒಂದು. ಆಸ್ಪತ್ರೆಗಳು ಬಡವರ ಪಾಲಿಗೆ ಶವದ ಮನೆಗಳಾಗಿಬಿಟ್ಟಿರುವುದರಿಂದ ಬದುಕುವುದಕ್ಕಿಂತ ಸಾಯುವುದೇ ಮೇಲು ಎಂಬ ನಿರ್ಧಾರಕ್ಕೆ ಬರುವಂತೆ ಪರಿಸ್ಥಿತಿ ಉಂಟಾಗುತ್ತದೆ. ಹಾಸ್ಯದ ಹೊನಲಿನಲ್ಲಿ ತೀವ್ರ ವಿಡಂಬನೆ ಇಲ್ಲಿ ಸಾಧ್ಯವಾಗಿದೆ. 'ನಾಲ್ಕು ಮೊಳಭೂಮಿ' ಕಥೆಯೂ ಕಥೆಯೊಳಗೊಂದು ಕಥೆಯ ತಂತ್ರದಿಂದ ಆಕರ್ಷಕವಾಗಿದೆ.

ಕಾದಂಬರಿ ಕ್ಷೇತ್ರದಲ್ಲೂ ಇವರ ಸಾಧನೆ ಗಣನೀಯವಾದುದು. ಸರ್ವಮಂಗಳ (1950), ಉಯ್ಯಾಲೆ (1960), ವೈಶಾಖ (1981), ಹೆಜ್ಜಾಲ (1998) - ಈ ಕಾದಂಬರಿಗಳು ಇವರಿಗೆ ಕೀರ್ತಿಯನ್ನು ತಂದುಕೊಟ್ಟವು. ಮಾನವೀಯ ಸಂಬಂಧದ ವಸ್ತುವಿನಿಂದಾಗಿ ಪ್ರಾದೇಶಿಕ ಹಿನ್ನೆಲೆಯನ್ನೊಳಗೊಂಡ 'ಸರ್ವಮಂಗಳ' ಹೊಸಅಲೆಯ ಕಾದಂಬರಿ ಎನಿಸಿ ಅದ್ಭುತ ಪ್ರಚಾರ ಪಡೆದುಕೊಂಡಿತು. ಇದರಲ್ಲಿನ ನಾಯಕಿ ಸರ್ವಮಂಗಳ

ತನ್ನ ಇಚ್ಛೆಗೆ ವಿರುದ್ಧವಾಗಿ ವಿವಾಹವಾದ ಮುಗ್ಧ ಗಂಡನ ಅಭಿವೃದ್ಧಿಯನ್ನೂ ಬಯಸುತ್ತಾಳೆ. ಅದೇ ರೀತಿಯಲ್ಲಿ ತಾನು ಪ್ರೀತಿಸಿದ ನಟರಾಜನನ್ನು ವಿವಾಹವಾದ ದುರ್ಗಿಯ ಶ್ರೇಯಸ್ಸನ್ನೂ ಬಯಸುವುದರಿಂದ ಅವಳ ಪಾತ್ರ ಉದಾತ್ತವಾಗಿ ಕಾಣಿಸುತ್ತದೆ. ಜೊತೆಗೆ ಅವಳ ಸ್ವಭಾವ ಉಳಿದೆಲ್ಲ ಪಾತ್ರಗಳ ಮೇಲೂ ಬೆಳಕುಚೆಲ್ಲುತ್ತದೆ. ಕೇಂದ್ರ ಪಾತ್ರವಾದ ಸರ್ವಮಂಗಳೆಯ ಉದಾತ್ತ ವ್ಯಕ್ತಿತ್ವವನ್ನು ಎತ್ತಿಹಿಡಿಯುವ ಈ ಕಾದಂಬರಿಯಲ್ಲಿ ಸ್ವಾತಂತ್ರ್ಯ ಚಳವಳಿ ಮತ್ತಿತರ ಹೋರಾಟಗಳ ನಿರೂಪಣೆಯೂ ಇದೆ. ಅಂತಿಮವಾಗಿ ಸರ್ವಮಂಗಳೆ ಮತ್ತು ನಟರಾಜನ ಬದುಕಿನ ದುರಂತವನ್ನು ನಿರೂಪಿಸುವುದೇ ಕಾದಂಬರಿಯ ಮುಖ್ಯ ಉದ್ದೇಶ ಎನ್ನಬಹುದು.

ರವೀಂದ್ರನಾಥ ಠಾಕೂರರ 'ಚಾರುಲತಾ' ಕಾದಂಬರಿಯನ್ನು ಹೋಲುವ 'ಉಯ್ಯಾಲೆ' ಕನ್ನಡದ ಶ್ರೇಷ್ಠ ಕಾದಂಬರಿಗಳಲ್ಲಿ ಒಂದು ಎಂಬ ಪ್ರಶಂಸೆಗೆ ಪಾತ್ರವಾಗಿದೆ. ಗಂಡು ಹೆಣ್ಣುಗಳ ಸೂಕ್ಷ್ಮ ಚಿತ್ರಣವಾಗಿರುವ ಉಯ್ಯಾಲೆ ಎಂಬ ಶೀರ್ಷಿಕೆ ಮಾನಸಿಕ ತುಯ್ದಾಟದ ಸಂಕೇತವಾಗಿದೆ. 'ವೈಶಾಖ' ಹೆಚ್ಚು ವಿಮರ್ಶೆಗೆ ಗುರಿಯಾದ ಕಾದಂಬರಿ. ಹೊಲೆಯರ ಲಕ್ಕ ಮತ್ತು ವೈದಿಕರ ರುಕ್ಮಿಣಿ - ಇವರ ಮೂಲಕ ಸಾಗುವ ಕಾದಂಬರಿಯ ಕಥೆ ವಿಶಿಷ್ಟ ತಂತ್ರದಿಂದ ಕೂಡಿದುದಾಗಿದೆ. ವಸ್ತುವನ್ನು ನಿರ್ವಹಿಸುವಲ್ಲಿ, ನಿರೂಪಿಸುವಲ್ಲಿ ವಿಶಿಷ್ಟವೆನಿಸುವ ಈ ಕಾದಂಬರಿ ಭಾಷಾದೃಷ್ಟಿಯಿಂದಲೂ ಗಣನೀಯವಾದುದು.

'ಹೆಜ್ಜಾಲ' ಕಾದಂಬರಿಯಲ್ಲಿ ತಂದೆಯಿಲ್ಲದ ಕಾಲೂರನ ಹುಟ್ಟಿನ ಅನ್ವೇಷಣೆ ನಡೆಯುತ್ತಿದೆಯೋ ಎಂಬಂತೆ ಕಥೆಯ ಘಟನಾವಳಿಗಳು ಹರಡಿಕೊಂಡಿವೆ. ಈ ಅನ್ವೇಷಣೆ ಲೇಖಕರ ಜೀವಪರ ದೃಷ್ಟಿಯ ಸಂಕೇತವಾಗಿದೆ. ಇದು ಚದುರಂಗರ ಕೊನೆಯ ಕಾದಂಬರಿ. ಇದರಲ್ಲಿ ಇವರ ಅನುಭವಗಳು ಪರಿಪಕ್ವಗೊಂಡ ಸ್ಥಿತಿಯನ್ನು ಕಾಣಲು ಸಾಧ್ಯವಿದೆ. ಮಾದೇವಮ್ಮ, ಪುಟ್ಟೀರಿ ಮೊದಲಾದ ಪಾತ್ರಗಳ ಮೂಲಕ ವ್ಯವಸ್ಥೆಯ ಕ್ರೌರ್ಯ ಮತ್ತು ಅಹಂಕಾರವನ್ನು ಪ್ರಶ್ನಿಸುವ ಕಲಾತ್ಮಕತೆಯ ಸೃಜನಶೀಲತೆ ಕಾದಂಬರಿಯ ಆಂತರ್ಯದಲ್ಲಿದೆ. ಮಾಯಮ್ಮ, ಅಜ್ಜಮ್ಮ, ಕಾಲೂರ ಯಾವ ಪಾತ್ರವೂ ಕಾಲ್ಪನಿಕ ಎನಿಸುವುದಿಲ್ಲ. ಅಜ್ಜಮ್ಮನ ಮರಣ, ನಾಯಿಯ ಬಗೆಗೆ ಕಾಲೂರ ತೋರುವ ಪ್ರೀತಿ, ಹಾವಿನಿಂದ ಕಚ್ಚಿಸಿಕೊಂಡ ಮಾದೇವಮ್ಮನನ್ನು ನಾಟಿಔಷಧಿಯಿಂದ ಗುಣಪಡಿಸುವುದು - ಅಖಂಡ ಜೀವನ ಪ್ರೀತಿಯ ಅಭಿವ್ಯಕ್ತಿ ಮೂಡಿಸುವಂಥವು. ಗ್ರಾಮ ಜೀವನದ ಇಂಥ ದಟ್ಟ ಅನುಭವಗಳು ಕಲೆಯಾಗಿ ಅರಳಿರುವುದರಿಂದ ಕಾದಂಬರಿಗೆ ವಿಶಿಷ್ಟಸ್ಥಾನ ಸಂದಿದೆ.

ಕುಮಾರರಾಮ (1966), ಇಲಿಬೋನು (1972), ಬಿಂಬ (1990) - ಈ ನಾಟಕಗಳನ್ನು ಬರೆಯುವುದರ ಮೂಲಕ ಚದುರಂಗರು ನಾಟಕಕಾರರೆನಿಸಿದರು. ಇಲಿಬೋನು ಒಂದು ಅಸಂಗತ ನಾಟಕ. ಚದುರಂಗರು ಉತ್ತರ ರಾಮಾಯಣದ ವಸ್ತುವನ್ನು ಪ್ರತ್ಯೇಕ ನೆಲೆಯಲ್ಲಿ ಸೃಜಿಸುವ ಕೆಲಸವನ್ನು 'ಬಿಂಬ' ನಾಟಕದಲ್ಲಿ ಮಾಡಿದ್ದಾರೆ. 1951ರಲ್ಲಿ ಪ್ರಕಟವಾದ 'ನನ್ನ ರಸಿಕ' ಚದುರಂಗರ ಗದ್ಯಗೀತೆಯಾದರೆ, ಅಲೆಗಳು (1981) ಹನಿಗವನಗಳ ಸಂಗ್ರಹವಾಗಿದೆ. ಚದುರಂಗರಿಗೆ ಚಲನಚಿತ್ರ ಕ್ಷೇತ್ರದಲ್ಲಿಯೂ ಪ್ರವೇಶವಿತ್ತು. ಪುಣೆಯಲ್ಲಿ ಸಿನಿಮಾ ತಂತ್ರದ ಬಗ್ಗೆ ಅಧ್ಯಯನ ಮಾಡಿದ್ದರು. 1948ರಲ್ಲಿ ಸಿದ್ಧವಾದ 'ಭಕ್ತಕುಂಬಾರ' ಚಿತ್ರಕ್ಕೆ ಕಥಾಲೇಖಕರಾಗಿದ್ದರು. ವಿದೇಶಿ ಚಿತ್ರ ಸಂಸ್ಥೆ ಎಂ.ಜಿ.ಎಂ. ತಯಾರಿಸಿದ ಇಂಗ್ಲಿಷಿನ 'ಮಾಯಾ' ಚಿತ್ರದ ಸಹನಿರ್ದೇಶಕರಾಗಿದ್ದರು. ಇವರೆ ನಿರ್ಮಿಸಿದ 'ಸರ್ವಮಂಗಳಾ' ಚಿತ್ರಕ್ಕೆ ರಾಜ್ಯ ಚಲನಚಿತ್ರ ಪ್ರಶಸ್ತಿ ದೊರಕಿತ್ತು (1967-68). 'ಉಯ್ಯಾಲೆ' ಚಿತ್ರಕ್ಕಾಗಿ ಇವರಿಗೆ ಉತ್ತಮ ಚಿತ್ರಕಥಾಲೇಖಕ ಪ್ರಶಸ್ತಿಯೂ ದೊರಕಿತು.

ಸಾಹಿತ್ಯಕ ಸಾಧನೆಗಾಗಿ ಇವರಿಗೆ ದೊರಕಿದ ಪ್ರಶಸ್ತಿಗಳು ಹಲವಾರು. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1978 ಮತ್ತು 1994), ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1982, ವೈಶಾಖ ಕಾದಂಬರಿಗೆ), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ - ಇವು ಮುಖ್ಯವಾದುವು. ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಾಕ್ಟರೇಟ್ ಪದವಿ ನೀಡಿ ಗೌರವಿಸಿದೆ (1993). ಇವರು 63ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು (1994). ಇವರು 1998 ಅಕ್ಟೋಬರ್ 19ರಂದು ನಿಧನಹೊಂದಿದರು. (ಜಿ.ಆರ್.ಟಿ.)

**ಚನ್ನಕೇಶವ ಅಯ್ಯಂಗಾರ್, ಎಚ್. :** 1889-1959. ಕನ್ನಡ ಅರುಣೋದಯ ಕಾಲದ ವಿದ್ವಾಂಸರು. ಮಾಸ್ಟರ್ ಆಫ್ ಓರಿಯಂಟಲ್ ಲರ್ನಿಂಗ್ (ಎಂ.ಒ.ಎಲ್.) ಪದವಿ ಪಡೆದ ಪ್ರಥಮ ಕನ್ನಡಿಗರು. ಚಿಕ್ಕಮಗಳೂರು ಜಿಲ್ಲೆಯ ಹಿರೇಮಗಳೂರು ಗ್ರಾಮದಲ್ಲಿ ಹುಟ್ಟಿದರು. ಮೈಸೂರು ಅಧ್ಯಾಪಕರ ಶಿಕ್ಷಣ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದು ಅನಂತರ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ, ಮದರಾಸು ವಿಶ್ವವಿದ್ಯಾಲಯದ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನ ಕನ್ನಡ ವಿಭಾಗದ ಪ್ರಧಾನ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಮುಂಬಯಿ, ಮದರಾಸು ವಿಶ್ವವಿದ್ಯಾಲಯಗಳ ಸೆನೆಟ್ ಸದಸ್ಯರೂ ಕನ್ನಡ ಅಧ್ಯಯನ ಮಂಡಳಿಯ ಸದಸ್ಯರೂ ಆಗಿ ಕೆಲಸಮಾಡಿದರು.



ಕನ್ನಡ ಸಾಹಿತ್ಯ ಪರಿಷತ್ತಿನ ಸಾಹಿತ್ಯ ವಿಭಾಗದ ಕಾರ್ಯದರ್ಶಿಯಾಗಿಯೂ ಪರಿಷತ್ ಪತ್ರಿಕೆ, ಕನ್ನಡನುಡಿ, ವಿಕಟ ಪ್ರತಾಪ ಮತ್ತು ಅರ್ಥಸಾಧಕ ಪತ್ರಿಕೆಗಳ ಸಂಪಾದಕರಾಗಿಯೂ ಕಾರ್ಯ ನಿರ್ವಹಿಸಿದ್ದಾರೆ. ಬಿ.ಎಂ.ಶ್ರೀಕಂಠಯ್ಯ, ಆರ್.ನರಸಿಂಹಾಚಾರ್, ಎಂ.ಎ. ರಾಮನುಜ ಅಯ್ಯಂಗಾರ್ - ಇವರೆಲ್ಲ ಇವರ ಸಹೋದ್ಯೋಗಿಗಳು ಮತ್ತು ಸಮಕಾಲೀನರು. ಇವರು ನಂದಳಿಕೆ ಲಕ್ಷ್ಮೀನಾರಾಯಣಯ್ಯನ (ಮುದ್ದಣ) ಜೊತೆ ಪತ್ರ ವ್ಯವಹಾರ ಇಟ್ಟುಕೊಂಡಿದ್ದರು. ಆತನ ಅದ್ಭುತ ರಾಮಾಯಣದ ಮೂಲಪ್ರತಿಯ ನಕಲು ಪ್ರತಿ ಇವರಲ್ಲಿತ್ತು.

ಇವರಿಗಿಂತ ಹಿಂದೆ ಮದರಾಸು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಪ್ರಧಾನ ಅಧ್ಯಾಪಕರಾಗಿದ್ದ ಆಲೆಮನೆ ವೆಂಕಟರಾಯರು ಮತ್ತು ಸಹೋದ್ಯೋಗಿ ಎಚ್.ಶೇಷಅಯ್ಯಂಗಾರರು ಸಂಪಾದಿಸಿದ್ದ ಶಬ್ದಮಣಿದರ್ಪಣದ ಕೊನೆಯ ಅನುಬಂಧಗಳನ್ನು ಇವರು ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಶಬ್ದಮಣಿದರ್ಪಣದ ಅವತರಣಿಕೆಯನ್ನು ಪರಿಶೀಲಿಸಿ, ಪರಿಷ್ಕರಿಸಿ ಅದರ ಉಪಯುಕ್ತತೆಯನ್ನು ಹೆಚ್ಚಿಸಿದ್ದಾರೆ. ಕನ್ನಡ ಸಾಹಿತ್ಯ ಕುರಿತಾದ ಇವರ ಲೇಖನಗಳು ಆನಲ್ಸ್ ಆಫ್ ಓರಿಯಂಟಲ್ ರಿಸರ್ಚ್ ಪತ್ರಿಕೆಯಲ್ಲಿ ಪ್ರಕಟವಾಗಿವೆ. (ಎ.ಎಸ್.ಕೆ.)

**ಚನ್ನಗಿರಿ :** ದಾವಣಗೆರೆ ಜಿಲ್ಲೆಯ ಒಂದು ತಾಲ್ಲೂಕು ಮತ್ತು ತಾಲ್ಲೂಕು ಕೇಂದ್ರ. ಪಶ್ಚಿಮದಲ್ಲಿ ಹೊನ್ನಾಳಿ ತಾಲ್ಲೂಕು ಮತ್ತು ಶಿವಮೊಗ್ಗ ಜಿಲ್ಲೆ, ಉತ್ತರಕ್ಕೆ ದಾವಣಗೆರೆ ತಾಲ್ಲೂಕು, ಪೂರ್ವಕ್ಕೆ ಚಿತ್ರದುರ್ಗ ಜಿಲ್ಲೆಯೂ ದಕ್ಷಿಣದಲ್ಲಿ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕು - ಇವು ಈ ತಾಲ್ಲೂಕಿನ ಮೇರೆಗಳು. ಈ ತಾಲ್ಲೂಕಿನಲ್ಲಿ ಬಸವಾಪಟ್ಟಣ, ಚನ್ನಗಿರಿ, ಸಂತೆಬೆನ್ನೂರು ಮತ್ತು ಉಬ್ರಾಣಿ ಹೋಬಳಿಗಳು, 245 ಹಳ್ಳಿಗಳು ಇವೆ. ವಿಸ್ತೀರ್ಣ 1212 ಚ.ಕಿಮೀ. ಜನಸಂಖ್ಯೆ 2,92,362.

ತಾಲ್ಲೂಕಿನ ದಕ್ಷಿಣ ಹಾಗೂ ಪಶ್ಚಿಮಭಾಗದಲ್ಲಿ ಬೆಟ್ಟಗಳ ಸಾಲುಗಳಿವೆ. ಇವುಗಳಿಂದ ಹರಿದು ಬರುವ ತೊರೆಗಳು 64ಕಿಮೀ ಸುತ್ತಳತೆಯುಳ್ಳ ಶಾಂತಿ ಸಾಗರವನ್ನು (ಸೂಳೆಕೆರೆ) ಸೇರುತ್ತವೆ. ಇಲ್ಲಿಂದ ಹರಿದು ಹರಿಹರದ ಬಳಿಯಲ್ಲಿ ತುಂಗಭದ್ರಾ ನದಿಯನ್ನು ಸೇರುವ ಹೊಳೆಗೆ ಹರಿದ್ರಾ ಎಂದು ಹೆಸರು. ಈ ತಾಲ್ಲೂಕಿನ ನೈಋತ್ಯ ಭಾಗದಲ್ಲಿ ಮಾತ್ರ

ಸ್ವಲ್ಪ ಅರಣ್ಯವಿದೆ. ಉಳಿದ ಪ್ರದೇಶದಲ್ಲಿ ಮೈದಾನ ಮತ್ತು ವಿಸ್ತಾರವಾದ ಹುಲ್ಲುಗಾವಲುಗಳಿವೆ. ಈ ತಾಲ್ಲೂಕಿನ ಉತ್ತರದಲ್ಲಿ ತೋಟಗಳೂ ಕಬ್ಬಿನ ಗದ್ದೆಗಳೂ ಹೆಚ್ಚು. ಶಾಂತಿಸಾಗರದ ಸುತ್ತಮುತ್ತಲ ಪ್ರದೇಶಗಳನ್ನು ವ್ಯವಸಾಯಕ್ಕಾಗಿ ಉತ್ತಮಗೊಳಿಸಲಾಗಿದೆ. ಹತ್ತಿರದಲ್ಲಿರುವ ಭದ್ರಾ ಜಲಾಶಯಕ್ಕೂ ಶಾಂತಿಸಾಗರಕ್ಕೂ ಸಂಬಂಧವೇರ್ಪಡಿಸಿರುವುದರಿಂದ ನೀರಾವರಿ ಸೌಲಭ್ಯ ಹೆಚ್ಚು ಲಭ್ಯವಾಗಿ ವ್ಯವಸಾಯ ವಾಣಿಜ್ಯಗಳಲ್ಲಿ ಈ ತಾಲ್ಲೂಕು ಅಭಿವೃದ್ಧಿ ಹೊಂದಿದೆ. ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ 749ಮಿಮೀ. ಸೂಳೆಕೆರೆಯ ಉತ್ತರ ಮತ್ತು ವಾಯುವ್ಯ ಭಾಗದಲ್ಲಿ ಫಲವತ್ತಾದ ಕರಿಮಣ್ಣಿನ ಭೂಮಿ ಇದ್ದು ಹತ್ತಿ, ಜೋಳ, ರಾಗಿಯನ್ನು ಬೆಳೆಯುವರು. ತಾಲ್ಲೂಕಿನ ದಕ್ಷಿಣ ಭಾಗದಲ್ಲಿ ಕಲ್ಲುಮಿಶ್ರಿತ ಕೆಂಪುಮಣ್ಣಿನ ಭೂಮಿ ಇದೆ. ತಾಲ್ಲೂಕಿನ ಉಳಿದ ಭಾಗದಲ್ಲಿ ಕಪ್ಪು ಮತ್ತು ಕೆಂಪು ಮಣ್ಣಿನ ಭೂಮಿ ಇದ್ದು ರಾಗಿ, ಜೋಳ, ಹತ್ತಿ, ತೊಗರಿ, ಹುರುಳಿಯನ್ನು ಬೆಳೆಯುತ್ತಾರೆ. ತಾಲ್ಲೂಕಿನಲ್ಲಿ ಉತ್ತಮ ಮರಗಳು ದೊರೆಯುವುದರಿಂದ ಮರಗೆಲಸ ಇಲ್ಲಿನ ಮುಖ್ಯ ಉದ್ಯಮಗಳಲ್ಲೊಂದು. ಕಂಬಳಿ ಮತ್ತು ಹತ್ತಿನೇಯ್ಗೆ, ಮಡಕೆ ಕುಡಿಕೆಗಳ ತಯಾರಿಕೆ ಮತ್ತು ಗಾಜಿನ ಬಳೆಗಳ ಕೈಗಾರಿಕೆಗಳಿವೆ.

ಈ ತಾಲ್ಲೂಕಿನ ಬಸವಾಪಟ್ಟಣ (ನೋಡಿ) ಹಿಂದೆ ಒಂದು ಪಾಳೆಯಪಟ್ಟಾಗಿತ್ತು. ದೇವರಹಳ್ಳಿಯ (ನೋಡಿ) ಹತ್ತಿರವಿರುವ ಉಡುಮರಡಿ ಬೆಟ್ಟದ ಮೇಲಿರುವ ರಂಗನಾಥ' ದೇವಾಲಯ ಪ್ರಸಿದ್ಧವಾದದ್ದು. ಸಂತೆಬೆನ್ನೂರಿನಲ್ಲಿ (ನೋಡಿ) ಪ್ರತಿವಾರವೂ ನಡೆಯುವ ಸಂತೆ ದೊಡ್ಡದು. ಈ ತಾಲ್ಲೂಕಿನ ಹೋದಿಗೆರೆಯಲ್ಲಿ (ನೋಡಿ) ಶಿವಾಜಿಯ ತಂದೆ ಶಹಾಜಿಯ ಸಮಾಧಿಯಿದೆ.

ಚನ್ನಗಿರಿ ಈ ತಾಲ್ಲೂಕಿನ ಆಡಳಿತ ಕೇಂದ್ರ. ಶಿವಮೊಗ್ಗದ ಈಶಾನ್ಯಕ್ಕೆ 52ಕಿಮೀ ದೂರದಲ್ಲಿ ಭದ್ರಾವತಿ-ಚಿತ್ರದುರ್ಗ ಹೆದ್ದಾರಿಯಲ್ಲಿದೆ. ಜನಸಂಖ್ಯೆ 18,517. ಇದೊಂದು ಉತ್ತಮ ವ್ಯಾಪಾರ ಕೇಂದ್ರವಾಗಿದೆ. ಚನ್ನಗಿರಿಯಿಂದ ಭದ್ರಾವತಿ, ಹೊಳಲ್ಕೆರೆಗಳಿಗೂ ಶಿವನಿ, ಹೊಳೆಹೊನ್ನೂರು, ನಲ್ಲೂರು, ಬಸವಾಪಟ್ಟಣ, ಕುಕನೂರು, ಸಂತೆಬೆನ್ನೂರು, ತ್ಯಾವಣಗಿ, ಬಾಡಗಳ ಕಡೆಗೂ ರಸ್ತೆ ಸಂಪರ್ಕವಿದೆ. ಭದ್ರಾವತಿ-ಚಿತ್ರದುರ್ಗ ರಸ್ತೆ ಈ ಪಟ್ಟಣದ ಮೂಲಕ ಸಾಗುತ್ತದೆ. ರಾಣಿ ಚೆನ್ನಮ್ಮಾಜಿ ಇಲ್ಲೊಂದು ಕೋಟೆಯನ್ನು ಕಟ್ಟಿಸಿ ಈ ಪಟ್ಟಣಕ್ಕೆ ತನ್ನ ಹೆಸರನ್ನಿಟ್ಟು ತನ್ನ ತಂಗಿಗೆ ಜಹಗೀರಿಯಾಗಿ ಕೊಟ್ಟಳು. ನಗರದ ನೈಋತ್ಯ ಮೂಲೆಯಲ್ಲಿ ಇರುವ ಸಣ್ಣಬೆಟ್ಟದ ಮೇಲೆ ಕೋಟೆಯಿದೆ.

ಇಲ್ಲಿಯ ಕಲ್ಲೇಶ್ವರ ದೇವಾಲಯ ಹೊಯ್ಸಳ ಶೈಲಿಯ ಹಳೆಯ ಕಟ್ಟಡವೆಂದು ಕಾಣುತ್ತದೆ. ಇದರ ಎರಡು ಗರ್ಭಗೃಹಗಳ ಪೈಕಿ ಒಂದು ದಕ್ಷಿಣಾಭಿಮುಖವಾಗಿದೆ. ಇದರಲ್ಲಿ 5' ಎತ್ತರದ ಕೇಶವ ವಿಗ್ರಹವಿದೆ. ಇನ್ನೊಂದು ಪೂರ್ವಾಭಿಮುಖವಾಗಿದೆ. ಇಲ್ಲಿ ಲಿಂಗವಿದೆ.

ಬೆಟ್ಟದ ತುದಿಯಲ್ಲಿರುವ ದೇವಸ್ಥಾನ ಬೇಟೆ ರಂಗನಾಥ'ಸ್ವಾಮಿಯದು. ಈ ಸ್ಥಳದಿಂದ ಕಾಣುವ ಸುತ್ತಲಿನ ದೃಶ್ಯ ನಯನಮನೋಹರವಾದುದು. ಉತ್ತರದ ಕಡೆಗೆ 19ಕಿಮೀ ದೂರದಲ್ಲಿರುವ ಸೂಳೆಕೆರೆ ರಮ್ಯವಾಗಿ ಕಾಣಿಸುತ್ತದೆ. ಬೇಟೆ ರಂಗನಾಥ' ಸ್ವಾಮಿಯ ದೇವಾಲಯದ ಮೂಲವಿಗ್ರಹದ ಎತ್ತರ 3'. ಶಂಕ, ಚಕ್ರ, ಬಿಲ್ಲು ಬಾಣಗಳಿಂದ ಅಲಂಕೃತವಾಗಿರುವ ಈ ಮೂರ್ತಿ ಬೇಟೆಗಾರನ ಉಡುಪು ತೊಡಪುಗಳಿಂದ ಕೂಡಿದೆ.

ಕಲ್ಲುಮಠ ಎನ್ನುವ ಒಂದು ವೀರಶೈವ ಮಠವೂ ಇಲ್ಲುಂಟು. ಇಲ್ಲಿಯ ದೊಡ್ಡ ಮಸೀದಿಯಲ್ಲಿ ಮೊಹಬ್ಬತ್-ಷಾ-ಮಸ್ತಾನ್ ಖಾದ್ರಿ ಎನ್ನುವವರ ಗೋರಿಯುಂಟು. ಇದು 1636ರಲ್ಲಿ ನಿರ್ಮಿತವಾದುದು. ಟಿಪ್ಪು, ದಿವಾನ್ ಪೂರ್ಣಯ್ಯ ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರು ಈ ಮಸೀದಿಗೆ ಸನ್ನದುಗಳನ್ನು ನೀಡಿದ್ದರೆಂದು ತಿಳಿದುಬರುತ್ತದೆ. *

**ಚನ್ನಪಟ್ಟಣ :** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೈಋತ್ಯ ಭಾಗದಲ್ಲಿರುವ ತಾಲ್ಲೂಕು ಹಾಗೂ ಅದರ ಮುಖ್ಯ ಸ್ಥಳ. 1873ರಲ್ಲಿ ಚನ್ನಪಟ್ಟಣ ಕ್ಲೋಸ್‌ಪೇಟೆಯ (ಈಗಿನ ರಾಮನಗರ) ಉಪ-ತಾಲ್ಲೂಕು ಎನಿಸಿತ್ತು; 1892ರಲ್ಲಿ ಕ್ಲೋಸ್‌ಪೇಟೆಯೇ ಚನ್ನಪಟ್ಟಣದ ಉಪತಾಲ್ಲೂಕಾಗಿ ಪರಿಗಣಿಸಲ್ಪಟ್ಟಿತು. ಈಗ ಎರಡೂ ಬೇರೆ ಬೇರೆಯಾಗಿವೆ. ತುಮಕೂರು ಜಿಲ್ಲೆಯ ಕುಣಿಗಲು, ಬೆಂಗಳೂರು ಜಿಲ್ಲೆಯ ರಾಮನಗರ ಹಾಗೂ ಕನಕಪುರ, ಮಂಡ್ಯ ಜಿಲ್ಲೆಯ ಮಳವಳ್ಳಿ ಮತ್ತು ಮದ್ದೂರು ತಾಲ್ಲೂಕುಗಳು ಈ ತಾಲ್ಲೂಕನ್ನು ಸುತ್ತುವರಿದಿವೆ. ಕಸಬ, ವಿರೂಪಾಕ್ಷಪುರ, ಮಳೂರು ಹೋಬಳಿಗಳು, 145 ಗ್ರಾಮಗಳಿವೆ. ತಾಲ್ಲೂಕಿನ ವಿಸ್ತೀರ್ಣ 542.5 ಚ.ಕಿಮೀ. ಜನಸಂಖ್ಯೆ 2,52,563.

ಈ ಪ್ರದೇಶದ ಮೇಲ್ಮೈ ಲಕ್ಷಣಗಳನ್ನು ಗಮನದಲ್ಲಿಟ್ಟು ಈ ತಾಲ್ಲೂಕನ್ನು ಎರಡು ಭಾಗವಾಗಿ ವಿಂಗಡಿಸಬಹುದು: (1) ಉತ್ತರ ಮತ್ತು ವಾಯುವ್ಯ ಭಾಗಗಳಲ್ಲಿ ಹಲವು ಬೆಟ್ಟಗಳ ಸಾಲಿದ್ದು, ಹೆಚ್ಚಾಗಿ ಬೆಂಗಾಡು ಹಾಗೂ ಕುರುಚಲು ಕಾಡುಗಳು ಕಂಡುಬರುವುವು. ಕೆರೆಗಳು ಮೊದಲಾದ ನೀರಾವರಿ ಸಾಧನಗಳಾವುವೂ ಸಾಮಾನ್ಯವಾಗಿ ಕಂಡುಬರುವುದಿಲ್ಲ. (2) ದಕ್ಷಿಣ ಮತ್ತು ನೈಋತ್ಯ ಭಾಗಗಳು ಮೈದಾನ ಪ್ರದೇಶವಾಗಿದ್ದು, ಜನಭರಿತ ಗ್ರಾಮಗಳು ಹಾಗೂ ಹಲವು ಮುಖ್ಯ ಕೆರೆಗಳಿಂದ ಕೂಡಿವೆ.



ಬಣ್ಣದ ಸಾಮಾನು ತಯಾರಿಕೆ

ಕಣ್ವ (ನೋಡಿ) ಈ ತಾಲ್ಲೂಕಿನ ಮುಖ್ಯ ನದಿ. ರಾಮನಗರ ತಾಲ್ಲೂಕಿನಿಂದ ಬರುವ ಈ ನದಿ ಗದ್ದೆ ತೋಟಗಳಿಂದ ಕೂಡಿರುವ ವಿಶಾಲ ಹಾಗೂ ಫಲವತ್ತಾದ ಕಣಿವೆಯ ಮೂಲಕ ಹರಿದು ಹೋಗುತ್ತದೆ. ಅಬ್ಬೂರಿನ ಹತ್ತಿರ ಇದಕ್ಕೆ ಒಂದು ಕಟ್ಟೆಯನ್ನು ಕಟ್ಟಿದ್ದು, ಇದರಿಂದಾಗಿ ನೀರಾವರಿ ಸೌಕರ್ಯ ಒದಗಿದೆ. ಹಲವು ಕೆರೆಗಳೂ ಇವೆ.

ಈ ಪ್ರದೇಶದ ಭೂಮಿ ಅಷ್ಟು ಸಮವಿಲ್ಲದ್ದರಿಂದ, ಇಲ್ಲಿನ ಮಣ್ಣು ಸಾಕಷ್ಟು ವೈವಿಧ್ಯಮಯವಾಗಿದೆ. ನೀರಿನ ಅನುಕೂಲ ಹೆಚ್ಚಿರುವಲಿ ಬತ್ತ, ಕಬ್ಬು, ತೆಂಗು, ಬಾಳೆ, ಮಾವು, ಅಡಕೆ ಮತ್ತು ವೀಳ್ಯದೆಲೆಗಳನ್ನು ಬಹಳವಾಗಿ ಬೆಳೆಯುವರು. ಕಣ್ವನದಿಯ ಕೆಳದಂಡೆಗಳ ಮೇಲೆ, ನೀರಿನ ಆಸರೆ ಹೆಚ್ಚಾಗಿದ್ದು ಇಲ್ಲಿನ ಮಣ್ಣೂ ಪ್ರಶಸ್ತವಾದ್ದರಿಂದ ಹಲವಾರು ತೆಂಗಿನ ತೋಟಗಳು ಸುಂದರವಾಗಿ ಹಬ್ಬಿವೆ. ಖುಷ್ಕಿ ಜಮೀನಿನಲ್ಲಿ ರಾಗಿ, ಜೋಳ ಮುಂತಾದವನ್ನು ಬೆಳೆಯುವರು.

ರೇಷ್ಮೆಸಾಕಣೆ, ಅದರ ನೂಲು ತೆಗೆಯುವುದೂ ಇಲ್ಲಿನ ಜನರ ಒಂದು ಮುಖ್ಯವಾದ ಕಸಬು. ಇಲ್ಲಿನ ಹವೆ ಈ ವ್ಯವಸಾಯಕ್ಕೆ ಬಹಳ ಅನುಕೂಲಕರವಾಗಿದೆ. ಇಲ್ಲಿ ಉಪ್ಪುನೇರಳೆ ಬೆಳೆ ಹೆಚ್ಚು. ತಾಲ್ಲೂಕಿನ ಹಲವೆಡೆಗಳಲ್ಲಿ ಹತ್ತಿಬಟ್ಟೆ ನೇಯ್ಗೆಯಿದೆ.

ಚನ್ನಪಟ್ಟಣದ ಉತ್ತರಕ್ಕೆ 8ಕಿಮೀ ದೂರದಲ್ಲಿ ಕಣ್ವ ನದಿಯ ದಡದಲ್ಲಿರುವ ಅಬ್ಬೂರು ಪ್ರಸಿದ್ಧ ಮಾಧ್ವಮತ ಕೇಂದ್ರಗಳಲ್ಲೊಂದು. ಬ್ರಹ್ಮಣ್ಯತೀರ್ಥರ ಬೃಂದಾವನವಿರುವುದು ಇಲ್ಲೇ. ಇವರ ಗುರುಗಳಾದ ಪುರುಷೋತ್ತಮ ತೀರ್ಥರು ಇದರ ಬಳಿಯಲ್ಲಿ ಸಶರೀರವಾಗಿ ಗುಹಾಪ್ರವೇಶ ಮಾಡಿದರೆಂಬ ಹೇಳಿಕೆಯುಂಟು. ವ್ಯಾಸರಾಯರೂ ಇಲ್ಲೇ ನೆಲಸಿದ್ದರೆಂದೂ ಶ್ರೀಪಾದರಾಯರು ತಮ್ಮ ಬಾಲ್ಯವನ್ನು ಇಲ್ಲೇ ಕಳೆದರೆಂದೂ ಪ್ರತೀತಿ. ಅಪ್ರಮೇಯ ದೇವಾಲಯವಿರುವ ದೊಡ್ಡಮಳೂರು ಐತಿಹಾಸಿಕ ಸ್ಥಳ.

ಸಮೀಪದ ಚಿಕ್ಕಮಳೂರಿನಲ್ಲಿ ಚೋಳರ ಕಾಲದ ಕೆಲವು ದೇವಾಲಯಗಳಿವೆ. ಚನ್ನಪಟ್ಟಣಕ್ಕೆ 9ಕಿಮೀ ದೂರದಲ್ಲಿರುವ ಮಾನಕುಂದ (ಪ್ರಾಚೀನ ಮಾಕುಂದ) ಗಂಗವಂಶದ ಭೂವಿಕ್ರಮ ಮತ್ತು ಶಿವಮಾರರ ರಾಜಧಾನಿಯಾಗಿತ್ತು. ಜಗದೇವರಾಯನ ತಮ್ಮ ಯುವರಾಜ ಅಂಕುಶರಾಯ ಇಲ್ಲಿ ಸ್ವಲ್ಪಕಾಲ ಇದ್ದನಂತೆ. ಚನ್ನಪಟ್ಟಣದ ದಕ್ಷಿಣಕ್ಕೆ 8ಕಿಮೀ ದೂರದಲ್ಲಿರುವ ಹೊಂಗನೂರು, ಗಂಗರ ಕಾಲದಲ್ಲಿ ಚಿಕ್ಕಗಂಗವಾಡಿಯ ಮುಖ್ಯಪಟ್ಟಣವೆನಿಸಿತ್ತು. ಅನಂತರ ಹೊಯ್ಸಳ ರಾಜ್ಯಪಾಲನ ವಾಸ ಸ್ಥಾನವೆನಿಸಿತ್ತು. ಚನ್ನಪಟ್ಟಣದಿಂದ 6ಕಿಮೀ ದೂರದಲ್ಲಿ ಸಣ್ಣ ನದಿಯ ಎಡದಂಡೆಯಲ್ಲಿರುವ ಕೂಡಲೂರು ಚೋಳರ ಆಳಿಕೆಯಲ್ಲಿ ರಾಜರಾಜ ಚತುರ್ವೇದಿಮಂಗಲಂ ಎಂದು ಪ್ರಸಿದ್ಧವಾಗಿತ್ತು. ಇಲ್ಲಿ ಚೋಳರ ಕಾಲದ ಅವಶೇಷಗಳಿವೆ. ಆ ಕಾಲದ ಕೆಲವು ಸುಂದರ ಕಂಚಿನ ವಿಗ್ರಹಗಳು ದೊರಕಿವೆ. ಈ ಗ್ರಾಮವನ್ನು ಹೈದರ್ ಅಲಿ ಫಕೀರನೊಬ್ಬನಿಗೆ ಇನಾಂ ಕೊಟ್ಟಂತೆ ತಿಳಿದುಬರುತ್ತದೆ. ಕಣ್ವ ಜಲಾಶಯ ಒಂದು ಪ್ರೇಕ್ಷಣೀಯ ಸ್ಥಳ. ನಾಗವಾರ, ಮೈಲನಾಯಕನಹಳ್ಳಿ, ಮಂಗಳವಾರಪೇಟೆ, ಅಕ್ಕೂರು, ಇಗ್ಗಲೂರು, ಸೋಗಲ, ಚಕ್ಕೆರೆ ಮತ್ತು ಬೇವೂರು ಈ ತಾಲ್ಲೂಕಿನ ಇತರ ಕೆಲವು ಮುಖ್ಯ ಗ್ರಾಮಗಳು.



ಬಣ್ಣದ ಆಟಿಕೆಗಳು

ಚನ್ನಪಟ್ಟಣ ಈ ತಾಲ್ಲೂಕಿನ ಆಡಳಿತ ಕೇಂದ್ರ. ಬೆಂಗಳೂರಿನ ನೈಋತ್ಯದಲ್ಲಿ ಬೆಂಗಳೂರು-ಮೈಸೂರು ರಸ್ತೆಯಲ್ಲಿ 60ಕಿಮೀ ದೂರದಲ್ಲಿದೆ. ಬೆಂಗಳೂರು-ಮೈಸೂರು ರೈಲುಮಾರ್ಗ ಈ ಊರನ್ನು ಹಾದುಹೋಗುತ್ತದೆ. ಚನ್ನಪಟ್ಟಣದಿಂದ ಆಗ್ನೇಯದಲ್ಲಿ ಸಾತನೂರಿಗೆ ಒಂದು ರಸ್ತೆಯಿದ್ದು, ಅದರ ಮತ್ತೊಂದು ಕವಲುರಸ್ತೆ ಹಲಗೂರಿಗೆ ಹೋಗುತ್ತದೆ. ಜನಸಂಖ್ಯೆ 63,561.

ಚನ್ನಪಟ್ಟಣ ಒಂದು ವ್ಯಾಪಾರ ಕೇಂದ್ರ. ಪಟ್ಟಣದ ದಟ್ಟವಾದ ಜನವಸತಿ ಇರುವುದು ಶುಕ್ರವಾರಪೇಟೆಯಲ್ಲಿ. ಇದು ಕೋಟೆ ಪ್ರದೇಶದ ಈಶಾನ್ಯದಲ್ಲಿದೆ. ಮೃದುವಾದ ಆಲೆಮರದ ಬಣ್ಣದ ಸಾಮಾನುಗಳು ತಯಾರಾಗುವುದು ಇಲ್ಲೇ; ಇವು ಇಂದಿಗೂ ಚನ್ನಪಟ್ಟಣದ ಬೊಂಬೆಗಳು ಎಂದು ವಿಶ್ವವಿಖ್ಯಾತವಾಗಿದ್ದು ಹೊರದೇಶಗಳಿಗೆ ರಫ್ತಾಗುತ್ತವೆ. ವೀಣೆಯ ತಂತಿಗಳೂ ಗಾಜಿನ ಬಳೆಗಳೂ ಹಿಂದೆ ಇಲ್ಲಿ ತಯಾರಾಗುತ್ತಿದ್ದುವು. ಈಗ ಆ ಕೈಗಾರಿಕೆಗಳು ಕ್ಷೀಣಿಸಿವೆ.

ಚನ್ನಪಟ್ಟಣದಲ್ಲಿ ಕೋಟೆಯ ಆಂಜನೇಯಸ್ವಾಮಿ ಮತ್ತು ವರದರಾಜಸ್ವಾಮಿ ಪೇಟೆಯ ನೀಲಕಂಠೇಶ್ವರಸ್ವಾಮಿ ಈ ದೇವಾಲಯಗಳೇ ಅಲ್ಲದೆ ಮಸೀದಿಗಳೂ ಚರ್ಚುಗಳೂ ಇವೆ. ಚನ್ನಪಟ್ಟಣದಲ್ಲಿ ಕರ್ನಾಟಕ ರಾಜ್ಯ ಪೋಲೀಸ್ ತರಬೇತು ಶಾಲೆ, ತಾಂತ್ರಿಕ ಶಿಕ್ಷಣಶಾಲೆ ಮತ್ತು ಗ್ರಾಮೀಣ ಕರಕುಶಲಗಳ ತರಬೇತು ಕೇಂದ್ರ ಇವೆ. ಸ್ಪನ್ ರೇಷ್ಮೆ ಕಾರ್ಖಾನೆ ಇಲ್ಲಿನ ದೊಡ್ಡ ಕೈಗಾರಿಕೆ.

ಕನ್ನಡ ಬಾಲಬೋಧೆ ಮೊದಲ್ಗೊಂಡು ಅನೇಕ ಕನ್ನಡ ಕೃತಿಗಳನ್ನು ರಚಿಸಿದ ಚ.ವಾಸುದೇವಯ್ಯನವರೂ (ನೋಡಿ) ಕಥೆ, ನಾಟಕ ವಿಮರ್ಶೆ ಮುಂತಾದ ನಾನಾ ಸಾಹಿತ್ಯ ಪ್ರಕಾರಗಳಲ್ಲಿ ಕೃತಿರಚನೆ ಮಾಡಿ ಆಧುನಿಕ ಕನ್ನಡ ಸಾಹಿತ್ಯವನ್ನು ಸಮೃದ್ಧಿಗೊಳಿಸಿದ ಸಿ.ಕೆ.ವೆಂಕಟರಾಮಯ್ಯನವರೂ (ನೋಡಿ) ಚನ್ನಪಟ್ಟಣದವರು. ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದ ಸಾಹಿತಿ ದೇ.ಜವರೇಗೌಡರು (ನೋಡಿ) ಚನ್ನಪಟ್ಟಣ ತಾಲ್ಲೂಕಿನ ಚಕ್ಕೆರೆ ಗ್ರಾಮದವರು.

ಸುಂದರ ತಾಣವಾದ ಈ ಊರು ವ್ಯಾಸತೀರ್ಥರ ಕಾಲದಲ್ಲಿ ಚಂದಪಟ್ಟಣವೆಂದು ಹೆಸರಾಯಿತೆಂದೂ ಅನಂತರ ಇದು ಚನ್ನಪಟ್ಟಣ ಎಂದಾಯಿತೆಂದೂ ಹೇಳಲಾಗಿದೆ. ಕೃತಯುಗದಲ್ಲಿ ವಿಜಯಪಾಲರೂ ತ್ರೇತಾಯುಗದಲ್ಲಿ ಕಣ್ವಮಹರ್ಷಿಗಳೂ ದ್ವಾಪರದಲ್ಲಿ ಲಂಬಕರ್ಣರೂ ಕಲಿಯುಗದಲ್ಲಿ ವಿಜ್ಞಾನೇಶ್ವರರೂ ಇದ್ದರೆಂಬುದು ಜನಪದ ನಂಬಿಕೆ.

3ನೆಯ ಪೆನುಗೊಂಡದ ಯುದ್ಧದಲ್ಲಿ ಅಸಾಧಾರಣ ಶೌರ್ಯ ಪ್ರದರ್ಶಿಸಿದ ಜಗದೇವರಾಯನ ಸೇವೆಯನ್ನು ಮೆಚ್ಚಿ ವಿಜಯನಗರದ ಶ್ರೀರಂಗರಾಯ ಇವನಿಗೆ ಘನಗಿರಿರಕ್ಷಕ ಎಂಬ ಬಿರುದನ್ನೂ ಚನ್ನಪಟ್ಟಣದ ಸೀಮೆಯನ್ನೂ ಕೊಟ್ಟನಂತೆ. ಅಲ್ಲದೆ ತನ್ನ ಮಗಳನ್ನೂ ಕೊಟ್ಟು ವಿವಾಹ ಮಾಡಿದನಂತೆ. ಜಗದೇವರಾಯ ಚನ್ನಪಟ್ಟಣವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಸು.1580ರಲ್ಲಿ ಇಲ್ಲಿನ ಕೋಟೆಯನ್ನು ಕಟ್ಟಿಸಿದ. ಆತನ ಮರಣಾನಂತರ, ಅವನ ಮಗ ಕುಮಾರ ಜಗದೇವರಾಯ ಆಳಿದ (ನೋಡಿ: ಚನ್ನಪಟ್ಟಣದ ಪಾಳೆಯಗಾರರು). 1630ರಲ್ಲಿ ಮೈಸೂರಿನ ಚಾಮರಾಜ ಒಡೆಯರು ಬಹುಕಾಲ ಮುತ್ತಿಗೆ ಹಾಕಿ ಈ ಕೋಟೆಯನ್ನು ವಶಪಡಿಸಿಕೊಂಡರು. 1759ರಲ್ಲಿ ಗೋಪಾಲ ಹರಿಯ ಮುಖಂಡತ್ವದಲ್ಲಿದ್ದ ಮರಾಠಾ ಸೇನೆ ಅದರ ಸುಮಾರು ಅರ್ಧ ಭಾಗವನ್ನು ನಾಶಮಾಡಿತು. ಹೈದರ್‌ಅಲಿ ಈ ಮುತ್ತಿಗೆಯನ್ನು ನಿವಾರಿಸಿದ. ದಿವಾನ್ ಪೂರ್ಣಯ್ಯ ಇಲ್ಲಿನ ಕೋಟೆಯನ್ನು ಮತ್ತೆ ದುರಸ್ತುಗೊಳಿಸಿದ. ಆದರೆ 19ನೆಯ ಶತಮಾನದಲ್ಲಿ ಇದು ನಿರುಪಯುಕ್ತವಾಗಿ ಶಿಥಿಲವಾಯಿತು. (ಎಸ್.ಜ.)

ಇಲ್ಲಿನ ಇತಿಹಾಸ ಕಾಲಕ್ಕೆ ಸಂಬಂಧಿಸಿದ ಸ್ಮಾರಕಗಳಲ್ಲಿ ಕೋಟೆಯಲ್ಲಿರುವ ವರದರಾಜ ದೇವಾಲಯ ಪ್ರಾಚೀನವಾದುದು. ಸು.15ನೆಯ ಶತಮಾನದಲ್ಲಿ ರಚಿತವಾದ ಈ ದೇವಾಲಯದಲ್ಲಿ ಗರ್ಭಗೃಹ, ಸುಕನಾಸಿ, ನವರಂಗ ಪಾತಾಳಾಂಕಣಗಳಿವೆ. ಸುತ್ತಲ ಪ್ರಾಕಾರ ಶಿಥಿಲವಾಗಿದೆ. ಪೇಟೆ ಭಾಗದಲ್ಲಿರುವ ಲಕ್ಷ್ಮೀನಾರಾಯಣ ಮತ್ತು ನೀಲಕಂಠೇಶ್ವರ ದೇವಾಲಯಗಳೂ ಸುಮಾರು ಇದೇ ಕಾಲದವು. ನೀಲಕಂಠೇಶ್ವರ ದೇವಾಲಯ ಗರ್ಭಗೃಹ, ಸುಕನಾಸಿ, ದೊಡ್ಡ ನವರಂಗ ಇತ್ಯಾದಿಗಳನ್ನೂ ಸುತ್ತು ಪ್ರಾಕಾರ ಮತ್ತು ಪಾತಾಳಾಂಕಣವನ್ನೂ ಒಳಗೊಂಡಿರುವ ದೊಡ್ಡಕಟ್ಟಡ. ಆದರೆ ಪಾತಾಳಾಂಕಣ ಮತ್ತು ಪ್ರಾಕಾರ ಸು.18ನೆಯ ಶತಮಾನದ ಸೇರ್ಪಡೆಗಳಂತೆ ತೋರುತ್ತವೆ. ಇಲ್ಲಿನ ತಿಮ್ಮಪ್ಪರಾಜ ಅರಸರ ಅರಮನೆ 19ನೆಯ ಶತಮಾನದ ಆದಿಭಾಗದಲ್ಲಿ ಚನ್ನಪಟ್ಟಣದಲ್ಲಿ ಫೌಜುದಾರರಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರ ಮೈದುನ ತಿಮ್ಮಪ್ಪರಾಜರು ಕಟ್ಟಿಸಿದ್ದು. ದೊಡ್ಡ ಹಜಾರಗಳು, ಉತ್ತಮ ಮರದ ದ್ವಾರ ಬಂಧ ಇತ್ಯಾದಿ ಕೆತ್ತನೆಗಳು, ನೀರಿನ ಕಾರಂಜಿಗಳು, ಸುಂದರ ವರ್ಣಚಿತ್ರಗಳು – ಇವುಗಳಿಂದ ಅಲಂಕೃತವಾಗಿದ್ದ ಈಗ ಕಟ್ಟಡ ಬಹಳ ಶಿಥಿಲಗೊಂಡಿದೆ.

ಚನ್ನಪಟ್ಟಣದ ಉತ್ತರಕ್ಕೆ ಬೆಂಗಳೂರು ರಸ್ತೆಯ ಪಕ್ಕದಲ್ಲಿ ಗೋರಿಗಳಿವೆ. ಅದರಲ್ಲಿ ಒಂದು ಹೈದರ್ ಅಲಿಯ ಧರ್ಮಗುರುವಾಗಿದ್ದ ಅಕ್ಕಲ್ ಷಾ ಖಾದ್ರಿಯದು. ಇವನ ಮತ್ತು ಇವನ ಸಮೀಪ ಬಂಧುಗಳ ಗೋರಿಗಳು ಸು.20 ಅಡಿ ಚೌಕದ ದೊಡ್ಡ ಕೋಣೆಯಲ್ಲಿವೆ. ಎತ್ತರದ

ಜಗತಿಯು ಮೇಲೆ ಮಧ್ಯದಲ್ಲಿ ಈ ಕೋಣೆ ಇದ್ದು ಅದರ ಸುತ್ತಲೂ ತೆರೆದ ವರಾಂಡ ಇದೆ. ಈ ವರಾಂಡದ ಪಶ್ಚಿಮದೆಡೆ ಇರುವ ಕಂಬಗಳು ದೇವಾಲಯದ ಕಂಬಗಳಂತೆ ಕಾಣುತ್ತವೆ. ಕೋಣೆಯ ಸುತ್ತ ಇರುವ ಗೋಡೆಗಳು ದಪ್ಪವಾಗಿದ್ದು ಮೂಲೆಗಳಲ್ಲಿ ಚಿಕ್ಕ ಕೋಣೆಗಳನ್ನು ಮಾಡಲಾಗಿದೆ. ಕೋಣೆಯ ಚಾವಣಿಯ ಮೇಲೆ ಮುಗಲ್ ಶೈಲಿಯ ಗುಜ್ಜುಗುಮ್ಮಟವಿದ್ದು ಅದರ ತುದಿಯಲ್ಲಿ ಕಳಸವಿದೆ. ಈ ಕಟ್ಟಡದ ಸುತ್ತಲೂ ಇತರ ಅನೇಕ ಸಣ್ಣ ಗೋರಿಗಳಿವೆ. ಅಲ್ಲದೆ ಪಶ್ಚಿಮಕ್ಕೆ ಒಂದು ಚಿಕ್ಕ ಮಸೀದಿ ಇದೆ.



ಸೈಯದ್ ಇಬ್ರಾಹೀಂ ದರ್ಗಾ

ಇನ್ನೊಂದು ಗೋರಿ ಟಿಪ್ಪುಸುಲ್ತಾನನ ಕಾಲದಲ್ಲಿ ಬೆಂಗಳೂರಿನ ಫೌಜುದಾರನಾಗಿದ್ದ ಸೈಯದ್ ಇಬ್ರಾಹೀಮನದು (ಈತ ಟಿಪ್ಪುವಿನ ಬಂಧನಕ್ಕೆ ಒಳಗಾಗಿದ್ದ ಇಂಗ್ಲಿಷರ ಬಗ್ಗೆ ಅನುಕಂಪ ತೋರಿಸಿದವನೆಂದು ಖ್ಯಾತನಾಗಿದ್ದಾನೆ). ಇದರಲ್ಲಿಯೂ ಎತ್ತರದ ಜಗತಿ, ಮೇಲೆ ಮಧ್ಯದಲ್ಲಿ ಒಂದು ಚಿಕ್ಕ ಗೋರಿ ಕೋಣೆ ಮತ್ತು ಅದರ ಸುತ್ತಲೂ ಹೊರ ಅಂಚಿನ ಕಂಬಗಳ ಮೇಲೆ ಎತ್ತಿದ ತೆರೆದ ವರಾಂಡ ಇವೆ. ಕೋಣೆಯ ಮೇಲೆ ಕಳಸ ತುದಿಯುಳ್ಳ ಗುಮ್ಮಟ ಇದೆ.

ಈ ದರ್ಗಾಗಳ ಸಮೀಪದಲ್ಲಿ ರಸ್ತೆಯಂಚಿನಲ್ಲಿ ಉಮ್ಮರ್‌ಖಾನ್ ಎಂಬುವನ ಗೋರಿ ಇದೆ. ಇದರಲ್ಲಿ ಒಂದು ನೆಲಮಾಳಿಗೆ ಇರುವುದೆಂದೂ ಅದರಲ್ಲಿ ಉಮ್ಮರ್ ಖಾನ್‌ನ ಶವಪೆಟ್ಟಿಗೆ ಇರುವ ಒಂದು ತೊಟ್ಟಿಲನ್ನು ತೂಗುಹಾಕಲಾಗಿದೆ ಎಂದೂ ಪ್ರತೀತಿ.
*

**ಚನ್ನಪಟ್ಟಣದ ಪಾಳೆಯಗಾರರು :** 16-17ನೆಯ ಶತಮಾನಗಳಲ್ಲಿ ಪೆನುಗೊಂಡೆಯ ವಿಜಯನಗರದ ಸಂತತಿಯವರ ಸಾಮಂತರಾಗಿ ಚನ್ನಪಟ್ಟಣದಿಂದ ಆಳಿದ ಪಾಳೆಯಗಾರರು. ಮೂಲತಃ ಇವರು ಬಾರಾಮಹಲ್ ಪ್ರದೇಶಕ್ಕೆ ಸೇರಿದವರು. ತೆಲುಗು ಬಣಜಿಗ ಕುಲದವರು. ಈ ವಂಶದ ಮೂಲಪುರುಷ ರಾಣೋಜಿರಾಯ. ಆದರೆ ಈ ವಂಶದ ಯಶಸ್ಸು ಹಾಗೂ ಪ್ರಭಾವವನ್ನು ಹೆಚ್ಚಿಸಲು ಕಾರಣನಾದವನು ಒಂದನೆಯ ಜಗದೇವರಾಯ.

ಒಂದನೆಯ ಜಗದೇವರಾಯ ಪೆನುಗೊಂಡೆಯಲ್ಲಿ ಆಳುತ್ತಿದ್ದ ಅರವೀಡು ಮನೆತನದ ತಿಮ್ಮರಾಜನ ಮಾವ. 1577ರಲ್ಲಿ ಬಿಜಾಪುರ ಮತ್ತು ಅಹಮದ್ ನಗರದ ಸುಲ್ತಾನರು ಪೆನುಗೊಂಡೆಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸುತ್ತಿರಲು ತಿಮ್ಮರಾಜ ತನ್ನ ರಾಜಧಾನಿಯನ್ನು ಚಂದ್ರಗಿರಿಗೆ ವರ್ಗಾಯಿಸಿದ್ದ. ಇದರಿಂದಾಗಿ ಆಕ್ರಮಣವನ್ನು ಎದುರಿಸುವ ಜವಾಬ್ದಾರಿ ಜಗದೇವರಾಯನ ಪಾಲಿಗೆ ಬಂತು. ಹುಟ್ಟು ಸಾಹಸಿಯೂ ವೀರ ಯೋಧನೂ ಆದ ಜಗದೇವರಾಯ, ಬಿಜಾಪುರದ ಸೇನೆಯನ್ನು ಹಿಮ್ಮೆಟ್ಟಿಸಿ ಪೆನುಗೊಂಡೆಯನ್ನು ವಿಪತ್ತಿನಿಂದ ಪಾರುಮಾಡಿದ. ಇದರಿಂದ ಸಂತೋಷಗೊಂಡ ತಿಮ್ಮರಾಜ ಒಂಬತ್ತು ಲಕ್ಷ ಪಗೋಡಗಳ ವರಮಾನವುಳ್ಳ ದೊಡ್ಡ ಜಿಲ್ಲೆಯೊಂದನ್ನು ಜಗದೇವರಾಯನಿಗೆ ಕೊಟ್ಟ. ಈ ಪ್ರದೇಶ ಬಾರಾಮಹಲಿನಿಂದ ಪಶ್ಚಿಮಘಟ್ಟಗಳವರೆಗೆ ವ್ಯಾಪಿಸಿದ್ದು ಮುಳಬಾಗಲು, ಪಿರಿಯಾಪಟ್ಟಣ, ಕಾನಕಾನಹಳ್ಳಿ ಮತ್ತು ಬೂದಿಹಾಳು - ಇವು ಸೇರಿದ್ದುವು. ಹೊಸದಾಗಿ ಪಡೆದ ಈ ದೊಡ್ಡ ರಾಜ್ಯದ ವ್ಯವಸ್ಥೆಗೆ ಅನುಕೂಲವಾಗಲು ಈ ಪ್ರದೇಶದ ಕೇಂದ್ರದಲ್ಲಿದ್ದ ಚನ್ನಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ ಕೋಟೆಯನ್ನು ಕಟ್ಟಿಸಿದ. ಅಂದಿನಿಂದ ಈ ಮನೆತನದ ಪಾಳೆಯಗಾರರಿಗೆ ಚನ್ನಪಟ್ಟಣದ ಪಾಳೆಯಗಾರರು ಎಂಬ ಹೆಸರಾಯಿತು.

ಜಗದೇವರಾಯ ಹದಿನೈದು ವರ್ಷಗಳ ತನ್ನ ಆಳಿಕೆಯ ಅವಧಿಯಲ್ಲಿ ಚನ್ನಪಟ್ಟಣ ರಾಜ್ಯಕ್ಕೆ ಒಂದು ರೂಪವನ್ನು ತಂದುಕೊಟ್ಟ. ಕೆಲವು ಗ್ರಾಂಥಿಕ ಮೂಲಗಳಲ್ಲಿ ಈ ವಂಶದವರ ಅನುಕ್ರಮವನ್ನು ಹೀಗೆ ಸೂಚಿಸಲಾಗಿದೆ: ರಾಣೋಜಿರಾಯ, ಇಮ್ಮಡಿ ಜಗದೇವರಾಯ (ಆಳಿಕೆ 15ವರ್ಷ), ಮುಮ್ಮಡಿ ಜಗದೇವರಾಯ (8 ವರ್ಷ), ಕುಮಾರ ಜಗದೇವರಾಯ (7 ವರ್ಷ) ಮತ್ತು ಅಂಕುಶರಾಯ (16 ವರ್ಷ). 1623ಕ್ಕೆ ಸೇರಿದ ಒಂದು ಶಾಸನದಲ್ಲಿ ಚನ್ನಪಟ್ಟಣದ ಪಾಳೆಯಗಾರರ ಅನುಕ್ರಮ ಈ ರೀತಿ ಇದೆ: ರಾಣ ಪೆದಜಗದೇವರಾಯ, ಅವನ ಮಗ ಜಗದೇವರಾಯ, ಅವನ ಮಗ ಇಮ್ಮಡಿ ಕುಮಾರ ಜಗದೇವರಾಯ (1623). 1630ರಲ್ಲಿ ಮೈಸೂರಿನ ಚಾಮರಾಜ ಒಡೆಯರು ಚನ್ನಪಟ್ಟಣ ವನ್ನು ವಶಪಡಿಸಿಕೊಂಡರು. ಇದರೊಂದಿಗೆ ಈ ರಾಜ್ಯದ ಇತರ ಭಾಗಗಳಾಗಿದ್ದ ಕಾನಕಾನಹಳ್ಳಿ, ಪಿರಿಯಾಪಟ್ಟಣಗಳೂ ಮೈಸೂರು ರಾಜ್ಯದಲ್ಲಿ ಸೇರ್ಪಡೆಯಾದ್ದಲ್ಲದೆ ಚನ್ನಪಟ್ಟಣದ ಪಾಳೆಯಗಾರರ ಆಳಿಕೆಯೂ ಕೊನೆಗೊಂಡಿತು. (ಎಚ್.ವಿ.ಎಸ್.)

**ಚನ್ನಬಸವಾಂಕ :** ಸು.1550. ವೀರಶೈವ ಕವಿ. ಮಹಾದೇವಿಯಕ್ಕನ ಪುರಾಣ ಎಂಬ ಕಾವ್ಯದ ಕರ್ತೃ. ಬಸವಾಂಕ-ಗಂಗಾಂಬೆಯರ ಮೊಮ್ಮಗ. ರುದ್ರಕವಿ ನಾಗಭೂಷಣಾಚಾರ್ಯನ ಮಗ. ವ್ಯಾಘ್ರಜಿನಾಂಬರದ ಕಥೆಯ ಚಿದಾನಂದಯತಿಪ ಶ್ರೀ ಗುರುಬಸವರಾಜನ ಶಿಷ್ಯ. ಪೂರ್ವಕವಿಗಳಲ್ಲಿ ಹರಿಹರ, ರಾಘವಾಂಕ, ಶೃಂಗಿರಾಜ, ಕೆರೆಯ ಪದ್ಮರಸ, ಕೇಶಿರಾಜ, ಭೀಮರಸ, ಕರಸ್ಥಲದ ನಾಗಿದೇವ - ಇವರನ್ನು ಸ್ತುತಿಸಿದ್ದಾನೆ.

ಮಹಾದೇವಿಯಕ್ಕನಪುರಾಣ ಷಟ್ಪದಿಯಲ್ಲಿ ರಚಿತವಾಗಿದೆ. ಇದರಲ್ಲಿ 33 ಸ್ಥಲಗಳೂ 1,607 ಪದ್ಯಗಳೂ ಇವೆ. ತಾನು ಈ ಗ್ರಂಥವನ್ನು ಬರೆಯಲು, ಗುರುಬಸವರಾಜರ ಪ್ರೇರಣೆಯೇ ಕಾರಣವೆಂದು ಕವಿ ಹೇಳಿಕೊಂಡಿದ್ದಾನೆ. (ಎನ್.ಆರ್.)

ಶಿವನಿಚ್ಛೆಯಂತೆ ಪಾರ್ವತಿಯ ಸಾತ್ವಿಕ ಕಳೆಯಾದ ಮಹಾದೇವಿ ನಿರ್ಮಲ-ಸುಮತಿಯರಿಗೆ ಮಗಳಾಗಿ ಹುಟ್ಟಿ ಬೆಳೆದು, ಮದುವೆ ನಿಂದು, ಕೌಶಿಕನನ್ನು ತೊರೆದು ಕಲ್ಯಾಣಕ್ಕೆ ಬಂದು ಆತ್ಮಕಲ್ಯಾಣವನ್ನು ಸಾಧಿಸಿ ಕದಳಿಯಲ್ಲಿ ಕರ್ಪೂರವಾಗಿ ಬೆಳಗಿದ ಮಹಾದೇವಿಯ ಚರಿತ್ರೆ ಇದರಲ್ಲಿ ನಿರೂಪಿತವಾಗಿದೆ. ಕಾವ್ಯದ ಬೇರೆ ಬೇರೆ ಪ್ರಸಂಗಗಳಲ್ಲಿ ಭಿನ್ನ ಭಿನ್ನ ರೀತಿಯ ಅಭಿವ್ಯಕ್ತಿಗಾಗಿ ಕವಿ ಆರು ವಿಧ'ವಾದ ಷಟ್ಪದಿಗಳನ್ನು ಬಳಸಿರುವುದಲ್ಲದೆ ಸಾಂಗತ್ಯ ಹಾಗೂ ಸಂಸ್ಕೃತ ಶ್ಲೋಕಗಳನ್ನೂ ಬಳಸಿದ್ದಾನೆ. ಇತರ ವೀರಶೈವ ಪುರಾಣಗಳಲ್ಲಿ ವರ್ಣಿಸಿರುವಂತೆ ಇಲ್ಲಿ ಶಿವನ ಪಂಚವಿಂಶತಿ ಲೀಲೆಗಳು, ಭುವನಕೋಶ ಮೊದಲಾದ ವರ್ಣನೆಗಳಿಗೆ ಕೈ ಹಾಕಿಲ್ಲ. ಮಹಾದೇವಿಯ ಕಥೆಗೆ ಪೋಷಕವಾಗಬಹುದಾದ, ಶಿವನ ಪಾರಮ್ಯವನ್ನು ಮೆರೆವ ಕೆಲವು ಕಥೆಗಳನ್ನು ಮಾತ್ರ ಹವಣರಿತು ಬಳಸಿದ್ದಾನೆ. ಗೀಜನ ಜೋಡಿಯ ಕಥೆ, ಧ್ರುವ-ಮಾರ್ಕಂಡೇಯರ ಕಥೆಗಳಲ್ಲಿ ಬರುವ ಕರುಣರಸ ಅತ್ಯಂತ ಹೃದಯ ಸ್ಪರ್ಶಿಯಾಗಿದೆ. ಮಹಾದೇವಿಯ ಕಥೆಯನ್ನೇ ಹೋಲುವ ಮಲುಹಣ ಮಂಗಳಾಂಗಿಯರ ಮಗಳಾದ ಚಂದ್ರಿನಿಯ ಕಥೆ ಔಚಿತ್ಯದಿಂದ ಕೂಡಿದೆ; ಅರ್ಥಪೂರ್ಣವಾಗಿದೆ.

ಹರಿಹರ ರಗಳೆಯಲ್ಲಿ ಹೇಳಿದ ಕಥೆಯನ್ನೇ ವಿಸ್ತರಿಸಿ ಹೇಳುವೆನೆಂದು ಚನ್ನಬಸವಾಂಕ ಹೇಳಿಕೊಂಡರೂ ಅನೇಕ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ಅಲ್ಲಿಯಂತೆ ಇಲ್ಲಿ ಮಹಾದೇವಿಯ ಜನನಕ್ಕಾಗಿ ಶಾಪದ ಕಪಿ ಪ್ರಸಂಗವೇ ಬರುವುದಿಲ್ಲ. ಪಾರ್ವತಿಯ ತಾಮಸ ಕಳೆಯಾದ

ಮಾಯೆಯಿಂದ ನಿರ್ಮಾಯನಾದ ಅಲ್ಲಮನನ್ನು ಸೋಲಿಸಲು ಆಗದೆ ಆಕೆಯು ಸಾತ್ವಿಕ ಕಳೆಯಾದ ಮಹಾದೇವಿ ಭೂಲೋಕದಲ್ಲಿ ಜನಿಸುತ್ತಾಳೆ. ಮಹಾದೇವಿಯ ಜನನ, ಬಾಲ್ಯ, ಯೌವನಾವಸ್ಥೆಗಳನ್ನು ಕಥೆಯ ಉದ್ದೇಶಕ್ಕೆ ಭಂಗ ತಾರದ ರೀತಿಯಲ್ಲಿ ಭಕ್ತಿ ಜ್ಞಾನ ವೈರಾಗ್ಯಕ್ಕನುಗುಣವಾಗಿ ಚಿತ್ರಿಸಿ ಮಹಾದೇವಿಯ ಜೀವನೋದ್ದೇಶದಲ್ಲಿ ಎಲ್ಲಿಯೂ ಕೃತಕತೆಯಾಗಲೀ ಅಸಮಂಜಸತೆಯಾಗಲೀ ಕಾಣದಂತೆ ಚಿತ್ರಿಸಿದ್ದಾನೆ. ಮದುವೆಯ ಪ್ರಸಂಗದಲ್ಲಿ ಅತಿರಂಜನೆಗೆ ಕೈಹಾಕದೆ, ಆಕೆ ಪಡೆದಿದ್ದ ಸಿದ್ಧಿಯ ನಿಲುವಿಗೆ ಧಕ್ಕೆ ತಾರದೆ ಆ ಪ್ರಸಂಗವನ್ನು ಅತ್ಯಂತ ಎಚ್ಚರಿಕೆಯಿಂದ ಚಿತ್ರಿಸಿದ್ದಾನೆ. ಮಹಾದೇವಿಯ ಅಷ್ಟವಿಧ ಪೂಜೆ, ಜಂಗಮ ದಾಸೋಹ, ಶರಣಗೋಷ್ಠಿಗಳ ವರ್ಣನೆಯನ್ನು ಹದವರಿತು ಮಾಡಿದ್ದಾನೆ. ಮೋಹಕ್ಕಿಂತ ತ್ಯಾಗಕ್ಕೆ, ರಾಗಕ್ಕಿಂತ ವಿರಾಗಕ್ಕೆ, ಅಹಂಕಾರಕ್ಕಿಂತ ವಿನಯಕ್ಕೆ, ತಾಮಸಕ್ಕಿಂತ ಸಾತ್ವಿಕತೆಗೆ ಗೆಲುವಾಗುತ್ತದೆ, ಪರಮಾತ್ಮನ ಸಾಮೀಪ್ಯ ದೊರೆಯುತ್ತದೆ ಎಂಬುದನ್ನು ತಿಳಿಸುವುದು ಕಾವ್ಯದ ಉದ್ದೇಶವಿರುವಂತೆ ಕಾಣುತ್ತದೆ. ಮಾಯೆಗೆ ಅಲ್ಲಮ ಹೇಗೆ ಅಸಾಧ್ಯನಾದನೋ ಹಾಗೆಯೇ ಮಹಾದೇವಿ ಇಲ್ಲಿ ಕೌಶಿಕನಿಗೆ ಅಸಾಧ್ಯಳಾಗಿ ಭಕ್ತಿ ಜ್ಞಾನ ವೈರಾಗ್ಯವಲ್ಲರಿಯನ್ನು ಪರಕಲಿಸಿ ನಿಮ್ಮ ಮಂಡೆಗೆ ಹೂವ ತಹೆನಲ್ಲದೆ ಹುಲ್ಲ ತಾರೆನೆಂಬ ಮಾತನ್ನು ಸಾರ್ಥಕಪಡಿಸಿ ನಿಜಪದವಿಯನ್ನು ಪಡೆಯುತ್ತಾಳೆ.

ಕಾವ್ಯಶೈಲಿ ಚೆನ್ನಾಗಿದೆ. ಷಟ್ಪದಿಗೆ ಉಚಿತವಾದ ನಡುಗನ್ನಡವನ್ನೂ ಉರ್ದು, ಪಾರಸೀಭಾಷೆಯ ಶಬ್ದಗಳನ್ನೂ ಗ್ರಾಮ್ಯ ಶಬ್ದಗಳನ್ನೂ ಕವಿ ಸಮರ್ಥ ರೀತಿಯಲ್ಲಿ ಬಳಸಿದ್ದಾನೆ. ವಚನಗಳನ್ನಂತೂ ಇದ್ದ ಹಾಗೆಯೇ ಧಾರಾಳವಾಗಿಯೇ ಉಪಯೋಗಿಸಿಕೊಂಡಿದ್ದಾನೆ. ನಾಟಕೀಯತೆಯಿಂದ ಕೂಡಿದ ಸಂಭಾಷಣಾ ಶೈಲಿ ಈ ಕಾವ್ಯದ ಅತ್ಯಂತ ಆಕರ್ಷಕವಾದ ಗುಣ; ಮಹಾಕವಿ ರಾಘವಾಂಕನ ಹರಿಶ್ಚಂದ್ರಕಾವ್ಯದ ಶೈಲಿಯನ್ನು ಮತ್ತೊಮ್ಮೆ ಇಲ್ಲಿ ಕಾಣಬಹುದು. ಮಹಾದೇವಿಯಕ್ಕನ ಜೀವನದ ಬಗ್ಗೆ ಹರಿಹರನ ರಗಳೆಯನ್ನು ಬಿಟ್ಟರೆ ಸಿಗುವ ಸಮಗ್ರವಾದ ಗ್ರಂಥ ಸದ್ಯಕ್ಕೆ ಇದೊಂದೇ. (ಬಿ.ಎನ್.ಸಿ.)

**ಚನ್ನಮ್ಮ, ಸರ್ವಶೀಲೆ :** ಹನ್ನೆರಡನೆಯ ಶತಮಾನದ ಕೊನೆಯ ಭಾಗದಲ್ಲಿ ಮಾಗಡಿ ತಾಲ್ಲೂಕು ಕಲ್ಯೆಯದ (ನೋಡಿ: ಕಲ್ಯ) ಬೆಟ್ಟದಲ್ಲಿ ವಾಸವಾಗಿದ್ದಳು ಎನ್ನಲಾದ ಒಬ್ಬ ಶಿವಶರಣೆ. ವೀರಶೈವಧರ್ಮದಲ್ಲಿ ಉಕ್ತವಾಗಿರುವ 63 ಶೀಲಗಳನ್ನು ಚಾಚೂ ತಪ್ಪದಂತೆ ಈಕೆ ಆಚರಿಸಿದುದರಿಂದ ಸರ್ವಶೀಲೆಯಾದಳು. ಕವಿ ಪಾಲ್ಕುರಿಕೆ ಸೋಮನಾಥ ಆಂಧ್ರದಿಂದ ಇಲ್ಲಿಗೆ ಬಂದು ಈಕೆಯ ಆಶೀರ್ವಾದಕ್ಕೆ ಪಾತ್ರನಾಗಿ ಈಕೆಯಿಂದ ಅನುಭವಬೋಧೆ ಪಡೆದು ಕಲ್ಯೆಯದಲ್ಲೇ ಐಕ್ಯನಾದನೆಂದು ಪಾಲ್ಕುರಿಕೆ ಸೋಮೇಶ್ವರಪುರಾಣದಿಂದ ತಿಳಿದುಬರುತ್ತದೆ. ಈಕೆಯ ಸಮಾಧಿ ಮಾಗಡಿ ತಾಲ್ಲೂಕಿನ ಗುಡೇಮಾರನಹಳ್ಳಿ ಹತ್ತಿರ ಎರಡು ಹಳ್ಳಗಳು ಕೂಡುವ ಸಂಗಮಸ್ಥಳದಲ್ಲಿದೆ. ಇದನ್ನು ಚನ್ನಮ್ಮನ ಮಂಟಪ ಎಂದು ಕರೆಯುತ್ತಾರೆ. *

**ಚನ್ನಯ್ಯ ಎಸ್. :** 1902-71. ಸ್ವಾತಂತ್ರ್ಯ ಹೋರಾಟಗಾರ, ಸಮಾಜ ಸೇವಕ, ಸಾಹುಕಾರ ಚನ್ನಯ್ಯ ಎಂದೇ ಪ್ರಸಿದ್ಧರಾಗಿದ್ದವರು. ಇವರು ಒಕ್ಕಲು ಮನೆತನದಲ್ಲಿ ಮೈಸೂರಿನಲ್ಲಿ 1902 ಏಪ್ರಿಲ್ 26ರಂದು ಜನಿಸಿದರು. ತಂದೆ ಮಳಿಗೆ ಸಿದ್ದಣ್ಣನವರು ವೃತ್ತಿಯಲ್ಲಿ ವ್ಯಾಪಾರಗಾರರಾಗಿದ್ದರು. ಚನ್ನಯ್ಯನವರು ಶಾಲೆಯಲ್ಲಿ ಕಲಿತಿದ್ದು ಕಡಿಮೆ. ವ್ಯಾಪಾರದ ಜತೆಗೆ ಸಾಮಾಜಿಕ ಚಟುವಟಿಕೆಗಳಲ್ಲೂ ಆಸಕ್ತಿವಹಿಸಿದ್ದರು. 1938ರಲ್ಲಿ ಮಂಡ್ಯ ಜಿಲ್ಲೆ ಮದ್ದೂರು ಬಳಿಯ ಶಿವಪುರದಲ್ಲಿ ನಡೆದ ಮೈಸೂರು ಪ್ರಾಂತೀಯ ಕಾಂಗ್ರೆಸ್‌ನ ಪ್ರಥಮ ಸಭೆಯ ಸ್ವಾಗತ ಸಮಿತಿ ಅಧ್ಯಕ್ಷರಾಗಿ ಆ ಮೂಲಕ ಇವರು ಸಕ್ರಿಯ ರಾಜಕೀಯಕ್ಕೆ ಮೊದಲ ಬಾರಿಗೆ ಪ್ರವೇಶಿಸಿದರು. ಅಲ್ಲಿಂದ ಮೊದಲುಗೊಂಡು ಅನೇಕ ಸ್ವಾತಂತ್ರ್ಯ ಚಳವಳಿಗಳಲ್ಲಿ ಇವರು ಭಾಗವಹಿಸಿದರು. ಮೈಸೂರು ಕಾಂಗ್ರೆಸ್ ಸಂಸ್ಥೆಯನ್ನು ಕಟ್ಟಲು ಅಪಾರವಾಗಿ ಶ್ರಮಿಸಿದರು. 1947ರಲ್ಲಿ ನಡೆದ ಅರಮನೆ ಸತ್ಯಾಗ್ರಹದಲ್ಲೂ ಇವರು ಭಾಗವಹಿಸಿದ್ದರು. ಆಗರ್ಭ ಶ್ರೀಮಂತರಾಗಿದ್ದರೂ ಸರ್ಕಾರದ ಕಡೆ ಮುಖಮಾಡದೆ ಜನತೆಯ ಸಂಘಟನಾ ಕಾರ್ಯದಲ್ಲೇ ತಲ್ಲೀನರಾದರು.

ಆಗಿನ ಮೈಸೂರು ಸಂಸ್ಥಾನದ ಪ್ರಥಮ ಮಂತ್ರಿಮಂಡಲದ ರಚನೆಯಲ್ಲಿ ಇವರು ಮುಖ್ಯ ಪಾತ್ರ ವಹಿಸಿದ್ದರು. ಪಕ್ಷ ಮತ್ತು ಸರ್ಕಾರದಲ್ಲಿ ಇವರು ಪ್ರಭಾವಶಾಲಿ ವ್ಯಕ್ತಿಯಾಗಿದ್ದರು. ಕೆಂಗಲ್ ಹನುಮಂತಯ್ಯನವರು ಮುಖ್ಯಮಂತ್ರಿಗಳಾಗಿದ್ದಾಗ ಇವರು ಮೈಸೂರು-ಪ್ರದೇಶ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು. ಬಿ.ಡಿ.ಜತ್ತಿ ಅವರು ನೇಮಿಸಿದ್ದ ಮೈಸೂರು ಮಹಾರಾಷ್ಟ್ರ ಗಡಿ ಸಮಿತಿ ಸದಸ್ಯರಾಗಿದ್ದರು. ಆರು ವರ್ಷಗಳ ಕಾಲ ರಾಜ್ಯ ವಿಧಾನಪರಿಷತ್ ಸದಸ್ಯರಾಗಿದ್ದರು (1960-66). 1966ರಲ್ಲಿ ಇವರು ಕಾಂಗ್ರೆಸ್ಸನ್ನು ಬಿಟ್ಟು ಜನತಾಪಕ್ಷವನ್ನು ಕಟ್ಟಿ ಅದರ ಸ್ಥಾಪಕ ಅಧ್ಯಕ್ಷರಾದರು. ಕಾಂಗ್ರೆಸ್ ಇಬ್ಭಾಗವಾದ ಮೇಲೆ ಇವರು ಆಡಳಿತ ಕಾಂಗ್ರೆಸ್ಸಿಗೆ ಸೇರಿದರು.

ಚನ್ನಯ್ಯನವರದು ಬಹುಮುಖ ಪ್ರತಿಭೆ. ತಾವು ವಾಸಿಸುತ್ತಿದ್ದ ಮೈಸೂರು ನಗರದ ಚಟುವಟಿಕೆಗಳೊಂದಿಗೆ ಇವರದು ನಿಕಟ ಸಂಬಂಧವಿತ್ತು. ಈ ನಗರದ ಸಾಮಾಜಿಕ ಮತ್ತು ಶೈಕ್ಷಣಿಕ ಕ್ಷೇತ್ರಕ್ಕೂ ತಮ್ಮ ಅಮೂಲ್ಯ ಸೇವೆಸಲ್ಲಿಸಿದ್ದಾರೆ. ಒಕ್ಕಲಿಗರ ವಿದ್ಯಾರ್ಥಿ ನಿಲಯ ಮತ್ತು ವಿ.ವಿ.ಮೊಹಲ್ಲಾದಲ್ಲಿರುವ ಕೆ.ಎಚ್.ರಾಮಯ್ಯ ನವರ ವಿದ್ಯಾರ್ಥಿನಿಲಯ ಸ್ಥಾಪನೆಗಾಗಿ ಲಕ್ಷಾಂತರ ರೂಪಾಯಿ ಬೆಲೆ ಬಾಳುವ ಕಟ್ಟಡಗಳನ್ನು ದಾನ ಮಾಡಿದರು. ಇನ್‌ಸ್ಟಿಟ್ಯೂಟ್ ಆಫ್ ಎಜುಕೇಶನ್ ಎಂಬ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿ ಅದರ ಅಧ್ಯಕ್ಷರಾಗಿದ್ದರು. ಗರಡಿಯಾಳಾಗಿದ್ದ ಇವರು ಒಂದು ಗರಡಿ ಸಂಘವನ್ನೂ ಕಟ್ಟಿದ್ದರು. ಇಂದು ಅದು ಚನ್ನಯ್ಯ ಗರಡಿ ಸಂಘ ಎಂದೇ ಹೆಸರಾಗಿದೆ.



ಹಳೆಯ ಮೈಸೂರು ರಾಜಕೀಯದಲ್ಲಿ ಸುಮಾರು ಎರಡು ದಶಕಗಳಕಾಲ ಸಕ್ರಿಯ ಪಾತ್ರವಹಿಸಿದ್ದ ಚನ್ನಯ್ಯನವರು 1971 ನವೆಂಬರ್ 20ರಂದು ಮೈಸೂರಿನಲ್ಲಿ ನಿಧನರಾದರು. (ಡಿ.ಎಸ್.ಜೆ.)

**ಚನ್ನರಾಯನದುರ್ಗ :** ತುಮಕೂರು ಜಿಲ್ಲೆ ಕೊರಟಗೆರೆ ತಾಲ್ಲೂಕಿನ ಒಂದು ಗಿರಿದುರ್ಗ. ಕೊರಟಗೆರೆ ಹಾಗೂ ಮಧುಗಿರಿ ಮಾರ್ಗದಲ್ಲಿ ಸಮುದ್ರಮಟ್ಟದಿಂದ 3734 ಅಡಿ ಎತ್ತರದಲ್ಲಿದೆ. ಬೆಟ್ಟದ ಮೇಲಿರುವ ಕೋಟೆಯನ್ನು ಮಧುಗಿರಿ ಪಾಳೆಯಗಾರ ಚನ್ನಪ್ಪಗೌಡ ಕಟ್ಟಿಸಿದ. ಇದನ್ನು ಸು.17ನೆಯ ಶತಮಾನದ ಮಧ್ಯದಲ್ಲಿ ಕಟ್ಟಲಾಯಿತು. ಇದು ಪರ್ವತಾಗ್ರದಲ್ಲಿದ್ದು ಚಿಕ್ಕಬೆಟ್ಟದಲ್ಲಿ ಚೆನ್ನಿಗರಾಯ ಹಾಗೂ ಈಶ್ವರ ದೇವಾಲಯಗಳಿವೆ. ಅರ್ಧಚಂದ್ರಾಕೃತಿಯ ಒಂದು ಸುಂದರ ದೊಣೆ ಇದೆ. ಇಲ್ಲಿ ಅನೇಕ ಹಗೇವುಗಳು ಮತ್ತು ಮದ್ದುಗುಂಡಿನ ಕೊಠಾರಗಳಿವೆ. ಕೆಳಗಿನ ಶೃಂಗದಿಂದ ಮೇಲಿನ ಶೃಂಗಕ್ಕೆ ಹೋಗುವ ದಾರಿಯಲ್ಲಿ ಹಲವು ಬಾಗಿಲುಗಳಿವೆ. ಇಲ್ಲಿನ ಕೋಟೆಯ ಗೋಡೆಯನ್ನು ಕೆಳಸ್ತರದಲ್ಲಿ ಕಲ್ಲಿನಿಂದಲೂ ಮತ್ತು ಅದರ ಮೇಲಿನ ಗೋಡೆಯನ್ನು ಇಟ್ಟಿಗೆಗಳಿಂದಲೂ ಕಟ್ಟಲಾಗಿದೆ. ಏರಿಳಿಯುವ ಮಾರ್ಗ ತುಂಬ ಕಡಿದಾಗಿದೆ. ಸುವರ್ಣಮುಖೀ ನದಿ ಈ ದುರ್ಗದಲ್ಲಿ ಉಗಮಿಸುತ್ತದೆ. ಉತ್ತರ ಪಿನಾಕಿನಿ ಅಥವಾ ಪೆನ್ನಾರ್ ನದಿಗೆ ಸೇರುವ ಅದರ ಶಾಖಾ ನದಿ ಜಯಮಂಗಲಿಗೆ ಸೇರುತ್ತದೆ.

ಮೈಸೂರು-ಮರಾಠ ಯುದ್ಧಗಳಿಗಿಂತ ಮುಂಚೆ ಈ ದುರ್ಗ ಮಧುಗಿರಿ ಪಾಳೆಯಗಾರರ ಅಧೀನದಲ್ಲಿತ್ತು. ಮರಾಠರು ಇದನ್ನು ಆಕ್ರಮಿಸಿ ವಶಪಡಿಸಿಕೊಂಡರು. ಆಗ ಪಾಳೆಯಗಾರನಾಗಿದ್ದ ರಾಮಗೌಡ ಮಧುಗಿರಿಗೆ ಓಡಿಹೋಗಿ ಅಲ್ಲಿ ಆಶ್ರಯಪಡೆದ. ಮೈಸೂರು ರಾಜರ ಸೇನಾನಾಯಕ

ಕೊಮರಯ್ಯ ಎಂಬಾತ ಇದನ್ನು ಮರಾಠರಿಂದ ಕಿತ್ತುಕೊಂಡ ಮತ್ತು ಆಗ ದೊಡ್ಡರಸು ಎಂಬ ಅಧಿಕಾರಿಯನ್ನು ಅಧಿಪತಿಯಾಗಿ ನೇಮಿಸಲಾಯಿತು. ಆ ಸಮಯದಲ್ಲಿ ದುರ್ಗದ ಹೆಸರನ್ನು ಪ್ರಸನ್ನಗಿರಿ ಎಂದು ಬದಲಾಯಿಸಲಾಯಿತು. ಅನಂತರ ಹೈದರ್ ಅಲಿ ಇದನ್ನು ಗೆದ್ದುಕೊಂಡ. ಆರು ವರ್ಷಗಳ ಅನಂತರದಲ್ಲಿ ಮರಾಠರು ಅವನಿಂದ ಪುನಃ ಈ ದುರ್ಗವನ್ನು ಕಿತ್ತುಕೊಂಡರು. ಅನಂತರ ಮತ್ತೆ ಇದನ್ನು ಟಿಪ್ಪು ಸುಲ್ತಾನ್ ಗೆದ್ದುಕೊಂಡ.

ಗಿರಿಯ ಪದತಲದಲ್ಲಿ ಒಂದು ಗುಹಾದೇವಾಲಯವಿದ್ದು ಇದರಲ್ಲೊಂದು ಮಠವಿದೆ. ಇದನ್ನು ಮುರಾರಿಮಠ ಎಂದು ಕರೆಯುತ್ತಾರೆ. ಇಲ್ಲಿ ಎರಡು ಪಾದುಕೆಗಳಿದ್ದು ಅವನ್ನು ಜನ ಪೂಜಿಸುತ್ತಾರೆ. ಮುರಾರಿ ಸ್ವಾಮಿಯ ಅನುಯಾಯಿಗಳ ಎರಡು ಸಮಾಧಿಗಳೂ ಇಲ್ಲಿವೆ. ಅವುಗಳಲ್ಲಿ ಒಂದು, ಈ ಮಠದಲ್ಲಿ ಅನ್ನಸಂತರ್ಪಣೆ ಮಾಡುತ್ತಿದ್ದ ಸ್ವಾಮಿಗಳಿಂದ ಅನ್ನಪೂರ್ಣಾದೇವಿ ಎಂದು ಕರೆಯಲ್ಪಡುತ್ತಿದ್ದ ಸ್ತ್ರೀಯದ್ದಾಗಿದೆ. (ಎಸ್.ಜಿ.ಎ.)

**ಚನ್ನರಾಯಪಟ್ಟಣ :** ಹಾಸನ ಜಿಲ್ಲೆಯ ಪೂರ್ವಭಾಗದಲ್ಲಿರುವ ತಾಲ್ಲೂಕು, ಅದರ ಮುಖ್ಯ ಸ್ಥಳ. ನೈಋತ್ಯದಲ್ಲಿ ಹೊಳೆನರಸೀಪುರ, ಪಶ್ಚಿಮದಲ್ಲಿ ಹಾಸನ, ವಾಯವ್ಯದಲ್ಲಿ ಅರಸೀಕೆರೆ ತಾಲ್ಲೂಕುಗಳು, ಪೂರ್ವ ಮತ್ತು ದಕ್ಷಿಣದಲ್ಲಿ ತುಮಕೂರು ಮತ್ತು ಮೈಸೂರು ಜಿಲ್ಲೆಗಳಿವೆ. ತಾಲ್ಲೂಕಿನ ವಿಸ್ತೀರ್ಣ 1,043.4ಚ.ಕಿಮೀ. ಗ್ರಾಮಗಳ ಸಂಖ್ಯೆ 387; ಹೋಬಳಿಗಳು 6 - ಕಸಬ, ದಂಡಿಗನಹಳ್ಳಿ, ಬಾಗೂರು, ನುಗ್ಗೇಹಳ್ಳಿ, ಹಿರೀಸಾವೆ ಮತ್ತು ಶ್ರವಣಬೆಳಗೊಳ. ಜನಸಂಖ್ಯೆ 2,78,112.



ಚನ್ನರಾಯಪಟ್ಟಣದ ಗದ್ದೆ ರಾಮೇಶ್ವರ ಗುಡಿಯಲ್ಲಿರುವ ಎರಡು ತಲೆಯ ಬಸವ

ತಾಲ್ಲೂಕಿನ ಉತ್ತರದಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಬೆಟ್ಟ ಶ್ರೇಣಿಯೊಂದಿದೆ. ಅದರಿಂದ ಕೆಲವು ತೊರೆಗಳು ಉತ್ತರಕ್ಕೂ ಪೂರ್ವಕ್ಕೂ ಹರಿದು ಶಿಂಷಾನದಿಯನ್ನು ಸೇರುತ್ತವೆ. ತಾಲ್ಲೂಕಿನ ಪಶ್ಚಿಮ ಎಲ್ಲೆಯ ಬಳಿ ತಗ್ಗಿನ ಬೆಟ್ಟವೊಂದಿದೆ. ಶ್ರವಣಬೆಳಗೊಳದಲ್ಲಿ ತಕ್ಕಮಟ್ಟಿನ ಎತ್ತರದ ಬೆಟ್ಟಗಳು ಒಂಟೊಂಟಿಯಾಗಿ ನಿಂತಿವೆ. ಅವುಗಳ ಪೈಕಿ ಇಂದ್ರಗಿರಿ ದೊಡ್ಡದು (ಎತ್ತರ 1,020ಮೀ) ಗೊಮ್ಮಟವಿಗ್ರಹವಿರುವುದು ಇದರ ಮೇಲೆ. ಮಿಕ್ಕಂತೆ ಈ ತಾಲ್ಲೂಕು ಅಷ್ಟೇನೂ ಎತ್ತರವಾಗಿಲ್ಲ.



ಚಂದ್ರಮೌಳೇಶ್ವರ ದೇವಾಲಯ

ಅಲೆಯಂತೆ ನೆಲ ಏರಿಳಿತದಿಂದ ಕೂಡಿದೆ. ತಾಲ್ಲೂಕಿನ ಮೂಲ ಅರೆ ಕಣಶಿಲೆಯದು. ಬೆಟ್ಟಗಳೂ ಕಣಶಿಲೆಯವೆ. ಈ ಕಲ್ಲು ವಾಸ್ತುರಚನೆಗಳಿಗೆ ಉತ್ತಮವಾದುದು. ನುಗ್ಗೇಹಳ್ಳಿಯ ಬಳಿ ಬಳಪದ ಕಲ್ಲಿನ ಹರಹುಗಳಿವೆ. ಈ ಭಾಗದಲ್ಲಿ ಕ್ರೋಮೈಟ್ ಸಹ ದೊರಕುತ್ತದೆ. ಈ ತಾಲ್ಲೂಕಿನ ಅಗ್ರಹಾರ ಮತ್ತು ಬಸವಾಪುರ ಗ್ರಾಮಗಳ ಬಳಿ ಕೋರಂಡಂ ನಿಕ್ಷೇಪಗಳಿವೆ. ಮಲವನ ಘಟ್ಟದ ಬಳಿ ವೆರ್ಮಿಕ್ಯುಲೇಟ್ ಎಂಬ ಅಭ್ರಕದ ಅದಿರು ಇದೆ.

ತಾಲ್ಲೂಕು ಉತ್ತರದಿಂದ ದಕ್ಷಿಣಕ್ಕೆ ಇಳಿಜಾರಾಗಿದೆ. ಮಣ್ಣು ಸಾಮಾನ್ಯವಾಗಿ ಫಲವತ್ತಾಗಿದ್ದು ತರಿ ಖುಷ್ಕಿ ಬೆಳೆಗಳಿಗೆ ಅನುಕೂಲವಾಗಿದೆ. ಪಶ್ಚಿಮದ ಎಲ್ಲೆಯ ಬಳಿ ಮಣ್ಣು ಆಳವಾಗಿಲ್ಲ. ಅಲ್ಲದೆ ಕಲ್ಲುಮಿಶ್ರಿತ. ಉಳಿದೆಡೆ ಮರಳಿನಿಂದ ಕೂಡಿದ ತೆಳುಗೆಂಪು ಮಣ್ಣು ಸಾಮಾನ್ಯ. ನುಗ್ಗೇಹಳ್ಳಿ ಬಳಿ ಕಪ್ಪುಮಣ್ಣು ಇದೆ. ತಾಲ್ಲೂಕಿನ ಸರಾಸರಿ ವಾರ್ಷಿಕ ಮಳೆ ಸು.684ಮಿಮೀ. ದೊಡ್ಡ ನದಿಗಳಾವುವೂ ಇಲ್ಲ. ಹೇಮಾವತಿ ಕಡೆ ಹರಿಯುವ ಕೆಲವು ಹಳ್ಳಗಳಿಗೆ ಅಡ್ಡಕಟ್ಟೆ ಕೆರೆಗಳು ನಿರ್ಮಾಣವಾಗಿವೆ. ಹೊಳೆನರಸೀಪುರದ ಬಳಿ ಹೇಮಾವತಿಗೆ ಕಟ್ಟಿರುವ ಶ್ರೀ ರಾಮದೇವರ ಅಣೆಕಟ್ಟಿನ ಉತ್ತರ ನಾಲೆಯಿಂದ ಈ ತಾಲ್ಲೂಕಿನ ದಕ್ಷಿಣ ಭಾಗಕ್ಕೆ ಸ್ವಲ್ಪ ನೀರಾವರಿ ಸೌಲಭ್ಯ ದೊರಕಿದೆ. ಒಟ್ಟು ಕೆರೆಗಳು 239, ದೊಡ್ಡವು 49. ಈ ತಾಲ್ಲೂಕಿನ ಅನಾದಿಕೆರೆ ಹಾಸನ ಜಿಲ್ಲೆಯ ಎರಡು ದೊಡ್ಡ ಕೆರೆಗಳಲ್ಲೊಂದು. ತಾಲ್ಲೂಕಿನ ಮುಖ್ಯ ಬೆಳೆಗಳು ರಾಗಿ, ಬತ್ತ ಮತ್ತು ಜೋಳ. ಇತರ ಬೆಳೆಗಳು ಮೆಣಸಿನಕಾಯಿ, ಹುರಳಿ, ಎಳ್ಳು, ಹತ್ತಿ, ತೆಂಗು, ಅಡಕೆ, ಆಲೂಗೆಡ್ಡೆ.

ಪ್ರಸಿದ್ಧ ಜೈನಕೇಂದ್ರ ಶ್ರವಣಬೆಳಗೊಳ (ನೋಡಿ) ಇರುವುದು ಈ ತಾಲ್ಲೂಕಿನಲ್ಲಿ. ಅಗ್ರಹಾರ ಬೆಳಗುಲಿ (ನೋಡಿ), ದಿಂಡಗೂರು (ನೋಡಿ), ನುಗ್ಗೇಹಳ್ಳಿ (ನೋಡಿ) – ಈ ಸ್ಥಳಗಳಲ್ಲಿ ಹೊಯ್ಸಳ ಕಾಲದ ದೇವಾಲಯಗಳಿವೆ. ಬೆಂಗಳೂರು-ಮಂಗಳೂರು ರಸ್ತೆಯಿಂದ ಅನತಿ ದೂರದಲ್ಲಿ ಶ್ರವಣಬೆಳಗೊಳದಿಂದ 5ಕಿಮೀ ದೂರದಲ್ಲಿರುವ ಹಳೆ ಬೆಳಗೊಳದಲ್ಲಿ ಸು.1094ರಲ್ಲಿ ಕಟ್ಟಿದ ಒಂದು ಜೈನ ಬಸದಿ, ಕೇಶವ ಮತ್ತು ಶಿವದೇವಾಲಯಗಳಿವೆ. ಚನ್ನರಾಯಪಟ್ಟಣದಿಂದ 26ಕಿಮೀ ದೂರದಲ್ಲಿರುವ ಹೆಬ್ಬಾಳಲಿನಲ್ಲಿನ ಸಿಂಗೇಶ್ವರ ದೇವಾಲಯ 1200ರಲ್ಲಿ ರಚಿತವಾದುದು. ಕಾಂತರಾಜಪುರ-ಜಿನನಾಥಪುರ ರಸ್ತೆಯಲ್ಲಿ ಚನ್ನರಾಯಪಟ್ಟಣಕ್ಕೆ 13ಕಿಮೀ ದೂರದಲ್ಲಿರುವ ಜಿನನಾಥಪುರದಲ್ಲಿ ವಿಷ್ಣುವರ್ಧನ 1117ರಲ್ಲಿ ಸ್ಥಾಪಿಸಿದ ಜೈನ ಬಸದಿ ಇದೆ. ಚನ್ನರಾಯಪಟ್ಟಣಕ್ಕೆ 19ಕಿಮೀ ದೂರದಲ್ಲಿರುವ ಕುಂದೂರಿನಲ್ಲಿ ಚಾಮುಂಡೇಶ್ವರಿ, ರಂಗನಾಥ, ಸುಬ್ರಹ್ಮಣ್ಯ ದೇವಾಲಯಗಳಿವೆ. ಇಲ್ಲಿ ಒಂದು ಒಕ್ಕಲಿಗರ ಮಠವೂ ಉಂಟು. ಚನ್ನರಾಯಪಟ್ಟಣ, ಶ್ರವಣಬೆಳಗೊಳ, ನುಗ್ಗೇಹಳ್ಳಿ ಜಾತ್ರೆಗಳು ಪ್ರಸಿದ್ಧವಾಗಿವೆ.

ಬೂಕನ ಬೆಟ್ಟದ ರಂಗಸ್ವಾಮಿ, ನವಲೆಯ ನಾಗೇಶ್ವರಸ್ವಾಮಿ, ಕತ್ರಿಘಟ್ಟದ ಅಮ್ಮನವರು, ತೆಜ್ಜೆಗೆರೆಯ ತೆಜ್ಜೆಗೆರೆ ಅಮ್ಮ, ಜಂಬೂರಿನ ಭಿಕ್ಕೇಶ್ವರ, ಬಾಗೂರಿನ ಸಂತೆಕಾಳಮ್ಮ - ಈ ದೇವರ ಜಾತ್ರೆಗಳೂ ತಾಲ್ಲೂಕಿನಲ್ಲಿ ನಡೆಯುತ್ತವೆ.

ಚನ್ನರಾಯಪಟ್ಟಣ ತಾಲ್ಲೂಕಿನ ಕೇಂದ್ರ. ಬೆಂಗಳೂರು-ಹಾಸನ ರಸ್ತೆಯಲ್ಲಿ ಹಾಸನದಿಂದ 39ಕಿಮೀ. ಪೂರ್ವ-ಆಗ್ನೇಯಕ್ಕಿದೆ. ಇಲ್ಲಿನ ಪುರಸಭೆ ರಚಿತವಾದ್ದು 1918ರಲ್ಲಿ. ಜನಸಂಖ್ಯೆ 33,240. ಮೈಸೂರಿನಿಂದ ಹಾಸನ, ಚಿಕ್ಕಮಗಳೂರು, ಚಿತ್ರದುರ್ಗ, ಶಿವಮೊಗ್ಗಗಳಿಗೆ ಮತ್ತು ಬೆಂಗಳೂರಿನಿಂದ ಹಾಸನ, ಮಂಗಳೂರುಗಳಿಗೆ ಹೋಗುವ ಬಸ್ಸುಗಳು ಚನ್ನರಾಯಪಟ್ಟಣದ ಮೂಲಕ ಹಾದು ಹೋಗುತ್ತವೆ. ಇದು ಮೊದಲು ಕೊಳತೂರು ಎಂಬ ಹೆಸರಿನ ಆಗ್ರಹಾರವಾಗಿತ್ತು. ಮಾಚಲದೇವಿ ಮತ್ತು ಶಾಂತಲದೇವಿ ಎಂಬ ಇಬ್ಬರು ಇದರ ಈಶಾನ್ಯದಲ್ಲಿರುವ ವಿಶಾಲ ಕೆರೆಯನ್ನು ಕಟ್ಟಿಸಿದರೆಂದು ಪ್ರತೀತಿ. ಸು.1600ರಲ್ಲಿ ಹೊಳೆನರಸೀಪುರದ ಲಕ್ಷ್ಮಪ್ಪ ನಾಯಕ ತನ್ನ ಮಗ ಚನ್ನರಾಯನಿಗೆ ಈ ಊರನ್ನು ಜಹಗೀರಾಗಿ ಕೊಟ್ಟ. ಈ ಊರು 1633ರಲ್ಲಿ ಮೈಸೂರಿನ ಚಾಮರಾಜ ಒಡೆಯರಿಗೆ ಸೇರಿತು. ಇಲ್ಲಿನ ಕೋಟೆಯನ್ನು ದೊಡ್ಡ ಬಸವಯ್ಯನೆಂಬ ನಾಯಕ ಕಟ್ಟಿದ. ಇದು ಹೈದರ್ ಅಲಿಯ ಕಾಲದಲ್ಲಿ ಪುನರ್ನಿರ್ಮಾಣವಾಯಿತು. ಈ ಊರಿನಲ್ಲಿ ಚನ್ನರಾಯಸ್ವಾಮಿ ದೇವಾಲಯವಿದೆ. ಇಲ್ಲಿ ಏಪ್ರಿಲ್‌ನಲ್ಲಿ ವಾರ್ಷಿಕ ಜಾತ್ರೆ ಜರಗುತ್ತದೆ. ಇಲ್ಲಿನ ಸಾತೇಶ್ವರ ಮತ್ತು ಗದ್ದೆ ರಾಮೇಶ್ವರ ದೇವಾಲಯಗಳು ಮೂಲತಃ ಹೊಯ್ಸಳ ಕಾಲದವು. (ಎಚ್.ಜಿ.)

**ಚನ್ನವೀರ ಕಣವಿ :** 1928–. ಪ್ರಸಿದ್ಧ ಕವಿ, ವಿಮರ್ಶಕ. 1928 ಜೂನ್ 28ರಂದು ಧಾರವಾಡ ಜಿಲ್ಲೆ ಹೊಂಬಳ ಗ್ರಾಮದಲ್ಲಿ ಜನಿಸಿದರು. ತಂದೆ ಸಕ್ಕರೆಪ್ಪ, ತಾಯಿ ಪಾರ್ವತವ್ವ. ಗದಗ, ಧಾರವಾಡಗಳಲ್ಲಿ ವಿದ್ಯಾಭ್ಯಾಸ ನಡೆಸಿದರು. 1950ರಲ್ಲಿ ಬಿ.ಎ., 1952ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. ಪೂರೈಸಿದರು. 1952ರಲ್ಲಿ ಆ ವಿಶ್ವವಿದ್ಯಾಲಯದ ಪ್ರಸಾರಾಂಗದ ಕಾರ್ಯದರ್ಶಿಯಾಗಿ ಅನಂತರ ಅದರ ನಿರ್ದೇಶಕರಾಗಿ (1958) ಸೇವೆ ಸಲ್ಲಿಸಿ ನಿವೃತ್ತರಾದರು.

ಇವರು ಕಾವ್ಯ, ವಿಮರ್ಶೆ ಈ ಎರಡೂ ಕ್ಷೇತ್ರಗಳಲ್ಲೂ ವ್ಯವಸಾಯ ಮಾಡಿದವರಾದರೂ ಇವರ ಒಲವು ಕಾವ್ಯದ ಕಡೆಗೇ. ಹಾಗೆಂದು ವಿಮರ್ಶೆಯನ್ನು ಕಡೆಗಣಿಸಿದವರಲ್ಲ. ಇವರ ಕಾವ್ಯದ ಹಿನ್ನೆಲೆಯಲ್ಲಿ ವಿಮರ್ಶನ ಪ್ರಜ್ಞೆ ಇದ್ದರೂ ಅದು ಹಾಲಿನಲ್ಲಿ ಬೆರೆತ ಸಕ್ಕರೆಯಂತೆ ಸುಪ್ತವಾಗಿದ್ದು ತನ್ನ ಪ್ರಭಾವವನ್ನು ಬೀರುತ್ತದೆ. ಪ್ರಜ್ಞೆ - ಪ್ರತಿಭೆಗಳ ಹದವಾದ ಕೂಡುವಿಕೆಯ ಫಲ ಇವರ ಕವಿತೆ ಎನ್ನಬಹುದು.

ಕಾವ್ಯಾಕ್ಷಿ ಇವರ ಪ್ರಥಮ ಕವನ ಸಂಕಲನ (1949). ಇದಕ್ಕೂ ಮೊದಲು ನಾಲ್ಕೈದು ವರ್ಷಗಳಿಂದ ಕವನ ರಚನೆಯಲ್ಲಿ ಗಂಭೀರವಾಗಿ ತೊಡಗಿದ್ದರು. ಅನಂತರ ಕಾವ್ಯ ವ್ಯವಸಾಯ ಸಮೃದ್ಧಿಯಾಗುತ್ತಾ ಹೋಯಿತು. ಅನೇಕ ಕವನ ಸಂಕಲನಗಳನ್ನು ಪ್ರಕಟಿಸಿದರು. ಕಾವ್ಯ ಮಾರ್ಗದಲ್ಲಿ ಇವರ ಗಂಭೀರ ನಡಿಗೆ, ಅತಿಯಾದ ಏರಿಳಿತಗಳಾಗಲಿ, ವಿವಿಧ ಕಾವ್ಯ ಮಾರ್ಗಗಳ ಹೊಯ್ದಾಟಗಳಾಗಲಿ ಅವುಗಳ ತೀವ್ರ ಪ್ರಭಾವವಾಗಲಿ ಎಲ್ಲೂ ಎದ್ದು ಕಾಣುವಂತಿರಲಿಲ್ಲ. ಅತಿರೇಕ ಎನಿಸುವಂತಿರಲಿಲ್ಲ. ಇವರು ಕಾವ್ಯರಚನೆಯಾರಂಭಿಸಿದಾಗ ಕನ್ನಡದಲ್ಲಿ ನವೋದಯ ಕಾವ್ಯ ಪರಾಕಾಷ್ಠೆಯ ಸ್ಥಿತಿ ಪಡೆದಿತ್ತು. ಅನಂತರ ಕೆಲವೇ ವರ್ಷಗಳಲ್ಲಿ ನವ್ಯಕಾವ್ಯದ ಉರುಬು ಆರಂಭವಾಯಿತು. ಇವರು ಆ ಹಂತದಲ್ಲಿ ನವ್ಯತೆಯ ಕಡೆಗೆ ವಾಲಿದಂತೆ ಕಂಡರೂ ಬಹು ಎಚ್ಚರದಿಂದ ಕಾವ್ಯ ರಚನೆಯಲ್ಲಿ ತೊಡಗಿದರು. ಇವರು ಮುಖ್ಯವಾಗಿ ಭಾವನಾಪ್ರಧಾನ ಕವಿ ಎಂಬುದು ಕುರ್ತುಕೋಟಿಯವರ ಅಭಿಪ್ರಾಯ.

ಇವರ ದೀಪಧಾರಿ (1956) ಕವನ ಸಂಕಲನದಲ್ಲಿ ಕೆಲವು ನವ್ಯಕಾವ್ಯ ಮಾರ್ಗದ ಹಲವು ಅಂಶಗಳನ್ನು ಓದುಗರು ಕಾಣಬಹುದಾದರೂ ಆ ಮಾರ್ಗದಲ್ಲಿ ನಡೆದ ಯಶಸ್ವಿ ಪ್ರಯೋಗಗಳೆಂದು ತಾವು ಇದನ್ನು ಕರೆಯುತ್ತಿಲ್ಲವೆಂದು ಆಧುನಿಕ ಭಾವಗೀತೆ ಹಾಗೂ ನವ್ಯಮಾರ್ಗಗಳ ನಡುವೆ ನಿರ್ಮಾಣಗೊಂಡಿರುವ ಕಂದರಕ್ಕೆ ಇದು ಸೇತುವೆಯಾದೀತೆಂಬ ನಮ್ರ ಭಾವನೆ ತಮಗಿದೆಯೆಂದೂ ಕಣವಿಯವರು ಆ ಸಂಕಲನದ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಇವೆರಡೂ ಮಾರ್ಗಗಳ ನಡುವೆ ಇದೊಂದು ಸೇತುವೆಯಾದೀತೆಂಬ ಮಾತನ್ನು ವಿಮರ್ಶಕರು ಗಮನಿಸಿ ಇವರನ್ನು 'ಸಮನ್ವಯ ಕವಿ' ಎಂದು ವರ್ಣಿಸತೊಡಗಿದರು. ನವೋದಯವಾಗಲಿ,



ನವ್ಯವಾಗಲಿ ಮೂಲತಃ ಅದು ಕಾವ್ಯವಾಗಿರಬೇಕಾದ್ದು ಮುಖ್ಯ ಎಂಬುದು ಕಣವಿಯವರನಂಬಿಕೆ. ವಿವಿಧ ಕಾವ್ಯ ಪ್ರಕಾರಗಳಿಗೆ ಸಾಮಾನ್ಯವಾದ ಹಲವು ಅಂಶ ಗಳಿರುತ್ತವೆ. ಒಂದೊಂದು ಪ್ರಕಾರದಲ್ಲಿ ಕೆಲಕೆಲವು ಅಂಶ ಗಳಿಗೆ ಒತ್ತು ಬೀಳುತ್ತದೆ. ಇದೊಂದು ಸಹಜ ಪ್ರತಿಕ್ರಿಯೆ ಎನ್ನಬಹುದಾಗಿದೆ. ನಾನು ಯಾವ ಪಂಥ'ದ ಕವಿಯೋ, ನನಗೆ ತಿಳಿದಿಲ್ಲ. ಆ ಕುರಿತು ಚರ್ಚೆ ಮಾಡುವವರು ಮಾಡಿಕೊಳ್ಳಲಿ. ಒಟ್ಟಿನಲ್ಲಿ ನಾನು ಕವಿ ಎಂಬು ದಷ್ಟೇ ಮುಖ್ಯವಾದದ್ದು, ಅಷ್ಟು ಸಾಕು ಎಂಬ ಅಭಿಪ್ರಾಯವನ್ನು ಕಣವಿಯವರು ವ್ಯಕ್ತಪಡಿಸಿದ್ದುಂಟು. "ಪ್ರಕೃತಿಲೀಲೆ, ಪ್ರಣಯ, ದಾಂಪತ್ಯ, ವಾತ್ಸಲ್ಯ ಈ ಮೊದಲಾದ ರಮ್ಯ ಪರಂಪರೆಯ ವಿಷಯಗಳೊಡನೆ ನವ್ಯ ವಿಷಯಗಳೂ ಕಣವಿಯವರ ಕೃತಿಗಳಲ್ಲಿ ಸೇರಿರುತ್ತದೆ. ಒಂದೊಂದಕ್ಕೂ ತಾಕಲಾಟವಿಲ್ಲ. ಸಮಾನ ಭೂಮಿಕೆ ಅವನ್ನು ಸುತ್ತ ಹೊಂದಿಸುತ್ತದೆ" ಎಂಬುದು ಮುಗಳಿಯವರ ಅಭಿಪ್ರಾಯ.

ಕಣವಿಯವರ ಕಾವ್ಯ ಸಂಕಲನಗಳು ಇವು : ಕಾವ್ಯಾಕ್ಷಿ(1949), ಭಾವಜೀವಿ (1950), ಆಕಾಶಬುಟ್ಟಿ (1953), ಮಧುಚಂದ್ರ (1954), ದೀಪಧಾರಿ (1956), ಮಣ್ಣಿನಮೆರವಣಿಗೆ (1960), ನೆಲಮುಗಿಲು (1965), ನಗರದಲ್ಲಿನೆರಳು (1974), ಜೀವಧ್ವನಿ (1980), ಕಾರ್ತಿಕಮೋಡ (1986), ಜೇನಿಯಾ (1989), ಶಿಶಿರದಲ್ಲಿ ಬಂದ ಸ್ನೇಹಿತ (1994), ಹಕ್ಕಿಪುಚ್ಚ (1985). ಚಿರಂತನದಾಹ (1975) ಇವರ ಆಯ್ದ ಕವನಗಳ ಸಂಕಲನ. ಸಮಗ್ರಕಾವ್ಯ 1996ರಲ್ಲಿ ಪ್ರಕಟವಾಯಿತು. ಹಕ್ಕಿಪುಚ್ಚ ಎಂಬುದು ಮಕ್ಕಳ ಕವಿತೆಗಳ ಸಂಗ್ರಹ.

ಇವರು ಸಾನೆಟ್ ಅಥವಾ ಸುನೀತಕ್ಕೆ ಒಂದು ರೂಪವನ್ನು ನೀಡಿದ್ದಾರೆ. ವ್ಯಕ್ತಿ ಚಿತ್ರಗಳ ರಚನೆಗೆ ಈ ಪ್ರಕಾರವನ್ನು ಮುಖ್ಯವಾಗಿ ಬಳಸಿಕೊಂಡಿದ್ದಾರೆ.

ಬೆಳಕಿಗಾಗಿ ತುಡಿಯುವುದು, ಬೆಳಕಿನತ್ತ ಸಾಗುವುದು ಇವರ ಕಾವ್ಯದ ನಿತ್ಯ ಹಂಬಲ ಎಂದು ಹೇಳಬಹುದು. ಅದು ಒಂದು ರೀತಿಯಲ್ಲಿ ಇವರ ಕಾವ್ಯ ನಿರ್ಮಾಣ ಪ್ರಕ್ರಿಯೆಯ ಉದ್ದಕ್ಕೂ ಧಾರೆಯಂತೆ ಹರಿದು ಬಂದಿದೆ. ಇವರ ಆಯ್ದ ಕವನಗಳ ಸಂಕಲನದ ಚಿರಂತನದಾಹವೂ ಇದನ್ನೇ ಸಂಕೇತಿಸುತ್ತದೆ. ಇವರ ದಾಹ ಜ್ಞಾನದ ಬೆಳಕಿಗಾಗಿ. ಜಗವ ತುಂಬಿದ ಬೆಳಕು ನಮಗೇಕೊ ಸಾಲದಿದೆ. ಎನಿತು ಮಾನವನೆದೆಯು ಆಳ ಅಗಲ ಎಂಬುದಾಗಿ ಇವರ ಕವಿಹೃದಯ ಹಂಬಲಿಸುತ್ತದೆ. ಇವರ ಮೊದಲನೆಯ ಕಾವ್ಯ ಸಂಕಲನವಾದ ಕಾವ್ಯಾಕ್ಷಿಯ ಮೊದಲನೆಯ ಕವಿತೆ ಇದನ್ನೇ ಕುರಿತದ್ದು. ನೀನು ಪೇಳ್ದ ಕವಿತೆಯ ತಂತ್ರ ಸವಿಯ ಹಾಡಲೊರೆದ ಮಂತ್ರ, ಬಾಳ ಹಣತೆಯಲ್ಲಿ ತಾಯೆ ಬೆಳಕು ಚಿಮ್ಮಿತು ಎನ್ನುತ್ತಾರೆ ಕವಿ. ಯುಗಯುಗಾಂತ್ಯದವರೆಗೆ ಜಗವ ಬೆಳಗಿಸಬಲ್ಲ ಎಲೆ ಚಿರಂತನ ಬೆಳಕೆ ನೀನೆ ಬೇಕು ಎಂಬುದು ಇನ್ನೊಂದು ಕವನದಲ್ಲಿಯ ಪ್ರಾರ್ಥನೆ.

ಕಣವಿಯವರ ಕಾವ್ಯಕರ್ಮದ ವಿಕಾಸದ ಹಾದಿಯ ಹಲವು ಘಟ್ಟಗಳನ್ನು ಇವರ ಕವನಗಳಲ್ಲಿ ಗುರುತಿಸುವುದು ಸಾಧ್ಯ. ಇವರ ಪ್ರಾರಂಭದ ಕವಿತೆಗಳಲ್ಲಿ ಕುವೆಂಪು, ಬೇಂದ್ರೆ, ಪುತಿನ, ಮಧುರಚೆನ್ನ ಮೊದಲಾದವರ ಕಾವ್ಯ ಪ್ರಭಾವವನ್ನು ಕಾಣಬಹುದು. ಭಾವಜೀವಿ ಎಂಬ ಕವನ ಇವರ ಆತ್ಮಕಥನ. ಅದರ ಮೇಲೆ ಮಧುರಚೆನ್ನರ 'ನನ್ನ ನಲ್ಲ'

ಕವಿತೆಯ ಪ್ರಭಾವವಿದೆ ಎಂದು ವಿಮರ್ಶಕರು ಗುರುತಿಸಿದ್ದಾರೆ. ಪ್ರಕೃತಿ ಗೀತೆಗಳ ರಚನೆಯೂ ಬೇಂದ್ರೆ,ಕುವೆಂಪು ರಚನೆಗಳಿಂದ ಪ್ರಭಾವಿತವಾಗಿರುವುದು ಕಂಡುಬರುತ್ತದೆ.

ಕಣವಿಯವರು ಕ್ರಮೇಣ ಅನುಕರಣೆಯ ಹಾದಿ ಬಿಟ್ಟು ಸ್ವತಂತ್ರ ಮನೋಧರ್ಮದ ಗರಿಕೂಡಿಸಿಕೊಂಡು ಕಾವ್ಯಾಕಾಶದಲ್ಲಿ ಉಡ್ಡಯನ ಮಾಡಿದ್ದರ ಲಕ್ಷಣಗಳು ಅನಂತರದ ಕವನಗಳಲ್ಲಿ ಕಾಣಬರುತ್ತದೆ. ಕಣವಿಯವರು ಬದುಕನ್ನು ವ್ಯಾಪಕವಾದ ಹಿನ್ನೆಲೆಯಲ್ಲಿ ಕಾಣತೊಡಗುತ್ತಾರೆ. ಸ್ವೋಪಜ್ಞತೆಯನ್ನು ಮೆರೆಯುತ್ತಾರೆ. ಸಮಾಜದ ದೋಷಗಳ ಮೇಲೆ ಬೆಳಕು ಚೆಲ್ಲುತ್ತಾರೆ, ಅದನ್ನು ಟೀಕಿಸುತ್ತಾರೆ. ವ್ಯಂಗ್ಯದ ಬಾರುಕೋಲುಗಳನ್ನು ಬೀಸುತ್ತಾರೆ. ಪ್ರಗತಿಶೀಲ ಚಳವಳಿಯ ಮತ್ತು ಆ ಮನೋಧರ್ಮದ ಲೇಖಕರ ಪ್ರಭಾವಕ್ಕೆ ಇವರು ಒಳಗಾಗದಂತೆ ಕಾಣುತ್ತಾರೆ. ಒಮ್ಮೊಮ್ಮೆ ಕಾವ್ಯ ಗುಣ ಹಿಂದಕ್ಕೆ ಸರಿಯಿತೋ, ಕವಿತೆ ವಾಚ್ಯವಾಗುತ್ತಿದೆಯೋ ಎನಿಸಿದರೂ ಅದೊಂದು ದೋಷವೆಂದು ಗುರುತಿಸಲಾಗದಷ್ಟು ತೆಳ್ಳಗಿರುತ್ತದೆ. ಒಂದು ರೀತಿಯಲ್ಲಿ ರಮ್ಯಕಾವ್ಯ ಪ್ರಭಾವದಿಂದ ಬಿಡುಗಡೆ ಹೊಂದದ ಇದೊಂದು ಸಾಧನವಾಗಿ ಪರಿಣಮಿಸಿದ್ದಿರಬಹುದು. ಆದರೆ ದೂರ ಹೋಗಬಹುದಾದ ಅಪಾಯಕ್ಕೆ ಇವರು ಸಿಲುಕದೆ ವಿಕಾಸದ ಹಾದಿಯಲ್ಲಿ ಮುನ್ನಡೆಯುತ್ತಾರೆ.

ಆ ವೇಳೆಗೆ ನವ್ಯಕಾವ್ಯದ ಯುಗದ ಉದಯವಾಗುತಿತ್ತು. ಅಡಿಗರ ಏರುದನಿ, ಪರಿಸರಕ್ಕೆ ಅವರ ತೀವ್ರ ಪ್ರತಿಕ್ರಿಯೆ, ಸಮಾಜ ಮುಖಿಯಾಗುವುದಕ್ಕಿಂತ ವ್ಯಕ್ತಿಗತವಾಗಿ ಚಿಂತನೆಯ ಹರಿವು, ಭಾಷೆ, ಲಯ ಮುಂತಾದವನ್ನೂ ಹೊಸದುಗೊಳಿಸಿಕೊಳ್ಳುವ ಕಾಳಜಿ, ಅವಕ್ಕೆ ಹೊಸದಾಗಿ ಶಕ್ತಿ ಪೂರಣ ಮಾಡುವ ಪ್ರಯತ್ನ, ಪ್ರತಿಮೆ ಸಂಕೇತಗಳನ್ನು ಅಂದಿನ ಸಂದರ್ಭದ ಅನುಭವಗಳ ಹಂದರದ ಮೇಲೆ ಹೆಣೆಯುವ ಪ್ರಯತ್ನ, ಆಗಾಗ್ಗೆ ಕಾಮದ ಅತಿರೇಕ, ಒಂಟಿತನದ ಅಳಲು ಅಸಹನೆ ಇವೇ ಪ್ರಧಾನವಾಗಿ ಕಂಡುಬಂದ ನವ್ಯಮಾರ್ಗದೊಂದಿಗೆ ಕಣವಿಯವರಾಗಲೀ, ಅವರಂಥ ಅವರ ಸಮಕಾಲೀನ ಕವಿಗಳಾಗಲಿ ನೇರವಾಗಿ ಹೋರಾಟದ ಕಣಕ್ಕೆ ಇಳಿಯಲಿಲ್ಲವಾದರೂ ಅದರಲ್ಲಿಯ ಕೆಲವು ಲಕ್ಷಣಗಳನ್ನು ಗುರುತಿಸಿ ಅವನ್ನು ತಮ್ಮ ಕಾವ್ಯದಲ್ಲಿ ಬೆಸುಗೆ ಮಾಡಿಕೊಳ್ಳುವುದರ ಜೊತೆಗೆ ಇದೊಂದು ಬಗೆಯ ಸಮನ್ವಯ ಪ್ರಯತ್ನವೋ, ನವೋದಯ ನವ್ಯಮಾರ್ಗಗಳ ಸೇತುಬಂಧವೋ ಎನಿಸುವ ಮಟ್ಟಿಗೆ ಇವರು ಕಾವ್ಯ ರಚನೆ ಮಾಡಿದರು. ಪ್ರಾರಂಭದಲ್ಲಿ ಇವರು ನವೋದಯ ಕಲಿಕಾ ಮಾರ್ಗಕ್ಕೆ ಸಂಪೂರ್ಣವಾಗಿ ತೆತ್ತುಕೊಂಡು, ಆಗ ಗಟ್ಟಿಯಾಗಿ ನಿರ್ಮಿಸಿಕೊಂಡ ಮನೋಧರ್ಮದ ಬಲದಿಂದಾಗಿ ಪ್ರಗತಿದೃಷ್ಟಿಗೂ ಸಂಪೂರ್ಣವಾಗಿ ಮಾರುಹೋಗದೆ, ನವ್ಯಮಾರ್ಗವನ್ನು ತಮ್ಮ ಸ್ವಭಾವಕ್ಕೆ ತಕ್ಕಂತೆ ಹೊಂದಿಸಿಕೊಂಡು, ಅರಗಿಸಿಕೊಂಡು, ಒಂದು ರೀತಿಯಲ್ಲಿ ನವೋದಯ ಕಾವ್ಯದ ಪಾತ್ರವನ್ನು ವಿಸ್ತರಿಸಲು ನಡೆಸಿದ ಯತ್ನ ಇವರ ಕವಿತೆಗಳಲ್ಲಿ ನಮಗೆ ಕಾಣುತ್ತದೆ.

ಚೆನ್ನವೀರ ಕಣವಿ ಸಾರ್ಥಕ ಕವಿ. ಕವಿತಾ ರಚನೆಯೇ ಅಲ್ಲದೆ ವಿಮರ್ಶೆಯ ಹಾದಿಯಲ್ಲೂ ಇವರು ನಡೆದು ಬಂದಿದ್ದಾರೆ. ಸಾಹಿತ್ಯ ಚಿಂತನ, ಕಾವ್ಯಾನುಸಂಧಾನ, ಸಮಾಹಿತ, ಸಮತೋಲನ, ಮಧುರಚೆನ್ನ, ಶುಭನುಡಿಯೆ ಹಕ್ಕಿ ಮುಂತಾದ ಕೃತಿಗಳಲ್ಲಿ ಕವಿ ಕೃತಿ ದರ್ಶನ, ವಿವೇಚನ, ನೆನಪಿನ ಚಿತ್ರಗಳು ಮತ್ತು ವಚನಗಳ ಹಾಗೂ ಜನಪದ ಗೀತೆಗಳ ವಿಶ್ಲೇಷಣೆಗಳೂ ಇವೆ. ಇವರ ಇತರ ಕೃತಿಗಳಿವು : ನವಿಲೂರ ಮನೆಯಿಂದ, ನವ್ಯಧ್ವನಿ, ನೈವೇದ್ಯ, ನಮ್ಮೆಲ್ಲರ ನೆಹರು, ಜೀವನಸಿದ್ಧಿ, ಸಿದ್ಧಿವಿನಾಯಕ. 'ಬಾಬಾ ಫರೀದ್' ಎಂಬುದು ಅನುವಾದ. ಇವರಿಗೆ ಹಲವಾರು ಪ್ರಶಸ್ತಿಗಳು ಬಂದಿವೆ. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1981), ಜೀವನದ ಒಟ್ಟಾರೆ ಸಾಧನೆಗಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1985), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1989), ಭಾರತ ಸರ್ಕಾರದ ಮಾನವ ಸಂಪನ್ಮೂಲ ಇಲಾಖೆಯ ಸಂಸ್ಕೃತಿ ವಿಭಾಗದ ಎಮೆರಿಟಸ್ ಫೆಲೋಶಿಪ್ (1996 - 98), ಪಂಪ ಪ್ರಶಸ್ತಿ (1999) ಇವು ಕೆಲವು. ಇವರು 1996ರಲ್ಲಿ ಹಾಸನದಲ್ಲಿ ನಡೆದ 65ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಇವರ ಕೆಲವು ಕವನಗಳು ಧ್ವನಿಸುರಳಿಯಲ್ಲಿ ಬಂದಿವೆ.

ಇವರ ಪತ್ನಿ ಶಾಂತಾದೇವಿ. ಇವರಿಗೆ ಐವರು ಮಕ್ಕಳು – ನಾಲ್ವರು ಗಂಡು, ಒಂದು ಹೆಣ್ಣು. ಕಣವಿಯವರ ಧಾರವಾಡದ ನಿವಾಸದ ಹೆಸರು 'ಚೆಂಬೆಳಕು', ಅಲ್ಲಿಯ ಕಲ್ಯಾಣನಗರದಲ್ಲಿ. ಇವರ ಸಮಗ್ರ ಕಾವ್ಯದ ಹೆಸರು 'ಹೊಂಬೆಳಕು'. ಕಣವಿಯವರು ಈಗ ಧಾರವಾಡದಲ್ಲಿ ನೆಲೆಸಿದ್ದಾರೆ. (ಎಚ್.ಎಸ್.ಕೆ.)

**ಚಲನಚಿತ್ರೋದ್ಯಮ :** ಭಾರತದಲ್ಲಿ ಚಲನಚಿತ್ರ ಒಂದು ಉದ್ಯಮವಾಗಿ ಬೆಳೆಯಲಾರಂಭಿಸಿದ್ದು 1920ರ ಅನಂತರ. ಮುಂದೆ ಹತ್ತು ವರ್ಷಗಳಲ್ಲಿಯೇ ಈ ಉದ್ಯಮ ಕರ್ನಾಟಕಕ್ಕೆ ಬಂತು. ಕನ್ನಡ ಚಲನ ಚಿತ್ರರಂಗಕ್ಕೆ ಸು.80 ವರ್ಷಗಳ ಕಾಲ ಸುದೀರ್ಘ ಇತಿಹಾಸವಿದೆ. ಚಲನಚಿತ್ರ ಉದ್ಯಮ ವಾಕ್ಚಿತ್ರಗಳ ಯುಗಕ್ಕೆ ಕಾಲಿಡುವುದಕ್ಕೆ ಮುಂಚೆ ಮೂಕಚಿತ್ರಗಳ ಯುಗವೊಂದು ಆಗಿಹೋಯಿತು. ಕನ್ನಡ ನೆಲದಲ್ಲಿ ಪ್ರಥಮವಾಗಿ 1929ರಲ್ಲಿ ಮೋಹನ್ ರಾಂ ಭವನಾನಿ ಎಂಬ ಮುಂಬಯಿ ನಿರ್ಮಾಪಕರೊಬ್ಬರು ಮೃಚ್ಛಕಟಿಕ ಎಂಬ ಮೂಕಚಿತ್ರವನ್ನು ಬೆಂಗಳೂರಿನ ಸುತ್ತಮುತ್ತ ಚಿತ್ರೀಕರಿಸಿದರು. ಈ ಚಿತ್ರದಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯ, ಟಿ.ಪಿ.ಕೈಲಾಸಂ. ಏಣಾಕ್ಷಿ ರಾಮರಾವ್, ಬಿ.ಎಸ್.ರಾಮರಾವ್, ಡಿ.ಕೆ.ಭಾರದ್ವಾಜ್, ಹರೀಂದ್ರ ಭಾರದ್ವಾಜ್ ಮೊದಲಾದವರು ಪಾತ್ರವಹಿಸಿದ್ದರು. 1929ರಲ್ಲಿಯೇ ಕರ್ನಾಟಕ ಪಿಕ್ಚರ್ಸ್ ಕಾರ್ಪೊರೇಷನ್ ಎಂಬ ಚಿತ್ರಸಂಸ್ಥೆಯ ಮೂಲಕ ಕೆಲವು ಮೂಕಚಿತ್ರಗಳು ಹೊರಬಿದ್ದುವು. ಗುಬ್ಬಿ ವೀರಣ್ಣ, ದೇವುಡು ನರಸಿಂಹಶಾಸ್ತ್ರಿ, ಶ್ರೀನಿವಾಸ ಮೂರ್ತಿ, ಬೆಲ್ಜಿಯಂನ ಆಲ್‌ಗುಡ್ ಮೊದಲಾದವರು ಈ ಸಂಸ್ಥೆಯ ವ್ಯವಸ್ಥಾಪಕರು. ಇದೇ ಕಾಲದಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತವಾದ ಸೂರ್ಯ ಫಿಲಂ ಕಂಪನಿ ಸು.45 ಮೂಕಚಿತ್ರಗಳನ್ನು ನಿರ್ಮಿಸಿತು. ಇದರಲ್ಲಿ ಬಹುತೇಕ ಸ್ಟಂಟ್ ಚಿತ್ರಗಳು. ಇಂಥ ಚಿತ್ರಗಳು ಎಲ್ಲಿ ತಯಾರಾದರೂ ಅವುಗಳಿಗೆ ಭಾಷೆಯ ಸೀಮಾರೇಖೆ ಇಲ್ಲದುದರಿಂದ ಭಾರತದಾದ್ಯಂತ ಬಿಡುಗಡೆಯಾಗುತ್ತಿದ್ದುವು. ಬೆಂಗಳೂರಿನಲ್ಲಿ ಈ ಚಟುವಟಿಕೆಗಳಿಗೆ ಪೂರಕವಾಗಿ 1931ರಲ್ಲಿ ಒಂದು ಸಣ್ಣ ಸ್ಟುಡಿಯೊ ತಲೆಯೆತ್ತಿತು. ಆದರೆ ಚಿತ್ರೀಕರಣಕ್ಕೆ ಅಗತ್ಯ ಸಾಮಗ್ರಿ ಸಲಕರಣೆಗಳು ದೂರದ ಮುಂಬಯಿ ಮದರಾಸುಗಳಿಂದಲೇ ಬರಬೇಕಾಗಿತ್ತು. ವೈ.ವಿ.ರಾವ್ ಅವರು ನಿರ್ದೇಶಿಸಿದ ಹರಿಮಾಯಾ ಎಂಬ ಮೂಕಚಿತ್ರ ಇಲ್ಲಿ ತಯಾರಾಯಿತು. ಇದರಲ್ಲಿ ರಾವ್ ಅವರೇ ಕೃಷ್ಣನ ಪಾತ್ರ ವಹಿಸಿದ್ದರು. ಇದೇ ಸ್ಟುಡಿಯೋದಲ್ಲಿ ಆಲ್‌ಗುಡ್ ಅವರ ನಿರ್ದೇಶನದಲ್ಲಿ ಹಿಸ್ ಲವ್ ಅಫೇರ್ಸ್ ಎಂಬ ಸಾಮಾಜಿಕ ಮೂಕಚಿತ್ರ 25,000ರೂ. ವೆಚ್ಚದಲ್ಲಿ ನಿರ್ಮಾಣವಾಯಿತು. ಈ ಚಿತ್ರದಲ್ಲಿ ಗುಬ್ಬಿ ವೀರಣ್ಣ, ಎಂ.ವಿ.ಸುಬ್ಬಯ್ಯ ನಾಯ್ಡು, ಜಯಮ್ಮ, ಬಿ.ಸುಂದರಮ್ಮ, ಎಚ್.ಎಲ್.ಎನ್.ಸಿಂಹ ಮೊದಲಾದವರಿದ್ದರು. ಕರ್ನಾಟಕದಲ್ಲಿ ಆ ಕಾಲಕ್ಕೆ 175 ಮೂಕ ಚಿತ್ರಗಳು ತಯಾರಾಗಿರ ಬಹುದೆಂಬುದು ಒಂದು ಅಂದಾಜು.



ಸಂಸಾರ ನೌಕಾ ಚಿತ್ರದ ಒಂದು ದೃಶ್ಯ

ಮೂಕಚಿತ್ರಗಳು ಉನ್ನತ ದಶೆಯಲ್ಲಿರುವಾಗಲೇ ಭಾರತಕ್ಕೆ ವಾಕ್ಚಿತ್ರ ಕಾಲಿಟ್ಟು 1931ರಲ್ಲಿ ಭಾರತದ ಮೊದಲ ವಾಕ್ಚಿತ್ರ (ಆಲಂಆರ)

ಬಿಡುಗಡೆಯಾದ ಮೂರು ವರ್ಷದಲ್ಲಿಯೇ ಕನ್ನಡದಲ್ಲಿಯೂ ವಾಕ್ಚಿತ್ರ ಯುಗ ಆರಂಭವಾಯಿತು. 1934ರಲ್ಲಿ ಸತಿ ಸುಲೋಚನ, ಭಕ್ತಧ್ರುವ ಎಂಬ ಚಿತ್ರಗಳು ಬಿಡುಗಡೆಯಾದವು. ಸೌತ್ ಇಂಡಿಯನ್ ಮೂವಿಟೋನ್ ಎಂಬ ಸಂಸ್ಥೆ ಕೊಲ್ಹಾಪುರದಲ್ಲಿ ಎರಡೂವರೆ ತಿಂಗಳಲ್ಲಿ ನಿರ್ಮಿಸಿದ ಚಿತ್ರ ಸತಿ ಸುಲೋಚನ, ಜಯವಾಣಿ ಫಿಲಂಸ್ ಅವರು ಮುಂಬಯಿ ಅಜಂತ ಸ್ಟುಡಿಯೋದಲ್ಲಿ ಚಿತ್ರಿಸಿದ ಚಿತ್ರ ಭಕ್ತಧ್ರುವ.

ಹರಿದು ಹಂಚಿಹೋಗಿದ್ದ ಕನ್ನಡನಾಡಿನಲ್ಲಿ ಕನ್ನಡ ಚಿತ್ರಗಳ ಚಿತ್ರೀಕರಣಕ್ಕೆ ಸಾಕಷ್ಟು ಅನುಕೂಲತೆಗಳಿಲ್ಲದೆ ಕನ್ನಡ ಚಿತ್ರರಂಗ ಅನ್ಯಭಾಷಾ ಕೇಂದ್ರಗಳಲ್ಲಿ ಉಸಿರು ಪಡೆಯಬೇಕಾದ ಪರಿಸ್ಥಿತಿಯಿದ್ದು ಕನ್ನಡ ಚಿತ್ರೋದ್ಯಮ ಭದ್ರವಾಗಿ ತಳವೂರುವುದು ಅಸಾಧ್ಯವಾಗಿತ್ತು. ಹೀಗಾಗಿ 1934ರಿಂದ 1947ರವರೆಗೆ ಕೇವಲ 16 ಕನ್ನಡ ಚಿತ್ರಗಳು ತಯಾರಾದವು.



ವೈ.ವಿ.ರಾವ್, ಶ್ರೀಕೃಷ್ಣನ ಪಾತ್ರದಲ್ಲಿ

ಅಲ್ಲಿಂದ ಸು.1960ರವರೆಗೆ ಕರ್ನಾಟಕದಲ್ಲಿ ತಯಾರಾಗುತ್ತಿದ್ದ ಚಿತ್ರಗಳ ಸಂಖ್ಯೆ ವರ್ಷಕ್ಕೆ ಏಳು ಅಥವಾ ಎಂಟು. ಹೀಗೆ ಅಲ್ಪಸಂಖ್ಯೆಯಲ್ಲಿ ಕನ್ನಡ ಚಿತ್ರಗಳು ತಯಾರಾಗಲು ಅನೇಕ ಕಾರಣಗಳಿದ್ದುವು. ಆ ಕಾಲಕ್ಕೆ ಕನ್ನಡ ನಾಡಿನಲ್ಲಿ ಕನ್ನಡ ಪ್ರೇಕ್ಷಕಸಮೂಹ ಬಲು ಕಡಿಮೆಯಿತ್ತು; ಹಳೆಯ ಮೈಸೂರು ರಾಜ್ಯದ ಕೆಲವು ನಗರ, ಪಟ್ಟಣಗಳ ಮಧ್ಯಮವರ್ಗದ ಜನ ಮಾತ್ರ ಕನ್ನಡ ಚಿತ್ರಗಳನ್ನು ನೋಡುತ್ತಿದ್ದರು. ಕೆಳವರ್ಗದ ನಗರವಾಸಿ ಜನ ಹಾಗೂ ಗ್ರಾಮಾಂತರ ಪ್ರದೇಶಗಳ ಮಂದಿಗೆ ಕೇವಲ ತಮಿಳು ಮತ್ತು ತೆಲುಗು ಚಿತ್ರಗಳೇ ಹೆಚ್ಚು ಪ್ರಿಯವಾಗಿದ್ದುವು. ಅನ್ಯಭಾಷಾ ನಿರ್ಮಾಪಕರೊಂದಿಗಿನ ಪೈಪೋಟಿಯ ನಡುವಿನ ಬದುಕು, ಅನ್ಯ ನಾಡಿನಲ್ಲಿ ಕನ್ನಡ ಚಿತ್ರಗಳ ತಯಾರಿಕೆಯ ತೊಂದರೆ, ಕಡಿಮೆ ಬಂಡವಾಳ, ಮಿತ ಮಾರುಕಟ್ಟೆ ಇವುಗಳ ಜೊತೆಗೆ ತಮ್ಮ ಭಾಷೆಯ ಬಗ್ಗೆ ಅಭಿಮಾನವಿರಲಿ ಸಹಾನುಭೂತಿಯೂ ಇಲ್ಲದ ಪ್ರೇಕ್ಷಕವೃಂದ – ಈ ಕಾರಣಗಳಿಂದಾಗಿ ಕನ್ನಡಚಿತ್ರೋದ್ಯಮ ಕುಂಟುತ್ತ ತೆವಳುತ್ತ ಸಾಗಿತ್ತು. ಇಂಥ ಸಮಯದಲ್ಲಿ ಕನ್ನಡ ಚಿತ್ರೋದ್ಯಮದ ಪ್ರಮುಖ ಶಿಲ್ಪಿಗಳೂ ಆರಂಭ ನೇತಾರರೂ ಆದ ಗುಬ್ಬಿವೀರಣ್ಣ, ಆರ್.ನಾಗೇಂದ್ರರಾವ್, ಬಿ.ಆರ್.ಪಂತುಲು, ಹೊನ್ನಪ್ಪ ಭಾಗವತರ್, ಡಿ.ಕೆಂಪರಾಜ ಅರಸು, ಎಚ್.ಎಲ್.ಎನ್.ಸಿಂಹ, ಬಿ.ಎಸ್.ರಂಗಾ ಮೊದಲಾದವರು ಮದರಾಸಿನಲ್ಲಿಯೇ ನಿಂತು ಕನ್ನಡ ಚಿತ್ರರಂಗವನ್ನು ಪೋಷಿಸಿದರು. ದಕ್ಷಿಣ ಭಾರತ ಚಿತ್ರೋದ್ಯಮದ ಹೆಸರಾಂತ ಎ.ವಿ.ಮೇಯಪ್ಪ ಚೆಟ್ಟಿಯಾರ್ ಅವರಂಥವರೂ ಕನ್ನಡ ಚಿತ್ರನಿರ್ಮಾಪಕರಿಗೆ ಸಹಾಯ ಹಸ್ತ ನೀಡುತ್ತಿದ್ದರು. ಹಾಗಾಗಿ 50ರ ದಶಕದಲ್ಲಿ ಸು. 75 ಚಿತ್ರಗಳು ಬಿಡುಗಡೆಯಾದವು. ಜಗನ್ಮೋಹಿನಿ, ಜಾತಕ ಫಲ, ಬೇಡರ ಕಣ್ಣಪ್ಪ, ರಾಜಾ ವಿಕ್ರಮ, ಜಲದುರ್ಗ, ಸ್ಕೂಲ್ ಮಾಸ್ಟರ್ ಮೊದಲಾದ ಚಿತ್ರಗಳು ಜನರನ್ನು ಆಕರ್ಷಿಸಿ ಕನ್ನಡ ಚಿತ್ರರಂಗ ಚಿಗುರೊಡೆಯಲು ಕಾರಣವಾದವು. ಆದರೂ ಕರ್ನಾಟಕ ಚಿತ್ರೋದ್ಯಮ ಆರ್ಥಿಕ ಮುಗ್ಗಟ್ಟಿನಿದ ಪಾರಾಗಿರಲಿಲ್ಲ.

ಕನ್ನಡ ಚಿತ್ರರಂಗದ ಪರಿಸ್ಥಿತಿ 60ರ ದಶಕದಲ್ಲಿ ಬದಲಾಗತೊಡಗಿತು. 1956ರಲ್ಲಿ ವಿಶಾಲ ಕರ್ನಾಟಕವಾಗಿ ಕನ್ನಡಕ್ಕೆ ಒಂದು ಭದ್ರನೆಲೆ ದೊರೆತಿದ್ದರೂ ಕನ್ನಡ ಚಿತ್ರೋದ್ಯಮ ಇತರ ಭಾಷೆಗಳ ಮುಷ್ಟಿಯಲ್ಲಿಯೇ ಸಿಲುಕಿತ್ತು. ಇದನ್ನು ಉಗ್ರವಾಗಿ ಪ್ರತಿಭಟಿಸಿದ ಕನ್ನಡ ಚಳವಳಿ (ನೋಡಿ) 60ರ ದಶಕದ ಆರಂಭದಲ್ಲಿ ಕನ್ನಡ ಚಿತ್ರರಂಗಕ್ಕೆ ವರಪ್ರಸಾದವಾಯಿತು. ಖ್ಯಾತ ಕಾದಂಬರಿಕಾರರಾದ ಅ.ನ.ಕೃ. ಹಾಗೂ ಎಂ.ರಾಮಮೂರ್ತಿ ಮೊದಲಾದವರ ನೇತೃತ್ವದಲ್ಲಿ ಈ ಚಳವಳಿ ನಡೆಯಿತು. ಸಹಾಯಾರ್ಥರೂಪದಲ್ಲಿ ಸರ್ಕಾರ ಕನ್ನಡ ಚಿತ್ರಗಳಿಗೆ ಸಹಾಯ ಮಾಡಬೇಕೆಂಬ ಒತ್ತಾಯ, ಸಿನಿಮಾ ಮಂದಿರಗಳಲ್ಲಿ ಕನ್ನಡ ಚಿತ್ರಗಳ ಕಡ್ಡಾಯ ಪ್ರದರ್ಶನ – ಈ ಬೇಡಿಕೆಗಳನ್ನು ಇಟ್ಟುದುದಲ್ಲದೆ ಈ ಆಂದೋಲನ ಬೇರೆ ಭಾಷೆಯ ಚಿತ್ರಗಳ ಡಬ್ಬಿಂಗ್‍ಗನ್ನು ಪ್ರಬಲವಾಗಿ ವಿರೋಧಿಸಿತು. ಕನ್ನಡ ಚಿತ್ರೋದ್ಯಮಿಗಳು ಇದನ್ನು ಹಾರ್ದಿಕವಾಗಿ ಸ್ವಾಗತಿಸಿದರು. ತಮ್ಮ ಸೃಜನಶೀಲತೆಯನ್ನು ಯಾವ ಮುಖವಾಗಿ ಹರಿಸಬೇಕೆಂಬುದರ ಬಗ್ಗೆ, ಕನ್ನಡ ಚಿತ್ರಗಳ ವಾಸ್ತವ ಪ್ರೇಕ್ಷಕರಾರು, ಅವರ ಅಭಿರುಚಿಯೇನು ಎಂಬುದರ ಬಗ್ಗೆ ಅರಿವು ಮೂಡಿ ಕನ್ನಡ ಚಿತ್ರೋದ್ಯಮದ ಹೊಸ ಅಸ್ತಿತ್ವಕ್ಕೆ ನಾಂದಿಯಾಯಿತು.

ಪ್ರಾದೇಶಿಕ ಚಿತ್ರೋದ್ಯಮಕ್ಕೆ ಉತ್ತೇಜನ ಕೊಡುವ ದೃಷ್ಟಿಯಿಂದ ಕೇಂದ್ರ ಸರ್ಕಾರ 1954ರಿಂದ ಪ್ರಾದೇಶಿಕ ಪ್ರಶಸ್ತಿಗಳನ್ನು ರಾಷ್ಟ್ರಮಟ್ಟದಲ್ಲಿ ನೀಡತೊಡಗಿತು. ಅಲ್ಲದೆ ಚಿತ್ರನಿರ್ಮಾಣಕ್ಕೆ ಸಾಲ ನೀಡುವ ಉದ್ದೇಶದಿಂದ 1960ರಲ್ಲಿ ಕರ್ನಾಟಕ ಫಿಲಂ ಫೈನಾನ್ಸ್ ಕಾರ್ಪೋರೇಷನ್ ಸ್ಥಾಪಿತವಾಯಿತು. ಕನ್ನಡ ಚಿತ್ರೋದ್ಯಮಕ್ಕೆ ಕಾಯಕಲ್ಪ ಚಿಕಿತ್ಸೆ ನಡೆದದ್ದು ಕರ್ನಾಟಕ ಸರ್ಕಾರ 1966ರರಿಂದ ಸಹಾಯಧನ ಯೋಜನೆಯನ್ನು ಜಾರಿಗೆ ತಂದಂದಿನಿಂದ. ಬಹುಶಃ ಭಾರತದಲ್ಲಿ ಇಂಥ' ಯೋಜನೆಯನ್ನು ಕಾರ್ಯಗತಗೊಳಿಸಿದ ಎರಡನೆಯ ರಾಜ್ಯವೆಂದರೆ ಕರ್ನಾಟಕ. ಕನ್ನಡ ನಾಡಿನಲ್ಲಿಯೇ ಸಂಪೂರ್ಣವಾಗಿ ಚಿತ್ರೀಕರಣಗೊಂಡ ಯಾವುದೇ ಚಿತ್ರಕ್ಕೆ ಯಾವುದೇ ಷರತ್ತಿಲ್ಲದೆ 50,000ರೂ. ಸಹಾಯಧನ ನೀಡತೊಡಗಿತು. ಇದು ಕನ್ನಡ ಚಿತ್ರನಿರ್ಮಾಪಕರನ್ನು ಮಾತ್ರವಲ್ಲದೆ ಇತರ ಭಾಷಾ ಚಿತ್ರ ನಿರ್ಮಾಪಕರನ್ನೂ ಆಕರ್ಷಿಸಿತು. 1980ರಿಂದ ರಾಜ್ಯದಲ್ಲೇ ನಿರ್ಮಾಣವಾದ ಕನ್ನಡ ಚಿತ್ರಗಳಿಗೆ 50% ತೆರಿಗೆ ವಿನಾಯಿತಿ ನೀಡಿದೆ. ಅಲ್ಲದೆ ಸಹಾಯಧನದ ಮೊತ್ತವನ್ನು ಕೂಡ ಹೆಚ್ಚಿಸಲಾಯಿತು. 1996ರ ಅನಂತರ ನೂತನ ಚಲನ ಚಿತ್ರ ನಿಯಮ ಜಾರಿಗೊಳಿಸಲಾಯಿತು. ಸರ್ಕಾರದಿಂದ ರಚಿಸಲಾಗುವ ಗುಣಾತ್ಮಕ ಆಯ್ಕೆ ಸಲಹಾ ಸಮಿತಿ ಆಯ್ಕೆ ಮಾಡುವ ಎರಡು ಪ್ರಾದೇಶಿಕ ಭಾಷಾ ಚಿತ್ರಗಳು ಸೇರಿದಂತೆ ಒಟ್ಟು 20 ಚಲನ ಚಿತ್ರಗಳಿಗೆ ತಲಾ ಒಂದು ಲಕ್ಷ ರೂಪಾಯಿ ಸಹಾಯ ಧನ ನೀಡಲಾಗುತ್ತಿದೆ. 1996ರಿಂದ 2002ರವರೆಗೆ ಒಟ್ಟು 120 ಚಿತ್ರಗಳಿಗೆ 12 ಕೋಟಿ ಸಹಾಯ ಧನವನ್ನು ಸರ್ಕಾರ ವಿತರಿಸಿದೆ. ಈ ಸೌಲಭ್ಯ ರಾಜ್ಯದಲ್ಲಿಯೇ ತಯಾರಾದ ಕನ್ನಡ, ತುಳು, ಕೊಂಕಣಿ, ಮತ್ತು ಕೊಡವ ಭಾಷೆಯ ಚಿತ್ರಗಳಿಗೆ ಮಾತ್ರ ಅನ್ವಯಿಸುತ್ತದೆ. ಜೊತೆಗೆ ಚಿತ್ರ ನಿರ್ಮಾಪಕರಿಗೆ ಎಲ್ಲ ಬಗೆಯ ಉತ್ತೇಜನಗಳನ್ನೂ ನೀಡುತ್ತಿದೆ; ಹೊರಾಂಗಣ ಚಿತ್ರೀಕರಣಕ್ಕೆ ಅನುಮತಿ ನೀಡುವ ಕ್ರಮವನ್ನು ಅತ್ಯಂತ ಸುಗಮಗೊಳಿಸಿದೆ; ಚಲನಚಿತ್ರ ಅಭಿವೃದ್ಧಿ ಕಾರ್ಪೋರೇಷನ್ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಚಿತ್ರೋದ್ಯಮಕ್ಕೆ ಪ್ರತ್ಯೇಕ ಸಹಾಯ ನೀಡುತ್ತಿದೆ. ಪ್ರಸ್ತುತ ಸಹಾಯಧನದ ಮೊತ್ತವನ್ನು ಹದಿನೈದು ಲಕ್ಷದವರೆಗೂ ಹೆಚ್ಚಿಸಲಾಗಿದೆ.

ಈ ಸಂಸ್ಥೆಯ ಆಶ್ರಯದಲ್ಲಿ ಸಂಚಾರಿ ಚಿತ್ರೀಕರಣ ಉಪಕರಣ ಘಟಕವೊಂದಿದ್ದು ನಿರ್ಮಾಪಕರು ದೈನಿಕ ಬಾಡಿಗೆಯ ಪ್ರಕಾರ ಅದರ

ಉಪಯೋಗ ಪಡೆಯಬಹುದು. ಉತ್ತಮ ಚಿತ್ರಗಳ ನಿರ್ಮಾಣಕ್ಕೆ ಉತ್ತೇಜನ ಕೊಡುವ ಉದ್ದೇಶದಿಂದ ವರ್ಷದ ಶ್ರೇಷ್ಠ ಚಿತ್ರಪ್ರಶಸ್ತಿ ನೀಡಿಕೆಯನ್ನೂ ರಾಜ್ಯ ಸರ್ಕಾರ ಆರಂಭಿಸಿತು (1966-67). 1976ರ ಜೂನ್ ಅಂತ್ಯದ ವೇಳೆಗೆ 32 ಕನ್ನಡ ಚಿತ್ರಗಳಿಗೆ ಇಂಥ ಪ್ರಶಸ್ತಿ ಸಂದಿದೆ. ಉತ್ತಮ ಚಿತ್ರಗಳಿಗೆ ಪ್ರಶಸ್ತಿ ನೀಡುವಾಗ ಕಲಾವಿದರಿಗೆ ಹಾಗೂ ತಾಂತ್ರಿಕರಿಗೆ ಅತ್ಯುತ್ತಮ ನಟ, ಅತ್ಯುತ್ತಮ ಪೋಷಕ ನಟ, ಅತ್ಯುತ್ತಮ ಪೋಷಕ ನಟಿ, ಅತ್ಯುತ್ತಮ ಕಥಾಲೇಖನ, ಅತ್ಯುತ್ತಮ ಚಿತ್ರನಾಟಕ ಕರ್ತೃ, ಅತ್ಯುತ್ತಮ ಸಂಭಾಷಣಾ ಕರ್ತೃ, ಅತ್ಯುತ್ತಮ ಸಂಗೀತ ನಿರ್ದೇಶಕ, ಅತ್ಯುತ್ತಮ ಛಾಯಾಗ್ರಾಹಕ, ಅತ್ಯುತ್ತಮ ಧ್ವನಿಗ್ರಾಹಕ, ಅತ್ಯುತ್ತಮ ಸಂಕಲನಕಾರ ಮೊದಲಾದ ಪ್ರಶಸ್ತಿ ನೀಡಿ ಪುರಸ್ಕರಿಸುವ ಪ್ರವೃತ್ತಿಯಿಂದಾಗಿ ಚಲನಚಿತ್ರಗಳ ಸರ್ವತೋಮುಖ ಗುಣಾಭಿವೃದ್ಧಿಗೆ ಪ್ರೇರಕವಾಗಿದೆ. ಉತ್ತಮ ಚಿತ್ರಗಳಿಗೆ ನೆರವು ಅಗತ್ಯವಾಗಿರುವುದರಿಂದ ಕನ್ನಡ ಚಿತ್ರಗಳಿಗೆ ಮನರಂಜನ ತೆರಿಗೆಯನ್ನು ಮನ್ನಾ ಮಾಡುವ ಮೂಲಕ ಸರ್ಕಾರ ಕನ್ನಡ ಚಿತ್ರಗಳನ್ನು ಪ್ರೋತ್ಸಾಹಿಸುತ್ತಿದೆ. ಹಾಗಾಗಿ ಈಗ ರಾಜ್ಯದಲ್ಲಿ ಕನ್ನಡ, ಕೊಡವ, ಕೊಂಕಣಿ, ತುಳು, ಹಿಂದಿ, ಇಂಗ್ಲಿಷ್, ತೆಲುಗು, ತಮಿಳು, ಮಲೆಯಾಳಂ ಭಾಷೆಗಳಲ್ಲಿನ ಸು.200 ಚಿತ್ರಗಳು ತಯಾರಾಗುತ್ತಿವೆ. ಚಿತ್ರೋದ್ಯಮದ ಬೆಳೆವಣಿಗೆ ಹಾಗೂ ಪ್ರಸಾರಕ್ಕೆ ಬೆನ್ನೆಲುಬಾಗಿ ನಿಂತ ಕರ್ನಾಟಕ ಸರ್ಕಾರ ರಾಜ್ಯದ ವಿವಿಧೆಡೆಗಳಲ್ಲಿ ಮಿನಿ ಚಿತ್ರಮಂದಿರಗಳನ್ನು ನಿರ್ಮಿಸಲು ಯೋಜನೆಯೊಂದನ್ನು ಕೈಗೊಂಡಿತ್ತು. ಚಿತ್ರರಂಗಕ್ಕೆ ಸಂಬಂಧಿಸಿದ ಸರ್ಕಾರಿ ವಿಭಾಗವನ್ನು ಪ್ರತ್ಯೇಕ ಇಲಾಖೆಯ ಅಂತಸ್ತಿಗೆ ಏರಿಸಲಾಗಿದೆ. ಬೆಂಗಳೂರಿನ ಜಯಚಾಮರಾಜೇಂದ್ರ ಸರ್ಕಾರಿ ಪಾಲಿಟೆಕ್ನಿಕ್ ಶಾಲೆಯಲ್ಲಿ ಸಿನಿಮಟೋಗ್ರಫಿ ಶಿಕ್ಷಣವನ್ನು ಒದಗಿಸಲಾಗುತ್ತಿದೆ. ಕರ್ನಾಟಕ ಚಲನಚಿತ್ರ ವಾಣಿಜ್ಯ ಸಂಘವೂ ಉದ್ಯಮದ ಸಂಘಟನೆಗೆ, ಅಭಿವೃದ್ಧಿಗೆ ಅಪಾರ ಶ್ರಮಪಡುತ್ತ ಬಂದಿದೆ.

70ನೆಯ ದಶಕದಲ್ಲಿ ಕನ್ನಡ ಚಿತ್ರರಂಗ ಕರ್ನಾಟಕದ ಒಂದು ಉದ್ಯಮ ಎನಿಸಿಕೊಳ್ಳುವ ಅರ್ಹತೆ ಪಡೆದುಕೊಂಡಿತು. ಇಲ್ಲಿಯವರೆಗೆ ಕನ್ನಡದಲ್ಲಿ ಬಿಡುಗಡೆಯಾಗಿರುವ ಸು.500 ಚಿತ್ರಗಳಲ್ಲಿ ಕೇವಲ ನೂರು ಚಿತ್ರಗಳು ಮಾತ್ರ 60ರ ಹಿಂದಿನ ಇಪ್ಪತ್ತಾರು ವರ್ಷಗಳ ಸಾಧನೆ. ಉಳಿದವೆಲ್ಲ ಇತ್ತೀಚೆಗೆ ಒಂದೂವರೆ ದಶಕದಲ್ಲಿ ನಿರ್ಮಿತವಾದವು. ಈ ಹೋಲಿಕೆಯನ್ನು ಗಮನಿಸಿದರೆ ಚಿತ್ರನಿರ್ಮಾಣ ಈಗ ಐದು ಪಟ್ಟು ಹೆಚ್ಚಾಗಿದೆ. ಕನ್ನಡ ಚಿತ್ರಗಳು ಸಂಖ್ಯೆಯ ದೃಷ್ಟಿಯಲ್ಲಿ ಮಾತ್ರವಲ್ಲದೆ ಗುಣಮಟ್ಟದಲ್ಲಿಯೂ ಹೆಚ್ಚಳ ಪಡೆದಿವೆ ಎನ್ನುವುದಕ್ಕೆ ರಾಷ್ಟ್ರಮಟ್ಟದ ಪ್ರಶಸ್ತಿಗಳು ಬರುತ್ತಿರುವುದೇ ಸಾಕ್ಷಿಯಾಗಿದೆ.



ಸದಾರಮೆ ಚಿತ್ರದಲ್ಲಿ ನರಸಿಂಹರಾಜು ಮತ್ತು ಗುಬ್ಬಿವೀರಣ್ಣ

ಚಿತ್ರೋದ್ಯಮದ ವಾಣಿಜ್ಯ ವ್ಯವಹಾರಗಳು ಉತ್ಪಾದನೆ, ಹಂಚಿಕೆ ಮತ್ತು ಪ್ರದರ್ಶನ ಎಂಬ ಮೂರು ಹಂತಗಳಲ್ಲಿ ನಡೆಯುತ್ತದೆ. ಈ ಉದ್ಯಮದ ಏಳು ಬೀಳುಗಳಲ್ಲಿ ಈ ಮೂರೂ ಮಜಲಿನ ಪಾತ್ರವೂ ಪ್ರಮುಖವಾದದ್ದು. ನಿರ್ಮಾಪಕ ವಲಯ ಮಂಡಳಿ, ಹಂಚಿಕೆದಾರರ ವಲಯ ಮಂಡಳಿ, ಪ್ರದರ್ಶನಕಾರ ವಲಯ ಮಂಡಳಿಗಳಿದ್ದು ಉದ್ಯಮದ ಕಾರ್ಯಭಾರಗಳು ಸುಸಂಘಟಿತವಾಗಿ ನಡೆಯುವ ಪ್ರಯತ್ನವಿದೆ. ಉಳಿದ ಎರಡು ವಲಯಗಳು ವ್ಯಾವಹಾರಿಕ ಅನುಕೂಲಕ್ಕಾಗಿ ಮಾತ್ರವಾದರೆ, ಉತ್ಪಾದನಾ ವಲಯ ನಿಜವಾದ ಸೃಜನಶೀಲತೆಯ ಕ್ಷೇತ್ರವಾಗಿ ಉದ್ಯಮದ ಭದ್ರವಾದ ಅಸ್ತಿಬಾರವಾಗಿದೆ. ಬಹುಕಾಲದವರೆಗೆ ಕನ್ನಡ ಚಿತ್ರಗಳ ತಯಾರಿಕೆ ಮದರಾಸು ಕೇಂದ್ರದಲ್ಲಿಯೇ ನಡೆಯುತ್ತಿತ್ತು. ಸ್ಟುಡಿಯೋ ಸೌಲಭ್ಯಗಳು ಕರ್ನಾಟಕದಲ್ಲಿ ಸಾಕಷ್ಟಿರಲಿಲ್ಲ. ಸರ್ಕಾರದ ಪ್ರೋತ್ಸಾಹದಿಂದಾಗಿ ನಿರ್ಮಾಪಕರು ತಮ್ಮ ಕೇಂದ್ರವನ್ನು ಬೆಂಗಳೂರು, ಮೈಸೂರಿಗೆ ಬದಲಾಯಿಸತೊಡಗಿದಾಗ ಪರಿಸ್ಥಿತಿ ಕೂಡ ಬದಲಾಗತೊಡಗಿತು. ಒಳಾಂಗಣ ಚಿತ್ರೀಕರಣಕ್ಕೆ ಅತ್ಯಾವಶ್ಯಕವಾದ ಸ್ಟುಡಿಯೋಗಳು ಈಗ ಕರ್ನಾಟಕದಲ್ಲಿವೆ.



ಪ್ರೀಮಿಯರ್ ಸ್ಟುಡಿಯೋ, ಮೈಸೂರು

ಮೈಸೂರು ಸೌಂಡ್ ಸ್ಟುಡಿಯೋಸ್ ಬೆಂಗಳೂರಿನಲ್ಲಿ ಸು.75,000ರೂ. ಬಂಡವಾಳದೊಂದಿಗೆ 1936ರಲ್ಲಿ ಸ್ಥಾಪಿತವಾಯಿತು. ಈ ಸ್ಟುಡಿಯೋದ ಮಾಲಿಕರು ಬಸ್ ಮಾಲಿಕರಾದ ತಿಮ್ಮಯ್ಯ. ಕನ್ನಡ ನಾಡಿನಲ್ಲಿಯೇ ತಯಾರಾದ ಮೊಟ್ಟಮೊದಲ ವಾಕ್ಚಿತ್ರ ರಾಜಸೂಯಯಾಗ ಇಲ್ಲಿ ಸಿದ್ಧವಾಯಿತು. ಎರಡು ತಮಿಳು ಚಿತ್ರಗಳನ್ನು ತಯಾರಿಸಿದ ಮೇಲೆ ಈ ಸ್ಟುಡಿಯೋ ಇದ್ದಕ್ಕಿದ್ದಂತೆ ಮುಚ್ಚಿಹೋಯಿತು. ಆಮೇಲೆ ಮೈಸೂರಿನಲ್ಲಿ ನವಜ್ಯೋತಿ ಸ್ಟುಡಿಯೋ ಅಸ್ತಿತ್ವಕ್ಕೆ ಬಂತು. 20ಕ್ಕೂ ಹೆಚ್ಚು ಕನ್ನಡ ಚಿತ್ರಗಳ ನಿರ್ಮಾಣಕ್ಕೆ ಕಾರಣವಾದ ಈ ಸ್ಟುಡಿಯೋ ಮೈಸೂರು ಕನ್ನಡ ಚಿತ್ರೋದ್ಯಮದ ಪ್ರಮುಖ ಕೇಂದ್ರವಾಗಿ ಬೆಳೆಯಲು ಅಂಕುರಾರ್ಪಣೆ ಮಾಡಿತು. ಈ ಸ್ಟುಡಿಯೋದೊಂದಿಗೇ ಜನ್ಮತಳೆದ ಮಹಾತ್ಮಾಚಿತ್ರಸಂಸ್ಥೆಯ ಕೃಷ್ಣಲೀಲೆ ಈ ಸ್ಟುಡಿಯೋದಲ್ಲಿ ನಿರ್ಮಿತವಾದ ಮೊದಲ ಚಿತ್ರ. ನವಜ್ಯೋತಿ ಸ್ಟುಡಿಯೋ ಮುಚ್ಚಿಹೋದ ಮೇಲೆ ಪ್ರೀಮಿಯರ್ ಸ್ಟುಡಿಯೋ ಸ್ಥಾಪಿತವಾಯಿತು (1954). ಈ ಸ್ಟುಡಿಯೋ ಕನ್ನಡ ಚಿತ್ರ ತಯಾರಿಕೆಗೆ ಆದಷ್ಟು ಕೊಡುಗೆ ನೀಡಿ ಈಗ ಸ್ಥಗಿತಗೊಂಡಿದೆ. ಬೆಂಗಳೂರಿನಲ್ಲಿ 1969ರಲ್ಲಿ ಅಸ್ತಿತ್ವಕ್ಕೆ ಬಂದ ಕಂಠೀರವ ಸ್ಟುಡಿಯೋ (ಎರಡು ಫ್ಲೋರ್‌ಗಳು) ಚಾಮುಂಡೇಶ್ವರಿ ಸ್ಟುಡಿಯೋ (ಎರಡು ಫ್ಲೋರ್‌ಗಳು), ಅಭಿಮಾನ್ ಸ್ಟುಡಿಯೋ (ಒಂದು ಫ್ಲೋರ್), ಸುಜಾತ ಸ್ಟುಡಿಯೋ (ಒಂದು ಫ್ಲೋರ್) - ಇವು ಕನ್ನಡ ಚಿತ್ರ ತಯಾರಿಕೆಯ ಪ್ರಮುಖ ಕೇಂದ್ರಗಳು. ಕನ್ನಡ ನಾಡಿನ ಸ್ಟುಡಿಯೋಗಳಲ್ಲಿ ಸುಸಜ್ಜಿತ ಮೇಕಪ್ ರೂಂಗಳು, ಜೊತೆಗೆ ರೆಕಾರ್ಡಿಂಗ್, ರೀ ರೆಕಾರ್ಡಿಂಗ್, ಹಾಗೂ ಡಬ್ಬಿಂಗ್ ಸೌಲಭ್ಯಗಳಿವೆ. ಆಧುನಿಕ ಚಿತ್ರಸಂಸ್ಕರಣಾಗಾರವಿದೆ. ಮೂವಿಯೋಲ ಸಹಿತವಾದ ಸಂಕಲನ ಕೊಠಡಿಗಳಿವೆ. ಹವಾನಿಯಂತ್ರಿತ ಫಿಲಂ ಶೇಖರಣ ಸೌಲಭ್ಯಗಳಿವೆ. ಅಲ್ಲದೆ ಸರ್ಕಾರದ ಚಲನಚಿತ್ರಾಭಿವೃದ್ಧಿ ಕಾರ್ಪೋರೇಷನ್‌ನಲ್ಲಿ ಅತ್ಯುತ್ತಮ ಕ್ಯಾಮರಾಗಳೂ ಅತ್ಯುತ್ತಮ ಮೂವಿಯೋಲ, ಅತ್ಯುತ್ತಮ ದೀಪೋಪಕರಣ ಹಾಗೂ ಹೊರಾಂಗಣ ಸಂಚಾರೀ ಚಿತ್ರೀಕರಣ ಘಟಕ ಇವೆ. ಪಾಲಿಟೆಕ್ನಿಕ್ ಶಾಲೆಯಲ್ಲಿ ಅತ್ಯಂತ ಆಧುನಿಕ 12 ಚಾನೆಲ್ ಮಿಕ್ಸರ್ ಯಂತ್ರವಿದ್ದು ಧ್ವನಿಮುದ್ರಣ ಹಾಗೂ ಹಿನ್ನೆಲೆ ಸಂಗೀತ ಮುದ್ರಣಕ್ಕೆ ಅನುಕೂಲವಿದೆ. ಹೊರಾಂಗಣ ಚಿತ್ರೀಕರಣಕ್ಕೆ ಕನ್ನಡ ನಾಡಿನಲ್ಲಿ ಅತ್ಯಂತ ರಮ್ಯ ಹಾಗೂ ಸುಂದರ ತಾಣಗಳಿವೆ. ಜಲಪಾತಗಳು, ಸಹ್ಯಾದ್ರಿಯ ಕಾಡು, ಮಂಗಳೂರು, ಕಾರವಾರದುದ್ದಕ್ಕೆ ಇರುವ ಕರಾವಳಿ ಪ್ರದೇಶ, ಮೈಸೂರು ಅರಮನೆ, ಬೃಂದಾವನ, ಜೊತೆಗೆ

ಅನೇಕ ಐತಿಹಾಸಿಕ ಸಾಂಸ್ಕೃತಿಕ ಸ್ಥಳಗಳು ಚಿತ್ರೀಕರಣಕ್ಕೆ ಒಳ್ಳೆಯ ಹಿನ್ನೆಲೆಯನ್ನೊದಗಿಸುತ್ತವೆ. ಮೊದಲಿಗೆ ಚಿತ್ರೀಕರಣ ಕರ್ನಾಟಕದಲ್ಲಿಯೇ ಆದರೂ ಸಂಸ್ಕರಣ (ಪ್ರಾಸೆಸಿಂಗ್) ಮತ್ತು ಧ್ವನಿಮುದ್ರಣಕ್ಕೆ (ರೀರೆಕಾರ್ಡಿಂಗ್) ಮದರಾಸಿಗೆ ಹೋಗಬೇಕಿತ್ತು. 1975ರಲ್ಲಿ ಕಂಠೀರವ ಸ್ಟುಡಿಯೊದಲ್ಲಿ ಕರ್ನಾಟಕ ಸಿನಿ ಲ್ಯಾಬೋರೇಟರೀಸ್ ಸಂಸ್ಥೆಯವರ ಚಲನಚಿತ್ರ ಸಂಸ್ಕರಣಾಗಾರ ತನ್ನ ಕೆಲಸವನ್ನು ಆರಂಭಿಸಿತು. ಎಲ್.ವಿ.ಪ್ರಸಾದ್ ಬೆಂಗಳೂರಿನಲ್ಲಿ ವರ್ಣಚಿತ್ರಸಂಸ್ಕರಣಕ್ಕಾಗಿ ಪ್ರಯೋಗಾಲಯ ಸ್ಥಾಪಿಸಿದರು. ನಾಗ್ ಸಹೋದರರು ಸಂಕೇತ್ ರೆಕಾರ್ಡಿಂಗ್ ಸ್ಟುಡಿಯೋ ಪ್ರಾರಂಭಿಸಿದರು. ಮದರಾಸಿನಲ್ಲಿರುವ ಫಿಲಂ ಸೆಂಟರ್ ಸಂಸ್ಥೆ ಹಾಗೂ ಜೆಮಿನಿ ಕಲರ್ ಲ್ಯಾಬೊರೇಟರಿಗಳಲ್ಲಿ ಕನ್ನಡ ವರ್ಣಚಿತ್ರಗಳ ಸಂಸ್ಕರಣ ಹಿಂದೆ ನಡೆಯುತ್ತಿತ್ತು. ವರ್ಣಚಿತ್ರಗಳು ಭಾರತದಲ್ಲಿ ಅತ್ಯಂತ ಬೇಡಿಕೆಯಿರುವ ಈಸ್ಟ್‌ಮನ್ ಬಣ್ಣದಲ್ಲಿ ತಯಾರಾಗುತ್ತವೆ. ಅದೃಷ್ಟವೊ ಅದೃಷ್ಟ ಎಂಬ ಕನ್ನಡ ಚಿತ್ರ ಆರ್ವೋ ಬಣ್ಣದಲ್ಲಿ ತಯಾರಾಗಿತ್ತು. ಕನ್ನಡದಲ್ಲಿ ಇಲ್ಲಿಯವರೆಗೆ ತಯಾರಾಗಿರುವ ಚಿತ್ರಗಳೆಲ್ಲವೂ 35ಎಂ.ಎಂ.ನಲ್ಲಿ ತಯಾರಾದವು. ಕೆಲವು ಸಾಕ್ಷ್ಯಚಿತ್ರಗಳು ಮಾತ್ರ 16ಎಂಎಂ.ನಲ್ಲಿ ತಯಾರಾಗಿವೆ. ಸೊಸೆ ತಂದ ಸೌಭಾಗ್ಯ ಕನ್ನಡದ ಪ್ರಪ್ರಥಮ ಸಿನಿಮಾಸ್ಕೋಪ್ ಚಿತ್ರ. ಚಲನಚಿತ್ರಗಳನ್ನು ತಯಾರಿಕೆಯ ದೃಷ್ಟಿಯಿಂದ ಸಾಮಾನ್ಯ ಚಿತ್ರಗಳು, ಅದ್ದೂರಿ ತಾರಾಗಣದ ಚಿತ್ರಗಳು ಹಾಗೂ ಅಲ್ಪವೆಚ್ಚದ ಕಲಾತ್ಮಕ ಚಿತ್ರಗಳು ಎಂದು ವಿಭಾಗಿಸಲಾಗುತ್ತದೆ.

ಉತ್ಪಾದನೆ ಹಾಗೂ ಪ್ರದರ್ಶನ ವಲಯಗಳ ನಡುವಣ ಕೊಂಡಿಯಾದ ಹಂಚಿಕೆದಾರರನ್ನು ಚಿತ್ರೋದ್ಯಮದ ಬಂಡವಾಳಗಾರರೆಂದೇ ಹೇಳಬಹುದು. ಕೇವಲ ಕನ್ನಡ ಚಿತ್ರಗಳನ್ನೇ ವಿತರಣೆ ಮಾಡುವ ಹಂಚಿಕೆದಾರರು ಸಾಮಾನ್ಯವಾಗಿ ಇಲ್ಲವಾದರೂ ಕನ್ನಡ ಚಿತ್ರಗಳಿಗೆ ಆದ್ಯತೆ ಕೊಡುವವರಿದ್ದಾರೆ. ವಿಜಯ ಪಿಕ್ಚರ್ಸ್ ಸರ್ಕ್ಯೂಟ್, ನವಯುಗ ಚಿತ್ರಸಂಸ್ಥೆ, ಕೆ.ಸಿ.ಎನ್. ಮೂವೀಸ್, ಶಾರದಾಮೂವೀಸ್, ಈಶ್ವರೀ ಪಿಕ್ಚರ್ಸ್ ಹಾಗೂ ಮೆಹತಾ ಪಿಕ್ಚರ್ಸ್ ಕನ್ನಡ ಚಿತ್ರಗಳಲ್ಲಿ ಆಸಕ್ತಿ ತೋರಿದ್ದಾರೆ. ಹಂಚಿಕೆದಾರರು ಕನ್ನಡ ಚಿತ್ರಗಳಿಗೆ ಭಾಗಶಃ ಬಂಡವಾಳ ಒದಗಿಸಿ, ಚಿತ್ರಗಳ ಹಂಚಿಕೆ ಹಿಡಿದು ಸೇಕಡಾವಾರು ವ್ಯವಸ್ಥೆಯಲ್ಲಿ ವ್ಯವಹಾರ ನಡೆಸುತ್ತಾರೆ. ಸಾಮಾನ್ಯವಾಗಿ ಕನ್ನಡ ಚಿತ್ರಗಳ ಆದ್ಯ ಹಂಚಿಕೆದಾರರೆಲ್ಲ ಬೆಂಗಳೂರಿನಲ್ಲಿ ಕೇಂದ್ರೀಕರಿಸಿದ್ದಾರೆ. ಮೈಸೂರು, ಶಿವಮೊಗ್ಗ, ಚಿತ್ರದುರ್ಗ, ಧಾರವಾಡ, ಗದಗ ಮೊದಲಾದೆಡೆಗಳಲ್ಲಿ ಎರಡನೆಯ ದರ್ಜೆಯ ವಿತರಣ ಕೇಂದ್ರಗಳಿವೆ.



ಕಂಠೀರವ ಸ್ಟುಡಿಯೋ, ಬೆಂಗಳೂರು

ವಿಶಾಲ ಕರ್ನಾಟಕದ ಉದ್ದಗಲಕ್ಕೆ ಹರಡಿಕೊಂಡಿರುವ ಚಿತ್ರ ಪ್ರದರ್ಶನ ಕೇಂದ್ರಗಳು ಚಿತ್ರೋದ್ಯಮದೊಂದಿಗೆ ಸಾರ್ವಜನಿಕ ಸಂಪರ್ಕ ಕಲ್ಪಿಸುತ್ತವೆ. ಇವುಗಳಲ್ಲಿ ಶಾಶ್ವತ ಹಾಗೂ ಸಂಚಾರಿ ಚಿತ್ರಮಂದಿರಗಳಿವೆ. ಬೆಂಗಳೂರು ನಗರ ಒಂದರಲ್ಲಿಯೇ ಸು.85 ಚಿತ್ರಮಂದಿಗಳಿದ್ದವು. ಇವುಗಳಲ್ಲಿ ಹಲವು ಅತ್ಯಾಧುನಿಕ ರೀತಿಯಲ್ಲಿ ಸಜ್ಜುಗೊಂಡವು. ಕನ್ನಡ ನಾಡಿನ ಚಿತ್ರಮಂದಿರಗಳ ವೈಶಿಷ್ಟ್ಯ ಎಂದರೆ ಬಹುಭಾಷಾ ಚಿತ್ರಗಳ ಪ್ರದರ್ಶನದ ಪರಿಪಾಠ. ಬೆಂಗಳೂರಿನಲ್ಲಿ ಆರಕ್ಕೂ ಹೆಚ್ಚು ಭಾಷಾ ಚಿತ್ರಗಳು ಪ್ರದರ್ಶನಗೊಳ್ಳುತ್ತವೆ. ಕರ್ನಾಟಕದ ರಾಜಧಾನಿಯಲ್ಲಿ ಇಂಗ್ಲಿಷ್, ಹಿಂದಿ, ತಮಿಳು, ತೆಲುಗು ಚಿತ್ರಗಳನ್ನು ಖಾಯಂ ಆಗಿ ಪ್ರದರ್ಶಿಸುವ ಚಿತ್ರಮಂದಿರಗಳಿದ್ದರೂ ಕನ್ನಡಕ್ಕೆ ಖಾಯಂ ಚಿತ್ರಮಂದಿರವಿಲ್ಲ. ಹಿಂದೆ ಭಾರತ ಚಿತ್ರಮಂದಿರವೊಂದು ಮಾತ್ರ ಕನ್ನಡ ಚಿತ್ರಗಳನ್ನು ಪ್ರದರ್ಶಿಸುವ ಧೋರಣೆ ಇಟ್ಟುಕೊಂಡಿತ್ತು. ಎಲ್ಲ ವಲಯದ ಸದಸ್ಯರೂ ಸೇರಿ ಸರ್ವಾನುಮತದಿಂದ ಬೆಂಗಳೂರಿನ ಎ ವರ್ಗದ ಆಧುನಿಕ ಚಿತ್ರಮಂದಿರಗಳಲ್ಲಿ ಕನ್ನಡ ಚಿತ್ರಗಳನ್ನು ಸೇಕಡವಾರು ಆದಾಯ ವ್ಯವಸ್ಥೆಯಲ್ಲಿ ಪ್ರದರ್ಶಿಸಬೇಕೆಂಬ ತೀರ್ಮಾನ ತೆಗೆದುಕೊಳ್ಳಲಾಯಿತು. ಈ ವ್ಯವಸ್ಥೆ ತೃಪ್ತಿಕರವಾಗಿಲ್ಲದ ಕಾರಣ 1975 ಡಿಸೆಂಬರ್ 1ರಿಂದ ಕನ್ನಡ ಚಿತ್ರಗಳ ಕಡ್ಡಾಯ ಪ್ರದರ್ಶನದ ಯೋಜನೆಯನ್ನು ಜಾರಿಗೆ ತರಲಾಯಿತು. ಈ ಯೋಜನೆಯಂತೆ ರಾಜ್ಯದ ಎಲ್ಲ ಚಿತ್ರಮಂದಿರಗಳೂ ವರ್ಷದಲ್ಲಿ ಕೊನೆಯ ಪಕ್ಷ 12ವಾರ ಕಾಲ ಅಥವಾ ಮೂರು ಕನ್ನಡ ಚಿತ್ರಗಳನ್ನು ಕಡ್ಡಾಯವಾಗಿ ಪ್ರದರ್ಶಿಸಬೇಕು. ಇದನ್ನು ಕ್ರಮಬದ್ಧವಾಗಿ ನಿರ್ವಹಿಸಲು ಕರ್ನಾಟಕ ಚಲನಚಿತ್ರ ವಾಣಿಜ್ಯ ಸಂಘದ ಜಾಗೃತ ಸಮಿತಿ ಹಾಗೂ ಸ್ವಯಂ ನಿಯಂತ್ರಣಾ ಸಮಿತಿಗಳು ರಚನೆಗೊಂಡಿದ್ದವು.

ಚಿತ್ರಗಳ ನಿರ್ಮಾಣ ವೆಚ್ಚ ಮತ್ತು ಅವುಗಳ ಜನಾಕರ್ಷಕ ಗುಣಕ್ಕೆ ಅನುಗುಣವಾಗಿ ಬಿಡುಗಡೆಯಾಗುವಾಗ ಹಾಕಿಸುವ ಚಿತ್ರ ಪ್ರತಿಗಳ ಸಂಖ್ಯೆ ಇರುತ್ತದೆ. ಪ್ರಾಯೋಗಿಕ ಚಿತ್ರಗಳ ಪ್ರತಿಗಳು ಕಡಿಮೆ. ಚಿತ್ರಗಳು ಪ್ರಥಮದಲ್ಲಿ ಎ ಕೇಂದ್ರ ಹಾಗೂ ಪ್ರಮುಖ ಬಿ ಕೇಂದ್ರಗಳಲ್ಲಿ ಬಿಡುಗಡೆಯಾಗುತ್ತವೆ.

ಇದುವರೆಗೆ ಕನ್ನಡ ಚಿತ್ರಗಳಿಗೆ ಕೇವಲ ಕರ್ನಾಟಕ ರಾಜ್ಯವೊಂದೇ ಮಾರುಕಟ್ಟೆಯಾಗಿತ್ತು. 1976ರ ಸೆಪ್ಟಂಬರಿನಲ್ಲಿ ಕರ್ನಾಟಕದ ಹೊರರಾಜ್ಯದ ಪ್ರಮುಖ ನಗರದಲ್ಲಿ ಮೊದಲ ಬಾರಿಗೆ ಕನ್ನಡ ಚಲನಚಿತ್ರಗಳ ಪ್ರದರ್ಶನದ ಉದ್ಘಾಟನೆಯಾಯಿತು. ಮದರಾಸಿನ ಪ್ರತಿಷ್ಠಿತ ಸಿನಿಮಾಮಂದಿರದಲ್ಲಿ ನಿಯಮಿತವಾಗಿ ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ಏರ್ಪಾಟು ಮಾಡಲಾಯಿತು. ಇದೀಗ ವಿವಿಧ ಟಿ.ವಿ.ಚಾನೆಲ್‌ಗಳಲ್ಲಿ ಕನ್ನಡ ಚಿತ್ರಗಳು ಪ್ರಸಾರಗೊಳ್ಳುತ್ತಿವೆ. ಕನ್ನಡ ಚಿತ್ರಗಳಿಗೆ ಇಂಗ್ಲಿಷ್ ಅಡಿಟಿಪ್ಪಣಿಗಳೊಂದಿಗೆ, 16 ಎಂ.ಎಂ.ಗೆ ಪರಿವರ್ತಿಸಿ ದೇಶದಾದ್ಯಂತ ಇರುವ ಫಿಲಂ ಕ್ಲಬ್‌ಗಳಿಗೆ ಒದಗಿಸುವ ಏರ್ಪಾಡೂ ಇದೆ. ಚಿತ್ರಗಳ ಗುಣಮಟ್ಟ ಹೆಚ್ಚಿದಂತೆ ಕನ್ನಡ ಚಿತ್ರಮಾರುಕಟ್ಟೆಯೂ ಕುದುರತೊಡಗಿದೆ.

ಕನ್ನಡ ಚಿತ್ರೋದ್ಯಮದ ಪೂರಕ ಉದ್ಯಮವಾಗಿ ಇಂದು ಕನ್ನಡ ಚಿತ್ರ ಸಂಗೀತದ ಧ್ವನಿಮುದ್ರಿಕೆಗಳ ಉದ್ಯಮವೂ ಒಳ್ಳೆಯ ಬೆಳವಣಿಗೆಯನ್ನು ಕಂಡಿದೆ. ಆರ್ಥಿಕ ಮುಗ್ಗಟ್ಟಿನಿಂದ ಮೊದಮೊದಲು ಕನ್ನಡ ನಿರ್ಮಾಪಕರು ಚಿತ್ರಸಂಗೀತಕ್ಕೆ ಹೆಚ್ಚು ಹಣ ವ್ಯಯ ಮಾಡಲು ಇಷ್ಟಪಡುತ್ತಿರಲಿಲ್ಲ. ಅಂದಿನ ಕಾಲದ ಇತರ ಭಾಷಾಚಿತ್ರಗಳ ಜನಪ್ರಿಯ ರಾಗಗಳನ್ನು ಕನ್ನಡಕ್ಕೆ ಅಳವಡಿಸುವ ಕಾರ್ಯನಡೆಯುತ್ತಿತ್ತು. ಮೊದಮೊದಲು ಸಂಗೀತ ನಿರ್ದೇಶಕನ ಸ್ವಂತಿಕೆಗೆ ಅವಕಾಶವೇ ಇರಲಿಲ್ಲ. ಈ ಮಿತಿಗಳೊಳಗೂ ಕನ್ನಡ ಚಿತ್ರಸಂಗೀತಕ್ಕೆ ಮೆರುಗು ಕೊಡಲು ಶ್ರಮಿಸಿ ಸಫಲರಾದವರೆಂದರೆ ಸಂಗೀತ ನಿರ್ದೇಶಕರಾದ ಜಿ.ಕೆ.ವೆಂಕಟೇಶ್, ಟಿ.ಜಿ.ಲಿಂಗಪ್ಪ, ರಾಜನ್-ನಾಗೇಂದ್ರ, ಎಂ.ರಂಗರಾವ್ ಹಾಗೂ ವಿಜಯಭಾಸ್ಕರ್ ಮೊದಲಾದವರು. ಬೆಳ್ಳಿಮೋಡ, ಶರಪಂಜರ, ಗೆಜ್ಜೆಪೂಜೆ, ಬಂಗಾರದಮನುಷ್ಯ, ಎರಡುಕನಸು ಮೊದಲಾದ ಚಿತ್ರಗಳ ಜನಪ್ರಿಯ ಹಾಡುಗಳಿಂದಾಗಿ ಧ್ವನಿಮುದ್ರಿಕೆಗಳ ಮಾರಾಟ ಅಧಿಕಗೊಳ್ಳುತ್ತ ಹೋಗಿ, ಕನ್ನಡ ಚಿತ್ರಸಂಗೀತ ಮಾರುಕಟ್ಟೆಗೆ ಹೊಸ ಹುರುಪು ಮೂಡಿ ಕನ್ನಡ ಸಂಗೀತ ನಿರ್ದೇಶಕರೂ ಹೊಸ ಹೊಸ ಪ್ರಯೋಗಗಳತ್ತ ಗಮನ ಕೊಡುವುದು ಸಾಧ್ಯವಾಯಿತು. ವಾಣಿಜ್ಯೋದ್ದೇಶಿತ ಚಿತ್ರಗಳಲ್ಲಿ ಈಗ ಸಂಗೀತಕ್ಕಾಗಿ ಅಪಾರ ಹಣ ವ್ಯಯಮಾಡಲಾಗುತ್ತಿದೆ. ಕೆಲವು ಚಿತ್ರಗಳಲ್ಲಿ ಸಂಗೀತಕ್ಕಾಗಿಯೇ ಅನೇಕ ಲಕ್ಷಗಳು ವೆಚ್ಚವಾಗಿರುವುದುಂಟು. ಹಾಡುಗಳು ಇಲ್ಲದ ಪ್ರಾಯೋಗಿಕ ಚಿತ್ರಗಳಲ್ಲಿಯೂ ಹಿನ್ನೆಲೆ ಸಂಗೀತ ಪ್ರಮುಖವಾಗಿರುವುದುಂಟು. ಸಂಸ್ಕಾರ, ಕಾಡು, ಅಬಚೂರಿನ ಪೋಸ್ಟಾಫೀಸು, ಚೋಮನ ದುಡಿ, ಪಲ್ಲವಿ, ಕನ್ನೇಶ್ವರರಾಮ, ಘಟಶ್ರಾದ್ಧ, ಚಿತೆಗೂ ಚಿಂತೆ, ತಬರನ ಕತೆ, ಕಾನೂರು ಹೆಗ್ಗಡತಿ, ದ್ವೀಪ ಮುಂತಾದ ಚಿತ್ರಗಳಲ್ಲಿ ಹಿನ್ನೆಲೆ ಸಂಗೀತವೂ ಪರಿಣಾಮ ದೃಷ್ಟಿಯಿಂದ ಪ್ರಮುಖವಾದುದು. ಹಾಡುಗಳೇ ಇಲ್ಲದ ಚಿತ್ರವಾದ ಸಂಕಲ್ಪದ ಉತ್ತಮ

ಸಂಗೀತಕ್ಕೆ ರಾಜ್ಯಪ್ರಶಸ್ತಿ ಬಂದಿರುವುದು ಗಮನಾರ್ಹ. ಈಗ ಕನ್ನಡ ಚಿತ್ರಗೀತೆಗಳು ಅಪಾರ ಜನಪ್ರಿಯತೆ ಗಳಿಸುತ್ತಿವೆ. ಕೆಲವು ವರ್ಷಗಳ ಹಿಂದೆ ಒಂದು ಗೀತೆಯ ಸಾವಿರ ಧ್ವನಿಮುದ್ರಿಕೆಗಳು ಮಾರಾಟವಾಗುತ್ತಿದ್ದರೆ ಈಗ ಈ ಸಂಖ್ಯೆ ಲಕ್ಷದ ಗಡಿಯನ್ನೂ ದಾಟಿರುವುದುಂಟು. ಎಚ್.ಎಂ.ವಿ. ಧ್ವನಿಮುದ್ರಿಕಾ ಸಂಸ್ಥೆ ಈ ದಿಕ್ಕಿನಲ್ಲಿ ಗಮನಾರ್ಹ ಸೇವೆ ಸಲ್ಲಿಸಿದೆ.



ಹಿಸ್ ಲವ್ ಅಫೇರ್ಸ್ ಎಂಬ ಮೂಕಿ ಚಿತ್ರದಲ್ಲಿ ಸುಬ್ಬಯ್ಯನಾಯ್ಡು, ಬಿ.ಜಯಮ್ಮ

ಚಲನಚಿತ್ರ ಮಾಧ್ಯಮಕ್ಕೆ ಪ್ರಚಾರ ಅತ್ಯಂತ ಆವಶ್ಯಕವಾದುದು. ಭಿತ್ತಿ ಪತ್ರಗಳು, ಕರಪತ್ರಗಳ ಮೂಲಕ ಹಾಗೂ ಪತ್ರಿಕೆ ಮತ್ತು ರೇಡಿಯೋ, ದೂರದರ್ಶನ ಜಾಹೀರಾತು ಮೊದಲಾದ ಮಾಧ್ಯಮಗಳನ್ನು ಬಳಸಿಕೊಳ್ಳಲು ಅನುಕೂಲ ಕಲ್ಪಿಸುವ ಪ್ರತ್ಯೇಕ ಸಂಸ್ಥೆಗಳಿವೆ. ಬೆಂಗಳೂರು ನಗರದಲ್ಲಿ ಇಂಥ ಅನೇಕ ಜಾಹೀರಾತು ಸಂಸ್ಥೆಗಳಿವೆ. ಅಲ್ಲದೆ ನೂರಾರು ಮಂದಿ ಪ್ರಚಾರ ಸಲಹೆಗಾರರೂ ಪ್ರಚಾರ ಏಜಂಟರೂ ಇದ್ದಾರೆ.

ಕರ್ನಾಟಕದ ಅನೇಕ ಕಡೆಗಳಲ್ಲಿ ಚಲನಚಿತ್ರಪ್ರೇಮಿಗಳು ಸಂಘಗಳನ್ನು ಸ್ಥಾಪಿಸಿಕೊಂಡಿರುವುದುಂಟು. ಜನಪ್ರಿಯ ನಟರ ಹೆಸರಿನಲ್ಲಿ ಅಭಿಮಾನಿ ಸಂಘಗಳೂ ಇವೆ. 1971 ನವಂಬರ್‌ನಲ್ಲಿ ದೆಹಲಿಯಲ್ಲಿಯೂ ಕನ್ನಡ ಫಿಲಂ ಸೊಸೈಟಿ ಸ್ಥಾಪಿತವಾಗಿ ಅನೇಕ ಚಿತ್ರೋತ್ಸವಗಳನ್ನು ನಡೆಸಿದೆ. ಖ್ಯಾತ ಕನ್ನಡ ಕಲಾವಿದರನ್ನು ಕರೆದು ಗೌರವಿಸಿದೆ. ಅಲ್ಲದೆ ಅಂತಾರಾಷ್ಟ್ರೀಯ ಮಟ್ಟದ ಒಳ್ಳೆಯ ಚಲನಚಿತ್ರಗಳನ್ನು ತರಿಸಿ ಪ್ರದರ್ಶಿಸುವ ಸಂಘಗಳೂ ಇವೆ. ಚಿತ್ರ ವೀಕ್ಷಣಾ ಪ್ರಜ್ಞೆಯನ್ನು ಸದಭಿರುಚಿಯನ್ನು ಬೆಳೆಸುವುದು ಇವುಗಳ ಧ್ಯೆಯ. ಬೆಂಗಳೂರಿನಲ್ಲಿಯ ಮಯೂರ ಫಿಲಂ ಸೊಸೈಟಿ, ಕಾವೇರಿ ಫಿಲಂ ಸೊಸೈಟಿ, ಸುಚಿತ್ರ ಫಿಲಂ ಸೊಸೈಟಿ, ಮೈಸೂರು ವಿಶ್ವವಿದ್ಯಾನಿಲಯದ ಪತ್ರಿಕೋದ್ಯಮ ವಿಭಾಗ ಹಾಗೂ ಮೈಸೂರು ಸಿ.ಎಫ್.ಟಿ.ಆರ್.ಐ.ನ ಮೈಸೂರು ಫಿಲಂ ಸೊಸೈಟಿ ಪ್ರಮುಖವಾದವು.

ಕನ್ನಡ ಚಿತ್ರೋದ್ಯಮಕ್ಕೆ ಪ್ರೋತ್ಸಾಹದಾಯಕವಾಗಿರುವ ಕನ್ನಡ ಪತ್ರಿಕೋದ್ಯಮದ ಪಾತ್ರವೂ ಮುಖ್ಯವಾದುದು. ಪ್ರತಿಯೊಂದು ದೈನಿಕ ಹಾಗೂ ವಾರಪತ್ರಿಕೆಗಳಲ್ಲಿಯೂ ಚಿತ್ರೋದ್ಯಮಕ್ಕೆ ಸಾಕಷ್ಟು ಅವಕಾಶವನ್ನು ಮಾಡಿಕೊಡಲಾಗುತ್ತಿದೆ. ಸಾಪ್ತಾಹಿಕ ಪುರವಣಿಗಳಲ್ಲಿ ವಿಶೇಷ ಅಂಕಣಗಳೇ ಇರುತ್ತವೆ. ಅಲ್ಲದೆ ಚಿತ್ರೋದ್ಯಮಕ್ಕೆ ಮೀಸಲಾದ ಸ್ವತಂತ್ರ ಪತ್ರಿಕೆಗಳೂ ಇವೆ. ಇವುಗಳಲ್ಲಿ ಚೆನ್ನೈನಿಂದ ಪ್ರಕಟವಾಗುವ ಚಂದಮಾಮ ಪಬ್ಲಿಕೇಷನ್ಸ್ ಅವರ ವಿಜಯ ಚಿತ್ರ ಹಾಗೂ ಹಿಂದೆ ಸಂಯುಕ್ತಕರ್ನಾಟಕ ಸಮೂಹದಿಂದ ಚಿತ್ರದೀಪ ಪ್ರಕಟವಾಗುತ್ತಿತ್ತು. ಮಣಿಪಾಲದ ಉದಯವಾಣಿ ಪತ್ರಿಕಾ ಸಮೂಹದಿಂದ ರೂಪತಾರಾ ಎಂಬ ಮಾಸಿಕ ಪ್ರಕಟವಾಗುತ್ತಿದೆ. ಮೇನಕಾ, ರೂಪಶಿಲ್ಪಿ ಮೊದಲಾದ ವಾರಪತ್ರಿಕೆಗಳೂ ನಟರಾಜ, ರಜತಪರದೆ ಮುಂತಾದ ಪಕ್ಷಪತ್ರಿಕೆಗಳೂ ಹಲವಾರಿವೆ. ಕನ್ನಡದ ಪ್ರಮುಖ ದಿನಪತ್ರಿಕೆಗಳು ಪ್ರತಿಶುಕ್ರವಾರ ಚಲನಚಿತ್ರ ಕುರಿತ ವಿಶೇಷ ಪುರವಣಿ ಪ್ರಕಟಿಸುತ್ತಿವೆ. ಕರ್ನಾಟಕ ಪತ್ರಕರ್ತರ ಪರಿಷತ್ತು ಪ್ರತಿವರ್ಷ ಸಿನಿಮಾ ಡೈರೆಕ್ಟರಿ ತರುವುದು, ಚಿತ್ರರಂಗದ ಬಗ್ಗೆ ವಿಚಾರ ಸಂಕಿರಣಗಳನ್ನು ಸಂಘಟಿಸುವುದು, ಚಿತ್ರೋತ್ಸವಗಳನ್ನು ನಡೆಸುವುದು ಮೊದಲಾದ ಕಾರ್ಯಗಳ ಮೂಲಕ ಕ್ರಿಯಾಶೀಲವಾಗಿದೆ.

ಚಿತ್ರಕಲಾವಿದರನ್ನು ತರಬೇತಿಗೊಳಿಸುವ ಸಂಸ್ಥೆಯೂ ಬೆಂಗಳೂರಿನಲ್ಲಿದೆ. 1973 ಜುಲೈ 16ರಂದು ಆದರ್ಶ ಫಿಲಂ ಇನ್‌ಸ್ಟಿಟ್ಯೂಟ್ ಆರಂಭವಾಯಿತು. ಇದರ ಮೊದಲ ಪ್ರಿನ್ಸಿಪಾಲರಾಗಿದ್ದವರು ಕನ್ನಡ ಚಿತ್ರರಂಗದ ಭೀಷ್ಮಾಚಾರ್ಯರೆನಿಸಿದ ಆರ್. ನಾಗೇಂದ್ರರಾಯರು. ಬಿ.ವಿ. ಕಾರಂತ, ಕು.ರಾ.ಸೀ., ರಾಜನ್ ನಾಗೇಂದ್ರ ಮೊದಲಾದವರು ಅಧ್ಯಾಪಕ ವರ್ಗದಲ್ಲಿದ್ದರು. ಈ ತರಬೇತು ಸಂಸ್ಥೆಯಲ್ಲಿ ಅಭಿನಯ, ವ್ಯಾಯಾಮ, ಭಾಷೋಚ್ಚಾರಣೆ, ನಟನೆ, ವರ್ಣಾಲಂಕಾರ, ನಿರ್ಮಾಣ, ನಿರ್ವಹಣ, ಸಂಕಲನ, ಚಿತ್ರಕಥಾಲೇಖನ, ಸಂಭಾಷಣಾ ಲೇಖನ ಮತ್ತು ನಿರ್ದೇಶನ ವಿಭಾಗಗಳಿವೆ. ಇಲ್ಲಿ ತರಬೇತಿ ಪಡೆದ ಕಲಾವಿದರು ಅನೇಕರು ಈಗಾಗಲೇ ಕನ್ನಡ ಚಿತ್ರರಂಗದಲ್ಲಿ ದುಡಿಯುತ್ತಿದ್ದಾರೆ. ಅಲ್ಲದೆ ಪುಣೆ ಹಾಗೂ ಚೆನ್ನೈನ ಫಿಲಂ ಇನ್‌ಸ್ಟಿಟ್ಯೂಟ್‌ಗಳಲ್ಲಿ ತರಬೇತಿ ಹೊಂದಿದ ಅನೇಕ ಕಲಾವಿದರು ಕನ್ನಡ ಚಿತ್ರರಂಗಕ್ಕೆ ಬಂದಿದ್ದಾರೆ.



ಮೊದಲ ವಾಕ್‌ಚಿತ್ರ 'ಸತಿ ಸುಲೋಚನ'ದಲ್ಲಿ ಎಂ.ವಿ. ಸುಬ್ಬಯ್ಯನಾಯ್ಡು

ಕರ್ನಾಟಕದಲ್ಲಿ ಚಲನಚಿತ್ರಗಳಿಗೆ ಸಂಬಂಧಿಸಿದಂತೆ ಇನ್ನೊಂದು ಬಗೆಯ ವೈಯಕ್ತಿಕ ಚಟುವಟಿಕೆಯೂ ನಡೆಯುತ್ತಿದೆ. ಬೆಂಗಳೂರಿನಲ್ಲಿನ ಕೆಲವು ಹವ್ಯಾಸೀ ಪಂಗಡಗಳು ಕಿರುಚಿತ್ರಗಳನ್ನು ನಿರ್ಮಿಸುತ್ತಿದ್ದಾರೆ.

ವಿದೇಶಗಳಲ್ಲಿ ಲಿಟ್ಲ್‌ಸಿನಿಮಾ, ಅಂಡರ್ ಗ್ರೌಂಡ್ ಸಿನಿಮಾ ಹಾಗೂ ಪರ್ಸನಲ್ ಸಿನಿಮಾ ಎಂಬ ಹೆಸರುಗಳಿಂದ ಜನಪ್ರಿಯವಾಗಿರುವ ಈ ಕಿರುಚಿತ್ರಗಳ ತಯಾರಿಕೆ ಭಾರತಕ್ಕೆ ಬಂದದ್ದು ತೀರಾ ಇತ್ತೀಚೆಗೆ. 16ಎಂ.ಎಂ. ಅಥವಾ 8ಎಂ.ಎಂ.ಗಳಲ್ಲಿ ತಯಾರಾಗುವ ಈ ಚಿತ್ರಗಳ ಪ್ರದರ್ಶನ ಅವಧಿ ಸೆಕೆಂಡುಗಳಿಂದ ಹಿಡಿದು ಆರು ಗಂಟೆಗಳು. ಬೆಂಗಳೂರಿನಲ್ಲಿ ಅನೇಕ ಹವ್ಯಾಸಿ ಚಿತ್ರ ನಿರ್ಮಾಣ ತಂಡಗಳಿವೆ. ಅಸೀಮ, ಸೃಷ್ಟಿ, ಸ್ವಜನ, ಸುಚಿತ್ರ ಫಿಲಮ್ ಸೊಸೈಟಿ ಮೊದಲಾದವುಗಳನ್ನು ಇಲ್ಲಿ ಹೆಸರಿಸಬಹುದು. ವೈಯಕ್ತಿಕ ಅನುಭವದ ಅನಿಸಿಕೆಯ, ಸಂವೇದನೆಯ ಪ್ರತೀಕವಾಗಿ ಚಲನಚಿತ್ರವನ್ನು ಸೃಜಿಸುವುದಲ್ಲದೆ, ಪ್ರೇಕ್ಷಕರಲ್ಲಿ ಚಲನಚಿತ್ರ ರಸಗ್ರಹಣ ಶಕ್ತಿಯನ್ನು ವೃದ್ಧಿಪಡಿಸುವುದು ಈ ಕಿರುಚಿತ್ರ ತಯಾರಿಕೆಯ ಉದ್ದೇಶ. ಬೆಂಗಳೂರಿನ ತಂಡಗಳು ಈಗಾಗಲೇ ಐ ಲುಕ್ ಸಿರೀಸ್, ಸ್ಲಿಪ್, ಕಿಕ್, ಡ್ರೀಂ, ಇನ್‌ವೆಂಟರಿ, ಪ್ಲೋಂಟ್, ಸುಳಿ, ಪ್ಯಾರಸೈಟ್ ಮೊದಲಾದ ಕಿರುಚಿತ್ರಗಳನ್ನು ತಯಾರಿಸಿವೆ. ಕಿರುಚಿತ್ರ ತಯಾರಿಕೆಯಲ್ಲಿನ ಮೊದಲ ಸಮಸ್ಯೆ ಎಂದರೆ ಪ್ರದರ್ಶನಾವಕಾಶ. ಖಾಸಗಿ ಮಟ್ಟದಲ್ಲಿ ಪ್ರಚಲಿತವಾಗಿರುವ ಇವುಗಳಿಗೆ ಸಾರ್ವಜನಿಕ ಚಿತ್ರಮಂದಿರಗಳಲ್ಲಿ ಅವಕಾಶ ವಿರುವುದಿಲ್ಲ.

**ವಾಕ್ಚಿತ್ರಗಳು :** ವಾಕ್ಚಿತ್ರ ತೆರೆಗೆ ಬಂದ ಸ್ವಲ್ಪಕಾಲದಲ್ಲಿಯೇ ಮೂಕಚಿತ್ರಗಳ ಬೇಡಿಕೆ ಇಳಿದು ವಾಕ್ಚಿತ್ರಗಳು ಅಪಾರ ಜನಪ್ರಿಯತೆ ಗಳಿಸತೊಡಗಿದವು. ಕನ್ನಡದ ಮೊದಲ ವಾಕ್ಚಿತ್ರ ಯಾವುದು ಎನ್ನುವುದರ ಬಗ್ಗೆ ಸಿನಿಮಾ ಇತಿಹಾಸಕಾರರಲ್ಲಿ ವಿವಾದವಿದೆ. ಮೊಟ್ಟಮೊದಲು 1934ರಲ್ಲಿ ಸತಿಸುಲೋಚನ ಬಿಡುಗಡೆಯಾಯಿತು. ಆದರೆ ಏಪ್ರಿಲ್ 1934ರಲ್ಲಿ ಬಿಡುಗಡೆಯಾದ ಭಕ್ತಧ್ರುವ ಎಲ್ಲಕ್ಕಿಂತ ಮೊದಲೇ ತಯಾರಿಕೆ ಆರಂಭವಾದ್ದರಿಂದ ಅದೇ ಕನ್ನಡದ ಮೊದಲ ವಾಕ್ಚಿತ್ರ ಎನ್ನುವವರೂ ಇದ್ದಾರೆ. ಎ.ವಿ.ವರದಾಚಾರ್ಯರ ನೆನಪಿನ ಮಂದಿರಕ್ಕೆ ಹಣ ಗಳಿಕೆಗೆಂದು ತಯಾರಿಸಿದ ಭಕ್ತಧ್ರುವದಲ್ಲಿ ವರದಾಚಾರ್ಯರ ಮೊಮ್ಮಗನೇ ಧ್ರುವನ ಪಾತ್ರವಹಿಸಿದ್ದರು. ಈ ಚಿತ್ರದಲ್ಲಿ ದೇವುಡು ಕೂಡ ಪಾತ್ರ ವಹಿಸಿದ್ದರು. ಹನ್ನೆರಡು ರೀಲುಗಳ ಈ ಚಿತ್ರ ಪ್ರೇಕ್ಷಕರನ್ನು ಚಕಿತಗೊಳಿಸಿತು. ಧ್ರುವನ ತಪಸ್ಸಿನ ಕಾಲದಲ್ಲಿ ಸಿಂಹದ ಗರ್ಜನೆ ಕೇಳಿಬಂದಾಗ ಚಿತ್ರಮಂದಿರದಲ್ಲಿದ್ದ ಮಹಿಳೆಯರನೇಕರು ಮೂರ್ಛೆಗೊಂಡು, ಕೆಲವರು ಹೊರಗಡೆ ಓಡಿಹೋದರಂತೆ. ಕೊಲ್ಲಾಪುರದಲ್ಲಿ ತಯಾರಾದ ಸತಿಸುಲೋಚನದ ನಿರ್ದೇಶಕರು ವೈ.ವಿ.ರಾವ್, ಆರ್.ನಾಗೇಂದ್ರರಾವ್ ಈ ಚಿತ್ರದ ಸಂಗೀತ ನಿರ್ದೇಶಕರು. ಈ ಚಿತ್ರದಲ್ಲಿ ಎಂ.ವಿ.ಸುಬ್ಬಯ್ಯ ನಾಯ್ಡು, ಆರ್.ನಾಗೇಂದ್ರರಾವ್, ವೈ.ವಿ.ರಾವ್ ಮೊದಲಾದವರು ನಟಿಸಿದ್ದರು. ಇದರಲ್ಲಿನ ಯುದ್ಧದ ಸನ್ನಿವೇಶಗಳನ್ನು ಆಗಿನ ಕಾಲದಲ್ಲಿಯೇ ಎರಡು ಸಾವಿರ ಜನರನ್ನು ಸೇರಿಸಿ ಮೂರು ಕ್ಯಾಮರಗಳನ್ನು ಬಳಸಿ ಚಿತ್ರೀಕರಿಸಲಾಗಿತ್ತು. 1935ರಲ್ಲಿ ಗುಬ್ಬಿ ವೀರಣ್ಣನವರು (ನೋಡಿ) ರಂಗಭೂಮಿಯಲ್ಲಿ ಜನಪ್ರಿಯವಾಗಿದ್ದ ಸದಾರಮೆಯನ್ನು ಕೊಯಮತ್ತೂರಿನಲ್ಲಿ ಚಿತ್ರೀಕರಿಸಿದರು. ಬೆಂಗಳೂರಿನ ಮೈಸೂರು ಸೌಂಡ್ ಸ್ಟುಡಿಯೋಸ್‌ನಲ್ಲಿ ತಯಾರಾದ ರಾಜಸೂಯಯಾಗ (1936) ಕನ್ನಡ ನಾಡಿನಲ್ಲಿಯೇ ಸಂಪೂರ್ಣವಾಗಿ ಸಿದ್ಧವಾದ ಮೊದಲ ವಾಕ್ಚಿತ್ರ. ಅದೇ ಕಾಲದಲ್ಲಿ ಸಿ.ಬಿ.ಮಲ್ಲಪ್ಪ ಕಂಪನಿಯವರು ಪುರಂದರದಾಸ ಎಂಬ ಜನಪ್ರಿಯ ನಾಟಕವನ್ನು ಚಿತ್ರೀಕರಿಸಿದರು (1936).




ಕನ್ನಡ ಚಿತ್ರರಂಗದ ಆರಂಭದಲ್ಲಿ ಪುರಾಣ ಕಥೆಗಳಿಗೆ, ಭಕ್ತಿ ಕಥೆಗಳಿಗೆ ಪ್ರಾಧಾನ್ಯವಿತ್ತು. ಅಲ್ಲದೆ ಅಂದಿನ ಕಾಲದ ವೃತ್ತಿ ರಂಗಭೂಮಿಯಲ್ಲಿ ಸಾಮಾನ್ಯವಾಗಿ ಪ್ರದರ್ಶನಗೊಳ್ಳುತ್ತಿದ್ದ ನಾಟಕಗಳೂ ಹೆಚ್ಚಾಗಿ ಪುರಾಣಕಥೆಗಳನ್ನೇ ಆಧರಿಸಿದ್ದವು. ರಂಗಪ್ರವೀಣರೇ ಚಿತ್ರರಂಗವನ್ನು ಮೊದಲು ಪ್ರವೇಶಿಸಿದುದರಿಂದ ಚಲನಚಿತ್ರಗಳ ಮೇಲೆ ರಂಗಭೂಮಿಯ ಮಹತ್ತರ ಪ್ರಭಾವವಿತ್ತು. ಅಷ್ಟೇ ಅಲ್ಲದೆ ಮೂಕಚಿತ್ರ ತೆರಳಿ ವಾಕ್ಚಿತ್ರ ಬಂದೊಡನೆ ಧ್ವನಿಗೆ ಮಹತ್ತ್ವ ಬಂದಿತು. ಒಳ್ಳೆಯ ಶಾರೀರವಿರುವ, ಮಾತು ಚೆನ್ನಾಗಿ ಆಡುವ, ಹಾಡಲು ಬರುವ ನಟರಿಗೆ ಬೇಡಿಕೆಯಿತ್ತು. ಹಾಗಾಗಿ ರಂಗನಟರಿಗೆ ಆದ್ಯತೆ ದೊರೆಯಿತು. ಗುಬ್ಬಿ ವೀರಣ್ಣ ಎಂ.ವಿ.ಸುಬ್ಬಯ್ಯನಾಯ್ಡು, ಎಚ್.ಎಲ್.ಎನ್.ಸಿಂಹ, ಬಿ.ಜಯಮ್ಮ ಮೊದಲಾದವರಿಂದ ಆರಂಭವಾದ ಈ ಪರಂಪರೆ ಬಹಳ ಕಾಲದವರೆಗೆ ಮುಂದುವರಿಯಿತು.

ಪುರಾಣ ಕಥೆಗಳಿಗೇ ಪ್ರಾಮುಖ್ಯ ಇದ್ದ ಈ ಕಾಲದಲ್ಲಿ ಇಡೀ ದಕ್ಷಿಣ ಭಾರತಕ್ಕೇ ಪ್ರಥಮವಾಗಿ ಸಾಮಾಜಿಕ ಚಿತ್ರವೊಂದನ್ನು ತಯಾರಿಸಿದ ಕೀರ್ತಿ ಕನ್ನಡಿಗರದು. ಆ ಚಿತ್ರ ಸಂಸಾರನೌಕ (1936). ಅಪಾರ ಯಶಸ್ಸು ಗಳಿಸಿದ ಆ ಚಿತ್ರದಲ್ಲಿ ಬಿ.ಆರ್. ಪಂತುಲು, ಎಂ. ವಿ. ರಾಜಮ್ಮ, ಡಿಕ್ಕಿ ಮಾಧವರಾವ್ ಮೊದಲಾದವರು ಪಾತ್ರವಹಿಸಿದ್ದರು.

ಎರಡನೆಯ ಮಹಾಯುದ್ಧದ ಕಾರಣವಾಗಿ ಸ್ವಲ್ಪಕಾಲ ಕನ್ನಡ ಚಿತ್ರರಂಗದ ಚಟುವಟಿಕೆ ಸ್ತಬ್ಧವಾಗಿತ್ತು. 1941ರಲ್ಲಿ ಗುಬ್ಬಿ ವೀರಣ್ಣನವರು ಹೊನ್ನಪ್ಪ ಭಾಗವತರ್ ಮತ್ತು ಜಯಮ್ಮ ಪಾತ್ರವಹಿಸಿದ ಸುಭದ್ರ ಎಂಬ ಚಿತ್ರವನ್ನು ತಯಾರಿಸಿದರು. ಅದೇ ವರ್ಷ ತೆರೆಗೆ ಬಂದ ವಸಂತಸೇನೆ ಕನ್ನಡ ಚಿತ್ರರಂಗದಲ್ಲೊಂದು ಮೈಲಿಗಲ್ಲು. ಆರ್. ನಾಗೇಂದ್ರರಾವ್ ಮತ್ತು ಎಂ.ವಿ. ಸುಬ್ಬಯ್ಯನಾಯ್ಡು ಅವರು ಎ.ವಿ.ಎಂ. ಸಂಸ್ಥೆಯ ಸಹಾಯದಿಂದ ನಿರ್ಮಿಸಿದ ಈ ಚಿತ್ರದಲ್ಲಿ ಉನ್ನತಮಟ್ಟದ ಅಭಿನಯಕಲೆ ಅಭಿವ್ಯಕ್ತವಾಗಿರುವುದರ ಜೊತೆಗೆ ತಾಂತ್ರಿಕ ಮಟ್ಟವೂ ಉತ್ತಮವಾಗಿತ್ತು. 1943ರಲ್ಲಿ ಅ.ನ.ಕೃ. ಅವರ ಕಾದಂಬರಿಯನ್ನು ಆಧರಿಸಿದ ಜೀವನನಾಟಕ ಎಂಬ ಚಿತ್ರ ತೆರೆಗೆ ಬಂತು.ಇದೇ ವರ್ಷ ರಾಧಾರಮಣ ಎಂಬ ಚಿತ್ರವನ್ನು ನಿರ್ಮಿಸಿದ ಎಂ.ವಿ. ರಾಜಮ್ಮ (ನೋಡಿ) ಕನ್ನಡದ ಮೊಟ್ಟಮೊದಲ ನಿರ್ಮಾಪಕಿಯಾದರು. 1947ರ ವೇಳೆಗೆ ಅನೇಕ ಕಾರಣಗಳಿಂದ ಚಿತ್ರನಿರ್ಮಾಣ ಮತ್ತೆ ಕಷ್ಟಕ್ಕೆ ಸಿಲುಕಿತ್ತು.



ವಸಂತಸೇನೆ ಚಿತ್ರದಲ್ಲಿ ಲಕ್ಷ್ಮೀಬಾಯಿ

ಈ ವೇಳೆಗೆ ಮೈಸೂರಿನಲ್ಲಿ ನವಜ್ಯೋತಿ ಸ್ಟುಡಿಯೊ ಆರಂಭವಾಗಿ ಮಹಾತ್ಮಚಿತ್ರ ಸಂಸ್ಥೆಯ ಶಂಕರ್‌ಸಿಂಗ್ ಮತ್ತು ಬಿ.ವಿಠಲಾಚಾರ್ಯರು ಕೃಷ್ಣಲೀಲೆಯನ್ನು ತೆರೆಗೆ ತಂದರು. ಬಿ. ವಿಠಲಾಚಾರ್ಯ ಅವರದು ಕನ್ನಡ ಚಲನಚಿತ್ರರಂಗದ ಬೆಳವಣಿಗೆಯ ಹಾದಿಯಲ್ಲಿ ಮಹತ್ವದ ಸಾಧನೆ. ಹಾಸನ ಜಿಲ್ಲೆ ಅರಸೀಕೆರೆಯಲ್ಲಿ ವಾಸವಾಗಿದ್ದ ಪದ್ಮನಾಭಾಚಾರ್ಯ ಹಾಗೂ ಸೀತಮ್ಮ ಅವರ ಪುತ್ರರಾದ ವಿಠಲಾಚಾರ್ಯರು ಹೋಟೆಲ್ ಉದ್ಯಮದಲ್ಲಿದ್ದವರು. ಆ ಉದ್ಯಮದಲ್ಲಿ ಹಣ ಸಂಪಾದಿಸಿ ಅರಸೀಕೆರೆಗೆ ಹಿಂತಿರುಗಿದರು. ಡಿ.ಶಂಕರ್‌ಸಿಂಗ್ ಜತೆ ಸೇರಿ ಟೂರಿಂಗ್ ಟಾಕೀಸ್ ಆರಂಭಿಸಿದರು.

ಕೃಷ್ಣಲೀಲಾ ಚಿತ್ರ ತಯಾರಿಕೆಯ ಸಮಯದಲ್ಲಿ ಮೈಸೂರಿಗೆ ಬಂದ ವಿಠಲಾಚಾರ್ಯ ಅವರು ಮಹಾತ್ಮ ಪಿಕ್ಚರ್ಸ್ ಸಂಸ್ಥಾಪಕರಲ್ಲಿ ಒಬ್ಬರಾದರು. ಮಹಾತ್ಮ ಪಿಕ್ಚರ್ಸ್‌ನವರು 1952ರಲ್ಲಿ ತಯಾರಿಸಿದ ಸಂಸ್ಥೆಯ ಐದನೆಯ ಚಿತ್ರ ಶ್ರೀನಿವಾಸ ಕಲ್ಯಾಣದ ನಿರ್ದೇಶಕರುಗಳಲ್ಲಿ ಒಬ್ಬರಾದರು. ಅದೇ ಸಂಸ್ಥೆಯ ಎಂಟನೆಯ ತಯಾರಿಕೆ ಸೌಭಾಗ್ಯಲಕ್ಷ್ಮಿ (1953) ಚಿತ್ರಕ್ಕೆ ಪೂರ್ಣಪ್ರಮಾಣದ ನಿರ್ದೇಶಕರಾದರು. ಅನಂತರ ಮಹಾತ್ಮ ಪಿಕ್ಚರ್ಸ್ ಸಂಸ್ಥೆಯಿಂದ ಬೇರ್ಪಟ್ಟು ತಮ್ಮದೇ ಆದ ವಿಠಲ್ ಪ್ರೊಡಕ್ಷನ್ಸ್ ಸಂಸ್ಥೆ ಆರಂಭಿಸಿದರು. ಈ ಲಾಂಛನದಲ್ಲಿ ತಯಾರಾದ ಮೊದಲ ಚಿತ್ರವೇ ಕನ್ಯಾದಾನ (1954). ಹೆಣ್ಣಿಗೆ ಗುಣ ಮುಖ್ಯ ಬಣ್ಣವಲ್ಲ ಎಂಬ ತತ್ತ್ವದ ಆಧಾರದ ಮೇಲೆ ತಯಾರಿಸಿದ ಈ ಸಾಮಾಜಿಕ ಚಿತ್ರದ ಮೂಲಕ ಭಾರೀ ಜನಪ್ರಿಯತೆಗಳಿಸಿದ್ದು ಕಲಾವಿದ ದಳ್ವಾಳಿ ಸೀತಾರಾಮಯ್ಯನ ಪಾತ್ರವಹಿಸಿದ್ದ ಬಾಲಕೃಷ್ಣ ಹಾಗೂ ಕಪ್ಪುಹುಡುಗಿ ಪದ್ಮಳ ಪಾತ್ರವಹಿಸಿದ್ದ ಹರಿಣಿ. 1953ರಲ್ಲಿ ಬಿ. ವಿಠಲಾಚಾರ್ಯ ನಿರ್ದೇಶಿಸಿದ ಸೌಭಾಗ್ಯಲಕ್ಷ್ಮಿ ಚಿತ್ರದ ಮೂಲಕ ರಾಜನ್-ನಾಗೇಂದ್ರ, ಪೂರ್ಣಪ್ರಮಾಣದ ಸಂಗೀತ ನಿರ್ದೇಶಕರಾದರು. ಕನ್ಯಾದಾನ ಚಿತ್ರದ ಹಾಡುಗಳನ್ನು ಬರೆದಿರುವ ಹುಣಸೂರು ಕೃಷ್ಣಮೂರ್ತಿ ಆ ಚಿತ್ರದಲ್ಲಿ ಹಾಡೊಂದನ್ನು ಹಾಡಿ ಹಿನ್ನೆಲೆಗಾಯಕರೂ ಆದರು.

ವಿಠಲ್ ಪ್ರೊಡಕ್ಷನ್ಸ್ ಲಾಂಛನದಲ್ಲಿಯೇ ರಾಜಲಕ್ಷ್ಮೀ ಎಂಬ ಚಿತ್ರ ತೆರೆಕಂಡಿತು (1954). ಮಾಯಾ, ತಂತ್ರ, ಮಂತ್ರಗಳ ಕಥೆಯನ್ನು ಒಳಗೊಂಡ ಈ ಚಿತ್ರದ ನಾಯಕ ಸಂಪತ್, ರೇವತಿ ಕಲ್ಯಾಣ್ ಕುಮಾರ್ ನಾಯಕಿ. ಮೈಸೂರಿನ ನವಜ್ಯೋತಿ ಸ್ಟುಡಿಯೋದಲ್ಲಿ ಈ ಚಿತ್ರ ತಯಾರಾಯಿತು. ಈ ಚಿತ್ರದಲ್ಲೇ ರೇವತಿಯ ಪರಿಚಯ ಚಿತ್ರರಂಗಕ್ಕೆ ಆಯಿತು. ವಿಠಲಾಚಾರ್ಯರು 1956ರಲ್ಲಿ ಮುತ್ತೈದೆ ಭಾಗ್ಯ ಚಿತ್ರ ನಿರ್ದೇಶಿಸಿದರು. ಮೈನಾವತಿಯನ್ನು ನಾಯಕಿಯಾಗಿ ತೆರೆಗೆ ಪರಿಚಯಿಸಿದ ಚಿತ್ರವಿದು. 1956ರಲ್ಲಿ ಮನೆ ತುಂಬಿದ ಹೆಣ್ಣು ನಿರ್ಮಿಸಿದರು. ಅತ್ತೆಗೊಂದು ಕಾಲ ಸೊಸೆಗೊಂದು ಕಾಲ ಎಂಬ ಗಾದೆಯನ್ನು ಆಧಾರವಾಗಿಟ್ಟುಕೊಂಡು ಬರೆಯಲಾಗಿದ್ದ ಚಿತ್ರಕಥೆ, ಸಂಭಾಷಣೆ ಇಂದಿರಾತನಯ (ವಿ.ಆರ್.ಶ್ಯಾಮ್) ಅವರದು. ಚಿತ್ರದ ಗೀತೆಗಳನ್ನು ಸೋರಟ್ ಅಶ್ವತ್ಥ್ ಬರೆದಿದ್ದರು.

ಮನೆತುಂಬಿದ ಹೆಣ್ಣು ಚಿತ್ರದ ಬಳಿಕ ವಿಠಲಾಚಾರ್ಯರು ಮನೆಗೆ ಬಂದ ಮಹಾಲಕ್ಷ್ಮಿಯನ್ನು ಗೋವಿಂದಯ್ಯನವರ ಜತೆ ಜಂಟಿಯಾಗಿ ನಿರ್ದೇಶಿಸಿದರು (1959). ಮತ್ತೆ ತೆಲುಗು ಚಿತ್ರರಂಗಕ್ಕೆ ತೆರಳಿದ ಅವರು ಅಲ್ಲಿಯೂ ಜನಪ್ರಿಯ ಯಶಸ್ವಿ ಚಿತ್ರ ನಿರ್ಮಾಪಕರೆನಿಸಿದರು. ಅನಂತರ ರಾಜಲಕ್ಷ್ಮಿ ಪ್ರೊಡಕ್ಷನ್ಸ್ ಲಾಂಛನದಲ್ಲಿ ವೀರಕೇಸರಿ ಚಿತ್ರ ನಿರ್ದೇಶಿದರು (1963). ಈ ಚಿತ್ರ ಭಾಗಶಃ ವರ್ಣದಲ್ಲಿದೆ. ಇದೇ ಅವರ ಕೊನೆಯ ಕನ್ನಡ ಚಿತ್ರ. 1949ರಲ್ಲಿ ಭಾರತಿ ಎಂಬ ಸಾಮಾಜಿಕ ಚಿತ್ರ ನಿರ್ಮಿತವಾಯಿತು. 1951ರಲ್ಲಿ ತೆರೆಗೆ ಬಂದ ಜಗನ್ಮೋಹಿನಿ ಶತದಿನ ಕಂಡ ಮೊದಲ ಕನ್ನಡ ಚಿತ್ರ. ಹರಿಣಿಯವರ ತಂದೆ ಪಣಿಯಾಡಿ ದಕ್ಷಿಣ ಕನ್ನಡ ಜಿಲ್ಲೆಯ ಉದ್ಯಮಿ. ಉದ್ಯಮದಲ್ಲಿ ನಷ್ಟ ಅನುಭವಿಸಿ ಉಡುಪಿ ಬಿಟ್ಟು ಮಧುರೆಗೆ ಹೋಗಿ ನೆಲಸಿದಾಗ ಹರಿಣಿ ಐದು ವರ್ಷದ ಬಾಲೆ. ಮಧುರೆಯಲ್ಲಿ ರಾಯಲ್ ಟಾಕೀಸ್ ಸಂಸ್ಥೆಯ ಮಾಲೀಕರಾದ ಹರಿದಾಸ್ ಚಿತ್ರ ತೆಗೆಯುತ್ತಿದ್ದಾಗ, ನಿರ್ದೇಶಕ ಸುಂದರ್‌ರಾವ್ ನಾಡಕರ್ಣಿ ಹರಿಣಿಗೆ ಆ ಚಿತ್ರದಲ್ಲಿ ಬಾಲಕನ ಪಾತ್ರ ನೀಡಿದರು. ಹೀಗೆ ಚಿತ್ರರಂಗಕ್ಕೆ ಕಾಲಿಟ್ಟ ಹರಿಣಿ 1946-49ರ ಅವಧಿಯಲ್ಲಿ ಮೂರು ತಮಿಳು ಚಿತ್ರಗಳಲ್ಲೂ ಅಭಿನಯಿಸಿದರು.

1949ರಲ್ಲಿ ಮಧುರೆಯಿಂದ ಮದರಾಸಿಗೆ ನಿವಾಸ ವರ್ಗಾವಣೆ ಆಯಿತು. ಆ ಸಮಯದಲ್ಲೇ ಶಂಕರ್‌ಸಿಂಗ್ ಜಗನ್ಮೋಹಿನಿ ಚಿತ್ರಕ್ಕಾಗಿ ನವತಾರೆಯೊಬ್ಬಳ ಶೋಧದಲ್ಲಿದ್ದರು. ಹರಿಣಿ ಈ ಪಾತ್ರಕ್ಕೆ ಆಯ್ಕೆಯಾದರು. ಜಗನ್ಮೋಹಿನಿಯ ಭಾರೀ ಯಶಸ್ಸು ಹರಿಣಿಯನ್ನು ಅಂದಿನ ಜನಪ್ರಿಯ ನಟಿಯನ್ನಾಗಿಸಿತು. ಜಗನ್ಮೋಹಿನಿಯ ಹಿಂದೆಯೇ ಶ್ರೀನಿವಾಸ ಕಲ್ಯಾಣ, ದಲ್ಲಾಳಿ, ಸೌಭಾಗ್ಯ ಲಕ್ಷ್ಮೀಗಳಲ್ಲಿ ಪಾತ್ರ ದೊರೆಯಿತು. ಕನ್ಯಾದಾನದಲ್ಲಿ ಬಿನ್ನಾಣಗಿತ್ತಿಯ ಪಾತ್ರ. ಮುಂದೆ ರತ್ನಮಂಜರಿ, ಕರುಣೆಯೇ ಕುಟುಂಬದ ಕಣ್ಣು ಚಿತ್ರಗಳಲ್ಲಿ ಅಭಿನಯ ಪಕ್ವತೆಯ ಕಡೆಗೆ, ನಂದಾದೀಪ, ನಾಂದಿಗಳಲ್ಲಿ ಮುಗ್ಧೆ, ಹಿಂದಿ ಚಿತ್ರ ರತ್ನದೀಪದಲ್ಲೂ ಹಾಸ್ಯ ಪಾತ್ರದಲ್ಲಿ ಹರಿಣಿ ಅಭಿನಯಿಸಿದ್ದಾರೆ. 1968ರಲ್ಲಿ ಅಭಿನಯ ವೃತ್ತಿಗೆ ಹರಿಣಿ ವಿದಾಯ ಹೇಳಿದರು.

1955ರಿಂದಲೂ ಚಿತ್ರರಂಗದ ಜತೆ ನಂಟು ಇಟ್ಟುಕೊಂಡಿರುವ ದೊರೆ-ಭಗವಾನ್ ಜೋಡಿ ಹಲವಾರು ಮಹತ್ವದ ಚಿತ್ರಗಳನ್ನು ನೀಡಿದೆ. ರಾಜಕುಮಾರ್ ಅಭಿನಯದ ಬಾಂಡ್ ಪಾತ್ರಗಳ ಚಿತ್ರ ಸರಣಿ ಅಲ್ಲದೆ, ಕಾದಂಬರಿಗಳನ್ನು ಚಿತ್ರಕ್ಕೆ ಅಳವಡಿಸಿರುವ ಖ್ಯಾತಿಯೂ ಇವರದಾಗಿದೆ. ಕಸ್ತೂರಿ ನಿವಾಸ (1971), ಎರಡು ಕನಸು (1974), ಗಿರಿಕನ್ಯೆ (1977), ಚಂದನದ ಗೊಂಬೆ (1979), ಬಯಲು ದಾರಿ (1976), ವಸಂತಗೀತ (1980), ಗಾಳಿಮಾತು (1981), ಮುನಿಯನ ಮಾದರಿ (1981), ಹೊಸಬೆಳಕು (1982), ಬೆಂಕಿಯ ಬಲೆ (1983), ಸಮಯದ ಗೊಂಬೆ (1984), ಯಾರಿವನು (1984), ನೀನು ನಕ್ಕರೆ ಹಾಲು ಸಕ್ಕರೆ (1991), ಜೀವನ ಚೈತ್ರ (1992) ಚಿತ್ರಗಳು ನಿರ್ದೇಶಕದ್ವಯರ ಒಳ್ಳೆಯ ಕಾಣಿಕೆಗಳಾಗಿವೆ. 1966ರಲ್ಲಿ ಜೇಡರ ಬಲೆ ಚಿತ್ರದ ಮೂಲಕ ಛಾಯಾಗ್ರಾಹಕ ಬಿ.ದೊರೈರಾಜ್ ಮತ್ತು ಕೆ.ಎಸ್.ಭಗವಾನ್ ಒಟ್ಟುಗೂಡಿ ದೊರೆ-ಭಗವಾನ್ ಹೆಸರಿನಲ್ಲಿ ಚಿತ್ರ ನಿರ್ದೇಶನಕ್ಕೆ ತೊಡಗಿದರು. ಈ ಜೋಡಿ 1993ರಲ್ಲಿ ಬೇರ್ಪಟ್ಟಿತು.



ಜಗನ್ಮೋಹಿನಿ ಚಿತ್ರದಲ್ಲಿ ಹರಿಣಿ

1954 ಕನ್ನಡ ಚಲನಚಿತ್ರ ಇತಿಹಾಸದಲ್ಲಿ ಮಹತ್ವದ ವರ್ಷವಾಗಿದೆ. ವರನಟ ರಾಜಕುಮಾರರನ್ನು (ನೋಡಿ) ಚಿತ್ರರಂಗಕ್ಕೆ ತಂದ ಬೇಡರ ಕಣ್ಣಪ್ಪ ಎಂಬ ಚಿತ್ರ ಇದೇ ವರ್ಷ ಬಿಡುಗಡೆಯಾಯಿತು. ಅಲ್ಲದೆ ಕನ್ನಡ ತೆರೆಯ ಮೇಲೆ ದೀರ್ಘಕಾಲ ಉಳಿದು ಬಂದ ಜಿ.ವಿ.ಅಯ್ಯರ್ (ನೋಡಿ), ಟಿ.ಎಸ್.ಬಾಲಕೃಷ್ಣ (ನೋಡಿ), ನರಸಿಂಹರಾಜು (ನೋಡಿ) ಅವರೂ ಈ ಚಿತ್ರದ ಮೂಲಕವೇ ಬೆಳಕಿಗೆ ಬಂದರು. ಅದೇ ವರ್ಷವೇ ಚಲನಚಿತ್ರಗಳಿಗೆ ಕೇಂದ್ರ ಸರ್ಕಾರ ಪ್ರಶಸ್ತಿ ನೀಡಲೂ ಆರಂಭಿಸಿತು. ಪ್ರಾದೇಶಿಕ ಮಟ್ಟದಲ್ಲಿ ರಾಷ್ಟ್ರಪ್ರಶಸ್ತಿ ಪಡೆದ ಮೊದಲ ಚಿತ್ರವೂ ಇದೇ ಆಯಿತು. ಈ ಚಿತ್ರ ತಮಿಳಿಗೆ ಡಬ್ ಆದುದಲ್ಲದೆ ತೆಲುಗಿನಲ್ಲೂ ಪುನರ್ನಿರ್ಮಾಣವಾಯಿತು. ಬಿ.ಆರ್.ಪಂತುಲು (ನೋಡಿ) ಅವರ ಮೊದಲ ತೇದಿ ಎಂಬ ಸಾಮಾಜಿಕ ಚಿತ್ರ ಕನ್ನಡದ ಹೊಸಬಗೆಯ ಪ್ರಯೋಗ ಎಂದು ಹೆಸರುಪಡೆಯಿತು. ಆರ್. ನಾಗೇಂದ್ರರಾಯರ ಪ್ರೇಮದ ಪುತ್ರಿ (1957) ರಾಷ್ಟ್ರಪತಿ ಬೆಳ್ಳಿಪದಕ ಗಳಿಸಿತಲ್ಲದೆ ಇತರ ಭಾಷೆಗಳಲ್ಲೂ ಅವತರಣಿಕೆಯನ್ನು ಕಂಡಿತು. ಬಿ.ಆರ್.ಪಂತುಲು ಅವರು 1958ರಲ್ಲಿ ನಿರ್ಮಿಸಿದ ಸ್ಕೂಲ್ ಮಾಸ್ಟರ್ 25 ವಾರಗಳ ಕಾಲ ನಡೆದು ಅಖಿಲ ಭಾರತ ಮಟ್ಟದಲ್ಲಿ ಆ ವರ್ಷದ ತೃತೀಯ ಶ್ರೇಷ್ಠ ಚಿತ್ರ ಎಂಬ ಮನ್ನಣೆ ಗಳಿಸಿತು. ಇತರ ಭಾಷೆಗಳಲ್ಲಿಯೂ ಈ ಚಿತ್ರ ಪುನರ್ನಿರ್ಮಾಣಗೊಂಡಿತು. ಹೊನ್ನಪ್ಪ ಭಾಗವತರ್, ರಾಜಕುಮಾರ್, ಲೀಲಾವತಿ ಮೊದಲಾದವರು ನಟಿಸಿದ ಜಗಜ್ಯೋತಿ ಬಸವೇಶ್ವರ 1959ರಲ್ಲಿ ತೆರೆ ಕಂಡಿತು. ಅನಂತರ ಕಚ್ಚಾಫಿಲಂ ಮುಗ್ಗಟ್ಟಿನಿಂದ ಚಿತ್ರೀಕರಣ ಕಷ್ಟವಾಗತೊಡಗಿತು. ಆರ್ಥಿಕ ಮುಗ್ಗಟ್ಟು, ಬಂಡವಾಳಗಾರರು ಕನ್ನಡ ಚಿತ್ರಗಳನ್ನು ತೆಗೆಯಲು ಮುಂದು ಬಾರದಿರುವುದು ಇವನ್ನು ಕಂಡು ಜಿ.ವಿ. ಅಯ್ಯರ್, ಬಾಲಕೃಷ್ಣ, ನರಸಿಂಹರಾಜು ಮತ್ತು

ರಾಜಕುಮಾರ್ ಮುಂತಾದವರು ಸೇರಿ ಕನ್ನಡ ಚಲನಚಿತ್ರ ಕಲಾವಿದರ ಸಂಘ ಎಂಬ ಸಹಕಾರಿ ಒಕ್ಕೂಟವನ್ನು ಮಾಡಿಕೊಂಡು ಕನ್ನಡದ ಮೊದಲ ಐತಿಹಾಸಿಕ ಚಿತ್ರವಾದ ರಣಧೀರ ಕಂಠೀರವವನ್ನು ತಯಾರಿಸಿದರು (1960). ಇಂದಿಗೂ ಇದು ಕನ್ನಡ ತೆರೆಯ ಹೆಮ್ಮೆಯ ಚಿತ್ರವಾಗಿದೆ.



ಬೇಡರ ಕಣ್ಣಪ್ಪ ಚಿತ್ರದ ಒಂದು ದೃಶ್ಯ

ಕನ್ನಡ ಚಿತ್ರಗಳಿಗೆ ಮಾರಕಪ್ರಾಯವಾಗಿದ್ದ ಒಂದು ಪ್ರವೃತ್ತಿ ಎಂದರೆ ಡಬ್ಬಿಂಗ್ ಚಿತ್ರಗಳು. ಯಾವುದೋ ಭಾಷೆಯಲ್ಲಿ ಜನಪ್ರಿಯವಾದ ಚಿತ್ರಗಳು ಕನ್ನಡದ ಕಂಠದಾನ ಪಡೆದು ವಿಜೃಂಭಿಸುತ್ತಿದ್ದುವು. ಕನ್ನಡಕ್ಕೆ ಮೊದಲು ಡಬ್ ಆದ ಚಿತ್ರ ನೀಲಾ ಪ್ರೊಡಕ್ಷನ್ಸ್ ಅವರ ಅಧಿಕಾರಿ. ಇತರ ಭಾಷೆಯ ಅದ್ದೂರಿ ಚಿತ್ರಗಳು ಹೀಗೆ ಕನ್ನಡಕ್ಕೆ ಡಬ್ ಆಗಿ ಬಂದಾಗ, ಕನ್ನಡ ಚಿತ್ರಗಳು ಕಳಾಶೂನ್ಯವಾಗಿಬಿಡುತ್ತಿದ್ದುವು. ಮಾಯಾ ಬಜಾರ್ ಹಾಗೂ ಲವಕುಶದಂಥ ಡಬ್ ಚಿತ್ರಗಳು ಕನ್ನಡನಾಡಿನಾದ್ಯಂತ ಅಪಾರ ಜನಪ್ರಿಯತೆಯನ್ನೂ ಹಣವನ್ನೂ ಗಳಿಸಿದುವು. ಡಬ್ಬಿಂಗ್ ಚಿತ್ರಗಳ ದಾಳಿಯನ್ನು ತಡೆಯುವ ಕನ್ನಡ ಚಳವಳಿ ಯಶಸ್ಸು ಕಂಡಮೇಲೆ ಕನ್ನಡ ಚಿತ್ರೋದ್ಯಮ ಚೇತರಿಸಿಕೊಳ್ಳಲಾರಂಭಿಸಿತಾದರೂ ಅನತಿಕಾಲದಲ್ಲಿಯೇ ಯಶಸ್ವಿ ಹಿಂದಿ, ತಮಿಳು, ತೆಲುಗು ಚಿತ್ರಗಳ ಕನ್ನಡ ಅವತರಣಿಕೆಯ ಪರಿಹರಿಸಲಾಗದ ಇನ್ನೊಂದು ಪ್ರವೃತ್ತಿ ಮೊಳೆತು ಕನ್ನಡ ಚಿತ್ರರಂಗ ಆ ಸುಳಿಗೆ ಸಿಲುಕಿತು. ಜೇನುಗೂಡು (ಬಾಬಿ), ಒಂದೇ ಬಳ್ಳಿಯ ಹೂಗಳು (ಭಾಯಿ ಬೆಹನ್), ವಾತ್ಸಲ್ಯ (ಪಾಸಮಲರ್), ಮಲ್ಲಿಮದುವೆ (ವೇಲೈಕ್ಕಾರಿ), ಮುರಿದ ಮನೆ (ಬಾಗಪಿರಿವನೈ), ಮನೆ ಅಳಿಯ (ಇಲ್ಲರಿಕಂ) ಮೊದಲಾದವು ಇಂಥ ಚಿತ್ರಗಳು. ಈ ಪರಂಪರೆ ಇಂದಿನ ವರೆಗೂ ಮುಂದುವರಿದಿದೆ.

ತಾರಾಪದ್ಧತಿಯ ಉಗಮ, ಚಿತ್ರ ನಿರ್ಮಾಣದಲ್ಲಿ ಸೌಕರ್ಯಗಳು ಬರಲಾರಂಭಿಸಿದ್ದು, ಹಿನ್ನೆಲೆಗಾಯನ, ಹಲವಾರು ಸಂಗೀತ ನಿರ್ದೇಶಕರ ಆಗಮನ ಮೊದಲಾದ ಬೆಳವಣಿಗೆಗಳೆಲ್ಲ ನಾಟಕಕಂಪನಿಗಳ ಮೂಲಕ ತೆರೆಗೆ ಬಂದ ಎಂ.ವಿ. ಸುಬ್ಬಯ್ಯನಾಯಿಡು, ಕೆಂಪರಾಜ ಅರಸು ಅವರಂತಹ ನಟರನ್ನು ಹಿನ್ನೆಲೆಗೆ ಸರಿಸಿತು. 1950ರಿಂದ 1969ರ ಕಾಲಾವಧಿಯಲ್ಲಿ ವಾಕ್ಚಿತ್ರದ ಆರಂಭದ ದಿನಗಳಿಂದ ಬಂದವರು ಕೂಡ ಪ್ರಬಲ ಸ್ಪರ್ಧೆ ಎದುರಿಸುವಂತಾಯಿತು. ಅಂದಿನ ದಿನಗಳಲ್ಲೇ ಅದ್ದೂರಿ ಸಿನಿಮಾ ನಿರ್ಮಿಸುವವರೆಂಬ ಹೆಸರುಗಳಿಸಿದ್ದ ಡಿ.ಕೆಂಪರಾಜ ಅರಸು ಈ ಅವಧಿಯಲ್ಲಿ ನಟಿಸಿದ್ದು ಕೇವಲ ಮೂರು ಚಿತ್ರಗಳಲ್ಲಿ ಮಾತ್ರ. ಕೆಂಪ ರಾಜ್ ಪ್ರೊಡಕ್ಷನ್ಸ್ ಲಾಂಛನದಲ್ಲಿ ತಾವೇ ನಿರ್ಮಿಸುತ್ತಿದ್ದ ಚಿತ್ರಗಳಲ್ಲಿ ಬಹು ತಾರಾಗಣವಿರುತಿತ್ತು. ಅವರು ತಯಾರಿಸಿದ ರಾಜಾ ವಿಕ್ರಮ (1954) ಶನಿಮಹಾ ರಾಜನ ಕಥೆ. ಹೆಚ್ಚು ಹಣ ಹಾಕಿ ಕನ್ನಡದಲ್ಲಿ ಚಿತ್ರ ಮಾಡುವ ಪರಂಪರೆಯನ್ನು ಆರಂಭಿಸಿದವರಲ್ಲಿ ಕೆಂಪರಾಜ ಅರಸು (ನೋಡಿ) ಮೊದಲಿಗರು. ಈಗ ರವಿಚಂದ್ರನ್ ಆ ಪರಂಪರೆ ಮುಂದುವರೆಸಿದ್ದಾರೆ. ರಾಜಾವಿಕ್ರಮ ಗಳಿಕೆಯಲ್ಲೂ ವಿಕ್ರಮ ಸಾಧಿಸಿತು. 1942ರಲ್ಲಿ ಗುಬ್ಬಿ ಫಿಲಂ ಕಂಪನಿ ತಯಾರಿಕೆ



ಜೀವನನಾಟಕ ಚಿತ್ರದ ಮೂಲಕ ಬೆಳ್ಳಿತೆರೆಗೆ ಪರಿಚಿತರಾದ ಡಿ. ಕೆಂಪರಾಜ್, ಅನಂತರ ಕೃಷ್ಣಲೀಲಾ (1947), ಭಕ್ತ ರಾಮದಾಸ (1948), ಚಿತ್ರಗಳಲ್ಲಿ ಅಭಿನಯಿಸಿದರು. 1954ರಲ್ಲಿ ರಾಜಾವಿಕ್ರಮ ಯಶಸ್ವಿಯಾದ ಅನಂತರ ಅದೇ ವರ್ಷ ಕೆಂಪರಾಜ್ ಸ್ವತಃ ಜಲದುರ್ಗ ನಿರ್ಮಿಸಿದರು. ಫ್ರೆಂಚ್ ಕತೆ ಕೌಂಟ್ ಆಫ್ ಮಾಂಟಿ ಕ್ರಿಸ್ಟೋ ಆಧಾರಿತ ಕತೆಯ ಚಿತ್ರದಲ್ಲಿ ಕೆಂಪರಾಜ್ ನಾಯಕ. ಆದರೆ ಈ ಚಿತ್ರ ಗಲ್ಲಾಪೆಟ್ಟಿಗೆ ಗಳಿಕೆಯಲ್ಲಿ ಸೋಲನ್ನಪ್ಪಿತು. ಅನಂತರ 1957ರವರೆಗೆ ಕೆಂಪರಾಜ್ ಅವರಿಗೆ ಅವಕಾಶಗಳು ಸಿಗಲಿಲ್ಲ. ಆಗ ತಮ್ಮ ಸ್ವಂತ ಲಾಂಛನದಲ್ಲಿ ನಳದಮಯಂತಿ ನಿರ್ಮಿಸಿದರು (1957). ಭಾನುಮತಿ ಈ ಚಿತ್ರದ ನಾಯಕಿ. ಚಿತ್ರದ ಹಾಡುಗಳನ್ನೂ ಅವರೇ ಬರೆದರು. ಅನಂತರ ಕರ್ನಾಟಕ ಚಲನಚಿತ್ರ ಅಭಿವೃದ್ಧಿ ನಿಗಮದ ಅಧ್ಯಕ್ಷರಾಗಿ ಕೆಂಪರಾಜ ಅರಸು ಸೇವೆ ಸಲ್ಲಿಸಿದ್ದರು (1978). ಇವರು 1982 ಮೇ 18ರಂದು ನಿಧನಹೊಂದಿದರು.



ಸ್ಕೂಲ್ ಮಾಸ್ಟರ್ ಚಿತ್ರದಲ್ಲಿ ಬಿ.ಆರ್.ಪಂತುಲು

ಸಾಹಿತ್ಯ ಕ್ಷೇತ್ರಕ್ಕೂ ಚಿತ್ರರಂಗಕ್ಕೂ ಭದ್ರವಾದ ನಂಟು. ಕೃಷ್ಣಮೂರ್ತಿ ಪುರಾಣಿಕರ ಧರ್ಮದೇವತೆ ಕಾದಂಬರಿ ಆಧರಿತ ಕರುಣೆಯೇ ಕುಟುಂಬದ ಕಣ್ಣು ಈ ಬಗೆಯಲ್ಲಿ ಮೊದಲ ಚಿತ್ರ. ಸ್ವಲ್ಪ ಕಾಲದಲ್ಲಿಯೇ ಇದೇ ಲೇಖಕರ ಕುಲವಧು ಕಾದಂಬರಿ ತೆರೆಕಂಡಿತು. ಕಾದಂಬರಿಕಾರ ತ.ರಾ.ಸು. ಅವರ ಚಂದವಳ್ಳಿಯ ತೋಟ, ಚಕ್ರತೀರ್ಥ,

ನಾಗರಹಾವು ಕಾದಂಬರಿಗಳು ಚಿತ್ರಗೊಂಡು ಹಣಗಳಿಕೆ ಹಾಗೂ ಗುಣದೃಷ್ಟಿಯಿಂದ ಅಪಾರ ಯಶಸ್ಸು ಗಳಿಸಿದ್ದವು. ಅ.ನ.ಕೃ. ಅವರ ಸಂಧ್ಯಾರಾಗ ಕಾದಂಬರಿ ಕೂಡ ಬೆಳ್ಳಿತೆರೆಯನ್ನು ಕಂಡು ಅಪಾರ ಜನಮನ್ನಣೆ ಗಳಿಸಿತು. ಕಾದಂಬರಿಗಳನ್ನು ಚಿತ್ರೀ ಕರಿಸುವುದರಲ್ಲಿ ಮೇಲುಪಂಕ್ತಿ ಹಾಕಿಕೊಟ್ಟವರು ನಿರ್ದೇಶಕ ಪುಟ್ಟಣ ಕಣಗಾಲ್ (ನೋಡಿ). ತ್ರಿವೇಣಿಯ ಕಾದಂಬರಿಗಳು ತೆರೆಯ ಮೇಲೆ ಗಳಿಸಿದ ಜನಪ್ರಿಯತೆ ಅಪ್ರತಿಮವಾದುದು. ಬೆಳ್ಳಿಮೋಡ, ಹಣ್ಣೆಲೆ ಚಿಗುರಿದಾಗ, ಶರಪಂಜರ, ಕಂಕಣ ಮೊದಲಾದವು ಅತ್ಯಂತ ಯಶಸ್ಸು ಕಂಡವು. ಅಲ್ಲದೆ ಅವರ ಕಾದಂಬರಿಯನ್ನು ಆಧರಿಸಿ ತೆಗೆದ ಪ್ರತಿಯೊಂದು ಚಿತ್ರವೂ ರಾಷ್ಟ್ರಮಟ್ಟದಲ್ಲಾಗಲೀ ರಾಜ್ಯಮಟ್ಟದಲ್ಲಾಗಲೀ ಪ್ರಶಸ್ತಿ ಪಡೆದಿರುವುದು ಕುತೂಹಲ ಪೂರ್ಣವಾಗಿದೆ. ಹಾಗೆಯೇ ಲೇಖಕಿಯರಾದ ವಾಣಿ (ಎರಡು ಕನಸು), ಎಂ.ಕೆ.ಇಂದಿರಾ (ಗೆಜ್ಜೆ ಪೂಜೆ), ಆರ್ಯಾಂಬ ಪಟ್ಟಾಭಿ (ಕಪ್ಪುಬಿಳುಪು) ಮಂಗಳಾ ಸತ್ಯನ್ (ಭಾಗ್ಯಜ್ಯೋತಿ), ದೇವಕಿ ಮೂರ್ತಿ (ಉಪಾಸನೆ) ಮೊದಲಾದವರ ಕೃತಿಗಳೂ ಚಿತ್ರಗಳಾಗಿವೆ. ಕನ್ನಡದಲ್ಲಿ ತೆರೆಕಂಡ ಹೊಸ ಬಗೆಯ ಚಿತ್ರಗಳಲ್ಲಿ ಸೇ.90 ಪಾಲು ಚಿತ್ರಗಳು ಕಾದಂಬರಿಗಳನ್ನು ಆಧರಿಸಿರುವುದು ಗಮನಾರ್ಹವಾಗಿದೆ. ಕನ್ನಡ ಚಲನಚಿತ್ರಗಳ ಗುಣಮಟ್ಟ ಏರಲು ಚಿತ್ರರಂಗಕ್ಕೆ ಸಾಹಿತ್ಯದ ಸಂಬಂಧ ಬಹಳ ಮಟ್ಟಿಗೆ ಕಾರಣವಾಗಿದೆ. ಕನ್ನಡ ಚಲನಚಿತ್ರಗಳಲ್ಲಿ ಕಂಡುಬಂದ ಇನ್ನೊಂದು ಪ್ರಮುಖ ಬೆಳವಣಿಗೆಯ ಅಂಶವೆಂದರೆ ಸಾಮಾಜಿಕ ಚಿತ್ರಗಳು ಹೆಚ್ಚಾಗಿ ತೆರೆ ಕಾಣತೊಡಗಿದ್ದು. ಕಾದಂಬರಿಗಳನ್ನು ಚಿತ್ರೀಕರಿಸುವ ಪ್ರವೃತ್ತಿಯೇ ಸಾಮಾಜಿಕ ಚಿತ್ರಗಳನ್ನು ಜನಪ್ರಿಯಗೊಳಿಸಿ ಅವುಗಳ ಸಂಖ್ಯೆ ಹೆಚ್ಚಾಗಲು ಪ್ರೇರಕವಾಯಿತು.



ಗೆಜ್ಜೆಪೂಜೆ ಚಿತ್ರದಲ್ಲಿ ಕಲ್ಪನಾ

ಕನ್ನಡ ಚಲನಚಿತ್ರಗಳು ಬಣ್ಣದ ಯುಗಕ್ಕೆ ಕಾಲಿಟ್ಟದ್ದು 1954ರಷ್ಟು ಹಿಂದೆಯೇ. ಸ್ತ್ರೀರತ್ನ ಎಂಬ ಚಿತ್ರದಲ್ಲಿ ಎರಡು ರೀಲುಗಳನ್ನು ವರ್ಣದಲ್ಲಿ ಚಿತ್ರಿಸಲಾಗಿತ್ತು. ಹಾಗೆಯೇ ವೀರಕೇಸರಿ ಎಂಬ ಚಿತ್ರ ಕೂಡ ಭಾಗಶಃ ವರ್ಣದಲ್ಲಿ ತಯಾರಾಗಿತ್ತು. ಆದರೆ ಪೂರ್ಣ ಪ್ರಮಾಣದ ಮೊದಲ ವರ್ಣಚಿತ್ರ ಎಂದರೆ ವಿಕ್ರಂ ಪ್ರೊಡಕ್ಷನ್ಸ್ ಅವರ ಅಮರಶಿಲ್ಪಿ ಜಕಣಾಚಾರಿ (1964). ಇದೇ ಚಿತ್ರಸಂಸ್ಥೆಯವರ ಮಿಸ್ಟರ್ ರಾಜಕುಮಾರ್, ಭಲೇ ಬಸವ ಚಿತ್ರಗಳೂ ವರ್ಣದಲ್ಲಿ ತಯಾರಾದವು. ಅನಂತರ ವರ್ಣಚಿತ್ರಗಳು ಬರತೊಡಗಿದವು. ಈಗ ಚಿತ್ರಗಳು ವರ್ಣದಲ್ಲಿಯೇ ತಯಾರಾಗುತ್ತಿವೆ.

ಕನ್ನಡ ಚಿತ್ರರಂಗದ ಸ್ವರೂಪದಲ್ಲಿ ಮತ್ತೊಂದು ಪರಿವರ್ತನೆ ನಿಧಾನವಾಗಿ ನಡೆಯಿತು. ಚಲನಚಿತ್ರ ಬೆಳವಣಿಗೆಯ ಆರಂಭ ಹಂತಗಳಲ್ಲಿ ಚಿತ್ರ ತಯಾರಿಕಾ ಸಂಸ್ಥೆಗೆ ಪ್ರಾಧಾನ್ಯವಿದ್ದು ಬಿಡುಗಡೆಯಾಗುವ ಚಿತ್ರಗಳ ಯಶಾಪಯಶಗಳಲ್ಲಿ ಸಂಸ್ಥೆಗೆ ಬಾಧ್ಯತೆ ಇತ್ತು. ಗುಬ್ಬಿ ಕರ್ನಾಟಕ, ಎ.ವಿ.ಎಂ., ಪದ್ಮಿನೀ ಚಿತ್ರ ಸಂಸ್ಥೆ, ಮಹಾತ್ಮ ಚಿತ್ರ ಸಂಸ್ಥೆ ಮೊದಲಾದವು ಕನ್ನಡ ಚಿತ್ರ ತಯಾರಿಕೆಯಲ್ಲಿ ಹೆಸರಾಂತ ಸಂಸ್ಥೆಗಳಾಗಿದ್ದುವು (ದಕ್ಷಿಣ ಭಾರತದ ಪ್ರಾಚೀನವೂ ಪ್ರಮುಖವೂ ಆದ ಮಾಡರ್ನ್ ಥಿಯೇಟರ್ಸ್ ಸಂಸ್ಥೆ ಸಹ ದೇವಕನ್ನಿಕಾ ಮತ್ತು ಮಂಗಳಗೌರಿ ಎಂಬ ಕನ್ನಡ ಚಿತ್ರಗಳನ್ನು ತಯಾರಿಸಿತ್ತು. ಹಾಗೆಯೇ ಜುಪಿಟರ್ ಚಿತ್ರಸಂಸ್ಥೆ ವಾಲ್ಮೀಕಿಯನ್ನು ತೆರೆಗೆ ತಂದಿತ್ತು). ಆದರೆ ಮೆಲ್ಲಮೆಲ್ಲಗೆ ನಾಯಕ ನಟರ ಪ್ರಾಬಲ್ಯ ಬೆಳೆದಂತೆ ಸಂಸ್ಥೆಗಳ ಹೆಸರು ಹಿಂದಾಗತೊಡಗಿತು. ಚಿತ್ರದ ನಾಯಕ ನಟರು ವೈಯಕ್ತಿಕ ವರ್ಚಸ್ಸು ಆಕರ್ಷಣೆಗಳನ್ನು ಬೆಳೆಸಿಕೊಳ್ಳತೊಡಗಿದಂತೆ ತಾರಾ ಪದ್ಧತಿ (ಸ್ಟಾರ್ ಸಿಸ್ಟಂ) ಕನ್ನಡ ಚಿತ್ರರಂಗಕ್ಕೆ ಬಂತು. ಅನೇಕ ಬಿಡಿ ನಿರ್ಮಾಪಕರು ಹುಟ್ಟಿಕೊಂಡು ನಾಯಕ ನಟನ ಹೆಸರಿನ ಬಲದಿಂದ ಚಿತ್ರ ತೆಗೆದು ಹಣ ಗಳಿಸತೊಡಗಿದರು. ಭಾರತೀಯ ಚಿತ್ರರಂಗದಲ್ಲಿ ವ್ಯಾಪಕವಾಗಿ ಆಗಲೇ ಹಬ್ಬಿದ್ದ ತಾರಾಪದ್ಧತಿಗೆ ಕನ್ನಡ ಚಿತ್ರರಂಗವೂ ಅಪವಾದವಾಗಲಿಲ್ಲ. ಹಾಗಾಗಿ 60ರ ದಶಕದಲ್ಲಿ ಕನ್ನಡ ಚಿತ್ರರಂಗದಲ್ಲಿ ರಾಜಕುಮಾರ್, ಕಲ್ಯಾಣಕುಮಾರ್, ಉದಯ ಕುಮಾರ್ ಈ ಮೂವರೂ ಕನ್ನಡ ಚಿತ್ರದಿಗಂತದ ತಾರೆಗಳಂತೆ ಬೆಳಗತೊಡಗಿದರು.

ಬೇಡರ ಕಣ್ಣಪ್ಪ (1954) ಮೂಲಕ ತೆರೆಯೇರಿ ಮೊದಮೊದಲು ಪೌರಾಣಿಕ ಚಿತ್ರಗಳಲ್ಲಿ ಭಕ್ತಿಪೂರ್ಣ ಪಾತ್ರಗಳಲ್ಲಿಯೇ ಕಾಣಿಸಿಕೊಳ್ಳುತ್ತಿದ್ದ ರಾಜಕುಮಾರ್ (ನೋಡಿ) ಅನಂತರ ಸಾಮಾಜಿಕ ಚಿತ್ರಗಳಲ್ಲಿಯೂ ತಮ್ಮ ಅಭಿನಯಕುಶಲತೆಯಿಂದ ಹೆಸರು ಮಾಡಿದರು. ತದನಂತರ ಬಾಂಡ್ ಚಿತ್ರಗಳಲ್ಲಿಯೂ ಧೀರೋದಾತ್ತ ಸಾಹಸಪೂರ್ಣ ಚಿತ್ರಗಳಲ್ಲಿಯೂ ಅಭಿನಯಿಸಿ ತಮ್ಮ ಅಭಿನಯಕೌಶಲವನ್ನು ಅಸಾಮಾನ್ಯವೆಂಬಂತೆ ಮೆರೆದರು. ರಾಜಕುಮಾರ ಅವರ ಚಿತ್ರಗಳು ಹೆಚ್ಚು ಹೆಚ್ಚು ಜನಪ್ರಿಯವಾಗತೊಡಗಿದಂತೆ ಅವರಿಗೆ ಬೇಡಿಕೆ ಹೆಚ್ಚುತ್ತ ಹೋಯಿತು. ಶಬ್ದವೇಧಿ (1999) ಚಿತ್ರದ ವರೆಗೆ 206 ಚಿತ್ರಗಳಲ್ಲಿ ರಾಜಕುಮಾರ್ ನಟಿಸಿದ್ದಾರೆ. ಇಲ್ಲಿಯವರೆಗೆ ತೆಗೆಯಲಾಗಿರುವ ಬಹುತೇಕ ಕನ್ನಡ ಐತಿಹಾಸಿಕ ಚಿತ್ರಗಳಲ್ಲಿಯೂ (ರಣಧೀರ ಕಂಠೀರವ, ಕಿತ್ತೂರ ಚೆನ್ನಮ್ಮ, ಇಮ್ಮಡಿ ಪುಲಿಕೇಶಿ, ಶ್ರೀಕೃಷ್ಣದೇವರಾಯ, ಮಯೂರ) ರಾಜಕುಮಾರ್ ನಾಯಕರಾಗಿದ್ದಾರೆ. ಅದ್ದೂರಿಯ ಚಿತ್ರಗಳಲ್ಲಿ, ಅತಿವೆಚ್ಚದ ಚಿತ್ರಗಳಲ್ಲಿ ರಾಜಕುಮಾರ್ ಅನಿವಾರ್ಯವಾದರು. ವರನಟ, ನಟಸಾರ್ವಭೌಮ, ರಸಿಕರ ರಾಜ, ಕನ್ನಡ ಕಂಠೀರವ ಮೊದಲಾದ ಬಿರುದುಗಳನ್ನು ಪಡೆದಿರುವ ಈ ನಟನಿಗೆ 1976ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಾಕ್ಟರೇಟ್ ಪ್ರಶಸ್ತಿ ನೀಡಿ ಗೌರವಿಸಿದೆ. ಇದಲ್ಲದೆ ಇವರು ಪದ್ಮಭೂಷಣ (1983), ಕರ್ನಾಟಕ ರತ್ನ (1993), ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿ(1996)ಗಳನ್ನೂ ಗಳಿಸಿದ್ದಾರೆ. ಬಂಗಾರದ ಹೂವು, ಕುಲಗೌರವ, ಭಕ್ತ ಕುಂಬಾರ ಚಿತ್ರಗಳಲ್ಲಿ ಅಭಿನಯಕ್ಕಾಗಿ ಮೂರು ಬಾರಿ ರಾಜ್ಯಪ್ರಶಸ್ತಿಗಳು ಬಂದಿವೆ. ಗಂಧದ ಗುಡಿ ಹಾಗೂ ಮಯೂರದಲ್ಲಿನ ಅಭಿನಯಕ್ಕಾಗಿ ಎರಡು ಬಾರಿ ಫಿಲಂಫೇರ್ ಪ್ರಶಸ್ತಿಗಳೂ ಬಂದಿವೆ.



ಅಮರಶಿಲ್ಪಿ ಜಕಣಾಚಾರಿ ಚಿತ್ರದಲ್ಲಿ ಕಲ್ಯಾಣ್‌ಕುಮಾರ್, ಬಿ.ಸರೋಜಾದೇವಿ

1954ರಲ್ಲಿಯೇ ನಟಶೇಖರದ ಮೂಲಕ ನಾಯಕ ಪಟ್ಟಕ್ಕೆ ಬಂದ ಕಲ್ಯಾಣ ಕುಮಾರ್ (ನೋಡಿ) ಸಂವೇದನೆಯ ಪಾತ್ರಗಳನ್ನು ಚೊಕ್ಕವಾಗಿ ನಿರ್ವಹಿಸಬಲ್ಲವರೆಂದು ಖ್ಯಾತರಾಗಿದ್ದರು. ಅಮರಶಿಲ್ಪಿ ಜಕಣಾಚಾರಿ ಎಂಬ ಮೊದಲ ವರ್ಣಚಿತ್ರದಲ್ಲಿ ಜಕಣಾಚಾರಿಯ ಪಾತ್ರನಿರ್ವಹಿಸಿದರು.

ದೈವಲೀಲೆಯಲ್ಲಿ ದ್ವಿಪಾತ್ರಗಳನ್ನು ವಹಿಸಿರುವ ಇವರು ಸ್ವತಃ ನಿರ್ಮಾಪಕ ನಿರ್ದೇಶಕರೂ ಆಗಿ ಕೆಲವು ಚಿತ್ರಗಳನ್ನು ತಂದರು. 1971ರಲ್ಲಿ ಪಾಪಪುಣ್ಯದಲ್ಲಿ ತೆರೆಯ ಮೇಲೆ ಕಾಣಿಸಿಕೊಂಡ ಅನಂತರ ಕೆಲವು ಕಾಲ ಇವರು ಚಿತ್ರ ರಂಗದಿಂದ ದೂರವಾಗಿದ್ದರು. 1984ರ ಅನಂತರ ಪುನಃ ಚಿತ್ರರಂಗಕ್ಕೆ ಬಂದರು. ಕಥಾಸಂಗಮ, ಕಾಲೇಜುರಂಗ, ಬೆಳ್ಳಿಮೋಡ ಎಂದೂ ನಿನ್ನವನೆ ಇವರು ನಟಿಸಿದ ಕೆಲವು ಚಿತ್ರಗಳು. ಇವರು ಕಿರುತೆರೆಯ ಧಾರಾವಾಹಿಗಳಲ್ಲೂ ನಟಿಸಿದ್ದರು.



ರಂಗನಾಯಕಿ ಚಿತ್ರದಲ್ಲಿ ರಾಮಕೃಷ್ಣ, ಆರತಿ

ಗುಬ್ಬಿಕಂಪನಿಯಲ್ಲಿ ಕಲಾವಿದರಾಗಿದ್ದ ಉದಯ ಕುಮಾರ್ (ನೋಡಿ) ಭಾಗ್ಯೋದಯ (1956) ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು. ರತ್ನಗಿರಿ ರಹಸ್ಯ, ಭಲೆ ಬಸವ ಮುಂತಾದವುಗಳಲ್ಲಿ ನಾಯಕ ಪಾತ್ರ ವಹಿಸಿದ್ದರು. ಇವರು ಪೋಷಕ ಪಾತ್ರದಲ್ಲಿಯೇ ಅದರಲ್ಲೂ ಹೆಚ್ಚಾಗಿ ಖಳನಾಯಕನ ಪಾತ್ರದಲ್ಲಿ ಜನಪ್ರಿಯತೆಗಳಿಸಿದ್ದಾರೆ. ಶ್ರೀರಾಮಾಂಜನೇಯ ಯುದ್ಧದಲ್ಲಿನ ಆಂಜನೇಯನ ಪಾತ್ರ, ಚಂದವಳ್ಳಿಯ ತೋಟದಲ್ಲಿನ ಶಿವನಂಜೇಗೌಡನ ದುರಂತ ಪಾತ್ರ ಇವರ ಅಭಿನಯ ಜೀವನದಲ್ಲಿ ಮೈಲಿಗಲ್ಲುಗಳು. ಸೇಡಿಗೆ ಸೇಡು (1970) ಇವರ ನೂರನೆಯ ಚಿತ್ರ. ನೂರೈವತ್ತು ಚಿತ್ರಗಳಲ್ಲಿ ಅಭಿನಯಿಸಿರುವ ಇವರು ಇದೇ ಮಹಾಸುದಿನ ಚಿತ್ರವನ್ನು ಸ್ವತಃ ತಯಾರಿಸಿದರು. ತಮ್ಮ ಕಡೆ ದಿನಗಳಲ್ಲಿ ಉದಯ ಕಲಾನಿಕೇತನ ಆರಂಭಿಸಿ ಆಸಕ್ತರಿಗೆ ಅಭಿನಯದಲ್ಲಿ ತರಬೇತಿ ನೀಡುತ್ತಿದ್ದರು. ಚಿತ್ರರಂಗದಲ್ಲಿ ವಿಭಿನ್ನ ಪಾತ್ರದಲ್ಲಿ ಮೆರೆದ ಇವರು 1985ರಲ್ಲಿ ನಿಧನರಾದರು.

ಪುರುಷಪ್ರಾಧಾನ್ಯ ಭಾರತೀಯ ಚಿತ್ರರಂಗದ ಸಾಮಾನ್ಯ ಲಕ್ಷಣ. ಕನ್ನಡ ಚಿತ್ರರಂಗ ಇದಕ್ಕೆ ಹೊರತಾಗಿಲ್ಲ. ನಾಯಕ ನಟ ನೆಲೆನಿಲ್ಲುವಷ್ಟು ದೀರ್ಘಕಾಲ ನಟಿಯರು ನಿಲ್ಲಲಾರರು. ನಾಯಕಿ ನಟಿಯರಾಗಿದ್ದ ಪಂಢರಿಬಾಯಿ, ಎಂ.ವಿ.ರಾಜಮ್ಮ, ಸಂಧ್ಯಾ, ಬಿ.ಸರೋಜಾದೇವಿ, ಲೀಲಾವತಿ ಮೊದಲಾದವರು ಕ್ಷಿಪ್ರಕಾಲದಲ್ಲಿಯೇ ಪೋಷಕ ಪಾತ್ರಧಾರಿಗಳಾಗಬೇಕಾಯಿತು. ಕನ್ನಡ ಚಲನಚಿತ್ರಗಳಲ್ಲಿ ನಟಿಯರ ಸ್ಥಾನದಿಂದ ತಾರಾಪಟ್ಟಕ್ಕೇರಿದವರೆಂದರೆ ಜಯಂತಿ (ನೋಡಿ) ಮತ್ತು ಭಾರತಿ (ನೋಡಿ) ಇಬ್ಬರೇ. ಚೆಲುವು, ಪ್ರತಿಭೆಗಳೆರಡರ ಮಿಳಿತವಾದ ಈ ನಟಿಯರು ರಾಜಕುಮಾರ್ ಜೊತೆ ಅಭಿನಯಿಸಿರುವ ಚಿತ್ರಗಳೇ ಹೆಚ್ಚು ಹಾಗೂ ಜನಪ್ರಿಯವಾದವು. ಜೇನುಗೂಡು ಮೂಲಕ ಕನ್ನಡ ಚಿತ್ರರಂಗ ಪ್ರವೇಶಿಸಿ ಚಂದವಳ್ಳಿಯ ತೋಟ (1965) ಮೂಲಕ ಖ್ಯಾತಿಗಳಿಸಿದ ಜಯಂತಿ ಅರವತ್ತಕ್ಕೂ ಹೆಚ್ಚು ಕನ್ನಡ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಮಿಸ್ ಲೀಲಾವತಿ, ಚಕ್ರತೀರ್ಥ, ಎಡಕಲ್ಲುಗುಡ್ಡದ ಮೇಲೆ. ಇವು ಈಕೆಯ ಶ್ರೇಷ್ಠ ಚಿತ್ರಗಳಲ್ಲಿ ಕೆಲವು. 1966ರಲ್ಲಿ ಬಿಡುಗಡೆಯಾದ ಲವ್ ಇನ್ ಬೆಂಗಳೂರು ಚಿತ್ರದಲ್ಲಿ ಕಲ್ಯಾಣಕುಮಾರ್ ಜೊತೆ ಮೊದಲ ಬಾರಿ ನಾಯಕಿಯಾದ ಭಾರತಿ ಒಂದು ದಶಕಕ್ಕೂ ಹೆಚ್ಚು ಕಾಲ ಚಿತ್ರರಂಗದಲ್ಲುಳಿದು ನೂರಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿರುವ ಬಹುಭಾಷಾ ತಾರೆ. ಸಂಧ್ಯಾರಾಗ ಹಾಗೂ ಶ್ರೀಕೃಷ್ಣದೇವರಾಯ ಚಿತ್ರಗಳಲ್ಲಿನ ಅಭಿನಯಕ್ಕೆ ಪ್ರಶಸ್ತಿಗಳನ್ನು ಪಡೆದಿದ್ದಾರೆ. ರಾಜಕುಮಾರ್ - ಭಾರತಿ ಅತ್ಯಂತ ಜನಪ್ರಿಯ ತಾರಾ ಜೋಡಿಯಾಗಿದ್ದು ಇವರು ಅಭಿನಯಿಸಿರುವ ಬಂಗಾರದ ಮನುಷ್ಯ ವರ್ಣಚಿತ್ರ ಎರಡು ವರ್ಷಗಳ ಕಾಲ ಪ್ರದರ್ಶನಗೊಂಡಿತು. ರಾಜಕುಮಾರ್, ಮಂಜುಳಾ ಜೋಡಿಯ ಸಂಪತ್ತಿಗೆ ಸವಾಲ್ ಮತ್ತು ಮಯೂರ ಚಿತ್ರಗಳೂ ಜನಪ್ರಿಯತೆ ಗಳಿಸಿದ್ದುವು.

60ರ ದಶಕದ ಉತ್ತರಾರ್ಧದಲ್ಲಿ ಹಿಂದಿ ಚಿತ್ರಗಳಲ್ಲಿ ಧಾರಾಳವಾಗಿದ್ದ ಅತಿ ನಗ್ನತೆ, ಕ್ರೌರ್ಯ, ಹಿಂಸಾಚಾರ ಮೊದಲಾದ ಮಾದಕ ಸೌಂದರ್ಯಗಳಿಂದ ಕನ್ನಡ ಚಿತ್ರಗಳು ಸಪ್ಪೆ ಎನಿಸತೊಡಗಿದವು. ಹಿಂದಿ ಚಿತ್ರಗಳನ್ನು ಅನುಕರಿಸಿ ಕನ್ನಡದಲ್ಲಿಯೂ ಆ ಬಗೆಯ ಚಿತ್ರಗಳು ಮೈದಳೆಯತೊಡಗಿದವು. ಸಮೂಹರಂಜನೆಯ ಚಿತ್ರಗಳ ಪ್ರವಾಹವೇ ನುಗ್ಗಿಬಂತು. ದೊರೆ-ಭಗವಾನ್ ನಿರ್ಮಾಪಕ ನಿರ್ದೇಶಕದ್ವಯರು ಜೇಡರ ಬಲೆಯು ಮೂಲಕ ಕನ್ನಡ ಚಿತ್ರರಂಗಕ್ಕೆ ಬಾಂಡ್ ಶೈಲಿಯನ್ನು ಪ್ರವೇಶಗೊಳಿಸಿದರು. ಈ ಬಗೆಯಲ್ಲಿ ಹಲವು ಚಿತ್ರಗಳ ಬೆನ್ನ ಹಿಂದೆಯೇ ಕೌತುಕಪೂರ್ಣ, ರೋಮಾಂಚಕಾರಿ ಕಥೆಗಳನ್ನು ಚಿತ್ರೀಕರಿಸುವ ಪ್ರವೃತ್ತಿ ಬೆಳೆಯಿತು. ಇದು ಈಗಲೂ ಮುಂದುವರಿದಿದೆ. ಈ ಬಗೆಯ ಚಿತ್ರ ಕಥೆಗಳನ್ನು ಬರೆಯುವಲ್ಲಿ ಹಿಂದಿಚಿತ್ರ ರಂಗದಲ್ಲಿ ದೊಡ್ಡ ಹೆಸರಾದ ಸಲೀಂ ಜಾವೇದರು ರಚಿಸಿರುವ ಕಥೆಗಳನ್ನು ಆಧರಿಸಿದ ಪ್ರೇಮದ ಕಾಣಿಕೆ ಹಾಗೂ ರಾಜಾ ನನ್ನ ರಾಜಾ ಚಿತ್ರಗಳು 1976ರಲ್ಲಿ ತೆರೆಕಂಡವು.



ಕಥಾಸಂಗಮ ಚಿತ್ರದ ಒಂದು ದೃಶ್ಯ - ಕಲ್ಯಾಣ್‌ಕುಮಾರ್, ಬಿ. ಸರೋಜಾದೇವಿ

ಈ ಮಧ್ಯೆ ಚಲನಚಿತ್ರಗಳಲ್ಲಿ ತಮ್ಮ ಅಸ್ತಿತ್ವವನ್ನು ಸಾಧಿಸಿ, ಚಿತ್ರಗಳ ಬೆಳವಣಿಗೆಗೆ ಹೊಸ ತಿರುವು ಕೊಡಲು ಯತ್ನಿಸುವ ನಿರ್ದೇಶಕರ ಪೀಳಿಗೆ ಕಾಣಿಸಿಕೊಳ್ಳತೊಡಗಿತು. ಈ ವೇಳೆಗಾಗಲೇ ಬಿ.ಆರ್.ಪಂತುಲು, ಬಿ.ಎಸ್.ರಂಗಾ, ಜಿ.ವಿ.ಅಯ್ಯರ್, ವೈ.ಆರ್.ಸ್ವಾಮಿ, ಹುಣಸೂರು ಕೃಷ್ಣಮೂರ್ತಿ, ಎಚ್.ಎಲ್.ಎನ್.ಸಿಂಹ ಮೊದಲಾದ ಪ್ರಬುದ್ಧ ನಿರ್ದೇಶಕರು ಪ್ರೌಢಚಿತ್ರಗಳನ್ನು ನಿರ್ಮಿಸುತ್ತಿದ್ದರೂ ಪರಂಪರೆಯಿಂದ ಜೋರಾಗಿ ನಿಂತು ನಿರ್ದೇಶನ ಪ್ರತಿಭೆಗಳನ್ನು ಮಿಂಚಿಸಿದ ಪೀಳಿಗೆ ಬಂದದ್ದು 60ರ ದಶಕದಲ್ಲಿಯೇ. ವಾದಿರಾಜ್-ಜವಹರ್ ಅವರ ತಯಾರಿಕೆಯಾದ ಕಿವುಡ-ಮೂಗರ ಹೃದಯಸ್ಪರ್ಶಿ ಸಮಸ್ಯೆಯನ್ನು ಎತ್ತಿಕೊಂಡ ನಾಂದಿ ಚಿತ್ರ (1964) ಎನ್.ಲಕ್ಷ್ಮೀನಾರಾಯಣರ ಪ್ರತಿಭಾಪೂರ್ಣ ನಿರ್ದೇಶನದಿಂದಾಗಿ ಅಪಾರ ಮನ್ನಣೆ ಪಡೆಯಿತು. ಅಂತಾರಾಷ್ಟ್ರೀಯ ಚಿತ್ರೋತ್ಸವಗಳಲ್ಲಿಯೂ ಹೆಸರುಮಾಡಿತು. ಇದೇ ನಿರ್ದೇಶಕರ ಉಯ್ಯಾಲೆ (1969), ಮುಕ್ತಿ (1970) ಹಾಗೂ ಹೊಸ ಬಗೆಯ ಅಬಚೂರಿನ ಪೋಸ್ಟಾಫೀಸು (1973), ಮುಯ್ಯಿ (1979), ಬೆಟ್ಟದಹೂವು (1985) ಚಿತ್ರಗಳೂ ಇವರ ಪ್ರತಿಭೆಗೆ ಸಾಕ್ಷಿಯಾಗಿವೆ. ನಂದಾದೀಪ (1962),

ಮಿಸ್ ಲೀಲಾವತಿ (1965) ಚಿತ್ರಗಳನ್ನು ಕೊಟ್ಟ. ಎಂ.ಆರ್.ವಿಠಲ್; ತೂಗುದೀಪದ (1965) ಮೂಲಕ ಕಾಣಿಸಿಕೊಂಡು ಗಾಂಧಿನಗರದಂಥ



ನಾಂದಿ ಚಿತ್ರದ ಒಂದು ದೃಶ್ಯದಲ್ಲಿ ರಾಜಕುಮಾರ್

ಚೊಕ್ಕವಾದ ಚಿತ್ರವನ್ನು ಕೊಟ್ಟ ಕೆ.ಎಸ್.ಎಲ್.ಸ್ವಾಮಿ (ರವಿ), ಈ ನಿರ್ದೇಶಕರು ಭರವಸೆ ಮೂಡಿಸುವವರಾಗಿದ್ದರು. ಲಗ್ನಪತ್ರಿಕೆ (1967), ಆರು ಮೂರು ಒಂಬತ್ತು (1970), ಮಂಕುದಿಣ್ಣೆ (1968), ಅರಿಶಿನ ಕುಂಕುಮ, ಲಕ್ಷ್ಮೀಸರಸ್ವತಿ (1970), ಶ್ರೀಕೃಷ್ಣ ರುಕ್ಮಿಣಿ (1971), ಕುಳ್ಳ ಏಜೆಂಟ್ 000 (1972), ಮಿಥಿಲೆಯ ಸೀತೆಯರು (1988), ಹರಕೆಯ ಕುರಿ (1992), ಮುಖ್ಯ ಚಿತ್ರಗಳು. 1966ರಲ್ಲಿ ಕನ್ನಡ ಚಲನಚಿತ್ರರಂಗ ಕಂಡ ಇನ್ನೊಬ್ಬ ಪ್ರೌಢ ಪ್ರತಿಭಾವಂತ ನಿರ್ದೇಶಕ ಎಂದರೆ ರೊಸೆಲಿನಿಯಂಥ ವಿಖ್ಯಾತ ನಿರ್ದೇಶಕನ ಬಳಿ ಕೆಲಸ ಮಾಡಿದ ಎಂ.ವಿ.ಕೃಷ್ಣಸ್ವಾಮಿ. ಇವರು ಎ.ಎನ್.ಮೂರ್ತಿರಾಯರ ಆಷಾಢಭೂತಿ ನಾಟಕ ಆಧರಿಸಿದ ಸುಬ್ಬಾಶಾಸ್ತ್ರಿ ಎಂಬ ಹೊಸ ರೂಪದ ಚಿತ್ರವನ್ನು ತಯಾರಿಸಿದರು. ಕನ್ನಡ ಚಿತ್ರರಂಗಕ್ಕೆ ಹೊಸ ತಿರುವು ಕೊಡಬಹುದಾಗಿದ್ದ ಈ ಚಿತ್ರ ಅಷ್ಟು ಯಶಸ್ಸು ಗಳಿಸಲಿಲ್ಲ. ಅಲ್ಲದೆ ಕೃಷ್ಣಸ್ವಾಮಿಯವರೂ ಕಾರಣಾಂತರಗಳಿಂದ



ಕಿತ್ತೂರು ಚೆನ್ನಮ್ಮ ಚಿತ್ರದಲ್ಲಿ ಬಿ.ಸರೋಜಾದೇವಿ

ಚಲನಚಿತ್ರರಂಗದಿಂದ ದೂರವಾದರು. ಕನ್ನಡದಲ್ಲಿ ನಿರ್ದೇಶಕನಿಗೆ ಪ್ರಾಧಾನ್ಯ ಬರುವಂತೆ ಮಾಡಿದ ಕೀರ್ತಿ ಎಸ್.ಆರ್.ಪುಟ್ಟಣ್ಣ ಕಣಗಾಲರದು. ಖ್ಯಾತ ನಿರ್ಮಾಪಕ ನಿರ್ದೇಶಕ ಪಂತುಲು ಅವರ ಜೊತೆ ಬಹುಕಾಲ ಕೆಲಸಮಾಡಿದ ಇವರು 1967ರಲ್ಲಿ ಬೆಳ್ಳಿಮೋಡ ಎಂಬ ಮೊದಲ ಚಿತ್ರದ ಮೂಲಕವೇ ಹೆಸರು ಗಳಿಸಿದರು. 1985ರವರೆಗೆ 23 ಚಿತ್ರಗಳನ್ನು ನಿರ್ದೇಶಿಸಿದರು. ಶುಭಮಂಗಳ, ಉಪಾಸನೆ, ರಂಗನಾಯಕಿ, ಗೆಜ್ಜೆಪೂಜೆ, ಶರಪಂಜರ, ನಾಗರಹಾವು, ಎಡಕಲ್ಲುಗುಡ್ಡದ ಮೇಲೆ, ಬಿಳಿ ಹೆಂಡ್ತಿ, ಕಾಲೇಜುರಂಗ, ಮಸಣದ ಹೂವು - ಹೀಗೆ ಚಿತ್ರದಿಂದ ಚಿತ್ರಕ್ಕೆ ಪರಿಷ್ಕಾರ ಹೊಂದುತ್ತ ಹೋದರು. ಪುಟ್ಟಣ್ಣ ಚಿತ್ರಿಸಿದ ಮೂರು ಕಥೆಗಳನ್ನು ಆಧರಿಸಿದ ಕಥಾಸಂಗಮ ಅವರ ಪ್ರತಿಭಾಕೌಶಲಕ್ಕೆ ಹಿಡಿದ ಕನ್ನಡಿ. ಕಾದಂಬರಿಗಳ ಚಿತ್ರೀಕರಣಕ್ಕೆ ಆದ್ಯತೆ ಕೊಟ್ಟು ಆ ಪರಂಪರೆ ತೀವ್ರವಾಗಿ ಬೆಳೆಯುವಂತೆ ಮಾಡಿದುದಲ್ಲದೆ, ಚಲನಚಿತ್ರಗಳಲ್ಲಿ ಹೆಣ್ಣಿನ ಪಾತ್ರವನ್ನು ಔನ್ನತ್ಯಗೊಳಿಸಿ ಆಕೆಯ ಸುತ್ತ ಕಥಾಹಂದರ ಹರಡಿಕೊಳ್ಳುವಂತೆ ಮಾಡಿದ ಖ್ಯಾತಿಯೂ ಪುಟ್ಟಣ್ಣ ಅವರದೇ. ಅನೇಕ ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿಗಳನ್ನು ಗಳಿಸಿದ ಇವರನ್ನು ದಕ್ಷಿಣ ಭಾರತೀಯ ಚಿತ್ರನಿರ್ದೇಶಕರ ಸಂಘದವರು 1974ರಲ್ಲಿ ಅತ್ಯುತ್ತಮ ನಿರ್ದೇಶಕ ಎಂದು ಗೌರವಿಸಿದ್ದಾರೆ. ನಾಲ್ಕು ಭಾಷೆಗಳಲ್ಲಿ ಇಪ್ಪತ್ತೈದಕ್ಕೂ ಹೆಚ್ಚು ಚಿತ್ರಗಳನ್ನು ನಿರ್ದೇಶಿಸಿರುವ ಪುಟ್ಟಣ್ಣ ವಾಣಿಜ್ಯೋದ್ದೇಶಿತ ಚಿತ್ರಗಳಲ್ಲಿಯೂ ಕಲಾತ್ಮಕತೆಯನ್ನು ಸಾಧಿಸಬಹುದು ಎನ್ನುವುದಕ್ಕೆ ಸಾಕ್ಷಿಯಾಗಿದ್ದಾರೆ. ಕನ್ನಡದ ಅನೇಕ ಪ್ರಮುಖ ನಟನಟಿಯರು ಚಿತ್ರರಂಗದಲ್ಲಿ ಭದ್ರವಾಗಿ ನೆಲೆಯಾಗುವಂತೆ ಮಾಡಿದ ಯಶಸ್ಸು ಪುಟ್ಟಣ್ಣನವರದ್ದೇ. ಅವರು ನಾಗರಹಾವು ಮೂಲಕ ವಿಷ್ಣುವರ್ಧನ ಅವರನ್ನು ತೆರೆಗೆ ಪರಿಚಯಿಸಿದರು. ಶುಭಮಂಗಳದ ಮೂಲಕ ಶ್ರೀನಾಥ್ ಅವರನ್ನು ಪ್ರಕಾಶಕ್ಕೆ ತಂದರು. ಖ್ಯಾತ ನಟ ಕಲ್ಯಾಣಕುಮಾರ್ ಸಹ ಮತ್ತೆ ಬೆಳಕಿಗೆ ಬಂದದ್ದು ಇವರ ಕಥಾಸಂಗಮದಿಂದಲೇ. ಪುಟ್ಟಣ್ಣನವರ ನಾಯಕ ನಟಿಯರಾದ ಕಲ್ಪನಾ (ನೋಡಿ) ಹಾಗೂ ಆರತಿ (ನೋಡಿ) ಹೆಚ್ಚು ಹೆಸರು ಗಳಿಸಿದ್ದಾರೆ. ಪಂತುಲು ಅವರ ಸಾಕುಮಗಳು ಮೂಲಕ ತೆರೆಗೆ ಬಂದ ಕಲ್ಪನಾ ಬೆಳ್ಳಿಮೋಡ, ಗೆಜ್ಜೆ ಪೂಜೆ, ಶರಪಂಜರಗಳಲ್ಲಿ ಅತ್ಯಂತ ಸಂವೇದನಾಪೂರ್ಣ ಅಭಿನಯವನ್ನು ನೀಡಿ ಅನೇಕ ರಾಜ್ಯ ಪ್ರಶಸ್ತಿಗಳನ್ನೂ ಫಿಲಂ ಫೇರ್ ಪ್ರಶಸ್ತಿಗಳನ್ನೂ ಪಡೆದರು. ಗೆಜ್ಜೆಪೂಜೆಯ ಮೂಲಕ ಚಿತ್ರರಂಗ ಪ್ರವೇಶಿಸಿದ ಆರತಿ ನಾಗರಹಾವು ಹಾಗೂ ಎಡಕಲ್ಲುಗುಡ್ಡದ ಮೇಲೆ ಹಾಗೂ ರಂಗನಾಯಕಿ ಚಿತ್ರಗಳಲ್ಲಿ ತಮ್ಮ ಅಭಿನಯದ ಮೂಲಕ ಕನ್ನಡ ತೆರೆಯಲ್ಲಿ ಸ್ಥಾನ ಗಳಿಸಿದರು. ಉಪಾಸನೆ, ಶುಭಮಂಗಳ, ಬಿಳಿಹೆಂಡ್ತಿ, ಕಥಾಸಂಗಮಗಳಲ್ಲಿಯೂ ಉತ್ತಮ ಅಭಿನಯ ನೀಡಿರುವ ಈಕೆ ಅನೇಕ ಪ್ರಶಸ್ತಿ ಗಳಿಸಿದ್ದಾರೆ. ರಾಜಕುಮಾರ್ - ಆರತಿ ಜೋಡಿಯ ಚಿತ್ರಗಳು ಕೆಲವು ಅಪಾರ ಯಶಸ್ಸು ಗಳಿಸಿವೆ. ಪುಟ್ಟಣ್ಣನವರು ಬಿಳಿಹೆಂಡ್ತಿ ಚಿತ್ರದಲ್ಲಿ ಮಾರ್ಗರೆಟ್ ಥಾಂಸನ್ ಎಂಬ ವಿದೇಶಿ ಕನ್ಯೆಯಿಂದಲೇ ಪಾತ್ರಮಾಡಿಸಿ ಕನ್ನಡದಲ್ಲಿ ಹೊಸ ಪ್ರಯೋಗ ಮಾಡಿದರು. ಮಸಣದ ಹೂವು ಇವರು ನಿರ್ದೇಶಿಸಿದ ಕೊನೆಯ ಚಿತ್ರ. ಚಿತ್ರಪೂರ್ಣಗೊಳಿಸುವ ಮುನ್ನವೇ ನಿಧನರಾದರು. ಪುಟ್ಟಣ್ಣನವರ ಹೆಸರಿನಲ್ಲಿ ಕನ್ನಡದ ಪ್ರತಿಭಾವಂತ ನಿರ್ದೇಶಕರಿಗೆ ಒಂದು ಲಕ್ಷ ರೂಪಾಯಿ ಬಹುಮಾನ ನೀಡುವ ಪ್ರಶಸ್ತಿಯನ್ನು ಕರ್ನಾಟಕ ಸರ್ಕಾರ ಜಾರಿಗೆ ತಂದಿದೆ (1986).



[illegible]

ಜಿ.ವಿ.ಅಯ್ಯರ್ (ನೋಡಿ) ಹಲವು ಅಪೂರ್ವ ಕೊಡುಗೆಗಳನ್ನು ನೀಡಿರುವುದರಿಂದ ಕನ್ನಡ ಚಿತ್ರರಂಗದ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದಾರೆ. ಇವರು ನಟಿಸಿದ ಮೊದಲ ಚಿತ್ರ ರಾಧಾರಮಣ (1943). 10ನೆಯ ವಯಸ್ಸಿನಲ್ಲಿ ಗುಬ್ಬಿ ಕಂಪನಿ ಸೇರಿದ ಇವರು ಬೇಡರ ಕಣ್ಣಪ್ಪ ಚಿತ್ರದ ಮೂಲಕ ಜನಪ್ರಿಯತೆ ಗಳಿಸಿದರು. ವಿಕ್ರಂ ಪ್ರೊಡಕ್ಷನ್ಸ್‌ರವರ ದಶಾವತಾರ ನಿರ್ದೇಶಿಸಿದರು (1960). ಇವರು ನಿರ್ದೇಶಿಸಿದ ಹಂಸಗೀತೆ ಯಶಸ್ವೀ ಚಿತ್ರ. ಇದಲ್ಲದೆ ಸಂಸ್ಕೃತದಲ್ಲಿ ಆದಿಶಂಕರಾಚಾರ್ಯ ಚಲನಚಿತ್ರ,

ನಿರ್ದೇಶಿಸಿದರು. ಈ ಚಿತ್ರ ಸ್ವರ್ಣಕಮಲ ಪ್ರಶಸ್ತಿ ಗಳಿಸಿತು. ಮಧ್ವಾಚಾರ್ಯ, ಭಗವದ್ಗೀತೆ, ಸ್ವಾಮಿ ವಿವೇಕಾನಂದ ಚಿತ್ರಗಳನ್ನೂ ಇವರು ನಿರ್ದೇಶಿಸಿದ್ದಾರೆ. 2003 ಡಿಸೆಂಬರ್ 21ರಂದು ಇವರು ಮುಂಬಯಿಯಲ್ಲಿ ನಿಧನರಾದರು.

ಮೇಯರ್ ಮುತ್ತಣ್ಣ (1969) ಚಿತ್ರದ ಮೂಲಕ ಪೂರ್ಣ ನಿರ್ದೇಶಕರಾದ ಸಿದ್ಧಲಿಂಗಯ್ಯನವರು (ನೋಡಿ) ರಾಜಕುಮಾರ್ - ಭಾರತಿ ಜೋಡಿಯ ಅನೇಕ ಯಶಸ್ವಿ ಚಿತ್ರಗಳನ್ನು ನಿರ್ದೇಶಿಸಿ ಉದ್ಯಮದಲ್ಲಿ ಹೆಸರಾದರು (ಬಾಳು ಬೆಳಗಿತು, ನಮ್ಮ ಸಂಸಾರ, ದೂರದಬೆಟ್ಟ). ಇವರು ನಿರ್ದೇಶಿಸಿರುವ, ಟಿ.ಕೆ.ರಾಮರಾವ್ ಅವರ ಕಾದಂಬರಿ ಆಧಾರಿತ ವರ್ಣಚಿತ್ರ ಬಂಗಾರದ ಮನುಷ್ಯ (1972) ಸತತವಾಗಿ 104 ವಾರಗಳ ಕಾಲ ಓಡಿ ಅಪೂರ್ವ ದಾಖಲೆ ನಿರ್ಮಿಸಿತು. ಕನ್ನಡದ ಹೆಸರಾಂತ ಸಾಹಿತಿ ಗೊರೂರು ರಾಮಸ್ವಾಮಿ ಅಯ್ಯಂಗಾರರ ಕಥೆಯನ್ನು ಆಧರಿಸಿ ಇವರು ಚಿತ್ರಿಸಿದ ಬೂತಯ್ಯನ ಮಗ ಅಯ್ಯು (1974) ತನ್ನ ಕಲಾತ್ಮಕ ದೃಷ್ಟಿಯಿಂದ ಇವರನ್ನು ಶ್ರೇಷ್ಠ ನಿರ್ದೇಶಕರನ್ನಾಗಿಸಿತು. 1977ರಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರರ ಹೇಮಾವತಿ ಕಾದಂಬರಿಯನ್ನು ತೆರೆಗೆ ತಂದರು. ಇವರು ನಿರ್ದೇಶಿಸಿದ ಪ್ರಮುಖ ಚಿತ್ರಗಳು ಭೂಲೋಕದಲ್ಲಿ ಯಮರಾಜ (1979), ನಾರದ ವಿಜಯ (1980), ಬಿಳಿಗಿರಿಯ ಬನದಲ್ಲಿ (1980), ಪ್ರೇಮಪರ್ವ (1983), ಸಂಭವಾಮಿ ಯುಗೇ ಯುಗೇ (1988), ಬಾರೇ ನನ್ನ ಮುದ್ದಿನ ರಾಣಿ (1990), ಬಾ ನನ್ನ ಪ್ರೀತಿಸು (1992), ಭೂತಾಯಿ ಮಕ್ಕಳು (1994). ಅಯ್ಯುವಿನ ಪಾತ್ರವನ್ನು ಜೀವಂತವಾಗಿ ನಿರ್ವಹಿಸುವುದರ ಮೂಲಕ ಚಿತ್ರರಂಗ ಪ್ರವೇಶಿಸಿದ ಲೋಕೇಶ್ ಕನ್ನಡದ ಅತ್ಯುತ್ತಮ ರಂಗನಟರಲ್ಲೊಬ್ಬರಾಗಿದ್ದ ಸುಬ್ಬಯ್ಯ ನಾಯ್ಡು ಅವರ ಮಗ. ಬೂತಯ್ಯನ ಮಗ ಅಯ್ಯು ಚಿತ್ರ ಹಿಂದಿ ಹಾಗೂ ತಮಿಳು ಅವತರಣಿಕೆಗಳಲ್ಲಿ ಅಯ್ಯುವಿನ ಪಾತ್ರವನ್ನು ಲೋಕೇಶ್ ನಿರ್ವಹಿಸಿದ್ದಾರೆ. ದೇವರ ಕಣ್ಣು ಹಾಗೂ ಪುನರ್ದತ್ತ ಎಂಬ ಮತ್ತೆರಡು ಚಿತ್ರಗಳಲ್ಲಿ ಇವರು ಅಭಿನಯಿಸಿದ್ದಾರೆ.



ಬೂತಯ್ಯನ ಮಗ ಅಯ್ಯು ಚಿತ್ರದ ಒಂದು ದೃಶ್ಯದಲ್ಲಿ ಲೋಕೇಶ್

ಕೇವಲ ವಾಣಿಜ್ಯ ದೃಷ್ಟಿಯಿಂದ ತಯಾರಾಗುತ್ತಿರುವ ಚಿತ್ರಗಳಿಗೂ 70ರ ದಶಕದಲ್ಲಿ ಆರಂಭವಾದ ಕಲಾತ್ಮಕ ಪ್ರಾಯೋಗಿಕ ಚಿತ್ರಗಳಿಗೂ ಪುಟ್ಟಣ್ಣ ಹಾಗೂ ಸಿದ್ಧಲಿಂಗಯ್ಯ ಅವರ ಚಿತ್ರಗಳು ನಡುವಣ ಬಂಧಸೇತುವೆಗಳಾದವು. ನಾಗರಹೊಳೆ ಚಿತ್ರದ (1977) ಮೂಲಕ ಪ್ರಖ್ಯಾತಿಗೆ ಬಂದ ಎಸ್.ವಿ.ರಾಜೇಂದ್ರಸಿಂಗ್ ಬಾಬು ಕನ್ನಡದ ಮತ್ತೊಬ್ಬ ಗಮನಾರ್ಹ ನಿರ್ದೇಶಕ. ಮೊದಲು ನಿರ್ದೇಶಿಸಿದ ಚಿತ್ರ ನಾಗಕನ್ಯೆ (1975). ನಾಗರಹೊಳೆ, ಮಕ್ಕಳ ಸಾಹಸವನ್ನೊಳಗೊಂಡ ಚಿತ್ರವಾಗಿದ್ದು ಭಾರೀ ಯಶಸ್ಸು ಪಡೆಯಿತು. 1978ರಲ್ಲಿ ಕಿಲಾಡಿ ಜೋಡಿ ಚಿತ್ರನಿರ್ದೇಶಿಸಿದ ರಾಜೇಂದ್ರಸಿಂಗ್ ಬಾಬು, ತಾಂತ್ರಿಕವಾಗಿ ಶ್ರೀಮಂತ ಚಿತ್ರಗಳನ್ನು ತೆಗೆಯುವುದರಲ್ಲಿ ನಿಸ್ಸೀಮರೆನಿಸಿದರು. 1980ರಲ್ಲಿ 'ಅಂತ' ಚಿತ್ರದ ಮೂಲಕ ಕನ್ನಡ ಚಿತ್ರಗಳ ದಿಕ್ಕನ್ನೇ ಬದಲಿಸಿದರು. ಎಚ್.ಕೆ.ಅನಂತರಾವ್ ಅವರ ಕಾದಂಬರಿ ಆಧರಿಸಿದ ಈ ಚಿತ್ರದಲ್ಲಿ ಅಂಬರೀಷ್, ಲಕ್ಷ್ಮಿ, ಜಯಮಾಲಾ, ಸುಂದರಕೃಷ್ಣಅರಸು, ವಜ್ರಮುನಿ ಮೊದಲಾದವರು ಅಭಿನಯಿಸಿದ್ದಾರೆ. ಸೆನ್ಸಾರ್ ಸುಳಿಗೆ ಸಿಲುಕಿ ನಿಷೇಧಗೊಂಡಿದ್ದ ಚಿತ್ರ ಅನಂತರ, ಬಿಡುಗಡೆಯಾಗಿ ಜನರ ಕುತೂಹಲ ಕೆರಳಿಸಿತು. ನಾಯಕ ಅಂಬರೀಷ್ ಅವರ ಚಿತ್ರ ಜೀವನದಲ್ಲಿ ಈ ಚಿತ್ರ ತಿರುವು ನೀಡಿತು. ನಾಗರಹಾವು, ಚಿತ್ರದ ಖಳನ ಪಾತ್ರದಿಂದ ಚಿತ್ರರಂಗ ಪ್ರವೇಶಿಸಿದ ಅಂಬರೀಷ್ (ನೋಡಿ) ಬಹಳ ಕಾಲ ಖಳ ನಟರಾಗಿದ್ದರು. ಅಂತ ಚಿತ್ರದಲ್ಲಿ ಅವರ ಸಬ್ ಇನ್ಸ್‌ಪೆಕ್ಟರ್ ಸುಶೀಲ್‌ಕುಮಾರ್ ಹಾಗೂ ಕನ್ವರ್ ಲಾಲ್ ಎಂಬ ರೌಡಿಯ ಪಾತ್ರ ಜನಪ್ರಿಯವಾಯಿತು. ಕನ್ನಡದ ಯಶಸ್ವಿ ನಾಯಕರಲ್ಲೊಬ್ಬರಾದರು. ಹಾಂಕಾಂಗ್‌ನಲ್ಲಿ ಏಜೆಂಟ್ ಅಮರ್ (1989) ಚಿತ್ರದ ಮೂಲಕ ಅಂಬರೀಷ್ ಶತಚಿತ್ರ ನಟರೂ ಆಗಿದ್ದಾರೆ. ಇದೇ ರೀತಿ ಖಳನಾಯಕ ಪಾತ್ರದಿಂದ ಚಿತ್ರರಂಗ ಪ್ರವೇಶಿಸಿದ ಪ್ರಭಾಕರ್ ಕೂಡ ನಾಯಕನಟರಾಗಿ ತಮ್ಮದೇ ಆದ ಛಾಪು ಮೂಡಿಸಿದ್ದರು. ಕಾಡಿನ ರಹಸ್ಯ ಚಿತ್ರದ ಮೂಲಕ ಅವರು ಚಿತ್ರರಂಗ ಪ್ರವೇಶಿಸಿದರು.

ಅಂತ ಬಿಡುಗಡೆಯಾಗಿ ಜನಪ್ರಿಯತೆ ಪಡೆದ ಅನಂತರ ಆ ಚಿತ್ರದ ಚೌಕಟ್ಟನ್ನೇ ಕಮರ್ಷಿಯಲ್ ಸಿನಿಮಾಗಳು ಅಳವಡಿಸಿಕೊಂಡವು. ಹಿಂದಿ ಹಾಗೂ ಇತರ ಭಾಷೆಗಳಲ್ಲೂ ಈ ಚಿತ್ರ ತಯಾರಾಯಿತು. ಇಂದಿಗೂ ಕಮರ್ಷಿಯಲ್ ಚಿತ್ರಗಳಲ್ಲಿ ಅಂತದ ನೆರಳು ಕಂಡುಬರುತ್ತದೆ.

ರಾಜೇಂದ್ರ ಸಿಂಗ್ ಬಾಬು ಅವರು ಸಿಂಹದ ಮರಿ ಸೈನ್ಯ ಎಂಬ ಮಕ್ಕಳ ಚಿತ್ರ ನಿರ್ದೇಶಿಸಿದರು. ಅರ್ಜುನ್ ಸರ್ಜಾ ಈ ಚಿತ್ರದಲ್ಲಿ ಬಾಲನಟರಾಗಿ ಅಭಿನಯಿಸುವ ಮೂಲಕ ಚಿತ್ರರಂಗ ಪ್ರವೇಶಿಸಿದರು. ರೋಹಿಣಿ ಪಿಕ್ಚರ್ಸ್ ಲಾಂಛನದಲ್ಲಿ ಅವರು ನಿರ್ದೇಶಿಸಿದ ಬಂಧನ ಕನ್ನಡ ಚಿತ್ರರಂಗದಲ್ಲಿ ಮತ್ತೆ ಯಶಸ್ಸಿನ ಅಲೆ ಎಬ್ಬಿಸಿತು. 1990ರಲ್ಲಿ ರಾಜೇಂದ್ರಸಿಂಗ್ ಬಾಬು ಮುತ್ತಿನ ಹಾರ ನಿರ್ದೇಶಿಸಿದರು. ಯುದ್ಧನಿಷೇಧ, ಶಾಂತಿ ಪ್ರತಿಪಾದನೆಯ ತತ್ತ್ವವನ್ನು ವೆಂ.ಮು. ಜೋಷಿ ಅವರ ಕತೆ ಆಧರಿಸಿ ರಾಜೇಂದ್ರಸಿಂಗ್ ಬಾಬು ನಿರೂಪಿಸಿದ್ದಾರೆ. ಮಹಾತ್ಮಪಿಕ್ಚರ್ಸ್ ಲಾಂಛನದಲ್ಲಿ ಬಣ್ಣದ ಗೆಜ್ಜೆ ತಯಾರಿಸಿದರು (1990). ತ್ರಿವೇಣಿಯವರ ಕಾದಂಬರಿ ಆಧರಿಸಿ ಹೂವು ಹಣ್ಣು ನಿರ್ದೇಶಿಸಿದರು. ಭೂಮಿತಾಯಿ ಚೊಚ್ಚಲ ಮಕ್ಕಳು, ಮುಂಜಾನೆಯ ಮಂಜು ಚಿತ್ರಗಳ ಮೂಲಕ ಸದಭಿರುಚಿಯ ಚಿತ್ರಗಳ ನಿರ್ದೇಶಕರಾಗಿರುವ ರಾಜೇಂದ್ರ ಸಿಂಗ್ ಬಾಬು ಕನ್ನಡ ಚಿತ್ರರಂಗದಲ್ಲಿ ಹಾಸ್ಯದ ಟ್ರೆಂಡ್ ಸೃಷ್ಟಿಸಿದ್ದು ಕೂಡ ದಾಖಲೆ. ಪುಟ್ಟಣ್ಣ ಕಣಗಾಲ್ ಪ್ರಶಸ್ತಿ ಪುರಸ್ಕೃತರೂ ಆಗಿರುವ ಇವರು ಕುರಿಗಳು ಸಾರ್ ಕುರಿಗಳು ಹಾಗೂ ಕೋತಿಗಳು ಸಾರ್ ಕೋತಿಗಳು, ಕತ್ತೆಗಳು ಸಾರ್ ಕತ್ತೆಗಳು ಎಂಬ ಹಾಸ್ಯ ಪ್ರಧಾನ ಚಿತ್ರಗಳನ್ನು ನಿರ್ದೇಶಿಸಿ ಕನ್ನಡ ಚಿತ್ರರಂಗದಲ್ಲಿ ಹೊಸ ಹಾದಿ ಹಿಡಿದರು.

ಮೇಯರ್ ಮುತ್ತಣ್ಣ ನಿರ್ಮಿಸುವುದರ ಮೂಲಕ (1969) ನಿರ್ಮಾಪಕರಾದ ಹಾಸ್ಯನಟ ದ್ವಾರಕೀಶ್ ಅನಂತರದ ದಿನಗಳಲ್ಲಿ ನಿರ್ದೇಶನಕ್ಕೂ ಇಳಿದರು. ಇವರು 1972ರಲ್ಲಿ ದ್ವಾರಕಾ ಫಿಲಂ ಲಾಂಛನದಲ್ಲಿ ಕುಳ್ಳ ಏಜೆಂಟ್ 000 ಎಂಬ ಹಾಸ್ಯ ಪ್ರಧಾನ ಚಿತ್ರ ತಯಾರಿಸಿದರು. ಮೊದಲಬಾರಿಗೆ ಹಿಂದಿ ಚಿತ್ರರಂಗದ ಹಿನ್ನೆಲೆಗಾಯಕ ಕಿಶೋರ್ ಕುಮಾರ್ ಈ ಚಿತ್ರದಲ್ಲಿ ಹಾಡಿದರು. ಕೌಬಾಯ್ ಕುಳ್ಳ, ಸಿಂಗಾಪೂರ್‌ನಲ್ಲಿ ರಾಜಾಕುಳ್ಳ ಎಂಬ ಚಿತ್ರ ತಯಾರಿಸಿದರು. ಮೊದಲಬಾರಿಗೆ ಸಿಂಗಾಪೂರ್‌ನಲ್ಲಿ ಚಿತ್ರೀಕರಣ (1973) ನಡೆಸಿದ್ದು ಈ ಚಿತ್ರದ ವಿಶೇಷ ಅವರು ಗುರುಶಿಷ್ಯರು ಎಂಬ ಹಾಸ್ಯ ಪ್ರಧಾನ ಜಾನಪದ ಚಿತ್ರವನ್ನೂ ನಿರ್ಮಿಸಿದರು (1981). 1985ರಲ್ಲಿ ನೀ ಬರೆದ ಕಾದಂಬರಿ ಚಿತ್ರ ನಿರ್ದೇಶಿಸುವ ಮೂಲಕ ನಿರ್ದೇಶಕರೂ ಆದರು. ಅನಂತರ ನೀ ತಂದ ಕಾಣಿಕೆ, ಆಫ್ರಿಕಾದಲ್ಲಿ ಶೀಲಾ ತಯಾರಿಸಿದರು. 1993ರಲ್ಲಿ ರಾಯರು ಬಂದರು ಮಾವನ ಮನೆಗೆ, ಕಿಲಾಡಿಗಳು ನಿರ್ದೇಶಿಸಿದರು (1994). ಹೊಸ ಸಾಹಸಗಳನ್ನು ಮಾಡುವುದರಲ್ಲಿ ದ್ವಾರಕೀಶ್ ಪ್ರಖ್ಯಾತರು. ಅವರ ಪುತ್ರ ಗಿರಿಗಾಗಿ ಮಜ್ನು ಚಿತ್ರವನ್ನು ನಿರ್ದೇಶಿಸಿದರು (2001). ಅಪಾರ ಯಶಸ್ಸು ಗಳಿಸಿದ ಆಪ್ತಮಿತ್ರ ಇವರ ಇತ್ತೀಚಿನ ಚಿತ್ರ (2004).

ಎಪ್ಪತ್ತರ ದಶಕದ ಆರಂಭದೊಂದಿಗೇ ಕನ್ನಡ ಚಿತ್ರ ರಂಗದಲ್ಲಿ ಹೊಸ ಬೆಳಕು ಮೂಡತೊಡಗಿತು. ಕನ್ನಡ ಚಲನಚಿತ್ರಗಳು ರಾಷ್ಟ್ರಮಟ್ಟಕ್ಕೇರುವುದಲ್ಲದೆ ಜಗಜ್ಜಾಹೀರಾಗತೊಡಗಿದುದೂ ಈ

ದಶಕದಲ್ಲಿಯೇ. ಸಮಕಾಲೀನ ಸಮಸ್ಯೆಗಳನ್ನು, ಸಮಾಜಕ್ಕೆ ಹತ್ತಿರದ ವಸ್ತುಗಳನ್ನು ಆರಿಸಿಕೊಂಡು ಆತ್ಮೀಯವಾಗಿ ಚಿತ್ರೀಕರಿಸಲು ಪ್ರಯತ್ನಿಸುವ ನೆಲದ ಸೊಗಡನ್ನುಳ್ಳ ಚಿತ್ರಗಳು ಬಂದವು. ಆಂಧ್ರುಕವಿಯಾಗಿದ್ದು,



ಸಂಸ್ಕಾರ ಚಿತ್ರದಲ್ಲಿ ಪಿ.ಲಂಕೇಶ್, ಗಿರೀಶ ಕಾರ್ನಾಡ್

ರಂಗಪರಿಶ್ರಮವಿರುವ ಪಟ್ಟಾಭಿರಾಮರೆಡ್ಡಿ ಅವರು ಕನ್ನಡ ಲೇಖಕ ಯು.ಆರ್.ಅನಂತಮೂರ್ತಿಯವರ ಕಾದಂಬರಿ ಸಂಸ್ಕಾರವನ್ನು ತೆರೆಗೆ ತಂದರು (1970). ರಾಷ್ಟ್ರಮಟ್ಟದಲ್ಲಿ ಅತ್ಯುತ್ತಮ ಚಿತ್ರವೆಂದು ಸುವರ್ಣಪದಕ ಪಡೆದ ಈ ಚಿತ್ರದಲ್ಲಿ ಖ್ಯಾತ ನಾಟಕಕಾರ ಗಿರೀಶ ಕಾರ್ನಾಡ ಹಾಗೂ ಪಟ್ಟಾಭಿಯವರ ಪತ್ನಿ ಸ್ನೇಹಲತಾ ರೆಡ್ಡಿ ಅವರು ಮುಖ್ಯ ಪಾತ್ರಗಳಲ್ಲಿದ್ದರು. ಖ್ಯಾತ ಆಸ್ಟ್ರೇಲಿಯನ್ ಛಾಯಾಗ್ರಾಹಕ ಟಾಂಕೋವನ್ ಈ ಚಿತ್ರವನ್ನು ಕ್ಯಾಮರದಲ್ಲಿ ಸೆರೆಹಿಡಿದಿದ್ದರು. ಈ ಚಿತ್ರದ ಹೊಸತನವನ್ನು ಜನ ಮೆಚ್ಚಿದ್ದರು. ಇಂಥ ಚಿತ್ರಗಳನ್ನು ನೋಡುವ ಪ್ರೇಕ್ಷಕವೃಂದ ಕನ್ನಡದಲ್ಲಿ ಸಿದ್ಧವಾಯಿತು. ಅಲ್ಲದೆ ಈ ಬಗೆಯ ಚಿತ್ರಗಳನ್ನು ಮಾಡಲು ಅನುಕೂಲವಾಗುವಂತೆ ಸರ್ಕಾರದ ಸಹಾಯಧನ (ಸಬ್ಸಿಡಿ) ಯೋಜನೆಯೂ ಇದ್ದಿತು. ಧರ್ಮದ ಟೊಳ್ಳು ಆವರಣವನ್ನು ಧಿಕ್ಕರಿಸಿ ವ್ಯಕ್ತಿಯ ವಿಕಾಸವನ್ನು ಚಿತ್ರಿಸಿದ ಸಂಸ್ಕಾರದ ಬೆನ್ನಹಿಂದೆಯೇ ಮನೆತನದ ಒಣಪ್ರತಿಷ್ಠೆಯನ್ನು ಪ್ರಶ್ನಾರ್ಹವಾಗಿಸಿದ ವಂಶವೃಕ್ಷ ಬಂತು. ಎಸ್.ಎಲ್.ಭೈರಪ್ಪನವರ ಕಾದಂಬರಿಯಾಧಾರಿತ ಈ ಚಿತ್ರವನ್ನು ನಿರ್ದೇಶಿಸಿದ ಗಿರೀಶ ಕಾರ್ನಾಡ ಹಾಗೂ ಬಿ.ವಿ.ಕಾರಂತರು ನಿರ್ದೇಶನಕ್ಕೆ ರಾಷ್ಟ್ರಮಟ್ಟದ ಪ್ರಶಸ್ತಿ ಪಡೆದರು. ಮುಂಬಯಿ ನಿರ್ದೇಶನ ಸಂಘದವರು ನಿರ್ದೇಶನಕ್ಕಾಗಿ ನೀಡುವ ಫಾಲ್ಕೆ ಪ್ರಶಸ್ತಿಯೂ ಈ ಚಿತ್ರಕ್ಕೆ ಬಂತು. ಈ ಚಿತ್ರದ ಮುಖ್ಯ ಪಾತ್ರದಲ್ಲಿ ವೆಂಕಟರಾವ್ ತಲಗೇರಿ ಹಾಗೂ ಕಾತ್ಯಾಯಿನಿ ಪಾತ್ರದಲ್ಲಿ ಎಲ್.ವಿ. ಶಾರದಾ ಅತ್ಯಂತ ಮನೋಜ್ಞ ಅಭಿನಯ ನೀಡಿದರು. ಶ್ರೀಕೃಷ್ಣ ಆಲನಹಳ್ಳಿಯವರ ಕಾದಂಬರಿ ಆಧಾರಿತ, ಗ್ರಾಮಾಂತರ ಜೀವನದಲ್ಲಿ ಅಡಗಿರುವ ಸುಪ್ತ ಜ್ವಾಲಾಮುಖಿಯ ಪದರಗಳನ್ನು ಬಿಡಿಸಿದ ಕಾಡು ಚಿತ್ರ ಗಿರೀಶ ಕಾರ್ನಾಡರ ನಿರ್ದೇಶನದಲ್ಲಿ ತೆರೆಗೆ ಬಂತು. ಅಪಾರ ಜನಪ್ರಿಯತೆ ಗಳಿಸಿದುದಲ್ಲದೆ ಈ ಚಿತ್ರ ರಾಷ್ಟ್ರಮಟ್ಟದಲ್ಲಿ ಮೂರು ಪ್ರಶಸ್ತಿಗಳನ್ನು ಗೆದ್ದುಕೊಂಡಿತು. ಇದರ ನಾಯಕಿ ನಂದಿನಿ (ನೋಡಿ) ಪ್ರಥಮ ಬಾರಿಗೆ ಊರ್ವಶಿ ಪ್ರಶಸ್ತಿ ಪಡೆದ ಕನ್ನಡ ನಟಿಯಾದಳು. ಶ್ರೇಷ್ಠ ಬಾಲನಟನಾಗಿ ಜಿ.ಎಸ್.ನಟರಾಜ್ ಪ್ರಶಸ್ತಿ ಪಡೆದ. ಅಲ್ಲದೆ ಕಾಡು ಚಿತ್ರ ದ್ವಿತೀಯ ಶ್ರೇಷ್ಠ ರಾಷ್ಟ್ರೀಯ ಚಿತ್ರ ಎಂದು ಪರಿಗಣಿತವಾಯಿತು. ಪಿ.ವಿ.ನಂಜರಾಜೇಅರಸು ನಿರ್ದೇಶಿಸಿದ, ಮೂಢನಂಬಿಕೆಗಳನ್ನು ವಿಮರ್ಶೆಗೊಳಪಡಿಸಿದ ಸಂಕಲ್ಪ ಹಾಗೂ ಮಧ್ಯಮ ವರ್ಗದ ಸುಶಿಕ್ಷಿತ ಯುವತಿಯರ ಸಮಸ್ಯೆಗಳನ್ನು ವಿಶ್ಲೇಷಿಸುವ ಎಂ.ಎಸ್.ಪ್ರಸಾದರ ಕಂಕಣ ಈ ಹೊಸ ಪರಂಪರೆಯ ಚಿತ್ರಗಳು. ಎನ್.ಲಕ್ಷ್ಮೀನಾರಾಯಣರ ಅಬಚೂರಿನ ಪೋಸ್ಟಾಫೀಸು ಹಾಗೂ ಪುಟ್ಟಣ್ಣ ಕಣಗಾಲರ ಕಥಾಸಂಗಮ ಈ ದಿಕ್ಕಿನಲ್ಲಿ ನಡೆದ ಸಾಧನೆಗಳೇ. 1975ರಲ್ಲಿ ತೆರೆಕಂಡ ಚೋಮನದುಡಿ ಹಾಗೂ ಹಂಸಗೀತೆಗಳು ಕ್ರಾಂತಿಕಾರಕವಾದವು. ಶಿವರಾಮ ಕಾರಂತರ ಕಾದಂಬರಿಯಾಧಾರಿತ ಚೋಮನ ದುಡಿ ಜೀತಪದ್ಧತಿಯನ್ನು ಸೂಕ್ಷ್ಮವಾಗಿ ಹಿಂಜಿದ ಅತ್ಯಂತ ಮಾನವೀಯ ಮೌಲ್ಯಗಳಿರುವ ಚಿತ್ರ. ಜನಾದರಣೆಯನ್ನು ಅಪಾರವಾಗಿ ಗಳಿಸಿದ ರಾಷ್ಟ್ರದ ಸರ್ವಶ್ರೇಷ್ಠ ಚಿತ್ರವೂ ಆಯಿತು. ಚೋಮನಾಗಿ ಕಾಣಿಸಿಕೊಂಡ ಎಂ.ವಿ.ವಾಸುದೇವರಾವ್ (ನೋಡಿ) ತಮ್ಮ ಮೊದಲ ಚಿತ್ರದಲ್ಲಿಯೇ ರಾಷ್ಟ್ರದ ಅತ್ಯುತ್ತಮ ನಟನೆಂದು ಪ್ರಶಸ್ತಿ ಗಳಿಸಿ, ಕನ್ನಡಕ್ಕೆ ಮೊದಲಿಗರಾದರು. ಬೆಳ್ಳಿಯ ಪಾತ್ರದಲ್ಲಿ ಪದ್ಮಾ ಕುಮುಟಾ ಗಮನ ಸೆಳೆದರು. ಬಿ.ವಿ.ಕಾರಂತರ ಉತ್ಕೃಷ್ಟ ನಿರ್ದೇಶನದ ಈ ಚಿತ್ರ ಅಂತಾರಾಷ್ಟ್ರೀಯ ಮನ್ನಣೆಯನ್ನೂ ಗಳಿಸಿತು. ಕಾರ್ಲೋವಾರಿ ಚಿತ್ರೋತ್ಸವದಲ್ಲಿ ಚಲನಚಿತ್ರ ವಿಮರ್ಶಕರ ಸಿಡಾಲ್ಕ್ ಪ್ರಶಸ್ತಿ ಚೋಮನ ದುಡಿಗೆ ಬಂದುದಲ್ಲದೆ, ಬಿ.ವಿ.ಕಾರಂತರನ್ನು ಭಾರತದ ಇನ್ನೊಬ್ಬ ಸತ್ಯಜಿತ್ ರಾಯ್ ಎಂದು ಪ್ರಶಂಸಿಸಲಾಯಿತು. ಕನ್ನಡ ಚಿತ್ರರಂಗದಲ್ಲಿ ನಟನಾಗಿ, ನಿರ್ದೇಶಕನಾಗಿ, ನಿರ್ಮಾಪಕನಾಗಿ, ಹಲವು ದಶಕಗಳಿಂದ ದುಡಿದ ಜಿ.ವಿ.ಅಯ್ಯರ್ ಅವರ ಹಂಸಗೀತೆ, ಕಾದಂಬರಿಕಾರ ತ.ರಾ.ಸು. ಅವರ ಅದೇ ಹೆಸರಿನ ಕಾದಂಬರಿಯನ್ನಾಧರಿಸಿದೆ. ಇಡೀ ಚಿತ್ರದಲ್ಲಿ ಕೇವಲ ಹದಿನೈದು ನಿಮಿಷಗಳು ಸಂಭಾಷಣೆಯುಳ್ಳ ಈ ಸಂಗೀತ ರೂಪಕ, ಉತ್ತಮ ಛಾಯಾಗ್ರಹಣ ಅರ್ಥಪೂರ್ಣ ನಿರ್ದೇಶನದಿಂದ ಒಳ್ಳೆಯ ಚಿತ್ರವಾಗಿದೆ. ಸಂಕಲ್ಪದಲ್ಲಿ ಕಾಣಿಸಿಕೊಂಡ ಅನಂತನಾಗ್ (ನೋಡಿ) ಈ ಚಿತ್ರದಲ್ಲಿ ಭೈರವಿ ವೆಂಕಟಸುಬ್ಬಯ್ಯನಾಗಿ ಅಪ್ರತಿಮ ಅಭಿನಯ ನೀಡಿದ್ದಾರೆ. ಈ ವರ್ಣಚಿತ್ರಕ್ಕೆ ಸಂಗೀತ ನಿರ್ದೇಶನ ನೀಡಿ, ಹಿನ್ನೆಲೆ ಗಾಯನ ಕೊಟ್ಟಿರುವ ಬಾಲಮುರಳಿ ಕೃಷ್ಣ ಅವರನ್ನು ವರ್ಷದ ಅತ್ಯುತ್ತಮ ಹಾಡುಗಾರರೆಂದು ರಾಷ್ಟ್ರಮಟ್ಟದಲ್ಲಿ ಗೌರವಿಸಲಾಗಿದೆ. ಕರ್ಣಾಟಕ ಸಂಗೀತದ ವಿಖ್ಯಾತ ಸಂಗೀತಗಾರರಾದ ಇವರು ಸಂಧ್ಯಾರಾಗ ಚಿತ್ರಕ್ಕೆ ಸಂಗೀತ ನಿರ್ದೇಶನ ಮಾಡಿದ್ದರು. 1976ರಲ್ಲಿ ಬಿಡುಗಡೆ ಕಂಡಿರುವ ಪಲ್ಲವಿ ನವ್ಯ ಸಾಹಿತಿ ಪಿ.ಲಂಕೇಶರ (ನೋಡಿ) ಸೃಷ್ಟಿ. ನಗರಜೀವನದ ಯುವಕ ಯುವತಿಯರ ಸಮಸ್ಯೆಗಳಿಗೆ ಕನ್ನಡಿ ಹಿಡಿಯುವ ಪ್ರಯತ್ನ ಇಲ್ಲಿ ಎದ್ದು ಕಾಣುತ್ತದೆ. ಸಂಸ್ಕಾರದಲ್ಲಿ ಪಾತ್ರ ನಾರಾಯಣಪ್ಪನ ಪಾತ್ರದಲ್ಲಿ ಲಂಕೇಶ್ ಅಭಿನಯಿಸಿದ್ದರು. ಲಂಕೇಶ್ ಅವರೊಳಗಿದ್ದ ನಾಟಕಕಾರ, ಕವಿ ಪಲ್ಲವಿಯಲ್ಲಿ ವಿಜೃಂಭಿಸಿದ್ದರಿಂದ ಅದರಲ್ಲಿ ಹೊಸ ದೃಷ್ಟಿಕೋನವನ್ನು ನೋಡಬಹುದಾಗಿತ್ತು. ಈ ಚಿತ್ರಕ್ಕಾಗಿ ಪಿ.ಲಂಕೇಶ್ ಶ್ರೇಷ್ಠ ನಿರ್ದೇಶಕ ಪ್ರಶಸ್ತಿ ಪಡೆದರು (1976).



ವಂಶವೃಕ್ಷ ಚಿತ್ರದಲ್ಲಿ ಚಂದ್ರಶೇಖರ್, ಎಲ್.ವಿ.ಶಾರದಾ

ಪಿ.ಲಂಕೇಶರ ಎರಡನೆಯ ಚಿತ್ರ ಅನುರೂಪ (1977). ಖಂಡವಿದಕೋ ಮಾಂಸವಿದಕೋ (1979), ಎಲ್ಲಿಂದಲೋ ಬಂದವರು (1989) ಚಿತ್ರಗಳನ್ನು ಆನಂತರದ ವರ್ಷಗಳಲ್ಲಿ ಅವರು ನಿರ್ದೇಶಿಸಿದರು. ಅವರ ಪುತ್ರಿ ಕವಿತಾ ಲಂಕೇಶ್ (ನೋಡಿ) ಕೂಡ ದೇವೀರಿ (2000) ಚಿತ್ರದ ಮೂಲಕ ನಿರ್ದೇಶಕಿ ಆಗಿದ್ದಾರೆ. ಪ್ರೀತಿ, ಪ್ರೇಮ, ಪ್ರಣಯ ಅವರು ನಿರ್ದೇಶಿಸಿದ ಇನ್ನೊಂದು ಚಿತ್ರ.

ಲಂಕೇಶ್ ಪುತ್ರ ಪಿ.ಎಲ್.ಇಂದ್ರಜಿತ್ ಕೂಡ ಚಲನಚಿತ್ರ ನಿರ್ದೇಶಕರಾಗಿ ಚಿತ್ರರಂಗ ಪ್ರವೇಶಿಸಿದ್ದಾರೆ. ತುಂಟಾಟ (2002), ಲಂಕೇಶ್ ಪತ್ರಿಕೆ (2003) ಹಾಗೂ ಮೊನಾಲಿಸಾ (2004) ಇವರು ನಿರ್ದೇಶಿಸಿದ ಚಿತ್ರಗಳು.



ಕಾಡು ಚಿತ್ರದಲ್ಲಿ ಬಾಲ ನಟರು

1977ರಲ್ಲಿ ಘಟಶ್ರಾದ್ಧ ಚಿತ್ರ ನಿರ್ದೇಶಿಸುವುದರೊಂದಿಗೆ ಚಿತ್ರರಂಗ ಪ್ರವೇಶಿಸಿದ ಗಿರೀಶ್ ಕಾಸರವಳ್ಳಿ (ನೋಡಿ) ಹೊಸ ಅಲೆಯ ಚಿತ್ರ ನಿರ್ಮಾಣಕ್ಕೆ ಹೊಸತೊಂದು ಆಯಾಮವನ್ನೇ ನೀಡಿದರು. ಪುಣೆಯ ಫಿಲಂ ಇನ್‌ಸ್ಟಿಟ್ಯೂಟಿನಿಂದ ತರಬೇತಿ ಪಡೆದು ಬಂದ ಗಿರೀಶ್ ಕಾಸರವಳ್ಳಿ ಬಿ.ವಿ.ಕಾರಂತರ ಜೊತೆ ಸಹಾಯಕ ನಿರ್ದೇಶಕರಾಗಿ ಚೋಮನದುಡಿ, ಸಿ.ಆರ್. ಸಿಂಹರ ಜೊತೆ ಕಾಕನ ಕೋಟೆ ಚಿತ್ರದಲ್ಲಿ ಸಹಾಯಕ ನಿರ್ದೇಶಕ ರಾಗಿದ್ದು ಅನುಭವ ಗಳಿಸಿದರು. ಅನಂತರ ಯು.ಆರ್.ಅನಂತ ಮೂರ್ತಿ ಅವರ ಕಥೆಯಾಧಾರಿತ ಘಟಶ್ರಾದ್ಧ ಚಿತ್ರವನ್ನು ಸ್ವತಂತ್ರವಾಗಿ ನಿರ್ದೇಶಿಸಿದರು.

ಇಂದಿಗೂ ಅರ್ಥವಂತಿಕೆಯ ಚಿತ್ರ ನಿರ್ಮಾಣದೊಂದಿಗೆ ಗಿರೀಶ್ ಕಾಸರವಳ್ಳಿ ಸೃಜನಶೀಲರಾಗಿಯೇ ಉಳಿದಿದ್ದಾರೆ. ಘಟಶ್ರಾದ್ಧ ರಾಷ್ಟ್ರಪ್ರಶಸ್ತಿ ಸ್ವರ್ಣ ಕಮಲ ಗಳಿಸಿತು. ಅನಂತರದ ದಿನಗಳಲ್ಲಿ ಆಕ್ರಮಣ (1980), ಮೂರು ದಾರಿಗಳು (1981), ತಬರನ ಕಥೆ (1987), ಬಣ್ಣದ ವೇಷ (1988), ಮನೆ (1990), ಕ್ರೌರ್ಯ, ತಾಯಿಸಾಹೇಬ, ದ್ವೀಪ ಚಿತ್ರಗಳನ್ನು ನಿರ್ದೇಶಿಸಿ ಪ್ರಶಸ್ತಿಗಳನ್ನೂ ಪಡೆದಿದ್ದಾರೆ. ತಬರನ ಕಥೆ, ಬಣ್ಣದ ವೇಷ ಚಿತ್ರಗಳೂ ರಾಷ್ಟ್ರಪ್ರಶಸ್ತಿ ಪಡೆದಿವೆ. ಆಕ್ರಮಣ, ಮೂರು ದಾರಿಗಳು ರಾಜ್ಯ ಪ್ರಶಸ್ತಿ ಗಳಿಸಿವೆ.



ಘಟಶ್ರಾದ್ಧ ಚಿತ್ರದ ಒಂದು ದೃಶ್ಯ

ತಬರನ ಕಥೆ, ಬಣ್ಣದ ವೇಷ, ತಾಯಿ ಸಾಹೇಬ ಹಾಗೂ ದ್ವೀಪ ಚಿತ್ರಗಳು ಗಿರೀಶ್ ಕಾಸರವಳ್ಳಿ ಅವರಿಗೆ ಸ್ವರ್ಣಕಮಲ ಪ್ರಶಸ್ತಿ ತಂದುಕೊಟ್ಟಿವೆ. ಹೊಸ ಅಲೆ ಚಿತ್ರಗಳ ಪರಂಪರೆಗೆ ಇಂದಿಗೂ ಬದ್ಧವಾಗಿರುವ ಗಿರೀಶ್ ಕಾಸರವಳ್ಳಿ, ಕಲಾತ್ಮಕ ಅಂಶಗಳಿಗೆ ಹೆಚ್ಚು ಒತ್ತು ನೀಡಿದವರು. ರಂ.ಶಾ. ಅವರ ಕಾದಂಬರಿಯನ್ನಾಧರಿಸಿ ಗಿರೀಶ್ ಕಾಸರವಳ್ಳಿ ನಿರ್ದೇಶಿಸಿದ ತಾಯಿ ಸಾಹೇಬ (1996) ವಿಭಿನ್ನ ಕಥಾವಸ್ತುವೊಂದನ್ನು ನಿರ್ವಹಿಸಿದ ರೀತಿಯಿಂದಾಗಿ ಗಮನ ಸೆಳೆಯುತ್ತದೆ. ನಟಿ ಜಯಮಾಲ (ನೋಡಿ) ಅವರಿಗೆ ರಾಷ್ಟ್ರೀಯ ಪ್ರಶಸ್ತಿ ತಂದುಕೊಟ್ಟ ಚಿತ್ರವಿದು. ನಾ.ಡಿಸೋಜರ ಕಾದಂಬರಿನ್ನಾಧರಿಸಿ ನಿರ್ಮಿತವಾದ ದ್ವೀಪ (2002) ಗಿರೀಶ್‌ರ ಪ್ರತಿಭೆಯ ಪ್ರಬುದ್ಧತೆಯ ಸಂಕೇತವಾಗಿ ಕಾಣಿಸಿಕೊಂಡಿದೆ. ಮಳೆ, ವಸ್ತುವಿನ ಗಾಢತೆ ಎಲ್ಲವೂ ಈ ಚಿತ್ರದಲ್ಲಿ ಮಡುಗಟ್ಟಿರುವುದು ವಿಶೇಷ.

ವಿ.ಆರ್.ಕೆ.ಪ್ರಸಾದ್, ಋಷ್ಯಶೃಂಗ (1977), ಬಿಡುಗಡೆಯಾಗಿ ಸಂಗೀತ ಹಾಗೂ ಛಾಯಾಗ್ರಹಣಕ್ಕಾಗಿ ಎರಡು ರಾಷ್ಟ್ರೀಯ ಪ್ರಶಸ್ತಿಗಳಿಸಿತು. ಸುರೇಶ್ ಹೆಬ್ಳೀಕರ್, ಸುಂದರ್‌ಶ್ರೀ, ವಸಂತಲಕ್ಷ್ಮೀ ಮೊದಲಾದವರು ಈ ಚಿತ್ರದಲ್ಲಿ ಅಭಿನಯಿಸಿದ್ದಾರೆ. ಅನಂತರ ಅವರು ಪ್ರೇಮ ಕಾಮ ನಿರ್ದೇಶಿಸಿದರು. ಅದೇ ವರ್ಷ ಸಿ.ಆರ್.ಸಿಂಹ ಅವರು ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರ ಕಾಕನ ಕೋಟೆಯನ್ನು ನಿರ್ದೇಶಿಸಿದರು. ಬಿ.ವಿ.ಕಾರಂತ ಮತ್ತು ಗಿರೀಶ ಕಾರ್ನಾಡ ಒಟ್ಟಾಗಿ ಎಸ್.ಎಲ್.ಭೈರಪ್ಪ ಅವರ ತಬ್ಬಲಿಯು ನೀನಾದೆ ಮಗನೆ ಚಿತ್ರ ನಿರ್ದೇಶಿಸಿದರು. ಮತ್ತೊಬ್ಬ ಗಮನ ಸೆಳೆವ ಚಿಂತನಶೀಲ ನಿರ್ದೇಶಕ ಎಂ.ಎಸ್.ಸತ್ಯು ಅನಂತಮೂರ್ತಿಯವರ ಕಾದಂಬರಿ ಆಧರಿಸಿ ಬರ ನಿರ್ದೇಶಿಸಿದರು.

1978ರಲ್ಲಿ ಹೊಸ ಅಲೆಯಲ್ಲಿ ಕಾಣಿಸಿಕೊಂಡ ಮತ್ತೊಬ್ಬ ನಿರ್ದೇಶಕ ಬರಗೂರು ರಾಮಚಂದ್ರಪ್ಪ (ನೋಡಿ). ಮೈತ್ರಿ ಆರ್ಟ್ಸ್ ಮೂಲಕ ತಮ್ಮದೇ ಆದ ಒಂದು ಊರಿನ ಕತೆ ನಿರ್ದೇಶಿಸಿದರು. ಪಂಚಾಯ್ತಿಯಲ್ಲಿ ಸ್ಥಾನ ಗಿಟ್ಟಿಸಲು ಆ ಊರಿನ ವಿವಿಧ ಜಾತಿಗಳಿಗೆ ಸೇರಿದವರು ಮಾಡುವ ಪ್ರಯತ್ನಗಳು, ಅಲ್ಲಿನ ಮುಖಂಡರ ಚಾಣಾಕ್ಷತನ, ಭದ್ರತೆಗಾಗಿ ಸೆಣಸುವ ವ್ಯವಸ್ಥೆಯ ಕ್ರೌರ್ಯ ಹಾಗೂ ಶೋಷಣೆಯ ವಿವಿಧ ಮುಖಗಳತ್ತ ಹೆಣೆದ ಕಥೆಯಿದು. 1978ರ ಸಾಲಿನ ಶ್ರೇಷ್ಠಕಥೆ ಹಾಗೂ ಸಂಭಾಷಣೆ ರಚನೆಗಾಗಿ ಬರಗೂರು ರಾಮಚಂದ್ರಪ್ಪ ಪ್ರಶಸ್ತಿ ಪಡೆದರು. ಅನಂತರ ಇವರು ತಯಾರಿಸಿದ ಬೆಂಕಿ ಚಿತ್ರ 1983-84ರ ಸಾಲಿನಲ್ಲಿ ದ್ವಿತೀಯ ಅತ್ಯುತ್ತಮ ಚಿತ್ರ ಪ್ರಶಸ್ತಿಗಳಿಸಿತು. ಸೂರ್ಯ ಇವರು ನಿರ್ದೇಶಿಸಿದ ಇನ್ನೊಂದು ಚಿತ್ರ. ಮೂರೂ ಚಿತ್ರಗಳು ಪ್ರಶಸ್ತಿ ಪಡೆದಿದ್ದು ಬರಗೂರರು ಚಿಂತನೆ ಹಾಗೂ ವೈಚಾರಿಕ ಚಿತ್ರಗಳನ್ನು ನೀಡುವ ನಿರ್ದೇಶಕರೆನಿಸಿದ್ದಾರೆ. ಇತ್ತೀಚಿನ ಚಿತ್ರ ಕರಡೀಪುರ (1997). ವಾಣಿಜ್ಯಾತ್ಮಕ ಚಿತ್ರಗಳ ಸಾಲಿನಲ್ಲಿ ಬರಗೂರು ಅವರು ನಿರ್ದೇಶಿಸಿದ ಹಗಲು ವೇಷ (2000) ಗಮನಾರ್ಹ ಚಿತ್ರ. ಗುಡ್ಡಗಾಡು ಜನಾಂಗವೊಂದರ ಕಥೆ ಕಮರ್ಷಿಯಲ್ ತೆರೆಗೆ ಮೊದಲಬಾರಿಗೆ ಪ್ರವೇಶಿಸಿದ್ದು ಹೀಗೆ. ಕ್ಷಾಮ ಬರಗೂರರ ಮತ್ತೊಂದು ಚಿತ್ರ. ಎಂ.ಎಸ್.ಸತ್ಯು ಅವರ ವಿಡಂಬನಾತ್ಮಕ ಚಿತ್ರ ಚಿತೆಗೂ ಚಿಂತೆ ಪಿ.ಎ.ಶ್ರೀನಿವಾಸ್ ಸ್ಪಂದನ ಚಿತ್ರವನ್ನು ನಿರ್ದೇಶಿಸಿದರು. ಗಿರೀಶ ಕಾರ್ನಾಡ ಐತಿಹಾಸಿಕ ಹಿನ್ನೆಲೆಯ ಕಥೆಯುಳ್ಳ ಒಂದಾನೊಂದು ಕಾಲದಲ್ಲಿ ನಿರ್ದೇಶಿಸಿದರು. ಅನಂತರ ಕುವೆಂಪು ಅವರ ಕಾದಂಬರಿಯಾಧಾರಿತ ಕಾನೂರು ಹೆಗ್ಗಡತಿಯನ್ನು (2000) ನಿರ್ದೇಶಿಸಿದರು. ಂ.ಎಸ್.ಸತ್ಯು ತಮ್ಮದೇ ಆದ ಶೈಲಿಯ ಮೂಲಕ ಹೆಸರಾಗಿದ್ದಾರೆ. ಅವರು ನಿರ್ದೇಶಿಸಿದ ಬರ, ಕನ್ನೇಶ್ವರರಾಮ, ಚಿತೆಗೂ ಚಿಂತೆ, ಹಾಗೂ ಗಳಿಗೆ ಚಿತ್ರಗಳು ವಿಭಿನ್ನವಾಗಿವೆ. ಟಿ.ಎಸ್.ರಂಗಾ ಗೀಜಗನ ಗೂಡು ಚಿತ್ರದಿಂದ (1978) ಭರವಸೆ ಹುಟ್ಟಿಸಿದರು. ಅನಂತರ



ಸಾವಿತ್ರಿ (1980) ನಿರ್ದೇಶಿಸಿದರು. ರಂಗಭೂಮಿಯಲ್ಲಿ ಸಕ್ರಿಯರಾಗಿದ್ದ ಪ್ರೇಮಾ ಕಾರಂತ್ (ನೋಡಿ), ಎಂ.ಕೆ.ಇಂದಿರಾ ಅವರ ಫಣಿಯಮ್ಮ ಕಾದಂಬರಿಯನ್ನು ಚಿತ್ರೀಕರಿಸಿದರು (1983). ಹೊಸ ಅಲೆಯ ಬೆಳವಣಿಗೆಯಲ್ಲಿ ಚಲನಚಿತ್ರ ನಿರ್ದೇಶನಕ್ಕೆ ಬಂದ ಮೊದಲ ಮಹಿಳೆ ಪ್ರೇಮಾ ಕಾರಂತ್. 1981ರಲ್ಲಿ ಗ್ರಹಣ ಚಿತ್ರದ ಮೂಲಕ ಹೊಸ ಅಲೆಯಿಂದ ಪ್ರಭಾವಗೊಂಡು ಬಂದ ಟಿ.ಎಸ್.ನಾಗಾಭರಣ (ನೋಡಿ) ಭರವಸೆಯ ನಿರ್ದೇಶಕರೂ ಹೌದು. ಅನಂತರ ಹೊಸ ಅಲೆ ಚಿತ್ರಗಳಿಂದಲೇ ಚಿತ್ರ ನಿರ್ದೇಶನ ಮಾಡದಿದ್ದರೂ ನಾಗಾಭರಣರು ಮೈಸೂರು ಮಲ್ಲಿಗೆ, ಬ್ಯಾಂಕರ್ ಮಾರ್ಗಯ್ಯ, ಚಿನ್ನಾರಿ ಮುತ್ತ ಚಿತ್ರಗಳ ಮೂಲಕ ಪರ್ಯಾಯ ಚಿತ್ರ ಪರಂಪರೆಗೆ ಕಾರಣರಾದರು. 1979ರಲ್ಲಿ ತಮ್ಮದೇ ಕಥೆ ಆಧರಿಸಿ ಕಾಡು ಕುದುರೆ ಚಿತ್ರ ನಿರ್ಮಿಸಿ ನಿರ್ದೇಶಕರಾಗಿ ಪ್ರವೇಶಿಸಿದ ನಾಟಕಕಾರ ಚಂದ್ರಶೇಖರ ಕಂಬಾರ (ನೋಡಿ) ಅವರದೇ ಆದ ಶೈಲಿಯ ಮೂಲಕ ಗಮನ ಸೆಳೆದರು. ಈ ಚಿತ್ರದ ಗಾಯನಕ್ಕಾಗಿ ಶಿವಮೊಗ್ಗ ಸುಬ್ಬಣ್ಣ ಅವರು ಶ್ರೇಷ್ಠ ಗಾಯಕನಾಗಿ ರಾಷ್ಟ್ರ ಪ್ರಶಸ್ತಿ ಪಡೆದರು. ಚಂದ್ರಶೇಖರ ಕಂಬಾರರು ಸಂಗೀತಾ ಕಿರು ಚಿತ್ರವನ್ನೂ ನಿರ್ದೇಶಿಸಿದರು (1981).

ಕುಬಿ ಮತ್ತು ಇಯಾಲ ಮೂಲಕ ಸದಾನಂದ ಸುವರ್ಣ, ಅವಸ್ಥೆ ಮೂಲಕ ಕೃಷ್ಣ ಮಾಸಡಿ, ಕೆಂಡದ ಮಳೆ ಮೂಲಕ ಬಿ.ಎಸ್. ಗೌರೀಶಂಕರ್ ಇವರುಗಳೆಲ್ಲಾ ಈ ನಿಟ್ಟಿನಲ್ಲಿ ಪ್ರಯತ್ನ ನಡೆಸಿದ್ದಾರೆ. ಕವಿತಾ ಲಂಕೇಶ್ (ದೇವೀರಿ), ಪಿ.ಶೇಷಾದ್ರಿ (ಮುನ್ನುಡಿ, ಅತಿಥಿ), ನಾಗಾಭರಣ (ನೀಲಾ, ಸಿಂಗಾರವ್ವ) ಮೊದಲಾದವರೆಲ್ಲಾ ತಮ್ಮ ಚಿತ್ರಗಳನ್ನು ಹೊಸ ಅಲೆ ಎಂದು ಹೇಳಿಕೊಳ್ಳುವುದಿಲ್ಲ. ಈ ಬಗೆಯ ಚಿತ್ರಗಳನ್ನು ಈಗ ಪರ್ಯಾಯ ಚಿತ್ರಗಳು ಎಂದು ಕರೆಯಲಾಗುತ್ತದೆ. ಆದರೂ ಹೊಸ ಅಲೆ ಎಂಬುದು ಕರ್ನಾಟಕದಲ್ಲಿ ಒಂದು ನಿರಂತರ ಪ್ರಕ್ರಿಯೆಯಾಗಿ ಇನ್ನೂ ಬೆಳೆಯಲಿಲ್ಲ. ವಾಣಿಜ್ಯ ಚಿತ್ರಗಳಿಗಿಂತ ತೀರಾ ಭಿನ್ನವಾದ ವಸ್ತು, ಭಿನ್ನ ನಿರೂಪಣೆ ಇರುವ ಇಂತಹ ಚಿತ್ರಗಳಿಗೆ ಪ್ರತ್ಯೇಕ ಪ್ರೇಕ್ಷಕವರ್ಗ ನಿರ್ಮಿಸುವುದು ಸಾಧ್ಯವಾಗದೆ ಹೋಗಿದೆ.



ಫಣಿಯಮ್ಮ ಚಿತ್ರದ ಒಂದು ದೃಶ್ಯ

ನಿರ್ಮಾಪಕ ನಿರ್ದೇಶಕ ಕ್ಷೀರಸಾಗರ ಅವರು ಕನಕಾಂಬರ (ಯಶವಂತ ಚಿತ್ತಾಲರ ಆಬೋಲಿನ ಕಥೆ ಆಧಾರಿತ) ವರ್ಣಚಿತ್ರವನ್ನು ಎಂಟೂವರೆ ದಿನಗಳಲ್ಲಿ ಸಂಪೂರ್ಣ ಹೊರಾಂಗಣ ಚಿತ್ರೀಕರಣದಲ್ಲಿಯೇ ಮುಗಿಸಿ ದಾಖಲೆ ಸ್ಥಾಪಿಸಿದ್ದಾರೆ. ದಿನೇಶ್ ಬಾಬು ತಡೆರಹಿತವಾಗಿ ನಲವತ್ತು ಗಂಟೆಗಳ ಕಾಲ ಚಿತ್ರೀಕರಿಸಿ ದಾಖಲೆ ಮಾಡಿದ್ದಾರೆ.

1982ರಲ್ಲಿ ಸಾಹಸ ಸಿಂಹ ಕನ್ನಡ ಚಿತ್ರರಂಗದಲ್ಲಿ ಮತ್ತೊಂದು ರೀತಿಯ ದಾಖಲೆ ಸೃಷ್ಟಿಸಿದ ಸಿನಿಮಾ. ಅದುವರೆಗೆ ಏಕತಾನತೆಯ ಅಭಿನಯದಲ್ಲಿದ್ದ ವಿಷ್ಣುವರ್ಧನ್ ತಾರಾ ಇಮೇಜಿಗೆ ಹೊಸ ತಿರುವು ನೀಡಿದ ಚಿತ್ರವೂ ಇದಾಯಿತು. ಜೋಸೈಮನ್ ನಿರ್ದೇಶನದ ಈ ಚಿತ್ರ ಹೊಸ ಬಗೆಯ ಸಾಹಸ ಸಂಯೋಜನೆಯಿಂದಾಗಿ ಯುವಜನರನ್ನು ಆಕರ್ಷಿಸಿ ಮುಂದೆ ಅದೇ ರೀತಿಯ ಚಿತ್ರಗಳ ಪರಂಪರೆಗೆ ಕಾರಣವಾಯಿತು. ಈ ಚಿತ್ರದ ಹೆಸರಿನ ಮಾದರಿಯಲ್ಲೇ ಹಲವಾರು ಚಿತ್ರಗಳು ಬರುವಂತಾಯಿತು.



ಒಂದಾನೊಂದು ಕಾಲದಲ್ಲಿ ಚಿತ್ರದ ಒಂದು ದೃಶ್ಯದಲ್ಲಿ ಶಂಕರನಾಗ್

ಮುಂದಾಕಿನಿ ಚಿತ್ರ ಪ್ರೈವೇಟ್ ಲಿ ನವರು ಮೂಕ ಚಿತ್ರಣದ ಪುಷ್ಪಕ ವಿಮಾನ ತಯಾರಿಸಿದರು (1987). ಸಿಂಗೀತಂ ಶ್ರೀನಿವಾಸರಾವ್ ನಿರ್ದೇಶಿಸಿದ ಈ ಚಿತ್ರದಲ್ಲಿ ಕಮಲಹಾಸನ್, ಅಮಲಾ, ಲೋಕನಾಥ್, ಟೀನೂ ಆನಂದ್, ಪ್ರತಾಪ್ ಪೋತನ್, ರಮ್ಯ, ಪಿ.ಎಲ್.ನಾರಾಯಣ್ ಮೊದಲಾದವರು ಅಭಿನಯಿಸಿದ್ದರು. ನಟರು ಬಹುತೇಕ ತಮಿಳು, ಹಿಂದಿ ಭಾಷೆಯವರು. ನಿರ್ದೇಶಕರು ತಮಿಳು ಚಿತ್ರರಂಗದಿಂದ ಬಂದವರು. ನಿರ್ಮಾಪಕರು ಮಾತ್ರ ಕನ್ನಡಿಗರು. 1933ರಲ್ಲಿ ಮುಗಿದು ಹೋಗಿದ್ದ ಮೂಕಿ ಯುಗವನ್ನು ಈ ಚಿತ್ರ ನೆನಪಿಸಿತು.

ಕನ್ನಡ ಚಲನಚಿತ್ರಗಳಿಗೆ ಗೌರವ ತಂದ ಈ ಚಿತ್ರಗಳು ಕನ್ನಡ ವಾಣಿಜ್ಯ ದೃಷ್ಟಿಯ ಚಿತ್ರಗಳ ಮೇಲೂ ಪ್ರಭಾವ ಬೀರಿವೆ. ಈ ಚಿತ್ರಗಳ ವಿಶೇಷತೆ ಎಂದರೆ ತಾರಾವೌಲ್ಯ ಇಲ್ಲದಿರುವುವಿಕೆ, ಪಾತ್ರಕ್ಕೆ ತಕ್ಕ ಕಲಾವಿದರನ್ನು ಆರಿಸುವ ಪ್ರವೃತ್ತಿ, ಹಾಡಿಲ್ಲದ ಚಿತ್ರಗಳ ತಯಾರಿಕೆ, ಅದ್ದೂರಿಯಿಲ್ಲದ ಸೆಟ್‌ಗಳು, ಸಾಮಾನ್ಯ ಉಡುಗೆತೊಡುಗೆ ಹಾಗೂ ಮೇಕಪ್, ಅತಿ ಕಡಿಮೆ ಬಂಡವಾಳ, ಸ್ಟುಡಿಯೋ ಪ್ರವೇಶಿಸದೆ ಕಥೆಗೆ ಅನುಗುಣವಾದ ಸ್ಥಳಗಳಲ್ಲಿಯೇ ಚಿತ್ರೀಕರಣ ಮಾಡುವ ಪ್ರಯತ್ನಗಳು ನಡೆದಿವೆ. ಈ ಚಿತ್ರಗಳು ಕನ್ನಡ ಚಿತ್ರರಂಗದ ಮೇಲೆ ಮಾಡಿರುವ ಪ್ರಭಾವ ಅಪಾರವಾದುದು. ರಾಷ್ಟ್ರಮಟ್ಟದ ಪ್ರಶಸ್ತಿಗಳನ್ನು ಕನ್ನಡಕ್ಕೆ ತಂದು ಕೊಟ್ಟ ಚಿತ್ರಗಳೆಲ್ಲ ಈ ವಲಯಕ್ಕೆ ಸೇರಿದವು ಎನ್ನುವುದು ಪ್ರಮುಖ ಅಂಶ.

ಕರ್ನಾಟಕ ಸರ್ಕಾರದ ವಾರ್ತಾ ಇಲಾಖೆ ಸುದ್ದಿಚಿತ್ರಗಳನ್ನೂ ಸಾಕ್ಷ್ಯಚಿತ್ರಗಳನ್ನೂ ನಿರ್ಮಿಸುತ್ತಿದೆ. ಕರ್ನಾಟಕದ ಹಿರಿಯ ಕಲಾವಿದರು, ಸಾಹಿತಿಗಳು ಮತ್ತು ಪ್ರಖ್ಯಾತ ವ್ಯಕ್ತಿಗಳನ್ನು ಕುರಿತ ಸಾಕ್ಷ್ಯಚಿತ್ರಗಳನ್ನು ತಯಾರಿಸುವ ದೊಡ್ಡ ಯೋಜನೆ ಇದೆ. ಈಗಾಗಲೇ ಡಿ.ವಿ.ಗುಂಡಪ್ಪ, ಕುವೆಂಪು, ದ.ರಾ.ಬೇಂದ್ರೆ, ಗುಬ್ಬಿ ವೀರಣ್ಣ, ಡಾ.ಮೋದಿ ಮೊದಲಾದವರ ಬಗ್ಗೆ ಸಾಕ್ಷ್ಯಚಿತ್ರಗಳು ತಯಾರಾಗಿವೆ. ಈ ಸಾಕ್ಷ್ಯಚಿತ್ರಗಳ ನಿರ್ಮಾಪಕರೆಂದರೆ ಚದುರಂಗ, ಗಿರೀಶ ಕಾರ್ನಾಡ, ಎಂ.ವಿ.ಕೃಷ್ಣಸ್ವಾಮಿ, ಎಂ.ಎಸ್.ಸತ್ಯು ಮೊದಲಾದವರು. ಬೆಂಗಳೂರಿನ ಖಾಸಗಿ ಸ್ಟುಡಿಯೋಗಳಲ್ಲಿ ಹಾಗೂ ಸರ್ಕಾರಿ ಪಾಲಿಟೆಕ್ನಿಕ್ ಶಾಲೆಯಲ್ಲಿ ಸಾಕ್ಷ್ಯಚಿತ್ರ ಹಾಗೂ ವಾರ್ತಾಚಿತ್ರಗಳ ತಯಾರಿಕೆಗೆ ಅನುಕೂಲ ಸಾಧನೆ ಸೌಲಭ್ಯಗಳಿವೆ. ಕೇಂದ್ರ ಸರ್ಕಾರದ ವಾರ್ತಾ ಮತ್ತು ಪ್ರಚಾರ ಸಚಿವಾಲಯಕ್ಕೆ ಸೇರಿದ ಫಿಲಂ ಡಿವಿಷನ್ ಕೂಡ ಸುದ್ದಿ ಚಿತ್ರಗಳನ್ನು, ಸಾಕ್ಷ್ಯಚಿತ್ರಗಳನ್ನು ನಿರ್ಮಿಸುತ್ತಿದೆ. ಕನ್ನಡ ವ್ಯಾಖ್ಯಾನಸಹಿತ

ಅವು ಕರ್ನಾಟಕದಲ್ಲಿ ಬಿಡುಗಡೆಯಾಗುತ್ತಿವೆ. ಪ್ರತಿಯೊಂದು ಚಿತ್ರ ಮಂದಿರವೂ ಪ್ರತಿಯೊಂದು ಪ್ರದರ್ಶನದಲ್ಲಿಯೂ ಇಂಥ ಚಿತ್ರಗಳನ್ನು ಪ್ರದರ್ಶಿಸಬೇಕೆಂಬ ಕಡ್ಡಾಯ ಕಾನೂನಿದೆ. ಫಿಲಂ ಡಿವಿಷನ್ ತನ್ನ ಸ್ವಂತ ಉತ್ಪಾದನ ಹಾಗೂ ವಿತರಣ ಕೇಂದ್ರಗಳನ್ನು ಮುಂಬಯಿ ಹಾಗೂ ರಾಜ್ಯದ ಇತರ ಪ್ರಾದೇಶಿಕ ವಿಭಾಗಗಳಲ್ಲಿ ಇಟ್ಟುಕೊಂಡಿದೆ.

ಭಾರತೀಯ ಚಲನಚಿತ್ರಗಳಲ್ಲಿ ಎದ್ದುಕಾಣುವ ಜಗತ್ತಿನ ಇತರ ಯಾವ ಚಿತ್ರ ಕ್ಷೇತ್ರದಲ್ಲೂ ಇರದ ಅಪೂರ್ವ ವೈಶಿಷ್ಟ್ಯವೆಂದರೆ ಚಿತ್ರಗೀತೆಗಳು. ಇವು ಚಲನಚಿತ್ರಗಳ ಅನಿವಾರ್ಯ ಅಂಶವೇ ಆಗಿದ್ದರೂ ಅವುಗಳಿಂದ ಹೊರತಾಗಿ ಪ್ರತ್ಯೇಕವಾಗಿ ಮನರಂಜನೆ ಕೊಡುವಂಥವು. ಕನ್ನಡ ಚಿತ್ರಗೀತೆಗಳು ಅಪಾರ ಜನಪ್ರಿಯತೆ ಗಳಿಸಿವೆ. ಕಣಗಾಲ್ ಪ್ರಭಾಕರಶಾಸ್ತ್ರಿ, ಕು.ರಾ.ಸೀತಾರಾಮ ಶಾಸ್ತ್ರಿ, ಸೋರಟ್ ಅಶ್ವತ್, ಹುಣಸೂರು ಕೃಷ್ಣಮೂರ್ತಿ, ಚಿ.ಉದಯಶಂಕರ್, ವಿಜಯನಾರಸಿಂಹ ಹಾಗೂ ಆರ್.ಎನ್.ಜಯಗೋಪಾಲ್, ದೊಡ್ಡರಂಗೇಗೌಡ, ಹಂಸಲೇಖ, ಮೊದಲಾದವರು ಪ್ರಮುಖ ಚಿತ್ರಸಾಹಿತಿಗಳು. ಅ.ನ.ಕೃ., ತ.ರಾ.ಸು., ಗಿರೀಶ ಕಾರ್ನಾಡ, ಯು.ಆರ್.ಅನಂತಮೂರ್ತಿ, ಶಿವರಾಮ ಕಾರಂತ, ಚದುರಂಗ, ನವರತ್ನರಾಂ, ಬೀಚಿ, ಬರಗೂರು ರಾಮಚಂದ್ರಪ್ಪ ಮೊದಲಾದ ಖ್ಯಾತಸಾಹಿತಿಗಳೂ ಚಿತ್ರಸಾಹಿತ್ಯ ರಚಿಸಿದ್ದಾರೆ. ಕನ್ನಡ ಕವಿಗಳಾದ ಕುವೆಂಪು, ದ.ರಾ.ಬೇಂದ್ರೆ, ಕೆ.ಎಸ್.ನರಸಿಂಹಸ್ವಾಮಿ, ಜಿ.ಎಸ್.ಶಿವರುದ್ರಪ್ಪ, ಗೋಪಾಲಕೃಷ್ಣ ಅಡಿಗ, ಲಕ್ಷ್ಮೀನಾರಾಯಣ ಭಟ್ಟ, ನಿಸಾರ್ ಅಹಮದ್, ಬಿ.ಆರ್.ಲಕ್ಷ್ಮಣರಾವ್ ಮೊದಲಾದವರ ಕವನಗಳನ್ನು ಚಿತ್ರಗೀತೆಗಳನ್ನಾಗಿ ಸಿರುವುದೂ ಉಂಟು. ಕನ್ನಡದ ಹೆಸರಾಂತ ಹಿನ್ನೆಲೆ ಗಾಯಕರೆಂದರೆ ಪಿ.ಬಿ.ಶ್ರೀನಿವಾಸ್, ಎಸ್.ಪಿ.ಬಾಲಸುಬ್ರಹ್ಮಣ್ಯಂ, ಪಿ.ಸುಶೀಲ, ಎಸ್.ಜಾನಕಿ, ಪಿ.ಲೀಲ, ವಾಣಿ ಜಯರಾಂ, ಬಿ.ಕೆ.ಸುಮಿತ್ರ, ಕಸ್ತೂರಿ ಶಂಕರ್, ಬೆಂಗಳೂರು ಲತಾ, ಮಂಜುಳ ಗುರುರಾಜ್ ಮೊದಲಾದವರು. ನಟ ರಾಜಕುಮಾರ್ ಗಾಯಕನಾಗಿಯೂ ಅಪಾರ ಜನಪ್ರಿಯತೆ ಗಳಿಸಿದ್ದಾರೆ. ಮಹಿಷಾಸುರ ಮರ್ದಿನಿಯಲ್ಲಿಯೇ ಸ್ವತಃ ಹಾಡಿರುವ ರಾಜಕುಮಾರ್ ಸಂಪತ್ತಿಗೆ ಸವಾಲ್ ಚಿತ್ರದಲ್ಲಿನ ಹಾಡಿನ ಮೂಲಕ ಗಾಯಕರಾಗಿ ಪ್ರಸಿದ್ಧಿಗೆ ಬಂದರು. ನಿರ್ದೇಶಕ ರವಿಯವರೂ ಹಾಡಿದ್ದಾರೆ. ಪ್ರಸಿದ್ಧ ಸಂಗೀತ ವಿದ್ವಾಂಸರಾದ ಬಾಲಮುರಳಿ ಕೃಷ್ಣ, ಸುಬ್ಬುಲಕ್ಷ್ಮೀ, ಸೀರ್ಕಾಳಿ ಗೋವಿಂದರಾಜನ್, ಭೀಮಸೇನ ಜೋಶಿ ಮೊದಲಾದವರು ಕನ್ನಡ ಚಿತ್ರಗಳಿಗೆ ಕಂಠವಿತ್ತಿದ್ದಾರೆ. ಅಲ್ಲದೆ ಹಿಂದಿಯ ಖ್ಯಾತ ಗಾಯಕಿಯಾದ ಲತಾ ಮಂಗೇಶ್ಕರ್, ಗಾಯಕರಾದ ಮನ್ನಾಡೆ, ಕಿಶೋರ್ ಕುಮಾರ್ ಹಾಗೂ ಮಹಮದ್ ರಫಿ ಕೂಡ ಕನ್ನಡ ಚಿತ್ರಗಳಲ್ಲಿ ಹಾಡಿರುವುದುಂಟು.

ತೆರೆಯ ಮರೆಯಲ್ಲಿದ್ದು ಚಿತ್ರಗಳ ಮಹತ್ತಿಗೆ ಕಾರಣವಾಗುವ ತಾಂತ್ರಿಕ ವರ್ಗದವರಲ್ಲಿ ಛಾಯಾಗ್ರಾಹಕರು ಪ್ರಮುಖರಾದವರು. ರಾಜಾರಾಂ, ಶ್ರೀಕಾಂತ್, ಆರ್.ಎನ್. ಕೃಷ್ಣಪ್ರಸಾದ್, ಚಿಟ್ಟಿಬಾಬು ಮೊದಲಾದ ಹೆಸರಾಂತ ಛಾಯಾಗ್ರಾಹಕರಲ್ಲದೆ, ಟಾಂಕೋವನ್ (ಸಂಸ್ಕಾರ), ಎಂ.ಎಸ್.ಷರೀಫ್ (ವಂಶವೃಕ್ಷ), ಗೋವಿಂದ ನಿಹಲಾನಿ (ಕಾಡು), ನಿಮಾಯ್ ಘೋಷ್ (ಹಂಸಗೀತೆ), ಹಾಗೂ ಎಸ್.ರಾಮಚಂದ್ರ (ಚೋಮನ ದುಡಿ, ಪಲ್ಲವಿ, ಕಂಕಣ), ಬಿ.ಎಸ್.ಹರಿದಾಸ್ (ಕಥಾಸಂಗಮ), ಮೊದಲಾದ ನವ್ಯ ಛಾಯಾಗ್ರಾಹಕರೂ ಕನ್ನಡದ ಚಿತ್ರಗಳ ಸೊಗಸಿಗೆ ಕಾರಣವಾಗಿದ್ದಾರೆ.

ಕನ್ನಡ ಚಲನಚಿತ್ರರಂಗ 70ರ ದಶಕದ ಅನಂತರ ಅಗಾಧ ಮುನ್ನಡೆಯನ್ನು ಸಾಧಿಸಿದೆ. ಪ್ರಾರಂಭದ ದಿನಗಳಲ್ಲಿ ಇತರ ಭಾಷಾಚಿತ್ರಗಳೊಡನೆ ಸಮಸ್ಕಂಧವಾಗಿ ನಿಲ್ಲಲೂ ಕಷ್ಟಪಡುತ್ತಿದ್ದರೆ 60ರ ದಶಕದಲ್ಲಿ ಕರ್ನಾಟಕದಲ್ಲಿ ವಿಶೇಷವಾಗಿ ಜನಪ್ರಿಯತೆಯನ್ನೂ ಸ್ವಂತಿಕೆಯನ್ನೂ ಸಾಧಿಸಿಕೊಂಡು ಇತ್ತೀಚೆಗೆ ಕರ್ನಾಟಕದಲ್ಲಷ್ಟೇ ಅಲ್ಲದೆ ಹೊರದೇಶಗಳಲ್ಲೂ ಮನ್ನಣೆ ಗಳಿಸಲಾರಂಭಿಸಿದೆ. ಅದರಲ್ಲೂ ಇತ್ತೀಚಿನ ಕೆಲವು ಚಿತ್ರಗಳು ಬರ್ಲಿನ್, ವೆನಿಸ್, ತಾಷ್ಕೆಂಟ್, ಕಾರ್ಲೋವಾರಿ ಮೊದಲಾದೆಡೆಗಳಲ್ಲಿ ನಡೆದ ಅಂತಾರಾಷ್ಟ್ರೀಯ ಚಿತ್ರೋತ್ಸವಗಳಿಗೂ ಪ್ರವೇಶಿಸಿದವು. 1975ರ ದೆಹಲಿಯ 5ನೆಯ ಅಂತಾರಾಷ್ಟ್ರೀಯ ಚಿತ್ರೋತ್ಸವದಲ್ಲಿ ಕಾಡುಚಿತ್ರಕ್ಕೆ ಅಂತಾರಾಷ್ಟ್ರೀಯ ವಿಮರ್ಶಕ ಪ್ರಶಸ್ತಿ ಲಭಿಸಿತು. ಅಲ್ಲದೆ ಸಂಸ್ಕಾರ, ಕಾಡು ಮತ್ತು ಹಂಸಗೀತೆಗಳು ಅಂತಾರಾಷ್ಟ್ರೀಯ ಮಾರುಕಟ್ಟೆಗೆ ಮಾರಾಟವಾದವು. ಕನ್ನಡ ಚಿತ್ರರಂಗದ ರಾಜಕುಮಾರ್ ಅವರಿಗೆ ಪದ್ಮಭೂಷಣ, ಬಿ.ಸರೋಜಾದೇವಿ ಮತ್ತು ಆರ್.ನಾಗೇಂದ್ರರಾವ್ ಇವರೀರ್ವರಿಗೆ ಪದ್ಮಶ್ರೀ ಪ್ರಶಸ್ತಿ ಬಂದು ರಾಷ್ಟ್ರ ಮಟ್ಟದ ಗೌರವ ಸಂದಿದೆ.

ಕನ್ನಡದಲ್ಲಿ ಬೆಳಗಿದ ಪ್ರತಿಭೆ ಹಲವು ಇತರ ಭಾಷಾಚಿತ್ರಗಳಲ್ಲಿಯೂ ಹರಿದ ಪ್ರಸಂಗಗಳು ಅನೇಕ. ಬಿ.ಸರೋಜಾದೇವಿ, ಜಯಂತಿ, ಭಾರತಿ, ಚಂದ್ರಕಲಾ ಮೊದಲಾದ ನಟಿಯರೂ ಕಲ್ಯಾಣಕುಮಾರ್, ಉದಯ ಕುಮಾರ್, ವಿಷ್ಣುವರ್ಧನ್, ಅನಂತನಾಗ್, ಅರ್ಜುನ್‌ಸರ್ಜಾ, ಸುನೀಲ್ ಶೆಟ್ಟಿ, ಲೀನಾ ಚಂದಾವರ್ಕರ್, ಲೋಕೇಶ್, ಪ್ರಕಾಶರೈ, ರಜನೀಕಾಂತ ಮೊದಲಾದ ನಟರೂ ಇತರ ಭಾಷಾ ಚಿತ್ರಗಳಲ್ಲಿಯೂ ಅಭಿನಯಿಸಿದ್ದಾರೆ. ಹಾಗೆಯೇ ತಮಿಳಿನ ನಟ ಶಿವಾಜಿ ಗಣೇಶನ್ (ಮಕ್ಕಳ ರಾಜ್ಯ, ಸ್ಕೂಲ್ ಮಾಸ್ಟರ್), ಹಿಂದಿಯ ಪೃಥ್ವಿರಾಜ ಕಪೂರ್ (ಸಾಕ್ಷಾತ್ಕಾರ), ಅಮರೀಶಪುರಿ (ಕಾಡು), ಮಲೆಯಾಳಂನ ಲಕ್ಷ್ಮಿ (ನಾ ನಿನ್ನ ಮರೆಯಲಾರೆ), ಮೊದಲಾದವರೂ ಮೂಲತಃ ಕನ್ನಡಿಗರಾದ ಶಿಲ್ಪಾಶೆಟ್ಟಿ, ವಿಶ್ವಸುಂದರಿ ಐಶ್ವರ್ಯ ರೈ ಹಲವು ಹಿಂದಿ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಕಮಲ ಹಾಸನ್, ಕೂಡ ಕನ್ನಡದಲ್ಲಿ ನಟಿಸಿದ್ದಾರೆ.



ಕನ್ನೇಶ್ವರರಾಮ ಚಿತ್ರದಲ್ಲಿ ಅನಂತನಾಗ್, ಶಬಾನಾ ಅಜ್ಮಿ

ಹಲವು ಕನ್ನಡ ಚಲನಚಿತ್ರಗಳು ಕೇಂದ್ರ ಸರ್ಕಾರ ನೀಡುವ ಅಖಿಲ ಭಾರತ ಮಟ್ಟದ ಪ್ರಶಸ್ತಿಗಳನ್ನೂ ಪ್ರಾದೇಶಿಕ ಪ್ರಶಸ್ತಿಗಳನ್ನೂ ಗಳಿಸಿವೆ. ಕರ್ನಾಟಕ ರಾಜ್ಯ ಸರ್ಕಾರದಿಂದಲೂ ಹಲವು ಚಿತ್ರಗಳು ಉತ್ತಮ ಚಿತ್ರ ಪ್ರಶಸ್ತಿ ಪಡೆದಿವೆ.

**ಇತ್ತೀಚಿನ ಬೆಳವಣಿಗೆ :** 21ನೆಯ ಶತಮಾನದ ಆರಂಭದಲ್ಲಿ ಚಿತ್ರರಂಗವನ್ನು ತಂತ್ರಜ್ಞಾನ ಆಳುತ್ತಿದೆ. ಅತಿ ವೇಗವಾಗಿ ಬೆಳೆಯುತ್ತಿರುವ ಶಿಕ್ಷಣ ಪ್ರಪಂಚ ಚಿತ್ರರಂಗವನ್ನೂ ಆವರಿಸಿರುವುದು. ಸಿನಿಮಾ, ಸಂಗೀತ, ಸಿನಿಮಾದ ಒಟ್ಟಾರೆ ಓಟ, ಶಬ್ದ ಎಲ್ಲದರಿಂದ ಅನುಭವಕ್ಕೆ ಬರುತ್ತಿದೆ. ಪ್ರಪಂಚ ಸಿನಿಮಾವೇ ಈ ಪವಾಡ ಸದೃಶ ವೈಭವದ ಮೋಡಿಗೆ ಒಳಗಾಗಿರುವುದರಿಂದ ತೆರೆಯ ಮೇಲಿನ ನೆಳಲು ಬೆಳಕಿನಾಟದಲ್ಲಿ ಮತ್ತಷ್ಟು ಕ್ರಾಂತಿಯತ್ತ ಹೊಸ ಶತಮಾನ ತನ್ನನ್ನು ತಾನು ಒಡ್ಡಿಕೊಳ್ಳುತ್ತಿದೆ. ಪ್ರಪಂಚ ಸಿನಿಮಾ ಹಾದಿಯಲ್ಲಿ ಭಾರತೀಯ ಚಿತ್ರರಂಗದ ನಡೆಯಲ್ಲಿ, ಕನ್ನಡ ಚಿತ್ರರಂಗದ ಆಗು ಹೋಗುಗಳಲ್ಲಿ 1990ರಿಂದ ಸತತವಾಗಿ ಬದಲಾವಣೆಯ ಗಾಳಿ ಬೀಸಿದೆ. ಹತ್ತೇ ವರ್ಷಗಳಲ್ಲಿ ಜಾಗತಿಕ ವಲಯದಲ್ಲಿ ನಡೆದ ಕ್ಷಿಪ್ರ ಪ್ರಗತಿ, ಕನ್ನಡ ಚಿತ್ರರಂಗದ ಮೇಲೂ ಪರಿಣಾಮ ಬೀರಿದೆ. ಆರಂಭ ಹಂತದಿಂದ ಹೆಜ್ಜೆ ಹೆಜ್ಜೆಗೂ ಸವಾಲುಗಳನ್ನು ಎದುರಿಸುತ್ತಲೇ ಬಂದ ಕನ್ನಡ ಚಿತ್ರರಂಗ, 21ನೆಯ ಶತಮಾನದಿಂದ ಆರಂಭದಲ್ಲೇ ಕನ್ನಡ ಚಾನಲ್‌ಗಳು ಒಡ್ಡುತ್ತಿರುವ ಸ್ಪರ್ಧಾತ್ಮಕ ಸವಾಲನ್ನು ಎದುರಿಸಿ ನಿಲ್ಲಬೇಕಾದ, ಸವಾಲನ್ನು ಅರಗಿಸಿಕೊಳ್ಳಬೇಕಾದ ಸ್ಥಿತಿಯನ್ನು ಎದುರಿಸುತ್ತಿದೆ. ಪಕ್ಕದ ರಾಜ್ಯಗಳಾದ ತಮಿಳುನಾಡು, ಕೇರಳ ಹಾಗೂ

ಆಂಧ್ರಪ್ರದೇಶಗಳಲ್ಲಿರುವಂತಹ ವಿಶಾಲ ಮಾರುಕಟ್ಟೆಯನ್ನು ಹೊಂದಿರದ ಕನ್ನಡ ಚಿತ್ರರಂಗಕ್ಕೆ ಆರಂಭದ ದಿನಗಳಿಂದಲೂ ಇದೇ ಪ್ರಶ್ನೆ. ಕನ್ನಡ ಪ್ರದರ್ಶನ ವ್ಯವಸ್ಥೆ ಸೂಕ್ತವಾಗಿ ಬೆಳೆದೇ ಇಲ್ಲ. ಆದರೆ ತಮಿಳು, ತೆಲುಗು, ಚಿತ್ರಗಳು ಆಯಾ ರಾಜ್ಯಗಳಲ್ಲಿ ಬಿಡುಗಡೆಯಾಗುವ ದಿನದಂದೇ ಕರ್ನಾಟಕದಲ್ಲಿ ಬಿಡುಗಡೆಯಾಗುತ್ತಿವೆ. ಕನ್ನಡ ಚಿತ್ರಗಳಿಗೆ ಇದೊಂದು ಪೈಪೋಟಿ ತಪ್ಪಿದ್ದೇ ಇಲ್ಲ. ಕನ್ನಡ ಚಿತ್ರಗಳು ಈ ರೀತಿಯ ಪೈಪೋಟಿಯನ್ನೆದುರಿಸಿದರೆ, ಚಿತ್ರಮಂದಿರಗಳ ಸಮಸ್ಯೆಯೂ ಅದರೊಂದಿಗೆ ಕಂಡುಬರುತ್ತದೆ. ಅರವತ್ತರ ದಶಕದಿಂದಲೂ ಬೆಳೆದು ಬರುತ್ತಿರುವ ಈ ಸಮಸ್ಯೆಗಳಿಗೆ ಇದುವರೆಗೆ ಪರಿಹಾರ ದೊರಕಿಲ್ಲ.



ಕಾನೂರು ಹೆಗ್ಗಡಿತಿ ಚಿತ್ರದಲ್ಲಿ ಗಿರೀಶ ಕಾರ್ನಾಡ ಮತ್ತು ತಾರಾ

ಇದೆಲ್ಲದರ ನಡುವೆಯೂ ಕನ್ನಡ ಚಿತ್ರರಂಗದಲ್ಲಿ ಶ್ರೀಘ್ರಗತಿಯ ಬೆಳೆವಣಿಗೆಗಳಾಗುತ್ತಿಲ್ಲ. 1985ರಲ್ಲಿ ಕನ್ನಡ ಚಿತ್ರರಂಗಕ್ಕೆ ನುಗ್ಗಿದ ಹೊಸ ರಕ್ತದ ಮಹಾಪೂರ ಚಿತ್ರರಂಗದಲ್ಲಿ ನವಚೇತನವನ್ನು ತಂದಿತು. 2002ರ ವೇಳೆಗೆ ಅದು ಹಳತಾಗಿ ಮತ್ತೊಂದು ಪೀಳಿಗೆ ಹೊಸ ಬಗೆಯ ಚಿತ್ರಗಳ ಮೂಲಕ ಬದಲಾವಣೆಯ ಗಾಳಿಯನ್ನು ತರುತ್ತಿದೆ. ಆರಂಭದ ಹಂತದಲ್ಲಿ ಸುಬ್ಬಯ್ಯನಾಯ್ಡು, ಕೆಂಪರಾಜ್, ಇಂದುಶೇಖರ್, ಹೊನ್ನಪ್ಪ ಭಾಗವತರ್, ನಾಯಕನಟರುಗಳಾಗಿದ್ದ ಕಾಲ. 1954ರ ಅನಂತರ ರಾಜ್‌ಕುಮಾರ್, ಉದಯಕುಮಾರ್, ಕಲ್ಯಾಣ್ ಕುಮಾರ್ ಅವರುಗಳ ಕಾಲ. ಅನಂತರದ ಕೆಲ ದಿನಗಳಲ್ಲಿ ರಾಜೇಶ್, ಗಂಗಾಧರ್, ರಮೇಶ್ ಕಾಣಿಸಿಕೊಂಡರು. ಕಾಲಕ್ರಮೇಣ ಆ ಸ್ಥಾನವನ್ನು ವಿಷ್ಣುವರ್ಧನ್, ಶ್ರೀನಾಥ್, ಲೋಕೇಶ್, ಅನಂತನಾಗ್, ಅಂಬರೀಶ್, ಶಂಕರ್‌ನಾಗ್, ಪ್ರಭಾಕರ್ ವಹಿಸಿಕೊಂಡರು. ರಾಮಕೃಷ್ಣ, ಜೈಜಗದೀಶ್, ಮಾನು, ಅಶೋಕ್ ಮೊದಲಾದವರೂ ಕೆಲಕಾಲ ನಾಯಕರಾಗಿದ್ದರು. ಈ ಎಲ್ಲವನ್ನೂ ಹಿಂದಕ್ಕೆ ಹಾಕಿ ಹೊಸ ಪೀಳಿಗೆಯ ನಟರಾಗಿ ಈ ಅವಧಿಯಲ್ಲಿ ನುಗ್ಗಿದ ರವಿಚಂದ್ರನ್, ಶಿವರಾಜ್‌ಕುಮಾರ್, ರಾಘವೇಂದ್ರ ರಾಜ್‌ಕುಮಾರ್, ರಮೇಶ್, ಶ್ರೀಧರ್, ಕುಮಾರ್‌ಬಂಗಾರಪ್ಪ, ವಿನೋದ್‌ರಾಜ್, ಅಭಿಜಿತ್, ಸಾಯಿಕುಮಾರ್, ಚರಣ್‌ರಾಜ್ ಇವರೆಲ್ಲಾ ಹಲವು ವರ್ಷಗಳ ಕಾಲ ಚಿತ್ರರಂಗದಲ್ಲಿ ತಮ್ಮ ಪ್ರತಿಭೆಯನ್ನು ಮೆರೆದರು.

ಆದರೆ ಇದ್ದಕ್ಕಿದ್ದಂತೆ ಚಿತ್ರರಂಗದಲ್ಲಿ ತಾರಾವರ್ಚಸ್ಸು ಮುಗಿಯಿತು. ಹೊಸ ಮುಖಗಳ ಅವ್ಯಾಹತ ಪ್ರವೇಶ ಕನ್ನಡ ಚಿತ್ರರಂಗದಲ್ಲಾದದ್ದು ಒಂದು ಹೊಸ ಬೆಳೆವಣಿಗೆಯೇ ಆಗಿದೆ. 1981ರಲ್ಲಿಯೇ ಪ್ರೇಮಲೋಕದಲ್ಲಿ ರವಿಚಂದ್ರನ್ ಅವರು ಸೃಷ್ಟಿಸಿದ ಪ್ರೇಮಕಥೆಗಳ ಟ್ರೆಂಡ್ ಮತ್ತೆ 2001ರಲ್ಲಿ ಪುನರಾವರ್ತನೆಯಾಗುತ್ತಿದೆ. ನಾಗತಿಹಳ್ಳಿ ಚಂದ್ರಶೇಖರ್ ಅವರು ಎಲ್ಲ ಹೊಸ ಮುಖಗಳನ್ನಿಟ್ಟುಕೊಂಡು ನಿರ್ದೇಶಿಸಿದ ನನ್ನ ಪ್ರೀತಿಯ ಹುಡುಗಿ ಈ ರೀತಿಯ ದಾರಿಗೆ ಹೊಸ ನಿರ್ದೇಶಕರನ್ನು ತಳ್ಳಿತು. ಈ ಮಾರ್ಗ ಸೂಚಿಯನ್ನು ಹಿಡಿದುಕೊಂಡು ಪ್ರೇಮಕಥೆಗಳ ಪೂರವೇ ಚಿತ್ರರಂಗದಲ್ಲಿ ಹರಿದು ಬಂತು. ಹೊಸ ಮುಖಗಳೂ ಕೂಡ ಹಾಗೆಯೇ ತೇಲಿಬಂದುವು. ನಿನಗಾಗಿ, ಅಪ್ಪು (2002) ಚಿತ್ರಗಳು ಕನ್ನಡದ ಹೊಸ ಟ್ರೆಂಡ್ ಆದವು. ನಿನಗಾಗಿ ಮೂಲಕ ವಿಜಯ್ ರಾಘವೇಂದ್ರ, ಅಪ್ಪು ಮೂಲಕ ಪುನೀತ್ ರಾಜ್‌ಕುಮಾರ್ (ನೋಡಿ) ನವನಟರಾಗಿ ಬೆಳ್ಳಿತೆರೆಗೆ ಪ್ರವೇಶಿಸಿದರು. ರಾಧಿಕಾ, ರಕ್ಷಿತಾ ನವನಟಿಯರಾಗಿ ಹೊರಬಂದರು. ಸ್ಪರ್ಶ ಚಿತ್ರದ ಮೂಲಕ ಚಿತ್ರರಂಗಕ್ಕೆ ಮರು ಪ್ರವೇಶ ಪಡೆದುಕೊಂಡ ಸುದೀಪ್ ಹುಚ್ಚ, ವಾಲಿ, ಚಂದು ಹಾಗೂ ಧಮ್ ಚಿತ್ರಗಳ ಮೂಲಕ ಹೊಸ ಆ್ಯಕ್ಷನ್ ಹೀರೋ ಇಮೇಜು ಪಡೆದರು. ಮೆಜೆಸ್ಟಿಕ್ ಚಿತ್ರದ ನಾಯಕನಾಗಿದ್ದ ದರ್ಶನ್ ಮತ್ತೊಬ್ಬ ಆ್ಯಕ್ಷನ್ ಹೀರೋ ಆಗಿ ಧ್ರುವ (2002) ಚಿತ್ರದಲ್ಲಿ ತಮ್ಮ ಪ್ರತಿಭೆ ಸಾಬೀತು ಮಾಡಿದರು. ಭೂತಯ್ಯನ ಮಕ್ಕಳು ಚಿತ್ರದ ಮೂಲಕ ಸೌರವ್, 'ಚಿತ್ರ' ಚಿತ್ರದ ಮೂಲಕ ನಾಗೇಂದ್ರ ಪ್ರಸಾದ್, ರೇಖಾ ಹಾಗೂ ಚಿಟ್ಟೆಯ ಮೂಲಕ ಅನಿರುದ್ಧ, ಛಾಯಾಸಿಂಗ್, ದಿಲ್ ಮೂಲಕ ವಿನೋದ್ ಪ್ರಭಾಕರ್, ನಿನಗೋಸ್ಕರ ಮೂಲಕ ನವೀನ್ ಮಯೂರ್, ನವ ಚಿತ್ರದ ಮೂಲಕ ತಾರಕೇಶ್ ಪಟೇಲ್, ನೀಲಾ ಮೂಲಕ ಹೊರಬಂದ ಶಿವಧ್ವಜ್, ಸಿ.ಪಿ.ಯೋಗೀಶ್ವರ್, ಮೋಹನ್, ಕೋಮಲ್, ಸುನಿಲ್, ಚೈತ್ರಾ ಮೊದಲಾದ ಹೊಸ ಮುಖಗಳೆಲ್ಲಾ ಚಿತ್ರರಂಗದಲ್ಲಿ ಮಿನುಗುತ್ತಿದ್ದಾರೆ. ಅಲ್ಲದೆ ನಿರ್ದೇಶಕರಾಗಿರುವ ಎಸ್.ನಾರಾಯಣ್, ಮಹೇಂದರ್, ಶಿವಮಣಿ, ಓಂ ಪ್ರಕಾಶ್ ರಾವ್ ನಟರಾಗಿಯೂ ಕಾಣಿಸಿಕೊಳ್ಳಲಾರಂಭಿಸಿದ್ದಾರೆ. ನಿರ್ಮಾಪಕರಾಗಿರುವ ರಾಕ್‌ಲೈನ್ ವೆಂಕಟೇಶ್, (ಡಕೋಟಾ ಎಕ್ಸ್‌ಪ್ರೆಸ್), ಸಾ.ರಾ.ಗೋವಿಂದು (ದಡ್ರು ಸಾರ್ ದಡ್ರು) ಕೂಡ ನಾಯಕ ನಟರಾದ ಬೆಳೆವಣಿಗೆ 2002ರಲ್ಲಿ ನಡೆದಿದೆ.

ಹೊಸಬರ ನಡುವೆ ಹಳಬರೂ ನವೀನ ಪ್ರಯೋಗಗಳಿಗೆ ತಮ್ಮನ್ನು ಒಪ್ಪಿಕೊಳ್ಳುತ್ತಿರುವುದು ಗಮನಾರ್ಹ. ಈ ಹಂತದಲ್ಲಿ ನಿರ್ದೇಶಕರಾಗಿ, ನಿರ್ಮಾಪಕರಾಗಿ, ನಟರಾಗಿ ಮೂಡಿಬಂದ ಉಪೇಂದ್ರ ಹಲವಾರು ಪ್ರಯೋಗಗಳನ್ನು ಮಾಡಿದರು. ಎ, ಉಪೇಂದ್ರ ಹಾಗೂ ರಕ್ತ ಕಣ್ಣೀರು ಚಿತ್ರಗಳು ಭಾರೀ ಯಶಸ್ಸುಗಳಿಸಿದ್ದೇ ಅಲ್ಲದೆ ಚರ್ಚೆಗೂ ಆಹ್ವಾನ ನೀಡಿದವು. ಎಚ್.ಟು.ಓ.($H_2O$), ಸೂಪರ್ ಸ್ಟಾರ್, ನಾಗರಹಾವು ಹಾಗೂ ನಾನು ನಾನೇ, ಕುಟುಂಬ (2003), ಓಂಕಾರ, ಗೋಕರ್ಣ, ಗೌರಮ್ಮ, ನ್ಯೂಸ್ ಚಿತ್ರಗಳು ಉಪೇಂದ್ರ ನಾಯಕರಾಗಿರುವ ಇತರ ಚಿತ್ರಗಳು. ಉಪೇಂದ್ರರ ಚಿತ್ರಗಳ ಮೂಲಕ ಬೆಳಕಿಗೆ ಬಂದ ಗುರುಕಿರಣ್ ಈಗ ಜನಪ್ರಿಯ ಸಂಗೀತ ನಿರ್ದೇಶಕರಾಗಿದ್ದಾರೆ.

ವಿಷ್ಣುವರ್ಧನ ಅಭಿನಯದ ಯಜಮಾನ ಹೊಸ ಪೀಳಿಗೆಯ ಕಲಾವಿದರ ಚಿತ್ರಗಳ ನಡುವೆಯೂ ಇದುವರೆಗಿನ ಎಲ್ಲ ದಾಖಲೆಗಳನ್ನೂ ಮೀರಿ ಗಳಿಕೆಯಲ್ಲಿ ಮುನ್ನುಗ್ಗಿತು. ಅಲ್ಲದೆ ಹೊಸರೀತಿಯ ಕೌಟಂಬಿಕ ಚಿತ್ರಗಳ ಟ್ರೆಂಡನ್ನು ಸೃಷ್ಟಿಸಿತು.

ಸಿಂಗೀತಂ ಶ್ರೀನಿವಾಸರಾವ್ ನಿರ್ದೇಶನದಲ್ಲಿ ತಯಾರಾದ ಆನಂದ್ (1986) ಮೂಲಕ ಜನಪ್ರಿಯ ನಟ ರಾಜಕುಮಾರ್ ಅವರ ಪುತ್ರ

## ರಾಜ್ಯ ಪ್ರಶಸ್ತಿ ಪಡೆದ ಚಿತ್ರಗಳು

| ವರ್ಷ | ಪ್ರಶಸ್ತಿ ಪಡೆದ ಚಿತ್ರಗಳ ಸಂಖ್ಯೆ | ಚಿತ್ರದ ಹೆಸರು | | | | |
|---|---|---|---|---|---|---|
| | | ಪ್ರಥಮ | ದ್ವಿತೀಯ | ತೃತೀಯ | ಚತುರ್ಥ | ತೀರ್ಪುಗಾರರ ವಿಶೇಷ ಪ್ರಶಸ್ತಿ |
| 1966-67 | 2 | — | ನಕ್ಕರೆ ಅದೇ ಸ್ವರ್ಗ | ಸಂಧ್ಯಾರಾಗ | | |
| 1967-68 | 3 | — | ಬೆಳ್ಳಿ ಮೋಡ | 1. ಸರ್ವಮಂಗಳಾ<br>2. ಬಂಗಾರದ ಹೂವು | | |
| 1968-69 | 3 | ಹಣ್ಣೆಲೆ ಚಿಗುರಿದಾಗ | ನಮ್ಮ ಮಕ್ಕಳು | ಮಣ್ಣಿನ ಮಗ | | |
| 1969-70 | 4 | ಗೆಜ್ಜೆ ಪೂಜೆ | 1. ಉಯ್ಯಾಲೆ<br>2. ಮುಕ್ತಿ | ಎರಡು ಮುಖ | | |
| 1970-71 | 3 | ಶರಪಂಜರ | ಸಂಸ್ಕಾರ | ಕುಲಗೌರವ | | |
| 1971-72 | 4 | ವಂಶವೃಕ್ಷ | ಬಂಗಾರದ ಮನುಷ್ಯ<br>2. ಯಾವ ಜನ್ಮದ ಮೈತ್ರಿ | ಸಿಪಾಯಿರಾಮು | | |
| 1972-73 | 4 | ಸಂಕಲ್ಪ | ನಾಗರಹಾವು | ಬಿಸತ್ತಿ ಬಾಬು ( ತುಳು) | ಹೃದಯಸಂಗಮ | |
| 1973-74 | 5 | ಬೂತಯ್ಯನ ಮಗ ಅಯ್ಯು | 1. ಕಾಡು<br>2. ಮಾಡಿ ಮಡಿದವರು | ಅಬಚೂರಿನ ಪೋಸ್ಟಾಫೀಸು | ಕೋಟಿ ಚೆನ್ನಯ್ಯ ( ತುಳು) | |
| 1974-75 | 4 | ಉಪಾಸನೆ | ಕಂಕಣ | ಭಕ್ತ ಕುಂಬಾರ | ಜಾಗೃತಿ | |
| 1975-76 | 4 | ಚೋಮನ ದುಡಿ | ಹಂಸಗೀತೆ | ಪ್ರೇಮದ ಕಾಣಿಕೆ | ಕಥಾಸಂಗಮ | |
| 1976-77 | 4 | ಪಲ್ಲವಿ | ಋಷ್ಯಶೃಂಗ | ಕಾಕನಕೋಟೆ | ಋತುಗಾನ | |
| 1977-78 | 3 | ಘಟಶ್ರಾದ್ಧ | ಸ್ಪಂದನ | ಅನುರೂಪ | | |
| 1978-79 | 4 | ಗ್ರಹಣ | ಸಾವಿತ್ರಿ | ಪರಸಂಗದ ಗೆಂಡೆ ತಿಮ್ಮ | | ಚಿತೆಗೂ ಚಿಂತೆ |
| 1979-80 | 4 | ಅರಿವು | ಮಿಂಚಿನ ಓಟ | ಚಂದನದ ಗೊಂಬೆ | | ದಂಗೆಯೆದ್ದ ಮಕ್ಕಳು |
| 1980-81 | 4 | ರಂಗನಾಯಕಿ | ಮೂರು ದಾರಿಗಳು | ಸಂಗೀತ | | ಕಿತಾಪತಿ |
| 1981-82 | 4 | ಬರ | ಮುನಿಯನ ಮಾದರಿ | ಬಾಡದ ಹೂವು | | ಭಾಗ್ಯವಂತೆ (ತುಳು) |
| 1982-83 | 4 | ಹಾಲುಜೇನು | ಫಣಿಯಮ್ಮ | ಅನ್ವೇಷಣೆ | | ಶೃಂಗಾರಮಾಸ |
| 1983-84 | 2 | -- | ಬೆಂಕಿ | ನೋಡಿಸ್ವಾಮಿ ನಾವು<br>ಇರೋದು ಹೀಗೆ | | |
| 1984-85 | 4 | ಆಕ್ಸಿಡೆಂಟ್ | ಬೆಟ್ಟದ ಹೂವು | ಮರಳಿಗೂಡಿಗೆ | | ಬೆರಳ್ಗೆ ಕೊರಳ್ |
| 1985-86 | 3 | ಹೊಸನೀರು | ಧ್ರುವತಾರೆ | ಅಭಿಮಾನ | | |
| 1986-87 | 3 | ತಬರನ ಕಥೆ | ಸೂರ್ಯ | ಮಧ್ವಾಚಾರ್ಯ | | |
| 1987-88 | 3 | ಆಸ್ಫೋಟ | ಅವಸ್ಥೆ | ಕಾಡಿನ ಬೆಂಕಿ | | |
| 1988-89 | 3 | ಯಾರು ಹೊಣೆ | ಬೆಳ್ಳಿ ಬೆಳಕು | ಸಂಕ್ರಾಂತಿ | | |
| 1989-90 | 3 | ಕುಬಿ ಮತ್ತು ಇಯಾಲ | ಸಂತ ಶಿಶನಾಳ ಷರೀಫ | ಪ್ರಥಮ ಉಷಾ ಕಿರಣ | | |
| 1990-91 | 3 | ಮುತ್ತಿನ ಹಾರ | ಕ್ರಮ | ಭುಜಂಗಯ್ಯನ<br>ದಶಾವತಾರಗಳು | | |
| 1991-92 | 3 | ವೀರಪ್ಪನ್ | ಮೈಸೂರು ಮಲ್ಲಿಗೆ | ಪತಿತ ಪಾವನಿ | | |
| 1992-93 | 4 | ಜೀವನ ಚೈತ್ರ | ಆತಂಕ | ಹರಕೆಯ ಕುರಿ | | ಬಂಗಾರ್ ಪಟ್ಲೆರ್ ( ತುಳು) |
| 1993-94 | 4 | ನಿಷ್ಕರ್ಷ | ಆಕಸ್ಮಿಕ | ಶ್ | | ಹೂವು ಹಣ್ಣು |
| 1994-95 | 4 | ಗಂಗವ್ವ ಗಂಗಾಮಾಯಿ | ಅರಗಿಣಿ | ಯಾರಿಗೂ ಹೇಳ್ಬೇಡಿ | | ಕೋಟ್ರೇಶಿ ಕನಸು |
| 1995-96 | 3 | ಪಂಚಾಕ್ಷರಿ ಗವಾಯಿ | ಕ್ರೌರ್ಯ | ಬೆಳದಿಂಗಳ ಬಾಲೆ | | |
| 1996-97 | 7 | ಅಮೆರಿಕಾ ಅಮೆರಿಕಾ | ನಾಗಮಂಡಲ | ನಾಗರಿಕ | | ವ್ಯೂಹ (ಅತ್ಯುತ್ತಮ ಮಕ್ಕಳ ಚಿತ್ರ)<br>ಕರಡೀಪುರ<br>ಜನುಮದ ಜೋಡಿ, ಬೊಗ್ಸಾಣಿ<br>(ಕೊಂಕಣಿ) |
| 1997-98 | 6 | ತಾಯಿ ಸಾಹೇಬ | ಲಾಲಿ | ನೋಡುಬಾ ನಮ್ಮೂರು | | 1. ಭೂಮಿ ಗೀತ<br>2. ಮಾರಿ ಬಲೆ (ತುಳು)<br>3. ಬಾಳ್ ಪೊಲಂದತ್ (ಕೊಡವ) |
| 1998-99 | 3 | ಚೈತ್ರದ ಚಿಗುರು | ಹೂಮಳೆ | ದೋಣಿಸಾಗಲಿ | | |
| 1999-2000 | 3 | ದೇವೀರಿ | ಕಾನೂರು ಹೆಗ್ಗಡತಿ | ಚಂದ್ರಮುಖಿ ಪ್ರಾಣಸಖಿ | | |
| 2000-01 | 5 | ಮುಸ್ಸಂಜೆ | ಶಾಪ | ಕುರಿಗಳು ಸಾರ್ ಕುರಿಗಳು | | 1. ಮುನ್ನುಡಿ<br>2. ತುಡರ್ (ತುಳು) |
| 2001-02 | 5 | ದ್ವೀಪ | ಏಕಾಂಗಿ | ನೀಲಾ | | 1. ಗಂಧದ ಗೊಂಬೆ (ವಿ.ಸಾ.ಪ.ಬೀ.)<br>2. ಪುಟ್ಟಿ (ಮಕ್ಕಳ ಚಿತ್ರ) |
| 2002-03 | 5 | ಅರ್ಥ | ಕ್ಷಾಮ | ಲಾಲಿಹಾಡು | | 1. ಸೈನಿಕ<br>2. ಕಲರವ (ಅತ್ಯುತ್ತಮ ಮಕ್ಕಳ ಚಿತ್ರ) |
| 2003-04 | 3 | ಚಿಗುರಿದ ಕನಸು | ಶಾಂತಿ | ಚಂದ್ರಚಕೋರಿ | | ಪ್ರವಾಹ |

## ಅಖಿಲ ಭಾರತ ಮಟ್ಟದಲ್ಲಿ ರಾಷ್ಟ್ರಪ್ರಶಸ್ತಿ ಪಡೆದ ಚಿತ್ರಗಳು

| ವರ್ಷ | ಚಿತ್ರದ ಹೆಸರು | ಪ್ರಶಸ್ತಿ |
|---|---|---|
| 1955 | ಬೇಡರ ಕಣ್ಣಪ್ಪ | ಅರ್ಹತಾಪತ್ರ |
| 1956 | ಮಹಾಕವಿ ಕಾಳಿದಾಸ | ಅರ್ಹತಾಪತ್ರ |
| 1957 | ಭಕ್ತವಿಜಯ | ಅರ್ಹತಾಪತ್ರ |
| 1958 | ಪ್ರೇಮದ ಪುತ್ರಿ | ಅರ್ಹತಾಪತ್ರ |
| 1959 | ಸ್ಕೂಲ್ ಮಾಸ್ಟರ್ | ಅರ್ಹತಾಪತ್ರ<br>ರಾಷ್ಟ್ರಪತಿಗಳ ರಜತ ಪದಕ |
| 1960 | ಜಗಜ್ಯೋತಿ ಬಸವೇಶ್ವರ | ಅರ್ಹತಾಪತ್ರ |
| 1961 | ಭಕ್ತಕನಕದಾಸ | ಅರ್ಹತಾಪತ್ರ |
| 1962 | ಕಿತ್ತೂರು ಚೆನ್ನಮ್ಮ | ಅರ್ಹತಾಪತ್ರ |
| 1963 | ನಂದಾದೀಪ | ಅರ್ಹತಾಪತ್ರ |
| 1964 | 1. ಸಂತ ತುಕಾರಾಂ | ರಾಷ್ಟ್ರಪತಿಗಳ ರಜತ ಪದಕ |
| | 2. ಮಂಗಳ ಮುಹೂರ್ತ | ಅರ್ಹತಾಪತ್ರ |
| 1965 | 1. ಚಂದವಳ್ಳಿಯ ತೋಟ | ರಾಷ್ಟ್ರಪತಿಗಳ ರಜತ ಪದಕ |
| | 2. ನವ ಜೀವನ | ಅರ್ಹತಾಪತ್ರ |
| | 3. ಮನೆ ಅಳಿಯ | ಅರ್ಹತಾಪತ್ರ |
| 1966 | 1. ಸತ್ಯ ಹರಿಶ್ಚಂದ್ರ | ರಾಷ್ಟ್ರಪತಿಗಳ ರಜತ ಪದಕ |
| | 2. ಮಿಸ್ ಲೀಲಾವತಿ | ಅರ್ಹತಾಪತ್ರ |
| | 3. ಮದುವೆ ಮಾಡಿ ನೋಡು | ಅರ್ಹತಾಪತ್ರ |
| 1967 | ಸಂಧ್ಯಾರಾಗ | ರಾಷ್ಟ್ರಪತಿಗಳ ರಜತ ಪದಕ |
| 1968 | ಬಂಗಾರದ ಹೂವು | ರಾಷ್ಟ್ರಪತಿಗಳ ರಜತ ಪದಕ |
| 1969 | ಮಣ್ಣಿನ ಮಗ | ತಾಂತ್ರಿಕ ಪ್ರಶಸ್ತಿ ಹಾಗೂ ನಗದು ಬಹುಮಾನ |
| 1970 | ಗೆಜ್ಜೆ ಪೂಜೆ | ಅಖಿಲ ಭಾರತ ಪ್ರಶಸ್ತಿ ಉತ್ತಮ ಚಿತ್ರ / ನಾಟಕ ಕರ್ತೃವಿಗೆ ಎಸ್.ಆರ್.ಪುಟ್ಟಣ್ಣ ಕಣಗಾಲ್ ಪ್ರಾದೇಶಿಕ ಪ್ರಶಸ್ತಿ ಹಾಗೂ ನಗದು ಬಹುಮಾನ |
| 1971 | 1. ಸಂಸ್ಕಾರ | ರಾಷ್ಟ್ರಪತಿಗಳ ಸ್ವರ್ಣ ಪದಕ ಅತ್ಯುತ್ತಮ ಕಥಾ ಚಿತ್ರಕ್ಕಾಗಿ |
| | 2. ನಗುವ ಹೂವು | ಅತ್ಯುತ್ತಮ ಪ್ರಾದೇಶಿಕ ಚಿತ್ರ ಮತ್ತು ನಗದು ಬಹುಮಾನ |
| 1972 | ವಂಶವೃಕ್ಷ | 1. ಅಖಿಲ ಭಾರತ ಪ್ರಶಸ್ತಿ ಅತ್ಯುತ್ತಮ ನಿರ್ದೇಶನಕ್ಕಾಗಿ<br>2. ಪ್ರಾದೇಶಿಕ ಪ್ರಶಸ್ತಿ ಮತ್ತು ನಗದು ಬಹುಮಾನ |
| 1973 | ಶರಪಂಜರ | ಪ್ರಾದೇಶಿಕ ಪ್ರಶಸ್ತಿ ಹಾಗೂ ನಗದು ಬಹುಮಾನ |
| 1974 | 1. ಕಾಡು | 1. ಅಖಿಲ ಭಾರತ ಪ್ರಶಸ್ತಿ ದ್ವಿತೀಯ ಅತ್ಯುತ್ತಮ ಕಥಾ ಚಿತ್ರ<br>2. ಅತ್ಯುತ್ತಮ ನಟಿ ಪ್ರಶಸ್ತಿ ಶ್ರೀಮತಿ ನಂದಿನಿ ಅವರಿಗೆ<br>3. ಅಖಿಲ ಭಾರತ ಪ್ರಶಸ್ತಿ ಅತ್ಯುತ್ತಮ ಬಾಲ ನಟ ಪ್ರಶಸ್ತಿ ಮಾಸ್ಟರ್ ಜಿ.ಎಸ್.ನಟರಾಜ್ ಅವರಿಗೆ |
| 1974 | 2. ಅಬಚೂರಿನ ಪೋಸ್ಟಾಫೀಸು | ಪ್ರಾದೇಶಿಕ ಚಿತ್ರ ಹಾಗೂ ನಗದು ಬಹುಮಾನ |

| ವರ್ಷ | ಚಿತ್ರದ ಹೆಸರು | ಪ್ರಶಸ್ತಿ |
|---|---|---|
| 1975 | ಕಂಕಣ | ಪ್ರಾದೇಶಿಕ ಚಿತ್ರ ಹಾಗೂ ರಜತ ಕಮಲ ಪ್ರಶಸ್ತಿ |
| 1976 | 1. ಚೋಮನ ದುಡಿ | ಸ್ವರ್ಣ ಕಮಲ ಅತ್ಯುತ್ತಮ ಕಥಾ ಚಿತ್ರಕ್ಕಾಗಿ, ರಜತ ಕಮಲ ಪ್ರಶಸ್ತಿ ಅತ್ಯುತ್ತಮ ನಟರಿಗೆ - ಎಂ.ವಿ.ವಾಸುದೇವರಾವ್ ರಜತ ಕಮಲ ಪ್ರಶಸ್ತಿ ಅತ್ಯುತ್ತಮ ಕಥೆಗಾಗಿ - ಕೆ.ಶಿವರಾಮ ಕಾರಂತ |
| | 2. ಹಂಸಗೀತೆ | ರಜತ ಕಮಲ ಪ್ರಶಸ್ತಿ, ಅತ್ಯುತ್ತಮ ಪ್ರಾದೇಶಿಕ ಪ್ರಶಸ್ತಿ ರಜತ ಕಮಲ, ಅತ್ಯುತ್ತಮ ಹಿನ್ನೆಲೆ ಗಾಯನಕ್ಕಾಗಿ ಎಂ. ಬಾಲಮುರಳಿಕೃಷ್ಣ ಅವರಿಗೆ |
| 1977 | 1. ಪಲ್ಲವಿ | ಅಖಿಲ ಭಾರತ ಪ್ರಶಸ್ತಿ, ರಜತ ಕಮಲ - ಅತ್ಯುತ್ತಮ ನಿರ್ದೇಶನಕ್ಕಾಗಿ ರಜತ ಕಮಲ ಪ್ರಶಸ್ತಿ ಅತ್ಯುತ್ತಮ ಪ್ರಾದೇಶಿಕ ಚಿತ್ರಕ್ಕಾಗಿ |
| | 1. ಋಷ್ಯಶೃಂಗ | ತಾಂತ್ರಿಕ ಪ್ರಶಸ್ತಿ, ರಜತ ಕಮಲ ಪ್ರಶಸ್ತಿ - ಅತ್ಯುತ್ತಮ ಛಾಯಾಗ್ರಹಣಕ್ಕಾಗಿ (ವರ್ಣ) ಎಸ್.ರಾಮಚಂದ್ರ ಅವರಿಗೆ ; ರಜತ ಕಮಲ ಪ್ರಶಸ್ತಿ - ಅತ್ಯುತ್ತಮ ಸಂಗೀತ ನಿರ್ದೇಶನಕ್ಕಾಗಿ -ಬಿ.ವಿ.ಕಾರಂತ ಅವರಿಗೆ |
| 1978 | 1. ಘಟಶ್ರಾದ್ಧ | ಅತ್ಯುತ್ತಮ ಕಥಾ ಚಿತ್ರಕ್ಕಾಗಿ ಅಖಿಲ ಭಾರತ ಪ್ರಶಸ್ತಿ,ಸ್ವರ್ಣ ಕಮಲ ಪ್ರಶಸ್ತಿ ರಜತ ಕಮಲ - ಅತ್ಯುತ್ತಮ ಬಾಲನಟ - ಅಜಿತ್‌ಕುಮಾರ್ ಸಂಗೀತ ನಿರ್ದೇಶನಕ್ಕಾಗಿ ರಜತ ಕಮಲ ಪ್ರಶಸ್ತಿ ಬಿ.ವಿ.ಕಾರಂತ್ ಅವರಿಗೆ |
| | 2. ತಬ್ಬಲಿಯು ನೀನಾದೆ ಮಗನೆ | ಪ್ರಾದೇಶಿಕ ಪ್ರಶಸ್ತಿ ಹಾಗೂ ರಜತ ಕಮಲ ಪ್ರಶಸ್ತಿ |
| 1979 | 1. ಗ್ರಹಣ | 1. ರಾಷ್ಟ್ರೀಯ ಏಕತೆಗಾಗಿ, ರಜತ ಕಮಲ ಹಾಗೂ ನಗದು ಬಹುಮಾನ (ಅತ್ಯುತ್ತಮ ಕಥಾ ಚಿತ್ರ)<br>2. ಅತ್ಯುತ್ತಮ ಚಿತ್ರನಾಟಕಕ್ಕಾಗಿ: ಟಿ.ಎಸ್.ರಂಗಾ ಮತ್ತು ನಾಗಾಭರಣ |
| | 2. ಒಂದಾನೊಂದು ಕಾಲದಲ್ಲಿ | ರಜತ ಕಮಲ ಹಾಗೂ ನಗದು ಬಹುಮಾನ |
| | 3. ಕಾಡು ಕುದುರೆ | ಅತ್ಯುತ್ತಮ ಹಿನ್ನೆಲೆ ಗಾಯನಕ್ಕಾಗಿ: ಶಿವಮೊಗ್ಗ ಸುಬ್ಬಣ್ಣ |
| 1980 | 1. ದಂಗೆಯೆದ್ದ ಮಕ್ಕಳು | ಅತ್ಯುತ್ತಮ ಮಕ್ಕಳ ಚಿತ್ರಕ್ಕಾಗಿ ಸ್ವರ್ಣ ಕಮಲ ಪ್ರಶಸ್ತಿ ಹಾಗೂ ನಗದು ಬಹುಮಾನ<br>ನಿರ್ದೇಶಕರಿಗೆ ನಗದು ಬಹುಮಾನ, |
| | 2. ಅರಿವು | ರಜತ ಕಮಲ ಪ್ರಶಸ್ತಿ |
| 1982 | 1. ಮೂರು ದಾರಿಗಳು | ಅತ್ಯುತ್ತಮ ಕಪ್ಪು ಬಿಳಪು ಛಾಯಾಗ್ರಹಣಕ್ಕಾಗಿ ಶ್ರೀಪತಿ ಆರ್. ಭಟ್ ಅವರಿಗೆ ಪ್ರಶಸ್ತಿ |
| | 2. ಬರ | ರಜತ ಕಮಲ ಹಾಗೂ ನಗದು ಬಹುಮಾನ |

| ವರ್ಷ | ಚಿತ್ರದ ಹೆಸರು | ಪ್ರಶಸ್ತಿ |
|---|---|---|
| 1983 | ಫಣಿಯಮ್ಮ | ಅತ್ಯುತ್ತಮ ಕನ್ನಡ ಚಿತ್ರಕ್ಕಾಗಿ ರಜತ ಕಮಲ ಹಾಗೂ ನಗದು ಬಹುಮಾನ |
| 1984 | 1. ಆದಿ ಶಂಕರಾಚಾರ್ಯ | 1.ಅತ್ಯುತ್ತಮ ಕಥಾ ಚಿತ್ರಕ್ಕಾಗಿ ಸ್ವರ್ಣ ಕಮಲ ಪ್ರಶಸ್ತಿ ಹಾಗೂ ನಗದು ಬಹುಮಾನ 2. ಅತ್ಯುತ್ತಮ ಚಿತ್ರನಾಟಕ ರಚನೆಗಾಗಿ ಜಿ.ವಿ.ಅಯ್ಯರ್ ಅವರಿಗೆ ಪ್ರಶಸ್ತಿ 3. ಅತ್ಯುತ್ತಮ ಛಾಯಾಗ್ರಹಣಕ್ಕಾಗಿ (ಕಪ್ಪು ಬಿಳುಪು) ಮಧು ಅಂಬಟ್ ಅವರಿಗೆ ಪ್ರಶಸ್ತಿ |
| | 1. ಬ್ಯಾಂಕರ್ ಮಾರ್ಗಯ್ಯ | ರಜತ ಕಮಲ ಪ್ರಶಸ್ತಿ ಹಾಗೂ ನಗದು ಬಹುಮಾನ |
| 1985 | 1. ಆಕ್ಸಿಡೆಂಟ್ | ಮಾದಕ ದ್ರವ್ಯ ನಿಷೇಧ ಕುರಿತಂತೆ ಅತ್ಯುತ್ತಮ ಚಿತ್ರಕ್ಕಾಗಿ ರಜತ ಕಮಲ ಹಾಗೂ ನಗದು ಬಹುಮಾನ |
| | 2. ಬಂಧನ | ರಜತ ಕಮಲ ಹಾಗೂ ನಗದು ಬಹುಮಾನ |
| 1986 | ಬೆಟ್ಟದ ಹೂವು | 1. ರಜತ ಕಮಲ ಹಾಗೂ ನಗದು ಬಹುಮಾನ 2. ಅತ್ಯುತ್ತಮ ಬಾಲ ನಟನೆಗೆ ರಜತ ಕಮಲ ಹಾಗೂ ನಗದು ಬಹುಮಾನ ಮಾಸ್ಟರ್ ಪುನೀತ್ ಅವರಿಗೆ |
| 1987 | 1. ತರಬನ ಕಥೆ | 1. ಅಖಿಲ ಭಾರತ ಪ್ರಶಸ್ತಿ ಅತ್ಯುತ್ತಮ ಕಥಾ ಚಿತ್ರಕ್ಕಾಗಿ ಸ್ವರ್ಣ ಕಮಲ ಹಾಗೂ ನಗದು ಬಹುಮಾನ 2. ಅಖಿಲ ಭಾರತ ಪ್ರಶಸ್ತಿ ಅತ್ಯುತ್ತಮ ನಟನೆಗಾಗಿ, ರಜತ ಕಮಲ ಹಾಗೂ ನಗದು ಬಹುಮಾನ, ಚಾರುಹಾಸನ್ ಅವರಿಗೆ |
| | 2. ಮಧ್ವಾಚಾರ್ಯ | 1. ಅಖಿಲ ಭಾರತ ಪ್ರಶಸ್ತಿ ಅತ್ಯುತ್ತಮ ಕಲಾ ನಿರ್ದೇಶನಕ್ಕಾಗಿ, ರಜತ ಕಮಲ ಹಾಗೂ ನಗದು ಬಹುಮಾನ ಪಿ. ಕೃಷ್ಣಮೂರ್ತಿ ಅವರಿಗೆ 2. ಅಖಿಲ ಭಾರತ ಪ್ರಶಸ್ತಿ ಅತ್ಯುತ್ತಮ ಸಂಗೀತ ನಿರ್ದೇಶನಕ್ಕಾಗಿ, ರಜತ ಕಮಲ ಪ್ರಶಸ್ತಿ ಹಾಗೂ ನಗದು ಬಹುಮಾನ ಎಂ. ಬಾಲಮುರಳಿ ಕೃಷ್ಣ ಅವರಿಗೆ |
| 1988 | 1. ಪುಷ್ಪಕ ವಿಮಾನ | ಅಖಿಲ ಭಾರತ ಪ್ರಶಸ್ತಿ ಅತ್ಯುತ್ತಮ ಚಿತ್ರಕ್ಕಾಗಿ ಜನಪ್ರಿಯ ಹಾಗೂ ಸಂಪೂರ್ಣ ಮನರಂಜನೆಗಾಗಿ ಸ್ವರ್ಣ ಕಮಲ ಹಾಗೂ ನಗದು ಬಹುಮಾನ |
| | 2. ಕಾಡಿನ ಬೆಂಕಿ | ರಜತ ಕಮಲ ಹಾಗೂ ನಗದು ಬಹುಮಾನ |
| 1989 | ಬಣ್ಣದ ವೇಷ | ರಜತ ಕಮಲ ಹಾಗೂ ನಗದು ಬಹುಮಾನ |
| 1990 | 1. ಸಂತ ಶಿಶುನಾಳ ಷರೀಫ | ಅಖಿಲ ಭಾರತ ಪ್ರಶಸ್ತಿ ಹಾಗೂ ನರ್ಗೀಸ್‌ದತ್ ಪ್ರಶಸ್ತಿ ರಾಷ್ಟ್ರೀಯ ಸೌಹಾರ್ದತೆಗಾಗಿ ಅತ್ಯುತ್ತಮ ಚಿತ್ರವೆಂದು ಹಾಗೂ ರಜತ ಕಮಲ ಹಾಗೂ ನಗದು ಬಹುಮಾನ |
| | 2. ಜಂಬೂ ಸವಾರಿ | ಅಖಿಲ ಭಾರತ ಪ್ರಶಸ್ತಿ ಅತ್ಯುತ್ತಮ ಮಕ್ಕಳ ಚಿತ್ರಕ್ಕಾಗಿ ಸ್ವರ್ಣ ಕಮಲ ಹಾಗೂ ನಗದು ಬಹುಮಾನ |
| | 3. ಮನೆ | ರಜತ ಕಮಲ ಹಾಗೂ ನಗದು ಬಹುಮಾನ |
| 1991 | 1. ಮೈಸೂರು ಮಲ್ಲಿಗೆ | ರಜತ ಕಮಲ ಪ್ರಶಸ್ತಿ ಅತ್ಯುತ್ತಮ ಗೀತ ರಚನೆಗಾಗಿ ಕೆ.ಎಸ್.ನರಸಿಂಹಸ್ವಾಮಿ ಅತ್ಯುತ್ತಮ ಪ್ರಾದೇಶಿಕ ಚಿತ್ರಕ್ಕಾಗಿ ರಜತ ಕಮಲ ಪ್ರಶಸ್ತಿ |
| 1992 | 1. ಭಗವದ್ಗೀತೆ | ಸ್ವರ್ಣ ಕಮಲ ಪ್ರಶಸ್ತಿ ನಿರ್ದೇಶನಕ್ಕಾಗಿ |
| | 2. ಜೀವನ ಚೈತ್ರ | ಅತ್ಯುತ್ತಮ ಹಿನ್ನೆಲೆ ಗಾಯನಕ್ಕಾಗಿ ರಾಜ್‌ಕುಮಾರ್ ಅವರಿಗೆ |
| | 3. ಹರಕೆಯ ಕುರಿ | ಅತ್ಯುತ್ತಮ ಪ್ರಾದೇಶಿಕ ಚಿತ್ರಕ್ಕಾಗಿ ರಜತ ಕಮಲ ಪ್ರಶಸ್ತಿ ನಿರ್ಮಾಪಕರಿಗೆ ಹಾಗೂ ನಿರ್ದೇಶಕರಿಗೆ ನಗದು ಬಹುಮಾನ |
| 1993 | 1. ದೇವರ ಕಾಡು | ಅತ್ಯುತ್ತಮ ಪರಿಸರ ಚಿತ್ರಕ್ಕಾಗಿ ರಜತ ಕಮಲ ಹಾಗೂ ನಗದು ಬಹುಮಾನ ನಿರ್ಮಾಪಕರಿಗೆ ಹಾಗೂ ನಿರ್ದೇಶಕರಿಗೆ |
| | 2. ಚಿನ್ನಾರಿ ಮುತ್ತ | ಅತ್ಯುತ್ತಮ ಮಕ್ಕಳ ಚಿತ್ರ ರಜತ ಕಮಲ ಪ್ರಶಸ್ತಿ ಹಾಗೂ ನಗದು ಬಹುಮಾನ ನಿರ್ಮಾಪಕರಿಗೆ ಹಾಗೂ ನಿರ್ದೇಶಕರಿಗೆ |
| | 3. ಮಂದಾರ ಪೂ (ಕೊಡವ ) | ರಜತ ಕಮಲ ಪ್ರಶಸ್ತಿ ಹಾಗೂ ನಗದು ಬಹುಮಾನ ನಿರ್ಮಾಪಕರಿಗೆ ಹಾಗೂ ನಿರ್ದೇಶಕರಿಗೆ |
| | 4. ಬಂಗಾರ್ ಪಟ್ಲೇರ್ (ತುಳು ) | ರಜತ ಕಮಲ ಪ್ರಶಸ್ತಿ ಹಾಗೂ ನಗದು ಬಹುಮಾನ ನಿರ್ಮಾಪಕರಿಗೆ ಹಾಗೂ ನಿರ್ದೇಶಕರಿಗೆ |

ಕೃಪೆ: ವಾರ್ತಾ ಇಲಾಖೆ, ಚಲನಚಿತ್ರವಿಭಾಗ, ಕರ್ನಾಟಕ ಸರ್ಕಾರ, ಬೆಗಳೂರು

### ರಾಷ್ಟ್ರ ಪ್ರಶಸ್ತಿ ಪಡೆದ ಇತರ ಕನ್ನಡ ಚಿತ್ರಗಳು

| | | |
|---|---|---|
| 1. | ಕೊಟ್ರೇಶಿ ಕನಸು<br>ನಿರ್ದೇಶನ: ನಾಗತಿಹಳ್ಳಿ ಚಂದ್ರಶೇಖರ್ | 1. ಉತ್ತಮ ಕನ್ನಡಚಿತ್ರ<br>2. ಉತ್ತಮ ಬಾಲ ಕಲಾವಿದ<br>ಮಾ. ವಿಜಯ ರಾಘವೇಂದ್ರ |
| 2. | ಕ್ರೌರ್ಯ<br>ನಿರ್ದೇಶನ: ಗಿರೀಶ್ ಕಾಸರವಳ್ಳಿ | 1. ಉತ್ತಮ ಕನ್ನಡಚಿತ್ರ<br>2. ಉತ್ತಮ ಬಾಲ ಕಲಾವಿದ<br>ಮಾ. ವಿಶ್ವಾಸ್ |
| 3. | ಸಂಗೀತ ಸಾಗರ ಗಾನಯೋಗಿ<br>ಪಂಚಾಕ್ಷರಿ ಗವಾಯಿ<br>ನಿರ್ದೇಶನ: ಚಿಂದೋಡಿ ಬಂಗಾರೇಶ್ | 1. ಉತ್ತಮ ಹಿನ್ನೆಲೆ ಗಾಯಕರು<br>ಎಸ್.ಪಿ.ಬಾಲಸುಬ್ರಮಣ್ಯಂ<br>2. ಉತ್ತಮ ಸಂಗೀತ ನಿರ್ದೇಶಕರು<br>ಹಂಸಲೇಖ |
| 4. | ಅಮೇರಿಕಾ-ಅಮೇರಿಕಾ<br>ನಿರ್ದೇಶನ: ನಾಗತಿಹಳ್ಳಿ ಚಂದ್ರಶೇಖರ್ | ಉತ್ತಮ ಕನ್ನಡಚಿತ್ರ |
| 5. | ತಾಯಿ ಸಾಹೇಬ | 1. ಸ್ವರ್ಣಕಮಲ ಪ್ರಶಸ್ತಿ<br>2. ನಟನೆಗಾಗಿ ವಿಶೇಷ ಜ್ಯೂರಿ<br>ಪ್ರಶಸ್ತಿ, ಜಯಮಾಲ<br>3. ಉತ್ತಮ ಕಲಾ ನಿರ್ದೇಶನ-<br>ರಮೇಶ್ ದೇಸಾಯಿ<br>4. ಉತ್ತಮ ಉಡುಪು ವಿನ್ಯಾಸ<br>ವೈಶಾಲಿ ಕಾಸರವಳ್ಳಿ |
| 6. | ಭೂಮಿಗೀತ<br>ನಿರ್ದೇಶನ: ಕೇಸರಿ ಹರವು | ಉತ್ತಮ ಪರಿಸರ ಚಿತ್ರ |
| 7. | ಮುಂಗಾರಿನ ಮಿಂಚು<br>ನಿರ್ದೇಶನ: ರಾಜೇಂದ್ರಸಿಂಗ್ ಬಾಬು | ಉತ್ತಮ ಕನ್ನಡ ಚಿತ್ರ |
| 8. | ಹೂ ಮಳೆ<br>ನಿರ್ದೇಶನ: ನಾಗತಿಹಳ್ಳಿ ಚಂದ್ರಶೇಖರ್ | ಉತ್ತಮ ಪ್ರಾದೇಶಿಕ ಭಾಷಾ ಚಿತ್ರ |
| 9. | ಕಾನೂರು ಹೆಗ್ಗಡತಿ<br>ನಿರ್ದೇಶನ: ಗಿರೀಶ್ ಕಾರ್ನಾಡ್ | ಉತ್ತಮ ಪ್ರಾದೇಶಿಕ ಭಾಷಾ ಚಿತ್ರ |
| 10. | ಮತದಾನ<br>ನಿರ್ದೇಶನ: ಟಿ.ಎನ್.ಸೀತಾರಾಂ | ಉತ್ತಮ ಪ್ರಾದೇಶಿಕ ಭಾಷಾ ಚಿತ್ರ |
| 11. | ಮುನ್ನುಡಿ<br>ನಿರ್ದೇಶನ: ಪಿ.ಶೇಷಾದ್ರಿ | ಸಾಮಾಜಿಕ ಕಳಕಳಿಯ ಚಿತ್ರ |
| 12. | ದ್ವೀಪ<br>ನಿರ್ದೇಶನ: ಗಿರೀಶ್ ಕಾಸರವಳ್ಳಿ | ಸ್ವರ್ಣ ಕಮಲ ಪ್ರಶಸ್ತಿ |
| 13. | ಅತಿಥಿ<br>ನಿರ್ದೇಶನ: ಪಿ.ಶೇಷಾದ್ರಿ | ಉತ್ತಮ ಪ್ರಾದೇಶಿಕ ಭಾಷಾ ಚಿತ್ರ |
| 14. | ಸಿಂಗಾರವ್ವ<br>ನಿರ್ದೇಶನ: ಟಿ.ಎಸ್.ನಾಗಾಭರಣ | ಉತ್ತಮ ಪ್ರಾದೇಶಿಕ ಭಾಷಾ ಚಿತ್ರ |
| 15. | ಬೇರು<br>ನಿರ್ದೇಶನ: ಪಿ.ಶೇಷಾದ್ರಿ | ಉತ್ತಮ ಪ್ರಾದೇಶಿಕ ಚಿತ್ರ |
| 15. | ಹಸೀನಾ<br>ನಿರ್ದೇಶನ: ಗಿರೀಶ್ ಕಾಸರವಳ್ಳಿ | ಸಾಮಾಜಿಕ ಕಳಕಳಿಯುಳ್ಳ ಚಿತ್ರ |

ಈ ಚಿತ್ರ ಯಶಸ್ವಿಯಾಯಿತು. ಶಿವರಾಜಕುಮಾರ್ ಅಭಿನಯದ ಎರಡನೆಯ ಚಿತ್ರ ವಿಜಯ ಸಾಸನೂರ್ ಅವರ ಕಾದಂಬರಿ ಆಧರಿಸಿದ ರಥಸಪ್ತಮಿ (1986) ಕೂಡ ಯಶಸ್ವಿಯಾಗಿ ಪ್ರದರ್ಶನ ಕಂಡಿತು. ಅವರ ಮೂರನೆಯ ಚಿತ್ರ ವೀರಭದ್ರಪ್ಪ ಅವರ ಬೇಟೆ ಕಾದಂಬರಿ ಆಧರಿಸಿದ ಮನ ಮೆಚ್ಚಿದ ಹುಡುಗಿ ಕೂಡ ರಜತ ಮಹೋತ್ಸವ ಕಂಡಿತು. ಈ ಎರಡು ಚಿತ್ರಗಳನ್ನು ಎಂ.ಎಸ್.ರಾಜಶೇಖರ್ ನಿರ್ದೇಶಿಸಿದ್ದಾರೆ. ಮೊದಲ ಮೂರು ಚಿತ್ರಗಳೂ ರಜತ ಮಹೋತ್ಸವ ಆಚರಿಸಿ, ಶಿವರಾಜಕುಮಾರ್ ಅವರನ್ನು ಯಶಸ್ವಿ ನಾಯಕ ನಟನನ್ನಾಗಿಸಿದವು.

ಶಿವರಾಜಕುಮಾರ್ ಅವರನ್ನಿಟ್ಟುಕೊಂಡು ಕೆಲವು ಹೊಸ ಪ್ರಯೋಗಗಳನ್ನು ಮಾಡುವ ಯತ್ನವನ್ನು ಕೆಲವು ನಿರ್ದೇಶಕರು ಮಾಡಿದರು. ರಾಜಕುಮಾರ್ ಅಭಿನಯಿಸಿದ ಚಿತ್ರಗಳನ್ನು ಮತ್ತೆ ಅವರ ಪುತ್ರ ಶಿವರಾಜಕುಮಾರ್ ಅಭಿನಯದಲ್ಲಿ ಪುನರ್ ನಿರ್ಮಾಣ ಮಾಡುವುದು ಒಂದು ಯತ್ನ. ಮತ್ತೊಂದು ಪ್ರಯೋಗವೆಂದರೆ ಜನಪ್ರಿಯವಾದ ರಾಜಕುಮಾರ್ ಅಭಿನಯದ ಚಿತ್ರವೊಂದರ ಎರಡನೆಯ ಭಾಗ ನಿರ್ಮಿಸುವುದು. ಶಿವರಾಜಕುಮಾರ್ ಅಭಿನಯದ ಶಿವ ಮೆಚ್ಚಿದ ಕಣ್ಣಪ್ಪ (1988) ಇಂತಹ ಒಂದು ಪ್ರಯತ್ನದ ಫಲ. ಆದರೆ ಈ ಎರಡೂ ಪ್ರಯೋಗಗಳು ಉತ್ತಮ ಫಲ ಕೊಡಲಿಲ್ಲ.

ರಾಜಕುಮಾರ್ ಅವರ ಮೊದಲ ಚಿತ್ರ ಬೇಡರ ಕಣ್ಣಪ್ಪ (1954), 44 ವರ್ಷಗಳ ಹಿಂದೆ ರಾಜಕುಮಾರ್ ಅವರು ವಹಿಸಿದ್ದ ಅದೇ ಪಾತ್ರವನ್ನು 1988ರಲ್ಲಿ ಅವರ ಪುತ್ರ ಶಿವರಾಜಕುಮಾರ್ ನಿರ್ವಹಿಸಿದ್ದರು. ಈ ಚಿತ್ರದಲ್ಲಿ ರಾಜಕುಮಾರ್ ಕೂಡ ಈಶ್ವರನ ಪಾತ್ರದಲ್ಲಿ ಕಾಣಿಸಿಕೊಂಡಿದ್ದಾರೆ. 1995ರಲ್ಲಿ ಮತ್ತೊಂದು ಬಗೆಯ ಪ್ರಯೋಗವಾಗಿ 1973ರಲ್ಲಿ ಅಪಾರ ಜನಪ್ರಿಯತೆ ಗಳಿಸಿದ್ದ ಗಂಧದ ಗುಡಿಯ ಮುಂದುವರೆದ ಭಾಗವನ್ನಾಗಿ ಗಂಧದ ಗುಡಿ ಭಾಗ 2 ಚಿತ್ರ ನಿರ್ಮಿಸಲಾಯಿತು. ಶಿವರಾಜಕುಮಾರ್ ಅವರು ಈ ಹಿಂದೆ ತಂದೆ ರಾಜಕುಮಾರ್ ವಹಿಸಿದ್ದ ಪಾತ್ರವನ್ನೆ ವಹಿಸಿದ್ದರು. ಈ ಚಿತ್ರದಲ್ಲೂ ರಾಜಕುಮಾರ್ ಗೌರವನಟರಾಗಿ ಕಾಣಿಸಿಕೊಂಡರು. ಓಂ ಚಿತ್ರ ಶಿವರಾಜಕುಮಾರ್‌ಗೆ ಹೊಸ ಇಮೇಜ್ ಸೃಷ್ಟಿಸಿತು. ಕನ್ನಡ ಚಿತ್ರರಂಗದಲ್ಲಿ ಒಂದು ಟ್ರೆಂಡನ್ನೂ ಸೃಷ್ಟಿ ಮಾಡಿತು. ನಮ್ಮೂರ ಮಂದಾರ ಹೂವೇ ಯಶಸ್ಸಿನ ಅನಂತರ ಬಂದ ನಾಗಾಭರಣ ನಿರ್ದೇಶನದ ಜನುಮದ ಜೋಡಿ ಶಿವರಾಜ್‌ಕುಮಾರ್ ಅವರನ್ನು ಮತ್ತಷ್ಟು ಜನಪ್ರಿಯಗೊಳಿಸಿದ, ಅದ್ಭುತ ಯಶಸ್ಸು ಪಡೆದ ಮತ್ತೊಂದು ದಾಖಲೆ ಚಿತ್ರ. ಅವರು ಚಿಗುರಿದ ಕನಸು ಚಿತ್ರದ ಪಾತ್ರಕ್ಕಾಗಿ 2003-04ನೆಯ ಸಾಲಿನ ರಾಜ್ಯ ಸರ್ಕಾರದ ಅತ್ಯುತ್ತಮ ನಟ ಪ್ರಶಸ್ತಿಗೆ ಆಯ್ಕೆಯಾಗಿದ್ದಾರೆ. ಸಂಗೀತ ನಿರ್ದೇಶಕ ಮನೋಹರ ಹಾಗೂ ಸಂಭಾಷಣೆಕಾರ ಬರಗೂರು ರಾಮಚಂದ್ರಪ್ಪನವರಿಗೂ ಈ ಚಿತ್ರ ಖ್ಯಾತಿ ತಂದುಕೊಟ್ಟಿತು.

ರಾಜಕುಮಾರರ ಮತ್ತೊಬ್ಬ ಪುತ್ರ ರಾಘವೇಂದ್ರ ರಾಜ್‌ಕುಮಾರ್ ಸಿಂಗೀತಂ ಶ್ರೀನಿವಾಸರಾವ್ ನಿರ್ದೇಶನದ ಚಿರಂಜೀವಿ ಸುಧಾಕರ್ (1988) ಚಿತ್ರದ ಮೂಲಕ ಬೆಳ್ಳಿತೆರೆ ಪ್ರವೇಶಿಸಿದರು. ನಂಜುಂಡಿ ಕಲ್ಯಾಣ (1989) ಅವರಿಗೆ ಭಾರೀ ಹೆಸರು ತಂದು ಕೊಟ್ಟಿತು. ಈ ಚಿತ್ರದ ಮೂಲಕ ನಾಯಕಿಯಾಗಿ ಕನ್ನಡ ಚಿತ್ರರಂಗ ಪ್ರವೇಶಿಸಿದ ಮಾಲಾಶ್ರೀ, ಐದು ವರ್ಷಗಳ ಕಾಲ ಸೂಪರ್ ಸ್ಟಾರ್ ಆಗಿ ಮೆರೆದರು. ಕನ್ನಡದ ಇನ್ನಾವ ನಟಿಯೂ ಗಳಿಸದಿದ್ದ ಜನಪ್ರಿಯತೆ ಮಾಲಾಶ್ರೀ ಪಾಲಿನದಾಯಿತು ಎಂಬುದು ಗಮನಾರ್ಹ. ಗಜಪತಿ ಗರ್ವಭಂಗ (1989), ಅನುಕೂಲಕ್ಕೊಬ್ಬ ಗಂಡ (1990), ಅನುರಾಗದ ಅಲೆಗಳು (1990), ನಾವಿಬ್ಬರು ನಮಗಿಬ್ಬರು (1993), ಸಾಗರ ದೀಪ (1994), ಸೂತ್ರದಾರ (1996), ರಾಘವೇಂದ್ರ ರಾಜಕುಮಾರ್ ಅಭಿನಯದ ಇತರ ಚಿತ್ರಗಳು.ಬಾಲನಟನಾಗಿ ರಾಷ್ಟ್ರಪ್ರಶಸ್ತಿ ಗಳಿಸಿದ್ದ ಪುನೀತ್ ಈಗ ನಾಯಕ ನಟರಾಗಿ ಅಭಿನಯಿಸುತ್ತಿದ್ದಾರೆ.



ದ್ವೀಪ ಚಿತ್ರದಲ್ಲಿ ಅವಿನಾಶ್ ಮತ್ತು ಸೌಂದರ್ಯ

ರವಿಚಂದ್ರನ್‌ರ ಹೆಸರು ಹಲವಾರು ಕಾರಣಗಳಿಂದ ಉಲ್ಲೇಖಾರ್ಹ, ರವಿಚಂದ್ರನ್ ನಟರಷ್ಟೇ ಅಲ್ಲ ನಿರ್ದೇಶಕರೂ ಕೂಡ. ಕನ್ನಡ ಚಿತ್ರಗಳಿಗೆ ತಾಂತ್ರಿಕ ಶ್ರೀಮಂತಿಕೆ ತುಂಬಿದ ಕೀರ್ತಿ ಅವರದು. ಹೊಸತನ ಅವರ ಚಿತ್ರಗಳ ವೈಶಿಷ್ಟ್ಯ. ಖದೀಮ ಕಳ್ಳರು ಇವರ ಮೊದಲ ಚಿತ್ರ. ಈಶ್ವರಿ ಪಿಕ್ಚರ್ಸ್ ಲಾಂಛನದಲ್ಲಿ ಹೊರಬಂದ ಚಕ್ರವ್ಯೂಹ (1983) ಚಿತ್ರದಲ್ಲಿ ರವಿಚಂದ್ರನ್‌ಗೆ ಮತ್ತೊಂದು ಚಿಕ್ಕಪಾತ್ರ. ಅನಂತರದ ದಿನಗಳಲ್ಲಿ ನಾಯಕ ನಟನಾಗುತ್ತ ಹೆಜ್ಜೆ ಹಾಕಲು ಇದು ನಾಂದಿಯಾಯಿತು. ಮರುವರ್ಷವೇ

ನಾನೇ ರಾಜದ ನಾಯಕ. ಅನಂತರ ಅದನ್ನು ಹಿಂಬಾಲಿಸಿ ಪ್ರೇಮಿಗಳ ಸವಾಲ್. 1995ರಲ್ಲಿ ಈಶ್ವರಿ ಲಾಂಛನದಲ್ಲಿ ಹಾಸ್ಯ ಪ್ರಧಾನ ಚಿತ್ರ ಸಾವಿರ ಸುಳ್ಳು ರವಿಚಂದ್ರನ್‌ರತ್ತ ದೃಷ್ಟಿ ಹಾಯಿಸಲು ಸಹಾಯಕವಾಯಿತು. ಮತ್ತೆ ಅದೇ ವರ್ಷ ಎನ್.ವೀರಸ್ವಾಮಿ ಈಶ್ವರಿ ಪಿಕ್ಚರ್ಸ್ ಲಾಂಛನದಲ್ಲಿ ತಯಾರಿಸಿದ ನಾನೂ ನನ್ನ ಹೆಂಡ್ತಿ ರವಿಚಂದ್ರನ್‌ರ ದಿಕ್ಕನ್ನೇ ಬದಲಾಯಿಸಿತು. ಡಿ.ರಾಜೇಂದ್ರ ಬಾಬು ನಿರ್ದೇಶನದ ಈ ಚಿತ್ರ ರವಿಚಂದ್ರನ್‌ರನ್ನಷ್ಟೇ ಅಲ್ಲ ಹಾಸ್ಯ ನಟ ಎನ್.ಎಸ್.ರಾವ್, ಚಿತ್ರ ಸಾಹಿತಿ, ಸಂಗೀತ ನಿರ್ದೇಶಕ ಹಂಸಲೇಖ (ಪಿ.ಜಿ.ಗಂಗರಾಜ್) ಅವರೂ ಚಿತ್ರರಂಗದಲ್ಲಿ ಮಿನುಗಲು ಕಾರಣವಾಯಿತು.

ಈಶ್ವರಿ ಪಿಕ್ಚರ್ಸ್ ಲಾಂಛನದಲ್ಲಿ ರವಿಚಂದ್ರನ್ ತಾವೇ ಅಭಿನಯಿಸಿದ ನಿರ್ದೇಶಿಸಿದ ಪ್ರೇಮಲೋಕ ಚಿತ್ರರಂಗದಲ್ಲಿ ಇತಿಹಾಸ ನಿರ್ಮಿಸಿತು. ರವಿಚಂದ್ರನ್ ಜತೆ ಹಿಂದಿ ಚಿತ್ರ ನಟಿ ಜೂಹಿ ಚಾವ್ಲಾ ಅಭಿನಯಿಸಿದ್ದಾರೆ. ಚಿತ್ರ ಪ್ರಚಂಡ ಯಶಸ್ಸುಗಳಿಸಿ ರವಿಚಂದ್ರನ್ ಅವರಿಗೆ ಜನಪ್ರಿಯ ನಾಯಕ ಎಂಬ ಪಟ್ಟಕಟ್ಟಿತು. ಈ ಚಿತ್ರದ ಮೂಲಕ ಹಂಸಲೇಖ ಸಂಗೀತ ನಿರ್ದೇಶಕರಾಗಿ ಖ್ಯಾತಿಗೆ ಬಂದರು. ಅನಂತರ ರವಿಚಂದ್ರನ್ ನಿರ್ದೇಶಿಸಿದ ರಣಧೀರ (1988) ಕೂಡ ಯಶಸ್ವಿ ಚಿತ್ರ. ಅನಂತರದ ದಿನಗಳು ರವಿಚಂದ್ರನ್ ಅವರ ಹರ್ಷದ ದಿನಗಳಾದವು. ಅಂಜದ ಗಂಡು (1988), ಯುದ್ಧಕಾಂಡ, ಯುಗಪುರುಷ, ಕಿಂದರಜೋಗಿ (1989), ಬಣ್ಣದ ಗೆಜ್ಜೆ, ಅಭಿಮನ್ಯು (1990), ರಾಮಾಚಾರಿ, ಶಾಂತಿ ಕ್ರಾಂತಿ, ಹಳ್ಳಿಮೇಷ್ಟ್ರು, ಗೋಪಿಕೃಷ್ಣ, ಶ್ರೀರಾಮಚಂದ್ರ (1992), ಗಡಿಬಿಡಿಗಂಡ, ಅಣ್ಣಯ್ಯ, ಮನೆದೇವ್ರು (1993), ಸಿಪಾಯಿ, ಚೆಲುವೆ ಒಂದು ಹೇಳ್ತಿನಿ, ಪ್ರೀತ್ಸೋದ್ ತಪ್ಪಾ, ಏಕಾಂಗಿ, ಮಲ್ಲ ಮೊದಲಾದವು ಇವರ ಅಭಿನಯದ ಮುಖ್ಯ ಚಿತ್ರಗಳು.

ಹಂಸಲೇಖ ಅವರ ಚಿತ್ರರಂಗ ಪ್ರವೇಶ ಈ ಕಾಲಾವಧಿಯ ಮಹತ್ವದ ಘಟನೆ (1987). ಪ್ರೇಮಲೋಕದಿಂದ ಸಂಗೀತ ನಿರ್ದೇಶನ ಆರಂಭಿಸಿದ ಇವರು ಒಂಬತ್ತೇ ವರ್ಷಗಳಲ್ಲಿ ನೂರು ಚಿತ್ರಗಳ ಸಂಗೀತ ನಿರ್ದೇಶಕರಾದರು. ಗಾನಯೋಗಿ ಪಂಚಾಕ್ಷರಿ ಚಿತ್ರಕ್ಕಾಗಿ ಫಿಲಂಫೇರ್ ಪ್ರಶಸ್ತಿ ಸಂದದ್ದು ಇವರ ಪ್ರತಿಭೆಗೆ ಸಾಕ್ಷಿ. ಇವರ ಸಾಹಿತ್ಯ ಹಾಗೂ ಸಹಜವಾಗಿ ಜನಸಾಮಾನ್ಯರಲ್ಲಿ ಹೊರಡುವ ಉದ್ಗಾರ, ಆಶ್ಚರ್ಯ, ಮಾತುಗಳು ಎಲ್ಲದಕ್ಕೂ ಸಂಗೀತದ ಸ್ಪರ್ಶ ನೀಡಿದ್ದು ಹಂಸಲೇಖರ ವೈಶಿಷ್ಟ್ಯ. ಇವರ ಪ್ರತಿಭೆ ಬೆಳಕಿಗೆ ಬಂದದ್ದು. ನಾನೂ ನನ್ನ ಹೆಂಡ್ತಿ ಚಿತ್ರಕ್ಕಾಗಿ ಇವರು ಬರೆದ ಯಾರೇ ನೀನು ಚೆಲುವೆ ನಿನ್ನಷ್ಟಕ್ಕೆ ನೀನೇ ಏಕೆ ನಗುವೆ ಎಂಬ ಹಾಡಿನಿಂದಾಗಿ. ಅನಂತರ ಇವರು ರವಿಚಂದ್ರನ್ ಅವರ ಚಿತ್ರ ನಿರ್ಮಾಣದ ಬಹುತೇಕ ಚಿತ್ರಗಳ ಸಂಗೀತ ನಿರ್ದೇಶಕರಾದರು. ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡು ಹಂಸಲೇಖ ಎಂಬ ಕ್ಯಾಸೆಟ್ ಕಂಪನಿಯನ್ನೂ ಆರಂಭಿಸಿದ್ದಾರೆ. ಇವರ ಪುತ್ರ ಅಲಂಕಾರ್ ಕೂಡ ಕಪೋರಿ ಚಿತ್ರ ಮೂಲಕ ನಾಯಕ ನಟರಾದರು. ಹಂಸಲೇಖ 350ಕ್ಕೂ ಹೆಚ್ಚು ಚಿತ್ರಗಳಿಗೆ ಸಂಗೀತ ನೀಡಿದ್ದಾರೆ.

ಚಿರಂಜೀವಿ ಸುಧಾಕರ್ (1988) ಚಿತ್ರದ ಮೂಲಕ ಖಳನಾಯಕನಾಗಿ ಚಿತ್ರರಂಗ ಪ್ರವೇಶಿಸಿದ ಶಶಿಕುಮಾರ್ ಕಾಲಕ್ರಮೇಣ ನಾಯಕನಟನಾಗಿ ಪರಿವರ್ತನೆಗೊಂಡರು. ಮಾಲಾಶ್ರೀ, ಶಶಿಕುಮಾರ್ ಜೋಡಿಯ ಚಿತ್ರಗಳು ಜನಪ್ರಿಯಗೊಂಡು ಆ ಎಲ್ಲ ಚಿತ್ರಗಳೂ ಯಶಸ್ವಿಯಾದವು. ಪೋಲೀಸನ ಹೆಂಡ್ತಿ (1990) ಶಶಿಕುಮಾರ್‌ಗೆ ಪೂರ್ಣ ಪ್ರಮಾಣದ ನಾಯಕ ಸ್ಥಾನ ಕಲ್ಪಿಸಿತು. ಚಿತ್ರದುರ್ಗ ಕ್ಷೇತ್ರದಿಂದ ಇವರು ಸಂಸತ್ ಸದಸ್ಯರೂ ಆಗಿದ್ದರು. ಆರಂಭದಲ್ಲಿ ಖಳನಟನಾಗಿದ್ದು ಅನಂತರ ನಾಯಕನಾಗಿ ಪರಿವರ್ತನೆ ಆಗುವ ನಾಯಕರು ಕನ್ನಡದಲ್ಲಿ ಹೆಚ್ಚಾಗಿಯೇ ಇದ್ದಾರೆ. ಆಗಂತುಕ ಚಿತ್ರದ ಮೂಲಕ ಖಳನಾಯಕನಾಗಿ ಪ್ರವೇಶಿಸಿದ ದೇವರಾಜ್ (1987) ಅನಂತರದ ದಿನಗಳಲ್ಲಿ ನಾಯಕ ಸ್ಥಾನಕ್ಕೇರಿದರು. ಅಂಬರೀಷ್, ಪ್ರಭಾಕರ್ ಅವರುಗಳೂ ಕೂಡ ಇದೇ ಹಂತದಿಂದ ನಾಯಕರಾದವರು. ದೇವರಾಜ್ ಉತ್ಕರ್ಷದಲ್ಲಿ ಉತ್ತಮ ಅಭಿನಯ ನೀಡಿದರು. ವೀರಪ್ಪನ್ ಚಿತ್ರದ ಅಭಿನಯಕ್ಕಾಗಿ ರಾಜ್ಯದ ಶ್ರೇಷ್ಠ ನಟ ಪ್ರಶಸ್ತಿ ಪಡೆದರು (1990). ಇದೇ ರೀತಿ ಜಗ್ಗೇಶ್ ಕೂಡ ಖಳನಾಯಕನಾಗಿ ಸಣ್ಣಪುಟ್ಟ ಪಾತ್ರ, ಹಾಸ್ಯ ನಟನಾಗಿ ಕೆಲ ಚಿತ್ರಗಳಲ್ಲಿ ಅಭಿನಯಿಸಿ ಅನಂತರ ನಾಯಕ ನಟರಾದರು. ಜಗ್ಗೇಶ್ ಸಂಭಾಷಣೆ ಹೇಳುವ ಶೈಲಿಯಿಂದಾಗಿ ಜನಪ್ರಿಯರಾಗಿದ್ದಾರೆ. ಭಂಡ ನನ್ನ ಗಂಡ, ತರ್ಲೆ ನನ್ ಮಗ, ಪೋಲೀಸ್ ಫೈಲ್, ಸೂಪರ್ ನನ್ ಮಗ, ಸರ್ವರ್ ಸೋಮಣ್ಣ, ಸೋಮ, ಪಟ್ಟಣಕ್ಕೆ ಬಂದ ಪುಟ್ಟ ಚಿತ್ರಗಳಲ್ಲಿ ಜಗ್ಗೇಶ್ ನಾಯಕರಾಗಿದ್ದಾರೆ. ಮೇಕಪ್ (2002) ಚಿತ್ರದ ಮೂಲಕ ಜಗ್ಗೇಶ್ ವೃತ್ತಿ ಜೀವನದಲ್ಲಿ ಬದಲಾವಣೆ ಆಗಿದೆ. ಈ ನಡುವೆ ಕಾಶೀನಾಥ್ ಕೂಡ ನಾಯಕನಾಗಿ ಕೆಲಕಾಲ ಮಿಂಚಿದರು. 1976ರಲ್ಲಿಯೇ ಅಪರೂಪದ ಅತಿಥಿಗಳು ಚಿತ್ರ ನಿರ್ಮಿಸಿದ್ದ ಕಾಶೀನಾಥ್ 1987ರಲ್ಲಿ ಅನುಭವ ಚಿತ್ರದ ಮೂಲಕ ಜನಪ್ರಿಯರಾದರು. ಈ ಚಿತ್ರದ ಯಶಸ್ಸು ಇವರಿಗೆ ನಾಯಕ ಪಟ್ಟ ಕಲ್ಪಿಸಿತು. ಇವರು ಅಭಿನಯಿಸಿದ ಅವಳೆ ನನ್ನ ಹೆಂಡ್ತಿ (1988) ರಜತೋತ್ಸವ ಕಂಡಿತು. ಇವರ ಸ್ವಂತ ತಯಾರಿಕೆ ಅನಂತನ ಅವಾಂತರ (1989) ಜನಪ್ರಿಯವಾದ ಅನಂತರ ಅದೇ ಜಾಡು ಹಿಡಿದ ಚಿತ್ರಗಳು ಹಲವಾರು ಬಂದವು. ಪೊಲೀಸ್ ಸ್ಟೋರಿ ಚಿತ್ರದ ಮೂಲಕ ಇದ್ದಕ್ಕಿದ್ದಂತೆ ನಾಯಕನಟನಾಗಿ ಬೆಳೆದ ಸಾಯಿಕುಮಾರ್ ಅದೇ ತರಹದ ಹಲವಾರು ಚಿತ್ರಗಳಲ್ಲಿ ನಾಯಕರಾದರು. ಪುಟ್ಟಣ್ಣ ಕಣಗಾಲ್ ಅಮೃತ ಘಳಿಗೆಯ ಮೂಲಕ ತೆರೆಗೆ ಪರಿಚಯಿಸಿದ ಶ್ರೀಧರ್ ಮೌನಗೀತೆ (1986), ಆಸ್ಫೋಟ (1988), ಬಿಸಿಲು ಬೆಳದಿಂಗಳು (1989), ಸಂತ ಶಿಶುನಾಳ ಶರೀಫ (1990) ಮೊದಲಾದ ಚಿತ್ರಗಳಲ್ಲಿ ಗಮನ ಸೆಳೆದರು. ಗೆಜ್ಜೆನಾದ (1993) ಮೂಲಕ ರಾಮ್‌ಕುಮಾರ್, ಶ್ (1993) ಮೂಲಕ ಕುಮಾರ್ ಗೋವಿಂದ್, ಸುಂದರ ಸ್ವಪ್ನಗಳು (1996), ಪಂಚಮವೇದದ (1990), ಮೂಲಕ ರಮೇಶ್, ಡ್ಯಾನ್ಸ್ ರಾಜಾ ಡ್ಯಾನ್ಸ್ (1989) ಮೂಲಕ ವಿನೋದರಾಜ್, ಚೈತ್ರದ ಪ್ರೇಮಾಂಜಲಿ (1992) ಮೂಲಕ ರಘುವೀರ್, ರಂಜಿತಾ (1993) ಮೂಲಕ ಅಭಿಜಿತ್ ನಾಯಕ ನಟರಾಗಿದ್ದಾರೆ.



ಸಿಂಗಾರವ್ವ ಚಿತ್ರದಲ್ಲಿ ಪ್ರೇಮಾ ಮತ್ತು ಅವಿನಾಶ್

ವಿಜಯೋತ್ಸವ (1987) ಚಿತ್ರದ ಮೂಲಕ ಬೆಳ್ಳಿ ತೆರೆಗೆ ಬಂದ ಕುಮಾರ್ ಬಂಗಾರಪ್ಪ (ವಸಂತಕುಮಾರ್) ಶರವೇಗದ ಸರದಾರ (1989), ಅಶ್ವಮೇಧ, ಅಂಗೈಯಲ್ಲಿ ಅಪ್ಸರೆ (1993), ಕ್ಷೀರ ಸಾಗರ (1992) ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ರಮೇಶ್ ಎಲ್ಲಾ ಬಗೆಯ ಪಾತ್ರಗಳಲ್ಲೂ ಹೊಂದಿ ಕೊಳ್ಳುವವರು. ನಮ್ಮೂರ ಮಂದಾರ ಹೂವೇ, ಹೃದಯ ಹೃದಯ, ಪತ್ಯರ್ಥ, ಅಮೆರಿಕಾ-ಅಮೇರಿಕಾ, ಅಮೃತವರ್ಷಿಣಿ ಮೊದಲಾದ ಚಿತ್ರಗಳಲ್ಲಿ ಗಮನ ಸೆಳೆಯುವ ಅಭಿನಯ ನೀಡಿದ್ದಾರೆ. ಸುದೀಪ್ ಮತ್ತು ದರ್ಶನ್ 21ನೆಯ ಶತಮಾನದ ಪ್ರಾರಂಭದಲ್ಲಿ ಭರವಸೆ ಮೂಡಿಸಿದ ನಟರಾಗಿ ಹೊರಹೊಮ್ಮಿದ್ದಾರೆ.

ಹೊಸ ಪೀಳಿಗೆಯ ನಾಯಕಿಯರಲ್ಲಿ ಮಾಲಾಶ್ರೀ ಸಾಧನೆಯೊಂದು ದಾಖಲೆ. ನಂಜುಂಡಿ ಕಲ್ಯಾಣದಲ್ಲಿ ಗುಂಡಿನ ಹಾಡು ಇವರನ್ನು ಉನ್ನತ ಸ್ಥಾನಕ್ಕೆ ಏರಿಸಿತಲ್ಲದೇ ಮಾಲಾಶ್ರೀ ಸ್ಟೈಲ್ ಆರಂಭವಾಯಿತು. ಪೋಲೀಸನ ಹೆಂಡ್ತಿ, ರಾಣಿಮಹಾರಾಣಿ, ರೆಡಿಮೇಡ್‌ಗಂಡ, ಮಾಲಾಶ್ರೀಮಾಮಾಶ್ರೀ, ಬೆಳ್ಳಿಕಾಲುಂಗರ, ಹೃದಯಹಾಡಿತು ಮೊದಲಾದ ಚಿತ್ರಗಳ ಯಶಸ್ಸು ಮಾಲಾಶ್ರೀಯ ಮೋಡಿಯಿಂದಲೇ. ಇದೇ ಸಮಯದಲ್ಲಿ ನಾಯಕಿಯರಾಗಿದ್ದ ಸುಧಾರಾಣಿ, ಶೃತಿ, ಭವ್ಯ ಅವರುಗಳು ಮಾಲಾಶ್ರೀ ನೀಡಿದ ತೀವ್ರ ಪೈಪೋಟಿಯ ನಡುವೆಯೂ ಕದಲದೆ ನಿಂತರಾದರೂ ಮಾಲಾಶ್ರೀಯಷ್ಟು ಯಶಸ್ವಿಯಾಗಲಿಲ್ಲ. ಮೈಸೂರು ಮಲ್ಲಿಗೆಯಂತಹ ಚಿತ್ರಗಳಲ್ಲಿ ಸುಧಾರಾಣಿ ಉತ್ತಮ ಅಭಿನಯ ನೀಡಿದರು. ರಂಜಿತಾ (1993) ದಲ್ಲಿ ಶೃತಿ ಪ್ರಬುದ್ಧ ಅಭಿನಯ ನೀಡಿದರು. ತಾರಾ, ವಿನಯಾಪ್ರಸಾದ್, ಚಂದ್ರಿಕಾ, ಕಾವ್ಯ, ವನಿತಾವಾಸು, ಶಿವರಂಜಿನಿ, ಅಭಿನಯ, ಪ್ರೇಮಾ, ದುರ್ಗಾಶೆಟ್ಟಿ, ರಕ್ಷಿತಾ, ಅನು ಪ್ರಭಾಕರ್, ರಮ್ಯಾ, ಪ್ರಿಯಾಂಕ, ರಾಧಿಕಾ ಮೊದಲಾದವರು ಅಭಿನಯ ಕ್ಷೇತ್ರದಲ್ಲಿ ಹೆಸರು ಮಾಡುತ್ತಿದ್ದಾರೆ. ಹಸೀನಾ ಚಿತ್ರದಲ್ಲಿನ ಅಭಿನಯಕ್ಕಾಗಿ ತಾರಾ ಶ್ರೇಷ್ಠನಟಿ ಪ್ರಶಸ್ತಿಗಳಿಸಿದ್ದಾರೆ (2005). ಬಹು ಭಾಷೆಗಳಲ್ಲಿ ನಟಿಸುವ ನಟಿಯರ ಸಂಖ್ಯೆ ಹೆಚ್ಚುತ್ತಿದೆ. ಇತ್ತೀಚೆಗೆ ಕಣ್ಮರೆಯಾದ ಸೌಂದರ್ಯ ಬಹು ಭಾಷಾ ತಾರೆಯಾಗಿ ಹೆಸರು ಮಾಡಿದ್ದರು. ಅವರು ನಟಿಸಿದ 'ಆಪ್ತಮಿತ್ರ' ಕನ್ನಡದಲ್ಲಿ 2004ರ ಹಿಟ್

ಚಿತ್ರವೆನಿಸಿತು. ಪ್ರಣತಿ, ಮುಮ್ತಾಜ್, ಸೋನಾಲಿ ಜೋಷಿ, ಮೀರಾ, ರಮ್ಯಕೃಷ್ಣ, ಜಾಸ್ಮಿನ್, ರಿಚಾ ಪಲ್ಲೋಟ್, ಸದಾ, ಪ್ರಣತಿ, ಪ್ರೀತಿ ಜಿಂಗಾನಿಯಾ, ಸೋನಾಲಿ, ಸಂಗೀತಾ, ನಿಖಿತಾ, ಹೃಷಿತಾ ಪ್ರಿಯದರ್ಶಿನಿ, ಮನೀಷಾ, ಸ್ಫೂರ್ತಿ ಮೊದಲಾದ ನವನಟಿಯರು; ಮುರಳಿ, ಸುನೀಲ್, ಮಯೂರ್, ಆದಿತ್ಯ, ಧ್ಯಾನ್, ಪ್ರವೀಣ್ ಮೊದಲಾದ ನವನಟರೂ ಚಿತ್ರರಂಗ ಪ್ರವೇಶಿಸಿದ್ದಾರೆ. ಪೋಷಕ ಪಾತ್ರಗಳಲ್ಲಿ ಉಮಾಶ್ರೀ, ಗಿರಿಜಾ ಲೋಕೇಶ್, ಅಂಜಲಿ, ಕಾಮಿನಿಧರನ್ ಹೆಸರಾಗಿದ್ದಾರೆ. ಕನ್ನಡ ಚಿತ್ರರಂಗದಲ್ಲಿ ಹೇಗೆ ಹೊಸ ನಟರುಗಳ ಅವ್ಯಾಹತ ಪ್ರವೇಶವಾಗುತ್ತಿದೆಯೋ ಅದೇ ರೀತಿ ನಿರ್ದೇಶಕರ ಪ್ರವೇಶವೂ ಆಗುತ್ತಿದೆ. ಹಳೆಯ ನಿರ್ದೇಶಕರು ಹೊಸ ಪ್ರಯೋಗಗಳಿಗೆ ಮೈ ಒಡ್ಡಿಕೊಳ್ಳುತ್ತಿದ್ದಾರೆ. ಎಸ್.ವಿ.ರಾಜೇಂದ್ರಸಿಂಗ್ ಬಾಬು, ಸುನಿಲ್‌ಕುಮಾರ್ ದೇಸಾಯಿ, ರಾಜೇಂದ್ರಬಾಬು, ಜೋಸೈಮನ್, ಟಿ.ಎಸ್.ನಾಗಾಭರಣ, ನಾಗತೀಹಳ್ಳಿಚಂದ್ರಶೇಖರ್, ಬರಗೂರು ರಾಮಚಂದ್ರಪ್ಪ ಗಮನಾರ್ಹವಾಗಿ ಹೊಸತನ್ನು ಸಾಧಿಸಿದ್ದಾರೆ. ಶಿವಮಣಿ, ಎಸ್.ನಾರಾಯಣ್, ಎಸ್.ಮಹೇಂದರ್, ಕೋಡ್ಲುರಾಮಕೃಷ್ಣ, ಓಂ ಪ್ರಕಾಶ್ ರಾವ್, ಬಿ.ರಾಮಮೂರ್ತಿ, ಸೀತಾರಾಮ ಕಾರಂತ್, ಟಿ.ಎನ್.ಸೀತಾರಾವ್, ಎನ್.ಎಸ್.ಶಂಕರ್, ನಾಗಣ್ಣ ಮೊದಲಾದವರೆಲ್ಲ ಹೊಸತನಕ್ಕಾಗಿ ದುಡಿಯುತ್ತಿದ್ದಾರೆ.



ತಾಯಿಸಾಹೇಬ ಚಿತ್ರದಲ್ಲಿ ಜಯಮಾಲ

ಕನ್ನಡಿಗರಾದ ಸಂಕಲನಕಾರ ಸುರೇಶ ಅರಸ್ ಬಾಂಬೆ ಚಿತ್ರಕ್ಕಾಗಿ ರಾಷ್ಟ್ರಪ್ರಶಸ್ತಿ ಪಡೆದದ್ದನ್ನು ಮತ್ತು ಅನಿಲ್‌ಮಲ್ನಾಡ್ ತೆಲುಗು ಚಿತ್ರಕ್ಕಾಗಿ ರಾಷ್ಟ್ರಪ್ರಶಸ್ತಿ ಪಡೆದದ್ದನ್ನು ಈ ಪ್ರಶಸ್ತಿ ಪಡೆದ ಕನ್ನಡಿಗ ಸಂಕಲನಕಾರರು ಎಂಬ ಕಾರಣಕ್ಕೆ ಉಲ್ಲೇಖಿಸಬಹುದು. (ಜಿ.ಎಂಯು.)

**ಪ್ರಶಸ್ತಿಗಳು :** ಕನ್ನಡ ಚಿತ್ರರಂಗಕ್ಕೆ ಅಪೂರ್ವಸೇವೆ ಸಲ್ಲಿಸಿರುವ ನಟ ರಾಜ್‌ಕುಮಾರ್ ಮತ್ತು ನಿರ್ದೇಶಕ ಕಣಗಾಲ್ ಪುಟ್ಟಣ್ಣ ಅವರ ಹೆಸರಿನಲ್ಲಿ ಒಂದು ಲಕ್ಷರೂಪಾಯಿಗಳ ಪ್ರಶಸ್ತಿಯನ್ನು ಕರ್ನಾಟಕ ಸರ್ಕಾರ ನೀಡುತ್ತಾ ಬಂದಿದೆ. 1992-93ನೆಯ ವರ್ಷದಿಂದ ರಂಗಭೂಮಿಯ ಪ್ರಸಿದ್ಧ ನಟರಾದ ಗುಬ್ಬಿ ವೀರಣ್ಣನವರ ಹೆಸರಿನಲ್ಲಿ ಗುಬ್ಬಿವೀರಣ್ಣ ಪ್ರಶಸ್ತಿ ಆರಂಭಿಸಲಾಯಿತು. ಪ್ರಥಮ ವರ್ಷ ಈ ಪ್ರಶಸ್ತಿ ರಾಜ್‌ಕುಮಾರ್‌ರವರಿಗೆ ಸಂದಿತು. ಅನಂತರ ಈ ಪ್ರಶಸ್ತಿಗೆ ಡಾ.ರಾಜ್‌ಕುಮಾರ್ ಪ್ರಶಸ್ತಿ ಎಂದು ಮರುನಾಮಕರಣ ಮಾಡಲಾಯಿತು. ಗುಬ್ಬಿ ವೀರಣ್ಣ ಪ್ರಶಸ್ತಿಯನ್ನು ಈಗ ವೃತ್ತಿ ರಂಗಭೂಮಿಗೆ ಗಣನೀಯ ಸೇವೆಸಲ್ಲಿಸಿದ ಕಲಾವಿದರಿಗೆ ನೀಡಲಾಗುತ್ತಿದೆ. ಇಲ್ಲಿಯವರೆಗೆ ಡಾ.ರಾಜ್‌ಕುಮಾರ್ ಪ್ರಶಸ್ತಿಯನ್ನು ಕೆ.ಎಸ್.ಅಶ್ವತ್ಥ್ (1993-94), ಪಂಡರೀಬಾಯಿ (1994-95), ಆರ್.ಲಕ್ಷ್ಮಣ್ (1995-96), ಎಂ.ಎನ್.ಬಸವರಾಜಯ್ಯ (1996-97), ಎಂ.ವಿ.ರಾಜಮ್ಮ (1997-98), ವಾದಿರಾಜ್ (1998-99), ಎಂ.ಲೀಲಾವತಿ (1999-2000), ವಿಜಯಭಾಸ್ಕರ್ (2000-01), ಪ್ರತಿಮಾದೇವಿ ಶಂಕರ್‌ಸಿಂಗ್ (2001-02), ಕೆ.ಸಿ.ಎನ್.ಗೌಡ (2003-04) ಪಡೆದಿದ್ದಾರೆ.

ಕಣಗಾಲ್ ಪುಟ್ಟಣ್ಣ ಪ್ರಶಸ್ತಿಯನ್ನು 1986-87ರಿಂದ ನೀಡಲಾಗುತ್ತಿದೆ. ಪ್ರಥಮ ವರ್ಷ ಹುಣಸೂರು ಕೃಷ್ಣಮೂರ್ತಿ ಈ ಪ್ರಶಸ್ತಿ ಪಡೆದರು. ಅನಂತರ ಜಿ.ವಿ.ಅಯ್ಯರ್ (1987-88), ಬಿ.ಎಸ್.ರಂಗ (1988-89), ಟಿ.ಎನ್.ಬಾಲಕೃಷ್ಣ (1989-90), ವೈ.ಆರ್.ಸ್ವಾಮಿ (1990-91), ಎಂ.ಆರ್.ವಿಠ್ಠಲ್ (1991-92), ಗೀತಪ್ರಿಯ (1992-93), ಸಿದ್ದಲಿಂಗಯ್ಯ (1993-94), ಕೆ.ಎಸ್.ಎಲ್.ಸ್ವಾಮಿ (1994-95), ದೊರೆ-ಭಗವಾನ್ (1995-96), ಎಸ್.ವಿ.ರಾಜೇಂದ್ರಸಿಂಗ್ ಬಾಬು (1996-97), ಗಿರೀಶ್‌ಕಾಸರವಳ್ಳಿ (1997-98), ಟಿ.ಎಸ್.ನಾಗಾಭರಣ (1998-99), ವಿ.ಸೋಮಶೇಖರ್ (1999-2000), ಕೆ.ವಿ.ಜಯರಾಂ (2000-01), ಎಂ.ಎಸ್.ರಾಜಶೇಖರ್ (2001-02), ವಿಜಯಾ ರೆಡ್ಡಿ (2003-04) ಪಡೆದಿದ್ದಾರೆ.

**ಜೀವಿತಾವಧಿ ಕೊಡುಗೆ ಗೌರವ ಪ್ರಶಸ್ತಿ :** ಕನ್ನಡ ಚಲನಚಿತ್ರ ರಂಗಕ್ಕೆ ಜೀವಮಾನದ ವಿಶಿಷ್ಟ ಕೊಡುಗೆ ಸಲ್ಲಿಸಿದವರಿಗಾಗಿ ಐವತ್ತು ಸಾವಿರ ರೂಪಾಯಿಗಳ ನಗದು ಬಹುಮಾನ ನೀಡಲಾಗುತ್ತಿದೆ.

**ತುಳು ಚಲನಚಿತ್ರಗಳು :** ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಪ್ರಚಲಿತ ಭಾಷೆಯಾದ ತುಳುವಿನಲ್ಲಿ ಚಲನಚಿತ್ರಗಳ ತಯಾರಿಕೆ ಆರಂಭವಾದದ್ದು ಎಪ್ಪತ್ತರ ದಶಕದಲ್ಲಿ. ಕೆಲವು ಕನ್ನಡ ಚಿತ್ರಗಳನ್ನು ನಿರ್ಮಿಸಿದ್ದ ರಾಜನ್ ಹಾಗೂ ವೃತ್ತಿಯಲ್ಲಿ ದರ್ಜಿಯಾಗಿದ್ದು ಅಭಿನಯ ಕಲೆಯಲ್ಲಿ ಆಸಕ್ತಿ ಇದ್ದ ಕೆ.ಎನ್.ಟೇಲರ್ ಎಂಬುವರಿಬ್ಬರೂ ಪ್ರತ್ಯೇಕವಾಗಿ ತುಳು ಚಿತ್ರಗಳ ನಿರ್ಮಾಣಕ್ಕೆ ಏಕಕಾಲದಲ್ಲಿ ತೊಡಗಿದ್ದರು. ರಾಜನ್ ಅವರ ಎನ್ನತಂಗಡಿ ಎಂಬ ಚಿತ್ರ ಮೊದಲು ಬಿಡುಗಡೆಯಾಯಿತು. ಈ ಚಿತ್ರದಲ್ಲಿ ನಿರ್ದೇಶಕ ರಾಜನ್ ಅವರೇ ನಾಯಕರಾಗಿದ್ದರು. ಮಲ್ಪೆಯ ಮಧ್ವರಾಜರ ನೆರವಿನಿಂದ ಕೆ.ಎನ್.ಟೇಲರ್ ನಿರ್ಮಿಸಿದ ದಾರೆದ ಬುಡದಿ ಟೇಲರರ ಹಾಸ್ಯ, ಆಕರ್ಷಕ ಹೊರಾಂಗಣ ಚಿತ್ರಗಳಿಂದ ಸಾಕಷ್ಟು ಯಶಸ್ವಿಯಾಯಿತು. ನುರಿತ ನಿರ್ದೇಶಕರಾದ ಆರೂರ್ ಪಟ್ಟಾಭಿ ಇದನ್ನು ನಿರ್ದೇಶಿಸಿದ್ದರು. ಅನಂತರ ಎನ್ನತಂಗಡಿಯಲ್ಲಿ ಅಭಿನಯಿಸಿದ್ದ ತುಳುನಟ ಆನಂದಟೇಲರ್ ಸ್ವಂತ ಚಿತ್ರವನ್ನು ತಯಾರಿಸಿದರು. ಆರೂರ್‌ಪಟ್ಟಾಭಿ ನಿರ್ದೇಶಿಸಿದ ಸೂರ್ಯನಾರಾಯಣ ಚಡಗರ ಕಾದಂಬರಿ ಆಧಾರಿತ ಪಗೆತ ಪುಗೆ ಚಿತ್ರದಲ್ಲಿ ಆನಂದ ಟೇಲರ್ ದ್ವಿಪಾತ್ರ ವಹಿಸಿದ್ದರು. ಇವರೇ ನಿರ್ಮಿಸಿದ ಇನ್ನೊಂದು ಚಿತ್ರ ಕಾಸೆದಾಯ್ ಕಂಡನಿ. ಪ.ಗೋಪಾಲಕೃಷ್ಣ ಎಂಬುವವರು ತಯಾರಿಸಿದ ಸರ್ಪಸಂಕಲೆ ಒಳ್ಳೆಯ ಪ್ರಚಾರವನ್ನು ಪಡೆದುಕೊಂಡರೂ ಬಿಡುಗಡೆ ಕಾಣಲಿಲ್ಲ. ಮಲೆಯಾಳಂ ನಿರ್ದೇಶಕರು ನಿರ್ದೇಶಿಸಿದ ಉಡಲ್ದ ತುಡರ್ ಕೂಡ ಯಶಸ್ಸು ಕಾಣಲಿಲ್ಲ. ತುಳು ಚಿತ್ರಗಳಲ್ಲಿ ಅಪಾರ ಯಶಸ್ಸು ಪಡೆದ ಚಿತ್ರಗಳೆಂದರೆ ಎಂ.ವೈ.ಕೋಲಾ ನಿರ್ಮಿಸಿದ ಬಿಸತ್ತಿ ಬಾಬು ಹಾಗೂ ಕೆ.ಎಂ.ಸುವರ್ಣ ಅವರ ಕೋಟಿಚೆನ್ನಯ್ಯ. ಆರೂರ್ ಪಟ್ಟಾಭಿ ನಿರ್ದೇಶಿಸಿದ ಬಿಸತ್ತಿಬಾಬು ಚಿತ್ರಕ್ಕೆ 72-73ನೆಯ ಸಾಲಿನ ರಾಜ್ಯ ಪ್ರಶಸ್ತಿಯೂ ಬಂದಿದೆ. ಜನಪ್ರಿಯ ಜನಪದ ಕಥೆಯಾಗಿರುವ ಕೋಟಿ ಚೆನ್ನಯ್ಯ ನಿರ್ಮಾಣಕ್ಕೆ ಆಗಿನ ಕಾಲಕ್ಕೆ ಸು.3 ಲಕ್ಷ ರೂಪಾಯಿಗಳ ವೆಚ್ಚವಾಗಿ ತುಳು ಚಿತ್ರಗಳಲ್ಲಿಯೇ ಅತ್ಯಂತ ವೆಚ್ಚದ ನಿರ್ಮಾಣ ಇದಾಗಿತ್ತು. ಶತದಿನೋತ್ಸವವನ್ನು ಆಚರಿಸಿದ ಈ ಮೊದಲ ತುಳು ಚಿತ್ರವನ್ನು ನಿರ್ದೇಶಿಸಿದವರು ಕಾದಂಬರಿಕಾರ ವಿಶುಕುಮಾರ್. ಈ ಚಿತ್ರಕ್ಕೆ 73-74ನೆಯ ಸಾಲಿನ ರಾಜ್ಯ ಪ್ರಶಸ್ತಿ ಬಂದಿದೆ. ಅನಂತರ ಬಂದ ಟೇಲರ್ ಅವರ ಸ್ವಂತ ನಿರ್ದೇಶನದ ಯಾನ್ ಸನ್ಯಾಸಿ ಆಪೆ ಹಾಗೂ ದಂಡಕೇರಿಯವರ ಬಯ್ಯ ಮಲ್ಲಿಗೆ ಅಂಥ ಯಶಸ್ಸನ್ನೇನೂ ಕಾಣಲಿಲ್ಲ. ಕೆ.ಎನ್.ಟೇಲರ್ ಅವರ ನಿರ್ದೇಶನದಲ್ಲಿ ಇನ್ನೊಂದು ಜನಪದ ಕಥೆ ತುಳುನಾಡ ಸಿರಿ ತೆರೆಕಂಡಿದೆ. ಮಂಗಳೂರು, ಉಡುಪಿ ಮತ್ತು ಪುತ್ತೂರು ಈ ಮೂರು ತಾಲ್ಲೂಕುಗಳಲ್ಲಷ್ಟೇ ನಿಜವಾದ ಮಾರುಕಟ್ಟೆ ಇರುವ ತುಳು ಚಿತ್ರಗಳ ತಯಾರಿಕೆ ಅಷ್ಟು ಲಾಭದಾಯಕವಾಗಿಲ್ಲವಾದ್ದರಿಂದ ಸರ್ಕಾರದಿಂದ ಸಹಾಯಧನ ದೊರೆಯುವಂತಿದ್ದರೂ ತುಳು ಚಿತ್ರಗಳ ನಿರ್ಮಾಣ ಅಷ್ಟು ಭರದಿಂದ ಸಾಗುತ್ತಿಲ್ಲ. (ಎಸ್.ಎಸ್.ಎಂಯು.)

**ಚಳ್ಳಕೆರೆ :** ಚಿತ್ರದುರ್ಗ ಜಿಲ್ಲೆಯ ಒಂದು ತಾಲ್ಲೂಕು, ಅದರ ಮುಖ್ಯ ಸ್ಥಳ. ಈ ತಾಲ್ಲೂಕಿನ ಪೂರ್ವದಲ್ಲಿ ಆಂಧ್ರ ಪ್ರದೇಶ ಮತ್ತು ಪಾವಗಡ ತಾಲ್ಲೂಕು, ದಕ್ಷಿಣದಲ್ಲಿ ಹಿರಿಯೂರು ತಾಲ್ಲೂಕು, ಪಶ್ಚಿಮದಲ್ಲಿ ಜಗಳೂರು ಮತ್ತು ಚಿತ್ರದುರ್ಗ ತಾಲ್ಲೂಕು, ಉತ್ತರದಲ್ಲಿ ಬಳ್ಳಾರಿ ಜಿಲ್ಲೆ ಮತ್ತು ಮೊಳಕಾಲ್ಮೂರು ತಾಲ್ಲೂಕು ಇವೆ. 1882ರವರೆಗೆ ಇದಕ್ಕೆ ದೊಡ್ಡೇರಿ ತಾಲ್ಲೂಕು ಎಂಬ ಹೆಸರಿತ್ತು. 1825ರಿಂದ 1866ರವರೆಗೆ ಮೊಳಕಾಲ್ಮೂರು ತಾಲ್ಲೂಕಿನ ಪ್ರದೇಶ ಇದಕ್ಕೆ ಸೇರಿತ್ತು. ಈಗ ತಾಲ್ಲೂಕಿನಲ್ಲಿ ಚಳ್ಳಕೆರೆ, ನಾಯಕನಹಟ್ಟಿ, ಪರಶುರಾಮಪುರ ಮತ್ತು ತಳಕು ಎಂಬ ನಾಲ್ಕು ಹೋಬಳಿಗಳೂ 190 ಹಳ್ಳಿಗಳೂ ಇವೆ. ತಾಲ್ಲೂಕಿನ ವಿಸ್ತೀರ್ಣ 2,059.8ಚ.ಕಿಮೀ. ಜನಸಂಖ್ಯೆ 3,24,822.

ಈ ತಾಲ್ಲೂಕಿನಲ್ಲಿ ಚದರಿದಂತೆ ಕೆಲವು ಕಣಶಿಲೆಯ ಬೆಟ್ಟಗಳಿವೆ. ಉಳಿದ ಭಾಗ ಹಲವು ತೊರೆಗಳಿಂದ ಒಡೆದ ಸ್ವಲ್ಪ ಏರುತಗ್ಗಿನ ಮೈದಾನ ಪ್ರದೇಶವಾಗಿದೆ. ಹೆಚ್ಚು ಭಾಗ ಕಲ್ಲುಮಿಶ್ರಿತ ಕೆಂಪು ಭೂಮಿ. ನೀರಾವರಿಗೆ ಒಳಪಟ್ಟಿರುವ ಭೂಮಿ ವಿನಾ ಉಳಿದ ನೆಲ ಅಷ್ಟೇನೂ ಫಲವತ್ತಾಗಿಲ್ಲ. ತಾಲ್ಲೂಕಿನ ನೈಋತ್ಯ ಭಾಗದಲ್ಲಿ ಸ್ವಲ್ಪ ಮಟ್ಟಿಗೆ ಉತ್ತಮವಾದ ಕಪ್ಪು ಮಣ್ಣಿನ ಪ್ರದೇಶವಿದೆ. ಅನೇಕ ಕಡೆಗಳಲ್ಲಿ ಮಣ್ಣು ಲವಣಯುಕ್ತವಾದ್ದು. ಚಳ್ಳಕೆರೆ ಪಟ್ಟಣದ ಪೂರ್ವಕ್ಕೆ, ಉಲ್ಲವರ್ತಿ ಕಾವಲ್‍ನಲ್ಲಿ ಮಣ್ಣಿನ ಮೇಲ್ಭಾಗದಲ್ಲಿ ಉರುಳೆಯಾಕಾರದ ಹರಳುಗಳ ರೂಪದಲ್ಲಿ ಪಾಟಲವರ್ಣದ ಕುರುಂದ ಶಿಲೆ ದೊರೆಯುತ್ತದೆ.

ಈ ತಾಲ್ಲೂಕಿನ ವಿಸ್ತೃತವಾದ ಅಮೃತಮಹಲ್ ಕಾವಲುಗಳು ಪ್ರಸಿದ್ಧವಾಗಿವೆ. ಸಣ್ಣ ತೊರೆಗಳ ದಡಗಳಲ್ಲಿ ಕೆರೆಯಂಗಳ ಮತ್ತಿತರ ತಗ್ಗು ಪ್ರದೇಶಗಳಲ್ಲಿ ಖರ್ಜೂರದ ಗಿಡಗಳುಂಟು.

ವೇದಾವತಿ ನದಿ ಅತ್ಯಂತ ದಕ್ಷಿಣದ ಅಂಚಿನಲ್ಲಿ ಈ ತಾಲ್ಲೂಕನ್ನು ಪ್ರವೇಶಿಸಿ, ದಕ್ಷಿಣೋತ್ತರವಾಗಿ ಹರಿದು, ಈಶಾನ್ಯ ದಿಕ್ಕಿಗೆ ತಿರುಗಿ ಘಟಪರ್ತಿ ಎಂಬಲ್ಲಿ ಬಳ್ಳಾರಿ ಜಿಲ್ಲೆಯನ್ನು ಪ್ರವೇಶಿಸುತ್ತದೆ. ನಾಯಕನಹಟ್ಟಿ ಹೊಳೆ ಮತ್ತು ಗರಣಿ ಇದರ ಉಪನದಿಗಳು. ಈ ನದಿಯ ನೀರನ್ನು ವ್ಯವಸಾಯಕ್ಕೆ ಉಪಯೋಗಿಸಿಕೊಳ್ಳಲಾಗುತ್ತಿದೆ. ನಂದಿಹಳ್ಳಿಯಲ್ಲಿ ನಿರ್ಮಾಣವಾಗುವ ಅಣೆಕಟ್ಟಿನಿಂದ ಈ ತಾಲ್ಲೂಕಿಗೆ ಹೇರಳವಾದ ನೀರು ಒದಗುವ ಭರವಸೆಯುಂಟು. ಪಾವಗಡ ತಾಲ್ಲೂಕಿನಲ್ಲಿ ಹುಟ್ಟಿ, ಈ ತಾಲ್ಲೂಕಿನ ಕಡೆಗೆ ಹರಿಯುವ ಮತ್ತೊಂದು ಪುಟ್ಟ ಉಪನದಿ ಈ ತಾಲ್ಲೂಕಿನ ಆಗ್ನೇಯ ಭಾಗಕ್ಕೆ ನೀರನ್ನು ಒದಗಿಸುತ್ತದೆ. ವಾಯುವ್ಯ ಮೂಲೆಯ ಪ್ರದೇಶ ಹಗರಿ ನದಿಯ ಕಣಿವೆಗೆ ಸೇರಿದ್ದು ಈ ನದಿಯೇ ತಾಲ್ಲೂಕಿನ ವಾಯುವ್ಯದ ಎಲ್ಲೆ.

ಇದು ಚಿತ್ರದುರ್ಗ ಜಿಲ್ಲೆಯ ಅತ್ಯಂತ ಕಡಿಮೆ ಮಳೆ ಬೀಳುವ ತಾಲ್ಲೂಕು. ಸರಾಸರಿ ವಾರ್ಷಿಕ ಮಳೆ 404.54ಮಿಮೀ. ಈ ತಾಲ್ಲೂಕಿನ ಕೆರೆಗಳ ಪೈಕಿ ಪರಶುರಾಮಪುರದ ಕೆರೆ ಅತ್ಯಂತ ದೊಡ್ಡದು. ನಾರಾಯಣಪುರ ಅಣೆಕಟ್ಟಿನಿಂದ ಒಂದು ಪೋಷಕ ಕಾಲುವೆಯನ್ನು ಇದಕ್ಕೆ ಸೇರಿಸಲಾಗಿದೆ. ಈ ತಾಲ್ಲೂಕಿನ ಅತ್ಯಂತ ಹಳೆಯ ಕೆರೆಯಾದ ನಾಯಕನಹಟ್ಟಿ ಹಿರೆಕೆರೆ ಸು.300 ವರ್ಷಗಳ ಹಿಂದೆ ತಿಪ್ಪೇರುದ್ರಸ್ವಾಮಿಯಿಂದ ನಿರ್ಮಿತವಾದ್ದು. ರಾಮಸಾಗರ ಕೆರೆ, ಮಣ್ಣಿಕೋಟೆ, ಕೋಡಿಹಳ್ಳಿ ಕೆರೆ, ಮೀರಸಾಬಿಹಳ್ಳಿ ರಾಣಿಕೆರೆ - ಇವು ತಾಲ್ಲೂಕಿನ ಇತರ ಕೆರೆಗಳು. ವೇದಾವತಿ ನದಿಯ ನೀರನ್ನು ಎರಡೂ ದಡಗಳಲ್ಲಿ ಮೇಲೆತ್ತಿ ವ್ಯವಸಾಯಕ್ಕೆ ಉಪಯೋಗಿಸಲಾಗುತ್ತಿದೆ. ಇತ್ತೀಚೆಗೆ ನಾರಾಯಣಪುರದಲ್ಲಿ ನಿರ್ಮಾಣವಾದ ಅಣೆಕಟ್ಟಿನ ಸಹಾಯದಿಂದ ಈ ತಾಲ್ಲೂಕಿಗೆ ನೀರಾವರಿ ಸೌಲಭ್ಯ ಒದಗಿದೆ.

ಈ ತಾಲ್ಲೂಕಿನಲ್ಲಿ ಖುಷ್ಕಿ ಬೆಳೆಗಳೇ ಮುಖ್ಯ. ಸಾವೆ, ಸಜ್ಜೆ, ರಾಗಿ, ನವಣೆ, ತೊಗರಿ, ಕಡಲೆ, ತಂಬಾಕು, ನೆಲಗಡಲೆ ಮುತ್ತಿತರ ಎಣ್ಣೆಯ ಬೀಜಗಳು ಮುಖ್ಯ ಬೆಳೆಗಳು. ಇವುಗಳಲ್ಲಿ ಕೆಲವನ್ನು ನೀರಾವರಿ ಅನುಕೂಲವಿರುವೆಡೆಗಳಲ್ಲೂ ಬೆಳೆಯಲಾಗುತ್ತಿದೆ. ಕಪ್ಪುಮಣ್ಣು ಇರುವ ಪ್ರದೇಶಗಳಲ್ಲಿ ಹತ್ತಿ ಬೆಳೆಯುತ್ತಾರೆ. ನೀರಿನ ಅನುಕೂಲವಿರುವೆಡೆಗಳಲ್ಲಿ ಬತ್ತ ಬೆಳೆಯುತ್ತಾರೆ. ಕೆರೆಗಳ ಬಳಿಯಲ್ಲಿ ಕೆಲವೆಡೆ ತೆಂಗು ಮತ್ತು ವೀಳೆಯದೆಲೆ ತೋಟಗಳಿವೆ. ನಾಲಾ ಅನುಕೂಲದಿಂದಲೂ ತೋಟದ ಬೆಳೆಗಳನ್ನು ಬೆಳೆಯುತ್ತಾರೆ. ಉಲ್ಲವರ್ತಿ ಕಾವಲಿನಲ್ಲಿ ದನಕರುಗಳನ್ನು ಸಾಕುವ ಕ್ಷೇತ್ರಗಳುಂಟು.

ಬೆಂಗಳೂರು-ಬಳ್ಳಾರಿ ಮಾರ್ಗ ಈ ತಾಲ್ಲೂಕಿನ ಮೂಲಕ ಹಾಯ್ದು ಹೋಗುತ್ತದೆ. ಚಿತ್ರದುರ್ಗದಿಂದ ಬರುವ ರಸ್ತೆಯೊಂದು ಇದನ್ನು ಚಳ್ಳಕೆರೆಯಲ್ಲಿ ಸಂಧಿಸುತ್ತದೆ. ಚಳ್ಳಕೆರೆಯಿಂದ ಪಾವಗಡ ಮತ್ತು ಜಗಳೂರುಗಳಿಗೆ ರಸ್ತೆಗಳುಂಟು. ಈ ತಾಲ್ಲೂಕಿನಲ್ಲಿ ರೈಲು ಮಾರ್ಗವಿಲ್ಲ. ಬಹಳ ಹತ್ತಿರದ ರೈಲು ನಿಲ್ದಾಣವೆಂದರೆ ಚಿತ್ರದುರ್ಗ.

ನಿಡುಗಲ್ ಮನೆತನದವರಿಂದ ಸ್ಥಾಪಿತವಾದ ದೊಡ್ಡೇರಿ, ಚಳ್ಳಕೆರೆಗೆ ಪೂರ್ವದಲ್ಲಿ ಸು.6ಕಿಮೀ ದೂರದಲ್ಲಿದೆ. ಈ ಊರು ಮುಂದೆ ಶಿರಾ ನವಾಬರ ಮತ್ತು ಹೈದರ್ ಅಲಿಯ ಕಾಲದಲ್ಲಿ ಒಂದು ಮುಖ್ಯ ಸ್ಥಳವಾಗಿತ್ತಲ್ಲದೆ 1882ರ ವರೆಗೆ ತಾಲ್ಲೂಕಿನ ಕೇಂದ್ರವೂ ಆಗಿತ್ತು. ಹಿಂದೆ ಇದು ಕಾಗದದ ಕೈಗಾರಿಕೆಗೆ ಹೆಸರಾಗಿತ್ತು. ಇಲ್ಲಿಯ ಕಾಗದದ ಹಾಳೆಗಳ ಪ್ರಮಾಣ ವಿಶಿಷ್ಟವಾಗಿದ್ದು ಅದನ್ನು ದೊಡ್ಡೇರಿ ಗಜ ಎಂದೇ ಕರೆಯಲಾಗುತ್ತಿತ್ತು. ನಾಯಕನಹಟ್ಟಿ ಈ ತಾಲ್ಲೂಕಿನ ಇನ್ನೊಂದು ಮುಖ್ಯ ಸ್ಥಳ. ನಾಯಕನಹಟ್ಟಿಯ ಕಲ್ಲೇದೇವಪುರ, ಗೌರಸಮುದ್ರದ ಜಾತ್ರೆಗಳು ಪ್ರಸಿದ್ಧವಾದವು.

ಚಳ್ಳಕೆರೆ ಈ ತಾಲ್ಲೂಕಿನ ಆಡಳಿತ ಕೇಂದ್ರ. ಬೆಂಗಳೂರು-ಬಳ್ಳಾರಿ ರಸ್ತೆಯಲ್ಲಿ ಚಿತ್ರದುರ್ಗದಿಂದ ಈಶಾನ್ಯಕ್ಕೆ 29ಕಿಮೀ ದೂರದಲ್ಲಿದೆ. ಜನಸಂಖ್ಯೆ 49,065. ಪ್ರತಿ ಭಾನುವಾರ ಇಲ್ಲಿ ನಡೆಯುವ ಸಂತೆ ಚಿತ್ರದುರ್ಗ ಜಿಲ್ಲೆಯಲ್ಲಿ ಅತ್ಯಂತ ದೊಡ್ಡದು ಹಾಗೂ ಪ್ರಸಿದ್ಧವಾದ್ದು. ನೆಲಗಡಲೆ, ಹತ್ತಿ, ಬತ್ತ ಇವು ಇಲ್ಲಿ ವ್ಯಾಪಾರವಾಗುವ ಸರಕುಗಳು. ಚಳ್ಳಕೆರೆ ಪಟ್ಟಣದಲ್ಲಿ ಒಂದು ನಿಯಂತ್ರಿತ ಮಾರುಕಟ್ಟೆಯೂ ಉಂಟು. ಈ ಪಟ್ಟಣದ ದೇವತೆ ಚಳ್ಳಕೆರೆ ಅಮ್ಮ. ಇಲ್ಲಿಯ ಪುರ ಪ್ರೌಢಶಾಲೆ ಇಡೀ ಜಿಲ್ಲೆಯಲ್ಲೇ ಹಳೆಯದು. ಇಲ್ಲಿ ಅನೇಕ ಎಣ್ಣೆ ಗಿರಣಿಗಳುಂಟು. ಚಳ್ಳಕೆರೆ ಪಟ್ಟಣದಲ್ಲೂ ತಾಲ್ಲೂಕಿನ ಅನೇಕ ಕಡೆಗಳಲ್ಲೂ ಅನೇಕ ಹತ್ತಿ ಕೈಮಗ್ಗಗಳುಂಟು. ಚಳ್ಳಕೆರೆ ವ್ಯಾಪಾರ ಕೇಂದ್ರವಾಗಿ ವಿಸ್ತಾರಗೊಳ್ಳುತ್ತಿದೆ. ಇಡೀ ಜಿಲ್ಲೆಗೆ ಇಲ್ಲಿಂದ ಉತ್ತಮ ಮಾರ್ಗ ಸಂಪರ್ಕವುಂಟು. ಇಲ್ಲಿ ಪುರಸಭಾಡಳಿತವಿದೆ. (ಎ.ಕೆ.)

**ಚಾಂದಬೀಬಿ :** ಖ್ಯಾತ ವೀರಾಗ್ರಣಿ. ಬಿಜಾಪುರದ ಸುಲ್ತಾನ ಅಲಿ ಆದಿಲ್ ಷಾನ (1558-80) ಪತ್ನಿ. ಅಹಮದ್‍ನಗರದ ಸುಲ್ತಾನ ಹುಸೈನ್ ನಿಜಾಮ್ ಷಾನ ಪುತ್ರಿ. ಅಲಿ ಆದಿಲ್ ಷಾ ತೀರಿಕೊಂಡಾಗ,



ರಾಣಿ ಚಾಂದಬೀಬಿ ತನ್ನ ಗಂಡನ ತಮ್ಮನ ಮಗನಾದ ಇಬ್ರಾಹೀಮನಿಗೆ ಪಟ್ಟಕಟ್ಟಿ ತಾನೇ ಆಡಳಿತಸೂತ್ರ ವಹಿಸಿದಳು. ಈಕೆಯ ಆಳಿಕೆ ಜನಪ್ರಿಯವಾಯಿತು. ಆದರೆ ಅಂದಿನ ಸ್ಥಿತಿಯಲ್ಲಿ ರಾಜ್ಯದ ವಜೀರರು ಪ್ರಬಲರಾಗಿದ್ದರು. ಕಮಾಲ್ ಖಾನ್ ಎಂಬ ವಜೀರ ರಾಜ್ಯಾಡಳಿತವನ್ನು ತನ್ನ ಕೈಗೇ ತೆಗೆದುಕೊಳ್ಳುವ ಪ್ರಯತ್ನ ನಡೆಸಿದ್ದ. ಚಾಂದಬೀಬಿ ಕಿಸ್ವರ್ ಖಾನ್ ಎಂಬುವನನ್ನು ನಿಯೋಜಿಸಿ ಕಮಾಲ್ ಖಾನನನ್ನು ಕೊಲೆ ಮಾಡಿಸಿದಳು. ಕಿಸ್ವರ್ ಖಾನನಾದರೋ ಅಧಿಕಾರದಾಹಿಯಾಗಿ ಚಾಂದಬೀಬಿಯನ್ನೇ ಸಾತಾರಾದ ಸೆರೆಗಟ್ಟಿದ. ಆದರೆ ರಾಜ್ಯದಲ್ಲಿದ್ದ ಅಬಿಸೀನಿಯದ ಸೈನಿಕರು ಚಾಂದಬೀಬಿಯನ್ನು ಸೆರೆಯಿಂದ ಬಿಡಿಸಿದರು. ಕಿಸ್ವರ್ ಖಾನ್ ಓಡಿಹೋದ. ಕೆಲಕಾಲಾನಂತರ ಚಾಂದಬೀಬಿ ಬಿಜಾಪುರವನ್ನು ಬಿಟ್ಟು ತನ್ನ ತೌರಾದ ಅಹಮದ್‍ನಗರಕ್ಕೆ ತೆರಳಿದಳು. ಅಲ್ಲಿ ಆಗ ಈಕೆಯ ಸೋದರನಾದ ಬುರ್ಹಾನ್ ಷಾ ಅಹಮದ್ ನಗರದ ಸುಲ್ತಾನನಾಗಿದ್ದ. ಆತ ತನ್ನ ಮಗ ಇಬ್ರಾಹಿಂನನ್ನು ತನ್ನ ಉತ್ತರಾಧಿಕಾರಿಯೆಂದು ನೇಮಿಸಿದಾಗ, ಆ ಆಯ್ಕೆಯನ್ನು ಅವನ ಸೇನಾನಾಯಕ ವಿರೋಧಿಸಿದ. ಪರಿಣಾಮವಾಗಿ ಅವರ ನಡುವೆ ತೀವ್ರ ಹೋರಾಟಗಳುಂಟಾದುವು.

ಬುರ್ಹಾನನ ಮರಣಾನಂತರ ಇಬ್ರಾಹೀಮ್ ತನ್ನ ಅತ್ತೆಯಾದ ಚಾಂದಬೀಬಿಯ ಸಹಾಯದಿಂದ ಅಧಿಕಾರ ರೂಢನಾದರೂ ಬಿಜಾಪುರದ ಆದಿಲ್‍ಷಾನೊಡನೆ ನಡೆದ ಒಂದು ಕದನದಲ್ಲಿ ಮಡಿದ (1595). ಈತನ ಮಗ ಬಹಾದೂರನನ್ನು ರಾಜ್ಯದ ವಾರಸುದಾರನೆಂದು ಚಾಂದಬೀಬಿ ಘೋಷಿಸಿ ಆತನಿಗೆ ಬೆಂಬಲವಾಗಿ ನಿಂತಳು. ಆದರೆ ಅಹಮದ್ ಎಂಬಾತ ಇದನ್ನು ತಿರಸ್ಕರಿಸಿ ಯುದ್ಧಕ್ಕೆ ಅಣಿಯಾದ. ಅಹಮದ್‍ನಗರದ ಈ ಆಂತರಿಕ ಕಲಹಗಳ ಉಪಯೋಗ ಪಡೆದು ಮುಗಲ್ ರಾಜಕುಮಾರ ಮುರಾದ ಅಹಮದ್‍ನಗರದ ಮೇಲೆ ಏರಿ ಹೋದ. ಆಗ ಚಾಂದಬೀಬಿ ಸ್ವತಃ ರಣರಂಗಕ್ಕೆ ಇಳಿದಳು. ಕಲಿತನದಿಂದ ಕಾದಾಡಿ ಮುಗಲ್ ಸೈನ್ಯದ ಒತ್ತಡವನ್ನು ಹಿಮ್ಮೆಟ್ಟಿಸಿದ್ದಳು. ಕೋಟೆಯನ್ನು ಭೇದಿಸಲು ಶತ್ರುಗಳು ಹೂಡಿದ ತಂತ್ರಗಳನ್ನು ನಾಶಗೊಳಿಸಿದಳಲ್ಲದೆ, ತನ್ನ ನಂಬುಗೆಯ ಸೇನಾಪತಿಗಳಾದ ಷಾ ಅಲಿ ಮತ್ತು ಅಭಂಗ್ ಖಾನರ ನೆರವಿನಿಂದ

ಮುಗಲರ ಸೈನ್ಯದ ಮೇಲೆ ಆಕ್ರಮಣ ಮಾಡಿದಳು. ಈ ವೇಳೆಗೆ ಬಿಜಾಪುರದ ಸೈನ್ಯವೂ ಈಕೆಯ ಸಹಾಯಕ್ಕೆ ಧಾವಿಸಿತು.ಇನ್ನು ಕದನ ಹೂಡಿ ಫಲವಿಲ್ಲವೆಂದು ಬಗೆದ ಮುರಾದ ಒಪ್ಪಂದಕ್ಕೆ ಹಾತೊರೆದ. ಚಾಂದಬೀಬಿಯೂ ಇದಕ್ಕೆ ಸಿದ್ಧಳಾಗಿದ್ದುದರಿಂದ ತಾತ್ಕಾಲಿಕವಾಗಿ ಇಬ್ಬರ ನಡುವಣ ಹೋರಾಟಗಳು ಕೊನೆಗೊಂಡುವು. ಆದರೆ ಬೀರಾರ್ ಕೋಟೆಯನ್ನು ಈಕೆ ಮುಗಲರಿಗೆ ಒಪ್ಪಿಸಬೇಕಾಯಿತು.

ಶತ್ರುವಿನ ಮುತ್ತಿಗೆಯ ಕಾಲದಲ್ಲಿ ಅಹಮದ್‍ನಗರದ ರಾಜಮನೆತನದವರ ಅಂತಃಕಲಹಗಳು ಸ್ವಲ್ಪಕಾಲ ನಿಂತಿದ್ದುವಾದರೂ ಈ ಕದನ ನಿಲುಗಡೆ ಒಪ್ಪಂದವೇರ್ಪಟ್ಟ ಕೂಡಲೇ ಹಳೆಯ ವೈಮನಸ್ಯಗಳು ಪುನಃ ತಲೆ ಎತ್ತಿದುವು. ಮುಗಲರ ಕಾಟದಿಂದ ದೂರವಿರಲು ಈಕೆ ರಾಜಧಾನಿಯನ್ನು ಜುನ್ನರ್‍ಗೆ ಸ್ಥಳಾಂತರಿಸಬಯಸಿದಳು. ಆದರೆ ಅಹಮದ್‍ನಗರವನ್ನು ಈಕೆ ಮುಗಲರಿಗೆ ಹಸ್ತಾಂತರಿಸುತ್ತಿದ್ದಾಳೆಂದು ಈಕೆಯ ವಿರೋಧಿಗಳು ಅಪಪ್ರಚಾರ ಆರಂಭಿಸಿ, ಪ್ರಜೆಗಳು ಇವಳಲ್ಲಿರಿಸಿದ್ದ ನಂಬುಗೆ ಸಡಿಲಗೊಳ್ಳುವಂತೆ ಮಾಡಿದರು. ನೆಹಂಗ್ ಖಾನ್ ಎಂಬ ಈಕೆಯ ವಿರೋಧಿ ನಾಯಕ ಈಕೆ ಮುಗಲರೊಡನೆ ಏರ್ಪಡಿಸಿಕೊಂಡಿದ್ದ ಒಪ್ಪಂದವನ್ನು ಉಲ್ಲಂಘಿಸಿ, ಇವಳ ಅನುಜ್ಞೆಯನ್ನು ಬದಿಗೆ ಸರಿಸಿ ಬೀರಾರಿಗೆ ಮುತ್ತಿಗೆ ಹಾಕಿದ. ಆದರೆ ಮುಗಲರ ಸೈನ್ಯ ಇವನನ್ನು ಸೋಲಿಸಿ ಹಿಮ್ಮೆಟ್ಟಿಸಿತು.

ಇಷ್ಟಾದರೂ ಚಾಂದಬೀಬಿಯ ವಿರೋಧಿಗಳು ಇವಳನ್ನು ದ್ವೇಷಿಸುತ್ತಲೇ ಇದ್ದರು. ರಾಜ್ಯದ ಹಿತಕ್ಕೆ ಮುಗಲರೊಡನೆ ಸ್ನೇಹ ಆವಶ್ಯಕವೆಂಬ ಇವಳ ಅಭಿಪ್ರಾಯವನ್ನು ಈಕೆಯ ವಿರೋಧಿಗಳು ಅಲ್ಲಗಳೆದರು. 1600ರಲ್ಲಿ ಅಕ್ಬರನ ಸೈನ್ಯ ಅಹಮದ್‍ನಗರವನ್ನು ಮುತ್ತಿದಾಗ, ಈಕೆ ಒಪ್ಪಂದ ಮಾಡಿಕೊಳ್ಳುವ ಇಚ್ಛೆ ವ್ಯಕ್ತಪಡಿಸಿದಳು. ಇದಕ್ಕೆ ಇವಳ ಪ್ರತಿಪಕ್ಷದವರ ವಿರೋಧವಿತ್ತು. ಕೋಟೆಯನ್ನು ಶತ್ರುಗಳಿಂದ ಕಾಪಾಡಲು ಇವಳು ಎಲ್ಲ ಜಾಗರೂಕತೆಯನ್ನೂ ವಹಿಸಿ ಹೋರಾಡುತ್ತಿದ್ದಾಗ, ಈಕೆಯ ಪಕ್ಷದವನೇ ಆದ ಜಿಲ್ಲಾ ಖಾನನೂ ಅವನ ಅನುಯಾಯಿಗಳೂ ಇವಳನ್ನು ಮೋಸದಿಂದ ಕೊಂದರು. ಇದರ ಫಲವಾಗಿ ಅಹಮದ್‍ನಗರ ಮುಗಲರ ಕೈಸೇರಿತು.

ಅಲಿ ಆದಿಲ್‍ಷಾ ಇವಳ ಹೆಸರಿನಲ್ಲಿ ಕಟ್ಟಿಸಿದ ಬಿಜಾಪುರದ ಚಾಂದ್ ಬಾವಡಿ, ಇವಳೇ ಕಟ್ಟಿಸಿದ ಗುಲ್ಬರ್ಗದ ಹೀರಾಪುರ ಮಸೀದಿ ಚಾಂದಬೀಬಿಯ ನೆನಪಿನಲ್ಲಿ ಕರ್ನಾಟಕದಲ್ಲಿ ಉಳಿದಿವೆ. (ಬಿ.ಆರ್.ಜಿ.)

**ಚಾಟುವಿಠಲನಾಥ** : ಸು.1519. ಕನ್ನಡ ಭಾಗವತದ ಹನ್ನೊಂದು ಹನ್ನೆರಡನೆಯ ಸ್ಕಂಧಗಳನ್ನು ರಚಿಸಿದ ಕವಿ. ಚಾರುವಿಠಲನೆಂದೂ ಕೆಲವು ಪ್ರತಿಗಳಲ್ಲಿ ಹೇಳಿದೆ. ಏಕಾದಶಸ್ಕಂಧದ ಮೂವತ್ತಾರು ಸಂಧಿಗಳ ಸಾವಿರದ ಐನೂರ ನಲವತ್ತೆರಡು ಪದ್ಯಗಳನ್ನೂ ಹನ್ನೆರಡನೆಯ ಸ್ಕಂಧದ ಎರಡು ಸಂಧಿಗಳ ಒಟ್ಟು ಎಂಬತ್ತೆಂಟು ಪದ್ಯಗಳನ್ನೂ ರಚಿಸಿದನೆಂದು ಕವಿ ಆಯಾ ಸ್ಕಂಧದ ಕಡೆಯಲ್ಲಿ ಹೇಳಿಕೊಂಡಿದ್ದಾನೆ. ಅಲ್ಲದೆ ಗ್ರಂಥದ ಕೊನೆಯ ಪದ್ಯದಲ್ಲಿ ಭಾಗವತವನ್ನು 'ಕನ್ನಡಿಸಿದನು ಸತ್ಕವಿ ಚಾಟುವಿಠಲನಾಥನರ್ತಿಯಲಿ' ಎಂದು ಹೇಳಿಕೊಂಡಿದ್ದಾನೆ. ಇದರಿಂದ ಭಾಗವತದ ಹನ್ನೆರಡು ಸ್ಕಂಧಗಳನ್ನೂ ಚಾಟುವಿಠಲನೆಂಬ ಹೆಸರಿನ ಕವಿಯೇ ಬರೆದನೆಂದು ಭಾವಿಸಬಹುದಾಗಿದೆ. ಆದರೆ ಚಾಟುವಿಠಲನಾಥನೆಂಬ ಹೆಸರು ಕನ್ನಡ ಭಾಗವತದ ಇನ್ನಾವ ಸ್ಕಂಧದಲ್ಲಿಯೂ ಬಂದಿಲ್ಲ. 'ಇದು ಸದಾನಂದಾಖ್ಯ ಯೋಗಿಯ ತೊದಲುನುಡಿ' 'ಗೋಪಿನಾಥನು ಮಂಗಳವನೀವನು ಸದಾನಂದಾಖ್ಯ ಮುನಿವರಗೆ,' 'ಯೋಗೀಂದ್ರನಖಿಳೋದಿತ ಸದಾನಂದ ಮುದದೊಳಭಿವರ್ಣಿಸಿದಂ', ಎಂಬ ವಾಕ್ಯಗಳು ಕನ್ನಡ ಭಾಗವತದ ಬೇರೆ ಬೇರೆ ಭಾಗಗಳಲ್ಲಿ ಬಂದಿವೆ. ಇದರಿಂದ ಕನ್ನಡ ಭಾಗವತಕಾರನ ಹೆಸರು ಸದಾನಂದನೆಂದಿರಬಹುದೆಂಬ ಸಂಶಯ ಬರುತ್ತದೆ. ಯೋಗಿ, ಯೋಗೀಂದ್ರ ಎಂದು ಹೇಳಿಕೊಳ್ಳುವುದರಿಂದ ಈತ ಯತಿಯಾಗಿದ್ದಿರಬಹುದು. ಈತನ ಗುರು ಅಚ್ಯುತಾರಣ್ಯನೆಂಬ ಯತಿ. ಆತನ ಸ್ತೋತ್ರ ಭಾಗವತದ ಎಲ್ಲ ಸ್ಕಂಧಗಳಲ್ಲಿಯೂ ಬಂದಿದೆ. ಕನ್ನಡ ಭಾಗವತದ ಪ್ರತಿ ಸಂಧಿಯ ಕೊನೆಯಲ್ಲಿಯೂ ನಿತ್ಯಾತ್ಮನೆಂಬ ಅಂಕಿತವಿದೆ. ನಿತ್ಯಾತ್ಮ ಶಬ್ದದೊಡನೆ ಬೇರೆ ಬೇರೆ ದೇವರ ಹೆಸರುಗಳನ್ನು ಸೇರಿಸಿ ಕವಿ ಬರೆದಿರುವುದರಿಂದ ಕವಿಯ ಅಂಕಿತ ನಿತ್ಯಾತ್ಮನೆಂದೇ ತೋರುತ್ತದೆ. ಸದಾನಂದನಿಗೆ ನಿತ್ಯಾತ್ಮನೆಂದು ಅಂಕಿತವಿದ್ದು ಭಾಗವತ ರಚನೆ ಪೂರೈಸುವ ವೇಳೆಗೆ ಚಾಟುವಿಠಲನೆಂಬ ಹೆಸರು ಬಂದಿರಬಹುದೆ? ಅಥವಾ ಸದಾನಂದ ಕವಿ ಬರೆಯದೆ ಬಿಟ್ಟಿದ್ದ ಭಾಗವತದ ಕಡೆಯ ಎರಡು ಸ್ಕಂಧಗಳನ್ನು ಅವನ ಶಿಷ್ಯನೋ ಭಕ್ತನೋ ಆದ ಚಾಟುವಿಠಲನೆಂಬ ಕವಿ ಬರೆದಿರಬಹುದೆ? ಇದು ಹೀಗೆಯೇ ಸರಿಯೆಂದು ನಿರ್ಧರಿಸಲು ಈಗ ಸಾಧ್ಯವಿಲ್ಲ. ಚಾಟುವಿಠಲನ ಹೆಸರಿರುವ ಕೊನೆಯ ಎರಡು ಸ್ಕಂಧಗಳಲ್ಲಿಯೂ ಸದಾನಂದ ಯೋಗಿಯ ಸ್ಮರಣೆಯಿದೆ. ಗೋಪಿನಾಥ ಮಂಗಳವನೀವನು ಸದಾನಂದಮುನಿವರಗೆ ಎಂಬ ಮಾತು ಬಂದಿರುವುದರಿಂದ ಚಾಟುವಿಠಲ, ಸದಾನಂದಮುನಿ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳಿರಬಹುದೆಂಬ ಭಾವನೆ ಬರುತ್ತದೆ.

ಸದಮಳಾಚ್ಯುತ ಕೃಷ್ಣರಾಯನ ಹೃದಯವೆನಿಸುವ ಭಾಗವತಶಾಸ್ತ್ರ - ಎಂಬ ಮಾತುಗಳು ಹನ್ನೆರಡನೆಯ ಸ್ಕಂಧದ ಕೊನೆಯ ಪದ್ಯದಲ್ಲಿ ಬಂದಿರುವುದರಿಂದ ಚಾಟುವಿಠಲನಾಥ ವಿಜಯನಗರದ ಅರಸನಾದ ಕೃಷ್ಣದೇವರಾಯನ ಕಾಲದಲ್ಲಿ ಇದ್ದಿರಬಹುದೆಂದು ತೋರುತ್ತದೆ. ಆದರೆ ಅತ್ಯಂತ ಪ್ರಾಚೀನವೆನಿಸಿದ ತಾಳೆ ಪ್ರತಿಯಲ್ಲಿ ಅದು ಶಾಲಿವಾಹನಶಕ 1441ರಲ್ಲಿ ಅಂದರೆ 1519ರಲ್ಲಿ ಪ್ರತಿ ಮಾಡಲ್ಪಟ್ಟಿತೆಂದು ಹೇಳಿದೆ. ನಕಲು ಮಾಡಿದುದೇ 1519ನೆಯ ವರ್ಷವಾದರೆ ಮೂಲ ಗ್ರಂಥ ಇನ್ನೂ ಮುಂಚೆಯೇ ಹುಟ್ಟಿರಬೇಕು. ಆ ಪ್ರತಿಯಲ್ಲಿ ಮೊದಲಿನ ಒಂಬತ್ತು ಸ್ಕಂಧಗಳು ಮಾತ್ರ ಇವೆ. ಆದ್ದರಿಂದ ಅವು ಅಷ್ಟಾದರೂ ಕೃಷ್ಣದೇವರಾಯನ ಕಾಲಕ್ಕಿಂತ ಮುಂಚೆಯೇ ರಚಿತವಾಗಿರಬೇಕು.

ಕನ್ನಡ ಭಾಗವತಕಾರ ಬೇರಾವ ಕವಿಯ ಸ್ಮರಣೆಯನ್ನೂ ಮಾಡಿಲ್ಲ. ಆದರೆ ಈತ ಕುಮಾರವ್ಯಾಸನ ಪ್ರಭಾವಕ್ಕೆ ಒಳಗಾಗಿರುವುದು ಕಾವ್ಯದಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಬೇರೆ ಕನ್ನಡ ಕವಿಗಳೂ ಈತನ ಹೆಸರನ್ನು ಸ್ಮರಿಸಿದಂತೆ ತೋರುವುದಿಲ್ಲ. ಹನ್ನೆರಡು ಸಾವಿರ ಷಟ್ಪದಿಗಳನ್ನುಳ್ಳ ಈ ಬೃಹದ್ಗ್ರಂಥವನ್ನು ರಚಿಸಿದ ಕವಿಯನ್ನು ಬೇರಾರೂ ಹೆಸರಿಸದಿರುವುದು ಕುತೂಹಲಕರವಾಗಿದೆ. ಈ ಕವಿಗೆ ಹರಿಗುಣ ಸ್ತುತಿ, ಹರಿಪಾದಭಕ್ತರ ಚಾರಿತ್ರ ಕಥನ, ಭಕ್ತಿಮಾರ್ಗ ನಿರೂಪಣೆ -ಇವು ಮುಖ್ಯವಾದ ಗುರಿಗಳು. ಅಖಿಲಭವರೋಗಹರವೆನಿಸಿದ ಭಾಗವತದರ್ಥವನ್ನು ಬಲ್ಲಂದದಲಿ ಹೇಳುವುದಾಗಿ ಪ್ರತಿಜ್ಞೆ ಮಾಡಿ ಕವಿ ಲಲಿತವಾದ ಕನ್ನಡದಲ್ಲಿ ಕಾವ್ಯ ರಚಿಸಿದ್ದಾನೆ.

ಮೊದಲಿನ ಎರಡು ಸ್ಕಂಧಗಳು ಪೀಠಿಕಾರೂಪದಲ್ಲಿದ್ದು ವ್ಯಾಸರು ಉಪದೇಶಿಸಿದ ಭಾಗವತವನ್ನು ಶುಕಮಹರ್ಷಿ ಪರೀಕ್ಷಿತನಿಗೆ ಉಪದೇಶಿಸಲು ಅಲ್ಲಿಯೇ ಇದ್ದು ಕೇಳಿದ ಸೂತಪುರಾಣಿಕ ಯಾಗಕಾರ್ಯಮಗ್ನರಾಗಿದ್ದ ಋಷಿಗಳಿಗೆ ನೈಮಿಷಾರಣ್ಯದಲ್ಲಿ ವಿಸ್ತರಿಸಿ ಹೇಳಿದನಂತೆ ಎಂಬ ಭಾಗವತದ ಉತ್ಪತ್ತಿ ಕಥೆಯನ್ನು ಹೇಳುತ್ತದೆ. ಮೂರನೆಯ ಸ್ಕಂಧದಲ್ಲಿ ಭಾಗವತ ಪ್ರಾರಂಭವಾಗಿ ಕಲ್ಪಾವಸಾನ ಕಥೆಯಿಂದ ತೊಡಗಿ ಹಿರಣ್ಯಕಶಿಪು ಹಿರಣ್ಯಾಕ್ಷರ ಚರಿತ್ರೆ, ಕಪಿಲ ದೇವಭೂತಿಯರ ಕಥೆ, ದಕ್ಷಯಜ್ಞ ವೃತ್ತಾಂತ, ಗಿರಿಜಾ ಕಲ್ಯಾಣ, ಧ್ರುವ ಪೃಥು ಪುರಂಜನರ ಕಥೆಗಳು, ಪ್ರಿಯವ್ರತರಾಯ, ಜಡಭರತರ ಕಥೆಗಳು ಕೊನೆಗೊಳ್ಳುವಲ್ಲಿಗೆ ಐದನೆಯ ಸ್ಕಂಧ ಮುಗಿಯುತ್ತದೆ. ಆರು ಏಳನೆಯ ಸ್ಕಂಧಗಳು ಅಜಾಮಿಳ, ವೃತಾಸುರ, ಪ್ರಹ್ಲಾದ ಮತ್ತು ತ್ರಿಪುರಾಸುರರ ಕಥೆಗಳನ್ನು ಹೇಳುತ್ತವೆ. ಎಂಟನೆಯ ಸ್ಕಂಧದಲ್ಲಿ ಮನುಮುನಿಗಳ ವರ್ಣನೆ, ಗಜೇಂದ್ರೋಪಾಖ್ಯಾನ, ಸಮುದ್ರಮಥನ ವೃತ್ತಾಂತ, ಮೋಹಿನಿಯ ಅವತಾರ, ವಾಮನ ಮತ್ಸ್ಯಾವತಾರಗಳ ಕಥೆ ಬಂದಿವೆ. ಒಂಬತ್ತನೆಯ ಸ್ಕಂಧ ಇಕ್ಷ್ವಾಕುವಂಶದ ಕಥೆ, ಪರಶುರಾಮ ವೃತ್ತಾಂತ, ಶ್ರೀ ರಾಮಚರಿತ್ರೆ ಮುಂತಾದುವುಗಳನ್ನು ಹೇಳುತ್ತದೆ. ಆ ಸ್ಕಂಧದ ಕಡೆಯಲ್ಲಿ ಆರಂಭವಾಗುವ ಯಾದವವಂಶದ ವರ್ಣನೆ ದಶಮ ಸ್ಕಂಧದಲ್ಲಿ ಮುಂದುವರಿದು ಯಾದವ ಶಿರೋಮಣಿಯಾದ ಶ್ರೀಕೃಷ್ಣನ ದೀರ್ಘವೂ ಸ್ವಾರಸ್ಯವೂ ಜನಪ್ರಿಯವೂ ಆದ ಸ್ಕಂಧ ಭಾಗವತವೆಂದೊಡನೆ ಜನರಿಗೆ ಶ್ರೀಕೃಷ್ಣಚರಿತಾಮೃತವೇ ನೆನಪಿಗೆ ಬರುತ್ತದೆ. ಹನ್ನೊಂದನೆಯ ಸ್ಕಂಧದಲ್ಲಿ ಶ್ರೀಕೃಷ್ಣ ವೈಕುಂಠಕ್ಕೆ ಹಿಂದಿರುಗಿದ ವೃತ್ತಾಂತವಿದೆ. ಕೊನೆಯ ಹನ್ನೆರಡನೆಯ ಸ್ಕಂಧ ಉಳಿದೆಲ್ಲ ಸ್ಕಂಧಗಳಿಗಿಂತ ತೀರ ಚಿಕ್ಕದು. ಇದರಲ್ಲಿ ಭವಿಷ್ಯನೃಪಾಲರ ಚರಿತ್ರೆ ಸಂಕ್ಷೇಪವಾಗಿ ನಿರೂಪಿತವಾಗಿದೆ. ಶುಕಮಹರ್ಷಿಗಳಿಂದಲೇ ನೇರವಾಗಿ ಭಾಗವತವನ್ನು ಕೇಳಿದ ಪರೀಕ್ಷಿತ ಮಹಾರಾಜ ಸದ್ಗತಿ ಹೊಂದಿದ ಕಥೆ ಈ ಸ್ಕಂಧದಲ್ಲಿದೆ.

ಕನ್ನಡ ಭಾಗವತಕಾರ ಮೂಲ ಸಂಸ್ಕೃತ ಭಾಗವತವನ್ನು ಕ್ರಮವಾಗಿ ಅನುವಾದ ಮಾಡಿದ್ದಾನೆ. ಆದರೂ ಇದು ಸ್ವತಂತ್ರ ಕಾವ್ಯದಂತೆ ಏಕಧಾರೆಯಾಗಿ ಎಲ್ಲಿಯೂ ಕುಂಟದೆ ನಡೆದಿದೆ. ಕವಿಯು ವರ್ಣನೆಗೆ ಪ್ರಾಧಾನ್ಯವಿತ್ತು ಕಥೆಯನ್ನು ಕುಗ್ಗಿಸುವ, ಮರೆಯುವ ಸಾಹಸಕ್ಕೆ ಎಲ್ಲಿಯೂ ಕೈಹಾಕಿಲ್ಲ. ಮಾತಿನ ಧೋರಣೆಯಲ್ಲಿ ತಾನಾಗಿ ಬಂದಿರುವ ಉಕ್ತಿ

ಚಮತ್ಕಾರಗಳನ್ನು ಕವಿ ತಡೆದಿಲ್ಲವೇ ಹೊರತು ಉದ್ದೇಶಪೂರ್ವಕವಾಗಿ ಅಲಂಕಾರ ಪ್ರಯೋಗಕ್ಕೆ ಆಸೆಪಟ್ಟಿಲ್ಲ. ಪಾಂಡಿತ್ಯ ಪ್ರದರ್ಶನ ಕವಿಯ ಆಶಯವಲ್ಲ. ಹರಿಕೀರ್ತನೆಯೇ ಪರಮ ಧ್ಯೇಯವಾಗಿದ್ದು ಅದನ್ನು ಕವಿ ಸಾಧಿಸಿ ಕೃತಕೃತ್ಯನಾಗಿದ್ದಾನೆ. (ಕೆ.ವಿಇ.)

**ಚಾಪೆ ಹೆಣಿಗೆ :** ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿರುವ ಗುಡಿ ಕೈಗಾರಿಕೆಗಳಲ್ಲಿ ಒಂದು. ಎಲ್ಲ ದೇಶದ ಆದಿವಾಸಿಗಳೂ ಈ ಗುಡಿಗಾರಿಕೆಯನ್ನು ಅವಲಂಬಿಸಿದ್ದರು. ಈಗಲೂ ನೀಗ್ರೋಗಳು, ರೆಡ್ ಇಂಡಿಯನರು, ಭಾರತದಲ್ಲಿನ ಆದಿವಾಸಿಗಳು ಇದರಿಂದಲೇ ತಮ್ಮ ಜೀವನ ನಿರ್ವಹಣೆ ಮಾಡುತ್ತಿದ್ದಾರೆ. ಅತಿ ಹಳೆಯ ಉದ್ಯಮವಾದರೂ ಇದು ಇಂದು ನಶಿಸಿಲ್ಲ. ಬಡವರಿಗೆ ಅಗತ್ಯದ ವಸ್ತುವಾಗಿ, ಶ್ರೀಮಂತರಿಗೆ ಭೋಗದ ವಸ್ತುವಾಗಿ ಚಾಪೆ ಮುಂದುವರಿಯುತ್ತಲೇ ಇದೆ.



ಚಾಪೆ ಹೆಣಿಗೆ

ಈ ಕೈಗಾರಿಕೆ ಕರ್ನಾಟಕ, ತಮಿಳುನಾಡು, ಕೇರಳ, ಅಸ್ಸಾಂ ಮತ್ತು ಬಂಗಾಲ ಮುಂತಾದ ರಾಜ್ಯಗಳಲ್ಲಿ ಊರ್ಜಿತಾವಸ್ಥೆಯಲ್ಲಿದೆ. ಕರ್ನಾಟಕದ ಕಡಕೊಳ, ಸೋಮೇಶ್ವರಪುರ, ಚಿಕ್ಕಜೋಗಿಹಳ್ಳಿ ಹಾಗೂ ಇನ್ನಿತರ ಕಡೆಗಳಲ್ಲಿ ಚಾಪೆಗಳನ್ನು ವಿಶೇಷವಾಗಿ ತಯಾರಿಸುತ್ತಾರೆ.

ಚಾಪೆಗಳನ್ನು ಬಿದಿರು, ಕಡ್ಡಿಹುಲ್ಲು, ಈಚಲುಗರಿ, ತೆಂಗಿನಗರಿ ಮತ್ತು ಓಲೆಗರಿಗಳಿಂದ ನೇಯುವರು. ಹಾಸುವ ಚಾಪೆ, ಪಂಕ್ತಿ ಚಾಪೆ, ಮೇಜುಗಳ ಮೇಲೆ ಹಾಸುವ ಚಾಪೆ, ಬಾಗಿಲಿಗೆ ಹಾಕುವ ಚಾಪೆಯ ಪರದೆಗಳು ಇತ್ಯಾದಿಯಾಗಿ ಚಾಪೆಯಲ್ಲಿ ಬಹು ನಮೂನೆಗಳಿವೆ. ಚಾಪೆಯಿಂದ ಹಣದ ಚೀಲ, ಹ್ಯಾಟುಗಳು, ಕೈಚೀಲ ಮುಂತಾದ ನಯ ನಾಜೂಕಿನ ಬಣ್ಣಬಣ್ಣಗಳಿಂದ ಅಲಂಕೃತವಾದ ದೈನಿಕ ಉಪಯೋಗದ ವಸ್ತುಗಳನ್ನೂ ತಯಾರಿಸುತ್ತಾರೆ. ಸಾಧಾರಣ ತರದ ಈಚಲ ಚಾಪೆಯನ್ನು ಅನೇಕ ವಸ್ತುಗಳು ಕಟ್ಟಲು ಹೇರಳವಾಗಿ ಉಪಯೋಗಿಸುವರು. ನಿಜಕ್ಕೂ ಚಾಪೆ ಜಮಖಾನೆಗಿಂತ ಉತ್ತಮ. ಬೆಲೆ ಕಡಿಮೆ. ಬೇಗ ಮಾಸುವುದಿಲ್ಲ. ಹೊಲಿಯುವುದು ಸುಲಭ. ಶೀತವನ್ನು ಹೀರದು.



ವಿವಿಧ ಮಾದರಿ ಚಾಪೆಗಳು

ಈ ಕೈಗಾರಿಕೆಗೆ ಬೇಕಾಗುವ ಉಪಕರಣಗಳೆಂದರೆ ಮಗ್ಗ, ಬಿದಿರು ಸಲಾಕೆಗಳು, ಹುಲ್ಲು ಇತ್ಯಾದಿ ಕಚ್ಚಾ ಸಾಮಗ್ರಿಗಳು. ಚಾಪೆಯ ಅಂದ ಅದರ ಮೂಲವಸ್ತು ವಿಶಿಷ್ಟವಾದ ನೇಯ್ಗೆ ಮತ್ತು ಬಣ್ಣಗಳ ಸಂಕಲನಗಳಲ್ಲಿದೆ. ಬೇಕಾದ ಚಿತ್ರಗಳನ್ನು ನೇಯ್ಗೆ ಮತ್ತು ಬಣ್ಣಗಳಿಂದ ಚಾಪೆಯ ಮೇಲೆ ಮೂಡಿಸಬಹುದು.

ಚಾಪೆಗೆ ಬೇಕಾದ ಕಚ್ಚಾ ಸಾಮಗ್ರಿಗಳು ಕಡಿಮೆ ಕ್ರಯದಲ್ಲಿ ಬೇಕಾದಷ್ಟು ಸಿಗುವುದರಿಂದ ಮತ್ತು ಮನೆ ಜನರೆಲ್ಲ ಕೆಲಸಮಾಡುವುದರಿಂದ ಇದನ್ನೇ ನಂಬಿದವರ ಜೀವನ ನಡೆಯುತ್ತಿದೆ. ಇದು ಇತರ ಸಣ್ಣ ಕೈಗಾರಿಕೆಗಳಂತೆ ವಂಶಪಾರಂಪರ್ಯವಾಗಿ ನಡೆದು ಬಂದಿರುವಂಥದು. ಆದರೆ ಚಾಪೆಗೆ ಸುವ್ಯವಸ್ಥಿತವಾದ ಮಾರುಕಟ್ಟೆಯ ಅಭಾವವಿರುವುದರಿಂದ ಲಾಭದ ದೊಡ್ಡ ಅಂಶ ಮಧ್ಯವರ್ತಿ ವ್ಯಾಪಾರಿಗಳ ಕೈವಶವಾಗಿ ಗೃಹ ಕೈಗಾರಿಕೆಯಲ್ಲಿ ತೊಡಗಿದವರಿಗೆ ಸಮರ್ಪಕವಾದ ಮತ್ತು ಪರಿಪೂರ್ಣವಾದ ಪ್ರತಿಫಲ ದೊರೆಯುತ್ತಿಲ್ಲ.

ಈ ಕೈಗಾರಿಕೆಯನ್ನು ಅವಲಂಬಿಸಿದ ಜನ ತಮ್ಮದೇ ಆದ ಸಹಕಾರ ಸಂಘಗಳನ್ನು ಸ್ಥಾಪಿಸಿ ಆ ಸಂಘಗಳ ಮೂಲಕ ತಮಗೆ ಆವಶ್ಯಕವಾದ ಕಚ್ಚಾ ಸಾಮಗ್ರಿಗಳನ್ನು ಕೊಳ್ಳುವುದು ಮತ್ತು ತಾವು ಹೆಣೆದ ಚಾಪೆಗಳನ್ನು ಮಾರುವುದರ ಮೂಲಕ ಯುಕ್ತ ಲಾಭ ಪಡೆಯಬಹುದು.

ಜಪಾನ್ ಮೊದಲಾದ ದೇಶಗಳಲ್ಲಿ ಬಹು ಅಂದವಾಗಿ ಚಾಪೆ ಹೆಣೆದು ಅದರ ಮೇಲೆ ಕಲಾತ್ಮಕವಾದ ಚಿತ್ರಗಳನ್ನು ಅಚ್ಚು ಒತ್ತುತ್ತಾರೆ. ಇಂಥ ಚಾಪೆಗಳಿಗೆ ಪ್ರಪಂಚಾದ್ಯಂತ ಬೇಡಿಕೆ ಇದೆ. ಕೇರಳದಲ್ಲಿ ಇದೇ ಮಟ್ಟದ ಸುಂದರ ಚಾಪೆಗಳನ್ನು ತಯಾರಿಸುತ್ತಿದ್ದಾರೆ. ಚಾಪೆ ಹೆಣಿಗೆ ಮೊದಲಾದ ಕೈಗಾರಿಕೆಗಳಿಗೆ ಸರ್ಕಾರ ಉದಾರ ಸಹಾಯ, ಪ್ರೋತ್ಸಾಹ ನೀಡುತ್ತಿವೆಯಾದರೂ ಇತ್ತೀಚೆಗೆ ಪ್ಲಾಸ್ಟಿಕ್ ಹೆಣಿಗೆಯ ಚಾಪೆಗಳ ಬಳಕೆ ಹೆಚ್ಚುತ್ತಿದೆ. ಉಳಿದ ಚಾಪೆಗಳ ಬೇಡಿಕೆ ದಿನೇ ದಿನೇ ಕ್ಷೀಣಿಸುತ್ತಿದೆ. *

**ಚಾಮರಸ :** ಸು.1430. ವೀರಶೈವ ಕವಿ. ಪ್ರಭುಲಿಂಗಲೀಲೆ ಎಂಬ ಕಾವ್ಯದ ಕರ್ತೃ. ಇವನ ಗ್ರಂಥದಲ್ಲಿ ಸ್ವವಿಷಯಗಳಿಲ್ಲ. ಇವನು ಪ್ರಭುಲಿಂಗಲೀಲೆಯನ್ನು ಬರೆದನೆಂಬ ವಿಷಯ ಅದೃಶ್ಯಕವಿ (ಸು.1580) ಮತ್ತು ಸಿದ್ಧನಂಜೇಶ (ಸು,1650) ಈ ಕವಿಗಳಿಂದ ತಿಳಿದುಬರುತ್ತದೆ. ಚಾಮರಸ ಪ್ರಭುಲಿಂಗಲೀಲೆಯನ್ನು ಬರೆದುದರ ಬಗ್ಗೆ ಶಾಂತಲಿಂಗದೇಶಿಕನ (ಸು.1672) ಭೈರವೇಶ್ವರಕಾವ್ಯದ ಕಥಾಮಣಿಸೂತ್ರರತ್ನಾಕರದಲ್ಲಿ ಒಂದು ದಂತಕಥೆಯಿದೆ. ಪ್ರೌಢದೇವರಾಯನ ಕಾಲದಲ್ಲಿ (1424-46) ಇದ್ದ ನೂರೊಂದು ವಿರಕ್ತರಲ್ಲಿ ಇವನ ಹೆಸರು ಕಂಡುಬರುತ್ತದೆ ಎಂಬ ಹೇಳಿಕೆಯೂ ಇದೆ. ಜಕ್ಕಣಾರ್ಯ (ಸು.1430), ಕುಮಾರವ್ಯಾಸ (1400) - ಇವರು ಚಾಮರಸನ ಸಮಕಾಲೀನರಿರಬಹುದೆಂದೂ ತಿಳಿದುಬರುತ್ತದೆ.

ಪ್ರಭುಲಿಂಗಲೀಲೆ ಭಾಮಿನೀಷಟ್ಪದಿಯಲ್ಲಿದೆ. ಇದರಲ್ಲಿ 25 ಗತಿ, 1111 ಪದ್ಯ ಇವೆ. 12ನೆಯ ಶತಮಾನದಲ್ಲಿದ್ದ ಅಲ್ಲಮಪ್ರಭುವಿನ ಜೀವನ, ಸಾಧನೆ, ಸಿದ್ಧಿಗಳ ಚಿತ್ರಣ ಕಾವ್ಯದ ವಸ್ತು. ಅಲ್ಲಮಪ್ರಭುವಿನ ಚರಿತ್ರೆ ಮೊಟ್ಟಮೊದಲು ಕಾವ್ಯವಾಗಿ ನಿರೂಪಿತವಾಗಿರುವುದು ಹರಿಹರನ ಪ್ರಭುದೇವರ ರಗಳೆಯಲ್ಲಿ. ಅದೇ ವಸ್ತುವನ್ನು ತೆಗೆದುಕೊಂಡು ಚಾಮರಸ ಕಾವ್ಯ ರಚಿಸಿದ್ದರೂ ಹರಿಹರನ ರಗಳೆಗೂ ಇವನ ಕಾವ್ಯಕ್ಕೂ ಹಲವಾರು ವ್ಯತ್ಯಾಸಗಳು ಕಥಾನಕ ಹಾಗೂ ನಿರೂಪಣಾಕ್ರಮದಲ್ಲಿ ಕಂಡುಬರುತ್ತವೆ. ಚಾಮರಸ ತನ್ನ ಕಥೆ 'ಸತ್ತವರ ಕಥೆಯಲ್ಲ ಜನನದ ಕುತ್ತದಲ್ಲಿ ಬಲುಕುದಿದು ಕರ್ಮದ ಕತ್ತರಿಗೆ ಸಿಕ್ಕುವರ ಸೀಮೆಯ ಮಾತು ತಾನಲ್ಲ; ಹೊತ್ತು ಹೋಗದೆ ಪುಂಡರಾಲಿಪ ಮತ್ತಮತಿಗಳ ಗೋಷ್ಠಿಯಲ್ಲಿದು' ಎಂದೂ 'ಸತ್ಯಶರಣರು ತಿಳಿವುದೀ ಪ್ರಭುಲಿಂಗಲೀಲೆಯ' ಎಂದೂ ತಾನು ಉತ್ತಮರಿಗಾಗಿ ಕಾವ್ಯ ರಚಿಸುತ್ತಿರುವುದಾಗಿಯೂ ಹೇಳಿಕೊಂಡಿದ್ದಾನೆ. ಕಾವ್ಯದಲ್ಲಿ ಕಲ್ಪನಾ ಸಂಪತ್ತು ಶಬ್ದಶಕ್ತಿ ಸಹಜವಿಲಾಸ ಕಂಡುಬರುತ್ತದೆ. ಸನ್ನಿವೇಶ ರಚನೆ, ಪಾತ್ರಚಿತ್ರಣದಲ್ಲಿ ಒಮ್ಮೊಮ್ಮೆ ಮಹಾಕವಿಯಲ್ಲಿರ ಬಹುದಾದ ಪ್ರತಿಭೆ ಮಿನುಗುತ್ತದೆ. ಶೈಲಿ ಸರಳವಾದರೂ ಶಿಥಿಲವಾಗಿಲ್ಲ. ಕಾವ್ಯಧರ್ಮ ಹಾಗೂ ಧರ್ಮ ಎರಡೂ ಕಾವ್ಯದಲ್ಲಿ ಸಮರಸವಾಗಿ ಹೊಂದಿವೆ. ವರ್ಣನೆಗಳು ಮನೋಹರವಾಗಿವೆ. ಅಷ್ಟಾದಶವರ್ಣನೆಗಳ ಸಂಪ್ರದಾಯ ಜಾಲಕ್ಕೆ ಕವಿ ಸಿಕ್ಕಿಲ್ಲ. ಉಚಿತವರಿತು ವರ್ಣನೆಗಳನ್ನು ತಂದಿದ್ದಾನೆ. ಭಾಮಿನೀ ಷಟ್ಪದಿಯ ನಿರರ್ಗಳವಾದ ಬಳಸುವಿಕೆಯಲ್ಲಿಯೂ ರೂಪಕ ಸಂಪತ್ತಿಯಲ್ಲಿಯೂ ಕೆಲವೊಮ್ಮೆ ಕುಮಾರವ್ಯಾಸನಿಗೆ ಸರಿಮಿಗಿಲೆನಿಸುತ್ತಾನೆ. ಇವನ ಕಾವ್ಯ ಶ್ರೇಷ್ಠಚರಿತ್ರ ಕಾವ್ಯವೆಂಬ ಪ್ರಶಂಸೆಗೆ ಭಾಜನವಾಗಿದೆ. ಮಹಾತ್ಮರ ಜೀವನ ಚರಿತ್ರೆಯನ್ನು ಕಾವ್ಯರೂಪದಲ್ಲಿ ಹೇಗೆ ಬರೆಯಬೇಕೆಂಬುದಕ್ಕೆ ಪ್ರಭುಲಿಂಗಲೀಲೆ ಉತ್ತಮ

ನಿದರ್ಶನವೆನ್ನಬಹುದು. ಈ ಕಾವ್ಯ ತೆಲುಗು, ತಮಿಳು, ಮರಾಠಿ, ಸಂಸ್ಕೃತ ಭಾಷೆಗಳಿಗೆ ಅನುವಾದವಾಗಿದೆ. (ಎಚ್.ಎ.ಕೆ.)

**ಚಾಮರಾಜ ಒಡೆಯರ್ I :** ಮೈಸೂರಿನ ಒಡೆಯರ ಸಂತತಿಯ ರಾಜ (ಸು.1423-59). ಈತನಿಗೆ ಸಂಬಂಧಿಸಿದ ನಿಖರವಾದ ಸಮಕಾಲೀನ ಮಾಹಿತಿ ದೊರೆಯುವುದಿಲ್ಲ. ಮೈಸೂರು ನಗರದ ಪೂರ್ವೋತ್ತರ ಮತ್ತು ಮೈಸೂರು ದೊರೆಗಳ ಪೂರ್ವಾಭ್ಯುದಯ ವಿವರ ಎಂಬ ಕೃತಿಗಳ ಪ್ರಕಾರ ಈತ ಈ ಮನೆತನದ ಸ್ಥಾಪಕನಾದ ಯದುರಾಯನ ಹಿರಿಯಮಗ.



ಇವನನ್ನು ಹಿರಿಯ ಬೆಟ್ಟದ ಚಾಮರಾಜ ಎಂದೂ ಕರೆಯಲಾಗಿದೆ. ಬೆಟ್ಟದ ಕೋಟೆಯ ಗೋಪಾಜಮ್ಮ ಈತನ ಹೆಂಡತಿ. ಇವನ ತಮ್ಮನಾದ ಚಾಮರಾಜ ಕೆಂಚಲಗೂಡಿನ ಶಾಖೆಯನ್ನು ಸ್ಥಾಪಿಸಿದನೆಂದು ತಿಳಿದುಬರುತ್ತದೆ. ಬೆಟ್ಟದ ಚಾಮರಾಜನ ಮರಣಾನಂತರ ಅವನ ಪುತ್ರನಾದ ಒಂದನೆಯ ತಿಮ್ಮರಾಜ ಉತ್ತರಾಧಿಕಾರಿಯಾದ. (ಜಿ.ಆರ್.ಆರ್.)

**ಚಾಮರಾಜ ಒಡೆಯರ್ II :** ಮೈಸೂರು ಸಂಸ್ಥಾನವನ್ನು ಆಳಿದ ಒಡೆಯರ ಸಂತತಿಯ ನಾಲ್ಕನೆಯ ರಾಜ (ಸು.1478-1513). ಒಂದನೆಯ ತಿಮ್ಮ ರಾಜ ಒಡೆಯರ್ ಮತ್ತು ಕಳಲೆಯ ಕಾಂತಾಜಮ್ಮ ಇವರ ಮಗ. ಇವನಿಗೆ ಹಿರಿಯ ಚಾಮರಸ ಒಡೆಯರ್ ಹಾಗೂ ಆರು ಬೆರಳು ಚಾಮ ರಾಜ ಎಂಬ ಹೆಸರುಗಳೂ ವಾಡಿಕೆಯಲ್ಲಿದ್ದವು. ಬಿಳಿಕೆರೆ ಪದ್ಮಾಜಮ್ಮ ಈತನ ಹೆಂಡತಿ. ಹಿರಿಯ ಬೆಟ್ಟದ ಚಾಮರಾಜ ಈತನ ಪುತ್ರ ಮತ್ತು ಉತ್ತರಾಧಿಕಾರಿ. (ಜಿ.ಆರ್.ಆರ್.)



**ಚಾಮರಾಜ ಒಡೆಯರ್ III :** ಮೈಸೂರು ವಂಶದ ಅರಸು (ಸು.1513-1553); ಎರಡನೆಯ ಚಾಮರಾಜ (ಆರು ಬೆರಳಿನ ಹಿರಿಯ ಚಾಮರಾಜ) ಮತ್ತು ಅವನ ಮಹಿಷಿ ಬಿಳಿಕೆರೆ ಪದ್ಮಾಜಮ್ಮ ಇವರ ಮಗ. 1492 ಸೆಪ್ಟೆಂಬರ್ 29ರಂದು ಜನಿಸಿದ. ಇವನನ್ನು ದೊಡ್ಡ ಚಾಮರಾಜ ಒಡೆಯರ್, ಬೆಟ್ಟದ ಚಾಮೇಂದ್ರ (ಚಾಮರಾಜ) ಎಂಬುದಾಗಿಯೂ ಹೆಸರಿಸಲಾಗಿದೆ. ಅಲ್ಲದೆ ತಿಮ್ಮರಾಜ ಒಡೆಯರ್ ಎಂಬ ಹೆಸರಿನಿಂದಲೂ ಹಲವು ದಾಖಲೆಗಳಲ್ಲಿ ಉಲ್ಲೇಖಿಸಲಾಗಿದೆ. ಬಾಲ್ಯದಲ್ಲಿ ತಿಮ್ಮರಾಜ ಎಂಬ ಹೆಸರಿದ್ದು ಅನಂತರ ತನ್ನ ಮುತ್ತಾತನ ಜ್ಞಾಪಕಾರ್ಥವಾಗಿ ಬೆಟ್ಟದ ಚಾಮರಾಜ ಎಂಬ ಹೆಸರನ್ನು ಹೊಂದಿದನೆಂದು ಊಹಿಸಲಾಗಿದೆ.

ಈತ 1513ರಲ್ಲಿ ಅಧಿಕಾರಕ್ಕೆ ಬಂದ. ಈತನ ಸಾಧನೆಗಳ ಮಾಹಿತಿ ದೊರೆಯದಿದ್ದಾಗ್ಯೂ ಇವನು ರಣಪರಾಕ್ರಮಿಯೆಂದೂ ವೈರಿಗಳನ್ನು ಸದೆಬಡಿಯುವುದರಲ್ಲಿ ಧೀರನೆಂದೂ ವರ್ಣಿತನಾಗಿದ್ದಾನೆ. ಇವನಿಗೆ ಬಿರುದೆಂತೆಂಬರಗಂಡ ಎಂಬ ಬಿರುದಿದ್ದಿತು. ಈ ಬಿರುದಿಗೆ ಸಂಬಂಧಿಸಿದಂತೆ ಒಂದು ದಂತಕಥೆಯೂ ಉಪಲಬ್ಧವಾಗಿದೆ. ಅದರ ಪ್ರಕಾರ ಒಂದು ಸಾರಿ ನಂಜನಗೂಡಿನ ಜಾತ್ರೆಯ ಕಾಲದಲ್ಲಿ ನೆರೆದಿದ್ದ ಸುತ್ತುಮುತ್ತಿನ ಪಾಳೆಯಗಾರರು ತಮ್ಮ ಪ್ರವರಗಳನ್ನೂ ಬಿರುದುಗಳನ್ನು ಹೇಳಿಕೊಂಡರಂತೆ. ಮೂರನೆಯ ಬೆಟ್ಟದ ಚಾಮರಾಜನ ಆಪ್ತಯೋಧನಾದ ಕಳಲೆಯ ನಂಜಸೆಟ್ಟಿ ಎಂಬುವನು ಆ ಸ್ಥಳದಲ್ಲಿದ್ದು, ಬಿರುದೆಂತೆಂಬರಗಂಡ ಎಂಬ ಬಿರುದಿಗೆ ತನ್ನ ಧಣಿಯೊಬ್ಬನೇ ಅರ್ಹನೆಂದು ಪ್ರತಿಪಾದಿಸಿದನಂತೆ. ಅನಂತರ ನಡೆದ ಗುಂಪುಜಗಳದಲ್ಲಿ ನಂಜಸೆಟ್ಟಿ ವಿಜೇತನಾದನಂತೆ. ಅಂದಿನಿಂದ ಈ ಮನೆತನದ ಅರಸರಿಗೆ ಮೇಲ್ಕಂಡ ಬಿರುದು ಅತಿ ಮೆಚ್ಚಿನದಾಯಿತಂತೆ.



ಇವನ ಕಾಲದಿಂದ ಮೈಸೂರು ಪಟ್ಟಣ ಪ್ರಸಿದ್ಧಿಗೆ ಬಂತು. ಅದುವರೆಗೂ ಅಲ್ಲಿ ಅಭದ್ರವಾದ ಕೋಟೆ, ಹಳೆಯ ಸೋಮೇಶ್ವರ ಮತ್ತು ಲಕ್ಷ್ಮೀನಾರಾಯಣ ದೇವಾಲಯಗಳು ಮಾತ್ರ ಇದ್ದು ದರಗೇರಿ ಮತ್ತು ತಮ್ಮಟಗೇರಿ ಎಂಬ ಎರಡು ಪ್ರಮುಖ ಕೇರಿಗಳಿಂದ ಕೂಡಿತ್ತು. ಮೈಸೂರು ಮತ್ತು ಸುತ್ತಮುತ್ತಿನ ಹಲವು ಹಳ್ಳಿಗಳು ಇವನ ಆಳಿಕೆಗೊಳಪಟ್ಟಿದ್ದುವು.

ಅಲಗಾಜಮ್ಮ (ಗೋಪರಸಮ್ಮ) ಮೂರನೆಯ ಚಾಮರಾಜನ ಪತ್ನಿ. ಚಾಮರಾಜನಿಗೆ ತಿಮ್ಮರಾಜ, ಕೃಷ್ಣರಾಜ ಮತ್ತು ಚಾಮರಾಜ ಎಂಬ ಮೂವರು ಪುತ್ರರೂ ದೊಡ್ಡದೇವೀರಮ್ಮ, ಚಿಕ್ಕದೇವಿರಮ್ಮ ಮತ್ತು ನಂಜಮ್ಮ ಎಂಬ ಮೂವರು ಪುತ್ರಿಯರೂ ಇದ್ದರು. ಬೆಟ್ಟದ ಚಾಮರಾಜ ಚಾಮುಂಡಿಬೆಟ್ಟದ ಮೇಲೆ ಹಿರೀಕೆರೆ ಎಂಬ ಕೊಳವನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಅಲ್ಲದೆ ತಿಪ್ಪೂರು ಎಂಬ ಗ್ರಾಮವನ್ನು ಕೊಂಡು ಅದನ್ನು ಮೇಲುಕೋಟೆಯ ಚೆಲುವರಾಯ ಸ್ವಾಮಿಗೆ ದಾನವಾಗಿ ನೀಡಿದ. ಈತ 1553 ಫೆಬ್ರುವರಿ 7ರಂದು ನಿಧನಹೊಂದಿದ. ಅನಂತರ ಇವನ ಹಿರಿಯ ಮಗನಾದ ಎರಡನೆಯ ತಿಮ್ಮರಾಜ ಉತ್ತರಾಧಿಕಾರಿಯಾದ. (ಜಿ.ಆರ್.ಆರ್.)

**ಚಾಮರಾಜ ಒಡೆಯರ್ IV :** (ಬೋಳ ಚಾಮರಾಜ) ಮೈಸೂರು ಸಂಸ್ಥಾನದ ದೊರೆ (1572-76). ಹಿರಿಯ ಬೆಟ್ಟದ ಚಾಮರಾಜನ ಎರಡನೆಯ ಮಗ. ತನ್ನ ಹಿರಿಯ ಸೋದರನಾದ ತಿಮ್ಮರಾಜನ ಉತ್ತರಾಧಿಕಾರಿ. ಮೈಸೂರು ಚಾಮರಸ ಒಡೆಯರ್, ಚಾಮರಾಜ, ಚಾಮನೃಪ, ಚಾಮರಾಜೇಂದ್ರ ಎಂಬುದಾಗಿಯೂ ಈತ ಗ್ರಂಥಗಳು ಮತ್ತು ಶಾಸನಗಳಲ್ಲಿ ಉಲ್ಲೇಖಿತನಾಗಿದ್ದಾನೆ. ಚಾಮರಾಜ 1507 ಜುಲೈ 25ರಂದು ಜನಿಸಿದ. ಪ್ರಚಲಿತವಿರುವ ಐತಿಹ್ಯದ ಪ್ರಕಾರ ಬಾಲ್ಯದಲ್ಲಿ ಚಾಮುಂಡಿ ಬೆಟ್ಟವನ್ನು ಸಂದರ್ಶಿಸಿದ ಒಂದು ಸಮಯದಲ್ಲಿ ಸಿಡಿಲಿನ ಹೊಡೆತದಿಂದ ಸ್ವಲ್ಪದರಲ್ಲಿ ಪಾರಾದನೆಂದೂ ಅದರಿಂದ ಇವನ ತಲೆಗೂದಲು ಸುಟ್ಟುಹೋಗಿ ತಲೆ ಬೋಳಾದುದರಿಂದ ಬೋಳ ಚಾಮರಾಜ ಎಂದು ಹೆಸರಾಯಿತೆಂದೂ ತಿಳಿದುಬರುತ್ತದೆ. ನಾಲ್ಕನೆಯ ಚಾಮರಾಜನ ಅನಂತರ ಆಳಿದ ಒಡೆಯರು ಹಾಕಿಸಿದ ಶಾಸನಗಳಿಂದ ಈತ ಬಿಲ್ಲುಬಾಣ ಹಾಗೂ ಶಸ್ತ್ರಾಸ್ತ್ರಪ್ರಯೋಗಗಳಲ್ಲಿ ನುರಿತ ಯೋಧನಾಗಿದ್ದುದಲ್ಲದೆ ಉದಾರ ರಾಜನಾಗಿದ್ದನೆಂದು ತಿಳಿದುಬರುತ್ತದೆ.

ವಿಜಯನಗರದ ರಾಜಪ್ರತಿನಿಧಿ ಶ್ರೀರಂಗಪಟ್ಟಣದಲ್ಲಿಲ್ಲದ ಸಮಯವನ್ನು ಉಪಯೋಗಿಸಿಕೊಂಡು ನಾಲ್ಕನೆಯ ಚಾಮರಾಜ ತನ್ನ

ಅಧಿಕಾರವನ್ನು ಬಲಪಡಿಸಿಕೊಂಡು ರಾಜ್ಯವಿಸ್ತರಣೆಯಲ್ಲಿ ತೊಡಗಿದ. ವರ್ಷಂಪ್ರತಿ ಸಲ್ಲಿಸುತ್ತಿದ್ದ ಕಪ್ಪವನ್ನು ನಿಲ್ಲಿಸಿದ ಹಾಗೂ ತನ್ನ ರಾಜ್ಯದಲ್ಲಿ



ಕಾಡುಮೃಗಗಳ ಹಾವಳಿಯು ಹೆಚ್ಚಿದೆ, ಅದರಿಂದ ಬೆಳೆಗಳು ಮತ್ತು ಜನರನ್ನು ರಕ್ಷಿಸಬೇಕು ಎಂಬ ನೆಪವೊಡ್ಡಿ ರಾಜ್ಯದ ಗಡಿಯ ಆಯಕಟ್ಟಿನ ಪ್ರದೇಶದಲ್ಲಿ ರಕ್ಷಣಾ ವ್ಯವಸ್ಥೆಯನ್ನು ಬಲಗೊಳಿಸಿದ. ಕಾರುಗಹಳ್ಳಿ, ಕನ್ನಂಬಾಡಿ, ತಲಕಾಡು ಮತ್ತು ಅಮ್ಮಚವಾಡಿ ಪಾಳೆಯಗಾರರನ್ನು ಸದೆಬಡಿಯುವ ಹವಣಿಕೆಯನ್ನು ನಡೆಸಿದ. ಈ ಉದ್ಧಟತನವನ್ನು ಸಹಿಸದೆ ಶ್ರೀರಂಗಪಟ್ಟಣದಲ್ಲಿ ವಿಜಯನಗರದ ರಾಜಪ್ರತಿನಿಧಿಯಾಗಿದ್ದ ಮೂರನೆಯ ರಾಮರಾಜಯ್ಯ ಚಾಮರಾಜನನ್ನು ಹತ್ತಿಕ್ಕಲು ಮೈಸೂರಿಗೆ ಮುತ್ತಿಗೆ ಹಾಕಿದ. ಮುತ್ತಿಗೆ ಮೂರು ತಿಂಗಳ ಕಾಲ ಮುಂದುವರಿಯಿತು. ಆದರೆ ಚಾಮರಾಜ ಚತುರತೆಯಿಂದ ಮುತ್ತಿಗೆಕಾರರಿಗೆ ಆಹಾರ ವಸ್ತುಗಳ ಅಭಾವವನ್ನುಂಟುಮಾಡಿ ಅವರನ್ನು ಹಿಮ್ಮೆಟ್ಟಿಸಿದ. ಪರಾಜಿತನಾದ ವಿಜಯನಗರದ ರಾಜಪ್ರತಿನಿಧಿ ಕಾಳ್ವೆ - ಕೊತ್ತಾಗಾಲ ಗ್ರಾಮವನ್ನು ಕೊಟ್ಟು ಇವನೊಡನೆ ಒಪ್ಪಂದ ಮಾಡಿಕೊಳ್ಳಬೇಕಾಯಿತು (1573-74). ಈ ಘಟನೆಯಿಂದ ಬೋಳ ಚಾಮರಾಜನ ಪ್ರತಿಷ್ಠೆ ಹೆಚ್ಚಿತು. ಮೈಸೂರು ದೊರೆಗಳ ವಂಶಾಭ್ಯುದಯದ ಪ್ರಕಾರ ಚಾಮರಾಜ 33 ಗ್ರಾಮಗಳ ಒಡೆಯನಾಗಿದ್ದನೆಂದೂ ಇವನಲ್ಲಿ 300 ಮಂದಿ ಸೈನಿಕರಿದ್ದರೆಂದೂ ತಿಳಿಯುತ್ತದೆ.

ಬೋಳ ಚಾಮರಾಜನಿಗೆ ಬಿಳಿಕೆರೆಯ ಕೆಂಪಮ್ಮ ಮತ್ತು (ಹೆಗ್ಗಡದೇವನ) ಕೋಟೆಯ ದೇವಾಜಮ್ಮ ಎಂಬ ಇಬ್ಬರು ಪತ್ನಿಯರಿದ್ದರು. ಹಿರಿಯಳಾದ ಕೆಂಪಮ್ಮನಿಗೆ ರಾಜ ಒಡೆಯರ್ ಮತ್ತು ಬೆಟ್ಟದ ಚಾಮರಾಜ, ಕಿರಿಯವಳಾದ ದೇವಾಜಮ್ಮನಿಗೆ ದೇವರಾಜ ಮತ್ತು ಚನ್ನರಾಜ ಎಂಬ ಗಂಡುಮಕ್ಕಳಿದ್ದರು. ಬೋಳ ಚಾಮರಾಜ ತನ್ನ ರಾಜಧಾನಿಯಲ್ಲಿ ಈಗಿನ ಅರಮನೆಯ ಮುಂದೆ ಇದ್ದ ಬೋಳಕೆರೆಯನ್ನು ಬತ್ತಿಸಿ ಅಲ್ಲಿ ಮುಳುಗಿತ್ತೆನ್ನಲಾದ ಲಿಂಗವನ್ನು ತಂದು, ಈಗ ಮೈಸೂರು ಅರಮನೆಯ ಒಳಗಿರುವ ತ್ರಿಣೇಶ್ವರ ದೇವಾಲಯವನ್ನು ಕಟ್ಟಿಸಿದ.

ನಾಲ್ಕನೆಯ ಚಾಮರಾಜ 1576 ನವೆಂಬರ್ 9ರಂದು ನಿಧನಹೊಂದಿದ. (ಜಿ.ಆರ್.ಆರ್.)

**ಚಾಮರಾಜ ಒಡೆಯರ್ V :** ಮೈಸೂರು ಸಂಸ್ಥಾನದ ಸಾಹಸಿ ದೊರೆ (ಸು.1617-37). ಒಡೆಯರ ಸಂತತಿಯಲ್ಲಿ ಪ್ರಸಿದ್ಧರಾಜ; ರಾಜ ಒಡೆಯರ ಮೊಮ್ಮಗ ಹಾಗೂ ನರಸರಾಜ ಮತ್ತು ಹೊನ್ನಾಜಮ್ಮ ಇವರ ಮಗ. 1603 ಏಪ್ರಿಲ್ 21ರಂದು ಜನಿಸಿದ. ರಾಜ ಒಡೆಯರ ಮರಣಾನಂತರ ಪಟ್ಟಕ್ಕೆ ಬಂದ. ಆಗ ಇವನು ಇನ್ನೂ ಹದಿನೈದು ವರ್ಷಗಳ ಬಾಲಕನಾದ್ದರಿಂದ, ಹದಿನೆಂಟು ವರ್ಷದವನಾಗುವವರೆಗೂ ದಳವಾಯಿ ಬೆಟ್ಟದ ಅರಸು (ಚಾಮಪ್ಪ) ಆಡಳಿತವನ್ನು ಮುಂದುವರಿಸಿದ. ನಾಗಮಂಗಲ ಮತ್ತು ದಣಾಯಕನ ಕೋಟೆ ಮೇಲೆ ನಡೆದ ಮುತ್ತಿಗೆಗಳು ಹಾಗೂ ದಳವಾಯಿ ತನ್ನ ಅಧಿಕಾರವನ್ನು ಭದ್ರಪಡಿಸಿಕೊಳ್ಳಲೆತ್ನಿಸಿ ವಿಫಲವಾದುದು - ಇವು ಚಾಮರಾಜನ ಆಡಳಿತದ ಪ್ರಾರಂಭದ ಕಾಲದ ಮುಖ್ಯ ಘಟನೆಗಳು. ಚನ್ನಪಟ್ಟಣದ ಜಗದೇವರಾಯನ ವಶದಲ್ಲಿದ್ದ ನಾಗಮಂಗಲ ಪ್ರದೇಶವನ್ನು ಆಕ್ರಮಿಸಲು ದಳವಾಯಿ ಬೆಟ್ಟದ ಅರಸು 1618ರಲ್ಲಿ ಪ್ರಯತ್ನಿಸಿ ವಿಫಲನಾದ. ಆದರೆ ಜಗದೇವರಾಯನ ಅಧೀನದಲ್ಲಿದ್ದ ಮದ್ದೂರು ಮತ್ತು ಕೆರೆಗೋಡುಗಳನ್ನು ವಶಪಡಿಸಿಕೊಂಡ (1619-20). ದಣಾಯಕನಕೋಟೆಯ ಮೇಲೆ ಯಶಸ್ವಿಯಾಗಿ ದಾಳಿಮಾಡಿ ಅಲ್ಲಿನ ಪಾಳೆಯಗಾರ ವಾರ್ಷಿಕವಾಗಿ 12,000 ವರಹ ಕಪ್ಪ ಕೊಡುವಂತೆ ಒಪ್ಪಂದವಾಯಿತು (1619). 1620ರಲ್ಲಿ ದಳವಾಯಿ ತನ್ನ ಅಧಿಕಾರವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿದ್ದುದರಿಂದ ಆ ವೇಳೆಗೆ ಪ್ರಾಪ್ತವಯಸ್ಕನಾದ ಚಾಮರಾಜ ಅಧಿಕಾರವನ್ನು ಸ್ವತಃ ನಡೆಸಲು ಪ್ರಾರಂಭಿಸಿದುದರಿಂದಲೂ ರಾಜನಿಗೂ ದಳವಾಯಿಗೂ ವೈಮನಸ್ಯವುಂಟಾಯಿತು. ದಳವಾಯಿಯ ಸಂಬಂಧಿಗಳು ಚಾಮರಾಜನ ಹತ್ಯೆಯ ಸಂಚು ನಡೆಸಿದರು. ಇದನ್ನು ಅರಿತ ರಾಜ ದಳವಾಯಿಯ ಸಂಬಂಧಿಗಳನ್ನು ಮರಣ ದಂಡನೆಗೆ ಗುರಿಪಡಿಸಿದ. ದಳವಾಯಿಯನ್ನು ಹಿಡಿದು ಅವನ ಕಣ್ಣು ಕೀಳಿಸಿ ಸೆರೆಮನೆಯಲ್ಲಿಟ್ಟ. 1621ರಲ್ಲಿ ಲಿಂಗಣ್ಣ ಎಂಬುವನನ್ನು ದಳವಾಯಿಯನ್ನಾಗಿ ನೇಮಿಸಿಕೊಂಡು ಸ್ವತಃ ಆಳಲು ಪ್ರಾರಂಭಿಸಿದ.

ಅನಂತರ ಚಾಮರಾಜ ತನ್ನ ತಾತನ ಮೇಲ್ಪಂಕ್ತಿಯನ್ನನುಸರಿಸಿ ರಾಜ್ಯ ವಿಸ್ತರಣೆಯಲ್ಲಿ ತೊಡಗಿದ. ಸೋಮರಾಜಯ್ಯನನ್ನು ಸೋಲಿಸಿ ತಲಕಾಡನ್ನು ಆಕ್ರಮಿಸಿಕೊಂಡ (ಅಕ್ಟೋಬರ್ 1621), ಜಗದೇವರಾಯನ ಸೈನ್ಯವನ್ನು ಹಿಮ್ಮೆಟ್ಟಿಸಿ ಮಳವಳ್ಳಿಯನ್ನೂ (ಮೇ 1623) ಬಾಳೋಜಿ ನಾಯಕನನ್ನು ಸೋಲಿಸಿ ಅರಿಕುಠಾರವನ್ನೂ (ಈಗಿನ ಚಾಮರಾಜನಗರ, ಡಿಸೆಂಬರ್ 1623), ಹಿಂದೆ ಹದಿನಾಡಿನ ನಂಜರಾಜನಿಗೆ ಸೇರಿದ್ದ ಸತ್ಯಾಗಾಲವನ್ನೂ (ಮೇ 1625) ಚನ್ನರಾಜ ಒಡೆಯರ್ ಎಂಬುವನನ್ನು ಸೋಲಿಸಿ ಹೆಗ್ಗಡದೇವನಕೋಟೆಯನ್ನೂ (ಜುಲೈ 1625) ತನ್ನ ರಾಜ್ಯಕ್ಕೆ ಸೇರಿಸಿಕೊಂಡ. 1626ರಲ್ಲಿ ನಡೆದ ಚನ್ನಪಟ್ಟಣದ ಮುತ್ತಿಗೆಯಲ್ಲಿ ದಳವಾಯಿ ಲಿಂಗಣ್ಣ ಮೃತನಾದ್ದರಿಂದ ಬಸವಲಿಂಗಣ್ಣ ಎಂಬುವನನ್ನು ದಳವಾಯಿಯಾಗಿ ನೇಮಿಸಿಕೊಂಡ. ಆತ ದಕ್ಷಿಣದತ್ತ ನುಗ್ಗಿ ಹೊಂಗನೂರು ಮತ್ತು ಅಮ್ಮಚವಾಡಿಗಳನ್ನು ಗೆದ್ದ (ಮಾರ್ಚ್ 1626). ಅನಂತರ ಪಿರಿಯಾಪಟ್ಟಣದ ಮೇಲೆ ದಾಳಿಮಾಡಿ ಅಲ್ಲಿನ ನಾಯಕನಿಂದ



ಕಪ್ಪಕಾಣಿಕೆಯನ್ನು ವಸೂಲಿ ಮಾಡಿ ಹಾಡ್ಯ, ಹನಸೋಗೆ ಮತ್ತು ಸಾಲಿಗ್ರಾಮ ಪ್ರದೇಶಗಳನ್ನು ವಶಪಡಿಸಿಕೊಂಡ (ಜುಲೈ 1626). ಅದೇ ತಿಂಗಳಲ್ಲಿ ಪ್ರಭುದೇವ ಮತ್ತು ಲಿಂಗರಾಜಯ್ಯ ಇವರಿಂದ ತಗಡೂರು, ಕೊತ್ತಾಗಾಲ, ಡಿಸೆಂಬರ್‌ನಲ್ಲಿ ಚನ್ನರಾಜಯ್ಯನಿಂದ ಚೌಡಲೆ - ಇವನ್ನು ಕಿತ್ತುಕೊಳ್ಳಲಾಯಿತು. 1627ರ ಹೊತ್ತಿಗೆ ಮೈಸೂರಿನ ಆಗ್ನೇಯದಲ್ಲಿ ಘಟ್ಟದ ಕೆಳಗೆ ಆಳುತ್ತಿದ್ದ ಘಟ್ಟ ಮುದಲಿಯಾರನಿಂದ ಕಪ್ಪ ವಸೂಲಿ ಮಾಡಲಾಯಿತು. 1630ರಲ್ಲಿ ದಳವಾಯಿ ಬಸವಲಿಂಗಣ್ಣ ತೀರಿಕೊಂಡಾಗ ಅವನ ಸ್ಥಾನದಲ್ಲಿ ಬೆಟ್ಟದ ಅರಸನ ತಮ್ಮನಾದ ವಿಕ್ರಮರಾಯನನ್ನು ದಳವಾಯಿಯಾಗಿ ನೇಮಿಸಿದ. ಅನಂತರ ಮೈಸೂರು ಮತ್ತು ಇಕ್ಕೇರಿ ಸಂಸ್ಥಾನಗಳ ಮಧ್ಯೆ ಘರ್ಷಣೆ ನಡೆಯಿತು. ಚನ್ನಪಟ್ಟಣದ ಜಗದೇವರಾಯ ಚಾಮರಾಜನನ್ನು ಎದುರಿಸುವ ಸನ್ನಾಹ ನಡೆಸಿದಾಗ, ಚಾಮರಾಜ ಸ್ವತಃ ಸೈನ್ಯದ ನೇತೃತ್ವವನ್ನು ವಹಿಸಿ ಜಗದೇವರಾಯನನ್ನು ಸೋಲಿಸಿ ಚನ್ನಪಟ್ಟಣವನ್ನು ಆಕ್ರಮಿಸಿಕೊಂಡ. ಅನಂತರ ನಾಗಮಂಗಲ ಮತ್ತು ಬೆಳ್ಳೂರನ್ನೂ ವಶಪಡಿಸಿಕೊಂಡ. ಚಿಕ್ಕನಾಯಕನಹಳ್ಳಿ ಪಾಳೆಯಗಾರ ಚಾಮರಾಜನೊಡನೆ ಶಾಂತಿ ಒಪ್ಪಂದವನ್ನು ಮಾಡಿಕೊಂಡ. 1634ರಲ್ಲಿ ಚಾಮರಾಜ ಚನ್ನರಾಯಪಟ್ಟಣವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡು ರಾಜ್ಯವನ್ನು ವಿಸ್ತರಿಸಿದ.

ಈತನ ಆಳಿಕೆಯ ಕೊನೆಯಲ್ಲಿ ಮೈಸೂರು ಸಂಸ್ಥಾನ ಮಳವಳ್ಳಿ, ಚನ್ನಪಟ್ಟಣ, ನಾಗಮಂಗಲ, ಚನ್ನರಾಯಪಟ್ಟಣ, ಪಿರಿಯಾಪಟ್ಟಣ ಮತ್ತು ದಣಾಯಕನ ಕೋಟೆ ಪ್ರದೇಶಗಳನ್ನೊಳಗೊಂಡಿತ್ತು. ಅಲ್ಲದೆ ಸುತ್ತಲಿನ ಅನೇಕ ಪಾಳೆಯಗಾರರು ಚಾಮರಾಜನ ಸ್ನೇಹವನ್ನು ಬಯಸುವಂತಾಯಿತು. ಅನೇಕರು ಕಪ್ಪವನ್ನೊಪ್ಪಿಸುತ್ತಿದ್ದರು. ಅಂದಿನ ವಿಜಯನಗರ ಸಾಮಂತರಲ್ಲಿ ಚಾಮರಾಜ ಪ್ರಭಾವೀ ಸ್ಥಾನವನ್ನು ಗಳಿಸಿದ್ದ.

ಚಾಮರಾಜ ಬಿರುದೆಂತೆಂಬರ ಗಂಡ, ಶ್ರೀಮದ್ ರಾಜಾಧಿರಾಜ ಪರಮೇಶ್ವರ, ಕಠಾರಿಯ ಸಾಳ್ವ, ವೈರಿಗಜಗಂಡಭೇರುಂಡ, ಅಪ್ರತಿಮವೀರ ಮೊದಲಾದ ಬಿರುದುಗಳನ್ನು ಧರಿಸಿದ್ದ. ಯಳಂದೂರಿನ ಮುದ್ದಾಜಮ್ಮ, ಬಿಳುಗಲಿಯ ದೇವೀರಮ್ಮ, ಮೂಗೂರಿನ ಸಿದ್ದಾಜಮ್ಮ, ಮೂಡಣಕೋಟೆಯ ಚನ್ನಾಜಮ್ಮ ಮತ್ತು ಸಿಂಧುವಳ್ಳಿಯ ದೊಡ್ಡಾಜಮ್ಮ ಇವರು ಚಾಮರಾಜನ ಪತ್ನಿಯರು. ಮುದ್ದಾಜಮ್ಮ ಮೇಲುಕೋಟೆಯ ಕೊಳದ ಸ್ನಾನಘಟ್ಟವನ್ನು ಕಟ್ಟಿಸಿದ್ದಳು. ಚಾಮರಾಜ 1637 ಮೇ 2ರಂದು ನಿಧನನಾದ. ಆಗ ಈತನ ಪತ್ನಿಯರು ಸತಿಯಾದಂತೆ ತೋರುತ್ತದೆ.

ಚಾಮರಾಜ ಪರಾಕ್ರಮಿಯಾಗಿದ್ದಂತೆ ಧರ್ಮಾಭಿಮಾನಿಯೂ ಆಗಿದ್ದ. ಇವನು ಮೈಸೂರಿನ ಲಕ್ಷ್ಮೀಕಾಂತ, ಚಾಮುಂಡೇಶ್ವರಿ ಮತ್ತು ಮಹಾಬಲೇಶ್ವರ ದೇವಾಲಯಗಳಿಗೆ ಉದಾರದತ್ತಿ ನೀಡಿದನಲ್ಲದೆ 1631ರಲ್ಲಿ ಶ್ರವಣಬೆಳಗೊಳವನ್ನು ಸಂದರ್ಶಿಸಿ ಅಲ್ಲಿಂದ ಕಾರಣಾಂತರಗಳಿಂದ ಸ್ಥಳಾಂತರ ಹೊಂದಿದ್ದ ಜೈನ ಗುರು ಚಾರುಕೀರ್ತಿಪಂಡಿತ ಯೋಗೀಂದ್ರರನ್ನು ತನ್ನ ಆಸ್ಥಾನಕ್ಕೆ ಕರೆಸಿ ಗೌರವಿಸಿ ಅವರು ಶ್ರವಣಬೆಳಗೊಳಕ್ಕೆ ಹಿಂದಿರುಗಲು ವ್ಯವಸ್ಥೆಮಾಡಿದ. ಅಲ್ಲದೆ ಶ್ರವಣಬೆಳಗೊಳ ಕ್ಷೇತ್ರದಲ್ಲಿ ಪೂಜಾಕೈಂಕರ್ಯಗಳು ಯಥೋಚಿತವಾಗಿ ಮುಂದುವರಿಯಲು ದಾನ ದತ್ತಿಗಳನ್ನು ನೀಡಿದ.

ಈತನ ಆಳಿಕೆಯ ಅವಧಿಯಲ್ಲಿ ಸಾಹಿತ್ಯಕ್ಕೂ ವಿಶೇಷ ಪ್ರೋತ್ಸಾಹ ದೊರಕಿತು. ಇವನ ಆಶ್ರಯದಲ್ಲಿದ್ದ ರಾಮಚಂದ್ರನೆಂಬ ವಿದ್ವಾಂಸ ಶಾಲಿಹೋತ್ರನ ಅಶ್ವಶಾಸ್ತ್ರವನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾನೆ. ಇದರಲ್ಲಿ 18 ಅಧ್ಯಾಯಗಳಿದ್ದು ವಿಷಯ ಸರಳ ಭಾಷೆಯಲ್ಲಿ ನಿರೂಪಣೆಗೊಂಡಿದೆ. ಪದ್ಮಣ ಪಂಡಿತನೆಂಬ ಜೈನಕವಿ ರಾಜನ ಆಣತಿಯಂತೆ ಹಯಸಾರ ಸಮುಚ್ಚಯ ಎಂಬ ಗ್ರಂಥವನ್ನು (ಕಂದದಲ್ಲಿ) ರಚಿಸಿದ್ದಾನೆ. ಇದಕ್ಕೆ ಚಾಮರಾಜೀಯ ಎಂಬ ಹೆಸರೂ ಇದ್ದು 20 ಅಧ್ಯಾಯಗಳನ್ನೂ 8,000 ಪದ್ಯಗಳನ್ನೂ ಒಳಗೊಂಡಿದೆ. ಚಾಮರಾಜನ ಪ್ರೋತ್ಸಾಹದಿಂದ ಕನ್ನಡ ಭಾಷೆಯಲ್ಲಿ ಅನೇಕ ಕೃತಿಗಳು ರಚಿತವಾದುದಲ್ಲದೆ ಈ ದಿಸೆಯಲ್ಲಿ ಹೆಚ್ಚಿನ ಪುರೋಭಿವೃದ್ಧಿಯಾಗಲು ನಾಂದಿಯಾಯಿತು.

ಚಾಮರಾಜ ಸ್ವತಃ ಕವಿಯೂ ಆಗಿದ್ದ. ಈತ ವಾಲ್ಮೀಕಿ ರಾಮಾಯಣ ಟೀಕೆ, ಬ್ರಹ್ಮೋತ್ತರಖಂಡ ಟೀಕೆ ಎಂಬ ಗ್ರಂಥಗಳನ್ನು ರಚಿಸಿದನೆಂದು ತಿಳಿದುಬರುತ್ತದೆ. ವಾಲ್ಮೀಕಿ ರಾಮಾಯಣ ಟೀಕೆಗೆ ಚಾಮರಾಜೋಕ್ತಿವಿಲಾಸ ಎಂಬ ಹೆಸರೂ ಇದೆ. ಇದು ಮೂಲ ರಾಮಾಯಣವನ್ನನುಸರಿಸಿ ಕನ್ನಡದಲ್ಲಿ ರಚಿತವಾದ ಪ್ರಥಮ ಗದ್ಯಕೃತಿ. ಗ್ರಂಥದ ಪ್ರಾರಂಭದಲ್ಲಿರುವ ಶ್ಲೋಕವೊಂದರಿಂದ ವಿರೂಪಾಕ್ಷನೆಂಬ ವಿದ್ವಾಂಸನಿಂದ ಇದನ್ನು ಬರೆಯಿಸಿದಂತೆ ತೋರುತ್ತದೆ. ಬ್ರಹ್ಮೋತ್ತರಖಂಡ ಟೀಕೆ ಸ್ಕಾಂದ ಪುರಾಣದಲ್ಲಿಯ ಬ್ರಹ್ಮೋತ್ತರ ಖಂಡಕ್ಕೆ ಗದ್ಯರೂಪದ ಕನ್ನಡ ವ್ಯಾಖ್ಯಾನ, 22 ಅಧ್ಯಾಯಗಳನ್ನೊಳಗೊಂಡಿದೆ. ಇದಕ್ಕೆ ಮಣಿಪ್ರಕಾಶ ಎಂಬ ಹೆಸರೂ ಇದೆ. (ಜಿ.ಆರ್.ಆರ್.)

**ಚಾಮರಾಜ ಒಡೆಯರ್ VI :** ಮೈಸೂರು ಸಂಸ್ಥಾನದ ದೊರೆ (1732-34). ಒಂದನೆಯ ಕೃಷ್ಣರಾಜನ ದತ್ತುಪುತ್ರ ಮತ್ತು ಉತ್ತರಾಧಿಕಾರಿ. ಒಂದನೆಯ ಕೃಷ್ಣರಾಜನಿಗೆ ಮಕ್ಕಳಿರಲಿಲ್ಲವಾದ್ದರಿಂದ ಅವನ ಅವಸಾನ ಕಾಲದಲ್ಲಿ ಅಂಕನಹಳ್ಳಿಯ ದೇವರಾಜ ಅರಸನ ಪುತ್ರನಾದ ಚಾಮರಾಜನನ್ನು ದತ್ತು ಸ್ವೀಕರಿಸಿ ಪಟ್ಟಗಟ್ಟಲು ತನ್ನ ರಾಣಿ ದೇವಾಜಮ್ಮನಿಗೆ ಆಣತಿ ನೀಡಿದ. ದೇವಾಜಮ್ಮ ತನ್ನ ಪತಿಯ ಇಚ್ಛೆಯನ್ನು ಆ ವೇಳೆಗೆ ಆಸ್ಥಾನದಲ್ಲಿ ಪ್ರಾಬಲ್ಯಕ್ಕೆ ಬಂದಿದ್ದ ಸರ್ವಾಧಿಕಾರಿ ನಂಜರಾಜಯ್ಯ, ದಳವಾಯಿ ದೇವರಾಜಯ್ಯ ಮತ್ತು ಕರಾಚೂರಿ ನಂಜರಾಜಯ್ಯ, ಇವರಿಗೆ ವಿವರಿಸಿದಳು. ಕೂಡಲೇ ಇವರು ಚಾಮರಾಜನನ್ನು ಶ್ರೀರಂಗಪಟ್ಟಣಕ್ಕೆ ಬರಮಾಡಿಕೊಂಡು ಹಿಂದಿನ ರಾಜನ ಇಚ್ಛೆಯನ್ನು ವಿವರಿಸಿ ಅವನ ಪಟ್ಟಾಭಿಷೇಕವನ್ನು 1732 ಮಾರ್ಚ್ 19ರಂದು ನೆರವೇರಿಸಿದರು. ಆ ವೇಳೆಗೆ ಚಾಮರಾಜನಿಗೆ 28 ವರ್ಷ ವಯಸ್ಸು ಆಗಿತ್ತು.

ಚಾಮರಾಜ ಒಡೆಯರ್ ಅಧಿಕಾರ ವಹಿಸಿದ ಅನಂತರ ಹಲವು ತಿಂಗಳ ಕಾಲ ದಳವಾಯಿಗಳ ಪ್ರಾಬಲ್ಯ ಸಹಿಸಿಕೊಂಡಿದ್ದ. ಆ ವೇಳೆಗೆ ಆಡಳಿತವೆಲ್ಲವೂ ಕಳಲೆ ಕುಟುಂಬದವರಾದ ದಳವಾಯಿ ದೇವರಾಜಯ್ಯ ಮತ್ತು ಕರಾಚೂರಿ ನಂಜರಾಜಯ್ಯ ಇವರ ಕರಗತವಾಗಿತ್ತು. ರಾಜ್ಯದ ಆಡಳಿತ ಮತ್ತು ಹಣಕಾಸಿನ ವ್ಯವಹಾರದ ಜೊತೆಗೆ ಅರಮನೆಯ ಆಡಳಿತ ಹಾಗೂ



ರಾಜನಿಗೆ ಸೇರಿದ ಜಮೀನುಗಳ ಉತ್ಪತ್ತಿ ಮೊದಲಾದ ಎಲ್ಲ ವಿಷಯಗಳ ಮೇಲ್ವಿಚಾರಣೆಯನ್ನೂ ದಳವಾಯಿಗಳೇ ನಿರ್ವಹಿಸುತ್ತಿದ್ದರು. ದಳವಾಯಿಗಳ ಸರ್ವಾಧಿಕಾರವನ್ನು ಕೊನೆಗಾಣಿಸಿ ಈ ದುಸ್ಥಿತಿಯಿಂದ ಪಾರಾಗಲು ಚಾಮರಾಜ 1732ರ ಡಿಸೆಂಬರ್ ಮಾಹೆಯಲ್ಲಿ ನಿರ್ಧರಿಸಿದ. ರಾಜನ ನಿರ್ಧಾರವನ್ನು ಸಂಚಿನಿಂದ ತಿಳಿದ ದಳವಾಯಿ ದೇವರಾಜಯ್ಯ ದೇವಾಜಮ್ಮನಿಗೆ ದೂರು ಹೇಳುವುದರ ಮೂಲಕ ಅವಳ ಮನಸ್ಸನ್ನು ಗೆದ್ದು ತನಗೆ ಇಚ್ಛೆ ಬಂದಂತೆ ಅಧಿಕಾರ ಚಲಾಯಿಸುವಂತೆ ಅವಳಿಂದ ವಾಗ್ದಾನ ಪಡೆದ. ಈ ಸಂಗತಿಯನ್ನು ತಿಳಿದ ಚಾಮರಾಜ 1732ರ ಜನವರಿಯಲ್ಲಿ ದೇವರಾಜಯ್ಯನನ್ನೂ ಸರ್ವಾಧಿಕಾರಿ ನಂಜರಾಜಯ್ಯನನ್ನೂ ಅಧಿಕಾರದಿಂದ ಕಿತ್ತುಹಾಕಿ ತನ್ನ ಆಪ್ತರನ್ನು ಅವರ ಸ್ಥಳದಲ್ಲಿ ನೇಮಿಸಿದ.

ಅನಂತರ ಚಾಮರಾಜ ಸ್ವತಂತ್ರವಾಗಿ ಆಡಳಿತ ನಡೆಸಿದ. ಸಮಕಾಲೀನ ಕೃತಿಯಾದ ಶೃಂಗಾರರಾಜತಿಲಕ ಬಾಣ ಮತ್ತು ಇತರ ಆಕರಗಳಿಂದ ತಿಳಿದುಬರುವಂತೆ ಚಾಮರಾಜ ಒಡೆಯರ್ ದಕ್ಷತೆಯಿಂದ ಆಡಳಿತದ ಪ್ರತಿ ಅಂಶವನ್ನು ಎಚ್ಚರಿಕೆಯಿಂದ ಪರಿಶೀಲಿಸುತ್ತಿದ್ದ. ತನ್ನ ಹಿಂದಿನ ಅರಸರಂತೆ ದೇವಾಲಯಗಳಿಗೂ ವಿದ್ವಾಂಸರಿಗೂ ದಾನ ಧರ್ಮಗಳನ್ನು ನೀಡಿದ. ಶ್ರೀರಂಗಪಟ್ಟಣ ಶ್ರೀಮಂತ ವರ್ತಕರಿಂದ ಕೂಡಿ ವ್ಯಾಪಾರ, ಧರ್ಮ ಮತ್ತು ವಿದ್ವತ್ತಿನ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಚಾಮರಾಜ ನೇಮಿಸಿಕೊಂಡಿದ್ದ ಅಧಿಕಾರಿಗಳು ನಿಸ್ಪೃಹತೆಯಿಂದ ಕಾರ್ಯನಿರ್ವಹಿಸುತ್ತಿದ್ದರು.

ಆದರೆ ಚಾಮರಾಜ ಬಹುಕಾಲ ರಾಜನಾಗಿ ಮುಂದುವರಿಯುವ ಅದೃಷ್ಟ ಪಡೆದಿರಲಿಲ್ಲ. ಪದಚ್ಯುತರಾದ ದಳವಾಯಿಗಳು ಚಾಮರಾಜನ ಆಳಿಕೆಯನ್ನು ಕೊನೆಗಾಣಿಸಲು ಸಮಯ ಕಾಯುತ್ತಿದ್ದರು. ಈ ಮಧ್ಯೆ ಚಾಮರಾಜ ಹಲವು ಆರ್ಥಿಕ ಸುಧಾರಣೆಗಳನ್ನು ಕೈಗೊಂಡ. ಇವನ ಸಾಕುತಾಯಿಯಾದ ರಾಣಿ ದೇವಾಜಮ್ಮ ಇತಿಮಿತಿಯಿಲ್ಲದ ಧರ್ಮಗಳನ್ನು ನೆರವೇರಿಸುತ್ತಿದ್ದು ಹೆಚ್ಚು ಸಂಖ್ಯೆಯಲ್ಲಿ ಸೇವಕ ವರ್ಗದವರನ್ನು ನೇಮಿಸಿಕೊಂಡಿದ್ದಳು. ಚಾಮರಾಜ ತರಲಿದ್ದ ಆರ್ಥಿಕ ಸುಧಾರಣೆಯಿಂದ ತಮಗೆ ತೊಂದರೆಯಾಗುವುದೆಂದು ಗ್ರಹಿಸಿದ ಹಲವರು ರಾಣಿಗೆ ಚಾಡಿ ಹೇಳತೊಡಗಿದರು. ಈ ಸಮಯವನ್ನು ಕಾಯುತ್ತಿದ್ದ ಕಳಲೆ ಸಹೋದರರು ವಿಶೇಷ ಹಣದಾಸೆಯನ್ನು ತೋರಿಸಿ ಸೈನ್ಯದಲ್ಲಿ ಒಡಕುಂಟುಮಾಡಿ ರಾಜರಮೇಲೆ ತಿರುಗಿಬೀಳುವಂತೆ ಮಾಡಿ ತಾವೇ ಅದರ ಮುಖಂಡತ್ವವನ್ನು ವಹಿಸಿ ರಾತ್ರಿ ವೇಳೆಯಲ್ಲಿ ದಂಗೆಯನ್ನು ನಡೆಸಿದರು. ಕುಹಕವನ್ನರಿಯದ ಚಾಮರಾಜ ದಳವಾಯಿ ದೇವರಾಜಯ್ಯನೊಡನೆ ಸೌಹಾರ್ದ ಒಪ್ಪಂದಕ್ಕೆ ಮುಂದಾದ. ಆದರೆ ಸಮಯಸಾಧಕನಾದ ದಳವಾಯಿ ಅರಮನೆಯ ಬಾಗಿಲನ್ನು ಆನೆಯಿಂದ ಒಡೆಸಿ ಚಾಮರಾಜನಿಂದ ರಾಜತ್ವದ ಚಿಹ್ನೆಗಳನ್ನು ಕಸಿದುಕೊಂಡು ಸಿಂಹಾಸನದ ಮೇಲಿಟ್ಟು ಅವನನ್ನು 1734 ಜೂನ್ 10 ರಂದು ಅಧಿಕಾರ ಚ್ಯುತನನ್ನಾಗಿ ಮಾಡಿದ. ಅವನ ಅಧಿಕಾರಿಗಳನ್ನೆಲ್ಲ ಸೆರೆಮನೆಗೆ ಕಳುಹಿಸಲಾಯಿತು. ಅನಂತರ ಚಾಮರಾಜನನ್ನು ಅವನ ಮೂವರು ಪತ್ನಿಯರ ಸಮೇತವಾಗಿ ಕಬ್ಬಾಳದುರ್ಗದ ಸೆರೆಮನೆಯಲ್ಲಿಡಲಾಯಿತು. ಚಾಮರಾಜ ಸೆರೆಯಾದ ಸ್ವಲ್ಪ ಕಾಲದಲ್ಲೇ ಅನಾರೋಗ್ಯಕ್ಕೆ ತುತ್ತಾಗಿ ಮರಣಹೊಂದಿದ. (ಜಿ.ಆರ್.ಆರ್.)

**ಚಾಮರಾಜ ಒಡೆಯರ್ (ಬೆಟ್ಟದ) VII :** ಮೈಸೂರು ರಾಜ್ಯದ ದೊರೆ (1770-76). ಇಮ್ಮಡಿ ಕೃಷ್ಣರಾಜನ ಕಿರಿಯ ಮಗ. ಅಣ್ಣ ನಂಜರಾಜ ಮೃತನಾದ ಅನಂತರ 11 ವರ್ಷದ ಬಾಲಕನಾದ ಈತನಿಗೆ ಹೈದರ್ ಪಟ್ಟ ಕಟ್ಟಿದ. ಹಲವು ಸಮಕಾಲೀನ ಶಾಸನಗಳು ಮತ್ತು ಅಧಿ .ಕೃತ ದಾಖಲೆಗಳಲ್ಲಿ ಬೆಟ್ಟದ ಚಾಮರಾಜ ರಾಜ ನೆಂದೂ ಹೈದರ್ ಸರ್ವಾಧಿ ಕಾರಿಯೆಂದೂ ಉಲ್ಲೇಖಿಸ ಲಾಗಿದೆಯಾದರೂ ರಾಜತ್ವ ಕೇವಲ ತೋರಿಕೆಗೆ ಮಾತ್ರ ವಾಗಿತ್ತು. ಅಧಿಕಾರವೆಲ್ಲ ಹೈದರನ ವಶದಲ್ಲಿತ್ತು. ಬೆಟ್ಟದ ಚಾಮರಾಜ ತನ್ನ ಹದಿನೇಳನೆಯ ವಯಸ್ಸಿನಲ್ಲಿ (1776) ಅಕಾಲ ಮೃತ್ಯುಗೀಡಾದ. ಇವನ ಮರಣ ವಿಷಪ್ರಾಶನ ದಿಂದ ಸಂಭವಿಸಿತೆಂದೂ ಅದಕ್ಕೆ ಹೈದರನೇ ಕಾರಣನೆಂದೂ ಊಹೆ ಇದೆ. (ಜಿ.ಆರ್.ಆರ್.)



**ಚಾಮರಾಜ ಒಡೆಯರ್ VIII :** ಖಾಸಾ ಚಾಮರಾಜನೆಂದೂ ಹೆಸರಿರುವ ಈತ ಮೈಸೂರು ಸಂಸ್ಥಾನದ ನಾಮ ಮಾತ್ರ ದೊರೆ (1776-96). ಹಿರಿಯ ಚಾಮರಾಜ ಒಡೆಯರ್ ಮಕ್ಕಳಿಲ್ಲದೆ ಮರಣ ಹೊಂದಿದುದರಿಂದ ಹೈದರ್ ಅಲಿ ಕಾರುಗಹಳ್ಳಿಯ ಕುಟುಂಬದ ಬಾಲಕನಾದ ಚಾಮರಾಜನನ್ನು ಗತಿಸಿದ ರಾಜನ ಉತ್ತರಾಧಿಕಾರಿಯಾಗಿ ಆರಿಸಿದ. ಹಿಂದಿನ ರಾಜನ ಮರಣಾನಂತರ ಉತ್ತರಾಧಿಕಾರಿಯನ್ನು ಆರಿಸಲು ಹೈದರ್ ರಾಜಕುಟುಂಬಕ್ಕೆ ಸಂಬಂಧಿಸಿದ ಅನೇಕ ಬಾಲಕರನ್ನು ಕರೆಸಿ ಅರಮನೆಯಲ್ಲಿ ಹಣ್ಣು ಹಂಪಲುಗಳನ್ನೂ ಇತರ ಅನೇಕ ಪದಾರ್ಥಗಳನ್ನೂ ಇಟ್ಟು ಆರಿಸಿಕೊಳ್ಳುವಂತೆ ಅವರಿಗೆ ಸೂಚಿಸಿದ. ಬೇರೆ ಬೇರೆ ಹುಡುಗರು ತಿಂಡಿ ತಿನಿಸುಗಳನ್ನು ಆರಿಸಿಕೊಳ್ಳುತ್ತಿದ್ದಾಗ ಬಾಲಕ ಚಾಮರಾಜ ಒಂದು ಕತ್ತಿ ಹಾಗೂ ನಿಂಬೆಹಣ್ಣು ಆರಿಸಿಕೊಂಡ. ಇದನ್ನು ಮೆಚ್ಚಿದ ಹೈದರ್ ಚಾಮರಾಜನನ್ನು ಉತ್ತರಾಧಿಕಾರಿಯೆಂದು ನಾಮಕರಣ ಮಾಡಿದ ಎಂಬ ಕಥೆ ಪ್ರಚಲಿತವಾಗಿದೆ. ಚಾಮರಾಜ ನೆಪಮಾತ್ರಕ್ಕೆ ರಾಜನಾಗಿದ್ದ. ಹೈದರ್ ಸರ್ವಾಧಿಕಾರಿಯಾಗಿದ್ದ. ಹೈದರ್‌ನ ಪ್ರಾಬಲ್ಯ ವನ್ನು ಕೊನೆಗಾಣಿಸಿ ರಾಜ ಮನೆತನದ ಅಧಿಕಾರವನ್ನು ಪುನಃ ಸ್ಥಾಪಿಸಲು ನಡೆದ ಯತ್ನಗಳು ಫಲಕಾರಿಯಾ ಗಲಿಲ್ಲ. ಚಾಮರಾಜ 1796ರಲ್ಲಿ ಸಿಡುಬುರೋಗಕ್ಕೆ ತುತ್ತಾಗಿ ಮರಣಹೊಂದಿದ. ಅನಂತರ ಸರ್ವಾಧಿಕಾರಿ ಯಾಗಿದ್ದ ಟಿಪ್ಪುಸುಲ್ತಾನ ಉತ್ತರಾಧಿಕಾರಿಯ ಆವಶ್ಯ ಕತೆಯಿಲ್ಲವೆಂದು ಘೋಷಿಸಿ ರಾಜಮನೆತನದವರನ್ನು ಸಾಮಾನ್ಯ ಗೃಹವೊಂದರಲ್ಲಿ ಬಂಧನದಲ್ಲಿಟ್ಟ. ಉತ್ತರಾಧಿಕಾರಿಯಾಗಬೇಕಾಗಿದ್ದ ಈತನ ಪುತ್ರ ಮೂರನೆಯ ಕೃಷ್ಣರಾಜ ಆಗ ಇನ್ನೂ ಕೇವಲ ಎರಡು ವರ್ಷದ ಬಾಲಕನಾಗಿದ್ದ. (ಜಿ.ಆರ್.ಆರ್.)



**ಚಾಮರಾಜ ಒಡೆಯರ್ IX :** ಮೈಸೂರು ಸಂಸ್ಥಾನದ ದೊರೆ (1881-94). ಮುಮ್ಮಡಿ ಕೃಷ್ಣರಾಜ ಒಡೆಯರ ದತ್ತುಪುತ್ರ. ಜನನ 1863. ಬ್ರಿಟಿಷ್ ಸರ್ಕಾರ ಮೈಸೂರು ರಾಜವಂಶದವರಿಗೆ ಆಡಳಿತ ವಹಿಸಬೇಕೆಂದು ತೀರ್ಮಾನಿಸಿದ್ದರಿಂದ, ಇವರು ಪ್ರಾಪ್ತ ವಯಸ್ಕರಾಗುತ್ತಿದ್ದ ಹಾಗೆಯೇ 50 ವರ್ಷಗಳ ರೆಸಿಡೆಂಟರ ಆಡಳಿತ ಕೊನೆಗೊಂಡಿತು. 1881 ಮಾರ್ಚ್ 25ರಂದು ಪಟ್ಟಕ್ಕೆ ಬಂದರು.

ಇವರ ಕಾಲದಲ್ಲಿ ಗೋರ್ಡನ್ ರೆಸಿಡೆಂಟನಾಗಿ ನೇಮಕ ಹೊಂದಿದ. ಸಿ. ರಂಗಾಚಾರ್ಲು ದಿವಾನರಾಗಿ ನಿಯುಕ್ತರಾದರು. ಆಡಳಿತ ಕಾರ್ಯಕಲಾಪಗಳಲ್ಲಿ ನೆರವಾಗಲು ಇವರಿಗೆ ಒಂದು ಪುಟ್ಟ ಸಲಹಾ ಮಂಡಲಿಯೂ ರಚಿತವಾಯಿತು. ರೆಸಿಡೆಂಟರ ಕಾಲದಲ್ಲಿ ರಾಜ್ಯಾಂಗದ ಕೆಲವು ಸಂಪ್ರದಾಯಗಳು ಮೈಸೂರಿನಲ್ಲಿ ಆಚರಣೆಗೆ ಬಂದಿದ್ದವು. ರಂಗಾಚಾರ್ಲು ಅವರು ಈ ಸಂಪ್ರದಾಯವನ್ನು ಮುಂದುವರಿಸಿ ಮೈಸೂರಿನಲ್ಲಿ ಪ್ರಜಾ ಪ್ರತಿನಿಧಿ ಸಭೆಯನ್ನು ಸ್ಥಾಪಿಸಿದರು. ಈ ಸಭೆಗೆ ಸಂಸ್ಥಾನದ ನಾನಾ ಭಾಗಗಳಿಂದ ಸರ್ಕಾರವೇ ಆರಿಸಿದ ನೂರ ನಲವತ್ತನಾಲ್ಕು ಜನ ಸದಸ್ಯರಿದ್ದರು. ಈ ಸಭೆಯು ಅಧಿವೇಶನ ಮೈಸೂರು ನಗರದಲ್ಲಿ ನಡೆಯುತ್ತಿತ್ತು. ಮೈಸೂರಿನಲ್ಲಿ ಪ್ರಜಾಪ್ರತಿನಿಧಿ ಸಭೆ ಸ್ಥಾಪಿಸಿದ್ದು, ಭಾರತದಲ್ಲೇ ಮೊದಲ ಬಾರಿಗೆ ಪ್ರಜಾ ಪ್ರಭುತ್ವ ಸ್ಥಾಪನೆಗೆ ತಳಹದಿ ಹಾಕಿದಂತಾಯಿತು. ರಂಗಾಚಾರ್ಲು 1883ರಲ್ಲಿ ನಿಧನಹೊಂದಿದ ಅನಂತರ ಕೆ. ಶೇಷಾದ್ರಿ ಅಯ್ಯರ್ ದಿವಾನರಾಗಿ ಬಂದರು. ಅವರ ಆಡಳಿತದ ಕಾಲದಲ್ಲಿ ಪ್ರತಿಯೊಂದು ಕ್ಷೇತ್ರದಲ್ಲೂ ಪ್ರಗತಿ ಕಂಡುಬಂತು. ಅವರು ಅಧಿಕಾರಕ್ಕೆ ಬರುವುದಕ್ಕೆ ಮುನ್ನ 58 ಮೈಲಿ ವರೆಗೆ ಬಂದಿದ್ದ ರೈಲು ಮಾರ್ಗ ಅವರು ಅಧಿಕಾರಕ್ಕೆ ಬಂದು ಎರಡು ವರ್ಷಗಳೊಳಗೆ 315 ಮೈಲಿಗಳಿಗೆ ವಿಸ್ತೃತವಾಯಿತು. ಸುಮಾರು ಒಂದೂವರೆ ಸಾವಿರ ಚದರ ಮೈಲಿ ಗಿಂತಲೂ ಹೆಚ್ಚಿನ ವಿಸ್ತೀರ್ಣಕ್ಕೆ ನೀರಾವರಿ ವ್ಯವಸ್ಥೆ ನಡೆಯಿತು. ಇದರಿಂದ ರಾಜ್ಯದ ಆದಾಯ ಹೆಚ್ಚಿತು. ಚಿನ್ನದ ಗಣಿ ಕೆಲಸ ಪ್ರಾರಂಭವಾದುದು ಶೇಷಾದ್ರಿ ಅಯ್ಯರ್ ಅವರ ದಿವಾನಗಿರಿ ಕಾಲದಲ್ಲಿ. ಶಿಕ್ಷಣ, ಗ್ರಾಮನೈರ್ಮಲ್ಯ, ಆರೋಗ್ಯ, ಅರಣ್ಯ ಸಂಪತ್ತು ಮುಂತಾದ ಎಲ್ಲ ರಂಗಗಳಲ್ಲೂ ಅಸಾಧಾರಣ ಪ್ರಗತಿಯುಂಟಾಯಿತು. ಆಡಳಿತದಲ್ಲಿ ಸೂಕ್ತ ಶಿಕ್ಷಣ ಕೊಡುವುದಕ್ಕಾಗಿ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆ ಪ್ರಾರಂಭವಾದುದು ಇದೇ ಕಾಲದಲ್ಲಿ. ಸಮಗ್ರ ಭಾರತದಲ್ಲಿ ಅರಸರಿಗೂ ಪ್ರಜೆಗಳಿಗೂ ಇಂಥ ಮಧುರಬಾಂಧವ್ಯ ಬೆಳೆದಿರುವುದು, ಇಂಥ ಸರ್ಕಾರ ಏರ್ಪಟ್ಟಿರುವುದು, ಪ್ರಜಾಕ್ಷೇಮವೇ ಸರ್ಕಾರದ ಪರಮಾದರ್ಶ ಎಂಬ ಘನತತ್ತ್ವ ಯಶಸ್ವಿಯಾಗಿ ಕಾರ್ಯಗತವಾಗಿರುವುದು ಮೈಸೂರಿನಲ್ಲಿ ಮಾತ್ರ ಎಂದು ಅಂದಿನ ವೈಸ್‌ರಾಯ್ ಲಾರ್ಡ್ ಲ್ಯಾನ್ಸ್‌ಡೌನ್ ಕೊಂಡಾಡಿದ್ದಾನೆ.



ಚಾಮರಾಜ ಒಡೆಯರು 1894ರ ನವೆಂಬರ್ ತಿಂಗಳ ಕೊನೆಯ ಭಾಗದಲ್ಲಿ ಕಲ್ಕತ್ತೆಗೆ ಹೋಗಿದ್ದರು. ಹೊರಡುವಾಗಲೇ ಇವರ ಆರೋಗ್ಯ ಸರಿಯಾಗಿರಲಿಲ್ಲ. ಕೊನೆಗೆ ಇವರ ಕಾಯಿಲೆ ಡಿಫ್ತೀರಿಯ ಎಂದು ತಿಳಿದು ಬಂತು. ಸಮರ್ಪಕ ಚಿಕಿತ್ಸೆಯೇನೋ ನಡೆಯಿತು. ಆದರೆ ಫಲಕಾರಿಯಾಗಲಿಲ್ಲ. 1894 ನವೆಂಬರ್ 28ರಂದು ನಿಧನಹೊಂದಿದರು.

ಚಾಮರಾಜ ಒಡೆಯರು ಸರಳ ಜೀವಿಯಾದ ಧೀರೋದಾತ್ತ ವ್ಯಕ್ತಿಯಾಗಿದ್ದರು.ಇವರಿಗೆ ಹಿಂದು ಸಂಪ್ರದಾಯದಲ್ಲಿ ಅಪಾರ ಭಕ್ತಿ ಶ್ರದ್ಧೆಗಳಿದ್ದುವು. ಇವರು ಪಾಶ್ಚಾತ್ಯ ಸಂಗೀತ, ಪಾಶ್ಚಾತ್ಯ ಕಲಾಕೃತಿಗಳಲ್ಲೂ ಪರಿಣತರಾಗಿದ್ದರು. ಇವರು ವೈಯಕ್ತಿಕ ಸಭ್ಯತೆ, ಸುಸಂಸ್ಕೃತಿ, ಸದಭಿರುಚಿಗಳಿಗೂ ದಕ್ಷ ರಾಜಕಾರ್ಯಕ್ಕೂ ಖ್ಯಾತರಾಗಿದ್ದರು. (ಎಂ.ಕೆ.ಬಿ.)

**ಚಾಮರಾಜನಗರ :** ಕರ್ನಾಟಕ ರಾಜ್ಯದ ಒಂದು ಜಿಲ್ಲೆ, ತಾಲ್ಲೂಕು ಹಾಗೂ ಅವುಗಳ ಆಡಳಿತ ಕೇಂದ್ರ. 1997ರಲ್ಲಿ ಕರ್ನಾಟಕ ರಾಜ್ಯದ ಕೆಲವು ಜಿಲ್ಲೆಗಳನ್ನು ಮರುವಿಂಗಡಣೆ ಮಾಡಿದಾಗ ಮೈಸೂರು ಜಿಲ್ಲೆಯಿಂದ ನಾಲ್ಕು ತಾಲ್ಲೂಕುಗಳನ್ನು ಬೇರ್ಪಡಿಸಿ ಚಾಮರಾಜನಗರ ಜಿಲ್ಲೆಯನ್ನು ರಚಿಸಲಾಯಿತು. ಗುಂಡ್ಲುಪೇಟೆ, ಚಾಮರಾಜನಗರ, ಕೊಳ್ಳೇಗಾಲ ಮತ್ತು ಯಳಂದೂರು—ಇವು ಈ ಜಿಲ್ಲೆಗೆ ಸೇರಿರುವ ತಾಲ್ಲೂಕುಗಳು. ರಾಜ್ಯದ ದಕ್ಷಿಣದ ತುತ್ತತುದಿಯಲ್ಲಿರುವ ಈ ಜಿಲ್ಲೆಯ ಉತ್ತರದಲ್ಲಿ ಮೈಸೂರು, ಮಂಡ್ಯ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳೂ ಪೂರ್ವ ಮತ್ತು ದಕ್ಷಿಣದಲ್ಲಿ ತಮಿಳುನಾಡು ರಾಜ್ಯ, ಪಶ್ಚಿಮಕ್ಕೆ ಕೇರಳ ರಾಜ್ಯಗಳೂ ಇವೆ. ಜಿಲ್ಲೆಯ ವಿಸ್ತೀರ್ಣ 5,685ಚ.ಕಿಮೀ. ಜನಸಂಖ್ಯೆ 9,64,775.

**ಭೂಲಕ್ಷಣ :** ದಕ್ಷಿಣ ಭಾರತ ಪ್ರಸ್ಥಭೂಮಿಯ ದಕ್ಷಿಣದ ತುದಿಯಲ್ಲಿರುವ ಜಿಲ್ಲೆ ಪೂರ್ವ ಮತ್ತು ಪಶ್ಚಿಮ ಘಟ್ಟಗಳು ಕೂಡುವೆಡೆಯಲ್ಲಿದೆ. ನೀಲಗಿರಿ ಬೆಟ್ಟಗಳ ಕವಲುಗಳು ಇದರೊಳಕ್ಕೆ ಚಾಚಿವೆ. ಈ ಪ್ರದೇಶ ಸಮುದ್ರಮಟ್ಟಕ್ಕಿಂತ ಸರಾಸರಿ 800ಮೀ ಎತ್ತರದಲ್ಲಿದೆ. ಜಿಲ್ಲೆಯ ಮೂರು ಕಡೆ ಹಬ್ಬಿರುವ ಬೆಟ್ಟಗಳಲ್ಲಿ ಕೊಳ್ಳೇಗಾಲ ತಾಲ್ಲೂಕಿನ ಮಹದೇಶ್ವರ ಬೆಟ್ಟ (976 ಮೀ), ಯಳಂದೂರು ತಾಲ್ಲೂಕಿನ ಬಿಳಿಗಿರಿರಂಗನಬೆಟ್ಟ (1,279ಮೀ), ಗುಂಡ್ಲುಪೇಟೆ ತಾಲ್ಲೂಕಿನ ಗೋಪಾಲಸ್ವಾಮಿಬೆಟ್ಟ (1,468ಮೀ) ಇವು ಈ ಜಿಲ್ಲೆಯ ಹೆಗ್ಗುರುತುಗಳಾಗಿವೆ. ಇವಲ್ಲದೆ ಪುಣಜೂರು (1252.7ಮೀ), ಮತ್‌ಪೋಡ್ (1515.5ಮೀ), ಹೊನ್ನನೆತ್ತಿಕಲ್ (1773.2ಮೀ), ಕತ್ತರಿ (1816ಮೀ), ಹೊನಬೆರ್ರ (1646ಮೀ) ಬೆಟ್ಟಗಳಿವೆ.

ಮಹದೇಶ್ವರಬೆಟ್ಟ ಸಾಲಿನಲ್ಲಿ ಆನೆಮಲೆ, ಕಾಡುಮಲೆ, ಜೇನುಮಲೆ ಮೊದಲಾದ 77 ದಟ್ಟಡವಿಗಳಿವೆ. ಬಿಳಿಗಿರಿರಂಗನ ಬೆಟ್ಟದ ಸಾಲು ಬಂಡೀಪುರದವರೆಗೂ ನಿಬಿಡವಾಗಿ ಹಬ್ಬಿದೆ. ಇವು ತಮಿಳುನಾಡು ಮತ್ತು ಕರ್ನಾಟಕ ರಾಜ್ಯಗಳ ನಡುವೆ ದೊಡ್ಡ ಅಭೇದ್ಯ ಗೋಡೆಗಳಂತೆ ನಿಂತಿವೆ. ಕೇರಳದ ಗಡಿ ಪ್ರದೇಶ ಗುಂಡ್ಲುಪೇಟೆ ತಾಲ್ಲೂಕಿನ ಹಿಮವದ್ ಗೋಪಾಲಸ್ವಾಮಿಬೆಟ್ಟದ ಹತ್ತಿರ ಬರುತ್ತದೆ. ಈ ಇಡೀ ಅರಣ್ಯ ರಾಶಿಯ ನಡುವೆ ಅತ್ಯಂತ ಪ್ರಸಿದ್ಧವಾದ ಧಾರ್ಮಿಕ ಕ್ಷೇತ್ರಗಳಿರುವುದೊಂದು ವಿಶೇಷ. ಪಶ್ಚಿಮ ಘಟ್ಟಗಳ ಶ್ರೇಣಿಗೆ ಹೋಲಿಸಿದರೆ ಈ ಪ್ರದೇಶದಲ್ಲಿ ಬೀಳುವ ಮಳೆ ಕಡಿಮೆಯೇ. ಆದರೆ ತಮಿಳುನಾಡು, ಕರ್ನಾಟಕ ಮತ್ತು ಕೇರಳ ರಾಜ್ಯಗಳ ಅಂಚಿನ ನೆಲಗಳನ್ನು ವಿಸ್ತಾರವಾದ ಅರಣ್ಯ ಆವರಿಸಿದೆ.

ಜಿಲ್ಲೆಯ ಉತ್ತರ ಮತ್ತು ಪೂರ್ವದಲ್ಲಿ ಬಯಲು ಪ್ರದೇಶವಿದೆ. ಕಪಿಲಾ ನದಿಯ ದಂಡೆಯ ಮೇಲೆ ವಿಸ್ತರಿಸಿರುವ ಈ ಭಾಗ ಹೆಚ್ಚಾಗಿ ಕೆಂಪುಮಣ್ಣಿನಿಂದ ಕೂಡಿದ್ದು, ಅಲ್ಲಲ್ಲಿ ಹೆಚ್ಚು ಎತ್ತರವಲ್ಲದ ಗುಡ್ಡಗಳು ಕಂಡುಬರುತ್ತವೆ.

**ಭೂವಿಜ್ಞಾನ :** ಈ ಜಿಲ್ಲೆ ದಕ್ಷಿಣ ಪ್ರಸ್ಥಭೂಮಿಯ ಅಂಚಿನಲ್ಲಿದ್ದರೂ ಪ್ರಸ್ಥಭೂಮಿ ಶಿಲಾ ರಚನೆಗಿಂತ ಸ್ವಲ್ಪ ಭಿನ್ನವಾಗಿದೆ. ಈ ಭಾಗದಲ್ಲಿ ಧಾರವಾಡ ಶಿಲಾ ರಚನೆ ಕಾಣದಿರುವುದೊಂದು ವಿಶೇಷ. ಇದರ ಬದಲು ಚಾರ್ನೊಕೈಟ್ ಶಿಲೆಗಳು ಕಂಡುಬರುತ್ತವೆ. ಅಲ್ಲಲ್ಲಿ ಹಾರ್ನ್‌ಬ್ಲೆಂಡ್, ಪೈರಾಕ್ಸಿನೈಟ್ ಮಾಸ್ನೈಟ್ ಶಿಲೆಗಳ ಹೊಡೆಸಾಲುಗಳು ಹಬ್ಬಿವೆ. ತೆರಕಣಾಂಬಿಯಲ್ಲಿ ಮಣಿಶಿಲೆ ಇದೆ. ಅಲ್ಲಲ್ಲಿ ಬಂಡೆ ಶ್ರೇಣಿಗಳಲ್ಲಿ ಕಯನೈಟ್ ಮತ್ತು ಸಿಲಿಮನೈಟ್ ಖನಿಜಗಳಿವೆ. ಖನಿಜ ಸಂಪತ್ತಿನಲ್ಲಿ ಈ ಜಿಲ್ಲೆ ಸಂಪದ್ಭರಿತವಾಗಿದೆ. ಕೊಳ್ಳೇಗಾಲ ತಾಲ್ಲೂಕಿನಲ್ಲಿ ತಾಮ್ರದ ನಿಕ್ಷೇಪವುಂಟು. ಗುಂಡ್ಲುಪೇಟೆ ಸುತ್ತಮುತ್ತ ಕುರಂಗದ ಕಲ್ಲಿದೆ. ಕೊಳ್ಳೇಗಾಲದ ವಾಣಿಜ್ಯ ಪ್ರಮಾಣದಲ್ಲಲ್ಲದಿದ್ದರೂ ಅಲ್ಪ ಪ್ರಮಾಣದಲ್ಲಿ ಚಿನ್ನದ ಅದಿರು ಕಂಡುಬರುತ್ತದೆ. ಕೆಲವಡೆ ಕಬ್ಬಿಣದ ಅಂಶ ಗಣನೀಯವಾಗಿರುವ ಶಿಲೆಗಳುಂಟು. ಈ ಪ್ರದೇಶದಲ್ಲೇ ಮೆಗ್ನೀಷಿಯಂ ಲೋಹ ನಿಕ್ಷೇಪವೂ ಇದೆ. ಸುಣ್ಣಕಲ್ಲು ನಿಕ್ಷೇಪ ಮತ್ತು ಸಿಲಿಮನೈಟ್ ಖನಿಜಗಳು ಕೆಲವೆಡೆ ಉಂಟು. ಬಿಳಿಗಿರಿರಂಗನ ಬೆಟ್ಟ ಪ್ರದೇಶದಲ್ಲಿ ರೇಷ್ಮೆಯಂತೆ ಹೊಳಪಾದ ಊದಾಬಣ್ಣದ ಚಂದ್ರಶಿಲೆ ಇದೆ. ಕಟ್ಟಡಗಳ ಅಲಂಕಾರಕ್ಕಾಗಿ ಬಳಸಲು ಯೋಗ್ಯವಾದ ನಾನಾ ಬಗೆಯ ಗ್ರಾನೈಟ್ ಶಿಲೆಗಳು ಜಿಲ್ಲೆಯಲ್ಲಿವೆ. ಕಲ್ಲು ತೆಗೆಯುವುದು ಇಲ್ಲಿನ ಒಂದು ಪ್ರಮುಖ ಉದ್ಯಮ. ಅವುಗಳಲ್ಲಿ ಕೆಂಪು, ಹಸುರು ಮತ್ತು ಗುಲಾಬಿ ಬಣ್ಣದ ಈ ಶಿಲೆಗಳು ಜಪಾನ್ ಮೊದಲಾದ ದೇಶಗಳಿಗೆ ರಫ್ತಾಗುತ್ತವೆ. ಕೆಲವು ಗ್ರಾನೈಟ್ ಶಿಲೆಗಳಿಂದ ಜಪಮಣಿ, ಗುಂಡಿಗಳು, ಆಭರಣ ಹರಳುಗಳು, ಮಸಿಕುಡಿಕೆ, ಪಾತ್ರೆಗಳನ್ನು ತಯಾರಿಸುತ್ತಾರೆ.

**ನದಿಗಳು :** ಚಾಮರಾಜನಗರ ಜಿಲ್ಲೆಯಲ್ಲಿ ದೊಡ್ಡ ನದಿಗಳು ಹರಿಯುವುದಿಲ್ಲ. ಆದರೆ ಕಾವೇರಿಯ ಉಪನದಿಯಾದ ಕಪಿಲಾ ಅಥವಾ ಕಬಿನಿ ಈ ಜಿಲ್ಲೆಯ ಉತ್ತರ ಮತ್ತು ಪೂರ್ವ ಭಾಗದ ಸರಹದ್ದಿನಲ್ಲೇ ಹರಿಯುತ್ತದೆ. ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರದ ಬಳಿ ಇದು ಕಾವೇರಿಯನ್ನು ಸೇರುತ್ತದೆ. ಮುಂದೆ ಕಾವೇರಿ ನದಿ ಸ್ವಲ್ಪ ದೂರ ಬೆಂಗಳೂರು ಮತ್ತು ಚಾಮರಾಜನಗರ ಜಿಲ್ಲೆಗಳ ಹಾಗೂ ತಮಿಳುನಾಡು ರಾಜ್ಯದ ಗಡಿಯಾಗಿ ಪರಿಣಮಿಸಿದೆ. ಕಪಿಲಾ ಮತ್ತು ಕಾವೇರಿ ನದಿಗಳನ್ನು ಸೇರುವ ಹಲವಾರು ಉಪನದಿಗಳು ಮತ್ತು ತೊರೆಗಳು ಈ ಜಿಲ್ಲೆಯ ಬೆಟ್ಟಗುಡ್ಡಗಳಲ್ಲಿ ಹುಟ್ಟಿ ಹರಿಯುತ್ತವೆ. ಗೋಪಾಲಸ್ವಾಮಿ ಬೆಟ್ಟದಲ್ಲಿ ಹುಟ್ಟುವ ಮಾವಿನಹಳ್ಳ ಮೈಸೂರು ಜಿಲ್ಲೆಯನ್ನು ಪ್ರವೇಶಿಸಿ ನುಗುಹೊಳೆಯನ್ನು ಸೇರುತ್ತದೆ. ಗುಂಡ್ಲುಹೊಳೆ ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಹುಟ್ಟಿ ನಂಜನಗೂಡು ಬಳಿ ಕಪಿಲಾ ನದಿಯನ್ನು ಕೂಡಿಕೊಳ್ಳುತ್ತದೆ.

ತಮಿಳುನಾಡಿನಿಂದ ಹರಿದುಬರುವ ಸುವರ್ಣಾವತಿ (ಹೊನ್ನುಹೊಳೆ), ಬಿಳಿಗಿರಿರಂಗನ ಬೆಟ್ಟದಿಂದ ಬರುವ ಗುಂಡಾಲ್ ಹೊಳೆ, ಹನೂರು ಸಮೀಪದ ಉಡುತೊರೆ ಹಳ್ಳ -ಇವು ಉತ್ತರಾಭಿಮುಖವಾಗಿ ಹರಿದರೆ ಮೋಯರ್ ಹಾಗೂ ಪಾಲಾರ್ ಈ ಜಿಲ್ಲೆ ಸರಹದ್ದಿನಲ್ಲಿ ಹರಿದು ಕಾವೇರಿಯನ್ನು ಸೇರುತ್ತವೆ. ಸುವರ್ಣಾವತಿ ಗಜಹಗಟ್ಟಿ ಕಣಿವೆಯ ಬಳಿ ದಿಂಬಂ ಎಂಬಲ್ಲಿ ಹುಟ್ಟಿ ಚಾಮರಾಜನಗರ, ಯಳಂದೂರು ಮತ್ತು ಕೊಳ್ಳೇಗಾಲ ತಾಲ್ಲೂಕುಗಳಲ್ಲಿ ಹರಿದು ತಲಕಾಡಿನ ಸಮೀಪ ಕಾವೇರಿಯನ್ನು ಕೂಡಿಕೊಳ್ಳುತ್ತದೆ. ಚಿಕ್ಕಹೊಳೆ ಇದರ ಉಪನದಿ. ಮಹದೇಶ್ವರ ಬೆಟ್ಟದ ಗುಳಿಯಾತನೂರು ಹಳ್ಳ, ಯೇಲಕ್ಕಿಯಾತು ಹಳ್ಳ, ಮೆದುಗನಾಳು ಹಳ್ಳ, ಬಿಳಿಗಿರಿರಂಗನ ಬೆಟ್ಟದ ಉಲಿಕೊಪ್ಪ ಹಳ್ಳ, ತಟ್ಟಿನ ಹಳ್ಳ - ಇವು ಇತರ ತೊರೆಗಳು. ಚಾಮರಾಜನಗರ ಜಿಲ್ಲೆಯಲ್ಲಿ ವಿಸ್ತಾರವಾದ ಅರಣ್ಯ ಪ್ರದೇಶವೂ ಹೊಳೆತೊರೆಗಳು ಇದ್ದರೂ ಇಲ್ಲಿ ಮಳೆಯ ಪ್ರಮಾಣ ಅಷ್ಟೇನೂ ಇಲ್ಲವಾದ್ದರಿಂದ, ಹೆಚ್ಚಿನ ಜಲಸಂಪತ್ತಿಲ್ಲ. ಒಳ್ಳೆಯ ಮಳೆಯಾದಾಗ ಪರಿಸ್ಥಿತಿ ಸುಧಾರಿಸುತ್ತದೆ. ನೀರಾವರಿಯಲ್ಲಿ ಅಭಿವೃದ್ಧಿಯನ್ನು ಸಾಧಿಸಲಾಗುತ್ತಿದೆ.

ಅರಣ್ಯ ಸಂಪತ್ತಿಗೆ ಸಂಬಂಧಿಸಿದಂತೆ ಈ ಜಿಲ್ಲೆ ಕರ್ನಾಟಕದ ಐದು ಮುಖ್ಯ ಜಿಲ್ಲೆಗಳಲ್ಲೊಂದು. ಜಿಲ್ಲೆಯ ಸು.1/3 ಭಾಗವನ್ನು ಅರಣ್ಯ ಆವರಿಸಿದೆ. ಚಾಮರಾಜನಗರವನ್ನು ಬಿಟ್ಟು ಉಳಿದೆಲ್ಲ ತಾಲ್ಲೂಕುಗಳಲ್ಲಿ ಕಾಡುಗಳಿವೆ. ಮಲೆನಾಡಿನ ಅರಣ್ಯಗಳಂತೆ ಇವು ದಟ್ಟವಾಗಿರದಿದ್ದರೂ ಇಲ್ಲಿ ಉತ್ತಮ ಜಾತಿಯ ಮರಗಳಿವೆ. ತೇಗ, ಬೀಟೆ, ಗಂಧ, ನಂದಿ, ಹೊನ್ನೆ, ಮತ್ತಿ ಮತ್ತು ಕರಿ ಮರಗಳು ಸಾಕಷ್ಟು ಕಂಡುಬರುತ್ತವೆ. ಬಿದಿರು, ಅರಗು, ಮರಗೋಂದು, ನೆಲ್ಲಿ, ಹುಣಿಸೆ, ಮಾವು ಸೀಗೆ -ಇವು ಇಲ್ಲಿಯ ಉಪೋತ್ಪನ್ನಗಳು. ಜಿಲ್ಲೆಯ ಅರಣ್ಯ ಪ್ರದೇಶದ ಒಟ್ಟು ವಿಸ್ತೀರ್ಣ 2,75,610 ಹೆಕ್ಟೇರ್ (1998-99). ಅಷ್ಟೇನೂ ಎತ್ತರವಲ್ಲದ ಕಾಡುಗಳು ಮತ್ತು ಪೊದೆಗಳಲ್ಲಿ, ಹುಲ್ಲುಗಾವಲುಗಳಲ್ಲಿ ಹುಲಿ, ಚಿರತೆ, ಕರಡಿ, ಆನೆ, ಜಿಂಕೆ, ಸಾರಂಗ, ಕಾಡುಕೋಣ ಮುಂತಾದ ಪ್ರಮುಖ ವನ್ಯಜೀವಿಗಳನ್ನು ಕಾಣಬಹುದು. ಮೊಲ, ನರಿ, ಕಾಡುಬೆಕ್ಕು, ಅಳಿಲು ಮುಂತಾದವೂ ಉಂಟು. ನವಿಲು ಇಲ್ಲಿನ ಕಾಡುಗಳಿಗೆ ಶೋಭೆ ತಂದಿರುವ ಪಕ್ಷಿ. ಬಂಡೀಪುರ (ನೋಡಿ) ಅಭಯಾರಣ್ಯ ಕಾಡು ಪ್ರಾಣಿಗಳ ಸಂರಕ್ಷಣಾ ತಾಣ. ಕಾಡುಗಳ್ಳರ ಹಾವಳಿಯಿಂದಾಗಿ ವೃಕ್ಷ ಸಂಕುಲ ಹಾಗೂ ಪ್ರಾಣಿಸಂಕುಲಗಳೆರಡಕ್ಕೂ ಹಾನಿಯಾಗುತ್ತಿದೆ.

**ವ್ಯವಸಾಯ :** ಚಾಮರಾಜನಗರ ಒಂದು ಹಿಂದುಳಿದ ಜಿಲ್ಲೆ. ವ್ಯವಸಾಯ ಇಲ್ಲಿನ ಮುಖ್ಯ ಕಸಬು. ಬತ್ತ, ರಾಗಿ, ಜೋಳ, ಕಬ್ಬು, ಹಿಪ್ಪುನೇರಳೆ, ನೆಲಗಡಲೆ, ಹರಳು, ಹತ್ತಿ, ಬಾಳೆ, ತೆಂಗು, ಅಡಕೆ - ಇವು ಮುಖ್ಯ ಬೆಳೆಗಳು. ವ್ಯವಸಾಯಕ್ಕೆ ನೀರಾವರಿ ಮುಖ್ಯ ಆಧಾರ. ಜಿಲ್ಲೆಯ ಸರಾಸರಿ ಮಳೆ 751ಮಿಮೀ. ಜಿಲ್ಲೆಯಲ್ಲಿ ಭಾರಿ ಜಲಾಶಯಗಳಿಲ್ಲ. ಹಲವಾರು ಮಧ್ಯಮ ಮತ್ತು ಸಣ್ಣ ಪ್ರಮಾಣದ ನೀರಾವರಿ ಯೋಜನೆಗಳು ಜಾರಿಗೆ ಬಂದಿವೆ. ಚಿಕ್ಕಹೊಳೆ, ಉಡುತೊರೆ ಹಳ್ಳ, ಸುವರ್ಣಾವತಿ, ಗುಂಡಾಲ್ ಹೊಳೆಗಳಿಗೆ ಅಲ್ಲಲ್ಲಿ ಜಲಾಶಯಗಳನ್ನು

ನಿರ್ಮಿಸಿ ನೀರಾವರಿಗೆ ಸೌಲಭ್ಯ ವಿಸ್ತರಿಸಲಾಗುತ್ತಿದೆ. ಕಬಿನಿ ಮತ್ತು ನುಗು ಜಲಾಶಯಗಳಿಂದ ಕೆಲವು ಪ್ರದೇಶಗಳಿಗೆ ನೀರಾವರಿ ಸೌಲಭ್ಯ ಒದಗಿಬರುತ್ತಿದೆ. ಕೊಳವೆ ಬಾವಿಗಳ ಮೂಲಕ ಅಂತರ್‌ಜಲವನ್ನು ಬಳಸಿಕೊಳ್ಳುವ ಪ್ರಯತ್ನ ನಡೆದಿದೆ.

ಜಿಲ್ಲೆಯಲ್ಲಿ ಸಾಗುವಳಿಗೆ ಯೋಗ್ಯವಾದ ನೆಲದಲ್ಲಿ 5,69,901 ಹೆಕ್ಟೇರ್ ಜಮೀನು ಬೇಸಾಯಕ್ಕೆ ಒದಗಿ ಬಂದಿದೆ (1998-99). ಕಾಲುವೆಯಿಂದ 11,192 ಹೆಕ್ಟೇರ್, ಕೆರೆಗಳಿಂದ 5,591, ಹೆಕ್ಟೇರ್ ಬಾವಿಗಳಿಂದ 18,799 ಹೆಕ್ಟೇರ್ ಜಮೀನು ನೀರಾವರಿಗೆ ಒಳಪಟ್ಟಿದೆ. ಜಿಲ್ಲೆಯಲ್ಲಿ ಸಾಕಷ್ಟು ಮಳೆಯನ್ನು ಆಧರಿಸಿದ ಭೂಮಿಯಲ್ಲಿ ರಾಗಿ, ಜೋಳ, ಕಡಲೆ ಮತ್ತು ದ್ವಿದಳ ಧಾನ್ಯಗಳನ್ನು ಬೆಳೆಯುತ್ತಾರೆ. ಹತ್ತಿ ಒಂದು ಪ್ರಮುಖ ವಾಣಿಜ್ಯ ಬೆಳೆ. ರೇಷ್ಮೆ ಸಾಕಣೆಗೆ ಜಿಲ್ಲೆ ಪ್ರಸಿದ್ಧವಾಗಿದೆ.

ಜಿಲ್ಲೆಯಲ್ಲಿ ಆಧುನಿಕ ಮೀನುಗಾರಿಕೆ ಜನಪ್ರಿಯವಾಗಿದೆ. ಕೆರೆಗಳು ಮತ್ತು ಜಲಾಶಯಗಳಲ್ಲಿ ಮೀನುಮರಿಗಳನ್ನು ಬೆಳೆಸಿ ಮೀನು ಉತ್ಪಾದಿಸಲಾಗುತ್ತದೆ. ವಾರ್ಷಿಕ ಉತ್ಪನ್ನ 1508 ಟನ್. ಬೇಡಿಕೆಗೆ ಅನುಗುಣವಾಗಿ ಹೈನುಗಾರಿಕೆ ಬೆಳೆಯುತ್ತಿದೆ. ಹೆಚ್ಚು ಹೆಚ್ಚಾಗಿ ಜಾನುವಾರನ್ನು ಸಾಕಲಾಗುತ್ತಿದೆ. ಪಶುಸಂಗೋಪನೆಗಾಗಿ 11 ಕೃತಕಗರ್ಭಧಾರಣೆ ಕೇಂದ್ರಗಳಿವೆ. 4 ಸಂಚಾರಿ ಪಶು ಚಿಕಿತ್ಸಾಲಯಗಳು ಜಿಲ್ಲೆಯಲ್ಲಿ ಕಾರ್ಯನಿರತವಾಗಿವೆ. ಪಟ್ಟಣಗಳು ಮತ್ತು ಸುತ್ತಮುತ್ತಲ ಪ್ರದೇಶಗಳಲ್ಲಿ ಅನೇಕ ಕೋಳಿ ಫಾರಂಗಳು ಅಸ್ತಿತ್ವಕ್ಕೆ ಬಂದಿವೆ. ಅಧಿಕ ಮಾಂಸೋತ್ಪನ್ನ ಸಾಧಕಗಳಾದ ಮಿಶ್ರತಳಿ ಕೋಳಿಗಳ ಸಾಕುವಿಕೆ ಅಭಿವೃದ್ಧಿ ಸಾಧಿಸುತ್ತಿದೆ.

**ಕೈಗಾರಿಕೆ :** ಚಾಮರಾಜನಗರ ಜಿಲ್ಲೆ ಕೈಗಾರಿಕೆಯಲ್ಲಿ ಹಿಂದುಳಿದಿದೆ. ಮೈಸೂರು ಜಿಲ್ಲೆಯಿಂದ ಪ್ರತ್ಯೇಕಗೊಂಡ ಈ ಜಿಲ್ಲೆಯಲ್ಲಿ ಬೆಳವಣಿಗೆಗೆ ಹೊಸ ಯೋಜನೆಗಳನ್ನು ಹಮ್ಮಿಕೊಳ್ಳಬೇಕಾಗಿದೆ. ರೇಷ್ಮೆ ಉದ್ಯಮ, ಹತ್ತಿಗಿರಣಿ ಮತ್ತು ಸಕ್ಕರೆ ಕಾರ್ಖಾನೆಗಳು ಇಲ್ಲಿನ ಮುಖ್ಯ ಉದ್ಯಮಗಳು. ಚಾಮರಾಜನಗರ ಮತ್ತು ಕೊಳ್ಳೇಗಾಲದಲ್ಲಿ ಕೇಂದ್ರೀಯ ರೇಷ್ಮೆ ಸಂಶೋಧನ ಮಂಡಳಿಯ ಪ್ರಾದೇಶಿಕ ಸಂಶೋಧನ ಕೇಂದ್ರಗಳು ಮತ್ತು ತರಬೇತಿ ಸಂಸ್ಥೆಗಳಿವೆ. ರೇಷ್ಮೆ ಬೀಜದ ಕೋಠಿಯೊಂದು ಚಾಮರಾಜನಗರದಲ್ಲಿದೆ. ಇಲ್ಲಿ ಮತ್ತು ಕೊಳ್ಳೇಗಾಲದಲ್ಲಿ ರೇಷ್ಮೆ ಗೂಡಿನ ಮಾರುಕಟ್ಟೆಗಳೂ ಕೊಳ್ಳೇಗಾಲದಲ್ಲಿ ಸರ್ಕಾರಿ ರೇಷ್ಮೆ ನೂಲು ಸುತ್ತುವ ಕಾರ್ಖಾನೆಯೂ ಇವೆ. ಮಾಂಬಳ್ಳಿಯಲ್ಲಿ ರೇಷ್ಮೆ ಸುತ್ತುವ ಮತ್ತು ನೇಯುವ ಕೇಂದ್ರವೂ ಸಂತೆಮರಳ್ಳಿಯಲ್ಲಿ ಸರ್ಕಾರಿ ರೇಷ್ಮೆ ನೂಲು ಸುತ್ತುವ ಘಟಕವೂ ಉಂಟು. ಅನೇಕ ಕಡೆಗಳಲ್ಲಿ ರೇಷ್ಮೆ ಸಾಕುವವರ ಸಹಕಾರ ಸಂಘಗಳನ್ನು ಸ್ಥಾಪಿಸಲಾಗಿದೆ. ಈ ಜಿಲ್ಲೆಯ ಎಲ್ಲ ತಾಲ್ಲೂಕುಗಳಲ್ಲೂ ಹಿಪ್ಪುನೇರಳೆ ಬೆಳೆಯುವುದು ಮತ್ತು ರೇಷ್ಮೆ ಹುಳು ಸಾಕಣೆ ಒಂದು ಪ್ರಮುಖ ಉಪ ಉದ್ಯಮ.

ಜಿಲ್ಲೆಯಲ್ಲಿ ಹತ್ತಿ ಬೆಳೆಯುವ ಪ್ರದೇಶ 12738 ಹೆಕ್ಟೇರ್. ಹಲವೆಡೆಗಳಲ್ಲಿ ಹತ್ತಿಯ ಮತ್ತು ಸ್ಪನ್ ಹತ್ತಿಯ ಕೈಮಗ್ಗಗಳಿವೆ. ಕೊಳ್ಳೇಗಾಲ, ಗುಂಡ್ಲುಪೇಟೆ ಮತ್ತು ಚಾಮರಾಜನಗರದಲ್ಲಿ ಜವಳಿ ಉದ್ಯಮ ಬೆಳೆದಿದೆ. ಚಾಮರಾಜನಗರ ಮತ್ತು ಅದರ ಬಳಿಯ ಅಂಕಣಸೆಟ್ಟಿಪುರದಲ್ಲಿ ಜವಳಿ ಗಿರಣಿಗಳಿವೆ.

ಕೊಳ್ಳೇಗಾಲದಲ್ಲಿ ಮಹದೇಶ್ವರ ಸಕ್ಕರೆ ಕಾರ್ಖಾನೆಯಿದೆ. ಜಿಲ್ಲೆಯ ಕೆಲವೆಡೆ ಬೆಲ್ಲ ಮತ್ತು ಖಂಡಸಾರಿ ತಯಾರಾಗುತ್ತವೆ. ಕೊಳ್ಳೇಗಾಲ ತಾಲ್ಲೂಕಿನ ಸತ್ತೇಗಾಲದಲ್ಲಿ ಕಾಗದ ತಯಾರಿಸುವ ಘಟಕವಿದೆ. ಜಿಲ್ಲೆಯಲ್ಲಿ ಮರಕೊಯ್ಯುವ ಉದ್ಯಮಗಳಲ್ಲಿ ಪೀಠೋಪಕರಣ ತಯಾರಿಕಾ ಘಟಕಗಳೂ ಬೀಡಿ ಕಟ್ಟುವ ಕೇಂದ್ರಗಳೂ ಎಂಜಿನಿಯರಿಂಗ್ ಕಾರ್ಯಾಗಾರಗಳೂ ಖಾದಿ ಮತ್ತು ಗ್ರಾಮೋದ್ಯೋಗ ಕೇಂದ್ರಗಳೂ ಎಣ್ಣೆ ತೆಗೆಯುವ ಕೇಂದ್ರಗಳೂ ಚರ್ಮ ಹದಗಾರಿಕೆ, ಸುಣ್ಣ ತಯಾರಿಕೆ, ಕಬ್ಬಿಣ ಮತ್ತು ಗ್ರಿಲ್ ಕೆಲಸ, ಮಣ್ಣಿನಿಂದ ಕುಂಡ, ಗಾಡಿ ತಯಾರಿಕೆ ಮುಂತಾದ ಉದ್ಯಮಗಳೂ ಅಲ್ಲಲ್ಲಿ ಉಂಟು. ಒಟ್ಟು 19 ಕಾರ್ಖಾನೆಗಳು, 1 ಕೈಗಾರಿಕಾ ಎಸ್ಟೇಟ್, 24 ಕೈಗಾರಿಕಾ ಷೆಡ್ಡುಗಳು ಜಿಲ್ಲೆಯಲ್ಲಿವೆ. ಒಟ್ಟು 3,482 ಜನರಿಗೆ ಉದ್ಯೋಗ ಒದಗಿಸಿವೆ (2001). ಕೊಳ್ಳೇಗಾಲದಲ್ಲಿ 1962-63ರಲ್ಲಿ ಸರ್ಕಾರಿ ಯಾಂತ್ರಿಕ ಕಾರ್ಯಾಗಾರವನ್ನು ಸ್ಥಾಪಿಸಲಾಗಿದೆ. ಗುಂಡ್ಲುಪೇಟೆ ತಾಲ್ಲೂಕಿನ ಅಂಕಳ್ಳಿಯಲ್ಲಿ ಚರ್ಮಗೆಲಸ ತರಬೇತಿ ಸಂಸ್ಥೆಯನ್ನು ಸ್ಥಾಪಿಸಲಾಗಿದೆ. (1987). ಅದೇ ತಾಲ್ಲೂಕಿನ ಕೋಡಿಹಳ್ಳಿಯಲ್ಲಿ ಚಾಪೆ ನೇಯುವ ತರಬೇತಿ ಕೇಂದ್ರವೂ ಚಾಮರಾಜನಗರದಲ್ಲಿ ಕೈಗಾರಿಕಾ ತರಬೇತಿ ಸಂಸ್ಥೆಯೂ ಉದ್ಯೋಗಾರ್ಥಿಗಳಿಗೆ ತರಬೇತಿ ನೀಡುತ್ತವೆ. ಗ್ರಾನೈಟ್, ಸುಣ್ಣಕಲ್ಲು ಗಣಿಗಾರಿಕೆ ಇಲ್ಲಿನ ಇನ್ನೆರಡು ಉದ್ಯಮಗಳು.

ಶಿಕ್ಷಣ ಕ್ಷೇತ್ರದಲ್ಲಿ ಈ ಜಿಲ್ಲೆ ಗಮನಾರ್ಹವಾಗಿ ಮುಂದುವರಿಯುತ್ತಿದೆ. ಜೆ.ಎಸ್.ಎಸ್. ವಿದ್ಯಾಸಂಸ್ಥೆ ಸ್ಥಾಪಿಸಿರುವ ಅನೇಕ ಶಾಲಾ ಕಾಲೇಜುಗಳು ಚಾಮರಾಜನಗರದಲ್ಲಿವೆ. ಜಿಲ್ಲೆಯಲ್ಲಿ 119 ಪ್ರೌಢಶಾಲೆಗಳೂ 32 ಕಿರಿಯ ಕಾಲೇಜುಗಳೂ ಇವೆ (2000-01). ಕೊಳ್ಳೇಗಾಲದಲ್ಲಿರುವ ಸರ್ಕಾರಿ ಕಾಲೇಜು ಅತ್ಯಂತ ಹಳೆಯದು. ಇತ್ತೀಚೆಗೆ ಚಾಮರಾಜನಗರದ ಜೆ.ಎಸ್.ಎಸ್. ಪ್ರಥಮ ದರ್ಜೆ ಕಾಲೇಜಿನಲ್ಲಿ ಕನ್ನಡ ಸ್ನಾತಕೋತ್ತರ ಶಿಕ್ಷಣ ಸೌಲಭ್ಯ (ಎಂ.ಎ.) ಕಲ್ಪಿಸಲಾಗಿದೆ (2002).

**ಸಾರಿಗೆ ಸಂಪರ್ಕ :** ರಾಜ್ಯದ ಗಡಿಭಾಗದಲ್ಲಿರುವ ಈ ಜಿಲ್ಲೆಯಲ್ಲಿ ನೆರೆರಾಜ್ಯಗಳೊಂದಿಗೆ ಸಂಪರ್ಕ ಸಾಧಿಸುವ ಪ್ರಮುಖ ರಸ್ತೆ ಮಾರ್ಗಗಳು ಹಾದುಹೋಗುತ್ತವೆ. 1998-99ರ ಅಂಕಿಅಂಶಗಳ ಪ್ರಕಾರ ಜಿಲ್ಲೆಯಲ್ಲಿ 160 ಕಿಮೀ ರಾಷ್ಟ್ರೀಯ ಹೆದ್ದಾರಿ, 106ಕಿಮೀ ರಾಜ್ಯ ಹೆದ್ದಾರಿ, 658ಕಿಮೀ ಜಿಲ್ಲಾ ರಸ್ತೆ ಮತ್ತು 209ಕಿಮೀ ಇತರ ರಸ್ತೆಗಳಿವೆ. ತಾಲ್ಲೂಕು ಅಭಿವೃದ್ಧಿ ಮಂಡಳಿಗಳಿಗೆ ಸೇರಿದ ರಸ್ತೆಗಳ ಉದ್ದ 337ಕಿಮೀ, ಅರಣ್ಯ ಇಲಾಖೆಗೆ ಸೇರಿದ ರಸ್ತೆಗಳು 449ಕಿಮೀ ಪುರಸಭೆಗಳ ರಸ್ತೆಗಳು 951ಕಿಮೀ ಪಂಚಾಯತಿ ರಸ್ತೆಗಳು 72ಕಿಮೀ ಮೈಸೂರು-ಊಟಿ ರಸ್ತೆ, ಬೆಂಗಳೂರು-ಕೊಯಮತ್ತೂರು, ಮೈಸೂರು-ಸುಲ್ತಾನ್‌ಬತೇರಿ, ಗುಂಡ್ಲುಪೇಟೆ-ಗೂಡಲೂರು-ಊಟಿ, ಕೊಳ್ಳೇಗಾಲ-ಸತ್ಯಮಂಗಲ ಘಾಟಿ, ಕೊಳ್ಳೇಗಾಲ-ಮಹದೇಶ್ವರ ಬೆಟ್ಟ-ಭವಾನಿ ರಸ್ತೆಗಳು ಈ ಜಿಲ್ಲೆಯಲ್ಲಿ ಹಾದು ಹೋಗುವ ಅಂತಾರಾಜ್ಯ ಮಾರ್ಗಗಳು. ಮೈಸೂರು-ಚಾಮರಾಜನಗರ-ಪುಣಜೂರು ಘಾಟಿ, ಹನೂರು-ರಾಮಪುರ, ಗುಂಡ್ಲುಪೇಟೆ-ಚಾಮರಾಜನಗರ ತಿರುಮಕೂಡಲು ನರಸೀಪುರ ರಸ್ತೆಗಳು ಮುಖ್ಯ ಜಿಲ್ಲಾ ರಸ್ತೆ ಮಾರ್ಗಗಳು.

ಮೈಸೂರು-ಚಾಮರಾಜನಗರ ರೈಲುಮಾರ್ಗ ಭಾರತಕ್ಕೆ ಸ್ವಾತಂತ್ರ್ಯ ಬರುವುದಕ್ಕೆ ಮೊದಲೇ ನಿರ್ಮಾಣವಾಯಿತು. ಚಾಮರಾಜನಗರ-ಸತ್ಯಮಂಗಲಂ ರೈಲುಮಾರ್ಗ ನಿರ್ಮಾಣ ಬಹಳ ದೀರ್ಘಕಾಲದಿಂದ ನನೆಗುದಿಯಲ್ಲಿದೆ.

**ಇತಿಹಾಸ ಮತ್ತು ಸಂಸ್ಕೃತಿ :** ಚಾಮರಾಜನಗರ ಜಿಲ್ಲೆ ದಟ್ಟವಾದ ಅರಣ್ಯದ ಪರಿಧಿಯಲ್ಲಿದ್ದು ಇಲ್ಲಿ ಪ್ರಾಚೀನ ಕಾಲದಿಂದಲೇ ಸಂಸ್ಕೃತಿ ಮತ್ತು ನಾಗರಿಕತೆ ಬೆಳೆದುಬಂದಿವೆ. ಇಲ್ಲಿನ ಬಹುಸಂಖ್ಯೆಯ ಚಿಕ್ಕಪುಟ್ಟ ನದಿಗಳು ಹಾಗೂ ಸರಹದ್ದಿನ ಕಪಿಲಾ, ಕಾವೇರಿ ನದಿ - ಇವು ವ್ಯವಸಾಯ ಸಮುದಾಯಗಳು ಇಲ್ಲಿ ನೆಲಸಲು ಅನುಕೂಲಕರವಾದ ನೀರಿನ ಆಸರೆಯನ್ನು ಒದಗಿಸಿದವು. ಸುತ್ತಲ ಅರಣ್ಯಗಳು ಆದಿವಾಸಿಗಳ ಮತ್ತು ಪರಿಶಿಷ್ಟಪಂಗಡಗಳ ಜನರ ನೆಲೆಸುವಿಕೆಗೆ ಭದ್ರತೆಯನ್ನು ತಂದುಕೊಟ್ಟಿದ್ದುವು. ಅತ್ಯಂತ ಪ್ರಾಚೀನ ನೆಲೆಗಳ ಗುರುತುಗಳು ಹಲವೆಡೆ ಕಂಡುಬಂದಿವೆ. ಕೊಳ್ಳೇಗಾಲ ತಾಲ್ಲೂಕಿನ ಲೊಕ್ಕನಹಳ್ಳಿ, ಹನೂರು, ಬೆಳ್ತೂರು, ಚಿಕ್ಕಯಲಾಪುರ, ಕನ್ನಿಕೆರೆ, ತೆಲ್ಲೂರ್, ಯಳಂದೂರು ತಾಲ್ಲೂಕಿನ ಯರಗಂಬಳಿ, ಗುಂಬಳ್ಳಿ, ಶಿವಕಳ್ಳಿ, ದೇವರಹಳ್ಳಿ, ಯರಿಯೂರು, ಗಾಣಿಗನೂರು, ಮಲ್ಲಾರಪಾಳ್ಯ, ಚಾಮರಾಜನಗರ ತಾಲ್ಲೂಕಿನ ಆಲೂರು, ಬೆಟ್ಟಹಳ್ಳಿ, ಚಂದಕವಾಡಿ, ಹೊಂಗನೂರು ಮತ್ತು ನಲ್ಲೂರು, ಹೊಸಹಳ್ಳಿ, ಬೂದಿತಿಟ್ಟು, ಗುಂಡ್ಲುಪೇಟೆ ತಾಲ್ಲೂಕಿನ ಕಳಲೆ, ಪಂಜನಹಳ್ಳಿ, ವೀರನಪುರ, ಹೊಸಹಳ್ಳಿ, ಗುಂಡ್ಲುಪೇಟೆ ಮೊದಲಾದ ಕಡೆಗಳಲ್ಲಿ ಇತಿಹಾಸ ಪೂರ್ವದ ನೆಲೆಗಳ ಶಿಲಾ ಅವಶೇಷಗಳು ದೊರೆತಿವೆ. ಇಲ್ಲೆಲ್ಲ ಶಿಲಾಯುಗದ ಮತ್ತು ಬೃಹತ್ ಶಿಲಾಯುಗದ ಜನರ ಆಯುಧಗಳೂ ಸಮಾಧಿಗಳೂ ಕಂಡುಬಂದಿವೆ.

ಕರ್ನಾಟಕದ ಅತ್ಯಂತ ಪುರಾತನವೆನಿಸಿದ ಪುನ್ನಾಟ ರಾಜ್ಯಕ್ಕೆ ಹೆಗ್ಗಡದೇವನ ಕೋಟೆ ತಾಲ್ಲೂಕಿನ ಕಿತ್ತೂರು (ಕೀರ್ತಿಪುರ) ರಾಜಧಾನಿಯಾಗಿತ್ತು. ಮೌರ್ಯ ಸಾಮ್ರಾಜ್ಯದ ಕಾಲದಲ್ಲಿ ಸ್ಥಾಪಿತವಾಗಿ 6ನೆಯ ಶತಮಾನದವರೆಗೆ ಉಳಿದುಬಂದಿತ್ತು. ಪ್ರಾಚೀನ ದಾಖಲೆಗಳಲ್ಲಿ ಬರುವ 'ಪುಂಟ್' ಎಂಬುದು ಪುನ್ನಾಟವಿರಬಹುದೆಂದು (ನೋಡಿ: ಪುನ್ನಾಟ) ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಮಗಧ ರಾಜ್ಯದಿಂದ ದಕ್ಷಿಣಕ್ಕೆ ವಲಸೆ ಬಂದ ಜೈನ ಸಂಘವೊಂದು ಭದ್ರಬಾಹುವಿನ ಸೂಚನೆಯಂತೆ ಪುನ್ನಾಟ

ದೇಶಕ್ಕೆ ಹೋಯಿತು ಎಂಬ ಪ್ರಸ್ತಾಪ ಹರಿಷೇಣನ ಬೃಹತ್ಕಥಾಕೋಶದಲ್ಲಿ ಬರುತ್ತದೆ. 2ನೆಯ ಶತಮಾನದ ಗ್ರೀಕ್ ಭೂಗೋಳಕಾರ ಟಾಲೆಮಿಯ ಪ್ರಕಾರ ಪೌನ್ನಟ ಎಂಬ ಪ್ರದೇಶ ಪಚ್ಚೆಕಲ್ಲುಗಳಿಗೆ ಪ್ರಸಿದ್ಧವಾಗಿತ್ತು. ಹೆಗ್ಗಡದೇವನ ಕೋಟೆ, ಗುಂಡ್ಲುಪೇಟೆ ವಲಯವು ಪಚ್ಚೆ, ಹರಳು ಮತ್ತು ಪದ್ಮರಾಗಗಳಿಗೆ ಪ್ರಸಿದ್ಧವಾಗಿತ್ತು. ಪೊನ್ನಿನವಾಡು ಎಂಬುದು ಪುನ್ನಾಡು, ಪುನ್ನಾಟು, ಪುನ್ನಾಟ ಆಗಿರಬಹುದೆನ್ನಲಾಗಿದೆ. ಪುನ್ನಾಟದ ಅರಸರು ಕದಂಬ ಮತ್ತು ಗಂಗ ಮನೆತನಗಳೊಂದಿಗೆ ವಿವಾಹ ಸಂಬಂಧ ಹೊಂದಿದ್ದ ವಿಷಯ ಶಾಸನಗಳಿಂದ ತಿಳಿದುಬರುತ್ತದೆ. ಗಂಗ ದುರ್ವಿನೀತ ಪುನ್ನಾಟ ರಾಜಮನೆತನದ ವಧುವಿನ ಮಗನಾಗಿದ್ದ, ತಾಯಿಯ ಮನೆತನದಲ್ಲಿ ಗಂಡು ಮಕ್ಕಳಿಲ್ಲದ್ದರಿಂದ ಪುನ್ನಾಟ ರಾಜ್ಯವನ್ನು ಗಂಗರಾಜ್ಯಕ್ಕೆ ಸೇರಿಸಿಕೊಳ್ಳಲಾಯಿತು (6ನೆಯ ಶತಮಾನ). ಈ ರಾಜಮನೆತನದವರ ಬಗ್ಗೆ ದೊರೆಯುವ ಕೆಲವೇ ಶಾಸನಗಳು ಯಳಂದೂರು, ನಂಜನಗೂಡು, ಹೆಗ್ಗಡದೇವನಕೋಟೆಗಳ ಬಳಿ ದೊರೆತಿವೆ. ಇವರು ಗಂಗರು ಮತ್ತು ಕದಂಬರಿಗಿಂತ ಹಿಂದೆಯೇ ಕರ್ನಾಟಕದಲ್ಲಿ ರಾಜ್ಯ ಸ್ಥಾಪಿಸಿದ ಕೀರ್ತಿಗೆ ಪಾತ್ರರಾಗಿದ್ದಾರೆ. ಗಂಗ ರಾಜ್ಯದ ವಿಸ್ತರಣೆಯಿಂದ ಇವರ ಅಸ್ತಿತ್ವಕ್ಕೆ ಚ್ಯುತಿಯುಂಟಾಯಿತೆಂದು ತೋರುತ್ತದೆ. ಈ ರಾಜವಂಶದ ಬಗ್ಗೆ ಹೆಚ್ಚಿನ ವಿವರಗಳು ತಿಳಿದು ಬಂದಿಲ್ಲ. ಆದರೆ ಗಂಗ-ಕದಂಬ ಪೂರ್ವ ಕಾಲದಲ್ಲಿ ಪುನ್ನಾಟ ರಾಜ್ಯ ಕಾವೇರಿ ಪ್ರದೇಶದ ಬಹುಭಾಗದಲ್ಲಿ ವ್ಯಾಪಿಸಿದ್ದಿರಬಹುದು.



ಪದ್ಮಾವತಿ, ಹರವೆ

ತಲಕಾಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳತೊಡಗಿದ ತಲಕಾಡಿನ ಗಂಗರು ಅಥವಾ ಪಶ್ಚಿಮ ಗಂಗರು 4ನೆಯ ಶತಮಾನದಿಂದ 11ನೆಯ ಶತಮಾನದ ಪ್ರಾರಂಭದವರೆಗೂ ಆಳಿ ಕರ್ನಾಟಕದ ರಾಜಮನೆತನಗಳಲ್ಲೇ ಅತ್ಯಂತ ದೀರ್ಘಕಾಲ ಆಳಿದವರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಈ ವಂಶದ ದುರ್ವಿನೀತನ (ಸು.529-79) ಕಾಲದಿಂದ ಹಿಡಿದು, ಪುನ್ನಾಟ ರಾಜ್ಯ ಗಂಗರಾಜ್ಯದಲ್ಲಿ ಅಂತರ್ಗತವಾದ ಮೇಲೆ ಅವರ ಆಳಿಕೆಯ ಕೊನೆಯವರೆಗೂ ಈ ಜಿಲ್ಲೆ ಗಂಗರ ಅಧೀನದಲ್ಲಿದ್ದಿತು. ಈ ವಂಶದ ದುರ್ವಿನೀತ, ಭೂವಿಕ್ರಮ, ಶ್ರೀಪುರುಷ, ಎರಡನೆಯ ಬೂತುಗ, ಎರಡನೆಯ ಮಾರಸಿಂಹ -ಇವರು ದಕ್ಷ ಪ್ರಭುಗಳಾಗಿದ್ದರು. ಈಗಿನ ತಮಿಳನಾಡಿನ ಭಾಗವಾಗಿರುವ ಕೊಯಮತ್ತೂರು ಮತ್ತು ಸೇಲಂ ಪ್ರದೇಶ ಹಲವು ಶತಮಾನಗಳ ಕಾಲ ಗಂಗರಾಜ್ಯದ ಒಂದು ಪ್ರಾಂತವಾಗಿತ್ತು. ಅದನ್ನು ಕೊಂಗುದೇಶವೆಂದು ಕರೆಯಲಾಗುತ್ತಿತ್ತು. ಇದರಿಂದಾಗಿ ಕನ್ನಡ ಸಂಸ್ಕೃತಿ ಅತ್ತ ಹರಡಿ, ಈಗಿನ ಮೈಸೂರು ಚಾಮರಾಜನಗರ ಜಿಲ್ಲೆಗಳ ಪ್ರದೇಶ ತಮಿಳು ಪ್ರಭಾವದಿಂದ ಮುಕ್ತವಾಗಲು ಸಾಧ್ಯವಾಯಿತು. ಗಂಗರ ಸಮಕಾಲೀನರಾದ ಕದಂಬರು, ಬಾದಾಮಿ ಚಳುಕ್ಯರು ಮತ್ತು ರಾಷ್ಟ್ರಕೂಟರ ಕಾಲದಲ್ಲೂ ಗಂಗರೇ ಈ ಪ್ರದೇಶದ ಮುಖ್ಯ ಅಧಿಪತಿಗಳಾಗಿದ್ದರು.



ಮಲೆಮಹದೇಶ್ವರ ದೇವಸ್ಥಾನ

ತಲಕಾಡಿನ ಗಂಗರ ರಾಜ್ಯದ ಹೃದಯಭಾಗವಾಗಿದ್ದ ಈ ಜಿಲ್ಲೆಯಲ್ಲಿ ಅವರ ದೇವಾಲಯಗಳು ಶಾಸನಗಳು ಹೇರಳವಾಗಿವೆ. ಆ ಕಾಲದಲ್ಲಿ ಕಲ್ಲಿಗಿಂತ ಇಟ್ಟಿಗೆಯಲ್ಲೇ ಹೆಚ್ಚಾಗಿ ದೇವಾಲಯ ಕಟ್ಟುತ್ತಿದ್ದುದರಿಂದ ಅವುಗಳಲ್ಲಿ ಹೆಚ್ಚಿನವು ನಷ್ಟವಾಗಿವೆ, ಇಲ್ಲವೇ ಮಾರ್ಪಟ್ಟಿವೆ. ಅವರ ಕಟ್ಟಡಗಳಲ್ಲಿ ಪ್ರಾಚೀನವೂ ಶ್ರೇಷ್ಠವೂ ಆದದ್ದು ಚಾಮರಾಜನಗರ ತಾಲ್ಲೂಕಿನ ನರಸಮಂಗಲದ ರಾಮೇಶ್ವರ ದೇವಾಲಯ. ಇದರ ತಳಹದಿ ಕಗ್ಗಲ್ಲಿನದು. ಮೇಲಿನ ಕಟ್ಟಡ ಇಟ್ಟಿಗೆಯದು. ಗಂಗರ ಕಾಲದ ಹತ್ತಾರು ಸಣ್ಣ ನಿರ್ಮಾಣಗಳೂ ಶಿಲ್ಪಗಳೂ ಇನ್ನೂ ಉಳಿದು ಬಂದಿವೆ.

ಗಂಗರ ಕಾಲದಲ್ಲಿ ರಾಜಕೀಯವಾಗಿ ಅಖಂಡವಾಗಿದ್ದ ಈ ಜಿಲ್ಲೆ 10ನೆಯ ಶತಮಾನದ ಅನಂತರ ರಾಜಕೀಯ ಏರುಪೇರುಗಳಿಗೆ ಒಳಗಾಯಿತು. 11ನೆಯ ಶತಮಾನದ ಪ್ರಾರಂಭದಲ್ಲಿ ಗಂಗರ ಆಳಿಕೆಯನ್ನು ಚೋಳರ ರಾಜರಾಜನು ಕೊನೆಗಾಣಿಸಿ ಈ ಪ್ರದೇಶವನ್ನು ತನ್ನ ಆಡಳಿತಕ್ಕೆ ಒಳಪಡಿಸಿಕೊಂಡ. ಚೋಳರ ಒಂದು ಶತಮಾನದ ಆಳಿಕೆಯಲ್ಲಿ ಇಲ್ಲಿನ ಆಡಳಿತ, ಕಲೆ ಮತ್ತು ವಾಸ್ತು ವಿನ್ಯಾಸದಲ್ಲಿ ಅನೇಕ ಬದಲಾವಣೆಗಳಾದವು. ಈ ಪ್ರದೇಶವೂ ಸೇರಿದಂತೆ ತಮ್ಮ ಅಧೀನದಲ್ಲಿದ್ದ ಪ್ರಾಂತದಲ್ಲಿ ಚೋಳರು ನಾಡುಗಳನ್ನು ರಚಿಸಿದರು. ಈ ಕಾಲಕ್ಕೆ ಸೇರಿದ ಕೆಲವು ಶಾಸನಗಳು ದೊರೆತಿವೆ. ಈ ಕಾಲದಲ್ಲಿ ಅಗ್ರಹಾರಗಳನ್ನೂ ದೇವಾಲಯಗಳನ್ನೂ ನಿರ್ಮಿಸಿದ ಬಗ್ಗೆ ಶಾಸನಗಳಲ್ಲಿ ಆಧಾರಗಳಿವೆ. ಮುಂದೆ ಹೊಯ್ಸಳರು ಪ್ರವರ್ಧಮಾನಕ್ಕೆ ಬಂದರು. ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ (1116) ಚೋಳರು ನಿರ್ಣಾಯಕವಾಗಿ ಸೋತರು. ತಲಕಾಡು ಹೊಯ್ಸಳರ ವಶವಾಯಿತು. ಈ ಯುದ್ಧದ ವಿಜಯದಲ್ಲಿ ದಂಡನಾಯಕ ಗಂಗರಾಜ ಪ್ರಮುಖ ಪಾತ್ರ ವಹಿಸಿದ್ದನೆಂದು ಶಾಸನಗಳಿಂದ ತಿಳಿದುಬರುತ್ತದೆ.

ಮುಂದೆ ಎರಡೂವರೆ ಶತಮಾನಗಳ ಕಾಲದ ಹೊಯ್ಸಳರ ಆಳಿಕೆಯಲ್ಲಿ ಈ ಜಿಲ್ಲೆ ಹೆಚ್ಚಿನ ಅಭ್ಯುದಯವನ್ನು ಕಂಡಿತು. ತಮಿಳುನಾಡಿನ ಅನೇಕ ಪ್ರದೇಶಗಳನ್ನು ತಮ್ಮ ಆಡಳಿತಕ್ಕೆ ಸೇರಿಸಿಕೊಂಡಿದ್ದ ಹೊಯ್ಸಳರ ರಾಜ್ಯದಲ್ಲಿ ಇದು ಆಯಕಟ್ಟಿನ ಮಹತ್ವ ಪಡೆದಿತ್ತು. ಅವರ ಕಾಲದಲ್ಲಿ ಇಲ್ಲಿ ಹಲವಾರು ದೇವಾಲಯಗಳು, ಕೆರೆಕಟ್ಟೆಗಳು, ಕಾಲುವೆಗಳು, ನಿರ್ಮಾಣವಾದವು. ಚಾಮರಾಜನಗರದಲ್ಲಿ ವಿಷ್ಣುವರ್ಧನನ ಮಹಾದಂಡನಾಯಕ ಪುಣಿಸಮಯ್ಯ ಪಾರ್ಶ್ವನಾಥ'ಸ್ವಾಮಿ ಬಸದಿಯನ್ನು ಕಟ್ಟಿಸಿ ಅದಕ್ಕೆ ದಾನದತ್ತಿಗಳನ್ನು ನೀಡಿದನೆಂದು 1116ರ ಶಾಸನ ತಿಳಿಸುತ್ತದೆ. ಈತ ಗಂಗವಾಡಿ ಪ್ರಾಂತದಲ್ಲಿ ಹಲವಾರು ಬಸದಿಗಳನ್ನು ಜೀರ್ಣೋದ್ಧಾರ ಮಾಡಿಸಿದ. ಪುಣಜನೂರಿಗೆ ಆ ಹೆಸರು ಬರಲು ಅವನು ಕಾರಣನಾಗಿರಬೇಕು. ಎರಡನೆಯ ಬಲ್ಲಾಳ ಯಳಂದೂರು ತಾಲ್ಲೂಕಿನ

ಯೆರಿಯೂರು ಎಂಬಲ್ಲಿ ವಲ್ಲಾಳೇಶ್ವರ ದೇವಾಲಯವನ್ನು ಕಟ್ಟಿಸಿದ. ಗುಂಡ್ಲುಪೇಟೆಯ ಬಿಟ್ಟ ದೇವಾಲಯ ನಿರ್ಮಾಣವಾದುದ್ದು ಇವನ ಕಾಲದಲ್ಲೇ. ಮೂರನೆಯ ವೀರಬಲ್ಲಾಳನ ಕಾಲದಲ್ಲಿ ಮಾಧವ ದಂಡನಾಯಕ ಗುಂಡ್ಲುಪೇಟೆ ತಾಲ್ಲೂಕಿನ ಗೋವರ್ಧನಗಿರಿಯ ಗೋಪಿನಾಥ ದೇವಸ್ಥಾನದಲ್ಲಿ ಒಂದು ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿಸಿದ.



ನರ್ತಿಸುತ್ತಿರುವ ನವಿಲು, ಬಂಡಿಪುರ

ಹೊಯ್ಸಳ ಅರಸರ ಮಾಂಡಲಿಕರಾಗಿದ್ದವರದೊಂದು ಮನೆತನ, ಈ ಜಿಲ್ಲೆಯ ಹದಿನಾಲ್ಕುನಾಡು ಅಥವಾ ಕುಡುಗುನಾಡನ್ನು ಮುಕ್ಕಾಲು ಶತಮಾನ ಕಾಲ ಆಳಿತು. ಇದರ ಮೂಲಪುರುಷ ಹೊಯ್ಸಳ ಮೂರನೆಯ ನರಸಿಂಹನ ಸೇನಾನಿ ಪೆರುಮಾಳೆ ದಂಡನಾಯಕ. ಇವನು ನೀಲಗಿರಿ ಮತ್ತು ಕೊಂಗುನಾಡುಗಳ ಮೇಲೂ ತನ್ನ ಸ್ವಾಮ್ಯ ಸಾಧಿಸಿಕೊಂಡಿದ್ದ. ತೆರಕಣಾಂಬಿ ಇವನ ರಾಜಧಾನಿಯಾಗಿತ್ತು. ಗೋಪಾಲಸ್ವಾಮಿ ಬೆಟ್ಟದ ಗೋವರ್ಧನಗಿರಿ ಗೋಪಿನಾಥ ದೇವಾಲಯವನ್ನು 1315ರಲ್ಲಿ ಪೆರುಮಾಳೆಯ ಮಗ ಕಟ್ಟಿಸಿದ. ಹೊಯ್ಸಳರ ಪತನಾನಂತರ ಈ ಅರಸು ಮನೆತನ ಕೊನೆಗೊಂಡಿತು. ವಿಜಯನಗರದ ಸಾಮಂತರಾಗಿದ್ದ ಉಮ್ಮತ್ತೂರಿನ ಪಾಳೆಯಗಾರರು ಇದರ ಸ್ವಾಮ್ಯ ಪಡೆದರು.

ಹೊಯ್ಸಳರ ಅನಂತರ ಇಲ್ಲಿ ವಿಜಯನಗರದ ಅರಸರು ಪ್ರಬಲರಾದರು. 1350ರ ದಶಕದಿಂದ ಇಲ್ಲಿ ವಿಜಯನಗರದ ಶಾಸನಗಳು ಕಾಣಿಸಿಕೊಳ್ಳುತ್ತವೆ. ಕೊಳ್ಳೇಗಾಲ ತಾಲ್ಲೂಕಿನ ಕಾಮಗೆರೆಯ ಬಳಿ ದೊರೆತಿರುವ 1354ರ ಶಾಸನ ಇವುಗಳಲ್ಲಿ ಪ್ರಮುಖವಾದದ್ದು. ವಿಜಯನಗರದ ರಾಜ ಬುಕ್ಕಣ್ಣಒಡೆಯನ ಮಗ ಕಂಪಣ್ಣಒಡೆಯ ಹಾಕಿಸಿದ ಶಾಸನ ಇದು. ಕಂಪಣ್ಣನ ಮಗ ಕುಮಾರ ನಂಜಣ್ಣ ಗುಂಡ್ಲುಪೇಟೆಯ ರಾಮನಾಥ ದೇವಾಲಯಕ್ಕೆ ತನ್ನ ತಂದೆ ಕಂಪಣನ ಸ್ಮರಣಾರ್ಥ ದತ್ತಿಬಿಟ್ಟ ವಿಚಾರ ಶಾಸನಗಳಿಂದ ತಿಳಿದುಬರುತ್ತದೆ. 1380ರವರೆಗೂ ನಂಜಣ್ಣ ಇಲ್ಲಿಯ ಮಾಂಡಲಿಕನಾಗಿದ್ದ. 15ನೆಯ ಶತಮಾನದ ಮಧ್ಯಭಾಗದವರೆಗೂ ವಿಜಯನಗರದ ಅರಸರಿಗೆ ಸೇರಿದ ಹತ್ತಾರು ಶಾಸನಗಳು ಈ ಭಾಗದಲ್ಲಿ ಕಂಡುಬರುತ್ತವೆ. ಇಲ್ಲಿ ಹರಿಹರ, ಒಂದನೆಯ ದೇವರಾಯ, ಎರಡನೆಯ ದೇವರಾಯ, ಮಲ್ಲಿಕಾರ್ಜುನ ಮೊದಲಾದವರ ಶಾಸನಗಳಿವೆ. ವಿಜಯನಗರದ ಸಾಮಂತರಾಗಿದ್ದ ಉಮ್ಮತ್ತೂರು ಪಾಳೆಯಗಾರರು ಮುಂದೆ ಇಲ್ಲಿ ಆಳಿಕೆ ನಡೆಸಿದರು.

1467-82ರ ಕಾಲಕ್ಕೆ ಸಂಬಂಧಿಸಿದ ಇಲ್ಲಿಯ ನಾಯಕರ ಶಾಸನಗಳಲ್ಲಿ ವೀರ ಹನುಮಪ್ಪ ಮತ್ತು ಆತನ ಮಗ ಇಮ್ಮಡಿರಾಯ ಅಥವಾ ಸೋಮಯ್ಯ ಎಂಬ ಹೆಸರುಗಳು ಕಂಡುಬರುತ್ತವೆ. ಅವರು ನಂಜನಗೂಡಿನ ನಂಜುಂಡೇಶ್ವರನಿಗೆ ದಾನ ಮಾಡಿದ ವಿಷಯ ಮುಳ್ಳೂರು ಶಾಸನದಲ್ಲಿದೆ. ಸೋಮಯ್ಯನ ಮಗ ದೇವರಾಯ ಒಡೆಯನೂ ತೆರಕಣಾಂಬಿಯಿಂದ ಕುಡುಗು ನಾಡನ್ನು ಆಳುತ್ತಿದ್ದನೆಂದು ಹೇಳಲಾಗಿದೆ. ಕುಡುಗು ನಾಡು ಸುಮಾರಾಗಿ ಗುಂಡ್ಲುಪೇಟೆ ತಾಲ್ಲೂಕಿನ ವ್ಯಾಪ್ತಿಗೆ ಬರುತ್ತದೆ. ಅವನು ಹರವೆಯಲ್ಲಿ ಒಂದು ದೇವಸ್ಥಾನವನ್ನು ಕಟ್ಟಿಸಿದ. ಈ ಮನೆತನದ ಇಮ್ಮಡಿ ಚಿಕ್ಕರಾಜನೆಂಬವನು ಹದಿನಾಡನ್ನು ಆಳುತ್ತಿದ್ದ. ಆತ ಸಾಲೂರು ವೀರಶೈವ ಮಠಕ್ಕೆ ದತ್ತಿನೀಡಿದ.

ಉಮ್ಮತೂರಿನ ನಾಯಕರ ವಂಶಾವಳಿ ಮತ್ತು ಅವರ ಚಟುವಟಿಕೆಗಳ ಬಗ್ಗೆ ಖಚಿತವಾದ ಸಮಗ್ರವಾದ ವಿವರಗಳು ತಿಳಿದುಬರುವುದಿಲ್ಲ. ಅವರು ಉಮ್ಮತ್ತೂರಿನಲ್ಲಿ ರಂಗನಾಥ ಮತ್ತು ಭುಜಂಗೇಶ್ವರ ದೇವಸ್ಥಾನಗಳನ್ನು ಕಟ್ಟಿಸಿದರು. ಪೂರ್ವಘಟ್ಟದ ಕೆಳಗೆ ಕೊಯಮತ್ತೂರಿನವರೆಗೂ ಇವರು ಆಧಿಪತ್ಯ ಹೊಂದಿದ್ದಿರಬಹುದೆಂದು ನಂಬಲಾಗಿದೆ. ಕಳಲೆ ಒಡೆಯರಿಗೂ ಇವರಿಗೂ ತೀವ್ರವಾದ ಹಗೆತನವಿದ್ದಿತು. ಕ್ರಮೇಣ ಪ್ರಬಲವಾದ ಈ ನಾಯಕರು ಕೃಷ್ಣದೇವರಾಯನ ಕಾಲದಲ್ಲಿ ಬಂಡೇಳುವ ಪ್ರವೃತ್ತಿ ತೋರಿಸಿದರು. ಆಗ (1512ರಲ್ಲಿ) ಕೃಷ್ಣದೇವರಾಯನೇ ದಂಡನಾಯಕತ್ವ ವಹಿಸಿ ಸೈನ್ಯವನ್ನು ಮುನ್ನಡೆಸಿ ಉಮ್ಮತ್ತೂರಿನ ಪಾಳೆಯಗಾರರನ್ನು ಸೋಲಿಸಿ ಅವರನ್ನು ಅಧಿಕಾರದಿಂದ ಇಳಿಸಿದ. ಈ ಪ್ರಾಂತ್ಯದ ಮೇಲೆ ಆಡಳಿತ ನಡೆಸುವ ಸಲುವಾಗಿ ಸಾಳುವ ಗೋವಿಂದರಾಜನನ್ನು ಮಾಂಡಲಿಕನಾಗಿ ನೇಮಿಸಿದ. ಗುಂಡ್ಲುಪೇಟೆಯ 29ನೆಯ ಶಾಸನ ಉಮ್ಮತ್ತೂರಿನಿಂದ ಆಳುತ್ತಿದ್ದ ವಿಜಯನಗರದ ಒಡೆಯರು ದೇವಾಲಯಕ್ಕೆ ದಾನ ನೀಡಿದ ವಿಷಯ ತಿಳಿಸುತ್ತದೆ. ವಿಜಯನಗರದ ರಾಮರಾಯನ ಸೇವಕ, ಊಳಿಗದ ಬಸವಪ್ಪ ಒಡೆಯ ಇಲ್ಲಿ ಆಳುತ್ತಿದ್ದುದನ್ನು ಗುಂಡ್ಲುಪೇಟೆ ತಾಲ್ಲೂಕಿನ 216ನೆಯ ಶಾಸನ (1562) ದೃಢಪಡಿಸುತ್ತದೆ. ವಡಗೆರೆಯಲ್ಲಿ ದೊರೆತಿರುವ ಯಳಂದೂರಿನ 182ನೆಯ ಶಾಸನ 1582ರಲ್ಲಿ ಹಾಕಿಸಿದ್ದಾಗಿದ್ದು, ಅದು ವಿಜಯನಗರದ ಪರಮಾಧಿಕಾರ ಈ ಭಾಗದಲ್ಲಿ ಮುಂದುವರಿದ್ದಿದ್ದುದಕ್ಕೆ ಸಾಕ್ಷಿಯಾಗಿದೆ. ಹದಿನಾಡ ಅರಸರು ವಿಜಯನಗರದ ಪರಮಾಧಿಕಾರವನ್ನು ಒಪ್ಪಿಕೊಂಡು 17ನೆಯ ಶತಮಾನದ ಪ್ರಾರಂಭದವರೆಗೂ ಈ ಜಿಲ್ಲೆಯ ಕೆಲವು ಭಾಗಗಳನ್ನು ಆಳುತ್ತಿದ್ದರು. ಅವರ ಮನೆತನದ ಸಿಂಗಪದೇವನೆಂಬವನು ಯಳಂದೂರಿನ ಗೌರೀಶ್ವರ ದೇವಾಲಯವನ್ನು ಕಟ್ಟಿಸಿದ.



ಚಾಮರಾಜೇಶ್ವರ ದೇವಸ್ಥಾನ, ಚಾಮರಾಜನಗರ

1565ರಲ್ಲಿ ನಡೆದ ತಾಳಿಕೋಟೆ ಯುದ್ಧದಲ್ಲಿ ವಿಜಯನಗರದ ಸೈನ್ಯ ಶಾಹಿ ಸುಲ್ತಾನರ ಸಂಯುಕ್ತ ಸೈನ್ಯದೆದುರು ಸೋತಾಗ ಆ ಸಾಮ್ರಾಜ್ಯ ದುರ್ಬಲವಾಗತೊಡಗಿತು. ಮುಂದೆ ಹಂತ ಹಂತವಾಗಿ ಸ್ಥಳೀಯ ಸಾಮಂತರು, ತುಂಡರಸರು ತಮ್ಮ ಶಕ್ತಿ ಸಂಪನ್ಮೂಲಗಳನ್ನು ಬೆಳೆಸಿಕೊಂಡು ಸ್ವತಂತ್ರರಾಗಲು ಪ್ರಯತ್ನಿಸಿದರು. ಈ ಪ್ರಯತ್ನದಲ್ಲಿ ಯಶಸ್ವಿಯಾದವರಲ್ಲಿ ಮೈಸೂರು ಅರಸರು (ನೋಡಿ: ಮೈಸೂರು ಒಡೆಯರು) ಸೇರಿದ್ದಾರೆ. 15ನೆಯ ಶತಮಾನದಲ್ಲಿ 33 ಗ್ರಾಮಗಳ ಒಡೆತನದಿಂದ ರಾಜ್ಯವಾಳಲಾರಂಭಿಸಿದ ಇವರು ಚಾಮರಾಜನಗರ ಜಿಲ್ಲೆಯ ನೆರೆಯ ಹದಿನಾಡಿನ ಮೇಲೆ ನಿಯಂತ್ರಣ ಹೊಂದಿದ್ದರು. ಈ ಮನೆತನದವರು ಮೈಸೂರಿಗೆ ತಮ್ಮ ನೆಲೆಯನ್ನು ವರ್ಗಾಯಿಸಿಕೊಂಡರು. ರಾಜ ಒಡೆಯರು (1578-1617) ಶ್ರೀರಂಗಪಟ್ಟಣದಲ್ಲಿದ್ದ ವಿಜಯನಗರದ ಪ್ರತಿನಿಧಿ ತಿರುಮಲರಾಯನನ್ನು ಪದಚ್ಯುತಗೊಳಿಸಿ ತಾನೇ ವಿಜಯನಗರದ ಪ್ರತಿನಿಧಿ ಎಂದು ಘೋಷಿಸಿಕೊಂಡ. ಆತ ಮುಂದೆ ಶೀಘ್ರವಾಗಿ ರಾಜ್ಯ ವಿಸ್ತರಣೆ ಮಾಡಿ ತಲಕಾಡು, ಚಾಮರಾಜನಗರ ಮತ್ತು ಉಮ್ಮತ್ತೂರು ಸೇರಿದಂತೆ ಈಗಿನ ಮಂಡ್ಯ, ಹಾಸನ ಮತ್ತು ಬೆಂಗಳೂರು ಜಿಲ್ಲೆಯ ಅನೇಕ ಭಾಗಗಳನ್ನು ತನ್ನ ಅಧೀನಕ್ಕೆ ತೆಗೆದುಕೊಂಡ. ಶ್ರೀರಂಗಪಟ್ಟಣ ಇವನ ರಾಜಧಾನಿಯಾಯಿತು. ಆದರೆ ಇವನು ಮೈಸೂರು ಒಡೆಯನೆಂದೇ ಪರಿಚಿತನಾದ. ಚಾಮರಾಜನಗರ ಜಿಲ್ಲೆ ಒಡೆಯರ ರಾಜ್ಯದ ಖಾಯಂ ಭಾಗವಾಯಿತು. ಈಗಿನ ಚಾಮರಾಜನಗರದಲ್ಲಿ ಮಹಾಪ್ರಭು ಎಂಬ ಸ್ಥಾನಿಕ ಅಧಿಕಾರ ನಿರ್ವಹಿಸುತ್ತಿದ್ದ.

ಮೈಸೂರು ಒಡೆಯರು ತಮಿಳುನಾಡಿನತ್ತಲೂ ರಾಜ್ಯ ವಿಸ್ತರಿಸಿದರು. ಚಾಮರಾಜನಗರ, ಜಿಲ್ಲೆಯ ಆಯಕಟ್ಟಿನ ಪ್ರದೇಶವಾಗಿದ್ದುದರಿಂದ ಅದನ್ನು ಎಚ್ಚರಿಕೆಯಿಂದ ಸಂರಕ್ಷಿಸಿಕೊಂಡು ಬಂದರು. ಟಿಪ್ಪುಸುಲ್ತಾನ ಬ್ರಿಟಿಷರಿಗೆ ಸಂಪೂರ್ಣವಾಗಿ ಸೋತು ಹತನಾದ ಮೇಲೆ (1799) ಮೈಸೂರು ರಾಜ್ಯದ ವಿಭಜನೆಯಾದಾಗ ಈ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕು ಮದರಾಸು ಪ್ರಾಂತಕ್ಕೆ ಸೇರಿತು. ಒಡೆಯರ ರಾಜಮನೆತನ ಮೈಸೂರಿನಲ್ಲಿ ನೆಲೆಸಿತು. ಚಾಮರಾಜನಗರ ಪಟ್ಟಣಕ್ಕೆ ಅರಿಕುಠಾರವೆಂಬ ಹೆಸರಿತ್ತು. ಅಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ತಂದೆ ಎಂಟನೆಯ ಚಾಮರಾಜ ಒಡೆಯರು ಜನಿಸಿದ್ದರು. ಅವರ ನೆನಪಿಗಾಗಿ ಕೃಷ್ಣರಾಜ ಒಡೆಯರು 1818ರಲ್ಲಿ ಅರಿಕುಠಾರಕ್ಕೆ ಚಾಮರಾಜನಗರ ಎಂದು ನಾಮಕರಣ ಮಾಡಿದರು. ಮುಮ್ಮಡಿ ಕೃಷ್ಣರಾಜ ಒಡೆಯರು ಇಲ್ಲಿ ಚಾಮರಾಜೇಶ್ವರ ದೇವಾಲಯವನ್ನು ನಿರ್ಮಿಸಿ ಅದನ್ನು ವಿಸ್ತರಿಸಿದರು. ಈ ಜಿಲ್ಲೆಯಲ್ಲಿ ಹಲವೆಡೆ ಮೈಸೂರು ಒಡೆಯರು ಮತ್ತು ಅವರ ರಾಣಿವಾಸದವರು ಕಟ್ಟಿಸಿದ ದೇವಾಲಯಗಳೂ ಪ್ರತಿಷ್ಠಾಪಿಸಿದ ವಿಗ್ರಹಗಳೂ ಕಟ್ಟಿಸಿದ ಛತ್ರಗಳೂ ಅಗ್ರಹಾರಗಳೂ ಇವೆ.

ಈಗಿನ ಚಾಮರಾಜನಗರ ಜಿಲ್ಲೆ ಪ್ರದೇಶ ಮೈಸೂರು ಸಂಸ್ಥಾನದಲ್ಲೇ ಅತ್ಯಂತ ದೊಡ್ಡದೆನಿಸಿದ್ದ ಮೈಸೂರು ಜಿಲ್ಲೆಯ ಭಾಗವಾಗಿತ್ತು. ಮೈಸೂರು ಜಿಲ್ಲೆಯಿಂದ ಮಂಡ್ಯ ಜಿಲ್ಲೆ 1939ರಲ್ಲಿ ಪ್ರತ್ಯೇಕವಾಯಿತು.

ಮೈಸೂರು ಸಂಸ್ಥಾನದ ಕಾಲದಲ್ಲಿ ಈ ಜಿಲ್ಲೆ ಹೆಚ್ಚಿನ ಅಭಿವೃದ್ಧಿ ಸಾಧಿಸಲಾಗಲಿಲ್ಲ. ಆದರೆ ಇಲ್ಲಿನ ಪ್ರವಾಸಿ ಮತ್ತು ಯಾತ್ರಾ ಸ್ಥಳಗಳು ಪ್ರಸಿದ್ಧವಾಗಿದ್ದುವು. 1926ರಲ್ಲಿ ಮೈಸೂರಿನಿಂದ ಚಾಮರಾಜನಗರದವರೆಗೆ ರೈಲುಮಾರ್ಗ ನಿರ್ಮಾಣವಾಯಿತು. ಇದು ಈ ಭಾಗದ ಸಾರಿಗೆ ಅಭಿವೃದ್ಧಿಗೆ ದೊಡ್ಡ ಕೊಡುಗೆಯಾಯಿತು.

ಸ್ವಾತಂತ್ರ್ಯ ಚಳವಳಿಯಲ್ಲಿ ಈ ಭಾಗದ ಜನರೂ ಭಾಗವಹಿಸಿದ್ದರು. 1928ರಲ್ಲಿ ಸಂಸ್ಥಾನದ ಪ್ರಥಮ ಕಾಂಗ್ರೆಸ್ ಅಧಿವೇಶನ ಮೈಸೂರು ನಗರದಲ್ಲಿ ಜರುಗಿತು. ಅದು ಈ ಭಾಗದ ಜನರಿಗೆ ಕಾಂಗ್ರೆಸ್ ಬಗ್ಗೆ ಒಲವು ಬೆಳೆಯಲು ಪ್ರೇರಕವಾಯಿತು. ಗಾಂಧೀಜಿಯವರು ತಮ್ಮ ಪ್ರವಾಸ ಕಾಲದಲ್ಲಿ ಈ ಜಿಲ್ಲೆಯ ಸರಹದ್ದಿನ ತಗಡೂರು, ಬದನವಾಳು ಮತ್ತು ನಂಜನಗೂಡುಗಳಿಗೆ ಭೇಟಿ ನೀಡಿದ್ದರು. ಸ್ವಾತಂತ್ರ್ಯಾನಂತರ ಭಾಷಾನುಗುಣ ಪ್ರಾಂತ್ಯ ರಚನೆಯಾದಾಗ (1956) ಕೊಳ್ಳೇಗಾಲ ತಾಲ್ಲೂಕು ಮೈಸೂರು ಜಿಲ್ಲೆಗೆ ಸೇರಿತು.

ಚಾಮರಾಜನಗರ ಜಿಲ್ಲೆಯಲ್ಲಿ ಪ್ರವಾಸಿ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲದೆ ಇನ್ನೂ ಹಲವಾರು ಐತಿಹಾಸಿಕ ಮತ್ತು ಸಾಂಸ್ಕೃತಿಕ ಮಹತ್ವದ ಸ್ಥಳಗಳಿವೆ. ಇಲ್ಲಿನ ಎಲ್ಲ ತಾಲ್ಲೂಕು ಕೇಂದ್ರಗಳೂ ಐತಿಹಾಸಿಕ ಮಹತ್ತ್ವ ಪಡೆದಿವೆ. ಇವಲ್ಲದೆ ಅಗರಂ, ಅಮಚವಾಡಿ, ಗಾಣಿಗನೂರು, ಹರದನಹಳ್ಳಿ, ಹೊಳೆ ಆಲೂರು, ಹೊಂಗನೂರು, ಕಂದಗಾಲ, ಕೆಸ್ತೂರು, ಕೋಟೆಕೆರೆ, ಕುದೇರು, ಕುಂತೂರು, ಮದ್ದೂರುಗಳು ವಿವಿಧ ಕಾರಣಗಳಿಗಾಗಿ ಮಹತ್ತ್ವ ಪಡೆದಿವೆ.

ಈ ಜಿಲ್ಲೆಯಲ್ಲಿ ಇತರೆಡೆಗಳಂತೆ ಎಲ್ಲ ಧರ್ಮದವರೂ ಇದ್ದಾರೆ. ಕೊಂತಿ ಪೂಜೆ, ಚೌಡೇಶ್ವರಿ ಜಾತ್ರೆ, ಬಸವನ ಓಕಳಿ, ಅತ್ತಿಗುಳಿ ಹಬ್ಬದಂತಹ ಜನಪದ ಹಬ್ಬಗಳೂ ಜಾತ್ರೆಗಳೂ ನಡೆಯುತ್ತವೆ. ಜನರು ಮಲೆಯ ಮಹದೇಶ್ವರ, ನಂಜನಗೂಡು, ತಿರುಮಕೂಡಲು ನರಸೀಪುರ, ಮೈಸೂರಿನ ಚಾಮುಂಡಿಬೆಟ್ಟಗಳಿಗೆ ಹೆಚ್ಚಾಗಿ ಯಾತ್ರೆ ಹೋಗಿಬರುತ್ತಾರೆ. ಮಲೆಯೂರು ಜೈನ ಯಾತ್ರಾಸ್ಥಳವಾಗಿದೆ. *

**ತಾಲ್ಲೂಕು :** ಈ ತಾಲ್ಲೂಕು ಪಶ್ಚಿಮ ಮತ್ತು ಉತ್ತರಕ್ಕೆ ಇದೇ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕು ಮತ್ತು ಮೈಸೂರು ಜಿಲ್ಲೆಯ ನಂಜನಗೂಡು ಹಾಗೂ ತಿರುಮಕೂಡಲು ನರಸೀಪುರ ತಾಲ್ಲೂಕುಗಳನ್ನು, ಪೂರ್ವಕ್ಕೆ ಇದೇ ಜಿಲ್ಲೆಯ ಕೊಳ್ಳೇಗಾಲ ಮತ್ತು ಯಳಂದೂರು ತಾಲ್ಲೂಕುಗಳನ್ನು, ದಕ್ಷಿಣಕ್ಕೆ ತಮಿಳುನಾಡಿನ ಕೊಯಮತ್ತೂರು ಜಿಲ್ಲೆಯನ್ನು ಮೇರೆಗಳಾಗಿ ಹೊಂದಿದೆ. ಚಾಮರಾಜನಗರ, ಹರದನಹಳ್ಳಿ, ಹರವೆ, ಸಂತೇಮರಳ್ಳಿ, ಚಂದಕವಾಡಿ ಹೋಬಳಿಗಳಿಂದಲೂ ಒಟ್ಟು 189 ಗ್ರಾಮಗಳಿಂದಲೂ ಕೂಡಿರುವ ಈ ತಾಲ್ಲೂಕಿನ ವಿಸ್ತೀರ್ಣ 1235.9ಚ.ಕಿಮೀ. ಜನಸಂಖ್ಯೆ 3,36,893.

ಪೂರ್ವ ಮತ್ತು ದಕ್ಷಿಣ ಎಲ್ಲೆಯಲ್ಲಿ ಬಿಳಿಗಿರಿರಂಗ ಶ್ರೇಣಿಯ ಬೆಟ್ಟಪ್ರದೇಶವಿದೆ. ಈ ಪ್ರದೇಶದಲ್ಲಿ ಸುಮಾರು ದಟ್ಟವಾದ ಪರ್ಣಪಾತಿ ವೃಕ್ಷಗಳಿರುವ ಕಾಡಿದೆ. ಆ ಭಾಗವನ್ನು ಬಿಟ್ಟರೆ ತಾಲ್ಲೂಕು ಬಹುತೇಕ ಮೈದಾನ.

ಇಲ್ಲಿಯ ಮುಖ್ಯ ನದಿ ಹೊನ್ನುಹೊಳೆ ಅಥವಾ ಸುವರ್ಣಾವತಿ. ಇದು ದಕ್ಷಿಣ ಗಡಿಯ ಆಚೆ ನೀಲಗಿರಿ ಬೆಟ್ಟಸಾಲಿನಲ್ಲಿ ದಿಂಬಂ ಎಂಬಲ್ಲಿ ಹುಟ್ಟಿ ಈಶಾನ್ಯಾಭಿಮುಖವಾಗಿ ಹರಿದು ರಾಮಸಮುದ್ರ ಮತ್ತು ಆಲೂರುಗಳನ್ನು ದಾಟಿ ಯಳಂದೂರಿನತ್ತ ಸಾಗುತ್ತದೆ. ಚಿಕ್ಕ ಹೊಳೆ ಇದರ ಉಪನದಿ.



ಬಿಳಿಗಿರಿರಂಗನಬೆಟ್ಟದ ರಂಗನಾಥ ದೇವರ ರಥೋತ್ಸವ

ಬಿಳಿಗಿರಿರಂಗನ ಬೆಟ್ಟದ ಪ್ರದೇಶ ಚಾರ್ನೋಕೈಟ್ ಶಿಲೆಗಳದು. ತಾಲ್ಲೂಕಿನ ಇತರ ಭಾಗದಲ್ಲಿ ಕಣಶಿಲೆಯೇ ತಳಶಿಲೆ. ತಾಲ್ಲೂಕಿನಲ್ಲಿ ಚಂದ್ರಶಿಲೆ ಮತ್ತು ಅಲಂಕಾರಕ್ಕಾಗಿ ಬಳಸುವ ಗ್ರಾನೈಟ್ ಶಿಲೆಗಳ ಸಂಪತ್ತಿದೆ. ತಾಲ್ಲೂಕಿನಲ್ಲಿ ಕಪ್ಪು ಮತ್ತು ಕೆಂಪು ಮಣ್ಣಿನಿಂದ ಹಿಡಿದು ನುರುಜು ಮಿಶ್ರಿತ ಮಣ್ಣಿನ ಭೂಮಿ ಇದ್ದು ಸಾಮಾನ್ಯವಾಗಿ ಫಲವತ್ತಾಗಿದೆ. ಸುವರ್ಣಾವತಿಯ ಬಳಿ ಚೌಳು ಮಣ್ಣು ವಿಶೇಷವಾಗಿದೆ. ತಾಲ್ಲೂಕಿನ ಪಶ್ಚಿಮದ ಭಾಗದ ನೆಲ ಹೆಚ್ಚು ಸಾರವತ್ತಾದ್ದಲ್ಲ. ಪೂರ್ವಕ್ಕೆ ಸಾಗಿದಂತೆ ಮಣ್ಣಿನ ಗುಣ ಅಧಿಕ. ಹೊನ್ನುಹೊಳೆ ಕಣಿವೆಯ ಮಣ್ಣು ತುಂಬ ಉತ್ತಮ. ಸುವರ್ಣಾವತಿಗೆ ಅಟುಗುಳಿಪುರದ ಬಳಿ ಕಟ್ಟೆ ಕಟ್ಟಲಾಗಿದೆ. 26ಮೀ. ಎತ್ತರವಿರುವ ಈ ಕಟ್ಟೆಯ ಉದ್ದ ಸು.1158ಮೀ. ಇದರ ಬಲನಾಲೆಯ ಉದ್ದ 23ಕಿಮೀ ಎಡನಾಲೆ 6.5ಕಿಮೀ. 1971 ರಿಂದ ನೀರಾವರಿಗೆ ಬಳಸಿಕೊಳ್ಳಲಾಗುತ್ತಿರುವ ಇದರ ಒಟ್ಟು ಅಚ್ಚುಕಟ್ಟು 1,000 ಎಕರೆ. ಕೊಯಮತ್ತೂರು ಜಿಲ್ಲೆಯಲ್ಲಿ ಹುಟ್ಟಿ ಚಾಮರಾಜನಗರ ತಾಲ್ಲೂಕಿನಲ್ಲಿ ಸುವರ್ಣಾವತಿಯನ್ನು ಸೇರುವ ಚಿಕ್ಕಹೊಳೆಗೆ ಈ ತಾಲ್ಲೂಕಿನಲ್ಲಿ, ಸುವರ್ಣಾವತಿ ಕಟ್ಟೆಯಿಂದ ಕೆಳಕ್ಕೆ 8ಕಿಮೀ ದೂರದಲ್ಲಿ, ಒಂದು ಮಧ್ಯಮ ವರ್ಗದ ಕಟ್ಟೆ ಕಟ್ಟಲಾಗಿದೆ. ಇವಲ್ಲದೆ ತಾಲ್ಲೂಕಿನಲ್ಲಿ ನೀರಾವರಿಗೆ ಅನುಕೂಲವಾದ ಹಲವು ಕೆರೆಗಳುಂಟು. ತಾಲ್ಲೂಕಿನ ಕೊಳವೆ ಬಾವಿಗಳು ಒಣಪ್ರದೇಶದಲ್ಲಿ ಮುಖ್ಯ ನೀರಾವರಿ ಮೂಲಗಳಾಗಿವೆ. ವಾರ್ಷಿಕ ಸರಾಸರಿ ಮಳೆ 667.59ಮಿಮೀ.

ಜೋಳ ಈ ತಾಲ್ಲೂಕಿನ ಮುಖ್ಯ ಬೆಳೆ. ರಾಗಿ, ಹುರುಳಿ ಮತ್ತು ಇತರ ಹಲವು ಖುಷ್ಕಿ ಬೆಳೆಗಳನ್ನೂ ಬೆಳೆಯುತ್ತಾರೆ. ಹತ್ತಿಯನ್ನೂ ಬೆಳೆಯುವುದುಂಟು. ಕೆಲವೆಡೆ ವರ್ಷಕ್ಕೆ ಎರಡು ಬೆಳೆ ತೆಗೆಯುತ್ತಾರೆ.

ನೀರಾವರಿ ಸೌಲಭ್ಯ ಇರುವಲ್ಲಿ ಬತ್ತ, ಕಬ್ಬು ಬೆಳೆಯುತ್ತವೆ. ಹಿಪ್ಪುನೇರಳೆ ವ್ಯವಸಾಯವೂ ವಿಶೇಷವಾಗಿ ನಡೆಯುತ್ತದೆ. ರೇಷ್ಮೆಹುಳು ಸಾಕುವುದು, ಎಳೆ ತೆಗೆಯುವುದು ತಾಲ್ಲೂಕಿನ ಒಂದು ಮುಖ್ಯ ಕಸಬು. ಹೊನ್ನುಹೊಳೆಯ ದಂಡೆಯ ಮೇಲೆ ಒಳ್ಳೆಯ ಅಡಕೆ, ತೆಂಗು ತೋಟಗಳಿವೆ. ಬಿಳಿಗಿರಿರಂಗನ ಬೆಟ್ಟ ಶ್ರೇಣಿಯಲ್ಲಿ ಕಾಫಿತೋಟಗಳೂ ಉಂಟು.

ತಾಲ್ಲೂಕಿನಲ್ಲಿ ಅಂಚೆ, ತಂತಿ, ವಿದ್ಯುಚ್ಛಕ್ತಿ ಸೌಲಭ್ಯಗಳ ಜೊತೆಗೆ ಶಾಲಾ ಕಾಲೇಜುಗಳೂ ವೈದ್ಯಾಲಯಗಳೂ ಇವೆ. ಸುತ್ತಲ ಯಳಂದೂರು, ಕೊಳ್ಳೇಗಾಲ, ಗುಂಡ್ಲುಪೇಟೆ, ನಂಜನಗೂಡುಗಳಿಗೆ ರಸ್ತೆ ಮಾರ್ಗ ಸಂಪರ್ಕವಿದೆ. ಮೈಸೂರು ಚಾಮರಾಜನಗರ ರೈಲ್ವೆ ಮಾರ್ಗವಿದ್ದು ಮುಂದೆ ಇದನ್ನು ವಿಸ್ತರಿಸುವ ಯೋಜನೆ ಇದೆ. ಅಮಚವಾಡಿ, ಬಾಗಳಿ, ಬದನಗುಪ್ಪೆ, ಚಂದಕವಾಡಿ, ಗಣಗನೂರು, ಹೊಂಗನೂರು, ಹರದನಹಳ್ಳಿ, ಹರವೆ, ಜ್ಯೋತಿಗೌಡನಪುರ, ಕಾಗಲವಾಡಿ, ಕೊತ್ತಲವಾಡಿ, ಕಡಲೂರು, ಕುದೇರು, ಮಂಗಲ, ನಾಗವಳ್ಳಿ, ರಾಮಸಮುದ್ರ, ಸರಗೂರು, ಸಂತೇಮರಳ್ಳಿ, ತಮ್ಮಡಹಳ್ಳಿ, ಉಮ್ಮತ್ತೂರು ಈ ತಾಲ್ಲೂಕಿನ ದೊಡ್ಡ ಗ್ರಾಮಗಳು. ಸಂತೇಮರಳ್ಳಿಯ ಸಂತೆ ಪ್ರಸಿದ್ಧವಾದುದು. ಕುದೇರು ಮತ್ತು ಮರಳ್ಳಿಗಳಲ್ಲಿ ರೇಷ್ಮೆ ವ್ಯವಸಾಯ ಉತ್ತಮವಾಗಿದೆ. ಚಾಮರಾಜ ನಗರಕ್ಕೆ 10ಕಿಮೀ ದೂರದಲ್ಲಿರುವ ಹಳೇ ಆಲೂರಿನಲ್ಲಿ ಪುರಾತನವಾದ ಅರ್ಕೇಶ್ವರ ಗುಡಿಯುಂಟು. ಹರದನಹಳ್ಳಿ (ನೋಡಿ) ಐತಿಹಾಸಿಕ ಸ್ಥಳ. ತೋಂಟದ ಸಿದ್ಧಲಿಂಗರ ಗುರುವಾದ ಗೋಸಲ ಚೆನ್ನಬಸವರು ಇದ್ದ ಗ್ರಾಮವಿದು. ನರಸಮಂಗಲದಲ್ಲಿ ಜೀರ್ಣವಾದ ರಾಮೇಶ್ವರ ಗುಡಿಯೊಂದಿದೆ. ಚಾಮರಾಜ ನಗರಕ್ಕೆ 3ಕಿಮೀ ದೂರದಲ್ಲಿರುವ ರಾಮಸಮುದ್ರದಲ್ಲಿ ಪುರಾತನ ಮಣಿಪುರದ್ದೆಂದು ಹೇಳಲಾದ ಅವಶೇಷಗಳಿವೆ. ಮಲೆಯೂರು ಬೆಟ್ಟದಲ್ಲಿ ಕೆಲವು ಪ್ರಾಚೀನ ಜೈನ ಅವಶೇಷಗಳಿವೆ. ಚಾಮರಾಜನಗರಕ್ಕೆ 16ಕಿಮೀ ದೂರದಲ್ಲಿ ನಂಜನಗೂಡು ಯಳಂದೂರು ರಸ್ತೆಯಲ್ಲಿರುವ ಉಮ್ಮತ್ತೂರು (ನೋಡಿ) ಗ್ರಾಮ ಪಾಳೆಯಪಟ್ಟಿನ ಕೇಂದ್ರವಾಗಿತ್ತು.

**ಪಟ್ಟಣ :** ಜಿಲ್ಲಾ ಕೇಂದ್ರವಾದ ಚಾಮರಾಜನಗರ ಈ ತಾಲ್ಲೂಕಿನ ಮುಖ್ಯ ಪಟ್ಟಣ. ಮೈಸೂರು ನಗರದ ಆಗ್ನೇಯಕ್ಕೆ 61ಕಿಮೀ ದೂರದಲ್ಲೂ ನಂಜನಗೂಡಿನಿಂದ 35ಕಿಮೀ ದೂರದಲ್ಲೂ ಇದೆ. ಜನಸಂಖ್ಯೆ 60,810.

ಮೈಸೂರು ಚಾಮರಾಜನಗರ ರೈಲು ಮಾರ್ಗದ ಕೊನೆಯ ನಿಲ್ದಾಣವಿದು. ನಂಜನಗೂಡಿನಿಂದ ಕೊಯಮತ್ತೂರಿನ ಕಡೆಗೆ ಚಾಮರಾಜನಗರದ ಮೂಲಕ ಸಾಗುವ ಒಂದು ಹೆದ್ದಾರಿಯಿದೆ. ಗುಂಡ್ಲುಪೇಟೆ ತಿರುಮಕೂಡಲು ನರಸೀಪುರ ರಸ್ತೆ ಈ ಊರಿನ ಮೂಲಕ ಸಾಗುತ್ತದೆ. ಇದೊಂದು ಮುಖ್ಯ ವ್ಯಾಪಾರಸ್ಥಳ. ಇಲ್ಲಿ ಪುರಸಭಾಡಳಿತವಿದೆ. ರೇಷ್ಮೆ ಕೈಗಾರಿಕಾ ಕೇಂದ್ರ, ಶಾಲಾ ಕಾಲೇಜುಗಳೂ ಆಸ್ಪತ್ರೆಗಳೂ ಇವೆ.

ಮುಮ್ಮಡಿ ಕೃಷ್ಣರಾಜ ಒಡೆಯರು ಕಟ್ಟಿಸಿದ (1826) ಇಲ್ಲಿನ ಚಾಮರಾಜೇಶ್ವರ ದೇವಸ್ಥಾನ ದೊಡ್ಡ ಪ್ರಾಕಾರ, ಎತ್ತರವಾದ ಮಹಾದ್ವಾರ ಗೋಪುರ ಮತ್ತು ಸುತ್ತಲೂ ಕೈಸಾಲೆ ಇರುವ ದೊಡ್ಡ ದೇವಾಲಯ. ಒಳಗೆ ಮೂರು ಗುಡಿಗಳಿವೆ. ಮಧ್ಯದ ಗುಡಿಯಲ್ಲಿ ಶಿವಲಿಂಗವಿದೆ. ಇದು ಚಾಮರಾಜೇಶ್ವರ. ಎಡಗಡೆ ಗುಡಿಯಲ್ಲಿ ಕೆಂಪನಂಜಾಂಬಾ ವಿಗ್ರಹವೂ ಬಲಗಡೆಯದರಲ್ಲಿ ಚಾಮುಂಡಿ ವಿಗ್ರಹವೂ ಇವೆ. ನವರಂಗದ ಎಡಬಲಗಳಲ್ಲಿ ಆರು ಲಿಂಗಗಳೂ ನವರಂಗದ್ವಾರದ ಒಳಪಕ್ಕಗಳಲ್ಲಿ ಸೂರ್ಯಚಂದ್ರರ ವಿಗ್ರಹಗಳೂ ಉಂಟು. ಪ್ರಾಕಾರದೊಳಗೆ ಸುತ್ತಲೂ ಹಲವು ಲಿಂಗಗಳೂ ಅರವತ್ತು ಮೂರು ಪುರಾತನರ ವಿಗ್ರಹಗಳೂ ಇವೆ. ಶಿವನ ಕೆಲವು ಲೀಲಾಮೂರ್ತಿಗಳು ಸುಂದರವಾಗಿವೆ. ಮುಮ್ಮಡಿ ಕೃಷ್ಣರಾಜ ಒಡೆಯರ, ಅವರ ನಾಲ್ವರು ರಾಣಿಯರ ವಿಗ್ರಹಗಳೂ ಇವೆ. ಈ ಊರಿನ ವೀರಭದ್ರ ಗುಡಿಯೂ ಗಮನಾರ್ಹ. ದೇಗುಲದಲ್ಲಿ ವೀರಭದ್ರ ಮೂರ್ತಿಯ ಮತ್ತು ಭದ್ರಕಾಳಿಯ ವಿಗ್ರಹಗಳು ಮುಖ್ಯವಾದವು. ಪಾರ್ಶ್ವನಾಥ ದೇವಸ್ಥಾನದ ಕೆಲವು ಮೂರ್ತಿಗಳು ತೆರಕಣಾಂಬಿ ಮತ್ತು ಹರಳಕೋಟೆಯಿಂದ ತಂದವೆನ್ನಲಾಗಿದೆ. ಚಾಮರಾಜ ಒಡೆಯರು ಹುಟ್ಟಿದ ಸ್ಥಳದಲ್ಲಿ ಕಟ್ಟಲಾದ ಜನನ ಮಂಟಪ ಸುಂದರವಾಗಿದೆ. ಅದರ ಗೋಡೆಯ ಮೇಲಣ ಚಿತ್ರಗಳು ಆಕರ್ಷಕವಾಗಿವೆ. ಇಲ್ಲಿರುವ ದೊಡ್ಡ ಅರಸಿನಕೊಳ ಕಂಠೀರವ ನರಸರಾಜ ಒಡೆಯರ್ ಕಟ್ಟಿಸಿದ್ದು. *

**ಚಾಮರಾಜೇಂದ್ರ ದೃಶ್ಯ ಕಲಾ ಅಕಾಡೆಮಿ :** ಕರ್ನಾಟಕದ ಪ್ರಸಿದ್ಧ ವೃತ್ತಿ ತರಬೇತಿ ಶಾಲೆ; ಹೆಸರಾದ ಕಲಾಕೇಂದ್ರ. ಕಾವಾ ಎಂದೂ ಪ್ರಸಿದ್ಧ. ಅನೇಕ ಮೇಧಾವಿ ಕುಶಲಕೈಗಾರಿಕಾ ಪಟುಗಳನ್ನು ಕಲಾವಿದರನ್ನು ಮತ್ತು ಶಿಲ್ಪಿಗಳನ್ನು ರೂಪಿಸಿರುವ ಈ ಶಾಲೆ ಭಾರತದಲ್ಲಿಯೂ ಹೆಸರಾಗಿದೆ. ಇಲ್ಲಿನ ಕಲಾವಸ್ತುಗಳೂ ಕಲಾಕೃತಿಗಳೂ ವಿಶ್ವಾದ್ಯಂತ ಪ್ರಸರಿಸಿವೆ. ದೇಶವಿದೇಶಗಳಿಂದ ಗಣ್ಯ ಅತಿಥಿಗಳು ಬಂದಾಗ ಸರ್ಕಾರ ಈ ಕಲಾಶಾಲೆಯಿಂದ ಅಪೂರ್ವ ಕಲಾಕೃತಿಗಳನ್ನು ಪಡೆದು ಅವರಿಗೆ ಅರ್ಪಿಸುವ ಪರಿಪಾಠ ಇದೆ.

ಈ ಸಂಸ್ಥೆ 1906ರಲ್ಲಿ ಮೈಸೂರು ನಗರದಲ್ಲಿ ಸ್ಥಾಪಿತವಾಯಿತು. ಸಯ್ಯಾಜಿರಾವ್ ರಸ್ತೆಯಲ್ಲಿ ಈಗಿರುವ ಭವ್ಯಕಟ್ಟಡದ ಸ್ಥಳ ಹಿಂದೆ ವಿಶ್ವಕರ್ಮ ಜನಾಂಗದ ಬೀದಿಯಾಗಿತ್ತೆಂದು ತಿಳಿದುಬರುತ್ತದೆ. ಅನಂತರ ಅವರಿಗೆ ಬೇರೆ ಕಡೆಯಲ್ಲಿ ನಿವೇಶನವನ್ನು ನೀಡಿ ಈ ಕಟ್ಟಡಕ್ಕೆ ಉಚಿತ ಸ್ಥಳವನ್ನು ಪಡೆದುಕೊಳ್ಳಲಾಯಿತು. ಈ ನೂತನ ಕಟ್ಟಡಕ್ಕೆ ಬರುವ ಮೊದಲು ವೃತ್ತಿಶಿಕ್ಷಣ ಶಾಲೆ ನಜರಬಾದಿನ ಪುಟ್ಟ ಕಟ್ಟಡವೊಂದರಲ್ಲಿತ್ತು. ಅಲ್ಲಿ ಚಿತ್ರಕಲೆ, ಮರದ ಕೆತ್ತನೆ, ಗಂಧದ ಕೆತ್ತನೆ, ನೇಯ್ಗೆ, ಬೆತ್ತದ ಕೈಗಾರಿಕೆ, ಪುಸ್ತಕಕ್ಕೆ ರಟ್ಟು ಕಟ್ಟುವಿಕೆ ಮುಂತಾದ ಕರಕುಶಲ ಕಲಾಶಿಕ್ಷಣ ನೀಡಲಾಗುತ್ತಿತ್ತು. ಒಮ್ಮೆ ಈ ಪುಟ್ಟ ಕಲಾ ಶಾಲೆಗೆ ಭೇಟಿ ಕೊಟ್ಟ ನಾಲ್ವಡಿ ಕೃಷ್ಣರಾಜ ಒಡೆಯರ ಸಲಹೆಯಂತೆ ಈಗಿನ ಸ್ಥಳಕ್ಕೆ ಆ ಶಾಲೆಯನ್ನು ವರ್ಗಾಯಿಸಲಾಯಿತು.

ವೃತ್ತಿ ಶಿಕ್ಷಣದ ಪ್ರಗತಿಗೆ ಸರ್ ಎಂ.ವಿಶ್ವೇಶ್ವರಯ್ಯನವರ ಅಧ್ಯಕ್ಷತೆಯಲ್ಲಿ ಸರ್ಕಾರ ಒಂದು ಸಲಹಾ ಸಮಿತಿಯನ್ನು 1910ರಲ್ಲಿ ನೇಮಿಸಿತು. ಸಮಿತಿಯ ಸಲಹೆಗಳ ಮೇರೆಗೆ ಮೈಸೂರು ನಗರದ ಇಟ್ಟಿಗೆಗೂಡಿನಲ್ಲಿದ್ದ ಎಂಜಿನಿಯರಿಂಗ್ ಶಾಲೆ ಮತ್ತು ನಜರಬಾದಿನಲ್ಲಿದ್ದ ಕೈಗಾರಿಕಾ ಶಾಲೆ - ಇವೆರಡನ್ನು ಸಮಾವೇಶಗೊಳಿಸಿ ಶ್ರೀಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯಾಗಿ ಪರಿವರ್ತನೆ ಮಾಡಲಾಯಿತು (1913). ಆರಂಭದಲ್ಲಿದ್ದ ಶಾಲೆಗಳಲ್ಲಿ ಎಂಜಿನಿಯರಿಂಗ್, ಕೈಗಾರಿಕೆ ಮತ್ತ ವಾಣಿಜ್ಯ ಶಾಲೆಗಳು ಮುಖ್ಯವಾದವು. ಅನಂತರ ಸಂಸ್ಥೆಯ ಆಡಳಿತವನ್ನು ವಿದ್ಯಾ ಇಲಾಖೆಯಿಂದ ಕೈಗಾರಿಕಾ ಇಲಾಖೆಗೆ 1920-21ರಲ್ಲಿ ವರ್ಗಾಯಿಸಲಾಯಿತಲ್ಲದೆ, ಶಿಕ್ಷಣ ಪದ್ಧತಿಯಲ್ಲಿಯೂ ಸುಧಾರಣೆಗಳನ್ನು ಮಾಡಲಾಯಿತು. ಚಿತ್ರಕಲೆ, ಮಾದರಿಗಳ ತಯಾರಿಕೆ, ಮರಗೆಲಸ, ಮರದ ಕೆತ್ತನೆ, ಲೋಹಗೆಲಸ, ಕೆತ್ತನೆ ತರಗತಿಗಳನ್ನು ತೆರೆಯಲಾಯಿತು. ಈ ಶಿಕ್ಷಣ ಐದು ವರ್ಷಗಳ ಅವಧಿಯಲ್ಲಿ ಮುಗಿಯುವಂತೆಯೂ ಪಠ್ಯಕ್ರಮವನ್ನು ರೂಪಿಸಲಾಯಿತು. ಕ್ರಮೇಣ ಎನ್‌ಗ್ರೇವಿಂಗ್, ಪ್ಲೇಟಿಂಗ್, ಗಂಧ, ದಂತದ ಕೆತ್ತನೆ ಮತ್ತು ಶಿಲ್ಪ ಮುಂತಾದ ಶಾಖೆಗಳನ್ನು ತೆರೆಯಲಾಯಿತು.

ಶಿಕ್ಷಣ ಪಡೆದ ಅಭ್ಯರ್ಥಿಗಳಲ್ಲಿ ಕೆಲವರನ್ನು ಆರಿಸಿಕೊಂಡು, ಅವರಿಗೆ ನಿಯಮಿತ ವೇತನ ಕೊಟ್ಟು ಕೆಲಸ ಮಾಡಿಸಿಕೊಳ್ಳುವ ಅವಕಾಶವೂ ಇಲ್ಲಿದೆ. ಇವರಿಂದ ರಚಿತವಾದ ಕೃತಿಗಳನ್ನು ಮಾರಾಟ ಮಾಡಲು ಶಾಖೆಯಲ್ಲಿಯೇ ಒಂದು ಪ್ರದರ್ಶನ ಕೇಂದ್ರವನ್ನು ಆರಂಭಿಸಲಾಗಿದೆ. ಶಾಲೆಯ ಹೊರಗೆ ಉಳಿದು ಕಲಾವಿದರು ರೂಪಿಸಿ ತಂದ ಕೃತಿಗಳನ್ನೂ ಆ ಮಾರಾಟದ ಪ್ರದರ್ಶನಾಲಯದಲ್ಲಿರಿಸುವ ಅವಕಾಶವೂ ಇದೆ. ಸರ್ಕಾರ ಇಂಥ ಕಸಬುದಾರರಿಗೆ ರಿಯಾಯಿತಿ ದರದಲ್ಲಿ ಗಂಧದ ಮರ, ದಂತ ಮುಂತಾದ ಸಾಮಗ್ರಿಗಳನ್ನು ಒದಗಿಸಿ ಪ್ರೋತ್ಸಾಹಿಸುತ್ತಿದೆ. ಈ ನೂತನ ಯೋಜನೆಯಿಂದಾಗಿ ಕರಕುಶಲಿಗರ ಸಂಖ್ಯೆ ಬೆಳೆಯುತ್ತಿದೆ.

ಶಾಲೆಯ ಅಭಿವೃದ್ಧಿಗಾಗಿ ಈತನಕ ದುಡಿದ ಮುಖ್ಯಾಧಿಕಾರಿಗಳ ಸೇವೆ ಸ್ಮರಣೀಯ. ಒಬ್ಬೊಬ್ಬರ ಕಾಲದಲ್ಲೂ ಒಂದೊಂದು ರೀತಿಯಲ್ಲಿ ಶಾಲೆ ಅಭಿವೃದ್ಧಿಹೊಂದುತ್ತ ಬಂದಿದೆ. ಇಲ್ಲಿಯವರೆಗೆ ಹದಿಮೂರು ಜನ ಸೂಪರಿಂಟೆಂಡೆಂಟರುಗಳು ಆಗಿಹೋಗಿದ್ದಾರೆ. ಮೊಟ್ಟಮೊದಲ ಅಧಿಕಾರಿ ಸುಬ್ಬಸ್ವಾಮಿ ಅಯ್ಯರ್. ಇವರ ಅನಂತರ 1917ರಲ್ಲಿ ಜೆರಾಲ್ಡ್ ಆಲ್ಬರ್ಟನ್ ಅವರು ಲಂಡನ್ನಿನಿಂದ ಬಂದು ಶಾಲೆಯ ಮುಖ್ಯಾಧಿಕಾರಿಯಾಗಿ ಸೇವೆ ಸಲ್ಲಿಸಿದರು. ಇವರಿಗೆ ಸಹಾಯಕರಾಗಿ ಬಂಗಾಲದ ಕಲಾವಿದ ಎಸ್.ಕೆ.ದೇವಾಲ್ ಅವರು ಕಲಾವಿಭಾಗವನ್ನು ನೋಡಿಕೊಳ್ಳುತ್ತಿದ್ದರು. ಆರ್.ಟಿ.ರಾಮಕೃಷ್ಣ, ಆರ್.ವೇಣುಗೋಪಾಲ್ ನಾಯುಡು, ಡಿ.ಕೃಷ್ಣಯ್ಯ, ಬಾಲಸುಬ್ರಹ್ಮಣ್ಯಂ, ಕೆ.ಕೇಶವಯ್ಯ, ಎಸ್.ಜಿ.ಟಂಕಸಾಲಿ ಮುಂತಾದವರು ಆ ಸಮಯದಲ್ಲಿ ಶಾಲೆಯ ಕಲಾಧ್ಯಾಪಕರಾಗಿದ್ದು ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದರು. ಎಸ್.ರಾಮಸ್ವಾಮಿ ಅಯ್ಯಂಗಾರ್, ಎನ್.ಜಿ.ಪಾವಂಜೆ, ಎಂ.ವೀರಪ್ಪ ಮೊದಲಾದವರೂ ಶಾಲೆಯ ಕೀರ್ತಿಗೆ ಶ್ರಮಿಸಿದ್ದಾರೆ. ಶಿಲ್ಪಿ ತಿನ್ನಾಚಾರ್ಯ, ಮತ್ತು ಇವರ ಸಹೋದರರು, ಖ್ಯಾತ ದಂತಶಿಲ್ಪಿ ಎಚ್.ವೆಂಕಪ್ಪ, ಎಸ್.ನಂಜುಂಡಸ್ವಾಮಿ, ವೈ.ಸುಬ್ರಹ್ಮಣ್ಯರಾಜು, ಬಸವಯ್ಯ,

ಸೂಫಿ ಮುಂತಾದ ಪ್ರತಿಭಾವಂತ ಕಲಾಕೋವಿದರ ಕರಕುಶಲತೆಗೆ ಹೆಚ್ಚಿನ ಪ್ರೋತ್ಸಾಹ ಸಂಸ್ಥೆಯಿಂದ ದೊರೆಯಿತು.

ಮರಗೆಲಸದಲ್ಲೂ ಈ ಶಾಲೆ ಹೆಸರಾಗಿದೆ. ಇದಕ್ಕೆ ಕಾರಣ ಜರ್ಮನಿಯ ಯು.ಜಿ.ಎಕ್ನರ್‌ರಂಥ ನಿಪುಣರ ಸೇವೆಯನ್ನು ಶಾಲೆ ಉಪಯೋಗಿಸಿಕೊಂಡಿದ್ದು. ಆಶೀರ್ವಾದಂ ಮೊದಲಾದವರು ಆ ವಿಭಾಗದಲ್ಲಿ ಮತ್ತೂ ಪ್ರಗತಿಯನ್ನು ತಂದುಕೊಟ್ಟರು.

ಶಾಲೆಯ ಎಲ್ಲ ವಿಭಾಗಗಳ ವಿದ್ಯಾರ್ಥಿಗಳಿಗೂ ಚಿತ್ರಕಲೆಯ ವಿಷಯವನ್ನು ತಿಳಿಯುವ ಅವಕಾಶ ಇದೆ. ವಿದ್ಯಾರ್ಥಿಗಳು ಆಗಾಗ ಮೃಗಾಲಯಕ್ಕೂ ಶ್ರೀ ಜಯಚಾಮರಾಜೇಂದ್ರ ಚಿತ್ರಶಾಲೆಗೂ ಹೋಗಿ ಬರುವ ಅವಕಾಶವನ್ನು ಮಾಡಿಕೊಡಲಾಗಿದೆ.

ಈಗ್ಗೆ ಈ ಸಂಸ್ಥೆಯಿಂದ ಸುಮಾರು ಮೂವತ್ತೈದು ಸಾವಿರ ಮಂದಿ ಶಿಕ್ಷಣ ಪಡೆದಿದ್ದಾರೆ. ಪ್ರತಿಭಾವಂತ ಹಳೆಯ ವಿದ್ಯಾರ್ಥಿಗಳಲ್ಲಿ ಕೆ.ವೆಂಕಟಪ್ಪ, ಕೆ.ಕೆ.ಹೆಬ್ಬಾರ್, ಎಸ್.ನಂಜುಂಡಸ್ವಾಮಿ, ಎಸ್.ಎ.ಸ್ವಾಮಿ, ಎಂ.ವೀರಪ್ಪ, ವೈ.ನಾಗರಾಜು, ವೈ.ಸುಬ್ರಹ್ಮಣ್ಯರಾಜು, ಎಸ್.ಆರ್.ಅಯ್ಯಂಗಾರ್, ಮೀರ್‌ಶೌಕತ್‌ಅಲಿ, ಸೂಫಿ, ಬಿ.ಎಚ್.ರಾಮ ಚಂದ್ರ, ಎಸ್.ಹನುಮಯ್ಯ, ರುಮಾಲೆ, ಶುದ್ಧೋದನ, ಚಂದ್ರಶೇಖರ, ಸೋಮಸುಂದರ, ಕುಕ್ಕೆ, ಎಂ.ಟಿ.ವಿ.ಆಚಾರ್ಯ, ಪಿ.ಆರ್.ತಿಪ್ಪೇಸ್ವಾಮಿ, ಕಾಳಪ್ಪ, ಶೆಣೈ, ಮರಿಸ್ವಾಮಿ, ಗೋವಿಂದಪ್ಪ, ಕೆ.ಎಲ್.ವೆಂಕಟೇಶ್ ಮುಂತಾದವರನ್ನು ಇಲ್ಲಿ ಹೆಸರಿಸಬಹುದು.

1970ರಲ್ಲಿ ಶಾಲೆ ತನ್ನ ಅರವತ್ತು ವರ್ಷದ ವಜ್ರ ಮಹೋತ್ಸವವನ್ನು ಆಚರಿಸಿತು. ಇದರ ನೆನಪಿಗಾಗಿ ಆರು ಲಕ್ಷ ರೂ.ಗಳ ಅಂದಾಜಿನಲ್ಲಿ ಚಿತ್ರಕಲಾ ವಿಭಾಗದ ಒಂದು ನೂತನ ಕಟ್ಟಡದ ಶಂಕುಸ್ಥಾಪನೆಯನ್ನು ಶಾಲೆಯ ಆವರಣದಲ್ಲಿ ಆಗಿನ ರಾಜ್ಯಪಾಲರು ನೆರವೇರಿಸಿದರು (1970). ತರುವಾಯ ಈ ಸಂಸ್ಥೆಯ ಚಿತ್ರಕಲಾ ವಿಭಾಗವು ಬೇರ್ಪಡೆಗೊಂಡು 'ಚಾಮರಾಜೇಂದ್ರ ದೃಶ್ಯ ಕಲಾ ಅಕಾಡೆಮಿ' ಎಂಬ ಹೆಸರಿನಲ್ಲಿ ಪ್ರತ್ಯೇಕ ಅಸ್ತಿತ್ವಹೊಂದಿ ನಡೆದುಕೊಂಡು ಬರುತ್ತಿದೆ. ಅದು 'ಕಾವ' ಎಂಬ ಹೆಸರಿನಿಂದಲೂ ಪರಿಚಿತವಾಗಿದೆ.

ತಾಂತ್ರಿಕ ಸಂಸ್ಥೆಯು ಕರಕುಶಲ ಕಸಬನ್ನು ಆಧುನಿಕಗೊಳಿಸುವುದು ಹಾಗೂ ಗ್ರಾಮಾಂತರ ಕುಶಲಕರ್ಮಿಗಳಿಗೆ ಆಧುನಿಕ ಯಂತ್ರೋಪಕರಣಗಳ ಬಗ್ಗೆ ಮಾಹಿತಿ ನೀಡಿ, ತರಬೇತಿ ನೀಡಿ ಅವರ ಕಸಬನ್ನು ಆರ್ಥಿಕವಾಗಿ ಸಬಲವಾಗುವಂತೆ ಮಾಡುವುದನ್ನು ಮುಖ್ಯ ಚಟುವಟಿಕೆಯಾಗಿ ಹೊಂದಿದೆ. ಇಲ್ಲಿ ತರಬೇತಿ ಪಡೆದ ಅನೇಕ ಪ್ರತಿಭಾವಂತರು ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಅನೇಕರು ಸ್ವಂತ ಉದ್ಯಮಗಳನ್ನೂ ನಡೆಸುತ್ತಿದ್ದಾರೆ.

ಸಂಸ್ಥೆಯು ಹಿಂದೆ 12 ವಿವಿಧ ಕಸಬುಗಳಲ್ಲಿ ತರಬೇತಿ ನೀಡುತ್ತಿತ್ತು. ಈಗ ಮರಗೆಲಸ, ಯಂತ್ರಾಗಾರ, ಲೋಹದ ಶಿಲ್ಪ ಕಲೆ, ಬೆತ್ತದ ಕೆಲಸ, ಮಾಡಲಿಂಗ್‌ಗಳಲ್ಲಿ ತರಬೇತಿ ನೀಡಲಾಗುತ್ತಿದೆ.

ಈ ಸಂಸ್ಥೆಯ ಆಧುನೀಕರಣಕ್ಕೆ ಸರ್ಕಾರದಿಂದ ಯೋಜನೆ ಮಂಜೂರಾಗಿದೆ. ಅದರಂತೆ ಕರಕುಶಲಕಲೆ, ಮಾನವ ಸಂಪನ್ಮೂಲ ಅಭಿವೃದ್ಧಿಯ ಬಗ್ಗೆ ತರಬೇತಿ, ಅಪ್ಲೈಡ್ ಡಿಸೈನ್ ಕ್ರಾಫ್ಟ್, ಶಿಲ್ಪ ಕಲೆ, ಆಭರಣಗಳು ಮುಂತಾದ ವಿಷಯಗಳನ್ನು ಹೊಸದಾಗಿ ಸೇರಿಸುವ ಉದ್ದೇಶ ಹೊಂದಲಾಗಿದೆ. ವಿದ್ಯಾರ್ಥಿನಿಲಯ ಕಟ್ಟಡ ನಿರ್ಮಾಣವಾಗಿದೆ. ಈಗ ಸಂಸ್ಥೆಯನ್ನು ಕೈಗಾರಿಕಾ ಇಲಾಖೆಯ ಅಧೀನದಲ್ಲಿ ಉಪನಿರ್ದೇಶಕ ಅಧಿಕಾರಿ ನೋಡಿಕೊಳ್ಳುತ್ತಿದ್ದಾರೆ. *

**ಚಾಮಲದೇವಿ :** ಕಲ್ಯಾಣ ಚಾಳುಕ್ಯ 1ನೆಯ ಸೋಮೇಶ್ವರನ (1044-68) ಪತ್ನಿಯರಲ್ಲೊಬ್ಬಳು. ಬರ್ಮನ ಮಗಳು. ಈಕೆಯ ಹೆಸರು ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನ ಬಲ್ಲಟ್ಟಿಗೆ ಗ್ರಾಮದ ಶಾಸನದಿಂದ ತಿಳಿದಿದೆ. ಈಕೆ ಕೃಷ್ಣಾ ತುಂಗಭದ್ರಾ ಸಂಗಮಕ್ಷೇತ್ರದಲ್ಲಿ ಪವಿತ್ರಸ್ನಾನಮಾಡಿ, ಪಟಿಮಲೆ ಎಂಬ ನೆಲೆವೀಡಿನಲ್ಲಿದ್ದಾಗ ಭಾಸ್ಕರಶೆಟ್ಟಿ ಎಂಬಾತ ಭೂದಾನಮಾಡಿದನೆಂಬುದಷ್ಟೇ ಈ ಶಾಸನದ ಉಲ್ಲೇಖ.

ಹಾನಗಲ್ಲಿನಲ್ಲಿ ಸಾಮಂತನಾಗಿದ್ದ ಕದಂಬಕುಲದ ಇಮ್ಮಡಿ ತೈಲಪನ (ಸು.1099-1129) ಪತ್ನಿಯ ಹೆಸರೂ ಚಾಮಲದೇವಿ. *

**ಚಾಮುಂಡಿ :** ಶಿವನ ಅರ್ಧಾಂಗಿಯಾದ ಪಾರ್ವತಿಯ ಅವತಾರಗಳಲ್ಲಿ ಒಂದು. ಭಾರತೀಯ ಶಿಷ್ಟಪುರಾಣಗಳಲ್ಲಿ ಹಾಗೂ ಕನ್ನಡ ಜನಪದ ಪುರಾಣ ಕಾವ್ಯಗಳಲ್ಲಿ ಚಾಮುಂಡಿಯ ಕಥೆಗಳು ಕಂಡುಬರುತ್ತವೆ. ಇವಳಿಗೆ ಆದಿಶಕ್ತಿ, ಸರ್ವಶಕ್ತಿ, ಮಾಹೇಶ್ವರಿ, ಕಾಳಿ, ಕಾತ್ಯಾಯನಿ, ಚಂಡಿ, ಅಂಬಾ, ಈಶ್ವರಿ, ಭಗವತಿ, ದುರ್ಗಿ, ಮಹಾದೇವಿ ಮುಂತಾದ ಹೆಸರುಗಳಲ್ಲಿ ಪೂಜೆ ಸಲ್ಲುತ್ತದೆ. ಈ ಎಲ್ಲ ರೂಪಗಳಲ್ಲಿ ಮಹಿಷಾಸುರಮರ್ದಿನಿಯ ರೂಪವನ್ನು ಭಾರತದಲ್ಲಿ ಬಹಳಷ್ಟು ಹಿಂದಿನಿಂದಲೂ ಆರಾಧಿಸಿಕೊಂಡು ಬರಲಾಗಿದೆ. ಆಶ್ವಯುಜ ಶುಕ್ಲಪಕ್ಷದ ನವರಾತ್ರಿಯ ಕಾಲದಲ್ಲಿ ಭಾರತಾದ್ಯಂತ ದುರ್ಗಾರಾಧನೆ ಅತ್ಯಂತ ವೈಭವದಿಂದ ನಡೆಯುತ್ತದೆ. ಮೈಸೂರಿನಲ್ಲಿ ಈ ದಿನಗಳನ್ನು ದಸರ ಎಂದು ಕರೆಯುತ್ತಾರೆ. ದಸರೆಯ ಹತ್ತನೆಯ ದಿನವಾದ ವಿಜಯದಶಮಿ, ಸಾಂಕೇತಿಕವಾಗಿ ಮಹಿಷನೆಂಬ ರಕ್ಕಸನನ್ನು ದುರ್ಗಿ ಸಂಹರಿಸಿದ ದಿನ. ಈ ದುರ್ಗಾರಾಧನೆ ಅರಿಷಡ್ವರ್ಗಗಳನ್ನು ಗೆದ್ದ ಆತ್ಮನನ್ನು ಸಾಂಕೇತಿಕವಾಗಿ ಸೂಚಿಸುತ್ತದೆ. ಏಕೆಂದರೆ ಅಸುರರು ಅರಿಷಡ್ವರ್ಗಗಳನ್ನು ಪ್ರತಿನಿಧಿಸುತ್ತಾರೆ.



ಚಾಮುಂಡೇಶ್ವರಿ ಉತ್ಸವಮೂರ್ತಿ

ಚಾಮುಂಡಿಗೆ ಸಂಬಂಧಿಸಿದ ಸಂಗತಿಗಳನ್ನು ಮಾರ್ಕಂಡೇಯಪುರಾಣ, ಕಾಲಿಕಾಪುರಾಣ, ಶ್ರೀದೇವಿಭಾಗವತ, ಸ್ಕಾಂದಪುರಾಣ, ವರಾಹಪುರಾಣ, ವಿಷ್ಣುಧರ್ಮೋತ್ತರಪುರಾಣ, ಸನತ್ಕುಮಾರ ಶಿಲ್ಪರತ್ನ, ಚತುರ್ವರ್ಗಚಿಂತಾಮಣಿ, ಹಾಗೂ ಅಭಿಲಷಿತಾರ್ಥಚಿಂತಾಮಣಿ ಮುಂತಾದ ಕೃತಿಗಳು ಅಲ್ಪಸ್ವಲ್ಪ ವ್ಯತ್ಯಾಸಗಳಿಂದ ನಿರೂಪಿಸುತ್ತವೆ. ಆದರೆ ಇವುಗಳೆಲ್ಲದರ ಮೂಲ ಆಶಯ ಒಂದೇ ಆಗಿದೆ. ದೇವತೆಗಳಿಗೆ ಅಪಜಯವನ್ನುಂಟುಮಾಡಿ ಇಂದ್ರಪದವಿಯನ್ನೇರಿ, ಶಿಷ್ಟರಿಗೆಲ್ಲ ಕಂಟಕಪ್ರಾಯನಾಗಿದ್ದ ಮಹಿಷಾಸುರನ ಸಂಹಾರಕ್ಕಾಗಿ ದೇವಾಧಿದೇವತೆಗಳ ಸರ್ವಶಕ್ತಿ ತೇಜಃಪುಂಜವಾಗಿ ಹೊರಟು ಸರ್ವಮಂಗಳೆಯಾದ ದೇವಿಯಾಗಿ ಆವಿರ್ಭವಿಸುತ್ತಾಳೆ. ದೇವತೆಗಳ ರಕ್ಷಣಾರ್ಥವಾಗಿ ದೇವಿ ಶಿವಭಕ್ತನಾದ ಮಹಿಷನನ್ನು ವಧಿಸುತ್ತಾಳೆ. ಇದಲ್ಲದೆ ಚಂಡ ಮುಂಡರನ್ನು ವಧಿಸಿ ಚಾಮುಂಡಿಯಾದಳೆಂಬ ಕಥೆಯೂ ಕಂಡುಬರುತ್ತದೆ. ಶಿಷ್ಟಪುರಾಣಗಳ ಪ್ರಕಾರ ಚಾಮುಂಡಿಯ ಅವತಾರದ ಉದ್ದೇಶವೆಂದರೆ ರಾಕ್ಷಸ ಸಂಹಾರ, ದೇವತೆಗಳ ರಕ್ಷಣೆ. ಈ ಪ್ರಧಾನ ಉದ್ದೇಶಕ್ಕೆ ಹೊರತಾದ ಯಾವ ಸಂಗತಿಗಳನ್ನೂ ನಾವು ಇಲ್ಲಿ

ನಿರೀಕ್ಷಿಸುವಂತಿಲ್ಲ. ಆದರೆ ಕನ್ನಡ ಜನಪದ ಪುರಾಣಕಾವ್ಯಗಳಲ್ಲಿ ಚಾಮುಂಡಿಯ ಜೀವನ ವೃತ್ತಾಂತ ಅತ್ಯಂತ ಕುತೂಹಲಕಾರಿಯೂ ವರ್ಣರಂಜಿತವೂ ಆಗಿ ಬೆಳೆದಿದೆ.

ಜನಪದ ಕಥೆಯ ಪ್ರಕಾರ ಉಜ್ಜಯಿನಿ ದೇಶದ ಬಿಜ್ಜಳರಾಯನಿಗೆ ಏಳು ಜನ ಹೆಣ್ಣುಮಕ್ಕಳಿರುತ್ತಾರೆ. ಅವರಲ್ಲಿ ಪಿರಿಯಾಪಟ್ಟಣದ ಉರಿಮಸಣಿ ಹಿರಿಯವಳು, ಚಾಮುಂಡಿ ಕಿರಿಯವಳು. ಇವರು ಏಳು ಜನವೂ ಕಾರಣಾಂತರದಿಂದ ಪರಸ್ಪರ ಜಗಳವಾಡಿಕೊಂಡು ಉತ್ತರದಿಂದ ಹೊರಟು ದಕ್ಷಿಣದ ಬೇರೆ ಬೇರೆ ಸ್ಥಳಗಳಲ್ಲಿ ನೆಲೆಗೊಂಡರು. ಕಿರಿಯವಳಾದ ಚಾಮುಂಡಿ ತಾನು ನೆಲೆಗೊಳ್ಳಲು ತಕ್ಕ ಸ್ಥಳಕ್ಕಾಗಿ ಶೋಧನೆ ಮಾಡುತ್ತ ಬರುತ್ತಿರುವಾಗ ಸಂಪದ್ಭರಿತ ಭೂಮಿ ಮಹಿಷಮಂಡಲ ಅವಳ ಕಣ್ಣಿಗೆ ಬಿತ್ತು. ಇದೇ ತನ್ನ ನೆಲೆಗೆ ಯೋಗ್ಯವಾದ ಸ್ಥಳವೆಂದು ನಿರ್ಧರಿಸಿ ಬಂದಾಗ ಈ ಮಂಡಲವನ್ನಾಳುತ್ತಿದ್ದ ಮಹಿಷನೆಂಬ ರಾಕ್ಷಸ ಅವಳನ್ನು ಇದಿರಿಸಲು ಬಂದ. ಬ್ರಹ್ಮನ ವರಬಲದಿಂದ ಕೊಬ್ಬಿದ್ದ ಅವನನ್ನು ಚಾಮುಂಡಿ ಇದಿರಿಸಲು ನಿಂತಾಗ ಅವಳ ಬೆವರಿನಿಂದ ಉತ್ತನಹಳ್ಳಿ ಮಾರಮ್ಮ ಹುಟ್ಟಿದಳು. ಈಕೆಯ ಸಹಾಯದಿಂದ ಚಾಮುಂಡಿ ಮಹಿಷನನ್ನು ಸಂಹರಿಸಿ ಮಹಿಷಮಂಡಲವನ್ನು ಸ್ವಾಧೀನಪಡಿಸಿಕೊಂಡು ಬೆಟ್ಟದ ಮೇಲೆ ನೆಲೆಗೊಂಡಳು. ಮಹಿಷ ಆಳುತ್ತಿದ್ದ ಮಹಿಷಮಂಡಲವೇ ಮಹಿಷಪುರಿಯಾಗಿ ಮಹಿಶೂರಾಗಿ ಈಗ ಮೈಸೂರಾಗಿದೆ. ಮೈಸೂರು ನಗರದೇವತೆಯೇ ಚಾಮುಂಡಿ.

ಜನಪದ ಸಾಹಿತ್ಯದಲ್ಲಿ ಚಾಮುಂಡಿಯನ್ನು ಚಾಮರಾಯರ ಮಗಳು ಎಂದೂ ಕರೆಯಲಾಗಿದೆ. ಮಲೆಯಮಾದೇಶ್ವರ ಜನಪದ ಮಹಾಕಾವ್ಯದಲ್ಲಿ ಶ್ರವಣ ದೊರೆಯ ಸಂಹಾರಕ್ಕಾಗಿ ಈಶ್ವರ ಭೂಮಿಗೆ ಬಂದಾಗ ಪಾರ್ವತಿಯೂ ಅವನೊಡನೆ ಕೈಲಾಸದಿಂದ ಬರುತ್ತಾಳೆ. ಮೈಸೂರಿಗೆ ಬಂದಾಗ ಮಹಿಷನನ್ನು ವಿಕಾರರೂಪದಿಂದ ಮರ್ದಿಸುತ್ತಾಳೆ. ಆಗ ಮಾದೇಶ್ವರ ಅವಳ ಉಗ್ರರೂಪವನ್ನು ನೋಡಲಾರದೆ ಅವಳನ್ನು ಬಿಟ್ಟು ಮುಂದಕ್ಕೆ ಹೊರಡುತ್ತಾನೆ. ಬೆಂಬಿಡದೆ ಬಂದ ಪಾರ್ವತಿಯನ್ನು ತಡೆದು, ತನ್ನ ಅಂಶ ನಂಜುಂಡನಾಗಿ ನಂಜನಗೂಡಿನಲ್ಲಿ ಹುಟ್ಟಿರುವುದಾಗಿಯೂ ಆ ಭೋಗನಂಜುಂಡನನ್ನು ಆಕೆ ಸೇರಬೇಕೆಂದೂ ಹೇಳಿ ಅವಳನ್ನು ಹಿಂದಕ್ಕೆ ಕಳಿಸುತ್ತಾನೆ. ಹಿಂತಿರುಗಿ ಬಂದ ಮೇಲಿನ ನಂಜುಂಡ ಚಾಮುಂಡಿಯರ ಪ್ರಣಯ ಪ್ರಸಂಗದ ರಸವತ್ತಾದ ಕಥೆಯನ್ನು ದೇವರಗುಡ್ಡರು, ನೀಲಗಾರರು, ತಂಬೂರಿಯವರು ಹೆಳವರು ಹಾಗೂ ಹೆಂಗಸರು ಹಾಡುತ್ತಾರೆ. ಇವರ ಸಾಹಿತ್ಯದ ಆಧಾರದಿಂದ ಚಾಮುಂಡಿಯ ಐತಿಹಾಸಿಕತೆಯನ್ನು ಸುಲಭವಾಗಿ ರೂಪಿಸಬಹುದಾಗಿದೆ.

ಅಲಿಖಿತ ಇತಿಹಾಸದ ಕಡೆಗೆ ಗಮನ ಹರಿಸಿದರೆ ಏಳುಮಲೆಯ ಮಾದೇಶ್ವರನಿಗೂ ನಂಜನಗೂಡಿನ ನಂಜುಂಡೇಶ್ವರನಿಗೂ ಚಾಮುಂಡಿಗೂ ಒಂದಲ್ಲ ಒಂದು ವಿಧದಲ್ಲಿ ಸಂಬಂಧವಿರುವಂತೆ ಕಂಡುಬರುತ್ತದೆ. ಅಲ್ಲದೆ ಇವರೆಲ್ಲರೂ ಸಮಕಾಲೀನರೆಂದು ಸ್ಪಷ್ಟವಾಗುತ್ತದೆ. ಚಾಮುಂಡಿ ಮಲೆಯ ಮಾದೇಶ್ವರನ ತಂಗಿಯೆಂದು ತಿಳಿಯುವುದರಿಂದಲೂ ಮಾದೇಶ್ವರ ಮಾದಿಗರವನೆಂದು ತಿಳಿಯುವುದರಿಂದಲೂ ಚಾಮುಂಡಿಯನ್ನು ನಂಜುಂಡನ ಪತ್ನಿಯರಾದ ದೇವೀರಮ್ಮ ಹಾಗೂ ಸೋಮಾಜಮ್ಮರು ಕೋಳಿ ಕುರಿ ತಿನ್ನುವ ಮುಂಡೆಯೆಂದು ಬಯ್ಯುವುದರಿಂದಲೂ ಚಾಮುಂಡಿ ಮಾದಿಗ ಕುಲದವಳು ಎಂಬುದು ಸ್ಪಷ್ಟವಾಗುತ್ತದೆ. ಲಿಂಗಾಯತರವನಾದ ನಂಜುಂಡ ಕುಂತೂರು ಮಠದಲ್ಲಿ ಮಾದೇಶ್ವರನ ಸಹಪಾಠಿ. ಮಾದೇಶ್ವರ ಶ್ರವಣ ದೊರೆಯನ್ನು ಸಂಹರಿಸಿ ಹದಿನಾಡನ್ನು ನಂಜುಂಡನಿಗೆ ಕೊಡುತ್ತಾನೆ. ನಂಜುಂಡ ಮಾದೇಶ್ವರನ ತಂಗಿಯಾದ ಚಾಮುಂಡಿಯೊಡನೆ ಗುಪ್ತಪ್ರಣಯವನ್ನು ಇಟ್ಟುಕೊಂಡಿದ್ದರಿಂದ ಇವರಿಬ್ಬರ ಮುಖದರ್ಶನವೇ ನನಗೆ ಬೇಡವೆಂದು ಮಾದೇಶ್ವರ ಕಂಪಣ ರಾಜ್ಯದ ಮೂಡ್ಲುಮಲೆಯಲ್ಲಿ 'ಏಕಾಂಗಿವಸ್ತು'ವಾಗಿ ನೆಲೆಗೊಳ್ಳುತ್ತಾನೆ. ಈ ಮೂವರೂ ಜನಪದ ಸಾಹಿತ್ಯದ ಪ್ರಕಾರ ಸಮಕಾಲೀನರಾಗಿದ್ದ ವಿಷಯ ಸತ್ಯವಾದುದಾದರೆ 16ನೆಯ ಶತಮಾನದ ಮಾದೇಶ್ವರನ ಕಾಲವೇ ನಂಜುಂಡ, ಚಾಮುಂಡಿಯರ ಕಾಲವೂ ಆಗುತ್ತದೆ.

ಐತಿಹಾಸಿಕ ದೃಷ್ಟಿಯಿಂದ ಅವಲೋಕಿಸಿದಾಗ ಚಾಮುಂಡಿ ಮೈಸೂರು ಅರಸರ ಪರವಾಗಿ ಬಹಳಷ್ಟು ಯುದ್ಧಗಳಲ್ಲಿ ಪಾಲ್ಗೊಂಡ ವೀರವನಿತೆಯಾಗಿದ್ದಿರಬಹುದು. ಪಿರಿಯಾಪಟ್ಟಣದ ಲಾವಣಿ, ಮಾಗಡಿ ಕೆಂಪೇಗೌಡನ ಲಾವಣಿಗಳಲ್ಲಿ ಈಕೆ ಮೈಸೂರರಸರ ಪರವಾಗಿ ನಂಜುಂಡನೊಡನೆ ಹೋಗಿ ಯುದ್ಧಮಾಡುವ ಸಂದರ್ಭಗಳ ವರ್ಣನೆ ಕಂಡುಬರುತ್ತದೆ. ಇವರಿಬ್ಬರ ಶಕ್ತಿಸಾಮರ್ಥ್ಯಗಳಿಗೆ ಕೃತಜ್ಞತೆಯ ರೂಪದಲ್ಲಿ ಮೈಸೂರು ಅರಸರು ತೋರಿಸಿದ ಭಕ್ತಿ ಇವರನ್ನು ದೇವರನ್ನಾಗಿಸಿದೆ. ಐತಿಹಾಸಿಕ ವ್ಯಕ್ತಿಗಳು ಹೀಗೆ ಭಕ್ತಿಗೌರವಗಳ ಪವಿತ್ರಾವರಣದಿಂದ ಪುರಾಣವ್ಯಕ್ತಿಗಳಾಗುವ ಸಂದರ್ಭಗಳು ನಮ್ಮಲ್ಲಿ ವಿರಳವೇನಲ್ಲ. *

**ಚಾಮುಂಡಿ ಬೆಟ್ಟ :** ಮೈಸೂರು ನಗರಕ್ಕೆ ಹೊಂದಿಕೊಂಡಂತೆ ಅದರ ಆಗ್ನೇಯಕ್ಕೆ ಪೂರ್ವಪಶ್ಚಿಮವಾಗಿ ಹಬ್ಬಿ ನಿಂತಿರುವ ಬೆಟ್ಟ. ಸಮುದ್ರಮಟ್ಟದಿಂದ 1063ಮೀ. ಎತ್ತರವಾಗಿದೆ. ಬೆಟ್ಟದ ಮೇಲೆ ಚಾಮುಂಡೇಶ್ವರಿಯ ದೇವಾಲಯವಿರುವುದರಿಂದ ಈ ಬೆಟ್ಟಕ್ಕೆ ಆ ದೇವತೆಯ ಹೆಸರೇ ಬಂದಿದೆ. ಸುತ್ತಲೂ ಬಯಲಿದ್ದು, ಒಂಟಿಯಾಗಿ ನಿಂತಿರುವ ಕಡಿದಾದ ಈ ಬೆಟ್ಟ ಬಹು ದೂರದವರೆಗೂ ಗೋಚರಿಸುವುದಲ್ಲದೆ, ಬೆಟ್ಟದ ಮೇಲೆ ನಿಂತು ನೋಡಿದಾಗ ಮೈಸೂರಿನ ಹರವು ಮತ್ತು ಸುತ್ತಲಿನ ಪ್ರಕೃತಿ ಸೌಂದರ್ಯ ರಮ್ಯವಾಗಿ ಕಾಣಿಸುತ್ತದೆ. ಮೈಸೂರಿಗೆ ಬರುವ ಪ್ರವಾಸಿಗಳ ಮುಖ್ಯ ಆಕರ್ಷಣೆಗಳಲ್ಲಿ ಇದೂ ಒಂದು. ಬೆಟ್ಟದ ಮೇಲ್ಭಾಗವನ್ನು ಹತ್ತನೆಯ ಶತಮಾನದ ಹೊತ್ತಿಗಾಗಲೇ ಪುಣ್ಯ ಕ್ಷೇತ್ರವೆಂದು ಪರಿಗಣಿಸಲಾಗಿತ್ತು. ಇಲ್ಲಿರುವ ಆ ಕಾಲದ ಶಾಸನಗಳಲ್ಲಿ ಇದನ್ನು ಮಬ್ಬೆಲದ ತೀರ್ಥ ಅಥವಾ ಮಬ್ಬಳದ ತೀರ್ಥ ಎಂದು ಕರೆದಿದೆ. ಇಲ್ಲಿ ಹಲವರು ಸಿದ್ಧಿಪಡೆದರೆಂದು ಶಾಸನಗಳು ತಿಳಿಸುತ್ತವೆ. ಈಗ ಇಲ್ಲಿರುವ ಮಹಾಬಲೇಶ್ವರ ದೇವಸ್ಥಾನ ಹೊಯ್ಸಳ ವಿಷ್ಣುವರ್ಧನನ ಕಾಲಕ್ಕಿಂತ ಮುಂಚೆಯೇ ನಿರ್ಮಿತವಾಗಿತ್ತು. ವಿಷ್ಣುವರ್ಧನನ ಕಾಲದಲ್ಲಿ 1128ರಲ್ಲಿ ಈ ಮಬ್ಬಳದ ತೀರ್ಥಕ್ಕೆ ದತ್ತಿಬಿಟ್ಟಿದ್ದ ಬಗ್ಗೆ ಶಾಸನವಿದೆ. ಆದರೆ ಅದರ ಮುಂದಿನ ಮಂಟಪವನ್ನು 17ನೆಯ ಶತಮಾನದಲ್ಲಿ ಕಟ್ಟಿಸಿದುದಾಗಿ ಅದರ ಕಂಬಗಳ ಮೇಲಿನ ಶಾಸನಗಳಿಂದ ತಿಳಿದುಬರುತ್ತದೆ. ಮೈಸೂರರಸರು ಬೆಟ್ಟದ ಮೇಲಿದ್ದ ಮಹಿಷಾಸುರಮರ್ದಿನಿಯನ್ನು ಚಾಮುಂಡೇಶ್ವರಿ ಎಂಬ ಹೆಸರಿನಿಂದ ತಮ್ಮ ಮನೆದೇವರಾಗಿ ಸ್ವೀಕರಿಸಿದ ಮೇಲೆ ಮಬ್ಬಳ ತೀರ್ಥಕ್ಕೆ ಚಾಮುಂಡಿ ಬೆಟ್ಟ ಎಂಬ ಹೆಸರು ಬಂದಿರಬೇಕು. ಅನಂತರ ಅಲ್ಲಿದ್ದ ದೇವಿಯ ಆಲಯಕ್ಕೆ ಪ್ರಾಮುಖ್ಯ ಹೆಚ್ಚಿ ದೇವಾಲಯ ವಿಸ್ತಾರವಾಗುತ್ತ ಹೋಯಿತು. ದೊಡ್ಡ ದೇವರಾಜ ಒಡೆಯರು ಬೆಟ್ಟಕ್ಕೆ ಸಾವಿರ ಮೆಟ್ಟಲುಗಳನ್ನು ಕಟ್ಟಿಸಿದರಲ್ಲದೆ, ಬೆಟ್ಟದ ಮೇಲೆ 700ನೆಯ ಮೆಟ್ಟಲಿನ ಹತ್ತಿರ ಅಲ್ಲಿಯೇ ಇದ್ದ ಬಂಡೆಗಲ್ಲೊಂದರಿಂದ ಬೃಹದಾಕಾರದ ನಂದಿಯನ್ನು ಕಡೆಸಿ ಪ್ರತಿಷ್ಠೆಮಾಡಿದರು. ತಲೆ ಎತ್ತಿ ಮಲಗಿರುವ ಈ ನಂದಿಯ ಮೂರ್ತಿ 16' ಎತ್ತರವಾಗಿದೆ; ದಷ್ಟಪುಷ್ಟವಾಗಿರುವಂತೆ ಕಂಡರಿಸಲ್ಪಟ್ಟಿದೆ. ಗಂಟೆಸರ, ಗೆಜ್ಜೆಸರ, ಗವುಸುಗಳಿಂದ ಅಲಂಕೃತವಾಗಿದ್ದು ಸಹಜ ಮುಖಲಕ್ಷಣಗಳಿಂದ ಕೂಡಿರುವ ಈ ನಂದಿ ತನ್ನ ಬೃಹದ್ಗಾತ್ರದಿಂದ ಅತ್ಯಂತ ಆಕರ್ಷಣೀಯವಾಗಿದೆ.



ಅರಮನೆಯ ಚಾವಣಿಯ ಮೇಲಿನಿಂದ ಕಾಣುವ ಚಾಮುಂಡಿ ಬೆಟ್ಟದ ಒಂದು ರಮ್ಯ ನೋಟ

ಚಾಮುಂಡೇಶ್ವರಿ ದೇವಾಲಯ ದ್ರಾವಿಡ ಶೈಲಿಯಲ್ಲಿ ಕಟ್ಟಿರುವ, ತಕ್ಕಮಟ್ಟಿಗೆ ದೊಡ್ಡದಾದ ದೇವಾಲಯ. ಮೂಲ ದೇವಾಲಯದ ನಿರ್ಮಾಣ ಕಾಲವನ್ನು ತಿಳಿಯಲು ಈಗ ಆಧಾರಗಳಿಲ್ಲ. ಮೈಸೂರು ಒಡೆಯರ ಕಾಲದಲ್ಲಿ ಬಹಳಷ್ಟು ಬದಲಾವಣೆಯಾಗಿದೆ. ಮುಮ್ಮಡಿ ಕೃಷ್ಣರಾಜ ಒಡೆಯರು ಇದನ್ನು ನವೀಕರಿಸಿ ಇದರ ಮಹಾದ್ವಾರಕ್ಕೆ ಒಂದು ಸುಂದರವಾದ ಗೋಪುರವನ್ನು ಕಟ್ಟಿಸಿದರು. ನಂಜನಗೂಡು, ಚಾಮರಾಜನಗರ,

ಮೈಸೂರುಗಳಲ್ಲಿ ಇವರು ಕಟ್ಟಿಸಿದ ಗೋಪುರಗಳಂತೆಯೇ ಇಟ್ಟಿಗೆ ಗಾರೆಯಲ್ಲಿ ಕಟ್ಟಿರುವ ಈ ಗೋಪುರವೂ ಮೇಲೆ ಹೋಗುತ್ತ ಕಿರಿದಾಗುವ ಏಳು ಅಂತಸ್ತುಗಳಿಂದ ಕೂಡಿದೆ. ಹೊರಮೈಯಲ್ಲಿ ಒಂದೊಂದು ಅಂತಸ್ತಿನಲ್ಲೂ ಕಿರುಗೋಪುರಗಳು ತುಂಬಿದ್ದು, ನಡುವಿನ ದ್ವಾರಗಳ ಇಕ್ಕೆಲಗಳಲ್ಲೂ ದ್ವಾರಪಾಲಕರೂ ಗೋಪುರದ ಎರಡೂ ಪಕ್ಕಗಳಲ್ಲಿ ಕುಳಿತಿರುವ ಮೂರ್ತಿಗಳೂ ತುದಿಯಲ್ಲಿ 7 ಕಳಶಗಳುಳ್ಳ ಶಿಖರವೂ ಇವೆ. ಮುಮ್ಮಡಿ ಕೃಷ್ಣರಾಜ ಒಡೆಯರ ಮತ್ತು ಅವರ ಪತ್ನಿಯರಾದ ದೇವಾಜಮ್ಮಣ್ಣಿ, ಚೆಲುವಾಜಮ್ಮಣ್ಣಿ ಮತ್ತು ಲಿಂಗಾಜಮ್ಮಣ್ಣಿಯವರ ಭಕ್ತವಿಗ್ರಹಗಳನ್ನು ಈ ದೇವಾಲಯದಲ್ಲಿಯೂ ನಿಲ್ಲಿಸಿದ್ದಾರೆ. ಈ ಮೂರ್ತಿಗಳ ಪೀಠದ ಮೇಲೆ ಅವರ ಹೆಸರುಗಳಿವೆ. ಇವು ಒಡೆಯರ ಕಾಲದ ಮೂರ್ತಿ ಶಿಲ್ಪಕ್ಕೆ ಮಾದರಿಯಾಗಿವೆ. ಸುಕನಾಸಿ ಮತ್ತು ನವರಂಗಗಳಿಗೆ ಹಾಕಿಸಿರುವ ಹಿತ್ತಾಳೆ ತಗಡು ಸಿಂಹವಾಹನವೇ ಮೊದಲಾದ ಹಲವು ವಾಹನಗಳು, ದೇವಿಯ ಸ್ತೋತ್ರಗಳನ್ನೊಳಗೊಂಡ ನಕ್ಷತ್ರಮಾಲಿಕೆ ಮತ್ತು ಇತರ ಆಭರಣಗಳು ಮುಂತಾದವು ದೇವಾಲಯಕ್ಕೆ ಮುಮ್ಮಡಿ ಕೃಷ್ಣರಾಜ ಒಡೆಯರು ಮತ್ತು ರಾಜಮನೆತನದ ಇತರರು ಮಾಡಿಸಿರುವ ಸೇವೆಗಳು.

ಆಶ್ವಯುಜ ಶುದ್ಧ ಹುಣ್ಣಿಮೆಯಂದು ನಡೆಯುವ ಚಾಮುಂಡೇಶ್ವರಿ ರಥೋತ್ಸವವೂ ಅದಾದ ಎರಡು ದಿವಸಗಳಿಗೆ ದೇವಾಲಯಕ್ಕೆ ಹತ್ತಿರದಲ್ಲಿರುವ ದೇವಿಕೊಳದಲ್ಲಿ ರಾತ್ರಿ ನಡೆಯುವ ತೆಪ್ಪೋತ್ಸವವೂ ಪ್ರಖ್ಯಾತವಾಗಿವೆ. ಈ ಸಮಯದಲ್ಲಿ ಸಹಸ್ರಾರು ಭಕ್ತರೂ ಪ್ರವಾಸಿಗಳೂ ಇಲ್ಲಿಗೆ ಬರುತ್ತಾರೆ.

ಬೆಟ್ಟದ ತುತ್ತತುದಿಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಕಟ್ಟಿಸಿದ ಒಂದು ಸುಂದರ ಅರಮನೆಯುಂಟು. ಪ್ರವಾಸಿಗಳಿಗೆ ಮತ್ತೊಂದು ಆಕರ್ಷಣೆ ಎಂದರೆ ದೇವಾಲಯಕ್ಕೆ ಹೋಗುವ ದಾರಿಯಲ್ಲಿರುವ 12' ಎತ್ತರದ ಮಹಿಷಾಸುರ ವಿಗ್ರಹ. ದೇವಸ್ಥಾನದ ಹತ್ತಿರದಲ್ಲಿ ಸಣ್ಣ ಊರೊಂದು ಬೆಳೆದಿದೆ.



ಚಾಮುಂಡಿ ಬೆಟ್ಟದಲ್ಲಿರುವ ಬೃಹತ್ ನಂದಿ

ಬೆಟ್ಟದ ಪೂರ್ವ ತುದಿಯಲ್ಲಿ, ಅದಕ್ಕೆ ಸೇರಿದಂತೆಯೇ ಲಲಿತಾದ್ರಿ ಎಂಬ ತಗ್ಗಾದ ಮೊರಡಿಯಿದೆ. ಪ್ರಶಾಂತ ವಾತಾವರಣದಿಂದ ಕೂಡಿರುವ ಈ ಎಡೆಯಲ್ಲಿ ಸುತ್ತಲೂ ಗಿಡಮರಗಳಿಂದಾವೃತವಾದ ಒಂದು ವಿಶ್ರಾಂತಿಗೃಹವಿದೆ. ಅದೀಗ ಹೋಟೆಲ್ ಆಗಿದೆ. ಲಲಿತಾದ್ರಿಯ ಮೂಲಕವೇ ಬೆಟ್ಟದ ಮೇಲಕ್ಕೆ ವಾಹನಸಂಚಾರವಮಾರ್ಗಗಳು ಹಾದುಹೋಗುತ್ತವೆ. ಹಿಂದಿನ ರಾಜರು ಕುದುರೆಯ ಮೇಲೆ ಬೆಟ್ಟವೇರುತ್ತಿದ್ದ ಸವಾರಿ ದಾರಿಯೊಂದು ಮೆಟ್ಟಿಲುಗಳ ಸಮೀಪದಲ್ಲಿದೆ.
*

**ಚಾರ್ಮಾಡಿ :** ದಕ್ಷಿಣ ಕನ್ನಡ ಜಿಲ್ಲೆ ಬೆಳ್ತಂಗಡಿ ತಾಲ್ಲೂಕಿನ ಒಂದು ಗ್ರಾಮ. ಬೆಳ್ತಂಗಡಿಯ ಪೂರ್ವಕ್ಕೆ 19ಕಿಮೀ ದೂರದಲ್ಲಿ ಮಂಗಳೂರು-ಕಡೂರು ಹೆದ್ದಾರಿಯ ಮೇಲಿದೆ. ಇದು ದಕ್ಷಿಣ ಕನ್ನಡ ಜಿಲ್ಲೆಯ ಪೂರ್ವದ ಗಡಿ ಭಾಗದಲ್ಲಿದ್ದು ಚಾರ್ಮಾಡಿಘಾಟ್ ರಸ್ತೆ ಇಲ್ಲಿಂದ ಪ್ರಾರಂಭವಾಗಿ 11ಕಿಮೀ ದೂರದವರೆಗೆ ಇದೆ. ಈ ರಸ್ತೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿಗೆ ಸಂಬಂಧ ಕಲ್ಪಿಸಿದೆ. ಚಾರುಮುಡಿ ಅಂದರೆ ಸುಂದರವಾದ ಮುಡಿಕೆಗಳನ್ನುಳ್ಳ ಘಟ್ಟಗಳ ಸಾಲು. ಇದೇ ಕಾರಣ ಈ ಸ್ಥಳಕ್ಕೆ ಚಾರ್ಮಾಡಿ ಎಂದು ಹೆಸರಾಗಿದೆ.

ಚಾರ್ಮಾಡಿಯ ಸುತ್ತುಮುತ್ತಲೂ ದಟ್ಟವಾದ ಅರಣ್ಯ ಪ್ರದೇಶವಿದ್ದು ಇಲ್ಲಿಂದ ಮರಗಳನ್ನು ಕಡಿದು ಲಾರಿಗಳಲ್ಲಿ ಮಂಗಳೂರಿಗೆ ಸಾಗಿಸುವರು. ಚಿಕ್ಕಮಗಳೂರಿನ ಕಡೆಯಿಂದ ಬರುವ ಕಾಫಿ ಮತ್ತು



ಚಾರ್ಮಾಡಿ ಘಾಟ್ ರಸ್ತೆಯ ಒಂದು ದೃಶ್ಯ

ಅದಿರನ್ನು ತುಂಬಿದ ಲಾರಿಗಳು ಇಲ್ಲಿಯ ಚೆಕ್‌ಪೋಸ್ಟ್‌ನ ಬಳಿ ತಂಗಿ, ಮಂಗಳೂರ ಕಡೆ ಮುಂದುವರಿಯುವುವು. ಇದನ್ನು ಕಾಫಿಘಾಟ್ ಎಂದೂ ಕರೆಯುವರು. ಈ ಘಾಟ್ ರಸ್ತೆ 1884ರಲ್ಲಿ ಪ್ರಾರಂಭವಾದಂದಿ ನಿಂದ ಚಾರ್ಮಾಡಿಗೆ ಅಧಿಕ ಪ್ರಾಮುಖ್ಯ ಬಂದಿದೆ. (ಟಿ.ಪಿ.ಎಸ್.ಆರ್.)

**ಚಾವುಂಡರಾಯ I :** ಪಶ್ಚಿಮ ಗಂಗರಾಜ 2ನೆಯ ಮಾರಸಿಂಹ (963-74) ಮತ್ತು 4ನೆಯ ರಾಚಮಲ್ಲ (974-99) ಇವರ ಸೇವೆಯಲ್ಲಿ ಯೋಧಾಗ್ರಣಿಯೂ ಮಂತ್ರಿಯೂ ಆಗಿದ್ದವ. ಈತ ಚಾವುಂಡರಾಯ ಪುರಾಣವೆಂದು ಪ್ರಸಿದ್ಧವಾಗಿರುವ ಕನ್ನಡ ಮಹಾಪುರಾಣವನ್ನು ರಚಿಸಿದ್ದಾನೆ.

ಜೈನಮತೀಯನಾದ ಈತನ ತಾಯಿತಂದೆಗಳು ಯಾರೆಂದು ತಿಳಿದುಬಂದಿಲ್ಲ. ಪಂಚಬಾಣನೆಂಬ ಕನ್ನಡ ಕವಿ ತನ್ನ ಭುಜಬಲಿ ಚರಿತೆಯಲ್ಲಿ (ಸು.1614) ಚಾವುಂಡರಾಯನ ತಾಯಿ ಕಾಳಲದೇವಿಯೆಂದೂ ಪತ್ನಿ ಅಜಿತಾದೇವಿಯೆಂದೂ ಹೇಳಿದ್ದಾನೆ. ಇದಕ್ಕೆ ಆಧಾರವೇನೋ ತಿಳಿಯದು. ಆದರೆ ಶ್ರವಣಬೆಳಗೊಳದಲ್ಲಿ ಜಿನಗೃಹವೊಂದನ್ನು ಮಾಡಿಸಿದ ಜಿನದೇವಣ ಚಾವುಂಡರಾಯನ ಮಗನೆಂಬುದಕ್ಕೆ ಶಾಸನಾಧಾರವಿದೆ. ಆರ್ಯಸೇನ ಅಥವಾ ಆರ್ಯನಂದಿಯ ಶಿಷ್ಯನಾದ ಅಜಿತಸೇನಾಚಾರ್ಯ ಈತನ ಗುರು. ಗೊಮ್ಮಟಸಾರದ ಕರ್ತೃ ನೇಮಿಚಂದ್ರಸಿದ್ಧಾಂತಚಕ್ರವರ್ತಿ ಇವನ ಇನ್ನೊಬ್ಬ ಗುರು.

ಚಾವುಂಡರಾಯನಿಗೆ, ನೇಮಿತೀರ್ಥಂಕರನ ಯಕ್ಷಿಯ ಹೆಸರಾದ ಚಾಮುಂಡಿ ಎಂಬುದರಿಂದ ಆ ಹೆಸರು ಬಂದಿರಬಹುದು. ಹೀಗೆಯೇ ಈತನಿಗೆ ಗೊಮ್ಮಟ, ಗೊಮ್ಮಟರಾಯ ಎಂಬ ಹೆಸರುಗಳು ನೇಮಿತೀರ್ಥಂಕರನ ಯಕ್ಷಿ ಕೂಷ್ಮಾಂಡಿ(ನಿ)ಯನ್ನು ಯಾವುದೋ ವಿಶೇಷ ಸಂದರ್ಭದಲ್ಲಿ ಹರಸಿಕೊಂಡದ್ದಕ್ಕಾಗಿಯೋ ಆಕೆಯ ವಿಶೇಷ ಪ್ರಸಾದಕ್ಕೆ ಪಾತ್ರನಾದದ್ದಕ್ಕಾಗಿಯೋ ಆ ಯಕ್ಷಿಯ ಪ್ರಾಕೃತ ರೂಪದ ಹೆಸರು ಗುಮ್ಮಡಿಯ ಮೂಲಕವಾಗಿ ಬಂದಿರಬೇಕು ಎಂದು ಊಹೆ. ದೊಡ್ಡಯ್ಯ, ಅನಂತಕವಿ, ದೇವಚಂದ್ರ ಇವರ ಕೃತಿಗಳಲ್ಲಿ ದೊರೆಯುವ ಚಾವುಂಡರಾಯ ಪರವಾದ ವೃತ್ತಾಂತದಲ್ಲಿ ಈತ ಈ ಕೂಷ್ಮಾಂಡಿ ಯಕ್ಷಿಯ ವಿಶೇಷ ಕೃಪೆಗೆ ಪಾತ್ರನಾಗಿಯೇ ಬಾಹುಬಲಿ ಮೂರ್ತಿಯನ್ನು ನಿಲ್ಲಿಸಿದನೆಂದು ಹೇಳಿರುವುದು ಕಂಡುಬರುತ್ತದೆ. ಚಾವುಂಡರಾಯ ಆ ಯಕ್ಷಿಯ ಆರಾಧಕನಾಗಿದ್ದಿರಬೇಕೆಂದೂ ಬಾಹುಬಲಿ ನಿರ್ಮಾಣ ಮೊದಲಾದ ಕಾರ್ಯಗಳಲ್ಲಿ ಆಕೆಯಿಂದ ಪ್ರೇರಣೆ ಪಡೆದನೆಂಬ ವಾರ್ತೆ ಜನಜನಿತವಾಗಿತ್ತೆಂದೂ ತೋರುತ್ತದೆ ಎಂಬುದು ವಿದ್ವಾಂಸರ ಅಭಿಪ್ರಾಯ. ನೇಮಿಚಂದ್ರಯತಿ ಚಾವುಂಡರಾಯನ ಪ್ರತಿಬೋಧನಾರ್ಥವಾಗಿ ಬರೆದು, ಈತನ ನಾಮಾಂತರವಾದ ಗೊಮ್ಮಟ ಎಂಬುದರಿಂದಾಗಿಯೇ ಗೊಮ್ಮಟ ಸಾರ ಎಂದು ತನ್ನ ಗ್ರಂಥಕ್ಕೆ ಹೆಸರು ಕೊಟ್ಟನೆಂದು ಕೆಲವರು ಅಭಿಪ್ರಾಯ

ಪಡುತ್ತಾರೆ. ಚಾವುಂಡರಾಯನಿಗೆ ರಾಯ, ಅಣ್ಣ ಎಂಬ ಬಿರುದುಗಳಿದ್ದು ರಾಯ ಎಂಬುದು ಶ್ರವಣಬೆಳಗೊಳದಲ್ಲಿ ಗೊಮ್ಮಟಮೂರ್ತಿಯನ್ನು ಪ್ರತಿಷ್ಠಿಸಿದ್ದು ಮುಂತಾದ ಮಹಾಕಾರ್ಯಗಳಿಗೆ ಮೆಚ್ಚಿ ರಾಚಮಲ್ಲ ಈತನಿಗೆ ಕೊಟ್ಟ ಬಿರುದು ಎಂದು ತಿಳಿಯುತ್ತದೆ.

ಚಾವುಂಡರಾಯ ಇಮ್ಮಡಿ ಮಾರಸಿಂಹನ ಸಹಪಾಠಿಯೂ ಆತನ ವಿಶ್ವಾಸಪಾತ್ರನಾದ ಯೋಧನೂ ಆಗಿದ್ದು, ಅವನ ಅನೇಕ ವಿಜಯಗಳಲ್ಲಿ ಪ್ರಾಯಃ ಸೇನಾನಿಯಾಗಿ ಹೋರಾಡಿದಂತೆ ತೋರುತ್ತದೆ. ನಾಲ್ವಡಿ ರಾಚಮಲ್ಲನಲ್ಲಿ ಈತ ಮಂತ್ರಿಯಾಗಿದ್ದುದು ನಿಶ್ಚಯ (ಸ್ಥಿರ ಜಿನಶಾಸನೋದ್ಧರಣರಾದಿಯೊಳಾರೆನೆ ರಾಚಮಲ್ಲಭೂವರ ವರಮಂತ್ರಿ ರಾಯನೆ...) ರಕ್ಕಸಗಂಗನ ಆಳಿಕೆಯ ಅವಧಿಯಲ್ಲಿಯೂ ಈತ ಇದ್ದಿರಬಹುದಾದರೂ ರಾಜ್ಯಾರಂಭದ ಕೆಲವು ವರ್ಷಗಳವರೆಗೆ ಮಾತ್ರ ಆತನ ಸೇವೆಯಲ್ಲಿದ್ದು ಪ್ರಾಯಃ 990ರ ವೇಳೆಗೆ ತೀರಿಕೊಂಡಿರಬೇಕು ಎಂಬುದಾಗಿ ಊಹಿಸಲಾಗಿದೆ. ರಕ್ಕಸಗಂಗನ ಕಾಲದವನಾದ ಕವಿ 1ನೆಯ ನಾಗವರ್ಮ ತನ್ನ ಛಂದೋಂಬುಧಿಯಲ್ಲಿ ಚಾವುಂಡರಾಯ ತನ್ನ ಪೋಷಕನೆಂಬುದಾಗಿಯೂ ಅಜಿತಸೇನಾಚಾರ್ಯ ಆಚಾರ್ಯನೆಂಬುದಾಗಿಯೂ ಹೇಳಿಕೊಂಡಿರುವುದು ಹೀಗೆ ತಿಳಿಯಲು ಅವಕಾಶ ಮಾಡಿಕೊಡುತ್ತದೆ.

ಚಾವುಂಡರಾಯ ಇಮ್ಮಡಿ ಮಾರಸಿಂಹನ ವಿಜಯೋದ್ಯಮಗಳಲ್ಲಿ ಭಾಗವಹಿಸಿ ಪ್ರಶಸ್ತಿಗಳನ್ನು ಗಳಿಸಿದ್ದು, ಚಾವುಂಡರಾಯ ಪುರಾಣದ ಆದ್ಯಂತ ಭಾಗಗಳ ಉಲ್ಲೇಖಗಳಿಂದಲೂ ಶ್ರವಣಬೆಳಗೊಳದ ಸು.983ರ ಒಂದು ಶಾಸನದಿಂದಲೂ ತಿಳಿದುಬರುತ್ತದೆ. ಗಂಗರಾಜ್ಯದ ವ್ಯವಸ್ಥೆ, ವಿಸ್ತರಣೆ, ಆಕ್ರಮಣಕಾರರ ವಿಧ್ವಂಸನ, ಅನ್ಯಕ್ರಾಂತ ದೇಶಭಾಗಗಳ ಸ್ವಾಧೀನತೆ ಇವುಗಳ ಸಾಧನೆಗೆ ಈತ ಪ್ರಮುಖ ಸಹಾಯಕನಾದನೆಂದು ಆ ವಿವರಣೆಗಳಿಂದ ತಿಳಿಯುತ್ತದೆ. ಛಲದಿಂದ ರಾಜಾಯ್ತನನ್ನು ಬಗಿದಿಕ್ಕಿದ ಭುಜಬಲ, ರಾಚನನ್ನು ಕೊಂದಂಥ ವೀರ, ತಾನಿದ್ದ ನೆಲೆಯಿಂದ ಗೋವಿಂದರಸನನ್ನು ಅಟ್ಟಿ ಓಡಿಸಿದ ಪರಾಕ್ರಮ, ಮಂಡಲ ರಾಜ್ಯಾಸಕ್ತನಾದ ಅಧಿಕನಾದ ರಾಚಯನನ್ನು ಕೊಂದ ಶೌರ್ಯ - ಇವನ್ನು ಅನೇಕರಿಗೆ ಅದ್ಭುತವೆನಿಸುವಂತೆ ವೀರಮಾರ್ತಾಂಡನು ಮಾಡಿ ತೋರಿಸಿದ ಎಂದು ಚಾವುಂಡರಾಯಪುರಾಣದ ಆದಿಭಾಗದಲ್ಲಿ ಹೇಳಿಕೊಂಡಿದ್ದಾನೆ. ಆಲಂಕಾರಿಕವಾಗಿ ಚಾವುಂಡರಾಯನ ಶೌರ್ಯವನ್ನು ಕೀರ್ತಿಸುವ ಭಾಗವೂ ಇಲ್ಲಿ ಬಂದಿದೆ. ಈ ಗ್ರಂಥದ ಅಂತ್ಯಭಾಗದಲ್ಲಿ, ಸಾಮಾನ್ಯ ರೀತಿಯಲ್ಲಿ ಈತನ ಗುಣಾತಿಶಯವನ್ನು ಕೀರ್ತಿಸಿರುವುದರ ಜತೆಗೆ, ಚಾರಿತ್ರಿಕ ವಿವರಗಳನ್ನೊಳಗೊಂಡ ಗದ್ಯಭಾಗದಲ್ಲಿ ಹೀಗೆ ಹೇಳಿದೆ: ಖೇಡಗ ಕಾಳಗದಲ್ಲಿ ವಜ್ಜಳದೇವನನ್ನು ಗೆದ್ದ ಸಾಹಸದಿಂದಾಗಿ ಸಮರ ಧುರಂಧರ ಎಂದೂ ಗೋನೂರಬಯಲಲ್ಲಿ ಎದುರಿಸಿ ನಿಂತು ನೊಳಂಬರೊಡನೆ ಹೋರಾಡಿ ಜಗದೇಕವೀರ ಮಾರಸಿಂಹನ ಮುಂದೆ ತನ್ನ ಶಕ್ತಿಯನ್ನು ಪ್ರದರ್ಶಿಸಿದ್ದರಿಂದ ವೀರಮಾರ್ತಾಂಡ ಎಂದೂ ಉಚ್ಚಂಗಿಯ ಕೋಟೆಯಲ್ಲಿ ರಾಜಾಯ್ತನೊಡನೆ ಒಬ್ಬನೇ ಕಾಳಗ ಕೊಟ್ಟದ್ದರಿಂದ ರಣರಂಗಸಿಂಗ ಎಂದೂ ಬಾಗೆಯೂರ ಕೋಟೆಯಲ್ಲಿ ತ್ರಿಭುವನವೀರನನ್ನು ಕೊಂದು ಗೋವಿಂದರನನ್ನು ಒಳಗೆ ಹೋಗುವಂತೆ ಮಾಡಿದ್ದರಿಂದ ವೈರಿಕುಲ ಕಾಲದಂಡ ಎಂದೂ ನೃಪಕಾಮನಕೋಟೆಯಲ್ಲಿ ರಾಜ, ಬಾಸ, ಸಿವರ, ಹೊಯ್ಸಳ ಕೂಣಾಂಕ ಮೊದಲಾದ ಕಲಿಗಳನ್ನು ಏಕಾಂಗ ಸಾಹಸದಿಂದ ಎದುರಿಸಿ ಹೋರಿದ್ದರಿಂದ ಭುಜವಿಕ್ರಮ ಎಂದೂ ತನ್ನ ತಮ್ಮನಾದ ನಾಗವರ್ಮನನ್ನು ಕೊಂದ ಹಗೆಗೆ ಚಲದಂಕಗಂಗ ಗಂಗರ ಭಟ ಎನಿಸಿದ ಮುದುರಾಚಯನನ್ನು ಕೊಂದದ್ದರಿಂದ ಸಮರ ಪರಶುರಾಮ ಎಂದೂ ಜಟ್ಟಿಗರನ್ನು ಅಟ್ಟಿದ ದಂಡಿನಲ್ಲಿಯೇ ಸಂಪೂರ್ಣವಾಗಿ ನಿವಾರಿಸಿದ್ದರಿಂದ ಪ್ರತಿಪಕ್ಷ ರಾಕ್ಷಸ ಎಂದೂ ವೀರಭಟಕೋಟಿಯನ್ನು ನಿಶ್ಶೇಷವಾಗಿ ಕೊಂದದ್ದರಿಂದ ಭಟಮಾರಿಯೆಂದೂ ನಿಶ್ಶಂಕಾದಿ ಗುಣಗಳನ್ನು ಕಾಪಾಡಿಕೊಳ್ಳುವುದರಲ್ಲಿಯೇ ಆಸಕ್ತನಾಗಿದ್ದುದರಿಂದ ಗುಣಮ ಕಾಮ ಎದೂ ಸತ್ಯತ್ಯಾಗಾದಿಸಮನ್ವಿತನಾದುದರಿಂದ ಸಮ್ಯಕ್ತ್ವ ರತ್ನಾಕರ ಎಂದೂ ಪರಾಂಗನೆ ಪರದ್ರವ್ಯಗಳಿಗೆ ವಿಮುಖನಾದುದರಿಂದ ಶೌಚಾಭರಣ ಎಂದೂ ಪರಿಹಾಸಕ್ಕಾದರೂ ಸುಳ್ಳಾಡುವವನಲ್ಲವಾದ್ದರಿಂದ ಸತ್ಯಯುಧಿಷ್ಠಿರ ಎಂದೂ ಅತಿಪ್ರಚಂಡರಾದ ವೀರ ಮಾಂಡಲಿಕರಲ್ಲಿ ತಲೆವಣಿಯಾದ್ದರಿಂದ ಸುಭಟ ಚೂಡಾಮಣಿ ಎಂದೂ ಹೇಳುವ ಈ ಅಂಕಮಾಲೆಗಳು ದಿಗ್ಗಜಗಳ ಪುಟಾಪುಟಗಳಲ್ಲಿಯೂ ಸಕಲ ಕುಲಾಚಲಕೂಟಗಳಲ್ಲಿಯೂ ನೆಲಸಿದುವು.

ಶ್ರವಣಬೆಳಗೊಳದ ಶಾಸನದಲ್ಲಿಯೂ ಮೇಲಿನ ಸಾಹಸಗಳಲ್ಲಿ ಒಂದೆರಡು ಉಲ್ಲೇಖವಾಗಿವೆ. ಇಲ್ಲಿ ಈತನ ಪೌರುಷದ ಆಲಂಕಾರಿಕ ವರ್ಣನೆಯೇ ಹೆಚ್ಚು. ಈತ ಹೋರಾಡಿದ ವ್ಯಕ್ತಿಗಳ ಹಾಗೂ ಸ್ಥಳಗಳ ವಿಚಾರ ವಿಶದವಾಗಿ ಇತಿಹಾಸದಿಂದ ತಿಳಿದುಬಂದಿಲ್ಲ. ವಜ್ಜಳದೇವನೆಂಬುವನು ಮುಮ್ಮಡಿ ಕೃಷ್ಣನ ಮಾಂಡಲಿಕನಾಗಿ ಪುಲಿನಾಡನ್ನು ಆಳುತ್ತಿದ್ದು ಬಳಿಕ ಪರಮಾರರ ಪಕ್ಷಕ್ಕೆ ಸೇರಿಕೊಂಡವನಿರಬಹುದು. ಇಲ್ಲಿನ ನೊಳಂಬ ಬಹುಶಃ 2ನೆಯ ಪೊಳಲ್ಚೋರನೋ ವೀರಮಹೇಂದ್ರನೋ ಆಗಿರಬೇಕು, ಚಾಳುಕ್ಯ ವಂಶದ ರಾಜಾದಿತ್ಯ ಇಲ್ಲಿನ ರಾಜಾಯ್ತ ಇರಬಹುದು ಮುಂತಾಗಿ ಊಹಿಸಲಾಗಿದೆ.

ಈತನ ಧರ್ಮಶ್ರದ್ಧೆಯ ಸಾಕ್ಷ್ಯಗಳನ್ನು ಶ್ರವಣಬೆಳಗೊಳದಲ್ಲಿ ಇಂದೂ ನಾವು ಕಾಣಬಹುದಾಗಿದೆ. ಇಲ್ಲಿಯ ಇಂದ್ರಗಿರಿಯ ಬೆಟ್ಟದ ಮೇಲೆ ಪ್ರತಿಷ್ಠಿಸಿರುವ ಮಹೋನ್ನತ ಗೊಮ್ಮಟವಿಗ್ರಹ ಈತನ ಕೀರ್ತಿಗೆತ್ತಿದ ಕಳಸವಾಗಿದೆ. ಈ ವಿಗ್ರಹದ ಉಭಯ ಪಾರ್ಶ್ವಗಳಲ್ಲಿಯೂ ಹುತ್ತದ ಮೇಲೆ ಕನ್ನಡ, ತಮಿಳು ಮತ್ತು ಮರಾಠಿ ಭಾಷೆಗಳಲ್ಲಿ, ಚಾವುಂಡರಾಯ ಆ ಮೂರ್ತಿಯನ್ನು ಮಾಡಿಸಿದ್ದಾಗಿ ತಿಳಿಸುವ ಶಿಲಾಲೇಖಗಳಿವೆ. ಬೊಪ್ಪಣಪಂಡಿತನ ಗೊಮ್ಮಟಸ್ತುತಿ ಶಾಸನದಲ್ಲಿಯೂ ನೇಮಿಚಂದ್ರ ಯತಿಯ ಗೊಮ್ಮಟಸಾರದಲ್ಲಿಯೂ ಈ ಸಂಗತಿಯನ್ನು ಘೋಷಿಸಿದೆ. ಪೌದನಪುರದಲ್ಲಿ ಭರತಚಕ್ರವರ್ತಿನಿರ್ಮಿತವಾದ ಬಾಹುಬಲಿಮೂರ್ತಿಯನ್ನು ನೋಡಬೇಕೆಂದು ಚಾವುಂಡರಾಯನಿಗೆ ಅಭಿಲಾಷೆಯುಂಟಾಗಿ ಅಲ್ಲಿಗೆ ಹೊರಡಲು ಸಿದ್ಧನಾದಾಗ ತಿಳಿದವರು ಅದು ಈತನ ಶಕ್ತಿಗೆ ಮೀರಿದ್ದೆಂದು ಹೇಳಿದರು. ಆಗ ಅದೇ ರೀತಿಯ ಮೂರ್ತಿಯನ್ನು ತಾನೂ ಮಾಡಿಸಬೇಕೆಂದು ನಿಶ್ಚಯಿಸಿ ಶ್ರವಣಬೆಳಗೊಳದ ಬೆಟ್ಟದ ಮೇಲೆ ಈ ಗೊಮ್ಮಟಮೂರ್ತಿಯನ್ನು ಯತ್ನ ಪೂರ್ವಕವಾಗಿ ಮಾಡಿಸಿದ. ಇದು ಬೊಪ್ಪಣಪಂಡಿತನ ವಿವರಣೆಯ ಸಾರ. ಇದೇ ವಿಷಯ ಅಲ್ಪಸ್ವಲ್ಪ ವ್ಯತ್ಯಾಸಗಳೊಡನೆ ದೊಡ್ಡಯ್ಯನ ಭುಜಬಲಿಶತಕ (ಸು.1550), ಪಂಚಬಾಣನ ಭುಜಬಲಿಚರಿತೆ (ಸು.1614) ಮೊದಲಾದವುಗಳಲ್ಲಿಯೂ ಬಂದಿದೆ. ಚಾವುಂಡರಾಯ ಬಾಹುಬಲಿ ವಿಗ್ರಹವನ್ನು ಪ್ರತಿಷ್ಠಿಸಿ ಅಭಿಷೇಕ ಮಾಡಿದ್ದನ್ನೂ ಅದರ ಪೂಜಾವ್ಯವಸ್ಥೆಗಾಗಿ ಹಲವಾರು ಗ್ರಾಮಗಳನ್ನು ದತ್ತಿ ಬಿಟ್ಟಿದ್ದನ್ನೂ ದೊಡ್ಡಬೆಟ್ಟದ ಕೆಳಗೆ ಗ್ರಾಮವೊಂದನ್ನು ಕಟ್ಟಿಸಿಕೊಟ್ಟದ್ದನ್ನೂ ಇಂಥ ಧರ್ಮಕಾರ್ಯವನ್ನು ನಡೆಸಿದ್ದಕ್ಕೆ ಸುಪ್ರೀತನಾದ ರಾಜಮಲ್ಲ ದೊರೆಯು ಚಾವುಂಡರಾಯನಿಗೆ ರಾಯನೆಂಬ ಬಿರುದು ಕೊಟ್ಟಿದ್ದನ್ನೂ ಭುಜಬಲಿ ಚರಿತೆಯಲ್ಲಿ ಹೇಳಿದೆ. ಗೊಮ್ಮಟಸಾರದ (ಸು.960) ಕರ್ಮಕಾಂಡದ ಕೆಲವು ಗಾಥೆಗಳು ಈತನ ಗುಣಾತಿಶಯದ ಸಂಕೀರ್ತನೆಯನ್ನು ಒಳಗೊಂಡಿವೆ. ಇದರ 968ನೆಯ ಗಾಥೆ, ನೇಮಿಚಂದ್ರನಿಂದ ಗೊಮ್ಮಟಸಾರವನ್ನು ಬರೆಸಿದ್ದು, ಚಾವುಂಡರಾಯ ಬಸದಿಯಲ್ಲಿ ನೇಮಿನಾಥ ಜಿನಬಿಂಬವನ್ನು ಪ್ರತಿಷ್ಠಿಸಿದ್ದು ಹಾಗೂ ಭವ್ಯವಾದ ಗೊಮ್ಮಟೇಶ್ವರ ವಿಗ್ರಹವನ್ನು ಸ್ಥಾಪಿಸಿದ್ದು ಇವನ್ನು ಸೂಚಿಸುತ್ತದೆಂದು ವಿದ್ವಾಂಸರು ಭಾವಿಸಿದ್ದಾರೆ. 969ನೆಯ ಗಾಥೆಯಲ್ಲಿಯೂ ಗೊಮ್ಮಟಮೂರ್ತಿ ನಿರ್ಮಾಣದ ಪ್ರಸ್ತಾಪವಿದೆ. 970-71ನೆಯ ಗಾಥೆಗಳಲ್ಲಿ ಆತನಿಂದಾದ ಈಷತ್ಪ್ರಾಗ್ಭಾರ ಜಿನಭವನದ ಹಾಗೂ ಸ್ತಂಭದ ಉಲ್ಲೇಖವಿದೆ. ಇವು ಚಾವುಂಡರಾಯ ಬಸದಿ ಮತ್ತು ತ್ಯಾಗದ ಬ್ರಹ್ಮದೇವರ ಕಂಬ ಇವನ್ನು ಕುರಿತಿವೆಯೆಂದು ಅಭಿಪ್ರಾಯಪಡಲಾಗಿದೆ. ಅಖಂಡ ಬಾಗಿಲು ಮತ್ತು ಗುಳ್ಳಕಾಯಜ್ಜಿ ಪ್ರತಿಮೆ ಇವೂ ಚಾವುಂಡರಾಯಕೃತವೆಂದು ಪ್ರತೀತಿಯಿದೆ.

ಹೀಗೆ ಯುದ್ಧವೀರನೂ ಧರ್ಮವೀರನೂ ಆಗಿದ್ದ ಚಾವುಂಡರಾಯ ಕವಿಯೂ ಕವಿಜನಪೋಷಕನೂ ಆಗಿ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಸ್ಮರಣೀಯನಾಗಿದ್ದಾನೆ. ರನ್ನ ಮೊದಲು ಅಜಿತಸೇನಾಚಾರ್ಯರಲ್ಲಿ ಚಾವುಂಡರಾಯನೊಡಗೂಡಿ ವಿದ್ಯಾಭ್ಯಾಸ ಮಾಡಿ, ಅನಂತರ ಸ್ವಲ್ಪಕಾಲ ಈತನ ಆಶ್ರಯದಲ್ಲಿದ್ದಿರಬಹುದು ಎಂದು ತೋರುತ್ತದೆ. ಚಾವುಂಡರಾಯನ ಶೌರ್ಯ ಔದಾರ್ಯಗಳನ್ನು ಅಜಿತಪುರಾಣದಲ್ಲಿಯೂ ಗದಾಯುದ್ಧದಲ್ಲಿಯೂ ಸ್ಪಷ್ಟವಾಗಿ ಕೀರ್ತಿಸಿದೆ. ಶ್ರವಣಬೆಳಗೊಳದ ಹೆಬ್ಬಂಡೆಯ ಮೇಲೆ ಈ ಇಬ್ಬರ ಹೆಸರುಗಳನ್ನೂ ಒಂದೆಡೆಗೆ ಒಟ್ಟಿಗೆ ಕೆತ್ತಿರುವುದು, ರನ್ನ 989ರಲ್ಲಿ ಹುಟ್ಟಿದ್ದ ತನ್ನ ಮಗನಿಗೆ ಚಾವುಂಡರಾಯನ 'ರಾಯ' ಎಂಬ ಹೆಸರನ್ನಿಟ್ಟುದು ಇವರ ಮಧುರ ಮೈತ್ರಿಯ ದ್ಯೋತಕವಾಗಿದೆ. ರನ್ನನ ಅನುಪಲಬ್ಧಕೃತಿಗಳಾದ ಚಕ್ರೇಶ್ವರಚರಿತ, ಪರಶುರಾಮಚರಿತಗಳಲ್ಲಿ ಯಾವುದಾದರೂ ಚಾವುಂಡರಾಯಪರವಾದುದಾಗಿರಬೇಕು ಎಂದು ಕೆಲವು ವಿದ್ವಾಂಸರು ಊಹಿಸಿದ್ದಾರೆ. 1ನೆಯ ನಾಗವರ್ಮನೂ ಛಂದೋಂಬುಧಿಯಲ್ಲಿ ಚಾವುಂಡರಾಯನ ಆಶ್ರಯವನ್ನು ಹೇಳಿಕೊಂಡಿದ್ದಾನೆ. ನೇಮಿಚಂದ್ರಯತಿ ಚಾವುಂಡರಾಯನ ಪ್ರೇರಣೆಯಿಂದ ಆತನ ಪ್ರತಿಬೋಧನಾರ್ಥವಾಗಿಯೇ ಗೊಮ್ಮಟಸಾರ, ತ್ರಿಲೋಕಸಾರ ಎಂಬ ಗ್ರಂಥಗಳನ್ನು ಬರೆದುದಾಗಿ ಆ ಗ್ರಂಥಗಳ ಟೀಕಾಕರ್ತರು ಹೇಳಿದ್ದಾರೆ. (ಟಿ.ವಿ.ವಿ.)

ಚಾವುಂಡರಾಯ ತ್ರಿಷಷ್ಟಿಲಕ್ಷಣಮಹಾಪುರಾಣ ಎಂಬ ಗ್ರಂಥವನ್ನು ಬರೆದಿದ್ದಾನೆ (978). ಇದಕ್ಕೆ ಚಾವುಂಡರಾಯಪುರಾಣ ಎಂಬ ಹೆಸರೂ ರೂಢಿಯಲ್ಲಿದೆ. ಇದಲ್ಲದೆ ಚಾರಿತ್ರಸಾರ ಎಂಬ ಸಂಸ್ಕೃತ ಗ್ರಂಥವೂ ಗೊಮ್ಮಟಸಾರದ ವೀರಮತ್ತಂಡೀ (ವೀರಮಾರ್ತಂಡೀ) ಎಂಬ ದೇಶೀವೃತ್ತಿಯೂ (ಪ್ರಾಯಶಃ ಕನ್ನಡ ವೃತ್ತಿ) ಈತನ ರಚನೆಗಳೆಂದು ತಿಳಿಯಲಾಗಿದೆ. ವೀರಮತ್ತಂಡೀ ದೊರೆತಿಲ್ಲ. ಚಾರಿತ್ರಸಾರ ದೊರೆತಿದ್ದು ಇದು ಗೃಹಸ್ಥರ ಮತ್ತು ಯತಿಗಳ ಚಾರಿತ್ರವನ್ನು ಸಂಗ್ರಹವಾಗಿ ವಿವರಿಸುವ ಗ್ರಂಥವಾಗಿದೆ. ತ್ರಿಷಷ್ಟಿಲಕ್ಷಣಮಹಾಪುರಾಣ 24 ತೀರ್ಥಂಕರರೇ ಮೊದಲಾದ 63 ಶಲಾಕಾಪುರುಷರ ಚರಿತ್ರೆ ನಿರೂಪಿತವಾಗಿರುವ ಜೈನರ ಪವಿತ್ರ ಧರ್ಮಗ್ರಂಥ. ಕನ್ನಡದ ಉಪಲಬ್ಧ ಪ್ರಾಚೀನ ಗದ್ಯಗ್ರಂಥಗಳಲ್ಲಿ ಎರಡನೆಯದು. ಜಿನಸೇನಾಚಾರ್ಯರು ಮತ್ತು ಗುಣಭದ್ರಾಚಾರ್ಯರು ಸಂಸ್ಕೃತದಲ್ಲಿ ಬರೆದ ಮಹಾಪುರಾಣ ಈ ಗ್ರಂಥಕ್ಕೆ ಆಕರ. ಕೆಲಮಟ್ಟಿಗೆ ಪಂಪನ ಆದಿಪುರಾಣದ ಪ್ರಭಾವವೂ ಇದರ ಮೇಲೆ ಆಗಿದೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಗ್ರಂಥ ವಿಶೇಷತಃ ಗದ್ಯರೂಪದಲ್ಲಿದೆ. ಆದಿ ಅಂತ್ಯಗಳಲ್ಲಿಯೇ ಅಲ್ಲದೆ ಅಲ್ಲಲ್ಲಿ ಒಂದೆರಡು ಪದ್ಯಗಳೂ ದೊರೆಯುತ್ತವೆ. ಗ್ರಂಥದ ನಡುವೆ ಅಲ್ಲಲ್ಲಿ ಬರುವ ಪ್ರಾಕೃತ ಹಾಗೂ ಸಂಸ್ಕೃತ ರಚನೆಗಳು ಈತನ ವಿದ್ವತ್ತು ಹಾಗೂ ಬಹುಭಾಷಾವಿದತ್ವಕ್ಕೆ ಸಾಕ್ಷಿಯಾಗಿವೆ. ಇದರಲ್ಲಿ ಅಂತರ್ಗತವಾಗಿರುವ ರಾಮಾಯಣದ ಕಥೆ ಜೈನ ರಾಮಾಯಣಗಳ ಪರಂಪರೆಯಲ್ಲಿ ಗುಣಭದ್ರರ ಸಂಪ್ರದಾಯಕ್ಕೆ ಸೇರಿದ್ದು ಆ ಪರಂಪರೆಯ ಕೆಲವು ಲಕ್ಷಣಗಳನ್ನು ತಿಳಿದುಕೊಳ್ಳುವಲ್ಲಿ ಉಪಯುಕ್ತವಾಗಿದೆ. ಮೂಲದ ಮಹಾಪುರಾಣದಲ್ಲಿರುವ ಕಾವ್ಯ ಸತ್ವ ಇಲ್ಲಿ ಬಂದಿಲ್ಲ. ಜೈನತತ್ವನಿರೂಪಣೆ ಸರಳವಾಗಿ ಸಂಕ್ಷೇಪವಾಗಿ, ತತ್ವವಿಚಾರಗಳು ಬಂದಾಗ ಕೆಲವೊಮ್ಮೆ ವಿವರವಾಗಿ ಬಂದಿವೆ. ವರ್ಣನೆಗಳಿಗಿಂತ ಕಥೆ ಹೇಳುವಲ್ಲಿ ಇವನ ಗದ್ಯಕ್ಕೆ ಅಲ್ಲಲ್ಲಿ ಕಾಂತಿ ಬಂದಿದೆ. ಇದರ ಗದ್ಯ ಭಾಷಾಶಾಸ್ತ್ರ ದೃಷ್ಟಿಯಿಂದ ಪರಿಶೀಲನೆಗೆ ಯೋಗ್ಯವಾಗಿದೆ. ಕಥೆ, ಭಾಷೆ, ಶೈಲಿ ಮತ್ತು ಜೀವನದರ್ಶನ ಈ ದೃಷ್ಟಿಗಳಿಂದ ಇದು ತೀರ ಸಾಮಾನ್ಯವಾದ ಕೃತಿಯಾಗಿ ಕಂಡುಬಂದರೂ ಕನ್ನಡದ ಪ್ರಾಚೀನ ಗದ್ಯ ಗ್ರಂಥಗಳಲ್ಲಿ ಒಂದು ಎಂಬ ದೃಷ್ಟಿಯಿಂದ ಗಮನಾರ್ಹವಾಗಿದೆ.

ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಕವಿಯಾಗಿ, ಕವಿಪೋಷಕನಾಗಿ, ಲೋಕೋತ್ತರವಾದ ಮಹಾಶಿಲ್ಪಕ್ಕೆ ಕಾರಣನಾದ ಮಹಾನುಭಾವನಾಗಿ, ಶೌರ್ಯ, ಶುಚಿತ್ವಗಳಿಗೆ ಹೆಸರಾದ ಮಹಾವ್ಯಕ್ತಿಯಾಗಿ ಮೆರೆದ ಚಾವುಂಡರಾಯನ ಹೆಸರು ಇಂದಿಗೂ ಶಾಶ್ವತವಾಗಿ ಉಳಿದುಬಂದಿದೆ. (ಜಿ.ಎಸ್.ಎಸ್.ಐ,ಟಿ.ವಿ.ವಿ.,ಕೆ.ಎನ್.ಎಸ್.)

**ಚಾವುಂಡರಾಯ II :** ಸು.1025. ಬ್ರಾಹ್ಮಣ ಕವಿ. ಲೋಕೋಪಕಾರ ಎಂಬ ಶಾಸ್ತ್ರಗ್ರಂಥದ ಕರ್ತೃ. ಈತ ಚಾಳುಕ್ಯ ಚಕ್ರವರ್ತಿ ಜಯಸಿಂಹನಲ್ಲಿ (1015-44) ಸರ್ವಾಧಿಕಾರಿಯಾಗಿದ್ದನೆಂದೂ ಆತನಿಂದ 'ಮಹಾಬಳಿಯ ಗ್ರಾಹಕತನ' ಪಡೆದನೆಂದೂ ಈತನ ಗ್ರಂಥದಿಂದ ತಿಳಿದುಬರುತ್ತದೆ. ಈತನ ಮುತ್ತಜ್ಜ ಶಂಕರಭಟ್ಟ, ಅಜ್ಜ ಪಂಗೊಂಡ ಭಟ್ಟ, ತಂದೆ ಭಟ್ಟಪಾರ್ಯ, ತಾಯಿ ಮಲ್ಲಿಕಬ್ಬೆ, ಅಚಳಿತವಚನ, ಧರ್ಮಧರ್ಮಾತ್ಮಜ, ದಾನವಿನೋದ, ಸರಸ್ವತೀಮುಖತಿಳಕ ಜಯಬಂಧುನಂದನ, ಬುಧಕಲ್ಪವೃಕ್ಷ, ಕಾವ್ಯವಿಳಾಸ ಮೊದಲಾದವು ಈತನಿಗಿದ್ದ ಬಿರುದುಗಳು.

ಲೋಕೋಪಕಾರ 12 ಆಶ್ವಾಸಗಳುಳ್ಳ ಪದ್ಯಗ್ರಂಥ. ಇದಕ್ಕೆ ಜನೋಪಕಾರ ಎಂಬ ಹೆಸರೂ ಇದೆ. ಇದು ಕನ್ನಡದಲ್ಲಿ ದೊರಕುವ ಮೊಟ್ಟಮೊದಲ ಶಾಸ್ತ್ರಗ್ರಂಥವೂ ಹೌದು. ಇದರಲ್ಲಿ ಪಂಚಾಂಗಫಲ, ಜ್ಯೋತಿಷ, ವಾಸ್ತು, ಉತ್ಪಾತಶಾಂತಿ, ಉದಕಾರ್ಗಳ, ವೃಕ್ಷಾಯುರ್ವೇದ, ಗಂಧಯುಕ್ತಿ, ಸೂಪ, ವೈದ್ಯ (ಗೋವೈದ್ಯ, ಅಶ್ವವೈದ್ಯ, ಗಜವೈದ್ಯ, ವಿಷವೈದ್ಯ), ಸರ್ವಲಕ್ಷಣ ಪರಿಜ್ಞಾನ, ಶಕುನ ಮುಂತಾದ ವಿಷಯಗಳ ವಿಸ್ತಾರವಾದ ನಿರೂಪಣೆಯಿದೆ. ವೈದ್ಯಭಾಗ ಆಯಾ ವಿಷಯಗಳಿಗೆ ಸಂಬಂಧಪಟ್ಟ ಬಹು ಸಂಬಂಧ ಚಿಕಿತ್ಸೆಗಳನ್ನು ನಿರೂಪಿಸುತ್ತದೆ. ಒಂದು ರೀತಿಯಲ್ಲಿ ಈ ಗ್ರಂಥವನ್ನು ಆ ಕಾಲದ ಸಾಮಾನ್ಯ ಗೃಹವಿಶ್ವಕೋಶವೆಂದು ಹೇಳಬಹುದು. ಅನಂತರ ಬಂದ ಶ್ರೀಧರಾಚಾರ್ಯ, ಕೀರ್ತಿವರ್ಮ ಮುಂತಾದ ಶಾಸ್ತ್ರಗ್ರಂಥಕಾರರಿಗೆ ಈತನ ಗ್ರಂಥವೇ ಪ್ರೇರಕವಾಗಿರುವಂತೆ ತೋರುತ್ತದೆ. (ಜಿ.ವಿ.ಎಸ್.ಎನ್.ಎಆರ್.)

**ಚಾಳುಕ್ಯ ವಂಶ :** ಕರ್ನಾಟಕದಲ್ಲಿ ಆಳಿದ ಒಂದು ಪ್ರಖ್ಯಾತ ರಾಜಮನೆತನ. ಈ ಮನೆತನದ ಅರಸರು ಸತ್ವಯುತ ಸಾಮ್ರಾಜ್ಯವನ್ನು ಕಟ್ಟಿ, ನಾಲ್ಕು ಶತಮಾನಗಳಿಗೂ ಹೆಚ್ಚು ಕಾಲ ನಾಡಿನ ಇತಿಹಾಸವನ್ನು ರೂಪಿಸಿ ಅಜೇಯವಾದ ಕರ್ನಾಟಕಬಲವಾಗಿ ಕೀರ್ತಿ ಪಡೆದರು. ಕರ್ನಾಟಕದ ಸಾಹಿತ್ಯ ಕಲೆಗಳಿಗೆ ಅಮಿತವಾದ ಪ್ರೋತ್ಸಾಹ ನೀಡಿದರು. ಇವರ ಹೆಸರಿನಲ್ಲಿ ಪ್ರಸಿದ್ಧವಾಗಿರುವ ವಿಶಿಷ್ಟವಾದ ವಾಸ್ತು ಹಾಗೂ ಶಿಲ್ಪಕಲೆ ರೂಪುಗೊಂಡಿತು. ದಕ್ಷಿಣ ಭಾರತದ ಇತಿಹಾಸದಲ್ಲಿ ಪ್ರಮುಖ ಪಾತ್ರ ವಹಿಸಿದ ಈ ಅರಸರ ಮನೆತನ ಭಾರತದಲ್ಲೇ ಪ್ರಬಲ ಅರಸು ಮನೆತನಗಳಲ್ಲೊಂದೆಂದು ಪರಿಗಣಿತವಾಗಿದೆ. ಕನ್ನಡಿಗರಾದ ಇವರು ತಮ್ಮ ಪ್ರಭಾವವನ್ನು ಕರ್ನಾಟಕದ ಹೊರಗೂ ವಿಸ್ತರಿಸಿದರು. ಭಾರತದಾದ್ಯಂತವಲ್ಲದೆ ಆಗ್ನೇಯ ಏಷ್ಯವೇ ಮುಂತಾದ ಇತರ ಕಡೆಗಳಿಗೂ ಕನ್ನಡ ನಾಡಿನ ಸಂಸ್ಕೃತಿ ಹರಡುವಂತೆ ಮಾಡಿದರು. ಈ ಮನೆತನದ ನಾನಾ ಶಾಖೆಗಳಲ್ಲಿ ಬಾದಾಮಿ, ಕಲ್ಯಾಣ, ವೆಂಗಿ, ವೇಮುಲವಾಡ ಪ್ರಸಿದ್ಧವಾದವು. ಈ ಶಾಖೆಗಳ ಅರಸರಲ್ಲದೆ ಇನ್ನೂ ನಾನಾ ಶಾಖೆಗಳವರು ಕರ್ನಾಟಕದ ಹೊರಗೂ ಆಳಿದರು.

ಈ ವಂಶದ ಹೆಸರು ಬಾದಾಮಿಯ ಶಾಖೆಗೆ ಸಂಬಂಧಿಸಿದಂತೆ ಚಳುಕ್ಯ ಎಂದೂ ಕಲ್ಯಾಣದ ಶಾಖೆಗೆ ಸಂಬಂಧಿಸಿದಂತೆ ಚಾಳುಕ್ಯ ಎಂದೂ ಸಾಮಾನ್ಯವಾಗಿ ಶಾಸನಗಳಲ್ಲಿ ಕಂಡುಬರುತ್ತದೆ. ಅಲ್ಲದೆ ಚಳ್ಕಿ, ಚಳುಕಿ, ಚಳುಕ್ಯ, ಅಳುಕ್ಯ, ಚಾಲುಕ್ಯ ಎಂಬ ರೂಪಗಳೂ ಪ್ರಚಾರದಲ್ಲಿವೆ. ಇವೆಲ್ಲದರ ಮೂಲಪದದ ಅರ್ಥವೇನು ಎಂಬುದು ಸ್ಪಷ್ಟವಾಗಿಲ್ಲ. ಇದೊಂದು ವ್ಯಕ್ತಿನಾಮವಾಗಿರಬಹುದು ಅಥವಾ ದ್ರಾವಿಡರ ಒಂದು ಪಂಗಡದ, ಜನಾಂಗದ ಹೆಸರಾಗಿರಬಹುದು. 3ನೆಯ ಶತಮಾನಕ್ಕೆ ಸೇರಿದ. ನಾಗಾರ್ಜುನಕೊಂಡದಲ್ಲಿ ದೊರೆತ ಶಾಸನವೊಂದರಲ್ಲಿ ಖಂದಚಲಿಕಿ ರೆಮ್ಮಣಕನೆಂಬ ಹೆಸರು ಕಂಡುಬಂದಿದೆ. ಇವನಿಗೂ ಚಲುಕ್ಯರಿಗೂ ಯಾವ ಸಂಬಂಧವನ್ನೂ ಕಲ್ಪಿಸಲಾಗದಾದರೂ ಚಲುಕ್ಯ ಎಂಬ ಹೆಸರಿನ ಪ್ರಾಚೀನ ರೂಪವಿದು ಎಂಬ ಒಂದು ಊಹೆ ಇದೆ. ಹನ್ನೊಂದನೆಯ ಶತಮಾನದಲ್ಲಿ ಮತ್ತು ಅನಂತರ ಹುಟ್ಟಿದ ಶಾಸನಗಳು ಈ ಹೆಸರಿನ ವ್ಯುತ್ಪತ್ತಿಯನ್ನು ಕುರಿತು ಹಲವಾರು ಕಥೆಗಳನ್ನು ಹೆಣೆದಿವೆ. ಚುಲುಕ ಎಂಬ ಸಂಸ್ಕೃತ ಪದದಿಂದ ಚಲುಕ್ಯ ಬಂತೆಂಬುದು ಒಂದು ಹೇಳಿಕೆ. ಚುಲುಕ ಎಂದರೆ ಎರಡು ಅಂಗೈಗಳನ್ನು ಕೂಡಿಸಿದರೆ ಉಂಟಾಗುವ ಬೊಗಸೆ. ಬಿಲ್ಹಣ, ತನ್ನ ವಿಕ್ರಮಾಂಕ ದೇವಚರಿತದಲ್ಲಿ ಈ ಕುರಿತು ಒಂದು ಕಥೆ ಹೇಳಿದ್ದಾನೆ. ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ಸಂರಕ್ಷಿಸಲು ನಾಡಿಗೆ ಒಬ್ಬ ಮಹಾಪುರುಷನ ಆವಶ್ಯಕತೆ ಇದೆ ಎಂಬ ಕಾರಣದಿಂದ, ಅಂಥ ಒಬ್ಬ ಪುರುಷನನ್ನು ಸೃಷ್ಟಿಸಬೇಕೆಂದು ಬ್ರಹ್ಮನನ್ನು ಇಂದ್ರ ಪ್ರಾರ್ಥಿಸಿದ. ಇದಕ್ಕೆ ಒಪ್ಪಿದ ಬ್ರಹ್ಮ ಸಂಧ್ಯಾಕಾಲದಲ್ಲಿ ಅರ್ಘ್ಯ ಬಿಡುವಾಗ ತನ್ನ ಚುಲುಕದಲ್ಲಿದ್ದ ನೀರನ್ನು ದೃಷ್ಟಿಸಿದ. ಆಗ ಬೊಗಸೆಯಿಂದ ವೀರನೊಬ್ಬ ಉದಯಿಸಿದ, ಚುಲುಕದಿಂದ ಬಂದವನಾದ್ದರಿಂದ ಇವನೇ ಚಲುಕ್ಯ ಚಾಲುಕ್ಯ ಚಾಳುಕ್ಯ ಎನಿಸಿಕೊಂಡ.

ಈ ಕಾಲದ ಶಾಸನಗಳಲ್ಲಿ ಇವರನ್ನು ಕುರಿತ ಇನ್ನೊಂದು ಹೇಳಿಕೆ ಇದೆ. ಇವರು ಅಯೋಧ್ಯೆಯಿಂದ ದಕ್ಷಿಣಕ್ಕೆ ಬಂದವರು. ಈ ವಂಶದ ಹದಿನಾರು ಅರಸರು ದಕ್ಷಿಣಾಪಥದಲ್ಲಿ ಆಳಿದ ಮೇಲೆ ಸ್ವಲ್ಪ ಕಾಲ ಇವರು ಸತ್ತ್ವಹೀನರಾಗಿದ್ದರು. ಈ ವಂಶದ ಜಯಸಿಂಹ ಪುನಃ ಬಲಸಂವರ್ಧನೆ ಮಾಡಿಕೊಂಡು ರಾಷ್ಟ್ರಕೂಟ ಮನೆತನದ ಕೃಷ್ಣನ ಮಗನಾದ ಇಂದ್ರನನ್ನು ಸೋಲಿಸಿ ಚಾಳುಕ್ಯ ರಾಜ್ಯ ಸ್ಥಾಪನೆಗೆ ಕಾರಣನಾದ ಎಂದು ಹೇಳಲಾಗಿದೆ. ಆದರೆ ಇವರು ಸೋಲಿಸಿದ ರಾಷ್ಟ್ರಕೂಟರು ಯಾರೆಂಬುದು ತಿಳಿಯದು. ಅಂಥವರಾರೂ ಕರ್ನಾಟಕದಲ್ಲಿ ಆ ಕಾಲದಲ್ಲಿ ಇದ್ದಂತಿಲ್ಲ. ಜಯಸಿಂಹನಿಗೆ ಹಿಂದೆ, ಚಾಲುಕ್ಯರು ಸತ್ವಹೀನರಾಗಿದ್ದ ಕಾಲಕ್ಕೂ ಮೊದಲು 16 ಜನ ದಕ್ಷಿಣಾಪಥದಲ್ಲಿ ಆಳಿದರೆಂಬ ಮಾತನ್ನು ನಂಬುವುದಾದರೆ ದಕ್ಷಿಣಾಪಥದಲ್ಲಿ ಇವರ ಆಳಿಕೆ ಸು.130ರ ವೇಳೆಗೇ ಆರಂಭವಾಯಿತೆನ್ನಬೇಕು. ಆದ್ದರಿಂದ ಈ ಹೇಳಿಕೆಯನ್ನು ನಂಬಲಾಗುವುದಿಲ್ಲ.

ಚಾಳುಕ್ಯರ ಮೂಲನಾಮ ಚಲುಕಿ, ಚಲ್ಕಿ, ಸಲುಕಿ ಅಥವಾ ಸಲ್ಕಿ ಎಂಬ ಕನ್ನಡ ಪದ ಎಂದು ಊಹಿಸುವುದು ಹೆಚ್ಚು ಸಮಂಜಸ. ಇದು ಹಾರೆಯಂಥ ಒಂದು ಕೃಷಿ ಉಪಕರಣದ ಹೆಸರು. ಈ ಮನೆತನದ ಮೂಲಪುರುಷ ಇದನ್ನು ತನ್ನ ಅಂಕಿತನಾಮವಾಗಿ ಸ್ವೀಕರಿಸಿರಬೇಕು. ಕೃಷಿ ಉಪಕರಣದ ಹೆಸರಿನ ಜೊತೆಗೆ ಅಪ್ಪ ಎಂಬ ಗೌರವ ಪದ ಜೋಡಿಸಿ ಹೆಸರಿಟ್ಟುಕೊಳ್ಳುವ ರೂಢಿ ಕರ್ನಾಟಕದಲ್ಲಿ ಈಗಲೂ ಇದೆ (ಉದಾ: ಸಲ್ಕೆಪ್ಪ, ಗುದ್ಲೆಪ್ಪ), ಚಾಳುಕ್ಯರು ಮೂಲತಃ ಬಾದಾಮಿಯ ಕೆಲಬಲದಲ್ಲಿ ವಾಸಿಸುವ ಒಕ್ಕಲಿಗರ ಬಣಕ್ಕೆ ಸೇರಿದವರಿರಬೇಕು. ಬರಬರುತ್ತ ಪ್ರಬಲವಾಗಿ ವಿಶಾಲ ಪ್ರದೇಶಗಳನ್ನು ಆಳಲು ಪ್ರಾರಂಭಿಸಿದಾಗ ಇವರ ಮನೆತನಕ್ಕೆ ಪೌರಾಣಿಕತೆಯನ್ನೂ ಪಾವಿತ್ರ್ಯವನ್ನೂ ಕೊಡುವುದಕ್ಕಾಗಿ ದಂತಕಥೆ ಹುಟ್ಟಿಕೊಂಡಿರಬೇಕು.

ಬಾದಾಮಿಯ ಚಳುಕ್ಯರ ಸಮಕಾಲೀನ ಶಾಸನಗಳಲ್ಲಿ ಮೇಲೆ ಹೇಳಿದ ಕಥೆಗಳಾವುವೂ ಕಾಣಬರುವುದಿಲ್ಲ. ಆದರೆ ಇವರು ಮೂಲತಃ ಕನ್ನಡಿಗರೇ ಎಂಬ ವಿಷಯ ಅವುಗಳಿಂದ ತಿಳಿದುಬರುತ್ತದೆ. ಕದಂಬರಂತೆ ಇವರೂ ಹಾರೀತಿ ಪುತ್ರರು, ಮಾನವ್ಯಸ ಗೋತ್ರರು. ವರಾಹ ಇವರ ಲಾಂಛನ. ಈ ಅರಸರ ಪುಲಕೇಶಿ, ಬಿಟ್ಟರಸ ಮುಂತಾದ ಹೆಸರುಗಳನ್ನೂ ನೋಡುತ್ತ ಗೆಲ್ವೋಂ, ಪ್ರಿಯಗಳ್ಳ ಇತ್ಯಾದಿ ಬಿರುದುಗಳನ್ನೂ ಇವರು ಕನ್ನಡ ಮತ್ತು ಸಂಸ್ಕೃತ ಭಾಷೆಗಳಿಗೆ ಕೊಟ್ಟ ಪ್ರೋತ್ಸಾಹವನ್ನೂ ಆ ಭಾಷೆ ಹಾಗೂ ಲಿಪಿಗಳಲ್ಲಿ ಇವರು ಕೆತ್ತಿಸಿದ ಶಾಸನಗಳನ್ನೂ ಗಮನಿಸಿದರೆ ಇವರಿಗೆ ಆ ಭಾಷೆಯ ಮೇಲೆ ಲಿಪಿಯ ಮೇಲೆ ಇದ್ದ ಒಲವು ಅರ್ಥವಾಗುತ್ತದೆ. ಈ ಕಾಲದಿಂದ ಕನ್ನಡ ಶಾಸನಸಾಹಿತ್ಯ ಹೆಚ್ಚು ಪ್ರೌಢವಾಗುತ್ತದೆ. ಕನ್ನಡದಲ್ಲಿ ಶಾಸನಗಳನ್ನು ಬರೆಸುವ ರೂಢಿ ಪ್ರಬಲವಾಗುತ್ತದೆ. ಇವರ ಅನಂತರ ಆಳಿದ ರಾಷ್ಟ್ರಕೂಟರು ಇವರ ಸೇನೆಯನ್ನು ಕರ್ನಾಟಕಬಲ ಎಂದು ಕರೆದಿರುವುದನ್ನು ಇಲ್ಲಿ ಗಮನಿಸಬಹುದು. 8ನೆಯ ಶತಮಾನದಲ್ಲಿ ಪಾಂಡ್ಯರು ಕರ್ನಾಟಕದ ಈ ಅರಸರೊಂದಿಗೆ ಸಂಬಂಧ ಬೆಳೆಸಿದ್ದರು. ಪಾಂಡ್ಯ ವಂಶದ ನೆಡುಂಜಡೈಯನ ಅಜ್ಜನಾದ ಶಡೈಯನನ್ನು ಶಾಸನದಲ್ಲಿ ಮಧುರ ಕರುಣಾಟಕನ್ ಎಂದು ವರ್ಣಿಸಿರುವುದು ಪಾಂಡ್ಯರು ಕರ್ನಾಟಕದವರೊಡನೆ - ಚಳುಕ್ಯರೊಡನೆ ಹೊಂದಿದ್ದ ಮಧುರವಾದ ಸಂಬಂಧದ ದ್ಯೋತಕವಾಗಿದೆ. ವಿಷ್ಣುವರ್ಧನರಾಜ ಎಂಬ ಹೆಸರಿನ ಕನ್ನಡ ರೂಪವಾದ ಬಿಟ್ಟರಸ ಎಂಬುದನ್ನು ಒಂದು ತಾಮ್ರ ಶಾಸನದ ಮೊಹರಿನ ಮೇಲೆ ಕೆತ್ತಲಾಗಿದೆ. ಈ ವಂಶದ ಬುದ್ಧವರಸನ ಬಿರುದು ಮದನಂಗಾಶ್ರಯ ಎಂದಿತ್ತು ಎಂಬ ವಿಷಯ ಇನ್ನೊಂದು ಶಾಸನದಿಂದ ತಿಳಿದಿದೆ. ಇದು ಸುಸ್ಪಷ್ಟವಾಗಿ ಕನ್ನಡದ ಬಿರುದು. ಈ ಎಲ್ಲ ಮಾಹಿತಿಗಳಿಂದ ಚಾಳುಕ್ಯರು ಮೂಲತಃ ಕನ್ನಡಿಗರೇ ಎಂಬುದೂ ಇವರು ಉತ್ತರದ ಅಯೋಧ್ಯೆಯಿಂದ ಬಂದವರೆಂಬುದು ಅನಂತರ ಹೆಣೆಯಲಾದ ಕಥೆಯೆಂಬುದೂ ಸ್ಪಷ್ಟ. (ಬಿ.ಆರ್.ಜಿ.)

## ಬಾದಾಮಿಯ ಚಳುಕ್ಯರು

**ರಾಜಕೀಯ ಇತಿಹಾಸ :** ಆರನೆಯ ಶತಮಾನದಲ್ಲಿ ವಾತಾಪಿ ಅಥವಾ ಬಾದಾಮಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡ ಇವರು ಸುಮಾರು ಎರಡು ಶತಮಾನಗಳ ಕಾಲ ರಾಜ್ಯವಾಳಿದರು. ಭಾರತದ ನಾನಾ ಪ್ರಾಂತ್ಯಗಳಲ್ಲಿ ಆಳಿದ ಚಾಳುಕ್ಯ ವಂಶಗಳಲ್ಲಿ ಬಾದಾಮಿ ಶಾಖೆಯೇ ಪ್ರಾಚೀನತಮವಾದುದು. ಬಾದಾಮಿಯ ಚಳುಕ್ಯರನ್ನು ಹಾರೀತಿಪುತ್ರರು, ಮಾನವ್ಯಸ ಗೋತ್ರಕ್ಕೆ ಸೇರಿದವರು, ಸಪ್ತಮಾತೃಕೆಯರಿಂದ ಪೋಷಿತರು ಹಾಗೂ ಕಾರ್ತಿಕೇಯನ ಆರಾಧಕರು, ನಾರಾಯಣ ಅನುಗ್ರಹಿಸಿದ ವರಾಹಲಾಂಛನರು ಎಂದು ಇವರ ಶಾಸನಗಳು ವರ್ಣಿಸುತ್ತವೆ.

ಸಾಹಿತ್ಯ ಹಾಗೂ ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಮೊದಲ ಚಳುಕ್ಯ ದೊರೆ ಜಯಸಿಂಹ, ಈತ ಕದಂಬರ ಅಧೀನದಲ್ಲಿ ಒಬ್ಬ ಅಧಿಕಾರಿಯೋ, ಮಾಂಡಲಿಕನೋ ಆಗಿದ್ದನೆಂದು ತೋರುತ್ತದೆ. ಮಾನ್ಯಪುರ ಶಾಖೆಯ ರಾಷ್ಟ್ರಕೂಟ ಅರಸ ಅಭಿಮನ್ಯುವಿನ ಮಾಂಡಲಿಕ ಜಯಸಿಂಹನೆಂಬುವನ ಹೆಸರು ಶಾಸನೋಕ್ತವಾಗಿದೆ. ಇವನೇ ಚಳುಕ್ಯ ಜಯಸಿಂಹನಾಗಿದ್ದಿರಬಹುದೆಂದು ಊಹಿಸಲೂ ಅವಕಾಶವಿದೆ. ಆದರೆ ಖಚಿತವಾದ ಆಧಾರಗಳಿಲ್ಲ. ಜಯಸಿಂಹ 500ರಿಂದ 520ರವರೆಗೆ ರಾಜ್ಯವಾಳಿರಬಹುದು. ಇವನ ಮಗ ರಣರಾಗ (ಸು.520-40). ಇವನ ಬಗ್ಗೆ ಹೆಚ್ಚಿನ ವಿವರಗಳೇನೂ ತಿಳಿದುಬಂದಿಲ್ಲ.

ರಣರಾಗನ ಮಗ ಒಂದನೆಯ ಪುಲಕೇಶಿ (540-66). ಈತ ಇತಿಹಾಸದ ದೃಷ್ಟಿಯಿಂದ ಚಳುಕ್ಯ ಸಾಮ್ರಾಜ್ಯದ ಸ್ಥಾಪಕ, ಕದಂಬರನ್ನು ಅಧಿಕಾರದಿಂದ ಪದಚ್ಯುತಗೊಳಿಸಿ ಸ್ವತಂತ್ರ ರಾಜ್ಯವೊಂದರ ನಿರ್ಮಾಣಕ್ಕೆ ಅಡಿಪಾಯ ಹಾಕಿದ. ಬಾದಾಮಿಯನ್ನು ಚಳುಕ್ಯ ರಾಜ್ಯದ ರಾಜಧಾನಿಯಾಗಿ ಸ್ಥಾಪಿಸಿದ. ಅನಂತರ ಒಂದನೆಯ ಕೀರ್ತಿವರ್ಮ (566-96) ಚಳುಕ್ಯ ರಾಜ್ಯವನ್ನು ಸುಭದ್ರಗೊಳಿಸಿದ. ನಳ, ಮೌರ್ಯ ಹಾಗೂ ಕದಂಬರಿಗೆ ಕಾಳರಾತ್ರಿ ಸ್ವರೂಪನಾಗಿದ್ದು, ಸೇಂದ್ರಕರನ್ನೂ ತನ್ನ ಅಧೀನರನ್ನಾಗಿ ಮಾಡಿಕೊಂಡು ರಾಜ್ಯವನ್ನು ವಿಸ್ತರಿಸಿದ.

ಕೀರ್ತಿವರ್ಮನ ಮರಣಾನಂತರ ಅವನ ಮಗನಾದ ಇಮ್ಮಡಿ ಪುಲಕೇಶಿ ರಾಜ್ಯವಾಳಲು ಪ್ರಾಪ್ತವಯಸ್ಕನಾಗಿರಲಿಲ್ಲವಾಗಿ ಕೀರ್ತಿವರ್ಮನ ತಮ್ಮ ಮಂಗಲೀಶ (596-619) ರಾಜ್ಯಸೂತ್ರಗಳನ್ನು ವಹಿಸಿಕೊಂಡ. ಸು.602ರಲ್ಲಿ ಕಳಚುರಿ ಬುದ್ಧರಾಜ, ಕೊಂಕಣದ ರೇವತೀ ದ್ವೀಪದ ಸ್ವಾಮಿರಾಜ ಇವರನ್ನು ಸೋಲಿಸಿ ಚಳುಕ್ಯ ರಾಜ್ಯವನ್ನು ಮತ್ತಷ್ಟು ವಿಸ್ತರಿಸಿದ. ಇಮ್ಮಡಿ ಪುಲಕೇಶಿಯ ಐಹೊಳೆ ಶಾಸನದಿಂದ, ಈತನ ಸೈನ್ಯ ಪೂರ್ವ ಪಶ್ಚಿಮ ಸಮುದ್ರಪರ್ಯಂತ ಕಾರ್ಯನಿರತವಾಗಿತ್ತೆಂಬ ಸೂಚನೆ ಇರುವುದರಿಂದ ಬಹುಶಃ ಒಂದು ಚಿಕ್ಕ ಪ್ರದೇಶಕ್ಕೆ ಸೀಮಿತವಾಗಿದ್ದ ರಾಜ್ಯವನ್ನು ವಿಸ್ತಾರವಾದ ಸಾಮ್ರಾಜ್ಯವಾಗಿ ಬೆಳೆಸಿದ ಕೀರ್ತಿ ಈತನದಾಗಿರಬೇಕು. ಆದರೆ ಸಿಂಹಾಸನದ ಹಕ್ಕುದಾರನಾದ ಕೀರ್ತಿವರ್ಮನ ಮಗ ಇಮ್ಮಡಿ ಪುಲಕೇಶಿ ವಯಸ್ಕನಾದಾಗಲೂ ಅವನಿಗೆ ರಾಜ್ಯವನ್ನು ಕೊಡಲು ಇಷ್ಟಪಡದೆ ರಾಜ್ಯ ತನ್ನ ವಂಶದಲ್ಲೇ ಮುಂದುವರಿಯಬೇಕೆಂಬ ಆಸಕ್ತಿಯನ್ನು ಹೊಂದಿದ್ದನಾಗಿ ಇವರಿಬ್ಬರಲ್ಲಿ ವಿರಸ ಮೂಡಿ ಕೊನೆಗೆ ನಡೆದ ಘರ್ಷಣೆಯಲ್ಲಿ ಮಂಗಲೀಶ ಸತ್ತ (ಸು.610).



ಮೇಗುಟಿ ದೇವಾಲಯ - ಐಹೊಳೆ

ಇಮ್ಮಡಿ ಪುಲಕೇಶಿ (610-42) ಕರ್ನಾಟಕ ಇತಿಹಾಸದಲ್ಲಿ ಮಾತ್ರವಲ್ಲದೆ ಪ್ರಾಚೀನ ಭಾರತೀಯ ಇತಿಹಾಸದಲ್ಲೇ ಕಂಡುಬರುವ ಅಪ್ರತಿಮ ಸಾರ್ವಭೌಮರಲ್ಲೊಬ್ಬ. ಸಾಮ್ರಾಜ್ಯ ನಿರ್ಮಾತೃವಿನಲ್ಲಿರಬೇಕಾದ ರಾಜಕೀಯ ನೈಪುಣ್ಯ, ಮಹತ್ವಾಕಾಂಕ್ಷೆ, ದಕ್ಷತೆ ಹಾಗೂ ದೂರದೃಷ್ಟಿ ಇವನಲ್ಲಿದ್ದವು. ಅಧಿಕಾರಕ್ಕೆ ಬಂದ ಹೊಸದರಲ್ಲಿ ಉಂಟಾಗಿದ್ದ ರಾಜಕೀಯ ಅಸ್ತವ್ಯಸ್ತತೆಯ ಲಾಭವನ್ನು ಹೊಂದಲಪೇಕ್ಷಿಸಿದ ಅಪ್ಪಾಯಿಕ ಮತ್ತು ಗೋವಿಂದ ಎಂಬುವರನ್ನೂ ನಿಗ್ರಹಿಸುವುದು ಮೊದಲಾದ ಕಾರ್ಯಗಳಿಂದ ಮೊದಲು ತನ್ನ ರಾಜ್ಯವನ್ನು ಸುಭದ್ರವಾಗಿಸಿ, ಅನಂತರ ದಿಗ್ವಿಜಯವನ್ನು ಕೈಕೊಂಡ. ಐಹೊಳೆಯಲ್ಲಿರುವ ಇವನ ಶಾಸನದಲ್ಲಿನ ವಿವರಗಳ ಪ್ರಕಾರ ಮೊದಲು ಕದಂಬ ರಾಜಧಾನಿ ಬನವಾಸಿಯನ್ನು ಆಕ್ರಮಿಸಿದ. ಇವನ ಸಾಮರ್ಥ್ಯವನ್ನು ಮನಗಂಡ ದಕ್ಷಿಣ ಕನ್ನಡ ಜಿಲ್ಲೆಯ ಆಳುಪರು ಹಾಗೂ ತಲಕಾಡಿನ ಗಂಗರು ಇವನಿಗೆ ಬೆಂಬಲ ನೀಡಿ ಸಾರ್ವಭೌಮತ್ವವನ್ನು ಒಪ್ಪಿಕೊಂಡರು.

ಅನಂತರ ಕೊಂಕಣದತ್ತ ಮುಂದುವರಿದು ಮೌರ್ಯರನ್ನು ನೌಕಾಯುದ್ಧದಲ್ಲಿ ಸದೆಬಡಿದ. ಮುಂದೆ ಉತ್ತರಾಭಿಮುಖವಾಗಿ ಹೊರಟು ಲಾಟ, ಮಾಳವ ಮತ್ತು ಗೂರ್ಜರರನ್ನು ಸೋಲಿಸಿ ಮಾಹೀ ನದಿಯವರೆಗೆ ತನ್ನ ರಾಜ್ಯವನ್ನು ವಿಸ್ತರಿಸಿದ. ಪುಲಕೇಶಿಯ ಈ ದಿಗ್ವಿಜಯ ಹರ್ಷನನ್ನು ಎಚ್ಚರಿಸಿರಬೇಕು. ಇದರಿಂದ ಉತ್ತರ ಮತ್ತು ದಕ್ಷಿಣ ಭಾರತಗಳ ಶ್ರೇಷ್ಠ ಸಾರ್ವಭೌಮರಿಬ್ಬರಿಗೂ ನರ್ಮದಾ ತೀರದಲ್ಲಿ ಯುದ್ಧವಾಯಿತು. ಪುಲಕೇಶಿ ಜಯಿಸಲಸಾಧ್ಯವಾದ ಶತ್ರು ಎಂಬುದನ್ನು ಹರ್ಷ ಮನಗಾಣಬೇಕಾಯಿತು. ಅವನ ಗಜಸೈನ್ಯಕ್ಕೆ ಅಪಾರ ನಷ್ಟವುಂಟಾಯಿತು. ಈ ವಿಜಯದ ನೆನಪಾಗಿ ಪುಲಕೇಶಿ ಪರಮೇಶ್ವರನೆಂಬ ಬಿರುದನ್ನು ಧರಿಸಿದ (ಸು.612). ಈ ವಿಷಯಗಳಿಂದ ಪುಲಕೇಶಿ ತೊಂಬತ್ತೊಂಬತ್ತು ಸಹಸ್ರ ಗ್ರಾಮಗಳಿಂದ ಕೂಡಿದ ಮಹಾರಾಷ್ಟ್ರ ತ್ರಯಗಳ ಪ್ರಭುವಾದ. ಅನಂತರ ಪುಲಕೇಶಿ ದಕ್ಷಿಣಾಪಥದ ಪೂರ್ವದೇಶಗಳನ್ನು ಜಯಿಸಲು ಹೊರಟ. ಕೋಸಲ ಮತ್ತು ಕಳಿಂಗದ ಅರಸರು ಪುಲಕೇಶಿಯ ಸೈನ್ಯಾಗಮನದಿಂದಲೇ ಭೀತರಾಗಿ ಇವನಿಗೆ ಶರಣಾಗತರಾದರು. ಮುಂದೆ ಸಾಗಿದ ಪುಲಕೇಶಿ ಪಿಷ್ಟಪುರವನ್ನು (ಗುಂಟೂರು ಜಿಲ್ಲೆಯ ಪಿಠಾಪುರಂ) ವಶಮಾಡಿಕೊಂಡ. ಅನಂತರ ಕುನಾಲ (ಎಲ್ಲೂರಿನ ಬಳಿಯ ಕೊಲ್ಲೇರು) ಪ್ರದೇಶವನ್ನು ಜಯಿಸಿದ.

ಮತ್ತೆ ದಕ್ಷಿಣದತ್ತ ಮುಂದುವರಿದು ಪಲ್ಲವ ಒಂದನೆಯ ಮಹೇಂದ್ರವರ್ಮನ ರಾಜ್ಯವನ್ನು ಆಕ್ರಮಿಸಿದ. ಪಲ್ಲವ ರಾಜಧಾನಿ ಕಂಚಿಗೆ

ಸಮೀಪದಲ್ಲಿರುವ ಪುಲ್ಲಲೂರಿನಲ್ಲಿ ನಡೆದ ಈ ಯುದ್ಧದಲ್ಲಿ ಪಲ್ಲವ ಅರಸ ಸೋತ. ಪಲ್ಲವ ರಾಜ್ಯದ ಉತ್ತರ ಭಾಗಗಳು ಪುಲಕೇಶಿಯ ವಶವಾದವು. ಹಲವು ಶತಮಾನಗಳವರೆಗೆ ದಕ್ಷಿಣ ಭಾರತದ ಇತಿಹಾಸದಲ್ಲಿ ಪ್ರಮುಖವಾಗಿ ಕಂಡುಬರುವ ಕನ್ನಡ ನಾಡಿನ ಹಾಗೂ ತಮಿಳು ನಾಡಿನ ಅರಸರ ವೈಷಮ್ಯಕ್ಕೆ ಈ ಘಟನೆಯೇ ನಾಂದಿಯಾಯಿತೆಂದರೆ ತಪ್ಪಾಗಲಾರದು. ಪಲ್ಲವರನ್ನು ಸೋಲಿಸಲು ಕಾತುರರಾಗಿದ್ದ ಚೋಳ, ಪಾಂಡ್ಯ ಹಾಗೂ ಕೇರಳದ ಅರಸರು ಚಳುಕ್ಯರ ಸ್ನೇಹವನ್ನು ಸಂಪಾದಿಸಿಕೊಂಡರು.



ಬಾದಾಮಿಯ ಕೋಟೆ

ಹೀಗೆ ಎಲ್ಲೆಡೆಗಳಲ್ಲಿಯೂ ವಿಜಯಗಳನ್ನು ಸಂಪಾದಿಸಿದ ಪುಲಕೇಶಿ ವಾತಾಪಿಗೆ ಹಿಂದಿರುಗಿದ. ಲೋಹನೇರ ಶಾಸನ ಇವನನ್ನು ಪೂರ್ವಾಪರಸಮುದ್ರಾಧಿಪತಿ ಎಂದು ವರ್ಣಿಸಿರುವುದರಿಂದ ಇವನ ಸಾಮ್ರಾಜ್ಯ ಪೂರ್ವಸಮುದ್ರದಿಂದ ಪಶ್ಚಿಮ ಸಮುದ್ರದವರೆಗೆ ಹಬ್ಬಿತ್ತೆಂದು ಹೇಳಬಹುದು. ಪುಲಕೇಶಿ ತಾನು ಗೆದ್ದ ಪ್ರದೇಶಗಳಲ್ಲಿ ರಾಜ್ಯಭಾರ ನಡೆಸಲು ಅನುಕೂಲವಾಗುವಂತೆ ಏರ್ಪಾಡುಗಳನ್ನು ಮಾಡಿದ. ನಾಸಿಕ ಪ್ರದೇಶದಲ್ಲಿ ಧರಾಶ್ರಯ ಜಯಸಿಂಹನೆಂಬ ಸೋದರನನ್ನು ಮತ್ತು ವೆಂಗಿ ದೇಶದಲ್ಲಿ ಇನ್ನೊಬ್ಬ ಸೋದರನಾದ ಕುಬ್ಜ ವಿಷ್ಣುವರ್ಧನನನ್ನು ರಾಜ್ಯಪಾಲರಾಗಿ ನಿಯಮಿಸಿದ.

ಪುಲಕೇಶಿ ಒಬ್ಬ ಉತ್ತಮ ಯೋಧ, ಶ್ರೇಷ್ಠ ದಿಗ್ವಿಜಯಿ, ದಕ್ಷ ಆಡಳಿತಗಾರ. ಆದರೆ ಇವನಿಗೆ ಒದಗಿಬಂದ ಅಂತ್ಯ ಮಾತ್ರ ದುರದೃಷ್ಟಕರವಾದುದು. ಪಲ್ಲವ ಮಹೇಂದ್ರವರ್ಮನ ಮಗ ಒಂದನೆಯ ನರಸಿಂಹ ಪುಲಕೇಶಿಯಿಂದ ತನ್ನ ತಂದೆಗೆ ಒದಗಿದ್ದ ಸೋಲಿನ ಅವಮಾನದ ಸೇಡನ್ನು ತೀರಿಸಿಕೊಳ್ಳಲು ನಿರ್ಧರಿಸಿ, ಅಪಾರ ಸೈನ್ಯ ಸಹಿತನಾಗಿ ವಾತಾಪಿಯತ್ತ ಮುನ್ನುಗ್ಗಿ ವಾತಾಪಿಯನ್ನು ಸುಟ್ಟು ತನ್ನ ವಶ ಮಾಡಿಕೊಂಡ; ವಾತಾಪಿಕೊಂಡ ಎಂಬ ಬಿರುದನ್ನು ಧರಿಸಿದ. ಈ ಘಟನೆ ಸು.642ರಲ್ಲಿ ನಡೆಯಿತೆಂದು ತೋರುತ್ತದೆ. ಪುಲಕೇಶಿ ಪ್ರಾಯಶಃ ಈ ಯುದ್ಧದಲ್ಲಿ ಮಡಿದಿರಬೇಕು.

ಪುಲಕೇಶಿಯ ಮರಣಾನಂತರ ಸುಮಾರು ಹದಿಮೂರು ವರ್ಷಗಳ ವರೆಗಿನ ಕಾಲ ಚಳುಕ್ಯ ಇತಿಹಾಸದಲ್ಲಿ ಕತ್ತಲೆಯ ಕಾಲ. ಸು.655ರಲ್ಲಿ ಪಲ್ಲವರ ವಶವಾಗಿದ್ದ ಚಳುಕ್ಯ ಸಾಮ್ರಾಜ್ಯವನ್ನು ಸ್ವಸಾಮರ್ಥ್ಯದಿಂದ ಸ್ವತಂತ್ರಗೊಳಿಸಿ ಒಂದನೆಯ ವಿಕ್ರಮಾದಿತ್ಯ ಪಟ್ಟಕ್ಕೆ ಬಂದ. ಚಳುಕ್ಯ ಸಾಮ್ರಾಜ್ಯ ದುರ್ದೆಶೆಯಲ್ಲಿದ್ದಾಗ ಹಲವಾರು ಸಾಮಂತರು ಸ್ವತಂತ್ರರಾಗತೊಡಗಿದರು. ಅವರನ್ನೆಲ್ಲ ನಿಗ್ರಹಿಸಿ ಪುನಃ ಸಾರ್ವಭೌಮತ್ವವನ್ನು ಸ್ಥಾಪಿಸಿದ ವಿಕ್ರಮಾದಿತ್ಯನು ಪರಮೇಶ್ವರ ಎಂಬ ಬಿರುದನ್ನು ಪಡೆದನೆಂದು ಹೇಳಲಾಗಿದೆ. ಆದರೆ ಇವನ ವಿಜಯಗಳ ವಿವರಗಳು ಮಾತ್ರ ಲಭ್ಯವಾಗಿಲ್ಲ. ದತ್ತಮಂಡಲ ಹಾಗೂ ನೆಲ್ಲೂರು ಪ್ರದೇಶ ಮುಂತಾದ ಇತರ ಪ್ರಾಂತ್ಯಗಳನ್ನು ವಿಕ್ರಮಾದಿತ್ಯ ಜಯಿಸಿದ. ಪುಲಕೇಶಿಯ ಕಾಲದಲ್ಲಿ ಪೂರ್ವ ಚಳುಕ್ಯ ಶಾಖೆ ಆರಂಭವಾದಂತೆ, ಇವನ ಕಾಲದಲ್ಲಿ ಗುಜರಾತಿನ ಶಾಖೆ ಆರಂಭವಾಯಿತು. ಇವನು ಪಲ್ಲವರನ್ನು ಜಯಿಸಿದ ಸಂಗತಿಯನ್ನು ಧರಾಶ್ರಯನ ನವಸಾರಿ ಶಾಸನವೇ ತಿಳಿಸುತ್ತದೆ. 670-71ರಲ್ಲಿ ವಿಕ್ರಮಾದಿತ್ಯ ಕಂಚಿಯ ಸಮೀಪದ ಮಲ್ಲಿಯೂರಿನಲ್ಲಿ ಸೈನ್ಯದೊಂದಿಗೆ ಬೀಡುಬಿಟ್ಟಿದ್ದ. 674ರಲ್ಲಿ ಕಾವೇರಿ ನದಿಯ ದಕ್ಷಿಣ ತೀರದ ಚೋಳಿಕ ವಿಷಯದ ಉರಗಪುರದಲ್ಲಿ ಇದ್ದ. 674ರ ಹೊತ್ತಿಗೆ ಪೆರುವಳನಲ್ಲೂರು ಎಂಬಲ್ಲಿ ಚಳುಕ್ಯರು ಮತ್ತು ಪಲ್ಲವರಿಗೆ ಯುದ್ಧ ನಡೆದಂತೆ ತೋರುತ್ತದೆ. ಈ ಬಗ್ಗೆ ವಿವರಗಳು ತಿಳಿದುಬಂದಿಲ್ಲ. ಒಟ್ಟಿನಲ್ಲಿ ವಿಕ್ರಮಾದಿತ್ಯ ತನ್ನ ಆಳಿಕೆಯ ಅಂತ್ಯದ ಹೊತ್ತಿಗೆ ತನ್ನ ರಾಜ್ಯವನ್ನು ಭದ್ರಪಡಿಸಿಕೊಂಡಿದ್ದನಲ್ಲದೆ ರಾಜ್ಯದ ಶತ್ರುಗಳ ನಿಗ್ರಹದಲ್ಲಿ ಒಂದೇ ಸಮನೆ ಶ್ರಮಿಸಿ ಸಫಲನಾಗಿದ್ದ. ವಿಕ್ರಮಾದಿತ್ಯನ ವಿಜಯಗಳಲ್ಲಿ ಅವನ ಮಗ ವಿನಯಾದಿತ್ಯ ಹಾಗೂ ಮೊಮ್ಮಗ ವಿಜಯಾದಿತ್ಯ ಗಮನೀಯವಾದ ಪಾತ್ರ ವಹಿಸಿದ್ದರು.

681ರಲ್ಲಿ ಒಂದನೆಯ ವಿಕ್ರಮಾದಿತ್ಯನ ಆಳಿಕೆ ಕೊನೆಗೊಂಡು, ಅನಂತರ ಯುವರಾಜನಾಗಿದ್ದ ವಿನಯಾದಿತ್ಯ ರಾಜ್ಯವನ್ನು ವಹಿಸಿಕೊಂಡ. ಇವನ ಕಾಲದಲ್ಲಿ ಸುಖಶಾಂತಿಗಳು ನೆಲೆಸಿದ್ದವು. ಕ್ರಮೇಣ ಪಾರಸಿಕ ಮತ್ತು ಸಿಂಹಳದ ಅರಸರನ್ನು ಈತ ಜಯಿಸಿದನೆಂದು ಶಾಸನಗಳು ತಿಳಿಸುತ್ತವೆ. ಆಳುಪರು ಹಾಗೂ ಸೇಂದ್ರಕರು ಇವನಿಗೆ ವಿಧೇಯರಾಗಿ ಸಾಮಂತರಾಗಿದ್ದರು. ಉತ್ತರ ಭಾರತದ ರಾಜನೊಬ್ಬನನ್ನು ಬಹುಶಃ ಕನೌಜಿನ ಯಶೋವರ್ಮ ಅಥವಾ ವಜ್ರಟನನ್ನು ಸೋಲಿಸಿ ಗಂಗಾ, ಯಮುನಾ ಹಾಗೂ ಪಾಳಿಧ್ವಜದ ಚಿಹ್ನೆಯನ್ನು ಇವನು ವಶಮಾಡಿಕೊಂಡನೆಂದು ಕೆಲವು ಶಾಸನಗಳಲ್ಲಿ ಹೇಳಿದೆ.

ಮುಂದೆ ವಿನಯಾದಿತ್ಯನ ಮಗ ವಿಜಯಾದಿತ್ಯ (696-733) ರಾಜನಾದ. ಇವನ ಆಳಿಕೆ ದೀರ್ಘವೂ ಶಾಂತಿಯುತವೂ ಆಗಿತ್ತು. ಇವನ ಕಾಲದಲ್ಲಿಯೂ ಪಲ್ಲವರ ಮೇಲೆ ಯುದ್ಧ ನಡೆಯಿತು. ಉಳ್ಚಾಲ ಶಾಸನದ ಪ್ರಕಾರ ಯುವರಾಜ ಎರಡನೆಯ ವಿಕ್ರಮಾದಿತ್ಯನ ನಾಯಕತ್ವದಲ್ಲಿ ಚಳುಕ್ಯ ಸೈನ್ಯ ಕಾಂಚೀಪುರಕ್ಕೆ ದಾಳಿ ಇಟ್ಟು ಎರಡನೆಯ ಪರಮೇಶ್ವರವರ್ಮನನ್ನು ಸೋಲಿಸಿ ಕಪ್ಪಕಾಣಿಕೆಗಳನ್ನು ಪಡೆಯಿತು.

ಅನಂತರ ಪಟ್ಟಕ್ಕೆ ಬಂದವನು ಇವನ ಮಗನಾದ ಎರಡನೆಯ ವಿಕ್ರಮಾದಿತ್ಯ (733-45). ರಾಜ್ಯ ವಹಿಸಿಕೊಂಡ ಅನತಿ ಕಾಲದಲ್ಲೇ ಇವನು ಅರಬ್ಬರ ಆಕ್ರಮಣವನ್ನು ಎದುರಿಸಬೇಕಾಯಿತು. ತಾಜಿಕರು ಅಥವಾ ಅರಬ್ಬರು ಸೈಂಧವ, ಕಚ್ಛೇಲ, ಸೌರಾಷ್ಟ್ರ, ಮೌರ್ಯ ಮುಂತಾದವರನ್ನು ನಿರ್ನಾಮಗೊಳಿಸಿ ದಕ್ಷಿಣಾಪಥ'ವನ್ನು ಪ್ರವೇಶಿಸಲಪೇಕ್ಷಿಸಿ ನವಸಾರಿಕಾ ಪ್ರಾಂತ್ಯವನ್ನು ವಶಮಾಡಿಕೊಳ್ಳಲು ಪ್ರಯತ್ನಿಸಿದರು. ಆದರೆ ಅವರ ಪ್ರಯತ್ನ ಸಫಲವಾಗಲಿಲ್ಲ. ಆ ಪ್ರಾಂತ್ಯದ ಅಧಿಕಾರಿಯಾಗಿದ್ದ ಚಾಳುಕ್ಯ ಶಾಖೆಯ ಅವನಿಜನಾಶ್ರಯ ಪುಲಕೇಶಿ ಅರಬ್ಬರನ್ನು ಹಿಮ್ಮೆಟ್ಟಿಸಿದ. ಇದರಿಂದ ಸಂತೋಷಗೊಂಡ ವಿಕ್ರಮಾದಿತ್ಯ ಅವನಿಗೆ ಅನೇಕ ಬಿರುದುಗಳನ್ನು ನೀಡಿದನೆಂದು ತಿಳಿದುಬರುತ್ತದೆ. ವಿಕ್ರಮಾದಿತ್ಯ ತನ್ನ ಕುಲವೈರಿಗಳಾದ ಪಲ್ಲವರೊಡನೆ ನಡೆಸಿದ ಯುದ್ಧ ಈ ಕಾಲದ ಇನ್ನೊಂದು ಪ್ರಮುಖ ಘಟನೆ. ಇವನು ಮೂರು ಬಾರಿ ಕಂಚಿಯನ್ನು ಜಯಿಸಿದನೆಂದು ಇವನ ಪತ್ನಿ ಲೋಕಮಹಾದೇವಿಯ ಪಟ್ಟದಕಲ್ಲಿನ ಶಾಸನದಿಂದ ತಿಳಿದುಬರುತ್ತದೆ. ಇವನು ಒಂದು ಯುದ್ಧದಲ್ಲಿ ಕಟುಮುಖವಾದಿತ್ರ, ಸಮುದ್ರಘೋಷ ಹಾಗೂ ಖಟ್ವಾಂಗಧ್ವಜಗಳನ್ನು ಪಲ್ಲವರರಸನಿಂದ ಕಿತ್ತುಕೊಂಡ. ಪಲ್ಲವರಸನ ಗಜಸೈನ್ಯವೂ ಅಪಾರ ಧನಸಂಪತ್ತೂ ಇವನ ವಶವಾಯಿತು. ಈ ಕಾಲದಲ್ಲಿ ಪಲ್ಲವ ಸಿಂಹಾಸನದಲ್ಲಿದ್ದವನು ಎರಡನೆಯ ನಂದಿವರ್ಮ ಪಲ್ಲವಮಲ್ಲ. ಯುದ್ಧ ಎಲ್ಲಿ ನಡೆಯಿತೆಂಬುದು ತಿಳಿಯದು. ವಿಕ್ರಮಾದಿತ್ಯ ಕಂಚಿಯನ್ನು ಪ್ರವೇಶಿಸಿ ಪಲ್ಲವರು ನಿರ್ಮಿಸಿದ್ದ ದೇವಾಲಯಗಳಿಗೆ ಅಪಾರ ಸಂಪತ್ತನ್ನು ದಾನವಾಗಿ ನೀಡಿ ತನ್ನ ಔದಾರ್ಯವನ್ನೂ ದೈವಭಕ್ತಿಯನ್ನೂ ಪ್ರದರ್ಶಿಸಿದ. ಪಲ್ಲವ ನರಸಿಂಹವರ್ಮ ಬಾದಾಮಿಯಲ್ಲಿ ಕೆತ್ತಿಸಿದ ತಮಿಳು ಶಾಸನಕ್ಕೆ

ಪ್ರತಿಯಾಗಿ ಕಂಚಿಯ ರಾಜಸಿಂಹೇಶ್ವರ ದೇವಾಲಯದ ಸ್ತಂಭವೊಂದರ ಮೇಲೆ ಕನ್ನಡ ಶಾಸನವನ್ನು ಕೆತ್ತಿಸಿದ. ಕಂಚಿಯುಂಗೊಂಡ ಎಂಬ ಬಿರುದನ್ನೂ ಧರಿಸಿದ.

ವಿಕ್ರಮಾದಿತ್ಯನ ಅನಂತರ ಅವನ ಮಗ ಇಮ್ಮಡಿ ಕೀರ್ತಿವರ್ಮ (745-57) ಆಳಿದ. ಇವನು ತನ್ನ ತಂದೆಯ ಜೀವಿತ ಕಾಲದಲ್ಲಿಯೇ ಯುವರಾಜನಾಗಿದ್ದು ಕಂಚಿಯನ್ನು ಆಕ್ರಮಿಸಿದ ವೀರ. ಇವನ ಆಳಿಕೆಯೂ ಶಾಂತಿಯುತವಾಗಿತ್ತು. ಆದರೆ ಚಳುಕ್ಯ ಬಲ ಕುಗ್ಗುತ್ತಿತ್ತು. ರಾಷ್ಟ್ರಕೂಟ ದಂತಿದುರ್ಗ 754ರ ಹೊತ್ತಿಗೆ ತನ್ನನ್ನು ಮಹಾರಾಜಾಧಿರಾಜನೆಂದೂ ಪಲ್ಲವರನ್ನು ನಿರ್ನಾಮಗೊಳಿಸಿದ ವೀರನೆಂದೂ ಕರೆದುಕೊಳ್ಳುವ ಮಟ್ಟಕ್ಕೆ ಬಂದಿದ್ದ. ಕೀರ್ತಿವರ್ಮನಿಗೆ ದಂತಿದುರ್ಗನ ಪ್ರಾಬಲ್ಯವನ್ನು ತಡೆಗಟ್ಟುವುದು ಸಾಧ್ಯವಾಗಲಿಲ್ಲ. 757ರವರೆಗೂ ಕೀರ್ತಿವರ್ಮ ಅರಸನಾಗಿ ಮುಂದುವರೆದರೂ ಕೊನೆಗೆ ಆ ವರ್ಷ ರಾಷ್ಟ್ರಕೂಟ ಕೃಷ್ಣನಿಂದ ಸೋಲಿಸಲ್ಪಟ್ಟ. ಕೀರ್ತಿವರ್ಮನ ಅಂತ್ಯದೊಂದಿಗೆ ಬಾದಾಮಿಯ ಚಳುಕ್ಯರ ಆಳಿಕೆ ಮುಕ್ತಾಯ ಹೊಂದಿತು. ಇವರ ಸ್ಥಾನವನ್ನು ರಾಷ್ಟ್ರಕೂಟರು ಆಕ್ರಮಿಸಿದರು. (ಎ.ವಿ.ಎನ್.)

ಶಾಸನಗಳ ಆಧಾರದಿಂದ ಬಾದಾಮಿಯ ಚಳುಕ್ಯರ ವಂಶಾವಳಿಯನ್ನು ಈ ರೀತಿ ನಿರೂಪಿಸಬಹುದು:

ಜಯಸಿಂಹ (ಸು.500-20)
|
ರಣರಾಗ (ಸು.520-40)
|
ಪುಲಕೇಶಿ (ಸು.540-66)

ಪೂಗವರ್ಮ — ಕೀರ್ತಿವರ್ಮ I (566-96) — ಮಂಗಲೀಶ(596-610)

ಕೀರ್ತಿವರ್ಮ I: ಪುಲಕೇಶಿ II (610-42) — ಕುಬ್ಜವಿಷ್ಣುವರ್ಧನ — ಧರಾಶ್ರಯ ಜಯಸಿಂಹ — ಬುದ್ಧವರಸ

ಪುಲಕೇಶಿ II: ಆದಿತ್ಯವರ್ಮ — ಚಂದ್ರಾದಿತ್ಯ — ರಣರಾಗ — ವಿಕ್ರಮಾದಿತ್ಯ I (655-81) — ಜಯಸಿಂಹ

ಆದಿತ್ಯವರ್ಮ: ಅಭಿನವಾದಿತ್ಯ

ವಿಕ್ರಮಾದಿತ್ಯ I:
ವಿನಯಾದಿತ್ಯ(681-96)
|
ವಿಜಯಾದಿತ್ಯ(696-733)
|
ವಿಕ್ರಮಾದಿತ್ಯ(733-45)
|
ಕೀರ್ತಿವರ್ಮII(745-57)

**ಆಡಳಿತ ವ್ಯವಸ್ಥೆ :** ರಾಜಪ್ರಭುತ್ವ ಈ ಕಾಲದಲ್ಲಿ ಆಚರಣೆಯಲ್ಲಿದ್ದ ರಾಜ್ಯ ಪದ್ಧತಿ. ರಾಜ್ಯದ ಆಡಳಿತದಲ್ಲಿ ರಾಜ ಸ್ವತಃ ಪಾಲುಗೊಂಡು ಪ್ರಮುಖ ಪಾತ್ರ ವಹಿಸುತ್ತಿದ್ದ. ರಾಜ್ಯ ಆನುವಂಶಿಕವಾಗಿ ತಂದೆಯಿಂದ ಹಿರಿಯ ಮಗನಿಗೆ ಬರುತ್ತಿತ್ತು. ಉತ್ತರಾಧಿಕಾರಿ ಅಪ್ರಾಪ್ತ ವಯಸ್ಕನಾಗಿದ್ದಾಗ ರಾಜ್ಯದ ಹೊಣೆ ಅರಸನ ತಮ್ಮನ ಮೇಲೆ ಬೀಳುತ್ತಿತ್ತು. ಮಂಗಲೀಶ ಇಮ್ಮಡಿ ಪುಲಕೇಶಿಯ ಪರವಾಗಿ ಆಳಿದುದನ್ನು ಇಲ್ಲಿ ಗಮನಿಸಬೇಕು. ಅಂತೆಯೇ ಉತ್ತರಾಧಿಕಾರಿ ಅಶಕ್ತನಾಗಿದ್ದಾಗ ರಾಜ್ಯವು ಮಕ್ಕಳಲ್ಲಿ ಸಮರ್ಥನಾದವನ ವಶವಾಗುತ್ತಿತ್ತು. ಇಮ್ಮಡಿ ಪುಲಕೇಶಿಯ ಅನಂತರ ಕುಸಿದಿದ್ದ ರಾಜ್ಯವನ್ನು ಮೇಲೆತ್ತಿ ಪುನಃ ಶಕ್ತಿಯುತವನ್ನಾಗಿ ಮಾಡಲು ಸಮರ್ಥನಾದ ವಿಕ್ರಮಾದಿತ್ಯನು ಪುಲಕೇಶಿಯ ಉತ್ತರಾಧಿಕಾರಿಯಾದುದು ಸಹಜವೆಂದೇ ಎನಿಸಿತು. ಸತ್ಯಾಶ್ರಯ, ಪೃಥ್ವೀವಲ್ಲಭ, ಮಹಾರಾಜಾಧಿರಾಜ ಪರಮೇಶ್ವರ, ಪರಮಭಟ್ಟಾರಕ -ಇವು ಈ ಅರಸರು ಸಾಮಾನ್ಯವಾಗಿ ಧರಿಸಿದ್ದ ಬಿರುದುಗಳು. ಧಾರ್ಮಿಕ ಪ್ರವೃತ್ತಿಯನ್ನನುಸರಿಸಿ ಪರಮಮಾಹೇಶ್ವರ, ಪರಮಭಾಗವತ ಎಂಬ ಬಿರುದುಗಳನ್ನೂ ಇವರು ಧರಿಸಿದ್ದರು.

ರಾಜ್ಯವನ್ನು ಹಲವಾರು ವಿಷಯಗಳಾಗಿ ವಿಂಗಡಿಸಲಾಗಿತ್ತೆಂದು ತೋರುತ್ತದೆ. ವಿಷಯ ಎಂಬುದು ಈಗಿನ ಜಿಲ್ಲೆ ಅಥವಾ ಅದಕ್ಕೂ ಹಿರಿದಾದ ಆಡಳಿತ ಪ್ರದೇಶ. ಬಾಣರಾಜ ವಿಷಯ, ಚೋಳಿಕ ವಿಷಯ, ಬೆಳ್ವಲ ವಿಷಯ, ಪಳಯಟ್ಟಾಣ ವಿಷಯ, ನಳವಾಡಿ ವಿಷಯ, ಪೆಡೆಕಲ್ಲು ವಿಷಯ ಇತ್ಯಾದಿಗಳ ಉಲ್ಲೇಖ ಶಾಸನಗಳಲ್ಲಿ ಬಂದಿವೆ. ಬಾಣರಾಜ ವಿಷಯ, ಚೋಳಿಕ ವಿಷಯ, ನಳವಾಡಿ ವಿಷಯಗಳು ಬಾಣ, ಚೋಳ, ನಳ ಮುಂತಾದ ಸಾಮಂತರ ಸ್ವಾಧೀನದಲ್ಲಿದ್ದ ವಿಷಯಗಳಾಗಿದ್ದು, ಅನಂತರ ಸಾಮ್ರಾಜ್ಯಕ್ಕೆ ಸೇರಿಹೋದ ಪ್ರದೇಶಗಳಾಗಿದ್ದಂತೆ ತೋರುತ್ತದೆ. ಈ ಎಲ್ಲ ವಿಷಯಗಳಿಗೂ ಅಧಿಪತಿಗಳಿದ್ದು ಅವರನ್ನು ವಿಷಯಾಧಿಪತಿ, ವಿಷಯಾಧಿಕರಣ, ಮಂಡಲಾಧಿಪತಿ ಎಂದು ಕರೆಯಲಾಗಿತ್ತು. ಈ ದೃಷ್ಟಿಯಲ್ಲಿ ವಿಷಯ ಮತ್ತು ಮಂಡಲ ಸಮಾನಾರ್ಥಕ ಪದಗಳು.

ಕೇಂದ್ರಾಧಿಕಾರಿಗಳು ಮತ್ತು ಅವರ ಕಾರ್ಯಕ್ಷೇತ್ರಗಳ ವಿವರಗಳು ನಮಗೆ ಹೆಚ್ಚಾಗಿ ತಿಳಿದುಬಂದಿಲ್ಲ. ತಾಮ್ರ ಶಾಸನಗಳಲ್ಲಿ ಅರಸ ತಾನು ಮಾಡಿದ ದಾನಕ್ಕೆ ಸಂಬಂಧಿಸಿದ ಆಜ್ಞೆಯನ್ನು ವಿಷಯಪತಿ, ಸಾಮಂತ, ಗ್ರಾಮಭೋಗಿಕ, ಮಹತ್ತರ ಮುಂತಾದ ಅಧಿಕಾರಿಗಳು ತಿಳಿಯತಕ್ಕದ್ದು ಎಂದು ಹೇಳುವುದರಿಂದ ಇವು ಅಧಿಕಾರಿಗಳ ಹೆಸರುಗಳೆಂಬುದು ತಿಳಿಯುತ್ತದೆ. ಮಹಾಸಂಧಿವಿಗ್ರಹಿ, ಮಹಾಕ್ಷಪಟಲಾಧಿಕೃತ ಮುಂತಾದವರು ಇತರ ಅಧಿಕಾರಿಗಳು. ಇವರು ಅರಸರ ಕಾರ್ಯದರ್ಶಿಗಳಾಗಿ ಕೆಲಸ ನಿರ್ವಹಿಸುತ್ತಿದ್ದರು. ರಾಜನ ಆಜ್ಞೆಗಳನ್ನೂ ನೀಡಿದ ದಾನಗಳನ್ನೂ ಬರೆಹರೂಪಕ್ಕೆ ಇಳಿಸಿ, ಕಾರ್ಯಗತ ಮಾಡುವ ಹೊಣೆಗಾರಿಕೆ ಇವರದಾಗಿತ್ತು. ಪುಣ್ಯವಲ್ಲಭರೆಂಬ ಕುಲಕ್ಕೆ ಸೇರಿದ ಇಂಥ ನಾಲ್ಕರು ಅಧಿಕಾರಿಗಳ ಹೆಸರುಗಳು ಶ್ರೀರಾಮ, ಅನಿರವದ್ಯ, ಅನಿವಾರಿತ, ಧನಂಜಯ ಶಾಸನಗಳಿಂದ ತಿಳಿದುಬಂದಿದೆ. ಶಾಸನಗಳನ್ನು ಬರೆಯಲು ಸಹ ಅಧಿಕಾರಿಗಳಿದ್ದರು. ಮಹೇಂದ್ರ ಪಲ್ಲವಾಚಾರಿ, ಸಿಂಗುಟ್ಟೆ, ಈಶಾನ ಮುಂತಾದವರು ಇಂಥ' ಲೇಖಕರು. ಕೇಂದ್ರ ಆಡಳಿತ ಕಾರ್ಯಗಾರವೊಂದಿದ್ದು ಅಲ್ಲಿ ವ್ಯವಸ್ಥಿತ ರೀತಿಯಲ್ಲಿ ದಾಖಲೆಗಳನ್ನು ಇಡಲಾಗಿದ್ದಿತೆಂದು ಊಹಿಸಬಹುದಾಗಿದೆ. ಹಿಂದೆ ಮಾಡಲಾದ ಶಾಸನಗಳನ್ನು ಉಲ್ಲೇಖಿಸಿ ಅದಕ್ಕೆ ಮತ್ತಷ್ಟನ್ನು ಸೇರಿಸಿಯೋ ಅಥವಾ ಲುಪ್ತವಾಗಿದ್ದಲ್ಲಿ ಅವುಗಳನ್ನು ಪುನರುಜ್ಜೀವನಗೊಳಿಸಿಯೋ ನೀಡಲಾದ ದಾನಶಾಸನಗಳಿವೆ.

ಆಡಳಿತದ ಘಟಕಗಳಲ್ಲಿ ಅತಿ ಸಣ್ಣದು ಗ್ರಾಮ. ಇದರ ಮುಖ್ಯಸ್ಥ ಗಾಮುಂಡ. ಕರಣ (ಗ್ರಾಮಭೋಗಿಕ) ಎಂಬುವನು ಇನ್ನೊಬ್ಬ ಗ್ರಾಮಾಧಿಕಾರಿ. ಈತ ಲೆಕ್ಕಪತ್ರಗಳ ವಹಿವಾಟನ್ನು ನಡೆಸುತ್ತಿದ್ದ. ಅರಸನಿಗೂ ಇತರ ಹಿರಿಯ ಆಡಳಿತಾಧಿಕಾರಿಗಳಿಗೂ ಇವರು ಆಡಳಿತದಲ್ಲಿ ಪ್ರಮುಖವಾದ ಕೊಂಡಿಗಳೂ ಆಗಿದ್ದರು. ಅಗ್ರಹಾರ ಗ್ರಾಮಗಳಲ್ಲಿ ಗ್ರಾಮದ ಹಿರಿಯರೆಲ್ಲ ಕೂಡಿದ ಮಹಾಜನ ಎಂಬ ಒಂದು ಸಮುದಾಯ ಇರುತ್ತಿತ್ತು. ಸಾಂಘಿಕ ಜೀವನಕ್ಕೆ ಸಂಬಂಧಿಸಿದಂತೆ ಕಟ್ಟುಪಾಡುಗಳನ್ನು ರೂಪಿಸುವ, ಗ್ರಾಮಸ್ಥರ ಯೋಗಕ್ಷೇಮವನ್ನು ವಹಿಸುವ, ಸಾಮಾಜಿಕ ವ್ಯವಸ್ಥೆ ಕಾಪಾಡುವ ಕರ್ತವ್ಯ ಮಹಾಜನರದು. ಅನೇಕ ಸಂದರ್ಭಗಳಲ್ಲಿ ಇವರ ಅಪ್ಪಣೆಯನ್ನು ಪಡೆದೆ ಅರಸರೂ ದಾನಧರ್ಮಾದಿ ಕಾರ್ಯಗಳನ್ನು ಮಾಡಬೇಕಿತ್ತು.

**ಆರ್ಥಿಕ-ಸಾಮಾಜಿಕ ಸ್ಥಿತಿ :** ವ್ಯವಸಾಯ ಜನರ ಮುಖ್ಯ ಕಸಬಾಗಿತ್ತು. ಭೂಮಿಯನ್ನೂ ಅದರ ಉತ್ಪತ್ತಿಗೆ ಅನುಗುಣವಾಗಿ ಅವು ಪಡೆದಿದ್ದ ನೀರಿನ ಆಸರೆಗನುಗುಣವಾಗಿ ವಿಂಗಡಿಸಲಾಗಿತ್ತು. ಬತ್ತ, ಕಬ್ಬು, ನವಣೆ, ಸಾಮೆ, ಗೋದಿ ಅಂದಿನ ಮುಖ್ಯ ಬೆಳೆಗಳು. ದೇಶದಲ್ಲಿ ಬೇಸಾಯಗಾರರು ಹೇರಳವಾಗಿದ್ದು ದೇಶ ದವಸಧಾನ್ಯಗಳಿಂದ ಸಮೃದ್ಧವಾಗಿತ್ತು. ಅರಸರು ಅನೇಕ ತಟಾಕಗಳನ್ನು ರಾಜ್ಯದಲ್ಲಿ ಕಟ್ಟಿಸಿ ಬೇಸಾಯಕ್ಕೆ ಪ್ರೋತ್ಸಾಹ ಕೊಡುತ್ತಿದ್ದರು. ನೇಕಾರಿಕೆ ಕಸಬುಗಳಲ್ಲಿ ಮುಖ್ಯವಾದುದಾಗಿತ್ತು. ಈ ಪ್ರದೇಶ ಹತ್ತಿ ಬೆಳೆಗೆ ಅನುಕೂಲವಾದ ವಾತಾವರಣವನ್ನು ಪಡೆದಿದ್ದುದರಿಂದ ಹತ್ತಿ ಇಲ್ಲಿ ವಿಶೇಷವಾಗಿ ಬೆಳೆಯುತ್ತಿದ್ದು ಹತ್ತಿಯ ಬಟ್ಟೆಗಳನ್ನು ಇಲ್ಲಿ ನೇಯುತ್ತಿದ್ದಿರಬೇಕು. ಅಲ್ಲದೆ ರೇಷ್ಮೆ ಬಟ್ಟೆಗಳನ್ನು ತಯಾರಿಸಲಾಗುತ್ತಿತ್ತು. ಪಟ್ಟಗಾಱರ ಉಲ್ಲೇಖ ಶಾಸನಗಳಲ್ಲಿ ಬಂದಿದೆ. ವ್ಯಾಪಾರ ಈ ಕಾಲದಲ್ಲಿ ಚೆನ್ನಾಗಿ ವ್ಯವಸ್ಥಿತವಾಗಿತ್ತು. ಆಂತರಿಕ ವ್ಯಾಪಾರವಲ್ಲದೆ ಪರದೇಶಗಳೊಡನೆ, ಪ್ರಮುಖವಾಗಿ ಪರ್ಷಿಯ ದೇಶದೊಡನೆ ಕರ್ನಾಟಕ ವಾಣಿಜ್ಯ ಸಂಬಂಧಗಳನ್ನು ಹೊಂದಿತ್ತೆನಿಸುತ್ತದೆ. ವ್ಯಾಪಾರ ವ್ಯವಹಾರಗಳಿಗೆ ಸಂಬಂಧಿಸಿದಂತೆ ಸಂಘಗಳಿದ್ದವು. ಅಯ್ಯಾವೊಳೆಐನೂರ್ವ್ವರದು ಒಂದು ಪ್ರಮುಖ ವಣಿಕ ಸಂಘ. ಇದಕ್ಕೆ ಸ್ವತಂತ್ರವಾದ ಸ್ಥಾನಮಾನವಿದ್ದಂತೆ ತೋರುತ್ತದೆ. ನಗರ ಎಂಬ ವರ್ತಕರ ಶ್ರೇಣಿ ಸಹ ಇತ್ತು. ಅಲ್ಲದೆ ಕಂಚುಗಾರರು, ತೆಲ್ಲಿಗರು ಇತ್ಯಾದಿ ಇತರ ವೃತ್ತಿಗಳಿಗೆ ಸಂಬಂಧಿಸಿದವರು ತಮ್ಮದೇ ಆದ ಶ್ರೇಣಿಗಳನ್ನು ರೂಪಿಸಿಕೊಳ್ಳುತ್ತಿದ್ದರು.

ಸಮಾಜದಲ್ಲಿ ವರ್ಣಾಶ್ರಮ ಪದ್ಧತಿ ಇತ್ತು. ಬ್ರಾಹ್ಮಣರು ವಿದ್ಯಾವಿನಯಸಂಪನ್ನರಾಗಿದ್ದು ಅಧ್ಯಯನ ಅಧ್ಯಾಪನಗಳಲ್ಲಿ ನಿರತರಾಗಿದ್ದರು. ಅರಸರಿಂದ ಗೌರವಿಸಲ್ಪಟ್ಟು ಅವರಿಗೆ ರಾಜನೀತಿಯಲ್ಲೂ ಸಲಹೆಗಳನ್ನು ನೀಡುತ್ತಿದ್ದರು. ಇಮ್ಮಡಿ ಪುಲಕೇಶಿಗೆ ನಾಗವರ್ಧನಾಚಾರ್ಯನೆಂಬಾತ, ಇಮ್ಮಡಿ ವಿಕ್ರಮಾದಿತ್ಯನಿಗೆ ಸುದರ್ಶನಾಚಾರ್ಯನೆಂಬಾತ ಗುರುವಾಗಿದ್ದರು. ಇಮ್ಮಡಿ ಕೀರ್ತಿವರ್ಮನ ಆಡಳಿತದಲ್ಲಿ ವ್ಯಾಘ್ರಸ್ವಾಮಿ ಎಂಬ ವೇದವೇದಾಂಗಪಾರಂಗತನೂ ನೀತಿಶಾಸ್ತ್ರ ವಿಶಾರದನೂ ಆದ ಬ್ರಾಹ್ಮಣನೋರ್ವ ಮಹೋಪಕಾರಕನಾಗಿದ್ದ.

ಅರಸನಿಗೆ ಬಾಲ್ಯದಿಂದಲೂ ಶಸ್ತ್ರಾಸ್ತ್ರಗಳಲ್ಲಿ , ರಾಜನೀತಿಯಲ್ಲಿ ಉಚಿತವಾದ ಉತ್ತಮವಾದ ತರಬೇತಿಯನ್ನು ನೀಡಲಾಗುತ್ತಿತ್ತು. ಮಂಗಲೀಶ ಕೋಟೆ ಕೊತ್ತಳಗಳ ರಚನೆಯಲ್ಲಿ ಪರಿಣತನೆಂದು ಮಹಾಕೂಟದ ಶಾಸನ ಅವನನ್ನು ಹೊಗಳಿದೆ. ತನ್ನ ಮಗನಾದ ವಿನಯಾದಿತ್ಯ ಹಾಗೂ ಮೊಮ್ಮಗ ವಿಜಯಾದಿತ್ಯರಿಗೆ ವಿಕ್ರಮಾದಿತ್ಯ ಸೂಕ್ತ ತರಬೇತಿ ನೀಡಿದ್ದನೆಂಬುದು ತಿಳಿದಿದೆ. ವಾತಾಪಿಯು ಚತುರ್ದಶವಿದ್ಯೋಪಲಸಿತರಾದ ಅನೇಕ ಸಹಸ್ರ ದ್ವಿಜರಿಂದ ಶೋಭಿಸುತ್ತಿತ್ತೆಂಬ ಶಾಸನದ ಹೇಳಿಕೆಯನ್ನು ಗಮನಿಸಿದರೆ ಅಂದು ಅಂಥ ವಿದ್ಯೆಗಳನ್ನು ಕಲಿಸುವ ವಿದ್ಯಾಸಂಸ್ಥೆಗಳಿದ್ದುವೆಂಬುದು ಸ್ಪಷ್ಟವಾಗುತ್ತದೆ.

ಸಮಾಜದಲ್ಲಿ ಸ್ತ್ರೀಯರಿಗೆ ಗಣ್ಯವಾದ ಸ್ಥಾನವಿತ್ತು. ಅವರು ಆಡಳಿತದಲ್ಲಿಯೂ ಪಾಲುಗೊಳ್ಳುತ್ತಿದ್ದರು. ಚಂದ್ರಾದಿತ್ಯನ ರಾಣಿ ವಿಜಯ ಭಟ್ಟಾರಿಕಾ ತನ್ನ ಹೆಸರಿನಲ್ಲಿ ಎರಡು ದತ್ತಿಗಳನ್ನು ನೀಡಿದಳು. ವಿನಯಾದಿತ್ಯನ ಪತ್ನಿ ವಿನಯವತಿ ರಾಜಧಾನಿಯಲ್ಲಿ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ಮೂರ್ತಿಗಳನ್ನು ಸ್ಥಾಪಿಸಿದಳು. ಲೋಕತಿನಿಮ್ಮಡಿ ಎಂಬಾಕೆ ಕುರ್ತಕೋಟಿ ಗ್ರಾಮವನ್ನು ಆಳುತ್ತಿದ್ದಳು. ವಿನಯಾದಿತ್ಯನ ಮಗಳಾದ ಕುಂಕುಮ ಮಹಾದೇವಿ ತನ್ನ ಸೋದರ ವಿಜಯಾದಿತ್ಯನೊಡನೆ ಕುಹುಂಡಿನಗರವೆಂಬ ಸ್ಕನ್ಧಾವಾರದಲ್ಲಿದ್ದಳು. ಸ್ತ್ರೀಯರಿಗೆ ವಿದ್ಯಾಭ್ಯಾಸದ ಸೌಲಭ್ಯಗಳು, ಅವಕಾಶಗಳು ಇದ್ದವು. ಸ್ತ್ರೀಯರು ಉತ್ತಮ ಗೃಹಿಣಿಯರು ಮಾತ್ರವಲ್ಲದೆ ಅಧಿಕಾರಿಗಳೂ ಕಲಾಜೀವಿಗಳೂ ಆಗಿದ್ದರು. ವಿಜಯಾದಿತ್ಯನ ಪ್ರಾಣವಲ್ಲಭೆ ಎನಿಸಿಕೊಂಡ ವಿನಾಪೋಟಿ ಎಂಬ ಸೂಳೆ ಮಕುಟೇಶ್ವರ ದೇವರಿಗೆ ರತ್ನ ಹಾಗೂ ಬೆಳ್ಳಿಯ ಪೀಠಗಳನ್ನು ದಾನಮಾಡಿದಳೆಂದು ತಿಳಿದಿದೆ. ಈಕೆ ಕೂಚಿಪೋಟಿಯ ಮಗಳು. ಬಾಲಬ್ಬೆ ಮುಂತಾದ ಇತರ ವಾರಾಂಗನೆಯರ ಹೆಸರುಗಳೂ ಈ ಕಾಲದ ಶಾಸನಗಳಲ್ಲಿ ಲಭಿಸಿವೆ. ಈ ಕಾಲದಲ್ಲಿ ದೇವದಾಸಿ ಪದ್ಧತಿ ಅಸ್ತಿತ್ವದಲ್ಲಿತ್ತು.

**ಲಲಿತ ಕಲೆ ಸಾಹಿತ್ಯ :** ಈ ಕಾಲದಲ್ಲಿ ಶಿಲ್ಪಕಲೆ, ಗಾಂಧರ್ವಕಲೆ ಮುಂತಾದ ಲಲಿತ ಕಲೆಗಳನ್ನು ಬೋಧಿಸುವ ಸಂಸ್ಥೆಗಳು ಇದ್ದಿರಬಹುದಾಗಿದೆ. ಐಹೊಳೆ, ಬಾದಾಮಿ, ಪಟ್ಟದಕಲ್ಲು ಹಾಗೂ ಮಹಾಕೂಟಗಳಲ್ಲಿ ಚಾಳುಕ್ಯ-ವಾಸ್ತು ಶಿಲ್ಪ ಶೈಲಿಯು ಆರಂಭವಾಯಿತು. ಐಹೊಳೆ ವಾಸ್ತುಶಿಲ್ಪಕ್ಕೆ ಸಂಬಂಧಿಸಿದ ಒಂದು ತರಬೇತಿ ಕೇಂದ್ರದಂತಿತ್ತು. ಅನಿವಾರಿತಾಚಾರಿ ಗುಣ್ಡನೆಂಬ ಶಿಲ್ಪಿಗೆ ಪೃಥ್ವಿಯ ಬಿನ್ನಾಣಿಗಳು ತ್ರಿಭುವನಾಚಾರಿ ಎಂಬ ಬಿರುದನ್ನಿತ್ತಿದ್ದರು. ಸರ್ವಸಿದ್ಧಿ ಆಚಾರ್ಯ ಎಂಬವ ಪಟ್ಟದಕಲ್ಲಿನ ಲೋಕೇಶ್ವರ ಮತ್ತು ತ್ರೈಲೋಕೇಶ್ವರ ದೇವಾಲಯಗಳನ್ನು ಕಟ್ಟಿದ ಸೂತ್ರಧಾರಿ. ಅನೇಕ ರೂಪವಾಸ್ತು ಪಿತಾಮಹನೆಂದೂ ವಾಸ್ತು ಪ್ರಾಸಾದಯಾನಾಸನಶಯನ ಮಣಿಮಕುಟರತ್ನಚೂಡಾಮಣಿಯೆಂದೂ ಶಾಸನ ಇವನನ್ನು ವರ್ಣಿಸಿರುವುದನ್ನು ಗಮನಿಸಿದರೆ ಈತ ಹಲವಾರು ನಗರಗಳನ್ನು ಯೋಜಿಸಿದನೆಂದೂ ಅರಮನೆಗಳು ಸಿಂಹಾಸನಾದಿ ಪೀಠೋಪಕರಣಗಳನ್ನು ರೂಪಿಸಿದನೆಂದೂ ಊಹಿಸಬಹುದು. ಈತನ ಚಟ್ಟ ರೇವಡಿವಜ್ಜರ್. ಈತನನ್ನು ತೆಂಕಣ ದಿಶೆಯ ಸೂತ್ರಧಾರಿ ಎಂದು ವರ್ಣಿಸಲಾಗಿದೆ. ಶಿವವದ್ದನ ಮಾನ, ಆತನ ಮಗ ಶಿವ, ಮೊಮ್ಮಗ ಶುಭದೇವ ಈ ಮೂವರು ಈ ಕಾಲದ ಖ್ಯಾತ ಶಿಲ್ಪಿಗಳು. ಬಲದೇವ, ಆರ್ಯ, ಪುಲ್ಲಪ್ಪನ್ ನಿರ್ಮಾಣದೇವನ್, ಆರ್ಯಮಿಞ್ಚಿ ಉಪಾಧ್ಯಾಯ, ಏರಂಡರ ಗಣಚ, ದೋಣಸಾಮಿ, ಅಯ್ಯಸಾಮಿ, ಕಲ್ಕುಟ್ಟೆ, ಕೊಟ್ಟಮಞ್ಚಿ ಎಂಬ ಹಲವಾರು ಶಿಲ್ಪಿಗಳ ಹೆಸರು ಸಮಕಾಲೀನ ಶಾಸನಗಳಿಂದ ತಿಳಿದಿದೆ. ಇನ್ನೊಬ್ಬ ಶಿಲ್ಪಿ ನರಸೊಬ್ಬನಿಗೆ ಜಂಬೂದ್ವೀಪದಲ್ಲಿಯೇ ಸರಿಸಮಾನರು ಯಾರೂ ಇರಲಿಲ್ಲವೆಂಬುದು ಒಂದು ಶಾಸನದ ಉದ್ಗಾರ. ಗಂಧರ್ವದ ಪ್ರಸ್ತಾಪ ಇನ್ನೊಂದು ಶಾಸನದಲ್ಲಿದೆ. ಅಚಲನೆಂಬ ನಟನ ಗರ್ಜನೆಯನ್ನು ಕೇಳಿದೊಡನೆ ಉಳಿದೆಲ್ಲ ನಟರು ತಮ್ಮ ಅಹಂಕಾರವನ್ನು ಅಡಗಿಸಿಕೊಳ್ಳುತ್ತಿದ್ದರು ಎಂದು ಪಟ್ಟದಕಲ್ಲಿನ ಶಾಸನದಲ್ಲಿ ಹೇಳಿದೆ.

ಈ ಕಾಲದಲ್ಲಿ ಅರಸರ ಪೋಷಣೆಗೆ ಒಳಪಟ್ಟು ಸಂಸ್ಕೃತ ಸಾಹಿತ್ಯ ಕೃತಿಗಳು ರಚಿತವಾದವು. ಸಂಸ್ಕೃತ ಭಾಷೆಯಲ್ಲಿನ ಶಾಸನಗಳು ಸಹ ಅಂದಿನ ಸಾಹಿತ್ಯಕ್ಕೆ ಕೈಗನ್ನಡಿಗಳಾಗಿವೆ. ಮಂಗಲೀಶನ ಮಹಾಕೂಟಸ್ತಂಭ ಶಾಸನದಲ್ಲಿ ಕಾಳಿದಾಸನ ರಘುವಂಶ ಹಾಗೂ ರಾಮಾಯಣ ಮತ್ತು ಅರ್ಥಶಾಸ್ತ್ರಗಳಿಂದ ಅನೇಕ ಪದಗಳನ್ನೂ ಪದಪುಂಜಗಳನ್ನೂ ಎತ್ತಿಕೊಂಡಿರುವುದು ಕಂಡುಬರುತ್ತದೆ. ಶಾಸನದಲ್ಲಿನ ಗದ್ಯ ಬಾಣನ ಶೈಲಿಯನ್ನು ನೆನಪಿಗೆ ತರುತ್ತದೆ. ಇಮ್ಮಡಿ ಪುಲಕೇಶಿಯ ಐಹೊಳೆ ಶಾಸನದ ಕರ್ತೃ ರವಿಕೀರ್ತಿ ತಾನು ಕಾಳಿದಾಸ ಭಾರವಿಗಳಷ್ಟೇ ಖ್ಯಾತನೆಂದು ಹೇಳಿಕೊಂಡಿರುವುದು ಉತ್ಪ್ರೇಕ್ಷೆಯೆನಿಸಿದರೂ ಅವರ ಶೈಲಿಯ ಪ್ರಭಾವ ಶಾಸನದಲ್ಲಿ ಕಾಣುತ್ತದೆ. ಚಂದ್ರಾದಿತ್ಯನ ಪತ್ನಿ ವಿಜಯ ಭಟ್ಟಾರಿಕೆಯು ವಿಜ್ಜಿಕಾ ಎಂಬ ಕವಯಿತ್ರಿಯಾಗಿದ್ದಳೆಂದು ಊಹಿಸಲಾಗಿದೆ. ಆದರೆ ಈ ಕಾಲದ ಕನ್ನಡ ಸಾಹಿತ್ಯ ಕೃತಿಗಳು ಯಾವುವೂ ದೊರೆತಿಲ್ಲ. ವಿಮಲ, ಉದಯ (ವಿಮಲೋದಯ), ನಾಗಾರ್ಜುನ, ಜಯಬಂಧು, ದುರ್ವಿನೀತರೆಂಬ ಗದ್ಯಕವಿಗಳು, ಶ್ರೀವಿಜಯ, ಕವೀಶ್ವರ ಪರಮ ಶ್ರೀವಿಜಯ ಅಥವಾ ಶ್ರೀವಿಜಯ ಕವೀಶ್ವರ ಪಂಡಿತ, ಚಂದ್ರ ಮತ್ತು ಲೋಕಪಾಲ ಎಂಬ ಪದ್ಯಕವಿಗಳನ್ನು ಕವಿರಾಜಮಾರ್ಗಕಾರ ತನಗೂ ಹಿಂದಿನವರೆಂದು ಹೆಸರಿಸಿದ್ದಾನೆ. ಇವರ ಯಾವ ಕೃತಿಗಳೂ ಲಭಿಸಿಲ್ಲ. ಆದರೆ ಸಮಕಾಲೀನ ಶಾಸನ ಸಾಹಿತ್ಯವನ್ನು ಗಮನಿಸಿದಾಗ ಈ ವೇಳೆಗೆ ಕನ್ನಡ ಭಾಷೆಯಲ್ಲಿ ವಿಸ್ತಾರವಾದ ಸಾಹಿತ್ಯ ಗ್ರಂಥಗಳೂ ಇದ್ದಿರಬಹುದೆನಿಸುತ್ತದೆ. ಇಂಥ ಹಲವಾರು ಶಾಸನಗಳು ಬಾದಾಮಿ, ಐಹೊಳೆ ಮುಂತಾದೆಡೆಗಳಲ್ಲಿ ದೊರೆತಿವೆ. ಕಪ್ಪೆ ಅರಭಟ್ಟನ ಶಾಸನದಲ್ಲಿ ಕನ್ನಡ ಛಂದಸ್ಸಿನಲ್ಲಿ ಪ್ರಾಚೀನವಾದ ತ್ರಿಪದಿಯ ವೃತ್ತಗಳ ಉಪಯೋಗ ಕಂಡುಬಂದಿದೆ. ಚತ್ತಾಣ, ಬೆದಂಡೆ, ಗದ್ಯ ಕಥೆಗಳಂಥ ಕಾವ್ಯಪ್ರಕಾರಗಳು, ಪದ, ಮೆಲ್ವಾಡು, ಪಾಡು ಮುಂತಾದ ಸಾಹಿತ್ಯ ರೂಪಕಗಳು, ಪಗರಣವೆಂಬ ದೃಶ್ಯವಿಧಾನಗಳು ಈ ಕಾಲದ ಸಾಹಿತ್ಯದ ಪ್ರಮುಖ ವೈಶಿಷ್ಟ್ಯಗಳಾಗಿ ಬೆಳೆದಿದ್ದಿರಬಹುದು. (ಬಿ.ಆರ್.ಜಿ.)

**ವಾಸ್ತುಶಿಲ್ಪ :** ಬಾದಾಮಿಯ ಚಳುಕ್ಯರ ಕಾಲದ ಮುಖ್ಯ ವಾಸ್ತು ಕೃತಿಗಳೆಲ್ಲ ಅವರ ರಾಜಧಾನಿಯಾಗಿದ್ದ ಬಾದಾಮಿ, ಅದರ ಪರಿಸರದಲ್ಲೇ ಇರುವ ಮಹಾಕೂಟ, ನಾಗರಾಳ, ಬಾದಾಮಿಗೆ 24ಕಿಮೀ ದೂರದಲ್ಲಿ ಮಲಪ್ರಭಾ ನದಿಯ ಬಲದಂಡೆಯಲ್ಲಿರುವ ಪಟ್ಟದಕಲ್ಲು, ಅದೇ ನದಿಯ ಎಡದಂಡೆಯಲ್ಲಿರುವ ಐಹೊಳೆ - ಈ ಸ್ಥಳಗಳಲ್ಲಿ ಇವೆ. ಐಹೊಳೆಯಲ್ಲಿರುವ ಒಂದು ಕೋಟೆಯ ಅವಶೇಷವನ್ನು ಬಿಟ್ಟರೆ ಮಿಕ್ಕವೆಲ್ಲ ದೇವಾಲಯಗಳು. ಬಾದಾಮಿಯಲ್ಲಿ ಸು.20, ನಾಗರಾಳಿನಲ್ಲಿ ಒಂದು, ಮಹಾಕೂಟದಲ್ಲಿ ಸು.10, ಪಟ್ಟದಕಲ್ಲಿನಲ್ಲಿ ಸು.12 ಮತ್ತು ಐಹೊಳೆಯಲ್ಲಿ ಸು.100ಕ್ಕೂ ಹೆಚ್ಚು ದೇವಾಲಯಗಳಿವೆ. ಅಲ್ಲದೆ ಆಂಧ್ರಪ್ರದೇಶದ ಮಹಬೂಬ್‌ನಗರ ಜಿಲ್ಲೆಯ ಅಲಂಪುರದಲ್ಲಿ ಒಂಬತ್ತು, ಕರ್ನೂಲು ಜಿಲ್ಲೆಯ ಸತ್ಯವೋಲು ಮತ್ತು ಮಹಾನಂದಿಗಳಲ್ಲಿ ಒಂದೊಂದು ದೇವಾಲಯಗಳು ಇವೆ. ಇವುಗಳಲ್ಲಿ ಹೆಚ್ಚಿನವು ಹಿಂದು ದೇವಾಲಯಗಳು. ಐದಾರು ಜೈನದೇಗುಲಗಳು, ಒಂದು ಅಥವಾ ಎರಡು ವಾಸ್ತು ಕೃತಿಗಳು ಬೌದ್ಧ ಎಂದು ಊಹಿಸಲು ಅವಕಾಶವಿದೆ.

ಬಾದಾಮಿಯ ಚಳುಕ್ಯರ ಕಾಲದ ಏಕೈಕ ಕ್ಷಾತ್ರವಾಸ್ತುವಿನ ಉದಾಹರಣೆಯಾಗಿರುವ ಐಹೊಳೆಯ ಕೋಟೆಗೋಡೆ ಸು.7 ಅಥವಾ 8ನೆಯ ಶತಮಾನದ್ದಿದ್ದಂತೆ ತೋರುತ್ತದೆ. ಆ ಕೋಟೆಯ ತಳವಿನ್ಯಾಸ ಸುಮಾರು ವೃತ್ತಾಕಾರವಾಗಿತ್ತೆಂದೂ ಅದರ ನಾಲ್ಕು ಕಡೆಯ ಮಹಾದ್ವಾರಗಳಲ್ಲೂ ಅಲ್ಲಲ್ಲಿ ಚೌಕಾಕಾರದ ಅಟ್ಟಾಲಕಗಳೂ ಇದ್ದುವೆಂದೂ ಅದು ಸುತ್ತಲೂ ಕಂದಕದಿಂದ ಪರಿವೃತವಾಗಿತ್ತೆಂದೂ ಅದರ ಈಗಿನ ಉಳಿಕೆಗಳಿಂದ ಊಹಿಸಬಹುದಾಗಿದೆ. ಯಾವ ಬಂಧಕ ಸಾಮಗ್ರಿಗಳನ್ನೂ ಉಪಯೋಗಿಸದೆ ದೊಡ್ಡ ಸೈಜುಕಲ್ಲುಗಳನ್ನು ಒಂದರ ಮೇಲೊಂದು ಪೇರಿಸಿ ಗೋಡೆಗಳನ್ನು ರಚಿಸಲಾಗಿದೆ.

ಈ ಕಾಲದ ಧಾರ್ಮಿಕ ವಾಸ್ತುಕೃತಿಗಳನ್ನು ಗುಹೆಗಳು ಮತ್ತು ಕಟ್ಟಡಗಳು ಎಂದು ವಿಂಗಡಿಸಬಹುದು. ಬಾದಾಮಿಯಲ್ಲಿ ಮೇಣಬಸ್ತಿಗಳು ಎಂದು ಕರೆಯಲಾಗುವ ನಾಲ್ಕು ಗುಹಾ ದೇವಾಲಯಗಳು, ಐಹೊಳೆಯಲ್ಲಿಯ ರಾವಳಫಡಿಗುಹೆ ಮತ್ತು ಇನ್ನೆರಡು ಗುಹೆಗಳು ಮೊದಲನೆಯ ರೀತಿಯವು. ಮರಳುಗಲ್ಲು ಗುಡ್ಡಗಳ ಕಡಿದಾದ ಮುಖದೊಳಕ್ಕೆ ಕೊರೆದಿರುವ ಈ ಗುಹೆಗಳಲ್ಲೆಲ್ಲ ಸಾಮಾನ್ಯವಾಗಿ ಒಂದು ಅಥವಾ ಹೆಚ್ಚು ಕಂಬಸಾಲುಗಳಿರುವ ಆಯಾಕಾರದ ಒಂದು ದೊಡ್ಡ ಹಜಾರ ಮತ್ತು ಅದರ ಹಿಂದೆ ಒಂದು

ಸಣ್ಣಗರ್ಭಗೃಹ ಮಾತ್ರ ಇರುತ್ತವೆ. ಹೊರಮೈಯನ್ನು ನಾಜೂಕಾಗಿ ಕೊರೆದಿರುವ ದಪ್ಪ ಕಂಬಗಳು, ಶಿಲ್ಪಾಲಂಕೃತ ಗೋಡೆಗಳು ಮತ್ತು ಚಾವಣಿಗಳು ಈ ಗುಹೆಗಳ ಆಕರ್ಷಕ ಭಾಗಗಳು. ಈ ಗುಹಾದೇವಾಲಯಗಳೆಲ್ಲ ಅವುಗಳ ವಾಸ್ತು ವಿನ್ಯಾಸಕ್ಕಿಂತ, ಅಲ್ಲಿ ಕಂಡುಬರುವ ದೇವದೇವತೆಗಳ ಬೃಹತ್ ಅತಿ ಉಬ್ಬುಶಿಲ್ಪಗಳು ಮತ್ತು ಅಲಂಕರಣದ ನಿಮ್ನ ಉಬ್ಬುಶಿಲ್ಪಗಳಿಗೆ ಪ್ರಸಿದ್ಧವಾಗಿವೆ. ಐಹೊಳೆಯ ಗುಹಾ ದೇವಾಲಯಗಳು ಚಿಕ್ಕವು. ಇವುಗಳಲ್ಲಿ ರಾವಳಫಡಿ ಗುಹೆ ಶೈವಧರ್ಮೀಯವಾದರೆ ಇನ್ನೆರಡು ಜೈನಗುಹೆಗಳು. ಬಾದಾಮಿಯ ಗುಹಾದೇವಾಲಯಗಳಲ್ಲಿ ನಾಲ್ಕನೆಯದು ಜೈನ, ಉಳಿದವುಗಳಲ್ಲಿ ಮೊದಲನೆಯದನ್ನು ಶೈವ ಗುಹೆಯೆಂದೂ 2 ಮತ್ತು 3ನೆಯವನ್ನು ವೈಷ್ಣವ ಗುಹೆಗಳೆಂದೂ ಅಲ್ಲಿಯ ಮುಖ್ಯ ಶಿಲ್ಪಗಳ ಆಧಾರದ ಮೇಲೆ ಕರೆಯುವುದುಂಟು. ಒಬ್ಬ ವಾಸ್ತು ಚರಿತ್ರಕಾರರ ಪ್ರಕಾರ ದಕ್ಷಿಣ ಭಾರತದ ಒಂದು ಜೈನ ಗುಹಾವಾಸ್ತು ಶಿಲ್ಪ ಸರಣಿಯಲ್ಲಿ ಬಾದಾಮಿಯ ಚಳುಕ್ಯರ ಕಾಲದ ಗುಹೆಗಳೇ ಅತ್ಯಂತ ಪ್ರಾಚೀನವಾದವು. ಇವುಗಳಲ್ಲೂ ಐಹೊಳೆಯ ಗುಹೆಗಳು ಮೊದಲವೆಂದೂ ಬಾದಾಮಿಯವು ಅನಂತರದವೆಂದೂ ಊಹೆ. ಬಾದಾಮಿಯ ಮೂರನೆಯ ಗುಹೆಯಲ್ಲಿ ಚಳುಕ್ಯ ಮಂಗಲೀಶನ ಒಂದು ಶಾಸನವಿದೆ. ಗುಹೆಯ ಕಾಲ ಶಕ 500 (578) ಎಂದು ಅದು ಸ್ಪಷ್ಟವಾಗಿ ತಿಳಿಸುತ್ತದೆ.



ಕಾರ್ತಿಕೇಯ ಶಿಲ್ಪ, ಹುಚ್ಚಮಲ್ಲಿ ಗುಡಿ, ಐಹೊಳೆ

ಚಳುಕ್ಯರ ಕಾಲದ ವಾಸ್ತುಕೃತಿಗಳೆಲ್ಲ ಬಿಜಾಪುರ ಜಿಲ್ಲೆಯಲ್ಲಿ ದೊರಕುವ ನಸುಗೆಂಪು ಅಥವಾ ತಿಳಿಹಳದಿ ಬಣ್ಣದ ಮರಳುಗಲ್ಲಿನಲ್ಲಿ ಕಟ್ಟಲಾದವು. ಹೆಚ್ಚು ಮಟ್ಟಿಗೆ ದೊಡ್ಡ ಚಪ್ಪಡಿಯಂಥ ಕಲ್ಲುಗಳನ್ನು ಯಾವ ಬಂಧಕ ಸಾಮಗ್ರಿಯನ್ನೂ ಉಪಯೋಗಿಸದೆ ಒಂದರ ಮೇಲೊಂದರಂತೆ ಪೇರಿಸಿ ಗೋಡೆಗಳನ್ನು ಎತ್ತುವುದು, ಅದೇ ರೀತಿಯ ಒಂದೊಂದೇ ದಪ್ಪ ಕಲ್ಲುಗಳನ್ನು ಕಂಬಗಳು ಮತ್ತು ತೊಲೆಗಳಾಗಿ ಉಪಯೋಗಿಸುವುದು, ದೊಡ್ಡ ಚಪ್ಪಡಿಗಳನ್ನು ಚಾವಣಿಗಾಗಿ ಕವುಚುವುದು - ಇದು ಈ ಕಾಲದ ವಾಸ್ತುಕೃತಿಗಳಲ್ಲಿ ಕಂಡುಬರುವ ತಂತ್ರ. ಚಳುಕ್ಯ ಪೂರ್ವಕಾಲದ ದಕ್ಷಿಣ ಭಾರತದಲ್ಲಿ ಶಿಲಾಕಟ್ಟಡಗಳ, ಅದರಲ್ಲೂ ಶಿಲಾ ದೇವಾಲಯಗಳ ರಚನೆ ಅಷ್ಟೇನೂ ಪ್ರಚಲಿತವಾಗಿರಲಿಲ್ಲ. ಅಂದಿನ ವಾಸ್ತು ರಚನೆಗಳಲ್ಲಿ ಗುಹಾ ರೀತಿಯನ್ನು ಬಿಟ್ಟರೆ, ಮರ ಅಥವಾ ಇಟ್ಟಿಗೆಯ ಕಟ್ಟಡಗಳಷ್ಟೇ ರೂಢಿಯಲ್ಲಿದ್ದವು. ಆದ್ದರಿಂದಲೆ ಭದ್ರತೆಯ ದೃಷ್ಟಿಯಿಂದ ಅಗತ್ಯವಾದ್ದಕ್ಕಿಂತ ಹೆಚ್ಚು ದಪ್ಪನೆಯ ಕಲ್ಲುಗಳ ಉಪಯೋಗ, ಸಾಮಗ್ರಿ ಮತ್ತು ಶಕ್ತಿಯ ಅಪವ್ಯಯ, ಚಳುಕ್ಯ ಶಿಲಾಕಟ್ಟಡಗಳಲ್ಲಿ ಕಂಡುಬರುತ್ತದೆಂದೂ ಇವು ಕಲೆಯ ಶೈಶವಾವಸ್ಥೆಯ ಸಾಮಾನ್ಯ ಕುರುಹೆಂದೂ ವಾಸ್ತುತಂತ್ರಜ್ಞರ ಅಭಿಪ್ರಾಯ. ಶಿಲಾಕಟ್ಟಡಗಳ ರಚನೆಯಲ್ಲಿ ಪೂರ್ವಸಂಪ್ರದಾಯದ ಹಿನ್ನೆಲೆಯಿಲ್ಲದಿದ್ದರೂ ಈ ದಿಶೆಯಲ್ಲಿ ನೂತನವಾಗಿ ಪ್ರಯೋಗಗಳನ್ನು ಮಾಡಿ ಮುಂದೆ ಅನೇಕ ಶತಮಾನಗಳ ಕಾಲ ಮುಂದುವರಿಯುವಂಥ ದೇವಾಲಯ ಸ್ವರೂಪವನ್ನು ರೂಪಿಸಿದ್ದು ಚಳುಕ್ಯರ ಕಾಲದ ಸಾಧನೆ. ಈ ದೃಷ್ಟಿಯಿಂದ ಸು.6ನೆಯ ಶತಮಾನದಿಂದ 8ನೆಯ ಶತಮಾನದವರೆಗೆ ಬೆಳೆದ ಪ್ರಯೋಗಾತ್ಮಕ ಚಳುಕ್ಯ ವಾಸ್ತುಶೈಲಿ ಭಾರತೀಯ ವಾಸ್ತುಚರಿತ್ರೆಯಲ್ಲಿ ಪ್ರಮುಖ ಸ್ಥಾನಗಳಿಸಿದೆ. ಈ ಕಾಲದ ವಾಸ್ತು ಕೃತಿಗಳನ್ನು ಅಭ್ಯಸಿಸಿರುವ ವಾಸ್ತು ಚರಿತ್ರಕಾರರು ಬಾದಾಮಿಯ ಚಳುಕ್ಯ ವಾಸ್ತುಸಂಪ್ರದಾಯವನ್ನು ಪ್ರಯೋಗಾತ್ಮಕ ವಾಸ್ತು ಸಂಪ್ರದಾಯವೆಂದೂ ಬಿಜಾಪುರ ಜಿಲ್ಲೆಯನ್ನೂ ಅದರಲ್ಲೂ ಐಹೊಳೆಯನ್ನು ಶಿಲಾದೇವಾಲಯ ಸಂಪ್ರದಾಯದ ತೊಟ್ಟಿಲು ಎಂದೂ ಕರೆದಿದ್ದಾರೆ.

ಬಾದಾಮಿಯ ಚಳುಕ್ಯ ಕಾಲದ ಮೊದಲ ದೇವಾಲಯಗಳ ರಚನೆಯಲ್ಲಿ ದೇವಾಲಯಗಳಿಗೆ ವಿಶಿಷ್ಟವಾದ ಪರಿಚಿತ ವಿನ್ಯಾಸ ಕಂಡುಬರುವುದಿಲ್ಲ. ದೂರದಿಂದ ನೋಡಿದರೆ ಅವನ್ನು ದೇವಾಲಯಗಳೆಂದು ಗುರುತಿಸುವುದೂ ಕಷ್ಟ. ಐಹೊಳೆಯ ಮಧ್ಯದಲ್ಲಿರುವ ಕೊಂತಿಗುಡಿ ಎಂದು ಕರೆಯುವ ಮೂರು ದೇವಾಲಯಗಳ ಗುಂಪು ಈ ಘಟ್ಟಕ್ಕೆ ಸೇರಿದವು. ಇವುಗಳಲ್ಲಿ ನವರಂಗದ ಹಿಂಭಾಗಕ್ಕೆ ಸರಿದ ಗರ್ಭಗೃಹ, ಸುಕನಾಸಿ, ಪ್ರದಕ್ಷಿಣಾಪಥ, ಸಭಾಮಂಟಪ, ಮುಖಮಂಟಪ ಮುಂತಾದ ಯಾವ ದೇವಾಲಯ ವೈಶಿಷ್ಟ್ಯಗಳೂ ಇಲ್ಲ. ತಳವಿನ್ಯಾಸದಲ್ಲಿ ಇವೆಲ್ಲ ಆಯಾಕಾರದ ಒಂದು ದೊಡ್ಡ ಹಜಾರ ಮಾತ್ರ. ಹಿಂಭಾಗದ ಗೋಡೆಗೆ ಸೇರಿದಂತೆ, ಹಜಾರದಲ್ಲಿ ಸ್ವಲ್ಪ ಭಾಗವನ್ನು ಆಕ್ರಮಿಸುವಂತೆ ಒಂದು ಆಯಾಕಾರದ ಗರ್ಭಗುಡಿಯನ್ನು ಅನಂತರ ಅಳವಡಿಸಲಾಗಿದೆ. ಕೊಂತಿಗುಡಿ ಗುಂಪಿನ ಮೊದಲನೆಯ ದೇವಾಲಯದ ಹಜಾರದಲ್ಲಿ ಗರ್ಭಗುಡಿಯ ಮುಂದೆ ಎರಡು ಕಂಬಗಳು ಇವೆ. ಎರಡನೆಯದರಲ್ಲಿ ಎಂಟು ಕಂಬಗಳನ್ನು ಅಡ್ಡಡ್ಡಲಾಗಿ ಎರಡು ಸಾಲುಗಳಾಗಿ ನಿಲ್ಲಿಸಲಾಗಿದೆ. ಆದರೆ ಮೂರನೆಯ ದೇವಾಲಯ ಪರಿಷ್ಕೃತ; ಇಲ್ಲಿ ಹಜಾರವನ್ನೇ ಮಧ್ಯದ ಒಂದು ಗೋಡೆಯಿಂದ ಎರಡು ಭಾಗ ಮಾಡಿ ಒಳಮಂಟಪ ಮತ್ತು ಮುಖಮಂಟಪದಂತೆ ಉಪಯೋಗಿಸಿಕೊಳ್ಳಲಾಗಿದೆ. ಅಲ್ಲದೆ, ಈ ದೇವಾಲಯದಲ್ಲಿ ಶಿಖರವನ್ನೂ ಅಳವಡಿಸುವ ಪ್ರಯತ್ನ ನಡೆದಿದೆ. ಕಂಬ ಮತ್ತು ಕಟ್ಟಡಗಳ ಕುಬ್ಜಾಕಾರ ಇವೆಲ್ಲ ಕೊಂತಿಗುಡಿ ದೇವಾಲಯಗಳ ಪ್ರಾಚೀನತೆಯನ್ನು ಸಾರುತ್ತವೆ.

ಈ ಪ್ರಯೋಗಾತ್ಮಕ ಘಟ್ಟಕ್ಕೇ ಸೇರಿದ ಇನ್ನೊಂದು ಕಟ್ಟಡ ಐಹೊಳೆಯ ಲಾಡಖಾನ್ ಗುಡಿ. ಪರ್ಸಿ ಬ್ರೌನ್ ಎಂಬ ವಿದ್ವಾಂಸ ಇದು ಐಹೊಳೆಯ ದೇವಾಲಯಗಳಲ್ಲಿ ಅತ್ಯಂತ ಪ್ರಾಚೀನವಾದ್ದೆಂದು (450) ಅಭಿಪ್ರಾಯಪಟ್ಟಿದ್ದರೂ ಇದು ಅಲ್ಲಿಯ ಇತರ ಕೆಲವು ದೇವಾಲಯಗಳಿಗಿಂತ ಸ್ವಲ್ಪ ಅನಂತರದ್ದೆಂದು ಇತ್ತೀಚಿನ ಸಂಶೋಧನೆಗಳಿಂದ ತಿಳಿದುಬಂದಿದೆ. ತಳವಿನ್ಯಾಸದಲ್ಲಿ ಇದು ಒಂದು ಚೌಕಾಕಾರದ ದೊಡ್ಡ ಹಜಾರ. ಆದರೆ ಒಳಭಾಗದಲ್ಲಿ ಹೊರ ಗೋಡೆಗಳಿಗೆ ಸಮಾನಾಂತರವಾಗಿರುವ ನಾಲ್ಕು ಕಂಬಗಳ ಎರಡು ಚೌಕಗಳಿದ್ದು, ಈ ಹಜಾರ ಏಕಕೇಂದ್ರದ ಮೂರು ಚೌಕಗಳ ಮಂಟಪದ ರೂಪ ತಾಳಿದೆ. ಹಿಂಭಾಗದ ಗೋಡೆಗೆ ಸೇರಿದಂತೆ ಚಿಕ್ಕ ಆಯಾಕಾರದ ಗರ್ಭಗುಡಿಯೂ ಮುಂಭಾಗದಲ್ಲಿ ಚೌಕ ಹಜಾರದಿಂದ ಮುಂದೆ ಸರಿದಿರುವ ಮುಖಮಂಟಪವೂ ಇವೆ. ಗರ್ಭಗುಡಿಯಲ್ಲಿ ಲಿಂಗವೂ ನಡುಚೌಕದಲ್ಲಿ ನಂದಿಯ ವಿಗ್ರಹವೂ ಇರುವುದರಿಂದ ಇದು ಶಿವದೇವಾಲಯವೆಂದು ತೋರುತ್ತದೆ. ಹೊರಗೋಡೆ ಇರುವಲ್ಲಿ ಮೊದಲು ಕಂಬಗಳಷ್ಟೇ ಇದ್ದು ಸುತ್ತಲೂ ತೆರೆದ ಮಂಟಪದಂತೆ ಕಟ್ಟಡವಿತ್ತೆಂದೂ ಅನಂತರ ಚಪ್ಪಡಿಗಳಿಂದಲೂ ದೊಡ್ಡ ಜಾಲಂಧ್ರಗಳಿಂದಲೂ ಹೊರಗೋಡೆಯನ್ನು ರಚಿಸಿರಬೇಕೆಂದೂ ಸ್ಪಷ್ಟವಾಗುತ್ತದೆ. ದೊಡ್ಡ ಚಪ್ಪಡಿಗಳನ್ನು ಇಳಿಜಾರಾಗಿರುವಂತೆ ಒಂದರ ಪಕ್ಕದಲ್ಲೊಂದರಂತೆ ಜೋಡಿಸಿ ಚಾವಣಿಯನ್ನು ರಚಿಸಲಾಗಿದೆ. ಹಾಸು ಹೆಂಚುಗಳ ಮೇಲಿನ ಹೊದಿಕೆ ಹೆಂಚುಗಳ ರೀತಿಯಲ್ಲಿ ಆ ಚಪ್ಪಡಿಗಳ ಮಧ್ಯದ ಸಂದುಗಳ ಮೇಲೆ ಕಿರಿ ಅಗಲದ ಉದ್ದ ಚಪ್ಪಡಿಗಳನ್ನು ಇಟ್ಟು ಸಂದುಗಳನ್ನು ಮುಚ್ಚಲಾಗಿದೆ. ಈ ರೀತಿಯ ಚಾವಣಿಯ ರಚನೆ ಪ್ರಾಯಶಃ ಈ ದೇವಾಲಯದಲ್ಲಿ ಮೊದಲಾಗಿ ಕಂಡುಬಂದಿದೆ. ಕರ್ನಾಟಕದಲ್ಲಿ ಮುಂದೆ ಅನೇಕ ಶತಮಾನಗಳ ಕಾಲ ಈ ವಿಧಾನ ಬಳಕೆಯಲ್ಲಿತ್ತು. ಮಾಳಿಗೆಯ ಮೇಲೆ, ಹಜಾರದ ನಡುಚೌಕದ ನೇರಕ್ಕೆ ಸರಿಯಾಗಿ, ಇನ್ನೊಂದು ಆಯ ತಳವಿನ್ಯಾಸದ ಚಿಕ್ಕ ಗರ್ಭಗೃಹವಿದೆ. ಇದರಲ್ಲಿ ಹೊರಗೋಡೆಗಳ ಮೇಲೆ ಅರೆಗಂಬಗಳು ಮತ್ತು ಕೆಲವು ಶಿಲ್ಪಾಲಂಕರಣಗಳು ಇವೆ. ಈ ಎರಡನೆಯ ಅಂತಸ್ತು ಮುಂದೆ

ಶಿಖರಗಳ ಬೆಳವಣಿಗೆಗೆ ಪೂರ್ವ ಸೂಚಿಯಾಗಿದ್ದಿರಬಹುದೆಂಬುದು ಕೆಲವು ವಿದ್ವಾಂಸರ ಅಭಿಪ್ರಾಯ. ಇಲ್ಲಿಯ ಮುಖಮಂಟಪದ ಕಂಬಗಳಲ್ಲಿ ಅನೇಕ ಮಿಥುನ ಶಿಲ್ಪಗಳನ್ನು ಅಳವಡಿಸಲಾಗಿದೆ. ಅಲಂಕೃತ ಮುಖಮಂಟಪ, ಇಳಿಚಾವಣಿ, ಎರಡನೆಯ ಅಂತಸ್ತು ಮುಂತಾದ ಹೊಸ ಅಂಗಗಳನ್ನು ಲಾಡಖಾನ್ ಗುಡಿ ಹೊಂದಿರುವುದರಿಂದ ಇದನ್ನು ಕೊಂತಿಗುಡಿಗಿಂತ ಅನಂತರದ ಘಟ್ಟದ್ದೆಂದು ಪರಿಗಣಿಸಬಹುದಾಗಿದೆ.

ಐಹೊಳೆಯ ದುರ್ಗ ಗುಡಿ ಅಸಾಮಾನ್ಯ ರೀತಿಯ ವೈಶಿಷ್ಟ್ಯಪೂರ್ಣ ಕಟ್ಟಡ. ಇದು ದೇವಾಲಯಗಳ ವಿನ್ಯಾಸ ಇನ್ನೂ ರೂಪುಗೊಳ್ಳದಿದ್ದಾಗ, ಬೌದ್ಧರ ಚೈತ್ಯಾಲಯದ ಮಾದರಿಯನ್ನು ಅನುಸರಿಸಿ ನಿರ್ಮಿಸಲಾಗಿರುವ ಒಂದು ಕಟ್ಟಡವೆಂದೂ 600ಕ್ಕೂ ಹಿಂದಿನದಿರಬಹುದೆಂದೂ ಒಬ್ಬ ವಿದ್ವಾಂಸರು ಊಹಿಸಿದ್ದಾರೆ. ಈ ದೇವಾಲಯದ್ದು ಗಜಪೃಷ್ಠಾಕೃತಿಯ ತಳವಿನ್ಯಾಸ; ಮುಂಭಾಗ ಆಯಾಕಾರವಾಗಿದ್ದು ಅದೇ ನೇರದಲ್ಲೇ ಪಕ್ಕದ ಗೋಡೆಗಳು ಅರ್ಧವೃತ್ತಾಕಾರದಲ್ಲಿ ಸೇರುತ್ತವೆ. ಈ ವಿನ್ಯಾಸ ಹೊರಮೈಗಷ್ಟೇ ಮೀಸಲಾಗಿಲ್ಲ. ನಡುವಣ ಗರ್ಭಗೃಹ, ಅದರ ಮುಂದಿನ ಮಂಟಪ, ಗರ್ಭ ಗೃಹದ ಸುತ್ತಲಿನ ಪ್ರದಕ್ಷಿಣಾಪಥ'ವನ್ನು ಒಳಗೊಳ್ಳುವಂತಿರುವ ಎರಡನೆಯ ಕೋಶ, ಇವೆಲ್ಲವನ್ನೂ ಸಮಾನಾಂತರದಲ್ಲಿ ಸುತ್ತುವರಿದಂತೆ ಹೊರಸುತ್ತು ಗೋಡೆ – ಇವು ಹೀಗೆ ಇವೆ. ಈ ಎಲ್ಲ ಭಾಗಗಳೂ ಅದೇ ಗಜಪೃಷ್ಠ ವಿನ್ಯಾಸದ ಎತ್ತರದ ಅಧಿಷ್ಠಾನದ ಮೇಲೆ ನಿಂತಿವೆ. ಹೊರಸುತ್ತಿನಲ್ಲಿ ಗೋಡೆಯ ಬದಲು ಕಂಬಗಳಷ್ಟೇ ಇದ್ದರೂ ಒಳಸುತ್ತುಗಳು ಭದ್ರ ಗೋಡೆಯವಾಗಿವೆ. ಇವುಗಳಲ್ಲಿ ಅಲ್ಲಲ್ಲಿ ಜಾಲಂಧ್ರಗಳಿವೆ. ಎರಡನೆಯ ಸುತ್ತಿನ ಹೊರಮೈಯಲ್ಲಿ ದೇವಕೋಷ್ಠಗಳುಂಟು. ದೇವಾಲಯದ ಮುಂಭಾಗದಲ್ಲಿ ಎರಡು ಪಕ್ಕಗಳಲ್ಲಿ ಪಾವಟಿಗೆಗಳಿವೆ. ದ್ವಾರದ ಮುಂದಿನ ಅರ್ಧ ಮಂಟಪಕ್ಕೆ ಒಯ್ಯುವಂತೆ ಇವನ್ನು ರಚಿಸಲಾಗಿದೆ. ಮೂರು ಸುತ್ತುಗಳಿಗೂ ಬೇರೆ ಬೇರೆಯಾಗಿ ಬೇರೆ ಬೇರೆ ಮಟ್ಟಗಳಲ್ಲಿ ಚಾವಣಿಗಳಿವೆ. ಮಧ್ಯದ ಚಾವಣಿ ಮಟ್ಟಸವಾದ್ದು. ಇತರ ಎರಡು ಇಳಿಜಾರಾಗಿವೆ. ಗರ್ಭಗೃಹದ ನೇರದಲ್ಲಿ ಚಾವಣಿಯ ಮೇಲುಗಡೆ ಒಂದು ಶಿಖರವುಂಟು. ಆಕೃತಿಯಲ್ಲಿ ಸರಳವಾಗಿರುವ ದೇವಾಲಯದ ಗಾತ್ರಕ್ಕೆ ಸಣ್ಣದೆನಿಸುವ ಈ ಶಿಖರ ದೇವಾಲಯ ರಚನೆಯ ಕಾಲಕ್ಕಿಂತ ಸ್ವಲ್ಪ ಅನಂತರದ್ದಿರಬಹುದೆಂದೂ ಆದರೂ ನಾಗರ ಸಂಪ್ರದಾಯದ ಶಿಖರಗಳ ಉಗಮಾವಸ್ಥೆಗೆ ಸೇರಿದ್ದೆಂದೂ ಊಹಿಸಲಾಗಿದೆ.

ಚಳುಕ್ಯ ವಾಸ್ತುಶೈಲಿಯ ವಿಕಸನ ಹಂತಗಳಲ್ಲಿ ಮುಂದಿನ ಗಮನಾರ್ಹ ದೇವಾಲಯ ಐಹೊಳೆಯ ಹುಚ್ಚಮಲ್ಲಿ ಗುಡಿ. ಇದು ಆಯಾಕಾರದ ತಳ ವಿನ್ಯಾಸದ ಕಟ್ಟಡ. ಆದರೆ ಇದರಲ್ಲಿ ದೇವಾಲಯದ ವಿವಿಧಾಂಗಗಳು ಹೆಚ್ಚು ಕಡಿಮೆ ರೂಪುಗೊಂಡಿವೆ. ಒಳಗೆ ಗರ್ಭಗೃಹ, ಅರಬರೆ ಅಂತರಾಳ, ಮಧ್ಯ ಮಂಟಪ ಮತ್ತು ಮುಂದೆ ಮುಖಮಂಟಪ, ಅಲ್ಲದೆ ಗರ್ಭಗುಡಿಯ ಮೇಲೆ ನಾಗರ ಶೈಲಿಯ ಶಿಖರ ಇವೆ. ಶಿಖರರಹಿತವಾದ, ಆದರೆ ಎರಡನೆಯ ಅಂತಸ್ತುಳ್ಳ, ಸುಮಾರು ಇದೇ ವಿನ್ಯಾಸದ ಇನ್ನೊಂದು ದೇವಾಲಯವೆಂದರೆ ಶಾಸನಪ್ರಸಿದ್ಧವಾದ ಮೇಗುಟಿ, ಇದು 634ರಲ್ಲಿ ಇಮ್ಮಡಿ ಪುಲಕೇಶಿಯ ಕಾಲದಲ್ಲಿ ಕಟ್ಟಿದ್ದು.

ಕೊಂತಿಗುಡಿ, ಲಾಡಖಾನ್ ಮೊದಲಾದ ಘಟ್ಟಗಳಲ್ಲಿ ಬೆಳೆಯುತ್ತಿದ್ದ ಹಿಂದು ಜೈನ ದೇವಾಲಯಗಳು ಪ್ರಾಯಶಃ 6ನೆಯ ಶತಮಾನದ ಕೊನೆಯ ಅಥವಾ 7ನೆಯ ಶತಮಾನದ ಮೊದಲ ಭಾಗಕ್ಕೆ ಹಿಂದು ಪೂಜಾ ಮತ್ತು ಇತರ ಧಾರ್ಮಿಕ ಆಚಾರಗಳಿಗೆ ಅನುಕೂಲವಾದಂಥ ವಾಸ್ತು ರೂಪವನ್ನು ತಳೆಯಲಾರಂಭಿಸಿದವು. ಈ ಬೆಳವಣಿಗೆಯಲ್ಲಿ ಚಳುಕ್ಯ ನೆಲದಲ್ಲೇ ಎರಡು ಕವಲುಗಳನ್ನು ಕಾಣಬಹುದು: ಒಂದು ದ್ರಾವಿಡ, ಮತ್ತೊಂದು ನಾಗರ. ಚಳುಕ್ಯ ವಾಸ್ತುಚರಿತ್ರೆಯಲ್ಲಿ ನಾಗರ ರೀತಿಯ ಮೊದಲ ಘಟ್ಟಗಳು ಹಿಂದೆ ವಿವರಿಸಿರುವ ದುರ್ಗ ಮತ್ತು ಹುಚ್ಚಮಲ್ಲಿ ಗುಡಿಗಳಲ್ಲಿವೆಯಾದರೆ, ದ್ರಾವಿಡ ರೀತಿಯ ಮೊದಲ ಘಟ್ಟದ ಕೃತಿಗಳು ಐಹೊಳೆಯ ಒಂದೆರಡು ಚಿಕ್ಕ ಗುಡಿಗಳಲ್ಲೂ ಮಹಾಕೂಟ ಮತ್ತು ಬಾದಾಮಿಯ ಹಲವು ದೇವಾಲಯಗಳಲ್ಲೂ ಕಾಣುತ್ತವೆ. ಮಹಾಕೂಟದ ಮಹಾಕೂಟೇಶ್ವರ ದೇವಾಲಯ ಪ್ರಾಯಶಃ ಸು.600ರದು. ಇದು ದ್ರಾವಿಡ ಸಂಪ್ರದಾಯದ ಕಟ್ಟಡ. ಬಾದಾಮಿಯ ಬೆಟ್ಟದಲ್ಲಿರುವ ಮಾಲೆಗಿತ್ತಿ ಶಿವಾಲಯದಲ್ಲಿ ದ್ರಾವಿಡ ಸಂಪ್ರದಾಯದ ವಿಶಿಷ್ಟಾಂಶಗಳೆಲ್ಲ ರೂಪುಗೊಂಡಿವೆ. ಚೌಕಾಕಾರದ ಗರ್ಭಗೃಹ, ಮಧ್ಯಮಂಟಪ ಮತ್ತು ಮುಖಮಂಟಪಗಳುಳ್ಳ ಈ ಗುಡಿಯ ರಚನೆಯಲ್ಲಿ ದಪ್ಪ ಕಂಬಗಳು, ಗೋಡೆಗಳು ಮುಂತಾದವುಗಳ ಉಪಯೋಗವಿಲ್ಲದ ಹೊರ ಅಲಂಕರಣದಲ್ಲಿ ಇರುವ ಸೀಮಿತ ವಾಸ್ತುಶಿಲ್ಪ ರೂಪಗಳು. ಅವುಗಳ ನಿರೂಪಣೆಯಲ್ಲಿ ಕಂಡುಬರುವ ಹೊಸತನದ ಹುರುಪು ಇವು ಇದೊಂದು ಆರಂಭದ ಘಟ್ಟದ ಕೃತಿಯೆಂದು ಸಾರುತ್ತವೆ. ಆದರೆ ಗರ್ಭಗುಡಿಯ ಮೇಲಿನ ಶಿಖರ ಮೆಟ್ಟಲು ಮೆಟ್ಟಲಾಗಿ ಮೇಲೆದ್ದಿದ್ದು ದ್ರಾವಿಡ ಸಂಪ್ರದಾಯದ ಎಲ್ಲ ಅಂಶಗಳೂ ಇದರಲ್ಲಿ ರೂಪುಗೊಂಡಿವೆ.



ಹಾರುತ್ತಿರುವ ಗಂಧರ್ವ ದಂಪತಿಗಳು, ಬಾದಾಮಿಯ 1ನೆಯ ಗುಹೆಯ ಚಾವಣಿಯ ಶಿಲ್ಪ

ಪಟ್ಟದಕಲ್ಲಿನ ದೇವಾಲಯಗಳು ಬಾದಾಮಿಯ ಚಳುಕ್ಯರ ಆಳಿಕೆಯ ಕೊನೆಯ ಘಟ್ಟದವು. ಇಲ್ಲಿರುವ ವಿರೂಪಾಕ್ಷ ದೇವಾಲಯ ಆ ಕಾಲದ ದೇವಾಲಯಗಳಲ್ಲಿ ಅತಿ ದೊಡ್ಡದು. ಇಮ್ಮಡಿ ವಿಕ್ರಮಾದಿತ್ಯನ ಪಟ್ಟದರಸಿ ಲೋಕ ಮಹಾದೇವಿ ಇದನ್ನು ಕಟ್ಟಿಸಿದಳೆಂದು (ಸು.740) ಅಲ್ಲಿ ದೊರಕಿರುವ ಒಂದು ಶಾಸನದಿಂದ ತಿಳಿಯುತ್ತದೆ. ಈ ದೇವಾಲಯದಲ್ಲಿ ಗರ್ಭಗೃಹ, ಅಂತರಾಳ, ಪ್ರದಕ್ಷಿಣಾಪಥ, ದೊಡ್ಡ ಸಂಭಾಮಂಟಪ, ಇದಕ್ಕೆ ಮೂರು ಕಡೆಗಳಿಂದ ಪ್ರವೇಶ ದ್ವಾರಗಳು, ಇವುಗಳ ಮುಂದೆ ಅರ್ಧ ಮಂಟಪಗಳು ಇವೆ. ಈ ಮುಖ್ಯ ಘಟಕದಿಂದ ಸ್ವಲ್ಪ ಬಿಟ್ಟಂತೆ ಮುಂಭಾಗದಲ್ಲಿ ಒಂದು ಪ್ರತ್ಯೇಕ ನಂದಿ ಮಂಟಪ, ಇವೆಲ್ಲವನ್ನೂ ಒಳಗೊಳ್ಳುವಂತೆ ಬೃಹತ್ ಪ್ರಾಕಾರ, ಪ್ರಾಕಾರಕ್ಕೆ ಸೇರಿದಂತೆ ಉಪದೇವತೆಗಳಿಗೆ ಸಣ್ಣ ಗುಡಿಗಳು ಇವೆ. ಏರುವಿನ್ಯಾಸದಲ್ಲಿ ಎತ್ತರದ ಅಧಿಷ್ಠಾನ, ದೇವಕೋಷ್ಠಗಳು, ಜಾಲಂಧ್ರಗಳು ಮತ್ತು ಶಿಲ್ಪಗಳಿಂದಲಂಕೃತವಾದ ಭಿತ್ತಿ, ಮೇಲೆ ಕಪೋತ ಕೂಟ ಶಾಲೆಗಳಿಂದ ಅಲಂಕೃತವಾದ ಹಾರ, ಗರ್ಭಗುಡಿಯ ಮೇಲೆ ಈ ಹಿಂದಿನ ಅಂಶಗಳನ್ನು ಅದೇ ಕ್ರಮದಲ್ಲಿ ಘಟ್ಟಘಟ್ಟಕ್ಕೆ ಚಿಕ್ಕದಾಗುವಂತೆ ಪುನರಾವರ್ತಿಸಿದ್ದು ಸ್ತೂಪಿಯಿಂದ ಅಲಂಕೃತವಾದ ದ್ರಾವಿಡ ಶೈಲಿಯ ತ್ರಿತಳ ಶಿಖರ ಇದೆ. ಹೊರ ಪ್ರಾಕಾರದ ಪ್ರವೇಶದ್ವಾರದ ಮೇಲೆ ಒಂದು ಕುಬ್ಜಾಕಾರದ ಶಾಲಾ ಶಿಖರವೂ ಉಂಟು. ಇದು ಮುಂದೆ ದೇವಾಲಯದ ವೈಶಿಷ್ಟ್ಯವಾದ ಮಹಾದ್ವಾರ ಗೋಪುರದ ಬೆಳವಣಿಗೆಯ ಮೊಳಕೆಯೆನ್ನುವಂತಿದೆ. ವಿರೂಪಾಕ್ಷ ದೇವಾಲಯದ ವಾಸ್ತು ಅನೇಕ ಭಿನ್ನ ಶೈಲಿಗಳ ಸಂಗಮವಾಯಿತು. ಅಲ್ಲದೆ ಈ ಪ್ರದೇಶದ ಆಶಯಗಳಿಗೆ ಅನುಗುಣವಾಗಿ ಬೆಳೆಸಿದ ಸ್ಥಳೀಯ ಶೈಲಿಯೂ ಇಲ್ಲಿ ಕಂಡುಬಂದಿದೆ. ಒಟ್ಟಿನ ಶಿಲ್ಪರಾಶಿಯಲ್ಲಿ ಅನೇಕ ಉಪಪ್ರಭೇದಗಳನ್ನು ಗುರುತಿಸಬಹುದು. ಶಿಲ್ಪಿಗಳ ವ್ಯಕ್ತಿಗತ ಪ್ರತಿಭೆಯ ಮಟ್ಟದ ಅಂತರಗಳೂ ಈ ವೈವಿಧ್ಯಕ್ಕೆ ಸಹಾಯಕವಾಗಿವೆ.

ಲಾಡಖಾನ್, ಕೊಂತಿಗುಡಿ, ಹುಚ್ಚಮಲ್ಲಿ ಗುಡಿಗಳಲ್ಲಿರುವ ಶಿಲ್ಪಗಳು ಪ್ರಾಯಶಃ ಆ ಕಾಲದ ಮೊದಲ ಘಟ್ಟದ ಶಿಲ್ಪಗಳನ್ನು ಸೂಚಿಸುತ್ತವೆ. ಹುಚ್ಚಮಲ್ಲಿ ಗುಡಿಯ ಮಂಟಪದ ಚಾವಣಿಯ ಮೇಲೆ ಕೆತ್ತಿರುವ ಕಾರ್ತಿಕೇಯ ವಿಗ್ರಹ ಆ ಕಾಲದ ದೇವಶಿಲ್ಪಗಳಲ್ಲಿ ಅತ್ಯುತ್ತಮ

ವಾದವುಗಳಲ್ಲೊಂದು. ಇತರ ಸಮಕಾಲೀನ ಶಿಲ್ಪಗಳಂತೆ ಇಲ್ಲೂ ದೇವಮೂರ್ತಿಯ ನಿರೂಪಣೆ ಬಹು ಸರಳ. ಅತಿ ಕಡಿಮೆ ಅಲಂಕರಣ, ಸುಮಾರು ದೀರ್ಘವೃತ್ತಾಕಾರದ ಹಸನ್ಮುಖ, ನೀಳವಾದ ತೆಳು ಶರೀರ – ಇವುಗಳಿಂದಾಗಿ ನಿರೂಪಣೆಯಲ್ಲಿ ದೇಹಶಕ್ತಿಗಿಂತ ದೈವೀಶಕ್ತಿ ಮತ್ತು ಕಳೆ ಎದ್ದುಕಾಣುತ್ತವೆ. ಗುಪ್ತರ ಶೈಲಿಯ ಪ್ರಭಾವವನ್ನು ಇಲ್ಲಿ ಗುರುತಿಸಬಹುದು. ಇದೇ ಸರಳತೆ, ಕಿರುನಗೆ, ಸಹಜ ಅಂಗಾಂಗ ಪ್ರಮಾಣ ಇವು ದೇವನ ವಾಹನವಾದ ನವಿಲಿನಲ್ಲೂ ಕಂಡುಬರುತ್ತವೆ. ಸಮತೋಲನವನ್ನು ಸಾಧಿಸಲು ಮಾಡಿರುವ ಗಂಧರ್ವ ಶಿಲ್ಪಗಳ ಜೋಡಣೆ ಈ ಕೃತಿಗೆ ಶೋಭೆಯನ್ನಿತ್ತಿದೆ. ಅಲ್ಲದೆ ಇವನ್ನೂ ದೇವನ ಗಾತ್ರಕ್ಕೇ ಮಾಡಿದೆ; ಮುಂದೆ ಶಿಲ್ಪದಲ್ಲಿ ಬೆಳೆದ ತಂತ್ರ ಇನ್ನೂ ಸ್ಥಿರೀಕೃತವಾಗಿಲ್ಲದಿದ್ದ ಕಾಲವನ್ನು ಇದು ಸೂಚಿಸುತ್ತದೆ. ನವಿಲಿನ ಮೇಲೆ ಆಕಾಶದಲ್ಲಿ ಅನಾಯಾಸವಾಗಿ ಹಾರುತ್ತಿರುವ ದೇವಗಂಧರ್ವಾದಿಗಳು, ಕೆಳಗೆ ಮೃತನಾಗಿ ನಿಶ್ಚಲನಾಗಿ ಬಿದ್ದಿರುವ ರಾಕ್ಷಸ – ಇವುಗಳ ಪರಸ್ಪರ ವಿರುದ್ಧ ಭಾವಗಳನ್ನು ಪರಿಣಾಮಕಾರಿಯಾಗಿ ಒಂದೆಡೆಯೇ ಮೂಡಿಸಿರುವುದು ಶಿಲ್ಪಿಯ ಜಾಣ್ಮೆಯನ್ನು ತೋರಿಸುತ್ತದೆ. ರಾಕ್ಷಸತ್ವದ ಅವಸಾನ, ದೇವತ್ವದ ಸುಲಭ ಜಯ- ಇವನ್ನು ಇದಕ್ಕಿಂತ ಚೆನ್ನಾಗಿ ಶಿಲ್ಪಿಸುವುದು ಸಾಧ್ಯವಿಲ್ಲವೆಂಬಷ್ಟುಮಟ್ಟಿಗೆ ಇದು ಯಶಸ್ವಿಯಾಗಿದೆ. ಚಳುಕ್ಯ ಶಿಲ್ಪಗಳಲ್ಲಿ ಇದೊಂದು ಅನುಪಮ ಕೃತಿ.

ಈ ಶಿಲ್ಪದಲ್ಲಿ ಕಂಡುಬರುವ ಸರಳತೆ ಮತ್ತು ಸಹಜತೆಗಳನ್ನು ಕೊಂತಿಗುಡಿಯಲ್ಲಿರುವ ಕೆಲವು ಮಿಥುನ ಶಿಲ್ಪಗಳಲ್ಲೂ ಕಾಣಬಹುದು. ಕಾಮಕೇಳಿನಿರತರಾದ ದಂಪತಿಗಳ ಒಂದು ಶಿಲ್ಪದಲ್ಲಿ ಕಾಮಪೂರಿತನಾದ, ಆದರೂ ಹೆಣ್ಣಿಗೆ ಧೈರ್ಯ ನೀಡುವಂತಿರುವ ಪ್ರೌಢ, ನಾಚಿಕೆಯಿಂದ ಬೆದರಿದಂತೆ ಮುದರಿಕೊಂಡಿದ್ದರೂ ಹೃದಯದೊಳಗಿನ ಸಂತಸವನ್ನು ಮುಖದಲ್ಲಿ ವ್ಯಕ್ತಪಡಿಸುತ್ತಿರುವ ಪ್ರೌಢೆ - ಇವರು ಮನೋಜ್ಞವಾಗಿ ಶಿಲ್ಪಿತವಾಗಿದ್ದಾರೆ.

ಬಾದಾಮಿಯ ಗುಹೆಯ ಮತ್ತು ಸ್ವಲ್ಪಮಟ್ಟಿಗೆ ದುರ್ಗ ದೇವಾಲಯದ ಶಿಲ್ಪಗಳು ಹಾರುತ್ತಿರುವ ಗಂಧರ್ವನೇ ಮುಂತಾದ ಗುಪ್ತರ ಶೈಲಿಯ ಸರಳ ಶಿಲ್ಪಗಳನ್ನು ಒಳಗೊಂಡಿವೆ. ಆದರೆ ಅಲ್ಲಿಯ ದೇವಮೂರ್ತಿಗಳಲ್ಲಿ ಹೆಚ್ಚಿನ ದೇಹಪುಷ್ಟಿ, ಶಕ್ತಿ, ನಿರೂಪಣೆಯಲ್ಲಿ ಸ್ನಿಗ್ಧತೆ ಮತ್ತು ಸಂಪ್ರದಾಯಬದ್ಧತೆ ಕಂಡುಬರುತ್ತವೆ. ಪ್ರಾಯಶಃ ಈ ಕಾಲದಲ್ಲಿ ರೂಪುಗೊಳ್ಳುತ್ತಿದ್ದ ಚಳುಕ್ಯರದೇ ಆದ ಸ್ಥಳೀಯ ಶೈಲಿಯ ಬೆಳೆವಣಿಗೆಯ ಮೊದಲ ಹಂತಗಳನ್ನು ಇವು ಸೂಚಿಸುತ್ತವೆ. ಉದಾಹರಣೆಗೆ ಬಾದಾಮಿಯ ಒಂದನೆಯ ಗುಹೆಯಲ್ಲಿರುವ ನಟರಾಜನನ್ನು ಗಮನಿಸಬಹುದು. ಲಲಿತ ಭಂಗಿಯಲ್ಲಿರುವ ದೇವ ಷೋಡಶಬಾಹುವಾಗಿದ್ದಾನೆ. ಆದರೆ ಬಾಹುಗಳ ನಿರೂಪಣೆಯಲ್ಲಿ ಸಾಮರಸ್ಯವಿಲ್ಲ. ಮುಂದಿನ ಎರಡು ಕೈಗಳನ್ನಷ್ಟೆ ಉಳಿಸಿಕೊಂಡು ದೃಷ್ಟಿಸಿದರೆ ಇದೊಂದು ಅಪೂರ್ವ ಸೌಂದರ್ಯದ ಶಿಲ್ಪ. ಆದರೆ ಇಲ್ಲಿ ಸೌಂದರ್ಯಕ್ಕಿಂತ ಶಾಸ್ತ್ರಕ್ಕೆ ಹೆಚ್ಚು ಗಮನವಿತ್ತಿರುವುದು ಕಂಡುಬರುತ್ತದೆ. ಪೌರಾಣಿಕ ಹಿಂದು ಧರ್ಮ ದಕ್ಷಿಣ ಭಾರತದಲ್ಲಿ ಪ್ರಾಯಶಃ ಮೊಟ್ಟಮೊದಲಿಗೆ ಪ್ರಭಾವ ಗಳಿಸುತ್ತಿದ್ದ ಈ ಕಾಲದಲ್ಲಿ ದೇವರನ್ನು ಅವನ ಸಕಲ ಶಕ್ತಿ, ಸಾಮರ್ಥ್ಯ ಮತ್ತು ಔನ್ನತ್ಯದ ಭಾವಗಳೊಡನೆ ರೂಪಿಸುವ ಪ್ರಯತ್ನ ಇಲ್ಲಿ ನಡೆದಿದೆಯೆಂದು ಊಹಿಸಬಹುದು. ಅಲ್ಲದೆ ಮುಖ್ಯ ದೇವರನ್ನು ದೊಡ್ಡದಾಗಿ, ಆದರೆ ಪಕ್ಕದಲ್ಲಿರುವ ಗಣಪತಿ ಮತ್ತು ವಾದ್ಯಗಾರನನ್ನು ಬಹಳ ಚಿಕ್ಕದಾಗಿ ನಿರೂಪಿಸುವುದಕ್ಕೂ ದೇವಸಾರ್ವಭೌಮತ್ವ ಪ್ರದರ್ಶನದ ಉದ್ದೇಶವೇ ಕಾರಣವಿರಬಹುದು. ಬಾದಾಮಿಯ ಮೂರನೆಯ ಗುಹೆಯಲ್ಲಿರುವ ತ್ರಿವಿಕ್ರಮ ವಿಗ್ರಹದ ಶಿಲ್ಪದಲ್ಲೂ ಇದೇ ತಂತ್ರ ಅನುಸರಿಸಲಾಗಿದೆ. ನೆಲದಿಂದ ಮಾಡಿನವರೆಗೆ ನಿಂತ ಬೃಹನ್ಮೂರ್ತಿಯ ದಪ್ಪ ಕೈಕಾಲು, ವಿಶಾಲ ಎದೆ, ಆಯುಧಗಳನ್ನು ಭದ್ರವಾಗಿ ಹಿಡಿದಿರುವ ಭಂಗಿ, ಕಾಲನ್ನು ಆಗಸದತ್ತ ಎತ್ತಿ ನಿಲ್ಲಿಸಿರುವ ರೀತಿ ಇವುಗಳಲ್ಲಿ ದೇವನ ಅಸಾಧಾರಣ ಬಲ ಎದ್ದುಕಾಣುತ್ತದೆ. ತ್ರಿವಿಕ್ರಮನ ಎದುರಿಗೆ ಉಳಿದ ಎಲ್ಲರೂ ವಾಮನರು ಎಂಬ ಭಾವನೆಯನ್ನು ಪಕ್ಕದಲ್ಲಿ ಇವನ ಸೇವೆಯಲ್ಲಿ ನಿರತರಾಗಿರುವ ಬಲಿ ಮತ್ತು ಸಹಚರರ ತೆಳು ಕುಬ್ಜ ಮೂರ್ತಿಗಳು ಸೂಚಿಸುವಂತಿವೆ. ಒಂದೊಂದು ಶಿಲ್ಪವೂ ನಾಟಕದ ಸ್ತಬ್ಧ ದೃಶ್ಯದಂತೆ ತೋರುತ್ತದೆ. ಈ ಶಿಲ್ಪ ಶೈಲಿ ಬಾದಾಮಿಯ ಚಳುಕ್ಯ ಕಾಲದಲ್ಲೇ ಅಲ್ಲದೆ ಮುಂದೆ ರಾಷ್ಟ್ರಕೂಟರ ಕಾಲದಲ್ಲೂ ಮುಂದುವರಿಯಿತು.

ಆದರೂ ಈ ಧಾರ್ಮಿಕ ಚೌಕಟ್ಟಿನ ಮಿತಿಯಲ್ಲೇ ಹಲವೆಡೆ ವ್ಯಕ್ತಿಯ ಶಕ್ತಿ ಮತ್ತು ಭಾವನೆಗಳ ನಿರೂಪಣೆಯಲ್ಲಿ, ಶಿಲ್ಪವಿನ್ಯಾಸದಲ್ಲಿ, ಶಿಲ್ಪಿಗಳು ತಮ್ಮ ಪ್ರತಿಭೆಯನ್ನು ಅಭಿವ್ಯಕ್ತಿಸಿದ್ದಾರೆ. ಈ ದೃಷ್ಟಿಯಿಂದ ಐಹೊಳೆಯ ರಾವಳಫಡಿ ಗುಹೆಯಲ್ಲಿರುವ ಶಿಲ್ಪಗಳು ಅಮೋಘವಾದವು. ಅಲ್ಲಿಯ ನಟರಾಜ ವಿಗ್ರಹಕ್ಕೆ ಹತ್ತು ಕೈಗಳಿರುವುದಾದರೂ ಹಿಂದಿನ ಕೈಗಳು ಹಿನ್ನೆಲೆಯ ಪರದೆಯ ಮೇಲಿನ ಹಾರಗಳೋ ಎಂದು ಕಾಣುವಂತೆ ಮಾಡಿ, ದೇವರನ್ನು ಅಷ್ಟೇ ಪ್ರಧಾನವಾಗಿ ತೋರಿಸಿರುವ ಜಾಣ್ಮೆ, ವಿಗ್ರಹದ ಅಂಗಾಂಗಗಳ ಸಹಜ ಪ್ರಮಾಣ, ನೃತ್ಯ ಭಂಗಿಗೆ ಸಹಜವಾದ ಮೈಬಾಗುಗಳು, ಮುಖದಲ್ಲಿ ಎದ್ದು ಕಾಣುವ ಭಾವತನ್ಮಯತೆ ಇವೆಲ್ಲವೂ ಮೂರ್ತಿಯ ಕಳೆಯನ್ನು ಹೆಚ್ಚಿಸಿವೆ. ಈ ವಿಗ್ರಹದ ಅಕ್ಕಪಕ್ಕದಲ್ಲಿರುವ ಅಷ್ಟಮಾತೃಕೆಯರ ಮೂರ್ತಿಗಳು ಮುಖ್ಯಮೂರ್ತಿಗೂ ಒಂದು ಕೈ ಮಿಗಿಲಾಗಿವೆ. ಇವುಗಳಲ್ಲಿರುವ ಬಳುಕು, ಕೋಮಲತೆ, ಲಾಸ್ಯ ಮತ್ತು ಆಕರ್ಷಣೆ ಅದ್ಭುತವಾದವು.

**ಚಿತ್ರಕಲೆ :** ಈ ಕಾಲದ ಚಿತ್ರಕಲೆಯ ಅವಶೇಷಗಳು ಬಾದಾಮಿಯ 3ನೆಯ ಗುಹೆಯಲ್ಲಿ ಕಂಡುಬಂದಿವೆ. 578ರಲ್ಲಿ ನಿರ್ಮಿತವಾದ ಈ ಗುಹೆ ಪ್ರಾಯಶಃ ಪೂರ್ಣವಾಗಿ ಚಿತ್ರಾಲಂಕೃತವಾಗಿದ್ದಿರಬೇಕೆಂದು ಅನೇಕ ಸಾಂದರ್ಭಿಕ ಸಾಕ್ಷ್ಯಗಳಿಂದ ಊಹಿಸಬಹುದು. ಈಗ ಉಳಿದಿರುವುವು ಕಪೋತದ ಒಳಭಾಗದಲ್ಲಿರುವ ಕೆಲವು ತುಣುಕುಗಳು ಮಾತ್ರ. ಈ ಭಿತ್ತಿಚಿತ್ರಗಳು ಅಜಂತದ ಚಿತ್ರ ಸಂಪ್ರದಾಯವನ್ನು ಹೋಲುತ್ತವೆ. ಆದರೂ ಅಜಂತದ ಚಿತ್ರಗಳ ಗುಣಮಟ್ಟ ಇವುಗಳಲ್ಲಿಲ್ಲ ಎಂಬುದು ಕಲಾಭಿಜ್ಞರ ಅಭಿಪ್ರಾಯ. ಇವುಗಳ ಬಣ್ಣಗಳು ಬಹಳವಾಗಿ ಮಾಸಿ ಹೋಗಿರುವುದರಿಂದ ಇವು ಸ್ಪಷ್ಟವಾಗಿಲ್ಲ. ರಾಜರಾಣಿಯರು ಆಸ್ಥಾನದಲ್ಲಿ ತಮ್ಮ ಪರಿವಾರ ಮತ್ತು ಭೃತ್ಯವರ್ಗದೊಡನೆ ನೃತ್ಯವೀಕ್ಷಣೆ ಮಾಡುತ್ತಿರುವುದು, ಇಂದ್ರನ ಆಸ್ಥಾನ, ಆಕಾಶದಲ್ಲಿ ಸಂಚರಿಸುತ್ತಿರುವ ವಿದ್ಯಾಧರ ದಂಪತಿಗಳು ಮುಂತಾದ ಚಿತ್ರಗಳಿದ್ದಂತಿವೆ. ರಚನೆಯಲ್ಲಿ ಅಥವಾ ಅವು ಉಳಿದಿರುವ ಸ್ಥಿತಿಯಲ್ಲಿ ಈ ಚಿತ್ರಗಳು ಬಹು ಉತ್ತಮವಾಗಿ ಕಾಣದಿದ್ದರೂ ಭಾರತದಲ್ಲಿ ಕಂಡುಬಂದಿರುವ ಹಿಂದು ದೇವಾಲಯದ ಭಿತ್ತಿ ಚಿತ್ರ ಸರಣಿಯಲ್ಲಿ ಇವೇ ಪ್ರಾಚೀನವಾದವೆಂಬ ಕಾರಣದಿಂದ ಇವಕ್ಕೆ ಪ್ರಾಮುಖ್ಯವಿದೆ. (ಎಸ್.ಎನ್.)

**ಶಾಸನಗಳು :** ಬಾದಾಮಿಯ ಚಳುಕ್ಯರ ಶಾಸನಗಳಲ್ಲಿ ಹೆಚ್ಚಿನವು ತಾಮ್ರ ಶಾಸನಗಳು. ಇವುಗಳ ಭಾಷೆ ಸಂಸ್ಕೃತ, ಲಿಪಿ ಕನ್ನಡ. ಅಲಂಪುರದಲ್ಲಿ ದೊರೆತ ಸಿದ್ಧಮಾತೃಕಾ ಲಿಪಿಯ ಶಾಸನ ಮತ್ತು ವಿನಯಾದಿತ್ಯನ ನಾಗರೀ ಲಿಪಿಯ ಶಾಸನ -ಇಂಥ' ಒಂದೆರಡನ್ನು ಹೊರತುಪಡಿಸಿ ಶಿಲಾ ಶಾಸನಗಳೆಲ್ಲವೂ ಕನ್ನಡ ಲಿಪಿಯಲ್ಲಿದ್ದು ಹೆಚ್ಚಿನವು ಕನ್ನಡ ಭಾಷೆಯಲ್ಲಿವೆ.

ಸಾಮಾನ್ಯವಾಗಿ ತಾಮ್ರ ಶಾಸನಗಳಲ್ಲಿ ಮಂಗಳವಾಕ್ಯ, ರಾಜಪ್ರಶಸ್ತಿ, ದಾನಕ್ಕೆ ಸಂಬಂಧಿಸಿದ ವಿವರಗಳು ಹಾಗೂ ಕೊನೆಯಲ್ಲಿ ಶಾಪರೂಪದ ಶ್ಲೋಕಗಳು ಇರುತ್ತವೆ. ವರಾಹಾವತಾರದ ವಿಷ್ಣುವನ್ನು ಸ್ತುತಿಸುವ ಜಯತ್ಯಾವಿಷ್ಕೃತಂ ವಿಷ್ಣೋಃ ವಾರಾಹಂ ಕ್ಷೋಭಿತಾರ್ಣ್ಣವಂ ಎಂದು ಆರಂಭವಾಗುವ ಶ್ಲೋಕ ಮೊದಲಲ್ಲಿದ್ದು ಅನಂತರ ಚಳುಕ್ಯರು ಮಾನವ್ಯಸ ಗೋತ್ರದವರು ಹಾರೀತಿಪುತ್ರರು ಸಪ್ತಮಾತೃಗಳಿಂದಲೂ ಕಾರ್ತಿಕೇಯನಿಂದಲೂ ರಕ್ಷಿಸಲ್ಪಟ್ಟು ಕಲ್ಯಾಣವಂತರಾಗಿ ಭಗವನ್ನಾರಾಯಣನ ಪ್ರಸಾದದಿಂದ ವರಾಹಲಾಂಛನವನ್ನು ಪಡೆದು ಅನೇಕ ರಾಜರನ್ನು ಗೆದ್ದವರು ಎಂದು ಹೇಳಲಾಗಿರುತ್ತದೆ. ಶಿಲಾ ಶಾಸನಗಳಲ್ಲಿ ಇಂಥ ಪ್ರಶಸ್ತಿಗಳು ಕಾಣಿಸುವುದಿಲ್ಲ. ವಿಷಯವನ್ನು ಚುಟುಕಾಗಿ ಹೇಳುವ ಸಣ್ಣ ಶಾಸನಗಳಿವು. ಇವುಗಳಲ್ಲಿ ನೇರವಾಗಿ ರಾಜನ ಆಳಿಕೆಯ ಪ್ರಸ್ತಾಪವಿದ್ದು ಅರಸನ ಹೆಸರನ್ನು ಉಲ್ಲೇಖಿಸಿದ ಅನಂತರ ಸತ್ಯಾಶ್ರಯ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಎಂಬ ಬಿರುದುಗಳಿರುತ್ತವೆ.

ಇವರ ಶಾಸನಗಳಲ್ಲಿ ಕಾಲನಿರ್ದೇಶನವಿರುವುದು ಒಂದು ವೈಶಿಷ್ಟ್ಯ. ಒಂದನೆಯ ಪುಲಕೇಶಿ ಮತ್ತು ಕೀರ್ತಿವರ್ಮರ ಬಾದಾಮಿಯ ಶಾಸನಗಳು, ಮಂಗಲೀಶನ ಮಹಾಕೂಟದ ಶಾಸನ, ಇಮ್ಮಡಿ ಪುಲಕೇಶಿಯ ಐಹೊಳೆಯ ಶಾಸನ ಮುಂತಾದ ಶಿಲಾಶಾಸನಗಳಲ್ಲಿ ಕಾಲಕ್ಕೆ ಸಂಬಂಧಿಸಿದ ಶಕವರ್ಷ ಹಾಗೂ ಇತರ ವಿವರಗಳಿವೆ. ಆದರೆ ಶಿಲಾಶಾಸನಗಳಿಗಿಂತ ಹೆಚ್ಚಾಗಿ ತಾಮ್ರ ಶಾಸನಗಳಲ್ಲಿ ಈ ವಿವರಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಅದರಲ್ಲಿಯೂ ವಿನಯಾದಿತ್ಯನ ಹಾಗೂ ಅನಂತರ ಆಳಿದ ಅರಸರ ತಾಮ್ರ ಶಾಸನಗಳಲ್ಲಿ ಇವು ಸಾಮಾನ್ಯವಾಗಿವೆ. ಮೊದಲ ಅರಸರ ತಾಮ್ರ ಶಾಸನಗಳಲ್ಲಿ, ಶಕವರ್ಷದ ಪ್ರಸ್ತಾಪ ಕೆಲವು ಶಾಸನಗಳಲ್ಲಿ ಮಾತ್ರ ಇವೆ. ರಾಜನ ಆಳಿಕೆಯ ವರ್ಷಗಳನ್ನು ಈ ಶಾಸನಗಳು ಸಾಮಾನ್ಯವಾಗಿ ಸೂಚಿಸಿವೆ. ಸಂವತ್ಸರದ ಹೆಸರುಗಳು ಅಪರೂಪವಾಗಿ ಉಲ್ಲೇಖಿಸಲ್ಪಟ್ಟಿವೆ.

ತಿಂಗಳು, ಪಕ್ಷ, ತಿಥಿಗಳ ವಿವರಗಳಿದ್ದರೂ ವಾರ ದಿನದ ಪ್ರಸ್ತಾಪ ಮಾತ್ರ ಇರುವುದಿಲ್ಲ. ಕನ್ನಡ ಭಾಷೆಯ ದಾನ ಶಾಸನಗಳಲ್ಲಿ ಇದ್ದತ್ತಿಯಾನಮಿದೋನ್ಸಾರಣಾಸಿಯೊಳ್ ಸಾಸಿರ್ವ್ವಪಾರ್ವ್ವರುಮಾನ್ ಸಾಸಿರ ಕವಿಲೆಯುಮಾನ್ಕೊನ್ದಲೋಕಕ್ಕೆ ಸನ್ದೋನಕ್ಕು ಮುಂತಾದ ಅದೇ ಭಾಷೆಯ



ಒಂದನೆಯ ಪುಲಕೇಶಿಯ ಶಾಸನ, ಬಾದಾಮಿ

ಶಾಪ ವಾಕ್ಯಗಳು ಕಾಣಸಿಗುತ್ತವೆ. ದಾನಕ್ಕೆ ಸಂಬಂಧಿಸಿದ ಹೆಚ್ಚಿನ ವಿವರಗಳನ್ನು ಈ ಶಾಸನಗಳಲ್ಲಿ ಕಾಣಲಾಗದು. ಶಾಸನ ಬರೆದ ಆಚಾರಿಯ ಹೆಸರುಗಳನ್ನು ಕೆಲವು ಸಂದರ್ಭಗಳಲ್ಲಿ ಕೊಟ್ಟಿದೆ. (ಬಿ.ಆರ್.ಜಿ.)

**ನಾಣ್ಯಗಳು :** ಬಾದಾಮಿ ಚಳುಕ್ಯರ ಲಾಂಛನ ವರಾಹವಾಗಿದ್ದಿತ್ತು. ಆದುದರಿಂದ ವರಾಹದ ಚಿತ್ರವನ್ನುಳ್ಳ ಮತ್ತು ಬರೆಹವಿಲ್ಲದಿರುವ ಚಿನ್ನದ ನಾಣ್ಯಗಳು ಬಾದಾಮಿ ಚಳುಕ್ಯರ ನಾಣ್ಯಗಳೆಂದು ವಿದ್ವಾಂಸರು ಭಾವಿಸಿದ್ದಾರೆ. ಸು.50-60 ಗ್ರೇನ್ ತೂಕದ ಚಿನ್ನದ ನಾಣ್ಯಗಳ ಮೇಲೆ ಬಾದಾಮಿ ಚಳುಕ್ಯರ ವರಾಹ ಚಿತ್ರವನ್ನು ಮುದ್ರಿಸಲಾಗಿದೆ. ಕಾಲಕ್ರಮದಲ್ಲಿ ವರಾಹ ಚಿಹ್ನೆ ಇಲ್ಲದಿದ್ದರೂ ಈ ತೂಕದ ನಾಣ್ಯಗಳಿಗೆ ವರಹ ಎಂದು ಹೆಸರಾಯಿತು. ನಾಣ್ಯಗಳಿಗೆ ವರಹ ಎಂಬ ಹೆಸರು ಬರಲು ಬಾದಾಮಿ ಚಳುಕ್ಯರ ವರಾಹ ಚಿಹ್ನೆಯೇ ಕಾರಣವೆಂದು ಎಲ್ಲ ವಿದ್ವಾಂಸರೂ ಒಪ್ಪಿದ್ದಾರೆ.

ಬಾದಾಮಿ ಚಳುಕ್ಯರ ನಾಣ್ಯಗಳು ಅಚ್ಚಿನಿಂದ ಮಾಡಿದವುಗಳು. ಇವರ ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳು ಈವರೆಗೆ ಬೆಳಕಿಗೆ ಬಂದಿವೆ. ಒಂದನೆಯ ವಿಕ್ರಮಾದಿತ್ಯನ ಚಿನ್ನದ ನಾಣ್ಯಗಳು 117 ಗ್ರೇನ್ ತೂಕ ಉಳ್ಳದ್ದಾಗಿವೆ. ವೃತ್ತಾಕಾರದ ಈ ನಾಣ್ಯಗಳ ವ್ಯಾಸ 0.76 ಅಂಗುಲ. ಇವುಗಳ ಮುಮ್ಮುಖದಲ್ಲಿ ಬಲಭಾಗಕ್ಕಿರುವ ವರಾಹವಿದೆ. ಇದರ ಮೇಲೆ ಸೂರ್ಯ ಮತ್ತು ಚಂದ್ರ, ಮುಂಭಾಗದಲ್ಲಿ ದೀಪಸ್ತಂಭ ಇವೆ. ವರಾಹದ ಕೆಳಭಾಗದಲ್ಲಿ ಶ್ರೀವಿಕ್ರಮ ಎಂಬ ಕನ್ನಡ ಲಿಪಿಯ ಬರೆಹವಿದೆ. ಈ ನಾಣ್ಯದ ಹಿಮ್ಮುಖದಲ್ಲಿ ನಿಂತಿರುವ ಮನುಷ್ಯನ ಚಿತ್ರವೂ ಸಣ್ಣ ವರಾಹವೂ ಎಡಭಾಗದಲ್ಲಿ ವಿಕ್ರಮ ಎಂಬ ಬರೆಹವೂ ಇವೆ. ಇದೇ ರಾಜನ ಚಿನ್ನ (30%) ಮತ್ತು ಬೆಳ್ಳಿ (70%) ಮಿಶ್ರಲೋಹದ ನಾಣ್ಯವೂ ದೊರಕಿದೆ. ಇದರ ತೂಕ 153 ಗ್ರೇನ್, ಇದು ಚಿನ್ನದ ನಾಣ್ಯದ ಮಾದರಿಯಲ್ಲೇ ಇದ್ದರೂ ಕೆಲ ಬದಲಾವಣೆಗಳನ್ನು ತೋರಿಸುತ್ತದೆ. ಮುಮ್ಮುಖದಲ್ಲಿ ಶ್ರೀವಿಕ್ರಮರಾಜ ಎಂಬ ಬರೆವಣಿಗೆಯಿದೆ. ಹಿಮ್ಮುಖದಲ್ಲಿ ಶ್ರೀವಿಕ್ರಮ ಮಹಾರಾಜ ಎಂಬ ಕನ್ನಡ ಲಿಪಿಯ ಬರೆಹವೂ ನವಿಲುಗರಿಯನ್ನು ಧರಿಸಿರುವ ಮನುಷ್ಯನ ಚಿತ್ರವೂ ಇವೆ. ಈ ಎರಡು ನಾಣ್ಯಗಳು ಖಚಿತವಾಗಿ ಬಾದಾಮಿ ಚಳುಕ್ಯರಿಗೆ ಸೇರಿದವು. 50-60 ಗ್ರೇನ್ ತೂಕಕ್ಕಿಂಥ ಭಿನ್ನವಾಗಿರುವ ಈ ನಾಣ್ಯಗಳ ತೂಕ ಗಮನಾರ್ಹವಾದುದು. ಈ ತೂಕ ಗುಪ್ತರ ಚಿನ್ನದ ನಾಣ್ಯಗಳಿಗೆ ಸಮೀಪವಾಗಿದೆ.

ಎಂ.ಎಚ್.ಕೃಷ್ಣ ಅವರು ಚಿನ್ನದ ನಾಣ್ಯವೊಂದನ್ನು ಒಂದನೆಯ ಪುಲಕೇಶಿಯದೆಂದು ಭಾವಿಸುತ್ತಾರೆ. ಇದರ ತೂಕ 57.2 ಗ್ರೇನ್ ಮತ್ತು ವ್ಯಾಸ 0.55". ಇದರ ಮುಮ್ಮುಖದಲ್ಲಿ ಅಲಂಕೃತ ವರಾಹವಿದೆ. ಅದರ ಮೇಲೆ ಸೂರ್ಯ ಮತ್ತು ಚಂದ್ರ, ಹಿಮ್ಮುಖದಲ್ಲಿ ಅಷ್ಟದಳ ಪದ್ಮವಿದೆ. ಈ ಪದ್ಮ ಕದಂಬರ ಚಿಹ್ನೆಯೆಂದು ಭಾವಿಸಿ ಕದಂಬರನ್ನು ಸೋಲಿಸಿದುದರ ನೆನಪಾಗಿ ಈ ನಾಣ್ಯಗಳನ್ನು ಪುಲಕೇಶಿ ಅಚ್ಚು ಮಾಡಿಸಿರಬೇಕೆಂದು ಕೃಷ್ಣ ಅವರು ಭಾವಿಸುತ್ತಾರೆ. ಆದರೆ ಇದರಲ್ಲಿ ಖಚಿತತೆಯಿಲ್ಲ. ಎಲಿಯಟ್ ಅವರು 66 ಗ್ರೇನ್ ತೂಕದ ಚಿನ್ನದ ನಾಣ್ಯಗಳನ್ನು ಬಾದಾಮಿ ಚಳುಕ್ಯರ ನಾಣ್ಯಗಳೆಂದು ಭಾವಿಸುತ್ತಾರೆ. ಒಂದು ನಾಣ್ಯದ ಮುಮ್ಮುಖದಲ್ಲಿ ಅಲಂಕೃತವಾದ ವರಾಹವಿದೆ. ಹಿಮ್ಮುಖದಲ್ಲಿ ಎಂಟು ದಳದ ಪದ್ಮದ ಚಿತ್ರವಿದೆ. ಮತ್ತೊಂದು ನಾಣ್ಯದಲ್ಲಿ ಅಲಂಕಾರವಿಲ್ಲದಿರುವ ವರಾಹ, ಹಿಮ್ಮುಖದಲ್ಲಿ ಪುಷ್ಪದ ನಮೂನೆಗಳಿವೆ. ಇವುಗಳಲ್ಲಿ ಬರೆವಣಿಗೆ ಇಲ್ಲದೆ ಇರುವುದರಿಂದ ಇವು ಯಾವ ರಾಜರ ನಾಣ್ಯಗಳು ಎಂಬುದು ತಿಳಿದಿಲ್ಲ. ಆದರೆ ವರಾಹ ಚಿತ್ರವಿರುವುದರಿಂದ ಇವು ಬಾದಾಮಿ ಚಳುಕ್ಯರ ನಾಣ್ಯಗಳೆಂದು ಊಹಿಸಬಹುದು. ಶ್ರೀರಣವಿಕ್ರಮ ಹಾಗೂ ಶ್ರೀಪೃಥಿವೀ ಎಂಬ ಬರೆಹವಿರುವ ನಾಣ್ಯಗಳನ್ನು ಒಂದನೆಯ ಪುಲಕೇಶಿಗೆ ಅನ್ವಯಿಸಲಾಗಿದೆ. ಹಾಗೆಯೇ ಶ್ರೀಕೃತರಾಜ ಎಂಬ ಬರೆಹವಿರುವ ನಾಣ್ಯವನ್ನು ಒಂದನೆಯ ಕೀರ್ತಿವರ್ಮನದೆಂದು ಭಾವಿಸಲಾಗಿದೆ. ಇಮ್ಮಡಿ ಪುಲಕೇಶಿಯ ತಾಮ್ರದ ನಾಣ್ಯಗಳು ಈಚೆಗೆ ಎಲಿಫೆಂಟ ದ್ವೀಪದಲ್ಲಿ ದೊರೆತಿದ್ದು, ಅವುಗಳ ಮುಮ್ಮುಖದಲ್ಲಿ ಶ್ರೀ ಸತ್ಯಾಶ್ರಯ ಎಂಬ ಬರೆಹ ಹಾಗೂ ಹಿಮ್ಮುಖದಲ್ಲಿ ವೃಷಭ ಚಿತ್ರಗಳಿವೆ. ಶ್ರೀ ವಿಕ್ರಮ ಎಂಬ ಬರೆಹವಿರುವ ಚಿನ್ನದ ನಾಣ್ಯ ಮೊದಲನೆಯ ವಿಕ್ರಮಾದಿತ್ಯನದೆಂದು ಪರಿಗಣಿಸಲಾಗಿದೆ. (ಎ.ವಿ.ಎನ್.)

## ಕಲ್ಯಾಣದ ಚಾಳುಕ್ಯರು

**ರಾಜಕೀಯ ಇತಿಹಾಸ :** ರಾಷ್ಟ್ರಕೂಟರ ಅನಂತರ ಉತ್ತರ ಕರ್ನಾಟಕದ ಭಾಗವನ್ನಲ್ಲದೆ ಸುತ್ತಲ ದಕ್ಷಿಣ ಕರ್ನಾಟಕ, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರ ಪ್ರದೇಶಗಳ ಬಹುಭಾಗಗಳಲ್ಲಿ ಕಲ್ಯಾಣದ ಚಾಳುಕ್ಯರು ಆಳಿಕೆ ನಡೆಸಿದರು. ಈ ವಂಶದವರ ಆಳಿಕೆ ಪ್ರಾರಂಭವಾದದ್ದು 973ರಲ್ಲಿ. ಆ ವರ್ಷ ರಾಷ್ಟ್ರಕೂಟ ಖೊಟ್ಟಿಗನನ್ನು ಸೋಲಿಸಿ ಚಾಳುಕ್ಯವಂಶದ ಇಮ್ಮಡಿ ತೈಲಪ ಸಿಂಹಾಸನವನ್ನು ಆಕ್ರಮಿಸಿಕೊಂಡ. ಅಲ್ಲಿಂದ ಸುಮಾರು ಎರಡು ಶತಮಾನಗಳವರೆಗೆ ಚಾಳುಕ್ಯರ ಆಳಿಕೆ ಅವ್ಯಾಹತವಾಗಿ ಸಾಗಿ ಅನಂತರ ಇಳಿಮುಖವಾಗಿ 12ನೆಯ ಶತಮಾನದ ಅಂತ್ಯದ ಹೊತ್ತಿಗೆ ಮರೆಯಾಯಿತು.

ಬಾದಾಮಿಯ ಚಳುಕ್ಯರ ಆಳ್ವಿಕೆಯನ್ನು ಕೊನೆಗೊಳಿಸಿ ಪ್ರಭುತ್ವವನ್ನು ಸಾಧಿಸಿಕೊಂಡಿದ್ದ ರಾಷ್ಟ್ರಕೂಟವಂಶದವರು ಸುಮಾರು ಎರಡು ಶತಮಾನಗಳವರೆಗೂ ರಾಜ್ಯ ನಿರ್ವಹಿಸಿದರೂ ಚಾಳುಕ್ಯವಂಶದ ಅರಸರು ಅಲ್ಲಲ್ಲಿ ಚಿಕ್ಕಪುಟ್ಟ ಪ್ರದೇಶಗಳಲ್ಲಿ ಉಳಿದುಕೊಂಡು ಬಂದು ತಮ್ಮ ಪುರಾತನ ವೈಭವದ ನೆನಪನ್ನು ಉಳಿಸಿಕೊಂಡಿದ್ದರೆಂದು ತೋರುತ್ತದೆ. ಈ ನಡುವೆ ಏಳು ತಲೆಮಾರುಗಳ ಜನ ತೆರೆಯ ಮರೆಯಲ್ಲಿ ಬಾಳಿದರೆಂದೂ ಖೊಟ್ಟಿಗನನ್ನು ಇಮ್ಮಡಿ ತೈಲಪ ಸೋಲಿಸಿ ಮಾನ್ಯಖೇಟವನ್ನು ಆಕ್ರಮಿಸಿದಂದಿನಿಂದ ಚಾಳುಕ್ಯರು ಪುನಃ ಪ್ರಕಾಶಕ್ಕೆ ಬಂದರೆಂದೂ ಕಲ್ಯಾಣದ ಚಾಳುಕ್ಯರ ಶಾಸನಗಳು ಹೇಳುತ್ತವೆ. ಗದಾಯುದ್ಧ ಕರ್ತೃ ರನ್ನ ಸಹ ಇಱಿವಬೆಡಂಗ ಸತ್ಯಾಶ್ರಯನ ವಂಶಾವಳಿಯನ್ನು ನಿರೂಪಿಸುವಾಗ ಬಾದಾಮಿಯ ಚಳುಕ್ಯರಿಗೂ ತೈಲಪನಿಗೂ ನಡುವಣ ಆ ವಂಶಜರ ಹೆಸರುಗಳನ್ನು ಉಲ್ಲೇಖಿಸಿದ್ದಾನೆ.

ಈ ನಡುಗಾಲದಲ್ಲಿ ತೆರೆಯ ಮರೆಯಲ್ಲಿದ್ದ ಚಾಳುಕ್ಯ ಅರಸರ ವಂಶಾವಳಿ ಹೀಗಿತ್ತೆಂದು ಶಾಸನಗಳಿಂದ ವ್ಯಕ್ತವಾಗುತ್ತದೆ.

ವಿಜಯಾದಿತ್ಯ

| | |
|---|---|
| ವಿಕ್ರಮಾದಿತ್ಯ II | ಭೀಮಪರಾಕ್ರಮ |
| ಕೀರ್ತಿವರ್ಮ V | ಕೀರ್ತಿವರ್ಮ III |
| | ತೈಲಪ I |
| | ವಿಕ್ರಮಾದಿತ್ಯ III |
| | ಭೀಮ II |
| | ಅಯ್ಯಣ |
| | ವಿಕ್ರಮಾದಿತ್ಯ IV |
| | ತೈಲಪ II |

ಆದರೆ ರನ್ನನ ಗದಾಯುದ್ಧ ಕಾವ್ಯದಲ್ಲಿ ಕೊಟ್ಟಿರುವ ವಂಶಾವಳಿ ಇದಕ್ಕಿಂತ ಸ್ವಲ್ಪಮಟ್ಟಿಗೆ ಭಿನ್ನವಾದದ್ದು. ಶಾಸನಗಳಲ್ಲಿ 1ನೆಯ ತೈಲಪನ ಮಗ ಮುಮ್ಮಡಿ ವಿಕ್ರಮಾದಿತ್ಯನೆಂದು ಹೇಳಿದ್ದರೆ, ಕವಿ ಈ ವಿಕ್ರಮಾದಿತ್ಯನನ್ನೂ ಭೀಮನ ಮಗನೆಂದು ಹೇಳಿ ಭೀಮನನ್ನು 1ನೆಯ ತೈಲಪನ ಮಗನೆಂದಿದ್ದಾನೆ. ಪಟ್ಟದಕಲ್ಲಿನಲ್ಲಿ ದೊರೆತ ಶಾಸನವೊಂದರಲ್ಲಿ ಒಬ್ಬ ತೈಲಪನ ಪ್ರಸ್ತಾಪವಿದೆ. ಶ್ರೀ ಪೆರ್ಗ್ಗಡೆ ಮಹಾರಾಜ ತೈಲ ಮಹಾಧಿರಾಜ ಎಂದಿರುವ ಈ ಶಾಸನದಲ್ಲಿನ ತೈಲ ಒಬ್ಬ ಅಧಿಕಾರಿ (ಶ್ರೀ ಪೆರ್ಗ್ಗಡೆ) ಆಗಿದ್ದನೆಂದೂ ಮಹಾರಾಜ, ಮಹಾಧಿರಾಜ ಎಂಬವು ಆತನ ಬಿರುದುಗಳೆಂದೂ ಹೇಳಲಾಗಿದೆ. ಲಿಪಿಶಾಸ್ತ್ರ ದೃಷ್ಟಿಯಿಂದ, ಈ ತೈಲಪ ಚಾಳುಕ್ಯ ಮನೆತನದ ಮುಮ್ಮಡಿ ಕೀರ್ತಿವರ್ಮನ ಮಗನಾದ 1ನೆಯ ತೈಲಪನೆಂದು ಊಹಿಸಲಾಗಿದೆ. ಎರಡನೆಯ ಭೀಮನನ್ನು ಮುಕುಂದಿಯ ಕೊಂದ ಭೀಮ ಎಂದು ಕವಿ ಕರೆದಿದ್ದಾನೆ. ಆದರೆ ಈ ಮುಕುಂದಿ ಯಾರು ಎಂಬುದು ತಿಳಿಯದು. ಕೃಷ್ಣನ ಮಗಳನ್ನು ಇಮ್ಮಡಿ ತೈಲಪನ ಅಜ್ಜನಾದ ಅಯ್ಯಣ ಮದುವೆಯಾದನೆಂದು ಹೇಳಿದೆ. ಈ ಕೃಷ್ಣ ಯಾರೆಂಬುದನ್ನು ಗುರುತಿಸುವಲ್ಲಿ ವಿದ್ವಾಂಸರಲ್ಲಿ ಒಮ್ಮತಾಭಿಪ್ರಾಯವಿಲ್ಲ.

ಅಯ್ಯಣನ ಮಗ ನಾಲ್ವಡಿ ವಿಕ್ರಮಾದಿತ್ಯ. ಕಳಚುರಿ ಮನೆತನದ ಲಕ್ಷ್ಮಣರಾಜನ ಮಗಳಾದ ಬೊಂಥಾದೇವಿಯನ್ನು ಈತ ಮದುವೆಯಾಗಿದ್ದ. ಚಾಳುಕ್ಯರು ಕ್ರಮೇಣ ಪ್ರಬಲರಾಗುತ್ತಿದ್ದರೆಂಬುದನ್ನು ಇದು ಸೂಚಿಸುತ್ತದೆ. ಈ ವೇಳೆಗೆ ರಾಷ್ಟ್ರಕೂಟ ಮುಮ್ಮಡಿ ಕೃಷ್ಣ ದಿಗ್ವಿಜಯಿಯಾಗಿ, ತನ್ನ ಸಂಬಂಧಿಗಳಾದ ಕಳಚುರಿಗಳನ್ನು ನಿರ್ಲಕ್ಷಿಸುವ ಮನೋಭಾವ ಬೆಳೆಸಿಕೊಂಡಿದ್ದ. ಬಹುಶಃ ಈ ಕಾರಣದಿಂದಲೇ ಚಾಳುಕ್ಯ ವಿಕ್ರಮಾದಿತ್ಯನೊಡನೆ ಕಳಚುರಿಗಳು ಬಾಂಧವ್ಯ ಏರ್ಪಡಿಸಿಕೊಂಡಿರಬಹುದು.

ರಾಷ್ಟ್ರಕೂಟರನ್ನೂ ಇಮ್ಮಡಿ ತೈಲಪ ಹೊರದೂಡುವ ಮುನ್ನ ಅವರ ಸಾಮಂತರಲ್ಲಿ ಒಬ್ಬನಾಗಿದ್ದ. 957ರ ಕಾರ್ಜೋಳ ಶಾಸನದಲ್ಲಿ ಕನ್ನರದೇವನ (ಮುಮ್ಮಡಿ ಕೃಷ್ಣ) ಪಾದಪದ್ಮೋಪಜೀವಿ ಎಂದು ತೈಲಪನನ್ನು ವರ್ಣಿಸಲಾಗಿದೆ. ಆದರೆ ಎಂಟು ವರ್ಷಗಳ ಅನಂತರ 965ರ ಶಾಸನದಲ್ಲಿ ಸತ್ಯಾಶ್ರಯ ಕುಲತಿಲಕ, ಚಾಳುಕ್ಯರಾಮ, ಆಹವಮಲ್ಲ ಇತ್ಯಾದಿ ಬಿರುದಾಂಕಿತನಾದ ಮಹಾಸಾಮಂತರ ತೈಲಪರಸ ತರ್ದ್ದವಾಡಿಸಾಸಿರದ ಪ್ರಾಂತ್ಯವನ್ನು ಆಳುತ್ತಿದ್ದನೆಂದು ಹೇಳಿದೆ. ಇದರಲ್ಲಿ ಈತನನ್ನು ಮಹಾಸಾಮಂತನೆಂದು ಕರೆಯಲಾಗಿದೆ. ಇವನು ಪದವಿಯಲ್ಲಿ ಮೇಲೇರಿದ್ದುದನ್ನು ಇದು ಸೂಚಿಸುತ್ತದೆ. ಇದಾದ ಇನ್ನೆಂಟು ವರ್ಷಗಳೊಳಗಾಗಿ ಈತ ರಾಷ್ಟ್ರಕೂಟರನ್ನು ಮಳಖೇಡದಿಂದ ಹೊರದೂಡಿ ಚಾಳುಕ್ಯ ರಾಜ್ಯವನ್ನು ಪುನಃ ಪ್ರತಿಷ್ಠಾಪಿಸಿದ. ಮುಮ್ಮಡಿ ಕೃಷ್ಣನ ಅನಂತರ ಅಶಕ್ತ ಅರಸರು ಅಧಿಕಾರಕ್ಕೆ ಬಂದುದನ್ನೂ ಪರಮಾರ ಸೀಯಕ ಹರ್ಷ ಮಾನ್ಯಖೇಟವನ್ನು ಮುತ್ತಿ ರಾಜಧಾನಿಯನ್ನು ಹಾಳು ಕೆಡವಿದ ಸಂದರ್ಭವನ್ನೂ ತನ್ನ ರಾಜ್ಯ ಸ್ಥಾಪನೆಗೆ ಈತ ಉಪಯೋಗಿಸಿಕೊಂಡ. ಕೃಷ್ಣನ ವಿರೋಧಿಗಳಾಗಿದ್ದವರು ಆಗ ತೈಲಪನ ಸಹಾಯಕ್ಕೆ ಬಂದಂತೆ ತೋರುತ್ತದೆ. ಶ್ರೀಮುಖ ಸಂವತ್ಸರದಲ್ಲಿ (974) ರಾಷ್ಟ್ರಕೂಟ ಕಕ್ಕನನ್ನು ತೈಲಪ ಸೋಲಿಸಿ ಚಾಳುಕ್ಯ ರಾಜ್ಯ ಸ್ಥಾಪಿಸಿ ಅನಂತರ 24 ವರ್ಷಗಳ ಕಾಲ ಆಳಿದನೆಂದು ಗದಗದ 6ನೆಯ ವಿಕ್ರಮಾದಿತ್ಯನ ಶಾಸನದಲ್ಲಿ ಹೇಳಿದೆ. ಕಲ್ಯಾಣದ ಚಾಳುಕ್ಯರು ಅಧಿಕಾರಕ್ಕೆ ಬರುವ ಮೊದಲು ವಾರಂಗಲ್ ಬಳಿಯ ಹನ್ಮಕೊಂಡದಲ್ಲಿ ಇದ್ದರು ಎಂಬುದಕ್ಕೆ ಇಮ್ಮಡಿ ಭೀಮನ ಕಾಜಿಪೇಟ್ ದರ್ಗಾ ಶಾಸನ ಆಧಾರವಾಗಿದೆ ಎಂಬ ಅಭಿಪ್ರಾಯವಿದೆ. ಇದರಿಂದ ರಾಷ್ಟ್ರಕೂಟರ ಅಧೀನದಲ್ಲಿ ಅವರು ಕೃಷ್ಣಾನದಿ ಬಯಲಿನ ವಿವಿಧೆಡೆ ಆಳಿದರೆಂದು ಹೇಳಬಹುದು. ಅವರಿಗೆ ಏತಗಿರಿ, ಪೊಟ್ಟಲಕೆರೆ, ಕೊಳ್ಳಿಪಾಕೆ, ಪೈಠಣ, ಕಲ್ಯಾಣ, ಜಯನ್ತಿಪುರ, ಸೆಲೆಹಳ್ಳಿ ಇತ್ಯಾದಿ ರಾಜಧಾನಿಗಳು ಮತ್ತು ನೆಲೆವೀಡುಗಳು ಇದ್ದವೆಂದು ತಿಳಿದುಬಂದಿದೆ.

ಕಕ್ಕನನ್ನು ಸೋಲಿಸಿದ ತೈಲಪ ಮಾನ್ಯಖೇಟವನ್ನು ಆಕ್ರಮಿಸಿದ. ಆದರೆ ರಾಷ್ಟ್ರಕೂಟರ ವಿಧೇಯ ಸಾಮಂತನಾಗಿದ್ದ ಗಂಗ ಮಾರಸಿಂಹ ಮತ್ತು ಅವನ ಮರಣಾನಂತರ ಅವನ ಉತ್ತರಾಧಿಕಾರಿಗಳಾಗಿ ಅಧಿಕಾರಕ್ಕೆ ಬಂದ ಗೋವಿಂದ, ಪಾಂಚಾಲದೇವ ಇವರು ತೈಲಪನನ್ನು ಎದುರಿಸಿದರೂ 977ರ ವೇಳೆಗೆ ಗಂಗ ಮನೆತನದ ಈ ಮಾಂಡಲಿಕರನ್ನು ಸೋಲಿಸಿದ ತೈಲಪ ತನ್ನ ಸಿಂಹಾಸನವನ್ನು ಭದ್ರಪಡಿಸಿಕೊಂಡ. ಈ ಹೊತ್ತಿಗೆ ರಾಷ್ಟ್ರಕೂಟರ ಅವನತಿಯೊಂದಿಗೆ ರಾಜ್ಯ ಸ್ಥಾಪನೆಮಾಡಿಕೊಂಡಿದ್ದ ಚೋಳ ವಂಶದವರು ರಾಜ್ಯ ವಿಸ್ತರಣಾಕಾಂಕ್ಷಿಗಳಾಗಿದ್ದರು. ಆ ವಂಶದ ರಾಜರಾಜ ಗಂಗವಾಡಿ ನೊಳಂಬವಾಡಿಗಳನ್ನು ವಶಪಡಿಸಿಕೊಳ್ಳಲು ಉದ್ಯುಕ್ತನಾದಾಗ ತೈಲಪ ದಕ್ಷಿಣದ ಕಡೆಗೆ ನುಗ್ಗಿ ಚೋಳ ಅರಸನನ್ನು ಸೋಲಿಸಿದ (1992). ಪರಮಾರ ವಂಶದ ಸೀಯಕ ಹರ್ಷನ ಉತ್ತರಾಧಿಕಾರಿ ಮುಂಜ ಚಾಳುಕ್ಯ ತೈಲಪನನ್ನು 16 ಬಾರಿ ಸೋಲಿಸಿದನೆಂದು ಮೇರುತುಂಗ ತನ್ನ ಪ್ರಬಂಧ ಚಿಂತಾಮಣಿಯಲ್ಲಿ ಹೇಳಿದ್ದಾನೆ. ಆದರೆ ಕೊನೆಯಲ್ಲಿ ಮುಂಜ ತೈಲಪನಿಗೆ ಸೋತು ಸೆರೆಸಿಕ್ಕು, ಬಹುಶಃ ಸೆರೆಮನೆಯಲ್ಲಿ ತೀರಿಕೊಂಡ. ಯುವರಾಜನಾದ ಸತ್ಯಾಶ್ರಯ ಈ ಯುದ್ಧದಲ್ಲಿ ಪ್ರಮುಖ ಪಾತ್ರವಹಿಸಿದ. ಇವನ ಕಾಲದಲ್ಲಿ ಚಾಳುಕ್ಯ ರಾಜ್ಯ ಸುಮಾರು ವಿಂಧ್ಯ ಪರ್ವತದವರೆಗೂ ಹಬ್ಬಿತ್ತು.

ತೈಲಪನ ಮರಣಾನಂತರ ಪಟ್ಟಕ್ಕೆ ಬಂದ ಇವನ ಮಗ ಇಱಿವ ಬೆಡಂಗ ಸತ್ಯಾಶ್ರಯ (997-1008) ಚೋಳ ರಾಜರಾಜ, ಅನಂತರ ರಾಜೇಂದ್ರ ಇವರೊಡನೆ ಕದನಗಳನ್ನು ಮುಂದುವರಿಸಿದ. ಚೋಳ ಸಾಮರ್ಥ್ಯದ ಪರಿಣಾಮವಾಗಿ ಗಂಗವಾಡಿ ಮತ್ತು ನೊಳಂಬವಾಡಿ ಪ್ರದೇಶಗಳು ಅವರ ವಶವಾದವು. ಆದರೆ ಚಾಳುಕ್ಯರ ಬಲ ಕುಂದಲಿಲ್ಲ. ಇತ್ತ ಕೊಂಕಣದ ಮಾಂಡಲಿಕ ಶಿಲಾಹಾರ ಅಪರಾಜಿತನನ್ನು ಸತ್ಯಾಶ್ರಯ ಸೋಲಿಸಿದ. ಗುಜರಾತಿನ ಮೇಲೆ ತನ್ನ ಪ್ರಭಾವವನ್ನು ವಿಸ್ತರಿಸಿ ಅಲ್ಲಿದ್ದ ಚಾಳುಕ್ಯಶಾಖೆಯ ಆಳಿಕೆಯ ಮುಂದುವರಿಕೆಗೆ ಕಾರಣನಾದ.

ಸತ್ಯಾಶ್ರಯನೊಂದಿಗೆ ಅವನ ತಮ್ಮ ದಶವರ್ಮನೂ ಆಳುತ್ತಿದ್ದುದಕ್ಕೆ ಯಲಬುರ್ಗಿ ತಾಲ್ಲೂಕಿನ ಕಲ್ಲೂರಿನ ಶಾಸನದಲ್ಲಿ ಉಲ್ಲೇಖವಿದೆ ಎಂದು ಹೇಳಲಾಗಿದೆ. ಸತ್ಯಾಶ್ರಯನಿಗೆ ಗಂಡುಮಕ್ಕಳಿಲ್ಲದ್ದರಿಂದ ಅವನ ತಮ್ಮ ದಶವರ್ಮನ ಮಗನಾದ 5ನೆಯ ವಿಕ್ರಮಾದಿತ್ಯ (1008-15) ಪಟ್ಟಕ್ಕೆ ಬಂದ. ಇವನು ಅಷ್ಟೇನೂ ಪ್ರಭಾವಶಾಲಿಯಾಗಿರಲಿಲ್ಲವಾದ್ದರಿಂದ, ದಕ್ಷಿಣದ ಚೋಳರೂ ಉತ್ತರದ ಪರಮಾರ ಅರಸ ಭೋಜನೂ ಇವನ ರಾಜ್ಯವನ್ನು ಮುತ್ತಿದರು. ರಾಜ್ಯವನ್ನು ಶತ್ರುಗಳಿಂದ ಕಾಪಾಡಿಕೊಳ್ಳುವುದಕ್ಕಾಗಿ ಇವನು ಬಹಳ ಶ್ರಮಿಸಬೇಕಾಯಿತು.

ವಿಕ್ರಮಾದಿತ್ಯನ ಅನಂತರ 1015ರ ಸುಮಾರಿನಲ್ಲಿ ಇವನ ಸೋದರ ಅಯ್ಯಣ ಕೆಲವು ತಿಂಗಳುಗಳ ಕಾಲ ರಾಜ್ಯವಾಳಿ ಅನಂತರ ರಾಜ್ಯವನ್ನು ತೊರೆದಂತೆ ತೋರುತ್ತದೆ. ವಂಶಾವಳಿಗಳಲ್ಲಿ ಇವನ ಉಲ್ಲೇಖವಿಲ್ಲ.

ಅಯ್ಯಣನ ಬಳಿಕ ಇವನ ತಮ್ಮ ಒಂದನೆಯ ಜಗದೇಕಮಲ್ಲ (ಜಯಸಿಂಹ II, 1015-44) ಪಟ್ಟಕ್ಕೆ ಬಂದ. ಇವನು ರಾಜ್ಯವಾಳ ತೊಡಗಿದಂದಿನಿಂದ ರಾಜ್ಯಕ್ಕೆ ಸೂಕ್ತವಾದ ರಾಜಧಾನಿಯೊಂದನ್ನು ಆರಿಸುವ ಕೆಲಸ ಆರಂಭವಾಯಿತೆನ್ನಬೇಕು. ಈತ ಪಟ್ಟಕ್ಕೆ ಬಂದ ತರುಣದಲ್ಲೇ ಚಾಳುಕ್ಯ ಚೋಳರ ನಡುವಣ ಕದನಗಳಲ್ಲಿ ರಾಜಧಾನಿ ಮಾನ್ಯಖೇಟ ಶತ್ರುಗಳ ವಶಕ್ಕೆ ಸಿಕ್ಕು ಅವರು ಅದನ್ನು ನಾಶಗೊಳಿಸಿದ್ದರು. ಅನಂತರ ಏತಗಿರಿ ಈಗಿನ ಯಾದಗಿರಿ, ಹೊ(ಪೊ)ಟ್ಟಳಕೆರೆ (ಈಗಿನ ಆಂಧ್ರಪ್ರದೇಶದ ಪಟನ್‌ಚೆರು ಅಥವಾ ಪೊಟ್ಲಚೆರುವು) ಮತ್ತು ಕೊಳ್ಳಿಪಾಕ್ಕೆ ಹೈದರಾಬಾದಿಗೆ 72ಕಿಮೀ ಅಂತರದಲ್ಲಿರುವ ಈಗಿನ ಕೊಲನುಪಾಕ -ಇವು ಕ್ರಮವಾಗಿ ಜಯಸಿಂಹನ ನೆಲೆಗಳಾಗಿದ್ದುವು. ಕಲ್ಯಾಣವನ್ನು ರಾಜಧಾನಿಯಾಗಿ ಆರಿಸಿ ಅದನ್ನು ಅಭಿವೃದ್ಧಿಗೊಳಿಸಿದವನು ಜಯಸಿಂಹನ ಮಗನಾದ ಒಂದನೆಯ ಸೋಮೇಶ್ವರ.

ಜಯಸಿಂಹ ಅಧಿಕಾರಕ್ಕೆ ಬಂದಾಗ ರಾಜ್ಯದ ಎಲ್ಲ ಮೇರೆಗಳಲ್ಲೂ ಶತ್ರುಗಳು ಯುದ್ಧ ಸನ್ನದ್ಧರಾಗಿದ್ದರು. ಪರಮಾರ ಭೋಜ, ಕಳಚುರಿ ಗಾಂಗೇಯ ದೇವ ಹಾಗೂ ದಕ್ಷಿಣದ ರಾಜೇಂದ್ರ ಚೋಳ ಇವರು ಕಲೆತು ಕರ್ನಾಟಕದ ಮೇಲೆ ಎರಗಿದರು. ಭೋಜ ಕೊಂಕಣವನ್ನು ಆಕ್ರಮಿಸಿದ. ರಾಜೇಂದ್ರ ಚೋಳ ಚಾಳುಕ್ಯ ರಾಜಧಾನಿಯನ್ನು ಮುತ್ತಿ ಸುಟ್ಟ, ಆದರೆ ಕೂಡಲೇ ಚೇತರಿಸಿಕೊಂಡ ಜಯಸಿಂಹ ಭೋಜನನ್ನು ಸೋಲಿಸಿ ಹಿಂದಕ್ಕೆ ಅಟ್ಟಿದ. ಕೊಂಕಣವನ್ನು ಪುನಃ ಆಕ್ರಮಿಸಿ ಸಪ್ತಕೊಂಕಣಾಧೀಶ್ವರರ ಸಂಪತ್ತನ್ನು ಸೂರೆಗೊಂಡ. ಸೇವುಣರ 3ನೆಯ ಭಿಲ್ಲಮನನ್ನು ಸೋಲಿಸಿದ ಬಳಿಕ ಆತನಿಗೆ ತನ್ನ ಮಗಳಾದ ಅವ್ವಲ್ಲದೇವಿಯನ್ನು ವಿವಾಹ ಮಾಡಿ ಕೊಟ್ಟು ಅವನ ವಿಧೇಯತೆಯನ್ನು ಗಳಿಸಿದ. ರಾಜ್ಯಕ್ಕೊದಗಿದ್ದ ವಿಪತ್ತನ್ನು ಅಧಿಕಾರಕ್ಕೆ ಬಂದ ಕೂಡಲೇ ಹೀಗೆ ಪರಿಹರಿಸಿಕೊಂಡ ಜಯಸಿಂಹನಿಗೆ, ಉತ್ತರದ ಅರಸರಿಂದ ಅನಂತರ ಹೆಚ್ಚಿನ ತೊಂದರೆ ಉಂಟಾಗಲಿಲ್ಲ. ಆದರೆ ದಕ್ಷಿಣದಲ್ಲಿ ರಾಜೇಂದ್ರ ಚೋಳ ಮಾತ್ರ ತನ್ನ ಆಕ್ರಮಣ ಮನೋಭಾವವನ್ನು ಬಿಡಲಿಲ್ಲ. ವೆಂಗಿಯ ರಾಜಕೀಯ ಇದಕ್ಕೆ ಒಳ್ಳೆಯ ಕಾರಣವನ್ನು ಒದಗಿಸಿ ಚಾಳುಕ್ಯ-ಚೋಳ ಯುದ್ಧಗಳು ಇವನ ಕಾಲದಲ್ಲಿ

ನಡೆಯುತ್ತಲೇ ಇದ್ದುವು. ಈ ಕದನಗಳಲ್ಲಿ ಜಯಸಿಂಹನಿಗೆ ಆತನ ಅಧಿಕಾರಿಗಳೂ ಸೇನಾನಿಗಳೂ ಆದ ಕುಂದಮರಸ ಮತ್ತು ವಾವಣರಸ ಬಹಳ ಸಹಾಯ ನೀಡಿದರು. ತನ್ನ ಆಳಿಕೆಯ ಉದ್ದಕ್ಕೂ ಯುದ್ಧನಿರತನಾಗಿದ್ದ ಜಯಸಿಂಹ ಸು.1044ರಲ್ಲಿ ಮೃತನಾದ.

ಜಯಸಿಂಹನ ಬಳಿಕ ಇವನ ಹಿರಿಯ ಮಗ ಒಂದನೆಯ ಸೋಮೇಶ್ವರ ಪಟ್ಟಕ್ಕೆ ಬಂದ. ಜಯಸಿಂಹನ ಕಾಲದಲ್ಲಿದ್ದ ರಾಜಕೀಯ ಪರಿಸ್ಥಿತಿ ಇವನ ಕಾಲದಲ್ಲೂ ಮುಂದುವರಿಯಿತು. ಈತ ಆಳಿದ 25 ವರ್ಷಗಳ ಕಾಲವೂ ದಕ್ಷಿಣ ಭಾರತ ಒಂದು ವಿಶಾಲವಾದ ರಣರಂಗವಾಗಿ ಪರಿವರ್ತಿತವಾಯಿತೆನ್ನಬಹುದು. ಕರ್ನಾಟಕದ ಹಾಗೂ ತಮಿಳುನಾಡಿನ ಎರಡು ಪ್ರಮುಖ ಅರಸುಮನೆತನಗಳ ನಡುವೆ ಈ ವರ್ಷಗಳಲ್ಲಿ ಹಿರಿಮೆಗಾಗಿ ತೀವ್ರವಾದ ಪೈಪೋಟಿಯುಂಟಾಯಿತು.

ಚೋಳ ರಾಜಾಧಿರಾಜ ಮತ್ತು ಸೋಮೇಶ್ವರ ಇವರ ನಡುವೆ ವಿಶೇಷವಾಗಿ ವೆಂಗಿ ಪ್ರದೇಶದ ಆಕ್ರಮಣಕ್ಕಾಗಿ ಐದು ಬಾರಿ ಘರ್ಷಣೆ ಉಂಟಾದುವು. ಸು.1044ರಲ್ಲಿ ದನ್ನಾಡದಲ್ಲಿ (ಆಂಧ್ರಪ್ರದೇಶದ ಧಾನ್ಯಕಟಕ ಅಥವಾ ಅಮರಾವತಿ) ಪುನಃ ಪುಣ್ಡೂರು ಎಂಬಲ್ಲಿ, ಅನಂತರ 1054ರಲ್ಲಿ ಕೊಪ್ಪಂನಲ್ಲಿ (ರಾಯಚೂರು ಜಿಲ್ಲೆಯ ಕೊಪ್ಪಳ) ಯುದ್ಧಗಳಾದುವು. ಹೆಚ್ಚಿನ ಯುದ್ಧಗಳು ಅನಿರ್ಣಾಯಕವಾಗಿದ್ದಂತೆ ತೋರುತ್ತದೆ. ಚಾಳುಕ್ಯ ಶಾಸನಗಳು ಮತ್ತು ಚೋಳ ಶಾಸನಗಳು ಅವರವರ ಬಲ ಮೇಲುಗೈಯಾಗಿತ್ತೆಂದು ವರ್ಣಿಸುವುದು ಸಾಮಾನ್ಯ. ಆದರೆ ಈ ಯುದ್ಧಗಳಲ್ಲಿ ಚಾಳುಕ್ಯ ಯುವರಾಜ ಜಯಸಿಂಹ ಮತ್ತು ಚೋಳ ರಾಜಾಧಿರಾಜ ಸತ್ತರೆಂಬ ಅಂಶಗಳು ಸ್ಪಷ್ಟ. ಚೋಳ ರಾಜಾಧಿರಾಜನ ಅನಂತರ ಬಂದ ಇಮ್ಮಡಿ ರಾಜೇಂದ್ರ ಹೋರಾಟಗಳನ್ನು ಮುಂದುವರಿಸಿ ಕೊಲ್ಲಾಪುರದವರೆಗೂ ಶತ್ರುಸೇನೆಯನ್ನು ಓಡಿಸಿದ. ಈತ ಅಲ್ಲಿ ಜಯಸ್ತಂಭವೊಂದನ್ನು ನೆಡಿಸಿದನೆಂದು ಹಲವು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. ಇದು ಸಂದೇಹಾಸ್ಪದ, ಮುನ್ನುಗ್ಗುತ್ತಿದ್ದ ರಾಜೇಂದ್ರನನ್ನು ಸೋಮೇಶ್ವರ ತಡೆದು ಅವನನ್ನು ಹಿಂದಕ್ಕೆ ಓಡಿಸಿದ್ದಾಗ, ಅವನು ಕುಮ್ಮಟದ ಕೋಟೆಯನ್ನು ಮುತ್ತಿದನೆಂದೂ ಆದರೆ ಅಲ್ಲಿ ಅಧಿಕಾರದಲ್ಲಿದ್ದ ಹೊಯ್ಸಳ ವಿನಯಾದಿತ್ಯನ ನೆರವಿಗೆ ಸೋಮೇಶ್ವರ ಧಾವಿಸಿ ಕುಮ್ಮಟದ ಕೋಟೆಯಂ ನಿಷ್ಕಂಟಕಂ ಮಾಡಿದನೆಂದೂ ಈಚೆಗೆ ದೊರೆತ ಬನ್ನಿಗೊಳದ ಶಾಸನ ಹೇಳುತ್ತದೆ. ಇನ್ನೊಮ್ಮೆ 1059ರಲ್ಲಿ ರಾಜೇಂದ್ರನನ್ನು ಸೋಮೇಶ್ವರ ತುಂಗಭದ್ರಾ ನದಿಯ ತೀರದಲ್ಲಿ ಎದುರಿಸಿ ಸೋಲಿಸಿದ. ಹೀಗೆ ಎರಡೂ ಬಣಗಳ ನಡುವೆ ಹೋರಾಟಗಳು ನಡೆಯುತ್ತಲೇ ಇದ್ದರೂ ಯಾರಿಗೂ ಖಚಿತವಾದ, ಅಂತಿಮವಾದ ಯಶಸ್ಸು ದೊರೆಕಲಿಲ್ಲ. ಮುಂದೆ ಒಂದು ಸಂದರ್ಭದಲ್ಲಿ ಸೋಮೇಶ್ವರ ವೆಂಗಿಮಂಡಲದಲ್ಲಿ ಸ್ವಲ್ಪ ಮಟ್ಟಿಗೆ ಯಶಸ್ಸನ್ನು ಸಂಪಾದಿಸಿದ (ಸು.1061). ಇದರ ಪರಿಣಾಮವಾಗಿ ಚೋಳ ವೀರರಾಜೇಂದ್ರ ಪುನಃ ಸೋಮೇಶ್ವರನನ್ನು ಕೂಡಲಸಂಗಮವೆಂಬ ಸ್ಥಳದಲ್ಲಿ ಎದುರಿಸಿದ. ವೆಂಗಿಯ ಆಂತರಿಕ ರಾಜಕೀಯದಲ್ಲಿ ನಡೆದ ಕೆಲವು ಹೊಂದಾಣಿಕೆಗಳು ಮುಂದೆ ಸ್ವಲ್ಪಮಟ್ಟಿಗೆ ಯುದ್ಧಗಳನ್ನು ತಡೆದುವು. ಸೋಮೇಶ್ವರನ ಆಳಿಕೆಯ ಅಂತಿಮ ವರ್ಷಗಳಲ್ಲಿ ನಡೆದ ಈ ಘಟನೆಗಳ ವಿವರಗಳು ಸ್ಪಷ್ಟವಾಗಿಲ್ಲ. ಆದರೆ ಅದುವರೆಗೂ ವಿಜಯಾದಿತ್ಯನ ಹಕ್ಕನ್ನು ನಿರಾಕರಿಸಿದ್ದ ಚೋಳರೂ ಆ ಘಟ್ಟದಲ್ಲಿ ವಿಜಯಾದಿತ್ಯನ ಆಳಿಕೆಯನ್ನು ಮಾನ್ಯಮಾಡಿದರು. ಇದರ ಫಲವಾಗಿ ವಿಜಯಾದಿತ್ಯನ ಮತ್ತು ವೀರರಾಜೇಂದ್ರನ ನಡುವಣ ಬಾಂಧವ್ಯದಲ್ಲಿ ಸ್ಪಷ್ಟವಾದ ಬದಲಾವಣೆಯುಂಟಾಯಿತು.

ಸೋಮೇಶ್ವರ ತನ್ನ ಆಳಿಕೆಯ ಕಾಲದ ಬಹುಭಾಗವನ್ನು ಚೋಳರೊಡನೆ ಕದನಗಳಲ್ಲಿ ಕಳೆದರೂ 1051ರಲ್ಲಿ ಪರಮಾರ ವಂಶದ ಭೋಜನ ಮೇಲೆ ನಡೆದು ಧಾರಾನಗರವನ್ನು ಸುಟ್ಟು ಮಾಂಡವದ ಕೋಟೆಯನ್ನು ವಶಪಡಿಸಿಕೊಂಡ. ಇನ್ನೊಂದು ಬಾರಿ ಭೋಜ ಇವನ ಮೇಲೇರಿ ಬಂದಾಗ ಸೋಮೇಶ್ವರ ಅವನನ್ನು ಚಾಳುಕ್ಯ ಮನೆತನದ ಭೀಮ ಮತ್ತು ಕಳಚುರಿ ಕರ್ಣರೊಡಗೂಡಿ ಕದನದಲ್ಲಿ ಎದುರಿಸಿದ. ಈ ಕದನದಲ್ಲಿ ಭೋಜ ಹತನಾದಂತೆ ತೋರುತ್ತದೆ.

ಒಂದು ಸಂದರ್ಭದಲ್ಲಿ ರಾಜ್ಯದೊಳಗೆ ದಂಗೆಯ ಸನ್ನಾಹ ನಡೆಸಿದ್ದ ಶಿಲಾಹಾರ ಮನೆತನದ ಕೊಂಕಣದ ಮುಮ್ಮಣಿ ಮತ್ತು ಕರಹಾಡದ ಮಾರಸಿಂಹರನ್ನೂ ಸೇವುಣರ 3ನೆಯ ಭಿಲ್ಲಮನನ್ನೂ ಸೋಲಿಸಿದ. 1068ರಲ್ಲಿ ಸೋಮೇಶ್ವರ ಮಡಿದ. ಆಗ ಸಿಂಹಾಸನವೇರಿದವನು ಆತನ ಹಿರಿಯ ಮಗ ಇಮ್ಮಡಿ ಸೋಮೇಶ್ವರ (1068-1076). ಇವನು ಪಟ್ಟಕ್ಕೆ ಬರುತ್ತಿದ್ದಂತೆಯೇ ಇವನ ಮೇಲೆ ದಾಳಿಮಾಡಿದ ಚೋಳ ವೀರರಾಜೇಂದ್ರನನ್ನು ಸೋಲಿಸಿದ. ಆದರೆ ಅನಂತರ ಉತ್ತರದಲ್ಲಿ ಪರಮಾರ ಉದಯಾದಿತ್ಯನಿಂದ ಪರಾಜಿತನಾದ. ಇಮ್ಮಡಿ ಸೋಮೇಶ್ವರ ದಕ್ಷನಾದ ಅರಸನಾಗಿರಲಿಲ್ಲ. ತನ್ನ ಆಳಿಕೆಯ ಕೊನೆಯ ದಿನಗಳಲ್ಲಿ ಚಾಳುಕ್ಯ ವೈರಿಗಳಾಗಿದ್ದ ಚೋಳರೊಡನೆ ಸ್ನೇಹ ಬೆಳೆಸಿದ್ದು ಚಾಳುಕ್ಯರ ಆಸಕ್ತಿಯ ಕ್ಷೇತ್ರವಾಗಿದ್ದ ವೆಂಗಿದೇಶ ಚೋಳರ ವಶವಾಗಲು ಅವಕಾಶ ಮಾಡಿಕೊಟ್ಟದ್ದು ಮೊದಲಾದ ಘಟನೆಗಳು ನಡೆದವು. ಅಲ್ಲದೆ ಒಂದನೆಯ ಸೋಮೇಶ್ವರನ ಕಾಲದಿಂದಲೂ ಪ್ರಭಾವಿಯಾಗಿದ್ದ ಇವನ ತಮ್ಮ 6ನೆಯ ವಿಕ್ರಮಾದಿತ್ಯನನ್ನು ಇವನು ಸಂಶಯದೃಷ್ಟಿಯಿಂದ ನೋಡುತ್ತಿದ್ದುದರಿಂದ ಇವರಲ್ಲಿ ವಿರಸಮೂಡಿತು.

ಈ ಪರಿಸ್ಥಿತಿಯಲ್ಲಿ ವಿಕ್ರಮಾದಿತ್ಯ, ಅಣ್ಣನನ್ನು ಸಿಂಹಾಸನದಿಂದ ಹೊರದೂಡಲು ನಿಶ್ಚಯಿಸಿದ. ಇವನ ತಮ್ಮ 3ನೆಯ ಜಯಸಿಂಹ.

**ಕಲ್ಯಾಣದ ಚಾಳುಕ್ಯರ ವಂಶಾವಳಿ**



ಗೋವೆಯ ಕದಂಬ ಜಯಕೇಶಿ, ಹಾನಗಲ್ಲಿನ ಕದಂಬ ಕೀರ್ತಿವರ್ಮ ಮುಂತಾದವರ ಬೆಂಬಲದಿಂದ ಸೋಮೇಶ್ವರನ ಮೇಲೆ ಜಯಗಳಿಸಿ ತಾನೇ ರಾಜನಾಗಿ ಐವತ್ತು ವರ್ಷಗಳಿಗೂ ಹೆಚ್ಚುಕಾಲ (1076-1127) ಆಳಿಕೆ ನಡೆಸಿದ. ಯುವರಾಜ ಪದವಿಯಲ್ಲಿದ್ದಾಗ ಮಿತಿಮೀರಿದ ಚಟುವಟಿಕೆಗಳಿಂದ ಕೂಡಿದ್ದು, ಸದಾ ಯುದ್ಧಸನ್ನದ್ಧನಾಗಿ, ಕದನಗಳಲ್ಲಿ ಪಾಲುಗೊಂಡಿದ್ದ ಈತ ಪಟ್ಟಕ್ಕೆ ಬಂದ ಬಳಿಕ ಹೆಚ್ಚು ಶಾಂತಿಯುತ ಜೀವನ ನಡೆಸಿದ. ಈ ಕಾಲದಲ್ಲಿ ಒಂದು ಕಡೆ ಕುಲೋತ್ತುಂಗನೂ ಮತ್ತೊಂದು ಕಡೆ ವಿಕ್ರಮಾದಿತ್ಯನೂ ಸಮಾನ ಶೂರರಾಗಿದ್ದರು. ತಮ್ಮ ತಮ್ಮ ಶಕ್ತಿಸಾಮರ್ಥ್ಯಗಳನ್ನೂ ಕುಂದುಕೊರತೆಗಳನ್ನೂ ಪರಸ್ಪರ ಅರಿತಿದ್ದ ಈ ಅರಸರು ರಾಜಕೀಯ ಹೋರಾಟಗಳನ್ನು ಕೊನೆಗಾಣಿಸಿ, ಪ್ರಜೆಗಳ ಕ್ಷೇಮಾಭಿವೃದ್ಧಿಗಾಗಿ ಶ್ರಮಿಸುವುದು ಹೆಚ್ಚು ಶ್ರೇಯಸ್ಕರವೆಂದು ಭಾವಿಸಿದಂತೆ ತೋರುತ್ತದೆ. ಆಗ ರಾಜ್ಯದಲ್ಲಿ ಶಾಂತಿ ಸುಭಿಕ್ಷೆ ನೆಲಸಿತ್ತು. ನಾಡು ಸರ್ವತೋಮುಖ ಅಭಿವೃದ್ಧಿಯನ್ನು ಕಂಡಿತು.

ಆದರೂ ವಿಕ್ರಮಾದಿತ್ಯನ ಆಡಳಿತ ಕಾಲದಲ್ಲೂ ಆಗಿಂದಾಗ್ಗೆ ಕೆಲವು ಘಟನೆಗಳು ಸಂಭವಿಸಿದುವು. ಇವನ ವಿರುದ್ಧ ಇವನ ಸೋದರನಾದ 3ನೆಯ ಜಯಸಿಂಹ ದಂಗೆ ಎದ್ದ. ಆದರೆ 1082ರ ಹೊತ್ತಿಗೆ ನಿಗ್ರಹಿಸಲ್ಪಟ್ಟ. ಕರಹಾಡದ ಶಿಲಾಹಾರ ಭೋಜ ಬಹುಶಃ ಸುಮಾರು ಒಂದು ದಶಕಕ್ಕೂ ಹೆಚ್ಚುಕಾಲ (1089-1100) ವಿಕ್ರಮಾದಿತ್ಯನ ವಿರುದ್ಧ ಬಂಡುಹೂಡಿದ್ದು ಕೊನೆಗೆ ಸೋತ. ಅಂತೆಯೇ ಆಳುಪರ, ಪೈವೆಯ ನಾಗವರ್ಮನ ಹಾಗೂ ಗೊಗ್ಗಿಯ ಬಂಡಾಯವನ್ನೂ ಅರಸ ಮುರಿದ. ರಾಜ್ಯದ ಉತ್ತರದಲ್ಲಿ ಪರಮಾರರ ವಿರುದ್ಧ ದಂಡೆತ್ತಿ ಉದಯಾದಿತ್ಯನನ್ನು ಸೋಲಿಸಿ (1088) ಆ ವಂಶದ ಜಗದ್ದೇವನಿಗೆ ಆಶ್ರಯ ನೀಡಿದ. ಈ ದಂಡಯಾತ್ರೆಗಳ ಪರಿಣಾಮವಾಗಿ ಚಾಳುಕ್ಯ ರಾಜ್ಯ ನರ್ಮದಾ ನದಿಯವರೆಗೂ ವಿಸ್ತರಿಸಿತು. ಗೂರ್ಜರ ಸಿಂಧುರಾಜನನ್ನೂ ರತ್ನಪುರದ ಕಳಚುರಿ ಜಾಜಲ್ಲದೇವನನ್ನೂ ತ್ರಿಪುರಿಯ ಯಶಃಕರ್ಣನನ್ನೂ ಒಮ್ಮೆ ಸೋಲಿಸಿದ. ಆಂಧ್ರದಲ್ಲಿ ವೆಂಗಿಮಂಡಲದ ಭಾಗಗಳೂ ಸು.1118ರ ಹೊತ್ತಿಗೆ ಪೂರ್ಣವಾಗಿ ವಿಕ್ರಮಾದಿತ್ಯನ ವಶವಾದವು.

ವಿಕ್ರಮಾದಿತ್ಯನ ಆಳಿಕೆಯ ಕೊನೆಯ ಭಾಗದಲ್ಲಿ ಹೊಯ್ಸಳರಿಂದ ಅನಿರೀಕ್ಷಿತವಾದ ವಿರೋಧ ಎದುರಾಯಿತು. ಹೊಯ್ಸಳ ಒಂದನೆಯ ಬಲ್ಲಾಳ ಮತ್ತು ಅವನ ತಮ್ಮ ವಿಷ್ಣುವರ್ಧನ ಇವರು ಚಾಳುಕ್ಯ ಸಾಮಂತರಾದ ಹಾನಗಲ್ಲಿನ ಕದಂಬರನ್ನೂ ಉಚ್ಚಂಗಿಯ ಪಾಂಡ್ಯರನ್ನೂ ಆಗಿಂದಾಗ್ಗೆ ಕೆಣಕಿ ಅವರ ಅಸ್ತಿತ್ವಕ್ಕೆ ಕುಂದುಂಟುಮಾಡಲಾರಂಭಿಸಿದರು. ಮೊದಮೊದಲು ವಿಕ್ರಮಾದಿತ್ಯ ಇದನ್ನು ತೃಣೀಕರಿಸಿದನಾದರೂ ಅವರ ಕಿರುಕುಳ ಹೆಚ್ಚಿದಾಗ ಧಾರಾನಗರದಿಂದ ತನ್ನೊಡನೆ ಬಂದಿದ್ದ ಪರಮಾರ ಜಗದೇವನ ನೇತೃತ್ವದಲ್ಲಿ ದೊಡ್ಡ ಸೈನ್ಯವೊಂದನ್ನು ಕಳಿಸಿದ. ಆದರೆ ಆತ ಹೊಯ್ಸಳರಿಂದ ಸೋತ (ಸು.1090). ಪುನಃ 1117-18ರಲ್ಲಿ, ಕಣ್ಣೇಗಾಲದಲ್ಲಿ ನಡೆದ ಕದನದಲ್ಲಿ ಹೊಯ್ಸಳ ಸೇನಾನಿ ಗಂಗರಾಜ ಚಾಳುಕ್ಯ ಸೇನೆಯನ್ನು ಸೋಲಿಸಿದ. ಈ ಸೋಲಿನಿಂದ ವಿಕ್ರಮಾದಿತ್ಯ ಕ್ರುದ್ಧನಾಗಿ ಪ್ರಚಂಡ ಸೈನ್ಯದೊಂದಿಗೆ ನುಗ್ಗಿ, ಹೊಯ್ಸಳರನ್ನು ಹಲಸೂರು ಮತ್ತು ಹೊಸವೀಡು ಕದನಗಳಲ್ಲಿ ಸೋಲಿಸಿದ. ವಿಷ್ಣುವರ್ಧನನ ಸೊಕ್ಕು ಇದರಿಂದ ಮುರಿದಂತಾಗಿ ಅವನು ಇನ್ನೂ ಸ್ವಲ್ಪ ಕಾಲ ಮಾಂಡಲಿಕನಾಗಿಯೇ ಮುಂದುವರಿಯುವುದರಲ್ಲಿ ತೃಪ್ತಿಪಟ್ಟುಕೊಳ್ಳಬೇಕಾಯಿತು. ದಿಕ್ಕು ದಿಕ್ಕುಗಳಲ್ಲೂ ಶತ್ರುಗಳನ್ನು ಸಂಹರಿಸಿ ಸಾಮಂತರನ್ನು ಆಜ್ಞಾಧಾರಕರನ್ನಾಗಿ ಮಾಡಿ ರಾಜ್ಯದಲ್ಲಿ ಶಾಂತಿಯನ್ನು ನೆಲೆಗೊಳಿಸಿ, ಪ್ರಜಾರಂಜಕನಾಗಿ, ಕಲಾಪೋಷಕನಾಗಿ, ಕವಿಗಳಿಗೂ ವಿದ್ವಾಂಸರಿಗೂ ಆಶ್ರಯದಾತನಾಗಿ, ಶಿಸ್ತಿನಿಂದ ಸೌಹಾರ್ದದಿಂದ ರಾಜ್ಯಭಾರಮಾಡಿದ ವಿಕ್ರಮಾದಿತ್ಯ 1127ರಲ್ಲಿ ನಿಧನಹೊಂದಿದ.

ಅನಂತರ ಪಟ್ಟಾಭಿಷಿಕ್ತನಾದವನು ಮುಮ್ಮಡಿ ಸೋಮೇಶ್ವರ (1127-39). ಚಾಳುಕ್ಯ ಇತಿಹಾಸದಲ್ಲಿ ಇವನ ಕಾಲ ಶಾಂತಿ ನೆಲಸಿದ್ದ ಕಾಲ. ಒಂದು ದೃಷ್ಟಿಯಿಂದ ಚಾಳುಕ್ಯಬಲ ಇಳಿಮುಖಗೊಳ್ಳಲು ಆರಂಭವಾದುದೂ ಇವನ ಕಾಲದಲ್ಲೇ ಎಂದು ಹೇಳಬಹುದು. ಇವನ ಆಳಿಕೆಯ ಪ್ರಾರಂಭದಲ್ಲಿಯೇ ವೆಂಗಿಯ ಬಹುಭಾಗ ಚಾಳುಕ್ಯರ ಕೈಬಿಟ್ಟಿತು. ದಕ್ಷಿಣದಲ್ಲಿ ಹೊಯ್ಸಳರು ದಿನೇ ದಿನೇ ಪ್ರವರ್ಧಮಾನಕ್ಕೆ ಬರುತ್ತಿದ್ದರು. ಆದರೂ ಈ ಹಿಂದೆ ಹೊಯ್ಸಳಾಧೀನವಾಗಿದ್ದ ಬನವಾಸೆ ಮತ್ತು ಉಚ್ಚಂಗಿ ಪ್ರಾಂತ್ಯಗಳನ್ನು ಸೋಮೇಶ್ವರ ಪುನಃ ಸಾಧಿಸಿಕೊಂಡಂತೆ ತೋರುತ್ತದೆ (ಸು. 1136). ಇದೊಂದೇ ಸೋಮೇಶ್ವರನ ಗಮನಾರ್ಹ ರಾಜಕೀಯ ಸಾಧನೆ.

ಮುಂದಿನ ರಾಜ ಮುಮ್ಮಡಿ ಸೋಮೇಶ್ವರನ ಮಗ ಪೆರ್ಮ ಜಗದೇಕಮಲ್ಲ (1139-49). ಅಶಕ್ತ ದೊರೆಯಾದ ಇವನ ಕಾಲದಲ್ಲಿ ಚಾಳುಕ್ಯ ಸಾಮ್ರಾಜ್ಯ ಸಂಕುಚಿತಗೊಳ್ಳಲಾರಂಭಿಸಿತು. ಆಂಧ್ರಪ್ರದೇಶದ ಕರಾವಳಿ ಭಾಗ ಸ್ವಲ್ಪ ಸ್ವಲ್ಪವಾಗಿ ಇವನ ಹತೋಟಿಯಿಂದ ಜಾರಿತು. ಹೊಯ್ಸಳ ವಿಷ್ಣುವರ್ಧನ ಮತ್ತೆ ದಂಗೆ ಎದ್ದು ಕದಂಬರನ್ನು ಸೋಲಿಸಿದ. ಹಾನಗಲ್ಲು ಬಂಕಾಪುರಗಳು ಅವನ ವಶವಾದುದಲ್ಲದೆ ಬನವಾಸಿ ಪ್ರಾಂತ್ಯದ ಆಧಿಪತ್ಯ ಕೆಲಕಾಲ ಅವನದಾಯಿತು. ಆದರೆ 1143ರ ಸುಮಾರಿನಲ್ಲಿ ಈ ಭಾಗದಲ್ಲಿ ಚಾಳುಕ್ಯ ಬಲ ಸ್ವಲ್ಪ ಚೇತರಿಸಿಕೊಂಡು ಹೊಯ್ಸಳರನ್ನು ಆಕ್ರಮಿತ ಪ್ರದೇಶಗಳಿಂದ ಹೊರಗಟ್ಟಿದ್ದರೂ ಚಾಳುಕ್ಯ ಸಾಮ್ರಾಜ್ಯಕ್ಕೆ ಹೊಯ್ಸಳರು ಪೆಟ್ಟುಕೊಡುವ ಶಕ್ತಿ ಗಳಿಸಿದ್ದರೆಂಬುದೇ ತತ್ಕಾಲದ ಸ್ಥಿತಿಯ ಸೂಚಕವಾಗಿದೆ. ಅತ್ತ ಕಳಚುರಿ ಮನೆತನದ ಬಿಜ್ಜಳ ಸಹ ಈ ವೇಳೆಗೆ ಪ್ರಬಲನಾಗಿ ಚಾಳುಕ್ಯ ರಾಜ್ಯವನ್ನು ಕಬಳಿಸಲು ಸನ್ನದ್ಧನಾಗುತ್ತಿದ್ದ.

ಇಂಥ ಪರಿಸ್ಥಿತಿಯಲ್ಲಿ ಜಗದೇಕಮಲ್ಲ ಮೃತನಾದಾಗ ಅವನ ಸೋದರ ಮುಮ್ಮಡಿ ತೈಲಪ (1149-62) ರಾಜ್ಯವಾಳತೊಡಗಿದ. ಅಶಕ್ತ ದೊರೆಯಾಗಿದ್ದ ಇವನ ಕಾಲದಲ್ಲಿ ಕಳಚುರಿ ಬಿಜ್ಜಳ ದಂಗೆ ಎದ್ದ, 1153ರ ವೇಳೆಗೆ ತಾನೇ ಚಕ್ರವರ್ತಿ ಎಂದು ಸಾರಿಕೊಂಡ. ರಾಜ್ಯದ ಅನೇಕ ಭಾಗಗಳ ಮೇಲೆ ಚಾಳುಕ್ಯರ ಅಂಕೆ ತಪ್ಪಿತು. ಶಿಲಾಹಾರರೂ ಕಾಕತೀಯರೂ ಹೊಯ್ಸಳರೂ ಈ ಪರಿಸ್ಥಿತಿಯ ಲಾಭ ಪಡೆದು ಸ್ವತಂತ್ರವಾಗಿ ಆಳತೊಡಗಿದರು. ತೈಲಪನ ವಿರುದ್ಧ ಕಾಕತೀಯ ರುದ್ರ ಕದನ ಹೂಡಿ ಜಯಗಳಿಸಿದ. ಈ ತೈಲಪನ ಕೊನೆಗಾಲದಲ್ಲಿ ಆಗ ರಾಜಧಾನಿಯನ್ನು ಅಣ್ಣಿಗೇರಿಗೆ ಮತ್ತೆ ಅಲ್ಲಿಂದ ಬನವಾಸಿಗೆ ವರ್ಗಾಯಿಸಿಕೊಂಡ. ಆಗ ಬನವಾಸಿ ಹಾಗೂ ಸುತ್ತಲಿನ ಪ್ರದೇಶಗಳು ಮಾತ್ರ ಇವನ ಅಧೀನದಲ್ಲಿ ಇದ್ದುವು.

ಸಾಯುವ ಮುನ್ನ ತೈಲಪ ತನ್ನ ಮಗ ತ್ರಿಭುವನಮಲ್ಲ 4ನೆಯ ಸೋಮೇಶ್ವರನನ್ನು ಉತ್ತರಾಧಿಕಾರಿಯಾಗಿ ನೇಮಿಸಿದ್ದನಾದರೂ ಇನ್ನಿಬ್ಬರು ರಾಜಕುಮಾರರಾದ 3ನೆಯ ಜಗದೇಕಮಲ್ಲ ಮತ್ತು 2ನೆಯ ಭೂಲೋಕಮಲ್ಲರು ಕಲ್ಯಾಣವನ್ನೇ ಬಿಟ್ಟು ಹೊರಗೆ ಹೋಗಬೇಕಾಯಿತು. ಅನಂತಪುರ, ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳಲ್ಲಿ ಅಧಿಕಾರದಲ್ಲಿದ್ದ ನಿಡುಗಲ್ಲಿನ ಚೋಳರು, ಉಚ್ಚಂಗಿಯ ಪಾಂಡ್ಯರು, ಸಾಂತರರು ಇವರಿಗೆ ಆಶ್ರಯವಿತ್ತರು. ಗೋವೆಯ ಕದಂಬರೂ ಇವರಿಗೆ ಬೆಂಬಲ ನೀಡಿದಂತೆ ತೋರುತ್ತದೆ. ಆದರೆ ಚಾಳುಕ್ಯ ರಾಜ್ಯ ಪೂರ್ಣವಾಗಿ ಕಳಚುರಿಗಳ ವಶವಾಯಿತು. 20 ವರ್ಷಗಳ ಅನಂತರ ಸು.1182ರಲ್ಲಿ ಸೋಮೇಶ್ವರ ತನ್ನ ನಂಬುಗೆಯ ದಂಡನಾಯಕರ ನೆರವಿನಿಂದ ರಾಜ್ಯವನ್ನು ಹಿಂದಕ್ಕೆ ಪಡೆದ. ಆದರೆ ಅವನ ಪ್ರಯತ್ನ ಪೂರ್ಣವಾಗಿ ಸಾರ್ಥಕವಾಗಲಿಲ್ಲ. ಒಂದು ಕಡೆ ಹೊಯ್ಸಳರೂ ಇನ್ನೊಂದು ಕಡೆ ಸೇವುಣರೂ ಮತ್ತೊಂದು ಕಡೆ ಕಾಕತೀಯರೂ ಪ್ರಬಲಿಸಿ ಅವರ ನಡುವಣ ಜಗಳದಲ್ಲಿ ಚಾಳುಕ್ಯ ರಾಜ್ಯ ಸು.1189ರ ಹೊತ್ತಿಗೆ ಕರಗಿಹೋಯಿತು.

**ಆಡಳಿತ ವ್ಯವಸ್ಥೆ :** ಕಲ್ಯಾಣದ ಚಾಳುಕ್ಯರ ರಾಜ್ಯವು ವಿಸ್ತಾರದಲ್ಲಿ ಹಿಂದಿನ ರಾಜ್ಯಗಳಿಗಿಂತ ಹೆಚ್ಚಾಗಿತ್ತು. ಅತ್ಯುತ್ತಮ ಸ್ಥಿತಿಯಲ್ಲಿ ರಾಜ್ಯ ದಕ್ಷಿಣದ ಕಾವೇರಿಯಿಂದ ನರ್ಮದೆಯವರೆಗೂ ಹಬ್ಬಿತ್ತು. ಮಹಾರಾಷ್ಟ್ರದ ದಕ್ಷಿಣದ ಜಿಲ್ಲೆಗಳು, ಆಂಧ್ರಪ್ರದೇಶದ ಪಶ್ಚಿಮದ ಅನಂತಪುರ, ಕಡಪ, ಕರ್ನೂಲು ಮುಂತಾದ ಜಿಲ್ಲೆಗಳು ಇವರ ರಾಜ್ಯದ ಭಾಗವಾಗಿ ಇದ್ದುವು. ಸಹಜವಾಗಿಯೇ ಆಡಳಿತದಲ್ಲಿ ಹೆಚ್ಚು ಸಮಸ್ಯೆಗಳು ಉದ್ಭವಿಸಿದುವು. ಅಧಿಕಾರವರ್ಗ ಹೆಚ್ಚಾಯಿತು. ಅರಸನ ಜವಾಬ್ದಾರಿ ಗುರುತರವಾಯಿತು.

ಅರಸನ ಸಹಾಯಕ್ಕೆ ಮಂತ್ರಿಮಂಡಲವೊಂದಿತ್ತು. ಒಬ್ಬ ಮನೆವೆರ್ಗ್ಗಡೆ, ಇಬ್ಬರು ತಂತ್ರಪಾಲರು, ಒಬ್ಬ ತಂತ್ರದ ಸೇನಬೋವ,

ಒಬ್ಬ ಪ್ರಧಾನ ಮತ್ತು ಒಬ್ಬ ಹಡಪದ ಇವರು ಒಂದನೆಯ ಸೋಮೇಶ್ವರನ ಮಂತ್ರಿಮಂಡಲದಲ್ಲಿದ್ದರೆಂದೂ ಪ್ರಧಾನರು ಮತ್ತು ಇತರ ಅಧಿಕಾರಿಗಳೊಡಗೂಡಿ ಖಿಲವಾಗಿದ್ದ ನೀತಿ ನಿಯಮಾವಳಿಗಳನ್ನು ರೂಪಿಸಿದರೆಂದೂ ಸೂಡಿಯ ಶಾಸನವೊಂದರಲ್ಲಿ ಹೇಳಿದೆ. ತಂತ್ರದ ಸೇನಬೋವ ಬಹುಶಃ ಆ ಮಂತ್ರಿಮಂಡಲದ ಕಾರ್ಯದರ್ಶಿಯಾಗಿದ್ದಿರಬಹುದು. ತಂತ್ರಪಾಳರಧಿಷ್ಠಾಯಕ ಎಂಬ ಅಧಿಕಾರಿ ಸಹ ಮಂತ್ರಿಮಂಡಲದ ಒಬ್ಬ ಸದಸ್ಯನಾಗಿದ್ದಂತೆ ತೋರುತ್ತದೆ. ಮಹಾಪ್ರಧಾನ ಎಂಬ ಹೆಸರು ಶಾಸನಗಳಲ್ಲಿ ದೊರಕಿದರೂ ಈತ ಮಂತ್ರಿಮಂಡಲದ ಮುಖ್ಯಸ್ಥನಾಗಿದ್ದಂತೆ ತೋರುವುದಿಲ್ಲ. ಒಂದೇ ಕಾಲದಲ್ಲಿ ಹಲವಾರು ಅಧಿಕಾರಿಗಳು ಈ ಬಿರುದನ್ನು ಹೊಂದಿದ್ದ ವಿಷಯ ತಿಳಿದಿದೆ. ಈ ಅಧಿಕಾರಿಗಳ ಕಾರ್ಯಕ್ಷೇತ್ರ ಯಾವುದಾಗಿತ್ತು, ಆಡಳಿತದ ಯಾವ ಶಾಖೆಗೆ ಅವರು ಮುಖ್ಯರಾಗಿದ್ದರು ಎಂದು ಹೇಳಲೂ ಸಹ ಸಾಧ್ಯವಿಲ್ಲ. ಅಂತಃಪುರ ವೆರ್ಗ್ಗಡೆ ಎಂಬಾತ ಬಹುಶಃ ರಾಜನ ಅರಮನೆಗೆ ಸಂಬಂಧಿಸಿದ ವ್ಯವಹಾರಗಳನ್ನು ಗಮನಿಸುತ್ತಿದ್ದ ಮನೆಯ ಹೆಗ್ಗಡೆ, ಕಡಿತವೆರ್ಗ್ಗಡೆ ಲೆಕ್ಕ ಪತ್ರಗಳ ಅಧಿಕಾರಿ. ಭಂಡಾರಿ, ಹೆಸರೆ ಸೂಚಿಸುವಂತೆ ಬೊಕ್ಕಸದ ಅಧಿಕಾರಿ. ವಡ್ಡರಾವುಳದ ಅಧಿಕಾರಿ ಆ ಹೆಸರಿನ ಸುಂಕವನ್ನು ವಸೂಲು ಮಾಡುವ ಜವಾಬ್ದಾರಿ ಹೊಂದಿದ್ದನೆನ್ನಬಹುದು. ಸೇನಾಧಿಪತಿ, ದಂಡನಾಯಕ, ಸಂಧಿವಿಗ್ರಹಿ, ಹೆರಿಲಾಳ ಕನ್ನಡ ಸಂಧಿವಿಗ್ರಹಿ, ಅಧ್ಯಕ್ಷ, ಸರ್ವಾಧ್ಯಕ್ಷ, ಅಂತಃಪುರಾಧ್ಯಕ್ಷ, ಬಾಹತ್ತರ ನಿಯೋಗಾಧಿಪತಿ, ಪಟ್ಟಸಾಹಣಿ, ಪಟ್ಟಸಾಹಣಧಿಷ್ಠಾಯಕ, ಅಚ್ಚುಪನ್ನಾಯದಧಿಷ್ಠಾಯಕ, ಪಸಾಯಿತ, ಶ್ರೀಕರಣ, ಬಾಣಸವೆರ್ಗ್ಗಡೆ, ಚೂಳಾಯ್ತ, ಪಡಿಹಾರ -ಇವು ಇನ್ನೂ ಕೆಲವು ಅಧಿಕಾರವರ್ಗಗಳು. ಹಲವಾರು ಸಂದರ್ಭಗಳಲ್ಲಿ ಒಬ್ಬನೇ ಹಲವಾರು ಅಧಿಕಾರಗಳನ್ನು ಪಡೆದಿರಬಹುದಾಗಿತ್ತು.

ಆಡಳಿತ ಸೌಕರ್ಯಕ್ಕಾಗಿ ರಾಜ್ಯವನ್ನು ಆ ಮೊದಲಿದ್ದಂತೆಯೇ ಬೇರೆ ಬೇರೆ ಪ್ರಾಂತ್ಯಗಳಾಗಿ ವಿಂಗಡಿಸಲಾಗಿತ್ತು. ಆದರೆ ಈ ಪ್ರಾಂತ್ಯಗಳು ಈಗ ಇನ್ನೂ ಹೆಚ್ಚಿದುವಲ್ಲದೆ ಒಂದೊಂದು ಪ್ರಾಂತ್ಯದಲ್ಲೂ ಸಣ್ಣ ಘಟಕಗಳಿದ್ದುವು. ಬನವಾಸಿ 12000, ನೊಳಂಬವಾಡಿ 32000, ಗಂಗವಾಡಿ 96000, ಸಿಂದವಾಡಿ 1000, ಹಲಸಿಗೆ 12000, ಕೊಲ್ಲಿಪಾಕೆ 5000, ಕೊಂಕಣ 900, ಪಾನುಂಗಲ್ಲು 500, ಬೆಳ್ವೊಲ 300, ಪುರಿಗೆರೆ 400, ಸಬ್ಬಿ 30, ಹೈವೆ 50 ಇತ್ಯಾದಿ ಘಟಕಗಳು ಇದ್ದವು. ರಾಜನ ಕೈಕೆಳಗಿನ ಅಧಿಕಾರಿಗಳು ಕೇಂದ್ರಾಡಳಿತದ ಹೊಣೆಗಾರಿಕೆಯ ಜೊತೆಗೆ ಈ ಪ್ರಾಂತ್ಯಗಳ ಆಡಳಿತಕ್ಕೆ ನೇರವಾಗಿ ಜವಾಬ್ದಾರರಾಗಿರುತ್ತಿದ್ದರು. ಕೆಲವು ಪ್ರಾಂತ್ಯಗಳಲ್ಲಿ ಆನುವಂಶಿಕವಾಗಿ ಆಳುತ್ತಿದ್ದ ಸಾಮಂತರೇ ಅಧಿಕಾರದಲ್ಲಿ ಮುಂದುವರೆಯುತ್ತಿದ್ದರು. ಆದರೂ ಬಹುಶಃ ಅವರ ಮೇಲಿನ ಉಸ್ತುವಾರಿಗಾಗಿ ಅರಸ ಅಧಿಕಾರಿಗಳನ್ನು ತನ್ನ ಪ್ರತಿನಿಧಿಗಳಾಗಿ ಅಂಥ ಪ್ರಾಂತ್ಯಗಳಿಗೆ ನೇಮಿಸುತ್ತಿದ್ದ. ಅಧಿಕಾರಿಗಳನ್ನು ಒಂದು ಪ್ರಾಂತ್ಯದಿಂದ ಇನ್ನೊಂದು ಪ್ರಾಂತ್ಯಕ್ಕೆ ವರ್ಗಾಯಿಸುತ್ತಲೂ ಇದ್ದ. ಯುವರಾಜ ಹಾಗೂ ಅರಸನ ಇತರ ಸಂಬಂಧಿಕರು ಸಹ ಹೀಗೆ ಪ್ರಾಂತ್ಯಾಧಿಕಾರಿಗಳಾಗಿ ನಿಯಮಿತ ಹೊಂದುತ್ತಿದ್ದರು.

ಗ್ರಾಮವು ಆಡಳಿತದ ಅತಿ ಸಣ್ಣ ಘಟಕ. ಇದರ ಆಡಳಿತದ ಸಂಪೂರ್ಣ ಹೊಣೆಗಾರಿಕೆ ಅಲ್ಲಿನ ಮಹಾಜನರದು, ಪ್ರಜೆ ಗೌಡುಗಳದು ಆಗಿತ್ತು. ದೇವಾಲಯಗಳು, ಕೆರೆಗಳು, ಕಾಲುವೆಗಳು ಮುಂತಾದುವುಗಳನ್ನು ಕಟ್ಟಿಸುವ ಜೀರ್ಣೋದ್ಧಾರ ಮಾಡುವ ಮತ್ತು ರಕ್ಷಿಸುವ ಕೆಲಸಗಳು, ವಿದ್ಯಾಸಂಸ್ಥೆ, ಅನ್ನಸತ್ರ ಮುಂತಾದುವುಗಳನ್ನು ನೋಡಿಕೊಳ್ಳುವ ಕೆಲಸಗಳೂ ಗ್ರಾಮೀಣ ಆಡಳಿತ ಕಕ್ಷೆಯೊಳಗೆ ಬರುತ್ತಿದ್ದುವು. ಅಗ್ರಹಾರ ಗ್ರಾಮಗಳ ನಿವಾಸಿಗಳ ಪ್ರತಿನಿಧಿಗಳನ್ನೊಳಗೊಂಡ ಒಂದು ಸಂಸ್ಥೆ ಮಹಾಜನರದು. ಗ್ರಾಮದ ವಿಸ್ತೀರ್ಣ, ಜನಸಂಖ್ಯೆಗಳನ್ನು ಆಧರಿಸಿ ಮಹಾಜನರ ಸಂಖ್ಯೆ ಸಹ ನಿರ್ಧಾರವಾಗುತ್ತಿತ್ತು. ಮಹಾಜನರೆಲ್ಲ ಬ್ರಾಹ್ಮಣರೇ ಆಗಿದ್ದರೆಂಬ ವಾದವಿದೆಯಾದರೂ ಅನ್ಯವೃತ್ತಿಕಾರರಿಗೂ ಗ್ರಾಮದ ಆಡಳಿತದಲ್ಲಿ ಪ್ರಾತಿನಿಧ್ಯವಿದ್ದಿತು ಎಂಬುದು ತಿಳಿದಿದೆ. ತಂಬುಲಿಗ, ತೆಲ್ಲಿಗ, ಮುಮ್ಮುರಿದಂಡ ಮುಂತಾದವರ ವೃತ್ತಿಸಂಘಗಳು (ಶ್ರೇಣಿ) ಇದ್ದುವು. ವರ್ತಕರು ನಕರಗಳೆಂದೊ ಸೆಟ್ಟಿಗಳೆಂದೋ ಕರೆಯಲ್ಪಡುತ್ತಿದ್ದರು. ಗಾವುಂಡ ಗ್ರಾಮದ ಪ್ರಮುಖ ಅಧಿಕಾರಿ, ಈತ ಆನುವಂಶಿಕವಾಗಿ ಈ ಅಧಿಕಾರವನ್ನು ಪಡೆದಿದ್ದ. ಒಂದೊಂದು ಗ್ರಾಮಕ್ಕೆ ಒಬ್ಬೊಬ್ಬ ಗಾವುಂಡನೇ ಇದ್ದರೂ ಒಮ್ಮೊಮ್ಮೆ ಹೆಚ್ಚಿನ ಸಂಖ್ಯೆಯಲ್ಲೂ ಇದ್ದರೆನ್ನಲು ಆಧಾರಗಳಿವೆ. ಗಾವುಂಡನಿಗೆ ನೆರವಾಗಿ ಒಬ್ಬ ಲೆಕ್ಕಿಗ (ಕರಣ) ಅಥವಾ ಸೇನಬೋವ ಇರುತ್ತಿದ್ದ. ಹಲವು ಗ್ರಾಮಗಳು ಕೂಡಿದ ನಾಡಿಗೆ ನಾಳ್ಗಾವುಂಡನೆಂಬಾತ ಅಧಿಕಾರಿ.

ಈ ಅಧಿಕಾರಿಗಳಿಗೆಲ್ಲ ನಿಶ್ಚಿತ ತಲುಬನ್ನು ನೀಡುವ ವ್ಯವಸ್ಥೆ ಇರಲಿಲ್ಲ. ಅದಕ್ಕೆ ಬದಲು ಅವರಿಗೆ ಭೂಮಿಯ ವೃತ್ತಿಗಳನ್ನು ನೀಡಲಾಗುತ್ತಿತ್ತು. ಹಿರಿಯ ಅಧಿಕಾರಿಗಳಿಗೆ ಒಂದೊಂದು ಗ್ರಾಮವನ್ನೇ ಅದರ ಆದಾಯವನ್ನು ಅವರು ಸ್ವಂತಕ್ಕೆ ಬಳಸಲೆಂದು ಕೊಡಲಾಗುತ್ತಿತ್ತು. ರಾಣಿಯರು, ರಾಜಕುಮಾರರು, ಅರಸನ ಇತರ ಸಂಬಂಧಿಕರು ಸಹ ಇಂಥ ವೃತ್ತಿಗಳನ್ನು ಪಡೆದಿದ್ದರು. ಬೀಳವೃತ್ತಿ, ಬೀಳಾನುವೃತ್ತಿ, ಪತ್ತುಲವೃತ್ತಿ, ಕುಮಾರವೃತ್ತಿ, ಅಣುಗಜೀವಿತ ಮುಂತಾಗಿ ಶಾಸನಗಳಲ್ಲಿ ಕಾಣಬರುವ ಪದಗಳು ಇಂಥ ವೃತ್ತಿಗಳನ್ನು ಸೂಚಿಸುತ್ತವೆ.

**ಆರ್ಥಿಕ-ಸಾಮಾಜಿಕ ಸ್ಥಿತಿ :** ರಾಜ್ಯ ಆರ್ಥಿಕವಾಗಿ ಬಹಳ ಅಭಿವೃದ್ಧಿ ಹೊಂದಿದ್ದಿತು. ಪ್ರಜೆಗಳು ತೆರಬೇಕಾಗಿದ್ದ ತೆರಿಗೆಗಳು ಬಹುವಿಧವಾಗಿದ್ದುವು. ಪನ್ನಾಯ, ದಸವಂದ, ಕುಳಿಯ ಸುಂಕ, ದವಸಾಯದ ಸುಂಕ, ಭತ್ತಾಯ, ಸದ್ದಾಯ, ಅರುವಣ, ನೀರುಣಿಸುಂಕ, ತಿಪ್ಪೆಸುಂಕ, ಮನ್ನೆವಣ, ತಳಾಱ ಗೂಲಿ ಇತ್ಯಾದಿಗಳು ತೆರಿಗೆಗಳು. ಇವುಗಳು ಬಹುಪಾಲು ವ್ಯವಸಾಯಕ್ಕೆ ಸಂಬಂಧಪಟ್ಟವುಗಳು. ಪ್ರತಿಯೊಂದು ತೆರಿಗೆಯ ಲಕ್ಷಣವಾಗಲಿ ಅರ್ಥವಾಗಲಿ ಅನೇಕ ಸಂದರ್ಭಗಳಲ್ಲಿ ಸ್ಪಷ್ಟವಾಗಿಲ್ಲ. ರಾಜ್ಯದ ಆದಾಯದ ಹೆಚ್ಚಿನ ಪಾಲು ಭೂಕಂದಾಯದಿಂದ ಬರುತ್ತಿತ್ತು. ವಾಣಿಜ್ಯ ಮತ್ತು ವೃತ್ತಿಗಳಿಗೆ ಸಂಬಂಧಿಸಿದಂಥ' ಪೆರ್ಜುಂಕ, ಸಂತೆವಣ, ಮನೆವಣ, (ಮನೆದೆಱೆ), ಕಿಱುದೆಱೆ, ಹೊಸತಿಲುವಣ, ಸೂಳವಾಣಪಣ, ಕನ್ನಡಿವಣ, ವಡ್ಡರಾವುಳ, ಡೊಂಬದೆಱೆ, ಘಾಣದೆಱೆ, ನಾವಿದವಾರಿ, ಬಿಲ್ಕೊಡೆ ಮುಂತಾದ ತೆರಿಗೆಗಳೂ ಇದ್ದುವು. ಸಾಮಾಜಿಕ ತೆರಿಗೆಗಳೆನ್ನಬಹುದಾದ ಮದುವೆಯ ಸುಂಕ, ದಂಡಾಯ ಎಂಬುವುಗಳೂ ಗಮನಾರ್ಹ. ಮನೆಗಳಲ್ಲಿ ನಡೆಯುವ ಹಬ್ಬ, ಮದುವೆ ಮುಂತಾದವುಗಳಿಗೂ ತೆರಿಗೆ ತೆರಬೇಕಾಗಿತ್ತು ಎಂಬುದು ಇದರಿಂದ ತಿಳಿಯುತ್ತದೆ. ದಂಡಾಯ ಶಿಕ್ಷೆಗೊಳಪಟ್ಟ ಸಮಾಜ ಘಾತುಕರಿಂದ ಗ್ರಾಮೀಣ ಸಂಸ್ಥೆಗಳೋ, ಕೇಂದ್ರಾಧಿಕಾರಿಗಳೋ ವಸೂಲು ಮಾಡುತ್ತಿದ್ದ ಮೊತ್ತ ಸರ್ಕಾರದ ಒಂದು ಆಯವಾಗಿತ್ತು. ಅತಿಕ್ರಮ ಪ್ರವೇಶಕ್ಕೆ 12 ಗದ್ಯಾಣ, ಆಡಿದ ಮಾತನ್ನು ಪೂರ್ಣವಾಗಿ ನಡೆಸದವರಿಗೆ 12 ಪಣ, ಮುರಿದಲ್ಲಿ 12 ಗದ್ಯಾಣ ದಂಡವೆಂದು ಒಂದು ಶಾಸನದಲ್ಲಿ ಹೇಳಿದೆ. ಆಜ್ಞೆಯನ್ನುಲ್ಲಂಘಿಸಿದರೆ 52 ದ್ರಮ್ಮ, ದುರಾಕ್ರಮಣಕ್ಕೆ 12 ದ್ರಮ್ಮ, ಕತ್ತಿಯನ್ನೆಳೆದರೆ 1000 ದ್ರಮ್ಮ, ಇರಿದರೆ 97 ದ್ರಮ್ಮ ದಂಡ ತೆರಬೇಕೆಂದು ಮತ್ತೊಂದು ಶಾಸನದಲ್ಲಿ ಹೇಳಿದೆ. ಇವುಗಳಿಂದ ಅಂದಿನ ಆಡಳಿತವರ್ಗ ಸಮಾಜದಲ್ಲಿ ಶಾಂತಿ ನೆಲಸಲು ಎಂಥ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿತ್ತೆಂದು ಗೊತ್ತಾಗುತ್ತದೆ.

ದ್ರಮ್ಮ, ಗದ್ಯಾಣ, ಪಣ, ಪೊನ್, ಸುವರ್ಣ, ಸಾಹಣಿಕಾಟಿ, ಸಲಿಕೆ, ಗುಲಿಕೆ, ಕಾಗಿಣಿ, ಮಾಡ, ವೀಸ, ಅಡ್ಡ, ಪ್ರತಾಪ, ಧರಣ ಮುಂತಾದ ನಾಣ್ಯಗಳು ಚಲಾವಣೆಯಲ್ಲಿದ್ದುವು. ಗದ್ಯಾಣದಲ್ಲಿಯೇ ಬಹುಶಃ ಅದರ ತೂಕ ಇತ್ಯಾದಿಗಳಿಗನುಸಾರವಾಗಿ ದುಸರ ಗದ್ಯಾಣ, ಕಟಕ ಗದ್ಯಾಣ, ಪೆರ್ಗ್ಗಡೆ ಗದ್ಯಾಣ ಮುಂತಾದ ಬೇರೆ ಬೇರೆ ನಾಣ್ಯಗಳಿದ್ದುವು. ಈ ನಾಣ್ಯಗಳನ್ನು ಅಚ್ಚುಹಾಕಿಸಲು ಕಮ್ಮಟಗಳಿದ್ದುವು. ಲಕ್ಕುಂಡಿಯಲ್ಲಿ ಬೆಳ್ಳಿನಾಣ್ಯಗಳನ್ನು ಎರಕಹೊಯ್ಯುತ್ತಿದ್ದ ಬೆಳ್ಳಿಗಮ್ಮಟವಿತ್ತು. ಕುಡತಿನಿಯಲ್ಲಿ ಕಾರ್ತಿಕೇಯದೇವರ ನವಿಲಚ್ಚಿನ ಪೊನ್ನನ್ನು ಎರಕ ಹೊಯ್ಯುತ್ತಿದ್ದರು. ಆಣಿಕಾಱ ಎಂಬ ಅಧಿಕಾರಿ ಇಂಥ ಕಮ್ಮಟದ ಅಧಿಕಾರಿಯಾಗಿದ್ದ.

ಜನರು ಅನೇಕ ರೀತಿಯ ಕರಭಾರವನ್ನು ಹೊರಬೇಕಾದಲ್ಲಿ ರಾಜ್ಯದ ಆರ್ಥಿಕ ಪರಿಸ್ಥಿತಿ ಅತ್ಯುತ್ತಮವಾಗಿತ್ತೆನ್ನಬಹುದು. ಅರಸರೂ ಅಧಿಕಾರಿಗಳೂ ವ್ಯವಸಾಯೋತ್ಪನ್ನ ಹೆಚ್ಚಲು ಬೇಕಾದ ನೀರಾವರಿ ಹಾಗೂ ಇತರ ಸೌಲಭ್ಯಗಳನ್ನು ಕಲ್ಪಿಸುತ್ತಿದ್ದರು. ಕಾಡುಗಳನ್ನು ಕಡಿದು ಹೆಚ್ಚಿನ ಭೂಮಿಯನ್ನು ವ್ಯವಸಾಯಕ್ಕೆ ಅಣಿಗೊಳಿಸಲಾಗುತ್ತಿತ್ತು. ಕೆರೆಗಳನ್ನು ಕಟ್ಟಿಸಿ, ಕಾಲುವೆಗಳನ್ನು ತೋಡಿಸುತ್ತಿದ್ದರು. ಇಂಥ ಕೆಲಸವನ್ನು ಅಧಿಕಾರಿಗಳು

ಕರ್ತವ್ಯವೆಂದೋ ವೈಯಕ್ತಿಕವಾಗಿ ಪುಣ್ಯಪ್ರದ ಕಾರ್ಯವೆಂದೋ ಪರಿಗಣಿಸಿದ್ದರು. ಇದರಿಂದ ಭೂಮಿ ಹೆಚ್ಚು ಫಲವತ್ತಾಗಿ ಉತ್ಪನ್ನ ಹೆಚ್ಚಿತ್ತು.

ಭೂಮಿ ಸಾಮಾನ್ಯವಾಗಿ ವ್ಯಕ್ತಿಗಳ ಒಡೆತನಕ್ಕೆ ಸೇರಿರಲಿಲ್ಲ. ಈ ಕಾಲದ ಶಾಸನಗಳನ್ನು ವಿಶ್ಲೇಷಿಸಿದರೆ ಗ್ರಾಮಕ್ಕೆ ಸೇರಿದ ಭೂಮಿ ಗ್ರಾಮಸ್ಥರಿಗೆಲ್ಲ ಒಟ್ಟಾಗಿ ಸೇರಿದ್ದು ಅವಿಭಕ್ತಸ್ವಾಮ್ಯವಾಗಿತ್ತು. ಅಧಿಕಾರಿಗಳಿಗೆ ತಲುಬಿಗೆ ಬದಲಾಗಿ ಕೊಡಲಾದ ಭೂಮಿಯ ವೃತ್ತಿ, ಬ್ರಾಹ್ಮಣರಿಗೆ ದಾನವಾಗಿ ನೀಡಲಾದ ವೃತ್ತಿಗಳು, ನೆತ್ತರುಗೊಡಗೆ ಮುಂತಾದ ವೃತ್ತಿಗಳು ಮಾತ್ರ ವೈಯಕ್ತಿಕ ಸ್ವಾಮ್ಯಕ್ಕೆ ಸೇರಿದ ಆಸ್ತಿಗಳೆಂದು ಭಾವಿಸಬಹುದು. ಅವರಿಗೆ ಸಹ ಈ ಭೂಮಿಯನ್ನು ಪರಭಾರೆ ಮಾಡುವ ಹಕ್ಕು ಇದ್ದಂತೆ ತೋರುವುದಿಲ್ಲ. ಇವು ಹೊರತುಪಡಿಸಿ ಉಳಿದೆಲ್ಲ ಭೂಮಿಯ ಯಜಮಾನಿಕೆ ಗ್ರಾಮದ ಮಹಾಜನರಿಗೆ ಸೇರಿತ್ತು. ಮಹಾಜನ ಸಂಸ್ಥೆಗಳೇ ದಾನಗಳನ್ನು ನೀಡುತ್ತಿದ್ದುವು; ಕರಗಳನ್ನೂ ವಸೂಲು ಮಾಡುತ್ತಿದ್ದುವು. ಭೂಮಿಯ ವೈಯಕ್ತಿಕ ವ್ಯವಹಾರಗಳು ಅಪರೂಪ, ಆದರೆ ವೈಯಕ್ತಿಕ ವೃತ್ತಿಗಳನ್ನು ಪಡೆದ ಅಧಿಕಾರಿಗಳು ಹಾಗೂ ಇತರರು ಅದರಿಂದ ಬಂದ ಉತ್ಪನ್ನವನ್ನು ರೂಢಿಸಿಕೊಂಡು ಶ್ರೀಮಂತರಾಗಿದ್ದರು. ಕೆರೆಗಳನ್ನೂ ದೇವಾಲಯಗಳನ್ನೂ ಕಟ್ಟಿಸುವ, ಕಾಲುವೆ ತೋಡಿಸುವ, ವಿದ್ಯಾಸಂಸ್ಥೆಗಳನ್ನು ಸ್ಥಾಪಿಸುವ ಆರ್ಥಿಕ ಶಕ್ತಿ ಅವರಲ್ಲಿತ್ತು. ಎಂತಲೆ ಈ ಕಾಲದಲ್ಲಿ ಅರಸರಿಗಿಂತ ಹೆಚ್ಚಾಗಿ ಶ್ರೀಮಂತ ವರ್ಗದವರು ಈ ಕಾಲಮಾನದಲ್ಲಿ ಇಂಥ ಕಾರ್ಯಗಳಲ್ಲಿ ತೊಡಗಿರುವುದನ್ನು ಕಾಣುತ್ತೇವೆ.

ಹೀಗೆ ಸಮಾಜದಲ್ಲಿ ಶ್ರೀಮಂತವರ್ಗವೊಂದು ಬೆಳೆಯಿತು. ಆರ್ಥಿಕಾಭಿವೃದ್ಧಿಯಾದರೂ ಅದು ಸಾಮಾನ್ಯವಾಗಿ ಎಲ್ಲರಲ್ಲಿಯೂ ವಿತರಣೆಯಾಗಿರಲಿಲ್ಲವೆಂಬುದೂ ತಿಳಿದುಬರುತ್ತದೆ. ಆದರೆ ದಲಿತವರ್ಗದ ಪರಿಸ್ಥಿತಿ ಅನುಕೂಲಕರವಾಗಿಯೇ ಇದ್ದಿತಾದುದರಿಂದ ಸಮಾಜದಲ್ಲಿ 12ನೆಯ ಶತಮಾನದ ಮಧ್ಯದವರೆಗೂ ಶಾಂತಿ ನೆಲಸಿತ್ತು. ಅನಂತರ ತಲೆಎತ್ತಿದ್ದ ವೀರಶೈವ ಕ್ರಾಂತಿ ಒಂದು ವಿಧದಲ್ಲಿ ಆರ್ಥಿಕ ಅಸಮಾನತೆಯ ವಿರುದ್ಧ ಎದ್ದ ಕ್ರಾಂತಿಯೂ ಹೌದು. ಅಲ್ಲದೆ ಈ ಶ್ರೀಮಂತ ವರ್ಗದಲ್ಲಿ ಬಹುಭಾಗ ಬ್ರಾಹ್ಮಣಧರ್ಮಕ್ಕೆ ಸೇರಿದವರಾಗಿದ್ದರು. ಅರಸರ ಆಡಳಿತಾಧಿಕಾರಿಗಳಲ್ಲಿ ಬಹುಪಾಲು ಬ್ರಾಹ್ಮಣರಾಗಿದ್ದರು. ಇದರಿಂದ ಇತರ ಧರ್ಮಾನುಯಾಯಿಗಳಿಗಿಂತಲೂ ಬ್ರಾಹ್ಮಣರಿಗೆ ಹೆಚ್ಚಿನ ಪ್ರೋತ್ಸಾಹ ದೊರಕಿತ್ತೆನ್ನಬಹುದು. ವರ್ಣ ಮತ್ತು ಜಾತಿ ವ್ಯವಸ್ಥೆಗಳು ಈಗ ಖಚಿತ ರೂಪವನ್ನು ತಾಳಿದ್ದುದಲ್ಲದೆ ಕಟ್ಟುನಿಟ್ಟಾದ ಜಾತಿನಿಯಮಗಳು ಆಚರಣೆಗೆ ಬಂದಿದ್ದುವು. ಆದರೆ ಬ್ರಾಹ್ಮಣರನೇಕರು ಕ್ಷತ್ರಿಯರಂತೆ ಯುದ್ಧಕರ್ಮಿಗಳಾಗಿದ್ದು ದಂಡನಾಯಕ, ಸೇನಾಪತಿ ಮುಂತಾದ ಪದವಿಗಳನ್ನು ಪಡೆದಿದ್ದರು. ಇದು ಎಷ್ಟರಮಟ್ಟಿಗೆ ಮಾನ್ಯವಾಗಿತ್ತು ಎಂಬುದು ಸಂದೇಹಾಸ್ಪದ. ಈ ಪ್ರವೃತ್ತಿ ವ್ಯಾಪಕವಾಗಿದ್ದಂತೆ ತೋರದು. ಜನಸಾಮಾನ್ಯರು ಅರಸನಿಂದ ನಿರೀಕ್ಷಿಸುತ್ತಿದ್ದುದು ದುಷ್ಟಶಿಕ್ಷಣ ಮತ್ತು ಶಿಷ್ಟರಕ್ಷಣ. ಅವರಿಗೆ ರಾಜಕೀಯದಲ್ಲಿ ಹೆಚ್ಚಿನ ಆಸಕ್ತಿ ಇದ್ದಂತೆ ಕಂಡುಬಾರದು.

ದೇವಾಲಯ ಈಗ ಕಿರಿದಾದ ಸಾಮಾಜಿಕ ಸಂಸ್ಥೆಯೂ ಆಗಿತ್ತು. ಅಲ್ಲದೆ ಅದೊಂದು ವಿದ್ಯಾಕೇಂದ್ರವಾಗಿತ್ತು. ದೇವಸ್ಥಾನಕ್ಕೆ ಸೇರಿದಂತೆ ಒಂದು ಮಠ ಮತ್ತು ಅನ್ನಸತ್ರ ಇರುತ್ತಿತ್ತು. ಮಠದಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳಿಗೆ ಸತ್ರದಲ್ಲಿ ಊಟೋಪಚಾರದ ವ್ಯವಸ್ಥೆ ಇತ್ತು. ತಪೋವನ, ಘಟಿಕಾಸ್ಥಾನಗಳು ಶಿಕ್ಷಣ ಕೇಂದ್ರಗಳಾಗಿದ್ದುವು. ಧಾರವಾಡ ಜಿಲ್ಲೆಯ ಕಾಡಿಯೂರು, ಬಳ್ಳಾರಿಯ ಮೊಡಿಗೆರೆ, ಗುಲ್ಬರ್ಗದ ನಾಗಾಯಿ, ಬಿಜಾಪುರದ ಕಡಲೆವಾಡ - ಇವು ಇಂಥ ಘಟಿಕಾಸ್ಥಾನಗಳು. ಇಲ್ಲಿ ಘಟಿಕಾಪ್ರಹಾರಿಗಳು (ಕಾಪಿನ ಘಟಿಯಾರಿ), ಖ್ಯಾತ ವಿದ್ವಾಂಸರು ಇರುತ್ತಿದ್ದರು. ಎಲ್ಲ ಚಟುವಟಿಕೆಗಳು ವೇಳಾಪಟ್ಟಿಯಂತೆ ಕ್ರಮವಾಗಿ ನಡೆಯುವಂತೆ ನೋಡಿಕೊಳ್ಳುವ ಹೊಣೆ ಇವರದಾಗಿತ್ತು. ಪರೀಕ್ಷೆಯಲ್ಲಿ ತೇರ್ಗಡೆಯಾದವರು ಘಟಿಕಾಸಾಹಣಿಗಳೆನಿಸಿಕೊಳ್ಳುತ್ತಿದ್ದರು. ಅಗ್ರಹಾರಗಳು ವಿದ್ಯಾಸಂಪನ್ನ ಬ್ರಾಹ್ಮಣರ ವಾಸಸ್ಥಳಗಳು. ವೇದಾಧ್ಯಾಯಿಗಳೂ ಷಟ್ಕರ್ಮನಿರತರೂ ಆದ ಬ್ರಾಹ್ಮಣರನ್ನು ಬೇರೆ ಬೇರೆ ಕಡೆಗಳಿಂದ ಬರಮಾಡಿಕೊಂಡು ಇಂಥ ಅಗ್ರಹಾರಗಳಲ್ಲಿ ಅವರಿಗೆ ವಸತಿ ಸೌಕರ್ಯವನ್ನು ಕಲ್ಪಿಸಿ ಅವರಿಂದ ವಿದ್ಯಾಪ್ರಸಾರ ಮಾಡಿಸುವುದು ಅಗ್ರಹಾರಗಳನ್ನು ಸ್ಥಾಪಿಸುವುದರ ಮುಖ್ಯ ಉದ್ದೇಶವಾಗಿತ್ತು. ಈ ಕಾಲದಲ್ಲಿ ಕರ್ನಾಟಕದಲ್ಲಿ ಅಗ್ರಹಾರಗಳು ಹೆಚ್ಚಿನ ಸಂಖ್ಯೆಯಲ್ಲಿದ್ದುವು.

**ಲಲಿತಕಲೆ, ಸಾಹಿತ್ಯ :** ಕಲೆಗಳಿಗೆ ಹೆಚ್ಚಿನ ರಾಜಾಶ್ರಯ, ಜನಾಶ್ರಯ ದೊರಕಿತು. ದೇವಾಲಯಗಳು ನೃತ್ಯ ಸಂಗೀತ ಮುಂತಾದ ಕಲೆಗಳಿಗೆ ಆಶ್ರಯ ನೀಡಿದ್ದುವು. ಶಾಸನಗಳಲ್ಲಿ ಇವುಗಳಿಗೆ ಸಂಬಂಧಿಸಿದ ಉಲ್ಲೇಖಗಳಿವೆ. ಅರಸನಾದ ಭೂಲೋಕಮಲ್ಲ ಮುಮ್ಮಡಿ ಸೋಮೇಶ್ವರನ ಅಭಿಲಷಿತಾರ್ಥಚಿಂತಾಮಣಿಯಲ್ಲಿ (ಮಾನಸೋಲ್ಲಾಸ) ಸಂಗೀತಶಾಸ್ತ್ರವನ್ನು ಕುರಿತು ಪ್ರಸ್ತಾಪಿಸಲಾಗಿದೆ. ಆತನ ಮಗ ಇಮ್ಮಡಿ ಜಗದೇಕಮಲ್ಲ ಸಂಗೀತಚೂಡಾಮಣಿಯ ಕರ್ತೃ. ಚಾಳುಕ್ಯ ರಾಣಿಯರಲ್ಲಿ ಹಲವರು ನೃತ್ಯ, ಸಂಗೀತಗಳಲ್ಲಿ ಪರಿಣಿತರಾಗಿದ್ದರು. ನೃತ್ಯವಿದ್ಯಾಧರಿ, ಸಂಗೀತ ವಿದ್ಯಾಧರಿ ಗಳೆನಿಸಿಕೊಂಡಿದ್ದರು. ಚಿತ್ರಕಲೆಗೂ ಪ್ರೋತ್ಸಾಹ ನೀಡಲಾಗಿತ್ತೆನ್ನ ಬಹುದಾದರೂ ಅದಕ್ಕೆ ಗುರುತುಗಳು ಉಳಿದಿಲ್ಲ.

ಸಾಹಿತ್ಯಕ್ಕೆ ಉದಾರವಾದ ರಾಜಾಶ್ರಯ ದೊರೆತ ಕಾರಣ ಸಂಸ್ಕೃತ ಹಾಗೂ ಕನ್ನಡಗಳಲ್ಲಿ ಅನೇಕ ಸಾಹಿತ್ಯ ಕೃತಿಗಳು ಬೆಳಕು ಕಂಡವು. ಇಮ್ಮಡಿ ಜಯಸಿಂಹನ ಆಸ್ಥಾನದಲ್ಲಿದ್ದ ವಾದಿರಾಜ ಎಂಬ ಜೈನಕವಿ ಸಂಸ್ಕೃತದಲ್ಲಿ ಪಾರ್ಶ್ವನಾಥ ಚರಿತ, ಪ್ರಮಾಣ ನಿರ್ಣಯ, ಯಶೋಧರ ಚರಿತ ಇತ್ಯಾದಿ ಗ್ರಂಥಗಳನ್ನು ರಚಿಸಿದ. ದಯಪಾಲನು ರೂಪಸಿದ್ಧಿ ಎಂಬ ವ್ಯಾಕರಣ ಗ್ರಂಥದ ಕರ್ತೃ. ಬಿಲ್ಹಣನ ವಿಕ್ರಮಾಂಕದೇವಚರಿತ ಪ್ರಸಿದ್ಧವಾದ ಐತಿಹಾಸಿಕ ಕಾವ್ಯ. ಈ ಕವಿ ಕಾಶ್ಮೀರವಾಸಿ. ದೇಶಪರ್ಯಟನೆ ಮಾಡುತ್ತ ಕರ್ನಾಟಕಕ್ಕೆ ಬಂದು ಇಲ್ಲಿ ರಾಜಾಶ್ರಯ ಪಡೆದು ವಿದ್ಯಾಪತಿ ಎನಿಸಿಕೊಂಡ. ಚಾರುಪಂಚಾಶಿಕವೆಂದು ಹೆಸರಾಂತ ಬಿಲ್ಹಣ ಕಾವ್ಯ ಈತನ ಇನ್ನೊಂದು ಕೃತಿ. ಯಾಜ್ಞವಲ್ಕ್ಯಸ್ಮೃತಿಗೆ ವ್ಯಾಖ್ಯಾನ ರೂಪದಲ್ಲಿ ರಚಿಸಿದ ಗ್ರಂಥ ಮಿತಾಕ್ಷರಾ. ಇದರ ಕರ್ತೃ ವಿಜ್ಞಾನೇಶ್ವರ. ಕಾನೂನು ನೀತಿ ಹಾಗೂ ಧರ್ಮಶಾಸ್ತ್ರಗಳಿಗೆ ಸಂಬಂಧಿಸಿದ ಗ್ರಂಥವಿದು. ಭೂಲೋಕಮಲ್ಲ ಮುಮ್ಮಡಿ ಸೋಮೇಶ್ವರ ಮಾನಸೋಲ್ಲಾಸ ಅಥವಾ ಅಭಿಲಷಿತಾರ್ಥಚಿಂತಾಮಣಿಯ ಕರ್ತೃ. ಜಗದಾಚಾರ್ಯ ಪುಸ್ತಕವೆನಿಸಿದ ಇದು ಒಂದು ವಿಶ್ವಕೋಶದಂತಿದೆ. ಈತನದೇ ಇನ್ನೊಂದು ಕೃತಿಯ ಹೆಸರು ವಿಕ್ರಮಾಂಕಾಭ್ಯುದಯ. ವಿಕ್ರಮಾಂಕದೇವಚರಿತವನ್ನೇ ಇದು ಹೋಲುತ್ತದೆಯಾದರೂ ಎರಡರಲ್ಲಿಯೂ ವಿವರಗಳಲ್ಲಿ ವ್ಯತ್ಯಾಸಗಳಿವೆ.

ಕರ್ನಾಟಕ ಕಾದಂಬರಿ ಹಾಗೂ ಛಂದೋಂಬುಧಿಗಳನ್ನು ರಚಿಸಿದ 1ನೆಯ ನಾಗವರ್ಮ ಈ ಕಾಲದವನು. ಅಜಿತತೀರ್ಥಂಕರಪುರಾಣತಿಲಕ ಮತ್ತು ಸಾಹಸಭೀಮವಿಜಯಗಳ ಕರ್ತೃವಾದ ಖ್ಯಾತಿವೆತ್ತ ರನ್ನ ಸಹ ಇದೇ ಕಾಲದವನು. ದುರ್ಗಸಿಂಹನಿಂದ ಹೊಗಳಲ್ಪಟ್ಟ ಮಾಳವೀಮಾಧವದ ಕನ್ನಮಯ್ಯ, ಮನಸಿಜ, ಚಂದ್ರಭಟ್ಟ, ಗಜಾಂಕುಶ ಹಾಗೂ ಎರಡನೆಯ ನಾಗವರ್ಮ ಹೆಸರಿಸಿದ ವತ್ಸರಾಜ ಚರಿತೆಯನ್ನು ಬರೆದ ನಾಗವರ್ಮ, ಸುಲೋಚನಾಚರಿತದ ನಾಗದೇವ, ಶಂಖವರ್ಮ, ಹರಿಪಾಲ ಮತ್ತು ಕೇಶಿರಾಜ ಉಲ್ಲೇಖಿಸಿರುವ ಹಂಸರಾಜ ಬಹುಶಃ ಈ ಕಾಲದ ಕವಿಗಳು. ಲೋಕೋಪಕಾರದ ಕರ್ತೃ ಎರಡನೆಯ ಚಾವುಂಡರಾಯ, ಕರ್ನಾಟಕ ಪಂಚತಂತ್ರದ ದುರ್ಗಸಿಂಹ, ಕಾವ್ಯಾವಲೋಕನ ಮುಂತಾದ ಶಾಸ್ತ್ರಗ್ರಂಥಗಳ ಮತ್ತು ವರ್ಧಮಾನಪುರಾಣದ ಕರ್ತೃ ಎರಡನೆಯ ನಾಗವರ್ಮ, ಜಾತಕತಿಲಕದ ಶ್ರೀಧರಾಚಾರ್ಯ, ದಿವಾಕರನಂದಿ, ಸುಕುಮಾರಚರಿತದ ಶಾಂತಿನಾಥ, ಗೋವೈದ್ಯದ ಕೀರ್ತಿವರ್ಮ, ಚಂದ್ರಚೂಡಾಮಣಿ ಶತಕದ ನಾಗವರ್ಮಾಚಾರ್ಯ, ಮಲ್ಲಿನಾಥಪುರಾಣ ಮತ್ತು ರಾಮಚಂದ್ರ ಚರಿತಪುರಾಣಗಳನ್ನು ರಚಿಸಿದ ನಾಗಚಂದ್ರ, ಧರ್ಮಾಮೃತದ ನಯಸೇನ, ಮೇಘಚಂದ್ರ, ಉದಯಾದಿತ್ಯ ಹಾಗೂ ಕನ್ನಡ ಸಾಹಿತ್ಯದ ಮೊದಲ ಕವಯಿತ್ರಿಯಾದ ಕಂತಿ ಮೊದಲಾದ ಕವಿಗಳಿಂದ ಈ ಕಾಲದಲ್ಲಿ ಕನ್ನಡ ಸಾಹಿತ್ಯ ಸಮೃದ್ಧವಾಗಿ ಬೆಳೆಯಿತು. (ಬಿ.ಆರ್.ಜಿ.)

**ವಾಸ್ತು ಶಿಲ್ಪ :** ಕಲ್ಯಾಣದ ಚಾಳುಕ್ಯ ಅರಸರ ಆಳಿಕೆಗೆ ಒಳಪಟ್ಟಿದ್ದ ಈಗಿನ ಉತ್ತರ ಕರ್ನಾಟಕ ಮತ್ತು ಅದಕ್ಕೆ ಹೊಂದಿಕೊಂಡಂತಿರುವ ಶಿವಮೊಗ್ಗ-ಚಿತ್ರದುರ್ಗ ಜಿಲ್ಲೆಗಳ (ಹಾಗೂ ಮಹಾರಾಷ್ಟ್ರದ ದಕ್ಷಿಣ

ಜಿಲ್ಲೆಗಳು ಮತ್ತು ಆಂಧ್ರ ಪ್ರದೇಶದ ಪಶ್ಚಿಮ ಜಿಲ್ಲೆಗಳ) ಪ್ರದೇಶದಲ್ಲಿ ಒಂದು ವಿಶಿಷ್ಟ ವಾಸ್ತುಶಿಲ್ಪ ಸಂಪ್ರದಾಯ ಬೆಳೆಯಿತು. ಆ ಕಾಲದ ಹಲವು ದೇವಾಲಯಗಳು ಮೇಲಿನ ಪ್ರದೇಶದ ಅನೇಕ ಎಡೆಗಳಲ್ಲಿ ಕಂಡುಬರುತ್ತವೆ. ಆದರೆ ಕ್ಷಾತ್ರ ಅಥ'ವಾ ಲೌಕಿಕ ವಾಸ್ತುಕೃತಿಗಳು ಯಾವುವೂ ಉಳಿದುಬಂದಿಲ್ಲ.

ಕಲ್ಯಾಣ ಚಾಳುಕ್ಯ ವಾಸ್ತು ರೀತಿ ಮೂಲತಃ ಇದೇ ಪ್ರದೇಶದಲ್ಲಿದ್ದ ಬಾದಾಮಿಯ ಚಳುಕ್ಯ ವಾಸ್ತು ಸಂಪ್ರದಾಯದಿಂದಲೇ ವಿಕಾಸ ಹೊಂದಿತಾದರೂ ಇದು ಸಂಪೂರ್ಣವಾಗಿ ಬೆಳೆಯುವ ವೇಳೆಗೆ ಅನೇಕ ಬದಲಾವಣೆಗಳಿಗೆ ಒಳಗಾಗಿ ತನ್ನತನವನ್ನು ಸಾಧಿಸಿಕೊಂಡಿದೆ. ಮೊದಲನೆಯದಾಗಿ, ಈ ಕಾಲದಲ್ಲಿ ಗುಹಾವಾಸ್ತು ರೀತಿಯನ್ನು ಪೂರ್ಣವಾಗಿ ಕೈಬಿಟ್ಟು ಕಟ್ಟಡಗಳ ರಚನೆಯನ್ನು ಉಳಿಸಿಕೊಳ್ಳಲಾಯಿತು. ಎರಡನೆಯದಾಗಿ, ಕಟ್ಟಡಗಳಿಗೆ ಬಾದಾಮಿಯ ಚಳುಕ್ಯರ ಕಾಲದಲ್ಲಿ ಉಪಯೋಗಿಸಲಾಗುತ್ತಿದ್ದ ಮರಳುಗಲ್ಲಿನ ಬದಲು, ಕರಿಕಲ್ಲು ಕ್ಲೋರೈಟಿಕ್ ಷಿಸ್ಟ್ ಬಳಕೆಗೆ ಬಂತು. ಈ ಹೊಸ ರಚನಾ ಸಾಮಗ್ರಿಯಲ್ಲಿ ದೊಡ್ಡ ಕಂಬ ಅಥವಾ ತೊಲೆಗಳಿಗೆ ಬೇಕಾದ ಗಾತ್ರದ ಕಲ್ಲನ್ನು ಪಡೆಯುವುದು ಕಷ್ಟವಾದ್ದರಿಂದಲೂ ಅವುಗಳ ಭಾರ ತಾಳಿಕೆಯ ಶಕ್ತಿ ಕಡಿಮೆಯಾದ್ದರಿಂದಲೂ ಆ ಕಾಲದ ದೇವಾಲಯಗಳ ಎತ್ತರವೂ ವಿಸ್ತಾರವೂ ಕಡಿಮೆ. ಅನೇಕ ಕಂಬಗಳನ್ನು ಅಳವಡಿಸಿ ಸ್ವಲ್ಪ ಹೆಚ್ಚು ವಿಸ್ತಾರದ ಕಟ್ಟಡಗಳನ್ನು ಕಟ್ಟುವ ಸಂಪ್ರದಾಯ ಬೆಳೆಯಿತು. ಈ ಕಲ್ಲು ಬಹಳ ಮೃದುವಾದ್ದರಿಂದ ಉಜ್ಜಿದಾಗ ಹೆಚ್ಚು ಹೊಳಪು ಪಡೆಯುವುದಲ್ಲದೆ, ಇದನ್ನು ಸುಲಭವಾಗಿ ಕೊರೆಯಲೂ ಅನುಕೂಲ. ಈ ಗುಣವನ್ನು ಚಾಳುಕ್ಯ ಸ್ಥಪತಿ ಶಿಲ್ಪಿಗಳು ಉಪಯೋಗಿಸಿಕೊಂಡು ತಮ್ಮ ಕೃತಿಗಳನ್ನು ಹೆಚ್ಚಿನ ಅಲಂಕರಣದಿಂದ ತುಂಬಿದ್ದಾರೆ. ಈ ಅಂಶಗಳೆಲ್ಲ ಈ ಶೈಲಿಯ ವೈಶಿಷ್ಟ್ಯಗಳೇ ಆದುವು. ರಚನಾತಂತ್ರದಲ್ಲಿ ಯಾವ ಬಂಧಕ ಸಾಮಗ್ರಿಯನ್ನೂ ಉಪಯೋಗಿಸದೆ ಸೈಜುಕಲ್ಲು ಅಥವಾ ಚಪ್ಪಡಿಗಳನ್ನು ಒಂದರಮೇಲೊಂದರಂತೆ ಜೋಡಿಸಿ ಕಟ್ಟಡಗಳನ್ನು ಎತ್ತುವ ರೀತಿ ಇಲ್ಲೂ ಕಂಡುಬರುತ್ತದೆ.



ಮಹಾದೇವ ದೇವಾಲಯ, ಇಟ್ಟಗಿ

ಚಾಳುಕ್ಯ ವಾಸ್ತುಶೈಲಿಯಲ್ಲಿ ಸಮಕೋಣಗಳ ಉಪಯೋಗ ವಿಶೇಷವಾಗಿ ಕಂಡುಬರುತ್ತದೆ. ನಕ್ಷತ್ರಾಕಾರದ ತಳವಿನ್ಯಾಸವಿರುವ ಡಂಬಳದ ದೊಡ್ಡ ಬಸಪ್ಪ ದೇವಾಲಯವೊಂದನ್ನು ಬಿಟ್ಟರೆ ಮಿಕ್ಕವುಗಳೆಲ್ಲ ಆಯತಾಸ್ರಗಳು, ಕೇವಲ ಒಂದು ಆಯ ಅಥ'ವಾ ಅನೇಕ ಆಯಗಳ ಜೋಡಣೆ ತಳವಿನ್ಯಾಸದ ಮೂಲ ಸೂತ್ರವಾಗಿತ್ತು. ಗೋಡೆಗಳು ಸಾಮಾನ್ಯವಾಗಿ ನೇರವಾಗಿದ್ದರೂ ಈ ನೇರವನ್ನು ಭಗ್ನದಂತಗಳಂತೆ ಆಲಂಕಾರಿಕವಾಗಿ ಚಿಕ್ಕ ಚಿಕ್ಕ ಹಿನ್‌ಸರಿತ ಮುನ್ ಸರಿತಗಳಿಂದ ಒಡೆಯುವುದು ಈ ಶೈಲಿಯ ಒಂದು ಸಾಮಾನ್ಯ ಅಂಶ. ಆದರೆ ಈ ಸರಿತಗಳೂ ಅಡ್ಡವಿನ್ಯಾಸದಲ್ಲಿ ಆಯಾಕಾರದವೇ ಆಗಿರುತ್ತವೆ. ಈ ಕಾಲದ ದೇವಾಲಯಗಳಲ್ಲಿ ಗರ್ಭಗೃಹ, ಅಂತರಾಳ, ಅದರ ಮುಂದೆ ಅನೇಕ ಕಂಬಗಳಿಂದ ಕೂಡಿದ ಭಿತ್ತಿರಹಿತ ತೆರೆದ ಮಂಟಪ ಇರುತ್ತವೆ. ಈ ಮಂಟಪದ ಹೊರ ಅಂಚಿನಲ್ಲಿ ಸುತ್ತಲೂ ಕಕ್ಷಾಸನಗಳು, ಎಂದರೆ ಒರಗುಬೆನ್ನುಳ್ಳ ಬೆಂಚುಗಳು ಇರುತ್ತವೆ. ಹಲವು ಬಾರಿ ಅಂತರಾಳ ಮತ್ತು ತೆರೆದ ಮಂಟಪಗಳ ಮಧ್ಯೆ ಸುತ್ತಲೂ ಮುಚ್ಚಿದ ನವರಂಗ ಮಂಟಪವಿರುವುದೂ ಉಂಟು. ಈ ದೇವಾಲಯಗಳಲ್ಲಿ ಒಂದಕ್ಕಿಂತ ಹೆಚ್ಚು ದ್ವಾರಗಳಿರುವುದೂ ಪಕ್ಕಗಳಿಂದಲೇ ಮುಖ್ಯ ದ್ವಾರಗಳಿರುವುದೂ ವಿರಳವೇನಲ್ಲ. ದಕ್ಷಿಣ, ಪಶ್ಚಿಮ ಅಥವಾ ಉತ್ತರಕ್ಕೆ ಮುಖ ಮಾಡಿರುವ ಕಟ್ಟಡಗಳು ಕೆಲವು ಮಾತ್ರ. ಉಳಿದ ದೇವಾಲಯಗಳು ಪೂರ್ವಾಭಿಮುಖವಾಗಿವೆ. ಮುಖ್ಯ ನಾಲ್ಕು ದಿಕ್ಕುಗಳನ್ನು ಬಿಟ್ಟು ಬೇರೆ ದಿಕ್ಕುಗಳಿಗೆ ಅಭಿಮುಖವಾದ ದೇಗುಲಗಳು ಇಲ್ಲವೆ ಇಲ್ಲ. ಕಟ್ಟಡಗಳ ಹೊರಮೈಯನ್ನು ಅಧಿಷ್ಠಾನ, ಭಿತ್ತಿ, ಕಪೋತ, ಹಾರಗಳಾಗಿ ವಿಂಗಡಿಸಲಾಗಿರುತ್ತದೆ. ಭಿತ್ತಿಯಲ್ಲಿ ಅನೇಕ ಅರೆಗಂಬಗಳಿರುತ್ತವೆ. ಒಂದು ಜೊತೆ ಅರೆಗಂಬಗಳ ಅಥ'ವಾ ಒಂದೇ ಅರೆಗಂಬದ ಮೇಲೆ ಶಿಖರಾಕೃತಿಯನ್ನು ಕಡೆಯುವುದು ಈ ಶೈಲಿಯ ವೈಶಿಷ್ಟ್ಯ. ಕಪೋತಗಳು ಮಟ್ಟಚಪ್ಪಡಿಯನ್ನು ಓರೆಯಾಗಿ ಸಿಕ್ಕಿಸಿದಂತೆಯೂ ಆಕಾರದಲ್ಲಿ ದ್ವಿಭಂಗವುಳ್ಳವಾಗಿಯೋ ಇದ್ದು ಅವುಗಳ ಕೆಳಗೆ ಪಟ್ಟಿಗಳ ಅಲಂಕರಣವಿರುತ್ತವೆ. ಒಳಭಾಗದಲ್ಲಿ ಬಹು ನಾಜೂಕಾಗಿ ಕೆತ್ತಿದ ದ್ವಾರಬಂಧಗಳು, ಆಲಂಕಾರಿಕ ಜಾಲಂಧ್ರಗಳು, ತಿರುಗಣೆಯಲ್ಲಿ ಮಾಡಿದ ಹೊಳಪು ಕಂಬಗಳು ಸಾಮಾನ್ಯ. ಈ ದೇವಾಲಯಗಳ ಶಿಖರ ವಿಶಿಷ್ಟ ರೀತಿಯದು. ಇದರಲ್ಲಿ ದ್ರಾವಿಡಸಂಪ್ರದಾಯದ ವೈಶಿಷ್ಟ್ಯವಾದ ಸಮಾನಾಂತರ ಏರುಗೆರೆಗಳ ಮಾಟವನ್ನೂ ಹಿತವಾಗಿ ಮೇಳೈಸಿದ ಒಂದು ರೀತಿಯ ಸಂಕರ ರೂಪು ಕಂಡುಬರುತ್ತದೆ. ಈ ಬೆರಕೆಯಿಂದ ಈ ರೀತಿಯನ್ನು ವೇಸರ ಎಂದು ವಿದ್ವಾಂಸರು ಕರೆದಿದ್ದಾರೆ. ದ್ರಾವಿಡ ಶಿಖರ ಸಂಪ್ರದಾಯದಂತೆ, ಒಂದೇ ಮಾದರಿಯ ತಳಗಳನ್ನು ಮೇಲೆ ಹೋದಂತೆಲ್ಲ ಚಿಕ್ಕದಾಗಿ ರೂಪಿಸುವ ತಂತ್ರ ಇಲ್ಲಿದ್ದರೂ ಒಂದೊಂದು ಏರು ಘಟ್ಟವನ್ನು ಅತಿ ಚಿಕ್ಕದಾಗಿ ಮಾಡಿ, ಕೆಳತಳದಲ್ಲಿರುವ ಪ್ರತಿ ಅಂಗವನ್ನೂ ಮೇಲಿನ ತಳಗಳಲ್ಲೂ ಅದೇ ನೇರದಲ್ಲೇ ಬರುವಂತೆ ಮಾಡಿ ತುದಿಯಲ್ಲಿ ಸಣ್ಣ ಸ್ತೂಪಿಯನ್ನಿಟ್ಟು ಈ ಸುಂದರ ರೂಪವನ್ನು ಸಾಧಿಸಲಾಗುತ್ತಿತ್ತು. ಇದರಿಂದಾಗಿ ಈ ಶಿಖರಗಳು ಕುಬ್ಜಾಕಾರವಾಗಿರುತ್ತವೆ; ದೇವಾಲಯಗಳೂ ಕುಳ್ಳಾಗಿರುತ್ತವೆ.

ಗದಗದ ಬಳಿ ಇರುವ ಕುಕ್ಕನೂರು (ನೋಡಿ) ಗ್ರಾಮದ ನವಲಿಂಗ ಮತ್ತು ಕಲ್ಲೇಶ್ವರ ದೇವಾಲಯಗಳಲ್ಲಿ ಈ ವಾಸ್ತು ಶೈಲಿಯ ಪ್ರಾರಂಭಿಕ ಘಟ್ಟವನ್ನು ನೋಡಬಹುದು. ಇವೆರಡೂ ಹಿಂದಿನ ದೇವಾಲಯಗಳಂತೆ ಮರಳುಗಲ್ಲಿನಲ್ಲಿ ಕಟ್ಟಿದವು. ನವಲಿಂಗ ದೇವಾಲಯದಲ್ಲಿ ಪಟ್ಟದಕಲ್ಲಿನ ಗುಡಿಗಳ ಹೋಲಿಕೆಯಿದ್ದರೂ ಮೇಗಣ ಸ್ತೂಪಿಯ ರೂಪಿನಲ್ಲಿ ಸ್ವಲ್ಪಮಟ್ಟಿನ ಬದಲಾವಣೆ ಕಂಡುಬರುತ್ತದೆ. ಗರ್ಭಗೃಹ, ಅಂತರಾಳ, ನಾಲ್ಕು ಕಂಬಗಳ ನವರಂಗ ಮಂಟಪ ಮತ್ತು ಮುಂದೆ ನಂದಿ ಮಂಟಪ ಇರುವ ಕಲ್ಲೇಶ್ವರ ದೇವಾಲಯ ವಿವಿಧಾಂಗಗಳ ಪ್ರಮಾಣದಲ್ಲಿ ಬಹು ಸಮತೋಲನವಾಗಿರುವ ಸುಂದರ ಕಟ್ಟಡ. ಹೊರಮೈ ಸರಳವಾಗಿದ್ದರೂ ಅಲ್ಲಲ್ಲಿ ಅರೆಗಂಬಗಳಿಂದ ನಾಜೂಕಾಗಿ ಅಲಂಕೃತವಾಗಿದೆ. ಶಿಖರದ ಏರುಘಟ್ಟಗಳಲ್ಲಿಯ ಕುಬ್ಜತೆ ಈ ದೇವಾಲಯದಲ್ಲಿ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತದೆ.

ಎರಡನೆಯ ಘಟ್ಟದ್ದೆನ್ನಬಹುದಾದ, ಕರಿಕಲ್ಲಿನಲ್ಲಿ ಕಟ್ಟಿದ, ಲಕ್ಕುಂಡಿಯ ಜೈನ ದೇವಾಲಯ ಹೊರಮೈ ನೋಟಕ್ಕೆ ಕಲ್ಲೇಶ್ವರ ಗುಡಿಯಂತೆಯೇ ಇದ್ದರೂ ಕಲ್ಯಾಣ ಚಾಳುಕ್ಯ ಶೈಲಿಯ ವೈಶಿಷ್ಟ್ಯಗಳಾದ ಒಂಟಿ ಅರೆಗಂಬಗಳ ಮೇಲೆ ನಿಂತಿರುವ ಶಿಖರ, ಅರೆಗಂಬಗಳ ಜೋಡಿಗಳಿಂದ ಮೇಲೆದ್ದಿರುವ ಸುರುಳಿಗಳು, ಬಳಕುವ ಕಮಾನಿನಂಥ ಅಲಂಕರಣ -ಇವನ್ನೆಲ್ಲ ಇಲ್ಲಿ ಮೊಟ್ಟಮೊದಲ ಸಲ ಬಳಸಲಾಗಿದೆ.

ಮೂರನೆಯ ಘಟ್ಟದ ಮೊದಲ ಹಂತದ ಮಾದರಿ ಹಾವೇರಿ ಜಿಲ್ಲೆಯ ಚೌಡದಾನಪುರದ ಮುಕ್ತೇಶ್ವರ ದೇವಾಲಯದಲ್ಲಿದೆ. ಇದುವರೆಗಿನ ದೇವಾಲಯಗಳ ಕಪೋತ ಬರಿಯ ದಪ್ಪ ಪಟ್ಟಿಕೆಯಷ್ಟೇ ಆಗಿದ್ದಿತಾದರೆ, ಇಲ್ಲಿ ಕೆಳಭಿತ್ತಿಗೆ ರಕ್ಷಣೆಯನ್ನು ಒದಗಿಸಿ, ಕಟ್ಟಡದ ಸೌಂದರ್ಯವೃದ್ಧಿಗೆ ಅನುವಾಗುವಂತೆ ಮುಂಚಾಚಿದ ಓರೆ ಕಪೋತಗಳನ್ನು ಅಳವಡಿಸಲಾಗಿದೆ. ಕ್ರಮೇಣ S ಆಕಾರದ ದ್ವಿವಕ್ರರೂಪವೂ ಸಾಧಿತವಾಯಿತು. ಈ

ಘಟ್ಟವನ್ನು ಹಾವೇರಿ ಜಿಲ್ಲೆಯಲ್ಲಿರುವ ಹಾವೇರಿಯ ಸಿದ್ದೇಶ್ವರ, ಹರಳಹಳ್ಳಿಯ ಸೋಮೇಶ್ವರ ಮತ್ತು ನೀರಲ್ಗಿಯ ಸಿದ್ಧರಾಮೇಶ್ವರ ದೇವಾಲಯಗಳಲ್ಲಿ ಕಾಣಬಹುದು.



ಗದಗದ ತ್ರಿಕೂಟೇಶ್ವರ ದೇವಾಲಯದ ಸರಸ್ವತಿ

12ನೆಯ ಶತಮಾನದ ಹೊತ್ತಿಗೆ ಕಲ್ಯಾಣ ಚಾಳುಕ್ಯ ವಾಸ್ತುರೀತಿ ತನ್ನ ಪೂರ್ಣವೈಶಿಷ್ಟ್ಯಗಳೊಡನೆ ಮೈದೋರಿತು. ಲಕ್ಕುಂಡಿಯ ಕಾಶಿವಿಶ್ವೇಶ್ವರ, ಕುರುವತ್ತಿಯ ಮಲ್ಲಿಕಾರ್ಜುನ ಮತ್ತು ಇಟ್ಟಗಿಯ ಮಹಾದೇವ ದೇವಾಲಯಗಳು ಈ ಬೆಳೆದ ಘಟ್ಟದ ಉತ್ತಮ ಉದಾಹರಣೆಗಳು. ಲಕ್ಕುಂಡಿಯ (ನೋಡಿ) ಕಾಶಿ ವಿಶ್ವೇಶ್ವರ ದೇವಾಲಯ ದ್ವಿಕೂಟಾಚಲ ಎರಡು ಗರ್ಭಗೃಹಗಳನ್ನುಳ್ಳದ್ದು. ಇಲ್ಲಿಯ ಶಿಖರ ಬಹುವಾಗಿ ಅಲಂಕೃತವಾಗಿದೆಯಲ್ಲದೆ, ಒಳಗಿನ ದ್ವಾರಬಂಧಗಳು ಚಿಕ್ಕಚಿಕ್ಕ ಶಿಲ್ಪಗಳಿಂದ ಶೋಭಿಸುತ್ತವೆ. ಕೆಲವು ದ್ವಾರಶಾಖೆಗಳಲ್ಲಿ ಸೂಕ್ಷ್ಮ ಆಯುಧಗಳಿಂದ ಕೊರೆದು ವಿನ್ಯಾಸಗಳನ್ನು ಹೊರಗೆತ್ತಿರುವ ಕೌಶಲ ಅನುಪಮವಾದ್ದು. ಈ ಶಿಲಾ ಶಿಲ್ಪ, ಚಿನ್ನ-ಬೆಳ್ಳಿಯ ಕುಸುರಿಯ ಕೆಲಸವನ್ನು ಜ್ಞಾಪಕಕ್ಕೆ ತರುತ್ತದೆ. ಕುರುವತ್ತಿಯ (ನೋಡಿ) ಮಲ್ಲಿಕಾರ್ಜುನ ದೇವಾಲಯದಲ್ಲಿ ಗರ್ಭಗೃಹ, ಅಂತರಾಳ, ನವರಂಗಮಂಟಪ ಮತ್ತು ಮುಖಮಂಟಪಗಳಿವೆ. ಒಳಗಿನ ಕಂಬಗಳು ನಯವಾಗಿ ಹೊಳಪು ಮಾಡಿದವುಗಳಾಗಿರುವುವಲ್ಲದೆ ಅವುಗಳ ಮೇಲೆ ಸುಂದರವಾದ ಮದನಿಕೆ ವಿಗ್ರಹಗಳನ್ನು ಇಡಲಾಗಿದೆ. 1112ರಲ್ಲಿ 6ನೆಯ ವಿಕ್ರಮಾದಿತ್ಯನ ದಂಡನಾಯಕ ಮಹಾದೇವ ಕಟ್ಟಿಸಿದ ಇಟ್ಟಗಿಯ (ನೋಡಿ) ಮಹಾದೇವ ದೇವಾಲಯ ಚಾಳುಕ್ಯ ಸಂಪ್ರದಾಯದ ಅತ್ಯುತ್ತಮ ವಾಸ್ತು ಕೃತಿ. ಇದರಲ್ಲಿ ಗರ್ಭಗೃಹ, ಅಂತರಾಳ, ಎರಡು ಪಕ್ಕಗಳಲ್ಲಿ ಬಾಗಿಲುಗಳಿರುವ ನವರಂಗ, ಮುಂದೆ ತೆರೆದ ಮಂಟಪ ಇವೆ. 68 ಕಂಬಗಳಿದ್ದ ಈ ಮುಂದಿನ ಮಂಟಪ ಈಗ ಭಾಗಶಃ ಮುರಿದಿರುವುದಾದರೂ ಒಟ್ಟು ದೇವಾಲಯದ ಮೊದಲ ಭವ್ಯತೆಯನ್ನು ಕಲ್ಪಿಸಿಕೊಳ್ಳುವುದು ಕಷ್ಟವೇನೂ ಇಲ್ಲ. ವಿವಿಧ ಭಾಗಗಳ ಸಮತೋಲ ಪ್ರಮಾಣ, ಚತುರ ಅಲಂಕರಣ, ಸುಂದರ ಹೊಳಪು ಕಂಬಗಳು, ಕುಸುರಿ ಕೆಲಸದ ದ್ವಾರಬಂಧಗಳು, ಕುಳ್ಳಾದರೂ ಕೌಶಲ ಪೂರಿತ ಕೆಲಸವಿರುವ ಶಿಖರ ಇತ್ಯಾದಿ ಚಾಳುಕ್ಯ ಸಂಪ್ರದಾಯದ ವಿಶಿಷ್ಟಾಂಗಗಳೊಡನೆ ಕೂಡಿರುವ ಈ ದೇವಾಲಯವನ್ನು ಅಲ್ಲಿಯ ಶಾಸನವೊಂದು ದೇವಾಲಯ ಚಕ್ರವರ್ತಿ ಎಂದು ವರ್ಣಿಸುತ್ತದೆ. ಈ ಘಟ್ಟದ ನೂರಾರು ದೇವಾಲಯಗಳು ಚಾಳುಕ್ಯ ಸಾಮ್ರಾಜ್ಯದ ಅನೇಕ ಸ್ಥಳಗಳಲ್ಲಿದ್ದುವೆಂದು ಶಾಸನಗಳಿಂದ ತಿಳಿದು ಬಂದಿದ್ದರೂ ಇವುಗಳ ಬಗ್ಗೆ ಹೆಚ್ಚಿನ ಅಧ್ಯಯನ ನಡೆದಿಲ್ಲ. ಬಿಜಾಪುರ ಜಿಲ್ಲೆಯ ಅರಸೀಬೀದಿಯಲ್ಲಿರುವ ಗುಡಿ, ಬಾದಾಮಿಯ ಬಳಿಯ ಬೇಲೂರಿನಲ್ಲಿರುವ ದೇವಾಲಯ, ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆಯಲ್ಲಿರುವ ತ್ರಿಪುರಾಂತಕ ದೇವಾಲಯ - ಇವು ಇತರ ಒಳ್ಳೆಯ ಕೃತಿಗಳು.

ಕಲ್ಯಾಣದ ಚಾಳುಕ್ಯರ ಆಳಿಕೆ ಕೊನೆಗೊಂಡರೂ ಅವರ ವಾಸ್ತುಶೈಲಿ ಮುಂದೆ ಬಂದ ಹೊಯ್ಸಳ, ಯಾದವ ಮತ್ತು ಕಾಕತೀಯ ಶೈಲಿಗಳಿಗೆ ಮೂಲ ಮಾದರಿಯನ್ನು ಒದಗಿಸಿತು. ವಿಶಾಲ ಜಗತಿ, ನಕ್ಷತ್ರಾಕಾರದ ತಳವಿನ್ಯಾಸ, ಹೊರಭಿತ್ತಿಯ ಮೇಲೆ ದೇವಶಿಲ್ಪಗಳ ಕೆತ್ತನೆ ಮುಂತಾದ ವಿಶಿಷ್ಟಾಂಗಗಳುಳ್ಳ ಹೊಯ್ಸಳ ವಾಸ್ತು ಶೈಲಿಯ ಬೆಳೆವಣಿಗೆಯತ್ತ ಹರಿಯುತ್ತಿದ್ದ ಚಾಳುಕ್ಯಕಾಲೀನ ವಾಸ್ತುಕೃತಿಗಳನ್ನು ಅನೇಕ ಕಡೆ ಗುರುತಿಸಬಹುದು. ಜಗತಿಯ ಅಳವಡಿಕೆಗೆ ಅಳಂದ ತಾಲ್ಲೂಕಿನ ನಿಂಬರ್ಗದ ಈಶ್ವರ ಗುಡಿ, ನಕ್ಷತ್ರ ತಳವಿನ್ಯಾಸಕ್ಕೆ ಡಂಬಳದ ದೊಡ್ಡ ಬಸಪ್ಪ ದೇವಾಲಯ, ಶಿಲ್ಪಾವೃತ ಭಿತ್ತಿಗಳಿಗೆ ಕಲ್ಯಾಣದ ಬಳಿಯ ಜಲಸಂಗ್ವಿಯ ದೇಗುಲ ಮತ್ತು ಗದಗಿನ ಸೋಮೇಶ್ವರ ದೇವಾಲಯ -ಇವು ಕೆಲವು ಉದಾಹರಣೆಗಳು.

ಕಲ್ಯಾಣ ಚಾಳುಕ್ಯರ ಕಾಲದವಾಗಿ ಈಗ ಉಳಿದಿರುವ ಶಿಲ್ಪಗಳಲ್ಲಿ ತತ್ಕಾಲೀನ ದೇವಾಲಯಗಳಿಗೆ ಸಂಬಂಧಿಸಿದ ಧಾರ್ಮಿಕ ಶಿಲಾಶಿಲ್ಪಗಳು (ಒಂದು ಕಂಚಿನ ಶಿಲ್ಪ ಈ ಕಾಲದ್ದೆಂದು ಒಬ್ಬ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಇದು ವಿವಾದಾಸ್ಪದ ವಿಷಯ). ಇವುಗಳಲ್ಲಿ ಹೆಚ್ಚಿನವು ದೇವಾಲಯಗಳ ಮೂಲದೇವರ ಅಥ್‌ವಾ ಉಪದೇವರ ವಿಗ್ರಹಗಳು. ವಾಸ್ತುಕೃತಿಗಳಿಗೆ ಪೋಷಕವಾಗಿ ಶಿಲ್ಪವನ್ನು ಉಪಯೋಗಿಸುವ ವಿಧಾನ ಈ ಶೈಲಿಯಲ್ಲೂ ಇದೆಯಾದರೂ ಈ ಬಗೆಯಲ್ಲಿ ವಾಸ್ತುರೂಪಾತ್ಮಕ, ಜ್ಯಾಮಿತೀಯ ಅಥವಾ ಬಳ್ಳಿಯ ತರಹದ ಅಲಂಕರಣ ಶಿಲ್ಪಗಳು ವಿಶೇಷ. ಸ್ತ್ರೀಮೂರ್ತಿಗಳ ಅಥವಾ ಪ್ರಾಣಿಗಳ ಶಿಲ್ಪಗಳು ಅಲ್ಲಿ



ಲಕ್ಕುಂಡಿಯ ಕಾಶಿ ವಿಶ್ವೇಶ್ವರ ದೇವಾಲಯದ ದಕ್ಷಿಣದ್ವಾರ

ವಿರಳವಾಗಿ ಕಂಡುಬರುತ್ತವೆ. ವಾಸ್ತು ಅಲಂಕರಣದಲ್ಲಿ ಉಬ್ಬುಶಿಲ್ಪ ಸಾಮಾನ್ಯ. ಇತರ ದೇವಮೂರ್ತಿಗಳೇ ಮುಂತಾದ ಬಿಡಿ ಶಿಲ್ಪಗಳ

ರಚನೆಯಲ್ಲಿ ಎರಡು ತಂತ್ರಗಳು ಪ್ರಚಲಿತವಾಗಿದ್ದುವು. ಬೆಂಗಡೆಯಲ್ಲಿ ವಿಶಾಲವಾದ ಫಲಕವನ್ನು ಬಿಟ್ಟು ಮೂರ್ತಿಯನ್ನು ಉಬ್ಬುಶಿಲ್ಪವಾಗಿ ರೂಪಿಸುವುದು ಒಂದು: ಹಿಂಭಾಗದಲ್ಲಿ ಪ್ರಭಾವಳಿಯನ್ನು ಕೆತ್ತಿ, ಮೂರ್ತಿಗಳು ಪೂರ್ಣಶಿಲ್ಪಗಳಾದರೂ ಅವು ಅತ್ಯುಬ್ಬುಶಿಲೆಗಳೆಂದು ಭಾಸವಾಗುವಂತೆ ಮಾಡುವುದು ಎರಡನೆಯದು. ದೇವಮೂರ್ತಿಗಳನ್ನು ಗರ್ಭಗುಡಿಯಲ್ಲೊ ಕೋಷ್ಠಗಳಲ್ಲೊ ಇಟ್ಟರೆ ನೋಡುಗನ ಕಣ್ಣಿಗೆ ಶಿಲ್ಪಗಳ ಮುಂಭಾಗವಷ್ಟೇ ಕಾಣುವಂತಿರುವುದರಿಂದ ಶಿಲ್ಪಿಗಳು ಈ ತಂತ್ರವನ್ನು ಅಳವಡಿಸಿಕೊಂಡಿರಬಹುದು.

ಆ ಕಾಲದ ದೇವಶಿಲ್ಪಗಳಲ್ಲಿ ವಿಷಯ ವ್ಯತ್ಯಾಸದ ವಿನಾ ನಿರೂಪಣೆಯ ಇತರ ಅಂಶಗಳಲ್ಲಿ ಸ್ನಿಗ್ಧತೆ ಮತ್ತು ಏಕರೂಪತೆ ಕಂಡುಬರುತ್ತದೆ. ಈ ಮೂರ್ತಿಗಳು ತೆಳು ಸುಂದರ ಮೈಮಾಟವುಳ್ಳವು. ಮುಖದಲ್ಲಿ ಮುಗ್ಧತೆಯೊಂದನ್ನು ಬಿಟ್ಟರೆ ಬೇರೆ ಯಾವ ಭಾವಾಭಿವ್ಯಕ್ತಿಯಾಗಲಿ, ಭಂಗಿ ನಿಲುವುಗಳಲ್ಲಿ ವೈವಿಧ್ಯವಾಗಲಿ ಇರುವುದಿಲ್ಲ. ಆಯುಧ ಇತ್ಯಾದಿಗಳನ್ನು ಹಿಡಿದಿರುವುದನ್ನು ತೋರಿಸುವ ರೀತಿ ಕಲಾತ್ಮಕವಾಗಿ ಕಂಡರೂ ನಾಟಕೀಯವಾಗಿ ಅಸಹಜ ಮುದ್ರೆಗಳಲ್ಲಿರುತ್ತವೆ. ಕಲ್ಯಾಣದ ಚಾಳುಕ್ಯರ ಕಾಲದ ಹೊತ್ತಿಗೆ ಆಗಮಶಾಸ್ತ್ರ ಮತ್ತು ಶಿಲ್ಪಸಂಪ್ರದಾಯಗಳು ಸಿದ್ಧ ಮತ್ತು ಪವಿತ್ರ ಸ್ಥಿತಿ ಪಡೆದಿದ್ದು, ಅವುಗಳ ಚೌಕಟ್ಟಿನಲ್ಲೇ ಮೂರ್ತಿಗಳನ್ನು ನಿರ್ಮಿಸಬೇಕಾಗಿ ಬಂದು, ಆ ಮಾರ್ಗದರ್ಶಕ ಶಾಸ್ತ್ರಗಳೇ ಕಲಾಭಿವ್ಯಕ್ತಿಗೆ ಸಂಕೋಲೆಯನ್ನು ಒಡ್ಡಿದವೆಂದು ಕಾಣುತ್ತದೆ. ಆದರೂ ದೇವಮೂರ್ತಿಗಳ ನಿರೂಪಣೆಯಲ್ಲಿ ಕಲಾಭಿವ್ಯಕ್ತಿಗೆ ಒದಗಿದ ಮಿತಿಯನ್ನು ಶಿಲ್ಪಿಗಳು ಅವುಗಳ ಅಲಂಕರಣದಲ್ಲಿ ನಿವಾರಿಸಿಕೊಂಡಿದ್ದಾರೆ. ಬಾದಾಮಿಯ ಚಳುಕ್ಯ ಸಂಪ್ರದಾಯದಂತೆಯೇ ಈ ದೇವಶಿಲ್ಪಗಳಲ್ಲೂ ಹೆಚ್ಚಿನ ವಸ್ತ್ರಾಭರಣಗಳಿರುವುದಿಲ್ಲ. ಆದರೆ ಇರುವಷ್ಟನ್ನು ಬಹು ಸೂಕ್ಷ್ಮವಾಗಿ, ಸುಂದರವಾಗಿ, ಬಂಗಾರದ ಮೇಲಿನ ಕುಸುರಿ ಕೆಲಸದಂತೆ ಕೆತ್ತುವುದರಲ್ಲಿ ಇವರು ವಿಶೇಷ ಪ್ರತಿಭೆಯನ್ನು ತೋರಿಸಿದ್ದಾರೆ. ಬಳುಕುವ ಬಾಗುವ ಲತಾಪಟ್ಟಿಕೆಗಳು, ಎರಡು ಪಕ್ಕಗಳಿಂದಲೂ ಮೇಲೆದ್ದು ಮೂರ್ತಿಯ ತಲೆಯ ನೇರಕ್ಕೆ ಕೀರ್ತಿಮುಖದಲ್ಲಿ ಸೇರಿ ಪ್ರಭಾವಳಿಗಳಾಗಿ ಪರಿಣಮಿಸಿದೆ. ಇವು ತತ್ಕಾಲೀನ ಶಿಲ್ಪಗಳ ಸುಂದರ ಹಾಗೂ ವಿಶಿಷ್ಟ ಕಲ್ಪನೆಗಳು. ಈ ಪ್ರಭಾವಳಿಗಳು ದೇವಮೂರ್ತಿಯ ಸುತ್ತಲೂ ಆಲಂಕಾರಿಕ ಚೌಕಟ್ಟನ್ನು ಒದಗಿಸಿ ಭಕ್ತನ ದೃಷ್ಟಿಮೂರ್ತಿಯ ಮುಖದ ಮೇಲೆ ಕೇಂದ್ರೀಕರಿಸುವಂತೆ ಮಾಡುತ್ತವೆ. ಕಲ್ಪನಾವೈವಿಧ್ಯ ಹಲವು ಸ್ತರಗಳ ಮತ್ತು ಹಲವು ತೆರನಾದ ಭಾವಾಭಿವ್ಯಕ್ತಿ ಮುಂತಾದ ಉಚ್ಚ ಕಲಾ ಅಂಶಗಳು ಈ ಶಿಲ್ಪಕೃತಿಗಳಲ್ಲಿ ಇಲ್ಲದಿದ್ದರೂ ಮೇಲೆ ಹೇಳಿದ ದೃಷ್ಟಿಯಿಂದ ಸಾರ್ಥಕವಾಗಿವೆ.

ಗುಲ್ಬರ್ಗ ಜಿಲ್ಲೆಯ ಹಿರೇಮಣ್ಣೂರಿನಲ್ಲಿರುವ ಕೇಶವ ವಿಗ್ರಹ ಕಲ್ಯಾಣದ ಚಾಳುಕ್ಯರ ಕಾಲದ ದೇವಮೂರ್ತಿಗಳ ಸ್ವರೂಪದ ಪರಿಚಯವನ್ನು ಚೆನ್ನಾಗಿ ಒದಗಿಸುತ್ತದೆ. ಇಲ್ಲಿ ಸಮಭಂಗಿಯಲ್ಲಿ ನಿಂತಿರುವ ಕೇಶವ, ಸುಂದರಕಾಯನಾದ ಯುವಕನಂತೆ ರೂಪಿತವಾಗಿದ್ದಾನೆ. ಅಂಗಾಂಗಗಳಲ್ಲಿ ಸಹಜ ಪ್ರಮಾಣವುಂಟು, ಆದರೆ ಭಾವರಹಿತ. ದೇವಮೂರ್ತಿಯಷ್ಟನ್ನೇ ತೆಗೆದುಕೊಂಡರೆ ಅಲಂಕರಣ ಅಲ್ಪ; ಕಿರೀಟ, ಹಾರ, ಕೈಕಡಗ, ಕಟಿಬಂಧಗಳಷ್ಟೇ. ಯೌವನದ ಹೊಳಪು ಮೈ ಪ್ರದರ್ಶಿತವಾಗಿವೆ. ಶಂಖಚಕ್ರಗದಾಪದ್ಮಗಳನ್ನು ಹಿಡಿದಿರುವ ರೀತಿ ಸುಂದರ; ಆದರೆ ಅಸಹಜ, ಪ್ರಭಾವಳಿಯ ಕೆತ್ತನೆ ಕೌಶಲಪೂರಿತವಾದ್ದು. ಶಾಸ್ತ್ರದ ಪರಿಮಿತಿಯೊಳಗೆ ಕೆಲಸ ಮಾಡಿರುವ ಶಿಲ್ಪಿ ತನ್ನ ಮೃದು ಕರಿಗಲ್ಲು ಮಾಧ್ಯಮವನ್ನು ಮೈಹೊಳಪು ಮತ್ತು ಆಭರಣಾದಿಗಳ ಕುಸುರಿ ಕೆಲಸಕ್ಕೆ ಚೆನ್ನಾಗಿಯೇ ಬಳಸಿಕೊಂಡಿದ್ದಾನೆನ್ನಬಹುದು. ಇದರಲ್ಲಿ ಕೆಲವು ಒಳ್ಳೆಯ ಲಕ್ಷಣಗಳಿದ್ದರೂ ಈ ಕೃತಿ ಹಿಂದಿನ ಕಾಲದ ಪ್ರತಿಭಾವಂತ ಶಿಲ್ಪಿಗಳ ಕೃತಿಗಳ ಔನ್ನತ್ಯವನ್ನು ಮುಟ್ಟಲಾರದೆನಿಸುತ್ತದೆ. ಆದರೂ ಒಂದು ದೃಷ್ಟಿಯಲ್ಲಿ ಇದೊಂದು ಸಫಲ ಕೃತಿ. ವಿಶಾಲ ಬರಿಗೋಡೆಯ ಹಿನ್ನೆಲೆಯಲ್ಲಿ ಗರ್ಭಗೃಹದ ಅರೆಬೆಳಕಿನಲ್ಲಿ ವಿಗ್ರಹವನ್ನಿಟ್ಟಾಗ,ಮೂರ್ತಿಯ ಸುತ್ತಲಿನ ಅಲಂಕರಣ, ಹೊಳಪಿನ ದೇವಕಾಯ, ಮುಖ್ಯವಾಗಿ ಅದರ ಸುಂದರಮುಖ -ಇವೆಲ್ಲ ಪ್ರತಿಫಲಿಸಿ ಭಕ್ತನ ಗಮನ ಸೆಳೆಯುತ್ತವೆ. ಭಕ್ತನೂ ದೇವನ ಪ್ರಭೆಯ ವಲಯದಲ್ಲಿ ಸೇರುತ್ತಾನೆ. ಭಕ್ತಿ ಭಾವ ಸ್ಫುರಿಸುತ್ತದೆ. ಇದನ್ನು ಕಡೆದ ಶಿಲ್ಪಿ ಸಂಪ್ರದಾಯದ ಪರಿಮಿತಿಯಲ್ಲೂ ತನ್ನ ವೈಯಕ್ತಿಕ ಪ್ರತಿಭೆ ಕೌಶಲಗಳನ್ನೆರೆದು ಇದನ್ನೊಂದು ಕಲಾತ್ಮಕ ಕೃತಿಯನ್ನಾಗಿ ಮಾಡಿದ್ದಾನೆ. ಆದರೆ ಕುರುವತ್ತಿಯ ಬ್ರಹ್ಮನ ವಿಗ್ರಹ ಈ ಪ್ರತಿಭೆ ಕೌಶಲಗಳ ಅಭಾವಕ್ಕೆ ಒಂದು ನಿದರ್ಶನ. ಇಲ್ಲಿ ಸಮಭಂಗಿಯಲ್ಲಿ ನಿಂತಿರುವ ಬ್ರಹ್ಮ ಮೂರ್ತಿಯಲ್ಲೂ ಮಣ್ಣೂರು ಶಿಲ್ಪದ ಎಲ್ಲ ಅಂಶಗಳೂ ಇರುವುವಾದರೂ ಇದು ಅದರಷ್ಟು ನಾಜೂಕಾಗಿಲ್ಲ.



ಬಳ್ಳಿಗಾವೆಯ ತ್ರಿಪುರಾಂತಕ ದೇವಾಲಯದಲ್ಲಿರುವ ಜಾಲಂಧ್ರ

ಶಿಲ್ಪಿಯ ಪ್ರತಿಭೆ ಶಾಸ್ತ್ರದ ಹಿಡಿತಕ್ಕೆ ಒಳಪಡದಿದ್ದಾಗ ಎಂಥ ಸಾಧನೆಗಳಿಗೆ ಅವಕಾಶ ಒದಗಿತೆಂಬುದನ್ನು ಕುರುವತ್ತಿಯ ಮದನಿಕೆ ವಿಗ್ರಹಗಳಲ್ಲಿ ನೋಡಬಹುದು. ಇವುಗಳಲ್ಲಿ ಒಂದು ವಿಗ್ರಹ ನರ್ತಿಸುತ್ತಿರುವ ಕಿಶೋರಿಯದು. ನವಯುವತಿಯ ಸೌಂದರ್ಯ, ದೇಹಲಾಲಿತ್ಯ, ಮುಗ್ಧತೆ, ಚಾಂಚಲ್ಯ -ಈ ಎಲ್ಲವನ್ನೂ ಶಿಲ್ಪಿ ಇಲ್ಲಿ ಸೆರೆಹಿಡಿದಿದ್ದಾನೆ. ಹಿನ್ನೆಲೆಯಲ್ಲಿರುವ ಲತೆಯ ಬಳುಕು ಇವಳ ಬಳುಕುವ ದೇಹದೊಂದಿಗೆ ಸಮರಸವಾಗಿದೆ. ಲತೆಯನ್ನೂ ಕಿಶೋರಿಯನ್ನೂ ಜೊತೆಗೂಡಿಸಿರುವ ಚಾತುರ್ಯ ಪ್ರಶಂಸಾರ್ಹವಾದದ್ದು. ಸೂಕ್ಷ್ಮಸಹೃದಯಿಗಳು ಈ ಶಿಲ್ಪೋಪಮೆಯಿಂದ ತರಂಗತರಂಗವಾಗಿ ಏಳುವ ರಸಾನುಭವವನ್ನು ಪಡೆಯಬಲ್ಲರು. ಜಲಸಂಗ್ವಿಯ ದೇಗುಲದ ಹೊರಭಿತ್ತಿಯ ಮೇಲೆ ಕೆತ್ತಿರುವ, ಲೇಖನ ಪಟವನ್ನು ಎತ್ತಿಹಿಡಿದು ಏನನ್ನೋ ಬರೆಯುವಂತಿರುವ ಒಂದು ಸ್ತ್ರೀ ಶಿಲ್ಪ ಆ ಕಾಲದ ಉತ್ತಮ ಕೃತಿಗಳಿಗೆ ಇನ್ನೊಂದು ಉದಾಹರಣೆ. ಇಲ್ಲಿ ನಿರೂಪಿತವಾಗಿರುವವಳು ಪ್ರೌಢೆ. ಈಕೆ ಯೌವನದ ಎರಡನೆಯ ಘಟ್ಟದಲ್ಲಿರುವಳೆಂಬುದು ಇವಳ ಅಂಗಸೌಷ್ಠವ, ಬಲಿತಮುಖ ಇವುಗಳಿಂದ ವ್ಯಕ್ತವಾಗುತ್ತದೆ. ಇಲ್ಲಿ ಚಿತ್ರಿತವಾಗಿರುವುದು ಕಿಶೋರಿಯ ಚಂಚಲಮನೋಭಾವವಲ್ಲ. ಸುಪೋಷಿತ ಗೃಹಿಣಿಯ ಸಫಲ ಜೀವನದ ಆನಂದ, ಹೆಮ್ಮೆ. ತನ್ನ ಇನಿಯನ ಬಗೆಗಷ್ಟೇ ಈಕೆಯ ಅಭಿಮಾನ, ಇವೆಲ್ಲ ಭಾವಗಳನ್ನೂ ಇವಳ ಸ್ಥಿರಭಂಗಿಯಲ್ಲಿ, ಕಾರ್ಯಮಗ್ನತೆಯಲ್ಲಿ ಶಿಲ್ಪಿ ಹೊಮ್ಮಿಸಿದ್ದಾನೆ. ಇವಳು ಬರೆಯುತ್ತಿರುವುದು ತನ್ನ ಪ್ರಿಯಕರನಾದ ಸಾಮ್ರಾಟನ ಪ್ರಶಸ್ತಿಯನ್ನು.

ಅಲಂಕರಣಕ್ಕಾಗಿ ಲತಾವಿನ್ಯಾಸವನ್ನು ಚಾಳುಕ್ಯ ಶಿಲ್ಪಿಗಳು ಬಹುವಾಗಿ ಉಪಯೋಗಿಸಿದ್ದಾರೆ. ಅಂಥ ಸುಂದರ ಕೃತಿಯೊಂದು ಬಳ್ಳಿಗಾವೆಯ ತ್ರಿಪುರಾಂತಕ ದೇವಾಲಯದಲ್ಲಿದೆ. ಇದು ಅಂತರಾಳದೊಳಕ್ಕೆ ಬೆಳಕನ್ನು ಚೆಲ್ಲಲು ಮಾಡಿರುವ ಜಾಲಂಧ್ರ. ಇದರಲ್ಲಿ ಒಂದೊಂದು ಲತಾವರ್ತುಲದ ಮಧ್ಯೆ ಒಬ್ಬೊಬ್ಬ ನೃತ್ಯಗಾರರನ್ನು ಒಂದೊಂದು ಭಂಗಿಯಲ್ಲಿ ರೂಪಿಸಿರುವ ರೀತಿ ಮೋಹಕವಾದ್ದು. ಹೊರಗೆ ಹೆಚ್ಚು ಬೆಳಕಿದ್ದಾಗ ಜಾಲಂಧ್ರದ ಕೆತ್ತನೆಗಳ ಮೇಲೆ ಸಂಭವಿಸುವ ನೆಳಲು ಬೆಳಕಾಟ, ಹಿಂದಿನ ಗೋಡೆಯ ಮೇಲೆ ಬೀಳುವ ಜಾಲಂಧ್ರದ ನೆರಳಿನ ಚೆಲುವು ರಮ್ಯವಾದವು.

ಕಲ್ಯಾಣ ಚಾಳುಕ್ಯರ ಕಾಲದ ಶಿಲ್ಪಗಳಲ್ಲಿ ಹಲವು ಉತ್ತಮಕೃತಿಗಳೇನೋ ಇವೆ. ಆದರೆ ಆ ಕಾಲದ ಶಿಲ್ಪಕೃತಿಗಳನ್ನು ಒಟ್ಟಾಗಿ ವಿಮರ್ಶಿಸಿದರೆ, ಅವುಗಳಲ್ಲಿ ಎದ್ದು ಕಾಣುವುದು ಶಿಲ್ಪಿಯ ಸೃಜನಾತ್ಮಕ ಪ್ರತಿಭೆಯಲ್ಲ; ಕೇವಲ ಕರಕೌಶಲ್ಯ, ಇದು ಕಲೆಯ ಇಳಿಮುಖದ ಕಾಲವನ್ನು ಸೂಚಿಸುತ್ತದೆ. (ಎಸ್.ಎಸ್.)

**ಶಾಸನಗಳು :** ಕಲ್ಯಾಣದ ಚಾಳುಕ್ಯರ ಶಾಸನಗಳು ಇದುವರೆಗೆ ಮೊದಲು ಆಳಿದ ಅರಸುಮನೆತನಗಳವರ ಶಾಸನಗಳಿಗಿಂತ ಸಂಖ್ಯೆಯ ದೃಷ್ಟಿಯಿಂದ ಹೆಚ್ಚು. ಇವುಗಳಲ್ಲಿ ಶಿಲಾಶಾಸನಗಳದೇ ಮೇಲುಗೈ. ತಾಮ್ರಶಾಸನಗಳು ಬಹಳ ಕಡಿಮೆ. ಬಹುತೇಕ ಎಲ್ಲ ಶಿಲಾಶಾಸನಗಳ ಲಿಪಿ ಕನ್ನಡ. ನಾಗರೀ ಲಿಪಿಯ ಶಾಸನಗಳು ವಿರಳ, ಆ ಲಿಪಿಯನ್ನು ತಾಮ್ರಶಾಸನಗಳಲ್ಲಿ ಮಾತ್ರ ಬಳಸಲಾಗಿದೆ. ಈ ಕಾಲದ ಅಕ್ಷರಗಳು ಹೆಚ್ಚು ವರ್ತುಲಾಕಾರವಾಗಿದ್ದು ಅವುಗಳನ್ನು ಸುಂದರವಾಗಿ ಕೊರೆಯಲಾಗಿದೆ. ಗಾತ್ರದಲ್ಲಿ ಅವು ಕಿರಿದು. ಶಿಲಾಶಾಸನಗಳನ್ನು ಕೊರೆಯುವ ಮೊದಲು ಕಲ್ಲನ್ನು ನಯಗೊಳಿಸಲಾಗುತ್ತಿತ್ತು. ಇವರ ಆಳಿಕೆಯ ಆರಂಭಕಾಲದ ಶಾಸನಗಳು ಸರಳವಾದ ಕಿರುಶಾಸನಗಳು. ಆದರೆ ಮೊದಲನೆಯ ಸೋಮೇಶ್ವರ ಮತ್ತು ಅವನ ಅನಂತರ ಆಳಿದ ಅರಸರ ಶಾಸನಗಳು ಹೆಚ್ಚು ವಿಸ್ತಾರವಾಗಿವೆ. ಅನೇಕ ಶಾಸನಗಳ ಭಾಷೆ ಕನ್ನಡವಾದರೂ ಅದು ಬಹುಮಟ್ಟಿಗೆ ಸಂಸ್ಕೃತದಿಂದ ಪ್ರಭಾವಿತವಾದುದು. ದಾನ ಶಾಸನಗಳೇ ಹೆಚ್ಚೆನವಾದರೂ ರಣರಂಗದಲ್ಲಿ ಮಡಿದ ವೀರರ, ಆತ್ಮಬಲಿಗೈದ ಯೋಧರ, ಸತಿಗಳ, ಸಲ್ಲೇಖನ ವಿಧಿಗಳಿಂದ ಬಾಳನ್ನು ತ್ಯಜಿಸಿದ ಜೈನ ಆಚಾರ್ಯರ ಸ್ಮಾರಕ ಶಾಸನಗಳೂ ಬಹು ಸಂಖ್ಯೆಯಲ್ಲಿವೆ. ಹಲವು ಶಾಸನಗಳು ಸಾಹಿತ್ಯ ಮೌಲ್ಯಗಳನ್ನೊಳಗೊಂಡಿವೆ.



ತ್ರೈಲೋಕ್ಯಮಲ್ಲ ವಿಜಯಾದಿತ್ಯನ ಬನ್ನಿಗೊಳ ಶಾಸನ

ಪ್ರಾರ್ಥನಾಶ್ಲೋಕಗಳಿಂದ ಆರಂಭವಾಗುವ ಈ ಶಾಸನಗಳು ರಾಜಶಾಸನಗಳಾಗಿದ್ದಲ್ಲಿ ಅರಸನ ಪ್ರಶಸ್ತಿ, ಆತನ ಸಾಹಸಗಳ ವರ್ಣನೆ ಹಾಗೂ ಹಲವಾರು ಸಂದರ್ಭಗಳಲ್ಲಿ ಅವನ ವಂಶಾವಳಿಗಳನ್ನು ಒಳಗೊಂಡಿರುತ್ತವೆ. ಅನಂತರ ಆತನ ಸಾಮಂತರಿಗೆ ಅಥವಾ ಪ್ರಾಂತ್ಯಾಧಿಕಾರಿಗಳಿಗೆ ಸಂಬಂಧಿಸಿದ ವಿವರಗಳು, ಅವರ ವರ್ಣನೆಗಳು ಇದ್ದು ಆ ಬಳಿಕ ತೇದಿಯ ಉಲ್ಲೇಖ ಬಂದು ಕೊನೆಗೆ ದಾನದ ವಿವರಗಳು ಕೊಡಲ್ಪಟ್ಟಿರುತ್ತವೆ. ಅರಸನನ್ನು ಸಮಸ್ತ ಭುವನಾಶ್ರಯ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯಕುಳತಿಳಕ ಚಾಳುಕ್ಯಾಭರಣ ಎಂಬ ಬಿರುದುಗಳಿಂದ ಸೂಚಿಸಿದ ಅನಂತರ ಅರಸನ ಹೆಸರನ್ನು ಹೇಳುತ್ತದೆ. ಈ ಅರಸರ ವೈಯಕ್ತಿಕವೆನ್ನಬಹುದಾದ ಆಹವಮಲ್ಲ, ಜಗದೇಕಮಲ್ಲ, ತ್ರೈಲೋಕ್ಯಮಲ್ಲ, ಭುವನೈಕಮಲ್ಲ, ತ್ರಿಭುವನಮಲ್ಲ, ಭೂಲೋಕಮಲ್ಲ ಮುಂತಾದ ಬಿರುದುಗಳು ಹೆಸರಿನ ಜೊತೆಗೆ ಸೇರಿಸಲ್ಪಟ್ಟಿರುತ್ತವೆ.

ತೇದಿಗಳಲ್ಲಿ ಹೆಚ್ಚಿನ ವಿವರಗಳು ಲಭಿಸುತ್ತವೆ. ಶಕವರ್ಷವನ್ನು ಸಾಮಾನ್ಯವಾಗಿ ಅಂಕಿಗಳಲ್ಲಿ ಸೂಚಿಸಿ ಅನಂತರ ಸಂವತ್ಸರದ ಹೆಸರು, ತಿಂಗಳು, ಪಕ್ಷ, ತಿಥಿ ಮತ್ತು ವಾರ, ದಿನಗಳನ್ನು ಕೊಡುತ್ತವೆ. ಆರನೆಯ ವಿಕ್ರಮಾದಿತ್ಯ ತನ್ನ ಹೆಸರಿನಲ್ಲಿ ಚಾಳುಕ್ಯವಿಕ್ರಮ ಶಕೆಯನ್ನು ಆರಂಭಿಸಿದಾಗಿನಿಂದ ಈ ನೂತನ ಶಕೆಯ ಉಲ್ಲೇಖ ಸಹ ಶಾಸನಗಳಲ್ಲಿ ಕಾಣಿಸಿಕೊಳ್ಳತೊಡಗುತ್ತದೆ. ಮೊದಲಿನ ಶಾಲಿವಾಹನ ಶಕೆಯನ್ನು ಸಾಮಾನ್ಯವಾಗಿ ಕೊಡುವುದಿಲ್ಲ. ಅನಂತರದ ಮುಮ್ಮಡಿ ಸೋಮೇಶ್ವರ, ಪೆರ್ಮಾಡಿ, ಮುಮ್ಮಡಿ ತೈಲ ಮತ್ತು ನಾಲ್ವಡಿ ಸೋಮೇಶ್ವರರು ತಮ್ಮ ತಮ್ಮ ಆಳಿಕೆಯ ವರ್ಷಗಳನ್ನು ಶಾಸನಗಳಲ್ಲಿ ಪ್ರಸ್ತಾಪಿಸುವ ಪದ್ಧತಿಯನ್ನು ಪ್ರಾರಂಭಿಸಿದರು. ಭೂಲೋಕಮಲ್ಲ ವರ್ಷ, ಜಗದೇಕಮಲ್ಲ ವರ್ಷ, ತ್ರೈಲೋಕ್ಯಮಲ್ಲದೇವ ವರ್ಷ ಮತ್ತು ತ್ರಿಭುವನಮಲ್ಲಸೋಮೇಶ್ವರದೇವ ವರ್ಷ ಎಂಬ ಈ ವರ್ಷಗಳನ್ನು ನೀಡುವಾಗ ಇವು ಅವರ ಆಳಿಕೆಯ ವರ್ಷಗಳೆಂದು ಪರಿಗಣಿಸಬೇಕು. ಚಾಳುಕ್ಯ ವಿಕ್ರಮ ಶಕೆ ಬಳಕೆಯಲ್ಲಿದ್ದುದು ಕೇವಲ ಒಂದು ಶತಮಾನದಷ್ಟು ಕಾಲ. ಐವತ್ತನೆಯ ವರ್ಷದ ಬಳಿಕ ಇದರ ಉಪಯೋಗ ಕಡಿಮೆಯಾಗುತ್ತ ಹೋಗಿದೆ.

ಈ ಕಾಲದ ಶಾಸನಗಳಲ್ಲಿ ದಾನ ನೀಡಿದವರ ಹಾಗೂ ಪಡೆದವರ ವರ್ಣನೆಗಳೂ ಭೌಗೋಳಿಕ ಪ್ರದೇಶಗಳ, ಗ್ರಾಮಗಳ, ಮಹಾಜನರ ವರ್ಣನೆಗಳೂ ಹೆಚ್ಚು ವಿವರಗಳೊಂದಿಗೆ ಕಾಣಿಸಿಕೊಳ್ಳುತ್ತವೆ.

ಮೊದಲಿನ ಗದ್ಯಶಾಸನಗಳಿಗೆ ಬದಲು ಗದ್ಯ ಪದ್ಯಮಿಶ್ರಿತ ಚಂಪೂ ಶೈಲಿಯ ಹಾಗೂ ಕಾವ್ಯಗುಣಗಳನ್ನು ಪಡೆದ ಶಾಸನಗಳು ಸಂಖ್ಯೆಯಲ್ಲಿ ಹೆಚ್ಚು. ಶಾಸನಗಳು ವಿಷಯ ನಿರೂಪಣೆಯ ವಸ್ತುನಿಷ್ಠ ಮಾಧ್ಯಮಗಳಾಗಿ ಉಳಿಯದೆ ಹೆಚ್ಚು ಕಲಾತ್ಮಕವಾಗಿ ಕಾವ್ಯಗಳಾಗಿವೆ. ರಚನೆಯಲ್ಲಿ ಸುಮಾರು ಒಂದೇ ಕಟ್ಟುಪಾಡಿಗೆ ಒಳಪಟ್ಟ ಈ ಶಾಸನಗಳಲ್ಲಿ ಕೆಲವು ಪ್ರತಿಭಾವಂತ ಕವಿಗಳ ಕೃತಿಗಳಾಗಿವೆ. ಅನ್ಯತ್ರ ತಿಳಿದುಬಾರದ ಅನೇಕ ಶಾಸನಕವಿಗಳು ಈ ಶಾಸನಗಳ ಮೂಲಕ ಬೆಳಕಿಗೆ ಬಂದಿದ್ದಾರೆ. ಕಮಳಾದಿತ್ಯ, ಕಂದರ್ಪ, ಕಪ್ಪಣಭಟ್ಟ, ನಾಗಮಯ್ಯ, ನಾಗವಾರ, ಜಿನವರ್ಮ ಪಂಡಿತ, ಕವಿರಾಜವಲ್ಲಭ, ಗೋವಿಂದ, ಮಲ್ಲಿನಾಥ, ಬಸವಣಯ್ಯ, ರಾಜವಲ್ಲಭ, ಕನ್ನಪಯ್ಯ, ರುದ್ರಭಟ್ಟ, ಹರಿಯಣ್ಣ, ವೈಜನಾಥ, ನಾಗದೇವ, ಕರ್ಪರಸ, ಸಂಧಿವಿಗ್ರಹಿ ದಾಮರಾಜ, ಮಾಳಪಯ್ಯ, ಮಾಧವಭಟ್ಟ, ನಾಗಾರ್ಜುನ ಪಂಡಿತ, ಮಲ್ಲ, ಚಂದ್ರಭಟ್ಟ, ಶ್ರೀಕಂಠಸೂರಿ, ಮಲ್ಲಿಕಾರ್ಜುನ ಭಟ್ಟ, ಆಚರಾಜ, ಮಲ್ಲಿದೇವ, ಲಕ್ಷ್ಮಣ, ನಾರಣದೇವ, ಚಟ್ಟಿಪಾರ್ಯ, ಶಾಂತಿನಾಥ, ಮದ್ದಿಮಯ್ಯ, ಭಾಸ್ಕರ, ಮಾಕಣ ಪಂಡಿತ, ಸಾಂತ ಮಹಂತ, ಬಲದೇವ, ಸೋಮೇಶ್ವರಭಟ್ಟ, ರೇಚಣಭಟ್ಟ, ಸರ್ವಜ್ಞ ಪಟ್ಟವರ್ಧನ, ಸೂರಿಲಿಯ ಮುಖ್ಯ ಪಂಡಿತ, ಕಲಿದೇವ ಪಂಡಿತ, ಉದಯಕಲ್ಪ ಮುಂತಾದ ಅನೇಕ ಶಾಸನ ಕವಿಗಳು ಈ ಕಾಲದವರು.

**ನಾಣ್ಯಗಳು :** ಕಲ್ಯಾಣ ಚಾಳುಕ್ಯರ ಕಾಲಕ್ಕೆ ಭಿನ್ನ ಮೌಲ್ಯಗಳನ್ನುಳ್ಳ ವೈವಿಧ್ಯಮಯ ನಾಣ್ಯಗಳು ಚಲಾವಣೆಯಲ್ಲಿದ್ದುವು. ದ್ರಮ್ಮ, ಗದ್ಯಾಣ, ಪೊನ್, ಪಣ, ಸುವರ್ಣ, ಸಾಹಣಿಕಾಟಿ, ಸಲಿಕೆ, ಗುಲಿಕೆ, ಕಾಹಿಣಿ, ಮಾಡ, ವೀಸ, ಅಡ್ಡ, ಪ್ರತಾಪ, ಧರಣ ಮುಂತಾದ ನಾಣ್ಯಗಳ ಹೆಸರುಗಳು ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತವೆ. ದುಸರ ಗದ್ಯಾಣ, ಕಟಕ ಗದ್ಯಾಣ, ಪೊಗ್ಗಡೆ ಗದ್ಯಾಣ ಇವುಗಳ ಮೌಲ್ಯಗಳು ಹೆಚ್ಚೆನವಾಗಿದ್ದಿರಬಹುದು. ಲಕ್ಕುಂಡಿಯಲ್ಲೂ ಸೂಡಿಯಲ್ಲೂ ಬೆಳ್ಳಿ ಗಮ್ಮಟವಿತ್ತು (ಬೆಳ್ಳಿಯ ನಾಣ್ಯಗಳ ಕಮ್ಮಟ). (ಬಿ.ಆರ್.ಜಿ.)

ಗದ್ಯಾಣವೆಂಬುದು ಚಿನ್ನದ ನಾಣ್ಯ. ಗದ್ಯಾಣಗಳಲ್ಲಿ ವಿವಿಧ ರೀತಿಗಳಿದ್ದುವು. ಟಂಕಶಾಲೆಯ ಹೆಸರನ್ನು ಗದ್ಯಾಣದ ಜೊತೆ ಸೇರಿಸುವುದು ಈ ಕಾಲದಲ್ಲಿ ಪ್ರಾರಂಭವಾಯಿತು. ಲೊಕ್ಕಿ ಅಥವಾ ಲೊಕ್ಕಿಗುಂಡಿ ಗದ್ಯಾಣವೆಂಬುದು ಲೊಕ್ಕಿಗುಂಡಿಯಲ್ಲಿದ್ದ ಟಂಕಶಾಲೆಯಲ್ಲಿ ಅಚ್ಚಾದ ಗದ್ಯಾಣ. ಕಟಕ ಗದ್ಯಾಣ, ಕಟಕ ಪ್ರಿಯ ಗದ್ಯಾಣ, ವರ್ತಕ ಲೊಕ್ಕಿ ಗದ್ಯಾಣ ಮುಂತಾದವುಗಳು ಚಾಳುಕ್ಯರ ಶಾಸನಗಳಲ್ಲಿ ಕಾಣಬರುತ್ತವೆ. ಇದೇ ರೀತಿಯಲ್ಲಿ ನವಿಲಚ್ಚಿನ ಪೊನ್, ಲೊಕ್ಕಿ ಪೊನ್ ಮುಂತಾದ ನಾಣ್ಯಗಳೂ ಶಾಸನಗಳಲ್ಲಿ ಉಲ್ಲೇಖಿತವಾಗಿವೆ. ಇವುಗಳ ಖಚಿತ ಸ್ವರೂಪವೇನೆಂಬುದು ತಿಳಿದಿಲ್ಲ. ಸೂಡಿ ಎಂಬಲ್ಲಿ ಒಂದು ಟಂಕಸಾಲೆ ಇತ್ತು. ಕಮ್ಮಟ, ಕಮ್ಮಟದ ಆಣಿ, ಅಚ್ಚು, ಅಚ್ಚಿನ ಮೊಳೆ, ಉಂಡಿಗೆ ಮುಂತಾದ ಪದಗಳು ಶಾಸನಗಳಲ್ಲಿ ವಿಶೇಷವಾಗಿ ಕಾಣಬರುತ್ತವೆ. ಇದರಿಂದ ನಾಣ್ಯಗಳನ್ನು ಅಚ್ಚು ಮಾಡುವ ಕಾರ್ಯ ವ್ಯವಸ್ಥಿತವಾಗಿ ಸಾಗುತ್ತಿತ್ತು ಎಂದು ತಿಳಿದುಬರುತ್ತದೆ. ಕಲ್ಯಾಣದ ಚಾಳುಕ್ಯರ ನಾಣ್ಯಗಳು ಕರ್ನಾಟಕ, ಆಂಧ್ರ, ತಮಿಳುನಾಡು ಮತ್ತು ಮಹಾರಾಷ್ಟ್ರಗಳಲ್ಲಿ ದೊರಕಿವೆ. ಆಂಧ್ರ ಪ್ರದೇಶದ ನೆಲ್ಲೂರು ಜಿಲ್ಲೆಯ ಕೋಡೂರು ಎಂಬಲ್ಲಿ ದೊರಕಿರುವ ಚಾಳುಕ್ಯರ ನಾಣ್ಯರಾಶಿಯೊಂದು ಬಹು ಶ್ರೀಮಂತವಾದುದು. ಇದರಲ್ಲಿ ಹದಿನೈದು ಸಾವಿರಕ್ಕೂ ಹೆಚ್ಚು ನಾಣ್ಯಗಳು ಮಡಕೆಯಲ್ಲಿ ದೊರಕಿದವು. ಇದರ ಆಧಾರದ ಮೇಲೆ ಚಾಳುಕ್ಯರ ನಾಣ್ಯಗಳ ವಿಷಯಗಳಲ್ಲಿ ವಿಶೇಷ ಮಾಹಿತಿ ದೊರಕಿವೆ.

ಈ ಕಾಲದ ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳು ಮಾತ್ರ ಬೆಳಕಿಗೆ ಬಂದಿವೆ. ಇವು ಮೊಳೆಯಿಂದ ಒತ್ತಿದ ಚಿಹ್ನೆಗಳುಳ್ಳ 'ಪಂಚ್' ನಾಣ್ಯಗಳು. ದುಂಡನೆಯ ಆಕಾರದ ಈ ನಾಣ್ಯಗಳಿಗೆ ಮುಮ್ಮುಖದಲ್ಲಿ ಮಾತ್ರ ಬರೆಹವುಂಟು. ಹಿಮ್ಮುಖ ಖಾಲಿಯಾಗಿ ಇರುತ್ತದೆ. ಸಾಮಾನ್ಯವಾಗಿ ಈ ನಾಣ್ಯಗಳಲ್ಲಿ ಶ್ರೀ ಎಂಬ ಕನ್ನಡ ಅಕ್ಷರ, ರಾಜನ ಹೆಸರು, ಸೂರ್ಯ, ಚಂದ್ರ, ಆನೆ, ಸಿಂಹ ಮುಂತಾದವು ಮುದ್ರಿತವಾಗಿರುತ್ತವೆ. ತೆಳುವಾದ ನಾಣ್ಯದ ಮೇಲೆ ಈ ರೀತಿ ಅನೇಕ ಪಂಚ್‌ಗಳು ಮಾಡಲ್ಪಟ್ಟಿರುವುದರಿಂದ ಇವುಗಳು ಬಟ್ಟಲಾಕಾರದಲ್ಲಿರುತ್ತವೆ.

ತ್ರೈಲೋಕ್ಯಮಲ್ಲ ಒಂದನೆಯ ಸೋಮೇಶ್ವರನ ಚಿನ್ನದ ನಾಣ್ಯಗಳು ಸುಮಾರು ಒಂದಂಗುಲ ವ್ಯಾಸದವು. ಇವುಗಳ ತೂಕ 58 ಗ್ರೇನ್‌ಗಳು. ಇವುಗಳಲ್ಲಿ ಒಂಬತ್ತು ಪಂಚ್ ಮುದ್ರಿತ ಚಿಹ್ನೆಗಳಿವೆ; ಐದು ಸಿಂಹ, ಎರಡು ಶ್ರೀ ಎಂಬ ಕನ್ನಡ ಅಕ್ಷರ, ಮಿಕ್ಕೆರಡು ತ್ರೇಲೋ ಮತ್ತು ಮಲ್ಲ ಎಂಬ ಕನ್ನಡ ಬರೆಹ. ಇಮ್ಮಡಿ ಸೋಮೇಶ್ವರ ಭುವನೈಕಮಲ್ಲನ ನಾಣ್ಯಗಳಲ್ಲಿಯೂ ಒಂಬತ್ತು ಪಂಚ್‌ಗಳಿವೆ. ಅವುಗಳಲ್ಲಿ ಐದು ಸಿಂಹ, ಎರಡು ಶ್ರೀ ಎಂಬ ಅಕ್ಷರ, ಮಧ್ಯದಲ್ಲಿ ಕಮಲದ ಹೂವು, ಅದರ ಮೇಲೆ ಭುವನೈಕ ಎಂಬ ಬರೆಹ ಕಾಣುತ್ತದೆ. ಎರಡನೆಯ ಜಯಸಿಂಹನ ಚಿನ್ನದ ನಾಣ್ಯಗಳು ಸುಮಾರು 58 ಗ್ರೇನ್ ತೂಗುತ್ತವೆ. ಇವುಗಳ ವ್ಯಾಸ 0.6" ರಿಂದ 0.8". ಒಂದು ನಮೂನೆಯ ನಾಣ್ಯದಲ್ಲಿ ಒಂಬತ್ತು ಪಂಚ್‌ಗಳಿವೆ. ಇದರಲ್ಲಿ ಐದು ಸಿಂಹ, ಎರಡು ಶ್ರೀ ಅಕ್ಷರ, ಜಯ ಮತ್ತು ದೇವ ಎಂಬ ಕನ್ನಡ ಬರೆಹಗಳಿವೆ. ಇದೇ ರೀತಿಯ ಕೆಲವು ನಾಣ್ಯಗಳಲ್ಲಿ ಸಿಂಹಗಳಿವೆ ಬದಲಾಗಿ ಹಂದಿ ಅಥವಾ ಆನೆ ಇರುವುದೂ ಉಂಟು. 2ನೆಯ ಜಗದೇಕಮಲ್ಲನ ಚಿನ್ನದ ನಾಣ್ಯಗಳು ಅನೇಕ ನಮೂನೆಗಳಲ್ಲಿ ದೊರಕಿವೆ. ಕೋಡೂರು ನಾಣ್ಯರಾಶಿಯಲ್ಲಿ 67 ರಿಂದ 69 ಗ್ರೇನ್ ತೂಕದ ನಾಣ್ಯಗಳಿವೆ. ಇವುಗಳ ಮೇಲೆ ಜಗ, ಜಗದೇ ಅಥವಾ ಜಗದೇಕಮಲ್ಲ ಎಂಬ ಕನ್ನಡ ಲಿಪಿಯ ಬರೆಹಗಳು ಪಂಚ್ ಮಾಡಲ್ಪಟ್ಟಿವೆ. ನಾಣ್ಯದ ಮಧ್ಯಭಾಗದಲ್ಲಿ ದೇವಾಲಯದ ಗೋಪುರದ ಚಿತ್ರವಿದೆ. ಇದರ ಎರಡು ಕಡೆಗಳಲ್ಲಿಯೂ ಶ್ರೀ ಎಂಬ ಅಕ್ಷರವಿದೆ. ಕೆಲವು ನಾಣ್ಯಗಳಲ್ಲಿ ಸ್ವಸ್ತಿಕ, ಚೌರಿ, ಶಂಖಗಳೂ ಕಾಣಬರುತ್ತವೆ.

ಕೋಡೂರು ನಾಣ್ಯರಾಶಿಯಲ್ಲಿ ಕಾಣಬರುವ ನಾಣ್ಯವೊಂದು ಅಯ್ಯಣನಿಗೆ ಸೇರಿದ್ದಿರಬಹುದೆಂದೂ ಊಹೆ. ಇದರಲ್ಲಿ ಯಣ ಎಂಬ ಕನ್ನಡ ಬರೆಹವಿದೆ. ಮತ್ತೊಂದು ನಾಣ್ಯದಲ್ಲಿ ದಶವರ್ಮ ಎಂಬ ಬರೆಹವಿದೆ. ಈ ನಾಣ್ಯ ಚಾಳುಕ್ಯ ರಾಜಕುಮಾರ ದಶವರ್ಮನದ್ದಿರಬೇಕೆಂದು ಹೇಳಬಹುದು. ಆರನೆಯ ವಿಕ್ರಮಾದಿತ್ಯನ ರಾಣಿ ಲಕ್ಷ್ಮಾದೇವಿಯದೆಂದು ಹೇಳಲಾದ ಕೆಲವು ನಾಣ್ಯಗಳು ದೊರಕಿವೆ. ಇವು ಚಾಳುಕ್ಯ ನಾಣ್ಯಗಳಂತೆಯೇ ಇವೆ. ಮಧ್ಯದಲ್ಲಿ ಕಮಲದ ಹೂವು. ಎರಡು ಪಕ್ಕಗಳಲ್ಲಿ ಶ್ರೀ ಎಂಬ ಅಕ್ಷರ, ಕನ್ನಡ ಲಿಪಿಯಲ್ಲಿ ಶ್ರೀ ಲಘುಮಾ ಎಂಬ ಬರೆಹ ಮತ್ತು ಶಂಖ ಈ ನಾಣ್ಯಗಳಲ್ಲಿ ಕಾಣಬರುತ್ತವೆ. ಭುಜಬಲ ಎಂಬ ಬರೆಹವಿರುವ ಕೆಲವು ನಾಣ್ಯಗಳು ಕಲ್ಯಾಣದ ಚಾಳುಕ್ಯರದೆಂದು ಕೆಲವರ ಅಭಿಪ್ರಾಯ.

ರಾಯಗಜಕೇಸರಿ ಮತ್ತು ದಾಯಗಜಕೇಸರಿ ಎಂಬ ಕನ್ನಡ ಬರೆಹವುಳ್ಳ ನಾಣ್ಯಗಳು ವಿಶೇಷವಾಗಿ ಆಂಧ್ರಪ್ರದೇಶದಲ್ಲಿ ದೊರಕಿವೆ. ಇವು ಚಾಳುಕ್ಯರ ಸಾಮಂತರ ನಾಣ್ಯಗಳು ಎಂದು ಭಾವಿಸಲಾಗಿದೆ. ರಾಮದುರ್ಗದಲ್ಲಿ ದೊರಕಿದ ಬರಮಭೂಪಾಲನ ನಾಣ್ಯಗಳಲ್ಲಿ ಶ್ರೀ ನಿಗಲಂಕಮಲ್ಲ ದಂಡಿನಗೋವ ಎಂಬ ಬರೆಹವಿದೆ. ಇವನು ಚಾಳುಕ್ಯ ಸಾಮಂತ. ಸಾತಾರಾ ಜಿಲ್ಲೆಯ ವಲ್ಲೆ ಎಂಬಲ್ಲಿ ದೊರಕಿರುವ ನಾಣ್ಯಗಳಲ್ಲಿ ಕನ್ನಡ ಬರೆಹವಿರುವುದರಿಂದ - ಇವು ಚಾಳುಕ್ಯರ ಸಾಮಂತರವೆಂದು ಭಾವಿಸಲಾಗಿದೆ. (ಎ.ವಿ.ಎನ್.)

### ಇತರ ಚಾಳುಕ್ಯ ಶಾಖೆಗಳು

ಬಾದಾಮಿಯ ಚಳುಕ್ಯರ ಆಳಿಕೆ ಕೊನೆಗೊಂಡು, ಕರ್ನಾಟಕದಲ್ಲಿ ರಾಷ್ಟ್ರಕೂಟರ ಆಳಿಕೆ ಆರಂಭವಾದಾಗ ಚಾಳುಕ್ಯರು ಸ್ವಲ್ಪ ಕಾಲ ತೆರೆಯ ಮರೆಯಲ್ಲಿದ್ದರು. ಆಗ ಈ ಮನೆತನದ ಹಲವಾರು ಶಾಖೆಗಳು, ಬೇರೆ ಬೇರೆ ಕಡೆ ಸಣ್ಣ ಪುಟ್ಟ ಅಧಿಕಾರಗಳನ್ನು ಹೊಂದಿದ್ದು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡವು. ವೆಂಗಿಯ ಚಾಳುಕ್ಯ, ವೇಮುಲವಾಡ ಚಾಳುಕ್ಯ, ಗುಜರಾತಿನ ಚಾಳುಕ್ಯ ಈ ವಂಶಗಳು ಸಹ ಈ ಮನೆತನಕ್ಕೆ ನೇರವಾಗಿ ಸಂಬಂಧಿಸಿದವು. ಕರ್ನಾಟಕದ ಹೊರಗೆ ಆಳಿದ ಚಾಳುಕ್ಯವಂಶದ ಶಾಖೆಗಳು ಅಲ್ಲದೆ ಕರ್ನಾಟಕದಲ್ಲಿದ್ದ ಕೆಲವು ಚಾಳುಕ್ಯ ಶಾಖೆಗಳು, ವ್ಯಕ್ತಿಗಳು ಶಾಸನಗಳ ಮೂಲಕ ಬೆಳಕಿಗೆ ಬಂದಿದ್ದಾರೆ.

ಚಾಳುಕ್ಯ ವಂಶಕ್ಕೆ ಸೇರಿದ ಪರಹಿತರಾಜನೆಂಬಾತ ಬೆಳಗಾಂವಿ ಜಿಲ್ಲೆಯ ಕೋಟೂರು ಗ್ರಾಮದ ಶಾಸನವೊಂದರಲ್ಲಿ ಕಾಣಿಸಿಕೊಂಡಿದ್ದಾನೆ. ಶಾಸನದ ಕಾಲ ಸು.9ನೆಯ ಶತಮಾನ. ರಾಷ್ಟ್ರಕೂಟ ಪ್ರಭೂತವರ್ಷನ 812ರ ತಾಮ್ರಶಾಸನದಲ್ಲಿ ಚಾಳುಕ್ಯಾನ್ವಯಕ್ಕೆ ಸೇರಿದ ವಿಮಲಾದಿತ್ಯನೆಂಬಾತ ಹೆಸರಿಸಲ್ಪಟ್ಟಿದ್ದಾನೆ. ಈತನ ತಂದೆ ರಾಜನ್ ಎಂದು ಬಿರುದಾಂಕಿತನಾದ ಯಶೋವರ್ಮ; ತಾತ ಬಲವರ್ಮ ನರೇಂದ್ರ. ಗಂಗಮಂಡಲದ ಅಧಿರಾಜನೆನಿಸಿದ ಚಾಕಿರಾಜ ಈತನ ಸೋದರಮಾವ. ಈತ ಕುಣುಂಗಿಲ ದೇಶವನ್ನು ಆಳುತ್ತಿದ್ದ.

ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ 951ರ ಹಿರೇಕೋಗಿಲೂರಿನ ತಾಮ್ರಶಾಸನದಲ್ಲಿ ಅರಸನ ಮಾಂಡಲಿಕನಾಗಿ ಕದಂಬಳಿಗೆ 1000 ಪ್ರಾಂತ್ಯವನ್ನು ಆಳುತ್ತಿದ್ದ ಚಾಳುಕ್ಯ ಕುಲದ ರಾಜಾದಿತ್ಯನ ವಂಶಾವಳಿಯನ್ನು ಕೊಟ್ಟಿದೆ. ಅದು ಹೀಗಿದೆ.

ಚಳುಕಿ
|
(ಆತನ ವಂಶದಲ್ಲಿ)
|
ಅವನಿಯಮ್ಮ
|
ಉತ್ತಮಗುಳ್ಳ
|
ನಿಜಗಲಿ I — ವ್ಯಾಳಕಂಚಿಗ
|
ಚಂದ್ರಾದಿತ್ಯ
|
ಇರುಗಮ್ಮ
|
ರಾಜಾದಿತ್ಯ I
|
ನಿಜಗಲಿ II
|
ಕಚ್ಚೆಗರಾಜ
|
ರಾಜಾದಿತ್ಯ II

ಮೊದಲನೆಯ ರಾಜಾದಿತ್ಯನು ಕಾಕಲವರ್ಷನ ಮಗಳನ್ನು ಮದುವೆಯಾದನೆಂದಿದೆ. ಈತ ಮೇಡೂರಿನಲ್ಲಿ ದೊರೆತ ಮುಮ್ಮಡಿ ಗೋವಿಂದನ ಶಾಸನದಲ್ಲಿ ಉಕ್ತನಾದ ಪರಮೇಶ್ವರನಿಯೋಗಿ ನನ್ನಿಚಳುಕಿ ಎನಿಸಿಕೊಂಡ ರಾಜಾದಿತ್ಯನಾಗಿರಬಹುದು. ಹಿರೇಕೋಗಿಲೂರಿನ ಶಾಸನದಲ್ಲಿ ಇಮ್ಮಡಿ ರಾಜಾದಿತ್ಯನನ್ನು ನನ್ನಿಕೆ ಎಂದು ವರ್ಣಿಸಲಾಗಿದೆ. ಈ ಶಾಸನದಲ್ಲಿ ಚಾಳುಕ್ಯರ ಮೂಲವನ್ನು ಕುರಿತು ಒಂದು ಪೌರಾಣಿಕ ಕಥೆ ಹೇಳಿದೆ. ದ್ರೋಣನ ಮಗನಾದ ಅಶ್ವತ್ಥಾಮ ಸಂಧ್ಯಾಸಮಯದಲ್ಲಿ ಮಂತ್ರಪೂತವಾದ ಗಂಗಾಜಲವನ್ನು ಬೊಗಸೆಯಿಂದ ಚೆಲ್ಲಿದಾಗ ಚಳುಕಿ ಎಂಬ ವೀರ ಹುಟ್ಟಿದನೆಂದೂ ಅವನು ಶತ್ರುಗಳನ್ನು ಹೊಡೆದೋಡಿಸಬಲ್ಲವನಾದ ಕಾರಣ (ಚಾಳಯುತಿ) ಅವನಿಗೆ ಆ ಹೆಸರು ಬಂತೆಂದೂ ಹೇಳಿದೆ. ಈ ತಾಮ್ರ ಶಾಸನದ ಮುದ್ರೆಯಲ್ಲಿ ವರಾಹದ ಚಿತ್ರವಿದೆ.

ಮೈಸೂರು ಜಿಲ್ಲೆಯ ವರುಣ ಗ್ರಾಮದಲ್ಲಿ ದೊರೆತ ಶಾಸನವೊಂದರಲ್ಲಿ ಮಹಾಸಾಮಂತ ನರಸಿಂಹನನ್ನು ಚಾಳುಕ್ಯ ವಂಶಲಲಾಮನೆಂದು ಕರೆದಿದೆ. ಈತನ ಪತ್ನಿ ಗಾವಿಲಬ್ಬರಸಿ. ಇದೇ ಗ್ರಾಮದ ಇನ್ನೂ ಕೆಲವು ಶಾಸನಗಳಲ್ಲಿ ಚಾಳುಕ್ಯಾನ್ವಯಕ್ಕೆ ಸೇರಿದ ಗೊಗ್ಗಿ ಎಂಬಾತನ ಉಲ್ಲೇಖವಿದೆ.

ಚಿತ್ರದುರ್ಗ ಜಿಲ್ಲೆಯ ಬೇವಿನಹಳ್ಳಿಯ ಶಾಸನದಲ್ಲಿ ಚಾಳುಕ್ಯ ಸರ್ವಜ್ಞನೆಂದು ಕರೆಯಲಾದ ಪಂದಿಗನ ವಂಶಾವಳಿ ಈ ರೀತಿ ಇದೆ:

ವಿಕ್ರಮಾದಿತ್ಯ ನೃಪ
|
ಪಿಳ್ಳಿಮಯ್ಯ
|
ಕೀರ್ತಿಯುತ — ಕಲಿ ಕೊಂಕಣದೇವ
|
ರೇವಣ
|
ರಾಜಭೂಭುಜ
|
ಚಿಕ್ಕಯಣ್ಣ
|
ಗೊಗ್ಗಿ
|
ಶೂದ್ರಕಾಂಕ
|
ಪಂದಿಗ (ಪತ್ನಿ: ಜಕ್ಕಿ ಸುಂದರಿ)

ಇದೇ ಜಿಲ್ಲೆಯ ಇನ್ನೂ 3-4 ಶಾಸನಗಳಲ್ಲಿ ಪಂದಿಗನ ಹೆಸರು ಕಾಣಸಿಗುತ್ತದೆ. (ಬಿ.ಆರ್.ಜಿ.)

**ಚಿಂಚಲಿ :** ಬೆಳಗಾಂವಿ ಜಿಲ್ಲೆ ರಾಯಭಾಗ ತಾಲ್ಲೂಕಿನ ಒಂದು ಗ್ರಾಮ ಮತ್ತು ಯಾತ್ರಾಸ್ಥಳ. ರಾಯಭಾಗ ಪಟ್ಟಣದಿಂದ 10ಕಿಮೀ ದೂರದಲ್ಲಿ ಕೃಷ್ಣಾನದಿಯ ದಡದಲ್ಲಿದೆ. ಜನಸಂಖ್ಯೆ 15,000. ಮಹಾರಾಷ್ಟ್ರದ ಗಡಿಯ ಅಂಚಿನಲ್ಲಿರುವ ಈ ಊರನ್ನು ಕೊಲ್ಹಾಪುರ ಸಂಸ್ಥಾನಿಕರಿಂದ ದೇಸಾಯಿ ಮನೆತನಕ್ಕೆ ಇನಾಮು ಗ್ರಾಮವಾಗಿ ನೀಡಲಾಗಿತ್ತು. ಮಾಯಕ್ಕದೇವಿ ಈ ಗ್ರಾಮದ ಪ್ರಸಿದ್ಧ ದೇವತೆ. ಈ ಕಾರಣದಿಂದಾಗಿ ಈ ಊರಿಗೆ ಮಾಯಕ್ಕನ ಚಿಂಚಲಿ ಎಂಬ ಹೆಸರೂ ಇದೆ. ಈ ದೇವತೆಗೆ ಮಹಾರಾಷ್ಟ್ರ ಹಾಗೂ ಕರ್ನಾಟಕದ ಭಕ್ತರು ನಡೆದುಕೊಳ್ಳುತ್ತಾರೆ. ಚಿಕ್ಕಗುಡಿಯಾಗಿದ್ದ ಮಾಯಕ್ಕನ ದೇವಾಲಯವನ್ನು ಈಗ ನವೀಕರಿಸಲಾಗಿದೆ. ಬಿಳಿಯ ಕಲ್ಲಿನಲ್ಲಿ ನಿರ್ಮಿಸಲಾದ ದೊಡ್ಡ ಶಿಖರ ಆಕರ್ಷಕವಾಗಿದೆ. ದೇವಾಲಯದ ವಾಸ್ತುವಿನ್ಯಾಸ ಚಾಳುಕ್ಯ ಶೈಲಿಯಲ್ಲಿದೆ. ಮುಖಮಂಟಪವನ್ನು ಮರದಿಂದ ನಿರ್ಮಿಸಲಾಗಿದ್ದು ಕೆತ್ತನೆಯ ಕೆಲಸ ಆಕರ್ಷಕವಾಗಿದೆ. ಪೂರ್ವಾಭಿಮುಖದ ಮಹಾದ್ವಾರ 50 ಅಡಿ ಎತ್ತರವಿದೆ. ಗರ್ಭಗುಡಿಯಲ್ಲಿ ಪಶ್ಚಿಮಕ್ಕೆ ಮುಖ ಮಾಡಿದ, ಕರಿಕಲ್ಲಿನಲ್ಲಿ ನಿರ್ಮಿಸಿದ ಸು.3ಅಡಿ ಎತ್ತರದ ಆಕರ್ಷಕ ಮಾಯಕ್ಕನ ಮೂರ್ತಿ ಇದೆ. ದೀಪಾವಳಿ, ಕಾರಹುಣ್ಣಿಮೆ, ನೂಲಹುಣ್ಣಿಮೆಗಳಲ್ಲಿ ದೇವಿಯ ಜಾತ್ರೆ ಜರುಗಿದರೂ ಮಾಘ ಹುಣ್ಣಿಮೆಯಲ್ಲಿ ಜರಗುವ ಜಾತ್ರೆ ದೊಡ್ಡದು. ಹಿಂದೆ ಈ ಜಾತ್ರೆಗೆ ಸು.35,000 ದಷ್ಟು ಭಕ್ತಾದಿಗಳು ಸೇರುತ್ತಿದ್ದರೆಂದು ತಿಳಿದುಬರುತ್ತದೆ. ಈ ಜಾತ್ರೆ ಮತ್ತು ಉತ್ಸವ ಏಳು ದಿವಸಗಳ ಕಾಲ ನಡೆಯುತ್ತದೆ. ಜಾನುವಾರು ಜಾತ್ರೆಯೂ ಈ ಸಂದರ್ಭದಲ್ಲಿ ಸೇರುತ್ತದೆ.

ಊರಲ್ಲಿ ಒಂದು ಕಲ್ಯಾಣಿ ಇದೆ. ಇದರ ಸುತ್ತ ಮಹಾದೇವ, ದತ್ತಾತ್ರೇಯ, ವೆಂಕೋಬನ ಸಣ್ಣ ಗುಡಿಗಳಿವೆ. ಇತ್ತೀಚೆಗೆ ಊರ ಮಧ್ಯದಲ್ಲಿ ಮಹಾವೀರ ಬಸದಿಯೊಂದನ್ನು ನಿರ್ಮಿಸಲಾಗಿದೆ. (ಆರ್.ಎಂ.)

**ಚಿಂಚೋಳಿ :** ಗುಲ್ಬರ್ಗ ಜಿಲ್ಲೆಯ ಈಶಾನ್ಯ ತುದಿಯಲ್ಲಿರುವ ಒಂದು ತಾಲ್ಲೂಕು; ಆ ತಾಲ್ಲೂಕಿನ ಆಡಳಿತ ಕೇಂದ್ರ. ತಾಲ್ಲೂಕು ಯಾದಗಿರಿ ಉಪವಿಭಾಗಕ್ಕೆ ಸೇರಿದೆ. ಹಿಂದೆ ಈ ತಾಲ್ಲೂಕು ಪೂರ್ಣವಾಗಿ ಆಲಂ ಅಲಿ ಕೈರೋಜ್ ಎಂಬ ನವಾಬನ ಜಾಗೀರಿಯಾಗಿತ್ತು. ಉತ್ತರದಲ್ಲಿ ಬೀದರ್ ಜಿಲ್ಲೆಯ ಹುಮನಾಬಾದ್ ತಾಲ್ಲೂಕು ಮತ್ತು ಆಂಧ್ರ ಪ್ರದೇಶ, ದಕ್ಷಿಣದಲ್ಲಿ ಸೇಡಂ ತಾಲ್ಲೂಕು, ಪಶ್ಚಿಮದಲ್ಲಿ ಚಿತ್ತಾಪುರ ಮತ್ತು ಗುಲ್ಬರ್ಗ ತಾಲ್ಲೂಕುಗಳು, ಪೂರ್ವದಲ್ಲಿ ಆಂಧ್ರ ಪ್ರದೇಶ ಈ ತಾಲ್ಲೂಕನ್ನು ಸುತ್ತುವರೆದಿವೆ. ಯಾದಗಿರಿಯ ಉಪವಿಭಾಗಕ್ಕೆ ಸೇರಿದ ಈ ತಾಲ್ಲೂಕಿನಲ್ಲಿ ಐನಾಪುರ, ಕೂಡ್ಲಿ, ಚಿಂಚೋಳಿ ಮತ್ತು ಸುಳೇಪೇಟೆ ಎಂಬ ನಾಲ್ಕು ಕಂದಾಯದ ವಲಯಗಳಿದ್ದು 145 ಗ್ರಾಮಗಳಿವೆ. ತಾಲ್ಲೂಕಿನ ವಿಸ್ತೀರ್ಣ 1556.3ಚ.ಕಿಮೀ. ಜನಸಂಖ್ಯೆ 2,23,477.

ಸಮುದ್ರಮಟ್ಟದಿಂದ ಸಾಮಾನ್ಯವಾಗಿ 304.8ಮೀ.-609.6ಮೀ. ಎತ್ತರದಲ್ಲಿರುವ ಈ ತಾಲ್ಲೂಕಿನ ಭಾಗ ಸ್ಥೂಲವಾಗಿ ಉತ್ತರದಿಂದ ದಕ್ಷಿಣಕ್ಕೆ ಇಳಿಜಾರಾಗಿದೆ. ಚಿಂಚೋಳಿ ತಾಲ್ಲೂಕಿನ ತಳಶಿಲೆ ಹೆಚ್ಚು ಮಟ್ಟಿಗೆ ಟ್ರಾಪ್, ಪಶ್ಚಿಮ ಭಾಗದಲ್ಲಿ ಈ ಟ್ರಾಪ್‌ನ ಬೆಟ್ಟಗಳ ಮೇಲೆ ಜಂಬುಕಲ್ಲಿರುವುದೂ ಉಂಟು. ಇದರಲ್ಲಿ ಲಿಮೋನೈಟ್, ಹೆಮಟೈಟ್‌ಗಳು ಇದ್ದು ಇವು ಹಿಂದೆ ಸ್ಥಳೀಯವಾಗಿ ಕಬ್ಬಿಣದ ಅದಿರಾಗಿ ಉಪಯೋಗವಾಗುತ್ತಿತ್ತು. ಚಿಂಚೋಳಿ ಊರಿನ ಸುತ್ತಮುತ್ತಲಲ್ಲಿ ಟ್ರಾಪ್ ಪದರಗಳ ನಡುವೆ ಚರ್ಟ್‌ಕಲ್ಲಿನ ಹರಹುಗಳೂ ಅದರ ಮೇಲೆ ಎರೆಮಣ್ಣು ಕಂಡುಬರುತ್ತವೆ. ಮಣ್ಣು ಅಷ್ಟೇನೂ ಫಲವತ್ತಾದ್ದಲ್ಲ. ಜಂಬು ಮತ್ತು ಕಪ್ಪು ಮಣ್ಣು ಹೆಚ್ಚಾಗಿಯೂ ಅಲ್ಲಲ್ಲಿ ಚೌಳು ಮತ್ತು ಸುಣ್ಣಕಲ್ಲಿನ ಪ್ರದೇಶಗಳೂ ಇವೆ. ಮಳೆ ಕಡಿಮೆ, ವರ್ಷಕ್ಕೆ ಸರಾಸರಿ 783.58ಮಿಮೀ. ಈ ತಾಲ್ಲೂಕಿನ ಮುಖ್ಯ ನದಿ ಮುಲ್ಲಾಮಾರಿ. ಈ ತಾಲ್ಲೂಕಿನಲ್ಲಿ ಒಟ್ಟು 88ಕಿಮೀ ದೂರ ಹರಿಯುವ ಈ ನದಿ ವಾಯವ್ಯದಲ್ಲಿ ತಾಲ್ಲೂಕನ್ನು ಪ್ರವೇಶಿಸಿ, ಚಿಂಚೋಳಿ ಪಟ್ಟಣದವರೆಗೂ ಪೂರ್ವಾಭಿ ಮುಖವಾಗಿ ಹರಿದು ಅನಂತರ ದಕ್ಷಿಣಕ್ಕೆ ತಿರುಗಿ ಮುಂದುವರೆದು ಕಾಗಿಣಾ ನದಿಯನ್ನು ಸೇರುತ್ತದೆ.

ಈ ತಾಲ್ಲೂಕಿನ ಪೂರ್ವ ಮತ್ತು ಉತ್ತರ ಭಾಗಗಳಲ್ಲಿ 70,087 ಎಕರೆ ಅರಣ್ಯ ಪ್ರದೇಶವಿದೆ. ಇಡೀ ಗುಲ್ಬರ್ಗ ಜಿಲ್ಲೆಯ ಅರಣ್ಯದಲ್ಲಿ ಸುಮಾರು ಅರ್ಧಭಾಗ ಇಲ್ಲಿದೆ. ಇಲ್ಲಿಯದು ಮುಖ್ಯವಾಗಿ ಪರ್ಣಪಾತಿ ಅರಣ್ಯ, ತೇಗ, ಬೀಟೆ, ಕರಿ ಮತ್ತಿ, ಹುರಗಲು ಮುಖ್ಯ ಮರಗಳು. ಬೀಡಿ ಎಲೆ, ಗಣಜಲು ಹುಲ್ಲು, ಜೇನು ಹೇರಳವಾಗಿ ದೊರಕುತ್ತವೆ. ಲಂಗೂರ್ ಕೋತಿ, ಜಿಂಕೆ, ನರಿಗಳಲ್ಲದೆ ಚಿರತೆಗಳೂ ಕರಡಿಗಳೂ ಇವೆ. ಹಿಂದೆ ಹುಲಿಗಳಿದ್ದುವು. ಈಗ ಅವು ಇಲ್ಲವೇ ಇಲ್ಲವೆನ್ನಬಹುದು. ತೋಳ, ಕಿರುಬ, ಕಾಡುನಾಯಿಗಳೂ ಉಂಟು.

ತಾಲ್ಲೂಕಿನಲ್ಲಿ ಜೋಳ, ಬಾಜ್ರಾ, ಗೋದಿ, ಸೇಂಗ, ದ್ವಿದಳಧಾನ್ಯಗಳು, ಸಜ್ಜೆ, ನವಣೆ ಇವುಗಳ ಜೊತೆಗೆ ಬತ್ತ, ಮೆಣಸಿನಕಾಯಿ, ಈರುಳ್ಳಿ, ಕುಸುಬೆ ಮತ್ತು ತರಕಾರಿಗಳನ್ನು ಬೆಳೆಯುತ್ತಾರೆ. ಮುಲ್ಲಾಮಾರಿ ನದಿಗೆ ಕಾರಕಮುಖಿ ಹಳ್ಳಿಯ ಹತ್ತಿರ ಅಣೆಕಟ್ಟು ಕಟ್ಟಿ ವ್ಯವಸಾಯಕ್ಕೆ ನೀರೊದಗಿಸಿಕೊಳ್ಳಲಾಗುತ್ತಿದೆ. ಚಂದ್ರಂಪಳ್ಳಿ ಜಲಾಶಯ ಈ ತಾಲ್ಲೂಕಿನಲ್ಲಿ ನೀರಾವರಿ ಸೌಲಭ್ಯ ಒದಗಿಸಿದೆ.

ಚಿಂಚೋಳಿ ತಾಲ್ಲೂಕಿನ ಮುಖ್ಯ ಪ್ರದೇಶಗಳಲ್ಲಿ ದೇಗಲಮಡಿ ಒಂದು. ಇಲ್ಲಿ ವೀಳೆಯದೆಲೆಯನ್ನು ಹೇರಳವಾಗಿ ಬೆಳೆದು ಬೀದರ್, ಗುಲ್ಬರ್ಗ, ಹೈದರಾಬಾದ್ ಮುಂತಾದ ಸ್ಥಳಗಳಿಗೆ ಕಳುಹಿಸುತ್ತಾರೆ. ಇಲ್ಲಿ

ಪುರಾತನ ಜೈನ ದೇವಾಲಯಗಳಿವೆ. ಕೇಶವಾರದಲ್ಲಿ ಉಣ್ಣೆಯ ಕಂಬಳಿಗಳು ತಯಾರಾಗುತ್ತವೆ. ನಿಡಗುಂದಿಯ ಮಣ್ಣಿನ ಮಡಕೆ ಕುಡಿಕೆಗಳು ಗುಲ್ಬರ್ಗಕ್ಕೆ ನಿರ್ಯಾತವಾಗುತ್ತವೆ. ಚಿಮ್ಮನ ಚೋಡದಲ್ಲಿ ಹೊಗೆಸೊಪ್ಪು ಹೆಚ್ಚು ಬೆಳೆಯುವುದರಿಂದ ಬೀಡಿ ಕಟ್ಟುವ ಉದ್ಯಮಕ್ಕೆ ಹೆಸರಾಗಿದೆ. ಈ ತಾಲ್ಲೂಕಿನ ಸುಲೇಪೇಟೆ ಒಂದು ದೊಡ್ಡ ಗ್ರಾಮ, ಕಂಬಳಿಗಳ ಮಾರುಕಟ್ಟೆ, ಬೀಡಿ ಕಟ್ಟುವ ಕೈಗಾರಿಕೆಗೂ ಪ್ರಸಿದ್ಧವಾಗಿದೆ. ತೊರವಿಯಲ್ಲಿ ಚೌಳು ಮಣ್ಣನ್ನು (ಫುಲ್ಲರ್ಸ್ ಅರ್ತ್) ಸಂಸ್ಕರಿಸುವ ಕಾರ್ಖಾನೆಯಿದೆ. (ಬಿ.)

ಚಿಂಚೋಳಿ ಈ ತಾಲ್ಲೂಕಿನ ಮುಖ್ಯ ಪಟ್ಟಣ ಮತ್ತು ಆಡಳಿತ ಕೇಂದ್ರ. ಇದು ಮುಲ್ಲಾಮಾರಿ ನದಿಯ ದಡದಲ್ಲಿದೆ. ಜನಸಂಖ್ಯೆ 17,158. ಗಿರಿಕಾನನ ಕಣಿವೆಗಳಿಂದ ಸುತ್ತುವರಿಯಲ್ಪಟ್ಟ ಚಿಂಚೋಳಿಯದು ರಮ್ಯವಾದ ಸನ್ನಿವೇಶ. ಚಿಂಚೋಳಿ ಪುರಸಭೆಯ ಆಡಳಿತಕ್ಕೊಳಪಟ್ಟಿದೆ.

ರಾಜ್ಯದ ಇತರ ಭಾಗಗಳಿಂದ ಚಿಂಚೋಳಿ ತಲುಪಬೇಕಾದರೆ ತಾಂಡೂರು ನಿಲ್ದಾಣಕ್ಕೆ ರೈಲಿನಲ್ಲಿ ಹೋಗಿ ಅಲ್ಲಿಂದ ಬಸ್ ಮೂಲಕ 30ಕಿಮೀ ಪ್ರಯಾಣ ಮಾಡಬೇಕಾಗುತ್ತಿತ್ತು. ಸೇಡಂ ತಾಲ್ಲೂಕಿನಿಂದ ನೇರವಾದ ರಸ್ತೆ ಸಿದ್ಧವಾಗಿರುವುದರಿಂದ ಈಗ ನೇರವಾಗಿ ಪ್ರಯಾಣಿಸಬಹುದಾಗಿದೆ.

ಚಿಂಚೋಳಿ ಪಟ್ಟಣದಲ್ಲಿ ಪ್ರಸಿದ್ಧವಾದ ದರ್ಗಾ ಒಂದುಂಟು. ರಾಜನ ಅರಮನೆ ಇನ್ನೊಂದು ಪ್ರೇಕ್ಷಣೀಯ ಕಟ್ಟಡ. ಇಲ್ಲಿನ ರಾಯಿಮಾನ್‌ಗಡ ದೇವಸ್ಥಾನಕ್ಕೆ ಅನೇಕ ಭಕ್ತರು ಬರುತ್ತಾರೆ. ಕರ್ನಾಟಕದ ಮಾಜಿ ಮುಖ್ಯಮಂತ್ರಿ ವೀರೇಂದ್ರ ಪಾಟೀಲ (ನೋಡಿ) ಚಿಂಚೋಳಿಯವರು. *

**ಚಿಂತಲಪಲ್ಲಿ, ವೆಂಕಟರಾವ್ :** 1875-1969. ಪ್ರಸಿದ್ಧ ಸಂಗೀತಗಾರರು. ವಿಜಯನಗರ ಸಂಸ್ಥಾನದ ಆಸ್ಥಾನ ವಿದ್ವಾಂಸರ ಪರಂಪರೆಗೆ ಸೇರಿದವರು. ಕೋಲಾರ ಜಿಲ್ಲೆ ಗೌರಿಬಿದನೂರು ತಾಲ್ಲೂಕಿನ ಚಿಂತಲಪಲ್ಲಿ (ಹುಣಸನಹಳ್ಳಿ) ಯಲ್ಲಿ 1875ರಲ್ಲಿ ಜನಿಸಿದರು. ಚಿಕ್ಕಪ್ಪ ಭಾಸ್ಕರ ರಾಯರು ಇವರ ಆರಂಭದ ಗುರುಗಳು. ಅನಂತರ ವೆಂಕಟ ನರಸಪ್ಪನವರೂ ಆಗಿನ ಮಹಾ ವಿದ್ವಾಂಸರಾಗಿದ್ದ ಕರೂರು ರಾಮ ಸ್ವಾಮಪ್ಪ, ಹನುಮಂತಾ ಚಾರ್ ನೇಕಾರಪಟ್ಟಿ ಶೇಷಯ್ಯ ಮತ್ತು ಹಾನಗಲ್ ಚಿದಂಬರಯ್ಯನ ವರಿಂದ ಸಂಗೀತದಲ್ಲಿ ಇವರು ಪ್ರೌಢ ಶಿಕ್ಷಣ ಪಡೆದರು.



ಇವರು ಕರ್ನಾಟಕ ಸಂಗೀತದ ಸತ್ಸಂಪ್ರದಾಯವನ್ನು ಕಳೆದ ಏಳು ದಶಕಗಳಿಂದಲೂ ಎತ್ತಿಹಿಡಿದು ಜನರಿಗೆ ಸಂಗೀತಸುಧೆಯನ್ನು ಉಣಿಸಿದ್ದಾರೆ. 4ನೆಯ ಮನೆಯ ಶ್ರುತಿಯಲ್ಲಿ ಲೀಲಾಜಾಲವಾಗಿ ಹಾಡುತ್ತಿದ್ದರು. ಸ್ವರಪ್ರಸ್ತಾರದಲ್ಲಿ ಅಸದೃಶ ಪಾಂಡಿತ್ಯ, ರಾಗಪೋಷಣೆಯಲ್ಲಿ ಅಪಾರ ಮನೋಧರ್ಮ ಮತ್ತು ದೇವರ ನಾಮಗಳ ಗಾಯನದಲ್ಲಿ ಒಂದು ಮನೋಜ್ಞವಾದ ಶೈಲಿ ಇವುಗಳು ಇವರ ಹಾಡುವಿಕೆಯಲ್ಲಿ ಕಂಡುಬರುತ್ತಿದ್ದ ವೈಶಿಷ್ಟ್ಯಗಳು. ಶಾರೀರಸಂಪತ್ತು, ಮಹತ್ತರ ಸಾಧನೆ ಮತ್ತು ದೈವಭಕ್ತಿ ಚಿಂತಲಪಲ್ಲಿಯವರ ಸಂಗೀತಕ್ಕೆ ಮೆರುಗು ಕೊಟ್ಟಿದ್ದವು.

ಮೈಸೂರಿನ ಶ್ರೀಮನ್ಮಹಾರಾಜರ ಆಸ್ಥಾನ ವಿದ್ವಾಂಸರಾಗಿ ಸಂಗೀತರತ್ನ ಎಂಬ ಬಿರುದನ್ನು ಪಡೆದರು. ರಾಯಲಸೀಮೆ ಮತ್ತು ಆಂಧ್ರ ಪ್ರದೇಶಗಳಲ್ಲಿ ಕಛೇರಿಗಳನ್ನು ಮಾಡಿ ಹೆಸರುಗಳಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನಿಂದ ಸಂಗೀತವಿದ್ಯಾನಿಧಿ ಎಂಬ ಬಿರುದನ್ನು ಸಂಪಾದಿಸಿದರು. 1958ರಲ್ಲಿ ನಡೆದ ಪ್ರಥಮ ಸಂಗೀತ ಸಮ್ಮೇಳನದ ಅಧ್ಯಕ್ಷತೆಯನ್ನೂ ಗಾನಕಲಾಸಿಂಧು ಎಂಬ ಪ್ರಶಸ್ತಿಯನ್ನೂ ಪಡೆದರು. 1960ರಲ್ಲಿ ಆಂಧ್ರ ಪ್ರದೇಶದ ಸಂಗೀತ ನಾಟಕ ಅಕಾಡೆಮಿಯ ಫೆಲೋಷಿಪ್ ಮತ್ತು 1960-61ರ ರಾಜ್ಯ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿ ಗಳಿಸಿದರು. ಇದಲ್ಲದೆ ಕರ್ನಾಟಕ ರಾಜ್ಯ ಸಂಗೀತ ನಾಟಕ ಅಕಾಡೆಮಿ ಮತ್ತು ಕೇಂದ್ರ ಸಂಗೀತ ನಾಟಕ ಅಕಾಡೆಮಿ ಸಹ ಇವರನ್ನು ಪುರಸ್ಕರಿಸಿವೆ. ಇವರು 1969 ಜೂನ್ 6ರಂದು ನಿಧನಹೊಂದಿದರು. (ಎಂ.ಎ.ಎನ್.)

**ಚಿಂತಾಮಣಿ :** ಕೋಲಾರ ಜಿಲ್ಲೆ ಚಿಕ್ಕಬಳ್ಳಾಪುರ ಉಪವಿಭಾಗಕ್ಕೆ ಸೇರಿದ ಒಂದು ತಾಲ್ಲೂಕು ಮತ್ತು ಆ ತಾಲ್ಲೂಕಿನ ಆಡಳಿತ ಕೇಂದ್ರ. ಈ ತಾಲ್ಲೂಕನ್ನು ಉತ್ತರದಲ್ಲಿ ಬಾಗೇಪಲ್ಲಿ ತಾಲ್ಲೂಕು ಮತ್ತು ಆಂಧ್ರ ಪ್ರದೇಶ, ಪಶ್ಚಿಮದಲ್ಲಿ ಶಿಡ್ಲಘಟ್ಟ ತಾಲ್ಲೂಕು, ದಕ್ಷಿಣದಲ್ಲಿ ಕೋಲಾರ ತಾಲ್ಲೂಕು ಮತ್ತು ಪೂರ್ವದಲ್ಲಿ ಶ್ರೀನಿವಾಸಪುರ ತಾಲ್ಲೂಕು ಸುತ್ತುವರೆದಿವೆ. ಈ ತಾಲ್ಲೂಕಿನಲ್ಲಿ ಚಿಂತಾಮಣಿ, ಅಂಬಾಜಿದುರ್ಗ, ಕೈವಾರ, ಮುರುಗಮಲೆ, ಮುಂಗಾನಹಳ್ಳಿ ಮತ್ತು ಚಿಲಕಲನೇರ್ಪು ಹೋಬಳಿಗಳಿದ್ದು 403 ಗ್ರಾಮಗಳಿವೆ. ತಾಲ್ಲೂಕಿನ ವಿಸ್ತೀರ್ಣ 894.0ಚ.ಕಿಮೀ. ಜನಸಂಖ್ಯೆ 2,71,246.

ತಾಲ್ಲೂಕಿನಲ್ಲಿ ಎರಡು ಸ್ಪಷ್ಟ ಭೌಗೋಳಿಕ ವಿಭಾಗಗಳಿವೆ. ಚಿಂತಾಮಣಿ ಬಾಗೇಪಲ್ಲಿ ರಸ್ತೆಯ ಉತ್ತರಭಾಗ ಕಲ್ಲುಸೀಮೆ, ಸಣ್ಣಪುಟ್ಟ ಬೆಟ್ಟಗಳು ಮತ್ತು ಕಲ್ಲುಮಿಶ್ರಿತ ಭೂಮಿಯಿದ್ದು ಉತ್ತರಕ್ಕೆ ಇಳಿಜಾರಾಗಿದೆ. ದಕ್ಷಿಣ ಭಾಗ ಕೆಂಪು ಮಣ್ಣಿನ ಬಯಲುಸೀಮೆ, ಅಲ್ಲಲ್ಲಿ ಸಣ್ಣ ಪುಟ್ಟ ಕಣಶಿಲೆಯ ಬೆಟ್ಟಗಳೂ ವಿಶಾಲವಾದ ಕೆಂಪು ಜಂಬುಮಣ್ಣಿನ ಬಯಲೂ ಇದ್ದು ಸುಮಾರು ನೈಋತ್ಯದೆಡೆಗೆ ಇಳಿಜಾರಾಗಿದೆ. ಮುರುಗಮಲೆ, ಅಂಬಾಜಿದುರ್ಗ (ಎತ್ತರ 1341ಮೀ.) ಮತ್ತು ರಹಮಾನ್‌ಘರ್ (1304ಮೀ.) ಮುಖ್ಯವಾದ ಬೆಟ್ಟಗಳು. ತಾಲ್ಲೂಕಿನ ವಾಯುವ್ಯದಲ್ಲಿ ಕೆಲವೇ ಕಿಮೀ ದೂರ ಪಾಪಘ್ನಿ ನದಿ ಹರಿದು ಆಂಧ್ರ ಪ್ರದೇಶವನ್ನು ಪ್ರವೇಶಿಸುತ್ತದೆ. ತಾಲ್ಲೂಕಿನ ವಾಯುಗುಣ ಹಿತಕರವಾದ್ದು. ವಾರ್ಷಿಕ ಸರಾಸರಿ ಮಳೆ 716.55ಮಿಮೀ.

ಉತ್ತರ ಕಲ್ಲುಸೀಮೆಗಿಂತಲೂ ದಕ್ಷಿಣದ ಕೆಂಪುಮಣ್ಣು ಭೂಮಿ ಹೆಚ್ಚು ವ್ಯವಸಾಯ ಯೋಗ್ಯವಾಗಿದ್ದರೂ ಉತ್ತರ ಭಾಗದಲ್ಲಿ ಅನೇಕ ಕಟ್ಟೆಗಳನ್ನು ಕಟ್ಟಿ ನೀರನ್ನು ಸಂಗ್ರಹಿಸುವ ಸೌಕರ್ಯ ಇದ್ದು ತಾಲ್ಲೂಕಿನ ಎಲ್ಲೆಡೆಯೂ ಬೇಸಾಯ ಸಾಗುತ್ತಿದೆ. ರಾಗಿ, ಬತ್ತ, ಕಬ್ಬು, ನೆಲಗಡಲೆ, ಮೆಣಸಿನಕಾಯಿ, ಈರುಳ್ಳಿ, ಆಲೂಗೆಡ್ಡೆ, ದ್ವಿದಳ ಧಾನ್ಯಗಳು ಇಲ್ಲಿಯ ಬೆಳೆಗಳು. ಮಾವಿನಹಣ್ಣು, ದ್ರಾಕ್ಷಿ ಮತ್ತು ದಾಳಿಂಬೆ ಇವನ್ನೂ ಬೆಳೆಯುತ್ತಾರೆ.

ಚಿಂತಾಮಣಿಯಲ್ಲಿ ದೊರಕುವ ಬಿಳಿಯ ಜೇಡಿಮಣ್ಣು ಪಿಂಗಾಣಿ ಉಪಕರಣಗಳ ತಯಾರಿಕೆಗೆ ಉಪಯುಕ್ತವಾದ್ದು. ತಾಲ್ಲೂಕಿನಲ್ಲಿ ರೇಷ್ಮೆ, ಸುಗಂಧ ದ್ರವ್ಯ, ಅಗರಬತ್ತಿ ತಯಾರಾಗುತ್ತವೆ. ಇವು ಆಂಧ್ರಪ್ರದೇಶ, ಮಧ್ಯಪ್ರದೇಶ ಮತ್ತು ಮಹಾರಾಷ್ಟ್ರಗಳಿಗೆ ರವಾನೆಯಾಗುತ್ತವೆ. ಚಿಂತಾಮಣಿ, ಕತ್ತರಿಗುಪ್ಪ, ವೆಂಕಟಗಿರಿ ಕೋಟೆ, ತಿಮ್ಮಸಂದ್ರಗಳಲ್ಲಿ ಕೈಮಗ್ಗದ ಉದ್ಯಮವಿದೆ. ವೆಂಕಟಗಿರಿ ಕೋಟೆಯಲ್ಲಿ ಕಂಬಳಿ ತಯಾರಿಕೆ ಇದೆ. ಮರ ಕುಯ್ಯುವ ಉದ್ಯಮವೂ ಉಂಟು.

ಪ್ರಸಿದ್ಧ ಕ್ಷೇತ್ರವೆನಿಸಿಕೊಂಡಿರುವ ಕೈವಾರ (ನೋಡಿ) ಈ ತಾಲ್ಲೂಕಿಗೆ ಸೇರಿದೆ. ಅಂಬಾಜಿದುರ್ಗ ಈ ಪ್ರದೇಶದ ಎತ್ತರವಾದ ಬೆಟ್ಟ. ಸುತ್ತಣ ವಿಶಾಲ ಪ್ರದೇಶದ ಸುಂದರ ದೃಶ್ಯವನ್ನು ಇಲ್ಲಿಂದ ಕಾಣಬಹುದು. ಬೆಟ್ಟದ ಮೇಲೆ ಕೋಟೆ, ಒಂದು ಶಿವದೇವಾಲಯವಲ್ಲದೆ ಎಣ್ಣೆ ಕಣಜ, ಖಜಾನೆ ಮೊದಲಾದ ಅವಶೇಷಗಳು ಉಳಿದಿವೆ. ಕೋಟೆ ಟಿಪ್ಪುಸುಲ್ತಾನನ ಕಾಲದಲ್ಲಿ ರಚಿತವಾದ್ದು, 1791ರಲ್ಲಿ ಬ್ರಿಟಿಷರ ವಶವಾಯಿತು. 1873ರವರೆಗೆ ಇದೇ ಸುತ್ತಲ ಪ್ರದೇಶದ ತಾಲ್ಲೂಕಿನ ಮುಖ್ಯ ಸ್ಥಳವಾಗಿತ್ತು. ಈಗ ಹೋಬಳಿ ಕೇಂದ್ರ. ರಹಮಾನ್‌ಘರ್(ನೋಡಿ) ಈ ಪ್ರದೇಶದ ಇನ್ನೊಂದು ಐತಿಹಾಸಿಕ (ಕೋಟೆ ಇರುವ) ಸ್ಥಳ. ಕೋನಕುಂಟ್ಲು ಎಂಬ ಸ್ಥಳದಲ್ಲಿ ವೆಂಕಟರಮಣಸ್ವಾಮಿ ದೇವಾಲಯವಿದ್ದು ಆಷಾಢ ಶುದ್ಧ ಪೂರ್ಣಿಮೆಯಂದು ಇಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ಈ ತಾಲ್ಲೂಕಿನ ಸಿಂಗ್ರಪಳ್ಳಿಯಲ್ಲಿ ಫಾಲ್ಗುಣ ಶುದ್ಧ ಏಕಾದಶಿಯಂದು ನಡೆಯುವ ಲಕ್ಷ್ಮೀನರಸಿಂಹಸ್ವಾಮಿ ಜಾತ್ರೆಯೂ ಅಲಂಬಗಿರಿ ಗ್ರಾಮದಲ್ಲಿ ಚೈತ್ರಶುದ್ಧ ಪೂರ್ಣಿಮೆಯಂದು ನಡೆಯುವ ವೆಂಕಟರಮಣಸ್ವಾಮಿ ಜಾತ್ರೆಯೂ

ಬುರುಡಗುಂಟೆ ಗ್ರಾಮದಲ್ಲಿ ಚೈತ್ರ ಬಹುಳ ತ್ರಯೋದಶಿಯಂದು ನಡೆಯುವ ಗಂಗಮ್ಮದೇವರ ಜಾತ್ರೆಯೂ ಪ್ರಸಿದ್ಧವಾದವು. ಜಾತ್ರೆಗಳ ಕಾಲದಲ್ಲಿ ದನಗಳ ಪ್ರದರ್ಶನ ನಡೆದು ಅವುಗಳ ವ್ಯಾಪಾರ ನಡೆಯುವುದು.

ತಾಲ್ಲೂಕಿನ ಆಡಳಿತ ಕೇಂದ್ರವಾದ ಚಿಂತಾಮಣಿ ಕೋಲಾರಕ್ಕೆ ವಾಯುವ್ಯದಲ್ಲಿ 32ಕಿಮೀ ದೂರದಲ್ಲಿದೆ. ಬೆಂಗಳೂರು-ಬಂಗಾರಪೇಟೆ ರೈಲು ಮಾರ್ಗ ಇದರ ಮುಖಾಂತರ ಹಾದುಹೋಗುತ್ತದೆ. ಜನಸಂಖ್ಯೆ 65,456.

ಚಿಂತಾಮಣಿ ಪೌರಸಭಾ ಪಟ್ಟಣ. ನಗರಕ್ಕೆ ಕನ್ನಂಪಲ್ಲಿ ಕೆರೆ ಮತ್ತು ಕೊಳವೆ ಬಾವಿಗಳಿಂದ ನೀರು ಸರಬರಾಜಾಗುತ್ತದೆ. ಒಂದು ವೃತ್ತಿ ಶಿಕ್ಷಣ ಶಾಲೆ, ಪಾಲಿಟೆಕ್ನಿಕ್ ಮತ್ತು ಪ್ರಥಮ ದರ್ಜೆ ಕಾಲೇಜೂ ಆಸ್ಪತ್ರೆಗಳೂ ಇವೆ. ಕೋಲಾರ ಜಿಲ್ಲೆಯ ಜಿಲ್ಲಾ ಗ್ರಂಥಾಲಯ ಈ ಊರಿನಲ್ಲಿದೆ. ಅಗರಬತ್ತಿ ತಯಾರಿಕೆ, ಚಿನ್ನ ಬೆಳ್ಳಿ ಕೆಲಸಗಳಿಗೆ ಚಿಂತಾಮಣಿ ಪ್ರಸಿದ್ಧವಾಗಿದೆ. ಮರಕೊಯ್ಯುವ ಕಾರ್ಖಾನೆಗಳಿವೆ. ಇದೊಂದು ವ್ಯಾಪಾರಕೇಂದ್ರ. ಕೋಲಾರ ಜಿಲ್ಲೆಯ ಪ್ರಥಮ ನಿಯಂತ್ರಿತ ಮಾರುಕಟ್ಟೆ ಆರಂಭವಾದ್ದು ಚಿಂತಾಮಣಿಯಲ್ಲೇ. ಇದರ ಮೂಲಕ ಬೆಲ್ಲ, ಹುಣಿಸೆ, ಮೆಣಸಿನಕಾಯಿಯ ವ್ಯಾಪಾರ ಹೇರಳವಾಗಿ ಜರುಗುತ್ತದೆ. ಚಿಂತಾಮಣಿಯಿಂದ ತಾಲ್ಲೂಕಿನ ಮತ್ತು ಹೊರಗಿನ ಮುಖ್ಯ ಸ್ಥಳಗಳಿಗೆ ರಸ್ತೆಗಳಿವೆ.

ಚಿಂತಾಮಣಿರಾವ್ ಎಂಬ ಮರಾಠ ನಾಯಕ ಈ ಪಟ್ಟಣವನ್ನು ಸ್ಥಾಪಿಸಿದನೆಂದೂ ಆದ್ದರಿಂದ ಇದಕ್ಕೆ ಆತನ ಹೆಸರು ಬಂದಿದೆಯೆಂದೂ ಹೇಳಲಾಗಿದೆ. ಚಿಂತಾಮಣಿಗೆ ಸೇರಿದಂತೆಯೇ ಉತ್ತರ ಭಾಗದಲ್ಲಿ ಇರುವ ನೆಕ್ಕುಂದಿಯಲ್ಲಿ ಗಂಗರ ಕಾಲದ ವೀರಗಲ್ಲುಗಳು, ಶಾಸನಗಳು ಮತ್ತು ಇತರ ಅವಶೇಷಗಳಿವೆ. (ಎಂ.ಎನ್.ಕೆ.)

**ಚಿಂದೋಡಿ ಲೀಲಾ :** ಕನ್ನಡ ವೃತ್ತಿರಂಗಭೂಮಿ ಮತ್ತು ಚಲನಚಿತ್ರರಂಗದ ಪ್ರಸಿದ್ಧ ನಟಿ. ಉತ್ತರ ಕರ್ನಾಟಕದ ಗಡಿನಾಡಿನಲ್ಲಿ ಕನ್ನಡ ಭಾಷೆ ಹಾಗೂ ನಾಟಕಗಳ ಕಹಳೆ ಮೊಳಗಿಸಿದ ಸಮರ್ಥ ಸಂಘಟಕಿ. ಅಣ್ಣೀಗೇರಿಯ ಸುಸಂಸ್ಕೃತ ಮನೆತನದಲ್ಲಿ ಜನಿಸಿದರು. ತಂದೆ ಚಿಂದೋಡಿ ವೀರಪ್ಪನವರು ರಂಗಭೂಮಿಯ ಹೆಸರಾಂತ ಕಲಾವಿದರಾಗಿದ್ದರು. ಇವರ ಅಣ್ಣ ವೀರಪ್ಪನವರೂ ರಂಗಕಲಾವಿದರೇ. ಚಿಂದೋಡಿ ಲೀಲಾರ ಮೊದಲ ಹೆಸರು ವೀರಮ್ಮ. ತಮ್ಮ ಐದನೆಯ ವಯಸ್ಸಿಗೇ ಮುಖಕ್ಕೆ ಬಣ್ಣ ಹಚ್ಚಿಕೊಂಡು, ಶಾಲೆಗೆ ಶರಣು ಹೊಡೆದು ರಂಗಭೂಮಿಯತ್ತ ಆಕರ್ಷಿತರಾದರು. ಚಿಂದೋಡಿ ವೀರಪ್ಪನವರ ಎಂಟು ಮಕ್ಕಳಲ್ಲಿ ಚಿಂದೋಡಿ ಲೀಲಾ ಕೊನೆಯವರು. ಇವರು ನಾಟಕ ಕಂಪನಿ ಸೇರಿದುದಕ್ಕೆ ಇವರ ನೆಂಟರಿಷ್ಟರು ಅಸಮಾಧಾನ ವ್ಯಕ್ತಪಡಿಸಿದ್ದರು. ಆದರೆ ತಂದೆ ಮಗಳಿಬ್ಬರೂ ಇದರಿಂದ ಅಧೀರರಾಗಲಿಲ್ಲ. ಆರಂಭದಲ್ಲಿ ಸಿದ್ಧರಾಮೇಶ್ವರ, ಸುಮಂಗಲಿ, ಸಂಪೂರ್ಣ ರಾಮಾಯಣ ನಾಟಕಗಳಲ್ಲಿ ಬಾಲನಟಿಯಾಗಿ ನಟಿಸಿದರು. 14ನೆಯ ವಯಸ್ಸಿನಲ್ಲಿ ನಾಯಕಿಯಾಗಿ ಶಾಕುಂತಲಾ, ಚಿತ್ರಾಂಗದಾ, ಗುಣಸಾಗರಿ ನಾಟಕಗಳಲ್ಲಿ ಅಭಿನಯಿಸಿದರು. ಈ ನಾಟಕಗಳಲ್ಲಿ ಇವರ ಅಣ್ಣ ವೀರಪ್ಪನೇ ನಾಯಕ. ತಮ್ಮ ಸಹೋದರನ ಕೆ.ಬಿ.ಆರ್ ಡ್ರಾಮಾ ಕಂಪನಿಯಿಂದ ಹೊರಬಂದ ಬಳಿಕ (1972), ಸಾಕಷ್ಟು ಸಂಕಷ್ಟಗಳನ್ನು ಅನುಭವಿಸಿ ಸ್ವಂತ ನಾಟಕ ಕಂಪನಿಯನ್ನು 1975ರಲ್ಲಿ ಸ್ಥಾಪಿಸಿದರು.



1960ರ ದಶಕ ಇವರ ರಂಗಭೂಮಿ ಜೀವನದಲ್ಲಿ ಸಂತಸವನ್ನುಂಟುಮಾಡಿದ ಪರ್ವಕಾಲ. 'ಹಳ್ಳಿ ಹುಡುಗಿ' ಮೇರು ನಾಟಕವಾಗಿ ಹೊರಹೊಮ್ಮಿತು; ಇವರಿಗೆ ಅಪಾರ ಖ್ಯಾತಿ ತಂದುಕೊಟ್ಟಿತು. ಸಾವಿರಾರು ಪ್ರದರ್ಶನಗಳನ್ನು ಕಂಡ ಹೆಗ್ಗಳಿಕೆ ಈ ನಾಟಕದ್ದು. ಹಾಗೆಯೇ ಗುಣಸಾಗರಿಯಲ್ಲಿ ಇವರ ಅಭಿನಯದ ನಾಯಕಿಯ ಪಾತ್ರ ಪ್ರೇಕ್ಷಕರನ್ನು ಆಕರ್ಷಿಸಿತು. ಬದಲಾದ ಕಾಲಕ್ಕನುಗುಣವಾಗಿ ಬ್ರಹ್ಮಚಾರಿಯಮಗ, ಪತಾಶಿ ಪಾಶ, ಸಿಡಿದೆದ್ದ ಬಡವ ಎಂಬ ಸಾಮಾಜಿಕ ನಾಟಕಗಳು ರಂಗವನ್ನೇರಿದವು. ಹೀಗೆ ಮೂರು ದಶಕಗಳು ಸಾಗಿಬಂದ ನಾಟಕಗಳಲ್ಲಿ ಪಾತ್ರವಹಿಸಿದ ಇವರ ಅಭಿನಯ ಪಕ್ವವಾಗುತ್ತ ಬಂತು. ಒಂದೇ ನಾಟಕದಲ್ಲಿ ತಾಯಿ ಮತ್ತು ಮಗಳ ಎರಡು ವಿಭಿನ್ನ ಸ್ವಭಾವದ ಪಾತ್ರಗಳಲ್ಲಿ ನಟಿಸುವುದರ ಮೂಲಕವೂ ಅಭಿನಯದ ಎರಡು ಸಾಧ್ಯತೆಗಳನ್ನು ಕೂಡ ಇವರು ಪ್ರದರ್ಶಿಸಿದ್ದಾರೆ.

80ರ ದಶಕದಲ್ಲಿ ಬೆಳಗಾಂವಿಯ ಶಿವಾನಂದ ಥಿಯೇಟರಿನಲ್ಲಿ ಇವರ ಹಲವು ನಾಟಕಗಳು ನಿರಂತರವಾಗಿ ನಡೆದು ಯಶಸ್ವಿಯಾದುವು. ಇದು ಕೆಲವು ಕನ್ನಡ ಭಾಷಾ ವಿರೋಧಿಗಳ ಕಣ್ಣು ಕೆಂಪಗಾಗಲು ಕಾರಣವಾಯಿತು. ನಾಟಕ ಪ್ರದರ್ಶನಗಳಿಗೆ ಅಡ್ಡಿಯನ್ನುಂಟುಮಾಡ ತೊಡಗಿದರು. ಈ ಸಂದರ್ಭದಲ್ಲಿ ಇವರು ಎದೆಗುಂದದೆ ಪರಿಸ್ಥಿತಿಯನ್ನು ದಿಟ್ಟತನದಿಂದ ಎದುರಿಸಿದರು. ಆಗ ಅದೇ ಊರಿನ ಖಾಲಿ ಜಾಗವೊಂದರಲ್ಲಿ ರಂಗಮಂದಿರವನ್ನು ನಿರ್ಮಿಸಿದರು. ಮರಾಠಿಗರ ನಿರಂತರ ಕಿರುಕುಳಕ್ಕೀಡಾದ ಇವರು ಕಡೆಗೆ ಶ್ರೇಷ್ಠ ನ್ಯಾಯಾಲಯದ ಮೊರೆಹೊಕ್ಕು ಯಶಸ್ವಿಯಾದರು. ಗಡಿಪ್ರದೇಶವಾದ ಬೆಳಗಾಂವಿಯಲ್ಲಿ ಸು.10 ವರ್ಷಗಳು ಮರಾಠಿಗರ ಉಪಟಳದ ನಡುವೆಯೂ ಕನ್ನಡ ನಾಟಕಗಳನ್ನು ಪ್ರದರ್ಶಿಸಿದ ದಿಟ್ಟತನ ಇವರದು. ಶಿವಾಜಿ ಕುರಿತಂತೆ ನಾಟಕವೊಂದನ್ನು ಸಿದ್ಧಪಡಿಸಿ ರಂಗದ ಮೇಲೆ ತಂದರು. ಮರಾಠಿ ಪ್ರೇಕ್ಷಕರು ಈ ನಾಟಕ ನೋಡಿ ದಂಗಾದರು. ಇವರ ಶ್ರೇಷ್ಠ ಅಭಿನಯ ಹಾಗೂ ನೃತ್ಯಗಳು ಮರಾಠಿಗರನ್ನೂ ಮೋಡಿಮಾಡಿದವು. ಪ್ರಬುದ್ಧ ಕಲಾವಿದೆಯಾಗಿ ಜಾತಿ, ಭಾಷಾ ಭೇದಗಳನ್ನು ಮೆಟ್ಟಿನಿಂತರು. ಜೊತೆಗೆ ಬೆಳಗಾಂವಿ ಮಹಾನಗರ ಪಾಲಿಕೆ ಚುನಾವಣೆಗೆ ಸ್ಪರ್ಧಿಸಿ ಜಯಗಳಿಸಿದರು. ಇವರು ನಿರ್ಮಿಸಿದ ಥಿಯೇಟರ್ ಚಿಂದೋಡಿ ಲೀಲಾ ರಂಗಮಂದಿರ ಎಂದೇ ಪ್ರಸಿದ್ಧಿಯಾಗಿದೆ.

'ಪೋಲೀಸನ ಮಗಳು' ಕೆ.ಬಿ.ಆರ್ ಡ್ರಾಮಾ ಕಂಪನಿಯ ಮತ್ತೊಂದು ಪ್ರಸಿದ್ಧ ನಾಟಕ. ಇದು ನೂರಾರು ಪ್ರದರ್ಶನಗಳನ್ನು ಕಂಡು ದಾಖಲೆ ನಿರ್ಮಿಸಿದೆ. ಅಷ್ಟೇ ಪ್ರಸಿದ್ಧವಾದ ಇನ್ನೊಂದು ನಾಟಕ 'ದೇಸಾಯರ ದರ್ಬಾರ್'. 'ಮದುವೆಯಾದರೂ ಮಡದಿಯಲ್ಲ' ಎಂಬ ನಾಟಕ 1200 ಪ್ರದರ್ಶನಗಳನ್ನು ಕಂಡಿದೆ. ಏಣಗಿ ಬಾಳಪ್ಪನವರ ಕಂಪನಿ, ಗುಬ್ಬಿ ಕಂಪನಿ, ಗುಡಗೇರಿ ಕಂಪನಿಗಳಲ್ಲೂ ಕೆಲ ಕಾಲ ಇವರು ಅಭಿನಯಿಸಿದ್ದಾರೆ. ಇವರು ಚಲನಚಿತ್ರ ಕ್ಷೇತ್ರದಲ್ಲಿಯೂ ಹೆಸರು ಮಾಡಿದ್ದಾರೆ. 33 ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಬಿ.ಆರ್.ಪಂತುಲು ಅವರ ಕಿತ್ತೂರು ಚೆನ್ನಮ್ಮ ಇವರ ಅಭಿನಯದ ಮೊದಲ ಚಿತ್ರ. ಗಾಳಿಗೋಪುರ, ನವಜೀವನ, ಶ್ರೀ ಕೃಷ್ಣದೇವರಾಯ, ಶರಪಂಜರ, ಮುಕ್ತಿ, ತುಂಬಿದ ಕೊಡ – ಈ ಮೊದಲಾದ ಚಿತ್ರಗಳಲ್ಲಿ ಸ್ಮರಣೀಯ ಅಭಿನಯ ನೀಡಿದ್ದಾರೆ. 'ಗಾನಯೋಗಿ ಪಂಚಾಕ್ಷರಿ ಗವಾಯಿ' ಚಲನಚಿತ್ರದ ನಿರ್ಮಾಪಕಿಯಾಗಿ ರಾಜ್ಯ ಪ್ರಶಸ್ತಿ ಗಳಿಸಿದ ಹೆಗ್ಗಳಿಕೆ ಇವರದು.

ಇವರಿಗೆ ಅನೇಕ ಗೌರವ, ಬಿರುದು, ಪ್ರಶಸ್ತಿಗಳು ದೊರೆತಿವೆ. ತ್ರಿಭುವನ ಕನ್ನಡತಿ, ಅಭಿನವ ಕಿತ್ತೂರು ಚೆನ್ನಮ್ಮ ಎಂಬ ಬಿರುದುಗಳನ್ನು ನೀಡಲಾಗಿದೆ. ಇವರಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ (1996), ಪದ್ಮಶ್ರೀ ಪ್ರಶಸ್ತಿ ಲಭಿಸಿವೆ. ವೃತ್ತಿ ರಂಗಭೂಮಿಗೆ ಗಣನೀಯ ಸೇವೆಸಲ್ಲಿಸಿದುದಕ್ಕಾಗಿ ಇವರಿಗೆ ಗುಬ್ಬಿವೀರಣ್ಣ ಪ್ರಶಸ್ತಿಯನ್ನು ನೀಡಲಾಗಿದೆ (2002). ಇವರು ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿದ್ದರು (1991-95). ಮೊದಲಬಾರಿಗೆ ರಂಗ ಕಲಾವಿದೆಯೊಬ್ಬರನ್ನು ಸರ್ಕಾರ ಇಂಥ ಹುದ್ದೆಗೆ ನಿಯಮಿಸಿದ್ದು ಇಲ್ಲಿ ಉಲ್ಲೇಖನೀಯ. 25 ವರ್ಷಕ್ಕೂ ಹೆಚ್ಚು ಕಾಲದಿಂದ ಅಸ್ತಿತ್ವದಲ್ಲಿದ್ದ ನಾಟಕ ಕಂಪನಿಗಳಿಗೆ ಆರ್ಥಿಕ ನೆರವು ನೀಡಲು ವ್ಯವಸ್ಥೆ ಮಾಡಿದ್ದು ಇವರ ಕಾಲಾವಧಿಯ ಮಹತ್ವದ ಸಾಧನೆ ಎನ್ನಬಹುದು. (ಎಚ್.ಕೆ.ಆರ್‌ಎ.)

**ಚಿಕಣಿ ಚಿತ್ರಕಲೆ :** ದಂತ, ಮರ, ಚರ್ಮ ಪತ್ರಗಳ ಮೇಲೆ ಸಣ್ಣ ಸಣ್ಣ ಆಕಾರದಲ್ಲಿ ಸ್ನಿಗ್ಧಮನೋಹರವಾಗಿ ರಚಿಸಿದ ಸೂಕ್ಷ್ಮ ಪ್ರತಿರೂಪಗಳು (ಮಿನಿಯೇಚರ್ ಪೇಂಟಿಂಗ್ಸ್). ಲಲಿತಕಲೆಯ ಮಾಧ್ಯಮಗಳಲ್ಲಿ ಒಂದೆನಿಸಿದ



ಮಹಿಷಾಸುರಮರ್ದಿನಿ: ವಿಜಯ ಹಾಗರಗುಂಡಗಿ ಅವರ ಕೃತಿ

ಈ ಕಲೆ ಕರಕುಶಲಕಲೆಯ ಒಂದು ಅಂಗವಾಗಿದೆ. ಮುಹಮ್ಮದೀಯರು ಭಾರತಕ್ಕೆ ಬಂದಾಗ ಈ ಕಲೆ ಅವರೊಡನೆ ಬಂತೆಂದು ಪ್ರತೀತಿ. ಅನಂತರ ಭಾರತದಾದ್ಯಂತ ಈ ಕಲೆ ಹಿಂದು ಮುಸ್ಲಿಂರ ಬದುಕಿನ ಸಾಮರಸ್ಯ ಹಾಗೂ ಬಾಂಧವ್ಯದ ಸಂಕೇತವಾಗಿ ರೂಪು ತಾಳಿತು. ಗುಜರಾತ್, ರಾಜಸ್ಥಾನ, ತಮಿಳುನಾಡು, ಆಂಧ್ರಪ್ರದೇಶ ಮುಂತಾದ ಕಡೆಗಳಲ್ಲೆಲ್ಲ ಅಲ್ಲಿನ ರಾಜರ ಸಾಂಸ್ಕೃತಿಕ ಆಡಳಿತ ವೈಖರಿಯ ರೂಪಗಳನ್ನು ಈ ಕಲೆಯ ಮಾಧ್ಯಮಗಳಲ್ಲಿ ಬಳಸಿಕೊಳ್ಳಲಾಯಿತು. ಕರ್ನಾಟಕದಲ್ಲಿ ವಿಜಯನಗರ ಅರಸರ ಕಾಲದಲ್ಲಿ (1540) ಈ ಕಲೆ ರೂಪು ಪಡೆಯಿತು. ಇಲ್ಲಿನ ಕಲಾವಿದರು ದಖನೀ ಸುಲ್ತಾನರ ಚಿಕಣಿ ಚಿತ್ರಶೈಲಿಗಳಲ್ಲೆ ಚಿತ್ರ ರಚಿಸುತ್ತಿದ್ದರು. ಇವರು ಚಿತ್ರ ರಚಿಸುವುದನ್ನೆ ವೃತ್ತಿಯಾಗಿ ಮೈಗೂಡಿಸಿಕೊಂಡರು.

ವಿಜಯನಗರ ಅರಸರ ಕಾಲದಲ್ಲಿ ರಥಗಳು, ಬಾಗಿಲುಗಳ ಮೇಲೆ ಚಿಕಣಿ ಚಿತ್ರಕಲೆ ಅಲಂಕಾರದ ಸ್ಥಾನ ಪಡೆದುಕೊಂಡಿತು. ಇಲ್ಲಿನ ಕಲೆಗಳು ರಾಮಾಯಣ, ಮಹಾಭಾರತ, ಪುರಾಣಗಳಿಗೆ ಸಂಬಂಧಿಸಿದ ಸಾಂಪ್ರದಾಯಿಕ ಶೈಲಿಯ ರಚನೆಗಳನ್ನು ಅನುಸರಿಸುತ್ತ ಬಂದಿವೆ. ಇದರ ಜೊತೆಯಲ್ಲೆ ಸಮಕಾಲೀನರ ಅಭಿರುಚಿಗೆ ತಕ್ಕಂತೆ ಕೆತ್ತನೆಕೆಲಸ, ನವಗ್ರಹದೇವತೆಗಳು, ಆಲಂಕಾರಿಕ ಬೊಂಬೆಗಳು ಹಾಗೂ ಗ್ರಾಮದೇವತೆಯ ಮೂರ್ತಿಗಳಿಗೆ ಬಣ್ಣ ಹಚ್ಚುವುದು, ಮಾರುಕಟ್ಟೆಯಲ್ಲಿ ಬೇಡಿಕೆಯಿರುವ ವಿವಿಧ ರೀತಿಯ ಗೃಹಾಲಂಕರಣದ ಫಲಪುಷ್ಪಗಳು, ಕುಳಿತುಕೊಳ್ಳಲು ಉಪಯೋಗಿಸುವ ಕಲಾತ್ಮಕ ಮರದ ಮಣೆಗಳು -ಹೀಗೆ ಸಿದ್ಧಪಡಿಸಿದ ಎಲ್ಲ ವಸ್ತುಗಳಿಗೂ ಚಿತ್ರಕಾರರು ಗತಕಾಲದ ಮೆರಗು ನೀಡುತ್ತ ಬಂದಿದ್ದಾರೆ. ಕಲಾವಿದರು ಪ್ರಕೃತಿಯಲ್ಲಿ ದೊರಕುವ ಸುಣ್ಣದಕಲ್ಲು, ಸಿದ್ದೆಮಣ್ಣು, ಕೆಂಪುಮಣ್ಣು, ದೀಪದಕಾಡಿಗೆ, ಅರಿಶಿಣದ ಕೊನೆಗಳಿಂದ ಕೆಂಪು, ಹಳದಿ, ಹಸುರು, ನೀಲಿ, ಕಂದು, ಕಪ್ಪು ಬಣ್ಣಗಳನ್ನು ಸಿದ್ಧಪಡಿಸಿಕೊಂಡು, ಈ ಎಲ್ಲ ಬಣ್ಣಗಳ ಜೊತೆಗೆ ತವರದಲೋಹದಿಂದ ಸಿದ್ಧಪಡಿಸಿಕೊಂಡ ಬಣ್ಣವನ್ನು ಮಿಶ್ರಣಮಾಡಿ ಚಿಕಣಿ ಚಿತ್ರಗಳಿಗೆ ಲೇಪನ ಮಾಡುವುದಿದೆ. ಹೀಗೆ ಲೇಪನ ಮಾಡುವುದರಿಂದ ಚಿಕಣಿಕಲೆ ಶೋಭೆ ಗೊಳ್ಳುತ್ತದೆ. ರಾಯಚೂರು ಜಿಲ್ಲೆ ಕೊಪ್ಪಳ ತಾಲ್ಲೂಕಿನ ಕಿನ್ನಾಳ ಗ್ರಾಮ ಈ ಕಲೆಯ ಜೀವಂತಿಕೆಯನ್ನು ಇಂದಿಗೂ ಉಳಿಸಿಕೊಂಡಿದೆ. (ಪಿ.ಜಿಜಿ.)

**ಚಿಕುಪಾಧ್ಯಾಯ :** ಸು.17ನೆಯ ಶತಮಾನ. ವಿಷ್ಣುಪುರಾಣ ಎಂಬ ಗ್ರಂಥದ ಕರ್ತೃ. ಈತನ ತಂದೆ ತೆರಕಣಾಂಬಿಯ ರಂಗಾರ್ಯ ಪಂಡಿತ, ತಾಯಿ ನಾಚಾರಮ್ಮ. ಈತ ಮೈಸೂರು ದೊರೆ ಚಿಕ್ಕದೇವರಾಜ ಒಡೆಯರ (1673-1704) ಆಸ್ಥಾನದಲ್ಲಿ ಕವಿಯೂ ಮಂತ್ರಿಯೂ ಆಗಿದ್ದನೆಂದು ತಿಳಿದುಬರುತ್ತದೆ. ಅಷ್ಟೇ ಅಲ್ಲದೆ ಈತ ಚಿಕ್ಕದೇವರಾಯನಿಗೆ ಉಪಾಧ್ಯಾಯನೂ ಆಗಿದ್ದನಂತೆ. ಆದುದರಿಂದ ಈತನಿಗೆ ಚಿಕುಪಾಧ್ಯಾಯ ಎಂಬ ಹೆಸರು ಬಂತೆಂದು ಪ್ರತೀತಿ. ಇವನ ಮೊದಲ ಹೆಸರು ಲಕ್ಷ್ಮೀಪತಿ. ಸಾಹಿತ್ಯ ಪ್ರಪಂಚದಲ್ಲಿ ಚಿಕುಪಾಧ್ಯಾಯನೆಂದೇ ಪ್ರಸಿದ್ಧಿ. ಈತನ ಕೃತಿಗಳ ಒಟ್ಟು ಸಂಖ್ಯೆ ಎಷ್ಟೆಂದು ತಿಳಿಯದು. ಇದುವರೆಗೆ 28 ಕೃತಿಗಳು ಮಾತ್ರ ದೊರಕಿವೆ. ಪೂರ್ವಕವಿಗಳಲ್ಲಿ ರುದ್ರಭಟ್ಟನನ್ನು ಮಾತ್ರ ಸ್ಮರಿಸಿದ್ದಾನೆ. ತಿರುಮಲಾರ್ಯ, ಸಿಂಗರಾರ್ಯ, ಸಂಚಿಯ ಹೊನ್ನಮ್ಮ, ತಿಮ್ಮಕವಿ, ಚಿದಾನಂದ ಕವಿ, ಮಲ್ಲರಸ ಮೊದಲಾದವರು ಈತನ ಸಮಕಾಲೀನರು. ಅರಸನ ಪ್ರೇರಣೆ, ಪ್ರೋತ್ಸಾಹದಿಂದ ತಾನು ಕೃತಿ ರಚನೆಗೆ ತೊಡಗಿದಂತೆ ಕವಿ ಹೇಳಿಕೊಂಡಿದ್ದಾನೆ. ಚಂಪೂ, ಸಾಂಗತ್ಯ ಮತ್ತು ಗದ್ಯ - ಈ ಮೂರೂ ಪ್ರಕಾರಗಳಲ್ಲಿ ಕೃತಿರಚನೆ ಮಾಡಿದ್ದಾನೆ.

ಯಾದವಗಿರಿ ಮಾಹಾತ್ಮ್ಯ, ಕಮಲಾಚಲ ಮಾಹಾತ್ಮ್ಯ, ಪಶ್ಚಿಮರಂಗ ಮಾಹಾತ್ಮ್ಯ, ವೆಂಕಟಗಿರಿ ಮಾಹಾತ್ಮ್ಯ, ಹಸ್ತಗಿರಿ ಮಾಹಾತ್ಮ್ಯ, ಶ್ರೀರಂಗಮಾಹಾತ್ಮ್ಯ, ಯದುಗಿರಿ ಮಾಹಾತ್ಮ್ಯ, ಇವು ತೀರ್ಥಕ್ಷೇತ್ರಗಳ ಹಿರಿಮೆಯನ್ನೂ ಅವಕ್ಕೆ ಸಂಬಂಧಿಸಿದ ಪುರಾತನ ಕಥೆಗಳನ್ನೂ ಹೇಳುವ ಗ್ರಂಥಗಳು. ಕಮಲಾಚಲ ಮಾಹಾತ್ಮ್ಯ ಹಿಮವದ್ಗೋಪಾಲಸ್ವಾಮಿ ಬೆಟ್ಟದ ಮಹಾತ್ಮೆಯನ್ನು ವಿವರಿಸುವ ಚಂಪೂ ಗ್ರಂಥ. ಇದರಲ್ಲಿ ಸು.3750 ಪದ್ಯಗಳಿವೆ. ಕಂಚಿಯ ಮಹತ್ತನ್ನು ಪ್ರಶಂಸಿಸುವ ಹಸ್ತಗಿರಿ ಮಹಾತ್ಮ್ಯ ಚಂಪೂವಿನಲ್ಲೇ ಇದ್ದು 1200 ಪದ್ಯಗಳನ್ನೊಳಗೊಂಡಿದೆ. ಯಾದವಗಿರಿ ಮಾಹಾತ್ಮ್ಯ (1200 ಪದ್ಯಗಳು), ಪಶ್ಚಿಮರಂಗ ಮಾಹಾತ್ಮ್ಯ (320 ಪದ್ಯಗಳು) -ಇವು ಸಾಂಗತ್ಯದಲ್ಲಿ ರಚಿತವಾಗಿವೆ. ಉಳಿದ ಮೂರು ಗ್ರಂಥಗಳು ಗದ್ಯದಲ್ಲಿವೆ.

ಸಾತ್ತ್ವಿಕ ಬ್ರಹ್ಮವಿದ್ಯಾವಿಲಾಸ ಎಂಬ ಗ್ರಂಥ ವಿಶಿಷ್ಟಾದ್ವೈತ ತತ್ತ್ವಗಳನ್ನು ಪ್ರತಿಪಾದಿಸುವ ಕೃತಿ. ಇದು ಇದೇ ಹೆಸರಿನ ಸಂಸ್ಕೃತ ಕೃತಿಯ ಭಾಷಾಂತರ. ಇದರಲ್ಲಿ 3 ಆಶ್ವಾಸಗಳಿವೆ. ಈ ಗ್ರಂಥ ಗುರುಶಿಷ್ಯ ಪ್ರಶ್ನೋತ್ತರ ರೂಪದಲ್ಲಿದ್ದು ಚಂಪೂವಿನಲ್ಲಿ ರಚಿತವಾಗಿದೆ.

ರುಕ್ಮಾಂಗದ ಚರಿತೆ (2286 ಪದ್ಯಗಳು) ಏಕಾದಶಿ ವ್ರತಮಹಿಮೆಯನ್ನೊಳಗೊಂಡ ಗ್ರಂಥ. ಚಂಪೂವಿನಲ್ಲಿದೆ. ದಿವ್ಯಸೂರಿ ಚರಿತೆ ಆಳ್ವಾರರುಗಳ ಕಥೆಯನ್ನು ಹೇಳುತ್ತದೆ. ತಮಿಳಿನಲ್ಲಿರುವ ಕಥೆಗಳನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾನೆ. ಶೇಷಧರ್ಮ, ಹರಿವಂಶದ ಅಶ್ವಮೇಧಿಕ ಪರ್ವದಲ್ಲಿ ಬರುವ ಕಥೆಯನ್ನು ಆಧರಿಸಿ 25 ಅಧ್ಯಾಯಗಳಲ್ಲಿ ಗದ್ಯದಲ್ಲಿ ಬರೆದ ಕೃತಿ. ಮಹಾವಿಷ್ಣುವಿನ ಸ್ತೋತ್ರ ಮತ್ತು ವರ್ಣನೆಗಳು ಈತನ ಇತರ ಕೆಲವು ಕೃತಿಗಳ ವಸ್ತು. ಕೃಷ್ಣನ ರೂಪವನ್ನು ಕಂಡು ಮೆಚ್ಚಿ ಮೋಹಿಸಿದ ಸ್ತ್ರೀಯರ ಸರಸ ಸಲ್ಲಾಪಗಳ ನಿರೂಪಣೆಯೇ ಶೃಂಗಾರಶತಕ ಸಾಂಗತ್ಯ. ಇದಲ್ಲದೆ ಈತ ಚಿತ್ರಕವಿತೆಗೂ ಕೈಹಾಕಿದ್ದಾನೆ. ಅಕ್ಷರಮಾಲಿಕಾ ಸಾಂಗತ್ಯ ಎಂಬ ಒಂದು ಶತಕದಲ್ಲಿ 'ಕ' ಕಾರದಿಂದ ಹಿಡಿದು 'ಕ್ಷ' ಕಾರದ ವರೆಗೆ ಅಕ್ಷರಾನುಕ್ರಮದಲ್ಲಿ ಕಾಗುಣಿತಾನುಸಾರವಾಗಿಯೂ ಕಲ್ಪಿಸಿ ಹೇಳಿದ ರಂಗನಾಥಸ್ವಾಮಿಯ ಸ್ತೋತ್ರ ಇದೆ. ಚಿತ್ರಶತಕ ಸಾಂಗತ್ಯ ಎಂಬ ಗ್ರಂಥದಲ್ಲಿ ಕನ್ನಡನಾಡು ನುಡಿಗಳ ವಿಷಯವಾಗಿ ಹೇಳಿರುವ ಪದ್ಯಗಳು ಬಹಳ ಸ್ವಾರಸ್ಯವಾಗಿವೆ. (ಕೆ.ವಿಇ.)

ಈತನ ವಿಷ್ಣುಪುರಾಣ ಸಂಸ್ಕೃತ ಗ್ರಂಥದ ಅನುವಾದ. ಚಂಪೂ, ಗದ್ಯ ಎರಡರಲ್ಲೂ ರಚಿತವಾಗಿವೆ. ಸಂಸ್ಕೃತದಲ್ಲಿರುವಂತೆ ಎರಡೂ ಕೃತಿಗಳಲ್ಲೂ ಆರು ಅಂಶಗಳಿವೆ. ಒಂದನೆಯ ಅಂಶದಲ್ಲಿ ಜಗತ್ಸೃಷ್ಟಿ, ಸಮುದ್ರಮಥನ, ದಕ್ಷನ ಕಥೆ, ಧ್ರುವಚರಿತೆ, ಪೃಥುವಿನ ಕಥೆ, ಪ್ರಚೇತಸಾಖ್ಯಾನ, ಪ್ರಹ್ಲಾದನ ಕಥೆ, ದೈತ್ಯ ದಾನವೋತ್ಪತ್ತಿ, ಕಶ್ಯಪಸಂತತಿ ಮತ್ತು ಪರಮಾತ್ಮನ ಮಾಹಾತ್ಮ್ಯ ಹೇಳಿದೆ. ಎರಡನೆಯ ಅಂಶದಲ್ಲಿ ಪ್ರಿಯವ್ರತಾಖ್ಯಾನ, ದ್ವೀಪ ವರ್ಷ ನಿರೂಪಣೆ, ಪಾತಾಳ ನರಕಾಖ್ಯಾನ,

ಸಪ್ತಸ್ವರ್ಗ, ಸೂರ್ಯಾದಿಗ್ರಹಗಳ ವಿಚಾರ, ಭರತಚರಿತೆ, ಮುಕ್ತಿ ಮಾರ್ಗ ನಿದರ್ಶನ, ನಿದಾಘ-ಋತುಸಂವಾದ -ಈ ವಿಷಯಗಳು ಸಂಕಲಿತವಾಗಿವೆ. ಮೂರನೆಯ ಅಂಶದಲ್ಲಿ ಮನ್ವಂತರಗಳು, ವೇದವ್ಯಾಸರ ಅವತಾರ, ನರಕೋದ್ಧಾರಕ ಕರ್ಮ, ಸಗರ-ಔರ್ವ ಸಂವಾದದ ಮೂಲಕ ಧರ್ಮನಿರೂಪಣೆ, ವರ್ಣಾಶ್ರಮ ನಿಬಂಧನೆ ಮತ್ತು ಸದಾಚಾರ ಈ ವಿಷಯಗಳು ಸಂಗೃಹೀತವಾಗಿವೆ. ನಾಲ್ಕನೆಯ ಅಂಶದಲ್ಲಿ ಸೂರ್ಯಚಂದ್ರವಂಶಗಳಲ್ಲಿ ಉತ್ಪನ್ನವಾದ ನಾನಾ ರಾಜರ ಕಥೆಗಳ ವಿವರಣೆಯಿದೆ. ಐದನೆಯ ಅಂಶದಲ್ಲಿ ಕೃಷ್ಣಾವತಾರದ ಕಥೆ ವರ್ಣಿತವಾಗಿದೆ. ಆರನೆಯ ಅಂಶದಲ್ಲಿ ಕಲಿಯುಗಧರ್ಮ, ನಾಲ್ಕು ವಿಧ ಪ್ರಳಯ, ಬ್ರಹ್ಮಜ್ಞಾನ ನಿರೂಪಣೆ ಈ ವಿಷಯಗಳು ನಿರೂಪಿತವಾಗಿದೆ. ಚಂಪೂ ಕೃತಿಯಲ್ಲಿ ಸಂಸ್ಕೃತ ಪದಗಳ ಬಳಕೆ ಅಧಿಕವಾಗಿರುವುದರಿಂದ ಬಂಧ ಪ್ರೌಢವಾಗಿದೆ. ಈ ಗ್ರಂಥದಲ್ಲಿ 32 ಆಶ್ವಾಸಗಳೂ 6244 ಪದ್ಯಗಳೂ ಇವೆ. ಇದನ್ನು 1691ರಲ್ಲಿ ಬರೆದು ಮುಗಿಸಿದಂತೆ ಕವಿ ಹೇಳಿಕೊಂಡಿದ್ದಾನೆ. (ಎಸ್.ಎನ್.ಕೆ.)

ಚಿಕುಪಾಧ್ಯಾಯ ಸಂಸ್ಕೃತದಲ್ಲಿ ಪಂಡಿತನಾಗಿದ್ದು ಹಲವು ಪುರಾಣಗಳನ್ನು ಆಳವಾಗಿ ಅಭ್ಯಾಸ ಮಾಡಿದಂತೆ ತೋರುತ್ತದೆ. ಪುರಾಣಗಳಿಂದ ಸಂಗ್ರಹಿಸಿದ ಕಥೆಗಳೇ ಈತನ ಅನೇಕ ಕ್ಷೇತ್ರಗಳ ಮಾಹಾತ್ಮ್ಯ ವರ್ಣನೆಗೆ ಸಹಾಯಕವಾಗಿವೆ. ಕಾಮಂದಕ ನೀತಿ, ತಿರುವಾಯ್ಮೊಳಿ ಎಂಬ ಗ್ರಂಥಗಳಿಗೆ ಈತ ಕನ್ನಡದಲ್ಲಿ ಟೀಕೆಯನ್ನು ಬರೆದಿದ್ದಾನೆ. ಈ ಟೀಕೆಗಳು ಕನ್ನಡ ಗದ್ಯದ ಬೆಳೆವಣಿಗೆಯಲ್ಲಿ ಒಂದು ಮುಖ್ಯ ಘಟ್ಟವೆಂದು ಹೇಳಬಹುದು. ಸಂಸ್ಕೃತ ಶುಕಸಪ್ತತಿಯನ್ನು ಕನ್ನಡಕ್ಕೆ ಗದ್ಯರೂಪದಲ್ಲಿ ಅನುವಾದ ಮಾಡಿದ್ದಾನೆ. ಆ ಕಾಲದ ಕನ್ನಡ ಗದ್ಯಶೈಲಿಯ ಸ್ವರೂಪವನ್ನು ತಿಳಿಯಲು ಇವುಗಳಿಂದ ಬಹಳ ಸಹಾಯಕವಾಗುತ್ತದೆ. ಕನ್ನಡ ಗದ್ಯದ ಬೆಳೆವಣಿಗೆಯಲ್ಲಿ ಚಿಕುಪಾಧ್ಯಾಯನಿಗೆ ಗಣ್ಯ ಸ್ಥಾನವಿದೆ. (ಕೆ.ವಿಇ.)

**ಚಿಕ್ಕ ಕಡತೂರು :** ಕೋಲಾರ ಜಿಲ್ಲೆ ಮಾಲೂರು ತಾಲ್ಲೂಕಿನ ಒಂದು ಗ್ರಾಮ. ಈ ಗ್ರಾಮದ ನೈಋತ್ಯಕ್ಕೆ ಕೊಂಚ ದೂರದಲ್ಲಿ ಸಿದ್ಧಪ್ಪದೇವರ ದೇವಾಲಯವಿದೆ. ಅದರ ಪಕ್ಕದಲ್ಲಿ ವೀರಪುರುಷರ ಸ್ಮರಣಾರ್ಥವಾಗಿ ನಿರ್ಮಿಸಿದ ಅನೇಕ ವೀರಗುಡಿಗಳಿವೆ. ಇವು ಮೂರು ಚಪ್ಪಡಿಗಳನ್ನು ಆಯ ವಿನ್ಯಾಸದಲ್ಲಿರುವಂತೆ ಹೂತು ಮೇಲೊಂದು ಚಪ್ಪಡಿಯನ್ನು ಹಾಸಿ ನಿರ್ಮಿಸಿದವು. ಮೂರು-ನಾಲ್ಕು ವರ್ಷಗಳಿಗೊಮ್ಮೆ ಇಂಥ ಗುಡಿಗಳನ್ನು ಹೊಸದಾಗಿ ಸೇರಿಸುತ್ತಿದ್ದರೆಂದು ಪ್ರತೀತಿ. ಸಿದ್ಧಪ್ಪ ದೇವಸ್ಥಾನದ ಮೊಗಸಾಲೆಯಲ್ಲಿ ಸು.60 ಅಡಿ ಉದ್ದ ಮತ್ತು 3/4 ಅಡಿ ವ್ಯಾಸದ ಒಂದು ಮರದ ತೊಲೆಯಿದೆ. ಸಿಡಿ ಹಬ್ಬದ ಕಾಲದಲ್ಲಿ ಭಕ್ತರು ಮೈಗೆ ಕೊಕ್ಕೆಗಳನ್ನು ಚುಚ್ಚಿಕೊಂಡು ತೂಗಾಡಲು ಈ ತೊಲೆಯನ್ನು ಉಪಯೋಗಿಸುತ್ತಿದ್ದರು. ಇಲ್ಲಿ ಕಂಬಗಳ ಮೇಲೆ ನಿಂತಿರುವ ಒಂದು ಚಿಕ್ಕ ಮಂಟಪವಿದೆ. ಇದರ ಗೋಪುರದ ನಾಲ್ಕು ಕಡೆಗಳಲ್ಲಿ ಅಂದವಾದ ಶಿಲ್ಪಾಲಂಕಾರವಿದೆ.

ಈ ಊರು ಹದಿನಾರನೆಯ ಶತಮಾನದಲ್ಲಿ ಹೊಸಕೋಟೆಯ ನಾಯಕ ತಿಮ್ಮೇಗೌಡನಿಗೆ ಸೇರಿತ್ತು. ಮುಂದೆ ಬಿಜಾಪುರದ ಸ್ವಾಧೀನವಾಗಿದ್ದು, ಹೈದರ್ ಅಲಿಯ ಕಾಲದಲ್ಲಿ ಮೈಸೂರಿಗೆ ಸೇರಿತು. (ಎ.ಎಂ.)

**ಚಿಕ್ಕಜಾಲ :** ಬೆಂಗಳೂರು ಜಿಲ್ಲೆ ದೇವನಹಳ್ಳಿ ತಾಲ್ಲೂಕಿನಲ್ಲಿ ಬೆಂಗಳೂರಿನಿಂದ ಸು.24ಕಿಮೀ ಉತ್ತರಕ್ಕಿರುವ ಪ್ರಾಗೈತಿಹಾಸಿಕ ನೆಲೆ ಮತ್ತು ಇತಿಹಾಸಪ್ರಸಿದ್ಧ ಗ್ರಾಮ. ಊರಿನ ಪೂರ್ವಕ್ಕೆ ಒಂದೂವರೆ ಕಿಮೀ ದೂರದವರೆಗೆ ಹರಡಿಕೊಂಡಿರುವ ಕಬ್ಬಿಣ ಯುಗದ ಬೃಹತ್ ಶಿಲಾಸಮಾಧಿ ಸಂಸ್ಕೃತಿಗೆ ಸೇರಿದ ವಿಸ್ತಾರವಾದ ಶ್ಮಶಾನವಿದೆ. ಈ ಪ್ರಾಕ್ತನ ನೆಲೆಯನ್ನು ಆಂಗ್ಲ ಸೈನ್ಯಾಧಿಕಾರಿ ಬಿ.ಆರ್.ಬ್ರಾನ್‌ಫಿಲ್ 1881ರಲ್ಲಿ ಕಂಡುಹಿಡಿದ. ಈ ಶ್ಮಶಾನದಲ್ಲಿರುವ ಸಮಾಧಿಗಳಲ್ಲಿ ಕಲ್ಲುಚಪ್ಪಡಿಗಳನ್ನು ಪೆಟ್ಟಿಗೆ ಆಕಾರದಲ್ಲಿ ಜೋಡಿಸಿ ನಿರ್ಮಿಸಿದ ಶಿಲಾತೊಟ್ಟಿಗಳಿದ್ದು ಅವನ್ನು ಮುಚ್ಚಲು ಉಪಯೋಗಿಸಿರುವ ಚಪ್ಪಡಿಗಳು 15' ಉದ್ದಗಲವುಳ್ಳವಾಗಿವೆ. ಒಂದೆರಡು ಶಿಲಾ ತೊಟ್ಟಿಗಳಲ್ಲಿ ಪೂರ್ವದ ಚಪ್ಪಡಿಗಳಲ್ಲಿ ಗುಂಡಾದ ರಂಧ್ರವಿದೆ. ಸಮಾಧಿಗಳೊಳಗೆ ಮೃತರ ದೇಹಾವಶೇಷಗಳು, ಮಡಕೆ, ಕುಡಿಕೆಗಳು, ಕಬ್ಬಿಣದ ಆಯುಧೋಪಕರಣಗಳು ಕಂಡುಬರುತ್ತವೆ. ಅವುಗಳಲ್ಲಿ ಕೆಲವನ್ನು ಹೊರತೆಗೆದು ಈಗ ಚೆನ್ನೈ ನಗರ ವಸ್ತುಸಂಗ್ರಹಾಲಯದಲ್ಲಿ ಪ್ರದರ್ಶಿಸಲಾಗಿದೆ. ಈ ಊರಿನಲ್ಲಿ ಹೊಯ್ಸಳರ ಕಾಲದಲ್ಲಿ ಕಟ್ಟಿದ ಒಂದು



ಕಲ್ಯಾಣಿ, ಚಿಕ್ಕಜಾಲ

ಚೆನ್ನಕೇಶವ ದೇವಾಲಯವಿದೆ. ಇದು ಸು.1275ರ ರಚನೆ. ಮುಮ್ಮಡಿ ವೀರಬಲ್ಲಾಳ ಮತ್ತು ವಿಜಯನಗರ ಅರಸರ ಕಾಲದ ಏಳು ಶಾಸನಗಳು ಇಲ್ಲಿದ್ದು, ಅವು ದೇವಾಲಯಗಳಿಗೆ ಗ್ರಾಮಭೂಮಿಗಳನ್ನು ದತ್ತಿ ಕೊಟ್ಟ ವಿಷಯವನ್ನು ತಿಳಿಸುತ್ತವೆ. ಊರಿನಲ್ಲಿ ಸುಂದರವಾದ ಒಂದು ಹಳೆಯ ಕಲ್ಯಾಣಿ ಇದೆ. (ಬಿ.ಕೆ.ಜಿ.)

**ಚಿಕ್ಕಜೋಗಿಹಳ್ಳಿ :** ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲ್ಲೂಕಿನ ಒಂದು ಗ್ರಾಮ. ಕೂಡ್ಲಿಗಿಯ ದಕ್ಷಿಣಕ್ಕೆ 26ಕಿಮೀ ದೂರದಲ್ಲಿ ಬಳ್ಳಾರಿ ಜಗಳೂರು ಮಾರ್ಗದಲ್ಲಿ ಬಳ್ಳಾರಿ ನಗರದ ನೈಋತ್ಯಕ್ಕೆ 104ಕಿಮೀ ದೂರದಲ್ಲಿದೆ.

ಇಲ್ಲಿನ ನಾಗರಿಕರು ಶ್ರಮದಾನದಿಂದ ತಮ್ಮ ಹಳ್ಳಿಯನ್ನು ಅಭಿವೃದ್ಧಿಪಡಿಸಿಕೊಂಡಿರುವುದರಿಂದ ಚಿಕ್ಕಜೋಗಿಹಳ್ಳಿ ಮಾದರಿ ಗ್ರಾಮವೆಂದು ಪ್ರಶಸ್ತಿ ಗಳಿಸಿದೆ. ಇಲ್ಲಿ ಬಾವಿಗಳನ್ನು ತೋಡಿ ಗ್ರಾಮಕ್ಕೆ ನೀರು ಸರಬರಾಜನ್ನು ಏರ್ಪಡಿಸಿಕೊಂಡಿದ್ದಾರೆ. ಚಿತ್ರದುರ್ಗ-ಬಳ್ಳಾರಿ ಹೆದ್ದಾರಿಗೆ ಸೇರುವ 30ಕಿಮೀ ದೂರದ ರಸ್ತೆಯನ್ನು ಮಾಡಿದ್ದಾರೆ. ಚಾಪೆ ಮತ್ತು ನಾರಿನ ಉತ್ಪಾದನಾ ಕೈಗಾರಿಕೆಗಳ ಸಂಘವಿದೆ. ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲೆ ಇವೆ. ಇಲ್ಲಿ ಒಂದು ತೋಟಗಾರಿಕೆ ತರಬೇತಿ ಕೇಂದ್ರವಿದೆ. *

**ಚಿಕ್ಕತಿರುಪತಿ :** ಕೋಲಾರ ಜಿಲ್ಲೆ ಮಾಲೂರು ತಾಲ್ಲೂಕಿನಲ್ಲಿ ಮಾಲೂರಿಗೆ ನೈಋತ್ಯದಲ್ಲಿ ಸರ್ಜಾಪುರ ರಸ್ತೆಯಲ್ಲಿರುವ ಒಂದು ಗ್ರಾಮ, ಯಾತ್ರಾಸ್ಥಳ. ಇಲ್ಲಿರುವ ಶ್ರೀನಿವಾಸದೇವರ ಭವ್ಯ ಗುಡಿ ಪ್ರಸಿದ್ಧ. ದೇವಾಲಯ ದೊಡ್ಡದಾಗಿದ್ದು ವಿಶಾಲವಾದ ಅಂಗಣ ಮತ್ತು ಪ್ರಾಕಾರ ಗಳನ್ನೊಳಗೊಂಡಿದೆ. ಶ್ರೀನಿವಾಸ ಎಂದು ಕರೆಯುವ ಇಲ್ಲಿರುವ ವರದರಾಜ ಮೂರ್ತಿಯನ್ನು ಸುಂದರವಾಗಿ ಕೆತ್ತಲಾಗಿದೆ. ದೇವಾಲಯದ ನವರಂಗದಲ್ಲಿ ರಾಮಾನುಜಾಚಾರ್ಯ ಮತ್ತು ವೇದಾಂತ ದೇಶಿಕರ ವಿಗ್ರಹಗಳಿವೆ. ಸ್ಥಳಪುರಾಣದ ಪ್ರಕಾರ ಯಜ್ಞೇಶ್ವರನಿಂದ ಸ್ಥಾಪಿತವಾದ ಈ ದೇವಾಲಯವನ್ನು ಜನಮೇಜಯನ ಕಾಲದಲ್ಲಿ ಪುನರ್ನಿರ್ಮಾಣ ಮಾಡಲಾಯಿತು.

ಚಿಕ್ಕತಿರುಪತಿ ಕರ್ನಾಟಕದಲ್ಲಿ ಹೆಸರುವಾಸಿಯಾಗಿದ್ದ ಧಾರ್ಮಿಕ ಕ್ಷೇತ್ರ. ಇದು ದೊಡ್ಡ ತಿರುಪತಿಯಷ್ಟೇ ಪವಿತ್ರವೆಂದು ಜನರ ನಂಬಿಕೆ. ಇಲ್ಲಿ ಪ್ರತಿವರ್ಷ ಚೈತ್ರಮಾಸದಲ್ಲಿ 7 ದಿನಗಳು ದೊಡ್ಡ ಪ್ರಮಾಣದಲ್ಲಿ ಪ್ರಸನ್ನವೆಂಕಟರಮಣಸ್ವಾಮಿ ಜಾತ್ರೆ ನಡೆಯುವುದು. ಆಗ ದನಗಳ ಜಾತ್ರೆಯೂ ನಡೆಯುವುದು. ಇಲ್ಲಿ ಯಾತ್ರಿಕರಿಗಾಗಿ ಅನೇಕ ಮಂಟಪಗಳನ್ನೂ ಛತ್ರಗಳನ್ನೂ ನಿರ್ಮಿಸಲಾಗಿದೆ. ಇಲ್ಲಿ ಪ್ರತಿ ಬುಧವಾರ ಸಂತೆ ಸೇರುತ್ತದೆ. (ಆರ್.ಸಿ.)

**ಚಿಕ್ಕದೇವರಾಜ ಒಡೆಯರ್ :** ಮೈಸೂರು ರಾಜವಂಶದ ಪ್ರಖ್ಯಾತ ದೊರೆ (1673-1704). ದೊರೆಯಾಗಿದ್ದ ದೇವರಾಜ ಒಡೆಯನ (1659-73) ಹಿರಿಯಣ್ಣ ದೊಡ್ಡದೇವರಾಜ ಒಡೆಯನ ಮಗ. 1645ರಲ್ಲಿ ಜನಿಸಿದ. ಈತನ ತಂದೆ ಇವನನ್ನು ಹಂಗಳವೆಂಬ ಗ್ರಾಮಕ್ಕೆ ಕಳಿಸಿ

ಅಂಕೆಯಲ್ಲಿರಿಸಿ, ವಿದ್ಯಾಬುದ್ಧಿಗಳನ್ನು ಕಲಿಸಿದ. ಅನಂತರ ದೇವರಾಜ ಒಡೆಯನ ಆಳಿಕೆಯ ಕಾಲದಲ್ಲಿ ಯುವರಾಜನಾಗಿ ಶ್ರೀರಂಗಪಟ್ಟಣದಲ್ಲಿದ್ದು ರಾಜ್ಯಕಾರ್ಯದಲ್ಲಿ ತರಬೇತಿಪಡೆದು ದೇವರಾಜ ಅಪುತ್ರಕನಾಗಿ ಮರಣ ಹೊಂದಿದ ಅನಂತರ ಪಟ್ಟಕ್ಕೆ ಬಂದು ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿದ.

ಈತ ಮೊದಲು ಶ್ರೀರಂಗಪಟ್ಟಣದಲ್ಲಿ ಫಿರಂಗಿಗಳನ್ನಿರಿಸಿ ಅದರ ಭದ್ರತೆಯನ್ನು ಹೆಚ್ಚಿಸಿದ. ಅನಂತರ ಹನ್ನೆರಡು ಸಾವಿರ ಕುದುರೆ ಮತ್ತು ಒಂದು ಲಕ್ಷ ಕಾಲ್ಬಲದ ಸೈನವನ್ನು ಕಟ್ಟಿ ದಿಗ್ವಿಜಯವನ್ನು ಕೈಕೊಂಡು ಅನೇಕ ಪ್ರದೇಶಗಳನ್ನು ಗೆದ್ದ. 1676ರಲ್ಲಿ ನರಸಪ್ಪ ಒಡೆಯನಿಂದ ಚಿಕ್ಕದೇವರಾಯನ ದುರ್ಗ, ಚಿಕ್ಕಪ್ಪಗೌಡನಿಂದ ದೊಡ್ಡ ದೇವಗಗನಗಿರಿ, ಜಹಾಂಗೀರ್ ಖಾನನಿಂದ ಹೊನ್ನವಳ್ಳಿ, ಹುಸೇನ್ ಖಾನ್‍ನಿಂದ ಬೊಮ್ಮಸಮುದ್ರ ಮತ್ತು ಭುಜಂಗಯ್ಯನಿಂದ ತೊಡನಾಡುಗಳನ್ನು ಗೆದ್ದ. 1678ರಲ್ಲಿ ಘುಟ್ಟಿ ಮೊದಲಿಯಾರಿಂದ ಅಂದೂರು ಮತ್ತು ಚಿಕ್ಕಪ್ಪಗೌಡನಿಂದ ಮಿಡಗೇಶಿ, ಮಧುಗಿರಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶವನ್ನು ಗೆದ್ದು ತನ್ನ ರಾಜ್ಯವನ್ನು ಬಿಜಾಪುರ ರಾಜ್ಯದ ಗಡಿವರೆಗೆ ವಿಸ್ತರಿಸಿದ್ದ. 1687ರಲ್ಲಿ ಖಾಸಿಂಖಾನನಿಂದ ತುಮಕೂರನ್ನೂ ಹಿಂದೆ ತನ್ನ ತಂದೆ ಗೆದ್ದಿದ್ದ ಚಿಕ್ಕನಾಯಕನಹಳ್ಳಿಯನ್ನೂ ಮರಾಠಾ ವೆಂಕೋಜಿರಾಯ ವಶಪಡಿಸಿಕೊಂಡಿದ್ದರಿಂದ ಅದನ್ನೂ ಪುನಃ ಗೆದ್ದುದೇ ಅಲ್ಲದೆ ಆ ಮರಾಠನಿಂದ ಕಂದಿಕೆರೆ, ತ್ಯಾಮಗೊಂಡ್ಲು, ಮನುಗೊಂಡೆ ದುರ್ಗ, ವಾಮಲೂರು, ಧರ್ಮಪುರಿ ಮತ್ತು ಪರಮತಿಗಳನ್ನೂ ವಶಪಡಿಸಿಕೊಂಡ. 1688ರಲ್ಲಿ ಶಂಖಗಿರಿಯ ಚಿಕ್ಕಯ್ಯನಿಂದ ಆವನಿ, ಪೇರೂರು, ಅರಶರವಾಣಿ, ಹೊಸಕೋಟೆ ಮತ್ತು ಶಂಖಗಿರಿಗಳನ್ನೂ ಶಾಲ್ಯದವರಿಂದ ಮನ್ನಾರಗುಡಿಯನ್ನೂ ಗೆದ್ದ. ಮರಾಠಾ ಘೋರಜಿಯಿಂದ ಅನಂತಗಿರಿಯನ್ನೂ ಗೆದ್ದ. ಕೊಯಮತ್ತೂರಿನ ಗುರಿಕಾರನಾದ ಲಿಂಗರಾಜಯ್ಯನಿಂದ ಕಾವೇರಿಪಟ್ಟಣವನ್ನೂ ಕುಂತೂರು ದುರ್ಗವನ್ನೂ ಬಾಗಡಿ ಪಾಳೆಯಗಾರನಿಂದ ಬಾಗಡಿಯನ್ನೂ ತನ್ನ ರಾಜ್ಯಕ್ಕೆ ಸೇರಿಸಿದ. 1690ರಲ್ಲಿ ಇಕ್ಕೇರಿ ಅರಸನಿಂದ ಹಾರ್ನಹಳ್ಳಿ, ಬಾಣಾವರ, ಕಡೂರು, ಸಕ್ಕರೆಪಟ್ಟಣ, ಬೇಲೂರು, ವಸ್ತಾರೆ ಮತ್ತು ಹಾಸನಗಳನ್ನು ಗೆದ್ದು ತನ್ನ ರಾಜ್ಯವನ್ನು ಬಾಬಾಬುಡನ್‍ಗಿರಿಯವರೆಗೆ ವಿಸ್ತರಿಸಿದ. ಐಗೂರು ಕೃಷ್ಣಪ್ಪನಾಯಕನಿಂದ ಐಗೂರು, ಚಿಕ್ಕಮಗಳೂರು, ಮಹಾರಾಜನದುರ್ಗ, ಅರಕಲಗೂಡು, ಸಕಲೇಶಪುರ ಮತ್ತು ಕೊಡ್ಲಿಪೇಟೆಗಳನ್ನೂ ಚಿಕ್ಕಪ್ಪನಾಯಕನಿಂದ 1697ರಲ್ಲಿ ಶಾಲ್ಯ, ಶಾದಮಂಗಲ, ನಾಮಕಲ್ಲು, ತಮ್ಮಂಬಟ್ಟಿಗಳನ್ನೂ ಪಡೆದ. 1675ರ ಈತನ ಒಂದು ಶಾಸನ ಈ ರಾಜ ಮಧುರೆಯ ಚೊಕ್ಕನಾಥ ನಾಯಕನನ್ನು ಸೋಲಿಸಿ ತ್ರಿಪುರ ಮತ್ತು ಅನಂತಪುರಿಗಳನ್ನು ಸಾಧಿಸಿಕೊಂಡನೆಂದು ಹೇಳುತ್ತದೆ.

1687ರಲ್ಲಿ ಬೆಂಗಳೂರು ಕೋಟೆಯನ್ನು ಮರಾಠರಿಂದ 3 ಲಕ್ಷ ರೂಪಾಯಿಗಳಿಗೆ ಕೊಂಡ. ಆದರೆ ಅಷ್ಟರಲ್ಲಿ ಪೆನುಗೊಂಡೆಯ ಖಾಸಿಂಖಾನ ಆ ಕೋಟೆಯನ್ನು ವಶಪಡಿಸಿಕೊಂಡನಾದರೂ ಚಿಕ್ಕದೇವರಾಜ ಆ ಖಾನನನ್ನು ಓಡಿಸಿ ಬೆಂಗಳೂರನ್ನು ಪುನಃ ಗೆದ್ದುಗೊಂಡು ಅಲ್ಲಿ ತನ್ನ ಅಧಿಕಾರಿಗಳನ್ನು ನೇಮಿಸಿದ್ದೇ ಅಲ್ಲದೆ ಅಲ್ಲಿ 12,000 ಮಗ್ಗದ ಜನರನ್ನು ತಂದಿರಿಸಿ ಅವರ ಜವಳಿ ಅರಮನೆಗೆ ಹಾಗೂ ಎಲ್ಲ ಸೀಮೆಗಳಿಗೂ ಹೋಗುವಂತೆ ಏರ್ಪಾಟು ಮಾಡಿದ್ದರಿಂದ ಬೆಂಗಳೂರು ವಾಣಿಜ್ಯ ಕೇಂದ್ರವಾಗಿ ಬೆಳೆಯಿತು.

ಮಾಗಡಿಗೆ ಮುತ್ತಿಗೆ ಹಾಕಿ ಅಲ್ಲಿಯ ಕೆಂಪೇಗೌಡನಿಂದ ಕಪ್ಪವನ್ನು ಸ್ವೀಕರಿಸಿದ. ಮಧುರೆ, ತಿರುಚಿನಾಪಳ್ಳಿ ಮತ್ತಿತರ ಪಾಳೆಯಗಾರರಿಂದ ಬರಬೇಕಾದ ಕಪ್ಪ 10-12 ವರ್ಷಗಳಿಂದ ಬಾರದೆ ನಿಂತುಹೋಗಿದ್ದುದರಿಂದ ಈತ ತನ್ನ ಸೇನಾನಿ ಕುಮಾರಯ್ಯನನ್ನು ಸೈನ್ಯದೊಂದಿಗೆ ಆ ಪ್ರಾಂತ್ಯಗಳಿಗೆ ಕಳಿಸಿದ. ಐಗೂರು ಕೃಷ್ಣಪ್ಪ ನಾಯಕನಿಗೆ, ಅವನ ಬೇಡಿಕೆಯ ಮೇರೆಗೆ ಐಗೂರು ಸಕಲೇಶಪುರಗಳನ್ನು ಕೊಟ್ಟು ಇಕ್ಕೇರಿಯ ಅರಸನಿಗೆ ವಸ್ತಾರೆಯನ್ನು ಕೊಟ್ಟು ಕಪ್ಪವನ್ನು ನಿಗದಿ ಮಾಡಿದ. ಈತ ಕೊಡಗು ಮತ್ತು ಮಲೆಯಾಳ ಪ್ರಾಂತ್ಯಗಳಿಂದಲೂ ಆನೆ, ಕುದುರೆ, ಧನ ಧಾನ್ಯಾದಿಗಳನ್ನೂ ಕಪ್ಪವನ್ನೂ ಪಡೆದುದಾಗಿ ಹೇಳಿಕೆಗಳಿವೆ. 1686ರ ಒಂದು ಶಾಸನದಲ್ಲಿ ಈತ ನಾಸಿಕದ (ಪಂಚವಟಿ) ಮರಾಠರನ್ನು ಸೋಲಿಸಿ ದಾದಾಜಿಯನ್ನು ಯುದ್ಧದಲ್ಲಿ ಕೊಂದನೆಂದೂ ಶಿವಾಜಿಯ ಮಗನಾದ ಶಂಭೂಜಿ, ಶಿವಾಜಿಯ ತಮ್ಮನಾದ ಏಕೋಜಿ (ವೆಂಕೋಜಿ) ಮತ್ತು ಇಕ್ಕೇರಿಯ ಬಸವನನ್ನೂ ಹೆದರಿಸಿದನೆಂದೂ ಹೇಳುತ್ತದೆ.

ಚಿಕ್ಕದೇವರಾಜ ಖಾಸಿಂಖಾನನ ಮೂಲಕ ಔರಂಗಜೇಬನ ಸಖ್ಯವನ್ನು ಬೆಳೆಸಿದ. ಔರಂಗಜೇಬ ಚಿಕ್ಕದೇವರಾಜನಿಗೆ ರಾಜಾ ಜಗದೇವ್ ಎಂಬ ಬಿರುದನ್ನೂ ಒಂದು ಮೊಹರನ್ನೂ ಅನೇಕ ಕಾಣಿಕೆಗಳನ್ನೂ ನೀಡಿ ದಂತದ ಸಿಂಹಾಸನದ ಮೇಲೆ ಕೂರಲು ಅನುಮತಿಯನ್ನು ಕೊಟ್ಟ.

ಚಿಕ್ಕದೇವರಾಜ ಒಡೆಯನ ರಾಜ್ಯ ದಕ್ಷಿಣದಲ್ಲಿ ಪಳನಿ ಮತ್ತು ಅಣ್ಣಾಮಲೈಗಳಿಂದ ಉತ್ತರದಲ್ಲಿ ಮಿಡಗೇಶಿಯವರೆಗೂ ಪೂರ್ವದಲ್ಲಿ ಬಾರಾಮಹಲ್‍ನಿಂದ ಪಶ್ಚಿಮದಲ್ಲಿ ಕೊಡಗು ಮತ್ತು ಬಲಂಗಳವರೆಗೂ ವ್ಯಾಪಿಸಿತ್ತು.

ಚಿಕ್ಕದೇವರಾಜ 32 ವರ್ಷಕಾಲ ವಿಜೃಂಭಣೆಯಿಂದ ಆಳಿ 1704ರಲ್ಲಿ ಮೃತನಾದ.

ಚಿಕ್ಕದೇವರಾಜ ಯುದ್ಧದಲ್ಲಷ್ಟೇ ಅಲ್ಲದೆ ಆಡಳಿತದಲ್ಲೂ ಗಟ್ಟಿಗನಾಗಿದ್ದ. ಇವನ ಕಾಲದ ಹೊತ್ತಿಗೆ ದೊಡ್ಡದಾಗಿ ಬೆಳೆದಿದ್ದ ತನ್ನ ರಾಜ್ಯದ ಸುಗಮ ಆಡಳಿತ ನಿರ್ವಹಣೆಗೆ ಹೊಸ ವ್ಯವಸ್ಥೆಗಳನ್ನು ಜಾರಿಗೆ ತಂದ. ಮಂತ್ರಾಲೋಚನಾಸಭೆಯನ್ನು ರೂಪಿಸಿದ. ಔರಂಗಜೇಬನ ಸರ್ಕಾರದಲ್ಲಿ 18 ಇಲಾಖೆಗಳಿರುವುದಾಗಿ ತಿಳಿದು ತಾನೂ 18 ಕಚೇರಿಗಳನ್ನು ತೆರೆದ. 8 ರಿಂದ 16 ಗ್ರಾಮಗಳನ್ನು ಸೇರಿಸಿ ಹೋಬಳಿಗಳನ್ನಾಗಿ ಮಾಡಿ ಅವುಗಳಿಗೆ ಅಧಿಕಾರಿಗಳನ್ನು ನೇಮಿಸಿ ಅವರ ವೇತನವನ್ನು ನಿಗದಿ ಮಾಡಿದ. ಕೋಟೆಕೊತ್ತಲಗಳಿಗೂ ಅಧಿಕಾರಿಗಳನ್ನು ನೇಮಿಸಿ ವೇತನಗಳನ್ನು ನಿಗದಿ ಪಡಿಸಿದ. ರಾಜ್ಯದಲ್ಲೆಲ್ಲ ಅಂಚೆಪದ್ಧತಿಯನ್ನು ಜಾರಿಗೆ ತಂದ. ಈ ಇಲಾಖೆ



ಗೂಢಚರ್ಯೆಯ ಕೆಲಸವನ್ನು ಕೂಡ ನಿರ್ವಹಿಸುತ್ತಿತ್ತು. ರಾಜ್ಯದಲ್ಲಿ ಕಂದಾಯ, ತೆರಿಗೆ ಇತ್ಯಾದಿ ಆದಾಯ ಮೂಲಗಳನ್ನು ಕ್ರಮಪಡಿಸಿ ರಾಜ್ಯದ ಬೊಕ್ಕಸವನ್ನು ಹೆಚ್ಚಿಸಿ ಅತ್ಯಂತ ಸ್ಥಿತಿವಂತ ರಾಜನಾಗಿ ನವಕೋಟಿನಾರಾಯಣನೆಂಬ ಬಿರುದನ್ನು ಪಡೆದ. ಅಳತೆ ಮತ್ತು ತೂಕಗಳನ್ನು ವ್ಯವಸ್ಥಿತಗೊಳಿಸಿ ಅವುಗಳ ಮೇಲೆ ರಾಜಮುದ್ರೆಯನ್ನು ಹಾಕಿಸಿ, ಹಾಗೆ ಮುದ್ರೆಯುಳ್ಳ ಅಳತೆಗಳನ್ನೇ ಬಳಸಬೇಕೆಂದು ವಿಧಿಸಿದ. ಅಧಿಕಾರಿಗಳಿಗೆ ಕೂಡ ರಾಜಮುದ್ರೆಯನ್ನೊದಗಿಸಿದ. ಲಂಚ, ಅಕ್ರಮ ಮುಂತಾದುವನ್ನು ನಿರೋಧಿಸಿದ. ಶ್ರೀರಂಗಪಟ್ಟಣದ ಪಶ್ಚಿಮದಲ್ಲಿ ಕಾವೇರಿ ನದಿಗೆ ಕಟ್ಟೆಯನ್ನು ಕಟ್ಟಿ ಎರಡು ಕಾಲುವೆಗಳ ನಿರ್ಮಾಣ ಮೊದಲಾದ ಕಾರ್ಯಗಳಿಂದ ರಾಜ್ಯದ ಆರ್ಥಿಕ ಉತ್ಪನ್ನ ಹೆಚ್ಚುವಂತೆ ಮಾಡಿದ.

ಈತನ ರಾಜಧಾನಿ ಶ್ರೀರಂಗಪಟ್ಟಣ ದಕ್ಷಿಣ ಭಾರತದ ಮುಖ್ಯ ರಾಜಕೀಯ ಕೇಂದ್ರವಾಗಿ, ಸಂಪದ್ಭರಿತ ಪಟ್ಟಣವಾಗಿ ಬೆಳೆದುದಲ್ಲದೆ ಪ್ರಸಿದ್ಧ ವಿದ್ಯಾಕೇಂದ್ರವೂ ಆಗಿದ್ದಿತು. ಈತನ ಧರ್ಮಶ್ರದ್ಧೆಯೂ ಪ್ರಸಿದ್ಧವಾಗಿದೆ. ಅನೇಕ ಅಗ್ರಹಾರಗಳನ್ನೂ ಸತ್ರಗಳನ್ನೂ ತಟಾಕಗಳನ್ನೂ ನಿರ್ಮಿಸಿದ. ಸ್ವತಃ ವೈಷ್ಣವನಾದರೂ ಇತರ ಮತಗಳಿಗೂ ಉತ್ತೇಜನವಿತ್ತ. ಶ್ರೀಮುಷ್ಣದಲ್ಲಿದ್ದ ಶ್ವೇತವರಾಹ ಸ್ವಾಮಿಯ ವಿಗ್ರಹವನ್ನು ಶ್ರೀರಂಗಪಟ್ಟಣಕ್ಕೆ ತಂದು ಅಲ್ಲಿ ಒಂದು ಗುಡಿಯನ್ನು ಕಟ್ಟಿಸಿ ಅದರಲ್ಲಿ ಪ್ರತಿಷ್ಠಾಪಿಸಿದ (ಈ ವಿಗ್ರಹವನ್ನು ಅನಂತರ ಪೂರ್ಣಯ್ಯ ಮೈಸೂರಿಗೆ ಸಾಗಿಸಿದ). 1673ರಲ್ಲಿ ಗುಂಡಲು ಗ್ರಾಮದಲ್ಲಿ ಒಂದು ಗುಡಿಯನ್ನು ಕಟ್ಟಿಸಿದ. ಬೆಂಗಳೂರಿನ ಕೋಟೆ ವೆಂಕಟರಮಣ ದೇವಾಲಯ ಸಹ ಈತನ ಕಾಲದ ಕೃತಿ. (ಎಂ.ಷಿ.;ಬಿ.ಎಂ.)

ಚಿಕ್ಕದೇವರಾಜ ಸ್ವತಃ ಕವಿಯೂ ಕವಿಪೋಷಕನೂ ಆಗಿದ್ದ. ಗೀತಗೋಪಾಲ, ಚಿಕದೇವರಾಜ ಬಿನ್ನಪ, ಭಾಗವತ, ಭಾರತ ಮತ್ತು ಶೇಷಧರ್ಮ ಎಂಬ ಕೃತಿಗಳು ಈತನ ಹೆಸರಿನಲ್ಲಿ ಪ್ರಸಿದ್ಧವಾಗಿವೆ. ಕಡೆಯ

ಮೂರು ಗ್ರಂಥಗಳು ಆಯಾ ಹೆಸರಿನ ಸಂಸ್ಕೃತ ಮೂಲಗ್ರಂಥಗಳಿಗೆ ಅರಸನು ತನ್ನ ಆಸ್ಥಾನದಲ್ಲಿನ ವಿದ್ವಾಂಸರಿಂದ ಬರೆಯಿಸಿದ ಕನ್ನಡ ಟೀಕೆಗಳು. ಭಾರತ, ಶಾಂತಿಪರ್ವದಿಂದ ಕೊನೆಯವರೆಗೆ ಮಾತ್ರ ಅನುವಾದವಾಗಿದೆ. ಈತನ ಹೆಸರಿನಲ್ಲಿರುವ ಭಾಗವತಕ್ಕೆ ಚಿಕದೇವರಾಜ ಸೂಕ್ತಿವಿಲಾಸಂ ಎಂಬ ಹೆಸರೂ ಇದೆ. ಗ್ರಂಥ' ಸಂಪೂರ್ಣವಾಗಿ ಗದ್ಯದಲ್ಲಿದೆ. ಒಂದೊಂದು ಅಧ್ಯಾಯದ ಮೊದಲಲ್ಲಿ ಒಂದು ಸಂಸ್ಕೃತ ಶ್ಲೋಕವನ್ನು ಕೊಟ್ಟು ಭಾಗವತದ ಒಂದು ಅಧ್ಯಾಯದ ಕಥೆಯನ್ನು ಟೀಕೆಯ ರೂಪದಲ್ಲಿ ಬರೆದಿದೆ. ಶೇಷಧರ್ಮ ಗದ್ಯದಲ್ಲಿದೆ.

ಚಿಕ್ಕದೇವರಾಜನ ಕೃತಿಗಳಲ್ಲಿ ಗೀತಗೋಪಾಲ ಮತ್ತು ಚಿಕದೇವರಾಜ ಬಿನ್ನಪಂ ಮುಖ್ಯವಾದುವು. ಗೀತಗೋಪಾಲ ಜಯದೇವಕವಿಯ ಪ್ರಸಿದ್ಧ ಗೀತಗೋವಿಂದ ಎಂಬ ಸಂಸ್ಕೃತ ಹಾಡುಗಬ್ಬದ ಮಾದರಿಯನ್ನು ಅನುಸರಿಸಿ ಕನ್ನಡದಲ್ಲಿ ಬರೆದ ಕೃಷ್ಣಸ್ತೋತ್ರಾತ್ಮಕವಾದ ಹಾಡುಗಳ ಸಂಕಲನ. ಇದರಲ್ಲಿ ಪೂರ್ವಭಾಗ, ಉತ್ತರಭಾಗ ಎಂಬ ಎರಡು ಭಾಗಗಳಿವೆ. ಪ್ರತಿಭಾಗದಲ್ಲಿ 7 ಖಂಡಗಳೂ ಪ್ರತಿಖಂಡದಲ್ಲಿ 7 ಪದ ಅಥವಾ ಹಾಡುಗಳೂ ಇವೆ. ಪ್ರತಿ ಖಂಡಕ್ಕೂ ಕವಿ ಸಪ್ತಪದಿ ಎಂಬ ಹೆಸರನ್ನು ಕೊಟ್ಟಿದ್ದಾನೆ. ಒಂದೊಂದು



ಬೆಂಗಳೂರಿನ ಕೋಟೆ ವೆಂಕಟರಮಣಸ್ವಾಮಿ ದೇವಾಲಯ, ಚಿಕ್ಕದೇವರಾಜ ಒಡೆಯರ ಕಾಲದ ನಿರ್ಮಾಣ

ಸಪ್ತಪದಿಯಲ್ಲೂ ಹೇಳಿರುವ ವಿಷಯದ ಸಾರಾಂಶ ಆಯಾ ಸಪ್ತಪದಿಯ ಆದಿಯಲ್ಲಿ ವಚನರೂಪದಲ್ಲಿ ಕೊಟ್ಟಿದೆ. ಇದರಲ್ಲಿ ಸಂಗೀತಕ್ಕೆ ಬಹಳ ಸುಲಭವಾಗಿ ಅಳವಡುವ ಭಾವಪೂರ್ಣವಾದ ಸುಂದರಗೀತೆಗಳಿವೆ. ಈ ಕೃತಿಯನ್ನು ರಚಿಸಿದ ಚಿಕ್ಕದೇವರಾಜ ಕವಿತೆ ಕಟ್ಟುವುದರಲ್ಲಷ್ಟೇ ಅಲ್ಲದೆ ಸಂಗೀತಕಲೆಯಲ್ಲಿಯೂ ಪರಿಣತನಾಗಿದ್ದನೆಂಬ ವಿಷಯು ಇದರಿಂದ ಸ್ಪಷ್ಟವಾಗುತ್ತದೆ. ಈ ಗ್ರಂಥ'ದ ಕೆಲವು ಕೀರ್ತನೆಗಳಲ್ಲಿ ತಿರುಮಲಾರ್ಯನಿಗೊಲಿದ ರಾಜಗೋಪಾಲ ಎಂಬ ಅಂಕಿತವಿರುವುದರಿಂದ ಇವುಗಳನ್ನು ಅರಸನ ಅತ್ಯಂತ ಪ್ರೀತಿಪಾತ್ರನಾದ ತಿರುಮಲಾರ್ಯ ಕವಿಯೇ ಬರೆದಿರಬಹುದೆಂದೂ ಊಹಿಸಲಾಗಿದೆ.

ಚಿಕದೇವರಾಜ ಬಿನ್ನಪ ವಿಶಿಷ್ಟಾದ್ವೈತಮತದ ಸಾರವನ್ನು ನಿರೂಪಿಸ ಹೊರಟ, ಮೇಲುಕೋಟೆಯ ನಾರಾಯಣಸ್ವಾಮಿಯಲ್ಲಿ ಕವಿ ಅರಿಕೆ ಮಾಡಿಕೊಂಡ 30 ಬಿನ್ನಪಗಳ ಗದ್ಯಗ್ರಂಥ. ಗ್ರಂಥದ ಮೊದಲಿಗೆ ಯದುಗಿರಿ ನಾರಾಯಣನ ಸ್ತುತಿ, ಅನಂತರ ಗದ್ಯಪದ್ಯರೂಪದಲ್ಲಿ ಕವಿಯ ಪರಾಕ್ರಮಾದಿಗಳು ವರ್ಣಿತವಾಗಿವೆ. ಪ್ರತಿಯೊಂದು ಬಿನ್ನಪದ ಆರಂಭದಲ್ಲಿಯೂ ಒಂದೊಂದು ಕಂದಪದ್ಯವಿದೆ. ಉಳಿದ ಭಾಗವೆಲ್ಲ ಗದ್ಯರೂಪದಲ್ಲಿದೆ. ಗದ್ಯಶೈಲಿ ಹಳಗನ್ನಡವಾಗಿದ್ದು ಪ್ರೌಢವಾಗಿದೆ. ಅಕ್ಕರವನರಿಯದೊಕ್ಕಲಿಗರಿಗೆ, ಪೆಣ್ಗಳಿಗೆ ಸಕ್ಕದದಿಂದ ತತ್ತ್ವಜ್ಞಾನವಾಗುವುದು ಕಷ್ಟ ಎಂದು ಎಲ್ಲರೂ ತಿಳಿಯುವಂತೆ ಕನ್ನಡದ ಮೆಲ್ನುಡಿಗಳಲ್ಲಿ ಅಖಿಲ ತತ್ತ್ವಾರ್ಥಗಳ ಸಂಗತಿಗೊಳಿಸಿ ಬಿನ್ನಪರೂಪವಾಗಿ ಹೇಳುತ್ತಿರುವೆನೆಂದು ಕವಿ ಹೇಳಿಕೊಂಡಿದ್ದಾನೆ. ಕನ್ನಡ ಗದ್ಯಸಾಹಿತ್ಯದ ಬೆಳೆವಣಿಗೆಯಲ್ಲಿ ಬಿನ್ನಪಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. (ಕೆ.ವಿಇ.;ಸಿ.ಕೆ.ಎನ್.)

**ಚಿಕ್ಕನಾಯಕನಹಳ್ಳಿ :** ತುಮಕೂರು ಜಿಲ್ಲೆ ತಿಪಟೂರು ಉಪ ವಿಭಾಗಕ್ಕೆ ಸೇರಿದ ಒಂದು ತಾಲ್ಲೂಕು ಹಾಗೂ ಅದರ ಮುಖ್ಯ ಸ್ಥಳ. ಉತ್ತರಕ್ಕೆ ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ಮತ್ತು ಹಿರಿಯೂರು ತಾಲ್ಲೂಕುಗಳು, ಪೂರ್ವಕ್ಕೆ ಶಿರಾ ಮತ್ತು ಗುಬ್ಬಿ ತಾಲ್ಲೂಕುಗಳು, ದಕ್ಷಿಣಕ್ಕೆ ತಿಪಟೂರು ತಾಲ್ಲೂಕು ಮತ್ತು ಪಶ್ಚಿಮದಲ್ಲಿ ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕು ಈ ತಾಲ್ಲೂಕನ್ನು ಸುತ್ತುವರೆದಿದೆ. ಶೆಟ್ಟಿಕೆರೆ, ಚಿಕ್ಕನಾಯಕನಹಳ್ಳಿ, ಕಂದಿಕೆರೆ, ಹಂದನಕೆರೆ ಮತ್ತು ಹುಳಿಯಾರು ಈ ತಾಲ್ಲೂಕಿನ ಹೋಬಳಿಗಳು. ಒಟ್ಟು 234 ಗ್ರಾಮಗಳಿವೆ. ತಾಲ್ಲೂಕಿನ ವಿಸ್ತೀರ್ಣ 1114.2ಚ.ಕಿಮೀ. ಜನಸಂಖ್ಯೆ 2,09,339.

ತಾಲ್ಲೂಕಿನ ಪೂರ್ವದಲ್ಲಿ ದಕ್ಷಿಣೋತ್ತರವಾಗಿ ಸಮಾನಾಂತರದಲ್ಲಿ ಸಾಗಿರುವ ತಗ್ಗಿನ ಕಣಶಿಲೆಯ ಬೆಟ್ಟಗಳ ಮೂರು ಸಾಲುಗಳಿವೆ. ಈ ಪ್ರದೇಶ ವೇದಾವತಿ ನದಿಗೆ ನೀರೊದಗಿಸುವಂತಿದೆ. ಶೆಟ್ಟಿಕೆರೆಯ ದಕ್ಷಿಣದಿಂದ ಉತ್ತರಕ್ಕೆ ಹುಳಿಯಾರಿನ ಕಡೆಗೆ ಹರಿಯುವ ಒಂದು ತೊರೆ ಮತ್ತು ಯಳನಾಡಿನಿಂದ ಬೂದಿಹಾಳಿನ ವಾಯವ್ಯದ ಕಡೆಗೆ ಹರಿಯುವ ಮತ್ತೊಂದು ತೊರೆ ಈ ತಾಲ್ಲೂಕಿನಲ್ಲಿ ಹರಿದು ವೇದಾವತಿಯನ್ನು ಸೇರುತ್ತವೆ. ತಾಲ್ಲೂಕಿನ ಪ್ರದೇಶದ ತಳಶಿಲೆ ಶಿಸ್ಟ್ ಜಾತಿಯದಾಗಿದ್ದು, ಹೆಚ್ಚು ಪ್ರದೇಶ ಮರಳುಮಿಶ್ರಿತ ಕೆಂಪುಮಣ್ಣಿನದು, ಸ್ವಲ್ಪವೇ ಏರು ತಗ್ಗುಗಳಿಂದ ಕೂಡಿದೆ. ಜಾಣೆಹಾರು ಬೆಟ್ಟಗಳಲ್ಲಿ ಮ್ಯಾಂಗನೀಸಿನ ಮತ್ತು ಕೆಂಪು ಹಾಗೂ ಬಿಳಿ ಮತ್ತು ಕಾವಿಮಣ್ಣಿನ ನಿಕ್ಷೇಪಗಳುಂಟು. ಬೆಳ್ಳಾರದ ಬಳಿ ಚಿನ್ನ ದೊರಕುತ್ತದೆ. ಇತ್ತೀಚಿನವರೆಗೂ ಇಲ್ಲಿ ಚಿನ್ನದ ಗಣಿಗಳು ಉಪಯೋಗದಲ್ಲಿದ್ದುವು. ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ಸುಣ್ಣಕಲ್ಲಿನ ಹರಹುಗಳಿವೆ.

ಈ ತಾಲ್ಲೂಕಿನಲ್ಲಿ ಮಳೆ ಸಾಮಾನ್ಯವೆನ್ನಬಹುದು. ವಾರ್ಷಿಕ ಸರಾಸರಿ 814.81ಮಿಮೀ. ಹೆಚ್ಚು ವ್ಯವಸಾಯ ಕೆರೆ ನೀರನ್ನು ಅವಲಂಬಿಸಿದೆ. ಸುವರ್ಣಮುಖಿ ನದಿಗೆ ಅಡ್ಡಲಾಗಿ 1892ರಲ್ಲಿ ರಚಿತವಾದ ಬೋರನಕಣಿವೆ ಜಲಾಶಯ ಈ ತಾಲ್ಲೂಕಿನ ದೊಡ್ಡ ಕೆರೆ; ಬೆಟ್ಟಗಳ ನಡುವಣ ಕಣಿವೆಯ ನೆಲ ಫಲವತ್ತಾದ್ದು. ಇಲ್ಲಿ ತೆಂಗು ಮತ್ತು ಅಡಕೆ ತೋಟಗಳಿವೆ. ರಾಗಿ, ಹುರುಳಿ, ಜೋಳ, ತೊಗರಿ ಮುಖ್ಯ ಬೆಳೆಗಳು. ಇಡೀ ಜಿಲ್ಲೆಯಲ್ಲಿ ತೆಂಗಿನ ಉತ್ಪತ್ತಿಯಲ್ಲಿ ತಿಪಟೂರನ್ನು ಬಿಟ್ಟರೆ ಚಿಕ್ಕನಾಯಕನಹಳ್ಳಿ ಎರಡನೆಯದು.

ಈ ತಾಲ್ಲೂಕಿನಲ್ಲಿ ರೈಲುಮಾರ್ಗವಿಲ್ಲದಿದ್ದರೂ ಇತರ ವಾಹನಗಳ ಉತ್ತಮ ಮಾರ್ಗಗಳಿದ್ದು ವ್ಯಾಪಾರಾಭಿವೃದ್ಧಿಗೆ ಅನುಕೂಲವಾಗಿದೆ. ಉಣ್ಣೆ ನೂಲುವವರ ಪರಸ್ಪರ ಸಹಾಯಕ ಸಂಘಗಳು ಈ ತಾಲ್ಲೂಕಿನ ಯಳನಾಡು ಮತ್ತು ಚಿಕ್ಕನಾಯಕನಹಳ್ಳಿಗಳಲ್ಲಿವೆ. ರೇಷ್ಮೆ ನೇಯುವ, ಕೈಮಗ್ಗದ ಮತ್ತು ಕುಂಬಾರಿಕೆ ಉದ್ಯಮಗಳಿದ್ದು ಕುಶಲ ಕೈಗಾರಿಕಾ ಸಂಘವೂ ಇದೆ. ಈ ತಾಲ್ಲೂಕಿನಲ್ಲಿ ಖಾದಿ ಗ್ರಾಮೋದ್ಯೋಗಕ್ಕೆ ಸಂಬಂಧಿಸಿದ ಕೈಗಾರಿಕಾ ಸಂಘಗಳೂ ಇವೆ.

ಈ ತಾಲ್ಲೂಕಿನ ದಬ್ಬೆಘಟ್ಟದಲ್ಲಿ 13ನೆಯ ಶತಮಾನದ ಮಹಾಲಿಂಗೇಶ್ವರ ದೇವಾಲಯವಿದೆ. ಅಲ್ಲಿಯ ಮೂರು ಗರ್ಭಗುಡಿಗಳಲ್ಲಿ ಹೊಯ್ಸಳೇಶ್ವರ, ಬ್ರಹ್ಮೇಶ್ವರ ಮತ್ತು ಮಾದೇಶ್ವರ ಲಿಂಗಗಳುಂಟು. ದೊಡ್ಡ ಬಿದರೆಯಲ್ಲಿ ಈಶ್ವರ ದೇವಾಲಯವಿದೆ. ಅಲ್ಲಿಯ ಪಾತಾಳಲಿಂಗೇಶ್ವರ ಗುಡಿಯಲ್ಲಿ 100 ಲಿಂಗಗಳಿವೆ. ಯಳನಾಡು ದ್ರಾವಿಡ ಶೈಲಿಯ ಸಿದ್ಧರಾಮೇಶ್ವರ ದೇವಾಲಯದಿಂದ ಪ್ರಸಿದ್ಧ. ವೀರಶೈವ ಗುರು ಸಿದ್ಧರಾಮ ಇಲ್ಲಿ ತಪಸ್ಸು ಮಾಡಿದ್ದನಂತೆ. ದೇವಾಲಯದ ಪೂಜಾಮೂರ್ತಿ ಲಿಂಗಾಕೃತಿಯ ಹುತ್ತ. ಹೊನ್ನೆಬಾಗಿ ಗ್ರಾಮಕ್ಕೆ ಸ್ವಲ್ಪ ದೂರದಲ್ಲಿ ಬೆಟ್ಟದ ಮೇಲೆ ರಂಗನಾಥಸ್ವಾಮಿ ಗುಡಿಯಿದೆ. ಹುಳಿಯಾರು (ನೋಡಿ) ಇನ್ನೊಂದು ಐತಿಹಾಸಿಕ ಸ್ಥಳ. ಕಂದಿಕೆರೆ ಗ್ರಾಮದಲ್ಲಿ ಒಂದು ಪುರಾತನ ಪಾಳುಬಿದ್ದಿರುವ ಕೋಟೆಯಿದೆ. ಇಲ್ಲಿ ಗೋಪಾಲಕೃಷ್ಣ ದೇವಾಲಯ ಮತ್ತು ಒಂದು ಬಸ್ತಿ ಇವೆ. ಕುಪ್ಪೂರಿನಲ್ಲಿ ಮರುಳಸಿದ್ದೇಶ್ವರರ ಗದ್ದುಗೆ ಇದೆ.

ಶೆಟ್ಟಿಕೆರೆಯಲ್ಲಿ (ನೋಡಿ) ಯೋಗಮಾಧವ ಮತ್ತು ರಂಗನಾಥಸ್ವಾಮಿ ದೇವಾಲಯಗಳಿವೆ. ಒಡೇರಹಳ್ಳಿಯ ಶಾಂತಮಲ್ಲಪ್ಪ ಮತ್ತು ಹೆಂಜೇರಪ್ಪ (ಭೈರವ) ದೇವಾಲಯಗಳು ಮತ್ತು ಪಂಕಜನಹಳ್ಳಿಯ ಮಲ್ಲಿಕಾರ್ಜುನ ದೇವಾಲಯ ಪ್ರಸಿದ್ಧವಾದವು.

ಈ ತಾಲ್ಲೂಕಿನ ದಾಸುಡಿಯಲ್ಲಿ ಚೈತ್ರ ಶುದ್ಧ ಸಪ್ತಮಿಯಲ್ಲಿ ನಡೆಯುವ ಆಂಜನೇಯಸ್ವಾಮಿ ಜಾತ್ರೆ, ಮುದ್ದೇನಹಳ್ಳಿಯಲ್ಲಿ ಜ್ಯೇಷ್ಠ ಬಹುಳ ಪಂಚಮಿಯಲ್ಲಿ ನಡೆಯುವ ಬಾಗಲ ಬಸವೇಶ್ವರ ಜಾತ್ರೆ, ಕರೆಹಳ್ಳಿಯಲ್ಲಿ ಫಾಲ್ಗುಣ ಶುದ್ಧ ದಶಮಿಯಲ್ಲಿ ನಡೆಯುವ ರಂಗಸ್ವಾಮಿ ಜಾತ್ರೆ, ಚಿಕ್ಕನಾಯಕನಹಳ್ಳಿಯಲ್ಲಿ ಫಾಲ್ಗುಣ ಶುದ್ಧ ದಶಮಿಯಂದು ನಡೆಯುವ ಪ್ರಸನ್ನೇಶ್ವರ ಸ್ವಾಮಿ ಜಾತ್ರೆ ಮತ್ತು ಮತಿಘಟ್ಟದಲ್ಲಿ ಚೈತ್ರ ಶುದ್ಧ ದ್ವಾದಶಿಯಂದು ನಡೆಯುವ ಪಾರ್ವತಮ್ಮ ಜಾತ್ರೆಗಳು ಪ್ರಸಿದ್ಧವಾದವು.

ಚಿಕ್ಕನಾಯಕನಹಳ್ಳಿ ಈ ತಾಲ್ಲೂಕು ಮತ್ತು ಹೋಬಳಿಯ ಮುಖ್ಯ ಪಟ್ಟಣ ಹಾಗೂ ಆಡಳಿತ ಕೇಂದ್ರ. ತುಮಕೂರಿನ ಪಶ್ಚಿಮ- ವಾಯವ್ಯ ದಿಕ್ಕಿನಲ್ಲಿ ತುರುವೇಕೆರೆ-ಹುಳಿಯಾರು ಮಾರ್ಗ ಮಧ್ಯದಲ್ಲಿ ಬೆಂಗಳೂರು ಶಿವಮೊಗ್ಗ ರಸ್ತೆಗೆ ಸು.13ಕಿಮೀ ದೂರದಲ್ಲಿದೆ. ಜನಸಂಖ್ಯೆ 22360. ಹಾಗಲವಾಡಿ ಮನೆತನದ ನಾಯಕರುಗಳಲ್ಲಿ ಪ್ರಸಿದ್ಧನೆನಿಸಿದ್ದ ಸಾಲಿ ನಾಯಕನ ಸೋದರ ಚಿಕ್ಕನಾಯಕನ ಹೆಸರಿನಿಂದ ಈ ಊರಿಗೆ ಈ ಹೆಸರು ಬಂದಿದೆ. ಪರಶುರಾಮ ಭಾವುವಿನ ಮುಖಂಡತ್ವದಲ್ಲಿದ್ದ ಮರಾಠರ ಸೇನೆ ಶ್ರೀರಂಗಪಟ್ಟಣದಲ್ಲಿದ್ದ ಲಾರ್ಡ್ ಕಾರ್ನ್‌ವಾಲಿಸನ ಸೈನ್ಯವನ್ನು ಸೇರಲು ಹೋಗುತ್ತಿದ್ದಾಗ ಮಾರ್ಗದಲ್ಲಿ ಸಿಕ್ಕಿದ ಚಿಕ್ಕನಾಯಕನಹಳ್ಳಿಯನ್ನು ಲೂಟಿ ಮಾಡಿ, ಕೋಟೆಯನ್ನು ಹಾಳುಗೆಡವಿದಂತೆ ತಿಳಿದುಬರುತ್ತವೆ.



ಹಂದನಕೆರೆ, ಐತಿಹಾಸಿಕ ಅವಶೇಷಗಳು

ಚಿಕ್ಕನಾಯಕನಹಳ್ಳಿ ತೆಂಗು ಮತ್ತು ಅಡಕೆ ತೋಟಗಳಿಂದ ಸುತ್ತುವರಿದಿದೆ. ತೆಂಗು, ಅಡಕೆ, ಬಿಳಿ ಹಾಗೂ ಬಣ್ಣದ ಹತ್ತಿ ಬಟ್ಟೆಗಳು, ಕಂಬಳಿಗಳು ಇಲ್ಲಿನ ಉತ್ಪನ್ನಗಳಾಗಿವೆ.

ಇಲ್ಲಿರುವ ದ್ರಾವಿಡ ಶೈಲಿಯ ವೆಂಕಟರಮಣಸ್ವಾಮಿ ದೇವಾಲಯ ದೊಡ್ಡದು ಹಾಗೂ ಸುಂದರವಾದುದು. ರಾಮೇಶ್ವರ ದೇವಾಲಯವೂ ಇದೇ ಶೈಲಿಯಲ್ಲಿ ನಿರ್ಮಿತವಾಗಿದೆ. ಇದನ್ನು ಹಾಗಲವಾಡಿಯ ನಾಯಕರುಗಳಲ್ಲೊಬ್ಬ ನಿರ್ಮಿಸಿದನೆಂದು ಪ್ರತೀತಿ. ಇದಲ್ಲದೆ ಇಲ್ಲಿ ಹುಳಿಯಾರು ಆಂಜನೇಯ, ಬ್ರಹ್ಮಪುರಿ ಆಂಜನೇಯ ದೇವಾಲಯಗಳಿವೆ.

ಈ ಊರಿನ ಗ್ರಾಮದೇವತೆ ಹಿರಿಮಾವರದಾ ಎಲ್ಲಮ್ಮ ಅಥವಾ ರೇಣುಕಾ ದೇವಿ. ಈ ಪ್ರತಿಮೆ ಮರದಿಂದ ಮಾಡಿದ್ದು ಕಲ್ಲಿನಿಂದ ಕಡೆಯಲಾದ ಮುಖವನ್ನು ಜೋಡಿಸಿರುವುದು ವಿಶೇಷ. ಉತ್ಸವ ಮೂರ್ತಿಯಾಗಿ ರೇಣುಕಾದೇವಿಯ ಮಗ ಪರಶುರಾಮನ ವಿಗ್ರಹವಿದೆ. ರೇಣುಕಾಪತಿ ಜಮದಗ್ನಿ ಕುಳಿತಿರುವ ಕಲ್ಲಿನ ವಿಗ್ರಹ ಒಂದು ಅಡಿ ಎತ್ತರವಿದ್ದು ಎಲ್ಲಮ್ಮನ ವಿಗ್ರಹದ ಬಲಗಡೆಯಲ್ಲಿದೆ. ತಾತಯ್ಯನ ಗೋರಿ ಎಂಬ ಒಬ್ಬ ಮುಸ್ಲಿಂ ಸಂತರ ಸಮಾಧಿ ಸಹ ಈ ಊರಿನಲ್ಲಿ ಇದೆ. ಇದಕ್ಕೆ ಅನೇಕ ಹಿಂದು ಭಕ್ತರೂ ಇದ್ದು ವರ್ಷಕ್ಕೊಮ್ಮೆ ಇಲ್ಲಿ ಉರುಸ್ ನಡೆಯುತ್ತದೆ. ಈ ಪಟ್ಟಣ ಪುರಸಭಾ ಆಡಳಿತಕ್ಕೆ ಒಳಪಟ್ಟಿದೆ. (ಎಸ್.ಜಿ.)

**ಚಿಕ್ಕಬಳ್ಳಾಪುರ** : ಕೋಲಾರ ಜಿಲ್ಲೆಯ ಒಂದು ತಾಲ್ಲೂಕು, ಇದೇ ಹೆಸರಿನ ಉಪವಿಭಾಗದ ಮತ್ತು ತಾಲ್ಲೂಕಿನ ಮುಖ್ಯ ಸ್ಥಳ. ಪೂರ್ವದಲ್ಲಿ ಶಿಡ್ಲಘಟ್ಟ, ಪಶ್ಚಿಮದಲ್ಲಿ ಗೌರಿಬಿದನೂರು, ಉತ್ತರದಲ್ಲಿ ಗುಡಿಬಂಡೆ ತಾಲ್ಲೂಕುಗಳೂ ದಕ್ಷಿಣದಲ್ಲಿ ಬೆಂಗಳೂರು ಜಿಲ್ಲೆಯೂ ಇದರ ಮೇರೆಗಳು. ಮಂಡಿಕಲ್ಲು, ನಂದಿ ಮತ್ತು ಚಿಕ್ಕಬಳ್ಳಾಪುರ ಎಂಬ ಮೂರು ಹೋಬಳಿಗಳೂ 251 ಗ್ರಾಮಗಳೂ ಇವೆ. ತಾಲ್ಲೂಕಿನ ವಿಸ್ತೀರ್ಣ 646.4 ಚ.ಕಿಮೀ. ಜನಸಂಖ್ಯೆ 1,84,226.

ಚಿಕ್ಕಬಳ್ಳಾಪುರ ತಾಲ್ಲೂಕು ದೊಡ್ಡ ಬೆಟ್ಟಗಳ ಪ್ರದೇಶ. ನಂದಿದುರ್ಗ ಶ್ರೇಣಿ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ಉತ್ತರ-ದಕ್ಷಿಣವಾಗಿ ಹಬ್ಬಿದೆ. ಇದರಲ್ಲಿ ನಂದಿದುರ್ಗ (1,479ಮೀ), ದಿಬ್ಬಗಿರಿ, ಬ್ರಹ್ಮಗಿರಿ (1,419ಮೀ), ಚನ್ನಕೇಶವ ಬೆಟ್ಟ (1,451ಮೀ), ಕಳವರದುರ್ಗ (ಸ್ಕಂದಗಿರಿ, 1,417ಮೀ), ಹರಿಹರೇಶ್ವರ ಬೆಟ್ಟ (1,256ಮೀ) ಮುಂತಾದ ಎತ್ತರದ ಬೆಟ್ಟಗಳಿವೆ. ಈ ಶ್ರೇಣಿಯಲ್ಲದೆ ಇತರ ಬೆಟ್ಟಗಳೂ ಉಂಟು. ಶ್ರೇಣಿಯ ಭಾಗವನ್ನು ಬಿಟ್ಟು ಇತರ ಬೆಟ್ಟಗಳ ನಡುವಿನ ಕಣಿವೆ ಪ್ರದೇಶ ಸುಮಾರು ಮಟ್ಟಸವಾಗಿದೆ. ಬೆಟ್ಟಗಳೂ ಒಳಗೊಂಡಂತೆ ಹೆಚ್ಚಿನ ಭಾಗ ಕಣಶಿಲೆಯ ಪ್ರದೇಶ. ಬೋಳುಗುಂಡುಗಳ ಬೆಟ್ಟಗಳು ತಾಲ್ಲೂಕಿನಲ್ಲಿ ಕಂಡುಬರುವ ಸಾಮಾನ್ಯ ದೃಶ್ಯ. ತಾಲ್ಲೂಕಿನ ಖನಿಜಸಂಪತ್ತು ಹೆಚ್ಚಿಲ್ಲ. ಚಿಕ್ಕಬಳ್ಳಾಪುರ ಊರಿನ ಬಳಿ ನುರುಜು ಸುಣ್ಣಕಲ್ಲು ದೊರಕುತ್ತದೆ. ತಾಲ್ಲೂಕಿನಲ್ಲಿ ಮಣ್ಣಿನ ಗುಣ ಅಲ್ಲಲ್ಲಿಗೆ ಎರೆಮಣ್ಣು, ಕಪ್ಪು ಮಣ್ಣು, ಮರಳುಮಿಶ್ರಿತ ನುರುಜು ಭೂಮಿ -ಹೀಗೆ ಬಹಳ ವ್ಯತ್ಯಾಸವಾಗುತ್ತದೆ. ನಂದಿಬೆಟ್ಟಶ್ರೇಣಿ ಅರ್ಕಾವತಿ, ಉತ್ತರ ಪಿನಾಕಿನಿ ಮೊದಲಾದ ನದಿಗಳ ಉಗಮಸ್ಥಾನ. ಇಲ್ಲಿ ಉಪಯುಕ್ತವಾಗಿರುವ ನದಿಗಳಲ್ಲಿ ಪಾಪಘ್ನಿ (ನೋಡಿ) ಮುಖ್ಯವಾದುದು. ಇದು ನಂದಿಯ ಈಶಾನ್ಯಕ್ಕಿರುವ ಗುಂಡಲಗುರ್ಕಿ ಬೆಟ್ಟದ ಬಳಿ ಹುಟ್ಟಿ ಬಾಗೇಪಲ್ಲಿ ತಾಲ್ಲೂಕಿನತ್ತ ಹರಿಯುತ್ತದೆ. ಉತ್ತರ ಪಿನಾಕಿನಿಯೂ ಉಪಯೋಗವಾಗುತ್ತಿದೆ. ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ 871ಮಿಮೀ. ಈ ತಾಲ್ಲೂಕಿನಲ್ಲಿ 34,684 ಎಕರೆ ಅರಣ್ಯ ಪ್ರದೇಶವಿದೆ. ಶ್ರೀಗಂಧ, ಬೇವು, ಹುಣಿಸೆ, ಹೊಂಗೆ, ಕರಿಜಾಲಿ, ಕಗ್ಗಲಿ, ಚುಜ್ಜಲು ಮುಂತಾದ ಮರಗಳು ಈ ಅರಣ್ಯದ ಮುಖ್ಯ ಸಸ್ಯವರ್ಗ.

ರಾಗಿ, ಬತ್ತ, ಕಬ್ಬು, ಮತ್ತು ದ್ವಿದಳ ಧಾನ್ಯಗಳು ತಾಲ್ಲೂಕಿನ ಮುಖ್ಯ ಬೆಳೆಗಳು. ಪಂಪುಗಳ ಮೂಲಕ ದೊಡ್ಡ ಬಾವಿಗಳಿಂದ ನೀರನ್ನೆತ್ತಿ ವ್ಯವಸಾಯ ಮಾಡುವುದು ಸಾಮಾನ್ಯ. ಆಲೂಗೆಡ್ಡೆ, ಈರುಳ್ಳಿ, ಹಿಪ್ಪನೇರಳೆ, ಮೆಣಸಿನಕಾಯಿ, ತರಕಾರಿ ಮತ್ತು ಹಣ್ಣುಗಳನ್ನೂ ಬೆಳೆಯುತ್ತಾರೆ. ಮಾವು, ಹುಣಿಸೆ, ಹೊಂಗೆ ಮತ್ತು ಸರ್ವೆ ಮರಗಳ ತೋಪುಗಳುಂಟು. ವ್ಯವಸಾಯದ ಜೊತೆಗೆ ಪಶುಪಾಲನೆ ಮತ್ತು ಕುರಿ ಸಾಕುವುದು ಜನರ ಉದ್ಯೋಗಗಳು.

ನಂದಿದುರ್ಗ (ನೋಡಿ) ಈ ತಾಲ್ಲೂಕಿನ ಪ್ರಸಿದ್ಧ ಪ್ರೇಕ್ಷಣೀಯ ಸ್ಥಳ. ಇತರ ಬೆಟ್ಟಗಳೂ ಸುಂದರ ತಾಣಗಳಾಗಿವೆ. ಅಗಲಗುರ್ಕಿ ಗ್ರಾಮದಲ್ಲಿ ಪಾಳೆಯಗಾರರ ಕಾಲದ ವೀರಭದ್ರ ದೇವಾಲಯವಿದೆ. ಈ ಊರಿನ ಕೆರೆಯ ದಕ್ಷಿಣ ತೂಬು ಮಂಟಪದ ರೀತಿಯಲ್ಲಿ ಕಟ್ಟಿರುವ ಸುಂದರ ಕೃತಿ. ಅಜ್ಜಾವರ ಮತ್ತು ಅಣಕನೂರಿನಲ್ಲಿ ಒಂದೊಂದು ರಂಗನಾಥ ದೇವಾಲಯ ಇವೆ. ಕಂದವರ ಗ್ರಾಮದಲ್ಲಿ ಒಂದು ದೊಡ್ಡ ಕೊಳ ಮತ್ತು ಜ್ವರಹರೇಶ್ವರ ದೇವಾಲಯ ಇವೆ. ದೇವಾಲಯದ ಬಳಿ ಇರುವ 40' ಎತ್ತರದ ಗರುಡಗಂಬ ಬಹುಸುಂದರ ಕೃತಿ. ಮಂಚನಬೆಲೆ ಗ್ರಾಮದಲ್ಲಿ ಸು.140 ವರ್ಷಗಳ ಹಿಂದಿನ ಆಂಜನೇಯ ದೇವಾಲಯವಿದೆ.

ಮುದ್ದೇನಹಳ್ಳಿ ಭಾರತರತ್ನ ವಿಶ್ವೇಶ್ವರಯ್ಯನವರ ಜನ್ಮಸ್ಥಳ. ಅವರ ನೆನಪಿಗೆ ಇಲ್ಲಿ ಒಂದು ವಸ್ತುಸಂಗ್ರಹಾಲಯವನ್ನು ಸ್ಥಾಪಿಸಲಾಗಿದೆ. ಪತ್ರೇನಹಳ್ಳಿಯ ಗೋಪಾಲಕೃಷ್ಣ ದೇವಾಲಯ ದ್ರಾವಿಡ ಶೈಲಿಗೆ ಒಂದು ಉತ್ತಮ ನಿದರ್ಶನವಾಗಿದೆ. ರಂಗಸ್ಥಳ ಗ್ರಾಮದಲ್ಲಿ ದ್ರಾವಿಡ ಶೈಲಿಯ ರಂಗನಾಥ ದೇವಾಲಯವಿದೆ. ಈ ತಾಲ್ಲೂಕಿನಲ್ಲಿ ನಡೆಯುವ ಜಾತ್ರೆಗಳಲ್ಲಿ ನಂದಿಯ ಭೋಗನಂದೀಶ್ವರಸ್ವಾಮಿ ಜಾತ್ರೆ, ಚಿತ್ರಾವತಿಯ ಸುಬ್ರಹ್ಮಣ್ಯಸ್ವಾಮಿ ಜಾತ್ರೆ ಪ್ರಸಿದ್ಧವಾದುವು. ಜಾತ್ರೆ ದಿನಗಳಲ್ಲಿ ದನಗಳ ವ್ಯಾಪಾರವೂ ನಡೆಯುತ್ತದೆ. *



ಚಿತ್ರಾವತಿ ಕೊಳ, ಚಿಕ್ಕಬಳ್ಳಾಪುರ

ಚಿಕ್ಕಬಳ್ಳಾಪುರ ಈ ತಾಲ್ಲೂಕಿನ ಮುಖ್ಯ ಪಟ್ಟಣ ಮತ್ತು ತಾಲ್ಲೂಕಿನ ಹಾಗೂ ಉಪ ವಿಭಾಗದ ಆಡಳಿತ ಕೇಂದ್ರ. ಕೋಲಾರಕ್ಕೆ 60ಕಿಮೀ ದೂರದಲ್ಲಿ ವಾಯವ್ಯ ದಿಕ್ಕಿನಲ್ಲಿದೆ. ಜನಸಂಖ್ಯೆ 54,938. ಇಲ್ಲಿ ಪುರಸಭೆ ಇದೆ. ಈ ಪಟ್ಟಣ ರೇಷ್ಮೆ ಉದ್ಯಮಕ್ಕೆ, ಕಲ್ಲು ಸಕ್ಕರೆ ತಯಾರಿಕೆಗೆ ಪ್ರಸಿದ್ಧ. ಸಣ್ಣ ಕೈಗಾರಿಕೆಗಳ ಬೆಳವಣಿಗೆಗಾಗಿ ಇಲ್ಲಿ ಕೈಗಾರಿಕಾ ಕ್ಷೇತ್ರವೊಂದು ಸ್ಥಾಪಿತವಾಗಿದೆ. ಚಿಕ್ಕಬಳ್ಳಾಪುರದಿಂದ ಬೆಂಗಳೂರಿಗೂ ಜಿಲ್ಲೆಯ ಪ್ರಮುಖ ಸ್ಥಳಗಳಿಗೂ ರಸ್ತೆಗಳುಂಟು. ಬೆಂಗಳೂರು, ಚಿಂತಾಮಣಿ, ಕೋಲಾರಗಳಿಗೆ ರೈಲ್ವೆ ಸಂಪರ್ಕವಿದೆ. ಇದೊಂದು ವ್ಯಾಪಾರ ಕೇಂದ್ರ. ಚಿಕ್ಕಬಳ್ಳಾಪುರ ಹಿಂದೆ ಒಂದು ಪಾಳೆಯಗಾರರ ಸಂತತಿಯ ಆಡಳಿತದಲ್ಲಿತ್ತು. ಈ ಊರಿನ ದೇವಾಲಯಗಳಲ್ಲಿ ಚನ್ನಕೇಶವ ದೇವಾಲಯ ಅತ್ಯಂತ ಹಳೆಯದು. ವೀರಭದ್ರ ದೇವಾಲಯ ಇತ್ತೀಚಿನದು. ಇಲ್ಲಿ ಉತ್ತಮ ಸುದ್ದೆ ವಿಗ್ರಹಗಳಿವೆ. ಪಟ್ಟಣಕ್ಕೆ 4ಕಿಮೀ ದೂರದಲ್ಲಿ ಚಿತ್ರಾವತಿ ಎಂಬ ಕೊಳವಿದೆ. ಇದೊಂದು ತೀರ್ಥ. ಇದರ ಸುತ್ತಲ ಹಂತಗಳನ್ನು ದಿವಾನ್ ಪೂರ್ಣಯ್ಯನವರು ಕಟ್ಟಿಸಿದರೆಂದು ಹೇಳಲಾಗಿದೆ. ಈ ಕೊಳಕ್ಕೆ ಹಲಸಮ್ಮನ ಬಾವಿ ಎಂದೂ ಹೆಸರುಂಟು. ಹಲಸಮ್ಮ ಪಾಳೆಯಗಾರನೊಬ್ಬನ ಕುಮಾರಿ. ಇದರ ಹತ್ತಿರ ಮಲ್ಲಿಕಾರ್ಜುನ ಚೆನ್ನಪ್ಪನ ಗದ್ದುಗೆಯಿದೆ. (ಎಂ.ಎನ್.ಕೆ.)

**ಚಿಕ್ಕಬಳ್ಳಾಪುರದ ಪಾಳೆಯಗಾರರು :** 1479-1791ರ ಅವಧಿಯಲ್ಲಿ ಚಿಕ್ಕಬಳ್ಳಾಪುರ ಮತ್ತು ಸುತ್ತಲ ಪ್ರದೇಶಗಳನ್ನು ಆಳುತ್ತಿದ್ದ ಆವತಿ ವಂಶಕ್ಕೆ ಸೇರಿದ ಪಾಳೆಯಗಾರರು. ಆವತಿಗೆ ವಲಸೆ ಬಂದು ನೆಲೆಸಿದ್ದ ಗೌಡರ ಗುಂಪಿನ ಯಜಮಾನ ಮಲ್ಲಬೈರೇಗೌಡನ ಕಿರಿಯ ಮಗ ಬೈರೇಗೌಡ ಒಮ್ಮೆ ಈಗಿನ ಚಿಕ್ಕಬಳ್ಳಾಪುರ (ಹಿಂದಿನ) ಕೋಡಿಮಂಚನಹಳ್ಳಿ ಪ್ರದೇಶದಲ್ಲಿ ಬೇಟೆಯಾಡುತ್ತಿದ್ದಾಗ ಮೊಲವೊಂದು ಇವನ ನಾಯಿಗಳ ಮೇಲೆ ಎದುರುಬಿತ್ತು. ಇದನ್ನು ಕಂಡ ಬೈರೇಗೌಡ ಈ ಸ್ಥಳ 'ಗಂಡುಭೂಮಿ' ಎಂದು ತೀರ್ಮಾನಿಸಿ ಅಲ್ಲಿಯ ಪಟೇಲರುಗಳಿಗೆ ಕೋಟೆ ಕಟ್ಟಲು ಸಲಹೆಯಿತ್ತ. ಬೈರೇಗೌಡನ ಮಗ ಮರಿಗೌಡ ವಿಜಯನಗರದ ಅರಸರಿಂದ ಅನುಮತಿಯನ್ನು ತಂದಮೇಲೆ ಕೋಟೆ ನಿರ್ಮಾಣವಾಗಿ (1479) ಚಿಕ್ಕಬಳ್ಳಾಪುರವೆಂದು ಪ್ರಸಿದ್ಧವಾಗಿ ಪಾಳೆಯಪಟ್ಟು ಸ್ಥಾಪನೆಯಾಯಿತು ಎಂದು ಸ್ಥಳಪುರಾಣ.

ಮರಿಗೌಡ ಈ ಪಾಳೆಯಪಟ್ಟಿನ ಮೊದಲನೆಯ ಪ್ರಭು. ಈತ 24 ವರ್ಷಗಳ ಕಾಲ ರಾಜ್ಯವಾಳಿದಮೇಲೆ ಇವನ ಮಗ ರಂಗಪ್ಪಗೌಡ 42 ವರ್ಷ, ಅನಂತರ ಇವನ ಸೋದರಳಿಯ ಡೋಗಿ ಬೈರೇಗೌಡ 30 ವರ್ಷ, ಅನಂತರ ಇವನ ಮಗ ದೊಡ್ಡ ಬೈರೇಗೌಡ 46 ವರ್ಷ ರಾಜ್ಯವಾಳಿದರು. ದೊಡ್ಡ ಬೈರೇಗೌಡನಿಗೆ ಮಕ್ಕಳಿಲ್ಲದ ಕಾರಣ, ಇವನ ಪತ್ನಿ ವೆಂಕಟಮ್ಮ ಅಧಿಕಾರಿಗಳ ಸಹಾಯದಿಂದ ಸು.15 ವರ್ಷಗಳ ಕಾಲ ಆಡಳಿತವನ್ನು ಮುಂದುವರಿಸಿ ತನ್ನ ಅವಸಾನಸಮಯದಲ್ಲಿ ತಾನು ಬೆಳೆಸಿದ ಜೋಗಿ ಬೈರೇಗೌಡನ ಮೊಮ್ಮಗ ಮರಿಗೌಡನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ದತ್ತು ತೆಗೆದುಕೊಂಡಳೆಂದೂ ಒಂದು ಹೇಳಿಕೆ ಇದೆ. 45 ವರ್ಷದ ಆಳ್ವಿಕೆಯ ಅನಂತರ ಇವನ ಅಣ್ಣ ಅಣ್ಣೇಗೌಡನ ಪಿತೂರಿಯಿಂದ ಈತ ರಾಜ್ಯಚ್ಯುತನಾಗಿ ಸಾದಲಿ ಮತ್ತು ಇಳಕಲು ದುರ್ಗಗಳ ಜಹಗೀರಿಯನ್ನು ಮಾತ್ರ ಅನುಭವಿಸಬೇಕಾಯಿತು. ತನ್ನ 18 ವರ್ಷಗಳ ಆಳಿಕೆಯಲ್ಲಿ ಶಿಡ್ಲಘಟ್ಟವನ್ನು ಒಂದು ಲಕ್ಷ ವರಹಕ್ಕೆ ಕೊಂಡು, 20 ಲಕ್ಷ ವರಹ ಧನವನ್ನು ಶೇಖರಿಸಿದ. ಅನಂತರ ಅಧಿಕಾರಕ್ಕೆ ಬಂದ ಇವನ ಮಗ ಹಾವಳಿ ಬೈರೇಗೌಡ ತನ್ನ ದುರ್ವರ್ತನೆಯಿಂದ ಕೇವಲ 4 ತಿಂಗಳಲ್ಲೇ ಪದಚ್ಯುತಿಗೊಂಡ. ಅನಂತರ ರಾಜ್ಯವನ್ನು ವಹಿಸಿಕೊಂಡ ಇವನ ಸಹೋದರ ಬೈಚೇಗೌಡನ ಕಾಲದಲ್ಲಿ ದಳವಾಯಿ ಕಂಠೀರವನ ನೇತೃತ್ವದಲ್ಲಿ ಮೈಸೂರು ಒಡೆಯರ ಸೇನೆ ಚಿಕ್ಕಬಳ್ಳಾಪುರಕ್ಕೆ ಮುತ್ತಿಗೆಹಾಕಿತು. ಬೈಚೇಗೌಡ ಮರಾಠರ ನೆರವನ್ನು ಪಡೆದು, ಕೋಟೆಯ ಪತನವನ್ನು ತಪ್ಪಿಸಿ ಕೋತಿಕೊಂಡದ ಬಳಿ ನಡೆದ ಭೀಕರಯುದ್ಧದಲ್ಲಿ ದಳವಾಯಿ ಕಂಠೀರವನ ಶಿರಚ್ಛೇದ ಮಾಡಿದ. ಬೈಚೇಗೌಡ ಬುರ್ದಗುಂಟವನ್ನೂ ಕೊಂಡು ತನ್ನ ರಾಜ್ಯಕ್ಕೆ ಸೇರಿಸಿಕೊಂಡ. ಇವನ ತರುವಾಯ ಪಟ್ಟಕ್ಕೆ ಬಂದ ದೊಡ್ಡ ಬೈರೇಗೌಡ ತಾನು ಆಳಿದ 2 ವರ್ಷಗಳಲ್ಲಿ ಮೈಸೂರು ಸೇನೆಯದಾಳಿಯ ಸಮಯದಲ್ಲಿ ಕೈಬಿಟ್ಟುಹೋಗಿದ್ದ ಪ್ರದೇಶಗಳನ್ನು ಪುನಃ ಸ್ವಾಧೀನಪಡಿಸಿಕೊಂಡ. ತರುವಾಯ ಇವನ ಸಹೋದರ ವೆಂಕಟನಾರಾಯಣಗೌಡ ಸು.35 ವರ್ಷ ರಾಜ್ಯವಾಳಿದ. ಅನಂತರ ಇವನ ಮಗ ಬೈಚೇಗೌಡ ಕೇವಲ 9 ತಿಂಗಳಲ್ಲೇ ಪದಚ್ಯುತನಾಗಲು ಈತನ ಚಿಕ್ಕಪ್ಪ ಚಿಕ್ಕಪ್ಪಗೌಡ ಅಧಿಕಾರ ವಹಿಸಿಕೊಂಡ. ಚಿಕ್ಕಪ್ಪಗೌಡನ ಕಾಲದಲ್ಲಿ ಹೈದರ್ ಚಿಕ್ಕಬಳ್ಳಾಪುರಕ್ಕೆ ಮುತ್ತಿಗೆ ಹಾಕಿ ಮದ್ದುಗುಂಡಿನಿಂದ ಕೋಟೆಯನ್ನು ನೆಲಸಮ ಮಾಡಲು ಪ್ರಯತ್ನಿಸಿದ. ಆದರೆ ಸ್ಫೋಟಕ ವಸ್ತುಗಳನ್ನು ನಿಷ್ಫಲಗೊಳಿಸುವ ವಿದ್ಯೆಯಲ್ಲಿ ಪರಿಣತನಾದ ಚಿಕ್ಕಪ್ಪಗೌಡನ ಕೌಶಲದಿಂದ ಹೈದರನ ಆಶಯ ಮೂರು ತಿಂಗಳಾದರೂ ಫಲಿಸಲಿಲ್ಲ. ಕೊನೆಗೆ ಇಬ್ಬರೂ ಸಂಧಿ ಮಾಡಿಕೊಂಡರು. ಒಪ್ಪಂದದ ಪ್ರಕಾರ, ಮೈಸೂರು ಸೇನೆ ವಾಪಸಾಗತಕ್ಕದ್ದೆಂದೂ ಚಿಕ್ಕಪ್ಪಗೌಡ 5 ಲಕ್ಷ ವರಹಗಳನ್ನು ಪರಿಹಾರವಾಗಿ ಕೊಡತಕ್ಕದ್ದೆಂದೂ ಹಿಂದೆ ಮೈಸೂರಿನ ಕಂಠೀರವನ ಶಿರಚ್ಛೇದನ ಮಾಡಿದ್ದಕ್ಕೆ ಪ್ರತಿಯಾಗಿ ಸುವರ್ಣ ಶಿರಸ್ಸನ್ನು ಕೊಡಬೇಕೆಂದೂ ನಿಶ್ಚಯವಾಯಿತು. ಪರಿಹಾರದ್ರವ್ಯದ ಒಂದು ಭಾಗ ಸ್ಥಳದಲ್ಲಿಯೇ ಸಂದಾಯವಾಯಿತು. ಉಳಿದ ಹಣವನ್ನು ವಸೂಲುಮಾಡಲು ಒಬ್ಬ ಅಧಿಕಾರಿಯನ್ನು ಅಲ್ಲಿಯೇ ಬಿಟ್ಟು ಹೈದರ್ ದೇವನಹಳ್ಳಿಗೆ ತೆರಳಿದ. ಅದೇ ಸಮಯದಲ್ಲಿ ಕಾದುಕೊಂಡಿದ್ದ ಚಿಕ್ಕಪ್ಪಗೌಡ ಗುತ್ತಿಯ ಮರಾಠ ನಾಯಕ ಮುರಾರಿರಾವ್‌ನಿಂದ ಸೈನ್ಯಸಹಾಯವನ್ನು ಪಡೆದು ಕೋಟೆಯ ರಕ್ಷಣೆಗಾಗಿ ಬಿಟ್ಟು, ತಾನು ನಂದಿದುರ್ಗದಲ್ಲಿ ಆಶ್ರಯಪಡೆದ. ಇದರಿಂದ ಕುಪಿತನಾದ ಹೈದರ್ ಚಿಕ್ಕಬಳ್ಳಾಪುರವಷ್ಟೇ ಅಲ್ಲದೆ ಸುತ್ತಲ ಹಲವು ದುರ್ಗಗಳನ್ನು ವಶಪಡಿಸಿಕೊಂಡು, ಚಿಕ್ಕಪ್ಪಗೌಡನನ್ನು ಹಿಡಿದು ಬೆಂಗಳೂರಿನಲ್ಲಿ ಸೆರೆಹಾಕಿದ. ಚಿಕ್ಕಪ್ಪಗೌಡ ಅಪುತ್ರಕನಾಗಿ ಅಲ್ಲಿಯೇ ಸತ್ತ. ಅನಂತರ ಚಿಕ್ಕಬಳ್ಳಾಪುರದ ಎಲ್ಲಾ ಕೈದಿಗಳನ್ನೂ ಹೈದರ್ ಕೊಯಮುತ್ತೂರಿಗೆ ಸಾಗಿಸಿದ.

ಮೂರನೆಯ ಮೈಸೂರು ಯುದ್ಧದ ಕಾಲದಲ್ಲಿ ಟಿಪ್ಪು ನಂದಿದುರ್ಗವನ್ನು ರಕ್ಷಿಸಲು ಚಿಕ್ಕಬಳ್ಳಾಪುರವನ್ನು ತೆರವು ಮಾಡಿದ್ದ. ಆಗ ಕಾರ್ನ್‌ವಾಲಿಸ್ ಈ ವಂಶದ ನಾರಾಯಣಗೌಡನನ್ನು ಪುನಃ ಚಿಕ್ಕಬಳ್ಳಾಪುರದ ಪಾಳೆಯಗಾರನಾಗಿ ನೇಮಿಸಿದ. ಟಿಪ್ಪುವಿನ ದಾಳಿಯನ್ನು ಎದುರಿಸಲು ಇಂಗ್ಲಿಷರು ಸೈನ್ಯ ನೆರವನ್ನು ಕೊಡಲು ಮುಂದೆ ಬಂದರೂ ನಾರಾಯಣಗೌಡ ಅದನ್ನು ತಿರಸ್ಕರಿಸಿ ಸ್ವಂತ ಬಲದ ಮೇಲೆ ನಿಲ್ಲಲು ಪ್ರಯತ್ನಿಸಿದ. ಈ ಸಂದರ್ಭವನ್ನು ಗಮನಿಸಿದ ಟಿಪ್ಪು ಚಿಕ್ಕಬಳ್ಳಾಪುರದ ಕೋಟೆಗೆ ಮುತ್ತಿಗೆಹಾಕಿ ನೆಲಸಮ ಮಾಡಿದ. 1791ರಲ್ಲಿ ಇಂಗ್ಲಿಷರು

ನಂದಿದುರ್ಗ ಮತ್ತು ಸುತ್ತಲ ಪ್ರದೇಶವನ್ನು ವಶಪಡಿಸಿಕೊಂಡಾಗ ಚಿಕ್ಕಬಳ್ಳಾಪುರವನ್ನು ಪುನಃ ನಾರಾಯಣಗೌಡನಿಗೆ ಹಿಂತಿರುಗಿಸಿದರು. ಆದರೆ ಇಂಗ್ಲಿಷರು ಟಿಪ್ಪುವಿನೊಂದಿಗೆ ಒಪ್ಪಂದ ಮಾಡಿಕೊಂಡಾಗ (1792) ನಾರಾಯಣಗೌಡನ ಅಧಿಕಾರ ಕೊನೆಗೊಂಡು ಚಿಕ್ಕಬಳ್ಳಾಪುರದ ಪ್ರಭುಗಳ ಚರಿತ್ರೆಯೂ ಅಂತ್ಯವಾಯಿತು. (ಕೆ.ಟಿ.ಆರ್.)

**ಚಿಕ್ಕಮಗಳೂರು :** ಕರ್ನಾಟಕ ರಾಜ್ಯದ ಒಂದು ಜಿಲ್ಲೆ; ಆ ಜಿಲ್ಲೆಯ ಒಂದು ತಾಲ್ಲೂಕು; ಜಿಲ್ಲೆ ಮತ್ತು ತಾಲ್ಲೂಕುಗಳ ಆಡಳಿತ ಕೇಂದ್ರ.

**ಜಿಲ್ಲೆ** : ಉತ್ತರಕ್ಕೆ ಶಿವಮೊಗ್ಗ ಮತ್ತು ದಾವಣಗೆರೆ ಜಿಲ್ಲೆಗಳು ಪೂರ್ವಕ್ಕೆ ಚಿತ್ರದುರ್ಗ ಹಾಗೂ ತುಮಕೂರು ಜಿಲ್ಲೆಗಳು, ದಕ್ಷಿಣಕ್ಕೆ ಹಾಸನ ಜಿಲ್ಲೆ, ಪಶ್ಚಿಮಕ್ಕೆ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳು – ಇವು ಈ ಜಿಲ್ಲೆಯ ಮೇರೆಗಳು. ಕಡೂರು, ಚಿಕ್ಕಮಗಳೂರು, ಕೊಪ್ಪ, ಮೂಡಿಗೆರೆ, ನರಸಿಂಹರಾಜಪುರ, ಶೃಂಗೇರಿ ಮತ್ತು ತರೀಕೆರೆ – ಇವು ಈ ಜಿಲ್ಲೆಯ ಏಳು ತಾಲ್ಲೂಕುಗಳು. ಜಿಲ್ಲೆಯಲ್ಲಿ ಒಟ್ಟು 32 ಹೋಬಳಿಗಳೂ 1113 ಗ್ರಾಮಗಳೂ 226 ಗ್ರಾಮ ಪಂಚಾಯಿತಿಗಳೂ 10 ಪಟ್ಟಣಗಳೂ ಇವೆ. ಪೂರ್ವ-ಪಶ್ಚಿಮವಾಗಿ ಈ ಜಿಲ್ಲೆಯ ಗರಿಷ್ಠ ಉದ್ದ 138ಕಿಮೀ. ಉತ್ತರ-ದಕ್ಷಿಣವಾಗಿ ಗರಿಷ್ಠ ಅಗಲ 88ಕಿಮೀ. ಜಿಲ್ಲೆಯ ವಿಸ್ತೀರ್ಣ 7,199ಚ.ಕಿಮೀ. ಜನಸಂಖ್ಯೆ 10,08,057.

ಮಲೆನಾಡು ಮತ್ತು ಮೈದಾನ ಪ್ರದೇಶದಿಂದ ಕೂಡಿರುವ ಈ ಜಿಲ್ಲೆ ಪರ್ವತಮಯ. ಇದರ ಪಶ್ಚಿಮದಂಚಿನಲ್ಲಿ ಪಶ್ಚಿಮಘಟ್ಟಗಳು ಹಬ್ಬಿವೆ. ಇವುಗಳ ಕೆಲವು ಶಿಖರಗಳು ಹಿಮಾಲಯಕ್ಕೂ ನೀಲಗಿರಿಗೂ ನಡುವಿನ ಪ್ರದೇಶದಲ್ಲೇ ಅತ್ಯುನ್ನತವಾದಂಥವು. ಈ ಪರ್ವತಶ್ರೇಣಿಯಿಂದ ಒಳಚಾಚಿ ಮೂಡಿಗೆರೆ, ಕೊಪ್ಪ, ನರಸಿಂಹರಾಜಪುರ ಮತ್ತು ಚಿಕ್ಕಮಗಳೂರು ತಾಲ್ಲೂಕುಗಳಲ್ಲಿ ಹಬ್ಬಿರುವ ಬೆಟ್ಟಗಳ, ಶಿಖರಗಳ ಪೈಕಿ ಮುಳ್ಳಯ್ಯನಗಿರಿಯ ಎತ್ತರ ಸಮುದ್ರಮಟ್ಟದಿಂದ 1925ಮೀ. ಇದರ ಸಮೀಪದಲ್ಲೇ ಇರುವ ಬಾಬಾಬುಡನ್ ಗಿರಿ ಮತ್ತು ಕಲ್ಲತ್ತಗಿರಿಗಳು ಸಮುದ್ರಮಟ್ಟದಿಂದ ಅನುಕ್ರಮವಾಗಿ 1894ಮೀ ಮತ್ತು 1876ಮೀ ಎತ್ತರವಾಗಿವೆ. ಪಶ್ಚಿಮ ಘಟ್ಟದ ಕುದುರೆಮುಖ ಶಿಖರ 1894ಮೀ. ಎತ್ತರವಾಗಿದೆ. ಕುದುರೆಮುಖದಂತೆ ತೋರುವ ಈ ಶಿಖರ ಕಡಲ ನಾವಿಕರಿಗೆ ಭೂಮಿಯ ಹೆಗ್ಗುರುತಾಗಿತ್ತು. ಇದೇ ಶ್ರೇಣಿಯಲ್ಲಿ ಬಲ್ಲಾಳರಾಯನ ದುರ್ಗ (1505ಮೀ), ಗಂಗಾಮೂಲ (1454ಮೀ), ಒಡ್ಡಿನಗುಡ್ಡ (1526ಮೀ), ಮೈತ್ರಿಗುಡ್ಡ (1661ಮೀ), ಲಕ್ಕೆಪರ್ವತ (1421ಮೀ), ಶಕುನಗಿರಿ (1418ಮೀ), ಕಂಚಿಕಲ್ ದುರ್ಗ (1220ಮೀ) ಮೊದಲಾದ ಶಿಖರಗಳಿವೆ. ಜಿಲ್ಲೆಯ ದಕ್ಷಿಣದಲ್ಲಿ ಎಪ್ಪತ್ತು ಮಂದಿ ಗುಡ್ಡ, ಸಿಸಲುಕುಡಿ ಇವು ಎತ್ತರವಾದ ಶಿಖರಗಳು.

ಕಡೂರು, ತರೀಕೆರೆ ಮತ್ತು ಚಿಕ್ಕಮಗಳೂರು ತಾಲ್ಲೂಕುಗಳ ಕೆಲವು ಭಾಗಗಳನ್ನು ಬಿಟ್ಟರೆ ಜಿಲ್ಲೆಯ ಉಳಿದೆಲ್ಲ ಮಲೆನಾಡಿನ ಭಾಗ. ಈ ಪ್ರದೇಶ ಬೆಟ್ಟಗುಡ್ಡಗಳಿಂದಲೂ ದಟ್ಟವಾದ ಕಾಡುಗಳಿಂದಲೂ ಕೂಡಿವೆ. ಅಲ್ಲಲ್ಲಿ ಕಿರಿದಾದ ಬಯಲುಗಳಿವೆ. ಇನ್ನು ಕೆಲವು ಕಡೆ ಬರಡು ಕುರುಚಲು ಕಾಡುಗಳಿವೆ. ಬೆಟ್ಟ ಗುಡ್ಡಗಳಲ್ಲಿ ಎತ್ತರಕ್ಕೆ ಹೋದಂತೆ, ಸು.1400ಮೀ ಮೇಲೆ, ಕಾಡು ಕಡಿಮೆಯಾಗಿ ಕುರುಚಲು ಅಥವಾ ಹುಲ್ಲಿನಿಂದ ಕೂಡಿದ ಬೋಳು ಪ್ರದೇಶಗಳಿವೆ. ಜಿಲ್ಲೆಯ ಪೂರ್ವಭಾಗಕ್ಕೆ ಹೋದಂತೆಲ್ಲ ಬಯಲಿನ ಲಕ್ಷಣಗಳು ಕಂಡುಬರುತ್ತವೆ. ಬಾಬಾಬುಡನ್ ಗಿರಿಯ ತಪ್ಪಲಿನಿಂದ ಪೂರ್ವಕ್ಕೆ ಥಟ್ಟನೆ ಭೂಮಿಯ ಮಟ್ಟ ಇಳಿಯುತ್ತದೆ. ಮಲೆನಾಡಿನ ಸರಹದ್ದಿನಲ್ಲಿರುವ ಚಿಕ್ಕಮಗಳೂರಿನ ಎತ್ತರ 1061ಮೀ. ಆದರೆ ಬಯಲು ಸೀಮೆಯಲ್ಲಿರುವ ಕಡೂರು 788ಮೀ, ತರೀಕೆರೆ 681ಮೀ ಎತ್ತರದಲ್ಲಿವೆ.

ಕರ್ನಾಟಕದಲ್ಲಿ ಹರಿಯುವ ಅನೇಕ ನದಿಗಳು ಹುಟ್ಟುವುದು ಈ ಜಿಲ್ಲೆಯಲ್ಲೇ. ಇಲ್ಲಿಯ ಜಲಸಂಪತ್ತನ್ನು ಇಲ್ಲಿಯ ಪರ್ವತಪ್ರದೇಶಗಳು ಇಬ್ಭಾಗವಾಗಿ ಒಡೆಯುತ್ತವೆ. ಆಗ್ನೇಯದಂಚಿನಲ್ಲಿ ಬಲ್ಲಾಳರಾಯನದುರ್ಗದಿಂದ ಹಿಡಿದು ಚಿಕ್ಕಮಗಳೂರು ಪಟ್ಟಣದ ಸಮೀಪವಿರುವ ಬಾಬಾಬುಡನ್ ಗಿರಿಯ ವರೆಗೂ ಹಬ್ಬಿರುವ ಪರ್ವತಶ್ರೇಣಿ ಕರ್ನಾಟಕದ ಉತ್ತರ ಮತ್ತು ದಕ್ಷಿಣದ ನದಿಗಳನ್ನು ಪ್ರತ್ಯೇಕಿಸುತ್ತದೆ. ವರಾಹ ಪರ್ವತದ ಗಂಗಾಮೂಲದಲ್ಲಿ ಹುಟ್ಟುವ ತುಂಗಾ ಮತ್ತು ಭದ್ರಾ ನದಿಗಳು ಉತ್ತರ ದಿಕ್ಕಿಗೆ ಹರಿದರೆ, ದಕ್ಷಿಣ ಭಾಗದಲ್ಲಿ ಮೆಲ್ಬಂಗಾಡಿಯ ಜಾವಳಿಯ ಬಳಿ ಹುಟ್ಟುವ ಹೇಮಾವತಿ ನದಿ ಮೂಡಿಗೆರೆ ತಾಲ್ಲೂಕಿನಲ್ಲಿ ದಕ್ಷಿಣ ದಿಕ್ಕಿಗೆ ಹರಿದು ಹಾಸನ ಜಿಲ್ಲೆಯನ್ನು ಪ್ರವೇಶಿಸುತ್ತದೆ. ತುಂಗಾ ಮತ್ತು ಭದ್ರಾ ನದಿಗಳು ಒಂದೇ ಪ್ರದೇಶದಲ್ಲಿ ಹುಟ್ಟಿದ್ದರೂ ಕೊಪ್ಪ ತಾಲ್ಲೂಕಿನಲ್ಲಿ ಇರುವ ಬೆಟ್ಟಗಳ ಸಾಲು ಅವನ್ನು ಪ್ರತ್ಯೇಕಿಸುತ್ತವೆ. ತುಂಗಾ ನದಿ ಶೃಂಗೇರಿಯವರೆಗೂ ಈಶಾನ್ಯ ದಿಕ್ಕಿಗೆ ಹರಿದು ಅನಂತರ ವಾಯವ್ಯ ದಿಕ್ಕಿಗೆ ತಿರುಗಿ ಶಿವಮೊಗ್ಗ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಭದ್ರಾ ನದಿ ಸ್ವಲ್ಪ ದೂರ ಪೂರ್ವದ ಕಡೆ ಹರಿದು ಕಳಸ, ಬಾಳೆಹೊನ್ನೂರು ಮತ್ತು ಖಾಂಡ್ಯಗಳನ್ನು ದಾಟಿ ಹೆಬ್ಬೆಯ ಬಳಿ ಜಾಗರ ಕಣಿವೆಯಿಂದ ಬರುವ ಸೋಮವಾಹಿನಿಯನ್ನು ಕೂಡಿಕೊಂಡು ಲಕ್ಕವಳ್ಳಿಯ ಮೂಲಕ ಶಿವಮೊಗ್ಗ ಜಿಲ್ಲೆಯನ್ನು ಪ್ರವೇಶಿಸುತ್ತದೆ.



ವಿದ್ಯಾಶಂಕರ ದೇವಾಲಯ, ಶೃಂಗೇರಿ

ದಕ್ಷಿಣದ ಕಡೆಗೆ ಹರಿಯುವ ಹೇಮಾವತಿ ನದಿಗೆ ಸ್ವಲ್ಪ ದೂರದಲ್ಲೇ ಸೋಮಾವತಿ ಹೊಳೆ ಸೇರುತ್ತದೆ. ಮುಂದೆ ಇದೇ ನದಿಗೆ ದೊಡ್ಡಹಳ್ಳ, ಕಪಿಲ ಮೊದಲಾದ ತೊರೆಗಳು ಸೇರುತ್ತವೆ. ನದಿ ಆಗ್ನೇಯ ದಿಕ್ಕಿಗೆ ಹರಿದು ಹಾಸನ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಮುಳ್ಳಯ್ಯನಗಿರಿಯ ಬಳಿ ಹುಟ್ಟುವ ಯಗಚಿ ನದಿ ಚಿಕ್ಕಮಗಳೂರನ್ನು ದಾಟಿ ಹಾಸನ ಜಿಲ್ಲೆಯನ್ನು ಪ್ರವೇಶಿಸಿ ಗೊರೂರು ಬಳಿ ಹೇಮಾವತಿಯನ್ನು ಸೇರುತ್ತದೆ.

ಮುಳ್ಳಯ್ಯನಗಿರಿ ಶ್ರೇಣಿಯಲ್ಲಿ ಗೌರಿಹಳ್ಳ ಮತ್ತು ಆವತಿಹಳ್ಳ ಎಂಬ ಎರಡು ತೊರೆಗಳು ಹುಟ್ಟುತ್ತವೆ. ಸಕ್ಕರೆಪಟ್ಟಣಕ್ಕೆ ಪಶ್ಚಿಮದಲ್ಲಿ 6ಕಿಮೀ ದೂರದಲ್ಲಿ ಗೌರಿಹಳ್ಳದಿಂದ ಆಗಿರುವ ಅಯ್ಯನಕೆರೆ ಇದೆ. ಅಲ್ಲಿಂದ ಹೊರಬೀಳುವ ನೀರೇ ಹೊಳೆಯಾಗಿ ವೇದಾನದಿ ಎಂದು ಹೆಸರಾಗಿದೆ. ಆವತಿ ಹಳ್ಳದಿಂದಾದದ್ದು ಮದಗ ಕೆರೆ. ಇದರಿಂದ ಹೊರಬಿದ್ದ ನೀರು ಕಡೂರಿನ ಬಳಿ ವೇದಾನದಿಯನ್ನು ಸೇರಿ ಅಲ್ಲಿಂದ ಮುಂದೆ ನದಿ ವೇದಾವತಿ ಎಂಬ ಹೆಸರಿನಿಂದ ಹರಿಯುತ್ತದೆ. (ಡಿ.ಎಸ್.ಜೆ.,ಎಂ.ಆರ್.ಆರ್.)

ಜಿಲ್ಲೆಯ ಸುಮಾರು ಅರ್ಧಭಾಗ ಧಾರವಾಡ ಭಿನ್ನಸ್ತರ ಶಿಲೆಗಳಿಂದ ಕೂಡಿದೆ. ಬಾಬಾಬುಡನ್ ಗಿರಿ, ಗಂಗಾಮೂಲ, ಮೈತ್ರಿಪರ್ವತ ಹಾಗೂ ಕುದುರೆಮುಖ ಪ್ರದೇಶಗಳಲ್ಲಿ ಈ ಬಗೆಯ ಶಿಲೆಗಳಿವೆ. ಬಾಬಾಬುಡನ್ ಗಿರಿ ಪ್ರದೇಶದ ಕಬ್ಬಿಣದ ಅದುರುಗಳಿರುವುದು ಈ ಶಿಲೆಗಳಲ್ಲಿ. ಕಬ್ಬಿಣದ ಅದುರು ಪದರಗಳು ಒತ್ತಾದ ಏಣುಗಳಾಗಿಯೇ ಪರಿಣಮಿಸಿ ಪರ್ವತಶಿಖರಗಳಾಗಿವೆ. ಈ ಪ್ರದೇಶದಲ್ಲಿರುವ ಕಲ್ಲತ್ತಗಿರಿ ಮತ್ತು ಕೆಮ್ಮಣ್ಣುಗುಂಡಿಯಲ್ಲಿ ಅದುರನ್ನು ತೆಗೆಯುವ ಕೆಲಸ ನಡೆಯುತ್ತಿದೆ. ಇದನ್ನು ಭದ್ರಾವತಿಯಲ್ಲಿರುವ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಗೆ ಸಾಗಿಸಲಾಗುತ್ತಿದೆ. ಜಿಲ್ಲೆಯ ಪಶ್ಚಿಮಭಾಗದಲ್ಲಿ ಮೂಡಿಗೆರೆ ಮತ್ತು ಶೃಂಗೇರಿ ತಾಲ್ಲೂಕುಗಳಲ್ಲಿ ವಿಶೇಷವಾಗಿ ಕಪ್ಪು ಹಾರ್ನ್‌ಬ್ಲೆಂಡ್ ಭಿನ್ನಸ್ತರ ಶಿಲೆಗಳುಂಟು. ಮೂಡಿಗೆರೆ ತಾಲ್ಲೂಕಿನಲ್ಲಿರುವ ಕುದುರೆಮುಖದಲ್ಲಿ ಕಬ್ಬಿಣದ ಅದುರು ತೆಗೆಯುವ ಬೃಹತ್ ಯೋಜನೆ ಅಸ್ತಿತ್ವದಲ್ಲಿದೆ.

ಭಿನ್ನ ಸ್ತರ ಶಿಲೆಗಳಿಲ್ಲದೆಡೆಗಳಲ್ಲಿ ವಿವಿಧ ಬಗೆಯ ಗ್ರ್ಯಾನೈಟ್‌ಗಳೂ ನೈಸ್ ಶಿಲೆಗಳೂ ಉಂಟು. ಗ್ರ್ಯಾನೈಟ್ ಶಿಲೆ ಕಡೂರು ಮತ್ತು ಬೀರೂರುಗಳ ಬಳಿ ಹೇರಳವಾಗಿ ದೊರೆಯುತ್ತದೆ. ಮೂಡಿಗೆರೆ ಬಳಿಯ ಕುದುರೆಗುಂಡಿ ಮತ್ತು ಬಾಳೆಗದ್ದೆಗಳಲ್ಲಿ ಅಧಿಕ ಪ್ರಮಾಣದಲ್ಲಿ ಈ ಕಲ್ಲುಗಳನ್ನು ಕಟ್ಟಡ, ಸೇತುವೆ ಮೊದಲಾದವುಗಳಿಗಾಗಿ ತೆಗೆಯುತ್ತಾರೆ. ಬೆಳವಾಡಿಯಲ್ಲೂ ಗ್ರ್ಯಾನೈಟ್ ಕಲ್ಲು ದೊರೆಯುತ್ತದೆ. ಶೃಂಗೇರಿಗೆ 6ಕಿಮೀ ದೂರದಲ್ಲಿ ಕಾಗೆಬಂಗಾರದ ನಿಕ್ಷೇಪಗಳುಂಟು. ತರೀಕೆರೆಯ ಕೆಲವು ಭಾಗಗಳಲ್ಲಿ ಕುರಂದ ಶಿಲೆಯಿದೆ. ಮ್ಯಾಂಗನೀಸನ್ನು ತೆಗೆಯುವ ಪ್ರಯತ್ನವೂ ನಡೆದಿದೆ.

ಬಾಬಾಬುಡನ್‌ಗಿರಿ ಮತ್ತು ಮುಳ್ಳಯ್ಯನ ಗಿರಿಯ ಉತ್ತರ ಮತ್ತು ಪೂರ್ವಕ್ಕಿರುವ ಬಯಲುಗಳದು ಕಪ್ಪುಮಣ್ಣು. ಚಿಕ್ಕಮಗಳೂರು ಮತ್ತು ತರೀಕೆರೆ ತಾಲ್ಲೂಕುಗಳ ಬಯಲು ಪ್ರದೇಶಗಳಿಂದ ಕಡೂರಿನವರೆಗೂ ಇದು ವ್ಯಾಪಿಸಿದೆ. ಇವು ಫಲವತ್ತಾದ ಪ್ರದೇಶಗಳು. ಚಿಕ್ಕಮಗಳೂರು ತಾಲ್ಲೂಕಿನಲ್ಲಿರುವ ಬೆಟ್ಟ ಪ್ರದೇಶದಲ್ಲಿರುವುದೂ ಹೆಚ್ಚಾಗಿ ಕಪ್ಪುಮಣ್ಣೆ. ಇದು ಕಾಫಿ ಬೆಳೆಗೆ ಅನುಕೂಲಕರ, ತರೀಕೆರೆ ತಾಲ್ಲೂಕಿನ ಪಶ್ಚಿಮಭಾಗದ್ದು ಮರಳು ಮತ್ತು ಸುಣ್ಣಕಲ್ಲು ಮಿಶ್ರಿತ ನೆಲ. ಮೂಡಿಗೆರೆ ತಾಲ್ಲೂಕಿನ ಬಹುಭಾಗ ಕೆಂಪುಮಣ್ಣಿನಿಂದ ಕೂಡಿದ್ದು. ಹೇಮಾವತಿ ನದಿ ಉದ್ದಕ್ಕೂ ಹೊತ್ತು ತಂದ ಹುಯಿಗಲು ಅಥವಾ ಸಣ್ಣ ಮರಳುಮಣ್ಣು ಅಕ್ಕಪಕ್ಕದ ಬಯಲಿನಲ್ಲಿ ಹರಡಿದೆ. ಕೊಪ್ಪ, ಶೃಂಗೇರಿ ತಾಲ್ಲೂಕುಗಳಲ್ಲಿ ಅಧಿಕ ಮಳೆಯಿಂದಾಗಿ ಗಟ್ಟಿಮಣ್ಣು ಮತ್ತು ಕೆಮ್ಮಣ್ಣು ಕಂಡುಬರುತ್ತವೆ. ಇಲ್ಲಿಯ ನದೀಬಯಲುಗಳು ಫಲವತ್ತಾದವು. ಅಡಕೆ ಬೆಳೆಗೆ ಅನುಕೂಲಕರವಾದ ಮಣ್ಣು ಈ ಪ್ರದೇಶದ್ದು.

ಚಿಕ್ಕಮಗಳೂರು ಜಿಲ್ಲೆಯ ವಾಯುಗುಣ ಹಿತಕರವಾದ್ದು. ಇದರ ಪಶ್ಚಿಮ ಭಾಗ ಹೆಚ್ಚು ತಂಪು. ಚಳಿಗಾಲದಲ್ಲಿ ಚಳಿ ಹೆಚ್ಚು. ಗರಿಷ್ಠ ಉಷ್ಣತೆ ಏಪ್ರಿಲ್ ಮತ್ತು ಮೇ ತಿಂಗಳುಗಳಲ್ಲಿ. ಜೂನ್‌ನಿಂದ ಸೆಪ್ಟಂಬರ್ ತಿಂಗಳವರೆಗೆ ಅಧಿಕ ಮಳೆ. ಜುಲೈ ತಿಂಗಳೊಂದರಲ್ಲಿ ವರ್ಷದ ಒಟ್ಟು ಮಳೆಯ ಸುಮಾರು 1/3ರಷ್ಟು ಬೀಳುತ್ತದೆ. ಜಿಲ್ಲೆಯ ಪೂರ್ವ ಭಾಗದಲ್ಲಿ ಮಳೆ ಕಡಿಮೆ; ಕಡೂರು ತಾಲ್ಲೂಕಿನಲ್ಲಿ ಕನಿಷ್ಠ. ಕೊಪ್ಪ, ಮೂಡಿಗೆರೆ, ಶೃಂಗೇರಿಗಳಲ್ಲಿ 2500ಮಿಮೀ ಗಿಂತ ಹೆಚ್ಚು ಮಳೆಯಾಗುತ್ತದೆ. ಜಿಲ್ಲೆಯಲ್ಲಿ ಅತಿ ಹೆಚ್ಚಿನ ಮಳೆಯಾಗುವ ಸ್ಥಳ ಮೂಡಿಗೆರೆ ತಾಲ್ಲೂಕಿನ ಬೈರಾಪುರ. ಅಲ್ಲಿ 8369ಮಿಮೀ ಮಳೆಯಾದ ದಾಖಲೆ ಇದೆ. ಇತರೆಡೆಗಳಲ್ಲಿ 2000ದಲ್ಲಿನ ಸರಾಸರಿ ಮಳೆ ಈ ರೀತಿ ಇದೆ. ಶೃಂಗೇರಿ 3571ಮಿಮೀ, ಕೊಪ್ಪ 2835ಮಿಮೀ, ಮೂಡಿಗೆರೆ 2435ಮಿಮೀ, ನರಸಿಂಹರಾಜಪುರ 1500ಮಿಮೀ, ಚಿಕ್ಕಮಗಳೂರು 1029ಮಿಮೀ, ತರೀಕೆರೆ 874ಮಿಮೀ, ಕಡೂರು 623ಮಿಮೀ.



ಈ ಜಿಲ್ಲೆಯ ಅರಣ್ಯ ಸಂಪತ್ತು ಉತ್ಕೃಷ್ಟವಾದದ್ದು. ಅರಣ್ಯ ಪ್ರದೇಶದ ವಿಸ್ತೀರ್ಣ 2,00,485 ಹೆಕ್ಟೇರ್, ಪಶ್ಚಿಮಘಟ್ಟಗಳ ಉದ್ದಕ್ಕೂ ಹಬ್ಬಿರುವ ಈ ಕಾಡುಗಳಲ್ಲಿ ಉತ್ತಮ ಜಾತಿಯ ಮರಗಳುಂಟು. ಅವುಗಳಲ್ಲಿ ತೇಗ, ಶ್ರೀಗಂಧ, ಮತ್ತಿ, ನಂದಿ, ಹಲಸು, ದಬ್ಬೆ, ಹೆಬ್ಬಲಸು, ನೇರಳೆ, ಸಾಗುವಾನಿ, ಕೋಗಿಲೆ ಮುಂತಾದ ಮರಮುಟ್ಟುಗಳಿಗೆ ಉಪಯುಕ್ತವಾದ ಮರಗಳಿವೆ. ಬಾಬಾಬುಡನ್ ಗಿರಿ ಗಿಡಮೂಲಿಕೆ ಸಸ್ಯಗಳಿಗೆ ಹೆಸರುವಾಸಿಯಾದ್ದು. ಹೊರಗಡೆಯಿಂದ ಇಲ್ಲಿಗೆ ನಾಟಿ ವೈದ್ಯರು ಬಂದು ಗಿಡಮೂಲಿಕೆಗಳನ್ನು ಸಂಗ್ರಹಿಸಿಕೊಂಡು ಹೋಗುತ್ತಾರೆ. ಕೊಪ್ಪ, ನರಸಿಂಹರಾಜಪುರ ತಾಲ್ಲೂಕುಗಳಲ್ಲಿ ವಿಪುಲವಾದ ಬಿದಿರು ಕಾಡುಗಳುಂಟು. ಕಾಗದ ತಯಾರಿಸಲು ಬೊಂಬುಗಳನ್ನು ಇಲ್ಲಿಂದ ಸಾಗಿಸಲಾಗುತ್ತದೆ. ಜಿಲ್ಲೆಯ ಕಾಡುಗಳಲ್ಲಿ ಬೆಳೆಯುವ ಅಂಟುವಾಳ, ಸೀಗೆಕಾಯಿ, ಕಾಡುಮೆಣಸು ಮೊದಲಾದವು ವಾಣಿಜ್ಯ ಫಸಲುಗಳು. ಜಿಲ್ಲೆಯ ಪೂರ್ವಭಾಗದಲ್ಲಿ ಕಾಡು ಕಡಿಮೆ. ಈಚಲು ಮರಗಳು ಸಾಕಷ್ಟು ಬೆಳೆಯುತ್ತವೆ. ಜಿಲ್ಲೆಯಲ್ಲಿರುವ ಮುಖ್ಯ ಮೀಸಲು ಕಾಡುಗಳೆಂದರೆ ಮುತ್ತೋಡಿ, ಗಂಗಗಿರಿ, ಹೆಬ್ಬರಗಿರಿ, ಸಿಂದಗೆರೆ, ಉದುಗೆರೆ, ದಕ್ಷಿಣಭದ್ರ, ತಳಾವರ, ಬಾಳೂರು, ತುಂಗಭದ್ರ, ಲಕ್ಕವಳ್ಳಿ, ನರಸಿಂಹ ಪರ್ವತ, ತೇಗೂರ್ ಗುಡ್ಡ, ಹೊಸಹಳ್ಳಿ, ಕಿತ್ತಲೆಖಾನ್, ಆರಂಬಳ್ಳಿ ಮತ್ತು ಕುಸ್‌ಗಲ್. ಅರಣ್ಯ ಪ್ರದೇಶದ ಅನೇಕ ಕಡೆ ಅರಣ್ಯ ಭೂಮಿಯನ್ನು ಪ್ಲಾಂಟೇಷನ್ ಸಾಗುವಳಿಗಾಗಿ ಒತ್ತುವರಿ ಮಾಡಿರುವದು ಕಂಡು ಬರುತ್ತದೆ. ಬಹುಕಾಲದಿಂದ ಸಾವಿರಾರು ಒಕ್ಕಲುಗಳು ಅರಣ್ಯದಲ್ಲಿ ನೆಲಸಿರುವ ಸಮಸ್ಯೆಯಿದೆ. ಇವೆಲ್ಲ ಅರಣ್ಯ ಪ್ರದೇಶದ ಕ್ಷೀಣಿಸುವಿಕೆಯನ್ನು ಹೆಚ್ಚಿಸಿವೆ. ಎಮ್ಮೆದೊಡ್ಡಿ ಕಾವಲು, ಚುರ್ಚೆ ಗುಡ್ಡ ಮೊದಲಾದ ಮೀಸಲು ಜಮೀನುಗಳಿವೆ. ಜಿಲ್ಲೆಯ ಕಾಡುಗಳಲ್ಲಿ ಹಲಸು, ನೇರಳೆ, ಈಚಲು, ಚೊಟ್ಟೆ, ಸೀಬೆ, ಬಕ್ಕಲ, ಹಾಲಿ ಹಣ್ಣುಗಳ ಮರಗಳಿವೆ. ಮಲೆನಾಡಿನ ಕಾಡಿನಲ್ಲಿ ಬೆಳೆಯುವ ಬಗನಿ ಮರದಿಂದ ಸೇಂದಿಯನ್ನು ತೆಗೆಯುತ್ತಾರೆ.

ಈ ಜಿಲ್ಲೆ ಪ್ರಾಣಿಸಂಪದ್ಭರಿತವಾದ್ದು. ಇಲ್ಲಿಯ ಕಾಡುಗಳಲ್ಲಿ ಆನೆ, ಹುಲಿ, ಕಾಡು ಕೋಣ, ತೋಳ, ಚಿರತೆ, ಹಂದಿ, ಕಡವೆ, ಸಾರಂಗ, ಜಿಂಕೆ, ಮುಸಿಯ, ಕೆಂಜಳಿಲು, ಕರಡಿ, ಮುಳ್ಳುಹಂದಿ, ಕಾಡುಕುರಿ, ಉಡ, ಪುನುಗ, ಬರ್ಕ, ಮೊಲ, ನರಿ ಮೊದಲಾದ ಮೃಗಗಳೂ ಬಾವಲಿ, ರಣಹದ್ದು, ಕಾಡುಕೋಳಿ, ನವಿಲು, ಕೋಗಿಲೆ, ಗವುಜುಗ, ಗಿಡುಗ, ಕಾಜಾಣ, ಬೆಳ್ಳಕ್ಕಿ, ಕೆಂಭೂತ -ಪಕ್ಷಿಗಳೂ ಬಾತುಜಾತಿಗೆ ಸೇರಿದ ಚರ್ಲೆ, ಕುಂಡಿಮುಳುಗ ಮೊದಲಾದ ನೀರುಹಕ್ಕಿಗಳೂ ಹೆಬ್ಬಾವು, ಮಂಡಲ, ಕಟುಗ, ಕಾಳಿಂಗಸರ್ಪ, ನಾಗರ, ಕೇರೆ ಮುಂತಾದ ಹಾವುಗಳೂ ಕೆರೆಗಳಲ್ಲಿ ಕುರಡಿ, ಮುರುಗೊಡವ, ಬಾಳೆ, ಅವಲು, ಕುಚ್ಚು, ಕೊರೆಮಳಲಿ, ಅರ್ಜು ಮುಂತಾದ ಮೀನುಗಳೂ ಮೊಸಳೆಗಳೂ ಇವೆ. ಇತ್ತೀಚೆಗೆ ಮರಕ್ಕಾಗಿ ಮತ್ತು ಸಾಗುವಳಿಗಾಗಿ ಕಾಡುಗಳು ನಾಶವಾಗುತ್ತಿರುವುದರಿಂದಲೂ ಶಿಕಾರಿಗಳಿಂದಲೂ ವನ್ಯಮೃಗಗಳು ನಶಿಸುತ್ತಿವೆ. ಜಿಲ್ಲೆಯ ಸಾಕುಪ್ರಾಣಿಗಳಲ್ಲಿ ಮುಖ್ಯವಾದವು ದನ, ಎಮ್ಮೆ, ಕುರಿ. ಮಲೆನಾಡಿನ ಹಸುಗಳು ಗಾತ್ರದಲ್ಲಿ ಚಿಕ್ಕವು. ಕಡಿಮೆ ಹಾಲು ಕರೆಯುತ್ತವೆ. ಬಿಳಿಯ ದೊಡ್ಡರಾಸುಗಳಿಗೆ ಮಲೆನಾಡಿನ ವಾಯುಗುಣ ಅಷ್ಟಾಗಿ ಒಗ್ಗುವುದಿಲ್ಲ. ಕೋಣಗಳನ್ನು ಬೇಸಾಯಕ್ಕೆ ಬಳಸುತ್ತಾರೆ.

ಜಿಲ್ಲೆಯ ಮುಖ್ಯ ಕಸಬು ಕೃಷಿ ಮತ್ತು ಪ್ಲಾಂಟೇಷನ್. ಕಾಫಿ ಇಲ್ಲಿಯ ಮುಖ್ಯ ವಾಣಿಜ್ಯ ಬೆಳೆ. ಈ ಜಿಲ್ಲೆಯಲ್ಲಿ ಕಾಫಿ ಬೆಳೆಯಬಹುದಾದ ಪ್ರದೇಶದ ವಿಸ್ತೀರ್ಣ 2,590ಚ.ಕಿಮೀ. ಇದು ಕರ್ನಾಟಕದಲ್ಲಿ ಹೆಚ್ಚು ಕಾಫಿ ಉತ್ಪಾದಿಸುವ ಒಂದು ಜಿಲ್ಲೆ. ಕಾಫಿಯನ್ನು ದಕ್ಷಿಣ ಭಾರತಕ್ಕೆ ಮೊಟ್ಟಮೊದಲ ಬಾರಿಗೆ ಬಾಬಾಬುಡನ್ ಎಂಬವನು ಆಫ್ರಿಕದಿಂದ ತಂದು ಈ ಜಿಲ್ಲೆಯಲ್ಲಿರುವ ಬಾಬಾಬುಡನ್ ಗಿರಿಯಲ್ಲಿ ನೆಟ್ಟನೆಂದೂ ಅದರಿಂದ ಈ ಗಿರಿಗೆ ಅವನ ಹೆಸರೇ ಬಂತೆಂದೂ ಪ್ರತೀತಿ. 1820ರ ತರುವಾಯ ಕಾಫಿ ಬೆಳೆ ಯುರೋಪಿಯನ್ ಬೆಳೆಗಾರರಿಂದ ಹೆಚ್ಚು ಪ್ರಚಾರಕ್ಕೆ ಬಂತು. ಸ್ಥಳೀಯ ಬೆಳೆಗಾರರೂ ಇದರಲ್ಲಿ ಆಸಕ್ತಿ ವಹಿಸಿದುದರಿಂದ ಇದು ಹೆಚ್ಚು ವ್ಯಾಪಕವಾಯಿತು. ಕಾಫಿ ಬೆಳೆಯ ಸಂಶೋಧನೆಗಾಗಿ ಬಾಳೆಹೊನ್ನೂರಿನಲ್ಲಿ ಒಂದು ಸಂಶೋಧನೆ ಕೇಂದ್ರವನ್ನು ಸ್ಥಾಪಿಸಲಾಗಿದೆ. ಅತ್ಯಧಿಕ ಮಳೆ ಬೀಳುವ ಕೊಪ್ಪ ಮತ್ತು ಮೂಡಿಗೆರೆ ತಾಲ್ಲೂಕುಗಳಲ್ಲಿ ಕೆಲವು ಎತ್ತರದ ಪ್ರದೇಶಗಳಲ್ಲಿ ಅರ್ಯಾಬಿಕ ಕಾಫಿ ಉತ್ತಮವಾಗಿ ಬೆಳೆಯುತ್ತದೆ. ಉಳಿದಲ್ಲಿ ರೊಬಸ್ಟ ಕಾಫಿ ಚೆನ್ನಾಗಿ ಬೆಳೆಯುತ್ತದೆ. ಕಾವೇರಿ ಎಂಬ ತಳಿ 1990ರ ದಶಕದಲ್ಲಿ ಹೆಚ್ಚು ಪ್ರಚಾರ ಪಡೆದು ಸಾಗುವಳಿಗೆ ಬಂದಿತು. ಆದರೆ ಅದು ಅಷ್ಟು ಫಲಪ್ರದವಾಗಿಲ್ಲ. ಈಗ ಇನ್ನೂ ಅನೇಕ ಹೊಸ ತಳಿಗಳನ್ನು ಸೃಷ್ಟಿಸಲಾಗಿದೆ. ಚಿಕ್ಕಮಗಳೂರು ಜಿಲ್ಲೆಯಲ್ಲಿ ಬೆಳೆಯುವ ಒಟ್ಟು ಕಾಫಿ ಉತ್ಪನ್ನ 77,700 ಮೆಟ್ರಿಕ್‌ಟನ್ ಕಾಫಿ ಬೆಳೆಯುವ ಪ್ರದೇಶ 80,818 ಹೆಕ್ಟೇರ್ (2000).



ಹೆಬ್ಬೆ ಜಲಪಾತ, ಕೆಮ್ಮಣ್ಣುಗುಂಡಿ ಸಮೀಪ

ಏಲಕ್ಕಿ ಇನ್ನೊಂದು ಮುಖ್ಯ ವಾಣಿಜ್ಯ ಬೆಳೆ. ಮೂಡಿಗೆರೆ ಮತ್ತು ಕೊಪ್ಪ ತಾಲ್ಲೂಕುಗಳಲ್ಲಿ ಇದನ್ನು ಹೆಚ್ಚಾಗಿ ಬೆಳೆಯಲಾಗುತ್ತಿದೆ. ಮೂಡಿಗೆರೆಯ ಬಳಿ ಒಂದು ಪ್ರಾದೇಶಿಕ ಏಲಕ್ಕಿ ಸಂಶೋಧನಾಲಯವನ್ನು ಸ್ಥಾಪಿಸಲಾಗಿದೆ. ಕಳೆದ ದಶಕದಲ್ಲಿ ಮಳೆ ಕಡಿಮೆಯಾದುದರಿಂದ ಈ ಬೆಳೆಗೆ ಭಾರಿ ಪೆಟ್ಟು ಬಿದ್ದಿದೆ. ಈಗ ಏಲಕ್ಕಿ ಬೆಳೆಯುವ ಸ್ಥಳಗಳಲ್ಲಿ ಹೆಚ್ಚಾಗಿ ಕಾಫಿ ಬೆಳೆಯುವ ಪ್ರಯತ್ನ ನಡೆಯುತ್ತಿದೆ. ಎಲೆ ಮಡ್ಲು ಹಾಗೂ ಕಳಸಕ್ಕೆ ಸಮೀಪದಲ್ಲಿ ಕೆಲವು ಚಹ ತೋಟಗಳಿವೆ.

ಈ ಜಿಲ್ಲೆಯಲ್ಲಿ ಅಡಕೆಯೂ ಹೆಚ್ಚಾಗಿ ಬೆಳೆಯುತ್ತದೆ. ಕೊಪ್ಪ, ಶೃಂಗೇರಿ, ನರಸಿಂಹರಾಜಪುರ ತಾಲ್ಲೂಕುಗಳಲ್ಲಿ ಮತ್ತು ಕಳಸದ ಸುತ್ತಮುತ್ತ ಬಯಲು ಸೀಮೆಯಲ್ಲಿ ಕೆಲವೆಡೆ ಅಡಕೆ ತೋಟಗಳಿವೆ. ಮೆಣಸು ಮತ್ತು ಶುಂಠಿಗಳನ್ನು ತೋಟಗಳಲ್ಲಿ ಗದ್ದೆಗಳಲ್ಲಿ ಉಪ ಬೆಳೆಗಳಾಗಿ ಬೆಳೆಯುವುದುಂಟು. ಕೆಲವೆಡೆ ರಬ್ಬರ್ ತೋಟಗಳಿವೆ. ಇತ್ತೀಚೆಗೆ ವೆನಿಲಾ ಬೆಳೆಯಲು ಒಲವು ಕಂಡುಬಂದಿದೆ.

ಬತ್ತ ಇಲ್ಲಿನ ಮುಖ್ಯ ಆಹಾರ ಬೆಳೆ. ಒಟ್ಟು 53200 ಹೆಕ್ಟೇರುಗಳಲ್ಲಿ ಬತ್ತ ಬೆಳೆಯಲಾಗುತ್ತದೆ. ಚಿಕ್ಕಮಗಳೂರಿನ ಸುತ್ತಣ ಬಯಲಿಗೆ ಹೊಂಜೇವಣಿಗೆ ಸೀಮೆ ಅಥವಾ ಚಿನ್ನ ಹರಿಯುವ ಬಯಲು

ಎಂದು ಹೆಸರು ಬಂದಿದೆ. ಇದಕ್ಕೆ ಇಲ್ಲಿಯ ಫಲವತ್ತಾದ ಬತ್ತದ ಬಯಲೇ ಕಾರಣ. ಕಪ್ಪುಮಣ್ಣಿನಿಂದ ಕೂಡಿದ ಪೂರ್ವ ಭಾಗದಲ್ಲಿ ಅದರಲ್ಲೂ ಬಯಲು ನಾಡಿನ ಭಾಗದಲ್ಲಿ ಬತ್ತದ ಇಳುವರಿ ಹೆಚ್ಚು. ಇದನ್ನು ಬೆಳೆಯುವ ಪ್ರದೇಶವೂ ಹೆಚ್ಚು. ಮಲೆನಾಡಿನ ಪ್ರದೇಶಗಳಲ್ಲಿ ಬತ್ತದ ಬಯಲುಗಳು ಕಡಿಮೆ. ಮೂಡಿಗೆರೆ ತಾಲ್ಲೂಕಿನ ಬಹುಭಾಗ ಬತ್ತದ ಬೆಳೆಗೆ ಅನುಕೂಲವಾಗಿಲ್ಲ. ಇದಕ್ಕೆ ಜಿಲ್ಲೆಯ ಅಧಿಕ ಮಳೆಯೂ ಅತಿಯಾದ ತೇವದಿಂದ ಕೂಡಿದ ಕೆಮ್ಮಣ್ಣು ಭೂಮಿಯೂ ಕಾರಣ. ಕಬ್ಬನ್ನು ಕೆಲವೆಡೆ ಬೆಳೆಯಲಾಗುತ್ತಿದೆ. ಕಡೂರು ತಾಲ್ಲೂಕಿನಲ್ಲಿರುವ ಅಯ್ಯನಕೆರೆ ಮತ್ತು ಮದಗಕೆರೆಗಳು ಸಾವಿರಾರು ಎಕರೆ ಪ್ರದೇಶಗಳಿಗೆ ನೀರನ್ನು ಒದಗಿಸುತ್ತವೆ. ಜಿಲ್ಲೆಯ ಒಟ್ಟು ನೀರಾವರಿ ಕ್ಷೇತ್ರ 30,365 ಹೆಕ್ಟೇರ್‌ಗಳು. ತರೀಕೆರೆ ತಾಲ್ಲೂಕಿನಲ್ಲಿ ಭದ್ರಾನದಿಗೆ ಅಡ್ಡಲಾಗಿ ಲಕ್ಕವಳ್ಳಿ ಅಣೆಕಟ್ಟನ್ನು ಕಟ್ಟಲಾಗಿದೆ. ಇದರ ಹೆಚ್ಚಿನ ಸೌಲಭ್ಯ ಶಿವಮೊಗ್ಗ ಜಿಲ್ಲೆಗೆ ದೊರೆಯುತ್ತದೆ. ಇದೇ ತಾಲ್ಲೂಕಿನಲ್ಲಿ ಜಂಬದಹಳ್ಳ ಯೋಜನೆಯನ್ನು 50 ಲಕ್ಷ ರೂ.ಗಳ ವೆಚ್ಚದಲ್ಲಿ ಕೈಗೊಳ್ಳಲಾಗಿದೆ.

ರಾಗಿ ಇನ್ನೊಂದು ಪ್ರಮುಖ ಬೆಳೆಯಾಗಿದ್ದು ಇದನ್ನು 55,819 ಹೆಕ್ಟೇರ್‌ಗಳಲ್ಲಿ ಬೆಳೆಯಲಾಗುತ್ತದೆ. ತೆಂಗು 30,161; ದ್ವಿದಳ ಧಾನ್ಯಗಳು 26,699; ಏಕದಳ ಧಾನ್ಯಗಳು 1,19,027 ಹೆಕ್ಟೇರ್‌ಗಳಲ್ಲಿ ಬೆಳೆಯುತ್ತದೆ (1999-2000). ಕಡಲೆ, ತೊಗರಿ, ಕಬ್ಬು, ಹತ್ತಿ, ಬೆಳೆಗಳನ್ನು ಸಣ್ಣ ಪ್ರಮಾಣದಲ್ಲಿ ಬೆಳೆಯುತ್ತಾರೆ. ತರೀಕೆರೆ ವೀಳೆಯದೆಲೆಗೆ ಪ್ರಸಿದ್ಧ.

ಜಿಲ್ಲೆಯ ಪಶ್ಚಿಮದಂಚಿನಲ್ಲಿರುವ ಕುದುರೆಮುಖದ ಬಳಿ ಅಧಿಕ ಪ್ರಮಾಣದಲ್ಲಿ ಕಬ್ಬಿಣದ ಅದುರನ್ನು ತೆಗೆಯುವ ಬೃಹತ್ ಯೋಜನೆ ಇದ್ದು ಕೆಮ್ಮಣ್ಣುಗುಂಡಿಯಲ್ಲಿ ಕಬ್ಬಿಣದ ಅದುರು ತೆಗೆಯುವ ಉದ್ಯಮವಿದ್ದು ನೂರಾರು ಜನರಿಗೆ ಉದ್ಯೋಗ ಒದಗಿದೆ. ಚಿಕ್ಕಮಗಳೂರಿನಲ್ಲಿ ಕಾಫಿ ಹದಮಾಡುವ ಅನೇಕ ಕಾರ್ಖಾನೆಗಳಿವೆ. ಇಲ್ಲಿಂದ ಕಬ್ಬಿಣದ ಅದುರನ್ನು ಮಂಗಳೂರು ಬಂದರಿಗೆ ಸಾಗಿಸಿ ವಿದೇಶಗಳಿಗೆ ರಫ್ತು ಮಾಡಲಾಗುತ್ತದೆ. ಗಣಿಗಾರಿಕೆಯಿಂದ ಉಂಟಾಗುವ ಪರಿಸರ ಹಾನಿಯ ಬಗ್ಗೆ ಸಾಮಾಜಿಕ ಚಳವಳಿ ನಡೆದಿದ್ದು ಗಣಿಗಾರಿಕೆ ಸದ್ಯ ಮುಂದುವರಿದಿದೆ. ಚಿಕ್ಕಮಗಳೂರು ಪಟ್ಟಣದಲ್ಲಿ ಮೊದಲ ಬಾರಿಗೆ 1917ರಲ್ಲಿ ಅಕ್ಕಿ ಗಿರಣಿಯನ್ನೂ 1920ರಲ್ಲಿ ಕಾಫಿ ಹದಮಾಡುವ ಕಾರ್ಖಾನೆಯನ್ನೂ ಸ್ಥಾಪಿಸಲಾಯಿತು. ಈಗ ಜಿಲ್ಲೆಯ ಹಲವಾರು ಕಡೆ ಅಕ್ಕಿ ಗಿರಣಿಗಳಿವೆ. ಕಾಫಿ ತೋಟಗಳಿಗೆ ಅಗತ್ಯವಿರುವ ಉಪಕರಣಗಳನ್ನು ತಯಾರಿಸುವ ಕಾರ್ಯಾಗಾರಗಳು ಚಿಕ್ಕಮಗಳೂರಿನಲ್ಲಿವೆ. 1911ರಲ್ಲಿ ಸ್ಥಾಪಿಸಿದ ಒಂದು ಹೆಂಚಿನ ಕಾರ್ಖಾನೆ ಶೃಂಗೇರಿಯಲ್ಲಿತ್ತು. ಚಿಕ್ಕಮಗಳೂರು,



ಜಿಲ್ಲಾಧಿಕಾರಿ ಕಚೇರಿ, ಚಿಕ್ಕಮಗಳೂರು

ತರೀಕೆರೆ, ಮೂಡಿಗೆರೆ ಮತ್ತಿತರೆಡೆಗಳಲ್ಲಿ ಮರ ಕೊಯ್ಯುವ ಕಾರ್ಖಾನೆಗಳೂ ಅಜ್ಜಂಪುರ, ಶಿವನಿ, ಬೀರೂರುಗಳಲ್ಲಿ ನೂಲಿನ ಮತ್ತು ಕಂಬಳಿ ತಯಾರಿಸುವ ಮಗ್ಗಗಳೂ ಉಂಟು. ಜಿಲ್ಲೆಯಲ್ಲಿ ಕೈಮಗ್ಗಗಳೂ ಕಡೂರು ತಾಲ್ಲೂಕಿನ ಬಿದರೆಯಲ್ಲಿ ಕಚ್ಚಾ ಗಾಜಿನ ಬಳೆಗಳನ್ನು ತಯಾರಿಸುವ ಕಾರ್ಖಾನೆಯೂ ಮೂಡಿಗೆರೆ ತಾಲ್ಲೂಕಿನ ಕೆಳಗೂರಿನಲ್ಲಿ ಚಹ ಪರಿಷ್ಕರಣ ಕಾರ್ಖಾನೆಯೂ ಇವೆ. ಇಲ್ಲಿಯ ಮಲೆನಾಡು ಭಾಗದಲ್ಲಿ ಜೇನು ಸಾಕುವ ಉದ್ಯಮ ಬೆಳೆದಿದೆ. ಮಡಕೆ ಮಾಡುವುದು, ಬಿದಿರಿನ ವಸ್ತುಗಳನ್ನು ತಯಾರಿಸುವುದು, ಗಾಡಿ ಕೂಡಿಸುವುದು ಮೊದಲಾದ ಕೈಗಾರಿಕೆಗಳೂ ಇವೆ. ಜಿಲ್ಲೆಯಲ್ಲಿ ಒಟ್ಟು 269 ಕಾರ್ಖಾನೆಗಳಿದ್ದು 1171ಉದ್ಯೋಗಿಗಳಿದ್ದಾರೆ. ಇತರ ಕೈಗಾರಿಕೆಯಲ್ಲಿ ಜಿಲ್ಲೆಯ ಸ್ಥಾನ ಗೌಣ. ಜಿಲ್ಲೆಯಲ್ಲಿ ಎರಡು ವೃತ್ತಿ ತರಬೇತು ಶಾಲೆಗಳುಂಟು.

ಬೆಂಗಳೂರು-ಪುಣೆ ರೈಲುಮಾರ್ಗ ಕಡೂರಿನ ಮೂಲಕ ಹಾದುಹೋಗುತ್ತದೆ. ಇದಕ್ಕೆ ಕವಲಾಗಿ ಬೀರೂರಿನಿಂದ ತರೀಕೆರೆಯ ಮೂಲಕ ಶಿವಮೊಗ್ಗಕ್ಕೆ ಒಂದು ರೈಲುಮಾರ್ಗವಿದೆ. ಜಿಲ್ಲೆಯಲ್ಲಿ ರೈಲುಮಾರ್ಗದ ಒಟ್ಟು ಉದ್ದ 97ಕಿಮೀ. ಕಡೂರು-ಚಿಕ್ಕಮಗಳೂರು ರೈಲು ಮಾರ್ಗ ಪ್ರಗತಿಯಲ್ಲಿದೆ. ಕಡೂರು-ಮಂಗಳೂರು ಹೆದ್ದಾರಿ ಚಿಕ್ಕಮಗಳೂರಿನ ಮೂಲಕ ಹಾದುಹೋಗುತ್ತದೆ. ಬೆಂಗಳೂರು - ಹೊನ್ನಾವರ ಹೆದ್ದಾರಿ ಕಡೂರಿನ ಮೂಲಕ ಸಾಗುತ್ತದೆ. ಚಿಕ್ಕಮಗಳೂರಿನಿಂದ ಬೆಂಗಳೂರು, ಮೈಸೂರು, ಹಾಸನ, ಶಿವಮೊಗ್ಗ, ಮಡಿಕೇರಿ, ಬೆಳಗಾಂವಿ, ಚಿತ್ರದುರ್ಗ, ಹರಿಹರ, ಉಡುಪಿ, ಮಂಗಳೂರು ಮೊದಲಾದ ಕಡೆಗಳಿಗೆ ಬಸ್ಸು ಮಾರ್ಗಗಳಿವೆ. ಚಿಕ್ಕಮಗಳೂರು - ಆಲ್ದೂರು - ಬಾಳೆಹೊನ್ನೂರು - ಉರುವಿನಖಾನ್ - ಕೊಟ್ಟಿಗೆಹಾರ ಹೆದ್ದಾರಿ, ಚಿಕ್ಕಮಗಳೂರು - ಜೈಪುರ - ಶೃಂಗೇರಿ - ಮಾರ್ಗ, ಚಿಕ್ಕಮಗಳೂರು - ಮಲ್ಲಂದೂರು - ನರಸಿಂಹರಾಜಪುರ - ಮಾರ್ಗ, ಚಿಕ್ಕಮಗಳೂರು - ಬಾಬಾಬುಡನ್‌ಗಿರಿ ರಸ್ತೆ, ಮಲ್ಲಂದೂರು - ಮತ್ತೋಡಿ - ಕೊಳಗಾವೆ ಗಿರಿ ರಸ್ತೆ, ಮೂಡಿಗೆರೆ - ಸಕಲೇಶಪುರ ರಸ್ತೆ, ಕೊಟ್ಟಿಗೆಹಾರ - ಕಳಸ ರಸ್ತೆ, ಕೊಟ್ಟಿಗೆಹಾರ - ಬಾಳೆಹೊನ್ನೂರು ರಸ್ತೆ, ಮೂಡಿಗೆರೆ - ದಾರದಹಳ್ಳಿ - ದೇವವೃಂದ ರಸ್ತೆ, ಮೂಡಿಗೆರೆ - ಗೆಂಡೆಹಳ್ಳಿ - ಬೇಲೂರು ರಸ್ತೆ, ಬಾಳೆಹೊನ್ನೂರು ಕೊಪ್ಪ - ಆಗುಂಬೆ ರಸ್ತೆ, ತರೀಕೆರೆ - ಲಕ್ಕವಳ್ಳಿ - ನರಸಿಂಹರಾಜಪುರ ರಸ್ತೆ ಇವು ಮಲೆನಾಡು ಭಾಗದ ಮುಖ್ಯ ರಸ್ತೆಗಳು. ಕಡೂರು - ಬೀರೂರು - ಅಜ್ಜಂಪುರ ರಸ್ತೆ, ಚಿಕ್ಕಮಗಳೂರು - ಮಾಗಡಿ - ಜಾವಗಲ್ಲು ರಸ್ತೆ, ತರೀಕೆರೆ - ಶಾಂತವೇರಿ - ಬೀರೂರು - ಕಡೂರು ರಸ್ತೆ; ತರೀಕೆರೆ - ಹೊಸದುರ್ಗ ರಸ್ತೆ - ಇವು ಬಯಲು ಸೀಮೆಯ ಮುಖ್ಯ ರಸ್ತೆಗಳು. ಜಿಲ್ಲೆಯಲ್ಲಿ 34 ದೊಡ್ಡ ಸೇತುವೆಗಳಿವೆ. ಮಲೆನಾಡಿನಲ್ಲಿ ರಸ್ತೆ ನಿರ್ಮಾಣದ ವೆಚ್ಚ ಹೆಚ್ಚು. ಆದ್ದರಿಂದ ಇನ್ನೂ ಅನೇಕ ಊರುಗಳಿಗೆ ರಸ್ತೆ ಸಂಪರ್ಕ ಸರಿಯಾಗಿಲ್ಲ. ಹಲವು ರಸ್ತೆಗಳು ಮಳೆಗಾಲದಲ್ಲಿ ಉಪಯೋಗಕ್ಕೆ ಬರುವುದಿಲ್ಲ. ಸರ್ಕಾರ ಈಗ ಈ ರಸ್ತೆಗಳ ವಿಸ್ತರಣೆ ಮತ್ತು ಅಭಿವೃದ್ಧಿಗೆ ಹೆಚ್ಚು ಗಮನ ನೀಡಿದೆ. ಒಟ್ಟು ರಸ್ತೆಗಳ ಉದ್ದ 7,547ಕಿಮೀ; ಪಕ್ಕಾರಸ್ತೆಗಳು 4,781ಕಿಮೀ (2000).

ಈ ಜಿಲ್ಲೆಯ ಸಾಕ್ಷರತೆ 64.27% (ಪುರುಷರಲ್ಲಿ 71.30% ಸ್ತ್ರೀಯರಲ್ಲಿ 57.13%). 53 ಪ್ರೌಢಶಾಲೆಗಳೂ 46 ಪದವಿಪೂರ್ವ ಕಾಲೇಜುಗಳೂ 14 ಪ್ರಥಮ ದರ್ಜೆ ಕಾಲೇಜುಗಳೂ ಇವೆ. ಒಂದು ಎಂಜಿನಿಯರಿಂಗ್ ಕಾಲೇಜಿದೆ. ಮೂಡಿಗೆರೆಯಲ್ಲಿ ತೋಟಗಾರಿಕಾ ಕಾಲೇಜಿದೆ. 3 ಪಾಲಿಟೆಕ್ನಿಕ್‌ಗಳಿವೆ (2000-01) ಮೂಡಿಗೆರೆ ಮತ್ತು ಶೃಂಗೇರಿಗಳಲ್ಲಿ ನರ್ಸಿಂಗ್ ಶಾಲೆಗಳು ಆರಂಭವಾಗಿವೆ.

ವ್ಯವಸಾಯ ಈ ಜಿಲ್ಲೆಯ ಜನರ ಪ್ರಧಾನ ಕಸಬಾದ್ದರಿಂದ ಗ್ರಾಮಜೀವನದ ಲಕ್ಷಣಗಳನ್ನು ಎಲ್ಲೆಲ್ಲೂ ಕಾಣಬಹುದು. ಬೆಳೆ ಕುಯ್ಲಿಗೆ ಬರುವಾಗ ಡಿಸೆಂಬರ್ ತಿಂಗಳಲ್ಲಿ ಹೊಸ ಅಕ್ಕಿ ಹಬ್ಬವನ್ನು ಮಾಡುತ್ತಾರೆ. ಆಗ ಹೊಸ ಬೆಳೆಯಿಂದ ಮಾಡಿದ ಅನ್ನವನ್ನು ದೇವರಿಗೆ ಮೀಸಲು ಅರ್ಪಿಸುತ್ತಾರೆ. ಗದ್ದೆ ಕುಯಿಲು, ಒಕ್ಕಣೆ ಮುಗಿದ ಮೇಲೆ ಕಣದ ಹಬ್ಬ ಆಚರಿಸುತ್ತಾರೆ. ಈ ಪದ್ಧತಿಯನ್ನೇ ಕಾಫಿ ಫಸಲಿಗೂ ಅನ್ವಯಿಸಲಾಗುತ್ತದೆ. ಸಾಮಾನ್ಯವಾಗಿ ಏಪ್ರಿಲ್, ಮೇ ತಿಂಗಳುಗಳಲ್ಲಿ ಸುಗ್ಗಿಹಬ್ಬವನ್ನು ಆಚರಿಸುತ್ತಾರೆ. ದೇವವೃಂದದಲ್ಲಿ ಉಗಾದಿಯಂದು ನಡೆಯುವ ರಾಮೇಶ್ವರ ಜಾತ್ರೆ ಈ ನಾಡಿನ ಹಬ್ಬ. ಫಲ್ಗುಣಿ ಸುಗ್ಗಿ ಹಬ್ಬ ಮುಕ್ಕುಂದ ನಾಡಿನ ಪ್ರಮುಖ ಉತ್ಸವ. ಒಂದೇ ಊರು ಪ್ರತ್ಯೇಕವಾಗಿ ಹಬ್ಬ ನಡೆಸುವುದೂ ಉಂಟು. ದಾರದಹಳ್ಳಿಯ ಸುಗ್ಗಿಹಬ್ಬ ಇಂಥದು. ಈ ಜಿಲ್ಲೆಯ ಕೊಪ್ಪ ಶೃಂಗೇರಿ ಭಾಗಗಳಲ್ಲಿ ಅಂಟಿಗೆ ಪಂಟಿಗೆ ಸಂಪ್ರದಾಯವಿದೆ. ಕಾರ್ತಿಕದಲ್ಲಿ ಕೋಲಾಟ ನಡೆಯುವುದು. ವೀರಗಾಸೆ ಕುಣಿತ, ಕರಡೆಮಜಲು,

ಕರಪಾಲಮೇಳ, ಕೀಲುಕುದುರೆ ನರ್ತನ ಮುಂತಾದವು ಇಲ್ಲಿಯ ಮುಖ್ಯ ಜನಪದ ಆಕರ್ಷಣೆಗಳು. ಬಯಲುಸೀಮೆಯಲ್ಲಿ ಅನೇಕ ಕಡೆ ದೇವರ ದರ್ಶನಗಳು ಬರುತ್ತವೆ. ಮೂಡಿಗೆರೆ ತಾಲ್ಲೂಕು ಕೆಸವೊಳಲಿನ ಮಹಾರುದ್ರ ದೇವರು ದರ್ಶನ ಬರುತ್ತಿದ್ದು ನೂರಾರು ಭಕ್ತರನ್ನು ಆಕರ್ಷಿಸಿದೆ.



ಬಾಬಾಬುಡನ್‌ಗಿರಿಯಲ್ಲಿರುವ ಹೊನ್ನಮ್ಮನ ಹಳ್ಳ

ಜಿಲ್ಲೆಯ ವಿವಿಧ ಭಾಗಗಳಲ್ಲಿ ನಡೆಯುವ ಜಾತ್ರೆಗಳಲ್ಲಿ ಮುಖ್ಯವಾದವು: ನಿರ್ವಾಣಸ್ವಾಮಿ ಜಾತ್ರೆ (ಮುಳ್ಳಯ್ಯನಗಿರಿ), ಸೀತಾಳ ಮಲ್ಲಿಕಾರ್ಜುನಸ್ವಾಮಿ ತೇರು (ಚಿಕ್ಕಮಗಳೂರು ತಾಲ್ಲೂಕು), ಲಕ್ಷ್ಮೀರಂಗನಾಥಸ್ವಾಮಿ ತೇರು (ಸಕ್ಕರೆ ಪಟ್ಟಣ), ಕಾಲಭೈರವ ತೇರು (ಬೀರುವದೇವರು), ಕಳಸೇಶ್ವರಸ್ವಾಮಿ ಜಾತ್ರೆ (ಕಳಸ), ಚಂದ್ರಮೌಳೇಶ್ವರ ಮತ್ತು ಶಾರದಾಂಬ ನವರಾತ್ರಿ ಮಹೋತ್ಸವ (ಶೃಂಗೇರಿ) ಮತ್ತು ಮಲ್ಲಿಕಾರ್ಜುನಸ್ವಾಮಿ ತೇರು (ಪುರ). ಶ್ರೀ ರಾಮೇಶ್ವರ ತೇರು (ದೇವವೃಂದ) ಬೆಳವಾಡಿ, ಬೀರೂರು, ಕಲ್ಮರಡಿ ಮಠ ಬುಕ್ಕಾಂಬುಧಿ, ಪಟ್ಟಣಗೆರೆ, ಆಸಂದಿ, ಹಿರೇಮಗಳೂರು, ದತ್ತಾತ್ರೇಯ ಪೀಠ, ಅಮೃತಾಪುರ, ಅಂಗಡಿ, ದೇವನೂರು ಮೊದಲಾದೆಡೆ ಜಾತ್ರೆ, ಉತ್ಸವಗಳು ನಡೆಯುತ್ತವೆ. ಸಿಂಹನಗದ್ದೆ ಜೈನರಿಗೆ ಪವಿತ್ರ ಸ್ಥಳ.

ಅನೇಕ ಸ್ಥಳಗಳು ಪುರಾಣೇತಿಹಾಸಪ್ರಸಿದ್ಧವಾದವು. ಮುಳ್ಳಯ್ಯನಗಿರಿ - ಬಾಬಾಬುಡನ್ ಗಿರಿ ಶ್ರೇಣಿಯೇ ರಾಮಾಯಣ ಕಾಲದ ಚಂದ್ರದ್ರೋಣ ಪರ್ವತವೆಂದು ಹೇಳಲಾಗಿದೆ. ಮೂಡಿಗೆರೆ ತಾಲ್ಲೂಕಿನಲ್ಲಿರುವ ಹೇರಿಕೆಗೆ ಸಮೀಪದಲ್ಲಿರುವ ಪಾಂಡವರ ಗುಡ್ಡದಲ್ಲಿ ಹಿಂದೆ ಪಾಂಡವರು ವನವಾಸಕಾಲದಲ್ಲಿ ಇದ್ದರೆಂಬುದು ಸ್ಥಳಪುರಾಣ. ಅಲ್ಲಿರುವ ಕಲ್ಲಿನ ಉಪಕರಣಗಳನ್ನು ಅವರು ಬಳಸುತ್ತಿದ್ದರು ಎಂದು ನಂಬಲಾಗಿದೆ. ತುಂಗಾನದಿಯ ಅಂಬುತೀರ್ಥ ಎಂಬಲ್ಲಿರುವ ಭೀಮುನಕಲ್ಲನ್ನು ಮಧ್ವಾಚಾರ್ಯರು ಒಂದೇ ಕೈಯಲ್ಲಿ ಎತ್ತಿ ಇಟ್ಟರೆಂದು ಮೂಡಿಗೆರೆಯ 89ನೆಯ ಶಾಸನ ತಿಳಿಸುತ್ತದೆ. ಮೂಡಿಗೆರೆ ತಾಲ್ಲೂಕಿನ ಬಲ್ಲಾಳರಾಯನ ದುರ್ಗದಲ್ಲಿ ಹೊಯ್ಸಳರ ಕಾಲದಲ್ಲಿ ಕಟ್ಟಿದ ಕೋಟೆಯುಂಟು. ಶೃಂಗೇರಿ ನಿಸರ್ಗದ ಮಡಿಲಲ್ಲಿರುವ ಸುಂದರ ಕ್ಷೇತ್ರ. ಬಾಳೆಹೊನ್ನೂರಿನಲ್ಲಿ ಶ್ರೀರಂಭಾಪುರಿ ಜಗದ್ಗುರುಗಳ ಮಠವಿದೆ. ಕಳಸ ಯಾತ್ರಾಸ್ಥಳ. ಇದು ಭೈರವರಸರ ರಾಜಧಾನಿಯೂ ಆಗಿತ್ತು. ಇದರ ಸಮೀಪದಲ್ಲಿ ಇರುವ ಹೊರನಾಡು ದೇಗುಲ ಪ್ರಸಿದ್ಧವಾದ್ದು. ಬಾಳೆಹೊನ್ನೂರಿಗೆ ಸಮೀಪದಲ್ಲಿ ಭದ್ರಾನದಿಯ ದಡದಲ್ಲಿರುವ ಖಾಂಡ್ಯ ಮಾರ್ಕಂಡೇಯನ ಜನ್ಮಸ್ಥಳವೆಂದು ಹೇಳಲಾಗಿದೆ. ಕಡೂರು - ಚಿಕ್ಕಮಗಳೂರು ರಸ್ತೆಯಲ್ಲಿರುವ ಸಕ್ಕರೆಪಟ್ಟಣ ಒಂದು ಪ್ರಮುಖ ಸ್ಥಳ. ಕಡೂರು ಪಟ್ಟಣದ ಬಳಿ ಇರುವ ಹೇಮಗಿರಿ ಮಲ್ಲಿಕಾರ್ಜುನಸ್ವಾಮಿ ಬೆಟ್ಟದಲ್ಲಿ ವರ್ಷಕ್ಕೊಮ್ಮೆ ದನದ ಜಾತ್ರೆ ನಡೆಯುತ್ತದೆ. ಆ ತಾಲ್ಲೂಕಿನಲ್ಲಿರುವ ಆಸಂದಿ ಗ್ರಾಮ ಇತಿಹಾಸ ಪ್ರಸಿದ್ಧವಾದ್ದು. ಕೊಪ್ಪ ತಾಲ್ಲೂಕಿನ ಜಂಬಿಟ್ಟಿಗೆ ಗ್ರಾಮದಲ್ಲಿ 1733ರಲ್ಲಿ ಕಟ್ಟಿಸಿದ ಒಂದು ದೇವಾಲಯ ಶಿಲ್ಪಕಲೆಗೆ ಪ್ರಸಿದ್ಧವಾದ್ದು. ತರೀಕೆರೆಯ ಬಳಿ ಅಮೃತಾಪುರದ ಅಮೃತೇಶ್ವರ ದೇವಾಲಯ ಹೊಯ್ಸಳರ ಕಾಲದಲ್ಲಿ ರಚಿತವಾದ್ದು. ಚಿಕ್ಕಮಗಳೂರು ತಾಲ್ಲೂಕಿನ ವಸ್ತಾರೆಯಲ್ಲಿ ಪದ್ಮಾವತಿಯ ದೇವಾಲಯವಿದೆ. ಅಲ್ಲಿರುವ ಸಪ್ತ ಮಾತೃಕೆಯರ ಮತ್ತು ರಾಜಮಂತ್ರಿ ಸಮಾಲೋಚನೆಯ ಕೆತ್ತನೆಗಳು ಆಕರ್ಷಕವಾದವು. ಮೂಡಿಗೆರೆ ತಾಲ್ಲೂಕಿನ ಘಟ್ಟಶ್ರೇಣಿಯಲ್ಲಿರುವ ಮರಗುಂದದ ಬೆಟ್ಟದ ಭೈರವೇಶ್ವರ, ಭೈರಾಪುರದ ನಾಣ್ಯದ ಭೈರವೇಶ್ವರ, ದೇವರಮನೆಯ ಕಾಲಭೈರವೇಶ್ವರ ದೇವಾಲಯಗಳು ಅತ್ಯಂತ ಪ್ರಾಚೀನ ದ್ರಾವಿಡ ವಾಸ್ತು ರಚನೆಗೆ ಮಾದರಿಗಳಾಗಿವೆ.

ಈ ಜಿಲ್ಲೆಯ ಕೆಲವು ಪ್ರದೇಶ 4-6ನೆಯ ಶತಮಾನಗಳಲ್ಲಿ ಆದ್ಯ ಕದಂಬರ ಆಳಿಕೆಗೆ ಒಳಪಟ್ಟಿತ್ತು. 7-8-9ನೆಯ ಶತಮಾನಗಳಲ್ಲಿ ಜಿಲ್ಲೆಯ ಪಶ್ಚಿಮದ ಕೆಲವು ಭಾಗಗಳು ದಕ್ಷಿಣ ಕನ್ನಡ ಜಿಲ್ಲೆಯಿಂದ ಆಳಿದ ಆಳುಪರಿಗೆ ಸೇರಿದ್ದುವು. ಶಿವಮೊಗ್ಗ ಜಿಲ್ಲೆಗೆ ಸೇರಿದ ಹುಂಚದ ಸಾಂತರರ ರಾಜ್ಯ ಇಲ್ಲಿಯವರೆಗೂ ಹಬ್ಬಿತ್ತು. ಜಿಲ್ಲೆಯ ಹೆಚ್ಚಿನ ಭಾಗ ಗಂಗರ ಅಧೀನದಲ್ಲಿತ್ತು.

ಹೊಯ್ಸಳರ ಮೂಲಪುರುಷನಿಗೆ ಜನ್ಮ ನೀಡಿದ ಹೆಗ್ಗಳಿಕೆ ಈ ಜಿಲ್ಲೆಗೆ ಸೇರುತ್ತದೆ. ಆ ಸ್ಥಳ ಇದ್ದುದು ಮೂಡಿಗೆರೆಗೆ 13ಕಿಮೀ ದೂರದಲ್ಲಿರುವ ಸೊಸವೂರು ಅಥವಾ ಈಗಿನ ಅಂಗಡಿ ಗ್ರಾಮದಲ್ಲಿ. 11-14ನೆಯ ಶತಮಾನಗಳಲ್ಲಿ ಜಿಲ್ಲೆ ಹೊಯ್ಸಳರ ಆಳಿಕೆಯಲ್ಲಿತ್ತು. ಶೃಂಗೇರಿಯ ವಿದ್ಯಾರಣ್ಯರು ವಿಜಯನಗರದ ಸ್ಥಾಪನೆಯಲ್ಲಿ ಪ್ರಮುಖ ಪಾತ್ರ ವಹಿಸಿದರೆಂದು ಹೇಳಲಾಗಿದೆ. ವಿಜಯನಗರದ ಅರಸರ ಆಳ್ವಿಕೆಯ ಕಾಲದಲ್ಲಿ ಜಿಲ್ಲೆಯ ಪಶ್ಚಿಮ ಭಾಗ ಕಾರ್ಕಳದ ರಾಜರಿಗೂ ದಕ್ಷಿಣ ಭಾಗ ಮಂಜರಾಬಾದ್ ಪ್ರದೇಶದ ಪಾಳೆಯಗಾರರಿಗೂ ಸೇರಿದ್ದುವು. ಇವರೆಲ್ಲ ವಿಜಯನಗರದ ಸಾಮಂತರಾಗಿದ್ದರು. ಹದಿನೇಳನೆಯ ಶತಮಾನದ ಮಧ್ಯಭಾಗದಲ್ಲಿ ಈ ಜಿಲ್ಲೆಯ ಬಹುಭಾಗವನ್ನು ಶಿವಪ್ಪನಾಯಕ ವಶಪಡಿಸಿಕೊಂಡ. ವಿಜಯನಗರದ ಪ್ರತಿನಿಧಿಯಾಗಿದ್ದ ಶ್ರೀರಂಗರಾಯ ಸ್ವಲ್ಪಕಾಲ ಅವನ ಆಶ್ರಯದಲ್ಲಿದ್ದು ಸಕ್ಕರೆಪಟ್ಟಣ, ಬೇಲೂರು ಮತ್ತು ನೆರೆಯ ಪ್ರದೇಶಗಳನ್ನಾಳುತ್ತಿದ್ದ. 1690-94ರಲ್ಲಿ ಮೈಸೂರಿನ ರಾಜರು ಈ ಜಿಲ್ಲೆಯ ದಕ್ಷಿಣ ಭಾಗವನ್ನು ಆಕ್ರಮಿಸಿಕೊಂಡರು. ಅದೇ ವರ್ಷ ಮೈಸೂರು ಮತ್ತು ಇಕ್ಕೇರಿಗಳ ನಡುವೆ ಒಪ್ಪಂದವಾಗಿ, ಮೈಸೂರಿನ ಅರಸರು ಗೆದ್ದಿದ್ದ ಪ್ರದೇಶಗಳಲ್ಲಿ ಐಗೂರು ಮತ್ತು ವಸ್ತಾರೆ ಪಾಳೆಯಪಟ್ಟುಗಳನ್ನು ಬಿಟ್ಟುಕೊಟ್ಟರು. ಈ ಮಧ್ಯದಲ್ಲಿ ಕೆಲವು ಕಾಲ ತರೀಕೆರೆ ಪಾಳೆಯಗಾರರು ಆ ಪಟ್ಟಣದ ಸುತ್ತಲ ಪ್ರದೇಶಗಳನ್ನು ಆಳುತ್ತಿದ್ದರು. 1763ರಲ್ಲಿ ಹೈದರ್ ಇಕ್ಕೇರಿಯನ್ನು ಆಕ್ರಮಿಸಿಕೊಂಡು ಅದರ ಅಧೀನದಲ್ಲಿದ್ದ ವಿವಿಧ ಪ್ರದೇಶಗಳನ್ನು ತನ್ನ ವಶಕ್ಕೆ ತೆಗೆದುಕೊಂಡ. ಇಡೀ ಜಿಲ್ಲೆ ಮೈಸೂರಿನ ಆಳಿಕೆಗೆ ಒಳಪಟ್ಟಿತು. ಟಿಪ್ಪುವಿನ ಪತನಾನಂತರ ಮತ್ತೆ ಈ ಪ್ರದೇಶ ಮೈಸೂರಿನ ಅರಸರಿಗೆ ಒಳಪಟ್ಟಿತ್ತು. 1830ರಲ್ಲಿ ತರೀಕೆರೆಯ ರಂಗಪ್ಪನಾಯಕ ಬಂಡೆದ್ದು ಕಾಳದುರ್ಗ ಮತ್ತು ಕಾಮನದುರ್ಗಗಳನ್ನು ಹಿಡಿದುಕೊಂಡ. ಮೈಸೂರಿನ ಸೇನೆ ಮರುವರ್ಷ ಮತ್ತೆ ಇವನ್ನು ವಶಪಡಿಸಿಕೊಂಡಿತು. ಮೈಸೂರಿನ ಆಡಳಿತವು ಕಮಿಷನರಿಗೆ ವರ್ಗವಾದಾಗ (1831) ಈ ಭಾಗವನ್ನು ನಗರ ವಿಭಾಗಕ್ಕೆ ಸೇರಿಸಲಾಯಿತು. 1863ರಲ್ಲಿ ಇದನ್ನು ಪ್ರತ್ಯೇಕ ಜಿಲ್ಲೆಯನ್ನಾಗಿ ಮಾಡಲಾಯಿತು. ಕಡೂರು ಜಿಲ್ಲೆಯೆಂದು ಕರೆಯಲ್ಪಡುತ್ತಿದ್ದ ಇದಕ್ಕೆ ಆಗ ಕಡೂರೇ ಆಡಳಿತ ಕೇಂದ್ರ. 1865ರಲ್ಲಿ ಚಿಕ್ಕಮಗಳೂರು ಈ ಜಿಲ್ಲೆಯ ಆಡಳಿತ ಕೇಂದ್ರವಾಯಿತು. 1882ರಲ್ಲಿ ಅರಸೀಕೆರೆ, ಬೇಲೂರು, ಹಾಸನ ಮತ್ತು ಮಂಜರಾಬಾದ್ ತಾಲ್ಲೂಕುಗಳನ್ನೊಳಗೊಂಡ ಹಾಸನ ವಿಭಾಗ ಈ ಜಿಲ್ಲೆಗೆ ಸೇರಿತ್ತು. 1886ರಲ್ಲಿ ಪ್ರತ್ಯೇಕವಾದ ಹಾಸನ ಜಿಲ್ಲೆಯನ್ನು ರಚಿಸಲಾಯಿತು. ತರುವಾಯ ಇಲ್ಲಿಯ ಸ್ವಲ್ಪ ಭಾಗವನ್ನು ಚಿತ್ರದುರ್ಗ ಜಿಲ್ಲೆಗೆ ಸೇರಿಸಿ ಇಂದಿನ ರೂಪದಲ್ಲಿ ಜಿಲ್ಲೆಯನ್ನು ಉಳಿಸಿಕೊಳ್ಳಲಾಯಿತು. (ಡಿ.ಎಸ್.ಜೆ.,ಎಚ್.ಪಿ.ಕೆ.)

ಚಿಕ್ಕಮಗಳೂರು ಜಿಲ್ಲೆ ಪ್ಲಾಂಟೇಷನ್ ಸಾಗುವಳಿಯಿಂದಾಗಿ ಹೊಸ ಆರ್ಥಿಕ ಸ್ವರೂಪವನ್ನು ಪಡೆದುಕೊಳ್ಳತೊಡಗಿತು. ಅನೇಕ ಐರೋಪ್ಯ ಕಾಫಿ ಬೆಳೆಗಾರರು ಜಿಲ್ಲೆಯಲ್ಲಿ ಬಂದು ನೆಲಸಿ ಕಾಫಿ ತೋಟಗಳನ್ನು ರೂಢಿಸಿದರು. ದೇಶೀಯರು ಸಹ ಕಾಫಿ ತೋಟಗಳನ್ನು ರೂಢಿಸತೊಡಗಿದರು. 1881ರಲ್ಲಿ ರಚಿತವಾದ ಪ್ರಜಾಪ್ರತಿನಿಧಿ ಸಭೆಯಲ್ಲಿ ಪ್ಲಾಂಟೇಷನ್

ಮಾಲೀಕ ವರ್ಗಕ್ಕೆ ಪ್ರತ್ಯೇಕ ಪ್ರಾತಿನಿಧ್ಯ ನೀಡಲಾಯಿತು. ಕೃಷಿ ಕಾರ್ಮಿಕ ವರ್ಗ ಬೆಳೆಯಿತು. ಹೊರರಾಜ್ಯಗಳಿಂದಲೂ ಕೃಷಿ ಕಾರ್ಮಿಕರು ಬಂದು ಇಲ್ಲಿ ನೆಲಸಿದರು. ಕಾಫಿ ಬೆಳೆಯ ಏಳುಬೀಳಿನೊಂದಿಗೆ ಅವರು ಇಲ್ಲಿಯೇ ಸ್ಥಿರವಾಗಿ ನೆಲಸಿದರು. 1914 ರಿಂದ ಜಾರಿಗೆ ಬಂದ ಮಲೆನಾಡು ಅಭಿವೃದ್ಧಿ ಯೋಜನೆಗೆ ಆಗಿನ ದಿವಾನರಾಗಿದ್ದ ಎಂ.ವಿಶ್ವೇಶ್ವರಯ್ಯನವರ ಆಸಕ್ತಿಯೇ ಬಹುಮುಖ್ಯ ಕಾರಣವಾಯಿತು. ಅದರಿಂದ ಮಲೇರಿಯಾ ರೋಗ ಹರಡುವುದನ್ನು ತಡೆಗಟ್ಟಲು, ಬಾಣಂತಿಯರ ಶುಶ್ರೂಷೆಗೆ ಆದ್ಯತೆ ನೀಡಲು, ರಸ್ತೆ, ಬಾವಿಗಳನ್ನು ಮಾಡಿಸಲು ಅನುಕೂಲವಾಯಿತು.

ಈ ಜಿಲ್ಲೆಯ ಸಾಹಿತ್ಯ ಪರಂಪರೆ ದೊಡ್ಡದು. ಜನ್ನ, ರುದ್ರಭಟ್ಟ, ಲಕ್ಷ್ಮೀಶ ಇವರನ್ನು ಈ ಜಿಲ್ಲೆಯ ಮೂಲದವರೆಂದು ಗುರುತಿಸಲಾಗಿದೆ. ಶೃಂಗೇರಿ, ಕಳಸ, ಬಾಳೆಹೊನ್ನೂರು, ದೇವನೂರು ಇವು ಹಿಂದಿನಿಂದಲೂ ಸಾಹಿತ್ಯ ಸಂಬಂಧವಾದ ಚಟುವಟಿಕೆಗಳನ್ನು ಹೊಂದಿದ್ದವು. ಅನೇಕ ಶರಣ ಸಾಹಿತಿಗಳ ಕೃತಿಗಳಲ್ಲಿ ಈ ಜಿಲ್ಲೆಯ ವಿವರಗಳು ದಾಖಲಾಗಿವೆ. ಯಳ್ಳಂಬಳಸೆ ವೈ. ಸುಬ್ಬರಾವ್‌ರವರು ಶ್ರೇಷ್ಠ ಅದ್ವೈತ ವಿದ್ವಾಂಸರಾಗಿ 'ಬ್ರಹ್ಮಸೂತ್ರ' ಸಹಿತ ಹಲವಾರು ವಿದ್ವತ್ ಕೃತಿಗಳನ್ನು ರಚಿಸಿ ಅಂತಾರಾಷ್ಟ್ರೀಯ ಖ್ಯಾತಿ ಪಡೆದವರು. ಇವರು ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳೆಂದು (1880-1975) ಉತ್ತರಾಶ್ರಮದಲ್ಲಿ ಪ್ರಸಿದ್ಧರಾಗಿ ಬೆಂಗಳೂರಿನಲ್ಲಿ ನೆಲೆಸಿದ್ದರು. ಆಧುನಿಕ ಸಾಹಿತ್ಯ ಮತ್ತು ಶಿಕ್ಷಣ ಕ್ಷೇತ್ರಕ್ಕೆ ಅಪಾರ ಕೊಡುಗೆ ನೀಡಿದ ಎ.ಆರ್.ಕೃಷ್ಣಶಾಸ್ತ್ರಿ (ನೋಡಿ)ಯವರ ಹಿರಿಯರು ಚಿಕ್ಕಮಗಳೂರು ತಾಲ್ಲೂಕಿನ ಅಂಬಳೆಯವರು. ಮಹಾಕವಿ ಕುವೆಂಪು ಅವರು ಹುಟ್ಟಿದ್ದು ಕೊಪ್ಪ ತಾಲ್ಲೂಕಿನ ಹಿರೇಕೊಡಿಗೆಯಲ್ಲಿ. ಈಗ ಅಲ್ಲಿ ಕುವೆಂಪು ಗೌರವಾರ್ಥ ಸಂದೇಶ ಮಂಟಪವನ್ನು ನಿರ್ಮಿಸಲಾಗಿದೆ. ಕುವೆಂಪು ಅವರ ಹಿರಿಯ ಪುತ್ರರೂ ಪಂಪ ಪ್ರಶಸ್ತಿ ವಿಜೇತರೂ ಆದ ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರು (ನೋಡಿ) ಮೂಡಿಗೆರೆ ಬಳಿ ನೆಲೆಸಿದ್ದಾರೆ. 'ಬುದ್ಧ ಚರಿತ ಮಹಾಮಧು' ಎಂಬ ಮಹಾಕಾವ್ಯ ರಚಿಸಿದ ಕಾಶಿ ವಿಶ್ವನಾಥ‌ಶೆಟ್ಟರು ಪ್ರಾಧ್ಯಾಪಕರಾಗಿ ನಿವೃತ್ತರಾಗಿ ಚಿಕ್ಕಮಗಳೂರಿನಲ್ಲಿ ನೆಲೆಸಿದ್ದರು. ಬಾಗಮನೆ ಕುಟುಂಬದಲ್ಲಿ ಹುಟ್ಟಿದ ಲಕ್ಷ್ಮೀದೇವಿ ಕಡಿದಾಳ್ ಮಂಜಪ್ಪನವರು ತಮ್ಮ ಕಾದಂಬರಿಗಳು ಹಾಗೂ ಇತರ ಕೃತಿಗಳ ಜೊತೆಗೆ 'ಶ್ರೀ ವಿವೇಕಾನಂದ ವಿಜಯ ಮಹಾಕಾವ್ಯ' ಎಂಬ ಬೃಹತ್ ಕೃತಿಯನ್ನು (ಒಂದು ಸಾವಿರ ಪುಟಗಳು) ರಚಿಸಿದ್ದಾರೆ. ಮಣೂರ, ಗೌ.ಮ.ಉಮಾಪತಿಶಾಸ್ತ್ರಿ, ದಾಶರಥಿ ದೀಕ್ಷಿತ್, ತ.ಪು.ವೆಂಕಟರಾಂ, ಯಳ್ಳಂಬಳಸೆ ಸುಬ್ರಹ್ಮಣ್ಯ ಶರ್ಮ, ತಿಮ್ಮರಸಯ್ಯ, ಮಾಕೋನಹಳ್ಳಿ ದೊಡ್ಡಪ್ಪಗೌಡ, ಕಾರೇಹಳ್ಳಿ ಮರುಳಸಿದ್ದಪ್ಪ, ಸವ್ಯಸಾಚಿ, ವೇಣುಗೋಪಾಲರಾವ್, ಕೆ.ಎಸ್.ಮಲ್ಲೇಗೌಡ ಇವರೆಲ್ಲ ಸಾರಸ್ವತ ಲೋಕಕ್ಕೆ ಕಾಣಿಕೆ ಸಲ್ಲಿಸಿದ ಹಿರಿಯರು. ಜಿಲ್ಲೆಗೆ ಒಂದಲ್ಲ ಒಂದು ರೀತಿ ಸಂಬಂಧಿಸಿದ ಹಿರಿಕಿರಿಯ ಸಾಹಿತಿಗಳು, ಸಂಶೋಧಕರು ಸಾರಸ್ವತ ಲೋಕದ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅಂತಹವರಲ್ಲಿ ಸುಮತೀಂದ್ರನಾಡಿಗ, ಅಜ್ಜಂಪುರ ಜಿ.ಸೂರಿ, ಎಂ.ಪಿ.ಮಂಜಪ್ಪಶೆಟ್ಟಿ, ಡಿ.ಎಸ್.ಜಯಪ್ಪಗೌಡ, ಎ.ಎನ್.ಸ್ವಾಮಿ, ಚಂದ್ರಯ್ಯನಾಯ್ಡು, ಕೆ.ಓಂಕಾರಪ್ಪ, ಕನ್ನಡದಲ್ಲಿ ಅರ್ಚನೆಗೆ ಹೆಸರಾದ ಹಿರೇಮಗಳೂರು ಕಣ್ಣನ್, ಎಂ.ಆರ್. ನಾಗಭೂಷಣ, ಶೃಂಗೇರಿ ಸುಬ್ಬರಾಯಾಚಾರ್, ಸು.ಅಮೃತಾಪುರ, ಹಳೇಕೋಟೆ ರಮೇಶ್, ಬಿ.ಪುಟ್ಟಯ್ಯ ಶ್ರೀನಿವಾಸಮೂರ್ತಿ, ಸೌಕೂರು ಸುಬ್ರಹ್ಮಣ್ಯ ಅಡಿಗ, ಘನಿ ಅಕ್ಮಲ್, ಅಕ್ಮಲ್ ಆಲ್ದೂರಿ, ಗೌ.ರು.ಓಂಕಾರಯ್ಯ, ತರೀಕೆರೆ ರಹಮತ್, ಬೆಳವಾಡಿ ಮಂಜುನಾಥ, ಕೆ.ಎಂ.ರೇವಣ್ಣ, ಯಲಗೊಂಡಿಗೆ ಮಂಜಯ್ಯ, ಬಾಣೂರು ಚನ್ನಪ್ಪ, ಹು.ಲಕ್ಷ್ಮೀನರಸಿಂಹಶಾಸ್ತ್ರಿ, ಕರಗುಂದ ರಾಮಣ್ಣ, ಟಿ.ಎಂ.ಬಾಲಗಣಪತಿ ಮೊದಲಾದವರು ಇದ್ದಾರೆ. ಮಹಿಳೆಯರಲ್ಲಿ ವಿಶೇಷವಾಗಿ ಬಿ.ಟಿ.ಲಲಿತಾನಾಯಕ್, ಲಲಿತಾಂಬ ವೃಷಭೇಂದ್ರ ಸ್ವಾಮಿ, ಕೆದಂಬಾಡಿ ಎಂ.ದೇವಕಿ, ಸೀತಮ್ಮ ನಂಜೇಗೌಡ, ಮಾಲತಿ ರಾಮದಾಸ್, ಟಿ.ಕೆ.ಶಕುಂತಳ, ಸುಕನ್ಯ ಕಳಸ ಇವರು ಗಮನಾರ್ಹರು.

ಈ ಜಿಲ್ಲೆಯ ಜನಪದ ಕಲೆ, ಸಾಹಿತ್ಯ ಕ್ಷೇತ್ರದಲ್ಲಿನ ಪ್ರಮುಖ ಹೆಸರು ಗೊ.ರು.ಚನ್ನಬಸಪ್ಪನವರದು. ಇವರು 1967ರಲ್ಲಿ ಅಖಿಲ ಕರ್ನಾಟಕ ಜನಪದ ಸಾಹಿತ್ಯ ಸಮ್ಮೇಳನವನ್ನು ತರೀಕೆರೆಯಲ್ಲಿ ಸಂಘಟಿಸುವಲ್ಲಿ ಶ್ರಮಿಸಿದರು. ಇವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಜನಪದ ಸಂಗೀತ ಕೋಗಿಲೆ ಕೆ.ಆರ್.ಲಿಂಗಪ್ಪನವರು (ನೋಡಿ) ತರೀಕೆರೆಯವರು. 1921ರಲ್ಲಿ ಕೆ.ಸಿ.ಪುಟ್ಟಣ್ಣಚೆಟ್ಟಿಯವರ ಅಧ್ಯಕ್ಷತೆಯಲ್ಲಿ ಚಿಕ್ಕಮಗಳೂರಿನಲ್ಲಿ 7ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಜರುಗಿತ್ತು. 1981ರಲ್ಲಿ 53ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಪು.ತಿ.ನರಸಿಂಹಾಚಾರ್ ಅವರ ಅಧ್ಯಕ್ಷತೆಯಲ್ಲಿ ಜರುಗಿತು. ಜಿಲ್ಲಾಮಟ್ಟದ ಹತ್ತಾರು ಸಾಹಿತ್ಯ ಸಮ್ಮೇಳನಗಳು ಜರುಗಿವೆ.



ಅನ್ನಪೂರ್ಣೇಶ್ವರಿ ದೇವಾಲಯ, ಹೊರನಾಡು

ಜಿಲ್ಲೆಯಲ್ಲಿ ಪತ್ರಿಕೋದ್ಯಮ 1932ರಿಂದ ಪ್ರಾರಂಭವಾಯಿತು. ಪಿ.ಚಿದಂಬರ್, ಪಂಡಿತ್, ಕೆ.ಎನ್.ಪ್ರಭುದೇವ್, ಎಂ.ಕೆ.ಗೋಪಾಲಸಿಂಗ್, ಎಂ.ವಿ.ಗುರುಬಸಪ್ಪ ಆದ್ಯರಲ್ಲಿ ಸೇರಿದ್ದಾರೆ. ಕೃ.ನ.ಮೂರ್ತಿ, ಜನಮಿತ್ರ ಪತ್ರಿಕೆಯನ್ನು 1962ರಲ್ಲಿ ಪ್ರಾರಂಭಿಸಿ ಪತ್ರಿಕೋದ್ಯಮಕ್ಕೆ ಹೊಸ ಚಾಲನೆ ನೀಡಿದರು. ಇದರೊಂದಿಗೆ ಹೊಸ ದಿಗಂತ, ಮಲೆನಾಡು ಸಂಗತಿ, ಗಿರಿವಾರ್ತಾ, ಶಿರೋರತ್ನ, ಯುವಲೋಕ, ಜಿಲ್ಲಾ ಲೇಖನ ಇವು ಪ್ರಮುಖ ಪತ್ರಿಕೆಗಳು. ಎಂ.ಎನ್.ಕೃಷ್ಣಮೂರ್ತಿ, ಜಿ.ವಿ.ಚೂಡನಾಥ' ಐಯ್ಯರ್, ಎಸ್.ಗಿರಿಜಾಶಂಕರ್, ಎಚ್.ಎಸ್.ಸೂರ್ಯನಾರಾಯಣ ಕಡೂರು, ಸಮುದ್ರವಳ್ಳಿ ಸುಬ್ಬರಾವ್, ಎಸ್.ಎನ್.ಶ್ರೀಕಂಠ, ಹೆಚ್.ಎನ್.ಪುಟ್ಟಸ್ವಾಮಿ, ಜಿ.ವಿ.ರಮೇಶ್, ಕಮಲಾಶ್ರೀಕಂಠ, ದಿನೇಶ್ ಪಟವರ್ಧನ, ಕಂ.ಕ.ಮೂರ್ತಿ, ಗಿರೀಶ್ ಮಾವಿನಕಾಡು, ಎ.ಎಚ್.ರಾಮಸ್ವಾಮಿ, ಎಂ.ಸಿ.ಶಿವಾನಂದಸ್ವಾಮಿ, ಸಿ.ಬಿ.ಸತೀಶ್, ಹೆಚ್.ಎಸ್.ಸುಂದರೇಶ್, ಜಿ.ಹಿರೇನಲ್ಲೂರು ಶಿವು ಮೊದಲಾದವರು ಜಿಲ್ಲಾ ಪತ್ರಿಕೋದ್ಯಮ ಕ್ಷೇತ್ರದಲ್ಲಿ ಗಣನೀಯವಾಗಿ ದುಡಿದವರಾಗಿದ್ದಾರೆ.

ಸ್ವಾತಂತ್ರ್ಯ ಹೋರಾಟದಲ್ಲಿ ಹಲವಾರು ಮುಖಂಡರು, ಅಸಂಖ್ಯಾತ ಕಾರ್ಯಕರ್ತರು ಭಾಗವಹಿಸಿದ್ದರು. ಅವರಲ್ಲಿ ಹೊಸಕೊಪ್ಪ ಕೃಷ್ಣರಾವ್, ಎಂ.ಹುಚ್ಚೇಗೌಡ, ತರೀಕೆರೆ ಟಿ.ಸಿ.ಶಾಂತಪ್ಪ, ಎಸ್.ಅಣ್ಣಪ್ಪಶೆಟ್ಟಿ, ಯಳ್ಳಂಬಳಸೆ ಚಂದ್ರಶೇಖರ್, ಮಾಕೋನಹಳ್ಳಿ ದೊಡ್ಡಪ್ಪಗೌಡ, ಡಿ.ಎಸ್.ಕೃಷ್ಣಪ್ಪಗೌಡ, ಕೆ.ಆರ್.ನಾರಾಯಣಶೆಟ್ಟಿ, ಜಿ.ಟಿ.ಸತ್ಯನಾರಾಯಣ ಶೆಟ್ಟಿ, ಮಾರ್ಗದ ಮಲ್ಲಪ್ಪ, ಬಿ.ಕೆ.ಲೋಕಪ್ಪಗೌಡ, ಸಿ.ವಿ.ಧ್ರುವರಾವ್, ವಾಸುದೇವರಾವ್, ಜಿ.ಪುಟ್ಟಸ್ವಾಮಿ, ಹಂಜಿ ಶಿವಣ್ಣ, ಬಿ.ಎಲ್.ಸುಬ್ಬಮ್ಮ, ಪಾರ್ವತಮ್ಮ ಹುಚ್ಚೇಗೌಡ, ಮುದಿಯಪ್ಪ, ಕೆ.ಎನ್.ವೀರಪ್ಪಗೌಡ, ಡಿ.ಎಚ್. ರುದ್ರಪ್ಪ, ಕೆ.ಎಂ.ತಮ್ಮಯ್ಯ, ಬಾಗಮನೆ ದೇವೇಗೌಡ, ಹಾಲೂರು ಗಿಡ್ಡಪ್ಪ ಮೊದಲಾದವರನ್ನು ಹೆಸರಿಸಬಹುದು.

ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಕಡಿದಾಳು ಮಂಜಪ್ಪನವರು ಈ ಜಿಲ್ಲೆಯ ಶೃಂಗೇರಿ ಕ್ಷೇತ್ರವನ್ನು ಪ್ರತಿನಿಧಿಸಿದ್ದರು. ಇನ್ನೂ ಹಲವಾರು ಜನ ಶಾಸಕರು ಮಂತ್ರಿಗಳಾಗಿ ಮತ್ತಿತರ ಜವಾಬ್ದಾರಿಯುತ ಹುದ್ದೆಗಳನ್ನು ನಿರ್ವಹಿಸಿದ್ದಾರೆ. ಮಾಜಿ ಪ್ರಧಾನಿ ಇಂದಿರಾಗಾಂಧಿಯವರು 1978ರಲ್ಲಿ ಲೋಕಸಭೆಗೆ ಈ ಜಿಲ್ಲೆಯಿಂದ ಸ್ಪರ್ಧಿಸಿ ವಿಜೇತರಾಗಿದ್ದರು. ಇಂದಿರಾಗಾಂಧಿ ಅವರಿಗೆ ಲೋಕಸಭಾ ಸ್ಥಾನ ತೆರವು ಮಾಡಿದ್ದ ಡಿ.ಬಿ.ಚಂದ್ರೇಗೌಡರು (ನೋಡಿ) 1983-85ರಲ್ಲಿ ವಿಧಾನಸಭಾ ಅಧ್ಯಕ್ಷರಾಗಿದ್ದರು. ಬಿ.ಎಲ್.ಶಂಕರ್

(ನೋಡಿ) ಅವರು (2002-04) ವಿಧಾನ ಪರಿಷತ್ತಿನ ಸಭಾಪತಿಯಾಗಿದ್ದರು. ಡಿ.ಕೆ.ತಾರಾದೇವಿಯವರು ಕೇಂದ್ರದಲ್ಲಿ ಸಚಿವೆಯಾಗಿದರು.

**ತಾಲ್ಲೂಕು** : ಉತ್ತರದಲ್ಲಿ ಕಡೂರು, ತರೀಕೆರೆ ತಾಲ್ಲೂಕುಗಳು, ಪಶ್ಚಿಮದಲ್ಲಿ ಶೃಂಗೇರಿ, ಕೊಪ್ಪ, ನರಸಿಂಹರಾಜಪುರ, ದಕ್ಷಿಣದಲ್ಲಿ ಮೂಡಿಗೆರೆ ತಾಲ್ಲೂಕು, ಪೂರ್ವಕ್ಕೆ ಹಾಸನ ಜಿಲ್ಲೆ - ಈ ತಾಲ್ಲೂಕಿನ ಮೇರೆಗಳು. ತಾಲ್ಲೂಕಿನಲ್ಲಿ ಅಂಬಳೆ, ಚಿಕ್ಕಮಗಳೂರು, ಲಕ್ಯ, ವಸ್ತಾರೆ, ಆವತಿ, ಜಾಗರ, ಆಲ್ದೂರು ಮತ್ತು ಖಾಂಡ್ಯ ಹೋಬಳಿಗಳೂ 231 ಗ್ರಾಮಗಳೂ ಇವೆ. ತಾಲ್ಲೂಕಿನ ಜನಸಂಖ್ಯೆ 2,94,445. ಪಶ್ಚಿಮ ಘಟ್ಟಶ್ರೇಣಿಯಿಂದ ಒಳಚಾಚಿರುವ ಬೆಟ್ಟದ ಸಾಲು ಈ ತಾಲ್ಲೂಕಿನವರೆಗೂ ಹಬ್ಬಿದೆ. ಈ ಬೆಟ್ಟದ ಸಾಲಿನಲ್ಲಿಯೇ ಬರುವ ಮುಳ್ಳಯ್ಯನಗಿರಿ ಮತ್ತು ಬಾಬಾಬುಡನ್‌ಗಿರಿ ಇವು ಕರ್ನಾಟಕದ ಅತ್ಯಂತ ಎತ್ತರದ ಶಿಖರಗಳಲ್ಲಿ ಎರಡು. ತಾಲ್ಲೂಕಿನಲ್ಲಿ 93,973 ಎಕರೆ ಅರಣ್ಯ ಪ್ರದೇಶವಿದೆ. ಈ ಕಾಡುಗಳಲ್ಲಿ ಹೊನ್ನೆ, ಬೀಟೆ, ಮತ್ತಿ, ನಂದಿ, ಹಲಸು, ದಬ್ಬೆ, ಸಾಗುವಾನಿ ಮೊದಲಾದ ಮರಗಳಿವೆ. ತಾಲ್ಲೂಕಿನಲ್ಲಿರುವ ಮುತ್ತೋಡಿ ಮೀಸಲು ಕಾಡು ಸಾವಿರಾರು ಎಕರೆ ಪ್ರದೇಶವನ್ನು ಆವರಿಸಿದೆ. ಇದಲ್ಲದೆ ಬಸವನ ಕೋಟೆ, ಸಾರುಗೋಡ್, ಮತ್ತಾವರ, ಗಂಧದ ಕಾಡು, ಗಂಗಗಿರಿ, ಹೆಬ್ಬಗಿರಿ ಮೊದಲಾದ ಕಾಡುಗಳಿವೆ. ಚುರ್ಚೆಗುಡ್ಡ, ಕಾಮನಹಳ್ಳಿಗಳಲ್ಲಿ ಮೀಸಲು ಜಮೀನು ಇದೆ. ತಾಲ್ಲೂಕಿನಲ್ಲಿ ಬೀಳುವ ವಾರ್ಷಿಕ ಸರಾಸರಿ ಮಳೆ 803.08 ಮಿಮೀ ಇದ್ದು ಇಲ್ಲಿಯ ಮಲೆನಾಡು ಪ್ರದೇಶಗಳ ಬೆಟ್ಟಗಳ ಇಳಿಜಾರು ಕಾಫಿ ಬೆಳೆಗೆ ಪ್ರಶಸ್ತವಾಗಿದೆ. ಚಿಕ್ಕಮಗಳೂರು ಪಟ್ಟಣದ ಸುತ್ತಮುತ್ತಲ ಮತ್ತು ಪೂರ್ವ ಭಾಗಕ್ಕಿರುವ ಬಯಲು ಪ್ರದೇಶಗಳು ಬತ್ತ ಮತ್ತು ಕಬ್ಬುಗಳನ್ನು ಬೆಳೆಯಲು ಫಲವತ್ತಾಗಿವೆ. ಈ ತಾಲ್ಲೂಕಿನಲ್ಲಿ ಕಬ್ಬಿಣದ ಅದುರಿನ ನಿಕ್ಷೇಪವೂ ಹೇರಳವಾಗಿದೆ.



ಬಾಬಾಬುಡನ್‌ಗಿರಿಯಲ್ಲಿರುವ ದತ್ತಾತ್ರೇಯ ಪೀಠದ ಆವರಣ

ಮುಳ್ಳಯ್ಯನಗಿರಿ ಬುಡದಲ್ಲಿ ಸೀತಾಳಪ್ಪನ ಕಣಿವೆಯಲ್ಲಿ ಯಗಚಿ ಹೊಳೆ ಹುಟ್ಟುತ್ತದೆ. ಇದು ಚಿಕ್ಕಮಗಳೂರಿನ ಮೂಲಕ ಬೇಲೂರು ಕಡೆ ಹರಿದು ಹಾಸನ ಜಿಲ್ಲೆ ಸೇರುತ್ತದೆ. ಇದೇ ತಾಲ್ಲೂಕಿನ ಆಣೂರು ಬಳಿ ಹುಟ್ಟುವ ಬೆರಂಜಿ ಹಳ್ಳ ಇದನ್ನು ಕೂಡಿಕೊಳ್ಳುತ್ತದೆ. ಗೌರಿಹಳ್ಳ ಮತ್ತು ಆವತಿ ಎಂಬ ಹೊಳೆಗಳು ಮುಳ್ಳಯ್ಯನಗಿರಿ ಶ್ರೇಣಿಯಲ್ಲಿ ಹುಟ್ಟುತ್ತವೆ. ಇವು ಕಡೂರಿನ ಬಳಿ ಒಂದುಗೂಡಿ ವೇದಾವತಿ ಎಂಬ ಹೆಸರಿನಿಂದ ಚಿತ್ರದುರ್ಗ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಜಾಗರ ಕಣಿವೆಯಲ್ಲಿ ಹುಟ್ಟುವ ಸೋಮವಾಹಿನಿ ಎಂಬ ಹೊಳೆ ಪಶ್ಚಿಮಕ್ಕೆ ಹರಿದು ಭದ್ರಾನದಿಯನ್ನು ಸೇರುತ್ತದೆ.

ಮಲೆನಾಡು ಭಾಗದಲ್ಲಿ ಕಾಫಿ ಮತ್ತು ಕಿತ್ತಲೆ, ಮೆಣಸು ಮುಖ್ಯ ಬೆಳೆಗಳು. ಆಲ್ದೂರು ಮತ್ತು ಮಲ್ಲಂದೂರಿನ ಸುತ್ತಮುತ್ತಲ ಪ್ರದೇಶಗಳು ಕಿತ್ತಲೆಹಣ್ಣಿನ ಬೆಳೆಗೆ ಹೆಸರುವಾಸಿಯಾಗಿದ್ದವು. ಮಲೆನಾಡು ಭಾಗದಲ್ಲಿ ಬತ್ತ, ಅಡಕೆಗಳನ್ನೂ ಬೆಳೆಯುತ್ತಾರೆ. ಆದರೆ ಈ ಬೆಳೆಗಳು ಅಷ್ಟು ಅಧಿಕ ಇಳುವರಿ ನೀಡುವುದಿಲ್ಲ. ಬಯಲು ಪ್ರದೇಶದಲ್ಲಿ ಬತ್ತ, ಕಬ್ಬು, ರಾಗಿ, ಆಲೂಗೆಡ್ಡೆ, ಹುರುಳಿ, ಗೆಣಸು, ಮೆಣಸಿನಕಾಯಿ, ಈರುಳ್ಳಿ, ಬೆಳ್ಳುಳ್ಳಿ, ಸಾಸಿವೆ ಮೊದಲಾದ ಬೆಳೆಗಳನ್ನು ಬೆಳೆಯಲಾಗುತ್ತದೆ.

ತಾಲ್ಲೂಕಿನ ಕಾಫಿ ತೋಟಗಳ ಉದ್ಯಮ ಬೆಳೆದು ಹೊರಗಿನಿಂದ ಬಂದ ಸಾವಿರಾರು ಕಾರ್ಮಿಕರಿಗೆ ಉದ್ಯೋಗ ಲಭಿಸಿದೆ. ಇಲ್ಲಿ ಅನೇಕ ಕಾರ್ಮಿಕ ಸಂಘಗಳು ಇವೆ. ಮಲ್ಲಂದೂರು, ಹಿರೇಮಗಳೂರು, ಕೈಮರ, ಕಳಸಾಪುರ, ಕೃಷ್ಣರಾಜಪೇಟೆ, ವಸ್ತಾರೆ, ಆಲ್ದೂರು, ಇಂದಾವರ, ಜೋಳದಾಳು, ಶಿರವಾಸೆ ಮೊದಲಾದ ಸ್ಥಳಗಳು ಬೆಳೆವಣಿಗೆ ಹೊಂದಿವೆ. ಇವುಗಳಲ್ಲಿ ಬಹುತೇಕ ಸ್ಥಳಗಳಲ್ಲಿ ಮಾಧ್ಯಮಿಕ ಶಾಲೆಗಳೂ ಪ್ರಾಥಮಿಕ ಆರೋಗ್ಯ ಕೇಂದ್ರಗಳೂ ಇವೆ. ಹಲವು ಸ್ಥಳಗಳಲ್ಲಿ ಪಶುವೈದ್ಯಶಾಲೆಗಳು ಮತ್ತು ಪ್ರೌಢಶಾಲೆಗಳುಂಟು. ತಾಲ್ಲೂಕಿನ ಕೆಲವು ಸ್ಥಳಗಳಲ್ಲಿ ವಾರದ ಸಂತೆಗಳು ನಡೆಯುತ್ತವೆ.

ಮುಳ್ಳಯ್ಯನಗಿರಿ ಮತ್ತು ಬಾಬಾಬುಡನ್ ಗಿರಿ ಪ್ರೇಕ್ಷಣೀಯ ಸ್ಥಳಗಳು. ಮೂಡಿಗೆರೆ ರಸ್ತೆಯಲ್ಲಿರುವ ವಸ್ತಾರೆ 1875ರವರೆಗೂ ಇದೇ ಹೆಸರಿನ ತಾಲ್ಲೂಕಿಗೆ ಕೆಂದ್ರವಾಗಿತ್ತು. ಈ ಹೆಸರು ವಸು ಧಾರಾ ಅಂದರೆ ದಾನವಾಗಿ ಕೊಟ್ಟ ಭೂಮಿ ಎಂಬ ಅರ್ಥದಲ್ಲಿ ಬಂದು ರೂಪಾಂತರ ಹೊಂದಿ ವಸ್ತಾರೆ ಆಗಿದೆ ಎಂದು ತಿಳಿದುಬರುತ್ತದೆ. ಹುಂಚದ ರಾಜರಲ್ಲೊಬ್ಬ ಇದನ್ನು ಸ್ಥಾಪಿಸಿದ. ಇದು ಹಿಂದೆ ಸಿಸುಕಲಿ ಮತ್ತು ಕಾರ್ಕಳ ದೊರೆಗಳ ಅಧೀನದಲ್ಲಿತ್ತು. ಮಲೆನಾಡಿನಲ್ಲಿ ಮೊಟ್ಟಮೊದಲು ಕಾಫಿ ಬೆಳೆಯಲು ಪ್ರಯತ್ನಿಸಿದ ಸ್ಥಳಗಳಲ್ಲಿ ಇದೂ ಒಂದು ಎಂದು ಹೇಳಲಾಗಿದೆ.

ಮತ್ತಾವರದಲ್ಲಿರುವ ಪಾರ್ಶ್ವನಾಥ ಬಸದಿ ಬಹು ಪುರಾತನವಾದ್ದು. ಮರಳೆಯಲ್ಲಿ ಹೊಯ್ಸಳ ಶೈಲಿಯ ಎರಡು ದೇವಾಲಯಗಳುಂಟು. ಚಿಕ್ಕಮಗಳೂರು ಪಟ್ಟಣಕ್ಕೆ 2ಕಿಮೀ ದೂರವಿರುವ ಹಿರೇಮಗಳೂರು ಐತಿಹಾಸಿಕ ಸ್ಥಳ. ಕಳಸಾಪುರದಲ್ಲಿರುವ ಚೆಲುವನಾರಾಯಣ ದೇವಾಲಯ ಆಕರ್ಷಕ. ಬೆಳವಾಡಿಯ ವೀರನಾರಾಯಣ ದೇವಾಲಯ ಪ್ರಸಿದ್ಧ ಹೊಯ್ಸಳ ದೇವಾಲಯಗಳಲ್ಲೊಂದು. ಪಾದಪೀಠವೂ ಸೇರಿದಂತೆ ಅಲ್ಲಿಯ ವಿಗ್ರಹದ ಎತ್ತರ 7'. ಅಲ್ಲಿರುವ ಇನ್ನೊಂದು ದೇವಾಲಯ ಮಲ್ಲಿಕಾರ್ಜುನನದು. ಇದರ ತುದಿಯಲ್ಲಿ ಹೊಯ್ಸಳರ ಲಾಂಛನವಿದೆ. ಈ ಎರಡೂ ದೇವಾಲಯಗಳ ನವರಂಗಗಳಲ್ಲೂ ಅನೇಕ ದೇವದೇವತೆಗಳ ವಿಗ್ರಹಗಳನ್ನು ಕೆತ್ತಲಾಗಿದೆ. ಕೋಟೆ ಊರು ವಸ್ತಾರೆ ಹೋಬಳಿಯಲ್ಲಿದೆ. ಇಲ್ಲಿ ಹಲವು ಪ್ರಾಚೀನ ಶಾಸನಗಳುಂಟು.

**ಪಟ್ಟಣ** : ಚಿಕ್ಕಮಗಳೂರು ಹೋಬಳಿ, ತಾಲ್ಲೂಕು ಮತ್ತು ಜಿಲ್ಲಾ ಆಡಳಿತ ಕೇಂದ್ರ. ಇದು ಮುಳ್ಳಯ್ಯನಗಿರಿಯ ದಕ್ಷಿಣಕ್ಕಿದೆ. ಜನಸಂಖ್ಯೆ 1,01,022. 40ಕಿಮೀ ದೂರದ ಕಡೂರೇ ಇಲ್ಲಿಗೆ ಅತ್ಯಂತ ಸಮೀಪದ ರೈಲ್ವೆ ನಿಲ್ದಾಣ.

ಇಲ್ಲಿ ಜಿಲ್ಲಾಮಟ್ಟದ ಕಚೇರಿಗಳೂ ಸೆಷನ್ಸ್ ಕೋರ್ಟೂ ಇವೆ. ಕಾಫಿ ಹದ ಮಾಡುವ ಕಾರ್ಖಾನೆಗಳಿವೆ. ಕೆಲವು ಎಂಜಿನಿಯರಿಂಗ್ ಕಾರ್ಯಾಗಾರಗಳು ಇದ್ದು ಇವು ಕಾಫಿ ತೋಟಗಳಿಗೆ ಬೇಕಾದ ಉಪಕರಣಗಳನ್ನು, ವಸ್ತುಗಳನ್ನು ತಯಾರಿಸುತ್ತವೆ. ಮರ ಕೊಯ್ಯುವುದು, ಬೆತ್ತ ಹೆಣೆಯುವುದು, ಕಬ್ಬಿಣದ ಉಪಕರಣಗಳ ರಿಪೇರಿ, ಗಾಡಿ ಕೂಡಿಸುವುದು, ಚರ್ಮದ ಕೆಲಸ -ಇವು ಕೆಲವು ಉಪಕಸಬುಗಳು. ಇಲ್ಲಿಯ ಪುರಸಭೆಯನ್ನು 1870ರಲ್ಲೇ ಸ್ಥಾಪಿಸಲಾಯಿತು.

ಪಟ್ಟಣಕ್ಕೆ ಸೇರಿಕೊಂಡಂತಿರುವ ರತ್ನಗಿರಿ ಒಂದು ಎತ್ತರದ ದಿಬ್ಬ; ಸಂಜೆಯ ವಿಹಾರ ಸ್ಥಳ. ಇಲ್ಲಿಯ ಗಂಧದ ಕೋಟೆ ಎಂಬ ಸ್ಥಳದಲ್ಲಿ ರಾಮೇಶ್ವರ ದೇವಾಲಯವೂ ಅನೇಕ ನಾಗರ ವಿಗ್ರಹಗಳೂ ಇವೆ. ಕನ್ನಿಕಾಪರಮೇಶ್ವರಿ ದೇವಾಲಯವನ್ನು ಆಧುನಿಕವಾಗಿ ಭವ್ಯವಾಗಿ ಕಟ್ಟಲಾಗಿದೆ. ಇಲ್ಲಿ ಒಂದು ಎಂಜಿನಿಯರಿಂಗ್ ಕಾಲೇಜು, ಒಂದು ಪಾಲಿಟೆಕ್ನಿಕ್, ಎರಡು ಪ್ರಥಮ ದರ್ಜೆ ಕಾಲೇಜುಗಳು ಇವೆ. ಆಧುನಿಕವಾಗಿ ನಿರ್ಮಿತವಾಗಿರುವ ಶ್ಮಶಾನ(ಮುಕ್ತಿಧಾಮ)ವಿದೆ.

ಚಿಕ್ಕಮಗಳೂರಿಗೆ ಈ ಹೆಸರು ಬರಲು ಕಾರಣವಾದ ಒಂದು ಐತಿಹ್ಯವಿದೆ. ಮಹಾಭಾರತ ಕಥೆಯಲ್ಲಿ ಬರುವ ಹಾಗೂ ಸಕ್ಕರೆ ಪಟ್ಟಣದಲ್ಲಿದ್ದನೆನ್ನಲಾದ ರುಕ್ಮಾಂಗದ ಚಿಕ್ಕಮಗಳೂರನ್ನೂ ಇದರ



ಆನೆ ವಿಗ್ರಹ, ಚಿಕ್ಕಮಗಳೂರು

ಸಮೀಪದಲ್ಲಿ ಇರುವ ಹಿರೇಮಗಳೂರನ್ನೂ ತನ್ನ ಕಿರಿಯ ಮತ್ತು ಹಿರಿಯ ಹೆಣ್ಣುಮಕ್ಕಳಿಗೆ ಬಳುವಳಿಯಾಗಿ ನೀಡಿದ. ಆ ಊರುಗಳಿಗೆ ಅನುಕ್ರಮವಾಗಿ ಚಿಕ್ಕ ಮಗಳ ಊರು ಮತ್ತು ಹಿರಿಯ ಮಗಳ ಊರು ಎಂದು ಹೆಸರುಗಳು ಬಂದುವು ಎಂದು ಪ್ರತೀತಿ. ಆದರೆ 9ನೆಯ ಶತಮಾನದಲ್ಲಿ ಗಂಗರು ನಿರ್ಮಿಸಿದರೆನ್ನಲಾದ ಕೋಟೆ ಇದ್ದ ಸ್ಥಳದಲ್ಲಿ ದೊರೆತಿರುವ ಶಾಸನದಲ್ಲಿ ಇದನ್ನು ಕಿರಿಯ ಮುಗುಳಿ ಎಂದು ಕರೆಯಲಾಗಿದೆ. ಮುಗುಳಿ ಎಂದರೆ ಒಂದು ಬಗೆಯ ಹೂ ಬಿಡುವ ಗಿಡ ಎಂಬ ಅರ್ಥವಿದೆ. ಒಂದು ಕಾಲಕ್ಕೆ ಇದು ಜೈನ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಚಿಕ್ಕಮಗಳೂರಿನ 1ನೆಯ ಶಾಸನದಲ್ಲಿ (1257) ಇದು ದೇವಳಿಗೆ ನಾಡಲ್ಲಿದ್ದಿತೆಂದೂ ಹೇಳಲಾಗಿದೆ. ಈ ಸ್ಥಳ ಹಿಂದೆಯೂ ಚಿಕ್ಕ ಪ್ರಾಂತ್ಯ ವಿಭಾಗದ ಮುಖ್ಯ ಕೇಂದ್ರವಾಗಿದ್ದಿರಬಹುದು. (ಡಿ.ಎಸ್.ಜೆ.)

**ಚಿಕ್ಕಮಳೂರು :** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣ ತಾಲ್ಲೂಕಿಗೆ ಸೇರಿದ ಗ್ರಾಮ. ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ಕಣ್ವ ನದಿಯ ಎಡದಂಡೆಯ ಮೇಲೆ ಚನ್ನಪಟ್ಟಣದಿಂದ ಸು.3ಕಿಮೀ ದೂರದಲ್ಲಿದೆ.

ಇದೊಂದು ಐತಿಹಾಸಿಕ ಸ್ಥಳ. ಹಿಂದೆ ಅಗ್ರಹಾರವಾಗಿತ್ತು. ಇಲ್ಲಿ ಅರ್ಕೇಶ್ವರ, ಗೋಪಾಲಕೃಷ್ಣ ಹಾಗೂ ಕಲ್ಲೇಶ್ವರ ದೇವಾಲಯಗಳಿವೆ. ಈ ದೇವಾಲಯಗಳಲ್ಲಿ ದೊರೆಯುವ ಹೇರಳ ತಮಿಳು ಶಾಸನಗಳಿಂದ ತಮಿಳುನಾಡಿನ ಭಕ್ತರು ಮಾಡಿಸಿದ ಸೇವಾ ವಿವರಗಳು ತಿಳಿದುಬರುತ್ತವೆ.

ಅರ್ಕೇಶ್ವರ ದೇವಾಲಯ ವಿಜಯನಗರ ಕಾಲದ್ದು. ಗರ್ಭಗೃಹ, ಸುಕನಾಸಿ, ನಾಲ್ಕು ಅಷ್ಟಕೋನದ ಸರಳ ಸ್ತಂಭಗಳಿಂದ ಕೂಡಿದ ನವರಂಗ, ಪೂರ್ವದಲ್ಲಿ ನಾಲ್ಕು ಸ್ತಂಭಗಳಿಂದ ಕೂಡಿದ ದೊಡ್ಡ ಮುಖಮಂಟಪ ಮತ್ತು ದಕ್ಷಿಣದಲ್ಲಿ ಎರಡು ಸ್ತಂಭಗಳಿಂದ ಕೂಡಿದ ಚಿಕ್ಕ ಮುಖಮಂಟಪ - ಇವುಗಳಿಂದ ಕೂಡಿದ ಚಿಕ್ಕ ಸರಳ ರಚನೆ. ಗರ್ಭಗೃಹದ ಹೊರಗೋಡೆಗಳ ಮೇಲೆ ಚೋಳ ಶೈಲಿಯ ಅನುಕರಣೆಗಳೆಂದು ತೋರುವ ಅರೆಗಂಬ ಮತ್ತು ಗೂಡುಗಳಿವೆ. ಉತ್ತರದಿಂದ ದಕ್ಷಿಣದತ್ತ ಸಾಗುವ ಸುಕನಾಸಿ ಮೂರು ಅಂಕಣದ್ದಾಗಿದೆ. ಚಿಕ್ಕ ಸುಕನಾಸಿಯೊಂದು ಮಧ್ಯದತ್ತ ಸಾಗುತ್ತದೆ. ಇಲ್ಲಿರುವ ಲಿಂಗ ಹುಟ್ಟು ಶಿಲೆಯೆಂದೇ ತೋರುತ್ತದೆ. ನವರಂಗದ ಉತ್ತರಕ್ಕಿರುವ ಚಿಕ್ಕ ಕೊಠಡಿಯಲ್ಲಿ ಇಟ್ಟಿಗೆಯ ಗೂಡೊಂದಿದೆ. ಇದರಲ್ಲಿ ಬಹುಶಃ ದೇವಿಯ ವಿಗ್ರಹವನ್ನಿಡಲಾಗಿತ್ತು. ಈಗ ನವರಂಗದಲ್ಲಿ ವೀಣಾಪಾಣಿ ವೀರಭದ್ರ, ಸಪ್ತಮಾತೃಕೆಯರು, ಷಣ್ಮುಖಿ, ವರದರಾಜ ಹಾಗೂ ಸೂರ್ಯವಿಗ್ರಹಗಳಿವೆ. ಇವೆಲ್ಲ ಒರಟಾದ ಶಿಲ್ಪಗಳು.

ಗೋಪಾಲಕೃಷ್ಣ ದೇವಾಲಯ ಚಿಕ್ಕ ಗರ್ಭಗೃಹ, ಎರಡು ಸುಕನಾಸಿಗಳು, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿದೆ. ಮುಖಮಂಟಪ ಮೂರು ಅಂಕಣದ್ದಾಗಿದ್ದು ಇನ್ನೊಂದು ಅಂಕಣ ಮಧ್ಯದಿಂದ ಚಾಚಿದೆ. ಮುಖಮಂಟಪದ ಸ್ತಂಭ ಹಾಗೂ ನವರಂಗ ದ್ವಾರಗಳು 14ನೆಯ ಶತಮಾನಕ್ಕೆ ಸೇರಿದ್ದೆಂದು ಹೇಳಬಹುದು. ಸ್ತಂಭಗಳು ಹದಿನಾರು ಮುಖದ ಅರೆಗೋಳವಿ ಆಕಾರದ ಅನುಕರಣೆಗಳಾಗಿವೆ. ಇವುಗಳ ಮೇಲ್ಭಾಗದ ಚೌಕನೆಯ ಭಾಗಗಳಲ್ಲಿ ನರಸಿಂಹ, ಜನಾರ್ದನ, ವೇಣುಗೋಪಾಲ, ಜಿಂಕೆಗೆ ಆಹಾರ ನೀಡುತ್ತಿರುವ ಸ್ತ್ರೀ ಮುಂತಾದ ಶಿಲ್ಪಗಳುಳ್ಳ ಉಬ್ಬುಚಿತ್ರಗಳಿವೆ. ಬೋದಿಗೆಗಳ ಮೇಲೆ ಕೆಳಮುಖವಾಗಿ ಚಾಚಿ ಇಳಿಬಿದ್ದಿರುವ ಮೊಗ್ಗನ್ನು ಬಿಡಿಸಿದೆ. ದ್ವಾರಪಾಲಕ ಮೂರ್ತಿಗಳು ಕಗ್ಗಲ್ಲಿನಲ್ಲಿ ಕೆತ್ತಿದ ಒರಟು ಶಿಲ್ಪಗಳಾಗಿವೆ. ಈ ದೇವಾಲಯದ ನಾಲ್ಕಡಿ ಎತ್ತರದ ವೇಣುಗೋಪಾಲ ಮೂರ್ತಿ ಶಿಲ್ಪದೃಷ್ಟಿಯಿಂದ ಗಮನಿಸಬಹುದಾದ ವಿಗ್ರಹ. ಹೊಯ್ಸಳ ಶೈಲಿಯನ್ನು ಅನುಕರಿಸಿರುವಂತೆ ತೋರುವ ಈ ಮೂರ್ತಿಯನ್ನು ಹಾಲುಣಿಸುತ್ತಿರುವ ಹಸುವಿನ ಮೇಲೆ ಒರಗಿಕೊಂಡಿರುವಂತೆ ಕೆತ್ತಿದೆ. ಗರ್ಭಗೃಹದ ಹೊರಗೋಡೆಯ ಮೇಲಿರುವ ಅರೆಗಂಬ ಹಾಗೂ ಗೂಡುಗಳು ಚೋಳರ ಕೆಲಸವನ್ನು ಹೋಲುತ್ತವೆ. ವಿಜಯನಗರ ಕಾಲದ ಕೊನೆಯ ಭಾಗದಲ್ಲಿ ದೇವಾಲಯದ ಶಿಖರವನ್ನು ನಿರ್ಮಿಸಿದಂತೆ ತೋರುತ್ತದೆ. ಮಹಾದ್ವಾರಕ್ಕೆ ಗೋಪುರವಿಲ್ಲ, ಇದೂ ವಿಜಯನಗರ ಕಾಲದ್ದು.

ಕಲ್ಲೇಶ್ವರ ದೇವಾಲಯ ಚಿಕ್ಕದು. ಇದು ಚೋಳರ ಕಾಲದ ನಿರ್ಮಾಣ. ವಿಜಯನಗರ ಕಾಲದಲ್ಲಿ ಜೀರ್ಣೋದ್ಧಾರಗೊಂಡಿದೆ. ದೇವಾಲಯದ ಹೊರಗೋಡೆಯ ಅರೆಗಂಬ ಹಾಗೂ ಗೂಡುಗಳು ನವರಂಗದ ಸ್ತಂಭಗಳು ಚೋಳ ರೀತಿಯವು. ಸ್ತಂಭಗಳು ಅರೆಗೋಳವಿಯಾಕಾರದ ಷೋಡಶ ಮುಖಗಳಿಂದ ಕೂಡಿವೆ. ಮೇಲ್ಭಾಗದಲ್ಲಿ ಶಿಲ್ಪಗಳಿವೆ. ನವರಂಗ ಹಾಗೂ ಸುಕನಾಸಿ ದ್ವಾರಗಳ ಮೇಲೆ ರುದ್ರಾಕ್ಷಿ ಮಣಿಗಳನ್ನು ಕೆತ್ತಿದೆ. ಗರ್ಭಗುಡಿಯಲ್ಲಿರುವ ಲಿಂಗ ಚಿಕ್ಕದು. ಇದನ್ನು ಬೇರೆಡೆಯಿಂದ ತಂದಿಟ್ಟಿರುವಂತೆ ತೋರುತ್ತದೆ. (ಎಚ್.ಎಂ.ಎನ್.ಆರ್.)

**ಚಿಕ್ಕಮಲ್ಲಿಕಾರ್ಜುನ :** ಸು.15ನೆಯ ಶತಮಾನ. ವೀರಶೈವ ಕವಿ. ಧರ್ಮಸಂಪಾದನೆ ಎಂಬ ಗ್ರಂಥದ ಕರ್ತೃ. ಗೋರಕೋಡಪುರ ಕವಿಯ ಜನ್ಮಸ್ಥಳವೆಂದು ತೋರುತ್ತದೆ. ಈತನ ತಂದೆ ಗೋರಕೋಡಪುರದ ಉಜ್ಜಣಾರಾಧ್ಯ. ಉಜ್ಜಯನೀಶ ಅಥವಾ ಉಜ್ಜಯನಿ ದೇಶಿಕೇಂದ್ರ ಈತನ ಗುರು. ಕಾಗಿನೆಲೆಯ ಚಿಕ್ಕವೀರೇಶ ಈತನ ಇನ್ನೊಬ್ಬ ಗುರು. ಪೂರ್ವಕವಿಗಳಲ್ಲಿ ಪಾಲ್ಕುರಿಕೆ ಸೋಮನಾಥ', ಭೀಮಕವಿ, ಪುರದ ಮಲ್ಲಯ್ಯ, ಗುರುಬಸವ ಇವರನ್ನು ಸ್ಮರಿಸಿದ್ದಾನೆ.

ಧರ್ಮಸಂಪಾದನೆ ಷಟ್ಪದಿಯಲ್ಲಿ ರಚಿತವಾಗಿದೆ. ಇದರಲ್ಲಿ ಐದು ಸಂಧಿಗಳಿವೆ. ಮೊದಲ ನಾಲ್ಕು ಸಂಧಿಗಳು ಪರಿವರ್ಧಿನಿಯಲ್ಲೂ ಕೊನೆಯದು ಭಾಮಿನಿಯಲ್ಲೂ ಇವೆ. ಕಾವ್ಯದಲ್ಲಿ ಒಟ್ಟು 598 ಪದ್ಯಗಳಿವೆ. ತಾನು ಈ ಕಾವ್ಯವನ್ನು ಗುರು ಕಾಗಿನೆಲೆಯ ಚಿಕ್ಕವೀರೇಶನ ಆದೇಶದಂತೆ ರಚಿಸಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. ಇದರಲ್ಲಿ ಶಿವಪದಕ್ಕೆ ಕಾರಣವಾದ ಭಿಕ್ಷೆಯ ಮಹಿಮೆ ವರ್ಣಿತವಾಗಿದೆ. ಅಮರಾವತಿ ಪಟ್ಟಣದ ಧನಿಕ ಇಂದೀವರ ರಾತ್ರಿ ಭಿಕ್ಷೆ ಬೇಡಲು ಬಂದ ಜಂಗಮನೊಬ್ಬನಿಗೆ ಭಿಕ್ಷೆ ನೀಡದೆ ಆತ ರಾತ್ರಿಯೆಲ್ಲ ಹಸಿವಿನಿಂದ ನರಳುವಂತೆ ಮಾಡಿದ ಅಪರಾಧಕ್ಕಾಗಿ ಶಿವನ ಶಾಪ ಹೊಂದಿ ಬ್ರಹ್ಮರಾಕ್ಷಸನಾಗಿ ಭೂಮಿಯಲ್ಲಿ ಹುಟ್ಟಿ, ಶಾಪವಿಮೋಚನೆ ಪಡೆದದ್ದು ಇದರ ಕಾವ್ಯವಸ್ತು. ಈ ಕಥೆಗೆ ಹಲವು ಉಪಕಥೆಗಳು ಸೇರಿಕೊಂಡು ಕಾವ್ಯ ಹಿಗ್ಗಿದೆ. ವೀರಶೈವ ಧರ್ಮಬೋಧನೆ, ಇಲ್ಲಿಯ ಮುಖ್ಯ ಗುರಿ. ಆದರೂ ಪರಮತವಿಡಂಬನೆ ಕಂಡುಬರುವುದಿಲ್ಲ. ಕಾವ್ಯದಲ್ಲಿ ವರ್ಣನಾಂಶ ಕಡಿಮೆ. ಕವಿ ತಾನು ವ್ಯಾಕರಣ, ಅಲಂಕಾರ, ಛಂದಸ್ಸು - ಇವುಗಳನ್ನು ಅರಿಯದವನೆಂದು ನಮ್ರನಾಗಿ ಹೇಳಿಕೊಂಡಿದ್ದಾನೆ. ಜನಸಾಮಾನ್ಯರಿಗೆ ಧರ್ಮಬೋಧನೆ ಅರ್ಥವಾಗಬೇಕು, ಜನ ಬದುಕಬೇಕು,

ನೀತಿವಶರಾಗಬೇಕು ಎಂಬ ಉದ್ದೇಶವನ್ನಿಟ್ಟುಕೊಂಡು ಸಾಂಪ್ರದಾಯಿಕ ವಿಧಾನದಲ್ಲಿ ಈ ಗ್ರಂಥ ರಚಿತವಾಗಿದ್ದರೂ ಕೆಲವು ಕಾವ್ಯಾಂಶಗಳನ್ನೂ ಹೊಂದಿದೆ ಎಂಬ ದೃಷ್ಟಿಯಿಂದ ಮುಖ್ಯವಾಗಿದೆ. *

**ಚಿಕ್ಕಮಾಗಡಿ :** ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕಿನ್ಲಲಿರುವ ಒಂದು ಗ್ರಾಮ. ಕಸಬೆಯ ಉತ್ತರಕ್ಕೆ 37ಕಿಮೀ ದೂರದಲ್ಲಿದೆ. ಒಂದು ಕಾಲದಲ್ಲಿ ಈ ಊರು ಜೈನಧರ್ಮದ ಪ್ರಮುಖ ಕೇಂದ್ರವಾಗಿತ್ತು. ಇಲ್ಲಿ ಜೈನಬಸದಿ ಹಾಗೂ ಭಗ್ನವಾದ ಅನೇಕ ಜೈನ ವಿಗ್ರಹಗಳು ಇವೆ. ಜೈನಬಸದಿ ಈಗ ಬಸವೇಶ್ವರ ಗುಡಿಯಾಗಿದೆ. ದೇವಾಲಯದ ಮುಂದೆ 13.5' ಎತ್ತರ 4.5' ಅಗಲದ 1182ರ ಶಾಸನವೊಂದಿದೆ. ಇಲ್ಲಿನ ಕಲ್ಲೇಶ್ವರ ದೇವಾಲಯ ತ್ರಿಕೂಟವರ್ಗಕ್ಕೆ ಸೇರಿದ್ದು, ಎರಡರಲ್ಲಿ ಈಶ್ವರಲಿಂಗ ಇನ್ನೊಂದರಲ್ಲಿ ವಿಷ್ಣುವಿನ ವಿಗ್ರಹ ಇವೆ. ಅಮ್ಮನ ಗುಡಿಯ ಮುಂಭಾಗದಲ್ಲಿ ಎರಡು ಮಾಸ್ತಿಕಲ್ಲುಗಳಿವೆ. *

**ಚಿಕ್ಕಯ್ಯ :** 12ನೆಯ ಶತಮಾನದ ಶಿವಶರಣ ಹಾಗೂ ವಚನಕಾರ. ನಿಜಲಿಂಗ ಚಿಕ್ಕಯ್ಯನೆಂದು ಪ್ರಸಿದ್ಧನಾಗಿದ್ದಾನೆ. ಬಸವೇಶ್ವರನ ಸಮಕಾಲೀನನೆಂದು ತೋರುತ್ತದೆ. ಈತ ಉಳಿಯುಮೇಶ್ವರ ಎಂಬ ಅಂಕಿತದಲ್ಲಿ ವಚನಗಳನ್ನು ರಚಿಸಿದ್ದಾನೆ. ಫ.ಗು.ಹಳಕಟ್ಟಿಯವರು ಚಿಕ್ಕಯ್ಯನ 15 ವಚನಗಳು ದೊರಕಿವೆಯೆಂದು ಹೇಳುತ್ತಾರೆ. ಕವಿಚರಿತಕಾರರು ಈತನ ಮೂರು ವಚನಗಳು ಉಪಲಬ್ಧವೆಂದೂ ಅದರಲ್ಲಿ ಒಂದು ವಾರ್ಧಕ ಷಟ್ಪದಿಯೆಂದೂ ಅಭಿಪ್ರಾಯಪಟ್ಟಿದ್ದಾರೆ. ಸಿದ್ಧನಂಜೇಶನ ಹೇಳಿಕೆಯಂತೆ ರಾಘವಾಂಕನೇ ಷಟ್ಪದಿ ರಚನೆಯ ಮೊದಲಿಗನೆಂಬ ಮಾತು ಆಗ ಸುಳ್ಳಾಗುತ್ತದೆ. ಸದ್ಯಕ್ಕೆ ಷಟ್ಪದಿ ರಚನೆ ರಾಘವಾಂಕನಿಗಿಂತ ಹಿಂದೆ ಇದ್ದರೂ ಷಟ್ಪದಿಯಲ್ಲಿ ಗ್ರಂಥರಚನೆಯಾದುದು ರಾಘವಾಂಕನಿಂದ ಎಂಬ ಮಾತನ್ನು ಒಪ್ಪಬಹುದಾಗಿದೆ.

ಈತನ ಕಥೆ ಹೀಗಿದೆ: ಕಾಶ್ಮೀರ ದೇಶದ ಮಾಂಡವ್ಯಪುರದ ತನ್ನ ಅರಮನೆಯಿಂದ ಮೂರು ಸಾವಿರ ಚಿರಮೂರ್ತಿಗಳನ್ನು ಬಸವಣ್ಣ ಗುಪ್ತವಾಗಿ ಒಯ್ದನೆಂಬ ಕಾರಣದಿಂದ ಬಸವಣ್ಣನನ್ನು ರಹಸ್ಯವಾಗಿ ಕೊಂದು ಬರುವಂತೆ ಇಬ್ಬರು ಭಟರನ್ನು ರಾಣಿ ಮಹಾದೇವಿ ಕಳುಹಿಸಿದಳು. ಕಪಟಜಂಗಮ ವೇಷದಿಂದಿದ್ದ ಆ ಭಟರು ಬಸವಣ್ಣನ ಕೃಪೆಗೆ ಪಾತ್ರರಾಗಿ ನಿಜಜಂಗಮರಾದರು. ಅವರಿಗೆ ಕ್ರಮವಾಗಿ ಚೋರಚಿಕ್ಕಯ್ಯ, ನಿಜಲಿಂಗಚಿಕ್ಕಯ್ಯ ಎಂದು ಹೆಸರಾಯಿತು. ನಿಜಲಿಂಗ ಚಿಕ್ಕಯ್ಯ ಓಲೆಗರಿಯನ್ನು ಮಾರುವ ಕಾಯಕ ನಡೆಸಿ ಗುರುಲಿಂಗ ಜಂಗಮ ಸೇವೆ ಮಾಡುತ್ತಿದ್ದ. ಒಮ್ಮೆ ಈತನನ್ನು ಗಂಗಯ್ಯನೆಂಬ ತಳವಾರ ಶಿವಪೂಜೆಗೆಂದು ಆಹ್ವಾನಿಸಿ, ರಾಜಕಾರ್ಯಕ್ಕಾಗಿ ಹೊರಗೆ ಹೋಗಿರಲು ಆತನ ಹೆಂಡತಿ ಚೆನ್ನಾಜಿ ಆ ಜಂಗಮನನ್ನು ಮೋಹಿಸಿ ರತಿಸುಖಕ್ಕೆ ಕರೆದಳು. ಆತ ಒಪ್ಪದಿರಲು ಆತನ ಗಂಟಿನಲ್ಲಿ ತನ್ನ ಆಭರಣಗಳನ್ನಿಟ್ಟು ತನ್ನನ್ನು ಆತ ಕೆಡಿಸಬಂದನೆಂದೂ ಕಳ್ಳತನ ಮಾಡಿರುವನೆಂದೂ ಗಂಡನಿಗೆ ಚಾಡಿಹೇಳಿದಳು. ತನ್ನ ಮಾತನ್ನು ಗಂಡ ಒಪ್ಪದಿರಲು ದೂರನ್ನು ದೊರೆಯ ತನಕ ಒಯ್ದಳು. ಚಿಕ್ಕಯ್ಯನ ಗಂಟಿನಲ್ಲಿ ಆಕೆಯ ಆಭರಣಗಳಿದ್ದುದನ್ನು ಕಂಡ ದೊರೆ ಆತನ ತಲೆ ಕತ್ತರಿಸಲು ಆಜ್ಞಾಪಿಸಿದ. ಆದರೆ ಕತ್ತರಿಸಿದ ಚಿಕ್ಕಯ್ಯನ ತಲೆ ಆಕಾಶಕ್ಕೆ ನೆಗೆದು ಪಂಚಾಕ್ಷರಿಯನ್ನು ಜಪಿಸುತ್ತಿರಲು ಬಸವಣ್ಣ ಬಂದು ಆತನನ್ನು ಮತ್ತೆ ಬದುಕಿಸಿದ ಎಂಬುದಾಗಿ ಶಿವಶರಣರ ಪುರಾಣಗಳಿಂದ ತಿಳಿದುಬರುತ್ತದೆ.

ವಾರ್ಧಕ ಷಟ್ಪದಿಯಲ್ಲಿರುವ ಈತನ ಒಂದು ಪದ್ಯ:

ಭವಪಾಶಬಂಧದಿಂ ಬಿಗಿದು ಕವಿಲೆಯ ಹುಲಿಯ<br>
ಗವಿಯೊಳಗೆ ಕಟ್ಟಿದಂತಾದ ಸಂಸಾರವೆಂ<br>
ಬವಿಚಾರಸರ್ಪ ಸರ್ವಗ್ರಾಸಗೊಂಡುದಿದನೊಮ್ಮೆ ಪರಿಹರಿಸಿ ನಿಮ್ಮ<br>
ಅವಿರಳ ಶ್ರೀಪಾದದೊಳು ಮಗ್ನನಾಗಿ ಮ<br>
ತ್ತವಿಕಲ್ಪ ಸಮಸುಖಾನಂದದೊಳಗೊಂದಿಹನೊ<br>
ಭವರಹಿತ ಪರಮೇಶ ಪಾಲಿಸೈ ಸದ್ಗುರುವೆ ಉಳಿಯುಮೇಶ್ವರಲಿಂಗವೇ

*

**ಚಿಕ್ಕರಾಮರಾಯ :** 1891-1945. ಪ್ರಸಿದ್ಧ ಸಂಗೀತ ವಿದ್ವಾಂಸರು. ಅರಸೀಕೆರೆ ಸಮೀಪದ ಕುರುಡಿ ಗ್ರಾಮದಲ್ಲಿ ಜನಿಸಿದರು. ತಂದೆ ಸುಬ್ಬರಾಯ.



ಚಿಕ್ಕರಾಮರಾಯರು ಓದಿದ್ದು ಇಂಟರ್‌ಮಿಡಿಯೆಟ್‌ವರೆಗೆ ಮಾತ್ರ. ಬಾಲ್ಯದಿಂದಲೂ ಇವರಿಗೆ ಸಂಗೀತ ಮತ್ತು ನಾಟಕ ಕಲೆಯಲ್ಲಿ ಹೆಚ್ಚಿನ ಅಭಿರುಚಿ ಇದ್ದು ಶಾಕುಂತಲಾ ನಾಟಕ ಕಂಪೆನಿ ಸೇರಿ ಬಾಲಕನ ಪಾತ್ರಗಳನ್ನು ಅಭಿನಯಿಸುತ್ತ, ತಮಗೆ ದೈವ ದತ್ತವಾಗಿ ಬಂದಿದ್ದ ಶಾರೀರ ಸಂಪತ್ತಿನಿಂದ ಪ್ರೇಕ್ಷಕರನ್ನು ಸಂಗೀತದಿಂದ ತಣಿಸಿ,ನಟನೆಯಿಂದ ಮುಗ್ಧಗೊಳಿಸುತ್ತಿದ್ದರು. ಇವರ ಪ್ರತಿಭೆ ನಾಲ್ವಡಿ ಕೃಷ್ಣರಾಜ ಒಡೆಯರ ಗಮನಕ್ಕೆ ಬಂದು ತಮ್ಮ ಆಸ್ಥಾನದಲ್ಲಿ ನೇಮಿಸಿ ಕೊಂಡು ಇವರಿಗೆ ಐದು ರೂಪಾಯಿ ಸಂಬಳವನ್ನು ಗೊತ್ತುಮಾಡಿದರಂತೆ.

ಚಿಕ್ಕರಾಮರಾಯರ ಸಂಗೀತಾಭ್ಯಾಸ ಪ್ರಾರಂಭದಲ್ಲಿ ಕರಿಗಿರಿರಾಯರಲ್ಲಿಯೂ ಅನಂತರ ವೈಣಿಕ ಶಿಖಾಮಣಿ ಸುಬ್ಬಣ್ಣನವರಲ್ಲಿಯೂ ನಡೆಯಿತು. ಸುಬ್ಬಣ್ಣನವರ ಆಶ್ರಯದಲ್ಲಿ ರಾಯರಿಗೆ ಸ್ವರ ಕಲ್ಪನೆ, ರಾಗಾಲಾಪನೆ ಮತ್ತು ತಾಳ ಪ್ರಸ್ತಾರ ಕ್ರಮಗಳು ಕರತಲಾಮಲಕವಾಗಿ, ಅನೇಕ ಬಾರಿ ಇವರ ಶಾರೀರ ಮಾಧುರ್ಯ, ಲಯಜ್ಞಾನ, ಸ್ವರವಿನ್ಯಾಸಗಳಿಂದ ಸುಬ್ಬಣ್ಣನವರೇ ಮಂತ್ರಮುಗ್ಧರಾಗಿ ತಮ್ಮ ಶಿಷ್ಯನ ಪ್ರತಿಭೆಯನ್ನು ಕಂಡು ಆನಂದಿಸಿ, ಆಶೀರ್ವದಿಸಿ ಸಂಪೂರ್ಣವಾಗಿ ವಿದ್ಯಾದಾನ ಮಾಡಿದರಂತೆ. ಇವರು ತಮ್ಮ ಪ್ರಾಪ್ತ ವಯಸ್ಸಿನಲ್ಲಿ ದಕ್ಷಿಣ ದೇಶದಲ್ಲೆಲ್ಲ ಪ್ರವಾಸ ಮಾಡಿ ತಾಳಬ್ರಹ್ಮ ಎಂಬ ಕೀರ್ತಿ ಪಡೆದು ಮೈಸೂರಿನ ಕೀರ್ತಿಯನ್ನು ಹೆಚ್ಚಿಸಿದರು. ಮೈಸೂರಿಗೆ ಬರುತ್ತಿದ್ದ ಅನೇಕ ವಿದ್ವಾಂಸರಿಗೆ ಇವರಲ್ಲಿ ಅಪಾರ ಗೌರವಾದರಗಳು ಇತ್ತೆಂದು ತಿಳಿದುಬರುತ್ತದೆ. ಚಿಕ್ಕರಾಮರಾಯರು ಸ್ವತಃ ಅನೇಕ ಕೀರ್ತನೆಗಳು, ತಿಲ್ಲಾನಗಳು, ವರ್ಣಗಳು ಮತ್ತು ಸ್ವರಜತಿಗಳನ್ನು ರಚಿಸಿ, ಸಂಗೀತದ ಜೊತೆಗೆ ಸಾಹಿತ್ಯದ ಸೇವೆಯನ್ನೂ ಮಾಡಿದ್ದಾರೆ. ಇವರಿಗೆ ಅಂದಿನ ಮಹಾರಾಜರು ಸಂಗೀತರತ್ನ ಎಂಬ ಬಿರುದನ್ನಿತ್ತು ಗೌರವಿಸಿದರು. ಚಿಕ್ಕರಾಮರಾಯರಲ್ಲಿ ವಿದ್ಯಾಭ್ಯಾಸ ಮಾಡಿದವರಲ್ಲಿ ನಾಗೇಂದ್ರರಾವ್, ಸೋಮಸುಂದರಂ, ಬೆಂಗಳೂರು ನಾಗರತ್ನಮ್ಮ, ಫಿಡಲ್ ರಾಮರಾವ್ ಮತ್ತು ಅರಕೆರೆ ನಾರಾಯಣರಾವ್ ಮೊದಲಾದವರ ಹೆಸರನ್ನು ಉಲ್ಲೇಖಿಸಬಹುದು. ಇವರು 1945ರ ಜನವರಿ ತಿಂಗಳಿನಲ್ಲಿ ನಿಧನರಾದರು. (ಎ.ಎನ್;ವಿ.ಆರ್.)

**ಚಿಕ್ಕವೀರಪ್ಪ :** ಕೊಡಗಿನ ರಾಜ (1736-66). ದೊಡ್ಡವೀರಪ್ಪನ ಮೊಮ್ಮಗ ಮತ್ತು ಉತ್ತರಾಧಿಕಾರಿ. ಇವನ ತಂದೆ ಅಪ್ಪಾಜಿರಾಜ. ತನ್ನ ಪತ್ನಿಯ ಆತ್ಮಹತ್ಯೆಗೆ ಕಾರಣನಾಗಿದ್ದರಿಂದ ಅವನನ್ನು ದೊಡ್ಡವೀರಪ್ಪ ಸೆರೆಮನೆಯಲ್ಲಿರಿಸಿದ್ದ. ತಂದೆಯ ಜೊತೆ ಮಗ ಚಿಕ್ಕವೀರಪ್ಪನೂ ಬಂಧನದಲ್ಲಿದ್ದ. ಅಪ್ಪಾಜಿರಾಜ ಕಾರಾಗೃಹದಲ್ಲಿರುವಾಗಲೇ ಮೃತನಾದ. ಅವನ ಮರಣಾನಂತರ ಮಗ ಚಿಕ್ಕವೀರಪ್ಪ ಬಿಡುಗಡೆ ಹೊಂದಿದ. ದೊಡ್ಡವೀರಪ್ಪನ ಮರಣಾನಂತರ ಚಿಕ್ಕವೀರಪ್ಪ ಕೊಡಗಿನ ಸಿಂಹಾಸನವನ್ನಲಂಕರಿಸಿದ.

ಚಿಕ್ಕಂದಿನ ದಿನಗಳನ್ನು ಸೆರೆಮನೆಯಲ್ಲಿ ಕಳೆದುದರಿಂದ ದೈಹಿಕವಾಗಿ ರೋಗಿಷ್ಠನೂ ಮಾನಸಿಕವಾಗಿ ದುರ್ಬಲನೂ ಆಗಿದ್ದ ಈತನ ಆಳಿಕೆಯೂ ದುರ್ಬಲವಾಗಿತ್ತು. ಚಿಕ್ಕವೀರಪ್ಪನ ಆಳಿಕೆಯ ಕಾಲದಿಂದ ಕೊಡಗಿನ ಮೇಲೆ ಮಹಮ್ಮದೀಯರ ಆಕ್ರಮಣಗಳು ಪ್ರಾರಂಭವಾದವು. ಚಿಕ್ಕವೀರಪ್ಪನ ಆಳಿಕೆಯ ಸಮಯಕ್ಕೆ ಹೈದರ್ ಬಲಿಷ್ಠನಾಗಿ ವಿಸ್ತಾರವಾಗಿ ಸಾಮ್ರಾಜ್ಯ ಸ್ಥಾಪನೆಗಾಗಿ ಸುತ್ತಮುತ್ತಲ ಪ್ರದೇಶಗಳ ಮೇಲೆ ಆಕ್ರಮಣ ಪ್ರಾರಂಭಿಸಿದ. 1763ರಲ್ಲಿ ಬಿದನೂರನ್ನು ವಶಪಡಿಸಿಕೊಂಡ ಮೇಲೆ ಅದರ ಆಶ್ರಿತರಾಗಿದ್ದ

ಕೊಡಗಿನ ಮೇಲೂ ತನ್ನ ಅಧಿಕಾರವಿದೆಯೆಂದು ಹೈದರ್ ಹೇಳತೊಡಗಿದ. ಹಿಂದೆ ಮೈಸೂರಿನ ಚಿಕ್ಕದೇವರಾಜ ಒಡೆಯ ಮತ್ತು ಕೊಡಗಿನ ದೊಡ್ಡ ವೀರಪ್ಪನಿಗೆ ಆಗಿದ್ದ ಸಂಧಿಯ ಪ್ರಕಾರ ದೊಡ್ಡವೀರಪ್ಪ ಕೊಡಬೇಕಾಗಿದ್ದ ಆದಾಯದ ಪಾಲಿಗೆ ಬದಲಾಗಿ ಏಳು ಸಾವಿರ ಸೀಮೆಯ ಬೆಮ್ಮತ್ತೆ, ಪಾಲ್ಲಿಪಟ್ಟಣ ಮತ್ತು ಹೊಸೂರು ಗ್ರಾಮಗಳನ್ನು ತನಗೆ ಬಿಟ್ಟುಕೊಡಬೇಕೆಂದು ಚಿಕ್ಕವೀರಪ್ಪನಿಗೆ ಹೈದರ್ ಹೇಳಿಕಳುಹಿಸಿದ. ಹೈದರ್ ಪ್ರಬಲನೂ ಬಲಿಷ್ಠನೂ ಆಗಿದ್ದರಿಂದ ಚಿಕ್ಕವೀರಪ್ಪ ಈ ಮೂರೂ ಗ್ರಾಮಗಳನ್ನು ಬಿಟ್ಟುಕೊಟ್ಟ. ಆದರೆ ಹೈದರ್ ಇಷ್ಟಕ್ಕೆ ತೃಪ್ತನಾಗದೆ 1765ರಲ್ಲಿ ಫಜಲ್ ಪುಲ್ ಖಾನನೆಂಬುವನ ನಾಯಕತ್ವದಲ್ಲಿ ಕೊಡಗಿನ ಮೇಲೆ ದಾಳಿಮಾಡಲು ಒಂದು ಸೈನ್ಯವನ್ನು ಕಳುಹಿಸಿದ. ಆದರೆ ಹೈದರ್‌ನ ಸೈನ್ಯ ಸೋಲನ್ನನುಭವಿಸಿತು. ಉಪಾಯಗಾರನಾದ ಹೈದರ್ ಕೊಡಗನ್ನು ಸುಲಭವಾಗಿ ಜಯಿಸಲು ಸಾಧ್ಯವಿಲ್ಲವೆಂಬುದು ತಿಳಿದು, ತಮಗೆ ಜಗಳ ಬೇಡವೆಂದೂ ಕೊಡಗಿನ ಗಡಿಯಲ್ಲಿರುವ ಉಚ್ಚಂಗಿ ಮೊದಲಾದ ಕೆಲವು ಊರುಗಳನ್ನು ಬಿಟ್ಟುಕೊಡುವುದಾಗಿಯೂ ಅದರ ಕ್ರಯ 3 ಲಕ್ಷ ರೂಪಾಯಿ ಕೊಡಬೇಕಾಗಿಯೂ ಕೇಳಿದ. ಇದಕ್ಕೆ ಒಪ್ಪಿಕೊಂಡ ಚಿಕ್ಕವೀರಪ್ಪ ಕಾಲು ಭಾಗ ಹಣವನ್ನು ಕೊಟ್ಟು ಉಳಿದ ಬಾಕಿಗೆ ತನ್ನ ದಳವಾಯಿಯ ತಮ್ಮನಾದ ಬರಮಣ್ಣನನ್ನು ಒತ್ತೆಯಾಳಾಗಿ ಕಳುಹಿಸಿಕೊಟ್ಟ. ಈ ನಡುವೆ ಚಿಕ್ಕವೀರಪ್ಪ ಪುತ್ರ ಸಂತಾನವಿಲ್ಲದೆ 1766ರಲ್ಲಿ ನಿಧನಹೊಂದಿದ.

ಚಿಕ್ಕವೀರಪ್ಪ ಒಡೆಯ ವೀರಶೈವ ಪಂಥದವನಾಗಿದ್ದರೂ ವೈದಿಕ ಧರ್ಮದಲ್ಲೂ ಭಕ್ತಿಯುಳ್ಳವನಾಗಿದ್ದ. 1756ರಲ್ಲಿ ಇವನು ಶೃಂಗೇರಿ ಜಗದ್ಗುರುಗಳಿಗೆ ತನ್ನ ರಾಜ್ಯದ ಒಂದು ಗ್ರಾಮವನ್ನು ದಾನವಾಗಿ ಕೊಟ್ಟ ದಾನಶಾಸನ ಪತ್ರ ಶೃಂಗೇರಿ ಮಠದಲ್ಲಿದೆ. (ಎಸ್.)

**ಚಿಕ್ಕ ಸಂಕಣ್ಣನಾಯಕ :** ಕೆಳದಿ ವಂಶದ ಅರಸ (ಸು.1567-82) ಸದಾಶಿವನಾಯಕನ (ದೊಡ್ಡ ಸಂಕಣ್ಣನಾಯಕ) ಮಗ ಮತ್ತು ಉತ್ತರಾಧಿಕಾರಿ (ಈತ ಸದಾಶಿವನಾಯಕನ ಎರಡನೆಯ ಮಗ ಮತ್ತು ದೊಡ್ಡಸಂಕಣ್ಣನಾಯಕನ ತಮ್ಮ ಹಾಗೂ ಉತ್ತರಾಧಿಕಾರಿ ಎಂಬ ಅಭಿಪ್ರಾಯ ಸಹ ಇದೆ). ಈತನೂ ರಾಮರಾಜಯ್ಯನೂ ಕೆಲವು ಕಾಲ ಜೊತೆಯಾಗಿ ರಾಜ್ಯಭಾರ ಮಾಡಿದಂತೆ ತೋರುತ್ತದೆ. ಕೆಳದಿ ನೃಪವಿಜಯ, ಶಿವತತ್ತ್ವರತ್ನಾಕರ ಮೊದಲಾದ ಗ್ರಂಥಗಳು ಈತ ಬಿಜಾಪುರದ ಸಲಾಬತ್‌ಖಾನ್, ಗೇರುಸೊಪ್ಪೆಯ ಭೈರಾದೇವಿ ಮತ್ತು ಸೋದೆಯ ಅರಸಪ್ಪನಾಯಕ – ಇವರ ಮೇಲೆ ಯುದ್ಧ ಹೂಡಿ ಯಶಸ್ವಿಯಾದನೆಂದು ತಿಳಿಸುತ್ತವೆ. *

**ಚಿಕ್ಕೋಡಿ :** ಬೆಳಗಾಂವಿ ಜಿಲ್ಲೆ ವಾಯವ್ಯ ಭಾಗದ ಒಂದು ತಾಲ್ಲೂಕು ಮತ್ತು ಆ ತಾಲ್ಲೂಕಿನ ಮುಖ್ಯಸ್ಥಳ. ತಾಲ್ಲೂಕನ್ನು ಪಶ್ಚಿಮ, ವಾಯವ್ಯ ಮತ್ತು ಉತ್ತರದಲ್ಲಿ ಮಹಾರಾಷ್ಟ್ರ ರಾಜ್ಯ, ಈಶಾನ್ಯದಲ್ಲಿ ಅಥಣಿ ತಾಲ್ಲೂಕಿನ ಸ್ವಲ್ಪ ಭಾಗ, ಪೂರ್ವದಲ್ಲಿ ರಾಯಬಾಗ ತಾಲ್ಲೂಕು, ಆಗ್ನೇಯದಲ್ಲಿ ಗೋಕಾಕ ತಾಲ್ಲೂಕಿನ ಸ್ವಲ್ಪ ಭಾಗ, ದಕ್ಷಿಣ ಮತ್ತು ನೈಋತ್ಯದಲ್ಲಿ ಹುಕ್ಕೇರಿ ತಾಲ್ಲೂಕು ಇವು ಸುತ್ತುವರೆದಿವೆ. ತಾಲ್ಲೂಕಿನಲ್ಲಿ ನಿಪ್ಪಾಣಿ, ಚಿಕ್ಕೋಡಿ ನಗರ, ಮನೋಳಿ ಮತ್ತು ಸದಲಗ ಹೋಬಳಿಗಳಿದ್ದು 100 ಗ್ರಾಮಗಳಿವೆ. ವಿಸ್ತೀರ್ಣ 1,269.5ಚ.ಕಿಮೀ. ಜನಸಂಖ್ಯೆ 5,61,671.

ಚಿಕ್ಕೋಡಿ ತಾಲ್ಲೂಕಿನ ಪಶ್ಚಿಮ ಭಾಗವನ್ನು ಮಲೆನಾಡಿನ ಸೆರಗೆಂದು ಕರೆಯುವುದುಂಟು. ಈ ತಾಲ್ಲೂಕಿನ ಬಹುಭಾಗ ಬೆಟ್ಟಗುಡ್ಡಗಳಿಂದ ಆವೃತವಾಗಿದೆ. ಅದರಲ್ಲೂ ಪೂರ್ವ ಮತ್ತು ಪಶ್ಚಿಮ ಭಾಗಗಳಲ್ಲಿ ಗುಡ್ಡಗಾಡು ಪ್ರದೇಶ ಹೆಚ್ಚು. ತಾಲ್ಲೂಕಿನ ನೈಋತ್ಯ ಅಂಚಿನಲ್ಲಿರುವ ಶೆಂದೂರು (ರಾಸೂಬಾಯಿ) ಬೆಟ್ಟ ಅತಿ ಎತ್ತರದ್ದು(917ಮೀ). ಚಿಕ್ಕೋಡಿ ಪಟ್ಟಣದ ನೆರೆಯಲ್ಲಿರುವ ನಾಗರಾಳ (771ಮೀ) ಜೋಗಿಗುಡ್ಡ, ನಿರ್ವಾಣಪ್ಪನ ಗುಡ್ಡಗಳೂ ಪ್ರಸಿದ್ಧವಾಗಿವೆ. ವೇದಗಂಗಾ ಮತ್ತು ದೂಧಗಂಗಾ ತಾಲ್ಲೂಕಿನ ಮುಖ್ಯ ನದಿಗಳು. ಪಂಚಗಂಗಾ ನದಿ ಕೇವಲ 2ಕಿಮೀ ದೂರ ತಾಲ್ಲೂಕಿನ ಉತ್ತರದಂಚಿನಲ್ಲಿ ಗಡಿಯಾಗಿ ಹರಿಯುತ್ತದೆ. ಕೃಷ್ಣಾನದಿ ತಾಲ್ಲೂಕಿನ ಈಶಾನ್ಯದ ಅಂಚಿನಲ್ಲಿ ಸು.8ಕಿಮೀ ದೂರ ಹರಿಯುತ್ತದೆ. ಕೊಲ್ಹಾಪುರ ಜಿಲ್ಲೆಯಿಂದ ಹರಿದು ಬರುವ ದೂಧಗಂಗಾ ತಾಲ್ಲೂಕಿನ ವಾಯವ್ಯ ಭಾಗದ ಗಡಿಯಲ್ಲಿ ಹರಿದು ಅನಂತರ ಉತ್ತರ ಭಾಗದಲ್ಲಿ ಸ್ವಲ್ಪ ದೂರ ತಾಲ್ಲೂಕಿನ ಒಳಗೂ ಮತ್ತೆ ಉತ್ತರದ ಗಡಿಯಾಗಿಯೂ ಸಾಗಿ ಕೃಷ್ಣಾ ನದಿಯನ್ನು ಕೂಡುತ್ತದೆ. ವೇದಗಂಗಾ ಪಶ್ಚಿಮದಂಚಿನ ಘಟ್ಟಗಳಲ್ಲಿ ಹುಟ್ಟಿ ಮೊದಲು ಪೂರ್ವಕ್ಕೆ ಹರಿದು ತಾಲ್ಲೂಕಿನ ಮಧ್ಯಕ್ಕೆ ಬಂದು ಉತ್ತರಕ್ಕೆ ತಿರುಗಿ ದೂಧ ಗಂಗಾ ನದಿಯನ್ನು ಸೇರುತ್ತದೆ.

ತಾಲ್ಲೂಕಿನ ಭೂಭಾಗವೆಲ್ಲ ಮೂಲ ಟ್ರಾಪ್ ಕಲ್ಲಿನ ಪ್ರದೇಶ. ಅನೇಕ ಬೆಟ್ಟಗಳು ಜಂಬಿಟ್ಟಿಗೆ ಕಲ್ಲಿನವು. ಆದರೆ ವೇದಗಂಗಾ, ದೂಧಗಂಗಾ ಮತ್ತು ಕೃಷ್ಣಾನದಿಯ ಹರಿವಿನ ಪ್ರದೇಶದಲ್ಲಿ ಕರಿ ಎರೆಮಣ್ಣಿದೆ. ಈ ಪ್ರದೇಶದಲ್ಲಿ ಹಬ್ಬಿರುವ ಗುಡ್ಡಗಳ ಓರೆಯಲ್ಲಿ ಚಿನ್ನದ ಅದುರು ದೊರೆಯುತ್ತದೆ. ಆದರೆ ಅದುರಿನಲ್ಲಿ ಚಿನ್ನದ ಪರಿಮಾಣ ಕಡಿಮೆ. ಈ ಭಾಗದಲ್ಲಿ ಹರಿಯುವ ಕೃಷ್ಣಾನದಿಯ ಪ್ರವಾಹದ ಗೋಮೇದಿಕದ ಹರಳುಗಳು ದೊರೆಯುತ್ತವೆ. ಸರವು ಎಂಬಲ್ಲಿ ಅಭ್ರಕದ ನಿಕ್ಷೇಪಗಳಿವೆ.

ತಾಲ್ಲೂಕಿನ ಹವೆ ಸಾಮಾನ್ಯವಾಗಿ ಹಿತಕರ. ಪಶ್ಚಿಮದ ಬೆಟ್ಟಗಳಲ್ಲಿ ಹೆಚ್ಚು ಮಳೆ, ಪೂರ್ವಕ್ಕೆ ಸರಿದಂತೆಲ್ಲ ಮಳೆ ಕಡಿಮೆಯಾಗುತ್ತದೆ. ಚಿಕ್ಕೋಡಿಯ ವಾರ್ಷಿಕ ಸರಾಸರಿ ಮಳೆ ಸು.630ಮಿಮೀ. ಹೊಳೆಗಳ ದಂಡೆಯ ಮೇಲಿನ ಭೂಮಿ ಮತ್ತು ತಾಲ್ಲೂಕಿನ ಉತ್ತರಭಾಗದ ನೆಲ ಹೆಚ್ಚು ಫಲವತ್ತಾಗಿದೆ. ತಾಲ್ಲೂಕಿನ ಪಶ್ಚಿಮದಲ್ಲಿ ಕೆಂಪುಮಣ್ಣಿದೆ, ಉಳಿದದ್ದೆಲ್ಲ ಕಪ್ಪು ಭೂಮಿ, ಉಸುಬು ಕೂಡಿದ ಕೆಂಪುನೆಲ ಕಪ್ಪುನೆಲದಷ್ಟು ಫಲವತ್ತಾಗಿಲ್ಲ. ಹಳ್ಳ, ಕೆರೆ, ಬಾವಿಗಳ ನೀರನ್ನು ತೋಟಗಾರಿಕೆಗೆ ಉಪಯೋಗಿಸುತ್ತಾರೆ.

ತಾಲ್ಲೂಕಿನಲ್ಲಿ ಕಬ್ಬನ್ನು ಹೆಚ್ಚಾಗಿ ಬೆಳೆಯುವುದರಿಂದ ಬೆಲ್ಲ ಹಾಗೂ ಸಕ್ಕರೆ ಮಾಡುವ ಉದ್ಯಮಗಳು ಸಾಕಷ್ಟು ಪ್ರಗತಿ ಸಾಧಿಸಿವೆ. ತಾಮ್ರ ಹಾಗೂ ಹಿತ್ತಾಳೆಯ ಸಾಮಾನುಗಳ ಕೈಗಾರಿಕೆಯೂ ಉಂಟು. ಸೀರೆ, ಕುಪ್ಪಸ, ರುಮಾಲು, ಹಚ್ಚಡ ಮೊದಲಾದವುಗಳನ್ನು ನೇಯುವ ಉದ್ಯಮ ಬೆಳೆಸಲು ಅವಕಾಶಗಳಿವೆ. ಬಂಗಾರದ ಆಭರಣಗಳಲ್ಲಿ ರತ್ನಗಳನ್ನು ಕೂಡಿಸುವ ಉದ್ಯಮ ಜನಪ್ರಿಯವಾಗಿದೆ. ಹತ್ತಿ, ಬೆಲ್ಲ, ತಂಬಾಕು, ಮೆಣಸಿನಕಾಯಿ ಇವು ನಿಪ್ಪಾಣಿಯಿಂದ ಕೊಂಕಣ, ಕಲಾದಗಿ, ಪುಣೆ ಮೊದಲಾದ ಕಡೆಗಳಿಗೆ ನಿರ್ಯಾತವಾಗುತ್ತವೆ. ಏಲಕ್ಕಿ, ಮೆಣಸುಗಳು ಕೊಂಕಣದಿಂದ ಆಯಾತವಾಗುವ ವಸ್ತುಗಳಲ್ಲಿ ಪ್ರಮುಖವಾದವು.

ಹುಬ್ಬಳ್ಳಿ-ಪುಣೆ ರೈಲುಮಾರ್ಗ ತಾಲ್ಲೂಕಿನ ಪೂರ್ವದ ಅಂಚಿನಲ್ಲಿ ಸ್ವಲ್ಪ ದೂರ ಸಾಗುತ್ತವೆ. ಚಿಕ್ಕೋಡಿ ರೋಡ್ ರೈಲು ನಿಲ್ದಾಣ ಮತ್ತು ರಾಯಬಾಗ ರೈಲುನಿಲ್ದಾಣ ಈ ತಾಲ್ಲೂಕಿನ ಸಮೀಪ ಇವೆ. ಬೆಂಗಳೂರು-ಬೆಳಗಾಂವಿ-ಕೊಲ್ಹಾಪುರ ಮುಂಬಯಿ ರಾಷ್ಟ್ರೀಯ ಹೆದ್ದಾರಿ ತಾಲ್ಲೂಕಿನ ಪಶ್ಚಿಮದಲ್ಲಿ ನಿಪ್ಪಾಣಿಯ ಮೂಲಕ ಸಾಗುತ್ತದೆ. ಮುಧೋಳ-ಚಿಕ್ಕೋಡಿ ನಿಪ್ಪಾಣಿ-ರಾಧಾ ನಗರ ಹೆದ್ದಾರಿ ತಾಲ್ಲೂಕಿನ ಮಧ್ಯದಲ್ಲಿ ಅಡ್ಡವಾಗಿ ಸಾಗುತ್ತದೆ. ಚಿಕ್ಕೋಡಿಯಿಂದ ಹುಕ್ಕೇರಿ, ಕಾಗವಾಡ, ಕುರಂದವಾಡಗಳಿಗೂ ರಸ್ತೆಗಳಿವೆ. ಈ ತಾಲ್ಲೂಕಿನ ಕೆಲವು ಮುಖ್ಯ ಸ್ಥಳಗಳಿಗೆ ಚಿಕ್ಕೋಡಿಯಿಂದ 18ಕಿಮೀ ವಾಯವ್ಯಕ್ಕೆ ದೂಧಗಂಗಾ ನದಿ ಬಳಿ ಇರುವ ಭೋಜ ಗ್ರಾಮ ಐತಿಹಾಸಿಕ ಸ್ಥಳ. ಇಲ್ಲಿ ಸವದತ್ತಿಯ ರಟ್ಟರ ಒಂದು ಶಾಸನವಿದೆ. ಕಬ್ಬೂರು ಚಿಕ್ಕೋಡಿಯಿಂದ 19ಕಿಮೀ ಆಗ್ನೇಯದಲ್ಲಿ ಮುಧೋಳ ರಸ್ತೆಯಲ್ಲಿರುವ ಗ್ರಾಮ. ಇಲ್ಲಿ ಒಂದು ಪ್ರಾಚೀನ ಈಶ್ವರ ದೇವಾಲಯವೂ ಮುಗಲರ ಕಾಲದವೆನ್ನಲಾದ ಕೆಲವು ಗುಮ್ಮಟಗಳೂ ಇವೆ. ಚಿಕ್ಕೋಡಿಯಿಂದ 8ಕಿಮೀ ದಕ್ಷಿಣದಲ್ಲಿ ಹುಕ್ಕೇರಿ ರಸ್ತೆಯಲ್ಲಿರುವ ಕರೋಸಿಯಲ್ಲಿ ಘಂಟೆ ಬಸವಣ್ಣ ದೇವಾಲಯವಿದೆ. ಇಲ್ಲಿ ಪ್ರತಿ ವರ್ಷ ಶ್ರಾವಣ ಮಾಸದಲ್ಲಿ ಜಾತ್ರೆ ನಡೆಯುತ್ತದೆ. ಚಿಕ್ಕೋಡಿಯ ಪಶ್ಚಿಮಕ್ಕೆ 24ಕಿಮೀ ದೂರದಲ್ಲಿರುವ ನಿಪ್ಪಾಣಿ (ನೋಡಿ) ದೊಡ್ಡ ವ್ಯಾಪಾರ ಕೇಂದ್ರ.

ಬೆಳಗಾಂವಿ-ಕೊಲ್ಲಾಪುರ ಹೆದ್ದಾರಿಯಲ್ಲಿ, ಚಿಕ್ಕೋಡಿಯ ವಾಯವ್ಯಕ್ಕೆ 35ಕಿಮೀ ಅಂತರದಲ್ಲಿ ದೂಧಗಂಗಾ ದಡದಲ್ಲಿರುವ ಕೊಂಗನೊಳ್ಳಿ ವ್ಯಾಪಾರ ಸ್ಥಳ. ಇಲ್ಲಿ ಪ್ರತಿ ಗುರುವಾರ ಸಂತೆ ನೆರೆದು ಅಕ್ಕಿ, ಸಕ್ಕರೆ, ಉಪ್ಪು, ಬಟ್ಟೆ, ಕಂಬಳಿಗಳ ವ್ಯಾಪಾರ ಸಾಗುತ್ತದೆ. 1877ಕ್ಕೆ ಮೊದಲು ಇಲ್ಲಿ ಕಾಗದವನ್ನು ಮಾಡುವ ಕಾರ್ಖಾನೆಗಳಿದ್ದುವು. ಇಲ್ಲಿ ಒಂದು ಹಾಳು ಕಿಲ್ಲೆ ಇದೆ. ಚಿಕ್ಕೋಡಿಯಿಂದ 16ಕಿಮೀ ಉತ್ತರಕ್ಕೆ ವೇದಗಂಗಾ ದಡದಲ್ಲಿರುವ ಸದಲಗ ದೊಡ್ಡ ಗ್ರಾಮ. ಕಲ್ಲುಸಕ್ಕರೆ ಮತ್ತು ನೇಯ್ಗೆ ಉದ್ಯಮಗಳಲ್ಲಿ ಪ್ರಸಿದ್ಧ. ನಿಪ್ಪಾಣಿಯಿಂದ ಸು.8ಕಿಮೀ ನೈಋತ್ಯಕ್ಕಿರುವ ರಾಸೂಬಾಯಿ ಬೆಟ್ಟದ ಮೇಲೆ ರಾಸೂಬಾಯಿ ದೇವಾಲಯವಿದೆ. ಚಿಕ್ಕೋಡಿಯಿಂದ ನೈಋತ್ಯಕ್ಕೆ 24ಕಿಮೀ ದೂರದಲ್ಲಿ ವಲ್ಲಭಗಡ (ಹರ್ಗಾಪುರ) ಬೆಟ್ಟವಿದೆ. ಇದರ ಮೇಲೆ ಸು.275' x 200' ವಿಸ್ತಾರದ ಸುಮಾರು ವೃತ್ತಾಕಾರದ ಕೋಟೆ ಇದೆ. ಈ ಕೋಟೆ ಕೆಲವು ಕಾಲ ಶಿವಾಜಿಯ ವಶದಲ್ಲಿತ್ತು. ಕುರ್ಲಿ, ಅಕೋಲ, ಲಾಟ, ಪತಂಕುಡಿ ಇತರ ಮುಖ್ಯ ಗ್ರಾಮಗಳು.

ಚಿಕ್ಕೋಡಿ ಈ ತಾಲ್ಲೂಕಿನ ಆಡಳಿತ ಕೇಂದ್ರ. ಬೆಳಗಾಂವಿಯಿಂದ ಉತ್ತರಕ್ಕೆ 72ಕಿಮೀ ದೂರದಲ್ಲಿದೆ. ಜನಸಂಖ್ಯೆ 32,820. ಪಟ್ಟಣ ಗುಡ್ಡಸಾಲುಗಳ ಮಧ್ಯದಲ್ಲಿದೆ.

ಕರಾವಳಿಯ ಹಿನ್ನಾಡಿನಲ್ಲಿರುವ ಕಾರಣ ವ್ಯಾಪಾರ ಸಾಗಾಣಿಕೆಯ ಕೇಂದ್ರವೆನಿಸಿದೆ. ಬತ್ತ, ಬೆಲ್ಲ, ತಂಬಾಕು, ಕಿರಾಣಿ ವ್ಯಾಪಾರ ವಿಪುಲ. ತಾಮ್ರ ಮತ್ತು ಹಿತ್ತಾಳೆ ಪಾತ್ರೆಗಳ ಕಾರ್ಖಾನೆಗಳಿವೆ. ಆಭರಣಗಳ ತಯಾರಿಕೆ, ನೇಯ್ಗೆ ಸಹ ಇವೆ. ಗುರುವಾರ ಸಂತೆ ಸೇರುತ್ತದೆ. ಊರಿನ ಪೂರ್ವಕ್ಕೆ 16ಕಿಮೀ ದೂರದಲ್ಲಿ ಚಿಕ್ಕೋಡಿ ರೋಡ್ ರೈಲ್ವೆ ನಿಲ್ದಾಣವಿದೆ; ಪಶ್ಚಿಮಕ್ಕೆ ಸು.24ಕಿಮೀ ದೂರದಲ್ಲಿ ಪುಣೆ-ಬೆಂಗಳೂರು ರಾಷ್ಟ್ರೀಯ ಹೆದ್ದಾರಿ ಇದೆ. ಚಿಕ್ಕೋಡಿಯಿಂದ ಅಥಣಿ, ಮಿರಜ, ರಾಯಬಾಗ, ನಿಪ್ಪಾಣಿ, ಸಂಕೇಶ್ವರ, ಗೋಕಾಕ, ಮುಧೋಳ ಮುಂತಾದ ದೊಡ್ಡ ಪಟ್ಟಣಗಳಿಗೆ ಮಾರ್ಗಗಳೂ ಬಸ್ಸಿನ ಸೌಕರ್ಯವೂ ಇವೆ. ವ್ಯಾಪಾರೋದ್ಯಮಗಳ ಬೆಳೆವಣಿಗೆಯಿಂದಾಗಿ ಈ ಪಟ್ಟಣ ಇನ್ನೂ ಹೆಚ್ಚು ಅಭಿವೃದ್ಧಿ ಹೊಂದಲು ಸಾಧ್ಯವಿದೆ.

ಈ ಪಟ್ಟಣದ ಸುತ್ತಲೂ ಮಣ್ಣಿನ ಕೋಟೆಯ ಗೋಡೆಗಳಿವೆ. ಈ ಸ್ಥಳ ಮೊದಲು ಕೊಲ್ಲಾಪುರ ಸಂಸ್ಥಾನಕ್ಕೆ ಸೇರಿತ್ತು. 1680ರಲ್ಲಿ ಈ ಊರು ಸಾಕಷ್ಟು ಪ್ರಸಿದ್ಧಿ ಪಡೆದಿತ್ತೆಂದೂ ಅಕ್ಕಿ, ಬೇಳೆ, ಮೆಣಸಿನಕಾಯಿ, ತಂಬಾಕು, ಕಿರಾಣಿ ಸಾಮಾನುಗಳ ವ್ಯಾಪಾರ ವಿಶೇಷವಾಗಿ ನಡೆಯುತ್ತಿತ್ತೆಂದೂ ಬಟ್ಟೆಗಳೂ ಕಂಬಳಿಗಳೂ ತಾಮ್ರ ಮತ್ತು ಹಿತ್ತಾಳೆ ಪಾತ್ರೆಗಳೂ ಸಿದ್ಧವಾಗುತ್ತಿದ್ದುವೆಂದೂ ಒಬ್ಬ ಪ್ರವಾಸಿ ಬರೆದಿಟ್ಟ ದಾಖಲೆಗಳಿವೆ. 1720ರಲ್ಲಿ ಕ್ಯಾಪ್ಟನ್ ಮೂರ್ ಎಂಬವನು ಈ ಊರನ್ನು ಬಹಳ ಅಭಿಮಾನದಿಂದ ಹೊಗಳಿದ್ದಾನೆ. ಇಲ್ಲಿ ಗುರುವಾರ ಸಂತೆಯೊಂದು ಇದ್ದು ಒಂದು ಮುಖ್ಯ ವ್ಯಾಪಾರಕೇಂದ್ರವೆಂದೂ ಇಲ್ಲಿಯ ನೇಯ್ಗೆಯ ಕೆಲಸ ಗಮನಾರ್ಹವೆಂದೂ ಜನರು ಗೌರವಾಭಿಮಾನಿಗಳೆಂದೂ ಬಣ್ಣಿಸಿ, ಈ ಊರಿನ ಸುತ್ತೆಲ್ಲ ಕಣ್ಣಿಗೆ ಅಂದವಾಗಿ ನಾಲಗೆಗೆ ರುಚಿಯಾಗಿರುವ ದ್ರಾಕ್ಷಿಯ ತೋಟಗಳು ಸಾಕಷ್ಟಿವೆಯೆಂದೂ ಅವು ಬಹಳ ಪ್ರಸಿದ್ಧವಾದವೆಂದೂ ಆತ ಹೇಳಿದ್ದಾನೆ. (ಡಿ.ಕೆ.;ಎಸ್.ಜಿ.ಕೆ.)

**ಚಿಗಟೇರಿ :** ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲ್ಲೂಕಿನಲ್ಲಿ ಕಸಬೆಯಿಂದ 13ಕಿಮೀ ಪೂರ್ವಕ್ಕಿರುವ ಒಂದು ಗ್ರಾಮ. ಈ ಗ್ರಾಮ ಹಿಂದೆ ಚಿನ್ನ ತೊಳೆಯುವ ಕೆಲಸಕ್ಕೆ ಪ್ರಸಿದ್ಧವಾಗಿತ್ತು. ಇಲ್ಲಿರುವ ಜಾಜಿಕಲ್ ಗುಡ್ಡ ಎಂಬ ಚಿಕ್ಕ ಬೆಟ್ಟದ ದಕ್ಷಿಣ ಮತ್ತು ಆಗ್ನೇಯದ ಪಾರ್ಶ್ವಗಳಲ್ಲಿ ಇರುವ ಚಿನ್ನದಿಂದ ಕೂಡಿದ ಬೆಣಚು ಕಲ್ಲುಗಳೇ ಇಲ್ಲಿ ದೊರೆಯುವ ಚಿನ್ನಕ್ಕೆ ಮೂಲವೆಂದು ತಿಳಿಯುತ್ತದೆ. ಅದರಂತೆ ಚಿನ್ನದಿಂದ ಕೂಡಿದ ಚೆಂಗುಳು ಎಂಬಲ್ಲಿನ ಚಿಗಟೇರಿ ಮೇಲಣ ನಾಲಾ, ಚಿಗಟೇರಿ ಹಳ್ಳಿಯ ಪಶ್ಚಿಮದಲ್ಲಿ ವಾಯುವ್ಯಕ್ಕೆ ಇರುವ ಒಂದು ಚಿಕ್ಕತೊರೆ, ಬೋವಿಹಳ್ಳಿನಾಲಾ ಎಂದು ಕರೆಯುವ ಒಂದು ತೊರೆ ಮತ್ತು ಜಾಜಿಕಲ್ ಗುಡ್ಡದ ಈಶಾನ್ಯದ ಇಳಿಜಾರಿನಲ್ಲಿ ಹರಿಯುವ ಕೊಂಗನಹೊಸೂರು ನಾಲೆ ಇವುಗಳಲ್ಲಿ ಜರುಗು ಚಿನ್ನಕ್ಕಾಗಿ ಶೋಧಿಸುವುದುಂಟು. ಇವುಗಳಲ್ಲಿ ಕೊಂಗನ ಹೊಸೂರು ನಾಲೆ ಹೆಚ್ಚು ಫಲದಾಯಕ, ಉಳಿದವು ಉತ್ತಮವೆಂಬುದು ಬ್ರೂಸ್‌ಫುಟ್ ಎಂಬ ಭೂವಿಜ್ಞಾನಿಯ ಅಭಿಪ್ರಾಯ. *

**ಚಿಟ್ ಮೇಳ :** ದಕ್ಷಿಣ ಕರ್ನಾಟಕದ ಕೆಲವು ಭಾಗಗಳಲ್ಲಿ, ಹೆಚ್ಚಾಗಿ ಹಾಸನ ಜಿಲ್ಲೆಯಲ್ಲಿ ಬಳಕೆಯಲ್ಲಿರುವ ಒಂದು ಜನಪದ ವಾದ್ಯಮೇಳ. ಸಾಹಿತ್ಯ, ಸಂಗೀತ, ನೃತ್ಯ ಎಲ್ಲವೂ ಇರುವ ಯಕ್ಷಗಾನ ಬಯಲಾಟದಂಥ ದೊಡ್ಡ ಮೇಳದ ಸಂಗೀತ ಭಾಗವನ್ನು ವಾದ್ಯ ಹಾಗೂ ನೃತ್ಯಗಳಲ್ಲಿ ಮಾತ್ರ ಅನುಸರಿಸುವ ಚಿಕ್ಕಮೇಳ ಅಥವಾ ಚಿಟ್‌ಮೇಳ ಉತ್ತರ ಕರ್ನಾಟಕದ ಕರಡೆಮಜಲು ಮೇಳವನ್ನು ಹೋಲುತ್ತದೆ. ಕರಡೆಮಜಲಿಗಿಂತ ಇದು ಕಿರಿದು ಎಂಬ ಅರ್ಥದಲ್ಲಿ ಇಲ್ಲಿ ಚಿಟ್ ಶಬ್ದದ ಬಳಕೆಯಾಗಿದೆ.



ಆದರೆ ಅದಕ್ಕಿಂತ ಇದು ಚಿಕ್ಕದು ಎಂದು ಸಾಧಿಸಲು ಆಧಾರ ಸಾಲದು. ಏಕೆಂದರೆ ಕರಡೆಮಜಲಿಗೆ ಸಂವಾದಿಯಾಗಿ ಅಷ್ಟೇ ಮಂದಿ ಭಾಗವಹಿಸುವ ಮೇಳವಿದು. ಇದರಲ್ಲಿ ಯಕ್ಷಗಾನ ಗೀತೆಗಳನ್ನು ವಿಶೇಷವಾಗಿ ನುಡಿಸಲಾಗುತ್ತದೆ. ಕರಡೆ ವಾದ್ಯವನ್ನು ಸೊಂಟಕ್ಕೆ ಕಟ್ಟಿಕೊಂಡು ಇಬ್ಬರು ಅದನ್ನು ಬಡಿಯುತ್ತ ಹಾಡಿನ ಗತಿಗೆ ತಕ್ಕಂತೆ ವಿವಿಧ ವಿನ್ಯಾಸದಲ್ಲಿ ನರ್ತಿಸುತ್ತಾರೆ. ಅವರ ನಡುವೆ ಒಬ್ಬ ಸಮೇಳವನ್ನೂ ಮತ್ತೊಬ್ಬ ಬಲ್ಲರಿಯನ್ನೂ ಬಡಿಯುತ್ತ ನರ್ತಿಸುತ್ತಾನೆ. ಶ್ರುತಿ ಮತ್ತು ನಾಗಸ್ವರ ವಾದ್ಯಗಳನ್ನು ಊದುವವರು ಬಯಲಾಟದ ಭಾಗವತರಂತೆ ಹಿಂಬದಿಯಲ್ಲಿ ನಿಂತು ನೃತ್ಯಕ್ಕೆ ಬೇಕಾದ ಗೀತೆಯನ್ನು ಒದಗಿಸುತ್ತಾರೆ.

ನಿಲುವಂಗಿ, ವೀರಗಾಸೆ, ನಡುಪಟ್ಟಿ ಹಾಗೂ ಬಿಳಿಯ ರುಮಾಲು ಚಿಟ್ ಮೇಳದ ಕಲಾವಿದರ ಸಾಮಾನ್ಯ ಉಡುಪು. ನಾಗಸ್ವರ ಊದುವವನೇ ಇಲ್ಲಿ ಸೂತ್ರಧಾರ. ಯಕ್ಷಗಾನದ ಎಲ್ಲ ಮಟ್ಟುಗಳನ್ನೂ ಈತ ನಾಗಸ್ವರದಲ್ಲಿ ತರುತ್ತಾನೆ. ಜನಪದ ಗೀತೆಗಳ ಮೂಲದ ಮಟ್ಟುಗಳನ್ನು ಹಿಡಿದು ವಾದ್ಯವನ್ನು ನುಡಿಸುವುದೂ ಉಂಟು. ಉಳಿದವರು ಇವನ ನಾದಕ್ಕನುಸಾರವಾಗಿ ನರ್ತಿಸುತ್ತಾರೆ. ಕರಡೆ, ಸಮೇಳಗಳನ್ನು ನಡುವಿಗೆ ಕಟ್ಟಿಕೊಂಡು ಅವನ್ನು ಕಿವಿಬಿರಿಯುವಂತೆ ಬಡಿಯುತ್ತ ಕುಣಿಯುವ ಚಳಕ ಆಶ್ಚರ್ಯಕರವಾದುದು. ಕುಣಿತದವರಲ್ಲಿ ಕುರುಬ ಜನಾಂಗದವರು ಹೆಚ್ಚಾಗಿ ಕಂಡುಬರುತ್ತಾರೆ. ಚಿಟ್‌ಮೇಳ ಸಾಮಾನ್ಯವಾಗಿ ಹಬ್ಬ ಹರಿದಿನಗಳಲ್ಲಿ, ಜಾತ್ರೆ ಉತ್ಸವಗಳಲ್ಲಿ ನಡೆಯುತ್ತದೆ. ಗ್ರಾಮದೇವತೆಯ ಹಬ್ಬದಲ್ಲಿ ರಾತ್ರಿಯಿಡೀ ಜನರ ಆಸಕ್ತಿಯನ್ನು ಹಿಡಿದಿಡುವ ಆಕರ್ಷಣೆ ಈ ಮೇಳಕ್ಕಿದೆ. ಹಾಸನ ಜಿಲ್ಲೆಯ ಹಾರನಹಳ್ಳಿಯ ಮೇಳ ತುಂಬ ಜನಪ್ರಿಯವಾದದ್ದು. ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕು ಮತ್ತಿಹಳ್ಳಿಯಲ್ಲೂ ಮೇಳದ ಒಂದು ತಂಡವಿದೆ. ಕರಡೆ ಮಜಲಿಗಿಂತಲೂ ವೇಷಕಟ್ಟಿ ಕುಣಿಯುವ ಬಯಲಾಟಕ್ಕಿಂತಲೂ ಚಿಟ್‌ಮೇಳ ಅತ್ಯಂತ ಆಕರ್ಷಕ. ಜನಪದ ವಾದ್ಯ ಸಂಗೀತದ ಹಿರಿಮೆಯನ್ನು ಸಾರುವ ವಿಶಿಷ್ಟ ಕಲೆ ಇದರಲ್ಲಿ ಉಳಿದುಬಂದಿದೆ. (ಜೆ.ಎಸ್‌ಪಿ.)

**ಚಿಟ್ಟಾಣಿ ರಾಮಚಂದ್ರ ಹೆಗಡೆ :** 1935-. ಪಡುವಲಪಾಯ ಯಕ್ಷಗಾನ ಬಡಗುತಿಟ್ಟಿನ ಪ್ರಸಿದ್ಧ ಕಲಾವಿದ. ಉತ್ತರ ಕನ್ನಡ ಜಿಲ್ಲೆ ಹೊನ್ನಾವರ ತಾಲ್ಲೂಕಿನ ಚಿಟ್ಟಾಣಿಯಲ್ಲಿ 1935 ಸೆಪ್ಟೆಂಬರ್ 18ರಂದು ಜನಿಸಿದರು. ತಾಯಿ ಗಣಪಿ, ಜನಪದ ಹಾಡುಗಾರ್ತಿ. ತಂದೆ ಸುಬ್ರಾಯ ಹೆಗಡೆ, ಯಕ್ಷಗಾನ ಪ್ರೇಮಿ. ಇವರಿಬ್ಬರ ಕಲಾ ಅಂಶಗಳು ಇವರಲ್ಲಿ ರಕ್ತಗತವಾಗಿ ಬಂದವು. ಮಗ ನನ್ನು ವಿದ್ಯಾವಂತನನ್ನಾಗಿ ಮಾಡ ಬೇಕೆಂಬುದು ತಂದೆಯ ಬಯಕೆ. ಆದರೆ ಎರಡನೆಯ ತರಗತಿಗೆ ಬರುವಷ್ಟರಲ್ಲಿಯೇ ಶಾಲಾ ವಿದ್ಯಾಭ್ಯಾಸ ಕೊನೆ ಗೊಂಡಿತು. ಇವರಲ್ಲಿದ್ದ ಯಕ್ಷಗಾನದ ಬಗೆಗಿನ ಪ್ರೀತಿ - ಶ್ರದ್ಧೆಗಳನ್ನು ಗಮನಿಸಿದ ಸಂತೆ ಗುಳಿ ರಾಮಕೃಷ್ಣ ಭಟ್ಟರು ತರಬೇತಿ ನೀಡಲು ಆರಂಭಿ ಸಿದರು. ತರುವಾಯದ ದಿನ ಗಳಲ್ಲಿ ಇವರು ಚಿಟ್ಟಾಣಿಯವರು ಎಂದೇ ಯಕ್ಷಗಾನ ಲೋಕದಲ್ಲಿ ಖ್ಯಾತರಾದರು. ತಮ್ಮ ಹದಿನಾಲ್ಕನೆಯ ವಯಸ್ಸಿನಲ್ಲಿ ಅಗ್ನಿ ಪಾತ್ರದೊಂದಿಗೆ ಯಕ್ಷಗಾನರಂಗಕ್ಕೆ ಪದಾರ್ಪಣೆ ಮಾಡಿದ ಚಿಟ್ಟಾಣಿಯವರು ಭಸ್ಮಾಸುರ, ಕೀಚಕ, ಸುಧನ್ವ, ಕಾರ್ತವೀರ್ಯ, ದುರ್ಯೋಧನ ಪಾತ್ರಗಳಿಗೆ ಯಕ್ಷಗಾನ ರಂಗದಲ್ಲಿ ಹೊಸ ಆಯಾಮ ನೀಡಿದರು. ಮೂಡ್ಕಣಿ ನಾರಾಯಣ ಹೆಗಡೆ, ಕೆರೆಮನೆ ಶಿವರಾಮ ಹೆಗಡೆಯವರ ಶಿಷ್ಯತ್ವ ಹಾಗೂ ಪ್ರಭಾವದಲ್ಲಿ ಬೆಳೆದ ಇವರು ಅಭಿನಯ, ನೃತ್ಯ, ಧ್ವನಿ, ಏರಿಳಿತಗಳಲ್ಲಿ ಮೂಡಿಸಿದ ಛಾಪು ಅನನ್ಯವಾದುದು. ವೈವಿಧ್ಯಮಯ ಭಾವಾಭಿವ್ಯಕ್ತಿಗೆ ಕಣ್ಣು ಸಮರ್ಥವಾದ ಮಾಧ್ಯಮವಾಗಬಲ್ಲದು ಎಂಬುದನ್ನು ಇವರು ತೋರಿಸಿದ್ದಾರೆ.



ಶೃಂಗಾರರಸ ಪ್ರಧಾನವಾದ ಕೀಚಕ, ಭಸ್ಮಾಸುರ ಪಾತ್ರಗಳು ಇವರಿಗೆ ಇನ್ನಿಲ್ಲದ ಕೀರ್ತಿಯನ್ನು ತಂದುಕೊಟ್ಟವು. ಜನಮನದಲ್ಲಿ ರೂಢಿಗತವಾದ ಪಾತ್ರ ಪರಿಕಲ್ಪನೆಗಳಿಗೆ ಇವರು ಜೀವ ತುಂಬಿದರು. ಭಾಗವತರು ಪದ್ಯವನ್ನು ಹೇಳುವಾಗ ಅವರೊಂದಿಗೇ ದನಿಗೂಡಿಸಿ ಹಾಡುವ ಕ್ರಮವನ್ನೂ ಇವರು ರೂಢಿಸಿದರು. ಆರಂಭಿಕ ಘಟ್ಟದಲ್ಲಿ ಈ ಕ್ರಮವನ್ನು ಅಧಿಕ ಪ್ರಸಂಗವೆಂದೂ ಪಾತ್ರಕ್ಕೆ ಶೋಭೆ ನೀಡದೆಂದೂ ಟೀಕಿಸಲಾಯಿತು. ಆದರೆ ಪ್ರೇಕ್ಷಕವರ್ಗ ಈ ವಿಧಾನವನ್ನು ಮೆಚ್ಚಿಕೊಂಡಿತು. ಇತ್ತೀಚಿನ ವರ್ಷಗಳಲ್ಲಿ ಬಹುಪಾಲು ಕಲಾವಿದರು ಈ ಮಾದರಿಯನ್ನು ಅನುಸರಿಸುತ್ತಿದ್ದಾರೆ.

ಇವರ ಪಾತ್ರಾಭಿನಯದಲ್ಲಿ ಕಂಡುಬರುವುದು ಆಕರ್ಷಕ ಹೆಜ್ಜೆಗಾರಿಕೆ, ಲವಲವಿಕೆ, ಲಯಬದ್ಧ ಅಂಗಚಲನೆ ಹಾಗೂ ದಣಿವರಿಯದ ನರ್ತನ. ಕೀಚಕ ಪಾತ್ರದ 'ಇವಳಾವ ಲೋಕದ ಸತಿಯೋ?' ಎಂದು ಸೈರಂಧ್ರಿಯನ್ನು ನೋಡಿ ಇವರು ಅಭಿನಯಿಸುವ ಪರಿ, ಕಾರ್ತವೀರ್ಯಾರ್ಜುನದ 'ನೀಲ ಗಗನದೊಳು ಮೇಘಗಳು' ಎಂಬ ಪದ್ಯದ ಅಭಿನಯ ಪ್ರೇಕ್ಷಕರನ್ನು ಮಂತ್ರಮುಗ್ಧರನ್ನಾಗಿಸಿದೆ.

ಇವರು ಕಲಾವಿದರಾಗಿ ಮೂಡ್ಕಣಿ ಮೇಳ, ಮೂರೂರು ಮೇಳ, ಗುಂಡಬಾಳ ಮೇಳ, ಇಡಗುಂಜಿ ಮೇಳ, ಅಮೃತೇಶ್ವರಿ ಯಕ್ಷಗಾನ ಮಂಡಳಿ, ಬಚ್ಚಗಾರು ಮೇಳ, ಮಾರಿಕಾಂಬಾ ಯಕ್ಷಗಾನ ಮಂಡಳಿಗಳಲ್ಲಿ ಸೇವೆಸಲ್ಲಿಸಿದ್ದಾರೆ. ಕಲಾವಿದರಾಗಿ ಮಾತ್ರವಲ್ಲದೆ ಸ್ವತಃ ತಂಡಕಟ್ಟಿ ನಿರ್ವಹಿಸಿದ ಮಹಾಗಣಪತಿ ಯಕ್ಷಗಾನ ಮಂಡಳಿ (ಬಚ್ಚಗಾರು) ಇವರಿಗೆ ಖ್ಯಾತಿಯನ್ನು ತಂದುಕೊಟ್ಟಿತು. ಮೂಡ್ಕಣಿ ನಾರಾಯಣ ಹೆಗಡೆಯವರೊಂದಿಗೆ ಪಟ್ಟಾಭಿಷೇಕ ಪ್ರಸಂಗದ ಲಕ್ಷ್ಮಣ ಪಾತ್ರ, ಕೆರೆಮನೆ ಶಿವರಾಮ ಹೆಗಡೆಯವರೊಂದಿಗೆ ಭಸ್ಮಾಸುರ, ಕೀಚಕ, ಸುಧನ್ವರ ಪಾತ್ರ, ಕೆರೆಮನೆ ಗಜಾನನ ಹೆಗಡೆ ಅವರೊಂದಿಗೆ ಬಬ್ರುವಾಹನ, ಕೀಚಕ ಪಾತ್ರ ನಿರ್ವಹಣೆಗಳು ಯಕ್ಷಗಾನ ಪ್ರಿಯರಲ್ಲಿ ಮನೆಮಾತಾಗಿ ಉಳಿದಿವೆ. ಇವರ ಅಭಿನಯದಲ್ಲಿ ನೃತ್ಯ, ಅಂಗವಿನ್ಯಾಸ, ಹೆಜ್ಜೆಗಾರಿಕೆಗಳು ವಿಜೃಂಭಿಸುವಂತೆ ಮಾತುಗಾರಿಕೆ ಇರುವುದಿಲ್ಲವೆಂಬ ಟೀಕೆಯೂ ಇದೆ.

ಇವರು ಭಾರತದಾದ್ಯಂತ ಪ್ರದರ್ಶನಗಳನ್ನು ನೀಡಿದ್ದಾರೆ. ಅನೇಕ ಸಂಘ ಸಂಸ್ಥೆಗಳು ಇವರನ್ನು ಗೌರವಿಸಿ ಸನ್ಮಾನಿಸಿವೆ. ಕಲಾರಸಿಕರ ಕಣ್ಮಣಿ, ಅಭಿಜಾತ ಕಲಾವಿದ, ಸಾಟಿ ಇಲ್ಲದ ನರ್ತಕ, ಕಲಾತಪಸ್ವಿ– ಇವು ಕೆಲವು ಬಿರುದುಗಳು. ಇವರಿಗೆ 60 ವರ್ಷ ತುಂಬಿದ ಸಂದರ್ಭದಲ್ಲಿ ಕಲಾಭಿಮಾನಿಗಳು ಇವರಿಗೆ ರಸರಾಜ ಎಂಬ ಅಭಿನಂದನಾ ಗ್ರಂಥವನ್ನು ಅರ್ಪಿಸಿ ಗೌರವಿಸಿದ್ದಾರೆ (1996). ಕರ್ನಾಟಕ ಸರ್ಕಾರ ಇವರಿಗೆ ರಾಜ್ಯೋತ್ಸವ ಪ್ರಶಸ್ತಿ (1991), ಜಾನಪದ ಶ್ರೀ ಪ್ರಶಸ್ತಿ (2003) ನೀಡಿ ಗೌರವಿಸಿದೆ. 'ನಿಮ್ಮ ಚಿಟ್ಟಾಣಿ' ಎನ್ನುವುದು ಇವರ ಆತ್ಮಕಥೆ (2004).

1959ರಲ್ಲಿ ಸುಶೀಲಾ ಅವರನ್ನು ಇವರು ವಿವಾಹವಾದರು. ಇವರಿಗೆ ನಾಲ್ವರು ಮಕ್ಕಳು. ಇವರು ಸದ್ಯದಲ್ಲಿ ಹೊನ್ನಾವರದ ಗುಡ್ಡೆಕೇರಿಯಲ್ಲಿ ವಾಸವಾಗಿದ್ದಾರೆ. ಇವರ ಮಕ್ಕಳಾದ ಸುಬ್ರಹ್ಮಣ್ಯ ಚಿಟ್ಟಾಣಿ ಮತ್ತು ನರಸಿಂಹ ಚಿಟ್ಟಾಣಿಯವರು ಬಡಗುತಿಟ್ಟಿನ ಹೆಸರಾಂತ ಯುವ ಕಲಾವಿದರಾಗಿದ್ದಾರೆ. (ಎಸ್.ಬಿಎಚ್.ಎ.)

**ಚಿಣ್ಣಪ್ಪ, ಕೆ.ಎಂ. :** ಪ್ರಸಿದ್ಧ ಅರಣ್ಯ ಸಂರಕ್ಷಣಾಧಿಕಾರಿ. ಹುಲಿ ಸಂರಕ್ಷಣೆಗಾಗಿ ಅಂತಾರಾಷ್ಟ್ರೀಯ ಪ್ರಶಸ್ತಿ ಪಡೆದವರು. ಇವರು ಅರಣ್ಯಾಧಿಕಾರಿಯಾಗಿ ವೃತ್ತಿ ಜೀವನ ಆರಂಭಿಸಿದರು (1965). ಅನಂತರ ವನ್ಯಜೀವಿ ವಿಭಾಗಕ್ಕೆ ಸೇರಿದರು (1967). ಕಾಡ್ಗಿಚ್ಚು ಮತ್ತು ಕಳ್ಳಬೇಟೆಗಳ ವಿರುದ್ಧ ಹೋರಾಡಲು ಯೋಜನೆಗಳನ್ನು ರೂಪಿಸಿ ವನ್ಯ ಜೀವಿಗಳ ಅಭಿವೃದ್ಧಿಗಾಗಿ ಶ್ರಮಿಸಿದರು. ನಾಗರಹೊಳೆ ರಾಷ್ಟ್ರೀಯ ಉದ್ಯಾನವನವೆಂದು ಘೋಷಿತ ವಾದ ಬಳಿಕ (1974) ಇವರು ವಲಯ ಅರಣ್ಯಾಧಿಕಾರಿಯಾಗಿ ನೇಮಕಗೊಂಡರು.ಈ ಉದ್ಯಾನ ವನದ ಭಾಗವಾಗಿದ್ದ ಸುಂಕದಕಟ್ಟೆ ವಲಯವನ್ನು ಬೆಂಕಿ, ಬೇಟೆ, ಕಳ್ಳಸಾಗಣೆಗಳಿಂದ ಮುಕ್ತ ಗೊಳಿಸಿದರು. ಗೂಢಚಾರ ಜಾಲ ಬಲಪಡಿಸಿದ್ದು ಇವರ ಕಾಲದ ಸಾಧನೆ. ಸುಪ್ರಸಿದ್ಧ ಸಂಶೋಧಕ ಉಲ್ಲಾಸ ಕಾರಂತರೊಂದಿಗೆ ಸಂಶೋಧನ ಕಾರ್ಯದಲ್ಲೂ ನಿರತರಾದರು (1985). ಇವರ ಪರಿಶ್ರಮ ದಿಂದಾಗಿ ನಾಗರಹೊಳೆಯಲ್ಲಿ ವನ್ಯಜೀವಿಗಳ ಸಂಖ್ಯೆ ವೃದ್ಧಿಸಿತು ಮತ್ತು ಅದೊಂದು ಉತ್ತಮ ರಾಷ್ಟ್ರೀಯ ಉದ್ಯಾನವನವೆಂದು ಪರಿಗಣಿಸಲ್ಪಟ್ಟಿತು.



ಚಿಣ್ಣಪ್ಪನವರ ಸೇವೆಗಾಗಿ ಹಲವು ಪ್ರಶಸ್ತಿ ಗೌರವಗಳು ಬಂದಿವೆ. ಕರ್ನಾಟಕ ಸರ್ಕಾರದ ಮುಖ್ಯಮಂತ್ರಿ ಚಿನ್ನದ ಪದಕ (1985), ಅಮೆರಿಕದ ನ್ಯೂಯಾರ್ಕ್ ವೈಲ್ಡ್ ಲೈಫ್ ಸೊಸೈಟಿಯ ಪ್ರತಿಷ್ಠಿತ ಸಂರಕ್ಷಣಾ ಪ್ರಶಸ್ತಿ (1988), ರಣತಂಬೂರ್ ಹುಲಿ ಪ್ರತಿಷ್ಠಾನದ ಟೈಗರ್ ಲಿಂಕ್ ಪ್ರಶಸ್ತಿ (1995) ಇವು ಮುಖ್ಯವಾದವು. ಎಸ್ಸೋ ತೈಲ ಸಂಸ್ಥೆ ಪ್ರತಿವರ್ಷ ಹುಲಿ ಸಂರಕ್ಷಣೆಯಲ್ಲಿ ತೊಡಗಿಸಿಕೊಂಡ ವ್ಯಕ್ತಿಗೆ ನೀಡುವ ಪ್ರತಿಷ್ಠಿತ ಎಸ್ಸೋ ಹುಲಿ ಸಂರಕ್ಷಣಾ ಅಂತಾರಾಷ್ಟ್ರೀಯ ಪ್ರಶಸ್ತಿಯೂ ಇವರಿಗೆ ಲಭಿಸಿದೆ

(2000). ಹುಲಿ ಸಂರಕ್ಷಣೆಗಾಗಿ ಶ್ರಮಿಸುವ ಉದ್ದೇಶದಿಂದ ಸರ್ಕಾರಿ ಸೇವೆಯನ್ನು ತ್ಯಜಿಸಿದ (1992) ಇವರು ಅನಂತರ ವೈಲ್ಡ್ ಲೈಫ್ ಫಸ್ಟ್ ಎಂಬ ಸಂಸ್ಥೆಯ ಅಧ್ಯಕ್ಷರಾದರು. ಈ ಸಂಸ್ಥೆ ಅರಣ್ಯ ಸಿಬ್ಬಂದಿಗೆ ತರಬೇತಿ ನೀಡುತ್ತಿದೆ. ನ್ಯೂಯಾರ್ಕ್ ವೈಲ್ಡ್ ಲೈಫ್ ಕನ್ಸರ್ವೇಶನ್ ಸೊಸೈಟಿಯ ಸಹಕಾರದಿಂದ ಕರ್ನಾಟಕದ ಹುಲಿ ಸಂರಕ್ಷಣಾ ಯೋಜನೆಯಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ನ್ಯೂಯಾರ್ಕ್ ವೈಲ್ಡ್ ಲೈಫ್ ಕನ್ಸರ್ವೇಶನ್ ಸೊಸೈಟಿ ಮತ್ತು ಇಂಗ್ಲೆಂಡಿನ ಗ್ಲೋಬಲ್ ಟೈಗರ್ ಪೆಟ್ರೋಲ್‌ಗಳ ಸಹಾಯದಿಂದ ಇವರು ನಾಗರಹೊಳೆ ವನ್ಯಜೀವಿಗಳ ಸಂರಕ್ಷಣಾ ಯೋಜನೆಯನ್ನು ಕೈಗೊಂಡಿದ್ದಾರೆ. ಈ ಸಂಸ್ಥೆ ವನ್ಯಜೀವಿಗಳ ಸಂರಕ್ಷಣೆಗೆ ಸಂಬಂಧಿಸಿದಂತೆ ತರಬೇತಿ ನೀಡುತ್ತಿದೆ. ವನ್ಯಜೀವಿಗಳನ್ನು ಜನರು ರಕ್ಷಿಸಿ, ಪ್ರೀತಿಸುವಂತೆ ಮಾಡುವ ಮನಃ ಪರಿವರ್ತನೆಯ ಕಾಯಕದಲ್ಲಿ ಇವರು ತಮ್ಮನ್ನು ತೊಡಗಿಸಿಕೊಂಡಿದ್ದಾರೆ. *

**ಚಿತ್ತಾಪುರ :** ಗುಲ್ಬರ್ಗ ಜಿಲ್ಲೆಯ ಒಂದು ತಾಲ್ಲೂಕು; ಅದರ ಮುಖ್ಯ ಸ್ಥಳ. ತಾಲ್ಲೂಕನ್ನು ಗುಲ್ಬರ್ಗ, ಚಿಂಚೋಳಿ, ಸೇಡಂ, ಯಾದಗಿರಿ, ಜೇವರಗಿ ಮತ್ತು ಶಾಹಪುರ ತಾಲ್ಲೂಕುಗಳು ಸುತ್ತುವರಿದಿವೆ. ವಿಸ್ತೀರ್ಣ 1764.3ಚ.ಕಿಮೀ. ಶಾಹಬಾದ, ಗುಂಡಗುರ್ತಿ, ನಾಲವಾರ, ಕಾಳಗಿ ಮತ್ತು ಚಿತ್ತಾಪುರ ಇದರ ಹೋಬಳಿಗಳು. ಒಟ್ಟು 122 ಹಳ್ಳಿಗಳಿವೆ. ಜನಸಂಖ್ಯೆ 3,66,524.

ತಾಲ್ಲೂಕು ಸಮುದ್ರ ಮಟ್ಟದಿಂದ ಸರಾಸರಿ 448ಮೀ ಎತ್ತರವಿದ್ದು ಹೆಚ್ಚು ಭಾಗ ಕಪ್ಪು ಮಣ್ಣಿನಿಂದ ಕೂಡಿದೆ. ನಾಲವಾರದ ಸುತ್ತಲೂ ಕೆಂಪು ಮಿಶ್ರಿತ ಉಸುಬಿನ ಭೂಮಿಯಿದೆ. ಈ ತಾಲ್ಲೂಕಿನ ಉತ್ತರ ಭಾಗದಲ್ಲಿ ವಾಯವ್ಯದಿಂದ ಆಗ್ನೇಯಕ್ಕೆ ಬೆಣ್ಣೆತೊರೆ ನದಿ ಹರಿದು ಸೇಡಂ ತಾಲ್ಲೂಕಿನ ಮಳಖೇಡದ ಹತ್ತಿರ ಕಾಗಿಣಾ ನದಿಯನ್ನು ಸೇರುತ್ತದೆ. ಕಾಗಿಣಾ ನದಿ ಈ ತಾಲ್ಲೂಕಿನ ಮಧ್ಯದಲ್ಲಿ ಈಶಾನ್ಯದಿಂದ ನೈಋತ್ಯಕ್ಕೆ ಹರಿದು ಹುನಗುಂಟ ಹಳ್ಳಿಯ ಹತ್ತಿರ ಭೀಮಾನದಿಯನ್ನು ಸೇರುತ್ತದೆ. ಭೀಮಾನದಿ ಚಿತ್ತಾಪುರ ತಾಲ್ಲೂಕಿನ ಗಡಿಯಲ್ಲಿ ನೈಋತ್ಯದಿಂದ ದಕ್ಷಿಣಕ್ಕೆ ಹರಿದು ಜೇವರಗಿ ಮತ್ತು ಶಾಹಪುರ ತಾಲ್ಲೂಕುಗಳನ್ನು ಬೇರ್ಪಡಿಸಿದೆ. ಈ ನದಿಗಳಿಂದಲೂ ಕುಂಬಾರವಾಡಿಕೆರೆ, ಆಲಹಳ್ಳಿಕೆರೆ, ಮುಗಳ ನಾಗಾವಿಯ ಬಸವೇಶ್ವರ ಕೆರೆಗಳಿಂದಲೂ ಚಿಕ್ಕ ನೀರಾವರಿ ಯೋಜನೆಯ ಅಡಿಯಲ್ಲಿ ತೋಡಿಸಿದ ಬಾವಿಗಳಿಂದಲೂ ಈ ತಾಲ್ಲೂಕಿನ ವ್ಯವಸಾಯಕ್ಕೆ ನೀರೊದಗುತ್ತಿದೆ. ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ 808.46ಮಿಮೀ. ಜೂನ್‌ನಿಂದ-ಅಕ್ಟೋಬರ್‌ವರೆಗೆ ಮಳೆಗಾಲ. ಜೋಳ, ಬತ್ತ, ನೆಲಗಡಲೆ, ತೊಗರಿ, ಕಡಲೆ, ಗೋದಿ, ಮೆಣಸಿನಕಾಯಿ ಮತ್ತು ಕಾಯಿಪಲ್ಲೆಗಳನ್ನು ಬೆಳೆಯುತ್ತಾರೆ. (ಬಿ.)

ತಾಲ್ಲೂಕಿನ ಮುಖ್ಯ ಕಸಬು ಒಕ್ಕಲತನ. ನೇಯುವುದು ಒಂದು ಮುಖ್ಯ ಉದ್ಯಮವಾಗಿದೆ. ಶಾಹಬಾದಿನಲ್ಲಿ ಕಲ್ಲಿನ ಗಣಿಗಳಲ್ಲಿ ಹಾಸುಕಲ್ಲುಗಳನ್ನು ತೆಗೆಯುತ್ತಾರೆ. ಆ ಕಲ್ಲುಗಳಿಗೆ ನಯ ಮಾಡಿ ಹೊಳಪು ಕೊಡುವುದುಂಟು. ಈ ಕಲ್ಲಿನ ಕೆಲಸ ಮಾಡುವ ಒಡ್ಡರನ್ನೂ ಲಂಬಾಣಿಗಳನ್ನೂ ಈ ಪ್ರದೇಶದಲ್ಲಿ ಹೆಚ್ಚಾಗಿ ಕಾಣಬಹುದು. ಶಾಹಬಾದ್ ಮತ್ತು ವಾಡಿಗಳಲ್ಲಿ ಸಿಮೆಂಟ್ ಕಾರ್ಖಾನೆಗಳಿವೆ. ಶಾಹಬಾದಿನಲ್ಲಿ ಒಂದು ಎಂಜಿನಿಯರಿಂಗ್ ಕಾರ್ಖಾನೆ ಸಹ ಇದೆ. ಚಿತ್ತಾಪುರ ಪಟ್ಟಣದಲ್ಲೂ ವಿವಿಧ ಕಲ್ಲಿನ ಗೃಹೋಪಯೋಗಿ ವಸ್ತುಗಳನ್ನು ತಯಾರಿಸುವ ಸಣ್ಣ ಉದ್ಯಮಗಳಿವೆ. ಸಿಮೆಂಟಿನಿಂದ ಒಲೆ, ಕಿಟಕಿ, ವೃಂದಾವನ ಮುಂತಾದವುಗಳನ್ನು ತಯಾರು ಮಾಡುವ ಕೈಗಾರಿಕೆ ಬೆಳೆದಿದೆ. ಈ ತಾಲ್ಲೂಕಿನ ಶಿರೂರಿನಲ್ಲಿ ದನದ ಜಾತ್ರೆ ನಡೆಯುತ್ತದೆ.

ಶಾಹಬಾದ (ನೋಡಿ) ಈ ತಾಲ್ಲೂಕಿನ ಪ್ರಮುಖ ಕೈಗಾರಿಕಾ ಪಟ್ಟಣ. ವಾಡಿ ಮುಖ್ಯ ರೈಲ್ವೆ ಜಂಕ್ಷನ್. ಕಾಳಗಿ, ನಾಗಾವಿ, ಕನಕನಹಳ್ಳಿ, ಸನ್ನತಿ – ಇವು ಐತಿಹಾಸಿಕ ಸ್ಥಳಗಳು. ಚಿತ್ತಾಪುರದ ಹತ್ತಿರದಲ್ಲಿರುವ ಯರಗೋಳದಲ್ಲಿ ಟೀಕಾಚಾರ್ಯರು ಇದ್ದು ನ್ಯಾಯಸುಧಾವನ್ನು ರಚಿಸಿದರೆಂದು ಪ್ರತೀತಿ ಇದೆ. ಶಾಹಬಾದಿನಿಂದ 2ಕಿಮೀ ದೂರದಲ್ಲಿರುವ ಭಂಕೂರು ಹಿಂದೆ ಭೂಮಕುರು ಎಂಬ ಹೆಸರಿನಿಂದ ಪ್ರಸಿದ್ಧವಾಗಿತ್ತು. ಇಲ್ಲಿ ಜೈನ ಮತ್ತು ಹಿಂದು ಶಿಲ್ಪಾವಶೇಷಗಳು ದೊರಕಿವೆ. ಬಲವಡಿಗಿಯಲ್ಲಿ ಎಲ್ಲಮ್ಮ, ಕೊಂಚೂರಿನಲ್ಲಿ ಪ್ರಾಣದೇವರು, ದಂಡಗುಂಡದಲ್ಲಿ ಬಸವೇಶ್ವರ, ರೇವಾಯಿಯಲ್ಲಿ ರೇವಣಸಿದ್ದೇಶ್ವರ, ಹೆಬ್ಬಾಳದಲ್ಲಿ ಅಣುವೀರಭದ್ರೇಶ್ವರ, ಸನ್ನತಿಯಲ್ಲಿ ಚಂದ್ರಲಾಪರಮೇಶ್ವರಿ, ಸೂಗೂರಿನಲ್ಲಿ ವೆಂಕಟೇಶ - ಈ ದೇವರ ಜಾತ್ರೆಗಳು ಪ್ರತಿವರ್ಷ ನಡೆಯುತ್ತವೆ.

ಚಿತ್ತಾಪುರ ತಾಲ್ಲೂಕಿನ ಮುಖ್ಯ ಸ್ಥಳ. ವಾಡಿ ಮತ್ತು ಹೈದರಾಬಾದ್ ರೈಲುಮಾರ್ಗದಲ್ಲಿದೆ. ಆಗ್ನೇಯಕ್ಕೆ ರಾಯಚೂರು ರೈಲು ಮಾರ್ಗಕ್ಕೂ ಪಶ್ಚಿಮಕ್ಕೆ ಮುಂಬಯಿ ರೈಲುಮಾರ್ಗಕ್ಕೂ ಕೂಡಿದೆ. ಜನಸಂಖ್ಯೆ 1,27,758. ಇಲ್ಲಿ ಶಾಹಬಾದ ಕಲ್ಲಿನ ಗಣಿಗಳಿದ್ದು ಕಲ್ಲುಚಪ್ಪಡಿಗಳ ತಯಾರಿಕೆಯುಂಟು. ಮುಸಲ್ಮಾನರ ಪವಿತ್ರ ಸ್ಥಳವಾದ ಚಿತಾ ಷಾ ವಲಿ ದರ್ಗಾ ಈ ಊರಿಗೆ ಸಮೀಪದಲ್ಲಿದೆ. ಪ್ರತಿವರ್ಷ ಚಿತಾ ಷಾ ವಲಿಯ ಜಾತ್ರೆ ನಡೆದು ಸು.10,000 ಮಂದಿ ಯಾತ್ರಿಗಳು ಇಲ್ಲಿ ಸೇರುತ್ತಾರೆ. ಚಿತ್ತಾಪುರದಲ್ಲಿ ಪೌರಸಭೆ ಆಡಳಿತವಿದೆ. ರೆಗ್ಯುಲೇಟೆಡ್ ಮಾರ್ಕೆಟ್ ಇದೆ. ಪಟ್ಟಣಕ್ಕೆ ರೈಲುಮಾರ್ಗವಲ್ಲದೆ ಉತ್ತಮ ರಸ್ತೆಗಳಿದ್ದು ಜಿಲ್ಲೆಯ ಎಲ್ಲೆಡೆಗೆ ಸಂಪರ್ಕವಿದೆ. *

**ಚಿತ್ರಕಲೆ :** ಪ್ರಾಗಿತಿಹಾಸ ಕಾಲದಿಂದಲೇ ಆರಂಭವಾಗುವ ಕರ್ನಾಟಕದ ಚಿತ್ರಕಲೆಯ ಇತಿಹಾಸವನ್ನು ಈಗ ಉಳಿದುಬಂದಿರುವ ಕೃತಿಗಳ ಆಧಾರದ ಮೇಲೆ ಪ್ರಾಗೈತಿಹಾಸಿಕ, ಅಭಿಜಾತ, ಮಧ್ಯಕಾಲೀನ ಮತ್ತು ಇಸ್ಲಾಮೀ ಶೈಲಿಗಳನ್ನು ಒಳಗೊಳ್ಳುವಂತೆ ಪ್ರಾಚೀನ ಕಾಲದ ಒಂದು ಘಟ್ಟ. ಪಾಶ್ಚಾತ್ಯ ಪ್ರಭಾವದಿಂದ ರೂಪುಗೊಂಡ ಆಧುನಿಕಕಾಲದ ಒಂದು ಘಟ್ಟ – ಹೀಗೆ ಎರಡು ಮುಖ್ಯ ಘಟ್ಟಗಳಾಗಿ ವಿಂಗಡಿಸಬಹುದು. ಈ ಘಟ್ಟಗಳು ಹಾಗೂ ಚಿತ್ರಕಲೆಗೆ ಸಂಬಂಧಿಸಿದಂತೆ ಶಿಕ್ಷಣ, ಪ್ರೋತ್ಸಾಹ ಈ ವಿಷಯಗಳನ್ನು ಪ್ರಸಕ್ತ ಲೇಖನದಲ್ಲಿ ಪ್ರಸ್ತಾಪಿಸಲಾಗಿದೆ.

**ಪ್ರಾಚೀನ :** ಈಗ ಉಳಿದು ಬಂದಿರುವ ಮಟ್ಟಿಗೆ ಕರ್ನಾಟಕದ ಉತ್ತರಭಾಗದ ಹಲವು ಕಡೆ ದೊರೆತಿರುವ ಗವಿಚಿತ್ರಗಳು ಅತ್ಯಂತ ಪ್ರಾಚೀನವೆಂದು ಹೇಳಬಹುದು. ಇವು ಬಹುಶಃ ನೂತನ ಶಿಲಾಯುಗದ ಕಾಲಕ್ಕೆ (ಕ್ರಿ.ಪೂ.ಸು.2500-1000) ಸೇರಿದುವೆಂದು ಭಾವಿಸಲಾಗಿದೆ. ನಿಂತಲ್ಲಿ ನಿಲ್ಲದೆ ಅಲೆಮಾರಿಗಳಾಗಿ ತಿರುಗುತ್ತಿದ್ದ ಹಳೆಯ ಶಿಲಾಯುಗದ ಜನ ಕಾಲಕ್ರಮೇಣ ಗುಡ್ಡಗಳ ಆಸರೆಯಲ್ಲಿ ಗವಿಗಳಲ್ಲೋ ಚಾಚುಬಂಡೆಗಳ ಕೆಳಗೋ ವಾಸಿಸಲಾರಂಭಿಸಿ ಗುಡಿಸಲು ಕಟ್ಟಿಕೊಂಡು ಮಡಕೆಗಳನ್ನು ಮಾಡಿಕೊಳ್ಳಲಾರಂಭಿಸಿದಾಗ, ಜೀವನ ವಿಧಾನವನ್ನು ಸುಧಾರಿಸಿಕೊಂಡು ಒಂದು ಕಡೆ ನೆಲೆ ನಿಲ್ಲಲಾರಂಭಿಸಿದಾಗ, ಕಲೆಯ ಕಡೆ ಗಮನ ಹರಿದಿರಬಹುದು. ಬಂಡೆಗಲ್ಲುಗಳ ಮೇಲೆ ಮುಖ್ಯವಾಗಿ ಚಾಚು ಬಂಡೆಗಳ ಆಸರೆಯ ಕೆಳಗೆ ಕೆಮ್ಮಣ್ಣಿನಲ್ಲಿ (ಅಪರೂಪವಾಗಿ ಬಿಳಿಬಣ್ಣದಿಂದ) ರೇಖಾಕಾರದಲ್ಲಿ ಗೂಳಿ, ಜಿಂಕೆ, ಮಾನವರ ಚಿತ್ರಗಳನ್ನು ಬಿಡಿಸಿದ ಚಿತ್ರಗಳು ಬಳ್ಳಾರಿ, ಬಿಜಾಪುರ, ರಾಯಚೂರು, ಗುಲ್ಬರ್ಗ ಜಿಲ್ಲೆಗಳಲ್ಲಿ ಹೇರಳವಾಗಿ ಕಂಡುಬಂದಿವೆ. ಮಾನವರ, ಪ್ರಾಣಿಗಳ ಆಕಾರಗಳನ್ನು ಮಾತ್ರ, ಹಲವು ವೇಳೆ ಸಾಂಕೇತಿಕವಾಗಿ, ಬಣ್ಣದ ಗೀರಿನಲ್ಲಿ ತೋರಿಸಿ ಕಣ್ಣು ಮೂಗುಗಳಾವುದನ್ನೂ ಬಿಡಿಸದೆ ಒಳಗೆಲ್ಲ ಚಪ್ಪಟೆಯಾಗಿ ಬಣ್ಣ ತುಂಬಿಸುವುದೇ ಇವುಗಳಲ್ಲಿನ ಪದ್ಧತಿ. ಆದರೂ ಕೇವಲ ಗೆರೆಗಳಿಂದಲೇ ಮಾನವರ, ಪ್ರಾಣಿಗಳ ಸಹಜವಾದ ಆಕೃತಿಗಳನ್ನು ರೂಪಿಸುವ ಕಲೆ ಈ ಕಾಲದ ಜನರಿಗೆ ಸಿದ್ಧಿಸಿದಂತೆ ತೋರುತ್ತದೆ. ತೆಕ್ಕಲಕೋಟೆ, ಸಂಗನಕಲ್ಲು,

ಗೊಂಬಿಗುಡ್ಡ, ತಾವರಗೇರಿ, ವಾಲಿದಿಬ್ಬ, ಸಿಡಿಲುಗುಂಡಿ ಮುಂತಾದ ಕಡೆಗಳಲ್ಲೆಲ್ಲ ಈಗಲೂ ಉಳಿದುಬಂದಿರುವ ಚಿತ್ರಗಳು ಆದಿಮಾನವನ ಕಲಾಸಕ್ತಿಯ ಸ್ವರೂಪವನ್ನು ವಿಶದಪಡಿಸುತ್ತವೆ. ಇವುಗಳಲ್ಲಿ ಹೆಚ್ಚಾಗಿ ಕೈಕೈಹಿಡಿದು ಸಾಲುಸಾಲಾಗಿ ನಿಂತ ಮಾನವಾಕೃತಿಗಳು ನೃತ್ಯ ಅಥವಾ ಬೇಟೆಯನ್ನು ಸೂಚಿಸುತ್ತವೆ. ಗೂಳಿ, ಹಸು, ಜಿಂಕೆ ಮೊದಲಾದ ಪ್ರಾಣಿಗಳ ಆಕೃತಿಗಳೂ ಉಂಟು. ಇವನ್ನು ಬಂಡೆಗಳ ಮೇಲೆ ತಮಗೆ ತೋಚಿದಾಗ ತೋಚಿದಂತೆ ಚಿತ್ರಿಸಿದ್ದು ಈ ಬಂಡೆಗಳು ಚಿತ್ರಗಳಿಂದ ತುಂಬಿ ಹೋಗಿರುವುದುಂಟು. ಆದರೆ ಅದರಲ್ಲಿ ಒಂದು ಕ್ರಮವಿರುವುದಿಲ್ಲ.



ಸುರಪುರ ಚಿತ್ರಕಲೆ

ಈ ಸರಳವಾದ ಚಿತ್ರಕಲೆ ನೂತನ ಶಿಲಾಯುಗದಿಂದ ಮುಂದುವರೆದು ಬೃಹತ್‍ಶಿಲಾಯುಗದ ಕಾಲದಲ್ಲಿಯೂ ಬೆಳೆದುಬಂದಿದೆ. ಬೃಹತ್ ಶಿಲಾಸಮಾಧಿಗಳ ಸಮೀಪದಲ್ಲಿಯೇ ಇರುವ ಚಾಚುಬಂಡೆಗಳ ಮೇಲಿನ ಚಿತ್ರಗಳಲ್ಲಿ ಕುದುರೆಸವಾರಿ ಮಾಡುತ್ತಿರುವ ಬೇಟೆಗಾರರು ಈಟಿ, ಕತ್ತಿ, ಬಿಲ್ಲುಬಾಣಗಳನ್ನು ಹಿಡಿದಿರುವುದನ್ನು ನೋಡಬಹುದು. ಕೈಕೈಹಿಡಿದು ಬೇಟೆಗಳನ್ನಡ್ಡಗಟ್ಟುವುದು, ಕುದುರೆಯ ಮೇಲೆ ಹುಲಿಬೇಟೆಯಾಡುವುದು ಮುಂತಾದ ಚಿತ್ರಗಳು ಹಿರೇಬೆನಕಲ್ಲಿನ ಚಾಚುಬಂಡೆಗಳಲ್ಲಿ ತುಂಬಿವೆ. ಬಲಿಚಕ್ರ ಎಂಬಲ್ಲಿಯೂ ಕುದುರೆಸವಾರನ ಚಿತ್ರವಿದೆ. ಇಲ್ಲೆಲ್ಲ ರೇಖೆಗಳ ನವಿರಿನಿಂದ ಸರಳತೆಯಿಂದ ಚಿತ್ರದ ಅಭಿವ್ಯಕ್ತಿ ಸ್ಪಷ್ಟಗೊಂಡಿದೆ. ತಮ್ಮ ಪರಿಮಿತಿಯಲ್ಲಿಯೇ ಈ ಚಿತ್ರಗಳು ಸತ್ತ್ವಯುಕ್ತವಾಗಿವೆ. ಬೇಸರ ಕಳೆಯಲೋ ತಾವು ಕಂಡ, ಮನದಲ್ಲಿ ನೆಲೆಗೊಂಡ ಘಟನೆಗಳನ್ನು ಮೂಡಿಸಲೋ ಮಾಂತ್ರಿಕ ಉದ್ದೇಶದಿಂದಲೋ ಇಂಥ ಚಿತ್ರಗಳನ್ನು ಅವರು ಬರೆದಿರಬಹುದು.

ಆ ಕಾಲದ ಜನತೆಗೆ ಚಿತ್ರಕಲೆಯಲ್ಲಿ ಆಸಕ್ತಿ ಇತ್ತು ಎನ್ನುವುದು ಆಗ ತಯಾರಾದ ಮಣ್ಣಿನ ಪಾತ್ರೆಗಳಿಂದ ಸ್ಪಷ್ಟವಾಗುತ್ತದೆ. ತಾಮ್ರಶಿಲಾಯುಗದ ಕೆಲವು ಮಾಸಲು ಕೆಂಪುವರ್ಣದ ಪಾತ್ರೆಗಳ ಮೇಲ್ಭಾಗದಲ್ಲಿ ಕಪ್ಪು ಅಥವಾ ನೇರಳೆ ವರ್ಣದ ಚಿತ್ರಗಳಿರುತ್ತವೆ. ದಪ್ಪ ರೇಖೆಗಳಿಂದ ಹಲವು ಬಗೆಯ ವಿನ್ಯಾಸಗಳನ್ನು ಮೂಡಿಸುವುದು ಇಲ್ಲಿಯ ಪದ್ಧತಿ. ಆ ಕಾಲದ ಇಂಥ ಚಿತ್ರಿತ ಮಡಕೆಗಳು ಹೆಚ್ಚಾಗಿ ಸಿಗುವುದು ಕರ್ನಾಟಕದ ಉತ್ತರ ಭಾಗದಲ್ಲಿಯೇ. ಬೃಹತ್ ಶಿಲಾಯುಗದ ಜನ ತಮ್ಮ ಮಡಕೆಗಳ ಮೇಲೆ ಚಿತ್ರ ರಚಿಸದಿದ್ದರೂ ಬಣ್ಣಕ್ಕೆ ಮಾರುಹೋಗಿದ್ದರು. ಅತ್ಯಂತ ಹೊಳಪಿನ ಕಪ್ಪು ಮತ್ತು ಕೆಂಪು ಮಡಕೆಗಳನ್ನವರು ತಯಾರಿಸಿದ್ದಾರೆ. ಆದರೆ ಚರಿತ್ರೆಯ ಆರಂಭಕಾಲಕ್ಕೆ ಬಂದರೆ ಇಂಥ ಹೊಳಪಿನ ಮಡಕೆಗಳ ಮೇಲೆ ಬಿಳಿಯ ಬಣ್ಣದಿಂದ ರೇಖಾಕೃತಿಗಳನ್ನು ಅಡ್ಡಾದಿಡ್ಡಿಯಾಗಿ ಅಲೆಅಲೆಯಾಗಿ, ದಪ್ಪ ಸಣ್ಣ ಚುಕ್ಕೆಗಳಾಗಿ ಹೂವಿನಂತೆ ಹತ್ತು ಹಲವು ಬಗೆಯಾಗಿ ಚಿತ್ರಿಸಿ ಕೆಂಪಿನ ಲೇಪನ ಕೊಟ್ಟಿರುವುದು ಹೆಚ್ಚು. ಇಂಥ ಚಿತ್ರಿತ ಮಡಕೆಗಳು ಬ್ರಹ್ಮಗಿರಿ, ಚಂದ್ರವಳ್ಳಿ, ಹೆಮ್ಮಿಗೆ, ಹೆರಕಲ್ಲು, ವಡಗಾಂವ ಮಾಧವಪುರ, ಮಸ್ಕಿ, ಬೆಂಗಳೂರು ಮುಂತಾದ ಹತ್ತಾರು ನಿವೇಶನಗಳಲ್ಲಿ ಹೇರಳವಾಗಿ ದೊರೆಯುತ್ತವೆ. ಇವುಗಳಲ್ಲಿ ಕಂಡುಬರುವ ಸಮಾನಾಂತರ ರೇಖೆಗಳೂ ಗವಿಗೋಡೆಗಳ ಮೇಲಿನ ಕೆಮ್ಮಣ್ಣಿನ ಬಣ್ಣದ ಚಿತ್ರಗಳೂ ಬಹುಶಃ ಜನಪದ ಸಂಪ್ರದಾಯದಲ್ಲಿ ಉಳಿದು ಬೆಳೆದು ಬಂದು ಜನ ತಮ್ಮ ಮನೆಗಳ ಗೋಡೆಗಳ ಮೇಲೆ ಕೆಮ್ಮಣ್ಣಿನ ಕಾರಣೆ ಮಾಡುವುದು, ಚಿತ್ರಗಳನ್ನು ಮೂಡಿಸುವುದು ಮತ್ತು ರಂಗವಲ್ಲಿಗಳನ್ನು ಹಾಕುವುದು ಇವುಗಳಲ್ಲಿ ಕಾಣಿಸಿಕೊಂಡಿರುವಂತೆ ತೋರುತ್ತದೆ. ಚಿತ್ರಕಲೆ ಕರ್ನಾಟಕದಲ್ಲಿ ಮುಂದೆ ಹೇಗೆ ಬೆಳವಣಿಗೆ ಹೊಂದಿತು ಎಂಬುದನ್ನು ಸೂಚಿಸುವ ಚಿತ್ರಗಳು ಸು.6ನೆಯ ಶತಮಾನದ ವರೆಗೂ ಕಂಡುಬರುವುದಿಲ್ಲ. ಆದರೂ ಚಿತ್ರಕಲೆಯನ್ನು ಅತ್ಯಂತ ಪ್ರೌಢಾವಸ್ಥೆಗೆ ತಂದಿದ್ದುದು ಅಜಂತದ ಗುಹೆಗಳಲ್ಲಿ ಕಂಡುಬರುತ್ತದೆ. ಕ್ರಿ.ಪೂ.2ನೆಯ ಶತಮಾನದಿಂದಲೇ ಆರಂಭವಾಗಿ ಏಳು ಶತಮಾನಗಳ ಕಾಲ ಒಂದೇ ಸಮನೆ ಬೆಳೆದು ಬಂದ ಇಲ್ಲಿನ ಭಿತ್ತಿಚಿತ್ರಗಳಲ್ಲಿ ಕರ್ನಾಟಕದ ಚಿತ್ರಗಾರರ ಪಾತ್ರವೆಷ್ಟೆಂಬುದು ತಿಳಿಯದು. ಆದರೂ ಬಾದಾಮಿಯ ಚಳುಕ್ಯರ ಕಾಲದಲ್ಲಿ ಅವರು ಕೊಟ್ಟ ಪ್ರೋತ್ಸಾಹದಿಂದ ಕೆಲವು ಭಿತ್ತಿಚಿತ್ರಗಳಾದರೂ ನಿರ್ಮಾಣವಾಗಿರಬೇಕು. ಒಂದನೆಯ ಗುಹೆಯಲ್ಲಿ ಗೋಡೆಯ ಮೇಲೆ ಇರುವ ರಾಜನೊಬ್ಬನ ಒಡ್ಡೋಲಗದ ಚಿತ್ರ ಇಮ್ಮಡಿ ಪುಲಕೇಶಿಯದೆಂದು ಭಾವಿಸಲಾಗಿದೆ. ಆದರೂ ಕರ್ನಾಟಕದಲ್ಲಿ ಇಂಥ ಚಿತ್ರಗಳು 6ನೆಯ ಶತಮಾನದವರೆಗೆ ಕಂಡುಬಂದಿಲ್ಲ. ಬಾದಾಮಿಯಲ್ಲಿ ಮೂರನೆಯ ಮುಂದಿನ ಗುಹೆಯ ಒಳಭಾಗದಲ್ಲಿ ಮಾತ್ರ ಕೆಲವು ಭಿತ್ತಿ ಚಿತ್ರಗಳ ಕುರುಹು ಉಳಿದು ಬಂದಿದೆ. 6ನೆಯ ಶತಮಾನದ ಕಡೆಯ ಭಾಗಕ್ಕೆ ಸೇರಿದ ಈ ಚಿತ್ರಗಳು ಅಜಂತದ ಭಿತ್ತಿಚಿತ್ರಗಳ ಪದ್ಧತಿಗೆ ಸೇರಿದವು. ಆದರೆ ಅಜಂತದ ಪರಿಣತಿ-ಹಿರಿಮೆ ಇವುಗಳಲ್ಲಿ ಇಲ್ಲವೆನ್ನಬಹುದು. ಇಲ್ಲಿನ ಚಿತ್ರಗಳು ಬಹುಮಟ್ಟಿಗೆ ನಶಿಸಿಹೋಗಿದ್ದರೂ ಉಳಿದಷ್ಟೇ ಚಿತ್ರಗಳು ಅಂದಿನ ಸತ್ತ್ವಯುತ ಶೈಲಿಯನ್ನು ಮನವರಿಕೆ ಮಾಡಿಕೊಡುತ್ತವೆ. ರೇಖೆಗಳನ್ನೆಳೆದಿರುವಲ್ಲಿ, ಭಾವಗಳನ್ನು ಪರಿಣಾಮಕಾರಿಯಾಗಿ ಹೊಮ್ಮಿಸುವಲ್ಲಿ ಅಜಂತ ಸಂಪ್ರದಾಯದ ಕೈವಾಡ ಸ್ಪಷ್ಟವಿದೆ. ರಾಜನೊಬ್ಬನ ಒಡ್ಡೋಲಗ, ಅವನ ಬಳಿಯೇ ಕುಳಿತ ಅರಸಿ, ಒಂದು ಕಡೆ ನರ್ತಕಿಯರು, ವಾದ್ಯಕಾರರು, ಸುತ್ತಲೂ ಪರಿವಾರದವರು, ದೂರದಲ್ಲಿ ಆಸ್ಥಾನಿಕರು ಇರುವ ಒಂದು ಚಿತ್ರ ಇದೆ. ಅಲ್ಲಲ್ಲಿ ಮುಕ್ಕಾಗಿದ್ದರೂ ಅದರ ಸಂಯೋಜನೆ ಆಕರ್ಷಕವಾದ್ದಾಗಿದೆ. ಇನ್ನೊಂದು ಚಿತ್ರವೂ ಇಂಥದೇ ಒಂದು ಒಡ್ಡೋಲಗದ ಚಿತ್ರ. ಇಲ್ಲಿ ಸುಖಾಸೀನರಾಗಿ ಕುಳಿತ ರಾಜರಾಣಿಯರು ಕೀರ್ತಿವರ್ಮ ಮತ್ತು ಅವನ ರಾಣಿಯರದೆಂದು ಊಹಿಸಿದ್ದಾರೆ. ರಾಣಿಯ ಮುಖಭಾವ, ಕುಳಿತ ಭಂಗಿ, ಪರಿವಾರದವರ ಗಂಭೀರ ಮುಖಮುದ್ರೆ, ನರ್ತಕರ ಮೋಹಕ ಭಂಗಿಗಳು ಉಳಿದಿರುವಷ್ಟರಲ್ಲಿಯೇ ಅವು ನುರಿತ ಚಿತ್ರಕಾರನ ಕೃತಿ ಎಂಬುದನ್ನು ಸಿದ್ಧಮಾಡಿಕೊಡುತ್ತವೆ. ಇವುಗಳಲ್ಲದೆ ಆಕಾಶದಲ್ಲಿ ತೇಲುತ್ತಿರುವ ಗಂಧರ್ವಮಿಥುನಗಳೂ ಇಲ್ಲಿ ಉಂಟು. ಬಾದಾಮಿಯ ಚಿತ್ರಗಳು ಪೂರ್ಣವಾಗಿ ಉಳಿದು ಬಂದಿದ್ದಲ್ಲಿ ಆರನೆಯ ಶತಮಾನದ ಭಿತ್ತಿಚಿತ್ರಗಳ ಹೆಮ್ಮೆಯ ಮಾದರಿ ಎನ್ನಿಸಿಕೊಳ್ಳುತ್ತಿದ್ದುವು.

ಕರ್ನಾಟಕದ ಚಿತ್ರಕಲೆಯ ಪರಂಪರೆಯಲ್ಲಿ ಇದೊಂದು ನಡುಗಡ್ಡೆ. ಮತ್ತೆ ಕೆಲವು ಶತಮಾನಗಳ ಕಾಲ ಚಿತ್ರಕಲೆಯ ಸ್ವರೂಪವನ್ನರಿಯಲು ಉದಾಹರಣೆಗಳಿಲ್ಲ. ಚಿತ್ರಕಲೆ ಇರಲಿಲ್ಲವೆಂದಲ್ಲ. ಸಾಹಿತ್ಯದಲ್ಲಿ, ಶಾಸನಗಳಲ್ಲಿ ಚಿತ್ರಗಳ, ಚಿತ್ರಕಾರರ ವರ್ಣನೆಗಳಿವೆ. ಗಂಗರ ತಾಮ್ರಶಾಸನವೊಂದನ್ನು ಕಂಡರಿಸಿದ ವಿಶ್ವಕರ್ಮ ತಾನು ಚಿತ್ರಕಲಾಭಿಜ್ಞೆಯನಾಗಿದ್ದುದಾಗಿ ಹೆಮ್ಮೆಯಿಂದ

ಹೇಳಿಕೊಂಡಿದ್ದಾನೆ. ಹೊಯ್ಸಳ ರೂವಾರಿಯೊಬ್ಬ ಚಿತ್ರಕರ್ಮ ಪತ್ರಕರ್ಮ ದಾರುಕರ್ಮ ಶಿಲಾಕರ್ಮ ಮೊದಲಾದ ಹಲವು ಕಲೆಗಳಲ್ಲಿ ನಿಷ್ಣಾತನೆಂದು ಕರೆದುಕೊಂಡಿದ್ದಾನೆ. ದೇವಾಲಯದಲ್ಲಿಟ್ಟಿದ್ದ ಶ್ರೀಮತಿಯ ಚಿತ್ರವನ್ನು ವಜ್ರಜಂಘ ನೋಡಿ ಹಲುಬುವ ಸನ್ನಿವೇಶವನ್ನು ಪಂಪ ವರ್ಣಿಸಿದ್ದಾನೆ. ಆದರೆ ಆ ಕಾಲದ ದೇವಾಲಯಗಳ ಮತ್ತು ಬಸದಿಗಳ ಗೋಡೆಗಳ ಮೇಲೆ ವರ್ಣಚಿತ್ರಗಳನ್ನು ರಚಿಸುವುದು ಬಹು ಅಪರೂಪವಾಗಿರಬೇಕು.



ಮೈಸೂರಿನ ಸಾಂಪ್ರದಾಯಿಕ ಚಿತ್ರಕಲೆ

ಮರದ, ಮಣ್ಣಿನ ಅಥವಾ ಇಟ್ಟಿಗೆಯ ಕಟ್ಟಡಗಳನ್ನು ಕಟ್ಟಿ ಆ ಕಟ್ಟಡಗಳ ಹಿಂಭಾಗದ ಗೋಡೆಗೆ ಸೇರಿದಂತೆ ಅರೆಯುಬ್ಬಿನಲ್ಲಿ ಮೃಣ್ಮೂರ್ತಿಗಳನ್ನು ಬಿಡಿಸಿ ಬಣ್ಣಹಾಕುವ ಪದ್ಧತಿ ಹಲವು ಕಡೆ, ಮುಖ್ಯವಾಗಿ ಮಲೆನಾಡು ಕರಾವಳಿ ಪ್ರದೇಶಗಳಲ್ಲಿ ಉಳಿದು ಬಂದಿವೆ. ಈ ಪದ್ಧತಿ ಬಹು ಹಿಂದಿನ ಕಾಲದಿಂದಲೇ ಅನೂಚಾನವಾಗಿ ನಡೆದುಬಂದಿರಬೇಕು. ಇದೇ ರೀತಿ ಭೂತಪೂಜೆಯ ಅಂಗವಾಗಿ ಹಲವು ಬಗೆಯ ಪ್ರಾಣಿಗಳ ಮತ್ತು ಮಾನವರ ಮೂರ್ತಿಗಳನ್ನು ಮರದಿಂದ ನಿರ್ಮಿಸಿ ಅವಕ್ಕೆ ಕಟುವರ್ಣಗಳನ್ನು ಹಾಕಿಟ್ಟು ಪೂಜಿಸುವ ಪದ್ಧತಿಯೂ ನಡೆದು ಬಂದಿದೆ. ಇಲ್ಲೆಲ್ಲ ಬಣ್ಣಕ್ಕೆ ಪ್ರಾಶಸ್ತ್ಯ. ಉದ್ಯಾವರ, ಪೊಳಲಿ, ಮೂಡಬಿದರೆ, ಬಾರಕೂರು, ಅನಂತಪುರ ಮುಂತಾದ ಕಡೆಗಳಲ್ಲಿ ಇರುವ ಬೃಹದಾಕಾರದ ಮೃಣ್ಮೂರ್ತಿಗಳೂ ಮೆಕ್ಕೆಕಟ್ಟೆ ಮತ್ತು ಇತರೆಡೆಗಳಲ್ಲಿರುವ ಚಿತ್ರವಿಚಿತ್ರವಾದ ದಾರುಮೂರ್ತಿಗಳೂ ಈಗ ಇರುವಂತೆ ಎಷ್ಟು ಹಿಂದಿನವೆಂದು ಹೇಳಲಾಗದಿದ್ದರೂ ಬಹು ಹಿಂದಿನ ಕಾಲದಲ್ಲಿಯೇ ಈ ಮೂರ್ತಿಗಳನ್ನು ಸ್ಥಾಪಿಸಿದ್ದು ಕಾಲಕಾಲಕ್ಕೆ ಅವನ್ನು ನವೀಕರಿಸುತ್ತಿದ್ದರೆಂದು ಹೇಳಬಹುದು. ದಕ್ಷಿಣ ಕನ್ನಡ ಜಿಲ್ಲೆಯ ಪೊಳಲಿಯ ಭಟ್ಟಾರಕಿಯ ಹೆಸರು ಹತ್ತನೆಯ ಶತಮಾನದ ಶಾಸನದಲ್ಲಿಯೇ ಇದೆ. ಇಲ್ಲಿಯ ಮೃಣ್ಮೂರ್ತಿಗಳು ಸುಂದರವಾದ ವರ್ಣಗಳಿಂದ ಅಲಂಕೃತವಾಗಿವೆ. ಆದರೆ ಇವುಗಳ ಮೂಲವರ್ಣಗಳು ಉಳಿದು ಬಂದಿಲ್ಲವಾಗಿ ಹಿಂದೆ ಅವು ಹೇಗಿದ್ದುವೆಂದು ಹೇಳಲು ಬಾರದು. 6-7ನೆಯ ಶತಮಾನಗಳ ಅನಂತರ ಶಿಲಾದೇವಾಲಯಗಳಲ್ಲಿ ಮೂರ್ತಿಶಿಲ್ಪಕ್ಕೆ ಪ್ರಾಧಾನ್ಯ ಬಂದುದರಿಂದ ಶಿಲ್ಪದಲ್ಲಿಯೇ ಎಲ್ಲ ಅಲಂಕರಣಗಳನ್ನೂ ಪೂರೈಸಲಾರಂಭಿಸಿದುದರಿಂದ ಬಹುಶಃ ವರ್ಣಚಿತ್ರಗಳಿಗೆ ಅವಕಾಶ ಕಡಿಮೆಯಾಗಿರಬೇಕು. ಅದರ ಬದಲು ಇಟ್ಟಿಗೆ, ಮರಗಳಿಂದ ಕಟ್ಟುತ್ತಿದ್ದ ಅರಮನೆ ಗುರುಮನೆಗಳಲ್ಲಿ ಇಂಥ ಚಿತ್ರಗಳನ್ನು ರಚಿಸುತ್ತಿದ್ದಿರಬೇಕು. ಆ ಕಾಲದ ಇಂಥ ಕಟ್ಟಡಗಳು ಈಗ ಉಳಿದು ಬಂದಿಲ್ಲ. ಹೊಯ್ಸಳರ ಕಾಲದ ಒಂದೆರಡು ದೇವಾಲಯಗಳಲ್ಲಿ ಒಳಚಾವಣಿಯಲ್ಲಿ ರೇಖಾ ಚಿತ್ರಗಳು ಉಳಿದುಬಂದಿವೆ. ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ ನಿರ್ಮಿತವಾಗಿರಬಹುದಾದ ಶ್ರವಣಬೆಳಗೊಳದ ಶಾಂತಿನಾಥ ಬಸದಿಯ ಗೋಡೆಗಳು ಮತ್ತು ಚಾವಣಿಗಳು ಚಿತ್ರಗಳಿಂದ ಅಲಂಕೃತವಾಗಿದ್ದುವು. ಈಗ ಅಲ್ಲಲ್ಲೆ ಅದರ ಕುರುಹುಗಳು ಮಾತ್ರ ಇವೆ. ಅವುಗಳಲ್ಲಿ ನಿಂತಿರುವ ಜಿನಮೂರ್ತಿಗಳು, ನರ್ತಕಿಯರು ಮುಂತಾದವರ ಚಿತ್ರಗಳು ಪರಿಶೀಲನಾರ್ಹವಾಗಿವೆ. ಬಹುಶಃ ಹನ್ನೆರಡನೆಯ ಶತಮಾನಕ್ಕೆ ಸೇರಿದ ಮೂರು ಓಲೆಗರಿ ಹಸ್ತಪ್ರತಿಗಳು ಮೂಡಬಿದರೆಯ ಜೈನಗ್ರಂಥಾಲಯದಲ್ಲಿದ್ದು ಅವುಗಳ ಮೇಲೆ ವರ್ಣಚಿತ್ರಗಳಿರುವುದೊಂದು ವಿಶೇಷ. ಧವಲಾ, ಜಯಧವಲಾ ಮತ್ತು ಮಹಾಧವಲಾ ಎಂಬ ಹೆಸರಿನ ಈ ಮೂರು ಗ್ರಂಥಗಳೂ ಮಸಿಯಲ್ಲಿ ಬರೆದುವಾಗಿದ್ದು ಪ್ರತಿ ಪುಟದ ಎರಡು ಕಡೆಯೂ ಚಿತ್ತಾರದ ಅಂಚುಗಳ ನಡುವೆ ಕಿರುಚಿತ್ರಗಳಿವೆ. ತೀರ್ಥಂಕರರು, ಯಕ್ಷಯಕ್ಷಿಯರು, ಮುನಿಗಳು, ಇತರ ಮೂರ್ತಿಗಳನ್ನು ರೇಖೆಗಳಿಂದ ಚಿತ್ರಿಸಿ ಬಣ್ಣ ತುಂಬಿದ್ದಾರೆ. ಅಲ್ಲಲ್ಲಿ ವರ್ತುಲಗಳ ನಡುವೆ ಹೂಗಳನ್ನು ಬಿಡಿಸಿ ಬಣ್ಣ ತುಂಬಿಸಿರುವುದುಂಟು. ಗಿಡಮರಗಳು, ನವಿಲು ಹಂಸಗಳು, ಅವುಗಳ ಸುರುಳಿಸುರುಳಿಯಾಗಿ ಬಿಚ್ಚಿರುವ ತೋಕೆಗಳು, 12ನೆಯ ಶತಮಾನದ ವರ್ಣಚಿತ್ರ ರೀತಿಯ ಮಾದರಿಯಾಗಿವೆ. ನೇಮಿನಾಥಪುರಾಣದ ಹಸ್ತಪ್ರತಿಯೊಂದರಲ್ಲಿಯೂ ಇಂಥ ಚಿತ್ರಗಳನ್ನು ಕಾಣಬಹುದು.

ವಿಜಯನಗರ ಕಾಲಕ್ಕೆ ಬಂದಮೇಲೆ ಭಿತ್ತಿಚಿತ್ರಗಳು ಕಾಣಿಸತೊಡಗುತ್ತವೆ. ಇವರ ಕಾಲದಲ್ಲಿ ದೇವಾಲಯಗಳು ಕಗ್ಗಲ್ಲಿನಲ್ಲಿ ನಿರ್ಮಿತವಾಗಿ ಚಾವಣಿಗಳು ಸರಳವಾಗಿರುತ್ತಿದ್ದುದರಿಂದ ಅಲ್ಲಲ್ಲಿ ಅವುಗಳನ್ನು ಚಿತ್ರಗಳಿಂದ ತುಂಬುವ ಪ್ರಯತ್ನ ನಡೆದಂತೆ ತೋರುತ್ತದೆ. ಹಂಪೆಯ ವಿರೂಪಾಕ್ಷ ದೇವಾಲಯದ ಮುಂದೆ ಕೃಷ್ಣದೇವರಾಯ ಕಟ್ಟಿಸಿದ ರಂಗಮಂಟಪದ ಒಳಚಾವಣಿ ಮತ್ತು ಸುತ್ತಣ ತೊಲೆಗಳ ಮೇಲೆ ಹಲವಾರು ಚಿತ್ರಗಳನ್ನು ರಚಿಸಲಾಗಿದೆ. ಮುಖ್ಯವಾಗಿ ಗಿರಿಜಾಕಲ್ಯಾಣ ಮುಂತಾದ ಶಿವಲೀಲೆಗಳೂ ತ್ರಿಪುರಾಸುರಸಂಹಾರ, ವಿಷ್ಣುವಿನ ದಶಾವತಾರ, ಅರ್ಜುನನ ಮತ್ಸ್ಯಭೇದ ಮುಂತಾದುವೂ ಅಡ್ಡತೊಲೆಯೊಂದರ ಮೇಲೆ ಸನ್ಯಾಸಿಯೊಬ್ಬರ ಮೆರವಣಿಗೆಯೂ ಇವೆ. ಈ ಸನ್ಯಾಸಿಯು ವಿದ್ಯಾರಣ್ಯರೆಂದು ಕೆಲವರು ಭಾವಿಸಿದರೆ ಕೃಷ್ಣರಾಯನ ಗುರುವಾಗಿದ್ದ ವ್ಯಾಸರಾಯರೆಂದೂ ಕುಹೂಯೋಗದಲ್ಲಿ ವ್ಯಾಸರಾಯರು ಸಿಂಹಾಸನದ ಮೇಲೆ ಕುಳಿತಿದ್ದು ರಾಜನಿಗೆ ಬಂದ ಕುತ್ತನ್ನು ಪರಿಹರಿಸಿದುದನ್ನು ಸೂಚಿಸುತ್ತದೆಂದು ಮತ್ತೆ ಕೆಲವರು ತಿಳಿದಿದ್ದಾರೆ. ಪಾದದಿಂದ ಸೊಂಟದವರೆಗೂ ಹಿಂದಕ್ಕೆ ಬಾಗಿದಂತಿದ್ದು ಅಲ್ಲಿಂದ ಮೇಲಿನ ಭಾಗ ಸ್ವಲ್ಪ ಮುಂಚಾಚಿದಂತಿರುತ್ತದೆ. ಈ ಚಿತ್ರಗಳನ್ನು ಅನಂತರದ ಕಾಲದಲ್ಲಿ ತಿದ್ದಿ ಪುನಃ ಬಣ್ಣಕೊಟ್ಟಿರುವುದರಿಂದ ಅದರ ಮೂಲ ಸೊಗಸಿಗೆ ಊನ ಬಂದಿದೆ. ಇದೇ ಕಾಲದ ಚಿತ್ರಗಳು ಆನೆಗೊಂದಿಯಲ್ಲಿ ಮಂಟಪವೊಂದರ ಚಾವಣಿಯಲ್ಲೂ ಕಂಡುಬಂದರೂ ಬಹುಮಟ್ಟಿಗೆ ಅವು ಶಿಥಿಲವಾಗಿವೆ. ಇವುಗಳಿಗೆ ಮಾದರಿಯಾಗಿರುವುದು ಕರ್ನಾಟಕದ ಆಚೆ ಇರುವ

ಲೇಪಾಕ್ಷಿಯಲ್ಲಿನ ಸೊಗಸಾದ ವರ್ಣಚಿತ್ರಗಳು. ವಿಜಯನಗರದ ಅಧೀನದಲ್ಲಿದ್ದ ಹಲವು ಪಾಳೆಯಗಾರರೂ ತಮ್ಮತಮ್ಮ ರಾಜ್ಯಗಳಲ್ಲಿ ಇಂಥ ಭಿತ್ತಿಚಿತ್ರಗಳನ್ನು ಬೆಳೆಸಿಕೊಂಡು ಬಂದರು. ಚಾಮರಾಜನಗರ ತಾಲ್ಲೂಕು ಹರದನಹಳ್ಳಿಯ ದಿವ್ಯಲಿಂಗೇಶ್ವರಸ್ವಾಮಿಯ ದೇವಾಲಯದ ಹಿಂಭಾಗದಲ್ಲಿರುವ ಕೈಸಾಲೆಯ ಚಾವಣಿಯಲ್ಲಿರುವುದೂ ಇದೇ ವಿಜಯನಗರ ಶೈಲಿಯನ್ನನುಕರಿಸಿದ ಚಿತ್ರಗಳೇ. ಲೇಪಾಕ್ಷಿಯ ಚಿತ್ರಗಳಂತಿರುವ ಇಲ್ಲಿನ ಚಿತ್ರಗಳಲ್ಲಿ ಚಲನೆಯಿದೆ, ಸತ್ವವಿದೆ. ಗಜಾಸುರನನ್ನು ಸೀಳಿ ತಾಂಡವವಾಡುತ್ತಿರುವ ಶಿವನ ಚಿತ್ರ ಚೈತನ್ಯಪೂರ್ಣವಾಗಿದೆ. ಹಿರಿಯೂರಿನ ತೇರುಮಲ್ಲೇಶ್ವರ ದೇವಾಲಯ, ಮಾಗಡಿಯ ಸೋಮೇಶ್ವರ ದೇವಾಲಯ ಮೊದಲಾದವುಗಳಲ್ಲಿ ವಿಜಯನಗರದ ಕಡೆಯ ಕಾಲಕ್ಕೆ ಸೇರಬಹುದಾದ ಭಿತ್ತಿಚಿತ್ರಗಳಿವೆ. ಹೆಚ್ಚಾಗಿ ಇವು ಶಿವಲೀಲೆಗಳನ್ನು, ಅದರಲ್ಲಿಯೂ ಗಿರಿಜಾ ಕಲ್ಯಾಣವನ್ನು, ವಿಸ್ತಾರವಾಗಿ ಪ್ರತಿಪಾದಿಸುತ್ತವೆ. ಇವಲ್ಲದೆ ವಸ್ತಾರೆಯಲ್ಲಿನ ಪದ್ಮಾವತಿ ಗುಡಿಯಲ್ಲಿ ಜೈನಸಂಪ್ರದಾಯದ ಚಿತ್ರಗಳುಂಟು. ಈ ಚಿತ್ರಗಳೆಲ್ಲ ಪರಂಪರಾಗತವಾಗಿ ಬಂದ ದೇಶೀಯ ಶೈಲಿಯಲ್ಲಿವೆ; ಕಲ್ಲಿನ ಮೇಲೆ ತೆಳುವಾಗಿ ಮೆತ್ತಿರುವ ನಯವಾದ ಗಾರೆಯ ಮೇಲೆ ರಚಿತವಾಗಿವೆ. ಚಿತ್ರದ ಆಧಾರದಲ್ಲಿ ಸೂಕ್ಷ್ಮಕಣಗಳಿಂದ ಕೂಡಿದ ಮೂರು ಪೊರೆಗಳು ಇರುತ್ತವೆ. ಚಿತ್ರಕ್ಕೂ ಒಳಗಿನ ಬಿಳಿಯ ಲೇಪನಕ್ಕೂ ನಡುವೆ ಮೊದಲ ಪೊರೆ ಬರುತ್ತದೆ. ಎರಡನೆಯ ಪೊರೆ ಆ ಬಿಳಿಯ ಲೇಪನ ಮತ್ತು ಗಾರೆ ಮಿಶ್ರಣದ ನಡುವೆ ಇದೆ. ಈ ಎರಡು ಲೇಪನಗಳ ಹಿಂದೆ ಸಮವಾದ ಸುಣ್ಣದ ಲೇಪನವನ್ನು ಕೊಡಲಾಗಿರುತ್ತದೆ. ಹೀಗೆ ಉತ್ತಮ ರೀತಿಯಲ್ಲಿ ಭಿತ್ತಿಯನ್ನು ಸಿದ್ಧಮಾಡಿ ಚಿತ್ರದ ರಚನೆಯನ್ನು ಮಾಡುತ್ತಾರೆ. ಚಿತ್ರಣದಲ್ಲಿ ವರ್ಣಗಳ ವೈಖರಿ, ಕುಂಚಗಳ ಸೂಕ್ಷ್ಮತೆ ಗಮನಾರ್ಹವಾದುದು. ಮೂಲ ವರ್ಣಗಳಾದ ಬಿಳುಪು, ಹಳದಿ, ಕೆಂಪು, ಕಪ್ಪು, ನೀಲಿ ಮತ್ತು ಇವುಗಳ ಪರಸ್ಪರ ಮಿಶ್ರಣದಿಂದ ನಾನಾ ವರ್ಣಗಳನ್ನು ಕಲಾವಿದರು ಪಡೆದುಕೊಂಡಿದ್ದಾರೆ. ಚಿತ್ರಗಳ ವಸ್ತು ಸಾಮಾನ್ಯವಾಗಿ ಧಾರ್ಮಿಕ, ವ್ಯಕ್ತಿಗಳ ಚಿತ್ರಣದಲ್ಲಿ ವಿಶೇಷತಃ ಪಾರ್ಶ್ವನೋಟವನ್ನಷ್ಟೇ ಮೂಡಿಸುವುದು ಈ ಕಾಲದ ಶೈಲಿಯ ವೈಶಿಷ್ಟ್ಯ.

ಇದೇ ಕಾಲದಲ್ಲಿ ಉತ್ತರದಲ್ಲಿ ಮುಸ್ಲಿಂ ಶೈಲಿಯ ಚಿತ್ರಗಳು ಬಳಕೆಗೆ ಬಂದುವು. ಬಹಮನೀ ಮತ್ತು ಬಿಜಾಪುರದರಸರು ಇದಕ್ಕೆ ಪ್ರೋತ್ಸಾಹ ಕೊಟ್ಟರು. ಇವರ ಕಾಲದಲ್ಲಿ ಕಾಗದದ ಮೇಲೆ ಕಿರುಚಿತ್ರಗಳನ್ನು ಚಿತ್ರಿಸುವುದು, ಹಸ್ತಪ್ರತಿಗಳಲ್ಲಿ ವರ್ಣಚಿತ್ರಗಳನ್ನು ರಚಿಸುವುದು ಹೇರಳವಾಗಿ ನಡೆದಿರಬೇಕು. ಈಗ ಕರ್ನಾಟಕದಲ್ಲಿ ಉಳಿದುಬಂದಿರುವುದು ಬಹು ಸ್ವಲ್ಪ, ಇವರ ಕಾಲದ ಭಿತ್ತಿಚಿತ್ರಗಳು ಕೆಲವು ಉಳಿದುಬಂದಿವೆ. ಕಮ್ಮಟಗಿಯ ಸ್ನಾನಗೃಹವೊಂದರ ಗೋಡೆ ಚಾವಣಿಗಳಲ್ಲಿ ಅಲಂಕರಣ ಚಿತ್ರಗಳೂ ವ್ಯಕ್ತಿಚಿತ್ರಗಳೂ ಇದ್ದುವು. ಇವು ಈಗ ಬಹುಮಟ್ಟಿಗೆ ಅಳಿಸಿಹೋಗಿವೆ. ಬಿಜಾಪುರದ ಆಸಾರ್ ಮಹಲ್‌ನ ಗೋಡೆಗಳ ಮೇಲೂ ಇಂಥ ಚಿತ್ರಗಳು ಇವೆ. ಇವು ಹೆಚ್ಚಾಗಿ ಹೂಬಳ್ಳಿಗಳ ಕುಂಡಗಳ ಅಲಂಕರಣ ಚಿತ್ರಗಳೇ. ಬೀದರ್‌ನ ಕಟ್ಟಡಗಳಲ್ಲಿ ವರ್ಣಸಂಯೋಜನೆಯುಳ್ಳ ಗಾಜಿನ ಮೆರಗಿನ ಬಿಲ್ಲೆಗಳನ್ನು ಜೋಡಿಸಿ ಚಿತ್ರಗಳನ್ನು ರಚಿಸಿದ್ದಾರೆ. ಒಂದೆಡೆ ಹುಲಿಯ ಚಿತ್ರವೂ ಉಂಟು. ಬಿಜಾಪುರದ ವಸ್ತುಸಂಗ್ರಹಶಾಲೆಯಲ್ಲಿ, ಖಾಸಗಿಯಾಗಿ ಕೆಲವರ ಬಳಿ ಇರುವ ಆ ಕಾಲದ ಕಿರುಚಿತ್ರಗಳು, ಚಿತ್ರಿತ ಹಸ್ತಪ್ರತಿಗಳು ದಖನೀ ಸಂಪ್ರದಾಯಕ್ಕೆ ಸೇರಿದವು. ರಾಗರಾಗಿಣಿಯರ ಚಿತ್ರಗಳು, ಗ್ರಂಥಗಳಲ್ಲಿ ಬರುವ ವಸ್ತುವನ್ನು ಅಲ್ಲಲ್ಲಿ ಚಿತ್ರಿಸುವುದು, ರಾಮಾಯಣ, ಭಾರತಗಳಿಂದ ಆಯ್ದ ವಸ್ತುವನ್ನು ಚಿತ್ರಿಸುವುದು ಇಲ್ಲಿ ಕಂಡುಬರುತ್ತದೆ. ಸುಲ್ತಾನರ, ರಾಣಿಯರ ವ್ಯಕ್ತಿಚಿತ್ರಣಗಳೂ ಉಂಟು.

ವಿಜಯನಗರದ ಅನಂತರ ಚಿತ್ರಕಲೆಗೆ ಹೆಚ್ಚಿನ ಪ್ರೋತ್ಸಾಹ ಕೊಟ್ಟವರು ಮೈಸೂರರಸರು. ಇವರ ಕಾಲದಲ್ಲಿ ಅನೇಕ ದೇವಾಲಯಗಳು ಮತ್ತು ಕಟ್ಟಡಗಳಲ್ಲಿ ಭಿತ್ತಿಚಿತ್ರಗಳ ರಚನೆಯಾಗಿದೆ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ನಿರ್ಮಿತವಾದ ಶ್ರವಣಬೆಳಗೊಳದ ಕಲ್ಯಾಣಿಯ ಮಂಟಪದಲ್ಲಿ ಆ ಕಾಲದ ಚಿತ್ರಗಳಿದ್ದುವು. ಕುರುಹುಗಳು ಮಾತ್ರ ಈಗ ಉಳಿದುಬಂದಿವೆ. ಎಡೆಯೂರಿನ ತೋಂಟದ ಸಿದ್ಧಲಿಂಗೇಶ್ವರ ದೇವಸ್ಥಾನದ ಮುಖಮಂಟಪದಲ್ಲಿ ಪಂಚವಿಂಶತಿ ಲೀಲಾಮೂರ್ತಿಗಳೂ ಸಿದ್ಧಲಿಂಗ ಯತಿಯ ಜೀವಿತಕ್ಕೆ ಸಂಬಂಧಿಸಿದ ಚಿತ್ರಗಳೂ ಇವೆ. ಗುಬ್ಬಿಯ ಮೈಲಪ್ಪನ ಗುಡಿಯ ಮುಖಮಂಟಪದಲ್ಲಿಯೂ ಶಿವನ ಪಂಚವಿಂಶತಿ ಲೀಲಾ ಮೂರ್ತಿಗಳುಂಟು. ಬೆಳಕವಾಡಿಯ ಮಂಟೇಸ್ವಾಮಿ ಮಠದ ಹಜಾರವೂ ರಾಮಾಯಣ ಮತ್ತು ಶಿವಲೀಲೆಗಳ ಚಿತ್ರಗಳನ್ನು ಹೊಂದಿದೆ.



ಗೋವರ್ಧನ ಗಿರಿಧಾರಿ: ಮೈಸೂರಿನ ಸಂಪ್ರದಾಯಿಕ ಚಿತ್ರಕಲೆ

ಟಿಪ್ಪುವಿನ ಕಾಲದಲ್ಲಿ ಕಟ್ಟಿದ ಶ್ರೀರಂಗಪಟ್ಟಣದ ದರಿಯಾದೌಲತ್‌ನಲ್ಲಿ ಕಂಬಗಳು, ಗೋಡೆಗಳು, ಚಾವಣಿಗಳೆಲ್ಲ ಒಳಗೂ ಹೊರಗೂ ಬಗೆಬಗೆಯ ವರ್ಣಚಿತ್ರಗಳಿಂದ ರಂಜಿತವಾಗಿವೆ. ಅನೇಕ ರಾಜರ, ಅಧಿಕಾರಿಗಳ, ರಾಣಿವಾಸದ ವ್ಯಕ್ತಿಚಿತ್ರಗಳು ಒಂದು ಗೋಡೆಯನ್ನಾವರಿಸಿದ್ದರೆ ಮತ್ತೊಂದು ಗೋಡೆಯ ಮೇಲೆ ಹೈದರ್ ಮತ್ತು ಟಿಪ್ಪುಗಳು ಪಾಲಿ ಎಂಬ ಊರಿನಲ್ಲಿ ನಡೆಸಿದ ಯುದ್ಧವನ್ನು ವಿವರವಾಗಿ ಚಿತ್ರಿಸಿದೆ. ಕಟ್ಟಡದ ಒಳಭಾಗದಲ್ಲಿ ಕಂಬಗಳ ಮೇಲೆಲ್ಲ ಗಿಡಗಳು, ಬಳ್ಳಿಗಳು, ಕುಂಡಗಳು ಮುಂತಾದ ಅಲಂಕರಣ ಚಿತ್ರಗಳಿದ್ದು ಇದಕ್ಕಾಗಿ ಕಟುವರ್ಣಗಳನ್ನು ಮಾತ್ರವಲ್ಲದೆ ಚಿನ್ನದ ರೇಕುಗಳನ್ನೂ ಬಳಸಿದೆ. ಕಟ್ಟಡದ ಭಾಗಗಳನ್ನೆಲ್ಲಾ ತುಂಬುವಂತೆ ಇಷ್ಟು ವಿಸ್ತಾರವಾಗಿ ಚಿತ್ರಿಸಿರುವುದು ಕರ್ನಾಟಕದಲ್ಲಿ ಬೇರೆ ಇಲ್ಲ. ಟಿಪ್ಪುವಿನ ಬೆಂಗಳೂರಿನ ಅರಮನೆಯಲ್ಲಿಯೂ ಚಿತ್ರಗಳಿದ್ದ ಕುರುಹುಗಳಿವೆ. ಬಹುಶಃ ಇದೇಕಾಲಕ್ಕೆ ಸೇರಿದುದು ಸೀಬಿಯ ನರಸಿಂಹಸ್ವಾಮಿ ದೇವಾಲಯದ ಮುಖಮಂಟಪ ಮತ್ತು ಮಹಾದ್ವಾರಗಳ ಅಂಕಣದಲ್ಲಿರುವ ವರ್ಣಚಿತ್ರಗಳು. ವಿಷ್ಣುವಿನ ದಶಾವತಾರಗಳು, ಶಿವಲೀಲೆಗಳು, ರಾಮಾಯಣ – ಭಾರತದ ಆಯ್ದ ಘಟನೆಗಳು, ವಿಶ್ವರೂಪ ಮುಂತಾದುವನ್ನು ಮುಖಮಂಟಪದಲ್ಲೂ ನರಸಿಂಹ ಚಂಚುಲಕ್ಷ್ಮಿಯರ ಕಥೆ, ಗೋವರ್ಧನೋದ್ಧರಣಗಳು ಮಹಾದ್ವಾರದಲ್ಲೂ ಇದ್ದು ಇವುಗಳೊಂದಿಗೆ ಟಿಪ್ಪು, ಅವನ ಕಾಲದಲ್ಲಿದ್ದ ಮುಸ್ಲಿಂ ಮತ್ತು ಹಿಂದು ಗಣ್ಯವ್ಯಕ್ತಿ ಚಿತ್ರಣಗಳನ್ನೂ ಸೈನ್ಯಗಳನ್ನೂ ಒಂದೆಡೆ ತೋರಿಸಿದ್ದಾರೆ.

ಕರ್ನಾಟಕದ ಇತರ ಕಡೆಗಳಲ್ಲಿ ಶ್ರೀಮಂತರ ರಾಜವಾಡೆಗಳಲ್ಲಿ ಚಿತ್ರಗಳನ್ನು ಬರೆಸುತ್ತಿದ್ದುದ್ದು ಹಲವು ಕಡೆ ಕಂಡುಬಂದಿದೆ. ನಿಪ್ಪಾಣಿಯ

ರಾಜವಾಡೆ, ಅಥಣಿಯ ವೀರಶೈವ ಮಠ ಮತ್ತು ನಿಪ್ಪಾಣಿ ಕರವಾಡೆ, ನರಗುಂದದ ಅರಮನೆ ಮತ್ತು ಕೋಟೆಯೊಳಗಿನ ವೆಂಕಟೇಶ್ವರ ದೇವಾಲಯ, ಕೊಡಗಿನಲ್ಲಿರುವ ಕೊಡಗಿನ ರಾಜರ ಅರಮನೆ, ಇವುಗಳಲ್ಲಿ ಹಲವು ಬಗೆಯ ಚಿತ್ರಗಳು ಶಿಥಿಲಾವಸ್ಥೆಯಲ್ಲಿ ಬೇರೆ ಬೇರೆ ಹಂತಗಳಲ್ಲಿ ಇನ್ನೂ ಉಳಿದುಬಂದಿವೆ.



ಡಿ.ಜಿ.ಬಡಿಗೇರ ಅವರ ಒಂದು ಕಲಾಕೃತಿ

ಮುಮ್ಮಡಿ ಕೃಷ್ಣರಾಜ ಒಡೆಯರು ಚಿತ್ರಕಾರರಿಗೆ ಬಹುಮಟ್ಟಿನ ಉತ್ತೇಜನವಿತ್ತರು. ಟಿಪ್ಪುವಿನ ಕಾಲದ ಚಿತ್ರಣರೀತಿ ಇವರ ಕಾಲದಲ್ಲಿ ಮುಂದುವರಿಯಿತು. ಮೈಸೂರಿನ ವೆಂಕಟರಮಣಸ್ವಾಮಿ ದೇವಾಲಯದಲ್ಲಿಯೂ ಮುಡುಕುತೊರೆ ಮಲ್ಲಿಕಾರ್ಜುನಸ್ವಾಮಿ ದೇವಾಲಯದಲ್ಲಿಯೂ ಚಿತ್ರಮಂಟಪಗಳಿದ್ದು ವೆಂಕಟರಣಸ್ವಾಮಿ ದೇವಾಲಯದಲ್ಲಿ ಪೌರಾಣಿಕ ಚಿತ್ರಗಳು, ಪ್ರಕೃತಿ ಚಿತ್ರಗಳೂ ಕೃಷ್ಣರಾಜ ಒಡೆಯರು ಅವರ ಹಿಂದಿನ ಕೆಲವು ರಾಜರುಗಳು, ಪೂರ್ಣಯ್ಯ, ಸುಬ್ಬರಾಯದಾಸ ಮೊದಲಾದವರ ವ್ಯಕ್ತಿಚಿತ್ರಣಗಳೂ ಮಲ್ಲಿಕಾರ್ಜುನ ದೇವಾಲಯದಲ್ಲಿ ಶಿವಲೀಲೆಗಳ, ಋಷಿಗಳ ದೇವತೆಗಳ ಚಿತ್ರಗಳೂ ತುಂಬಿವೆ. ಇದೇ ಕಾಲದ ಶ್ರವಣಬೆಳಗೊಳದ ಜೈನಮಠದಲ್ಲಿ ಜಿನರ, ಜೈನಚಕ್ರವರ್ತಿಗಳ ಜೀವನವನ್ನು ತೋರಿಸುವ ಭಿತ್ತಿಚಿತ್ರಗಳು ತುಂಬಿವೆ. ಪಂಚಪರಮೇಷ್ಠಿಗಳು, ಯಕ್ಷಯಕ್ಷಿಯರು, ಚೌವೀಸ ತೀರ್ಥಂಕರರು, ಪಾರ್ಶ್ವನಾಥನ ಸಮವಸರಣ, ಭರತ ಚಕ್ರವರ್ತಿಯ ಜೀವನಚಿತ್ರ, ಮೊದಲಾದುವುಗಳ ಜೊತೆಗೆ ಕಾಡಿನ ಪ್ರಕೃತಿಚಿತ್ರ, ಮುಮ್ಮಡಿ ಕೃಷ್ಣರಾಜ ಒಡೆಯರ ವ್ಯಕ್ತಿಚಿತ್ರ ಮೊದಲಾದವನ್ನು ನೋಡಬಹುದು. (ಎಂ.ಎಚ್.)

ಮೈಸೂರು ಪ್ರಭುಗಳ ಕಲಾಪ್ರೇಮದಿಂದಾಗಿ ಉಳಿದಿರುವ ಕನ್ನಡದ ಅಪೂರ್ವ ಕಲಾಕೃತಿಗಳಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರೇ ರಚಿಸಿದ್ದೆನ್ನಲಾದ ಶ್ರೀತತ್ತ್ವನಿಧಿ ಎಂಬ ಬೃಹತ್ ಗ್ರಂಥವೂ ಒಂದು. ಇದರಲ್ಲಿ ಸಾವಿರಾರು ವರ್ಣರಂಜಿತ ಚಿತ್ರಗಳಿವೆ. ಇಲ್ಲಿ ಶಕ್ತಿನಿಧಿ, ವಿಷ್ಣುನಿಧಿ, ಶಿವನಿಧಿ, ಬ್ರಹ್ಮನಿಧಿ, ಗ್ರಹನಿಧಿ, ವೈಷ್ಣವನಿಧಿ, ಶೈವನಿಧಿ, ಆಗಮನಿಧಿ, ಕೌತುಕನಿಧಿ ಎಂಬ ಒಂಬತ್ತು ದಳಗಳಿವೆ. ಶಕ್ತಿನಿಧಿಯಲ್ಲಿ ಶ್ರೀ ಚಾಮುಂಡೇಶ್ವರಿಯ ಸುವರ್ಣರಂಜಿತ ಚಿತ್ರ ಸೊಗಸಾಗಿದೆ. ವಿಷ್ಣುನಿಧಿಯಲ್ಲಿ ನೃಸಿಂಹ, ಶೇಷಶಾಯಿ, ತಾರಕರಾಮ, ಪಟ್ಟಾಭಿರಾಮ ದಶಾವತಾರ ಮೊದಲಾದ ವೈಷ್ಣವ ಚಿತ್ರಗಳು, ಶಿವನಿಧಿಯಲ್ಲಿ ಕೈಲಾಸಮೂರ್ತಿ, ಪಂಚವಿಂಶತಿ ಶಿವಲೀಲೆಗಳು, ತಾಂಡವಮೂರ್ತಿಗಳು, ಗಣೇಶಕುಮಾರ, ವೀರಭದ್ರ ಮೊದಲಾದ ಶೈವಚಿತ್ರಗಳು, ಬ್ರಹ್ಮನಿಧಿಯಲ್ಲಿ ಬ್ರಹ್ಮಲೋಕ, ಚತುರ್ಮುಖ ಬ್ರಹ್ಮ, ಸರಸ್ವತಿ, ಸಪ್ತಋಷಿಗಳು, ಅಷ್ಟನದಿಗಳು, ಚತುರ್ದಶ ಲೋಕಗಳು, ಇಂದ್ರರು, ಅಷ್ಟವಸುಗಳು ವೇದಸ್ವರೂಪ ದೇವಾಯುಧೋಪಕರಣಗಳು, ಬತ್ತೀಸ ರಾಗಲಕ್ಷಣಗಳು ಮೊದಲಾದ ಚಿತ್ರಗಳು - ಹೀಗೆ ಆಯಾ ದಳಗಳಿಗೆ ಸಂಬಂಧಿಸಿದಂತೆ ಒಟ್ಟು 1888 ವರ್ಣರಂಜಿತ ಚಿತ್ರಗಳೂ 458 ರೇಖಾಚಿತ್ರಗಳೂ ಇವೆ. ಇಲ್ಲಿನ ಚಿತ್ರಗಳಲ್ಲಿನ ಹಿನ್ನೆಲೆಯಲ್ಲಿ ಬಳಸಿರುವ ಹಾಳತ, ತೆಳುವರ್ಣ, ದಪ್ಪವರ್ಣಗಳ ಬಳಕೆ, ರೇಖಾವಿನ್ಯಾಸ ಮೆಚ್ಚುವಂಥದು (ಇಂಥ ಅಪೂರ್ವ ಚಿತ್ರಗಳ ನಿಧಿ ಗ್ರಂಥಗಳು ಎರಡಿವೆ. ಒಂದು ಅರಮನೆಯಲ್ಲಿ ಮತ್ತೊಂದು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ).

1861ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಮೈಸೂರಿನಲ್ಲಿ ಜಗನ್ಮೋಹನ ಅರಮನೆಯನ್ನು ಕಟ್ಟಿಸಲು ಮೊದಲು ಮಾಡಿದರು. 1875ರ ವೇಳೆಗೆ ಅದು ಚಿತ್ರಶಾಲೆಯಾಗಿ ಪರಿವರ್ತನೆಗೊಂಡಿತು. ಈ ಕಲಾಸಂಗ್ರಹಾಲಯದಲ್ಲಿ ಕೆಲವು ಭಿತ್ತಿಚಿತ್ರಗಳಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ವಂಶವೃಕ್ಷ, ಮೈಸೂರು ಅರಸರ ವಂಶಾವಳಿಯನ್ನು ತೋರುವ ಸಂತಾನಾಂಬುಜ, ರಾಜರು ಆರು ಆನೆಗಳನ್ನು ಕಟ್ಟಿರುವ ರಥದಲ್ಲಿ ಜಂಬೂಸವಾರಿ ಹೊರಟಿರುವ ಚಿತ್ರ ಸೊಗಸಾಗಿದೆ. ಇಷ್ಟೇ ಅಲ್ಲದೆ ಕೊತ್ತಗಾಲ ಕಿತ್ತೂರುಗಳಲ್ಲಿ ಮುಮ್ಮಡಿಯವರು ಮೆರೆದ ಹುಲಿ ಶಿಕಾರಿ, ಕೆಂಪುನಂಜಯ್ಯನೆಂಬವ ಪಟ್ಟದಾನೆಯನ್ನು ಚಾಮರಾಜನಗರದ ಕಾಡಿನಿಂದ ಹಿಡಿದು ತಂದುದು-ಈ ದೃಶ್ಯಗಳಿವೆ. ಅಲ್ಲದೆ ಪ್ರಸನ್ನಪಾರ್ವತಿ, ದುರದುಂಡಿ ಸರ್ವಮಂಗಳ, ಜಗದಾಂಬ, ಪುಟ್ಟಚಾಮುಂಡಿ, ವರಚಾಮುಂಡಿ, ಚೆಲುವೆ ಚಾಮುಂಡಿಯರೆಂಬ ಪಟ್ಟದ ಹಸುಗಳು, ವಿಜಯ ಎಂಬ ಪಟ್ಟದ ಕುದುರೆ ಸರ್ವಚಿತ್ರರಂಜಿನಿ, ಸರ್ವಾಂಗಸುಂದರ ಎಂಬ ಮೋಹಕ ಕನ್ಯೆಯರು ಚಿತ್ರಿತವಾಗಿದ್ದಾರೆ. ಮತ್ತೊಂದು ಭಿತ್ತಿಯಲ್ಲಿ ಮುಮ್ಮಡಿಯವರ ಸಮಕಾಲೀನ ನವಾಬರ ಭಕ್ಷಿಗಳ ಪರಿವಾರದವರ ರೂಪಚಿತ್ರಗಳನ್ನು ಚಿತ್ರಿಸಲಾಗಿದೆ. ಮುಮ್ಮಡಿಯವರ ವಸಂತೋತ್ಸವದ ನೋಟ, ಚದುರಂಗದಾಟ ಮುಂತಾದವನ್ನು ಬಹು ಸೊಗಸಾಗಿ ಬಿಡಿಸಲಾಗಿದೆ. ಈ ಕಾಲದಲ್ಲಿ ವೀರಣ್ಣ, ಮಲ್ಲಪ್ಪ, ಬಸಣ್ಣ ಮುಂತಾದ ಕಲಾವಿದರಿದ್ದರು.

ಚಾಮರಾಜ ಒಡೆಯರ ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿಯೂ ಪ್ರಾಚೀನ ಸಂಪ್ರದಾಯದ ವರ್ಣಚಿತ್ರಕಲೆಗೆ ಸಾಕಷ್ಟು ಪ್ರೋತ್ಸಾಹ ದೊರೆತಿದೆ. ಈ ಅರಸರ ಕಾಲದಲ್ಲಿ ಬೆಳೆದ ಮೈಸೂರು ದೇಶೀಯ ಶೈಲಿಯ ಅನೇಕ ಅಪೂರ್ವ ಚಿತ್ರಪಟಗಳು ಮನೆಮನೆಗಳಲ್ಲೂ ರಾಮಮಂದಿರಗಳಲ್ಲೂ ಅರಮನೆ ಗುರುಮನೆಗಳಲ್ಲೂ ದೊರೆಯುತ್ತವೆ. ಈ ಕಲಾಸಂಪ್ರದಾಯವನ್ನು ಇನ್ನೂ ಉಳಿಸಿಕೊಂಡು ಬಂದಿರುವ ಕಲಾವಿದರು ಎಲ್ಲೋ ಅಪರೂಪವಾಗಿ ದೊರೆಯುತ್ತಾರೆ. ಕಾಗದದ ಮೇಲೆ ಬಟ್ಟೆಯ ಮೇಲೆ ಇಲ್ಲವೆ ಗಾಜಿನ ಮೇಲೆ ಜಲವರ್ಣ ಅಥವಾ ತೈಲವರ್ಣಗಳಲ್ಲಿ ರಾಜಮಹಾರಾಜರ ರೂಪಚಿತ್ರಗಳನ್ನೂ ದೇವದೇವತೆಗಳ ಹಾಗೂ ಅನೇಕ ಪೌರಾಣಿಕ ಸನ್ನಿವೇಶಗಳ ಸಂಯೋಜನಾ ಚಿತ್ರಗಳನ್ನೂ ರಚಿಸುವುದು ಈ ಸಂಪ್ರದಾಯದಲ್ಲಿ ವಿಶೇಷ. ಸುವರ್ಣ ಲೇಪನದ ಹಾಗೂ ದೇಶೀಯ ಮೂಲವರ್ಣಗಳ ಉಪಯೋಗ ಕಾಣುತ್ತದೆ. ಮೊದಲು ಸೀಸದ ಕಡ್ಡಿಯಲ್ಲಿ ಆಕೃತಿಯನ್ನು ರೂಪಿಸಿಕೊಂಡು ಅನಂತರ ವರ್ಣಗಳನ್ನು ಹಾಕಿ, ಅಲಂಕಾರ ವೈಖರಿ ತರುವೆಡೆಗಳಲ್ಲೆಲ್ಲ ಬಿಳಿಯ ಸೀಸದಲ್ಲಿ ರೇಖೆಗಳನ್ನು ಎಳೆದು ಅದರ ಮೇಲೆ ವಜ್ರದ ಅಂಟನ್ನು ಸವರಿ, ಅದರ ಮೇಲೆ ಚಿನ್ನದ ರೇಖೆಯನ್ನು ಲೇಪಿಸುವುದು. ಬೂಟ ಕುಸುರಿನ ಕೆಲಸ ಮಾಡುವಾಗ ವಿವಿಧ ವರ್ಣಗಳನ್ನು ಬಳಸಿ ಆಯಾ ಭಾಗಗಳಿಗೆ ಸರ್ವರೇಖುವಿನ ಲೇಪನ

ಮಾಡುವುದು ಇಲ್ಲಿನ ತಂತ್ರ. ಕೃತಿಗಳು ಪೂಜಾಚಿತ್ರಗಳಾದುದರಿಂದ ಚಿತ್ರಕಾರರ ಹೆಸರು ಇವುಗಳಲ್ಲಿ ಕಂಡುಬರುವುದಿಲ್ಲ. ಸುಂದರಯ್ಯ, ಕೊಂಡಪ್ಪ, ಎಲ್ಲಪ್ಪ, ದುರ್ಗದ ವೆಂಕಟಪ್ಪ, ನರಸಿಂಹಯ್ಯ ಮುಂತಾದವರು ಈ ಶೈಲಿಯನ್ನು ಉಳಿಸಿಕೊಂಡು ಬಂದವರಲ್ಲಿ ಕೆಲವರು.



ಕಾಶ್ಮೀರ ಕಣಿವೆಯ ರಮ್ಯ ದೃಶ್ಯ: ಅಮೀನ ಸಾಹೇಬ ಕಮಡೋಳಿಯವರ ಕಲೆ

**ಆಧುನಿಕ:** ಭಾರತ ಪಾಶ್ಚಾತ್ಯರ ಆಳಿಕೆಗೆ ಒಳಗಾದ ಮೇಲೆ ಭಾರತೀಯ ಪದ್ಧತಿಯ ಚಿತ್ರಕಲೆಗೆ ಅಪಾರ ಪೆಟ್ಟು ಬಿತ್ತು. ಪಾಶ್ಚಾತ್ಯ ಸಂಪ್ರದಾಯದ ಕಲಾಶಾಲೆಗಳು ಮುಂಬಯಿ, ಕಲ್ಕತ್ತ, ಮದರಾಸು, ಮೈಸೂರು ಮುಂತಾದ ಕಡೆ ತಲೆ ಎತ್ತಿಕೊಂಡವು. ಭಾರತೀಯ ಹಾಗೂ ಪಾಶ್ಚಾತ್ಯ ಮಿಶ್ರ ಕಲಾ ಸಂಪ್ರದಾಯದ ಚಿತ್ರಕಾರರೂ ಬೆಳೆದುಬಂದರು. ಮುಂಬಯಿಯ ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್ ಕಲಾಶಾಲೆ ಸಾವಿರಾರು ಚಿತ್ರಕಾರರನ್ನು ಬೆಳಕಿಗೆ ತಂದಿತು. ಇವರಲ್ಲಿ ಕನ್ನಡಿಗರೂ ಬಹುಮಂದಿ ಇದ್ದಾರೆ. ಪಾಶ್ಚಾತ್ಯ ಚಿತ್ರಕಲೆಯ ಪ್ರಭಾವ ಕರ್ನಾಟಕದಲ್ಲೂ ಕಾಣಿಸಿಕೊಳ್ಳಲಾರಂಭಿಸಿತು. 19-20ನೆಯ ಶತಮಾನಗಳಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಚಿತ್ರಕಲಾರಂಗದಲ್ಲಿ ಬೆಳೆದ ಅನೇಕ ಸಂಪ್ರದಾಯಗಳನ್ನು ಅನುಕರಿಸುವ, ಅವೇ ತಂತ್ರಗಳನ್ನು ಉಪಯೋಗಿಸಿ ದೇಶೀ ವಸ್ತುಗಳನ್ನು ಪ್ರತಿಪಾದಿಸುವ ಪಂಥಗಳೂ ಕರ್ನಾಟಕದಲ್ಲಿ ಕಾಣಿಸಿಕೊಂಡುವು. ಕರ್ನಾಟಕದ ಚಿತ್ರಕಲಾ ಇತಿಹಾಸದಲ್ಲಿ ಈ ಆಧುನಿಕ ಯುಗ ಸಂಕೀರ್ಣತೆಯ ಕಾಲ. ಪಾಶ್ಚಾತ್ಯರಲ್ಲಿ ಬೆಳೆದ ವೈವಿಧ್ಯಮಯದ ಚಿತ್ರರಚನಾತಂತ್ರಗಳು ತತ್ಸಂಬಂಧದ ಅನೇಕ ರೀತಿಯ ಹಿನ್ನೆಲೆಯ ವಸ್ತುಗಳು ಮತ್ತು ಕೃತಕ ವರ್ಣಗಳು — ಇವನ್ನು ಬಳಸುವುದು ಈ ಕಾಲದಲ್ಲಿ ಕಂಡುಬಂದ ಮುಖ್ಯ ಬದಲಾವಣೆ. ಪ್ರಾಚೀನ ಚಿತ್ರಕಲೆ ಹೆಚ್ಚಾಗಿ ಧಾರ್ಮಿಕವಸ್ತುಗಳನ್ನು ಅಭಿವ್ಯಕ್ತಿಗೊಳಿಸುತ್ತಿದ್ದರೆ, ಈ ಕಾಲದಲ್ಲಿ ಅನೇಕ ಲೌಕಿಕ ಸನ್ನಿವೇಶಗಳನ್ನೂ ಭಾವನೆಗಳನ್ನೂ ರೂಪಿಸುವುದು ಮತ್ತೊಂದು ಪ್ರಮುಖ ವ್ಯತ್ಯಾಸ. ಈ ಅನುಕರಣಗಳ ಜೊತೆಗೆ ಬಂಗಾಲದಲ್ಲಿ ಅವನೀಂದ್ರನಾಥ್ ಠಾಕೂರ್ ಮೊದಲಾದವರಿಂದ ವರ್ಧಿತವಾದ ದೇಶೀ ಪ್ರತಿಕ್ರಿಯೆಯ ಧಾಟಿಯೂ ಕರ್ನಾಟಕದಲ್ಲಿ ಕಾಣಿಸಿಕೊಂಡಿತು.

ಈ ವಿವಿಧ ಧಾಟಿಗಳಲ್ಲಿ ಚಿತ್ರರಚನೆ ಮಾಡಿರುವ ಮತ್ತು ಮಾಡುತ್ತಿರುವ ಕಲಾವಿದರು ಕರ್ನಾಟಕದ ಕಲಾ ಸಂಪತ್ತನ್ನು ಸುಪುಷ್ಟಗೊಳಿಸಿದ್ದಾರೆ. ಕೆ.ವೆಂಕಟಪ್ಪನವರು ಕರ್ನಾಟಕದಲ್ಲಿ ಮಾತ್ರವಲ್ಲ ಭಾರತದಲ್ಲೇ ಅಗ್ರಗಣ್ಯ ಸ್ಥಾನ ಪಡೆದವರು. ಮೈಸೂರಿನ ಎಸ್.ನಂಜುಂಡಸ್ವಾಮಿ ಕಲೆಯ ಎಲ್ಲ ಪ್ರಕಾರಗಳಲ್ಲೂ ಉತ್ತಮ ಕೌಶಲವನ್ನು ಮೆರೆದ ಸುಪ್ರಸಿದ್ಧರು. ಎಂ.ವೀರಪ್ಪ, ಎಸ್.ಆರ್.ಸ್ವಾಮಿ ಮತ್ತು ಎಚ್.ಎಸ್.ಇನಾಮತಿ, ಇವರು ಭಾರತೀಯ ಸಂಪ್ರದಾಯದ ಸಂಯೋಜನ ಚಿತ್ರ ರಚನೆಯಲ್ಲಿ ಹೆಸರು ಗಳಿಸಿದವರು. ಗುಲ್ಬರ್ಗದ ಶಂಕರರಾವ್ ಆಳಂದಕರ್ ಭಾವನಾತ್ಮಕ ಚಿತ್ರರಚನೆಗೆ ಖ್ಯಾತಿ ಪಡೆದವರು. ಸುಪ್ರಸಿದ್ಧ ಕಲಾವಿದರಾದ ಎಸ್.ಎಂ.ಪಂಡಿತ್ ಅವರು ಆಳಂದಕರ್ ಶಿಷ್ಯರಲ್ಲಿ ಪ್ರಮುಖರು. ರೂಪ ಚಿತ್ರ ರಚನೆಯಲ್ಲಿ ವಿ.ಆರ್.ರಾವ್ ಹೆಸರು ಬಹುಕಾಲ ನಿಲ್ಲುವಂಥದು. ದಕ್ಷಿಣ ಕನ್ನಡ ಜಿಲ್ಲೆಯವರಾದ ಇವರು ಲಂಡನ್ನಿನಲ್ಲಿ 12 ವರ್ಷಗಳ ಕಾಲ ನೆಲಸಿ ಚಿತ್ರಕಲೆಯಲ್ಲಿ ಹೆಚ್ಚಿನ ಸೇವೆ ಸಲ್ಲಿಸಿ ಕನ್ನಡ ನಾಡಿಗೆ ಕೀರ್ತಿ ತಂದವರು. ಮೃಗಪಕ್ಷಿಗಳ ಬೆಡಗುಬಿನ್ನಾಣಗಳನ್ನು ತೋರಬಲ್ಲವರಾಗಿದ್ದರು. ವರ್ಣಶಿಲ್ಪಿ ಮೈಸೂರಿನ ಜನಾಬ್ ಸೂಫಿ. ಇವರು ಸಂಯೋಜನ ಚಿತ್ರರಚನೆಯಲ್ಲೂ ಹೆಸರುಗಳಿಸಿದ ಕಲಾವಿದರು. ಅಮೀನ ಸಹೇಬ ಕಮಡೋಳಿ ಜಲವರ್ಣ ಚಿತ್ರಗಳನ್ನು ರಚಿಸಿದರು. ಡಿ.ಜಿ.ಬಳಿಗೇರ ತೈಲವರ್ಣದ ರಮ್ಯ ಚಿತ್ರಗಳನ್ನು ರಚಿಸಿದರು. ಭಾರತೀಯ ಹಾಗೂ ಪಾಶ್ಚಾತ್ಯ ಕಲಾಪದ್ಧತಿಯನ್ನು ಅಳವಡಿಸಿಕೊಂಡು ವೈ.ಎಸ್.ರಾಜು ಅವರು ಚಾರಿತ್ರಿಕ ಚಿತ್ರರಚನೆಯಲ್ಲಿ ತಮ್ಮದೇ ಆದ ವೈಖರಿ ತೋರುತ್ತಾರೆ. ಅಂತೆಯೇ ಸಂಯೋಜನೆ ಹಾಗೂ ಭಾವಚಿತ್ರ ರಚನೆಯಲ್ಲಿ ಎಸ್.ಎಸ್.ಕುಕ್ಕೆ ಮತ್ತು ಆರ್. ಸೀತಾರಾಮ್ ಅವರದು ಖ್ಯಾತಿ ಪಡೆದ ಹೆಸರು.

ರಾಗಮಾಲಿಕಾ ಚಿತ್ರಗಳನ್ನು ರಚಿಸಿದ ಎಂ.ವಿ.ಮಿಣಜಿಗಿ ಅವರನ್ನು ಮರೆಯುವಂತಿಲ್ಲ. ಎಂ.ಎ.ಚೆಟ್ಟಿಯವರ ಚಿತ್ರಗಳ ಜಲವರ್ಣತಂತ್ರ ಮೆಚ್ಚುವಂತಹುದು. ಚಿತ್ರಕಲೆಯನ್ನು ಮರದ ಹುದುಗು (ಇನ್‍ಲೇ) ಕಲೆಗೆ ಅಳವಡಿಸಿ ಖ್ಯಾತರಾದವರಲ್ಲಿ ಮೈಸೂರಿನ ಮೀರ್ ಶೌಕತ್ ಅಲಿ ಮೊದಲಿಗರು. ಚಂದಮಾಮ ಖ್ಯಾತಿಯ ಕಲಾವಿದ ಎಂ.ಟಿ.ವಿ.ಆಚಾರ್ಯರು ಪೌರಾಣಿಕ ಚಿತ್ರರಚನೆಯಲ್ಲಿ ಅಗ್ರಗಣ್ಯರಾಗಿದ್ದಾರೆ. ಕಟ್ಟುಕಟ್ಟಳೆಗೆ ಶರಣಾಗದ ಧೀಮಂತ ಕಲಾವಿದ ಆರ್.ಎಸ್.ನಾಯ್ಡು ತಮ್ಮ ಅಪೂರ್ವ ವ್ಯಂಗ್ಯ ಚಿತ್ರಗಳಿಂದಾಗಿ, ತಮ್ಮ ವಿಶಿಷ್ಟ ರೇಖಾವಿನ್ಯಾಸದಿಂದಾಗಿ ಮೆರೆದು ವಿಖ್ಯಾತ ಕಲಾವಿದರು. ಆರ್.ಕೆ.ಲಕ್ಷ್ಮಣ್ ಮತ್ತೋರ್ವ ವಿಶಿಷ್ಟ ರೇಖಾಚಿತ್ರಕಾರರಾಗಿ ಭಾರತದಲ್ಲಿ ಪ್ರಖ್ಯಾತರಾಗಿದ್ದಾರೆ. ಕೊರವಂಜಿ ಮಾಸಪತ್ರಿಕೆಯ ಮೂಲಕ ಬೆಳಕು ಕಂಡ ಇವರು ಟೈಂಸ್ ಆಫ್ ಇಂಡಿಯಾ ಪತ್ರಿಕೆಯ ಕಲಾವಿದರಾಗಿದ್ದಾರೆ. ಮೈಸೂರು ಪ್ರಿಂಟರ್ಸ್ ಲಿಮಿಟೆಡ್ ವೃತ್ತಪತ್ರಿಕಾ ಬಳಗದ ಮೂರ್ತಿ, ರಮೇಶ್ ಮುಂತಾದವರು ರೇಖಾಚಿತ್ರ ರಚನೆಯಲ್ಲಿ ಒಳ್ಳೆಯ ಕೌಶಲವನ್ನು ಮೆರೆದಿದ್ದಾರೆ. ಗೋಪಾಲ್ ಮತ್ತು ಹುಬ್ಲೀಕರ್, ಚಂದ್ರನಾಥ್, ಗುಜ್ಜಾರ್ ಮೊದಲಾದವರು ಪತ್ರಿಕೆಯ ಪ್ರಮುಖ ಕಲಾವಿದರಾಗಿದ್ದಾರೆ. ಬೆಂಗಳೂರಿನ ರಂಗನಾಥ್, ಮಂಗಳೂರಿನ ನವಭಾರತ ಪತ್ರಿಕೆಯ ಎಸ್.ಸಿ.ರಘು, ವಿನೋದ, ಕೊರವಂಜಿ, ಸುಧಾ, ಮಯೂರ ಮುಂತಾದವುಗಳ ಮೂಲಕ ವ್ಯಂಗ್ಯ ಚಿತ್ರಗಳನ್ನು ಪ್ರಕಟಿಸಿದ ಎಸ್.ಕೆ.ನಾಡಿಗ್ ಮುಂತಾದವರು ರೇಖಾಚಿತ್ರ ರಚನೆಯಿಂದ ಚಿರಪರಿಚಿತರಾಗಿದ್ದಾರೆ.

ಬಳ್ಳಾರಿಯ ಕೊಂಡಾಚಾರಿ ಅವರು ಉತ್ತಮ ರೇಖಾಚಿತ್ರ ರಚನಾ ಚತುರರು. ಇವರಲ್ಲದೆ ಮುಂಬಯಿಯಲ್ಲಿರುವ ರಾಘವೇಂದ್ರ, ಬೆಂಗಳೂರಿನ ಪುರುಷೋತ್ತಮ, ಅನಂತಯ್ಯ, ಆರಗಂ ಕೃಷ್ಣಮೂರ್ತಿ, ಶೇವಾಗೂರ್, ಬಿ.ಪಿ.ಬಾಯಿರಿ, ಹುಬ್ಬಳ್ಳಿಯ ಟಿ.ಕೆ.ರಾವ್, ಕೆ.ಬಿ.ಕುಲಕರ್ಣಿ ಮುಂತಾದವರು ರೇಖಾಚಿತ್ರ ರಚನೆಯಲ್ಲಿ ಒಳ್ಳೆಯ ಪ್ರೌಢಿಮೆಯನ್ನು ಗಳಿಸಿದ್ದಾರೆ.

ಎಸ್.ಎನ್.ಸ್ವಾಮಿಯವರು ತೈಲವರ್ಣದ ಭಾವಚಿತ್ರಕಾರರೆಂದು ಖ್ಯಾತಿ ಪಡೆದಿದ್ದಾರೆ. ಇವರ ಪೆನ್ಸಿಲ್‌ನ ರೇಖಾಚಿತ್ರ ಕಲೆಗಾರಿಕೆ ಸಹ ಎಂಥವರನ್ನೂ ಮಾರುಹೋಗಿಸುವಂಥದು. ಖ್ಯಾತಿವೆತ್ತ ಎಸ್.ಜಿ.ಟಂಕಸಾಲೆ ಹಿರಿಯ ಕಲಾವಿದ ಯಲವಟ್ಟಿಯವರೂ ಜಲವರ್ಣ ನಿಸರ್ಗಚಿತ್ರಕಾರರು, ಗ್ರಾಮೀಣ ದೃಶ್ಯದಲ್ಲಿ ತಮ್ಮದೇ ಆದ ವರ್ಣಸಂಯೋಜನೆ ಇವರ ಕಲಾಕೌಶಲ. ಎಂ.ವಿ.ಮಿಣಜಗಿ, ವೈ.ನಾಗರಾಜು, ಬಿ.ಎಚ್.ರಾಮಚಂದ್ರ, ಎಸ್.ಆರ್.ಅಯ್ಯಂಗಾರ್ಯ, ಎನ್.ಎಸ್.ಸುಬ್ಬುಕೃಷ್ಣ, ಎಂ.ಎಚ್.ರಾಮು ಮೊದಲಾದವರು ರೂಪಚಿತ್ರ ರಚನೆಯಲ್ಲಿ ನುರಿತ ಕಲಾವಿದರಾಗಿದ್ದಾರೆ. ಎನ್.ಹನುಮಯ್ಯನವರು ಸುಪ್ರಸಿದ್ಧ ನಿಸರ್ಗಚಿತ್ರಕಾರರಾದ ಎಸ್.ಜಿ.ಟಂಕಸಾಲೆ ಯವರ ಶಿಷ್ಯರು. ಗ್ರಾಮೀಣ ಜೀವನದ ರಮ್ಯದೃಶ್ಯಗಳು ಇವರ ವಸ್ತು. ವಿಶಿಷ್ಟ ಶೈಲಿ ಇವರದು. ಇವರ ಸಾಲಿನಲ್ಲಿ ರುಮಾಲೆ ಚೆನ್ನಬಸವಯ್ಯ, ಎಂ.ಜೆ.ಶುದ್ಧೋದನ, ಎಂ.ಎಸ್.ಚಂದ್ರಶೇಖರ್, ಸೋಮಸುಂದರ, ಪಿ.ಆರ್.ತಿಪ್ಪೇಸ್ವಾಮಿ, ಮರಿಸ್ವಾಮಿ ಮೊದಲಾದವರು ಪ್ರಕೃತಿಚಿತ್ರಕಾರರಲ್ಲಿ ಹೆಸರು ಪಡೆದವರಾಗಿದ್ದಾರೆ. ಸಮಗ್ರ ಭಾರತದ ನಾನಾ ಕಡೆಗಳಲ್ಲಿ ಪ್ರವಾಸ ಮಾಡಿ ಭಾರತದ ಸಾಂಸ್ಕೃತಿಕ ಪರಂಪರೆಯ ಭವ್ಯ ಸಂಕೇತಗಳಾದ ಗುಡಿಗೋಪುರಗಳ ವೈಭವವನ್ನು ಚಿತ್ರಿಸುವುದರಲ್ಲಿ ಪಿ.ಆರ್.ತಿಪ್ಪೇಸ್ವಾಮಿ ಯವರು ನಿಷ್ಣಾತರಾಗಿದ್ದರು.

ಕೆ.ಕೆ.ಹೆಬ್ಬಾರರು ಕ್ರಮಬದ್ಧವಾದ ಸಂಪ್ರದಾಯ ಕಲೆಯಲ್ಲಿ ಅಭ್ಯಾಸ ಮಾಡಿದವರಾದರೂ ಕ್ರಮೇಣ ತಮ್ಮ ಕಲೆಯಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ಮೆರೆಯುತ್ತ ಬಂದಿದ್ದು ಹೊಸ ಸಂಪ್ರದಾಯದ ಪ್ರಮುಖರಲ್ಲಿ ಒಬ್ಬರೆಂದು ಖ್ಯಾತಿ ಗಳಿಸಿದ್ದಾರೆ. ಭಾರತೀಯ ವಸ್ತುನಿಷ್ಠೆ ಇವರ ಕೃತಿಗಳಲ್ಲಿ ಎದ್ದುತೋರುತ್ತದೆ. ಈ ನವ್ಯ ಸಂಪ್ರದಾಯದಲ್ಲಿ ಕಾರವಾರದ ಲಕ್ಷ್ಮಣ ಪೈ, ಬೆಂಗಳೂರಿನ ಪಿ.ಸುಬ್ಬರಾವ್. ಆರ್.ಎಂ.ಹಡಪದ, ಜಿ.ಎಸ್.ಶೆಣೈ, ಎಸ್.ಜಿ.ವಾಸುದೇವ ಅಲ್ಪಂಜೋ ಮೊದಲಾದವರನ್ನು ಹೆಸರಿಸಬಹುದು.

ಶಾಸ್ತ್ರೀಯ ಸಂಪ್ರದಾಯದ ದೇವರುಗಳ ಚಿತ್ರರಚನೆಯಲ್ಲಿ ಅಮೋಘ ಸಿದ್ಧಿಯನ್ನು ಪಡೆದವರು ಮೈಸೂರಿನ ಸಿದ್ಧಲಿಂಗಸ್ವಾಮಿಗಳು. ಇವರ ಪರಂಪರೆಯಲ್ಲಿ ಮೈಸೂರಿನ ನಾಗೇಂದ್ರ ಸ್ಥಪತಿ ಮತ್ತು ಮಹಾದೇವಸ್ವಾಮಿ ಖ್ಯಾತರಾಗಿದ್ದಾರೆ.



ಎಚ್.ಎಸ್.ಇನಾಮತಿ ಅವರ ಕಲೆ

ಜಿ.ಎಸ್.ದಂಡಾವತಿಮಠ, ಡಿ.ವಿ.ಹಾಲಭಾವಿ, ಡಿ.ಜಿ.ಶೆಣೈ, ಡಿ.ಜಿ.ಬಡಿಗೇರ, ಎಂ.ಎ.ಚೆಟ್ಟಿ, ಬಿ.ಜಿ.ಗೌಡ, ಟಿ.ಪಿ.ಅಕ್ಕಿ, ರಾಮನರಸಯ್ಯ, ರಘೋತ್ತಮ ಪುಟ್ಟಿ, ಗೂಳಣ್ಣನವರ್, ಎಂ.ಈ.ಗುರು, ಎಸ್.ಕಾಳಪ್ಪ, ಬೆಂಗಳೂರಿನ ಎಂ.ಎಸ್.ನಂಜುಂಡರಾವ್, ಎಂ.ಬಿ.ಬಸವರಾಜಂ, ವಿಷ್ಣುದಾಸ್, ರಾಮದಾಸ್, ಸುಂಕದ, ಮನೋಳಿ, ಯೂಸೂಫ್, ಆರಕಲ್, ಆರ್.ಜಿ.ರಾಯ್ಕರ, ವೈ.ಸುಬ್ರಹ್ಮಣ್ಯರಾಜು, ಸಿ.ಚಂದ್ರಶೇಖರ, ಎನ್.ಸಿ.ದೇಸಾಯಿ, ರಾಮದಾಸ ಅಡ್ಯಂತಾಯ ಎಸ್.ಧನಲಕ್ಷ್ಮೀ, ಕಳುಲಾಕ್ಷಿ.ಎಂ.ಜೆ. ಮೊದಲಾದವರು ಕಲೆಯ ವಿವಿಧ ಪ್ರಕಾರಗಳಲ್ಲಿ ದುಡಿದು ಹೆಸರಾಗಿದ್ದಾರೆ.



ಕೆ.ವೆಂಕಟಪ್ಪ ಅವರ ಪ್ರಕೃತಿ ಚಿತ್ರ

ಕಲಾವಿದೆಯರಲ್ಲಿ ಪಿ.ಆರ್.ಕಮಲಮ್ಮ, ಸುಭಾಷಿಣಿದೇವಿ, ರಾಜಲಕ್ಷ್ಮೀ, ಎಂ.ಜೆ.ಕಮಲಾಕ್ಷಿ, ಎನ್.ಪುಷ್ಪಮಾಲ ಎಸ್.ಧನಲಕ್ಷ್ಮಿ, ಎಂ.ಜೆ.ಕಮಲಾಕ್ಷಿ ಮೊದಲಾದವರನ್ನು ಹೆಸರಿಸಬಹುದು.

**ವಿಮರ್ಶೆ** : ಚಿತ್ರರಚನೆ ಒಂದು ಕಡೆ ನಿರಂತರವಾಗಿ ಸಾಗುತ್ತಿದ್ದರೆ ಮತ್ತೊಂದು ಕಡೆ ಅದನ್ನು ತೂಗಿ ನೋಡಿ ಬೆಲೆ ಕಟ್ಟುವ ಕಲಾವಿಮರ್ಶೆ ಹೆಚ್ಚಾಗಿ ಬೆಳೆದಿಲ್ಲ. ಆದರೂ ಭಾರತದಲ್ಲಿ ಹೆಸರಾದ ಕಲಾವಿಮರ್ಶಕ ಜಿ. ವೆಂಕಟಾಚಲಂ ಅವರು ಕನ್ನಡಿಗರು ಪಾಂಡವಪುರದವರು. ಬಹುಪಾಲು ಇಂಗ್ಲಿಷ್‌ನಲ್ಲೇ ಬರೆದ ಇವರ ಕಲಾವಿಮರ್ಶೆಗಳು ಅತ್ಯುಚ್ಚಮಟ್ಟದ ಸಮತೂಕವಾದ ವಿಮರ್ಶೆಗಳಾಗಿವೆ. ಶಿವರಾಮ ಕಾರಂತರು ಕಲಾವಿದ ಹೆಬ್ಬಾರರ ಬಗ್ಗೆ ಬರೆದಿರುವ ಪುಟ್ಟ ಕೃತಿ ಅವರ ಜೀವಂತ ಕಲಾಪ್ರಜ್ಞೆಗೆ ಸಾಕ್ಷಿ. ಅ.ನ.ಕೃ. ಅವರು ಚಿತ್ರಕಲಾ ವಿಮರ್ಶೆಯಲ್ಲಿ ಹೆಸರಾಗಿದ್ದವರು. ಪಾಶ್ಚಾತ್ಯ ಸಿದ್ಧಾಂತಗಳ ಪರಿಚಯ ಮಾಡಿಕೊಂಡಿದ್ದರು. ಅವರ ಕಲಾವಿಮರ್ಶಾದೃಷ್ಟಿ ಅತ್ಯಂತ ತೀಕ್ಷ್ಣವಾದುದು. ರಾಜಾ ರವಿವರ್ಮ ಪುಸ್ತಕ ಇದಕ್ಕೆ ಒಳ್ಳೆಯ ಉದಾಹರಣೆ. ನಾ ಕಂಡ ಕಲಾವಿದರು ಕೃತಿಗಳಲ್ಲಿ ಸಹ ಕೆಲವು ಚಿತ್ರಕಾರರ ಕೃತಿ ಪರಿಚಯವನ್ನು ಸಮರ್ಪಕವಾಗಿ ಮಾಡಿದ್ದಾರೆ. ಎಸ್.ಕೆ.ರಾಮಚಂದ್ರರಾವ್ ಮತ್ತು ಬಿ.ವಿ.ಕೆ.ಶಾಸ್ತ್ರಿ ಅವರೂ ಚಿತ್ರಕಲಾವಿಮರ್ಶೆಯಲ್ಲಿ ಸಾಕಷ್ಟು ಪರಿಣತಿಯನ್ನು ಪಡೆದುಕೊಂಡಿದ್ದಾರೆ. ಪಿ.ಆರ್.ತಿಪ್ಪೇಸ್ವಾಮಿಯವರು ಕಲಾವಿಮರ್ಶೆಯಲ್ಲೂ ಹೆಸರು ಪಡೆದವರು. ಇವರ ಭಾರತೀಯ ಚಿತ್ರಕಲೆ, ಕಲೋಪಾಸಕರು, ಕರ್ನಾಟಕದ ಚಿತ್ರಕಲೆ ಮುಂತಾದ ಕೃತಿಗಳು ಪ್ರಕಟವಾಗಿವೆ.

**ಶಿಕ್ಷಣ ಮತ್ತು ಪ್ರೋತ್ಸಾಹ :** ಕನ್ನಡ ನಾಡಿನ ಕಲಾಪ್ರೋತ್ಸಾಹದ ಸಲುವಾಗಿ ಮೈಸೂರಿನಲ್ಲಿ 1913ರಲ್ಲಿ ಚಾಮರಾಜ ಒಡೆಯರ ನೆನಪಿನಲ್ಲಿ

ಶ್ರೀ ಚಾಮರಾಜೇಂದ್ರ ವೃತ್ತಿಶಿಕ್ಷಣ ಶಾಲೆಯನ್ನು ತೆರೆಯಲಾಯಿತು. ಈ ಶಾಲೆಯ ಕಟ್ಟಡದ ಶಂಕುಸ್ಥಾಪನೆ ಜಾರ್ಜ್ ಚಕ್ರವರ್ತಿಗಳಿಂದ ನೆರವೇರಿತು.



ಕೆ.ಕೆ.ಹೆಬ್ಬಾರ ಅವರ ಕಲೆ

ಇದುವರೆಗೆ ಚಿತ್ರಕಲೆ ಕೆಲವು ಮನೆತನಗಳಿಗಷ್ಟೇ ಸೀಮಿತವಾಗಿರುತ್ತಿತ್ತಾದರೆ ಈ ಕಾಲದಿಂದ ಕಲೆಯ ವಿದ್ಯಾಭ್ಯಾಸ ಆಸಕ್ತರಿಗೆಲ್ಲರಿಗೂ ತೆರೆಯುವಂತಾಯಿತು. ಈ ಶಾಲೆ ಅನೇಕ ಪ್ರಖ್ಯಾತ ಚಿತ್ರಗಾರರಿಗೆ ಮೂಲ ಸ್ಥಾನವಾಯಿತು. ಕೆ.ವೆಂಕಟಪ್ಪ, ಕೆ.ಕೇಶವಯ್ಯ, ಎಸ್. ನಂಜುಂಡಸ್ವಾಮಿ, ಎಸ್.ಎನ್.ಸ್ವಾಮಿ, ಸುಬ್ಬುಕೃಷ್ಣ, ಕೆ.ಕೆ.ಹೆಬ್ಬಾರ್ – ಹೀಗೆ ಅನೇಕಾನೇಕ ವರ್ಣಶಿಲ್ಪಿಗಳನ್ನು ನೆನೆದಾಗಲೆಲ್ಲ ಈ ಕಲಾಶಾಲೆಯನ್ನು ಮರೆಯಲಾಗದು.

ಕರ್ನಾಟಕ ಸರ್ಕಾರ ಹಿಂದಿನಿಂದ ನಡೆಸುತ್ತಿರುವ ಮೈಸೂರಿನ ಚಾಮರಾಜೇಂದ್ರ ವೃತ್ತಿಶಿಕ್ಷಣ ಕಲಾಶಾಲೆಯೇ ಅಲ್ಲದೆ 1964ರಲ್ಲಿ ದಾವಣಗೆರೆಯಲ್ಲಿ ಚಿತ್ರಕಲಾ ಶಾಲೆಯನ್ನು ಸ್ಥಾಪಿಸಿದೆ. ಇವುಗಳನ್ನು ಬಿಟ್ಟರೆ ಖಾಸಗಿಯಾಗಿ ನಡೆಸಿಕೊಂಡು ಬಂದ ಚಿತ್ರಕಲಾ ಶಾಲೆಗಳೇ ಹೆಚ್ಚು. ಅವುಗಳಲ್ಲಿ ಮುಖ್ಯವಾಗಿ ಬೆಂಗಳೂರಿನ ಎ.ಎನ್.ಸುಬ್ಬರಾಯರ ಕಲಾ ಮಂದಿರ (ಸ್ಥಾಪನೆ 1919), ಧಾರವಾಡದ ಹಾಲಭಾವಿಯವರ ಸ್ಕೂಲ್ ಆಫ್ ಆರ್ಟ್ಸ್ (1935), ಗದಗಿನ ಟಿ.ಪಿ.ಅಕ್ಕಿ ಅವರ ವಿಜಯ ಆರ್ಟ್ಸ್ ಇನ್‌ಸ್ಟಿಟ್ಯೂಟ್ (1941), ಹುಬ್ಬಳ್ಳಿಯ ಶ್ರೀ ವಿಜಯಮಹಾಂತೇಶ ಲಲಿತಕಲಾ ಮಹಾವಿದ್ಯಾಲಯ, ಮೈಸೂರಿನ ಕಲಾನಿಕೇತನ, ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಚಿತ್ರಕಲಾ ವಿದ್ಯಾಲಯ, ಕೆನ್ ಸ್ಕೂಲ್ ಆಫ್ ಆರ್ಟ್ಸ್ ಮತ್ತು ಆಚಾರ್ಯ ಚಿತ್ರಕಲಾ ಭವನ, ಧಾರವಾಡದ ಕಲಾಕೇಂದ್ರ ಮತ್ತು ಸ್ಕೂಲ್ ಆಫ್ ಆರ್ಟ್ಸ್, ಗುಲ್ಬರ್ಗದ ಐಡಿಯಲ್ ಫೈನ್ ಆರ್ಟ್ಸ್ ಇನ್‌ಸ್ಟಿಟ್ಯೂಟ್ ಮತ್ತು ಬೆಳಗಾಂವಿಯ ಉಮರ ಖಯ್ಯಾಮ್ ಸ್ಕೂಲ್ ಆಫ್ ಆರ್ಟ್ಸ್, ಚಿತ್ರಮಂದಿರ ಸ್ಕೂಲ್ ಆಫ್ ಆರ್ಟ್ಸ್ ಮತ್ತು ಬೆನನ್ ಸ್ಮಿತ್ ಡಿ.ಟಿ.ಸಿ. ಕಲಾಶಿಕ್ಷಕರ ತರಬೇತಿ ಶಾಲೆ, ದಕ್ಷಿಣ ಕನ್ನಡ ಜಿಲ್ಲೆಯ ಕಟಪಾಡಿಯಲ್ಲಿರುವ ಚಿತ್ರಕಲಾಮಂದಿರ ಮೊದಲಾದವು ಚಿತ್ರಕಲೆಯಲ್ಲಿ ವಿದ್ಯಾರ್ಥಿಗಳಿಗೆ ತರಬೇತಿ ನೀಡುತ್ತಿವೆ. ಇಂದು ನೂರಾರು ಅಭ್ಯರ್ಥಿಗಳು ಉಚ್ಚಕಲೆಯಲ್ಲಿ ತರಬೇತಿ ಪಡೆಯುತ್ತಿದ್ದಾರೆ. ಈ ಶಾಲೆಗಳಲ್ಲಿ ಚಿತ್ರಕಲೆಯನ್ನು ಅಭ್ಯಾಸ ಮಾಡಿದವರಿಗೆ ಅವರವರ ಪರೀಕ್ಷೆಗಳಿಗನುಸಾರವಾಗಿ ವಿದ್ಯಾ ಇಲಾಖೆ ಕಲಾ ಪರೀಕ್ಷಾ ಮಂಡಳಿಯನ್ನು ನೇಮಿಸಿದೆ. ಅದು ಡ್ರಾಯಿಂಗ್, ಪೆಯಿಂಟಿಂಗ್, ನಾಲ್ಕು ರೀತಿ ಮಾಡಲಿಂಗ್, ಮೂರು ರೀತಿ ಆರ್ಟ್ಸ್ ಟೀಚಿಂಗ್ ಮತ್ತು ಡ್ರಾಯಿಂಗ್ ಗ್ರೇಡ್ ಇವುಗಳಲ್ಲಿ ಪರೀಕ್ಷೆಗಳನ್ನು ನಡೆಸಿ ಜಿ.ಡಿ., ಡಿ.ಟಿ.ಸಿ., ಡಿ.ಎಂ., ಎ.ಎಂ. -ಈ ರೀತಿಯ ಬೇರೆ ಬೇರೆ ಪದವಿಗಳನ್ನು ನೀಡುತ್ತದೆ. ರಾಜ್ಯದಲ್ಲಿ ಹೈಯರ್ ಆರ್ಟ್ಸ್ ಮತ್ತು ಡ್ರಾಯಿಂಗ್ ಗ್ರೇಡ್ ಪರೀಕ್ಷಾ ಕೇಂದ್ರಗಳು ಇವೆ. ಪ್ರತಿ ವರ್ಷ ಸಾವಿರಾರು ಕಲಾಭ್ಯಾಸಿಗಳು ಡ್ರಾಯಿಂಗ್ ಗ್ರೇಡ್ ಪರೀಕ್ಷೆ ಮತ್ತು ಹೈಯರ್ ಆರ್ಟ್ಸ್ ಪರೀಕ್ಷೆಗೆ ಕೂರುತ್ತಿದ್ದಾರೆ.

ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಚಿತ್ರಕಲೆಯ ಬಗ್ಗೆ ಅಗತ್ಯವಾದ ಆಸಕ್ತಿ ಬೆಳೆಸಲು ರಾಜ್ಯದ ಪ್ರತಿಯೊಂದು ಪ್ರಾಥಮಿಕ, ಮಾಧ್ಯಮಿಕ ಹಾಗೂ ಪ್ರೌಢಶಾಲೆಗಳ ಶಿಕ್ಷಣ ಕ್ರಮದಲ್ಲಿ ಚಿತ್ರಕಲೆಯ ವಿಷಯ ಅಳವಡಿಸಲಾಗಿದೆ. ಆದರೆ ಸದ್ಯದಲ್ಲಿ ಈಗಿನ 2000 ಪ್ರೌಢಶಾಲೆಗಳಲ್ಲಿ ಕೇವಲ 500 ಪ್ರೌಢಶಾಲೆಗಳಲ್ಲಿ ಮಾತ್ರ ಕಲಾಶಿಕ್ಷಕರಿದ್ದಾರೆ. ಈಗ ರಾಜ್ಯದಲ್ಲಿ ಒಂಬತ್ತು ತರಬೇತಿ ಕಲಾಶಾಲೆಗಳಿವೆ.

ಚಿತ್ರಕಲೆಯ ಪ್ರೋತ್ಸಾಹದ ಗುರಿಯನ್ನು ಇಟ್ಟುಕೊಂಡ ಅನೇಕ ಸಂಘಸಂಸ್ಥೆಗಳು ಕರ್ನಾಟಕದಲ್ಲಿ ಇವೆ. 1962ರಲ್ಲಿ ರಾಜ್ಯದ ಲಲಿತಕಲಾ ಅಕಾಡೆಮಿ ಸ್ಥಾಪಿತವಾಯಿತು. ಕಲಾವಿದರ ಹಾಗೂ ಕಲೆಯ ಪ್ರಗತಿಗಾಗಿ ರೂಪುಗೊಂಡ ಈ ಸಂಸ್ಥೆ ಕಲಾಪ್ರದರ್ಶನಗಳನ್ನು ನಡೆಸುವ ಮತ್ತು ಕಲಾಕೃತಿಗಳನ್ನು ಕೊಳ್ಳುವ ಕಾರ್ಯ ನಡೆಸುತ್ತಿದೆ. ಕಲಾಪ್ರದರ್ಶನಗಳನ್ನು ರಾಜ್ಯದ ಒಳಭಾಗದಲ್ಲಿ ನಡೆಸುವ ಕಲಾವಿದರಿಗೆ 500ರೂ.ಗಳ ಸಹಾಯಧನವನ್ನೂ ರಾಜ್ಯದ ಹೊರಗೆ ನಡೆಸುವವರಿಗೆ ಒಂದು ಸಾವಿರ ರೂಪಾಯಿಗಳ ಸಹಾಯಧನವನ್ನೂ ನೀಡುತ್ತ ಬಂದಿದೆ. ಕಲೆಗೆ ಸಂಬಂಧಿಸಿದ ಕೆಲವು ಪುಸ್ತಕಗಳನ್ನು ಪ್ರಕಟಿಸಿದೆ. ಅನೇಕ ಕಲಾವಿದರಿಗೆ ಪ್ರಶಸ್ತಿಗಳನ್ನು ನೀಡಿದೆ. ಅಲ್ಲದೆ ಮಾಸಾಶನವನ್ನು ನೀಡುತ್ತ ಬಂದಿದೆ. ಭಿತ್ತಿಚಿತ್ರಗಳನ್ನು ನಕಲು ಮಾಡಿಸುವ ಕಾರ್ಯ ನಡೆಸಿದೆ. 1976ರಲ್ಲಿ ಕಲಾವಿದರ ಶಿಬಿರವೊಂದನ್ನು ಕೆ.ಕೆ.ಹೆಬ್ಬಾರರ ನೇತೃತ್ವದಲ್ಲಿ ಶ್ರೀರಂಗಪಟ್ಟಣದಲ್ಲಿ ನಡೆಸಿತು.



ಕುಪ್ಪಳಿಯ ಕವಿಶೈಲ: ಪಿ.ಆರ್.ತಿಪ್ಪೆಸ್ವಾಮಿ ಅವರ ಕೃತಿ

ಕರ್ನಾಟಕ ಸರ್ಕಾರ ಕೆ.ವೆಂಕಟಪ್ಪನವರ ಹೆಸರಿನಲ್ಲಿ ಬೆಂಗಳೂರಿನಲ್ಲಿ ಚಿತ್ರಕಲಾಗಾರವನ್ನು ತೆರೆದಿದೆ. ಇಲ್ಲಿನ ಪ್ರದರ್ಶನಾಲಯದಲ್ಲಿ ಆಗಾಗ ಕಲಾಪ್ರದರ್ಶನಗಳನ್ನು ನಡೆಸಲು ಅವಕಾಶ ಮಾಡಿಕೊಡಲಾಗಿದೆ. ವೆಂಕಟಪ್ಪನವರ ಹೆಸರಿನಲ್ಲಿ ಚಿತ್ರಕಲೆಗೆ ಮಹತ್ತರ ಸೇವೆಸಲ್ಲಿಸಿದವರಿಗಾಗಿ ಕರ್ನಾಟಕದ ಕಲಾವಿದರಿಗೆ ಕರ್ನಾಟಕ ಸರ್ಕಾರ ಒಂದು ಲಕ್ಷರೂಪಾಯಿ ಮೌಲ್ಯದ ಪ್ರಶಸ್ತಿ ನೀಡಿ ಗೌರವಿಸುತ್ತಿದೆ (1994). ರಾಜ್ಯ ಸರ್ಕಾರದ ಪ್ರಾಚ್ಯವಸ್ತು ಸಂಶೋಧನೆ ಮತ್ತು ವಸ್ತುಸಂಗ್ರಹಾಲಯ ಇಲಾಖೆ ತನ್ನ ವಸ್ತುಸಂಗ್ರಹಾಲಯಗಳಿಗೆ ಕಲಾಕೃತಿಗಳನ್ನು ಕೊಂಡು ಕಲಾವಿದರಿಗೆ ಪ್ರೋತ್ಸಾಹ ನೀಡುತ್ತಿದೆ. ಈಚೆಗೆ ಈ ಇಲಾಖೆ ರಾಜ್ಯ ಮಟ್ಟದ ಕಲಾವಿದರ ಪ್ರದರ್ಶನವನ್ನು ನಡೆಸಿ ಅನೇಕ ಕೃತಿಗಳಿಗೆ ಬಹುಮಾನ ನೀಡುವ ಕ್ರಮವನ್ನೂ ಕೈಗೊಂಡಿದೆ.

ಮೈಸೂರಿನಲ್ಲಿ 1960ರಲ್ಲಿ ಸ್ಥಾಪಿತವಾಗಿದ್ದ ಚಿತ್ರಶಿಲ್ಪ ಅಕಾಡೆಮಿ ಪಿ.ಆರ್.ತಿಪ್ಪೇಸ್ವಾಮಿಯವರ ನೇತೃತ್ವದಲ್ಲಿ ಅತ್ಯುತ್ತಮ ಕಾರ್ಯಗಳನ್ನು ಎಸಗಿತು. ಅನೇಕ ಕಲಾವಿದರ ಏಕವ್ಯಕ್ತಿ ಕಲಾಪ್ರದರ್ಶನಗಳನ್ನು ನಡೆಸಿ, ಮೈಸೂರಿನಲ್ಲಿ ವಿದ್ವಾಂಸರಿಂದ ಉಪನ್ಯಾಸಗಳನ್ನು ಏರ್ಪಡಿಸಿ ಕಲಾಪ್ರಸಾರವನ್ನು ಕೈಗೊಂಡಿತು. ಬೆಂಗಳೂರಿನಲ್ಲಿ ಸ್ಥಾಪಿತವಾಗಿರುವ ಕರ್ನಾಟಕ ಪ್ರದೇಶ ಚಿತ್ರಕಲಾ ಪರಿಷತ್ ಮತ್ತು ಕರ್ನಾಟಕ ಚಿತ್ರಕಲಾವಿದರ ಮಹಾ ಪರಿಷತ್ ಎಂಬ ಎರಡು ಸಂಸ್ಥೆಗಳು ಕಲಾವಿದರ ಏಳಿಗೆಗಾಗಿ ಶ್ರಮಿಸುತ್ತಿವೆ. ಕರ್ನಾಟಕ ಚಿತ್ರಕಲಾ ಪರಿಷತ್ (ನೋಡಿ) ರಾಜ್ಯ ಮಟ್ಟದ ಕಲಾವಿದರ ಸಮ್ಮೇಳನಗಳನ್ನು ನಡೆಸಿ ಕಲಾವಿದರ ಸಂಘಟನೆಗೂ ಶ್ರಮಿಸಿದೆ. ಆಗಾಗ ವಿಧಾನ ಸೌಧದಲ್ಲೂ ದೆಹಲಿಯಲ್ಲೂ ಕಲಾಪ್ರದರ್ಶನಗಳನ್ನು ನಡೆಸಿ ಕರ್ನಾಟಕದ ಚಿತ್ರಕಲೆಗೆ ಖ್ಯಾತಿಯನ್ನು ತಂದುಕೊಟ್ಟಿದೆ. ಮೈಸೂರಿನ ಚಿತ್ರಕಲಾ ಸಂಘ ಕಲಾವಿದರ ಅನೇಕ ಪ್ರದರ್ಶನಗಳನ್ನು ದಸರ ವಸ್ತುಪ್ರದರ್ಶನದ ಹಳೆಯ ಕಟ್ಟಡದಲ್ಲಿ ನಡೆಸಿ ತನ್ನ ಉತ್ತಮ ಸೇವೆಯನ್ನು ಮಾಡಿದೆ.



ಎಸ್.ನಂಜುಂಡಸ್ವಾಮಿ ಅವರ ಕಲೆ

ಮೈಸೂರಿನ ದಸರ ವಸ್ತುಪ್ರದರ್ಶನದ ಚಿತ್ರಕಲಾ ಪ್ರದರ್ಶನ ಇಡೀ ಭಾರತದ ಚಿತ್ರಕಲಾವಿದರ ಕುತೂಹಲವನ್ನು ಸೆಳೆದಿದೆ. ಭಾರತದ ಹೆಸರಾಂತ ಕಲಾವಿದರ ಜೊತೆಯಲ್ಲಿ ಕರ್ನಾಟಕದ ಕಲಾವಿದರೂ ಸ್ಪರ್ಧಿಸಿ ಪುರಸ್ಕಾರಗಳನ್ನು ಪಡೆಯುವ ಅವಕಾಶವನ್ನು ಒದಗಿಸಿದೆ. ಮೈಸೂರಿನ ಶ್ರೀಜಯಚಾಮರಾಜೇಂದ್ರ ಚಿತ್ರಶಾಲೆ, ಮೈಸೂರಿನ ಅರಮನೆ, ಬೆಂಗಳೂರಿನಲ್ಲಿ ವೆಂಕಟಾಚಲಂ ಅವರು ತಮ್ಮ ಮಿತ್ರ ಫ್ರೆಡ್‌ಹಾರ್ವೆ ಅವರ ಹೆಸರಿನಲ್ಲಿ ಸ್ಥಾಪಿಸಿದ ಆರ್ಟ್ ಗ್ಯಾಲರಿ- ಇಲ್ಲಿ ಕರ್ನಾಟಕ ಕಲಾವಿದರ ಅತ್ಯುತ್ತಮ ಕಲಕೃತಿಗಳು ಪ್ರದರ್ಶಿತವಾಗಿವೆ. ಈಚೆಗೆ ಬೆಂಗಳೂರು ನಗರದಲ್ಲೂ ಕಲಾವಿದರ ವಿವಿಧ ಶೈಲಿಗಳ ಕೃತಿಗಳ ಪ್ರದರ್ಶನಗಳು ಆಗಾಗ ಜರುಗುತ್ತಿದ್ದು ಜನರ ಆಸಕ್ತಿಯನ್ನು ಕೆರಳಿಸುತ್ತಿವೆ. (ಪಿ.ಆರ್.ಟಿ.)

**ಚಿತ್ರಗುಪ್ತ :** ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ ಕನ್ನಡ ಪತ್ರಿಕೆ. ಮೊದಲು ದಿನಪತ್ರಿಕೆಯಾಗಿ 1928ರ ಡಿಸೆಂಬರ್ ಅಂತ್ಯದಲ್ಲಿ ಪ್ರಾರಂಭವಾಯಿತು. ಎಚ್.ಕೆ. ವೀರಣ್ಣಗೌಡರು ಈ ಪತ್ರಿಕೆಯನ್ನು ಆರ್ಕಾಟ್ ಶ್ರೀನಿವಾಸಾಚಾರ್ ಬೀದಿಯಲ್ಲಿದ್ದ ತಮ್ಮ ಗ್ರಾಮಸೇವಾ ಪ್ರೆಸ್‌ನಲ್ಲಿ ಸಂಪಾದಿಸಿ ಮುದ್ರಿಸಿ ಪ್ರಕಾಶಪಡಿಸುತ್ತಿದ್ದರು. ಕೇವಲ 3 ವರ್ಷಗಳ ಕಾಲ ಮಾತ್ರ ನಡೆದರೂ ತನ್ನ ಧ್ಯೇಯಕ್ಕನುಸಾರವಾಗಿ ದೇಶಸೇವೆ ಸಲ್ಲಿಸಿ ಕೀರ್ತಿ ಗಳಿಸಿತ್ತು. ಸರ್ಕಾರದ ಆಡಳಿತದಲ್ಲಿದ್ದ ಲೋಪದೋಷಗಳನ್ನು ಕಟುವಾಗಿ ಟೀಕಿಸುತ್ತಿದ್ದುದರಿಂದ ಈ ಪತ್ರಿಕೆ ಆಗಿನ ಸರ್ಕಾರದ ಕ್ರೂರ ದೃಷ್ಟಿಗೆ ಪಕ್ಕಾಗಿತ್ತು.

ಬೆಂಗಳೂರಿನಲ್ಲಿ 1929ರಲ್ಲಿ ನಡೆದ ಗಣಪತಿ ಗಲಭೆಯ ಸಂಬಂಧ ವಿಚಾರಣೆ ನಡೆಸಲು ಎಂ.ವಿಶ್ವೇಶ್ವರಯ್ಯನವರ ಅಧ್ಯಕ್ಷತೆಯಲ್ಲಿ ಸರ್ಕಾರದವರು ಒಂದು ವಿಚಾರಣಾ ಸಮಿತಿಯನ್ನು ರಚಿಸಿದ್ದರು. ಆ ಸಮಿತಿಯ ವರದಿಯನ್ನು ಬಹಿರಂಗಪಡಿಸಬೇಕೆಂದು ನ್ಯಾಯಾವಿಧಾಯಕ ಮತ್ತು ಪ್ರಜಾಪ್ರತಿನಿಧಿ ಸಭೆಯ ಸದಸ್ಯರು ಎಷ್ಟೇ ಒತ್ತಾಯಪಡಿಸಿದರೂ ಸರ್ಕಾರ ವರದಿಯನ್ನು ಪ್ರಕಟಿಸಲಿಲ್ಲ. ಸರ್ಕಾರದ ಬೀಗಮುದ್ರೆಯಲ್ಲಿದ್ದ ಆ ವರದಿಯ ಪ್ರತಿಯೊಂದನ್ನು ವೀರಣ್ಣಗೌಡರು ಹೇಗೋ ಪಡೆದುಕೊಂಡು ಚಿತ್ರಗುಪ್ತ ಪತ್ರಿಕೆಯಲ್ಲಿ ಕ್ರಮವಾಗಿ ಪ್ರಕಟಿಸುತ್ತ ಬಂದರು. ಆಮೇಲೆ ಸರ್ಕಾರ ವರದಿಯನ್ನು ಪುಸ್ತಕರೂಪದಲ್ಲಿ ಪ್ರಕಟಿಸಿತು. ಅದೇ ರೀತಿ 1928-29ನೆಯ ಸಾಲಿನಲ್ಲಿ ಬೆಂಗಳೂರು ಜಿಲ್ಲಾ ಬೋರ್ಡ್‌ನವರು ಕಬ್ಬನ್ ಪಾರ್ಕ್‌ನಲ್ಲಿ ನಡೆಸಿದ ವಸ್ತುಪ್ರದರ್ಶನದಲ್ಲಿ ಆಡಳಿತಗಾರರು ಲಕ್ಷಾಂತರ ರೂಪಾಯಿ ದುಂದುವೆಚ್ಚ ಮಾಡಿದುದನ್ನು ಸರ್ಕಾರದ ತನಿಖೆ ಶಾಖೆಯವರು ಸರ್ಕಾರಕ್ಕೆ ಕೊಟ್ಟಿದ್ದ ವರದಿಯನ್ನೂ ದಿವಾನರು ಪ್ರಕಟಿಸಲು ಅವಕಾಶ ಕೊಡಲಿಲ್ಲ. ಆ ವರದಿಯೂ ಚಿತ್ರಗುಪ್ತ ಪತ್ರಿಕೆಯಲ್ಲಿ ಪ್ರಕಟವಾಯಿತು. ದಾವಣಗೆರೆಯಲ್ಲಿ ನಡೆದ ಹಿಂದು ಮುಸ್ಲಿಂ ಗಲಭೆಯ ನಿಜಾಂಶಗಳನ್ನು ವಿವರವಾಗಿ ಪ್ರಕಟಿಸಬಾರದೆಂದು ಸರ್ಕಾರದವರು ಪ್ರಯತ್ನಿಸಿದರು. ಆದರೆ ಚಿತ್ರಗುಪ್ತ ಪತ್ರಿಕೆಯಲ್ಲಿ ಆ ವಿವರಗಳ ನಿಜಾಂಶಗಳು ಪ್ರಕಟವಾದುವು. ಈ ಎಲ್ಲ ಕಾರ್ಯಗಳಿಂದ ಪತ್ರಿಕೆಯ ಬಗ್ಗೆ ಸರ್ಕಾರದ ಕಿರುಕುಳ ಸಹಿಸಲಾರದಷ್ಟಾಯಿತು. ಜೊತೆಗೆ ಪತ್ರಿಕೆ ನಾನಾವಿಧವಾದ ಆರ್ಥಿಕ ಮುಗ್ಗಟ್ಟಿಗೆ ಒಳಗಾಯಿತು. ರಾಷ್ಟ್ರೀಯ ಕನ್ನಡ ದಿನಪತ್ರಿಕೆಯೆಂದು ಖ್ಯಾತಿಪಡೆದಿದ್ದ ಚಿತ್ರಗುಪ್ತ ದಿನಪತ್ರಿಕೆಯೂ ಅದೇ ಹೆಸರಿನಲ್ಲಿ ಕೆಲಕಾಲದಿಂದ ಹೊರಬರುತ್ತಿದ್ದ ವಾರ ಪತ್ರಿಕೆಯೂ 1931ರ ಅಂತ್ಯದ ಹೊತ್ತಿಗೆ ಅನಿವಾರ್ಯವಾಗಿ ಪ್ರಕಟನೆ ನಿಲ್ಲಿಸಬೇಕಾಯಿತು.

1947ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದು ಮೈಸೂರು ಸಂಸ್ಥಾನದಲ್ಲಿ ಪ್ರಜಾಪ್ರಭುತ್ವ ಸ್ಥಾಪಿತವಾದಮೇಲೆ ಕೆಲವು ಮಂದಿ ಸ್ನೇಹಿತರು ಖಾಸಗಿ ಸಂಸ್ಥೆಯೊಂದನ್ನು ಸ್ಥಾಪಿಸಿಕೊಂಡು ಪುನಃ ಚಿತ್ರಗುಪ್ತ ಪತ್ರಿಕೆಯನ್ನು ಹೊರಡಿಸಲು ವೀರಣ್ಣಗೌಡರನ್ನು ಪ್ರೋತ್ಸಾಹಿಸಿದರು. ಅದೂ ಕೇವಲ ಒಂದು ವರ್ಷಕಾಲ ನಡೆದು ಹಣದ ಮುಗ್ಗಟ್ಟಿನಿಂದ ನಿಂತಿತು. ಅನಂತರ ಪತ್ರಿಕೆಯ ಉಪಸಂಪಾದಕರಾಗಿದ್ದ ಎಂ.ಎಸ್.ಭಾರದ್ವಾಜರ ಸಂಪಾದಕತನದಲ್ಲಿ ವಾರಪತ್ರಿಕೆ ಕೆಲವು ತಿಂಗಳು ಮಾತ್ರ ನಡೆಯಿತು. (ಎಚ್.ಕೆ.ವಿ.)

**ಚಿತ್ರದುರ್ಗ :** ಕರ್ನಾಟಕ ರಾಜ್ಯದ ಒಂದು ಜಿಲ್ಲೆ, ತಾಲ್ಲೂಕು ಮತ್ತು ಅವುಗಳ ಆಡಳಿತ ಕೇಂದ್ರ. 1997ರಲ್ಲಿ ಜಿಲ್ಲಾ ಪುನರ್ವಿಂಗಡನೆ ಯಾದಾಗ ಈ ಜಿಲ್ಲೆಯ ದಾವಣಗೆರೆ, ಹರಿಹರ ಮತ್ತು ಜಗಳೂರು ತಾಲ್ಲೂಕುಗಳು ದಾವಣಗೆರೆ ಜಿಲ್ಲೆಗೆ ಸೇರಿದವು. ಬಳ್ಳಾರಿ ಜಿಲ್ಲೆ, ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆ, ತುಮಕೂರು ಜಿಲ್ಲೆ, ಚಿಕ್ಕಮಗಳೂರು ಜಿಲ್ಲೆ, ದಾವಣಗೆರೆ ಜಿಲ್ಲೆ -ಇವು ಚಿತ್ರದುರ್ಗ ಜಿಲ್ಲೆಯನ್ನೂ ಸುತ್ತುವರಿದಿದೆ. ಚಳ್ಳಕೆರೆ, ಚಿತ್ರದುರ್ಗ, ಹಿರಿಯೂರು, ಮೊಳಕಾಲ್ಮೂರು, ಹೊಸದುರ್ಗ, ಹೊಳಲ್ಕೆರೆ ಈ ಜಿಲ್ಲೆಯ ತಾಲ್ಲೂಕುಗಳು, ಜಿಲ್ಲೆಯ

ವಿಸ್ತೀರ್ಣ 8,388ಚ.ಕಿಮೀ. 22 ಹೋಬಳಿಗಳು, 932 ಜನವಸತಿ, ಇರುವ ಗ್ರಾಮಗಳು ಇವೆ. ಜನಸಂಖ್ಯೆ 15,10,227.

ಜಿಲ್ಲೆಯ ಹೆಚ್ಚು ಭಾಗ ತಗ್ಗಾದ ಕಣಶಿಲೆಯ ಬೋಳು ಬೆಟ್ಟಗಳಿಂದಲೂ ಮಧ್ಯೆಮಧ್ಯೆ ಇರುವ ಸ್ವಲ್ಪ ಮಟ್ಟಸವಾದ ಕಣಿವೆಗಳಿಂದಲೂ ಕೂಡಿದೆ. ಮುಖ್ಯವಾದ ಬೆಟ್ಟಸಾಲುಗಳು ದಕ್ಷಿಣ ಆಗ್ನೇಯದಿಂದ ಉತ್ತರ ವಾಯವ್ಯದ ಕಡೆಗೆ ಸಮಾಂತರದಲ್ಲಿ ಸಾಗುತ್ತವೆ. ಪೂರ್ವ ಸಾಲು ಹಿರಿಯೂರಿನ ಪಶ್ಚಿಮದಿಂದ ಚಿತ್ರದುರ್ಗದ (984ಮೀ) ಪರ್ಯಂತ ಹಬ್ಬಿ, ಮುಂದೆ ಸ್ವಲ್ಪ ದೂರ ಬಿಟ್ಟು ವಾಯವ್ಯದಲ್ಲಿ ಕಣಕುಪ್ಪ ಬೆಟ್ಟದಲ್ಲಿ (839ಮೀ) ಮುಂದುವರಿದು ಜಿಲ್ಲೆಯ ಎಲ್ಲೆಯವರೆಗೂ ಸಾಗುತ್ತದೆ. ಚಿತ್ರದುರ್ಗದ ದಕ್ಷಿಣಕ್ಕಿರುವ ಜೋಗಿ ಮರಡಿ (1,159ಮೀ), ಏಚಲದುರ್ಗ (1,160ಮೀ) ಮತ್ತು ಬೀರನಕಲ್ಲುದುರ್ಗ (1,177ಮೀ) ಈ ಸಾಲಿನ ಉನ್ನತ ಶಿಖರಗಳು. ಪಶ್ಚಿಮ ಶ್ರೇಣಿ ಹೊಸದುರ್ಗದಲ್ಲಿ (983ಮೀ) ಆರಂಭವಾಗಿ, ಮಾಯಕೊಂಡದ ಮೂಲಕ ಅಣಜಿ ಕಡೆಗೆ ಹಬ್ಬಿದೆ. ಹೊಸದುರ್ಗ ತಾಲ್ಲೂಕಿನಲ್ಲಿರುವ ಹಾಲರಾಮೇಶ್ವರಗುಡ್ಡ (1,181ಮೀ) ಈ ಶ್ರೇಣಿಯ ಹಾಗೂ ಜಿಲ್ಲೆಯ ಅತಿ ಎತ್ತರದ ಬೆಟ್ಟ. ಶ್ರೇಣಿಗಳ ಹೆಚ್ಚಿನ ಭಾಗ ಹಿರಿಯೂರು, ಚಿತ್ರದುರ್ಗ, ಹೊಸದುರ್ಗ ತಾಲ್ಲೂಕುಗಳಲ್ಲಿವೆ. ಮೊಳಕಾಲ್ಮೂರುವಿನ ಬಳಿ ಕೆಲವು ಬೆಟ್ಟಗಳುಂಟು. ಇವುಗಳಲ್ಲಿ ಮುಖ್ಯವಾದವು ನುಂಕೆಭೈರವ (921ಮೀ,) ಜಟಿಂಗರಾಮೇಶ್ವರ (1,057ಮೀ) ಮತ್ತು ಶಾಂತಿಗುಡ್ಡ (791ಮೀ). ಈ ಪ್ರದೇಶ ವಿಶಿಷ್ಟ ಸೌಂದರ್ಯದಿಂದ ಕೂಡಿದ್ದೆಂದು ಬ್ರೂಸ್‍ಫೂಟ್ ಬರೆದಿದ್ದಾನೆ. ಬೆಟ್ಟಗಳ ಶ್ರೇಣಿಗಳನ್ನು ಬಿಟ್ಟರೆ ಜಿಲ್ಲೆಯ ಉಳಿದ ಭಾಗ ಮಟ್ಟಸವಾದ ಮೈದಾನ. ಅಂಥ ವೈವಿಧ್ಯವೇನೂ ಇಲ್ಲ. ಇಡೀ ಜಿಲ್ಲೆ ಸಮುದ್ರಮಟ್ಟದಿಂದ ಸಾಮಾನ್ಯವಾಗಿ 600ಮೀ ಎತ್ತರದಲ್ಲಿದೆ. ಸಾಮಾನ್ಯವಾಗಿ ಉತ್ತರ ಮತ್ತು ಈಶಾನ್ಯಕ್ಕೆ ಇಳಿಜಾರಾಗಿದೆ.



ವಾಣಿವಿಲಾಸ ಸಾಗರ, ಹಿರಿಯೂರು

ಬಾಬಾಬುಡನ್‍ಗಿರಿ ಶ್ರೇಣಿಯಿಂದ ಹರಿದು ಬರುವ ವೇದಾವತಿ ಜಿಲ್ಲೆಯ ಮುಖ್ಯ ನದಿ. ಜಿಲ್ಲೆಯ ದಕ್ಷಿಣ ಮತ್ತು ಪೂರ್ವಭಾಗದ ಎಲ್ಲೆಗೆ ಸುಮಾರು ಸಮಾಂತರವಾಗಿ ಸಾಗುವ ಈ ನದಿ ನೈಋತ್ಯದಲ್ಲಿ ಹೊಸದುರ್ಗ ತಾಲ್ಲೂಕನ್ನು ಪ್ರವೇಶಿಸಿ ಹಿರಿಯೂರು ಮತ್ತು ಚಳ್ಳಕೆರೆ ತಾಲ್ಲೂಕುಗಳ ಮೂಲಕ 207ಕಿಮೀ ದೂರ ಹರಿಯುತ್ತದೆ. ಜನಗನಹಳ್ಳ (ಚಿಕ್ಕಹಗರಿ) ಎಂಬುದು ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆ ಜಗಳೂರು ತಾಲ್ಲೂಕುಗಳಲ್ಲಿ ಹರಿದು ವೇದಾವತಿಯನ್ನು ಸೇರುತ್ತದೆ. ಸ್ವರ್ಣಮುಖಿ ನದಿ ತುಮಕೂರು ಜಿಲ್ಲೆಯಲ್ಲಿ ಹುಟ್ಟಿ ಹಿರಿಯೂರು ತಾಲ್ಲೂಕಿನ ಇಕ್ಕನೂರು ಬಳಿ ಚಿತ್ರದುರ್ಗ ಜಿಲ್ಲೆಯನ್ನು ಪ್ರವೇಶಿಸಿ 11ಕಿಮೀ ದೂರ ಹರಿದು ವೇದಾವತಿಯನ್ನು ಸೇರುತ್ತದೆ. ಹೊಳಲ್ಕೆರೆಯ ಪಶ್ಚಿಮ ಭಾಗದ ಬೆಟ್ಟಗಳಲ್ಲಿ ಹುಟ್ಟಿ, ಚಿತ್ರದುರ್ಗ ಜಿಲ್ಲೆಯಲ್ಲಿ 72ಕಿಮೀ ದೂರ ಹರಿದು, ತುಂಗಭದ್ರಾ ನದಿಯನ್ನು ಸೇರುವ ತರೆ ಸ್ಯಾಗಲಹಳ್ಳ, ಈ ಜಿಲ್ಲೆಯಲ್ಲಿ ಹರಿಯುವ ಗರಣಿ ಮತ್ತು ನಾಯಕನಹಟ್ಟಿ ತೊರೆಗಳು ಹಿರಿಯೂರಿಗೆ 11ಕಿಮೀ ದೂರದಲ್ಲಿ ವೇದಾವತಿಯನ್ನು ಸೇರುತ್ತದೆ. ಜಿಲ್ಲೆಯಲ್ಲಿ ಮಳೆ ಕಡಿಮೆ. ಬೇಸಗೆಯ ತಾಪ ಹೆಚ್ಚು. ಚಳಿಗಾಲ ಹಿತಕರ. ಚಳಿಗಾಲದ ಸರಾಸರಿ ಉಷ್ಣತೆ $27.9^0$ಸೆಂ. ಬೇಸಗೆಯಲ್ಲಿ $36.2^0$ಸೆಂ. ನಿಂದ $41^0$ಸೆಂ. ಈ ಜಿಲ್ಲೆಯ ಸರಾಸರಿ ವಾರ್ಷಿಕ ಮಳೆ 655ಮಿಮೀ.

ಜಿಲ್ಲೆಯಲ್ಲಿ ಕಣಶಿಲೆ ಹೆಚ್ಚುಮಟ್ಟಿಗೆ ಹರಡಿದೆ. ಶಿಸ್ಟ್ ಕಲ್ಲು, ಕ್ವಾರ್ಟ್‍ಜೈಟ್, ಸಮೂಹ ಶಿಲೆಗಳು (ಗ್ರಾಂಗ್ಲಾಮರೇಟ್ಸ್), ಸುಣ್ಣಕಲ್ಲು ಮತ್ತು ಕಬ್ಬಿಣಯುಕ್ತ ಶಿಲಾಪದರಗಳು ಇವೆ. ಅಲ್ಲಲ್ಲಿ ಡಾಲರೈಟ್ ನುಗ್ಗುಶಿಲೆಗಳೂ ಉಂಟು. ಹೊಸದುರ್ಗ ತಾಲ್ಲೂಕಿನ ಬೂದಿಹಾಳು, ಗಂಜಿಗೆರೆ, ಹಿರಿಯೂರು ತಾಲ್ಲೂಕಿನ ಗೋಗುಡ್ಡ ಇವುಗಳ ಬಳಿ ಕಲ್ನಾರು ದೊರೆಯುತ್ತದೆ. ಹೊಳಲ್ಕೆರೆ ತಾಲ್ಲೂಕಿನ ಶಿವಗಂಗೆ ಬೆಟ್ಟಗಳಲ್ಲಿ, ಬಾಕ್ಸೈಟ್ ಅದುರು ಇದೆ. ಚಿತ್ರದುರ್ಗ ತಾಲ್ಲೂಕಿನ ಚಿಕ್ಕಣ್ಣನಹಳ್ಳಿ ಬಳಿ ಆಂಟಿಮೊನಿಯ ಸ್ವಲ್ಪ ಪ್ರಮಾಣದ ನಿಕ್ಷೇಪವಿದೆ. ಚಳ್ಳಕೆರೆಯ ಬಳಿಯಲ್ಲಿ ಕೊರಂಡಂ, ಕಾಳನಗವೆ ಬೆಟ್ಟಗಳಲ್ಲಿ ಕ್ರೋಮೈಟ್ ದೊರಕುತ್ತದೆ. ಹಿರಿಯೂರು ತಾಲ್ಲೂಕಿನ ಗವನಹಳ್ಳಿಯಲ್ಲಿ ಕ್ಯಾಲ್ಸೈಟ್, ಹೊಳಲ್ಕೆರೆ ತಾಲ್ಲೂಕಿನಲ್ಲಿ ಕ್ಯಾನೈಟ್, ಹೊಳಲ್ಕೆರೆ ತಾಲ್ಲೂಕಿನ ಕುಡಿನೀರುಕಟ್ಟೆ ಬಳಿ ವರ್ಮಿಕುಲೇಟ್ ದೊರಕುತ್ತವೆ. ಚಿತ್ರದುರ್ಗ ತಾಲ್ಲೂಕಿನ ಇಂಗಳದಾಳು (ನೋಡಿ) ಬಳಿ ಉತ್ತಮವಾದ ತಾಮ್ರದ ಅದುರು ಇದೆ. ಇಂಗಳದಾಳಿನಲ್ಲಿ ತಾಮ್ರದ ಅದುರನ್ನು ತೆಗೆಯಲಾಗುತ್ತಿದೆ. ಇಲ್ಲಿ ಪೈರೈಟ್ ನಿಕ್ಷೇಪಗಳು ಸಹ ಇವೆ. ಪೈರೈಟ್‍ಗಳು ಚಿತ್ರದುರ್ಗ ತಾಲ್ಲೂಕಿನ ಕುರುಬರ ಮರಡಿಕೆರೆ, ಕಲ್ಲೆಹಡಲು, ಯರೆಹಳ್ಳಿಗಳ ಬಳಿ ಸಹ ಇವೆ. ಜಿಲ್ಲೆಯ ಹಲವೆಡೆಗಳಲ್ಲಿ ಚಿನ್ನದ ನಿಕ್ಷೆಪಗಳಿದ್ದು ಚಿತ್ರದುರ್ಗ ತಾಲ್ಲೂಕಿನ ಕೋಟೆಮರಡಿ ಮತ್ತು ಗೋಣೂರು, ಹೊಸದುರ್ಗ ತಾಲ್ಲೂಕಿನ ಬೂದಿಮರಡಿ, ಹಿರಿಯೂರು ತಾಲ್ಲೂಕಿನ ಜವನಗೊಂಡನಹಳ್ಳಿ, ಅಣ್ಣೆಸಿದ್ರಿ, ದಿಂಡಿವಾರ - ಈ ಸ್ಥಳಗಳಲ್ಲಿ ಪ್ರಾಚೀನ ಕಾಲದಲ್ಲಿ ಚಿನ್ನವನ್ನು ತೆಗೆಯುತ್ತಿದ್ದ ಬಗ್ಗೆ ಸೂಚನೆಗಳಿವೆ. ಹಿರಿಯೂರು ತಾಲ್ಲೂಕಿನಲ್ಲಿ ಉತ್ತಮವಾದ ಕಬ್ಬಿಣದ ಅದಿರಿದೆ. ಹೊಸದುರ್ಗ, ಹೊಳಲ್ಕೆರೆ ಮತ್ತು ಚಿತ್ರದುರ್ಗ ತಾಲ್ಲೂಕುಗಳಲ್ಲೂ ಸ್ವಲ್ಪಮಟ್ಟಿಗೆ ಕಬ್ಬಿಣದ ಅದುರಿನ ಹರಹುಗಳಿವೆ. ಸ್ಫಟಿಕ ಜಾತಿಯ ಸುಣ್ಣಕಲ್ಲಿನ ಪದರಗಳು ಜಿಲ್ಲೆಯ ಅನೇಕ ಕಡೆಗಳಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಹಿರಿಯೂರಿನ ವಾಯವ್ಯಕ್ಕಿರುವ ಜವಗೊಂಡನಹಳ್ಳಿ, ಹೊಸದುರ್ಗ ತಾಲ್ಲೂಕಿನ ಮಾರಿಕಣಿವೆ ಮತ್ತು ಮಡದಕೆರೆ, ಕಂಚಿಪುರ ಭಾಗಗಳು, ಹೊಳಲ್ಕೆರೆ ತಾಲ್ಲೂಕಿನ ಹೊರಕೆರೆ, ದೇವರಪುರ, ದಾವಣಗೆರೆ ತಾಲ್ಲೂಕಿನ ದೇವರ ಬೆಳ್ಳಿಕೆರೆ ಇಲ್ಲಿನ ಹರಹುಗಳು ಮುಖ್ಯವಾದುವು. ಚಿತ್ರದುರ್ಗ ತಾಲ್ಲೂಕಿನ ಕುರುಬರ ಮರಡಿಕೆರೆ, ಗೋಣೂರು, ಗುಡ್ಡದ ರಂಗವನಹಳ್ಳಿ ಮತ್ತು ಹಿರಿಯೂರು ತಾಲ್ಲೂಕಿನ ನಿಶಾನಿಗುಡ್ಡ — ಇವುಗಳ ಬಳಿ ಸ್ವಲ್ಪ ಪ್ರಮಾಣದಲ್ಲಿ ಸೀಸದ ಅದುರು ಇದೆ. ಹೊಸದುರ್ಗ, ಹೊಳಲ್ಕೆರೆ ತಾಲ್ಲೂಕುಗಳಲ್ಲಿ ಮ್ಯಾಂಗನೀಸ್ ಅದುರು ವ್ಯಾಪಕವಾಗಿದೆ. ಹೊಳಲ್ಕೆರೆ ತಾಲ್ಲೂಕಿನ ಲೋಕದೊಳಲಿನ ಬಳಿ ಬಳಪದಕಲ್ಲು, ಹಿರಿಯೂರಿನಲ್ಲಿ ಹಾಸಗಲ್ಲು ಮತ್ತು ಚಿತ್ರದುರ್ಗ ತಾಲ್ಲೂಕಿನಲ್ಲಿ ನುರುಜು ಸುಣ್ಣಕಲ್ಲು ದೊರಕುತ್ತವೆ. ಚಿತ್ರದುರ್ಗ ಮತ್ತು ಹೊಸದುರ್ಗ ತಾಲ್ಲೂಕಿನ ಹಲವೆಡೆಗಳಲ್ಲಿ ಉತ್ತಮವಾದ ವಿವಿಧ ಬಣ್ಣದ ಸುದ್ದೆ ಮಣ್ಣುಗಳುಂಟು.

ಜಿಲ್ಲೆಯಲ್ಲಿ ಕುರುಚಲು ಕಾಡುಗಳೇ ಹೆಚ್ಚು. ಮಳೆ ಹೆಚ್ಚಾಗಿಲ್ಲದ ಭಾಗಗಳಲ್ಲಿ ಹುಣಿಸೆ, ಮಾವು, ಹಿಪ್ಪೆ ಮರಗಳು, ಜಾಲಿ ಜಾತಿಯ ಗಿಡಗಳು ಮತ್ತು ಸೀತಾಫಲ ಬೆಳೆಯುತ್ತವೆ. ತಂಪು ತಿಂಗಳುಗಳಲ್ಲಿ ಚಳ್ಳಕೆರೆ ಮತ್ತು ಹೊಸದುರ್ಗ ತಾಲ್ಲೂಕುಗಳ ಅಮೃತಮಹಲ್ ಹುಲ್ಲುಗಾವಲುಗಳು ಅಚ್ಚಹಸಿರಾಗಿರುತ್ತವೆ. ಹೊಸದುರ್ಗದ ಬಳಿಯ ವೇದಾವತಿ ಕಣಿವೆ ಸಸ್ಯಸಂಪದ್ಯುಕ್ತವಾದ್ದು. ಜೋಗಿಮಟ್ಟಿ ಬೆಟ್ಟಗಳ ಬಳಿ ಬಿದಿರುಮೆಳೆಗಳು ಉಂಟು. ಚೌಬೀನೆಗೆ ಯೋಗ್ಯವಾದ ಕಮ್ಮರ, ಸೋಮೆ (ಸ್ವಾಮಿ ಮರ ಮತ್ತು ಕೆಂಪು ಖೈರ ಮರಗಳು ಅಲ್ಲಿ ಬೆಳೆಯುತ್ತವೆ. ದಿಂಡಿಗ, ಬೇವು, ಕಕ್ಕೆ, ಚುಜ್ಜಲು, ತಂಗಡಿ) ಇತರ ಬಗೆಯ ಮರಗಳು, ಬೆಟ್ಟಗುಡ್ಡಗಳಲ್ಲಿ ಚಿರತೆ, ಕತ್ತೆಕಿರುಬ, ಕರಡಿ, ಕಾಡುಹಂದಿಗಳಿವೆ. ಹುಲಿಗಳೂ ಉಂಟು. ಜಿಂಕೆಗಳು ಹಿರಿಯೂರು, ಚಿತ್ರದುರ್ಗ, ಹೊಳಲ್ಕೆರೆ ತಾಲ್ಲೂಕುಗಳಲ್ಲಿ ಹೆಚ್ಚು. ನಾಗರಹಾವು, ಮಂಡಲದಹಾವುಗಳು ಇವೆ. ಮಂಡರಗಪ್ಪೆ ಮತ್ತು ಇತರ ಬಗೆಯ ಚೇಳುಗಳುಂಟು. ತುಂಗಭದ್ರಾ ನದಿಯಲ್ಲಿ ಮೊಸಳೆಗಳಿವೆ. ಕಾಡುಕಾಗೆ, ಮೈನ, ಮರಕುಟಿಗ, ಕಾಡುಪಾರಿವಾಳ, ಕಾಡುಕೋಳಿ, ಕವುಜಗ, ನೀರುಕೋಳಿ, ಕೋಗಿಲೆ, ಬಾನಾಡಿ ಇವು ಜಿಲ್ಲೆಯಲ್ಲಿರುವ ಪಕ್ಷಿಗಳಲ್ಲಿ ಮುಖ್ಯವಾದವು. ಮತ್ತೋಡು ಬಳಿ ಕೊಕ್ಕರೆಗಳುಂಟು.


0 10 20
ಕಿಲೋಮೀಟರುಗಳು
ಚಿತ್ರದುರ್ಗ ಜಿಲ್ಲೆ
ಚಿತ್ರದುರ್ಗ ಜಿಲ್ಲೆ
ರಾಮಪುರ
ಬ್ರಹ್ಮಗಿರಿ
ಸಿದ್ದಾಪುರ
ಜಟಿಂಗರಾಮೇಶ್ವರ
ಮೊಳಕಾಲ್ಮೂರು
ಬೊಮ್ಮಗೊಂಡನ ಕೆರೆ
ಹಿರೇಕೆರೆಹಳ್ಳಿ
ನಾಯಕನಹಟ್ಟಿ
ತಳಕು
ತಿಪ್ಪಾರೆಡ್ಡಿಹಳ್ಳಿ
ಭರಮಸಾಗರ
ಮುದ್ದಾಪುರ
ತುರುವನೂರು
ಚಳ್ಳಕೆರೆ
ಸಿರಿಗೆರೆ
ಚಿತ್ರದುರ್ಗ
ದೊಡ್ಡೇರಿ
ಪರಶುರಾಮಪುರ
ಭರಮನಾಯಕನ ದುರ್ಗ
ಚಂದ್ರವಳ್ಳಿ
ಇಂಗಳದಾಳು
ಚಿಕ್ಕಜಾಜೂರು
ಐಮಂಗಲ
ಹರ್ತಿಕೋಟೆ
ವೇದಾವತಿ
ಧರ್ಮಪುರ
ಹೊಳಲ್ಕೆರೆ
ಹಿರಿಯೂರು
ರಾಮಗಿರಿ
ತಾಳ್ಯ
ಭರಮಗಿರಿ
ಮಾಡದಕೆರೆ
ವಾಣೀವಿಲಾಸಸಾಗರ
ಹೊಸದುರ್ಗ
ಜವಗೊಂಡನಹಳ್ಳಿ
ನೀರಗುಡ್ಡ
ಮತ್ತೋಡು
ಶ್ರೀರಾಂಪುರ

ಕೆರೆ ಬಾವಿಗಳು ಜಿಲ್ಲೆಯ ನೀರಾವರಿ ಮೂಲಗಳು. ಹೊಸದುರ್ಗ ತಾಲ್ಲೂಕಿನ ಮಾರಿಕಣಿವೆಯಲ್ಲಿ ವೇದಾವತಿ ನದಿಗೆ ಕಟ್ಟಲಾಗಿರುವ ವಾಣಿವಿಲಾಸ ಸಾಗರ ಜಲಾಶಯದಿಂದ ಹಿರಿಯೂರು ತಾಲ್ಲೂಕಿನ ಕೆಲವು ಭಾಗ ಸಾಗುವಳಿಯಾಗುತ್ತದೆ. ಹಿರಿಯೂರು ತಾಲ್ಲೂಕಿನ ಕರಿಯಾಲದ ಬಳಿ ಸ್ವರ್ಣಮುಖಿ ನದಿಗೆ ಅಣೆ ಕಟ್ಟಲಾಗಿದೆ. ಚಳ್ಳಕೆರೆ ತಾಲ್ಲೂಕಿನ ಭಾಗದಲ್ಲಿ ವೇದಾವತಿಯಿಂದ ನೀರನ್ನು ಎತ್ತಿ ಅಥವಾ ಪ್ರವಾಹವನ್ನು ತಿರುಗಿಸಿ ವ್ಯವಸಾಯಕ್ಕೆ ನೀರು ಬಳಸುವುದು ಸಾಮಾನ್ಯ. ಜನಗನಹಳ್ಳಕ್ಕೆ ಅಡ್ಡಲಾಗಿ ಭಟ್ಟರಹಳ್ಳಿ, ಮಲ್ಲಳ್ಳಿ ಮತ್ತು ದೇವಸಮುದ್ರ ಕೆರೆಗಳನ್ನು ಕಟ್ಟಲಾಗಿದೆ. ಚಿತ್ರದುರ್ಗ ತಾಲ್ಲೂಕಿನ ಭೀಮಸಮುದ್ರ, ಚಳ್ಳಕೆರೆ ತಾಲ್ಲೂಕಿನ ಧರ್ಮಾಪುರಕೆರೆ, ಹೊಳಲ್ಕೆರೆ ತಾಲ್ಲೂಕಿನ ಮುತ್ತುಗದೂರು ಕೆರೆ ಜಿಲ್ಲೆಯ ದೊಡ್ಡ ಕೆರೆಗಳಲ್ಲಿ ಕೆಲವು. ಜೋಳ ಮತ್ತು ರಾಗಿ ತಾಲ್ಲೂಕಿನ ಮುಖ್ಯಬೆಳೆಗಳು. ಹತ್ತಿ, ಬತ್ತ, ಕಬ್ಬು ತಲ್ಲೂಕಿನ ಇತರ ಬೆಳೆಗಳು. ಕಡಲೆಕಾಯಿ, ಎಣ್ಣೆಬೀಜಗಳು-ಹೊಗೆಸೊಪ್ಪು,—ಇತರ ಬೆಳೆಗಳು. ತೊಗರಿ, ನವಣೆ, ಸಾಸುವೆ, ಬಾಳೆ, ಅಡಕೆ, ತೆಂಗು, ಈರುಳ್ಳಿ, ಮೆಣಸಿನಕಾಯಿ, ಹಣ್ಣು, ತರಕಾರಿಗಳು ಇವನ್ನು ಸ್ವಲ್ಪಮಟ್ಟಿಗೆ ಬೆಳೆಯಲಾಗುತ್ತದೆ.



ಬೃಹದೇಶ್ವರ ಸ್ಥಂಭ: ಚಿತ್ರದುರ್ಗ

ಕೋಳಿಸಾಕಣೆ ಉದ್ಯಮ ಜಿಲ್ಲೆಯಲ್ಲಿ ಸಾಕಷ್ಟಿದೆ. ಜಿಲ್ಲೆಯ ಮತ್ಸ್ಯೋದ್ಯಮ ಹೆಚ್ಚಾಗಿ ವಾಣಿವಿಲಾಸ ಸಾಗರವನ್ನು ಅವಲಂಬಿಸಿದೆ. ಜೊತೆಗೆ ನದಿಗಳೂ ನೂರಾರು ದೊಡ್ಡ ಕೆರೆಗಳೂ ಸಾಮಾನ್ಯ ಕೆರೆಗಳೂ ಮತ್ಸ್ಯೋದ್ಯಮಕ್ಕೆ ಸಹಕಾರಿಯಾಗಿವೆ. ಚಿತ್ರದುರ್ಗ ಮತ್ತು ವಾಣಿವಿಲಾಸಪುರದಲ್ಲಿ ಇದಕ್ಕೆ ಸಂಬಂಧಿಸಿದ ಸರ್ಕಾರಿ ಕಚೇರಿಗಳಿವೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಮುಖ್ಯ ಊರುಗಳಿಗೆ ಉತ್ತಮ ರಸ್ತೆ ಸಂಪರ್ಕವಿದೆ. ಅವುಗಳಲ್ಲಿ ರಾಷ್ಟ್ರೀಯ ಹೆದ್ದಾರಿ 4, ಬೆಂಗಳೂರು-ಬಳ್ಳಾರಿ, ರಾಜ್ಯ ಹೆದ್ದಾರಿ; ಬೆಂಗಳೂರು – ಪುಣೆ, ಬ್ರಾಡ್‌ಗೇಜ್ ರೈಲುಮಾರ್ಗ ಚಿತ್ರದುರ್ಗ ಜಿಲ್ಲೆಯ ಮೂಲಕ ಹಾದು ಹೋಗುತ್ತದೆ. ಚಿಕ್ಕಜಾಜೂರಿನಿಂದ ಚಿತ್ರದುರ್ಗಕ್ಕೆ 34ಕಿಮೀ ದೂರದ ರೈಲುಮಾರ್ಗವುಂಟು.

ಗಣಿಗಾರಿಕೆ ಜಿಲ್ಲೆಯಲ್ಲಿ ವ್ಯಾಪಕವಾಗಿ ಬೆಳೆಯುತ್ತಿದೆ. ಹೊಸದುರ್ಗ, ಚಿತ್ರದುರ್ಗ, ಹೊಳಲ್ಕೆರೆ ತಾಲ್ಲೂಕುಗಳಲ್ಲಿ ಮ್ಯಾಂಗನೀಸ್ ಗಣಿಗಳಿವೆ. ಜಿಲ್ಲೆಯಲ್ಲಿ ಕಬ್ಬಿಣದ ಮತ್ತು ತಾಮ್ರದ ಗಣಿಗಳಿವೆ. ಚಿತ್ರದುರ್ಗ ತಾಲ್ಲೂಕಿನ ಇಂಗಳದಾಳು, ಕೊಲಾಹಾಳು, ಕಲ್ಲೆಹಡಲು ಈ ಸ್ಥಳಗಳಲ್ಲಿ ಗಂಧಕ ತೆಗೆಯಲಾಗುತ್ತಿದೆ. ಇಂಗಳದಾಳಿನಲ್ಲಿ ತಾಮ್ರದ ಅದುರನ್ನು ತೆಗೆದು ಸಂಸ್ಕರಿಸಲಾಗುತ್ತಿದೆ. ಯಂತ್ರಪುರದ ಕಿರ್ಲೋಸ್ಕರ್ ಕಾರ್ಖಾನೆಯಲ್ಲಿ ಕಡೆತದ ಯಂತ್ರಗಳೇ ಮೊದಲಾದ ಯಂತ್ರೋಪಕರಣಗಳು ತಯಾರಾಗುತ್ತವೆ. ಚಳ್ಳಕೆರೆ, ಚಿತ್ರದುರ್ಗಗಳಲ್ಲಿ ಎಣ್ಣೆ ಗಿರಣಿಗಳಿವೆ. ಹಿರಿಯೂರಿನಲ್ಲಿ ಸಕ್ಕರೆ ಕಾರ್ಖಾನೆ ಇದೆ. ಈ ಜಿಲ್ಲೆಯ ಕೈಮಗ್ಗದ ಹತ್ತಿ, ರೇಷ್ಮೆ ಮತ್ತು ಉಣ್ಣೆ ಬಟ್ಟೆಗಳು ಪ್ರಸಿದ್ಧ. ಕಂಬಳಿ ನೇಯ್ಗೆ ಇದೆ. ಕೃಷಿ ಮತ್ತು ಕೈಗಾರಿಕೋದ್ಯಮಿಗಳಿಗೆ ಬ್ಯಾಂಕುಗಳ ಆರ್ಥಿಕ ನೆರವು ದೊರೆಯುತ್ತಿದೆ. ನಿಯಂತ್ರಿತ ಮಾರುಕಟ್ಟೆಗಳಿವೆ.

ವಿದ್ಯಾಭ್ಯಾಸಕ್ಕೆ ಅನುಕೂಲವಿದ್ದು ಸರ್ಕಾರಿ ಮತ್ತು ಖಾಸಗಿ ಶಾಲಾಕಾಲೇಜುಗಳು ಈ ಜಿಲ್ಲೆಯಲ್ಲಿವೆ. ಎಂಜನಿಯರಿಂಗ್ ಕಾಲೇಜು, ಉಪಾಧ್ಯಾಯ ತರಬೇತಿ, ಕೈಗಾರಿಕಾ ಮತ್ತು ತಾಂತ್ರಿಕ ತರಬೇತಿ ಶಾಲೆಗಳೂ ಹಾಗೂ ಇತರ ಕಾಲೇಜುಗಳೂ ಈ ಜಿಲ್ಲೆಯಲ್ಲಿವೆ.

**ಪ್ರೇಕ್ಷಣೀಯ ಸ್ಥಳಗಳು :** ಚಂದ್ರವಳ್ಳಿ ಪ್ರಾಕ್ತನ ನಿವೇಶನ. ಭಾರತ ಸರ್ಕಾರದ ಪುರಾತತ್ತ್ವ ಇಲಾಖೆ ಇಲ್ಲಿ ಉತ್ಖನನ ನಡೆಸಿದೆ. ರಾಜ್ಯದಲ್ಲಿ ಐತಿಹಾಸಿಕ ಮಹತ್ವವುಳ್ಳ ಚಿನ್ನದ ನಾಣ್ಯ, ಆಭರಣಗಳು, ಬಣ್ಣದ ಮಣ್ಣಿನ ಪಾತ್ರೆಗಳು ದೊರಕಿವೆ. ಜೋಗಿಬೆಟ್ಟ ಗಿರಿಧಾಮ, ಪಂಡರಹಳ್ಳಿ ಬೆಟ್ಟದಲ್ಲಿ ರಂಗನಾಥಸ್ವಾಮಿ ದೇವಾಲಯವಿದೆ. ಸಿರಿಗೆರೆಯಲ್ಲಿ, ಬೃಹನ್ಮಠ ಸಂಸ್ಥಾನವಿದೆ. ನೀರ್ತಡಿಯಲ್ಲಿರುವ ರಂಗನಾಥಸ್ವಾಮಿ ದೇವಾಲಯ ಪ್ರಸಿದ್ಧವಾದುದು. ನಾಯಕನಹಟ್ಟಿ (ನೋಡಿ) ಧಾರ್ಮಿಕ ಕ್ಷೇತ್ರ. ರಾಮದುರ್ಗದಲ್ಲಿ ಗುಹಾಂತರ ದೇವಾಲಯವಿದೆ ಅಲ್ಲಿ ಪುರಾತನ ಭೈರವೇಶ್ವರ ದೇವಾಲಯವಿದೆ. ಬ್ರಹ್ಮಗಿರಿ (ನೋಡಿ) ಒಂದು ಪುರಾತನ ನೆಲೆ.

ಚಿತ್ರದುರ್ಗ ಜಿಲ್ಲೆಯಲ್ಲಿ ನವಶಿಲಾಯುಗದಿಂದಲೂ ಜನವಸತಿ ಇತ್ತೆಂಬುದು ಈ ಜಿಲ್ಲೆಯ ಬ್ರಹ್ಮಗಿರಿಯಲ್ಲಿ ನಡೆದಿರುವ ಉತ್ಖನನಗಳಿಂದ ತಿಳಿದುಬಂದಿದೆ. ಬ್ರಹ್ಮಗಿರಿ, ಚಿಕ್ಕಮಧುರೆ, ತುರುವನೂರು ಮೊದಲಾದೆಡೆಗಳಲ್ಲಿ ಬೃಹತ್ ಶಿಲಾ ಸಮಾಧಿಗಳಿದ್ದು ಕಬ್ಬಿಣ ಯುಗದ ಸಂಸ್ಕೃತಿ ಇಲ್ಲಿ ಹರಡಿತ್ತೆಂಬುದು ಸ್ಪಷ್ಟಪಟ್ಟಿದೆ. ಈ ಜಿಲ್ಲೆ ಮೌರ್ಯ ಸಾಮ್ರಾಜ್ಯಕ್ಕೆ ಸೇರಿತ್ತೆಂಬುದು ಬ್ರಹ್ಮಗಿರಿ, ಸಿದ್ದಾಪುರ ಮತ್ತು ಜಟಿಂಗರಾಮೇಶ್ವರಗಳಲ್ಲಿ ದೊರೆತಿರುವ ಅಶೋಕನ ಶಾಸನಗಳಿಂದ ವ್ಯಕ್ತವಾಗುತ್ತದೆ. ಮೌರ್ಯರ ಅನಂತರ ಸಾತವಾಹನರು ಇಲ್ಲಿ ಆಳಿದರು. ಅವರ ಶಾಸನಗಳು ದೊರೆಯದಿದ್ದರೂ ಚಂದ್ರವಳ್ಳಿಯಲ್ಲಿ ಯಜ್ಞಶ್ರೀ ಸಾತಕರ್ಣಿಯ,ಚುಟು, ಕುರವಂಶಗಳವರ ಅನೇಕ ಸೀಸದ ನಾಣ್ಯಗಳು ದೊರೆತಿವೆ. 1-12ನೆಯ ಶತಮಾನಗಳಲ್ಲಿ ಈ ಪ್ರದೇಶ ರೋಮನ್ ಚಕ್ರಾಧಿಪತ್ಯದೊಡನೆ ವ್ಯಾಪಾರಸಂಬಂಧ ಹೊಂದಿತ್ತು. ಚಂದ್ರವಳ್ಳಿಯಲ್ಲಿ ಆಗಸ್ಟಸ್ ಮತ್ತು ಟೈಬೀರಿಯಸ್ ಚಕ್ರವರ್ತಿಗಳ ನಾಣ್ಯಗಳೂ ಮೆಡಿಟರೆನಿಯನ್ ಪ್ರದೇಶದಲ್ಲಿ ತಯಾರಾದ ರೂಲೆಟೆಡ್ ಮೃಣ್ಪಾತ್ರೆಗಳೂ ದೊರೆತಿವೆ. ಮುಂದೆ ಈ ಜಿಲ್ಲೆ ಬನವಾಸಿ ಕದಂಬರಿಗೆ ಸೇರಿತು. ಕದಂಬ ಮಯೂರಶರ್ಮ ಗೆದ್ದ ರಾಜ್ಯಗಳನ್ನು ಅವನ ಚಂದ್ರವಳ್ಳಿ ಶಾಸನ ತಿಳಿಸುತ್ತದೆ. ಅಲ್ಲಿ ಅವನು ಒಂದು ಕೆರೆಯನ್ನು ಕಟ್ಟಿಸಿದ್ದನೆಂದೂ ಶಾಸನದಿಂದ ಗೊತ್ತಾಗುತ್ತದೆ. ಚಿತ್ರದುರ್ಗ ಜಿಲ್ಲೆಯ ಪಶ್ಚಿಮ ಮತ್ತು ಉತ್ತರದ ಬಹುಭಾಗ ಕದಂಬಳಿಗೆ 1000ದಲ್ಲಿ ಸೇರಿತ್ತು. ಅನಂತರ ಬಾದಾಮಿಯ ಚಳುಕ್ಯರಿಗೂ ರಾಷ್ಟ್ರಕೂಟರಿಗೂ ಅಧೀನವಾಯಿತು. ಇದೇ ಕಾಲದಲ್ಲಿ ಈ ಜಿಲ್ಲೆಯ ಬಹು ಭಾಗವನ್ನು ಆಳಲಾರಂಭಿಸಿದ ಮುಖ್ಯವಾದ

ರಾಜಮನೆತನ ನೊಳಂಬ ಪಲ್ಲವರದು. ಇವರ ರಾಜಧಾನಿ ಹೆಂಜೇರು. ಮೊದಲು ನೊಳಂಬಳಿಗೆ 1000ವಾಗಿದ್ದ ಇವರ ರಾಜ್ಯ ಮುಂದೆ ನೊಳಂಬವಾಡಿ 32000 ರಾಜ್ಯವಾಯಿತು. ಸ್ವಲ್ಪಕಾಲ ಸ್ವತಂತ್ರವಾಗಿಯೂ ಮತ್ತೆ ಸ್ವಲ್ಪಕಾಲ ಗಂಗರ ಅಥವಾ ರಾಷ್ಟ್ರಕೂಟರ ಅಧೀನವಾಗಿಯೂ ನೊಳಂಬರು ಆಳಿದರು. ಈ ಜಿಲ್ಲೆಯ ತೀರ ದಕ್ಷಿಣಭಾಗದಲ್ಲಿ ನಿರ್ಗುಂದ 300 ಪ್ರಾಂತ್ಯವಿತ್ತು. ಇದೂ ನೊಳಂಬರ ಅಧೀನದಲ್ಲಿತ್ತು. ಚಳ್ಳಕೆರೆ ತಾಲ್ಲೂಕಿನ ಹಿರೆಮಧುರೆ, ಚಿಕ್ಕಮಧುರೆಗಳು ಇವರ ಕಾಲದ ಮುಖ್ಯ ಊರುಗಳಾಗಿದ್ದುವು.

ಹತ್ತನೆಯ ಶತಮಾನದಲ್ಲಿ ಪುನಃ ಪ್ರಬಲರಾದ ಚಾಳುಕ್ಯರಿಗೆ ಈ ಭಾಗ ಸೇರಿತ್ತು. ನೊಳಂಬವಾಡಿ 32000ವನ್ನು ಸ್ವಲ್ಪಕಾಲ ಚಾಳುಕ್ಯ ಯುವರಾಜ ಜಯಸಿಂಹ ನೊಳಂಬ ಪಲ್ಲವ ಆಳಿದ. ನಿರ್ಗುಂದ 300ನ್ನು ಗೋವಿಂದ, ಚೆಟ್ಟ, ವಿಷ್ಣು ಮೊದಲಾದ ಸಾಮಂತರಾಜರು ಮೊದಲು ಚಾಳುಕ್ಯರಿಗೂ ಅನಂತರ ಹೊಯ್ಸಳರಿಗೂ ಅಧೀನರಾಗಿ ಹುಳಿಯಾರಿನಿಂದ ಆಳಿದರು. ಹನ್ನೊಂದನೆಯ ಶತಮಾನದಿಂದ ನೊಳಂಬವಾಡಿಯನ್ನು ಉಚ್ಚಂಗಿ ಪಾಂಡ್ಯರು ಚಾಳುಕ್ಯರ ಅಧೀನರಾಗಿ ಆಳಲಾರಂಭಿಸಿದರು. ಇವರಲ್ಲಿ ತ್ರಿಭುವನಮಲ್ಲ ಪಾಂಡ್ಯದೇವ, ವಿಜಯ ಪಾಂಡ್ಯದೇವ, ವೀರಪಾಂಡ್ಯದೇವ ಇವರು ಮುಖ್ಯರು. ಪಾಂಡ್ಯರು ಆಳುತ್ತಿದ್ದ ಜಿಲ್ಲೆಯ ಈ ಭಾಗಕ್ಕೆ ಪಾಂಡ್ಯ ರಾಜ್ಯ ಅಥವಾ ಪಾಂಡ್ಯ ಮಂಡಲವೆಂಬ ಹೆಸರಿತ್ತು. ಸು.1220ರ ವರೆಗೂ ಆಳಿದ ಪಾಂಡ್ಯರನ್ನು ಹೊಯ್ಸಳ ಇಮ್ಮಡಿ ವೀರಬಲ್ಲಾಳ ಸೋಲಿಸಿ ಪಾಂಡ್ಯನಾಡನ್ನು ಹೊಯ್ಸಳ ರಾಜ್ಯಕ್ಕೆ ಸೇರಿಸಿಕೊಂಡ. ನೊಳಂಬವಾಡಿ, ನಿರ್ಗುಂದ 300 ಇವು ಹೊಯ್ಸಳ ರಾಜ್ಯದ ಪ್ರಾಂತ್ಯಗಳಾದುವು.

ಈ ಜಿಲ್ಲೆಯ ಪೂರ್ವಭಾಗವನ್ನು ಚೋಳಮನೆತನದ ಅರಸರು ಮಹಾಮಂಡಲೇಶ್ವರರಾಗಿ 12ನೆಯ ಶತಮಾನದಲ್ಲಿ ನಿಡುಗಲ್ಲಿನಿಂದ ಆಳಿದರು. ಇವರಲ್ಲಿ ಇರುಂಗೋಳ ಚೋಳ ಮಹಾರಾಜ, ಮಲ್ಲಿದೇವ ಚೋಳ ಮಹಾರಾಜ, ಗೋವಿಂದರಾಯ, ಇರುಂಗೋಳದೇವ ಇವರನ್ನು ಹೆಸರಿಸಬಹುದು.



ಸಂಪಗೆ ಸಿದ್ದೇಶ್ವರ: ಚಿತ್ರದುರ್ಗ

ದೇವಗಿರಿಯ ಯಾದವರೂ ಈ ಜಿಲ್ಲೆಯ ವಾಯವ್ಯ ಭಾಗವನ್ನು ಸ್ವಲ್ಪಕಾಲ ತಮ್ಮ ಅಧೀನಕ್ಕೆ ಒಳಪಡಿಸಿಕೊಂಡಿದ್ದರು. ಆದರೆ 1287ರಲ್ಲಿ ಹೊಯ್ಸಳರು ಈ ಭಾಗವನ್ನೆಲ್ಲ ಆಕ್ರಮಿಸಿಕೊಂಡರು. ಇವರ ಕಾಲದಲ್ಲಿ ಬೆಮ್ಮತ್ತನಕಲ್ಲು (ಈಗಿನ ಚಿತ್ರದುರ್ಗ ಪಟ್ಟಣ) ಈ ಪ್ರಾಂತ್ಯದ ಮುಖ್ಯ ಪಟ್ಟಣವಾಯಿತು. ಹೊಯ್ಸಳರ ಕಾಲಾನಂತರ ಈ ಜಿಲ್ಲೆ ವಿಜಯನಗರ ಸಾಮ್ರಾಜ್ಯಕ್ಕೆ ಒಳಪಟ್ಟಿದ್ದಾಗಲೂ ಬೆಮ್ಮತ್ತನಕಲ್ಲು ಇಲ್ಲಿಯ ಮುಖ್ಯ ಪಟ್ಟಣವಾಗಿ ಮುಂದುವರಿಯಿತು. ಮುಂದೆ 15-16ನೆಯ ಶತಮಾನಗಳಲ್ಲಿ ಹಲವು ಪಾಳೆಯಗಾರರು ಈ ಜಿಲ್ಲೆಯಲ್ಲಿ ಅಲ್ಲಲ್ಲಿ ಆಳಲಾರಂಭಿಸಿದರು. ಅವರಲ್ಲಿ ಮುಖ್ಯರಾದವರು ಚಿತ್ರದುರ್ಗ ಮತ್ತು ನಿಡುಗಲ್ಲು ದುರ್ಗದ ಪಾಳೆಯಗಾರರು. ಕಾಮಗೇಟಿ ವಂಶಕ್ಕೆ ಸೇರಿದ ಚಿತ್ರದುರ್ಗದ ಪಾಳೆಯಗಾರರು ಆರಂಭದಲ್ಲಿ ವಿಜಯನಗರಕ್ಕೆ ಅಧೀನರಾಗಿದ್ದು 1564ರಲ್ಲಿ ವಿಜಯನಗರದ ಪತನಾನಂತರ ಸ್ವತಂತ್ರರಾಗಿ ಆಧಿಪತ್ಯ ನಡೆಸಿದರು. ಇವರಲ್ಲಿ ಮದಕರಿ ನಾಯಕ, ಕಸ್ತೂರಿ ರಂಗಪ್ಪ ನಾಯಕ, ಕುಮಾರ ಭರಮಪ್ಪ ನಾಯಕ ಮೊದಲಾದವರು ಪ್ರಬಲರು. ಆದರೆ ಒಂದು ಕಡೆ ಮರಾಠರೊಂದಿಗೂ ಇನ್ನೊಂದು ಕಡೆ ಹೈದರನೊಂದಿಗೂ ಇವರು ಹೋರಾಡಬೇಕಾಯಿತು. ಕಟ್ಟಕಡೆಗೆ 1779ರಲ್ಲಿ ಹೈದರನಿಗೆ ಸೋತು ಈ ವಂಶ ಕೊನೆಗೊಂಡಿತು. ಕೋಟೆಯನ್ನು ಹೈದರ್ ಮತ್ತು ಟಿಪ್ಪು ಬಲಪಡಿಸಿ, ಅಲ್ಲಿ ಬಲವಾದ ಸೈನ್ಯವನ್ನಿಟ್ಟಿದ್ದರು.



ಗೋಪಾಲಸ್ವಾಮಿ ಹೊಂಡ: ಚಿತ್ರದುರ್ಗ ಕೋಟೆ

ಅನಂತರ ಈ ಪ್ರದೇಶ ಮೈಸೂರರಸರಿಗೆ ಸೇರಿ ಚಿತ್ರಕಲ್ ಫೌಜುದಾರಿಯಾಗಿ ಮುಂದುವರಿಯಿತು. ಮೈಸೂರು ಸಂಸ್ಥಾನ ಬ್ರಿಟಿಷ್ ಕಮಿಷನರ್ ಆಡಳಿತಕ್ಕೆ ಒಳಪಟ್ಟಿದ್ದಾಗ ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳು ಸೇರಿ ಚಿತ್ರದುರ್ಗ ವಿಭಾಗವಾಗಿ ತುಮಕೂರು ಇದರ ಮುಖ್ಯ ಕೇಂದ್ರವಾಯಿತು. 1863ರಲ್ಲಿ ಆ ವಿಭಾಗವನ್ನು ರದ್ದುಮಾಡಿ ಚಿತ್ರದುರ್ಗ ಜಿಲ್ಲೆಯನ್ನು ನಗರ ವಿಭಾಗಕ್ಕೆ ಸೇರಿಸಿ, ಜಿಲ್ಲೆಯನ್ನು ನಂದಿದುರ್ಗ ವಿಭಾಗಕ್ಕೆ ಸೇರಿಸಲಾಯಿತು. 1879ರಲ್ಲಿ ಈ ವ್ಯವಸ್ಥೆ ರದ್ದಾಯಿತು. 1882ರಲ್ಲಿ ಚಿತ್ರದುರ್ಗವನ್ನೇ ತುಮಕೂರು ಜಿಲ್ಲೆಗೆ ಸೇರಿಸಿ ಅದನ್ನೊಂದು ಉಪವಿಭಾಗವನ್ನಾಗಿ ಮಾಡಲಾಯಿತು. 1886ರಲ್ಲಿ ಚಿತ್ರದುರ್ಗ ಜಿಲ್ಲೆಯನ್ನು ಮತ್ತೆ ಸ್ಥಾಪಿಸಿ ಪಾವಗಡ ತಾಲ್ಲೂಕನ್ನು ತುಮಕೂರು ಜಿಲ್ಲೆಗೆ ಸೇರಿಸಲಾಯಿತು. 1956ರಲ್ಲಿ ರಾಜ್ಯ ಪುನರ್ವಿಂಗಡಣೆಯಾದಾಗ ಚಿತ್ರದುರ್ಗ ಜಿಲ್ಲೆ ಬೆಂಗಳೂರು ವಿಭಾಗದ ಅಂಗವಾಯಿತು.

ಚಿತ್ರದುರ್ಗ ಜಿಲ್ಲೆಯುಲ್ಲಿ ಹಲವು ಪ್ರಾಚೀನ ಸ್ಮಾರಕಗಳಿವೆ. ಬೃಹತ್ ಶಿಲಾಸಮಾಧಿಗಳನ್ನು ಬಿಟ್ಟರೆ ಬ್ರಹ್ಮಗಿರಿಯ ಗುಡ್ಡದ ಇಳಿಜಾರಿನಲ್ಲಿ ಸು.3ನೆಯ ಶತಮಾನದ ಚೈತ್ಯಾಕಾರದ ಇಟ್ಟಿಗೆಯ ಕಟ್ಟಡದ ಅವಶೇಷ ಇವುಗಳಲ್ಲಿ ಮುಖ್ಯವಾದ್ದು. ಇದು ಬ್ರಹ್ಮಗಿರಿಯ ಅಶೋಕನ ಶಾಸನದ ಬಳಿಯೇ ದೊರೆತಿದೆ. ಬ್ರಹ್ಮಗಿರಿ, ಸಿದ್ದಾಪುರ ಮತ್ತು ಜಟಿಂಗ ರಾಮೇಶ್ವರಗಳಲ್ಲಿ ಬಂಡೆಗಳ ಮೇಲೆ ಆಳವಾಗಿಯೂ ದಪ್ಪನಾಗಿಯೂ ಕೊರೆದಿರುವ ಅಶೋಕನ ಮೂರು ಶಾಸನಗಳು ಬ್ರಾಹ್ಮೀಲಿಪಿಯಲ್ಲಿವೆ. ಇವು ಈ ಜಿಲ್ಲೆಯ ಅತ್ಯಂತ ಪ್ರಾಚೀನವೂ ಪ್ರಮುಖವೂ ಆದ ಶಾಸನಗಳು. ಈ ಭಾಗದಲ್ಲಿ ಇಸಿಲ ಎಂಬ ಪಟ್ಟಣವಿದ್ದುದು ಈ ಶಾಸನಗಳಿಂದ ವ್ಯಕ್ತವಾಗುತ್ತದೆ. ಸಾತವಾಹನರ ಕಾಲದ ನಾಗರಿಕತೆಯ ಹಲವು ರೀತಿಯ ಅವಶೇಷಗಳು ಚಂದ್ರವಳ್ಳಿಯಲ್ಲಿ ದೊರಕಿವೆ. ಬಹುಶಃ ಇದೇ ಕಾಲದಲ್ಲೇ ಬಂಡೆಗಳ ಮೇಲೆ ರೇಖೆಯಲ್ಲಿ ಬಿಡಿಸಲಾದ ಹುಲಿ, ಜಿಂಕೆ, ಕಾಡುಕೋಣಗಳ ಆಕೃತಿಗಳನ್ನು ಚಂದ್ರವಳ್ಳಿಯ ಬಳಿಯಲ್ಲೂ ಚಿತ್ರದುರ್ಗದ ಬೆಟ್ಟದ ಮೇಲೂ ನೋಡಬಹುದು.

ಅಂಕಲೆಮಠದ ಪರದೇಶಪ್ಪನ ಗವಿ, ಧವಳಪ್ಪನ ಗುಡ್ಡದ ಮೇಲಿನ ಗುಹಾದೇವಾಲಯ, ಚಿತ್ರದುರ್ಗದ ಬೆಟ್ಟದ ಮೇಲಿರುವ ಹಿಡಿಂಬೇಶ್ವರ, ಸಿದ್ದೇಶ್ವರ, ಫಲ್ಗುಣೇಶ್ವರ ಮತ್ತು ಏಕನಾಥೇಶ್ವರ ದೇವಾಲಯಗಳ ಗರ್ಭಗೃಹಗಳು ಗವಿಗಳಲ್ಲಿವೆ. ಇವುಗಳಲ್ಲಿ ಕೆಲವಾದರೂ 8-9ನೆಯ ಶತಮಾನಕ್ಕೆ ಸೇರಿದವು. ಇವು ಈ ಜಿಲ್ಲೆಯ ಪ್ರಾಚೀನ ದೇವಾಲಯಗಳು.



ಚಿತ್ರದುರ್ಗ ಕೋಟೆಯ ಒಂದು ದೃಶ್ಯ

ಮದರಿಕಲ್ಲು ಎಂಬ ಹೆಸರಿನಿಂದ ನೊಳಂಬ ಪಲ್ಲವರ ಪ್ರಾಂತ್ಯವೊಂದರ ರಾಜಧಾನಿಯಾಗಿದ್ದ ಚಿಕ್ಕಮಧುರೆಯಲ್ಲಿ ನೊಳಂಬ ಪಲ್ಲವಾಧಿರಾಜನ ರಾಣಿ ಮತ್ತು ಪಲ್ಲವಮಲ್ಲನ ತಾಯಿ ಗವಗಣಬ್ಬೆ 790ರಲ್ಲಿ ಗವಗಣೇಶ್ವರವೆಂಬ ಶಿವಾಲಯವನ್ನು ಕಟ್ಟಿಸಿದಳು. ಈಗ ಶಿಥಿಲಾವಸ್ಥೆಯಲ್ಲಿರುವ ಸರಳವಾದ ಈ ದೇವಾಲಯದಲ್ಲಿ ಚೌಕನಾದ ಕಂಬಗಳು ತೆಳುವಾಗಿ ಉಬ್ಬಿಸಿ ಬಿಡಿಸಿದ ಸಪ್ತಮಾತೃಕೆ, ಸೂರ್ಯ ಮೊದಲಾದ ಚಿಕ್ಕಚಿಕ್ಕ ಮೂರ್ತಿಗಳೂ ಇವೆ. ಚಿಕ್ಕಮಧುರೆ ಮತ್ತು ಹಿರೇಮಧುರೆಗಳಲ್ಲಿ ನೊಳಂಬರ ಕಾಲದ ಹಲವು ವೀರಗಲ್ಲುಗಳಿವೆ. ಕತ್ತಿಗುರಾಣಿಗಳನ್ನು ಹಿಡಿದು ನಿಂತ ಭವ್ಯಾಕೃತಿಗಳನ್ನು ಅವುಗಳಲ್ಲಿ ಕಂಡರಿಸಿದೆ. ಪ್ರಭಾಕರದಾಸ ಮೊದಲಾದ ಕೆಲವು ವೀರರ ಹೆಸರುಗಳು ಮಾತ್ರ ಈ ವೀರಗಲ್ಲುಗಳಲ್ಲಿ ಇರುವುದುಂಟು. ತಮಟಕಲ್ಲಿನಲ್ಲಿ ಎರಡು ಕಲ್ಲುಗಳ ಮೇಲೆ ದಪ್ಪ ಅಕ್ಷರಗಳಲ್ಲಿ ಸುಂದರವಾಗಿ ಕಡೆದಿರುವ 8ನೆಯ ಶತಮಾನದ ಶಾಸನವೊಂದಿದೆ. ಇದು ಮಾಸಿಕ್ಕಾ ಪುರಾಧಿನಾಥನಾಗಿದ್ದ ಗುಣಮಧುರನೆಂಬ ವೀರನನ್ನು ಮನೋಜ್ಞವಾಗಿ ವರ್ಣಿಸುತ್ತದೆ. ಚಿತ್ರದುರ್ಗದ ಬಳಿ ಗೋವನೂರು ಎಂಬಲ್ಲಿ ದೊರೆತ, ಈಗ ಚಿತ್ರದುರ್ಗದ ವಸ್ತು ಸಂಗ್ರಹಾಲಯದಲ್ಲಿಟ್ಟಿರುವ, ಸಪ್ತಮಾತೃಕೆಯರ ಮೂರ್ತಿಗಳು ಗವಗಣೇಶ್ವರ ದೇವಾಲಯದ ಶಿಲ್ಪದ ಮಾದರಿಯಲ್ಲಿವೆ. ಇವು ನೊಳಂಬರ ಶಿಲ್ಪಕ್ಕೆ ಮಾದರಿಗಳಾಗಿವೆ.

ರಾಷ್ಟ್ರಕೂಟರ ಕಾಲದಲ್ಲಿ ಸು.10ನೆಯ ಶತಮಾನದಲ್ಲಿ ಕಟ್ಟಿದ್ದಿರಬಹುದಾದ ನಂದಗುಡಿಯ ಈಶ್ವರ ದೇವಾಲಯ ಈ ಜಿಲ್ಲೆಯಲ್ಲಿರುವ ಕೆಲವೇ ಪ್ರಾಚೀನ ದೇವಾಲಯಗಳಲ್ಲಿ ಪ್ರಮುಖವಾದ್ದು. ಹೊರಭಾಗ ಹೆಚ್ಚು ಬದಲಾವಣೆ ಹೊಂದಿ ತೀರ ಸಾಮಾನ್ಯವಾದುದಾಗಿ ಕಂಡರೂ ಅಲ್ಲಿರುವ ಬೃಹದಾಕಾರದ ನಂದಿ, ವಿಶಾಲವಾದ ಮಧ್ಯದ ಅಂಕಣವನ್ನು ಹೊಂದಿರುವ ನವರಂಗದ ಕಂಬಗಳು, ವೈವಿಧ್ಯಮಯವಾಗಿ ಕಂಡರಿಸಿರುವ ಸುಕನಾಸಿಯ ಬಾಗಿಲುವಾಡ, ಅದರ ಇಕ್ಕೆಲಗಳಲ್ಲಿ ಉನ್ನತವಾಗಿ ನಿಂತಿರುವ ದ್ವಾರಪಾಲಕರು - ಇವೆಲ್ಲವೂ ಆಕರ್ಷಕವಾಗಿವೆ. ಜಟಿಂಗರಾಮೇಶ್ವರ ಬೆಟ್ಟದ ಮೇಲೆ 10ನೆಯ ಶತಮಾನದ ಶಾಸನವೊಂದಿದೆ. ಅದು ಜಟಾಯುವನ್ನು ರಾವಣ ವಧಿಸಿದ ತಾಣವೆಂದೂ ಶ್ರೀರಾಮ ಜಟಾಯುವಿಗೆ ಸಂಸ್ಕಾರ ಮಾಡಿ ಇಟ್ಟಿಗೆಯಲ್ಲಿ ಜಟಿಂಗರಾಮೇಶ್ವರ ದೇವಾಲಯವನ್ನು ಕಟ್ಟಿಸಿದ್ದನೆಂದೂ ಆ ದೇವಾಲಯವನ್ನು ಕಲ್ಲಿನಿಂದ ಪುನರ್ನಿರ್ಮಾಣ ಮಾಡಿದುದಾಗಿಯೂ ಆ ಶಾಸನ ತಿಳಿಸುತ್ತದೆ. ಅಶೋಕನ ಶಾಸನದ ಬಳಿಯೇ ಇರುವ ಈ ದೇವಾಲಯ ಬಹಶಃ ಇಟ್ಟಿಗೆಯಿಂದ ಕಟ್ಟಿದ ಚೈತ್ಯಾಲಯವಾಗಿತ್ತು. 10ನೆಯ ಶತಮಾನದ ಹೊತ್ತಿಗಾಗಲೇ ಮೇಲಿನ ಪ್ರತೀತಿ ಹರಡಿದ್ದಿರಬೇಕು.

ಹರಿಹರದ ಹರಿಹರೇಶ್ವರ ಅಥವಾ ಶಂಕರನಾರಾಯಣ ದೇವಾಲಯ 11ನೆಯ ಶತಮಾನದ ಹೊತ್ತಿಗೆ ಆಗಲೇ ಪ್ರಸಿದ್ಧವಾಗಿತ್ತು. ಆದರೆ ಮೂಲ ಮೂರ್ತಿಯೊಂದನ್ನು ಬಿಟ್ಟು ಆಗಿನ ದೇವಾಲಯ ಉಳಿದುಬಂದಿಲ್ಲ. ಈಗ ಇರುವ ದೇವಾಲಯವನ್ನು ಹೊಯ್ಸಳ ಮಂತ್ರಿ ಪೋಲಾಳ್ವ ದಂಡನಾಥ 1224ರಲ್ಲಿ ಕಟ್ಟಿಸಿದ. ಈ ದೇವರಿಗೆ ಉಚ್ಚಂಗಿ ಪಾಂಡ್ಯರು, ಕಳಚುರಿ ಬಿಜ್ಜಳ, ಯಾದವರು, ಹೊಯ್ಸಳರು ಮತ್ತು ವಿಜಯನಗರದ ಅರಸರು ದತ್ತಿ ಬಿಟ್ಟಿದ್ದಾರೆ. ಶಾಸನಗಳಲ್ಲಿ ವರ್ಣಿತವಾಗಿರುವ ಈ ಹೊಯ್ಸಳ ದೇವಾಲಯ ಪೂರ್ಣವಾಗಿ ಉಳಿದುಬಂದಿಲ್ಲವಾದರೂ ಇದು ಈ ಜಿಲ್ಲೆಯಲ್ಲೇ ಅತ್ಯಂತ ಸುಂದರವಾದ ದೇವಾಲಯ. ಇದರ ಸುತ್ತಲೂ ಅನೇಕ ಶಾಸನಗಳಿವೆ. ಅವುಗಳಲ್ಲಿ ಒಂದು 16'ಗಳಿಗೂ ಹೆಚ್ಚು ಎತ್ತರವಾಗಿದೆ.

ಚಾಲುಕ್ಯರ ಕಾಲದಲ್ಲೂ ಹೊಯ್ಸಳರ ಕಾಲದಲ್ಲೂ ಈ ಜಿಲ್ಲೆಯಲ್ಲಿ ಹಲವಾರು ದೇವಾಲಯಗಳು ನಿರ್ಮಿತವಾದುವು. ಹಾನೆಯದ ಅಕ್ಕತಂಗಿಯರ ಗುಡಿ, ಕೂಡಗನೂರಿನ ವಿಷ್ಣು ದೇವಾಲಯ (1113), ಸೋಮೇಶ್ವರ ದೇವಾಲಯ (1101), ಕಬ್ಬೂರಿನ ಅವಿಮುಕ್ತೇಶ್ವರ ದೇವಾಲಯ (1114), ಮಳಲಕೆರೆಯ ಲಿಂಗ, ಜನಾರ್ದನ ಮತ್ತು ನಾರಾಯಣರನ್ನೊಳಗೊಂಡ ತ್ರಿಕೂಟಾಚಲ (1071), ಕಂದಗಲ್ಲಿನ ಕಲ್ಲೇಶ್ವರ, ಲೋಕಿಕೆರೆಯ ಕೇತೇಶ್ವರ ಮತ್ತು ಕೋಡಿ ಕಲ್ಲೇಶ್ವರ ಮತ್ತು ಆನೆಕೊಂಡದ ಈಶ್ವರ ದೇವಾಲಯಗಳನ್ನು ಹೆಸರಿಸಬಹುದು. ಆದರೆ ಈ ದೇವಾಲಯಗಳಲ್ಲಿ ಬಹುಭಾಗ ಹಾಳಾಗಿವೆ. ಇವುಗಳಲ್ಲಿ ಹಲವನ್ನು ರಕ್ಷಿಸುವುದಕ್ಕಾಗಿ ಮಣ್ಣಿನ ದಿಬ್ಬದಿಂದ ಮುಚ್ಚಿಹಾಕಿದೆ. ಹೊರನೋಟಕ್ಕೆ ಬರಿಯ ಮಣ್ಣಿನ ಗುಡ್ಡೆಗಳಾಗಿ ಕಂಡರೂ ಬಾಗಿಲುಗಳ ಮೂಲಕ ಅವುಗಳ ಒಳಹೊಕ್ಕಾಗ ಚಾಲುಕ್ಯ ಶಿಲ್ಪದ ಸುಂದರ ಪರಿಚಯ ಆಗುತ್ತದೆ. ಅವುಗಳಲ್ಲೆಲ್ಲ ಆನೆಕೊಂಡದ ಈಶ್ವರ ದೇವಾಲಯದ ನವರಂಗದ ಕಂಬಗಳು ವೈವಿಧ್ಯಮಯವಾಗಿಯೂ ಸುಂದರವಾಗಿಯೂ ಇವೆ. ಕಂಡರಣೆಯಲ್ಲಿ ಇವು ಬೇಲೂರಿನ ಕಂಬಗಳನ್ನು ನೆನಪಿಗೆ ತರುತ್ತವೆ. ಹರಿಹರಕ್ಕೆ 12ಕಿಮೀ ದೂರದಲ್ಲಿರುವ ನಂದಿತಾವರೆಯಲ್ಲಿ ಹೊಯ್ಸಳ ಅಧಿಕಾರಿ ಮಾಣಿಕಣ್ಣ 1220ರಲ್ಲಿ ಕಟ್ಟಿಸಿದ ಸುಂದರವಾದ ಅಮೃತಲಿಂಗ ಮಾಣಿಕೇಶ್ವರ ದೇವಾಲಯವಿದೆ. ಇದರ ಹೊರಗೂ ಒಳಗೂ ಗೋಡೆಯ ಮೇಲೆ 2' ಎತ್ತರದ ಮೂರ್ತಿಗಳ ಸಾಲಿದೆ.



ಚಿತ್ರದುರ್ಗದ ಕೋಟೆಯ ಒಳ್ಳಗೆ ಮದ್ದಿನ ಮನೆ

ಚಿತ್ರದುರ್ಗದ ಪಾಳೆಯಗಾರರು ಕಟ್ಟಿಸಿದ ಹಲವು ದೇವಾಲಯಗಳೂ ಇತರ ಕಟ್ಟಡಗಳೂ ಚಿತ್ರದುರ್ಗದ ಬೆಟ್ಟದ ಮೇಲೂ ಇತರ ಕಡೆಗಳಲ್ಲೂ ಉಳಿದುಬಂದಿವೆ. ನೀರ್ತಡಿಯಲ್ಲಿ ಇವರು ಪುನರ್ನಿರ್ಮಾಣ ಮಾಡಿದ

ರಂಗನಾಥ ದೇವಾಲಯದ ಹೊರಗೋಡೆಯ ಮೇಲಿನ ಮೂರ್ತಿಶಿಲ್ಪಗಳು ವಿಜಯನಗರ ಶಿಲ್ಪದ ಅನುಕರಣೆ. ಇದರ ಉನ್ನತವಾದ ಗರ್ಭಗುಡಿಯ ಶಿಲಾಗೋಪುರ ವಿಶಿಷ್ಟವಾದ್ದು. ನಾಯಕನಹಟ್ಟಿಯ ದಕ್ಷಿಣಕ್ಕೆ ತಗ್ಗಾದ ಕಲ್ಲುಮೊರಡಿಯೊಂದರ ಇಳಿಜಾರಿನಲ್ಲಿ ಬಂಡೆಯನ್ನು ಕತ್ತರಿಸಿ ಕೊರೆದು, ನಾಲ್ಕು ಕಂಬಗಳ ಆಧಾರದ ಮೇಲೆ ನಿಂತ ಹಜಾರದಂಥ ಗವಿಯೊಂದನ್ನು ನಿರ್ಮಿಸಿ ಕಂಬಗಳ, ಚಾವಣಿಯ ಮತ್ತು ಅಡ್ಡತೊಲೆಗಳ ಮೇಲೆಲ್ಲ ನವುರಾದ ಶಿಲ್ಪವನ್ನು ಬಿಡಿಸಲಾಗಿದೆ. ಇದು ನಾಯಕರ ವಾಸ್ತುಶಿಲ್ಪದ ಒಂದು ಅಪೂರ್ವ ಮಾದರಿ. ಹಾಗೆಯೇ ಅವರು ಚಿತ್ರದುರ್ಗದ ಬೆಟ್ಟದ ಮೇಲೆ ಕಟ್ಟಿಸಿದ್ದ ಹಲವು ಸುತ್ತುಗಳ ಅಭೇದ್ಯ ಕೋಟೆಯನ್ನು ಹೈದರ್ ಮತ್ತು ಟಿಪ್ಪು ಮತ್ತಷ್ಟು ಭದ್ರಪಡಿಸಿದರು. ಅದು ಈಗಲೂ ಅಚ್ಚಳಿಯದೆ ಉಳಿದುಬಂದಿದೆ.



ಉಯ್ಯಾಲೆ ಕಂಬ: ಚಿತ್ರದುರ್ಗ ಕೋಟೆ

**ತಾಲ್ಲೂಕು :** ತಾಲ್ಲೂಕನ್ನು ಜಗಳೂರು, ಚಳ್ಳಕೆರೆ ಮತ್ತು ಹಿರಿಯೂರು, ಹೊಳಲ್ಕೆರೆ, ದಾವಣಗೆರೆ ತಾಲ್ಲೂಕುಗಳು ಸುತ್ತುವರಿದಿವೆ. ಹಿರೇಗುಂಟನೂರು, ಚಿತ್ರದುರ್ಗ, ಭರಮಸಾಗರ ಮತ್ತು ತುರುವನೂರು ಈ ನಾಲ್ಕು ಹೋಬಳಿಗಳಿವೆ. 163 ಹಳ್ಳಿಗಳಿವೆ. ತಾಲ್ಲೂಕಿನ ವಿಸ್ತೀರ್ಣ 1,375.3ಚ.ಕಿಮೀ. ಜನಸಂಖ್ಯೆ 3,76,027. ಈ ತಾಲ್ಲೂಕಿನಲ್ಲಿ ಜೋಗಿಮಟ್ಟಿ ಕಾಡಿಗೆ ಸೇರಿದ ಜೋಗಿಮಟ್ಟಿ, ಧವಳಪ್ಪನ ಗುಡ್ಡ, ಬೈರಂಕಲ್ ಗುಡ್ಡ, ಏಚಲ ಗುಡ್ಡ ಮತ್ತು ಓಬಳದೇವರ ಗುಡ್ಡಗಳಿವೆ. ಗರಣಿನದಿ ಈ ತಾಲ್ಲೂಕಿನ ಪೂರ್ವಭಾಗದಲ್ಲಿ ಹುಟ್ಟಿ ವೇದಾವತಿ ನದಿಗೆ ಸಮಾಂತರ ಹರಿದು ಹಿರಿಯೂರಿಗೆ 11ಕಿಮೀ ದೂರದಲ್ಲಿ ವೇದಾವತಿ ನದಿಯನ್ನು ಕೂಡಿಕೊಳ್ಳುವುದು. ತಾಲ್ಲೂಕಿನ ಹಲವೆಡೆಗಳಲ್ಲಿ ತಾಮ್ರ ಮೊದಲಾದ ಖನಿಜಗಳು ಸಿಕ್ಕುತ್ತವೆ. ಈ ತಾಲ್ಲೂಕಿನ ಸರಾಸರಿ ವಾರ್ಷಿಕ ಮಳೆ 655ಮಿಮೀ. ರಾಗಿ, ಸ್ವಲ್ಪ ಬತ್ತ, ತೊಗರಿ, ಹತ್ತಿ, ನೆಲಗಡಲೆ ಮುಂತಾದವನ್ನು ಬೆಳೆಯುತ್ತಾರೆ.



ಗಾಳಿ ಮಂಟಪ: ಚಿತ್ರದುರ್ಗ ಕೋಟೆ

ಮುಖ್ಯಸ್ಥಳವಾದ ಚಿತ್ರದುರ್ಗವನ್ನು ಬಿಟ್ಟರೆ ತುರುವನೂರು ತಾಲ್ಲೂಕಿನ ದೊಡ್ಡ ಊರು. ಇಂಗಳದಾಳು (ನೋಡಿ) ಗಣಿಗಾರಿಕೆಗೆ ಹೆಸರಾದುದು. ಚಂದ್ರವಳ್ಳಿ ಪ್ರಸಿದ್ಧ ಐತಿಹಾಸಿಕ ನೆಲೆ. ಚಿತ್ರದುರ್ಗ-ದಾವಣಗೆರೆ ರಸ್ತೆಯಲ್ಲಿರುವ ಎಮ್ಮೆಹಟ್ಟಿಯಿಂದ 3ಕಿಮೀ ದೂರದಲ್ಲಿರುವ ಹಂಪನೂರಿನ ಬಳಿಯ ಗುಡ್ಡದ ಮೇಲೆ ರಂಗನಾಥ ದೇವಾಲಯ ಮತ್ತು ಹನುಮಂತ ದೇವಾಲಯ ಇವೆ. ಇವು ನಾಯಕರ ಕಾಲದ ವಾಸ್ತು ಕೃತಿಗಳು. ಸಿರಿಗೆರೆಯಲ್ಲಿ ಪ್ರಸಿದ್ಧವಾದ ವೀರಶೈವ ಮಠವಿದೆ.

**ಪಟ್ಟಣ:** ಜಿಲ್ಲೆಯ ಮತ್ತು ತಾಲ್ಲೂಕಿನ ಆಡಳಿತಕೇಂದ್ರ. ಚಿತ್ರದುರ್ಗ, ಚಿಕ್ಕಜಾಜೂರು-ಚಿತ್ರದುರ್ಗ ರೈಲುಮಾರ್ಗದಲ್ಲಿ ಚಿಕ್ಕ ಜಾಜೂರಿನಿಂದ 34ಕಿಮೀ. ಈಶಾನ್ಯದಲ್ಲಿ, ಬೆಂಗಳೂರಿನಿಂದ 204ಕಿಮೀ ವಾಯವ್ಯಕ್ಕೆ ಬೆಂಗಳೂರು-ಧಾರವಾಡ ಹೆದ್ದಾರಿಯಲ್ಲಿದೆ. ಜನಸಂಖ್ಯೆ 1,25,060.

ಬಂಡೆಗಲ್ಲುಗಳಿಂದ ಆವೃತವಾದ ಎತ್ತರವಾದ ಬೆಟ್ಟದ ಬುಡದಲ್ಲಿ ಉತ್ತರದಿಕ್ಕಿನ ಕಡೆ ಊರು ಹರಡಿಕೊಂಡಿದೆ. ಚಿತ್ರದುರ್ಗದ ಹಳೆಯ ಊರು ಬೆಟ್ಟದ ವಾಯವ್ಯ ಬುಡದಲ್ಲಿ ಕೋಟೆಯೊಳಗೆ ಇದೆ. ಅಲ್ಲಿಂದ ಮತ್ತಷ್ಟು ಮುಂದೆ ಹೊಸ ಬಡಾವಣೆಗಳು ಬೆಳೆದಿವೆ. ಜಿಲ್ಲೆಯ ಮುಖ್ಯ ಕಚೇರಿಗಳು, ಜಿಲ್ಲಾ ಆಸ್ಪತ್ರೆ, ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯ ವಿಭಾಗ ಕಚೇರಿ ಮತ್ತು ಅನೇಕ ವಿದ್ಯಾಸಂಸ್ಥೆಗಳು ಈ ನಗರದಲ್ಲಿವೆ. ಹತ್ತಿ ಒಕ್ಕುವ ಕಾರ್ಖಾನೆಗಳು ಇಲ್ಲಿವೆ. ಕೈಮಗ್ಗ, ಎಣ್ಣೆ ತೆಗೆಯುವುದು, ಇತರ ಕೈಗಾರಿಕೆಗಳಿಂದಾಗಿ ಚಿತ್ರದುರ್ಗ ವಾಣಿಜ್ಯ ಕೇಂದ್ರವಾಗಿ ಬೆಳೆದಿದೆ.

ಊರಿನ ವಾಯುವ್ಯದೆಡೆಯಲ್ಲಿರುವ ಮುರುಗಿಮಠ ಬಹು ಪ್ರಸಿದ್ಧವಾದುದು. ಕಟ್ಟಡ ಎರಡು ಅಂತಸ್ತಿನದು. ಮುಂದೆ ಆನೆಬಾಗಿಲು ಎಂಬ ಹೆಬ್ಬಾಗಿಲಿದೆ. ಈ ಮಠದ ಸ್ಥಾಪಕರಾದ ಇಮ್ಮಡಿ ಮುರುಗಿಸ್ವಾಮಿಗಳ ಗದ್ದುಗೆ ಇದೆ. ಅನೇಕ ವೀರಶೈವ ಅನುಯಾಯಿಗಳಿರುವ ಮಠ ಬಹುಜನರನ್ನು ಆಕರ್ಷಿಸುತ್ತದೆ. ಊರಿನ ಪಶ್ಚಿಮದಲ್ಲಿ ಚಂದ್ರವಳ್ಳಿ ನೆಲೆಯ ಬಳಿ ಅಂಕ್ಲಿಮಠವೆನ್ನುವ ಇನ್ನೊಂದು ಮಠವಿದೆ. ಬಹುಶಃ ಇಲ್ಲಿರುವ ಕೆಲವು ಕಟ್ಟಡಗಳು ಸು.500-600 ವರ್ಷಗಳಷ್ಟು ಹಳೆಯವು. *

ಸುತ್ತಲೂ ಹಬ್ಬಿರುವ ಬೆಟ್ಟಸಾಲು, ಅಲ್ಲಲ್ಲಿ ಮೇಲೆದ್ದಿರುವ ಶಿಖರಗಳು ಚಿತ್ರದುರ್ಗದ ರಕ್ಷಣಾಸಾಮರ್ಥ್ಯವನ್ನು ಹೆಚ್ಚಿಸಿದ್ದುವು. ಆದ್ದರಿಂದಲೇ ಇಲ್ಲಿ ಚರಿತ್ರ ಪೂರ್ವಕಾಲದಿಂದಲೂ ಜನ ವಾಸಿಸುತ್ತಿದ್ದುದು ಗೋಚರವಾಗಿದೆ. ಬೆಟ್ಟದ ಪಶ್ಚಿಮ ದಿಕ್ಕಿನ ಬುಡಕ್ಕೆ ಹೊಂದಿ ಕೊಂಡಂತಿರುವ ಚಂದ್ರವಳ್ಳಿ ಎಂಬಲ್ಲಿ ನವಶಿಲಾಯುಗದ ಕಾಲದಿಂದಲೂ

ಜನರಿದ್ದುದು ಅಲ್ಲಿ ನಡೆಸಿದ ಭೂಶೋಧನೆಗಳಿಂದ ವ್ಯಕ್ತವಾಗಿದೆ. ಸಾತವಾಹನರ ಕಾಲದಲ್ಲಿ ಚುಟುವಂಶಕ್ಕೆ ಸೇರಿದ ರಾಜರು ಇಲ್ಲಿ ಆಳುತ್ತಿದ್ದುದು ಭೂಶೋಧನೆಯಲ್ಲಿ ದೊರೆತ ಅವರ ಸೀಸದ ನಾಣ್ಯಗಳಿಂದಲೂ ಮಡಕೆಯ ಚೂರುಗಳು, ಕಟ್ಟಡಗಳ ಅವಶೇಷಗಳಿಂದಲೂ ತಿಳಿದುಬಂದಿದೆ. ಕದಂಬರ ಮೊದಲ ರಾಜನಾದ ಮಯೂರಶರ್ಮ ಇಲ್ಲಿ ತಟಾಕವನ್ನು ನಿರ್ಮಿಸಿದ್ದ. ಚಾಳುಕ್ಯರ ಕಾಲದಲ್ಲಿ ಇದಕ್ಕೆ ಸೂಳ್ಗಲ್ಲು ಎಂದೂ ಹೊಯ್ಸಳರ ಕಾಲದಲ್ಲಿ ಬೆಮ್ಮತ್ತನಕಲ್ಲು, ಬ್ರಹ್ಮಗಿರಿಪುರಿ, ಪೆರುಮಾಳೆಪುರ ಎಂಬ ಹೆಸರುಗಳೂ ಇದ್ದುವು. ಇದಲ್ಲದೆ ಪೌರಾಣಿಕವಾಗಿ ಹಿಡಿಂಬ ಇಲ್ಲಿ ವಾಸಮಾಡುತ್ತಿದ್ದನೆಂದು ಇದಕ್ಕೆ ಹಿಡಿಂಬ ಪಟ್ಟಣವೆಂದೂ ಮತ್ತು ಚಿನ್ಮೂಲಾದ್ರಿಯೆಂದೂ ಕರೆದಿದೆ. ವಿಜಯನಗರದ ಅರಸರ ಮತ್ತು ಪಾಳೆಯಗಾರರ ಕಾಲದಲ್ಲಿ ಚಿತ್ರದುರ್ಗ ಅಥವಾ ಚಿತ್ರಕಲ್‌ದುರ್ಗ ಮತ್ತು ಚಿನ್ನನಕಲ್‌ದುರ್ಗ ಎಂಬ ಹೆಸರುಗಳು ರೂಢಿಯಾಗಿ ಬಂದಿದ್ದುವು. ಹೈದರ್ ಇದನ್ನು ಆಕ್ರಮಿಸಿಕೊಂಡ ಮೇಲೆ ಇದಕ್ಕೆ ಫರೂಕ್‌ಯಾದ್-ಹಿಸ್ಸಾರ್ ಎಂಬ ಹೆಸರನ್ನು ಕೊಟ್ಟಿದ್ದ.



ಹಳೆಯ ಮುರುಗಿ ಮಠ: ಚಿತ್ರದುರ್ಗ ಕೋಟೆ

ಚಿತ್ರದುರ್ಗದ ಪ್ರಧಾನ ಆಕರ್ಷಣೆ ಎಂದರೆ ಇಲ್ಲಿನ ಕೋಟೆ ಮತ್ತು ಪ್ರಾಚೀನ ದೇವಾಲಯಗಳು. ಕೋಟೆ ಏಳು ಸುತ್ತಿನದು. ಬೆಟ್ಟದ ಮೇಲೆ ನಾಲ್ಕು ಸುತ್ತು ಮತ್ತು ಕೆಳಗೆ ಮೂರು ಸುತ್ತು ಕೋಟೆಗೋಡೆಗಳಿವೆ. ಹೊರಸುತ್ತಿನ ಗೋಡೆಗೆ ಪೂರ್ವದಲ್ಲಿ ರಂಗಯ್ಯನ ಬಾಗಿಲು (ಸಿರಾ ದರ್ವಾಜಾ), ಉತ್ತರದಲ್ಲಿ ಸಂತೆ ಅಥವಾ ಸಿದ್ದಯ್ಯನ ಬಾಗಿಲು (ಫತೇ ದರ್ವಾಜಾ), ಪಶ್ಚಿಮದಲ್ಲಿ ಸೀನೀರು ಹೊಂಡದ ಬಾಗಿಲು ಅಥವಾ ಉಚ್ಚಂಗಿ ಬಾಗಿಲು ಮತ್ತು ದಕ್ಷಿಣದಲ್ಲಿ ಲಾಲ್‌ಕೋಟೆ ಬಾಗಿಲು - ಹೀಗೆ ನಾಲ್ಕು ಬಾಗಿಲುಗಳಿವೆ. ಕೆಳದುರ್ಗದ ನೈಋುತ್ಯದಲ್ಲಿ ಛತ್ರಿಬಂಡೆ ಇದೆ. ಇದು ಹಿಂದು ಹಾಗೂ ಮುಸಲ್ಮಾನರಿಗೆ ಪವಿತ್ರ ಸ್ಥಳ. ಊರಿನ ದಕ್ಷಿಣಕ್ಕಿರುವ ಇನ್ನೊಂದು ಗುಡ್ಡದ ಮೇಲೆ ಬೇಡರ ಕುಲದೇವರಾದ ಓಬಳಾದೇವಿಯಗುಡಿ ಇದೆ.

ಚಿತ್ರದುರ್ಗದ ಕೋಟೆ ಬಹಳ ಭದ್ರವಾಗಿ ರಚಿತವಾಗಿರುವ ಕಟ್ಟಡ. ಮೇಲು ಕೋಟೆಯಲ್ಲಿ ಅನೇಕ ದೊಡ್ಡ ಕಲ್ಲುಗೋಡೆಗಳು, ಫಿರಂಗಿಗಳು ಮತ್ತು ಇತರ ಅವಶೇಷಗಳಲ್ಲದೆ 14 ದೇವಾಲಯಗಳಿವೆ. ಪೂರ್ವದ ಕಡೆಯಿಂದ ಕೋಟೆ ಏರಿಹೋಗುವಲ್ಲಿ ಐದು ಬಾಗಿಲುಗಳನ್ನು ಹಾದುಹೋಗಬೇಕು. ಇದರಲ್ಲಿ ಮೊದಲನೆಯ ಬಾಗಿಲು ಬಹುಶಃ ವಿಜಯನಗರ ಕಾಲದ ರಚನೆಯಾಗಿದ್ದು ಅದರ ಮೇಲೆ ಗಂಡಭೇರುಂಡ, ಬಸವಣ್ಣ, ಗಣೇಶ ಇತ್ಯಾದಿ ಶಿಲ್ಪಗಳಿವೆ. ಎರಡನೆಯ ಮತ್ತು ಮೂರನೆಯ ಬಾಗಿಲುಗಳು ಸಾಮಾನ್ಯ ರೀತಿಯವು. 4ನೆಯದು ಬಹು ಮಜಬೂತಾದ ಕಟ್ಟಡ. 5ನೆಯ ಬಾಗಿಲನ್ನು ಹಾದುಹೋಗುತ್ತಿದ್ದಂತೆಯೇ ಮುಖ್ಯವಾದ ಕಟ್ಟಡಗಳು ಮತ್ತು ದೇವಾಲಯಗಳು ಸಿಗುತ್ತವೆ. ಚಿತ್ರದುರ್ಗದ ಕೋಟೆಯ ಗೋಡೆಗಳು ಹೆಚ್ಚುಮಟ್ಟಿಗೆ ದಪ್ಪಕಲ್ಲುಗಳಿಂದ ರಚಿತವಾದುವು. ಸಾಮಾನ್ಯವಾಗಿ 15ರಿಂದ 40 ಅಡಿಗಳ ಎತ್ತರ ಇವೆ. ಅಲ್ಲಲ್ಲಿ ಒಳಮುಖದಲ್ಲಿ ಇಟ್ಟಿಗೆ ಗೋಡೆಗಳನ್ನು ಕಟ್ಟಿ 6 – 8 ಅಡಿಗಳಷ್ಟು ಎತ್ತರಿಸಲಾಗಿದೆ. ಕೋಟೆಯ ಹೊರಮೈಗೆ ಸೇರಿದಂತೆ ಹಲವಾರು ದುಂಡು, ಚೌಕ, ಷಟ್ಕೋನ, ಅಷ್ಟಕೋನ ವಿನ್ಯಾಸದ ಅಟ್ಟಾಲಕಗಳನ್ನು ರಚಿಸಲಾಗಿದೆ. ಹೊರಗಿನ ಮೂರು ಸುತ್ತು ಗೋಡೆಗಳ ಸುತ್ತ ಕಂದಕಗಳಿವೆ. ಹಿಂದೆ ಇವುಗಳಲ್ಲಿ ನೀರು ತುಂಬಿದ್ದು ಅನೇಕ ರೀತಿಯ ಸಸ್ಯಗಳು ಮತ್ತು ಮೊಸಳೆಗಳನ್ನು ಬೆಳೆಸಿ ದಾಟಲು ಅಸಾಧ್ಯವಾಗುವಂತೆ ಮಾಡಲಾಗಿತ್ತು. ಒಟ್ಟು ಕೋಟೆಯಲ್ಲಿ 19 ಹೆಬ್ಬಾಗಿಲುಗಳೂ 35 ದಿಡ್ಡಿಬಾಗಿಲೂಗಳೂ 35 ಗುಪ್ತಮಾರ್ಗಗಳೂ ನಾಲ್ಕು ಗರುತಿಸಲಾಗದ ಬಾಗಿಲುಗಳೂ ಇದ್ದುವಂತೆ. ಇವುಗಳಲ್ಲಿ ಹಲವು ಈಗ ಉಳಿದಿಲ್ಲ. ಕೋಟೆಗೆ ದಪ್ಪ ಮರದ ಬಾಗಿಲುಗಳಿದ್ದುವು. ದಪ್ಪ ಕಬ್ಬಿಣದ ತಗಡಿನ ಹೊದಿಕೆಯಿಂದಲೂ ಹೊರಭಾಗದಲ್ಲಿ ಚೂಪು ಮೊಳೆಗಳಿಂದಲೂ ಅವನ್ನು ಭದ್ರಪಡಿಸಲಾಗಿತ್ತು. ಬೆಟ್ಟದ ಮೇಲೆ ಪಾಳೆಯಗಾರರ ಕಾಲದ ಮಣ್ಣುಕೋಟೆ ಮತ್ತು ಅರಮನೆಯ ನಿವೇಶನ ಇವೆ. ಈಗಿರುವ ಭದ್ರಕೋಟೆಯ ಹೆಚ್ಚು ಭಾಗವನ್ನು ನಿರ್ಮಿಸಿದವರು ಹೈದರ್ ಅಲಿ ಮತ್ತು ಟಿಪ್ಪುಸುಲ್ತಾನ್; ಕೋಟೆಯಲ್ಲಿ ಇವರು ಕಟ್ಟಿಸಿದ ಕಣಜಗಳು ಮತ್ತು ಎಣ್ಣೆ ತುಪ್ಪವನ್ನು ಸಂಗ್ರಹಿಸುತ್ತಿದ್ದ ಎಣ್ಣೆಕೊಳ, ತುಪ್ಪದಕೊಳ ಮುಂತಾದವು ಇವೆ. ಒಳಕೋಟೆಯಲ್ಲಿರುವ ಮಹಲ್ ಒಂದು ಮುಖ್ಯ ಕಟ್ಟಡ. ಈಗ ಇದರ ಮಧ್ಯದ ಹಜಾರದ ಚಾವಣಿ ಬಿದ್ದುಹೋಗಿದ್ದು ಮರದ ಕಂಬಗಳು ಮಾತ್ರ ನಿಂತಿವೆ. ಇದರ ಎರಡನೆಯ ಅಂತಸ್ತಿನಲ್ಲಿ ಕೆಲವು ಸಾಮಾನ್ಯ ರೀತಿಯ ಕೋಣೆಗಳಿವೆ. ಮಹಲಿನ ಸಮೀಪದಲ್ಲಿ 10.5' ಅಡಿ ಉದ್ದ 4.5' ಅಡಿ ಅಗಲ ಮತ್ತ 4.5' ಅಡಿ ಆಳದ ದೊಡ್ಡ ಶಿಲಾತೊಟ್ಟಿ ಇದೆ. ಟಿಪ್ಪು ಸುಲ್ತಾನನ ಕಾಲದಲ್ಲಿ ಇದು ಆನೆಗಳ ಉಪಯೋಗಕ್ಕಾಗಿ ಇತ್ತಂತೆ. ಮದ್ದನ್ನು ಅರೆಯಲು ಉಪಯೋಗಿಸುತ್ತಿದ್ದ ಒಂದು ದೊಡ್ಡ ಬೀಸುವ ಕಲ್ಲು ಸಹ ಇಲ್ಲಿದೆ.

ಬೆಟ್ಟದ ಮೇಲೆ ಸಂಪಗೆ ಸಿದ್ದೇಶ್ವರ, ಹಿಡಿಂಬೇಶ್ವರ, ಏಕನಾಥೇಶ್ವರಿ, ಫಲ್ಗುಣೇಶ್ವರ, ಗೋಪಾಲಕೃಷ್ಣ, ಸುಬ್ಬರಾಯ ಮತ್ತು ಬಸವ ದೇವಾಲಯಗಳಿವೆ.

ಹಿಡಿಂಬೇಶ್ವರ, ಸಿದ್ದೇಶ್ವರ, ಫಲ್ಗುಣೇಶ್ವರ, ಏಕನಾಥೇಶ್ವರಿ ಈ ದೇವಾಲಯಗಳು ಪ್ರಾಚೀನವಾದ ಕಟ್ಟಡಗಳು. ಚಾಚುಬಂಡೆಗಳ ಬುಡದಲ್ಲಿ ಉಂಟಾಗಿರುವ ಸ್ವಾಭಾವಿಕ ಗವಿಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟ ಶಿವದೇವಾಲಯಗಳು.



ಚಿತ್ರದುರ್ಗ ಕೋಟೆಯ ಗೋಡೆಯ ಮೇಲೆ ಶಿಲ್ಪಿತವಾಗಿರುವ ಏಳುಹೆಡೆಯ ಸರ್ಪ ಮತ್ತು ಬಸವ

ಇವುಗಳ ಮೇಲಿನ ಬಂಡೆಗಳ ಮೇಲೆ ಚಾಳುಕ್ಯರೀತಿಯಲ್ಲಿ ಕಟ್ಟಿದ ಕಲ್ಲಿನ ಶಿಖರಗಳಿವೆ. ಹೊಯ್ಸಳರ ಕಾಲದಲ್ಲಿ ಇವುಗಳ ಮುಂದೆ ನವರಂಗಗಳೂ ಮುಖಮಂಟಪಗಳೂ ಅವುಗಳ ಇಕ್ಕೆಲಗಳಲ್ಲಿಯೂ ಜಗತಿಗಳೂ ನಿರ್ಮಿತವಾದುವು. ಇವುಗಳ ಕಂಬಗಳು ಗುಂಡಾಗಿಯೋ ಅಷ್ಟ ಮುಖವುಳ್ಳವಾಗಿಯೋ ಇವೆ. ಹೊಯ್ಸಳರ ಕಾಲದಲ್ಲಿ ನಿರ್ಮಿತವಾಗಿದ್ದರೂ ಇವೆಲ್ಲವೂ ಕಗ್ಗಲ್ಲಿನ ಕಟ್ಟಡಗಳೇ. ಪೆರುಮಾಳೆ ದಂಡ ನಾಯಕನ

ಕಾಲದಲ್ಲಿ ಈ ಮಂಟಪಗಳು ನಿರ್ಮಾಣವಾದಂತೆ ತೋರುತ್ತವೆ. ಬಸವೇಶ್ವರ ದೇವಾಲಯು ಬಳಪದ ಕಲ್ಲಿನಲ್ಲಿ ನಿರ್ಮಿತವಾದ ಕಟ್ಟಡ. ವಿಜಯನಗರದ ಕಾಲದಲ್ಲಿ ಸಿದ್ಧೇಶ್ವರ, ಹಿಡಿಂಬೇಶ್ವರ ದೇವಾಲಯಗಳ ಮುಂದಿನ ಮೂರಂತಸ್ತಿನ ಗೋಪುರದ್ವಾರಗಳು ಮತ್ತು ಉಯ್ಯಾಲೆ ಕಂಬಗಳು ನಿರ್ಮಿತವಾದುವು. ಒಂದನೆಯ ದೇವರಾಯನ ಮಗ ಮಲ್ಲಣ್ಣ ಒಡೆಯ ಈ ಮಹಾದ್ವಾರಗಳನ್ನು ಕಟ್ಟಿಸಿದಂತೆ ತೋರುತ್ತದೆ. ಈ ಎರಡು ಮಹಾದ್ವಾರಗಳೂ ತೇರಿನಂತೆ ವಿಶಿಷ್ಟ ರೀತಿಯಲ್ಲಿ ನಿರ್ಮಿತವಾಗಿದ್ದು ಅವುಗಳನ್ನು ಹಿಡಿಂಬರಥ, ಭೀಮರಥಗಳೆಂದು ಜನ ತೋರಿಸುತ್ತಾರೆ. ಏಕನಾಥೇಶ್ವರಿ ದೇವಾಲಯದ ಮುಂದೆ ನಿಂತಿರುವ ನಲವತ್ತು ಅಡಿಗೂ ಹೆಚ್ಚು ಎತ್ತರದ ಕಲ್ಲಿನ ಕಂಬ, ಉಯ್ಯಾಲೆ ಕಂಬಗಳು ನಾಯಕರ ಕಾಲದ ರಚನೆಗಳು.



ವಿಶ್ವಯೋಗಮಂದಿರ: ಮಲ್ಲಾಡಿಹಳ್ಳಿ

ಕೆಳ ಕೋಟೆಯಲ್ಲಿ ಇರುವ ಮುಖ್ಯ ಕಟ್ಟಡವೆಂದರೆ ಉಚ್ಚಂಗಿಯಮ್ಮನ (ಉತ್ಸವಾಂಬ) ದೇವಾಲಯ. ಬೆಟ್ಟದ ಬುಡದಲ್ಲಿ ಎತ್ತರದ ಸ್ಥಾನದಲ್ಲಿ ಕೆಳಗಿನ ಪಟ್ಟಣವನ್ನು ನೋಡುತ್ತಿರುವಂತೆ ಕಟ್ಟಲಾಗಿದೆ. ಇದೂ ನಾಯಕರ ಕಾಲದ ರಚನೆ. ಇದು ಎರಡು ಅಂತಸ್ತಿನ ಬೃಹತ್ ಕಟ್ಟಡ. ಚಿತ್ರದುರ್ಗದ ಮುಖ್ಯ ದೇವಾಲಯ. ಇದರ ಮುಂದೆ ಎತ್ತರವಾದ ಒಂದು ದೀಪದ ಕಂಬ ಮತ್ತು ಒಂದು ಉಯ್ಯಾಲೆ ಕಂಬ ಇವೆ. ದೇವಾಲಯದ ಮುಂದೆ ಪೂರ್ವದ ರಂಗಯ್ಯನ ಬಾಗಿಲವರೆಗೂ ಹಬ್ಬಿರುವ ರಥ'ದ ಬೀದಿ (ದೊಡ್ಡ ಪೇಟೆ) ಇದೆ.

ಹಿಂದಿನ ಪಾಳೆಯಗಾರರು ನೀರು ಸಂಗ್ರಹಣೆಗಾಗಿ ಮಾಡಿದ ವ್ಯವಸ್ಥೆ ವೈಶಿಷ್ಟ್ಯಪೂರ್ಣವಾದುದು. ದುರ್ಗದ ಸುತ್ತ ಮತ್ತು ಮೇಲೆ ಅನೇಕ ಕೆರೆ, ಹೊಂಡಗಳಿವೆ. ದುರ್ಗದ ದಕ್ಷಿಣಕ್ಕಿರುವ ಜೋಗಿಮಟ್ಟಿ ಬೆಟ್ಟಗಳಿಂದ ಹರಿದು ಬರುವ ನೀರನ್ನು ಮೊದಲು ದೊಡ್ಡಣ್ಣನ ಕೆರೆಯಲ್ಲಿ ಸಂಗ್ರಹಿಸಲಾಗುತ್ತಿತ್ತು. ಅಲ್ಲಿಂದ ಕೋಡಿಬಿದ್ದ ನೀರು ಮುಂದೆ ತಿಮ್ಮಣ್ಣನಾಯಕನ ಕೆರೆ, ಸಣ್ಣಕೆರೆಗಳಿಗೆ ಹರಿದು ಅಲ್ಲಿಂದ ದಬದಬೆ ಮತ್ತು ವಡ್ಡು ಹೊಂಡಗಳಿಗೆ ಹರಿಯುವ ವ್ಯವಸ್ಥೆ ಇದೆ. ಮೇಲುದುರ್ಗದಲ್ಲಿ ಬೀಳುವ ಮಳೆಯ ನೀರು ಸ್ವಲ್ಪವೂ ವ್ಯರ್ಥವಾಗದಂತೆ ಒಂದರ ಕೆಳಗೆ ಒಂದರಂತಿರುವ ಗೋಪಾಲಕೃಷ್ಣ ಹೊಂಡ, ಅಕ್ಕತಂಗಿಯರ ಹೊಂಡ, ಸಿಹಿನೀರು ಹೊಂಡ ಮತ್ತು ಸಂತೆಹೊಂಡಗಳನ್ನು ತುಂಬುತ್ತದೆ.

ಟಿಪ್ಪು ಸುಲ್ತಾನನ ಪತನದ ಅನಂತರ ಈ ಕೋಟೆಯಲ್ಲಿ ಕೆಲದಿನ ಬ್ರಿಟಿಷ್ ಠಾಣ್ಯವಿತ್ತು. ಈಗ ಇಲ್ಲಿನ ಕೋಟೆ ಮತ್ತು ಇತರ ಮುಖ್ಯ ಕಟ್ಟಡಗಳು ಪುರಾತತ್ತ್ವ ಇಲಾಖೆಯಿಂದ ರಕ್ಷಿತವಾಗಿವೆ. ರಂಗಯ್ಯನ ಬಾಗಿಲಿನಲ್ಲಿ ಒಂದು ಸರ್ಕಾರಿ ವಸ್ತು ಸಂಗ್ರಹಾಲಯವಿದ್ದು ಅಲ್ಲಿ ಅನೇಕ ಪ್ರಾಚೀನ ವಸ್ತುಗಳು ಮತ್ತು ದಾಖಲೆಗಳನ್ನು ಸಂಗ್ರಹಿಸಿಡಲಾಗಿದೆ.

ಆಧುನಿಕ ಕನ್ನಡ ಸಾಹಿತ್ಯಕ್ಕೆ ಈ ಜಿಲ್ಲೆಯು ಕೊಡುಗೆ ಉಲ್ಲೇಖನೀಯ. ಪ್ರಸಿದ್ಧ ಸಾಹಿತಿಗಳಾದ ಟಿ.ಎಸ್.ವೆಂಕಣ್ಣಯ್ಯ (ನೋಡಿ) ತ.ಸು.ಶಾಮರಾಯ (ನೋಡಿ), ತ.ರಾ.ಸುಬ್ಬರಾವ್ (ನೋಡಿ), ಬಿ.ಎಲ್.ವೇಣು ಮೊದಲಾದವರು ಈ ಜಿಲ್ಲೆಯವರು. ಇದಲ್ಲದೆ ಸುಪ್ರಸಿದ್ಧ ಕಲಾವಿದ ಪಿ.ಆರ್.ತಿಪ್ಪೇಸ್ವಾಮಿ (ನೋಡಿ) ಯವರು ಈ ಜಿಲ್ಲೆಯ ಹರ್ತಿಕೋಟೆಯವರು. ಮೀರಾಸಾಬಿ ಹಳ್ಳಿ ಶಿವಣ್ಣ, ಮೈಲಹಳ್ಳಿ ರೇವಣ್ಣ ಮೊದಲಾದವರು ಜಾನಪದಕ್ಷೇತ್ರಕ್ಕೆ ಗಣನೀಯ ಕೊಡುಗೆ ನೀಡಿದ್ದಾರೆ. ಲಕ್ಷ್ಮಣ ತೆಲಗಾವಿಯವರು ಸಂಶೋಧಕರು. ಸಿರಿಯಜ್ಜಿ ಜನಪದ ಹಾಡುಗಾರ್ತಿ. ಶಾಂತಮ್ಮ ಜನಪದ ಕಥೆ ಹೇಳುವವರಲ್ಲಿ ನೈಪುಣ್ಯ ಸಾಧಿಸಿದ್ದಾರೆ. (ಎಂ.ಎಚ್.)

**ಚಿತ್ರದುರ್ಗದ ಪಾಳೆಯಗಾರರು :** 16ರಿಂದ 18ನೆಯ ಶತಮಾನದ ಅವಧಿಯಲ್ಲಿ ಚಿತ್ರದುರ್ಗ ಜಿಲ್ಲೆಯ ಬಹುಭಾಗ ಮತ್ತು ಸುತ್ತಲಿನ ಕೆಲವು ಭಾಗಗಳನ್ನು ಆಳಿದ ಪಾಳೆಯಗಾರರು. ಇವರು ಬೇಡಕುಲದ ವಾಲ್ಮೀಕಿ ಗೋತ್ರದ ಕಾಮಗೇಟಿ ವಂಶದವರೆಂದೂ ಮಹಾನಾಯಕಾಚಾರ್ಯ ಎಂಬ ಬಿರುದನ್ನು ಹೊಂದಿದ್ದರೆಂದೂ ಶಾಸನಗಳಿಂದ ತಿಳಿಯುತ್ತದೆ. ಕಾಮಗೇಟಿ ಕಸ್ತೂರಿ ಎಂಬ ಪೂರ್ವನಾಮ ಮತ್ತು ಮದಕರಿನಾಯಕ ಎಂಬ ಹೆಸರು ಈ ವಂಶದ ಹಲವರಿಗಿತ್ತು.

ಇವರ ಮೂಲದ ಬಗ್ಗೆ ಹಲವು ಕಥೆಗಳಿವೆ. ಒಂದು ಐತಿಹ್ಯದ ಪ್ರಕಾರ ಸು.1475ರಲ್ಲಿ ತಿರುಪತಿಯ ಸಮೀಪದ ಜಡಿಕಲ್ ದುರ್ಗದಿಂದ ಮೂರು ಬೇಡ ಕುಟುಂಬಗಳು ವಲಸೆ ಬಂದು ಭರಮಸಾಗರದ ಬಳಿಯಲ್ಲಿನ ನೀರ್ತಡಿಯಲ್ಲಿ ನೆಲೆಸಿದವು. ಆ ಕುಟುಂಬಗಳಲ್ಲೊಂದರ ಯಜಮಾನನ ಮಗ ಹಿರೇಹನುಮಪ್ಪ ನಾಯಕ ಮತ್ತು ಮೊಮ್ಮಗ ತಿಮ್ಮಣ್ಣನಾಯಕ ಇವರು ಕಾಲಾಂತರದಲ್ಲಿ ದಾವಣಗೆರೆ ತಾಲ್ಲೂಕಿನ ಮತ್ತಿಯನ್ನು ಸೇರಿದರು. ವಿಜಯನಗರದ ಅರಸರು ಶೂರನಾದ ಮತ್ತಿಯ ತಿಮ್ಮಣ್ಣನಾಯಕನನ್ನು ಹೊಳಲ್ಕೆರೆಗೂ ಅನಂತರ ಹಿರಿಯೂರು ಮತ್ತು ಚಿತ್ರದುರ್ಗಗಳಿಗೂ ನಾಯಕನನ್ನಾಗಿ ನೇಮಿಸಿದರು. ಚಿತ್ರದುರ್ಗದ ಕೋಟೆ ಇವನ ಕಾಲದ ರಚನೆ. ತಿಮ್ಮಣ್ಣನಾಯಕ ಕಲ್ಬುರ್ಗಿಯ ತುರುಷ್ಕರ ವಿರುದ್ಧ ಹೋರಾಡಿ ವಿಜಯನಗರದ ಅರಸರಿಂದ ಬಹುಮಾನಗಳನ್ನು ಪಡೆದ. ಆದರೆ ಅನಂತರ ತನ್ನ ಅವಿಧೇಯತೆಯಿಂದಾಗಿ ವಿಜಯನಗರದಲ್ಲಿ ಬಂದಿಯಾಗಿ ಅಲ್ಲಿಯೇ ಸತ್ತ ಎಂಬ ಇನ್ನೊಂದು ಕಥೆಯಿದೆ. 1568ರಲ್ಲಿ ವಿಜಯನಗರದ ತಿರುಮಲ (ರಾಮರಾಯನ ತಮ್ಮ) ಹೊಳಲ್ಕೆರೆ ಸೀಮೆಯನ್ನು ಮದಕರಿನಾಯಕನಿಗೆ ಅಮರವಾಗಣೆಯಾಗಿ ಕೊಟ್ಟನೆಂದು ಶಾಸನಗಳು ತಿಳಿಸುತ್ತವೆ. ಮದಕರಿನಾಯಕ ಈ ವಂಶದ ಪಾಳೆಯಗಾರರ ಸಾಮಾನ್ಯ ಹೆಸರಾದ್ದರಿಂದ, ಇವನೇ ಕಥೆಗಳ ತಿಮ್ಮಣ್ಣನಾಯಕನಿರಬಹುದು. ತಿಮ್ಮಣ್ಣನಾಯಕನ (ಸು.1568-88) ತರುವಾಯ ಅವನ ಮಗ ಓಬಣ್ಣನಾಯಕ (ಸು.1588-1602) ಪಾಳೆಯಗಾರನಾದ. ಇವನ ಕಾಲದಲ್ಲಿ ಚಿತ್ರದುರ್ಗದ ಕೋಟೆಯೊಳಗೆ ಪಟ್ಟಣ ಬೆಳೆಯಿತು. ಇವನ ಮಗ ಕಸ್ತೂರಿ ರಂಗಪ್ಪನಾಯಕ (ಸು.1602-52) ಬಸವಾಪಟ್ಟಣದ ಪಾಳೆಯಗಾರರೊಡನೆ ಹೊಡೆದಾಡಿ, ಮಾಯಕೊಂಡ, ಸಂತೇಬೆನ್ನೂರು, ಹೊಳಲ್ಕೆರೆ, ಅಣಜಿ ಮುಂತಾದ ಸ್ಥಳಗಳನ್ನು ಚಿತ್ರದುರ್ಗದ ಪಾಳೆಯಪಟ್ಟಿಗೆ ಸೇರಿಸಿದ.

ಇವನ ಮಗ ಎರಡನೆಯ ಮದಕರಿನಾಯಕ (ಸು.1652-74) ಧೀರ, ಸಾಹಸಿ. ಈತ ರಾಜ್ಯದ ಪೂರ್ವಕ್ಕಿದ್ದ ಅನೇಕ ಪ್ರದೇಶಗಳನ್ನು ಗೆದ್ದು ರಾಜ್ಯವನ್ನು ನಾಲ್ಕು ಪ್ರಾಂತ್ಯಗಳಾಗಿ ಮಾಡಿ ಅಲ್ಲಿ ಪ್ರತ್ಯೇಕ ಪ್ರಾಂತ್ಯಾಧಿಕಾರಿಗಳನ್ನು ನೇಮಿಸಿದ. ಅನಂತರ ಅಧಿಕಾರಕ್ಕೆ ಬಂದ ಇವನ ದತ್ತುಪುತ್ರ ಓಬಣ್ಣನಾಯಕ (1674-75) ವಿಷಯಲಂಪಟನೂ ಕ್ರೂರಿಯೂ ಆದ್ದರಿಂದ ಇವನ ದಳವಾಯಿಗಳೇ ಇವನನ್ನು ಕೊಂದು ಇವನ ಮಗ ಶೂರಕಾಂತ ನಾಯಕನಿಗೆ ಅಧಿಕಾರ ವಹಿಸಿದರು. ಈತನೂ ಸೈನಿಕರೊಡನೆ ಸೌಹಾರ್ದದಿಂದಿರದೆ ಕ್ಷುಲ್ಲಕ ಕಾರಣಕ್ಕಾಗಿ ಹತನಾದ. ಈ ದಾರುಣ ಪರಿಸ್ಥಿತಿಯಲ್ಲಿ ದಳವಾಯಿಗಳು ಹರಪನಹಳ್ಳಿಯಲ್ಲಿ ಇದ್ದ ಮದಕರಿನಾಯಕನ ತಮ್ಮ ಚಿಕ್ಕಣ್ಣನಾಯಕನನ್ನು ಕರೆತಂದು ಪಾಳೆಯಗಾರನನ್ನಾಗಿ ಮಾಡಿದರು.

ವೀರನೂ ಚತುರನೂ ಆದ ಚಿಕ್ಕಣ್ಣನಾಯಕ (ಸು.1676-86) ರಾಜ್ಯವನ್ನು ದಕ್ಷತೆಯಿಂದ ಆಳಿದ. ಹರಿಹರದ ದೇವಾಲಯದ ಸಂಪತ್ತನ್ನು ಸೂರೆ ಮಾಡಲು ಮುಸ್ಲಿಮರು ದೊಡ್ಡ ದಂಡನ್ನು ತರಲು ಚಿಕ್ಕಣ್ಣನಾಯಕ ಅವರನ್ನು ಸದೆಬಡಿದು ನಗರವನ್ನು ರಕ್ಷಿಸಿದ. ಚಿಕ್ಕಣ್ಣನಾಯಕನ ಮರಣಾನಂತರ ಇವರ ಅಣ್ಣ ಲಿಂಗಣ್ಣನಾಯಕ ಪಾಳೆಯಗಾರನಾಗಿ ಮುಮ್ಮಡಿ ಮದಕರಿ (ಸು.1686-88) ಎಂದು ಹೆಸರು ತಳೆದ. ದಳವಾಯಿಗಳ ಪ್ರಾಬಲ್ಯ ಹೆಚ್ಚಾಗಿದ್ದು ಆ ಕಾಲದಲ್ಲಿ ಮುದ್ದಣ್ಣನ ನಾಯಕತ್ವದ ಒಂದು

ಗುಂಪು ಲಿಂಗಣ್ಣನಾಯಕನನ್ನು ಕೊಂದು ಅವನ ಸ್ಥಾನದಲ್ಲಿ ದುರ್ಬಲನೆನಿಸಿದ ದೊಣ್ಣೆರಂಗಪ್ಪ ನಾಯಕನನ್ನು ಕೂಡಿಸಿತು (ಸು. 1688-89). ಮುದ್ದಣ್ಣ ಸರ್ವಾಧಿಕಾರಿಯಾಗಿ ಆಡಳಿತ ನಡೆಸತೊಡಗಿದ. ಕ್ರಮೇಣ ಭರಮಪ್ಪನೆಂಬ ಮತ್ತೊಬ್ಬ ದಳವಾಯಿ ಬಲಿಷ್ಠನಾಗಿ ಮುದ್ದಣ್ಣ ಮತ್ತು ಅವನ ಸಹೋದರರನ್ನು ಕೊಲ್ಲಿಸಿ ದೊಣ್ಣೆರಂಗಪ್ಪನಾಯಕನನ್ನು ಸೆರೆಮನೆಯಲ್ಲಿಟ್ಟು ಅವನ ಹೆಸರಿನಲ್ಲಿ ತಾನೇ ರಾಜ್ಯವಾಳಲಾರಂಭಿಸಿದ. ರಂಗಪ್ಪನಾಯಕ ತೀರಿಕೊಂಡ ಮೇಲೆ, ದಳವಾಯಿ ಭರಮಪ್ಪ ಸ್ವ-ಅಧಿಕಾರಕ್ಕೆ ಆಸೆಪಡದೆ ಬಿಳಿಚೋಡಿನಲ್ಲಿದ್ದ ಭರಮಪ್ಪನಾಯಕನೇ ನಿಜವಾದ ಹಕ್ಕುದಾರನೆಂದು ತೀರ್ಮಾನಿಸಿ ಅವನನ್ನು 1689ರಲ್ಲಿ ಚಿತ್ರದುರ್ಗದ ಪಾಳೆಯಗಾರನನ್ನಾಗಿ ಮಾಡಿದ. ಈತ ಅಧಿಕಾರವನ್ನು ಕೈಗೆ ತೆಗೆದುಕೊಳ್ಳುತ್ತಿದ್ದಂತೆಯೇ ರಾಜ್ಯಕ್ಕೆ ಒದಗಿದ ಅನೇಕ ವಿಪತ್ತುಗಳನ್ನು ಚಾತುರ್ಯದಿಂದ ಎದುರಿಸಿ, ತನ್ನ ಮೂವತ್ತೊಂರು ವರ್ಷಗಳ ಆಳಿಕೆಯಲ್ಲಿ (1689-1721) ಅನೇಕ ದೇವಾಲಯ, ಅರಮನೆ, ಕೋಟೆ, ಕೆರೆಕೊಳಗಳನ್ನು ಕಟ್ಟಿಸಿ, ಪಾಳೆಯಪಟ್ಟನ್ನು ಪ್ರಶಂಸಾರ್ಹವಾಗಿ ಬೆಳೆಸಿದ. ಅನಂತರ ಪಟ್ಟಕ್ಕೆ ಬಂದ ಇವನ ಮಗ ಹಿರೇ ಮದಕರಿನಾಯಕನೂ (ಸು. 1721-48) ಸಮರ್ಥ.



ಚಿತ್ರದುರ್ಗದ ಕುಮಾರ ಮದಕರಿನಾಯಕನ ಪೊಂಬೊಳಲ ಶಾಸನ

ಹರಪನಹಳ್ಳಿ, ಸವಣೂರು, ಬಿದನೂರು ನಾಯಕರೊಡನೆಯೂ ಮರಾಠರ ಮೇಲೂ ಯುದ್ಧಮಾಡಿ ಮೊಳಕಾಲ್ಮೂರಿನವರೆಗೂ ರಾಜ್ಯವನ್ನು ವಿಸ್ತರಿಸಿದ. ಆದರೆ ಇತರ ನಾಯಕರ ಬೆಂಬಲ ಪಡೆದ ಬಿದನೂರಿನ ಸೈನ್ಯಕ್ಕೂ ಚಿತ್ರದುರ್ಗದ ಸೈನ್ಯಕ್ಕೂ ಮಾಯಕೊಂಡದಲ್ಲಿ ನಡೆದ ಭೀಕರ ಕದನದಲ್ಲಿ (1747-48) ಚಿತ್ರದುರ್ಗದವರು ಸೋತರು. ತದನಂತರ ಮದಕರಿ ನಾಯಕನಿಗೂ ಹರಪನಹಳ್ಳಿಯ ನಾಯಕನಾದ ಸೋಮಶೇಖರ ನಾಯಕನಿಗೂ ನಡೆದ ದ್ವಂದ್ವಯುದ್ಧದಲ್ಲಿ ಮದಕರಿನಾಯಕ ಮೃತನಾದ. ಬಳಿಕ ಗದ್ದುಗೆಯನ್ನೇರಿದ ಇವನ ಮಗ ಕಸ್ತೂರಿ ರಂಗಪ್ಪನಾಯಕ (1748-54) ಮರಾಠ ಸರದಾರನಾದ ಗುತ್ತಿಯ ಮುರಾರಿರಾಯನ ನೆರವಿನಿಂದ ಮಾಯಕೊಂಡವನ್ನು ಸ್ವಾಧೀನಪಡಿಸಿಕೊಂಡ. ಅಪುತ್ರಕನಾದ ರಂಗಪ್ಪನಾಯಕನ ಮರಣಾನಂತರ ಭರಮಪ್ಪನಾಯಕನ ಮಗ ಕಿರಿಯ ಮದಕರಿನಾಯಕ (1754-79) ದೊರೆಯಾದ. ಅಸದಳ ಪರಾಕ್ರಮಿಯಾದ ಇವನ ಕಾಲದಲ್ಲಿ ಚಿತ್ರದುರ್ಗ ಸರ್ವತೋಮುಖವಾಗಿ ವಿಸ್ತರಣೆ ಹೊಂದಿ ಬಲಿಷ್ಠ ರಾಜ್ಯವಾಯಿತು. ಪರಸ್ಪರ ಶತ್ರುಗಳಾದ ಮರಾಠರೂ ಹೈದರ್ ಅಲಿಯೂ ಇವನ ಸಹಾಯವನ್ನು ಅಪೇಕ್ಷಿಸಿದರು. ಮದಕರಿನಾಯಕ ಮೊದಲು ಹೈದರ್‌ಗೆ ನೆರವು ನೀಡಿ ಬಿದನೂರು, ಬಂಕಾಪುರ, ನಿಡುಗಲ್ಲು ಮತ್ತು ಮರಾಠರ ಮೇಲೆ ಕೈಗೊಂಡ ಅವನ ದಂಡಯಾತ್ರೆಗಳ ಯಶಸ್ಸಿಗೆ ಕಾರಣನಾದ. ಅದರಲ್ಲೂ ಒಂದು ವರ್ಷಕಾಲ ಸತತ ಪ್ರಯತ್ನ ಪಟ್ಟರೂ ಹೈದರನಿಗೆ ಸ್ವಾಧೀನವಾಗದ ನಿಡುಗಲ್ಲು ಮದಕರಿಯ ಮೂಲಕ ಸುಲಭವಾಗಿ ದೊರೆಯಿತು. ಆದರೆ ಹೈದರನಿಗೆ ನಾಯಕನ ಬಗ್ಗೆ ಕೃತಜ್ಞತೆಯ ಬದಲು ಅಂತರಂಗದಲ್ಲಿ ದ್ವೇಷಾಸೂಯೆಗಳೇ ಇದ್ದುವು. ಸಿರಿ, ಕೀರ್ತಿಯಿಂದ ಮೆರೆಯುತ್ತಿದ್ದ ಚಿತ್ರದುರ್ಗವನ್ನು ಸ್ವಾಧೀನಪಡಿಸಿಕೊಳ್ಳುವ ಹಂಚಿಕೆ ಅವನಿಗೆ ಇದ್ದಂತೆ ತೋರುತ್ತದೆ. ಇದನ್ನು ಶಂಕಿಸಿದ ಅಥವಾ ತತ್ಕಾಲದ ರಾಜಕೀಯ ಬಲಾಬಲಗಳನ್ನು ನೋಡಿ ಹೈದರನ ಪತನ ಖಚಿತವೆಂದು ಭ್ರಮಿಸಿದ ಮದಕರಿ, 1777ರಲ್ಲಿ ಹೈದರಾಬಾದಿನ ನಿಜಾಮ ಮತ್ತು ಮರಾಠರು ಹೈದರನ ಮೇಲೆ ಬೀಳಲು ಸನ್ನಾಹ ಮಾಡಿಕೊಂಡಾಗ ಮರಾಠರ ಸ್ನೇಹ ಬೆಳೆಸಿದ. ಹಿಂದಿನ ಕರಾರಿನಂತೆ ಹೈದರನಿಗೆ ಸೈನ್ಯಸಹಾಯವನ್ನು ಕಳುಹಿಸದೆ ಸುಮ್ಮನಿದ್ದ. ಇದರಿಂದ ಕುಪಿತನಾದ ಹೈದರ್ ತನಗೊದಗಿದ ಅಪಾಯವನ್ನು ನಿವಾರಿಸಿಕೊಂಡ ಮೇಲೆ ಚಿತ್ರದುರ್ಗವನ್ನು ಮುತ್ತಿದ. ಮೊದಲ ಬಾರಿಯ ಮುತ್ತಿಗೆಯಲ್ಲಿ ಹೈದರನಿಗೆ ಜಯ ದೊರೆಯುವ ಸೂಚನೆ ಕಂಡುಬರದಿರಲು ನಾಯಕನೊಡನೆ ಒಪ್ಪಂದ ಮಾಡಿಕೊಂಡು ಹಿಂದಿರುಗಿದ. ಆದರೆ ಒಪ್ಪಂದದ ಪ್ರಕಾರ ನಾಯಕ ಯುದ್ಧದಿಂದಾದ ನಷ್ಟಕ್ಕೆ ಪರಿಹಾರದ್ರವ್ಯವನ್ನು ಸಲ್ಲಿಸದೆಹೋಗಲು ಹೈದರ್ ಅಪಾರ ಸೇನೆಯೊಡನೆ ಚಿತ್ರದುರ್ಗವನ್ನು ಎರಡನೆಯ ಬಾರಿ ಮುತ್ತಿದ. ಈ ಬಾರಿ ನಾಯಕನ ಕಡೆಯ ಅಧಿಕಾರಿಗಳೆಸಗಿದ ದ್ರೋಹ ಹಾಗೂ ಹೈದರನ ತಂತ್ರದಿಂದಾಗಿ ಚಿತ್ರದುರ್ಗದ ಪತನ ಸಮೀಪಿಸಿದರೂ ನಾಯಕ ಅಳುಕದೆ ಕಡೆತನಕ ವೀರಾವೇಶದಿಂದ ಹೋರಾಡಿದ. ಈ ಸಂಬಂಧವಾಗಿ ರಚನೆಗೊಂಡಿರುವ ಒನಕೆ ಓಬವ್ವನ ಕಥೆ ಅತ್ಯಂತ ಪ್ರಸಿದ್ಧವಾದುದು. ಆದರೆ ಚಿತ್ರದುರ್ಗ ಹೈದರನ ಕೈವಶವಾಗಿ; ನಾಯಕ ಹೈದರನ ಬಂದಿಯಾದ (ಮಾರ್ಚ್ 1779). ಇದರೊಂದಿಗೆ ಚಿತ್ರದುರ್ಗ ಪಾಳೆಯಗಾರರ ಆಳಿಕೆ ಮುಗಿಯಿತು. ಕೊನೆಗೆ ಮದಕರಿನಾಯಕ ಶ್ರೀರಂಗಪಟ್ಟಣದ ಸೆರೆಮನೆಯಲ್ಲಿ ಸಾವನ್ನಪ್ಪಿದ. (ಸಿ.ಕೆ.ವೈ.ಡಿ.)

**ಚಿತ್ರಾಪುರ :** ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕಿನಲ್ಲಿ ಮಂಗಳೂರಿನಿಂದ 24ಕಿಮೀ ಉತ್ತರಕ್ಕೆ ಕುಲೈ ಗ್ರಾಮಕ್ಕೆ ಸೇರಿದಂತೆ ಪಣಂಬೂರಿನ ಹತ್ತಿರ ಸಮುದ್ರ ತೀರದಲ್ಲಿರುವ ಒಂದು ಹಳ್ಳಿ. ಪ್ರಾಚೀನ ಶಾಸನಗಳಲ್ಲಿ ಇದನ್ನು ಚಿತ್ರಾಪ್ಪ ಎಂದು ಉಲ್ಲೇಖಿಸಲಾಗಿದೆ. ಇಲ್ಲಿ ಮಾಧ್ವಸಂಪ್ರದಾಯಕ್ಕೆ ಸೇರಿದ ಚಿತ್ರಾಪುರ ಮಠವಿದೆ. 14-15ನೆಯ ಶತಮಾನದ ಶಾಸನಗಳಲ್ಲಿ ಈ ಮಠದ ಉಲ್ಲೇಖವಿದೆ. ಈ ಮಠದ ಅಧೀನದಲ್ಲಿ ಒಂದು ದುರ್ಗಾ ದೇವಾಲಯವಿದೆ. ಇದು ಮೂಲತಃ 11ನೆಯ ಶತಮಾನದ ರಚನೆ. ಇಲ್ಲಿಯ ದೇವತೆ ಲಿಂಗಾಕಾರದಲ್ಲಿದೆ. ದೇವರನ್ನು ಪುಳುಪಿನ ದೇವತೆಯೆಂದು 13 ಮತ್ತು 14ನೆಯ ಶತಮಾನದ ಶಾಸನಗಳಲ್ಲಿ ಹೇಳಿದೆ. ಚೌಕಾಕಾರವಾದ ದೇವಾಲಯ ಪಶ್ಚಿಮಾಭಿಮುಖವಾಗಿ ಅರಬ್ಬೀ ಸಮುದ್ರಕ್ಕೆ ಎದುರಾಗಿದೆ. (ಟಿ.ಪಿ.ಎಸ್.ಆರ್.)

**ಚಿತ್ರಾಲಂಕೃತ ಹಸ್ತಪ್ರತಿಗಳು :** ವಿವಿಧ ರೀತಿಯ ಚಿತ್ರಗಳಿಂದ ಅಲಂಕೃತವಾದ ಹಸ್ತಪ್ರತಿಗಳಿಗೆ ಈ ಹೆಸರಿದೆ (ಇಲ್ಯೂಮಿನೇಟೆಡ್ ಮ್ಯಾನ್ಯುಸ್ಕ್ರಿಪ್ಟ್). ಅಕ್ಷರಗಳನ್ನೇ ಸಾಲಂಕೃತವಾಗಿ ಮಾಡುವುದು, ಪುಟಪುಟಕ್ಕೂ ಸುಂದರ ಚೌಕಟ್ಟನ್ನು ಕಟ್ಟುವುದು, ಮುಖಪುಟವನ್ನು ಮೇಲು

ಹೊದಿಕೆಯ ರಟ್ಟನ್ನು ವರ್ಣಚಿತ್ರಗಳಿಂದ ಅಲಂಕರಿಸುವುದು, ವಿಷಯಕ್ಕೆ ಸಂಬಂಧಿಸಿದಂತೆ ಗ್ರಂಥದ ಒಳಗಡೆ ರೇಖಾಚಿತ್ರಗಳನ್ನು ಒದಗಿಸುವುದು- ಹೀಗೆ ಹಸ್ತಪ್ರತಿ ಚಿತ್ರಾಲಂಕರಣಕಲೆ ಅನೇಕ ಬಗೆಯಲ್ಲಿ ಪ್ರಕಾಶಗೊಂಡು ಲಿಪಿಕಾರರ ಕಲಾಕೌಶಲಕ್ಕೆ ನಿದರ್ಶನವಾಗಿದೆ.



ಶಿವ ಮತ್ತು ಉಮೆ

ಚಿತ್ರಾಲಂಕೃತ ಹಸ್ತಪ್ರತಿಗಳು ಯಾವುದೇ ದೇಶಕ್ಕೆ, ವಿಷಯಕ್ಕೆ ಸೀಮಿತವಾಗಿಲ್ಲ. ದೊರೆಯುವ ಚಿತ್ರಗಳು ಮಾತ್ರ ಆಯಾ ದೇಶದ, ಆಯಾ ಕಲೆಯ ವೈಶಿಷ್ಟ್ಯವನ್ನು ಪಡೆದಿರುತ್ತವೆ. ಇದುವರೆಗೆ ತಿಳಿದುಬಂದಿರುವಂತೆ ಯುರೋಪಿನಲ್ಲಿ ಬಿಜಾಂಟೀಯನ್ ಮತ್ತು ರೋಮನ್ ಕಲೆಗಳೇ ಪುರಾತನವಾದುವು. ದೊರೆಯುವ ಚಿತ್ರಾಲಂಕೃತ ಹಸ್ತಪ್ರತಿಗಳಲ್ಲಿ ಪುರಾತನವಾದುವೆಂದರೆ ಈಜಿಪ್ಟಿನ ಪಪೈರಸ್ ಸುರುಳಿಗಳು. ಇವುಗಳ ಕಾಲ ಕ್ರಿ.ಪೂ.7000. ದಿ ಬುಕ್ ಆಫ್ ದಿ ಡೆಡ್ ಎಂಬ ಗ್ರಂಥದ ಬೇರೆ ಬೇರೆ ಪ್ರತಿಗಳು ಹಲವು ಸಮಾಧಿಗಳಲ್ಲಿ ಕಂಡುಬಂದಿವೆ. ಇವುಗಳೆಲ್ಲವೂ ಪಪೈರಸ್ ಸುರುಳಿಗಳೇ. ಇವುಗಳಲ್ಲಿ ರೇಖಾಚಿತ್ರಗಳನ್ನೂ ಜಲವರ್ಣ ಚಿತ್ರಗಳನ್ನೂ ಕಾಣಬಹುದಾಗಿದೆ. ಇದೇ ಮಾದರಿಯ ಒಂದು ಹಸ್ತಪ್ರತಿ ಬ್ರಿಟಿಷ್ ವಸ್ತುಸಂಗ್ರಹಾಲಯದಲ್ಲಿದೆ. ಗ್ರೀಸಿನಲ್ಲಿ 4ನೆಯ ಶತಮಾನಕ್ಕೆ ಪೂರ್ವದ ಇಂಥ ಯಾವ ಪ್ರತಿಗಳೂ ದೊರೆಯದಿದ್ದರೂ ಸು.400ರ ರೋಮನ್‌ಪ್ರತಿ ಹೋಮರನ ಇಲಿಯಡ್ ಕಾವ್ಯ ಅಪ್ರೋಸಿಯಾನ ಗ್ರಂಥಾಲಯದಲ್ಲಿದೆ. ಇದರಲ್ಲಿ 58 ಉಜ್ವಲಾಲಂಕೃತ ಚಿತ್ರಗಳಿವೆ. ಇನ್ನೊಂದು ಇದೇ ಕಾಲದ ರೋಮನ್ ಪ್ರತಿಯೆಂದರೆ ವರ್ಜಿಲ್ ಆಫ್ ದಿ ವ್ಯಾಟಿಕನ್.

ಇದೇ ರೀತಿ ಭಾರತದಲ್ಲಿ ಓಲೆ ಮತ್ತು ಕಾಗದದ ಮೇಲೆ ಬರೆದ ಚಿತ್ರಾಲಂಕೃತ ಹಸ್ತಪ್ರತಿಗಳು ದೊರೆಯುತ್ತವೆ. ಈಗ ತಿಳಿದು ಬಂದಿರುವಂತೆ ಓಲೆಯ ಅತ್ಯಂತ ಹಳೆಯ ಚಿತ್ರಾಲಂಕೃತ ಪ್ರತಿಯೆಂದರೆ, 1962ರಲ್ಲಿ ನ್ಯೂಯಾರ್ಕ್ ನಗರದಲ್ಲಿ ಪ್ರದರ್ಶಿತವಾದ ಸಂಸ್ಕೃತ ಗ್ರಂಥ. ಇದು ಬೌದ್ಧರ ಪ್ರಾರ್ಥನಾಗೀತೆಗಳನ್ನೊಳಗೊಂಡಿದೆ. ಇದರಲ್ಲಿರುವ ಚಿತ್ರಗಳು ಅಜಂತ ಕಲೆಯನು ಅನುಸರಿಸಿವೆಯೆಂದು ಹೇಳಲಾಗಿದೆ. ಈಗ ದೊರೆಯುವ ಮತ್ತೊಂದು ಪ್ರತಿಯೆಂದರೆ ಧವಳ ಮಹಾಗ್ರಂಥ. ಇದರ ಕಾಲ ಸು.11ನೆಯ ಶತಮಾನ. ಇದು ಅರ್ಧಮಾಗಧಿ ಭಾಷೆಯಲ್ಲಿ ಕನ್ನಡ ಶಾಸನ ಲಿಪಿಯಲ್ಲಿ ಬರೆದುದಾಗಿದೆ. ಜೈನತತ್ತ್ವ ನಿರೂಪಣೆಯನ್ನು ಹೊಂದಿರುವ ಈ ಹಸ್ತಪ್ರತಿ ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದರೆ ಜೈನಮಂದಿರದಲ್ಲಿ, ಸಿದ್ಧಾಂತದರ್ಶನಕ್ಕೆಂದು ಮೀಸಲಾಗಿದೆ. ಇದರಲ್ಲಿ ಅತ್ಯುತ್ತಮವಾದ ವರ್ಣರಂಜಿತ ಚಿತ್ರಗಳಿವೆ. ಇಲ್ಲಿಯೇ ಇರುವ ಮತ್ತೊಂದು ರೇಖಾಚಿತ್ರಗಳನ್ನೊಳಗೊಂಡ ಹಸ್ತಪ್ರತಿಯೆಂದರೆ ನೇಮಿಚಂದ್ರನ ನೇಮಿನಾಥಪುರಾಣ. ಇಂಥ ಹಲವಾರು ಓಲೆಗ್ರಂಥಗಳಲ್ಲಿ ಚಿತ್ರಗಳನ್ನು ಕಂಡರಿಸಲಾಗಿದ್ದಾರೆ. ಹಲವು ಹಸ್ತಪ್ರತಿಗಳು ಮೈಸೂರಿನ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮತ್ತು ಪ್ರಾಚ್ಯ ವಿದ್ಯಾಸಂಶೋಧನಾಲಯದಲ್ಲಿವೆ.

14ನೆಯ ಶತಮಾನದ ಕೊನೆಯಲ್ಲಿ ಕಾಗದ ಬಳಕೆಗೆ ಬಂದು ಅದು ಓಲೆ ಮತ್ತು ಭೂರ್ಜಪತ್ರಗಳ ಸ್ಥಾನವನ್ನು ಆಕ್ರಮಿಸಿತು. ಕಾಗದ ಬಳಕೆಗೆ ಬಂದಮೇಲೆ ತಯಾರಾದ ಹಸ್ತಪ್ರತಿಗಳಲ್ಲಿ 1550ರಲ್ಲಿ ಬರೆದ, ಜೈನ ನಿಯಮಾವಳಿಗಳನ್ನೊಳಗೊಂಡ ಚಿತ್ರಾಲಂಕೃತ ಹಸ್ತಪ್ರತಿಯೆಂದರೆ ಕಲ್ಪಸೂತ್ರ. ಇದರಲ್ಲಿನ ಚಿತ್ರಗಳು ಪಶ್ಚಿಮ ದೇಶದ ರೇಖಾವಿನ್ಯಾಸಗಳನ್ನೊಳಗೊಂಡ ಭಾರತ ಚಿತ್ರಗಳು.

16ನೆಯ ಶತಮಾನದಲ್ಲಿ ಬಹುತೇಕ ಹಸ್ತಪ್ರತಿಗಳು ಚಿತ್ರಗಳಿಂದ ಅಲಂಕೃತವಾದುವಾಗಿವೆ. ಮೊಗಲ್ ಚಕ್ರವರ್ತಿ ಅಕ್ಬರ್ ಭಾರತದ ಎಲ್ಲ ಭಾಗಗಳಿಂದ ಚಿತ್ರಕಾರರನ್ನು ಕರೆಸಿದ. ಇವರಿಂದ ಹಲವಾರು ಹಸ್ತಪ್ರತಿಗಳು ಉತ್ತಮ ಚಿತ್ರಗಳಿಂದ ಅಲಂಕೃತವಾದುವು. ಈ ಎಲ್ಲ ಚಿತ್ರಗಳಲ್ಲಿ ಮೊಗಲರ ಕಲಾವಂತಿಕೆಯನ್ನು ಕಾಣಬಹುದಾಗಿದೆ. ಇದಕ್ಕೆ ಉದಾಹರಣೆಯಾಗಿ 36 ಚಿತ್ರಗಳನ್ನೊಳಗೊಂಡ, 1595ರಲ್ಲಿ ಅಕ್ಬರನಿಗಾಗಿ ರಚಿತವಾದ ಅಬ್ದುಲ್ ರಹೀಮ್ ಗ್ರಂಥ'ವನ್ನು ನೋಡಬಹುದು. ಇದು ಬಾಬರನ ಜೀವನ ಘಟನೆಗಳನ್ನೊಳಗೊಂಡ ಪಾರಸಿ ಹಸ್ತಪ್ರತಿ. 16ನೆಯ ಶತಮಾನದ ಮತ್ತೊಂದು ಚಿತ್ರಾಲಂಕೃತ ಹಸ್ತಪ್ರತಿಯೆಂದರೆ ಎನ್‌ಸೈಕ್ಲೊಪೀಡಿಯ ಆಫ್ ಸೈನ್ಸಸ್-ಇದರಲ್ಲಿ ಮರಗಿಡಗಳು, ಕಲ್ಲುಗಳು ಮತ್ತು ಪ್ರಾಣಿಗಳ ಚಿತ್ರಗಳು ಅತ್ಯಂತ ಸುಂದರವಾಗಿ ಚಿತ್ರಿತವಾಗಿವೆ. 1567ರಲ್ಲಿ ಪ್ರಸಿದ್ಧ ಕನ್ನಡ ಲಿಪಿಕಾರ ಪಾಯಣ್ಣನಿಂದ ಕಂಡರಿಸಲಾದ ಎರಡನೆಯ ನಾಗವರ್ಮನ ವರ್ಧಮಾನ ಪುರಾಣದ ಕಾಗದದ ಪ್ರತಿಯಲ್ಲಿ ಕೆಲವು ವರ್ಣರಂಜಿತ ಚಿತ್ರಗಳನ್ನು ಕಾಣಬಹುದು.



ನೇಮಿಪುರಾಣದ ಒಂದು ಹಸ್ತಪ್ರತಿ

ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ (ಸು.1850) ಇಂಥ' ಹಸ್ತಪ್ರತಿಗಳು ಮೈಸೂರು ನಗರದಲ್ಲಿ ರಚಿತವಾಗಿವೆ. ಇವುಗಳಲ್ಲಿ ಶ್ರೀತತ್ತ್ವನಿಧಿ ಬಹು ಪ್ರಸಿದ್ಧವಾದುದು. ಇದರಲ್ಲಿ ಸು.40,000 ವರ್ಣಚಿತ್ರಗಳೂ ಹಲವಾರು ರೇಖಾಚಿತ್ರಗಳೂ ಇವೆ. ಇಲ್ಲಿ ಕೊಟ್ಟಿರುವ ನವವಿಧಿಗಳ ನಿರೂಪಣೆಗೆ ಅನುಗುಣವಾಗಿ ಚಿತ್ರಗಳನ್ನು ಅಳವಡಿಸಲಾಗಿದೆ.

ಹಾಗೆಯೇ ಚದುರಂಗಚಕ್ರವನ್ನೂ ನೋಡಬಹುದು. ಇದೂ ವರ್ಣಚಿತ್ರಗಳಿಂದ ಕೂಡಿದೆ. ಇದರಲ್ಲಿ ವಿವಿಧ ರೀತಿಯ ಆಟಗಳಿವೆ. ಹಾಗೆಯೇ ಅಶ್ವವೈದ್ಯ ಗ್ರಂಥವೂ ಚಿತ್ರಸಹಿತವಾಗಿದೆ.



ಗೌತಮನ ಆಶೀರ್ವಾದ: ಚಿತ್ರಾಲಂಕೃತ ಹಸ್ತಪ್ರತಿಯ ಒಂದು ಮಾದರಿ

ವೀರಶೈವಾಮೃತ ಪುರಾಣ ಓಲೆಗ್ರಂಥ'ದಲ್ಲಿ ಹಲವಾರು ರೇಖಾಚಿತ್ರಗಳನ್ನು ಬಿಡಿಸಲಾಗಿದೆ. ಭೀಮಕವಿಯ ಬಸವಪುರಾಣದ ಕಾಗದದ ಹಸ್ತಪ್ರತಿಯೊಂದರಲ್ಲಿ ಪ್ರತಿ ಪುಟವನ್ನೂ ವಿವಿಧ ರೀತಿಯ ಬಣ್ಣದ ಚೌಕಟ್ಟುಗಳಿಂದ ಅಲಂಕರಿಸಲಾಗಿದೆ. ಇಲ್ಲಿ ಕಂಡುಬರುವ ವಿನ್ಯಾಸಗಳು ತುಂಬ ಆಕರ್ಷಕವಾಗಿವೆ. ಈ ಚೌಕಟ್ಟುಗಳೇ ಅಲ್ಲದೆ ಈ ಹಸ್ತಪ್ರತಿಯ ರಕ್ಷಣೆಗಾಗಿ ಉಪಯೋಗಿಸಿರುವ ಹೊರಗಣ ಎರಡು ಹಲಗೆಗಳ ಮೇಲೆ ಮೂಡಿಸಿರುವ ವರ್ಣರಂಜಿತ ಚಿತ್ರಗಳೂ ಬಹಳ ಸೊಗಸಾಗಿವೆ.



ಹಸ್ತಪ್ರತಿ ಚಿತ್ರಗಳು

ಹೀಗೆ ಚಿತ್ರಗಳನ್ನು ಬಿಡಿಸಿರುವುದಲ್ಲದೆ, ಅಕ್ಷರಗಳನ್ನು ಬರೆಯುವಾಗಲೂ ಹಲವಾರು ಚಿತ್ರವಿಚಿತ್ರ ರೀತಿಯಿಂದ ಬರೆದ ಲಿಪಿಕಾರರು ತಮ್ಮ ಕಲಾಪ್ರೌಢಿಮೆಯನ್ನು ಪ್ರದರ್ಶಿಸಿರುವುದನ್ನು ಕಾಣಬಹುದು. ಇದಕ್ಕೆ ಧವಳ ಗ್ರಂಥದಲ್ಲಿ ಹಾಕಿರುವ 4ನೆಯ ಪತ್ರಸಂಖ್ಯೆಯನ್ನು ನೋಡಬಹುದು. ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ರಾಜನೀತಿ ಪದ್ಯಗಳಿರುವ ಪತ್ರಗಳಲ್ಲಿ ಬರೆದಿರುವ ವಿವಿಧ ರೀತಿಯ ಸಾಲು ಜೋಡಿಗಳನ್ನು ನೋಡಬಹುದು. ವಿವಿಧ ದಿಕ್ಕುಗಳಿಂದ ಓದಬಹುದಾದ ಈ ಬರೆಹ ಚಮತ್ಕಾರಯುಕ್ತವಾಗಿದೆ.

ಹಾಗೆಯೇ ಸೂಕ್ಷ್ಮ ಲಿಪಿಗಳಿಗೆ ಪ್ರಸಿದ್ಧವಾಗಿರುವ ಮೈಸೂರಿನ ಪ್ರಾಚ್ಯ ವಿದ್ಯಾಸಂಶೋಧನಾಲಯದಲ್ಲಿರುವ ದೇವೀಸ್ತೋತ್ರ ಮತ್ತು ಸುಂದರ ಕಾಂಡ ಓಲೆಗ್ರಂಥಗಳನ್ನು ನೋಡಬಹುದು. ದೇವೀಸ್ತೋತ್ರ ಹಸ್ತಪ್ರತಿಯ 2½" ಉದ್ದದಲ್ಲಿ 25 ಅಕ್ಷರಗಳನ್ನೂ 2½" ಅಗಲದಲ್ಲಿ 23 ಪಂಕ್ತಿಗಳನ್ನೂ ಕಾಣಬಹುದಾಗಿದೆ. ಇದು ಸಂಸ್ಕೃತ ಗ್ರಂಥವಾಗಿದ್ದು ತೆಲುಗು ಲಿಪಿಯಲ್ಲಿದೆ. ಸುಂದರಕಾಂಡ ಗ್ರಂಥಾಕ್ಷರದಲ್ಲಿದೆ. 3¾" x 1½" ಬರೆವಣಿಗೆಯ ಅಳತೆಯ ಭಾಗದಲ್ಲಿ 47 ಅಕ್ಷರಗಳೂ 21-25 ಪಂಕ್ತಿಗಳೂ ಇವೆ. ಇವುಗಳ ಜೊತೆಗೆ ಇದೇ ಮಾದರಿಯಲ್ಲಿ ಬರೆದಿರುವ, ಹೆಸರು ತಿಳಿಯದ ಯಾವುದೋ ಗ್ರಂಥದ ಒಂದು ಪತ್ರ ಮಾತ್ರ ದೊರೆತಿದೆ. ಅದರ ಅಳತೆ 18" x 1¼" ಅದರ ಪ್ರತಿ ಪಕ್ಕದಲ್ಲಿ 22 ಪಂಕ್ತಿಗಳೂ ಪ್ರತಿ ಪಂಕ್ತಿಯಲ್ಲಿಯೂ 420 ಅಕ್ಷರಗಳೂ ಇವೆ ಎಂದಾಗ ಆಶ್ಚರ್ಯವಾಗುತ್ತದೆ. 15ನೆಯ ಶತಮಾನದಲ್ಲಿ ಅಚ್ಚಿನ ಸಾಧನ ಬಂದು, ಅದರ ಮೂಲಕ ಚಿತ್ರಗಳನ್ನು ಹಾಕುವುದು ರೂಢಿಗೆ ಬಂದಮೇಲೆ ಹಸ್ತಪ್ರತಿಗಳ ಚಿತ್ರಗೆಲಸ ಕಡಿಮೆಯಾಗುತ್ತ ಬಂತು. *

**ಚಿತ್ರಾವತಿ :** ಕೋಲಾರ ಜಿಲ್ಲೆಯ ಒಂದು ಸಣ್ಣ ನದಿ. ಉತ್ತರ ಪಿನಾಕಿನಿಯ ಉಪನದಿ. ನಂದಿ ಬೆಟ್ಟದ ಉತ್ತರಕ್ಕೆ 14ಕಿಮೀ ದೂರದಲ್ಲಿರುವ ಕಲಗನಪಾಳ್ಯ ಬೆಟ್ಟದ ಬಳಿ ಹುಟ್ಟಿ ಈಶಾನ್ಯಾಭಿಮುಖವಾಗಿ ವರಲಕೊಂಡ ಬೆಟ್ಟದ ಪಕ್ಕದಲ್ಲಿ ಸಾಗಿ ಬಾಗೇಪಲ್ಲಿ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ಹರಿದು ಅನಂತರ ಆಂಧ್ರಪ್ರದೇಶವನ್ನು ಪ್ರವೇಶಿಸುತ್ತದೆ. ಅನಂತಪುರ ಜಿಲ್ಲೆಯ ಹಿಂದೂಪುರ ತಾಲ್ಲೂಕಿನಲ್ಲಿ ಹರಿದು ಮುಂದೆ ಕಡಪ ಜಿಲ್ಲೆಯ ಗುಂಡಲೂರಿನ ಬಳಿ ಉತ್ತರ ಪಿನಾಕಿನಿಯಲ್ಲಿ ಸೇರುವುದು. ಈ ನದಿ ಕರ್ನಾಟಕ ಭಾಗದಲ್ಲಿ ಸು.50ಕಿಮೀ ದೂರ ಹರಿಯುತ್ತದೆ. ನದಿಯ ಪಾತ್ರದ ಉದ್ದಕ್ಕೂ ಸು.539ಚ.ಕಿಮೀ ಪ್ರದೇಶ ಈ ನದಿಯಿಂದ ನೀರಾವರಿ ಸೌಕರ್ಯ ಪಡೆದಿದೆ. ಚಿತ್ರಾವತಿ ನದಿಯ ಉಪಯೋಗ ಬಾಗೇಪಲ್ಲಿ ತಾಲ್ಲೂಕಿನಲ್ಲಿ ಹೆಚ್ಚು. ನದಿಯ ಎರಡು ದಂಡೆಗಳ ಮೇಲೂ ಉದ್ದಕ್ಕೂ ಅನೇಕ ಪಂಪ್‌ಹೌಸ್‌ಗಳು ನಿರ್ಮಿತವಾಗಿದ್ದು ಅವುಗಳ ಸಹಾಯದಿಂದ ನದಿ ನೀರನ್ನು ಜಮೀನುಗಳಿಗೆ ಒದಗಿಸಿ ವ್ಯವಸಾಯ ಮಾಡುವರು. ಕೆಲವು ಕಡೆ ಚಿತ್ರಾವತಿ ನದಿಗೆ ಅಡ್ಡಗಟ್ಟೆಯನ್ನು ಕಟ್ಟಿ ಕಾಲುವೆಗಳ ಮೂಲಕ ಕೆರೆಗಳಿಗೆ ನೀರು ಬರುವಂತೆ ಮಾಡಲಾಗಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಬಾಗೇಪಲ್ಲಿ ತಾಲ್ಲೂಕಿನ ರಾಮಸಮುದ್ರ ಮತ್ತು ರೆಡ್ಡಿಹಳ್ಳಿಯ ಕೆರೆಗಳು. ತಿರುಮಣಿ, ಬಾಗೇಪಲ್ಲಿ ಮತ್ತು ಸೋಮೇನ ಹಳ್ಳಿ ಈ ನದಿಯ ದಡದಲ್ಲಿರುವ ಮುಖ್ಯ ಗ್ರಾಮಗಳು. (ಆರ್.ಸಿ.)

**ಚಿದಂಬರಯ್ಯ, ಹೊಸಕೆರೆ :** 1870-1938. ಧರ್ಮಪ್ರಚಾರಕರು, ಧಾರ್ಮಿಕ ಗ್ರಂಥಕರ್ತರುಗಳು. ಗುಬ್ಬಿ ತಾಲ್ಲೂಕಿನ ಹೊಸಕೆರೆಯಲ್ಲಿ ಜನಿಸಿದರು. ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣರಾದ ಇವರು ಅನಂತರ ಸ್ವಂತ ಪರಿಶ್ರಮದಿಂದ ಕನ್ನಡ, ಇಂಗ್ಲಿಷ್ ಮತ್ತು ಮರಾಠಿ ಭಾಷೆಯಲ್ಲಿ ಪಾಂಡಿತ್ಯವನ್ನು ಸಂಪಾದಿಸಿಕೊಂಡರು. ದಾವಣಗೆರೆ ಮುಂತಾದ ಸ್ಥಳಗಳಲ್ಲಿ ಮಾಧ್ಯಮಿಕ ಶಾಲಾ ಅಧ್ಯಾಪಕರೂ ಮುಖ್ಯೋಪಾಧ್ಯಾಯರೂ ಆಗಿ ಕೆಲಸಮಾಡಿದರು. ಅಧ್ಯಾತ್ಮಿಕ ಪ್ರವೃತ್ತಿಯುವರಾಗಿದ್ದ ಇವರು ಉಪಾಧ್ಯಾಯ ವೃತ್ತಿಗೆ ರಾಜೀನಾಮೆ ಸಲ್ಲಿಸಿ ಸಾಧುಗಳಾದ ಗೋಂದಾವಲಿ ಮಹಾರಾಜರು ಮತ್ತು ಕುರ್ತಕೋಟಿ ಮಹಾಭಾಗವತರಲ್ಲಿ ಸೇವಾನಿರತರಾದರು. ಭಾರತೀಯ ತರುಣರನ್ನು ಪರಧರ್ಮ ಪರಭಾಷಾವ್ಯಾಮೋಹದಿಂದ ಮುಕ್ತರನ್ನಾಗಿಸಿ ಸ್ವಧರ್ಮ ಸ್ವಭಾಷಾ ಪ್ರೇಮಿಗಳನ್ನಾಗಿಸಲು ಧಾರವಾಡದಲ್ಲಿ ಸ್ಥಾಪಿತವಾದ ರಾಷ್ಟ್ರೀಯ ಶಿಕ್ಷಣ ಸಮಿತಿಯಲ್ಲಿ ಶಿಕ್ಷಕರಾಗಿ ನೇಮಕಗೊಂಡು ವಿದ್ಯಾರ್ಥಿಗಳಿಗೆ ಧರ್ಮಬೋಧೆ ಮಾಡತೊಡಗಿದರು. ಆಗ್ಗೆ ಧಾರ್ಮಿಕ ಪ್ರೌಢಗ್ರಂಥಗಳ ವ್ಯಾಸಂಗ ನಡೆಸಿ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ನೀಡುವುದು ಕಠಿಣ ಕಾರ್ಯವಾಗಿದ್ದ ಸಮಯದಲ್ಲಿ ಧರ್ಮಕ್ಕೆ ಸಂಬಂಧಿಸಿದಂತೆ ಮೂವತ್ತಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದರು. ಇವರ ಗ್ರಂಥಗಳಲ್ಲಿ ಕೆಲವು ಭಾಷಾಂತರಗಳು, ಕೆಲವು ಟೀಕೆಗಳು ಮತ್ತೆ ಕೆಲವು ಸ್ವತಂತ್ರ ಕೃತಿಗಳು. ಗೀತೆ, ವೇದ,

ಉಪನಿಷತ್ತು ಮತ್ತು ಪುರಾಣಗಳ ಧರ್ಮಸೂತ್ರಗಳನ್ನು ಸರಳವಾಗಿ ಹಲವಾರು ಉಪಕಥೆಗಳೊಂದಿಗೆ, ಕನ್ನಡದ ಪ್ರಾಚೀನ ಕವಿಗಳ, ಕಾವ್ಯಗಳ ಉದಾಹರಣೆಗಳೊಂದಿಗೆ ಕನ್ನಡಕ್ಕೆ ತಂದರು. ಗ್ರಂಥರಚನೆ, ಪ್ರಕಾಶನಗಳ ಜೊತೆಗೆ ಪರಮಾರ್ಥ ಮತ್ತು ಭಕ್ತಬಂಧು ಎಂಬ ಎರಡು



ಮಾಸಪತ್ರಿಕೆಗಳನ್ನು ಇವರು ನಡೆಸುತ್ತಿದ್ದರು. ಬೆಂಗಳೂರಿನಲ್ಲಿ ಕೀರ್ತನಕಾರರ ಸಮ್ಮೇಳನ ನಡೆಸಿ, ಕೀರ್ತನಕಲೆಯನ್ನು ಶಾಸ್ತ್ರೀಯಗೊಳಿಸಲು ಪ್ರಯತ್ನಿಸಿದ ಇವರು ಮಾದರಿಗಾಗಿ ಹಲವು ಕೀರ್ತನ ಗ್ರಂಥಗಳನ್ನೂ ರಚಿಸಿದರು.

ಚಿದಂಬರಯ್ಯನವರು ಗದ್ಯ, ಪದ್ಯ, ನಾಟಕ, ಟೀಕೆ ಮುಂತಾದುವುಗಳಲ್ಲೆಲ್ಲ ಕೈಯಾಡಿಸಿದ್ದಾರೆ. ಉಪಾಧ್ಯಾಯ ವೃತ್ತಿಯ ತಮ್ಮ ಅನುಭವಗಳನ್ನು ಆ ಕ್ಷೇತ್ರದ ಕುಂದುಕೊರತೆಗಳನ್ನು ಆಧರಿಸಿ ಮನಃಶಿಕ್ಷಣ, ಬೋಧನ ಸ್ವಭಾವ, ಬೋಧನ ಕ್ರಮ, ಉಪಾಧ್ಯಾಯರ ಯೋಗ್ಯತೆಗಳು, ಗಣಿತಾಬ್ಜಭಾಸ್ಕರ ಮೊದಲಾದ ಗ್ರಂಥಗಳನ್ನು ರಚಿಸಿದ್ದಾರೆ. ಕುರ್ತಕೋಟಿ ಮಹಾಭಾಗವತರ ಉಪನ್ಯಾಸಗಳನ್ನೆಲ್ಲ ಸಂಗ್ರಹಿಸಿ ಭಗವದ್ಗೀತಾ ಸಾರವೆಂಬ ಗ್ರಂಥವನ್ನೂ ಮರಾಠಿಯ ಮನಾಚೇ ಶ್ಲೋಕವೆಂಬ ಗ್ರಂಥವನ್ನೂ ಆಧರಿಸಿ ಮನಸ್ಸಿಗುಪದೇಶವೆಂಬ ಕನ್ನಡ ಗ್ರಂಥವನ್ನೂ ಪ್ರಕಟಿಸಿದ್ದಾರೆ.

ನೀತಿಗಳ ನೆಲಗಟ್ಟು, ಗುಣನಿರೂಪಣೆ, ಭರತನ ಬಂಧುಪ್ರೇಮ ಮುಂತಾದ ನೀತಿಗ್ರಂಥಗಳನ್ನೂ ಸುಧರ್ಮಪ್ರಭಾವ, ಕಲಿಸಂಕರಣ, ಕೃಷ್ಣಮಹೇಶ್ವರಿ, ನವೀನಕಲ್ಪ, ಚೂಡಾಲೆ ಮುಂತಾದ ನಾಟಕಗಳನ್ನೂ ವಿದ್ಯಾರಣ್ಯ ಕಾವ್ಯ, ಪರಮಾತ್ಮಸ್ತುತಿ, ಗುರುಸ್ತುತಿ ಮುಂತಾದ ಸ್ತೋತ್ರಗ್ರಂಥಗಳನ್ನೂ ಅನೇಕ ಕೀರ್ತನೆಗಳನ್ನೂ ಸಂಗೀತಕ್ಕೆ ಅಳವಡಿಸಿ ಭಕ್ತಿಗೀತಾವಳಿ ಗ್ರಂಥವನ್ನೂ ಹರಿಕಥೆ ನಡೆಸುವವರಿಗೆ ಮಾರ್ಗದರ್ಶನವಾಗುವಂತೆ ಕೀರ್ತನ ಕಂಠಾಭರಣ ಮುಂತಾದ ಕೀರ್ತನ ಗ್ರಂಥಗಳನ್ನೂ ಇವರು ರಚಿಸಿದ್ದಾರೆ. ಅನುಭವಾಮೃತಕ್ಕೆ ಸಂದರ್ಶನೀ ಎಂಬ ಕನ್ನಡ ಟೀಕೆಯನ್ನು ರಚಿಸಿದ್ದಾರೆ.

ಆರ್ಯಧರ್ಮಪ್ರದೀಪ ಇವರ ಶ್ರೇಷ್ಠ ಗ್ರಂಥಗಳಲ್ಲೊಂದು. ಸು.550 ಪುಟಗಳ ಈ ಗ್ರಂಥ 1924ರಲ್ಲಿ ಮೊದಲು ಮುದ್ರಣಗೊಂಡು, ಅನಂತರ ಮೂರುಬಾರಿ ಪುನರ್ಮುದ್ರಣಗೊಂಡಿದೆ. ಇದರಲ್ಲಿ ಪರಿಶಿಷ್ಟವಾಗಿ ವೈದಿಕ ಧರ್ಮದ ಪರಮ ಗ್ರಂಥಗಳಾದ ವೇದಗಳು, ವೇದಾಂಗಗಳು, ಮೀಮಾಂಸೆ, ನ್ಯಾಯಶಾಸ್ತ್ರ, ಧರ್ಮಶಾಸ್ತ್ರ ಮತ್ತು ಪುರಾಣಗಳ ಹಾಗೂ ಕೆಲವು ಮುಖ್ಯ ಮತಭೇದಗಳಾದ ಬೌದ್ಧ, ಜೈನ, ಅದ್ವೈತ, ವಿಶಿಷ್ಟಾದ್ವೈತ, ವೀರಶೈವ, ದ್ವೈತ, ಸಿಖ್‌ಮತಗಳ ಬಗ್ಗೆಯೂ ಆರ್ಯಸಮಾಜ, ಯಹೂದೀ, ಪಾರಸೀ, ಇಸ್ಲಾಮ್ ಮತ್ತು ಕ್ರೈಸ್ತ ಮತಗಳ ಬಗ್ಗೆಯೂ ಸ್ಥೂಲ ವಿವರಣೆ ನೀಡಿದ್ದಾರೆ.

ಇವರ ಮತ್ತೊಂದು ಜನಪ್ರಿಯ ಗ್ರಂಥ ಗೀತಾರ್ಥಚಂದ್ರಿಕೆ (1929). ಗೀತೆಯ ಬಗ್ಗೆ ಹಲವು ಕನ್ನಡ ವ್ಯಾಖ್ಯಾನ ಗ್ರಂಥಗಳಿದ್ದರೂ ನೂತನ ಮಾದರಿಯಲ್ಲಿ ರಚಿತವಾದ ಈ ಗ್ರಂಥ ತುಂಬ ಜನಪ್ರಿಯವಾಗಿದೆ. ಗೀತೆಯ ಒಂದೊಂದು ಶಬ್ದಕ್ಕೂ ಸೂಕ್ತ ಅರ್ಥ ನೀಡಿ, ವಿವರಣೆ, ಉದಾಹರಣೆಗಳಿಂದ ಗೀತೆಯನ್ನು ಸುಲಭಗ್ರಾಹ್ಯವಾಗಿ ಮಾಡಿದ್ದಾರೆ. ಇವರ ಗ್ರಂಥಗಳಲ್ಲಿ ಕೀರ್ತನಕಂಠಾಭರಣ-ರಾಮಾಯಣ ತುಂಬ ಪ್ರಸಿದ್ಧ ಗ್ರಂಥ (1928). ಇಂದಿಗೂ ಅದು ಕೀರ್ತನಕಾರರಿಗೆ ಕೈದೀಪವಾಗಿದೆ. ಇವರ ಗ್ರಂಥಗಳಲ್ಲಿರುವ ವೈಶಿಷ್ಟ್ಯವೆಂದರೆ ಸಂಸ್ಕೃತ ಕಾವ್ಯಭಾಗಗಳ ಜೊತೆಗೆ ಕನ್ನಡ ಪ್ರಾಚೀನ ಸಾಹಿತ್ಯ ಹಾಗೂ ಕವಿಗಳ ಪದ್ಯಗಳನ್ನು ಧಾರಾಳವಾಗಿ ಉಪಯೋಗಿಸಿಕೊಂಡಿರುವುದು. ಹಲವು ಕನ್ನಡ ಕವಿಗಳ, ವಚನಕಾರರ ಪದ್ಯಗಳಿಗೆ ಸಂಗೀತ ಸ್ವರ ಸಂಯೋಜನೆಯನ್ನೂ ಮಾಡಿದ್ದಾರೆ. ತಾವೇ ಸ್ವತಃ ಕೆಲವು ಗೀತೆಗಳನ್ನು ರಚಿಸಿದ್ದಾರೆ. ಮರಾಠಿಯಿಂದ ಸಾಕಿ, ದಿಂಡಿ ಛಂದಗಳನ್ನು ಕನ್ನಡಕ್ಕೆ ತಂದಿದ್ದಾರೆ.

ಚಿದಂಬರಯ್ಯನವರು ತಮ್ಮ ಜೀವನದ ಕೊನೆಯ ದಿನಗಳನ್ನು ತಿರುಮಕೂಡಲು ನರಸೀಪುರದ ನದೀತೀರದ ಪ್ರಶಾಂತ ವಾತಾವರಣದಲ್ಲಿ ಕಳೆದು 1938 ಏಪ್ರಿಲ್ 17ರಂದು ನಿಧನಹೊಂದಿದರು. *

**ಚಿದಾನಂದಕವಿ :** ಸು.1680 ಜೈನಕವಿ. ಮುನಿವಂಶಾಭ್ಯುದಯ ಎಂಬ ಗ್ರಂಥದ ಕರ್ತೃ. ಮೈಸೂರು ದೊರೆ ಚಿಕ್ಕದೇವರಾಜನನ್ನೂ (1673-1704) ಆತನ ವಂಶಾವಳಿಯನ್ನೂ ತನ್ನ ಗ್ರಂಥದಲ್ಲಿ ಸ್ತುತಿಸಿದ್ದಾನೆ.

ಮುನಿವಂಶಾಭ್ಯುದಯ ಸಾಂಗತ್ಯದಲ್ಲಿದೆ. ದೊರೆತ ಅಸಮಗ್ರ ಪ್ರತಿಯಲ್ಲಿ 5 ಸಂಧಿಗಳಿವೆ. ಈ ಗ್ರಂಥದಲ್ಲಿ ಜೈನಮುನಿಗಳ, ಮುಖ್ಯವಾಗಿ ಮೂಲಸಂಘದ ದೇಶೀಯ ಗಣದ ಕೊಂಡಕುಂದಾನ್ವಯದ ಮುನಿಗಳ ಪರಂಪರೆ ಹೇಳಿದೆ. ಶ್ರುತಕೇವಲಿಯಾದ ಭದ್ರಬಾಹು ಶ್ರವಣಬೆಳಗೊಳಕ್ಕೆ ಬಂದು ಚಿಕ್ಕಬೆಟ್ಟದಲ್ಲಿ ಇದ್ದಂತೆಯೂ ಚಂದ್ರಗುಪ್ತ ಅರ್ಹದ್ಬಲಾಚಾರ್ಯ ಕಾಲದಲ್ಲಿ ಬೆಳಗೊಳಕ್ಕೆ ಬಂದು ದೀಕ್ಷೆಪಡೆದಂತೆಯೂ ಇದರಲ್ಲಿ ಹೇಳಿದೆ. ಕಾವ್ಯಶೈಲಿ ಸಾಂಗತ್ಯದ ಲಾಲಿತ್ಯದಿಂದ ಕೂಡಿದೆ. ಆತ್ಮನನ್ನು ಕುರಿತ ಒಂದು ಪದ್ಯ:

> ಸತ್ಕರ್ಮಗಳ ಮಾಡಿ ಸುಖಿಯಹನಂತೊಮ್ಮೆ
> ದುಷ್ಕರ್ಮಗಳ ಮಾಡಿ ದುಃಖಿ
> ಸತ್ಕರ್ಮ ದುಷ್ಕರ್ಮವೆರಡ ತಪದಿ ಸು
> ಟ್ಟಿಕ್ಕಲೊಮ್ಮೆಗೆ ಮುಕ್ತನಾತ್ಮ

ಕನ್ನಡದಲ್ಲಿ ಚಿದಾನಂದ ಎಂಬ ಹೆಸರಿನ ಇನ್ನೂ ಮೂವರು ಕವಿಗಳಿದ್ದಾರೆ: 1. ಹೊನ್ನಾವರ ತಾಲ್ಲೂಕು ಬೈಲೂರಿನ ಚಿದಾನಂದ (ಸು. 1675) ಹಾಡುಗಳನ್ನು ಬರೆದಿದ್ದಾನೆ. ಇವಕ್ಕೆ ಚಿದಾನಂದ ಕೊರಡೆ ಎಂಬ ಹೆಸರಿದೆ. 2. ಚಿದಾನಂದ (ಸು.1750) ಈತ ಚಿದಖಂಡಾನುಭವಸಾರ, ಹರಭಕ್ತಿರಸಾಯನ ಎಂಬ ಕೃತಿಗಳನ್ನು ಬರೆದಿದ್ದಾನೆ. 3. ಚಿದಾನಂದಕವಿ (ಸು.1234) ಶಾಸನ ಕವಿಯಾದ ಈತ ಮಂಡ್ಯದ 122ನೆಯ ಶಾಸನವನ್ನು ಬರೆದಂತೆ ತಿಳಿದುಬರುತ್ತದೆ. ಈತನ ಸ್ವತಂತ್ರ ಕೃತಿಗಳು ಉಪಲಬ್ಧವಿಲ್ಲ. (ಎಂ.ಆರ್.,ಎಚ್.ಪಿ.ಎಸ್.)

**ಚಿದಾನಂದಮೂರ್ತಿ, ಎಂ. :** 1931-. ಪ್ರಸಿದ್ಧ ಸಂಶೋಧಕ ಲೇಖಕ. ಈಗ ದಾವಣಗೆರೆ ಜಿಲ್ಲೆಯಲ್ಲಿರುವ ಚನ್ನಗಿರಿತಾಲ್ಲೂಕಿನ



ಹಿರೇಕೋಗಲೂರಿನಲ್ಲಿ 1931 ಮೇ 10ರಂದು ಜನಿಸಿದರು. ತಂದೆ ಕೊಟ್ಟೂರಯ್ಯ, ತಾಯಿ ಪಾರ್ವತಮ್ಮ. ಇವರ ಪ್ರಾಥಮಿಕ ಮಾಧ್ಯಮಿಕ ವಿದ್ಯಾಭ್ಯಾಸಗಳು ಕೋಗಲೂರು, ಸಂತೆಬೆನ್ನೂರುಗಳಲ್ಲೂ ಇಂಟರ್ ಶಿಕ್ಷಣ ದಾವಣಗೆರೆಯಲ್ಲೂ ಬಿ.ಎ.(ಆನರ್ಸ್), ಕನ್ನಡ ಎಂ.ಎ. ಮತ್ತು ಪಿಎಚ್.ಡಿ. ಅಧ್ಯಯನಗಳು ಮೈಸೂರಿನಲ್ಲೂ ನಡೆದುವು. ಇಂಟರ್‌ನಲ್ಲಿ ಹತ್ತನೆಯ ರ್‍ಯಾಂಕನ್ನೂ ಬಿ.ಎ.(ಆನರ್ಸ್) ಮತ್ತು ಎಂ.ಎ. ಪದವಿಗಳಲ್ಲಿ ಮೊದಲನೆಯ ರ್‍ಯಾಂಕನ್ನೂ ಗಳಿಸಿದ ಇವರು ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದರು.

ಆರಂಭದ ಕೆಲವು ವರ್ಷ ಪದವಿ ಕಾಲೇಜುಗಳಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿದ ಇವರು 1957ರಲ್ಲಿ ಮೈಸೂರಿನ

ಯುವರಾಜ ಕಾಲೇಜಿನಲ್ಲಿ ಅಧ್ಯಾಪಕರಾದರು. ಮಾನಸಗಂಗೋತ್ರಿಯ ಸ್ನಾತಕೋತ್ತರ ಕನ್ನಡ ವಿಭಾಗದಲ್ಲಿ 1960ರಲ್ಲಿ ಅಧ್ಯಾಪಕರಾಗಿ, 1968ರಲ್ಲಿ ರೀಡರ್ ಆದರು. ಬಳಿಕ ಬೆಂಗಳೂರು ವಿಶ್ವವಿದ್ಯಾಲಯದ ಸೇವೆಯಲ್ಲಿ ಕನ್ನಡ ಪ್ರಾಧ್ಯಾಪಕರಾಗಿ 1990ರ ಅಕ್ಟೋಬರ್ 10ರಂದು ಸ್ವಯಂ ನಿವೃತ್ತಿ ಪಡೆದರು. 1967-68ರಲ್ಲಿ ಶಿಕಾಗೊ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಸಂದರ್ಶಕ ಅಧ್ಯಾಪಕರಾಗಿಯೂ 1979ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿಯೂ ಕೆಲಸ ಮಾಡಿದ್ದಾರೆ. ಕನ್ನಡದ ಕಾರಣಕ್ಕೆ ಕರ್ನಾಟಕದ ವಿವಿಧ ಪ್ರಾಂತ್ಯಗಳನ್ನೂ ಅಧ್ಯಯನದ ಸಲುವಾಗಿ ದೇಶ ವಿದೇಶಗಳನ್ನೂ ಸುತ್ತಿದ್ದಾರೆ. ಬರ್ಕ್ಲಿಯಲ್ಲಿ ನಡೆದ ಅಮೆರಿಕನ್ ಓರಿಯಂಟಲ್ ಸೊಸೈಟಿಯ ವಾರ್ಷಿಕಾಧಿವೇಶನ, ಫಿಲಡೆಲ್ಫಿಯದಲ್ಲಿ ನಡೆದ ಏಷಿಯನ್ ಸೆಮಿನಾರ್, ಸ್ಟಾನ್‌ಫೋರ್ಡ್ ವಿಶ್ವ ವಿದ್ಯಾನಿಲಯದ ಐತಿಹಾಸಿಕ ಭಾಷಾವಿಜ್ಞಾನ - ಈ ಮೊದಲಾದ ಸಮ್ಮೇಳನಗಳಲ್ಲಿ ಇವರು ಪ್ರಬಂಧ ಮಂಡಿಸಿದ್ದಾರೆ.

ಚಿದಾನಂದಮೂರ್ತಿಯವರು ಮೂವತ್ತಕ್ಕೂ ಹೆಚ್ಚು ಪುಸ್ತಕಗಳನ್ನೂ ನಾನೂರಕ್ಕೂ ಹೆಚ್ಚು ಸಂಪ್ರಬಂಧಗಳನ್ನೂ ಪ್ರಕಟಿಸಿದ್ದಾರೆ. ಭಾಷೆ-ವ್ಯಾಕರಣ-ಸ್ಥಳನಾಮ, ಛಂದಸ್ಸು-ಗ್ರಂಥಸಂಪಾದನೆ-ಸಾಹಿತ್ಯಚರಿತ್ರೆ-ಜಾನಪದ-ಶಾಸನ-ಕರ್ನಾಟಕ-ಇತಿಹಾಸ - ಸಂಸ್ಕೃತಿ -ಹೀಗೆ ಇವರದು ಹಲವು ಕ್ಷೇತ್ರಗಳ, ಬಹುಮುಖ ಸಂಶೋಧನೆ. ಇವರ ಸಂಶೋಧನೆಯಲ್ಲಿ ವ್ಯಾಪಕವಾದ ವ್ಯಾಸಂಗ, ಆಳವಾದ ಅಧ್ಯಯನ, ಅಪಾರವಾದ ಪರಿಶ್ರಮ, ಮಿಂಚಿನ ಪ್ರತಿಭೆ ಮಿಳಿತವಾಗಿವೆ. ಇವರ ಸಂಶೋಧನ ಲೇಖನಗಳು ಹೊಸಸಂಗತಿಗಳ ಹೊಳಪಿನಿಂದ ಕಂಗೊಳಿಸುತ್ತವೆ. ಸಂಸ್ಕೃತಿಶೋಧಕರಾಗಿ ಇವರು ಕನ್ನಡ ಸಂಶೋಧನ ಕ್ಷೇತ್ರದ ವ್ಯಾಪ್ತಿಯನ್ನು ವಿಸ್ತರಿಸಿ ಅದಕ್ಕೆ ಹಲವು ಆಯಾಮಗಳನ್ನು ಜೋಡಿಸಿದ್ದಾರೆ.

ಭಾಷಾವಿಜ್ಞಾನದ ಮೂಲತತ್ತ್ವಗಳು (1965) ಎಂಬ ಕೃತಿ ಭಾಷಾವಿಜ್ಞಾನ ಹಾಗೂ ಕನ್ನಡ ಭಾಷೆ, ವ್ಯಾಕರಣ, ಸ್ಥಳನಾಮಗಳನ್ನು ಕುರಿತದ್ದು. 'ವಾಗರ್ಥ' (1981) ಕನ್ನಡದಲ್ಲಿ ಪ್ರತಿಧ್ವನಿಪದ, ಗೋದಾವರಿ ತೀರದ ಕನ್ನಡ, ಕರ್ನಾಟಕದ ಸ್ಥಳನಾಮ - ವ್ಯಕ್ತಿನಾಮ, ವ್ಯಾವಹಾರಿಕ ಶಿಷ್ಟಕನ್ನಡದ ವಿಭಕ್ತಿ ವ್ಯವಸ್ಥೆ ಮುಂತಾದ 25 ಬರೆಹಗಳಿಂದ ಕೂಡಿದ ಇನ್ನೊಂದು ಕೃತಿ. ಛಂದಸ್ಸಿಗೆ ಸಂಬಂಧಿಸಿದ ಕೃತಿ 'ಛಂದೋತರಂಗ' (1984). ಇದರಲ್ಲಿ ಬೆದಂಡೆ, ಒನಕೆವಾಡು, ಲಯಗ್ರಾಹಿ ಲಯೋತ್ತರ, ಅಂಶಷಟ್ಪದಿ ಮುಂತಾದ ವಿಚಾರಗಳನ್ನು ಕುರಿತಂತೆ 25 ಲೇಖನಗಳಿವೆ. ಹೊಸ ಪರಿಭಾಷೆಯ ಸೃಷ್ಟಿ, ಒಳನೋಟಗಳನ್ನು ನಾವು ಇಲ್ಲಿ ಕಾಣುತ್ತೇವೆ.

'ಕನ್ನಡ ಭಾಷಾ ಸಾಹಿತ್ಯಗಳ ಸೃಷ್ಟಿಕ ವಿದ್ಯಾರ್ಥಿ' ಎಂಬುದು ಚಿದಾನಂದಮೂರ್ತಿಯವರನ್ನು ಕುರಿತ ತೀ.ನಂ.ಶ್ರೀಕಂಠಯ್ಯನವರ ಪ್ರಶಂಸೆ. ಅದರ ಸಮರ್ಥನೆ ಎಂಬಂತೆ ಇವರು ಕವಿರಾಜಮಾರ್ಗಕಾರನಿಂದ ಮುದ್ದಣನವರೆಗೆ ವಿಪುಲವಾಗಿ ಕೆಲಸ ಮಾಡಿದ್ದಾರೆ. ಸಂಶೋಧನತರಂಗ (1,2), ಹೊಸತು ಹೊಸತು (1993) ಎಂಬ ಕೃತಿಗಳು ಈ ದೃಷ್ಟಿಯಿಂದ ಮುಖ್ಯವಾದುವು. ವೀರಶೈವ ಸಾಹಿತ್ಯದ ಬಗ್ಗೆಯೂ ಇವರು ಅಪಾರವಾದ ಕೆಲಸ ಮಾಡಿದ್ದು ಶೂನ್ಯ ಸಂಪಾದನೆಯನ್ನು ಕುರಿತು, ವಚನ ಸಾಹಿತ್ಯ (1964), ಲಿಂಗಾಯತ ಅಧ್ಯಯನಗಳು (1986), ವಚನಶೋಧ (1994) ಎಂಬ ಕೃತಿಗಳನ್ನು ಪ್ರಕಟಿಸಿದ್ದಾರೆ. ವಚನ ಸಾಹಿತ್ಯದ ಉಗಮ, ಅಜಗಣ್ಣನ ವಚನಗಳ ಅಭಿಜ್ಞೆ, ಅನಿಮಿಷನ ಗುಹೆ, ಹರಿಹರನ ವಾಸಸ್ಥಾನ, ಚಾಮರಸನ ಆಶ್ರಮ, ಪಾಲ್ಕುರಿಕೆ ಸೋಮನಾಥನ ಸಮಾಧಿಗಳನ್ನು ಇವರು ಗುರುತಿಸಿದ್ದಾರೆ. ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ (1985) ಎಂಬ ಇವರ ಪುಸ್ತಕ ಮಧ್ಯಕಾಲೀನ ಕರ್ನಾಟಕದ ಸಾಂಸ್ಕೃತಿಕ ವಿವೇಚನೆ. ದಲಿತದನಿಯನ್ನು, ದಲಿತ ಜೀವನವನ್ನು ದಲಿತವರ್ಗದ ಹೋರಾಟವನ್ನು ಚಿತ್ರವತ್ತಾಗಿ ಆಧಾರಸಹಿತವಾಗಿ ಈ ಕೃತಿ ತಿಳಿಸುತ್ತದೆ. ಕರ್ನಾಟಕದ ದಲಿತ ಹೋರಾಟದ ಪುನರ‍್ರಚನೆಗೆ ಇದೊಂದು ಆಕರ ಗ್ರಂಥ. ಇವರು ಕುಕ್ಕ್ಯಾಲ ಶಾಸನದ ಮೇಲೆ ತೋರಿಸಿರುವ ಆದಿಪುರಾಣದ ಪ್ರಭಾವ, ಸುಕುಮಾರ ಚರಿತೆಯ ರಚನಾಕಾಲ, ಹಂಪಿಯು ವ್ಯಾಟಿಕನ್ ನಗರ ಮಾದರಿಯದು ಎಂಬುವು ತುಂಬ ಅಮೂಲ್ಯವಾದ ಶೋಧಗಳು.

ಚಿದಾನಂದಮೂರ್ತಿಯವರಿಗೆ ತುಂಬ ಹೆಸರು ತಂದುಕೊಟ್ಟದ್ದು ಇವರ ಶಾಸನದ ಸಂಬಂಧವಾದ ಸಂಶೋಧನೆ. ಶಾಸನಗಳಲ್ಲಿ ಹುದುಗಿದ್ದ ಸಾಂಸ್ಕೃತಿಕ ಲೋಕವನ್ನು ಅನಾವರಣಗೊಳಿಸಿದ್ದು ಇವರ ಸಂಶೋಧನೆಯ ವೈಶಿಷ್ಟ್ಯ. ಸು.450ರಿಂದ ಸು.1150ರ ವರೆಗಿನ ಶಾಸನಗಳನ್ನು ಅವಲಂಬಿಸಿ ಇವರು ರಚಿಸಿದ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಇವರ ಪಿಎಚ್.ಡಿ. ಪ್ರಬಂಧ. ಸಂಸ್ಕೃತಿ ಸಂಶೋಧನ ಕ್ಷೇತ್ರದ ದೀಪಸ್ತಂಭ. ಅಪಾರ ಪರಿಶ್ರಮ, ವಿಶಾಲ ಅಧ್ಯಯನ, ತರ್ಕಬದ್ಧ ವಿಶ್ಲೇಷಣೆಗಳಿಂದ ಕೂಡಿರುವ ಈ ಕೃತಿಯಲ್ಲಿ ಮೊದಲ ಬಾರಿಗೆ ನೂರಾರು ವಿಷಯಗಳ ಮೇಲೆ ಬೆಳಕು ಚೆಲ್ಲಲಾಗಿದೆ. ವೇಳೆವಾಟಿ, ಲೆಂಕವಾಟಿ, ಸಹಗಮನ, ಸಮಾಧಿಮರಣ, ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನ, ತುರುಗೋಳ್, ಪೆಣ್‌ಪುಯ್ಯಲ್, ಊರಳಿವು, ಕಾಳಾಮುಖ, ಕಾಪಾಲಿಕಾ, ಕಾಳ, ಲಾಕುಳಶೈವ ಮುಂತಾದ ನೂರಾರು ವಿಷಯಗಳನ್ನು ಕುರಿತಂತೆ ಇದೊಂದು ಸಾಂಸ್ಕೃತಿಕ ವಿಶ್ವಕೋಶವಾಗಿದೆ. ಪೂರ್ಣಸೂರ್ಯಗ್ರಹಣ (1982) ಎಂಬ ಕೃತಿ ಸಮಾಜೋ– ಸಾಂಸ್ಕೃತಿಕ ಅಧ್ಯಯನದ ಹೊತ್ತಗೆ. ಗ್ರಾಮೀಣ (1977), ಪಗರಣ ಮತ್ತು ಇತರ ಸಂಪ್ರಬಂಧಗಳು ಎಂಬ ಸಂಕಲನಗಳ ಬರೆಹಗಳು ಜಾನಪದ ಅಧ್ಯಯನಕ್ಕೆ ಹೊಸ ಉಪಕ್ರಮ ನೀಡಿದ ಪುಸ್ತಕಗಳು. ಶೂಲದಹಬ್ಬ, ನಾಗಬೆತ್ತ, ಕುಪ್ಪಕುಳಿ, ಪಗರಣ, ಕರಪಲ್ಲವ, ದಂತಕತೆ, ಬೈಗುಳ, ಹಳ್ಳಿ, ಜೋಕುಮಾರ, ಮೈಲಾರ ಮಾಳಚಿಯರನ್ನು ಕುರಿತ ಇದೊಂದು ವಿಶಿಷ್ಟ ಜಾನಪದ ಲೋಕ.

ಕನ್ನಡ-ಕನ್ನಡಿಗ-ಕರ್ನಾಟಕಗಳ ಉಳಿವಿಗಾಗಿ ಚಿದಾನಂದಮೂರ್ತಿಯವರು ಮಾಡುತ್ತ ಬಂದ ಕನ್ನಡ ಹೋರಾಟ ಒಂದು ಚರಿತ್ರೆಯಾಗಿದೆ. ಗೋಕಾಕ್ ಚಳವಳಿ ಸಂದರ್ಭದಲ್ಲಿ ಸಾಹಿತಿಗಳ ಕಲಾವಿದರ ಬಳಗವನ್ನು ಅಸ್ತಿತ್ವಕ್ಕೆ ತಂದರು; ಮತ್ತೆ 'ಕನ್ನಡ ಶಕ್ತಿ ಕೇಂದ್ರ' ಸ್ಥಾಪಿಸಿ ಅದರ ಕಾರ್ಯಾಧ್ಯಕ್ಷರಾದರು. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಸ್ಥಾಪನೆಗೆ ಪ್ರೇರಕರಾದವರಲ್ಲಿ ಇವರೂ ಒಬ್ಬರು. ಜನಸಾಮಾನ್ಯರಲ್ಲಿ ಕನ್ನಡಪ್ರಜ್ಞೆಯನ್ನು ಜಾಗೃತಗೊಳಿಸಲು ಇವರು ಪ್ರಕಟಿಸಿರುವ ಕನ್ನಡ ಸಂಸ್ಕೃತಿ, ನಮ್ಮ ಹೆಮ್ಮೆ (1987), ಕನ್ನಡ-ಕನ್ನಡಿಗ-ಕರ್ನಾಟಕ ಎಂಬ ಕೃತಿಗಳು ತುಂಬ ಉಪಯುಕ್ತವೂ ಪರಿಣಾಮಕಾರಿಯೂ ಆಗಿವೆ. ತಾವು ನಿರೀಕ್ಷಿಸಿದ ಪ್ರಮಾಣದಲ್ಲಿ ಕನ್ನಡ ಜಾಗೃತಿ ಆಗದಿದ್ದುದರಿಂದ ವ್ಯಥೆಗೊಂಡು ಇವರು ಜಲಪ್ರವೇಶ ಮಾಡಿಯೂ ಉಳಿದುಕೊಂಡರು.

ಇವರಿಗೆ ಅನೇಕ ಪ್ರಶಸ್ತಿ, ಬಹುಮಾನ, ಪುರಸ್ಕಾರಗಳು ಪ್ರಾಪ್ತವಾಗಿವೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನ, ದೇವರಾಜ ಬಹಾದ್ದೂರ್ ಬಹುಮಾನ, ಮೈಸೂರು ವಿಶ್ವವಿದ್ಯಾನಿಲಯ ತೀ.ನಂ.ಶ್ರೀ. ಸ್ಮಾರಕ ಬಹುಮಾನ, ಹೊಸತು ಹೊಸತು ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1997) ಲಭ್ಯವಾಗಿವೆ. ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವದ ಗೌರವ ಪ್ರಶಸ್ತಿ (1978), ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ (1984), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1985), ಭೂಸನೂರಮಠ ಸ್ಮಾರಕ ಗೌರವ ಪ್ರಶಸ್ತಿ (1992), ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಗೌರವ ಪ್ರಶಸ್ತಿ (1993), ಬಸವಸೇವಾಸಮಿತಿಯ ಸಾಹಿತ್ಯಶ್ರೀ ಪ್ರಶಸ್ತಿ, ಅನಕೃ ಪ್ರತಿಷ್ಠಾನ ಪ್ರಶಸ್ತಿ (1999), ಸೇಡಿಯಾಪು ಕೃಷ್ಣಭಟ್ಟ ಪ್ರಶಸ್ತಿ (2000) ಪ್ರಾಪ್ತವಾಗಿವೆ. ಇವರಿಗೆ 2002ರಲ್ಲಿ ಪಂಪ ಪ್ರಶಸ್ತಿ ನೀಡಿ ಗೌರವಿಸಲಾಗಿದೆ. ಹಂಪಿ ಕನ್ನಡ ವಿಶ್ವವಿದ್ಯಾಲಯ ಇವರಿಗೆ ನಾಡೋಜ ಗೌರವ ನೀಡಿದೆ (2004). ಇವರ ಶಿಷ್ಯರು, ಮಿತ್ರರು, ಅಭಿಮಾನಿಗಳು ಇವರಿಗೆ ಸಂಶೋಧನ ಎಂಬ ಅಭಿನಂದನ ಗ್ರಂಥವನ್ನು ಸಮರ್ಪಿಸಿದ್ದಾರೆ. ಇವರ ಹೆಸರಿನಲ್ಲಿ ಚಿದಾನಂದ ಪ್ರಶಸ್ತಿ ಎಂಬುದನ್ನು ಸ್ಥಾಪಿಸಲಾಗಿದ್ದು ಕನ್ನಡ ಸಂಶೋಧನ ಕ್ಷೇತ್ರಕ್ಕೆ ಕೆಲಸ ಮಾಡಿದ ವಿದ್ವಾಂಸರಿಗೆ ಇದನ್ನು ನೀಡಲಾಗುತ್ತಿದೆ. (ಎನ್.ಎಸ್.ಟಿ.)

**ಚಿದಾನಂದಾವಧೂತ :** ಸು.1750. ಬ್ರಾಹ್ಮಣಕವಿ. ಅದ್ವೈತ ವೇದಾಂತವನ್ನು ನಿರೂಪಿಸುವ ಜ್ಞಾನಸಿಂಧು ಎಂಬ ಕೃತಿಯ ಕರ್ತೃ. ತುಂಗಭದ್ರಾ ತಟದ ಅಯೋಧ್ಯಾಪುರದ ಚಿದಾನಂದ ಈತನ ಗುರು. ಪಂಚೀಕರಣ, ತತ್ತ್ವಚಿಂತಾಮಣಿ, ನವಚಕ್ರಕುಲರೇಖಾಲಕ್ಷಣ, ದೇವೀಮಹಾತ್ಮ್ಯೆ, ಬಗಳಾಂಬಸ್ತೋತ್ರ, ಚಿದಾನಂದ ವಚನ ಮತ್ತು ಕಾಮವಿಡಂಬನೆ - ಇವು ಈತನ ಇತರ ಕೃತಿಗಳು. ವೇದ ಉಪನಿಷತ್ತುಗಳ ಜ್ಞಾನವನ್ನು ಉಪಯೋಗಿಸಿಕೊಂಡು ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವ ಈತನ ಜ್ಞಾನಸಿಂಧು ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿದೆ. ಈ ಆಧ್ಯಾತ್ಮ ಬೋಧನೆಯನ್ನು ಷಣ್ಮುಖನಿಗೆ ಶಿವ ವಿವರಿಸಿದಂತೆ ವರ್ಣಿಸಲಾಗಿದೆ.

ಇದರಲ್ಲಿ ಅಧಿಕಾರಲಕ್ಷಣ, ವೈರಾಗ್ಯನಿರ್ಣಯ, ಗುರುಕಟಾಕ್ಷ, ತತ್ತ್ವನಿರ್ಣಯ, ಜೀವೇಶ್ವರೈಕ್ಯ, ಜೀವಪರಮಾತ್ಮೈಕ್ಯ, ನಿಶ್ಚಯಜ್ಞಾನ, ನಿಜಬೋಧ, ನಿರಾಲಂಬ, ಸಾಧನಚತುಷ್ಟಯ, ಸಪ್ತಭೂಮಿಕಾ, ಶ್ರವಣಮನನನಿದಿಧ್ಯಾಸನ, ಹಠಯೋಗ, ಲಯಯೋಗ, ಭಕ್ತಿಯೋಗ ಮುಂತಾದ 49 ಅಧ್ಯಾಯಗಳೂ 3621 ಪದ್ಯಗಳೂ ಇವೆ. ಈ ಕೃತಿ ಮಹಲಿಂಗರಂಗನ ಅನುಭವಾಮೃತವನ್ನು ವಸ್ತು ಹಾಗೂ ನಿರೂಪಣೆಗಳೆರಡಲ್ಲೂ ಬಹುಮಟ್ಟಿಗೆ ಹೋಲುತ್ತದೆ. ಜ್ಞಾನ ಸಿಂಧುವಿಗೆ ಹಲವು ವಚನ ಟೀಕುಗಳೂ ಇವೆ. (ಜಿ.ಎಸ್.ಪಿ.ಎಂ.)

ಪಂಚೀಕರಣ 15 ವಚನಗಳ ಗದ್ಯಕೃತಿ. ಚಿದಾನಂದ ಸದ್ಗುರು ಎಂಬ ಅಂಕಿತದಿಂದ ಪ್ರತಿವಚನವೂ ಮುಕ್ತಾಯವಾಗುತ್ತದೆ. ಧ್ಯಾನಪರತತ್ತ್ವ, ವಿಶ್ವವಿರಾಟ್ಪುರುಷ ವಿವರ, ಜೀವೇಶ್ವರೈಕ್ಯ ವಿಚಾರ, ಪ್ರಣವನಾದಬಿಂದು ಸ್ವರೂಪ ಮತ್ತಿತರ ವಿವರಗಳು ತತ್ತ್ವಚಿಂತಾಮಣಿಯಲ್ಲಿವೆ. ವೇದಾಂತ ವಿಷಯವನ್ನು ತಿಳಿಸುವ ನವಚಕ್ರಕುಲರೇಖಾಲಕ್ಷಣದಲ್ಲಿ ಶಿವಪಾರ್ವತಿಯರ ಸಂವಾದ ಶ್ಲೋಕ ರೂಪದಲ್ಲಿದ್ದು, ಅದರ ಟೀಕೆ ಗದ್ಯದಲ್ಲಿದೆ. ದೇವೀಮಹಾತ್ಮ್ಯ ಅದೇ ಹೆಸರಿನ ಸಂಸ್ಕೃತ ಕೃತಿಯ ಭಾಷಾಂತರವಾಗಿದ್ದು 18 ಸಂಧಿ, 796 ಪದ್ಯಗಳನ್ನೊಳಗೊಂಡು ಭಾಮಿನೀ ಷಟ್ಪದಿಯಲ್ಲಿದೆ. ಬಗಳಾಂಬ ಸ್ತೋತ್ರದಲ್ಲಿ 101 ಪದ್ಯಗಳಿವೆ. ಹತ್ತು ಮಹಾವಿದ್ಯಾಧಿದೇವತೆಗಳಲ್ಲಿ ಒಬ್ಬಳಾದ ಬಗಳಾಂಬ ದೇವತೆಯ ಸ್ತುತಿಯೇ ಇದರ ವಸ್ತು. ಕೃತಿ ಛಂದೋವತಂಸ ಛಂದಸ್ಸಿನಲ್ಲಿದೆ. ಪ್ರತಿ ಪದ್ಯದ ಕೊನೆಯಲ್ಲಿ ಚಿದಾನಂದ ಎಂಬ ಅಂಕಿತವಿದೆ. ಚಿದಾನಂದ ವಚನದಲ್ಲಿ ರಾಗತಾಳಗಳಿಂದ ಕೂಡಿದ ಹಲವು ಹಾಡುಗಳಿವೆ. ಕಾಮವಿಡಂಬನಕ್ಕೆ ಹೋಳಿ ಪದಗಳು ಎಂಬ ಹೆಸರಿದ್ದು 110 ಪದ್ಯಗಳನ್ನೊಳಗೊಂಡಿದೆ. ನೀತಿ, ತತ್ತ್ವ ನಿರೂಪಣೆಯೇ ಇಲ್ಲಿನ ವಸ್ತು. *

**ಚಿನ್ನ ಬೆಳ್ಳಿ ಕೆತ್ತನೆ :** ಚಿನ್ನ ಮತ್ತು ಬೆಳ್ಳಿ ಬಹಳ ಹಿಂದಿನಿಂದಲೂ ಮಾನವನಿಗೆ ಅಪೂರ್ವ ಲೋಹಗಳಾಗಿವೆ. ಈ ಲೋಹಗಳನ್ನು ಆಭರಣಗಳಾಗಿ ಧರಿಸುತ್ತ ಬಂದಿದ್ದಾನೆ, ಹಣವಾಗಿ ಬಳಸಿದ್ದಾನೆ. ಇಂದಿಗೂ ಅವು ಅವನ ಶ್ರೀಮಂತಿಕೆಯ ಮಾಪನಗಳಾಗಿವೆ. ಚಿನ್ನ, ಬೆಳ್ಳಿಯ ಗೋಲವಾದ ಮತ್ತು ಸ್ತಂಭಾಕಾರದ ಚಿಕ್ಕ ಮಣಿಗಳು ಸಿಂಧೂ ಸಂಸ್ಕೃತಿಯ ಉತ್ಖನನದಲ್ಲಿ ದೊರಕಿವೆ. ಚಿನ್ನದ ಮಣಿಗಳ ಮೇಲಿನ ಚಿಕ್ಕ ಚಿಕ್ಕ ಮುಚ್ಚಳಗಳು ರಚನಾಕೌಶಲದಲ್ಲಿ ಆಶ್ಚರ್ಯಕಾರಕವಾಗಿವೆ. ವೇದಗಳಲ್ಲಿ ಮತ್ತು ಪ್ರಾಚೀನ ಕಾವ್ಯ ಪುರಾಣಗಳಲ್ಲಿ ಬಂಗಾರ ಮತ್ತು ಬೆಳ್ಳಿಯಿಂದ ತಯಾರಿಸಿದ ನಾನಾ ಆಭರಣಗಳ ಹೆಸರುಗಳು ದೊರಕುತ್ತವೆ.



ಕರ್ಣ ಶೋಭನ, ಕುಂಭ, ಖಾಡಿ, ರುಕ, ಸ್ರಜ ರಸನ, ನಿನಭಗಳೆಂಬ ಆಭರಣಗಳು ಕ್ರಮವಾಗಿ, ಕಿವಿ, ತಲೆ, ಪಾದ, ಕೈ, ಕೊರಳು, ಟೊಂಕ ಇವುಗಳಿಗೆ ಧರಿಸುವಂಥವು ಆಗಿದ್ದವು. ಮಹಾಕಾವ್ಯಗಳ ಕಾಲದಲ್ಲಿ ಆಭರಣಗಳಲ್ಲಿನ ಕೌಶಲ ಪರಾಕಾಷ್ಠೆ ಹೊಂದಿತ್ತು. ಬೇಲೂರು, ಸೋಮನಾಥಪುರ ಮೊದಲಾದೆಡೆ ಶಿಲ್ಪಗಳಲ್ಲಿ ಕಂಡುಬರುವ ಆಭರಣಗಳ ನಕ್ಷೆಗಳು ಆಧುನಿಕವೂ ವೈವಿಧ್ಯಪೂರ್ಣವೂ ಆಗಿವೆ. ಮುಕುಟ, ನೆತ್ತಿಮಣಿ, ನತ್ತು, ಚಿತ್ರಾಣ, ಬುಗುಡಿ, ಬುಲಾಕು, ಕಂಠೀಸರ, ಕಂಕಣ, ವಂಕಿ, ಜೂರಿಕ ಇತ್ಯಾದಿ ಆಭರಣಗಳು ಕಾಲಕ್ಕನುಸಾರವಾಗಿ ಬೇರೆ ಬೇರೆ ಹೆಸರುಗಳಿಂದ ಆಕಾರ, ಅಳತೆಗಳಿಂದ ರೂಢಿಯಲ್ಲಿವೆ.

ಚಿನ್ನ, ಬೆಳ್ಳಿಯ ಕೆಲಸ ಮಾಡುವವರು ಬಹುತೇಕ ಪರಂಪರೆಯನ್ನೇ ಅನುಸರಿಸುತ್ತಾರೆ. ಅವರ ಉದ್ಯೋಗ ಪರಂಪರಾಗತವಾಗಿರುತ್ತದೆ. ಅವರು ದೇವರಪೂಜೆ, ಧರ್ಮಕಾರ್ಯಗಳಿಗೆ ಬೇಕಾದ ಸಲಕರಣೆ, ಆಭರಣಗಳನ್ನು ಶಾಸ್ತ್ರಬದ್ಧವಾಗಿ ಮಾಡುತ್ತಾರೆ. ಆದರೆ ಸ್ತ್ರೀಪುರುಷರು ಧರಿಸುವ ಆಭರಣಗಳನ್ನು ಆಯಾ ಕಾಲದ ರುಚಿ, ಬೇಡಿಕೆಗಳನ್ನು ಅನುಸರಿಸಿ ತಯಾರಿಸುತ್ತಾರೆ. ಚಿನ್ನ ಬೆಳ್ಳಿಯ ಉದ್ಯೋಗವನ್ನು ವಿಶಿಷ್ಟ ಜಾತಿಯವರು ಮಾಡುತ್ತಿದ್ದು, ಅವರನ್ನು ವಿಶ್ವ ಕರ್ಮರು, ವಿಶ್ವಬ್ರಾಹ್ಮಣರು, ದೈವಬ್ರಾಹ್ಮಣರು, ಪಾಂಚಾಲಿಯರು, ಪತ್ತಾರರು, ಸೋನಾರರು, ಅಕ್ಕಸಾಲಿಗರು, ಚಿನಿವಾರರು, ಅರ್ಕಚಾರಿಗಳು, ಆಚಾರಿಗಳು, ಪಂಚಾನನರು ಸುವರ್ಣಕಾರರು ಎಂದೂ ಕರೆಯುತ್ತಾರೆ. ಆಧುನಿಕ ನಾಗರಿಕತೆಯಲ್ಲಿ ಜನರು ಸೂಕ್ಷ್ಮತರ ಮತ್ತು ವೈವಿಧ್ಯ ಮಯವಾದ ಆಭರಣಗಳನ್ನು ಹೆಚ್ಚು ಹೆಚ್ಚಾಗಿ ಇಚ್ಛಿಸುತ್ತಾರಾಗಿ ಚಿನಿವಾರರು, ಪರಂಪರಾಗತವಾಗಿ ಬಂದ ಆಭರಣ ತಯಾರಿಕೆಯ ಜ್ಞಾನ ಸಾಕಾಗದ್ದರಿಂದ ವಿಶೇಷ ತರಬೇತಿ ಪಡೆಯುತ್ತಿದ್ದಾರೆ. ಇದುವರೆಗೆ ತಂದೆ, ಮಕ್ಕಳು, ಹೆಚ್ಚೆಂದರೆ ಹತ್ತಿರದ ಸಂಬಂಧಿಗಳು ಒಟ್ಟಾಗಿ ಈ ಕೆಲಸ ಮಾಡುತ್ತಿದ್ದರು. ಹೊರಗಿನ ನೌಕರರನ್ನು ನಿಯಮಿಸಿಕೊಳ್ಳುವ ರೂಢಿ ಈಚೀಚೆಗೆ ಬರುತ್ತಿದೆ.



ಒಂದು ಚಿಕ್ಕ ಸ್ಥಳದಲ್ಲಿ ಅಕ್ಕಸಾಲಿಗನ ಕೆಲಸ ನಡೆದಿರುತ್ತದೆ. ಅದು ಬಹುತೇಕ ಮನೆಯ ಹೊರಭಾಗ, ಅವನ ಸುತ್ತುಮುತ್ತು ಆಭರಣಗಳನ್ನು ತಯಾರಿಸಲು ಬೇಕಾದ ಸಲಕರಣೆಗಳನ್ನು ಇಟ್ಟು ಕೊಂಡಿರುತ್ತಾನೆ. ಐರಣಿ, ಸುತ್ತಿಗೆ, ಚಿಮುಟಿಗೆ, ಊದುಗೊಳವೆ. ಅಗ್ನಿ ಕುಂಡ, ಕುದ್ದಾಲಿ, ಕೆತ್ತನೆಯ ಚಾಣಗಳು, ಬೈರಿಗೆ, ಕರಗಸ, ತರತರದ ಅಚ್ಚುಗಳು, ಪಂಕ, ಅರಗಳು, ಕಂಪಾಸು, ತ್ರಾಸು, ತೂಕ-ಅಳತೆಗಳು, ಗುಂಜಿಗಳು - ಇವು ಅವನ ಕೆಲವು ಹತಾರಗಳು, ಚಿಮಣಿ, ಇಕ್ಕುಳ, ತಂತಿ, ಪಿಟ್ಟಾಡಾಯ್ ಯಂತ್ರಗಳು - ಇವು ನಯಗೊಳಿಸುವ ಸಾಧನಗಳು. ಅಲ್ಲದೆ, ಬಂಗಾರವನ್ನು ಶುದ್ಧಗೊಳಿಸಲು ನೈಟ್ರಿಕ್ ಮತ್ತು ಸಲ್ಫ್ಯೂರಿಕ್ ಆಸಿಡ್ಡುಗಳು, ಆಭರಣದ ವಿವಿಧ ಮಾದರಿಯ ಚಿತ್ರಗಳುಳ್ಳ ಪುಸ್ತಕಗಳು ಅವನ ಬಳಿ ಇರುತ್ತವೆ.



ಚಿನ್ನ-ಬೆಳ್ಳಿಯ ಕೈಗಾರಿಕೆ ಕೇವಲ ಕೈಕಸಬಲ್ಲ. ಅದು ಕಲೆ, ಉಪಯುಕ್ತ ಕಲೆ. ಕಲೆ ಮತ್ತು ಕೈಕಸಬುಗಳ ಕೌಶಲದಲ್ಲಿ ಈ ದಂಧೆ ಲಾಭದಾಯಕವೂ ಆಗಿದೆ. ಆರ್ಥಿಕವಾಗಿ ಈ ವೃತ್ತಿ ಮಧ್ಯಮ ವರ್ಗಕ್ಕೆ ಸೇರುತ್ತದೆ. ಗ್ರಾಹಕರ, ಅಕ್ಕಸಾಲಿಗರ ಮಧ್ಯದಲ್ಲಿ ದಲಾಲಿ ಮಾಡುವ ಸರಾಫರು ಮಾತ್ರ ಶ್ರೀಮಂತ ವರ್ಗಕ್ಕೆ ಸೇರುತ್ತಾರೆ. ಈ ದಂಧೆಗೆ ಪ್ರಾಮಾಣಿಕತೆ, ಕುಶಲತೆ ಅಷ್ಟೇ ಮಹತ್ತ್ವದ್ದಾಗಿವೆ. *

**ಚುಂಚನಕಟ್ಟೆ :** ಮೈಸೂರು ಜಿಲ್ಲೆ ಕೃಷ್ಣರಾಜನಗರ ತಾಲ್ಲೂಕಿನ ಒಂದು ಯಾತ್ರಾಸ್ಥಳ. ಕೃಷ್ಣರಾಜನಗರಕ್ಕೆ 15ಕಿಮೀ ಪಶ್ಚಿಮದಲ್ಲಿ ಕಾವೇರಿ



ಕೋದಂಡರಾಮ ದೇವಾಲಯ

ನದಿಯ ಬಲದಡದಲ್ಲಿದೆ. ಇದು ಹೋಬಳಿ ಕೇಂದ್ರ. ಈ ಗ್ರಾಮ ಕುಪ್ಪೆ ಗ್ರಾಮಪಂಚಾಯಿತಿಗೆ ಒಳಪಟ್ಟಿದೆ. ಇಲ್ಲಿಂದ ಸಾಲಿಗ್ರಾಮ, ಮಿರ್ಲೆ, ಪಿರಿಯಾಪಟ್ಟಣ ಮುಂತಾದ ಸುತ್ತಲ ಊರುಗಳಿಗೆ ಉತ್ತಮ ಮಾರ್ಗ ಸಂಪರ್ಕಗಳಿವೆ. ಶ್ರೀರಾಮಭಕ್ತನಾದ ಚುಂಚ ಎಂಬ ಋಷಿ ಇಲ್ಲಿದ್ದನೆಂದೂ ಈ ಸ್ಥಳಕ್ಕೆ ಅವನ ಹೆಸರೇ ಬಂದಿದೆಯೆಂದೂ ಶ್ರೀರಾಮ ಅರಣ್ಯವಾಸದಲ್ಲಿದ್ದಾಗ ಸೀತಾಲಕ್ಷ್ಮಣಸಮೇತನಾಗಿ ಇಲ್ಲಿಗೆ ಬಂದಿದ್ದನೆಂದೂ ಸ್ಥಳಪುರಾಣ. ಚುಂಚನಕಟ್ಟೆ ಬಳಿ ಕಾವೇರಿ ನದಿ 80' ಎತ್ತರದಿಂದ ಹಂತಹಂತವಾಗಿ ದುಮುಕುತ್ತದೆ. ಪ್ರವಾಹದ ಕಾಲದಲ್ಲಿ ಈ ಜಲಪಾತ ನೋಡಲು ರಮ್ಯ. ಜಲಪಾತದ ಬಳಿಯಿಂದ ಹಿನ್ನೆಲೆಗೆ ಸ್ವಲ್ಪ ಅಂತರದಲ್ಲಿ



ಚುಂಚನಕಟ್ಟೆ ಜಲಪಾತ

ಕಾವೇರಿಗೆ ಅಡ್ಡಲಾಗಿ ಸೇತುವೆ ನಿರ್ಮಿಸಲಾಗಿದೆ. ಈ ಸೇತುವೆಗೆ ಉತ್ತರದಲ್ಲಿ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ನಿರ್ಮಿತವಾದ ಸು.333ಮೀ. ಉದ್ದದ ರಾಮಸಮುದ್ರ ಅಣೆಕಟ್ಟು ಇದೆ. ಇಲ್ಲಿಂದ ಸು.30ಮೀ. ದೂರದಲ್ಲಿ ಇನ್ನೊಂದು ಅಣೆಕಟ್ಟು ಇದೆ.

ಜಲಪಾತದ ಬಳಿಯಲ್ಲೇ ನದಿಯ ಬಲದಂಡೆಯ ಮೇಲೆ ಕೋದಂಡರಾಮ ದೇವಾಲಯವಿದೆ. ಈ ದೇವಾಲಯದ ಪ್ರಾಕಾರವನ್ನು ಮುಮ್ಮಡಿ ಕೃಷ್ಣರಾಜ ಒಡೆಯರು ಕಟ್ಟಿಸಿದರು. ದೇವಾಲಯದ ಪ್ರಾಕಾರದ ಒಳಗೆ 1932ರಲ್ಲಿ ಕಟ್ಟಲಾದ ಕಲ್ಯಾಣ ಮಂಟಪದಲ್ಲಿ ವರ್ಣರಂಜಿತ ದಶಾವತಾರ ಚಿತ್ರಗಳಿವೆ. ದೇವಾಲಯದ ಪ್ರವೇಶದ್ವಾರದ ಎಡ ಬಲ ಗೋಡೆಗಳಲ್ಲಿ ನಾಗಬಂಧದ ಶಿಲಾಫಲಕಗಳಿವೆ. ದೇವಾಲಯದ ಸುತ್ತಲೂ ಅನೇಕ ಪುಟ್ಟ ಮಂಟಪಗಳಿವೆ. ದೇವಾಲಯದ ಎದುರು ಒಂದು ಸುಂದರವಾದ ಕಲ್ಯಾಣಮಂದಿರ ಉಂಟು. ಪ್ರತಿವರ್ಷ ಜನವರಿ ತಿಂಗಳಲ್ಲಿ ಚುಂಚನಕಟ್ಟೆ ಜಾತ್ರೆ ಎಂದು ಪ್ರಸಿದ್ಧವಾಗಿರುವ ರಾಮದೇವರ ರಥೋತ್ಸವ ನಡೆಯುತ್ತದೆ. ದನಗಳ ಪರಿಷೆಯೂ ಆಗ ಸೇರುತ್ತದೆ. ಹಳ್ಳಿಕಾರು ಜಾತಿಯ ಹೋರಿಗಳಿಗೆ ಈ ಜಾತ್ರೆ ಪ್ರಸಿದ್ಧ. ಈ ಜಾತ್ರೆಗೆ ಸುಮಾರು ಎರಡು ಲಕ್ಷ ಜನ ಬರುವುದುಂಟು. ಚುಂಚನಕಟ್ಟೆಯ ಬಳಿ ಒಂದು ಸಹಕಾರ ಸಕ್ಕರೆ ಕಾರ್ಖಾನೆ ಸ್ಥಾಪಿತವಾಗಿದೆ. ಇಲ್ಲಿ ವಿದ್ಯಾರ್ಥಿಗಳಿಗೆ ಉಚಿತ ವಸತಿ ಸೌಲಭ್ಯ ನೀಡುವ ಒಂದು ಅನಾಥಾಶ್ರಮವಿದೆ. ಶ್ರೀ ಆದಿಚುಂಚನಗಿರಿ ಮಠದ ಕಲ್ಯಾಣಮಂಟಪವಿದೆ. *

**ಚುಟುವಂಶ :** ಸು.2-3ನೆಯ ಶತಮಾನಗಳಲ್ಲಿ ಕರ್ನಾಟಕದಲ್ಲಿ ಆಳಿದ ಮಾಂಡಲಿಕ ರಾಜವಂಶ. ಬಹುಶಃ ಇವರು ಸಾತವಾಹನರ ಸಾಮಂತರಾಗಿದ್ದರು ಮಾತ್ರವಲ್ಲದೆ ಅವರೊಡನೆ ರಕ್ತಸಂಬಂಧವನ್ನೂ ಹೊಂದಿದ್ದರು. ಇವರು ಮುಖ್ಯವಾಗಿ ಕುಂತಲದ ಕೆಲವು ಭಾಗಗಳನ್ನು ಆಳಿದಂತೆ ತೋರುತ್ತದೆ. ಇವರ ರಾಜಧಾನಿ ಬನವಾಸಿ. ಇವರ ಎರಡು ಶಾಸನಗಳು ದೊರೆತಿವೆ. ಬನವಾಸಿಯಲ್ಲಿ ದೊರಕಿರುವ ಒಂದು ಶಾಸನ ಆ ಕಾಲದ ಬ್ರಾಹ್ಮೀ ಲಿಪಿಯಲ್ಲಿದೆ. ಕರಿಯ ನಾಗರಕಲ್ಲಿನ ಸುತ್ತ ಕೆತ್ತಲ್ಪಟ್ಟಿದೆ. ಶಾಸನದ ಭಾಷೆ ಪ್ರಾಕೃತ. ಇದರಲ್ಲಿ ವಿಣ್ಹುಕಡ ಚುಟುಕುಲಾನಂದ ಸಾತಕರ್ಣಿಯ ಮಗಳಾದ ಶಿವಸ್ಕಂದ ನಾಗಶ್ರೀ ಮತ್ತು ಆಕೆಯ ಮಗ ಯುವರಾಜ (ಹೆಸರು ಹೇಳಿಲ್ಲ) ಇವರ ಪ್ರಸ್ತಾಪವಿದೆ. ನಾಗಶ್ರೀ ಬನವಾಸಿಯಲ್ಲಿ ನಾಗರಕಲ್ಲೊಂದನ್ನು ನಿಲ್ಲಿಸಿ ಕೆರೆಯನ್ನೂ ವಿಹಾರವನ್ನೂ ಕಟ್ಟಿಸಿದಳೆಂದು ಶಾಸನ ತಿಳಿಸುತ್ತದೆ. ಈ ಶಾಸನ ಚುಟುಕುಲಾನಂದ ಸಾತಕರ್ಣಿಯ ಆಳ್ವಿಕೆಯ ಹನ್ನೆರಡನೆಯ ವರ್ಷದಲ್ಲಿ ಬರೆಸಿದುದು. ಈ ಶಾಸನದ ಅನಂತರದ್ದೆಂದು ಹೇಳಲಾದ ಮಳವಳ್ಳಿ ಶಾಸನ ಸಹ ಲಾಟವಿ ಎಂಬ ಗ್ರಾಮವನ್ನು ಬ್ರಹ್ಮ ದಾನವಾಗಿ ಬಿಟ್ಟ ವಿಷಯವನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಹೇಳಲಾದ ಸಾತಕರ್ಣಿ ನಾಗಶ್ರೀಯ ಮಗನೆಂದು ಊಹಿಸಲಾಗಿದೆ.

ಈ ಎರಡು ಶಾಸನಗಳು ಮತ್ತು ದೊರಕಿರುವ ಸೀಸದ ನಾಣ್ಯಗಳಿಂದ ಚುಟುವಂಶದ ಈ ರಾಜರ ಇತಿಹಾಸವನ್ನು ರಚಿಸಬಹುದು. ಇವರನ್ನು ಆನಂದವಂಶದವರೆಂದೂ ಕೆಲವರು ಕರೆಯುತ್ತಾರೆ. ಇವರು ಹಾರಿತೀಪುತ್ರರು ಮತ್ತು ಮಾನವ್ಯಗೋತ್ರದವರು. ಸಾತಕರ್ಣಿ ಎಂಬ ಹೆಸರು ಇವರಿಗೆ ಇರುವುದರಿಂದ, ಸಾತವಾಹನರ ಬಂಧುಗಳಾಗಿದ್ದಿರಬೇಕೆಂದು ಊಹಿಸಲಾಗಿದೆ. ಈ ಎರಡು ಶಾಸನಗಳ ಆಧಾರದ ಮೇಲೆ ಈ ವಂಶದಲ್ಲಿ ಮೊದಲು ಆಳಿದವನು ಬನವಾಸಿ ಶಾಸನದ ವಿಣ್ಹುಕಡ ಚುಟುಕುಲಾನಂದ ಸಾತಕರ್ಣಿ I. ಅನಂತರ ಶಿವಸ್ಕಂಧ ನಾಗಶ್ರೀ. ಅನಂತರ ಅವಳ ಮಗ ಚುಟುಕುಲಾನಂದ ಸಾತಕರ್ಣಿ II. ಶಿವಸ್ಕಂದನಾಗಶ್ರೀ ಎಂಬ ಹೆಸರಿನಲ್ಲಿರುವ ಶಿವಸ್ಕಂದ ಎಂಬುದು ನಮ್ಮ ಗಮನವನ್ನು ಪಲ್ಲವರ ಕಡೆಗೆ ಸೆಳೆಯುತ್ತದೆ. ಆದರೆ ಖಚಿತವಾದ ಮಾಹಿತಿ ದೊರಕಿಲ್ಲದಿರುವುದರಿಂದ ಏನನ್ನೂ ಹೇಳಲಾಗುವುದಿಲ್ಲ.

ಚುಟುಕುಲಾನಂದ ಮತ್ತು ಮುಡಾನಂದ ಎಂಬ ಬರೆಹಗಳುಳ್ಳ ಸೀಸದ ನಾಣ್ಯಗಳು ಈ ವಂಶದವರಿಗೇ ಸೇರಿದವು ಎಂಬುದು ವಿದ್ವಾಂಸರ ಮತ. ಆದರೆ ರ್‍ಯಾಪ್ಸನ್ ಅವರು ಶಾಸನದ ಚುಟುಕುಲಾನಂದ ಸಾತಕರ್ಣಿ

ಮತ್ತು ನಾಣ್ಯಗಳ ಚುಟುಕುಲಾನಂದ ಭಿನ್ನ ವ್ಯಕ್ತಿಗಳೆಂದು ಪರಿಗಣಿಸುತ್ತಾರೆ. ನಾಣ್ಯಗಳ ಬರೆವಣಿಗೆ ಶಾಸನದ ಬರೆವಣಿಗೆಗಿಂತ ಪ್ರಾಚೀನವಾದುದರಿಂದ, ನಾಣ್ಯಗಳಲ್ಲಿನ ಚುಟುಕುಲಾನಂದ ಶಾಸನಗಳ ಚುಟುಕುಲಾಂದ ಸಾತಕರ್ಣಿಯ ಪೂರ್ವಜನಿರಬೇಕೆಂದು ಅವರು ಊಹಿಸಿದ್ದಾರೆ. ಆದರೆ ನಾಣ್ಯಗಳಲ್ಲಿರುವ ಮುಡಾನಂದ ಯಾರು ಮತ್ತು ಅವನು ಯಾರ ಅನಂತರ ರಾಜ್ಯವಾಳಿದ ಎನ್ನುವ ವಿಷಯಗಳು ಸರಿಯಾಗಿ ತಿಳಿದಿಲ್ಲ. ಬನವಾಸಿ ಮತ್ತು ಮಳವಳ್ಳಿ ಶಾಸನಗಳ ಲಿಪಿಯು ಆಧಾರದ ಮೇಲೆ ಈ ರಾಜರು ಮೂರನೆಯ ಶತಮಾನದ ಮಧ್ಯಭಾಗದವರೆಗೂ ಆಳುತ್ತಿದ್ದರೆಂದು ಹೇಳಬಹುದು. ಅಂದರೆ ಕದಂಬ ಮಯೂರಶರ್ಮ ಈ ಸಣ್ಣಪುಟ್ಟ ರಾಜರುಗಳನ್ನು ಸೋಲಿಸಿ ಕದಂಬರಾಜ್ಯವನ್ನು ಸ್ಥಾಪಿಸಿರಬಹುದು. ತಾಳಗುಂದದ ಪ್ರಣವೇಶ್ವರ ದೇವಾಲಯ ಮತ್ತು ಬನವಾಸಿಯ ನಾಗಶಿಲ್ಪ ಚುಟುವಂಶದ ವಾಸ್ತು ಮತ್ತು ಶಿಲ್ಪದ ಮಾದರಿಗಳಾಗಿವೆ.

**ನಾಣ್ಯಗಳು :** ಮೊತ್ತಮೊದಲಿಗೆ ಮೆರ್ವಿನ್ ಸ್ಮಿತ್ ಎಂಬಾತ ಚಿತ್ರದುರ್ಗದಲ್ಲಿ ಈ ದೊರೆಗಳ ನಾಣ್ಯಗಳನ್ನು ಪತ್ತೆಹಚ್ಚಿದ್ದ. ಜನರಲ್ ಪಿಯರ್ಸ್ ಇದೇ ರೀತಿಯ ನಾಣ್ಯಗಳನ್ನು ಕಾರವಾರದಲ್ಲಿ ಪತ್ತೆಮಾಡಿದ.



ಶಿವಾಲನಂದನ ನಾಣ್ಯಗಳು

ಚಂದ್ರವಳ್ಳಿಯ ಉತ್ಖನನದಲ್ಲಿ 1947ರಲ್ಲಿಯೂ ಅನಂತರ ಬನವಾಸಿಯಲ್ಲಿಯೂ ಈ ನಾಣ್ಯಗಳು ದೊರಕಿದವು. ಚುಟುವಂಶದ ನಾಣ್ಯಗಳು ಸೀಸದಿಂದ ಮಾಡಿದವು. ಸಾಮಾನ್ಯವಾಗಿ ಅವುಗಳ ವ್ಯಾಸ ಒಂದರಿಂದ ಒಂದೂಕಾಲು ಅಂಗುಲ. ತೂಕ ಸುಮಾರು ಇನ್ನೂರು ಹತ್ತರಿಂದ ಇನ್ನೂರೈವತ್ತು ಗ್ರೇನ್‌ಗಳು. ಈ ನಾಣ್ಯಗಳ ಮುಂಭಾಗದಲ್ಲಿ ಬೆಟ್ಟವೂ ರಾಜನ ಹೆಸರೂ ಇರುತ್ತವೆ. ಹಿಂಭಾಗದಲ್ಲಿ ಕಟಕಟೆಯೊಳಗಿರುವ ವೃಕ್ಷ ಮತ್ತು ಕೆಲವು ಚಿಹ್ನೆಗಳು ಕಾಣುತ್ತವೆ. ಮುಂಭಾಗದಲ್ಲಿ ರಞೋ ಚುಟುಕುಲಾನಂದನ ಇಲ್ಲವೆ ರಞೋ ಮುಡಾನಂದ ಎಂಬ ಬರೆಹ



ಚುಟುಕುಲಾನಂದನ ನಾಣ್ಯಗಳು

ಬ್ರಾಹ್ಮೀಲಿಪಿಯಲ್ಲಿರುತ್ತದೆ. ಇವರ ಮುಖ್ಯವಾದ ನಾಣ್ಯಗಳನ್ನು ಈ ರೀತಿ ವರ್ಣಿಸಬಹುದು: ಮುಂಭಾಗ- ಏಳು ಸಣ್ಣ ವೃತ್ತಗಳಿಂದ ಕೂಡಿದ ಬೆಟ್ಟ, ಅದರ ಕೆಳಗೆ ಡೊಂಕಾದ ಮೂರು ಗೆರೆಗಳು; ನಾಣ್ಯದ ತುದಿಯಲ್ಲಿ ರಞೋ ಚುಟುಕುಲಾನಂದಸ ಎಂಬ ಬ್ರಾಹ್ಮೀಲಿಪಿಯ ಬರೆಹ. ಹಿಂಭಾಗ- ಕಟಕಟೆಯೊಳಗಿನ ವೃಕ್ಷ; ಸ್ವಸ್ತಿಕ ಚಿಹ್ನೆಯು ಮೇಲೆ ನಂದಿಪಾದ, ತ್ರಿಕೋನಾಕೃತಿಯ ಲಾಂಛನದ ಮೇಲೆ ಯ ಎಂಬ ಅಕ್ಷರ. ಮತ್ತೊಂದು ನಮೂನೆಯ ನಾಣ್ಯದಲ್ಲಿ ಹಿಂಭಾಗದಲ್ಲಿ ತ್ರಿರತ್ನ ಚಿಹ್ನೆ ಕಾಣಬರುತ್ತದೆ. ಮುಂಭಾಗದಲ್ಲಿ ಬದಲಾವಣೆಯಿಲ್ಲ.

ಚಂದ್ರವಳ್ಳಿಯ ಉತ್ಖನನದಲ್ಲಿ ಬರೆಹವಿಲ್ಲದ ಕೆಲವು ಸಣ್ಣ ಸೀಸದ ನಾಣ್ಯಗಳು ದೊರಕಿದವು. ಸುಮಾರು ಅರ್ಧ ಅಂಗುಲ ವ್ಯಾಸ ಮತ್ತು ಐವತ್ತು ಗ್ರೇನ್ ತೂಕದ ಈ ನಾಣ್ಯಗಳ ಹಿಂಭಾಗವು ಈ ಮೇಲೆ ಹೇಳಿದ ನಾಣ್ಯಗಳಲ್ಲಿರುವಂತೆ ಸಣ್ಣ ವೃತ್ತಗಳಿಂದ ಕೂಡಿದ ಬೆಟ್ಟ ಕಾಣಬರುತ್ತದೆ. ಹಿಂಭಾಗದಲ್ಲಿ ಸ್ವಸ್ತಿಕವೇ ಮೊದಲಾದ ಚಿಹ್ನೆಗಳಿರುತ್ತವೆ. ಆದುದರಿಂದ ಇವುಗಳೂ ಚುಟುವಂಶದವರ ಸಣ್ಣ ನಾಣ್ಯಗಳಿರಬಹುದೆಂದು ಕೆಲವರು ಅಭಿಪ್ರಾಯಪಡುತ್ತಾರೆ. (ಎ.ವಿ.ಎನ್.)

**ಚೆಂಗಲರಾಯರೆಡ್ಡಿ, ಕ್ಯಾಸಂಬಳ್ಳಿ :** 1902-76. ಮೈಸೂರು ರಾಜ್ಯದ ಪ್ರಥಮ ಕಾಂಗ್ರೆಸ್ ಮುಖ್ಯಮಂತ್ರಿ (1947-52). ಭಾರತ ಒಕ್ಕೂಟದ ಮಂತ್ರಿಯೂ ಮಧ್ಯಪ್ರದೇಶದ ರಾಜ್ಯಪಾಲರೂ (1965-71) ಆಗಿದ್ದರು. ಕೋಲಾರ ಜಿಲ್ಲೆ ಕ್ಯಾಸಂಬಳ್ಳಿಯಲ್ಲಿ 1902 ಮೇ 4ರಂದು ಜನಿಸಿದರು. ತಂದೆ ಬಿ.ವೆಂಕಟರೆಡ್ಡಿ. ಚಿಕ್ಕಂದಿನಿಂದ ಪರೀಕ್ಷೆಗಳಲ್ಲಿ ಉನ್ನತ ವರ್ಗಗಳಲ್ಲಿ ತೇರ್ಗಡೆಯಾಗುತ್ತಿದ್ದ ರೆಡ್ಡಿಯವರು ಮದರಾಸಿನ ಪಚ್ಚಯಪ್ಪ ಕಾಲೇಜಿನಲ್ಲಿ ಓದಿ ಬಿ.ಎ. ಪದವಿಯನ್ನು ಪಾರಿತೋಷಕದೊಂದಿಗೆ ಪಡೆದರು. ಅನಂತರ ಅಲ್ಲಿಯೇ ಕಾನೂನು ವ್ಯಾಸಂಗ ಮಾಡಿ ಉನ್ನತ ಶ್ರೇಣಿಯಲ್ಲಿ ಪದವಿ ಗಳಿಸಿದರು.

ಅನಂತರ ವಕೀಲವೃತ್ತಿಯನ್ನು ಆರಂಭಿಸಿದರಲ್ಲದೆ ಸಾರ್ವಜನಿಕ ಜೀವನವನ್ನೂ ಪ್ರವೇಶಿಸಿದರು. ಕೋಲಾರ ಜಿಲ್ಲಾ ಬೋರ್ಡಿನ ಅಧ್ಯಕ್ಷರೂ (1934-40) ಮೈಸೂರು ಸಂಸ್ಥಾನದ ಪ್ರಜಾಪಕ್ಷದ ಅಧ್ಯಕ್ಷರೂ ಆಗಿದ್ದರು (1935-37). ತರುವಾಯ ರಾಜ್ಯಶಾಸನ ಸಭೆಗೆ ಚುನಾಯಿತರಾದರು. ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಹೋರಾಟ ಬಿರುಸಾದಾಗ ಮಹಾರಾಜರ ಆಶ್ರಯದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯ ಬೇಡಿಕೆಯನ್ನು ಮೈಸೂರು ಕಾಂಗ್ರೆಸ್ ಮಂಡಿಸಿತು. ರೆಡ್ಡಿಯವರು ಆ ಪಕ್ಷದ ಮುಂಚೂಣಿಯ ನಾಯಕರಾದರು. ರಾಜ್ಯಾದ್ಯಂತ ಜನತೆಯಲ್ಲಿ ಹೊಸ ಚೇತನ ತುಂಬಿ, ಹೋರಾಟಕ್ಕೆ ತೀವ್ರಗತಿ ಬರುವಂತೆ ಮಾಡುವಲ್ಲಿ ಇವರು ವಹಿಸಿದ ಪಾತ್ರ ಮುಖ್ಯವಾದುದು. 1937-38ರಲ್ಲಿ ಇವರು ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು. ಸೆರೆಮನೆವಾಸ ಅನುಭವಿಸಿದರು. ಮಹಾತ್ಮ ಗಾಂಧಿಯವರ ಸೇವಾಗ್ರಾಮ ಆಶ್ರಮದಲ್ಲಿ ಮೈಸೂರು ಕಾಂಗ್ರೆಸ್ಸಿನ ಪ್ರತಿನಿಧಿಯಾಗಿ ಸ್ವಲ್ಪಕಾಲ ಇರುವ ಅವಕಾಶ ಇವರಿಗೆ ಲಭಿಸಿತ್ತು. ಅಖಿಲಭಾರತ ದೇಶೀಯ ಸಂಸ್ಥಾನಗಳ ಪ್ರಜಾಪರಿಷತ್ತಿನ ಕಾರ್ಯಕಾರಿ ಮಂಡಲಿಯ ಸದಸ್ಯರಾಗಿ ಇವರು ಚುನಾಯಿತರಾಗಿದ್ದರು (1944-45). 1946-47ರಲ್ಲಿ ಇವರು ಮತ್ತೆ ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು.



ಭಾರತಕ್ಕೆ ಸ್ವಾತಂತ್ರ್ಯ ಪ್ರಾಪ್ತವಾದ ಮೇಲೆ ದೇಶೀಯ ಸಂಸ್ಥಾನಗಳಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಗಾಗಿ ಹೋರಾಟ ಉಗ್ರರೂಪ ತಾಳಿತು. 1947, ಸೆಪ್ಟೆಂಬರ್ 19ರಂದು ರೆಡ್ಡಿಯವರ ನಾಯಕತ್ವದಲ್ಲಿ ಸತ್ಯಾಗ್ರಹ ಆರಂಭವಾಯಿತು. ಕೊನೆಗೆ ಸಂಸ್ಥಾನ ಸರ್ಕಾರ ಮಣಿದು, ಪ್ರಜೆಗಳ ಬೇಡಿಕೆಗಳನ್ನು ಈಡೇರಿಸಬೇಕಾಯಿತು. ಕಾಂಗ್ರೆಸ್ ಪಕ್ಷದ ನಾಯಕರಾಗಿದ್ದ ರೆಡ್ಡಿಯವರಿಗೂ ದಿವಾನರಾಗಿದ್ದ ಆರ್ಕಾಟ್ ರಾಮಸ್ವಾಮಿ ಮೊದಲಿಯಾರರಿಗೂ ರಾಜಕೀಯ ಒಪ್ಪಂದವಾಗಿ ಮೈಸೂರಿನಲ್ಲಿ ಪ್ರಜಾಪ್ರತಿನಿಧಿಗಳ ಮಂತ್ರಿಮಂಡಲ ರಚನೆಯಾಯಿತು. ಇವರು ಮೈಸೂರಿನ ಪ್ರಥಮ ಮುಖ್ಯಮಂತ್ರಿಯಾಗಿ, ಸಚಿವ ಸಂಪುಟ ರಚಿಸಿ 1952ರ ವರೆಗೂ ಅಧಿಕಾರದಲ್ಲಿದ್ದರು. ಮುಂದೆ ಇವರು ರಾಜ್ಯಸಭೆಯ (1952-57) ಮತ್ತು

ಲೋಕಸಭೆಯ (1957-64) ಸದಸ್ಯರಾಗಿದ್ದರು. ಕೇಂದ್ರ ಸರ್ಕಾರದ ಕೈಗಾರಿಕಾ ಉತ್ಪಾದನ ಸಚಿವರಾಗಿ (1952-57), ಅನಂತರ ಗೃಹನಿರ್ಮಾಣ ಮತ್ತು ಸರಬರಾಯಿ ಸಚಿವರಾಗಿ (1957-61), ವಾಣಿಜ್ಯ ಮತ್ತು ಕೈಗಾರಿಕಾ ಸಚಿವರಾಗಿ (1961-63) ಕೆಲಸ ಮಾಡಿದರು. ಲೋಕಸಭೆಯಲ್ಲಿ ಕಾಂಗ್ರೆಸ್ ಪಕ್ಷದ ಉಪನಾಯಕರಾಗಿದರು (1963-64). ಅವಧಿಯಲ್ಲಿ ಮಧ್ಯಪ್ರದೇಶದ ರಾಜ್ಯಪಾಲರಾಗಿದ್ದರು (1965-71).

ಅರ್ಥಶಾಸ್ತ್ರದಲ್ಲಿ ನಿಪುಣರೂ ಅನುಭವಿಗಳೂ ಆದವರೆಂದು ಹೆಸರಾಗಿದ್ದ ರೆಡ್ಡಿಯವರು ಡೆಲ್ಲಿ ಸ್ಕೂಲ್ ಆಫ್ ಎಕನಾಮಿಕ್ಸ್ (ಅರ್ಥಶಾಸ್ತ್ರ ಶಾಲೆಯ) ಸ್ಥಾಪಕ ಸದಸ್ಯರಲ್ಲೊಬ್ಬರಾಗಿದ್ದರು. ಕನ್ನಡ ಪ್ರತಿಕೋದ್ಯಮದಲ್ಲೂ ಇವರು ಕೆಲಸ ಮಾಡಿದ್ದಾರೆ. ಇವರು ಸ್ವಲ್ಪ ಕಾಲ ಜನವಾಣಿ ಕನ್ನಡ ದಿನಪತ್ರಿಕೆಯ ಸಂಪಾದಕರಾಗಿದ್ದರು.

ಇವರು ತಮ್ಮ 75ನೆಯ ವಯಸ್ಸಿನಲ್ಲಿ ಬೆಂಗಳೂರಿನಲ್ಲಿ ನಿಧನರಾದರು. (ಜಿ.ವಿ.ಎನ್.)

**ಚೆಟ್ಟಳ್ಳಿ :** ಕೊಡಗು ಜಿಲ್ಲೆ ವಿರಾಜಪೇಟೆ ತಾಲ್ಲೂಕಿನ ಒಂದು ಗ್ರಾಮ. ಮಡಿಕೇರಿ-ಸಿದ್ಧಾಪುರ-ವಿರಾಜಪೇಟೆ ಮಾರ್ಗದಲ್ಲಿ ಮಡಿಕೇರಿಗೆ ಆಗ್ನೇಯಕ್ಕೆ ಸು.16ಕಿಮೀ ದೂರದಲ್ಲಿದೆ. ಚೆಟ್ಟಳ್ಳಿ-ಶುಂಠಿಕೊಪ್ಪ ಮಾರ್ಗದಲ್ಲಿ ಚೆಟ್ಟಳ್ಳಿಯಿಂದ ಎರಡೂವರೆ ಕಿಮೀ ದೂರದಲ್ಲಿ ರಾಜ್ಯ ಸರ್ಕಾರಕ್ಕೆ ಸೇರಿದ ಮತ್ತು ಭಾರತ ಕೃಷಿ ಸಂಶೋಧನ ಮಂಡಳಿಯ ನೆರವನ್ನು ಪಡೆದಿರುವ ಕಿತ್ತಳೆಹಣ್ಣಿನ ಸಂಶೋಧನ ಕೇಂದ್ರವಿದೆ. ಇಲ್ಲಿಯ ಕಿತ್ತಳೆ ಮತ್ತು ಇತರ ಹಣ್ಣುಹಂಪಲುಗಳ ಹಾಗೂ ಏಲಕ್ಕಿ, ಲವಂಗ ಮತ್ತು ಜಾಯಿಕಾಯಿ ಮೊದಲಾದ ಸಂಬಾರ ಸಸ್ಯಗಳ ಸಂಶೋಧನೋದ್ಯಾನ ಅತ್ಯಂತ ಚಿತ್ತಾಕರ್ಷಕವಾಗಿದ್ದು ಆಸಕ್ತ ರೈತರಿಗೆ ಬೋಧಪ್ರದ ಕೃಷಿ ಕೇಂದ್ರವೂ ಆಗಿದೆ. ಹೊಸಹೊಸ ಜಾತಿಯ ಜಂಬೀರ ಫಲಗಳ ವಿಕಸನ ದೃಷ್ಟಿಯಿಂದಲೂ ಲವಂಗ ಮತ್ತು ಜಾಯಿಕಾಯಿಗಳನ್ನು ಮಲೆನಾಡಿನ ತೋಟಗಳಲ್ಲಿ ಬೆಳೆಸುವ ಬಗೆಗೂ ಇಲ್ಲಿ ಅನೇಕ ಪ್ರಯೋಗಗಳನ್ನು ಕೈಗೊಳ್ಳಲಾಗುತ್ತಿದೆ. ಈ ಸಂಶೋಧನ ಫಲಸಸ್ಯೋದ್ಯಾನವನ್ನು ರಾಜ್ಯಕ್ಕೇ ಒಂದು ಮಾದರಿಯೆನಿಸುವ ಉತ್ತಮ ತೋಟಗಾರಿಕೆಯ ಪ್ರಾತ್ಯಕ್ಷಿಕತೆಯ ಕೇಂದ್ರವನ್ನಾಗಿ ಮಾರ್ಪಡಿಸಿ ವಿಸ್ತರಿಸುವ ಯೋಜನೆ ಇದೆ. ಈ ಸಂಶೋಧನ ಕೇಂದ್ರದ ಸಮೀಪದಲ್ಲೇ ಭಾರತೀಯ ಕಾಫಿ ಬೋರ್ಡಿನ ಕಾಫಿ ಉಪ ಸಂಶೋಧನ ಕೇಂದ್ರವಿದೆ. (ಎಂ.ಪಿ.)

**ಚೆಟ್ಟಿ ಮುರಿಗೆಪ್ಪಣ್ಣ :** 1907-. ನೈಜ ಚಿತ್ರಕಲೆಯ ಕಲಾವಿದ. ಇವರದು ಶರಣಪರಂಪರೆಯ ಮನೆತನ. ಕಲಾಕಾರರಾದ ಅಡಿವೆಪ್ಪ ದಂಪತಿಗಳಿಗೆ ಮಗನಾಗಿ 1907 ಮಾರ್ಚ್ 9ರಂದು ಬೆಳಗಾಂವಿ ಜಿಲ್ಲೆ ಅಥಣಿಯಲ್ಲಿ ಜನಿಸಿದರು. ಪ್ರಾಥಮಿಕ, ಮಾಧ್ಯಮಿಕ ಶಾಲೆಯಲ್ಲಿ ಚಿತ್ರಕಲಾ ಸ್ಪರ್ಧೆಗಳಲ್ಲಿ ಬಹುಮಾನ ಗಳಿಸುತ್ತಿದ್ದರು. ಮುಂಬಯಿಯ ಜೆ.ಜೆ. ಸ್ಕೂಲ್ ಆಫ್ ಆರ್ಟ್ ಸಂಸ್ಥೆಯಲ್ಲಿ ಚಿತ್ರಕಲಾ ಶಿಕ್ಷಣ ಪಡೆದ ಅನಂತರ ಕಲಾರಾಧನೆಗೆ ತೊಡಗಿದರು. ಡಿಪ್ಲೊಮಾ ಪರೀಕ್ಷೆಯಲ್ಲಿ ಇವರು ರಚಿಸಿದ ತೈಲಮಾಧ್ಯಮದ ಕೃಷ್ಣಾರ್ಜುನ ಯುದ್ಧದ ಸನ್ನಿವೇಶದ ಚಿತ್ರಕ್ಕೆ ಪ್ರಥಮ ಬಹುಮಾನ ಹಾಗೂ ಸ್ವರ್ಣ ಪದಕ ದೊರಕಿತು (1924). ಅನಂತರ ಫೆಲೊಷಿಪ್‌ಗೆ ಆಯ್ಕೆಗೊಂಡರು (1931-34).

ಹತ್ತುಸಾವಿರಕ್ಕೂ ಹೆಚ್ಚು ಭಾವಚಿತ್ರ, ರೇಖಾಚಿತ್ರ, ಸಂಯೋಜನ ಚಿತ್ರ ಮತ್ತು ನಿಸರ್ಗಚಿತ್ರಗಳನ್ನು ರಚಿಸಿರುವ ಚೆಟ್ಟಿಯವರು ಗದುಗಿನ ಚಿತ್ರಕಲೆಯನ್ನು ಉಳಿಸಿ ಬೆಳೆಸಿ ಸಿರಿವಂತಗೊಳಿಸಿದವರಲ್ಲಿ ಮೊದಲಿಗರು. ಅಭಿವ್ಯಕ್ತಿಗಿಂತ ಶರಣ ಪರಂಪರೆಯ ಕಥಾವಸ್ತುವಿಗೆ ಪ್ರಾಮುಖ್ಯತೆ ನೀಡಿ ಕಲ್ಪನೆಗೆ ಹೊಸರೂಪ ಕೊಡುವಲ್ಲಿ ಸಿದ್ಧಹಸ್ತರು. ನಾಡಿನ ಅನೇಕ ಶಿವಶರಣರು ಇವರ ಕುಂಚದಲ್ಲಿ ಅರಳಿದ್ದಾರೆ. ಭಾವಚಿತ್ರಗಳಲ್ಲಿ ರಾಜಮಹಾರಾಜರ ಪೇಟಗಳಲ್ಲಿ ಮತ್ತು ಆಭರಣಗಳಲ್ಲಿ ಬಂಗಾರದ ಹೊಳಪನ್ನು ನೈಜವಾಗಿ ಬಣ್ಣದ ಬಳಕೆಯಿಂದ ಚಿತ್ರಿಸುವುದು ಇವರಿಗೆ ಬಂದ ದೈವದತ್ತ ಕೊಡುಗೆ.

ಉದಯಪುರದಲ್ಲಿ ಅರಮನೆಯ ಆವರಣದಲ್ಲಿದ್ದ ಜಲಮಂದಿರದ ನಿಸರ್ಗಚಿತ್ರ ಬಿಡಿಸಿದಾಗ ಅದನ್ನು ಮೆಚ್ಚಿದ ಮಹಾರಾಜರು ಚಿತ್ರವನ್ನು ಅರಮನೆಗಾಗಿ ಸಂಗ್ರಹಿಸಿ ಪುರಸ್ಕಾರ ನೀಡಿ ಗೌರವಿಸಿದರು. ಕಲಾಶಾಲೆಯ ಸುಂದರ ತೋಟದಲ್ಲಿದ್ದ ಗಿಡವೊಂದರ ಬೊಡ್ಡೆಯನ್ನು ಮೋಹಕವಾಗಿ ಚಿತ್ರಿಸಿದ್ದನ್ನು ಕಂಡು ಗುರುಗಳಾದ ಸೊಲೊಮನ್ ಅವರು ಅದನ್ನು ಶಾಲೆಯ ಗ್ಯಾಲರಿಗಾಗಿ ಸಂಗ್ರಹಿಸಿ ಅದರ ಪ್ರತಿಕೃತಿಯನ್ನು ಇಂಗ್ಲೆಂಡಿಗೆ ಕಳುಹಿಸಿದರು. ಅದು ಅಲ್ಲಿಯೂ ಮೆಚ್ಚುಗೆ ಗಳಿಸಿತು. ಮಠಮಂದಿರಗಳಲ್ಲಿ ಕಂಡುಬರುವ ಹಲವು ಕೃತಿಗಳಲ್ಲಿ ಸಿದ್ಧಲಿಂಗೇಶ್ವರಸ್ವಾಮಿಯ ಮೂಲಚಿತ್ರವನ್ನು ಪ್ರಥಮವಾಗಿ ಚಿತ್ರಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಚಾಂದ ಸಂಸ್ಥಾನದ ಮಹಾರಾಜರು ಏರ್ಪಡಿಸಿದ್ದ ಚಿತ್ರಕಲಾ ಸ್ಪರ್ಧೆಯಲ್ಲಿ ಇವರು ರಚಿಸಿದ ವಿಶ್ವರೂಪದರ್ಶನ ತೈಲಚಿತ್ರಕ್ಕೆ ಮಹಾರಾಜರ ಚಿನ್ನದ ಪದಕ ದೊರಕಿತು. ಹುಬ್ಬಳ್ಳಿಯ ಜಗದ್ಗುರು ಮೂರುಸಾವಿರ ಮಠದ ಗ್ರಂಥಮಾಲೆಯ ವೀರಶೈವ ಭಾರತಿ ಪುಸ್ತಕ ಸಂಪದಕ್ಕೆ ಶರಣರ ಅಸಂಖ್ಯಾತ ಚಿತ್ರಗಳನ್ನು ರಚಿಸಿರುವ ಚೆಟ್ಟಿಯವರ ಅನೇಕ ಉತ್ತಮ ಕೃತಿಗಳು ದೇಶದ ವಿವಿಧ ಮಠ ಮಂದಿರಗಳಲ್ಲಿ ಅಲಂಕೃತಗೊಂಡಿವೆ.

ಇವರಿಗೆ ಹಲವಾರು ಪ್ರಶಸ್ತಿ ಪುರಸ್ಕಾರಗಳು ದೊರಕಿವೆ. ವೆಂಕಟಪ್ಪ ಪ್ರಶಸ್ತಿ (1996), ಎಂ.ಟಿ.ವಿ. ಆಚಾರ್ಯ ಪ್ರಶಸ್ತಿ, ರಾಜ್ಯ ಪ್ರಶಸ್ತಿ (1998) ಹಾಗೂ ಲಲಿತಕಲಾ ಅಕಾಡೆಮಿಯ ಪ್ರಶಸ್ತಿಗಳು ಉಲ್ಲೇಖನೀಯ. ಕಲೆಯನ್ನು ಜೀವನದಲ್ಲಿ ಹಾಸುಹೊಕ್ಕಾಗಿಸಿಕೊಂಡ ಚೆಟ್ಟಿಯವರು ಸರಳರು ಹಾಗೂ ಉದಾರಿಗಳೂ ಆಗಿದ್ದರು. ಗದುಗಿನಲ್ಲಿರುವ ತಮ್ಮ ಸ್ವಂತ ನಿವಾಸ ಆರ್ಟ್ ಗ್ಯಾಲರಿಯಾಗಬೇಕೆಂಬುದು ಇವರ ಆಕಾಂಕ್ಷೆಯಾಗಿದೆ.

(ಎಸ್‌ಯು.ಎಂ.)

**ಚೆನ್ನಕೇಶವಯ್ಯ, ಎನ್. :** 1895-. ಕರ್ಣಾಟಕ ಸಂಗೀತ ವಿದ್ವಾಂಸರು. ಮಂಡ್ಯ ಜಿಲ್ಲೆ ಕೃಷ್ಣರಾಜಪೇಟೆ ತಾಲ್ಲೂಕಿನ ನಾಟಹಳ್ಳಿಯಲ್ಲಿ ಜನಿಸಿದರು. ತಂದೆ ಕೇಶವಯ್ಯ, ತಾಯಿ ಲಕ್ಷ್ಮೀದೇವಮ್ಮ. ಹೇಮಾವತಿ



ನದೀ ತೀರದ ಪ್ರಶಾಂತ ವಾತಾವರಣದಲ್ಲಿ ವಾಸ ಮಾಡುತ್ತಿದ್ದ ಕೇಶವಯ್ಯನವರು ಸಂಗೀತದಲ್ಲಿ ತಕ್ಕಮಟ್ಟಿನ ಸಾಧನೆ ನಡೆಸಿದ್ದರು. ದೇವರ ನಾಮಗಳನ್ನು ಸುಶ್ರಾವ್ಯವಾಗಿ ಹಾಡಬಲ್ಲವರಾಗಿದ್ದ ಇವರು ಭಾರತವಾಚನದಲ್ಲೂ ವಿಶೇಷವಾದ ಆಸಕ್ತಿ ಬೆಳೆಸಿಕೊಂಡಿದ್ದರು. ತಮ್ಮ ಸಂಗೀತಪ್ರೇಮದಿಂದ ಸುತ್ತಣ ಜನರ ಪ್ರೀತಿ ವಿಶ್ವಾಸಗಳಿಸಿದ್ದ ಕೇಶವಯ್ಯನವರು ಸಂಗೀತದ ಸಣ್ಣಪ್ಪನವರೆಂದು ಪ್ರಸಿದ್ಧರಾಗಿದ್ದರು. ತಾಯಿ ಲಕ್ಷ್ಮೀದೇವಮ್ಮನವರೂ ಸಂಗೀತಪ್ರಿಯೆ. ತಾಯಿ ತುಂಬಿದ ಭಕ್ತಿಭಾವದಿಂದ ದೇವರನಾಮಗಳನ್ನು ಹಾಡುತ್ತಿದ್ದರು. ತಂದೆ ತಾಯಿಗಳ ಸಂಗೀತದ ಒಲುಮೆ ಚಿಕ್ಕಂದಿನಲ್ಲಿಯೇ ಇವರ ಮೇಲೆ ಪ್ರಭಾವ ಬೀರಿತು.

ಇವರು ಲೋಯರ್ ಸೆಕೆಂಡರಿ (1909) ಪರೀಕ್ಷೆಯನ್ನು ಮುಗಿಸಿ ಮೈಸೂರಿನಲ್ಲಿ ವ್ಯಾಸಂಗ ಮುಂದುವರಿಸಿ ಅಪ್ಪರ್ ಸೆಕೆಂಡರಿ (1912), ಉಪಾಧ್ಯಾಯ ತರಬೇತಿ (1914), ಡ್ರಾಯಿಂಗ್ ಡಿಪ್ಲೊಮಾ, ವ್ಯವಸಾಯ ಮತ್ತು ಪಶುವೈದ್ಯ ತರಬೇತಿ ಪರೀಕ್ಷೆಗಳಲ್ಲೂ ಜಯಶೀಲರಾದರು. ಸಂಗೀತವೇ ಇವರ ಬಾಳಿನ ಸಕಲವಾಗಿತ್ತಾದರೂ ಜೀವನಕ್ಕೆ ಬೇರೆ ವೃತ್ತಿಯನ್ನವಲಂಬಿಸಿ ಸಂಗೀತ ಸಾಧನೆಯನ್ನು ಸ್ವಂತ ಸುಖಕ್ಕಾಗಿ ಮುಂದುವರಿಸಬೇಕೆಂಬುದು ಇವರ ಅಭಿಲಾಷೆಯಾಗಿತ್ತು. ಇದಕ್ಕಾಗಿ ಇವರು ಮೈಸೂರಿನಲ್ಲಿ ವೈಣಿಕ ವಿದ್ವಾನ್ ಶಿವರಾಮಯ್ಯನವರಲ್ಲಿ ನಾಲ್ಕು ವರ್ಷಗಳ ಕಾಲ ಸಂಗೀತಾಭ್ಯಾಸ ಮಾಡಿದರು. ಶಿವರಾಮಯ್ಯನವರ

ತಂದೆಯವರಾದ ಪದ್ಮನಾಭಯ್ಯನವರು ಮೈಸೂರು ವಾಸುದೇವಾಚಾರ್ಯರ ಗುರುಗಳಾಗಿದ್ದುದರಿಂದ ಇವರ ಸಂಗೀತಕ್ಕೂ ವಾಸುದೇವಚಾರ್ಯರದಕ್ಕೂ ಇರುವ ಸಾಮ್ಯವನ್ನು ಗುರುತಿಸಬಹುದು. ಪ್ರತಿಯೊಂದು ಗಮಕವೂ ಸರಿಯಾದ ಪ್ರಮಾಣದಲ್ಲಿರುವಂತೆ ಶ್ರುತಿಪೂರ್ಣವಾದ ಭಾವಭರಿತವಾದ ಪ್ರಶಾಂತ ಮನಸ್ಕವಾದ ಹಾಡುಗಾರಿಕೆಗೆ ಇವರು ಪ್ರಸಿದ್ಧರಾಗಿದ್ದರು.

ಶಿವರಾಮಯ್ಯನವರ ಮನೆಯಲ್ಲಿ ಪ್ರತಿ ಏಕಾದಶಿಯಂದು ನಡೆಯುತ್ತಿದ್ದ ಭಜನೆಯಲ್ಲಿ ವಾಸುದೇವಾಚಾರ್ಯರೂ ಭಾಗವಹಿಸುತ್ತಿದ್ದರು. ಚೆನ್ನಕೇಶವಯ್ಯನವರು ಅವರ ಹಾಡುಗಾರಿಕೆಯಿಂದ ಪ್ರಭಾವಿತರಾದರಲ್ಲದೆ. ಅವರಲ್ಲೂ ಅಭ್ಯಾಸ ಮಾಡಿದರು. ಶಿವರಾಮಯ್ಯನವರಿಂದ ಸಂಗೀತದ ಲಕ್ಷ್ಯ ಹಾಗೂ ಲಕ್ಷಣದ ಖಚಿತ ನಿರ್ಣಯಜ್ಞಾನ ಪಡೆದಿದ್ದ ಚೆನ್ನಕೇಶವಯ್ಯನವರು ವಾಸುದೇವಾಚಾರ್ಯರ ನಿಕಟ ಸಹವರ್ತಿಯಾಗಿ ಹಲವು ವರ್ಷಗಳ ಕಾಲ ಸಾಧನೆ ಮಾಡಿದರಲ್ಲದೆ, ಆಚಾರ್ಯರ ಕೃತಿಗಳನ್ನು ಸ್ವರಸಹಿತ ಬರೆದು ಅವುಗಳ ಸಂಕಲನದ ಪ್ರಕಟನೆಯಲ್ಲಿ ನೆರವಾದರು. ವಾಸುದೇವಾಚಾರ್ಯರು ತಮ್ಮ ಹೊಸ ಕೃತಿಗಳನ್ನು ಚೆನ್ನಕೇಶವಯ್ಯನವರಿಗೆ ಹೇಳಿ ಅವರಿಂದ ಬರೆಯಿಸುತ್ತಿದ್ದರು. ಚೆನ್ನಕೇಶವಯ್ಯನವರು ಈ ಕೆಲಸವನ್ನು ಮುಂದುವರಿಸಿ ಅನೇಕ ಅಪೂರ್ವ ಕೃತಿಗಳನ್ನು ಸಂಗ್ರಹಿಸಿದರು.

ಚೆನ್ನಕೇಶವಯ್ಯವನವರು ಮೈಸೂರಿನಲ್ಲಿ ಶಾರದಾವಿಲಾಸ ಶಾಲೆಯಲ್ಲಿ ಉಪಾಧ್ಯಾಯರಾದರು. ಉದ್ಯೋಗದ ವೇಳೆ ಬಿಟ್ಟು ಇವರ ದಿನದ ಉಳಿದ ಕಾಲವೆಲ್ಲ ಸಂಗೀತಕ್ಕೆ ಮೀಸಲಾಯಿತು. ದೇಶದ ಅನೇಕ ಕಡೆಗಳಲ್ಲಿ ಇವರ ಕಚೇರಿಗಳು ಏರ್ಪಡುತ್ತಿದ್ದವು. ತಮ್ಮ ಬಿಡುವಿನ ವೇಳೆಯಲ್ಲಿ ಇವರು ಅನೇಕ ಶಿಷ್ಯರಿಗೆ ಪಾಠ ಹೇಳಿಕೊಟ್ಟರು. ಅವರಲ್ಲಿ ಅನೇಕರು ಸುಪ್ರಸಿದ್ಧ ಸಂಗೀತಗಾರರಾಗಿದ್ದಾರೆ.

ಚೆನ್ನಕೇಶವಯ್ಯನವರು 1944ರಲ್ಲಿ ಮೈಸೂರಿನ ಆಸ್ಥಾನ ವಿದ್ವಾಂಸರಾದರು. ಜಯಚಾಮರಾಜರು ರಚಿಸಿದ ತೊಂಬತ್ತಾರು ಕೀರ್ತನೆಗಳನ್ನು ಇವರು ಮಹಾರಾಜರ ಸಮ್ಮುಖದಲ್ಲಿ ಹಾಡಿದರಲ್ಲದೆ ಅವನ್ನು ಚಿಟ್ಟೆಸ್ವರ ಸಹಿತ ಬರೆದಿಟ್ಟರು. ಮೈಸೂರಿನಲ್ಲಿ ಸೇರಿದ್ದ ಸಂಗೀತ ಸಮ್ಮೇಳನಕ್ಕೆ ಇವರು ಅಧ್ಯಕ್ಷರಾಗಿದ್ದರು (1963). ಆ ಸಮಯದಲ್ಲಿ ಇವರಿಗೆ ಗಾನಕಲಾಸಿಂಧು ಎಂಬ ಪ್ರಶಸ್ತಿ ದೊರಕಿತು. ಸಂಗೀತ ಕಲಾರತ್ನ, ಸಂಗೀತ ವಿದ್ಯಾನಿಧಿ ಇವರಿಗೆ ದೊರೆತಿದ್ದ ಇತರ ಬಿರುದುಗಳು. ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿ ಪ್ರಾಪ್ತವಾದ್ದು 1972ರಲ್ಲಿ.

ಹಾಡುಗಾರಿಕೆಯ ಜೊತೆಗೆ ಸಂಶೋಧನ ಪ್ರವೃತ್ತಿಯೂ ಚೆನ್ನಕೇಶವಯ್ಯನವರಲ್ಲಿ ಬೆಳೆದುಬಂದಿದೆ. ವಾಸುದೇವಾಚಾರ್ಯ ಹಾಗೂ ಜಯಚಾಮರಾಜ ಒಡೆಯರ ಕೃತಿಗಳಲ್ಲದೆ ಇವರು ಮೈಸೂರು ಸದಾಶಿವರಾಯರು, ಚಿಂತಲಪಲ್ಲಿ ವೆಂಕಟರಾಯರ ತಾತಂದಿರಾದ ಗವಿರಂಗದಾಸರು ಮೊದಲಾದ ಅನೇಕ ವಾಗ್ಗೇಯಕಾರರ ಕೃತಿಗಳನ್ನು ಸ್ವರಪಡಿಸಿ ಬರೆದಿಟ್ಟಿದ್ದಾರೆ. ಹರಿದಾಸಕೀರ್ತನಸುಧಾಸಾಗರ ಎಂಬುದು ಚೆನ್ನಕೇಶವಯ್ಯನವರ ಮಹತ್ತರ ಕೃತಿ. ಇದಲ್ಲದೆ ಇವರು ಇನ್ನೂ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಕೆಲವನ್ನು ಪ್ರಕಟಿಸಿದ್ದಾರೆ. ವೀಣೆ ಸುಬ್ಬಣ್ಣನವರ ಜೀವನ ಸಾಧನೆಗಳನ್ನು ಕುರಿತ ಪುಸ್ತಕ ರಚಿಸಿದ್ದಾರೆ. ಆಲಾಪನಾ ಪದ್ಧತಿ, ತಾನ ಮತ್ತು ಪಲ್ಲವಿ ಎಂಬುದು ಇವರ ಇನ್ನೊಂದು ಕೃತಿ. (ಎಚ್.ಎಸ್.ಕೆ.)

**ಚೆನ್ನಪ್ಪ :** ಸು.1750. ವೀರಶೈವ ಕವಿ. ಶಿವಶರಣ ಲೀಲಾಮೃತ ಎಂಬ ಕೃತಿಯ ಕರ್ತೃ. ಹಂಪೆಗೆ ದಕ್ಷಿಣದಲ್ಲಿರುವ ನಿಡುಗಲ್ಲು ಈತನ ಸ್ಥಳ. ಗುರು ಪಂಚವಣ್ಣಿಗೆ ಚೆನ್ನಮಲ್ಲಿಕಾರ್ಜುನ.

ಶಿವಶರಣ ಲೀಲಾಮೃತ ಹನ್ನೊಂದು ಸಂಧಿಗಳಿರುವ ಯಕ್ಷಗಾನದ ಧಾಟಿಯಲ್ಲಿರುವ ಗ್ರಂಥ. ಬಸವಣ್ಣನವರ ಮತ್ತು ಅವರ ಕಾಲದಲ್ಲಿನ ಶಿವಶರಣರ ಚರಿತಗಳನ್ನು ಇದರಲ್ಲಿ ಹೇಳಿದೆ. ಗ್ರಂಥಾರಂಭದಲ್ಲಿ ಹರಿಹರ, ರಾಘವಾಂಕ, ಭೀಮಕವಿ, ಚಾಮರಸ, ಗುಬ್ಬಿಯ ಮಲ್ಲಣಾರ್ಯ ಮೊದಲಾದ ಪೂರ್ವಕವಿಗಳನ್ನು ಸ್ಮರಿಸಲಾಗಿದೆ. ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ (ಸು.1825) ರಚಿತವಾದ ಸಿರಿಯಾಳ ಚರಿತ್ರೆ ಎಂಬ ಯಕ್ಷಗಾನಕ್ಕೆ ಈ ಕೃತಿಯೇ ಆಧಾರವೆಂಬ ವಿಷಯ ಆ ಗ್ರಂಥದಿಂದ ತಿಳಿದುಬರುತ್ತದೆ. (ಜಿ.ಎಸ್.ಎಸ್.)

**ಚೆನ್ನಬಸವಣ್ಣ :** ಹನ್ನೆರಡನೆಯ ಶತಮಾನದಲ್ಲಿದ್ದ ಒಬ್ಬ ಶಿವಶರಣ ಹಾಗೂ ಸುಪ್ರಸಿದ್ಧ ವಚನಕಾರ. ಬಸವಾದಿ ಪ್ರಮಥರು ನಡೆಸಿದ ಬಹುಮುಖ ಕ್ರಾಂತಿಯ ಕರ್ಣಧಾರತ್ವವನ್ನು ವಹಿಸಿದ ಮಹಾನುಭಾವಿ. ಷಟ್ಸ್ಥಲ ಚಕ್ರವರ್ತಿ, ಸ್ವಯಂಭುಜ್ಞಾನಿ, ಅವಿರಳಜ್ಞಾನಿ, ಬೌದ್ಧಿಕ ಸಾಮ್ರಾಜ್ಯದ ನಿರಂಕುಶ ಚಕ್ರವರ್ತಿ ಮೊದಲಾದ ಪ್ರಶಂಸೆಗೆ ಪಾತ್ರನಾದ ದಾರ್ಶನಿಕ. ಸಮಕಾಲೀನ ವಚನಕಾರರು, ಅನಂತರ ಬಂದ ಅನೇಕ ಕವಿಗಳು ತಮ್ಮ ಕೃತಿಗಳಲ್ಲಿ ಈತನ ತೇಜಃಪೂರ್ಣವಾದ ವ್ಯಕ್ತಿತ್ವ ಹಾಗೂ ಮಹಾನ್ ಸಾಧನೆಗಳನ್ನು ಕುರಿತು ವರ್ಣಿಸಿದ್ದಾರೆ. ಬಸವೇಶ್ವರ, ಅಲ್ಲಮಪ್ರಭು, ಅಕ್ಕಮಹಾದೇವಿ, ಸಿದ್ಧರಾಮ, ಮಡಿವಾಳ ಮಾಚಿದೇವ, ತೋಂಟದ ಸಿದ್ಧಲಿಂಗೇಶ ಮೊದಲಾದ ಶರಣಶ್ರೇಷ್ಠರು ಈತನ ಮಹಿಮೆಯನ್ನು ಕೊಂಡಾಡಿದ್ದಾರೆ. ಹಡಪದ ಅಪ್ಪಣ್ಣ, ನುಲಿಯ ಚಂದಯ್ಯ, ಅಮುಗಿದೇವಯ್ಯ ಮೊದಲಾದ ವಚನಕಾರರಂತೂ ಈತನ ಹೆಸರನ್ನೇ ಅಂಕಿತವಾಗಿಟ್ಟುಕೊಂಡು ವಚನಗಳನ್ನು ರಚಿಸಿದ್ದಾರೆ. ಹರಿಹರ, ಪಾಲ್ಕುರಿಕೆ ಸೋಮನಾಥ, ಚಾಮರಸ, ವಿರೂಪಾಕ್ಷಪಂಡಿತ, ಲಕ್ಕಣ್ಣದಂಡೇಶ, ವಿರಕ್ತ ತೋಂಟದಾರ್ಯ, ಭೀಮಕವಿ, ಷಡಕ್ಷರದೇವ ಮೊದಲಾದ ಕವಿಗಳು ಇವನನ್ನು ತಮ್ಮ ಕಾವ್ಯಗಳಲ್ಲಿ ಸ್ಮರಿಸಿದ್ದಾರೆ. ಶೂನ್ಯಸಂಪಾದನೆಯಲ್ಲಿ ಚೆನ್ನಬಸವ ಸಂಪಾದನೆ ಎಂಬ ಪ್ರಕರಣವಿದೆ. ತೆಲುಗು ಮತ್ತು ಸಂಸ್ಕೃತ ಭಾಷೆಗಳಲ್ಲಿ ಈತನ ಬಗ್ಗೆ ಕಾವ್ಯಗಳು ರಚಿತವಾಗಿವೆ. ಅಲ್ಲಮಪ್ರಭುವಿನ ಅನಂತರ ಈತ ಶೂನ್ಯಸಿಂಹಾಸನದ ಎರಡನೆಯ ಅಧ್ಯಕ್ಷನೂ ಬಸವಣ್ಣನವರ ಅನಂತರ ಬಿಜ್ಜಳನ ಮಂತ್ರಿಯೂ ಆಗಿದ್ದಂತೆ ತಿಳಿಯುತ್ತದೆ. ಈತ ಚಿಕ್ಕದಣ್ಣಾಯಕ ಎಂದೂ ಜನಪ್ರಿಯನಾಗಿದ್ದ.

ಈತನ ಜನನದ ಬಗ್ಗೆ ಅನೇಕ ದಂತಕಥೆಗಳು ಹುಟ್ಟಿಕೊಂಡಿವೆ. ಅವತಾರ ಪುರುಷನೆಂದೂ ಅಯೋನಿಜನೆಂದೂ ಷಣ್ಮುಖನ ಅವತಾರವೆಂದೂ ಈತನನ್ನು ಅನೇಕ ವೀರಶೈವ ಕವಿಗಳು ಬಣ್ಣಿಸಿದ್ದಾರೆ. ಚಾಮರಸ, ವಿರೂಪಾಕ್ಷಪಂಡಿತ, ಅದೃಶ್ಯ ಕವಿ, ಲಕ್ಕಣ್ಣದಂಡೇಶ ಮೊದಲಾದ ಕವಿಗಳು ತಮ್ಮ ಕಾವ್ಯದಲ್ಲಿ ಇವನ ಜನನ ಅಲೌಕಿಕವಾದುದೆಂದೂ ಅಭೂತಪೂರ್ವವಾದುದೆಂದೂ ನಿರೂಪಿಸಿದ್ದಾರೆ. ಆದರೆ ಸಿಂಗಿರಾಜ ಪುರಾಣದಿಂದ ಈತನ ತಂದೆ ಕಾಯಕಯೋಗಿ ಶಿವಸ್ವಾಮಿಯೆಂದೂ ತಾಯಿ ಮಹಾ ಶಿವಭಕ್ತೆಯಾದ ಬಸವಣ್ಣನವರ ಸಹೋದರಿ ಅಕ್ಕನಾಗಮ್ಮನೆಂದೂ ತಿಳಿದುಬರುತ್ತದೆ. ಬಸವಣ್ಣನವರು ಚೆನ್ನಬಸವಣ್ಣನಿಗೆ ಸೋದರಮಾವ ಆಗಿದ್ದರಷ್ಟೇ ಅಲ್ಲದೆ ಗುರುವೂ ಆಗಿದ್ದರು.

ಚೆನ್ನಬಸವಣ್ಣ ಚಿಕ್ಕವಯಸ್ಸಿನಲ್ಲಿಯೇ ಅಪಾರ ಜ್ಞಾನ ಮತ್ತು ಅನುಭವಗಳನ್ನು ಪಡೆದ. ಈತ ಧಾರ್ಮಿಕ ಜ್ಞಾನದಲ್ಲಿ ಬಲ್ಲಿದನಾದಂತೆ ಲೋಕವ್ಯವಹಾರದಲ್ಲಿಯೂ ಚತುರನಾಗಿದ್ದ. ಅನುಭವಮಂಟಪದಲ್ಲಿ ಈತ ನಿರ್ವಹಿಸಿದ ಪಾತ್ರ ಬಲು ದೊಡ್ಡದು. ತನ್ನ ಪ್ರಭಾವಪೂರ್ಣ ವ್ಯಕ್ತಿತ್ವದಿಂದ, ಅಪಾರ ಆಧ್ಯಾತ್ಮಜ್ಞಾನ ಸಂಪತ್ತಿನಿಂದ, ಅಸೀಮ ಸ್ಥಿರಚಿತ್ತದಿಂದ ಎಂಥ ವಿಷಮಸನ್ನಿವೇಶದಲ್ಲೂ ಯುಕ್ತಪರಿಹಾರ ನೀಡುತ್ತಿದ್ದ. ಕುಶಾಗ್ರಮತಿಯಾದ ಈತ ತತ್ತ್ವಪರಾಮರ್ಶೆಯಲ್ಲಿ ಮಿಗಿಲೆನಿಸಿಕೊಂಡು ಬಿಕ್ಕಟ್ಟಿನ ಧಾರ್ಮಿಕ ಸಮಸ್ಯೆಗಳನ್ನು ಹಗುರವಾಗಿ ಬಿಡಿಸುತ್ತಿದ್ದ. ಜೀವನದ ನಾನಾ ರಂಗಗಳಲ್ಲಿ ಅದ್ಭುತ ಕ್ರಾಂತಿಯುಂಟಾದ ಆ ಸಂದರ್ಭದಲ್ಲಿ ಸರ್ವಾಂಗಸುಂದರ ಸಮಾಜ ನಿರ್ಮಾಣಗೊಳ್ಳಲು ಈತ ಜನತೆಯನ್ನು ಸತ್ಪಾತ್ರದಲ್ಲಿ ನಡೆಸಿದ. ವ್ಯಕ್ತಿಯ ಉದ್ಧಾರಕ್ಕಿಂತ ಸಮಷ್ಟಿಯ ಸಮಾಜದ ಉದ್ಧಾರದ ಕಡೆಗೆ ಹೆಚ್ಚು ಲಕ್ಷ್ಯಕೊಟ್ಟು ಜನರಲ್ಲಿದ್ದ ಅಜ್ಞಾನ, ಅಂಧಶ್ರದ್ಧೆ, ಅನಾಚಾರಗಳನ್ನು ತೊಲಗಿಸಿ, ಸದಾಚಾರ ಸತ್ಕ್ರಿಯೆ, ದೈವೀಭಕ್ತಿ ಮೂಡುವಂತೆ ಮಾಡಿದ. ವೀರಶೈವಧರ್ಮದ ಅಂತಃಸತ್ತ್ವದಂತಿರುವ ಷಟ್ಸ್ಥಲ ಸಿದ್ಧಾಂತಕ್ಕೆ ಸರಿಯಾದ ತಳಹದಿ ಹಾಕಿ ಅದನ್ನು ಪ್ರಮಾಣಪುರಸ್ಸರವಾಗಿ ಪ್ರತಿಪಾದಿಸಿದ. ಮಾನವನ ಅಂತರಂಗಶುದ್ಧಿಗೆ ಕ್ರಿಯಾಚಾರ, ಜ್ಞಾನಾಚಾರ, ಭಾವಾಚಾರ, ಸತ್ಯಾಚಾರ, ನಿತ್ಯಾಚಾರ, ಧರ್ಮಾಚಾರ ಮತ್ತು ಸರ್ವಾಚಾರಗಳೆಂಬ ಸಪ್ತಾಚಾರಗಳನ್ನು ಬೋಧಿಸಿದ.

ಬಸವಣ್ಣ ಕಲ್ಯಾಣವನ್ನು ಬಿಟ್ಟು ಕಪ್ಪಡಿಕ್ಷೇತ್ರದ ಕೂಡಲಸಂಗಮದಲ್ಲಿ ಐಕ್ಯವಾದ ಅನಂತರ ಈತ ರಾಜಧಾನಿಯಲ್ಲಿ ನಿಂತು ಶಿವಶರಣರ ಧರ್ಮವನ್ನು ಕಾಪಾಡಿ ಕ್ರಾಂತಿಯ ಕ್ಷೋಭೆಯನ್ನು ಹತೋಟಿಗೆ

ತಂದು ತನ್ನ ರಾಜಕೀಯ ಮತ್ತು ಆಧ್ಯಾತ್ಮ ಜೀವನ ಎರಡನ್ನೂ ಮುಂದುವರಿಸಿದ. ಬಸವಣ್ಣ ಐಕ್ಯವಾದ ಮೂರು ತಿಂಗಳಿಗೆ (1168) ಈತ ಉಳುವಿಯ ಮಹಾಮನೆಯಲ್ಲಿ ಐಕ್ಯನಾದ. ಇವನ ಸಮಾಧಿ ಉಳುವಿಯಲ್ಲಿದೆ. ಪ್ರತಿವರ್ಷ ಮಾಘಮಾಸದಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ.

ಚೆನ್ನಬಸವಣ್ಣ ಒಳ್ಳೆಯ ವಚನಕಾರ. ಕೂಡಲ ಚನ್ನಸಂಗಮದೇವ ಎಂಬುದು ಇವನ ವಚನಗಳ ಅಂಕಿತ. ಉಪಲಬ್ಧವಾಗಿರುವ ಈತನ ಷಟ್ಸ್ಥಲವಚನಗಳ ಸಂಖ್ಯೆ 1500ಕ್ಕೂ ಮಿಕ್ಕಿವೆ. ಧರ್ಮದ ನಿಗೂಢ ತತ್ತ್ವಗಳು, ಅಂತೆಯೇ ಜೀವನದ ಮೌಲ್ಯಗಳು ಮೃದುಮಧುರ ಶೈಲಿಯಲ್ಲಿ ಮೂಡಿವೆ. ಸುಂದರ ಸಾದೃಶ್ಯಗಳಿಂದ ಆಯಾ ಸನ್ನಿವೇಶದ ಪೂರ್ಣ ಚಿತ್ರ ಕಣ್ಣಿಗೆ ಕಟ್ಟುವಂತೆ ಚಿತ್ರಿಸುವ ಬಲ್ಮೆ ಇವನಿಗಿದೆ. ಆತ್ಮಾನಂದದ ಸ್ಥಿತಿಯನ್ನು ಸುವ್ಯಕ್ತಗೊಳಿಸಬಲ್ಲ ಸಮರ್ಥ ಸಾಹಿತಿಯಾಗಿ ಈತ ಶೋಭಿಸುತ್ತಾನೆ.

ಈತ ಬಿಡಿವಚನಗಳನ್ನು ಬರೆದು ತೃಪ್ತನಾಗದೆ ತತ್ತ್ವಶಾಸ್ತ್ರಕ್ಕೆ ಶಾಶ್ವತ ರೂಪುಕೊಡಲು ಕೆಲವು ಕೃತಿಗಳನ್ನು ರಚಿಸಿದ್ದಾನೆ. ಇವು ಜಿಜ್ಞಾಸುಗಳಿಗೆ ಕೈದೀವಿಗೆಯಂತಿವೆ. ಕರಣಹಸುಗೆ ಎಂಬ ಗದ್ಯ ಕೃತಿಯಲ್ಲಿ ದೇಹರಚನೆ, ಇಂದ್ರಿಯಗಳ ಕಾರ್ಯ, ಸಪ್ತವ್ಯಸನ, ಪ್ರಣವದ ಮೂಲ ಮೊದಲಾದ ವೀರಶೈವ ತತ್ತ್ವಗಳ ವಿವರಣೆ ಇದೆ. ಮಿಶ್ರಾರ್ಪಣ ಎಂಬುದು ಗದ್ಯ ಕೃತಿ. ಇದರಲ್ಲಿ ಕಾಯಾರ್ಪಣ, ಕರ್ಣಾರ್ಪಣ, ಭಾವಾರ್ಪಣ ಮತ್ತು ಪರಿಪೂರ್ಣಾರ್ಪಣಗಳ ಸ್ವರೂಪ, ಸುಬುದ್ಧಿ, ನಿರಹಂಕಾರ, ಸೌಮನಸ್ಯ, ಸುಜ್ಞಾನ, ಸದ್ಭಾವನಾ ನೆಲೆ ಮೊದಲಾದುವನ್ನು ಕುರಿತು ವಿವೇಚಿಸಲಾಗಿದೆ. ಪದಮಂತ್ರ ಗೋಪ್ಯದಲ್ಲಿ ಸಿದ್ಧರಾಮನಿಗೆ ಹೇಳಿದ ಶಿವಯೋಗಮಾರ್ಗದ ಲಕ್ಷಣಗಳು ಪದಗಳಲ್ಲಿ ನಿರೂಪಿತವಾಗಿವೆ. ಮಂತ್ರಗೋಪ್ಯದಲ್ಲಿ 27 ಹಾಡುಗಳಿವೆ. ಇದರಲ್ಲಿ ವೀರಶೈವ ಧರ್ಮಸೂಕ್ಷ್ಮಗಳು ಹಾಗೂ ಶಿವಯೋಗ ಸ್ವರೂಪ ವಿವರಿಸಲಾಗಿದೆ. ಕಾಲಜ್ಞಾನವಚನಗಳು ಭವಿಷ್ಯದ ವಿಷಯಗಳನ್ನು ತಿಳಿಸುವ ವಚನಗಳು. ರುದ್ರಭಾರತಸೃಷ್ಟಿ ಎಂಬ ಗದ್ಯಕೃತಿಯಲ್ಲಿ ಸಂಸ್ಕೃತ ಶ್ಲೋಕಗಳ ಉದಾಹರಣೆಗಳೊಂದಿಗೆ ಸೃಷ್ಟಿಕ್ರಮ, ಯುಗ ಮೊದಲಾದವುಗಳ ನಿರೂಪಣೆಯಿದೆ. ಷಟ್ಚಕ್ರದಲ್ಲಿ ಸೃಷ್ಟಿಯ ಉತ್ಪತ್ತಿ ಸ್ಥಿತಿ ಲಯಗಳೂ ಶರೀರ ರಚನೆ, ಜೀವ-ದೇಹಗಳ ಚೇಷ್ಟೆ, ಯೋಗ ಲಕ್ಷಣಗಳ ವಿವರಣೆಗಳೂ ಇವೆ. ತೊಂಬತ್ತಾರು ಸಕೀಲಂಗಳು, ಅನುಭವಮಂಟಪದ ಅಧ್ಯಕ್ಷ ಪೀಠದಿಂದ ಹೇಳಿದ 96 ವಚನಗಳಾಗಿವೆ. ಈತನ ಕೃತಿಗಳಲ್ಲಿ ಕಾವ್ಯಾಂಶ ಕಡಿಮೆಯಿದ್ದರೂ ಇವನ ಆಳವಾದ ಆಲೋಚನೆ, ಉನ್ನತವಾದ ಪ್ರತಿಭೆಯನ್ನು ಅವು ವ್ಯಕ್ತಪಡಿಸುತ್ತವೆ. (ಟಿ.ಆರ್.ಎಂ.)

**ಚೆನ್ನಬಸವನಾಯಕ :** ಕೆಳದಿಯ ರಾಜ (1754-57). ಇಮ್ಮಡಿ ಬಸವಪ್ಪನಾಯಕ ಮತ್ತು ಅವನ ರಾಣಿ ವೀರಮ್ಮಾಜಿಗೆ ಸಂತತಿಯಿರಲಿಲ್ಲವಾದ್ದರಿಂದ ಈತನನ್ನು ದತ್ತು ಸ್ವೀಕರಿಸಲಾಗಿತ್ತು. ಇಮ್ಮಡಿ ಬಸವಪ್ಪನಾಯಕನ ಮರಣಾನಂತರ ಪಟ್ಟಕ್ಕೆ ಬಂದ. ಇವನ ಕಾಲದಲ್ಲಿ ಕೆಳದಿ ಮತ್ತು ಮಧುಗಿರಿ ಪಾಳೆಯಗಾರರಿಗೆ ಯುದ್ಧಗಳು ನಡೆದವು. ಮಿಗಿಲಾಗಿ ಮರಾಠರು ಕೆಳದಿಯನ್ನು ಮುತ್ತಿದ್ದರು. ಇವನು ಮರಾಠರೊಡನೆ ಸಂಧಾನ ನಡೆಸಿ ಅವರಿಗೆ ಹಣ ನೀಡಿ ರಾಜ್ಯವನ್ನು ಆಕ್ರಮಣದಿಂದ ಪಾರುಮಾಡಿದ. ಚೆನ್ನಬಸವನಾಯಕನಿಗೆ ತಾಯಿ ವೀರಮ್ಮಾಜಿಯ ನಡತೆ ಸರಿಬೀಳದೆ ಅವರಲ್ಲಿ ವಿರಸವೇರ್ಪಟ್ಟಿತ್ತು. ಅವರಿಬ್ಬರ ಮಧ್ಯೆ ಅನೇಕ ಘರ್ಷಣೆಗಳೂ ಆದುವು. ಕೊನೆಗೆ ಇನ್ನೂ ಅವಿವಾಹಿತನೂ ಯುವಕನೂ ಆದ ಚೆನ್ನಬಸವನಾಯಕ 1757ರಲ್ಲಿ ಇದ್ದಕ್ಕಿದ್ದಂತೆ ಮರಣಹೊಂದಿದ. ವೀರಮ್ಮಾಜಿ ಇವನನ್ನು ಕೊಲೆ ಮಾಡಿಸಿದಳೆಂಬ ಊಹೆ ಇದೆ. ಚೆನ್ನಬಸವನಾಯಕ ಕೇವಲ ಮೂರು ವರ್ಷ ಮಾತ್ರ ರಾಜ್ಯಭಾರ ಮಾಡಿದರೂ ಇವನು ಜನಪ್ರಿಯನಾಗಿದ್ದ. ಇವನನ್ನು ಕುರಿತ ಕೆಲವು ಕನ್ನಡ ಜನಪದ ಗೀತೆಗಳು ಪ್ರಚಾರದಲ್ಲಿವೆ. (ಜಿ.ಆರ್.ಆರ್.)

**ಚೆನ್ನಮಲ್ಲಿಕಾರ್ಜುನ :** ಸು.1560. ವೀರಶೈವಕವಿ. ಶಿವಮಹಿಮಾ ಶತಕ ಮತ್ತು ಗುರುಸ್ತೋತ್ರದ ಟೀಕು ಎಂಬ ಕೃತಿಗಳನ್ನು ರಚಿಸಿದ್ದಾನೆ. ಈತನಿಗೆ ಚೆನ್ನಮಲ್ಲಿಕಾರ್ಜುನದೇವ ಎಂಬ ಹೆಸರು ಇದ್ದಂತೆ ತಿಳಿದುಬರುತ್ತದೆ. ಶಾಂತಲಿಂಗ ಈತನ ಗುರು. ಕವಿ ತನ್ನನ್ನು ಸ್ವಯಶೋಜಿತ, ವಿದ್ವತ್ಕವಿ ಎಂದೂ ವಿಶ್ಲೇಷಿಸಿಕೊಂಡಿದ್ದಾನೆ.

ಶಿವಮಹಿಮಾಶತಕ ಶಿವಪಾರಮ್ಯವನ್ನು ಸಾರುವ ಗ್ರಂಥ. ಇದಕ್ಕೆ ಚೆನ್ನಮಲ್ಲೇಶ್ವರಶತಕ ಎಂಬ ಹೆಸರೂ ಇದೆ. ಇದರಲ್ಲಿ 113 ವೃತ್ತಗಳೂ 2 ಕಂದಗಳೂ ಇವೆ. ಪ್ರತಿವೃತ್ತವೂ ಶ್ರೀ ಚೆನ್ನಮಲ್ಲೇಶ್ವರ ಎಂಬ ಅಂಕಿತದಿಂದ ಮುಕ್ತಾಯವಾಗುತ್ತದೆ.

ಗುರುಸ್ತೋತ್ರದ ಟೀಕು ಎಂಬುದು ಶೀಲವಂತಯ್ಯನಿಂದ (ಸು.1160) ರಚಿತವಾದ ಗುರುಸ್ತೋತ್ರಕ್ಕೆ ಈತ ಬರೆದ ಕನ್ನಡ ಟೀಕು. ಇದಕ್ಕೆ ಆತ್ಮಲಿಂಗಪ್ರಣವ ಸಂಯೋಗಸ್ಥಲದ ತ್ರಿವಿಧಿ ಎಂಬ ಹೆಸರೂ ಇದೆ. ಗುರುಸ್ತೋತ್ರದ ಟೀಕನ್ನು ತನ್ನ ಗುರು ಶಾಂತಲಿಂಗನ ಅಡಿದಾವರೆಗಳಿಗೆ ಭಕ್ತಿಪೂರ್ವಕವಾಗಿ ಸಮರ್ಪಿಸಿದುದಾಗಿ ಕವಿ ಹೇಳಿಕೊಂಡಿದ್ದಾನೆ. (ಜ.)

**ಚೆನ್ನಮ್ಮಾಜಿ :** ಕೆಳದಿ ಸಂಸ್ಥಾನವನ್ನು ಆಳಿದ ರಾಣಿ (1671-97). ಒಂದನೆಯ ಸೋಮಶೇಖರನಾಯಕನ (1663-71) ಪತ್ನಿ. ಸೋಮಶೇಖರ ನಾಯಕ ದುಷ್ಕಟಗಳಿಗೆ ಬಲಿಯಾಗಿ ಮರಣಹೊಂದಿದಾಗ ಸರಿಯಾದ ಉತ್ತರಾಧಿಕಾರಿ ಇರಲಿಲ್ಲವಾಗಿ ರಾಜಧಾನಿಯಲ್ಲಿ ಸಿಂಹಾಸನವನ್ನು ಆಕ್ರಮಿಸುವ ಸಂಚೊಂದು ನಡೆದು ಶಿವಪ್ಪನಾಯಕ ಎಂಬುವನೊಬ್ಬನನ್ನು ರಾಜನೆಂದು ಸಾರಲಾಯಿತು. ಅದೇ ಸಮಯದಲ್ಲಿ ಬಿಜಾಪುರದ ಸುಲ್ತಾನ ಇನ್ನೂ ಹಲವು ಪಾಳೆಯಗಾರರೊಡನೆ ಕೆಳದಿ ರಾಜ್ಯದ ಮೇಲೆ ದಂಡೆತ್ತಿ ಬಂದ. ಈ ಸಂದರ್ಭದಲ್ಲಿ ಚೆನ್ನಮ್ಮಾಜಿ ರಾಜ್ಯವನ್ನು ಶತ್ರುಗಳಿಂದ ರಕ್ಷಿಸಲು ನಿರ್ಧರಿಸಿ ರಾಜಧಾನಿಯಿಂದ 1871ರಲ್ಲಿ ತಪ್ಪಿಸಿಕೊಂಡು ಹೋಗಿ ಭುವನಗಿರಿಯನ್ನು ತಲುಪಿ ಅಲ್ಲಿ ತನ್ನ ಆಪ್ತರಾದ ತಿಮ್ಮಣ್ಣನಾಯಕ ಮತ್ತು ಸಬ್ಬನೀಸ ಕೃಷ್ಣಪ್ಪಯ್ಯ ಎಂಬುವರ ಸಹಾಯದಿಂದ ಶಿವಪ್ಪನಾಯಕನನ್ನು ಕೊಲ್ಲಿಸಿದಳು. ಅನಂತರ ರಾಜಧಾನಿಗೆ ಬಂದು ಅಧಿಕಾರವನ್ನು ವಹಿಸಿಕೊಂಡು ಪಿತೂರಿಗಾರರನ್ನು ಅಡಗಿಸಿದಳು. ಕೆಳದಿ ರಾಜ್ಯದ ಆಕ್ರಮಣದಲ್ಲಿ ತೊಡಗಿದ್ದ ಬಿಜಾಪುರದ ಸುಲ್ತಾನನ ಮತ್ತು ಬಿಳಗಿ, ಸೋದೆ ಮೊದಲಾದ ಪಾಳೆಯಗಾರರ ಸೈನ್ಯವನ್ನು ಸೋಲಿಸಿದಳು. ಪರಾಕ್ರಮದಿಂದ ಹೋರಾಡಿ ಹೊರಗಿನ ಶತ್ರುಗಳ ಭೀತಿಯಿಂದ ರಾಜ್ಯವನ್ನು ರಕ್ಷಿಸಿದುದಲ್ಲದೆ ರಾಜ್ಯದಲ್ಲಿ ಮೂಡಿದ್ದ ಅನಾಯಕತೆಯನ್ನು ಹೋಗಲಾಡಿಸಿದಳು.

1690ರ ವೇಳೆಗೆ ಈಕೆಯ ಕ್ಷಾತ್ರಸತ್ವವನ್ನು ಪರೀಕ್ಷೆಗೆ ಹಚ್ಚುವ ಘಟನೆಯೊದಗಿತು. ಔರಂಗಜೇಬನ ಸೈನ್ಯದಿಂದ ಪರಾಜಿತನಾದ ಶಿವಾಜಿಯ ಎರಡನೆಯ ಮಗ ರಾಜಾರಾಮ ಆಶ್ರಯವನ್ನು ಹುಡುಕುತ್ತ ದಕ್ಷಿಣದತ್ತ ಧಾವಿಸಿ ಬಂದು ಚೆನ್ನಮ್ಮಾಜಿಯ ರಕ್ಷಣೆ ಕೋರಿದ. ಶತ್ರುವಿನ ಮತ್ತು ತನ್ನ ಬಲಾಬಲದ ಮಿತಿಯ ಅರಿವಿದ್ದರೂ ಚೆನ್ನಮ್ಮಾಜಿ ರಾಜಾರಾಮನಿಗೆ ರಕ್ಷಣೆ ನೀಡಿದಳು. ಇದರಿಂದ ಕುಪಿತಗೊಂಡ ಔರಂಗಜೇಬ ಕೆಳದಿ ರಾಜ್ಯವನ್ನು ಮುತ್ತಲು ಸೈನ್ಯ ಕಳುಹಿಸಿದ. ಮುಗಲ ಸೈನ್ಯಕ್ಕೂ ಬಿದನೂರಿನ ಪಡೆಗಳಿಗೂ ತೀವ್ರವಾದ ಯುದ್ಧ ನಡೆದು ಔರಂಗಜೇಬನ ಸೈನ್ಯ ಸೋತು ಹಿಂದಿರುಗಿತು. ಔರಂಗಜೇಬನಂಥ ಮಹಾಪರಾಕ್ರಮಿಯ ಸೈನ್ಯವನ್ನು ಸೋಲಿಸಿದ ಚೆನ್ನಮ್ಮನ ಕೀರ್ತಿ ವಿಶೇಷವಾಗಿ ಹರಡಿತು. ಈ ಸಂಗತಿಯನ್ನು ಕುರಿತಾದ ಕನ್ನಡ ಜನಪದ ಗೀತೆಗಳು ಇಂದಿಗೂ ಜನಜನಿತವಾಗಿವೆ.

ಅನಂತರ ಚೆನ್ನಮ್ಮಾಜಿ ಬಸವಾಪಟ್ಟಣವನ್ನೂ ಹುಲಿಕೆರೆ ಕೋಟೆಯನ್ನೂ ತನ್ನ ರಾಜ್ಯಕ್ಕೆ ಸೇರಿಸಿಕೊಂಡಳು. ಹುಲಿಕೆರೆಗೆ ಚೆನ್ನಗಿರಿ ಎಂದು ಹೆಸರಿಟ್ಟಳು. ಮೈಸೂರಿನ ಅರಸರಿಗೂ ಬಿದನೂರು ರಾಜ್ಯಕ್ಕೂ ವೈಮನಸ್ಯವಿದ್ದದ್ದರಿಂದ 1695ರ ವೇಳೆಗೆ ಯುದ್ಧಗಳು ಪ್ರಾರಂಭವಾದವು. ಪ್ರಾರಂಭದಲ್ಲಿ ಬಿದನೂರಿನ ಸೈನ್ಯ ಪರಾಕ್ರಮದಿಂದ ಹೋರಾಡಿತು. ಆದರೆ ಅರಕಲಗೂಡಿನ ಬಳಿ ನಡೆದ ಕದನದಲ್ಲಾದ ಸೋಲಿನಿಂದ ಕೆಳದಿ ಸಂಸ್ಥಾನದ ಕೆಲವು ಭಾಗ ಕೈಬಿಟ್ಟಿತು.

ಚೆನ್ನಮ್ಮಾಜಿಗೆ ಮಕ್ಕಳಿರಲಿಲ್ಲವಾದ್ದರಿಂದ ಬಾಲಕನೊಬ್ಬನನ್ನು ದತ್ತು ಸ್ವೀಕರಿಸಿ ಬಸವಭೂಪಾಲ ಎಂದು ನಾಮಕರಣ ಮಾಡಿದಳು. ತನ್ನ ಪತಿಯ ಹೆಸರಿನಲ್ಲಿ ಅನೇಕ ಅಗ್ರಹಾರಗಳನ್ನು ನಿರ್ಮಿಸಿದಳು. ಬ್ರಾಹ್ಮಣರಿಗೂ

ಜಂಗಮರಿಗೂ ದಾನದತ್ತಿಗಳನ್ನು ನೀಡಿದಳು. ಕೆಳದಿಯ ವೀರಭದ್ರ ದೇವಾಲಯದ ಮುಂಭಾಗದಲ್ಲಿ ಧ್ವಜಸ್ತಂಭವನ್ನು ಸ್ಥಾಪಿಸಿದಳು. ಉದಾರ ಮತಿಯ ನೀತಿಯನ್ನನುಸರಿಸಿದ ಚೆನ್ನಮ್ಮಾಜಿ ತನ್ನ ರಾಜ್ಯದ ತೀರಪ್ರದೇಶದ ಪಟ್ಟಣಗಳಲ್ಲಿ ಚರ್ಚುಗಳನ್ನು ನಿರ್ಮಿಸಿಕೊಳ್ಳಲು ಪೋರ್ಚುಗೀಸರಿಗೆ ಅನುಮತಿ ನೀಡಿದಳು. ಈಕೆ ಮೂಕಾಂಬಿಕಾ ದೇವಾಲಯಕ್ಕೆ ಭೂಮಿದಾನ ಮಾಡಿದ್ದಲ್ಲದೆ ತನ್ನ ಹೆಸರಿನಲ್ಲಿ ಚೆನ್ನಾಂಬಪುರ ಎಂಬ ಅಗ್ರಹಾರವನ್ನು ಸ್ಥಾಪಿಸಿದಳು. ಇವಳ ದತ್ತುಪುತ್ರನಾದ ಬಸವಪ್ಪನಿಗೆ ಆಡಳಿತದಲ್ಲಿ ತರಬೇತಿ ನೀಡಿ ಸು.1696-97ರಲ್ಲಿ ಅವನಿಗೆ ಪಟ್ಟ ಕಟ್ಟಿ ತಾನು ಅಧಿಕಾರದಿಂದ ನಿವೃತ್ತಳಾದಳು. ಇವಳು 1698ರಲ್ಲಿ ಮರಣಹೊಂದಿದಂತೆ ತಿಳಿದುಬರುತ್ತದೆ. (ಜಿ.ಆರ್.ಆರ್.)

**ಚೆಲುವಾಂಬೆ :** ಸು.1725. ಕನ್ನಡ ಕವಯಿತ್ರಿ. ಮೈಸೂರು ದೊರೆ ದೊಡ್ಡ ಕೃಷ್ಣರಾಜ ಒಡೆಯರ (1713-32) ಪಟ್ಟಮಹಿಷಿ. ದಳವಾಯಿ ದೊಡ್ಡೇಂದ್ರನ ಮಗ ಕಳಲೆ ಕಾಂತನೃಪನ ಮಗಳು. ಈಕೆ ವರನಂದೀಕಲ್ಯಾಣ, ವೆಂಕಟಾಚಲಮಾಹಾತ್ಮ್ಯ ಲಾಲಿಪದ, ಅಲಮೇಲುಮಂಗೈ ಲಾಲಿಪದ, ತುಲಾಕಾವೇರೀಮಾಹಾತ್ಮ್ಯ ಟೀಕೆ ಎಂಬ ಕೃತಿಗಳನ್ನು ರಚಿಸಿದ್ದಾಳೆ. ಈಕೆ ಕೃಷ್ಣಕರ್ಣಾಮೃತದ ಟೀಕೆಯನ್ನೂ ಬರೆದಿರುವುದಾಗಿ ತಿಳಿದುಬರುತ್ತದೆ.

ವರನಂದೀಕಲ್ಯಾಣ ಸಾಂಗತ್ಯದಲ್ಲಿ ರಚಿತವಾಗಿದೆ. ಇದರಲ್ಲಿ 7 ಸಂಧಿಗಳೂ 881 ಪದ್ಯಗಳೂ ಇವೆ. ತನ್ನ ಪತಿಯು ಯದುಗಿರಿಯರೆಯನ ಚಾರಿತ್ರ್ಯವನ್ನು ನೆರೆ ಸೊಬಗಿನೊಳುಸುರು ಎಂದು ನೇಮಿಸಲು ಅದನ್ನು ಶಿರದೊಳಾಂತು ಈ ಕಾವ್ಯವನ್ನು ರಚಿಸಿದೆನೆಂದೂ ಕೃತಿಗೆ ಕರ್ತನು ಚೆಲುವರಾಯ ಸನ್ಮತಿಯಿತ್ತವನು ಶ್ರೀನಿವಾಸ ಎಂದೂ ಹೇಳಿಕೊಂಡಿದ್ದಾಳೆ. ಉನ್ನತಿ ಪಡೆದ ಅಚ್ಚಗನ್ನಡದ ಇನಿವಾತನ್ನು ಚೆನ್ನತೆಗೊಳಿಸಿ ವರ್ಣಕದಲ್ಲಿ ಕಾವ್ಯವನ್ನು ಹೇಳುವುದಾಗಿಯೂ ಕಾವ್ಯಾರಂಭದಲ್ಲಿ ಹೇಳಿಕೊಂಡಿದ್ದಾಳೆ. ದಿಲ್ಲಿಯ ಬಾದಶಹನ ಮಗಳಾದ ವರನಂದಿಗೂ ಮೇಲುಕೋಟೆ ಚೆಲುವರಾಯಸ್ವಾಮಿಗೂ ನಡೆದ ವಿವಾಹ ಈ ಕಾವ್ಯದ ವಸ್ತು. ಸತ್ಯಭಾಮೆಯೇ ವರನಂದಿಯಾಗಿ ಹುಟ್ಟಿದಂತೆ ಕಾವ್ಯದಲ್ಲಿ ಹೇಳಿದೆ. ವಿವಾಹ ಸಂದರ್ಭದ ವರ್ಣನೆಗಳು ಮನೋಹರವಾಗಿವೆ. ಶೈಲಿ ಸರಳವೂ ಲಲಿತವೂ ಹೃದಯಂಗಮವೂ ಆಗಿದೆ.

ವೆಂಕಟಾಚಲಮಾಹಾತ್ಮ್ಯ ಲಾಲಿಪದದಲ್ಲಿ ವೆಂಕಟಾಚಲಪತಿಯ ಕಥೆಯನ್ನು ನಿರೂಪಿಸುವ 203 ಲಾಲಿಪದಗಳಿವೆ. ಅಲಮೇಲುಮಂಗೈ ಲಾಲಿಪದದಲ್ಲಿ ವೆಂಕಟಾಚಲಪತಿಯ ಪತ್ನಿ ಅಲಮೇಲುಮಂಗೈ ಎಂಬ ಲಕ್ಷ್ಮಿಯ ಸ್ತುತಿರೂಪವಾದ 35 ಲಾಲಿಪದಗಳಿವೆ. ತುಲಾಕಾವೇರಿ ಮಾಹಾತ್ಮ್ಯ ಟೀಕೆ ಅಗ್ನಿಪುರಾಣೋಕ್ತವಾದ ತುಲಾಕಾವೇರಿಮಾಹಾತ್ಮ್ಯಕ್ಕೆ ಗದ್ಯರೂಪದಲ್ಲಿ ಬರೆದ ಕನ್ನಡ ಟೀಕೆ. ಇದಕ್ಕೆ ಚೆಲುವಾಂಬಿಕಾವಾಣಿವಿಲಾಸವೆಂಬ ಹೆಸರೂ ಇದೆ. ಇದರಲ್ಲಿ 30 ಅಧ್ಯಾಯಗಳಿವೆ. ಗ್ರಂಥಾಂತ್ಯದಲ್ಲಿರುವ ಒಂದು ಶ್ಲೋಕದಿಂದ ಚೆಲುವಾಂಬಿಕೆಯ ಅಂಕಿತದಲ್ಲಿ ಮೌದ್ಗಲ್ಯಗೋತ್ರದ ವೆಂಕಟಾರ್ಯನ ಮಗ ಶ್ರೀನಿವಾಸ ಈ ಟೀಕೆಯನ್ನು ಬರೆದಂತೆ ತೋರುತ್ತದೆ. ಈಕೆಯ ಕೃತಿಗಳಲ್ಲಿ ಸ್ತ್ರೀಯರಿಗೆ ಅನುಭವವೇದ್ಯವಾದ ಅಪ್ಯಾಯಮಾನವಾದ ಅಂಶಗಳು ಅಧಿಕವಾಗಿ ಅಡಕವಾಗಿವೆ. ದೊಡ್ಡ ಪಂಡಿತೆಯಂತೆ ಕಾವ್ಯರಚನೆಯ ಪ್ರಯತ್ನದಲ್ಲಿ ತೊಡಗದೆ ಸ್ತ್ರೀತ್ವವನ್ನು ಮೆರೆದಿರುವುದೇ ಚೆಲುವಾಂಬೆಯ ವೈಶಿಷ್ಟ್ಯ. (ಕೆ.ಎಸ್.ಕೆ.)

**ಚೆಲ್ಲಕೇತನ :** 9-10ನೆಯ ಶತಮಾನಗಳಲ್ಲಿ ಬನವಾಸಿ ಮಂಡಲದ ಅಧಿಕಾರಿಗಳಾಗಿದ್ದ ಒಂದು ಪ್ರಮುಖ ಮನೆತನ. ಎಱಕೋರಿ ಎಂಬುವವನು ಇದರ ಮೊದಲಿಗ. ಕೊಳನೂರಾಧೀಶ್ವರನೆನಿಸಿದ ಧೋರ ಈತನ ಮಗ. ಧೋರನ ಮಗ ಬಂಕೆಯ. ಈತನ ತಾಯಿ ವಿಜಯಾಂಕಾ. ಬಂಕೆಯನನ್ನು ಶಾಸನಗಳಲ್ಲಿ ಬಂಕೇಶ, ಬಂಕೆಯರಸ ಎಂದೂ ಕರೆಯಲಾಗಿದೆ (ನೋಡಿ: ಬಂಕೇಶ). ಈತ ರಾಷ್ಟ್ರಕೂಟ 1ನೆಯ ಅಮೋಘವರ್ಷನ ಮಾಂಡಲಿಕನಾಗಿ ಬನವಾಸಿ ನಾಡನ್ನು ಆಳುತ್ತಿದ್ದ. ಕುಂದಟ್ಟೆ ಮತ್ತು ಲೋಕಾದಿತ್ಯ (ಲೋಕಟೆ) ಇವನ ಮಕ್ಕಳು. ಹಿರಿಯ ಮಗ ನಿಡುಗಂದಗೆ 12 ಎಂಬ ಸಣ್ಣ ಭಾಗದ ಅಧಿಕಾರಿಯಾಗಿದ್ದ. ಲೋಕಾದಿತ್ಯ ಸು.895 ರಿಂದ ಒಂದು ದಶಕಕ್ಕೂ ಹೆಚ್ಚು ಕಾಲ ಬನವಾಸಿ ಪ್ರಾಂತ್ಯಾಧಿಕಾರಿಯಾಗಿದ್ದ. ಇವನ ಮಗ ಕಲಿವಿಟ್ಟ. ಇವನ ಅಧೀನದಲ್ಲಿ ಪುನ್ನವಂತಿ (ಹೊನ್ನತ್ತಿ) 12ರ ಅಧಿಕಾರಿಯಾಗಿದ್ದ. 916ರ ಹಾಗೂ 928ರ ಶಾಸನಗಳಲ್ಲಿ ಬಂಕೆಯನೆಂಬಾತ ಬನವಾಸಿ ಪ್ರಾಂತ್ಯಾಧಿಕಾರಿಯಾಗಿದ್ದನೆಂದು ಹೇಳಿದೆ. ಈತ ಲೋಕಟೆಯ ಮಗನಾಗಿರಬೇಕು. 914ರ ಶಾಸನವೊಂದರಲ್ಲಿ ಧೋರನೆಂಬಾತ ಈ ಪ್ರಾಂತ್ಯವನ್ನು ಆಳುತ್ತಿದ್ದನೆಂದು ಹೇಳಿದೆ. ಆದ್ದರಿಂದ ಈತ ಇಮ್ಮಡಿ ಬಂಕೆಯನ ಸೋದರನಾಗಿರಬಹುದು. ಕಲಿವಿಟ್ಟವೆಂಬವನು ಲೋಕಟೆಯ ಮಗನೆಂದು ಹೇಳಿರುವ ಕಾರಣದಿಂದಲೂ ಆತನ ಶಾಸನಗಳು ಧೋರನ ಶಾಸನಕ್ಕೂ ಮೊದಲಿನವಾದ್ದರಿಂದಲೂ ಕಲಿವಿಟ್ಟನಿಗೆ ಧೋರ ಕಿರಿಯ ಸೋದರನೆಂದು ಊಹಿಸಬಹುದು. ಕಲಿವಿಟ್ಟ 929ರಲ್ಲಿ ಬೆಳ್ವೊಲ 200 ಪ್ರಾಂತ್ಯವನ್ನು ಆಳುತ್ತಿದ್ದ. ಅದೇ ಹೆಸರಿನ ಒಬ್ಬಾತ ಬನವಾಸಿಯನ್ನು 945-46ರಲ್ಲಿ ಆಳುತ್ತಿದ್ದನೆಂದೂ ಶಾಸನಗಳಿಂದ ತಿಳಿದಿದೆ. 928ರವರೆಗೆ ಬಂಕೆಯ ಬನವಾಸಿ ನಾಡಧಿಕಾರಿಯಾಗಿದ್ದ ಕಾರಣ, ಅವನ ಅನಂತರ ಅವನ ಮಗನಾದ ಕಲಿವಿಟ್ಟ ಮೊದಲು ಬೆಳ್ವೊಲ ಹಾಗೂ ಅನಂತರ ಬನವಾಸಿ ಪ್ರಾಂತ್ಯಗಳ ಅಧಿಕಾರಿಯಾಗಿದ್ದನೆಂದು ಊಹಿಸಬೇಕಾಗಿದೆ. ಈ ವಿವರಗಳನ್ನು ಒಟ್ಟುಗೂಡಿಸಿ ಚೆಲ್ಲಕೇತನ ಮನೆತನದ ವಂಶಾವಳಿಯನ್ನು ಹೀಗೆ ರೂಪಿಸಬಹುದು:

ಎಱಕೋರಿ
|
ಧೋರ I
|
ಬಂಕೆಯ I (860)

ಕುಂದಟ್ಟೆ (860) — ಲೋಕಟೆ (ಲೋಕಾದಿತ್ಯ 895-905)

ಲೋಕಟೆಯ ಮಕ್ಕಳು: ಕಲಿವಿಟ್ಟ I (913-14) — ಧೋರ II (915-16) — ಬಂಕೆಯ II (916-28)

ಬಂಕೆಯ II
|
ಕಲಿವಿಟ್ಟ II (928-45)

(ಬಿ.ಆರ್.ಜಿ.)

**ಚೇರಮಾಂಕ :** ಸು.1526. ವೀರಶೈವ ಕವಿ. ಚೇರಮಕಾವ್ಯದ ಕರ್ತೃ. ಈತನ ಅಜ್ಜ ನಾಗಲಿಂಗಸೆಟ್ಟಿ, ತಂದೆ ಗಂಗಪ್ಪಸೆಟ್ಟಿ, ಗುರುಚೆನ್ನವೀರೇಶ. ಚೇರಮಕಾವ್ಯವನ್ನು ಗುಬ್ಬಿಯ ಮಲ್ಲಣಾರ್ಯನ ಕೃಪೆಯಿಂದ ಬರೆದಂತೆ ಕವಿ ಹೇಳಿಕೊಂಡಿದ್ದಾನೆ. ಪೂರ್ವಕವಿಗಳಲ್ಲಿ ಪಾಲ್ಕುರಿಕೆಸೋಮನಾಥ, ಕೆರೆಯ ಪದ್ಮರಸ, ಕುಮಾರ ಪದ್ಮರಸ, ಹರೀಶ್ವರ – ಇವರನ್ನು ಸ್ಮರಿಸಿದ್ದಾನೆ. ಕವಿ ತನ್ನನ್ನು ನವರಸಭಾವಲಕ್ಷಣಾಲಂಕಾರನಿಪುಣ ಎಂದು ವಿಶ್ಲೇಷಿಸಿಕೊಂಡಿದ್ದಾನೆ.

ಚೇರಮಕಾವ್ಯ ವಾರ್ಧಕ ಷಟ್ಪದಿಯಲ್ಲಿದೆ. ಇದರಲ್ಲಿ 11 ಸಂಧಿಗಳೂ 555 ಪದ್ಯಗಳೂ ಇವೆ. ಶಿವಭಕ್ತ ಚೇರಮನ ಕಥೆ ಕಾವ್ಯದ ವಸ್ತು. ತಾನು ಈ ಕಾವ್ಯವನ್ನು 1526ರಲ್ಲಿ ಬರೆದಂತೆ ಕವಿ ಹೇಳಿಕೊಂಡಿದ್ದಾನೆ. ಚೇರಮನನ್ನು ಕುರಿತಂತೆ ಹರಿಹರ ಒಂದು ರಗಳೆಯನ್ನೂ ವಿರುಪರಾಜ ಸು.1519ರಲ್ಲಿ ರಚಿಸಿದ ತನ್ನ ತ್ರಿಭುವನತಿಲಕದಲ್ಲಿ ಕೆಲವು ವಿಷಯಗಳನ್ನೂ ಬರೆದಿರುವಂತೆ ತಿಳಿದುಬರುತ್ತದೆ. ಇದೊಂದು ಭಕ್ತಿರಸಪ್ರಧಾನವಾದ ಕಾವ್ಯ. ಕವಿ ಅತಿಯಾಗಿ ಸಂಸ್ಕೃತವನ್ನು ಬಳಸದೆ ಕನ್ನಡದಲ್ಲಿಯೇ ಸಮಗ್ರ ಕಾವ್ಯವನ್ನು ರಚಿಸಲು ಪ್ರಯತ್ನಿಸಿದ್ದಾನೆ. ಶೈಲಿ ಪ್ರೌಢವಾಗಿಯೂ ಗಂಭೀರವಾಗಿಯೂ ಇದೆ. ಕಾವ್ಯದಲ್ಲಿ ಬರುವ ವರ್ಣನೆಗಳು ಹಿತಮಿತವಾಗಿವೆ. ತನ್ನ ಕಾವ್ಯದಲ್ಲಿ ಬಿಟ್ಟಕಣ್ಣಾವರೂರ ಸುಧೆಯ ಸವಿ, ಮನವಲರ್ದುನಟ್ಟು ಕೂಡುವ ಲತಾಂಗಿಯ ಸೋಂಕು ಇರುವುದಾಗಿಯೂ ಪಂಚೇಂದ್ರಿಯಂ ನಲಿವವೋಲ್ ತಾನು ಕಾವ್ಯವನ್ನು ಹೇಳಿರುವುದಾಗಿಯೂ ಪ್ರಶಂಸೆ ಮಾಡಿಕೊಂಡಿದ್ದಾನೆ. ಈತನದು ಮಧ್ಯಮ ದರ್ಜೆಯ ಲಕ್ಷಣಯುಕ್ತ ಷಟ್ಪದೀಕಾವ್ಯ ಎಂದು ಹೇಳಬಹುದು. (ಎನ್.ಬಿ.)

**ಚೊಕ್ಕಮ್ಮ, ಎನ್. :** 1922-. ಕರ್ನಾಟಕ ಸಂಗೀತ ವಿದುಷಿ. 1922 ಸೆಪ್ಟೆಂಬರ್ 18ರಂದು ಬೆಂಗಳೂರಿನಲ್ಲಿ ಜನಿಸಿದರು. ತಂದೆ ನರಸಿಂಹ ಅಯ್ಯಂಗಾರ್, ತಾಯಿ ರುಕ್ಕಮ್ಮ. ಚೊಕ್ಕಮ್ಮನವರು ಅಕ್ಕ ಹಾಗೂ ಭಾವನವರ ಮನೆಯಲ್ಲಿ ಮೈಸೂರಿನಲ್ಲಿ ಬೆಳೆದರು. ಎಸ್.ಎಸ್.ಎಲ್.ಸಿ. ಓದಿದರು. ಅಕ್ಕ ಪದ್ಮಮ್ಮ ಹಾಗೂ ಭಾವ ಬಿ.ಎಸ್.ಅಯ್ಯಂಗಾರ್ ಅವರಿಗೆ ಸಂಗೀತದ ಬಗ್ಗೆ ಅಪಾರ ಒಲವಿತ್ತಲ್ಲದೆ ಅದರ ಪರಿಚಯವೂ ಇತ್ತು. ಗಂಧದೆಣ್ಣೆ ಕಾರ್ಖಾನೆಯಲ್ಲಿ ಮಹಾ ವ್ಯವಸ್ಥಾಪಕರಾಗಿದ್ದ ಭಾವನವರು ಹಾಗೂ ಅಕ್ಕನ ಆಸೆ, ಪ್ರೋತ್ಸಾಹ, ಉತ್ತೇಜನದಿಂದಾಗಿ ಇವರಿಗೆ ಸಂಗೀತಾಭ್ಯಾಸ ಆರಂಭವಾಯಿತು. ಅಕ್ಕನೇ ಇವರಿಗೆ ಆರಂಭದ ಗುರುವಾಗಿದ್ದರು. ಅವರು ಹಾರ್ಮೋನಿಯಂ



ನುಡಿಸಿಕೊಂಡು ತಂಗಿಗೆ ಸಂಪ್ರದಾಯದ ಹಾಡುಗಳು ಹಾಗೂ ಪೂಜೆಯ ಹಾಡುಗಳನ್ನು ಕಲಿಸಿದರು. ಅನಂತರ ವಿರೂಪಾಕ್ಷ ಶಾಸ್ತ್ರಿಯವರಿಂದ ಕರ್ನಾಟಕ ಶಾಸ್ತ್ರೀಯ ಸಂಗೀತದ ಪ್ರಾರಂಭ ಪಾಠವಾಯಿತು. ಅನಂತರ ಕೆಲವು ತಿಂಗಳ ಕಾಲ ಇವರು ಸ್ವರ ಮೂರ್ತಿಯವರಿಂದ ವೀಣೆಯ ಪಾಠ ಕಲಿತರು. ಅನಂತರ ವೀಣೆ ಸುಬ್ಬಣ್ಣನವರ ಶಿಷ್ಯರಾದ ವೀಣೆ ದೇವಪ್ಪನವರಿಂದಲೂ ಟಿ.ಪುಟ್ಟಸ್ವಾಮಯ್ಯ, ತಿಟ್ಟೆ ಕೃಷ್ಣಅಯ್ಯಂಗಾರ್, ಕಲಾನಿಧಿ ಕೆ.ವಾಸುದೇವಾ ಚಾರ್ಯರಿಂದಲೂ ಇವರಿಗೆ ಪ್ರೌಢ ಪಾಠವಾಯಿತು. ಜೊತೆಗೆ ಡಿ.ಶೇಷಪ್ಪನವರ ಮಾರ್ಗದರ್ಶನವೂ ದೊರೆಯಿತು. ವೀಣೆಯನ್ನು ನುಡಿಸಿಕೊಂಡು ಹಾಡುವುದು ಚೊಕ್ಕಮ್ಮನವರ ಸಂಗೀತದ ವಿಶೇಷತೆಯಾಗಿತ್ತು.

ಚೊಕ್ಕಮ್ಮನವರು ಅನೇಕ ಸಾರ್ವಜನಿಕ ಕಾರ್ಯಕ್ರಮಗಳನ್ನು ನೀಡಿದ್ದಾರೆ. 1938ರಲ್ಲಿ ಎಂ.ವಿ. ಗೋಪಾಲಸ್ವಾಮಿ ಅವರ ಮೈಸೂರು ಆಕಾಶವಾಣಿ ಕೇಂದ್ರದಲ್ಲಿ ಇವರ ಸಂಗೀತ ಪ್ರಸಾರವಾಯಿತು. ದೇಶದ ಅನೇಕ ರಾಮಮಂದಿರಗಳು ಮತ್ತು ಸಭಾ ಸಮಾರಂಭಗಳಲ್ಲಿ ಇವರು ಹಾಡಿದ್ದಾರೆ. ಮೈಸೂರು ಅರಮನೆಯಲ್ಲಿ ಅನೇಕ ಕಾರ್ಯಕ್ರಮಗಳನ್ನು ನೀಡಿದ್ದಾರೆ. ಇಡೀ ದಕ್ಷಿಣ ಭಾರತದಲ್ಲಿ ಇವರು ಅನೇಕ ಕಛೇರಿಗಳಲ್ಲಿ ಹಾಡಿದ್ದಾರೆ. ದೇಶದ ಇತರ ರೇಡಿಯೋ ಕೇಂದ್ರಗಳೂ ಇವರ ಸಂಗೀತವನ್ನು ಪ್ರಸಾರ ಮಾಡಿವೆ. ಇವರು ಹಿರಿಯ ವಿದ್ವಾಂಸರ ಪ್ರಶಂಸೆಯನ್ನೂ ಗಳಿಸಿದರು. ಇವರು ಅನೇಕ ವಿದ್ಯಾರ್ಥಿಗಳಿಗೆ ಸಂಗೀತ ಶಿಕ್ಷಣ ನೀಡಿದ್ದಾರೆ. ಅನೇಕ ದೇವರನಾಮ ಹಾಗೂ ಪಲ್ಲವಿಗಳಿಗೆ ಸ್ವರ, ತಾಳಗಳನ್ನು ಸಂಯೋಜಿಸಿದ್ದಾರೆ. ಇವರಿಗೆ ಸಂಸ್ಕೃತ, ಹಿಂದಿ, ತಮಿಳು ಭಾಷೆಗಳ ಪರಿಚಯವಿದೆ.

ಇವರ ಸಂಗೀತವನ್ನು ಮೆಚ್ಚಿ ಅನೇಕ ಸಂಘ ಸಂಸ್ಥೆಗಳು ಇವರನ್ನು ಸನ್ಮಾನಿಸಿವೆ. ಮಲ್ಲಾಡಿಹಳ್ಳಿ ಸ್ವಾಮಿಯವರಿಂದ ಸ್ವರಕಿನ್ನರಿ, ಅಖಿಲ ಸಾಧು ಸಮ್ಮೇಳನದಿಂದ ವೀಣಾವಾದನ ಚತುರೆ, ಸ್ವರಲಿಪಿ ಪ್ರತಿಷ್ಠಾನದಿಂದ ಸ್ವರಭೂಷಿಣಿ ಬಿರುದುಗಳು ಇವರಿಗೆ ದೊರೆತಿವೆ. ಕರ್ನಾಟಕ ಸರ್ಕಾರವು ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ (1975). ಸಂಗೀತ ನೃತ್ಯ ಅಕಾಡೆಮಿ, ಗಾಯನ ಸಮಾಜ, ಗಾನಕಲಾಪರಿಷತ್ತು, ರೋಟರಿ ಕ್ಲಬ್ ಮೊದಲಾದ ಸಂಸ್ಥೆಗಳು ಇವರನ್ನು ಸನ್ಮಾನಿಸಿ ಗೌರವಿಸಿವೆ. ಇವರು 1996ರಲ್ಲಿ ಗಾನಕಲಾಪರಿಷತ್ತಿನ ಸಂಗೀತ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. 1998ರ ದಸರ ಸಂದರ್ಭದಲ್ಲಿ ಇವರಿಗೆ ಕರ್ನಾಟಕ ರಾಜ್ಯದ ಸಂಗೀತ ವಿದ್ವಾನ್ ಪ್ರಶಸ್ತಿ ದೊರಕಿತು. (ಎಚ್.ಆರ್.ಎಲ್.)

**ಚೋಳರ ಆಳಿಕೆ :** ಕರ್ನಾಟಕದ ದಕ್ಷಿಣದ ಕೆಲವು ಜಿಲ್ಲೆಗಳ ಮೇಲೆ 11-12ನೆಯ ಶತಮಾನಗಳಲ್ಲಿ ಚೋಳರ ಪ್ರಭುತ್ವ ಇತ್ತು. ಇದು ಆರಂಭವಾದುದು ಹನ್ನೊಂದನೆಯ ಶತಮಾನದ ಆರಂಭದಲ್ಲಿ, ಪ್ರಸಿದ್ಧನಾದ ಚೋಳ ಅರಸ ರಾಜರಾಜನ ಕಾಲದಿಂದ. ಆದರೆ ಅದಕ್ಕೂ ಮೊದಲೇ ಕರ್ನಾಟಕದೊಡನೆ ಚೋಳರ ಸಂಪರ್ಕ ಗಂಗರ ಕಾಲದಲ್ಲಿ ಆರಂಭವಾಗಿತ್ತು. ಗಂಗ ಇಮ್ಮಡಿ ಶಿವಮಾರನ ಮಗ ಪೃಥ್ವೀಪತಿ ತಂದೆಯ ಮರಣದ ಕಾಲಕ್ಕೆ ಇನ್ನೂ ಅಪ್ರಾಪ್ತ ವಯಸ್ಕನಾಗಿದ್ದ ಕಾರಣ ಸಿಂಹಾಸನ ಈತನ ಚಿಕ್ಕಪ್ಪ ವಿಜಯಾದಿತ್ಯನ ಪಾಲಿಗೆ ಬಂತು. ಆತ ಅದನ್ನು ತನ್ನ ಮಗ ರಾಚಮಲ್ಲನಿಗೆ ವಹಿಸಿದ. ಇದರಿಂದ ರಾಜ್ಯ ಪೃಥ್ವೀಪತಿಯ ಕೈತಪ್ಪಿತು. ಕಳೆದುಹೋದ ರಾಜ್ಯವನ್ನು ಪಡೆಯಲೆಂದು ಆತ ಚೋಳ ಒಂದನೆಯ ಆದಿತ್ಯನ (871-907) ನೆರವನ್ನು ಪಡೆದ. ತೊಂಡೈಮಂಡಲದಲ್ಲಿ ಆಳುತ್ತಿದ್ದ ಪಲ್ಲವ ಅಪರಾಜಿತನನ್ನು ಆದಿತ್ಯ ಸೋಲಿಸಿದಾಗ ಪೃಥ್ವೀಪತಿ ಚೋಳ ಅರಸನಿಗೆ ನೆರವು ನೀಡಿದ. ಈ ಗಂಗ ಅರಸ ಚೋಳರ ಸಾಮಂತಿಕೆಯನ್ನು ಒಪ್ಪಿದಂತೆ ತೋರುತ್ತದೆ. ಆದಿತ್ಯನ ಮಗ ಪರಾಂತಕ ಪೃಥ್ವೀಪತಿಯ ಮೊಮ್ಮಗ ಇಮ್ಮಡಿ ಪೃಥ್ವೀಪತಿಗೆ ನೆರವಾಗಿ ಬಾಣರನ್ನು ಸೋಲಿಸಿ ಅವರ ಆಳಿಕೆಯ ಪ್ರದೇಶವನ್ನೂ ಸೆಂಬಿಯನ್ ಮಹಾಬಲಿ ಬಾಣರಸ ಎಂಬ ಬಿರುದನ್ನೂ ಗಂಗನಿಗಿತ್ತ. ಪರಾಂತಕನ ಅನಂತರ ರಾಷ್ಟ್ರಕೂಟ ಮುಮ್ಮಡಿ ಕೃಷ್ಣ ಚೋಳ ರಾಜ್ಯದಲ್ಲಿ ನಡೆಸಿದ ದಾಳಿಗಳ ಪರಿಣಾಮವಾಗಿ ಅವರ ಪ್ರಾಬಲ್ಯ ಸ್ವಲ್ಪಕಾಲ ಕುಗ್ಗಿತು.



ಅಗರದ ನರಸಿಂಹ ದೇವಾಲಯ

985ರಲ್ಲಿ ಪಟ್ಟಕ್ಕೆ ಬಂದ ರಾಜರಾಜ ಚೋಳ ಸು.1004ರ ವೇಳೆಗೆ ಕುಡುಮಲೈ ನಾಡಿನ ಮೇಲೆ ದಂಡೆತ್ತಿ ಉದಗೈಕೋಟೆಯನ್ನು ಆಕ್ರಮಿಸಿದ. ಈ ಕುಡುಮಲೈನಾಡು ಈಗಿನ ಕೊಡಗು ಜಿಲ್ಲೆಯ ಪ್ರದೇಶವೆಂದು ಗುರುತಿಸಲಾಗಿದೆ. ಈ ದಂಡಯಾತ್ರೆಯಲ್ಲಿ ಯುವರಾಜ ರಾಜೇಂದ್ರ ಪ್ರಮುಖ ಪಾತ್ರ ವಹಿಸಿದ್ದ. ಈತ ಕೊಡಗಿನ ಮಾಲಂಬಿಯ ಸುತ್ತಲಿನ ಏಳು ಸಾವಿರ ಸೀಮೆಗೆ ಕೊಂಗಾಳ್ವರನ್ನು ಅಧಿಪರನ್ನಾಗಿ ನೇಮಿಸಿದ. ಇದರ ಪರಿಣಾಮವಾಗಿ ಕೊಂಗಾಳ್ವರು ಚೋಳ ಅರಸರ ಹೆಸರುಗಳನ್ನು ಸ್ವೀಕರಿಸಿದರು. ಈ ದಂಡಯಾತ್ರೆಯ ಮುಂದಿನ ಹೆಜ್ಜೆ ತಡಿಗೈ (ದಡಿಗೈ) ಪಾಡಿಯ ಮೇಲೆ. ಇದು ಮಂಡ್ಯ ಜಿಲ್ಲೆಯ ನಾಗಮಂಗಲ, ಮಂಡ್ಯ, ಮಳವಳ್ಳಿ, ಶ್ರೀರಂಗಪಟ್ಟಣ, ಕೃಷ್ಣರಾಜ ಪೇಟೆ ತಾಲ್ಲೂಕುಗಳನ್ನು ಒಳಗೊಂಡ ಪ್ರಾಂತ್ಯವಾಗಿತ್ತು. ಈ ವೇಳೆಗೆ ಗಂಗರ ಪ್ರಾಬಲ್ಯ ಸಹ ಕುಗ್ಗಿ ಗಂಗವಾಡಿ ಸಹ ಸುಲಭವಾಗಿ ಚೋಳರ ವಶವಾಯಿತು. ರಾಜರಾಜ ಇದಕ್ಕೆ ಮುಡಿಗೊಂಡಚೋಳ ಮಂಡಲವೆಂಬ ಹೆಸರಿತ್ತ. ತೆಲ್ಲಕುಲದ ಅಪ್ರಮೇಯನನ್ನು ತನ್ನ ಪ್ರತಿನಿಧಿಯಾಗಿ ನೇಮಿಸಿದ. ನೊಳಂಬರು ಮೊದಲು ಗಂಗರ ಅಧೀನರಾಗಿದ್ದು ಕೊನೆಕೊನೆಗೆ ಅವರ ವೈರವನ್ನು ಕಟ್ಟಿಕೊಂಡರು. ದಡಿಗಪಾಡಿಯನ್ನು ಕಸಿದುಕೊಂಡ ಬಳಿಕ

ಅವರೂ ಚೋಳರ ಸಾಮಂತಿಕೆಯನ್ನು ಒಪ್ಪಿದರು. ತಲಕಾಡನ್ನು ಸಹ ವಶಪಡಿಸಿಕೊಂಡ ರಾಜರಾಜ ಅನಂತರ ನೊಳಂಬವಾಡಿಯನ್ನು ಆಕ್ರಮಿಸಿದ. ಕೋಲಾರ, ಬೆಂಗಳೂರು, ತುಮಕೂರು, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಕೆಲವು ಪ್ರದೇಶಗಳನ್ನೂ ಒಳಗೊಂಡ ಪ್ರಾಂತ್ಯವಾದ ನೊಳಂಬವಾಡಿ ನಿಗರಿಲಿ ಚೋಳಮಂಡಲದ ಒಂದು ಭಾಗವಾಯಿತು. ಕೋಲಾರ ಜಿಲ್ಲೆಯ ಪೂರ್ವಪ್ರದೇಶ ನಿಗರಿಲಿ ಚೋಳ ಮಂಡಲದಲ್ಲಿನ ಕುವಳಾಲನಾಡು ಎನಿಸಿಕೊಂಡಿತು. ಚಿಂತಾಮಣಿ ತಾಲ್ಲೂಕು ಕೈವಾರನಾಡಿಗೂ ಚಿಕ್ಕಬಳ್ಳಾಪುರ ತಾಲ್ಲೂಕು ಕಳವರ ನಾಡಿಗೂ ಸೇರಿದವು.

ರಟ್ಟಪಾಡಿ ನಾಡನ್ನು ಸಹ ರಾಜರಾಜ ಗೆದ್ದುಕೊಂಡನೆಂದು ಚೋಳರ ಶಾಸನಗಳು ಹೇಳಿದ್ದರೂ ಅದು ಉತ್ಪ್ರೇಕ್ಷೆಯಾಗಿದ್ದಂತೆ ತೋರುತ್ತದೆ. ಇರಿವಬೆಡಂಗ ಸತ್ಯಾಶ್ರಯನ ನೇತೃತ್ವದಲ್ಲಿ ಚಾಳುಕ್ಯ ಸೈನ್ಯ ರಾಜರಾಜನನ್ನು ಸೋಲಿಸಲು ಯತ್ನಿಸಿತಾದರೂ ಹೆಚ್ಚಿನ ಯಶಸ್ಸು ಲಭಿಸಲಿಲ್ಲ. ತುಂಗಭದ್ರಾನದಿ ಎರಡೂ ರಾಜ್ಯಗಳ ನಡುವಣ ಮೇರೆಯಾಯಿತು.



ಹಳೇಆಲೂರಿನ ಅರ್ಕೇಶ್ವರ ದೇವಾಲಯದ ಮುಂಭಾಗ

ರಾಜರಾಜನ ಮಗ ಮೊದಲನೆಯ ರಾಜೇಂದ್ರ 1012ರಲ್ಲಿ ಪಟ್ಟಾಭಿಷಿಕ್ತನಾದ. ಈತ ತನ್ನ ಆಳಿಕೆಯ ಮೂರನೆಯ ವರ್ಷದೊಳಗಾಗಿ ಕರ್ನಾಟಕದ ಅರಸನಾದ ಚಾಳುಕ್ಯ ಐದನೆಯ ವಿಕ್ರಮಾದಿತ್ಯನನ್ನು ಕದನದಲ್ಲಿ ಎದುರಿಸಿದನೆಂಬುದು ಈತನ ತಿರುಮಣ್ಣಿವಳವ ಎಂಬ ಪ್ರಶಸ್ತಿಯಿಂದ ತಿಳಿಯುತ್ತದೆ. ಎಡದೊರೆ ನಾಡು (ಕೃಷ್ಣಾ-ತುಂಗಭದ್ರಾಗಳ ನಡುವಣ ಈಗಿನ ರಾಯಚೂರು ಜಿಲ್ಲೆಯನ್ನೊಳಗೊಂಡ ಪ್ರದೇಶ) ಮತ್ತು ಬನವಾಸಿಗಳನ್ನು ಈತ ಗೆದ್ದುಕೊಂಡನೆಂದು ಅದರಲ್ಲಿ ಹೇಳಿದೆ. ಅದೂ ಉತ್ಪ್ರೇಕ್ಷೆಯೇ. ವಿಕ್ರಮಾದಿತ್ಯನ ಅನಂತರ ಆಳತೊಡಗಿದ ಜಯಸಿಂಹನೊಡನೆಯೂ ರಾಜೇಂದ್ರ ಕಾದಬೇಕಾಯಿತು. ರಾಯಚೂರು ಜಿಲ್ಲೆಯ ಮಸ್ಕಿಯಲ್ಲಿ ಕದನ ನಡೆಯಿತು. ತಮ್ಮ ಅರಸನಿಗೆ ಹೆದರಿ ಜಯಸಿಂಹ ಓಡಿಹೋದ; ರಟ್ಟಪಾಡಿ ಏಳೂವರೆ ಲಕ್ಷ ಪ್ರದೇಶ ರಾಜೇಂದ್ರನ ವಶವಾಯಿತು ಎಂದು ಎಂದಿನಂತೆ ಚೋಳರ ಶಾಸನಗಳು ಹೇಳಿಕೊಳ್ಳುತ್ತವೆಯಾದರೂ ವಾಸ್ತವಿಕವಾಗಿ ಸಮಾನಬಲದ ಇಬ್ಬರಲ್ಲಿ ಯಾರಿಗೂ ಯಶಸ್ಸು ದೊರೆಯಲಿಲ್ಲ.

ಅನಂತರ ಆಳಿದ ಚೋಳ ಅರಸರು ತುಂಗಭದ್ರೆಯ ಉತ್ತರಭಾಗದ ಪ್ರದೇಶವನ್ನು ಆಕ್ರಮಿಸುವ ತಮ್ಮ ಯತ್ನಗಳನ್ನು ಮುಂದುವರಿಸಿದರೂ ಅವರು ಸಫಲರಾಗಲಿಲ್ಲ. ತಮ್ಮ ಅಧೀನಕ್ಕೆ ಬಂದ ತುಂಗಭದ್ರೆಯ ಕೆಳಗಿನ ನೊಳಂಬವಾಡಿಯ ಹಾಗೂ ಗಂಗವಾಡಿಯ ಕೆಲವು ಭಾಗಗಳನ್ನು ಸಹ ಕಳೆದುಕೊಂಡರು. ನೊಳಂಬರು ಸಂಧಿ ಸಾಧಿಸಿ ಚಾಳುಕ್ಯರ ಸಾಮಂತರಾದರು.

ದಕ್ಷಿಣ ಕರ್ನಾಟಕದ ತುಮಕೂರು, ಬೆಂಗಳೂರು, ಮಂಡ್ಯ ಹಾಗೂ ಮೈಸೂರು ಜಿಲ್ಲೆಗಳು ಚೋಳರ ವಶದಲ್ಲಿ ಉಳಿದವಾದರೂ 11ನೆಯ ಶತಮಾನದಲ್ಲಿ ತಲೆ ಎತ್ತಿದ ಹೊಯ್ಸಳರು ಚೋಳರನ್ನು ಹೊರದೂಡಲು ನಿರ್ಧರಿಸಿದರು. ಸು.1116ರ ವೇಳೆಗೆ ಚೋಳ ಕುಲೋತ್ತುಂಗನ ಕಾಲದಲ್ಲಿ ಹೊಯ್ಸಳ ವಿಷ್ಣುವರ್ಧನ ತಲಕಾಡನ್ನು ವಶಪಡಿಸಿಕೊಂಡು ತಲಕಾಡುಗೊಂಡ ಎಂಬ ಬಿರುದನ್ನು ಧರಿಸಿದ. ವಿಷ್ಣುವರ್ಧನನ ದಂಡನಾಯಕ ಗಂಗರಾಜ ಈ ಸಾಧನೆಯಲ್ಲಿ ಮುಖ್ಯ ಪಾತ್ರವಹಿಸಿದ್ದ. ಆಗ ಚೋಳರ ಪ್ರತಿನಿಧಿಯಾಗಿ ಈ ಪ್ರದೇಶವನ್ನು ಆಳುತ್ತಿದ್ದ ಅಡಿಗೈಮಾನ್ ವಂಶಸ್ಥನಾದ ಆದಿಯಮನನ್ನೂ ದಾಮೋದರ ಮತ್ತು ನರಸಿಂಹವರ್ಮರೆಂಬ ಇನ್ನಿಬ್ಬರನ್ನೂ ಸೋಲಿಸಿ ಗಂಗರಾಜ ಗಂಗವಾಡಿಯನ್ನು ಚೋಳರಿಂದ ಕಸಿದುಕೊಂಡ. ಕುಲೋತ್ತುಂಗ ಚೋಳನಿಂದ ಹೀಗೆ ಗಂಗವಾಡಿಯನ್ನು ಕಳೆದುಕೊಂಡರೂ ಕೋಲಾರ ಜಿಲ್ಲೆಯ ಕೆಲವು ಭಾಗಗಳು ಅವನ ಅಧೀನದಲ್ಲಿದ್ದುವು.

ಕುಲೋತ್ತುಂಗನ ಅನಂತರ ಆಳಿದ ವಿಕ್ರಮಚೋಳನನ್ನು ಕೋಲಾರ ಪ್ರದೇಶದಿಂದ ಹೊರದೂಡಲು ವಿಷ್ಣುವರ್ಧನ ಯತ್ನಿಸಿದನಾದರೂ 1130ರ ವರೆಗೂ ಚೋಳರು ಆ ಪ್ರಾಂತ್ಯವನ್ನು ಸ್ವಾಧೀನದಲ್ಲಿಟ್ಟುಕೊಂಡಿದ್ದರೆಂಬುದು ಶಾಸನಗಳಿಂದ ತಿಳಿದಿದೆ. ಅನಂತರ ಆ ಪ್ರಾಂತ್ಯ ವಿಷ್ಣುವರ್ಧನನ ವಶವಾದರೂ ಚೋಳರು ಪುನಃ ಅದನ್ನು ಪಡೆದರು. ರಾಜರಾಜ ಚೋಳನ ಸು.1153-54ನೆಯ ವರ್ಷದ ಶಾಸನದಿಂದ ಆಗ ಅಲ್ಲಿ ಚೋಳರ ಪ್ರಭುತ್ವವಿತ್ತೆಂಬುದು ಸ್ಪಷ್ಟವಾಗುತ್ತದೆ. ಅನಂತರ ಚೋಳರ ಬಲವೇ ಕುಗ್ಗಿತು. ಪರಂಪರೆಯಿಂದ ಬಂದ ರಾಜ್ಯವನ್ನೇ ಕಾಪಾಡಿಕೊಳ್ಳಲು ಅವರು ಹೆಣಗಿದರು. ಅದಕ್ಕೆ ಅವರು ಹೊಯ್ಸಳರ ನೆರವನ್ನು ಸಹ ಕೋರಿದರು. ಮುಮ್ಮಡಿ ಕುಲೋತ್ತುಂಗ ಬಲ್ಲಾಳನ ಮಗಳು ಸೋಮಲೆಯನ್ನು ಮದುವೆಯಾದ. ಆಕೆಗೆ ಮಕ್ಕಳಿರಲಿಲ್ಲವಾದ ಕಾರಣ ಸೋದರ ನರಸಿಂಹನಿಗೆ ಕಾಳಲೆಯಲ್ಲಿ ಜನಿಸಿದ ಸೋಮೇಶ್ವರನನ್ನು ಬೆಳೆಸಿದಳು. ಈ ರಾಜಕೀಯ ಬೆಳವಣಿಗೆಗಳ ಫಲವಾಗಿ ಚೋಳರು 1200ರ ವೇಳೆಗೆ ಕರ್ನಾಟಕದಿಂದ ಕಾಲ್ತೆಗೆದರು. (ಬಿ.ಆರ್.ಜಿ.;ಸಿ.ವಿ.ಆರ್.)

**ಆಡಳಿತ ವ್ಯವಸ್ಥೆ :** ಕರ್ನಾಟಕದಲ್ಲಿ ದೊರೆತಿರುವ ಚೋಳರ ಶಾಸನಗಳು ಅಂದಿನ ಆಡಳಿತ ವ್ಯವಸ್ಥೆಯನ್ನರಿಯಲು ಆಧಾರವಾಗಿವೆ. ಚೋಳ ರಾಜ್ಯದಲ್ಲಿದ್ದ ಆಡಳಿತವ್ಯವಸ್ಥೆಯನ್ನೇ ಹೊಸದಾಗಿ ಗೆದ್ದ ಕರ್ನಾಟಕದ ಭಾಗಗಳಲ್ಲಿ ಜಾರಿಗೆ ತಂದರೆಂಬುದು ಇವುಗಳ ಅಧ್ಯಯನದಿಂದ ತಿಳಿದುಬರುತ್ತದೆ.

ಚೋಳರ ಕಾಲದಲ್ಲಿ ಆಡಳಿತವ್ಯವಸ್ಥೆ ಹೆಚ್ಚು ಕೇಂದ್ರೀಕೃತ ವಾದುದೂ ಬಿಗಿಯಾದುದೂ ಆಗಿತ್ತು. ಆಡಳಿತದ ಅನುಕೂಲಕ್ಕಾಗಿ ತಮ್ಮ ರಾಜ್ಯವನ್ನು ಅವರು ಹಲವು ವಿಭಾಗಗಳಾಗಿ ವಿಂಗಡಿಸಿದ್ದರು. ಈ ಪ್ರದೇಶಗಳಿಗೆ ಹಾಗೂ ವಿಭಾಗಗಳಿಗೆ ತಮ್ಮವೇ ಆದ ಹೆಸರುಗಳಿದ್ದವು. ಈ ಪದ್ಧತಿ ಗೆದ್ದು ಸೇರಿಸಿಕೊಂಡ ಭಾಗಗಳಲ್ಲಿ ಮುಂದುವರಿಯಿತು. ಹಲವು ಗ್ರಾಮಗಳು ಸೇರಿ ಕೂಟ್ರ ಇಲ್ಲವೆ ನಾಡು, ಕೆಲವೊಮ್ಮೆ ತನಿಯಾರ್ (ದೊಡ್ಡ ಗ್ರಾಮ), ಹಲವು ಕೂಟ್ರಗಳು ಸೇರಿ ವಳನಾಡು, ವಳನಾಡುಗಳ ಸಮೂಹವಾದ ಮಂಡಲ - ಈ ವಿಭಾಗಗಳಿದ್ದವು. ಮಂಡಲಗಳೇ ಅತಿ ದೊಡ್ಡದಾದ ವಿಭಾಗಗಳು. ಚೋಳರ ಕಾಲದಲ್ಲಿ ಇಂಥ ಸುಮಾರು ಎಂಟು ಅಥವಾ ಒಂಬತ್ತು ಮಂಡಲಗಳಿದ್ದವೆಂದು ತಿಳಿದುಬರುತ್ತದೆ. ಈ ವಿಭಾಗವ್ಯವಸ್ಥೆಗನುಗುಣವಾಗಿ ಕರ್ನಾಟಕದ ಗಂಗವಾಡಿ ಹಾಗೂ ನೊಳಂಬವಾಡಿಯ ಕೆಲವು ಭಾಗಗಳು ನಿಗರಿಲಿಶೋಳಮಂಡಲ, ಮುಡಿಗೊಂಡಶೋಳಮಂಡಲ, ಜಯಂಗೊಂಡ ಶೋಳಮಂಡಲ ಮತ್ತು ವಿಕ್ಕಿರಮಶೋಳಮಂಡಲಗಳಲ್ಲಿ ಸೇರಿಹೋದುವು. ಆಗಾಗ್ಗೆ ನಾಡು ವಳನಾಡುಗಳನ್ನು ಪುನರ್ವಿಂಗಡಿಸುತ್ತಿದ್ದುದು ಸಾಮಾನ್ಯವಾಗಿದ್ದುದರಿಂದ ಈ ಕಾಲದ ನಾಡು ವಳನಾಡುಗಳನ್ನು ಸ್ಪಷ್ಟವಾಗಿ ಗುರುತಿಸುವುದು ಕಷ್ಟ. ಆದರೂ ಕರ್ನಾಟಕಕ್ಕೆ ಸಂಬಂಧಿಸಿದಂತೆ ಚೋಳರ ಶಾಸನಗಳಲ್ಲಿ ರಾಜೇಂದ್ರ ಶೋಳವಳನಾಡು, ಗಂಗೈಕೊಂಡಶೋಳವಳನಾಡು, ವೀರರಾಜೇಂದ್ರ ವಳನಾಡು, ಉಯ್ಯಕೊಂಡಾರ ವಳನಾಡು, ಕ್ಷತ್ರಿಯಶಿಖಾಮಣಿ ವಳನಾಡು, ಶೋವಿ ವಳನಾಡು, ನಿತ್ತವಿನೋದ ವಳನಾಡು, ಅರುಮುಳಿದೇವ ವಳನಾಡು ಇತ್ಯಾದಿಗಳು ಕಂಡುಬರುತ್ತವೆ. ಹಾಗೆಯೇ ಕುವಲಾಲನಾಡು, ಕುಕ್ಕನೂರುನಾಡು, ಅವನಿಯ ನಾಡು, ಕಿಟಿಲೈನಾಡು, ಮಣ್ಣೆನಾಡು, ತೊಂಡೈನಾಡು, ಇರುಮಾಡಿನಾಡು, ಸೆಂಬೂರ ನಾಡು, ಮದಲ್‌ನಾಡು, ಕೈವಾರನಾಡು, ಇಳನಗರನಾಡು, ಕಳವರನಾಡು, ಪದಿನಾಡು, ವೆಳ್ಳಪ್ಪನಾಡು, ಕುಡುಮಲೈನಾಡು, ಪೆರಿಯನಾಡು ಅಥವಾ ಇಡೈನಾಡು, ವಡಕರೈನಾಡು ಮುಂತಾದ ನಾಡುಗಳನ್ನೂ ಶಾಸನಗಳು ಉಲ್ಲೇಖಿಸಿವೆ.

ಈ ಕಾಲದಲ್ಲಿ ಅನೇಕ ಊರುಗಳು ಹೊಸ ಹೆಸರುಗಳನ್ನು ಪಡೆದವು. ಗಂಗ ರಾಜಧಾನಿ ತಲಕಾಡು ರಾಜರಾಜನ ಹೆಸರನ್ನು ಪಡೆದು ರಾಜರಾಜಪುರವಾಯಿತು. ಚನ್ನಪಟ್ಟಣದ ಸಮೀಪವಿರುವ ಮಣಲೂರು ಅಥವಾ ಮಳೂರು ರಾಜರಾಜನ ಬಿರುದೊಂದರ ಮೇಲೆ ನಿಕರಿಲಿಚೋಳಪುರವಾಯಿತು. ಹಾಗೆಯೇ ಮಾಲಿಂಗಿ ಜನನಾಥಪುರವಾಯಿತು. ಕುಣಿಗಲಿಗೆ ರಾಜೇಂದ್ರಪುರವೆಂಬ ಹೆಸರು ಬಂತು. ಕೆಲವು ಗ್ರಾಮಗಳು ಚತುರ್ವೇದಿಮಂಗಲ ಎಂಬ ಹೆಸರಿನೊಡನೆ ಅಗ್ರಹಾರಗಳಾಗಿ ಪರಿವರ್ತಿತವಾದುವು. ಮದ್ದೂರು ಶೋವಿಮಹಾದೇವಿ ಚತುರ್ವೇದಿಮಂಗಲ, ಪುಂಗನೂರು (ಹೊಂಗನೂರು) ತ್ರೈಲೋಕ್ಯ ಮಾದೇವಿ ಚತುರ್ವೇದಿ ಮಂಗಲ, ಪೆರಿಯಮಬಿವೂರು ರಾಜೇಂದ್ರ ಸಿಂಹ ಚತುರ್ವೇದಿಮಂಗಲ, ಉತ್ತನೂರು ರಾಜೇಂದ್ರ ಚೋಳ ಚತುರ್ವೇದಿ ಮಂಗಲ, ಕೂಡಲೂರು ರಾಜರಾಜ ಚತುರ್ವೇದಿಮಂಗಲ ಹಾಗೂ ವೆಳ್ಳಿಯೂರು ಜನನಾಥ ಚತುರ್ವೇದಿಮಂಗಲಗಳಾಗಿ ಪರಿವರ್ತಿತವಾದುವು. ಇನ್ನೂ ಹಲವಾರು ಚತುರ್ವೇದಿಮಂಗಲಗಳನ್ನು ಚೋಳ ಶಾಸನಗಳು ಹೆಸರಿಸಿವೆ.

ಚೋಳರ ಆಡಳಿತ ವ್ಯವಸ್ಥೆಯ ಹಲವು ಬಗೆಯ ಅಧಿಕಾರಿಗಳನ್ನು ಶಾಸನಗಳು ಉಲ್ಲೇಖಿಸಿವೆ. ಎಲ್ಲ ಅಧಿಕಾರಿಗಳಿಗೆ ಕರುಮಿಗಳಂ ಹಾಗೂ ಪಣಿಮಕ್ಕಳ್ ಎಂಬ ಸರ್ವಸಾಮಾನ್ಯ ಹೆಸರಿತ್ತು. ವಿಡೈಯಿಲ್ ಅಧಿಕಾರಿ, ಉಡನ್‍ಕೊಟ್ಟನ್, ನಾಡುವಿರುಕ್ಕಮ್, ಕಣ್‍ಕಾಣಿ, ವರಿಗಪೊತ್ತಗಮ್, ಮೂಗವೆಟ್ಟಿ, ಮೂವೇಂದು ವೇಳಾರ್, ಮಹಾಮಾತ್ರ ಮುಂತಾದ ಅಧಿಕಾರಿಗಳು ಉಲ್ಲೇಖಿತರಾಗಿದ್ದಾರೆ.

ಆಡಳಿತ ವ್ಯವಸ್ಥೆಯ ಅತಿ ದೊಡ್ಡ ವಿಭಾಗವಾದ ಮಂಡಲಗಳಲ್ಲಿ ಅರಸ ಆರಿಸಿದ ಪ್ರತಿನಿಧಿಗಳು ಆಡಳಿತ ನಡೆಸುತ್ತಿದ್ದರು. ಆದಿಯಮ, ನರಸಿಂಹವರ್ಮ, ದಾಮನಂದಿ, ಇಳವಂಜಿರಾಯ, ಬ್ರಹ್ಮಾದಿರಾಯ ಮತ್ತಿತರರು ಕರ್ನಾಟಕದ ಚೋಳ ಪ್ರದೇಶಗಳಲ್ಲಿ ರಾಜ್ಯವಾಳಿದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಗಂಗವಾಡಿಯ ರಾಜಧಾನಿಯಾಗಿ ತಲಕಾಡು ಅಥವಾ ರಾಜರಾಜಪುರ ಮುಂದುವರಿಯಿತು. ಚನ್ನಪಟ್ಟಣ ತಾಲ್ಲೂಕಿನ ಪುಂಗನೂರು ಚಿಕ್ಕಗಂಗವಾಡಿಯ ರಾಜಧಾನಿಯಾಯಿತು.

ಗ್ರಾಮಗಳ ಆಡಳಿತ ಮುಖ್ಯವಾಗಿ ಆಯಾ ಗ್ರಾಮಗಳ ಸಭೆಗೆ ಸೇರಿದುದಾಗಿತ್ತು. ಸಭೆ, ಮಹಾಸಭೆ, ಊರ್, ಕುರಿ, ಪೆರುಂಗುರಿ ಎಂಬುದಾಗಿ ಕರೆಯುತ್ತಿದ್ದ ಈ ಸಂಸ್ಥೆ ತನ್ನ ಪರಿಮಿತಿಯೊಳಗಿನ ಪ್ರದೇಶದ ಆಡಳಿತವನ್ನು ನಿರ್ವಹಿಸುತ್ತಿತ್ತು. ಗ್ರಾಮಸಭೆಯಲ್ಲಿ ಬೇರೆಬೇರೆ ಕೆಲಸಗಳನ್ನು ನಿರ್ವಹಿಸಲು ಇದ್ದ ಸಮಿತಿಗಳಿಗೆ ವಾರಿಯಂ ಎಂಬ ಹೆಸರಿತ್ತು. ವಿಟ್ಟಿ, ವೇದಿಲೈ, ವಾಲಕ್ಕಾಣಂ, ಕೋಲ್‍ನಿರೈಕೂಲಿ, ಕಾಲಳಮಕೂಲಿ, ಪದಿಕಾವಲ್, ಮಾಡೈ, ಕೋರ್ ಮುಂತಾದ ಹಲವು ತೆರಿಗೆಗಳಿದ್ದವು.

ಸುಮಾರು ನೂರು ವರ್ಷಗಳ ಕಾಲ ಚೋಳರ ಆಳಿಕೆಗೆ ಒಳಪಟ್ಟಿದ್ದ ಕರ್ನಾಟಕದ ಭಾಗದಲ್ಲಿ ತಮ್ಮ ಆಡಳಿತದ ವಿವಿಧಾಂಗಗಳ ಮೂಲಕ ತಮಿಳುನಾಡಿನ ಸಂಸ್ಕೃತಿಯನ್ನು ಹಬ್ಬಿಸಿದರು. ಈ ಪ್ರದೇಶಗಳಲ್ಲಿ ತಮಿಳು ಆಡಳಿತಭಾಷೆಯಾಗಿ ನೆಲೆಗೊಂಡಿತು. ಗ್ರಾಮಾಡಳಿತದ ದೇವಾಲಯ ಆಡಳಿತದ ವ್ಯವಸ್ಥೆಯ ಬಗ್ಗೆ ಇದ್ದ ಹತೋಟಿಯನ್ನು ವಿವರವಾಗಿ ಶಾಸನಗಳು ಪರಿಚಯಿಸುತ್ತವೆ. ಚೋಳರ ಆಡಳಿತದ ಪ್ರಭಾವ ಎಷ್ಟರ ಮಟ್ಟಿಗೆ ಉಂಟಾಯಿತೆಂದರೆ ಗಂಗವಾಡಿಯಿಂದ ಚೋಳರನ್ನೋಡಿಸಿದ ಹೊಯ್ಸಳರೂ ಇಲ್ಲಿ ತಮಿಳು ಶಾಸನಗಳನ್ನೇ ಹಾಕಿಸಬೇಕಾಯಿತು. ಅಲ್ಲದೆ ಚೋಳರನ್ನು ಅನುಕರಿಸಿ ಇವರು ತಮ್ಮ ಹೆಸರುಗಳಲ್ಲಿ ಚತುರ್ವೇದಿಮಂಗಲಗಳನ್ನು ಸ್ಥಾಪಿಸಿದರು. ಇವರ ಶಾಸನಗಳಲ್ಲೂ ಮುಡಿಗೊಂಡ ಶೋಳಮಂಡಲ, ಗಂಗೈಕೊಂಡ ಶೋಳವಳನಾಡು ಇತ್ಯಾದಿ ಹೆಸರುಗಳೇ ಕೆಲವು ಕಾಲ ಮುಂದುವರಿದುವು. (ಎಚ್.ಎಂ.ಎನ್.ಆರ್.)

**ವಾಸ್ತುಶಿಲ್ಪ:** ಚೋಳರು ಕರ್ನಾಟಕದ ಭಾಗವನ್ನು ಆಕ್ರಮಿಸಿಕೊಂಡ ಕಾಲದಲ್ಲಿ ದೇವಾಲಯಗಳ ನಿರ್ಮಾಣದಲ್ಲಿ ಒಂದು ಉತ್ಕ್ರಾಂತಿಯೇ ನಡೆದಿತ್ತು. ತಂಜಾವೂರಿನ ಬೃಹದೀಶ್ವರ ದೇವಾಲಯದ ನಿರ್ಮಾಣ ಆರಂಭವಾಗಿತ್ತು. ಅನೇಕ ಕಡೆಗಳಲ್ಲಿ ಹೊಸ ದೇವಾಲಯಗಳನ್ನು ನಿರ್ಮಿಸುವ ಪರಿಪಾಠ ಹೆಚ್ಚಿತ್ತು. ಚೋಳ ಸಮ್ರಾಟರನ್ನನುಕರಿಸಿ ಇವರ ಅಧಿಕಾರಿಗಳೂ ಸಾಮಂತರೂ ತಾವು ಆಳುತ್ತಿದ್ದ ಪ್ರಾಂತ್ಯಗಳಲ್ಲಿ ಹಲವಾರು ದೇವಾಲಯಗಳನ್ನು ನಿರ್ಮಿಸಿ ಅವುಗಳ ಪೂಜಾದಿಗಳಿಗೆ ಹೇರಳವಾಗಿ ದಾನದತ್ತಿಗಳನ್ನು ಕೊಟ್ಟರು. ಕರ್ನಾಟಕದಲ್ಲಿ ಚೋಳರು ಆಕ್ರಮಿಸಿಕೊಂಡ ಪ್ರಾಂತ ಈ ದಿಸೆಯಲ್ಲಿ ಹೊಸ ಹುರುಪನ್ನು ಕಂಡಿತು. ಹೊಸ ಉತ್ಸಾಹ ಮೂಡಿತು. ಈ ಪ್ರಾಂತ್ಯದಲ್ಲಿ ಸುಮಾರು ಒಂದು ಶತಮಾನಕ್ಕಿಂತ ಸ್ವಲ್ಪ ಹೆಚ್ಚು ಕಾಲದಲ್ಲಿ ಇಲ್ಲಿ ಇವರು ಕಟ್ಟಿಸಿದ ದೇವಾಲಯಗಳು ನೂರಾರು ಚೋಳ ರಾಜ್ಯದಲ್ಲಿ ನಿರ್ಮಿಸಿದಂತೆ ಬೃಹದ್ದೇವಾಲಯಗಳನ್ನು ಇವರು ಇಲ್ಲಿ ನಿರ್ಮಿಸದಿದ್ದರೂ ಇವರು ಕಟ್ಟಿಸಿದ ಮಧ್ಯಮ ಮತ್ತು ಸಣ್ಣ ದೇವಾಲಯಗಳನ್ನು ಊರೂರುಗಳಲ್ಲಿಯೂ ಕಾಣಬಹುದು. ಇದರೊಂದಿಗೆ, ಮೊದಲೇ ಇದ್ದ ಇಟ್ಟಿಗೆಯ ದೇವಾಲಯಗಳಿಗೆ ಬದಲಾಗಿ ಕಲ್ಲಿನ ಗುಡಿಗಳನ್ನು ಇವರು ಕಟ್ಟಿರುವುದುಂಟು; ಕಲ್ಲಿನ ದೇವಾಲಯಗಳನ್ನು ವಿಸ್ತರಿಸಿರುವುದೂ ಉಂಟು.

ಇವರು ದ್ರಾವಿಡ ಶೈಲಿಯ ಕಟ್ಟಡಗಳಿಗೆ ಉಪಯೋಗಿಸಿರುವುದು ಗಟ್ಟಿಯಾದ ಕಣಶಿಲೆ (ಗ್ರಾನೈಟ್), ದಪ್ಪ ದಿಮ್ಮಿಗಳನ್ನು ಅತಿ ನಾಜೂಕಾಗಿ ಜೋಡಿಸಿ ಕಟ್ಟಿರುವ ಗೋಡೆಗಳ ಹೊರಮೈಯನ್ನು ನಯಗೊಳಿಸಿರುವುದಲ್ಲದೆ ಅವುಗಳ ಮೇಲಿನ ಶಿಲ್ಪವನ್ನು ಸ್ಪಷ್ಟವಾಗಿ ಖಚಿತವಾಗಿ ಬಿಡಿಸಿ ಅವು ಎದ್ದುಕಾಣುವಂತೆ ಕಂಡರಿಸುವುದು ಇವರ ಶೈಲಿಯ ವೈಶಿಷ್ಟ್ಯ. ಇವರ ದೇವಾಲಯಗಳು ಸಾಮಾನ್ಯವಾಗಿ ಹೆಚ್ಚು ಅಲಂಕರಣವಿಲ್ಲದ ಸರಳ ಕಟ್ಟಡಗಳು. ಈ ದೇವಾಲಯಗಳಲ್ಲಿ ಚೌಕನೆಯ ಗರ್ಭಗೃಹ, ಅಂತರಾಳ, ಮಹಾಮಂಟಪ ಮತ್ತು ಮುಖಭದ್ರ, ಹೊರಗೋಡೆಗಳಲ್ಲಿ ಅಲ್ಲಲ್ಲಿ ಅರೆಗಂಬಗಳು, ನಡುವೆ ಆಳವಿಲ್ಲದ ಗೂಡುಗಳು, ಒಮ್ಮೊಮ್ಮೆ ಈ ಗೂಡುಗಳಲ್ಲಿ ಮೂರ್ತಿಗಳು, ಗುಂಡಾಗಿ ಬಾಗಿರುವ ಲೋವೆಗಳು, ಈ ಲೋವೆಗಳ ಕೆಳಗೆ ಅಪರೂಪವಾಗಿ ಹಂಸ ಅಥವಾ ಯಾಳಿಗಳ ಸಾಲುಗಳು, ಒಂದು ಅಥವಾ ಮೂರು ಅಂತಸ್ತುಗಳ ಮೇಲೇರುವ ಗೋಪುರಗಳು ಇವು ಸಾಮಾನ್ಯವಾಗಿ ಕಂಡುಬರುತ್ತವೆ. ಅನೇಕ ಸ್ಥಳಗಳಲ್ಲಿ ಈಗ ಉಳಿದು ಬಂದಿರುವ ಚೋಳ ದೇವಾಲಯಗಳಲ್ಲಿ ಹಲವು ಶಿಥಿಲಾವಸ್ಥೆಯ ಬೇರೆ ಬೇರೆ ಹಂತಗಳಲ್ಲಿವೆ. ಕೆಲವು ಮುಖ್ಯವಾದ ದೇವಾಲಯಗಳ ವಾಸ್ತು ಶಿಲ್ಪಗಳ ವೈವಿಧ್ಯವನ್ನು ಇಲ್ಲಿ ಗಮನಿಸಬಹುದು.

ಯಳಂದೂರು ತಾಲ್ಲೂಕಿನ ಅಗರ (ನೋಡಿ) ಗಂಗರ ಕಾಲದಲ್ಲಿಯೇ ಇದ್ದು ಚೋಳರ ಕಾಲದಲ್ಲಿ ಪ್ರಸಿದ್ಧಿಗೆ ಬಂದ ಒಂದು ಅಗ್ರಹಾರ. ಇಲ್ಲಿ ಹಲವಾರು ದೇವಾಲಯಗಳಿವೆ. ಇವುಗಳಲ್ಲಿ ಮುಖ್ಯವಾದುದು ಮತ್ತು ಸುಂದರವಾದುದು ದುರ್ಗಿಯ ದೇವಾಲಯ. ಬಹುಶಃ ರಾಜರಾಜನ ಕಾಲದಲ್ಲಿ ನಿರ್ಮಿತವಾದ ಈ ದೇವಾಲಯದ ತಳಹದಿಯ ದಿಂಡುಕಲ್ಲುಗಳ ಮೇಲೆ ಕೋಡಿರುವ ಸಿಂಹಗಳ ಸಾಲುಗಳನ್ನು ನೋಡಬಹುದು. ಇದರ ಹೊರಗೋಡೆಗಳ ಮೇಲೆ ಅರೆಗಂಬಗಳು, ಆಳವಲ್ಲದ ಅರೆಮಂಟಪಗಳು, ಯಾಳಿ ಅಥವಾ ನೀರ್ಗುದುರೆಗಳ ಸಾಲು, ಕಿರಿದಾಗಿ ಗುಂಡಾಗಿ ಬಾಗಿರುವ ಲೋವೆ, ಮೇಲೆ ಅಷ್ಟಮುಖದ ಗೋಪುರಕ್ಕೆ ಲಾಳದಾಕೃತಿಯ ಕಮಾನುಗಳು, ನವರಂಗದಲ್ಲಿ ತೆಳುವಾದ ಗುಂಡುಕಂಬಗಳು ಇವೆ. ಗರ್ಭಗೃಹದಲ್ಲಿ ಪ್ರಸನ್ನ ಗಂಭೀರ ಮುಖಮುದ್ರೆಯಿಂದ ಸಮಭಂಗದಲ್ಲಿ ನಿಂತಿರುವ ಅಭಯ ಚಕ್ರ ಶಂಖ ಕಟಿಹಸ್ತಗಳನ್ನುಳ್ಳ ಚತುರ್ಭುಜ ದುರ್ಗಾ ದೇವಿಯ ಮೂರ್ತಿ ಸುಂದರವಾದ ಚೋಳ ಶೈಲಿಗೆ ಮಾದರಿ. ಇಲ್ಲಿನ ನರಸಿಂಹಸ್ವಾಮಿ ದೇವಾಲಯದ ಬಹುಭಾಗ ಪುನರ್ನಿರ್ಮಾಣಗೊಂಡಿವೆ. ಆದರೆ ಗರ್ಭಗೃಹ ಸುಕನಾಸಿಗಳು ಮೂಲರೂಪದಲ್ಲಿ ಉಳಿದು ಬಂದಿವೆ. ಗರ್ಭಗೃಹ ಅಪರೂಪವಾಗಿ ವೃತ್ತಾಕಾರದ ತಳವಿನ್ಯಾಸವನ್ನು ಹೊಂದಿದೆ. ಇಲ್ಲಿನ ನರಸಿಂಹ ವಿಗ್ರಹ ಮೂರ್ತಿಶಿಲ್ಪ ರೀತಿಗೆ ಒಂದು ಅಪರೂಪವಾದ ಉದಾಹರಣೆ. ನರಸಿಂಹಸ್ವಾಮಿ ದೇವಾಲಯದ ಸಮೀಪದಲ್ಲಿಯೇ ವರದರಾಜ ದೇವಾಲಯವಿದೆ. ಈಗ ಅದರ ಗರ್ಭಗೃಹ ಸುಕನಾಸಿಗಳ ವಿನಾ ಉಳಿದ ಭಾಗಗಳು ನಾಮಾವಶೇಷವಾಗಿವೆ. ಗರ್ಭಗೃಹದಲ್ಲಿರುವ, ತೆಳುವಾದ ನೀಳವಾಗಿ ನಿಂತಿರುವ ವಿಷ್ಣುವಿನ ಮೂರ್ತಿ ಆಕರ್ಷಕವಾಗಿದೆ. ಈ ಊರಿನ ಮತ್ತೊಂದು ಚೋಳ ದೇವಾಲಯ ರಾಮೇಶ್ವರ. ಆದರೆ ಅದು ಈಗ ಪೂರ್ತಿಯಾಗಿ ಪುನರ್ನಿರ್ಮಾಣಗೊಂಡಿದೆ.

ಅಗರದ ಸಮೀಪದಲ್ಲಿರುವ ಮದ್ದೂರು ರಾಜೇಂದ್ರಚೋಳನ ರಾಣಿ ಪಂಚವನ್ ಮಾದೇವಿಯ ಹೆಸರಿನಲ್ಲಿ ನಿರ್ಮಿತವಾದ ಪಂಚವನಮಾದೇವಿ

ಚತುರ್ವೇದಿಮಂಗಲವೆಂಬ ಅಗ್ರಹಾರ. ಇದೇ ಕಾಲದಲ್ಲಿ ಕಟ್ಟಿಸಿದ ದೇಶೇಶ್ವರ ದೇವಾಲಯ ಸರಳವಾದುದು. ಹೊಯ್ಸಳ ವಿಜಯನಗರ ಅರಸರ ಕಾಲದಲ್ಲಿ ಅದನ್ನು ವಿಸ್ತರಿಸಲಾಯಿತು. ಚಾಮರಾಜನಗರ ತಾಲ್ಲೂಕಿನ ಹಳೆ ಆಲೂರು ಚೋಳರ ಕಾಲದ ಮತ್ತೊಂದು ಮುಖ್ಯವಾದ ಅಗ್ರಹಾರ. ಆದರೆ ಹಳೆಯ ಊರು ಈಗ ನಾಶವಾಗಿದೆ. ಅಲ್ಲಿನ ಚೋಳರ ಕಾಲದ ದೇವಾಲಯಗಳು ಅತ್ಯಂತ ಶಿಥಿಲಾವಸ್ಥೆಯಲ್ಲಿವೆ. ಇವುಗಳಲ್ಲಿ ಪ್ರಮುಖವಾದವು ದೇಶೇಶ್ವರ ಮತ್ತು ಅರ್ಕೇಶ್ವರ ದೇವಾಲಯಗಳು. ತಗ್ಗಾದ ದೇಶೇಶ್ವರ ಗುಡಿಯ ಬಳಿಯಲ್ಲಿರುವ ಸಪ್ತಮಾತೃಕಾ ವಿಗ್ರಹಗಳು ಕಲ್ಲಿನ ಹಲಗೆಯ ಮೇಲೆ ತೆಳುವಾಗಿ ಬಿಡ್ಡಿಸಿದ್ದರೂ ಸತ್ವಯುತವಾಗಿವೆ. ಅರ್ಕೇಶ್ವರ ದೇವಾಲಯದ ಹೊರಗೋಡೆಗಳನ್ನು ಹೊಸದಾಗಿ ನಿರ್ಮಿಸಲಾಗಿದೆ. ಆದರೆ ಅದರ ನವರಂಗದ ಕಂಬಗಳು ಒಳಚಾವಣಿಯಲ್ಲಿನ ನಟರಾಜ ಮತ್ತು ಅಷ್ಟದಿಕ್ಪಾಲಕರ ಮೂರ್ತಿಗಳು, ಬಾಗಿಲುವಾಡ, ಎರಡು ಕಡೆಯಲ್ಲಿಯೂ ಗೋಡೆಗೆ ಸೇರಿಸಿರುವ ವಾದ್ಯಮೇಳದವರ ಶಿಲ್ಪಫಲಕಗಳು, ನಂದಿಮಂಟಪ - ಇವು ಚೋಳಶಿಲ್ಪದ ಮಾದರಿಯನ್ನು ಎತ್ತಿ ಹಿಡಿಯುತ್ತವೆ. ಅದರಲ್ಲಿಯೂ ನವರಂಗದ ಮೂರು ಕಂಬಗಳು ಮತ್ತು ನಂದಿ ಮಂಟಪದ ನಾಲ್ಕು ಕಂಬಗಳ ಮೇಲೆ ತೆಳುವಾಗಿ ಬಿಡಿಸಿರುವ ಶಿಲ್ಪಗಳು ರಾಜೇಂದ್ರ ಚೋಳನ ದಂಡೆಯಾತ್ರೆಯನ್ನು ಸೂಚಿಸುತ್ತವೆಯೆನ್ನಲಾಗಿದೆ. ಇವು ಕರ್ನಾಟಕದಲ್ಲಿನ ಚೋಳರ ಕಾಲದ ಶಿಲ್ಪಕೃತಿಗಳಲ್ಲಿಯೇ ಅಪರೂಪದವೆನಿಸಿವೆ.

ಚೋಳರು ಆಳುತ್ತಿದ್ದ ತಲಕಾಡಿನಲ್ಲಿ ಇವರ ಕಾಲದ ದೇವಾಲಯಗಳು ಇದ್ದಿರಬೇಕು. ಆದರೆ ಹಳೆಯ ಊರು ಮರಳಿನಲ್ಲಿ ಮುಚ್ಚಿಹೋಗಿದ್ದು ಇತ್ತೀಚೆಗೆ ನಡೆದ ಉತ್ಖನನದಿಂದ ಕೆಲವೊಂದು ದೇವಾಲಯಗಳು ಪತ್ತೆಯಾಗಿವೆ. ಅವುಗಳ ಕಾಲನಿರ್ಣಯ ಆಗಬೇಕು. ಈಗ ಅಲ್ಲಿರುವ ವೈದ್ಯನಾಥೇಶ್ವರ ದೇವಾಲಯ ಬಹುಶಃ ಚೋಳರ ಕಾಲದಲ್ಲಿಯೇ ಕಟ್ಟಿದ ದೇವಾಲಯವಾಗಿದ್ದು, ಅದು ಶಿಥಿಲವಾದ ಮೇಲೆ ವಿಜಯನಗರದ ಅರಸರು ಅಲ್ಲಿ ಹೊಸ ದೇವಾಲಯವೊಂದನ್ನು ಕಟ್ಟಿರಬೇಕು. ತಲಕಾಡಿಗೆ ಎದುರಾಗಿ, ಕಾವೇರಿಯ ಬಲದಂಡೆಯ ಮೇಲಿನ ತಡಿಮಾಲಿಂಗಿಯಲ್ಲಿ ಚೋಳ ರಾಜರಾಜನ ಕಾಲದಲ್ಲಿ ನಿರ್ಮಿತವಾದ ಜನಾರ್ದನ ದೇವಾಲಯವಿದೆ. ಅದರಲ್ಲಿನ ಶಾಸನಗಳಲ್ಲಿ ದೇವಾಲಯವನ್ನು ಇರವಿಕುಲಮಾಣಿಕ್ಯವಿಣ್ಣಗರಾಳ್ವಾರ್ ದೇವಾಲಯವೆಂದು ಕರೆಯಲಾಗಿದೆ. ಒಂದೇ ಅಂತಸ್ತಿನ ಚೌಕ ಗೋಪುರವುಳ್ಳ ಗರ್ಭಗೃಹ, ತಗ್ಗಾದ ಸುಕನಾಸಿ ಮತ್ತು ನವರಂಗಗಳನ್ನುಳ್ಳ ಈ ದೇವಾಲಯ ಚೋಳರ ಆರಂಭಕಾಲದ ಶೈಲಿಗೊಂದು ಉತ್ತಮ ಉದಾಹರಣೆ. ಬಹುಶಃ ಗಂಗರ ಕಾಲದಲ್ಲಿ ನಿರ್ಮಿತವಾದ, ಪುಟ್ಟಪುಟ್ಟ ಗರ್ಭಗೃಹ ಸುಕನಾಸಿ ನವರಂಗಗಳನ್ನು ಹೊಂದಿದ್ದ ಬನ್ನೂರಿನ ಹನುಮಂತೇಶ್ವರ ದೇವಾಲಯಕ್ಕೆ ಚೋಳರ ಕಾಲದಲ್ಲಿ ಮುಂದೆ ದೊಡ್ಡದಾಗಿ ಮತ್ತೊಂದು ನವರಂಗವನ್ನು ಕಟ್ಟಲಾಯಿತು. ರಾಜರಾಜನ ಕಾಲದಲ್ಲಿ ಈ ದೇವಾಲಯಕ್ಕೆ ದತ್ತಿಬಿಟ್ಟ ವಿಷಯವನ್ನು ಅದರ ಹೊರಗೋಡೆಯ ದಿಂಡಿನ ಮೇಲಿರುವ ಶಾಸನ ತಿಳಿಸುತ್ತದೆ.

ಮಂಡ್ಯ ಜಿಲ್ಲೆಯ ಮಾರೇಹಳ್ಳಿಯ ನರಸಿಂಹಸ್ವಾಮಿ, ದೇಶೇಶ್ವರ ದೇವಾಲಯಗಳು, ಮದ್ದೂರಿನ ವರದರಾಜ ಮತ್ತು ನರಸಿಂಹಸ್ವಾಮಿ ದೇವಾಲಯಗಳು, ಮಳವಳ್ಳಿಯ ಶಾರ್ಙ್ಗಪಾಣಿ ದೇವಾಲಯ ಇವೂ ಮೂಲತಃ ಚೋಳರ ಕಾಲದಲ್ಲಿಯೇ ನಿರ್ಮಿತವಾದ ದೇವಾಲಯಗಳು. ಮದ್ದೂರಿನ ನರಸಿಂಹಸ್ವಾಮಿ ದೇವಾಲಯದಲ್ಲಿರುವ ನರಸಿಂಹನ ಭವ್ಯವಾದ ಮೂರ್ತಿ ಆಕರ್ಷಕವಾಗಿದೆ. ಚನ್ನಪಟ್ಟಣ ತಾಲ್ಲೂಕಿನ ಮಳೂರು, ಹೊಂಗನೂರು ಮೊದಲಾದ ಕಡೆ ಚೋಳರ ಕಾಲದ ಹಲವಾರು ದೇವಾಲಯಗಳಿವೆ. ಅವುಗಳಲ್ಲಿ ಹಲವು ಹಾಳಾಗಿವೆ. ಮಳೂರಿನ ಅಪ್ರಮೇಯ ಸ್ವಾಮಿ ದೇವಾಲಯ ಬಹುಶಃ ರಾಜರಾಜನ ದಂಡನಾಯಕ ಅಪ್ರಮೇಯನ ಹೆಸರಿನಲ್ಲಿ ಕಟ್ಟಿದುದಾಗಿರಬೇಕು. ಆದರೆ ಅದರ ಈಗಿರುವ ಬಹುಭಾಗ ಅನಂತರ ಪುನರ್ನಿರ್ಮಾಣಗೊಂಡಿತು. ಕೂಡಲೂರಿನಲ್ಲಿ ಈಗ ರಾಮೇಶ್ವರ ದೇವಾಲಯವೊಂದು ಮಾತ್ರ ಉಳಿದಿದೆ. ಅಲ್ಲಿದ್ದ ಮಂಗಲೇಶ್ವರ ದೇವಾಲಯ ನೆಲಸಮವಾಗಿದೆ. ಅದರ ಶಾಸನಗಳೂ ಶಿಲ್ಪಗಳೂ ಅಲ್ಲಲ್ಲಿ ಚದರಿ ಬಿದ್ದಿವೆ. ಅಲ್ಲಿಯೇ ಭೂಮಿಯಲ್ಲಿ ದೊರೆತ, ಆ ದೇವಾಲಯಕ್ಕೆ ಸೇರಿದ್ದ, ಕೆಲವು ಲೋಹಮೂರ್ತಿಗಳಲ್ಲಿ ನಟರಾಜ ಮತ್ತು ಸೋಮಸ್ಕಂದರ ಮೂರ್ತಿಗಳು ಸುಂದರವಾಗಿವೆ. ಮಳೂರು ಪಟ್ಟಣದ ನಾರಾಯಣಸ್ವಾಮಿ ದೇವಾಲಯ ಚಿಕ್ಕದಾದರೂ ಸುಂದರವಾದ್ದು. ಒಂದೇ ಅಂತಸ್ತಿನ ಗೋಪುರವುಳ್ಳ ಇದರ ಗರ್ಭಗೃಹ ತಡಿಮಾಲಿಂಗಿಯ ಜನಾರ್ದನ ದೇವಾಲಯದ ಮಾದರಿಯಲ್ಲಿದೆ.

ಕರ್ನಾಟಕದಲ್ಲಿರುವ ಚೋಳ ದೇವಾಲಯಗಳಲ್ಲಿಯೇ ಒಂದು ಉತ್ತಮವಾದ ನಿರ್ಮಾಣವೆಂದರೆ ಬೆಂಗಳೂರಿನ ಬಳಿಯ ಬೇಗೂರಿನಲ್ಲಿರುವ ಚೋಳೇಶ್ವರ ಗುಡಿ. ಗಂಗರ ಸಾಮಂತ ನಾಗತ್ತರ ಇಲ್ಲಿ ಕಟ್ಟಿಸಿದ್ದ ನಾಗೇಶ್ವರ ದೇವಾಲಯದ ಪ್ರತಿಕೃತಿ. ನಂದಿಯಲ್ಲಿರುವ ಭೋಗನಂದೀಶ್ವರ ಮತ್ತು ಅರುಣಾಚಲೇಶ್ವರ ದೇವಾಲಯಗಳನ್ನು ನೆನಪಿಗೆ ತರುವ ಈ ಜೋಡಿ ದೇವಾಲಯಗಳು ಗಂಗ ಮತ್ತು ಚೋಳರ ಕಾಲದಲ್ಲಿ ಪಲ್ಲವ ಶೈಲಿ ಹೇಗೆ ಪ್ರಚಲಿತವಿತ್ತು ಎಂಬುದನ್ನು ಸೂಚಿಸುತ್ತವೆ. ಪುಟ್ಟದಾದ ಗರ್ಭಗೃಹ, ಅಂತರಾಳ, ಗುಂಡು ಕಂಬಗಳಿರುವ ನವರಂಗ, ಮೂರು ಅಂತಸ್ತಿನ ಶಿಲಾಗೋಡೆಗಳ ಮೇಲೆ ಬಿಡಿಸಿರುವ ಅರೆಗಂಬಗಳು, ಆಳವಿಲ್ಲದ ಗೂಡುಗಳು, ಲೋವೆಯ ಕೆಳಗಿನ ಹಂಸಸಾಲು, ಗೋಪುರದ ಒಂದೊಂದು ಅಂತಸ್ತಿನಲ್ಲಿಯೂ ಇರುವ ಪಂಜರ, ಗಜಪೃಷ್ಠಾಕೃತಿಗಳು, ನಡುನಡುವೆ ದಕ್ಷಿಣಾಮೂರ್ತಿ ಮೊದಲಾದ ಅತ್ಯಂತ ಸುಂದರವಾದ ಮೂರ್ತಿಗಳು, ಬಳ್ಳಿ, ಸುರುಳಿ ಮುಂತಾದ ಅಲಂಕರಣಗಳಿಂದ ಕೂಡಿದ ಸುಂದರವಾದ ಬಾಗಿಲುವಾಡ, ಸ್ವಾಭಾವಿಕವಾಗಿ ಕಾಣಿಸುವ ನಂದಿಗಳಿಂದ ಕೂಡಿದ ಈ ದೇವಾಲಯದ ಸೌಂದರ್ಯ ಗಮನಿಸಬೇಕಾದುದು. ದೇವಾಲಯದ ಅಕ್ಕಪಕ್ಕಗಳಲ್ಲಿ ಒಂದೇ ಆವರಣದಲ್ಲಿ ನಿರ್ಮಿತವಾಗಿರುವ ಇನ್ನು ಕೆಲವು ಪುಟ್ಟ ದೇವಾಲಯಗಳೂ ಚೋಳರ ಕಾಲಕ್ಕೇ ಸೇರಿದವು.

ಬೆಂಗಳೂರು ಜಿಲ್ಲೆಯಲ್ಲಿರುವ ಮತ್ತೊಂದು ಪ್ರಸಿದ್ಧ ದೇವಾಲಯ ಬಿನ್ನಮಂಗಲದ ಮುಕ್ತಿನಾಥೇಶ್ವರ. ಇದರ ಹೊರಗೋಡೆಯ ಮೇಲೆ ಅಲ್ಲಲ್ಲಿ ದಪ್ಪನಾದ ಅರೆಗಂಬಗಳು, ನಡುವೆ ದೊಡ್ಡದಾದ, ಆದರೆ ಆಳವಿಲ್ಲದ ಗೂಡುಗಳು, ಗೂಡುಗಳಲ್ಲಿಯೂ ಗೋಡೆಯ ಮೇಲೂ ಇರುವ ಕಾಳಿಂಗಮರ್ದನ, ಸದಾಶಿವ, ದಕ್ಷಿಣಾಮೂರ್ತಿ, ತಾಂಡವೇಶ್ವರ, ಬ್ರಹ್ಮ, ಚಾಮುಂಡಿ ಮೊದಲಾದ ಅಷ್ಟು ನಯವಾಗಿ ಕಂಡರಿಸದಿದ್ದರೂ ಆಕರ್ಷಕವಾಗಿರುವ ಮೂರ್ತಿಗಳಿವೆ. ಗರ್ಭಗೃಹದ ಮೇಲೆ ಇಟ್ಟಿಗೆಯಿಂದ ಕಟ್ಟಿದ ಗೋಪುರವಿದೆ. ನವರಂಗದ ಕಂಬಗಳು ಚೌಕಾಕೃತಿಯಲ್ಲಿವೆ. ಇವು ಹಲವು ಬಗೆಯ ಕಂಡರಣೆಗಳಿಂದ ತುಂಬಿ ವಿಶಿಷ್ಟವೆನಿಸಿವೆ.

ಕೋಲಾರ ಜಿಲ್ಲೆಯಂತೂ ಹಲವಾರು ಚೋಳ ದೇವಾಲಯಗಳಿಗೆ ಪ್ರಸಿದ್ಧವಾಗಿದೆ. ರಾಜೇಂದ್ರ ಚೋಳನ ಕಾಲದಲ್ಲಿ ಕೋಲಾರದಲ್ಲಿ ಕಟ್ಟಿಸಿದ ಪ್ರಸಿದ್ಧ ದೇವಾಲಯ ಪಿಡಾರಿಯಾರ್ ಅಥ್‌ವಾ ಕೋಲಾರಮ್ಮನದು. ಮೊದಲು ಅಲ್ಲಿದ್ದ ಇಟ್ಟಿಗೆಯ ದೇವಾಲಯಕ್ಕೆ ಬದಲಾಗಿ ಕಲ್ಲಿನ ಈ ಸುಂದರ ದೇವಾಲಯವನ್ನು ಕಟ್ಟಿದುದಾಗಿ ಅಲ್ಲಿನ ಒಂದು ಶಾಸನದಿಂದ ತಿಳಿದುಬರುತ್ತದೆ. ಕರ್ನಾಟಕದಲ್ಲಿ ಈಗ ಉಳಿದುಬಂದಿರುವ ಚೋಳ ದೇವಾಲಯಗಳಲ್ಲಿಯೇ ದೊಡ್ಡದೂ ಸುಂದರವಾದುದೂ ಆದ ಈ ದೇವಾಲಯದ ಹೊರ ಗೋಡೆಗಳಲ್ಲಿ ತಮಿಳು ಶಾಸನಗಳು ತುಂಬಿವೆ. ಈ ದೇವಾಲಯಗಳಲ್ಲಿರುವ ಮಹಿಷಾಸುರಮರ್ದಿನಿಯ ಮೂರ್ತಿ ಅತ್ಯಂತ ಸತ್ವಯುತವಾದದ್ದು. ಇದೇ ಮೂರ್ತಿಯನ್ನು ಹೋಲುವ ಲೋಹಬಿಂಬವೊಂದು ಇತ್ತೀಚೆಗೆ ತಲಕಾಡಿನ ಬಳಿ ಮರಳಿನಲ್ಲಿ ದೊರೆತಿದೆ. ಅದು ಚೋಳರ ಕಾಲದ ಲೋಹಶಿಲ್ಪದ ಒಂದು ಆಕರ್ಷಕ ಮಾದರಿಯಾಗಿದೆ. ಈ ಲೋಹಮೂರ್ತಿಗೆ ಚಿನ್ನದ ಲೇಪನ ಇದ್ದ ಗುರುತುಗಳಿರುವುದೊಂದು ವಿಶೇಷ.

ನಂದಿಯಲ್ಲಿರುವ, ಗಂಗರ ಕಾಲಕ್ಕೆ ಸೇರಿದ, ಭೋಗನಂದೀಶ್ವರ ಮತ್ತು ಅರುಣಾಚಲೇಶ್ವರ ದೇವಾಲಯಗಳ ಮುಂದಿರುವ ನಂದಿಮಂಟಪಗಳು ರಾಜೇಂದ್ರಚೋಳನ ಕಾಲದಲ್ಲಿ ನಿರ್ಮಿತವಾಗಿದ್ದಿರಬೇಕೆಂಬುದನ್ನು ಅವುಗಳ ಮೇಲಿರುವ ರಾಜೇಂದ್ರನ ಶಾಸನದಿಂದ ಊಹಿಸಬಹುದು. ಬೇತಮಂಗಲದ ವಿಜಯೇಂದ್ರಸ್ವಾಮಿ ದೇವಾಲಯವೂ ಹೀಗೆಯೇ ಮೊದಲು ಗಂಗರ ಕಾಲದಲ್ಲಿ ಇಟ್ಟಿಗೆಯಿಂದ ನಿರ್ಮಿತವಾದುದಾಗಿದ್ದು, ಚೋಳರ ಕಾಲದಲ್ಲಿ ಇದರ ಮುಂದಿನ ಭಾಗವನ್ನು ಕಲ್ಲಿನಲ್ಲಿ ಕಟ್ಟಿದ್ದಾರೆ. ಇದೇ ರೀತಿ ಆವನಿಯಲ್ಲಿದ್ದ ಪ್ರಾಚೀನ ದೇವಾಲಯಗಳಿಗೆ ಚೋಳರ ಹಲವು ಭಾಗಗಳನ್ನು ಸೇರಿಸಿದ್ದಾರೆ. ಕೋಲಾರದ ಸಮೀಪದಲ್ಲಿ ನರಸಾಪುರದಲ್ಲಿ, ಭೂಮಿಯಲ್ಲಿ

ಅಡಗಿಸಿಟ್ಟಿದ್ದ, ಈಚೆಗೆ ಹೊರತೆಗೆದ, ನಟರಾಜನ, ಐದು ಅಡಿಗಳಷ್ಟು ಎತ್ತರದ, ಪಂಚಲೋಹದ ಮೂರ್ತಿ ಒಂದು ಅಪೂರ್ವ ಕೃತಿ. ನೀಳವಾದ ಕೈಕಾಲುಗಳು, ವಿಶಾಲವಾದ ಎದೆ ಭುಜಗಳು, ಪ್ರಮಾಣಬದ್ಧ ಅಂಗಸೌಷ್ಠವ, ಬಲಗಾಲಿನಿಂದ ಅಪಸ್ಮಾರವನ್ನು ತುಳಿದು ಎಡಗಾಲನ್ನು ಎತ್ತಿ ಪಕ್ಕಕ್ಕೆ ಚಾಚಿ ಅಭಯ ಡಮರು ಪ್ರಭೆ ಲಂಬಹಸ್ತಗಳಿಂದ ಬಳುಕಿ ಆಡುತ್ತಿರುವ ತಾಂಡವ ನೃತ್ಯ, ಇಕ್ಕೆಲಗಳಲ್ಲಿಯೂ ಅಲೆ ಅಲೆಯಾಗಿ ಹರಡಿರುವ ಜಟೆ, ಮೇಲೆ ಕೆದರಿರುವ ಗರಿ, ಲೀಲಾವಿನೋದದಿಂದ ಪ್ರಸನ್ನವಾಗಿರುವ ಮುಖಮುದ್ರೆ - ಇವುಗಳಿಂದ ಈ ನಟರಾಜನ ಭವ್ಯಮೂರ್ತಿ ಕರ್ನಾಟಕದ ಲೋಹ ಮೂರ್ತಿಗಳಲ್ಲಿ ಒಂದು ಅತ್ಯುತ್ತಮ ಕೃತಿ ಎನ್ನಬಹುದು. ಮುಳಬಾಗಿಲು, ನಂಗಲಿಗಳಲ್ಲಿಯೂ ಚೋಳರ ಕಾಲದ ಹಲವು ಲೋಹಮೂರ್ತಿಗಳು ದೊರೆತಿವೆ.

ಇವುಗಳಲ್ಲದೆ ಅನೇಕ ಸಣ್ಣಪುಟ್ಟ ದೇವಾಲಯಗಳು, ಅವುಗಳ ಅವಶೇಷಗಳು ಚೋಳರು ಆಕ್ರಮಿಸಿದ್ದ ಕರ್ನಾಟಕದ ಭಾಗಗಳಲ್ಲಿ ಅಲ್ಲಲ್ಲಿ ಚದರಿವೆ. ಇವರು ಈ ಭಾಗವನ್ನಾಳಿದ ಅವಧಿಯಲ್ಲಿ ಇಲ್ಲಿ ನಿರ್ಮಾಣವಾದ ವಾಸ್ತುಶಿಲ್ಪರೀತಿಯ ಬೆಳೆವಣಿಗೆಯನ್ನು ಈಗ ದೊರೆತಿರುವ ಆಧಾರಗಳಿಂದ ಸ್ಪಷ್ಟವಾಗಿ ಗುರುತಿಸುವುದು ಸಾಧ್ಯವಲ್ಲದಿದ್ದರೂ ಚೋಳ ವಾಸ್ತುಶಿಲ್ಪ ಶೈಲಿ ಕರ್ನಾಟಕದಲ್ಲಿ ವ್ಯಾಪಕವಾಗಿ ಹರಡಿತ್ತೆನ್ನುವುದು ಮಾತ್ರ ಸ್ಪಷ್ಟ. ಇಂದಿಗೂ ಹಳ್ಳಿಗಳಲ್ಲಿ ಯಾವ ಕಲ್ಲಿನ ದೇವಾಲಯವಿದ್ದರೂ ಅಲ್ಲಿನವರು ಅದನ್ನು ಚೋಳ ಪ್ರತಿಷ್ಠೆಯೆಂದೇ ಗುರುತಿಸುವುದನ್ನು ಕಂಡಾಗ ಚೋಳ ವಾಸ್ತುಶಿಲ್ಪ ಶೈಲಿ ಕನ್ನಡನಾಡಿನ ಜನಮನದ ಮೇಲೆ ಪ್ರಭಾವವನ್ನು ಎಷ್ಟರಮಟ್ಟಿಗೆ ಅಚ್ಚೊತ್ತಿದೆ ಎಂಬುದು ಗೊತ್ತಾಗುತ್ತದೆ. (ಎಂ.ಎಚ್.)

**ಶಾಸನಗಳು :** ಚೋಳರು ತಮ್ಮ ಆಳಿಕೆಯ ಕಾಲದಲ್ಲಿ ಕರ್ನಾಟಕದ ದಕ್ಷಿಣ ಹಾಗೂ ಪೂರ್ವಭಾಗಗಳಲ್ಲಿ ಅನೇಕ ಶಾಸನಗಳನ್ನು ಹಾಕಿಸಿದರು. ಇವುಗಳಲ್ಲಿ ಮೊದಲಿನ ಕೆಲವು ಶಾಸನಗಳು ಕನ್ನಡ ಭಾಷೆಯಲ್ಲೂ ಅನಂತರದ ಶಾಸನಗಳು ತಮಿಳಿನಲ್ಲೂ ಇವೆ. ಚೋಳರಸರು ತಮ್ಮ ಶಾಸನಗಳನ್ನು ರೂಢಿಯಂತೆ ಪ್ರತ್ಯೇಕವಾಗಿ ತಯಾರಿಸಿದ ಕಲ್ಲುಗಳ ಮೇಲೆ ಕೆತ್ತಿಸಿ, ತಾವು ಕೊಟ್ಟ ದತ್ತಿಗಳ ಬಳಿ ನೆಡಿಸುತ್ತಿರಲಿಲ್ಲ; ಆದರೆ ತಾವು ಕಟ್ಟಿಸಿದ ದೇವಸ್ಥಾನಗಳ ಕಲ್ಲು ಗೋಡೆಗಳು, ತಳಪಾದಿ ಕಲ್ಲುಗಳು ಹಾಗೂ ಮೇಲ್ಚಾವಣಿಗಳ ಮೇಲೆ ಕೆತ್ತಿಸುತ್ತಿದ್ದರು. ಉದಾಹರಣೆಗೆ ಕೋಲಾರದ ಕೋಲಾರಮ್ಮನ ದೇವಸ್ಥಾನ, ಯಳಂದೂರು ತಾಲ್ಲೂಕಿನ ಅಗರದ ರಾಮೇಶ್ವರ ದೇವಸ್ಥಾನ ಮತ್ತು ಲಕ್ಷ್ಮೀನೃಸಿಂಹಸ್ವಾಮಿ ದೇವಸ್ಥಾನದ ಶಾಸನಗಳನ್ನು ಉಲ್ಲೇಖಿಸಬಹುದು.

ತಮಿಳುನಾಡಿನ ಚೋಳರ ಶಾಸನಗಳು ರಾಜರು ಪಟ್ಟಕ್ಕೆ ಬಂದ ಸಂವತ್ಸರಗಳನ್ನು ಮಾತ್ರ ನಮೂದಿಸುತ್ತವೆ. ಇದರಿಂದಾಗಿ ರಾಜರ ಕಾಲ ನಿರ್ಣಯ ಮಾಡಲು ಬಹಳ ದುಸ್ತರ. ಆದರೆ ಕರ್ನಾಟಕದಲ್ಲಿನ ಚೋಳರಸರ ಶಾಸನಗಳು ರಾಜನ ಪಟ್ಟಾಭಿಷೇಕ ಸಂವತ್ಸರವನ್ನು ಮಾತ್ರವಲ್ಲದೆ, ಶಕ ಸಂವತ್ಸರವನ್ನೂ ನಮೂದಿಸುತ್ತವೆ. ಇದರಿಂದ ಚೋಳರಸರ ಕಾಲವನ್ನು ಖಚಿತವಾಗಿ ನಿರ್ಧರಿಸಲು ಕರ್ನಾಟಕದ ಶಾಸನಗಳು ಈ ದಿಶೆಯಲ್ಲಿ ಅಮೂಲ್ಯ ಕೊಡುಗೆಯನ್ನು ನೀಡಿವೆ. ಅನೇಕ ವೇಳೆ ಶಾಸನಗಳಲ್ಲಿ ಚೋಳರಾಜರು ತಮ್ಮ ಬಿರುದುಗಳನ್ನೇ ಉಪನಾಮಗಳಾಗಿ ತಮ್ಮ ಹೆಸರುಗಳ ಜೊತೆಯಲ್ಲಿ ನಮೂದಿಸಿಕೊಂಡಿರುವುದರಿಂದ ಅವರ ನಿಜನಾಮಧೇಯಗಳನ್ನು ಗುರುತಿಸಲು ಬಹಳ ಕಷ್ಟವಾಗುತ್ತದೆ.

ಈ ಶಾಸನಗಳು ಸಾಮಾನ್ಯವಾಗಿ ರಾಜರ ಪ್ರಶಸ್ತಿ ಪರಾಕ್ರಮಗಳನ್ನು, ಅವರು ಮಾಡಿದ ದಾನಧರ್ಮಗಳನ್ನು, ಅವರು ಕಟ್ಟಿಸಿದ ದೇವಾಲಯಗಳನ್ನು ಕುರಿತು ವಿವರವಾಗಿ ತಿಳಿಸುತ್ತವೆ. ಅಲ್ಲದೆ ಈ ಶಾಸನಗಳಿಂದ ಆ ಕಾಲದ ರಾಜರುಗಳ ಆಡಳಿತ ಪದ್ಧತಿ ಹಾಗೂ ಸಾಮಾಜಿಕ ವ್ಯವಸ್ಥೆಯನ್ನೂ ತಿಳಿಯಬಹುದಾಗಿದೆ. ಚನ್ನಪಟ್ಟಣ ತಾಲ್ಲೂಕಿನ ಮಳೂರು ನಾರಾಯಣಸ್ವಾಮಿ ದೇವಸ್ಥಾನದಲ್ಲಿರುವ ರಾಜರಾಜದೇವನ 23ನೆಯ ಆಳಿಕೆಯ ಸಂವತ್ಸರವನ್ನು ಉಲ್ಲೇಖಿಸುವ ಶಾಸನ. ರಾಜರಾಜ ಕಾಂದಲೂರು ಶಾಲೈ (ಮಲಬಾರಿನ ಒಂದು ರೇವುಪಟ್ಟಣ) ಎಂಬಲ್ಲಿ ಹಲವಾರು ಹಡಗುಗಳನ್ನು ನಾಶಪಡಿಸಿದನೆಂದು ತಿಳಿಸುತ್ತದೆ. ಇದಲ್ಲದೆ ಅವನು ವೆಂಗಿನಾಡು (ಕೃಷ್ಣಾ –ಗೋದಾವರಿ ಮಧ್ಯದ ತೆಲುಗು ಸೀಮೆ), ಗಂಗಪಾಡಿ, ನುಲುಂಬಪಾಡಿ, ತಡಿಗೈವಳ್ಳಿ, ಕುಂದುಮಲೈನಾಡು, ಕೊಲ್ಲಂ, ಕಳಿಂಗ, ಇಳಾಮಂಡಲ (ಶ್ರೀ ಲಂಕಾ), ಸಂಗಲರು, ರಟ್ಟಪಾಡಿ ಏಳೂವರೆ ಲಕ್ಷ ಹನ್ನೆರಡು ಸಾವಿರ ಪುರಾತನ ದ್ವೀಪಗಳು ಹಾಗೂ ಪಾಂಡ್ಯದೇಶಗಳನ್ನು ಜಯಿಸಿದನೆಂದು ತಿಳಿಸುತ್ತದೆ. ಹುಣಸೂರು ತಾಲ್ಲೂಕಿನ ಶಾಸನಗಳು ರಾಜ ಪ್ರತಿನಿಧಿಗಳ ಪರಿಪಾಲಾನಾಕ್ರಮವನ್ನು ವಿಶದಪಡಿಸುತ್ತವೆ. ರಾಜೇಂದ್ರ ಚೋಳನ ಶಾಸನವೊಂದರಲ್ಲಿ ವಿಶಿಷ್ಟವಾದ ನ್ಯಾಯಪದ್ಧತಿಯ ವಿವರಗಳನ್ನು ಕಾಣಬಹುದಾಗಿದೆ. ಹೀಗೆಯೇ ಭೂಮಿಗಳ ಅಳತೆ, ಕಂದಾಯ ಹಾಗೂ ಸುಂಕಗಳ ಬಗ್ಗೆ ಈ ಶಾಸನಗಳು ಅಮೂಲ್ಯವಾದ ಮಾಹಿತಿಯನ್ನು ನೀಡುತ್ತವೆ.



ತಮಿಳು ಶಾಸನ, ಕೋಲಾರಮ್ಮನ ದೇವಾಲಯ, ಕೋಲಾರ

ಕನ್ನಡ ಭಾಷೆಯಲ್ಲಿರುವ ಕೆಲವು ಶಾಸನಗಳು ಆ ಕಾಲದ (10-11ನೆಯ ಶತಮಾನಗಳ) ಭಾಷಾ ಸ್ವರೂಪದ ಮೇಲೆ ಬೆಳಕನ್ನು ಚೆಲ್ಲುತ್ತವೆ. ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿನ ರಾಜಾಧಿರಾಜನ ಆಳಿಕೆಗೆ ಸಂಬಂಧಿಸಿದ ಶಾಸನ ಸರಳ ಹಾಗೂ ಸುಂದರವಾದ, ಮನಕರಗಿಸುವ ಕನ್ನಡ ಜನಪದಗೀತೆಯಾಗಿದೆ. ಈ ಶಾಸನದಲ್ಲಿ ಅತ್ಯಂತ ಹೃದಯವಿದ್ರಾವಕವಾದ ಘಟನೆಯೊಂದು ಸಮರ್ಥ ಹಾಗೂ ಸತ್ವಶಾಲಿಯಾದ ಭಾಷೆಯ ಸೊಗಡಿನಲ್ಲಿ ಮೂಡಿ ಬಂದಿದೆ. ಕನ್ನಡದ ಸೊಬಗನ್ನು ಸಮರ್ಪಕವಾದ ರೀತಿಯಲ್ಲಿ ಚಿತ್ರಿಸಿರುವ ಈ ಶಾಸನ ಭಾವ ಭಾಷೆಗಳ ಸಹಜತೆಗೆ ಹಾಗೂ ಅವುಗಳ ಬಂಧುರತೆಗೆ ಶ್ರೇಷ್ಠ ನಿದರ್ಶನವಾಗಿದೆ (ನೋಡಿ: ಮಲ್ಲ). ತಿರುಮಕೂಡಲು ನರಸೀಪುರ ತಾಲ್ಲೂಕಿನ ಕಲಿಯೂರು ಗ್ರಾಮದ ಕನ್ನಡ ಶಾಸನ ರಾಜ ರಾಜದೇವನ ಮಂತ್ರಿ ಹಾಗೂ ಸೇನಾನಿಯಾಗಿದ್ದ ಅಪ್ರಮೇಯನನ್ನು ಕುರಿತದ್ದಾಗಿದೆ. ಈ ಶಾಸನದ ಭಾಷೆ ಅತ್ಯಂತ ಪ್ರೌಢವಾಗಿದೆ. ಹಳಗನ್ನಡದ ಅಚ್ಚತನವನ್ನು ಅಂದವಾಗಿಸಿ ರೂಪಿಸುವುದರ ಜೊತೆಗೆ ಶೌರ್ಯ ಧೈರ್ಯಗಳಿಂದ ಹೋರಾಡಿದ ವೀರರ ಯುದ್ಧಗತಿಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ.

ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣದ ಶಾಸನ ಇನ್ನೊಂದು ದೃಷ್ಟಿಯಿಂದ ಕುತೂಹಲಕರವಾದದ್ದು. ಶಾಸನವನ್ನು ಬರೆಯಿಸಿ ಕೆತ್ತಿಸುವುದರ ಬಗ್ಗೆ ಮಾಹಿತಿಯನ್ನು ಇದರಿಂದ ಪಡೆಯಬಹುದಾಗಿದೆ. ಈ ಶಾಸನದಲ್ಲಿ ಶಾಸನವನ್ನು ಲೇಖನವೆಂದು ಕರೆಯಲಾಗಿದೆ. ಸಾಮಾನ್ಯವಾಗಿ ರಾಜನ ಆಸ್ಥಾನದಲ್ಲಿರುವ ಕವಿ ಅಥವಾ ಪಂಡಿತ ಶಾಸನವನ್ನು ರಚಿಸುತ್ತಿದ್ದ. ರಚಿಸಿದ ಶಾಸನವನ್ನು ಸೇನಬೋವ ಅಥವಾ ಅಕ್ಷರಜ್ಞನೊಬ್ಬ ಕಲ್ಲಿನ ಮೇಲಾಗಲಿ ತಾಮ್ರಪತ್ರದ ಮೇಲಾಗಲಿ ಬರೆಯುತ್ತಿದ್ದ. ಈ ಶಾಸನವನ್ನು ಕಲ್ಲುಕುಟಿಗ, ಬಡಗಿ, ಕಮ್ಮಾರ ಅಥವಾ ಅಕ್ಕಸಾಲಿಗ ಅಕ್ಷರರೇಖೆಗಳನ್ನು ಅನುಸರಿಸಿ ಕೆತ್ತುತ್ತಿದ್ದ. (ಎಸ್.ವಿ.ಎಸ್.ಬಿ)

**ನಾಣ್ಯಗಳು :** ಕರ್ನಾಟಕದ ಅನೇಕ ಪ್ರದೇಶಗಳನ್ನು ಕೆಲವುಕಾಲ ತಮ್ಮ ಅಧೀನದಲ್ಲಿಟ್ಟುಕೊಂಡಿದ್ದ ಚೋಳರ ನಾಣ್ಯಗಳು ಕರ್ನಾಟಕದಲ್ಲಿಯೂ ದೊರೆತಿವೆ. ಚೋಳರ ನಾಣ್ಯೇತಿಹಾಸವನ್ನು ಅರಿಯಲು ಇವು ಸಹಕಾರಿಯಾಗಿವೆ. ದಕ್ಷಿಣಭಾರತದಲ್ಲಿ ಬೆಳ್ಳಿಯ ನಾಣ್ಯಗಳನ್ನು ಮೊತ್ತಮೊದಲಿಗೆ ಬಳಕೆಗೆ ತಂದ ಕೀರ್ತಿ ಚೋಳರಿಗೆ ಸೇರುತ್ತದೆ. ದೊರೆತಿರುವ ಚೋಳನಾಣ್ಯಗಳಲ್ಲಿ ಉತ್ತಮಚೋಳ ಹೊರಡಿಸಿದ ನಾಣ್ಯಗಳೇ ಹಳೆಯವು. ಇವನ ನಾಣ್ಯಗಳಲ್ಲಿ ಇಕ್ಕೆಡೆಗಳಲ್ಲೂ ಚಾಮರ ಸಹಿತವಾದ

ಛತ್ರಿಯ ಕೆಳಗೆ ದೀಪಸ್ತಂಭ, ಬಿಲ್ಲು, ಹುಲಿ ಮತ್ತು ಮೀನುಗಳ ಚಿತ್ರಗಳಿವೆ. ನಾಣ್ಯಗಳ ಹಿಂಭಾಗದಲ್ಲಿ ನಾಗರೀ ಅಥವಾ ಗ್ರಂಥಲಿಪಿಯಲ್ಲಿ ಉತ್ತಮಚೋಳ ಎಂಬ ಬರೆಹವಿದೆ. ಬಿಲ್ಲು, ಹುಲಿ ಮತ್ತು ಮೀನು ಕ್ರಮವಾಗಿ ಚೇರ, ಚೋಳ ಮತ್ತು ಪಾಂಡ್ಯ ಚಿಹ್ನೆಗಳು; ಉತ್ತಮ ಚೋಳ ತಮಿಳುದೇಶ ಮತ್ತು ಕೇರಳಗಳ ಸಾರ್ವಭೌಮನಾಗಿದ್ದನೆಂದು ಇದರಿಂದ ಗೊತ್ತಾಗುತ್ತದೆ. ಇದೇ ನಮೂನೆಯ ನಾಣ್ಯಗಳಲ್ಲಿ ಚನ್ದ್ರಶಾನ್ತ (ಚಂದ್ರಶಾಂತ) ಎಂಬ ಶಾಸನವಿದೆ. ಚಂದ್ರಶಾಂತ ಎಂಬುದು ಒಬ್ಬನ ಹೆಸರೇ ಅಥವಾ ಬಿರುದೇ ಎನ್ನುವುದು ತಿಳಿದುಬಂದಿಲ್ಲ. ಒಂದನೆಯ ರಾಜರಾಜ ಚಂಡಪರಾಕ್ರಮ ಎಂಬ ಬಿರುದನ್ನು ಧರಿಸಿದ್ದುದರಿಂದ ಈ ನಮೂನೆಯ ನಾಣ್ಯಗಳನ್ನು ಅವನು ಹೊರಡಿಸಿರಬಹುದೆಂಬ ಊಹೆಯೂ ಇದೆ. ರಾಜರಾಜನ ನಾಣ್ಯಗಳಲ್ಲಿಯೂ ಹುಲಿ ಮೀನುಗಳ ಚಿತ್ರಗಳಿವೆ. ಹಿಂಭಾಗದಲ್ಲಿ ಶ್ರೀ ರಾಜರಾಜ ಎಂಬ ಬರೆಹವಿರುತ್ತದೆ. ರಾಜರಾಜನ ಬೇರೆ ನಮೂನೆಯ ನಾಣ್ಯಗಳೂ ದೊರೆತಿವೆ. ಒಂದು ನಮೂನೆಯ ನಾಣ್ಯಗಳಲ್ಲಿ ನಿಂತಿರುವ ಮತ್ತು ಕುಳಿತಿರುವ ರಾಜರಾಜನ ಚಿತ್ರವೂ ಹಿಂಭಾಗದಲ್ಲಿ ಶ್ರೀರಾಜರಾಜ ಎಂಬ ನಾಗರೀ ಶಾಸನವೂ ಇವೆ. ನಾಣ್ಯದ ಎರಡೂ ಕಡೆಗಳಲ್ಲಿ ಕುಳಿತಿರುವ ರಾಜನ ಚಿತ್ರ ಮತ್ತು ರಾಜರಾಜನೆಂಬ ಶಾಸನವಿರುವ ತಾಮ್ರದ ನಾಣ್ಯಗಳು ದೊರೆತಿವೆ. ಕುದುರೆಯನ್ನೇರಿರುವ ಮನುಷ್ಯನ ಚಿತ್ರವಿರುವ ನಾಣ್ಯ ಯೂಕ್ರಟೈಡಸ್ ಎಂಬುವನ ನಾಣ್ಯದ ನಮೂನೆಯನ್ನು ಹೋಲುತ್ತದೆ. ಇನ್ನೊಂದು ನಮೂನೆಯ ನಾಣ್ಯದಲ್ಲಿ ಮುರಳೀಧರ ಕೃಷ್ಣನ ಚಿತ್ರ ಹಾಗೂ ವಿ ಅಥವಾ ವ ಎಂಬ ಅಕ್ಷರವಿದೆ. ಶ್ರೀಲಂಕಾವೀರ ಎಂಬ ಶಾಸನವಿರುವ ನಾಣ್ಯಗಳು ರಾಜರಾಜನವೇ ಎಂದು ತಿಳಿದುಬರುತ್ತದೆ. ಹುಲಿ, ಮೀನು ಮುಂತಾದ ಚಿತ್ರಗಳಿರುವ ನಾಣ್ಯಗಳನ್ನು ರಾಜೇಂದ್ರನೂ ಅಚ್ಚುಹಾಕಿಸಿ, ತನ್ನ ಹೆಸರಿನ ಶಾಸನವನ್ನು ಸೇರಿಸಿದ. ತನ್ನ ಉತ್ತರಾಪಥದ ದಿಗ್ವಿಜಯಗಳ ಜ್ಞಾಪಕಾರ್ಥವಾಗಿ ಗಂಗೈಕೊಂಡಚೋಳನ್ ಎಂಬ ಬಿರುದಿನ ಶಾಸನವಿರುವ ನಾಣ್ಯಗಳನ್ನು ಹೊರಡಿಸಿದ. ಯುದ್ಧಮಲ್ಲ ಮತ್ತು ಜಯ (ಜಯಂಗೊಂಡ) ಎಂಬ ಶಾಸನಗಳಿರುವ ನಾಣ್ಯಗಳೂ ದೊರೆತಿವೆ. ತನ್ನ ಹೆಸರಿನ ಶಾಸನವಿರುವ ನಾಣ್ಯಗಳನ್ನು ಕುಲೋತ್ತುಂಗನೂ ವೃಷಭದ ಚಿತ್ರ ಮತ್ತು ವಿ ಎಂಬ ಶಾಸನವಿರುವ ನಾಣ್ಯಗಳನ್ನು ವಿಕ್ರಮ ಚೋಳನೂ ವೃಷಭ ಮತ್ತು ಕಠಾರಿಯ ಚಿತ್ರವಿರುವ ನಾಣ್ಯಗಳನ್ನು ಎರಡನೆಯ ಕುಲೋತ್ತುಂಗನೂ ವೃಷಭ ಮತ್ತು ಶಂಖದ ಚಿತ್ರವಿರುವ ನಾಣ್ಯಗಳನ್ನು ಎರಡನೆಯ ರಾಜರಾಜ ಎರಡನೆಯ ರಾಜಾಧಿರಾಜ ಮತ್ತು ಎರಡನೆಯ ರಾಜೇಂದ್ರರೂ ಹೊರಡಿಸಿದರು. (ಎಚ್.ಎಂ.ಎನ್.ಆರ್.)

**ಚೌಂಡರಸ :** ಸು.1185-1240. ಬ್ರಾಹ್ಮಣ ಕವಿ. ದಶಕುಮಾರ ಚರಿತ್ರೆ, ಬಾಣಾಸುರವಿಜಯ, ನಳಚರಿತ್ರೆ ಎಂಬ ಗ್ರಂಥಗಳ ಕರ್ತೃ. ಈತನ ತಂದೆ ಮಧುಸೂಧನ, ತಾಯಿ ಮಲ್ಲವ್ವೆ, ಹೆಂಡತಿ ಲಕ್ಷ್ಮೀ, ಅಣ್ಣ ಸರಸಕವೀಶ್ವರ. ಕವಿಗೆ ಚೌಂಡರಾಜನೆಂಬ ಹೆಸರೂ ಇದ್ದಂತೆ ತಿಳಿಯುತ್ತದೆ. ಕವಿರಾಜಶೇಖರ, ಕವಿತಾವಿಲಾಸ ಎಂಬವು ಈತನ ಬಿರುದುಗಳು. ಪೂರ್ವಕವಿಗಳಲ್ಲಿ ಪಂಪ, ಪೊನ್ನ, ಚಂದ್ರ, ರುದ್ರಭಟ್ಟ (ಸು.1185) ಇವರನ್ನು ಸ್ಮರಿಸಿದ್ದಾನೆ. 'ಪಂಡರೀರಾಯಭಂಗ ವಿಟ್ಠಲಂ', ವಿಟ್ಠಲಪದಾಂಭೋಜಾತ ಭೃಂಗ' ಎಂದು ಹೇಳಿಕೊಂಡಿರುವುದರಿಂದ ಈತ ಪಂಡರಾಪುರದವನಾಗಿರಬೇಕೆಂದೂ ಪಂಡರಾಪುರದ ವಿಟ್ಠಲನ ಭಕ್ತನೆಂದೂ ಊಹಿಸಬಹುದು.

ಇವನು ನಳಚರಿತ್ರೆಯಲ್ಲದೆ ಬಾಣಾಸುರವಿಜಯ ಮತ್ತು ದಶಕುಮಾರ ಚರಿತ್ರೆ ಎಂಬ ಕಾವ್ಯಗಳನ್ನು ರಚಿಸಿರುವುದಾಗಿ ನಳಚರಿತ್ರೆಯಿಂದ ತಿಳಿದುಬರುತ್ತದೆ. ಬಾಣಾಸುರವಿಜಯ ಉಪಲಬ್ಧವಿಲ್ಲ. ಈತನ ಉಳಿದೆರಡು ಕೃತಿಗಳ ಕೆಲವು ಪದ್ಯಗಳು ಮಲ್ಲಿಕಾರ್ಜುನನ (ಸು.1240) ಸೂಕ್ತಿಸುಧಾರ್ಣವ ಗ್ರಂಥದಲ್ಲಿ ಸಂಕಲಿತವಾಗಿವೆ.

ದಶಕುಮಾರಚರಿತ್ರೆ ಚಂಪೂ ಗ್ರಂಥ. ದಂಡಿಯ ಸಂಸ್ಕೃತ ದಶಕುಮಾರ ಚರಿತೆ ಈ ಗ್ರಂಥಕ್ಕೆ ಆಕರ. ಹತ್ತುಜನ ರಾಜಕುಮಾರರ ಸಾಹಸ, ಪ್ರೇಮ ಇಲ್ಲಿಯ ಕಥಾವಸ್ತು. ಮುಖ್ಯ ಕಥಾನಕ ಯಥಾ ಮೂಲವಾದರೂ ವರ್ಣನೆಗಳಲ್ಲಿ ಮೂಲದಲ್ಲಿಲ್ಲದ ವಿಸ್ತಾರ ಮತ್ತು ಸ್ವತಂತ್ರ ಕಲ್ಪನೆಗಳು ಬಂದಿವೆ. ಕಥನಕಲೆಯಲ್ಲಿ ಸಹಜಗತಿ ಇದೆ. ಬಂಧ ಲಕ್ಷಣಬದ್ಧವಾಗಿಯೂ ಲಲಿತವಾಗಿಯೂ ಇದೆ.

ನಳಚರಿತ್ರೆ ಸು.800 ಪದ್ಯಗಳುಳ್ಳ ಚಂಪೂಕಾವ್ಯ. ಮಹಾಭಾರತದ ನಳೋಪಾಖ್ಯಾನವನ್ನು ಮೂಲವಾಗಿಟ್ಟುಕೊಂಡು ಈ ಕೃತಿಯನ್ನು ರಚಿಸಿರುವಂತೆ ಊಹಿಸಲು ಅವಕಾಶವಿದೆ. ಚಂಪೂ ಸಂಪ್ರದಾಯವನ್ನನುಸರಿಸಿ ಈ ಕಾವ್ಯ ಪ್ರೌಢವಾಗಿದೆ. ವರ್ಣನೆಗಳಲ್ಲಾಗಲಿ ಪಾತ್ರನಿರೂಪಣೆಯಲ್ಲಾಗಲಿ ಹೇಳಿಕೊಳ್ಳುವಂಥ ಕಾವ್ಯಾಂಶ ಕಂಡುಬರುವುದಿಲ್ಲ. (ಎಸ್.ಎನ್.ಕೆ.)

**ಚೌಟ ವಂಶ :** ಸು.12-18ನೆಯ ಶತಮಾನದವರೆಗೆ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ಪ್ರದೇಶದಲ್ಲಿ ರಾಜ್ಯವಾಳಿದ ಕಿರುರಾಜಮನೆತನ. ಮೂಲತಃ ಉಲ್ಲಾಳದ ಬಳಿಯ ಸೋಮೇಶ್ವರ ಇವರ ರಾಜಧಾನಿಯಾಗಿದ್ದು ಕ್ರಮೇಣ ಅದು ಪುತ್ತಿಗೆಗೆ ಹಾಗೂ ಅನಂತರ ಮೂಡಬಿದರೆಗೆ ಬದಲಾಯಿತು. ಚುಟು, ಚತುರ್ಥ ಅಥವಾ ಚಾವುಡ (ರಜಪೂತ)ದಿಂದ ಚೌಟ ಎಂಬ ಪದ ರೂಢಿತವಾಗಿರಬಹುದೆಂಬ ಅಭಿಪ್ರಾಯಗಳಿವೆ.

ಸೋಮವಾರಪೇಟೆ ತಾಲ್ಲೂಕಿನ ಉಲುಗುಲಿ ಗ್ರಾಮದ 1264ರ ಶಾಸನವೊಂದರಲ್ಲಿ ಚಉಟು ಎಂದು ಪ್ರಪ್ರಥಮ ಉಲ್ಲೇಖ ದೊರೆಯುತ್ತದೆ. ಸ್ಥಳೀಯ ಸಂಪ್ರದಾಯದ ಪ್ರಕಾರ ಚೌಟ ವಂಶಸ್ಥರು ಶಿವಮೊಗ್ಗದ ಹೊಸನಗರ ಪ್ರದೇಶದಿಂದ ಬಂದವರು.

ಚೌಟವಂಶಕ್ಕೆ ಸೇರಿದವರೆಂದು ಕೆಲವು ವಿದ್ವಾಂಸರು ಊಹಿಸುವ ತಿರುಮಲರಾಯ (1169-79), ಚೆನ್ನರಾಯ (1179-1219) ಮತ್ತು ದೇವರಾಯ (1219-45) ಮೊದಲಾದ ಅರಸರ ಬಗ್ಗೆ ವಿವರಗಳೇನೂ ತಿಳಿಯದು. ಇವರ ಉಲ್ಲೇಖವಿರುವ ಶಾಸನಗಳೂ ದೊರೆತಿಲ್ಲ. 1390ರ ಶಾಸನವೊಂದರಲ್ಲಿ ವಿಕ್ರಚೌಟನೆಂಬ ಅರಸನ ಉಲ್ಲೇಖವಿದೆ. 1398ರ ಉತ್ತರ ಕನ್ನಡ ಜಿಲ್ಲೆಯ ಕೈಕಿಣಿ ಗ್ರಾಮದ ಶಾಸನಗಳಿಂದ ವಿಜಯನಗರದ ಅರಸ ಇಮ್ಮಡಿ ಹರಿಹರನ ಕಾಲದಲ್ಲಿ ಮಹಾಮಂಡಲೇಶ್ವರ ಮಂಗಪ್ಪ ದಣ್ಣಾಯಕ ಚೌಟರನ್ನು ಸೋಲಿಸಿದ ಸಂಗತಿ ತಿಳಿದುಬರುತ್ತದೆ. 1431ರ ಪುತ್ತೂರ ಶಾಸನದಲ್ಲಿ ಉಕ್ತನಾಗಿರುವ ಚೌಟ ಸಾಂತೆಯ ಶಾಸನಗಳಿಂದ ತಿಳಿದುಬರುವ ಚೌಟ ದೊರೆ. ಮಂಗಳೂರು ತಾಲ್ಲೂಕಿನ ಅದ್ದೂರು ಶಾಸನದ (1434) ಜೋಗಿ ಒಡೆಯ, 1465ರ ಒಂದು ಶಾಸನದಲ್ಲಿ ಹೇಳಿರುವ 'ಪುತ್ತಿಗೆಯ ಜನನದಲು ಬಾಳುವ' ಅಲ್ಲಪ್ಪಶೇಖ ಚೌಟ ಇವರು ಇತರ ಶಾಸನೋಕ್ತರು. 1507ರಲ್ಲಿ ತಿರುಮಲರಾಯಚೌಟ ಪೊಳಲಿ ದೇವಾಲಯಕ್ಕೆ ದತ್ತಿಬಿಟ್ಟ. ಬಹುಶಃ ಈತ ಕೃಷ್ಣದೇವರಾಯನ ಆಸ್ಥಾನಕ್ಕೆ ಭೇಟಿ ನೀಡಿದ್ದಿರಬೇಕು. ಇವನ ಅನಂತರ ತುಳುವರಸ ಚೌಟ ಮತ್ತು ತರುವಾಯ ತಿರುಮಲರಸ ಚೌಟ ಪಟ್ಟಕ್ಕೆ ಬಂದರು. ಈ ತಿರುಮಲರಸ ಕಳಸ-ಕಾರ್ಕಳ ಪ್ರಭುವಾದ ಪಾಂಡ್ಯಪ್ಪ ಒಡೆಯನೊಂದಿಗೆ ರಾಜಕೀಯ ಒಪ್ಪಂದವನ್ನು ಮಾಡಿಕೊಂಡ. 1571ರ ಶಾಸನವೊಂದು ಲೋಕ ದೇವಿಯನ್ನು ಉಲ್ಲೇಖಿಸುತ್ತದೆ. ಈಕೆ ಬಹುಶಃ ಅಬ್ಬಕ್ಕದೇವಿಯ ಸೋದರಿ. ಅಬ್ಬಕ್ಕದೇವಿ ಉಲ್ಲಾಳದಿಂದಲೂ ಲೋಕದೇವಿ ಪುತ್ತಿಗೆಯಿಂದಲೂ ಒಂದೇ ಕಾಲದಲ್ಲಿ ಆಳುತ್ತಿದ್ದಿರಬೇಕೆಂದು ತೋರುತ್ತದೆ. ಈ ಕಾಲದಿಂದ ಮುಂದೆ ಚೌಟರ ಎರಡೂ ಶಾಖೆಗಳು ಆಳಿಕೆ ನಡೆಸಿರಬೇಕು. ಉಲ್ಲಾಳ ಶಾಖೆಯ ಇತಿಹಾಸಕ್ಕೆ ಪೋರ್ಚುಗೀಸ್ ದಾಖಲೆಗಳೇ ಮೂಲಧಾರ. 1556ರಲ್ಲಿ ಪೋರ್ಚುಗೀಸ್ ಸೇನಾನಿಯೊಬ್ಬ ಯುದ್ಧನೌಕೆಯೊಂದಿಗೆ ಉಲ್ಲಾಳದ ಅರಸಿಯಿಂದ ಕಪ್ಪವನ್ನು ವಸೂಲು ಮಾಡಲು ಬಂದು ಮಂಗಳೂರನ್ನು ಲೂಟಿ ಮಾಡಿದ. ರಾಣಿ ಶಾಂತಿ ಒಪ್ಪಂದ ಮಾಡಿಕೊಂಡಳು. ಈಕೆ ಅಬ್ಬಕ್ಕ (ನೋಡಿ) ಇರಬೇಕು.

ಲೋಕದೇವಿಯ ಅನಂತರ ಚಿಕ್ಕರಾಜರಸ ಪುತ್ತಿಗೆ ಶಾಖೆಯ ಉತ್ತರಾಧಿಕಾರಿಯಾದ. ಈತ 1600ರವರೆಗೂ ರಾಜ್ಯವಾಳಿರಬೇಕು. 1640ರ ಶಾಸನವೊಂದು ಹೆಸರಿಸುವ ಚಿಕ್ಕರಾಜ ಒಡೆಯ ಈಗ ತಿಳಿದಿರುವಂತೆ ಚೌಟರ ಕೊನೆಯ ಅರಸ.

ಚೌಟರಸರು ಜೈನಮತಾವಲಂಬಿಗಳಾಗಿದ್ದರು. ಇವರು ಕಾರ್ಕಳದ ಭೈರರಸರೊಂದಿಗೆ ವೈರ ಹೊಂದಿದ್ದರೂ ಕೆಲವೊಮ್ಮೆ ಒಪ್ಪಂದ ಮಾಡಿಕೊಂಡರು. ಹಾಗೆಯೇ ಬಂಗವಾಡಿಯ ಬಂಗರು ಮತ್ತು ಇತರ ಸ್ಥಳೀಯ ರಾಜಮನೆತನಗಳೊಡನೆ ಒಪ್ಪಂದ ಮಾಡಿಕೊಂಡರು. ಈ ಒಪ್ಪಂದಗಳು ಆಗಾಗ್ಗೆ ಭಂಗವಾಗುತ್ತಿದ್ದುದನ್ನೂ ಕಾಣುತ್ತೇವೆ.

ಶಾಸನಗಳ ಆಧಾರದಿಂದ ಚೌಟವಂಶಾವಳಿಯನ್ನು ಹೀಗೆ ರಚಿಸಬಹುದು:

ವಿಕ್ರ ಚೌಟ (1375?- 1410)
|
ಸಾಂತೆಯ (1410 - 35?)
|
ಜೋಗಿ ಒಡೆಯ (1435?- 55?)
|
ಅಲ್ಲಪ್ಪಶೇಖ (1455?-75?)
|
ದೇವರುಶೇಖ (1475?-1500?)
|
ತಿರುಮಲರಾಯ (1500?-25)
|
ತುಳುವರಸ (1525 -40)
|
ತಿರುಮಲರಸ (1540 - 65)

(ಪುತ್ತಿಗೆ ಶಾಖೆ)
ಲೋಕದೇವಿ (1565 -75)
|
ಚಿಕ್ಕರಾಜರಸ (1575-1600)
|
ಹೆಸರು ತಿಳಿಯದ ಅರಸ
|
ಚಿಕ್ಕರಾಜ ಒಡೆಯ (1640)

(ಉಲ್ಲಾಳ ಶಾಖೆ)
ಅಬ್ಬಕ್ಕದೇವಿ (1544 -98)
|
ಹೆಸರು ತಿಳಿಯದ ಉತ್ತರಾಧಿಕಾರಿಗಳು

(ಎಚ್.ಎಂ.ಎನ್.ಆರ್.)

**ಚೌಡದಾನಪುರ :** ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲ್ಲೂಕಿನಲ್ಲಿ ರಾಣೆಬೆನ್ನೂರಿನಿಂದ ಉತ್ತರಕ್ಕೆ 22ಕಿಮೀ ಹಾಗೂ ದೇವರಗುಡ್ಡ ರೈಲ್ವೆ ನಿಲ್ದಾಣದಿಂದ 6ಕಿಮೀ ಅಂತರದಲ್ಲಿ, ತುಂಗಭದ್ರಾ ನದಿಯ ದಂಡೆಯ ಮೇಲಿರುವ ಒಂದು ಹಳ್ಳಿ.

ಐತಿಹ್ಯಗಳ ಪ್ರಕಾರ ಚೌಡದಾನಪುರಕ್ಕೆ- ಅವಿಮುಕ್ತಕ್ಷೇತ್ರವೆಂದು ಹೆಸರು. ಇಲ್ಲಿ ನದಿ ಪೂರ್ವ-ಪಶ್ಚಿಮವಾಹಿನಿಯಾಗಿ ಇರುವುದರಿಂದ ಸ್ಥಳ ಪವಿತ್ರವೆನಿಸಿದೆ. ಈ ಗ್ರಾಮಕ್ಕೆ 13ನೆಯ ಶತಮಾನದ ಆದಿಭಾಗದಲ್ಲಿ ಕೂರ್ತಗಿ ಎಂಬ ಹೆಸರಿತ್ತೆಂದು ಇಲ್ಲಿಯ ಶಿಲಾಶಾಸನದಿಂದ ತಿಳಿದುಬರುತ್ತದೆ. ಪುರಾಣಕಾಲದಲ್ಲಿ ಈ ಸ್ಥಳ ತ್ರಿಪುರದಹನ ಸ್ಥಾನವೆಂತಲೂ ಈಗ ಈ ಸುತ್ತಿನಲ್ಲಿರುವ ಚೌಡಯ್ಯದಾನಪುರ (ಶಿವಪುರ), ಚಂದಾಪುರ (ಚಂದ್ರಪುರ), ನರಸೀಪುರ (ನರಸಿಂಹಪುರ) - ಇವು ಹಿಂದಿನ ತ್ರಿಪುರಗಳ ಸ್ಮಾರಕಗಳೆಂದೂ ಐತಿಹ್ಯ. ಪ್ರಖ್ಯಾತ ವಚನಕಾರ, ಶ್ರೇಷ್ಠ ಶಿವಶರಣ ಅಂಬಿಗರ ಚೌಡಯ್ಯ ಈ ಗ್ರಾಮದವನು. ಚೌಡಯ್ಯ ಈಗಿರುವ ಶಿವಪುರಕ್ಕೆ ಸೇರಿದ ಭೂಭಾಗವನ್ನು ದಾನವಾಗಿ ಕೊಟ್ಟಿದ್ದರಿಂದ ಇದಕ್ಕೆ ಚೌಡಯ್ಯದಾನಪುರ ಎಂದು ಹೆಸರು ಬಂದಿದೆಯೆಂದು ಪ್ರತೀತಿ. ನಯನಮನೋಹರವಾದ ಚೌಡಯ್ಯನ ಸ್ಮಾರಕ ಮಂದಿರ ತುಂಗಭದ್ರೆಯ ದಂಡೆಯಲ್ಲಿ ಶೋಭಿಸುತ್ತಿದೆ.

ಕಲ್ಯಾಣ ಚಾಳುಕ್ಯ ಚಕ್ರವರ್ತಿ 6ನೆಯ ವಿಕ್ರಮಾದಿತ್ಯ, ಗುತ್ತರ ಮಲ್ಲಿದೇವ, ಹಾನುಗಲ್ಲು ಕದಂಬ ಅರಸು ಕಾಮದೇವ, ಯಾದವ, ಕನ್ನರ, ಮಹಾದೇವ, ರಾಮಚಂದ್ರ ಮೊದಲಾದ ಅರಸರ ಉಲ್ಲೇಖವಿರುವ ಒಂಬತ್ತು ಶಿಲಾಶಾಸನಗಳು ಇಲ್ಲಿ ದೊರೆಕಿವೆ. ಗುತ್ತ ಅರಸರ ಇತಿಹಾಸವನ್ನು ನಿರೂಪಿಸುವ ಮಹತ್ವದ ಶಿಲಾ ಲಿಪಿಗಳು ಇಲ್ಲಿಯೇ ಸಿಕ್ಕಿವೆ. ಈ ವಂಶದ ರಾಜಧಾನಿಯಾಗಿದ್ದ ಗುತ್ತಲ ಈ ಹಳ್ಳಿಯ ನೆರೆಯಲ್ಲಿದೆ.

ನದಿಯ ದಂಡೆಯ ಮೇಲಿರುವ ಮುಕ್ತೇಶ್ವರ ಗುಡಿ ಚಾಳುಕ್ಯ ಶೈಲಿಯ ಸುಂದರ ದೇವಾಲಯ. ಕರಿ ಕಲ್ಲಿನಿಂದ ರಚಿಸಲಾದ ಈ ದೇವಾಲಯ ಶಿಲ್ಪಕಲೆಗೆ ಹೆಸರಾಗಿದೆ. ರುದ್ರಮುನಿ ದೇವಾಲಯ, ಗುಹಮುನಿಗಳ ದೇವಾಲಯ, ವೀರಭದ್ರ ದೇವಾಲಯಗಳಲ್ಲದೆ ದೊಡ್ಡ ಬಸವೇಶ್ವರ, ಸಣ್ಣಬಸವೇಶ್ವರ, ಭೈರವಮೂರ್ತಿಗಳ ಗುಡಿಗಳನ್ನು ಇಲ್ಲಿ ನೋಡಬಹುದು. ಇಲ್ಲಿ ಮಕರ ಸಂಕ್ರಾಂತಿ ಜಾತ್ರೆ ವೈಭವದಿಂದ ನಡೆಯುತ್ತದೆ. ಯುಗಾದಿಯಂದು ವೀರಭದ್ರ ದೇವರ ಉತ್ಸವ ನೆರವೇರುವುದು.

ಇತ್ತೀಚೆಗೆ ಶಿವದೇವ ಒಡೆಯರ ಅವಿರತ ಪರಿಶ್ರಮದಿಂದ ಈ ಊರಿಗೆ ಹೊಸ ಚೈತನ್ಯ ಬಂದಿದೆ. ಹಲವು ಸೌಲಭ್ಯಗಳು ದೊರೆತಿವೆ. (ಎಸ್.ಎಸ್.ಬಿ.)

**ಚೌಡಪ್ಪನಾಯಕ :** ಕೆಳದಿ ರಾಜವಂಶದ ಮೂಲಪುರುಷ (ಸು.1500-30). ಇವನ ಮೂಲ ಹೆಸರು ಚೌಡಗೌಡ. ಈತನ ತಂದೆ ಪಳ್ಳಿವಾಯಲಿನ (ಸಾಗರ ತಾಲ್ಲೂಕು ಹಳ್ಳಿಬೈಲು) ಬಸಪ್ಪ, ತಾಯಿ ಬಸವಾಂಬೆ. ಈತನ ತಮ್ಮ ಭದ್ರಪ್ಪ. ಬೇಸಾಯವೇ ಇವರ ಜೀವನೋಪಾಯವಾಗಿತ್ತು. ಸಾಮಾನ್ಯ ಮನೆತನದಲ್ಲಿ ಹುಟ್ಟಿದ ಚೌಡಪ್ಪ ಮುಂದಕ್ಕೆ ಹೇಗೆ ಬಂದನೆನ್ನುವ ವಿಷಯದಲ್ಲಿ ಶಿವತತ್ತ್ವ ರತ್ನಾಕರ ಮತ್ತು ಕೆಳದಿನೃಪವಿಜಯ ಗ್ರಂಥಗಳಲ್ಲಿ ದಂತಕಥೆಗಳಿವೆ. ಅವುಗಳ ಪ್ರಕಾರ ಚೌಡಪ್ಪನಿಗೆ ಎಲ್ಲೋ ಹೂತಿಟ್ಟ ಒಂದು ಕೊಪ್ಪರಿಗೆ ಹಣ ಮತ್ತು ಒಂದು ಕತ್ತಿ (ನಾಗರಿಮುರಿ) ಸಿಕ್ಕಿತು. ಇದರ ಸಹಾಯದಿಂದ ಚೌಡಪ್ಪ ಮತ್ತು ಇವನ ಸಹೋದರ ಒಂದು ಸೈನ್ಯವನ್ನು ಕಟ್ಟಿ ಕೆಳದಿಯ ಸುತ್ತಮುತ್ತಲ ಪ್ರದೇಶವನ್ನು ತಮ್ಮ ಹತೋಟಿಗೆ ತೆಗೆದುಕೊಂಡರು. ಆಗ ಆಳುತ್ತಿದ್ದ ವಿಜಯನಗರದ ಚಕ್ರವರ್ತಿ ಇವರ ಚಟುವಟಿಕೆಯನ್ನು ಒಪ್ಪಲಿಲ್ಲ. ಇವರನ್ನು ವಿಜಯನಗರಕ್ಕೆ ಕರೆತರಿಸಿ ಸೆರೆಮನೆಯಲ್ಲಿಡಿಸಿದ. ಇದೇ ಸಮಯದಲ್ಲಿ ಇನ್ನೊಬ್ಬ ಪಾಳೆಯಗಾರ ವಿಜಯನಗರದ ವಿರುದ್ಧ ದಂಗೆಯೆದ್ದಾಗ, ಆ ದಂಗೆಯನ್ನು ಅಡಗಿಸುತ್ತೇವೆಂದು ಸಹೋದರರು ಚಕ್ರವರ್ತಿಗೆ ಆಶ್ವಾಸನೆ ಕೊಟ್ಟರು. ಸೆರೆಯಿಂದ ಹೊರಬಂದ ಇವರು ಆಶ್ವಾಸನೆಯನ್ನು ಪೂರೈಸಿದರು. ಚಕ್ರವರ್ತಿ ಸಂತುಷ್ಟನಾಗಿ ಇವರು ಗೆದ್ದ ಹಳ್ಳಿಗಳನ್ನು ಇವರಿಗೇ ಮಾನ್ಯವಾಗಿ ಕೊಟ್ಟ.

ಚೌಡಪ್ಪನ ಒಂದೇ ಒಂದು ಶಾಸನ (1506) ಸಿಕ್ಕಿದೆ. ಇದರಲ್ಲಿ ತಾನು ಯಾರಿಗೆ ಅಧೀನನೆಂದು ಹೇಳಿಕೊಂಡಿಲ್ಲ. ಇದರಲ್ಲಿ ಇವನಿಗೆ ಎಡವಮುರಾರಿ ಎನ್ನುವ ಬಿರುದಿದೆ. ಇದು ಮುಂದಿನ ಎಲ್ಲ ಕೆಳದಿನಾಯಕರ ಬಿರುದಾಗಿತ್ತು.

ಚೌಡಪ್ಪನಿಗೆ ಇಬ್ಬರು ಮಕ್ಕಳು: ಸದಾಶಿವ ಮತ್ತು ಭದ್ರ. ಇವನ ಒಬ್ಬ ಹೆಂಡತಿಯ ಹೆಸರು ತಿರುಮಮ್ಮ. ಇವಳು ಸದಾಶಿವನ ತಾಯಿ. ಕೆಳದಿನೃಪವಿಜಯದಲ್ಲಿ ಇವನು ಕೆಳದಿಯಲ್ಲಿ ರಾಮೇಶ್ವರ ದೇವಸ್ಥಾನವನ್ನು ಮರದಲ್ಲಿ ಕಟ್ಟಿಸಿದನೆಂದು ಹೇಳಿದೆ. ಈ ಗ್ರಂಥ ಮತ್ತು ಶಿವತತ್ತ್ವರತ್ನಾಕರದಲ್ಲಿ ಚೌಡಪ್ಪನಿಗೆ ನಾಯಕನೆನ್ನುವ ಬಿರುದನ್ನು ವಿಜಯನಗರದ ಚಕ್ರವರ್ತಿ ಕೊಟ್ಟನೆಂದು ಹೇಳಿದೆ. ಆದರೆ ಶಾಸನದಲ್ಲಿ ಈತನ ಹೆಸರು ಚೌಡಗೌಡನೆಂದು ಇರುವುದಲ್ಲದೆ, ಇವನ ಮಗ ಸದಾಶಿವ ನಾಯಕನ ಶಾಸನದಲ್ಲಿಯೂ ಇದೇ ಹೆಸರಿದೆ. (ಜಿ.ಎಸ್.ಡಿ.)

**ಚೌಡಯ್ಯ, ಟಿ. :** 1895-1967. ಪ್ರಸಿದ್ಧ ಪಿಟೀಲು ವಿದ್ವಾಂಸರು. ಮೈಸೂರಿನಿಂದ 30ಕಿಮೀ ಪೂರ್ವಕ್ಕಿರುವ ತಿರುಮಕೂಡಲಿನಲ್ಲಿ 1895 ಜನವರಿ 1ರಂದು ಜನಿಸಿದರು. ತಂದೆ ಸಂಗೀತಪ್ರಿಯರಾಗಿದ್ದ ಅಗಸ್ತ್ಯ ಗೌಡರು, ತಾಯಿ ಸಂಗೀತ ಮತ್ತು ಭರತನಾಟ್ಯಗಳಲ್ಲಿ ಸ್ವತಃ ಕಲಾವಿದೆಯಾಗಿದ್ದು ಸಂಸ್ಕೃತ ಭಾಷೆಯನ್ನೂ ಬಲ್ಲವರಾಗಿದ್ದ ಸುಂದರಮ್ಮನವರು. ಚೌಡಯ್ಯನವರಿಗೆ ಪ್ರಥಮ ಶಿಕ್ಷಣ ತಾಯಿಯವರಿಂದಲೇ ದೊರಕಿತು. ತಮ್ಮ ಮಗನ ಭವಿಷ್ಯ ಸಂಗೀತದಲ್ಲಿದೆ ಎಂಬುದನ್ನು ಅರಿತ ಇವರ ತಾಯಿ ಮಗನನ್ನು ಮೈಸೂರಿನಲ್ಲಿದ್ದ ತಮ್ಮ ಸೋದರನಲ್ಲಿಗೆ ಕಳುಹಿಸಿಕೊಟ್ಟರು. ಅವರು ಚೌಡಯ್ಯನವರನ್ನು ಪ್ರಸಿದ್ಧ ಸಂಗೀತ

ವಿದ್ವಾಂಸರಾಗಿದ್ದ ಬಿಡಾರಂ ಕೃಷ್ಣಪ್ಪನವರಲ್ಲಿ ಸಂಗೀತವನ್ನು ಕಲಿಯಲು ಸೇರಿಸಿದರು. ಸು.18 ವರ್ಷಕಾಲ ಕೃಷ್ಣಪ್ಪನವರಲ್ಲಿ ಶಿಕ್ಷಣ ಪಡೆದ ಚೌಡಯ್ಯನವರು ಪಿಟೀಲು ವಾದನದಲ್ಲಿ ಅಮೋಘ ಪಾಂಡಿತ್ಯ ಗಳಿಸಿದರು. ಗುರುಗಳ ಅಪ್ಪಣೆಯ ಮೇರೆಗೆ 1926ರಿಂದ ಸೋಲೋ ಕಛೇರಿಗಳನ್ನು ಮಾಡಲು ಪ್ರಾರಂಭಿಸಿದರು. ಪಿಟೀಲು ವಾದ್ಯದ ಮೇಲೆ ಪೂರ್ಣ ಹತೋಟಿ ಪಡೆಯಲು ಶ್ರದ್ಧೆಯ ಜೊತೆಗೆ ಇವರ ಕಠಿಣವಾದ ಸಾಧನೆಯೂ



ಕಾರಣವಾಗಿತ್ತು. ಇವರು ತಮ್ಮ ಸಾಧನೆಗಾಗಿ ದಿನದ 16 ಗಂಟೆಗಳನ್ನು ಮೀಸಲಾಗಿಡುತ್ತಿದ್ದರಂತೆ. ಹಿರಿಯ ವಿದ್ವಾಂಸರಾದ ಅರಿಯಕುಡಿ ರಾಮಾನುಜಯ್ಯಂಗಾರ್, ಪಾಲಘಾಟ್ ರಾಮಭಾಗವತರ್, ಚೆಂಬೈ ವೈದ್ಯನಾಥ ಭಾಗವತರ್, ಶೆಮ್ಮಂಗುಡಿ ಶ್ರೀನಿವಾಸಯ್ಯರ್, ಜಿ.ಎನ್. ಬಾಲಸುಬ್ರಹ್ಮಣ್ಯಂ, ಎಂ.ಎಸ್.ಸುಬ್ಬುಲಕ್ಷ್ಮಿ ಮೊದಲಾದವರು ಚೌಡಯ್ಯನವರ ಪ್ರತಿಭೆಯನ್ನು ಅರಿತು ಇವರನ್ನು ತಮ್ಮ ಕಛೇರಿಗಳಲ್ಲಿ ಪಕ್ಕವಾದ್ಯಕ್ಕಾಗಿ ಆಹ್ವಾನಿಸುತ್ತಿದ್ದರು. ನಾಲ್ಕು ತಂತಿಗಳ ಪಿಟೀಲು ವಾದ್ಯವನ್ನು ಏಳು ತಂತಿಗಳಿಗೆ ಮಾರ್ಪಡಿಸಿ ಅದನ್ನು ಪ್ರಸಿದ್ಧಿಗೆ ತಂದ ಕೀರ್ತಿ ಚೌಡಯ್ಯನವರದು. ಇನ್ನೂ ಮುಂದುವರಿದು 19 ತಂತಿಗಳ ಪಿಟೀಲನ್ನು ಇವರು ಅಮೋಘವಾಗಿ ನುಡಿಸುತ್ತಿದ್ದುದುಂಟು.

ಚೌಡಯ್ಯನವರ ಪಾಂಡಿತ್ಯ ದಿನೇದಿನೇ ವೃದ್ಧಿಯಾಗಿ ಜನತೆ ಇವರನ್ನು ಅನೇಕ ಬಿರುದು ಸನ್ಮಾನಗಳಿಂದ ಗೌರವಿಸಿತು. 1941ರಲ್ಲಿ ಮೈಸೂರು ಮಹಾರಾಜರಿಂದ ಸಂಗೀತರತ್ನ ಎಂಬ ಬಿರುದೂ 1957ರಲ್ಲಿ ರಾಷ್ಟ್ರಪತಿಗಳ ಪ್ರಶಸ್ತಿಯೂ ಮದರಾಸು ಸಂಗೀತ ಅಕಾಡೆಮಿಯಿಂದ ಸಂಗೀತ ಕಲಾನಿಧಿ ಮತ್ತು ಮೈಸೂರು ಸಂಗೀತ ಪರಿಷತ್ತಿನಿಂದ ಗಾನಕಲಾಸಿಂಧು ಎಂಬ ಬಿರುದುಗಳೂ ದೊರಕಿದವು.

ಚೌಡಯ್ಯನವರು ತ್ರಿಮುಕುಟ ಎಂಬ ಅಂಕಿತದಲ್ಲಿ ಅನೇಕ ಸುಂದರ ಕೃತಿಗಳನ್ನು ಮತ್ತು ತಿಲ್ಲಾನಗಳನ್ನು ರಚಿಸಿದ್ದಾರೆ. ಇವರು ಸಂಗೀತ ಬೋಧನೆಗಾಗಿ ಅಯ್ಯನಾರ್ ಕಲಾಶಾಲೆಯನ್ನು ಮೈಸೂರು ಹಾಗೂ ಬೆಂಗಳೂರಿನಲ್ಲಿ ಸ್ಥಾಪಿಸಿದರು. ವಿದ್ವಾನ್ ವಿ.ಸೇತುರಾಮಯ್ಯ, ವಿ.ರಾಮರತ್ನಂ, ಕಂಡದೇವಿ ಅಳಗಿರಿಸ್ವಾಮಿ, ಆರ್.ಕೆ.ವೆಂಕಟರಾಮಶಾಸ್ತ್ರಿ, ಸಿ.ಆರ್.ಮಣಿ ಇವರು ಚೌಡಯ್ಯನವರ ಶಿಷ್ಯವರ್ಗದಲ್ಲಿ ಪ್ರಸಿದ್ಧರಾದ ಕೆಲವರು. ಚಿತ್ರನಟ ಅಂಬರೀಷ್ ಇವರ ಮೊಮ್ಮಗ.

ಪಿಟೀಲು ವಾದನದಲ್ಲಿ ಅದ್ವಿತೀಯರಾಗಿ ಭಾರತದಾದ್ಯಂತ ಖ್ಯಾತಿಗಳಿಸಿದ ಇವರು 1967 ಜನವರಿ 19ರಂದು ನಿಧನರಾದರು.

ಆರ್.ಗುಂಡೂರಾವ್ ಮುಖ್ಯಮಂತ್ರಿಗಳಾಗಿದ್ದ ಕಾಲದಲ್ಲಿ ಇವರ ಸ್ಮರಣಾರ್ಥವಾಗಿ ಬೆಂಗಳೂರಿನಲ್ಲಿ ಟಿ.ಚೌಡಯ್ಯ ಸ್ಮಾರಕ ಭವನವನ್ನು ನಿರ್ಮಿಸಲಾಗಿದೆ. (ವಿ.ಆರ್.)

**ಚೌಡಿಕೆ ಮೇಳ** : ಧಾರ್ಮಿಕ ಸಂಪ್ರದಾಯದ ವೃತ್ತಿಗಾಯಕರಲ್ಲಿ ಸವದತ್ತಿ ಎಲ್ಲಮ್ಮನ ಭಕ್ತರಾದ ಚೌಡಿಕೆಯವರು ಕಥೆಯನ್ನು ಹಾಡುತ್ತ ಜೊತೆಗೆ ಕುಣಿಯುತ್ತ ನಡೆಸುವ ಮೇಳ. ಇದರಲ್ಲಿ ಉಪಯೋಗಿಸುವ ಪ್ರಧಾನ ವಾದ್ಯ ಚೌಡಿಕೆ. ತಂತಿವಾದ್ಯಗಳ ಗುಂಪಿಗೆ ಸೇರುವ ಚೌಡಿಕೆ ಭಾರತದ ನಾನಾಭಾಗಗಳಲ್ಲಿ ಹಲವಾರು ಹೆಸರುಗಳಿಂದ ಪ್ರಚಲಿತವಿದೆ. ಉತ್ತರ ಕರ್ನಾಟಕದಲ್ಲಿ ಇದಕ್ಕೆ ಚೌಟಗಿ, ಚವುಡಿ ಎಂದು ಕರೆಯುತ್ತಾರೆ. ಜನಪದದಲ್ಲಿ ಇದರ ರಚನೆಯನ್ನು ಕುರಿತು ಕೆಲವು ಕಥೆಗಳು ಕಂಡುಬರುತ್ತವೆ. ಒಂದು ಕಥೆಯ ಪ್ರಕಾರ ಎಲ್ಲಮ್ಮನ ಅಣ್ಣ ಕಾರ್ತವೀರ್ಯಾರ್ಜುನ ಜಮದಗ್ನಿಯ ಬಳಿಯಲ್ಲಿದ್ದ ಕಾಮಧೇನುವನ್ನು ಬಯಸಿ ಕೇಳಲು, ಆತ ಕೊಡಲು ನಿರಾಕರಿಸಿದಾಗ ಅವರನ್ನು ಕೊಂದು ಹಸುವನ್ನು ಕೊಂಡೊಯ್ದ. ಇತ್ತ ಪತಿಯನ್ನು ಕಳೆದುಕೊಂಡ ತಾಯಿಯ ದುಃಖಶಮನಕ್ಕಾಗಿ ಪರಶುರಾಮ ಕೊಡಲಿಯಿಂದ ಕಾರ್ತವೀರ್ಯನ ಶಿರವನ್ನು ಕತ್ತರಿಸಿ, ಅವನ ದೊಕ್ಕೆ ಕಿತ್ತು ಕಂಚಿನ ಚೌಡಿಕೆ ಮಿಂಚಿನ ಚೌಡಿಕೆ ಮಾಡಿ ಪಚ್ಚೆ ಕಿತ್ತು ಹಿಂದೆ ಮುಚ್ಚಗೆಮಾಡಿ, ಕರುಳು ಕಿತ್ತು ನುಡಿಸೋ ತಂತಿ ಮಾಡಿ, ತೋಳನ್ನು ತೆಗೆದು ದಂಡಿಗೆ ಮಾಡಿ, ಗಡ್ಡಾ ಕಿತ್ತು ಜಾಲ್ರ ಮಾಡಿ, ಗ್ವಾಮಾಳೆ ಸರ ತೆಗೆದು ನವಾರ ಮಾಡಿ, ಕಿರುಬೆರಳ ಕಿತ್ತು ನುಡಿಸೋ ಕಡ್ಡಿ ಮಾಡಿ, ಹೆಬ್ಬೆರಳು ಕಿತ್ತು ಬಿರುಟೇ ಮಾಡಿ ಚೌಡಿಕೆ ರಚಿಸಿಕೊಂಡು ನುಡಿಸುತ್ತ ತಾಯ ಬಳಿಗೆ ಬಂದ. ಪರಶುರಾಮ ಲೋಕಕಂಟಕನಾದ ಬೇಟಾಸುರನೆಂಬ ರಾಕ್ಷಸನ ಶಿರವನ್ನು ಕತ್ತರಿಸಿ ಅದರಿಂದ ಚೌಡಿಕೆ ಮಾಡಿಕೊಂಡು ನುಡಿಸಿದ ಎಂದು ಇನ್ನೊಂದು ಕಥೆ ಹೇಳುತ್ತದೆ. ಚೌಡಿಕೆಯಲ್ಲಿ ಅಡಗಿರುವ ಉಡಿಕೆ ಎಂಬ ಶಬ್ದ ಸೇಲಂ ಜಿಲ್ಲೆಯ ಮಾದೇಶ್ವರನ ಭಕ್ತರು ಬಳಸುವ ಉಡಕ್ಕೆ ಎಂಬ ವಾದ್ಯವನ್ನು ನೆನಪಿಗೆ ತರುತ್ತದೆ. 'ಚೂಡ' ಎಂಬ ಪದಕ್ಕೆ ಶಿರಸ್ಸು



ಚೌಡಿಕೆಮೇಳ ನಡೆಸುತ್ತಿರುವ ಮೆಣಸಿನಕಾಯಿ ಸಿದ್ರಾಮಣ್ಣ ಮತ್ತು ಸಂಗಡಿಗರು

ಎಂಬ ಅರ್ಥವಿರುವುದರಿಂದ ಶಿರಸ್ಸಿನಿಂದ ಚೌಡಿಕೆಯನ್ನು ಮಾಡಿಕೊಂಡಿದ್ದು (ಜನಪದದಲ್ಲಿರುವ ಕಥೆಯ ಪ್ರಕಾರ) ಎಂಬುದು ಸರಿಯಿದ್ದರೆ ಚೂಡ ಉಡಕ್ಕೆ > ಚೂಡುಡುಕ್ಕೆ > ಚೂವುಡಕೆ > ಚೌಡಿಕೆ ಆಗಿದೆ

ಯೆನ್ನಬಹುದು. ಚರ್ಮದ ಉಡಕ್ಕೆ ಇದರ ಮೂಲ ಎನ್ನುವುದಾದರೆ ಚಿಮ್ಮುಡುಕ್ಕೆ > ಚೂವುಡುಕೆ > ಚೌಡಿಕೆ ಆಗಿರಬಹುದು ಎಂದು ಊಹಿಸಬಹುದು. ಚಂಡಿಕೆ ಶಬ್ದವೇ ಚೌಡಿಕೆಗೆ ಮೂಲವಿರಬಹುದು ಎಂಬುದು ಮತ್ತೊಂದು ಊಹೆ.

ಚೌಡಿಕೆಯಲ್ಲಿ ಶ್ರುತಿ, ಬಾರ್ಕಿ ಎಂಬ ಎರಡು ರೀತಿಯ ವಾದ್ಯಗಳಿವೆ. ಶ್ರುತಿ ಚೌಡಿಕೆ ರಚಿಸಲು ಹತ್ತು ಅಂಗುಲ ವ್ಯಾಸ, ಹದಿನೈದು ಅಂಗುಲ ಉದ್ದವುಳ್ಳ ಕಂಚು, ಹಿತ್ತಾಳೆ, ಎರಕ, ಹೊನ್ನೆಮರ, ಕೊಂಡಮಾವಿನಮರ ಅಥವಾ ತೆಂಗಿನ ಮರಗಳ ಕುಂದಲಿಗೆಯಾಕಾರದ ಕೊಳವೆ ಇವನ್ನು ಉಪಯೋಗಿಸುತ್ತಾರೆ. ತಳಭಾಗಕ್ಕೆ ಎಳೆ ಆಡಿನ ಮರಿ ಅಥವಾ ಬಾತುಕೋಳಿಯ ಚರ್ಮದ ಮುಚ್ಚಳಿಕೆಯ ಕೇಂದ್ರ ಬಿಂದುವಿಗೆ ಒಂದು ರಂಧ್ರವುಳ್ಳ ತೆಂಗಿನಕಾಯಿ ಚಿಪ್ಪಿನ ಅಥವಾ ಸವಕಲು ನಾಣ್ಯದ ಬಿಲ್ಲೆಯನ್ನು ಕಿತ್ತುಬರದಂತೆ ಹತ್ತಿಸಿ ಈ ರಂಧ್ರದ ಮುಖಾಂತರ ಮತ್ತೊಂದು ಬಾಯಿಯ ಕಡೆಗೆ ಮುದಿಕುರಿಯ ಕರುಳನ್ನು ತಂತಿಯಂತೆ ಎಳೆದು ಕಾಲುಭಾಗ ಹೆರೆದಿರುವ ಮುಕ್ಕಾಲುಭಾಗ ಉಂಡುಗಡ್ಡಿಯಾಗಿಯೆ ಉಳಿದಿರುವ ಸುಮಾರು ಎರಡೂವರೆ ಅಡಿ ಉದ್ದದ ಬಿದಿರು ದಂಡದ ಮೇಲ್ಭಾಗಕ್ಕೆ ಬಂಧಿಸಿರುವ ತೇಗದ ಅಥವಾ ಕಣಿಗಲೆ ಮರದ ಬಿರುಟೆಗೆ ಬಿಗಿಯಲಾಗುತ್ತದೆ. ಇದರ ಸಹಾಯದಿಂದ ಹದವಾದ ನಾದ ಬರುವಂತೆ ಶ್ರುತಿ ಎತ್ತಿಕೊಳ್ಳಬಹುದು. ಮಹಾರಾಷ್ಟ್ರದ ಕುಂತಗೆ ನಮ್ಮ ಈ ಚೌಡಿಕೆ ಹೋಲುತ್ತದೆ. ಬಾರ್ಕಿ ಚೌಡಿಕೆಯ ರಚನೆ ಶ್ರುತಿ ಚೌಡಿಕೆಗಿಂತ ಸರಳ. ಇದರಲ್ಲಿ ಬಿದಿರು ದಂಡವನ್ನು ಬಳಸಲಾಗುವುದಿಲ್ಲ. ತಳಭಾಗದಿಂದ ಎಳೆದ ಕರುಳ ತುದಿಗೆ ಅರ್ಧ ಅಡಿ ಉದ್ದದ ಮತ್ತು ಎರಡು ಬೆರಳು ಗಾತ್ರದ ನೀರ್ಬಂಜಿ ಮರದ ಕಡ್ಡಿಗೆ ಕಟ್ಟಲಾಗುತ್ತದೆ. ಇದನ್ನು ಚೌಡಿಕೆ ಕಂಕಕ್ಕೆ ಬಿಗಿಕೊಟ್ಟುಕೊಂಡು ಕರುಳ ತಂತಿಯನ್ನು ಹಿಂದಕ್ಕೂ ಮುಂದಕ್ಕೂ ತುಯ್ಯುತ್ತ ಕೋಲ್ಗಳ್ಳಿ ಕಡ್ಡಿಯಿಂದ ಅಥವಾ ಕೈ ಬೆರಳಿನಿಂದ ನುಡಿಸಿದರೆ ನಾದ ಹೊಮ್ಮುತ್ತದೆ.

ಚೌಡಿಕೆಯುವರಲ್ಲಿ ಮೇಳ ಕಟ್ಟುವುದಕ್ಕೆ ಕಟ್ಟುನಿಟ್ಟಾದ ನಿಯಮಗಳಿಲ್ಲದಿದ್ದರೂ ಸಾಂಪ್ರದಾಯಿಕವಾಗಿ ಎಲ್ಲಮ್ಮನನ್ನೂ ಚೌಡಿಕೆಯನ್ನೂ ಇಟ್ಟು ಪೂಜಿಸಿ, ವಿಘ್ನೇಶ್ವರ, ಸರಸ್ವತಿ, ಶಿವ ಮುಂತಾದವರನ್ನು ಪ್ರಾರ್ಥಿಸುತ್ತ ಮೇಳಕ್ಕೆ ತೊಡಗುತ್ತಾರೆ. ಮೇಳಕ್ಕೆ ಒಂದೂವರೆ ಅಡಿ ಎತ್ತರದ ನಿವೇಶನಕ್ಕೆ ಹಸುರು ಚಪ್ಪರ ಹಾಕಿ ಶೃಂಗರಿಸಿರುತ್ತಾರೆ. ಮೇಳ ಮಾಡುವಾಗ ಹಳದಿ ಅಥವಾ ಬಿಳಿ ಬಣ್ಣದ ಪೇಟ, ಹಳದಿ ಅಂಗಿ, ಇದರ ಮೇಲೆ ಕರಿಯ ಕೋಟು, ಹಳದಿ ಪಂಚೆಯ ಕಾಸೆ, ಹಳದಿ ಶಲ್ಯ, ಕಾಲಿಗೆ ಕಿರುಗೆಜ್ಜೆ, ಕೊರಳಿಗೆ ಎಲ್ಲಮ್ಮನ ತಾಳಿ ಮುಂತಾದವುಗಳನ್ನು ಧರಿಸಿರುತ್ತಾರೆ.

ಮೇಳದಲ್ಲಿ ಕುಣಿಯುವುದು, ಪ್ರಧಾನ ಗಾಯಕನೊಡನೆ ಸೊಲ್ಲಿನವರು ಹೂಂಗುಟ್ಟುವುದು, ಪಲ್ಲವಿಯನ್ನು ಹಾಡುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಇಲ್ಲಿ ಬಾರ್ಕಿ ಚೌಡಿಕೆಯನ್ನು ನುಡಿಸುವವನೇ ಪ್ರಧಾನ ಗಾಯಕ. ಇವನು ಕಥೆಯನ್ನು ನಿರೂಪಿಸಿದರೆ ಶ್ರುತಿ ಚೌಡಿಕೆ ಹಿಡಿದ ಗಾಯಕ ಅದಕ್ಕೆ ಸೊಲ್ಲು ಕೊಡುತ್ತಾನೆ. ಇವರೊಂದಿಗೆ ಒಮ್ಮೊಮ್ಮೆ ಮತ್ತೊಬ್ಬ ಸೇರಿದಾಗ ಆತ ಬಟ್ಟು ತಾಳವನ್ನು ಹಿಡಿದೊ ಅಥವಾ ಶ್ರುತಿ ಚೌಡಿಕೆಯನ್ನು ಹಿಡಿದೊ ಪ್ರಧಾನ ಗಾಯಕನ ಮತ್ತೊಂದು ಪಕ್ಕದಲ್ಲಿ ನಿಲ್ಲುತ್ತಾನೆ. ಹೀಗೆ ನಿಂತ ಸೊಲ್ಲಿನವರು ಪ್ರಧಾನ ಗಾಯಕ ಕಥೆ ಮುಂದುವರಿಸಲು ಮತ್ತು ಆತನಿಗೆ ಮಧ್ಯ ಮಧ್ಯೆ ಬಿಡುವು ದೊರಕಿಸಿಕೊಡಲು ವಚನದ ಪ್ರತಿಸಾಲಿನಲ್ಲೂ ಹೌದು, ಅಲ್ಲವೆ, ಭಲಾಭಲ, ಉಧೋ ಜಯ, ತಾಯಿ ಎಲ್ಲಮ್ಮ ಎಂದು ಸೊಲ್ಲು ಕೊಡುತ್ತ ನೆರವಾಗುತ್ತಾರೆ. ಪದ್ಯಗಳು ಬಂದಾಗ ಪ್ರಧಾನ ಗಾಯಕ ಒಂದು ಸಾಲನ್ನು ಪ್ರಾರಂಭಿಸಿದರೆ ಇವರು ಅದನ್ನು ಪೂರ್ಣಗೊಳಿಸುತ್ತಾರೆ. ವಚನದ ಪ್ರತಿಸಾಲಿನ ಕೊನೆಗೆ ಚೌಡಿಕೆನಾದ ದನಿ ಕೊಡುತ್ತಿರುತ್ತದೆ.

ಚೌಡಿಕೆಯವರ ಹೆಂಗಸರು ಗಂಡಸರಂತೆ ಚೌಡಿಕೆ ಹಿಡಿದು ಹಾಡುವುದಾಗಲಿ, ಮೇಳ ನಡೆಸುವುದಾಗಲಿ ಕಂಡುಬರುವುದಿಲ್ಲವಾದರೂ ಅಡ್ಲಿಗೆಯನ್ನು (ಎಲ್ಲಮ್ಮ ದೇವತೆ ಇರುವ ಕುಕ್ಕೆ) ತಲೆಯ ಮೇಲೆ ಹೊತ್ತುಕೊಂಡು ಆಕೆಯನ್ನು ಕುರಿತ ಬಿಡಿ ಹಾಡುಗಳನ್ನು ಹಾಡುತ್ತ ಕುಣಿಯುತ್ತ ತಮ್ಮ ವೃತ್ತಿಯನ್ನು ಮಾಡುತ್ತಾರೆ. ಗಂಡಸರು ಚೌಡಿಕೆ ನುಡಿಸುತ್ತ ಹಾಡಿದರೆ ಅದರ ಗತ್ತಿಗೆ ತಕ್ಕಂತೆ ಹೆಂಗಸು ಮನಸಾರೆ ಕುಣಿಯುವ ಪದ್ಧತಿಯನ್ನು ಜೋಗಿತಿ ಸಂಪ್ರದಾಯ ಉಳಿಸಿಕೊಂಡು ಬಂದಿದೆ.

ಚೌಡಿಕೆಯವರು ಎಲ್ಲಮ್ಮ, ಸರ್ಜಪ್ಪನಾಯ್ಕ, ಬಳ್ಳಾರಿತತ್ತ್ವ, ಅಣ್ಣತಂಗಿ, ಬಂಜೆ ಹೊನ್ನಮ್ಮ, ಆನಂದ್ರತಿ, ವಿಶ್ವಬ್ರಹ್ಮ ಎಂಬ ಕಥೆಗಳನ್ನು ಹಾಡುತ್ತಾರೆ. ಇವುಗಳಲ್ಲಿ ಪ್ರಧಾನವಾದುದು ಎಲ್ಲಮ್ಮನ ಕಥೆ. (ಎನ್.ಎನ್.ಜಿ.)

**ಚೌಪದಿ** : ಇದೊಂದು ಅಚ್ಚಗನ್ನಡ ಛಂದಸ್ಸು. ಇದರಲ್ಲಿ ಅಂಶಗಣಾತ್ಮಕ ಮತ್ತು ಮಾತ್ರಾಗಣಾತ್ಮಕ ಎಂದು ಎರಡು ವಿಧ. ನಾಗವರ್ಮ ತನ್ನ ಛಂದೋಂಬುಧಿಯಲ್ಲಿ ಹೇಳಿರುವ ಲಕ್ಷಣದಂತೆ ಇದರಲ್ಲಿ ಪ್ರತಿಪಾದದಲ್ಲಿಯೂ ಒಂದು ವಿಷ್ಣುಗಣ ಮತ್ತು ಒಂದು ರುದ್ರಗಣ ಬರುತ್ತವೆ. ಜಯಕೀರ್ತಿ ತನ್ನ ಛಂದೋನುಶಾಸನದಲ್ಲಿ ಇದನ್ನು ಚತುಷ್ಪದಿಕಾ ಎಂದು ಹೆಸರಿಸಿದ್ದಾನೆ. ಚೂಡಾಮಣಿ ಎಂಬ ಗ್ರಂಥದಲ್ಲಿ ಇದು ಬಳಕೆಯಾಗಿರುವುದೆಂದು ಆತ ಹೇಳಿರುವನಾದರೂ ಆ ಗ್ರಂಥ ಅಲಭ್ಯ.

ಚಂದ್ರರಾಜನ ಮದನತಿಲಕದಲ್ಲಿ ಇದು ಬಳಕೆಯಾಗಿರುವುದು ಕಂಡುಬರುತ್ತದೆ.

ವಿ ರು<br>
ರತಿಹೀನಂ | ಪೆಳವಂ ಕುಬ್ಜ |

ಅಂಶಗಣಾನ್ವಿತವಾಗಿದ್ದ ಮೂಲ ಚೌಪದಿ ಅಮಳ ಎಂಬ ಬಂಧದ ಸಂಪರ್ಕದಿಂದ ಮಾತ್ರಾಗಣಕ್ಕೆ ತಿರುಗಿರಬಹುದೆಂಬ ಸಂದೇಹ ಮೂಡುತ್ತದೆ. ಅಮಳದ ಲಯವೂ ಅದರ ಸಾಮಾನ್ಯ ಲಕ್ಷಣವೂ ಚೌಪದಿಯನ್ನೇ ಹೋಲುವುದನ್ನು ಗಮನಿಸಬಹುದು.

ನಾಗವರ್ಮನ ಸೂತ್ರದ ಅಮಳದಲ್ಲಿ ನಾಲ್ಕು ಮಾತ್ರಾಗಣದ ಮುಂದೆ ಆರು ಮಾತ್ರಾಗಣದ ವಿನ್ಯಾಸ ಬಂದಿದೆ. ಚೌಪದಿ ಅಂಶಗಣದಿಂದ ಮಾತ್ರಾಗಣಕ್ಕೆ ತಿರುಗಿರಬಹುದು. ಯಾವ ಹಳಗನ್ನಡ ಕಾವ್ಯಗಳಲ್ಲಿಯೂ ಇದು ಬಳಕೆಯಾಗಿರುವುದು ಕಂಡುಬರುವುದಿಲ್ಲ. ನಡುಗನ್ನಡದಲ್ಲಿ ಮಾತ್ರಾಗಣದಿಂದ ಕೂಡಿದ ನಾಲ್ಕು ಪಾದಗಳುಳ್ಳ ಚೌಪದಿ ಬಳಕೆಯಾಗಿದೆ. ಇದರ ಪ್ರತಿಪಾದದಲ್ಲಿಯೂ ಐದು ಮಾತ್ರೆಯ ಗಣಗಳು ಮೂರು ಮತ್ತು ಒಂದು ಮೂರು ಮಾತ್ರೆಯ ಗಣ ಇವೆ. ಕೆಲವುಕಡೆ 3, 4, 3, 4, ಮಾತ್ರೆಯ ಗಣಗಳು ಬಂದಿರುವುದೂ ಉಂಟು.

ಮಹಾನವಮಿ ಪದಗಳು ನಾಲ್ಕು ಪಾದಗಳಲ್ಲಿ ರಚನೆಯಾಗಿದ್ದು ಅವನ್ನೂ ಚೌಪದಿಗಳೆಂದೇ ಕರೆಯಲಾಗಿದೆ. ಇಲ್ಲಿ ಪ್ರತಿ ಪಾದದಲ್ಲಿ ಐದು ಮಾತ್ರೆಯ ಗಣಗಳು ಮೂರು ಮತ್ತು ಮೂರು ಮಾತ್ರೆಯ ಗಣ ಒಂದು ಕಂಡುಬರುತ್ತವೆ:

ಆಶ್ವಯುಜ | ಶುದ್ಧ ಮಾ | ನವಮಿ ಬರ | ಲೆಂದು

ಶಾಶ್ವತದಿ | ಹರಸಿದೆವು | ಬಾಲಕರು | ಬಂದು

ಈಶ ನಿಮ | ಗತ್ಯಧಿಕ | ಸುಖವ ಕೊಡ | ಲೆಂದು

ಲೇಸಾಗಿ | ಹರಸಿದೆವು | ಬಾಲಕರು | ಬಂದು

ಇವನ್ನು ಪರಿಶೀಲಿಸಿದರೆ ಪಾದಗಳಲ್ಲಿ ಮಾತ್ರ ಪರಸ್ಪರ ಸಾಮ್ಯ ಕಂಡುಬರುತ್ತದೆಯೇ ಹೊರತು ಲಕ್ಷಣದಲ್ಲಿ ಯಾವ ಸಾಮ್ಯವೂ ಕಂಡುಬರುವುದಿಲ್ಲ (ನೋಡಿ: ಕನ್ನಡ ಛಂದಸ್ಸು). *

# ಛ

**ಛಾಯಾಭಗವತಿ :** ಗುಲ್ಬರ್ಗ ಜಿಲ್ಲೆಯ ಸುರಪುರ ತಾಲ್ಲೂಕಿನಲ್ಲಿ ಕೃಷ್ಣಾನದಿ ತಟದಲ್ಲಿರುವ ಒಂದು ಪುಣ್ಯಕ್ಷೇತ್ರ. ನದಿಯ ದಂಡೆಯಲ್ಲಿ, ಒಂದು ನೈಸರ್ಗಿಕ ಗುಹೆಯಲ್ಲಿ ಸೂರ್ಯನ ಪತ್ನಿ ಛಾಯಾಭಗವತಿದೇವಿಯ ದೇವಾಲಯವಿದೆ. ಇದು ಪುರಾತನವಾದುದು ಮತ್ತು ಪ್ರಸಿದ್ಧವಾದುದು. ಶ್ರೀರಾಮಚಂದ್ರ ವನವಾಸದಲ್ಲಿದ್ದಾಗ



ಕೃಷ್ಣಾ ನದಿ

ಇಲ್ಲಿಗೆ ಬಂದಿದ್ದನೆಂದೂ ಇಲ್ಲಿನ ತೀರ್ಥವೊಂದರಲ್ಲಿ ಶ್ರಾದ್ಧಮಾಡಿದನೆಂದೂ ಅದನ್ನೇ ಈಗ ರಾಮಗಯಾ ಎಂದು ಹೇಳುವರೆಂದೂ ಸ್ಥಳಪುರಾಣ ಸಾರುತ್ತದೆ. ಇದಲ್ಲದೆ ಉತ್ತರವಾಹಿನಿ, ಬ್ರಹ್ಮಹೃದಯ, ಬ್ರಹ್ಮವೇಣಿ, ವಿಷ್ಣುವೇಣಿ, ಗೋಮುಖ, ವಸಿಷ್ಠತೀರ್ಥ, ಜಮದಗ್ನಿ ತೀರ್ಥ, ಕಪಿಲತೀರ್ಥ ಮುಂತಾಗಿ ನೂರಕ್ಕೂ ಮಿಕ್ಕು ತೀರ್ಥಗಳಿವೆ. ಒಂದೊಂದಕ್ಕೂ ಅದರದೇ ಆದ ವೈಶಿಷ್ಟ್ಯವಿದೆ. ಈ ಎಲ್ಲ ತೀರ್ಥಗಳು ಮೂಲತಃ ಕೃಷ್ಣಾ ನದಿಯ ಪ್ರವಾಹ ಹಾಗೂ ಪಾತ್ರದಲ್ಲೇ ಇವೆ. ಕೃಷ್ಣಾನದಿ ಅಲ್ಲಲ್ಲಿ ಟಿಸಿಲಾಗಿ ಹರಿದಿರುವುದರಿಂದ ಕೆಲವು ನಡುಗಡ್ಡೆಗಳಾಗಿವೆ. ಇಂತಹ ನಡುಗಡ್ಡೆಗಳಲ್ಲಿ ಛಾಯಾಭಗವತಿಯ ಸ್ಥಳದ ಪೂರ್ವದಲ್ಲಿ ಒಂದು ಜಲದುರ್ಗವಿದೆ. ಇದು ರಾಯಚೂರು ಜಿಲ್ಲೆಯ ಈಗಿನ ಲಿಂಗಸುಗೂರು ತಾಲ್ಲೂಕಿಗೆ ಸೇರಿದೆ (ನೋಡಿ-ಜಲದುರ್ಗ). ಇನ್ನೊಂದು ನಡುಗಡ್ಡೆಯಲ್ಲೇ ಕೆಲವು ತೀರ್ಥಗಳಿವೆ. ವಸಿಷ್ಠ, ವಿಶ್ವಾಮಿತ್ರ, ಮುಂತಾದವರು ತಪಸ್ಸು ಮಾಡಿದ ಸ್ಥಳಗಳೆಂದು ಕೆಲವನ್ನು ತೋರಿಸುತ್ತಾರೆ. ಒಂದೆಡೆಯಲ್ಲಿ ವಸಿಷ್ಠರ ಬ್ರಹ್ಮದಂಡವಿದೆಯೆಂದು ಹೇಳುತ್ತಾರೆ. ಈ ಕ್ಷೇತ್ರದ ಬಳಿ ಧನುಷ್ಕೋಟಿ ಎಂಬ ಒಂದು ಸುಂದರ ಜಲಪಾತವಿದೆ. ಇಲ್ಲಿ ನೀರು ಬಹಳ ಎತ್ತರದಿಂದ ಕೆಳಕ್ಕೆ ಬೀಳುತ್ತದೆ. ಹೀಗೆ ಬೀಳುವ ನೀರನ್ನು ಬಿಸಿಲಿನಲ್ಲಿ ನೋಡುವುದರಲ್ಲೂ ಶಬ್ದವನ್ನು ಕೇಳುವದರಲ್ಲೂ ಒಂದು ಬಗೆಯ ಆನಂದ ಉಂಟಾಗುತ್ತದೆ. ಇಲ್ಲಿಂದ ಸ್ವಲ್ಪ ದೂರದಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆಯ ಭಾಗವಾಗಿ ನಾರಾಯಣಪುರದ ಬಳಿ ದೊಡ್ಡ ಅಣೆಕಟ್ಟನ್ನು ಕಟ್ಟಿ ಅದರ ಕೆಳಗಣ ವಿಸ್ತಾರವಾದ ಪ್ರದೇಶಕ್ಕೆ ನೀರಾವರಿಯ ಸೌಕರ್ಯ ಒದಗಿಸಲಾಗಿದೆ.

ಕೃಷ್ಣಾಮಾಹಾತ್ಮ್ಯಂ ಎಂಬ ಸಂಸ್ಕೃತ ಗ್ರಂಥದಲ್ಲಿ ಛಾಯಾಭಗವತೀ ಕ್ಷೇತ್ರದ ವಿಶೇಷ ವಿವರವಿದೆ. ಛಾಯಾದೇವಿ ಬಹುಕಾಲದಿಂದಲೂ ಈ ಪ್ರದೇಶದ ಸರ್ವರಿಗೂ ಆರಾಧ್ಯ ದೇವತೆ. ಕನ್ನಡ ಸಾಹಿತ್ಯದಲ್ಲಿ ಲಕ್ಷ್ಮೀಶ ಈಕೆಯನ್ನು ಸನ್ನುತಚ್ಛಾಯೆ ಎಂದು ಬಹುಭಕ್ತಿಯಿಂದ ವರ್ಣಿಸಿದ್ದಾನೆ. 'ಸಾದೇವಿದಿಡಗಿಗೆ ದಿಡಗೀಲೆ ಹೋಗೋಣ' ಎಂಬುದು ಒಂದು ಜನಪದ ನುಡಿ. ಈ ದೇವಿಯ ಜಾತ್ರೆ ಪ್ರತಿವರ್ಷ ವೈಶಾಖಮಾಸದ ಶುಕ್ಲಪಕ್ಷದಲ್ಲಿ ಅಕ್ಷಯ ತೃತೀಯಾ ಸುಮಾರಿನಲ್ಲಿ ನಡೆಯುತ್ತದೆ. ಆಗ್ಗೆ ದೇವಿಯ ದರ್ಶನಕ್ಕೆಂದು, ತೀರ್ಥಸ್ನಾನಕ್ಕೆಂದು ಸಹಸ್ರಾರು ಯಾತ್ರಾರ್ಥಿಗಳು ಬರುತ್ತಾರೆ. ಪ್ರಾಚೀನ ಕಾಲದಲ್ಲಿ ಛಾಯಾಭಗವತಿಯ ಕ್ಷೇತ್ರವನ್ನು ತಲುಪುವುದು ಇಲ್ಲಿನ ಅರಣ್ಯ ಹಾಗೂ ವನ್ಯಮೃಗಗಳ ಕಾರಣದಿಂದ ಕಷ್ಟಸಾಧ್ಯವಾಗಿತ್ತು. ಅಂತೆಯೇ 'ಆದೀತು ಕಾಶಿ ಆಗಲಾರದದ್ದು ಛಾಯೆ' ಎಂಬ ಗಾದೆಯು ಮಾತು ಇಂದಿಗೂ ಜನಬಳಕೆಯಲ್ಲಿದೆ. (ಎಸ್.ಜೆ.ಎ.)

# ಜ

**ಜಂಗಮ :** ಸ್ಥಾವರ ಮತ್ತು ಜಂಗಮ ಪದಗಳು ಸಾಮಾನ್ಯವಾಗಿ ಅಚರ ಮತ್ತು ಚರ ಎಂಬ ಶಬ್ದಗಳ ಪರ್ಯಾಯ ಪದಗಳು. ಆದರೆ ವೀರಶೈವಧರ್ಮದಲ್ಲಿ ಬಳಕೆಯಲ್ಲಿರುವ ಜಂಗಮ ಪದ ಪಾರಿಭಾಷಿಕ.

> ಅಂತರ್ಧಾಯ ಲಲಾಟಾಕ್ಷಿಂ ಶಶಾಂಕಂ ಸಂವಿಧಾಯ ಚ |
> ಅವಾಮಭಾಗಲಲನೋ ಜಂಗಮಃ ಪರಮೇಶ್ವರಃ ||
>
> (ಸಿದ್ಧಾಂತಶಿಖಾಮಣಿ)

ಮಂಡೆಯ ಚಂದ್ರಕಲೆ, ಹಣೆಗಣ್ಣು ಮತ್ತು ಎಡಗಡೆಯ ಅಗಜೆಯರನ್ನು ಮರೆಮಾಚಿದ ಸಾಕ್ಷಾತ್ ಪರಮೇಶ್ವರನೇ ಜಂಗಮ ದೇಹ ಧರಿಸಿ-

> ಅಹಮೇವ ಮಹೇಶಾನಿ ಧೃತ್ವಾ ಜಂಗಮವಿಗ್ರಹಂ
> ಮದ್ಭಕ್ತಾನುಗ್ರಹಾರ್ಥಾಯ ಪರ್ಯಟಾಮಿ ಮಹೀತಲೇ (ವೀರಾಗಮ)

ಎಂದು ಹೇಳಿದನೆನ್ನಲಾಗಿದೆ.

ಭಕ್ತರನ್ನು ಅನುಗ್ರಹಿಸಲು ಭೂಲೋಕದಲ್ಲಿ ಸಂಚರಿಸುವನೆಂಬುದು ಆಗಮಗಳ ಹೇಳಿಕೆ. ಅಯ್ಯಾ, ನೀನೆನ್ನ ಭವವ ಕೊಂದಹೆನೆಂದು ಜಂಗಮಲಾಂಛನನಾಗಿ ಬಂದಲ್ಲಿ ನಾ ಭಕ್ತನೆಂಬ ವಾಹನವಾಗಿರ್ದೆ ಎಂಬ ಬಸವಣ್ಣನವರ ಮಾತು ಇದನ್ನು ಸಮರ್ಥಿಸುತ್ತದೆ.

ಐತಿಹಾಸಿಕವಾಗಿ ಕ್ರಿಸ್ತಶಕಾರಂಭದ ಸಮಯದಿಂದಲೂ ಜಂಗಮ ಮಠಗಳು ಭರತಖಂಡದಲ್ಲಿದ್ದಂತೆ ತಿಳಿದುಬರುತ್ತದೆ. ಒಂದನೆಯ ಶತಮಾನದ ಹೊತ್ತಿಗೆ ಶ್ರೀಶೈಲದಲ್ಲಿ ಶೈವಮಠವೊಂದು ಅಸ್ತಿತ್ವದಲ್ಲಿದ್ದ ಬಗೆಗೆ ಪರಿಶೋಧನೆಗಳು ನಡೆದಿವೆ (ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರೆ). ಶ್ರೀಶೈಲದ ಜಂಗಮ ಮಲ್ಲಿಕಾರ್ಜುನ ಶಿವಯೋಗಿಗಳ ಪ್ರಭಾವವನ್ನು ನನ್ನೆ ಚೋಡಕವಿ (ಸು.940) ತನ್ನ ತೆಲುಗು ಕಾವ್ಯ ಕುಮಾರಸಂಭವದ ಪ್ರಾರಂಭದಲ್ಲಿ ಮಾಡಿದ್ದಾನೆ. ಸು.800ರಲ್ಲಿದ್ದ ಆನಂದಗಿರಿ ತನ್ನ ಶಂಕರವಿಜಯದಲ್ಲಿ ಶಿರಸಿ ಪಾಷಾಣಲಿಂಗಂಚ ಧಾರಿಣಃ ಜಂಗಮಾಃ ಎಂದು ಶಿರೋಲಿಂಗಧಾರಿ ಜಂಗಮರನ್ನು ಉಲ್ಲೇಖಿಸಿದ್ದಾನೆ. ವೀರಾಗಮದಲ್ಲಿ ಜಂಗಮನ ಸ್ವರೂಪವನ್ನು ಕುರಿತು

ಧಾರಯೇತ್ಸಮತಾಕಂಥಾಂ ಕ್ಷಮಾಖ್ಯಾಂ ಭಸ್ಮಘುಂಟಿಕಾಂ
ದಯಾಕಮಂಡಲುಂ ವತ್ಸ ಜ್ಞಾನದಂಡಂ ಮನೋಹರಂ
ವೈರಾಗ್ಯಭಿಕ್ಷಾಪಾತ್ರಂ ಚ ಭಕ್ತಿಭಿಕ್ಷಾಂ ಚ ಯಾಚತೇ
ಕಂಥಾಕಮಂಡಲುರ್ದಂಡಃ ಖರ್ಪರೋ ಭಸ್ಮಭಸ್ತ್ರಿಕಾ

ಎಂದು ಹೇಳಿರುವ ವರ್ಣನೆ ಪ್ರಭುದೇವರ - ಸಮತೆ ಎಂಬ ಕಂಥೆಯ (ಜೋಳಿಗೆ) ತೊಟ್ಟು, ಸುಬುದ್ಧಿ ಎಂಬ ಟೊಪ್ಪರವನಿಕ್ಕಿ, ವಿಷಯವೆಂಬ ಹಾವುಗೆಯ ಮೆಟ್ಟಿ, ಕಮಲಧವೆಂಬ ಕುಳಿಯ ಬೀಳದೆ, ವೈರಾಗ್ಯವೆಂಬ ಕೊರಡನೆಡಹದೆ, ಮರವೆ ಎಂಬ ಚಳಮೆಟ್ಟದೆ ಗುಹೇಶ್ವರನ ಶರಣ ಬಂದನು ಭಕ್ತಿಭಿಕ್ಷೆಯನಿಕ್ಕು ಸಂಗನ ಬಸವಣ್ಣ ಎಂಬ ವಚನದಲ್ಲಿ ಪಡಿಮೂಡಿದೆ.

ವೀರಶೈವ ಸಿದ್ಧಾಂತದ ಅಷ್ಟಾವರಣಗಳಲ್ಲಿ ಉಕ್ತವಾದ ಜಂಗಮ ಉಪಾಸ್ಯತ್ರಯದಲ್ಲಿ ಒಂದು. ಗುರು ಲಿಂಗ ಜಂಗಮರು ಶಿವನ ಮೂರು ಅಂಶಗಳು (ಏಕಮೂರ್ತಿಸ್ತ್ರಿಧಾ ಭಕ್ತಃ ಗುರುರ್ಲಿಂಗಂ ತು ಜಂಗಮಃ) ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದ ಎಂಬ ಐದು ಪ್ರಥಮ ಗೋತ್ರಗಳಿಗೆ ಸೇರಿದ ರೇಣುಕ ದಾರುಕ ಮುಂತಾದ ಐವರು ಆಚಾರ್ಯರಿಂದ ವೀರಮಾಹೇಶ್ವರ ದೀಕ್ಷೆ ಹೊಂದಿದ ಐದು ಆರಾಧ್ಯ ಸಂಪ್ರದಾಯಗಳಿಗೂ ಜಂಗಮ ಎಂಬ ಹೆಸರಿದೆ. ಇವರನ್ನು ವೀರಶೈವ ಗುರು ಮತ್ತು ಜಂಗಮರು (ವಿರಕ್ತ) ಪೀಠಗಳಿಗೆ ಕ್ರಮವಾಗಿ ಅಧಿಪತಿಗಳನ್ನಾಗಿ ಆರಿಸುವ ಸಂಪ್ರದಾಯ ಉಂಟು. ಇವರಲ್ಲಿ ಗುರುಭಕ್ತನ ಶಕ್ತಿ ಪಾತವನ್ನು ಗುರುತಿಸಿ ಶಿವದೀಕ್ಷೆ ಎಸಗಿ ತತ್ತ್ವಗಳನ್ನು ಬೋಧಿಸುತ್ತಾನೆ. ಈ ದೃಷ್ಟಿಯಿಂದ ಗುರು, ಜಂಗಮರು ಕ್ರಮವಾಗಿ ಭಕ್ತರ ಬೋಧಕ ಮತ್ತು ಪರೀಕ್ಷಕರೆನಿಸುತ್ತಾರೆ. ಇವರಲ್ಲಿ ಕೆಲವರು ಗೃಹಸ್ಥರು, ಕೆಲವರು ದೇಶಿಕರು (ಬ್ರಹ್ಮಚಾರಿಗಳು), ಈ ಇಬ್ಬರೂ ಸಮಾಜಕ್ಕೆ ಪೂಜ್ಯರು.

ಯೋಗಿನೀಸಹಿತಾಃ ಕೇಚಿತ್ ಕೇಚಿತ್ ದೇಶಿಕಸಂಜ್ಞಿಕಾಃ
ಸ್ವೇಚ್ಛಾಶ್ರಮವಿಹಾರಾಸ್ತೇ ಲಿಂಗಭೋಗೋಪಭೋಗಿನಃ

ಶಿವಶರಣರು ಜಂಗಮರಲ್ಲಿ ಜಾತಿ ಕುಲ ಅಂತಸ್ತುಗಳನ್ನು ಎಣಿಸಬಾರದು ಎನ್ನುತ್ತಾರೆ. ಅರಿವು ಆಚಾರವುಳ್ಳವರೆ ಜಂಗಮ ಎಂದು ಚನ್ನಬಸವಣ್ಣ ಹೇಳಿದ್ದಾನೆ.

ವೀರಶೈವ ಸಾಹಿತ್ಯದಲ್ಲಿ ಅಷ್ಟಾವರಣಾಂತರ್ಗತ ಜಂಗಮ, ವಂಶಾನುಗತ ಜಂಗಮ, ಅತಿಥಿರೂಪಿ ಜಂಗಮ ಎಂಬ ಮೂರು ರೂಪಗಳಲ್ಲಿ ಜಂಗಮ ಶಬ್ದ ವ್ಯವಹರಿಸಲ್ಪಟ್ಟಿದೆ. ಶಿವಾಗಮಗಳಲ್ಲಿಯೂ ವೀರಶೈವ ಪುರಾಣಗಳಲ್ಲಿಯೂ ಅತಿಥಿಗಳನ್ನು ಜಂಗಮರೆಂದು ಕರೆಯಲಾಗಿದೆ. ವೃಷಭೇಂದ್ರ ವಿಜಯದಲ್ಲಿ ಶ್ರೀ ರೇಣುಕಾಚಾರ್ಯನನ್ನು ಜಂಗಮ ಕೋಟಿಗೆ ಮುಖ್ಯವಾದ ಭಾಸ್ಮತ್ ಗುರು ಎಂದು ವರ್ಣಿತವಾಗಿದೆ. ಒಟ್ಟಿನಲ್ಲಿ ಜಂಗಮರು ಪೂಜ್ಯರು, ಪೂಜಾರ್ಹರು ಎಂದು ವ್ಯವಹರಿಸಲ್ಪಟ್ಟಿದೆ. ಭಕ್ತಿಭಂಡಾರಿ ಬಸವಣ್ಣನನ್ನು ಜಂಗಮ ಪ್ರಾಣಿ ಎಂದು ಕರೆಯಲಾಗಿದೆ. ಈಗಲೂ ವೀರಶೈವರಲ್ಲಿ ಜಂಗಮ ದಾಸೋಹಕ್ಕೆ ಬಹಳ ಪ್ರಾಮುಖ್ಯವಿದೆ. *

**ಜಂಬಿಟ್ಟಿಗೆ :** ಚಿಕ್ಕಮಗಳೂರು ಜಿಲ್ಲೆ ಕೊಪ್ಪ ತಾಲ್ಲೂಕಿನಲ್ಲಿ ಹರಿಹರಪುರದಿಂದ 2ಕಿಮೀ ದೂರದಲ್ಲಿ ತುಂಗಾನದಿಯ ದಡದಲ್ಲಿರುವ ಗ್ರಾಮ. ಪ್ರಾಚೀನ ಅಗ್ರಹಾರ. ಚಿಕ್ಕದಾದರೂ ಕೌಶಲ್ಯದಿಂದ ಕೂಡಿರುವ ನೀಲಕಂಠೇಶ್ವರ ದೇವಾಲಯವೇ ಇಲ್ಲಿನ ವೈಶಿಷ್ಟ್ಯ. ಇದನ್ನು ನಿರ್ಮಿಸಿದ ಶಿಲ್ಪಿ ಕಳಸದ ಕೊಲ್ಲೂರನ ಮಗ ಕಾಳಣ್ಣನೆಂದೂ ಇದು 1733ರಲ್ಲಿ ನಿರ್ಮಿತವಾಯಿತೆಂದೂ ಇಲ್ಲಿನ ಶಾಸನದಿಂದ ತಿಳಿದುಬರುತ್ತದೆ. ದೇವಾಲಯ 10 ಅಡಿ ಉದ್ದ ಮತ್ತು 8 ಅಡಿ ಅಗಲವಿದೆ. ಇದು ಗರ್ಭಗೃಹ, ಸುಕನಾಸಿ, ಎರಡು ಕಂಬಗಳುಳ್ಳ ಮುಖಮಂಟಪ ಮತ್ತು ಮೇಲೆ ಚಿಕ್ಕ ಶಿಖರ ಇರುವ ದ್ರಾವಿಡ ಶೈಲಿಯ ಗುಡಿ, ದೇವಾಲಯದ ಗೋಡೆಗಳಲ್ಲೆಲ್ಲ ಶಿಲ್ಪಗಳು ತುಂಬಿವೆ. ಕಲಾದೃಷ್ಟಿಯಿಂದ ಈ ಶಿಲ್ಪಗಳು ಅಷ್ಟು ಪರಿಪೂರ್ಣವಾಗಿಲ್ಲ. ಆದರೆ ಒರಟುಕಲ್ಲಿನ ಮೇಲೆ ಈ ಶಿಲ್ಪಗಳನ್ನು ಕಂಡರಿಸಿರುವುದು ನಿಜಕ್ಕೂ ಒಂದು ಸಾಧನೆ. ದೇವಾಲಯದ ದಕ್ಷಿಣ ಮತ್ತು ಪಶ್ಚಿಮ ಭಾಗದ ಗೋಡೆಗಳಲ್ಲಿ ರಾಮಾಯಣ ಮತ್ತು ಮಹಾಭಾರತದ ಕಥೆಗಳ ಶಿಲ್ಪಗಳಿವೆ. ಉತ್ತರಭಾಗದ ಗೋಡೆಯಲ್ಲಿ ಭಾಗವತಪುರಾಣವನ್ನು ಕಂಡರಿಸಲಾಗಿದೆ. ಅದೇ ಭಾಗದಲ್ಲಿ ಶಿವಲೀಲೆಗಳು ಮತ್ತು ಯಮಲೋಕದಲ್ಲಿ ಪಾಪಿಗಳು ಅನುಭವಿಸಬೇಕಾದ ಚಿತ್ರಹಿಂಸೆಗಳ ದೃಶ್ಯಗಳನ್ನು ಬಿಡಿಸಲಾಗಿದೆ. ವಿಷ್ಣುವಿನ ಹತ್ತು ಅವತಾರಗಳೂ ಪಂಚಮುಖದ ಕಾಮಧೇನುವಿನ ಚಿತ್ರಗಳೂ ಈ ದೇವಾಲಯದಲ್ಲಿವೆ.



ನೀಲಕಂಠೇಶ್ವರ ದೇವಾಲಯ

ಗರ್ಭಗೃಹ ಮತ್ತು ಸುಕನಾಸಿಗಳ ದ್ವಾರಗಳ ತಿರುಗಣೆಯ ಮೇಲೂ ರಾಮಾಯಣದ ಕಥೆ ಇದೆ. ಸುಕನಾಸಿಯ ದ್ವಾರದ ಎಡಕ್ಕೆ ದುರ್ಗಾ, ಚಂದ್ರ ಮತ್ತು ಸೂರ್ಯನಾರಾಯಣರ ಮೂರ್ತಿಗಳಿವೆ. ಬಲಕ್ಕೆ ಗಣಪತಿ, ಸೂರ್ಯ ಮತ್ತು ಗೋಪಾಲರ ಮೂರ್ತಿಗಳಿವೆ. ಪ್ರತಿ ಮೂರ್ತಿಗೂ ಹೆಸರು ಬರೆಯಲಾಗಿದೆ. ಪ್ರತಿ ದೃಶ್ಯ ಸಮೂಹಕ್ಕೂ ವಿವರಣಾತ್ಮಕ ಟಿಪ್ಪಣಿ ಇದೆ. (ಡಿ.ಎಸ್.ಜೆ.)

**ಜಕ್ಕಣಾರ್ಯ :** ಸು.1430. ವೀರಶೈವ ಕವಿ. ಏಕೋತ್ತರಶತಸ್ಥಲ ಎಂಬ ಗ್ರಂಥದ ಕರ್ತೃ. ಈತನಿಗೆ ಜಕ್ಕಣ್ಣ, ಜಕ್ಕಪ್ಪ ಎಂಬ ಹೆಸರೂ ಭಕ್ತಿಭಂಡಾರಿ ಎಂಬ ಬಿರುದೂ ಇದ್ದಂತೆ ತಿಳಿದುಬರುತ್ತದೆ. ಈತ ವಿಜಯನಗರದ ಪ್ರೌಢದೇವರಾಯನ (1424-46) ಮಂತ್ರಿಯೂ ದಂಡನಾಯಕನೂ ಭಂಡಾರಿಯೂ ಆಗಿದ್ದ. ಮಹಾಲಿಂಗದೇವನ ಶಿಷ್ಯನಾದ ಕುಮಾರ ಬಂಕನಾಥ ಈತನ ಗುರು.

ಜಕ್ಕಣಾರ್ಯ ವೀರಶೈವ ಗ್ರಂಥಗಳ ರಚನೆಗಾಗಿ ಅಪರಿಮಿತ ದ್ರವ್ಯವನ್ನು ವೆಚ್ಚಮಾಡಿದನೆಂದು ಗುಬ್ಬಿಯ ಮಲ್ಲಣಾರ್ಯನ ವೀರಶೈವಮಹಾಮೃತಪುರಾಣದಲ್ಲಿ ಹೇಳಿದೆ. ಅದೃಶ್ಯಕವಿಯ ಪ್ರೌಢರಾಯನ ಕಾವ್ಯ, ಸಿದ್ಧನಂಜೇಶನ ರಾಘವಾಂಕಚಾರಿತ್ರ ಮತ್ತು ಶಾಂತಲಿಂಗದೇಶಿಕನ ಭೈರವೇಶ್ವರಕಾವ್ಯದ ಕಥಾಮಣಿಸೂತ್ರ ರತ್ನಾಕರಗಳಲ್ಲಿ ಈತನ ಪ್ರಸಕ್ತಿಯಿದೆ. ಅದೃಶ್ಯಕವಿಯ ಪ್ರೌಢರಾಯನ ಕಾವ್ಯ ಮತ್ತು ಅದನ್ನೇ ಅನುಸರಿಸಿದ ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರದಲ್ಲಿ ಇವನಿಗೆ ಸಂಬಂಧಿಸಿದ ಒಂದು ಐತಿಹ್ಯ ಹೀಗಿದೆ: ಕುಂತಲ ದೇಶದ ಪ್ರೌಢರಾಯನ ಆಳಿಕೆಯಲ್ಲಿ

ಜಕ್ಕಣಾರ್ಯ ಮಂತ್ರಿ. ಮುಕುಂದಪೆದ್ದಿ ಮತ್ತು ವೃಂದಾಚಾರ್ಯರು ಗುರುಗಳು. ಈ ಗುರುಗಳು ಪ್ರೌಢರಾಯನಿಗೆ ಒಂಬತ್ತು ತಿಂಗಳು ಭಾರತವನ್ನು ಓದಿ ಹೇಳಿ ಅದರ ಮೆರವಣಿಗೆ ಮಾಡಿದರು. ಅದನ್ನು ಕಂಡ ಜಕ್ಕಣಾರ್ಯ 'ಪ್ರಭುಸ್ವಾಮಿ' ಪೇಳ್ದ ವಚನಂಗಳಿಗೆ ಕ್ರಮದಿಯೇ ಕೋತ್ತರಶತಸ್ಥಲ ಸೂತ್ರಗಳನ್ನಿಟ್ಟು ರಮಣೀಯವಾಗಿ ವರ್ಣಕ ವಸ್ತುಕಗಳಿಂದ ವ್ಯಾಖ್ಯಾನ ಮಾಡಿದ. ನೂರೊಂದು ವಿರಕ್ತರು, ಕರಸ್ಥಲದ ನಾಗಿದೇವ, ಕಲ್ಲುಮಠದ ಪ್ರಭುದೇವ, ವೀರಣ್ಣೊಡೆಯ, ಚಾಮರಸ ಮೊದಲಾದ ಶರಣರು ಆ ಕೃತಿಯನ್ನು ಮೆರವಣಿಗೆ ಮಾಡಿದರು. ಮರುದಿನ ಬೆಳಗಿನ ಆಸ್ಥಾನದಲ್ಲಿ ಮುಕುಂದಪೆದ್ದಿ ಜಕ್ಕಣಾರ್ಯನನ್ನು ಕುರಿತು 'ರಾತ್ರಿ ನಡೆದುದು ಸತ್ತವರ ಒಸಗೆಯೋ, ಹೆತ್ತ ಸೌರಂಭವೋ ಎಂದು ಪ್ರಶ್ನಿಸಿದ. ಆಗ ಜಕ್ಕಣ್ಣ' 'ಉತ್ಸವದ ವೇಳೆಯೊಳು ಮುಕ್ತಿಯೆಂದೆಂಬ ಶಿಶುವಂ ಭಕ್ತಿಸತಿ ಪೆತ್ತಳು' ಎಂದ.

ಮುಕುಂದಪೆದ್ದಿ ಅಲ್ಲಮನ ಒಂದು ವಚನಕ್ಕೆ ಅಸಂಬದ್ಧ ವ್ಯಾಖ್ಯಾನ ಮಾಡಿದ. ಅದನ್ನು ಪ್ರತಿಭಟಿಸಿ 18 ಮತದವರು ಮೆಚ್ಚುವಂತೆ ಜಕ್ಕಣ್ಣ ವ್ಯಾಖ್ಯಾನ ಮಾಡಿದ. ಪ್ರೌಢದೇವರಾಯ ಮೆಚ್ಚಿ ಜಕ್ಕಣ್ಣನಿಗೆ ತ್ರಿಸರದಪದಕ ಮತ್ತು ರುದ್ರ ಕಂಕಣವನ್ನು ಕೊಡಲು ಹೋದಾಗ ಮುಕುಂದಪೆದ್ದಿಯು ಶರಣರು ಮಾಯೆಯ ಮೋಹಕ್ಕೆ ಬೆರಸಿರುವರೋ ಇಲ್ಲವೋ ಎನ್ನುವುದನ್ನು ಪರೀಕ್ಷೆಮಾಡಿದ ಅನಂತರ ಮನ್ನಿಸುವುದು ಎಂದ. ಈ ಪ್ರಶ್ನೆಗೆ ಹದಿನೈದು ದಿವಸದಲ್ಲಿ ಉತ್ತರ ಕೊಡುವುದಾಗಿ ಚಾಮರಸ ಹೇಳಿದ. ಮುಕುಂದಪೆದ್ದಿ ಮನೆಗೆ ಹೋದ.

ದಿವಸ ಒಂದಕ್ಕೆ ನೂರಹನ್ನೊಂದು ಪದ್ಯಗಳಂತೆ ಹನ್ನೊಂದು ದಿನದಲ್ಲಿ ಚಾಮರಸ ಪ್ರಭುಲಿಂಗಲೀಲೆಯನ್ನು ಮುಗಿಸಿ ಪ್ರೌಢರಾಯನಿಗೆ ಒಪ್ಪಿಸಿದ. ದೊರೆ ಆಸ್ಥಾನ ಕವಿಗಳಿಗೆ ಪ್ರಭುಲಿಂಗಲೀಲೆಯ ಅರ್ಥ ಹೇಳಲು ಕೇಳಿದ. ಯಾರೂ ಮುಂದೆ ಬರಲಿಲ್ಲ. ಜಕ್ಕಣಾರ್ಯನು, 'ಪ್ರಭುಲಿಂಗಲೀಲಾಮೃತದ ಅಭಿಪ್ರಾಯವೊಂದುಳಿಯದೆ' ಹೇಳಿದ. ಅರಸ ಮೆಚ್ಚಿ ವಾದಿಗಳನ್ನು ಹೊರಹಾಕಿ ಜಕ್ಕಣಾರ್ಯನಿಗೆ ರನ್ನದೊಡಿಗೆ, ತ್ರಿಸರ, ರುದ್ರಕಂಕಣ, ದಿವ್ಯವಸನ, ವಾಹನ ಮತ್ತು ಐದು ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟ. ಜಕ್ಕಣಾರ್ಯ ತನ್ನಂತೆಯೆ ಚಾಮರಸನಿಗೂ ಸತ್ಕಾರ ಮಾಡಿಸಿದ. ಪ್ರಭುಲಿಂಗಲೀಲೆಯನ್ನು ಆನೆಯ ಮೇಲೆ ಮೆರವಣಿಗೆ ಮಾಡಿಸಿದ. ಲಕ್ಕಣಾರ್ಯರಿಗೆ ಮಂತ್ರಿ ಪದವಿಯನ್ನು ಕೊಟ್ಟು ಬಯಲಾದ.

ಜಕ್ಕಣಾರ್ಯನ ಏಕೋತ್ತರಶತಸ್ಥಲಕ್ಕೆ ಕನ್ನಡದಲ್ಲಿ ವಿಶಿಷ್ಟ ಸ್ಥಾನವಿದೆ. ಕನ್ನಡದಲ್ಲಿ ಗೀತಸಾಹಿತ್ಯ ಹರಿದಾಸರಿಂದ ಈಚೆಗೆ ಬಂದದ್ದು ಎನ್ನುವ ಅಭಿಪ್ರಾಯವಿತ್ತು. ಆದರೆ 12ನೆಯ ಶತಮಾನದಲ್ಲಿಯೇ ಶಿವಶರಣರಿಂದ ಗೀತಸಾಹಿತ್ಯದ ನಿರ್ಮಾಣವಾಗಿದೆ ಎನ್ನುವ ಅಮೂಲ್ಯ ಅಂಶವನ್ನು ಈ ಗ್ರಂಥ ಸೂಚಿಸುತ್ತದೆ. ಮಹಾಲಿಂಗದೇವನ ಏಕೋತ್ತರಶತಸ್ಥಲ ಈ ಕೃತಿಗೆ ಮೂಲ. ಇದರಲ್ಲಿ ಶಿವಶರಣರ ಕೆಲವು ವಚನಗಳು ಇಲ್ಲ; ಉಳಿದಂತೆ ಮಹಾಲಿಂಗದೇವ ಮತ್ತು ಜಕ್ಕಣಾರ್ಯರ ಕೃತಿಗಳು ಸ್ವರೂಪದಲ್ಲಿ ಒಂದೇ ಆಗಿವೆ. (ಜಿ.ಜಿ.ಎಂ.)

**ಜಗದೇಕಮಲ್ಲ II :** ಕಲ್ಯಾಣಚಾಳುಕ್ಯ ವಂಶದ ದೊರೆ (1139-49) ಈತನಿಗೆ ಪೆರ್ಮ ಎಂದೂ ಹೆಸರಿದೆ. ಪ್ರತಾಪಚಕ್ರವರ್ತಿ ಇವನ ಬಿರುದು. ಈತ 3ನೆಯ ಸೋಮೇಶ್ವರನ ಮಗ ಮತ್ತು ಉತ್ತರಾಧಿಕಾರಿ.

ಸೋಮೇಶ್ವರನ ಮರಣದೊಂದಿಗೆ ಚಾಳುಕ್ಯ ರಾಜ್ಯದಲ್ಲಿದ್ದ ಬಿಗಿ ತಪ್ಪಿ ಹಲವು ಸಾಮಂತರು ಸ್ವತಂತ್ರರಾಗುವ ಪ್ರಯತ್ನ ನಡೆಸಿದರು. ಇವನ ಕಾಲಕ್ಕೆ ವೆಂಗಿ ಪೂರ್ಣವಾಗಿ ಕೈಬಿಟ್ಟಿತ್ತಲ್ಲದೆ ಆಂಧ್ರ ದೇಶದಲ್ಲಿ ಕಾಕತೀಯ 2ನೆಯ ಪ್ರೋಲ ಪ್ರಬಲನಾದ. ಗೋವೆಯ ಕದಂಬರೂ ಸ್ವಾತಂತ್ರ್ಯ ಸಾರಿದ್ದರಿಂದ ಕೊಂಕಣ ಮತ್ತು ಪಲಸಿಗೆಗಳು ಕೈಬಿಟ್ಟವು. ದಕ್ಷಿಣದಲ್ಲಿದ್ದ ವಿಷ್ಣುವರ್ಧನ ರಾಜ್ಯವಿಸ್ತರಣೆ ಕೈಕೊಂಡನಾಗಿ 1139ರಲ್ಲಿ ಹಾನಗಲ್ಲು ಅವನ ವಶವಾಯಿತು. ಅನಂತರ ಚಾಳುಕ್ಯ ರಾಜ್ಯಕ್ಕೇ ಆತಂಕ ಉಂಟುಮಾಡುವಂತೆ ಗದಗ ಮತ್ತು ಲಕ್ಕುಂಡಿಗೂ ಮುಂದುವರೆದ. ಆದರೆ ಜಗದೇಕಮಲ್ಲನ ದಂಡನಾಯಕ ಬರ್ಮದೇವಯ್ಯ ಮತ್ತು ಅವನ ತಮ್ಮ ಮಾಧವ ಇವರು ಸು.1143ರಲ್ಲಿ ಹೊಯ್ಸಳ ಸೈನ್ಯವನ್ನು ಹಿಮ್ಮೆಟ್ಟಿಸಿ ಆ ಭಾಗಗಳನ್ನು ಚಾಳುಕ್ಯ ರಾಜ್ಯದಲ್ಲಿ ಉಳಿಸಿದರು.

ಚಾಳುಕ್ಯರ ಬಂಧುಗಳಾಗಿದ್ದ ಕಳಚುರಿಗಳು ಸೋಮೇಶ್ವರನ ಕಾಲದಲ್ಲೇ ಸ್ವತಂತ್ರರಾಗುವ ಸೂಚನೆಗಳನ್ನು ನೀಡಿದ್ದರು. ಪೆರ್ಮ ಜಗದೇಕಮಲ್ಲನ ಕಾಲದಲ್ಲಿ ಬಿಜ್ಜಳ ತರ್ದವಾಡಿ ಮೊದಲಾದ ಭಾಗಗಳನ್ನು ವಶಪಡಿಸಿಕೊಂಡು ಹೆಚ್ಚು ಕಡಿಮೆ ಸ್ವತಂತ್ರನಾಗಿಯೇ ಆಳುತ್ತಿದ್ದನೆಂಬುದು ಬಿಜ್ಜಳನ ಯಾವ ಶಾಸನಗಳಲ್ಲೂ ಸಮ್ರಾಟ ಜಗದೇಕಮಲ್ಲನ ಹೆಸರನ್ನು ಹೇಳದಿರುವುದರಿಂದ ಸ್ಪಷ್ಟವಾಗುತ್ತದೆ.

ಸು.10 ವರ್ಷಗಳ ದುರ್ಬಲ ಆಳಿಕೆಯ ಅನಂತರ ಜಗದೇಕಮಲ್ಲ ನಿಧನಹೊಂದಿದ. ಅನಂತರ ಇವನ ತಮ್ಮ 3ನೆಯ ತೈಲಪ ಚಾಳುಕ್ಯ ಸಿಂಹಾಸನವನ್ನು ವಹಿಸಿಕೊಂಡ. (ಟಿ.ಎಸ್.ಎಸ್.ಎನ್.)

**ಜಗದ್ದಳ ಸೋಮನಾಥ :** ಸು.1175. ಜೈನಕವಿ. ಕರ್ನಾಟಕ ಕಲ್ಯಾಣಕಾರಕ ಎಂಬ ವೈದ್ಯ ಗ್ರಂಥದ ಕರ್ತೃ. ಈತನಿಗೆ ವಿಚಿತ್ರ ಕವಿಯೆಂಬ ಬಿರುದೂ ಇದ್ದಂತೆ ತಿಳಿದುಬರುತ್ತದೆ. ತನ್ನ ಗ್ರಂಥವನ್ನು ಸುಮನೋಬಾಣ ಕವಿಯೂ ಅಭಯಚಂದ್ರ ಸಿದ್ಧಾಂತಿಯೂ ತಿದ್ದಿದಂತೆ ಹೇಳಿಕೊಂಡಿರುವುದರಿಂದ ಈತ ಸುಮನೋಬಾಣನ (ಸು.1175) ಕಾಲದವನೆಂಬ ಅಂಶ ವ್ಯಕ್ತವಾಗುತ್ತದೆ.

ಕನ್ನಡ ವೈದ್ಯ ಗ್ರಂಥಗಳಲ್ಲಿ ಕೀರ್ತಿವರ್ಮನ (ಸು.1100) ಗೋವೈದ್ಯವನ್ನು ಬಿಟ್ಟರೆ ಕಲ್ಯಾಣಕಾರಕ ಅತ್ಯಂತ ಪ್ರಾಚೀನವಾದುದು. ಪೂಜ್ಯಪಾದರಿಂದ ಸಂಸ್ಕೃತದಲ್ಲಿ ರಚಿತವಾದ ಕಲ್ಯಾಣಕಾರಕ ಈ ಗ್ರಂಥಕ್ಕೆ ಆಕರ. ಕಂದ ಮತ್ತು ವೃತ್ತಗಳಲ್ಲಿ ರಚಿತವಾಗಿದೆ. ಇದರಲ್ಲಿ ಪೀಠಿಕಾ ಪ್ರಕರಣ, ಪರಿಭಾಷಾ ಪ್ರಕರಣ, ಷೋಡಶಜ್ವರನಿದಾನ ಚಿಕಿತ್ಸಾ ನಿರೂಪಣಪ್ರಕರಣ, ಅತಿಸಾರಗ್ರಹಣೀನಿದಾನ ಚಿಕಿತ್ಸಾನಿರೂಪಣ ಪ್ರಕರಣ, ರಕ್ತಪಿತ್ತನಿದಾನ ಚಿಕಿತ್ಸಾನಿರೂಪಣ ಪ್ರಕರಣ, ಕ್ಷಯನಿದಾನ ಚಿಕಿತ್ಸಾನಿರೂಪಣ ಪ್ರಕರಣ, ಉದರರೋಗನಿದಾನ ಚಿಕಿತ್ಸಾನಿರೂಪಣ ಪ್ರಕರಣ, ಗುಲ್ಮನಿದಾನ ಚಿಕಿತ್ಸಾ ನಿರೂಪಣಪ್ರಕರಣ, ಅಶ್ಮರೀಪ್ರಕರಣ, ಕಾಮಾಲೆಯ ನಿದಾನ ಚಿಕಿತ್ಸಾಪ್ರಯೋಗ ಪ್ರಕರಣ, ಮೂಲವ್ಯಾಧಿನಿದಾನ ಚಿಕಿತ್ಸಾಪ್ರಕರಣ ಮೊದಲಾದ 11ಕ್ಕೂ ಹೆಚ್ಚು ಪ್ರಕರಣಗಳಿವೆ. ಪ್ರತಿಪ್ರಕರಣದಲ್ಲೂ ವ್ಯಾಧಿಗಳ ವಿವರ ಹಾಗೂ ಅವುಗಳ ಚಿಕಿತ್ಸಾ ವಿಧಾನಗಳನ್ನು ನೀಡಲಾಗಿದೆ. ವ್ಯಾಧಿಗಳಿಗೆ ನಿರೂಪಿಸಿರುವ ನಿದಾನಕ್ರಮ ಸುಲಭವೂ ಪರಿಣಾಮಕಾರಿಯೂ ಆಗಿರುವಂತೆ ತೋರುತ್ತದೆ. ಈ ಗ್ರಂಥದಲ್ಲಿ ನಿರೂಪಿತವಾಗಿರುವ ವಿಷಯಗಳು ಕೆಲವು ಸಂದರ್ಭಗಳಲ್ಲಿ ಹೆಚ್ಚು ವೈಜ್ಞಾನಿಕವಾಗಿದ್ದು ಕೃತಿ ಅತ್ಯಂತ ಉಪಯುಕ್ತವಾಗಿವೆ. (ಬಿ.ಎಸ್.ಆರ್‌ಯು.)

**ಜಗನ್ನಾಥದಾಸ :** ಸು.1728-1809. ಕನ್ನಡದ ಪ್ರಮುಖ ಹರಿದಾಸರಲ್ಲೊಬ್ಬರು. ಪುರಂದರದಾಸ ಮತ್ತು ಕನಕದಾಸರ ಅನಂತರ ಹರಿದಾಸ ಸಾಹಿತ್ಯವನ್ನು ಅದರ ಪರಮೋತ್ಕರ್ಷ ಸ್ಥಿತಿಗೆ ಏರಿಸಿದವರು. ರಾಯಚೂರು ಜಿಲ್ಲೆಯ ಬ್ಯಾನವಟ್ಟೆ ಇವರ ಜನ್ಮಸ್ಥಳ. ಇವರು ಬ್ಯಾನವಟ್ಟೆ ನರಸಿಂಹದಾಸರ ವರಪುತ್ರರು. ಆದವಾನಿಯ ದಿವಾನ ಪಂಗನಾಮದ ತಿಮ್ಮಣ್ಣಯ್ಯನವರ ಶಿಷ್ಯರು. ಶ್ರೀನಿವಾಸಾಚಾರ್ಯ ಎಂಬುದು ಇವರ ಪೂರ್ವಾಶ್ರಮದ ಹೆಸರು. ಇವರು ಚಿಕ್ಕಂದಿನಲ್ಲೇ ಪ್ರತಿಭಾವಂತರಾಗಿದ್ದು ಮಂತ್ರಾಲಯ ಮಠದ ಶ್ರೀ ವರದೇಂದ್ರತೀರ್ಥರಲ್ಲಿ ವ್ಯಾಸಂಗಮಾಡಿ ಶಾಸ್ತ್ರವಿದ್ಯಾಪಾರಂಗತರಾಗಿ ಅನಂತರ ಆಚಾರ್ಯಪೀಠವನ್ನೇರಿ ಬಹುಶಿಷ್ಯಸಂಪತ್ತಿನಿಂದ ಶೋಭಿಸಿದರು. ಆ ಕಾಲದ ಅಪರೋಕ್ಷಜ್ಞಾನಿಗಳಾದ ವಿಜಯದಾಸರನ್ನು ಒಮ್ಮೆ ತಿರಸ್ಕಾರದಿಂದ ಕಂಡು, ಅದರ ಫಲವಾಗಿ ಉದರಬೇನೆಯಿಂದ ನೊಂದು, ಅವರ ಶಿಷ್ಯ ಗೋಪಾಲದಾಸರಿಂದ ರೋಗನಿವಾರಣೆಯಾದೊಡನೆ ಹೃದಯ ಪರಿವರ್ತನೆಹೊಂದಿ ಶ್ರೀಜಗನ್ನಾಥ ವಿಠಲನೆಂಬ ಅಂಕಿತದಿಂದ ಹರಿದಾಸದೀಕ್ಷೆ ಪಡೆದರು. ಇಷ್ಟೇ ಅಲ್ಲದೆ ತಮ್ಮ ಗುರುವಿನಿಂದ ನಲವತ್ತು ವರ್ಷ ಆಯುರ್ದಾನವನ್ನು ಪಡೆದರೆಂದು ಕಥೆ. ಪಂಡಿತೋಹಂ ಎಂಬ ಅಹಂಕಾರದಿಂದ ದಾಸೋಹಂ ಎಂಬ ಭಕ್ತಿಪಂಥಕ್ಕೇರಿದರು.

ಜಗನ್ನಾಥದಾಸರು ತಂತ್ರಸಾರ, ತತ್ತ್ವಸುವಾಲಿ, ಹರಿಕಥಾಮೃತಸಾರ ಎಂಬ ಕೃತಿಗಳನ್ನೂ ಕೀರ್ತನೆಗಳನ್ನೂ ರಚಿಸಿದ್ದಾರೆ. ತತ್ತ್ವಸುವಾಲಿ ತ್ರಿಪದಿ ಛಂದಸ್ಸಿನಲ್ಲಿ ಸು.600 ಪದ್ಯಗಳಿಂದ ಕೂಡಿರುವ ಸರಳ ಶೈಲಿಯಲ್ಲಿ

ತತ್ತ್ವವನ್ನು ಬೋಧಿಸುವ ಗ್ರಂಥ. ತಂತ್ರಸಾರ ವಿಷ್ಣುಸ್ತುತಿ ಮತ್ತು ಮಂತ್ರಸ್ವರೂಪವನ್ನು 27 ನುಡಿಗಳಲ್ಲಿ ಒಳಗೊಂಡ ಹಾಡು. ಇವರು ರಚಿಸಿರುವ ಸುಮಾರು ಇನ್ನೂರು ಕೀರ್ತನೆಗಳಲ್ಲಿ ಜ್ಞಾನಭಕ್ತಿವೈರಾಗ್ಯಗಳು ಮುಪ್ಪುರಿಗೊಂಡು ಮೂಡಿ ಬಂದಿವೆ.

ಹರಿಕಥಾಮೃತಸಾರ ಭಾಮಿನೀ ಷಟ್ಪದಿಯಲ್ಲಿದೆ. ಇದರಲ್ಲಿ 32 ಸಂಧಿಗಳೂ 988 ಪದ್ಯಗಳೂ ಇವೆ. ಇದೊಂದು ತತ್ತ್ವಪುಂಜ ಗ್ರಂಥವಾಗಿದ್ದು ದ್ವೈತಸಿದ್ಧಾಂತದ ಕನ್ನಡ ವಿಶ್ವಕೋಶವೆನಿಸಿದೆ. ಈ ಗ್ರಂಥಕ್ಕೆ ಎರಡು ಸಂಸ್ಕೃತ ವ್ಯಾಖ್ಯಾನಗಳೂ ಸೇರಿ ಒಟ್ಟು ಒಂಬತ್ತು ವ್ಯಾಖ್ಯಾನಗಳಿವೆ. ವೇದವೇದಾಂತಗಳ ತಿರುಳು, ಮಾಧ್ವಸಿದ್ಧಾಂತದ ಸಾರ - ಇವು ಇಲ್ಲಿ ಸಾರವತ್ತಾಗಿ ನಿರೂಪಿತವಾಗಿವೆ. ಇವರ ಕೃತಿಗಳಲ್ಲಿ ಅಪೂರ್ವ ಪದಬಂಧ, ನಿರರ್ಗಳ ಶೈಲಿಯ ಓಟ, ಅರ್ಥಗಾಂಭೀರ್ಯ, ಸಿದ್ಧಾಂತದ ಸಮರ್ಥ ಪ್ರತಿಪಾದನೆ ಈ ಗುಣಗಳು ಕಂಡುಬರುತ್ತವೆ. ಹರಿಕಥಾಮೃತಸಾರ ಕನ್ನಡದ ಒಂದು ಅಪೂರ್ವ ಕೃತಿ ಎಂಬ ಮನ್ನಣೆಗೆ ಪಾತ್ರವಾಗಿದೆ. ಈ ಕೃತಿ ಇಂಗ್ಲಿಷಿಗೂ ಭಾಷಾಂತರವಾಗಿದೆ. (ಕೆ.ಎಂ.ಕೆ.)

**ಜಗಳೂರು** : ದಾವಣಗೆರೆ ಜಿಲ್ಲೆಯ ಒಂದು ತಾಲ್ಲೂಕು; ತಾಲ್ಲೂಕಿನ ಮುಖ್ಯ ಸ್ಥಳ. ತಾಲ್ಲೂಕಿನ ಪೂರ್ವದಲ್ಲಿ ಚಿತ್ರದುರ್ಗ ಜಿಲ್ಲೆ, ದಕ್ಷಿಣದಲ್ಲೂ ಚಿತ್ರದುರ್ಗ ಜಿಲ್ಲೆ, ಪಶ್ಚಿಮದಲ್ಲಿ ದಾವಣಗೆರೆ ಮತ್ತು ಹರಪನಹಳ್ಳಿ, ಉತ್ತರದಲ್ಲಿ ಬಳ್ಳಾರಿ ಜಿಲ್ಲೆ ಇವು ಸುತ್ತುವರಿದಿವೆ. 1882ರವರೆಗೆ ಇದಕ್ಕೆ ಕನಕುಪ್ಪ ಎಂಬ ಹೆಸರಿತ್ತು. ಆ ವರ್ಷ ಚಿತ್ರದುರ್ಗದ ಉಪತಾಲ್ಲೂಕಾಯಿತು. 1886ರಲ್ಲಿ ಸ್ವತಂತ್ರ ತಾಲ್ಲೂಕಾಯಿತು. ಜಗಳೂರು, ಸೊಕ್ಕೆ, ಬಿಳಿಚೋಡು ಹೋಬಳಿಗಳೂ 170 ಗ್ರಾಮಗಳೂ ಇವೆ. ವಿಸ್ತೀರ್ಣ 9,647ಚ.ಕಿಮೀ. ಜನಸಂಖ್ಯೆ 1,58,829.

ತಾಲ್ಲೂಕಿನಲ್ಲಿ ಕಣಶಿಲೆಗಳೂ ಧಾರವಾಡ ಶ್ರೇಣಿಯ ಕಲ್ಲುಗಳೂ ಹರಡಿವೆ. ಈ ತಾಲ್ಲೂಕಿನ ಹೊನ್ನೆಮರಡಿಯಲ್ಲಿ ಹಿಂದೆ ಚಿನ್ನ ತೆಗೆಯುತ್ತಿದ್ದುದಕ್ಕೆ ಸೂಚನೆಗಳಿವೆ. ಹೊಸಕೆರೆಯ ಬಳಿ ಸುಣ್ಣಕಲ್ಲಿನ ಹರಹಿದೆ. ಮ್ಯಾಂಗನೀಸ್ ನಿಕ್ಷೇಪವೂ ಈ ತಾಲ್ಲೂಕಿನಲ್ಲುಂಟು. ತಾಲ್ಲೂಕಿನ ಕೆಲವು ಭಾಗಗಳಲ್ಲಿ ಸ್ಲೇಟ್ ರೀತಿಯ ಹಾಸುಚಪ್ಪಡಿಗಳನ್ನು ತೆಗೆಯುವುದುಂಟು. ತಾಲ್ಲೂಕು ಸ್ವಲ್ಪ ಏರುತಗ್ಗುಗಳಿರುವ ಮೈದಾನ ಪ್ರದೇಶ. ವಾಯವ್ಯ ಭಾಗಗಳಲ್ಲಿ ಸಣ್ಣ ಬೆಟ್ಟಗುಡ್ಡಗಳಿವೆ. ಈ ಭಾಗದಲ್ಲಿ ಕುರುಚಲು ಮತ್ತು ಪರ್ಣಪಾತಿ ಮರಗಳು ಇವೆ. ಕೃಷಿಯೋಗ್ಯ ಭೂಮಿಯಲ್ಲಿ ಕಾಲುಭಾಗ ಕಪ್ಪುಮಣ್ಣಿನಿಂದ ಕೂಡಿದ್ದು. ಉಳಿದ ಭಾಗ ಕೆಂಪು ಮಣ್ಣಿನ ಮತ್ತು ಮರಳಿನಿಂದ ಕೂಡಿದ ಫಲವತ್ತಲ್ಲದ ಭೂಮಿ. ಫಲವತ್ತಾದ ಭೂಮಿ ತಾಲ್ಲೂಕಿನ ದಕ್ಷಿಣಭಾಗದಲ್ಲಿ ಮತ್ತು ವಾಯವ್ಯದ ತಗ್ಗಿನ ಕಣಿವೆ ಪ್ರದೇಶಗಳಲ್ಲಿವೆ. ತಾಲ್ಲೂಕಿನಲ್ಲಿ ನೈಋತ್ಯ ಈಶಾನ್ಯಾಭಿಮುಖವಾಗಿ ನೀರ್ಬೇರ್ಪಡೆಯ ಏರು ಹಬ್ಬಿದ್ದು ಈ ಭಾಗದಲ್ಲಿ ವಾಯವ್ಯ ಮತ್ತು ಆಗ್ನೇಯಗಳ ಕಡೆಗೆ ಚಿಕ್ಕ ಹಳ್ಳಗಳು ಹರಿಯುತ್ತವೆ. ಆಗ್ನೇಯದ ಕಡೆ ಹರಿಯುವವು ಜನಗಹಳ್ಳಕ್ಕೆ (ಚಿಕ್ಕಹಗರಿ) ಸೇರುತ್ತವೆ. ಈ ಚಿಕ್ಕ ಹಳ್ಳಗಳು ಹರಿಯುವ ಪ್ರದೇಶದಲ್ಲಿ ಬಾವಿ, ಕೆರೆಗಳನ್ನು ನಿರ್ಮಿಸಲಾಗಿದೆ. ಇಲ್ಲಿ ಕೆಲವೆಡೆ ವ್ಯವಸಾಯ ಚೆನ್ನಾಗಿದ್ದು ವರ್ಷಕ್ಕೆ ಎರಡು ಬೆಳೆಗಳನ್ನು ತೆಗೆಯುವುದೂ ಉಂಟು. ತಾಲ್ಲೂಕಿನ ಪೂರ್ವದ ಕೆಲವು ಗ್ರಾಮಗಳಿಗೆ ಭೀಮ ಸಮುದ್ರ ಕೆರೆಯಿಂದ ಮುಂದೆ ಬರುವ ಜನಗಹಳ್ಳದಿಂದ ವ್ಯವಸಾಯಕ್ಕೆ ಅನುಕೂಲವುಂಟು. ತಾಲ್ಲೂಕಿನಲ್ಲಿ ಮಳೆ ಕಡಿಮೆ. ವಾರ್ಷಿಕ ಸರಾಸರಿ 550ಮಿಮೀ. ನೀರಾವರಿ ಸಹಾಯದಿಂದ ರಾಗಿ, ಬತ್ತ, ಹತ್ತಿ, ತೊಗರಿ, ಜೋಳ, ನವಣೆ, ಎಣ್ಣೆಬೀಜಗಳು, ಅಡಕೆ, ತೆಂಗು ಮತ್ತು ಕಬ್ಬು ಬೆಳೆಯುತ್ತಾರೆ.

ತಾಲ್ಲೂಕಿನಲ್ಲಿ ಬಿಜಾಪುರ-ಉಜನಿ, ನಾಯಕನಹಟ್ಟಿ-ಜಗಳೂರು, ಚಿತ್ರದುರ್ಗ-ಜಗಳೂರು, ದಾವಣಗೆರೆ-ಜಗಳೂರು, ಭರಮಸಾಗರ ಬಿಳಿಚೋಡು-ಬಸವನಕೋಟೆ - ಈ ಮುಖ್ಯ ರಸ್ತೆಗಳಿವೆ. ತಾಲ್ಲೂಕಿನ ಹೆಚ್ಚು ವ್ಯಾಪಾರ ದಾವಣಗೆರೆಯೊಡನೆ ಸಾಗುತ್ತದೆ.

ಈ ತಾಲ್ಲೂಕಿನ ಅನಗೋಡು ಐತಿಹಾಸಿಕ ಸ್ಥಳ. ಪ್ರಸಿದ್ಧ ಉಚ್ಚಂಗಿದುರ್ಗದಿಂದ 6ಕಿಮೀ ದೂರದಲ್ಲಿರುವ ಈ ಸ್ಥಳ ಬುದ್ಧನ ಕಾಲದಷ್ಟು ಹಿಂದಿನದೆಂದೂ ಅಶೋಕಪಟ್ಟಣ ಎಂಬುದೇ ಅನಗೋಡು ಎಂದಾಗಿದೆಯೆಂದೂ ಹೇಳಿಕೆಗಳಿವೆ. ಸಮೀಪದಲ್ಲಿ ಬೃಹತ್ ಶಿಲಾಸಮಾಧಿಗಳಿವೆ. ಇಲ್ಲಿಯ ಸ್ವಯಂಭೂಕಲಿದೇವೇಶ್ವರ ದೇವಾಲಯ ಕಲ್ಯಾಣದ ಚಾಳುಕ್ಯರ ಕಾಲದ ರಚನೆ. ಇಲ್ಲಿ ಹಲವು ಶಾಸನಗಳಿವೆ. ಬಿಸ್ತುವಳ್ಳಿ ಎಂಬಲ್ಲಿ ಚಿತ್ರದುರ್ಗದ ಹಿರೇಮದಕರಿ ನಾಯಕನ ದಳವಾಯಿಯಾಗಿದ್ದ ಮುದ್ದಣ್ಣ ಕಟ್ಟಿಸಿದ ದಳವಾಯಿಹೊಂಡ ಎಂಬ ಹೆಸರಿನ ಒಂದು ಹೊಂಡವಿದೆ. ಸು.30 ಗಜ ಚೌಕದ ಈ ಹೊಂಡದ ಸುತ್ತಲ ಪ್ರಾಕಾರದಲ್ಲಿ ಕೆತ್ತನೆಗಳಿವೆ. ಸಮೀಪದ ಗುಡ್ಡದಲ್ಲಿ ರಂಗನಾಥ ದೇವಾಲಯವಿದೆ. ಇಲ್ಲಿ ಪ್ರತಿ ಚೈತ್ರದಲ್ಲಿ ಜಾತ್ರೆ ಜರುಗುತ್ತದೆ. ಕೋಟೆಗುಡ್ಡೆ, ಕಲ್ಲೇದೇವರಪುರ ಮತ್ತು ಗುರುಸಿದ್ಧಾಪುರಗಳಲ್ಲೂ ವಾರ್ಷಿಕ ಜಾತ್ರೆಗಳು ನಡೆಯುತ್ತವೆ. *

ಜಗಳೂರು ಈ ತಾಲ್ಲೂಕಿನ ಕಸಬೆ ಹಾಗೂ ಆಡಳಿತಕೇಂದ್ರ. ಜನಸಂಖ್ಯೆ 14,741. ಚಿತ್ರದುರ್ಗ, ದಾವಣಗೆರೆಗಳಿಂದ ಒಳ್ಳೆಯ ರಸ್ತೆ ಸಂಪರ್ಕವಿದೆ. ಜೋಗಪ್ಪ ಎಂಬ ಋಷಿಯ ಹೆಸರಿನಿಂದ ಈ ಊರಿನ ಹೆಸರು ಬಂದಿದೆಯೆಂದು ಪ್ರತೀತಿ. ಇಲ್ಲಿರುವ ಜೋಗಪ್ಪ ದೇವಾಲಯದಲ್ಲಿ ತ್ರಿಶೂಲ ಕಮಂಡಲಗಳನ್ನು ಹಿಡಿದಿರುವ 3' ಎತ್ತರದ ಮೂರ್ತಿ ಇದೆ. ಇಲ್ಲಿನ ಕೆಮ್ಮವ್ವ ದೇವಾಲಯದಲ್ಲಿ 1.5 ಅಡಿ ಎತ್ತರದ ತ್ರಿಶೂಲ ಮತ್ತು ಡಮರುಧಾರಿ ಆಸೀನ ವಿಗ್ರಹವಿದೆ. ಇದರ ಅರ್ಚನೆಯಿಂದ ಕೆಮ್ಮು ನಿಲ್ಲುವುದೆಂದು ಪ್ರತೀತಿ. ಜಗಳೂರಿನಲ್ಲಿ ಕಲ್ಲುಮಠ ಎಂಬ ವೀರಶೈವ ಮಠವಿದೆ. ಇಲ್ಲಿ ಮುರುಗಿ ಮಠದ ಸ್ವಾಮಿಗಳಲ್ಲೊಬ್ಬರು ಎನ್ನಲಾದ ತೋಟದಸ್ವಾಮಿಯ ಗದ್ದುಗೆಯುಂಟು. (ಕೆ.ಬಿ.ಷಿ.)

**ಜಗ್ಗಲಿಗೆ** : ಬಂಡಿಯಷ್ಟು (ಚಕ್ಕಡಿ) ದೊಡ್ಡದಾದ, ಚಕ್ರಾಕಾರದ ಸುಮಾರು ಐದು ಅಡಿ ಎತ್ತರದ ತಮಟೆಯಂತೆ ಬಾರಿಸುವ ಒಂದು ಜನಪದ ವಾದ್ಯ. ಉತ್ತರ ಕರ್ನಾಟಕದ ಕೆಲವೇ ಪ್ರದೇಶಗಳಲ್ಲಿ ಕಂಡುಬರುವ ಈ ವಾದ್ಯಗಳ ಮೇಳ ಪ್ರದರ್ಶನಾತ್ಮಕ ಕಲೆಯಾಗಿದೆ. ಇದನ್ನು ಮಾಡಿಸುವವರು ಊರಿನ ಶ್ರೀಮಂತರು ಅಥವಾ ದೇವಸ್ಥಾನಗಳ ಮುಖ್ಯಸ್ಥರು. ಈ ತಯಾರಿಕೆ ಕೂಡ ಕುತೂಹಲ ಹುಟ್ಟಿಸುವಂತಹದು. ಚಕ್ಕಡಿ (ಬಂಡಿ) ಬಳೆಯನ್ನೋ ಅಥವಾ ಕಬ್ಬಿಣದ ಸಲಾಕೆಯನ್ನೋ ಜಗ್ಗಲಿಗೆ ತಯಾರಿಕೆಗೆ ಉಪಯೋಗಿಸುತ್ತಾರೆ. ಹದಗೊಳಿಸಿದ ದನ ಅಥವಾ ಎಮ್ಮೆ ಚರ್ಮವನ್ನು ಹಾಳೆಯಂತೆ ಮಾಡಿ, ವೃತ್ತಾಕಾರವಾಗಿ ಹೊದಿಸಿ, ಚರ್ಮದಿಂದಲೇ ಮಾಡಿದ ಹುರಿಯಿಂದ ಅದನ್ನು ಬಿಗಿಯುತ್ತಾರೆ. ಅನಂತರ ಹಲಗೆಯ ಮೇಲೆ ವಿವಿಧ ಬಣ್ಣಗಳಿಂದ ಚಿತ್ರಗಳನ್ನು ಬಿಡಿಸುವರು. ಹಲಗೆಯ ಮಧ್ಯದಲ್ಲಿ 6 ಅಥವಾ 8 ಅಂಗುಲ ವೃತ್ತವನ್ನು ಬಣ್ಣದಿಂದ ತುಂಬುತ್ತಾರೆ.



ಜಗ್ಗಲಿಗೆ ಕುಣಿತದ ಒಂದು ದೃಶ್ಯ

ಒಂದು ಮೇಳದಲ್ಲಿ ಸುಮಾರು 25ರಿಂದ 30 ಜಗ್ಗಲಿಗೆಗಳು ಭಾಗವಹಿಸುವುದುಂಟು. ಜಗ್ಗ ಎನ್ನುವ ಪದಕ್ಕೆ ಬಹಳ ಎಂಬ ಅರ್ಥವೂ ಇದೆ. ಊರಿನಲ್ಲಿ ಜರುಗುವ ಜಾತ್ರೆ, ಸಭೆ ಸಮಾರಂಭ ಮತ್ತು ಹಬ್ಬ ಹರಿದಿನಗಳಲ್ಲಿ ಈ ಕಲೆಯ ಪ್ರದರ್ಶನ ಕಂಡುಬರುತ್ತದೆ. ಇದರಲ್ಲಿ ಭಾಗವಹಿಸುವ ಕಲಾವಿದರ ಉಡುಗೆ ತೊಡುಗೆಗಳು ಸರಳವೂ ಅಷ್ಟೇ

ಆಕರ್ಷಕವೂ ಆಗಿರುತ್ತವೆ. ತಲೆಗೆ ರುಮಾಲು (ಪೇಟ), ಬಿಳಿ ಬಣ್ಣದ ನಿಲುವಂಗಿ, ಬಿಳಿ ದೋತರ ಧರಿಸಿ, ಸೊಂಟಕ್ಕೆ ವಸ್ತ್ರವೊಂದನ್ನು ಬಿಗಿದಿರುತ್ತಾರೆ. ಹಲಗೆಯನ್ನು ಬಾರಿಸಲು ಒಂದು ಚಿಕ್ಕದಾದ ಕುಣಿ ಹಿಡಿದಿರುತ್ತಾರೆ. ಈ ಮೇಳಕ್ಕೆ ಒಬ್ಬ ಮುಖ್ಯಸ್ಥನಿದ್ದು, ಉಳಿದ ಕಲಾವಿದರಿಗೆ ಮಾರ್ಗದರ್ಶನ ನೀಡುವುದು ಈತನ ಕೆಲಸ. ಮೂರು, ಆರು, ಒಂಬತ್ತು, ಹನ್ನೊಂದು ಅಕ್ಷರ ತಾಳಗಳನ್ನು ಲಯಬದ್ಧವಾಗಿ ಬಾರಿಸುತ್ತಾರೆ. ಈ ಮೇಳದ ಜೊತೆಗೆ ಇಬ್ಬರು ಅಥವಾ ನಾಲ್ಕು ಮಂದಿ ಕಲಾವಿದರು ಮಾಮೂಲಿ ಹಲಗೆಗಳನ್ನೂ ಬಾರಿಸುವುದುಂಟು.

ಕಲಾವಿದರು ಜಗ್ಗಲಿಗೆಯನ್ನು ಎಡಗೈಯಿಂದ ಉರುಳಿಸುತ್ತಾ ತಾಳಕ್ಕೆ ಅನುಗುಣವಾಗಿ ಬಾರಿಸುತ್ತಾರೆ. ಡೊಳ್ಳಿನಲ್ಲಿ ಹೊರಡಿಸುವ ವಿವಿಧ ನಾದಗಳನ್ನು ಇದರಲ್ಲಿಯೂ ಹೊಮ್ಮಿಸಲಾಗುತ್ತದೆ. ವಿವಿಧ ನಮೂನೆಯಲ್ಲಿ ಬಾಗಿ ಬಳುಕಿ ಕುಣಿದು ಕುಪ್ಪಳಿಸಿ ಬಾರಿಸುವ ಜಗ್ಗಲಿಗೆ ರಣ ಬಡಿತ, ಅದರ ರಭಸ ದನಿ ಪ್ರೇಕ್ಷಕರ ಮೈಯಲ್ಲಿ ನವಿರೇಳಿಸುವಂತಿರುತ್ತದೆ. ಪ್ರದರ್ಶನದ ಉದ್ದಕ್ಕೂ ಎಲ್ಲಿಯೂ ಹಾಡುಗಾರಿಕೆ ಇಲ್ಲದಿರುವುದು ಈ ಕಲೆಯ ಮತ್ತೊಂದು ವೈಶಿಷ್ಟ್ಯ. ಹಲಗೆಯ ಮೇಳ ಎರಡು ಸಾಲುಗಳಲ್ಲಿ ಸಾಲಾಗಿ ಸಾಗುತ್ತಿರುವಾಗ ಬಣ್ಣ ಬಣ್ಣದ ಕಾಗದದಿಂದ ಬಾವುಟಗಳನ್ನು ಎತ್ತಿ ಹಿಡಿದ ನೋಟ ನೋಡುಗರಿಗೆ ಆನಂದವನ್ನು ಉಂಟುಮಾಡುತ್ತದೆ. (ಎಂ.ಆರ್‌ಇ.)

**ಜಟಿಂಗರಾಮೇಶ್ವರ :** ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಬ್ರಹ್ಮಗಿರಿ ಬೆಟ್ಟಕ್ಕೆ ಮೂರು ಕಿಮೀ ಅಂತರದಲ್ಲಿ ರಾಮಸಾಗರದ ಬಳಿ ಇರುವ ಬೆಟ್ಟ. ಇದರಲ್ಲಿ ಸಣ್ಣ ಜಟಿಂಗರಾಮೇಶ್ವರ ಮತ್ತು ಹಿರಿಯ ಜಟಿಂಗರಾಮೇಶ್ವರ ಎಂಬ ಎರಡು ಬೆಟ್ಟಗಳು ಸೇರಿವೆ. ಬೆಟ್ಟದ ಮೇಲಿನ ಒಂದು ಬಂಡೆಯಲ್ಲಿ ಅಶೋಕನ ಶಾಸನವಿದೆ. ಅಶೋಕನ ಕಾಲಕ್ಕಿಂತ ಮೊದಲೇ ಇಲ್ಲಿ ಜನವಸತಿಯಿತ್ತು. ಅಶೋಕನ ಕಾಲದ ಇಸಿಲ ನಗರ ಜಟಿಂಗರಾಮೇಶ್ವರ ಮತ್ತು ಬ್ರಹ್ಮಗಿರಿಗಳ ನಡುವೆ ಹಬ್ಬಿತ್ತು. ಇಲ್ಲಿರುವ ಗವಿಗಳೂ ಏಕಾಂತ ತೀರ್ಥದಂಥ ದೋಣೆಗಳೂ ಜನವಸತಿಗೆ ಅನುಕೂಲವಾಗಿದ್ದುವು.



ಜಟಿಂಗರಾಮೇಶ್ವರ ದೇವಾಲಯ

ರಾವಣ ಸೀತೆಯನ್ನು ಕದ್ದೊಯ್ಯುತ್ತಿದ್ದಾಗ ಜಟಾಯು ಇಲ್ಲಿ ಅವನನ್ನು ತಡೆದು ಹೋರಾಡಿ ಸತ್ತನೆಂಬ ಕಥೆಯನ್ನು ಇಲ್ಲಿನ 961ರ ಶಾಸನವೊಂದು ಹೇಳುತ್ತದೆ. ಜಟಾಯುವಿನ ಹೆಸರಿನಲ್ಲಿ ರಾಮ ಇಲ್ಲಿ ಲಿಂಗವನ್ನು ಪ್ರತಿಷ್ಠೆಮಾಡಿದನೆಂದೂ ದೇವಾಲಯ ಇಟ್ಟಿಗೆಯದಾಗಿತ್ತೆಂದೂ ಇದನ್ನು ಕಿತ್ತು ರಾಮೇಶ್ವರನಿಗಾಗಿ ಕಲ್ಲಿನ ದೇವಾಲಯವೊಂದನ್ನೂ ಮತ್ತೆ ಕೆಲವು ದೇವಾಲಯಗಳನ್ನೂ ಲಿಂಗಶಿವಜೀಯು ಕಟ್ಟಿಸಿದನೆಂದೂ ಅದೇ ಶಾಸನ ತಿಳಿಸುತ್ತದೆ. ಜಟಿಂಗರಾಮೇಶ್ವರ ಎಂಬ ಹೆಸರಿಗೆ ಈ ಕಥೆಯೆ ಕಾರಣವಿರಬಹುದು. ಜಟಾಯು ರಾವಣನೊಂದಿಗೆ ಹೋರಾಡುತ್ತಿದ್ದಾಗ ಸೀತೆ ನಿಂತಿದ್ದ ಸ್ಥಳ ಎಂದು ಕೊಳದ ಬಳಿ ಇರುವ ಪಾದಗಳನ್ನೂ, ರಾವಣನನ್ನು ಜಟಾಯು ಕೆಡವಿದ ಕೊರಕಲು ಜಟಾಯುವಿನ ದೇಹಕ್ಕೆ ರಾಮ ಅಗ್ನಿಸ್ಪರ್ಶಮಾಡಿದ ಸ್ಥಳ ಎಂದೂ ಅಲ್ಲಿ ಜನ ತೋರಿಸುತ್ತಾರೆ.

ನೊಳಂಬರು ಮತ್ತು ಚಾಳುಕ್ಯರ ಕಾಲದಲ್ಲಿ ಇಲ್ಲಿ ಕೆಲವು ಸಣ್ಣ ದೇವಾಲಯಗಳು ನಿರ್ಮಿತವಾದವು. ಆ ಕಾಲದಲ್ಲಿ ಈ ಬೆಟ್ಟಕ್ಕೆ ಬಲ್ಲೋಡಿ ತೀರ್ಥ ಎಂಬ ಹೆಸರಿತ್ತು. ಮುಂದೆ ವಿಜಯನಗರದ ಕಾಲದಲ್ಲೂ ಪಾಳೆಯಗಾರರ ಕಾಲದಲ್ಲೂ ಹಲವು ಗುಡಿಗೋಪುರಗಳನ್ನು ಕಟ್ಟಿಸಲಾಯಿತು; ಹಳೆಯ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಲಾಯಿತು. ಸಣ್ಣ ಜಟಿಂಗರಾಮೇಶ್ವರ ಬೆಟ್ಟದ ಮೇಲಿನ ದೊಡ್ಡ ಆವರಣದಲ್ಲಿ ಹಲವಾರು ದೇವಾಲಯಗಳು ಉಳಿದುಬಂದಿವೆ. ವಿಜಯನಗರದ ದೇವರಾಯನ ಕಾಲದಲ್ಲಿ ಕಟ್ಟಿದ ದೊಡ್ಡ ಮಹಾದ್ವಾರದ ಗೋಪುರ ಈಗ ಶಿಥಿಲವಾಗಿದೆ. ಆ ಮಹಾದ್ವಾರದ ಒಳಹೊಕ್ಕರೆ ಮತ್ತೊಂದು ಸಣ್ಣ ಮಹಾದ್ವಾರ, ಅದರ ಎರಡೂ ಕಡೆಯೂ ಗಣಪತಿ ಮತ್ತು ಚಾಮುಂಡಾಂಬಿಕೆ ಗುಡಿಗಳನ್ನು ಕಾಣಬಹುದು. ಎರಡನೆಯ ಗುಡಿಯಲ್ಲಿರುವ ಮಹಿಷಾಸುರಮರ್ದಿನಿ ಮೂರ್ತಿ ಸುಂದರವಾಗಿದೆ. ಮುಂದೆ ನಲವತ್ತು ಅಡಿ ಎತ್ತರದ ದೀಪಸ್ತಂಭವಿದೆ. ಇದು ಪಾಳೆಯಗಾರರ ಕಾಲಕ್ಕೆ ಸೇರಿದ್ದುದು. ಇಲ್ಲಿನ ಪಂಪಾಪತಿ ದೇವಾಲಯಕ್ಕೆ ಕದಂಬ ನಾಗರ ರೀತಿಯ ಶಿಖರವಿದೆ. ಜಂಬುಕೇಶ್ವರನ ಗುಡಿ ಇಟ್ಟಿಗೆಯದು. ಇವಲ್ಲದೆ ವೀರಭದ್ರ, ಸಪ್ತಮಾತೃಕೆಯರು, ಜನಾರ್ದನ, ಅರ್ಕೇಶ್ವರ, ಚಂಡಿಕೇಶ್ವರ, ತಪೋಲಿಂಗ, ಭೈರವ ಮುಂತಾದ ಸರಳವಾಗಿ ಕಟ್ಟಿರುವ ಹಲವಾರು ಗುಡಿಗಳೂ ಇಲ್ಲಿವೆ. ಗರ್ಭಗುಡಿ, ಸುಕನಾಸಿ ಮತ್ತು ನವರಂಗಗಳನ್ನುಳ್ಳ ರಾಮೇಶ್ವರ ದೇವಾಲಯವೇ ಇಲ್ಲಿನ ಪ್ರಾಚೀನ ಹಾಗೂ ಮುಖ್ಯದೇವಾಲಯ. ಇದನ್ನು ವಿಜಯನಗರದ ಕಾಲದಲ್ಲಿ ಸಂಪೂರ್ಣವಾಗಿ ಪುನರ್ನಿರ್ಮಿಸಿದಂತೆ ತೋರುತ್ತದೆ. (ಎಂ.ಎಚ್.)

**ಜಟ್ಟಿ ತಾಯಮ್ಮ :** 1862-1947. ಮೈಸೂರು ನಾಟ್ಯ ಸಂಪ್ರದಾಯದ ಹಿರಿಮೆಯನ್ನು ಎತ್ತಿ ಹಿಡಿದ ಪ್ರಸಿದ್ಧ ಭರತನಾಟ್ಯ ಪ್ರವೀಣೆ ಮತ್ತು ಸಂಗೀತ ವಿದುಷಿ. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಖಾಸಾ ಊಳಿಗದವರಾಗಿದ್ದ ಜಟ್ಟಿ ದಾಸಪ್ಪನವರ ಪುತ್ರಿ. ಹುಟ್ಟು ಹೆಸರು ಲಕ್ಷ್ಮೀದೇವಮ್ಮ. ತಂದೆ ಆಂಧ್ರದ ತೆಲುಗು ಜಾವಡಿ, ಮೂವನವರಾದ ಗೋಪಾಲ ಎಂಬುವವರು ಕ್ಷೇತ್ರಜ್ಞನ ಪದಗಳನ್ನೂ ಹಾಡುವುದರಲ್ಲಿಯೂ ಹೆಸರು ಗಳಿಸಿದ್ದರು. ಮಗಳಿಗಿದ್ದ ನಾಟ್ಯಾಭಿರುಚಿ, ಸಂಗೀತಾಭಿಲಾಷೆಯನ್ನು ಕಂಡು ದಾಸಪ್ಪನವರು ಅಕೆಗೆ ಸಂಗೀತ ಕಲಿಸಿದುದಲ್ಲದೆ, ಸುಬ್ಬರಾಯಪ್ಪನವರಿಂದ ಭರತ ನಾಟ್ಯ ಶಿಕ್ಷಣ ಕೊಡಿಸಿದರು. ತಾಯಮ್ಮ ಮುಂದೆ ಕವೀಶ್ವರ ಗಿರಿಯಪ್ಪನವರಿಂದ ಅಭಿನಯ ಮತ್ತು ಚಂದ್ರಶೇಖರಶಾಸ್ತ್ರಿಗಳಿಂದ ತೆಲುಗು ಜಾವಡಿ ಮತ್ತು ಪದಗಳನ್ನು ಕಲಿತರು. ಕವಿತಿಲಕ ಬಸವಪ್ಪಶಾಸ್ತ್ರಿಗಳಿಂದ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ನವರಸ ಭಾವಗಳನ್ನು ಪ್ರದರ್ಶಿಸಲು ಸಹ ಕಾರಿಯಾಗುವಂತೆ ಅತ್ಯುತ್ತಮ ವಾದ ಪದಗಳನ್ನು ಮತ್ತು ಸಾಹಿತ್ಯ ಪದಗಳನ್ನು ಕಲಿತರು. ಹಿಂದುಸ್ಥಾನೀ ಗವಾಯಿಗಳಿಂದ ಹಿಂದುಸ್ಥಾನೀ ರಾಗಗಳ ಪರಿಚಯ ಮಾಡಿ ಕೊಂಡರು. ತಮ್ಮ ಹದಿನೈದನೆಯ ವಯಸ್ಸಿನಲ್ಲಿ ಅರಮನೆಯಲ್ಲಿ ಭರತ ನಾಟ್ಯ ಪ್ರದರ್ಶನ ನೀಡಿ ವಿದ್ವಾಂಸರ ಮೆಚ್ಚುಗೆ ಪಡೆದು ರಾಜನರ್ತಕಿಯಾಗಿ ನಿಯಮಿತ



ರಾದರೂ ಅರಮನೆಯ ವೃತ್ತಿಯಿಂದ ದೂರ ಉಳಿದು ಚಾಮರಾಜ ಒಡೆಯರ ಆಹ್ವಾನದ ಮೇಲೆ ವಿಶೇಷ ದಿನಗಳಲ್ಲಿ ರಾಜಸಭೆಯಲ್ಲಿ ನಾಟ್ಯ ಮಾಡುತ್ತಿದ್ದರು. ಇವರ ಭೈರವೀ ರಾಗದ ಸ್ವರಜತಿಯ ಅಭಿನಯ ಪ್ರಸಿದ್ಧವಾದದ್ದು. 1944ರಲ್ಲಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಒಮ್ಮೆ ನರ್ತನ ಪ್ರದರ್ಶನ ನೀಡಿ ವಿದ್ವಾಂಸರ ಮೆಚ್ಚುಗೆ ಗಳಿಸಿದರು.

1935ರಲ್ಲಿ ರಾಗಿಣಿ ದೇವಿ, ಮಿಸ್ ಮೇಯೊ ಮತ್ತು ಐರ್ಲೆಂಡಿನ ಕೆಲವು ಮಹಿಳೆಯರು ಮೈಸೂರಿಗೆ ಬಂದು ಇವರಿಂದ ಭರತನಾಟ್ಯ ಶಿಕ್ಷಣ ಪಡೆದರೆನ್ನಲಾಗಿದೆ. ರಾಮಗೋಪಾಲ್, ಉದಯಶಂಕರ್, ಎಸ್.ಎನ್.ಸ್ವಾಮಿ, ಇವರ ಶಿಷ್ಯರು. 1945ರಲ್ಲಿ ಮೈಸೂರು ಮಹಾರಾಜ ಕಾಲೇಜಿನಲ್ಲಿ ನಡೆದ ಇವರ ನಾಟ್ಯಪ್ರದರ್ಶನವನ್ನು ಮೆಚ್ಚಿಕೊಂಡ ರಾಧಾಕೃಷ್ಣನ್ ಅವರು ನಾಟ್ಯಸರಸ್ವತಿ ಎಂಬ ಬಿರುದನ್ನಿತ್ತು ಗೌರವಿಸಿದರು. ತಾಯಮ್ಮನವರು ಸುಬ್ರಹ್ಮಣ್ಯಶಾಸ್ತ್ರಿಯವರಿಂದ ಸಂಸ್ಕೃತ ಶಿಕ್ಷಣ ಪಡೆದಿದ್ದುದರಿಂದ ಅಭಿನಯಕ್ಕಾಗಿ ಗೀತಗೋವಿಂದ, ಕೃಷ್ಣಕರ್ಣಾಮೃತ ಮತ್ತು ಕಾಳಿದಾಸಾದಿಗಳ ಕೃತಿಗಳನ್ನು ಹೆಚ್ಚು ಬಳಸುತ್ತಿದ್ದರು. ವಾಸುದೇವಾಚಾರ್ಯರು ತಾಯಮ್ಮನವರಿಗೆ ರಾಗ ಮಾಲಿಕೆಯ ಒಂದು ವಾಮನಸ್ತೋತ್ರವನ್ನು ಕಲಿಸಿದ್ದರು. ತಾಯಮ್ಮನವರ ನಾಟ್ಯಕೌಶಲವನ್ನು ಗೌರವಿಸಿದ ತಿರುವಾಂಕೂರು ಮಹಾರಾಜರು ತಾಯಮ್ಮನವರ ಭಾವಚಿತ್ರವನ್ನು ತಮ್ಮ ಕಲಾಭವನದಲ್ಲಿ ಹಾಕಿಸಿದರು. ಇವರು 1947 ನವೆಂಬರ್ 17ರಂದು ನಿಧನಹೊಂದಿದರು. (ಕೆ.ಎಸ್.ಐ.)

**ಜಡಿಗೇನಹಳ್ಳಿ :** ಬೆಂಗಳೂರು ಗ್ರಾಮಾಂತರ ಜಿಲ್ಲೆಯೂ ಹೊಸಕೋಟೆ ತಾಲ್ಲೂಕಿನಲ್ಲಿರುವ ಒಂದು ಹಳ್ಳಿ. ಹೊಸಕೋಟೆಯಿಂದ ಈ ಹಳ್ಳಿಗೆ ಹೋಗುವ ಹಾದಿಯಲ್ಲಿ ಉರುಟು ಕಲ್ಲುಗಳಿಂದ ಕೂಡಿರುವ ಒಂದು ದಿಣ್ಣೆ ಅಡ್ಡಲಾಗುತ್ತದೆ. ಅದನ್ನು ದಾಟುತ್ತಿದ್ದಂತೆ ರಸ್ತೆಯ ಎರಡು ಬದಿಯಲ್ಲೂ ಹಲವು ಬೃಹತ್ ಶಿಲಾಸಮಾಧಿಗಳು ಕಣ್ಣಿಗೆ ಬೀಳುತ್ತವೆ. ರಸ್ತೆಯ ಪಕ್ಕದಲ್ಲಿ ಇರುವ ಒಂದು ಹಳ್ಳ ಇಂಥ ಕೆಲವು ಸಮಾಧಿಗಳನ್ನು ಕೊರೆದಿರುವುದನ್ನೂ ನೋಡಬಹುದು. ಗುಂಡಾದ ಕಲ್ಲುಗಳನ್ನಿಟ್ಟು ರಚಿಸಿರುವ 6'-20' ವರೆಗಿನ ವ್ಯಾಸವುಳ್ಳ, ಬೇರೆ ಬೇರೆ ಯಾಗಿ ಅಥವಾ ಒಂದರೊಳಗೊಂದರಂತೆ ಇರುವ ವೃತ್ತಗಳು ಈ ಸಮಾಧಿಗಳ ಮೇಲ್ನೋಟಕ್ಕೆ ತೋರುವ ಹೆಗ್ಗುರುತುಗಳು. ಇವುಗಳಲ್ಲಿ ನಾಲ್ಕರ ಉತ್ಖನನ 1957ರಲ್ಲಿ ನಡೆಯಿತು. ಬೇರೆ ಕೆಲವು ಬೃಹತ್ ಶಿಲಾಸಮಾಧಿಗಳಲ್ಲಿರುವಂತೆ ಇವುಗಳಲ್ಲಿ ಚಪ್ಪಡಿಕಲ್ಲಿನ ಪೆಟ್ಟಿಗೆಯಾಗಲಿ, ದೊಡ್ಡ ಗಾತ್ರದ ಮುಚ್ಚುಗಲ್ಲಾಗಲಿ, ಕಲ್ಲುತುಂಡುಗಳ ರಾಶಿಯಾಗಲಿ ಇಲ್ಲದೆ ಇವು ಕುಣಿ ಸಮಾಧಿಯ ಗುಂಪಿಗೆ ಸೇರಿವೆ. ಆಳವಾದ ಕುಣಿಯಲ್ಲಿ ಮಣ್ಣಿನಿಂದ ತಯಾರಿಸಿದ ಶವಸಂಪುಟವನ್ನು ಇಟ್ಟಿರುವುದು ಇಲ್ಲಿಯ ಬೃಹತ್ ಶಿಲಾಸಮಾಧಿಗಳ ಒಂದು ವೈಶಿಷ್ಟ್ಯ.

ಸಣ್ಣ ವೃತ್ತಗಳಿರುವ ಸಮಾಧಿಗಳಲ್ಲಿ 5'-6' ಆಳದ ಗುಂಡಿಗಳಲ್ಲಿ ಚಿಕ್ಕದಾದ ಸು.3'-4' ಉದ್ದದ ಶವಸಂಪುಟಗಳಿದ್ದುವು. ಅವುಗಳ ಸುತ್ತಲೂ ಬಗೆಬಗೆಯ ಮಣ್ಣಿನ ಪಾತ್ರೆಗಳು, ಕಬ್ಬಿಣದ ಸಾಮಾನುಗಳಿದ್ದುವು. ದೊಡ್ಡ ಸಮಾಧಿಗಳಲ್ಲಿ 12' ಗಿಂತ ಹೆಚ್ಚು ಆಳವಾದ ಒಂದು ದೊಡ್ಡ ಗುಂಡಿ, ಅದರ ತಳದಲ್ಲಿ ಪುನಃ ಒಂದರ ಪಕ್ಕದಲ್ಲೊಂದರಂತೆ ಎರಡು ಕಿರುಗುಂಡಿಗಳು, ಅವುಗಳಲ್ಲೊಂದರಲ್ಲಿ ಶವಸಂಪುಟ, ಕೆಲವು ಮಣ್ಣಿನ ಪಾತ್ರೆಗಳು ಮತ್ತು ಕಬ್ಬಿಣದ ಪದಾರ್ಥಗಳು ಇನ್ನೊಂದರಲ್ಲಿ ವಿವಿಧ ಆಕೃತಿಗಳ ಮತ್ತು ಗಾತ್ರಗಳ ಹಲವಾರು ಮಣ್ಣಿನ ಪಾತ್ರೆಗಳು ತುಂಬಿದ್ದುವು. ತೊಟ್ಟಿಲಿನ ಮಾದರಿಯಲ್ಲಿರುವ 7' ಉದ್ದವಾದ ಕೆಂಪು ಬಣ್ಣದ ಶವಸಂಪುಟಕ್ಕೆ ಎಂಟು ಕಾಲುಗಳು, ಉಬ್ಬಿರುವ ಮುಚ್ಚಳ ಇದ್ದುವು. ಗುಂಡಿಯಲ್ಲಿ ಮೊದಲು ಬತ್ತವನ್ನು ಹರಡಿ ಅದರ ಮೇಲೆ ಶವಸಂಪುಟವನ್ನಿಟ್ಟಿದ್ದಕ್ಕೆ ಕುರುಹುಗಳಿವೆ. ಇಲ್ಲಿ ದೊರೆತಿರುವ ಯಾವ ಶವಸಂಪುಟದಲ್ಲೂ ಅಸ್ಥಿಪಂಜರವಾಗಲಿ, ಶವದ ಇತರ ಕುರುಹುಗಳಾಗಲಿ ಕಂಡುಬಂದಿಲ್ಲದಿರುವುದು ಒಂದು ವಿಚಿತ್ರ. ಕಬ್ಬಿಣದ ಪದಾರ್ಥಗಳಲ್ಲಿ ಕತ್ತಿ, ಚೂರಿ, ಕುಡುಗೋಲು, ಗುದ್ದಲಿ, ಮುಕ್ಕಾಲುಪೀಠ, ಬಾಣಲೆ, ತ್ರಿಶೂಲ ಮುಂತಾದವೂ ಮಣ್ಣಿನ ಪಾತ್ರೆಗಳಲ್ಲಿ ಮಡಕೆಗಳು, ತಟ್ಟೆಗಳು, ಬಟ್ಟಲುಗಳು, ಮುಚ್ಚಳವಿರುವ ಉದ್ದಕತ್ತಿನ ಹೂಜಿಗಳು, ಪಾನಪಾತ್ರೆಗಳು ಮತ್ತು ಆಟಿಕೆಯಂತಿರುವ ಕಿರುಪಾತ್ರೆಗಳೂ ಸೇರಿವೆ. ಇವುಗಳಲ್ಲಿ ಕೆಂಪು ಬಣ್ಣದ ಪಾತ್ರೆಗಳೇ ಹೆಚ್ಚು. ಕಪ್ಪು ಹೊಳಪಿನ ಪಾತ್ರೆಗಳೂ ಉಂಟು. ಬೃಹತ್ ಶಿಲಾಸಮಾಧಿಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಕೆಂಪು-ಕಪ್ಪು ಮಡಕೆಗಳೂ ಇವೆ. ಶವಸಂಪುಟಗಳನ್ನೂ ಇತರ ಪದಾರ್ಥಗಳನ್ನೂ ಕಿರುಕುಂಡಿಗಳಲ್ಲಿ ಜೋಡಿಸಿಟ್ಟು ಮೇಲೆ ಜಿಗುಟಾದ ಜೇಡಿಯ ಮಣ್ಣನ್ನು ಗಿಡಿದು ದೊಡ್ಡ ಗುಣಿಯನ್ನು ತುಂಬಿರುವುದರಿಂದ ಅದನ್ನು ಅಗೆದು ತೆಗೆಯುವುದು ಶ್ರಮಸಾಧ್ಯ. ಇಲ್ಲಿಯ ಸಮಾಧಿಗಳನ್ನು ಬೃಹತ್ ಶಿಲಾಸಮಾಧಿಗಳ ಕಾಲದ ಕಡೆಯ ಭಾಗಕ್ಕೆ ಎಂದರೆ ಸ್ಥೂಲವಾಗಿ ಕ್ರಿ.ಶ. 1-3ನೆಯ ಶತಮಾನಗಳ ಕಾಲಕ್ಕೆ ಸೇರಿಸಬಹುದೆಂದು ಅಭಿಪ್ರಾಯ ಪಡಲಾಗಿದೆ. (ಎಂ.ಎಚ್.)

**ಜಡೆಮುನಿ :** ಕರ್ನಾಟಕದ ಜನಪದ ಜೀವನದ ಕುತೂಹಲಕಾರಿ ಕಲ್ಪನೆಗಳಲ್ಲಿ ಹಾಗೂ ಅತಿಮಾನುಷ ಶಕ್ತಿಗಳಲ್ಲಿ ಜನಪದಕ್ಕಿರುವ ನಂಬಿಕೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಐತಿಹ್ಯಗಳಲ್ಲಿ ಒಂದು. ಜಡೆಮುನಿ ಜನಸಾಮಾನ್ಯರನ್ನು ಅಂಜಿಸಿರುವ ಅಗೋಚರ ಶಕ್ತಿವಿಶೇಷಗಳಲ್ಲಿ ಒಂದಾದರೂ ಅದು ಸಾಮಾನ್ಯ ದೆವ್ವ, ಕೊಳ್ಳಿದೆವ್ವಗಳಿಗಿಂತ ಭಿನ್ನವಾದುದು. ಇವೆರಡಕ್ಕಿಂತ ಉನ್ನತ ಸ್ಥಾನ ಅದಕ್ಕೆ. ಅತೀತಬಲ ಪಡೆದ ದೈವಸ್ವರೂಪಿ ಶಕ್ತಿಯೊಂದು ಜ್ವಾಲೆಯ ರೂಪದಲ್ಲಿ ಆಗಾಗ ಕಾಣಿಸಿಕೊಂಡು ಜನರಿಗೆ ತಲ್ಲಣ ಉಂಟುಮಾಡುವುದು. ಅದಕ್ಕೆ ನೆಲದಲ್ಲಿ ಎಳೆದಾಡುವಷ್ಟು ಉದ್ದನೆಯ ಜಡೆ, ಕಾಂತಿಯುಕ್ತವಾದ ಮೈ, ಅಮಾವಾಸ್ಯೆ, ಹುಣ್ಣಿಮೆಯ ರಾತ್ರಿಗಳಲ್ಲಿ ಅದು ಕೆಲವರ ಕಣ್ಣಿಗೆ ಗೋಚರಿಸುವುದುಂಟು. ಅಂಥ ರಾತ್ರಿಗಳಲ್ಲಿ ಒಂದು ನೆಲೆಯಿಂದ ಹೊರಟು ದೇವಾಲಯಗಳಿರುವ ಸ್ಥಳಗಳಲ್ಲಿ ಸಂಚರಿಸಿ ಬೆಳಗಾಗುವುದರಲ್ಲಿ ತನ್ನ ಮೂಲ ನೆಲೆಯನ್ನು ಸೇರಿಕೊಳ್ಳಬೇಕು. ಇಂಥ ಸಂಚಾರದ ಪ್ರದೇಶವನ್ನು ಮುನಿಸಂಚಾರದ ಪ್ರದೇಶ ಎಂದು ನಿರ್ದಿಷ್ಟವಾಗಿ ಜನಪದರು ಗುರುತಿಸುತ್ತಾರೆ. ಮುನಿ ವಾಸಿಸುವುದು ಸಾಮಾನ್ಯವಾಗಿ ಆಲದ ಮರಗಳಲ್ಲಿ. ರಾತ್ರಿ ಆಲದ ಮರದಿಂದ ವಾದ್ಯಮೇಳಗಳೊಡನೆ ಹೊರಟು ಕೊಳದಲ್ಲಿ ಅಥವಾ ತೊರೆಯಲ್ಲಿ ಮಿಂದು ದೇವಾಲಯಗಳಿಗೆ ಹೋಗಿಬರುವುದು ಮುನಿಯ ಪದ್ಧತಿ. ಮುನಿಯ ಪರಿವಾರವಾದರೂ ಇಂಥ ಅಗೋಚರ ಶಕ್ತಿಗಳೇ. ಈ ಮುನಿಯನ್ನು ಪರಿವಾರ ಪಲ್ಲಕ್ಕಿಯಲ್ಲಿ ಹೊತ್ತು ಸಾಗುವುದೂ ಉಂಟು. ಅದನ್ನು ಕಣ್ಣಾರೆ ಕಂಡಂತೆ ಬಣ್ಣಿಸುವವರೂ ಉಂಟು. ಮುನಿಯನ್ನು ಮನುಷ್ಯರು ನೋಡಬಹುದು. ಆದರೆ ಮುನಿಯ ದೃಷ್ಟಿ ಮನುಷ್ಯರ ಮೇಲೆ ಬಿದ್ದರೆ ಮರಣ ಖಂಡಿತ ಎಂಬ ನಂಬಿಕೆಯಿದೆ. ಆದರೆ ಮುನಿಯೊಡನೆ ಮಾತಾಡಿದವರೂ ಇರುವವರೆಂದು ನಂಬಿಕೆ. ಯಾವುದೋ ಗಂಟನ್ನು ಮರೆತು ಅದನ್ನು ತರಲು ಹೋದಾಗ ಮುನಿಯ ದೃಷ್ಟಿಗೆ ಬಿದ್ದು, ಮುನಿ ಅಂಥ ಅಸಹಾಯಕರನ್ನು ಕ್ಷಮಿಸಿ ಈ ವಿಚಾರದಲ್ಲಿ ಯಾರಿಗೂ ಹೇಳದಂತೆ ಎಚ್ಚರಿಸಿ ಕಳಿಸಿದ ಎಂದು ಹೇಳಲಾಗಿದೆ. ಆದರೆ ಅದನ್ನು ಹೇಳಿಕೊಂಡರು. ಪ್ರಾಣ ಬಿಟ್ಟರೆಂದು ಹೇಳುವ ಜನಜನಿತ ಕಥೆಗಳು ಹಲವಾರು. ಜನಪದ ಜೀವನದಲ್ಲಿ ಜಡೆಮುನಿಯ ಕಲ್ಪನೆ ವಿಚಿತ್ರವಾದುದು. ಮುನಿ ಶಬ್ದ ಯತಿಯೊಬ್ಬನನ್ನು ನಿರ್ದೇಶಿಸುತ್ತದೆ. ಇಲ್ಲಿನ ಕಲ್ಪನೆಯೂ ಋಷಿಯನ್ನೇ ನೆನಪಿಗೆ ತರುತ್ತದೆ. ಅಂಥದೇ ದೈವಿಕ ಆವರಣ ಮುನಿಯ ಸುತ್ತ ಕಲ್ಪಿತವಾಗಿದೆ.

ಬೆಳೆ ಬಂದ ಕಾಲದಲ್ಲಿ ಬೆಳೆದ ಹೊಲದಲ್ಲಿ ಮುನಿಯಪ್ಪನನ್ನು ಪೂಜಿಸುವುದುಂಟು. ಅನೇಕ ಕಡೆಯಲ್ಲಿ ಮುನಿಯಪ್ಪ, ಮುನೇಶ್ವರ ಮುಂತಾದ ಹೆಸರಿನ ದೈವಗಳಿಗೆ ಗುಡಿಗಳನ್ನು ಕಟ್ಟಿ ಆರಾಧಿಸುತ್ತಾರೆ. ಆದರೆ ಈ ಮುನೀಶ್ವರನಿಗೂ ಜಡೆಮುನಿಗೂ ಇರುವ ಸಂಬಂಧ ಅಸ್ಪಷ್ಟ. (ಜಿ.ಎಸ್.ಪಿ.)

**ಜತ್ತಿ, ಬಸಪ್ಪ ದಾನಪ್ಪ :** 1912-2001. ಭಾರತ ಗಣರಾಜ್ಯದ ಮಾಜಿ ಉಪಾಧ್ಯಕ್ಷರು (1974). ಇದಕ್ಕೆ ಮೊದಲು ಒರಿಸ್ಸದ ರಾಜ್ಯಪಾಲರೂ ಪುದುಚೇರಿಯ ಉಪರಾಜ್ಯಪಾಲರೂ ಮೈಸೂರು ರಾಜ್ಯದ ಮಂತ್ರಿಯೂ ಮುಖ್ಯಮಂತ್ರಿಯೂ ಜಮಖಂಡಿ ಸಂಸ್ಥಾನದ ಮುಖ್ಯಮಂತ್ರಿಯೂ ಆಗಿದ್ದರು.

ಈಗಿನ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ (ಆಗ ಸಂಸ್ಥಾನ) ಸಾವಳಗಿ ಗ್ರಾಮದಲ್ಲಿ 1912 ಸೆಪ್ಟೆಂಬರ್ 10ರಂದು ಜನಿಸಿದರು. ತಂದೆ ದಾನಪ್ಪ ಜತ್ತಿ, ತಾಯಿ ಭಾಗವ್ವ. ದಾನಪ್ಪ ಜತ್ತಿಯವರು ಒಬ್ಬ ವ್ಯಾಪಾರಿ. ಅವರ ಮೂವರು ಗಂಡುಮಕ್ಕಳಲ್ಲಿ ಒಬ್ಬರಾದ ಜತ್ತಿಯವರು ಹುಟ್ಟೂರಿನಲ್ಲಿ ಪ್ರಾಥಮಿಕ, ಮಾಧ್ಯಮಿಕ ವ್ಯಾಸಂಗವನ್ನು ಮುಗಿಸಿ ಅನಂತರ ಬಿಜಾಪುರದಲ್ಲಿ ಪ್ರೌಢಶಾಲೆಯ ಶಿಕ್ಷಣ ಪಡೆದರು. ಕೊಲ್ಹಾಪುರದ ರಾಜಾರಾಮ್ ಕಾಲೇಜಿನಲ್ಲಿ ವ್ಯಾಸಂಗಮಾಡಿ ಬಿ.ಎ. ಪದವಿಯನ್ನೂ ಕಾನೂನು

ಕಾಲೇಜಿನಲ್ಲಿ ಕಲಿತು ಎಲ್.ಎಲ್.ಬಿ. ಪದವಿಯನ್ನೂ ಗಳಿಸಿ (1940) ಜಮಖಂಡಿಯಲ್ಲಿ ವಕೀಲರಾಗಿ ಜೀವನ ಆರಂಭಿಸಿದರು (1940-45). ಸಾರ್ವಜನಿಕ ಕ್ಷೇತ್ರ ಪ್ರವೇಶಮಾಡಿ ಜಮಖಂಡಿಯಲ್ಲಿ ಪೌರಸಭೆಯ ಸದಸ್ಯರಾಗಿ ಎರಡು ಬಾರಿ ಆಯ್ಕೆಹೊಂದಿದರಲ್ಲದೆ ಅದರ ಅಧ್ಯಕ್ಷರಾದರು (1940-45). ಜಮಖಂಡಿ ಪ್ರಜಾಪರಿಷತ್ತಿನ ಪ್ರಮುಖ ಕಾರ್ಯಕರ್ತರಲ್ಲಿ ಒಬ್ಬರಾಗಿದ್ದ ಇವರು ಜಮಖಂಡಿಯಲ್ಲಿ ಪ್ರಜಾಪ್ರತಿನಿಧಿ ಸರ್ಕಾರ ಸ್ಥಾಪನೆಯಾದಾಗ ಮಂತ್ರಿಮಂಡಲ ರಚಿಸುವ ಹೊಣೆ ಹೊತ್ತರು. ಭಾರತ ಸ್ವತಂತ್ರವಾದ ಮೇಲೆ ಸಂಸ್ಥಾನಗಳ ಭವಿಷ್ಯದ ಬಗ್ಗೆ ಚರ್ಚೆ ನಡೆಯುತ್ತಿದ್ದಾಗ ದಕ್ಷಿಣ ಸಂಸ್ಥಾನಗಳ ಒಕ್ಕೂಟರಚನೆಯ ಪ್ರಯತ್ನಗಳು



ನಡೆದಿದ್ದುವು. ಜತ್ತಿಯವರು ಜಮಖಂಡಿ ಸಂಸ್ಥಾನಿಕರ ಮನವೊಲಿಸಿ ಭಾರತ ಒಕ್ಕೂಟದಲ್ಲಿ ಆ ಸಂಸ್ಥಾನ ವಿಲೀನಗೊಳ್ಳುವಂತೆ ಮಾಡಲು ಶ್ರಮಿಸಿದರು. ವಿಲೀನಗೊಂಡ ಪ್ರದೇಶಗಳ ಪ್ರತಿನಿಧಿಯಾಗಿ ಜತ್ತಿಯವರು ಬೊಂಬಾಯಿ ವಿಧಾನಸಭೆಗೆ ನಾಮಕರಣ ಹೊಂದಿದರಲ್ಲದೆ ಅಲ್ಲಿಯ ಮುಖ್ಯಮಂತ್ರಿ ಬಿ.ಜಿ.ಖೇರರ ಸಂಸದೀಯ ಕಾರ್ಯದರ್ಶಿಯಾಗಿ ನೇಮಕ ಗೊಂಡರು(1948). 1952ರ ಚುನಾವಣೆಯಲ್ಲಿ ಬೊಂಬಾಯಿ ವಿಧಾನಸಭೆಗೆ ಚುನಾಯಿತರಾಗಿ ಆ ರಾಜ್ಯದ ಆರೋಗ್ಯ ಮತ್ತು ಕಾರ್ಮಿಕ ಖಾತೆಯ ಉಪ ಮಂತ್ರಿಯಾದರು.

1956ರಲ್ಲಿ ರಾಜ್ಯ ಪುನರ್‌ರಚನೆಯಾದ ಅನಂತರ ಜತ್ತಿಯವರು ನೂತನ ಮೈಸೂರು ರಾಜ್ಯದ (ಈಗ ಕರ್ನಾಟಕ) ಭೂ ಸುಧಾರಣಾ ಸಮಿತಿಯ ಅಧ್ಯಕ್ಷರಾಗಿ ನೇಮಕಗೊಂಡರು. ರಾಜ್ಯದ ಭೂ ಸುಧಾರಣಾ ಕಾಯಿದೆಗಳಿಗೆ ಜತ್ತಿ ಸಮಿತಿಯ ವರದಿ ತಳಹದಿಯಾಯಿತು. 1957 ಮತ್ತು 1967ರ ಚುನಾವಣೆಗಳಲ್ಲಿ ಇವರು ರಾಜ್ಯ ವಿಧಾನಸಭೆಗೆ ಆಯ್ಕೆಯಾದರು.

1958ರಲ್ಲಿ ಜತ್ತಿಯವರು ಮೈಸೂರಿನ ವಿಧಾನಮಂಡಲ ಕಾಂಗ್ರೆಸ್ ಪಕ್ಷದ ನಾಯಕರಾಗಿ ಆಯ್ಕೆಯಾಗಿ ರಾಜ್ಯದ ಮುಖ್ಯಮಂತ್ರಿಯಾದರು. 1962ರ ಚುನಾವಣೆಗಳ ಅನಂತರ ರಚಿತವಾದ ನಿಜಲಿಂಗಪ್ಪನವರ ಮಂತ್ರಿಮಂಡಲದಲ್ಲಿ 1965ರವರೆಗೆ ಹಣಕಾಸಿನ ಮಂತ್ರಿಯಾಗಿ, 1968ರ ವರೆಗೆ ಆಹಾರ ಮಂತ್ರಿಯಾಗಿ ಕೆಲಸಮಾಡಿದರು. 1963ರಲ್ಲಿ ಇವರು ಪುದುಚೇರಿಯ ಉಪರಾಜ್ಯಪಾಲರಾಗಿ ನೇಮಕಗೊಂಡರು. 1973ರಲ್ಲಿ ಒರಿಸ್ಸದ ರಾಜ್ಯಪಾಲರಾದರು. 1973-74ರಲ್ಲಿ ಆ ರಾಜ್ಯದಲ್ಲಿ ರಾಷ್ಟ್ರಪತಿ ಆಳಿಕೆ ಜಾರಿಗೆ ಬಂದಾಗ ಜತ್ತಿಯವರು ಅದರ ಆಡಳಿತವನ್ನು ಯಶಸ್ವಿಯಾಗಿ ನಿರ್ವಹಿಸಿದರು. 1974ರಲ್ಲಿ ಭಾರತ ಗಣರಾಜ್ಯದ ಉಪಾಧ್ಯಕ್ಷರಾಗಿ ಚುನಾಯಿತರಾದರು. ಇವರು ಹಂಗಾಮಿ ರಾಷ್ಟ್ರಪತಿ ಯಾಗಿಯೂ ಕಾರ್ಯನಿರ್ವಹಿಸಿದರು (1977). ರಾಜ್ಯ ಸಭೆಯ ಅಧ್ಯಕ್ಷರಾಗಿ ದಕ್ಷತೆಯಿಂದ ಕಾರ್ಯನಿರ್ವಹಿಸಿದರು.

ಜತ್ತಿಯವರಿಗೆ ಅನೇಕ ಗೌರವ ಪ್ರಶಸ್ತಿಗಳು ಸಂದಿವೆ. ಕರ್ನಾಟಕ ವಿಶ್ವವಿದ್ಯಾಲಯ (1974), ಬರ್ಹಾಂಪುರ ವಿಶ್ವವಿದ್ಯಾಲಯ (1977) ಮತ್ತು ಪಂಜಾಬಿನ ಗುರುನಾನಕ್ ವಿಶ್ವವಿದ್ಯಾಲಯಗಳು (1978) ಗೌರವ ಡಾಕ್ಟರೇಟ್ ನೀಡಿವೆ. ಇವಲ್ಲದೇ ಇವರಿಗೆ ರಾಷ್ಟ್ರೀಯ ನಾಗರೀಕ ಪ್ರಶಸ್ತಿ (1990), ಶಾಂತಿ ಏಕತೆ ಪ್ರಶಸ್ತಿ (1991), ಬದುಕನ್ನು ಶ್ರೀಮಂತಗೊಳಿಸುವವರಿಗೆ ನೀಡಲಾಗುವ ವಿಜಯ ರತ್ನ ಪ್ರಶಸ್ತಿ (1992), ಶಿರೋಮಣಿ ಪ್ರಶಸ್ತಿ, ಭಾರತ ಏಕತಾ ಪ್ರಶಸ್ತಿ ಮತ್ತು ಮಾನವ ಸೇವಾ ಪುರಸ್ಕಾರ (1993) ದೊರೆತಿವೆ. 'ನನಗೆ ನಾನೇ ಮಾದರಿ' ಎಂಬುದು ಇವರ ಆತ್ಮಕಥೆ (1989).

ಪಾಂಡುಚೆರಿಯ ಶ್ರೀಮಾತೆಯವರ ಪ್ರಭಾವಕ್ಕೆ ಒಳಗಾಗಿದ್ದ ಜತ್ತಿಯವರು ಮೊದಲಿನಿಂದಲೂ ಆಧ್ಯಾತ್ಮಿಕ ಪ್ರವೃತ್ತಿಯವರಾಗಿದ್ದರು. ಬಸವೇಶ್ವರರ ಉಪದೇಶ ಮತ್ತು ತತ್ತ್ವಗಳ ಪ್ರಚಾರದ ಉದ್ದೇಶದಿಂದ ರಚಿತವಾಗಿದ್ದ ಬಸವ ಸಮಿತಿಗೆ ಜತ್ತಿಯವರು ಪ್ರಾರಂಭದಿಂದಲೂ ಅಧ್ಯಕ್ಷರಾಗಿದ್ದರು. ಸಂಗವ್ವನವರು ಜತ್ತಿಯವರ ಪತ್ನಿ, ಇವರಿಗೆ ಒಬ್ಬ ಪುತ್ರಿ, ಮೂವರು ಪುತ್ರರಿದ್ದಾರೆ. (ಎಸ್.ಡಿ.)

**ಜನ :** ಕರ್ನಾಟಕದಲ್ಲಿ ಸುಮಾರು 5 ಲಕ್ಷ ವರ್ಷಗಳಿಂದಲೂ ಜನ ನೆಲಸಿದ್ದರೆಂಬುದಕ್ಕೆ ಪ್ರಾಗೈತಿಹಾಸಿಕ ಆಧಾರಗಳು ದೊರಕುತ್ತವೆ. ಆದರೆ ಇಲ್ಲಿಯ ಜನ ಇಲ್ಲಿಯೇ ವಿಕಸನ ಹಂತಗಳಲ್ಲಿ ರೂಪುಗೊಂಡವರೆಂಬುದಕ್ಕೆ ಸ್ಪಷ್ಟಾಧಾರಗಳು ದೊರಕುವುದಿಲ್ಲ. ಬೇರೆ ದೇಶಗಳಲ್ಲಿ ವಿಶಿಷ್ಟ ರೂಪಾಂಶಗಳನ್ನುಳ್ಳ ಹಲವು ಜನಾಂಗಗಳು ಸಾಂದ್ರವಾಗಿರುವುದು, ವಿಕಸನ ಹಂತದ ಪಳೆಯುಳಿಕೆಗಳೂ ಹೆಚ್ಚಿಗೆ ದೊರಕಿರುವುದು - ಈ ಕಾರಣಗಳಿಂದ ಬೇರೆ ಬೇರೆ ದೇಶಗಳಿಂದ ಬೇರೆ ಬೇರೆ ಕಾಲಗಳಲ್ಲಿ ವಲಸೆಬಂದ ಹಲವು ಜನಾಂಗಗಳು ಇಂದಿನ ಕರ್ನಾಟಕದ ಜನಸ್ತೋಮಕ್ಕೆ ಹಾಗೂ ಅದರ ವೈವಿಧ್ಯಕ್ಕೆ ಅವಕಾಶ ಮಾಡಿವೆ ಎಂದು ಹೇಳಬಹುದು. ದೇಹದ ಆಕೃತಿ, ಮುಖದ ಮಾಟ, ಬಣ್ಣ ಇತ್ಯಾದಿಗಳನ್ನು ಶಾಸ್ತ್ರೀಯವಾಗಿ ವಿಶ್ಲೇಷಿಸಿ ಇಂದಿನ ವಿಶ್ವದ ಜನಸಮೂಹವನ್ನು ಹಲವು ಬುಡಕಟ್ಟುಗಳಾಗಿ ವಿಂಗಡಿಸಬಹುದೆಂಬುದು ಮಾನವಶಾಸ್ತ್ರಜ್ಞರ ಅಭಿಪ್ರಾಯ. ಅದರ ಆಧಾರದ ಮೇಲೆ ಕರ್ನಾಟಕದ ಜನರ ಅಧ್ಯಯನವನ್ನು ಕೈಗೊಂಡಲ್ಲಿ ಇಲ್ಲಿ ಹಲವು ಬುಡಕಟ್ಟುಗಳ ಜನರಿದ್ದಂತೆ ತೋರುತ್ತದೆ.

ಮೊದಲಾಗಿ ನಿಗ್ರಿಟೋ ಬುಡಕಟ್ಟಿನ ರೂಪಾಂಶಗಳನ್ನು ಇಂದಿನ ಕರ್ನಾಟಕದ ಜನರಲ್ಲಿ ಅಲ್ಲಲ್ಲಿ ಗುರುತಿಸಬಹುದು. ಕುಳ್ಳುದೇಹ, ಕಪ್ಪಾದ ಮೈಬಣ್ಣ, ದೊಡ್ಡ ನಿತಂಬ, ಮುಂಚಾಚಿದ ಮೂತಿ, ಜಜ್ಜಿದಂಥ ಮೂಗು, ಒಂದೊಂದು ಸುರುಳಿಸುರುಳಿಯಾಗಿ ಸುತ್ತಿಕೊಳ್ಳುವ ಗುಂಗುರು ಕೂದಲು ಇವು ನಿಗ್ರಿಟೋ ಬುಡಕಟ್ಟಿನಲ್ಲಿ ಕಂಡುಬರುವ ಸಾಮಾನ್ಯಾಂಶಗಳು. ಈ ಬುಡಕಟ್ಟಿನ ಜನರು ಮಧ್ಯ ಮತ್ತು ದಕ್ಷಿಣ ಆಫ್ರಿಕದಲ್ಲಿ ವಿಶೇಷವಾಗಿ ಕಂಡುಬರುತ್ತಾರೆ. ಮಲಯ, ಫಿಲಿಫೀನ್ಸ್, ನ್ಯೂ ಗಿನಿ, ಅಂಡಮಾನ್ ದ್ವೀಪಗಳಲ್ಲೂ ಈ ಸ್ವರೂಪದ ಕೆಲವು ಆದಿವಾಸಿ ಜನಾಂಗಗಳು ಇರುವುದರಿಂದ, ಬಹು ಪ್ರಾಚೀನ ಕಾಲದಲ್ಲಿ ಎಂದೋ ಈ ಬುಡಕಟ್ಟಿನ ಜನ ಏಷ್ಯದಲ್ಲೂ ಪಸರಿಸಿದ್ದಂತೆ ತೋರುತ್ತದೆ. ಭಾರತದಲ್ಲೂ ಕೇರಳದ ಕಾಡಾರ್ ಜನರಲ್ಲಿ ಹಾಗೂ ಬಿಹಾರದ ರಾಜಮಹಲ್ ಬೆಟ್ಟ ಪ್ರದೇಶಗಳ ಜನರಲ್ಲಿ ಈ ರೂಪಾಂಶಗಳು ಕಂಡುಬರುತ್ತವೆ. ಕರ್ನಾಟಕದಲ್ಲಿ ಈ ರೂಪಾಂಶಗಳೆಲ್ಲವನ್ನೂ ಪೂರ್ಣವಾಗಿ ಪಡೆದಿರುವ ವ್ಯಕ್ತಿಗಳು ಕಂಡುಬರುವುದು ವಿರಳವಾದರೂ ಅವರ ಹಲವಂಶಗಳನ್ನು ಹೊಂದಿರುವವರು ಅಲ್ಲಲ್ಲಿ ಕಾಣಸಿಗುತ್ತಾರೆ. ನಿಗ್ರಿಟೋ ಬುಡಕಟ್ಟಿನ ಜನ ಅತ್ಯಂತ ಪ್ರಾಚೀನ ಕಾಲದಲ್ಲಿ ಇತರರೆಲ್ಲರಿಗಿಂತ ಮೊದಲು ಕರ್ನಾಟಕ ದೇಶಕ್ಕೆ ಕಾಲಿಟ್ಟಿರಬಹುದು. ಸೂಕ್ಷ್ಮಶಿಲಾಯುಗ ಸಂಸ್ಕೃತಿಗಳ ಅಥವಾ ಇದಕ್ಕೂ ತೀರ ಹಿಂದಿನ ಪಟ್ಟೆಚಕ್ಕೆ ಶಿಲಾಯುಧಗಳನ್ನು ಉಪಯೋಗಿಸುತ್ತಿದ್ದ ಜನ ಈ ನಿಗ್ರಿಟೋ ಬುಡಕಟ್ಟಿನವರೇ ಇರಬಹುದೇನೋ ಎನಿಸುತ್ತದೆ. ಆದರೆ ಇದು ಯಾವುದೇ ಸ್ಪಷ್ಟವಾದ ಮಾಹಿತಿಗಳಿಂದ ಸಿದ್ಧವಾಗದೆ ಇರುವ ವಿಷಯ, ಕೇವಲ ಊಹೆ.

ಸುಮಾರು ಕಪ್ಪಾದ ಮೈಬಣ್ಣ, ಎತ್ತರವಲ್ಲದ ನಿಲವು, ಸ್ವಲ್ಪ ಮುಂಚಾಚಿದ ಮೂತಿ, ಕಿರಿದಾದ ಹಣೆ, ದಪ್ಪ ಮೂಗು, ಅಲೆಯಲೆಯಾಗಿ ಹಬ್ಬುವ ಸಾಧಾರಣ ಗುಂಗುರುಕೂದಲು ಈ ವೈಶಿಷ್ಟ್ಯಗಳುಳ್ಳ ಆಸ್ಟ್ರಲಾಯಿಡ್ ಬುಡಕಟ್ಟಿನ ಜನ ಕರ್ನಾಟಕದ ಜನಸಮೂಹದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಮಿಳಿತವಾಗಿದ್ದಾರೆ. ಇಂದಿನ ಸೋಲಿಗ, ಚೆಂಚ, ಕಾಡುಕುರುಬ, ಕೊರಗ, ಮುಂತಾದ ಆದಿವಾಸಿ ಜನಾಂಗಗಳವರು ಈ ಗುಂಪಿಗೆ ಸೇರಿದವರು. ಇತರ ಅನೇಕ ಜಾತಿ ಮತ್ತು ವರ್ಗಗಳಲ್ಲಿ ಬೇರೆ ಬೇರೆ ಪ್ರಮಾಣಗಳಲ್ಲಿ ಈ ಬುಡಕಟ್ಟಿನ ರೂಪಾಂಶಗಳು ಕಂಡುಬರುತ್ತವೆ. ಈ ಬುಡಕಟ್ಟಿನ ಜನ ಮೂಲತಃ ಎಲ್ಲಿಯವರು, ಎಂದು ಕರ್ನಾಟಕಕ್ಕೆ ಬಂದರು ಎಂಬ ವಿಷಯಗಳು ನಿಖರವಾಗಿ ತಿಳಿದಿಲ್ಲ. ಆದರೆ ಆಸ್ಟ್ರೇಲಿಯದ ಮತ್ತು ಆಗ್ನೇಯ ಏಷ್ಯದ ಕೆಲವು ಭಾಗಗಳಲ್ಲಿ ಈ ಬುಡಕಟ್ಟಿನ ಆದಿವಾಸಿಗಳು

ನಿಬಿಡವಾಗಿ ಕಂಡುಬರುವುದರಿಂದ ಈ ಜನ ಅತ್ತಣಿಂದಲೇ ಭಾರತಕ್ಕೆ, ಕರ್ನಾಟಕಕ್ಕೆ ಬಂದಿರಬೇಕೆಂದು ಊಹಿಸಲಾಗಿದೆ. ಇವರ ಆಗಮನ ನಿಗ್ರಿಟೋ ಜನರು ಬಂದು ನೆಲಸಿದ ಅನಂತರ ಆಗಿರಬಹುದು.

ಪೇಲಿಲಿಯೋ ಮೆಡಿಟರೇನಿಯನ್ ರೂಪಾಂಶಗಳನ್ನು ಗಮನಾರ್ಹ ಪ್ರಮಾಣದಲ್ಲಿ ಹೊಂದಿರುವ ಜನ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಸಾಮಾನ್ಯ ಎತ್ತರದ ನಿಲುವು, ಉದ್ದ ತಲೆ, ನೇರ ಮುಖ ಮತ್ತು ಹಣೆ, ಸಾಧಾರಣವಾದ ಮೂಗು, ಹೆಚ್ಚು ಗುಂಗುರಿಲ್ಲದ ಕೂದಲು, ಕಡುಗೆಂಪು ಮೈ ಬಣ್ಣ - ಇವು ಮೆಡಿಟರೇನಿಯನ್ ಬುಡಕಟ್ಟಿನ ವೈಶಿಷ್ಟ್ಯಗಳು. ಇದೇ ರೀತಿಯ ಜನ ಮೆಡಿಟರೇನಿಯನ್ ಸಮುದ್ರದ ಸುತ್ತ ಅದರಲ್ಲೂ ಏಷ್ಯ ಮೈನರ್, ಪಶ್ಚಿಮ ಏಷ್ಯ ಮತ್ತು ಉತ್ತರ ಆಫ್ರಿಕಗಳಲ್ಲಿ ವಿಶೇಷವಾಗಿ ಹರಡಿದ್ದಾರೆ. ಈ ಬುಡಕಟ್ಟಿನ ಜನ ಪ್ರಾಯಶಃ ಆಸ್ಟ್ರಲಾಯಿಡ್ ಜನರ ಅನಂತರ ಕರ್ನಾಟಕಕ್ಕೆ ವಲಸೆ ಬಂದಿರಬೇಕೆಂದು ಊಹೆಯಿದೆ. ಮೆಡಿಟರೇನಿಯನ್ ರೀತಿಯ ಜನರ ಅಸ್ಥಿಪಂಜರಗಳು ಕರ್ನಾಟಕದ ನವಶಿಲಾಯುಗದ ಸಮಾಧಿಗಳಲ್ಲಿ ಕಂಡುಬಂದಿವೆ.

ಕ್ರಿ.ಪೂ.2ನೆಯ ಸಹಸ್ರಮಾನದ ಹೊತ್ತಿಗೆ ಕಕೇಶಿಯನ್ ಬುಡಕಟ್ಟಿಗೆ ಸೇರಿದ ಜನ ಮಧ್ಯಏಷ್ಯ ಪ್ರದೇಶದಿಂದ ಹೊರಟು ಭಾರತದ ವಾಯುವ್ಯ ಭಾಗಕ್ಕೆ ತಲುಪಿದ್ದರೆಂದು ಅನೇಕ ಆಧಾರಗಳಿಂದ ತಿಳಿದುಬಂದಿದೆ. ಎತ್ತರದ ನಿಲುವು, ನೀಟಾದ ಮುಖಮಾಟ, ತೆಳುವಾದ ನೇರಮೂಗು, ನೀಲಿಗಣ್ಣು, ನೇರ ಕೂದಲು, ಬಿಳಿಯ ಬಣ್ಣ - ಈ ವಿಶಿಷ್ಟರೂಪದ ಈ ಜನ ಕರ್ನಾಟಕದಲ್ಲೂ ಹರಡಿದ್ದರೇ ಎಂಬುದನ್ನು ಸುಲಭವಾಗಿ ತಿಳಿಯಲು ಸಾಧ್ಯವಾಗಿಲ್ಲ. ಕ್ರಿ.ಪೂ. ಒಂದನೆಯ ಸಹಸ್ರಮಾನದ ಅಂತ್ಯದಲ್ಲಿ ಉತ್ತರ ಭಾರತದಿಂದ ಸಾಂಸ್ಕೃತಿಕ ಪ್ರಭಾವ ಹಬ್ಬಲಾರಂಭಿಸಿದರೂ ಎಷ್ಟರಮಟ್ಟಿಗೆ ಈ ಸ್ವರೂಪದ ಜನ ಇದಕ್ಕೆ ಕಾರಣರಾದರೆಂದು ಇಂದಿನ ಕರ್ನಾಟಕದ ಜನರ ಮಾನವಶಾಸ್ತ್ರೀಯ ವಿಶ್ಲೇಷಣೆಯಿಂದ ಸ್ಪಷ್ಟವಾಗಿಲ್ಲ.

ಕರ್ನಾಟಕದಲ್ಲಿ ಅಗಲ ತಲೆಯ ಕೆಲವು ಜನರ ವರ್ಗಗಳು ಕಾಣಸಿಗುತ್ತವೆ. ಇವುಗಳಲ್ಲಿ ಅಲ್ಪನಾಯಿಡ್ ಎಂಬುದು ಒಂದು. ಈ ವರ್ಗದ ಜನ ಮಧ್ಯಮ ಎತ್ತರದವರಾಗಿದ್ದು ಸಣ್ಣ ಅಗಲ ತಲೆಯುಳ್ಳವರಾಗಿದ್ದಾರೆ. ತಲೆಯ ಹಿಂಭಾಗ ದುಂಡಗಿರುವುದು ಈ ವರ್ಗದ ಜನರ ವಿಶೇಷ ಲಕ್ಷಣ. ದುಂಡನೆಯ ಮುಖ ಮತ್ತು ಎದ್ದು ಕಾಣುವ ಮೂಗು ಇವರ ಇನ್ನಿತರ ಲಕ್ಷಣಗಳು. ದೇಹದ ಮತ್ತು ಮುಖದ ಕೂದಲು ಹೆಚ್ಚಾಗಿ ಇರುತ್ತದೆ. ಇವರ ಚರ್ಮ ತೆಳುಬಣ್ಣದ್ದಾಗಿರುತ್ತದೆ.

ಇನ್ನೊಂದು ಡಿನೇರಿಕ್ ಗುಂಪು. ಈ ವರ್ಗದವರು ಎತ್ತರವಿದ್ದು ಉದ್ದ ಮುಖದ ಓರೆಯಾದ ಮೂಗಿನವರಾಗಿರುತ್ತಾರೆ. ಸಣ್ಣ ತಲೆಯಿದ್ದು ಅದರ ಹಿಂಭಾಗ ಚಪ್ಪಟೆಯಾಗಿರುತ್ತದೆ. ತಲೆಚಿಪ್ಪು ಎತ್ತರವಿದ್ದು ಹಣೆ ಒಳಸರಿದಿರುತ್ತದೆ. ಚರ್ಮ ಮತ್ತು ಕೂದಲು ಕಪ್ಪಾಗಿರುತ್ತದೆ. ಕರ್ನಾಟಕದ ಕೊಡಗರು ಈ ಗುಂಪನ್ನು ಪ್ರತಿನಿಧಿಸುತ್ತಾರೆ. ಕರ್ನಾಟಕದಲ್ಲಿ ಬಹಳ ಜನ ಈ ಮೇಲಿನ ಎರಡು ಗುಂಪುಗಳ ಗುಣಗಳನ್ನು ಹೊಂದಿರುವುದರಿಂದ ಅವರನ್ನು ಆಲ್ಪಿನೊ-ಡಿನೇರಿಕ್ ಜನವರ್ಗಕ್ಕೆ ಸೇರಿಸಲಾಗುತ್ತದೆ. ಪ್ರಾಯಶಃ ಈ ಜನವರ್ಗಕ್ಕೆ ಕಾರಣರಾದವರು ಕ್ರಿಸ್ತಶಕಾರಂಭದ ಆಸುಪಾಸಿನಲ್ಲಿ, ಎಂದರೆ ಚಾರಿತ್ರಿಕ ಯುಗದ ಆದಿಭಾಗದಲ್ಲಿ, ಭಾರತಕ್ಕೆ ವಲಸೆ ಬಂದ ಶಕರು ಎಂಬುದು ಒಂದು ಊಹೆ. ಹಿಮಾಲಯದ ಉತ್ತರ ತಪ್ಪಲಿನಲ್ಲಿದ್ದ ಈ ಬುಡಕಟ್ಟಿನ ಮೂಲ ಜನ, ಆಫ್ಘಾನಿಸ್ತಾನದ ಸೇಸ್ತಾನ್ ಮೂಲಕ ವಾಯುವ್ಯ ಭಾರತವನ್ನು ಪ್ರವೇಶಿಸಿ, ಅನಂತರ ಭಾರತದ ಇತರೆಡೆಗಳಿಗೂ ಹರಡಿದಂತೆ ತೋರುತ್ತದೆ. ಕರ್ನಾಟಕದಲ್ಲಿ ಕಂಡುಬರುವ ಅಗಲ ತಲೆಯ ಜನವರ್ಗಕ್ಕೂ ಈ ವಲಸೆ ಕಾರಣವಾಗಿರಬಹುದು. ಆದರೆ ಇತ್ತೀಚಿನ ಕೆಲವು ಸಂಶೋಧನೆಗಳಿಂದ ಬೃಹತ್ ಶಿಲಾಸಮಾಧಿ ಸಂಸ್ಕೃತಿಗಳ ಕಾಲದಲ್ಲೂ ಈ ರೂಪಾಂಶವನ್ನು ಹೊಂದಿದ್ದ ಜನ ಇದ್ದಿರಬಹುದೆಂಬುದಕ್ಕೆ ಸಾಕಷ್ಟು ಸಾಕ್ಷ್ಯಗಳಿರುವುದರಿಂದ ಈ ಸಂಬಂಧದ ಸಮಸ್ಯೆ ಜಟಿಲವಾಗಿದೆ.

ಒಟ್ಟಿನಲ್ಲಿ ಕ್ರಿಸ್ತಶಕಾರಂಭದ 3-4 ನೆಯ ಶತಮಾನಗಳ ಹೊತ್ತಿಗೆ ಕರ್ನಾಟಕ ವಿವಿಧ ಬುಡಕಟ್ಟುಗಳ ನೆಲೆವೀಡಾಗಿತ್ತು. ಇಂದು ಈ ನಾಡಿನಲ್ಲಿರುವ ಬಹುಪಾಲು ಜನರ ಮೂಲವನ್ನು ಈ ವಿಧಗಳಲ್ಲಿಯೇ ಕಾಣಬಹುದು.

ಈ ಎಲ್ಲ ವರ್ಗೀಕರಣವನ್ನು ಬಹಳ ಕಡಿಮೆ ಶರೀರದ ಅಳತೆಗಳ ಆಧಾರದ ಮೇಲೆ ಮಾಡಿರುವುದರಿಂದ ಈ ದಿಸೆಯಲ್ಲಿ ಇನ್ನೂ ಸಂಶೋಧನೆಯಾಗಬೇಕಿದೆ. ಎಲ್ಲ ಜಾತಿಗಳ ಮತ್ತು ಗಿರಿಜನರ ಶರೀರದ ಅಳತೆಗಳನ್ನು ತೆಗೆದುಕೊಂಡು ಪರೀಕ್ಷೆ ಮಾಡಿದಾಗ ಮಾತ್ರ ಜನವರ್ಗಗಳ ಬಗ್ಗೆ ಖಚಿತವಾಗಿ ಹೇಳಬಹುದು. ಭಾರತೀಯ ಮಾನವಶಾಸ್ತ್ರ ಸಂಶೋಧನ ಇಲಾಖೆ ಕರ್ನಾಟಕದ ಎಲ್ಲ ರೀತಿಯ ಜನರ ಶರೀರದಳತೆಗಳನ್ನು ತೆಗೆದುಕೊಂಡಿದೆಯಾದರೂ ಅದರ ಫಲಿತಾಂಶ ಇನ್ನೂ ಪ್ರಕಟವಾಗಬೇಕಾಗಿದೆ. ಹೀಗಾಗಿ ಜನವರ್ಗಗಳ ಬಗ್ಗೆ ಹೆಚ್ಚು ಖಚಿತವಾಗಿ ಹೇಳಲು ಸಾಧ್ಯವಾಗಿಲ್ಲ.

ಕೆಲವು ಆದಿವಾಸಿಗಳನ್ನು ಹೊರತುಪಡಿಸಿದರೆ, ಯಾವುದೇ ಒಂದು ಬುಡಕಟ್ಟಿನ ಜನ ಅದರ ಮೂಲ ಸ್ವರೂಪದೊಡನೆ ಇಂದು ಉಳಿದುಕೊಂಡಿಲ್ಲ; ಕಾಲಕ್ರಮದಲ್ಲಿ ಪರಸ್ಪರವಾಗಿ ರಕ್ತಸಂಬಂಧ ಬೆಳೆದು ಇಂದು ಈ ಜನ ಬಹು ಮಿಶ್ರಣದೊಡನೆ ಕಾಣಸಿಕೊಳ್ಳುತ್ತಾರೆ. ಈ ರಕ್ತಸಂಬಂಧ ಯಾವುದೇ ಒಂದು ಜಾತಿ, ಕುಲ ಅಥವಾ ಪಂಥದವರಿಗೆ ಸೀಮಿತವಾಗಿಲ್ಲ. ವರ್ಗವರ್ಗಗಳಲ್ಲಿ ವ್ಯತ್ಯಾಸಗಳು ಕಂಡುಬಂದರೆ, ಅವು ಕೇವಲ ಮಿಶ್ರಣದ ಪರಿಮಾಣದಲ್ಲಿ ಮಾತ್ರ. ಈ ದೃಷ್ಟಿಯಿಂದ ನೋಡಿದಲ್ಲಿ ಜನರನ್ನು ಬುಡಕಟ್ಟಿನ ಆಧಾರದ ಮೇಲೆ ವರ್ಗೀಕರಿಸುವುದು ಕೇವಲ ಶಾಸ್ತ್ರದೃಷ್ಟಿಯಲ್ಲಿ ಮಾತ್ರ ಸಾಧ್ಯ. ಬಹು ಪ್ರಾಚೀನ ಕಾಲದಿಂದಲೂ ವಿವಿಧ ಜನಾಂಗಗಳು ಜೊತೆ ಜೊತೆಯಾಗೇ ವಾಸಿಸುತ್ತಿದ್ದು ಮಿಶ್ರವಾಗುತ್ತಿದ್ದುವೆಂಬುದಕ್ಕೆ ಕರ್ನಾಟಕದ ಪುರಾತನ ನೆಲೆಗಳಲ್ಲಿ ದೊರೆತ ಅಸ್ಥಿಪಂಜರಗಳು ಸಾಕ್ಷ್ಯಗಳಾಗಿವೆ. ಕರ್ನಾಟಕದ ರಾಯಚೂರು ಜಿಲ್ಲೆಯ ಮಸ್ಕಿಯಲ್ಲಿ ಸಿಕ್ಕ ಅಸ್ಥಿಪಂಜರಗಳ ವಿಶ್ಲೇಷಣೆ ಅಲ್ಲಿ ಮೆಡಿಟರೇನಿಯನ್ ಮತ್ತು ಪಶ್ಚಿಮದ ಅಗಲ ತಲೆಯವರ ವರ್ಗಕ್ಕೆ ಸೇರಿದವರು ಇದ್ದರೆಂಬುದನ್ನು ಸೂಚಿಸುತ್ತದೆ. ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆಯಲ್ಲಿ ಸಿಕ್ಕ ಎಲುಬಿನ ಅವಶೇಷಗಳ ಮೇಲಿಂದ ಆ ಜನರನ್ನು ಪೇಲಿಯೊ ಮೆಡಿಟರೇನಿಯನ್ ಮತ್ತು ಆಸ್ಟ್ರಲಾಯಿಡ್ ಗುಣಗಳುಳ್ಳ ಸಮ್ಮಿಶ್ರ ವರ್ಗಕ್ಕೆ ಸೇರಿಸಬಹುದಾಗಿದೆ. ಬ್ರಹ್ಮಗಿರಿಯಲ್ಲಿ ಸಿಕ್ಕ ತಲೆಬುರುಡೆಗಳಲ್ಲಿ ಕೆಲವು ಆಸ್ಟ್ರಲಾಯಿಡ್ ಗುಣಗಳನ್ನೂ ಕೆಲವು ಅಗಲತಲೆಯವರ ಗುಣಗಳನ್ನೂ ಹೊಂದಿವೆ. ಜೇವರಗಿಯಲ್ಲಿ ಸಿಕ್ಕ ತಲೆಬುರುಡೆಯ ಚಿತ್ರವನ್ನು ಮೆಡೋಸ್ ಟೇಲರ್ ಅವರು ಚಿತ್ರದ ರೂಪದಲ್ಲಿ ಪ್ರಕಟಿಸಿದ್ದಾರೆ. ಈ ಚಿತ್ರದ ಮೇಲಿಂದ ಇದು ನೀಗ್ರಾಯಿಡ್ ಗುಂಪಿಗೆ ಸೇರುತ್ತದೆಂದು ಹೇಳಬಹುದು.

ಹೊರನಾಡುಗಳಿಂದ ಕರ್ನಾಟಕದತ್ತ ಹರಿಯುತ್ತಿದ್ದ ಜನವಲಸೆ ಚಾರಿತ್ರಿಕ ಕಾಲದಲ್ಲೂ ಮುಂದುವರಿಯಿತು. ಕ್ರಿಸ್ತಶಕದ 1-2ನೆಯ ಶತಮಾನಗಳಲ್ಲಿ ಗ್ರೀಕೋ-ರೋಮನರು, 7-8-9ನೆಯ ಶತಮಾನಗಳಲ್ಲಿ ಅರಬ್ಬರು, ಪಾರಸೀಕರು, ಸಿಂಹಳೀಯರು ಹಾಗೂ ಪ್ರಾಯಶಃ ಆಗ್ನೇಯ ಏಷ್ಯದವರು,ಮುಂದೆ 12ನೆಯ ಶತಮಾನದ ಅನಂತರದಲ್ಲಿ ತುರ್ಕಿ, ಅರೇಬಿಯ, ಪರ್ಷಿಯ ಮತ್ತಿತರ ಪಶ್ಚಿಮ ಏಷ್ಯ ದೇಶಗಳ ಮೂಲದ ಮುಸಲ್ಮಾನರು, 14ನೆಯ ಶತಮಾನದಿಂದ ಪೋರ್ಚುಗೀಸರು, ಫ್ರೆಂಚರು, ಡಚ್ಚರು, ಬ್ರಿಟಿಷರು ಈ ನಾಡಿನೊಡನೆ ಸಂಪರ್ಕಹೊಂದಿದರು. ಅಲ್ಲದೆ ಬಹಮನೀ, ಬಿಜಾಪುರ ಸುಲ್ತಾನರ ಕಾಲದಲ್ಲಿ ಆಫ್ರಿಕದಿಂದ ಸಿದ್ದಿಗಳು ಕರ್ನಾಟಕಕ್ಕೆ ವಲಸೆ ಬಂದರು. ಈ ವಿವಿಧ ಮೂಲಗಳವರು ಕರ್ನಾಟಕದ ಜನಸ್ತೋಮದಲ್ಲಿ ಒಂದಲ್ಲ ಒಂದೆಡೆ ಬೆರೆತಿದ್ದಾರೆ. ಆದರೆ ಇದು ಗಮನಾರ್ಹ ಪ್ರಮಾಣದಲ್ಲೇನೂ ಆಗಿಲ್ಲವೆಂದು ತೋರುತ್ತದೆ.

ದ್ರಾವಿಡ, ಆರ್ಯ ಎಂಬ ಬೇರೆಬೇರೆ ಜನವರ್ಗಗಳು ಇವೆ ಎಂಬಕಲ್ಪನೆ ಕೆಲವೆಡೆ ಇದೆ. ಮಾನವಶಾಸ್ತ್ರಜ್ಞರ ದೃಷ್ಟಿಯಲ್ಲಿ ದ್ರಾವಿಡ, ಆರ್ಯ ಎಂಬುವು ಕೇವಲ ಭಾಷಿಕ ಗುಂಪುಗಳನ್ನು ಹೆಸರಿಸುತ್ತವೆಯೇ ಹೊರತು ಆ ವರ್ಗದ ಭಾಷೆಗಳನ್ನು ಆಡುವವರ ದೇಹಮಾಟದಲ್ಲಿರುವ ವ್ಯತ್ಯಾಸವನ್ನು ಸೂಚಿಸುವುದಿಲ್ಲ. ಒಂದೇ ರೀತಿಯ ದೇಹಮಾಟದ ವ್ಯಕ್ತಿಗಳು ಭಾಷೆಯನ್ನು ಆಡುತ್ತಾರೆಂಬುದಾಗಲಿ, ಒಂದೇ ಭಾಷೆಯನ್ನು ಆಡುವ ಜನ ಒಂದೇ ರೀತಿಯ ದೇಹಮಾಟವನ್ನು ಹೊಂದಿರುತ್ತಾರೆಂಬುದಾಗಲಿ ಸುಸಂಬದ್ಧ ತಿಳಿವಳಿಕೆಯಲ್ಲ.

ಈಗೀಗ ಶಾರೀರಿಕ ಮಾನವಶಾಸ್ತ್ರಜ್ಞರು ನಿಖರವಾದ ಮತ್ತು ಖಚಿತವಾಗಿ ಗುರುತಿಸಬಲ್ಲ ಲಕ್ಷಣಗಳನ್ನು ಆಧರಿಸಿ ಜನರನ್ನು ವರ್ಗೀಕರಿಸುತ್ತಾರೆ. ಮುಖ್ಯವಾಗಿ ರಕ್ತಗುಂಪುಗಳು ಮತ್ತು ಕೈ ಬೆರಳು ಮತ್ತು ಕೈಗಳ ಮುದ್ರೆಗಳ ಆಧಾರದ ಮೇಲಿಂದ ಜನರನ್ನು ವರ್ಗೀಕರಿಸುವುದು ಕಂಡುಬರುತ್ತದೆ. ಇದಲ್ಲದೆ ಇನ್ನಿತರ ಜೈವಿಕ ಲಕ್ಷಣಗಳಾದ ಅಸಾಮಾನ್ಯ ಹೆಮೊಗ್ಲೋಬಿನ್‌ಗಳು, ಸಿಕಲ್ ಸೆಲ್ ಹೆಮೊಗ್ಲೋಬಿನ್, ಟ್ರಾನ್ಸ್‌ಫರಿನ್‌ಗಳು, ಪ.ಟಿ.ಸಿ. ರುಚಿ ನೋಡುವುದು ಮತ್ತು ಬಣ್ಣಗುರುಡತನ - ಇವುಗಳ ಆಧಾರದ ಮೇಲಿಂದ ಕೂಡ ಜನರನ್ನು ವಿಭಾಗಿಸಬಹುದು. ಈ ದಿಶೆಯಲ್ಲಿ ಹೆಚ್ಚಿನ ಅಧ್ಯಯನ ನಡೆದಿಲ್ಲವಾದ್ದರಿಂದ ಇದರ ಬಗ್ಗೆ ಖಚಿತವಾಗಿ ಹೇಳುವುದು ಕಷ್ಟ. ಭಾರತೀಯ ಮಾನವಶಾಸ್ತ್ರ ಸಂಶೋಧನ ಇಲಾಖೆ ಮತ್ತು ಕರ್ನಾಟಕ ವಿಶ್ವವಿದ್ಯಾಲಯದ ಮಾನವಶಾಸ್ತ್ರ ವಿಭಾಗ ಈ ದಿಶೆಯಲ್ಲಿ ಕೆಲಸ ಮಾಡುತ್ತಿವೆ.

ರಕ್ತಗುಂಪುಗಳಲ್ಲಿ ಕೂಡ ಅನೇಕ ವಿಧಗಳಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ABO, Rh, MNS ಮತ್ತು ಲೀವಿಸ್ ಗುಂಪುಗಳು. ABO ರಕ್ತಗುಂಪುಗಳ ಬಗ್ಗೆ ಆಳವಾದ ಸಂಶೋಧನೆ ಮಾಡುವವರೆಗೆ ಏನೂ ಹೇಳಲಿಕ್ಕಾಗುವುದಿಲ್ಲ. Rh ರಕ್ತ ಗುಂಪುಗಳಲ್ಲಿ ಮುಖ್ಯವಾಗಿ CDe (Ri) ಗುಂಪು ಹೆಚ್ಚಾಗಿರುವುದು ಕಂಡುಬಂದಿದೆ. CDE (r) ಗುಂಪು ಆದಿವಾಸಿಗಳಲ್ಲಿ ಕಂಡುಬಂದಿದೆ. ಚೆಂಚರಲ್ಲಿ ಲೀವಿಸ್ ಪಾಸಿಟಿವ್ ಸೇ.9.2ರಷ್ಟಿದೆ. ಪಿ.ಟಿ.ಸಿ.ಯನ್ನು 70ರಷ್ಟು ಜನರು ರುಚಿ ನೋಡಬಲ್ಲವರಾಗಿದ್ದಾರೆ. ಅಸಾಮಾನ್ಯ ಹೆಮೊಗ್ಲೋಬಿನ್‌ಗಳು ಕರ್ನಾಟಕದ ಜನರಲ್ಲಿ ಇನ್ನೂ ಕಂಡುಬಂದಿಲ್ಲ. ಸಿಕಲ್ ಸೆಲ್ ಹೆಮೊಗ್ಲೋಬಿನ್‌ಗಳು ಆದಿವಾಸಿ ಜನಾಂಗಗಳಲ್ಲಿ ಕಂಡುಬಂದಿವೆ.

ಹೀಗೆ ಆಧುನಿಕ ಗುಣಗಳ ಆಧಾರದ ಮೇಲೆ ಜನರ ವರ್ಗೀಕರಣ ಮಾಡುವ ಸಂಶೋಧನೆಯ ಕೆಲಸವನ್ನು ಕೆಲವೇ ಗುಂಪುಗಳ ಬಗ್ಗೆ ಮಾಡಿರು ವುದರಿಂದ ಎಲ್ಲ ಜನರ ಬಗ್ಗೆ ಇಂಥ ವರ್ಗೀಕರಣ ಬಹಳ ಕಷ್ಟ. (ಯು.)

**ಜನಪದ :** ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಿಂದ ಪ್ರಕಟವಾಗುತ್ತಿರುವ ಕನ್ನಡ ಮಾಸಪತ್ರಿಕೆ. ಮಾರ್ಚ್ 1966ರಲ್ಲಿ ಪ್ರಾರಂಭವಾಯಿತು. ಹಿಂದೆ ವಾರ ಪತ್ರಿಕೆಯಾಗಿ ಪ್ರಕಟವಾಗುತ್ತಿತ್ತು. ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಮುಖ್ಯಾಧಿಕಾರಿ ಪತ್ರಿಕೆಯ ಪ್ರಧಾನ ಸಂಪಾದಕರಾಗಿಯೂ ಒಬ್ಬ ಹಿರಿಯ ಸಹಾಯಕ ನಿರ್ದೇಶಕರು ಸಂಪಾದಕರಾಗಿಯೂ ಇರುವರು. ರಾಜ್ಯದ ಅಭಿವೃದ್ಧಿ ಚಟುವಟಿಕೆಗಳ ಪ್ರಕಟಣೆಗೆ ಮೀಸಲಾದ ಈ ಪತ್ರಿಕೆ ಸರ್ಕಾರದ ನೀತಿ – ನಿರ್ಣಯಗಳು ಮತ್ತು ಮಂಜೂರಾತಿಗಳು ಹಾಗೂ ಕಾರ್ಯಕ್ರಮಗಳನ್ನು ಪರಿಚಯ ಮಾಡಿಕೊಡುತ್ತದೆ. ಅಭಿವೃದ್ಧಿ ಯೋಜನೆಗಳು, ಪ್ರಗತಿಪರ ರೈತರು, ಪ್ರಗತಿಪರ ಕೃಷಿಕ್ಷೇತ್ರಗಳು, ವ್ಯವಸಾಯ ತಿಳಿವಳಿಕೆ, ಕುಟುಂಬ ಯೋಜನೆ, ಉಳಿತಾಯ, ಗೃಹಕೈಗಾರಿಕೆ ಮುಂತಾದ ವಿಷಯಗಳ ಮೇಲೆ ಸರಳವಾದ ಭಾಷೆಯಲ್ಲಿ ಚಿತ್ರ ಮತ್ತು ಅಂಕಿಅಂಶಸಹಿತವಾದ ಲೇಖನಗಳನ್ನು ಪ್ರಕಟಿಸುತ್ತದೆ. (ಪಿ.ಕೆ.ಪಿ.)




**ಜನಪದ ಆಟಗಳು :** ಹೆಚ್ಚಾಗಿ ಗ್ರಾಮೀಣ ಪರಿಸರದಲ್ಲಿ ಕಂಡು ಬರುವ, ಮನೋರಂಜನೆಯೇ ಪ್ರಮುಖ ಉದ್ದೇಶವಾಗುಳ್ಳ ಅನೇಕ ಬಗೆಯ ಜನಪದ ಆಟಗಳು ಕರ್ನಾಟಕದಲ್ಲಿ ಪ್ರಚಲಿತವಿವೆ. ಈ ಆಟಗಳನ್ನು ಒಳಾಂಗಣ ಆಟಗಳು, ಹೊರಾಂಗಣ ಆಟಗಳು ಎಂದು ವಿಭಾಗಿಸಿಕೊಳ್ಳಬಹುದು.

**ಒಳಾಂಗಣ ಆಟಗಳು :** ಕರ್ನಾಟಕದಲ್ಲಿ ಪ್ರಚಲಿತವಿರುವ ಒಳಾಂಗಣ ಆಟಗಳಲ್ಲಿ ಇತ್ತೀಚೆಗೆ ಬಳಕೆಗೆ ಬಂದಿರುವ ಇಸ್ಪೀಟನ್ನು ಬಿಟ್ಟರೆ, ಪಗಡೆ ಮತ್ತು ಚದುರಂಗ ಜನಪ್ರಿಯವಾಗಿವೆ. ಈ ಆಟಗಳು ಭಾರತದ ಎಲ್ಲೆಡೆಯೂ ಕಂಡುಬರುವಂಥವು. ಹಿಂದೆ ಕರ್ನಾಟಕದಲ್ಲಿ ವಿಶೇಷವಾಗಿ ಪ್ರಚಾರದಲ್ಲಿದ್ದ ಇಸ್ಪೀಟ್ ರೀತಿಯ ಗಂಜೀಫ (ನೋಡಿ) ಎಂಬ ಆಟ ಈಗ ಎಲ್ಲೋ ಅಪರೂಪವಾಗಿ ಕಾಣಸಿಗುತ್ತದೆ. ಕರ್ನಾಟಕದಲ್ಲಿ ವಿಶೇಷವಾಗಿ ಪ್ರಚಲಿತವಾಗಿರುವ, ಸಾಮಾನ್ಯವಾಗಿ ಕಿರಿಯರೇ ಭಾಗವಹಿಸುವ ಕೆಲವು ಆಟಗಳು ಹೀಗಿವೆ.



ವಿವಿಧ ಮಾದರಿಯ ಚನ್ನೆಮಣೆಗಳು

**ಅಣ್ಣೇಕಲ್ಲು :** ಹೆಣ್ಣುಮಕ್ಕಳ ಆಟ. ಇದಕ್ಕೆ ಗಜ್ಜುಗದ ಗಾತ್ರದ ಕಲ್ಲುಗಳು ಬೇಕು. ಇಬ್ಬರು ಅಥವಾ ಹೆಚ್ಚು ಜನ ಆಡಬಹುದು. ಒಬ್ಬೊಬ್ಬರಿಗೆ ಐದೈದು ಕಲ್ಲುಗಳು. ಇದರಲ್ಲಿ ವ್ಯತ್ಯಾಸ ಮಾಡಿಕೊಳ್ಳಬಹುದು. ಎಲ್ಲರ ಕಲ್ಲುಗಳನ್ನೂ ಒಟ್ಟಿಗೆ ಇಟ್ಟು ಯಾರಾದರೊಬ್ಬರು ಆಟ ಪ್ರಾರಂಭಿಸಬೇಕು. ಆಮೇಲೆ ಕುಳಿತಿರುವವರಲ್ಲಿ ಅಪ್ರದಕ್ಷಿಣವಾಗಿ ಆಟ ಮುಂದುವರಿಯುತ್ತದೆ. ಕಲ್ಲುಗಳನ್ನೆಲ್ಲ ಅನುಕೂಲವಾದಷ್ಟು ಎತ್ತರಕ್ಕೆ ಎರಡೂ ಅಂಗೈಗಳಿಂದ ಮೇಲೆಸೆದು ಮುಂಗೈಮೇಲೆ ಆಟದ ನಿಬಂಧನೆಯ ಪ್ರಕಾರ ಒಂದೋ ಎಷ್ಟೋ ಆತುಕೊಂಡು ಉಳಿದವನ್ನು ಕೆಳಗೆ ಬೀಳಬಿಡಬೇಕು. ಕೆಲವು ಬಗೆಯ ಆಟದಲ್ಲಿ ಕೈಮೇಲಾಗಲಿ, ನೆಲದ ಮೇಲಾಗಲಿ ಮೂರು ಕಲ್ಲು ಇರಲು ಅವಕಾಶವಿಲ್ಲ. ಇದನ್ನು 'ಮೂಸ' ಎನ್ನುತ್ತಾರೆ. ಮೂಸವಾದರೆ ಆಟ ಹೋಯಿತು. ಆಡುವುದರಲ್ಲೂ ವೈವಿಧ್ಯವಿದೆ. ಕಲ್ಲುಗಳನ್ನು ಮೇಲೆಸೆದು ಒಂದು ಮುಂಗೈ ಮೇಲೆಮಾಡಿ ಕಲ್ಲುಗಳನ್ನು ಮಾರ್ಗಮಧ್ಯದಲ್ಲಿ ಮೇಲಿನಿಂದ ಹಿಡಿಯಬೇಕು. ಇದಕ್ಕೆ ಸೆಣಪಿ ಎನ್ನುತ್ತಾರೆ.ಒಂದು ಕಲ್ಲನ್ನು ಮಾತ್ರ ಮುಂಗೈ ಮೇಲೆ ಆತುಕೊಂಡು ಮತ್ತೆ ಅದನ್ನು ಬೀಳಿಸದಂತೆ ಮೇಲೆಸೆದು ಅಂಗೈಯಲ್ಲಿ ಆನಬೇಕು. ಯಾವ ಸಂದರ್ಭದಲ್ಲೇ ಬಿಟ್ಟರೂ ಆಟ ಹೋಯಿತು. ಕಲ್ಲನ್ನು ಮತ್ತೆ ಮೇಲೆಸೆದು ಅದು ಕೆಳಗೆ ಬೀಳುವಷ್ಟರಲ್ಲಿ ನೆಲದಲ್ಲಿ ಬಿದ್ದಿರುವ ಕಲ್ಲುಗಳಲ್ಲಿ ಒಂದನ್ನು ಎತ್ತಿಕೊಂಡು ಮೇಲಿನದನ್ನು ಆನಬೇಕು. ತಪ್ಪಿದರೆ ಆಟ ಹೋಯಿತು. ನೆಲದ ಮೇಲೆ ಇತರ ಕಲ್ಲುಗಳನ್ನು ಅಲ್ಲಾಡಿಸಿದರೂ ಆಟ ಹೋಯಿತು. ಹೀಗೆ ಒಂದು ಕಲ್ಲಿಂದ ಒಂದೊಂದೇ ಕಲ್ಲಿನಂತೆ ಗೆಲ್ಲುತ್ತ, ಒಂದೂ ಸೀಬೀಬಿ, ಎರಡೂ ಗರಡಾಳ, ಮೂರೂ ಮುತ್ತಿನ ಚೆಂಡು, ನಾಕೂ ನಾಗಪ್ಪ, ಐದೂ ಪಂಚಾಂಗ, ಆರೂ ದಾಳಿಂಬೆ, ಏಳೂ ಬೇಳೆ, ಎಂಟೂ ರಾಯರ ಗಂಟೆ, ಒಂಬೈನೋಲ್ಲ ಎಂದು ಹೇಳುತ್ತ ಇರುವ ಹತ್ತು ಕಲ್ಲುಗಳನ್ನೂ ಇಬ್ಬರಿದ್ದರೆ ಒಬ್ಬೊಬ್ಬರಿಗೆ ಐದು ಕಲ್ಲುಗಳಂತೆ, ಗೆದ್ದರೆ ಆಟಗಾತಿ ಗೆದ್ದಂತಾಯಿತು. ಆಮೇಲೆ ಮುಂದಿನವಳ ಆಟ. ಕಲ್ಲಿನ ಸಂಖ್ಯೆಯಲ್ಲಿ ಆನುವುದರ ಭಂಗಿಯಲ್ಲಿ, ಗೆದ್ದ ಮೇಲೆ ಸೋತವರಿಗೆ ವಿಧಿಸುವ ಶಿಕ್ಷೆಯಲ್ಲಿ, ಇತರ ನಿಯಮಗಳಲ್ಲಿ ವೈವಿಧ್ಯವಿದೆ.

**ಹುಣಿಸೆ ಬೀಜದ ಆಟ :** ಇದಕ್ಕೆ ಸಾಮಾನ್ಯವಾಗಿ ಇಪ್ಪತ್ತು ಇಪ್ಪತ್ತು ಹುಣಿಸೇಬೀಜಗಳು ಬೇಕು; ಹಾಲುವಾಣದ ಬೀಜಗಳೂ ಆಗಬಹುದು.

ಕೆಲವರು ಕವಡೆಗಳನ್ನೂ ಉಪಯೋಗಿಸುತ್ತಾರೆ. ಇಬ್ಬರು ಅಥವಾ ಹೆಚ್ಚು ಜನ ಆಡಬಹುದು. ಬೀಜಗಳನ್ನೆಲ್ಲ ಬೊಗಸೆಯಲ್ಲಿ ಸೇರಿಸಿ ನೆಲದ ಮೇಲೆ ಚೆಲ್ಲುವುದು; ಆಮೇಲೆ ಮತ್ತೊಂದು ಬೀಜ ಅಲ್ಲಾಡದಂತೆ ಒಂದಕ್ಕೊಂದು ತಾಟಿಸುವುದು - ಹೀಗೆ ತಾಟಿಸಿದ ಎರಡು ಬೀಜಗಳನ್ನು ಗೆದ್ದಂತೆ. ಗುರಿ ತಪ್ಪದಿರುವ ತನಕ ಅಥವಾ ಇತರ ಬೀಜಗಳು ಅಲ್ಲಾಡದಿರುವ ತನಕ ಆಟ ಮುಂದುವರಿಯುತ್ತದೆ. ತಪ್ಪಿದಲ್ಲಿ ಬೇರೆಯವರ ಆಟ. ಎಲ್ಲವನ್ನೂ ಗೆದ್ದಮೇಲೆ ತಮ್ಮ ತಮ್ಮ ಪಾಲಿಗೆ ಬಂದ ಬೀಜಗಳನ್ನು ಎಣಿಸಿದರೆ ಎಷ್ಟು ಕಡಿಮೆಯಾಗಿದೆಯೋ ಅಷ್ಟು ಸೋತಂತೆ. ಹೆಚ್ಚಾಗಿದ್ದರೆ ಅಷ್ಟು ಗೆದ್ದಂತೆ. ಮುಂದಿನ ಆಟಕ್ಕೆ ಇಬ್ಬರೂ ಸಮನಾಗಿ ಬೀಜಗಳನ್ನು ಹಾಕಬೇಕು. ಇದರ ಪರಿಣಾಮವಾಗಿ ಆಟದ ಕೊನೆಯಲ್ಲಿ ಯಾರಾದರೂ ಸೋಲಬಹುದು.



ಚನ್ನೆಮಣೆ ಆಟಕ್ಕೆ ಬಳಸುವ ವಿವಿಧ ಕಾಳುಗಳು

**ಸರಿಬೆಸ :** ಇದನ್ನು ಸಾಮಾನ್ಯವಾಗಿ ಇಬ್ಬರು ಅಡಕೆ ಇಟ್ಟುಕೊಂಡು ಆಡುತ್ತಾರೆ. ಸರಿ ಬೆಸ ಎಂದರೆ ಸಮ, ವಿಷಮ - ಎಂದರ್ಥ. ಮದುವೆಮನೆಗಳಲ್ಲಿ ಈ ಆಟ ಹೆಚ್ಚು. ಇಬ್ಬರು ತಮ್ಮಲ್ಲಿರುವ ಅಡಕೆಗಳಲ್ಲಿ ಇಷ್ಟಬಂದಷ್ಟನ್ನು ಒಂದು ಮುಷ್ಟಿಯಲ್ಲಿ ಅವಿತಿಟ್ಟುಕೊಂಡು ಸರಿಯೊ ಬೆಸವೊ ಎಂದು ಕೇಳಬೇಕು. ಎದುರಾಳಿ ಊಹಿಸಿ ಸರಿ ಇಲ್ಲವೇ ಬೆಸ ಎನ್ನಬೇಕು. ಎಣಿಸಿ ನೋಡಿದಾಗ ಹೇಳಿದಂತೆ ಸರಿಯೋ ಅಥವಾ ಬೆಸವೋ ಆಗಿದ್ದರೆ ಹೇಳಿದವರಿಗೆ ಅಷ್ಟು ಅಡಕೆಯನ್ನು ಕೊಟ್ಟುಬಿಡಬೇಕು. ತಪ್ಪಾಗಿದ್ದರೆ ಹೇಳಿದವರು ಅಷ್ಟು ಅಡಕೆಯನ್ನು ಕಟ್ಟಿಕೊಡಬೇಕು. ಅನಂತರ ಆಟ ಬದಲಾವಣೆ, ಮೊದಲು ತೋರಿಸುತ್ತಿದ್ದವರು ಈಗ ಹೇಳಬೇಕು. ಹೀಗೆ ತಮ್ಮಲ್ಲಿರುವ ಅಡಕೆಗಳನ್ನು ಸೋಲುವ ತನಕ ಆಟವಾಡಬಹುದು.

**ಉದ್ದಿನ ಮೂಟೆ ಆಟ:** ಇದನ್ನು ಆಡಲು ಎರಡು ಕೈಗಳೇ ಸಾಕು. ಪುಟ್ಟ ಮಕ್ಕಳು ಐದಾರು ಜನ ಸೇರಿ ಒಟ್ಟಿಗೆ ತಮ್ಮ ತಮ್ಮ ಎರಡೂ ಕೈಮುಷ್ಟಿಗಳನ್ನು ಒಂದರಮೇಲೊಂದು ಜೋಡಿಸಿ ಹಿಡಿದುಕೊಳ್ಳಬೇಕು. ಇವೆಲ್ಲವೂ ಮೂಟೆಗಳು (ಮೂಟೆ). ಮಗುವೊಂದು ತನ್ನ ಒಂದು ಕೈ ಮುಷ್ಟಿಯನ್ನು ಮಾತ್ರ ಮೇಲಿಟ್ಟು ಇನ್ನೊಂದು ಕೈ ತರ್ಜನೀ ಬೆರಳಿಂದ ಇದೇನು ಮೂಟೆ, ಇದೇನು ಮೂಟೆ ಎಂದು ಹೇಳಬೇಕು. ಒಂದೊಂದು ಮಗುವೂ ತನ್ನ ಮೂಟೆ ಉದ್ದಿನದೊ, ಹೆಸರಿನದೊ, ಕಡಲೆಯದೊ, ತಡಗುಣಿಯದೊ ಎಂದು ಹೇಳಬೇಕು. ಆಮೇಲೆ ಮೂಟೆಗಳ ಸಾಲಿಗೆ ಎಣ್ಣೆ ಹಚ್ಚಿದಂತೆಯೂ ಮತ್ತು ಉಶ್ ಉಶ್ ಎಂದು ನೀರು ಹುಯ್ದಂತೆ ನಟಿಸಿ, ಒರಸಿ ಚಿನ್ನದ ಕತ್ತೀಲಿ ಹೊಡೆಯಾನೊ ಬೆಳ್ಳಿ ಕತ್ತೀಲಿ ಹೊಡೆಯಾನೊ ಎಂದು ಹೇಳಿ ಕೈಬೀಸುವಷ್ಟರಲ್ಲಿ ಎಲ್ಲರೂ ತಮ್ಮತಮ್ಮ ಕೈಗಳನ್ನು ಬೆನ್ನ ಹಿಂದೆ ಬಚ್ಚಿಟ್ಟುಕೊಳ್ಳಬೇಕು. ಈಗ ಆಟ ಮತ್ತೊಂದು ಮುಖ್ಯ ತಿರುವಿಗೆ ಬಂದು ನಿಲ್ಲುತ್ತದೆ. ದೊಡ್ಡಮಗು ಪ್ರತಿಯೊಬ್ಬರನ್ನೂ ಪ್ರಶ್ನೆ ಕೇಳುತ್ತದೆ. ಕೈಕಾಲೆಲ್ಲ ಎಲ್ಲಿಗೆ ಹೋದೊ? ಸಂತೆಗೆ ಹೋದೊ, ಸಂತೇನ್ ಕೊಡ್ತು? ಕಬ್ಬು ಕೊಡ್ತು, ಕಬ್ಬೇನ್ ಮಾಡ್ದೆ? ತಿಂದು ಸಿಪ್ಪೆ ತಿಪ್ಪೆಗೆ ಹಾಕ್ದೆ, ತಿಪ್ಪೇನ್ ಕೊಡ್ತು? ಗೊಬ್ಬರ ಕೊಡ್ತು, ಗೊಬ್ಬರ ಏನ್ ಮಾಡ್ದೆ? ಹೊಲಕ್ಹಾಕ್ದೆ, ಹೊಲ ಏನ್ ಕೊಡ್ತು? ಹುಲ್ಲು ಕೊಡ್ತು, ಹುಲ್ಲೇನ್ ಮಾಡ್ದೆ? ಹಸೀಗ್ಹಾಕ್ದೆ, ಹಸೇನ್ ಕೊಡ್ತು? ಹಾಲ್ ಕೊಡ್ತು, ಹೀಗೆ ಪ್ರಶ್ನೆ ಅದಕ್ಕೆ ಉತ್ತರ. ಒಂದೊಂದು ಮಗುವೂ ಉತ್ತರ ಕೊಡುತ್ತ ಹೋಗಿ ಕೊನೆಗೆ ಯಾವುದೋ ಒಂದು ರಸಸನ್ನಿವೇಶದಲ್ಲಿ ಚಮತ್ಕಾರದ ಉತ್ತರ ಬಂದಾಗ ಎಲ್ಲರೂ ನಗುವರು. ಅಲ್ಲಿಗೆ ಆಟ ಮುಕ್ತಾಯವಾಗುತ್ತದೆ.

**ಹರಳುಮಣೆ ಆಟ :** ಇದಕ್ಕೆ ಅಳಗುಳಿಮಣೆ ಆಟ, ಚನ್ನೆಮಣೆ ಆಟ ಎಂಬ ಹೆಸರುಗಳೂ ಇವೆ. ಆಟವಾಡಲು ಒಂದೊಂದು ಸಾಲಿನಲ್ಲಿ ಏಳು ಏಳು ಪುಟ್ಟ ಬೋಗುಣಿಗಳಂಥ ಎರಡು ಸಾಲು ಗುಳಿಗಳುಳ್ಳ ಸುಮಾರು ಐದಾರು ಅಂಗುಲ ಅಗಲ, ಹದಿನೈದು ಹದಿನಾರು ಅಂಗುಲ ಉದ್ದವುಳ್ಳ ಆಯತಾಕಾರದ ಒಂದು ಮರದ ಮಣೆ ಮತ್ತು ಒಂದು ಗುಳಿಗೆ ಐದರಂತೆ ಹದಿನಾಲ್ಕು ಗುಳಿಗಳಿಗೆ ಎಪ್ಪತ್ತು ಹುಣಿಸೆಬೀಜ ಬೇಕು. ಒಂದೊಂದು ಕಡೆಗೆ ಒಬ್ಬೊಬ್ಬರಂತೆ ಇಬ್ಬರಾಡುವ ಆಟದಲ್ಲಿ ಮೊದಲು ಎಲ್ಲ ಮನೆಗಳಿಗೂ (ಗುಳಿ) ಐದೈದರಂತೆ ಹರಳು ತುಂಬಿ ಯಾರಾದರೊಬ್ಬರು ಆಟ ಮೊದಲು ಮಾಡಬೇಕು. ಯಾವುದಾದರೂ ಒಂದು ಮನೆಯ ಐದು ಹರಳನ್ನು ತೆಗೆದುಕೊಂಡು ಮುಂದಿನ ಮನೆಗಳಿಗೆ ಒಂದೊಂದರಂತೆ ಹಾಕಬೇಕು. ಮುಗಿದಾಗ ಮುಂದಿನ ಮನೆಯನ್ನು ಮುರಿದು ಅದಕ್ಕೆ ಹಾಕದೆ ಅದರ ಮುಂದಿನ ಮನೆಗಳಿಗೆ ಹಾಕುತ್ತ ಹೋಗಬೇಕು. ಹೀಗೆ ಹಾಕುವಾಗ ಖಾಲಿಮನೆ ಸಿಕ್ಕಿದರೆ ಅದನ್ನು ಬೆರಳುಗಳಿಂದ ಸವರಿ ಮುಂದಿನ ಮನೆಯ ಬೀಜಗಳನ್ನು ತೆಗೆದಿಟ್ಟುಕೊಳ್ಳಬೇಕು. ಅವು ಗೆದ್ದ ಹರಳು, ಅಲ್ಲಿಗೆ ಒಬ್ಬರ ಆಟ ಮುಗಿಯಿತು. ಮನೆ ಬಿಟ್ಟು ಮನೆಯಲ್ಲಿ ಬೀಜವಿದ್ದರೆ ಎಷ್ಟು ಮನೆಗಳಲ್ಲಿದ್ದರೂ ಸವರಿ ತೆಗೆದುಕೊಳ್ಳಬಹುದು. ಎದುರುಬದುರು ಮನೆಗಳು ಖಾಲಿಯಿದ್ದರೂ ಹೀಗೆ ಮಾಡಬಹುದು. ಒಂದು ಮನೆಯಲ್ಲಿ ನಾಲ್ಕು ಹರಳಿದ್ದರೆ ಅದಕ್ಕೆ ಕರು ಎಂದು ಹೆಸರು. ಅದನ್ನು ಆಯಾ ಆಟಗಾರರು ತೆಗೆದಿಟ್ಟುಕೊಳ್ಳಬಹುದು. ಹೀಗೆ ಕೊನೆಯಲ್ಲಿ ತಮ್ಮತಮ್ಮ ಮನೆಗಳಲ್ಲಿ ಹರಳಿರುವ ತನಕವೂ ಆಡಬಹುದು. ಕೊನೆಯಲ್ಲಿ ಎಣಿಸಿ ನೋಡಿದಾಗ ಮೂವತ್ತೈದಕ್ಕಿಂತ ಕಡಿಮೆ ಇದ್ದರೆ ಅಷ್ಟು ಸೋತಂತೆ. ಹೆಚ್ಚಿದಂತೆ ಅಷ್ಟು ಗೆದ್ದಂತೆ. ಒಂದು ಮನೆಗೆ ಐದಕ್ಕಿಂತ ಕಡಿಮೆ ಬೀಜ ತುಂಬುವಂತಿಲ್ಲ. ಹೀಗೆ ಕೊನೆಯಲ್ಲಿ ತಮ್ಮ ಕಡೆ ಒಂದು ಮನೆಯನ್ನು ತುಂಬಲಾರದಾದಾಗ ಸಂಪೂರ್ಣ ಸೋಲು ಒಬ್ಬರಿಗೆ, ಸಂಪೂರ್ಣ ಗೆಲವು ಮತ್ತೊಬ್ಬರಿಗೆ. ಇದು ಸಾದಾ ಆಟ. ಇದರಲ್ಲೇ ಕಾಶಿಮನೆ, ಮೂಲೆ ಕಟ್ಟುವುದು ಮೊದಲಾದ ಇತರ ಪ್ರಕಾರದ ಆಟಗಳೂ ಇವೆ.



ಪಗಡೆ ಆಟದ ಹಾಸು

**ಆನೆ ಕುರಿ ಆಟ :** ಇದು ಇಬ್ಬರಾಡುವ ಆಟ. ಒಬ್ಬರು ಮೂರು ಆನೆಗಳನ್ನು ವಹಿಸಿಕೊಂಡರೆ, ಒಬ್ಬರು ಇಪ್ಪತ್ತು ಕುರಿಗಳನ್ನು ವಹಿಸಿಕೊಳ್ಳಬೇಕು. ಆನೆ ಒಂದು ಕುರಿಯ ಮೇಲೆ ಮಾತ್ರ ನೆಗೆಯಬಲ್ಲದು. ನೆಗೆದರೆ ಆ ಕುರಿ ಆನೆಗೆ ಸೇರುತ್ತದೆ. ಜಾಗವಿದ್ದರೆ ಒಂದರ ಅನಂತರ ಒಂದನ್ನು ಎಷ್ಟು ಸಾರಿ ಯಾವ ದಿಕ್ಕಿನಲ್ಲಿ ಬೇಕಾದರೂ ನೆಗೆಯಬಹುದು. ಕುರಿ ಆನೆಯ ಮೇಲೆ ನೆಗೆಯಲಾರದು. ಆದರೆ ನೆಗೆಯಲು ಅವಕಾಶ ಸಿಗದಂತೆ ಒಂದು ಕುರಿಯ ಮಗ್ಗುಲು ಮನೆಯಲ್ಲಿ ಮತ್ತೊಂದು ಕುರಿ ಇರಬೇಕಷ್ಟೆ. ಹೀಗೆ ಆಡುತ್ತ ಆನೆ ನಡೆಯದಂತೆ ಮಾಡಬೇಕು. ಇಲ್ಲವೇ ಕುರಿಗಳು ಆನೆಗೆ ಆಹುತಿಯಾಗಬೇಕು. ನಡೆಸಲು ಮನೆಯಿದ್ದರೆ ನಡೆಸಲೇಬೇಕು. ನಡೆಸಲಾಗದಾದಾಗ ಸಂಬಂಧಪಟ್ಟವರು ಸೋತಂತೆ.

**ಹುಲಿ ಕುರಿ ಆಟ :** ಇಬ್ಬರಾಡುವ ಆಟ. ಒಬ್ಬ ಕುರಿ ಮತ್ತೊಬ್ಬ ಹುಲಿ, ಹದಿನಾರು ಕುರಿಗಳು (ಸಣ್ಣ ಬೀಜಗಳು), ಎರಡು ಹುಲಿಗಳು (ದೊಡ್ಡ ಕಲ್ಲು) ಇರುತ್ತವೆ. ಆಟದ ಪ್ರಾರಂಭದಲ್ಲಿ ಒಳ ಎಂಟು ಮನೆಗೆ ಎಂಟು ಕುರಿ ಕೂಡಿಸಬೇಕು. ನಡುವೆ ಒಂದು ಹುಲಿ, ಹೊರಚೌಕದ ನಡುಮನೆಯಲ್ಲಿ ಮತ್ತೊಂದು ಹುಲಿಯ ಹಾರಿಕೆಯಿಂದ ಆಟ ಪ್ರಾರಂಭ. ಅದನ್ನು ತಡೆಗಟ್ಟಲು ಕುರಿ ಪ್ರಯತ್ನಿಸಬೇಕು. ಆನೆ ಕುರಿ ಆಟದಂತೆ ಹುಲಿಯಾಗಲಿ ಕುರಿಯಾಗಲಿ ಒಂದೇ ಏಟಿಗೆ ಎರಡರ ಮೇಲೆ ದಾಟುವಂತಿಲ್ಲ. ಒಂದೊಂದು ಸಾರಿಗೆ ಒಂದೊಂದರಂತೆ, ಸ್ಥಳವಿದ್ದರೆ ಎಷ್ಟರ ಮೇಲೆ ಬೇಕಾದರೂ ನೆಗೆಯಬಹುದು. ಹುಲಿ ನೆಗೆದರೆ ಕುರಿ ಸಾಯುತ್ತದೆ. ಹೀಗೆ ಆಡುತ್ತ ಯಾರಾದರೊಬ್ಬರು ಎದುರಿಸಲಾರದ ಸ್ಥಿತಿಗೆ ಬಂದಾಗ ಆಟ ಮುಕ್ತಾಯದ ಘಟ್ಟಕ್ಕೆ ಬರುತ್ತದೆ. ಅಂದರೆ ಹುಲಿಗೆ ನಡೆಯಲು ಜಾಗವಿಲ್ಲದಂತಾಗಬೇಕು. ಇಲ್ಲ ಎಲ್ಲ ಕುರಿಗಳನ್ನೂ ತಿಂದು ಹಾಕಬೇಕು. ಮತ್ತೆ ಮರು ಆಟ.

**ಚೌಕಬಾರ :** ನಾಲ್ಕು ಜನರೊ, ಇಬ್ಬರೊ, ಮೂವರೊ ಆಡಬಹುದಾದ ಆಟ. ಮೊದಲಿಗೆ ತಲಾ ಐದು ಮನೆಗಳ ಅಥವಾ ಏಳು ಮನೆಗಳ ಚೌಕ ಬರೆದುಕೊಳ್ಳಬೇಕು. ಐದರ ಮನೆಗೆ ನಾಲ್ಕು ಹುಣಿಸೆಬೇಳೆಗಳೊ ಕವಡೆಗಳೊ ಬೇಕಾದರೆ ಏಳರ ಮನೆಗೆ ಆರು ಬೇಕು. ಹೊರಭಾಗದ ಮಧ್ಯದ ಮನೆಗಳು ಕಟ್ಟೆಮನೆಗಳು. ಇಲ್ಲಿ ಅಪಾಯವಿಲ್ಲ. ನಡು ಮಧ್ಯದ ಮನೆ ಹಣ್ಣಿನ ಮನೆ. ಏಳರ ಮನೆ ಆಟದಲ್ಲಿ ಮೂಲೆ ಮೂಲೆಯ ಶೃಂಗಾಭಿಮುಖ ಮನೆ ಕಟ್ಟೆಮನೆ. ಯಾರಾದರೊಬ್ಬರು ಆಟ ಪ್ರಾರಂಭಿಸುತ್ತಾರೆ. ಅಲ್ಲಿಂದ ಮುಂದಕ್ಕೆ ಅವರ ಬಲಗಡೆ ಇರುವವರು ಆಡುವುದು ರೂಢಿ. ಹೊರಗಡೆ ಮನೆಗಳಲ್ಲಿ ಒಂದೇ ಕಾಯಿಗೆ ಅವಕಾಶ. ಕಟ್ಟೆಮನೆಗಳಿಗೆ ಈ ನಿಯಮವಿಲ್ಲ. ಬೇಳೆ ಬಿಡುವಾಗ ನಾಲ್ಕೂ ಅಂಗಾತ ಬಿದ್ದರೆ ಚೌಕವೆನ್ನುತ್ತಾರೆ. ಬೋರಲಾಗಿ ಬಿದ್ದರೆ ಬಾರ ಎನ್ನುತ್ತಾರೆ. ಇದೇ ಪ್ರಾಯಶಃ ಆಟದ ಹೆಸರು. ಪ್ರತಿಯೊಬ್ಬರೂ ನಡೆಸುತ್ತ ಒಂದು ಸುತ್ತು ಬಂದು ತಮ್ಮ ತಮ್ಮ ಮನೆಯ ಹಿಂದಿನ ಮನೆಯ ಮೂಲಕ ಒಳನುಗ್ಗಿ ಈಗ ಪ್ರದಕ್ಷಿಣೆಯಾಗಿ ಅನುಕೂಲವಾದ ರೀತಿಯಲ್ಲಿ ಬೇಳೆ ಬಿದ್ದರೆ ಹಣ್ಣು ಮಾಡಬಹುದು. ನಾಲ್ಕು ಕಾಯಿಗಳನ್ನೂ ಮೊದಲು ಹಣ್ಣು ಮಾಡುವವರು ಗೆದ್ದಂತೆ. ಕೊನೆಯಲ್ಲಿ ಉಳಿದವರು ಸೋತಂತೆ. ಈ ಆಟದಲ್ಲಿ ಕೆಲವು ನಿಬಂಧನೆಗಳನ್ನು ಮಾಡಿಕೊಳ್ಳುತ್ತಾರೆ. ಕಾಯಿ ಹೊಡೆದರೆ ಕೊಲೆ ಎಂದು ಹೆಸರು. ಇದನ್ನು ಕಾಯಿ ಕಡಿಯುವುದು ಎಂದೂ ಕರೆಯುತ್ತಾರೆ. ಕಾಯಿ ಕಡಿಯದೆ ಯಾರೂ ಒಳನುಗ್ಗಲು ಅವಕಾಶವಿಲ್ಲ. ಒಂದೇ ಕಾಯನ್ನು ಹೊರಗಡೆಯೇ ಸುತ್ತಿಸುತ್ತಿರಲು ಅವಕಾಶವಿಲ್ಲ. ಎಲ್ಲ ಕಾಯಿಗಳನ್ನು ನಡೆಸಿ ಗತ್ಯಂತರವಿಲ್ಲದಿದ್ದರೆ ಸುತ್ತಿಸಬೇಕು. ಒಂದೇ ಸಮನೆ ಮೂರು ಚೌಕವಾಗಲಿ, ಮೂರು ಬಾರವಾಗಲಿ ಬೀಳಬಾರದು. ಚೌಕ ಅಥವಾ ಬಾರ ಬಿದ್ದಾಗ ಅದರ ಕೈ ಉಂಟು. ಅಂದರೆ ಬೇಳೆ ಬಿಡಲು ಮತ್ತೊಂದು ಅವಕಾಶ. ಬೇಕಿಲ್ಲದಾಗ 'ಇಂಥ' ಕೈ ಬೇಡ ಎನ್ನುವಂತಿಲ್ಲ. ಒಳಗಡೆ ಎರಡು ಕಾಯಿಗಳನ್ನು ಜೊತೆ ಕಟ್ಟಬಹುದು. ಅದಕ್ಕೆ ತಕ್ಕಂತೆ ಬೇಳೆ ಬೀಳಬೇಕು. ನಡೆಸಿದ ಮೇಲೆ ಅವು ಗಟ್ಟಿ ಜೊತೆ. ಒಂಟಿ ಅದನ್ನು ದಾಟಬಹುದೇ, ಜೊತೆ ಒಂಟಿಯನ್ನು ಹೊಡೆಯಬಹುದೆ, ಜೊತೆಯನ್ನು ಕೀಳಬಹುದೇ ಇತ್ಯಾದಿ ವಿಚಾರಗಳಲ್ಲಿ ಮೊದಲೇ ಒಪ್ಪಂದವಾಗಿರಬೇಕು. ಗೆದ್ದವರೆಲ್ಲ ಆಟದ ಬೇಳೆಗಳನ್ನು ಸರಿ-ಬೆಸ ಆಟದಂತೆ ಕೈಯಲ್ಲಿ ಬಚ್ಚಿಟ್ಟಿಕೊಂಡು ಎಷ್ಟು ಎಂದು ಕೇಳಿ, ತಪ್ಪು ಹೇಳಿದರೆ ಅಷ್ಟು ಗುದ್ದು ಎಂದು ಎಣಿಸಿಕೊಂಡು, ಸರಿಯಾಗಿ ಹೇಳಿದರೆ ಬೇಳೆಗಳನ್ನು ಕೊಟ್ಟು ಕೊನೆಯಲ್ಲಿ ಆದಷ್ಟು ಗುದ್ದುಗಳನ್ನು ಸೋತವನ ಕೈಮೇಲೆ ಕೊಡಬಹುದು. ಇದಿಲ್ಲದೆಯೆ ಮರು ಆಟ ಪ್ರಾರಂಭಿಸಬಹುದು. ಕೆಲವರು ಎಲ್ಲ ಕಾಯಿಗಳನ್ನೂ ಹಣ್ಣಿನ ಮನೆಯಲ್ಲಿಟ್ಟು ಕಾಯಿಸು ಎಂದು ಹೇಳಿ ಪಕ್ಕದಿಂದ ಸೋತವನ ಕೈಗೆ ಏಟು ಕೊಡುತ್ತಾರೆ. ಪ್ರತಿಸಾರಿಯೂ ಒಂದೊಂದು ಕಾಯಿ ಆತನಿಗೆ ದಕ್ಕುತ್ತದೆ. ಏಳರ ಮನೆ ಆಟವೂ ಇದೇ ರೀತಿ. ಎರಡೆರಡು ಮನೆ ಜಾಸ್ತಿ. ಎರಡು ಬೇಳೆ ಜಾಸ್ತಿ. ಎಲ್ಲ ಬೇಳೆಗಳೂ ಅಂಗಾತ ಬಿದ್ದರೆ ಆರು. ಮಗುಚಿಕೊಂಡರೆ ಹನ್ನೆರಡು ಇಷ್ಟೇ ವ್ಯತ್ಯಾಸ.

**ಇಪ್ಪತ್ತರಾಟ :** ಇದು ಇಬ್ಬರು ಅಥವಾ ಹೆಚ್ಚು ಜನ ಆಡುವ ಆಟ. ಇದಕ್ಕೆ ನಾಲ್ಕು ಹುಣಿಸೆಬೇಳೆಗಳೊ ಕವಡೆಗಳೊ ಸಾಕು. ಪ್ರತಿಯೊಬ್ಬರೂ ಸರದಿಯಂತೆ ಆಡಬೇಕು. ಯಾರದು ಸರಿಯಾಗಿ ಇಪ್ಪತ್ತಾಗುತ್ತದೊ ಅವರು ಗೆದ್ದಂತೆ. ಕೊನೆಯಲ್ಲಿ ಉಳಿಯುವವರು ಸೋತಂತೆ. ಗೆದ್ದವರು ಸರಿ-ಬೆಸ ಆಟದಂತೆ ಬೇಳೆಗಳನ್ನು ಬಚ್ಚಿಟ್ಟುಕೊಂಡು ತೋರಿಸಿ ಆದಷ್ಟು ಗುದ್ದುಗಳನ್ನು ಎಣಿಸಿಕೊಂಡು ಸೋತವನ ಕೈಯನ್ನು ನೆಲದಲ್ಲಿರಿಸಿ ಗುದ್ದಬಹುದು.

**ಹೊರಾಂಗಣ ಆಟಗಳು :** ಇಂದು ಗ್ರಾಮೀಣ ಭಾಗಗಳಲ್ಲೂ ಆಧುನಿಕ ವಿದ್ಯಾಭ್ಯಾಸ ಪದ್ಧತಿಯ ಶಾಲೆಗಳು ವ್ಯಾಪಕವಾಗಿ ಇರುವುದರಿಂದ ಆಯಾ ಶಾಲೆಗಳಲ್ಲಿ ಉತ್ತೇಜಿಸುವ ಫುಟ್‌ಬಾಲ್, ಕ್ರಿಕೆಟ್ ಇತ್ಯಾದಿ ಆಟಗಳು ಜನಪ್ರಿಯವಾಗುತ್ತಿವೆಯಾದರೂ ಹಲವು ಬಗೆಯ ಪ್ರಾಚೀನ ಜನಪದ ಆಟಗಳು ಎಷ್ಟೋ ಉಳಿದುಬಂದಿವೆ. ಸಾಹಸದ ಆಟಗಳಾದ ಕತ್ತಿವರಸೆ, ದೊಣ್ಣೆವರಸೆ, ಪಂಜು ತಿರುಗಿಸುವುದು ಮೊದಲಾದವು ಕುಟುಕು ಜೀವ ಉಳಿಸಿಕೊಂಡಿವೆ. ಹಿಂದಿನಿಂದಲೂ ರೂಢಿಯಲ್ಲಿದ್ದ ಕೊಕ್ಕೋ, ಹುತುತು (ಕಬಡಿ) ಮೊದಲಾದವು ಶಿಷ್ಟ ಕ್ರೀಡೆಗಳಾಗಿ ಬೆಳೆದಿವೆ. ಇಲ್ಲಿ ಗ್ರಾಮೀಣ ಪರಿಸರಗಳಲ್ಲಿ ಕಾಣಿಸುವ ಕೆಲವು ಆಟಗಳನ್ನು ಮಾತ್ರ ವಿವರಿಸಲಾಗಿದೆ.

**ಉಪ್ಪೂಪೆಕಡ್ಡಿ :** ಇದು ಪುಟ್ಟ ಮಕ್ಕಳ ಆಟ. ಇಬ್ಬರೇ ಆಟಗಾರರು. ಇದಕ್ಕೆ ಸುಮಾರು ಹತ್ತುಹನ್ನೆರಡು ಅಂಗುಲದ ಪುಟ್ಟದೊಂದು ಮಣ್ಣಿನ ಅಥವಾ ಮರಳಿನ ಏರಿ ಮತ್ತು ಎರಡಂಗುಲ ಉದ್ದದ ದಬ್ಬಳದಂಥ ಕಡ್ಡಿ ಇದ್ದರೆ ಸಾಕು. ಒಂದು ಮಗು ಕಡ್ಡಿಯನ್ನು ಆಚೆ ಈಚೆ ತುದಿಯಲ್ಲಿ ಹೆಬ್ಬೆರಳು ಮತ್ತು ತೋರುಬೆರಳುಗಳ ಮಧ್ಯೆ ಇಟ್ಟುಕೊಂಡು ಮತ್ತೊಂದು ಮಗು ನೋಡು ನೋಡುತ್ತಿದ್ದಂತೆಯೇ ಉಪಾಯವಾಗಿ ಏರಿಯನ್ನು ಎರಡು ಕೈಯಲ್ಲೂ ಮುಚ್ಚಿಕೊಂಡು ಕೈಗಳನ್ನು ಹಿಂದಕ್ಕೂ ಮುಂದಕ್ಕೂ ಆಡಿಸುತ್ತ ಕಡ್ಡಿಯನ್ನು ಬಚ್ಚಿಟ್ಟು ಕಡ್ಡಿ ಎಲ್ಲಿದೆ ಎಂದಾಗ ಮತ್ತೊಂದು ಮಗು ತನ್ನೆರಡು ಕೈಗಳ ಬೆರಳುಗಳನ್ನು ಒಂದಕ್ಕೊಂದು ಹೆಣೆದು ಮುಂಗೈಗಳು ಮೇಲಾಗುವಂತೆ ಕಡ್ಡಿ ಇರಬಹುದಾದ ಜಾಗವನ್ನು ಮುಚ್ಚಿಕೊಳ್ಳುತ್ತದೆ. ಅದನ್ನು ಬಚ್ಚಿಟ್ಟ ಮಗುವಿಗೆ ಗೊತ್ತಿರುವುದರಿಂದ ನಿಜವಾಗಿದ್ದರೆ ಒಪ್ಪಿಕೊಳ್ಳುತ್ತದೆ. ಇಲ್ಲದಿದ್ದರೆ ಆ ಜಾಗ ಬಿಟ್ಟು ಬೇರೆ ಜಾಗದಲ್ಲಿ ತೋರಿಸುತ್ತದೆ. ಇದರ ಮೇಲೆ ಆಟದಲ್ಲಿ ಸೋಲು ಗೆಲುವು, ಹೇಳುವ ಮಗು ಗೆದ್ದರೆ ಅದಕ್ಕೆ ಆಟ, ಸೋತರೆ ಅದರ ಕೈಗೆ ಬೊಗಸೆ ಮಣ್ಣಿತ್ತು ಮಧ್ಯಕ್ಕೆ ಅದಕ್ಕೆ ಅದೇ ಕಡ್ಡಿಯನ್ನು ನೆಟ್ಟು ಅದರ ಕಣ್ಣು ಮುಚ್ಚಿಕೊಂಡು ಹತ್ತಾರು ಗಜ ದೂರ ಹೋಗಿ ಅಲ್ಲೆಲ್ಲೊ ಒಂದು ಕಡೆ ಅದನ್ನು ಹಾಕಿಸಿ, ವಾಪಸ್ಸು ಹಾಗೆಯೇ ಕರೆದು ತಂದು ಮೊದಲಿನ ಸ್ಥಳದಲ್ಲಿ ಮೂರು ಸುತ್ತು ಸುತ್ತಿಸಿ ದಿಗ್ಭ್ರಮೆ ಬರುವಂತೆ ಮಾಡಿ ಕಣ್ಣು ಬಿಡಿಸುವುದು. ಆ ಮಗು ಈಗ ಹೋಗಿ ಕಡ್ಡಿ ಹುಡುಕಿ ತರಬೇಕು. ಹುಡುಕಿದರೂ ಸಿಗದಿದ್ದಾಗ ಗೆದ್ದ ಮಗು ನಕ್ಕು, ಗೇಲಿ ಮಾಡಿ ಚಪ್ಪಾಳೆ ತಟ್ಟಿ ಕಡ್ಡಿ ತೋರಿಸಿಕೊಡುತ್ತದೆ.

**ಕಣ್ಣುಮುಚ್ಚಾಲೆ :** ಇದನ್ನು ಅವಿತೇ ಗುಮ್ಮನಾಟವೆಂದೂ ಕರೆಯುತ್ತಾರೆ. ಇದೊಂದು ಸಾಮೂಹಿಕ ಆಟ. ಒಬ್ಬರು ಹಿಡಿಯುವವರು; ಉಳಿದವರು ಅವಿತುಕೊಳ್ಳುವವರು; ಹಿಡಿಯುವವರ ಕಣ್ಣ ಮುಚ್ಚಲು ಒಬ್ಬ ಅಜ್ಜಿ. ಆದ್ದರಿಂದ ಇದಕ್ಕೆ ಕಣ್ಣುಮುಚ್ಚಾಲೆ ಎಂಬ ಹೆಸರು. ಹಿಡಿಯುವವರ ಕಣ್ಣನ್ನು ಮುಚ್ಚುವ ಅಜ್ಜಿಯು ಕಣ್ಣಾಮುಚ್ಚೆ, ಕಾಡೆಗೂಡೆ, ಉದ್ದಿನ ಮೂಟೆ ಉರುಳೇ ಹೋಯ್ತು, ಹಾಲೇ ಕಂಬ ಹರಿದೇ ಹೋಯ್ತು, ನಮ್ಮ ಹಕ್ಕಿ ಬಿಟ್ಟೆನೋ ಬಿಟ್ಟೆ, ನಿಮ್ಮ ಹಕ್ಕಿ ಮುಚ್ಚಿಕೊಳ್ಳಿರೋ ಮುಚ್ಚಿಕೊಳ್ಳಿ ಎಂದು ಗಟ್ಟಿಯಾಗಿ ಹಾಡಿಕೊಂಡು ಹೇಳಿ ತನ್ನ ಹಕ್ಕಿ ಬಿಡುತ್ತಾಳೆ. ಈ ಹಕ್ಕಿ ಬಚ್ಚಿಟ್ಟುಕೊಂಡಿರುವ ಹಕ್ಕಿಗಳನ್ನು ಹಿಡಿಯಬೇಕು. ಯಾವುದಾದರೂ ಬುದ್ಧಿವಂತ ಕಳ್ಳಹಕ್ಕಿ ಇದಕ್ಕೆ ಕಾಣದಂತೆ ಅಜ್ಜಿಯನ್ನು ಬಂದು ಮುಟ್ಟಿಸಿಕೊಂಡುಬಿಟ್ಟರೆ ಮೊದಲು ಹಿಡಿಯುತ್ತಿದ್ದ ಹಕ್ಕಿಯೇ ಕಣ್ಣು ಮುಚ್ಚಿಸಿಕೊಂಡು ಮತ್ತೆ ಹಿಡಿಯಬೇಕು. ಇಲ್ಲವೆ ಯಾವುದಾದರೂ ಒಂದು ಬಚ್ಚಿಟ್ಟುಕೊಂಡಿದ್ದ ಹಕ್ಕಿಯನ್ನು ಕಂಡುಬಿಟ್ಟರೆ ಹೆಸರು ಹಿಡಿದು ಕೂಗಿ ಕಂಡೆ, ಕಂಡೆ ಎಂದು ಹಿಡಿದರಾಯಿತು. ಆ ಹಕ್ಕಿ ಈಗ ಕಣ್ಣು ಮುಚ್ಚಿಸಿಕೊಳ್ಳಬೇಕು. ಈಚೆಗೆ, ಕಣ್ಣು ಮುಚ್ಚುವ ಅಜ್ಜಿಗೆ ಬದಲಾಗಿ ಹಿಡಿಯಬೇಕಾದವರು ಒಂದು ಕಡೆ ನಿಂತು ಗೋಡೆಗೋ ಯಾವುದಾದರೂ ವಸ್ತುವಿಗೋ ಎದುರಾಗಿ ನಿಂತು ಮುಚ್ಚಿಟ್ಟುಕೊಂಡಿದ್ದು ಬಚ್ಚಿಟ್ಟುಕೊಂಡಿರುವವರನ್ನು ಕಂಡಾಗ ಕೂಗಿಕೊಳ್ಳುವ ರೂಢಿ ಇದೆ. ಇದಕ್ಕೆ ಗುಲ್ಲಾರಿಯೋ ಎಂದು ಕರೆಯುವರು.

**ಕುಂಟಾಟ :** ಇದು ಸಾಮಾನ್ಯವಾಗಿ ಮಕ್ಕಳ ಆಟ. ಆಡುವವರೆಲ್ಲರೂ ಸೇರಿ ಒಂದು ಚೌಕವನ್ನು (ಆಟದ ಅಂಗಣ) ಬರೆದುಕೊಳ್ಳುತ್ತಾರೆ. ಯಾರಾದರೊಬ್ಬರು ಹಿಡಿಯಬೇಕು. ಎಲ್ಲರೂ ಸೇರಿ ಒಟ್ಟಿಗೆ ಚಪ್ಪಾಳೆ ಹಾಕಿ ಒಂದರ ಮೇಲೊಂದು ಕೈಯಿಟ್ಟು ತೋರಿಸಬೇಕು. ಕೈಯಿಟ್ಟಿರುವ ರೀತಿಯಲ್ಲಿ ಯಾರದು ಇತರರಿಗಿಂತ ಭಿನ್ನವಾಗಿರುತ್ತದೊ ಅವರು ಹಿಡಿಯಬೇಕು. ಒಬ್ಬರು ಈ ರೀತಿ ಸಿಕ್ಕುವ ತನಕ ಚಪ್ಪಾಳೆ ತಟ್ಟುತ್ತಿರುತ್ತಾರೆ. ಸಿಕ್ಕಿದವರು ಕುಂಟುತ್ತ ಕುಂಟುತ್ತ ಚೌಕಟ್ಟಿನೊಳಗೆ ಬಾಕಿಯವರನ್ನು ಹಿಡಿಯಬೇಕು. ಕಾಲು ಬಿಡಕೂಡದು. ಸುಸ್ತಾದಾಗ ಸಮಯಾವಕಾಶ ಕೇಳಬಹುದು. ಮೊದಲು ಸಿಕ್ಕಿಬಿದ್ದವರು ಮುಂದಕ್ಕೆ ಕುಂಟಿಕೊಂಡು ಹಿಡಿಯಬೇಕು. ಎಲ್ಲೆ ಬಿಟ್ಟು ಹೊರ ಹೋದವರೂ ಸಿಕ್ಕಿಬಿದ್ದಂತೆ ಲೆಕ್ಕ.

**ಕುಂಟುವ ಬಿಲ್ಲೆ :** (ಕುಂಟೆಪಿಲ್ಲಿ) ಸಾಮಾನ್ಯವಾಗಿ ಹೆಣ್ಣುಮಕ್ಕಳ ಆಟ. ಚೌಕನಾಗಿ ನಾಲ್ಕು, ಆರು, ಎಂಟು ಹೀಗೆ ತಮಗೆ ಅನುಕೂಲವಾದಂತೆ ಮನೆಗಳನ್ನು ಎರಡು ಸಾಲಾಗಿ ಬರೆದುಕೊಳ್ಳಬೇಕು. ಹೆಂಚಿನ ಅಥವಾ ಮಡಕೆಯ ಚೂರು ಒಂದನ್ನು ವೃತ್ತಾಕಾರವಾಗಿ ಸವೆದು ಬಚ್ಚವನ್ನಾಗಿ ಮಾಡಿಕೊಂಡು ಅದನ್ನು ಅನುಕ್ರಮವಾಗಿ ಮೊದಲನೆಯ ಮನೆ, ಎರಡನೆಯ ಮನೆ - ಹೀಗೆ ಇಟ್ಟುಕೊಂಡು ಕುಂಟಬೇಕು. ಈ ಬಚ್ಚವನ್ನು ಹಣೆಯ ಮೇಲೆ ಇಟ್ಟುಕೊಂಡು ಸರಿಯೋ ಎಂದು ಕೇಳಿಕೊಂಡು ಕೊನೆಗೆ ಹೋಗಿ ಮನೆಗಳನ್ನು ನೋಡದೆ ಬಚ್ಚವನ್ನು ಹಿಂದಕ್ಕೆ ಯಾವುದಾದರೊಂದು ಮನೆಗೆ ಬೀಳುವಂತೆ ಎಸೆಯಬೇಕು. ಆಗ ಅದು ಯಾವುದಾದರೊಂದು ಮನೆಗೆ ಸರಿಯಾಗಿ ಬಿದ್ದರೆ ಅದು ಅವರ ಮನೆ. ಮುಂದೆ ಮತ್ತೊಬ್ಬರ ಆಟ. ಮೊದಲು ಗೆದ್ದಿರುವ ಮನೆಯನ್ನು ಅವರು ಕುಂಟುತ್ತಲೇ ದಾಟಬೇಕು. ಮೊದಲು ಆಡಿದಂತೆ ತಾವು ಆಡಿದರೆ ಅವರಿಗೂ ಒಂದು ಮನೆ ದಕ್ಕುತ್ತದೆ. ಹೀಗೆ ಮನೆಗಳನ್ನು ಗೆಲ್ಲುತ್ತಹೋದಾಗ ಹೆಚ್ಚು ಮನೆ ಗೆದ್ದವರು ಅಥವಾ ಇನ್ನೊಬ್ಬರು ಹೋಗದಂತೆ ಮಾಡಿದವರು ಗೆದ್ದಂತೆ.

**ಕಲ್ಲೊ ಮಣ್ಣೊ :** ಹೆಣ್ಣುಮಕ್ಕಳು ಗಂಡುಮಕ್ಕಳು ಯಾರಾದರೂ ಭಾಗವಹಿಸಬಹುದಾದ ಈ ಆಟದಲ್ಲಿ ಒಬ್ಬ ಹಿಡಿಯುವವನು, ಹಿಡಿಸಿಕೊಳ್ಳುವವರು ಹೀಗೆ ಎರಡು ಪಕ್ಷಗಳಿರುತ್ತವೆ. ಎಡಗೈ ಹಸ್ತದ ಮೇಲೆ ಬಲಗೈ ಹಸ್ತವನ್ನು ತಾಳಹಾಕುವುದರ ಮೂಲಕ ಹಿಡಿಯುವವನ ನಿರ್ಧಾರವಾಗುತ್ತದೆ. ಸೋತ ವ್ಯಕ್ತಿ ಹಿಡಿಯಲು ತೊಡಗಬೇಕಾಗುತ್ತದೆ. ಆಗ ಹಿಡಿಯುವವನು ಉಳಿದವರನ್ನು ಕಲ್ಲೊ ಮಣ್ಣೊ ಎಂದು ಕೇಳುವನು. ಆಗ ಅವರು ಕಲ್ಲು ಅಂದರೆ ಅವರು ಕಲ್ಲಿನ ಮೇಲೆ ನಿಂತಾಗ, ಮಣ್ಣು ಅಂದರೆ ಅವರು ಮಣ್ಣಿನ ಮೇಲೆ ನಿಂತಾಗ ಹಿಡಿಯಬೇಕು. ಕಲ್ಲು ಎಂದು ಹೇಳಿ ಮಣ್ಣಿನ ಮೇಲೂ ಮಣ್ಣು ಎಂದು ಹೇಳಿ ಕಲ್ಲಿನ ಮೇಲೂ ನಿಂತುಕೊಳ್ಳುವರು. ಆದರೆ ಅವರು ಹಾಗೆಯೇ ನಿಂತುಕೊಂಡುಬಿಟ್ಟರೆ ಇವನು ಹಿಡಿಯಲೂ ಆಗುವುದಿಲ್ಲ. ಆಟವೂ ಸಾಗುವುದಿಲ್ಲ. ಆದ್ದರಿಂದ ಅವರು ಆಟ ಕೊಡಬೇಕಾಗುತ್ತದೆ. ಅಂದರೆ ಅವರು ಕಲ್ಲಿಂದ ಮಣ್ಣಿಗೂ ಮಣ್ಣಿಂದ ಕಲ್ಲಿಗೂ ಓಡಾಡುತ್ತಿರುತ್ತಾರೆ. ಆಟ ಕ್ರಿಯಾತ್ಮಕವಾಗಿ ಸಾಗುತ್ತದೆ. ಹಿಡಿಸಿಕೊಳ್ಳುವವರಲ್ಲಿ ಮತ್ತು ಹಿಡಿಯುವವನಲ್ಲಿ ಎಚ್ಚರಿಕೆ ಸದಾ ಇರುತ್ತದೆ. ಅವರ ಹೇಳಿಕೆಗೆ ವಿರುದ್ಧವಾಗಿ ನಿಂತು ಆಗ ಏನಾದರೂ ತತ್‌ಕ್ಷಣ ಈತ ಅವರನ್ನು ಮುಟ್ಟಿಬಿಟ್ಟರೆ ಅವರು ಸೋತುಹೋದಂತೆ. ಆಗ ಹಿಡಿಸಿಕೊಂಡವನು ಹಿಡಿಯಬೇಕಾಗುತ್ತದೆ. ಆಟವಾಡುವಾಗ ಆಟಗಾರರು ನಿನ್ನ ಕಲ್ಲಿಗೆ ನಾನು ಬಂದೆ. ನಿನ್ನ ಮಣ್ಣಿಗೆ ನಾನು ಬಂದೆ ಎಂದು ಹೇಳುತ್ತ ಆಟವಾಡುತ್ತಾರೆ. ಹೀಗೆ ಆಟ ನಿರಂತರವಾಗಿ ರಂಜನೀಯವಾಗಿ ಸಾಗುತ್ತದೆ.

**ಕಾಚಿಕೋಲ್ ಬಂದಿಕೋಲ್ :** ಇದು ಈಗಿನ ಸಂಗೀತ ಕುರ್ಚಿ (ಮ್ಯೂಸಿಕಲ್ ಚೇರ್) ಇದ್ದಂತೆ. ಆಡುವವರ ಸಂಖ್ಯೆಗಿಂತ ಒಂದು ಕಡಿಮೆ ಇರುವಷ್ಟು ಕಂಬಗಳನ್ನು ವೃತ್ತಾಕಾರವಾಗಿ ನೆಟ್ಟು ಒಂದೊಂದರ ಬಳಿ ಒಬ್ಬನಂತೆ ನಿಲ್ಲುತ್ತಾರೆ. ಕಂಬ ಇಲ್ಲದವನು ಜಾಗ ಹುಡುಕುತ್ತ ಸುತ್ತುಹಾಕುತ್ತಿರುತ್ತಾನೆ. ಅವನ ಕಣ್ಣುತಪ್ಪಿಸಿ ಉಳಿದವರು ತಮ್ಮ ತಮ್ಮ ಸ್ಥಳ ಬದಲಾಯಿಸುತ್ತಿರುತ್ತಾರೆ. ಖಾಲಿ ಕಂಬ ಕಂಡೊಡನೆ ಓಡುವವ ಅಲ್ಲಿಗೆ ಹೋಗಿ ನಿಲ್ಲುತ್ತಾನೆ. ಜಾಗ ಸಿಗದವ ಸೋತು ಸುತ್ತು ತಿರುಗುತ್ತಾನೆ.

**ರತ್ತೋ ರತ್ತೋ :** ಇದು ಹೆಣ್ಣುಮಕ್ಕಳ ಆಟ. ಆಡುವವರೆಲ್ಲ ವೃತ್ತಾಕಾರವಾಗಿ ಒಬ್ಬರಿಗೊಬ್ಬರು ಕೈಕಟ್ಟಿಕೊಂಡು ರತ್ತೋ ರತ್ತೋ ರಾಯನ ಮಗಳೇ ಬಿತ್ತೋ ಬಿತ್ತೋ ಭೀಮನ ಮಗಳೇ ಹದಿನಾರೆಮ್ಮೆ ಕಾಯಲಾರೆ, ಕರೆಯಲಾರೆ, ಕಾಸಲಾರೆ, ಕುಕ್ಕುರು ಬಸವಿ, ಕೂರು ಬಸವಿ ಎಂದ ಕೂಡಲೇ ಎಲ್ಲರೂ ತತ್‌ಕ್ಷಣವೇ ಕೂತುಕೊಳ್ಳಬೇಕು. ಕೊನೆಯಲ್ಲಿ ಕುಳಿತವಳು ಸೋತಂತೆ. ಈಗ ಅವಳನ್ನು ಮಧ್ಯದಲ್ಲಿ ನಿಲ್ಲಿಸಿಕೊಂಡು ಉಳಿದವರೆಲ್ಲರೂ ವೃತ್ತಾಕಾರವಾಗಿ ಮೊದಲಿನಂತೆ ಒಬ್ಬರಿಗೊಬ್ಬರು ಕೈಕಟ್ಟಿಕೊಂಡು ಮೊದಲು ಹೇಳಿದಂತೆ ಹೇಳುತ್ತ ಸುತ್ತಲೂ ತಿರುಗಬೇಕು. ಕೊನೆಯಲ್ಲಿ ಕೂರು ಬಸವಿ ಎಂದು ಎಲ್ಲರೂ ಅವಳ ತಲೆಯ ಮೇಲೆ ಕೈಯಿಟ್ಟು ಬಲಾತ್ಕಾರವಾಗಿ ಕುಕ್ಕರಿಸುವಂತೆ ಮಾಡುತ್ತಾರೆ. ಇದೇ ಆಟವನ್ನು ಬೇರೆ ರೀತಿಯಲ್ಲೂ ಆಡುತ್ತಾರೆ.

**ಟೋಪಿಯಾಟ :** ಸಾಮಾನ್ಯವಾಗಿ ಗಂಡುಮಕ್ಕಳ ಆಟ. ಶಾಲೆಗಳಲ್ಲಿ ಆಡಿಸುವುದುಂಟು. ಆಡುವವರೆಲ್ಲರೂ ವೃತ್ತಾಕಾರವಾಗಿ ಸುಖಾಸನ ಹಾಕಿಕೊಂಡು ಒಳಮುಖವಾಗಿ ಕುಳಿತುಕೊಳ್ಳಬೇಕು. ಯಾರಾದರೊಬ್ಬ ತನ್ನ ಟೋಪಿಯನ್ನೊ ಅಥ'ವಾ ಹುರಿಯಾಗಿ ಮಾಡಿ ಮಡಿಸಿ ಹಗ್ಗದಂತೆ ಮಾಡಿದ ಟವಲ್ಲನ್ನೊ ಕೈಯಲ್ಲಿ ಹಿಡಿದುಕೊಂಡು ಕುಳಿತಿರುವವರ ಹಿಂದುಗಡೆ ಸುತ್ತಲೂ ತಿರುಗುತ್ತ ಬುದ್ಧಿವಂತಿಕೆಯಿಂದ ಒಬ್ಬನ ಹಿಂದುಗಡೆ ಕೈಗೆ ನಿಲುಕುವಂತೆ ಅದನ್ನು ಇಡಬೇಕು. ಕೂತವ ಮಂದಬುದ್ಧಿಯವನೊ ಅಲಸಿಗನೊ ಆದರೆ ಟೋಪಿ ಅವನ ಬೆನ್ನ ಹಿಂದೆ ಇದೆ ಎನ್ನುವುದು ಅವನಿಗೆ ತಿಳಿದೇ ಇರುವುದಿಲ್ಲ. ಇಟ್ಟವನು ಒಂದು ಸುತ್ತು ಓಡಿಬಂದು ಕೂತವನ ಬೆನ್ನಮೇಲೆ ಟೋಪಿಯಿಂದ ಏಟುಕೊಡಲು ಪ್ರಾರಂಭಿಸುತ್ತಾನೆ. ಏಟು ತಿನ್ನುವವ ಒಂದು ಸುತ್ತು ಓಡಿಬಂದು ತನ್ನ ಜಾಗದಲ್ಲಿ ಕೂಡಬೇಕು. ಆಟ ಮುಂದುವರಿಯುತ್ತದೆ. ಚುರುಕಾದವ ತನ್ನ ಬೆನ್ನ ಹಿಂದಿರುವ ಟೋಪಿಯನ್ನು ಗುರುತಿಸಿ ಕೈಗೆ ತೆಗೆದುಕೊಂಡು ಇಟ್ಟವನನ್ನು ಅಟ್ಟಿ ಹೋಗುತ್ತಾನೆ. ಇಟ್ಟವ ಹೊಡೆತ ತಿಂದು ಅಥ'ವಾ ಅದರಿಂದ ತಪ್ಪಿಸಿ ಕೊಂಡು ಬಂದು ಸುತ್ತು ಓಡಿ ಎದ್ದವನ ಜಾಗದಲ್ಲಿ ಕೂರಬೇಕು.

**ಮರಕೋತಿ ಆಟ :** ಇದು ಗಂಡುಮಕ್ಕಳಾಟ. ಆಡುವವರೆಲ್ಲ ಒಂದು ಮರವನ್ನು ಏರಿ ಕೋತಿಗಳಂತೆ ಕುಳಿತುಕೊಳ್ಳುತ್ತಾರೆ. ಹಿಡಿಯುವವನೊಬ್ಬ ಆಮೇಲೆ ಮರವನ್ನೇರಿ ಹಿಡಿಯಬೇಕು. ಒಬ್ಬ ಒಂದು ಮೊಳದುದ್ದದ ಕೋಲನ್ನು ತೆಗೆದುಕೊಂಡು ಮರದ ಕೆಳಗೆ ಒಂದು ವೃತ್ತವನ್ನು ಬರೆದು ಕೋಲನ್ನು ತೊಡೆಸಂದಿಯಿಂದ ದೂರ ಬೀಸಿ ಒಗೆಯುತ್ತಾನೆ. ಅನಂತರ ಆತ ಮರ ಹತ್ತುತ್ತಾನೆ. ಹಿಡಿಯುವವನು ಆ ಕೋಲನ್ನು ತಂದು ವೃತ್ತದೊಳಗಿಟ್ಟು ಮರ ಹತ್ತಿ ಯಾರನ್ನಾದರೂ ಹಿಡಿಯಬೇಕು. ಆಗ ಹಿಡಿಸಿಕೊಂಡವನು ಸೋತಂತೆ. ಹಿಡಿಯುವವನು ಯಾರನ್ನಾದರೂ ಮುಟ್ಟುವ ಮುಂಚೆಯೇ ಮರದಿಂದ ಯಾರಾದರೂ ದುಮುಕಿ ಕೋಲನ್ನು ಮುಟ್ಟಿದರೆ ಹಿಡಿಯುವವನು ಸೋತಂತೆ. ಕೋಲು ಮುಟ್ಟಿದವನು ಕೋಲನ್ನು ಮೊದಲಿನಂತೆ ದೂರ ಎಸೆಯುತ್ತಾನೆ. ಹಿಡಿಯುವವನು ಮತ್ತೆ ಅದನ್ನು ವೃತ್ತದಲ್ಲಿ ತಂದಿಟ್ಟು ಯಾರನ್ನಾದರೂ ಹಿಡಿಯಬೇಕು. ಸಿಕ್ಕಿದವನು ಕಳ್ಳನಾಗುತ್ತಾನೆ. ಹೀಗೆ ಆಟ ಮುಂದುವರಿಯುತ್ತದೆ.

**ಗೋಲಿಯಾಟ :** ಗಂಡುಮಕ್ಕಳ ಆಟ. ನೆಲದಲ್ಲಿ ಒಂದು ಗುಳಿ ತೋಡಿ (ಬದ್ದು ಮಾಡಿಕೊಂಡು) ಆಡುವುದು ಒಂದು ಬಗೆ. ಎಲ್ಲರೂ ನಿಗದಿಯಾದ ದೂರದಿಂದ ಬದ್ದಿನ ಕಡೆಗೆ ಗೋಲಿ ಬಿಡಬೇಕು. ಒಂದೇ ಎಸೆತಕ್ಕೆ ಗೋಲಿಯನ್ನು ಬದ್ದಿಗೆ ತುಂಬಿದವರು ಗೆದ್ದಂತೆ. ಹೀಗೆ ಗೋಲಿ ಎಸೆದಾಗ ಬದ್ದಿಗೆ ಅತಿ ಹತ್ತಿರವಿರುವ ಗೋಲಿ ಕುಳ್ಳಿ, ಅತಿ ದೂರವಿರುವ ಗೋಲಿ ಗಟ್ಟಿ, ಒಪ್ಪಂದದಂತೆ ಗಟ್ಟಿ ಗೋಲಿಯವನೊ ಕುಳ್ಳಿ ಗೋಲಿಯವನೊ ಮೊದಲು ಆಡಬೇಕು. ಆತ ಬದ್ದು ತುಂಬಿ ಯಾವುದಾದರೊಂದು ಗೋಲಿಗೆ ಹೊಡೆಯಬೇಕು. ಮತ್ತೆ ಬದ್ದು ತುಂಬಬೇಕು. ಮತ್ತೆ ಹೊಡೆಯಬೇಕು. ಹೀಗೆ ಆಡುವಾಗ ಎಲ್ಲಿ ತಪ್ಪಿದರೂ ಅವನ ಆಟ ಅಲ್ಲಿಗೆ ನಿಲ್ಲುತ್ತದೆ. ಮತ್ತೆ ಮುಂದಿನ ಕುಳ್ಳಿ ಅಥ'ವಾ ಗಟ್ಟಿ ಗೋಲಿಯವನ ಆಟ. ಹೀಗೆ ಮೊದಲು ಹತ್ತು

ಮಾಡಿದವನು ಗೆದ್ದಂತೆ. ಒಬ್ಬ ಹತ್ತು ಮಾಡಿಬಿಟ್ಟರೆ, ಬಾಕಿಯವರ ಲೆಕ್ಕವೆಲ್ಲ ವಜಾ ಆದಂತೆ. ಅವರು ಮತ್ತೆ ಮೊದಲಿನಿಂದ ಆಡಬೇಕು. ಕೊನೆಯಲ್ಲುಳಿಯುವವನೇ ಸೋತವ. ಹೀಗೆ ಸೋತವ ತನ್ನ ಗೋಲಿಯನ್ನು ನಿಗದಿಯಾದ ದೂರದಿಂದ ಬದ್ದಿನ ಕಡೆಗೆ ಎಸೆದು ತುಂಬಲು ಪ್ರಯತ್ನಿಸಬೇಕು. ತುಂಬಿದರೆ ಮೊದಲು ಗೆದ್ದವನಿಗೆ ಆಟ ಕೊಟ್ಟಂತಾಯಿತು. ಮತ್ತೆ ಎರಡನೆಯವನಿಗೆ, ಆದರೆ ಗೋಲಿ ಬದ್ದಿಗೆ ಬೀಳದಿದ್ದರೆ ಗೆದ್ದವನು ಬದ್ದಿನ ಹತ್ತರದಿಂದ ಸೋತವನ ಗೋಲಿಯನ್ನು ಹೊಡೆದು ದೂರ ಓಡಿಸುತ್ತಾನೆ. ಅದನ್ನು ಸೋತವನು ಒಪ್ಪಂದದಂತೆ ಬೆರಳುಗಳಿಂದಲೋ ಮೊಳಕೈಯಿಂದಲೋ ದೇಕ(ತಳ್ಳ)ಬೇಕು. ಬದ್ದು ತುಂಬಲು ಯತ್ನಿಸಬೇಕು. ತುಂಬಿದರೆ ಗೆದ್ದ; ಇಲ್ಲದಿದ್ದರೆ ಮತ್ತೆ ಹೊಡೆತ ಮತ್ತೆ ದೇಕೋಣ. ಹೀಗೆ ಸೋತವ ಗೆದ್ದವರೆಲ್ಲರಿಗೂ ಗೋಲಿಯನ್ನು ಎಸೆದು (ಬಿಟ್ಟು) ದೇಕಿದೇಕಿ, ಬದ್ದು ತುಂಬಿ, ಆಟ ಕೊಡಬೇಕು.

ಈ ಆಟದಲ್ಲಿ ಅನೇಕ ಪ್ರಕಾರಗಳಿವೆ. ಎಣಿಕೆಗೆ ಬದಲಾಗಿ ಹೊನಗನ್ನೆ, ಹೊನಕೆರಡು, ಬಂಗಲಿ, ಬಾಲ ಇತ್ಯಾದಿಯಾಗಿಯೂ ಎಕ್ಕಲ್‌ಗಾಜ, ಡಬ್ಬೀರಾಜ, ತೀನಂತಿರ್ಪು - ಹೀಗೂ ನಾಲ್ಕು ಏಳು ಅಥವಾ ಹತ್ತರ ತನಕ ಎಣಿಸುತ್ತಾರೆ. ಗೋಲಿಗೆ ಬದಲಾಗಿ ಗುಂಜಿಯನ್ನು, ಗುಂಡನೆಯ ಗೂರ್ಚಿಕಲ್ಲು ಉಪಯೋಗಿಸುವುದುಂಟು. ಬದ್ದಿಗೆ ಬದಲಾಗಿ ಪುಟ್ಟ ಚೌಕ ಬರೆದು ತಮ್ಮ ತಮ್ಮದಾಗಿ ಒಂದೊಂದು ಗೋಲಿಯನ್ನು ಪಣವಾಗಿಟ್ಟು ದೂರದಿಂದ ಅದನ್ನು ಹೊಡೆದು ಚೌಕದಿಂದ ಆಚೆಗೆ ತಳ್ಳಿ ಗೆದ್ದುಕೊಳ್ಳುವುದು - ಹೀಗೆ ನಿಯಮಗಳನ್ನು ಬದಲಾವಣೆ ಮಾಡಿಕೊಂಡು ಪೆಯಿಂದ ಮುಂತಾಗಿ ಹೆಸರಿಟ್ಟುಕೊಂಡು ಆಡುವುದೂ ಉಂಟು.

**ಗ'ಜ್ಜುಗ'ದಾಟ :** ಈ ಆಟಕ್ಕೆ ಹೆಚ್ಚು ಗಜ್ಜುಗಗಳು ಮತ್ತು ಒಂದೊಂದು ಬಚ್ಚ (ಅಥವಾ ಗುಂಚಿ) ಬೇಕು. ಆಯತಾಕಾರವಾಗಿಯೊ ಅಂಡಾಕಾರವಾಗಿಯೊ ಮನೆಯೊಂದನ್ನು ಬರೆದುಕೊಂಡು ಆಡುವವರೆಲ್ಲರೂ ಒಬ್ಬೊಬ್ಬರಿಗೆ ಒಂದೊಂದು ಬಡ್ಡಿ (ಮೂರು ಗಜ್ಜುಗದ ಮೇಲೆ ಒಂದು) ಗಜ್ಜುಗಗಳನ್ನು ಅದರಲ್ಲಿ ಇಡಬೇಕು. ನಿಗದಿಯಾದ ದೂರದಿಂದ ಗಜ್ಜುಗಗಳತ್ತ ಬಚ್ಚ ಎಸೆಯಬೇಕು. ಹೀಗೆ ಎಸೆದಾಗ ಆ ಏಟಿಗೆ ಗಜ್ಜುಗ ಈಚೆಗೆ ಹಾರಿದರೆ ಬಳಿ ಹೊಡೆದಂತಾಯ್ತು. ಎಲ್ಲೆಯ ಗೀರಿನ ಮೇಲೆ ಬಿದ್ದರೆ ಬಿದ್ದಷ್ಟು ಗಜ್ಜುಗಗಳನ್ನು ವಟ್ಟ ಕೊಡಬೇಕು. ಬಚ್ಚವೇ ಬದ್ದಿನೊಳಗೆ ಹೋಗಿ ಕುಳಿತರೆ ಅದಕ್ಕೂ ವಟ್ಟ ಕೊಡಬೇಕು. ಗಜ್ಜುಗ ಅಲುಗಾಡಿದರೆ ಜಮ್ಮಿ ಮಾಡಿಕೊಂಡಂತೆ. ಅಂಥ'ವನಿಗೂ ಮೊದಲಾಟವುಂಟು. ಆದರೆ ಹಳಿ ಹೊಡೆದವನಿದ್ದರೆ ಆತನಿಗೆ ಮೊದಲು ಅವಕಾಶ. ಇಂಥವರು ಯಾರೂ ಇಲ್ಲದಿದ್ದರೆ ಒಪ್ಪಂದದ ಪ್ರಕಾರ ಗಟ್ಟಿ ಅಥ'ವಾ ಕುಳ್ಳಿ ಬಚ್ಚದವರಿಗೆ ಮೊದಲಾಟ. ಹೀಗೆ ಬಚ್ಚದಿಂದ ಹೊಡೆದು ದೂರ ಹೊರಡಿಸಿದ ಗಜ್ಜುಗಗಳು ಗೆದ್ದವನ ಲಾಭ. ಕಳೆದುಕೊಂಡವನಿಗೆ ನಷ್ಟ. ಈ ಆಟದ ನಿಬಂಧನೆಗಳು ಬೇರೆ ಬೇರೆ ಕಡೆ ಬೇರೆ ಬೇರೆಯಾಗಿರುತ್ತವೆ.

**ಚೆಂಡಾಟ :** ಇದರಲ್ಲಿ ಅನೇಕ ಆಟಗಳಿವೆ. ಲಗ್ಗೆಚೆಂಡು ಗಂಡುಮಕ್ಕಳ ಆಟ. ಇದಕ್ಕೆ ಚಪ್ಪಟೆಯಾದ ಸುಮಾರು ಎಂಟು ಹತ್ತು ಅಂಗುಲ ಆಯತಾಕಾರದ ಕಲ್ಲು (ಇದೇ ಲಗ್ಗೆ) ಮತ್ತು ಆಡಲು ಒಂದು ಹಳೇ ಅರಿವೆಯನ್ನು ಪಟ್ಟಿ ಪಟ್ಟಿಯಾಗಿ ಹರಿದು ಸುತ್ತ ಬಿಚ್ಚಿಕೊಳ್ಳದಂತೆ ಹೊಲೆದ ಚೆಂಡು ಇಷ್ಟು ಸಾಕು. ಕಲ್ಲು ಸಿಗದಿದ್ದರೆ ಹೆಂಚಿನ ಅಥವಾ ಒಡೆದ ಮಡಕೆಯ ಚೂರುಗಳನ್ನು ಒಂದರ ಮೇಲೊಂದಿಟ್ಟು ಸುಮಾರು ಐದಾರು ಅಂಗುಲ ಎತ್ತರ ಬರುವಂತೆ ಪೇರಿಸಿದರೂ ಲಗ್ಗೆಯಾಗುತ್ತದೆ. ಆಡುವವರೆಲ್ಲ ಸಮನಾಗಿ ಎರಡು ಗುಂಪಾಗುತ್ತಾರೆ. ಈಗಿನ ಕ್ರಿಕೆಟ್ ಆಟದಂತೆ ಲಗ್ಗೆಗೆ ಹೊಡೆಯುವವರು ಒಂದು ಗುಂಪು. ಲಗ್ಗೆ ಕಾಯ್ದುಕೊಂಡಿದ್ದು ಚೆಂಡೇನಾದರೂ ಪುಟವೆದ್ದು ಬಂದರೆ ಆಡುವವರು ಒಂದು ಗುಂಪು. ಪ್ರತಿಯೊಬ್ಬರಿಗೂ ಮೂರು ಅವಕಾಶ. ಆಕಸ್ಮಾತ್ ಚೆಂಡನ್ನು ಆತುಬಿಟ್ಟರೆ ಮೊದಲ ಎಸೆತವಾಗಿದ್ದರೂ ಲಗ್ಗೆ ಬಿದ್ದಿದ್ದರೂ ಆಟ ಹೋಯಿತು. ಮುಂದಿನವರಿಗೆ ಆಟ, ಲಗ್ಗೆ ಬಿದ್ದು ಚೆಂಡು ಆನಲು ಸಿಗದೆ ಹೋದರೆ ಲಗ್ಗೆ ಬೀಳಿಸಿದ ಪಂಗಡ ಚೆಂಡನ್ನು ಅವಿತಿಟ್ಟುಕೊಳ್ಳುತ್ತಾರೆ. ಯಾರಲ್ಲಿದೆ ಎಂಬುದು ಅವರಿಗೆ ಮಾತ್ರ ಗೊತ್ತು. ಆದರೆ ಪ್ರತಿಯೊಬ್ಬನೂ ಚೆಂಡಿರುವವನಂತೆ ನಟಿಸಿ ಲಗ್ಗೆ ಕಾಯುತ್ತಿದ್ದ ಗುಂಪಿನವರನ್ನು ಹರತೋ ಹರತೋ ಎಂದು ಕೂಗುತ್ತ ಹೊಡೆಯಲು ಅಟ್ಟಿಸಿಕೊಂಡು ಹೋಗುತ್ತಾನೆ. ಚೆಂಡು ಹೊಡೆದು ಯಾರಿಗಾದರೂ ತಗುಲಿದರೆ ಮತ್ತೆ ಅವಿತಿಟ್ಟುಕೊಳ್ಳುವುದು. ತಗುಲದಿದ್ದರೂ ಚೆಂಡಿಲ್ಲದವನನ್ನು ಯಾರಾದರೂ ಮುಟ್ಟಿಸಿಕೊಂಡು ಬಿಟ್ಟರೂ ಎಚ್ಚರಿಕೆಯಿಂದ ಮರೆಯಲ್ಲೋಡಿ ಬಂದು ಲಗ್ಗೆಯನ್ನೂ ಮೊದಲಿದ್ದಂತೆ ಒಡ್ಡಿದರೂ ಗೆದ್ದಂತೆ. ಆಗ ಕಾಯುತ್ತಿದ್ದವರು ಲಗ್ಗೆ ಹೊಡೆದವರಾಗುತ್ತಾರೆ. ಹೊಡೆಯುತ್ತಿದ್ದವರು ಲಗ್ಗೆ ಕಾಯುತ್ತಾರೆ. ಹರತೋ ಎಂದು ಕೂಗಿಕೊಂಡು ಅಟ್ಟಿಸಿಕೊಂಡು ಹೋಗುವುದರಿಂದ ಇದಕ್ಕೆ ಹರತೋ ಚೆಂಡು ಎಂದೂ ಹೆಸರು. ಲಗ್ಗೆ ಆಟದಲ್ಲಿ ಕೆಲವು ಪ್ರಭೇದಗಳಿವೆ.

**1. ಸಿಕ್ಕಿದವರಿಗೆ ಸಿಕ್ಕುಪಾಲು (ಸಿಕ್ಕಿದವರಿಗೆ ಸೀರುಂಡೆ) :** ಎರಡು ಪಂಗಡ ಮಾಡಿಕೊಳ್ಳದೆ ಯಾರು ಬೇಕಾದರೂ ಲಗ್ಗೆ ಬೀಳಿಸಿ, ಆಡುವ ಲಗ್ಗೆಚೆಂಡಿನ ಒಂದು ಪ್ರಭೇದಕ್ಕೆ ಈ ಹೆಸರಿದೆ.

**2. ಕುದುರೆ ಚೆಂಡು :** ಈ ಆಟದಲ್ಲೂ ಎರಡು ಪಂಗಡ. ಇಲ್ಲಿ ಲಗ್ಗೆಗೆ ಬದಲಾಗಿ ಎರಡುಗಳ ಗಳ ಮೇಲೆ ಒಂದು ಅಡ್ಡಕಡ್ಡಿ. ನಿಗದಿಯಾದ ದೂರದಿಂದ ಚೆಂಡನ್ನು ಅದರಡಿ ನೇರವಾಗಿ ಎಸೆದು ಕಡ್ಡಿಯನ್ನು ಬೀಳಿಸಬೇಕು. ಬೀಳಿಸದಿದ್ದರೆ ಚೆಂಡನ್ನು ಹೊಡೆಯುತ್ತಿರುವ ಪಂಗಡಕ್ಕೆ ಒಬ್ಬನನ್ನು ಕುದುರೆಯಾಗಿ ಕಳುಹಿಸಬೇಕು. ಒಂದು ಗುಂಪಿನವರು ಅಡ್ಡ ಕಡ್ಡಿಯ ಹತ್ತಿರ ನಿಂತುಕೊಂಡು ಒಬ್ಬೊಬ್ಬರೂ ಮೂರು ಮೂರು ಅವಕಾಶದೊಳಗೆ ದಂಡಿನಿಂದ (ಇದನ್ನು ಗಾರು ಎಂತಲೂ ಕರೆಯುತ್ತಾರೆ.) ಚೆಂಡನ್ನು ಕಾಯುವವರತ್ತ ಬಾರಿಸಬೇಕು. ದಂಡನ್ನು ಒಂದು ಸಾರಿ ಬೀಸಿ ಚೆಂಡಿಗೆ ತಾಗದಿದ್ದರೂ ಆ ಅವಕಾಶ ಮುಗಿದಂತೆ. ಹೊಡೆದೂ ಅದನ್ನು ಎದುರಾಳಿಗಳು ಆತುಕೊಂಡು ಬಿಟ್ಟರೆ ಆಯಿತು. ಇಲ್ಲದಿದ್ದರೆ ಹೊಡೆದ ಚೆಂಡನ್ನು ಹಿಡಿದು ಗುರಿಗೆ ಹೊಡೆದು ಅಡ್ಡ ಕಡ್ಡಿಯನ್ನು ಬೀಳಿಸಿದರೂ ಅಥ'ವಾ ಅದರಡಿ ಚೆಂಡು ನುಗ್ಗಿಸಿಬಿಟ್ಟರೂ ಹೊಡೆಯುತ್ತಿರುವ ಪಂಗಡದವರಿಗೆ ಒಬ್ಬ ಆಟಗಾರನನ್ನು ಕುದುರೆಯಾಗಿ ಕಳುಹಿಸಬೇಕು. ಹೊಡೆಯುವವರಲ್ಲಿ ಒಬ್ಬ ಅವನ ಬೆನ್ನಮೇಲೇರಿ ಕುಳಿತುಕೊಳ್ಳುತ್ತಾನೆ. ಹೀಗೆ ಮತ್ತೆ ಅಡ್ಡಕಡ್ಡಿ ಬೀಳಿಸುವ ತನಕವೂ ಆತ ಕುದುರೆಯಾಗಿರಬೇಕು. ಕೆಲವು ಸಾರಿ ಇಂಥ' ಕುದುರೆಗಳ ಸಾಲೇ ಇರುತ್ತದೆ. ಚೆಂಡನ್ನು ಯಶಸ್ವಿಯಾಗಿ ಗುರಿ ಮುಟ್ಟಿಸಿದಾಗ ಈ ಕುದುರೆಗಳು ಸವಾರನನ್ನು ಎತ್ತಿಹಾಕಿ ಓಡುವುದನ್ನು ನೋಡಲು ಮೋಜೆನಿಸುತ್ತದೆ. ಒಂದು ಪಂಗಡದವರೆಲ್ಲರೂ ಹೊಡೆದು ಮುಗಿಸಿದ ಮೇಲೆ ಆಟ ಬದಲಾಯಿಸುತ್ತದೆ. ಯಥಾಪ್ರಕಾರ ಆಟ ಮುಂದುವರಿಯುತ್ತದೆ.

**3. ಟಾಂಗ್‌ಬಿರಾಂಗ್ :** ಚಿಣ್ಣಿಕೋಲಿನ ಆಟದಂತೆ ರೂಲುದೊಣ್ಣೆಯಂತಿರುವ ದಾಂಡಿನಿಂದ ಚಿಣ್ಣಿಗೆ ಬದಲಾಗಿ ಚೆಂಡನ್ನು ಹೊಡೆಯುವುದು. ಆದರೆ ಚೆಂಡನ್ನು ನೆಲದ ಮೇಲಿಡದೆ ಟಾಂಗ್ ಎಂದಾಗ ಯಾವುದಾದರೊಂದು ಪಾದವನ್ನೆತ್ತಿ ಅದರ ಮೇಲಿಟ್ಟುಕೊಂಡು ಎಸೆದು, ಬಿರಾಗ್ ಎಂದು ಒಂದು ಮುಂಗೈ ಮೇಲೆ ಮಾಡಿಕೊಂಡು ಹೆಬ್ಬೆರಳು ಮತ್ತು ಮಧ್ಯದ ಎರಡು ಬೆರಳುಗಳನ್ನೂ ಕೆಳಗೆ ಮಡಿಸಿ ತರ್ಜನಿ ಮತ್ತು ಕನಿಷ್ಠ ಬೆರಳುಗಳ ಮೇಲೆ ಚೆಂಡನ್ನಿಟ್ಟುಕೊಂಡು ಮೇಲೆಸೆದು, ಮುಷ್ಟಿ ಎಂದುಕೊಂಡು ಕೈ ಮುಷ್ಟಿಯ ಮೇಲೆ ಚೆಂಡನ್ನಿಟ್ಟುಕೊಂಡು ಎಸೆದು, ಗೋಡ (ಘೋಡಾ) ಎಂದುಕೊಂಡು ಒಂದು ಮಣಿಕಟ್ಟಿನ ಮೇಲೆ ಇಟ್ಟುಕೊಂಡು ಎಸೆದು, ಹೀಗೆಯೇ ಕೋನಿ ಎಂದುಕೊಂಡು ಒಂದು ಮೊಳಕೈ ಮೇಲೆ ಅಂಕಿ ಎಂದುಕೊಂಡು ಕಣ್ಣಿನ ಹುಬ್ಬಿನ ಮೇಲೆ ಇಟ್ಟುಕೊಂಡು ಚೆಂಡು ಬೀಳಿಸಿ ಮೇಲಿರುವಂತೆಯೆ ದಾಂಡಿನಿಂದ ಹೊಡೆದು ಅಟ್ಟುತ್ತಾರೆ. ಚೆಂಡನ್ನು ನಿಗದಿಯಾದ ಒಂದು ಬದ್ದಿನ ಹತ್ತಿರ ಗುರಿಯಿಟ್ಟು ಎಸೆಯಬೇಕು. ಚಿಣ್ಣಿ ಆಟದಂತೆ ಇಲ್ಲೂ ಚೆಂಡನ್ನು ಹೊಡೆದು ಹಿಮ್ಮೆಟ್ಟಿಸಬಹುದು. ನೆಗೆಯುವಷ್ಟು ದೂರದಲ್ಲಿ ಚೆಂಡು ಬಿದ್ದರೆ ಹೊಡೆಯುವವನ ಆಟ ಆಯಿತು. ಮೇಲೆ ಹೇಳಿದ ಯಾವ ಸ್ಥಾನದಲ್ಲಿ ಹೊಡೆದಾಗಲೂ ಏಟು ತಾಗದಿದ್ದರೂ ಅಥವಾ ಚೆಂಡನ್ನು ಆತು ಬಿಟ್ಟರೂ ದಾಂಡನ್ನು ಮೂರು ಸಾರಿ ಬೀಸಿ ತಾಗದಿದ್ದರೂ ಆಡುವವರ ಆಟ ಆಯಿತು. ಗುರಿಯಿಟ್ಟು ಚೆಂಡನ್ನು ಬದ್ದಿನತ್ತ ಹೊಡೆದಾಗ ಬದ್ದಿನಿಂದ ಚೆಂಡಿರುವ ದೂರವನ್ನು ಚಿಣ್ಣಿ ಆಟದಂತೆ ಅಳೆದು ಎಣಿಸುತ್ತಾರೆ. ಆದರೆ

ಟಾಂಗ್‌ಬಿರಾಂಗ್ ಇತ್ಯಾದಿಯಾಗಿ ಏಳರ ತನಕ ಎಣಿಸಿ ಇಷ್ಟು ಆಯಿತು ಎಂದು ಲೆಕ್ಕಹಾಕುತ್ತಾರೆ.

**ಚಿಣ್ಣಿಕೋಲು :** ಇದು ಗಂಡುಮಕ್ಕಳ ಆಟ. ಆಟವಾಡಲು ಎರಡು ತುದಿಗಳಲ್ಲೂ ಚೂಪು ಮಾಡಿದ ಒಂದು ಒಂದೂವರೆ ಅಂಗುಲ ವ್ಯಾಸದಷ್ಟು ಗಾತ್ರದ ಎರಡು ಮೂರಂಗುಲ ಉದ್ದದ ಮರದ ಪುಟ್ಟ ತುಂಡು (ಚಿಣ್ಣಿ)ಬೇಕು. ಇದರ ಒಂದು ತುದಿಗೆ ಮೊಳದುದ್ದದ ದಪ್ಪಕೋಲಿನಿಂದ (ದಾಂಡು) ಮೆಲ್ಲಗೆ ಏಟುಕೊಟ್ಟು ಮೇಲಕ್ಕೆ ಪುಟಿದು ಬರುವಂತೆ ಮಾಡಿ ಹೊಡೆಯಬೇಕು. ಈ ಆಟದಲ್ಲೂ ಎರಡು ಪಂಗಡ. ಹೊಡೆಯುವವರು ಮತ್ತು ಕಾಯುವವರು. ಚೆಂಡಾಟದಂತೆ ಇಲ್ಲೂ ಅನೇಕ ನಿಯಮಗಳು. ಆದರೆ ಬದ್ದಿನಿಂದ ಚಿಣ್ಣಿಗಿರುವ ದೂರವನ್ನು ದಾಂಡಿನಿಂದ ಅಳೆದು ನೂರಾದರೆ ಒಂದು ಬ್ಯಾಂಕು ಎನ್ನುತ್ತಾರೆ. ಈ ಬ್ಯಾಂಕು ನೂರೇ ಆಗಬೇಕಿಲ್ಲ. ಬೇಕಾದರೆ ಒಪ್ಪಂದದ ಪ್ರಕಾರ ಇಳಿಸಬಹುದು. ತಪ್ಪು ಎಣಿಕೆ ಹೇಳಿದರೆ ಆಗಿದ್ದೆಲ್ಲಾ ಉಪ್ಪುಪ ಆಗಿ ವಜಾ ಆಗಿಬಿಡುತ್ತದೆ. ಚಿಣ್ಣಿ ಹೊಡೆಯುವ ಮೊದಲು ತುರ್‌ದಾಂಡ್, ತುರ್‌ಬದ್, ತುರ್‌ಚೀಪ್, ಕಟ್‌ಕೋಲ್, ರೆಡಿ ಎಂದು ಕೇಳಿ ಎದುರಾಳಿಗಳು ರೆಡಿ ಎಂದ ಮೇಲೆ ಹೊಡೆಯುವುದು ವಾಡಿಕೆ (ಇಲ್ಲಿ ರೆಡಿ ಎನ್ನುವ ಮಾತಿನಂತೆ ಟ್ರೂ ಬಿಡ್, ಟ್ರೂ ಚಿಪ್, ಕಟ್ ಮೊದಲಾದ ಇಂಗ್ಲಿಷ್ ಪದಗಳ ಅಪಭ್ರಂಶಗಳೂ ದಾಂಡು, ಕೋಲ್ ಮೊದಲಾದ ಕನ್ನಡ ಶಬ್ದಗಳೂ ಸೇರಿರುವುದು ಗಮನಾರ್ಹವಾಗಿದೆ. ಆಟ ನಮ್ಮದೇ. ಯಾವಾಗಲೋ ಇಂಗ್ಲಿಷ್ ಪರಿಭಾಷೆ ಬಂದು ಸೇರಿ ಅಪಭ್ರಂಶವಾಗಿದೆ).

**ಕೋಲು ಹಾರಿಸುವ ಆಟ :** ಇದಕ್ಕೆ ಎರಡು ಮೂರು ಅಡಿ ಉದ್ದದ ಕೋಲುಗಳು ಬೇಕು. ಆಡುವವರು ಎಷ್ಟು ಜನ ಬೇಕಾದರೂ ಇರಬಹುದು. ಒಬ್ಬ ಮಾತ್ರ ತನ್ನ ಕೋಲನ್ನು ನೆಲದ ಮೇಲೆ ಇಟ್ಟು ಕಾಯಬೇಕು. ಯಾರೂ ಇದಕ್ಕೆ ಒಪ್ಪದಿದ್ದರೆ ಚಪ್ಪಾಳೆ ಹಾಕಿ - ರತ್ತೋ ರತ್ತೋ ಆಟದಂತೆ ತೀರ್ಮಾನಿಸುತ್ತಾರೆ. ಉಳಿದವರೆಲ್ಲ ತಮ್ಮ ಕೋಲನ್ನು ಒಪ್ಪಂದದಂತೆ ಕಲ್ಲ ಮೇಲೆ ಊರಿ ಇಟ್ಟುಕೊಂಡಿದ್ದು ಕೋಲು ಕಾಯುತ್ತಿರುವವನ ಕೈಗೆ ಸಿಕ್ಕದಂತೆ ಕೋಲನ್ನು ಹಾರಿಸಿಕೊಂಡು ಹೋಗಬೇಕು. ನೆಲದ ಮೇಲೆ ಕೋಲು ಊರಿದವನನ್ನು ಕಾಯುವವ ಮುಟ್ಟಿದರೆ ಅವನು ಸೋತಂತೆ. ಕಾಯುವವನಿಗೆ ಕೋಲು ಕೊಟ್ಟವನೂ ಸಿಕ್ಕಿಬಿದ್ದ. ಇಲ್ಲದಿದ್ದರೆ ಆತನ ಕೋಲನ್ನು ಸಾಧ್ಯವಾದಷ್ಟು ದೂರ ಹಾರಿಸುತ್ತಾರೆ. ಎಲ್ಲೋ ಒಂದು ಕಡೆ ಆತ ಗೆಲ್ಲುತ್ತಾನೆ. ಆಗ ಅವನು ಮೊದಲು ಹೊರಟ ಸ್ಥಾನವನ್ನು ಕುಂಟಿಕೊಂಡು ಕವಡೆ ಕವಡೆ, ಕಂಚಿನ ಕವಡೆ, ಕಂಚಿನ ಕವಡೆ ಎಂದು ಹೇಳುತ್ತ ಉಸಿರು ಬಿಡದೆ ಮೂರೇ ಉಸಿರಿನಲ್ಲಿ ತಲುಪಬೇಕು. ಕಾಲೂ ಬಿಡಕೂಡದು. ಇದರಲ್ಲೂ ನಿಯಮಗಳಲ್ಲಿ ವ್ಯತ್ಯಾಸವಿದೆ.

**ಬುಗುರಿ :** ಇದಕ್ಕೆ ಮರದ ಬುಗುರಿಗಳೂ ದಾರವೂ ಬೇಕು. ಎಲ್ಲರೂ ತಮ್ಮ ತಮ್ಮ ಬುಗುರಿಗೆ ದಾರ ಸುತ್ತಿ ಒಂದೇ ಸಾರಿಗೆ ಬುಗುರಿ ಆಡಿಸಬೇಕು. ಆಡುತ್ತಿದ್ದಂತೆಯೇ ಯಾರು ಬುಗುರಿಯನ್ನು ದಾರ ಸುತ್ತಿ ಮೇಲೆಸೆದು ಆನಲು ತಪ್ಪುವನೋ ಆತನೇ ಬದ್ದಿನಲ್ಲಿ ಗುರಿಯಿಡಬೆಕು. ಉಳಿದವರು ನೇರವಾಗಿ ಹೊಡೆದೊ ಅಥವಾ ಆಡುತ್ತಿದ್ದ ಬುಗುರಿಯನ್ನು ಹಾಗೆಯೇ ಬೆರಳುಗಳಿಂದ ಉಪಾಯವಾಗಿ ಎತ್ತಿಯೋ ಅದರ ಮೇಲೆಸೆದು ಅದನ್ನು ಬದ್ದಿನ ಸುತ್ತ ವೃತ್ತದಿಂದ ಹೊರಹೊರಡಿಸಬೇಕು ಅದು ಹೊರಟ ತತ್‌ಕ್ಷಣವೇ ಮಿಂಚಿನ ವೇಗದಲ್ಲಿ ಎಲ್ಲರೂ ಬುಗುರಿಯಿಟ್ಟಿದ್ದವನೂ - ತಮ್ಮ ತಮ್ಮ ಬುಗುರಿಗೆ ದಾರ ಸುತ್ತಿ ಆಡಿಸಿ ಮೇಲೆತ್ತಬೇಕು. ಬುಗುರಿ ಹೊರಡಿಸಿದವನ ಬುಗುರಿ ಇನ್ನೂ ಆಡುತ್ತಿದ್ದರೆ ಅದನ್ನೇ ಅವನು ಮೇಲೆತ್ತಬಹುದು. ಕೊನೆಯಲ್ಲುಳಿದವನೇ ಕಳ್ಳ. ಆಟ ಹೀಗೆ ಮುಂದುವರಿಯುತ್ತದೆ. ಚುರುಕಾದ ಆಟಗಾರರಾದರೆ ಸೋತವನ ಬುಗುರಿಯನ್ನು ಗುನ್ನ ಹಾಕಿ ಒಡೆದಿಡುತ್ತಾರೆ.

**ಸುರುಸುರುಕೆ ಬತ್ತಿ :** ಇದರಲ್ಲಿ ಎರಡು ಪಕ್ಷಗಳಿರುತ್ತವೆ. ಪ್ರತಿ ಪಕ್ಷಕ್ಕೂ ಒಬ್ಬೊಬ್ಬ ಮುಖ್ಯಸ್ಥ ಇರುವನು. ಈ ಎರಡು ಪಕ್ಷಗಳ ಆಟಗಾರರೂ ಎದುರುಬದುರಾಗಿ ಸಮಾನಾಂತರವಾಗಿ ಸಾಲಾಗಿ ಕುಳಿತುಕೊಳ್ಳುವರು. ಆಗ ಅವರ ಎರಡು ಕೈಗಳನ್ನೂ ಹಿಂದಕ್ಕೆ ತೆಗೆದು ಎರಡು ಕೈಗಳ ಬೆರಳುಗಳ ಮಧ್ಯೆ ಪರಸ್ಪರ ಸೇರಿಸಿ, ಬೊಗಸೆಯಾಗಿ ಮಾಡಿಕೊಂಡು ಬೆನ್ನಹಿಂದೆ ಕೈಗಳನ್ನು ಬಿಟ್ಟು, ಪಕ್ಷಗಳ ಮುಖ್ಯಸ್ಥರು ತಮ್ಮ ಪಕ್ಷದ ಆಟಗಾರರ ಹಿಂದೆ ನಿಂತುಕೊಳ್ಳುವರು. ಆಟವನ್ನು ಮೊದಲು ಯಾರು ಆಡಬೇಕೆಂಬುದನ್ನು ನಾಣ್ಯವನ್ನು ಮೇಲೆಸೆದು ಟಾಸ್ ಹಾಕುವುದರ ಮೂಲಕ ನಿರ್ಧರಿಸುತ್ತಾರೆ. ಆಟದ ಸರದಿ ಬಂದಾಗ, ಪಕ್ಷದ ಮುಖ್ಯಸ್ಥ, ಒಂದು ಚೂರುಬಟ್ಟೆಯನ್ನು ತೆಗೆದುಕೊಂಡು, ಅದನ್ನು ಉಂಡೆ ಮಾಡಿ, ತಮ್ಮ ಪಕ್ಷದ ಆಟಗಾರರ ಹಿಂದೆ ಬಿಟ್ಟಿರುವ ಎಲ್ಲ ಕೈಗಳಿಗೂ ಬಟ್ಟೆಯನ್ನು ಇಟ್ಟ ಹಾಗೆ ಮಾಡಿ ಇಡದಂತೆ ನಟಿಸುತ್ತ ಹೋಗುವನು. ಹೀಗೆ ಮಾಡುವಾಗ ಸುರುಸುರುಕೆ ಬತ್ತಿ, ಸೊಂಡಾನೆ ಬತ್ತಿ, ನೋಡಿದವರ ಕಣ್ಣಿಗೆ ಜುಮುಜುಮು ಎಂದು ಹೇಳುವನು. ಆ ಬಟ್ಟೆಯ ಬತ್ತಿಯನ್ನು ಕೊನೆಗೆ ಯಾವನೋ ಒಬ್ಬನ ಕೈಲಿ ಬಿಟ್ಟು, ಇನ್ನೊಬ್ಬನ ಕೈಲಿ ಇಟ್ಟಂತೆ ನಟಿಸಿ ಮತ್ತೆ ಅವರ ಕೈಗಳಿಗೂ ಇಡುವಂತೆ ಓಡಾಡಿ ನಿಂತು ಕೊಳ್ಳುವನು. ಆಗ ಟಾಸ್‌ನಲ್ಲಿ ಸೋತವನು ಬಟ್ಟೆ ಬತ್ತಿ ಯಾರ ಹತ್ತಿರ ಇದೆ ಎಂಬುದನ್ನು ಹೇಳಬೇಕು. ಎರಡು ಪಕ್ಷದ ಸಾಲಿಗೂ ಸುಮಾರು ಐದಾರು ಅಡಿ ಅಂತರವಿರುವುದರಿಂದ ಇವನು ಯಾರ ಕೈಲಿ ಬತ್ತಿ ಇಟ್ಟನೋ ಹೇಳುವುದು ಕಷ್ಟ. ಸೋತ ಮುಖ್ಯಸ್ಥ ಊಹಾಶಕ್ತಿಯ ಮೇಲೆ ಹಾಗೂ ಬಟ್ಟೆ ಇರುವವನ ಮುಖದ ಭಾವನೆಗಳ ಮೂಲಕ ಕಲ್ಪಿಸಿ ಹೇಳುವನು. ಹಾಗೆ ಅವನು ಹೇಳಿದುದು ಸರಿಯಾದರೆ ಆಟ ಇವರ ಪಕ್ಷಕ್ಕೆ ಬಂದುಬಿಡುತ್ತದೆ. ಆಗ ಎದುರು ಪಕ್ಷದವರು ಹೇಳಬೇಕಾಗುತ್ತದೆ. ಇಲ್ಲದಿದ್ದರೆ ಆಟ ಹಾಗೆಯೇ ಮುಂದುವರಿಯುತ್ತೆ.

**ಮೊಟ್ಟೆಯಿಕ್ಕುವಾಟ :** ಅನೇಕ ಆಟಗಾರರಿರುವ ಈ ಆಟದಲ್ಲಿ ಎರಡು ಪಕ್ಷಗಳಿರುತ್ತವೆ. ಇವರ ಆಟಕ್ಕೆ ಇಡೀ ಬೀದಿಯೇ ಆಟದ ಭೂಮಿಯಾಗುತ್ತದೆ. ಎರಡು ಪಕ್ಷಗಳ ಆಟಗಾರರೂ ಪರಸ್ಪರ ಪಕ್ಷಗಳಿಗೆ ತಿಳಿಯದ ಹಾಗೆ ಸಂದಿ ಗೊಂದಿಯಲ್ಲಿ ಮಣ್ಣಿನ ಸಣ್ಣ ಸಣ್ಣ ಗುಪ್ಪೆಗಳನ್ನು ಇಡುತ್ತ ಬರುವರು. ಇವೇ ಮೊಟ್ಟೆಗಳು. ಹೀಗೆ ಅಸಂಖ್ಯಾತ ಮೊಟ್ಟೆಗಳನ್ನು ಇಟ್ಟಮೇಲೆ ಮೊಟ್ಟೆ ಇಡುವುದು ಸಾಕು ಎಂದುಕೊಂಡವರು ಗುಡ್ ಗಾಡಾರಿಯೊ ಎಂದು ಕೂಗುವರು. ಆಗ ಎಲ್ಲರೂ ಮೊಟ್ಟೆ ಇಡುವುದನ್ನು ನಿಲ್ಲಿಸಬೇಕು. ನಿಲ್ಲಿಸಿದ ಮೇಲೆ ಒಂದು ಪಕ್ಷದವರು ಮತ್ತೊಂದು ಪಕ್ಷದವರ ಮೊಟ್ಟೆಗಳನ್ನು ಪತ್ತೆಹಚ್ಚುವ ಕೆಲಸದಲ್ಲಿ ನಿರತರಾಗುವರು. ಹಾಗೆ ಹುಡುಕಿದ ಮೊಟ್ಟೆಗಳನ್ನು ಎಣಿಕೆ ಮಾಡಿಕೊಳ್ಳುವರು. ಇನ್ನು ಹುಡುಕಲು ಆಗುವುದಿಲ್ಲ ಎಂದಮೇಲೆ, ಮೊಟ್ಟೆಗಳನ್ನು ಇಟ್ಟವರೇ ಎದುರು ಪಕ್ಷದವರಿಗೆ ತೋರಿಸುವರು. ಅನಂತರ ಎರಡು ಗುಂಪುಗಳು ಒಂದು ಕಡೆ ಸೇರಿ ಒಬ್ಬೊಬ್ಬರದು ಎಷ್ಟು ಮೊಟ್ಟೆಗಳು ಆಗಿವೆ ಎಂದು ನೋಡುತ್ತಾರೆ. ಹೆಚ್ಚು ಸಂಖ್ಯೆಯ ಮೊಟ್ಟೆಗಳಿಂದ ಕಡಿಮೆ ಸಂಖ್ಯೆಯ ಮೊಟ್ಟೆಗಳನ್ನು ಕಳೆದರೆ ಉಳಿದ ಮೊಟ್ಟೆಗಳ ಗುಂಪಿನವರು ಗೆದ್ದಹಾಗೆ. ಸೋತವರು ಬೈಸ್ಕೆ ಹೊಡೆಯಬೇಕಾಗುತ್ತದೆ.

**ಕೋಲಾಟ :** ಇದು ಜನಪದ ಆಟಗಳಲ್ಲೆಲ್ಲ ಕಲಾತ್ಮಕವೂ ಜನಪ್ರಿಯವೂ ಆಗಿದೆ. ಕೋಲುಗಳ ಮೂಲಕವೇ ಆಟ ವಿವಿಧ ಭಂಗಿಯಲ್ಲಿ ಸಾಗುವುದರಿಂದ ಇದಕ್ಕೆ ಕೋಲಾಟವೆಂದೇ ಹೆಸರಾಯಿತು. ಈ ಆಟವನ್ನು ಸುಗ್ಗಿಯ ಕಾಲದಲ್ಲಿ ಹಬ್ಬ ಹರಿದಿನಗಳಲ್ಲಿ ಹೆಚ್ಚು ಆಡುತ್ತಾರೆ. ಇರುಳ ಬೆಳುದಿಂಗಳಿನಲ್ಲಿ ಆಟ ಆಡುತ್ತಿದ್ದರೆ ಕಣ್ಣಿಗೆ ಹಬ್ಬ, ಕಿವಿಗೆ ರಸದೌತಣ, ಇದರಲ್ಲಿ ಹುಡುಗರಂತೆ ದೊಡ್ಡವರೂ ಭಾಗವಹಿಸುತ್ತಾರೆ. ಇಲ್ಲಿಯ ಆಟಗಾರರ ಸಾಧನಗಳೆಂದರೆ ಕೋಲುಗಳು. ಕೋಲುಗಳನ್ನು ಸೀಬೆ, ಕಣಿಗಿಲೆ, ನಿರ್‌ಬಂಜಿ ಮೊದಲಾದ ಮರಗಳಿಂದ ತಯಾರಿಸುತ್ತಾರೆ. ಕೋಲಾಟದಲ್ಲಿಯೆ ಸುತ್ತುಕೋಲು, ಹಾರ್‌ಗುಟುಕು, ಜಡೆಕೋಲು, ಬಿಜುಗನ ಕೋಲು, ತೇರುಕೋಲು, ಮನೆಕೋಲು, ಚಿಟುಕಿನ ಕೋಲು, ವಾದದ ಕೋಲು, ಕಾಲುಸಂದಿನ ಕೋಲು, ಕೊರವಂಜಿ ಕೋಲು, ಉಯ್ಯಾಲೆಯಾಟ ಇತ್ಯಾದಿ ಅನೇಕ ಬಗೆಯ ಆಟಗಳಿವೆ (ನೋಡಿ: ಕೋಲಾಟ). ಕೋಲಾಟದಲ್ಲಿ ಬರುವ ಹಾಡು, ಹಾಡಿಗೆ ತಕ್ಕ ಕುಣಿತ, ಕುಣಿತಕ್ಕೆ ತಕ್ಕ ಕೋಲುಗಳ ಸಪ್ಪಳ ಇವುಗಳಿಂದಾಗಿ ಆಟ ಸ್ವಾರಸ್ಯಕರವಾಗಿರುತ್ತದೆ. ಸಂಗೀತ, ನರ್ತನ ಮತ್ತು ಆಟ ಈ ಮೂರರ ಸಮ್ಮಿಲನವಾಗಿರುವ ಕೋಲಾಟ ಒಂದು ಉತ್ಕೃಷ್ಟ ಕಲೆ.

**ಬಳೆಗಾಜಿನ ಆಟ :** ಇದರಲ್ಲಿ ಎರಡು ಪಕ್ಷಗಳಿರುತ್ತವೆ. ನೆಲದಲ್ಲಿ ಮೂರು ಗುಳಿಗಳನ್ನು ತೋಡಿಸುತ್ತಾರೆ. ಅನಂತರ ಆಟಗಾರರೆಲ್ಲ ಒಂದೆಡೆ ಸೇರಿ ಕಾಸನ್ನು ಮೇಲಕ್ಕೆಸೆದು (ಟಾಸ್) ಸೋಲು ಗೆಲುವನ್ನು ನಿರ್ಧರಿಸುತ್ತಾರೆ. ಸೋತವರು ಗುಳಿಯಿಂದ ಬಳೆಗಾಜನ್ನು ತೆಗೆಯಬೇಕಾಗುತ್ತದೆ. ಗೆದ್ದವರು ಬಳೆಗಾಜನ್ನು ಹೂತಿಡುವ ಕೆಲಸವನ್ನು ವಹಿಸಬೇಕಾಗುತ್ತದೆ. ಗೆದ್ದವರು ಇರುವ ಮೂರು ಗುಳಿಗಳಲ್ಲಿ ಯಾವುದಾದರೂ ಒಂದಕ್ಕೆ ಬಳೆಚೂರುಗಳನ್ನು ಹಾಕಿ ಮೂರನ್ನೂ ಮಣ್ಣಿನಿಂದ ಮುಚ್ಚಿರುತ್ತಾರೆ. ಆಗ ಸೋತವರು ಬಳೆಗಾಜು ಎಲ್ಲಿದೆ ಎಂದು ಹುಡುಕಬೇಕು. ಅವರ ಗುಳಿಗಳ ಮೇಲೂ ಕೈಯಾಡಿಸಿ, ಯಾವುದೋ ಒಂದನ್ನು ಗೋರುತ್ತಾರೆ. ಹಾಗೆ ಗುಳಿಯಿಂದ ಮಣ್ಣನ್ನು ಗೋರಿದಾಗ ಅವರಿಗೆ ಬಳೆ ಸಿಕ್ಕಿದರೆ ಅವರು ಗೆದ್ದಹಾಗೆ. ಬಳೆ ಸಿಕ್ಕುವುದೇ ಅವರಿಗೆ ಲಾಭ. ಒಂದು ಪಕ್ಷ ಬಳೆ ಸಿಕ್ಕದೆ ಹೋದರೆ ಅವರು ಸೋತಂತೆ. ಆಗ ಗೆದ್ದವರು ಬಳೆಗಳನ್ನು ತೆಗೆದು ತೋರುವರು. ಸೋತವರು ಆ ಬಳೆಗಳು ಎಷ್ಟಿದ್ದುವೋ ಅಷ್ಟನ್ನು ಸೇರಿಸಿ ಗೆದ್ದವರಿಗೆ ಕೊಡಬೇಕಾಗುತ್ತದೆ. ಹೀಗೆ ಆಟ ಮುಂದುವರಿಯುತ್ತಿರುತ್ತದೆ. ಇದರಲ್ಲಿ ಗಂಡುಮಕ್ಕಳು ಮತ್ತು ಹೆಣ್ಣು ಮಕ್ಕಳು ಇಬ್ಬರೂ ಭಾಗವಹಿಸಬಹುದು. ಈಚೆಗೆ ಈ ಆಟದಲ್ಲಿ ಬಹಳ ಸುಧಾರಣೆಗಳಾಗಿವೆ.

**ತೆಂಗಿನಕಾಯಿ ಜೂಜು :** ಇದು ಗಂಡಸರು ಪಂಥ ಕಟ್ಟಿ ಆಡುವ ಆಟ. ಕಾಯಿಯನ್ನು ಒಡ್ಡುವವನು ಕಲ್ಲುಗಳನ್ನೂ ಮಾರುತ್ತಾನೆ. ಹೊಡೆಯುವವರು ಆ ಕಲ್ಲುಗಳನ್ನು ಕೊಂಡುಕೊಳ್ಳಬೇಕು. ಕೊಂಡುಕೊಂಡ ಮೇಲೆ ನಿರ್ದಿಷ್ಟವಾದ ದೂರದಿಂದ ಕಾಯಿಗೆ ಕಲ್ಲನ್ನು ಬೀಸಿ ಹೊಡೆಯುತ್ತಾರೆ. ಮೊದಲ ಏಟಿಗೆ ಕಾಯಿ ಒಡೆದರೆ ಒಡೆದವರಿಗೆ ಕಾಯಿ ಬಿಟ್ಟಿಯಾಗಿ ಸಿಗುತ್ತದೆ. ಹಾಗಾಗದಿದ್ದರೆ ಮುಂದೆ ಕಾಸಿನ ಎಣಿಕೆ ಪ್ರಾರಂಭವಾಗುತ್ತದೆ. ಹೀಗೆ ಇವರು ಆಟ ಆಡುವಾಗ ಪ್ರೇಕ್ಷಕರು ಕೂಡ ದುಡ್ಡು ಕಟ್ಟಿ ಜೂಜಿನಲ್ಲಿ ಸಕ್ರಿಯವಾಗಿ ಭಾಗವಹಿಸುವುದುಂಟು. ಆಟ ಮೋಜಿನಿಂದ ಸಾಗುತ್ತದೆ.

**ತ್ರಿರಂಗ :** ಇದು ಇಬ್ಬರೇ ಆಟಗಾರರು ಆಡುವ ಆಟ. ನೆಲದ ಮೇಲೆ ಮನೆಯನ್ನು ಬರೆದು ಆಟಗಾರರಿಬ್ಬರೂ ಎದುರುಬದುರಾಗಿ ಕುಳಿತುಕೊಳ್ಳುತ್ತಾರೆ. ಪ್ರತಿಯೊಬ್ಬನ ಹತ್ತಿರವೂ ಒಂಬತ್ತು ಕಾಯಿಗಳು ಇರುತ್ತವೆ. ಇವರು ಕಾಯಿ ಇಡಬೇಕಾದರೆ ನೇರ ರೇಖೆಯೇ ಆಗಿರಬೇಕು ಮತ್ತು ಮೂರು ಕೇಂದ್ರಗಳೇ ಇರಬೇಕು. ಸಿಕ್ಕಾಪಟ್ಟೆಯಾಗಿ ಎಲ್ಲೆಂದರಲ್ಲಿ ಕಾಯನ್ನು ಮೂರು ಕೇಂದ್ರಗಳಿರುವ ಒಂದು ನೇರ ರೇಖೆಯಲ್ಲಿ ಒಬ್ಬನೇ ಮೂರು ಕಾಯಿಗಳನ್ನು ಇಟ್ಟುಬಿಟ್ಟರೆ, ಎದುರು ಪಕ್ಷದವನು ಒಂದು ಕಾಯನ್ನು ಗೆದ್ದುಕೊಳ್ಳುತ್ತಾನೆ. ಆದರೆ ಎದುರು ಪಕ್ಷದವನು ಇವನಿಗೆ ಇಂಥ ಅವಕಾಶ ಮಾಡಿಕೊಡದೆ ಇವನು ಆ ರೇಖೆಯ ಒಂದೋ ಎರಡೋ ಕಾಯನ್ನು ಇಟ್ಟು ಕೂಡಲೇ ಜಾಗರೂಕನಾಗಿ ತನ್ನ ಒಂದು ಕಾಯನ್ನು ಆ ರೇಖೆಯ ಇನ್ನೊಂದು ಕೇಂದ್ರಕ್ಕೆ ಇಟ್ಟುಬಿಡುವನು. ಆಗ ಯಾರ ಕಾಯನ್ನು ಯಾರೋ ಹೊಡೆದುಕೊಳ್ಳಲು ಸಾಧ್ಯವಾಗುವುದಿಲ್ಲ. ಹೀಗೆ ಯಾರಾದರೊಬ್ಬ ಕಾಯಿಗಳನ್ನು ಕಳೆದುಕೊಳ್ಳುವವರೆಗೆ ಆಟ ನಡೆಯುತ್ತದೆ. ಯಾರೂ ಕಾಯನ್ನು ಹೊಡೆಯಲು ಸಾಧ್ಯವಾಗದೆ ಮನೆಗಳನ್ನು ಕಟ್ಟಿ ನಿಲ್ಲಿಸಿದರೆ ಆಗ ಇಬ್ಬರೂ ತಮ್ಮತಮ್ಮ ಕಾಯಿಗಳನ್ನು ಎತ್ತಿಕೊಂಡು ಮೊದಲಿಂದ ಆಟವಾಡುತ್ತಾರೆ.

**ಬಚ್ಚದ ಕಲ್ಲು :** ಆಟಗಾರರು ಬಚ್ಚ ಮತ್ತು ಕಲ್ಲು ಸಾಧನಗಳ ಜೊತೆಯಲ್ಲಿ ಬರಬೇಕು. ಸಿಗರೇಟಿನ ಅಥವಾ ಬೆಂಕಿಪೊಟ್ಟಣದ ಎಲೆಗಳಿಗೆ ಬಚ್ಚ ಎಂದು ಹೆಸರು. ಇವುಗಳಿಗೆ ಟ್ರಿಕ್ಕಿ ಎಂದೂ ಹೆಸರುಂಟು. ಇದರಿಂದ ಈ ಆಟಕ್ಕೆ ಟ್ರಿಕ್ಕಿ ಆಟ ಎಂತಲೂ ಕರೆವರು. ಇಲ್ಲಿ ಬಚ್ಚ ಅಥವಾ ಟ್ರಿಕ್ಕಿಗಳೇ ಜೂಜಿನ ಎಲೆಗಳು. ಅವುಗಳನ್ನು ಆಟಗಾರರು ಸಂಗ್ರಹಿಸಿಕೊಂಡು ಆಟಕ್ಕೆ ಬರುತ್ತಾರೆ. ಆಟವಾಡುವುದಕ್ಕೆ ಅಗಲ ಬಾಯುಳ್ಳ ಚಪ್ಪಟೆಕಲ್ಲನ್ನು ತರಬೇಕು. ಹೀಗೆ ಆಟಕ್ಕೆ ಬಂದವರು ಮೊದಲು ವೃತ್ತಾಕಾರದ 'ಅಂಡ'ವೊಂದನ್ನು ನಿರ್ಮಿಸಿ, ಅದರಲ್ಲಿ ನಿಯತ ಸಂಖ್ಯೆಯ ಬಚ್ಚಗಳನ್ನು ಹಾಕುತ್ತಾರೆ. ಒಬ್ಬರು ಹಾಕಿದಷ್ಟನ್ನು ಎಲ್ಲರೂ ಹಾಕಬೇಕು. ಹೀಗೆ ಎಲ್ಲರೂ ಹಾಕಿದ ಮೇಲೆ ಎಲ್ಲ ಆಟಗಾರರೂ ನಿಯಮಿತವಾದ ದೂರದಲ್ಲಿ ನಿಂತು ಅಲ್ಲಿಂದ ಬಚ್ಚದ ಕಲ್ಲನ್ನು ಬಿಡುತ್ತಾರೆ. ಹಾಗೆ ಬಿಟ್ಟಾಗ ಕಲ್ಲುಗಳು ಒಂದಕ್ಕೊಂದು ಸ್ಪರ್ಶಿಸಿದರೆ ಅಥವಾ ಪಟ್ಟಿಯೊಳಗೆ ಬಿದ್ದರೆ ಮತ್ತೆ ಎಲ್ಲರೂ ಬಿಡಬೇಕಾಗುತ್ತದೆ. ವೃತ್ತಕ್ಕೆ ತೀರ ಹತ್ತಿರದಲ್ಲಿ ಯಾರ ಕಲ್ಲು ಬಿದ್ದಿರುತ್ತದೋ ಅವರು ಮೊದಲು ಆಟವಾಡಬೇಕಾಗುತ್ತದೆ. ಅನಂತರ ಮುಂದಿನ ಹತ್ತಿರದವನು ಹೊಡೆಯುತ್ತಾನೆ. ಹೀಗೆ ಆಟದ ಸರದಿ ಒಬ್ಬರಿಂದ ಒಬ್ಬರಿಗೆ ಬರುತ್ತದೆ. ಆಟ ಬಂದವನು ಬಚ್ಚದ ಕಲ್ಲಿನಿಂದ ಬಚ್ಚಗಳನ್ನು ವೃತ್ತದಿಂದ ಹೊರಗೆ ಹಾರುವಂತೆ ಹೊಡೆಯುವನು. ಹೊರಗೆ ಹಾರಿದ ಬಚ್ಚಗಳೆಲ್ಲವೂ ಅವನಿಗೆ ಸೇರಿದಂತೆ. ಹೀಗೆ ಆಟವಾಡುತ್ತಿರುವಾಗ ಬಚ್ಚಗಳು ಹೊರಗೆ ಬರದೆ ಹೋದರೆ, ಅವನ ಆಟ ಮುಗಿಯುತ್ತದೆ. ಬೇರೊಬ್ಬ ಹೊಡೆಯುತ್ತಾನೆ. ಹೀಗೆ ಸರದಿ ಪ್ರಕಾರ ಬಚ್ಚಗಳೆಲ್ಲ ವೃತ್ತದಿಂದ ಹೊರಗೆ ಬರುವ ತನಕ ಆಟ ಸಾಗುತ್ತದೆ. ಅವರು ಗೆದ್ದ ಬಚ್ಚಗಳೆಲ್ಲ ಅವರೇ ಇಟ್ಟುಕೊಳ್ಳುವರು. ಬಚ್ಚಗಳನ್ನೆಲ್ಲ ಗೆದ್ದುಕೊಂಡ ಮೇಲೆ ಮತ್ತೆ ನಿಗದಿಯಾದ ಬಚ್ಚಗಳನ್ನು ಹಾಕಿ ಆಟ ಪ್ರಾರಂಭಿಸುತ್ತಾರೆ. ಹೀಗೆ ಆಟ ನಿರಂತರವಾಗಿ ಸಾಗುತ್ತದೆ. ಇದರಲ್ಲಿ ಕೈ ಚಳಕ ಹಾಗೂ ಗುರಿ ಬಹಳ ಮುಖ್ಯ. ಗಂಡುಮಕ್ಕಳು ಮಾತ್ರ ಇದರಲ್ಲಿ ಭಾಗವಹಿಸುವರು.

**ಸೀಯುವ ಆಟ :** ಇದಕ್ಕೆ ಇಬ್ಬರಾದರೂ ಆಟಗಾರರು ಇರಬೇಕು. ಹೆಚ್ಚು ಜನ ಇದ್ದಷ್ಟೂ ಆಟದಲ್ಲಿ ಉತ್ಸುಕತೆ ಹೆಚ್ಚು. ಇದರಲ್ಲಿ ಭಾಗವಹಿಸುವವರು ಹುಡುಗರು. ಅವರು ಹೆಚ್ಚು ಸಮರ್ಥರಾಗಿರಬೇಕಾಗುತ್ತದೆ. ಮೊದಲು ಒಂದು ಗೆರೆ ಎಳೆಯುವರು. ಆಟದ ಸ್ಪರ್ಧಿಗಳು ಎಲ್ಲರೂ ಗೆರೆಯ ಮೇಲೆ ಕೈಗಳನ್ನು ಊರಿಕೊಂಡು ಕಾಲುಗಳನ್ನು ಹಿಂದಕ್ಕೆ ನೀಡಿ ಬಗ್ಗುವರು. ಅನಂತರ ಬಲಗಾಲಿಗೆ ಸಪುತೂಕದ ಕೋಲೊಂದನ್ನು ಆರಿಸಿಕೊಂಡು, ಹೆಬ್ಬೆರಳು ಮತ್ತು ಉದ್ದನೆಯ ಬೆರಳುಗಳ ನಡುವೆ ಸಿಕ್ಕಿಸಿ, ಅದನ್ನು ರಭಸದಿಂದ ಹಿಂದಿನಿಂದ ಮುಂದಕ್ಕೆ ಎಸೆಯಬೇಕು. ಯಾರದು ಅತಿ ದೂರಕ್ಕೆ ಹೋಗಿರುತ್ತದೋ ಅವರು ಗೆದ್ದಹಾಗೆ. ಹೀಗೆ ಒಬ್ಬ ಉಳಿಯುವ ತನಕ ಆಟ ಮುಂದುವರಿಯುತ್ತದೆ. ಆಮೇಲೆ ಪುನಃ ಆಟ ಮೊದಲಿಂದ ಪ್ರಾರಂಭವಾಗುತ್ತದೆ. ಈ ಆಟ ಕೆಲವು ಮಟ್ಟಿಗೆ ಬಟ್ಟೆಯಾಟವನ್ನು ಹೋಲುತ್ತದೆ.

**ನರಿಕೊಂತನ ಆಟ :** ಇಲ್ಲಿಯೂ ಕೈ ತಾಳ ಹಾಕುವುದರ ಮೂಲಕ ಪಕ್ಷ ನಿರ್ಧಾರವಾಗುತ್ತದೆ. ನೆಲಕ್ಕೆ ಸುಮಾರು ಕಡ್ಡಿಗಳನ್ನು ನೆಟ್ಟಿರುತ್ತಾರೆ. ಅವುಗಳನ್ನು ಕಾಯುವವನು ಒಬ್ಬ. ಉಳಿದವರೆಲ್ಲ ಕಡ್ಡಿಗಳನ್ನು ಕೀಳಲಿಕ್ಕೆ ಪ್ರಯತ್ನಿಸುವರು. ಹೀಗೆ ಕಡ್ಡಿಗಳನ್ನು ಕೀಳಲು ಬಂದಾಗ, ಕಾಯುವವನು ಅವರನ್ನು ಹಿಡಿದರೆ, ಹಿಡಿಸಿಕೊಂಡವರೇ ಕಡ್ಡಿಗಳನ್ನು ಕಾಯಬೇಕಾಗುತ್ತದೆ. ಕಾಯುವವನು ಹಿಡಿಯಲು ಹೋದಾಗ, ಉಳಿದವರು ಸುಮ್ಮನಿರದೆ ಬೇರೆ ಕಡೆಯಿಂದ ಬಂದು ಕಡ್ಡಿಯನ್ನು ಕೀಳುವರು. ಅಷ್ಟು ಜನರನ್ನೂ ಹೆದರಿಸಿ ಕಡ್ಡಿಗಳನ್ನು ಕಾಯಬೇಕಾಗುತ್ತದೆ.

**ಬಟ್ಟೆ ಆಟ :** ಇದಕ್ಕೆ ಕುದುರೆ ಆಟ ಅಥವಾ ಸವಾರಿ ಆಟ ಎಂದೂ ಹೆಸರಿದೆ. ಇದರಲ್ಲಿ ಭಾಗವಹಿಸುವವರೆಲ್ಲ ಹುಡುಗರೇ. ಈ ಆಟಕ್ಕೆ ಇಬ್ಬರಿಗಿಂತ ಹೆಚ್ಚು ಮಂದಿ ಆಟಗಾರರಿರಬೇಕು. ಹೆಚ್ಚು ಜನ ಇದ್ದಷ್ಟು ಆಟ ರಂಗೇರುತ್ತದೆ. ಮೊದಲು ಆಟಗಾರರು ಎರಡು ಪಕ್ಷಗಳನ್ನು ಮಾಡಿಕೊಳ್ಳುತ್ತಾರೆ. ಪಕ್ಷ ನಿರ್ಧಾರವಾಗುವುದೂ ಒಂದು ವಿಶೇಷ ರೀತಿಯಲ್ಲಿ. ಹೆಚ್ಚು ಜನರಿದ್ದಾಗ ಇಬ್ಬರು ಪ್ರಮುಖರಾಗಿ ನಿರ್ಧಾರವಾಗುತ್ತದೆ. ಆ ಇಬ್ಬರು ಉಳಿದವರನ್ನು ಸಮಭಾಗವಾಗಿ ತಮ್ಮ ತಮ್ಮ ಪಕ್ಷಕ್ಕೆ ಸೇರಿಸಿಕೊಳ್ಳಬೇಕಾಗುತ್ತದೆ. ಆ ಇಬ್ಬರು ಪ್ರಮುಖರೂ ಟಾಸ್ ಹಾಕಿ ಯಾರು ಆ ಗುಂಪಿನಿಂದ ಮೊದಲು ತಮ್ಮ ಕಡೆಗೆ ಆರಿಸಿಕೊಳ್ಳಬೇಕೆಂಬ ಸರದಿಯನ್ನು ನಿರ್ಧರಿಸುವರು. ಟಾಸ್‌ನಲ್ಲಿ ಗೆದ್ದವನು ತನಗೆ ಬೇಕಾದವರನ್ನು ಕರೆದು ತನ್ನ ಪಕ್ಷವನ್ನು ಕಟ್ಟಿಕೊಳ್ಳುತ್ತಾನೆ. ಉಳಿದವರು ಇನ್ನೊಬ್ಬನ ಪಕ್ಷಕ್ಕೆ ಸೇರಿಕೊಳ್ಳುತ್ತಾರೆ. ಹೀಗೆ ಪಕ್ಷ ನಿರ್ಧಾರವಾದ ಅನಂತರ ಯಾರು ಆಟ ಆಡಬೇಕು, ಯಾರು ಹಿಡಿಯಬೇಕೆಂಬುದನ್ನು ಅದೇ ಟಾಸ್‌ನಿಂದಲೇ ನಿರ್ಧರಿಸುತ್ತಾರೆ. ಅಥವಾ ಪರಸ್ಪರ ಒಪ್ಪಿಗೆಯಿಂದಲೂ ಇದು ಸಾಧ್ಯವಾಗಬಹುದು. ಹೀಗೆ ಮಾಡಿ ಕೊಂಡಮೇಲೆ ಆಟ ಪ್ರಾರಂಭವಾಗುತ್ತದೆ. ಮೊದಲು ಉದ್ದನೆಯ ಗೆರೆಯೊಂದನ್ನು ಎಳೆಯುವರು. ಗೆರೆಯ ಆಚೆ ಈಚೆ ಪಕ್ಷ ಪ್ರತಿಪಕ್ಷಗಳವರು ನಿಂತುಕೊಳ್ಳುವರು. ಆಗ ಗೆದ್ದವರು ಆಟ ಪ್ರಾರಂಭಿಸುವರು. ಆಟದ ಮುಖ್ಯ ಸಾಧನ ಹಗ್ಗ ಹೊಸೆದ ಹಾಗೆ

ನುಲಿದಿರುವ ಚೌಕ (ಟವಲ್). ಚೌಕವನ್ನು ನುಲಿದು ಚೂಪಾದ ತುದಿಗೆ ಒಂದು ದಾರ ಕಟ್ಟುವರು. ಆಗ ಗೆದ್ದವರಲ್ಲಿ ಒಬ್ಬ ಬಂದು ಚೌಕದ ಚೂಪಾದ ತುದಿಯಲ್ಲಿ ತನ್ನ ಬಲಗಾಲಿನ ಹೆಬ್ಬೆರಳನ್ನು ಪಕ್ಕದ ಬೆರಳುಗಳ ಮಧ್ಯೆ ಸಿಕ್ಕಿಸಿ ಗೆರೆಗೆ ಸಮೀಪಿಸಿದಂತೆ ಕೈಗಳೆರಡನ್ನೂ ಊರಿ ರಭಸದಿಂದ ಮುಂದಕ್ಕೆ ಎಸೆಯಬೇಕು. ಹಾಗೆ ಎಸೆಯುವಾಗ ಬಟ್ಟೆ ಹಾಕಿದ ಗೆರೆಯಿಂದ ಹೊರಗೆ ಹೋಗದೆ ಒಳಗೆ ಬಿದ್ದರೆ ಅದು ಲೆಕ್ಕಕ್ಕಿಲ್ಲ. ಹಾಗೆ ಅವನಿಗೆ ಮೂರು ಸರದಿಗಳು ಮಾತ್ರ ಇರುತ್ತವೆ. ಆ ಮೂರರಲ್ಲೂ ಎಸೆಯದಿದ್ದರೆ ಅವನು ಹೊರಬಂದು, ಅವರ ಕಡೆಯ ಇನ್ನೊಬ್ಬನಿಗೆ ಆಟವನ್ನು ಬಿಟ್ಟುಕೊಡಬೇಕಾಗುತ್ತದೆ. ಹಾಗಾದರೆ ಅವನು ಎಸೆದಾಗ ಏನಾದರೂ ಎದುರು ಪಕ್ಷದವರು ಅದನ್ನು ಹಿಡಿದುಕೊಂಡರೆ (ನೆಲ ಸೋಕದಂತೆ) ಆಟ ಆಡುವವನು ಹೊರಬರಬೇಕಾಗುತ್ತದೆ. ಹಾಗೆ ಹಿಡಿದುಕೊಳ್ಳದೆ ನೆಲಕ್ಕೆ ಬಿಟ್ಟು ಕೊಟ್ಟರೆ ನಿಯತವಾದ ಸಂಖ್ಯೆಯ ತನಕ ಲೆಕ್ಕ ಮಾಡುತ್ತ ಹೋಗುತ್ತಾರೆ. ಆ ಸಂಖ್ಯೆಯನ್ನು ತುಂಬಿಬಿಟ್ಟರೆ, ಕೂಡಲೇ ಸೋತವನು ಒಬ್ಬನನ್ನು ಕುದುರೆ ಕೂರಿಸಬೇಕಾಗುತ್ತದೆ. ಅಂದರೆ ಒಬ್ಬ ಬಗ್ಗುವುದು, ಅವನ ಮೇಲೆ ಗೆದ್ದವನೊಬ್ಬ ಸವಾರಿ ಕೂತುಕೊಳ್ಳುವನು. ಆಟ ಮಾತ್ರ ಸಾಗುತ್ತಲೇ ಇರುತ್ತದೆ. ಸೋತವರು ಬಟ್ಟೆಯನ್ನು ಹಿಡಿದು ಆಟವಾಡುತ್ತಿದ್ದವನನ್ನು ಔಟ್ ಮಾಡಿಬಿಟ್ಟರೆ ಆಗ ಕುದುರೆ ಕೂತವನು ಮೇಲೆದ್ದು ಮತ್ತೆ ತನ್ನ ಗುಂಪನ್ನು ಸೇರಿಕೊಳ್ಳುತ್ತಾನೆ. ಹೀಗಾಗಿ ಯಾವುದಾದರೂ ಒಂದು ಪಕ್ಷ ಔಟಾಗಿಯೋ ಅಥವಾ ಗೆದ್ದೊ ಆಟವನ್ನು ಮುಕ್ತಾಯಕ್ಕೆ ತರುವರು. ಆಗ ಹಿಡಿಯುತ್ತಿದ್ದ ಪಕ್ಷ ಬಟ್ಟೆ ಎಸೆಯುವುದಕ್ಕೂ ಎಸೆಯುತ್ತಿದ್ದ ಪಕ್ಷ ಹಿಡಿಯುವುದಕ್ಕೂ ನಿಂತುಕೊಳ್ಳುತ್ತವೆ. ಹೀಗೆ ಆಟ ನಿರಂತರವಾಗಿ ಸಾಗುತ್ತದೆ.

**ಹುಳಸಪ್ಪನ ಆಟ :** ಕಣ್ಣು ಮುಚ್ಚಿ ತಲೆಗೂದಲನ್ನು ಎಳೆಯುವುದು, ಎಳೆದವರ ಹೆಸರನ್ನು ಹೇಳುವ ತನಕವೂ ಹುಳಿ ಹಿಂಡೋದು. ಇದಕ್ಕೆ ಹುಳಸಪ್ಪನಾಟ ಎಂದು ಹೆಸರು.

ಜನಪದ ಆಟಗಳನ್ನು ಕುರಿತಂತೆ ಅರವಿಂದ ಮಾಲಗತ್ತಿಯವರು ಸಂಶೋಧನೆ ನಡೆಸಿ ಮಹಾಪ್ರಬಂಧ ರಚಿಸಿದ್ದಾರೆ, ಇದು ಉತ್ತರ ಕರ್ನಾಟಕದ ಜನಪದ ಕಲೆಗಳನ್ನು ಕುರಿತಂತೆ ಅನನ್ಯ ದಾಖಲೆಯಾಗಿದೆ. *

**ಜನಪದ ಕಥೆ :** ಜನಪದ ಸಾಹಿತ್ಯದ ಒಂದು ಪ್ರಮುಖ ಪ್ರಕಾರ. ಜನಪದ ಕಥೆಗಳನ್ನು ಸಂಕೀರ್ಣ ಜನಪದ ಕಥೆಗಳು, ಸರಳ ಜನಪದ ಕಥೆಗಳು ಎಂದು ಎರಡು ಪ್ರಧಾನ ವರ್ಗಗಳಾಗಿ ವಿಭಾಗಿಸಲಾಗಿದೆ. ಸಂಕೀರ್ಣ ಜನಪದ ಕಥೆ ಹಲವಾರು ಆಶಯಗಳ ಮೇಲೆ ಬೆಳವಣಿಗೆಯನ್ನು ಸಾಧಿಸಿಕೊಳ್ಳುತ್ತದೆ. ಸಂಕೀರ್ಣ ಕಥೆಗಳನ್ನು ಅತಿಮಾನುಷ ಕಥೆಗಳು, ಮಾಂತ್ರಿಕ ಅಥವಾ ಅದ್ಭುತ ಕಥೆಗಳು, ರಮ್ಯ ಕಥೆಗಳು, ವಾಸ್ತವಿಕ ಕಥೆಗಳು - ಹೀಗೆ ಪ್ರಧಾನ ವರ್ಗಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಕಿನ್ನರಕಥೆಗಳು, ಕಟ್ಟುಕಥೆಗಳು ಎಂಬ ಹೆಸರುಗಳೂ ಈ ವರ್ಗದ ಕಥೆಗಳಿಗೇ ಅನ್ವಯವಾಗುತ್ತವೆ. ಈ ಗುಂಪಿನ ಎಲ್ಲ ಬಗೆಯ ಕಥೆಗಳೂ ಕನ್ನಡದಲ್ಲಿ ಕಂಡುಬಂದಿವೆ. ಅತ್ಯುತ್ತಮ ಮಾದರಿಗಳೂ ದೊರೆತಿವೆ. ಸಾಕಷ್ಟು ಸುದೀರ್ಘ ಕಥೆಗಳೂ ಗುರುತಿಸಲ್ಪಟ್ಟಿವೆ. ಕನ್ನಡದ ತಕ್ಕೊಂಡಪ್ಪನ ಕಥೆ, ಹೂ ಕೊಟ್ಟ ಚದುರೆ ಈ ಕಥೆಗಳಷ್ಟು ಸುದೀರ್ಘವೂ ಸಂಕೀರ್ಣವೂ ಆದ ಕಥೆಗಳು ಇತರೆಡೆಗಳಲ್ಲಿ ವಿರಳವೆಂದೇ ಹೇಳಬೇಕು.

ಕನ್ನಡದ ಅತಿಮಾನುಷ ಕಥೆಗಳಲ್ಲಿ ಅತಿಮಾನುಷ ಪತಿಗಳು, ಅತಿಮಾನುಷ ಪತ್ನಿಯರು, ಅತಿಮಾನುಷ ವಿರೋಧಿಗಳು ಹಾಗೂ ಸಹಾಯಕರು - ಈ ನಾಲ್ಕು ಗುಂಪಿಗೂ ಉತ್ತಮ ಸಂಖ್ಯೆಯ ಕಥೆಗಳು ಲಭ್ಯವಾಗಿವೆ. ಅತಿಮಾನುಷ ಪತಿಗಳಲ್ಲಿ ಸೂರ್ಯ, ಮಳೆರಾಯ, ದೇವೇಂದ್ರರಾಯನ ಮಗ ಮುಂತಾದವರು ಮಾನವ ಲೋಕದ ಸಂಬಂಧವನ್ನು ಬೆಳೆಸಿದ ಸಂದರ್ಭಗಳು ಕಂಡುಬರುತ್ತವೆ. ಅತಿಮಾನುಷ ಪತ್ನಿಯರಲ್ಲಿ ದೇವಗನ್ನೆಯರು, ಅಪೂರ್ವ ರತ್ನ ಕನ್ಯೆಯರು, ನಾಗ ಲೋಕದ ನಾಗೇಂದ್ರರಾಯನ ಮಕ್ಕಳು, ದೇವಲೋಕದ ದೇವೇಂದ್ರರಾಯನ ಮಕ್ಕಳು, ಬಿದರೆ ಒಳಗಿನ ಚದುರೆಯರು ಸಾಮಾನ್ಯ ಮಾನವ ನಾಯಕರನ್ನು ಕೈಹಿಡಿಯುವ ಕುತೂಹಲಕಾರಿ ಘಟನೆಗಳು ಕಾಣಸಿಗುತ್ತವೆ. ಈ ಕಥೆಗಳೆಲ್ಲ ದೇವಲೋಕ, ಮಾನವ ಲೋಕಗಳ ಸಂಬಂಧವನ್ನು ಕಲ್ಪಿಸಿಕೊಂಡು ಕಲ್ಪನಾರಮ್ಯ ರಚನೆಗಳಾಗಿ ಮೈವೆತ್ತಿವೆ. ಕಥಾನಾಯಕ ಅಥವಾ ನಾಯಕಿಯರು ತಮ್ಮ ಸಾಹಸಯಾತ್ರೆಯಲ್ಲಿ ಅನೇಕ ಅಡ್ಡಿ ಆತಂಕಗಳನ್ನು ಎದುರಿಸುತ್ತ ಪರೀಕ್ಷೆಗಳನ್ನು ಗೆಲ್ಲುತ್ತ, ಅತ್ಯಂತ ಆಶ್ಚರ್ಯಕರ ರೀತಿಯಲ್ಲಿ ಯಶಸ್ಸನ್ನು ಸಾಧಿಸಿ ತಮ್ಮ ಪ್ರಿಯವ್ಯಕ್ತಿಗಳನ್ನು ಸೇರುತ್ತಾರೆ. ಕನ್ನಡ ಜನಪದ ಕಥೆಗಳ ಅತ್ಯಂತ ವರ್ಣರಂಜಿತವಾದ ಭಾಗವೇ ಈ ಅತಿಮಾನುಷ ಕಥೆಗಳ ವರ್ಗ.

ಅತಿಮಾನುಷ ಕಥೆಗಳಲ್ಲಿ ಅತಿಮಾನುಷ ವಿರೋಧಿಗಳು, ಅತಿಮಾನುಷ ಸಹಾಯಕರೂ ಬರುವುದುಂಟು. ಈ ಪಾತ್ರಗಳೆಲ್ಲ ಕ್ರೌರ್ಯ, ದರ್ಪ, ಅಟ್ಟಹಾಸ ಅಥವಾ ಮೌಢ್ಯಗಳಿಂದ ಕೂಡಿರುತ್ತವೆ. ನಾಯಕ ನಾನಾ ಚಮತ್ಕಾರಗಳಿಂದ ಅವನ್ನು ಗೆಲ್ಲುತ್ತಾನೆ. ಒಂದೇ ಕಥೆಯಲ್ಲಿ ಹಲವು ವಿರೋಧಿಗಳು ಬರಬಹುದು. ಹಲವು ಸಹಾಯಕರು ಬರಬಹುದು. ಒಬ್ಬನೇ ವಿರೋಧಿ ಇದ್ದರೂ ಇರಬಹುದು. ಕುಂಟನ ಸಾಹಸ ಎಂಬ ಕಥೆಯಲ್ಲಿ ಬರುವ ರಾಕ್ಷಸ ಅತಿಮಾನುಷ ವಿರೋಧಿ. ಗುಳಕಾಯಿ ತಮ್ಮ ಎಂಬ ಕಥೆಯಲ್ಲಿ ಗುಳಕಾಯಿಯೇ ಅತಿಮಾನುಷ ಸಹಾಯಕ.

ಕನ್ನಡ ಜನಪದ ಕಥೆಗಳಲ್ಲಿ ನಾಯಿಯಾದರೂ ತಾಯಿ, ಮಡಿದ ಗಂಡನ ಪಡೆದ ಚೆಲುವೆ, ಗುಲಗಂಜಮ್ಮ, ಚಿಕ್ಕಮ್ಮಿ ದೊಡ್ಡಮ್ಮಿ ಮುಂತಾದ ಕಥೆಗಳ ಭಿನ್ನರೂಪಗಳು ಬೇರೆಬೇರೆ ಪ್ರದೇಶಗಳಲ್ಲಿ ದೊರೆಯುತ್ತವೆ. ನಾಗಮಾಣಿಕ್ಯ, ದೊಂಬರ ಹುಡುಗ - ಈ ಎರಡು ಕಥೆಗಳು ಎಲ್ಲ ಜಿಲ್ಲೆಗಳಲ್ಲೂ ಕಂಡುಬಂದಿವೆ. ಮಾಂತ್ರಿಕ ಕಥೆಗಳ ಸಾಲಿನಲ್ಲಿ ಬರುವ ಈ ಎರಡು ಕಥೆಗಳು ಜಗತ್ತಿನ ಜಾನಪದ ವಿದ್ವಾಂಸರ ಆಸಕ್ತಿಯನ್ನೂ ಸೆಳೆದಿವೆ. ದೊಂಬರ ಹುಡುಗ ಎಂಬ ಕಥೆ ಆರ್ನೆ ಅಂಟಿ ಮತ್ತು ಸ್ಟಿತ್ ಥಾಂಸನ್ ವರ್ಗೀಕರಣದಲ್ಲಿ 325ನೆಯ ಸಂಖ್ಯೆಯನ್ನು ಪಡೆದಿದೆ. ಈ ಕಥೆಯ ಬಗ್ಗೆ ಸಾಕಷ್ಟು ಚರ್ಚೆಗಳೂ ನಡೆದು, ಬೆನ್ಫೆಯ ಕಾಲದಿಂದ ಇಲ್ಲಿಯವರೆಗೆ ಇದು ಗಮನಾರ್ಹ ಕಥೆಯಾಗಿಯೇ ಉಳಿದಿದೆ. ಇದರ ಅತ್ಯುತ್ತಮ ರೂಪಗಳು ಕನ್ನಡದಲ್ಲಿ ಕಂಡುಬಂದಿವೆ. ನಾಗಮಾಣಿಕ್ಯ (5600) ಕಥೆ ಕೂಡ ಇಷ್ಟೇ ಜನಪ್ರಿಯವಾದುದು. ಅಲ್ಲಾಉದ್ದೀನನ ಅದ್ಭುತ ದೀಪ ಕಥೆಯನ್ನು ಹೋಲುವ ಇದು ವಿಶ್ವಮಾದರಿಗಿಂತ ಸುಧಾರಿತ ರೂಪದಲ್ಲಿ ಕನ್ನಡದಲ್ಲಿ ದೊರೆತಿದೆ. ಆರಂಭದ ತಾಯಿ-ಮಗ ಇವರ ಪ್ರಸಂಗ ಕನ್ನಡಕ್ಕೆ ವಿಶಿಷ್ಟವಾದುದು.

ಸರಳ ಕಥೆಗಳು ಸಾಕಷ್ಟು ಸಂಗ್ರಹವಾಗಿರುತ್ತವೆ; ಒಂದು ಅಥವಾ ಹೆಚ್ಚು ಆಶಯಗಳ ಮೇಲೆ ಬೆಳೆದುಕೊಂಡಿರುತ್ತವೆ. ಕನ್ನಡದ ಸರಳ ಜನಪದ ಕಥೆಗಳಲ್ಲಿ ಬುದ್ಧಿವಂತರ ಕಥೆಗಳು, ದಡ್ಡರ ಕಥೆಗಳು, ಪ್ರಾಣಿಕಥೆಗಳು, ವಿನೋದ ಕಥೆಗಳು, ಸೂತ್ರ ಕಥೆಗಳು, ಸಂಚಿತ ಕಥೆಗಳು - ಹೀಗೆ ಎಲ್ಲ ವರ್ಗದ ಕಥೆಗಳೂ ಕಾಣಬರುತ್ತವೆ.

ಬುದ್ಧಿವಂತಿಕೆಯ ಕಥೆಗಳ ಸಾಲಿನಲ್ಲಿ ಕನ್ನಡ ಕಥೆಗಳಿಗೆ ಒಂದು ಗಣ್ಯಸ್ಥಾನವೇ ಲಭ್ಯವಾಗಬೇಕು. ಸಾಮಾನ್ಯವಾಗಿ ಜನಪದ ಕಥೆಗಳಲ್ಲಿ ದಡ್ಡರೂ ಮೂರ್ಖರೂ ಕೆಲವು ಆಕಸ್ಮಿಕ ಘಟನೆಗಳಿಂದ ಬುದ್ಧಿವಂತರಾಗಿ ಕಂಡುಬರುತ್ತಾರೆ. ಕೆಲವು ಅನಿರೀಕ್ಷಿತ ಫಲಗಳನ್ನು ಪಡೆಯುತ್ತಾರೆ. ಈ ಎರಡು ಗುಂಪಿನ ಕಥೆಗಳಿಗೂ ಕನ್ನಡ ಕಥೆಗಳ ಕಣಜದಲ್ಲಿ ಸಾಕಷ್ಟು ನಿದರ್ಶನಗಳಿವೆ. ಕೂಚಂಭಟ್ಟನ ಕಥೆ, ಗೊಲ್ಲನ ಉತ್ತರ, ಚದುರ ಚನ್ನಯ್ಯ ಮುಂತಾದ ಕಥೆಗಳು ಬುದ್ಧಿವಂತರ ಕಥೆಗಳಿಗೆ ಅತ್ಯುತ್ತಮ ನಿದರ್ಶನಗಳಾಗಿವೆ. ಇಬ್ಬರು ಹುಡುಗರ ಸಮಸ್ಯೆಯನ್ನು ಸರಳವಾಗಿ ಬಿಡಿಸಿದ ಗೊಲ್ಲಗೌಡ, ಮುದುಕಿಯನ್ನು ಮೋಸಗೊಳಿಸಿ ವಡೆಗಳನ್ನು ಕದ್ದು ಪಾರಾದ ಚದುರ ಚನ್ನಯ್ಯ, ಶಾಸ್ತ್ರಕಾರನಂತೆ ನಟಿಸಿ ಐಶ್ವರ್ಯವನ್ನು ಪಡೆದ ಕೂಚಂಭಟ್ಟ - ಇಂಥ ಪಾತ್ರಗಳು ನಮ್ಮ ಮನಸ್ಸಿನ ಮೇಲೆ ಅಚ್ಚೊತ್ತಿ ನಿಲ್ಲುತ್ತವೆ. ಇಂಥ ನೂರಾರು ಬುದ್ಧಿವಂತರು ಕನ್ನಡ ಕಥೆಗಳಲ್ಲಿ ಕಂಡುಬರುತ್ತಾರೆ. ಬುದ್ಧಿವಂತಿಕೆಯ ಕಥೆಗಳ ಸಾಲಿನಲ್ಲಿಯೇ ವಿನೋದ ಕಥೆಗಳೂ ಬರುತ್ತವೆ. ಈ ಎರಡು ಕಥಾವರ್ಗಗಳಲ್ಲಿಯೂ ಪರಸ್ಪರ ಸಂಬಂಧ ಇದ್ದೇ ಇದೆ. ನೆಂಟನನ್ನು ಕಟ್ಟು, ಘಾಟಿ ಸೊಸೆ, ಯಾಡಕುಂಬಾರ ಮುಂತಾದ ಅನೇಕ ವಿನೋದ ಕಥೆಗಳನ್ನು ಇಲ್ಲಿ ಹೆಸರಿಸಬಹುದು. ಕೊಂಗನಹಳ್ಳಿ ದಾಸಯ್ಯ, ಮಂಜುಗಣ್ಣನ ಮಾಯಣ್ಣ - ಈ ಕಥೆಗಳು ಜನಪ್ರಿಯವಾದ ಚಮತ್ಕಾರಯುಕ್ತ ವಿನೋದ ಕಥೆಗಳು, ಒಂದು ರಾತ್ರಿಯಲ್ಲಿ ನಾಲ್ಕು ಜನ ಹೆಂಗಸರನ್ನೂ ವಂಚಿಸಿದ ದಾಸಯ್ಯನ ಕಥೆಯಲ್ಲಿ ಹೆಜ್ಜೆಹೆಜ್ಜೆಗೂ ಹಾಸ್ಯದ ಹೊನಲು ಉಕ್ಕುತ್ತದೆ. ಮಂಜು

ಗಣ್ಣಿನ ಅಳಿಯ ಮಾಯಣ್ಣ ಅತ್ತೆಯ ಮನೆಯಲ್ಲಿ ಪಟ್ಟ ಪರಿಪಾಟಲು ನಮ್ಮ ವಿನೋದ ಕಥೆಗಳ ಕಲ್ಪನೆಯ ಸೊಗಸಿಗೆ ಒಳ್ಳೆಯ ನಿದರ್ಶನ.

ಪ್ರಾಣಿ ಕಥೆಗಳ ವರ್ಗ ಜನಪದ ಕಥೆಗಳಲ್ಲಿ ಅತ್ಯಂತ ಪ್ರಮುಖವಾದುದು. ಕನ್ನಡ ನಾಡಿನ ನಾನಾ ಕಡೆಗಳಿಂದ ಪ್ರಕಟವಾಗಿರುವ ಎಲ್ಲ ಸಂಕಲನಗಳಲ್ಲಿಯೂ ಪ್ರಾಣಿ ಕಥೆಗಳಿವೆ. ಶುದ್ಧ ಪ್ರಾಣಿ ಕಥೆಗಳು, ಮಿಶ್ರ ಪ್ರಾಣಿ ಕಥೆಗಳು ಎಂದು ಎರಡು ಪ್ರಮುಖ ವರ್ಗಗಳಲ್ಲಿ ಈ ಗುಂಪಿನ ಕಥೆಗಳನ್ನು ಪರಿಗಣಿಸಬಹುದು. ಕೋತಿ ಕೊಟ್ಟ ಭಾಗ್ಯ, ನಾಯಿಯಾದರೂ ತಾಯಿ, ಸಾವಿತ್ರಮ್ಮ - ಈ ಕಥೆಗಳಲ್ಲಿ ಪ್ರಾಣಿಗಳ ಪ್ರಸ್ತಾಪ ಬಂದರೂ ಅವು ಗೌಣ. ಕೆಲವೊಮ್ಮೆ ಪ್ರಾಣಿಗಳು ಮಾನವ ರೂಪಿನಲ್ಲಿ ಕಾಣಿಸಿಕೊಳ್ಳುತ್ತವೆ. ಸಾಹಸ ಕಾರ್ಯಗಳನ್ನು ನಡೆಸುತ್ತವೆ. ಅತಿಮಾನುಷ ಪತಿ ಪತ್ನಿಯರಾಗಿ ಪರಿವರ್ತಿತವಾಗುತ್ತವೆ. ಆದರೆ ಶುದ್ಧ ಪ್ರಾಣಿಕಥೆಗಳಲ್ಲಿ ಪ್ರಾಣಿಪ್ರಪಂಚದ ಪ್ರಾಚುರ್ಯ ಹೆಚ್ಚು. ಮಾನವ ಪಾತ್ರಗಳು ಇಲ್ಲಿ ಗೌಣವಾಗಿ ಬರಬಹುದು, ಬರದಿರಬಹುದು. ಕನ್ನಡದಲ್ಲಿ ದೊರೆತಿರುವ ಪ್ರಾಣಿ ಕಥೆಗಳು ಈ ಎಲ್ಲ ಗುಣಗಳಿಂದಲೂ ತುಂಬಿವೆ.

ಕನ್ನಡದ ಕಾಗಕ್ಕ ಗುಬ್ಬಕ್ಕನ ಕಥೆ ಕರ್ನಾಟಕ ಮಹಾರಾಷ್ಟ್ರ ಗಳೆರಡರಲ್ಲೂ ಕಾಣಸಿಗುತ್ತದೆ. ಪಕ್ಷಿಗಳು, ಪ್ರಾಣಿಗಳು ಹೇರಳವಾಗಿ ಕನ್ನಡ ಕಥೆಗಳಲ್ಲಿ ಪ್ರಸ್ತಾಪಿಸಲ್ಪಟ್ಟಿವೆ. ನರಿ, ಕಿರುಬ, ಕುದುರೆ, ಕತ್ತೆ, ಹುಲಿ, ಮೊಸಳೆ, ಇಲಿ, ಎಮ್ಮೆ, ಎತ್ತು, ಕೋಳಿ, ಗಿಣಿ, ಸರ್ಪ, ಅಳಿಲು, ಬೆಕ್ಕು, ಮರ್ಕಾಟಿ, ಕಾಗೆ, ಗೂಬೆ, ಗುಬ್ಬಚ್ಚಿ ಮುಂತಾದುವನ್ನು ಕಾಣಬಹುದು. ಈ ಪ್ರಾಣಿಗಳ ಸಾಲಿನಲ್ಲಿ ತಂತ್ರಿಯ ಸ್ಥಾನ ನರಿಗೆ ಮೀಸಲು. ನರಿ ಕೆಲವೆಡೆ ಇತರರನ್ನು ವಂಚಿಸಲು ತನ್ನ ಬುದ್ಧಿಶಕ್ತಿಯನ್ನು ಬಳಸಿಕೊಂಡರೆ, ಕೆಲವೆಡೆ ಇತರರ ನೆರವಿಗೂ ಬಳಸಿಕೊಳ್ಳುತ್ತದೆ. ಮೊಸಳೆಯ ಮೋಸಕ್ಕೆ ಒಳಗಾದ ಹುಡುಗನನ್ನು ಅದು ಉಳಿಸಿತು. ಕುದುರೆಯನ್ನು ಕಳೆದುಕೊಂಡ ವ್ಯಕ್ತಿಗೆ ನ್ಯಾಯವನ್ನು ದೊರಕಿಸಿತು. ಇಂಥ ಆದರ್ಶಗುಣಗಳ ಜೊತೆಗೆ ಗುಳ್ಳೆನರಿ ಎಂಬ ಕಥೆಯಲ್ಲಿ ತೋಟದ ಹುಡುಗ, ಗಾಡಿಯವರು, ಇತರ ನರಿಗಳು ಎಲ್ಲರನ್ನೂ ಮೋಸಗೊಳಿಸಿದ ತಂತ್ರಿ ಎನಿಸಿತು. ನರಿಯ ಪಾತ್ರ ಕನ್ನಡ ಪ್ರಾಣಿಕಥೆಗಳಲ್ಲೆಲ್ಲ ಹರಡಿಕೊಂಡಿದೆ. ಅದರ ಕುಶಾಗ್ರ ಬುದ್ಧಿಗೆ ಎಂಥವರೂ ಬೆರಗಾಗುತ್ತಾರೆ.

ಸೂತ್ರ ಕಥೆ ಮತ್ತು ಸಂಚಿತ ಕಥೆಗಳಿಗೆ ಕನ್ನಡದಲ್ಲಿ ಒಳ್ಳೆಯ ನಿದರ್ಶನಗಳಿವೆ. ತಾವರೆ ಹೂ, ಬೆಲ್ಲದ ಮಲ್ಲ - ಇಂಥ ಕಥೆಗಳು ಸೂತ್ರಕಥೆಗೆ ಒಳ್ಳೆಯ ಮಾದರಿಗಳು. ಕಥೆಯ ಹೆಜ್ಜೆ ಹೆಜ್ಜೆಯಲ್ಲಿ ಪದ್ಯರೂಪದ ಸೂತ್ರಗಳು ಮೇಲಿಂದ ಮೇಲೆ ಕಾಣಿಸಿಕೊಳ್ಳುತ್ತವೆ. ಕಥೆ ಈ ಸೂತ್ರಗಳ ಮೇಲೆಯೇ ಆಕರ್ಷಕವೆನಿಸುತ್ತದೆ. ಸಂಚಿತ ಕಥೆ ತಂತ್ರದ ಮೇಲೆ ನಿಂತಿರುತ್ತದೆ. ಒಂದು ಘಟ್ಟದಿಂದ ಆರಂಭವಾದ ಕಥೆ ಸುತ್ತಿಕೊಂಡು ಮತ್ತೆ ಅಲ್ಲಿಗೆ ಬಂದು ಸೇರುತ್ತದೆ. ಕನ್ನಡದ ಗಿಣಿಯ ಮರಿ ಕಥೆ ಸಂಚಿತ ಕಥೆಗೆ ಒಳ್ಳೆಯ ಉದಾಹರಣೆ. ಒಂದು ಗಿಣಿಯ ಮರಿ ಮಾವಿನ ಮರವನ್ನು ಕಡಿದುರುಳಿಸಲು ಬಡಗಿಯನ್ನು ಕೇಳುತ್ತದೆ. ಅವನು ಹಾಸ್ಯ ಮಾಡುತ್ತಾನೆ. ಬೆಕ್ಕಿನ ಬಳಿಗೆ ಹೋಗಿ ಅವನ ಕಾಲನ್ನು ಕಡಿಯುವಂತೆ ತಿಳಿಸುತ್ತದೆ. ಬೆಕ್ಕು ನಗುತ್ತದೆ. ನಾಯಿಯ ಬಳಿಗೆ ಹೋಗಿ ಬೆಕ್ಕನ್ನು ಕಡಿಯುವಂತೆ ಹೇಳುತ್ತದೆ; ನಾಯಿ ನಿರಾಕರಿಸುತ್ತದೆ. ಅಜ್ಜಿಯ ಬಳಿಗೆ ಹೋಗಿ ನಾಯಿಯನ್ನು ಹೊಡೆಯುವಂತೆ ಹೇಳುತ್ತದೆ. ಅಜ್ಜಿ ಅದರ ಮಾತನ್ನು ಕೇಳುವುದಿಲ್ಲ. ಅಜ್ಜನ ಬಳಿ ಹೋಗಿ ಅಜ್ಜಿಯನ್ನು ಹೊಡೆಯುವಂತೆ ಹೇಳುತ್ತದೆ; ಅಜ್ಜ ಕೇಳುವುದಿಲ್ಲ. ಹಸುವಿನ ಬಳಿ ಹೋಗಿ, ಅಜ್ಜ ಹಾಲು ಕರೆಯಲು ಬಂದಾಗ ಒದೆಯುವಂತೆ ಹೇಳುತ್ತದೆ; ಅದೂ ನಿರಾಕರಿಸುತ್ತದೆ. ಆದರೆ ಕರು ತಾಯ ಕೆಚ್ಚಲನ್ನು ಕಚ್ಚಲು ಒಪ್ಪಿಕೊಳ್ಳುತ್ತದೆ. ಅಜ್ಜ ಹಾಲು ಕರೆಯಲು ಬಂದಾಗ ಕರು ಕೆಚ್ಚಲು ಕಚ್ಚುತ್ತದೆ. ಹಸು ಒದೆಯುತ್ತದೆ. ಹಾಲು ಉರುಳುತ್ತದೆ. ಅಜ್ಜ ಅಜ್ಜಿಗೆ ಹೊಡೆಯುತ್ತಾನೆ. ಅಜ್ಜಿ ನಾಯಿಗೆ ಹೊಡೆಯುತ್ತಾಳೆ. ನಾಯಿ ಬೆಕ್ಕನ್ನು ಕಚ್ಚುತ್ತದೆ. ಬೆಕ್ಕು ಬಡಗಿಯನ್ನು ಕಚ್ಚಿ ಮಾವಿನ ಮರ ಹತ್ತುತ್ತದೆ. ಬಡಗಿ ಮರವನ್ನು ಕಡಿದುರುಳಿಸುತ್ತಾನೆ. ಗಿಣಿ ಮರಿಯ ಆಸೆ ನೆರವೇರುತ್ತದೆ. ಹೀಗೆ ಕಥೆ ಹೊರಟ ನೆಲೆಗೇ ಬಂದು ಉದ್ದೇಶವನ್ನು ಈಡೇರಿಸುತ್ತದೆ. ಇಂಥ ಸಂಚಿತ ಕಥೆಗಳ ಶೋಧ ಕನ್ನಡದಲ್ಲಿ ಇನ್ನೂ ನಡೆಯಬೇಕಾಗಿದೆ.

ಗಾದೆಯ ಕಥೆಗಳು, ಒಗಟಿನ ಕಥೆಗಳು ಕನ್ನಡದಲ್ಲಿ ಸಾಕಷ್ಟು ದೊರೆತಿವೆ. ಪ್ರಮುಖ ಸಂಕಲನಗಳಲ್ಲೆಲ್ಲ ಇವು ಸೇರಿವೆ. ನೀತಿ ಕಥೆಗಳು ಜನಪದ ಕಥಾ ಕೋಶದಲ್ಲಿ ವಿರಳ. ಇತ್ತೀಚೆಗೆ ಮಲೆನಾಡಿನಲ್ಲಿ ಕೆಲವು ನೀತಿಕಥೆಗಳು ಕಂಡುಬಂದಿವೆ (ಶಿವಮೊಗ್ಗ ಜಿಲ್ಲೆಯ ಜನಪದ ಕಥೆಗಳು), ಪೋಲಿ ಕಥೆಗಳು ಎಲ್ಲ ಸಂಸ್ಕೃತಿಯಲ್ಲಿಯೂ ಲಭ್ಯವಾಗುತ್ತವೆ. ಅಶ್ಲೀಲತೆಯೇ ಪೋಲಿ ಕಥೆಗಳ ಮೂಲ ಸೆಲೆ. ಈ ಕಥೆಗಳು ಸಂಗ್ರಹಕಾರರಿಗೆ ಸುಲಭವಾಗಿ ಲಭ್ಯವಾಗುವುದಿಲ್ಲ. ಹೇಳುವವರು ಅಂಥ ಕಥೆಗಳನ್ನು ಸಂಗ್ರಹಕಾರರ ಎದುರು ಹೇಳಲು ನಾಚುವುದೇ ಇದಕ್ಕೆ ಕಾರಣ. ಆದರೆ ಕನ್ನಡದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಪೋಲಿ ಕಥೆಗಳು ಸಿಕ್ಕುತ್ತವೆ. ಕೆಲವು ಸಂಗ್ರಹಕಾರರರು ಈ ಕಥೆಗಳನ್ನು ತಮ್ಮ ಸಂಕಲನದಲ್ಲಿ ಸೇರಿಸಿರುವುದು ಗಮನಾರ್ಹ (ನಮ್ಮ ಸುತ್ತಿನ ಜನಪದ ಕಥೆಗಳು).

ಜನಪದ ಕಥೆಗಳ ವೈಜ್ಞಾನಿಕ ಅಧ್ಯಯನ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಬಹಳ ಹಿಂದೆಯೇ ಶಿಖರವನ್ನು ಎಟುಕಿಸಿಕೊಂಡಿದ್ದರೂ ಕನ್ನಡದಲ್ಲಿ ಈ ಅಧ್ಯಯನ ತೀರ ತಡವಾಗಿ ಆರಂಭವಾಯಿತು. ಅಬ್ಬೆಡುಬಾಯಿ ಹಾಗೂ ಮೇರಿ ಫ್ರೀರೆ ಅವರ ಗ್ರಂಥಗಳಲ್ಲಿರುವ ಜನಪದ ಕಥೆಗಳು ಕನ್ನಡ ನಾಡಿನ ಕಥೆಗಳೆ ಎಂದು ಖಚಿತವಾದರೆ, ಪಾಶ್ಚಾತ್ಯ ವಿದ್ವಾಂಸರು ಕನ್ನಡ ಕಥೆಗಳ ಕಡೆ ಕಳೆದ ಶತಮಾನದಲ್ಲಿಯೇ ದೃಷ್ಟಿಯನ್ನು ಹರಿಸಿದ್ದು ಗಮನಾರ್ಹ ಅಂಶವಾಗುತ್ತದೆ. ಆದರೆ ಇದಕ್ಕೂ ಮೊದಲೇ ಸಾವಿರ ವರ್ಷಗಳ ಹಿಂದೆಯೇ ಕನ್ನಡದ ಆದ್ಯ ಗದ್ಯ ಗ್ರಂಥ ವಡ್ಡಾರಾಧನೆಯಲ್ಲಿಯೆ ಅನೇಕ ಕನ್ನಡ ಜನಪದ ಕಥೆಗಳು ಸಮಾವೇಶಗೊಂಡಿವೆ. ಪೂಜಾರಿ ಪುಟ್ಟಕ್ಕನ ಕಥೆಯನ್ನು ಇಲ್ಲಿ ಉದಾಹರಿಸಬಹುದು. ಅಲ್ಲಿಂದ ಇಲ್ಲಿಯವರೆಗೆ ಕಥೆಗಳನ್ನು ಅನೇಕ ಕವಿಗಳು ಸ್ವೀಕರಿಸಿ ಸಾಹಿತ್ಯವನ್ನು ಬೆಳೆಸಿದ್ದಾರೆ.

ಕನ್ನಡ ಜನಪದ ಕಥೆಗಳನ್ನು ಕನ್ನಡಿಗರೊಬ್ಬರು ಮೊದಲು ಸಂಗ್ರಹಿಸಿದ ನಿದರ್ಶನ 20ನೆಯ ಶತಮಾನದ ಆದಿಭಾಗದಲ್ಲಿ ಕಂಡುಬರುತ್ತದೆ. ಎಂ.ಎಲ್.ಶ್ರೀಕಂಠೇಶಗೌಡರು ಸುರಭಿ ಪತ್ರಿಕೆಯಲ್ಲಿ ಆಗಾಗ ಪ್ರಕಟಿಸಿದ ಕಥೆಗಳು ಗಮನಾರ್ಹವಾದುವು. ಮುಂದೆ ಜನಪದ ಸಾಹಿತ್ಯ ಕ್ಷೇತ್ರದಲ್ಲಿ ಗೀತಸಂಕಲನಗಳೇ ಹೆಚ್ಚಾಗಿ ಬಂದುವು. ಸ್ವಾತಂತ್ರ್ಯೋತ್ತರ ದಿನಗಳಲ್ಲಿ ಅಲ್ಲೊಂದು ಇಲ್ಲೊಂದು ಸಂಕಲನಗಳು ಕಾಣಿಸಿಕೊಂಡರೂ 1966ರ ಈಚೆಗೆ ಉತ್ತಮ ಕಥಾಸಂಕಲನಗಳು ಪ್ರಕಟವಾಗತೊಡಗಿದವು. ಜಾನಪದ ಕಥಾಮೃತ 1-2 (ಧವಳ ಶ್ರೀ), ಕನ್ನಡ ಜನಪದ ಕಥೆಗಳು (ಜೀಶಂಪ). ಕರ್ನಾಟಕದ ಜನಪದ ಕಥೆಗಳು, (ಜೀಶಂಪ), ಕರ್ನಾಟಕ ಜಾನಪದ ಕಥೆಗಳು (ರಾಗೌ), ಆಯ್ದ ಜನಪದ ಕಥೆಗಳು (ಜೀಶಂಪ), ಜನಪದ ಕಥಾವಳಿ (ಲಕ್ಕಪ್ಪಗೌಡ), ಒಬ್ಬನೇ ಹೇಳಿದ ಇಪ್ಪತ್ತೆರಡು ಕಥೆಗಳು (ಪಿ.ವೀರಣ್ಣ), ಎಪ್ಪತ್ತೊಂದು ಜನಪದ ಕಥೆಗಳು (ಶಿವಕುಮಾರ್), ಧಾರವಾಡ ಜಿಲ್ಲೆಯ ಜನಪದ ಕಥೆಗಳು (ಟಿ.ಎಸ್.ರಾಜಪ್ಪ), ಬೆಳಗಾಂ ಜಿಲ್ಲೆಯ ಭಿನ್ನರೂಪಗಳು ಭಿನ್ನರೂಪಗಳು ಜನಪದ ಕಥೆಗಳು (ಟಿ.ಎಸ್.ರಾಜಪ್ಪ), ಉತ್ತರ ಕನ್ನಡ ಜಿಲ್ಲೆಯ ಜನಪದ ಕಥೆಗಳು, ಜನಪದ ಮತ್ತು ಗಿರಿಜನರ ಕಥೆಗಳು, ಸಿದ್ಧಿಯರ ಕಥೆಗಳು, ಕುಮರಿ ಮರಾಠಿಗಳ ಕಥೆಗಳು, ಅಪೂರ್ವ ಮೃದಂಗ ಮತ್ತು ಇವರ ಕಥೆಗಳು, ಕರ್ನಾಟಕ ಕರಾವಳಿಯ ಜನಪದ ಕಥೆಗಳು, ಗಾದೆ ಕಥೆಗಳು, ಜನಪದ ಭಾರತ ಕಥೆಗಳು, ಹೊನ್ನಮ್ಮನ ಮನೆಯ ಕಥೆಗಳು, (ಎಲ್.ಆರ್.ಹೆಗಡೆ), ಸಂಕೀರ್ಣ ಜನಪದ ಕಥೆಗಳು, (ತೀ.ನಂ.ಶಂಕರ ನಾರಾಯಣ), ಶಿವಮೊಗ್ಗ ಜಿಲ್ಲೆಯ ಜನಪದ ಕಥೆಗಳು, (ಎ.ಹಿರಿಯಣ್ಣ), ಹಾಸನ ಜಿಲ್ಲೆಯ ಜನಪದ ಕಥೆಗಳು (ಹಿ.ಶಿ.ರಾಮಚಂದ್ರೇ ಗೌಡ), ಕಬ್ಬಾಳು ದುರ್ಗದಲ್ಲಿ ಹುಲಿ (ಕ್ಯಾತನ ಹಳ್ಳಿ ರಾಮಣ್ಣ), ಇಬ್ಬೀಡಿನ ಜನಪದ ಕಥೆಗಳು (ವೈ.ಸಿ.ಭಾನುಮತಿ), ಕಥೆಕೇಳೆ ಗುಬಲಾಡಿ, ಕಲ್ಲಂಗಡಿ (ಜೀಶಂಪ) ಹಣ್ಣಿನಕಂಕನರಿ (ಜೀನಹಳ್ಳಿ ಸಿದ್ದಲಿಂಗಪ್ಪ), ಜನಪದ ಕಥಾಮಂಜರಿ (ಬಿ.ಎಸ್.ಸ್ವಾಮಿ), ಬೆದರುಗೊಂಬೆ ಮತ್ತು ಇತರ ಜನಪದ ಕಥೆಗಳು (ಡಿ.ಕೆ.ರಾಜೇಂದ್ರ), ಮೂವತ್ತು ಜನಪದ ಕಥೆಗಳು (ಕೆ.ಆರ್.ಸಂಧ್ಯಾರೆಡ್ಡಿ), ಲಂಬಾಣಿ ಜನಪದ ಕಥೆಗಳು (ಸೋಮಣ್ಣ ಹೊಂಗಳ್ಳಿ) ಮುಂತಾದ ಕೆಲವು ಮುಖ್ಯ ಸಂಕಲನಗಳು ಕನ್ನಡ ಜನಪದ ಕಥೆಗಳ ದೊಡ್ಡ ಭಂಡಾರದ ಕಡೆ ನಮ್ಮ ಗಮನವನ್ನು ಸೆಳೆಯುತ್ತವೆ.

ಜನಪದ ಕಥೆಗಳ ಸಂಗ್ರಹ, ವರ್ಗೀಕರಣ ಕರ್ನಾಟಕದಲ್ಲಿ ಬಿರುಸಿನಿಂದ ನಡೆಯುತ್ತಿವೆ. ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಜಾನಪದ ವಿಭಾಗದ ಯೋಜನೆಗಳ ಫಲವಾಗಿ ಪ್ರತಿ ಜಿಲ್ಲೆಯ ಜನಪದ ಕಥೆಗಳೂ ಸಂಗ್ರಹಗೊಳ್ಳುತ್ತಿವೆ. ಸಂಗ್ರಹಗೊಂಡ ಸಾಮಗ್ರಿಯನ್ನು ಶಾಸ್ತ್ರೀಯ ಅಧ್ಯಯನಕ್ಕೆ ಬಳಸಿಕೊಳ್ಳುವ ಪ್ರಯತ್ನಗಳು ನಡೆಯುತ್ತಿವೆ. ಆಯಾ ಸಂಕಲನಗಳಲ್ಲಿಯೇ ಜನಪದ ಕಥೆಗಳ ವ್ಯಾಪಕ ಹಿನ್ನೆಲೆ, ಭಾಷಿಕ ಮೌಲ್ಯ, ಸಾಹಿತ್ಯಕ ಮೌಲ್ಯ, ವಿಶ್ವಮಾದರಿಗಳ ವೈಶಿಷ್ಟ್ಯ, ಸ್ಥಳೀಯ ರೂಪಗಳ ಸೊಗಸು ಮುಂತಾದುವನ್ನು ಕುರಿತು ಅಭ್ಯಾಸಪೂರ್ಣ ಪ್ರಸ್ತಾವನೆಗಳನ್ನು ಬರೆಯಲಾಗಿದೆ. ಆಶಯಗಳು, ವರ್ಗಗಳು ಮತ್ತು ರಚನಾತತ್ತ್ವದ ಹಿನ್ನೆಲೆಯಲ್ಲಿ ಜನಪದ ಕಥೆಗಳನ್ನು ವಿಶ್ಲೇಷಿಸಲೂ ಸಾಕಷ್ಟು ಸಾಮಗ್ರಿ ಲಭ್ಯವಾಗುತ್ತಿದೆ. (ಜೆ.ಎಸ್.ಪಿ.)

**ಜನಪದ ಕಾವ್ಯ :** ವಿಶ್ವದ ಎಲ್ಲ ಸಂಸ್ಕೃತಿಗಳಲ್ಲೂ ಗದ್ಯಾತ್ಮಕ ಹಾಗೂ ಪದ್ಯಾತ್ಮಕ ಜನಪದ ಸಾಹಿತ್ಯ ಕಂಡುಬರುತ್ತದೆ. ಗದ್ಯಾತ್ಮಕ ಜನಪದ ಸಾಹಿತ್ಯವನ್ನು ಪುರಾಣ, ಐತಿಹ್ಯ ಹಾಗೂ ಕಟ್ಟುಕಥೆಗಳೆಂದು ವಿಂಗಡಿಸಲಾಗುತ್ತದೆ. ಪದ್ಯಾತ್ಮಕ ಜನಪದ ಸಾಹಿತ್ಯ ಗೀತೆ, ಲಾವಣಿ, ಖಂಡಕಾವ್ಯ ಹಾಗೂ ದೀರ್ಘ ಕಾವ್ಯಗಳ ಮೊತ್ತವನ್ನು ಒಳಗೊಂಡಿದೆ. ಈ ಪದ್ಯಸಾಹಿತ್ಯದ ಅತ್ಯಂತ ಗಮನಾರ್ಹ ಭಾಗವೇ ಜನಪದ ಕಾವ್ಯಪ್ರಕಾರ. ಜನಪದ ಕಾವ್ಯ ಪದ್ಯ ಹಾಗೂ ಗದ್ಯಗಳೆರಡರಲ್ಲಿಯೂ ಇರಬಹುದು. ಗದ್ಯ ಪದ್ಯಮಿಶ್ರಿತವಾದ ಚಂಪೂರೀತಿಯ ಕಾವ್ಯವೂ ಆಗಿರಬಹುದು. ಅತ್ಯಂತ ಸಂಗ್ರಹವಾದ ಕಥನಗೀತೆ ಅಥವಾ ಲಾವಣಿಗಳನ್ನು ಬೇರ್ಪಡಿಸಿ ಇದಕ್ಕಿಂತ ವ್ಯಾಪ್ತಿಯಲ್ಲಿ ವೈವಿಧ್ಯದಲ್ಲಿ ಭಿನ್ನವಾಗಿ ನಿಲ್ಲುವ ಹಾಡ್ಗತೆಗಳನ್ನೆಲ್ಲ ಜನಪದ ಕಾವ್ಯ ಎಂದು ಪರಿಗಣಿಸಿಕೊಂಡು ಪರಿಶೀಲಿಸಬಹುದು.

ಜನಪದ ಕಾವ್ಯಗಳನ್ನು ಸಾಮಾನ್ಯವಾಗಿ ಷ್ಯಾಮನ್ (ಮಾಂತ್ರಿಕ, ಅಭಿಚಾರಿ) ಸಂಬಂಧ ಕಾವ್ಯಗಳು ವೀರಕಾವ್ಯಗಳು, ರಮ್ಯಕಾವ್ಯಗಳು ಹಾಗೂ ಚಾರಿತ್ರಿಕ ಕಾವ್ಯಗಳು ಎಂದು ನಾಲ್ಕು ಪ್ರಮುಖವರ್ಗಗಳಲ್ಲಿ ವಿಂಗಡಿಸಲಾಗಿದೆ. ದೇವತೆಗಳು, ಪ್ರೇತಗಳು, ಮೊದಲಾದವುಗಳೊಡನೆ ತನಗೆ ಸಂಪರ್ಕವಿದೆಯೆಂದು ಹೇಳಿಕೊಳ್ಳುವ ಉಪಾಸಕ ಅಥವಾ ಅರ್ಚಕ ಅಥವಾ ವೈದ್ಯನ ಸುತ್ತ, ಹರಿಯುವ ಈ ಷಾಮನಿಸ್ಟಿಕ್ ಪಂಥದ ಕಾವ್ಯಗಳಲ್ಲಿ ಮಾಂತ್ರಿಕತೆ ಹಾಗೂ ಅತಿಮಾನುಷ ಘಟನೆಗಳು ಹೆಚ್ಚು. ವೀರಕಾವ್ಯಗಳಲ್ಲಿ ವೀರ ಪರಾಕ್ರಮಗಳಿಗೆ ಆದ್ಯತೆ ಹೆಚ್ಚು. ರಮ್ಯಕಾವ್ಯಗಳಲ್ಲಿ ಪ್ರೇಮ ಹಾಗೂ ಅದ್ಭುತಸಾಹಸಗಳು ಮೇಳವಿಸಿರುತ್ತವೆ. ಚರಿತ್ರೆಯ ಘಟನೆಯೊಂದನ್ನು ಅವಲಂಬಿಸಿ ಬೆಳೆದುಕೊಂಡಿರುವುದೇ ಚಾರಿತ್ರಿಕ ಕಾವ್ಯ. ಫಿನ್‌ಲೆಂಡ್ ಮತ್ತು ಸ್ಲಾವಿಕ್ ಪ್ರದೇಶಗಳಲ್ಲಿ ಜನಪದ ಕಾವ್ಯಗಳನ್ನು ಹೆಚ್ಚಾಗಿ ಗುರುತಿಸಲಾಗಿದೆ. ಮೇಲಿನ ವರ್ಗೀಕರಣ ಈ ಪ್ರದೇಶದ ಜನಪದ ಕಾವ್ಯಗಳನ್ನು ನಿರ್ದೇಶಿಸಿದರೂ ಜಗತ್ತಿನ ಎಲ್ಲ ಭಾಗದ ಕಾವ್ಯಗಳಿಗೂ ಸ್ಥೂಲವಾಗಿ ಅನ್ವಯವಾಗುತ್ತದೆ. ಈ ಜನಪದ ಕಾವ್ಯಗಳನ್ನು ಸಾಮಾನ್ಯವಾಗಿ ವೃತ್ತಿಗಾಯಕರು ಪರಂಪರಾನುಗತವಾಗಿ ವಾಕ್ಸಂಪ್ರದಾಯದಲ್ಲಿ ಉಳಿಸಿಕೊಂಡು ಬರುತ್ತಾರೆ. ವಾದ್ಯವೊಂದರ ಹಿನ್ನೆಲೆಯಲ್ಲಿ ಇವನ್ನು ಹಾಡಲಾಗುವುದು, ನಿರೂಪಿಸಲಾಗುವುದು. ಕೆಲವು ಸಂದರ್ಭಗಳಲ್ಲಿ ಮಾತ್ರ ಯಾವ ವಾದ್ಯದ ಹಿನ್ನೆಲೆಯೂ ಇಲ್ಲದೆ ಸಾಮಾನ್ಯ ಗಾಯಕರೂ ಹಾಡುವುದುಂಟು. ಕರ್ನಾಟಕದ ಜನಪದ ಕಾವ್ಯಗಳಿಗೂ ಮೇಲಿನ ಅಂಶಗಳು ಅನ್ವಯವಾಗುತ್ತವೆ.

ಕಾವ್ಯ ಸಂಪ್ರದಾಯಗಳನ್ನು ಉಳಿಸಿಕೊಂಡು ಬಂದಿರುವ ವೃತ್ತಿಗಾಯಕರ ಪರಂಪರೆ ಮತ್ತು ಜನಪದ ಕಾವ್ಯಗಳ ವ್ಯಾಪಕತೆಯನ್ನು ಗಮನಿಸಿದಾಗ ಕರ್ನಾಟಕವು ಜನಪದ ಕಾವ್ಯಗಳ ದೊಡ್ಡ ಕಣಜವಾಗಿ ಕಂಡುಬರುತ್ತದೆ. ಕಂಸಾಳೆಯವರು, ನೀಲಗಾರರು, ಚೌಡಿಕೆಯವರು, ಗೊರವರು, ಗೊಂದಲಿಗರು, ಜುಂಜಪ್ಪನವರು ಮೊದಲಾದ ಕೆಲವು ವರ್ಗದ ಗಾಯಕರು ಧಾರ್ಮಿಕ ವೃತ್ತಿಗಾಯಕರು ಎಂದು ಪರಿಗಣಿಸಲ್ಪಟ್ಟಿದ್ದಾರೆ. ದೊಂಬಿದಾಸರು, ಹೆಳವರು, ತೆಲುಗು ಬಣಜಿಗರು, ಕಿನ್ನರಿ ಜೋಗಿಗಳು, ಕರಪಾಲದವರು, ತಂಬೂರಿಯವರು ಮುಂತಾದ ಅನೇಕ ಬಗೆಯ ಗಾಯಕವರ್ಗವನ್ನು ಲೌಕಿಕ ವೃತ್ತಿಗಾಯಕರು ಎಂದು ಕರೆಯಲಾಗಿದೆ. ಧಾರ್ಮಿಕ ವೃತ್ತಿಗಾಯಕರು ದೈವವೊಂದರ ಹೆಸರಲ್ಲಿ ಜನಪದ ಧರ್ಮಪ್ರಸಾರಕರಾಗಿ ಕೆಲಸ ಮಾಡುವುದರ ಜೊತೆಗೆ ತಮ್ಮ ದೈವದ ಮಹಿಮೆಯನ್ನೂ ಕಾವ್ಯಗಳ ಮೂಲಕ ಪ್ರಸಾರ ಮಾಡುತ್ತಾರೆ. ಮಲೆಯ ಮಾದೇಶ್ವರ ಕಾವ್ಯ, ಮಂಟೇಸ್ವಾಮಿ ಕಾವ್ಯ, ಎಲ್ಲಮ್ಮನ ಕಾವ್ಯ, ಜುಂಜಪ್ಪನ ಕಾವ್ಯ, ಮೈಲಾರಲಿಂಗನ ಕಾವ್ಯ - ಇವು ಕನ್ನಡದ ಪ್ರಮುಖ ಜನಪದ ಧಾರ್ಮಿಕ ಕಾವ್ಯಗಳು. ಈ ಪಂಚಕಾವ್ಯಗಳೂ ಮುಖ್ಯವಾಗಿ ವೃತ್ತಿಗಾಯಕರಿಗೆ ಸಂಬಂಧಪಡುತ್ತವೆ. ಮಲೆಯ ಮಾದೇಶ್ವರ ಕಾವ್ಯವನ್ನು ಹಾಡುವವರು ದೇವರಗುಡ್ಡರು ಅಥವಾ ಕಂಸಾಳೆಯವರು. ಇವರು ಬೆಂಗಳೂರು, ಮೈಸೂರು ಹಾಗೂ ಮಂಡ್ಯ ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಈ ಜಿಲ್ಲೆಗಳ ಪಶ್ಚಿಮ ಮತ್ತು ಉತ್ತರದ ಭಾಗಗಳನ್ನು ಬಿಟ್ಟರೆ ಮಿಕ್ಕೆಡೆಗಳಲ್ಲೆಲ್ಲ ಮಾದೇಶ್ವರ ಕಾವ್ಯ ಪ್ರಚಲಿತವಾಗಿದೆ. ಕಂಸಾಳೆ ಎಂಬ ಕಂಚಿನ ವಾದ್ಯವನ್ನು ಬಾರಿಸುತ್ತ ಹಲವು ರಾತ್ರಿಗಳು ಈ ಕಾವ್ಯವನ್ನು ಹಾಡಲಾಗುತ್ತದೆ. ಸಾಮಾನ್ಯವಾಗಿ ಮಲೆಯ ಮಾದೇಶ್ವರ ಕಾವ್ಯ ತಾಳುಗತೆ, ಶ್ರವಣದೊರೆಯ ಸಾಲು, ಜುಂಜೇಗೌಡನ ಸಾಲು, ಶಂಕಮ್ಮನ ಸಾಲು, ಇಕ್ಕೇರಿ ದೇವಮ್ಮನ ಸಾಲು, ಬೇವಿನ ಕಾಳಿ ಸಾಲು, ಸರಗೂರಪ್ಪನ ಸಾಲು ಎಂಬ ಏಳು ಭಾಗಗಳಲ್ಲಿ ಕಂಡುಬರುತ್ತದೆ. ಈ ಏಳು ಸಾಲುಗಳು ಅಥವಾ ಕವಲುಗಳು ಒಂದೊಂದು ಸ್ವತಂತ್ರ ಖಂಡಕಾವ್ಯಗಳಂತೆ ಬೇರೆ ಬೇರೆಯಾಗಿಯೇ ಇವೆ. ಮಾದೇಶ್ವರ ಕಾವ್ಯವೃತ್ತದ ಈ ಕವಲುಗಳಲ್ಲಿ ಯಾವ ಕಥೆ ಎಲ್ಲಿ ಬೇಕಾದರೂ ಹಿಂದು ಮುಂದಾಗಬಹುದು. ಆದರೂ ಮೇಲಿನಂತೆ ಒಂದು ಕ್ರಮಬದ್ಧ ಸೂತ್ರವನ್ನು ಹಾಡುಗಾರರೂ ಗುರುತಿಸುತ್ತಾರೆ. ಈ ಏಳು ಭಾಗಗಳನ್ನೂ ಒಂದು ಮೇಳದಲ್ಲಿ ಅಥವಾ ಒಂದು ರಾತ್ರಿಯಲ್ಲಿ ಹಾಡಲು ಸಾಧ್ಯವಾಗುವುದಿಲ್ಲ. ಏಳು ರಾತ್ರಿಗಳೇ ಬೇಕಾಗುತ್ತವೆ. ಭಕ್ತರ ಅಥವಾ ಆಸಕ್ತರ ಕೋರಿಕೆಯಂತೆ ಅಗತ್ಯವಾದ ಭಾಗವನ್ನು ಮಾತ್ರ ಆರಿಸಿಕೊಂಡು ಇವರು ಹಾಡುತ್ತಾರೆ. ಅಖಂಡ ಗುಣ ಈ ಕಾವ್ಯಕ್ಕೆ ಇಲ್ಲವಾದ್ದರಿಂದ ಮಹಾಕಾವ್ಯದ ವ್ಯಾಪ್ತಿಗೆ ಒಳಪಡಿಸುವುದು ಕಷ್ಟವಾಗುತ್ತದೆಯಾದರೂ ಎಲ್ಲ ಕವಲುಗಳಲ್ಲಿಯೂ ಮಾದೇಶ್ವರರು ಇರುವುದರಿಂದ, ಅವರ ಮಹಿಮೆಗಳು, ಪವಾಡಗಳು ಎಲ್ಲೆಡೆಯಲ್ಲಿಯೂ ವಿಜೃಂಭಿಸುವುದರಿಂದ ಇದನ್ನು ಒಂದು ಸಮಗ್ರ ಕಾವ್ಯವೆಂದೇ ಪರಿಗಣಿಸಬಹುದು. ಮಲೆಯ ಮಾದೇಶ್ವರ ಕಾವ್ಯ ನಮ್ಮ ಜನಪದ ಕಾವ್ಯಗಳಲ್ಲೆಲ್ಲ ವಿಸ್ತಾರವಾದುದು. ವ್ಯಾಪಕವಾದುದು. ಏಳು ನೂರು ವರ್ಷಗಳ ಹಿಂದೆ ಮಹಿಮಾಪುರುಷರಾಗಿ ಅವತರಿಸಿದ ಮಾದೇಶ್ವರರು ಕಲ್ಯಾಣದ ಶರಣ ಪರಂಪರೆಯ ಒಬ್ಬ ಐತಿಹಾಸಿಕ ವ್ಯಕ್ತಿಯಾಗಿಯೇ ಗುರುತಿಸಲ್ಪಟ್ಟಿದ್ದಾರೆ. ದಕ್ಷಿಣದಿಂದ ಉತ್ತರದ ಕಲ್ಯಾಣಕ್ಕೆ ಹೋಗಿ, ಶರಣ ಕೇಂದ್ರವನ್ನು ಸಂದರ್ಶಿಸಿ ಮತ್ತೆ ದಕ್ಷಿಣಕ್ಕೆ ಬಂದು, ತಮ್ಮದೇ ಆದ ಭಕ್ತ ಪರಂಪರೆಯನ್ನು ಬೆಳೆಸಿಕೊಳ್ಳುತ್ತ ಪೂರ್ವಘಟ್ಟಗಳ ನಡುವೆ ನೆಲಸಿದಂತೆ ಜನಪದ ಕಾವ್ಯಗಳಿಂದ ವ್ಯಕ್ತವಾಗುತ್ತದೆ. ಈ ನೆಲೆ ಮುಂದೆ ಮಲೆಯ ಮಾದೇಶ್ವರ ಕ್ಷೇತ್ರವೆಂದು ಹೆಸರಾಯಿತು.

ಮಾದೇಶ್ವರ ಕಾವ್ಯದ ತಾಳುಗತೆ ಮೇಲಿನ ವಿಷಯಗಳನ್ನು ಪ್ರಸ್ತಾಪಿಸುತ್ತದೆ. ಮಾದೇಶ್ವರರು ಇಲ್ಲಿ ನೆಲೆಸಿದ ಮೇಲೆ ಭಕ್ತರನ್ನು ಪಡೆದುಕೊಳ್ಳುವ ಸಂದರ್ಭಗಳು ಬರುತ್ತವೆ. ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುವ ಹೊಣೆ ಅವರದಾಗುತ್ತದೆ. ಆಲಂಬಾಡಿ ಜುಂಜೇಗೌಡ, ಸರಗೂರಪ್ಪ ಇವರನ್ನು ಭಕ್ತರನ್ನಾಗಿ ಪಡೆದುಕೊಂಡ ಸನ್ನಿವೇಶಗಳು ಎರಡು ಅಪೂರ್ವ ಕಥಾನಕಗಳಾಗಿ ಮೂಡಿವೆ. ಬೇವಿನಕಾಳಿಯ ಪ್ರಸಂಗ ಹಾಗೂ ಇಕ್ಕೇರಿ ದೇವಮ್ಮನ ಪ್ರಸಂಗ ದುಷ್ಟ ಶಿಕ್ಷಣದ ಹಿನ್ನೆಲೆಯಲ್ಲಿ ಮೂಡಿಬಂದ ಕಥಾನಕಗಳು. ಶಂಕಮ್ಮನ ಸಾಲು ಶಿಷ್ಟ ರಕ್ಷಣೆಯನ್ನು ಪ್ರತಿಪಾದಿಸುತ್ತದೆ.

ಮಾದೇಶ್ವರ ಕಾವ್ಯದ ಅತ್ಯಂತ ಮುಖ್ಯವಾದ ಪ್ರಸಂಗ ಶ್ರವಣ ದೊರೆ ಸಾಲು. ಶೈವ ಹಾಗೂ ಜೈನಧರ್ಮಗಳ ಸಂಘರ್ಷವೊಂದನ್ನು ಚಿತ್ರಿಸುವ ಈ ಪ್ರಸಂಗದಲ್ಲಿ ಮಾದೇಶ್ವರರು ತೋರುವ ಕೌಶಲ, ಸಾಮಯಿಕ ಪ್ರಜ್ಞೆ ಹಾಗೂ ಶ್ರವಣವಧೆಯ ಸಾಹಸಗಳು ರೋಮಾಂಚಕಾರಕವಾಗಿ ಮೂಡಿಬಂದಿವೆ. ದೇವತೆಗಳನ್ನೆಲ್ಲ ಶ್ರವಣ ತನ್ನ ಸೆರೆಯಲ್ಲಿಟ್ಟುಕೊಂಡಿದ್ದು, ಅವರ ಬಿಡುಗಡೆಗಾಗಿಯೇ ಮಾದೇಶ್ವರರು ಅವತಾರವೆತ್ತಿದರು ಎಂಬಂತೆ ಈ ಭಾಗ ಮೂಡಿಬಂದಿದೆ.

ಮಾದೇಶ್ವರರ ಕಾವ್ಯ ಹಲವು ದೃಷ್ಟಿಗಳಿಂದ ಗಮನಾರ್ಹವಾದದ್ದು. ಶಿಷ್ಟಧರ್ಮಗಳಿಂದ ಭಿನ್ನವಾದ ಜನಪದ ಧರ್ಮವೊಂದರ ಪ್ರತಿಪಾದಕರಾಗಿ ಮಾದೇಶ್ವರರು ಕಾಣಿಸಿಕೊಂಡರೆಂಬ ದೃಷ್ಟಿಯಿಂದ ಈ ಕಾವ್ಯವನ್ನು ವಿಶೇಷ ಹಿನ್ನೆಲೆಯಲ್ಲಿ ನೋಡಬೇಕಾಗುತ್ತದೆ. ಶಕ್ತಿವತ್ತಾದ ಪ್ರಾದೇಶಿಕ ಭಾಷೆಯ ಸೊಗಡು, ಪಾತ್ರಗಳ ಸ್ವಭಾವ ವೈಚಿತ್ರ, ಅದ್ಭುತ ವರ್ಣನೆಗಳು ಇವನ್ನೆಲ್ಲ ದೃಷ್ಟಿಯಲ್ಲಿಟ್ಟುಕೊಂಡು ಪರಿಶೀಲಿಸಿದಾಗ, ಧಾರ್ಮಿಕ ಚೌಕಟ್ಟಿನಿಂದ ಪವಾಡಗಳ ಸಂಕೋಲೆಯಿಂದ ಈ ಕಾವ್ಯ ಹೊರಗೆ ನಿಂತು ಅತ್ಯಪೂರ್ವ ಜನಪದ ಕಾವ್ಯವಾಗಿ ನಿಲ್ಲುತ್ತದೆ.

ಮಾದೇಶ್ವರ ಸಂಪ್ರದಾಯಕ್ಕೆ ಸರಿಸಾಟಿಯಾಗಿ, ಸಾಮಾನ್ಯವಾಗಿ ಒಂದೇ ಪ್ರದೇಶದಲ್ಲಿ ಪ್ರಚಲಿತವಾಗಿರುವ ಕಾವ್ಯ ಸಂಪ್ರದಾಯವೆಂದರೆ ನೀಲಗಾರರದು. ಇವರು ಮಳವಳ್ಳಿ, ತಾಲ್ಲೂಕಿನ ಮಂಟೇಸ್ವಾಮಿ ಮಠಕ್ಕೆ ಸಂಬಂಧಪಡುತ್ತಾರೆ. ಕೊಳ್ಳೇಗಾಲ ತಾಲ್ಲೂಕಿನ ಚಿಕ್ಕಲ್ಲೂರಿನ ಸಿದ್ಧಪ್ಪಾಜಿ ಕ್ಷೇತ್ರ, ಕೃಷ್ಣರಾಜನಗರ ತಾಲ್ಲೂಕಿನ ಕಪ್ಪಡಿ ರಾಚಪ್ಪಾಜಿ ಕ್ಷೇತ್ರಗಳೂ ಇವರಿಗೆ ಸಂಬಂಧಪಡುತ್ತವೆ. ಮಂಟೇಸ್ವಾಮಿ ಸಂಪ್ರದಾಯದ ಮೂಲಗುರು ಮಂಟೇಸ್ವಾಮಿ ಎಂಬ ಧರ್ಮ ಪ್ರಸಾರಕರು. ಇವರು ಜನಪದ ಧರ್ಮವೊಂದನ್ನು ಅವಲಂಬಿಸಿ ಅದರ ಪ್ರಸಾರಕ್ಕಾಗಿ ಹೊರಟು ಒಕ್ಕಲನ್ನು ಪಡೆಯುತ್ತ ಉತ್ತರದ ಕಲ್ಯಾಣದ ಕಡೆಯಿಂದ ದಕ್ಷಿಣದ ಬೊಪ್ಪಗೌಡನಪುರಕ್ಕೆ ಬಂದವರು. ಇವರ ಮುಖ್ಯ ಶಿಷ್ಯರು ರಾಚಪ್ಪಾಜಿ ಮತ್ತು ಸಿದ್ಧಪ್ಪಾಜಿ. ಈ ಮೂವರು ಮಹಾಮಹಿಮರಿಗೂ ಸಂಬಂಧಪಟ್ಟಂತೆ ರಚಿತವಾಗಿರುವ ಮಂಟೇಸ್ವಾಮಿ ಕಾವ್ಯ ಧರೆಗೆ ದೊಡ್ಡವರ ವಚನ (ತಾಳುಗತೆ), ಸಿದ್ಧಪ್ಪಾಜಿ ವಚನ, ಹಲಗೂರು ಪವಾಡ, ರಾಚಪ್ಪಾಜಿ ವಚನ, ಚಿಕ್ಕಲ್ಲೂರು ಸಾಲು ಎಂಬ - ಐದು ಕವಲುಗಳಾಗಿ ಒಡೆಯುತ್ತದೆ. ಮಾದೇಶ್ವರ ಕಾವ್ಯದಲ್ಲಿರುವ ಏಕಸೂತ್ರತೆಯ ತೊಡಕು ಈ ಕಾವ್ಯದಲ್ಲಿಲ್ಲ. ಸುಸಂಬದ್ಧವಾಗಿ ಸಮಗ್ರವಾಗಿ ಮೂಡಿಬಂದಿದೆ. ಕಲ್ಯಾಣದಿಂದ ಆರಂಭವಾಗುವ ಈ ಕಾವ್ಯ ಮೂಲಗುರುವಿನ ಜೊತೆಯಲ್ಲಿಯೇ ದಕ್ಷಿಣದತ್ತ ಸಾಗಿ ಅನಂತರ ಪೂರ್ವಪಶ್ಚಿಮಗಳಿಗೆ ವ್ಯಾಪಿಸಿ, ಚಿಕ್ಕಲ್ಲೂರು ಕಪ್ಪಡಿಗಳಲ್ಲಿ ನಿಲುಗಡೆಯನ್ನು ಪಡೆಯುತ್ತದೆ. ಮಂಟೇಸ್ವಾಮಿಗಳು ದಾರಿಯುದ್ದಕ್ಕೂ ಶಿಷ್ಯರನ್ನು ಪಡೆದ ರೀತಿ, ಸಿದ್ಧಪ್ಪಾಜಿಯವರನ್ನು ಸ್ವೀಕರಿಸಿದ ಬಗೆ, ಸಿದ್ಧಪ್ಪಾಜಿಯವರು ಹಲಗೂರು ಪಾಂಚಾಳರ ಸೊಕ್ಕನ್ನು ಮುರಿದ ವೈಖರಿ, ಗುರು ಪಾತಾಳಬಾವಿಯಲ್ಲಿ ಪವಡಿಸಿದ ಮೇಲೆ ಶಿಷ್ಯರಿಬ್ಬರೂ ಒಂದೊಂದು ತಪೋಭೂಮಿಯನ್ನು ಅರಸಿಕೊಂಡು ಹೋದ ರೀತಿ - ಇದು ಈ ಕಾವ್ಯದ ಮೂಲ ಬಂಡವಾಳ. ಇದೊಂದು ಧಾರ್ಮಿಕ ಕಾವ್ಯವೇ ಆದರೂ ಸಿದ್ಧಪ್ಪಾಜಿಯಂಥ' ಉಜ್ವಲ ಪಾತ್ರವೊಂದರಿಂದಾಗಿ ಉನ್ನತ ಕಾವ್ಯವಾಗಿ ರೂಪುಗೊಂಡಿದೆ. ಸಿದ್ಧಪ್ಪಾಜಿ ಮಂಟೇಸ್ವಾಮಿಗಳ ಶಿಷ್ಯರಾದ ಸಂದರ್ಭ, ಹಲಗೂರು ಪಾಂಚಾಳರನ್ನು ಅವರು ಎದುರಿಸಿದ ಸಂದರ್ಭಗಳು ಅತ್ಯಂತ ಶಕ್ತಿವತ್ತಾಗಿ ಮೂಡಿಬಂದಿದ್ದು, ಕಾವ್ಯಕ್ಕೆ ಶೋಭೆಯನ್ನು ತಂದಿವೆ. ನಾಗವೀಣೆ ಎಂದು ಕರೆಯಲಾಗುವ ಒಂದು ಬಗೆಯ ಮಟ್ಟಸ ತಂಬೂರಿ ಈ ಕಾವ್ಯ ಸಂಪ್ರದಾಯದವರ ಮುಖ್ಯ ವಾದ್ಯ.

ಸವದತ್ತಿ ಎಲ್ಲಮ್ಮನಿಗೆ ಸಂಬಂಧಿಸಿದಂತೆ ಚೌಡಿಕೆಯವರು, ಗೊಂದಲಿಗರು ಎಂಬ ಎರಡು ವರ್ಗದ ಗುಡ್ಡರು ಕಂಡುಬರುತ್ತಾರೆ. ಚೌಡಿಕೆ ಎಂಬ ವಿಶಿಷ್ಟ ವಾದ್ಯವನ್ನು ಹಿಡಿದವರೇ ಚೌಡಿಕೆಯವರು. ಇವರು ಎಲ್ಲಮ್ಮ ಕ್ಷೇತ್ರಕ್ಕೆ ಮಾತ್ರ ನಡೆದುಕೊಳ್ಳುವ ಧಾರ್ಮಿಕ ಪ್ರತಿನಿಧಿಗಳು. ಗೊಂದಲಿಗರು ಎಲ್ಲಮ್ಮನ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿರದೆ ತುಳಜಾ ಭವಾನಿ, ಕೊಲ್ಲಾಪುರದಮ್ಮ ಮುಂತಾದವರಿಗೂ ನಡೆದುಕೊಳ್ಳುತ್ತಾರೆ. ಆದರೆ ಈ ಎರಡು ಸಂಪ್ರದಾಯದವರೂ ಎಲ್ಲಮ್ಮನ ಕಾವ್ಯವನ್ನು ಹಾಡುತ್ತಾರೆ.

ಎಲ್ಲಮ್ಮನ ಕಾವ್ಯ ಸ್ತ್ರೀಪಾತ್ರ ಪ್ರಧಾನವಾದ ಕನ್ನಡದ ಏಕಮಾತ್ರ ಧಾರ್ಮಿಕ ಕಾವ್ಯ. ಈ ಕಾವ್ಯದಲ್ಲಿ ಜನಪದ ಮೂಲದ ಎಲ್ಲಮ್ಮನ ಕಥೆ, ಪುರಾಣ ಮೂಲದ ಎಲ್ಲಮ್ಮನ ಕಥೆ ಎಂಬ ಎರಡು ಕಥಾಸಂಪ್ರದಾಯಗಳು ಕಂಡುಬರುತ್ತವೆ. ಜನಪದ ಮೂಲದ ಎಲ್ಲಮ್ಮನ ಕಥೆ ಚೌಡಿಕೆಯವರಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಶಿವನ ವರದಿಂದ ಹುಟ್ಟಿದ ಓರಂಗಲ್ಲು ರಾಯ ಅಪಾರ ಪ್ರತಾಪದಿಂದ ಮೆರೆಯುತ್ತ ಅಜ್ಞಾತ ನೆಲೆಯಲ್ಲಿ ತಪೋರೂಢಳಾಗಿದ್ದ ಮಹಾದೇವಿ ಎಲ್ಲಮ್ಮನನ್ನೇ ವರಿಸಲು ಪ್ರಯತ್ನಿಸುತ್ತಾನೆ. ಅವನ ಸೊಕ್ಕನ್ನು ಮುರಿಯಲಾಗಿಯೇ ಎಲ್ಲಮ್ಮ ಓರಂಗಲ್ಲಿನತ್ತ ನಡೆದು, ಜಾಣೆ ಮಾತಂಗಿಯನ್ನು ಕೂಡಿಕೊಂಡು, ಕರ್ನಾಟಕದ ಸಮಸ್ತ ದೈವಗಳನ್ನೂ ತನ್ನ ನೆರವಿಗೆ ಪಡೆದು ಓರಂಗಲ್ಲುರಾಯನ ಸೊಕ್ಕನ್ನು ಮುರಿದು ತನ್ನ ಗುಡ್ಡನನ್ನಾಗಿ ಸ್ವೀಕರಿಸುತ್ತಾಳೆ. ಚೌಡಿಕೆ ವಾದ್ಯದ ಗತ್ತಿನಲ್ಲಿ ಸಾಗುವ ಈ ಕಾವ್ಯ ಉದ್ದಕ್ಕೂ ರಸ ರೋಮಾಂಚನವನ್ನುಂಟುಮಾಡುತ್ತ, ಪಾತರಲಿಂಗನ ಪ್ರಸಂಗದಲ್ಲಿ ಭವ್ಯತೆಯನ್ನು ಎಟುಕಿಸಿಕೊಳ್ಳುತ್ತದೆ. ಇದೊಂದು ಅಪೂರ್ವವಾದ ರೀತಿಯ ವೀರಕಾವ್ಯವೂ ಆಗಿ ಮೂಡಿಬಂದಿದೆ. ಇಲ್ಲಿನ ಯುದ್ಧ ಸನ್ನಿವೇಶಗಳು ಕುತೂಹಲವನ್ನು ಕೆರಳಿಸುತ್ತವೆ. ಪುರಾಣ ಮೂಲದ ಕಥೆ ಎಲ್ಲಮ್ಮನ ಮೂಲವನ್ನು ರೇಣುಕೆಯೊಡನೆ ಸಮೀಕರಿಸುತ್ತದೆ. ಜಮದಗ್ನಿ ಪರಶುರಾಮ, ಕಾರ್ತವೀರ್ಯಾರ್ಜುನ ಮುಂತಾದವರ ಪ್ರಸ್ತಾಪವೂ ಇಲ್ಲಿ ಕಂಡುಬರುತ್ತವೆ. ಈ ಕಥೆಯೂ ಆಕರ್ಷಕವಾಗಿ ಮೂಡಿಬಂದಿದೆ.

ಕಾಡುಗೊಲ್ಲರ ಅಧಿದೈವ ಜುಂಜಪ್ಪನ ಹಿನ್ನೆಲೆಯಲ್ಲಿ ಜನಪದ ಕಾವ್ಯವೊಂದು ಸೃಷ್ಟಿಯಾಗಿದೆ. ಚಿಕ್ಕನಾಯಕನಹಳ್ಳಿಯ ಸಮೀಪದ ಹಾಗಲವಾಡಿ, ಶಿರಾ ಸಮೀಪದ ಕಳವೇರಹಳ್ಳಿ ಹಾಗೂ ಬೇವಿನಹಳ್ಳಿಗಳು ಈ ಕಾವ್ಯದ ಮುಖ್ಯ ನೆಲೆಗಳು. ಕಳವೇರಹಳ್ಳಿಯನ್ನು ಕೇಂದ್ರ ಮಾಡಿಕೊಂಡು, ಜುಂಜಪ್ಪನ ಕಾವ್ಯ ಚಿತ್ರದುರ್ಗ, ತುಮಕೂರು, ಚಿಕ್ಕಮಗಳೂರು, ಬೆಂಗಳೂರು ಜಿಲ್ಲೆಗಳ ವ್ಯಾಪ್ತಿಯಲ್ಲಿ ಹರಡಿಕೊಂಡಿದೆ. ಕಾವ್ಯದುದ್ದಕ್ಕೂ ವಿಸ್ಮಯಕಾರಕ ಘಟನೆಗಳಿಗೆ ಕಾರಣವಾದ ಜುಂಜಪ್ಪನ ದನಗಳು ಮೇದ ಕಾವಲುಗಳು ಈ ಎಲ್ಲ ಜಿಲ್ಲೆಗಳಲ್ಲೂ ಕಾಣಬರುತ್ತವೆ. ಜುಂಜಪ್ಪನ ಸಂಪ್ರದಾಯಕ್ಕೆ ಸೇರಿದ ಗುಡ್ಡರನ್ನು ಗಣೆಯವರು ಎಂದು ಕರೆಯಲಾಗಿದೆ. ಗಣೆ ಎಂದು ಕರೆಯಲ್ಪಡುವ ಒಂದು ದೊಡ್ಡ ಕೊಳಲು ಇವರ ಮುಖ್ಯ ವಾದ್ಯ. ಇದರ ಹಿನ್ನೆಲೆಯಲ್ಲಿ ಕಾವ್ಯವನ್ನು ಹಾಡಿಕೊಂಡು ಹೋಗಲಾಗುವುದು. ಜುಂಜಪ್ಪನ ಕಾವ್ಯ ಹೆಚ್ಚಾಗಿ ಕಂಡುಬರುವುದು ಗಣೆಯವರಲ್ಲಿ, ಇನ್ನೂ ಕೆಲವರು ಈ ಕಾವ್ಯವನ್ನು ಹಾಗೆಯೇ ಹಿಮ್ಮೇಳಮುಮ್ಮೇಳಗಳೊಡನೆ ಹಾಡುತ್ತಾರೆ. ಎರಡು ಅಥವಾ ಮೂರು ರಾತ್ರಿಗಳ ಈ ಸುದೀರ್ಘ ಕಾವ್ಯದಲ್ಲಿ ಉತ್ತರ ಸಂಪ್ರದಾಯದ ಜುಂಜಪ್ಪನ ಕಾವ್ಯ ದಕ್ಷಿಣ ಸಂಪ್ರದಾಯದ ಜುಂಜಪ್ಪನ ಕಾವ್ಯ - ಎಂಬ ಎರಡು ಸಂಪ್ರದಾಯಗಳು ಕಂಡುಬಂದಿವೆ. ಎರಡು ಸಂಪ್ರದಾಯಗಳಲ್ಲಿಯೂ ಮೂಲಸಾಮಗ್ರಿ ಒಂದೇ ಆದರೂ ಕಥೆಗಳ ನಡೆ ವಿಭಿನ್ನವಾಗಿದೆ. ಉತ್ತರ ಸಂಪ್ರದಾಯದ ಕಾವ್ಯದ ಪ್ರಕಾರ ದಕ್ಷಿಣ ಸಂಪ್ರದಾಯದ ಕಾವ್ಯಕ್ಕಿಂತ ಜುಂಜಪ್ಪನ ತಾತ ಮುತ್ತಾತರ ಹೆಸರು ವಂಶಾವಳಿ ಬೇರೆಯಾಗುತ್ತದೆ. ದಕ್ಷಿಣ ಸಂಪ್ರದಾಯದ ಕಾವ್ಯದಲ್ಲಿ ಕಥೆಯ ವೈವಿಧ್ಯ ನಮ್ಮ ದೃಷ್ಟಿಯನ್ನು ಸೆಳೆದರೆ ಉತ್ತರ ಸಂಪ್ರದಾಯದ ಕಾವ್ಯದಲ್ಲಿ ಧಾರ್ಮಿಕ ಅಂಶಗಳು ಹೆಚ್ಚು. ಎರಡು ಸಂಪ್ರದಾಯದ ಕಾವ್ಯಗಳನ್ನು ಜುಂಜಪ್ಪನ ಪೂರ್ವಿಕರ ಕಥೆ, ಜುಂಜಪ್ಪ ಹಾಗೂ ಅವನ ತಮ್ಮಂದಿರಾದ ಮಾರ, ಮೈಲರ ಕಥೆ ಎಂಬ ಎರಡು ಪ್ರಧಾನ ಭಾಗಗಳಲ್ಲಿ ಹಾಡಲಾಗುತ್ತದೆ. ಜುಂಜಪ್ಪನ ಪೂರ್ವಿಕರ ಕಥೆ ಸಾಕಷ್ಟು ವಿಸ್ತಾರವಾಗಿಯೇ ಮೂಡಿಬಂದಿದೆ. ಜುಂಜಪ್ಪನ ತಂದೆ, ತಾತ, ಮುತ್ತಾತ ಅವರ ಜೀವನ ವಿವರಗಳನ್ನೊಳಗೊಂಡ ಮೊದಲ ಭಾಗ ಮುಂದಿನ ಕಾವ್ಯ ವಿಸ್ತಾರಕ್ಕೆ ಒಳ್ಳೆಯ ತಳಹದಿಯನ್ನು ರಚಿಸುತ್ತದೆ. ಜುಂಜಪ್ಪನ ಅವತಾರವಾದ ಮೇಲೆ ಏಳುಗೂಡಿನ ದನಗಳನ್ನು ಬೇರೆ ಬೇರೆ ಪ್ರದೇಶಗಳಲ್ಲಿ ಕಾದುಕೊಂಡು ಅಲ್ಲಲ್ಲಿನ ಸಮಸ್ಯೆಗಳನ್ನು ನಿವಾರಿಸುತ್ತ ಹೋದ ಅಪೂರ್ವ ಸನ್ನಿವೇಶಗಳು ಕಾವ್ಯದುದ್ದಕ್ಕೂ ಬರುತ್ತವೆ. ಜುಂಜಪ್ಪನ ಸೋದರಮಾವಂದಿರು ಬೇರೆಬೇರೆಯವರನ್ನು ಆಶ್ರಯಿಸಿ, ಜುಂಜಪ್ಪ ಮತ್ತು ಅವನ ತಮ್ಮಂದಿರಿಗೆ ಕೊಟ್ಟ ಕಿರುಕುಳಗಳೇ ಈ ಕಾವ್ಯದ ಬಹುಭಾಗವನ್ನು ಆಕ್ರಮಿಸಿಕೊಳ್ಳುತ್ತವೆ. ಯಾವುದಕ್ಕೂ ಜಗ್ಗದ ಸೋದರಳಿಯನಿಗೆ ಅವರು ಮದ್ದನ್ನು ಕೊಡುತ್ತಾರೆ. ಮದ್ದುಂಡು ಮಡಿದ ಜುಂಜಪ್ಪ, ಏಳು ದಿನಕ್ಕೆ ಮತ್ತೆ ಹುಟ್ಟಿ ಬಂದು ಸೋದರಮಾವಂದಿರ ಹಟ್ಟಿಯನ್ನೂ ಅವರನ್ನೂ ಉರಿ ಬಾಣಗಳಿಂದ ನಾಶಮಾಡುತ್ತಾನೆ.

ಕೃಷ್ಣ ಕಥೆಯ ಚೌಕಟ್ಟಿನಲ್ಲಿ ಬರುವ ಈ ಕಾವ್ಯದ ಕಥಾವಸ್ತು ಗೊಲ್ಲ ಸಂಸ್ಕೃತಿಯ ಮೇಲೆ ವಿಶೇಷವಾಗಿ ಬೆಳಕು ಚೆಲ್ಲುತ್ತದೆ. ಜುಂಜಪ್ಪನ ಪಾತ್ರದ ಔನ್ನತ್ಯದ ದೃಷ್ಟಿಯಿಂದ ಕಾವ್ಯದುದ್ದಕ್ಕೂ ಬರುವ ಅದ್ಭುತ ಸನ್ನಿವೇಶಗಳ ದೃಷ್ಟಿಯಿಂದ, ಬಡಮೈಲನಂಥ ಎತ್ತಿನ ಪಾತ್ರದ ಸೊಗಸಿನಿಂದ ಜುಂಜಪ್ಪನ ಕಾವ್ಯ ನಮ್ಮ ಜನಪದ ಕಾವ್ಯಗಳಲ್ಲಿ

ಅಗ್ರಪಂಕ್ತಿಯಲ್ಲಿ ನಿಲ್ಲಬಹುದಾದ ಕಾವ್ಯವೆನಿಸುತ್ತದೆ. ಒಬ್ಬ ಸಾಂಸ್ಕೃತಿಕ ವೀರನನ್ನು ಕುರಿತ ಈ ಕಾವ್ಯ ಎಲ್ಲ ದೃಷ್ಟಿಗಳಿಂದಲೂ ಒಂದು ಜನಪದ ಮಹಾಕಾವ್ಯ ಎನ್ನುವುದರಲ್ಲಿ ಅಡ್ಡಿ ಇಲ್ಲ.

ಗೊರವ ಸಂಪ್ರದಾಯ ಮೈಲಾರ ಕ್ಷೇತ್ರಕ್ಕೆ ಸಂಬಂಧಪಡುತ್ತದೆ. ಈ ಕ್ಷೇತ್ರದ ಗೊರವರು ಕರ್ನಾಟಕದಾದ್ಯಂತ ಕಂಡುಬರುತ್ತಾರೆ. ಇವರಲ್ಲಿಯೂ ದಕ್ಷಿಣ ಸಂಪ್ರದಾಯ ಹಾಗೂ ಉತ್ತರ ಸಂಪ್ರದಾಯಗಳನ್ನು ಕಾಣಬಹುದು. ದಕ್ಷಿಣ ಸಂಪ್ರದಾಯದ ಗೊರವರಲ್ಲಿ ಮೈಸೂರು ಜಿಲ್ಲೆಯ ಮುಡುಕುತೊರೆ ಕ್ಷೇತ್ರಕ್ಕೆ ಸಂಬಂಧಪಡುವ ಪಾರ್ವತೀ ಗೊರವರು ಮುಡುಕುತೊರೆ ಮಲ್ಲಿಕಾರ್ಜುನ ಹಾಗೂ ಪಾರ್ವತಿಯವರಿಗೆ ಸಂಬಂಧಪಟ್ಟ ಕಾವ್ಯವೊಂದನ್ನು ಹಾಡುತ್ತಾರೆ. ಉಳಿದವರು ಮೈಲಾರಲಿಂಗ ಕೋಮಲೆ ಹಾಗೂ ಮೈಲಾರಲಿಂಗ ಮಣಿಮಲ್ಲಾಸುರನನ್ನು ಕೊಂದ ಕಥೆಗಳನ್ನು ಹಾಡುಗಬ್ಬದ ರೂಪದಲ್ಲಿ ಹಾಡುತ್ತಾರೆ. ಮಲ್ಲಿಕಾರ್ಜುನ-ಪಾರ್ವತಿ ಇವರ ಕಥೆ ಗಂಗೆ-ಗೌರಿ ಪ್ರಸಂಗದ ಹಿನ್ನೆಲೆಯಲ್ಲಿ ಮೂಡಿನಿಂತ ರಚನೆ. ಕೋಮಲೆಯ ಪ್ರಸಂಗ ಮೈಲಾರಲಿಂಗ ಗೊರವನ ರೂಪಿನಲ್ಲಿ ಹೋಗಿ ಕೋಮಲೆಯನ್ನು ಹೊತ್ತುತಂದುದನ್ನು ಚಿತ್ರಿಸುತ್ತದೆ. ಮಣಿಮಲ್ಲಾಸುರ ಸಂಹಾರ ಕನ್ನಡದ ಇತರ ಧಾರ್ಮಿಕ ಜನಪದ ಕಾವ್ಯಗಳಂತೆ ಮೈಲಾರಲಿಂಗನ ಅವತಾರದ ಹಿನ್ನೆಲೆಯನ್ನೂ ಅವನ ಸಾಹಸವನ್ನೂ ಬಣ್ಣಿಸುತ್ತದೆ.

ಕನ್ನಡ ಜನಪದ ಕಾವ್ಯಗಳಲ್ಲಿ ಮೇಲಿನ ಐದು ಕಾವ್ಯಗಳೂ ಆಯಾ ಧಾರ್ಮಿಕ ದೃಷ್ಟಿಯಿಂದ ಗಣನೀಯವೆನಿಸುವಂತೆಯೇ ಕಾವ್ಯದೃಷ್ಟಿಯಿಂದಲೂ ಮುಖ್ಯವೆನಿಸುತ್ತವೆ. ವಿಸ್ತಾರದ ದೃಷ್ಟಿಯಿಂದಲೂ ಈ ಕಾವ್ಯಗಳಿಗೆ ಸರಿಸಮಾನ ಕಾವ್ಯಗಳು ಕಡಿಮೆ. ಮಾಂತ್ರಿಕ ಆವರಣಗಳು, ಮಹಿಮೆಯ ಪ್ರದರ್ಶನಗಳು, ಪವಾಡಗಳ ಪಂಕ್ತಿಗಳು, ದೈವಿಕ ಸನ್ನಿವೇಶಗಳು - ಇವುಗಳ ನಡುವೆಯೂ ಈ ಕಾವ್ಯಗಳಲ್ಲಿ ಕಾವ್ಯ ಮೌಲ್ಯ ಉಳಿದು ಬಂದಿದ್ದು ಒಂದು ಶ್ರೇಷ್ಠ ಕಾವ್ಯ ಪರಂಪರೆಯನ್ನು ಸ್ಥಾಪಿಸಿದೆ.

ಲೌಕಿಕ ವೃತ್ತಿಗಾಯಕರು ಹಾಡುವ ಲೌಕಿಕ ಕಾವ್ಯಗಳ ಜೊತೆಗೆ ಧಾರ್ಮಿಕ ವೃತ್ತಿಗಾಯಕರು ಹಾಡುವ ಹತ್ತಾರು ಲೌಕಿಕ ಕಾವ್ಯಗಳನ್ನೂ ನಿರ್ಲಕ್ಷಿಸುವಂತಿಲ್ಲ. ಸಾಮಾನ್ಯ ಗಾಯಕರು ಹಾಡುವ ಲೌಕಿಕ ಕಾವ್ಯಗಳನ್ನೂ ಈ ವರ್ಗದಲ್ಲಿಯೇ ಪರಿಗಣಿಸಬೇಕಾಗುತ್ತದೆ. ಕನ್ನಡದಲ್ಲಿ ಲಭ್ಯವಾಗಿರುವ ಕೆಲವು ಪ್ರಮುಖ ಲೌಕಿಕ ಕಾವ್ಯಗಳನ್ನು ಪೌರಾಣಿಕ ಕಾವ್ಯಗಳು, ಐತಿಹಾಸಿಕ ಕಾವ್ಯಗಳು, ದೈವ ಸಂಬಂಧಿ ಪ್ರಣಯ ಕಾವ್ಯಗಳು, ರಮ್ಯ ಕಾವ್ಯಗಳು, ಸ್ತ್ರೀಪಾತ್ರ ಪ್ರಧಾನ ಕಾವ್ಯಗಳು, ಪುರುಷಪಾತ್ರ ಪ್ರಧಾನ ಕಾವ್ಯಗಳು, ವಾಸ್ತವಿಕ ಕಾವ್ಯಗಳು, ಆತ್ಮಾರ್ಪಣೆಯ ಕಾವ್ಯಗಳು — ಎಂದು ವರ್ಗೀಕರಿಸಿಕೊಳ್ಳಬಹುದು. ವಿಶ್ವಕಾವ್ಯಗಳ ವರ್ಗೀಕರಣವನ್ನು ಗಮನಿಸಿದಾಗ ವೀರಕಾವ್ಯಗಳು ಹಾಗೂ ಐತಿಹಾಸಿಕ ಕಾವ್ಯಗಳ ನಡುವೆ ಹೆಚ್ಚು ಅಂತರವನ್ನು ಕಲ್ಪಿಸಲು ಸಾಧ್ಯವಾಗುವುದಿಲ್ಲ. ಕನ್ನಡದಲ್ಲಿ ಲಭ್ಯವಾಗಿರುವ ಶಿವಶರಣರ ಕಾವ್ಯಗಳನ್ನು ಲೌಕಿಕ ಕಾವ್ಯಗಳ ಸಾಲಿನಲ್ಲಿ ವೃತ್ತಿ ಗಾಯಕರು ಹಾಡುವುದರಿಂದ ಸೌಲಭ್ಯದೃಷ್ಟಿಯಿಂದ ಅವುಗಳನ್ನು ಪ್ರತ್ಯೇಕ ವರ್ಗವಾಗಿಯೇ ನೋಡಬೇಕು. ರಮ್ಯ ಕಾವ್ಯಗಳನ್ನುಳಿದು ಉಳಿದ ವರ್ಗಗಳೆಲ್ಲ ಕನ್ನಡ ಜನಪದ ಕಾವ್ಯಗಳ ಜಾಯಮಾನಕ್ಕೆ ಅನುಗುಣವಾಗಿ ಪ್ರತ್ಯೇಕ ವರ್ಗಗಳನ್ನು ಪಡೆದುಕೊಳ್ಳುತ್ತವೆ.

ರಾಮಾಯಣ, ಮಹಾಭಾರತ, ಭಾಗವತ ಹಾಗೂ ಶಿವಕಥೆಗಳ ಸಂಬಂಧದ ವಸ್ತುಗಳನ್ನೊಳಗೊಂಡ ಕಾವ್ಯಗಳನ್ನು ಪೌರಾಣಿಕ ಕಾವ್ಯಗಳೆಂದು ಪರಿಗಣಿಸಲಾಗಿದೆ. ಕನ್ನಡದಲ್ಲಿ ಸಮಗ್ರ ಜನಪದ ರಾಮಾಯಣವಾಗಲಿ, ಮಹಾಭಾರತವಾಗಲಿ ದೊರೆತಿಲ್ಲ. ರಾಮಾಯಣ ಸಂಬಂಧವಾದ ಸಮಗ್ರ ಕಾವ್ಯವೊಂದು ಭಾಗವಂತಿಕೆ ಸಂಪ್ರದಾಯದಲ್ಲಿ ಕಂಡುಬಂದರೂ ಅದು ಹೆಚ್ಚಾಗಿ ಶಿಷ್ಟಮೂಲಕ್ಕೆ ವಾಲುವಂತಿದೆ. ರಾಮಾಯಣದ ಕೆಲವು ಪ್ರಮುಖ ಘಟನೆಗಳ ಮೇಲೆ ನಿಂತ ತುಂಡು ಕಾವ್ಯಗಳು ಅಲ್ಲಲ್ಲಿ ಲಭ್ಯವಾಗಿವೆ. ಅವುಗಳಲ್ಲಿ ಕುಶಲವರ ಕಾಳಗ ಅತ್ಯಂತ ಗಮನಾರ್ಹವಾದುದು.

ಮಹಾಭಾರತಕ್ಕೆ ಸಂಬಂಧಿಸಿದ ಸಮಗ್ರ ಕಾವ್ಯ ವಾಕ್ಸಂಪ್ರದಾಯದಲ್ಲಿ ಕಂಡುಬಂದಿಲ್ಲ. ಕಿನ್ನರಿ ಜೋಗಿಗಳು ಹಾಡುವ ಮಹಾಭಾರತದ ವಿವಿಧ ಭಾಗಗಳನ್ನು ಗಮನಿಸಿದರೆ ಆ ಸಂಪ್ರದಾಯದಲ್ಲಿ ಸಮಗ್ರ ಜನಪದ ಕಾವ್ಯವೊಂದಿತ್ತು ಎಂದು ಊಹಿಸುವ ಸಾಧ್ಯತೆ ಇದೆ. ಭಾಗವತ ಹಾಗೂ ಶಿವಪುರಾಣ ಸಂಬಂಧವಾದ ಲಾವಣಿಗಳು ದೊಂಬಿದಾಸರಲ್ಲಿ ಲಭ್ಯವಾಗಿವೆ. ಗೌರಮ್ಮನ ಮದುವೆ, ಗಂಗೆ ಗೌರಿ ಜಗಳ, ಕೃಷ್ಣ ಕೊರವಂಜಿ ಇಂಥ ಕಿರುಲಾವಣಿಗಳನ್ನು ಸುವಿಸ್ತಾರ ಕಾವ್ಯಗಳ ಸಾಲಿನಲ್ಲಿ ಪರಿಗಣಿಸಲು ಸಾಧ್ಯವಾಗುವುದಿಲ್ಲ.

ಐತಿಹಾಸಿಕ ವಿಷಯವನ್ನು ಆಧರಿಸಿ ರಚಿತವಾದ ಕಾವ್ಯಗಳು ಕನ್ನಡದಲ್ಲಿ ಹೇರಳವಾಗಿ ದೊರೆಯುತ್ತವೆ. ಪಿರಿಯಾಪಟ್ಟಣದ ಕಾಳಗ, ಸರ್ಜಪ್ಪನಾಯಕ, ಮಾಗಡಿ ಕೆಂಪೇಗೌಡ, ಸಂಗೊಳ್ಳಿ ರಾಯಣ್ಣ ಮುಂತಾದ ಕೆಲವು ವಿಶಿಷ್ಟ ಸ್ವರೂಪದ ಕಾವ್ಯಗಳು ಗಮನಾರ್ಹವಾಗಿವೆ. ಪಿರಿಯಾಪಟ್ಟಣದ ಕಾಳಗ ಜನಪದ ಐತಿಹಾಸಿಕ ಕಾವ್ಯಗಳ ಸಾಲಿನ ಒಂದು ನಾಯಕರತ್ನ, ಪಿರಿಯಾಪಟ್ಟಣ ಮತ್ತು ಮೈಸೂರುಗಳ ನಡುವೆ ಒಂದು ಯುದ್ಧದ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಈ ಕಾವ್ಯ ಅತ್ಯಂತ ವ್ಯಾಪಕವಾದುದು. ಯುದ್ಧಕ್ಕೆ ಪ್ರೇರಕವಾದ ಸನ್ನಿವೇಶಗಳು, ಯುದ್ಧಸಿದ್ಧತೆ, ಯುದ್ಧವರ್ಣನೆಗಳು, ವೀರರಾಜನ ಶೌರ್ಯಸಾಹಸ ಹಾಗೂ ಸ್ವಾಭಿಮಾನ ಪೂರ್ಣ ಸನ್ನಿವೇಶಗಳು - ಇವುಗಳ ದೃಷ್ಟಿಯಿಂದ ಪಿರಿಯಾಪಟ್ಟಣದ ಕಾಳಗ ಒಂದು ಅತ್ಯುತ್ತಮ ಐತಿಹಾಸಿಕ ಜನಪದಕಾವ್ಯವಾಗಿ ಮೂಡಿದೆ.

ಕರ್ನಾಟಕದ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಅಲ್ಲಲ್ಲಿನ ಅಧಿದೈವಗಳಿಗೆ ಸಂಬಂಧಿಸಿದ ಕೆಲವು ವಿಲಕ್ಷಣ ಪ್ರಣಯ ಸಂಬಂಧಿಯಾದ ವಸ್ತು ಆ ಬಗೆಯ ಜನಪದ ಕಾವ್ಯಗಳ ಸೃಷ್ಟಿಗೆ ಪ್ರೇರಕವಾಗಿದೆ. ಬಿಳಿಗಿರಿರಂಗ, ನಂಜುಂಡೇಶ್ವರ, ಚುಂಚನಗಿರಿ ಭೈರವ, ಮೈಲಾರಲಿಂಗ, ಮೇಲುಕೋಟೆ ಚೆಲುವರಾಯ - ಇವರಿಗೆ ಸಂಬಂಧಿಸಿದಂತೆ ಕಾವ್ಯಗಳು ಸೃಷ್ಟಿಯಾಗಿವೆ. ಈ ದೈವಗಳು ಉಪಪತ್ನಿಯೊಬ್ಬಳೊಡನೆ ಸರಸ ಸಲ್ಲಾಪವಾಡುವುದು, ತಮ್ಮ ಪತ್ನಿಯರ ವಿರಸಕ್ಕೆ ಕಾರಣವಾಗುವುದು, ಅದರಿಂದ ನಾನಾರೀತಿಯ ಕಷ್ಟಗಳನ್ನಾದರೂ ಎದುರಿಸಲು ಸಿದ್ಧವಾಗುವುದು, ಮುಂತಾದ ವಿಷಯಗಳ ಸುತ್ತ ಹೆಣೆದುಕೊಂಡಿರುವ ಈ ಕಾವ್ಯಗಳಲ್ಲಿ ನಂಜಯ್ಯ-ಚಾಮುಂಡಿ ಇವರ ಪ್ರಣಯವನ್ನು ನಿರೂಪಿಸುವ ಕಾವ್ಯ ಎರಡು ಮೂರು ಪ್ರಕಾರಗಳಲ್ಲಿ ಸೃಷ್ಟಿಯಾಗಿದೆ. ಸ್ತ್ರೀಯರ ತ್ರಿಪದಿ ಕಾವ್ಯ, ನೀಲಗಾರರ ಕಾವ್ಯ ಹಾಗೂ ಹೆಳವರ ಕಾವ್ಯಗಳನ್ನು ಇಲ್ಲಿ ಹೆಸರಿಸಬಹುದು. ಚಾಮುಂಡಿ ಪುರಾಣ ಎಂಬ ಹೆಸರಿನಲ್ಲಿ ಸಾಕಷ್ಟು ವಿಸ್ತಾರವಾಗಿಯೇ ಈ ಕಾವ್ಯ ಬೆಳವಣಿಗೆಯನ್ನು ಸಾಧಿಸಿದೆ.

ಕನ್ನಡ ಜನಪದಕಾವ್ಯಗಳಲ್ಲಿ ರಮ್ಯಕಾವ್ಯಗಳೂ ಸಾಕಷ್ಟು ಸಂಖ್ಯೆಯಲ್ಲಿ ದೊರೆಯುತ್ತವೆ. ಈ ಕಾವ್ಯಗಳ ಸಾಲಿನಲ್ಲಿ ಅತ್ಯುತ್ತಮ ಕಾವ್ಯ ನೀಲವೇಣಿ; ಬಸವಕುಮಾರ ಲೋಹಿತಕುಮಾರ, ನೀಲಕಂಠ ರೂಪಾವತಿ, ಸಾರಂಗಧರ, ಚೆನ್ನಿಗರಾಮ - ಮುಂತಾದ ಕಾವ್ಯಗಳನ್ನು ಇಲ್ಲಿ ಹೆಸರಿಸಬಹುದು.

ಪುರುಷರ ಮೇಳಗಳಿರುವಂತೆಯೇ ಕರ್ನಾಟಕದಲ್ಲಿ ಸ್ತ್ರೀಯರ ಮೇಳಗಳೂ ಕಂಡುಬರುತ್ತವೆ. ಕೆಲವು ಸುದೀರ್ಘ ಕಾವ್ಯಗಳನ್ನು ಕಂಠಗತ ಮಾಡಿಕೊಂಡ ಸ್ತ್ರೀಯರು ಆಹ್ವಾನದ ಮೇಲೆ ಮನೆಗಳಲ್ಲಿ ಈ ಕಾವ್ಯಗಳನ್ನು ಸಮಗ್ರ ರಾತ್ರಿ ಹಾಡುತ್ತಾರೆ. ಈ ಮೇಳಗಳಲ್ಲಿ ಅನೇಕ ಸುಂದರ ಕಾವ್ಯಗಳು ಗುರುತಿಸಲ್ಪಟ್ಟಿವೆ. ಗುಣಸಾಗರಿ, ಅಣಜಿ ಹೊನ್ನಮ್ಮ, ಬಾಲನಾಗಮ್ಮ ಮುಂತಾದ ಸ್ತ್ರೀ ಪಾತ್ರ ಪ್ರಧಾನ ಕಾವ್ಯಗಳು, ಕಾಳಿಂಗರಾಯ ಮುಂತಾದ ಪುರುಷಪಾತ್ರ ಪ್ರಧಾನ ಕಾವ್ಯಗಳು ಇಲ್ಲಿ ಗಮನಾರ್ಹ. ದುರ್ವಿಧಿಯ ಕೈವಾಡದಲ್ಲಿ ನಾನಾ ದುರಂತಗಳಿಗೆ ಪಕ್ಕಾಗಿ ಸಾವು ನೋವನ್ನು ಅನುಭವಿಸುವ ದುರ್ದೈವಿಗಳ ಕಥೆಗಳಿವು.

ಕನ್ನಡ ಜನಪದ ಕಾವ್ಯಗಳಲ್ಲಿ ವಾಸ್ತವಿಕ ಕಾವ್ಯಗಳನ್ನೂ ಒಂದು ಪ್ರತ್ಯೇಕ ವರ್ಗದಲ್ಲಿ ಪರಿಗಣಿಸಬೇಕಾಗುತ್ತದೆ. ಬಂಜೆ ಹೊನ್ನಮ್ಮ ಈ ಸಾಲಿನ ಕಾವ್ಯಗಳಲ್ಲಿ ಅತ್ಯುತ್ತಮವಾದುದು. ಮಕ್ಕಳಿಲ್ಲದ ಅದೃಷ್ಟಹೀನ ಸ್ತ್ರೀಯೊಬ್ಬಳು ನಾನಾ ರೀತಿಯ ಮಾನಸಿಕ ವೇದನೆಯನ್ನು ಅನುಭವಿಸುವುದು, ಸಮಾಜದ ಕಣ್ಣಿನಲ್ಲಿ ದೈವದ ಕಣ್ಣಿನಲ್ಲಿ ಆಕೆ ತಿರಸ್ಕಾರಕ್ಕೆ ಗುರಿಯಾಗುವುದು. ಕೊನೆಗೆ ಮಗುವೊಂದನ್ನು ಹಡೆದು ತನ್ನ ಬಂಜೆತನದ ಅಪಯಶಸ್ಸನ್ನು ಹೋಗಲಾಡಿಸುವುದು ಮುಂತಾದ ವಿಷಯಗಳ ಸುತ್ತ ಈ

ಕಾವ್ಯ ವಿಸ್ತಾರವಾಗಿ ಹಬ್ಬಿಕೊಂಡಿದೆ. ಉತ್ತರದೇವಿ ವಾಸ್ತವಿಕ ಜನಪದ ಕಾವ್ಯಗಳೆಲ್ಲೆಲ್ಲ ಹೆಚ್ಚು ಜನಪ್ರಿಯವಾದುದು.

ತ್ಯಾಗ ಬಲಿದಾನಗಳಿಗೆ ಸಂಬಂಧಿಸಿದ ಅನೇಕ ಜನಪದ ಕಾವ್ಯಗಳು ಕನ್ನಡದಲ್ಲಿ ದೊರೆಯುತ್ತವೆ. ಹೊಸಕೆರೆಯೊಂದಕ್ಕೆ ಸೊಸೆಯನ್ನು ಬಲಿಕೊಡುವುದು, ಗಂಡನನ್ನು ಕಳೆದುಕೊಂಡು ಸತಿ ಮಹಾಸತಿಯಾಗುವುದು ಮುಂತಾದ ವಸ್ತುವನ್ನು ಆಧರಿಸಿದ ಅಸಂಖ್ಯಾತ ಕಾವ್ಯಗಳು ಕನ್ನಡದಲ್ಲಿ ದೊರೆಯುತ್ತವೆ. ಹುಳಿಯಾರು ಕೆಂಚಮ್ಮ, ವೀರ ತಿಮ್ಮವ್ವ, ಗೊಲ್ಲರ ನಾಗಮ್ಮ, ಈರೋಬಿ ಮುಂತಾದ ಕಾವ್ಯಗಳು ಸಂಗ್ರಹವಾಗಿಯೂ ವಿಸ್ತಾರವಾಗಿಯೂ ದೊರೆಯುತ್ತವೆ.

ಕನ್ನಡದಲ್ಲಿ ಜನಪದ ಕಾವ್ಯಗಳ ವೈವಿಧ್ಯ ಹೆಚ್ಚು. ಕಾಡುಗೊಲ್ಲ ಜನಾಂಗದಲ್ಲಿ, ಹರಿಜನರಲ್ಲಿ, ಒಕ್ಕಲುಮಕ್ಕಳಲ್ಲಿ ಇವುಗಳ ಪ್ರಾಚುರ್ಯ ಅಧಿಕ. ವೃತ್ತಿಗಾಯಕರು ಜನಪದ ಕಾವ್ಯಗಳ ಸಂರಕ್ಷಕರು. ಈ ಕಾವ್ಯಗಳಲ್ಲಿ ಕೆಲವು ಪ್ರಾದೇಶಿಕವಾಗಿಯೂ ಮತ್ತೆ ಕೆಲವು ಸಮಗ್ರ ಕರ್ನಾಟಕ ದಲ್ಲಿಯೂ ಕಾಣಬರುತ್ತವೆ. ಗುಣಸಾಗರಿ, ಉತ್ತರದೇವಿ, ಬಾಲನಾಗಮ್ಮ ಮುಂತಾದವು ಕರ್ನಾಟಕದಾದ್ಯಂತ ಗುರುತಿಸಲ್ಪಟ್ಟಿವೆ. ಬಾಲನಾಗಮ್ಮ ಕನ್ನಡನಾಡಿನ ಗಡಿಯನ್ನೂ ದಾಟಿ ಆಂಧ್ರ ಪ್ರದೇಶದಲ್ಲಿಯೂ ಹಬ್ಬಿದೆ. (ಜಿ.ಎಸ್.ಪಿ.)

**ಜನಪದ ಗಣಿತ :** ಪ್ರಾಚೀನಕಾಲದಿಂದ ಬೆಳೆದು ಬಂದಿರುವ ಗಣಿತ ವಿಜ್ಞಾನಕ್ಕೆ ಜನಪದ ಗಣಿತವನ್ನು ಹೋಲಿಸಿದಾಗ ಜನಪದ ಗಣಿತಕ್ಕೆ ತನ್ನದೇ ಆದ ಪರಿಮಿತಿಗಳಿದ್ದರೂ ವಿಜ್ಞಾನಪೂರ್ವ ಯುಗದಲ್ಲಿನ ಜನತೆಯ ಸಮಸ್ಯೆಗಳಿಗೆ ಅದು ತಕ್ಕ ಉತ್ತರವನ್ನು ಒದಗಿಸಿಕೊಟ್ಟಿದ್ದಿತೆಂದೇ ಹೇಳಬಹುದು. ಅಲ್ಲದೆ ಇಂದಿನ ಗಣಿತ ವಿಜ್ಞಾನ ಜನಪದ ಗಣಿತದ ಪರಿಷ್ಕೃತ ರೂಪವೇ ಆಗಿದೆ. ಆದ್ದರಿಂದ ಅಂದಿನ ಅಂದಾಜಿನ ಲೆಕ್ಕಾಚಾರ ಇಂದು ಕರಾರುವಾಕ್ಕೆನಿಸದಿರಬಹುದು. ಈ ಮಾತು ಜನಪದ ಗಣಿತಕ್ಕೆ ಎಲ್ಲ ಸಂದರ್ಭಗಳಲ್ಲೂ ಅನ್ವಯವಾಗುವಂಥ'ದಲ್ಲ ಎಂಬುದನ್ನೂ ಮರೆಯಕೂಡದು.

ಜನಪದದಲ್ಲಿ ಉದ್ದ, ಅಗಲ, ತೂಕ, ಎತ್ತರ ಮತ್ತು ಕಾಲಪರಿಮಾಣಗಳ ಲೆಕ್ಕಾಚಾರಗಳಲ್ಲಿ ಹಿಂದಿನ ಕ್ರಮ ಈಗಲೂ ಉಸಿರಾಡುತ್ತಿರುವಂತೆ ಕಂಡರೂ ರಾಜಕೀಯ, ಸಾಮಾಜಿಕ ಬದಲಾವಣೆಗಳಿಂದಾಗಿ, ಪರಕೀಯ ದಾಳಿಗಳಿಂದಾಗಿ ಜನಪದದ ಬಹುತೇಕ ವ್ಯವಹಾರ ಕ್ರಮಗಳೆಲ್ಲ ಕ್ರಮೇಣ ಮೂಲೆಗುಂಪಾದವು. ರೈತ, ಕಮ್ಮಾರ, ಚಮ್ಮಾರ, ಕುಂಬಾರ, ದರ್ಜಿ, ಕೆಲಸಿ, ದೇವಾಂಗಸೆಟ್ಟಿ, ಉಪ್ಪಲಿಗಸೆಟ್ಟಿ ಮುಂತಾದ ಎಲ್ಲ ಕಸಬಿನ ಜನ ತಮ್ಮ ಕಸಬಿನ ಉತ್ಪನ್ನಗಳನ್ನು ಪರಸ್ಪರ ಚಾಟಿ (ಬಾರ್ಟರ್) ಮಾಡಿಕೊಳ್ಳುವ ವ್ಯವಹಾರ ಪದ್ಧತಿಯಿಂದ ಜನಪದ ಗಣಿತ ಪ್ರಾರಂಭವಾಯಿತೆಂದು ಹೇಳಬಹುದು. ಆದರೆ ಚಾಟಿ ಪದ್ಧತಿ ಬಹಳಷ್ಟು ಸಲ ನಿಖರವಾದ ಬೆಲೆಯನ್ನು ನಿರ್ಧಾರವಾಡದೆಹೋದ ಕಾರಣದಿಂದ ಹಣದ ಕಲ್ಪನೆ ಅನಂತರ ಮೂಡಿತೆಂದು ಕಾಣುತ್ತದೆ. ಒಟ್ಟಿನಲ್ಲಿ ವ್ಯವಹಾರ ಗೊಂದಲವಾಗದಂತೆ ನೋಡಿಕೊಂಡ ವ್ಯಾಪಾರ ಗಣಿತವಿಜ್ಞಾನದ ತಳಹದಿಯೆಂದರೂ ಆದೀತು. ಚಾಟಿ ಪದ್ಧತಿಯಾಗಲಿ ಅಥವಾ ಹಣದಿಂದ ವಸ್ತುವಿನ ಮೌಲ್ಯ ನಿರ್ಧಾರ ಮಾಡುವುದಾಗಲಿ ಅದು ಸಾರ್ವತ್ರಿಕ ರಾಜೀಮನೋಭಾವದ ಫಲಿತಾಂಶವೆಂದು ಹೇಳಬಹುದು. ಹೀಗೆ ಗಣಿತಪ್ರಕಾರ ನಿರ್ದಿಷ್ಟ ರೂಪವನ್ನು ತಾಳಿ ಸಾರ್ವತ್ರಿಕ ಸ್ವೀಕಾರ ಮುದ್ರೆ ಪಡೆಯಬೇಕಾದರೆ ಬಹಳಷ್ಟು ಕಾಲ ಹಿಡಿದಿರಬೇಕೆಂದು ಕಾಣುತ್ತದೆ. ಆದ್ದರಿಂದಲೆ ದಿನ, ವಾರ, ಪಕ್ಷ, ತಿಂಗಳು, ವರ್ಷ, ತೂಕ, ಗಾತ್ರ, ಉದ್ದ, ಅಗಲ, ಎತ್ತರ ಮಂತಾದವುಗಳ ಅಳತೆ ಬಿಡಿಸಲಾಗದ ಕಗ್ಗಂಟಾಗದೆ ವ್ಯವಹಾರದ ಸುಲಭೋಪಾಯವಾಗಿದೆ.

ಜನಪದ ಗಣಿತವನ್ನು ಪ್ರಧಾನವಾಗಿ ವ್ಯವಹಾರ ಗಣಿತ ಮತ್ತು ವಿನೋದ ಗಣಿತ ಎಂದು ಎರಡಾಗಿ ವಿಂಗಡಿಸಿಕೊಳ್ಳಬಹುದು. ವ್ಯವಹಾರ ಗಣಿತ ಜೀವನದ ಸರ್ವ ವ್ಯಾಪಾರಗಳಲ್ಲೂ ವ್ಯಾಪಿಸಿಕೊಂಡಿರುವಂಥದ್ದು. ವಿನೋದ ಗಣಿತ ಆಟ ಮುಂತಾದ ಸಂದರ್ಭಗಳಲ್ಲಿ ಒಡ್ಡುವ ಚಮತ್ಕಾರಗಳಿಂದ ಕೂಡಿರುವಂಥದು.

ವ್ಯವಹಾರ ಗಣಿತದಲ್ಲಿ ನಾಣ್ಯಗಳು ಅಗ್ರಸ್ಥಾನದಲ್ಲಿವೆ. ಹಿಂದೆ ಬಳಕೆಯಲ್ಲಿದ್ದ ನಾಣ್ಯಗಳು ರಾಜಕೀಯ ಹಾಗೂ ಸಾಮಾಜಿಕ ಬದಲಾವಣೆಯ ಕಾರಣದಿಂದ ಆಗಾಗ ಮಾರ್ಪಟ್ಟಿವೆ. ಮೊದಲು ನಾಣ್ಯಗಳಿಗೆ ಚರ್ಮ, ತಾಡಪತ್ರ ಹಾಗೂ ಲೋಹಗಳನ್ನು ಬಳಸುತ್ತಿದ್ದಂತೆ ತಿಳಿದುಬರುತ್ತದೆ. ಹಿಂದಿದ್ದ ನಾಣ್ಯಗಳಿಗೆ ಈಗಿನ ನಾಣ್ಯಗಳ ಬೆಲೆ ಎಷ್ಟೆಂದು ಹೇಳುವುದು ಅಸಾಧ್ಯವಾಗಿದೆ. ವರಹ, ದುರ್ಗೀವರಹ, ಪಗೋಡ, ರಾಮಟಂಕಿ ವರಹ, ಗದ್ಯಾಣ, ಹೊನ್ನು, ಮೊಹರು, ಕಂಠೀರವ, ಅಡಕೆ, ಅಷರಫಿ, ಕಾಸು, ಅಡ್ಡ, ಪಾವಲಿ, ಚವುರಿ, ಪ್ರಿಯಕಾವೇರಿ, ಗಬರು, ಪುತಲಿ, ಕಲುಕುಂಟಿ ಮುಂತಾದವು ಹಿಂದೆ ಪ್ರಚಲಿತವಿದ್ದ ಕೆಲವು ನಾಣ್ಯಗಳು. ಹಿಂದಿದ್ದ ಕೆಲವು ನಾಣ್ಯಗಳ ಕೋಷ್ಟಕ ಇದು:

| | | | |
|---|---|---|---|
| 4 | ಕಾಣಿ | 1 | ವೀಸ |
| 5 | ವೀಸ | 1 | ಹಾಗ |
| 4 | ಹಾಗ | 1 | ಹಣ |
| 10 | ಹಣ | 1 | ಗದ್ಯಾಣ ಇತ್ಯಾದಿ |

ಧಾನ್ಯಗಳ ಅಳತೆಯಲ್ಲಿ ಸ್ಯಾರೆ, ಹಿಡಿ, ಬೊಗಸೆ, ಸೊಲ್ಲಿಗೆ, ಸೇರು, ಪಾವು, ಚಟಾಕು, ಪಲ್ಲ, ಖಂಡುಗ, ಮಾನ, ಬಳ್ಳ, ಕೊಳಗ, ಪಂಚಕ ಮುಂತಾದ ಬಗೆಗಳಿದ್ದಂತೆ ತಿಳಿದುಬರುತ್ತದೆ. ಇವುಗಳ ಅಳತೆಯೂ ಇಂದಿನ ಅಳತೆಗೆ ಎಷ್ಟೆಷ್ಟು ಸಮವೆಂದು ಖಚಿತವಾಗಿ ಹೇಳಬರುವುದಿಲ್ಲ. ಅಲ್ಲದೆ ಒಂದೇ ಹೆಸರಿನ ಅಳತೆ ಸಾಧನ ಬೇರೆ ಬೇರೆ ಕಡೆ ಬೇರೆ ಬೇರೆ ಗಾತ್ರದಲ್ಲಿದ್ದುದು ಇದಕ್ಕೆ ಕಾರಣ. ಇಂಥ ಸಾಧನಗಳಿಲ್ಲದೆಯೂ ಅವರ ವ್ಯವಹಾರ ನಡೆದುಹೋಗಿದೆ. ಉದಾ: ಹಾಲು, ಜೇನು, ಎಣ್ಣೆ ಮುಂತಾದವುಗಳನ್ನು ಅಳೆಯಲು ಈಗಲೂ ಕೆಲವೊಮ್ಮೆ ಹಳ್ಳಿಗಳಲ್ಲಿ ಬಿದಿರಿನ ಹಂಡೆಗಳನ್ನು ಬಳಸುತ್ತಾರೆ. ಅನ್ನ, ಸಾರು, ಹಿಟ್ಟು ಮುಂತಾದವನ್ನು ಅಡುವಾಗಲು ಅವರ ಅಂದಾಜಿನ ಅಳತೆ ಸರಿಹೋಗುತ್ತದೆ. ಒಂದು ಬೊಗಸೆ ಅಕ್ಕಿ ಅನ್ನವಾಗಿ ಇಂಗಲು ಅವರಲ್ಲಿ ಅವರದೇ ಅಳತೆ ಚೊಂಬುಗಳಿವೆ. ಧಾನ್ಯಗಳ ಅಳತೆಯೂ ಬಿದಿರು ಹೆಡಗೆ, ಕುಕ್ಕೆ, ಬುಟ್ಟಿ, ಕುಂಕುಲು ಮುಂತಾದವುಗಳಿಂದ ಸುಗಮವಾಗುತ್ತದೆ. ಉಪ್ಪು ಸಾಲ ಪಡೆಯುವಾಗ ಒಂದು ಹಿಡಿ ಅಥವಾ ಒಂದು ಮರಗೈ ಲೆಕ್ಕ, ಸಾಸುವೆ ಸಾಲ ಪಡೆಯುವಾಗ ಒಂದು ಸ್ಯಾರೆ ಲೆಕ್ಕ ಬಳಕೆಯಲ್ಲಿದೆ. ಹಾಲು, ಮೊಸರು ಮಜ್ಜಿಗೆಗಳ ಅಳತೆಗೆ ಒಂದು ತೊಟ್ಟು ಹಾಲು, ಒಂದು ಹನಿ ಮೊಸರು, ಒಂದು ಹನಿ ಮಜ್ಜಿಗೆ ಮುಂತಾಗಿ ಹೇಳುವುದರಿಂದ ಆ ಹೇಳಿಕೆಗೆ ತಗುಲುವಷ್ಟು ಹಾಲು ಮೊಸರು ಮಜ್ಜಿಗೆಯನ್ನು ಕೊಡಲಾಗುತ್ತದೆ.

| ಧಾನ್ಯಗಳ | ಅಳತೆ | ಒಂದು | ಕೋಷ್ಟಕ |
|---|---|---|---|
| 1 | ಖಂಡುಗ | 4 | ಪಂಚಕ |
| 1 | ಪಂಚಕ | 5 | ಕೊಳಗ |
| 1 | ಕೊಳಗ | 4 | ಬಳ್ಳ |
| 1 | ಬಳ್ಳ | 4 | ಮಾನ |
| 1 | ಮಾನ | 4 | ಸೊಲ್ಲಿಗೆ |
| 1 | ಸೊಲ್ಲಿಗೆ | 4 | ಗಿದ್ದಿಗೆ ಇತ್ಯಾದಿ |

ಜನಪದರಲ್ಲಿ ಗಾತ್ರನಿರ್ಧಾರ ಅವರು ಕಂಡಿರುವ ವಸ್ತುಗನ್ನು ಆಧರಿಸಿದಂತೆ ಏರ್ಪಡುತ್ತದೆ. ಉದಾ: ಅವರೆಕಾಳು ಗಾತ್ರ, ನಿಂಬೆಕಾಯಿ ಗಾತ್ರ, ಹಿಟ್ಟಿನಮುದ್ದೆ ಗಾತ್ರ, ಕುಂಬಳಕಾಯಿ ಗಾತ್ರ, ಎರಡು ಬೆರಳು ಗಾತ್ರ, ಮೀನಿನ ತತ್ತಿ ಗಾತ್ರ, ಹಿಟ್ಟಿನ ದೊಣ್ಣೆ ಗಾತ್ರ, ಅರುಕಡ್ಡಿ ಗಾತ್ರ, ಮುಂಗೈಗಾತ್ರ, ತೊಡೆಗಾತ್ರ, ಹೆಬ್ಬೆರಳು ಗಾತ್ರ, ಕಿರುಬೆರಳು ಗಾತ್ರ, ಗೆಜ್ಜಗದ ಗಾತ್ರ, ದೆಯ್ಯದ ಗಾತ್ರ ಮುಂತಾಗಿ ಹೇಳಿ ಅವರು ವಸ್ತುಗಳ ಗಾತ್ರಕಲ್ಪನೆ ಕಣ್ಣಿಗೆ ಕಟ್ಟುವಂತೆ ಮಾಡುತ್ತಾರೆ. ಅಗಲವನ್ನು ನಿರ್ದೇಶಿಸುವಾಗ ಕಾಸಿನಗಲ, ರೂಪಾಯಗಲ, ಅಂಗೈ ಅಗಲ, ಆಕಾಶದಗಲ, ಬಾವಾಡಿನಗಲ, ಗಂಗಾಳದಗಲ, ರೊಟ್ಟಿಯಗಲ ಮುಂತಾಗಿ ಹೇಳುತ್ತಾರೆ.

ತೂಕದ ಅಳತೆಗಾಗಿ ತೂಗೋ ಕೋಲನ್ನು ಬಳಸುತ್ತಾರೆ. ಹಳ್ಳಿಗಳಲ್ಲಿ ಈಗಲೂ ಬೆಣ್ಣೆ ತೂಗಲು ಎರಡು ತಟ್ಟೆಗಳಿರುವ ತಕ್ಕಡಿಗೆ ಬದಲಾಗಿ ತೂಗೋ ಕೋಲನ್ನೇ ಬಳಸುತ್ತಾರೆ. ದವಸಧಾನ್ಯಗಳನ್ನು ತೂಗುವ ಪದ್ಧತಿ ಹಿಂದೆ ಇದ್ದಂತೆ ಕಾಣುವುದಿಲ್ಲ. ಆದರೆ ಲೋಹಗಳನ್ನು ತೂಗುವ

ಪದ್ಧತಿ ಇತ್ತು. ಲೋಹದ ತೂಕವನ್ನು ತಕ್ಕಡಿಯ ಸಹಾಯದಿಂದ ನಿರ್ಧರಿಸುತ್ತಿದ್ದರು. ತೂಕಕ್ಕೆ ಸಂಬಂಧಿಸಿದ ಒಂದು ಕೋಷ್ಟಕ:

| | | | |
|---|---|---|---|
| 1 | ಭಾರ | 20 | ತೊಲ |
| 1 | ತೊಲ | 5 | ಬೀಸಗೆ |
| 1 | ಬೀಸಗೆ | 20 | ಪಲ |
| 1 | ಪಲ | 4 | ಕರ್ಷ |
| 1 | ಕರ್ಷ | 4 | ಸುವರ್ಣ |

ಚಿನ್ನ ಬೆಳ್ಳಿಗಳ ತೂಕದಲ್ಲಿ ಗುಲಗಂಜಿಯನ್ನು ಬಳಸುವುದು ಈಗಲೂ ಅಕ್ಕಸಾಲಿಗರಲ್ಲಿ ಬಳಕೆಯಲ್ಲಿದೆ.

ದೂರದ ಅಳತೆಗೆ ಗಾವುದ, ಹರದಾರಿ, ಯೋಜನ, ಒಂದು ಕೂಗುದೂರ, ಕೋಳಿ ಕೂಗುದೂರ, ಒಂದು ಸಿಳ್ಳುದೂರ ಮುಂತಾದ ಮಾನಗಳಿವೆ. ಉದ್ದದ ಅಳತೆಗೆ ಗೇಣು, ಚೋಟು, ಮೊಳ, ಮಾರು, ಒತ್ತೋಳು, ಬೆರಳುದ್ದ ಮುಂತಾದವಿವೆ. ಎತ್ತರವನ್ನು ಹೇಳುವಾಗ ಆಳೆತ್ತರ, ಎರಡಾಳೆತ್ತರವೆಂದು ಹೇಳುವ ರೂಢಿ ಇದೆ. ಆಳವನ್ನು ಹೇಳುವಾಗ ಹಣೆಮಟ್ಟ, ಎದೆಮಟ್ಟ, ಕೊರಳುಮಟ್ಟ, ಸೊಂಟಮಟ್ಟ, ಮೊಣಕಾಲಮಟ್ಟ ಇತ್ಯಾದಿ ಹೇಳುವುದುಂಟು. ದೂರದ ಅಳತೆಯನ್ನು ಹೇಳುವ ಒಂದು ಕೋಷ್ಟಕ ಹೀಗಿದೆ:

| | | | |
|---|---|---|---|
| 1 | ಯೋಜನ | 4000 | ಕ್ರೋಶ |
| 1 | ಕ್ರೋಶ | 2000 | ದಂಡ |
| 1 | ದಂಡ | 4 | ಮೊಳ |
| 1 | ಮೊಳ | 2 | ಗೇಣು |
| 1 | ಗೇಣು | 12 | ಬೆರಳು |

ಕಾಲಪರಿಮಾಣ ಜನಪದರಲ್ಲಿ ವಿಶಿಷ್ಟರೀತಿಯಲ್ಲಿ ಪ್ರಚಲಿತವಿದೆ. ಸೂರ್ಯೋದಯ ಸೂರ್ಯಾಸ್ತಗಳ ಅಂತರ ಹಾಗೂ ಸೂರ್ಯಾಸ್ತದಿಂದ ಸೂರ್ಯೋದಯದ ಅಂತರವನ್ನು ಬೇರೆ ಬೇರೆ ಕಾಲಗಳೆಂದು ಸೂಚಿಸಲು ಅವರು ಬಳಸುವ ಪರಿಭಾಷೆ ಆಶ್ಚರ್ಯಕರವಾಗಿದೆ. ಬೆಳ್ಳಿ ಮೂಡೋಹೊತ್ತು, ಮುಸ್ಸಂಜೆಹೊತ್ತು, ಬೆಳಕರಿಯೋ ಹೊತ್ತು, ಕೋಳಿಕೂಗೋ ಹೊತ್ತು, ಆರ್ಕಟ್ಟೋ ಹೊತ್ತು, ರೊಟ್ಟಿ ಹೊತ್ತು, ಕರ ಬಿಟ್ಕಳೋಹೊತ್ತು, ದನಬಿಡೋ ಹೊತ್ತು, ದೀಪಕಚ್ಚೋ ಹೊತ್ತು, ಕಲ್ಲು ನೀರು ಕರಗೋ ಹೊತ್ತು, ಸೂರ್ಯ ನೆತ್ತೀಗೆ ಬಂದೊತ್ತು, ಸೂರ್ಯ ನಾಕ್ಮಾರಿದ್ದೊತ್ತು, ನಿಸ್ರಾರ್ತ ಜಾಮ, ಸಪ್ಪಟು ಸರ್‍ಹೊತ್ತು - ಇತ್ಯಾದಿ ಪದಗಳಿವೆ. ಇವಲ್ಲದೆ ಖಚಿತವಾದ ಕಾಲನಿರ್ಧಾರಕ್ಕಾಗಿ ಹಿಂದೆ ಘಟಿಕಾ ಪಾತ್ರೆ ಎಂಬ ಸಾಧನವನ್ನು ಬಳಸುತ್ತಿದ್ದರು. ಘಳಿಗೆ ಜಾವ ಮುಂತಾದ ಪದಗಳು ಆಗಾಗ ಕಿವಿಯ ಮೇಲೆ ಬಿದ್ದರೂ ಅವು ಇಂದಿನ ಕಾಲಪರಿಮಾಣದ ಎಷ್ಟಕ್ಕೆ ಸಮ ಎಂಬುದು ಬಹಳ ಜನರಿಗೆ ತಿಳಿಯದ ವಿಚಾರ. ಒಂದು ಘಳಿಗೆ 24 ನಿಮಿಷಗಳಿಗೆ ಸಮವಾಗಿದೆ.

| | | | |
|---|---|---|---|
| 60 | ಘಳಿಗೆ | 30 | ಮಹೂರ್ತ |
| 30 | ಮಹೂರ್ತ | 1 | ದಿವಸ |
| 71/2 | ಘಳಿಗೆ | 1 | ಜಾವ |
| 8 | ಜಾವ | 1 | ದಿವಸ |
| 30 | ದಿವಸ | 1 | ಮಾಸ |
| 12 | ಮಾಸ | 1 | ವರ್ಷ |
| 100 | ವರ್ಷ | 1 | ಶತಮಾನ |

ಮಳೆ ಬೆಳೆ ಕಾಲಗಳನ್ನು ಜನಪದರು ಸರಾಗವಾಗಿ ಗುರುತಿಸುತ್ತಾರೆ. ಅಶ್ವಿನಿಯಿಂದ ಹಿಡಿದು ರೇವತಿಯವರೆಗೆ 27 ಮಳೆಗಳಿವೆ. ಒಂದೊಂದು ಮಳೆಗೂ ಒಂದೊಂದು ನಕ್ಷತ್ರದ ಹೆಸರಿದೆ. ಪ್ರತಿಯೊಂದು ನಕ್ಷತ್ರಕ್ಕೂ ನಾಲ್ಕು ಪಾದಗಳು.ಇಂತಿಂಥ ಮಾಸದಲ್ಲಿ ಇಂತಿಂಥ ದಿನದಲ್ಲಿ ಇಂತಿಂಥ ಮಳೆ ಪ್ರಾರಂಭವಾಗುವುದನ್ನು ಅವರು ಯಾವ ಗ್ರಂಥಗಳ ಆಧಾರವೂ ಇಲ್ಲದೆ ನಿರ್ಧರಿಸಿ ಹೇಳಬಲ್ಲರು. ಯಾವುದಾದರೂ ಮಳೆ ಹುಟ್ಟಿದ ದಿನಗಳಲ್ಲಿ ಸರಿಯಾಗಿ ಬೀಳದೆ ಕೊನೆಯ ದಿನಗಳಲ್ಲಿ ಜಡಿ ಹಿಡಿದರೆ ಕೊನೆ ಪಾದದಲ್ಲಿ ಚೆನ್ನಾಗಿ ಮಳೆಯಾಯ್ತು ಎಂದು ಪಾದಗಳ ಲೆಕ್ಕವನ್ನು ಹೇಳುತ್ತಾರೆ. ಒಂದು ಪಾದಕ್ಕೆ 3¼ ದಿನದ ಲೆಕ್ಕವಿದೆ.

ವೀಳೆದೆಲೆ ಲೆಕ್ಕದಲ್ಲಿ

| | | | |
|---|---|---|---|
| 20 | ಎಲೆ | 1 | ಕವಳಿಗೆ |
| 10 | ಕವಳಿಗೆ | 1 | ಕಟ್ಟು |
| 100 | ಕಟ್ಟು | 1 | ಪಿಂಡಿ |

ಕೆಲವು ಕಡೆ ಒಂದು ಪಿಂಡಿಗೆ 25, 50, 75 ಕಟ್ಟುಗಳನ್ನೂ ಹೇಳುತ್ತಾರೆ. ಅಡಕೆಕಾಯನ್ನು ಎಣಿಸುವಾಗ ಒಂದು ಕೈಗೆ 10 ಅಡಕೆಕಾಯಿ ಹಾಕುತ್ತಾರೆ. ಕವಡೆ ಆಟದಲ್ಲಿ ನಾಲ್ಕು ಬಿದ್ದರೆ ಚೌಕ, ಒಂದಕ್ಕೆ ಕೊಷ್ಠಿ, ಮೂರಕ್ಕೆ ಮುಷ್ಯ, ನಾಲ್ಕಕ್ಕೆ ಚೌಕ, ಐದಕ್ಕೆ ಪಂಜ, ಹನ್ನೆರಡಕ್ಕೆ ಬಾರಾ ಮುಂತಾಗಿ ಹೇಳುತ್ತಾರೆ.

ವಿನೋದ ಗಣಿತ ಅಥ'ವಾ ಚಮತ್ಕಾರ ಗಣಿತ ವಿನೋದದ ಸಮಯಗಳಲ್ಲಿ ಜೂಜುಗಳಲ್ಲಿ ಬಳಕೆಯಾಗುತ್ತಿದ್ದಂತೆ ತಿಳಿಯುತ್ತದೆ. ಇಂಥ ಲೆಕ್ಕಗಳು ಬುದ್ಧಿಯ ಕಸರತ್ತಿಗೆ ಸಾಧನಗಳಾಗಿರುತ್ತಿದ್ದವು. ಈ ಬಗೆಯ ಲೆಕ್ಕಗಳನ್ನು ಸಾಮಾನ್ಯವಾಗಿ ಒಬ್ಬರು ಒಡ್ಡುವುದು ಮತ್ತೊಬ್ಬರು ಒಡೆಚುವುದು ರೂಢಿಯಲ್ಲಿದೆ. ಆದ್ದರಿಂದ ಇವನ್ನು ಒಗಟುಗಳ ಗುಂಪಿನಲ್ಲಿ ಸಂಖ್ಯಾತ್ಮಕ ಒಗಟು ಎಂದು ಕರೆಯಲಾಗಿದೆ. ಗಣಿತಸಂಧಿ ಒಗಟುಗಳು ಅಥ'ವಾ ಒಗಟು ಲೆಕ್ಕಗಳು ಜನಪದ ಜೀವನದ ಬೇರೆ ಬೇರೆ ಸಂದರ್ಭಗಳಲ್ಲಿ ಮಹತ್ತ್ವದ ಪಾತ್ರವನ್ನು ವಹಿಸುತ್ತವೆ. ವಿರಾಮದ ವೇಳೆಯಲ್ಲಿ ವಿನೋದಕ್ಕಾಗಿ ಇಂಥ' ಒಗಟುಗಳನ್ನು ಒಡ್ಡುವುದು ಒಡೆಚುವುದು ಒಂದು ವಿಧವಾದರೆ, ಜನಪದರು ತಮ್ಮ ನಿತ್ಯಕಾಯಕವನ್ನು ಹಗುರಗೊಳಿಸಿಕೊಳ್ಳುವುದಕ್ಕೆ ಇವನ್ನು ಬಳಸಿಕೊಳ್ಳುವುದು ಇನ್ನೊಂದು ಬಗೆ. ಪಂಡಿತ ಮಂಡಲಿಗಳಲ್ಲಿ ಪಂಥ'ಕ್ಕಾಗಿಯೂ ಇಂಥ' ಲೆಕ್ಕಗಳನ್ನು ಒಡ್ಡಿ ಬುದ್ಧಿಪರೀಕ್ಷೆಗಾಗಿ ಬಳಸಿಕೊಳ್ಳುತ್ತಿದ್ದುದೂ ಉಂಟು. ಇಂಥ ಸಂಖ್ಯಾತ್ಮಕ ಒಗಟುಗಳು ಅಕ್ಷರಸ್ಥ, ಅನಕ್ಷರಸ್ಥರಿಬ್ಬರಲ್ಲೂ ಸಮಾನ ಪಾತ್ರವನ್ನು ವಹಿಸಿವೆ. ಆಶ್ಚರ್ಯವೆಂದರೆ ಅನಕ್ಷರಸ್ಥರು ಇಂಥ' ಲೆಕ್ಕಗಳನ್ನು ನಿರಾಯಾಸವಾಗಿ ಒಡೆಚುವ ಬಗ್ಗೆ, ಅಂಕಿಗಳ ಮೂಲಕ ರೂಪಿತವಾಗುವ ಇಂಥ ಲೆಕ್ಕಗಳಿಗೆ ಉತ್ತರವನ್ನು ಕಂಡುಹಿಡಿಯುವುದು ಅತ್ಯಂತ ತ್ರಾಸವೇ ಸರಿ. ಆದರೆ ಇವು ಬುದ್ಧಿಗೆ ಬಹಳಷ್ಟು ವ್ಯಾಯಾಮ ಕೊಡುತ್ತವೆ. ಇವುಗಳಲ್ಲಿ ಜನಪದರ ಬುದ್ಧಿಚತುರತೆ, ತಂತ್ರಗಳು ಎದ್ದು ತೋರುತ್ತವೆ. ಅಷ್ಟು ಮಾತ್ರವಲ್ಲ ಅವರ ಜ್ಞಾನಕೋಶದ ಅತ್ಯಮೂಲ್ಯ ಭಾಗ ಇಂಥ ಲೆಕ್ಕಗಳು ಎಂದೆನ್ನಬಹುದು. ಇಂಥ' ಲೆಕ್ಕಗಳನ್ನು ಒಡ್ಡಿದಾಗ ಅವುಗಳ ಉತ್ತರ ಹತ್ತಿರದಲ್ಲೇ ಇರುವಂತೆ ಭಾಸವಾದರೂ ಕೂಡದೆ, ಕಳೆಯದೆ, ಗುಣಿಸದೆ, ಭಾಗಿಸದೆ ಹಳ್ಳಿಯವರಂತೆ ಸರಾಗವಾಗಿ ಉತ್ತರಿಸುವುದು ಅಷ್ಟೇನು ಸುಲಭವಲ್ಲ. ಇಂಥ' ವಿನೋದಗಣಿತ ಅಥ'ವಾ ಚಮತ್ಕಾರಗಣಿತದಲ್ಲಿ ಕೆಲವನ್ನು ಇಲ್ಲಿ ಉದಾಹರಿಸಬಹುದು.

ಸಂಕಲನಕ್ಕೆ :  
ದೋಸೆ ಕಲ್ಲಿನ ಮೇಲೆ ಏಳು ದೋಸೆ  
ಹಸೆ ಕಲ್ಲಿನ ಮೇಲೆ ಆರು ದೋಸೆ  
ನೆಲೀನ ಮೇಲೆ ಹತ್ತು ದೋಸೆ  
ಅವು ಇವೆಲ್ಲ ಎಷ್ಟು ದೋಸೆ

ಹೀಗೆ ಲೆಕ್ಕವನ್ನು ಒಡ್ಡಿದಾಗ 7+6+10=23 ಎಂದು ಕೂಡಿ ಉತ್ತರವನ್ನು ಕೊಟ್ಟರೆ ಸೋಲಬೇಕಾಗುತ್ತದೆ. ಇಲ್ಲಿರುವ ಚಮತ್ಕಾರವನ್ನು ಎಚ್ಚರದಿಂದ ಗಮನಿಸಬೇಕಾಗುತ್ತದೆ. ದೋಸೆಕಲ್ಲಿನ ಮೇಲೆ ಎದ್ದ ದೋಸೆ ಹಸೆಕಲ್ಲಿನ ಮೇಲೆ ಆರಿತು, ಆರಿದ ದೋಸೆಯನ್ನು ನೆಲೀನ ಮೇಲೆ ಸುರಕ್ಷಿತವಾಗಿ ಇಡಲಾಯಿತು. ಅಂದರೆ ಒಂದೇ ಒಂದು ದೋಸೆ ದೋಸೆಕಲ್ಲಿನ ಮೇಲಿಂದ ಹಸೆಕಲ್ಲಿಗೆ ಹಸೆಕಲ್ಲಿನ ಮೇಲಿಂದ ನೆಲುವಿನ ಮೇಲಕ್ಕೆ ಹೋಯಿತು. ಹೀಗೆ ಏಳು ಆರು ಹತ್ತು ಎಂಬ ಪದಗಳ ಮೇಲೆ ಆಟವಾಡಿರುವ ಚಮತ್ಕಾರವನ್ನು ಗಮನಿಸಬಹುದು.

**ವ್ಯವ'ಕಲನ :** 30ರಲ್ಲಿ ಹನ್ನೆರಡು ಕಳೆದರೆ 12 ಉಳಿಯುತ್ತದೆ. ಹಾಗಾದರೆ 12ರಲ್ಲಿ 30 ಕಳೆದರೆ ಎಷ್ಟು ಉಳಿಯುತ್ತದೆ.

ಈ ಸಮಸ್ಯೆ ವಿಚಿತ್ರವೆನಿಸಿದರೂ ಅಕ್ಷರಸ್ಥ ಇದಕ್ಕೆ 30 - 18 = 12; 12 - 30 = -18 ಎಂದು ಉತ್ತರಿಸಬಲ್ಲ. ಆದರೆ -18 ಎಂಬ ಉತ್ತರ ಜನಪದರಿಗೆ ಅರ್ಥವಾಗುವುದಿಲ್ಲ. ಈ ಉತ್ತರದಿಂದ ಅವರನ್ನೊಪ್ಪಿಸುವುದು ಸುಲಭವಲ್ಲ. ಏಕೆಂದರೆ ಈ ಸಮಸ್ಯೆಗೆ ಅವರಲ್ಲೇ ಬೇರೆ ಉತ್ತರವಿದೆ. ಆ ಉತ್ತರಕ್ಕೆ ಅಕ್ಷರಸ್ಥನ ಉತ್ತರ ತಾಳೆಯಾಗ ದಿರುವಾಗ ಒಪ್ಪುವುದಾದರು ಹೇಗೆ? ಆದ್ದರಿಂದ ಅವರೇ ಅದಕ್ಕೆ ಪರಿಹಾರ ಒದಗಿಸುತ್ತಾರೆ. ಅದೇನೆಂದರೆ 12ರಲ್ಲಿ 30ನ್ನು ಕಳೆದರೆ 11 ಉಳಿಯುತ್ತಂತೆ. ಅಂದರೆ 1 ವರ್ಷದ 12 ತಿಂಗಳುಗಳಲ್ಲಿ 30 ದಿನಗಳನ್ನು ಅರ್ಥಾತ್ 1 ತಿಂಗಳನ್ನು ಕಳೆದರೆ 11 ತಿಂಗಳು ತಾನೆ ಉಳಿಯುವವು ಆದ್ದರಿಂದ ಉತ್ತರ 30 ದಿನದಲ್ಲಿ 18ನ್ನು ಕಳೆದರೆ ಉಳಿದದ್ದು 12 ದಿನ. 12 ತಿಂಗಳಲ್ಲಿ 30 ದಿನ ಕಳೆದರೆ ಉಳಿದದ್ದು 11 ತಿಂಗಳು.

**ಭಾಗಾಕಾರಕ್ಕೆ :** ಒಂದೆರಡು ಮೂರ್ನಾಕು ಸಂಧೀಲ್ಯೆದಾರೇಳು ಇದನ್ನು ಇಪ್ಪತ್ತೊಂದರಿಂದ ನಿಶ್ಶೇಷವಾಗಿ ಭಾಗಿಸಿ ಎಂದು ಹೇಳುವ ಈ ಲೆಕ್ಕಕ್ಕೆ ಅವರ ಉತ್ತರವೂ ತುದಿಬಾಯಿಯಲ್ಲೇ ಸಿದ್ಧವಾಗಿರುತ್ತದೆ. ಉತ್ತರ ಏಳು ನಾಕಾರು ಮುಂದೊಂಬತ್ತೇಳು. ಪ್ರಶ್ನೆ ಉತ್ತರಗಳೆರಡೂ ಅತ್ಯಂತ ಚಮತ್ಕಾರದಿಂದ ಕೂಡಿವೆ. ಪ್ರಶ್ನೆಯನ್ನು ವಿಭಜಿಸಿ ಬರೆದುಕೊಳ್ಳುವುದರಲ್ಲೆ ಈ ಗಣಿತ ರಹಸ್ಯವೆಲ್ಲ ಅಡಗಿದೆ.

ಒಂದೆರಡು ಅಂದರೆ 1 ಮತ್ತು 1
ಮೂರ್ನಾಕು ಅಂದರೆ 3 3 3 3
ಸಂಧೀಲ್ಯೆದಾರೇಳು ಅಂದರೆ 6 6 6 6 6 7

ಸಂಧೀಲಿ ಎಂದಿರುವುದರಿಂದ ಒಂದೆರಡು ಮೂರ್ನಾಕುಗಳ ಮಧ್ಯೆ ಈ 6 6 6 6 6 7ನ್ನು ಬರೆದುಕೊಂಡು 21 ರಿಂದ ಭಾಗಿಸಬೇಕು. ಅಂದರೆ.

16163656637÷21 = 769,69,69,69,7 ಉತ್ತರ ಹೀಗೆ: 7 ನಾಲ್ಕು 6 ಅವುಗಳ ಮುಂದೆಲ್ಲ 9, 7.

**ಗುಣಾಕಾರಕ್ಕೆ :** ಒಂದು ಹೊಲದಲ್ಲಿ ನೂರು ಸಾಲುಗಳಿವೆ. ಒಂದೊಂದು ಸಾಲಿನಲ್ಲೂ ನೂರು ಹುತ್ತಗಳಿವೆ. ಒಂದೊಂದು ಹುತ್ತಕ್ಕೂ ನೂರು ಕೋವೆಗಳಿವೆ. ಪ್ರತಿಯೊಂದು ಕೋವೆಯಲ್ಲೂ ನೂರು ಇಲಿಗಳಿವೆ. ಪ್ರತಿಯೊಂದು ಇಲಿಗೂ ನೂರು ಮರಿಗಳಿವೆ. ಒಂದೊಂದು ಮರಿಗೂ ಒಂದೊಂದು ಪಾವು ರಾಗಿ ಇದೆ. ಹಾಗಾದರೆ ಇರುವ ಹುತ್ತಗಳೆಷ್ಟು? ಕೋವೆಗಳೆಷ್ಟು? ಇಲಿಗಳೆಷ್ಟು? ಮತ್ತು ಒಟ್ಟು ಎಷ್ಟು ಸೇರು ರಾಗಿ ಇದೆ ಇದನ್ನು ಒಡಚಿದವನಿಗೆ ಬಹುಮಾನ ಹೆಣ್ಣಿನ ಸನ್ಮಾನ.

ದೊಡ್ಡ ಸಂಖ್ಯೆಗಳಲ್ಲಿ ಗುಣಿಸಿ ಹೇಳಬೇಕಾದ ಈ ಬಗೆಯ ಲೆಕ್ಕಗಳನ್ನು ಹೇಳಿ ಇವನ್ನು ಒಡಚಲು ಪ್ರಯತ್ನಿಸಿದರೆ ಹುಚ್ಚರಾಗಿ ಹೋಗುತ್ತಾರೆಂದೂ ಅದಕ್ಕೆ ಉತ್ತರ ಹೇಳಿದವರೇ ಇಲ್ಲವೆಂದು ಜನಪದರು ಹೇಳುತ್ತಾರೆ. ಕಾರಣ ಇಷ್ಟೆಲ್ಲವನ್ನೂ ಬರೆವಣಿಗೆಯನ್ನರಿಯದ ಅವರು ಮನಸ್ಸಿನಲ್ಲೆ ಗುಣಿಸಿ ಹೇಳುವುದು ಕಷ್ಟತಾನೆ! ಆದ್ದರಿಂದ ಅವರು ಬೇರೆ ಬೇರೆ ರೀತಿಯಲ್ಲಿ ಭಾವಿಸುವುದು ಸಹಜವೇ ಆಗಿದೆ. ಹೀಗೆ ಅವರಿಗಾರಿಗೂ ಬಿಡಿಸಲು ಬರದ ಲೆಕ್ಕಗಳಿದ್ದಾಗ ಮಾತ್ರ ಒಗಟಿನ ಮುಂದೆ ಒಡಚಿದವರಿಗೆ ಬಹುಮಾನ ಹೆಣ್ಣಿನ ಸನ್ಮಾನ ಎಂದು ಹೇಳುತ್ತಾರೆ. ಅಕ್ಷರಸ್ಥರಿಗೆ ಈ ಬಗೆಯ ಲೆಕ್ಕಗಳು ನೀರು ಕುಡಿದಷ್ಟು ಸುಲಭ.

ಬಹಳಷ್ಟು ಸಮಯ ತಲೆ ಕೆರೆದುಕೊಂಡರೂ ಸುಲಭವಾಗಿ ಉತ್ತರ ಹೇಳಲಾರದಂಥ' ಅನೇಕ ಲೆಕ್ಕಗಳು ಜನಪದರಲ್ಲಿವೆ. ಅಂಥ' ಕೆಲವು ಉದಾಹರಣೆಗಳನ್ನು ಈಗ ನೋಡಬಹುದು.

ಆನೆಗೆ ಐದು ರೂಪಾಯಿ, ಕುದುರೆಗೆ ಮುಕ್ಕಾಲು ರೂಪಾಯಿ, ಕತ್ತೆಗೆ ಕಾಲು ರೂಪಾಯಿಯಂತೆ ನೂರು ರೂಪಾಯಿಗೆ ನೂರು ರಾಸುಗಳನ್ನು ತಂದರೆ ಎಷ್ಟು ಆನೆಗಳಿವೆ ಎಷ್ಟು ಕುದುರೆಗಳಿವೆ ಎಷ್ಟು ಕತ್ತೆಗಳಿವೆ?

ಈ ಬಗೆಯ ಲೆಕ್ಕಗಳಿಗೆ ವಿದ್ಯಾವಂತ ಪ್ರಯತ್ನಪಟ್ಟು ಹೇಳುವುದು ಅಸಾಧ್ಯವೇನಲ್ಲದಿದ್ದರೂ ಅನಕ್ಷರಸ್ಥರು ನಿರಾಯಾಸವಾಗಿ ಉತ್ತರಿಸಿದಾಗ ಆಶ್ಚರ್ಯವಾಗುತ್ತದೆ.

ಭಾಷಾಚಮತ್ಕಾರದಿಂದ ಲೆಕ್ಕಗಳನ್ನು ಒಡ್ಡುವ ರೀತಿ ನೋಡಿ:

ನಾನೂರು ರೂಪಾಯಿ ಕೊಟ್ಟು ಒಂದು ಕುದುರೆ ತಂದು 300 ರೂಪಾಯಿಗೆ ಮಾರಿದರೆ ಎಷ್ಟು ಲಾಭ ಬಂತು.

ಈ ಲೆಕ್ಕಕ್ಕೆ 100 ರೂಪಾಯಿ ನಷ್ಟವೆಂದು ಹೇಳಿದರೆ ತಪ್ಪಾಗಿಬಿಡುತ್ತದೆ. ನಾನೂರು ಎಂದರೆ ನಾನು ನೂರು ಎಂದು ಅರ್ಥೈಸಬೇಕಾಗುತ್ತದೆ. ನಾನು ನೂರು ರೂಪಾಯಿಗೆ ತಂದ ಕುದುರೆಯನ್ನು ಮುನ್ನೂರು ರೂ.ಗಳಿಗೆ ಮಾರಿದರೆ 200 ರೂ.ಲಾಭ ಎಂದು ಹೇಳಬೇಕು.

ಅತ್ಯಂತ ಸುಲಭವಾಗಿದ್ದರೂ ಕ್ಲಿಷ್ಟವಾಗಿ ಕಾಣುವ ಈ ಲೆಕ್ಕವನ್ನು ನೋಡಿ: ಮೂರು ಸಂಖ್ಯೆಗಳನ್ನು ಕೂಡಿದರೆ ಹಾಗೂ ಗುಣಿಸಿದರೆ ಒಂದೇ ಉತ್ತರ ಬರಬೇಕು, ಹಾಗಾದರೆ ಮೂರು ಸಂಖ್ಯೆಗಳಾವುವು ?

ಉತ್ತರ 1, 2 ಮತ್ತು 3
ಕೂಡಿದಾಗ: 1 + 2 + 3 = 6
ಗುಣಿಸಿದಾಗ: 1 x 2 x 3 = 6

ಉತ್ತರವೇ ಇಲ್ಲದಂಥ ಕೆಲವು ಲೆಕ್ಕಗಳನ್ನು ಒಡ್ಡಿ ಉತ್ತರಿಸಲು ಪ್ರಯತ್ನಿಸಿದವರನ್ನು ನೋಡಿ ನಗುವುದೂ ಉಂಟು. ಅಂಥದೊಂದು ಈ ಲೆಕ್ಕ.

55 ಕುದುರೆಗಳನ್ನು, 11 ಗೂಟಗಳಿಗೆ - ಒಂದು ಗೂಟಕ್ಕೆ ಕಟ್ಟಿದವುಗಳ ಸಂಖ್ಯೆ ಮತ್ತೊಂದು ಗೂಟಕ್ಕೆ ಬರದಂತೆ - ಬೆಸಸಂಖ್ಯೆಯಲ್ಲಿ ಕಟ್ಟಿರಿ ಎಂದು ಲೆಕ್ಕವನ್ನು ಒಡ್ಡಿ, ಉತ್ತರಿಸಲು ಪ್ರಯತ್ನಿಸಿದವನ, ಮುಖಭಂಗ ಮಾಡುವುದು ಅಥವಾ ಹಾಸ್ಯಕ್ಕೀಡು ಮಾಡುವುದು ಅಥವಾ ಪಂಥ ಕಟ್ಟಿ ಸೋಲಿಸುವುದು ಜನಪದರಲ್ಲಿ ಸಾಮಾನ್ಯ. ಇಂಥ ನೂರಾರು ಲೆಕ್ಕಗಳು ಜನಪದ ಗಣಿತ ಭಂಡಾರದಲ್ಲಿವೆ. ಕನ್ನಡದಲ್ಲಿ ಈ ಪ್ರಕಾರಕ್ಕೆ ಸಂಬಂಧಿಸಿದಂತೆ 'ಜನಪದ ಚಮತ್ಕಾರ ಗಣಿತ' ಎಂಬ ಹೆಸರಿನ ಹೊತ್ತಗೆಯನ್ನು ಪಿ.ಕೆ. ರಾಜಶೇಖರ ಮತ್ತು ವಿಷ್ಣುಸಂತೆ ಸಣ್ಣನಂಜೇಗೌಡರು ಸೇರಿ ಪ್ರಕಟಿಸಿದ್ದಾರೆ. ಜೇನಹಳ್ಳಿ ಸಿದ್ಧಲಿಂಗಪ್ಪನವರು ಜನಪದ ಗಣಿತ ಮತ್ತು ಜನಪದ ಚಮತ್ಕಾರ ಗಣಿತ ಕೃತಿಗಳನ್ನು ಪ್ರಕಟಿಸಿದ್ದಾರೆ. *

**ಜನಪದ ಗೀತೆ :** ಜನಪದ ಸಾಹಿತ್ಯದ ಒಂದು ಪ್ರಕಾರ. ಕನ್ನಡದಲ್ಲಿ ಇದನ್ನು ಹಳ್ಳಿಯ ಹಾಡು ಎಂದು ಕರೆಯಲಾಗುತ್ತದೆ.

ಜನಪದ ಗೀತೆಗಳು ಹೇಗೆ, ಯಾವ ಕಾಲದಲ್ಲಿ ಹುಟ್ಟಿದವು ಎಂಬ ಪ್ರಶ್ನೆಗಳಿಗೆ ಖಚಿತವಾದ ಉತ್ತರ ಹೇಳಲು ಸಾಧ್ಯವಿಲ್ಲ. ಅವು ಹುಟ್ಟಿ ಬೆಳೆದು ಬಂದುದು ಶುದ್ಧವಾದ ವಾಕ್ ಪರಂಪರೆಯಲ್ಲಿ. ಈ ಹುಟ್ಟು ಬೆಳೆವಣಿಗೆಗೆ ಕಾರಣರಾದವರು ಅನಕ್ಷರಸ್ಥರಾದ ಪಂಡಿತರಲ್ಲದ ಸಾಮಾನ್ಯ ಜನ.

ಜನಪದ ಗೀತೆಗಳ ಲಕ್ಷಣಗಳನ್ನು ಖಚಿತವಾಗಿ ಹೇಳುವುದು ಕಷ್ಟವಾದರೂ ವಾಕ್ ಪರಂಪರೆ ತತ್ಪರಿಣಾಮವಾದ ಅಜ್ಞಾತ ಕರ್ತೃತ್ವ - ಇವು ಈ ಗೀತೆಗಳ ಮುಖ್ಯ ಲಕ್ಷಣಗಳೆನ್ನಬಹುದು. ಪ್ರತಿಭಾ ಮೂಲವಾದ ಭಾವನಿರ್ಭರತೆ ಈ ಕಾವ್ಯದ ಮೂಲಸತ್ತ್ವ. ಕೆಲವು ಮೂಲಭೂತವಾದ ಅಂಶಗಳಲ್ಲಿ ಜನಪದ ಗೀತೆ ನಾಗರಿಕ ಶಿಷ್ಟ ಕಾವ್ಯಕ್ಕಿಂತ ಭಿನ್ನವಾದುದು. ಅದು ಮಾರ್ಗವಾದರೆ ಇದು ದೇಸಿ. ಜನಪದ ಗೀತೆ ತನ್ನ ಸೋದರ ಕಲೆಗಳಾದ ಸಂಗೀತ ನೃತ್ಯಗಳನ್ನು ಬಳಸಿಕೊಳ್ಳುತ್ತದೆ. ನೃತ್ಯ ಅದಕ್ಕೆ ಸದಾ ಅನಿವಾರ್ಯವಲ್ಲ. ಆದರೆ ಜನಪದ ಗೀತೆ ಮತ್ತು ಸಂಗೀತ ಅಭಿನ್ನವೆನ್ನಬೇಕು. ಜನಪದ ಗೀತೆಗಳ ಸಂಗೀತ ಶಾಸ್ತ್ರೀಯ ಸಂಗೀತದಂತೆ ಬಿಗಿಯಾದುದಲ್ಲ. ನವ್ಯತೆ, ವೈವಿಧ್ಯಸಾಧ್ಯತೆ ಅದರ ಪ್ರಮುಖ ಲಕ್ಷಣಗಳು. ಜನಪದ ಗೀತೆಗಳ ಬಗ್ಗೆ ಗಮನಿಸಬೇಕಾದ ಇನ್ನೊಂದು ಮಹತ್ವದ ಸಂಗತಿಯೆಂದರೆ ಅವು ಶಿಷ್ಟಕಾವ್ಯಕ್ಕಿಂತ ಕ್ರಿಯಾತ್ಮಕ ಎಂಬುದು. ನಿರ್ದಿಷ್ಟ ಸಂದರ್ಭ ಸನ್ನಿವೇಶಗಳಲ್ಲಿ ಅವು ಬಳಕೆಗೊಂಡು ಸಾಮಾಜಿಕ ಅಥವಾ ಸಾಮೂಹಿಕ ಉದ್ದೇಶವನ್ನು ನೆರವೇರಿಸುತ್ತವೆ; ತನ್ಮೂಲಕ ಸಮಾಜ ಜೀವನದಲ್ಲಿ ಹಾಸುಹೊಕ್ಕಾಗಿರುತ್ತವೆ.

ಜನಪದ ಗೀತೆಗಳನ್ನು ಹಲವು ಬಗೆಯಾಗಿ ವರ್ಗೀಕರಿಸಬಹುದು. ಅವುಗಳಲ್ಲಿ ಗೀತೆಗಳು ಹಾಗೂ ಕಥನಗೀತೆಗಳು ಎಂದು ಎರಡು ದೊಡ್ಡ ಗುಂಪುಗಳು ಏರ್ಪಡುತ್ತವೆ. ಗೀತೆಗಳಲ್ಲಿ ಮತ್ತೆ ಭಾವಗೀತೆಗಳು, ಧಾರ್ಮಿಕ

ಗೀತೆಗಳು, ಮಾಂತ್ರಿಕ ಗೀತೆಗಳು, ಕಾಯಕ ಗೀತೆಗಳು, ಕ್ರೀಡಾಗೀತೆಗಳು, ನಾಟ್ಯಗೀತೆಗಳು, ಶಿಶುಗೀತೆಗಳು ಇತ್ಯಾದಿಯಾಗಿ ಭೇದ ಕಲ್ಪಿಸಬಹುದು. ಕುಡಿತದ ಹಾಡುಗಳು, ರಾಜಕೀಯ ಸ್ವರೂಪದ ವಿಡಂಬನ ಗೀತೆಗಳು, ಗದ್ಯಮಿಶ್ರಿತ ಗೀತೆಗಳು, ಬೀದಿಹೋಕ ವ್ಯಾಪಾರಿ ಗೀತೆಗಳು ಮುಂತಾದುವೂ ಉಂಟು. ಭಾವಗೀತೆಗಳನ್ನು ಪುನಃ ಪ್ರೇಮಗೀತೆಗಳು, ಶೋಕಗೀತೆಗಳು, ಹಾಸ್ಯಗೀತೆಗಳು ಭಕ್ತಿಗೀತೆಗಳು, ದೇಶಭಕ್ತಿ ಗೀತೆಗಳು ಇತ್ಯಾದಿಯಾಗಿ ವಿಂಗಡಿಸಬಹುದು. ಭಾವಗೀತೆಗಳ ಪ್ರಮುಖ ಗುಣಗಳೆಂದರೆ ತೀವ್ರವಾದ ಆತ್ಮನಿಷ್ಠೆ ಮತ್ತು ಭಾವತೀವ್ರತೆ, ಅವು ಒಮ್ಮೊಮ್ಮೆ ಭಾವಾತಿಸಾರದತ್ತ ಒಲಿಯಲೂಬಹುದು. ಕಥನಗೀತೆಗಳಲ್ಲಿ ಲಾವಣಿಯೂ ಸಮಾವೇಶಗೊಳ್ಳುತ್ತದೆ. ಹಾಗೆ ಸಮಾವೇಶಗೊಳಿಸದೆ ಲಾವಣಿಯನ್ನೇ ಬೇರೆ ಗುಂಪಾಗಿ ವರ್ಗೀಕರಿಸುವುದೂ ಉಂಟು. ಲಾವಣಿಯೆಂದರೆ ಒಂದು ಕಥೆಯನ್ನು ಹೇಳುವ ಹಾಡು ಅಥವಾ ಹಾಡಿನಲ್ಲಿ ಹೇಳಲಾದ ಒಂದು ಕಥೆ ಎಂಬ ಅಭಿಪ್ರಾಯವಿದೆ. ಲಾವಣಿಗಳೆಲ್ಲ ಕಥನಗೀತೆಗಳೇ ಆದರೂ ಕಥನಗೀತೆಗಳೆಲ್ಲ ಲಾವಣಿಗಳಲ್ಲ. ಸರಳವಾದ ಸಣ್ಣಪುಟ್ಟ ಕಥನಗೀತೆಗಳು, ಕಥೆ ಹೇಳುತ್ತವೆ ಎಂಬುದನ್ನು ಬಿಟ್ಟರೆ ಉಳಿದೆಲ್ಲ ಲಕ್ಷಣಗಳಲ್ಲೂ ಗೀತೆಗಳನ್ನೇ ಹೋಲುತ್ತವೆ. ಇವುಗಳದೇ ಒಂದು ಗುಂಪು. ಆದರೆ ಸುದೀರ್ಘವೂ ಕೆಲವು ವಿಶಿಷ್ಟ ಲಕ್ಷಣಗಳುಳ್ಳವೂ ಆದ ಕಥನಗೀತೆಗಳನ್ನು ಲಾವಣಿಗಳೆಂದು ಹೆಸರಿಸಿ ಪ್ರತ್ಯೇಕ ಗುಂಪನ್ನಾಗಿ ಪರಿಗಣಿಸಬಹುದು. ಜನಪದ ಗೀತೆಗಳಲ್ಲಿ ಲಾವಣಿಗಳ (ನೋಡಿ: ಲಾವಣಿ) ಪಾಲು ಬಹು ದೊಡ್ಡದು.

ಜನಪದ ಗೀತೆಗಳು ಇಡೀ ಗುಂಪಿನ ಆಸ್ತಿಯಾದರೂ ಎಲ್ಲರೂ ಎಲ್ಲ ಸಂದರ್ಭಗಳಲ್ಲೂ ಹಾಡುವಂಥವು ಎಂಬ ಪ್ರಮೇಯವೇನೂ ಕಂಡುಬರುವುದಿಲ್ಲ. ಇಲ್ಲಿ ಒಂದು ತೆರನಾದ ವಿಶೇಷತೆಯನ್ನು ನಾವು ಗಣಿಸಬೇಕಾಗುತ್ತದೆ. ಕೆಲವು ಬಗೆಯ ಹಾಡುಗಳು ವಯೋಮಾನಕ್ಕೆ ಅನುಗುಣವಾದುವು. ಮಕ್ಕಳ ಹಾಡುಗಳನ್ನು ದೊಡ್ಡವರು ಹಾಡುವುದೂ ಪ್ರೇಮಗೀತೆಗಳನ್ನು ಮುದುಕರು ಹಾಡುವುದೂ ವಿರಳ. ಮತ್ತೆ ಕೆಲವು ಬಗೆಗಳು ಲಿಂಗಭೇದವನ್ನನುಸರಿಸುತ್ತವೆ. ಹೆಂಗಸರ ಹಾಡುಗಳೇ ಬೇರೆ ಗಂಡಸರ ಹಾಡುಗಳೇ ಬೇರೆ. ನಮ್ಮಲ್ಲಿ ಜೋಗುಳದ ಹಾಡುಗಳು, ಸೋಬಾನೆ ಪದಗಳು, ಶಾಸ್ತ್ರದ ಹಾಡುಗಳು ಮುಂತಾದವು ಸ್ತ್ರೀಯರಿಗೆ ಮೀಸಲು; ಕೋಲಾಟದ ಪದಗಳು, ಕಂಸಾಳೆ ಪದಗಳು, ಕೆಲಬಗೆಯ ಲಾವಣಿಗಳು ಮೊದಲಾದವು ಗಂಡಸರ ಹಾಡುಗಳು. ಒಟ್ಟಿನಲ್ಲಿ ಜನಪದ ಗೀತೆ ಎಲ್ಲ ಅರ್ಥಗಳಲ್ಲೂ ಸಾಮಾಜಿಕವಾದುದು. ಅದರಲ್ಲಿ ವ್ಯಕ್ತಿಗಿಂತ ಗುಂಪಿಗೆ ಪ್ರಾಧಾನ್ಯ, ಸಮಷ್ಟಿ ಪ್ರಜ್ಞೆಯೇ ಅದರ ಅಗ್ಗಳಿಕೆಯಾಗಿದೆ. (ಸಿ.ಪಿ.ಕೆ.,ಆರ್.ವಿ.ಎಸ್.ಎಸ್.)

ಕರ್ನಾಟಕದಲ್ಲಿ ಜನಪದ ಗೀತೆಗಳು ಬಹು ಪ್ರಾಚೀನ ಕಾಲದಿಂದ ಬಳಕೆಯಲ್ಲಿದ್ದಿರಬಹುದಾದರೂ ಅವುಗಳ ಬಗ್ಗೆ ಸ್ಪಷ್ಟ ದಾಖಲೆಗಳು ದೊರಕುವುದು ಕಡಿಮೆ. ಕನ್ನಡದಲ್ಲಿ ಒನಕೆವಾಡುಗಳು ಮುಂತಾದ ಕೆಲಸದ ಹಾಡುಗಳು ಸು.8ನೆಯ ಶತಮಾನದಿಂದಲೇ ಪ್ರಚಲಿತವಾಗಿದ್ದವೆಂಬುದಕ್ಕೆ ಶಾಸನಾಧಾರಗಳಿವೆ. ಗಂಗದೊರೆ ಶಿವಮಾರನ ಗಜಾಷ್ಟಕ ಕನ್ನಡದಲ್ಲಿ ಓವನಿಗೆಯೂ ಒನಕೆವಾಡೂ ಆಗಿದ್ದಂತೆ ತಿಳಿದುಬರುತ್ತದೆ. ಆದರೆ ಪ್ರಾಚೀನ ಕನ್ನಡ ವಿದ್ವಾಂಸರು ಜನಪದ ಗೀತೆಗಳನ್ನು ಅಷ್ಟಾಗಿ ಆದರದಿಂದ ಕಾಣಲಿಲ್ಲ. ಮಧುರಕವಿ ಮತ್ತು ಇತರ ಕವಿಗಳು ಜನಪದ ಕಾವ್ಯವನ್ನು ಅಪಹಾಸ್ಯ ಮಾಡಿರುವುದುಂಟು.

ಕರ್ನಾಟಕದಲ್ಲಿ ಜನಪದ ಗೀತೆಗಳನ್ನು ಸಂಗ್ರಹಿಸುವ ಕಾರ್ಯ ಪಾಶ್ಚಾತ್ಯ ವಿದ್ವಾಂಸರಿಂದ ಪ್ರಾರಂಭವಾಯಿತು. ಮೊದಲಿಗೆ ಜೆ.ಎಫ್. ಫ್ಲೀಟ್ ಅವರು ಕೆಲವು ಕನ್ನಡ ಲಾವಣಿಗಳನ್ನು ಸಂಗ್ರಹಿಸಿ ಇಂಡಿಯನ್ ಆಂಟಿಕ್ವರಿ ಪತ್ರಿಕೆಯಲ್ಲಿ ಪ್ರಕಟಿಸಿದರು. ಅಂದಿನಿಂದ ಜನಪದ ಗೀತೆಗಳ ಸಂಗ್ರಹ ಮತ್ತು ಅಧ್ಯಯನ ನಡೆಯುತ್ತ ಬಂದಿದೆ.

ಜನಪದ ಗೀತೆಗಳಲ್ಲಿ ಕೆಲಸದ ಹಾಡುಗಳೇ ಅತ್ಯಂತ ಪ್ರಾಚೀನವಾದುವೆಂದು ವಿದ್ವಾಂಸರ ಅಭಿಮತ. ಕೃಷಿಕರ ಗೀತೆಗಳು, ಕಾರ್ಮಿಕರ ಗೀತೆಗಳು, ಇತರ ವೃತ್ತಿಗಳಿಗೆ ಸಂಬಂಧಿಸಿದ ಗೀತೆಗಳು ಕೆಲಸದ ಹಾಡುಗಳ ವಿಭಾಗದಲ್ಲಿ ಬರುತ್ತವೆ. ಕೆಲಸದ ಹಾಡುಗಳು ಕೆಲಸ ಮಾಡುವಾಗ ಹುಟ್ಟುವ ಹಾಡುಗಳಾಗಬಹುದು ಅಥವಾ ಆಯಾ ಕೆಲಸವನ್ನು ಕುರಿತ ಹಾಡುಗಳಾಗಿರಬಹುದು. ಉಳುವಾಗ, ಬಿತ್ತುವಾಗ, ನಾಟಿ ಹಾಕುವಾಗ, ಕೊಯ್ಯುವಾಗ, ನೇಯುವಾಗ, ನೂಲುವಾಗ, ದೋಣಿ ನಡೆಸುವಾಗ, ಭಾರ ಎತ್ತುವಾಗ ಮತ್ತು ಎಳೆಯುವಾಗ, ಕುಟ್ಟುವಾಗ, ಬೀಸುವಾಗ ಇಂಥ ಇತರ ಸಂದರ್ಭಗಳಲ್ಲಿ ಶ್ರಮಪರಿಹಾರಕ್ಕಾಗಿ ಹಾಡುಗಳು ಹೊಮ್ಮುತ್ತವೆ. ಈ ಗೀತೆಗಳು ಒಂದು ಸಮಾಜದ ಸಂಸ್ಕೃತಿಯನ್ನರಿಯುವಲ್ಲಿ ಅತ್ಯಂತ ಉಪಯುಕ್ತವಾಗುತ್ತವೆ.

ಕರ್ನಾಟಕದಲ್ಲಿ ಕೃಷಿಕರ ಗೀತೆಗಳ ಸಂಖ್ಯೆ ಹೆಚ್ಚು. ಮೇಟಿಯನ್ನು ನಾಟುವುದು, ಹಂತಿ ಕಟ್ಟುವುದು, ಕಣ ಮಾಡುವುದು, ಕಂಕಿಗಳನ್ನು ವಿಂಗಡಿಸುವುದು, ರಾಶಿ ಮಾಡುವುದು ಇತ್ಯಾದಿ ಕಾರ್ಯಗಳನ್ನು ಮಾಡುವಾಗ ಗೀತೆಗಳನ್ನು ಹಾಡುವುದುಂಟು. ಬೀಜ ಬಿತ್ತುವ ಕೆಲಸದಿಂದ ಹಿಡಿದು ಒಕ್ಕಿದ ಧಾನ್ಯವನ್ನು ಮನೆಗೆ ತೆಗೆದುಕೊಂಡು ಹೋಗುವವರೆಗೂ ಇಂಥ ಹಾಡುಗಳು ರಚನೆಯಾಗಿವೆ.

ಸ್ವಾತೀಯ ಮಳೆ ಬಂದು ಮಳೆರಾಜ<br>
ಸುತ್ತ ದೇಶಕ್ಕೆ ಆಗ್ಯಾದೆ ಮಳೆರಾಜ<br>
ಹಳ್ಳಕೊಳ್ಳ ಹೆಣ ಹರಿದಾಡಿ ಹೋದಾವು<br>
ಯಾವಾಗ ಬಂದ್ಯಪ್ಪ ಮಳೆರಾಜ

ಎಂದು ಮಳೆರಾಜನನ್ನು ರೈತ ಕೇಳುತ್ತಾನೆ. ಮಳೆ ಇಲ್ಲದಿದ್ದರೆ ರೈತನಿಗೆ ಏತವೇ ಗತಿ. ಏತದ ಹಾಡುಗಳನ್ನು ಹಾಡುತ್ತ ಹೊಲದಲ್ಲಿ ಕೆಲಸವನ್ನು ಪ್ರಾರಂಭ ಮಾಡುತ್ತಾನೆ. ಹೊಲದ ಕೆಲಸ ರೈತನಿಗೆ ಪವಿತ್ರವಾದುದು. ಅನ್ನವೇ ಅವನ ಪಾಲಿಗೆ ದೇವರು. ಆದುದರಿಂದಲೇ

ಕಣವೆ ಮಂಟಪವಾತೊ ಗುಣವಂತ ಬಸವೇಶ<br>
ಹೊಣೆಗಾರ ಶ್ವೇತ ದಂಡೇಶ | ಕಣ ಮೇಟಿ<br>
ಗಣೆಗುರುವು ಕಣಕಿ ಪ್ರಭುಲಿಂಗೊ

ಎಂದು ಭಾವಿಸುತ್ತಾನೆ. ಗೃಹಸಂಬಂಧವಾದ ಕೆಲಸಗಳಿಗೆ ಸಂಬಂಧಿಸಿದ ಹಾಡುಗಳಲ್ಲಿ ಮುಖ್ಯವಾದುವು ಬೀಸುವ ಕಲ್ಲಿನ ಹಾಡುಗಳು ಮತ್ತು ಒನಕೆಯ ಹಾಡುಗಳು. ಕನ್ನಡದಲ್ಲಿ ಇವು ಹೇರಳವಾಗಿ ದೊರಕುತ್ತವೆ. ಕಲ್ಲಮ್ಮ ಎಂದರೆ ಜನಪದ ಸ್ತ್ರೀಗೆ ಅತ್ಯಂತ ಪ್ರೀತಿ, ಆ ಕಲ್ಲು ಕೊಟ್ಟವರನ್ನೂ ಅವರು ಮರೆಯುವುದಿಲ್ಲ. ಅಂಥವರನ್ನು:

ಕಲ್ಲು ಕೊಟ್ಟಮ್ಮಗೆ ಎಲ್ಲಾ ಭಾಗ್ಯವು ಬರಲಿ<br>
ಪಲ್ಲಕ್ಕಿ ಮೇಲೆ ಮಗ ಬರಲಿ ಆ ಮನೆಗೆ<br>
ಮಲ್ಲಿಗೇ ಮುಡಿಯೋ ಸೊಸೆ ಬರಲಿ

- ಎಂದು ಹಾಡಿ ಹೊಗಳುತ್ತಾರೆ. ಬೆಳಗಿನ ಜಾವದಲ್ಲೇ ಎದ್ದು ರಾಗಿ ಬೀಸುವಾಗ ನಾ ನಿನ್ನ ನಿದ್ದೆ ಕೆಡಿಸೀದೆ ರಾಗಿಕಲ್ಲೆ ಎಂದು ಅಚೇತನಗಳನ್ನೂ ಚೇತನಗಳಂತೆ ಭಾವಿಸುವ ಮನಸ್ಸು ಜನಪದರದು. ಈ ಕೆಲಸದ ಹಾಡುಗಳು ಜನಪದರ ಕೆಲಸದ ಶ್ರಮವನ್ನು ಮರೆಯುವ ಹಾಗೆ ಮಾಡುತ್ತವೆ.

ಜನಪದ ಗೀತೆಗಳಲ್ಲಿ ಪರಮಾರ್ಥ ಗೀತೆಗಳು ಅತ್ಯಂತ ಪ್ರಾಚೀನ ಕಾಲದಿಂದ ಉಳಿದು ಬಂದಿದೆ. ಮಾನವ ಮಾನವಾತೀತ ಶಕ್ತಿಗಳನ್ನು ನಂಬಿ, ಆ ಶಕ್ತಿಗಳೊಂದಿಗೆ ಸಂಪರ್ಕವನ್ನು ಬೆಳೆಸಿಕೊಳ್ಳುವ ಸಲುವಾಗಿ ರಚಿತವಾದ ಹಾಡುಗಳನ್ನು ಪರಮಾರ್ಥ ಗೀತೆಗಳ ಹೆಸರಿನಲ್ಲಿ ವಿವೇಚಿಸಬಹುದು. ಸ್ತುತಿಪದಗಳು ಭಕ್ತಿ ಮಾರ್ಗದಲ್ಲೂ ವ್ರತಗಳು ಜಾತ್ರೆಗಳಿಗೆ ಸಂಬಂಧಿಸಿದ ಹಾಡುಗಳು ಕರ್ಮ ಮಾರ್ಗದಲ್ಲೂ ತತ್ತ್ವದ ಪದಗಳು ಜ್ಞಾನ ಮಾರ್ಗದಲ್ಲೂ ಸೇರುತ್ತವೆ. ಇವುಗಳಲ್ಲಿ ಸ್ತುತಿಪದಗಳಿಗೆ ಹೆಚ್ಚು ಪ್ರಾಧಾನ್ಯ.

ಬೆಳಗಾಗಿ ನಾನೆದ್ದು ಯಾರ್ಯಾರ ನೆನೆಯಾಲಿ<br>
ಎಳ್ಳು ಜೀರಿಗೆ ಬೆಳೆಯೋ ಭೂಮಿತಾಯ<br>
ಎದ್ದೊಂದು ಗಳಿಗೆ ನೆನೆದೇನು

ದೇವತಾಸ್ತುತಿ ಜನಪದರ ಬಾಳನ್ನೇ ಆವರಿಸಿದೆ

ದೇವರ ನೆನೆದಾರೆ ಸಾವುಟ್ಟು ನಮಗಿಲ್ಲ<br>
ಹಾವು ಕಚ್ಚಿದರೂ ವಿಷವಿಲ್ಲ ಸರ್ಪಾನ<br>
ಹೆಡೆಯ ದಾಟಿದರೂ ಭಯವಿಲ್ಲ

ಎಂಬುದು ಅವರ ನಂಬಿಕೆ. ಕನ್ನಡದಲ್ಲಿರುವ ಸ್ತುತಿಪದಗಳನ್ನು ಶಿವಸ್ತುತಿಗಳು, ವಿಷ್ಣುಸ್ತುತಿಗಳು, ಇತರ ದೇವತಾ ಸ್ತುತಿಗಳು ಎಂದು ವಿಂಗಡಿಸಬಹುದು. ಶಿವಸಂಬಂಧಿ ಗೀತೆಗಳಲ್ಲಿ ಶಿವ, ಪಾರ್ವತಿ, ಗಂಗೆ, ಬಸವ, ಗಣಪತಿ, ಷಣ್ಮುಖಕುಮಾರ, ಶಿವಶರಣರು ಮುಂತಾದವರ ಜೀವನ ಸಂಗತಿಗಳು ನಿರೂಪಿತವಾಗಿವೆ. ವಿಷ್ಣು ಸಂಬಂಧ ಗೀತೆಗಳಲ್ಲಿ ವಿಷ್ಣು, ರಾಮ, ಕೃಷ್ಣ, ಲಕ್ಷ್ಮೀ ಮುಂತಾದವರನ್ನು ಕುರಿತ ವರ್ಣನೆಗಳಿರುತ್ತವೆ. ಜೋಕುಮಾರ ಸಂಪ್ರದಾಯ, ಕರಗ, ಗೌರೀಪೂಜೆ, ಎಲ್ಲಮ್ಮ ದೇವತೆಗಳ ಸಂಪ್ರದಾಯಗಳು ಇತ್ಯಾದಿ ಕರ್ಮಮಾರ್ಗದ ಆಚರಣೆಗಳಿಗೆ ಸಂಬಂಧಿಸಿದ ಗೀತೆಗಳೂ ಕನ್ನಡದಲ್ಲಿ ಹೇರಳವಾಗಿವೆ. ತತ್ತ್ವದ ಪದಗಳಲ್ಲಿ ಮಾನವನ ಹುಟ್ಟು, ಸಾವು, ಜಗತ್ತಿನ ಸೃಷ್ಟಿರಹಸ್ಯ, ವೈರಾಗ್ಯಭಾವ, ಮರಣಾನಂತರದ ಸ್ಥಿತಿ ಮುಂತಾದುವುಗಳ ಬಗೆಗಿನ ವಿಚಾರಗಳಿರುತ್ತವೆ.

ಗೃಹಜೀವನದ ಹಾಡುಗಳು ಕುಟುಂಬದ ಸುಖದುಃಖಗಳನ್ನು ಬಾಳಿನಲ್ಲಿನ ಆಸರಿಕೆ ಬೇಸರಿಕೆಗಳನ್ನು ವ್ಯಕ್ತಪಡಿಸುತ್ತವೆ. ತೌರಿನ ಬಯಕೆ, ಬಂಜೆತನ, ಸಂತಾನಾಕಾಂಕ್ಷೆ, ದಾಂಪತ್ಯ ಜೀವನ, ಅತ್ತೆಮನೆಯ ಕಾಟ, ವೈಧವ್ಯ, ಮಕ್ಕಳ ಆಟಪಾಟ, ವಿನೋದ ಇತ್ಯಾದಿ ಅನೇಕ ವಿಷಯಗಳು ಈ ಹಾಡುಗಳಲ್ಲಿ ಬರುತ್ತವೆ. ಇವನ್ನು ಗರತಿಯರು ಸಾಮಾನ್ಯವಾಗಿ ರಾಗಿ ಬೀಸುವಾಗಲೋ ಬತ್ತ ಕುಟ್ಟುವಾಗಲೋ ಹಾಡುತ್ತಾರೆ. ತಾಯಿ - ಮಗಳು, ಅಕ್ಕ - ತಂಗಿ, ಅಣ್ಣ - ತಂಗಿ, ಅಕ್ಕ - ತಮ್ಮ, ಅತ್ತೆ - ಸೊಸೆ, ಅತ್ತಿಗೆ - ನಾದಿನಿ, ಗಂಡ - ಹೆಂಡತಿ, ಮೈದುನ - ಅತ್ತಿಗೆ, ಅತ್ತೆ - ಮಾವ, ಮಾವ - ಸೊಸೆ ಮುಂತಾಗಿ ಒಂದು ಕುಟುಂಬದಲ್ಲಿ ಕಾಣಬರುವ ಬಾಂಧವ್ಯಗಳನ್ನು ಪ್ರತಿಬಿಂಬಿಸುವ ಹಾಡುಗಳು ಕನ್ನಡದ ತ್ರಿಪದಿಗಳಲ್ಲಿ ಅತ್ಯಂತ ಹೃದ್ಯವಾಗಿ ಮೂಡಿಬಂದಿವೆ.

ಜನಪದ ಗೀತೆಗಳಲ್ಲಿ ಮಕ್ಕಳ ಹಾಡುಗಳನ್ನು ಪ್ರತ್ಯೇಕವಾಗಿ ನೋಡಬೇಕಾಗುತ್ತದೆ. ಮಕ್ಕಳಿಗಾಗಿ ದೊಡ್ಡವರು ಕಲ್ಪಿಸಿದ ಲಾಲಿಪದಗಳು, ಜೋಗುಳ ಪದಗಳು ಮತ್ತು ಮಕ್ಕಳೇ ರಚಿಸಿದ ಹಾಡುಗಳು ಈ ವಿಭಾಗದಲ್ಲಿ ಬರುತ್ತವೆ. ಮಕ್ಕಳ ಹಾಡುಗಳಲ್ಲಿ ಎಷ್ಟೋ ಬಾರಿ ಅರ್ಥಕ್ಕಿಂತ ಪ್ರಾಸಾನುಪ್ರಾಸದ ಚಮತ್ಕಾರ, ರಂಜನೆ ಹೆಚ್ಚಾಗಿ ಕಂಡುಬರುತ್ತದೆ. ಉದಾಹರಣೆಗೆ

ಕಾಗೆ ಕಾಗೆ ಕವ್ವ ! ಯಾರ್ ಬತ್ತಾರವ್ವ<br>
ಮಾವ್ ಬತ್ತಾನವ್ವ ! ಮಾವ್ಗೇನ್ ಊಟ<br>
ರಾಗಿಕಲ್ ಗೂಟ

ಇಂಥ ಗೀತೆಗಳು ಎಲ್ಲೋ ಪ್ರಾರಂಭವಾಗಿ ಇನ್ನೆಲ್ಲೋ ಮುಕ್ತಾಯ ವಾಗುವುದುಂಟು.

ದೀಪಾವಳಿ, ಹೋಳಿ, ದಸರ ಮುಂತಾದ ಸಂದರ್ಭಗಳಲ್ಲಿ ಹಾಡುವ ಹಾಡುಗಳನ್ನೂ ಮದುವೆಯಲ್ಲಿ ಹಾಡುವ ಹಾಸ್ಯಶೃಂಗಾರ ಗೀತೆಗಳನ್ನೂ ಕೋಲಾಟದ ಪದಗಳನ್ನೂ ವೈನೋದಿಕ ಹಾಡುಗಳೆಂದು ವಿಭಾಗಿಸಬಹುದು. ಜನಪದ ಗೀತೆಗಳಲ್ಲಿ ಶೃಂಗಾರವನ್ನೂ ನವುರಾಗಿ ಚಿತ್ರಿಸಿರುವುದುಂಟು. ಕನ್ನಡ ಜನಪದ ಗೀತೆಗಳಲ್ಲಿ ಶೃಂಗಾರ ಗೀತೆಗಳ ಮೊತ್ತ ಅಪಾರವಿದ್ದು ಸತ್ತ್ವದಿಂದಲೂ ಅವು ಯಾವುದೇ ಶಿಷ್ಟ ಕಾವ್ಯಕ್ಕೆ ಸರಿಸಮಾನವಾಗಿವೆ. ಸಾಮಾನ್ಯವಾಗಿ ಇಂಥ ಹಾಡುಗಳಲ್ಲಿ ಶೃಂಗಾರ ಹಾಸ್ಯರಸಗಳು ಬೆಸೆದುಕೊಂಡಿರುವುದೇ ಹೆಚ್ಚು. (ಆರ್.ವಿ.ಎಸ್.ಎಸ್.)

**ಜನಪದ ಚಿತ್ರಕಲೆ :** ಮಾನವನ ಬರೆವಣಿಗೆಯಲ್ಲಿ ಮೊದಲು ಕಂಡು ಬಂದದ್ದು ಚಿತ್ರಗಳೆ. ಅವನು ವಾಸಿಸುತ್ತಿದ್ದ ಗುಹೆಗಳ ಹೊರ ಮತ್ತು ಒಳ ಮೈಗಳಲ್ಲಿ ಅಂಥ ಚಿತ್ರಗಳನ್ನು ಇಂದಿಗೂ ನೋಡಬಹುದು. ಮುಂದೆ ಆತ ಮಾತಿಗೆ ಬರೆವಣಿಗೆಯ ರೂಪ ಕೊಡಲು ಪ್ರಯತ್ನಿಸಿದಾಗಲೂ ಚಿತ್ರಗಳನ್ನೇ ಬಳಸಿದ. ಇದೇ ಮುಂದೆ ಚಿತ್ರಲಿಪಿಯಾಯಿತು. ಚೀನ, ಜಪಾನ್ ಮುಂತಾದ ದೇಶಗಳ ಲಿಪಿಗಳಲ್ಲಿ ಚಿತ್ರಲಿಪಿಯ ಸುಳುಹನ್ನು ಸ್ಪಷ್ಟವಾಗಿ ಗುರುತಿಸಬಹುದು. ಜನಪದ ಚಿತ್ರಕಲೆ ಜನಪದ ಸಂಗೀತದಷ್ಟೇ ಪ್ರಾಚೀನವಾದುದು. ಜನಪದ ಚಿತ್ರಕಲೆ ಆಯಾ ಜನದ ಜೀವನ ರೀತಿಗಳನ್ನು ನಂಬಿಕೆಗಳನ್ನು ಧಾರ್ಮಿಕ ವಿಚಾರಗಳನ್ನು ಪ್ರತಿನಿಧಿಸುತ್ತದೆ. ಜಿಂಕೆ, ಆನೆ, ಹುಲಿಗಳ ಬೇಟೆ ಹಾಗೂ ಕೃಷಿಗೆ ಸಂಬಂಧಿಸಿದ ಚಿತ್ರಗಳು ಹೇರಳವಾಗಿ ದೊರೆಯುತ್ತವೆ. ಜನ ತಾವು ಆಚರಿಸುವ ಹಬ್ಬ ಹುಣ್ಣಿಮೆಗಳಲ್ಲಿ ಹಾಕುವ ಬಗೆಬಗೆಯ ರಂಗವಲ್ಲಿಗಳಲ್ಲಿ, ಕಟ್ಟುವ ಮಂಟಪಗಳಲ್ಲಿ, ಬಳಸುವ ಮಡಕೆ ಕುಡಿಕೆಗಳ ಮೇಲಿನ ಅಲಂಕರಣಗಳು, ನೇಯುವ ಬಟ್ಟೆಗಳಲ್ಲಿ, ಧರಿಸುವ ಉಡಿಗೆ ತೊಡಿಗೆಗಳಲ್ಲಿ ಚಿತ್ರಕಲಾಭಿರುಚಿಯ ವಿವಿಧ ನಿದರ್ಶನಗಳನ್ನು ಕಾಣಬಹುದು. ಅನೇಕ ವಸ್ತುಸಂಗ್ರಹಾಲಯಗಳು ಜನಪದ ಚಿತ್ರಕಲೆಗೆ ಸಂಬಂಧಿಸಿದ ವಸ್ತುವಿಶೇಷಗಳನ್ನು ಸಂಗ್ರಹಿಸಿಟ್ಟಿವೆ.

ಮಡಕೆಗಳು, ಆಟಿಕೆಗಳು, ಪ್ರತಿಮೆಗಳು, ಮಾತೃದೇವತೆಯ ಶಿಲಾ ವಿಗ್ರಹಗಳು ಭಾರತದಲ್ಲಿ ಸಿಂಧೂಕಣಿವೆಯ ನಾಗರಿಕತೆಯ ನಿವೇಶನಗಳಲ್ಲಿ ಹೇರಳವಾಗಿ ದೊರೆತಿವೆ. ಇವು ಒಂದು ಜನಪ್ರಿಯ ಕಲಾ ರೂಪದ ಸಂಪ್ರದಾಯಕ್ಕೆ, ಅಂದರೆ ಜನಪದ ಕಲಾ ಸಂಪ್ರದಾಯಕ್ಕೆ ಸೇರಿದುವು. ಏಕೆಂದರೆ ಅದರ ಸಮಕಾಲೀನವೂ ಹೆಚ್ಚು ಕೃತಕವೂ ಆದ ಸಂಸ್ಕೃತಿಗಳು ಉತ್ಪಾದಿಸಿದ ಕಲಾವಸ್ತುಗಳಿಗಿಂತ ಅವು ಬೇರೆಯಾಗಿದೆ. ಈ ಜನಪದ ಸಂಪ್ರದಾಯದ ಅವಿಚ್ಛಿನ್ನ ವಹನವಾದರೋ ಬಹಳ ಆಶ್ಚರ್ಯಕರವಾದ ಸತ್ತ್ವದಿಂದ ಕೂಡಿದೆ. ಏಕೆಂದರೆ ಇಂದಿಗೂ ಭಾರತದ ಕೆಲವು ಭಾಗಗಳಲ್ಲಿ ಸಣ್ಣ ಮಣ್ಣಿನ ಬೊಂಬೆಗಳ ತಯಾರಿಕೆ ಕಂಡುಬರುತ್ತದೆ. ಇದು ಕಲ್ಪನೆ ಮತ್ತು ತಯಾರಿಕೆಗಳಲ್ಲಿ ಮಾತೃದೇವತೆ ಹಾಗೂ ಫಲವಂತಿಕೆ ಪಂಥಗಳನ್ನು ಪ್ರತಿನಿಧಿಸುವ ಚರಿತ್ರಪೂರ್ವ ವಿಗ್ರಹಗಳಿಗೆ ಸಮಾನವಾಗಿದೆ. ಮಕ್ಕಳ ಆಟದ ಸಾಮಾನುಗಳೂ ಕಂಡುಬರುತ್ತವೆ. ಅವಿಚ್ಛಿನ್ನ ಪರಂಪರೆಯ ಕೆಲವು ಅಲಂಕಾರಗಳು, ವಿನ್ಯಾಸಗಳು ಮತ್ತೆ ಮತ್ತೆ ಪುನರುಕ್ತವಾಗುತ್ತವೆ. ಹಾಗೆ ಅನೇಕ ಶತಮಾನಗಳಿಂದ ಯುಗಗಳಿಂದ ಪುನರುಕ್ತವಾಗುತ್ತಿದ್ದರೂ ಅವು ಪ್ರತಿಯೊಂದು ಸಾರಿಯೂ ಹೊಸದಾಗಿಯೆ ಕಾಣುತ್ತವೆ. ಇದು ಜನಪದ ಚಿತ್ರಕಲೆಯ ಮುಖ್ಯ ಲಕ್ಷಣಗಳಲ್ಲಿ ಒಂದು. ಹಳ್ಳಿಗರ ಕಲೆಯ ಒಂದು ಲಕ್ಷಣ ಅದರ ಸಂಪ್ರದಾಯ ಪಾಲನೆ. ಕಲೆಗಳೆಲ್ಲ ಅದರ ಕಾಲವನ್ನು ಕುರಿತು ಖಚಿತವಾಗಿ ನಿರ್ದೇಶಿಸುವುದು ಮಾತ್ರ ಸಾಧ್ಯವಿಲ್ಲ. ಸರಳ ಸುಂದರ ಅಲಂಕಾರ ನಮೂನೆಗಳು ರೂಪುಗೊಂಡು ಶತಮಾನಗಳ ಕಾಲ ಉಳಿಯುತ್ತದೆ. ಹಳ್ಳಿಗರ ಮನಸ್ಸಿನಲ್ಲಿ ವಿನೂತನತೆಗಾಗಿ ಅವಿರತ ಹಂಬಲಿಕೆ ಇರುವುದಿಲ್ಲ. ಅವರು ಕೇಳುವದು ಒಂದು ವಸ್ತು ತನ್ನದೇ ಆದ ಬೆಡಗಿನಿಂದ ಕೂಡಿರಬೇಕು ಎಂದಷ್ಟೇ. ಕೆಲವೇ ಅಲಂಕಾರಗಳು ಮತ್ತು ಬಣ್ಣಗಳ ಮಿಶ್ರಣದಿಂದ ಅಸಂಖ್ಯಾತ ವೈವಿಧ್ಯ ಮತ್ತು ಪರಿಣಾಮಗಳನ್ನು ಪಡೆಯುವುದು ಸಾಧ್ಯ ಎಂಬುದನ್ನು ಅವರು ಅರಿತಂತೆ ತೋರುತ್ತದೆ.

ಹೆಚ್ಚು ಕಾಲ ಉಳಿಯುವ ಲೋಹ ಅಥವಾ ಶಿಲೆಯಲ್ಲದೆ ಬೇರೆಯಾವುದೇ ವಸ್ತುವಿನಲ್ಲಿಯೂ ಕಲೆ ಕಾಲದ ದಾಳಿಗಳನ್ನು ಎದುರಿಸಿ ಉಳಿಯದಿರಬಹುದು. ಆದ್ದರಿಂದ ಚರಿತ್ರಪೂರ್ವ ಕಾಲದ ಅಥವಾ ಅನಂತರದ ಚಾರಿತ್ರಿಕ ಯುಗಗಳ ಜನಪದ ಚಿತ್ರಕಲೆಯ ನಿರೂಪಣೆಯನ್ನುಳ್ಳ ಒಂದು ಸುಸಂಬದ್ಧವಾದ ಕಾಲಾನುಕ್ರಮ ರೂಪರೇಷೆಯನ್ನು ಕೊಡುವುದು ಹೆಚ್ಚು ಕಡಿಮೆ ಅಸಾಧ್ಯವಾಗುತ್ತದೆ. ಮೌರ್ಯ ಪೂರ್ವಕಾಲದ ಆರ್ಷೇಯ ಮಣ್ಣಿನ ವಿಗ್ರಹಗಳು ಮತ್ತು ಸಂಗವಂಶದ ಕಾಲಕ್ಕೆ ಸೇರಿದವು ಜನಪದ ಪರಂಪರೆಯ ಮುಂದುವರಿಕೆಯನ್ನು ಸಮರ್ಥಿಸುತ್ತದೆ.

ಅದೆಷ್ಟೇ ಸ್ವಲ್ಪವಾಗಿರಲಿ, ಚಾರಿತ್ರಿಕ ಆಧಾರ ತೋರಿಸುವಂತೆ ಅಜಂತದ ಅಭಿಜಾತ ಚಿತ್ರಕಲಾಸೃಷ್ಟಿಯ ಅನಂತರ ಚಿತ್ರಕಲೆಯ ದೇಶೀಯ ಸಂಪ್ರದಾಯ ಹೆಚ್ಚಾಗಿ ಜನಪದ ಪರಂಪರೆಯ ಆರ್ಷೇಯ ಕುರುಹುಗಳನ್ನು ಹೊಂದಿದ್ದ ಕೃತಿಗಳಲ್ಲಿ ಉಳಿದುಕೊಂಡು ಬಂತು ಎಂಬುದು ತೀರ ಸ್ಪಷ್ಟ. ನಿದರ್ಶನಕ್ಕೆ ಗುಜರಾತಿನ (ಪಶ್ಚಿಮ ಭಾರತೀಯ ಪದ್ಧತಿ) ಜೈನ ಕಲ್ಪಸೂತ್ರಗಳ ಪ್ರಾಚೀನ ತಾಳೆವೋಲೆಯ ಹಸ್ತಪ್ರತಿಗಳು, ಬಂಗಾಲದ ಪಾಲ ಸಾಮ್ರಾಜ್ಯದ (ಪೂರ್ವ ಭಾರತೀಯ ಪದ್ಧತಿ) ಕೃತಿಗಳು. ಜನಪದ ಚಿತ್ರಕಲೆಯ ಗುಜರಾತ್‌ನ ಜನಪ್ರಿಯ ಶೈಲಿಯ ಕೆಲವು ಮಾದರಿಗಳು 11ನೆಯ ಶತಮಾನದವೆಂದು ಹೇಳಲಾಗಿದೆ. 14 ನೆಯ ಶತಮಾನದಲ್ಲಿ ರಮಾನಂದ ಭಕ್ತಿಪಂಥವನ್ನು ಆರಂಭಗೊಳಿಸಿದ ಮೇಲೆ ಒಂದು ದೊಡ್ಡ ಪ್ರಚೋದಕ ಶಕ್ತಿ ಮತ್ತು ಆವೇಶ ಭಾರತೀಯ ಜೀವನವನ್ನು ಕಲೆ ಮತ್ತು ಸಾಹಿತ್ಯಗಳಲ್ಲಿ ಆವರಿಸಿತು. ಪೌರಾಣಿಕ ಪುನರುಜ್ಜೀವನದ ಈ ಕಾಲದಲ್ಲಿ ಜನಪದ ಗೀತೆಗಳು ಮತ್ತು ಭಕ್ತಿಗೀತೆಗಳು ಉಚ್ಛ್ರಾಯಸ್ಥಿತಿಗೇರಿದುವು. ಗ್ರಾಮ ಚಿತ್ರ ಕಲಾವಿಧಾನದ ಮೇಲೆ ಭಕ್ತಿ ಪಂಥ ತನ್ನದೇ ಪ್ರಭಾವಗಳನ್ನು ಬೀರಿತು. ಭಾಗವತ ಮತ್ತು ಇತರ

ಮೂಲಗಳಿಂದ ಶ್ರೀ ಕೃಷ್ಣನ ಜೀವನವನ್ನು ಚಿತ್ರಿಸುವ ಚಿತ್ರಗಳನ್ನು ಅಪಾರ ಸಂಖ್ಯೆಯಲ್ಲಿ ರಚಿಸಲಾಯಿತು. ವಿಶೇಷತಃ ಹಸ್ತಪ್ರತಿ ಚಿತ್ರಗಳ ರೂಪದಲ್ಲಿ ಮೊದಮೊದಲಿನ ರಾಜಸ್ಥಾನೀ ಚಿತ್ರಕಲೆ (16ನೆಯ ಶತಮಾನ) ಜನಪದ ಕಲೆಯ ಗುರುತುಗಳನ್ನು ತೋರಿಸುತ್ತದೆ. ಮೇವಾರ ಪದ್ಧತಿಯ (17ನೆಯ ಶತಮಾನ) ಪ್ರಾರಂಭವಂತೂ ಇನ್ನು ಪ್ರಾಚೀನವಾದ ಆರ್ಷೇಯ ಅಥವಾ ಜನಪದ ಸಂಪ್ರದಾಯಗಳ ಬೇರುಗಳಿಗೆ ಹರಡಿಕೊಂಡಿತ್ತು. ತೀರ ಇತ್ತೀಚೆಗೆ 19ನೆಯ ಶತಮಾನದಲ್ಲಿ ಕಾಲಿಘಾಟ್ (ಬಂಗಾಲ) ಜನಪದ ಚಿತ್ರಕಲಾವಿದರು ಒಂದು ಓಜಸ್ಸಿನಿಂದ ಕೂಡಿದ ಸತ್ತ್ವಯುಕ್ತವಾದ, ಶೈಲಿಯನ್ನು ರೂಢಿಗೆ ತಂದರು.

ಮಾತೃದೇವತಾ ಪಂಥಗಳ ಜೇಡಿಮಣ್ಣಿನ ವಿಗ್ರಹಗಳು ಪ್ರಾಚೀನ ಜನಪದ ಸಂಸ್ಕೃತಿಗಳಿಂದ ಮೂಡಿದುವು ಎಂಬುದನ್ನು ಆಗಲೇ ನೋಡಿದ್ದೇವೆ. ಮುಂದೆ, ಜನಪದ ಚಿತ್ರಕಾರ ವೈಷ್ಣವ ಧರ್ಮದ ಪುನರುತ್ಥಾನವನ್ನು ಅನುಸರಿಸಿ, ದೊಡ್ಡ ಪ್ರಮಾಣದಲ್ಲಿ ದೇವತಾ ವಿಗ್ರಹಗಳನ್ನು ರಚಿಸಿದ. ನಾಥದ್ವಾರ, ಗುಜರಾತ್ ಮತ್ತು ಒರಿಸ್ಸಗಳಲ್ಲಿ ಕ್ರಮವಾಗಿ ನಾಥಜಿ ಮತ್ತು ಜಗನ್ನಾಥರ ವಿಗ್ರಹಗಳನ್ನು ತಯಾರಿಸಲಾಯಿತು. ಅಲ್ಲಿಗೆ ಬಂದ ಯಾತ್ರಿಕರು ತಮ್ಮ ಯಾತ್ರೆಯ ಗುರುತಾಗಿ ಅವನ್ನು ಒಯ್ಯುತ್ತಿದ್ದರು. ಈ ಪದ್ಧತಿ ಇಂದಿಗೂ ಉಳಿದುಬಂದಿದೆ.

ಕರ್ನಾಟಕದಲ್ಲಿ ಅಂದಂದಿನ ರಾಜಮನೆತನಗಳ ಪ್ರೋತ್ಸಾಹದಿಂದ ದೇಶೀಯ ಸಂಪ್ರದಾಯದ ಚಿತ್ರಕಲೆ ಬೆಳೆದುಬಂದಿದೆ. ಒಂದು ಸಾವಿರದ ನೂರರುವತ್ತು ಪುಟಗಳ ಹೆಬ್ಬೊತ್ತಿಗೆಯಾದ ಶ್ರೀತತ್ತ್ವನಿಧಿಯಲ್ಲಿ ಅಪೂರ್ವವಾದ 1888 ವರ್ಣರಂಜಿತ ಚಿತ್ರಗಳೂ 458 ರೇಖಾಚಿತ್ರಗಳೂ ಇವೆ. ರಾಜರುಗಳ ವಂಶವೃಕ್ಷಗಳ ಭಿತ್ತಿಚಿತ್ರಗಳನ್ನು ಇದರಲ್ಲಿ ಕಾಣಬಹುದು. ಮುಮ್ಮಡಿಯವರ ಧ್ಯಾನಶ್ಲೋಕಗಳಿಗೆ ಅನುಸಾರವಾಗಿ ಬರೆಯಲಾದ ಸುಂದರವಾದ ಚಿತ್ರಗಳನ್ನೂ ಇದರಲ್ಲಿ ನೋಡಬಹುದು. ಶ್ರೀರಂಗಪಟ್ಟಣದಲ್ಲಿರುವ ಹೈದರನ ಕಾಲದ ಕುಡ್ಯ ಚಿತ್ರಗಳು ದೇಶೀಯ ಶೈಲಿಯಲ್ಲಿವೆ. ರಾಜರ ಪ್ರೋತ್ಸಾಹದಿಂದ ರೂಪುಗೊಂಡ ಕನ್ನಡ ರೀತಿಯ ಚಿತ್ರಗಳನ್ನು ಮನೆ ಮನೆಗಳಲ್ಲೂ ಮಠಮಂದಿರಗಳಲ್ಲೂ ಅರಮನೆ ಗುರು ಮನೆಗಳಲ್ಲೂ ನೋಡಬಹುದಾಗಿದೆ. ಕಾಗದದ ಮೇಲೆ ಬಟ್ಟೆಯ ಮೇಲೆ ಇಲ್ಲವೆ ಗಾಜಿನ ಮೇಲೆ ಜಲವರ್ಣ ಅಥವಾ ತೈಲವರ್ಣಗಳಲ್ಲಿ ರಾಜರುಗಳ ರೂಪ ಚಿತ್ರಗಳನ್ನು, ದೇವದೇವತೆಗಳ ಹಾಗೂ ಪೌರಾಣಿಕ ಸನ್ನಿವೇಶಗಳ ಸಂಯೋಜನ ಚಿತ್ರಗಳನ್ನು ವಿಶೇಷವಾಗಿ ರಚಿಸಲಾಗಿದೆ. ಸುವರ್ಣಲೇಪನದ, ವರ್ಣರಂಜಿತ ಕುಸುರಿ ಕೆಲಸದ ಈ ಜನಪದ ಚಿತ್ರರಚನೆಯಲ್ಲಿ ಕಂಡುಬರುವ ಶ್ರದ್ಧೆ, ತಾಳ್ಮೆ, ಭಕ್ತಿ, ಪ್ರತಿಭೆ, ಸಾಧನೆ, ಕಲ್ಪನೆ ಮುಂತಾದುವು ಮೆಚ್ಚುವಂಥವು. ಇಲ್ಲಿ ನಾವು ಕಾಣುವ ಇನ್ನೊಂದು ವಿಶೇಷವೆಂದರೆ ದೇಶೀಯ ಮೂಲವರ್ಣಗಳು. ಮೊದಲು ಸೀಸದ ಕಡ್ಡಿಯಲ್ಲಿ ಆಕೃತಿಯನ್ನು ರೂಪಿಸಿಕೊಂಡು ಅನಂತರ ವರ್ಣಗಳನ್ನು ಹಾಕಿ, ಅಲಂಕಾರ ವೈಖರಿಗಳನ್ನು ತರುವೆಡೆಗಳಲ್ಲೆಲ್ಲ ಬಿಳಿಯ ಸೀಸದಲ್ಲಿ ರೇಖೆಗಳನ್ನು ಎಳೆದು ಅದರ ಮೇಲೆ ವಜ್ರದ ಅಂಟನ್ನು ಸವರುತ್ತಾರೆ. ಅನಂತರ ಅದರ ಮೇಲೆ ಚಿನ್ನದ ರೇಖನ್ನು ಲೇಪಿಸುತ್ತಾರೆ. ರೇಖಿನ ಮೇಲೆ ವರ್ಣಗಳು ಬಾರದೆ ಭದ್ರವಾಗಿ ಕೂರುವಂತೆ ಒಂದು ಬಗೆಯ ಅಂಟನ್ನು ಬಳಸುತ್ತಾರೆ. ಬೂಟ ಕುಸುರಿನ ಕೆಲಸ ಮಾಡುವಾಗ ವಿವಿಧ ವರ್ಣಗಳನ್ನು ಬಳಸಿ ಆಯಾ ಭಾಗಗಳಿಗೆ ಸ್ವರ್ಣ ರೇಖಿನ ಲೇಪನ ಮಾಡುತ್ತಾರೆ. ಹೀಗೆ ರಚಿತವಾದ ಕೃತಿ ಅನೇಕ ವರ್ಷಗಳ ಕಾಲ ತನ್ನ ಪ್ರಕಾಶವನ್ನು ಕಳೆದುಕೊಳ್ಳದೆ ಚಿರನೂತನ ಎಂಬಂತೆ ಕಾಣುತ್ತಿರುತ್ತದೆ. ಹೆಚ್ಚಾಗಿ ಇವು ಪೂಜಾಚಿತ್ರಗಳಾದುದರಿಂದ ಅವುಗಳ ಮೇಲೆ ಚಿತ್ರಕಾರರ ಹೆಸರು ಕಂಡುಬರುವುದಿಲ್ಲ.

ಈಚೆಗೆ ಪಾಶ್ಚಾತ್ಯ ಸಂಪ್ರದಾಯಗಳ ಸಂಪರ್ಕದಿಂದ ನೂತನ ಪ್ರಯೋಗಗಳು ನಡೆಯುತ್ತಿವೆಯಾದರೂ ಜನಪದ ಶೈಲಿಯ ಪ್ರಗತಿ ಮಂದಗೊಂಡಿದೆ. ಇಲ್ಲಿ ದೇಶೀಯ ವರ್ಣಗಳನ್ನೇ ಬಳಸಲಾಗುತ್ತದೆ. ರಾಮಾಯಣ, ಮಹಾಭಾರತ, ಭಾಗವತ ಮುಂತಾದ ಪೌರಾಣಿಕ ಹಾಗೂ ಚಾರಿತ್ರಿಕ ಸನ್ನಿವೇಶಗಳ ದೃಶ್ಯವನ್ನು ದೇಶೀಯ ಬಟ್ಟೆಯ ಮೇಲೆ ಬಿಡಿಸಲು ಬಣ್ಣಗಳನ್ನು ಬಳಸಿರುವುದನ್ನು ಗಮನಿಸಬೇಕು. ಅನೇಕ ದೇಗುಲಗಳಲ್ಲಿ ಈ ಬಗೆಯ ಚಿತ್ರಫಲಕಗಳನ್ನು ದೇವರುಗಳ ಹಿಂಬದಿಯಲ್ಲಿ ಇಲ್ಲವೆ ರಥಗಳ ಮಂಟಪಗಳಲ್ಲಿ ತೂಗುಹಾಕುವುದು ವಾಡಿಕೆಯಾಗಿತ್ತು.



ಕಲಂ

ಕಲಂಕಾರಿ ಚಿತ್ರಕಲೆಯ ಮುಖ್ಯ ರಹಸ್ಯವಿರುವುದು ಚಿತ್ರಕ್ಕೆ ಬೇಕಾಗುವ ಬಟ್ಟೆ, ಬಣ್ಣ, ಲೇಖನಿಗಳ ಸಿದ್ಧತೆಯಲ್ಲಿ. ಮೂಲಿಕೆಗಳಿಂದ ನೇರವಾಗಿ ಚೆಲುವೆಮಾಡಿದ ಹತ್ತಿ ಇಲ್ಲವೆ ರೇಷ್ಮೆ ಕೋರಾಬಟ್ಟೆಯ ಮೇಲೆ ಸಸ್ಯಗಳಿಂದ ತಯಾರಾದ ದೇಶೀ ಮೂಲವರ್ಣಗಳನ್ನು ಆತ ಜಾಣ್ಮೆಯಿಂದ ಬಳಸುತ್ತಾನೆ. ಚಿತ್ರ ಬರೆಯಲು ಉಪಯೋಗಿಸುವ ಬಟ್ಟೆಯನ್ನು ಮೈರಾಭಲಂ ಎಂಬ ದ್ರವ್ಯದಲ್ಲಿ ಮತ್ತೆ ಮತ್ತೆ ನೆನೆಹಾಕಿ ಹಿಂಡಿ ಮರಳ ಮೇಲೆ, ಬಿಸಿಲಿನಲ್ಲಿ ಒಣಗಿಸಿ ತಯಾರಿಸುತ್ತಾರೆ. ಮೈರಾಭಲಂ ಎಂದರೆ ನೀರಿನಲ್ಲಿ ನೆನೆದ ಅಳಲೆಕಾಯಿ ಚೂರ್ಣವನ್ನು ಎಮ್ಮೆಯ ಹಾಲಿನೊಂದಿಗೆ ಬೆರಸಿ ಮಾಡಿದ ದ್ರವ್ಯ.

ಜನಪದ ಕಲಾವಿದರು ಬಳಸುವ ವರ್ಣಗಳು ಕೇವಲ ಮೂರು ನಾಲ್ಕು. ಆಯಾ ಬಣ್ಣಗಳು ಬಟ್ಟೆಯ ಮೇಲೆ ಸ್ಥಿರವಾಗಿ ನಿಲ್ಲಲು ಸಹಾಯಕವಾಗುವಂತೆ ಪಟಿಕದ ರಸವನ್ನೂ ಉಪಯೋಗಿಸಲಾಗುತ್ತದೆ. ಉಪಯೋಗಿಸುವ ಜಲವರ್ಣಗಳೆಲ್ಲ ಗಿಡಮೂಲಿಕೆಗಳಿಂದ ಆದವು. ಕೆಂಪು, ಕಪ್ಪು, ಹಳದಿ ಮತ್ತು ನೀಲಿ - ಈ ನಾಲ್ಕು ಬಹುಮುಖ್ಯವಾದ ಮೂಲವರ್ಣಗಳು. ತಾಟಿಬೆಲ್ಲ, ಕಬ್ಬಿನಬೆಲ್ಲ ಮತ್ತು ಕಬ್ಬಿಣದ ಚೂರುಗಳ ಜೊತೆಯಲ್ಲಿ ನೀರು ಬೆರಸಿ ಮೂಲರೇಖೆಗಾಗಿ ಬಳಸುವ ಕಪ್ಪುಬಣ್ಣವನ್ನು ತಯಾರಿಸುತ್ತಾರೆ. ಮಂಜಿಷ್ಟ (ಬೇರು), ಸುರುಳು ಪಟ್ಟೆ, ಮರದ ತೊಗಟೆ, ತಾಮ್ರತೇಗ, ಏಟಿಜಲಗ ಮತ್ತು ನೀರು - ಇವುಗಳ ಸಮ್ಮಿಶ್ರಣದಿಂದ ರಕ್ತವರ್ಣವನ್ನು ಸಿದ್ಧಮಾಡುತ್ತಾರೆ. ಕರಕಹೂಗಳಿಂದ ವರ್ಣ ಮತ್ತು ದೇಶೀಯ ನೀಲಿಯನ್ನು ಪಡೆಯುತ್ತಾರೆ.

ಲೇಖನಿಗೆ ಇಲ್ಲಿ ಕುಂಚದ ಸ್ಥಾನ. ನೋಡಲು ಸಾಮಾನ್ಯವಾಗಿ ಕಂಡರೂ ಅದರ ಉಪಯೋಗ ಚಮತ್ಕಾರವಾದುದು. ಒಂದು ತುದಿ ಚೂಪಾಗಿರುವ ಆರು ಅಂಗುಲದ ಬಿದಿರಿನ ಕಡ್ಡಿಯನ್ನು ತಯಾರಿಸಿ ಅದರ ಚೂಪು ತುದಿಯ ಕೊಂಚ ಮೇಲುಭಾಗದಲ್ಲಿ ಸ್ವಲ್ಪ ಉಣ್ಣೆಯನ್ನು ಇಟ್ಟು ಅದರ ಸುತ್ತಲೂ ತೆಳು ನೂಲಿನಿಂದ ಬಿಗಿಯಲಾಗುತ್ತದೆ. ಆ ಭಾಗವನ್ನು ಬಣ್ಣಗಳಲ್ಲಿ ಅದ್ದಿ ತೆಗೆದು ಲೇಖನಿಯಲ್ಲಿರುವ ಉಣ್ಣೆಯ ಭಾಗವನ್ನು ಬೆರಳುಗಳಿಂದ ಒತ್ತುತ್ತ ಹೋದರೆ ಅದರಲ್ಲಿ ಸಂಗ್ರಹವಾದ ಬಣ್ಣ ಕಡ್ಡಿಯ ತುದಿಯ ಮೂಲಕ ಇಳಿದು ಬಟ್ಟೆಯ ಮೇಲೆ ಚಿತ್ರ ಮೂಡುತ್ತದೆ. ಬೇರೆ ಬೇರೆ ವರ್ಣಗಳಿಗೆ ಬೇರೆ ಬೇರೆ ಕಲಂಗಳನ್ನು ಉಪಯೋಗಿಸಲಾಗುತ್ತದೆ.

ಕಲಂಕಾರಿ ಕಲೆಯಲ್ಲಿ ನಾವು ಕಾಣುವ ಮುಖ್ಯ ಲಕ್ಷಣಗಳೆಂದರೆ ಪ್ರಾದೇಶಿಕ ಸಂಪ್ರದಾಯ ನಿಷ್ಠೆ, ಮೌಲಿಕ ಪ್ರತಿಭೆ ಹಾಗೂ ಅಸಾಧಾರಣ ವೇಗ. ಈ ಕಲಾವಿದರ ಕಲ್ಪನಾಚಾತುರ್ಯ ನಿಜವಾಗಿ ದೊಡ್ಡದು. ಜಲವರ್ಣವಾದರೂ ಈ ಚಿತ್ರಗಳು ತೈಲವರ್ಣದ ಮೆರಗನ್ನು ತೋರುತ್ತವೆ.

ಆಂಧ್ರದ ಗುಡ್ಡಗಾಡಿನ ಜನರಲ್ಲಿ ಈ ಕಲೆ ಮೊದಲು ಉಗಮವಾಯಿತು. ಚಿತ್ತೂರು ಜಿಲ್ಲೆಯ ಕಾಳಹಸ್ತಿಯಲ್ಲಿರುವ ವ್ರಾತಪತಿಯಲ್ಲಿ ಇಂದಿಗೂ ಕೆಲವು ಕಲಾವಿದರು ಇದ್ದಾರೆ. ಈ ಕಲೆಯ ಬೆಳೆವಣಿಗೆಗೆ ಕೇಂದ್ರ ಗೃಹ ಕೈಗಾರಿಕಾ ಸಂಸ್ಥೆ ಹೆಚ್ಚಿನ ಆಸಕ್ತಿಯನ್ನು ತೋರುತ್ತ ಬಂದಿದೆ. ಇವರಿಗಾಗಿ ತರಬೇತಿ ಕೇಂದ್ರ ಒಂದನ್ನು ಮದರಾಸಿನಲ್ಲಿ ತೆರೆಯಲಾಗಿದೆ. ಅಲ್ಲಿ ಖ್ಯಾತ ಕಲಾವಿದರೂ ಕಲಾ ವಸ್ತುಗಳ ಸಂಗ್ರಾಹಕರೂ ಆದ ಕೋಡೂರು ರಾಮಮೂರ್ತಿಯವರ ಮುಂದಾಳು ತನದಲ್ಲಿ ಒಳ್ಳೆಯ ಕೆಲಸ ನಡೆಯುತ್ತಿದೆ. ಹೊಸ ಹೊಸ ಪ್ರಯೋಗಗಳಿಗೂ ಅಲ್ಲಿ ಅವಕಾಶ ಕಲ್ಪಿಸಲಾಗಿದೆ. ಇಲ್ಲಿ ಸಿದ್ಧವಾದ ಕೃತಿಗಳು ದೆಹಲಿ, ಮುಂಬಯಿ, ಮದರಾಸು, ಹೈದರಾಬಾದು, ಬೆಂಗಳೂರು ಮುಂತಾದ ಕಡೆ ಅನೇಕ ಸಾರಿ ಪ್ರದರ್ಶನ ಕಂಡಿವೆ. *

**ಜನಪದ ಛಂದಸ್ಸು :** ಜನಪದ ಹಾಡುಗಳ ರಚನೆ ಅಥವಾ ಅದರ ಛಂದಸ್ಸು ವಿಶಿಷ್ಟವೂ ಸ್ವಕೀಯವೂ ಆದ ಲಕ್ಷಣಗಳನ್ನೊಳಗೊಂಡಿರುತ್ತದೆ. ಇತರ ಶಾಖೆಗಳಂತೆ ಇದೂ ಪ್ರಭಾವಿತವಾಗುವುದಕ್ಕಿಂತ ಪ್ರಭಾವ ಬೀರುವುದು ಹೆಚ್ಚು. ವಿಶೇಷವೆಂದರೆ ಜನಪದ ಛಂದಸ್ಸು ಭಾಷೆ ಇತ್ಯಾದಿಗಳಂತೆ ಬೇಗ ವಿಕಾರಗೊಳ್ಳದೆ ತನ್ನ ತನವನ್ನು ಗರಿಷ್ಠ ಪ್ರಮಾಣದಲ್ಲಿ ಉಳಿಸಿಕೊಂಡಿರುತ್ತದೆ. ಆದುದರಿಂದ ಛಂದಸ್ಸು ಜನಪದೀಯತೆಯ ಮುಖ್ಯ ಲಕ್ಷಣಗಳಲ್ಲೊಂದಾಗಿರುತ್ತದೆ. ಇಲ್ಲಿ ಛಂದೋಬಂಧಗಳು ಸಮೂಹದ ವಸ್ತುವಾಗಿ ಆವರ್ತನಗೊಳ್ಳುವುದರಿಂದಲೂ ಪಲ್ಲವಿಯ ಪುನರುಕ್ತಿಯಿಂದಲೂ ಏಕತಾನ ಸಹಜವಾದರೂ ವಿಕಾಸಶೀಲವೂ ಆದ ಜನಪದ ಸಮಾಜದಲ್ಲಿ ವೈವಿಧ್ಯ ಸಾಧನೆಯೂ ಆಗುತ್ತದೆ. ಈ ವೈವಿಧ್ಯ ಮತ್ತು ಅದರ ಚರಿತ್ರೆ ಆ ಒಂದು ಸಮಾಜದ ವಿಶಿಷ್ಟವಾದ ಸಾಂಸ್ಕೃತಿಕ ಕೊಡುಗೆಯನ್ನು ನಿರ್ಧರಿಸುತ್ತದೆ.

ದ್ರಾವಿಡಛಂದಸ್ಸಿನಲ್ಲಿ ಮುಖ್ಯವಾದ ಪಾತ್ರ ಕನ್ನಡ ಛಂದಸ್ಸಿನದು. ಇದರ ಇತಿಹಾಸವನ್ನು ಗಮನಿಸಿದರೆ ಬಹುಶಃ ಕನ್ನಡ ಸಾಹಿತ್ಯದ ಸುವರ್ಣಯುಗ ಆರಂಭವಾಗುವ ಹೊತ್ತಿಗೆ ಸಂಸ್ಕೃತಪ್ರಾಕೃತಗಳ ಪ್ರಭಾವ ಸಾಕಷ್ಟು ಉಂಟಾದುದರಿಂದ ಕನ್ನಡ ಛಂದಸ್ಸು ಶ್ರೀಮಂತರ ಮನೆಯ ದಾಸಿಯಂತೆ ಮೂಲೆಗುಂಪಾಯಿತು. ಆದರೂ ಬೇರೊಂದು ರೂಪದಲ್ಲಿ ಗುಪ್ತಗಾಮಿನಿಯಾಗಿ ನಿರಂತರವಾಗಿ ಪ್ರವಹಿಸುತ್ತಲೇ ಇತ್ತು. ಚತ್ತಾಣ ಬೆದಂಡೆಯಂಥ ದೇಶೀರೂಪಗಳನ್ನು ಹಾಡುವುದೂ ಕೇಳುವುದೂ ಗೌರವಕ್ಕೆ ಯೋಗ್ಯವೆನಿಸಿರಲಿಲ್ಲ. ಹೀಗೆ ಕನ್ನಡ ಸಾಹಿತ್ಯ ಪಂಡಿತರ ಸೊತ್ತಾಯಿತು. ಜನಪದ ಸಾಹಿತ್ಯ ಅದಕ್ಕೆ ತೊತ್ತಾಯಿತು. ಆದುದರಿಂದಲೇ ಅಕ್ಕರ ತ್ರಿಪದಿ ಷಟ್ಪದಿಗಳನ್ನು ಬಿಟ್ಟರೆ ಉಳಿದುವು ಛಂದಸ್ಸಿನ ಗ್ರಂಥಗಳಲ್ಲಿ ಮಾತ್ರ ದೊರೆಯುತ್ತವೆ. ಜನಪದ ಛಂದಸ್ಸನ್ನು ಪರಿಶೀಲಿಸಿದರೆ ದೇಸಿಯನ್ನು ಅಲಕ್ಷ್ಯದಿಂದ ನೋಡುತ್ತ ಉಪಚಾರಕ್ಕಾಗಿ ವಿವರಿಸುತ್ತಿದ್ದ ಶಾಸ್ತ್ರಕಾರಮಾರ್ಗಿಗಳು ದೇಸೀ ರೂಪಗಳ ಪರಿಚಯವನ್ನು ಮಾಡಿಕೊಳ್ಳುವ ಪ್ರಯತ್ನವನ್ನೇ ಮಾಡಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಶಾಸ್ತ್ರದ ಲಕ್ಷಣಗಳು ಜನಪದ ಛಂದಸ್ಸಿನ ವಿಷಯದಲ್ಲಿ ಹೆಚ್ಚು ಬೆಳಕು ಬೀರುವುದಿಲ್ಲ. ಬ್ರಹ್ಮ ವಿಷ್ಣು ರುದ್ರಗಣ ಕಲ್ಪನೆಯಾದರೂ ಬಹುಮಟ್ಟಿಗೆ ಸಾಂಪ್ರದಾಯಿಕ. ಜನಪದ ಛಂದಸ್ಸಿನ ಚರಿತ್ರೆಯ ಪುನರ‍್ರಚನೆ ಎಂದರೆ ಬೇರೊಂದು ರೂಪದಲ್ಲಿ ಹರಿಯುತ್ತಿದ್ದ ಗುಪ್ತಗಾಮಿನಿಯನ್ನು ಗೊತ್ತುಹಚ್ಚುವುದೇ ಆಗಿದೆ. ಅದಕ್ಕೆ ಇಂದಿನ ಜನಪದ ಛಂದಸ್ಸಿನ ಅರಿವು ತಳಹದಿಯಾಗಿರುತ್ತದೆ. ಈ ಅರಿವು ಅನ್ಯಪ್ರಭಾವಗಳಿಂದ ರೂಪುಗೊಳ್ಳುತ್ತಿರುವ ಆಧುನಿಕ ಸಾಹಿತ್ಯ ಗೀತರೂಪವನ್ನು ಸ್ವದೇಶಿ ಪೋಷಣೆಯಿಂದ ತೇಜಸ್ವಿಗೊಳಿಸತಕ್ಕದಾಗಿದೆ.

ಜನಪದ ಛಂದಸ್ಸನ್ನು ಅಂಶಲಯವೆಂದು ವ್ಯವಹರಿಸುತ್ತಿದ್ದೇವೆ. ಅಂಶಲಯ ಸಂಸ್ಕೃತದ ವರ್ಣಸಂಗೀತಕ್ಕೂ ಪ್ರಾಕೃತದ ತಾಳಸಂಗೀತಕ್ಕೂ ಹೊಂದದೆ ವೈದಿಕ ಛಂದಸ್ಸಿನ ಸ್ವರಸಂಗೀತಕ್ಕೆ ಹೊಂದುತ್ತದೆ ಎಂದು ಎಚ್.ಡಿ.ವೇಲಣಕರರು ಹೇಳುತ್ತಾರೆ. ಇದನ್ನು ಡಿ.ಎಸ್.ಕರ್ಕಿ ಅವರು ಒಪ್ಪುತ್ತಾರೆ. ವೇಲಣಕರ್ ಅವರು ವೈದಿಕ ಛಂದಸ್ಸಿನಲ್ಲಿ ಕಾಲತತ್ತ್ವ ಮುಖ್ಯ ಪಾತ್ರವೇನೂ ವಹಿಸಿಲ್ಲ ಎಂದಿದ್ದಾರೆ. ಆದರೆ ದ್ರಾವಿಡ ಛಂದಸ್ಸಿನಲ್ಲಿ, ಅದರಲ್ಲೂ ಕನ್ನಡ ಜನಪದ ಛಂದಸ್ಸಿನಲ್ಲಿ ಕಾಲತತ್ತ್ವ ಅನಿವಾರ್ಯ ಪಾತ್ರದ್ದಾಗಿದೆ.

ಲಯದಲ್ಲಿ ಎರಡು ವಿಧ. ಮಾತ್ರಾಗಣದ್ದು ಸ್ವಯಂ ವ್ಯಕ್ತಲಯ, ಓದಿದಾಗ ತಾನಾಗಿ ಒಂದು ಮಾತ್ರಾಲಯವನ್ನು ಅದು ವ್ಯಕ್ತಪಡಿಸುತ್ತದೆ. ಅಂಶಗಣಗಳ ವಿಷಯದಲ್ಲಾದರೆ ನಮ್ಮ ಶ್ರಮ ಅಗತ್ಯ. ನಮ್ಮ ಇಷ್ಟದ ಒಂದು ಮಾತ್ರಾಲಯವನ್ನು ಆರೋಪಿಸುತ್ತೇವೆ; ಆದ್ದರಿಂದ ಆರೋಪಿತಲಯ ಅನ್ವಯಿಸುತ್ತೇವೆ; ಅನ್ವಿತಲಯ; ಸಾಧಿಸುತ್ತೇವೆ - ಸಾಧಿತಲಯ ಮಾತ್ರಾಗಣ ತನ್ನಲ್ಲೇ ಒಂದು ಕ್ರಮವನ್ನುಳ್ಳದ್ದು; ಇರುವ ಕ್ರಮವನ್ನು ಅನುಸರಿಸುತ್ತೇವೆ. ಇಲ್ಲಿ ಕ್ರಮವಿಲ್ಲದ್ದು; ಅದನ್ನು ಕ್ರಮಗೊಳಿಸುತ್ತೇವೆ. ನಮ್ಮ ಇಷ್ಟದ ಮಾತ್ರಾಲಯದ ಕ್ರಮವನ್ನು ಬಂಧ ಅನುಸರಿಸುತ್ತದೆ. ಆದ್ದರಿಂದ ವಾಸ್ತವವಾಗಿ ಅಂಶಲಯ ಎಂಬುದಿಲ್ಲ; ಕಾಲತತ್ತ್ವಕ್ಕೆ ಒಳಪಡಿಸಿ ಹಾಡಿದಾಗ ಎಲ್ಲವೂ ಮಾತ್ರಾಲಯದ್ದೇ.

ಸ್ಥೂಲವಾಗಿ ಒಂದು ಆಘಾತದಿಂದ ಇನ್ನೊಂದು ಆಘಾತದವರೆಗಿನ ಕಾಲಾವಕಾಶಕ್ಕೆ ಗಣ ಎಂದು ಹೆಸರು. ತಮಿಳಿನಲ್ಲಿ ಗಣ ಒಂದೇ ಅಕ್ಷರವುಳ್ಳದ್ದೂ ಆಗಿರಬಹುದು. ಆದರೆ ಕನ್ನಡದಲ್ಲಿ (ತಮಿಳಿನಲ್ಲೂ) ಆ ಒಂದಕ್ಷರವೂ ಇರಬೇಕಿಲ್ಲ. ಆಘಾತದಿಂದ ಆಘಾತದವರೆಗೆ ಮೌನವೋ ಹಿಂದಿನ ಗಣದ ಅಂತ್ಯಾಕ್ಷರದ ಸ್ವರದ ಮುಂದುವರಿದ ಆಲಾಪನೆಯೋ ವ್ಯಾಪಿಸಬಹುದು. ಆದ್ದರಿಂದ ಗಣ ಮೂಲ ಘಟಕವಾಗದು. ಕೊನೆಯ ಪಕ್ಷ ಎರಡು ಗಣಗಳಾದರೂ ಎಡೆಬಿಡದೆ ಬಂದಾಗ ಲಯಕ್ಕೆ ಗತಿ ಒದಗುತ್ತದೆ. ತಮಿಳಿನಲ್ಲಿ ಗಣವನ್ನು ಬಿಟ್ಟರೆ ತೋಲ್‌ಕಾಪ್ಪಿಯರ್ ಪ್ರಕಾರ ಪಾದವೂ ತಿರುಗಾಕ್ಕೈಪಾಡಿಯಾರ್ ಪ್ರಕಾರ ತಾಳವೂ ಛಂದಸ್ಸಿನ ಮೂಲಘಟಕವಾಗಿದೆ. ತಾಳಕ್ಕೆ ಆವೃತ್ತಿಯನ್ನೇ ನೀಡತಕ್ಕದ್ದು ಪಾದವಾದುದರಿಂದ ಕನ್ನಡ ಜನಪದಛಂದಸ್ಸಿಗೆ ಪಾದವನ್ನೇ ಮೂಲಘಟಕವನ್ನಾಗಿಟ್ಟುಕೊಳ್ಳಬಹುದು.

ಉಚ್ಚಾರಣಸಾಧ್ಯತೆಯ ಪರಿಮಿತಿಯೊಂದನ್ನು ಬಿಟ್ಟರೆ ಅಂಶಗಣದಲ್ಲಿ ಇಂತಿಷ್ಟೇ ಅಕ್ಷರಗಳು ಹೀಗೇ ಬರಬೇಕೆಂಬ ನಿಯಮವೇನೂ ಇಲ್ಲ. ಸಾಮಾನ್ಯವಾಗಿ ಮೊದಲ ಅಂಶ ಒಂದು ಗುರು ಅಥ'ವಾ ಎರಡು ಲಘುಗಳು. ಅನಂತರದ ಅಂಶಗಳಲ್ಲಿ ಎರಡು ಲಘುಗಳು ತ್ವರಿತಗೊಳ್ಳುವುದೂ ಉಂಟು; ಒಂದು ಗುರುವಿನ ಸ್ಥಾನದಲ್ಲಿ ಎರಡು ಲಘುಗಳು ಬಂದಂತೆ. ಷಟ್ಪದಿಯ ಮೂರು, ಆರನೆಯ ಪಾದಾಂತ್ಯದ ರುದ್ರ ವಿಚ್ಛೇದ್ಯರುದ್ರ ಎಂದರೆ - ವಿಷ್ಣು + ಗುರು. ವಿಷ್ಣುವಿನ ಸ್ಥಾನದಲ್ಲಿ ಬ್ರಹ್ಮ ಬರಬಹುದಾದುದರಿಂದ ಇದು ಬ್ರಹ್ಮ + ಗುರು ಕೂಡ ಆಗಬಹುದು. ಆದ್ದರಿಂದ ವಿಷ್ಣು ರುದ್ರಗಳಲ್ಲಿ ಎರಡು ಬಗೆಗಳಿವೆ. ಒಂದು ಗಣಾವಕಾಶದೊಳಗೆ ಉಚ್ಚರಿಸಲ್ಪಡುವ ವಿಷ್ಣು ಮತ್ತು ರುದ್ರ; ಮತ್ತು ಇವು ವಿಚ್ಛೇದಗೊಂಡು ಕ್ರಮವಾಗಿ ಬ್ರ + ಗು ಮತ್ತು ವಿ + ಗು ಆಗತಕ್ಕವು. ಇಲ್ಲಿನ ಬ್ರಹ್ಮ ವಿಷ್ಣುಗಳ ಸ್ಥಾನದಲ್ಲಿ ಒಂದೇ ಅಕ್ಷರವೂ ಬರಬಹುದು. ಆಗ ಗು + ಗು ಆಗುತ್ತದೆ. ಒಂದು ಗಣದಲ್ಲಿ ಅಕ್ಷರವೇ ಇಲ್ಲದಿರಬಹುದಾಗಿರುವದರ ಜೊತೆಗೆ, ಗಣದ ಆರಂಭದಲ್ಲಿ ಒಂದು ಅಕ್ಷರ ಬರುವುದರ ಜೊತೆಗೆ, ಗಣದ ಆರಂಭ ಮತ್ತು ಅಂತ್ಯಗಳಲ್ಲಿ ಮಾತ್ರ ಅಕ್ಷರ ಬಂದು ಮಧ್ಯೆ ಎಡೆ, ಎಳೆತ, ಮೌನ ಇರಬಹುದು. ಅಥವಾ ಗಣಾಂತ್ಯದಲ್ಲಿ ಮಾತ್ರ ಅಕ್ಷರ ಅಥವಾ ಅಕ್ಷರಗಳು ಬರಬಹುದು. ರುದ್ರವು ವಿ + ಗು ಆಗುವುದೆಂದು ಹೇಳಿದೆವು. ಇಲ್ಲಿಯ ವಿಷ್ಣುವಿನ ಸ್ಥಾನದಲ್ಲಿ ಬ್ರಹ್ಮ ಬರಬಹುದಾದುದರ ಜೊತೆಗೆ ರುದ್ರವೇ ಬರಬಹುದು. ಆಗ ಗಣಾವಕಾಶದ ರು + ಗು ಆಗುತ್ತದೆ. ಈ ರುದ್ರ ಅತಿರುದ್ರವೂ ಆಗಬಹುದು. ಇವೆಲ್ಲ ಮುಂದಿನ ಪ್ರಯೋಗಗಳಲ್ಲಿ ಸ್ಪಷ್ಟವಾಗಿವೆ. ಒಂದು ಲಕ್ಷಣಕ್ಕೆ ಉದಾಹರಿಸಿರುವ ಲಕ್ಷ್ಯಗಳಲ್ಲಿ ಇತರ ಪರಿಶೀಲನಾಂಶಗಳೂ ಇರುವುದನ್ನು ಗಮನಿಸಬಹುದು. ಒಟ್ಟಿನಲ್ಲಿ ಗಣಸ್ವರೂಪ ಎಷ್ಟೇ ಸ್ವಚ್ಛಂದವಿರಲಿ ಆಘಾತ (ತಾಳ) ನಿಯಮವನ್ನು ಪಾದ (ಆವರ್ತ) ನಿಯಮವನ್ನು ಜನಪದ ಛಂದಸ್ಸು ಮೀರುವುದಿಲ್ಲ.

ಮುಂದಿನ ಬರೆವಣಿಗೆಯಲ್ಲಿ ಈ ಕೆಲವು ಸಂಕೇತಗಳನ್ನು ಬಳಸಲಾಗಿದೆ. ಅವುಗಳ ಅರ್ಥ ಹೀಗಿದೆ: 1 = ಗಣ; ‖ = ಪಾದ; * = ಯತಿ; - ‖ = ವಿಲಂಬ ಮತ್ತು ಪಾದಾಂತ್ಯ; s = ವಿಲಂಬ; ] = ಇಲ್ಲಿಯವರೆಗೆ ಹುಸಿ.

1.ಒಂದು ಗಣದ ಸ್ಥಾನದಲ್ಲಿ ಒಂದೇ ಗುರ್ವಕ್ಷರ ಬರಬಹುದು. ಲಘು ಬಂದಾಗ ಅದನ್ನೆಳೆದು ವಿಲಂಬಿಸುತ್ತೇವೆ.

ಒಂದು ಸು| ತ್ತಿನ ಕ್ಯಾ| ಟಿs| ಅದರೊಳು; ಬಸವಕ | ಬಸವನ್ನಿ| ರೆs| ಬಸವನ; ಜಾಣೆಜಾ| ಗುರುದ್ಹೆಣ್ಣೇ| ಸುವ್ವಲಾ| ಲಿs|

2.ಒಂದು ಅಕ್ಷರ ಎರಡು ಗಣಗಳ ಕಾಲವನ್ನು ತೆಗೆದುಕೊಳ್ಳಬಹುದು. ಈ ವಿಲಂಬದಲ್ಲಿ ಹಿಂದಿನ ಸ್ವರವನ್ನು ಆಲಾಪಿಸಬಹುದು; ಇಲ್ಲವೆ ಮೌನ ತುಂಬಬಹುದು; ಉಸಿರ್ದಾಣ ಮಾಡಿಕೊಳ್ಳಬಹುದು.

ಐದುತಿಂ| ಗಳ ಬಸು| ರೀs|| ಕೆನ್ನೆಮೇ| ಗಾಲು ಹಸು| ರುs| s||; ಎಳ್ಳು ಬಣ| ಜಿಗರುಡು| ಗs| s|| ಎಳ್ಳುಮಾ| ರಲು ಬಂ| ದs| s||

3. ಒಂದು ಗಣಾವಕಾಶದೊಳಗೆ ರುದ್ರ ಬರಬಹುದು.

ಭೂಮಿತಾಯಿ| ನೀ ಮಿಂದ| ದಿನಹೇ| ಳೆ - ಸುವ್ವೀ; ಕೊಂತ್ಯಮ್ಮಕೊ| ಟ್ಟಣಕುಟ್ಟಿ| ಭೀಮಣ್ಣಭೀ| ಕ್ಷೆಯ ಬೇಡಿ|

4. ಅತಿರುದ್ರಗಳೂ ಬರಬಹುದು

ಹೊನ್ನಮುತ್ತಿನ| ಮಾತ| ನೀಕೇಳೆ * ನನ್ನವಳೆ; ನಾನು ಮಿಂ| ದಂಥ ದಿನವ| ನೀವೇನು| ಕೇಳಿರಿ|; ಬಾರದ ಪ| ವಾಡಕೆಲ್ಲ| ಬಂದು ಒದಗೊ| ಘನನೀಲಿ|

5. ಅತಿರುದ್ರಕ್ಕೂ ಹೆಚ್ಚಿನ ಅಕ್ಷರಗಳು ಬರಬಹುದು. ಇದನ್ನು ಮಹಾಗಣ ಎನ್ನಬಹುದು.

ಹೊಡಿಸ್ಯಾನು| ಜಯಭೇರಿಗಳ| ಹಿಡಿಸ್ಯಾನು| ಬಿರುದಿನ ಕಾಳೆ; ಬಣ್ಣದಲ್ಲಿ ಬಲು| ಚೆಲುವ| ನನತಮ್ಮ| ತವರವರು; ಆನೆಮೇಲೆ| ಅಡಿಕೆ | ಜಾಣನ ಮೇಲೆ| ಸುಣ್ಣ|

6. ಗಣದ ಮೊದಲಂಶ ಹ್ರಸ್ವವಾಗಿದ್ದು ಹಾಡುವಾಗ ದೀರ್ಘವಾಗ ಬಹುದು.

ಕೇಳಪ್ಪ| ನನತಂದೆ| ದಕ್ಷಬ್ರ| ಹ್ಮs ನೆ|; ಮನೆಯಾ| ಗಿs ನ| ಬಂಡಿ| ಮುರಿಸಿ| ............ ನಡುವಾ| ಗಿs ನ| ಉಡಿದಾರ| ಮುರಿಸಿ |

7. ಗಣದ ಮೊದಲಂಶ ಹ್ರಸ್ವವಾಗಿದ್ದು ಅದರ ಬೆಲೆ ಹ್ರಸ್ವವಾಗೇ ಇರಬಹುದು.

ಹುಸೇನ| ಸಾಬಿ| ಇರುವ| ನಂತೆ|| ಹುಸೇನ| ಸಾಬಿ| ಸಿನೇತ| ಗಾತಿ; ಸೂರೆ ಮಾ| ಡ್ಯಾರೋ| ಫಿರಂಗೇರು.

8. ಹುಸಿ ಅಥವಾ ಸಾಮಾನ್ಯವಾಗಿ ವಿಲಂಬದ ಮುಂದೆ ಬರುವ, ಗಣಾಘಾತದ ಹಿಂದೆ ಬರುವ ಅಕ್ಷರ ಅಥವಾ ಅಕ್ಷರಗಳು, ಎರಡು ರೀತಿಗಳಲ್ಲಿ ಅಚ್ಚಿಸುವ ರೂಢಿಯಿದೆ. ಮೊದಲ ಪಾದದ ಮೊದಲ ಗಣದ ಹಿಂದಿನ ಹುಸಿಯನ್ನು ಆರಂಭದಲ್ಲಿ ತೋರುವುದು ಒಳ್ಳೆಯದು

ಹೆಣ್ಣೆ ನೀ ಸಣ್ಣವಳೇ ನೆ
ನಿನ್ನಂಗವ ನಾ ಬಲ್ಲೆನೆ

ಅಥವಾ

ಹೆಣ್ಣೆ ನೀ ಸಣ್ಣವಳೇನೆ s - ನೀ
ನಿನ್ನಂದವ ನಾ ಬಲ್ಲೆನೆ

ಹುಸಿ ಎರಡು ರೀತಿಗಳಲ್ಲಿ ಬರಬಹುದು

(ಅ) ಅಕ್ಷರ ಅಥವಾ ಅಕ್ಷರಗಳು + ವಿಚ್ಛೇದ ಯತಿ + ಹುಸಿಯ ಅಕ್ಷರ ಅಥವಾ ಅಕ್ಷರಗಳು

ಕಣಿಯ ಕೇ | ಳಾರೆ ಕಣಿ | ಯ* ರಾಯ | ಗೊಲ್ಲರಹಳ್ಳಿ
ಕಾ] ಲಂದೀ | ಗೆ* ತೋಳು | ಬಂದೀ | ಗೆ

(ಆ) ಅಕ್ಷರ ಅಥವಾ ಅಕ್ಷರಗಳು + ವಿಲಂಬಯತಿ + ಹುಸಿಯ ಅಕ್ಷರ ಅಥವಾ ಅಕ್ಷರಗಳು

ಕೊಡಗು ಮಲೆ | ಯಾಳ ರಾಜ್ಯ | ಕೆs ಗಡಿ | ಯಾವುದೆಂದ್ರೆ;
ಮಲ್ಲಿಗೆಹಾ | ರಗಳೆ | ಲ್ಲೊsನಿ | ಲ್ಲಯ್ಯರಾಜ

(ಅ ಮತ್ತು ಆ)

ರಂಗನೊಲಿ | ದಾs ಗೋ | ವಿಂದ ನೊಲಿ | ದಾs
ರಾಮನೊಲಿ | ದಾs* | ರಾಮು | ಕೃಷ್ಣನೋಲಿ | ದಾs

9. ಗಣಪರಿವೃತ್ತಿ ಎರಡು ಅಂಶಗಣಗಳು ಮೂರು ಉಪಗಣಗಳಾಗಿ ಒಡೆದುಕೊಳ್ಳುತ್ತವೆ.

ಚಿಕ್ಕಾ - ಚಿಕ್ಕಾ - ಕೋಲ | ಚಿಕ್ಕಾ - ಬಂಡೀ - ಕೋಲ;
ಈರೇ - ಹೂವಿs - ನಂತೆ | ತುಪ್ಪಕೆ | ಬಂದದ್ದು;
ಬೆಟ್ಟು - ಗದ್ದೆಗೆ - ನೂರು - ಬಯಲು - ಗದ್ದೆಗೆ - ನೂರು

**ಜನಪದ ಬಂಧಗಳು :** ಜನಪದ ಗೀತಗಳಲ್ಲಿ ಅಗ್ರಸ್ಥಾನ ತ್ರಿಪದಿಗಿದ್ದರೂ ಇನ್ನುಳಿದ ಬಗೆಗಳೂ ಅಷ್ಟೇ ಆಕರ್ಷಕವಾಗಿವೆ; ಹಲವು ಮಾತ್ರಾ ಛಂದೋಬಂಧಗಳ ಮೂಲದ ಬಗೆಗೆ ಬೆಳಕು ಬೀರತಕ್ಕವಾಗಿವೆ. ಅವನ್ನು ಕ್ರಮವಾಗಿ ಪರಿಶೀಲಿಸಬಹುದು.

i ವಿವಿ :

ಕಟಕಟಿ | ಕಲ್ಲೂರು || ಅರಗಿನ | ಆಲೂರು || ಬೆಡಗಿನ | ಬೇಲೂರು || ಹಿಂದೆ ತಾ | ವರೆಗೇರೆ

ii ವಿವಿಗ :

ಕೋಲುಕೋ | ಲಣ್ಣ ಕೋ | ಲೆs | s; ಹೊರೀಕೆ | ಹೋಗಲಾ | ರs |s|| ಹೊರೆಹುಲ್ಲು | ತರಲಾ | ರs |s ||

iii ವಿ ವಿ ವಿ ಗ :

ಇಂದಿನ | ದಿನದಲಿ | ಓಲಗ ವಾs || ; ವಡ್ಡೂರು | ದಾಸರು| ಸುವಿಲಾ| ಲೆ; ಕೋಗಿಲೆಂ | ಬೋದು | ಕೋಗಿ | ಲೆ

iv ವಿ ವಿ ವಿ ಬ್ರ :

ಕೋಲೇಕೋ | ಲೇಕೋಲು | ಕೋಲಣ್ಣ | ಕೋಲೆ.

v ವಿ ವಿ ವಿ ವಿ : (ಎರಡನೆಯ ನಾಲ್ಕನೆಯ ಗಣಗಳು ಬ್ರಹ್ಮವಾಗುವ ಪ್ರವೃತ್ತಿ ಇದೆ)

ಹೇಳಿದ | ನಾಗಣ್ಣ | ಕೇಳಿದ | ನಿಂಗಣ್ಣ; ಅರಮನೆ | ಒಳಗೊಬ್ಬ| ದೊರೆಮಗಾ | ಕುಂತವ್ನೆ; ಏರಿಯ | ಕೆಳಗೇ | ಹೋದಾಳು | ಕೊರವಂಜಿ

vi ವಿ ವಿ ವಿ ವಿ

ವಿಬ್ರವಿಬ್ರ:

ಜಾಣೆಯ | ಮನೆಸುತ್ತ | ಜಾಲದ | ವನಗಳು || ಜಾಣೆಯ ಅರ | ಮನೆಗೆ| ಜಾಣ ತಾ | ಬಂದ ; ಆರು ಸು | ತ್ತಿನ ಕೋಟೆ | ಏಳು ಸು| ತ್ತಿನ ಬೇಲಿ || ಒಂದೆ ಜಿಗಿ | ತಕ್ಕೆ | ಜಿಗಿದಳು | ಸುವ್ವಿ

vii ವಿ ವಿ ವಿ ವಿ

ವಿ ವಿ ವಿ ಗ :

ಅರಮನೆಗೆ | ಬಂದಾನ | ಬಾಬಾ ಸಾ | ಹೇಬ || ರಾಣೆನ್ನ | ನುಡಿಸ್ಯಾನ| ಕೌತುಕ | ದಿs || ಚಿಂತೆಯು | ಕಂತ್ಯಾಕ | ಜೀವದ | ಚಿಂತ್ಯಾಕ || ಈಶಸಂ | ಕೇತ | ತಲೆಬಾಗಿ | ರಿs ||

ಇದೇ ಷಟ್ಪದಿಗೆ ಕಾರಣವಾಗಿರುವುದು ಆವರ್ತದೃಷ್ಟಿಯಿಂದ ಷಟ್ಪದಿ ಚೌಪದಿಯೇ ಈ ರಚನೆಯ ದ್ವಿಪದಿಯಲ್ಲಿ ಮಾಡಿಕೊಂಡಿರುವ ವೈವಿಧ್ಯ:

ಸುವ್ವಿ ಸು | ವ್ವಮ್ಮಲಾಲೆ | ಸುವಲಾ | ಲೆ * ನಮ್ಮ | ಜಾಣೆಜಾ | ಗರುದ್ಹೆಣ್ಣೆ | ಸುವ್ವಿಲಾ | ಲೆ ; ಎಳ್ಳುಂಡೆ | ಜೇನುತುಪ್ಪ | ಗಣನಾ | ಯ್ಕ* ನಮಗೆ ||| ವಿದ್ಯೇಯ | ಕಲಿಸಯ್ಯ | ಗಣನಾ | ಯ್ಕ

viii ವಿ ವಿ ವಿ ವಿ

ವಿ ವಿ ಗ :

ಬಾರದ ಪ | ವಾಡಕೆಲ್ಲ | ಬಂದು | ಒದಗೊ | ಘನನೀಲಿ || ಸಿದ್ದಯ್ಯ | ನೀವೆ ಬ | ನ್ನಿ || s ||

ನಾಲ್ಕು ಪಾದಗಳೂ ಆಗಬಹುದು. ಈ ರಚನೆಯಲ್ಲಿ ಸಾಧಿಸಿರುವ ವೈವಿಧ್ಯ : ಕೊಡಗು ಮಲೆ | ಯಾಳರಾಜ್ಯ | ಕೆs ಗಡಿ | ಯಾವುದೆಂದ್ರೆ |

ಬೆಡಗಿನಂಥ | ಪೆರಿಯ ಪಟ್ಟ | ಣs s || ; ಹೂವಿನ | ಗೊಲ್ಲಕಾ | ಣೆ | s | ಈರಣ್ಣ || ನಾಡಿಗೆ | ಚೆಲುವ ಕಾ | ಣೆ; ಗೋಕುಲ | ದೊಳಗೆ | ಹುಟ್ಟಿ | ಅಲ್ಲಿ || ಗೋವ್ಗಳ | ಕಾಯ್ದುವ | ಗೆs | s || ಮಾವ | ನ್ನs | ಕೊಂದಂ | ಥ s || ಧೀರಶ್ರೀ | ಕೃಷ್ಣ ನಿ | ಗೆ

ix ವಿ ವಿ ವಿ ವಿ

ವಿ ಬ್ರ ವಿ :

ಏಳೆ ದ್ವಿಪದಿ; ಏಳನೆಯ ಗಣ ವಿಚ್ಛೇದ್ಯ ವಿಷ್ಣು ಅಥವಾ ವಿಚ್ಛೇದ್ಯರುದ್ರ ಆಗಬಹುದು

ಮೂಡಲ | ಸೀಮಿಂದ | ನಾಡದೊಂ | ಬರು ಬಂದು || ಊರಾಗಳ | ಮಠಕ್ಕೆ | ನಿಲುತಾರೆ

x ವಿ ವಿ ವಿ ವಿ

ವಿ ಬ್ರ ವಿ

ವಿ ವಿ ವಿ ವಿ

ವಿಬ್ರವಿ

ಏಳೆ ಚತುಷ್ಪದಿ ದಬ್ಬಣಸಾಲೆ | ಬತ್ತ | ಒಬ್ಬ ಕು | ಟ್ಟs ಲಾರೆ | ಯೆಬ್ಬಿಸೊ | ನಿನ್ನ | ಮಡದೀಯ || ಮಡದಿಯೆ | ಬ್ಬಿಸಿದರೆ | ಅರೆನಿದ್ರೆ|| ಯಾದಾವೆ || ಒಬ್ಬೊಬ್ಬೆ | ಮಾಡಿ | ತೆಗಿತಂಗಿ

xi ವಿ ವಿ ವಿ ವಿ

ವಿ ಬ್ರ ವಿ ವಿ

ವಿ ಬ್ರ ವಿ

ತ್ರಿಪದಿ ಅಥವಾ ಏಳೆ ತ್ರಿಪದಿ. ಏಳು ಮತ್ತು ಹನ್ನೊಂದನೆಯ ಗಣ ವಿಚ್ಛೇದ್ಯ ವಿಷ್ಣು ಅಥವಾ ವಿಚ್ಛೇದ್ಯ ರುದ್ರವಾಗಬಹುದು. ಉಳಿದ ಸ್ಥಾನಗಳಲ್ಲಿ ಬ್ರಹ್ಮ, ರುದ್ರ, (ಸಂಕೋಚ) ಬರುವುದು

1. ತ್ರಿಪದಿಯ ಬ್ರಹ್ಮದ ಸ್ಥಾನದಲ್ಲಿ ಣ- ರೂಪ ಬರಬಹುದು. ಇಂಥ ಕಡೆಗಳಲ್ಲಿ ಮೊದಲ ಹ್ರಸ್ವವನ್ನು ಎಳೆದು ವಿಲಂಬಿಸಬೇಕು.

ಮೂರು ವ | ರ್ಷಾದ; ರಾಯರೆಂ | ಜs ಲ; ಕೊಯ್ಯದೆ ಬ| ಯ್ಯದೇ; ಕೊಟ್ಟ ಭಾ | ಷೆಗೆ

2. ತ್ರಿಪದಿಯ ಬ್ರಹ್ಮದ ಸ್ಥಾನದಲ್ಲಿ ವಿಷ್ಣುವೂ ಕ್ವಚಿತ್ತಾಗಿ ರುದ್ರ ಅತಿರುದ್ರಗಳೂ ಬರಬಹುದು

ಲೋಕದವ | ರೀಗೆಲ್ಲ | ಉಪಕಾರ; | ಪಿತೃಋಣ | ತಿದ್ದೋರು| ನವುಗಿನ್ನು| ದೇವ; ಹಾಡು | ಭೂ | ಲೋಕದ | ಒಡೆಯಾಗೆ | ಶಿವರಾಯ; ಕಂಡಾಳು | ಭೂಮಿತಾಯಿ| ಇದುರೀಗೆ

3. ಈ ಬ್ರಹ್ಮದ ಸ್ಥಾನದಲ್ಲಿ ಒಂದೇ ಅಕ್ಷರವೂ ಬರಬಹುದು.

ಒಬ್ಬೆಮಾ | ಡಿs | ತೊಳಸಿಡು | ಹುಟ್ಟಿದರೆ; ತನ್ನ ಸೊಸೆ| ಗೆs| ಉಡಕೊಟ್ಟು (ಸೇಗೆ ಎಂದೂ ಸಾಧ್ಯ)

4. ತ್ರಿಪದಿಯ ಎರಡನೆಯ ಪಾದದ ಮೂರನೆಯ ಗಣ ವಿಷ್ಣುವಿನ ಸ್ಥಾನದಲ್ಲಿ:

(ಅ) ಮಾರ್ಗಿಗಳಿಂದ ಹೇಳಲ್ಪಟ್ಟ ರೂಪ ; ಮನೆಗೆ ಬಂ | ದಳಿಯ ಮಗನಲ್ಲ | ತೌರೀಗೆ |

(ಆ) ಮೊದಲು ಹಾಡುವಾಗ ಇದು ವಿಚ್ಛೇದ್ಯವಿಷ್ಣುವಾಗಬಹುದು; ಮನೆಗೆ ಬಂ | ದಳಿಯ | ಮಗನ | ಲ್ಲ

(ಇ) ಈ ಸ್ಥಾನದಲ್ಲಿ ವಿಚ್ಛೇದ್ಯ ರುದ್ರ ಬರಬಹುದು. ಪುನರಾವೃತ್ತಿಯಲ್ಲಿ ಅದು ಸಂಕುಚಿತ ರುದ್ರವಾಗುತ್ತದೆ:

ನೀರಿದ್ರೆ | ಬಾಳೆ | ಗೊನೆಗೆ ಭೋ | ಗ; ಪುನರಾವೃತ್ತಿಯಲ್ಲಿ ನೀರಿದ್ರೆ| ಬಾಳೆ | ಗೊನೆಗೆ ಭೋಗ | ತಾಯವ್ವ

5. ತ್ರಿಪದಿಯ ಮೂರನೆಯ ಪಾದದ ಮೂರನೆಯ ಗಣವೂ ವಿಚ್ಛೇದ್ಯ ವಿಷ್ಣು (ಬ್ರ + ಗು); ವಿಚ್ಛೇದ್ಯ ರುದ್ರ (ವಿ + ಗು) ಆಗಿರಬಹುದು; ರಂಗನೇ | ರ್‍ಯಾನೆ | ಹೊಸತೇ | ಜಿ

6. ತ್ರಿಪದಿಯ ಎರಡನೆಯ ಪಾದವನ್ನು ಮೂರನೆಯ ಗಣದವರೆಗೆ ಹಾಡಿ ಅನಂತರ ನಾಲ್ಕನೆಯ ಗಣದೊಡನೆ ಅದನ್ನೇ ಮತ್ತೆ ಹಾಡುತ್ತೇವೆ ಎಂದುಕೊಂಡಿದ್ದೇವೆ. ಆದರೆ ಇಲ್ಲಿ ಹಲವು ಪ್ರಕ್ರಿಯೆಗಳಿವೆ:

(ಅ) ಸಾಮಾನ್ಯ ರೂಪ : ಸೂಳೆಯ | ಹೆಣ್ಣು | ನಾನಲ್ಲ | s || ಸೂಳೆಯ | ಹೆಣ್ಣು | ನಾನಲ್ಲ | ದೇವರೆ ||

(ಆ) ಮೂರನೆಯ ಗಣಾನಂತರದ ಅಕ್ಷರ ಎರಡನೆಯ ಬಾರಿ ಹಾಡುವಾಗ ಮೂರನೆಯ ಗಣದೊಳಗೆ ಸೇರಬಹುದು. ಎಂದರೆ ವಿಚ್ಛೇದ್ಯವಿಷ್ಣು > ಸಾಮಾನ್ಯ ವಿಷ್ಣು; ವಿಚ್ಛೇದ್ಯ ರುದ್ರ > ಸಂಕುಚಿತರುದ್ರ:

ಬಸುರಿಲ್ಲ | ವಂತೆ | ಅಳುತಾ | ಳೆs || ಬಸುರಿಲ್ಲ | ವಂತೆ| ಅಳುತಾಳೆ | ನಮಕೊಮರ; ಕೂಸಕಂ | ದಯ್ಯ | ಒಳಹೊರ | ಗೆs || ಕೂಸುಕಂ | ದಯ್ಯ | ಒಳಹೊರಗೆ | ಆಡಿದರೆ

(ಇ) ಮೂರನೆಯ ಗಣಾನಂತರದ ಅಕ್ಷರ ಎರಡನೆಯ ಬಾರಿ ಹಾಡುವಾಗ ಲುಪ್ತವಾಗಬಹುದು: ಕನ್ನೆ ಎಡ | ಗಡೆಗೆ | ಕರೆತನ್ನಿ | ರಿs || ಕನ್ನೆ ಎಡ| ಗಡೆಗೆ | ಕರೆತನ್ನಿ | ನಮ್ಮನೆಯ

(ಈ) ಮೂರನೆಯ ಗಣದ ಆದ್ಯಂತ ಹಿಂಜರಿದು ಎರಡನೆಯ ಗಣವಾದ ಬ್ರಹ್ಮವನ್ನು ವಿಷ್ಣುವನ್ನಾಗಿ ಮಾಡಬಹುದು.

ನಾರಿಗೌ | ರಮ್ಮ | ತೌರಿಂದ | s || ನಾರಿಗೌ | ರಮ್ಮ ತೌ| ರೂರಿಂದ| ಬರುವಾಗ

(ಉ) ಮೂರನೆಯ ಗಣಕ್ಕೆ ಇನ್ನಷ್ಟು ಅಕ್ಷರಗಳು ಸೇರಿಕೊಳ್ಳಬಹುದು:

ಕರುವಲ್ಲೆ | ಚೆಂದ | ಗೌಡರು | s || ಕರುವಲ್ಲೆ | ಚೆಂದ | ಗೌಡರು ಶಿವ| ರುದ್ರಪ್ಪನ ; ನಾಲ್ವರು ಅಣ್ಣಾನೋರೆ | ಕುಳುತ | ಲ್ಲೋs || ನಾಲ್ವರು ಅಣ್ಣ | ನೋರೆ| ಕುಳುತಲ್ಲೊ ನಾ | ರಿಯಮುಂಡೆ

(ಊ) ಮೂರನೆಯ ಗಣದ ಅಂತ್ಯಾಕ್ಷರಗಳು ವ್ಯತ್ಯಸ್ತವಾಗಬಹುದು:

ಒಂಬತ್ತು | ವರ್ಷ | ಸಲಹಿದೆ | - || ಒಂಬತ್ತು | ವರ್ಷ | ಸಲಹಿಸಾ | ಕಿದ ಮಗಳ; ನೀರು ಹು | ಯ್ದಂಗೆ | ಬೆವತೇವು - || ನೀರು ಹು | ಯ್ದಂಗೆ | ಬೆವತು ಬೆಂ | ಡಾದೆವು

(ಎ) ಇಡೀ ಪಾದದ ಗಣವ್ಯವಸ್ಥೆಯೇ ವ್ಯತ್ಯಾಸ್ತವಾಗಬಹುದು:

ಹಾವಡ್ಡ | ಲಾಗಿ | ಸುಳಿದಾಳೆ -|| ಹಾವಡ್ಡ | ಲಾಗಿಸುಳಿ | ದಾಳೆ ಆ | ಮಾರಿಯ

7. ಊನಗಣತ್ರಿಪದಿ: ಎರಡನೆಯ ಪಾದದಲ್ಲಿ ನಾಲ್ಕನೆಯ ಗಣವಿರದು. ಆ ಸ್ಥಾನದಲ್ಲಿ ಒಂದೇ ಮೀಸಲಕ್ಷರ ಬರಬಹುದು: ನೆಲವಮಾ | ಳಿಗೆ ಮನೆ | ಯವ್ವ ತಾಯ | ವ್ವ -||; ಗುತ್ತಿನ ಮಳೆ | ನಾಡ ಹೊಳೆಕಟ್ಟೆ||

8. ತ್ರಿಪದಿಯಲ್ಲಿ ಸಾಮಾನ್ಯವಾಗಿ ಪಾದಾಂತಯತಿ ಖಚಿತ. ಪಾದಾರ್ಧಯತಿ (ಮೂರನೆಯ ಪಾದದಲ್ಲಿ ಎರಡು ಗಣಗಳ ಅನಂತರ) ಸಾಮಾನ್ಯ. ಎರಡನೆಯ ಪಾದಾಂತ್ಯದಲ್ಲಿ ಯತಿ ಇಲ್ಲದಿದ್ದರೂ ನಡೆಯುತ್ತದೆಂದು ತೋರುತ್ತದೆ:

ನಾಚಿಕೆ | ಬರಿದೆ | ಮನದೊಳು | ನಿನಗೆನು || ತ್ತಾ ಚದು | ರೆಯರು | ನುಡಿದಾರು

ಆದರೆ ಇಂಥ ಪ್ರಯೋಗಗಳು ಅಪೂರ್ವ. ಎರಡನೆಯ ಪಾದದ ಮೂರನೆಯ ಗಣಾನಂತರ ಯತಿ ಇದ್ದರೂ ಪುನರಾವೃತ್ತಿಯಲ್ಲಿ ಅದು ಲೆಕ್ಕಕ್ಕೆ ಬರುವುದಿಲ್ಲ. ಬ್ರಹ್ಮದ ವಿಲಂಬ ಯತಿಯನ್ನಪೇಕ್ಷಿಸುತ್ತದೆ.

9. ಇತರ ಬಂಧಗಳಲ್ಲಿನಂತೆಯೇ ತ್ರಿಪದಿಯಲ್ಲಿ ಪ್ರಾಸ ಐಚ್ಛಿಕ; ವಡಿಯ ಪ್ರವೃತ್ತಿ ಇದೆ :

ಬಲ್ಲಾಳ ಹಿತ್ತಿಲ - ಬಳ್ಳಿಯ ಹೆಸರೇನು || ಬೆಳ್ಳಿಯ ದಂಡೆ ಬಿಡುನೀರ|| ಬಲ್ಲಾಳು ತಿಂಬ - ಬಿಳಿಯೆಲೆ

xii ವಿ ವಿ ವಿ ವಿ

ವಿ ಬ್ರ ವಿ ವಿ

ವಿ ಬ್ರ ವಿ ವಿ

ವಿ ಬ್ರ ವಿ ಇತ್ಯಾದಿ

ತ್ರಿಪದಿಯಲ್ಲಿ ಬೆಳೆದು ಏಳೆ ಮೂರು ಪಾದವಾದಂತೆ ಇನ್ನೂ ಬೆಳೆದು ಬಹುಪದಿಗಳಾಗಬಹುದು. ಆರು ಪಾದಗಳನ್ನಾಗಿ ಹಾಡಬೇಕಾಗುವ ಏಳೆ ಚತುಷ್ಪದಿ: ರಾಯ ಹರ್ತೀಯ ರುವಾರ್‍ದ ಬೀದ್ಯಾಗೆ || ಸೂರ‍್ಯ ಉರಿದಂಗೆ ಉರದಾಳೆ* ಆಮಾರಿ| ಹಾವಡ್ಡಲಾಗಿ ಸುಳಿದಾಳೆ + ಆ* ಮಾರಿಯ || ನಾಲ್ಕೆಮೇಲೆ ಬಿಟ್ಟಾಳೆ ಉರಿಬಾಣ; ಏಳೆ ಪಂಚಪದಿ, ಏಳೆ ಷಟ್ಪದಿ ಏಳೆ ಅಷ್ಟಪದಿಗಳಿಗೂ ಉದಾಹರಣೆಗಳಿವೆ.

xiii ಬ್ರಹ್ಮದೀರ್ಘಿಕಾ: ಬ್ರಹ್ಮಗಣದ ನಡೆಯನ್ನು ಪ್ರಧಾನವಾಗಿ ಉಳ್ಳಪಾದಕ್ಕೆ ನಾಲ್ಕು ಗಣಗಣ ಮಿತಿಯಲ್ಲಿ ಬರುವ ಬಂಧಗಳನ್ನು ಹಿಂದೆ ಉದಾಹರಿಸಲಾಗಿದೆ. ಪಾದಕ್ಕೆ ನಾಲ್ಕಕ್ಕಿಂತ ಹೆಚ್ಚು ಗಣಗಳು ಬ್ರಹ್ಮಪ್ರಧಾನವಾಗಿ ಬರುವ ಬಂಧಗಳನ್ನು ಬ್ರಹ್ಮದೀರ್ಘಿಕಾ ಎನ್ನಲಾಗಿದೆ.

1. 4 ಬ್ರ + ಗು

ಅವ್ರ] ಮಡದಿ | ಹೆಸರು | ಹರಿಯಲ | ದೇವ | ಮ್ಮ || ಮಗನ | ಹೆಸರು| ಸೀತಾಳ | ರಾಮ | ಯ್ಯ ||

2. 6 ಬ್ರ + ಗು

ನಾಗರು | ಕೊಡತಿ | ನಂತ | ಹೇಳಿ | ಸಾರಿ | ಹೇಳ್ಯಾ | ರೊ -|| ; ಸುತ್ತ | ಮುತ್ತ| ಕೋಲು | ಕೊಡಿ | ಸೂಳೆ | ರಾಯ | ಗೆ (4 ಪಾದ, ಇಲ್ಲಿ 3 ನೆಯ ಪಾದದಲ್ಲಿ 8 ಬ್ರ ಇದೆ)

3. 7 ಬ್ರ + ಗು (3 ಪಾದ) + (6 ಬ್ರ + ಗು)

ಊರು | ಊರಿಗ್ | ಯಾವ್ಪು | ಮೇಲು | ಕೊಲ್ಲಂ | ಪುರವೆ | ಮೇಲ | ಲ್ಲೊ|; ಕ್ಯಾತಾ | ರೀಫ್‌ಹೋ | ಇನ್ ಕೊವಿ | ಲಾಕರ್ | ಕಪ್ಪಡಿ | ಸಂಗಮ | ಬಿಸ್ಮಿ | ಲ್ಲಾ

4. (8 ಬ್ರ) + (6 ಬ್ರ + ಗು) ಅಥವಾ 4 ಬ್ರ + 4 ಬ್ರ + 6 ಬ್ರ + ಗು ಪಾದಕ್ಕೆ ನಾಲ್ಕು ಗಣಗಳ ಷಟ್ಪದಿಗೆ ಇದು ಹೋಲುತ್ತದೆ: ಬೆಡಗಿ | ನ ಮಾ | ತಿದು | ಸಲ್ಲ | ಭೀಮ | ಸೇನನ | ಗದೆಯು | ನಿನ್ನ || ತೊಡೆಯ | ಮೇಲೆ | ಬಿದ್ದಿ | ತಂತೆ | ಬೇಡ| ಎಂದ | ಳು ; ಕಡುಕಡು | ಗತ್ತಿ | ಕೈಯಾಗ್ | ಹಿಡಿದು ...........

xiv ಮಿಶ್ರಬಂಧಗಳು :

ಐದು ತಿಂ | ಗಳ ಬಸು | ರೀs | s || ಕೆನ್ನೆಮೇ | ಗಾಲುಹಸು | ರುs| s || ಭೂಮಿತಾಯಿ | ನೀಮಿಂದ | ದಿನಹೇ | ಳೆ - ಸುವ್ವಿ || ನಾನು ಮಿಂ | ದಂತ ದಿನವ | ನೀವೇನು | ಕೇಳೀರಿ | ಏಲಕ್ಕಿ | ಮಾವಿನ | ಫಲಬಂ | ದುs | s || ನಾಮಿಂದೇ | ನನ್ನ| ತವರ | ಲಿs ಸುವ್ವಿ ಇತ್ಯಾದಿ. ಮದುವೆ ಹಾಡುಗಳಲ್ಲಿ ಕೆಲವು ಖಚಿತವಾದ ಪಂಚಪದಿಗಳು ರೂಢವಾಗಿವೆ. ವಿವಿವಿಬ್ರ ಎಂಬಂತೆ ಮೂರು ಪಾದಗಳು, ನಾಲ್ಕು ವಿಷ್ಣು ಒಂದು ಪಾದ, ಕೊನೆಗೆ ವಿಬ್ರವಿ ಎಂದು ಒಂದು ಪಾದ.

ದ್ರಾವಿಡ ಛಂದಸ್ಸಿನ ವೈಶಿಷ್ಟ್ಯ, ಕನ್ನಡ ಜನಪದ ಛಂದಸ್ಸಿನ ವೈಶಿಷ್ಟ್ಯ, ಕನ್ನಡ ಜನಪದ ಛಂದಸ್ಸಿನ ಕೊಡುಗೆ, ಇದರ ಚರಿತ್ರೆಯ ರಚನೆಯನ್ನು ಕುರಿತು ಎರಡು ಮಾತುಗಳು ಅಗತ್ಯ.

ತಾಳ (ಗಣಾಘಾತ) ಮತ್ತು ಆವರ್ತವನ್ನು (ಪಾದ) ಆಧಾರವಾಗಿಟ್ಟುಕೊಂಡು ಅದರೊಳಗೆ ಎಲ್ಲ ವೈವಿಧ್ಯದ ನಡೆಗಳನ್ನು ಸಾಧಿಸುವ ಪದ್ಧತಿ ಏಕಮೇವವಾಗಿ ದ್ರಾವಿಡ ಛಂದಸ್ಸಿನದು. ಅಕ್ಷರವೃತ್ತಗಳ ಮಾತ್ರಾಲಯಕ್ಕಿಂತ, ಮಾತ್ರಾಗಣಗಳ; ಮಾತ್ರಾಲಯಕ್ಕಿಂತ ಅಂಶಗಣಗಳ ಮಾತ್ರಾಲಯ ಅತ್ಯಂತ ಕಡಿಮೆ ಪರಿಣತಿಯನ್ನು ಅಪೇಕ್ಷಿಸತಕ್ಕದ್ದಾದುದರಿಂದ ಇದೇ ಅತ್ಯಂತ ಪ್ರಾಚೀನವಿರಬೇಕು. ಜೊತೆಗೆ ಗಣದ ವ್ಯಾಪ್ತಿಯೊಳಗೆ ಅಕ್ಷರಗಳ ಮೊತ್ತ ಹೇಗೂ ಬರಬಹುದಾದುದರಿಂದ ಲಯದ ನಡೆಯಲ್ಲಿ ಸಾಧಿತವಾಗುವ ವೈವಿಧ್ಯವೂ ಇಲ್ಲಿ ಹೆಚ್ಚು.

ಮಲೆಯಾಳಂ ಜನಪದಗೀತೆಯೊಂದರಲ್ಲಿ ಚತ್ತಿ | ಮಂದಾ | ರಂ ತುಳಸಿ ಪಿಚ್ಚ | ಕಮಾ | ಲೆಯುಂ ಚೂಡಿ - ಎಂದು ಅಕ್ಷರಗಳ ಲೆಕ್ಕವೇ ಮುಖ್ಯವಾದ, ಅಕ್ಷರ ಪೌಲ್ಯ ಅಗಣ್ಯವಾದ, ಎಲ್ಲ ಅಕ್ಷರಗಳನ್ನೂ ಎಳೆದು ಹೇಳುವಂಥ ರೀತಿ ಇದೆ. ಬೆಡಗಿ | ನಮಾ | ತಿದು | ಸಲ್ಲ......................ಎಂದು ಮೊದಲಾಗುವ ಕನ್ನಡ ಉದಾಹರಣೆ ಇದನ್ನೇ ಹೋಲುತ್ತದೆ. ಪ್ರಾಯಶಃ ಮನುಷ್ಯ ಮೊದಲು ಅಕ್ಷರಗಳ ಹ್ರಸ್ವತೆ ದೀರ್ಘತೆಗಳನ್ನು ಗಮನಿಸಿ ಹಾಡಿರಲು ಸಾಧ್ಯವಿಲ್ಲ. ಕಾಲದ ಒಂದು ಖಚಿತವಾದ ಅಂತರದ ತಾಳವನ್ನು (ಗಣಾಘಾತ) ಮುಖ್ಯವಾಗಿಟ್ಟುಕೊಂಡು, ಆ ತಾಳಕ್ಕೆ ತಪ್ಪದೆ, ಬಂದಂತೆ ಹಾಡಿರುವುದೇ ಸಹಜ.

ತಮಿಳು ಭಾಷೆ ಸಂಸ್ಕೃತದ ಪ್ರಭಾವದಿಂದ ದೂರವಿರಲು ಪ್ರಯತ್ನಿಸಿತು. ಅದರಿಂದಾಗಿ ತನ್ನ ಸಂಪ್ರದಾಯವನ್ನು ಉಳಿಸಿಕೊಂಡು ಬರಲು ಹೆಣಗಿತು. ಈ ಪರಿಸ್ಥಿತಿಯಲ್ಲಿ ತನ್ನಲ್ಲೇ ವೈವಿಧ್ಯವನ್ನು ಸಾಧಿಸುವುದರೆಡೆಗೆ ಹೆಚ್ಚು ಗಮನ ಕೊಡಲಾಗದೆ ಹಳಯದನ್ನು ಉಳಿಸಿಕೊಂಡು ಬರುವುದರಲ್ಲೇ ಹೆಚ್ಚಿನ ಶಕ್ತಿ ವ್ಯಯಮಾಡಬೇಕಾಗಿ ಬಂದಿರಬೇಕು. ಆದ್ದರಿಂದ ತಮಿಳು ಜನಪದ ಛಂದಸ್ಸಿನಲ್ಲಿ ಹಳೆಮೆಯ ಕೆಲವು ವಿಶಿಷ್ಟತೆಗಳು ಉಳಿದಿವೆ. ತೆಲುಗು ಭಾಷೆ ಕನ್ನಡದಂತೆ ಸಂಸ್ಕೃತದ ಪ್ರಭಾವಕ್ಕೊಳಗಾಯಿತು. ಮೇಲಾಗಿ ಶಿಷ್ಟರ ಕೈಯಲ್ಲಿ ಜನಪದ ಛಂದಸ್ಸೂ ಶಿಷ್ಟವಾಗಿ, ನಿಯಮಗಳಿಂದ ಅಲಂಕೃತವಾಗಿ ವೈವಿಧ್ಯಸಾಧನೆಯಲ್ಲಿ ಹಿಂದಾಯಿತು. ಜನಪದದ ಕೋಗಿಲೆಗೆ ಚಿನ್ನದ ಮನೆಯ ಆಶ್ರಯ ದೊರಕಿತು. ಆದರೆ ಕನ್ನಡದ ರೀತಿ ವಿಶಿಷ್ಟವಾದದ್ದು. ಕನ್ನಡ ಭಾಷೆ ಸಂಸ್ಕೃತ ಪ್ರಾಕೃತಗಳಿಂದ ಪ್ರಭಾವಿತವಾದರೂ ಈ ಪ್ರಭಾವ ಜನಪದರ ಮೇಲೆ ಏನೂ ಪರಿಣಾಮ ಬೀರಲಿಲ್ಲ. ವೃತ್ತರತ್ನಾಕರದಂಥ ಗ್ರಂಥಗಳನ್ನು ಶಿಷ್ಟರು ಬಿಡಲಿಲ್ಲ. ಜನಪದರು ಹಿಡಿಯಲಿಲ್ಲ. ಎಲ್ಲೋ ಅಪರೂಪಕ್ಕೊಮ್ಮೊಮ್ಮೆ ಶಿಷ್ಟರುವನ್ನು ಕೆಳಗಿಳಿದು ಬಂದು ಕರೆದಾಗ ಜನಪದರು ಹೋಗಿ ಸೇರಿ, ತಮ್ಮ ರೂಪವನ್ನು ಅವರಿಗೆ ತೊಡಿಸಿದರು ಮತ್ತೆ ತಮ್ಮ ಪಾಡಿಗೆ ತಾವು ಜನಪದರಾಗಿಯೇ ಉಳಿದರು. ಸಂಸ್ಕೃತದ ಪ್ರಭಾವ ಪಡೆದ ಜನಪದವನ್ನು ಅಲಕ್ಷಿಸಿದ್ದು ದೂರವಿರಿಸಿದ್ದು ಅಥವಾ ತಾವೇ ದೂರ ಉಳಿದದ್ದು ಒಂದು ರೀತಿಯಲ್ಲಿ ಒಳ್ಳೆಯದೇ ಆಯಿತಲ್ಲದೆ ಜನಪದರ ಸಕ್ರೀಯವಾದ ಬೆಳೆವಣಿಗೆಗೆ ಅವಕಾಶ ಮಾಡಿಕೊಟ್ಟಿತು. ಈ ಸುಸಂಸ್ಕೃತರು ಶಿಷ್ಟರೇ ಬಳಸಿಕೊಂಡು ಬಂದ ಕೆಲವು ಜನಪದ ಬಂಧಗಳನ್ನು ಉಪಚಾರಕ್ಕೆಂಬಂತೆ ಅವರ ನಿಯಮಕ್ಕನುಸಾರ ಅನುಸರಿಸಿ ತಾವೂ ಗ್ರಂಥಗಳಲ್ಲಿ ಬಳಸಿದರು. ಆದರೆ ಜನಪದರ ಪರಿಚಯಕ್ಕೆ ಹೋಗದೆ, ಜನಪದ ಛಂದಸ್ಸಿನ ವೈವಿಧ್ಯ ಕಾಣಲಾರದೆ, ಅದನ್ನು ಬಳಸಲಾರದೆ ಹೋದರು. ಓದುವ ಧಾಟಿಯೇ ಮರೆತು ಹೋದಾಗ ಜನಪದ ಬಂಧದ ಹೆಸರಿನಲ್ಲಿ ತೋಚಿದಂತೆ ಬರೆದರು ಅಥವಾ ಗೀತಿಕೆಯನ್ನು ಹೇಗೋ ಹಾಗೆ ಕೈ ಬಿಟ್ಟರು. ಹೀಗಾಗಿ ತೆಲುಗಿನಲ್ಲಾದಂತೆ ಜನಪದರ ಛಂದಸ್ಸು ಶಿಷ್ಟಗೊಂಡು ನಿಯಮಗಳ ಸಂಕೋಲೆಗೆ ಒಪ್ಪಿಸಿಕೊಳ್ಳುವ ಬಗೆ ಕನ್ನಡಕ್ಕೆ ಬರಲಿಲ್ಲ. ತನ್ನ ಮೇಲೆ ಯಾವ ದಾಳಿಯೂ ಇಲ್ಲದ್ದರಿಂದ ಆತ್ಮರಕ್ಷಣೆಯತ್ತ ಗಮನ ಕೇಂದ್ರೀಕರಿಸಿ ವೈವಿಧ್ಯ ಸಾಧಿಸಲಾಗದ ಸ್ಥಿತಿಯೂ ಬರಲಿಲ್ಲ. ಯಾರ ಹಂಗು ಅಂಕೆಗಳಿಲ್ಲದೆ ಅದು ತನ್ನ ಪಾಡಿಗೆ ತಾನು ಕಾಡಿನ ಮಲ್ಲಿಗೆಯಂತೆ ಅರಳಿತು. ಆದ್ದರಿಂದಲೇ

ಸುಶಿಕ್ಷಿತರ ಗಾಳಿ ಇಲ್ಲದೆಡೆಗಳಲ್ಲಿ ಕನ್ನಡ ಜನಪದ ಸಂಸ್ಕೃತಿ ಛಂದಸ್ಸು ಇಂದಿಗೂ ತನ್ನ ವೈವಿಧ್ಯದಿಂದ ಜೀವ ತುಂಬಿ ನಿಂತಿದೆ. ಯಾವುದೇ ಒಂದು ಛಂದೋ ಪದ್ಧತಿ ಎರಡು ಅನುಕೂಲಗಳನ್ನು ಎಷ್ಟುರವಟ್ಟಿಗೆ ನಡೆಸಿಕೊಡುತ್ತದೆ ಎಂಬುದನ್ನು ಅವಲಂಬಿಸಿದೆ. ಒಂದು ಸಹಜವಾದ ಅಭಿವ್ಯಕ್ತಿಯನ್ನು ವಿಕಾರಗೊಳಿಸುವ ಅಗತ್ಯ ಬೀಳದಂತೆ ಗರಿಷ್ಠ ಪ್ರಮಾಣದಲ್ಲಿ ಹೊಂದಿಸಿಕೊಳ್ಳುವ ಗುಣವಿರಬೇಕು. ಈ ಗುಣ ದ್ರಾವಿಡ ಛಂದಸ್ಸಿಗೆ, ವಿಶೇಷವಾಗಿ ಕನ್ನಡ ಜನಪದ ಛಂದಸ್ಸಿಗೆ ಇದೆ. ಎರಡು ಗಣ: ಹಾಗೂ ಆವರ್ತದ ಪರಿಮಿತಿಯಲ್ಲಿ ಗರಿಷ್ಠ ಪ್ರಮಾಣದಲ್ಲಿ ನಡೆವೈವಿಧ್ಯ ಸಾಧ್ಯವೇ ಎಂಬುದು. ಈ ಸಾಧ್ಯತೆಯ ಪ್ರಮಾಣವೂ ದ್ರಾವಿಡ ಛಂದಸ್ಸಿನಲ್ಲಿ, ವಿಶೇಷವಾಗಿ ಕನ್ನಡ ಜನಪದ ಛಂದಸ್ಸಿನಲ್ಲಿ ಹೆಚ್ಚು. ಕಾ| ಲಂದೀ |ಗೆ - ತೋಳು | ಬಂದೀ |ಗೆ ಎಂಬಂತೆ ಗಣಾವಕಾಶದೊಳಗೆ ಹಾಗೂ ಪಾದದೊಳಗೆ ನಡೆಭೇದ ಕಲ್ಪಿಸಿರುವುದನ್ನು ಕನ್ನಡ ಜನಪದ ಛಂದಸ್ಸಿನಲ್ಲಿ ಬಹುವಾಗಿ ಕಾಣುತ್ತೇವೆ. ಸಿರಿಗಿರಿ1 ಮಂಚಾ3 ದ ಮುಂದೆ4 (ಅಂಕಿಗಳು ಆ ಅಕ್ಷರಗಳ ಮಾತ್ರಾ ಕಾಲವನ್ನು ಸೂಚಿಸುತ್ತದೆ) ಎಂಬಂಥ ಕಾಲ ವಿತರಣೆ ಶಿಷ್ಟರಲ್ಲೂ ಸಂಗೀತದ ಸಾಧನೆ ಮಾಡಿದವರಿಗೆ ಮಾತ್ರ ಸಾಧ್ಯ; :ಇಲ್ಲಿ ಸಹಜವಾಗಿ ಅಭಿವ್ಯಕ್ತ. ಇದು ಕನ್ನಡ ಜನಪದ ಛಂದಸ್ಸಿನ ಕೋಡು. ಇಲ್ಲಿನ ಮಹಾಗಣಗಳು ತಮಿಳಿನ ಮೂರಶೈಗಳ ಸರಣಿಯಲ್ಲಿ ಕಾಣಬಹುದಾದರೂ ಇವು ತಮಿಳಿನಲ್ಲಿ ಇಲ್ಲಿನಂತೆ ಒಂದು ಗಣಾವಕಾಶ ದೊಳಗೆ ಬಂದಿವೆಯೋ ಎಂಬುದು ಪರಿಶೀಲನಾರ್ಹ. ಪ್ರಾಯಶಃ ತೋಲ್ ಕಾಪ್ಪಿಯರ್ ಸೂತ್ರಗಳು ಅತ್ತ ಗದ್ಯವೂ ಅಲ್ಲದ ಇತ್ತ ಪದ್ಯವೂ ಅಲ್ಲ ಎನ್ನಲಾದ ವಿಶಿಷ್ಟ ರೂಪದ ನೂಳ್‌ಚೆಯ್ಯುಳ್‌ನ ಸಮಸ್ಯೆಯನ್ನು ಬಿಡಿಸುವಲ್ಲಿ ಕನ್ನಡ ಜನಪದ ಛಂದಸ್ಸಿನ ವೈವಿಧ್ಯಗಳು ಬೆಳಕು ಬೀರಬಲ್ಲವು. ಕೊಡಗು, ತುಳು ಮೊದಲಾದ ಆಡುಭಾಷೆಗಳ ಜನಪದ ಛಂದಸ್ಸಿನ ಅಧ್ಯಯನದಿಂದಲೂ ಮಿಗಿಲಾದ ಪ್ರಯೋಜನವಿದೆ.

ಕಾಲಕಾಲಕ್ಕೆ ಕನ್ನಡ ಸಾಹಿತ್ಯ ರೂಪಗಳು ಬದಲಾಗಲು ಕನ್ನಡ ಜನಪದ ಛಂದಸ್ಸು ಹೇಗೆ ಸಹಾಯವಾಗಿದೆ ಎಂಬುದು ಈ ಲೇಖನದ ವ್ಯಾಪ್ತಿಗೆ ಮೀರಿದ್ದು. ಕರ್ಣಾಟಕ ಸಂಗೀತದ ತಾಳಾಂಗದ ಮೇಲೆ ದ್ರಾವಿಡ ಛಂದಸ್ಸು, ಅದರಲ್ಲೂ ಕನ್ನಡ ಜನಪದ ಛಂದಸ್ಸು ಬೀರಿದ ಪ್ರಭಾವ ಹೆಚ್ಚಿನದು. ಔತ್ತರೇಯರು ಶ್ರುತಿಯಲ್ಲಿಯೂ ದಾಕ್ಷಿಣಾತ್ಯರು ತಾಳದಲ್ಲಿಯೂ ಹೆಚ್ಚು ಗಮನವಿಟ್ಟರು ಎಂಬ ರಾಳ್ಳಪಲ್ಲಿ ಅನಂತಕೃಷ್ಣಶರ್ಮರ ಮಾತು ಗಮನಾರ್ಹ. ಉತ್ತರಾದಿ ಸಂಗೀತದ ಖ್ಯಾಲ್‌ಗೂ ದ್ರಾವಿಡ ಛಂದಸ್ಸು ಹತ್ತಿರದ್ದು. ಸಂಗೀತದಲ್ಲಿ ವಿಲಂಬ ಮಧ್ಯ ದ್ರುತ ಲಯಗತಿಗಳಿವೆಯಷ್ಟೆ. ಈ ಒಂದೊಂದೂ ಒಂದು ಆವರ್ತಕ್ಕೆ ಅನ್ವಯಿಸಿದಾಗ ಆ ಒಂದೊಂದಕ್ಕೆ ತಕ್ಕಂತೆ ಗಣವೂ ಗಣದ ಅಕ್ಷರಗಳೂ ಪ್ರಮಾಣತಃ ಪ್ರವರ್ತಿಸುತ್ತವೆ. ಗಣದ ಕಾಲಾವಕಾಶವನ್ನು ಬದಲಿಸದೆ ಗಣಾಂಶಗಳಿಗೆ ವಿಲಂಬ ಮಧ್ಯದ್ರುತ ಈ ಮೂರನ್ನೂ ಬೇಕಾದರೆ ಅನ್ವಯಿಸಿ ನಡೆಯ ವೈಚಿತ್ರ್ಯವನ್ನು ತೋರಿಸಕ್ಕದ್ದು ಕನ್ನಡ ಜನಪದ ಛಂದಸ್ಸು. ಕರ್ಣಾಟಕ ಸಂಗೀತದ ಸ್ಥಾಯಿ (ಠಾಯಿ) ಪದ್ಧತಿಯನ್ನು ಕರ್ನಾಟಕದ ಗೋಪಾಲನಾಯಕ ಸು.1300ರಲ್ಲಿ ಉತ್ತರ ದೇಶದಲ್ಲಿ ಪ್ರಚಾರ ಮಾಡಿದ. ಈ ಪದ್ಧತಿಯಲ್ಲಿ ಸಂಗೀತಗಾರನಿಗೆ ತನ್ನ ಇಚ್ಛೆಯಂತೆ ತಾಳವನ್ನು ಆಧಾರವಾಗಿಟ್ಟುಕೊಂಡು ತನ್ನ ರಾಗವಿಸ್ತರಣ ಪ್ರಾವೀಣ್ಯವನ್ನು ತೋರಿಸುವುದಕ್ಕೆ ಅಧಿಕಾರವುಂಟು; ಹಾಗೂ ಅವಕಾಶ ಉಂಟು ಎಂದು ಹುಲಗೂರು ಕೃಷ್ಣಾಚಾರ್ಯರು ಹೇಳಿದ್ದಾರೆ. ಒಂದು ತಾಳವನ್ನು ಆಧಾರವಾಗಿಟ್ಟುಕೊಳ್ಳುವುದು ಜನಪದ ಛಂದಸ್ಸಿನಲ್ಲೂ ಮೊದಲ ಅಗತ್ಯ. ರಾಗ ವ್ಯಂಜನಾವ್ಯಾಪಾರದಿಂದ ರಸಪ್ರತೀತಿ ಉಂಟು ಮಾಡುವ ವಾಚ್ಯಾರ್ಥವಿಲ್ಲದ ನಾದ, ನಾದ ಪರಂಪರೆ ಇಲ್ಲಿ ಅರ್ಥವುಳ್ಳ ಅಕ್ಷರಗಳ ಸಮೂಹ; ತಾಳಕ್ಕೆ ಸಂಬಂಧಿಸಿದಂತೆ ಪಾಠಾಕ್ಷರಗಳಿಗೆ (ಬೋಲ್) ಸಮಾನ ಕಾಲಘಟಕದ (ಗಣದ) ಮಿತಿಯಲ್ಲಿ ಅಕ್ಷರಗಳ ವಿವಿಧ ರೀತಿಯ ಕಲ್ಪನೆ ಇಲ್ಲಿಗೆ ಅನ್ವಯಿಕ. ಹೀಗೆ ಕೀರ್ತನ ಸಂಪ್ರದಾಯಕ್ಕೆ ಕರ್ಣಾಟಕ ಸಂಗೀತವೂ ಕರ್ಣಾಟಕ ಸಂಗೀತಕ್ಕೆ ವಿಶೇಷವಾಗಿ ಕನ್ನಡ ಜನಪದ ಛಂದಸ್ಸೂ ಮೂಲ ಸ್ರೋತವಾಗಿದೆ. ಆದಿಪ್ರಾಸ ಕನ್ನಡ ಜನಪದ ಛಂದಸ್ಸಿನ ಕೊಡುಗೆ. ಗೀತಗೋವಿಂದದಲ್ಲಿ ಕೆಲವೆಡೆ ಕಾಣತಕ್ಕ ಆದಿಪ್ರಾಸ ಕೇವಲ ಆಕಸ್ಮಿಕವಿರಲಾರದು. ರಗಳೆಗಳಿಗೆ ಪ್ರಾಕೃತ ಮೂಲವನ್ನು ತೀ.ನಂ.ಶ್ರೀ. ಅವರು ಕಂಡುಹಿಡಿದಿದ್ದಾರೆ. ಪ್ರಾಕೃತಕ್ಕೆ ಎಲ್ಲಿಂದ ಬಂತು? ಜನಪದ ರಗಳೆಗಳನ್ನು, ಬಗೆಬಗೆಯ ರಗಳೆಗಳನ್ನು ಮೇಲೆ ನೋಡಿದ್ದೇವೆ. ತಮಿಳಿನಲ್ಲಿ ಒಂದು ಅಥವಾ ಮೂರು ಪಾದಗಳ ಕನಿಷ್ಠ ಮಿತಿಯಿಂದ ಆರಂಭಿಸಿ, ತೋಲ್ಕಾಪ್ಪಿಯರ ಪ್ರಕಾರ ಸಾವಿರ ಪಾದ ಪರಮಾವಧಿಯಿರುವ, ಆದರೆ ಪ್ರಯೋಗದಲ್ಲಿ 782 ಪಾದಗಳು ಸಿಕ್ಕಿರುವ 'ಆಸ್ಸಿರಿಯವಿರುತ್ತು' ಇದೆ. ಅಂಶಷಟ್ಪದಿ ವಿವಿಧ ಮಾತ್ರಾ ಷಟ್ಪದಿ ಗಳಾಗಬಹುದಾದರೆ, ಅಂಶ ರಗಳೆ, ಜನಪದ ರಗಳೆಗಳು ಮಾತ್ರಾರಗಳೆಗಳೇಕೆ ಆಗಬಾರದು, ಪ್ರಾಕೃತಕ್ಕೂ ದ್ರಾವಿಡರ ಕಾಣಿಕೆ ಏಕಿರಬಾರದು, ಎಂಬ ವಿಚಾರಗಳು ಪರಿಶೀಲನಯೋಗ್ಯ. ರಗಳೆಗಳಿಗೆ ಅಂಶಮೂಲವನ್ನು ಬಿ.ಎಂ.ಶ್ರೀ. ಅವರು ಕಲ್ಪಿಸಿರುವುದು ಹೆಚ್ಚು ಆಧಾರವುಳ್ಳದ್ದೆನ್ನಿಸುತ್ತದೆ.

ಮೊದಲಿನಿಂದಲೂ ತನ್ನ ಪಾಡಿನಲ್ಲಿ ವೈವಿಧ್ಯಗಳನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬಂದಿರುವ ಕನ್ನಡ ಜನಪದ ಛಂದಸ್ಸಿನ ಅರಿವನ್ನು ಆಧಾರವಾಗಿಟ್ಟುಕೊಂಡು ಕನ್ನಡ ಜನಪದ ಛಂದಸ್ಸಿನ ಚರಿತ್ರೆಯನ್ನು ಪುನರ್‌ರಚಿಸಬೇಕಾಗಿದೆ. ಹಾಗೆ ಪುನರ್ ರಚಿಸಲು ಇಂದಿನಿಂದ ಹಿಂದಕ್ಕೆ ಹೀಗೆ ಹೋಗಬೇಕಾಗಿದೆ. ಹರಿದಾಸ ಕೀರ್ತನ ಸಂಪ್ರದಾಯದ ಛಂದಸ್ಸು; ಶಿವದಾಸರ ಗೀತಗಳು; ವಚನಗಳ ಮಧ್ಯೆ ಸೇರಿರುವ ವಚನಕಾರರ ವಚನಗಳೆನ್ನಿಸಿಕೊಂಡಿರುವ ಹಾಡುಗಳು; ಅಂಶಗಣ ಘಟಿತವಾಗಿರುವ ಸೋಮೇಶ್ವರ ಹೇಳಿರುವ (ಅಭಿಲಷಿತಾರ್ಥಚಿಂತಾಮಣಿ) ಮಾತ್ರೈಲಾ ಎಂಬ ಹೆಸರಿನ ಅಂಶಬಂಧಗಳು; ಅಚಲಾನಂದರ ಕೀರ್ತನೆಗಳು ಪೂರ್ವದ ಹಳಗನ್ನಡ ಶಾಸನಗಳಲ್ಲಿ ಸಿಗುವ ಅಂಶಬಂಧಗಳು ನಾಲ್ಕು ಮಾತ್ರೆಗಳ ನಡೆಯಿರುವ, ಆ ನಡೆಯಲ್ಲಿ ಸ್ವಾತಂತ್ರ್ಯ ವಹಿಸಿರುವ ಚಂಪಕಮಾಲೆಯಲ್ಲಿ 'ಎಡೆಪಱು' ಗೀನಡೆಕೆಯ್ದು ತಪಂ ......... ಎಂಬಲ್ಲಿ ನಾಲ್ಕು ಮಾತ್ರೆಗಳ ಸ್ಥಳದಲ್ಲಿ ಆರು ಮಾತ್ರೆಗಳನ್ನು ಅಡಕಿಸಿರುವುದು; ಮುಂದೆ ಕೆಲವು ವೈದಿಕ ಛಂದೋ ಬಂಧಗಳು - ಇವುಗಳ ಸೂಕ್ಷ್ಮ ಪರೀಶೀಲನೆ ನಡೆಯಬೇಕಾಗಿದೆ. ಆಗ ವೈದಿಕ ಛಂದಸ್ಸು ದ್ರಾವಿಡ ಛಂದಸ್ಸಿನ ಒಂದು ಪರಿಣತ ರೂಪವೋ ಪ್ರಭಾವಿತ ರೂಪವೋ ಆಗಿರುವುದು ಸಾಧ್ಯವಿದೆ ಎಂಬ ಹೇಳಿಕೆಗೆ ಖಚಿತ ರೂಪ ದೊರಕಬಹುದು. (ಕೆ.ಎಸ್‌ಐ.ಐ.)

**ಜನಪದ ಜ್ಯೋತಿಷ್ಯ :** ಹಳ್ಳಿಯ ಜನ ಬಿತ್ತುವಾಗ, ಒಕ್ಕುವಾಗ, ಮದುವೆ ಮುಂಜಿ ಮಾಡುವಾಗ, ದೊಡ್ಡ ವ್ಯಾಪಾರ ವಹಿವಾಟು ಮಾಡುವಾಗ, ಆಕಸ್ಮಿಕಗಳೊದಗಿ ತೀರ ತೊಂದರೆಗಳುಂಟಾದಾಗ, ವ್ಯಾಕುಲರಾಗಿ ಭವಿಷ್ಯ ತಿಳಿಯಲು ಜೋಯಿಸರನ್ನೋ ಪೂಜಾರಿಯನ್ನೋ ನೋಡುತ್ತಾರೆ. ಆತ ಪಂಚಾಂಗ ನೋಡಿ ಅವರ ಗ್ರಹಗತಿಗಳು ಹೇಗಿವೆ ಎಂಬುದನ್ನು ಹೇಳುತ್ತಾನೆ. ಇಂಥ ಜ್ಯೋತಿಷ್ಯವನ್ನು ಸಂಪೂರ್ಣವಾಗಿ ಜನಪದ ಜ್ಯೋತಿಷ್ಯ ಎನ್ನಲಾಗುವುದಿಲ್ಲ. ಶುದ್ಧ ಜನಪದ ಎಂದು ಕರೆಯಬಹುದಾದಂಥವು ಎಂದರೆ ಕವಡೆಶಾಸ್ತ್ರ, ಓಲೆಗರಿ ಶಾಸ್ತ್ರ, ಗಿಣಿಶಾಸ್ತ್ರ, ಕೊರವಂಜಿ, ಕುರುಮಾಮು ಮುಂತಾದವು.

**ಕವ'ಡೆ ಶಾಸ್ತ್ರ :** ಈ ಶಾಸ್ತ್ರ ಹೇಳುವವರು ಜ್ಯೋತಿಷ್ಯ ಕೇಳಲು ಬಂದವರ ಕೈಯಲ್ಲಿ ಹತ್ತಿಪ್ಪತ್ತು ಕವಡೆಗಳನ್ನು ಕೊಟ್ಟು, ಬಿಡಲು ಹೇಳುತ್ತಾರೆ. ಬಿಟ್ಟ ಕವಡೆಗಳನ್ನು ಎಣಿಸಿ ಸರಿಯೊ ಬೆಸವೊ ಎಂಬುದನ್ನು ಲೆಕ್ಕಾಚಾರಹಾಕಿ ಅದಕ್ಕನುಗುಣವಾಗಿ ಒಳ್ಳೆಯದು ಕೆಟ್ಟದ್ದರ ಬಗ್ಗೆ ಸೂಚನೆ ಕೊಡುತ್ತಾರೆ.

**ಓಲೆ'ಗರಿ ಶಾಸ್ತ್ರ :** ಜ್ಯೋತಿಷಿಯ ಬಳಿ ಓಲೆಗರಿಗಳ ಕಟ್ಟೊಂದು ಇರುತ್ತದೆ. ಒಂದೊಂದು ಗರಿಯಲ್ಲೂ ಬೇರೆ ಬೇರೆ ವಿಷಯಗಳನ್ನು ಕುರಿತು ಬರೆದಿರಲಾಗುತ್ತದೆ. ಜ್ಯೋತಿಷ್ಯ ಕೇಳಲು ಬಂದಾತನ ಮುಂದುಗಡೆ ಈ ಗರಿಗಳ ಕಟ್ಟನ್ನು ಇಟ್ಟು ಆತನ ಕೈಯಲ್ಲಿ ಒಂದು ಕಡ್ಡಿಯನ್ನು ಕೊಟ್ಟು ತನ್ನ ಮನಸ್ಸಿಗೆ ಬಂದ ಕಡೆ ಕಟ್ಟಿನ ಮಧ್ಯೆ ಕಡ್ಡಿಯನ್ನು ತೂರಿಸಲು ಹೇಳಲಾಗುತ್ತದೆ. ಆ ಕಡ್ಡಿ ಎಲ್ಲಿ ತೂರಿರುತ್ತದೋ ಅಲ್ಲಿನ ಗರಿಯನ್ನು ಜೋಯಿಸ ಕೈಗೆತ್ತಿಕೊಂಡು ಅದರಲ್ಲಿ ಬರೆದಿರಬಹುದಾದ ವಿಚಾರವನ್ನು ಓದಿ ಹೇಳಿ ವ್ಯಾಖ್ಯಾನಮಾಡಿ ಶುಭ ಅಶುಭಗಳ ಬಗ್ಗೆ ತಿಳಿವಳಿಕೆ ಕೊಡುತ್ತಾನೆ.

**ಗಿಣಿ ಶಾಸ್ತ್ರ :** ಸಾಮಾನ್ಯವಾಗಿ ಇದೂ ಹೆಚ್ಚು ಕಡಿಮೆ ಓಲೆಗರಿ ವಿಧಾನದಂತೆಯೆ. ಇದರಲ್ಲಿ ಗಿಣಿ ಪ್ರಮುಖ ಪಾತ್ರವಹಿಸುತ್ತದೆ. ಬಂದವರ

ಹಣೆಬರೆಹವನ್ನು ನಿರ್ಧರಿಸುವುದು ಈ ಗಿಣಿಯೆ. ಜ್ಯೋತಿಷಿಯ ಬಳಿ ದಪ್ಪ ಕಾಗದದ ಇಪ್ಪತ್ತು ಮೂವತ್ತು ಲಕೋಟೆಗಳಿರುತ್ತವೆ. ಒಂದೊಂದರಲ್ಲೂ ಒಂದೊಂದು ದೇವರ ಭಾವಚಿತ್ರವಿದ್ದು ಕೆಲವು ವಾಕ್ಯಗಳನ್ನು ಬರೆದಿರುತ್ತಾರೆ. ಒಳಗೆ ಏನು ಬರೆದಿದೆ ಎನ್ನುವುದು ಹೊರಗಿನಿಂದ ಕಾಣುವುದಿಲ್ಲ. ಜ್ಯೋತಿಷ್ಯ ಹೇಳುವ ಕಾಲಕ್ಕೆ ಪಂಜರದಿಂದ ಹೊರಬಂದ ಗಿಣಿ ಹರಡಿರುವ ಲಕೋಟೆಗಳಲ್ಲಿ ಒಂದನ್ನು ತನ್ನ ಕೊಕ್ಕಿನಿಂದ ಎಳೆದು ಪ್ರತ್ಯೇಕಿಸಿಡುತ್ತದೆ. ಅದನ್ನೆತ್ತಿಕೊಂಡು ಅದರಲ್ಲಿನ ಬರೆಹದಂತೆ ಜೋಯಿಸ ಗಿರಾಕಿಗೆ ಭವಿಷ್ಯ ಏನು ಎಂಬುದನ್ನು ಹೇಳುತ್ತಾನೆ. ಈ ಶಾಸ್ತ್ರದಲ್ಲಿ ಲಕೋಟೆಗಳ ಬದಲಾಗಿ ಒಮ್ಮೊಮ್ಮೆ ಓಲೆಗರಿಗಳನ್ನು ಕಾಣಬಹುದು. ವಿಧಾನಮಾತ್ರ ಮೊದಲಿನಂತೆಯೆ. ಓಲೆಗರಿಗಳಾದಲ್ಲಿ ದೇವರ ಪಟವಿರುವುದಿಲ್ಲ.

ಮೇಲೆ ಕಾಣಿಸಿದ ಮೂರು ಬಗೆಯ ಜ್ಯೋತಿಷಿಗಳು ಸಾಮಾನ್ಯವಾಗಿ ಜಾತ್ರೆ, ಸಂತೆ, ಮಾರುಕಟ್ಟೆ, ಚೌಕ ಮುಂತಾಗಿ ಜನಸಂದಣಿ ಇರುವ ಕಡೆ ಕಾಣಸಿಗುತ್ತಾರೆ.

**ಕೊರವಂಜಿ :** ಸಾಮಾನ್ಯವಾಗಿ ಇವರು ಹಳ್ಳಿಗಳಲ್ಲಿ ಹೆಚ್ಚಾಗಿ ಓಡಿಯಾಡುತ್ತಾರೆ. ಕಣಿ ಕೇಳ್ತೀರೇನಮ್ಮ ಕಣಿ ಎಂದು ಸಾರಿಕೊಂಡು ಬೀದಿ ಬೀದಿಗಳಲ್ಲಿ ಸುತ್ತುತ್ತಿರುತ್ತಾರೆ. ಕೇಳಲು ಇಚ್ಛಿಸುವ ಜನರ ಹಸ್ತರೇಖೆಗಳನ್ನು ಗಮನಿಸಿ ಅದಕ್ಕನುಗುಣವಾಗಿ ಆ ವ್ಯಕ್ತಿಯ ಹಿಂದಿನ ಮತ್ತು ಮುಂದಿನ ವಿಚಾರಗಳನ್ನು ವಿವರಿಸುತ್ತಾರೆ.

**ಕುರುಮಾಮ :** ಕೊರವಂಜಿಯ ರೀತಿ ಇವರೂ ಅಲೆಮಾರಿ ಜನ. ಕೈಯಲ್ಲಿ ಏಕನಾದ ಹಿಡಿದುಕೊಂಡು, 'ರಾಮಾನಂದಂ, ರಾಮಾನಂದಂ, ಮಸ್ತಾನನ್ನ ಗುರುನಾದನ್ನ, ಕೊಂಡದೇವತೆ' ಮುಂತಾಗಿ ಹಾಡಿಕೊಂಡು ಬೀದಿ ಬೀದಿ ಸುತ್ತುತ್ತಾರೆ. ಹಸ್ತರೇಖೆಯನ್ನು ಪರೀಕ್ಷಿಸಿ ಜ್ಯೋತಿಷ್ಯ ನುಡಿಯುತ್ತಾರೆ. ನಾವು ಮನಸ್ಸಿನಲ್ಲಿ ಕುರಿತುಕೊಂಡ ವಿಚಾರ ಇಂಥದೇ ಎಂದು ಹೇಳುವ ಚಾಣಾಕ್ಷತನ, ಬುದ್ಧಿವಂತಿಕೆ ಇವರದು (ನೋಡಿ: ಕುರುಮಾಮ).

ಇವಿಷ್ಟು ಮುಖ್ಯವಾಗಿ ಜನಪದ ಜ್ಯೋತಿಷ್ಯದ ಮುಖ್ಯ ಅಂಗಗಳು. ಇವಲ್ಲದೆ ಕಾಡು ಸಿದ್ದ, ಗೊರವ ಮುಂತಾದವರು ಕೂಡ ಭಿಕ್ಷಾಟನೆಯ ವೇಳೆಯಲ್ಲಿ ಆ ಊರಿಗೆ ಅಥವಾ ಯಾವುದೋ ಮನೆಗೆ ಮುಂದೊದಗಬಹುದಾದ ಗಂಡಾಂತರಗಳನ್ನೋ ಶುಭವನ್ನೋ ಸೂಚಿಸುತ್ತ ತಿರುಗುತ್ತಾರೆ. ಕಾಡುಗೊಲ್ಲರು ಕೂಡ ಗಣೆ ಊದಿ ಕಣಿ ಹೇಳುತ್ತಾರೆ. ಇಷ್ಟಲ್ಲದೆ ದೇವರು ಕೆಲವರ ಮೈಮೇಲೆ ಬಂದು ಇಷ್ಟಾನಿಷ್ಟಗಳನ್ನು ಶುಭಾಶುಭ ಫಲಗಳನ್ನು ಹೇಳುವುದೂ ಉಂಟು. *

**ಜನಪದ ದೇವತೆಗಳು :** ಗ್ರಾಮ್ಯ ಜನಾಂಗಗಳಲ್ಲಿ ಆದಿಕಾಲದಿಂದಲೂ ಉಳಿದುಬಂದಿರುವ ದೇವತೆಗಳನ್ನು ಜನಪದ ದೇವತೆಗಳೆಂದು ಕರೆಯಬಹುದು. ಶಿಷ್ಟದೇವತೆಗಳ ಆರಾಧನೆ ಬಳಕೆಗೆ ಬರುವ ಮುನ್ನವೇ ಈ ದೇವತೆಗಳು ಇದ್ದುದಲ್ಲದೆ ಅವುಗಳಲ್ಲಿ ಅನೇಕವಕ್ಕೆ ಮೂಲವೂ ಆಗಿದ್ದುವು. ಸಾಮಾನ್ಯವಾಗಿ ಜನಪದ ದೇವತೆಗಳು ಶಿಷ್ಟ ಜನಾಂಗದಿಂದ ಆರಾಧನೆಗೊಳ್ಳುವುದಿಲ್ಲ. ನಾಗರಿಕರ ದೃಷ್ಟಿಯಲ್ಲಿ ಇವು ಕ್ಷುದ್ರ ದೈವಗಳೆನಿಸಿಕೊಂಡಿವೆ.

ಜನಪದ ದೇವತೆಗಳ ಕಲ್ಪನೆ, ಆರಾಧನೆ, ಆಚರಣೆ ಮುಂತಾದವುಗಳಿಗೆಲ್ಲ ಖಚಿತವಾದ ಹಿನ್ನೆಲೆಯನ್ನು ಒದಗಿಸುವುದು ಕಷ್ಟ. ಏಕೆಂದರೆ ಇವನ್ನು ಕುರಿತ ಯಾವ ಐತಿಹಾಸಿಕ ದಾಖಲೆಗಳೂ ಲಿಖಿತರೂಪದಲ್ಲಿ ದೊರೆಯುವುದಿಲ್ಲ. ಆದ್ದರಿಂದ ಇವುಗಳ ಇತಿವೃತ್ತಗಳಿಗೆಲ್ಲ ಪರಂಪರೆಯಿಂದ ಕಂಠಸ್ಥ ರೂಪದಲ್ಲಿ ಬೆಳೆದುಳಿದು ಬಂದಿರುವ ಜಾನಪದವನ್ನೇ ಮೊರೆಹೋಗಬೇಕಾಗುತ್ತದೆ. ಈ ದೇವತೆಗಳ ಆರಾಧನೆಗೆ ಸಂಬಂಧಿಸಿದಂತೆ ಹೇಳುವ ಸ್ತುತಿ ಗೀತೆಗಳು, ಪುರಾಣ ಕಥೆಗಳು, ಐತಿಹ್ಯಗಳು, ಲಾವಣಿಗಳು ಮಂತಾದವುಗಳಿಂದ ಅವುಗಳಲ್ಲಿ ಅಡಗಿರಬಹುದಾದ ಐತಿಹಾಸಿಕತೆಯನ್ನು ಅಗೆದು ತೆಗೆಯಬಹುದಾಗಿದೆ. ಈ ಬಗೆಯ ಆಧಾರಗಳನ್ನು ಗಮನಿಸಿದಾಗ ವೀರರು, ಪತಿವ್ರತೆಯರು, ಸಾಧುಸಂತರು, ಪಿತೃಗಳು, ಪ್ರಾಣಿಗಳು, ಬಲಿಯಾದವರು, ಆತ್ಮಹತ್ಯೆ ಮಾಡಿಕೊಂಡವರು, ಭೂತಪ್ರೇತಗಳು, ಮರಗಿಡಗಳು, ಗ್ರಹನಕ್ಷತ್ರಗಳು ನದೀನದಗಳು - ಎಲ್ಲವೂ ಜನಪದ ದೇವತೆಗಳಾಗಿರುವುದು ಕಂಡುಬರುತ್ತದೆ.

ಕರ್ನಾಟಕದಲ್ಲಿ ಜನಪದ ದೇವತೆಗಳಿಲ್ಲದ ಗ್ರಾಮವೇ ಇಲ್ಲವೆಂದು ಹೇಳಬಹುದು. ಈ ಎಲ್ಲ ದೇವತೆಗಳಿಗೂ ಪರಂಪರಾನುಗತ ಪದ್ಧತಿ, ನಂಬಿಕೆ, ಆಚರಣೆ ಇದ್ದು ಹಬ್ಬಹರಿದಿನಗಳಲ್ಲಿ ನಡೆಸಿಕೊಂಡು ಬರಲಾಗುತ್ತಿದೆ. ಆದರೂ ಈ ದೇವತೆಗಳಲ್ಲಿ ಹೆಚ್ಚಿನವಕ್ಕೆ ನಿತ್ಯ ಪೂಜೆಯಿಲ್ಲ. ವರ್ಷದ ಯಾವುದೋ ಕೆಲವು ಸಂದರ್ಭಗಳಲ್ಲಿ ಇವುಗಳಿಗೆ ಹಬ್ಬ ಜಾತ್ರೆ ಪೂಜೆ ಇತ್ಯಾದಿಗಳು ನಡೆಯುತ್ತವೆ. ಶಿಷ್ಟ ದೇವತೆಗಳಿಗಿರುವಂತೆ ಈ ದೇವತೆಗಳಿಗೆ ಸುಂದರವಾದ ದೊಡ್ಡ ಆಲಯಗಳೂ ಇರುವುದಿಲ್ಲ. ಊರಿನ ಹೊರಗೋ ಮರದ ಕೆಳಗೋ ಕಣಿವೆಯಲ್ಲೋ ಕೆರೆ ಏರಿಯ ಮೇಲೋ ಗುಡ್ಡದ ಮೇಲೋ ಮರದ ತೋಪಿನಲ್ಲೋ ನಾಲ್ಕು ಒರಟು ಕಲ್ಲಿನ ಚಪ್ಪಡಿಗಳನ್ನು ನಿಲ್ಲಿಸಿ ಕಟ್ಟಿದ ಗುಡಿಗಳೇ ಈ ದೇವತೆಗಳಿಗೆ ಆಲಯಗಳು. ಶಿಷ್ಟದೇವತೆಗಳಂತೆ ಇವು ಎಷ್ಟೋ ವೇಳೆ ಕೆತ್ತನೆಯ ಸುಂದರವಾದ ವಿಗ್ರಹಗಳಾಗಿರದೆ ಒರಟು ಕಲ್ಲುಗಳಾಗಿರುತ್ತವೆ. ಹೀಗೆ ಶಿಷ್ಟದೇವತೆಗಳಿಗಿರುವ ಸವಲತ್ತುಗಳು ಜನಪದ ದೇವತೆಗಳಿಗಿರದಿದ್ದರೂ ಇವು ಗ್ರಾಮದ ಅಧಿಷ್ಠಾತ್ರಿ ದೇವತೆಗಳಾಗಿದ್ದು ಗ್ರಾಮದ ಆಗುಹೋಗುಗಳ ಸರ್ವಾಧಿಕಾರಿಗಳಾಗಿ ಗ್ರಾಮದ ಸಂರಕ್ಷಕರಾಗಿ ಗ್ರಾಮದ ಜನತೆಯ ಭಯಭಕ್ತಿಗಳನ್ನು ಗಳಿಸಿಕೊಂಡಿವೆ.



ದುರ್ಗಾದೇವಿ

ಜನಪದ ದೇವತೆಗಳನ್ನು ಪೂಜಿಸುವ ಅರ್ಚಕರು ಸಾಮಾನ್ಯವಾಗಿ ಶೂದ್ರರೇ ಆಗಿದ್ದರೂ ವಿರಳವಾಗಿ ಬ್ರಾಹ್ಮಣರೂ ವೀರಶೈವರೂ ಅರ್ಚಕರಾಗಿರುವ ಉದಾಹರಣೆಗಳೂ ಇವೆ. ಶಿಷ್ಟದೇವತೆಗಳ ಆರಾಧನೆಗೂ ಜನಪದ ದೇವತೆಗಳ ಆರಾಧನೆಗೂ ಬಹಳಷ್ಟು ವ್ಯತ್ಯಾಸಗಳಿವೆ. ಅವುಗಳಲ್ಲಿ ಮುಖ್ಯವಾದುದು ಬಲಿ. ಜನಪದ ದೇವತೆಗಳು ಬಲಿಯಿಂದ ಸುಪ್ರೀತವಾಗುತ್ತವೆ ಎಂಬ ನಂಬಿಕೆ ಇದೆ. ಈ ದೇವತೆಗಳ ಅಲಂಕಾರ

ಇತ್ಯಾದಿಗಳೂ ತೀರ ವಿಲಕ್ಷಣವಾಗಿರುವುದಲ್ಲದೆ ಭಯ ಹುಟ್ಟಿಸು ವಂತಿರುತ್ತವೆ. ಸಾಮಾನ್ಯವಾಗಿ ಕೋಳಿ, ಕುರಿ, ಆಡು, ಹಂದಿ, ಕೋಣ - ಈ ಪ್ರಾಣಿಗಳನ್ನು ಬಲಿಕೊಟ್ಟು, ಬೇವಿನಸೊಪ್ಪು, ತಾಳೆಹೂ ಹೊಂಬಾಳೆಗಳಿಂದ ಅಲಂಕರಿಸಿ, ಎಣ್ಣೆಮಜ್ಜನ ಮಾಡಿಸಿ, ತಂಬಿಟ್ಟು ಎಳನೀರು ಮಡೆಯನ್ನ ರಕ್ತದನ್ನ ಅರಿಸಿನದನ್ನ ಕುಂಕುಮದನ್ನ ಮೊಸರನ್ನ ಎಳ್ಳುಂಡೆ ಮುಂತಾದ ತಳಿಗೆ ನೀಡಿ - ಈ ದೇವತೆಗಳನ್ನು ಆರಾಧಿಸುತ್ತಾರೆ. ಜನಪದ ದೇವತೆಗಳಿಗೆ ಪ್ರಾಣಿಬಲಿ ಕೊಡುತ್ತಿದ್ದಂತೆ ನರಬಲಿಯನ್ನೂ ಕೊಟ್ಟ ಉದಾಹರಣೆಗಳೂ ಇವೆ. ನರಬಲಿಯನ್ನು ಕೇಳಿದ ಕೆಲವು ದೇವತೆಗಳ ಗುಡಿಯನ್ನೇ ಕಲ್ಲುಮಣ್ಣುಗಳಿಂದ ಮುಚ್ಚಿದ ಉದಾಹರಣೆಗಳು ಕಾಣದೊರೆಯುತ್ತವೆ. ಈಗ ನರಬಲಿ ಇಲ್ಲದೆ ಇದ್ದರೂ ಪ್ರಾಣಿಗಳನ್ನು ಬಲಿಕೊಡುವ ಮತ್ತು ಹೆಂಡ, ಭಂಗಿಯಿಂದ ದೇವತೆಗಳನ್ನು ಸಂತೃಪ್ತಿಪಡಿಸುವ ಸಂಪ್ರದಾಯಗಳು ಇನ್ನೂ ಜೀವಂತವಾಗಿರುವುದನ್ನು ನೋಡಬಹುದಾಗಿದೆ.



ಮಾರಿಕಾಂಬಾ, ಶಿರಸಿ

ಜನಪದ ದೇವತೆಗಳಿಗೆ ಒಪ್ಪಿಸುವ ಹರಕೆಗಳೂ ಸೇವೆಗಳೂ ತೀರ ವಿಚಿತ್ರವಾದವು. ದಿಂಡುರುಳು ಸೇವೆ, ಹೆಜ್ಜೆ ನಮಸ್ಕಾರ ಮೊದಲಾದ ಸರಳ ಸೇವೆಗಳಲ್ಲದೆ ಮೈಗೆಲ್ಲ ದಬ್ಬಳದ ಗಾತ್ರ ಸರಳುಗಳನ್ನು ಚುಚ್ಚಿಕೊಂಡು ತಮ್ಮಟೆ ಹೊಡೆಸುತ್ತ ಅದರ ಗತ್ತಿಗೆ ತಕ್ಕಂತೆ ಕುಣಿದಾಡುತ್ತ ಹರಕೆ ಒಪ್ಪಿಸುವ ಸರಳು ಪವಾಡದ ಸೇವೆ, ದಬ್ಬಳದಂಥ ಸರಳನ್ನು ಬಾಯಿಗೆ ಚುಚ್ಚಿಕೊಳ್ಳುವ ಬಾಯಿ ಬೀಗದ ಸೇವೆ, ಬೆಂಕಿಯ ಮೇಲೆ ನಡೆಯುವ ಕೆಂಡಕೊಂಡ ಸೇವೆ (ಕೊಂಡ ಹಾಯುವುದು), ಎಲ್ಲಮ್ಮನಿಗೆ ಹರಕೆ ಹೊತ್ತವರು ನಡೆಸಿಕೊಂಡು ಬಂದಿರುವ ಗಂಡಸು ಹೆಂಗಸಾಗುವ, ಹೆಂಗಸುಗಂಡಸಾಗುವ ಜೋಗಿತಿ ಸಂಪ್ರದಾಯ (ನೋಡಿ) ಇತ್ಯಾದಿ ಇನ್ನೂ ಕೆಲವು ಭಯಂಕರ ಸೇವೆಗಳೂ ಜನಪದ ದೇವತೆಗಳಿಗೆ ಸಲ್ಲುತ್ತವೆ. ಜನಪದ ಧಾರ್ಮಿಕ ವೃತ್ತಿ ಗಾಯಕರೆಲ್ಲರೂ ತಮ್ಮ ತಮ್ಮ ದೇವರುಗಳಿಗೆ ಗುಡ್ಡರಾಗಿದ್ದುಕೊಂಡು ಆ ದೇವತೆಯನ್ನು ಭಕ್ತಿಯಿಂದ ಪೂಜಿಸಿಕೊಂಡು ಬರುತ್ತಾರೆ. ಇವಲ್ಲದೆ ಅನೈತಿಕವೆನಿಸಿದರೂ ದೇವರ ಹೆಸರಿನಲ್ಲಿ ಕೆಲವು ಹೆಂಗಸರು ಸಂತಾನಾಪೇಕ್ಷೆಯಿಂದ ಜಾತ್ರೆಪರಿಸೆಗಳಲ್ಲಿ ಪರಪುರುಷನನ್ನು ಕೂಡುವ ತೇರಿನ ಪಟ್ಟಡಿಸೇವೆ, ತಾಳೆಮೆಳೆ ಸೇವೆ, ಹೊಳೆಕರೆ ಸೇವೆಗಳೂ ಇವೆಯಂತೆ. (ನೋಡಿ: ದೇವರ ಸೇವೆಗಳು).

ಶಿಷ್ಟಪುರಾಣಗಳ ತ್ರಿಮೂರ್ತಿಗಳು ಸೃಷ್ಟಿಸ್ಥಿತಿಲಯಗಳ ಪ್ರತೀಕ ವೆನಿಸಿರುವಂತೆ ಜನಪದ ದೇವತೆಗಳು ಈ ಬಗೆಯ ವಿಶ್ವದೇವತೆಗಳಾಗಿರದೆ ವಿಶ್ವದ ವ್ಯಾಪಕತೆಗೆ ಸಂಬಂಧಿಸಿದ ಸಂಕೇತಗಳೂ ಆಗಿರದೆ ಅವು ಗ್ರಾಮಜೀವನದ ಪ್ರತೀಕಗಳಾಗಿ ಕಾಲರ ಸಿಡುಬು ದಡಾರ ಪ್ಲೇಗು ಹಾಗೂ ದನಕರುಗಳಿಗೆ ಬರುವ ರೋಗಗಳ ಅಧಿದೇವತೆಗಳಾಗಿ ಕಾಣಿಸಿಕೊಳ್ಳುತ್ತವೆ.

ತಮ್ಮ ಶಕ್ತಿಯ ಪರಿಮಿತಿಯೊಳಗೇ ಪ್ರಭಾವ ಬೀರುವ ಜನಪದ ದೇವತೆಗಳಲ್ಲಿ ಹೆಚ್ಚಿನವು ಹೆಣ್ಣುದೇವತೆಗಳು. ಗಂಡುದೇವತೆಗಳು ಬಂದರೂ ಅವು ಹೆಣ್ಣುದೇವತೆಗಳ ಸಹೋದರರಾಗಿಯೋ ಗಂಡಂದಿರಾಗಿಯೋ ಕಾಣಿಸಿಕೊಳ್ಳುತ್ತವೆ. ಆರ್ಯ ದೇವತೆಗಳಲ್ಲಿ ಈಶ್ವರ, ವಿಷ್ಣು ಬ್ರಹ್ಮರಾದಿಯಾಗಿ ಗಂಡುದೇವತೆಗಳ ಪ್ರಾಬಲ್ಯವನ್ನು ಹೆಚ್ಚಾಗಿ ಕಾಣುತ್ತೇವೆ. ಆದರೆ ಜನಪದ ದೇವತೆಗಳಲ್ಲಿ ಶಿಷ್ಟದೇವತೆಯಾಗಿ ಪರಿವರ್ತನೆ ಹೊಂದಿರುವ ಈಶ್ವರನ ಮಡದಿ ಪಾರ್ವತಿಯೇ ಕಾಳಿ ಮುಂತಾದ ಹೆಸರುಗಳಲ್ಲಿ ಜನಪದ ದೇವತೆಯಾಗಿದ್ದಾಳೆ. ಅಥವಾ ಎಲ್ಲ ಹೆಣ್ಣುದೇವತೆಗಳಿಗೂ ಆಧಾರಭೂತಳಾಗಿದ್ದಾಳೆ. ಇದಕ್ಕೆ ವಿದ್ವಾಂಸರನೇಕರು ಬೇರೆ ಬೇರೆ ಕಾರಣಗಳನ್ನು ಕೊಡಲು ಪ್ರಯತ್ನಿಸಿದ್ದರೂ ಅವು ಅಷ್ಟು ತರ್ಕಸಮ್ಮತವಾಗಿಲ್ಲವೆಂದೇ ಹೇಳಬಹುದು. ಆದರೂ ಅವರ ಅಭಿಪ್ರಾಯದಲ್ಲಿ ಪ್ರಪಂಚದಾದ್ಯಂತ ಯುದ್ಧ ದೇವತೆಗಳೆಲ್ಲ ಗಂಡೇ ಆಗಿದ್ದು ಬೇಸಾಯ ದೇವತೆಗಳು ಹೆಣ್ಣು ದೇವತೆಗಳೆಂದು ಅಭಿಪ್ರಾಯಪಡುತ್ತಾರೆ. ಜನಪದ ಗಂಡು ದೇವತೆಗಳಲ್ಲಿ ಮಾದೇಶ್ವರ, ಮಂಟೇಸ್ವಾಮಿ, ಜೋಕುಮಾರ, ಮುಡುಕುತೊರೆ ಮಲ್ಲಪ್ಪ, ಹನುಮಪ್ಪ ಮುಂತಾದ ದೇವತೆಗಳು ಸ್ವತಂತ್ರ ಅಸ್ತಿತ್ವವನ್ನು ಗಳಿಸಿಕೊಂಡಿವೆ.

ಜನಪದ ದೇವತೆಗಳನ್ನು ಪ್ರಧಾನವಾಗಿ ಗ್ರಾಮದೇವತೆ, ಸ್ಥಾನದೇವತೆ, ಕುಲದೇವತೆ, ಇಷ್ಟದೇವತೆ, ಗೃಹದೇವತೆ ಎಂಬ ಐದು ಗುಂಪುಗಳಾಗಿ ವಿಂಗಡಿಸಿಕೊಳ್ಳಬಹುದು. ಈ ಸಂಖ್ಯೆಯನ್ನು ವಿಸ್ತರಿಸಲೂಬಹುದು. ಆದರೂ ಈ ಬಗೆಯ ವಿಭಜನೆಯಿಂದ ಕೆಲಮಟ್ಟಿನ ತೊಡಕುಗಳು ಉಳಿದೇ ಉಳಿಯುವುದರಿಂದ ಈ ಕ್ರಮವೇ ಸರಿಯೆಂದು ಹೇಳುವಂತಿಲ್ಲ. ಏಕೆಂದರೆ ಕೆಲವೊಮ್ಮೆ ಒಂದು ಗ್ರಾಮದೇವತೆ ಕೆಲವರಿಗೆ ಮನೆದೇವರಾಗಿರಬಹುದು; ಒಬ್ಬರ ಇಷ್ಟದೇವತೆ ಒಂದು ಸ್ಥಾನದೇವತೆಯಾಗಿರಬಹುದು. ಒಂದು ಸ್ಥಾನದೇವತೆ ಕೆಲವರ ಕುಲದೇವತೆಯೂ ಆಗಿರಬಹುದು.

ಸಾಮಾನ್ಯವಾಗಿ ಪ್ರತಿಯೊಂದು ಗ್ರಾಮಕ್ಕೂ ಒಂದು ಗ್ರಾಮದೇವತೆ ಇರುತ್ತದೆಯಾದರೂ ಗ್ರಾಮದೇವತೆ ಇಲ್ಲದ ಗ್ರಾಮಗಳೂ ಉಂಟು. ಗ್ರಾಮದೇವತೆಗಳೆಲ್ಲ ಹೆಣ್ಣುದೇವತೆಗಳೇ ಆಗಿದ್ದರೂ ಕೆಲವು ಕಡೆ ಬಸವ, ಹನುಮ, ಭೈರವ, ಬೀರಪ್ಪ, ಶಿವ ಮುಂತಾದ ಗಂಡು ದೇವತೆಗಳೂ ಗ್ರಾಮದೇವತೆಗಳಾಗಿರುವುದು ಕಂಡುಬಂದಿದೆ. ಗ್ರಾಮದೇವತೆಗಳು ಗ್ರಾಮದ ಸಂರಕ್ಷಕ ಶಕ್ತಿಗಳು. ಅವು ರೋಗರುಜಿನ ಮೊದಲಾದ ಅನಿಷ್ಟಗಳು ಗ್ರಾಮವನ್ನು ಪ್ರವೇಶಿಸದಂತೆ ಕಾಯ್ದುಕೊಂಡಿರುತ್ತವೆ. ಅದಕ್ಕಾಗಿಯೆ ಗ್ರಾಮದೇವತೆಗಳ ಗುಡಿ ಊರಿನ ಹೆಬ್ಬಾಗಿಲ ಬಳಿಯಲ್ಲೇ ಇರುತ್ತವೆ. ಪರಸ್ಥಳದಿಂದ ವಲಸೆ ಬಂದ ಕ್ರೂರ ದೇವತೆಗಳು ಗ್ರಾಮವನ್ನು ಹೊಗಲು ಪ್ರಯತ್ನಿಸಿದಾಗ ಗ್ರಾಮದೇವತೆಗಳು ಅವನ್ನು ಹೊಡೆದೋಡಿಸುತ್ತವೆಯಂತೆ. ಊರಿನ ಜನ ಗ್ರಾಮದೇವತೆಯ ಹಬ್ಬ ಮಾಡದೆ ಅಲಕ್ಷ್ಯ ಮಾಡಿದಾಗ ಕೂಗುಮಾರಿ ಊರನ್ನು ನಟ್ಟಿರುಳಿನಲ್ಲಿ ಪ್ರವೇಶಿಸಿ ಕಾಕುಹಾಕುತ್ತ ಬೀದಿ ಬೀದಿಗಳಲ್ಲೆಲ್ಲ ಓಡಾಡುತ್ತಿರುತ್ತಾಳಂತೆ. ಇವಳ ದನಿಯನ್ನು ಕೇಳಿದವರು ಓಗೊಟ್ಟರೆ ಸತ್ತುಹೋಗುತ್ತಾರಂತೆ. ಅದಕ್ಕಾಗಿ ಹಳ್ಳಿಯ ಜನ ಈ ಮಾರಿ ತಮ್ಮ ಮನೆಯೊಳಕ್ಕೆ ಬರದಿರಲೆಂದು ಬಾಗಿಲ ಮೇಲೆ ನಾಳೆ ಬಾ ಎಂದು ಬರೆದಿರುತ್ತಾರೆ. ಕೂಗುಮಾರಿ ಗ್ರಾಮದೇವತೆಯ ತಂಗಿಯೋ ಇನ್ನಾವುದಾದರೂ ಸಂಬಂಧದವಳೋ ಆಗಿರುತ್ತಾಳೆ. ಗ್ರಾಮದೇವತೆಯ ಪರವಾಗಿ ಇವಳು ಊರಿನ ಜನರನ್ನು ಎಚ್ಚರಿಸಿ ಹಬ್ಬ ಮಾಡಲು ಸೂಚನೆ ಕೊಡುತ್ತಾಳೆಂಬ ನಂಬಿಕೆಯುಂಟು. ಗ್ರಾಮದೇವತೆ ರೋಗದೇವತೆಗಳನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಂಡಿರುತ್ತಾಳೆ.

ಸಾಧಾರಣವಾಗಿ ಪ್ರತಿ ಗ್ರಾಮದವರೂ ತಮ್ಮ ಗ್ರಾಮದೇವತೆಗೆ ಹರಕೆ ಮಾಡಿಕೊಳ್ಳುವುದು ವಾಡಿಕೆ. ಈ ವಿಷಯದಲ್ಲಿ ಗ್ರಾಮದವರು ಬಹುಮಟ್ಟಿಗೆ ಕಟ್ಟುನಿಟ್ಟು. ಗ್ರಾಮದೇವತೆ ಒಂದು ಗ್ರಾಮಕ್ಕೆ ಸೇರಿದ್ದರಿಂದ ಅದರ ಅನುಗ್ರಹ ಆ ಗ್ರಾಮದವರಿಗೇ ಮೀಸಲು. ಗ್ರಾಮದವರೂ ಅವಳನ್ನೇ ನಂಬಿ ಸರ್ವಕ್ಕೂ ಅವಳನ್ನೇ ಯಾಚಿಸಿ ಪಡೆಯಬೇಕೆಂಬುದು ಸಾಮಾನ್ಯ ನಿಯಮ. ಆದರೆ ಕೆಲವೊಮ್ಮೆ ತನ್ನೂರ ಗ್ರಾಮದೇವತೆಗೆ ಮಾಡಿಕೊಂಡ ಹರಕೆ ವಿಫಲವಾದರೆ ಬೇರೆ ಊರಿನ ಮತ್ತೊಂದು ದೇವತೆಗೆ ಹರಕೆ ಹೊರುತ್ತಾರೆ. ಹೀಗೆ ಮಾಡುವುದು ಕೇವಲ ಅಪರೂಪವಾದ ಮತ್ತು ವಿಶೇಷವಾದ ಸಂದರ್ಭಗಳಲ್ಲಿ ಮಾತ್ರ. ಸಾಮಾನ್ಯ ಕಾಲದಲ್ಲಿ ಊರ ದೇವರನ್ನು ಬಿಟ್ಟು ಇತರ ದೇವರಿಗೆ ಹರಕೆ ಹೊತ್ತರೆ ಊರಿನವರು ಸುಮ್ಮನಿರುವುದಿಲ್ಲ. ಹಾಗೆಯೇ ಬೇರೆ ಊರಿನವರೂ ತಮ್ಮೂರ ದೇವರಿಗೆ ಬಂದು ಹರಕೆ ಹೊತ್ತರೆ ಸಾಧಾರಣವಾಗಿ ಸುಮ್ಮನಿರುವುದಿಲ್ಲ. ಆದರೆ ಒಂದೂರಿನ ದೇವರಿಗಿಂತ ಮತ್ತೊಂದೂರಿನ ದೇವರು ಹೆಚ್ಚು ಪ್ರಬಲ, ಫಲದಾಯಕ ಎಂದು ತೋರಿದರೆ ಆ ದೇವರಿಗೆ ನಡೆದುಕೊಳ್ಳುತ್ತಾರೆ.



ನಾಡದೇವತೆ ಶಾಂತಾದುರ್ಗ, ಅಂಕೋಲ

ಕರ್ನಾಟಕದ ಹೆಚ್ಚು ಕಡೆಗಳಲ್ಲಿ ಮಾರಮ್ಮ ಗ್ರಾಮ ದೇವತೆಯಾಗಿದ್ದಾಳೆ. ಮಾರಿಗೆ ಕಬ್ಬಾಳದ ದುರುಗಮ್ಮ, ಏಳು ನಾಲಗೆ ದುರಗಿ, ಹಟ್ಟಿ ಲಕ್ಕಮ್ಮ, ಹಟ್ಟಿ ಕಲ್ಲಮ್ಮ, ಬಾಚಳ್ಳಿ ಅಮ್ಮ, ಕಿಕ್ಕೇರಿ ಅಮ್ಮ, ಬೆಟ್ಟದ ಚಿಕ್ಕಮ್ಮ, ಕರುಳಕೆಲ್ಲ ದೇವಮ್ಮ, ಬೆಟ್ಟಳ್ಳಿ ಮಾರಮ್ಮ, ಕಲ್ಲೂರ ಮಲ್ಲುಗದೇವಿ, ಮುಡುಗುಂಡದ ಮುಳ್ಳಾಚೆ, ಬನ್ನೂರು ಹ್ಯಾಮಾದ್ರಿ, ಮೂಗೂರು ತಿಬ್ಬಾದೇವಿ, ಉತ್ತನಹಳ್ಳಿ ಉರುಕಾಡಿ, ಗೊಂಡನಹಳ್ಳಿ ಗೊತ್ತುಕಾಡಿ, ಪಿರಿಯಾಪಟ್ಟಣದ ಬರಿಮುಷ್ಣಿ, ಎಲ್ಲಮ್ಮ, ಅಗರ ದಿಂಡಿನ ಮಾರಿ, ಕುಂಡ್ಮಾರಿ, ಕಿವುಡ್ಮಾರಿ, ಕುಂಟ್ಮಾರಿ, ಬೆಟ್ಟದ ಚಾಮುಂಡಿ, ಬೆಂಕಿಮಾರಿ, ದೂರದ ದುಬ್ಲಮ್ಮ, ಕೊಡಗಿನ ಮಮ್ಮಾಯಿ, ಮೂಕಳ್ಳಿ ಮಾಮಾರಿ, ಬಲಮಂಕಾಳಿ, ಉತ್ತನಳ್ಳಿ ಮಾರಿ, ಹೊನ್ನಾಲದಮ್ಮ, ಬಾಣಂತಮ್ಮ, ಬಿಸಲಾಳಿಯಮ್ಮ, ಹಾಸನಮ್ಮ, ಮದ್ದೂರಮ್ಮ, ಅಂಕಾಲಮ್ಮ ಮುಂತಾದ ಬೇರೆ ಬೇರೆ ಹೆಸರುಗಳಿವೆ.

ಮಂಟೇಸ್ವಾಮಿ ಮತ್ತು ಮಾದೇಶ್ವರರು ಈ ಮಾರಿಯರನ್ನು ಕಟ್ಟಿ ಆಳುತ್ತಿದ್ದರಂತೆ. ಅವರ ಅಪ್ಪಣೆಯ ಮೇರೆಗೆ ಇವರೆಲ್ಲ ಬೇರೆ ಬೇರೆ ಊರುಗಳನ್ನು ಸೇರಿ ಗ್ರಾಮದೇವತೆಗಳಾದರಂತೆ. ಈ ಮಾರಿಯರೆಲ್ಲ ಉತ್ತರದಿಂದ ಬಂದವರೆಂಬುದು ಅತ್ಯಂತ ಪ್ರಚಲಿತವಾದ ಆಶಯ. ಇವರ ಸಂಖ್ಯೆ ಪ್ರಾರಂಭದಲ್ಲಿ ಏಳು ಇದ್ದು ಅನಂತರದಲ್ಲಿ ಏಳುನೂರು ಏಳು ಸಾವಿರ ಆಗಿದೆ.

ಸ್ಥಾನದೇವತೆಗಳು ಒಂದು ಸುತ್ತಿನ ಹತ್ತಾರು ಊರುಗಳ ಮೇಲೆ ಪ್ರಭಾವ ಬೀರುತ್ತವೆ. ಇವನ್ನು ಸ್ಥಳದೇವತೆಗಳೆಂದೂ ಕರೆಯುತ್ತಾರೆ. ಸ್ಥಾನದೇವತೆಗಳು ಹತ್ತಾರು ಹಳ್ಳಿಗಳ ದೇವತೆಗಳನ್ನು ಆಳುವಂಥವು. ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಭೈರವ, ಸಿದ್ಧಪ್ಪಾಜಿ, ರಾಚಪ್ಪಾಜಿ, ಕೊಂಗಳ್ಳಿಮಲ್ಲಮ್ಮ, ಮುಡುಕುತೊರೆ ಮಲ್ಲಮ್ಮ, ಬೆಟ್ಟದ ಚಾಮುಂಡಿ, ಸವದತ್ತಿ ಎಲ್ಲಮ್ಮ, ತುಳಜಾಪುರದ ಭವಾನಿ, ಕೊಲ್ಲೂರು ಮೂಕಾಂಬಿಕೆ, ಶಿರಸಿ ಮಾರಿಕಾಂಬೆ, ಮಳಲಿ ಗಿಡ್ಡಮ್ಮ, ಅಂಗಡಿ ವಸಂತಮ್ಮ, ಧರ್ಮಸ್ಥಳದ ಮಂಜುನಾಥ, ಬಿಳಿಗಿರಿರಂಗ ಮುಂತಾದ ದೇವತೆಗಳು ಈ ಗುಂಪಿನಲ್ಲಿ ಸೇರುತ್ತವೆ. ಇವುಗಳ ಸ್ಥಾನಮಾನಗಳು ಇನ್ನಿತರ ದೇವತೆಗಳಿಗಿಂತ ಹೆಚ್ಚಿನವಾಗಿರುತ್ತವೆ.

ಪ್ರಾಚೀನ ಬಡುಕಟ್ಟಿನ ಜನಗಳಲ್ಲಿ ರಕ್ತಸಂಬಂಧಕ್ಕನುಗುಣವಾಗಿ ಹಲವಾರು ಗುಂಪುಗಳು ಕಂಡುಬರುತ್ತವೆ. ಈ ಪ್ರತಿಯೊಂದು ಗುಂಪೂ ಪ್ರಾಣಿಗಳನ್ನಾಗಲಿ ಸಸ್ಯಗಳನ್ನಾಗಲಿ ಗ್ರಹನಕ್ಷತ್ರಗಳನ್ನಾಗಲಿ ತಮ್ಮ ಕುಲದೈವವೆಂದು ಪರಿಗಣಿಸಿ ತಮ್ಮ ವಂಶದ ಮೂಲವನ್ನು ಅವುಗಳಿಗೆ ಆರೋಪಿಸುವ ಪದ್ಧತಿ ಪ್ರಪಂಚದಾದ್ಯಂತ ಕಂಡುಬಂದಿದೆ. ಮುಂದುವರಿದ ಜನಾಂಗಗಳಲ್ಲೂ ಈ ಪದ್ಧತಿ ಇದೆ ಎಂಬುದು ನಮ್ಮಲ್ಲಿ ಕಂಡುಬರುವ ಆನೆಗುಲ, ಬೆಳ್ಳಿಗುಲ ಎನ್ನುವ ಮಾತುಗಳಿಂದ ವ್ಯಕ್ತವಾಗುತ್ತದೆ. ತಾವು ಆರಾಧಿಸುವ ವಸ್ತುವನ್ನು ಗೋತ್ರ ಎಂದು ಕರೆಯಲಾಗಿದೆ. ಗೋತ್ರವೆಂದರೆ ತಮ್ಮ ಬುಡಕಟ್ಟಿನ ಮೂಲಪುರುಷನೆಂದೂ ತಮ್ಮ ಕುಲದೇವತೆಯೆಂದೂ ತಿಳಿಯುವವರಿದ್ದಾರೆ. ತೋಡರು ತಮ್ಮ ಕುಲದೇವರು ಎಮ್ಮೆ ಎಂದೂ ಭಾರತದಲ್ಲಿರುವ ಕಾಡುಜನ ಸರ್ಪವನ್ನು ತಮ್ಮ ಕುಲದೇವರೆಂದೂ ಕರೆದುಕೊಳ್ಳುತ್ತಾರೆ. ಕುಲದೇವತೆಯ ಅತೃಪ್ತಿ ಮತ್ತು ಕೋಪಕ್ಕೆ ತುತ್ತಾಗಬಾರದೆಂದು ಅವುಗಳ ಬಗೆಗಿನ ಭಯಭಕ್ತಿಯಿಂದ ಹಲವಾರು ಬಹಿಷ್ಕಾರಾಜ್ಞೆಗಳನ್ನು ರೂಢಿಗೆ ತಂದಿರುವುದನ್ನು ತೋಡರು ಎಮ್ಮೆಯ ಬಗೆಗೆ ತಳೆದಿರುವ ವಿಚಿತ್ರ ನಿಲುವುಗಳು ಸಮರ್ಥಿಸುತ್ತವೆ. ಹೀಗಾಗಿ ಆದಿಜನಾಂಗದವರು ಯಾವುದಾದರೂ ಒಂದು ಪ್ರಾಣಿಯನ್ನೋ ಅಥವಾ ವಸ್ತುವನ್ನೋ ತಮ್ಮ ಕುಲದ ಸಂಕೇತವೆಂದು ಭಾವಿಸಿ, ಅದನ್ನು ಪವಿತ್ರ ಹಾಗೂ ಪೂಜ್ಯವೆಂದು ಪರಿಗಣಿಸುತ್ತಿದ್ದರು. ಈ ಪದ್ಧತಿ ಪರಂಪರೆಯಿಂದ ಇಂದಿಗೂ ಹಲವು ಕಡೆಗಳಲ್ಲಿ ಮುಂದುವರಿದುಕೊಂಡು ಬಂದಿದೆ.

ಇಷ್ಟದೇವತೆಗಳನ್ನು ಜನಪದದಲ್ಲಿ ಮೊರೆಬಿದ್ದ ದೇವರು ಎಂದು ಕರೆಯುತ್ತಾರೆ. ಯಾವುದಾದರೂ ಕಷ್ಟಸಂಕಷ್ಟಗಳು ಒದಗಿ ಬಂದಾಗ ಗೃಹದೇವತೆಯಾಗಲಿ ಕುಲದೇವತೆಯಾಗಲಿ ಸ್ಥಾನದೇವತೆಯಾಗಲಿ ಗ್ರಾಮದೇವತೆಯಾಗಲಿ ರಕ್ಷಿಸಲು ಸಮರ್ಥ ಎನಿಸದೆ ಹೋದಾಗ ಇವುಗಳಿಗಿಂತಲೂ ಬೇರೆ ಯಾವುದಾದರೂ ದೊಡ್ಡ ದೇವರನ್ನು ಹುಡುಕಬೇಕಾಗುತ್ತದೆ. ಇಂಥ ಸಂದರ್ಭಗಳಲ್ಲಿ ತಮಗೆ ಬಂದಿರುವ ಕಷ್ಟವನ್ನು ಪರಿಹರಿಸಿದರೆ ಪ್ರತಿವರ್ಷವೂ ಹರಕೆ ಸಲ್ಲಿಸುವುದಾಗಿ ಬೇರೆ ಯಾವುದಾದರೂ ಪ್ರಸಿದ್ಧ ದೇವತೆಗೆ ಮೊರೆಹೋಗುತ್ತಾರೆ. ಕಷ್ಟ ಪರಿಹಾರವಾದರೆ ಆ ಹೊಸ ದೇವತೆ ಅವರ ಇಷ್ಟದೇವತೆಯಾಗುತ್ತದೆ.

ಗೃಹದೇವತೆಗಳನ್ನು ಮಂದೇವರು (ಮನೆದೇವರು) ಎಂದು ಕರೆಯುತ್ತಾರೆ. ಪ್ರತಿಯೊಂದು ಮನೆಯೂ ಪವಿತ್ರ ದೇವಾಲಯ ಎಂದು ಪರಿಗಣಿಸಲಾಗುತ್ತದೆ. ಮನೆಯಲ್ಲಿ ತೆಂಗಿನಕಾಯಿ ಮಡಗಿರುವ ಕಳಸವನ್ನು ಪೂಜಿಸಿ ಗೃಹಲಕ್ಷ್ಮೀ ಪೂಜೆಯನ್ನು ಮಾಡುತ್ತಾರೆ. ಗೃಹಪ್ರವೇಶದ ಸಂದರ್ಭದಲ್ಲೂ ಈ ಪೂಜೆ ಅತ್ಯಂತ ಶಾಸ್ತ್ರೀಯವಾಗಿ ನಡೆಯುತ್ತದೆ. ಜನಪದರಿಗೆ ಲಕ್ಷ್ಮೀ ಮಾತ್ರವಲ್ಲದೆ ಬೇರೆ ಬೇರೆ ಮಂದೇವರುಗಳು ಇರುತ್ತವೆ. ಸಾಮಾನ್ಯವಾಗಿ ಮನೆದೇವರನ್ನು ಹೊಂದಿರುವವರು ತಮ್ಮ ಕುಟುಂಬವನ್ನು ಆ ದೇವರ ಹೆಸರಿನಲ್ಲಿ ಗುರುತಿಸಿಕೊಳ್ಳುವುದು ವಾಡಿಕೆ ಉದಾಹರಣೆಗೆ ತಿರುಪತಿ ತಿಮ್ಮಪ್ಪನ ಮನೆದೇವರಾಗಿದ್ದರೆ ಆ

ಕುಟುಂಬದವರು ತಮ್ಮನ್ನು ತಿರುಪತಿ ತಿಮ್ಮಪ್ಪನ ಒಕ್ಕಲಿನವರು ಎಂದು ಕರೆದುಕೊಂಡರೆ ಮಳಲಿ ಗಿಡ್ಡಮ್ಮ ಮನೆದೇವರಾಗಿದ್ದವರು ತಮ್ಮನ್ನು ಮಳಲಿಗಿಡ್ಡಿ ಒಕ್ಕಲೆಂದು ಕರೆದುಕೊಳ್ಳುತ್ತಾರೆ.



ಹಳೆಮಾರಿಯಮ್ಮ, ಕಾಪು

ಜನಪದ ದೇವತೆಗಳಲ್ಲಿ ರೋಗದೇವತೆಗಳು ಅತ್ಯಂತ ಪ್ರಭಾವಿ ದೈವಗಳಾಗಿವೆ. ಈ ದೇವತೆಗಳಲ್ಲಿ ಐತ್ಲಮ್ಮ, ಪ್ಲೇಗಮ್ಮ, ಸೀತಾಳಮ್ಮ, ಕಾಲರಮ್ಮ, ದಡಾರಮ್ಮ, ಸಿಡುಬಮ್ಮ ಮುಂತಾದವರು ಸುಪ್ರಸಿದ್ಧರು. ಇತ್ತೀಚೆಗೆ ಏಡ್ಸ್‌ಅಮ್ಮ ಎಂಬ ಹೊಸ ದೇವತೆಯು ಸೇರ್ಪಡೆಗೊಂಡಿದೆ. ಗ್ರಾಮದೇವತೆ ದುರ್ಬಲಳಾದಾಗ ಇವರು ಊರನ್ನು ಪ್ರವೇಶಿಸುತ್ತಾರಂತೆ. ಇವರು ಒಂದು ಕಿವಿಯನ್ನು ಹಾಸಿಕೊಂಡು ಒಂದು ಕಿವಿಯನ್ನು ಹೊದ್ದುಕೊಂಡು ಕಗ್ಗತ್ತಲ ಗವಿಗಳಲ್ಲಿ ಮಲಗಿರುತ್ತಾರಂತೆ. ಹಸಿವಿನಿಂದ ತತ್ತರಿಸಿದಾಗ ಕಾಕುಹಾಕುತ್ತ ಗುಡ್ಡದ ಗಾತ್ರ ಕಣ್ಣುಗಳಲ್ಲಿ ಕಿಡಿಕಾರುತ್ತ ಕೊಳಗದ ಅಗಲ ಬಾಯಿ ಬಿಟ್ಟುಕೊಂಡು ಎಡಗೈಯಲ್ಲಿ ಮೊರಹಿಡಿದುಕೊಂಡು ಮಾನವರನ್ನೆಲ್ಲ ತೊಡೆದು ತಿಪ್ಪೆಗೆಸಯಲು ಬರುತ್ತಾರಂತೆ. ಕಾಯಿಲೆಗಳ ರೂಪದಲ್ಲಿ ಮಾನವರನ್ನು ಇವರು ಕೊಲ್ಲುತ್ತಾರೆ. ಇವರಿಗೆ ಕೋಳಿ, ಕುರಿ, ಆಡು, ಹಂದಿ, ಕೋಣಗಳನ್ನು ಬಲಿಕೊಟ್ಟು ಜನ ತಮ್ಮ ಗ್ರಾಮವನ್ನು ಉಳಿಸಿಕೊಳ್ಳುತ್ತಾರೆ. ಸಣ್ಣ ಪುಟ್ಟ ಚಳಿಜ್ವರಗಳಿಗೆಲ್ಲ ಚೌಡಿ ಎಂಬ ದೇವತೆಯ ಸೋಂಕೇ ಕಾರಣವಂತೆ. ಇವಳ ಸ್ಪರ್ಶದಿಂದ ಕಾಯಿಲೆಗಳು ಬರುತ್ತವೆ. ಆದರೆ ಹರಕೆ ಹೊತ್ತು ಕೋಳಿ ಬಲಿ ಕೊಟ್ಟರೆ ಈ ದೇವತೆ ತೃಪ್ತಳಾಗುತ್ತಾಳೆ. ಇವಳ ಗಂಡ ಮುನೇಶ್ವರ ಅಥವಾ ಜಡೆಮುನಿ. ಈತ ಭೂತಪ್ರೇತಗಳ ಒಡೆಯನೆಂದೂ ನಟ್ಟ ನಡುರಾತ್ರಿ ಕಲ್ಲು ನೀರು ಕರಗುವ ವೇಳೆಯಲ್ಲಿ ಸಂಚಾರ ಮಾಡುತ್ತಾನೆಂದೂ ಹೇಳಲಾಗುತ್ತದೆ (ನೋಡಿ: ಜಡೆಮುನಿ). ಇಂಥ ಬಗೆಬಗೆಯ ಬಣ್ಣ ಬಣ್ಣದ ಕಲ್ಪನೆಯ ದೇವತೆಗಳು ಆದಿವಾಸಿಗಳಲ್ಲಿ ಜೀವಂತವಾಗಿವೆ. ತಮ್ಮ ಜೀವನ ಸರ್ವಸ್ವವೂ ಈ ದೇವತೆಗಳ ಅವಲಂಬನೆಯಿಂದಲೇ ರೂಪಿತವಾಗುತ್ತದೆ ಎಂದು ಅವರು ದೃಢವಾಗಿ ನಂಬುತ್ತಾರೆ. *

**ಜನಪದ ಧರ್ಮ :** ಜನಪದ ಧರ್ಮ ಹಾಗೂ ಶಿಷ್ಟ ಧರ್ಮ ಇವುಗಳ ನಡುವಿನ ನಿರ್ದಿಷ್ಟ ಗಡಿ ರೇಖೆಯನ್ನು ಗುರುತಿಸುವುದು ಕಷ್ಟಸಾಧ್ಯವಾದರೂ ಕೆಲವು ಪ್ರಮುಖ ಅಂಶಗಳಿಂದ ಸ್ವಲ್ಪಮಟ್ಟಿಗೆ ಅವುಗಳಿಗಿರುವ ವ್ಯತ್ಯಾಸಗಳನ್ನು ಕಾಣಬಹುದು. ಪ್ರಪಂಚದ ಇತರ ಜನಪದ ಧರ್ಮಗಳಂತೆ ಕರ್ನಾಟಕದ ಜನಪದ ಧರ್ಮಕ್ಕೂ ಯಾವ ಲಿಖಿತ ಗ್ರಂಥಗಳ ಆಧಾರ ಅಥವಾ ತಾತ್ವಿಕ ವಿವೇಚನೆಯ ಹಿನ್ನೆಲೆ ಇಲ್ಲವೆನ್ನಬಹುದು. ಅದು ನೈಸರ್ಗಿಕ ಧರ್ಮಕ್ಕೆ ತುಂಬಾ ಹತ್ತಿರವಾಗಿದೆ. ಜನಪದ ಧರ್ಮ ಅನುಕರಣೆ ಮತ್ತು ಆಚರಣೆಗಳಿಂದ ಉಳಿದು ಬಂದಿದ್ದು, ಹೆಚ್ಚಾಗಿ ಅತಿಮಾನುಷ ಅಂಶ, ಅಲೌಕಿಕ ಜೀವಿಗಳ ಆರಾಧನೆ ಮತ್ತು ಅನೇಕ ಧಾರ್ಮಿಕ ನಂಬಿಕೆಗಳಿಂದ ಕೂಡಿದೆ. ಅದರಲ್ಲಿ ಕಂಡುಬರುವ ಆಚಾರ-ವಿಚಾರಗಳು, ನಡಾವಳಿಗಳು, ನಂಬಿಕೆಗಳು, ಕಲೆಗಳು ಮತ್ತು ಹುಟ್ಟುಸಾವುಗಳ ಮಧ್ಯೆ ಅನುಸರಿಸಲೇಬೇಕಾದ ಸಂಪ್ರದಾಯಗಳು ಜನರ ಜೀವನವಿಧಾನ ಮತ್ತು ಅವರ ಮನೋದೃಷ್ಟಿಯನ್ನು ಪ್ರತಿನಿಧಿಸುತ್ತವೆ. ತಾವು ಪರಿಪಾಲಿಸುವ ಧರ್ಮದ ಧ್ಯೇಯೋದ್ದೇಶಗಳ ಅರಿವಿಲ್ಲವಾದರೂ ತಮ್ಮ ಸುತ್ತ ಕಾಪಾಡುವ ಒಂದು ಶಕ್ತಿಯಿದೆ ಎಂಬುದನ್ನು ಜನಪದರು ನಂಬುತ್ತಾರೆ. ಹೀಗಾಗಿ ಅವರು ನದಿ ಜಲಪಾತಗಳು, ಬೆಟ್ಟ ಗುಡ್ಡಗಳು, ದಟ್ಟವಾದ ಕಾಡು ಎಲ್ಲವುಗಳಲ್ಲೂ ದೈವತ್ವವನ್ನು ಅರಸುತ್ತಾರೆ. ಇವುಗಳ ಒಡೆಯನೇ ಆ ಪ್ರದೇಶದಲ್ಲಿ ವಾಸವಾಗಿದ್ದು ಕಾಯಿಲೆ ಮತ್ತು ಅನಿಷ್ಟಗಳಿಗೆ ಕಾರಣನೆಂದು ನಂಬಿ ಅವುಗಳನ್ನು ಪೂಜಿಸುತ್ತಾರೆ. ಇಂಥ ಸರ್ವಚೇತನವಾದ ವಾಸ್ತವವಾಗಿ ಜನಪದಧರ್ಮದ ಅಡಿಗಲ್ಲಾಗಿದೆ ಎಂದು ಹೇಳಬಹುದು. ನೈಸರ್ಗಿಕ ವಸ್ತುಗಳ ಸುತ್ತ ಅನೇಕ ದಂತಕಥೆ, ಪುರಾಣಗಳನ್ನು ಹೆಣೆದು ಅವುಗಳ ಪ್ರಾಮುಖ್ಯತೆಯನ್ನು ಹೆಚ್ಚಿಸುವುದಲ್ಲದೆ ಹಿಂದಿನಿಂದ ನಡೆಸಿಕೊಂಡು ಬಂದ ಬೇಕು-ಬೇಡಗಳನ್ನು ತಪ್ಪದೆ ಪಾಲಿಸುತ್ತಾರೆ. ಸರ್ವಚೇತನತ್ವದಲ್ಲಿ ಜನಪದರಿಗೆ ನಂಬಿಕೆ ಬಹಳ. ಆಲ, ಬೇವು, ಅರಳಿ, ತೆಂಗು, ತುಳಸಿ, ಎಕ್ಕ ಮುಂತಾದ ಮರ ಗಿಡಗಳನ್ನು ತಮ್ಮ ಇಷ್ಟಾರ್ಥ ಸಿದ್ಧಿಗೆಂದು ಪೂಜಿಸುವ ಪದ್ಧತಿ ಕರ್ನಾಟಕದ ಜನಪದ ಧರ್ಮದಲ್ಲಿದೆ. ಕೆಲವರು ಅವುಗಳನ್ನು ಕಡಿಯುವುದಿಲ್ಲ. ಪವಿತ್ರ ವೃಕ್ಷಗಳನ್ನು ನಾಶಮಾಡಿದರೆ ತಮ್ಮ ವಂಶವೇ ನಾಶಹೊಂದುತ್ತದೆ ಎಂಬ ಭಯ ಹಾಗೂ ನಂಬಿಕೆ ಅವರಲ್ಲಿದೆ. ಅರಳಿ-ಬೇವನ್ನು ಒಟ್ಟಿಗೆ ಬೆಳೆಸಿ ಅವುಗಳಿಗೆ ಕಲ್ಲುಕಟ್ಟೆಯನ್ನು ಕಟ್ಟಿಸಿ ಪೂಜಿಸುವುದನ್ನು ಕರ್ನಾಟಕದ ಎಲ್ಲ ಕಡೆ ಕಾಣಬಹುದು. ಗಿಡ-ಮರಗಳಿಂದ ದೊರಕಿದ ಮೊದಲ ಹಣ್ಣು ಅಥವಾ ಕಾಯನ್ನು ದೇವರುಗಳಿಗೆ ಅರ್ಪಿಸುವುದು, ಮರಗಳನ್ನು ನೆಟ್ಟು ಬೆಳೆಸುವುದು. ಕಣಿಗಲು ಗಿಡಗಳನ್ನು ನೆಡುವುದು ಪುಣ್ಯಕಾರ್ಯವೆಂದು ತಿಳಿಯುತ್ತಾರೆ.

ಪ್ರಕೃತಿಪೂಜೆ ಜನಪದ ಧರ್ಮದಲ್ಲಿ ಹೆಚ್ಚು. ತುಮಕೂರು, ಹಾಸನ, ಮಂಡ್ಯ ಜಿಲ್ಲೆಗಳಲ್ಲಿ ಆಚರಿಸುವ ಮುಂಗಾರು ಹಬ್ಬ ಅಥವಾ ಕಾರುಹಬ್ಬ ವಿಶಿಷ್ಟವಾಗಿದೆ. ಮುಂಗಾರು ಮಳೆ ಬಿದ್ದು ತಂಪಾದ ಭೂಮಿಯನ್ನು ಉತ್ತು ಬಿತ್ತುವ ಕಾಲದಲ್ಲಿ ಮಳೆರಾಜನಿಗೆ ಕೃತಜ್ಞತೆಯನ್ನು ಈ ಹಬ್ಬದ ಮೂಲಕ ಸಲ್ಲಿಸುತ್ತಾರೆ. ಈ ಸಂದರ್ಭದಲ್ಲಿ ಗೋವುಗಳನ್ನು ಮೈತೊಳೆದು ಶೃಂಗರಿಸಿ ವ್ಯವಸಾಯೋಪಕರಣಗಳನ್ನು ತೊಳೆದು ಒಂದೆಡೆ ಇಟ್ಟು ಪೂಜಿಸುತ್ತಾರೆ. ಮಳೆ ಬಾರದೆ ಹೋದಾಗ ತಿಂಗಳುಮಾವನ ಪೂಜೆ (ನೋಡಿ) ಕೈಗೊಳ್ಳುವ ಪದ್ಧತಿ ತುಮಕೂರು, ಹಾಸನ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಕಂಡುಬರುತ್ತದೆ. ಪರವಮಾಡುವುದು, ಮಳೆರಾಯನನ್ನು ಕರೆಯುವುದು, ಮಾರಿಗೆ ಮೊರೆಹೊಕ್ಕು ಮಳೆರಾಜನನ್ನು ಬರುವಂತೆ ಮಾಡು ಎಂದು ಬೇಡುವುದನ್ನು ಹಳ್ಳಿಗಳಲ್ಲಿ ಕಾಣಬಹುದು. ಉತ್ತರ ಕನ್ನಡ ಜಿಲ್ಲೆಯ ಗುಂಗರು (ಬ್ರಾಹ್ಮಣೇತರ ಪೂಜಾರಿಗಳು) ಮಳೆರಾಜನನ್ನು

ಕರೆಯುವ ರೀತಿ ಕುತೂಹಲಕಾರಿಯಾಗಿದೆ. ಗುಂಗನೊಬ್ಬ ರಾತ್ರಿಯಲ್ಲಿ ನಗ್ನಾವಸ್ಥೆಯಲ್ಲಿ ಪ್ರತಿಮನೆಗೂ ಹೋಗಿ ಅಡಿಗೆ ಸಾಮಾನುಗಳನ್ನು ಸಂಗ್ರಹಿಸಿ ಬೆಳಗಾಗುವುದರೊಳಗೆ ಹತ್ತಿರದ ಕಾಡನ್ನು ಸೇರುತ್ತಾನೆ. ಇದೇ ರೀತಿ ಮೂರು ದಿನಗಳ ಕಾಲ ಸಂಗ್ರಹಿಸಿ ಮೂರನೆಯ ದಿನ ಮಧ್ಯರಾತ್ರಿಯಲ್ಲಿ ಬೆತ್ತಲೆಯಲ್ಲಿಯೇ ಮಳೆರಾಜನಿಗೆ ಪೂಜೆ ಸಲ್ಲಿಸಿದ ಅನಂತರ ತಾನು ಸಂಗ್ರಹಿಸಿದ್ದ ಸಾಮಾನುಗಳಿಂದ ಅಡುಗೆ ಮಾಡಿ ಬಟ್ಟೆ ಧರಿಸಿಕೊಂಡು ಬೆಳಗ್ಗೆ ಊರವರನ್ನು ತಾನಿದ್ದ ಕಾಡಿಗೆ ಆಹ್ವಾನಿಸಿ ಊಟಕ್ಕೆ ಹಾಕುತ್ತಾನೆ. ಎಲ್ಲರೂ ಸೇರಿ ಊಟ ಮಾಡುವಾಗ ಮಳೆ ಬಂದೇ ಬರುವುದೆಂಬ ನಂಬಿಕೆ ಈ ಜನಗಳಲ್ಲಿದೆ.

ಸಾಕುಪ್ರಾಣಿಗಳು ಮತ್ತು ಉಪಯುಕ್ತ ಪ್ರಾಣಿಗಳನ್ನು ದೇವರ ಅಥ'ವಾ ದೇವತೆಗಳ ವಾಹನವೆಂದು ತಿಳಿಯುವುದು, ಅವತಾರವೆಂದು ಪರಿಗಣಿಸುವುದು ಜನಪದರಲ್ಲಿದೆ. ವ್ಯವಸಾಯದಲ್ಲಿ, ಹೈನುಗಾರಿಕೆಯಲ್ಲಿ ಹೆಚ್ಚು ಉಪಯುಕ್ತವಾಗುವ ಗೋವುಗಳನ್ನು ಪೂಜಿಸುವುದು, ಸಾಕುಪ್ರಾಣಿಗಳಾದ ನಾಯಿ, ಬೆಕ್ಕು ಮುಂತಾದವುಗಳನ್ನು ಗೌರವದಿಂದ ಕಾಣುವುದನ್ನು ನೋಡಬಹುದು. ನಾಯಿಯನ್ನು ಕಾಲಿನಿಂದ ಒದೆಯಬಾರದು ಎಂಬ ನಂಬಿಕೆ ಇದೆ. ನಾಯಿ ಒದ್ದೆಯೋ ತಾಯಿ ಒದ್ದೆಯೋ ಎಂಬ ಗಾದೆಯಲ್ಲಿ ತಾಯಿಯಷ್ಟೇ ನಾಯಿಯೂ ಪವಿತ್ರವಾದುದು ಎಂಬರ್ಥ ಧ್ವನಿತವಾಗಿರುವುದನ್ನು ಕಾಣಬಹುದು. ನಾಯಿ ನಾರಾಯಣ ಎನ್ನುವಲ್ಲಿ ದೇವರ ಪವಿತ್ರತೆಯನ್ನು ಪ್ರಾಣಿಗೆ ಆರೋಪಿಸಲಾಗಿದೆ. ಹಲ್ಲಿ ನುಡಿದರೆ ಅದು ದೇವರ ನುಡಿಯೆಂದೂ ಶುಭಾಶುಭಗಳನ್ನು ಹೇಳುತ್ತದೆ ಎಂದೂ ನಂಬುತ್ತಾರೆ.

ಜನಪದ ಧರ್ಮದಲ್ಲಿ ಬಹಳವಾಗಿ ಕಂಡುಬರುವ ಸರ್ಪಾರಾಧನೆ ಕರ್ನಾಟಕದಲ್ಲಿ ಮಾತ್ರವಲ್ಲ ಜಗತ್ತಿನ ಬಹಳಷ್ಟು ಕಡೆ ಪ್ರಚಲಿತವಿದ್ದಂತೆ ತಿಳಿದುಬರುತ್ತದೆ. ವೇದಗಳ ಕಾಲದಲ್ಲೂ ಈ ಸಂಪ್ರದಾಯವಿತ್ತು. ಸರ್ಪದ ವಿಗ್ರಹಗಳನ್ನು ಮಾಡಿಸಿ ಅರಳಿ ಮರದ ಬುಡದಲ್ಲಿ ಅಥವಾ ಪ್ರತ್ಯೇಕ ಮಂಟಪಗಳಲ್ಲಿ ಇಟ್ಟು ವರ್ಷಕ್ಕೊಮ್ಮೆ ಅಥ'ವಾ ಕಷ್ಟಬಂದಾಗ ಪೂಜಿಸುವುದುಂಟು. ನಾಗರಪಂಚಮಿಯ ಹಬ್ಬದಂದು ಸರ್ಪದ ವಿಗ್ರಹಕ್ಕೆ ಅಥವಾ ಹುತ್ತಕ್ಕೆ ತನಿ ಎರೆಯುವ ಪದ್ಧತಿ ಕರ್ನಾಟಕದಲ್ಲಿದೆ. ಮಕ್ಕಳಿಗೆ ಅಥವಾ ದೊಡ್ಡವರಿಗೆ ನಾಗರು ಎಂಬ ಚರ್ಮರೋಗ ಕಾಣಿಸಿಕೊಂಡಾಗ ನಾಗರ ಕಲ್ಲು ಕಡೆಸಿ ಚಿನ್ನ ಅಥವಾ ಬೆಳ್ಳಿಯ ಸರ್ಪದಾಕೃತಿಯನ್ನು ಮಾಡಿಸಿ ಅದನ್ನು ಪೂಜಿಸುತ್ತಾರೆ. ಸರ್ಪಕ್ಕೆ ಆರೋಪಿಸಿರುವ ದೈವತ್ವದ ಕಲ್ಪನೆಯಿಂದಾಗಿ ಅವುಗಳನ್ನು ಕೊಲ್ಲಬಾರದೆಂಬ ನಂಬಿಕೆ ಉಳಿದುಬಂದಿದೆ. ನಾಗಾರಾಧನೆ ಭಾರತದಾದ್ಯಂತ ಕಂಡುಬಂದರೂ ಕರ್ನಾಟಕದ ಕರಾವಳಿಯ ಪ್ರದೇಶಗಳಲ್ಲಿ ನಾಗಮಂಡಲವನ್ನು ಹಾಕಿ ನೃತ್ಯವನ್ನು ಮಾಡುವುದರ ಮೂಲಕ ನಾಗದೇವತೆಯನ್ನು ಒಲಿಸುವ ರೀತಿ ವಿಶಿಷ್ಟವಾದುದು (ನೋಡಿ: ವೈದ್ಯನೃತ್ಯ).

ಪಿತೃಪೂಜೆ ಜನಪದ ಧರ್ಮದಲ್ಲಿ ಪ್ರಮುಖವಾಗಿದೆ. ಸತ್ತವರು ಸ್ವರ್ಗದಲ್ಲಿ ಸುಖವಾಗಿರಲು ಪಿತೃಪೂಜೆ ಅಗತ್ಯ ಎಂಬ ನಂಬಿಕೆ ಇದೆ. ಪಿತೃಗಳು ಭೂತಗಳಾಗಿ ಬಂದು ಕಾಯುತ್ತವೆ ಅಥವಾ ಪೀಡಿಸುತ್ತವೆ ಎಂದು ತಿಳಿದು ಅವುಗಳನ್ನು ಸಂಪ್ರೀತಗೊಳಿಸಲು ಪೂಜಿಸುವುದುಂಟು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಿರುವ ಭೂತಾರಾಧನೆ (ನೋಡಿ) ಹೆಚ್ಚು ಕಡಿಮೆ ಪಿತೃಪೂಜೆಯೇ ಆಗಿದೆ. ಈ ಪ್ರದೇಶದ ಜನ ಸುಮಾರು ಅರವತ್ತಕ್ಕೂ ಹೆಚ್ಚು ಭೂತಗಳಿವೆ ಎಂದು ನಂಬುತ್ತಾರೆ. ಇವುಗಳಲ್ಲಿ ಕಲ್ಕುಡ, ಪಂಜುರ್ಲಿ, ಬೊಬ್ಬರ್ಯ ಮುಖ್ಯವಾದವುಗಳು. ಭೂತಗಳನ್ನು ಸಾಮಾನ್ಯವಾಗಿ ಪ್ರತಿಮೆಗಳ ರೂಪದಲ್ಲಿ ಅಥವಾ ಕೆಲವು ವಸ್ತುಗಳನ್ನೇ ಭೂತಗಳೆಂದು ಪರಿಗಣಿಸಿ ಪೂಜಿಸುವುದುಂಟು. ಗತಕಾಲದಲ್ಲಿ ಬದುಕಿದ್ದ ಐತಿಹಾಸಿಕ ವ್ಯಕ್ತಿಗಳ ಸ್ಮರಣಾರ್ಥವಾಗಿ ಅಥವಾ ಊರಿನ ರಕ್ಷಣೆಯಲ್ಲಿ ಮಡಿದವನ ಜ್ಞಾಪಕಾರ್ಥವಾಗಿ ಭೂತಾರಾಧನೆಯನ್ನು ಕೈಗೊಳ್ಳಬಹುದು. ಗತಿಸಿದ ವೀರರಾದ ಕೋಟಿ ಚನ್ನಯ್ಯರು ಭೂತಗಳಾಗಿ ಬಂದು ಊರನ್ನು ಕಾಯುತ್ತಿರುವರೆಂಬ ನಂಬಿಕೆಯಿಂದ ವರ್ಷಕ್ಕೊಮ್ಮೆ ಅವರ ಭೂತಾರಾಧನೆ ನಡೆಯುತ್ತದೆ. ಈ ಸಂದರ್ಭದಲ್ಲಿ ವಿಶಿಷ್ಟ ವೇಷಗಳನ್ನು ಧರಿಸಿ ಭೂತ ನೃತ್ಯವನ್ನು ಕೈಗೊಳ್ಳುತ್ತಾರೆ. ಪರವ, ಬೈದ್ಯ ಮತ್ತು ಪಾಣಾರ ಜಾತಿಯವರು ಭೂತಗಳ ಅರ್ಚಕರಾಗಿದ್ದು, ಭೂತನೃತ್ಯಕ್ಕೆ ಹೆಸರಾಗಿದ್ದಾರೆ. ಭೂತಾರಾಧನೆಯೂ ಭಯಮೂಲವಾಗಿದ್ದು ಅವುಗಳ ಮನವೊಲಿಸಿಕೊಳ್ಳಲು ಹಂದಿ, ಕುರಿ, ಕೋಳಿಗಳನ್ನು ಬಲಿ ಕೊಡುತ್ತಾರೆ. ಭೂತಗಳಿಗೆ ಸಂಬಂಧಿಸಿದ ಪಾಡ್ದನಗಳಲ್ಲಿ ಅವುಗಳ ಇತಿವೃತ್ತಗಳನ್ನಲ್ಲದೆ ಭಯವನ್ನುಂಟುಮಾಡುವ ಉಕ್ತಿಗಳಿರುತ್ತವೆ. ಉದಾಹರಣೆಗೆ ಪ್ರಾಣಿಬಲಿ ಕೊಡದಿದ್ದರೆ, ನನ್ನಲ್ಲಿ ನಂಬಿಕೆ ಇಟ್ಟು ಪೂಜಿಸದಿದ್ದರೆ ನಿನ್ನ ಪ್ರಾಣವನ್ನೇ ಬಲಿ ತೆಗೆದುಕೊಳ್ಳುತ್ತೇನೆ ಎಂದು ಹೇಳುವ ಅನೇಕ ಪಾಡ್ದನಗಳು ಭೂತಾರಾಧನೆಯ ಸಂಪ್ರದಾಯದಲ್ಲಿದೆ.

ಜನಪದ ಧರ್ಮದ ಮತ್ತೊಂದು ಮುಖ ಕುಲದೇವತಾಪದ್ಧತಿ ಎನ್ನಬಹುದು. ಈ ಪದ್ಧತಿಯಲ್ಲಿ ಒಂದು ಗುಂಪಿನ ಅಥವಾ ಬುಡಕಟ್ಟಿನ ಜನ ತಮ್ಮ ವಂಶದ ಅಥವಾ ಕುಲದ ಮೂಲವನ್ನು ಕೆಲವು ಪ್ರಾಣಿ, ವಸ್ತು ಅಥವಾ ಗಿಡಮರಗಳಿಗೆ ಆರೋಪಿಸಿಕೊಂಡು ಅವುಗಳನ್ನು ತಮ್ಮ ಕುಲದೇವರುಗಳೆಂದು ಪೂಜಿಸುತ್ತಾರೆ. ಹೀಗೆ ಪೂಜಿಸುವ ವಸ್ತುಗಳನ್ನು ಅಥ'ವಾ ಪ್ರಾಣಿ, ಗಿಡಮರಗಳನ್ನು ಅವರು ನಾಶಮಾಡುವ ಅಥ'ವಾ ಕೊಲ್ಲುವ ಕೆಲಸಕ್ಕೆ ಕೈಹಾಕುವುದಿಲ್ಲ. ಈ ಪದ್ಧತಿಯನ್ನು ಅನುಸರಿಸುವ ಕೆಲವು ಕಾಡುಕುರುಬರು ತಮ್ಮ ಕುಲವನ್ನು ಆನೆಗೆ ಆರೋಪಿಸಿಕೊಂಡಿದ್ದಾರೆ. ಅವರು ಎಂದೂ ಆನೆ ಸವಾರಿ ಮಾಡುವುದಿಲ್ಲ. ಆಡುಕುರುಬರು ಆಡನ್ನು ಕೊಲ್ಲುವುದಿಲ್ಲ ಹಾಗೂ ಅದರ ಮಾಂಸವನ್ನು ಸೇವಿಸುವುದಿಲ್ಲ. ಇದೇ ರೀತಿ ಬಸರಿ ಕುರುಬರು ಬಸರಿ ಮರವನ್ನು ಕಡಿಯುವುದಿಲ್ಲ. ಸರ್ಪ ಒಕ್ಕಲಿಗರು ಸರ್ಪವನ್ನೆಂದಿಗೂ ಕೊಲ್ಲುವುದಿಲ್ಲ. ಈ ಪದ್ಧತಿ ತಮ್ಮ ವಂಶದ ಅಥವಾ ಕುಲದ ರಕ್ತಶುದ್ಧಿಯನ್ನು ಕಾಯ್ದುಕೊಂಡು ಬರುವ ಉದ್ದೇಶವುಳ್ಳದ್ದಾಗಿದೆ ಎಂದು ಅವರು ನಂಬುತ್ತಾರೆ.

ಊರನ್ನು ಕಾಯುವ ಗ್ರಾಮದೇವತೆಗಳ ಹಾಗೂ ರೋಗರುಜಿನಗಳನ್ನು ತರುವ ಮತ್ತು ನಿವಾರಿಸುವ ಇನ್ನಿತರ ಅತಿಮಾನುಷ ಶಕ್ತಿಗಳ ಕಲ್ಪನೆ ಜನಪದರಲ್ಲಿ ವಿಶೇಷವಾಗಿದೆ. ಇವಕ್ಕೆ ಅವಿಧೇಯರಾದರೆ, ಹಿಂದಿನಿಂದ ಬಂದ ಸಂಪ್ರದಾಯಗಳನ್ನು ಅನುಸರಿಸದಿದ್ದರೆ, ಊರಿಗೋ ವಂಶಕ್ಕೋ ಅಥ'ವಾ ದನಕರುಗಳಿಗೋ ಕೆಡುಕು ಸಂಭವಿಸುತ್ತದೆ ಎಂದು ತಿಳಿದು ಅವುಗಳನ್ನು ಭಯಭಕ್ತಿಗಳಿಂದ ಆರಾಧಿಸುವುದಲ್ಲದೆ ಊರನ್ನು ಕಾಯುವ ಶಕ್ತಿಗಳೆಂದು ಬಗೆದು ಶಾಂತಗೊಳಿಸಲು ಬಲಿಕೊಡುತ್ತಾರೆ. ಹೀಗಾಗಿ ಕರ್ನಾಟಕದ ಪ್ರತಿಹಳ್ಳಿಗಳಲ್ಲೂ ಗ್ರಾಮದೇವತೆಗಳ ದೇವಮಾನವರ ಅಥವಾ ಭೂತಗಳ ಗುಡಿಗಳನ್ನು ಕಾಣಬಹುದು. ಸಾಮಾನ್ಯವಾಗಿ ರೋಗದೇವತೆಗಳು ಮತ್ತು ಸಾಮಾನ್ಯದೇವತೆಗಳು ಕರ್ನಾಟಕದ ಎಲ್ಲ ಹಳ್ಳಿಗಳಲ್ಲಿ ಗುಡ್ಡಗಾಡು ಜನಾಂಗಗಳಲ್ಲಿ ನೆಲಸಿವೆ. ಪ್ಲೇಗಿನಮ್ಮ, ಸಿಡುಬಿನಮ್ಮ, ದಡಾರದಮ್ಮ, ಕುಕ್ಕಲಮ್ಮ, ಸುಂಕಿನಮಾರಿ, ಊರಮ್ಮ, ಕರಿಯಮ್ಮ, ಕೆಂಪಮ್ಮ, ಎಲ್ಲಮ್ಮ, ಗಂಗಮ್ಮ, ಮಾಸ್ತಮ್ಮ, ಮದ್ದೂರಮ್ಮ, ದೊಡ್ಡಮ್ಮ, ಬಿಸಿಲುಮಾರಿ, ಕೂಗುಮಾರಿ ಇನ್ನೂ ಮುಂತಾದ ದೇವತೆಗಳು ಜನಪದರ ಆರಾಧ್ಯದೇವತೆಗಳಾಗಿವೆ. ಈ ದೇವತೆಗಳಿಗೆ ವಿಶಿಷ್ಟ ಶಕ್ತಿಗಳನ್ನು ಆರೋಪ ಮಾಡಿ ದೈವಿಕ ಆವರಣವನ್ನು ಕಲ್ಪಿಸಿರುವುದಲ್ಲದೆ ಪ್ರತಿವರ್ಷ ನಡೆಯುವ ಮಾರಿಹಬ್ಬ ರೋಗಗಳು ತಲೆದೋರಿದಾಗ ಕೈಗೊಳ್ಳುವ ಹಬ್ಬಗಳು. ಈ ಮಾರಿಯರನ್ನು ಒಲಿಸಿಕೊಳ್ಳುವ ಹಾಗೂ ಅವು ಕೋಪಗೊಂಡಿವೆ ಎಂದು ತಿಳಿದು ಶಮನ ಮಾಡುವ ದೃಷ್ಟಿಯಿಂದ ಅವುಗಳ ಆರಾಧನೆಯಲ್ಲಿ ತೊಡಗುತ್ತಾರೆ. ಸಾಮಾನ್ಯವಾಗಿ ಆಕಾರ ರಹಿತ ಕಲ್ಲು ಅಥವಾ ಕೆಲವು ಗುರುತುಗಳು ಅಥವಾ ವಸ್ತುಗಳನ್ನೇ ದೇವತೆಗಳೆಂದು ಭಾವಿಸಿ ಅವುಗಳಿರುವ ಜಾಗದಲ್ಲಿ ಗುಡಿಕಟ್ಟಿ ದೇವತೆಯ ಸಂಕೇತವಾಗಿ ಪೂಜಿಸುವುದೂ ಉಂಟು.

ದೇವತೆಗಳ ಹೆಸರಿನಲ್ಲಿ ಸಾಕಿದ ಕುರಿ, ಕೋಳಿ, ಕೋಣ, ಹಂದಿ, ಮೇಕೆ ಮುಂತಾದ ಪ್ರಾಣಿಗಳನ್ನು ಹಬ್ಬಗಳಲ್ಲಿ ಸಾಮಾನ್ಯವಾಗಿ ಬಲಿ (ನೋಡಿ) ಕೊಡುವುದುಂಟು. ಗ್ರಾಮದೇವತೆಯ ಜಾತ್ರೆಗಳಲ್ಲಿ ಧಾರ್ಮಿಕ ಆಚರಣೆಗಳಾದ ಗಾವುಸಿಗಿಯುವಿಕೆ- ಕುರಿ ಅಥವಾ ಮೇಕೆಯನ್ನು ಬಾಯಲ್ಲಿ ಕಚ್ಚಿಕೊಂಡು ಆವೇಶದಿಂದ ದೇವರು ಮೈತುಂಬಿ ಬಂದವನಂತೆ ಓಡಾಡುವುದು, ಸಿಡಿ (ನೋಡಿ) ಆಡುವುದು, ಸೋಮನ ಕುಣಿತ (ನೋಡಿ), ಮಣೆವು ಹಾಕುವುದು (ನೋಡಿ), ಕೊಂಡ ಹಾಯುವುದು (ನೋಡಿ) - ಇವೇ ಮುಂತಾದ ಆಚರಣೆಗಳು ಕಡ್ಡಾಯವಾಗಿರುತ್ತವೆ. ಇಂಥ ಆಚರಣೆಗಳು ದೇವತೆಗಳ ಪ್ರತಿಷ್ಠೆಯನ್ನು ಹೆಚ್ಚಿಸುವುದರಲ್ಲಿ ಹೆಚ್ಚು ಪಾತ್ರವಹಿಸುತ್ತವೆ.

ಗುಡ್ಡಗಾಡಿನ ದೇವತೆಗಳಿಗೆ ಹಾಗೂ ಕೆಲವು ಗ್ರಾಮದೇವತೆಗಳಿಗೆ ಹೆಂಡವನ್ನು ಅರ್ಪಿಸುವುದುಂಟು. ಇದನ್ನು ಘಟೆ ಉಕ್ಕಿಸುವಿಕೆ ಎನ್ನುತ್ತಾರೆ.

ದೇವರು ಮೈ ಮೇಲೆ ಬಂದವನು ಬೇವಿನಸೊಪ್ಪನ್ನು ಹೆಂಡ ತುಂಬಿದ ಹೊಸ ಗಡಿಗೆಗಳಲ್ಲಿ ಅದ್ದಿ ಕಲಕಿದಾಗ ನೊರೆ ಉಕ್ಕುತ್ತದೆ. ಮಾಂಸದ ಅಡುಗೆಯನ್ನು ರಾಶಿಯೋಪಾದಿಯಲ್ಲಿ ಎಡೆ ಹಾಕಿರುತ್ತಾರೆ. ಈ ಸಂದರ್ಭದಲ್ಲಿ ಊರಿನ ಪಿಡುಗುಗಳ ಬಗ್ಗೆ, ಭವಿಷ್ಯದ ಬಗ್ಗೆ ಮತ್ತು ಜನರ ವೈಯಕ್ತಿಕ ಕಷ್ಟನಷ್ಟಗಳ ಬಗ್ಗೆ ಆ ವ್ಯಕ್ತಿ ಭವಿಷ್ಯ ನುಡಿಯುತ್ತಾನೆ. ಇಂಥ ಆಚರಣೆಗಳೇ ಅಲ್ಲದೆ ಮಾರಿ ಹಬ್ಬಗಳಲ್ಲಿ ರಥೋತ್ಸವ, ಹರಕೆ ಹೊತ್ತವರ ಬಾಯಿ ಬೀಗ ಸೇವೆಗಳೂ ಇರುತ್ತವೆ. ಹರೆವಾದ್ಯಗಳ ಗದ್ದಲಗಳೊಂದಿಗೆ ಸ್ತುತಿ ಗೀತೆಗಳನ್ನು ಹಾಡುತ್ತ ಮಧ್ಯೆ ಮಧ್ಯೆ ಕೇಕೆ ಹಾಕುತ್ತ ಸೋಮಗಳನ್ನು ಆವೇಶಪೂರಿತವಾಗಿ ಕುಣಿಸುತ್ತ ಭಯಭಕ್ತಿಯಿಂದ ನಡೆದುಕೊಳ್ಳುತ್ತಾರೆ.

ಬೆಳೆದ ಫಸಲಿಗೆ ಹೆಚ್ಚು ಮಾಡುವುದು, ರಾಶಿಪೂಜೆ, ರಾಗಿಕಲ್ಲು ಪೂಜೆ, ಒರಳು ಕಲ್ಲು ಪೂಜೆ ಹೆಚ್ಚಾಗಿ ಜನಪದರಲ್ಲಿ ಕಂಡುಬರುತ್ತವೆ. ಪ್ರತಿ ಜನಾಂಗ ಅಥವಾ ಜಾತಿಯವರು ತಮ್ಮ ವೃತ್ತಿಯಲ್ಲಿ ಬಳಸುವ ಸಲಕರಣೆಗಳನ್ನು ಪೂಜಿಸುವುದು ವಾಡಿಕೆಯಲ್ಲಿದೆ. ಕುಂಬಾರ ತಾನು ಮಡಕೆ ಮಾಡುವ ಚಕ್ರವನ್ನು ಪೂಜಿಸಿದರೆ, ಅಕ್ಕಸಾಲಿಗ ಕುಲುಮೆ ಮತ್ತಿತರ ತನ್ನ ಉಪಕರಣಗಳನ್ನೂ ಒಕ್ಕಲಿಗ ವ್ಯವಸಾಯೋಪಕರಣಗಳನ್ನೂ ಪೂಜಿಸುತ್ತಾನೆ.

ಮಂಡ್ಯ ಹಾಗೂ ಮೈಸೂರು ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುವ ಕೊಂತಿಪೂಜೆ (ನೋಡಿ) ಒಂದು ವಿಶಿಷ್ಟ ಧಾರ್ಮಿಕ ಸಂಪ್ರದಾಯವಾಗಿದೆ. ಆದರ್ಶಮಾತೆ ಕುಂತಿಯ ನೆನಪಿಗಾಗಿ ಆಚರಿಸುವ ಈ ಪೂಜೆಯನ್ನು ಸಾಮಾನ್ಯವಾಗಿ ಮೈನೆರೆದ ಹೆಣ್ಣನ್ನು ಗುಡ್ಲು ಕೂಡಿಸುವಾಗ ಹಾಗೂ ಒಸಗೆಯ ಸಂದರ್ಭಗಳಲ್ಲಿ ಕೈಗೊಳ್ಳುತ್ತಾರೆ.

ಮಾಟ-ಮಂತ್ರ ಜನಪದ ಧರ್ಮದ ಒಂದು ಪ್ರಮುಖ ಭಾಗ. ಕಾಯಿಲೆ ಬಂತೆಂದರೆ ಊರದೇವತೆಗೆ ಪೂಜೆ ಸಲ್ಲಿಸುವುದು ಅಥವಾ ಪೂಜಾರಿಯಿಂದ ಮಂತ್ರ ಹಾಕಿಸಿಕೊಳ್ಳುವುದು, ಯಂತ್ರಕಟ್ಟಿಸಿಕೊಳ್ಳುವುದು ರೂಢಿಯಲ್ಲಿದೆ. ಮಣ್ಣಿನ ಗೊಂಬೆಗೆ ಕಕ್ಕಡಬತ್ತಿಗಳನ್ನು ಹಚ್ಚಿ ಅನ್ನದುಂಡೆಗಳಿಂದ ಪೂಜಿಸಿ ಊರ ಹೊರಗೆ ಇಟ್ಟು ಹಿಂತಿರುಗಿನೋಡದೆ ಬಂದರೆ ಬಂದ ಜ್ವರ ಇಳಿಯುತ್ತದೆ ಎಂಬ ನಂಬಿಕೆ ಇದೆ. ಮಂತ್ರಗಾರರು ಕೆಲವೊಮ್ಮೆ ದೇವತೆಗಳ ಪ್ರತಿಷ್ಠಾಪಕರಾಗುತ್ತಾರೆ. ದೇವತೆಗಳ ಆಕೃತಿಯನ್ನು ಮಾಡಿ ಅವಕ್ಕೆ ಕಣ್ಣು ಧರಿಸಿ ಶಕ್ತಿಯನ್ನು ತುಂಬಿದಾಗ ಆ ದೇವತೆಗಳು ಪೂಜಿಸಲು ಯೋಗ್ಯವಾಗುತ್ತವೆ. ಭೂತಪ್ರೇತಗಳನ್ನು ಓಡಿಸುವುದರಲ್ಲಿ, ಬೇಕಾದ ವಸ್ತುಗಳ ಅಪಹರಣದಲ್ಲಿ, ಬೆಳೆಯನ್ನು ಸಮೃದ್ಧಿಯಾಗಿಸುವಲ್ಲಿ ಹಾಗೂ ಶತ್ರುಗಳ ನಾಶ ಕಾರ್ಯದಲ್ಲಿ ಮಂತ್ರವಿದ್ಯೆಯನ್ನು ಬಳಸುವುದುಂಟು. ಇದರಿಂದಾಗಿ ಜನಪದ ಧರ್ಮದಲ್ಲಿ ಮಾಟ ಮಾಡಿಸುವಿಕೆ, ಸೆರೆ ಬಿಡಿಸುವಿಕೆ, ಮೋಡಿ ಹಾಕುವುದು, ಗಾಳಿ (ನೋಡಿ) ಬಿಡಿಸುವುದು ಮುಂತಾದ ಕ್ರಿಯೆಗಳು ಜೀವಂತವಾಗಿವೆ. ಮಂತ್ರಶಕ್ತಿಯಿಂದ ಮಾಡುವ ಅದ್ಭುತಗಳು ಹಳ್ಳಿಗರನ್ನು ಚಕಿತರನ್ನಾಗಿ ಮಾಡುತ್ತವೆ; ಕೆಲವೊಮ್ಮೆ ಮಂತ್ರವಾದಿಯನ್ನು ದೇವರ ಪ್ರತಿನಿಧಿಯೆಂದೂ ತಿಳಿಯುವುದುಂಟು.

ಹುಟ್ಟುಸಾವುಗಳಿಗೆ ಸಂಬಂಧಿಸಿದ ಆಚರಣೆಗಳನ್ನು ಜನಪದ ಧರ್ಮದಲ್ಲೇ ಸೇರಿಸಬಹುದು. ಕರ್ನಾಟಕದಲ್ಲಿ ಸಾಮಾನ್ಯವಾಗಿ ಮಗು ಹುಟ್ಟಿದ 3, 7, 8, 11, 12ನೆಯ ದಿನದಲ್ಲಿ ನಾಮಕರಣಮಾಡಿ ಸೂತಕ ಕಳೆದುಕೊಳ್ಳುವುದು ಅನೇಕ ಧಾರ್ಮಿಕ ವಿಧಿಗಳಿಂದ ಕೂಡಿರುತ್ತದೆ. ಶವಸಂಸ್ಕಾರ ವಿವಿಧ ರೀತಿಯದಾಗಿರುತ್ತದೆ. ಸತ್ತವರನ್ನು ಸುಡುವ ಅಥವಾ ಹೂಳುವ ಪದ್ಧತಿಯಿದೆ. ತೊನ್ನು ಹತ್ತಿದವರನ್ನು ಹೂಳದೆ ಕಾಡುಗಾಣಿಸುತ್ತಾರೆ. ಇದಕ್ಕೆ ಕಲ್ಲುಸೇವೆ ಎಂತಲೂ ಹೆಸರು. ಅಂಥವರನ್ನು ಹೂಳಿದರೆ ಹಳ್ಳಿಗೆ ಕೇಡು ಬರುವುದೆಂದೂ ಮಳೆಯಿಲ್ಲದ ಕ್ಷಾಮ ಬರುತ್ತದೆಂದೂ ನಂಬಿಕೆ ಇದೆ. ಕೂಳು ಹಾಕುವುದು, ಕರ್ಮ ಕಳೆದುಕೊಳ್ಳುವುದು ಇವೇ ಮುಂತಾದ ಸಂಪ್ರದಾಯಗಳು ಅಂತ್ಯಕ್ರಿಯೆಯಲ್ಲಿ ಸೇರಿರುತ್ತವೆ.

ಕೆಲವು ಆಚರಣೆಗಳಲ್ಲಿ ಕರ್ನಾಟಕದ ಜನಪದ ಧರ್ಮ ಶಿಷ್ಟ ಧರ್ಮದಿಂದ ಪ್ರಭಾವಿತವಾಗದೆ ಇಲ್ಲ. ನಾಗರಿಕತೆಯ ಪ್ರಭಾವ ಹೆಚ್ಚಾದಂತೆ ಸ್ವಾಭಾವಿಕವಾಗಿ ಕೆಲವು ಮೂಲ ಸಂಪ್ರದಾಯಗಳು ಕಣ್ಮರೆಯಾಗುತ್ತವೆ. ಅಲ್ಲದೆ ಈ ಎರಡು ಧರ್ಮಗಳ ನಡುವೆ ಸಂಘರ್ಷಣೆ ಮತ್ತು ಸಂಕರಕ್ರಿಯೆಗಳು ಸತತವಾಗಿ ನಡೆಯುತ್ತಿರುತ್ತವೆ. ಮಾರಮ್ಮನನ್ನು ಪೂಜಿಸುವವರು ಇಷ್ಟದೇವರುಗಳನ್ನೂ ಪೂಜಿಸುತ್ತಾರೆ. ವಿಶಿಷ್ಟ ಶಕ್ತಿಗಳನ್ನು ಹೊಂದಿರುವ ಮಾರಮ್ಮಗಳನ್ನು ಶಿಷ್ಟ ಧರ್ಮದವರೂ ಕೆಲವರು ನಂಬಿ ಪೂಜಿಸುವುದುಂಟು.

ಧರ್ಮ, ಅದು ಜನಪದ ಧರ್ಮವಾಗಲಿ ಶಿಷ್ಟಧರ್ಮವಾಗಲಿ, ಎರಡರ ಮುಖ್ಯ ಉದ್ದೇಶವು ಬದುಕಿಗೆ ಒಳ್ಳೆಯದಾಗಲಿ ಎಂಬುದೇ ಆಗಿದೆ. (ಎಸ್.ಎನ್.ಜಿ.)

ಜನಪದ ಧರ್ಮದಲ್ಲಿ ಇವೆಲ್ಲಕ್ಕಿಂತ ಮುಖ್ಯವಾದುದೆಂದರೆ ಜನಪದರು ತಮ್ಮ ಕರ್ತವ್ಯದಲ್ಲಿ ಇಟ್ಟಿರುವ ಶ್ರದ್ಧೆ ಹಾಗೂ ನಂಬಿಕೆ.

ಮರ್ತ್ಯಕ್ಕ ಬಂದೀದಿ ಕರ್ತವ್ಯ ಮಾಡಾಕ<br>
ವ್ಯರ್ಥ ನೀನಾಗಬ್ಯಾಡ ನನ ಕಂದಮ್ಮ<br>
ಶರ್ತ ಗೆದಿಯವ್ವ ಬಂದುದಕ

ಎಂಬ ಮಾತಿನಲ್ಲಿ ಈ ಬದುಕು ಒಂದು ಪಂಥಾಹ್ವಾನ. ಆದ್ದರಿಂದ ಇದು ಎಷ್ಟರ ಮಟ್ಟಿಗೆ ಕರ್ತವ್ಯಶೀಲವಾಗಿರಬೇಕು, ಪ್ರಾಮಾಣಿಕವಾಗಿರಬೇಕು ಮತ್ತು ಹೇಗೆ ಎಲ್ಲ ಕಷ್ಟಗಳನ್ನೂ ಎದುರಿಸಿ ನಿಂತು ಬದುಕಬೇಕು ಎಂಬುದರ ವಿವೇಚನೆಯಿದೆ. ಮರ್ತು ಕುಂತೀ ಯಾಕ ಮುರ್ತು ಹೋಯ್ತಿತೀ ತುರ್ತು ಮಾಡಣ್ಣ ನಿನ ಕೆಲಸ ಮುಂದಿನೇಚಿನಿ ಯಾಕ ಹಿಂದಾದ ಮರಿಬೇಕ ಇಂದೀನ ಗ್ಯಾನ ಇರಬೇಕ - ಎನ್ನುವಲ್ಲಿ ಈಗಿನ ಕೆಲಸ ಮುಖ್ಯ, ಮುಂದಾಗುವುದರ ಬಗ್ಗೆ ಸುಮ್ಮನೆ ಯೋಚಿಸುವುದರಿಂದ ಯಾವ ಪ್ರಯೋಜನವೂ ಇಲ್ಲ, ಕೆಲಸಮಾಡಿ ಬದುಕು ಸಾಗಿಸು ಎನ್ನುವ ಹಿತನುಡಿಯಿದೆ. ಜನಪದರು, ಬದುಕುವುದೊಂದೇ ಮುಖ್ಯವಲ್ಲ ನಡೆನುಡಿಯೂ ಶುದ್ಧವಾಗಿರಬೇಕು ಎಂದು ನಂಬಿದವರು. ಜೀವನ ಪರಿಶುದ್ಧವಾಗಿರಬೇಕು ಆಗ ಬದುಕಿದ್ದು ಸಾರ್ಥಕವೆಂದು ತಿಳಿದವರು. ಸುಳ್ಳು, ಕಳ್ಳತನ, ಹಾದರ, ಮೋಸ, ಕಾಠಿಣ್ಯ, ಅನ್ಯಾಯ, ಅತ್ಯಾಚಾರಕ್ಕೆ ಸುಖವಿಲ್ಲ. ಇವುಗಳಿಗೆ ಸುಡುಗಾಡೇ ಗತಿ ಎಂಬ ನಂಬಿಕೆ ಉಳ್ಳವರು. ಸತ್ಯ, ಸದಾಚಾರ, ನಿಷ್ಕಪಟತನ, ಕಾರುಣ್ಯ, ಪಾವಿತ್ರ್ಯ ಮೊದಲಾದ ಗುಣಗಳಿಗೆ ಜನಪದರು ಆದ್ಯತೆ ನೀಡಿದ್ದಾರೆ. (ಕೆ.ವಿ.ಜಿ.)

**ಜನಪದ ನಂಬಿಕೆಗಳು** : ಜಾನಪದದ ಒಂದು ಪ್ರಕಾರ. ನಂಬಿಕೆ ಎಂದರೆ ಒಂದು ಹೇಳಿಕೆ ಅಥವಾ ವಸ್ತುಸ್ಥಿತಿಯ ಬಗ್ಗೆ ಮಾನಸಿಕ ಒಪ್ಪಿಗೆಯನ್ನು ತೋರುವ ಪ್ರವೃತ್ತಿ. ಜನಪದರ ಜೀವನದಲ್ಲಿ ಹಾಸುಹೋಕ್ಕಾಗಿರುವ ಈ ನಂಬಿಕೆಗಳು ಜನತೆಯ ಆಂತರಿಕ ಮನೋಭಾವ ಹಾಗೂ ಮೂಲಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ಪರಿಚಯಿಸುವ ಪ್ರಮುಖ ಸಾಧನಗಳಾಗಿವೆ. ಎಷ್ಟೋ ವೇಳೆ ಇವು ಜನಪದರ ಬಾಳನ್ನೇ ನಿರ್ದೇಶಿಸುತ್ತವೆ ಎಂದರೆ ಅತಿಶಯೋಕ್ತಿಯಾಗಲಾರದು. ಪ್ರಪಂಚದಾದ್ಯಂತ ಕಂಡುಬರುವಂತೆ ನಂಬಿಕೆಗಳು ಕರ್ನಾಟಕದಲ್ಲೂ ಕಂಡುಬರುತ್ತವೆ. ಹೀಗೆ ಕಂಡುಬರುವ ನಂಬಿಕೆಗಳಲ್ಲಿ ಬಹಳಷ್ಟು ಮೂಢನಂಬಿಕೆಗಳೇ ಆದರೂ ಕೆಲವು ನಂಬಿಕೆಗಳಲ್ಲಿ ವೈಜ್ಞಾನಿಕ ಸತ್ಯ, ಸಾಮಾನ್ಯ ಜ್ಞಾನ, ಪೌರಾಣಿಕ, ಐತಿಹ್ಯಾಂಶ ಹಾಗೂ ಕಥಾಂಶಗಳೂ ಅಡಕವಾಗಿವೆ.

ಜನಪದ ನಂಬಿಕೆಗಳ ಉಗಮ ಮುಖ್ಯವಾಗಿ ಮೂರು ರೀತಿಗಳಲ್ಲಿ ಆಯಿತೆನ್ನಬಹುದು - ಧಾರ್ಮಿಕ, ಸಾಂಸ್ಕೃತಿಕ ಹಾಗೂ ವೈಯಕ್ತಿಕ. ಧಾರ್ಮಿಕ ನಂಬಿಕೆಗಳು ಭಯದಿಂದ ಹುಟ್ಟಿದವು. ಮನಸ್ಸಿನ ಅಸ್ಥಿರತೆ ಮತ್ತು ಅತಿಮಾನುಷಭಯ ಈ ವರ್ಗದ ನಂಬಿಕೆಗಳ ಹುಟ್ಟಿಗೆ ಮುಖ್ಯ ಕಾರಣ. ಭೂತಾರಾಧನೆ, ಪಿತೃಪೂಜೆ, ದೇವತೆಗಳ ಆರಾಧನೆ, ಕುಲದೇವತಾಪದ್ಧತಿ ಇತ್ಯಾದಿಗಳಿಗೆ ಸಂಬಂಧಿಸಿದ ನಂಬಿಕೆಗಳು ಈ ಗುಂಪಿನಲ್ಲಿ ಸೇರುತ್ತವೆ. ಜನ ತಮ್ಮ ಸಂಸ್ಕೃತಿಯನ್ನು ರೂಪಿಸಿಕೊಳ್ಳುವಾಗ ಅವರ ಚಟುವಟಿಕೆಗಳಿಗೆ ತಕ್ಕಂತೆ ಈ ಕೆಲವು ನಂಬಿಕೆಗಳು ರೂಪತಾಳಿದವು. ಇವು ಸಾಂಸ್ಕೃತಿಕ ನಂಬಿಕೆಗಳು. ಉದಾಹರಣೆಗೆ ವಿಧವೆ ಶುಭಕಾರ್ಯಗಳಲ್ಲಿ ಭಾಗವಹಿಸಬಾರದು ಎಂಬುದನ್ನು ಸಮಾಜ ಒಪ್ಪಿದ್ದರಿಂದ ಅದು ಆಚರಣೆಯಲ್ಲಿದ್ದು ನಮ್ಮ ಸಂಸ್ಕೃತಿಯಲ್ಲಿ ಸೇರಿದ ಒಂದು ನಂಬಿಕೆಯಾಗಿ ಉಳಿದುಬಂತು.

ವೈಯಕ್ತಿಕ ನಂಬಿಕೆಗಳು ಧಾರ್ಮಿಕ ಹಾಗೂ ಸಾಂಸ್ಕೃತಿಕ ನಂಬಿಕೆಗಳ ಸಂಸ್ಕಾರದಿಂದ ಒಬ್ಬ ವ್ಯಕ್ತಿಯಲ್ಲಿ ಕಾಣಿಸಿಕೊಳ್ಳುತ್ತವೆ. ಇವು ಸಾರ್ವತ್ರಿಕವಾದರೂ ವ್ಯಕ್ತಿಯಿಂದ ವ್ಯಕ್ತಿಗೆ ಬೇರೆಯಾಗಬಹುದು. ಒಬ್ಬನಿಗೆ ಮಂಗಳವಾರ ಅಶುಭವಾದರೆ ಮತ್ತೊಬ್ಬನಿಗೆ ಅದು ಶುಭವಾಗಬಹುದು. ಒಬ್ಬನಿಗೆ ಒಂದು ಅಂಕಿ ಅದೃಷ್ಟಸಂಖ್ಯೆಯಾದರೆ ಮತ್ತೊಬ್ಬನಿಗೆ ದುರದೃಷ್ಟದ ಸಂಕೇತವಾಗಬಹುದು. ಈ ಬಗೆಯ ನಂಬಿಕೆಗಳಲ್ಲಿ ಬಾಳಿನ ಅನುಭವ ಹಾಗೂ ಮಾನಸಿಕ ಅನುಭವಗಳ ಮಿಳಿತವನ್ನು ಕಾಣಬಹುದು. ಯಾವ ಗಳಿಗೆಯಲ್ಲಿ ಅವಳು ನನ್ನ ಮನೆಗೆ ಹೆಜ್ಜೆ ಇಟ್ಟು ಬಂದಳೋ ನನ್ನ ಮನೆ ಬಂಗಾರವಾಯಿತು - ಎಂದು ಸೊಸೆ ಮನೆಗೆ ಬಂದ ಅನಂತರ ಮನೆಯ ಉತ್ತಮ ಪರಿಸ್ಥಿತಿಯನ್ನು ಕಂಡು ಅವಳ ಅತ್ತೆ ಅಥವಾ ಮಾವ ಹೇಳಿಕೊಳ್ಳಬಹುದು. ಹಾಗೆಯೇ ಸೊಸೆ ಕಾಲಿಟ್ಟಂದಿನಿಂದ ಅವಳು ಬಂದ ಕಾಲುಗುಣ ಚೆನ್ನಾಗಿಲ್ಲವೆಂದೂ ನನ್ನ ಮನೆ ಗುಡಿಸಿ ಗುಂಡಾಂತರವಾಯಿತೆಂದೂ ಹೇಳಬಹುದು. ವೈಯಕ್ತಿಕ ನಂಬಿಕೆಗಳು ಕೆಲವೊಮ್ಮೆ ವ್ಯಕ್ತಿಯ ಶ್ರೇಯಸ್ಸಿಗೆ ಮಾರಕವಾಗುವುದುಂಟು. ಮಹತ್ ಕಾರ್ಯಕ್ಕೆಂದು ಹೊರಟವನು ಅಪಶಕುನವಾಯಿತೆಂದು ಹಿಂತಿರುಗುವುದರಿಂದ ನಷ್ಟವನ್ನು ಅನುಭವಿಸಬಹುದು. ದೇವರೇ ತನ್ನ ರೋಗವನ್ನು ವಾಸಿಮಾಡುತ್ತಾನೆಂದು ನಂಬಿ ವೈದ್ಯನನ್ನು ಕಾಣದೆ ವಾಸಿಮಾಡಿಕೊಳ್ಳದೆ, ವಾಸಿಮಾಡಿಕೊಳ್ಳಲು ಪ್ರಯತ್ನಿಸದೆ ಪ್ರಾಣವನ್ನೇ ಕಳೆದುಕೊಳ್ಳಬಹುದು.

ನಂಬಿಕೆಗಳು ತಪ್ಪುಗ್ರಹಿಕೆಯಿಂದಲೂ ಹುಟ್ಟಬಹುದು. ವಿಚಾರಶಕ್ತಿ ಕಡಿಮೆ ಇರುವವರು ಮನೋದೌರ್ಬಲ್ಯವುಳ್ಳವರು ಸಮಾಜದಲ್ಲಿ ಪ್ರಭಾವಿತಶಕ್ತಿಗಳಾಗಿದ್ದರೆ ಅಂಥವರು ನಂಬಿಕೆಗಳ ಹುಟ್ಟಿಗೆ ಕಾರಣರಾಗುತ್ತಾರೆ.

ನಂಬಿಕೆಗಳಲ್ಲಿ ಸಾರ್ವತ್ರಿಕತೆ ಮತ್ತು ಪ್ರಾದೇಶಿಕತೆ ಕಂಡುಬರುತ್ತವೆ. ಇವುಗಳ ಮೂಲ ಆಶಯ ಸಾಮಾನ್ಯವಾಗಿ ಒಂದೇ. ಕೆಲವೊಮ್ಮೆ ರೂಪ ಮಾತ್ರ ಬೇರೆಯಾಗಿರುತ್ತವೆ. ಕೆರೆಗೆ ಬಲಿಕೊಟ್ಟರೆ ಏರಿ ಭದ್ರವಾಗಿ ನಿಲ್ಲುತ್ತದೆ, ನರಬಲಿ ಕೊಟ್ಟರೆ ಐಶ್ವರ್ಯ ಮತ್ತು ದೇವರ ದಯೆ ಗಳಿಸಬಹುದು, ಮನೆ ಭದ್ರವಾಗಿ ನಿಲ್ಲಬೇಕಾದರೆ ತಳಹದಿಗೆ ಮಕ್ಕಳ ಬಲಿಕೊಡಬೇಕು ಮುಂತಾದ ನಂಬಿಕೆಗಳು ಪ್ರಪಂಚದ ಎಲ್ಲೆಡೆ ಇರುವಂತೆ ಕರ್ನಾಟಕದಲ್ಲೂ ಇದ್ದವೆಂಬುದಕ್ಕೆ ಜನಪದ ಸಾಹಿತ್ಯದಲ್ಲಿ ಅನೇಕ ಪುರಾವೆಗಳು ದೊರೆಯುತ್ತವೆ. (ಜಿ.ಎ.ಡಿ.)

ಕರ್ನಾಟಕದಲ್ಲಿನ ನಂಬಿಕೆಗಳನ್ನು ಅಧ್ಯಯನ ದೃಷ್ಟಿಯಿಂದ ಸ್ಥೂಲವಾಗಿ ವೈಜ್ಞಾನಿಕ, ಅವೈಜ್ಞಾನಿಕ ಎಂದು ವಿಭಜಿಸಬಹುದು. ಈ ರೀತಿಯ ವಿಭಜನೆಯಡಿಯಲ್ಲಿ ಎಲ್ಲ ತರಹದ ನಂಬಿಕೆಗಳನ್ನೂ ಸೇರಿಸಲು ಸಾಧ್ಯವಾಗುವುದಿಲ್ಲ. ಎಲ್ಲ ನಂಬಿಕೆಗಳಲ್ಲೂ ವೈಜ್ಞಾನಿಕ ಅಂಶ ದೊರೆಯುವುದಿಲ್ಲ. ವೈಜ್ಞಾನಿಕವಲ್ಲದ ಕೆಲವು ನಂಬಿಕೆಗಳಲ್ಲಿ ನಂಬಿಕೆ ಇಡುವುದರಿಂದ ಮಾನಸಿಕ ತೃಪ್ತಿಯಾದರೂ ದೊರೆಯಬಹುದು. ಉದಾಹರಣೆಗೆ ಪಿತೃಪಕ್ಷವನ್ನು ಆಚರಿಸುವುದರಿಂದ ಸತ್ತವರ ಆತ್ಮಕ್ಕೆ ಶಾಂತಿ ದೊರೆಯುತ್ತದೆ; ಅವರು ಪದೇ ಪದೇ ಬಂದು ಪೀಡಿಸುವುದಿಲ್ಲ ಎಂದು ನಂಬುವುದರಲ್ಲಿ ವೈಜ್ಞಾನಿಕ ಸತ್ಯವಿಲ್ಲದಿದ್ದರೂ ಅಂಥ ಆಚರಣೆಗಳಿಂದ ಆಚರಿಸುವವನಿಗೆ ಮಾನಸಿಕ ಸಂತೃಪ್ತಿ ದೊರೆಯಬಹುದು.

ವೈಜ್ಞಾನಿಕ ಸತ್ಯವನ್ನೊಳಗೊಂಡ ನಂಬಿಕೆಗಳು ಬಹಳಷ್ಟಿವೆ. ಊಟಕ್ಕೆ ಕುಳಿತಾಗ ತಟ್ಟೆ ಅಥವಾ ಎಲೆಯ ಸುತ್ತಲೂ ನೀರನ್ನು ಚುಮುಕಿಸಬೇಕು ಎಂಬ ನಂಬಿಕೆಯಿಂದ ಸಣ್ಣ ಕ್ರಿಮಿಕೀಟಗಳು ತಟ್ಟೆಯ ಒಳಗೆ ಹರಿದು ಬರುವುದನ್ನು ತಡೆಗಟ್ಟಬಹುದು. ಉಗುರು ನೀರನ್ನು ಹಾರಿಸಬಾರದು. ಹಾರಿಸಿದರೆ ಉಗುರುಸುತ್ತಾಗುತ್ತದೆ ಎಂಬಲ್ಲಿ ಇರುವ ಸತ್ಯವಿಷ್ಟು; ಉಗುರು ಸಂದುಗಳಲ್ಲಿ ಕೊಳೆ ಸೇರಿದರೆ ವಿಷವಸ್ತು ಉಂಟಾಗುತ್ತದೆ. ಇದನ್ನು ಬೇರೆಯವರಿಗೆ ಹಾರಿಸುವುದರಿಂದ ಅವರಿಗೆ ಹಾನಿಯಾಗಬಹುದು. ಅಂತೆಯೇ ಬೇರೆಯವರ ಚಪ್ಪಲಿಗಳನ್ನು ಮೆಟ್ಟಬಾರದು, ಬೇರೆಯವರು ಬಟ್ಟೆಯನ್ನು ಬಳಸಬಾರದು ಎಂಬಲ್ಲಿ ಚರ್ಮರೋಗವನ್ನು ತಡೆಗಟ್ಟಬಹುದು ಎಂಬ ಸತ್ಯವನ್ನು ಕಾಣಬಹುದು.

ಕೆಲವು ನಂಬಿಕೆಗಳಲ್ಲಿ ವೈದ್ಯಕೀಯ ಸಂಗತಿಗಳು ಅಡಕವಾಗಿವೆ. ಅಜೀರ್ಣದಿಂದ ಹೊಟ್ಟೆ ಉಬ್ಬರಿಸಿಕೊಂಡರೆ, ನೋವು ಕಾಣಿಸಿಕೊಂಡರೆ ಬೆಂಬೂದಿ (ಬೆಚ್ಚನೆಯ ಬೂದಿ) ತಿಕ್ಕಿದರೆ ಸರಿಯಾಗುತ್ತದೆ ಎಂಬಲ್ಲಿ ಆ ರೀತಿ ಮಾಡುವುದರಿಂದ ಪಚನಕ್ರಿಯೆ ಚೇತನಗೊಂಡು ನೋವು ಕಡಮೆಯಾಗಬಹುದು. ತಲೆನೋವು ಬಂದರೆ ಚಿಟಿಕೆ (ಗಾಜಿನ ಬಳೆಚೂರಿನಿಂದ ಗಂಡಸ್ಥಲಕ್ಕೆ ಚುರುಕ್ ಎನ್ನುವಂತೆ ಸುಡುವುದು) ಹಾಕಿದರೆ ವಾಸಿಯಾಗುತ್ತದೆ ಎಂಬ ನಂಬಿಕೆ ಚೀನದಲ್ಲಿರುವ ಆಕ್ಯೂಪಂಕ್ಚರ್ ವೈದ್ಯಪದ್ಧತಿಯನ್ನೂ ನೆನಪಿಗೆ ತರುತ್ತದೆ. ನಿಗದಿಯಾದ ಜಾಗದಲ್ಲಿ ಚಿಟಿಕೆ ಹಾಕುವುದರಿಂದ ನರದ ಮೇಲೆ ಒಂದೆಡೆಯೇ ಸಂಗ್ರಹವಾಗಿದ್ದ ವಿಷವಸ್ತುಗಳು ಕ್ರಿಯೆಯ ವರ್ಧನೆಯಿಂದ ಬೇರೆಡೆಗೆ ಸಾಗಿಸಲ್ಪಟ್ಟು ನೋವು ಕಡಿಮೆಯಾಗಬಹುದು.

ಪ್ರಕೃತಿಯೊಡನೆ ಹೊಂದಿರುವ ಸತತ ಸಂಪರ್ಕದಿಂದಾಗಿ ರೈತ ಅದರಲ್ಲಾಗುವ ಬದಲಾವಣೆಗಳನ್ನು ಗಮನಿಸಿ ಕೆಲವು ನಂಬಿಕೆಗಳನ್ನು ಸೃಷ್ಟಿಸಿದ. ಇವು ಕೆಲವೊಮ್ಮೆ ಸತ್ಯವಾಗುವುದುಂಟು. ಕೋಟೆ ಮುಗಿಲೆದ್ದರೆ ಮಳೆಯಾಗುತ್ತದೆ. ಸೂರ್ಯ ಗುಡಿಕಟ್ಟಿದರೆ, (ಪ್ರಭಾವಳಿ ಸುತ್ತುಗಟ್ಟಿದರೆ) ಸೂರೆಲ್ಲ ಮಳೆಯಾಗುತ್ತದೆ. ಕೊಡತಿ ಹುಳು ಕಾಣಿಸಿಕೊಂಡರೆ ಮಳೆಯಾಗುತ್ತದೆ. ತಿಂಗಳು (ಚಂದ್ರ) ಗುಡಿಕಟ್ಟಿದರೆ ತಿಂಗಳು ಮಳೆಯಿಲ್ಲ. ಎತ್ತುಮೂರು ಮಿಂಚಿದರೆ (ಕುರ್ತೇಟು) ಖಂಡಿತ ಮಳೆ ಇತ್ಯಾದಿ ನಂಬಿಕೆಗಳಿಗೂ ವಾತಾವರಣದಲ್ಲಾಗುವ ಬದಲಾವಣೆಗಳಿಗೂ ಏನೋ ಸಂಬಂಧವಿರಬೇಕು. ಅವುಗಳ ಆಂತರಿಕ ಸತ್ಯಾಸತ್ಯಗಳ ವಿವೇಚನೆ ರೈತರಿಗೆ ಇಲ್ಲವಾದರೂ ಅವು ಪರಂಪರಾನುಗತವಾಗಿ ಅನುಭವದಿಂದ ಬಂದವುಗಳಾದ್ದರಿಂದ ಅಂಥ ನಂಬಿಕೆಗಳು ಉಳಿದುಬಂದಿವೆ.

ನಂಬಿಕೆಗಳ ಮತ್ತೊಂದು ರೀತಿಯ ವಿಭಜನಕ್ರಮವೆಂದರೆ ಅವುಗಳನ್ನು ಮಾನುಷ, ಅತಿಮಾನುಷ, ಪ್ರಾಣಿ, ಪ್ರಕೃತಿ, ಕೌಟುಂಬಿಕ ಹಾಗೂ ಸಂಕೀರ್ಣ ಸಂಬಂಧದವು ಎಂದು ವಿಭಜಿಸುವುದು. ಈ ಪ್ರಕಾರಗಳ ನಡುವಿನ ಎಲ್ಲೆಯನ್ನು ಗುರುತಿಸುವಾಗ ಅಸ್ಪಷ್ಟತೆ ಕಾಣಬಂದರೂ ಎಲ್ಲ ರೀತಿಯ ನಂಬಿಕೆಗಳನ್ನೂ ವಿಷಯಪ್ರಧಾನತೆಯ ಆಧಾರದ ಮೇಲೆ ಸಮರ್ಪಕವಾಗಿ ವಿಂಗಡಿಸಬಹುದೆಂದು ತೋರುತ್ತದೆ.

ದೆವ್ವ, ಪೀಡೆ, ದೇವರುಗಳ ಬಗ್ಗೆ ಇರುವ ನಂಬಿಕೆಗಳು ಅತಿಮಾನುಷ ಗುಂಪಿನಲ್ಲಿ ಸೇರುತ್ತವೆ. ಪೂರ್ಣಿಮೆ ಅಮಾವಾಸ್ಯೆಗಳಲ್ಲಿ ದೆವ್ವಗಳ ಸಂಚಾರ ಹೆಚ್ಚು, ಜುಟ್ಟಿಲ್ಲದ ತೆಂಗಿನ ಕಾಯನ್ನು ದೇವರಿಗೆ ಒಡೆಯಬಾರದು, ಹುಣಿಸೆ ಮರದಲ್ಲಿ ದೆವ್ವಗಳಿರುತ್ತವೆ ಇತ್ಯಾದಿ ನಂಬಿಕೆಗಳು ಸಾಮಾನ್ಯವಾಗಿ ಅತಿಮಾನುಷ ಭಯದಿಂದ ಹುಟ್ಟಿದ ಮನಸ್ಸಿನ ಅಸ್ಥಿರ ಭಾವನೆಗಳು ಮನಸ್ಸಿನ ಅಂಗೀಕಾರಮುದ್ರೆ ಧರಿಸಿ ಸಮಾಜದಲ್ಲಿ ಬಳಕೆಯಲ್ಲಿವೆ.

ಹಬ್ಬ-ಹರಿದಿನಗಳು, ಹುಟ್ಟು-ಸಾವು, ಕಾಲ, ಕನಸು ನಿದ್ರೆ, ವಾರಗಳು, ಒಡಹುಟ್ಟಿದವರು, ವಿವಾಹ, ಪುರುಷ ಹಾಗೂ ಸ್ತ್ರೀ ದೇಹಗಳಿಗೆ ಸಂಬಂಧಿಸಿದ ವಿಷಯಗಳನ್ನೊಳಗೊಂಡ ನಂಬಿಕೆಗಳನ್ನು ಮಾನುಷ ಗುಂಪಿನಲ್ಲಿ ಸೇರಿಸಬಹುದು. ಈ ಗುಂಪಿನಲ್ಲಿ ವೈಯಕ್ತಿಕ ಹಾಗೂ ಸಾಂಪ್ರದಾಯಿಕ ನಂಬಿಕೆಗಳು ಸೇರುತ್ತವೆ. ವರ್ಷಕ್ಕೊಮ್ಮೆ ಬರುವ ಹಬ್ಬದದಿನ ಮಕ್ಕಳನ್ನು ಹೊಡೆಯಬಾರದು, ತೊಲೆ ಕೆಳಗೆ ಮಲಗಿದರೆ ಕನಸುಗಳು ಜಾಸ್ತಿ, ಸಂಜೆಯಾದ ಮೇಲೆ ಅಂಗಡಿಯಿಂದ ಅಥವಾ ಮನೆಯಿಂದ ಹೊರಗಡೆಗೆ ಸೀಗೆಕಾಯಿಪುಡಿ ಅರಿಸಿನ ಮಜ್ಜಿಗೆ ಉಪ್ಪು ಕೊಡಬಾರದು, ಹೊತ್ತು ಮುಳುಗಿದ ಮೇಲೆ ಅಕ್ಕಿ ತಿನ್ನಬಾರದು ಇತ್ಯಾದಿಗಳು ಈ ವಿಭಾಗಕ್ಕೆ ಸೇರುತ್ತವೆ. ವಾರಗಳ ಶುಭಾಶುಭಗಳನ್ನು ಕುರಿತ ನಂಬಿಕೆಗಳೂ ಇವೆ. ಸಾಮಾನ್ಯವಾಗಿ ಮಂಗಳವಾರ ಅಶುಭ, ಶನಿವಾರ ಹೊಸ ಬಟ್ಟೆ ಹಾಕಬಾರದು, ಶುಕ್ರವಾರ ಸೊಸೆ ಕಳುಹಿಸಬಾರದು, ಮಂಗಳವಾರ ಮಗಳನ್ನು ಕಳುಹಿಸಬಾರದು, ಹುಟ್ಟಿದ ವಾರದಲ್ಲಿ ತಲೆಕೂದಲು ಚೌರಮಾಡಿಸಬಾರದು ಇತ್ಯಾದಿ. ಮಾನವನ ಅಂಗಾಂಗಗಳಲ್ಲಿನ ಕುರುಹು ಅಥವಾ ಕೆಲವು ನ್ಯೂನತೆಗಳನ್ನು ಕುರಿತು ಅವು ಅವನ ಅದೃಷ್ಟ - ದುರದೃಷ್ಟಗಳನ್ನು ತಿಳಿಸುತ್ತವೆ ಎಂಬ ನಂಬಿಕೆಗಳೂ ಸಾಕಷ್ಟು ಕಂಡುಬರುತ್ತವೆ. ಆರು ಬೆರಳಿದ್ದವರು, ಮಾಲುಗಣ್ಣಿನವರು ಅದೃಷ್ಟವಂತರಂತೆ. ಮೂಗು ಉದ್ದವಿದ್ದರೆ ಪುಣ್ಯವಂತ, ಕಣ್ಣು ಸಣ್ಣವಾಗಿದ್ದರೆ ಬುದ್ಧಿವಂತ, ತಲೆ ದಪ್ಪವಾಗಿದ್ದರೆ ಬುದ್ಧಿವಂತ, ಹಸ್ತದಲ್ಲಿ ಗರುಡಮಚ್ಚೆ ಇದ್ದವರನ್ನು ಹಾವು ಕಚ್ಚುವುದಿಲ್ಲ, ಎದೆಯ ಬಲಭಾಗದಲ್ಲಿ ಮಚ್ಚೆ ಇದ್ದ ಪುರುಷ

ಅದೃಷ್ಟವಂತ, ಎಡಭಾಗದಲ್ಲಿದ್ದರೆ ಸ್ತ್ರೀ ಅದೃಷ್ಟವಂತೆ ಇತ್ಯಾದಿ. ದೇಹದಲ್ಲಿ ಆಗುವ ಆಕಸ್ಮಿಕ ಚಲನೆಯನ್ನು ಕುರಿತ ನಂಬಿಕೆಗಳಿವೆ. ಉದಾಹರಣೆಗೆ ಹಣೆ ಅದುರಿದರೆ ಶುಭ, ಬಲಭುಜ ಅದುರಿದರೆ ಸಂಭೋಗಸುಖ, ಎಡಭುಜ ಅದುರಿದರೆ ಕೇಡು, ಬೆನ್ನು ಅದುರಿದರೆ ಧನಲಾಭ, ಬಲಗಣ್ಣು ಅದುರಿದರೆ ಶುಭ, ಎಡಗಣ್ಣು ಅದುರಿದರೆ ಅಶುಭ ಇತ್ಯಾದಿ.

ವಿವಾಹಕ್ಕೆ ಸಂಬಂಧಿಸಿದ ನೂರಾರು ನಂಬಿಕೆಗಳು ಕರ್ನಾಟಕದಲ್ಲಿವೆ. ವಿವಾಹದ ದಿನ ಮಳೆ ಬಂದರೆ ಗಂಡು ಅಥವಾ ಹೆಣ್ಣು ಅಕ್ಕಿ ತಿಂದಿದ್ದಾರೆಂದು ಹೇಳುತ್ತಾರೆ. ಲಗ್ನ ಕಟ್ಟಿಸಿದ ದಿನದಿಂದ ಮದುವೆ ಮುಗಿಯುವವರೆಗೆ ಮನೆಯಲ್ಲಿ ಮಾಂಸ ಮಾಡಬಾರದು. ಮದುವೆಯಾದ ವರ್ಷ ಮನೆ ಕಟ್ಟಬಾರದು. ಮದುವೆಯಾದ ವರ್ಷವೇ ಮೂರು ತಲೆ ಕಾಣಬಾರದು. ಕಂಡರೆ ಅವ್ವನಿಗೋ ಅಪ್ಪನಿಗೋ ಕೇಡು ಇತ್ಯಾದಿ. ಪ್ರಾಣಿಸಂಬಂಧ ನಂಬಿಕೆಗಳಲ್ಲಿ ಪ್ರಾಣಿಗಳ ಚತುರತೆ, ಅವುಗಳಿಂದ ಬರುವ ಅನಿಷ್ಟ, ಅವುಗಳ ಬಗ್ಗೆ ಮಾನವನಿಗಿರುವ ಅನುಕಂಪ ಮೊದಲಾದವನ್ನು ಕಾಣಬಹುದು. ಇರುವೆಗೂಡಿಗೆ ಅಕ್ಕಿ ಬೆಲ್ಲ ಹಾಕಿದರೆ ಪುಣ್ಯಬರುತ್ತದೆ, ಕೊತ್ತಿ ಸಾಯಿಸಿದರೆ ಕಾಶಿಗೆ ಹೋದರೂ ಪಾಪ ಕಳೆಯುವುದಿಲ್ಲ - ಈ ಮೊದಲಾದ ನಂಬಿಕೆಗಳು ಪ್ರಾಣಿಗಳ ಮೇಲಿನ ಮಮತೆ, ಅನುಕಂಪೆಯನ್ನು ತೋರುತ್ತವೆ. ನಡುರಾತ್ರಿಯಲ್ಲಿ ನಾಯಿಗಳು ಒಟ್ಟಿಗೆ ಊಳಿಡಲಾರಂಭಿಸಿದರೆ ಯಾರಾದರೂ ಸಾಯುತ್ತಾರೆ ಎಂಬ ನಂಬಿಕೆ ಅನಿಷ್ಟವನ್ನು ಸೂಚಿಸುತ್ತದೆ. ಪ್ರಾಣಿ ನಂಬಿಕೆಗಳಲ್ಲಿ ಭವಿಷ್ಯವಾಚನಗಳು ಬಹಳಷ್ಟಿವೆ. ಇದರಲ್ಲಿ ಶಕುನಗಳು ಸಾಮಾನ್ಯವಾಗಿ ಪ್ರಯಾಣಕ್ಕೆ ಸಂಬಂಧಿಸಿದವುಗಳು. ಪ್ರಯಾಣದಲ್ಲಿ ಹಾವು ಎಡದಿಂದ ಬಲಕ್ಕೆ ಬಂದರೆ ಒಳ್ಳೆಯದು, ಹಲ್ಲಿ ಬಲದಿಂದ ತಲೆಯ ಮೇಲೆ ನುಡಿದರೆ ಶುಭ, ನರಿ ಆಗ್ನೇಯ ದಿಕ್ಕಿನಲ್ಲಿ ಕೂಗಿದರೆ ಅಶುಭ, ಗೂಬೆ ಊರೊಳಗೆ ಬಂದು ಕೂಗಿದರೆ ಯಾರಾದರೂ ಸಾಯುತ್ತಾರೆ, ಬೆಕ್ಕು ಅಡ್ಡಲಾಗಿ ಎಡದಿಂದ ಬಲಕ್ಕೆ ಹೋದರೆ ಶುಭ ಹೀಗೆಂದು ಹೇಳುವುದುಂಟು. ಮನೆಯ ಮೇಲೆ ಕಾಗೆಗಳು ಕುಳಿತು ಕೂಗಿದರೆ ಆ ದಿನ ನೆಂಟರು ಬರುತ್ತಾರೆ ಎಂಬ ನಂಬಿಕೆ ಕೆಲವು ಕಡೆ ಇದೆ.

ಪ್ರಕೃತಿಯನ್ನು ಕುರಿತ ನಂಬಿಕೆಗಳಲ್ಲಿ ಗಿಡ, ಮರ, ಫಲ, ಹೂವುಗಳಿಗೆ ಸಂಬಂಧಿಸಿದ ವಿಷಯಗಳು ಬರುತ್ತವೆ. ಫಲಬಿಡುವ ಮರವನ್ನು ಕಡಿಯಬಾರದು, ಅರಳಿಮರ ಕಡಿಯಬಾರದು ಇತ್ಯಾದಿ. ಇಂಥ ನಂಬಿಕೆಗಳಿಗೆ ಬಹುಶಃ ಅರಳಿಮರ ದೊಡ್ಡದಾಗಿದ್ದು ದಾರಿಹೋಕರಿಗೆ ನೆರಳನ್ನು ನೀಡುತ್ತದೆ. ಫಲಬಿಡುವ ಮರ ಮನುಷ್ಯನಿಗೆ ಉತ್ಕೃಷ್ಟ ಹಣ್ಣುಗಳನ್ನು ಕೊಡುತ್ತದೆ ಎಂಬುದು ಕಾರಣವಿರಬೇಕು.

ಕೌಟುಂಬಿಕ ನಂಬಿಕೆಗಳು ಅಡುಗೆ, ಊಟ ಮತ್ತು ಕುಟುಂಬದ ವಿಷಯಗಳಿಗೆ ಸಂಬಂಧಿಸಿದವುಗಳು. ಊಟದ ತಟ್ಟೆಯನ್ನು ಕಾಲಿನಿಂದ ಒದೆಯಬಾರದು. ಎಂಜಲು ತಟ್ಟೆಯನ್ನು ದಾಟಬಾರದು; ದಾಟಿದರೆ ಊಟಮಾಡಿದವರಿಗೆ ಹೊಟ್ಟೆ ನೋವು ಬರುತ್ತದೆ. ತುತ್ತು ತೂಕ ಮಾಡಬಾರದು ಇತ್ಯಾದಿಗಳಲ್ಲದೆ ಕುಟುಂಬದಲ್ಲಿ ಅನುಸರಿಸಬೇಕಾದ ನಿಯಮಗಳ ಬಗ್ಗೆ, ಅದರ ಐಕ್ಯತೆಗೆ ಹಿರಿಕಿರಿಯರು ಅನುಸರಿಸಬೇಕಾದ ನಡತೆಯ ಬಗ್ಗೆ, ಬಳಕೆಯ ವಸ್ತುಗಳ ಬಗ್ಗೆ ಇರುವ ನಂಬಿಕೆಗಳು ಈ ವಿಭಜನೆಯಡಿಯಲ್ಲಿಯೇ ಸೇರುತ್ತವೆ.

ಕೆಲವು ನಂಬಿಕೆಗಳು ಒಳ್ಳೆಯ ಐತಿಹ್ಯಗಳಾಗುತ್ತವೆ. ಇದಕ್ಕೆ ತುರುವೇಕೆರೆ ಸಮೀಪದಲ್ಲಿ ಮಲ್ಲಾಘಟ್ಟದ ಬಳಿ ಇರುವ ಅಣ್ಣ ತಮ್ಮಂದಿರ ಗುಡ್ಡಕ್ಕಿರುವ ಕಥೆಯನ್ನು ಉದಾಹರಣೆಯಾಗಿ ಹೇಳಬಹುದು. ಅಣ್ಣತಮ್ಮಂದಿರಲ್ಲಿ ಪರಸ್ಪರ ಆಸೆ ಹೆಚ್ಚಾದಾಗ ಅಣ್ಣನನ್ನು ಊಟಕ್ಕೆ ಕಳುಹಿಸಿ ತಮ್ಮ ಅವನ ರಾಶಿಯನ್ನು ದೋಚುತ್ತಾನೆ. ತಮ್ಮ ಮನೆಗೆ ಹೋದಾಗ ಅಣ್ಣ ತಮ್ಮನ ರಾಶಿಯಲ್ಲಿ ಕದಿಯುತ್ತಾನೆ. ಅವರ ಆಸೆಬುರುಕತನಕ್ಕೆ ಪ್ರಾಯಶ್ಚಿತ್ತವೆಂಬಂತೆ ಇಬ್ಬರ ರಾಶಿಗಳು ಬೆಳಕುಹರಿಯುವದರೊಳಗೆ ಮಣ್ಣಿನ ಗುಡ್ಡೆಗಳಾಗಿರುತ್ತವೆ. ತುಂಬಿದ ರಾಶಿಯಲ್ಲಿ ಧಾನ್ಯ ಕದಿಯಬಾರದು ಎಂಬ ಈ ಒಂದು ನಂಬಿಕೆ ಈಗಲೂ ಸುತ್ತಮುತ್ತಲ ಜನರ ಮೇಲೆ ನೈತಿಕ ಪ್ರಭಾವವನ್ನು ಬೀರಿರುವುದುಂಟು. ಹೀಗೆ ಎಷ್ಟೋ ನಂಬಿಕೆಗಳಿಗೆ ಕಾರಣವಾದ ದಂತಕಥೆಗಳಿವೆ.

ಕೆಲವು ನಂಬಿಕೆಗಳಂತೂ ನೀತಿಪ್ರಧಾನವಾಗಿವೆ. ಉಂಡವನಿಗೆ ಎರಡು ಬಗೆಯಬಾರದು, ತುಂಬಿದ ಕೆರೆಗೆ ಕಲ್ಲು ಹೊಡೆಯಬಾರದು (ಅಂದರೆ ನೆಮ್ಮದಿಯಿಂದಿರುವವರ ಜೀವನದ ಮಧ್ಯೆ ಪ್ರವೇಶಿಸಿ ಅಶಾಂತಿಯನ್ನು ತರುವ ಯತ್ನ ಬೇಡ ಇತ್ಯಾದಿ, ಹಸಿದವನಿಗೆ ಅನ್ನ ಹಾಕಿದರೆ ಪುಣ್ಯ ಬರುತ್ತದೆ ಎಂಬ ನಂಬಿಕೆ ಮಾನವೀಯತೆಯನ್ನು ಪ್ರತಿನಿಧಿಸುತ್ತದೆ.

ನಂಬಿಕೆಗಳಿಂದ ಮಾನವನಿಗೆ ಉಪಕಾರವಾಗುವ ಸಂದರ್ಭಗಳಿದ್ದಾಗ್ಯೂ ಮುಗ್ಧಜನತೆಗೆ ಬಹಳಷ್ಟು ಸಲ ಈ ಬಗೆಯ ಕೆಲವು ಮೂಢನಂಬಿಕೆಗಳಿಂದ ತಮ್ಮ ಸರ್ವಸ್ವವನ್ನೂ ನಾಶಮಾಡಿಕೊಳ್ಳುವ ಸಮಯ ಒದಗಿಬರುವುದುಂಟು. ಆದ್ದರಿಂದ ಮೊದಲಿಗೆ ಅವುಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳಬೇಕಾಗುತ್ತದೆ. ಈ ಹಿಡಿತಕ್ಕೆ ಸಿಕ್ಕದೆ ಹೋದ ನಂಬಿಕೆಗಳಿಂದ ಎಚ್ಚರವಿರಬೇಕಾದ ಅಗತ್ಯವನ್ನೂ ಅಲಕ್ಷಿಸಕೂಡದು.

ಕನ್ನಡದಲ್ಲಿ ಜನಪದ ನಂಬಿಕೆಗಳ ಸಂಗ್ರಹ ಸಂಪಾದನೆ ಪ್ರಕಟಣೆಯ ಕಾರ್ಯ ತಕ್ಕಮಟ್ಟಿಗೆ ನಡೆದಿರುವುದರ ಜೊತೆಗೆ ಅವನ್ನು ವೈಜ್ಞಾನಿಕ ಒರೆಗಲ್ಲಿನಿಂದ ಪರೀಕ್ಷಿಸಿ ಪೃಥಃಕರಿಸುವ ಕಾರ್ಯವೂ ನಡೆದಿದೆ. ಇಂಥ ಪ್ರಯತ್ನಗಳಲ್ಲಿ ಮೊದಲನೆಯದು ರಾಗೌ ಮತ್ತು ಎಂ.ಸಿ. ವಸಂತಕುಮಾರ್ ಅವರು ಜೊತೆಯಾಗಿ ಪ್ರಕಟಿಸಿರುವ ಜನಪದ ನಂಬಿಕೆಗಳು ಎಂಬ ಸಂಕಲನ (1972). ಇದರಲ್ಲಿ ವಿಸ್ತಾರವಾದ ಬಹು ಉಪಯುಕ್ತವಾದ ಪ್ರಸ್ತಾವನೆಯಿದೆ. ಅನಂತರ ಜಿ.ವಿ.ದಾಸೇಗೌಡರ ನಮ್ಮ ಜನಪದ ನಂಬಿಕೆಗಳು ಎಂಬ ಹೊತ್ತಿಗೆ ಪ್ರಕಟವಾಯಿತು (1972). ಈ ಕೃತಿಯ ವಿಶೇಷವೆಂದರೆ ಉಪಯುಕ್ತ ಪ್ರಸ್ತಾವನೆಯ ಜೊತೆಗೆ ನಂಬಿಕೆಗಳು, ವಿಭಜನೆ, ವ್ಯಾಖ್ಯಾನ ಇತ್ಯಾದಿಗಳು ಇರುವುದು. ಮತ್ತೊಂದು ಉತ್ತಮ ಸಂಕಲನ ಡಿ.ಕೆ.ರಾಜೇಂದ್ರ ಅವರ ನಮ್ಮ ಸುತ್ತಿನ ನಂಬಿಕೆಗಳು (1973). ಈ ದಿಶೆಯಲ್ಲಿ ನಡೆಯಬೇಕಾಗಿರುವ ಅಪಾರ ಕೆಲಸಕ್ಕೆ ಈ ಮೂರೂ ಸಂಕಲನಗಳು ದಿಕ್ಸೂಚಿಯಾಗಿವೆ. *

**ಜನಪದ ನಿರುಕ್ತಿ :** ಊರು, ಕೇರಿ, ನದಿ, ಬೆಟ್ಟ, ಗುಡ್ಡ, ಕೆರೆ ಕಾಲುವೆ ಮುಂತಾದವುಗಳ ಹೆಸರುಗಳ ಬಗ್ಗೆ ಜನಸಾಮಾನ್ಯರು ಕೊಡುವ ವಿವರಗಳಿಗೆ ಜನಪದ ನಿರುಕ್ತಿ ಎಂಬ ಹೆಸರಿದೆ. ತಾವು ಕೊಡುವ ಪ್ರತಿಯೊಂದು ವಿವರಕ್ಕೂ ಪುರಾಣ, ಇತಿಹಾಸ, ಇಲ್ಲವೆ ಐತಿಹ್ಯದ ಆಧಾರವನ್ನು ಕಲ್ಪಿಸುವುದು ಇಲ್ಲಿನ ವಾಡಿಕೆ. ಪದಗಳಿಗೆ ನಿಜವಾದ ನಿಷ್ಪತ್ತಿ ತಿಳಿಯದಿದ್ದಾಗ, ಅವುಗಳ ನಿಷ್ಪತ್ತಿಯನ್ನು ತಪ್ಪು ಗ್ರಹಿಸುವುದು, ಇಲ್ಲವೆ ಸಂಬಂಧವಿರಬಹುದಾದ ಇತರ ಪದಗಳ ಜೊತೆ ತಪ್ಪು ಸಾದೃಶ್ಯ ಕಲ್ಪಿಸುವುದು ಇಲ್ಲಿ ಸಾಮಾನ್ಯ. ಎಷ್ಟೋ ವೇಳೆ ತಮ್ಮ ವಿವರಣೆಗೆ ತಕ್ಕಂತೆ ಜನ ಮೂಲಪದದ ರೂಪವನ್ನೇ ಬದಲಾಯಿಸಿರುವುದುಂಟು. ಪದಗಳ ಈ ಬಗೆಯ ರೂಪಾಂತರಕ್ಕೆ ಕೆಲವು ಕಾರಣಗಳಿವೆ. ಹಳೆಯ ಪದಗಳು ರೂಢಿ ತಪ್ಪಿದಾಗ ಅವುಗಳ ಅರ್ಥ ಬದಲಾವಣೆ ಹೊಂದಬಹುದು ಅಥವಾ ಪದಗಳು ತಾವಾಗಿಯೇ ಬದಲಾವಣೆಗೆ ಒಳಗಾಗಬಹುದು. ಜೊತೆಗೆ ಪರಕೀಯರ ಭಾಷೆ ಉಡುಪು ಸಂಪ್ರದಾಯ ನಡಾವಳಿಗಳ ಬಗ್ಗೆ ಸ್ವಾಭಾವಿಕವಾಗಿಯೇ ಒಂದು ರೀತಿಯ ಹೇವರಿಕೆಯಿರುವುದರಿಂದ ಪರಕೀಯ ಭಾಷೆಯನ್ನು ತಪ್ಪು ಉಚ್ಚರಿಸುವುದು ಅಥವಾ ಪದಗಳನ್ನು ಉದ್ದೇಶ ಪೂರ್ವಕವಾಗಿ ತಿರುಚುವುದು ಸಾಮಾನ್ಯವಾಗಿ ನಡೆಯುತ್ತದೆ. ಎಷ್ಟೋ ವೇಳೆ ತಪ್ಪು ನಿರುಕ್ತಿಗಳು ಸ್ಥಿರವಾಗಲು ಪ್ರಾಚೀನ ಪದಗಳನ್ನು ಕುರಿತಾದ ವಿದ್ವಾಂಸರ ತಪ್ಪು ವ್ಯಾಖ್ಯಾನಗಳೂ ಕಾರಣವಾಗುತ್ತವೆ. ಕೆಲವೊಂದು ತಪ್ಪು ಸಮೀಕರಣದಿಂದ ಪದಗಳ ರೂಪ ಹೀಗೆ ರೂಪಾಂತರಗೊಳ್ಳುವಾಗ ತಪ್ಪು ಸಂಬಂಧ ಮತ್ತು ಸಾದೃಶ್ಯದಿಂದಾಗಿ ಅವುಗಳ ಭಾವ ಕೂಡ ಭ್ರಷ್ಟಗೊಳ್ಳುವುದು ಸಹಜ. ಜನಪದ ನಿರುಕ್ತಿ ಅನೇಕ ಪದಗಳ ಸುತ್ತ ಅಸಂಖ್ಯಾತ ನಂಬಿಕೆಗಳು ಮತ್ತು ಪುರಾಣಗಳನ್ನು ಸೃಷ್ಟಿಸಿದೆ.

ಐತಿಹ್ಯಗಳಿಗೂ ಜನಪದ ನಿರುಕ್ತಿಗೂ ನಿಕಟ ಸಂಬಂಧವಿದೆ. ಐತಿಹ್ಯಗಳಲ್ಲಿ ಸ್ಥಳೀಯ ಐತಿಹ್ಯಗಳು ಜನಪದ ನಿರುಕ್ತಿಗಳಿಂದ ಹೆಚ್ಚು ಪ್ರಭಾವಿತವಾಗಿವೆ. ಇಂಥದಕ್ಕೆ ಪಿರಿಯಾಪಟ್ಟಣದ ಸಮೀಪದಲ್ಲಿರುವ ಮಾಕಲ್ಲಯ್ಯನ ಗುಡ್ಡ ಒಂದು ನಿದರ್ಶನ. ಇದರ ಹಿನ್ನೆಲೆಯಲ್ಲಿ ಸೊಗಸಾದ ಪುರಾಣ ಕತೆಯೊಂದಿದೆ. ಸೀತಾ ರಾಮಲಕ್ಷ್ಮಣರು ಅರಣ್ಯವಾಸದ ಕಾಲದಲ್ಲಿ

ದಶರಥನ ಹೆಸರಿನ ಲಿಂಗವೊಂದನ್ನು ಸ್ಥಾಪಿಸಿ ಪೂಜಿಸುತ್ತಿದ್ದರು. ಇದನ್ನು ಈಗ ದಶರಥೇಶ್ವರ ಎಂದು ಕರೆಯಲಾಗುತ್ತಿದೆ. ಇದು ಅವರಿಗೆ ಕಷ್ಟಕಾಲದಲ್ಲಿ ಮಾತನಾಡಿ ಎಚ್ಚರಿಕೆ ನೀಡುತ್ತ ಮಾರ್ಗದರ್ಶಿಯಾಗಿತ್ತು. ಹೀಗಿರುವಾಗ ಸಂನ್ಯಾಸಿ ರೂಪದಲ್ಲಿ ಬಂದ ರಾವಣ ಸೀತೆಗೆ ಭಿಕ್ಷೆ ನೀಡಲು ಕೇಳಿದ. ಲಿಂಗದ ಎಚ್ಚರಿಕೆಯನ್ನೂ ಗಮನಿಸದೆ ಸೀತೆ ಋಷಿಯೆಂದು ತಿಳಿದು ರಾವಣನಿಗೆ ಭಿಕ್ಷೆ ನೀಡಲು ಮುಂದಾದಳು. ಫಲವಾಗಿ ದಶರಥೇಶ್ವರ ಮಾತನಾಡದೆ ಕಲ್ಲಾದನಂತೆ. ರಾವಣನಿಂದ ಸೀತಾಪಹರಣವಾಗುವಾಗ ಸೀತೆ, ಮಾವ ಕಲ್ಲಾದೆಯಾ ಎಂದು ಕೂಗಿಕೊಂಡಳಂತೆ. ಈಗ ಮಾವ ಕಲ್ಲಾದೆಯಾ ರೂಪವೇ ಮಾಕಲ್ಲಯ್ಯ ಆಗಿ, ಆ ಪ್ರದೇಶ ಮಾಕಲ್ಲಯ್ಯನ ಗುಡ್ಡ ಎಂದೇ ಪ್ರಸಿದ್ಧವಾಯಿತೆಂದು ಹೇಳುತ್ತಾರೆ.

ಅನೇಕ ಸ್ಥಳ ಮತ್ತು ನದಿಗಳ ಹೆಸರುಗಳ ಮೂಲ ಕೂಡ ಜನಪದ ನಿರುಕ್ತಿಯಂತಿರುವುದು ಗಮನಾರ್ಹ. ಸ್ಥಳದ ಹೆಸರಿಗೆ ಬೆಂಗಳೂರು ಒಳ್ಳೆಯ ಉದಾಹರಣೆ. ಇದು ಬೆಂಗಾಳು ಎಂಬುದರಿಂದ ಬಂದಿದ್ದು, ಇದರ ಹಿಂದೆ ಮಾಗಡಿ ಕೆಂಪೇಗೌಡನಿಗೆ ಸಂಬಂಧಿಸಿದ ಐತಿಹ್ಯವೊಂದಿದೆ. ಈಗ ಬೆಂಗಳೂರು ಇರುವ ಪ್ರದೇಶದಲ್ಲಿ ಒಮ್ಮೆ ಸಂಚಾರ ಹೊರಟ ಕೆಂಪೇಗೌಡನಿಗೆ ತುಂಬ ಹಸಿವಾಯಿತಂತೆ. ಅದೇ ಸಮಯದಲ್ಲಿ ಅವನ ಮನೆದೇವತೆ ಕೆಂಪಮ್ಮ ಬೇಯಿಸಿದ ಕಾಳನ್ನು ಇರಿಸಿಕೊಂಡು ಕುಳಿತಿದ್ದಳು. ಹಸಿದು ಬಂದ ಕೆಂಪೇಗೌಡನಿಗೆ ಆಕೆ ಕಾಳು ಕೊಟ್ಟು, ಆ ಜಾಗದಲ್ಲಿ ಕೋಟೆ ಕಟ್ಟಿಸುವಂತೆ ಸೂಚಿಸಿ ಅದೃಶ್ಯಳಾದಳು. ಅಲ್ಲಿ ಕಟ್ಟಿಸಿದ ಊರಿಗೆ ಕೆಂಪೇಗೌಡ ಬೆಂದ ಕಾಳಿನ ನೆನಪಿಗಾಗಿ ಬೆಂಗಾಳು ಎಂದು ಹೆಸರಿಟ್ಟನೆಂದು ಹೇಳಲಾಗಿದೆ. ಇದಕ್ಕೆ ಊರು ಪದ ಸೇರಿಕೊಂಡು ಬೆಂಗಾಳೂರು ಆಗಿ ಕ್ರಮೇಣ ಈಗ ಬೆಂಗಳೂರು ಆಗಿ ಈ ಪದ ಮಾರ್ಪಾಡಾಗಿದೆ ಎಂಬುದಾಗಿ ಜನಜನಿತ ಕಥೆಯೊಂದಿದೆ. ನದಿಯ ಹೆಸರಿಗೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹರಿಯುವ ನೇತ್ರಾವತಿಯನ್ನು ನೋಡಬಹುದು. ಹಿರಣ್ಯಾಕ್ಷ ಭೂಮಿಯನ್ನು ಅಪಹರಿಸಿ ಪಾತಾಳ ಲೋಕಕ್ಕೆ ತೆಗೆದುಕೊಂಡು ಹೋದಾಗ ಆ ಭೂಮಿಯನ್ನು ಹಿಂದಕ್ಕೆ ತರಲು ವಿಷ್ಣು ವರಾಹಾವತಾರವೆತ್ತಿ ಹಿರಣ್ಯಾಕ್ಷನನ್ನು ಕೊಲ್ಲಬೇಕಾಯಿತು. ಭೂಮಿಯನ್ನು ಸ್ವಸ್ಥಾನದಲ್ಲಿರಿಸಿದ ಮೇಲೆ ವಿಷ್ಣು ವಿಶ್ರಾಂತಿಗಾಗಿ ಒಂದು ಬೆಟ್ಟದ ಮೇಲೆ ಕುಳಿತುಕೊಂಡಾಗ ವರಾಹದ ಎರಡು ಕೋರೆದಾಡೆಗಳೂ ಎರಡು ಬೆಟ್ಟಗಳಿಗೆ ತಾಕಿ ಎರಡು ನದಿಗಳು ಉದ್ಭವವಾದವು. ಅವೇ ತುಂಗಾ ಮತ್ತು ಭದ್ರಾ ನದಿಗಳು. ಕೋರೆ ತಾಕಿ ಸಿಡಿದ ಮಣ್ಣು ವರಾಹಮೂರ್ತಿಯ ಕಣ್ಣಿಗೆ ಬಿತ್ತು. ಕೂಡಲೇ ಕಣ್ಣಿನಿಂದ ನೀರು ಚಿಮ್ಮಿತು. ಹೀಗೆ ವಿಷ್ಣುವಿನ ನೇತ್ರದಿಂದ ಚಿಮ್ಮಿದ ನದಿಯೇ ನೇತ್ರಾವತಿ ಎಂದು ಹೆಸರಾಯಿತಂತೆ.

ಹೀಗೆಯೇ ಸಾಮ್ರಾಜ್ಯಗಳ ಹೆಸರುಗಳಾದ ಕದಂಬ, ಚಾಳುಕ್ಯ, ಹೊಯ್ಸಳ ಮೊದಲಾದವು ಕೂಡ ಐತಿಹ್ಯ ಮೂಲದವಾಗಿದ್ದು ಅವುಗಳ ವಿವರಗಳು ಜನಪದ ನಿರುಕ್ತಿಯಂತೆಯೇ ಇವೆ. (ಆರ್.ಜಿ.)

**ಜನಪದ ನೃತ್ಯಗಳು :** ಕರ್ನಾಟಕದಾದ್ಯಂತ ನಲವತ್ತಕ್ಕೂ ಹೆಚ್ಚು ಜನಪದ ನೃತ್ಯಗಳು ಪ್ರಚಲಿತವಾಗಿವೆ ಎಂದು ಅಂದಾಜು ಮಾಡಲಾಗಿದೆ. ಅವುಗಳನ್ನು ಪ್ರಾದೇಶಿಕವಾಗಿ ಹೀಗೆ ವರ್ಗೀಕರಿಸಬಹುದು.

**ಉತ್ತರ ಕರ್ನಾಟಕ :** ಕರಡೆ ಮಜಲು, ಡೊಳ್ಳು ಕುಣಿತ, ಗೊಂದಲಿಗರ ಮೇಳ, ವಾಘೆಮುರುಳಿ ಮೇಳ, ಕೋಲಾಟ.

**ದಕ್ಷಿಣ ಕರ್ನಾಟಕ :** ವೀರಗಾಸೆ ಕುಣಿತ, ಸೋಮನ ಕುಣಿತ, ಕುರುಬ ದೇವರ ಕುಣಿತ, ಲಿಂಗದ ಬೀರರ ಕುಣಿತ, ಕೋಲ ಕುಣಿಯುವುದು, ಗುಡ್ಡರ ಕುಣಿತ, ರಂಗದ ಕುಣಿತ, ಗಾರುಡಿ ಕುಣಿತ, ಬೀಸು ಕಂಸಾಳೆ ಕುಣಿತ, ಭಾಗವಂತಿಕೆ ಮೇಳ, ಕರಪಾಲ ಮೇಳ, ಚೌಡಿಕೆ ಮೇಳ, ಪಟಕುಣಿತ, ಪೂಜಾಕುಣಿತ, ಚಿಟ್ ಮೇಳ, ಗೊರವರ ಕುಣಿತ, ನಂದಿಕೋಲು ಕುಣಿತ, ಕಂಬಳಿಕುಣಿತ, ಮಾರಮ್ಮನ ಕುಣಿತ, ಮಣೇವು ಕುಣಿತ, ಕೋಲಾಟ.

**ಕೊಡಗು :** ಹುತ್ತರಿ ಕುಣಿತ, ಬೊಳಕಾಟ, ಉಮ್ಮತ್ತಾಟ, ಕತ್ತಿ ಕುಣಿತ, ಕೊಂಬು ಕುಣಿತ.

**ದಕ್ಷಿಣ ಕನ್ನಡ ಜಿಲ್ಲೆ :** ದುಡಿ ಕುಣಿತ, ಡೋಲಿನ ಕುಣಿತ, ವೈದ್ಯನೃತ್ಯ, ಭೂತನೃತ್ಯ, ಹೋಲಿನೃತ್ಯ, ಆಟಿಕಡೆಂಜ, ಕೋರತನಯ, ಕೋಲಾಟ.

**ಉತ್ತರ ಕನ್ನಡ ಜಿಲ್ಲೆ :** ಸುಗ್ಗಿ ಕುಣಿತ, ಕರಡಿ ಕುಣಿತ, ಸಿಂಹ ನೃತ್ಯ, ಹೂವಿನ ಮಕ್ಕಳ ಕುಣಿತ, ಕೋಲಾಟ.

ಈ ನೃತ್ಯಗಳಲ್ಲಿ ಕೆಲವು ಧಾರ್ಮಿಕ ಹಿನ್ನೆಲೆಯಲ್ಲಿ ಮೂಡಿಬಂದವುಗಳಾದರೆ ಇನ್ನು ಕೆಲವು ಮನರಂಜನೆಯೇ ಏಕೈಕ ಉದ್ದೇಶವಾಗಿ ಹುಟ್ಟಿಕೊಂಡಂಥವು. ಧಾರ್ಮಿಕ ಹಿನ್ನೆಲೆಯಲ್ಲಿ ಹುಟ್ಟಿದ ನೃತ್ಯಗಳು ಆಯಾ ದೇವತೆಯ ಹೆಸರಿನಲ್ಲಿ ನಿರ್ದಿಷ್ಟ ಕಾಲದಲ್ಲಿ ಸಂಪ್ರದಾಯಬದ್ಧವಾಗಿ ನಡೆಯುತ್ತವೆ. ಮನರಂಜನೆಯ ಹಿನ್ನೆಲೆಯಲ್ಲಿ ಹುಟ್ಟಿ ಲೌಕಿಕ ಕಲೆಯಾಗಿ ಬೆಳೆದುಬಂದ ನೃತ್ಯಗಳಿಗೆ ಇಂಥ ಕಟ್ಟುಪಾಡುಗಳು ಅಷ್ಟಾಗಿ ಅನ್ವಯಿಸುವುದಿಲ್ಲ.



ಕೋಲಾಟ

ಜನಪದ ಲೌಕಿಕ ನೃತ್ಯಗಳಲ್ಲಿ ಕೋಲಾಟ (ನೋಡಿ) ಅತ್ಯಂತ ಜನಪ್ರಿಯವಾದುದು. ಇದು ನಾಡಿನ ಎಲ್ಲ ಕಡೆಗಳಲ್ಲೂ ಕಾಣಬರುವ ಏಕಮಾತ್ರ ಕಲೆಯಾಗಿದ್ದು ಉಳಿದವು ಪ್ರಾದೇಶಿಕ ಹಿನ್ನೆಲೆಯಲ್ಲಿ ಬರುತ್ತವೆ. ಕೋಲಾಟಕ್ಕೆ ಹೆಸರಾದ ಜನಾಂಗ ಕಾಡುಗೊಲ್ಲರದು. ಇವರ ಗೆಜ್ಜೆಯ ಕೋಲಾಟ ಅತ್ಯಂತ ಪ್ರಾಚೀನವಾದುದು. ಕೋಲಾಟಗಳಲ್ಲಿ ಹತ್ತಾರು ಬಗೆಗಳಿರುವಂತೆಯೇ ಸಾಕಷ್ಟು ಪ್ರಾದೇಶಿಕ ವೈವಿಧ್ಯವೂ ಕಾಣಬರುತ್ತದೆ. ದಕ್ಷಿಣ ಕರ್ನಾಟಕದ ಕೋಲಾಟದ ತಂಡಗಳಲ್ಲಿ ಯಾವ ವಿಶಿಷ್ಟ ರೀತಿಯ ವೇಷಭೂಷಣವೂ ಕಾಣಬರುವುದಿಲ್ಲ. ಉತ್ತರ ಕರ್ನಾಟಕಕ್ಕೂ ಈ ಮಾತು ಅನ್ವಯಿಸುತ್ತದೆ. ಆದರೆ ಉತ್ತರ ಕನ್ನಡ ಜಿಲ್ಲೆಯ ಹಾಲಕ್ಕಿಗೌಡರ ಸುಗ್ಗಿಯ ಕುಣಿತ, ದಕ್ಷಿಣ ಕನ್ನಡ ಜಿಲ್ಲೆಯ ಮರಾಟ ನೃತ್ಯಗಳಲ್ಲಿ ಕೋಲಾಟ ವೈವಿಧ್ಯದಂತೆಯೇ ಆಕರ್ಷಕ ವೇಷಗಾರಿಕೆಯಾಗಿ ತೋರಿಬರುತ್ತದೆ. ಕೊಡಗಿನ ಹುತ್ತರಿ ಕುಣಿತದಲ್ಲಿ ಕೋಲಾಟದ ಪಾತ್ರ ಪ್ರಧಾನವಾದುದೇ. ಕೊಡವರ ಸಾಂಪ್ರದಾಯಿಕ ರೀತಿಯ ವೇಷಭೂಷಣ ಇಲ್ಲಿನ ಒಂದು ವೈವಿಧ್ಯ. ಇವರು ಬಳಸುವ ಕೋಲುಗಳು ಉದ್ದವಾಗಿರುತ್ತವೆ. ಎರಡು ಮೂರು ಅಡಿ ಉದ್ದದ ಬೆರಳುಗಾತ್ರದ ಜೋಡಿ ಬೆತ್ತವನ್ನು ಇಲ್ಲಿ ಬಳಸಲಾಗುತ್ತದೆ. ಹಾಲಕ್ಕಿಗೌಡರ ಕುಣಿತ, ಹುತ್ತರಿ ಕುಣಿತಗಳಲ್ಲಿ ಕೆಲವು ವಾದ್ಯಗಳನ್ನು ಹಿನ್ನೆಲೆಗೆ ಬಳಸಲಾಗುವುದು. ಕುಣಿತದ ವೈಖರಿ, ತಾಳದ ಗತ್ತು, ಕೋಲಾಟದ ಪದಗಳ ವೈವಿಧ್ಯ ಅತ್ಯಂತ ಗಮನಾರ್ಹವಾದುವು. ಹಾಸನ ಹಾಗೂ ತುಮಕೂರು ಜಿಲ್ಲೆಯ ಕೆಲವು ಭಾಗಗಳಲ್ಲಿ ಕಂಡುಬರುವ ಚಿಟ್‌ಮೇಳ (ನೋಡಿ) ಕೋಲಾಟದಂತೆಯೇ ಉಳಿದುಬಂದಿರುವ ಒಂದು ಲೌಕಿಕ ನೃತ್ಯ. ಕರಡೆ ಮೇಳದಂತೆ ವಾದ್ಯಗಳ ವೈಭವ ಇಲ್ಲಿಯೂ ಪ್ರಮುಖವಾಗಿದ್ದು ಮೇಳದಲ್ಲಿ ಕರಡೆ, ಸಮಾಳ, ಝುಮ್ಮಿ, ಮೌರಿ ಮೊದಲಾದ ವಾದ್ಯಗಳನ್ನು ಬಳಸಲಾಗುತ್ತದೆ. ಇಲ್ಲಿ ನೃತ್ಯದ ಪಾತ್ರ ದೊಡ್ಡದು. ಯಕ್ಷಗಾನದ ವಿವಿಧ ಮಟ್ಟುಗಳನ್ನು ಮೌರಿಯಲ್ಲಿ ನುಡಿಸುವ ತಂಡದ ನಾಯಕ, ವಿವಿಧ ವಾದ್ಯಗಳ ಗತ್ತಿನಲ್ಲಿ ಕರಡೆ ಸಮೇಳ

ಘುಮ್ಮಿಗಳ ವಾದ್ಯಪಟಗಳನ್ನು ಕುಣಿಸುತ್ತಾನೆ. ಈ ವಾದ್ಯಗಳನ್ನು ಬಡಿಯುತ್ತ ಬಯಲಾಟದ ನೃತ್ಯಗಳನ್ನೇ ಈ ಕಲಾವಿದರು ಪ್ರದರ್ಶಿಸುತ್ತಾರೆ. ಜಲ್ಲರಿಯನ್ನು ಬಡಿಯುವ ಮತ್ತೊಬ್ಬ ಕಲಾವಿದ ಮೃದುನೃತ್ಯವನ್ನು ಪ್ರದರ್ಶಿಸುತ್ತ ಇವರ ನಡುವೆ ಅತ್ತಿಂದಿತ್ತ ಚಲಿಸುತ್ತ ಆ ಕಲೆಗೆ ಇನ್ನಷ್ಟು ಆಕರ್ಷಣೆಯನ್ನು ತರುತ್ತಾನೆ. ಹೀಗೆಯೇ ಉತ್ತರ ಕರ್ನಾಟಕದ ವಾಘೆ ಮುರುಳಿ ಮೇಳ ಅತ್ಯಂತ ಆಕರ್ಷಕವಾದುದು.



ಕರಗ ಕುಣಿತ

ಈ ಲೌಕಿಕ ಕಲೆಗಳನ್ನು ಬಿಟ್ಟರೆ ಉಳಿದೆಲ್ಲ ಜನಪದ ನೃತ್ಯಗಳೂ ಒಂದಲ್ಲ ಒಂದು ವಿಧದಲ್ಲಿ ಧಾರ್ಮಿಕ ಸಂಬಂಧವನ್ನು ಉಳಿಸಿಕೊಂಡೇ ಬಂದಿವೆ. ಧಾರ್ಮಿಕ ಮೂಲದ ನೃತ್ಯಗಳಲ್ಲಿ ಮೈಸೂರು ಮಂಡ್ಯ ಜಿಲ್ಲೆಗಳಲ್ಲಿ ಜನಪ್ರಿಯವಾಗಿರುವ ಮಲೆಯ ಮಾದೇಶ್ವರನ ಆರಾಧಕರಾದ ದೇವರಗುಡ್ಡರು ಕಂಸಾಳೆ ವಾದ್ಯದೊಂದಿಗೆ ನಡೆಸುವ ಬೀಸುಕಂಸಾಳೆ ನೃತ್ಯ (ನೋಡಿ), ಶಿವಮೊಗ್ಗ, ಕೋಲಾರ, ತುಮಕೂರು, ಮಂಡ್ಯ ಜಿಲ್ಲೆಗಳಲ್ಲಿ ಪ್ರಚಾರದಲ್ಲಿರುವ ಮೈಲಾರಲಿಂಗನಗುಡ್ಡರ, ಗೊರವರ ಕುಣಿತ (ನೋಡಿ), ನಂದಿಕೋಲು ಕುಣಿತ (ನೋಡಿ), ಬಯಲು ಸೀಮೆಯಲ್ಲಿ ಹೆಚ್ಚಾಗಿ ಕಂಡುಬರುವ ವೀರಗಾಸೆ ಕುಣಿತ (ನೋಡಿ), ಲಿಂಗದಬೀರರ ಕುಣಿತ (ನೋಡಿ)- ಇವು ಶೈವ ಸಂಪ್ರದಾಯಕ್ಕೆ ಸೇರಿದ ನೃತ್ಯಗಳಾಗಿವೆ. ಕಂಸಾಳೆ ನೃತ್ಯದಲ್ಲಿ ಕಂಸಾಳೆ ವಾದ್ಯವನ್ನು ಬಡಿದುಕೊಂಡು ವಿವಿಧ ಭಂಗಿಯಲ್ಲಿ ಬಾಗಿ ಬಳುಕಿ ಕುಣಿದು ಕುಪ್ಪಳಿಸಿ ಕೌಶಲವನ್ನು ಪ್ರದರ್ಶಿಸುವ ವೈಖರಿ ಆಶ್ಚರ್ಯಕರವಾಗಿರುತ್ತದೆ. ಮಾದೇಶ್ವರರ ಪದಗಳೂ ಕಂಸಾಳೆಯ ನಾದವೂ ಈ ಕುಣಿತಕ್ಕೆ ಮೆರುಗು ತರುತ್ತವೆ. ಗೊರವರು ತಲೆಯ ಮೇಲೆ ಕರಡಿಯ ಕೂದಲ ಟೊಪ್ಪಿಗೆ, ಮೈಮೇಲೆ ಕಪ್ಪುನಿಲುವಂಗಿ, ಕವಡೆಯ ಸರಗಳು, ಕೈಯಲ್ಲಿ ಡಮರುಗ ತ್ರಿಶೂಲಗಳನ್ನು ಹಿಡಿದು ವೃತ್ತಾಕಾರವಾಗಿ ನರ್ತಿಸುತ್ತಾರೆ. ವೀರಗಾಸೆ ಕುಣಿತದಲ್ಲಿ ವೀರಭದ್ರನ ಖಡ್ಗಗಳನ್ನು (ಹಾಡುಗಳನ್ನು) ಹೇಳುತ್ತ ನಾಲ್ಕಾರು ಮಂದಿ ಕರಡೆಯ ಹಾಗೂ ಇತರ ವಾದ್ಯಗಳ ಗತ್ತಿಗೆ ನರ್ತಿಸುತ್ತಾರೆ. ನಡುನಡುವೆ ಕರಡೆಯನ್ನು ಬಡಿಯುವ ಮುಂದಾಳು ವೀರಭದ್ರನ ಅವತಾರದ ಹಿನ್ನೆಲೆಯನ್ನು ಬಣ್ಣಿಸುತ್ತಿರುತ್ತಾನೆ. ಲಿಂಗದ ಬೀರರ ಕುಣಿತದಲ್ಲಿ ಒಬ್ಬ ಅಥವಾ ಇಬ್ಬರು ವೀರಭದ್ರನ ಬಿರುದುಗಳನ್ನು ಧರಿಸಿ ಕುಣಿಯುತ್ತಾರೆ. ಒಬ್ಬ ಖಡ್ಗಗಳನ್ನು ಹೇಳುವುದು ಮತ್ತೊಬ್ಬ ಲಾಂಛನಗಳನ್ನು ಧರಿಸಿ ಭಲರೇ ವೀರ ಎಂದು ಸುತ್ತಲೂ ಕುಣಿಯುವುದು ಇಲ್ಲಿನ ವೈಶಿಷ್ಟ್ಯ. ರುದ್ರನೃತ್ಯಗಳಲ್ಲಿ ಲಿಂಗದಬೀರರ ಕುಣಿತಕ್ಕೆ ಹೆಚ್ಚಿನ ಮನ್ನಣೆ ಇದೆ. ದೇವರ ಉತ್ಸವಗಳಲ್ಲಿ, ಮದುವೆ ಮೆರವಣಿಗೆ ಮುಂತಾದ ವಿಶೇಷ ಸಂದರ್ಭಗಳಲ್ಲಿ ಈ ನೃತ್ಯವನ್ನು ಏರ್ಪಡಿಸಲಾಗುತ್ತದೆ. ಬಯಲುಸೀಮೆಯ ಎಲ್ಲ ಕಡೆಗಳಲ್ಲೂ ಈ ನೃತ್ಯ ಕಾಣಬರುತ್ತದೆ. ನಂದಿಯ ಮೂರ್ತಿಯನ್ನೂ ಹಿತ್ತಾಳೆಯ ಬಿರುದಾವಳಿಗಳನ್ನೂ ಗಗ್ಗರ ಬಳೆಗಳನ್ನೂ ಬಣ್ಣದ ವಸ್ತ್ರಗಳನ್ನೂ ಬಳಸಿ ಅಲಂಕರಿಸಿದ ಹತ್ತು ಹದಿನೈದು ಮಾರು ಉದ್ದದ ಭಾರವಾದ ಬಿದಿರು ಗಳುಗಳನ್ನು ನಂದಿ ಕೋಲು ಎಂದು ಕರೆಯಲಾಗುತ್ತದೆ. ಇಲ್ಲಿ ನಂದಿಕೋಲು ಹೊತ್ತವನು ನಡುವಿಗೆ ಕಟ್ಟಿದ ಒಂದು ಸಣ್ಣಚೀಲದಲ್ಲಿ ಕೋಲಿನ ತಳವನ್ನು ಕೂರಿಸಿ ತಮ್ಮಟೆಯ ಗತ್ತಿಗೆ ಕುಣಿಯುವ ಸಾಹಸ ಮೆಚ್ಚುವಂತಿರುತ್ತದೆ. ಅತ್ಯಂತ ಕಷ್ಟಸಾಧ್ಯವಾದ ನಂದಿಕೋಲುನೃತ್ಯ ದೇವರ ಉತ್ಸವಗಳಲ್ಲಿ ಮೆರವಣಿಗೆಯ ಸಂದರ್ಭಗಳಲ್ಲಿ ಕಂಡುಬರುತ್ತದೆ.

ಶಿವಮೊಗ್ಗ, ಚಿತ್ರದುರ್ಗ, ಉತ್ತರ ಕರ್ನಾಟಕದ ಭಾಗಗಳಲ್ಲಿ ಹೆಚ್ಚಾಗಿ ಕಂಡುಬರುವ ಡೊಳ್ಳು ಕುಣಿತ (ನೋಡಿ) ಬೀರೇಶ್ವರ ಸಂಪ್ರದಾಯದಕ್ಕೆ ಸೇರಿದ ಧಾರ್ಮಿಕ ನೃತ್ಯ, ಕುರುಬ ಜನಾಂಗದ ಈ ನೃತ್ಯ. ಒಂದು ಗಂಡು ಕಲೆ. ದೊಡ್ಡ ಆಕಾರದ ಡೊಳ್ಳುಗಳನ್ನು ನಡುವಿಗೆ ಕಟ್ಟಿಕೊಂಡು ಅದನ್ನು ಶಕ್ತಿಮೀರಿ ಬಡಿಯುತ್ತ ವಿವಿಧ ಭಂಗಿಗಳಲ್ಲಿ ಬೀರರು ಕುಣಿಯುತ್ತಾರೆ. ನಡುವೆ ಒಬ್ಬ ಜಲ್ಲರಿಯನ್ನು ಬಡಿಯುವ ಮೋಜು, ಕುಣಿಯುವ ಗತ್ತು ಮನೋಹರವಾಗಿರುತ್ತದೆ.

ಗಾರುಡಿ ಕುಣಿತ ವೈಷ್ಣವ ಸಂಪ್ರದಾಯಕ್ಕೆ ಸೇರಿದ ಧಾರ್ಮಿಕ ನೃತ್ಯ. ಇಲ್ಲಿಯ ಕುಣಿತ ಅಪೂರ್ವ ರೀತಿಯದು. ಎರಡು ಮೂರು ಆಳೆತ್ತರದ ಬಿದಿರು ತಡಿಕೆಯ ಆಕೃತಿಯನ್ನು ಮಾಡಿ, ಅದರ ಮೇಲೆ ಮರದ ತಲೆಯನ್ನು ಕೂರಿಸಿ ಮರದ ಕೈ ಮತ್ತು ಪುಂಗಿಯನ್ನು ಅಳವಡಿಸಿ ಮೈ ಮೇಲೆ ವಸ್ತ್ರಗಳನ್ನು ಜೋಡಿಸಿ ಗಾರುಡಿಗಳ ಆಕೃತಿಯನ್ನು ಸಿದ್ಧಪಡಿಸಿಕೊಳ್ಳಲಾಗುತ್ತದೆ. ಕುಣಿಯುವ ವ್ಯಕ್ತಿ ಈ ಆಕೃತಿಯನ್ನು ಧರಿಸಿ ನೃತ್ಯ ಮಾಡುವ ರೀತಿ ನೋಡುವವರಿಗೆ ಬೆರಗನ್ನು ತರುತ್ತದೆ.

ಇದೇ ಸಂಪ್ರದಾಯಕ್ಕೆ ಸೇರಿದ ನೃತ್ಯಗಳಲ್ಲಿ ಪಟಕುಣಿತ (ನೋಡಿ) ಭಾಗವಂತಿಕೆ ಮೇಳ (ನೋಡಿ) ಮುಖ್ಯವಾದುವು. ಪಟಕುಣಿತ ನಂದಿಕೋಲಿನ ನೃತ್ಯವನ್ನೇ ಹೋಲುತ್ತದೆ. ಇದರಲ್ಲಿ ಹತ್ತಾರು ಮಂದಿ ಭಾಗವಹಿಸುತ್ತಾರೆ. ಬಣ್ಣದ ಬಟ್ಟೆಗಳನ್ನು ಸುತ್ತಿ ಅಲಂಕರಿಸಿದ, ತುದಿಯಲ್ಲಿ ಲೋಹದ ಛತ್ರಿಯನ್ನು ಕಟ್ಟಿದ ಉದ್ದವಾದ ಕೋಲುಗಳನ್ನು ಪಟ ಎಂದು ಕರೆಯಲಾಗುತ್ತದೆ. ಇವನ್ನು ಹಿಡಿದು ಸಾಲುಸಾಲಾಗಿ ವಿವಿಧ ವೈಖರಿಯಲ್ಲಿ ತಮ್ಮಟೆ ಹೆಬ್ಬರೆಗಳ ಭಾಗವಂತಿಕೆ ಮೇಳದಲ್ಲಿ ಗತ್ತಿಗೆ ನರ್ತಿಸುವ ಸೊಗಸು ಅಪೂರ್ವವಾದುದು. ಭಾಗವಂತಿಕೆ ಪದಗಳನ್ನು ಎರಡು ಸಾಲಿನಲ್ಲಿ ನಿಂತು ಕೆಲವರು ಹಾಡುತ್ತ ಸಾಗುವಾಗ ಅವರ ನಡುವೆ ಕೋಡಂಗಿಯ ವೇಷವನ್ನು ಧರಿಸಿದ ವ್ಯಕ್ತಿಯೊಬ್ಬ ಮೃದುವಾಗಿ ನರ್ತಿಸುತ್ತಾನೆ.



ಸೋಮನ ಕುಣಿತ

ಶಕ್ತಿದೇವತೆಗಳಿಗೆ ಸಂಬಂಧಿಸಿದ ನೃತ್ಯಗಳಲ್ಲಿ ಸೋಮನ ಕುಣಿತ (ನೋಡಿ), ಗುಡ್ಡರ ಕುಣಿತ, ಪೂಜಾ ಕುಣಿತ (ನೋಡಿ), ಕರಗ (ನೋಡಿ) ಮುಂತಾದ ನೃತ್ಯಗಳಿವೆ. ಸೋಮನ ಕುಣಿತ ಕರ್ನಾಟಕದ ಮುಖವಾಡ ನೃತ್ಯಗಳಲ್ಲಿ ಮುಖ್ಯವಾದುದು. ಬಣ್ಣದ ವಸ್ತ್ರದಲ್ಲಿ ಕಚ್ಚೆಯನ್ನು ಹಾಕಿ, ಕೈಯಲ್ಲಿ ಬೆಳ್ಳಿಬೆತ್ತ ಹಿಡಿದು, ಸಾಮಾನ್ಯವಾಗಿ ಬರಿ ಮೈಯಲ್ಲಿ ಮುಖವಾಡ ಧರಿಸಿ ಗ್ರಾಮದೇವತೆಯ ಉತ್ಸವಮೂರ್ತಿಯ ಮುಂದೆ ಎರಡು ಮೂರು

ಸೋಮಗಳು ತಮ್ಮಟೆ, ಹರೆ, ಡೋಲು, ಮೌರಿಗಳ ಹಿನ್ನೆಲೆಗೆ ನರ್ತಿಸುತ್ತವೆ. ತಮ್ಮಟೆಯನ್ನು ಬಡಿಯುವ ಕಲಾವಿದ ನಡುನಡುವೆ ದೇವರನ್ನು ಕರೆಯುವ ಅಪೂರ್ವ ತ್ರಿಪದಿಗಳನ್ನು ಹಾಡುತ್ತಾನೆ. ಹೆಜ್ಜೆಹೆಜ್ಜೆಗೆ ಹಾಡು, ಕುಣಿತ, ಜೈಕಾರಗಳು ಸೋಮನ ಕುಣಿತವನ್ನು ವಿಶೇಷವಾಗಿ ಕಳೆಗಟ್ಟಿಸುತ್ತವೆ.

ಗುಡ್ಡರ ಕುಣಿತದಲ್ಲಿ ತಮ್ಮಟೆಗೆ ಬದಲಾಗಿ ಚಕ್ರವಾದ್ಯ ಎಂಬ ವಿಶಿಷ್ಟ ರೀತಿಯ ತಾಸೆಯನ್ನು ಬಳಸಲಾಗುತ್ತದೆ. ಮಾರಿಕುಣಿತ ಎಂದು ಈ ನೃತ್ಯವನ್ನು ಕರೆಯುತ್ತಾರೆ. ಇದು ಬಹುಮಟ್ಟಿಗೆ ರಂಗದ ಕುಣಿತವನ್ನೇ ಹೋಲುತ್ತದೆ. ಹಾಸನ, ಮಂಡ್ಯ, ಮೈಸೂರು ಜಿಲ್ಲೆಗಳಲ್ಲಿ ಈ ಕುಣಿತ ಹೆಚ್ಚಾಗಿ ಉಳಿದುಬಂದಿದೆ.



ಪೂಜಾ ಕುಣಿತ

ಪೂಜಾ ಕುಣಿತ ಮಂಡ್ಯ ಹಾಗೂ ಬೆಂಗಳೂರು ಜಿಲ್ಲೆಯ ವಿಶಿಷ್ಟ ಕಾಣಿಕೆ. ಏಳು ಅಥವಾ ಒಂಬತ್ತು ಕಳಸಗಳಿಂದ ಅಲಂಕರಿಸಿದ ದೇವಿಯ ಪೂಜೆಯನ್ನು ನೆತ್ತಿಯ ಮೇಲಿನ ಕಳಸದ ಮೇಲಿರಿಸಿ ಕೈ ಬಿಟ್ಟು ತಮ್ಮಟೆಯ ಗತ್ತಿಗೆ ನರ್ತಿಸುವ ವೈಖರಿ ಅದ್ಭುತವಾದುದು. ಪೂಜಾಕುಣಿತದಲ್ಲಿ ಒನಕೆಯ ಕುಣಿತವೂ ಕೆಲವು ಕಡೆ ಸೇರಿಕೊಂಡಿದೆ. ತಲೆಯ ಮೇಲೆ ಒನಕೆಯೊಂದನ್ನು ಹೊತ್ತು ಕೈಬಿಟ್ಟು ಕುಣಿಯುವುದು ಇಲ್ಲಿಯ ಆಕರ್ಷಣೆ. ಕರಗ ಕುಣಿತ ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಮಣ್ಣಿನ ಕಳಸವನ್ನು ವಿವಿಧ ರೀತಿಯಲ್ಲಿ ಅಲಂಕರಿಸಿ ನೆತ್ತಿಯಲ್ಲಿ ಧರಿಸಿ ಕೈಬಿಟ್ಟು ಕುಣಿಯುವ ಕುಶಲಿಗಳಾದ ಕಲಾವಿದರು ನೋಡುವವರನ್ನು ಬೆರಗುಗೊಳಿಸುತ್ತಾರೆ.

ರಂಗದ ಕುಣಿತ ಕರ್ನಾಟಕದ ಅನೇಕ ಕಡೆಗಳಲ್ಲಿ ಕಾಣಬರುತ್ತದೆ. ಊರ ದೇವತೆಯ ಹಬ್ಬಕ್ಕೆ ಸಂಬಂಧಿಸಿದ ಈ ನೃತ್ಯ ಹಬ್ಬಕ್ಕೆ ಹದಿನೈದು ದಿನಗಳ ಮುಂಚೆಯೇ ಆರಂಭವಾಗುತ್ತದೆ. ಊರ ರಂಗದಲ್ಲಿ ಬೆಂಕಿಯನ್ನು ಹಾಕಿ, ಕೈಯಲ್ಲಿ ವಸ್ತ್ರವೊಂದನ್ನು ಹಿಡಿದು, ಜನಪದ ಗೀತೆಗಳನ್ನು ನಡುನಡುವೆ ಹಾಡುತ್ತ, ತಮ್ಮಟೆಯ ಗತ್ತಿಗೆ ಊರಿನ ಕಲಿಗಳೆಲ್ಲ ವಿವಿಧ ಭಂಗಿಗಳಲ್ಲಿ ನರ್ತಿಸುತ್ತಾರೆ.

ದಕ್ಷಿಣ ಕನ್ನಡ ಜಿಲ್ಲೆಯ ಭೂತನೃತ್ಯಗಳಾದ ಆಟಿಕಡೆಂಜ (ನೋಡಿ), ಕೋರತನಯ ಅಲ್ಲಿನ ವಿಶಿಷ್ಟ ಸಂಸ್ಕೃತಿಯನ್ನು ಸಾರುತ್ತವೆ. ನಲ್ಕೆಯವರಲ್ಲಿ ಪ್ರಚಲಿತವಾಗಿರುವ ತುಳು ಆಟಿ ತಿಂಗಳಲ್ಲಿ ಬರುವ ಆಟಿಕಡೆಂಜ ನೃತ್ಯ ವಿಶೇಷವಾದದ್ದು. ತೆಂಬರೆಯ ಗತ್ತಿಗೆ ಈ ನೃತ್ಯ ಕೂಡಿಬರುತ್ತದೆ. ಕೋರತನಯ ನಲ್ಕೆಯವರಲ್ಲಿ ಇರುವ ಇನ್ನೊಂದು ನೃತ್ಯವಿಶೇಷ. ನೃತ್ಯ ಸಮಯದಲ್ಲಿ ಕೋರತನಯ ವೇಷ ಹಾಕಿಕೊಂಡು ರೈತರ ಮನೆಯ ಬಾಗಿಲಲ್ಲಿ ನರ್ತಿಸಿ, ದವಸಧಾನ್ಯಗಳನ್ನು ಸಂಗ್ರಹಿಸಲಾಗುತ್ತದೆ. ಭೂತಾರಾಧನೆಯ ಸಂದರ್ಭದಲ್ಲಿ ವ್ಯಕ್ತಿಯೊಬ್ಬ ಆವೇಶ ಬರಿಸಿಕೊಂಡು ಮಾಡುವ ನೃತ್ಯವೈಖರಿ ಅಪೂರ್ವವಾದುದು. ಪ್ರಭಾವಳಿಯಂತೆ ತೆಂಗಿನ ಹಾಳೆಯಲ್ಲಿ ಕಟ್ಟಿಕೊಳ್ಳುವ ಅಣಿ, ವೈವಿಧ್ಯಮಯ ಆಭರಣ ವಿಶೇಷಗಳು, ಮುಖದಲ್ಲಿ ಬಣ್ಣಗಾರಿಕೆ, ಕಾಲಗಗ್ಗರ ಮೊದಲಾದುವು ಭೂತವೇಷದ ಆಕರ್ಷಣೆಗಳು. ಚಂಡೆ ಮೊದಲಾದ ವಾದ್ಯಗಳ ಗತ್ತಿಗೆ ಭೂತದ ಪಾತ್ರ ನರ್ತಿಸುವುದರ ಜೊತೆಗೆ ಇಲ್ಲಿನ ಪಾಡ್ದನ ಸಾಹಿತ್ಯವೂ ಗಮನಾರ್ಹವಾಗಿದೆ. *

ಹಿಂದಿನ ಮೈಸೂರು ಸಂಸ್ಥಾನ ಪ್ರದೇಶದಲ್ಲಿ ಕಂಡುಬರುವ ಜನಪದ ನೃತ್ಯಗಳಲ್ಲಿ ಕೋಲ ಕುಣಿಯುವುದು ಎಂಬುದು ಒಂದು. ಕೋಲ ಎಂದರೆ ಒಂದು ದೆವ್ವ ಅಥವಾ ಭೂತ. ಇದು ಸ್ವಲ್ಪ ಹೆಚ್ಚು ಕಡಿಮೆ ದಕ್ಷಿಣ ಕನ್ನಡದ ಭೂತಾರಾಧನೆಯ ಕುಣಿತಕ್ಕೆ ಸರಿಹೋಗುವಂಥದ್ದು. ಇದರಲ್ಲಿ ನಾನಾ ಬಗೆ, ನಾನಾ ಸಂಪ್ರದಾಯಗಳುಂಟು. ಪ್ರತಿ ಹಳ್ಳಿಯೂ ಅನೇಕ ವೇಳೆ ಹಳ್ಳಿಗಳಲ್ಲಿ ಕೆಲವು ಸಂಸಾರಗಳು ಊರಿಗೆ ಒಳ್ಳೆಯದಾಗಲೆಂದು, ಸಂಪ್ರದಾಯಬದ್ಧವಾಗಿ ತಮಗೆ ಆಗಿ ಬಂದಿರುವ ಒಂದು ದೆವ್ವವನ್ನು ಚಪ್ಪರದಲ್ಲಿ ಆವಾಹನೆ ಮಾಡಿ, ಹೂವು ಹಸುರುಚಿಗುರು, ಅಡಕೆ, ಹೊಂಬಾಳೆಗಳಿಂದ ಪೂಜಿಸಿ ಅದರ ಮುಂದೆ ಕುಣಿಯುವುದಕ್ಕೆ ಕೋಲ ಕುಣಿಯುವುದು ಎನ್ನುವರು. ಅನೇಕ ವೇಳೆ ತಮ್ಮಟೆಗಳ ನಾನಾ ಭಂಗಿಗಳಿಗೆ ಅನುಗುಣವಾಗಿ ಈ ನೃತ್ಯ ಅರ್ಧರಾತ್ರಿಯವರೆಗೆ ಕೆಲವೊಮ್ಮೆ ಬೆಳಗಿನ ಜಾವದವರೆಗೆ ನಡೆಯುವುದುಂಟು. ಇದರಲ್ಲಿ ಕುಣಿತಗಾರರೆಲ್ಲ ಒಂದೊಂದು ವಿಚಿತ್ರವಾದ ವೇಷಧರಿಸಿ, ಕೆಲವು ವೇಳೆ ಪುರಾಣದ ವ್ಯಕ್ತಿಗಳಾದ ಭೀಮ, ಅರ್ಜುನ, ಅಭಿಮನ್ಯು, ದ್ರೌಪದಿ, ಕೈಕೇಯಿ ಮುಂತಾದವರಂಥ ವೇಷಗಳನ್ನು ಧರಿಸಿಕೊಂಡು ಕುಣಿಯುತ್ತಾರೆ. ಪುರುಷರೇ ಸ್ತ್ರೀಪಾತ್ರಗಳನ್ನೂ ಹಾಕುವುದುಂಟು. ಒಂದೊಂದು ವೇಷವೂ ಕೋಲನ ಮುಂದೆ ಬಂದಾಗ, ತನಗೆ ಬೇಕಾದ ಧಾಟಿಯಲ್ಲಿ ತಮ್ಮಟೆ ಹೊಡೆಯಿಸಿಕೊಂಡು ಕುಣಿಯುತ್ತದೆ.

ಒಮ್ಮೆ ಜನಪ್ರಿಯವಾಗಿದ್ದು ಈಗಲೂ ಪ್ರಚಾರದಲ್ಲಿರುವ ನೃತ್ಯಗಳಲ್ಲಿ ಮಾರಿಯಮ್ಮನ ಕುಣಿತವೂ ಒಂದು. ಮಾರಿಯಮ್ಮನ ಪೂಜಾರಿಯ ವೇಷ ವಿಶೇಷ ರೀತಿಯಲ್ಲಿ ಆಕರ್ಷಣೀಯವೂ ರುದ್ರಭಯಂಕರವೂ ಆಗಿರುತ್ತದೆ. ಇವನು ಸಾಧಾರಣವಾಗಿ ಒಳ್ಳೆ ಕಟ್ಟುಮಸ್ತಾದ ಪುಷ್ಟ ಆಳು. ಕೊಬ್ಬಿದ ಮೀಸೆ ಬಿಟ್ಟಿರುವ ಈತ ಕೆಂಪು ಬಣ್ಣದ ಸೀರೆಯನ್ನು ಕಚ್ಚೆಪಂಚೆಯಾಗಿ ಸೊಂಟಕ್ಕೆ ಉಟ್ಟಿರುತ್ತಾನೆ. ಸೊಂಟದ ಮೇಲುಭಾಗವೆಲ್ಲ ಬೆತ್ತಲೆಯೆಗೆ ಎದ್ದುಕಾಣುವಂತೆ ವಿಭೂತಿ ಮತ್ತು ಕುಂಕುಮ. ತೋಳಿಗೆ ಬೆಳ್ಳಿ ಮುಲಾಮಿನ ಬಿಗಿಯಾದ ತೋಳಬಂದಿ. ಹಣೆ ಕೆನ್ನೆಗಳಿಗೆ ಪೂರ್ತಿಯಾಗಿ ಕೆಂಪುಬಣ್ಣ. ಉಳಿದ ಸ್ಥಳಗಳಲ್ಲಿ ಅರಸಿನ ಬಣ್ಣ, ನೆತ್ತಿಯಲ್ಲಿ ಹಣೆಗಣ್ಣಿನಂತೆ ರೂಪಾಯಿ ಅಗಲದ ವಿಶಾಲವಾದ ಕೇಸರಿ ಬೊಟ್ಟು, ಸೊಂಟಕ್ಕೆ ಸಣ್ಣ ಗಂಟೆಗಳ ಸರ, ಎರಡೂ ಕಾಲಿಗೆ ಗೆಜ್ಜೆ. ಕೆಲವರು ಮಂಡಿಗೆ ಸಹ ಗೆಜ್ಜೆ ಸರ

ಕಟ್ಟುವುದುಂಟು. ಕೈಯಲ್ಲಿ ಒಂದೊಂದು ಎರಡು ಅಂಗುಲ ದಪ್ಪವಾದ ಚಾವಟಿ - ಈ ವೇಷದೊಂದಿಗೆ ಮಾರಿಯಮ್ಮನ ಪೆಟ್ಟಿಗೆಯನ್ನು ನೆಲದ ಮೇಲೆ ಇಟ್ಟು, ತಮ್ಮಟೆ ಹರೆಗಳ ಸದ್ದಿಗನುಗುಣವಾಗಿ ದೇವರ ಮುಂದೆ ಕುಣಿಯುತ್ತಾನೆ. ಸೊಂಟದ ಗಂಟೆ ಸದ್ದು, ಕಾಲಿನ ಗೆಜ್ಜೆಸದ್ದು, ಮಾರಿಯಮ್ಮನ ಹೊಗಳಿಕೆ, ಮಧ್ಯೆ ಮಧ್ಯೆ ಚಾವಟಿಯ ಸದ್ದು - ಇವುಗಳೊಂದಿಗೆ ಲಯಬದ್ಧವಾಗಿ ಕುಣಿಯುವ ನೃತ್ಯ ಗಂಭೀರವೂ ಆಕರ್ಷಕವೂ ಆಗಿರುತ್ತದೆ.



ಕುಡಬಿಯರ ಹೋಳಿಕುಣಿತ

ಕಂಬಳಿ ಕುಣಿತ ತುಂಬ ಮನರಂಜಕವಾದ ಒಂದು ಬಗೆಯ ನೃತ್ಯ. ದೇವರ ಮುಂದೆ ಒಬ್ಬೊಬ್ಬ ಭಕ್ತನೂ ಸೊಂಟಕ್ಕೆ ಒಂದು ಕಂಬಳಿ ಸುತ್ತಿಕೊಂಡು ಕುಣಿಯುತ್ತಾನೆ. ಇದರಲ್ಲಿ ನೂರಾರು ಜನ ಭಾಗವಹಿಸುವುದುಂಟು. ಸಾಧಾರಣವಾಗಿ ಬಿಳಿಯ ಉಡುಪನ್ನು ಧರಿಸಿ, ಸೊಂಟಕ್ಕೆ ಕರಿಕಂಬಳಿ ಸುತ್ತಿ, ವಿವಿಧ ಭಂಗಿಯಲ್ಲಿ ಬಾಗಿ, ತಿರುಗಿ, ನೆಗೆದು, ಕುಣಿಯುವಾಗ ಕಪ್ಪು ಬಿಳುಪುಗಳ ವರ್ಣರಾಶಿಯ ಪ್ರದರ್ಶನ ಉಲ್ಲಾಸವನ್ನುಂಟುಮಾಡುತ್ತದೆ.

ಕುರುಬದೇವರ ಕುಣಿತದಲ್ಲಿ ದೇವರ ಮುಂದೆ ಕುಣಿಯುವವರು ಅನೇಕ ಕಡೆಗಳಲ್ಲಿ ವೃತ್ತಿನರ್ತಕರು. ಇವರು ದೇವರ ಮುಂದೆ ಕುಣಿತದ ಪ್ರದರ್ಶನವನ್ನು ಮಾಡುತ್ತ ಹೆಚ್ಚು ಹೊತ್ತು ಕಳೆಯುತ್ತಾರೆ. ಇದರಿಂದ ಬೇಸರಗೊಂಡ ವಾದ್ಯಗಾರರೂ ಕೆಲವು ವೇಳೆ ಭಕ್ತಾದಿಗಳೂ ಇವರನ್ನು ಬೈದು ಮುಂದಕ್ಕೆ ಹೊರಡಿಸುವುದುಂಟು. ಗಾಯಕರು ಹೊಂಟು ಬಾರವ್ವ ಹೊಂಟು ಬಾರವ್ವ ಹೊಂಟು ಬಾರವ್ವ ಎಂದು ಹಾಡುತ್ತಿರಲು ದೇವರು ಒಳಗಿನಿಂದ ಹೊರಕ್ಕೆ ಬರುತ್ತದೆ. ಕುರುಬರ ದೇವರು ಬೈದಲ್ಲದೆ ಮುಂದೆ ಹೋಗದು ಎಂಬ ಒಂದು ಗಾದೆ ಮೇಲಿನ ಮಾತನ್ನು ಸಮರ್ಥಿಸುತ್ತದೆ. ಮಣೇವು ಕುಣಿತ (ನೋಡಿ) ಮಣೇವು ಹಾಕುವುದು ಎಂಬುದು ಮುಖ್ಯವಾಗಿ ದಾಸಯ್ಯಗಳ ಕುಣಿತ. ದೇವರ ಪೂಜೆಯಾದ ಮೇಲೆ ದೇವರ ಮುಂದೆ ಬಿಳಿ ಚೌಕಗಳನ್ನು ಹಾಸಿ, ಅವುಗಳ ಮೇಲೆ ಕಡಲೆಪುರಿ ತೆಂಗಿನಕಾಯಿ ಕೊಬ್ಬರಿ ಬೆಲ್ಲ ಬಾಳೆಹಣ್ಣು ಹಲಸಿನಹಣ್ಣು ಸೌತೆಕಾಯಿ ಚೂರು ಮೊದಲಾದವನ್ನು ಸೇರಿಸಿ ಮಾಡಿದ ರಸಾಯನವನ್ನು ಗುಡ್ಡೆಯಾಗಿಡುತ್ತಾರೆ. ಒಂದೊಂದು ಗುಡ್ಡೆಗೆ ಒಬ್ಬೊಬ್ಬ ದಾಸಯ್ಯನಂತೆ ಕೈಯಲ್ಲಿ ಬೆತ್ತ ಹಿಡಿದು ಉದ್ಗಾರ ಮಾಡುತ್ತ ಅದರ ಸುತ್ತ ಕುಣಿಯುತ್ತಾರೆ. ತಮ್ಮಟೆಯವರು ಒಂದು ಸಂಕೇತವನ್ನು ಬಾರಿಸಿದ ಕೂಡಲೇ ದಾಸಯ್ಯಗಳೆಲ್ಲ ಬಾಗಿ ಕೈಯಿಂದ ಮುಟ್ಟದೆ ಬಾಗಿನರ್ತಿಸುತ್ತಲೇ ರಸಾಯನ ತಿನ್ನುತ್ತಾರೆ. ಈ ನೃತ್ಯಗಳೇ ಅಲ್ಲದೆ ಬೇರೆ ಬೇರೆ ಸಂದರ್ಭಗಳಲ್ಲಿ ಪ್ರಕಟವಾಗುವ ಹುಲಿವೇಷ, ಪಾಳೆಗಾರವೇಷ, ಕೋಡಂಗಿವೇಷ, ಕೀಲುಕುದುರೆ ಮೊದಲಾದವೂ ಜನಪದ ನೃತ್ಯಗಳೇ ಎನ್ನಬಹುದು. (ಜಿ.ಆರ್.ಐ.)

ಕೊಡಗಿನಲ್ಲಿ ಹೆಚ್ಚು ಪ್ರಸಿದ್ಧವಾಗಿರುವ ಜನಪದ ನೃತ್ಯಗಳಲ್ಲಿ ಹುತ್ತರಿ ಕುಣಿತವನ್ನು (ನೋಡಿ) ಬಿಟ್ಟರೆ ಉಮ್ಮತ್ತಾಟ ಗಮನಾರ್ಹವಾದುದು. ಈ ನೃತ್ಯವನ್ನು ಕೊಡವರು ಉಮ್ಮತ್ತಾಟ್ ಎಂದು ಕರೆಯುತ್ತಾರೆ. ಈ ನೃತ್ಯ ಸಾಮಾನ್ಯವಾಗಿ ಕೊಡವರ ವಿಶಿಷ್ಟ ಹಬ್ಬಗಳಾದ ಕೈಲ್‌ಮೂಹೂರ್ತ, ಕಾವೇರಿ ಸಂಕ್ರಮಣ, ಹುತ್ತರಿ, ಶಿವರಾತ್ರಿ, ಯುಗಾದಿ, ಷಷ್ಠಿ, ವಿಷ್ಣುಸಂಕ್ರಮಣಗಳಲ್ಲಿ ನಡೆಯುತ್ತದೆ. ಇದರಲ್ಲಿ ಸಂಪೂರ್ಣವಾಗಿ ಸ್ತ್ರೀಯರು ಭಾಗವಹಿಸುವರು. ಇವರು ಸಮವಸ್ತ್ರಧಾರಿಗಳಾಗಿರುತ್ತಾರೆ. ಸೀರೆಯ ನೆರಿಗೆಯನ್ನು ಹಿಂದಕ್ಕೆ ಬಿಟ್ಟು, ಸೀರೆಯ ಇನ್ನೊಂದು ತುದಿಯನ್ನು ಬೆನ್ನಿನ ಮೇಲೆ ಇಳಿ ಬಿಟ್ಟು ಎದೆಯ ಮೇಲೆ ಹಾಯಿಸಿ ಬಲಪಕ್ಕಕ್ಕೆ ಕಟ್ಟಿಕೊಳ್ಳುತ್ತಾರೆ. ಜೊತೆಗೆ ಬೆನ್ನಿನ ಮೇಲೆ ಹರಡಿಕೊಳ್ಳುವಂತೆ ಒಂದು ಜರಿ ಹೊದಿಕೆಯನ್ನು ತಲೆಗೆ ಕಟ್ಟಿಕೊಳ್ಳುವರು. ಹೀಗೆ ವಿಶಿಷ್ಟ ಉಡುಗೆತೊಡುಗೆಗಳಿಂದ ಅಲಂಕೃತರಾಗಿ ಎರಡು ಕೈಗಳಲ್ಲೂ ತಾಳಗಳನ್ನು ಹಿಡಿದು ತಮ್ಮ ಕಾಲುಗಳ ಕ್ರಮಬದ್ಧ ಚಲನೆಗೆ ತಕ್ಕಂತೆ ತಾಳಗಳನ್ನು ತಟ್ಟುತ್ತ ತಾಳದ ನಾದಕ್ಕನುಗುಣವಾಗಿ ವಿವಿಧ ಭಂಗಿಗಳಲ್ಲಿ ನೃತ್ಯಕ್ಕೆ ಸಂಬಂಧಪಟ್ಟ ಕೊಡವ ಜನಪದ ಗೀತೆಗಳನ್ನು ಇಂಪಾಗಿ ಹಾಡುತ್ತ ನರ್ತಿಸುವರು. ನೃತ್ಯದಲ್ಲಿ ಏಕತಾನತೆ ಹೆಚ್ಚಾಗಿ ಕಂಡುಬಂದರೂ ನಯನಾಜೂಕು ಶಿಸ್ತುಗಳು ಮುಪ್ಪುರಿಗೊಂಡಿದ್ದು ನೋಡುಗರ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತದೆ.

ಬೊಳಕಾಟ ಕೊಡವರಲ್ಲಿ ಪ್ರಸಿದ್ಧವಾದ ಇನ್ನೊಂದು ಜನಪದ ಧಾರ್ಮಿಕ ನೃತ್ಯ. ಇದನ್ನು ಕೊಡವರು ಬೊಳ್‌ಕಾಟ್ ಎಂದು ಕರೆಯುತ್ತಾರೆ. ಈ ನೃತ್ಯ ಹೆಚ್ಚಾಗಿ ಸುಗ್ಗಿಯ ಕಾಲದಲ್ಲಿ ಮದುವೆ, ದೇವರ ಉತ್ಸವ ಮೊದಲಾದ ಧಾರ್ಮಿಕ ಸಮಾರಂಭಗಳಲ್ಲಿ ನಡೆಯುತ್ತದೆ. ಇದೊಂದು ಬಗೆಯ ದೀಪನೃತ್ಯ. ನೃತ್ಯದಲ್ಲಿ ಇಪ್ಪತ್ತಕೂ ಹೆಚ್ಚು ಬಗೆಗಳಿವೆಯೆಂದು ತಿಳಿದುಬರುತ್ತದೆ. ನೃತ್ಯದಲ್ಲಿ ಗಂಡಸರು ಮಾತ್ರ ಭಾಗವಹಿಸುತ್ತಾರೆ. ನರ್ತಿಸುವವರು ಕಪ್ಪುಬಣ್ಣದ ಉದ್ದನೆಯ ನಿಲುವಂಗಿ ಧೋತಿ ಧರಿಸಿ, ಅದರ ಮೇಲೆ ಸೊಂಟಕ್ಕೆ ಕೆಂಪುಬಣ್ಣದ ರೇಷ್ಮೆಯ ನೀಳ ನಡುಪಟ್ಟಿ, ಸುತ್ತಿ, ಅದಕ್ಕೆ ಪೀಚುಕತ್ತಿ ಸಿಕ್ಕಿಸಿ, ತಲೆಗೆ ಉದ್ದನೆಯ ಬಿಳಿ ಜರಿ ಇರುವ ರುಮಾಲು ಸುತ್ತಿ, ಕೈಯಲ್ಲಿ ಒಂದು ದೊಡ್ಡ ಖಡ್ಗ ಒಂದು ಬಿಳಿಯ ಚಾಮರ ಹಿಡಿದಿರುತ್ತಾರೆ. ನೃತ್ಯ ಆರಂಭವಾಗುವುದಕ್ಕೆ ಮುಂಚೆ ವಿಶಾಲವಾದ ಬಯಲಿನಲ್ಲಿ ದೊಡ್ಡ ಕಂಚಿನ ದೀಪಗಳನ್ನಿಡುತ್ತಾರೆ.



ಹಾಲಕ್ಕಿ ಸುಗ್ಗಿಕುಣಿತ

ಬಯಲಿನ ಮಧ್ಯದಲ್ಲಿ ಮರವಿದ್ದರೆ, ಆ ಮರಕ್ಕೆ ದೀಪಗಳನ್ನು ಕಟ್ಟಿರುತ್ತಾರೆ. ದೀಪಗಳ ಸುತ್ತಲೂ ದುಡಿ, ತಮ್ಮಟೆ, ತಾಳ, ಓಲಗ ಈ ವಾದ್ಯಗಳನ್ನು ನುಡಿಸುವ ನಾಲ್ವರಿರುತ್ತಾರೆ. ಇವರು ವಾದ್ಯ ನುಡಿಸುತ್ತಿರುವಾಗ ನರ್ತನದಲ್ಲಿ ಭಾಗವಹಿಸುವವರು ಒಬ್ಬೊಬ್ಬರಾಗಿ ಮುಂದೆ ಬಂದು ವೃತ್ತಾಕಾರವಾಗಿ ಹಿನ್ನೆಲೆ ವಾದ್ಯದ ನಾದಕ್ಕನುಗುಣವಾಗಿ ಹೆಜ್ಜೆ ಹಾಕುತ್ತ ಮುಂದುವರಿಯುತ್ತಾರೆ. ಎದುರು ಬದುರು ನಿಂತ ಈ ಎರಡು ಗುಂಪು ಒಂದರಲ್ಲಿ ಇನ್ನೊಂದು ತೂರಿ ನರ್ತಿಸುತ್ತ ದೀಪವನ್ನು ಪ್ರದಕ್ಷಿಣೆ ಮಾಡುತ್ತದೆ. ವಾದ್ಯದ ನಾದಕ್ಕನುಗುಣವಾಗಿ ಚಾಮರಗಳನ್ನು ಬೀಸುತ್ತ ಆವೇಶಭರಿತರಾಗಿ ನರ್ತಿಸುವ ದೃಶ್ಯ ರಮಣೀಯವಾಗಿರುತ್ತದೆ. ನೃತ್ಯದಲ್ಲಿ

ಹಾಡಿರುವುದಿಲ್ಲ. ಆದರೆ ನರ್ತಿಸುವಾಗ ನಮ್ಮ ತಂದೆ, ನಮ್ಮ ತಾಯಿ, ನಮ್ಮ ಕುಲದೈವ ಎಂದು ಆವೇಶಭರಿತರಾಗಿ ಕೇಕೆ ಹಾಕುತ್ತಿರುತ್ತಾರೆ.



ಗೌಳಿಗರ ಕುಣಿತ

ಮಲೆನಾಡಿನ ಭಾಗಗಳಲ್ಲಿ ಪ್ರಚಲಿತವಿರುವ ಕೋಲಾಟದಲ್ಲಿ ಬೊಳಕಾಟದ ಛಾಯೆ ಕಂಡುಬರುತ್ತದೆ. ಈ ಆಟ ಮೊದಲಿಗೆ ಇಲ್ಲೂ ಪ್ರಚಾರದಲ್ಲಿದ್ದು ಇದನ್ನು ನಾಡಿಗರ ಕುಣಿತವೆಂದು ಕರೆಯುತ್ತಿದ್ದಂತೆ ತಿಳಿಯುತ್ತದೆ. (ಎ.ಎಚ್.)

ಸಾಹಿತ್ಯಪ್ರಧಾನವಾದ ಯಕ್ಷಗಾನ ಬಯಲಾಟಗಳಲ್ಲೂ ಕರಪಾಲ ಮೇಳ (ನೋಡಿ), ಚೌಡಿಕೆ ಮೇಳ (ನೋಡಿ), ಜೋಗಿಗಳ ಮೇಳ ಮುಂತಾದುವುಗಳಲ್ಲೂ ನೃತ್ಯ ಪ್ರಮುಖವಾಗಿಯೇ ಬರುತ್ತದೆ. ಉತ್ತರ ಕರ್ನಾಟಕದ ಗೊಂದಲಿಗರು (ನೋಡಿ) ನಡೆಸುವ ಮೇಳ ಕಥಾ ಪ್ರಧಾನವಾದುದು. ಕರಪಾಲ ಮೇಳ, ಚೌಡಿಕೆ ಮೇಳಗಳಂತೆ ಸಾಹಿತ್ಯ, ಸಂಗೀತ, ಕುಣಿತಗಳು ಇಲ್ಲಿ ಮುಪ್ಪುರಿಗೊಂಡಿರುತ್ತವೆ. ಕಥಾನಿರೂಪಣೆಯ ನಡುವೆ ಹಾಡು, ಕುಣಿತ ಇರುತ್ತವೆ. ಸಮಗ್ರರಾತ್ರಿ ಜನರ ಆಸಕ್ತಿಯನ್ನು ಹಿಡಿದಿಡಬೇಕಾದ ಹೊಣೆಗಾರಿಕೆ ಈ ಕಲೆಗಳದು. ಆದುದರಿಂದಲೇ ಕಥಾಮಾಧ್ಯಮ ಇಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಯಕ್ಷಗಾನ ಬಯಲಾಟಗಳು, ತೊಗಲುಗೊಂಬೆ ಆಟ (ನೋಡಿ), ಸೂತ್ರದಗೊಂಬೆ ಆಟ (ನೋಡಿ), ಶ್ರೀಕೃಷ್ಣಪಾರಿಜಾತ (ನೋಡಿ) ಮುಂತಾದ ಮೇಳಗಳಲ್ಲೂ ನೃತ್ಯ ಮತ್ತು ಸಂಗೀತ ಕಥೆಗೆ ಅಧೀನ. ಚಿತ್ರ, ಶಿಲ್ಪ, ಸಂಗೀತ, ನೃತ್ಯ ಹೀಗೆ ಲಲಿತಕಲೆಗಳೆಲ್ಲ ಕೂಡಿಬರುವ ಜನಪದ ನಾಟಕಗಳು ತಮ್ಮದೇ ಆದ ಪ್ರತ್ಯೇಕ ವಿಭಜನೆಗೆ ಒಳಪಡುತ್ತವೆ.



ಗೊಂಡರಮಂಡಲ ಕುಣಿತ

ಜನಪದ ನಾಟಕಗಳ ಸಂಗೀತ, ಸಾಹಿತ್ಯ ಹಾಗೂ ಇತರ ಅಂಶಗಳಂತೆಯೇ ನೃತ್ಯವೂ ಗಣ್ಯವಾದುದೇ. ದೈತ್ಯಪಾತ್ರಗಳ ರೌದ್ರನೃತ್ಯ, ಸ್ತ್ರೀಪಾತ್ರಗಳ ಲಲಿತ ನೃತ್ಯ, ರಾಜಪಾತ್ರಗಳ ಗಂಭೀರನೃತ್ಯ - ಇವು ಮೂಡಲಪಾಯದಲ್ಲಿ ಅಪಾರ ವೈವಿಧ್ಯವನ್ನು ಸಾಧಿಸಿಕೊಂಡಿವೆ. ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ತೆಂಕುತಿಟ್ಟು, ಬಡಗುತಿಟ್ಟು, ಉತ್ತರ ಕರ್ನಾಟಕದ ದೊಡ್ಡಾಟ, ದಕ್ಷಿಣ ಕರ್ನಾಟಕದ ಮೂಡಲಪಾಯ, ಘಟ್ಟದ ಕೋರೆ ಯಕ್ಷಗಾನ ಸಂಪ್ರದಾಯಗಳ ಮೂಲಭೂತ ಗುಣ ಒಂದೇ ಆದರೂ ನೃತ್ಯದಲ್ಲಿ ಸಾಕಷ್ಟು ವೈವಿಧ್ಯ ಕಂಡುಬರುತ್ತದೆ. ತೆಂಕುತಿಟ್ಟಿನ ತೀವ್ರ ವೇಗದ ಸುತ್ತು ಹಾಕುವ ವೈಖರಿ, ಬಡಗುತಿಟ್ಟಿನ ಮಂಡಿಯ ಸುತ್ತು, ಮೂಡಲಪಾಯದ ಉಡಂಗ್ ಇವು ಆಯಾ ಕಲೆಗಳಿಗೆ ಮಾತ್ರ ಮೀಸಲಾದುವು. ಮೂಡಲಪಾಯದ ಸ್ತ್ರೀ ಪಾತ್ರ ಕುಳಿತ ಭಂಗಿಯಲ್ಲಿ ನೃತ್ಯವನ್ನು ಆರಂಭಿಸಿ ಕ್ರಮೇಣ ಮೇಲೆದ್ದು ನರ್ತಿಸತೊಡಗಿದರೆ ಪಡವಲಪಾಯದ ಸ್ತ್ರೀ ಪಾತ್ರಗಳು ನೇರವಾಗಿಯೇ ನೃತ್ಯವನ್ನು ಆರಂಭಿಸುತ್ತವೆ. ಇಂಥ ಕಥಾಪ್ರಧಾನ ನೃತ್ಯಗಳನ್ನು ಬಿಟ್ಟರೆ ಇನ್ನುಳಿದ ಕಲೆಗಳೆಲ್ಲ ಪ್ರಧಾನವಾಗಿ ಕುಣಿತಗಳು; ಇಲ್ಲಿ ಕೆಲವು ಕಡೆ ಸಾಹಿತ್ಯದ ಹಿನ್ನೆಲೆ ಬಂದರೂ ಅದು ಪ್ರಮುಖವಲ್ಲ. *

**ಜನಪದ ರಂಗಭೂಮಿ :** ಕರ್ನಾಟಕದ ಜನಪದ ಕಲಾಭಿವ್ಯಕ್ತಿಯ ಒಂದು ಮುಖ್ಯ ಪ್ರಕಾರವಾಗಿರುವ ರಂಗಭೂಮಿ ಕಲೆ ಬಹು ಪ್ರಾಚೀನ ಕಾಲದಿಂದಲೂ ಪ್ರಚಲಿತವಿರುವುದಲ್ಲದೆ, ಶಿಷ್ಟರಂಗಭೂಮಿಗಿಂತ ಅನೇಕ ರೀತಿಗಳಲ್ಲಿ ಭಿನ್ನವಾದ ಕೆಲವು ಅಂಶಗಳನ್ನು ಒಳಗೊಂಡಿದ್ದು ತನ್ನ ಸ್ವಂತಿಕೆಯನ್ನು ಉಳಿಸಿ ಬೆಳೆಸಿಕೊಂಡು ಬಂದಿದೆ. ಇಂದು ನಾಡಿನ ವಿವಿಧ ಭಾಗಗಳಲ್ಲಿ ಪ್ರಚಲಿತವಾಗಿರುವ ಅನೇಕ ಬಗೆಯ ರಂಗಭೂಮಿಯ ಅಭಿವ್ಯಕ್ತಿ ರೀತಿಗಳನ್ನು ಗುರುತಿಸಬಹುದಾಗಿದೆ. ಜನಪದ ರಂಗಭೂಮಿಗೆ ಸಂಬಂಧಿಸಿದಂತೆ ಯಕ್ಷಗಾನ ಬಯಲಾಟ, ಮೂಡಲಪಾಯ, ಪಡುವಲಪಾಯ, ತಾಳಮದ್ದಲೆ, ಸಣ್ಣಾಟ, ತೊಗಲುಗೊಂಬೆ ಆಟ, ಸೂತ್ರದ ಗೊಂಬೆಆಟ, ಶ್ರೀಕೃಷ್ಣ ಪಾರಿಜಾತ, ಕರಿಬಂಟ, ಕೋಡಂಗಿ - ಇವುಗಳ ಬಗ್ಗೆ ಈ ಸಂಪುಟದಲ್ಲಿ ಪ್ರತ್ಯೇಕ ಲೇಖನಗಳಿವೆ. ಪ್ರಸಕ್ತ ಲೇಖನದಲ್ಲಿ ಜನಪದ ರಂಗಭೂಮಿಯ ಪ್ರಾಚೀನತೆ ಮತ್ತು ಇಂದು ಪ್ರಚಲಿತವಾಗಿರುವ ಮುಖ್ಯ ಪ್ರಕಾರಗಳ ಸ್ಥೂಲ ಸಮೀಕ್ಷೆಯನ್ನು ಕೊಡಲಾಗಿದೆ.

**ಪ್ರಾಚೀನತೆ:** ಕನ್ನಡ ನಾಟಕ ಸಾಹಿತ್ಯದ ಪ್ರಾಚೀನತೆಯನ್ನು ಗಮನಿಸಿದರೆ ನಾಟಕ, ನಾಟಕಾಭಿನಯ, ನಾಟಕಶಾಲೆ, ನಟ, ಪಗರಣ ಮುಂತಾದ ಶಬ್ದಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಕನ್ನಡದಲ್ಲಿ ಶಿಷ್ಟ ನಾಟಕ ಸಾಹಿತ್ಯದ ಚರಿತ್ರೆ ಖಚಿತವಾಗಿ ಆರಂಭವಾಗುವುದು ಹದಿನೇಳನೆಯ ಶತಮಾನದಿಂದ, ಸಿಂಗರಾರ್ಯನ ಮಿತ್ರವಿಂದಾಗೋವಿಂದ ರಚಿತವಾದ ಮೇಲೆ. ಆದರೆ ಜನಪದ ರಂಗಭೂಮಿಗೆ ಪ್ರಾಚೀನ ಪರಂಪರೆ ಇದ್ದಂತೆ ತೋರುತ್ತದೆ.

ಈ ಸಂದರ್ಭದಲ್ಲಿ ಪ್ರಾಚೀನ ಕಾವ್ಯಗಳಲ್ಲಿ ಬರುವ ಪಗರಣ, ನಾಳ್ಪಗರಣ ಶಬ್ದಗಳು ಆಸಕ್ತಿಯನ್ನು ಕೆರಳಿಸುತ್ತವೆ. ಕೆಲವು ವಿದ್ವಾಂಸರು ಇವು ನಾಟಕವನ್ನು ನಿರ್ದೇಶಿಸುವ ಶಬ್ದಗಳಾಗಿರಲಾರವು ಕೇವಲ ಒಂದು ಬಗೆಯ ವಿವಿಧ ವೇಷದ ಮನರಂಜನೆಗಳಾಗಿದ್ದಿರಬಹುದೆಂದು ಊಹಿಸುತ್ತಾರೆ. ಆದರೆ ವಡ್ಡಾರಾಧನೆಯಲ್ಲಿ ಬರುವ ಲೋಗರ್ ಪಗರಣಿಗರಾಗಿ ಎನಿತಾನಂ ತೆಱದ ರೂಪುಗಳಂ ಕೈಗೊಂಡು ಮರಮೊಗಂಗಳನ್ನಿಟ್ಟುಬಂದು ಮುಂದೆ ಆಡಿಯುಂ ಪಾಡಿಯುಂ ನಗಿಸಿಯುಂ ಎಂಬ ವರ್ಣನೆಗಳನ್ನು ನೋಡಿದರೆ ನಾಟಕಕಲೆಗೆ ಮೀಸಲಾದ ಪಗರಣಿಗರು ಇದ್ದರೆಂಬ ಕಲ್ಪನೆ ಬರುತ್ತದೆ. ಅವರು ವಿವಿಧ ವೇಷಗಳನ್ನು ಧರಿಸುವ ರೀತಿಯೂ ನಾಟಕದ ಬಗೆಯನ್ನೇ ಪರಿಚಯಿಸುತ್ತದೆ. ನಯಸೇನನ 'ಮೂರು ದಿನದ ಪಗರಣಕ್ಕೆ ಗಡ್ಡ ಮೀಸೆ ಮಂಡೆಯುಂ ಬೋಳಿಸಿದರ್' ಎಂಬ ಮಾತು ಪಗರಣ ಒಂದು ನಾಟಕವೇ ಎಂಬುದನ್ನು ಖಚಿತಪಡಿಸುತ್ತದೆ. ಆದರೆ ಇವು ಜನಪದ ನಾಟಕಗಳೇ ಆಗಿದ್ದುವು ಎಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ನಾಳ್ಪಗರಣ ಬಹುಶಃ ಜನಪದ ನಾಟಕದ ಹಿನ್ನೆಲೆಯಲ್ಲಿ ಬಳಸಿದ ಶಬ್ದವಿರಬಹುದು.

ಅಲ್ಲಮ ಪ್ರಭುವಿನ ಸಮಕಾಲೀನನಾದ ಬಹುರೂಪಿ ಚೌಡಯ್ಯ ಒಳ್ಳೆಯ ನಟನಾಗಿದ್ದನಂತೆ. ಇವನು ಶಿವಲೀಲೆಯನ್ನಾಡಿ ನಾಡಿನಾದ್ಯಂತ ಶಿವಗಾಳಿಯನ್ನು ಬೀಸುವಂತೆ ಮಾಡಿದ. ವೈಷ್ಣವ ಕಥೆಗಳನ್ನು ಆಡುತ್ತಿದ್ದ ಕೊಟ್ಟರಗಿಯ ಅಚ್ಯುತನನ್ನೂ ಜಿನಕಥೆಗಳನ್ನು ಆಡುತ್ತಿದ್ದ ಚಿಕ್ಕಯ್ಯನನ್ನೂ ನಾಟಕ ಕಲೆಯಲ್ಲಿ, ಕುಣಿತದಲ್ಲಿ ಸೋಲಿಸಿದನೆಂಬ ಸಂಗತಿಯನ್ನು ತಿಳಿಸುವ

ಜನಪದ ಗೀತೆಯೊಂದನ್ನು ಉಲ್ಲೇಖಿಸಿ ವಿದ್ವಾಂಸರಾದ ಗದ್ದಗಿಮಠ ಅವರು ವಚನಕಾರರ ಕಾಲಕ್ಕೆ ಸಂಗೀತ ಸಾಹಿತ್ಯ ಹಾಗೂ ನೃತ್ಯ ಪ್ರಧಾನವಾಗಿದ್ದ ಬಯಲಾಟದ ಅಸ್ತಿತ್ವವನ್ನು ಗುರುತಿಸಿದ್ದಾರೆ.



ವೇಷಗಾರರು

ಜನಪದ ನಾಟಕಗಳ ಪ್ರಸ್ತಾಪ ಕುಮಾರವ್ಯಾಸನಲ್ಲಿಯೂ ಬರುತ್ತದೆ. ಈ ನಾಟಕಗಳನ್ನು ಅಲ್ಲಿ 'ನಾಡಾಡಿಗಳ ನಾಟಕ' ಎಂದು ಕರೆಯಲಾಗಿದೆ. ದೊಂಬಿದಾಸರು, ಬಹುರೂಪಿಗಳು 'ಇಂಥ' ನಾಟಕಗಳನ್ನು ಆಡಿ ಜನಪ್ರಿಯಗೊಳಿಸಿರಬೇಕು. ಕುಮಾರವ್ಯಾಸ ನೀಡುವ ಈ ನಾಟಕದ ಚಿತ್ರವನ್ನು ಗಮನಿಸಬಹುದು.

ಬೇಡನಾದನಜಾತರಿಪು ಮಾ
ತಾಡಸಿದನಹಿಪತಿಯನೆಲೆ ನಾ
ಡಾಡಿಗಳ ನಾಟಕದ ಫಣಿಯಲ್ಲಾರು ನೀನೆಂದ

ಕಂಠೀರವ ನರಸರಾಜ ವಿಜಯದಲ್ಲಿ ದಶಾವತಾರ ನಾಟಕದ ಬಣ್ಣನೆ ಬರುತ್ತದೆ

ಹರಿಯ ದಶಾವತಾರದ ನಾಟಕವ ತೋರಿ
ಮೆರೆದ ಭಾಗವತರ ಚಂದ
ನರಸರಾಜೇಂದ್ರಚಂದ್ರಮನೋಲಗದಲಿ
ಪರಿಶೋಭಿಸಿದುದೇಪೇಳ್ವೆ

ಯಕ್ಷಗಾನ ಬಯಲಾಟಗಳು ಅತ್ಯಂತ ಪ್ರಾಚೀನ ಕಾಲದಿಂದಲೂ ಶಿಷ್ಟಮೂಲ ಮತ್ತು ಜನಪದ ಮೂಲಗಳೆರಡರಲ್ಲೂ ಪ್ರಚಲಿತವಾಗಿದ್ದು ಬೆಳೆದುಬಂದಂತೆ ತೋರುತ್ತದೆ. ಇದು ಶೈವ, ವೈಷ್ಣವ ಹಾಗೂ ಜೈನ - ಈ ಮೂರು ಮೂಲಗಳಲ್ಲಿಯೂ ಲಭ್ಯವಾಗುತ್ತದೆ. ಈ ಮೂರು ಸಂಪ್ರದಾಯಗಳು ವಚನಕಾರರ ಕಾಲಕ್ಕೂ ಇದ್ದವು ಎಂಬುದಕ್ಕೆ ಸಾಕಷ್ಟು ಆಧಾರಗಳು ದೊರೆಯುತ್ತವೆ. ಶಿವರೂಪ, ದಶರೂಪ, ಜಿನರೂಪಗಳೆಂಬ ಮೂರು ವಿವಿಧ' ನೃತ್ಯನಾಟಕ ಹಾಗೂ ಈ ಸಂಪ್ರದಾಯದ ಮುಖ್ಯವಾದ ಮದ್ದಲೆಗಳ ಪ್ರಸ್ತಾಪ ಕೆಲವು ತ್ರಿಪದಿಗಳಲ್ಲಿ ಸ್ಪಷ್ಟವಾಗಿ ಬಂದಿದೆ. ಯಕ್ಷಗಾನ ಎಂಬ ಪದದ ಪ್ರಯೋಗವೂ ಪ್ರಾಚೀನ ಸಾಹಿತ್ಯದಲ್ಲಿ ಕಂಡುಬರುತ್ತದೆ. ನಾಗಚಂದ್ರನ ಮಲ್ಲಿನಾಥ' ಪುರಾಣದಲ್ಲಿ ಅಮರಿಯರೇಂ ಯಕ್ಷಾಂದೋಳಮನಾಡುವ ಮಾಕ್ಕೆಯಿಂ ಮನಂಗೊಳಿಸಿದರೊ: ಮನಂ ಬಿಡೆ ಯಕ್ಕಲಗಾಣನಂದದಿಂ ಎಂಬ ಸಾಲುಗಳು ಸ್ಪಷ್ಟವಾಗಿ ಯಕ್ಷಗಾನವನ್ನೇ ನಿರ್ದೇಶಿಸುತ್ತವೆ. ಅಗ್ಗಳನ ಚಂದ್ರಪ್ರಭ'ಪುರಾಣದಲ್ಲಿ 'ಲೀಲೆಯಿನೆಕ್ಕಲಗಾಣಮನೋರ್ವನಂ ಕೇಳುತ್ತಮಿರ್ದಂ' ಎಂಬ ಮಾತು ಬರುತ್ತದೆ.

ಯಕ್ಷಗಾನವೇ ಬಹುಶಃ ಏಕಮಾತ್ರ ನೃತ್ಯನಾಟಕವಾಗಿ ಕರ್ನಾಟಕದಲ್ಲಿ ಉಳಿದು ಬಂದಿವೆ ಎನ್ನಬಹುದು. ನಾಟಕ ಎಂದಾಗ ಯಕ್ಷಗಾನವೇ ನಮ್ಮ ಅತ್ಯಂತ ಪ್ರಾಚೀನ ನಾಟಕವಾಗಿ ಕಾಣಿಸಿಕೊಳ್ಳುತ್ತದೆ. ಏಕೆಂದರೆ ಈ ಕಲೆ ಜನಪದ ಮೂಲದಲ್ಲಿ ಮಾತ್ರವಲ್ಲದೆ ಅರಮನೆ ಗುರುಮನೆಗಳಲ್ಲೂ ಪ್ರಚಲಿತವಾಗಿತ್ತು ಎಂಬ ವಿಷಯ ಇಲ್ಲಿ ಮುಖ್ಯವಾದದ್ದು. ಅನೇಕ ಪ್ರೌಢಕವಿಗಳು ಶಿಷ್ಟಕಾವ್ಯಗಳ ಜೊತೆಗೆ ಯಕ್ಷಗಾನಕಾವ್ಯಗಳನ್ನೂ ರಚಿಸಿದ ನಿದರ್ಶನಗಳಿವೆ.

ಶಿವರಾಮ ಕಾರಂತರ ಪ್ರಕಾರ ಅತ್ಯಂತ ಹಳೆಯ ಯಕ್ಷಗಾನ ಕಾವ್ಯ 1564ರದು. ದಕ್ಷಿಣ ಕನ್ನಡ ಜಿಲ್ಲೆಯ ಅಜಪುರದ ವಿಷ್ಣು ಎಂಬ ಕವಿ ಈ ಕೃತಿಯನ್ನು ರಚಿಸಿದ್ದಾನೆ. ಅಲ್ಲಿಂದೀಚೆಗೆ ಅಪಾರ ಸಂಖ್ಯೆಯ ಕೃತಿಗಳು ದೊರೆಯುತ್ತವೆ. ರಾಮಾಯಣ, ಮಹಾಭಾರತ, ಭಾಗವತ, ಶಿವಪುರಾಣಗಳ ಕಥೆಗಳ ಜೊತೆಗೆ ಜನಪದ ಮೂಲದ ಕಾವ್ಯಗಳೂ ಈ ಸಂಪ್ರದಾಯದಲ್ಲಿ ದೊರೆಯುತ್ತವೆ. ಮೂಲತಃ ಯಕ್ಷಗಾನ ಕಲೆ ಶುದ್ಧ ಜನಪದ ಮೂಲದ್ದೇ ಆಗಿತ್ತು ಎಂಬುದಕ್ಕೆ ಕರಿಬಂಟನ ಕಥೆ'ಯಂಥ' ಅತ್ಯಂತ ಹಳೆಯ ಯಕ್ಷಗಾನ ಕಥೆಗಳು ನಿದರ್ಶನವಾಗುತ್ತವೆ. ಯಕ್ಷಗಾನ ರೂಪದಲ್ಲಿ ದೊರೆಯುವ ಕರಿಬಂಟನ ಕಥೆ'ಯ ವಸ್ತು ಜನಪದ ಮೂಲದಿಂದ ಆರಿಸಿಕೊಂಡದ್ದು. ಇದೇ ಹಳೆಯ ಯಕ್ಷಗಾನ ನಾಟಕವಾಗಿದ್ದು ಅನಂತರ ಬೇರೆ ಬೇರೆ ಧರ್ಮಗಳ ಪ್ರಭಾವದಿಂದ ವಿವಿಧ ಯಕ್ಷಗಾನ ಕೃತಿಗಳು ರಚಿತವಾಗಿರಬಹುದು. ಶುದ್ಧ ಲೌಕಿಕ ಕಲೆಯಾಗಿದ್ದ ಯಕ್ಷಗಾನ ಧ'ರ್ಮಗಳ ಪ್ರಭಾವದಿಂದ ಧಾರ್ಮಿಕ ವ್ಯಾಪ್ತಿಯನ್ನು ಪಡೆದು ಕೊಂಡಿರಬಹುದು. ಲೌಕಿಕ ಸಂಪ್ರದಾಯದ ಕರಿಬಂಟನ ಕಥೆಯನ್ನು ಅನೇಕ ಕವಿಗಳು ಯಕ್ಷಗಾನಕ್ಕೆ ಅಳವಡಿಸಿದ್ದಾರೆ. ಕೆಂಪಣ್ಣಗೌಡ ವಿರಚಿತ ಕರಿಬಂಟನ ಕಥೆಯೇ ಇತರ ಕವಿಗಳ ಕರಿಬಂಟನ ಕಥೆಗಳಿಗಿಂತ ಪ್ರಾಚೀನ ವೆಂಬಂತೆ ತೋರುತ್ತದೆ. ಏಕೆಂದರೆ ಇದರಲ್ಲಿ ಹೊಸಗನ್ನಡದ ಸಂಭಾಷಣೆಯು ಭಾಗಗಳಿಲ್ಲದೆ ಸಂಪೂರ್ಣ ಗೀತನಾಟಕವಾಗಿದೆ. ಮೂಡಲಪಾಯ ಸಂಪ್ರದಾಯದ ನಾಟಕಗಳೂ ಮೊದಲಿಗೆ ಗೀತನಾಟಕಗಳೇ ಆಗಿದ್ದು ಸಂಭಾಷಣೆ ಅನಂತರ ಸೇರಿರಬೇಕು ಎಂಬ ಅಂಶ ಇದರಿಂದ ಸ್ಪಷ್ಟವಾಗುತ್ತದೆ. ಇದಾದ ಮೇಲೆ ಬಂದಿರಬಹುದಾದ ಗೊಂಬೆಯಾಟದ ಸಿದ್ಧಯ್ಯನ ಕರಿಬಂಟನ ಕಾಳಗ ಯಕ್ಷಗಾನ 1725ರಲ್ಲಿ ರಚಿತವಾಯಿತೆಂದು ತಿಳಿದುಬರುತ್ತದೆ.



ಪಡುವಲಪಾಯ ಯಕ್ಷಗಾನದ ಪ್ರಸಂಗವೊಂದರಲ್ಲಿ ಚಿಟ್ಟಾಣಿರಾಮಚಂದ್ರ ಹೆಗಡೆ

ಯಕ್ಷಗಾನ ಪರಂಪರೆಯ ಕವಿಗಳಲ್ಲಿ ದೇವಿದಾಸ, ನಾಗಪ್ಪಯ್ಯ, ಪಾರ್ತಿಸುಬ್ಬ, ಹಳೆಮಕ್ಕಿ ರಾಮ, ಹಟ್ಟಿಯಂಗಡಿ ರಾಮಭಟ್ಟ, ಅಜಪುರದ ವೆಂಕಟ, ನಿತ್ಯಾನಂದ ಅವಧೂತ, ಪಾಂಡೇಶ್ವರ ವೆಂಕಟ,

ಗೇರುಸೊಪ್ಪೆ ಶಾಂತಪ್ಪಯ್ಯ ಮುಂತಾದವರು ಮುಖ್ಯರು. ಶಿಷ್ಟಕವಿಗಳಲ್ಲಿ ಮುದ್ದಣ ಹಾಗೂ ಅಳಿಯ ಲಿಂಗರಾಜ ಮುಖ್ಯರಾದವರು. ಅಳಿಯ ಲಿಂಗರಾಜ ಸುಮಾರು ನಲವತ್ತು ಪ್ರಸಂಗಗಳನ್ನು ರಚಿಸಿರುವಂತೆ ತಿಳಿಯುತ್ತದೆ.

ಯಕ್ಷಗಾನ ಸಂಪ್ರದಾಯದ ತಾಳಮದ್ದಲೆಯ ಪ್ರಸ್ತಾಪ 1556ರ ಬಳ್ಳಾರಿ ಜಿಲ್ಲೆಯ ಸೋಮಸಮುದ್ರದ ಲಕ್ಷ್ಮೀನಾರಾಯಣ ದೇವಾಲಯಕ್ಕೆ ದತ್ತಿ ಬಿಟ್ಟ ಶಾಸನವೊಂದರಲ್ಲಿ ಬರುತ್ತದೆ.

ಮೇಲಿನ ವಿವರಗಳಿಂದ ಯಕ್ಷಗಾನ, ಬಯಲಾಟ ಜನಪದ, ಶೈವ, ವೈಷ್ಣವ, ಜೈನ ಪರಂಪರೆಗಳಲ್ಲಿ ನಡೆದು ಬಂದುದೆಂಬ ಅಂಶವೂ ಇದು ಕರ್ನಾಟಕದಾದ್ಯಂತ ನೃತ್ಯನಾಟಕ ಹಾಗೂ ತಾಳಮದ್ದಲೆ ಎಂಬ ಎರಡು ರೂಪಗಳಲ್ಲಿ ಉಳಿದು ಬಂದುದರ ಜೊತೆಗೆ ಓದಿಸಿ ಹೇಳಬಹುದಾದ ಒಂದು ಕಾವ್ಯವೂ ಆಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಯಕ್ಷಗಾನ ಕೃತಿಗಳ ರಚನೆಯಲ್ಲಿ ಅನೇಕ ಕವಿಗಳ ಹೆಸರನ್ನೂ ನಿರ್ದಿಷ್ಟವಾಗಿ ಗುರುತಿಸಲು ಸಾಧ್ಯವಾಗುವುದರಿಂದ ಅದರ ಸಾಹಿತ್ಯ ಶಿಷ್ಟ ಹಾಗೂ ಜನಪದಗಳ ಮಧ್ಯಂತರದಲ್ಲಿ ವಿಶಿಷ್ಟ ಸ್ವರೂಪದಲ್ಲಿ ಉಳಿದು ಬಂದಿದೆ ಎಂಬ ಅಂಶ ಖಚಿತವಾದುದು. ಯಕ್ಷಗಾನದ ಮೇಲಿನ ಮೂರು ರೂಪಗಳು ಈಗಲೂ ಉಳಿದು ಬಂದಿವೆ ಎಂಬುದನ್ನೂ ಗಮನಿಸಬಹುದು.



ಗೊಂದಲಿಗರ ಮೇಳ

ಜನಪದ ರಂಗಭೂಮಿಯ ಮತ್ತೊಂದು ಪ್ರಮುಖ ಪ್ರಕಾರವಾದ ಸೂತ್ರದ ಬೊಂಬೆಯಾಟ ತುಂಬ ಪ್ರಾಚೀನವಾದುದು. ಸಂಸ್ಕೃತ ನಾಟಕಗಳಲ್ಲಿ ಬರುವ ಸೂತ್ರಧಾರ ಈ ಬೊಂಬೆಯಾಟಗಳ ಸೂತ್ರಧಾರನೇ. ಈ ನಾಟಕದ ಪ್ರಭಾವದಿಂದಲೇ ನಾಟಕಗಳು ಕವಲೊಡೆದಿರಬೇಕು ಅಥವಾ ಪ್ರಭಾವಿತವಾಗಿರಬೇಕು ಎಂಬ ವಾದ ಇದೆ. ಕನ್ನಡ ಸಾಹಿತ್ಯದಲ್ಲಿ ಬೊಂಬೆಯಾಟಗಳ ಸೂಚನೆ ತುಂಬ ಹಿಂದಿನಿಂದಲೇ ತೋರಿಬರುತ್ತದೆ. ಚೆನ್ನಬಸವಣ್ಣನವರ ಒಂದು ವಚನದಲ್ಲಿ 'ಸೂತ್ರದ ಬೊಂಬೆಗೆ ಪ್ರಾಣವುಂಟೆ'. ಎಂಬ ಮಾತು ಬರುತ್ತದೆ. ದಾಸಸಾಹಿತ್ಯದಲ್ಲಂತೂ ಈ ಬೊಂಬೆಯಾಟದ ಪ್ರಸ್ತಾಪ ಅನೇಕ ಸಂದರ್ಭಗಳಲ್ಲಿ ಬರುತ್ತದೆ. ಡಿಂಬದೊಳು ಕಾಂಬ ಸೂತ್ರದ ಬೊಂಬೆಯಂತೆ ಎಂಬ ಮಾತು ಕನಕದಾಸರಲ್ಲಿ ಕಂಡುಬಂದರೆ, ಬೊಂಬೆಯಾಟವನಾಡಿಸಿದ ಮಹಾಭಾರತವೆಂಬ ಮಾತು ಪುರಂದರದಾಸರಲ್ಲಿ ಕಂಡುಬರುತ್ತದೆ. ಅವರೇ ಇನ್ನೊಂದು ಕಡೆ

ನೀನೇ ಆಡಿಸದಿರಲು ಜಡ ಒನಕೆಯಾ ಬೊಂಬೆ
ನೀನಿಟ್ಟ ಸೂತ್ರದಿಂದ ಚಲಿಸುವುದು ಕೈಕಾಲು

ಎಂದು ಸ್ಪಷ್ಟವಾಗಿ ಸೂತ್ರದ ಬೊಂಬೆಯ ರಚನಾತಂತ್ರವನ್ನೂ ವಿವರಿಸಿದ್ದಾರೆ.

**ಪ್ರಕಾರಗಳು :** ಇಂದು ಕರ್ನಾಟಕದಲ್ಲಿ ಪ್ರಚಾರದಲ್ಲಿರುವ ರಂಗಭೂಮಿಯ ಪ್ರಕಾರಗಳನ್ನು ಯಕ್ಷಗಾನ ಮತ್ತು ಸಣ್ಣಾಟ ಎಂಬ ಎರಡು ಮುಖ್ಯ ರೀತಿಗಳಲ್ಲಿ ವಿಂಗಡಿಸಿಕೊಳ್ಳಬಹುದು. ಇವುಗಳಲ್ಲಿ ಯಕ್ಷಗಾನ ಹೆಚ್ಚು ಜನಪ್ರಿಯವಾಗಿರುವುದಲ್ಲದೆ ಅನೇಕ ರೀತಿಯ ಪ್ರಭೇದಗಳನ್ನು ಒಳಗೊಂಡಿದೆ. ಇದು ಹೆಚ್ಚು ಕಡಿಮೆ ಕರ್ನಾಟಕದ ಎಲ್ಲ ಭಾಗಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಕಂಡುಬರುತ್ತದೆ. ಸಣ್ಣಾಟದಲ್ಲೂ ಪ್ರಕಾರ ಭೇದಗಳಿದ್ದರೂ ಅವು ಕೆಲವು ಪ್ರದೇಶಗಳಿಗಷ್ಟೇ ಸೀಮಿತವಾಗಿವೆ.

**ಯಕ್ಷಗಾನ :** ಶಿವರಾಮ ಕಾರಂತರ ಪ್ರಕಾರ ಯಕ್ಷಗಾನ ಎಂಬುದು ಒಂದು ಸಂಗೀತ ಸಂಪ್ರದಾಯ. ಅವರು ಅನೇಕ ಆಧಾರಗಳ ಮೇಲೆ ಯಕ್ಷಗಾನ ಸಂಗೀತ ಸಂಪ್ರದಾಯ ಕರ್ನಾಟಕ ಸಂಗೀತಕ್ಕಿಂತ ಹಳೆಯದೆಂದೂ ಅದೊಂದು ದೇಶೀಯ ಸಂಗೀತ ಸಂಪ್ರದಾಯವೆಂದೂ ಸಾಧಿಸಿದ್ದಾರೆ. ಒಂದು ಕಾಲಕ್ಕೆ ರಾಜಾಸ್ಥಾನದ ಮನ್ನಣೆಗೂ ಪಾತ್ರವಾಗಿದ್ದ ಈ ಸಂಗೀತ ಸಂಪ್ರದಾಯ ಕ್ರಮೇಣ ಉಪೇಕ್ಷೆಗೆ ಒಳಗಾಗಿ ಜನಪದ ನಾಟಕಗಳಲ್ಲಿ ಮಾತ್ರ ಉಳಿದಿರಬೇಕೆಂದು ಅವರು ಅಭಿಪ್ರಾಯಪಡುತ್ತಾರೆ. ಕೆಲವು ಯಕ್ಷಗಾನ ಕವಿಗಳ ಮಾತುಗಳನ್ನೇ ಅವರು ಉಲ್ಲೇಖಿಸಿ ಕವಿಗಳು ಹೇಗೆ ಈ ಸಂಗೀತ ಸಂಪ್ರದಾಯವನ್ನು ಅನುಸರಿಸಿ ಕಾವ್ಯರಚನೆ ಮಾಡಿದರು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಮತ್ತೊಬ್ಬ ಯಕ್ಷಗಾನ ವಿದ್ವಾಂಸರಾದ ಕುಕ್ಕಿಲ ಕೃಷ್ಣಭಟ್ಟರು ಯಕ್ಷಗಾನ ಎಂಬುದಕ್ಕೆ ಬೇರೆ ರೀತಿಯ ವ್ಯಾಖ್ಯಾನವನ್ನು ನೀಡಿ ಯಕ್ಷಗಾನ ಮೇಳಗಳು ಒಂದೊಂದು ದೇವಾಲಯಕ್ಕೆ ಸಂಬಂಧಪಟ್ಟವಾಗಿದ್ದು, ದೇವಸ್ಥಾನದ ನಿತ್ಯಸೇವೆಗಳಲ್ಲಿ ಯಕ್ಷಗಾನಸೇವೆಯೂ ಒಂದಾಗಿತ್ತು ಎಂದು ಅಭಿಪ್ರಾಯಪಡುತ್ತಾರೆ. ಅವರ ಪ್ರಕಾರ ಯಕ್ಷಗಾನ ದೇವರಸೇವೆಗೆ ಮೀಸಲಾದ ಒಂದು ಗೇಯಪ್ರಬಂಧ ಅಥವಾ ಪೂಜಾಪ್ರಬಂಧ. ಈ ಯಕ್ಷಗಾನ ಶಾಸ್ತ್ರೀಯಸಂಗೀತದಿಂದಲೇ ಹಾಡಬೇಕಾದುದೆಂಬುದು ಅವರ ಸ್ಪಷ್ಟ ಅಭಿಮತ.

ದಕ್ಷಿಣ ಕರ್ನಾಟಕ ಉತ್ತರ ಕರ್ನಾಟಕಗಳ ಪರ್ಯಂತ ಕುಣಿತ, ಕರಪಾಲ ಮೇಳಗಳು ಮೂಡಲಪಾಯ ಯಕ್ಷಗಾನಗಳ ಮೇಲೆ ಪ್ರಭಾವ ಬೀರಿರಬಹುದು. ತಾಳಧಾರಿಯಾದ ಕರಪಾಲದ ಅಯ್ಯ ಕಥೆಯನ್ನು ನಿರೂಪಿಸುತ್ತ ನಡುನಡುವೆ ಹಾಡುತ್ತ ಹಾವಭಾವಗಳನ್ನು ಪ್ರದರ್ಶಿಸುತ್ತ ಅಭಿನಯಿಸುತ್ತಾನೆ. ಅವನ ತಾಳದ ಗತ್ತಿಗೆ, ಸಹನರ್ತಕರಿಬ್ಬರು ಹಾಡಿನ ಪಾದಗಳನ್ನು ಮುಂದುವರಿಸಿ ಜೊತೆಯಲ್ಲಿ ನರ್ತಿಸುತ್ತಾರೆ. ಅವರ ನರ್ತನದ ವೈಖರಿ, ಹಾಡಿನ ರೀತಿ ಎಲ್ಲವೂ ಯಕ್ಷಗಾನಕ್ಕೆ ಸಮೀಪವಾಗಿದೆ.

ಯಕ್ಷಗಾನದ ಪ್ರಮುಖ ಪ್ರಭೇದಗಳನ್ನು ಹೀಗೆ ಗುರುತಿಸಬಹುದು:

1 ಯಕ್ಷಗಾನ ಬಯಲಾಟ: (ಅ) ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ ಪ್ರದೇಶ: i ಮೂಡಲಪಾಯ (ದೊಡ್ಡಾಟ, ಅಟ್ಟದಾಟ, ಯಕ್ಷಗಾನ, ಬಯಲ್ಕತೆ) ii ಘಟ್ಟದ ಕೋರೆ

(ಆ) ಉತ್ತರ ಕನ್ನಡ ಜಿಲ್ಲೆ, ದಕ್ಷಿಣ ಕನ್ನಡ ಜಿಲ್ಲೆ ಉಡುಪಿ ಜಿಲ್ಲೆ, ಶಿವಮೊಗ್ಗ ಜಿಲ್ಲೆಯ ಮಲೆನಾಡಿನ ಗರ್ಭ ಪ್ರದೇಶ.

ಪಡವಲಪಾಯ (ಬಡಗುತಿಟ್ಟು, ತೆಂಕುತಿಟ್ಟು)

2 ತಾಳಮದ್ದಲೆ

3 ಬೊಂಬೆಯಾಟಗಳು

(ಅ) ಸೂತ್ರದ ಬೊಂಬೆಯಾಟ

(ಆ) ತೊಗಲು ಬೊಂಬೆಯಾಟ

**ಯಕ್ಷಗಾನ ಬಯಲಾಟ :** ಕರ್ನಾಟಕ ಯಕ್ಷಗಾನ ಬಯಲಾಟಗಳು ಸಮಗ್ರ ರಾತ್ರಿ ಪ್ರದರ್ಶಿತವಾಗುವ ಕಲೆಗಳು. ಸುದೀರ್ಘವಾದ ಕಥೆಗಳಿದ್ದರೆ ಎರಡು ಮೂರು ರಾತ್ರಿ ಆಡುವ ಕಥೆಗಳೂ ಉಂಟು. ಜನಪದ ಮೂಲದ ಕರಿಬಂಟನ ಕಥೆ, ಸಾರಂಗಧರನ ಕಥೆಯಂತೆಯೇ ಶಿವಪುರಾಣ,



ಕರಾವಳಿ ಯಕ್ಷಗಾನ

ರಾಮಾಯಣ, ಮಹಾಭಾರತ, ಭಾಗವತಗಳಿಂದ ಕಥಾವಸ್ತುವನ್ನು ಸ್ವೀಕರಿಸಿ ಯಕ್ಷಗಾನ ಕೃತಿಗಳನ್ನು ರಚಿಸಿಕೊಳ್ಳಲಾಗಿರುತ್ತದೆ. ಮೂಡಲಪಾಯ ಸಂಪ್ರದಾಯದಲ್ಲಿ ಭಾಗವತರೊಬ್ಬರನ್ನು ಗೊತ್ತುಪಡಿಸಿಕೊಂಡು ಹಲವಾರು ತಿಂಗಳು ನೃತ್ಯವನ್ನೂ ಸಂಭಾಷಣೆಯನ್ನೂ ಕಲಿಯುತ್ತಾರೆ. ಈ ಭಾಗವತ ಸದಾ ಸಂಚಾರಶೀಲ. ಯಾವ ಊರಿನಲ್ಲಿ ನಾಟಕ ಕಲಿಸಬೇಕು ಆ ಊರಿಗೆ ಹೋಗಿ ಕೆಲವು ದಿನ ಅಲ್ಲಿ ನೆಲಸುತ್ತಾನೆ. ಇವನು ಬ್ರಾಹ್ಮಣ, ವೀರಶೈವ, ಒಕ್ಕಲಿಗ, ದೇವಾಂಗ, ವಿಶ್ವಕರ್ಮ - ಹೀಗೆ ಯಾವ ಜನಾಂಗದವನಾದರೂ ಆಗಿರಬಹುದು. ವಿಶ್ವಕರ್ಮ ಹಾಗೂ ದೇವಾಂಗದವರು ಈ ಕಲೆಯಲ್ಲಿ ಹೆಚ್ಚು ನಿಷ್ಣಾತರು. ಭಾಗವತ ನಾಟಕವನ್ನು ಕಲಿಸಿದ ಮೇಲೆ ಒಮ್ಮೆ ಅಥವಾ ಎರಡು ಬಾರಿ ಅದನ್ನು ಆಡಿಸಿ ಮತ್ತೊಂದು ಊರಿನಿಂದ ವೀಳೆಯವನ್ನು ಸ್ವೀಕರಿಸಿ ಕಲಿಸಲು ಅಲ್ಲಿಗೆ ಹೊರಟು ಹೋಗುತ್ತಾನೆ. ಅವನಿಗೆ ಗೊತ್ತಾದ ಸಂಭಾವನೆ ಹಾಗೂ ಊಟೋಪಚಾರಗಳ ವ್ಯವಸ್ಥೆಯನ್ನು ಕಲಿಯುವವರು ನೋಡಿಕೊಳ್ಳುತ್ತಾರೆ. ಒಮ್ಮೆ ಹೀಗೆ ಕಲಿತ ಯಕ್ಷಗಾನ ಪ್ರದರ್ಶನಕ್ಕೆ ಮುಂಚೆ, ಒಂದು ದಿನ ಗೆಜ್ಜೆಪೂಜೆಯನ್ನು ನಡೆಸುತ್ತಾರೆ. ಕಟ್ಟಲನ್ನು ಕಟ್ಟಿ ವೇಷಭೂಷಣವಿಲ್ಲದೆ ಇಡೀ ನಾಟಕದ ಅಭ್ಯಾಸವನ್ನು ಅಲ್ಲಿ ನಡೆಸುವುದಕ್ಕೆ ಗೆಜ್ಜೆಪೂಜೆ ಎನ್ನಲಾಗಿದೆ. ಯಕ್ಷಗಾನವನ್ನು ಹೀಗೆ ಪ್ರದರ್ಶಿಸಿದ ಮೇಲೆ ಮತ್ತೆ ಅದು ಮರೆತು ಹೋಗಬಹುದು. ಇನ್ನೊಮ್ಮೆ ಆಡುವ ಅವಕಾಶ ಬಂದಾಗ ಭಾಗವತ ಮತ್ತೆ ಬಂದು ಮರೆತು ಹೋದ ನೃತ್ಯ, ಮಾತುಗಾರಿಕೆಗಳನ್ನು ಸರಿಪಡಿಸಿ ಆಡಿಸಬೇಕು. ಕೆಲವು ಕಡೆ ಹೊಸ ನಾಟಕವನ್ನೇ ಕಲಿಯಬಹುದು. ನಾಟಕ ಕಲಿಕೆ ದಕ್ಷಿಣ ಕರ್ನಾಟಕ ಮತ್ತು ಉತ್ತರ ಕರ್ನಾಟಕಗಳಲ್ಲಿ ಅದೊಂದು ವೃತ್ತಿಯಾಗಿರದೆ ಹವ್ಯಾಸವಾಗಿ ಬೆಳೆದು ಬಂದಿದೆ. ಆದರೆ ಕರಾವಳಿ ಪ್ರದೇಶದ ಯಕ್ಷಗಾನ ಒಂದು ವೃತ್ತಿಯಂತೆ ಬೆಳೆದು ಬಂದಿದೆ. ದಕ್ಷಿಣ ಕನ್ನಡ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆ, ಉಡುಪಿ ಜಿಲ್ಲೆ - ಈ ಮೂರು ಪ್ರದೇಶಗಳಲ್ಲಿಯೂ ಯಕ್ಷಗಾನ ಪ್ರಚಲಿತವಾಗಿದ್ದು ತುಂಬ ಜನಪ್ರಿಯವಾಗಿದೆ; ಮನರಂಜನೆಯ ಮುಖ್ಯ ಸಾಧನವಾಗಿದೆ. ಇಲ್ಲಿ ಬಡಗುತಿಟ್ಟು ಮತ್ತು ತೆಂಕುತಿಟ್ಟು ಎಂಬ ಎರಡು ಪ್ರಭೇದಗಳು ಕಂಡುಬರುತ್ತವೆ. ಬಡಗುತಿಟ್ಟು ಉತ್ತರ ಸಂಪ್ರದಾಯ. ಇದು ಉಡುಪಿ, ಕುಂದಾಪುರ, ಹೊನ್ನಾವರ ಭಾಗಗಳ ಯಕ್ಷಗಾನ. ತೆಂಕುತಿಟ್ಟು. ದಕ್ಷಿಣ ಸಂಪ್ರದಾಯ. ಇದು ಮಂಗಳೂರು, ಪುತ್ತೂರು ಹಾಗೂ ಕಾಸರಗೋಡು ಭಾಗಗಳ ಯಕ್ಷಗಾನ. ಬಡಗುತಿಟ್ಟಿನವರು ಕಿರೀಟಗಳಿಗೆ ಬದಲಾಗಿ ಬಟ್ಟೆಯನ್ನು ಸುತ್ತಿ ಮಾಡಿಕೊಂಡ ಪಗಡಿ ಎಂಬ ಅರಳಿ ಎಲೆ ಆಕಾರದ ಸಾಧನವನ್ನು ಸ್ಥಳದಲ್ಲಿಯೇ ಸಿದ್ಧಗೊಳಿಸಿಕೊಳ್ಳುತ್ತಾರೆ. ತೆಂಕುತಿಟ್ಟಿನವರು ಕಿರೀಟಗಳನ್ನು ಬಳಸುತ್ತಾರೆ. ಬಡಗಿನವರು ತಾಳವನ್ನೂ ತೆಂಕಿನವರು ಜಾಗಟೆಯನ್ನೂ ಬಳಸುತ್ತಾರೆ. ನೃತ್ಯದಲ್ಲಿಯೂ ಅಲ್ಪ ಸ್ವಲ್ಪ ವ್ಯತ್ಯಾಸಗಳು ಕಂಡುಬರುತ್ತವೆ. ಆದರೆ ಇವೆರಡೂ ಬೇರೆ ಬೇರೆಯ ಕಲೆಗಳೇ ಎಂದು ಸಾಧಿಸಲು ಆಧಾರಗಳು ಕಡಿಮೆ.

ಯಕ್ಷಗಾನ ವೇಷಭೂಷಣಗಳು ಮೂಡಲಪಾಯ ಘಟ್ಟದ ಕೋರೆ, ತೆಂಕುತಿಟ್ಟು, ಬಡಗುತಿಟ್ಟುಗಳಲ್ಲಿ ಬೇರೆ ಬೇರೆಯ ಆಕಾರಗಳಲ್ಲಿ ಕಂಡುಬಂದರೂ ಮುಖ್ಯ ಆಭರಣಗಳು ಒಂದೇ ಬಗೆಯಲ್ಲಿ ತೋರಿಬರುತ್ತವೆ.

ಯಕ್ಷಗಾನ ಬಯಲಾಟ ಒಂದು ಗಂಡುಕಲೆ. ವೀರರಸ ಪ್ರಧಾನ ರಚನೆಗಳೇ ಯಕ್ಷಗಾನ ಕಾವ್ಯಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಆಭರಣಗಳ ಕಲ್ಪನೆಯಲ್ಲೂ ವೀರೋಚಿತ ದೃಷ್ಟಿ ಇದೆ. ಮೊದಲಿಗೆ ಈ ಆಭರಣಗಳು ಲೋಹದ ಸಾಧನಗಳಾಗಿದ್ದು ಈಗ ಮರದ ವಸ್ತುಗಳು ಬಳಕೆಯಾಗುತ್ತಿವೆ. ತೆಂಕುತಿಟ್ಟು ಬಡಗುತಿಟ್ಟುಗಳು ವೃತ್ತಿನಾಟಕಗಳಾದುದರಿಂದ ಇಲ್ಲಿ ಒಡವೆವಸ್ತ್ರಗಳ ವಿಜೃಂಭಣೆ ಹೆಚ್ಚು.

ಯಕ್ಷಗಾನ ಬಯಲಾಟಗಳ ವಾದ್ಯಗಳಲ್ಲಿ ಮದ್ದಲೆ, ತಾಳ ಮುಖ್ಯ ವಾದ್ಯಗಳು. ಚಂಡೆ, ಮುಖವೀಣೆ, ಶ್ರುತಿಪೆಟ್ಟಿಗೆ ಇವು ಪೋಷಕ ವಾದ್ಯಗಳು. ಎಲ್ಲ ಪ್ರದೇಶಗಳ ಯಕ್ಷಗಾನ ಬಯಲಾಟಗಳಲ್ಲೂ ತಾಳಮದ್ದಲೆ ಅನಿವಾರ್ಯ. ಇವು ಆಕಾರದಲ್ಲಿ ಬದಲಾದರೂ ಸಂಗೀತ, ನೃತ್ಯಗಳ ದೃಷ್ಟಿಯಿಂದ ಸಾಂಪ್ರದಾಯಿಕವಾಗಿ ಬಳಸಿಕೊಂಡು ಬಂದ ವಾದ್ಯಗಳಾಗಿವೆ. ಚಂಡೆ, ಕರಾವಳಿಯ ತೆಂಕುತಿಟ್ಟು ಮತ್ತು ಬಡಗುತಿಟ್ಟುಗಳಲ್ಲಿ ಮಾತ್ರ ಕಾಣಬರುವ ವಾದ್ಯ. ಚಂಡೆಯ ನಾದ ಯಕ್ಷಗಾನ ಬಯಲಾಟಗಳಿಗೆ ನೃತ್ಯಸಂಗೀತಗಳಿಗೆ ವಿಶೇಷ ವಾತಾವರಣವನ್ನು ಕಲ್ಪಿಸುತ್ತದೆ; ರಮ್ಯತೆಯನ್ನು ತಂದುಕೊಡುತ್ತದೆ. ಮೂಡಲಪಾಯದಲ್ಲಿ ಚಂಡೆಯ ಸ್ಥಾನದಲ್ಲಿ ಮುಖವೀಣೆಯನ್ನು ಬಳಸಲಾಗುತ್ತದೆ. ಚಂಡೆ ಬಡಿಯುವ ವಾದ್ಯವಾದರೆ, ಮುಖವೀಣೆ ಊದುವ ವಾದ್ಯ. ಒಂದು ಅಡಿ ಉದ್ದದ ಈ ಸಣ್ಣ ವಾದ್ಯ ನೀಡುವ ನಾದ ಅದ್ಭುತವಾದುದು; ಮೋಹಕವಾದುದು. ಶ್ರುತಿಗಾಗಿ ಇತ್ತೀಚೆಗೆ ಹಾರ್ಮೋನಿಯಮ್ ಬಳಕೆಯಾಗುತ್ತಿದ್ದರೂ ಮೊದಲಿಗೆ ಶ್ರುತಿಗೆ ಬುರುಡೆಯೊಂದನ್ನು (ಪುಂಗಿ) ಬಳಸಲಾಗುತ್ತಿತ್ತು.



ಮೂಡಲಪಾಯ ಯಕ್ಷಗಾನದ ರಾವಣ

ಯಕ್ಷಗಾನ ಬಯಲಾಟಗಳಿಗೆ ರಂಗಮಂಟಪವೊಂದರ ಅಗತ್ಯವಿದೆಯೆ, ಮೊದಲಿಗೆ ಇದು ಇತ್ತೆ, ಇದ್ದರೆ ಬಯಲಾಟ ಎಂಬ ಹೆಸರು ಬರಲು ಕಾರಣವೇನು ಎಂಬ ಸಮಸ್ಯೆಗಳು ಏಳುತ್ತವೆ. ಯಕ್ಷಗಾನಗಳನ್ನು ಬೀದಿಯಲ್ಲಿ, ತೆರೆದ ಬಯಲಲ್ಲಿ ಆಡಲಾಗುತ್ತದೆಯಾದರೂ ಆಟದ

ಪ್ರದರ್ಶನಕ್ಕೆ ಒಂದು ಚೌಕಟ್ಟು ಅಗತ್ಯ. ನಾಲ್ಕು ಮೂಲೆಗೆ ನಾಲ್ಕು ಕಂಬಗಳನ್ನು ನೆಟ್ಟು ತಳಿರು ತೋರಣಗಳಿಂದ ಅದನ್ನು ಅಲಂಕರಿಸಿಕೊಂಡು ಆ ಚೌಕಟ್ಟಿನ ನಡುವೆ ನಟರು ಕುಣಿತ ಅಭಿನಯಗಳನ್ನು ಪ್ರದರ್ಶಿಸುತ್ತಿದ್ದರು. ಈ ಚೌಕಟ್ಟಿನ ಮೂರು ಕಡೆ ತೆರೆದ ಬಯಲಲ್ಲಿ ಪ್ರೇಕ್ಷಕರು ಕೂರಬಹುದು. ಹಿಂಬದಿಯಲ್ಲಿ ಭಾಗವತರು. ಪಾತ್ರಗಳು ಪ್ರವೇಶಿಸುವುದೂ ಅಲ್ಲಿಂದಲೇ. ಚೌಕಟ್ಟಿನ ನಡುವೆ ಒಂದು ವೇದಿಕೆ ಅಥವಾ ಅಟ್ಟ ಬಂದರೆ ಆಯಿತು. ಗ್ರೀಕ್ ರಂಗಭೂಮಿಯ ಸಾಮ್ಯವನ್ನು ಈ ಅಟ್ಟಗಳಲ್ಲಿ ನಾವು ನೋಡಬಹುದು. ಕರಾವಳಿಯ ಸಂಪ್ರದಾಯದಲ್ಲಿ ಈ ಬಗೆಯ ಬಯಲಾಟವನ್ನು ಅಲ್ಲಲ್ಲಿ ಈಗಲೂ ಕಾಣಬಹುದು.



ಬಸ್ವಂತಿ ಬಲ್ವಂತಿ ಸಣ್ಣಾಟ

ಮೂಡಲಪಾಯದಲ್ಲಿ ಕಟ್ಟಲು ಕಟ್ಟುವ ಸಂಪ್ರದಾಯವಿದೆ. ಈ ಕಟ್ಟಲೇ ರಂಗ. ಸೋಗೆ ಮತ್ತು ಬಿದಿರುಗಳಿಂದ ಕಟ್ಟಿ ನೆಲಕ್ಕೆ ಹಲಗೆಗಳನ್ನು ಅಳವಡಿಸಿ ಅಟ್ಟವನ್ನು ಕಟ್ಟುವರು. ಅಂಕದ ಪರದೆ ಮಾತ್ರ ಮುಂಭಾಗದಲ್ಲಿ ಇರುತ್ತದೆ. ಒಮ್ಮೆ ಆ ಪರದೆಯನ್ನು ಎತ್ತಿದರೆ ಮತ್ತೆ ಅದನ್ನು ನಾಟಕ ಮುಗಿಯುವವರೆಗೆ ಬಿಡುವಂತಿಲ್ಲ. ಕೆಲವು ನಾಟಕಗಳಿಗೆ (ದೇವೀ ಮಹಾತ್ಮೆ, ಶನಿ ಮಹಾತ್ಮೆ ಹಾಗೂ ತ್ರಿಪುರ ಸಂಹಾರ) ಎರಡು ಅಂತಸ್ತಿನ ಕಟ್ಟಲು ಇರುತ್ತದೆ. ದೇವಲೋಕ ಭೂಲೋಕಗಳ ಕಲ್ಪನೆ ಇಲ್ಲಿ ಇರುತ್ತದೆ. ರಾಮಾಯಣ ಸಂಬಂಧವಾದ ನಾಟಕವಾದರೆ ಹನುಮನ ಪಾತ್ರ ಮೇಲಿನಿಂದ ಇಳಿಯುವ ಕಲ್ಪನೆಯನ್ನು ಕೊಡಲು ಕಟ್ಟಲಿನ ತುದಿಯಿಂದ ನೆಲಕ್ಕೆ ಒಂದು ಹಗ್ಗವನ್ನು ಬಿಗಿದು ಕಟ್ಟಿರುತ್ತಾರೆ. ಈ ಪಾತ್ರ ರಂಗದ ಒಳಗೆ ಇರುವುದಿಲ್ಲ. ಅಗತ್ಯ ಬಂದಾಗ ಮಾತ್ರ ಅಲ್ಲಿಗೆ ಹೋಗಿ ಉಳಿದ ವೇಳೆ ತನಗಾಗಿ ರಂಗದ ಹೊರಗೆ ನೆಟ್ಟ ಮರದ ರೆಂಬೆಯೊಂದರ ಮೇಲೆ ಕೂರಬೇಕು.

ರಂಗಸಂಪ್ರದಾಯದಲ್ಲಿ, ಮೊದಲು ಚೌಕಿಯಲ್ಲಿ ಒಡವೆಗಳನ್ನೂ ದೇವರನ್ನೂ ಪೂಜಿಸಲಾಗುತ್ತದೆ. ಪಡುವಲಪಾಯದಲ್ಲಿ ಭಾಗವತ ಹಾಗೂ ವಾದ್ಯದವರು ರಂಗದ ಹಿಂಬದಿಯಲ್ಲಿ ಮೇಜೊಂದರ ಮೇಲೆ ಆಸೀನರಾಗುತ್ತಾರೆ. ಮೂಡಲಪಾಯದಲ್ಲಿ ಭಾಗವತ ಮತ್ತು ವಾದ್ಯದವರು ರಂಗದ ಎಡಬದಿಯಲ್ಲಿ ನಿಲ್ಲುತ್ತಾರೆ. ಭಾಗವತ ಸಭಾವಂದನೆಯನ್ನು ಮಾಡಿದ ಮೇಲೆ, ಪ್ರಾರ್ಥನಾ ಪದ್ಯಗಳನ್ನು ಆರಂಭಿಸುತ್ತಾನೆ. ವಿಘ್ನೇಶ್ವರನ ಪೂಜೆಗೆ ಗಣೇಶನ ಮುಖವಾಡವನ್ನು ಧರಿಸಿದ ಪಾತ್ರಧಾರಿಯೊಬ್ಬನನ್ನು ಪೀಠವೊಂದರಲ್ಲಿ ಕೂರಿಸಿ ಅರ್ಚಿಸಲಾಗುವುದು. ಕೆಲವು ಕಡೆ ಈ ಪಾತ್ರವೂ ನರ್ತಿಸುತ್ತದೆ. ಗಣೇಶ, ಅರ್ಜುನ ಮತ್ತು ಭಾಗವತರ ನಡುವೆ ಸರಸ ಸಂಭಾಷಣೆ ನಡೆಯುತ್ತದೆ. ಗಣೇಶನ ನಿರ್ಗಮನಾನಂತರ ಸರಸ್ವತಿಯ ಪಾತ್ರ ಬರುತ್ತದೆ. ಭಾಗವತ ಸಂಪ್ರದಾಯದ ಯಕ್ಷಗಾನಗಳಲ್ಲಿ ಬಾಲಗೋಪಾಲರು ಅನಂತರ ರಂಗದಲ್ಲಿ ಬಂದು ನರ್ತಿಸುತ್ತಾರೆ. ಪಡುವಲಪಾಯದಲ್ಲಿ ಆರಂಭದಲ್ಲಿ ಎರಡು ಸ್ತ್ರೀ ಪಾತ್ರಗಳು ಬಂದು ನರ್ತಿಸುವುದೂ ಉಂಟು. ದೇವತೆಗಳು ರಂಗದಲ್ಲಿ ಅವತರಿಸುವ ಉದ್ದೇಶ ನಾಟಕಕ್ಕೆ ಯಶಸ್ಸನ್ನು ಕೋರಲು. ಈ ಪೂರ್ವರಂಗದ ಅನಂತರ ನಾಟಕದ ಮುಖ್ಯ ಪಾತ್ರದ ಪ್ರವೇಶದೊಡನೆ ನೇರವಾಗಿ ಆರಂಭವಾಗುತ್ತದೆ.

ಯಕ್ಷಗಾನ ಬಯಲಾಟಗಳಲ್ಲಿ ವಿದೂಷಕನ ಪಾತ್ರವೂ ಮುಖ್ಯವಾದುದೇ. ವಿದೂಷಕನನ್ನು ಹನುಮನಾಯಕ, ಕೋಡಂಗಿ, ಚಾರ, ಸಾರಥಿ ಎಂಬೆಲ್ಲ ಹೆಸರುಗಳಲ್ಲಿ ಕರೆಯಲಾಗುತ್ತದೆ. ಇಲ್ಲಿನ ಈ ವಿದೂಷಕ ನಾಟಕದ ಪಾತ್ರಗಳ ಜೊತೆ ಬೆರೆತರೂ ಮುಖ್ಯಕ್ರಿಯೆಯಲ್ಲಿ ಅವನಿಗೆ ನೇರವಾದ ಸಂಬಂಧ ಇಲ್ಲ. ಅವನು ನಾಟಕದ ಪಾತ್ರಗಳಲ್ಲಿ ಒಬ್ಬನಲ್ಲ. ಆದರೆ ನಾಟಕದುದ್ದಕ್ಕೂ ಅವನಿದ್ದು ನಾಟಕಕ್ಕೆ ಚಾಲನೆಯನ್ನು ಕೊಡುತ್ತಾನೆ.

ಯಕ್ಷಗಾನ ಬಯಲಾಟಗಳಲ್ಲಿ ಅತ್ಯಂತ ಸರಳವಾದ ಎರಡು ಹೆಜ್ಜೆ ಮೂರು ಹೆಜ್ಜೆಯ ನೃತ್ಯಗಳು ಕಂಡುಬರುತ್ತವೆ. ಮೂಡಲಪಾಯದಲ್ಲಿ ಬಲಗಾಲನ್ನು ಎತ್ತಿ ಮೇಲೆ ನೆಗೆಯುವ ವೈಖರಿಯನ್ನು ಉಡಂಗ ಎನ್ನುತ್ತಾರೆ. ಪಡುವಲಪಾಯದಲ್ಲಿ ತೆಂಕುತಿಟ್ಟಿನಲ್ಲಿ ಬುಗರಿಯಂತೆ ತಿರುಗುವ ಚಮತ್ಕಾರ ಕಂಡುಬರುತ್ತದೆ. ಪಡುವಲಪಾಯದಲ್ಲಿ ಮಂಡಿಯ ಸುತ್ತು ಕಷ್ಟಸಾಧ್ಯವಾದುದು. ಸ್ತ್ರೀ ಪಾತ್ರಗಳ ನೃತ್ಯ ಮೃದು, ಲಲಿತ. ಮೂಡಲಪಾಯದಲ್ಲಿ ಕುಳಿತ ಭಂಗಿಯಲ್ಲಿ ನೃತ್ಯವನ್ನು ಆರಂಭಿಸಿ ಕ್ರಮೇಣ ಮೇಲಕ್ಕೆ ಎದ್ದು ನೃತ್ಯ ಮಾಡಲಾಗುತ್ತದೆ. ಕೆಲವೊಮ್ಮೆ ಕುಳಿತ ಭಂಗಿಯಲ್ಲಿ ಹಾಕುವ ಸ್ತ್ರೀ ಪಾತ್ರದ ಹೊರಳು ಆಶ್ಚರ್ಯಕರವಾದುದು. ಅತ್ಯಂತ ಪ್ರೀತಿಯ ವ್ಯಕ್ತಿಗಳನ್ನು ಕೆಲವೊಮ್ಮೆ ಚಂಗನೆ ಕಂಕುಳಲ್ಲಿ ಎತ್ತಿಕೊಂಡು ಕುಣಿಯುವ ಕೌಶಲ ಅದ್ಭುತವಾಗಿರುತ್ತದೆ. ಪತಿ ತನ್ನ ಪತ್ನಿಯನ್ನೂ ತಾಯಿ ತನ್ನ ಮಗುವನ್ನೂ ಈ ರೀತಿ ಎತ್ತಿಕೊಂಡು ಕುಣಿಯಬಹುದು. ಪಾತ್ರಧಾರಿ ವಯಸ್ಕನೇ ಆದರೂ ಅವನನ್ನು ಹೊತ್ತು ಕುಣಿಯುವ ರೀತಿ ಕುತೂಹಲವನ್ನುಂಟುಮಾಡುತ್ತದೆ. ಮೂಡಲಪಾಯದಲ್ಲಿ ಪ್ರೇಕ್ಷಕರಿಗೆ ಬೆನ್ನು ತೋರಿಸುವ ಸಂಪ್ರದಾಯವಿಲ್ಲ. ಪಡವಲಪಾಯದಲ್ಲಿ ಈ ನಿಯಮ ಇದ್ದಂತೆ ಇಲ್ಲ. ಯುದ್ಧಸಂದರ್ಭಗಳಲ್ಲಿ ಪಾತ್ರಧಾರಿಗಳು ಪರಸ್ಪರ ಅಭಿಮುಖವಾಗಿ ಬಿಲ್ಲು ಬಾಣವನ್ನು ಹಿಡಿದ ಭಂಗಿಯಲ್ಲಿ ನರ್ತಿಸಿ ಅನಂತರ ಪರಸ್ಪರ ಬಾಹುಗಳನ್ನು ಹಿಡಿದು ಜೋಡಿನೃತ್ಯವನ್ನು ಮಾಡುತ್ತಾರೆ.



ಸಂಗ್ಯಾ ಬಾಳ್ಯಾ

ಹಾಡಿನ ಮುಕ್ತಾಯದಲ್ಲಿ ಸೋಲಬೇಕಾದ ವ್ಯಕ್ತಿ ಕೆಳಗೆ ಕುಸಿದವನಂತೆ ಮಾಡಿ ಹಿಂದಕ್ಕೆ ಸರಿದುಕೊಳ್ಳುತ್ತಾನೆ. ಕೆಲವೊಮ್ಮೆ ಇವರಿಬ್ಬರ ನಡುವೆ ಘರ್ಷಣೆಯಾಗುವ ಸೂಚನೆಯನ್ನು ಗಮನಿಸಿ ಎರಡು ಪಾತ್ರಗಳ ನಡುವೆ ಒಂದು ಏಣಿಯನ್ನು ಅಡ್ಡಹಿಡಿಯುತ್ತಾರೆ. ಕೆಲವು ದೈವಾಂಶ ಸಂಭೂತ ಪಾತ್ರಗಳು ಭಾವಾವೇಶದಿಂದ ರಂಗದ ಮೇಲೆ ಕುಸಿಯುವುದೂ ಉಂಟು. ಅಂಥ ಸಂದರ್ಭಗಳಲ್ಲಿ ಅವರನ್ನು ನೆಲಕ್ಕೆ ಬೀಳದಂತೆ ಹಿಡಿದು ರಂಗದ ಹೊರಗೆ ಸಾಗಿಸಿ ಗಾಳಿ ಹಾಕುವುದೂ

ಉಂಟು. ಯಕ್ಷಗಾನ ಬಯಲಾಟಗಳ ಸಂಭಾಷಣೆಗಳಲ್ಲಿ ಎರಡು ಪಾಯಗಳೂ ಭಿನ್ನಭಿನ್ನ ಸಂಪ್ರದಾಯಗಳನ್ನು ಹೊಂದಿವೆ.

ಮೂಡಲಪಾಯ ಪಡುವಲಪಾಯ ಸಂಪ್ರದಾಯಗಳಂತೆಯೇ ಈ ಎರಡರ ನಡುವೆ ಘಟ್ಟದ ಮೇಲೆ ಬಯಲುಸೀಮೆ ಮಲೆಸೀಮೆಗಳ ಸಂಗಮಸ್ಥಳದಲ್ಲಿ ಘಟ್ಟದಕೋರೆ ಎಂಬ ಒಂದು ವಿಶಿಷ್ಟ ಸಂಪ್ರದಾಯ ಕಂಡುಬರುತ್ತದೆ. ತುಂಬ ಪ್ರಾಚೀನ ರೂಪದಲ್ಲಿ ಯಕ್ಷಗಾನ ಇಲ್ಲಿ ಉಳಿದುಬಂದಂತೆ ತೋರುತ್ತದೆ. ಪಡುವಲಪಾಯದ ತೆಂಕುತಿಟ್ಟಿಗೆ ಹತ್ತಿರವಾಗಿರುವ ಈ ಸಂಪ್ರದಾಯ ಬಯಲುಸೀಮೆಯ ಮಂಡ್ಯ ಜಿಲ್ಲೆಯ ಹೊಸಹೊಳಲು ಮುಂತಾದ ಕಡೆಗಳಲ್ಲಿ ಕಂಡುಬಂದಿರುವುದು ಆಶ್ಚರ್ಯಕರ. ಇಲ್ಲಿನ ನೃತ್ಯ, ಹಾಡುಗಾರಿಕೆ, ಮಾತುಗಾರಿಕೆಯ ವೈಖರಿ ಯಕ್ಷಗಾನದ ಉನ್ನತ ಕಲಾಪರಂಪರೆಯನ್ನು ಸಾರುವಂತಿದೆ.

**ತಾಳಮದ್ದಲೆ :** ಇದು ಯಕ್ಷಗಾನಗೋಷ್ಠಿ ಇದ್ದಂತೆ. ಕುಣಿತ, ರಂಗ ಹಾಗೂ ವೇಷಭೂಷಣಗಳಿಲ್ಲದೆ ಕುಳಿತೇ ಕಥೆಯನ್ನು ನಡೆಸುವ ಕಲೆಯಿದು. ಭಾಗವತರು, ವಾದ್ಯದವರು, ಮುಖ್ಯಪಾತ್ರಧಾರಿಗಳು ಎಲ್ಲರೂ ಒಂದು ಗೊತ್ತಾದ ಸ್ಥಳದಲ್ಲಿ ಕಲೆತು 'ತಾಳ-ಮದ್ದಲೆ'ಯನ್ನು ನಡೆಸುತ್ತಾರೆ. ಒಂದೊಂದು ಪಾತ್ರವನ್ನು ಒಬ್ಬೊಬ್ಬರು ಹಂಚಿಕೊಂಡು ಮಾತುಗಾರಿಕೆಯನ್ನು ನಡೆಸುತ್ತಾರೆ. ಭಾಗವತರು ಹಾಡುತ್ತಾರೆ. ಇಲ್ಲಿ ಚಂಡೆ, ಮದ್ದಳೆ, ತಾಳ ಎಲ್ಲವೂ ಇರುತ್ತವೆ. ಎರಡು ಪಾಯಗಳಲ್ಲಿಯೂ ತಾಳಮದ್ದಲೆ ಕಂಡುಬರುತ್ತದೆ. ಆದರೆ ಪಡುವಲಪಾಯದಲ್ಲಿ ಇದರ ಪ್ರಾಚುರ್ಯ ಹೆಚ್ಚು. ತಾಳಮದ್ದಲೆಗಳು ವಿಶೇಷವಾಗಿ ನಡೆಯುವುದು ಮಳೆಗಾಲದಲ್ಲಿ.

**ಬೊಂಬೆಯಾಟಗಳು :** ಯಕ್ಷಗಾನ ಬೊಂಬೆಯಾಟಗಳಲ್ಲಿ ಸೂತ್ರದ ಬೊಂಬೆಯಾಟ ಯಕ್ಷಗಾನ ಬಯಲಾಟಕ್ಕೆ ತೀರ ಹತ್ತಿರವಾದದ್ದು. ಮಾನವಪಾತ್ರಧಾರಿಗಳ ಬದಲಾಗಿ ಬೊಂಬೆಗಳನ್ನು ಇಲ್ಲಿ ಬಳಸಲಾಗುತ್ತದೆ. ವೇಷಭೂಷಣ, ಸಾಹಿತ್ಯ, ಸಂಗೀತ, ನೃತ್ಯ ಎಲ್ಲವೂ ಆಯಾ ಪ್ರದೇಶದ ಯಕ್ಷಗಾನ ಕಲೆಗೆ ಹತ್ತಿರವಾಗಿರುತ್ತದೆ. ಬೊಂಬೆಯಾಟಕ್ಕೆ ಬೇಕಾದ ರಂಗಮಂಟಪ ತುಂಬ ಚಿಕ್ಕದು. ಇದನ್ನು ಎರಡು ಮಾರು ಅಗಲ, ಎರಡು ಮಾರು ಎತ್ತರದ, ಹಿಂದಕ್ಕೆ ತುಸು ವಿಸ್ತಾರವಾದ ಬಿದಿರು ಮತ್ತು ತಡಿಕೆಗಳಿಂದ ಕಟ್ಟಿಕೊಳ್ಳುತ್ತಾರೆ. ಮುಂಭಾಗ ಬೊಂಬೆಗಳು ಕುಣಿಯುವ ಸ್ಥಳ. ಅಲ್ಲಿ ಎರಡು ಕಪ್ಪು ಪರದೆಗಳನ್ನು ಕಟ್ಟಿಕೊಳ್ಳುವರು. ಒಂದು ಪರದೆ ಭೂಮಿಯಿಂದ ಎರಡು ಮೂರು ಅಡಿ ಎತ್ತರವಿರುತ್ತದೆ. ಅದರ ಮೇಲೆ ಒಂದು ಅಡಿಯಷ್ಟು ಮುಂದಕ್ಕೆ ಅಷ್ಟೇ ಎತ್ತರದ ಮತ್ತೊಂದು ಪರದೆಯನ್ನು ಕಟ್ಟುತ್ತಾರೆ. ಈ ನಡುವಿನ ಒಂದು ಅಡಿ ಅಗಲದ ಜಾಗ ಇರುವುದು ಬೊಂಬೆಗಳನ್ನು ಇಳಿಯಬಿಟ್ಟು ಬಾಗಿ ಕುಣಿಸುವುದಕ್ಕಾಗಿ. ಬೊಂಬೆಗಳು ತೆರೆಯ ಹೊರಗೆ, ಪ್ರೇಕ್ಷಕರ ಅಭಿಮುಖವಾಗಿ ಕಾಣಿಸಿಕೊಂಡರೆ ಸೂತ್ರಧಾರರು ತೆರೆಯ ಹಿಂದೆ ಉಳಿಯುತ್ತಾರೆ. ಒಳಗೆ ಬೊಂಬೆಗಳನ್ನು ಸಾಲಾಗಿ ಜೋಡಿಸಿಕೊಂಡು ಅಗತ್ಯಬಂದಂತೆ ಎತ್ತಿಕೊಳ್ಳುತ್ತಾರೆ. ಬೊಂಬೆಗಳ ಕುಣಿತ, ತೆರೆಯ ಹಿಂದೆ ನಿಂತ ಸೂತ್ರಧಾರನನ್ನು ಅವಲಂಬಿಸುತ್ತದೆ. ಅವನು ಕುಣಿದಂತೆ ಕುಣಿಸಿದಂತೆ ಇದು ಇಲ್ಲಿ ಕುಣಿಯುತ್ತದೆ. ಎರಡು ಮೂರು ಮಂದಿ ಕುಣಿಸುವವರಿರುತ್ತಾರೆ. ಭಾಗವತರು ತಾಳಮದ್ದಲೆ ಹಾಗೂ ಹಿಮ್ಮೇಳದವರೂ ಸೇರಿದಂತೆ ಈ ಕಲಾವಿದರ ತಂಡದಲ್ಲಿ ಹತ್ತು ಹನ್ನೆರಡು ಮಂದಿ ಇರಬಹುದು. ಯಕ್ಷಗಾನ ಸಂಪ್ರದಾಯದಂತೆಯೇ ಉಳಿದ ಪ್ರದರ್ಶನ ಸಾಗುತ್ತದೆ. ಕರ್ನಾಟಕದ ಅನೇಕ ಕಡೆಗಳಲ್ಲಿ ಸೂತ್ರದ ಬೊಂಬೆಯಾಟ ಈಗಲೂ ಅಸ್ತಿತ್ವದಲ್ಲಿದೆ.

ತೊಗಲುಬೊಂಬೆಯಾಟವೂ ಯಕ್ಷಗಾನಮೇಳವೇ. ಕಿಳ್ಳೇಕ್ಯಾತರು ಎಂಬ ಸಮುದಾಯದವರು ಈ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿದ್ದಾರೆ. ತೊಗಲುಗೊಂಬೆಗಳು ಜಿಂಕೆಯ ಅಥವಾ ಮೇಕೆಯ ಚರ್ಮದಿಂದ ತಯಾರಿಸಿದವುಗಳಾಗಿರುತ್ತವೆ. ತೊಗಲುಬೊಂಬೆಯಾಟಕ್ಕೆ ಸೂತ್ರದ ಬೊಂಬೆಯಾಟದಂತೆಯೇ ನಾಲ್ಕು ಕಡೆಯೂ ಮುಚ್ಚಿದ ಚಿಕ್ಕ ರಂಗಮಂಟಪಬೇಕು. ಮುಂಬದಿಯಲ್ಲಿ ನೆಲದಿಂದ ಎರಡು ಅಡಿ ಎತ್ತರಕ್ಕೆ ಒಂದು ಕಪ್ಪು ಬಟ್ಟೆಯನ್ನು ಕಟ್ಟುತ್ತಾರೆ. ಅದರ ಮೇಲೆ ಒಂದು ಶುಭ್ರವಾದ ಬಿಳಿಯ ಪಂಚೆಯನ್ನು ಕಟ್ಟುತ್ತಾರೆ. ಪಶ್ಚಿಮ ಸಂಪ್ರದಾಯದಲ್ಲಿ ಕುಳಿತುಕಂಡು ಬೊಂಬೆಗಳನ್ನು ಕುಣಿಸುತ್ತಾರೆ. ಎತ್ತರವಾದ ರಂಗಮಂಟಪವನ್ನು ನಿರ್ಮಿಸಿಕೊಂಡು ಮೂರು ನಾಲ್ಕು ಬಿಳಿಯ ಪಂಚೆಗಳನ್ನು ಅಳವಡಿಸಿ ತೆರೆಯನ್ನು ಸಿದ್ಧಗೊಳಿಸಿಕೊಳ್ಳುತ್ತಾರೆ. ರಂಗದ ಒಳಗೆ ಪ್ರಕಾಶವಾಗಿ ಹೊಳೆಯುವ ದೀಪವೊಂದು ಉರಿಯುತ್ತಿರುತ್ತದೆ. ಬಿಳಿಯ ಪಂಚೆಯ ಮೇಲೆ ತೆರೆಯ ಹಿಂದೆ ಬಣ್ಣದ ಬೊಂಬೆಗಳನ್ನು ಹಿಡಿದಾಗ ದೀಪದ ಬೆಳಕು ಅವುಗಳ ಮೇಲೆ ಬಿದ್ದು ಪ್ರಕಾಶದಿಂದ ಕೂಡಿ ಹೊರಗೆ ಕುಳಿತ ಪ್ರೇಕ್ಷಕರಿಗೆ ಅವು ವರ್ಣರಂಜಿತವಾಗಿ ತೋರಿ ಬರುತ್ತವೆ. ಇಬ್ಬರು ಕುಣಿಸುವರು. ಇತರರು ಹಿಮ್ಮೇಳ, ಭಾಗವಂತಿಕೆ, ಬೊಂಬೆಗಳನ್ನು ಒದಗಿಸುವಿಕೆ ಮುಂತಾದ ಕಾರ್ಯದಲ್ಲಿ ನೆರವಾಗುತ್ತಾರೆ. ಪೂರ್ವ ಸಂಪ್ರದಾಯದಲ್ಲಿ ಕಲಾವಿದರು ಬೊಂಬೆಗಳನ್ನು ಕುಣಿಸುತ್ತ ತಾವೂ ಕುಣಿಯುತ್ತಾರೆ.



ತೊಗಲುಗೊಂಬೆ ಆಟದ ರಾಕ್ಷಸಿ

**ಸಣ್ಣಾಟ :** ಕರ್ನಾಟಕದಲ್ಲಿ ಯಕ್ಷಗಾನ ಬಯಲಾಟ, ಯಕ್ಷಗಾನ, ಬೊಂಬೆಯಾಟಗಳಂತೆಯೇ ಕೆಲವು ಸಣ್ಣಾಟಗಳೂ ಕಂಡುಬರುತ್ತವೆ. ಇವು ಉತ್ತರ ಕರ್ನಾಟಕ ಹಾಗೂ ಅಲ್ಲಿಗೆ ಹತ್ತಿರವಾದ ಮಲೆನಾಡು ಭಾಗಗಳಲ್ಲಿ



ಶ್ರೀಕೃಷ್ಣಪಾರಿಜಾತ

ಕಂಡುಬರುವುದು ಹೆಚ್ಚು. ಈ ಸಣ್ಣಾಟಗಳಲ್ಲಿ ಶ್ರೀಕೃಷ್ಣಪಾರಿಜಾತ, ಸಂಗ್ಯಾ ಬಾಳ್ಯಾ, ಅಲ್ಲಮ ಪ್ರಭು, ರಾಧಾನಾಟ ಮುಂತಾದುವು ಮುಖ್ಯವಾದವು. ಸಣ್ಣಾಟಗಳನ್ನು ಶೈವ ಸಣ್ಣಾಟಗಳೆಂದೂ ವೈಷ್ಣವ ಸಣ್ಣಾಟಗಳೆಂದೂ ಸಾಮಾಜಿಕ ಹಾಗೂ ಕಾಲ್ಪನಿಕ ಸಣ್ಣಾಟಗಳೆಂದೂ ವಿಭಜಿಸಿಕೊಳ್ಳಬಹುದು. ಇವೂ ಸಹ ಅಟ್ಟಗಳ ಮೇಲೆಯೇ ಆಡತಕ್ಕವು. ಇವೆಲ್ಲವೂ ಗೀತನಾಟಕಗಳೇ. ಎಲ್ಲ ನಾಟಕಗಳೂ ಬರವಣಿಗೆಯಲ್ಲಿವೆ. ಇಲ್ಲಿನ ನೃತ್ಯಕ್ಕೂ ಯಕ್ಷಗಾನ ನೃತ್ಯಕ್ಕೂ ಯಾವ ಬಗೆಯ ಸಂಬಂಧವೂ ಇಲ್ಲ. ಒಂದು ಬಗೆಯ ಲಾಸ್ಯನೃತ್ಯ ಇಲ್ಲಿ ಕಂಡುಬರುತ್ತದೆ. ವೇಷಭೂಷಣಗಳೂ ಅತ್ಯಂತ ಸರಳ. ಸಂಭಾಷಣೆಯನ್ನು ಗೀತೆಗಳ ಹಿನ್ನೆಲೆಯಲ್ಲಿ ರಚಿಸಿಕೊಳ್ಳುತ್ತಾರೆ.

ದಾಸರಾಟದ ಪರಂಪರೆಯಲ್ಲಿ 'ರಾಧಾನಾಟ' ಒಂದಾಗಿ ತೋರಿದರೂ ಅದು ಚಿಮಣಾ ಮತ್ತು ಗೊಡ್ಡಿ ಭೀಮಣ್ಣಾ ಇವರ ಕಥೆಗೆ ಅನಂತರ

ಜಿಗಿಯುತ್ತದೆ. ವೈವಿಧ್ಯಮಯವಾದ ಗೀತ ಕೂಟಗಳನ್ನು ಇಲ್ಲಿ ಕಾಣಬಹುದು. ಆರಂಭದಲ್ಲಿ ಬರುವ ರಾಧಾಕೃಷ್ಣರ ಪ್ರಸಂಗದಿಂದ ಇದನ್ನು ರಾಧಾನಾಟ ಎಂದು ಕರೆಯಲಾಗಿದೆ. ಅಲ್ಲಮಪ್ರಭು ಮತ್ತು ಮಾಯೆಯರಿಗೆ ಸಂಬಂಧಿಸಿದ ಸಣ್ಣಾಟವೇ ಅಲ್ಲಮಪ್ರಭು. ಗೋರಕುಂಬಾರ, ಭಕ್ತಪ್ರಹ್ಲಾದ ಮುಂತಾದ ವೈಷ್ಣವ ಸಂಪ್ರದಾಯದ ಆಟಗಳಂತೆಯೇ ಸಂಗ್ಯಾ-ಬಾಳ್ಯ, ರೂಪಾಸಿಂಗ್, ಮುಕುಂದ-ಗೋವಿಂದ ಎಂಬ ಆಟಗಳೂ ಹೆಚ್ಚು ಜನಪ್ರಿಯವಾಗಿವೆ. ಈ ಸಣ್ಣಾಟಗಳಲ್ಲೆಲ್ಲ ಹೆಚ್ಚು ಪ್ರಚಲಿತವಾಗಿರುವ ನಾಟಕ ಶ್ರೀಕೃಷ್ಣಪಾರಿಜಾತ. ಅಪರಾಳ ತಮ್ಮಣ್ಣ (ನೋಡಿ) ವಿರಚಿತ ಶ್ರೀಕೃಷ್ಣಪಾರಿಜಾತ (ಸು.1800) ಉತ್ತರ ಕರ್ನಾಟಕದ ಹಳ್ಳಿಹಳ್ಳಿಯಲ್ಲಿಯೂ ಜಾತ್ರೆ ಉತ್ಸವಗಳಲ್ಲಿಯೂ ಕಂಡುಬರುತ್ತದೆ.



ರಾಧಾನಾಟ

ದಕ್ಷಿಣ ಕರ್ನಾಟಕದ ಜನಪದ ರಂಗಭೂಮಿ ಈಗೀಗ ಆಧುನಿಕ ಕಂಪನಿ ನಾಟಕಗಳ ಅನುಕರಣೆಯ ಮೇಲೆ ಹುಟ್ಟಿಕೊಂಡ ಹೊಸ ನಾಟಕ ಪರಂಪರೆಯೊಂದನ್ನು ಸ್ಥಾಪಿಸಿಕೊಳ್ಳುತ್ತಿದೆ. ಈ ನಾಟಕಗಳು ಹೆಚ್ಚಾಗಿ ಪೌರಾಣಿಕ ವಸ್ತುವನ್ನೇ ಅವಲಂಬಿಸಿದ್ದರೂ ನೃತ್ಯಭಾಗ ಕಣ್ಮರೆಯಾಗಿ ಕೇವಲ ಅಭಿನಯ ಪ್ರಧಾನ ನಾಟಕಗಳಾಗಿ ಉಳಿದಿವೆ. ಸಂಗೀತ, ಸಾಹಿತ್ಯ ಈ ಯಾವ ದೃಷ್ಟಿಯಿಂದಲೂ ಇವು ಜನಪದ ನಾಟಕಗಳೆನಿಸದೆ ಪ್ರತ್ಯೇಕವಾಗಿ ಉಳಿದುಹೋಗಿವೆ. (ಜೆ.ಎಸ್.ಪಿ.)

**ಜನಪದ ವಾದ್ಯಗಳು :** ಯಾವ ಸಂಗೀತಕ್ಕೂ ಶ್ರುತಿ ಮತ್ತು ಲಯ ಮುಖ್ಯವಾದುವು. ಜನಪದ ಸಂಗೀತಗಾರರಿಗೆ ಶ್ರುತಿ ಲಯ ತಾಳ ಇವು ಮೂರೂ ಮುಖ್ಯ. ತಮ್ಮ ಸಂಗೀತಕ್ಕೆ ಪೋಷಕಗಳಾಗಿ ಅವರು ಬಗೆಬಗೆಯ ಮಿಡಿಯುವ, ಊದುವ, ಬಡಿಯುವ ವಾದ್ಯಗಳನ್ನು ಸೃಷ್ಟಿಮಾಡಿಕೊಂಡಿದ್ದಾರೆ. ಇವೇ ಜನಪದ ವಾದ್ಯಗಳು. ಸಂಗೀತವಿಲ್ಲದೆ ಯಾವ ಕುಣಿತವೂ ಇಲ್ಲ. ಒಂದೊಂದು ಬಗೆಯ ಆಟ ಕುಣಿತ ಮೇಳಗಳಲ್ಲಿ ಒಂದು, ನಾಲ್ಕು, ಹತ್ತು ಹೀಗೆ ಸಂಗೀತವಾದ್ಯಗಳಿರುತ್ತವೆ. ಹಾಡುವ ಕುಣಿಯುವ ಜನಪದ ಮೇಳಗಳ ಸಂಖ್ಯೆ ಕಡೆಯ ಪಕ್ಷ ಅರವತ್ತು ಪ್ರಕಾರಗಳಾದರೂ ಇವೆ. ಇವುಗಳಲ್ಲೆಲ್ಲ ಜನಪದ ವಾದ್ಯಗಳನ್ನು ಉಪಯೋಗಿಸುತ್ತಾರೆ.

ಜನಪದ ಕಲೆಗಳಲ್ಲಿ ಸಂಗೀತ ವಾದ್ಯಗಳನ್ನು ಎರಡು ಬಗೆಯಲ್ಲಿ ಉಪಯೋಗಿಸುವುದು ಕಂಡುಬರುತ್ತದೆ. ಒಂದು, ಹಾಡುವಾಗ ಬಾಯಿಧ್ವನಿಯೊಂದಿಗೆ ಉಪಯೋಗಿಸುವುದು. ಮತ್ತೊಂದು, ಬರಿಯ ವಾದ್ಯ ಸಂಗೀತ. ಇದು ವಾದ್ಯಗಾನಕ್ಕಷ್ಟೇ ಮೀಸಲಾದುದು. ಅಲ್ಲದೆ 'ಇಂಥ' ಆಟಕ್ಕೆ 'ಇಂಥ' ವಾದ್ಯಗಳನ್ನೇ ಉಪಯೋಗಿಸಬೇಕೆಂಬ ವಾಡಿಕೆ ಇದೆ. ಅನೇಕ ವಾದ್ಯಗಳು ಅನೇಕ ಪ್ರಕಾರದ ಮೇಳಗಳಿಗೆ ಸರಿಹೋಗುವುದರಿಂದ, ಸ್ವರಮೇಳ ಕೆಡದಂತೆ ಯಾವ ವಾದ್ಯ ಬೇಕೋ ಅದನ್ನು ಉಪಯೋಗಿಸುತ್ತಾರೆ.

ಈಗ ದೊರೆಯುವ ಜನಪದ ವಾದ್ಯಗಳ ಸಂಖ್ಯೆ ತಕ್ಕಮಟ್ಟಿಗೆ ವಿಪುಲವಾಗಿದೆ. ಹಿಂದೆ ಇದ್ದ ಕೆಲವು ವಾದ್ಯಗಳು ಇಂದು ಮಾಯವಾಗಿವೆ. ತಂಬೂರಿ, ಕಿನ್ನರಿ, ಏಕನಾದ - ಇವು ತಂತಿವಾದ್ಯಗಳು. ಇವು ಶ್ರುತಿಗೆ ಸಹಾಯಕವಾಗುವುದರಿಂದ, ಇವುಗಳನ್ನು ಎಲ್ಲ ಸಂದರ್ಭದಲ್ಲಿಯೂ ಉಪಯೋಗಿಸಬಹುದು (ಆದರೆ ಸಾಧಾರಣವಾಗಿ ಸೋಬಾನೆ ಪದ ಮತ್ತು ಗದ್ದೆ ನಾಟಿ ಹಾಕುವಾಗ ಹೇಳುವ ಪದಗಳಿಗೆ ಯಾವ ಶ್ರುತಿಯೂ ಇಲ್ಲ). ಓಲಗ, ತುತ್ತೂರಿ, ಕೊಂಬು, ಕಹಳೆ, ಮುಖವೀಣೆ, ಕೊಳಲು, ಪಿಳ್ಳಂಗೋವಿ, ಶಂಖ ಮುಂತಾದುವು ಊದುವಾದ್ಯಗಳು. ತಮ್ಮಟೆ, ಹರೆ, ದುಡಿ, ಡೊಳ್ಳು, ಚೌಡಿಕೆ, ನಗಾರಿ, ಕಣೆ, ಕುಣಿಮಿಣಿ, ಢಾಲಿ, ಕೋಲು, ಹುಯಿಲುತಮ್ಮಟೆ, ಜಂಡೆ, ಹೆಬ್ಬರೆ, ಮದ್ದಳೆ, ಡವಣೆ, ಡಂಕ, ಡೋಲು, ಕರಡೆ, ಖಂಜರಾ, ಬೋರ್, ರೊಂಜ, ಚಂಗ, ಉಪಂಗ, ತಾಸ್, ಚೌಗಡಿ, ಹಲಗೆ, ಆವಜ, ದಿಮಿಡಿಮಿ ಮುಂತಾದವು ಬಾರಿಸುವವಾದ್ಯಗಳು. ಕರಡೆ ಈಶ್ವರ ಪೂಜೆಗೆ ಮುಖ್ಯ. ವೀರಗೀತಕ್ಕೂ ಇದು ಬೇಕು. ಬಳೆ ಗೆಜ್ಜೆ ತಾಳ ಗಂಟೆ ಕೋಲು ಜಾಗಟೆ ಇವು ಕಂಚಿನ ವಾದ್ಯಗಳು.



ಕಂಸಾಳೆ

ಚೌಡಿಕೆಯ ಹಾಡಿಕೆಯಲ್ಲಿ ನಾಲ್ಕು ಜನರಿರುತ್ತಾರೆ. ಸಣ್ಣ ನಗಾರಿ ಉಪಯೋಗಿಸುತ್ತಾರೆ. ಕೊಡವರು ಶ್ರುತಿಗೆ ಚೀಣಿ ಎಂಬ ವಾದ್ಯವನ್ನೂ ಲಂಬಾಣಿಗರು ಉಪಂಗವನ್ನೂ (ಕಂಚಿನ ತಟ್ಟೆ, ಕಡ್ಡಿ) ಬಳಸುತ್ತಾರೆ. ಈ ವಾದ್ಯಗಳನ್ನೆಲ್ಲ ಬಡಿಯಲು ಊದಲು ನುಡಿಸಲು ಅನೂಚಾನವಾಗಿ ಬಂದ ಪದ್ಧತಿ ಇದೆ. ಇವುಗಳ ಜೊತೆಗೆ ಕೊಡವರು ಸುಗ್ಗಿ ಕುಣಿತ ಮತ್ತು ಹುತ್ತರಿ ಕುಣಿತಗಳಲ್ಲಿ ಉಪಯೋಗಿಸುವ ಓಲಗ, ತಮ್ಮಟೆ ಮುಂತಾದ ವಾದ್ಯಗಳೂ ಇವೆ. ಗಂಟೆಯನ್ನು ಗಂಟೆಹೆಳವರು ಪದ ಹೇಳುವಾಗ ಉಪಯೋಗಿಸುತ್ತಾರೆ. ಡೊಳ್ಳಿನ ವಾದ್ಯದಲ್ಲಿ ನಾಲ್ಕು ಐದು ದಪ್ಪ ಡೊಳ್ಳುಗಳನ್ನು ಒಟ್ಟಿಗೆ ಬಾರಿಸುವುದರಿಂದ ಭಯಂಕರವಾದ ಅತ್ಯುತ್ಸಾಹ ಯುತವಾದ ಸದ್ದು ಉಂಟಾಗುತ್ತದೆ. ಈ ಎಲ್ಲ ವಾದ್ಯಗಳನ್ನೂ ಸಾಧಾರಣವಾಗಿ ಜಾತ್ರೆಗಳಲ್ಲಿ ದೇವತಾ ಮೆರವಣಿಗೆ ರಥೋತ್ಸವಗಳಲ್ಲಿ



ಚೌಡಿಕೆ ವಾದ್ಯ



ನೀಲಗಾರರ ವಾದ್ಯಗಳು - ತಂಬುರಿ, ಗಗ್ಗರ, ಡಮರುಗ



ಕಿನ್ನರಿ



ದೊಂಬಿದಾಸರ ಏಕತಾರಿ



ಕರಪಾಲಮೇಳದ ಗುಮಟೆ



ಹೆಳವರ ಘಂಟೆ

ಕೇಳಬಹುದು. ಕೊಂಬು ಅತ್ಯಂತ ಮನೋಹರವಾದ ವಾದ್ಯ. ಇದರ ಆಕಾರ ಸೊಗಸಾಗಿದೆ. ಪ್ರಾರಂಭದಲ್ಲಿ ಚಿಕ್ಕದಾಗಿ ಮುಂದೆ ದಪ್ಪವಾಗಿ ಬಾಗಿ ಅಲ್ಲಿಂದ ಮುಂದೆ ಇನ್ನೂ ದಪ್ಪವಾಗಿ ಕೊನೆಯಲ್ಲಿ ಬಾಯನ್ನು ಗಾಳಿಗೆ ತೆಗೆದಿರುತ್ತದೆ. ಅದು ಒಂದೊಂದು ಕಡೆ ಬಾಗಿರುವಲ್ಲಿಗೆ ತೆಗೆಯುವಂತೆ ಮೂರು ಭಾಗ ಮಾಡಿರುತ್ತಾರೆ. ಅಷ್ಟು ಉದ್ದವನ್ನೂ ಒಟ್ಟಿಗೆ ಎತ್ತಿಕೊಂಡು ಹೋಗುವುದು ಕಷ್ಟ. ಸಾಮಾನ್ಯವಾಗಿ ಅದಕ್ಕಾಗಿ ಒಂದರೊಳಗೆ ಒಂದರಂತೆ (ಮೂರು ಭಾಗವೂ ಕೆಲವು ವೇಳೆ ಎರಡೇ ಭಾಗವೂ ಇರುವುದುಂಟು) ಸೇರಿಸಿಟ್ಟುಕೊಂಡಿದ್ದು ಊದುವಾಗ ಮಾತ್ರ ಮೂರನ್ನೂ ಕಮಾನಿನಂತೆ ಸೇರಿಸಿ, ಸಣ್ಣ ತುದಿಯನ್ನು ಬಾಯಲ್ಲಿಟ್ಟುಕೊಂಡು ಊದುತ್ತಾರೆ. ಆಗ ಅದರಿಂದ ನಾದ ಹೊರಟು ಬಾಗಿ ಬಾಗಿ ನಾಲ್ಕನೆಯ ಸ್ವರವನ್ನು ಮುಟ್ಟಿ ಪೂರ್ಣಕಂಠದಲ್ಲಿ ಮೊರೆದು ಮೊಳಗುತ್ತದೆ. ಇದರಲ್ಲಿ ಹೆಚ್ಚಿನ ಧ್ವನಿ ಹೊರಡಿಸಲು ಅನುಭವವುಳ್ಳ ನಿಪುಣ ಊದುಗಾರನಾಗಿರಬೇಕು. ಇಲ್ಲದಿದ್ದರೆ ಮುಕ್ಕಾಲು ವರ್ತುಲಾಕಾರವಾದ ಬಾಗಿ ಬಾಗಿ ಹೋಗುವ ಆ ಧ್ವನಿಯನ್ನು ಪೂರ್ತಿಯಾಗಿ ಮೊಳಗಿಸುವುದು ಸಾಧ್ಯವಿಲ್ಲ. ಕೊಂಬನ್ನು ಊದಲು ಉಸಿರುಬಲವೂ ಚೆನ್ನಾಗಿರಬೇಕು. ಶಂಖ ಮತ್ತು ಜಾಗಟೆಗಳ ಶಬ್ದವೂ ಹಾಗೆಯೇ ಮನೋಹರ. ಜನಪದ ವಾದ್ಯಗಳಲ್ಲಿ ಶಂಖದಲ್ಲಿಯಂತೆ ಘನ ಸ್ವರ ಮತ್ತಾವುದರಿಂದಲೂ ಹೊರಡುವುದಿಲ್ಲ. ಜಾಗಟೆ ಸಹ ಹುರುಪುಗೊಳಿಸುವ ವಾದ್ಯ. ಶಂಖ ಮತ್ತು ಜಾಗಟೆ ದೇವಸ್ಥಾನಗಳಲ್ಲಿಯೂ ಉಪಯೋಗವಾಗುತ್ತವೆ.



ಜುಂಜಪ್ಪನ ಗಣೆ

ಜನಪದ ವಾದ್ಯಗಳಲ್ಲಿ ಕೆಲವು ವಿಶಿಷ್ಟ ಪಂಗಡದವರು ಮಾತ್ರ ಕೆಲವು ವಿಶಿಷ್ಟ ವಾದ್ಯಗಳನ್ನು ಉಪಯೋಗಿಸುವುದು ಕಾಣಬರುತ್ತದೆ. ಕೊಡವರು ಬೊಳಕಾಟದಲ್ಲಿ ದುಡಿ ಎಂಬ ಚರ್ಮವಾದ್ಯವನ್ನು ಉಪಯೋಗಿಸುತ್ತಾರೆ. ಚೌಗಟದಲ್ಲಿ ಶ್ರುತಿ, ಸಣ್ಣ ನಗಾರಿ, ತಾಳ - ಇವು ಬಳಕೆಯಲ್ಲಿವೆ. ಚೌಡಿಕೆ ಎಂಬ ವಾದ್ಯವನ್ನು ಚೌಡಿಕೆ ಪದವನ್ನು ಹೇಳುವವರು ಮಾತ್ರ ಉಪಯೋಗಿಸುತ್ತಾರೆ. ಸೋಮನ ಕುಣಿತ (ಚೋಮನ ಕುಣಿತ)ವನ್ನು ಕುಣಿಯುವಾಗ ತಮ್ಮಟೆ ಹರೆ ಗೆಜ್ಜೆ ಮತ್ತು ಕೈಯಲ್ಲಿ ಚಾವಟಿ ಇರಬೇಕು. ಕಾರವಾರದ ಕಡೆ ಜಾಗಟೆ ಸಹ ಇರಬೇಕು. ಡೊಳ್ಳು ಮೇಳದವರು ಐದು ಆರು ಡೊಳ್ಳುಗಳನ್ನೂ ಜೊತೆಗೆ ತಾಳವನ್ನೂ ಉಪಯೋಗಿಸುತ್ತಾರೆ. ಕುರುಬರು ಬೀರೇದೇವರ ಉತ್ಸವದಲ್ಲಿ ಒಂದು ಎರಡು ಡೊಳ್ಳನ್ನೂ ಉಪಯೋಗಿಸುತ್ತಾರೆ. ಎಲ್ಲಮ್ಮನ ಜಾತ್ರೆಯಲ್ಲಿ ಜೋಗಿತಿಯರು ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಚೌಡಿಕೆ ವಾದ್ಯವನ್ನು ಬಳಸುತ್ತಾರೆ. ಗುಮಟೆ ವಾದ್ಯವನ್ನು ಗುಮಟೆ ಪದದವರು ಹಾಡಿನ ಜೊತೆ ಉಪಯೋಗಿಸುತ್ತಾರೆ. ಇವರು ಶ್ರುತಿಗೆ ತಂಬೂರಿಯನ್ನೂ ಉಪಯೋಗಿಸುವುದುಂಟು.



ಗೊಂದಲಿಗರ ಸಂಭಾಳ

ಡೊಳ್ಳುವಾದ್ಯವನ್ನು ಹೊಟ್ಟೆಗೆ ಕಟ್ಟಿಕೊಂಡು ತುದಿಗೆ ಬಟ್ಟೆ ಕಟ್ಟಿದ ಕೋಲಿನಿಂದ ಎರಡು ಕಡೆಯೂ ಹೊಡೆಯುತ್ತಾರೆ. ಹರೆಯನ್ನು ಬರಿ ಮರದ ತುಂಡಿನಿಂದ ತಿಕ್ಕಿದರೆ ಭರ್‌ಭರ್ ಎಂದು ಸದ್ದಾಗುತ್ತದೆ. ಕುಣಿಮಿಣಿಯನ್ನು ಕೊರಳಿಗೆ ನೇತು ಹಾಕಿಕೊಂಡು ಅಥವಾ ಹೊಟ್ಟೆಗೆ ಕಟ್ಟಿಕೊಂಡು ಎರಡು ಕೈಗಳಿಂದಲೂ ಎರಡು ಸಣ್ಣಕಡ್ಡಿಗಳಿಂದ ಹೊಡೆಯುತ್ತಾರೆ. ಅದು ಸಣ್ಣ ಧ್ವನಿಯಲ್ಲಿ ಶಬ್ದಮಾಡುತ್ತದೆ. ಡಂಕದಲ್ಲಿ ಎರಡು ತಮ್ಮಟೆಗಳಿರುತ್ತವೆ. ಸೊಂಟಕ್ಕೆ ಕಟ್ಟಿಕೊಂಡು ಎರಡು ಕೈಗಳಿಂದಲೂ ಬಾರಿಸುತ್ತಾರೆ. ಹಿತ್ತಾಳೆ ವಾದ್ಯಗಳು, ತಾಳಗಳು ಕಂಚಿನವು. ಇವುಗಳ ನುಡಿಸುವಿಕೆಯಿಂದ ಖಣಿಲ್ ನಾದವುಂಟಾಗುತ್ತದೆ. (ಜಿ.ಆರ್.ಐ.)

**ಜನಪದ ವಾಸ್ತು:** ನಾಗರಿಕ ಸಮಾಜಗಳಲ್ಲಿ ವಿಶಿಷ್ಟವಾಗಿ ಕಂಡು ಬರುವ ಸಾಮಾಜಿಕ, ರಾಜಕೀಯ, ಔದ್ಯಮಿಕ ಸಂಸ್ಥೆಗಳು, ಸಂಪತ್ತು ಕೇಂದ್ರೀಕೃತವಾಗಿರುವ ಕೆಲವು ವರ್ಗಗಳು ವ್ಯವಹಾರ ಕ್ಲಿಷ್ಟತೆ, ವಿವಿಧ ಆವಶ್ಯಕತೆಗಳು ಮುಂತಾದ ಕಾರಣಗಳಿಂದಾಗಿ ರೂಪಿಸಿಕೊಂಡಿರುವ ವಾಸ್ತುನಿರ್ಮಾಣಗಳು ದೊಡ್ಡವಾಗಿಯೂ ವೈವಿಧ್ಯಮಯವಾಗಿಯೂ ಕಲಾತ್ಮಕವಾಗಿಯೂ ಇರುತ್ತವೆಯಾಗಿ, ಇವುಗಳ ಪರಿಚಯವಿರುವ ಆಧುನಿಕ ಯುಗದಲ್ಲಿ ವಾಸ್ತು ಎಂಬ ಪದವನ್ನು ಇಂಥ' ವಿಶಿಷ್ಟ ರೀತಿಯ ಕೃತಿಗಳಿಗೇ ಬಳಸುವುದು ರೂಢಿಯಾಗಿದೆ. ನಾಗರಿಕ ಸಮಾಜದಿಂದ ಭಿನ್ನವಾಗಿರುವ ಸರಳವಾದ ಜನಪದ ಸಮಾಜಗಳಲ್ಲಿ ವಿಶಿಷ್ಟ ವಾಸ್ತುರಚನೆಗಳಿಗೆ ಆವಶ್ಯಕವಾದ ಸಂಪನ್ಮೂಲಗಳಾಗಲೀ ಅಗತ್ಯಗಳಾಗಲೀ ಇಲ್ಲದಿರುವುದರಿಂದ, ಇಲ್ಲಿಯ ಸಾಮಾನ್ಯ ರಚನೆಗಳನ್ನು ಮೇಲಿನ ಅರ್ಥದಲ್ಲಿ ವಾಸ್ತುಕೃತಿಗಳು ಎಂದು ಹೆಸರಿಸುವುದು ಅಷ್ಟು ಸಾಧುವಾಗಿ ಕಾಣುವುದಿಲ್ಲ. ಜನಪದ ನಿರ್ಮಾಣಗಳು ಬಹುಮಟ್ಟಿಗೆ ಬಿಸಿಲು ಮಳೆಯಿಂದ ರಕ್ಷಣೆಯೊದಗಿಸಿರುವ ಆವರಣಗಳು, ಅಷ್ಟೇ, ಜೋಪಡಿ, ಗುಡಿಸಲು ಮುಂತಾದವನ್ನು ಕಟ್ಟಡಗಳೆಂದು ಹೆಸರಿಸಲಾಗದು.

ಮೊದಲನೆಯದಾಗಿ ಜನಪದ ವಾಸ್ತುರಚನೆಗಳಲ್ಲಿ ಮುಖ್ಯವಾಗಿ ಕಂಡುಬರುವ ಒಂದು ಅಂಶವೆಂದರೆ - ಅವುಗಳ ಸರಳತೆ. ಎಲ್ಲ ಜನಪದ

ವಾಸ್ತು ನಿರ್ಮಾಣಗಳನ್ನೂ ಲೌಕಿಕ ಮತ್ತು ಧಾರ್ಮಿಕ ಎಂಬ ಎರಡು ಗುಂಪುಗಳಲ್ಲಿ ವಿಂಗಡಿಸಬಹುದು. ಲೌಕಿಕ ವಾಸ್ತು ಬಹುಮಟ್ಟಿಗೆ ಕುಟುಂಬಗಳ ವಾಸಗೃಹಗಳಿಗಷ್ಟೇ ಸೀಮಿತವಾಗಿರುತ್ತದೆ. ಅಪರೂಪವಾಗಿ ವಿನೋದಗೃಹಗಳು, ಗರಡಿಗಳು, ಹಲವು ಜನ ಕೂಡುವ ಚಾವಡಿಗೂ ಕಂಡುಬರುವುದುಂಟು. ದೇವಾಲಯಗಳು ಧಾರ್ಮಿಕ ರೀತಿಯ ವಾಸ್ತುಗಳು. ಇವುಗಳ ಸಂಖ್ಯೆ ಬಹು ಕಡಿಮೆ. ಒಂದೋ ಎರಡೋ ಇದ್ದರೆ ಹೆಚ್ಚು. ಬಹುಪಾಲು ಸಂದರ್ಭಗಳಲ್ಲಿ ಮರ, ನದೀ ದಡ, ಬಯಲುಗಳೇ ಪೂಜಾಸ್ಥಾನಗಳಾಗಿದ್ದು ಕೆಲವು ಗ್ರಾಮಗಳಲ್ಲಿ ದೇವಾಲಯಗಳು ಇಲ್ಲದಿರುವುದೂ ಉಂಟು. ಎಷ್ಟೋ ವೇಳೆ ಎರಡು ಪಕ್ಕಗಳಲ್ಲಿ ಎರಡು ಕಲ್ಲು ನೆಟ್ಟು, ಅದರ ತಲೆಯ ಮೇಲೆ ಒಂದು ಚಪ್ಪಡಿ ಎಳೆದು ಅದನ್ನೇ ಗುಡಿ ಎಂದು ಕರೆಯುವುದೂ ಉಂಟು. ಕಲ್ಲುಗುಂಡು ಮಾರಿ ಆಗಬಹುದಾದರೆ ಇದು ಅದರ ದೇಗುಲವಾಗುವುದರಲ್ಲಿ ಯಾವ ಅಚ್ಚರಿಯೂ ಕಾಣದು. ಒಂದೇ ದೇವಾಲಯ ಹಲವು ಗ್ರಾಮಗಳ ಧಾರ್ಮಿಕ ಆವಶ್ಯಕತೆಯನ್ನು ಪೂರೈಸುವುದೂ ಅಪರೂಪವಲ್ಲ. ಕೆಲವು ಸಂದರ್ಭಗಳಲ್ಲಿ ಈ ದೇವಾಲಯಗಳೇ ನ್ಯಾಯತೀರ್ಮಾನ, ವಿನೋದ ಮುಂತಾದ ಲೌಕಿಕ ವ್ಯವಹಾರಗಳಿಗೂ ಉಪಯೋಗವಾಗುತ್ತವೆ. ಒಟ್ಟಿನಲ್ಲಿ ಹೇಳುವುದಾದರೆ ಜನಪದ ವಾಸ್ತುನಿರ್ಮಾಣಗಳು ಅವರ ನಿತ್ಯಜೀವನದ ಕನಿಷ್ಠ ಆವಶ್ಯಕತೆಗಳಿಗಷ್ಟೇ ಸೀಮಿತವಾಗಿರುತ್ತವೆ. ಶ್ರೀಮಂತಿಕೆ ಇಲ್ಲಿಲ್ಲ. ಆದ್ದರಿಂದ ಸಹಜವಾಗಿ ಈ ನಿರ್ಮಾಣಗಳು ಚಿಕ್ಕವಾಗಿಯೂ ವೈವಿಧ್ಯ ರಹಿತವಾಗಿಯೂ ಇರುವುದೇ ಹೆಚ್ಚು.

ಪರಿಸರದ ಗಾಢಪ್ರಭಾವ ಜನಪದ ವಾಸ್ತುರಚನೆಗಳಲ್ಲಿ ಎದ್ದು ಕಾಣುವ ಎರಡನೆಯ ಮುಖ್ಯ ಅಂಶ. ಇದನ್ನು ವಾಸ್ತು ರಚನೆಗೆ ಉಪಯೋಗಿಸುವ ವಸ್ತುಗಳಲ್ಲೂ ಮತ್ತು ರಚನೆಯ ಆಕಾರದಲ್ಲೂ ಕಾಣಬಹುದು. ನಿರ್ಮಾಣಕಾರರು ಆ ಸ್ಥಳದಲ್ಲಿ ಸುಲಭವಾಗಿ ಸಿಕ್ಕುವ ತುಟ್ಟಿಯಲ್ಲದ ವಸ್ತುಗಳನ್ನಷ್ಟೇ ಆರಿಸಿಕೊಂಡಿರುತ್ತಾರೆ. ಉದಾಹರಣೆಗೆ ಮಣ್ಣು ವಿಶೇಷವಾಗಿ ಉಪಯೋಗವಾಗಿರುವ ವಸ್ತು. ಜೊತೆಗೆ ಕಲ್ಲಿನ ಸೀಮೆಯಲ್ಲಿ ಕಲ್ಲು, ಕಾಡುಪ್ರದೇಶಗಳಲ್ಲಿ ಮರ, ಬಿದಿರು, ಸೊಪ್ಪು, ಗರಿ, ಬಯಲು ನಾಡಿನಲ್ಲಿ ಹುಲ್ಲು ಮುಂತಾದವುಗಳಲ್ಲಿ ಕಟ್ಟಿದ ಕಟ್ಟಡಗಳು ಕಂಡುಬರುತ್ತವೆ. ಚೂಪುಚಾವಣಿ, ಇಪ್ಪಾರು, ಒಪ್ಪಾರು, ಅರ್ಧಗೋಲ, ಪೀಪಾಯಿ ಇತ್ಯಾದಿ ಇಳಿಜಾರಿರುವ ನಿರ್ಮಾಣಗಳು, ಮಂಜು, ಮಳೆ ಇರುವ ಪ್ರದೇಶಗಳಲ್ಲಿದ್ದರೆ, ಮಳೆ ಬಹು ಕಡಿಮೆ ಇರುವ ಪ್ರದೇಶಗಳಲ್ಲಿ ಮಟ್ಟವಾದ ಮಣ್ಣಿನ ಮಾಳಿಗೆ ಮನೆಗಳಿರುತ್ತವೆ.

ತೀರ ಕನಿಷ್ಠ ಅಲಂಕರಣ ಜನಪದ ವಾಸ್ತುಕೃತಿಗಳಲ್ಲಿ ಕಾಣುವ ಮೂರನೆಯ ಅಂಶ. ಹೆಚ್ಚಿನವುಗಳಲ್ಲಿ ಅಲಂಕರಣದ ದೃಷ್ಟಿಯೇ ಇರುವುದಿಲ್ಲ.

ನಾಲ್ಕನೆಯದಾಗಿ ಈ ಕಟ್ಟಡಗಳು ಚಿರಕಾಲ ಸ್ಥಿರವಾಗಿ ಉಳಿಯಲೆಂದು ಕಟ್ಟಿದವುಗಳಲ್ಲ. ಇವನ್ನು ಆಗಿಂದಾಗ್ಗೆ ನವೀಕರಿಸುವುದು ಅಥವಾ ಹೊಸವನ್ನೇ ನಿರ್ಮಿಸುವುದು ಬಹುಸಾಮಾನ್ಯ. ಈ ಅಂಶಗಳನ್ನು ವಿಶ್ವದ ನಾನಾಕಡೆಗಳಲ್ಲಿ ಕಂಡುಬರುವ ಕೃತಿಗಳಲ್ಲಿ ಗಮನಿಸಬಹುದು. ಭಾರತದ ಜನಪದ ವಾಸ್ತುರಚನೆಗಳಲ್ಲೂ ಹಲವಾರು ಪರಿಸರ ನಿರ್ಧರಿತವಾದ ವೈಶಿಷ್ಟ್ಯ, ವೈವಿಧ್ಯಗಳನ್ನು ಗಮನಿಸಬಹುದು.

ಕರ್ನಾಟಕದ ಹೆಚ್ಚು ಮಳೆ ಬೀಳುವ ಕರಾವಳಿ ಮತ್ತು ಮಲೆನಾಡು ಪ್ರದೇಶಗಳಲ್ಲೂ ಕೇರಳದ ರೀತಿಯ ಕುಳ್ಳು ಗೋಡೆಗಳು ಮತ್ತು ಬಹು ಇಳಿಜಾರಿನ ಎರಡು ಅಥವಾ ನಾಲ್ಕು ಹಾರಿನ ಚಾವಣಿ ಮನೆಗಳು ಕಂಡುಬರುತ್ತವೆ. ಗೋಡೆಗಳು ಸಾಮಾನ್ಯವಾಗಿ ಮಣ್ಣು ಅಥವಾ ಜಂಬಿಟ್ಟಿಗೆಯವು. ಚಾವಣಿಗಳು (ಮಂಗಳೂರು ಹೆಂಚಿನವನ್ನು ಗಮನಿಸದೇ ಹೋದಲ್ಲಿ) ವಿಶೇಷತಃ ಬಿದಿರು ಅಥವಾ ಮರದ ಜಂತಿ ಹಂದರದ ಮೇಲೆ ಮುಚ್ಚಿದ, ಹುಲ್ಲು, ಗರಿ ಮುಂತಾದವುಗಳಿಂದ ಮಾಡಿದವು. ಇಲ್ಲಿಯ ಮನೆಗಳಲ್ಲಿ ಇದ್ದಿಲು ಮುಂತಾದ ಸಾಮಗ್ರಿಗಳನ್ನು ಬೆರೆಸಿ ಅರೆದು ಮಾಡಿದ ನಯಗಾರೆಯನ್ನು ನೆಲ ಮತ್ತು ಗೋಡೆಯ ಕೆಳಮಟ್ಟಗಳಿಗೆ ಹಚ್ಚುವ ರೂಢಿ ಇದೆ. ಕೆಂಪು ಕಾರಣೆಯ ಸರಳ ಅಲಂಕರಣವೂ ಉಂಟು. ಮನೆಗಳ ಮುಂದೆ ಹೆಬ್ಬಾಗಿಲ ಇಕ್ಕೆಲದಲ್ಲಿ ಜಗಲಿ, ಒಳಗೆ ಹಜಾರ ಮತ್ತು ವಿವಿಧ ಗೃಹ ಉದ್ದೇಶಗಳಿಗಾಗಿ ಬಳಸಲು ಬೇರೆ ಬೇರೆ ಕೋಣೆಗಳಿರುತ್ತವೆ. ಬಹು ಸರಳವಾದ ಗುಡಿಸಲುಗಳು ಆಕಾರದಲ್ಲಿ ಸುಮಾರು ಇದೇ ರೀತಿಯಿದ್ದರೂ ಒಳ ಆವರಣದಲ್ಲಿ ಹೆಚ್ಚು ವಿಂಗಡಣೆಗಳಿರುವುದಿಲ್ಲ.

ಉತ್ತರ ಕರ್ನಾಟಕದ ಬಯಲು ಪ್ರದೇಶ ಹಾಗೂ ದಕ್ಷಿಣ ಕರ್ನಾಟಕದ ಮಳೆ ಕಡಿಮೆ ಇರುವ ಚಿತ್ರದುರ್ಗ, ಕೋಲಾರ, ತುಮಕೂರು, ಬೆಂಗಳೂರು ಜಿಲ್ಲೆಗಳು ಮತ್ತು ಸುತ್ತಲ ಪ್ರದೇಶಗಳಲ್ಲಿ ಆಯಾಕಾರದ ಮಾಳಿಗೆ ಮನೆಗಳು ವಿಶೇಷ. ಇವುಗಳ ಗೋಡೆಗಳು ಹೆಚ್ಚು ಮಟ್ಟಿಗೆ ಮಣ್ಣಿನವು. ಕಲ್ಲು ವಿಶೇಷವಾಗಿ ದೊರಕುವ ಕೆಲವೆಡೆಗಳಲ್ಲಿ ಕಲ್ಲಚೂರುಗಳನ್ನು ಜೋಡಿಸಿ ಮಾಡಿದ ಗೋಡೆಗಳೂ ಇರುತ್ತವೆ. ಹೆಬ್ಬಾಗಿಲು ಕಿರಿದು ಮತ್ತು ಕುಳ್ಳು. ಒಳಭಾಗದಲ್ಲಿ ಆವಶ್ಯಕತೆಗೆ ತಕ್ಕಂತೆ ಕೋಣೆಗಳೂ ಹಜಾರವೂ ಇರುತ್ತವೆ. ಗೋಡೆಗಳ ಮೇಲೆ ತೊಲೆ ಮತ್ತು ಅಡ್ಡಜಂತಿಗಳನ್ನು ಇಟ್ಟು ಹಂದರ ಮಾಡಿ, ಮೇಲೆ ಕಡ್ಡಿ, ಸೊಪ್ಪುಗಳನ್ನು ಜೋಡಿಸಿ, ಅದರ ಮೇಲೆ ಮಣ್ಣನ್ನು ದಪ್ಪಗೆ ಹರವಿ ಮಾಡಿದ ಚಾವಣಿ ಇರುತ್ತದೆ. ಗೋಡೆಗಳು ಮಳೆಯ ಇರುಚಲಿನಿಂದ ನೆನೆಯದಂತೆ ಅವುಗಳ ಮೇಲಂಚಿನಲ್ಲಿ ಮುಂಚಾಚುವ ಲೋವೆಕಲ್ಲುಗಳನ್ನೋ ಭೂತಾಳೆ ಪಟ್ಟೆಗಳನ್ನೋ ಜೋಡಿಸುತ್ತಾರೆ. ಮೇಲೆ ಹರವಿದ ಮಣ್ಣು ಮಳೆಯಿಂದ ಕೊಚ್ಚಿಹೋಗದಂತಿರಲೂ ಬಿದ್ದ ನೀರು ಕಟ್ಟಡಕ್ಕೆ ಅಪಾಯವಾಗದಂತೆ ಒಂದೆಡೆಯಿಂದ ಹರಿದು ಹೋಗಲೂ ಸುತ್ತಂಚಿನಲ್ಲಿ ಮಣ್ಣು ದಿಂಡನ್ನೂ ಅಲ್ಲಲ್ಲಿ ಮಣ್ಣಿನ ದೋಣಿಗಳನ್ನೂ ಒದಗಿಸಿರುತ್ತಾರೆ. ಈ ಕಟ್ಟಡಗಳಿಗೆ ಕಿಟಕಿಗಳಿರುವುದಿಲ್ಲವಾದರೂ ಇದಕ್ಕೆ ಅಪವಾದಗಳೂ ಇಲ್ಲದಿಲ್ಲ. ಮನೆಗಳಿಗೆ ಮಣ್ಣುಗಾರೆ, ಸುಣ್ಣ, ಕಾರಣೆಯ ಪರಿಷ್ಕರಣವಿರುತ್ತದೆ. ಕೋಲಾರ, ಬೆಂಗಳೂರು ಮತ್ತು ಸುತ್ತಲಿನ ಪ್ರದೇಶಗಳಲ್ಲಿ ಗ್ರಾನೈಟ್ ಚಪ್ಪಡಿಗಳು ಬಹುವಾಗಿ ದೊರಕುವುದರಿಂದ ಇಲ್ಲಿಯ ಮಾಳಿಗೆ ಮನೆಗಳಲ್ಲಿ ಮಣ್ಣಿನ ಬದಲು ಈ ಕಲ್ಲಿನ ಉಪಯೋಗವೇ ಹೆಚ್ಚು. ಮೊದಲು ಕಲ್ಲಿನ ಕಂಬಗಳನ್ನು ನೆಟ್ಟು, ಅದೇ ಕಲ್ಲಿನ ತೊಲೆಗಳನ್ನು ಜೋಡಿಸಿ, ಮೇಲೆ ಚಪ್ಪಡಿಗಳನ್ನು ಹಾಸುವ ಪದ್ಧತಿ ಇಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಮಳೆ ಕಡಿಮೆ ಬೀಳುವ ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ಮಾಳಿಗೆ ಮನೆಗಳಲ್ಲದೆ ವೃತ್ತಾಕಾರದ ತಳವಿನ್ಯಾಸವಿರುವ ಮನೆಗಳೂ ಇವೆ. ಇವು ವಿಶೇಷವಾಗಿ ಒಂದೇ ಕೋಣೆಯ ಮನೆಗಳು. ಗೋಡೆ ಮಣ್ಣಿನದು. ಮೇಲೆ ಬಿದಿರಿನ ಅಥವಾ ಕಡ್ಡಿಗಳ ಹಂದರದ ಮೇಲೆ ಹುಲ್ಲು ಮುಚ್ಚಿದ ಶಂಕುತಲೆಯಾಕಾರದ ಚಾವಣಿ ಇರುತ್ತದೆ.

ದಕ್ಷಿಣ ಕರ್ನಾಟಕದ ದಕ್ಷಿಣ ಜಿಲ್ಲೆಗಳಲ್ಲಿನ ಜನಪದ ನಿವಾಸಗಳು ಸಾಮಾನ್ಯವಾಗಿ ಆಯಾಕಾರದ ಮಣ್ಣು ಗೋಡೆಯ ಮನೆಗಳು. ಇವುಗಳಲ್ಲೂ ಮುಂದೆ ಬಾಗಿಲಿನ ಇಕ್ಕೆಲಗಳಲ್ಲಿ ಜಗಲಿ, ಒಳಗೆ ಹಜಾರ ಮತ್ತು ಅನೇಕ ಕೋಣೆಗಳಿರುತ್ತವೆ. ದೊಡ್ಡ ಮನೆಗಳಲ್ಲಿ ಪುಟದ ಗೋಡೆ (ಅಂದರೆ ಕಲಸಿದ ಮಣ್ಣಿನ ದಪ್ಪ ಉಂಡೆಗಳನ್ನು ಒಂದರ ಮೇಲೊಂದು ಪೇರಿಸಿ ಎತ್ತಿದ ಗೋಡೆ) ಸಾಮಾನ್ಯ. ಬಹು ಎತ್ತರವಾದ ಗೋಡೆಗಳ ಆವಶ್ಯಕತೆ ಇದ್ದಾಗ ಅಥವಾ ಚಿಕ್ಕ ಮನೆಗಳನ್ನು ಕಟ್ಟುವಾಗ ತಡಿಕೆ ಗೋಡೆಯನ್ನು ಅಂದರೆ ಬಿದಿರಿನ ಕಂಬಗಳಿಗೆ ಬಿಗಿದ ಬಿದಿರುದಬ್ಬೆಗಳ ಹಂದರದ ಮೇಲೆ ಕಲಸಿದ ಮಣ್ಣನ್ನು ಮೆತ್ತಿ ಮಾಡಿದ ತೆಳುಗೋಡೆಯನ್ನು, ಅಳವಡಿಸುವುದುಂಟು. ಮನೆಗಳ ಚಾವಣಿ ಸಾಮಾನ್ಯವಾಗಿ ಇಪ್ಪಾರು. ಪಕ್ಕದ ಗೋಡೆಗಳ ಎತ್ತರದ ಭಾಗದಲ್ಲಿ ಒಂದು ಬೆಮ್ಮರವನ್ನು ಇಟ್ಟು, ಹಾರು ಎರಡೂ ಕಡೆ ಇಳಿಜಾರಾಗಿರುವಂತೆ ಮಾಡಲಾಗಿರುತ್ತದೆ. ಈ ಹಾರುಗಳು ಬೊಂಬು, ಗಳುಗಳಿಂದ ಆದ ಹಂದರಗಳು. ಮೇಲೆ ತೆಂಗಿನ ಗರಿಯಿಂದ ಹೆಣೆದ ಮಟ್ಟಾಳೆಯನ್ನು ಅಥವಾ ಮಣ್ಣಿನ ಅರೆಕೊಳವೆ ಆಕೃತಿಯ ನಾಡ ಹೆಂಚುಗಳನ್ನು ಮುಚ್ಚಲು ಉಪಯೋಗಿಸಲಾಗುತ್ತದೆ. ಕೆಲವೆಡೆ ಸೋಗು ಮತ್ತು ಹುಲ್ಲನ್ನೂ ಬಳಸುವುದುಂಟು. ಮಣ್ಣಿನ ತಡಿಕೆ ಅಥವಾ ಪುಟದ ಗೋಡೆಗಳನ್ನು ಆಯಾಕಾರದಲ್ಲಿ ಕಟ್ಟಿ, ಒಂದು ಗೋಡೆಯನ್ನು ಎತ್ತರಕ್ಕೆ ಮಾಡಿ, ಅದಕ್ಕೆ ಸಮಕೋನದಲ್ಲಿರುವ ಗೋಡೆಗಳನ್ನು ಇಳಿಜಾರಾಗಿರುವಂತೆ ರೂಪಿಸಿ ಇದರ ಮೇಲಿನ ಚಾವಣಿ ಒಂದೇ ಕಡೆಗೆ ಇಳಿಜಾರಾಗಿರುವಂತೆ ಮಾಡಿದ ಒಪ್ಪಾರು ಕಟ್ಟಡಗಳೂ ಅಲ್ಲಲ್ಲಿ ಕಂಡುಬರುತ್ತವೆ. ಆದರೆ ಇಂಥಾ ಕಟ್ಟಡಗಳನ್ನು ದನ, ಎಮ್ಮೆಗಳನ್ನು ಕಟ್ಟಲು ಕೊಟ್ಟಿಗೆಯಾಗಿ ಉಪಯೋಗಿಸುವುದೇ ಹೆಚ್ಚು. ಒಂದು ವಿಶಿಷ್ಟ ರೀತಿಯ ವಿಶೇಷವಾಗಿ ಸ್ವಲ್ಪ ಸ್ಥಿತಿವಂತರಿಗೇ ಸೇರಿದ, ತೊಟ್ಟಿಮನೆಗಳು ಕರ್ನಾಟಕದ

ಹಲವೆಡೆಗಳಲ್ಲಿವೆ. ಇವುಗಳ ರಚನಾ ವಿಧಾನ ಇತರ ಮನೆಗಳಿಗಿಂತ ಸ್ವಲ್ಪ ಭಿನ್ನವಾಗಿರುತ್ತದೆ. ಇವುಗಳಲ್ಲಿ ಆಯಾ ಅಥವಾ ಚೌಕ ತಳವಿನ್ಯಾಸವಿದ್ದು ಮಧ್ಯೆ ಒಂದು ತೆರೆದ (ಮುಚ್ಚು ಇಲ್ಲದ) ತೊಟ್ಟಿ ಇರುತ್ತದೆ. ತೊಟ್ಟಿಯ ಸುತ್ತಲೂ ಪಡಸಾಲೆ, ಅದರ ಸುತ್ತಲೂ ಕೋಣೆಗಳನ್ನು ವ್ಯವಸ್ಥೆ ಮಾಡಲಾಗಿರುತ್ತದೆ. ಮುಂದೆ ಮುಂಬಾಗಿಲಿನ ಇಕ್ಕೆಲಗಳಲ್ಲಿ ಜಗಲಿಗಳಿರುತ್ತವೆ. ಈ ತೊಟ್ಟಿಮನೆಗಳು ವಿಶಾಲವಾಗಿದ್ದು ಒಂದು, ಎರಡು ಅಥವಾ ಮೂರು ಅಂಕಣಗಳ ತೊಟ್ಟಿ ಮನೆಗಳು ಇತ್ಯಾದಿಯಾಗಿ ವಿವಿಧ ಪರಿಮಾಣಗಳಲ್ಲಿರುತ್ತವೆ.

ಕರ್ನಾಟಕದ ಜನಪದ ವಾಸ್ತುರಚನೆಗಳಲ್ಲಿ ವಾಸಗೃಹಗಳ ಜೊತೆಗೆ ದೇವಾಲಯಗಳೂ ಕಂಡುಬರುತ್ತವೆ. ಇವು ಶ್ರೀಮಂತ ಸಮಾಜಗಳಿಂದ ಪ್ರೋತ್ಸಾಹಿತವಾದ ರಚನೆಗಳಂತೆ ವಿಶಿಷ್ಟ ರೀತಿಯವುಗಳಲ್ಲ. ಸಾಮಾನ್ಯವಾಗಿ ಬಹು ಚಿಕ್ಕ ಏಕ ಕೋಣೆಯ ಕಟ್ಟಡಗಳು. ರಚನಾತಂತ್ರ ವಾಸಗೃಹಗಳಂತೆಯೇ. ಕೆಲವು ಗ್ರಾಮಗಳಲ್ಲಿ ಅತಿ ಕುಳ್ಳಾದ, ಕೇವಲ 3-4 ಅಡಿ ಎತ್ತರದ, ಮೂರು ಕಡೆ ಮಾತ್ರ ಗೋಡೆಗಳಿದ್ದು ಮಟ್ಟಿ ಚಾವಣಿಯಿಂದ ಮುಚ್ಚಿದ ಆಯಾಕಾರದ ಕಿರು ದೇವಾಲಯಗಳು ಕಂಡಬರುತ್ತವೆ.

ಊರಿನ ಜನ ಕೆಲವೊಂದು ಸಾಮಾಜಿಕ ವ್ಯವಹಾರಗಳಿಗಾಗಿ ಸಭೆ ಸೇರಲು, ಕೆಲವು ಬಾರಿ ಹೊರಗಿನಿಂದ ಬಂದವರಿಗೆ ತಂಗುದಾಣವಾಗಿರಲು, ಮತ್ತಿತರ ಸಾರ್ವಜನಿಕ ಕಾರ್ಯಗಳಿಗೆ ಉಪಯೋಗವಾಗಲು ಹಳ್ಳಿಗೊಂದು ಚಾವಡಿ ಇರುತ್ತದೆ. ಸಾಮಾನ್ಯವಾಗಿ ಇವುಗಳಿಗೆ ಮೂರು ಕಡೆ ಗೋಡೆ ಇದ್ದು ಮುಂಭಾಗ ತೆರೆದಂತಿರುತ್ತದೆ. ಗ್ರಾಮದ ಆವಶ್ಯಕತೆ, ಆರ್ಥಿಕ ಸ್ಥಿತಿ ಇತ್ಯಾದಿಗಳಿಗೆ ಅನುಗುಣವಾಗಿ ಇವು ಹಲವು ಅಂಕಣಗಳಷ್ಟು ಅಗಲವಾಗಿರುತ್ತವೆ.

ಗ್ರಾಮಗಳಲ್ಲಿ ಕಂಡುಬರುವ ಇನ್ನೊಂದು ರೀತಿಯ ಕಟ್ಟಡ ಗರಡಿ (ನೋಡಿ). ಗ್ರಾಮೀಣರ ಕಸರತ್ತಿಗಾಗಿ ನಿರ್ಮಿತವಾಗಿರುವ ಈ ಗರಡಿಮನೆಗಳಲ್ಲಿ ಒಂದು ಹಜಾರ ಮಾತ್ರ ಇರುತ್ತದೆ. ಆಯಾ ಪ್ರದೇಶದ ರೂಢಿಯಂತೆ ಮಾಳಿಗೆ ಚಾವಣಿಯೋ, ಒಪ್ಪಾರು, ಇಪ್ಪಾರು ಚಾವಣಿಯೋ ಇರುತ್ತದೆ. ಕಿಟಕಿಗಳು ಇಲ್ಲದಿರುವುದು, ಅತಿ ಕುಳ್ಳಾದ ಬಾಗಿಲು ಇವುಗಳ ವೈಶಿಷ್ಟ್ಯ. *

**ಜನಪದ ವೈದ್ಯ :** ಯಾವುದನ್ನು ಜನಸಾಮಾನ್ಯರು ಸಾಮಾನ್ಯವಾಗಿ ಹಳ್ಳಿವೈದ್ಯ ಅಥವಾ ನಾಟಿವೈದ್ಯ ಎಂದು ಕರೆಯುವರೋ ಅದನ್ನೇ ಶಾಸ್ತ್ರೀಯವಾಗಿ ಜನಪದ ವೈದ್ಯ ಎಂದು ಕರೆಯಲಾಗುತ್ತದೆ. ದಿನನಿತ್ಯದ ಜೀವನದಲ್ಲಿ ಜನಪದರು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತಿತ್ತು. ಮನೆಯಲ್ಲಿ ಎತ್ತಿಗೆ ಕಾಲು ಮುರಿದರೆ, ಯಾರಿಗಾದರೂ ಹಾವು ಕಚ್ಚಿದರೆ, ಯಾರಾದರೂ ಕುಡುಗೋಲಿನಿಂದ ಕೈ ಕುಯ್ದುಕೊಂಡರೆ, ಯಾರಿಗಾದರೂ ಕತ್ತು ಉಳುಕಿದರೆ, ರೋಗರುಜಿನಗಳು ಬಂದರೆ ಆಧುನಿಕ ಆಸ್ಪತ್ರೆ ಸೌಕರ್ಯಗಳು ದೊರೆಯದಿದ್ದ ಸಂದರ್ಭಗಳಲ್ಲಿ ಅವಕ್ಕೆ ಪರಿಹಾರಗಳನ್ನೂ ಜನಪದರೇ ಕಂಡು ಕೊಳ್ಳಬೇಕಾಗಿತ್ತು. ಅವರು ಪ್ರಕೃತಿಯಲ್ಲಿ ದೊರೆಯುವ ಬಗೆಬಗೆಯ ನಾರು ಬೇರುಗಳು, ಎಲೆಕಾಯಿಹಣ್ಣುಗಳು, ಪ್ರಾಣಿಜನ್ಯವಾದ ವಸ್ತುಗಳು ದಿನಬಳಕೆಯ ಸಾಮಾನ್ಯ ವಸ್ತುಗಳು - ಎಲ್ಲವನ್ನೂ ಬುದ್ಧಿವಂತಿಕೆಯಿಂದ ಬಳಸಿಕೊಂಡು ರೋಗಗಳನ್ನು ಪರಿಹರಿಸಿಕೊಳ್ಳಲು ಯತ್ನಿಸುತ್ತಿದ್ದರು. ಒಂದೊಂದು ಕಾಯಿಲೆಯನ್ನು ಗುಣಪಡಿಸಲು ಒಂದೊಂದು ಔಷಧಿ ಬಳಸಬೇಕೆಂಬುದನ್ನು ಅನುಭವದಿಂದ ಅರಿತರು. ಇದರಿಂದಾಗಿ ಹೊಸ ವಿದ್ಯೆಯೊಂದು ತಿಳಿದಂತಾಯಿತು. ಹಸ್ತಗುಣ ಚೆನ್ನಾಗಿದ್ದ ಕೆಲವರು ಈ ಕ್ರಮಗಳನ್ನು ರೂಢಿಸಿಕೊಂಡರು. ತಲೆಮಾರಿನಿಂದ ತಲೆಮಾರಿಗೆ, ತಂದೆಯಿಂದ ಮಗನಿಗೆ, ಗುರುವಿನಿಂದ ಶಿಷ್ಯನಿಗೆ ಈ ವಿದ್ಯೆ ಪ್ರಚುರವಾಯಿತು. ಈ ವಿದ್ಯೆಯಲ್ಲಿ ಪಾರಂಗತರಾದವರು ಆಯಾ ಪರಿಸರದಲ್ಲಿ ಹೆಚ್ಚು ಗೌರವ ಹಾಗೂ ಪ್ರಯೋಜನ ಪಡೆದರು. ಜನಪದವೈದ್ಯ ಹುಟ್ಟಿ ಬೆಳೆದು ಈ ವರೆಗೆ ಉಳಿದುಬಂದಿರುವ ಕ್ರಮ ಹೀಗೆ ಎಂದು ಹೇಳಬಹುದು. ಅನಂತರ ಈ ವೈದ್ಯ ಎಲ್ಲ ವೈದ್ಯದ ಮುಖ್ಯವಾಗಿ ಆಯುರ್ವೇದದ ಮೂಲವಾಯಿತೆನ್ನಬಹುದು.

ಮನೋವೈದ್ಯ, ಪಶುವೈದ್ಯ, ಮಕ್ಕಳವೈದ್ಯ, ಬಸುರಿ-ಬಾಣಂತಿ, ವೈದ್ಯ, ಸಾಮಾನ್ಯವೈದ್ಯ ಎಂಬ ವಿಭಾಗಗಳಲ್ಲಿ ಜನಪದ ವೈದ್ಯದ ಸ್ವರೂಪವನ್ನು ವಿವರಿಸಬಹುದು. ಇವು ಮಾತ್ರವಲ್ಲದೆ ಚಿಕ್ಕ ಪುಟ್ಟ ಶಸ್ತ್ರಚಿಕಿತ್ಸೆಗಳನ್ನೂ ಜನಪದ ವೈದ್ಯದಲ್ಲಿ ಗುರುತಿಸಲು ಸಾಧ್ಯ. ಮನೋವೈದ್ಯ ಜನಪದ ವೈದ್ಯದಲ್ಲಿ ಪ್ರಧಾನವಾದ ಸ್ಥಾನ ಪಡೆದಿದೆ. ಮನಸ್ಸಿನ ಮೇಲೆ ಪ್ರೇರಣೆ ಉಂಟುಮಾಡುವ ಪರಿಣಾಮ ಎಷ್ಟೆಂಬುದು ಮನೋವಿಜ್ಞಾನವನ್ನು ಓದಿದ ಎಲ್ಲರಿಗೂ ತಿಳಿದಿರುವ ವಿಷಯ. ಜನಪದ ವೈದ್ಯದ ವಿವರಗಳನ್ನು ಪರಿಶೀಲಿಸಿದಾಗ ಅಲ್ಲಿನ ರೋಗಗಳಿಗೆ ಪ್ರೇರಣೆಯೇ ಮೂಲವಾಗಿದ್ದು, ಮನಸ್ಸಿನ ಪರಿಣಾಮ ದೇಹದ ಮೇಲೆ ಆಗಿರುವುದರಿಂದ ಉಂಟಾಗಿರುವ ಮನೋದೈಹಿಕ ರೋಗಗಳು ಸಾಕಷ್ಟಿವೆ ಎಂಬುದು ಸ್ಪಷ್ಟವಾಗುತ್ತದೆ. ಈ ರೀತಿಯ ರೋಗಗಳ ಲಕ್ಷಣಗಳ ವಿವರ, ಚಿಕಿತ್ಸಾಕ್ರಮ, ಇವುಗಳ ಸಂಗ್ರಹ ಹಾಗೂ ಅಧ್ಯಯನ ಜನಪದ ವೈದ್ಯದಲ್ಲಿ ಪ್ರಾಮುಖ ಶಾಖೆಯಾಗುತ್ತದೆ. ಮಂತ್ರ, ಮಾಟ, ದೃಷ್ಟಿತೆಗೆಯುವುದು, ದೆವ್ವ ಬಿಡಿಸುವುದು, ದೇವರ ಪೂಜೆ ಮಾಡಿ ತೀರ್ಥ ಕೊಡುವುದು ಮೊದಲಾದ ಸಂದರ್ಭಗಳಲ್ಲೆಲ್ಲ ಜನಪದ ವೈದ್ಯರು ರೋಗಿಗಳಿಗೆ ಕೊಡುವುದು ಮನೋಚಿಕಿತ್ಸೆ ಎಂದೇ ಹೇಳಬಹುದು. ಉದಾಹರಣೆಗೆ ಕೆಟ್ಟ ಕಣ್ಣಿನಿಂದ ಉಂಟಾದ ದೃಷ್ಟಿದೋಷವನ್ನು ಪರಿಹರಿಸಲು ಜನಪದರು ಮಾಡುವ ಚಿಕಿತ್ಸೆಗಳನ್ನು ಗಮನಿಸಬಹುದು. ಕೆಲವು ಜನರಲ್ಲಿ ಕೆಟ್ಟ ಕಣ್ಣು ಉಂಟೆಂದೂ ಅಂಥ ಜನ ಮಕ್ಕಳನ್ನು ದೃಷ್ಟಿಸಿ ನೋಡಿದಾಗ ಅವಕ್ಕೆ ಹೊಟ್ಟೆನೋವು ಬರುವುದೆಂದೂ ನಂಬುತ್ತಾರೆ. ಈ ನಂಬಿಕೆಯೇ ಒಂದು 'ಪ್ರೇರಣೆ'ಯಾಗಿ ಪರಿಣಮಿಸಿ ದೇಹದ ಮೇಲೆ ಪರಿಣಾಮ ಬೀರುತ್ತದೆ. ಇಂಥ ಸಂದರ್ಭದಲ್ಲಿ ಕೆಟ್ಟಕಣ್ಣಿನ ದೃಷ್ಟಿದೋಷವನ್ನು ಹೋಗಲಾಡಿಸಲು ನೆಟ್ಟಿಗೆ ಮುರಿಯುವುದು, ಕೆಂಡದ ರಾಜು ಹಾಕುವುದು, ಉರಿಯುತ್ತಿರುವ ಹಂಚಿಕಡ್ಡಿಗಳನ್ನು ನೀವಾಳಿಸುವುದು, ನಾಲ್ಕು ದಾರಿಗಳು ಕೂಡುವೆಡೆ ದಾಟು ಹಾಕುವುದು - ಈ ಬಗೆಯ ಕೆಲಸಗಳನ್ನು ಮಾಡುತ್ತಾರೆ. ಈ ಕ್ರಮಗಳೂ ಪ್ರೇರಣೆಗಳೇ. ಈ ಕ್ರಮಗಳಿಂದ ತಮಗೆ ಹೊಟ್ಟೆನೋವು ಹೋಗುವುದೆಂಬ ನಂಬಿಕೆ ಜನರಿಗಿರುವುದರಿಂದ, ಮನಸ್ಸಿನ ಪ್ರೇರಣೆಯ ಕಾರಣದಿಂದಲೇ ಹೊಟ್ಟೆನೋವು ವಾಸಿಯಾಗುವುದುಂಟು. ಮಾಟಕ್ಕೆ ಪ್ರತಿಮಾಟ ಮಾಡುವುದು. ದೆವ್ವ ಹಿಡಿದಿರುವವರಿಗೆ ದೆವ್ವ ಬಿಡಿಸುವುದು ಇವುಗಳಲ್ಲಿಯೂ ನಾವು ಕಾಣುವುದು ಪ್ರೇರಣೆ ಮತ್ತು ಪ್ರತಿಪ್ರೇರಣೆಗಳ ಪರಿಣಾಮವನ್ನು.

ಪಶುಗಳಿಗೆ ಸಾಮಾನ್ಯವಾಗಿ ಲರಡು (ಲಲ್ಲು) ಸೆಲೆ, ಕುಂದು, ಹರುಪತಿ, ದೊಡ್ಡರೋಗ, ಚಪ್ಪೆ (ಕೆಪ್ಪೆ) ರೋಗ, ಅಳ್ಳೇರೋಗ, ಕಾಲುಜ್ವರ, ಬಾಯಿಜ್ವರ, ಪಿನಾಸಿ ಮೊದಲಾದ ರೋಗಗಳು ಬರುತ್ತವೆ. ಇವು ಮಾತ್ರವಲ್ಲದೆ ಕಾಲು, ಕೋಡು ಮುರಿದು ಹೋಗುವುದುಂಟು. ಕೆಲವೊಮ್ಮೆ ಹೆಗಲು ಬಾತುಕೊಳ್ಳುತ್ತದೆ. ಮೈಗೆ ಉಣ್ಣೆ ಹತ್ತುತ್ತದೆ. ಕಣ್ಣು ಬಿಳುಪಾಗುತ್ತದೆ. ಶರೀರದಲ್ಲಿ ಗಾಯಗಳಾಗಿ ಹುಳು ಬೀಳುತ್ತದೆ. ಕರುಗಳಲ್ಲಿ ಜಂತುಹುಳು ಆಗುತ್ತದೆ. ದನಗಳು ಮುಂಗಾರು ಜೋಳ ತಿಂದು ಸೊಕ್ಕುತ್ತವೆ. ಇದ್ದಕ್ಕಿದ್ದಂತೆ ಹಸುಗಳಲ್ಲಿ ಹಾಲು ಕಡಿಮೆಯಾಗುತ್ತದೆ. ಹಸು ಎಮ್ಮೆಗಳು ಕರು ಹಾಕಿದಾಗ ಸತ್ತೆ ಬೀಳುವುದು ಕಷ್ಟವಾಗುತ್ತದೆ - ಹೀಗೆ ಬಗೆಬಗೆಯಾದ ತೊಂದರೆಗಳುಂಟಾಗುತ್ತವೆ. ಪಶುವೈದ್ಯದಲ್ಲಿ ಪರಿಣತನಾದ ವ್ಯಕ್ತಿ, ರೋಗಗಳ ಲಕ್ಷಣಗಳು ಚೆನ್ನಾಗಿ ತಿಳಿದಿರುವುದರಿಂದ ರೋಗ ವಾಸಿಮಾಡುತ್ತಾನೆ. ಉದಾಹರಣೆಗೆ ಕಾಲುಜ್ವರ; ಇದರಲ್ಲಿ ದನಗಳ ಗೊರಸಿನ ಸಂದು ಊದಿಕೊಂಡು ಕೀವು ಬರುತ್ತದೆ. ನೀರಿನಲ್ಲಿ ಓಡಾಡಿದಾಗ ಗಾಯ ಹೆಚ್ಚಾಗಿ ಕೀವು ಸುರಿಯುವುದು ಮಾತ್ರವಲ್ಲದೆ ಹುಳು ಬೀಳಲು ಆರಂಭವಾಗುತ್ತದೆ. ಕಾಲನ್ನು ಮುಟ್ಟಿದರೆ ಹೆಚ್ಚಾಗಿ ಬಿಸಿಯಾಗಿರುತ್ತದೆ. ಈ ಲಕ್ಷಣಗಳು ಕಂಡುಬಂದಾಗ ಅದನ್ನು ಕಾಲುಜ್ವರ ಎಂದು ಗುರುತಿಸುತ್ತಾರೆ. ಆಗ ಮೀನು ತಂದು ಅದನ್ನು ನೀರಿನೊಡನೆ ಒಂದು ಕಲ್ಲಿನ ಮೇಲೆ ತೇದು ಆ ನೀರನ್ನು ದನಗಳ ಕಾಲ ಗೊರಸಿನ ಮೇಲೆ ಪ್ರತಿನಿತ್ಯ ಹಾಕುತ್ತ ಬಂದರೆ ಕಾಲುಜ್ವರ ಕಡಿಮೆಯಾಗುತ್ತ ಬಂದು ಕ್ರಮೇಣ ಹೊರಟು ಹೋಗುತ್ತದೆ. ದನಕರುಗಳಿಗೆ ಮಾತ್ರವಲ್ಲದೆ, ಎಮ್ಮೆ, ಕೋಣ, ಆಡು, ಹಂದಿ, ಕುರಿ, ಕೋಳಿ ಮೊದಲಾದ ಪ್ರಾಣಿಗಳಿಗೂ ಬರುವ ಬಗೆಬಗೆಯ ಕಾಯಿಲೆಗಳಿಗೆ ಜನಪದ ವೈದ್ಯದಲ್ಲಿ ಪರಿಹಾರಗಳನ್ನು ಕಾಣಬಹುದು.

ಮಕ್ಕಳಿಗೆ ಕೆಲವು ರೋಗಗಳು ಹುಟ್ಟಿನಿಂದಲೇ ಬಂದರೆ ಮತ್ತೆ ಕೆಲವು ಹುಟ್ಟಿದ ಅನಂತರ ಬರುತ್ತವೆ. ರೋಗಗಳು ಬಂದಮೇಲೆ ಅವನ್ನು ಹೋಗಲಾಡಿಸುವುದಕ್ಕೆ ಬದಲಾಗಿ ರೋಗಗಳು ಬರದಂತೆಯೇ ಮುಂಜಾಗರೂಕತೆ ವಹಿಸಬೇಕಾಗುತ್ತದೆ. ಈ ಕಾರಣದಿಂದಾಗಿ ಬಸುರಿಯರಿಗೆ ಕೆಲವು ವಿಶೇಷವಾದ ಔಷಧಿಗಳನ್ನು ಕೊಡುವುದರ ಮೂಲಕ ಮಗು ಆರೋಗ್ಯಕರವಾಗಿರುವಂತೆ ಮಾಡುತ್ತಾರೆ. ತಾಯಿ ತಿನ್ನುವ ಆಹಾರದ ಕಾರಣದಿಂದಾಗಿಯೂ ಮಗುವಿಗೆ ರೋಗ ಬರುವುದುಂಟು. ಈ ಕಾರಣದಿಂದ ಮಗು ಆರೋಗ್ಯವಾಗಿರಬೇಕಾದರೆ ಬಾಣಂತಿ ಹೆಚ್ಚು ಜಾಗರೂಕತೆಯನ್ನು ವಹಿಸಬೇಕಾಗುತ್ತದೆ. ಮಕ್ಕಳಿಗೆ ಬರುವ ಇತರ ರೋಗಗಳಲ್ಲಿ ಹಕ್ಕಿಕಡುಕನ ರೋಗ, ವಾಯು, ಹೊಟ್ಟೆನೋವು, ಹೊಟ್ಟೆ ಉಬ್ಬರ, ಲಾಳಸಂಕಾಲೆ, ಬಾಲಗ್ರಹ, ಇಸಬು, ಕೆಮ್ಮು ಮೊದಲಾದ ಕಾಯಿಲೆಗಳಿವೆ. ಬಸುರಿ - ಬಾಣಂತಿಯರಿಗೆ ಅವರಿಗೇ ಸೀಮಿತವಾದ, ವಿಶಿಷ್ಟವಾದ ಕಾಯಿಲೆಗಳು ಬರುತ್ತವೆ. ಈ ಕಾಯಿಲೆಗಳ ಸ್ವರೂಪವನ್ನು ಮನೆಯಲ್ಲಿನ ಹಿರಿಯ ಹೆಂಗಸರು ತಿಳಿದಿರುತ್ತಾರೆ. ಅವರೇ ಸೂಲಗಿತ್ತಿಯ ಕೆಲಸವನ್ನೂ ಮಾಡುವುದುಂಟು. ಇಂದಿಗೂ ಅನೇಕ ಸಂಸಾರಗಳಲ್ಲಿ ಬಸುರಿ -ಬಾಣಂತಿಯರಿಗೆ ಆಸ್ಪತ್ರೆ ಔಷಧಿ ಕೊಡುವುದಿಲ್ಲ. ಮನೆವೈದ್ಯವನ್ನೇ ಮಾಡುತ್ತಾರೆ. ನಾರು ಬೇರುಗಳ ಕಷಾಯ, ಲೇಹ್ಯ ಅವಲೇಪ, ಊಟೋಪಚಾರಗಳ ಎಚ್ಚರಿಕೆ, ಶುಶ್ರೂಷೆ - ಇತ್ಯಾದಿಗಳಿಂದ ಆಗಬಹುದಾದ ಅನೇಕ ತೊಂದರೆಗಳನ್ನು ಸುಲಭವಾಗಿ ನಿವಾರಿಸುವ ವೈದ್ಯ ಮನೆಯ ಹಿರಿಯರಿಗೆ ಗೊತ್ತಿರುತ್ತದೆ. ಸಾಮಾನ್ಯವಾಗಿ ಎಲ್ಲರಿಗೂ ಬರುವ ನೆಗಡಿ, ಕೆಮ್ಮು, ವಾಂತಿ, ಭೇದಿ ಮೊದಲಾದ ದಿನನಿತ್ಯದ ಕಾಯಿಲೆಗಳಿಗೆ ಅನೇಕ ಚಿಕಿತ್ಸೆಗಳಿವೆ. ಹೀಗೆ ಬಳಸುವ ನಾಟಿ ಔಷಧಿಗಳು ಸರಳ ಸ್ವರೂಪವಾಗಿರುತ್ತವೆ; ಸಂಕೀರ್ಣವಾದ ಔಷಧಿಗಳೂ ಕೆಲವು ಸಲ ಬಳಕೆಯಾಗುತ್ತವೆ. ಸರಳವಾದ ಔಷಧಿಗಳು ಹೆಚ್ಚು ಖರ್ಚಿಲ್ಲದೆ ದೊರೆಯುತ್ತವೆ. ಉದಾ: ಉಗುರು ಸುತ್ತು ಆದಾಗ ಒಂದು ಕೋಳಿ ಮೊಟ್ಟೆಯನ್ನು ತೂತು ಮಾಡಿ ಅದನ್ನು ಬೆರಳಿನೊಳಗೆ ತೂರಿಸಿ ಇಟ್ಟು ಬಟ್ಟೆ ಕಟ್ಟಿದರೆ ಕೋಳಿಮೊಟ್ಟೆ ಉಗುರು ಸುತ್ತಿನಲ್ಲಿ ಇರುವ ಕೀವನ್ನು ಹೀರುತ್ತದೆ. ಕೆಲವು ದಿನಗಳಲ್ಲಿ ಉಗುರು ಸುತ್ತು ವಾಸಿಯಾಗುತ್ತದೆ. ಮೊಟ್ಟೆಯ ಬದಲಿಗೆ ನಿಂಬೆಹಣ್ಣನ್ನು ಬಳಸುವುದೂ ಉಂಟು. ಎಳೆಗೂಸಿಗೆ ಕೊಡುವ ಬಜೆ, ಅತಿಮಧುರ ಮೊದಲಾದ ಸುತ್ತುಕಾರ ಇನ್ನೊಂದು ಒಳ್ಳೆಯ ಔಷಧ'. ಇಂಥ' ಸರಳವಾದ ಔಷಧಿಗಳು ಜನಪದ ವೈದ್ಯರಲ್ಲಿ ಹಲವಾರು ದೊರೆಯುತ್ತವೆ. ಸಂಕೀರ್ಣ ಔಷಧಿಗಳಿಗೆ ಕಷಾಯಗಳು ಉತ್ತಮ. ಉದಾಹರಣೆ, ಬಗೆಬಗೆಯ ಸೊಪ್ಪುಗಳನ್ನು ನಾರುಬೇರುಗಳನ್ನು ಹಾಕಿ ಕಷಾಯಗಳನ್ನು ತಯಾರಿಸುತ್ತಾರೆ. ಇದರಲ್ಲಿ ಬೇವಿನ ಚಕ್ಕೆ ಬಹು ಮುಖ್ಯವಾದುದು. ಈ ಕಷಾಯಗಳು ಹಲವಾರು ಕಾಯಿಲೆಗಳಿಗೆ ಪರಿಹಾರ ನೀಡುತ್ತವೆ.

ಜನಪದ ವೈದ್ಯದಲ್ಲಿ ಬಳಕೆಯಾಗುವ ವಸ್ತುಗಳು ಸುಲಭವಾಗಿ ದೊರಕುವಂಥವು. ಅವುಗಳಲ್ಲಿ ಬಹುಪಾಲಿನವು ಆ ಸುತ್ತುಮುತ್ತಲೇ ಸಿಗುವಂಥವೂ ಆಗಿವೆ. ಜೇನುತುಪ್ಪ, ನಿಂಬೆಹಣ್ಣು, ಸೊಪ್ಪುಗಳು, ತುಳಸಿ, ತಾಮ್ರದ, ತಗಡು, ಸಗಣಿ ವೀಳೆಯದೆಲೆ, ಬಾಳೆಯಕರೆ, ಶುಂಠಿ, ಹೊಗೆಸೊಪ್ಪು, ಹಾಲು, ಕೋಳಿಮೊಟ್ಟೆ, ಹರಳೆಣ್ಣೆ, ಉಪ್ಪು, ಮೆಣಸಿನಕಾಯಿ, ಲೋಳಿಸರ, ಅರಿಸಿನದ ಕೊನೆ, ಬಜೆಕೊನೆ, ಮಜ್ಜಿಗೆ, ದೊಡ್ಡಪತ್ರೆ, ತುಂಬೆಸೊಪ್ಪು, ಎಕ್ಕದೆಲೆ, ಜೇಡನ ಬಲೆ, ನಂದಬಟ್ಟಲ ಹೂ ಮೊದಲಾದ ಹಲವಾರು ಪದಾರ್ಥಗಳು ಜನಪದ ವೈದ್ಯದಲ್ಲಿ ಬಳಕೆಯಾಗುತ್ತವೆ. ಕೆಲವಾರು ಪ್ರಾಣಿಗಳಿಂದ ತೆಗೆದ ಕೊಬ್ಬುಗಳು, ತುಪ್ಪಗಳು (ಮೊಸಳೆ ಕೊಬ್ಬು, ಕೇರೆಹಾವಿನ ತುಪ್ಪ, ಉಡದ ತುಪ್ಪ ಇತ್ಯಾದಿ) ಸಹ ಜನಪದ ವೈದ್ಯದಲ್ಲಿ ಸೇರುತ್ತವೆ.

ದೇಶದ ವಿವಿಧ ಭಾಗಗಳಲ್ಲಿ ಸ್ಥಳೀಯವಾಗಿಯೇ ದೊರಕುವ ಸಾಮಗ್ರಿಗಳ ಮೇಲೆ ಅವಲಂಬಿತವಾಗಿ ರೂಢಿಗತವಾಗಿರುವ ಜನಪದ ವೈದ್ಯದ ಬಗ್ಗೆ ವೈಜ್ಞಾನಿಕ ದೃಷ್ಟಿಯಿಂದ ಅಧ್ಯಯನ ನಡೆಸುವ ಅಗತ್ಯ ಈಗ ಹೆಚ್ಚಾಗಿದೆ. (ಟಿ.ಎಸ್.ಎಸ್)

**ಜನಪದ ಶಿಲ್ಪ :** ಜನಪದ ಶಿಲ್ಪವೆಂದರೆ ಯಾವುದು ಎಂಬುದನ್ನು ಸ್ಪಷ್ಟವಾಗಿ ನಿರ್ಧರಿಸುವುದು ಕಷ್ಟಸಾಧ್ಯ. ಅದರ ಹರಹಿನ ಸೀಮೆ, ಲಕ್ಷಣ ಇತ್ಯಾದಿಗಳನ್ನು ನಿರೂಪಿಸುವ ಪ್ರಯತ್ನವನ್ನು ಹಲವು ವಿದ್ವಾಂಸರು ಮಾಡಿರುವರಾದರೂ ಈ ವಿಷಯದಲ್ಲಿ ಒಮ್ಮತವಿಲ್ಲ. ಘನವಸ್ತುಗಳಿಂದ ಆಕೃತಿಗಳನ್ನು ಮೂಡಿಸುವ ಶಿಲ್ಪಕಲೆ ನಿತ್ಯಜೀವನ ನಿರ್ವಹಣೆಯ ಅತ್ಯಾವಶ್ಯಕತೆಗಳಿಂದ ಹೊರಗಿರುವ ಒಂದು ವ್ಯಾಪಾರ. ಇದರ ನೆಲೆ ಇರುವುದು ಮಾನವನ ಸೃಷ್ಟ್ಯಾತ್ಮಕ ಮನೋವಾಂಛೆಯಲ್ಲಿ. ಹೊಸದನ್ನು ಸೃಷ್ಟಿಸಬೇಕೆಂಬ ಆಸಕ್ತಿ ನಾನಾಸ್ತರಗಳಲ್ಲಿ ಅಂದರೆ ಕೆಲವು ಬಾರಿ ಸೌಂದರ್ಯಾನುಭವಕ್ಕೆ ಪ್ರೋತ್ಸಾಹಕವಾಗಿ, ಹಲವು ಬಾರಿ ಧರ್ಮ, ಅಂತಸ್ಸಿನ ಪ್ರಜ್ಞೆ, ವಿನೋದ ಮುಂತಾದ ಮನೋರಂಗದ ಇತರ ವ್ಯಾಪಾರಗಳಿಗಾಗಿ ಉಪಯೋಗವಾಗುತ್ತದೆ. ಈ ಧೋರಣೆಗಳು ಮಾನವನ ಎಲ್ಲ ವರ್ಗ-ಸ್ತರಗಳಲ್ಲೂ ಕಲಾನಿರ್ಮಾಣದ ನೆಲಗಟ್ಟಾಗಿ ಕಾಣಿಸುವುದರಿಂದ, ಧೋರಣೆಯ ಆಧಾರದ ಮೇಲೆ ಜನಪದ ಶಿಲ್ಪ ಯಾವುದು, ಅದು ಅಲ್ಲದ್ದು ಯಾವುದು ಎಂಬುದನ್ನು ನಿರ್ಧರಿಸಲಾಗುವುದಿಲ್ಲ.

ಪರಂಪರಾನುಗತತೆ, ಅಲಿಖಿತತೆ ಇತ್ಯಾದಿ ಜನಪದದ ಇತರ ರಂಗಗಳಲ್ಲಿ ಉಪಯೋಗಿಸುವ ಮಾನದಂಡಗಳು, ಕಲಾರಂಗದಲ್ಲಿ (ಅದರಲ್ಲೂ ಶಿಲ್ಪದಲ್ಲಿ) ಅರ್ಥಹೀನವಾಗುತ್ತವೆ. ಎಲ್ಲ ಕಲೆಗಳೂ ಅವು ಆದಿವಾಸಿಗಳದ್ದಾಗಿರಲಿ ಬಹುಜನವರ್ಗದ್ದಾಗಿರಲಿ, ನಾಗರಿಕ ವರ್ಗಗಳದ್ದಾಗಿರಲಿ, ಪರಂಪರಾಗತವೇ. ಬಹುಮಟ್ಟಿಗೆ ಪೂರ್ವಾನುಭವ ಮತ್ತು ವಾಸನೆಗಳು ಇವುಗಳ ರೂಪನಿರ್ದೇಶ ಮಾಡುತ್ತವೆ. ಶಿಲ್ಪ ಮೂಲತಃ ವೃತ್ತಿಜನ್ಯವಾದುದರಿಂದ, ಇದರ ಸೃಷ್ಟಿಗೆ ಲಿಖಿತಶಾಸ್ತ್ರಗಳ ಉಪಯೋಗ ಅಲ್ಪ; ಇದು ಬಹುಮಟ್ಟಿಗೆ ಗುರು-ಶಿಷ್ಯ ಪರಂಪರೆಯಲ್ಲಿ ಕಲಿಕೆ ಅನುಭವದ ಸೂತ್ರದ ಮೇಲೆ ಮುಂದುವರಿಯುತ್ತದೆ.

ಜನಪದ ಸಮಾಜಗಳಲ್ಲಿ ಪ್ರಚಲಿತವಾಗಿರುವ ಶಿಲ್ಪವೇ ಜನಪದ ಶಿಲ್ಪ ಎಂಬ ವಿವರಣೆ ಸಾಧುವಾಗಿ ಕಂಡರೂ ಶಿಲ್ಪಗಳ ಆಳ ಅಧ್ಯಯನಕ್ಕೆ ತೊಡಗಿದಾಗ ಈ ವಿವರಣೆ ಅಸಮರ್ಪಕವೆನಿಸುತ್ತದೆ. ಜನಪದದಂಥ ಸರಳ ಸಮಾಜದಲ್ಲಿ ಹಲವಾರೆಡೆಗಳಿಂದ ಬಂದ ಅನುಭವ, ಜ್ಞಾನ ಮತ್ತು ವಿಧಾನಗಳು ತಮ್ಮದೇ ಆದ ಮಾರ್ಗದಲ್ಲಿ ರೂಪುಗೊಂಡು ಜನಪದದ ಸ್ವತ್ತಾಗಿಬಿಡುತ್ತವೆ. ಹೊರಪ್ರಪಂಚದ ಸಾಂಸ್ಕೃತಿಕ ಪ್ರಭಾವಗಳ ಸೋಂಕಿಲ್ಲದೆಯೋ ಕೆಲವು ವೇಳೆ ಅವನ್ನು ಪ್ರತಿಭಟಿಸಿಯೋ ನಿಂತ ಸಂಕುಚಿತ ಪ್ರದೇಶದಲ್ಲಿ ಚಿಕ್ಕ ಸಮೂಹಗಳಲ್ಲಿ ವಾಸಿಸುವ ಆದಿವಾಸಿ ಜನಾಂಗಗಳಲ್ಲಿ ಗಾಢವಾಗಿ ಕಾಣುವ ವೃತ್ತಿ, ವಿಧಾನ, ಕಲ್ಪನೆ ಇತ್ಯಾದಿಗಳೂ ಮೂಲತಃ ಈ ವರ್ಗಗಳನ್ನೇ ಹಿನ್ನೆಲೆಯಾಗಿ ಹೊಂದಿರುವ ಜನಪದ ವರ್ಗಗಳಲ್ಲೂ ಕಂಡುಬರುವುದರಿಂದ, ಆದಿವಾಸಿ ಶಿಲ್ಪಗಳ ಮತ್ತು ಜನಪದ ಶಿಲ್ಪಗಳ ನಡುವಿನ ವಿಭಜನ ರೇಖೆಯನ್ನು ಸ್ಪಷ್ಟವಾಗಿ ಗುರುತಿಸಲಾಗುವುದಿಲ್ಲ. ಭಾರತದ ಭಿಲ್ಲರೇ ಮೊದಲಾದ ಆದಿವಾಸಿ ಜನಾಂಗಗಳು ತಮಗೆ ಅವಶ್ಯವಾದ ಶಿಲ್ಪ ನಿರ್ಮಾಣಕ್ಕೆ ಪಕ್ಕದ ಗ್ರಾಮೀಣ ಕಲೆಗಾರರನ್ನೇ ಅವಲಂಬಿಸಿರುತ್ತಾರಾಗಿ, ಇಂಥ ಸಂದರ್ಭಗಳಲ್ಲಿ ಆದ ನಿರ್ಮಾಣಗಳು ಜನಪದದ್ದೋ ಆದಿವಾಸಿಗಳದೋ ಎಂದು ಹೇಳುವುದು ಅಸಾಧ್ಯವಾಗುತ್ತದೆ. ನಾಗರಿಕ ಸಮಾಜಗಳ ಹಲವೊಂದು ಭಾವನೆಗಳು ಸ್ವಲ್ಪಸ್ವಲ್ಪವಾಗಿ ಜನಪದ ವರ್ಗಗಳಿಗೆ ಹರಿಯುವ ಸತತಕ್ರಿಯೆಯಿಂದಾಗಿ ಹಲವಾರು ನಾಗರಿಕ ಮೂಲದ ಶಿಲ್ಪಗಳು ಅಥವಾ ಅವುಗಳ ಬಡ ಅನುಕರಣೆಗಳು ಜನಪದ ಶಿಲ್ಪಗಳಾಗಿಯೇ ಕಾಣಿಸಿಕೊಳ್ಳುತ್ತವೆ. ಇವೆಲ್ಲ ಜನಪದ ಶಿಲ್ಪದ ಸ್ಪಷ್ಟ ಸೀಮೆಯನ್ನು ನಿರ್ಧರಿಸುವಲ್ಲಿ ಹಲವು ಸಮಸ್ಯೆಗಳನ್ನು ಒಡ್ಡುತ್ತವೆ.

ಮೂಲ ಮತ್ತು ರೂಪ ಯಾವುದೇ ಆದರೂ ಜನಪದ ಸಮಾಜಗಳಲ್ಲಿ ಪ್ರಚಲಿತವಾಗಿರುವ ಕೆಲವು ಸಾಮಾನ್ಯಾಂಶಗಳನ್ನು ಗಮನಿಸಬಹುದು. ಮೊದಲನೆಯದಾಗಿ, ಜನಪದದ ಸರಳ ಮನೋಭೂಮಿಕೆಗೆ, ಆರ್ಥಿಕಸ್ಥಿತಿಗೆ ಒಗ್ಗುವ ಸರಳತೆ ಜನಪದ ಶಿಲ್ಪಗಳ ಮುಖ್ಯ ಅಂಶ. ಸಾಮಗ್ರಿ, ತಂತ್ರ ಮತ್ತು ನಿರೂಪಣೆಯಲ್ಲಿ ಈ ಸರಳತೆ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತದೆ. ಮಣ್ಣು, ಕಲ್ಲು, ಮರ, ಮರದ ಹೊಟ್ಟು, ಹಿತ್ತಾಳೆ ಮುಂತಾಗಿ ಆಯಾ ಪ್ರದೇಶಗಳಲ್ಲಿ ಸುಲಭವಾಗಿ ದೊರಕುವ ಸಾಮಗ್ರಿಗಳನ್ನಷ್ಟೇ ಶಿಲ್ಪಗಳ ತಯಾರಿಯಲ್ಲಿ ಬಳಸಲಾಗಿರುತ್ತದೆ. ಅತ್ಯಲಂಕರಣ

ವಿಧಾನ, ಕ್ಲಿಷ್ಟ ತಂತ್ರಗಳು ಮುಂತಾದ ನಾಗರಿಕ ಶಿಲ್ಪವಿಧಾನಗಳು ಇಲ್ಲಿಲ್ಲ. ನಿರೂಪಣೆಯಲ್ಲಿ ಆಯಾ ಶಿಲ್ಪಗಳಿಗೆ ಸಂಬಂಧಿಸಿದ ಮುಖ್ಯ ಭಾವನೆಗಳ ಅಭಿವ್ಯಕ್ತಿ ಶಿಲ್ಪದ ಗುರಿಯಾಗಿರುತ್ತದೆಯೇ ಹೊರತು, ಯಥಾಸ್ಥಿತಿಯ ಸಮಗ್ರ ಪ್ರತಿರೂಪೀಕರಣ ಅಥವಾ ಅತಿಚತುರ ನಿರೂಪಣಾ ವಿಧಾನಗಳು ಇವುಗಳಲ್ಲಿ ಇರುವುದಿಲ್ಲ. ಎರಡನೆಯದಾಗಿ, ಕಲೆಗಾಗಿ ಕಲೆ ಸೃಷ್ಟಿ ಮಾಡಬೇಕೆಂಬ ಕಲೆಗಾರನ ಮನಸ್ಸಿನ ಒತ್ತಡದಿಂದ ಹುಟ್ಟಿದ ನಾಗರಿಕ ಕಲಾಸೃಷ್ಟಿಗಳಲ್ಲಿ ಕಂಡುಬರುವ, ಶಿಲ್ಪಿಯೇ ಕೇಂದ್ರವಾಗುಳ್ಳ ಹಿನ್ನೆಲೆ ಜನಪದ ಶಿಲ್ಪ ಸೃಷ್ಟಿಯಲ್ಲಿ ಇರುವುದಿಲ್ಲ. ಇಲ್ಲಿ ಶಿಲ್ಪಿಗಿಂತಲೂ ಶಿಲ್ಪಗಳನ್ನು ಉಪಯೋಗಿಸುವವರ ದೃಷ್ಟಿ, ಆವಶ್ಯಕತೆಗಳೇ ಶಿಲ್ಪ ಸೃಷ್ಟಿಯ ಚೇತನ. ಯಾರಿಗಾಗಿ ಕಲೆ ನಿರ್ಮಾಣವಾಗುತ್ತದೆಯೋ ಆ ಜನಪದವೇ ಜನಪದ ಶಿಲ್ಪದ ಜೀವಾಳ (ಆಂದ್ರೇ ಮಾಲ್ರೊ). ಶಿಲ್ಪಿ ಹೆಚ್ಚು ಕಡಿಮೆ ಕಸಬುಗಾರ. ಮೇಲಿನದಕ್ಕೆ ಹೊಂದಿಕೊಂಡಂತೆ ಬರುವ ಮೂರನೆಯ ಅಂಶವೆಂದರೆ ಈ ಜನಪದ ಶಿಲ್ಪಗಳು ಕೇವಲ ಕಲಾಕೃತಿಗಳಾಗಿರದೆ, ಅವು ಹೆಚ್ಚುಮಟ್ಟಿಗೆ ಯಾವುದೋ ಸಾಮಾಜಿಕ ಉದ್ದೇಶಗಳಿಗಾಗಿ, (ಉದಾ: ಧರ್ಮ, ಮಾಟ, ವಿನೋದ) ರೂಪಿಸಲಾಗಿರುತ್ತದೆ. ಇಲ್ಲಿ ಕಲೆ ಉಪಯೋಗಾತ್ಮಕ. ನಾಲ್ಕನೆಯದಾಗಿ, ಜನಪದ ಶಿಲ್ಪಗಳಲ್ಲದಿದ್ದರೂ ಶಿಲ್ಪಸ್ವರೂಪಗಳು ಬಹುಕಾಲ ಮುಂದುವರಿಯುತ್ತಿರುತ್ತವೆ. ಸಂಪ್ರದಾಯಾತ್ಮಕ ಸಮೂಹ ಪ್ರಜ್ಞೆ ಇವುಗಳ ರಕ್ಷೆ, ನವಸೃಷ್ಟ್ಯಾತ್ಮಕ ವ್ಯಕ್ತಿಪ್ರಜ್ಞೆಗೆ ಇಲ್ಲಿ ಸಾಕಷ್ಟು ಸ್ಥಳವಿಲ್ಲ.

ಜನಪದ ಕಲೆಯ ಅಧ್ಯಯನದಲ್ಲಿ ಸಾಕಷ್ಟು ಕೆಲಸ ಮಾಡಿರುವ ಜೋಸೆಫ್‌ವ್ಯದ್ರ ಎಂಬ ವಿದ್ವಾಂಸ ಸಹ ಶಿಲ್ಪಿಗಿಂತಲೂ ಶಿಲ್ಪಗಳನ್ನು ಉಪಯೋಗಿಸುವ ಮಂದಿಯ ಮನೋಭಾವ, ದೃಷ್ಟಿ ಮತ್ತು ಉದ್ದಿಶ್ಯದ ಗಾಢ ಪ್ರಭಾವ ಜನಪದ ಶಿಲ್ಪಸೃಷ್ಟಿಯಲ್ಲಿರುವುದನ್ನು ಒತ್ತಿ ಹೇಳುತ್ತಾನೆ. ಅವನ ಪ್ರಕಾರ ಆ ಪ್ರಭಾವದಿಂದಾಗಿ ಶಿಲ್ಪಗಳು ಯಾವ ವರ್ಗದ ಜನರಿಗಾಗಿ ಸೃಷ್ಟಿಸಲಾದುವೋ ಆ ಜನಗಳ ಸುಲಭ ಗ್ರಹಣೆಗೆ ಅನುಕೂಲವಾಗುವ ರೀತಿಯಲ್ಲಿ ನಿರೂಪಿತವಾಗಿರುತ್ತವೆ. ಜನರಿಗೆ ಪರಿಚಯವಿರುವ ನೈಸರ್ಗಿಕ ವಿನ್ಯಾಸಗಳು, ವಿಷಯ ಒಮ್ಮೆಯೇ ಮನ ನಾಟುವ ನೇರವೂ ಹರಿತವೂ ನಾಟಕೀಯವೂ ಆದ ರೂಪಣಾ ವಿಧಾನಗಳು ಇವುಗಳಲ್ಲಿ ಬಳಕೆಯಾಗಿರುತ್ತವೆ. ಆ ಸಮಾಜದಿಂದ ಹೊರಗಿರುವವರಿಗೆ ಸುಲಭವಾಗಿ ಅರ್ಥವಾಗದ, ಹಲವು ಸಾಂಕೇತಿಕ ವಿನ್ಯಾಸಗಳು ಒಮ್ಮೊಮ್ಮೆ ಕಂಡುಬಂದರೂ ಅವು ಕಾಲಾನುಕಾಲದಿಂದ ಪರಂಪರೆಯಲ್ಲಿ ಬೆಳೆದು ಬಂದವಾಗಿದ್ದು, ಜನಪದ ಮಂದಿಗೆ ಅವು ಸುಲಭವಾಗಿ ಅರ್ಥವಾಗುತ್ತವೆ. ವ್ಯದ್ರನ ಪ್ರಕಾರ ಆಕಾಶತತ್ತ್ವ ಅಥವಾ ತಾವಿನ ಭಾವನೆ. ಅಂದರೆ ಶಿಲ್ಪನಿರೂಪಣೆಯಲ್ಲಿ ವಸ್ತುಗಳನ್ನು ಹಿಂದೆ ಮುಂದೆ, ಅಡ್ಡ ಉದ್ದವಾಗಿ, ಚಿಕ್ಕ ದೊಡ್ಡದಾಗಿ ನಿರೂಪಿಸಿ ಯಥಾದೃಷ್ಟಿಯನ್ನು ತರುವ ತಂತ್ರ ಜನಪದ ಶಿಲ್ಪಗಳಲ್ಲಿ ಇರುವುದಿಲ್ಲ. ಅಲ್ಲದೆ ಅಲಂಕರಣಾದಿ ವಿವರಗಳ ಅಳವಡಿಕೆಯಿಂದ ವಸ್ತುವಿನ ಮೂಲ ಸ್ವರೂಪದ ಭಾವನೆಯನ್ನು ನಿರೂಪಿಸುವ ತಂತ್ರ ಇಲ್ಲಿರುತ್ತದೆಯೇ ಹೊರತು, ಮೂಲವಸ್ತುವನ್ನು ಕೇಂದ್ರೀಕರಿಸಿ ಅಲಂಕರಣಗಳಿಂದ ಪ್ರಭಾವಯುತವಾಗಿ ಮಾಡುವ ನಾಗರಿಕ ಶಿಲ್ಪಗಳ ತಂತ್ರ ಕಾಣುವುದಿಲ್ಲ. ಇವುಗಳಲ್ಲಿ ಹಲವು ಅಭಿಪ್ರಾಯಗಳು ವಿವಾದಾಸ್ಪದವಾಗಿವೆ. ಮೂಲವಸ್ತುವಿನ ಹೊರಪ್ರಾಕಾರದ ಉಪಾಂಶಗಳು ಶಿಲ್ಪನಿರೂಪಣೆಯಲ್ಲಿ ಅಷ್ಟೇನೂ ಮುಖ್ಯವಲ್ಲ. ಜನಪದ ಶಿಲ್ಪಗಳಲ್ಲಿ ನಿಸರ್ಗ ಸಹಜರೂಪಗಳ ಸತ್ತ್ವವಷ್ಟೇ ನಿರೂಪಿತವಾಗುವುದರಿಂದ ಇತರ ಅಂಶಗಳು ನೋಡುಗನ ಚಿತ್ತದಲ್ಲಿ ತಾವಾಗಿಯೇ ಕೂಡಿಕೊಳ್ಳುತ್ತವೆ. ತಾವಿನ ಭಾವನೆ ಒಂದಲ್ಲ ಒಂದು ರೀತಿ ಸ್ವಪ್ರಕಟನಾ ಶಕ್ತಿಯುಳ್ಳದ್ದು; ಅಲ್ಲದೆ ಜನಪದ ಶಿಲ್ಪ ಹಲವು ಬಾರಿ ಕಲ್ಪನಾರಂಗದ ವಸ್ತು- ಕಥೆಗಳನ್ನು ನಿರೂಪಿಸುವುದರಿಂದ, ಯಥಾದೃಷ್ಟಿ ನಿರೂಪಣೆಗಿಂತ ಕಲ್ಪನಾರಂಗದ ಕೆಲಸವೇ ಇಲ್ಲಿ ಹೆಚ್ಚು - ಇತ್ಯಾದಿ ಕಾರಣಗಳಿಂದ ವ್ಯದ್ರನ ಕೆಲವೊಂದು ಊಹೆಗಳನ್ನು ವಿದ್ವಾಂಸರು ಒಪ್ಪುವುದಿಲ್ಲ.

ಮತ್ತಷ್ಟು ವ್ಯವಸ್ಥಿತ ಅಧ್ಯಯನ ನಡೆಸಿರುವ ಕಾನ್ರಾಡ್ ಹ್ಯಾವರ್‌ನ ಪ್ರಕಾರ ಜನಪದ ಶಿಲ್ಪಗಳಲ್ಲಿ ನೈಸರ್ಗಿಕ ಚಿತ್ರಣ ಅಂದರೆ ಯಥಾಸ್ಥಿತಿ ನಿರೂಪಣೆ ಇರುವುದಿಲ್ಲ. ಇಲ್ಲಿ ಇರುವುದು ಅವುಗಳ ತತ್ತ್ವ ವ್ಯಾಖ್ಯೆ ಮಾತ್ರ; ತತ್ತ್ವದ ಹೊರಗಿನ ಎಲ್ಲ ಅಂಶಗಳೂ ಇಲ್ಲಿ ಗೌಣವಾಗುತ್ತವೆ. ಉದಾಹರಣೆಗೆ ಒಬ್ಬ ಸಂತನನ್ನು ನಿರೂಪಿಸುವಲ್ಲಿ ಸಂತತ್ವವನ್ನು ತೋರಿಸುವ ಅವನ ಪರಿಕರಗಳು ಮುಖ್ಯವಾಗುತ್ತವೆಯೋ ಹೊರತು ಸಂತನ ಅಂಗಾಂಗವಿವರಗಳನ್ನೊಳಗೊಂಡ ಪ್ರತಿರೂಪವಲ್ಲ. ಹ್ಯಾವರ್‌ನ ಅಧ್ಯಯನವನ್ನು ಮುಂದುವರಿಸಿ ತೋಷಿ ಎಂಬ ವಿದ್ವಾಂಸ ಜನಪದ ಕಲೆಯ (ಶಿಲ್ಪಗಳೂ ಸೇರಿದಂತೆ) ಲಕ್ಷಣಗಳನ್ನು ಈ ರೀತಿ ಪಟ್ಟಿಮಾಡಿದ್ದಾನೆ. 1. ಎಲ್ಲ ರೀತಿಯ ಹೆಚ್ಚಿನ ವಿವರಗಳನ್ನೂ ಕೈಬಿಟ್ಟು ಕೆಲವೇ ನಿರ್ದಿಷ್ಟ ಗೆರೆ, ಆಕಾರಗಳಿಂದ ಶಿಲ್ಪ ಭಾವವನ್ನಷ್ಟೇ ಒಗ್ಗೂಡಿಸುವುದು. 2. ವರ್ಣಚ್ಛೇದ, ವರ್ಣಸಾಂದ್ರ ವ್ಯತ್ಯಾಸ ಮುಂತಾದ ಕ್ಲಿಷ್ಟತಂತ್ರಗಳನ್ನು ಬಳಸದೆ ಗೆರೆ, ಬಣ್ಣ, ಗಾತ್ರಗಳ ಸಂಯೋಜನೆಯಿಂದ ಸುಲಭವಾಗಿ ನಿರೂಪಿಸುವುದು. 3. ಕೆಲವೊಂದು ಸಂದರ್ಭಗಳಲ್ಲಿ ನೋಡುಗನ ದೃಷ್ಟಿ ಒಂದು ವಸ್ತುವಿನ ಮೇಲೆ ಕೇಂದ್ರೀಕೃತವಾಗುವಂತೆ ಮಾಡಲು ಅವನ್ನು ಅಸ್ವಾಭಾವಿಕವಾಗಿ ವಿಪರೀತ ದೊಡ್ಡದಾಗಿ ನಿರೂಪಿಸುವುದು (ಉದಾಹರಣೆಗೆ ರಾಜನನ್ನು ಬಹಳ ದೊಡ್ಡದಾಗಿ ನಿರೂಪಿಸಿ, ಪರಿವಾರದವರನ್ನು ಗಿಡ್ಡಾಗಿ ತೋರಿಸುವುದು). 4. ಚಲನೆ, ಧ್ವನಿ, ಮನೋವ್ಯಾಪಾರ ಮತ್ತು ಭಾವನೆಗಳಿಗೆ ಆಕಾರವನ್ನು ಕೊಡುವುದು. 5. ಅನೇಕ ಸಾಮಾನ್ಯ ರೂಪಗಳನ್ನು, ಕಾಲ್ಪನಿಕ ರೀತಿಯಲ್ಲಿ ಪರಿವರ್ತಿಸಿ, ಅವುಗಳ ಒಗ್ಗೂಡಣೆ ಅಲಂಕರಣವನ್ನು ಸಾಧಿಸುವುದು. 6. ಗೆರೆಗಳು, ರೂಪಗಳು ಅಥವಾ ವರ್ಣತಾವುಗಳನ್ನು ನಿರ್ದಿಷ್ಟವಾಗಿ ಹಲವು ಬಾರಿ ನಿರೂಪಿಸುವುದು. ಜನಪದ ಶಿಲ್ಪದ ಅಧ್ಯಯನ ಹಲವು ದೇಶಗಳಲ್ಲಿ ಇನ್ನೂ ಶೈಶವಾವಸ್ಥೆಯಲ್ಲಿದೆ.

ಕರ್ನಾಟಕದಲ್ಲಿ ಜನಪದ ಶಿಲ್ಪಗಳ ಅಧ್ಯಯನ, ಜಾನಪದ ದೃಷ್ಟಿಯಿಂದಲೂ ಕಲಾ ಇತಿಹಾಸದ ದೃಷ್ಟಿಯಿಂದಲೂ ಹೊಸದಾಗಿ ಪ್ರಾರಂಭವಾಗಬೇಕಾಗಿದೆ. ಸದ್ಯಕ್ಕೆ ಕೆಲವು ಉದಾಹರಣೆಗಳನ್ನು ಮಾತ್ರ ಪಟ್ಟಿ ಮಾಡಬಹುದು. ತಮಿಳುನಾಡು ಮತ್ತು ಕೇರಳದ ರೀತಿಯ ಮಣ್ಣಿನ ಅಯ್ಯಪ್ಪನ್ ವಿಗ್ರಹಗಳು ಮತ್ತು ಅವಕ್ಕೆ ಅರ್ಪಿಸಿದ ದನ, ನಾಯಿ ಮುಂತಾದ ಬೊಂಬೆಗಳು ಕೊಡಗು ಪ್ರದೇಶದಲ್ಲಿ ಇವೆ. ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಭೂತಾರಾಧನೆಗೆ ಸಂಬಂಧಿಸಿದ ಹಿತ್ತಾಳೆಯ ಮುಖವಾಡಗಳು, ಆಯಾ ಭೂತ, ದೇವತೆಗಳ ಸ್ವರೂಪ ಕಲ್ಪನೆಗೆ ತಕ್ಕಂಥ ಭಾವಗಳನ್ನು ಬಹು ಪ್ರಭಾವಕಾರಿಯಾಗಿ ನಿರೂಪಿಸುತ್ತವೆ. ಉಡುಪಿ ಜಿಲ್ಲೆ ಮೆಕ್ಕೆಕಟ್ಟೆ ಎಂಬಲ್ಲಿನ ಬೃಹತ್ ಮರದ ವಿಗ್ರಹಗಳು ಅಸಾಧಾರಣ ಕಲಾಕೃತಿಗಳು. ಕರ್ನಾಟಕದ ಹಲವೆಡೆ ಮಾರಮ್ಮ ಇತ್ಯಾದಿ ಜನಪದ ದೇವತೆಗಳನ್ನು ಹಿತ್ತಾಳೆಯಲ್ಲಿ ಮಾಡುವ ರೂಢಿ ಇದೆ. ರಾಜಸ್ಥಾನ, ಮಧ್ಯಪ್ರದೇಶಗಳಲ್ಲಿರುವಂಥ ಕುದುರೆಯ ಮೇಲೆ ಕುಳಿತ ಗಂಡುವಿಗ್ರಹಗಳನ್ನು ದಕ್ಷಿಣ ಕರ್ನಾಟಕದಲ್ಲೂ ಕಾಣಬಹುದು. ಇವನ್ನು ಬೀರೇದೇವರು ಎಂದು ಕರೆಯುತ್ತಾರೆ. ಇವು ಸಾಮಾನ್ಯವಾಗಿ ಹಿತ್ತಾಳೆಯಲ್ಲಿ ಮಾಡಿದವು. ಉತ್ತರ ಕರ್ನಾಟಕದ ಹಲವೆಡೆ ಮಾರಿಯಮ್ಮ, ಮರಗಮ್ಮ ಮುಂತಾದ ಮರದ ವಿಗ್ರಹಗಳು ಸಿಗುತ್ತವೆ. ಇವಲ್ಲದೆ ನಾಗರಿಕ ಸಂಪ್ರದಾಯಗಳಿಂದ ಬಂದ ಗಣೇಶ, ಗೌರಿ ಇತ್ಯಾದಿಗಳನ್ನು ಗ್ರಾಮೀಣರೇ ಮಾಡಿ ಉಪಯೋಗಿಸುವುದು ಕರ್ನಾಟಕದ ಹಲವೆಡೆಯಲ್ಲಿ ಕಂಡುಬರುತ್ತದೆ. ಇವೆಲ್ಲ ಧರ್ಮ, ಸಂಪ್ರದಾಯಗಳಿಗೆ ಸಂಬಂಧಿಸಿದ್ದಾದರೆ, ಮಕ್ಕಳ ವಿನೋದಕ್ಕಾಗಿ ಮಾಡಿದ ಮರ ಅಥವಾ ಮಣ್ಣಿನ ಆಟಿಕೆಗಳು ಅದರಲ್ಲೂ ಬಸವ ಇತ್ಯಾದಿ ಪ್ರಾಣಿಗಳ ಬೊಂಬೆಗಳು, ಕಿಸುಕಾಲು ಬೊಂಬೆಗಳು ಬಹುಸಾಮಾನ್ಯವಾಗಿ ಕಂಡುಬರುವ ಜನಪದ ಶಿಲ್ಪಗಳು. ನವರಾತ್ರಿಯ ಕಾಲದಲ್ಲಿ ಈ ರೀತಿಯ ಅನೇಕ ಬೊಂಬೆಗಳನ್ನು ಇಟ್ಟು ಅಲಂಕರಿಸುವ ಸಂಪ್ರದಾಯ ಕರ್ನಾಟಕದಲ್ಲಿದೆ. ಇವಲ್ಲದೆ ಸೂತ್ರದ ಬೊಂಬೆ ಆಟದಲ್ಲಿ ಉಪಯೋಗಿಸುವ ಮರದ ಬೊಂಬೆಗಳು ಆಯಾ ಪ್ರದೇಶಗಳ ಉಡಿಗೆ-ತೊಡಿಗೆಗಳಿಂದ ಅಲಂಕೃತವಾಗಿದ್ದು ಕೆಲವು ಉಚ್ಚತಮ ಕಲಾಕೃತಿಗಳ ಮಟ್ಟಕ್ಕೆ ಏರಬಲ್ಲವಾಗಿವೆ. *

**ಜನಪದ ಸಂಗೀತ :** ಕನ್ನಡ ಜನಪದ ಹಾಡುಗಾರಿಕೆಯಲ್ಲಿ ಕನ್ನಡ ನಾಡಿಗೆ ವಿಶಿಷ್ಟವಾದ ಗುಣಗಳನ್ನೂ ವಿಶ್ವಮಾನ್ಯವಾದ ಸಂಗೀತದ ಅಂಶಗಳನ್ನೂ ಗುರುತಿಸಬಹುದು. ಜನಪದ ಗೀತೆಗಳ ಸಂಗೀತಾಂಶವನ್ನು, ಅಂದರೆ ಅವುಗಳ ದನಿ ಲಯಗಳನ್ನು ಪರಿಶೀಲಿಸಿದಾಗ ಶಾಸ್ತ್ರೀಯ ಸಂಗೀತಕ್ಕೆ ಜನಪದ ಸಂಗೀತ ಅಡಿಪಾಯವಾಗಿದೆ ಎಂಬುದು ಕಂಡುಬರುತ್ತದೆ. ನಾಗರಿಕರ ಸಂಪರ್ಕವೇ ಇಲ್ಲದೆ ಗುಡ್ಡಗಾಡುಗಳಲ್ಲಿ

ಇಂದಿಗೂ ವಾಸಿಸುವ ಅನೇಕ ಬುಡಕಟ್ಟುಗಳವರು ಹಾಡಿಕೊಳ್ಳುವ ಹಾಡುಗಳಲ್ಲಿ ಇಂದಿನ ಕರ್ನಾಟಕ ಹಾಗೂ ಹಿಂದುಸ್ಥಾನೀ ಗಾನ ಪದ್ಧತಿಯ ರಾಗಗಳಿಗೆ ಅಡಿಪಾಯವಾಗಬಲ್ಲ ದನಿಮಾಧುರ್ಯಗಳು ಕೇಳಿಬರುತ್ತವೆ. ಉದಾಹರಣೆಗೆ ಕರ್ನಾಟಕದ ನಾಗರಹೊಳೆಯ ಬೆಟ್ಟಕುರುಬರ ಹಾಡುಗಳಲ್ಲಿ ಖರಹರಪ್ರಿಯ ರಾಗದ ಅನೇಕ ಸ್ವರಸಂಚಾರಗಳನ್ನು ಗುರುತಿಸಲಾಗಿವೆ.

ಪ್ರಪಂಚದಲ್ಲಿ ಬಳಕೆಯಲ್ಲಿರುವ ಎಲ್ಲ ಜನಪದ ಗೀತೆಗಳಲ್ಲಿಯೂ ಐದು ಸ್ವರಗಳ ಸ್ವರಶ್ರೇಣಿಗಳೇ (ಪೆಂಟಾಕೋನಿಕ್) ಅಧಿಕವಾಗಿ ಉಪಯೋಗಿಸಲ್ಪಡುತ್ತವೆ. ಐದಕ್ಕಿಂತ ಕಡಿಮೆಯೂ ಇರಬಹುದು. ಐದು ಅತ್ಯಧಿಕ ಸ್ವರಸಂಖ್ಯೆ. ಈ ಅಂಶವನ್ನು ಕರ್ನಾಟಕದ ಜನಪದ ಹಾಡುಗಳಲ್ಲೂ ಕಾಣಬಹುದು. ಕರ್ನಾಟಕದ ಶಾಸ್ತ್ರೀಯ ಸಂಗೀತದಲ್ಲಿ ಉಪಯೋಗಿಸಲ್ಪಡುವ ರಾಗಗಳಲ್ಲಿ ಸಂಪೂರ್ಣ ರಾಗಗಳಿಗೆ ಆರೋಹಣಾವರೋಹಣಗಳಲ್ಲಿ ಏಳು ಸ್ವರಗಳೂ ಷಾಢವ ರಾಗಗಳಿಗೆ ಆರು ಸ್ವರಗಳೂ ಔಡವ ರಾಗಗಳಿಗೆ ಐದು ಸ್ವರಗಳೂ ಇರುವುದನ್ನು ಇಲ್ಲಿ ನೆನೆಯಬಹುದು. ಐದಕ್ಕಿಂತ ಹೆಚ್ಚು ಸ್ವರಗಳು ಒಂದು ಶ್ರೇಣಿಯಲ್ಲಿ ಬಳಕೆಯಾಗಿರುವ ಜನಪದ ದನಿಗಳು ಅಪರೂಪ.

ಕರ್ನಾಟಕದ ಎಲ್ಲ ಕಡೆಯ ಜನಪದ ಹಾಡುಗಾರರೂ ಹೋ, ಹಾ, ಭಲೆ, ಐಸಾ ಇತ್ಯಾದಿಯಾಗಿ ತಮ್ಮ ತಮ್ಮ ಭಾಷೆಗೆ ಸಹಜವಾಗಿ ಹೊಂದಿಕೊಂಡು ಬರುವ ಉದ್ಗಾರಗಳನ್ನು ತಾವು ಹಾಡುವ ಹಾಡಿಗೆ ಸೇರಿಸಿ ಹಾಡುವುದುಂಟು. ಸಂಗೀತದ ನಡುವೆ ಗದ್ಯವಾಗಿಯೇ ಮೂಡುವ ಈ ಉದ್ಗಾರಗಳು ಲಯಕ್ಕೆ ಒಂದು ನಿಲುಗಡೆಯನ್ನೋ ಬಿರುಸನ್ನೋ ಮುಕ್ತಾಯವನ್ನೋ ಒದಗಿಸಿಕೊಡುವುದರಲ್ಲಿ ಯಶಸ್ವಿಯಾಗಿವೆ.

ಜನಪದ ಸಂಗೀತ ರಾಗಪ್ರಧಾನವಾದುದಾಗಿದ್ದು ಭಾರತದ ಎಲ್ಲ ಜನಪದ ಗಾಯನ ಪದ್ಧತಿಯಲ್ಲಿಯೂ ಸಾಮ್ಯತೆಯನ್ನು ಗುರುತಿಸಬಹುದು. ಗುಜರಾತಿನ ದುಹಾಛಂದಗಳು, ಮಹಾರಾಷ್ಟ್ರದ ಲಾವಣಿಗಳು, ಒರಿಸ್ಸದ ಹಾಡುಗಬ್ಬಗಳು, ಉತ್ತರ ಕರ್ನಾಟಕದ ಗೀಗೀ ಪದಗಳು, ಹಳೆಯ ಮೈಸೂರಿನ ಲಾವಣಿಗಳು ಮೊದಲಾದುವೆಲ್ಲಕ್ಕೂ ನಾದರೂಪದಲ್ಲಿರುವ ಹೋಲಿಕೆ ಅದ್ಭುತವಾದದ್ದು. ಮದುವೆ ಸಂಪ್ರದಾಯದಲ್ಲಿ ಹಾಡುವ ಹಾಡುಗಳು, ದೇವರುದಿಂಡರುಗಳ ಮುಂದೆ ಕುಣಿಯುವಾಗ ನುಡಿಸುವ ವಾದ್ಯಗಳು - ಹೀಗೆ ವಿಮರ್ಶೆ ಮಾಡುತ್ತ ಹೊರಟರೆ ಭಾರತದ ವಿವಿಧ ಪ್ರಾಂತ್ಯಗಳ ಜನಪದ ಗೀತೆಗಳಲ್ಲಿ ನಾದರೀತಿಯಾಗಿ ದನಿ ಲಯಗಳಲ್ಲಿ ಅದ್ಭುತವಾದ ಸಾಮ್ಯ ಕಾಣುತ್ತದೆ. ಉದಾಹರಣೆಗೆ ಒರಿಸ್ಸದ ಕೆಲವು ಜನಪದ ಗೀತೆಗಳ ದನಿಗಳನ್ನು ಉಳಿಸಿಕೊಂಡು ಅವಕ್ಕೆ ಕನ್ನಡ ಮಾತನ್ನೊದಗಿಸಿದರೆ ಇದು ಕನ್ನಡ ನಾಡಿನ ಹಾಡಲ್ಲ ಎಂದು ಹೇಳುವುದು ಕಷ್ಟವಾಗುತ್ತದೆ. ಅಷ್ಟರಮಟ್ಟಿನ ನಾದಸಾಮ್ಯ ಇಲ್ಲಿ ಎದ್ದುಕಾಣುತ್ತದೆ. ಆದರೆ ಇಂದಿನ ಶಾಸ್ತ್ರೀಯ ಸಂಗೀತವನ್ನು ಗಮನಿಸಿದರೆ ಉತ್ತರದ ಹಿಂದುಸ್ಥಾನೀ ಪದ್ಧತಿಗೂ ದಕ್ಷಿಣದ ಕರ್ನಾಟಕ ಸಂಗೀತ ಪದ್ಧತಿಗೂ ಇಂಥ ನಾದಸಾಮ್ಯತೆ ಉಳಿದುಬಂದಿಲ್ಲ. ಜನಪದ ಗೀತಪದ್ಧತಿಯ ತುಲನಾತ್ಮಕ ಅಭ್ಯಾಸದಿಂದ ಶಾಸ್ತ್ರೀಯ ಸಂಗೀತ ಉತ್ತರ ದಕ್ಷಿಣಗಳಲ್ಲಿ ಭಿನ್ನರೂಪ ತಳೆದದ್ದೇಕೆ ಎನ್ನುವ ಪ್ರಶ್ನೆಗೆ ಉತ್ತರ ಸಿಕ್ಕೀತು.

ಕನ್ನಡದ ಮೂಲ ಛಂದಸ್ಸು ತ್ರಿಪದಿ. ತ್ರಿಪದಿ ಹಾಡಾಗಿಯೇ ಮೂಡಿಬಂದಿದ್ದು. ನಾಡಹಾಡುಗಳಲ್ಲಿ ಬಹು ಹೆಚ್ಚು ಭಾಗ ತ್ರಿಪದಿಗಳೇ. ಸಣ್ಣ ಸರಳ ಭಾವನೆಗಳ ಅಭಿವ್ಯಕ್ತಿಗಾಗಲಿ, ದೊಡ್ಡ ಕಥೆಗಳನ್ನು ಹೇಳುವುದಕ್ಕಾಗಲೀ ತ್ರಿಪದಿಗಳ ಬಳಕೆಯಾಗಿದೆ. ಈ ಎಲ್ಲ ಸಂದರ್ಭಗಳಲ್ಲೂ ತ್ರಿಪದಿ ಸಹಜವಾಗಿ ಸುಂದರವಾಗಿ ಹಾಡಿಕೆಗೆ ಒಗ್ಗಿಕೊಂಡು ಬಂದಿರುವುದು ಸ್ವಾರಸ್ಯಕರ ಅಂಶ. ತ್ರಿಪದಿಯನ್ನು ವಿವಿಧ ಲಯಗಳಿಗೆ ಯಶಸ್ವಿಯಾಗಿ ಹೊಂದಿಸಿಕೊಂಡಿರುವುದು ಲಯಬದ್ಧ ಹಾಡುಗಳಲ್ಲಿ ಕಂಡುಬಂದಿದೆ. ಲಯ ವಿರಹಿತ ದನಿಮಾಧುರ್ಯಗಳಲ್ಲಿ ತ್ರಿಪದಿಯನ್ನು ಎಳೆದೆಳೆದು ಹಾಡುವಲ್ಲಿ ವಿಧವಿಧವಾದ ದನಿಗಳನ್ನು ಬಳಕೆ ಮಾಡಿರುವುದು ಕಾಣುತ್ತದೆ. ತ್ರಿಪದಿಗಳೇ ಅಲ್ಲದೆ ದ್ವಿಪದಿಗಳು, ಚೌಪದಿಗಳು, ರಗಳೆಯ ಧಾಟಿಯ ಚಂಪೂರೀತಿಯ ಕಥನಕವನಗಳು - ಇವೆಲ್ಲ ಕನ್ನಡ ಜನಪದರ ಬಾಯಲ್ಲಿ ಹಾಡಾಗಿಯೇ ಮೂಡಿಬಂದಿವೆ. ನಾಡಹಾಡುಗಾರರು - ಈ ಎಲ್ಲ ಛಂದಸ್ಸುಗಳನ್ನು ನಾದಕ್ಕೆ ಒಗ್ಗಿಸಿಕೊಂಡಿರುವ ರೀತಿ ಅಪೂರ್ವವಾದದ್ದು. ಸಂಗೀತವು ಸಾಹಿತ್ಯದ ಅರ್ಥವನ್ನು ಮುಚ್ಚದೆ ಒಂದಕ್ಕೊಂದು ಪೂರಕವಾಗಿ ಕೂಡಿಕೊಂಡು ಬರುವಂತೆ ಹಾಡಿರುವುದು ಇವರ ಮುಖ್ಯ ಸಾಧನೆ. ಈ ಸಿದ್ಧಿಯ ದೆಸೆಯಿಂದಲೇ ನಮ್ಮ ಜನಪದ ಸಂಗೀತ ಲಘುಸಂಗೀತಕ್ಕೆ ಜನ್ಮದಾಯಿನಿಯಾಯಿತು. ಈ ಕ್ರಿಯೆ ಭಾರತದಾದ್ಯಂತ ನಡೆದಿದೆ.

ನೃತ್ಯದ ಗತಿಭೇದಗಳಿಗೆ ಸರಳ ರಾಗಗಳನ್ನು ಹೊಂದಿಸಿಕೊಳ್ಳುವಲ್ಲೂ ಜನಪದ ಸಂಗೀತದ ಸಾಧನೆ ಗಮನಾರ್ಹವಾದದ್ದು. ಈ ಅಂಶವನ್ನು ಕೋಲಾಟ, ಕಂಸಾಳೆ ನೃತ್ಯ, ವೀರಗಾಸೆ ಕುಣಿತ ಮುಂತಾದವುಗಳಲ್ಲಿ ಕಾಣಬಹುದು. ಈ ಸಂದರ್ಭದಲ್ಲೇ ಲಯವಾದ್ಯಗಳನ್ನು ಜನಪದ ಸಂಗೀತ ವಿಸ್ತಾರವಾಗಿ ಬಳಸಿಕೊಂಡಿದೆ ಎಂಬುದನ್ನು ಕಾಣುತ್ತೇವೆ.

ದುಡಿ, ತಮ್ಮಟೆ, ಡೋಲು, ಗುಮಟೆ, ಛಡ, ಚಂಡೆ ಇತ್ಯಾದಿ ಲಯವಾದ್ಯಗಳು ಕರ್ನಾಟಕದ ಮೂಲೆಮೂಲೆಯಲ್ಲೂ ಒಂದಲ್ಲ ಒಂದು ಹೆಸರಿನಲ್ಲಿ, ರೂಪದಲ್ಲಿ ಸಿಕ್ಕುತ್ತವೆ. ಜನಪದ ವಾದ್ಯಗಾರರು ಅನೇಕ ಸಣ್ಣಪುಟ್ಟ ವ್ಯತ್ಯಾಸಗಳನ್ನು ಮಾಡಿಕೊಂಡು ವಿವಿಧ ರೂಪಗಳಲ್ಲಿ ಈ ವಾದ್ಯಗಳನ್ನು ರಚಿಸಿದ್ದಾರೆ. ತಂತೀ ವಾದ್ಯದಲ್ಲಿ ಇಷ್ಟೊಂದು ವೈವಿಧ್ಯ ಕಾಣಬರುವುದಿಲ್ಲವಾದರೂ ಹಲವಾರು ತಂತೀವಾದ್ಯಗಳನ್ನು ಕನ್ನಡ ನಾಡಿನ ಹಾಡುಗಾರರು ಬಳಸುತ್ತಾರೆ. ತಂತೀವಾದ್ಯಗಳಲ್ಲಿ ತಂಬೂರಿ ಮುಖ್ಯವಾದದ್ದು. ಖಾಲಿ ಬುರುಡೆಯನ್ನು ವಾದ್ಯ ರಚನೆಯಲ್ಲಿ ಉಪಯೋಗಿಸಿ ಆ ಬುರುಡೆಯೊಳಗಿನ ವಾಯುವಿನ ಒತ್ತಡವನ್ನು ಸರಳ ನಿಯಂತ್ರಣಕ್ಕೆ ಒಳಗಾಗಿಸಿ ಒತ್ತಡವನ್ನು ಹೆಚ್ಚು ಕಡಿಮೆ ಮಾಡುತ್ತ ಬುರುಡೆಯ ಒಂದು ಅಥವಾ ಎರಡು ಮುಖಗಳಿಗೆ ಹೊದಿಸಿದ ಚರ್ಮದ ಹೊದಿಕೆಯನ್ನು ಬಡಿಯುವುದರಿಂದ ಕೆಲವಾರು ಸ್ವರಗಳನ್ನು ಹೊರಡಿಸುವ ತಂತ್ರವನ್ನೂ ಜನಪದ ವಾದ್ಯಗಾರರು ಬಹಳವಾಗಿ ಬಳಸಿರುವುದು ಕಾಣುತ್ತದೆ.

ರಾಗಿ ಬೀಸುವ ಹಾಡುಗಳು, ಕೋಲಾಟದ ಹಾಡುಗಳು, ಗೀಗೀ ಪದಗಳು, ಎಲ್ಲಮ್ಮನ ಪದಗಳು, ಕೊಂತ್ಯಮ್ಮನ ಪದಗಳು ಮುಂತಾದವುಗಳಲ್ಲಿ ಕಾಣಬರುವ ದನಿವೈವಿಧ್ಯ ಸಂಗೀತ ಪ್ರಪಂಚದ ಬೆರಗುಗಳಲ್ಲಿ ಒಂದು ಎಂದರೆ ಅತಿಶಯೋಕ್ತಿಯಲ್ಲ. ಮೂರು ನಾಲ್ಕು ಸ್ವರಗಳ ಪರಿಧಿಯಲ್ಲೇ ಇದ್ದು ವಿಸ್ತಾರ ಮಾಡುವ ಪರಿಪಾಠವಿಲ್ಲದೆಯೂ ಬಗೆಬಗೆಯ ದನಿಗಳನ್ನು ಸೃಷ್ಟಿಮಾಡುವ ಸಂಗೀತ ಪ್ರತಿಭೆಯನ್ನು ಇಲ್ಲಿ ಕಾಣುತ್ತೇವೆ. ಈ ನಾದರೂಪಗಳು ಕಷ್ಟವಿಲ್ಲದೆ ಸಹಜವಾಗಿ, ಸರಳವಾಗಿ, ಸಾರ್ಥಕವಾಗಿ, ಇಂಪಾಗಿ ಮೂಡಿಬಂದಿವೆ. ಹಾಗೆಯೇ ಇಲ್ಲಿನ ಲಯದ ಓಟ, ಗತಿಯ ಬೆಡಗುಗಳೂ ಆಕರ್ಷಕವಾಗಿವೆ.

ಸಂಪ್ರದಾಯದ ಹಾಡುಗಳು, ನಾಟಕದ ಹಾಡುಗಳು, ಇವೆಲ್ಲವುಗಳ ರಾಗಗಳು ಜನಪದ ದನಿಗಳಿಂದ ಬಹಳವಾಗಿ ಪ್ರಭಾವಿತವಾದವುಗಳು. ಹೀಗೆ ಜನಪದ ಸಂಗೀತ ವೈವಿಧ್ಯಮಯವೂ ವೈಶಿಷ್ಟ್ಯವುಳ್ಳದ್ದೂ ಆಗಿದೆ. (ಎಲ್.ಜಿ.ಎಸ್.)

**ಜನಪ್ರಗತಿ** : ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ ಒಂದು ವಾರ ಪತ್ರಿಕೆ. ಮೈಸಿಂಡಿಯ ಇಂಗ್ಲಿಷ್ ವಾರಪತ್ರಿಕೆಯನ್ನು ನಡೆಸುತ್ತಿದ್ದ ಪಿ.ಎಸ್.ಹೊಸಾಳಿ ಜನಪ್ರಗತಿಯನ್ನು 1951 ಜುಲೈ 15ರಂದು ಆರಂಭಿಸಿದರು. ಪ್ರಾರಂಭದಲ್ಲಿ ಎಸ್.ಎಸ್.ಸೀತಾರಾಮಶಾಸ್ತ್ರಿ ಸಂಪಾದಕರಾಗಿದ್ದು ಕೆಲವು ವರ್ಷಗಳ ಅನಂತರ ಪಿ.ಎಸ್.ಹೊಸಾಳಿಯವರೇ ಸಂಪಾದಕರಾದರು.

ಪತ್ರಿಕೆಯ ಧ್ಯೇಯಧೋರಣೆಗಳ ಬಗ್ಗೆ ಪ್ರಥಮ ಸಂಚಿಕೆಯಲ್ಲಿ ಹೀಗೆ ಬರೆಯಲಾಗಿದೆ: ಜನಪ್ರಗತಿಯು ಯಾವ ಪೂರ್ವಸಿದ್ಧಾಂತಕ್ಕೂ ಕಟ್ಟುಬೀಳುವುದಿಲ್ಲ. ಪ್ರಗತಿದಾಯಕವಾದ ಎಲ್ಲ ಉತ್ಕೃಷ್ಟ ವಿಚಾರಗಳಿಗೂ ಅದು ಸ್ವಾಗತ ನೀಡುತ್ತದೆ. ಸಮಸ್ತ ವಿಷಯಗಳಲ್ಲೂ ಕಾಲಧರ್ಮದ ನವ್ಯತೆಯನ್ನು ಅರಸುತ್ತದೆ.

ಜನಪ್ರಗತಿಯನ್ನು ಬಿ.ಎನ್.ಗುಪ್ತ ಅವರು 1959ರ ಮಾರ್ಚ್ 1ರಂದು ತೆಗೆದುಕೊಂಡು ಅವರೇ ಅದರ ಸಂಪಾದಕ ಮತ್ತು ಪ್ರಕಾಶಕರಾದರು. ಉನ್ನತಮಟ್ಟದ ಲೇಖನಗಳು, ಪತ್ರಿಕಾಲಯದ ಆಡಳಿತದ ದಕ್ಷನಿರ್ವಹಣೆ, ನವೀನ ಆಕರ್ಷಕ ಶೀರ್ಷಿಕೆಗಳ ಪ್ರಕಟನೆ

ಮುಂತಾದವುಗಳಿಂದ ನಾಲ್ಕೇ ವರ್ಷಗಳಲ್ಲಿ ಪತ್ರಿಕೆಯ ಪ್ರಸಾರ 1,400ರಿಂದ 21,000ಕ್ಕೆ ಏರಿತು.

ಬಿ.ಎನ್.ಗುಪ್ತ ಅವರು ಜನಪ್ರಗತಿಯಲ್ಲಿ ಬರೆಯತೊಡಗಿದ ಅಯ್ಯಪ್ಪನ ಚಾವಡಿ ಅಂಕಣ ಜನಪ್ರಿಯವಾಗಿತ್ತು. ರಾಜಕೀಯದ ಒಳಹೊರಗನ್ನು ಅರಿತ ಅಯ್ಯಪ್ಪನವರು ಗಮಾರನಾದ, ಆದರೆ ರಾಜಕೀಯ ಪ್ರಜ್ಞೆಯುಳ್ಳ ಬೋರನ ಜೊತೆ ಸಂವಾದ ನಡೆಸುವ ವೈಖರಿಯೇ ಈ ಅಂಕಣದ ಸ್ವಾರಸ್ಯ. ಭಾರತ ದರ್ಶನ, ಲೋಕಸಪ್ತಾಹ - ಇವು ಇನ್ನೆರಡು ಸ್ಥಿರಶೀರ್ಷಿಕೆಗಳು. ಜೊತೆಗೆ ಕಥೆ, ಕವನ ಮುಂತಾದವು ಇದ್ದುವು.

1971 ಜನವರಿ 1ರಿಂದ ಕಲ್ಲೆ ಎನ್.ಶಿವೋತ್ತಮರಾವ್ ಜನ ಪ್ರಗತಿಯನ್ನು ಗುಪ್ತರಿಂದ ವಹಿಸಿಕೊಂಡು ನಡೆಸತೊಡಗಿದರು. (ಎಸ್.ಸಿ.ಜಿ.)

**ಜನಮತ :** ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ ಮಾಸಪತ್ರಿಕೆ. ಗಾಂಧೀಸ್ಮಾರಕ ಸಹಕಾರಿ ವೃತ್ತಪತ್ರಿಕಾ ಸಂಘವನ್ನು 1967 ಆಗಸ್ಟ್ 25ರಂದು ಗುದ್ಲೆಪ್ಪ ಹಳ್ಳಿಕೇರಿ ಮತ್ತು ಗೆಳೆಯರು ಸ್ಥಾಪಿಸಿ, ಅದರ ವತಿಯಿಂದ 1969 ನವೆಂಬರ್ 1ರಂದು ಈ ಪತ್ರಿಕೆಯನ್ನು ಆರಂಭಿಸಿದರು. ಗುದ್ಲೆಪ್ಪ ಹಳ್ಳಿಕೇರಿಯವರು ಇದಕ್ಕೆ ರೂ.35,000 ಷೇರು ಬಂಡವಾಳ ಸಂಗ್ರಹಿಸಿದರು. ಸರ್ಕಾರ ರೂ.30,000 ಬಂಡವಾಳ ಹಾಕಿತು. ಪತ್ರಿಕೆಯನ್ನು ಮೊದಲು ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ಮುದ್ರಿಸಲಾಗುತ್ತಿತ್ತು. 1970ರ ನವೆಂಬರಿನಿಂದ ತನ್ನ ಸ್ವಂತ ಮುದ್ರಣಾಲಯದಲ್ಲಿ ಪತ್ರಿಕೆ ಅಚ್ಚಾಗತೊಡಗಿತು.

ಸಂಘದ ಅಧ್ಯಕ್ಷರಾದ ಗುದ್ಲೆಪ್ಪ ಹಳ್ಳಿಕೇರಿಯವರು ಪತ್ರಿಕೆಯ ಪ್ರಥಮ ಕಾರ್ಯನಿರ್ವಾಹಕ ಸಂಪಾದಕರಾದರು. 1971 ಮೇ 14ರಂದು ಹಳ್ಳಿಕೇರಿಯವರು ನಿಧನರಾದ ಅನಂತರ ಬಿ.ವಿ.ಪೂರ್ಣೇಂದ್ರ ಮತ್ತು ಎಸ್.ಎಂ.ಸಾಗರ್ ಅವರು ಅನುಕ್ರಮವಾಗಿ ಕಾರ್ಯನಿರ್ವಾಹಕ ಸಂಪಾದಕ ರಾದರು. ಪತ್ರಿಕೆಯ ಪ್ರಥಮ ಕಾರ್ಯನಿರತ ಸಂಪಾದಕರು ಕಲ್ಲೆ ಎನ್.ಶಿವೋತ್ತಮರಾವ್. ಅನಂತರ ಅನುಕ್ರಮವಾಗಿ ಪಿ.ಸಿದ್ದಪ್ಪ ಹಾಗೂ ವಿ.ಕೆ.ಜಾಗೀರದಾರ್ ಈ ಕೆಲಸ ನಿರ್ವಹಿಸಿದರು. ಕೊನೆಯವರೆಗೂ ಎಸ್.ಎಂ.ಸಾಗರ್ ಅವರು ಪತ್ರಿಕೆಯ ಮುದ್ರಕರೂ ಪ್ರಕಾಶಕರೂ ಆಗಿದ್ದರು. ಈ ಪತ್ರಿಕೆ 1972ರ ಜನವರಿಯಲ್ಲಿ ಪ್ರಕಟಣೆ ನಿಲ್ಲಿಸಿತು. (ಎಸ್.ಸಿ.ಜಿ.)

**ಜನವಾಣಿ :** ಬೆಂಗಳೂರು ನಗರದಿಂದ ಪ್ರಕಟವಾಗುತ್ತಿರುವ ದಿನ ಪತ್ರಿಕೆ. ಸಂಪಾದಕರು ಜಿ.ಎಸ್.ನರಸಿಂಹ ಸೋಮಯಾಜಿ. ಪ್ರಕಾಶಕರು ಎನ್.ವಿ.ಅಂಜಿ, ಮುದ್ರಕರು ಕೆ.ವಿ.ಅನಂತನ್.

1934ರಲ್ಲಿ ಬಿ.ಎನ್.ಗುಪ್ತ ಅವರು ಈ ಪತ್ರಿಕೆಯನ್ನು ಮದರಾಸಿನಲ್ಲಿ ಪ್ರಾರಂಭಿಸಿದರು. ಪತ್ರಿಕೆಯ ಸ್ವತಂತ್ರ ಧೋರಣೆಯ ಫಲವಾಗಿ ಸರ್ಕಾರದ ಆಗ್ರಹಕ್ಕೆ ಗುರಿಯಾಗಿ ಪತ್ರಿಕೆಯ ಪ್ರಕಾಶನವನ್ನು ಮದರಾಸಿನಿಂದ ಬೆಂಗಳೂರಿಗೆ ವರ್ಗಾಯಿಸಲಾಯಿತು. 1935ರಲ್ಲಿ ಪತ್ರಿಕೆ ಒಂದು ನಿಯಮಿತ ಸಂಸ್ಥೆಯಾಗಿ ಪರಿವರ್ತನೆ ಹೊಂದಿತು. ಪತ್ರಿಕೆಯ ಸಂಪಾದಕರಾಗಿದ್ದವರಲ್ಲಿ ಕೆ.ಸಿ.ರೆಡ್ಡಿ ಮತ್ತು ಬಿ.ಪುಟ್ಟಸ್ವಾಮಯ್ಯ ಪ್ರಮುಖರು. 1939ರಲ್ಲಿ ಪತ್ರಿಕೆಯ ಮಾಲೀಕತ್ವವನ್ನು ಸ್ಥಾಪಕರಾದ ಬಿ.ಎನ್.ಗುಪ್ತರೇ ವಹಿಸಿಕೊಂಡರು.

ಜನವಾಣಿಯು ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ತನ್ನ ಒಬ್ಬ ಪ್ರತಿನಿಧಿಯನ್ನು ಗಾಂಧೀಯವರ ಬಳಿಗೆ ಕಳುಹಿಸಿ ಅವರ ಚಟುವಟಿಕೆಗಳ ಬಗ್ಗೆ ಆ ಪ್ರತಿನಿಧಿ ಕಳುಹಿಸುತ್ತಿದ್ದ ವರದಿಯನ್ನು ಪ್ರಕಟಿಸುತ್ತಿತ್ತು. ಹರಿತವಾದ ಅಗ್ರಲೇಖನ, ನಿರ್ಭಯ ಟೀಕೆ ಟಿಪ್ಪಣಿಗಳಿಂದ ಸ್ವಾತಂತ್ರ್ಯ ಹೋರಾಟಕ್ಕೆ ಸ್ಫೂರ್ತಿ ನೀಡುತ್ತಿತ್ತು.

1945ರಲ್ಲಿ ಬಿ.ಎನ್.ಗುಪ್ತ ಅವರು ಜನವಾಣಿಯನ್ನೂ ವಾರಪತ್ರಿಕೆ ಪ್ರಜಾಮತವನ್ನೂ ಬಿ.ಎಂ.ಶ್ರೀನಿವಾಸಯ್ಯನವರಿಗೆ ಮಾರಿದರು. ಆಗ ಪತ್ರಿಕಾಲಯ ರೋಟರಿ ಮುದ್ರಣಯಂತ್ರ, ಟೆಲಿಪ್ರಿಂಟರ್ ಮುಂತಾದವುಗಳಿಂದ ಸಜ್ಜಾಯಿತು. ಜಿ.ಎಸ್.ನರಸಿಂಹ ಸೋಮಯಾಜಿಯವರು ಆಗಿನಿಂದ ಸಂಪಾದಕತ್ವವನ್ನು ವಹಿಸಿಕೊಂಡು ಪತ್ರಿಕೆಯನ್ನು ನಡೆಸಿಕೊಂಡು ಬಂದರು. 1959ರಲ್ಲಿ ಬಿ.ಎಂ.ಶ್ರೀನಿವಾಸಯ್ಯನವರು ಮರಣ ಹೊಂದಿದ್ದರಿಂದ ಅವರ ಮಗ ಬಿ.ಎಸ್.ನಾರಾಯಣ್ ಪತ್ರಿಕಾ ಮಾಲಿಕತ್ವ ವಹಿಸಿಕೊಂಡು ಕೆಲವು ಸುಧಾರಣೆಗಳನ್ನು ಮಾಡಿದರು. 1964ರಲ್ಲಿ ಈ ಪತ್ರಿಕೆ ಅಮೆರಿಕದ ನ್ಯೂಸ್ ವೀಕ್‌ನೊಡನೆ ಸುದ್ದಿ ಸಂಪಾದನೆಯ ವಿಷಯದಲ್ಲಿ ಒಡಂಬಡಿಕೆ ಮಾಡಿಕೊಂಡು ಜನವಾಣಿ ವಾರ್ತಾ ಸಾಪ್ತಾಹಿಕ ಪ್ರಾರಂಭಿಸಿತು. ಕನ್ನಡ ಜನತೆಗೆ ವಿಚಾರಪೂರ್ಣ ಹಾಗೂ ವೈಜ್ಞಾನಿಕ ಲೇಖನಗಳನ್ನೂ ಜಾಗತಿಕ, ರಾಜಕೀಯ ಹಾಗೂ ಆರ್ಥಿಕ ವ್ಯವಹಾರಗಳ ವಿಶ್ಲೇಷಣೆಯನ್ನೂ ಒದಗಿಸುತ್ತಿದ್ದ ಈ ವಾರ್ತಾ ಸಾಪ್ತಾಹಿಕ ಕೆಲವು ತೊಂದರೆಗಳಿಂದ ಸ್ವಲ್ಪ ಕಾಲದಲ್ಲೇ ನಿಂತುಹೋಯಿತು. (ಜಿ.ಎಸ್.ಎನ್.ಎಸ್.)

**ಜನಶಕ್ತಿ :** ಕಾರ್ಮಿಕರ, ರೈತರ ಮತ್ತು ದಲಿತವರ್ಗದವರ ಸಂಘಟನೆ ಮತ್ತು ಪುರೋಭಿವೃದ್ಧಿಗಾಗಿ ಕರ್ನಾಟಕ ರಾಜ್ಯ ಕಮ್ಯೂನಿಸ್ಟ್ ಪಕ್ಷದಿಂದ 1946ರಲ್ಲಿ ಹುಬ್ಬಳ್ಳಿಯಲ್ಲಿ ಆರಂಭವಾದ ವಾರಪತ್ರಿಕೆ. ಡಿಮೈ ಫೋಲಿಯೋ ಆಕಾರದ ಎಂಟು ಪುಟಗಳ ಪತ್ರಿಕೆಯಾಗಿ ಕರ್ನಾಟಕದ ರೈತರು ಮತ್ತು ಕಾರ್ಮಿಕರಲ್ಲಿ ಪ್ರಚಾರದಲ್ಲಿತ್ತು. ಇದರ ಮೊದಲ ಸಂಪಾದಕರು ಕುಳಕುಂದ ಶಿವರಾಯರು (ನಿರಂಜನ). ಸುಮಾರು ಒಂದು ವರ್ಷದ ಅನಂತರ ಸದಾಶಿವ್ ಇದರ ಸಂಪಾದಕತ್ವವನ್ನು ವಹಿಸಿಕೊಂಡರು. 1948ರಲ್ಲಿ ದೇಶಾದ್ಯಂತ ಕಮ್ಯೂನಿಸ್ಟರು ದಸ್ತಗಿರಿಯಾದಾಗ ಇದರ ಪ್ರಕಟಣೆ ನಿಂತುಹೋಯಿತು.

ಇದು ಮತ್ತೆ 1952ರಲ್ಲಿ ಎಂ.ನರಸಿಂಹನ್ ಅವರ ಸಂಪಾದಕತ್ವದಲ್ಲಿ ಬೆಂಗಳೂರಿನಿಂದ ಪ್ರಕಟವಾಗಲಾರಂಭಿಸಿತು. ಎರಡು ವರ್ಷಗಳ ಕಾಲ ನಡೆದು 1954ರಲ್ಲಿ ಮತ್ತೆ ನಿಂತುಹೋಯಿತು. 1956 ನವೆಂಬರ್ ತಿಂಗಳಲ್ಲಿ ಸಿ.ಆರ್.ಕೃಷ್ಣರಾಯರು ಸಂಪಾದಕರಾಗಿ ಜನಶಕ್ತಿಯನ್ನು ಆರು ವರ್ಷಗಳ ಕಾಲ ಯಶಸ್ವಿಯಾಗಿ ನಡೆಸಿಕೊಂಡು ಬಂದರು. 1962ರಲ್ಲಿ ಮತ್ತೆ ಇದು ನಿಂತುಹೋಯಿತು. ಕಮ್ಯೂನಿಸ್ಟ್ ನಾಯಕ ದಿವಂಗತ ಬಿ.ಕೆ.ಸುಂದರೇಶ್ ಅವರು ಸಂಪಾದಕರಾಗಿ ಇದೇ ಹೆಸರಿನ ವಾರ ಪತ್ರಿಕೆಯೊಂದನ್ನು 1990ರ ದಶಕದಲ್ಲಿ ಚಿಕ್ಕಮಗಳೂರಿನಿಂದ ಪ್ರಕಟಿಸುತ್ತಿದ್ದರು. ಅದೂ ಕ್ರಮೇಣ ನಿಂತುಹೋಯಿತು. *

**ಜನಸಂಖ್ಯೆ :** ಕರ್ನಾಟಕ ರಾಜ್ಯದ ವಿಸ್ತೀರ್ಣ 1,91,791ಚ.ಕಿಮೀ. ಜನಸಂಖ್ಯೆ 5,27,33,958 (2001). ಜನ ಸಾಂದ್ರತೆ ಚ.ಕಿಮೀಗೆ 275. ಕರ್ನಾಟಕ ಭಾರತದ ಒಟ್ಟು ವಿಸ್ತೀರ್ಣದಲ್ಲಿ ಸೇ.5.85 ರಷ್ಟಿದೆ. ಜನಸಂಖ್ಯೆ ಸೇ.5.35 ರಷ್ಟು ಆಗುತ್ತದೆ. ಭಾರತದ ಇತರ ರಾಜ್ಯಗಳೊಡನೆ ಹೋಲಿಸಿದರೆ ಕರ್ನಾಟಕ ವಿಸ್ತೀರ್ಣದಲ್ಲಿ ಎಂಟನೆಯ ಸ್ಥಾನವನ್ನೂ ಜನಸಂಖ್ಯೆಯಲ್ಲಿ ಒಂಬತ್ತನೆಯ ಸ್ಥಾನವನ್ನೂ ಪಡೆದಿದೆ. 1991ರಲ್ಲಿ ಜನಸಂಖ್ಯೆಯ ದೃಷ್ಟಿಯಿಂದಲೂ ಇದರ ಸ್ಥಾನ ಎಂಟನೆಯದಾಗಿತ್ತು.

**ಬೆಳವಣಿಗೆ :** ಕರ್ನಾಟಕದ ಜನಸಂಖ್ಯೆ 1901ರಲ್ಲಿ 1.3 ಕೋಟಿಯಿತ್ತು; ಭಾರತದ ಜನಸಂಖ್ಯೆ 23.83ಕೋಟಿ. ಅಲ್ಲಿಂದ ಮುಂದೆ, 1901-11ರ ದಶಕವನ್ನು ಬಿಟ್ಟರೆ ಉಳಿದ ದಶಕಗಳಲ್ಲೆಲ್ಲ ಅದು ನಿರಂತರವಾಗಿ ಏರುತ್ತಲೇ ಇದೆ. ಆ ದಶಕದಲ್ಲಿ ದೇಶದಲ್ಲಿ ಹಬ್ಬಿದ ಇನ್‌ಫ್ಲುಯನ್‌ಜಾ ಕಾಯಿಲೆಯಿಂದಾಗಿ ಜನಸಂಖ್ಯೆ ಸೇ.1.09ರಷ್ಟು ಇಳಿಯಿತು. ಭಾರತದ ಜನಸಂಖ್ಯೆಯಲ್ಲಾಗಿದ್ದ ಇಳಿತ ಸೇ.0.30 ಅಲ್ಲಿಂದ ಈಚೆಗೆ ಸಾಮಾನ್ಯವಾಗಿ ಭಾರತದ ಜನಸಂಖ್ಯೆಯ ಏರಿಕೆಯ ದರಕ್ಕಿಂತ ಕರ್ನಾಟಕದಲ್ಲಿ ಏರಿಕೆಯ ದರ ಕಡಿಮೆಯಾಗಿಯೇ ಇದೆ.

1991-2001ರ ದಶಕದಲ್ಲಿ ಕರ್ನಾಟಕದ ಜನಸಂಖ್ಯೆಯ ಏರಿಕೆಯ ದರ ಸೇ.17.25. ಇದರ ಹಿಂದಿನ ದಶಕದಲ್ಲಿ ಈ ದರ ಸೇ.21.12 ಆಗಿತ್ತು. ಒಟ್ಟಾರೆ ಭಾರತದ ಜನಸಂಖ್ಯೆ ಅಧಿಕವಾಗಿದ್ದರೂ ಏರಿಕೆಯ ದರದಲ್ಲಿ ಗಮನಾರ್ಹವಾದ ಇಳಿತವಾಗಿದೆ. 1991-2001ರಲ್ಲಿ ಭಾರತದ ಜನಸಂಖ್ಯೆಯಲ್ಲಿ ಸೇ.21.35ರ ಏರಿಕೆಯಾಯಿತು. ಕರ್ನಾಟಕದ ಜನಸಂಖ್ಯೆಯ ಏರಿಕೆಯ ದರ ಭಾರತದಕ್ಕಿಂತಲೂ ಕಡಮೆಯಾಗಿತ್ತು. ದೇಶದಲ್ಲಿ ಅತ್ಯಂತ ಕಡಿಮೆಯ ಏರಿಕೆಯ ದರ ಸಾಧಿಸಿದ ರಾಜ್ಯ ಕೇರಳ (9.4%).

ಯಾವುದೇ ದೇಶದ ಜನಸಂಖ್ಯೆಯ ಬೆಳವಣಿಗೆಯನ್ನು ಮೂರು ಹಂತಗಳಾಗಿ ವಿಂಗಡಿಸಿ ವಿವರಿಸುವುದು ರೂಢಿ. ಮೊದಲನೆಯದು ಹಿಂದುಳಿದ ಆರ್ಥಿಕ ಸ್ಥಿತಿಯದು. ಎರಡನೆಯದು ಪರಿವರ್ತನೆಯ ಹಂತ.

ಮೂರನೆಯದು ಮುಂದುವರಿದ ಅಥವಾ ಪ್ರಗತಿಪರ ಹಂತ. ಹಿಂದುಳಿದ ಆರ್ಥಿಕ ಸ್ಥಿತಿಯ ಹಂತದಲ್ಲಿ ಜನನ ಹಾಗೂ ಮರಣ ದರಗಳು ಹೆಚ್ಚಿನ ಮಟ್ಟದಲ್ಲಿರುತ್ತವೆ. ಜನರ ತಲಾ ಆದಾಯ ಕಡಿಮೆಯಾಗಿರುತ್ತದೆ. ವೈದ್ಯಕೀಯ ಸೌಲಭ್ಯ, ಪೌಷ್ಠಿಕ ಆಹಾರ, ನೈರ್ಮಲ್ಯ ಹಾಗೂ ವೈದ್ಯಕೀಯ ಸೌಲಭ್ಯಗಳ ಅಭಾವದಿಂದಾಗಿ ಮರಣದ ಅನುಪಾತ ಹೆಚ್ಚಾಗಿರುತ್ತದೆ. ಹೆಚ್ಚು ಮಕ್ಕಳನ್ನು ಪಡೆಯಬೇಕೆಂಬ ಆಸೆಯನ್ನು ಪುಷ್ಟೀಕರಿಸುವಂಥ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ನಂಬಿಕೆಗಳು ಹಿಂದುಳಿದ ಆರ್ಥಿಕತೆಯಲ್ಲಿ ಪ್ರಬಲವಾಗಿರುವುದರಿಂದ ಈ ಹಂತದಲ್ಲಿ ಜನನ ದರದ ಅನುಪಾತ ಹೆಚ್ಚು. ಹೀಗೆ ಜನನ ಮತ್ತು ಮರಣ ದರಗಳೆರಡು ಹೆಚ್ಚಾಗಿರುವ ಕಾರಣ ಜನಸಂಖ್ಯೆ ಬೆಳವಣಿಗೆಯ ದರ ಒಂದು ಮಿತಿಯಲ್ಲಿರುತ್ತದೆ. ಆದರೂ ಒಟ್ಟಾರೆ ಜನಸಂಖ್ಯೆ ಏರುತ್ತಲೇ ಇರಬಹುದು. ಆರ್ಥಿಕತೆಯಲ್ಲಿ ಬೆಳವಣಿಗೆ ಕಂಡುಬಂದಂತೆ ತಲಾ ವರಮಾನ ಉತ್ತಮಗೊಂಡು ಪೌಷ್ಠಿಕ ಆಹಾರ ನೈರ್ಮಲ್ಯ ಸಾರ್ವಜನಿಕ ಆರೋಗ್ಯ ಸುಧಾರಿಸಿ, ವೈದ್ಯಕೀಯ ಸೌಲಭ್ಯಗಳು ಜನರಿಗೆ ತಕ್ಕಷ್ಟು ದೊರಕಿ ಮರಣ ದರದಲ್ಲಿ ಇಳಿಕೆ ಉಂಟಾಗುತ್ತದೆ. ಆದರೆ ಜನರ ಸಾಮಾಜಿಕ ಹಾಗೂ ಧಾರ್ಮಿಕ ಭಾವನೆಗಳು ಬೇಗ ಬದಲಾವಣೆಯಾಗುವುದಿಲ್ಲವಾದ್ದರಿಂದ ಮಕ್ಕಳನ್ನು ಪಡೆಯುವುದರ ಬಗ್ಗೆ ಅವರ ಭಾವನೆ ಸ್ಥಿರ ಸ್ಥಿತಿಯಲ್ಲಿರುತ್ತದೆ. ಆದ ಕಾರಣ ಈ ಹಂತದಲ್ಲಿ ಮರಣ ದರ ಇಳಿಕೆಗೊಂಡರೂ ಜನನ ದರ ಹಿಂದಿನ ಮಟ್ಟದಲ್ಲಿಯೇ ಮುಂದುವರಿಯುತ್ತದೆ. ಹೀಗಾಗಿ ಈ ಹಂತದಲ್ಲಿ ಜನಸಂಖ್ಯೆಯು ಬೆಳವಣಿಗೆಯ ದರ ಏರಲು ಪ್ರಾರಂಭಿಸುತ್ತದೆ. ಇದು ಅವಸ್ಥಾ ಪರಿವರ್ತನದ ಹಂತ. ಆರ್ಥಿಕತೆ ಮುಂದುವರಿದ ಹಂತವನ್ನು ಮುಟ್ಟಿದ ಅನಂತರ ಜನರ ಭಾವನೆಗಳಲ್ಲಿ ಬದಲಾವಣೆಯಾಗಿ ಜನನ ದರವೂ ಇಳಿಮುಖವಾಗುತ್ತದೆ. ಹಾಗೂ ಅದು ಒಂದು ಕನಿಷ್ಠ ಮಟ್ಟದಲ್ಲಿ ಸ್ಥಿರಗೊಳ್ಳುತ್ತದೆ. ನಿರಂತರವಾಗಿ ಇಳಿಯುತ್ತಿದ್ದ ಮರಣ ದರವೂ ಒಂದು ಕನಿಷ್ಠ ಮಟ್ಟದಲ್ಲಿ ಸ್ಥಿರಗೊಳ್ಳುತ್ತದೆ. ಹೀಗೆ ಎರಡು ದರಗಳೂ ಈಗ ಕೆಳಗಿನ ಮಟ್ಟದಲ್ಲಿ ಒಂದಕ್ಕೊಂದು ಸಮೀಪವಾಗಿದ್ದು ಸ್ಥಿರಗೊಳ್ಳುವುದರಿಂದ ಜನಸಂಖ್ಯೆಯ ಬೆಳವಣಿಗೆಯ ದರವೂ ಇಳಿಯತೊಡಗುತ್ತದೆ.

ಕರ್ನಾಟಕದಲ್ಲಿ ಜನನ ಮತ್ತು ಮರಣ ದರಗಳು 1921ರ ತನಕ ಹೆಚ್ಚಿನ ಮಟ್ಟದಲ್ಲಿದ್ದು ಅವು ಒಂದಕ್ಕೊಂದು ಸಮೀಪವಾಗಿದ್ದುವು. ಈ ಕಾರಣದಿಂದ ಈ ಅವಧಿಯ ದಶಕವಾರು ಜನಸಂಖ್ಯೆಯ ಬೆಳವಣಿಗೆ ದರ ಸಹ ತೀರ ಕಡಿಮೆಯಾಗಿತ್ತು. ಅನಂತರದ ಅವಧಿಯಲ್ಲಿ ಜನಸಂಖ್ಯೆಯ ಬೆಳವಣಿಗೆ ದರ ಏರಲು ಪ್ರಾರಂಭಿಸಿತು. ಈ ಸ್ಥಿತಿ ಮೇಲೆ ವಿವರಿಸಿದ ಎರಡನೆಯ ಹಂತದ ಸ್ಥಿತಿಗೆ ಈಗ ಅವಸ್ಥಾ ಪರಿವರ್ತನೆಯ ಹಂತ ಮುಟ್ಟಿತ್ತು. ಎಂದರೆ ಮರಣದರ ತೀಕ್ಷ್ಣವಾಗಿ ಇಳಿಕೆಗೊಂಡರೂ ಜನನ ದರದಲ್ಲಿ ಹೆಚ್ಚು ಇಳಿಕೆಯಾಗಲಿಲ್ಲ. ಈಚಿನ ದಶಕ ಅಧಿಕ ದರದಲ್ಲಿ ಬೆಳೆಯುವ ಪ್ರವೃತ್ತಿಗೆ ಬಲಿಯಾಗಿತ್ತು. 1991-2001ರ ದಶಕದಲ್ಲಿ ಜನನ ದರ ಮರಣ ದರಗಳೆರಡೂ ಇಳಿಯುತ್ತಿರುವುದರಿಂದ ಕ್ರಮೇಣ ಇವೆರಡು ಪರಸ್ಪರ ಹತ್ತಿರಕ್ಕೆ ಬಂದು ಮೂರನೆಯ ಸ್ಥಿರ ಜನಸಂಖ್ಯೆಯ ಹಂತದತ್ತ ರಾಜ್ಯ ಸಾಗುತ್ತಿದೆ ಎನ್ನಬಹುದು.

**ಜನಸಂಖ್ಯೆಯ ಹಂಚಿಕೆ :** ಕರ್ನಾಟಕದ ಜನಸಾಂದ್ರತೆ ಚ.ಕಿಮೀ. (275) ಭಾರತದ ಜನಸಾಂದ್ರತೆಗಿಂತ (324) ಕಡಿಮೆ. ಕರ್ನಾಟಕದ ಜನಸಾಂದ್ರತೆ ಕೇರಳ (819), ಪಶ್ಚಿಮ ಬಂಗಾಲ (904), ತಮಿಳು ನಾಡು (478), ಪಂಜಾಬ್ (482) ಮೊದಲಾದವುಗಳಿಗಿಂತ ಕಡಿಮೆ. ಮಧ್ಯಪ್ರದೇಶ (196) ರಾಜಸ್ತಾನ (165), ಹಿಮಾಚಲ ಪ್ರದೇಶ (109) ಇವುಗಳಿಗಿಂತ ಹೆಚ್ಚು.

ಜನಸಾಂದ್ರತೆಯಲ್ಲಿ ಕರ್ನಾಟಕದಲ್ಲೇ ಜಿಲ್ಲೆಯಿಂದ ಜಿಲ್ಲೆಗೆ ವ್ಯತ್ಯಾಸವಿದೆ. ಬೆಂಗಳೂರು ನಗರ ಜಿಲ್ಲೆಯ ಜನಸಾಂದ್ರತೆ 2979. ಎಲ್ಲಕ್ಕಿಂತಲೂ ಹೆಚ್ಚು. ಬೆಂಗಳೂರು ಗ್ರಾಮಾಂತರ ಜಿಲ್ಲೆಯದು 323. ಎಲ್ಲಕ್ಕಿಂತ ಕಡಿಮೆ ಉತ್ತರ ಕನ್ನಡ ಜಿಲ್ಲೆಯದು 132. ರಾಜ್ಯದ ಸರಾ ಸರಿಗಿಂತ ಹೆಚ್ಚು ಜನಸಾಂದ್ರತೆ. ಇರುವ ಉಳಿದ ಜಿಲ್ಲೆಗಳು ಬೆಳಗಾಂವಿ 314, ಧಾರವಾಡ 376, ಕೋಲಾರ 307, ಮಂಡ್ಯ 355, ಮೈಸೂರು 383, ದಕ್ಷಿಣ ಕನ್ನಡ ಜಿಲ್ಲೆ 416, ಉಡುಪಿ 286, ದಾವಣಗೆರೆ 302, ಹಾವೇರಿ 298 ಮತ್ತು ಬೀದರ್ 276. ರಾಜ್ಯದ ಜನಸಾಂದ್ರತೆ ಸರಾಸರಿಗಿಂತ ಕಡಿಮೆ ಇರುವ ಜಿಲ್ಲೆಗಳು ಬಳ್ಳಾರಿ 240, ಬಿಜಾಪುರ 172, ಚಿಕ್ಕಮಗಳೂರು 158, ಚಿತ್ರದುರ್ಗ 179, ಕೊಡಗು 133, ಗುಲ್ಬರ್ಗ 193, ಗದಗ 209, ಉತ್ತರ ಕನ್ನಡ 132, ಕೊಪ್ಪಳ 166, ಚಾಮರಾಜನಗರ 189, ರಾಯಚೂರು 241 ಮತ್ತು ಶಿವಮೊಗ್ಗ 193.

ಹಂಚಿಕೆಯಲ್ಲಿ ಗ್ರಾಮ ಹಾಗೂ ನಗರವಾರು ಜನಸಂಖ್ಯೆಯ ಹಂಚಿಕೆಯನ್ನೂ ಗಮನಿಸಬಹುದು: 1. ನಗರೀಕರಣದ ಮಟ್ಟ ಹಾಗೂ ಅದು ನಡೆಯುತ್ತಿರುವ ದಿಶೆ. 2. ಆರ್ಥಿಕತೆಯ ರಚನೆಯ ಸ್ವರೂಪ - ಎಂದರೆ ಆರ್ಥಿಕತೆಯು ಗ್ರಾಮೋದ್ಯೋಗ ಪ್ರಧಾನವೋ ಅಥವಾ ನಗರೋದ್ಯಮ ಪ್ರಧಾನವೋ ಎಂಬ ಎರಡು ಅಂಶಗಳನ್ನು ಸೂಚಿಸುತ್ತದೆ.

1961ರ ಜನಗಣತಿಯ ತನಕ ಯಾವುದೇ ಊರನ್ನು ಗ್ರಾಮವೇ ಅಥವಾ ನಗರವೇ ಎಂದು ವಿಂಗಡಿಸುವುದರಲ್ಲಿ ಸರಿಯಾದ ಮಾನದಂಡವನ್ನು ಉಪಯೋಗಿಸುತ್ತಿರಲಿಲ್ಲ. ಈಚೆಗೆ ನಗರವೆಂದು ಗುರುತಿಸಲು ಈ ಕೆಲವು ನಿರ್ಣಾಯಕಗಳನ್ನು ಇಟ್ಟುಕೊಳ್ಳಲಾಗಿದೆ: 1. ಎಲ್ಲ ಮುನಿಸಿಪಾಲಿಟಿಗಳು ಹಾಗೂ ದಂಡುಗಳು. 2. ಜನಸಂಖ್ಯೆ 5000ಕ್ಕಿಂತ ಮತ್ತು ಜನಸಾಂದ್ರತೆ ಚ.ಕಿಮೀಗೆ 400ಕ್ಕಿಂತ ಕಡಿಮೆ ಇಲ್ಲದ ಹಾಗೂ ಕನಿಷ್ಠ ಪಕ್ಷ ಮುಕ್ಕಾಲು ಪಾಲು ಪ್ರಾಯಸ್ಥ ಗಂಡಸರು ಕೃಷಿಯೇತರ ಉದ್ಯಮಗಳಲ್ಲಿ ತೊಡಗಿರುವ ಊರುಗಳು.

1901 ಮತ್ತು 1971ರ ಅವಧಿಯಲ್ಲಿ ನಗರದ ಜನಸಂಖ್ಯೆ 15.2 ಲಕ್ಷದಿಂದ 71.1 ಲಕ್ಷಕ್ಕೆ ಏರಿತು. ಇದೇ ಅವಧಿಯಲ್ಲಿ ಗ್ರಾಮವಾಸಿಗಳ ಸಂಖ್ಯೆ 115.3 ಲಕ್ಷದಿಂದ 221.9 ಲಕ್ಷಕ್ಕೆ ಏರಿತು. ಎಪ್ಪತ್ತು ವರ್ಷಗಳಲ್ಲಿ ನಗರದ ಜನಸಂಖ್ಯೆ ಸೇ.367.7 ರಷ್ಟು ಗ್ರಾಮವಾಸಿಗಳ ಸಂಖ್ಯೆ ಸೇ.92.4ರಷ್ಟು ಏರಿಕೆಯನ್ನು ತೋರಿಸಿದುವು. ರಾಜ್ಯದ ಒಟ್ಟು ಜನಸಂಖ್ಯೆಯ ಏರಿಕೆಯೊಡನೆ ಹೋಲಿಸಿದರೆ ಗ್ರಾಮಪ್ರದೇಶದ ಜನಸಂಖ್ಯೆ ಏರಿಕೆ ಕಡಿಮೆ. ಪಟ್ಟಣ ಪ್ರದೇಶದ ಜನಸಂಖ್ಯೆ ಏರಿಕೆ ತೀರ ಅಧಿಕ. ದಶಕವಾರು ಏರಿಕೆಯಲ್ಲೂ ಇದೇ ನಮೂನೆಯನ್ನು ಗ್ರಾಮ ಹಾಗೂ ನಗರ ಪ್ರದೇಶದ ಜನಸಂಖ್ಯೆ ವೃದ್ಧಿಯಲ್ಲಿ ಕಾಣಬಹುದು. ನಗರ ಪ್ರದೇಶದ ಜನಸಂಖ್ಯೆ ಅಧಿಕ ದರದಲ್ಲಿ ಬೆಳೆಯಲು ಕಾರಣವೆಂದರೆ ಗ್ರಾಮವಾಸಿಗಳು ಪಟ್ಟಣಗಳಿಗೆ ವಲಸೆ ಬರುವುದು. ನಗರ ಪ್ರದೇಶದ ಜನಸಂಖ್ಯೆ ಅಧಿಕ ದರದಲ್ಲಿ ಬೆಳೆಯುತ್ತಿರುವ ಕಾರಣ ಒಟ್ಟು ಜನಸಂಖ್ಯೆಯಲ್ಲಿ ಅದರ ಪ್ರಮಾಣ ಹೆಚ್ಚಾಗುತ್ತ ಹೋಗುತ್ತಿದೆ. ಈ ಪ್ರಮಾಣ ಕರ್ನಾಟಕದಲ್ಲಿ 1901ರಲ್ಲಿ ಸೇ.11.6 ಇದ್ದುದು 1971ರಲ್ಲಿ ಸೇ.24.3ಕ್ಕೆ ಏರಿತು. ಕರ್ನಾಟಕದಲ್ಲಿ ನಗರೀಕರಣ ವೇಗವಾಗಿ ಸಾಗುತ್ತಿದೆ ಎಂಬುದು ಇದರಿಂದ ತಿಳಿಯುತ್ತದೆ.

1991-2001ರಲ್ಲಿ ರಾಜ್ಯದ ಜನಸಂಖ್ಯೆ ಶೇ.17.25ರ ದರದಲ್ಲಿ ಏರಿದರೆ, ಗ್ರಾಮೀಣ ಪ್ರದೇಶದ ಜನಸಂಖ್ಯೆಯು ಏರಿಕೆಯು ದರ ಸೇ.12.05, ನಗರದ ಜನಸಂಖ್ಯೆಯ ಏರಿಕೆಯ ದರ ಸೇ.28.85 ಆಗಿತ್ತು.

ಗ್ರಾಮೀಣ ಜನಸಂಖ್ಯೆಯಲ್ಲಿ ಅತ್ಯಂತ ಹೆಚ್ಚಿನ ಬೆಳವಣಿಗೆ ದರ ಸಾಧಿಸಿದ ಜಿಲ್ಲೆ ಕೊಪ್ಪಳ (22.87%), ಅತ್ಯಂತ ಕಡಿಮೆ ಬೆಳವಣಿಗೆ ಸಾಧಿಸಿದ್ದು ದಕ್ಷಿಣ ಕನ್ನಡ (4.03%).

ಪಟ್ಟಣ ಜನಸಂಖ್ಯೆಯಲ್ಲಿ ಗರಿಷ್ಠ ಏರಿಕೆಯ ದರ ಹಾವೇರಿ ಜಿಲ್ಲೆಯದು (46.69%). ನಗರ ಜನಸಂಖ್ಯೆಯ ದರದಲ್ಲಿ ಗಮನಾರ್ಹ ಇಳಿತವಾದ್ದು ಉಡುಪಿಯಲ್ಲಿ (9.9%) ಮತ್ತು ಕೊಡಗಿನಲ್ಲಿ (3.49%).

ಕರ್ನಾಟಕದಲ್ಲಿ ನಗರದ ಜನಸಂಖ್ಯೆ 1,79,19,858 (2001). ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಇದರ ಪ್ರಮಾಣ (33.98%). ಬೆಂಗಳೂರು ಜಿಲ್ಲೆಯ ನಗರ ಜನಸಂಖ್ಯೆ 57,45,417. ಇದು ಆ ಜಿಲ್ಲೆಯ ಒಟ್ಟು ಜನಸಂಖ್ಯೆಯ (65,23,110) ಸೆ.88.08. ಕೊಡುಗು ಜಿಲ್ಲೆಯ ನಗರದ ಜನಸಂಖ್ಯೆ ಪ್ರಮಾಣ (13.79) ಅತ್ಯಂತ ಕಡಿಮೆ. ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ (5,27,33,958) 2,68,56,343 ಮಂದಿ ಪುರುಷರು, 2,58,77,615 ಸ್ತ್ರೀಯರು (2001) ಕಳೆದ ಹಲವು ದಶಕಗಳಲ್ಲಿ ಸ್ತ್ರೀ ಪುರುಷರ ಸಂಖ್ಯಾನುಪಾತ ಸ್ತ್ರೀಯರ ದೃಷ್ಟಿಯಿಂದ

ಪ್ರತಿಕೂಲದ್ದಾಗಿತ್ತು. 1901ರಲ್ಲಿ ಪ್ರತಿ 1000 ಪುರುಷರಿಗೆ 983 ಮಂದಿ ಸ್ತ್ರೀಯರಿದ್ದರು. ಈ ಅನುಪಾತ ಕ್ರಮೇಣವಾಗಿ ಇನ್ನೂ ಇಳಿಯುತ್ತಿತ್ತು. 1971ರಲ್ಲಿ ಇದು 959ಕ್ಕೆ ತಗ್ಗಿತು. 1991-2001ರ ದಶಕದಲ್ಲಿ ಇದು ಮತ್ತೆ ಏರುವ ಪ್ರವೃತ್ತಿಗೆ ಒಳಗಾದದ್ದು ಸಮಾಧಾನದ ಸಂಗತಿ. 2001ರಲ್ಲಿ ಪ್ರತಿ 1000 ಪುರುಷರಿಗೆ ಸ್ತ್ರೀಯರ ಸಂಖ್ಯೆ 964 ಆಗಿತ್ತು. ಬಹುತೇಕ ಎಲ್ಲ ಜಿಲ್ಲೆಗಳಲ್ಲಿ ಈ ಪ್ರವೃತ್ತಿ ವ್ಯಕ್ತವಾಗಿದೆ. ಈ ವಿಚಾರದಲ್ಲಿ ಉಡುಪಿ ಜಿಲ್ಲೆಯದು ಅಗ್ರಸ್ಥಾನ. ಅಲ್ಲಿ ಪ್ರತಿ ಸಾವಿರ ಗಂಡಸರಿಗೆ 1127 ಮಹಿಳೆಯರಿದ್ದಾರೆ. ಆದರೆ ತುಂಬ ವಿಚಿತ್ರದ ಸಂಗತಿಯೆಂದರೆ, ಕಳೆದ ಐದು ಜನಗಣತಿಗಳಲ್ಲಿ ಈ ಜಿಲ್ಲೆಯ ಪುರುಷ-ಸ್ತ್ರೀ ಅನುಪಾತ ಇಳಿಯುತ್ತ ಬಂದಿದೆ. 1991ರಲ್ಲಿ 1000 ಗಂಡಸರಿಗೆ 1134 ಸ್ತ್ರೀಯರಿದ್ದರು. ಈಗ ಈ ಸಂಖ್ಯೆ 1127ಕ್ಕೆ ಇಳಿದಿದೆ.

ಉಡುಪಿಯ ಅನಂತರದ ಸ್ಥಾನ ದಕ್ಷಿಣ ಕನ್ನಡ ಜಿಲ್ಲೆಗೆ. ಅಲ್ಲಿ ಪ್ರತಿ 1000 ಪುರುಷರಿಗೆ 1023 ಮಂದಿ ಸ್ತ್ರೀಯರು; ಹಾಸನದಲ್ಲಿ ಪ್ರತಿ 1000 ಪುರಷರಿಗೆ 1005 ಮಂದಿ ಸ್ತ್ರೀಯರು. ಬಾಗಲಕೋಟೆ, ಬೀದರ್, ಗದಗ ಜಿಲ್ಲೆಗಳಲ್ಲಿ ಅನುಪಾತ ತೀವ್ರವಾಗಿ ಇಳಿಯುತ್ತಿದೆ. ಬಿಜಾಪುರ ಜಿಲ್ಲೆಯಲ್ಲಿ 1991ರ ಅನುಪಾತ 948, ಈಗಲೂ ಇದೇ ಮುಂದುವರಿದಿದೆ. ಆದರೆ 1981ರಲ್ಲಿ ಇದು 970 ಆಗಿತ್ತು. ಅತ್ಯಂತ ಕಡಿಮೆ ಅನುಪಾತ ಬೆಂಗಳೂರು ಜಿಲ್ಲೆಯದು. 1991ರ ಅನುಪಾತ 903, 2001ರಲ್ಲಿ ಇದು 908ಕ್ಕೆ ಏರಿತು.

ಸಾಕ್ಷರತೆಯ ವಿಚಾರದಲ್ಲಿ ಬೆಂಗಳೂರು ಜಿಲ್ಲೆಯದು ಅಗ್ರಸ್ಥಾನ. ಇಡೀ ಕರ್ನಾಟಕದಲ್ಲಿ 1991ರಲ್ಲಿ ಸಾಕ್ಷರತೆಯ ಸೇಕಡವಾರು 56.04. 2001ರಲ್ಲಿ ಇದು 67.04ಕ್ಕೆ ಏರಿತು. ಮಹಿಳೆಯರಲ್ಲಿ ಸಾಕ್ಷರತೆ ಸೇ.44.34ರಿಂದ ಸೇ.57.45ಕ್ಕೆ ಹೆಚ್ಚಿತು. ಪುರುಷರ ಸಾಕ್ಷರತೆಯ ಪ್ರಮಾಣ ಸೇ.67.26 ರಿಂದ ಸೇ.76.29ಕ್ಕೆ ಅಧಿಕವಾಯಿತು. ಬೆಂಗಳೂರು ಜಿಲ್ಲೆಯಲ್ಲಿ ಸಾಕ್ಷರತೆಯ ಪ್ರಮಾಣ ಸೇ.83.91. ದಕ್ಷಿಣ ಕನ್ನಡ ಜಿಲ್ಲೆಯದು ಅನಂತರದ ಸ್ಥಾನ; ಸೇ.83.47. ಅತ್ಯಂತ ಕಡಿಮೆ ಸಾಕ್ಷರತೆಯ ಜಿಲ್ಲೆ ರಾಯಚೂರು (49.54). ಗುಲ್ಬರ್ಗ ಜಿಲ್ಲೆ ಇದಕ್ಕಿಂತ ಸ್ವಲ್ಪ ಮೇಲಿದೆ. (ಸೇ.50.65).

ಕರ್ನಾಟಕದಲ್ಲಿ ಒಟ್ಟು ಸಾಕ್ಷರತೆಯ ಪ್ರಮಾಣ (67.04%). ಒಟ್ಟು ಭಾರತದಕ್ಕಿಂತ (65.38%) ಅಧಿಕ. ಕರ್ನಾಟಕದ್ದಕ್ಕಿಂತ ಹೆಚ್ಚಿನ ಸಾಕ್ಷರತೆಯ ಪ್ರಮಾಣ ಇರುವ ರಾಜ್ಯಗಳು ಒಕ್ಕೂಟ ಪ್ರದೇಶಗಳು. ಹಿಮಾಚಲ ಪ್ರದೇಶ (77.13), ಪಂಜಾಬ್ (69.95), ಚಂಡೀಗಢ (81,76), ಉತ್ತರಾಂಚಲ (72.28), ಹರಿಯಾಣ (68.59), ದೆಹಲಿ (81.82), ಸಿಕ್ಕಿಂ (69.68), ಅರುಣಾಚಲ ಪ್ರದೇಶ (67.11), ಮಣಿಪುರ (68.87), ಮಿಜೋರಂ (88.49), ತ್ರಿಪುರಾ (73.66), ಪಶ್ಚಿಮ ಬಂಗಾಲ (69.22), ಗುಜರಾತ್ (69.97), ಡಮನ್ ಮತ್ತು ಡಿಯು (81.09), ಮಹಾರಾಷ್ಟ್ರ (77.27), ಗೋವ (82.32), ಲಕ್ಷದ್ವೀಪ (87.52), ಕೇರಳ (90.92), ತಮಿಳುನಾಡು (73.47), ಪಾಂಡಿಚೇರಿ (81.49), ಆಂಡಮಾನ್ ಮತ್ತು ನಿಕೋಬಾರ್ (81.18).

**ಜನಶಕ್ತಿ :** ಆರ್ಥಿಕತೆಯ ಬೆಳವಣಿಗೆ ಹಾಗೂ ಅಲ್ಲಿ ಉಪಯೋಗಿಸಲಾಗುವ ತಾಂತ್ರಿಕ ಕ್ರಮಗಳನ್ನು ನಿರ್ಧರಿಸುವ ಅಂಶಗಳಲ್ಲಿ ಜನಶಕ್ತಿಯೂ ಒಂದು. ಸಾಮಾನ್ಯವಾಗಿ ಜನಶಕ್ತಿಯನ್ನು ಉದ್ಯೋಗಿಗಳ ಮತ್ತು ನಿರುದ್ಯೋಗಿಗಳ ಮೊತ್ತವನ್ನು ಒಟ್ಟುಗೂಡಿಸುವುದರ ಮೂಲಕ ಅಂದಾಜು ಮಾಡುವುದು ರೂಢಿಯಾದರೂ ಕರ್ನಾಟಕಕ್ಕೆ ಸಂಬಂಧಿಸಿದ ಇಂಥ' ಅಂಕಿಅಂಶಗಳ ಅಭಾವವಿರುವುದರಿಂದ ಈ ಸಂಬಂಧ'ದಲ್ಲಿ ಬೇರೊಂದು ಕ್ರಮವನ್ನು ಅನುಸರಿಸಬಹುದು. ಜನಗಣತಿ ವರದಿಗಳಲ್ಲಿ ಕಾಣುವ ಜನಸಂಖ್ಯೆಯ ವಯೋವರ್ಗಗಳಲ್ಲಿ (0-14, 15-34, 35-59 ಮತ್ತು 60+),0-14ರ ವ್ಯಕ್ತಿಗಳು ಹಸುಳೆಗಳು ಹಾಗೂ ಶಾಲೆಗೆ ಹೋಗುವ ಮಕ್ಕಳು ಮತ್ತು 60+ ವರ್ಗದ ವ್ಯಕ್ತಿಗಳು ವೃದ್ಧರು. ಇವರನ್ನು ಬಿಟ್ಟು 15-59ರ ವಯೋವರ್ಗದವರನ್ನು ಮಾತ್ರ ಶ್ರಮಿಸಬಹುದುದಾದವರೆಂದು ಎಣಿಸಬಹುದು. ಈ ವರ್ಗದಲ್ಲೂ ಕೆಲವರು - ಎಂದರೆ ವಿದ್ಯಾರ್ಥಿಗಳು, ಮದುವೆಯಾದ ಸ್ತ್ರೀಯರು, ಬೇಗ ಕೆಲಸದಿಂದ ವಿಶ್ರಾಂತಿ ಪಡೆಯುವವರು, ಭಿಕ್ಷುಕರು, ವೇತನಕ್ಕಾಗಿ ಕೆಲಸಮಾಡಲು ಇಷ್ಟಪಡದೆ ಇರುವರು ಇರಬಹುದು. ಆದ್ದರಿಂದ 15-59 ವಯೋವರ್ಗದ ಕೆಲಸದಲ್ಲಿ ತೊಡಗಿಸಬಹುದಾದ ವ್ಯಕ್ತಿಗಳ ಗುಂಪಿನಿಂದ ಕೆಲಸಮಾಡಲು ಇಷ್ಟಪಡುವ ವ್ಯಕ್ತಿಗಳನ್ನು ನಿಷ್ಪನ್ನ ಮಾಡಿದರೆ ಅವರು ಜನಶಕ್ತಿಯನ್ನು ಪ್ರತಿನಿಧಿಸುತ್ತಾರೆ. ಭಾರತದ ಯೋಜನಾ ಆಯೋಗ ಎರಡನೆಯ ಯೋಜನಾವಧಿಯಲ್ಲಿ 15-59ರ ವಯೋವರ್ಗದವರಲ್ಲಿ ಪುರುಷರಲ್ಲಿ ಸೇ.90; ಸ್ತ್ರೀಯರಲ್ಲಿ ಸೇ.35 ಮಂದಿ ಕೆಲಸವನ್ನು ಅರಸುವವರೆಂದು ಅಭಿಪ್ರಾಯಪಟ್ಟಿದೆ ಹಾಗೂ ಸ್ತ್ರೀಯರ ಬಗ್ಗೆ ಈ ಪ್ರಮಾಣ ಕಾಲಕ್ರಮದಲ್ಲಿ ಏರುತ್ತದೆ ಎಂದು ಯೋಜನಾವಧಿಯಲ್ಲಿ ಈ ಪ್ರಮಾಣವನ್ನು ಸೇ.40 ಎಂದು ನಿರ್ಧರಿಸಿತು. ಈ ಆಧಾರದ ಮೇಲೆ ಹೇಳುವುದಾದರೆ ಕೋಷ್ಟಕ 6ರಲ್ಲಿ ತೋರಿಸಿರುವಂತೆ 1961ರಲ್ಲಿ 15-59ರ ವಯೋವರ್ಗದ ಕೆಲಸಕ್ಕೆ ತೊಡಗಿಸಬಹುದಾಗಿದ್ದ ಜನರ ಸಂಖ್ಯೆ 12,285 ಸಾವಿರ. ಇವರ ಪೈಕಿ ಸೇ.90 ಪುರುಷರು ಮತ್ತು ಸೇ.36 ಸ್ತ್ರೀಯರು. ಜನಶಕ್ತಿಯ ವ್ಯಾಖ್ಯೆಗೆ ಒಳಪಟ್ಟರೆ ಕರ್ನಾಟಕದ ಜನಶಕ್ತಿ 1961ರಲ್ಲಿ 7,858 ಸಾವಿರ. 1971ರ ಜನಗಣತಿಯ ಪ್ರಕಾರ 15-59 ವಯೋವರ್ಗದ ಜನಸಂಖ್ಯೆ 15,074 ಸಾವಿರ. ಪುರುಷರಲ್ಲಿ 90% ಸ್ತ್ರೀಯರಲ್ಲಿ 40% ಕೆಲಸವನ್ನರಸುವವರ ಪ್ರಮಾಣವಾದರೆ, 1971ರಲ್ಲಿನ ಜನಶಕ್ತಿ ಪ್ರಮಾಣ 9,877 ಸಾವಿರ. ಎಂದರೆ 1961-71ದಶಕದಲ್ಲಿ ಜನಶಕ್ತಿ 2,019 ಸಾವಿರದಷ್ಟು (25.54%) ಏರಿತು. ಜನಶಕ್ತಿಯ ಏರಿಕೆಯನ್ನು ಜನ ಸಂಖ್ಯೆಯ ಏರಿಕೆಗೆ (ಸೇ.24.21) ಹೋಲಿಸಿದರೆ ಇದು ಹೆಚ್ಚು ಎನಿಸುತ್ತದೆ.

1961ರಲ್ಲಿ ಗ್ರಾಮುಪ್ರದೇಶದ ಜನಶಕ್ತಿ 6011 ಸಾವಿರ ಮಂದಿ (ಸೇ.76). ಇದರ ಪೈಕಿ 72% ಪುರುಷರು 28% ಸ್ತ್ರೀಯರು. 1971ರಲ್ಲಿ ಗ್ರಾಮ ಪ್ರದೇಶದ ಜನಶಕ್ತಿ 7,298 ಸಾವಿರಕ್ಕೆ ಏರಿತು (ಒಟ್ಟು ಜನಶಕ್ತಿಯಲ್ಲಿ 74%). ಇವರ ಪೈಕಿ 70% ಪುರುಷರು, 30% ಸ್ತ್ರೀಯರು.

ಪಟ್ಟಣ ಪ್ರದೇಶದ ಜನಶಕ್ತಿ 1961ರಲ್ಲಿ 1848 ಸಾವಿರವಿದ್ದು ಒಟ್ಟು ಜನಶಕ್ತಿಯ ಸೇ.24 ಭಾಗದಷ್ಟಿದ್ದಿತು. ಇವರಲ್ಲಿ 74% ಪುರುಷರು 26% ಸ್ತ್ರೀಯರು. 1971ರಲ್ಲಿ ಇಲ್ಲಿನ ಜನಶಕ್ತಿ 2,582 ಸಾವಿರಕ್ಕೇರಿತು. ಹಾಗೂ ಒಟ್ಟು ಜನಶಕ್ತಿಯಲ್ಲಿನ ಇವರ ಪ್ರಮಾಣ ಸೇ.26ಕ್ಕೆ ಏರಿತು. ಇವರ ಪೈಕಿ ಪುರುಷರ ಪ್ರಮಾಣ 71%; ಸ್ತ್ರೀಯರ ಪ್ರಮಾಣ 29%.

1961-71ರ ಅವಧಿಯಲ್ಲಿ ಒಟ್ಟು ಜನಶಕ್ತಿ ಸೇ.25.54ರಷ್ಟು ಏರಿದ್ದರೆ ಇದೇ ಅವಧಿಯಲ್ಲಿನ ಗ್ರಾಮ ಮತ್ತು ಪಟ್ಟಣ ಪ್ರದೇಶಗಳ ಜನಶಕ್ತಿಯ ಏರಿಕೆ ಕ್ರಮವಾಗಿ ಸೇ.21.4 ಮತ್ತು ಸೇ.41.5 ಹಾಗೂ ಜನಶಕ್ತಿಯಲ್ಲಿ ಸ್ತ್ರೀಪುರುಷರ ಪ್ರಮಾಣ ಗ್ರಾಮಪ್ರದೇಶದಲ್ಲಿ ಅವು ಕ್ರಮವಾಗಿ ಸೇ.32.5 ಮತ್ತು ಸೇ.12.4ರಷ್ಟು ಏರಿತು. ಪಟ್ಟಣ ಪ್ರದೇಶದಲ್ಲಿ ಈ ಅಂಕಿಗಳು ಕ್ರಮವಾಗಿ 57.3 ಮತ್ತು 33.6.

ಜನಶಕ್ತಿ ಹಂಚಿಕೆ ವಿಶ್ಲೇಷಣೆಯಿಂದ ಕೆಲವು ಅಂಶಗಳು ಹೊರಬೀಳುತ್ತವೆ. ಹೆಚ್ಚು ಪಾಲಿನ ಜನಶಕ್ತಿ ಗ್ರಾಮಾಂತರ ಪ್ರದೇಶದ್ದಾಗಿಯೇ ಉಳಿದಿದೆ. ಪಟ್ಟಣ ಪ್ರದೇಶದ ಜನಶಕ್ತಿ ಗ್ರಾಮಪ್ರದೇಶಕ್ಕಿಂತ ಅಧಿಕ ದರದಲ್ಲಿ ಬೆಳೆಯುತ್ತಿದೆ. ಆದಕಾರಣ ಗ್ರಾಮಾಂತರ ಜನಶಕ್ತಿಯ ಪ್ರಮಾಣ ಹೆಚ್ಚಿನ ಮಟ್ಟದಲ್ಲಿದ್ದರೂ ಅದು ಈ ಅವಧಿಯಲ್ಲಿ ಇಳಿಕೆ ತೋರಿರುವುದು ಗಮನಾರ್ಹ. ಗ್ರಾಮಾಂತರ ಹಾಗೂ ಪಟ್ಟಣ ಪ್ರದೇಶದ ಜನಶಕ್ತಿಯ ಬೆಳವಣಿಗೆಯ ಈ ನಮೂನೆಗೆ ಕಾರಣ ಹಳ್ಳಿಗಾಡಿನಿಂದ ಪಟ್ಟಣಗಳಿಗೆ ಹೆಚ್ಚು ಪ್ರಮಾಣದಲ್ಲಿ ಜನ ವಲಸೆ ಬಂದಿರುವುದು. ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೇನೆಂದರೆ, ಗ್ರಾಮ ಹಾಗೂ ಪಟ್ಟಣ ಪ್ರದೇಶಗಳೆರಡರಲ್ಲೂ ಸ್ತ್ರೀ ಜನಶಕ್ತಿ ಬೆಳವಣಿಗೆ ದರ ಅಧಿಕ ಎಂಬುದು. ಈ ಕಾರಣದಿಂದ ಪುರುಷ ಜನಶಕ್ತಿ ಪ್ರಮಾಣ ಹೆಚ್ಚಿನ ಮಟ್ಟದಲ್ಲಿದ್ದರೂ ಇದು ಇಳಿಕೆ ತೋರಿಸಿದೆ. ಸ್ತ್ರೀ ಜನಶಕ್ತಿ ಪ್ರಮಾಣ ಏರಿಕೆ ತೋರಿಸಿದೆ. ಉದ್ಯೋಗಗಳಲ್ಲಿ ತೊಡಗುವುದರ ಬಗ್ಗೆ ಸ್ತ್ರೀಯರ ಮನೋಭಾವ ಮುಂದೆ ಬದಲಾದಂತೆ ಅವರಲ್ಲಿ ಹೆಚ್ಚಿನ ಪ್ರಮಾಣದವರು ಉದ್ಯೋಗಗಳನ್ನು ಅರಸುವುದು ಖಂಡಿತ. ಆಗ ಸ್ತ್ರೀ ಜನಶಕ್ತಿಯ ಬೆಳವಣಿಗೆ ಇನ್ನೂ ಏರುವುದರಲ್ಲಿ ಅನುಮಾನವಿಲ್ಲ ಎಂಬುದನ್ನು ಇಲ್ಲಿ ಗಮನಿಸಬಹುದು.

ವಾಸ್ತವವಾಗಿ ಉದ್ಯೋಗದಲ್ಲಿರುವವರ ಪ್ರಮಾಣ ಹಾಗೂ ಬೇರೆ ಬೇರೆ ಉದ್ಯೋಗಗಳಲ್ಲಿ ಹಂಚಿಹೋಗಿರುವ ಅವರ ಪ್ರಮಾಣದ ವಿಶ್ಲೇಷಣೆಯಿಂದ ಆರ್ಥಿಕತೆಯ ಬೆಳವಣಿಗೆಗಾಗಿ ಒಟ್ಟು ಜನಸಂಖ್ಯೆಯಲ್ಲಿ

ಎಷ್ಟು ಮಂದಿ ದುಡಿಯುತ್ತಿದ್ದಾರೆ, ಆರ್ಥಿಕತೆ ಕೃಷಿ ಪ್ರಧಾನವೋ ಕೈಗಾರಿಕಾ ಪ್ರಧಾನವೋ ಇತ್ಯಾದಿ ಅಂಶಗಳನ್ನು ತಿಳಿಯಬಹುದು. ಉದ್ಯೋಗಿಗಳಲ್ಲದವರು ಎಂದರೆ ಅವಲಂಬಿತರು, ವಿವಾಹಿತ ಸ್ತ್ರೀಯರು, ನಿವೃತ್ತಿ ಹೊಂದಿದವರು, ಭಿಕ್ಷುಕರು, ಅಲೆಮಾರಿಗಳು, ಬಂದಿಗಳು ಹಾಗೂ ನಿರುದ್ಯೋಗಿಗಳು. ಇವರು ಉದ್ಯೋಗಿಗಳೆನಿಸುವವರಾಗಿದ್ದರೂ ಲಾಭ ಅಥವಾ ವೇತನಕ್ಕಾಗಿ ಉತ್ಪನ್ನಕಾರಕ ಉದ್ಯೋಗದಲ್ಲಿ ತೊಡಗಿರದಂಥವರು. ಆದರೆ ಉದ್ಯೋಗಿಗಳೆಂಬ ಪದವನ್ನು ಏಕರೀತಿಯಲ್ಲಿ ಎಲ್ಲ ಜನಗಣತಿ ವರ್ಷಗಳಲ್ಲಿ ವ್ಯಾಖ್ಯಿಸಿರಲಿಲ್ಲ. ಆದಕಾರಣ ಇವರನ್ನು ಕುರಿತ ಅಂಕಿಅಂಶಗಳು ಹೋಲಿಕೆಗೆ ಅನರ್ಹವಾದುವು. 1971ರ ಜನಗಣತಿಯಲ್ಲಿ ನಿಯತ ಉದ್ಯೋಗಗಳಲ್ಲಿ ನಿರತರಾದವರನ್ನು ಮಾತ್ರ ಉದ್ಯೋಗಿಗಳೆಂದು ಪರಿಗಣಿಸಲಾಗಿದೆ. ಹಿಂದಿನ ಜನಗಣತಿಗಳಲ್ಲಿ ಇದ್ದಂತೆ ತಮ್ಮ ಕಂಟುಂಬದ ಉದ್ಯೋಗದಲ್ಲಿ ಸಹಾಯ ನೀಡುವ ಮನೆ ಹೆಂಗಸರು, ಶಾಲೆಗೆ ಹೋಗುವ ಮಕ್ಕಳು ಮುಂತಾದ ಅವಲಂಬಿತರನ್ನು ಉದ್ಯೋಗಿಗಳೆಂದು ಪರಿಗಣಿಸುವುದಿಲ್ಲ. ಈ ಕಾರಣದಿಂದ ಹಿಂದಿನ ಜನಗಣತಿಗಳಲ್ಲಿ ಉದ್ಯೋಗಿಗಳೆನಿಸಿದ ಅನೇಕರು ಮುಂದಿನ ಜನಗಣತಿಯಲ್ಲಿ ಉದ್ಯೋಗಿಗಳಲ್ಲದವರೆನಿಸುತ್ತಾರೆ.

ಕರ್ನಾಟಕದ ಆರ್ಥಿಕತೆಯಲ್ಲಿ ಕೃಷಿ ಹಾಗೂ ಅದಕ್ಕೆ ಸಂಬಂಧಿಸಿದ ಉದ್ಯಮ (ಪ್ರಾಥಮಿಕ ಕ್ಷೇತ್ರ) ಪ್ರಧಾನವಾದುದು. ಈ ಕ್ಷೇತ್ರದಲ್ಲಿ ಒಟ್ಟು ಉದ್ಯೋಗಿಗಳಲ್ಲಿನ ಶೇ.71.3ರಷ್ಟು ಮಂದಿ ನಿರತರಾಗಿದ್ದಾರೆ. ಇದು ಭಾರತದ ಪ್ರಮಾಣಕ್ಕೆ ಸರಿಸುಮಾರಾಗಿದೆ ಎಂಬುದನ್ನು ನೋಡಬಹುದು. ಕರ್ನಾಟಕದ ಉದ್ಯೋಗಿಗಳ ಪೈಕಿ ಶೇ.12 ಮಂದಿ ದ್ವಿತೀಯಕ ಕ್ಷೇತ್ರದಲ್ಲೂ ಶೇ.16.7 ಮಂದಿ ತೃತೀಯಕ ಕ್ಷೇತ್ರದಲ್ಲೂ ತೊಡಗಿದ್ದಾರೆ. ಭಾರತಕ್ಕೆ ಸಂಬಂಧಿಸಿದ ಈ ಅಂಕಿಗಳು ಕ್ರಮವಾಗಿ ಶೇ.10.8 ಮತ್ತು ಶೇ.16.8. ಭಾರತ ಮತ್ತು ಕರ್ನಾಟಕಗಳ ಉದ್ಯೋಗಿಗಳ ಕ್ಷೇತ್ರವಾರು ಹಂಚಿಕೆಯ ನಮೂನೆಯಲ್ಲಿ ಹೆಚ್ಚು ವ್ಯತ್ಯಾಸ ಕಾಣುವುದಿಲ್ಲ.

ಇಲ್ಲಿ ಒಂದು ಅಂಶವನ್ನು ಗಮನಿಸಬೇಕು. ಹಿಂದುಳಿದ ಆರ್ಥಿಕತೆಗಳಲ್ಲಿ ಸಾಧಾರಣವಾಗಿ ಪ್ರಾಥಮಿಕ ಕ್ಷೇತ್ರದಲ್ಲಿ ತೊಡಗಿರುವ ಉದ್ಯೋಗಿಗಳ ಪ್ರಮಾಣ ಹೆಚ್ಚು. ಆದರೆ ಆರ್ಥಿಕತೆ ಬೆಳೆವಣಿಗೆ ಹೊಂದಿದಂತೆ ಅದರ ರಚನೆಯಲ್ಲಿ ಬದಲಾವಣೆಗಳುಂಟಾಗುತ್ತವೆ. ಮುಖ್ಯವಾಗಿ ಹೇಳುವುದಾದರೆ ತಾಂತ್ರಿಕ ಕ್ರಮಗಳ ಅಳವಡಿಕೆಯಿಂದಾಗಿ ಪ್ರಾಥಮಿಕ ಕ್ಷೇತ್ರದಿಂದ ಉದ್ಯೋಗಿಗಳು ಬಿಡುಗಡೆ ಹೊಂದಿ ದ್ವಿತೀಯಕ ಮತ್ತು ತೃತೀಯಕ ಕ್ಷೇತ್ರಗಳಲ್ಲಿ ನಿಯಮಿಸಲ್ಪಡುತ್ತ ಹೋಗುವುದು. (ಎ.ಎ.)

**ಜನಸಂಖ್ಯಾನಿಯಂತ್ರಣ ಮತ್ತು ಕುಟುಂಬ ಯೋಜನೆ :** ನಾಗಾಲೋಟದಲ್ಲಿ ಬೆಳೆಯುತ್ತಿರುವ ಜನಸಂಖ್ಯೆಯ ಕುದುರೆಗೆ ಕಡಿವಾಣ ಹಾಕಿ ನಿಯಂತ್ರಣದಲ್ಲಿಡುವ ಕಾರ್ಯದಲ್ಲಿ ಭಾರತದ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಮಹತ್ತರ ಪಾತ್ರ ವಹಿಸುತ್ತಿವೆ. ಸರ್ಕಾರದ ಜೊತೆಗೆ ಹಲವು ಸ್ವಯಂಸೇವಾ ಸಂಸ್ಥೆಗಳೂ ದೇಶದಾದ್ಯಂತ ಕುಟುಂಬ ಯೋಜನೆಯ ಕ್ಷೇತ್ರದಲ್ಲಿ ದುಡಿಯುತ್ತಿವೆ. ಮೈಸೂರು ಸಂಸ್ಥಾನದ ಅಂದಿನ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ್ (1884-1940) ಬೆಂಗಳೂರಿನ ವಿಕ್ಟೋರಿಯ ಆಸ್ಪತ್ರೆ ಮತ್ತು ಹೆರಿಗೆ ಆಸ್ಪತ್ರೆ ಹಾಗೂ ಮೈಸೂರಿನ ಕೃಷ್ಣರಾಜೇಂದ್ರ ಆಸ್ಪತ್ರೆ ಮತ್ತು ವಾಣಿವಿಲಾಸ ಆಸ್ಪತ್ರೆಗಳಲ್ಲಿ ಜನನ ನಿಯಂತ್ರಣ ವಿಭಾಗವನ್ನು ಪ್ರಾರಂಭಿಸಿದರು (1930). ಜಗತ್ತಿನ ಮೊಟ್ಟಮೊದಲ ಸರ್ಕಾರಿ ಜನನ ನಿಯಂತ್ರಣ ಆಸ್ಪತ್ರೆಗಳನ್ನು ಸ್ಥಾಪಿಸಿದ ಹೆಗ್ಗಳಿಕೆ ಕರ್ನಾಟಕಕ್ಕೆ ಸಲ್ಲುತ್ತದೆ.

ಮೈಸೂರು ಸಂಸ್ಥಾನದಲ್ಲಿ 1930ರಿಂದಲೂ ಜನಸಂಖ್ಯಾ ನಿಯಂತ್ರಣ ಕಾರ್ಯ ನಡೆಯುತ್ತ ಬಂದಿದೆ. ಕುಟುಂಬ ಯೋಜನೆ ನಿರ್ದಿಷ್ಟ ಕಾರ್ಯಸ್ವರೂಪ ಪಡೆದಿದ್ದು ಎರಡನೆಯ ಪಂಚವಾರ್ಷಿಕ ಯೋಜನೆಯ ಸಂದರ್ಭದಲ್ಲಿ. ಗ್ರಾಮೀಣ ಹಾಗೂ ನಗರ ಪ್ರದೇಶದ ಜನರಿಗೆ ಜನಸಂಖ್ಯಾ ಹೆಚ್ಚಳದ ಬಗ್ಗೆ ಅರಿವು ಮೂಡಿಸುವ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಎಲ್ಲಾ ವೈದ್ಯಕೀಯ ಸಂಸ್ಥೆಗಳಲ್ಲಿ ವ್ಯಾಸಕ್ಟಮಿ, ಟ್ಯುಬೆಕ್ಟಮಿ, ಉದರದರ್ಶಕ ಶಸ್ತ್ರ ಚಿಕಿತ್ಸೆ (ಲ್ಯಾಪ್ರೊಸ್ಕೋಪಿ) ಹಾಗೂ ತಂತಿ ಅಳವಡಿಕೆ (ಐ.ಯು.ಡಿ.) ಸೌಲಭ್ಯಗಳನ್ನು ನೀಡಲಾಯಿತು. ಉಪನ್ಯಾಸಗಳು, ಪ್ರದರ್ಶನ ಮುಂತಾದ ಅರಿವು ಮೂಡಿಸುವ ಕಾರ್ಯಕ್ರಮಗಳಿಗೆ ಹೆಚ್ಚು ಒತ್ತು ನೀಡಲಾಯಿತು.

ಗ್ರಾಮೀಣ ಪ್ರದೇಶಗಳ ಜನರಿಗೆ ಉತ್ತಮವಾದ ಆರೋಗ್ಯ ಸೇವೆಗಳು ದೊರೆಯಬೇಕೆಂಬ ಉದ್ದೇಶದಿಂದ ಸರ್ಕಾರ ಗ್ರಾಮ ಮಟ್ಟದಿಂದ ಆರೋಗ್ಯ ಸೇವಾ ಸಂಸ್ಥೆಗಳನ್ನು ಸಜ್ಜುಗೊಳಿಸಲು ಕಾರ್ಯಕ್ರಮ ಹಮ್ಮಿಕೊಂಡಿತು. ಎಲ್ಲರಿಗೂ ಆರೋಗ್ಯ ಒದಗಿಸುವುದು, ಗ್ರಾಮೀಣ ಜನತೆಗೆ ಅತ್ಯುತ್ತಮ ಸೇವೆ ಸುಲಭವಾಗಿ ದೊರಕಿಸುವುದು ಇವು ಮೂಲ ಉದ್ದೇಶಗಳಾಗಿದ್ದುವು. ಗ್ರಾಮೀಣ ಪ್ರದೇಶದ ಮಹಿಳೆಯರಲ್ಲಿ ಅಂತರ್ಗತವಾಗಿರುವ ಹೆರಿಗೆ ಕುರಿತಂತೆ ಇರುವ ಭಯ ನಿವಾರಣೆ, ತಾಯಂದಿರ ಮತ್ತು ಶಿಶು ಮರಣ ಪ್ರಮಾಣ ಇಳಿಸಿ, ಸುರಕ್ಷಿತ ಹೆರಿಗೆ ಸಾಧ್ಯವಾಗುವಂತೆ ಮಾಡುವ ಕಾರ್ಯಕ್ರಮ ಅನುಷ್ಠಾನಗೊಳಿಸಲಾಯಿತು. ಕುಟುಂಬ ಕಲ್ಯಾಣ ಕಾರ್ಯಕ್ರಮ ಪರಿಣಾಮಕಾರಿಯಾಗಿ ನಡೆಸಲು ಅಂಗನವಾಡಿ ಕಾರ್ಯಕರ್ತೆಯರ ಸಹಕಾರವನ್ನೂ ಪಡೆಯಲಾಗುತ್ತಿದೆ. ಈ ಕಾರ್ಯಕ್ರಮದ ಅಂಗವಾಗಿ ತಾಯಿ ಮತ್ತು ಮಗುವಿನ ಆರೋಗ್ಯದ ಬಗ್ಗೆ ಹೆಚ್ಚಿನ ಮಹತ್ವ ನೀಡಲಾಗಿದೆ. ಮಕ್ಕಳಿಗೆ ಹಾಗೂ ಗರ್ಭಿಣಿಯರಿಗೆ ಚುಚ್ಚುಮದ್ದು ಸೌಲಭ್ಯಗಳನ್ನು ನೀಡಲಾಗುತ್ತಿದೆ.

ಭಾರತದ ಜನಸಂಖ್ಯಾ ಯೋಜನೆ viii ಮತ್ತು ix ರ ಅಡಿಯಲ್ಲಿ ಹಲವಾರು ವಿಧಾಯಕ ಕಾರ್ಯಕ್ರಮಗಳನ್ನು ಕರ್ನಾಟಕ ಸರ್ಕಾರ ಕೈಗೊಂಡಿತು. 315 ಉಪಕೇಂದ್ರಗಳು, 14 ಪ್ರಾಥಮಿಕ ಆರೋಗ್ಯ ಕೇಂದ್ರ, 43 ವೈದ್ಯಾಧಿಕಾರಿಗಳ ವಸತಿನಿಲಯ ಹಾಗೂ ವೈದ್ಯಕೀಯ ಸೇವೆ ಬಲಪಡಿಸಲು ಹಲವು ಕಟ್ಟಡಗಳನ್ನು ನಿರ್ಮಿಸಲಾಯಿತು. ಇದಲ್ಲದೆ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರ, 8 ಜಿಲ್ಲಾ ತರಬೇತಿ ಕೇಂದ್ರ, 4 ಕಿರಿಯ ಆರೋಗ್ಯ ಸಹಾಯಕರ ತರಬೇತಿ ಕೇಂದ್ರ ಮತ್ತು ಒಂದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರವನ್ನು ಪ್ರಾರಂಭಿಸಲಾಯಿತು. ಈ ತರಬೇತಿ ವಿಭಾಗದಲ್ಲಿ ಒಟ್ಟು 3994 ವೈದ್ಯಾಧಿಕಾರಿಗಳೂ ಸೇರಿದಂತೆ ವಿವಿಧ ಆರೋಗ್ಯ ಸಿಬ್ಬಂದಿವರ್ಗ ತರಬೇತಿ ಪಡೆದಿದೆ (1998-99).

ಬೆಂಗಳೂರಿನ ಜನಸಂಖ್ಯಾ ಕೇಂದ್ರವು ಕರ್ನಾಟಕ ಸರ್ಕಾರ, ಅದರಲ್ಲೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ ಹಮ್ಮಿಕೊಂಡಿರುವ ಹಲವಾರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಾರ್ಯಕ್ರಮಗಳನ್ನು ಉತ್ತಮ ರೀತಿಯಲ್ಲಿ ಪರಿಣಾಮಕಾರಿಯಾಗಿ ಆನುಷ್ಠಾನಗೊಳಿಸಲು ಸಹಕರಿಸುತ್ತಿದೆ.

ಗ್ರಾಮೀಣ ಆರೋಗ್ಯ ಕಾರ್ಯಕ್ರಮಗಳು ಆರೋಗ್ಯದ ಮಟ್ಟವನ್ನು ಹೆಚ್ಚಿಸುವಲ್ಲಿ ಹಾಗೂ ಪ್ರತಿಯೊಬ್ಬರಿಗೂ ಆರೋಗ್ಯ ಸೇವಾ ಸೌಲಭ್ಯಗಳನ್ನು ಒದಗಿಸುವಲ್ಲಿ ತುಂಬ ಪರಿಣಾಮಕಾರಿಯಾಗಿವೆ. ಸರ್ಕಾರ ಪ್ರತಿ 30,000 ಜನಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರ, ಪ್ರತಿ 15 ರಿಂದ 20 ಸಾವಿರ ಜನಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯ ಘಟಕ ಹಾಗೂ ಪ್ರತಿ 5,000 ಜನಸಂಖ್ಯೆಗೆ ಒಂದು ಉಪಕೇಂದ್ರ ಪ್ರಾರಂಭಿಸಿದೆ.

**ಕುಟುಂಬ ಕಲ್ಯಾಣ ಸೇವೆಗಳು :** ಕುಟುಂಬ ಕಲ್ಯಾಣ ಕಾರ್ಯಕ್ರಮ ಎರಡನೆಯ ಪಂಚವಾರ್ಷಿಕ ಯೋಜನೆಯಡಿಯಲ್ಲಿ ಮಹತ್ವ ಪಡೆಯಿತು. ಈ ಕಾರ್ಯಕ್ರಮವನ್ನು ಹಲವಾರು ಹಂತಗಳಲ್ಲಿ ಅಳವಡಿಸಲು ಉತ್ತಮ ಸುಸಂಘಟನೆ ಮತ್ತು ಮೇಲ್ವಿಚಾರಣೆಗೆ ಜಿಲ್ಲಾ ಆರೋಗ್ಯ ಅಧಿಕಾರಿಗಳನ್ನು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಯಾಗಿ ಪುನರ್ ನಿಯೋಜಿಸಲಾಯಿತು.

ಜನಸಂಖ್ಯೆಯ ಬೆಳೆವಣಿಗೆಯ ಸಮಸ್ಯೆಯನ್ನು ಪರಿಣಾಮಕಾರಿಯಾಗಿ ಎದುರಿಸಲು ಸಂತಾನೋತ್ಪತ್ತಿ ವಯಸ್ಸಿನಲ್ಲಿರುವ ಮಹಿಳೆಯರ ಮತ್ತು ಐದು ವರ್ಷದ ಒಳಗಿನ ಮಕ್ಕಳ ಆರೋಗ್ಯದತ್ತ ಗಮನ ಹರಿಸುವುದು ಬಹಳ ಮುಖ್ಯವೆಂದು ಭಾವಿಸಲಾಯಿತು. ಕುಟುಂಬಕಲ್ಯಾಣ ಕಾರ್ಯಕ್ರಮ ಸಂತಾನೋತ್ಪತ್ತಿ ವಯಸ್ಸಿನಲ್ಲಿರುವ ಮಹಿಳೆಯರ ಮತ್ತು ಐದು ವರ್ಷದೊಳಗಿನ ಮಕ್ಕಳ ಆರೋಗ್ಯ ಉತ್ತಮಪಡಿಸುವತ್ತ ಕೇಂದ್ರಿಕೃತವಾಗಿತ್ತು. ಇದಲ್ಲದೇ ಅಪೇಕ್ಷಿತರಿಗೆ ಗರ್ಭನಿರೋಧಕ ಸೇವೆಗಳನ್ನು ಹಾಗೂ ಅಂತರದ ಹೆರಿಗೆಗಳಿಗೆ ಸಂಬಂಧಿಸಿದ ಸೇವೆಗಳನ್ನು ಒದಗಿಸುವತ್ತ ಸಾಕಷ್ಟು ಗಮನ ಹರಿಸಲಾಯಿತು. ಯಶಸ್ವಿಯಾಗಿ ತಾಯಿ ಮತ್ತು

ಮಗುವಿನ ಉಳಿವೂ ಹಾಗೂ ಅವರ ಆರೋಗ್ಯ, ದಂಪತಿಗಳು, ಗರ್ಭಿಣಿಯಾಗುವ ಹಾಗೂ ಸಂಬಂಧಿಸಿದ ಕಾಯಿಲೆಗಳ ಭಯವಿಲ್ಲದೆ ಲೈಂಗಿಕ ಸಂಬಂಧ ಹೊಂದುವುದರಲ್ಲಿ ಸಹಕಾರಿಯಾಗಿದೆ. ಫಲಾನುಭವಿಗಳ ಅಗತ್ಯವನ್ನಾಧರಿಸಿದ ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯ ಸಮಗ್ರ ಸೇವೆಯನ್ನೊದಗಿಸುವುದೇ ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯ ಕಾರ್ಯಕ್ರಮದ ಉದ್ದೇಶ.

1932ರಲ್ಲಿ ಮೈಸೂರು ಮೆಡಿಕಲ್ ಕೌನ್ಸಿಲ್ ಸ್ಥಾಪಿಸಲಾಯಿತು. ಇದರಲ್ಲಿ ಎಲ್ಲಾ ವಿವಿಧ ವೈದ್ಯಕೀಯ ವೃತ್ತಿ ಮಾಡುವವರನ್ನು ಗುರುತಿಸಿ ನೋಂದಣಿ ಮಾಡಲಾಯಿತು. ಇದು ವೈದ್ಯವೃತ್ತಿಯವರಿಗೆ ಹಲವಾರು ಸೌಕರ್ಯಗಳನ್ನು ಒದಗಿಸುತ್ತಿದೆ. ಇಂಡಿಯನ್ ಮೆಡಿಕಲ್ ಕೌನ್ಸಿಲ್ ಬೆಂಗಳೂರಿನಲ್ಲಿ ಸ್ಥಾಪಿತವಾದದ್ದು 1928ರಲ್ಲಿ. ಈ ಸಂಘ ಕರ್ನಾಟಕದಲ್ಲಿ ಒಟ್ಟು 67 ಶಾಖೆಗಳನ್ನು ಹೊಂದಿದ್ದು ವೈದ್ಯರಿಗೆ ಫೆಲೋಷಿಪ್ ನೀಡುವುದಲ್ಲದೆ ಆರೋಗ್ಯ ಯೋಜನೆಗಳಿಗೆ ಸಂಬಂಧಪಟ್ಟಂತೆ ಕರ್ನಾಟಕ ಸರ್ಕಾರಕ್ಕೆ ಸಲಹೆ ನೀಡುತ್ತ ಬಂದಿದೆ.

ರಾಷ್ಟ್ರದ ಅಭಿವೃದ್ಧಿ ಸಾಮರ್ಥ್ಯವನ್ನು ಮುಂದುವರಿಸಲು ಅನುವಾಗುವಂತೆ ದೇಶದ ಜನಸಂಖ್ಯೆಯಿರಬೇಕು ಎಂಬುದು ಕುಟುಂಬ ಯೋಜನಾ ಕಾರ್ಯಕ್ರಮದ ಮುಖ್ಯ ಗುರಿ. ಮಕ್ಕಳ ಆರೋಗ್ಯ, ಉಳಿವು ಮತ್ತು ದೀರ್ಘಾವಧಿಯ ಆಯುಸ್ಸಿನ ಬಗ್ಗೆ ಭರವಸೆ ಉಂಟಾದಲ್ಲಿ ತಂದೆ ತಾಯಿಗಳು ಚಿಕ್ಕ ಸಂಸಾರ ಹೊಂದುತ್ತಾರೆ ಎಂಬುದು ದೃಢಪಟ್ಟಿದೆ. ಅಲ್ಪಾವಧಿಯಲ್ಲಿ ಅಂತರದ ಹೆರಿಗೆ ಮತ್ತು ಸಂತಾನಹರಣ ಶಸ್ತ್ರಚಿಕಿತ್ಸೆಯ ವಿಧಾನಗಳಿಂದ ಅನಪೇಕ್ಷಿತ ಗರ್ಭವನ್ನು ತಡೆಗಟ್ಟುವ ಮೂಲಕ ಪರಿಣಾಮಕಾರಿಯಾಗಿ ಜನಸಂಖ್ಯೆಯನ್ನು ನಿಯಂತ್ರಿಸಬಹುದು. ಆದರೂ ಮಧ್ಯಮಾವಧಿ ಮತ್ತು ದೀರ್ಘಾವಧಿಯಲ್ಲಿ ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳ ಕಾರ್ಯಕ್ರಮ ಚಿಕ್ಕ ಕುಟುಂಬದ ಬಗ್ಗೆ ಭರವಸೆ ಮೂಡಿಸಿ ಜನಸಂಖ್ಯೆಯ ಸ್ಥಿರತೆಗೆ ಕಾರಣವಾಗಬಹುದು. ಆದ್ದರಿಂದ ಏಕಕಾಲದಲ್ಲೇ ರಾಷ್ಟ್ರದ ಜನಸಂಖ್ಯೆಗೆ ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳನ್ನು ಒದಗಿಸುವುದು ಹಾಗೂ ಗರ್ಭನಿರೋಧಕ ಹಾಗೂ ಸಂತಾನಹರಣ ವಿಧಾನಗಳನ್ನು ಅಳವಡಿಸಲು ಅಪೇಕ್ಷಿತ ದಂಪತಿಗಳನ್ನು ಪ್ರೋತ್ಸಾಹಿಸುವುದು ಭಾರತ ಸರ್ಕಾರದ ಕುಟುಂಬ ಕಲ್ಯಾಣ ಇಲಾಖೆಯ ಒಟ್ಟಾರೆ ನೀತಿಯಾಗಿದೆ. ಇದನ್ನೇ ಕರ್ನಾಟಕ ರಾಜ್ಯ ಸರ್ಕಾರವೂ ಅನುಸರಿಸುತ್ತ ಬಂದಿದೆ. ಕೆಲವು ಕ್ರಮಗಳನ್ನು ಏಕಕಾಲಕ್ಕೆ ಅನುಸರಿಸುವುದರಿಂದ ಗುರಿಗಳನ್ನು ಸಾಧಿಸಬಹುದು.

ಗ್ರಾಮೀಣ ಮತ್ತು ನಗರ ಪ್ರದೇಶಗಳ ಸಮುದಾಯಗಳಿಗೆ ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳನ್ನು ಒದಗಿಸಲು ಸಂಪನ್ಮೂಲಗಳ ವ್ಯವಸ್ಥೆ, ಆರೋಗ್ಯ ವ್ಯವಸ್ಥೆಯಲ್ಲಿ ದಕ್ಷತೆ ಕಾಪಾಡುವುದು. ಮಹಿಳೆಯರಲ್ಲಿ ಸಾಕ್ಷರತೆಯ ಮಟ್ಟವನ್ನು ಹೆಚ್ಚಿಸುವುದು ಮತ್ತು ಕುಟುಂಬ ಗಳಲ್ಲಿ ಶೈಕ್ಷಣಿಕ ಮಟ್ಟವನ್ನು ಹೆಚ್ಚಿಸುವುದು, ಕುಟುಂಬಗಳ ಆರ್ಥಿಕ ಸ್ಥಿತಿ ಉತ್ತಮಪಡಿಸಲು ಪ್ರಯತ್ನಿಸುವುದು, ಅಂತರ ಇಲಾಖೆಗಳ ಸಮನ್ವಯಕ್ಕಾಗಿ ಸಾಧನೆಗಾಗಿ ಯುಕ್ತ ವ್ಯವಸ್ಥೆ ಮಾಡುವುದು ಮತ್ತು ಕುಟುಂಬ ಕಲ್ಯಾಣ ಕಾರ್ಯಕ್ರಮಗಳ ಹಾಗೂ ಪರಸ್ಪರ ಬೆಂಬಲಕ್ಕಾಗಿ ಗುರುತಿಸಿದ ಇತರ ಕಾರ್ಯಕ್ರಮಗಳ ನಿರ್ವಹಣೆಯನ್ನು ಸಂಯೋಜಿಸುವುದು ಮೊದಲಾದವು ಪ್ರಮುಖವಾದುವು.

ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯ ಕಾರ್ಯಕ್ರಮವು ಶಿಶು ಉಳಿವು ಮತ್ತು ಸುರಕ್ಷಿತ ತಾಯ್ತನದ ಅಂಶಗಳಲ್ಲದೆ, ಲೈಂಗಿಕ ಸಂಪರ್ಕ ಕಾಯಿಲೆಗಳಿಗೆ ಸಂಬಂಧಿಸಿದ ಹಾಗೂ ಜನನಾಂಗ ಮಾರ್ಗದ ಸೋಂಕಿಗೆ ಸಂಬಂಧಿಸಿದ ಎರಡು ಕಾರ್ಯಕ್ರಮಗಳನ್ನೂ ಒಳಗೊಂಡಿದೆ.

ಎಲ್ಲಾ ಕೇಂದ್ರಗಳು ಕುಟುಂಬ ಕಲ್ಯಾಣ ಯೋಜನೆಯ ಕಾರ್ಯ ಚಟುವಟಿಕೆಗಳನ್ನು ಹೇಗೆ ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿವೆ ಎಂಬುದನ್ನು ಅರಿತುಕೊಳ್ಳಲು ಜಿಲ್ಲಾ ಮಟ್ಟದ ಕುಟುಂಬದ ಸಮೀಕ್ಷೆಯನ್ನು ನಿರಂತರ ಆಧಾರದ ಮೇಲೆ ನಡೆಸಲಾಗುತ್ತದೆ. ಇದರ ದೃಢೀಕರಣಕ್ಕಾಗಿ ಸಹಗಾಮಿ ಮೌಲ್ಯಮಾಪನವನ್ನು ನಡೆಸಲಾಗುತ್ತಿದೆ.

**ಫ್ಯಾಮಿಲಿ ಪ್ಲಾನಿಂಗ್ ಅಸೋಸಿಯೇಷನ್ ಆಫ್ ಇಂಡಿಯ** (ಎಫ್.ಪಿ.ಎ.ಐ) : ಇಂಟರ್ ನ್ಯಾಷನಲ್ ಪ್ಲಾನ್ಡ್ ಪೇರೆಂಟ್‌ಹುಡ್ ಅಸೋಸಿಯೇಷನ್‌ನ ಅಂಗಸಂಸ್ಥೆಯಾಗಿರುವ ಬೃಹತ್ ರಾಷ್ಟ್ರೀಯ ಸ್ವಯಂಸೇವಾ ಸಂಸ್ಥೆಯಾದ ಇದು ಮುಂಬೈನಲ್ಲಿ ಮುಖ್ಯ ಕಾರ್ಯಾಲಯ ಹೊಂದಿದೆ. ರಾಷ್ಟ್ರದಾದ್ಯಂತ 39 ಶಾಖೆಗಳನ್ನು ಹೊಂದಿದ್ದು ಕರ್ನಾಟಕದಲ್ಲಿ ಇದರ 11 ಶಾಖೆಗಳಿವೆ: ಬೆಂಗಳೂರು, ಮೈಸೂರು, ಬೆಳಗಾಂವಿ, ಬಳ್ಳಾರಿ, ಬೀದರ್, ಬಿಜಾಪುರ, ಧಾರವಾಡ, ರಾಯಚೂರು, ಶಿವಮೊಗ್ಗ, ಉತ್ತರ ಕನ್ನಡ ಮತ್ತು ಉಡುಪಿ. ಜನಸಂಖ್ಯೆ ಮತ್ತು ಸಂಪನ್ಮೂಲಗಳ ನಡುವೆ ಸಮತೋಲನ ಸ್ಥಾಪಿಸುವುದು, ಜವಾಬ್ದಾರಿಯುತ ಲೈಂಗಿಕ ವರ್ತನೆಯನ್ನು ಬೆಳಸಿಕೊಳ್ಳಲು ಯುವಜನತೆಯನ್ನು ಸಿದ್ಧಪಡಿಸುವುದು ಇದರ ಗುರಿ. ಆರೋಗ್ಯ, ಕುಟುಂಬ ಕಲ್ಯಾಣ, ಪ್ರಜನನ ಮತ್ತು ಮಗುವಿನ ಆರೋಗ್ಯ, ಪರಿಸರ ರಕ್ಷಣೆ, ಏಡ್ಸ್ ವಿರುದ್ಧ ಹೋರಾಟ, ಹೆಣ್ಣು ಮಕ್ಕಳ ಶಿಕ್ಷಣ ಮೊದಲಾದ ಕ್ಷೇತ್ರಗಳಲ್ಲಿ ಸರ್ಕಾರದೊಂದಿಗೆ ಹಾಗೂ ಇತರ ಸ್ವಯಂಸೇವಾ ಸಂಸ್ಥೆಗಳ ನೆರವಿನೊಂದಿಗೆ ಈ ಸಂಸ್ಥೆ ಕರ್ನಾಟಕದಲ್ಲಿ ಕಾರ್ಯನಿರ್ವಹಿಸುತ್ತಿದೆ.

(ಬಿಎಚ್.ಆರ್.)

**ಜನ್ನ** : 12ನೆಯ ಶತಮಾನದ ಉತ್ತರಾರ್ಧ ಮತ್ತು 13ನೆಯ ಶತಮಾನದ ಪೂರ್ವಾರ್ಧದಲ್ಲಿ ಇದ್ದ ಪ್ರಸಿದ್ಧ ಜೈನಕವಿ. ಯಶೋಧರ ಚರಿತೆ, ಅನಂತನಾಥ ಪುರಾಣ ಎಂಬ ಕಾವ್ಯಗಳ ಕರ್ತೃ. ಹಳೇಬೀಡು ಪ್ರಾಂತ್ಯದವನಾದ ಈತನ ತಂದೆ ಸುಮನೋಬಾಣನೆಂಬ ಬಿರುದು ಪಡೆದಿದ್ದ ಶಂಕರ, ತಾಯಿ ಗಂಗಾದೇವಿ, ಹೆಂಡತಿ ಲಕುಮಾದೇವಿ, ಸೋದರಳಿಯ ಕೇಶಿರಾಜ, ಧರ್ಮಗುರು ರಾಮಚಂದ್ರದೇವಮುನಿ, ಉಪಾಧ್ಯಾಯ ಇಮ್ಮಡಿ ನಾಗವರ್ಮ. ಹೊಯ್ಸಳ ಬಲ್ಲಾಳನಿಂದ (1173-1220) ಕವಿಚಕ್ರವರ್ತಿ ಎಂಬ ಬಿರುದನ್ನು ಪಡೆದು, ಅನಂತರ ನರಸಿಂಹನಲ್ಲಿ (1220-35) ದಂಡಾಧಿಪತಿಯೂ ಮಂತ್ರಿಯೂ ಆಗಿದ್ದ. ನಾಟ್ಪ್ರಭು ಜನಾರ್ದನದೇವ ಎಂದು ತನ್ನನ್ನು ಕರೆದುಕೊಂಡಿದ್ದಾನೆ. ಜನ್ನ ಪಂಪನಂತೆ ಬಹುಮುಖ ವ್ಯಕ್ತಿತ್ವವುಳ್ಳವ. ಈತ ಅನುಭವ ಮುಕುರವೆಂಬ ಕಾಮಶಾಸ್ತ್ರ ಸಂಬಂಧವಾದ ಕೃತಿಯೊಂದನ್ನು ಬರೆದಿದ್ದಾನೆ. ಕೆಲವು ಶಾಸನಗಳೂ ಈತನಿಂದ ರಚಿತವಾಗಿವೆ.

ಯಶೋಧರಚರಿತೆ ಸುಂದರವಾದ ಪುಟ್ಟ ಕಾವ್ಯ. ಇದರ ರಚನೆಯ ಕಾಲ 1209. ಇದರಲ್ಲಿ ಕೇವಲ ನಾಲ್ಕು ಅವತಾರಗಳೂ 310 ಪದ್ಯಗಳೂ ಇವೆ. ಕಂದಪದ್ಯಗಳಿಂದಲೇ ರಚಿತವಾಗಿರುವುದು ಈ ಕೃತಿಯ ವಿಶಿಷ್ಟತೆ. ಇದಕ್ಕೆ ಮೂಲ ಸಂಸ್ಕೃತದಲ್ಲಿ ವಾದಿರಾಜ (11ನೆಯ ಶತಮಾನ) ಬರೆದಿರುವ ಯಶೋಧರ ಚರಿತ. ಇದಕ್ಕಿಂತಲೂ ಹಿಂದೆ ಪ್ರಭಂಜನ, ಹರಿಭದ್ರ, ಸೋಮದೇವ ಮುಂತಾದ ಪ್ರಾಕೃತ ಸಂಸ್ಕೃತ ಕವಿಗಳು ಯಶೋಧರನ ಕಥೆಯನ್ನು ನಿರೂಪಿಸಿದ್ದರು. ಮೂಲತಃ ಅದೊಂದು ಜನಪದ ಕಥೆಯಿರಬೇಕು. ವಾದಿರಾಜ ಹಿಂದಿನವರಲ್ಲಿ ಬಹುಮಟ್ಟಿಗೆ ಧಾರ್ಮಿಕ ಸ್ವರೂಪದ ಕಥೆಯಷ್ಟೆ ಆಗಿದ್ದ ಯಶೋಧರಾಖ್ಯಾನವನ್ನು ತೆಗೆದುಕೊಂಡು ಅದರ ಅಸಂಗತಾಂಶಗಳನ್ನು ನಿವಾರಿಸಿ ಉಚಿತ ಮಾರ್ಪಾಡುಗಳನ್ನು ಮಾಡಿಕೊಂಡು ಅದನ್ನೊಂದು ಸರಳ ರಮ್ಯವಾದ, ಮಾನವೀಯ ಸ್ವಾರಸ್ಯವುಳ್ಳ ಕಾವ್ಯವನ್ನಾಗಿ ಪರಿವರ್ತಿಸಿದ. ಅವನ ಕಾವ್ಯಕ್ಕೆ ಸಂಸ್ಕೃತದಲ್ಲಿ ಯಾವ ವೈಶಿಷ್ಟ್ಯವಿದೆಯೋ ಅದೇ ವೈಶಿಷ್ಟ್ಯ ಕನ್ನಡದಲ್ಲಿ ಜನ್ನನ ಕೃತಿಗಿದೆ.

ಯಶೋಧರ ಚರಿತೆಯಲ್ಲಿ ಜನ್ನ ವಾದಿರಾಜನನ್ನು ಹೆಜ್ಜೆಹೆಜ್ಜೆಗೂ ಅನುಸರಿಸಿದ್ದಾನಾದರೂ ತನ್ನ ಸ್ವಂತ ಪ್ರತಿಭೆಯನ್ನು ಸಾಕಷ್ಟು ತೋರಿದ್ದಾನೆ. ಕೆಲವೆಡೆ ಮೂಲವನ್ನು ಸೊಗಸಾಗಿ ಅನುವಾದಿಸಿ ತನ್ನ ಭಾಷಾಂತರ ಶಕ್ತಿಯನ್ನು ಮೆರೆದಿದ್ದಾನೆ; ಕೆಲವೆಡೆ ಮೂಲದ ಚೆಲುವನ್ನು ಹೆಚ್ಚಿಸಿದ್ದಾನೆ; ಎಷ್ಟೋ ಕಡೆ ಮೂಲವನ್ನು ಅಂದವಾಗಿ ಸಂಗ್ರಹಿಸಿದ್ದಾನೆ. ಕಥೆಗೆ ಕೆಲವು ಅಂಶಗಳು ಹೊಸದಾಗಿ ಸೇರಿವೆ. ಅನೇಕ ಕಡೆ ಸೂಕ್ಷ್ಮವಾದ ಕೆಲವು ಮಾರ್ಪಾಟುಗಳಾಗಿವೆ. ಮೂಲದ ಕೆಲವು ಅನೌಚಿತ್ಯಗಳು ಹೋಗಿವೆ. ಅಲ್ಲದೆ, ಜನ್ನ ದೇಸಿಯ ಸೊಬಗನ್ನು ತನ್ನ ಕೃತಿಯಲ್ಲಿ ಸೂರೆಮಾಡಿದ್ದಾನೆ; ಅನ್ಯಭಾಷಾಕೃತಿಯೊಂದನ್ನು ತಾಯ್ನುಡಿಯಲ್ಲಿ ಎಷ್ಟು ಚೆನ್ನಾಗಿ ನಿರ್ವಹಿಸಬಹುದೊ ಅಷ್ಟು ಚೆನ್ನಾಗಿ ನಿರ್ವಹಿಸಿ ಯಶಸ್ವಿಯಾಗಿದ್ದಾನೆ.

'ಜೀವದಯೆ ಜೈನಧರ್ಮಂ' ಎಂಬ ಸಂದೇಶವನ್ನು ಬಿತ್ತರಿಸಿ, ಅಹಿಂಸೆಯ ಪಾರಮ್ಯವನ್ನು ಎತ್ತಿ ಹಿಡಿಯುವುದು ಯಶೋಧರ ಚರಿತೆಯ ಉದ್ದೇಶ. ಹಿಂಸೆಯಿಂದಾಗುವ ಘೋರ ದುರಂತವನ್ನು ಕವಿ ಮನಮುಟ್ಟುವಂತೆ ಚಿತ್ರಿಸಿದ್ದಾನೆ. ಯಶೋಧರ ಮತ್ತು ಚಂದ್ರಮತಿಯರು ಒಂದು ಹಿಟ್ಟಿನ ಕೋಳಿಯನ್ನು ಬಲಿಕೊಟ್ಟು ಸಂಕಲ್ಪ ಹಿಂಸೆಯನ್ನೆಸಗಿದ ಮಾತ್ರದಿಂದಲೇ ಹಲವಾರು ಜನ್ಮಗಳನ್ನೆತ್ತಿ ತಿರ್ಯಗ್ಗತಿಗಳಲ್ಲಿ ತೊಳಲಿ ಕಡೆಗೆ ಕರ್ಮದಿಂದ ಬಿಡುಗಡೆಗೊಳ್ಳುವುದನ್ನು ಇಲ್ಲಿ ನೋಡುತ್ತೇವೆ. ಈ ಕೃತಿಯಲ್ಲಿ ವ್ಯಕ್ತವಾಗುವ ಅಹಿಂಸಾತತ್ತ್ವ ಜೈನಧರ್ಮಕ್ಕೇ ಸೀಮಿತವಾದುದಲ್ಲ. ಅದು ಇಡೀ ಮಾನವಧರ್ಮದ ಸಂದೇಶವಾಗಿ ನಿಲ್ಲುತ್ತದೆ. ಅದನ್ನು ಕವಿ ಕಲಾವಿಲಾಸಪೂರ್ವಕವಾಗಿ ಪ್ರತಿಪಾದಿಸಿದ್ದಾನೆ.

ಯಶೋಧರಚರಿತೆಯಲ್ಲಿ ಅಮೃತಮತಿಯ ವಿಕೃತ ಪ್ರಣಯದ ಕಥೆಯೊಂದು ಪೂರಕವಾಗಿ ಸೇರಿಕೊಂಡಿದೆ. ಅದರಲ್ಲಿ ಬರುವ ಸಮಸ್ಯೆ ಸಾಮಾಜಿಕವಾದುದು, ನಿತ್ಯನೂತನವಾದುದು; ಕವಿ ಅದನ್ನು ವೈರಾಗ್ಯ ಪ್ರಚೋದನೆಗೆ, ಧರ್ಮಬೋಧನೆಗೆ ಬಳಸಿ ಕೊಂಡಿದ್ದಾನಾದರೂ ಅದನ್ನು ಪ್ರತ್ಯೇಕಿಸಿ ನೋಡುವುದು ಸಾಧ್ಯ. 'ಮನಸಿಜನ ಮಾಯೆ ವಿಧಿವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ' ಎಂಬುದು ಇಲ್ಲಿ ಜನ್ನನ ಕಾಣ್ಕೆ.

ಒಟ್ಟಿನಮೇಲೆ ಮಾನವಸ್ವಭಾವದ ಸಂಕೀರ್ಣತೆಯ ಅರಿವು, ಸ್ವಾರಸ್ಯಪೂರ್ಣವೂ ಸಂಕ್ಷಿಪ್ತವೂ ಆದ ನಿರೂಪಣೆ, ಸರಳ ಸಮುಚಿತವಾದ ಅಲಂಕಾರಗಳು, ದೇಸಿಯ ಬೆಡಗು ಬಿನ್ನಾಣಗಳು ಈ ಗುಣಗಳಿಂದ ಕೂಡಿರುವ ಯಶೋಧರ ಚರಿತೆ ಕನ್ನಡದಲ್ಲಿ ಒಂದು ವಿರಳವರ್ಗದ ಕಾವ್ಯವಾಗಿದೆ. ಧರ್ಮ, ಕಾವ್ಯಧರ್ಮಗಳ ಸಮನ್ವಯಕ್ಕೆ ಒಳ್ಳೆಯ ನಿದರ್ಶನವಾಗಿದೆ. (ಪಿ.ಪಿ.ಕೆ.)

ಅನಂತನಾಥಪುರಾಣ 14ನೆಯ ತೀರ್ಥಂಕರನಾದ ಅನಂತನಾಥನ ಕಥೆಯನ್ನು ಬಣ್ಣಿಸುವ 14 ಆಶ್ವಾಸಗಳ ಪ್ರೌಢ ಚಂಪೂಕಾವ್ಯ. ಇದರ ರಚನೆಯ ಕಾಲ 1230. ಕಥಾಬಂಧ ಹೀಗಿದೆ: ಒಂದು ದಿನ ಪದ್ಮರಥ ಮಹಾರಾಜ ಉಲ್ಕಾಪಾತವನ್ನು ಕಂಡು ವಿರಕ್ತನಾಗಿ ತಪಸ್ವಿಯಾದ. ಮರುಭವದಲ್ಲಿ ಇವನು ಅಚ್ಯುತ ಕಲ್ಪದಲ್ಲಿ ಜನಿಸಿದ. ಈ ಅಚ್ಯುತೇಂದ್ರ ಸ್ವರ್ಗದಿಂದ ಚ್ಯುತನಾಗಿ ಅಯೋಧ್ಯೆಯ ಸಿಂಹಸೇನ ಮಹಾರಾಜನಿಗೂ ಇವನ ಮಡದಿಯಾದ ಜಯಶಾಮೆಗೂ ಮಗನಾಗಿ ಹುಟ್ಟಿದ. ಇವನೇ ಅನಂತನಾಥ. ಇವನ ಮಡದಿ ರತ್ನಮಾಲೆ. ಈ ದಂಪತಿಗಳ ಪುತ್ರ ವಿಜಯ. ಒಂದು ದಿನ ಮಿಂಚನ್ನು ಕಂಡು ಅನಂತನಾಥನಿಗೆ ವೈರಾಗ್ಯವುಂಟಾಯಿತು. ಮಗನಿಗೆ ರಾಜ್ಯವನ್ನು ಕೊಟ್ಟು ಮುನಿಯಾದ. ಘಾತಿಕರ್ಮಗಳನ್ನು ಗೆದ್ದು ಜಿನನಾದ, ಮೂರು ಲೋಕಕ್ಕೂ ಧರ್ಮವರ್ಷವನ್ನು ಕರೆದು ತೀರ್ಥಂಕರನಾದ. ಅನಂತನಾಥಪುರಾಣಕ್ಕೆ ಮುಖ್ಯವಾದ ಆಕರ ಗುಣಭದ್ರಾಚಾರ್ಯರು ಸಂಸ್ಕೃತದಲ್ಲಿ ರಚಿಸಿರುವ ಉತ್ತರಪುರಾಣ. ಅಲ್ಲಿ ಕೇವಲ 85 ಶ್ಲೋಕಗಳಲ್ಲಿ ಮುಗಿಯುವ ಅನಂತನಾಥನ ಕಥೆಯನ್ನು ಜನ್ನ ಎಳೆದು ಹಿಗ್ಗಲಿಸಿ 14 ಆಶ್ವಾಸಗಳಷ್ಟು ದೊಡ್ಡದು ಮಾಡಿದ್ದಾನೆ. ಈ ಕಾವ್ಯ ಸಂಪ್ರದಾಯದ ಪ್ರಭಾವಕ್ಕೆ ವಿಶೇಷವಾಗಿ ಪಕ್ಕಾಗಿದೆ. ವಿದ್ವತ್ತಿನ ಪ್ರದರ್ಶನ, ಮಾತಿನ ಆಡಂಬರ, ಅಲಂಕಾರಗಳ ಜಟಿಲತೆ, ಮತೀಯ ಪ್ರಕ್ರಿಯೆಗಳ ಆಧಿಕ್ಯ, ಅನಾವಶ್ಯಕ ವರ್ಣನೆಗಳು, ಔಚಿತ್ಯ ಪ್ರಜ್ಞೆಯ ಕೊರತೆ - ಇವು ಈ ಕಾವ್ಯದ ಎದ್ದು ಕಾಣುವ ಲಕ್ಷಣಗಳು. ಹೀಗಾಗಿ ಈ ಕೃತಿ ರಸವತ್ತಾದ ಕವಿತೆಯಾಗುವುದರ ಬದಲು ಬಹುಮಟ್ಟಿಗೆ ಶುಷ್ಕವಾದ ಪುರಾಣವಾಗಿ ಪರಿಣಮಿಸಿದೆ.

ಆದರೆ ಇದರಲ್ಲಿ ಅಂತರ್ಗತವಾಗಿರುವ ಚಂಡಶಾಸನನ ಉಪಾಖ್ಯಾನ ಒಂದು ಹೃದಯಂಗಮವಾದ ಭಾಗ. ಪ್ರತ್ಯೇಕಿಸಿದರೆ ಅದೊಂದು ಉಜ್ವಲವಾದ ಖಂಡಕಾವ್ಯವಾಗುತ್ತದೆ. ಜಿನಕಥೆಗೂ ಅದಕ್ಕೂ ಸಾವಯವ ಸಂಬಂಧವೇನೂ ಇಲ್ಲ. ಉತ್ತರ ಪುರಾಣದಲ್ಲಿ ಬಿಂದುರೂಪವಾಗಿ ಬರುವ ಕಥೆಯನ್ನು ಇಲ್ಲಿ ಜನ್ನ ಸೊಗಸಾಗಿ ವಿಸ್ತರಿಸಿದ್ದಾನೆ. ಯಶೋಧರಚರಿತೆಯಲ್ಲಿ ಹೆಣ್ಣಿನ ನಿಷಿದ್ಧಕಾಮ ಚಿತ್ರಿತವಾಗಿದ್ದರೆ ಚಂಡಶಾಸನನ ವೃತ್ತಾಂತದಲ್ಲಿ ಗಂಡಿನ ದುರಂತ ವ್ಯಾಮೋಹ ನಿರೂಪಿತವಾಗಿದೆ. ಸುಮಾರು 80 ಪದ್ಯಗಳಷ್ಟು ಚಿಕ್ಕದಾದರೂ ಈ ಉಪಾಖ್ಯಾನ ಸಹೃದಯ ಚಿತ್ತದ ಮೇಲೆ ಅಳಿಸಲಾಗದ ಮುದ್ರೆಯೊತ್ತುತ್ತದೆ. ಅನಂತನಾಥಪುರಾಣದ ಅಮರತ್ವಕ್ಕೆ ಚಂಡಶಾಸನನ ಪ್ರಕರಣವೇ ಅಡಿಗಲ್ಲಾಗಿದೆ.

ಯಶೋಧರಚರಿತೆ ಮತ್ತು ಅನಂತನಾಥಪುರಾಣದ ಚಂಡಶಾಸನನ ಕಥೆ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಸ್ಥಾನ ಪಡೆಯುತ್ತವೆ. ಸಂಪ್ರದಾಯ ಬದ್ಧವೂ ಚಿರಪರಿಚಿತವೂ ಆದ ವಸ್ತುವನ್ನು ಬಿಟ್ಟು, ವಿಷಮಪ್ರಣಯದ ಎರಡು ದಿಕ್ಕುಗಳನ್ನು ಚಿತ್ರಿಸಿ ಇಲ್ಲಿ ಬದುಕಿನ ವಾಸ್ತವಿಕತೆಗೆ ಕವಿ ಕನ್ನಡಿ ಹಿಡಿದಿದ್ದಾನೆ. ವಿಮರ್ಶಕರೊಬ್ಬರು ಹೇಳುವಂತೆ ಅದಮ್ಯವಾದ ಕಾಮದ, ಧರ್ಮವಿರುದ್ಧ ಪ್ರಣಯದ ಸ್ತ್ರೀಮುಖ ಪುರುಷಮುಖಗಳನ್ನು ಉಜ್ವಲವಾಗಿ ಕ್ರಾಂತಿಕಾರಕ ರೀತಿಯಲ್ಲಿ ಚಿತ್ರಿಸಿ ಕನ್ನಡ ಸಾಹಿತ್ಯಕ್ಕೆ ಸ್ವಂತ ಕಾಣಿಕೆ ಸಲ್ಲಿಸಿದ್ದಾನೆ. ಕನ್ನಡ ಸಾಹಿತ್ಯಕ್ಕೆ ಮಾತ್ರವಲ್ಲ, ಜಾಗತಿಕ ಸಾಹಿತ್ಯಕ್ಕೂ ಬೆಲೆಯುಳ್ಳ ಕಾಣಿಕೆ ಸಲ್ಲಿಸಿದ್ದಾನೆಂದರೆ ತಪ್ಪಲ್ಲ. ಮಹಾಕಾವ್ಯದ ಔನ್ನತ್ಯ, ಭವ್ಯತೆಗಳು ಆಂಶಿಕವಾಗಿಯಾದರೂ ಇವನ ಎರಡು ಕಿರುಗಬ್ಬಗಳಲ್ಲಿ ತಲೆದೋರಿವೆ. ಆದ್ದರಿಂದ ಜನ್ನ ಮಹಾಕವಿಗಳ ಸಾಲಿನಲ್ಲಿ ನಿಲ್ಲಲಾರನಾದರೂ ಮಧ್ಯಮವರ್ಗದ ಕವಿಗಳ ಪಂಕ್ತಿಯಲ್ಲಿ ಅಗ್ರಸ್ಥಾನಕ್ಕೆ ನಿಸ್ಸಂದೇಹವಾಗಿ ಅರ್ಹನಾಗುತ್ತಾನೆ. ನೇಮಿಜನ್ನಮರೀರ್ವರೆ ಕರ್ನಾಟಕಕೃತಿಗೆ ಸೀಮಾಪುರುಷರ್ ಎಂಬ ಮಧುರಕವಿಯ ಪ್ರಶಂಸೆ ಉತ್ಪ್ರೇಕ್ಷೆ ಎನ್ನಿಸದು. (ಪಿ.ಪಿ.ಕೆ.,ಜಿ.ಬಿ.)

**ಜಮಖಂಡಿ :** ಬಾಗಲಕೋಟೆ ಜಿಲ್ಲೆಯ ಒಂದು ಉಪವಿಭಾಗ, ತಾಲ್ಲೂಕು ಮತ್ತು ಆ ತಾಲ್ಲೂಕಿನ ಆಡಳಿತಕೇಂದ್ರ. ಜಮಖಂಡಿ ಉಪವಿಭಾಗದಲ್ಲಿ ಮುಧೋಳ, ಜಮಖಂಡಿ ಮತ್ತು ಬೀಳಗಿ ತಾಲ್ಲೂಕುಗಳಿವೆ. ತಾಲ್ಲೂಕು ಜಿಲ್ಲೆಯ ವಾಯವ್ಯ ಭಾಗದಲ್ಲಿದೆ. ಪಶ್ಚಿಮ ಮತ್ತು ಉತ್ತರದಲ್ಲಿ ಬೆಳಗಾಂವಿ ಜಿಲ್ಲೆಯ ರಾಯಬಾಗ, ಅಥಣಿ ತಾಲ್ಲೂಕುಗಳು, ಪೂರ್ವದಲ್ಲಿ ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಯ ಬೀಳಗಿ, ದಕ್ಷಿಣದಲ್ಲಿ ಮುಧೋಳ - ಈ ತಾಲ್ಲೂಕುಗಳಿವೆ. ತಾಲ್ಲೂಕಿನ ವಿಸ್ತೀರ್ಣ 1,169.2ಚ.ಕಿಮೀ. ತಾಲ್ಲೂಕಿನಲ್ಲಿರುವ ಕಂದಾಯ ವಲಯಗಳು ಜಮಖಂಡಿ, ಸಾವಳಗಿ ಮತ್ತು ತೇರದಾಳ. ಒಟ್ಟು 65 ಹಳ್ಳಿಗಳಿವೆ. ಜನಸಂಖ್ಯೆ 4,08,436.

ತಾಲ್ಲೂಕಿನ ದಕ್ಷಿಣದೆಡೆ ತೇರದಾಳದಿಂದ ಪೂರ್ವಾಭಿಮುಖವಾಗಿ ಹಬ್ಬಿರುವ ಹೆಚ್ಚು ಎತ್ತರವಲ್ಲದ ಬೆಟ್ಟಸಾಲನ್ನು ಬಿಟ್ಟರೆ ತಾಲ್ಲೂಕಿನ ಹೆಚ್ಚು ಪ್ರದೇಶ ಮಟ್ಟಸ ನೆಲ. ಸಾಮಾನ್ಯವಾಗಿ ಕೃಷ್ಣಾನದಿಯೆಡೆಗೆ ಮತ್ತು ಪಶ್ಚಿಮ ಪೂರ್ವವಾಗಿ ಇಳಿಜಾರಾಗಿದೆ. ಬೆಟ್ಟಪ್ರದೇಶ ಕಲಾದಗಿ ಗುಂಪಿನ ಶಿಲೆಗಳದು, ಇತರ ಭಾಗ ಕರಿ ಎರೆಮಣ್ಣಿನ ಪ್ರದೇಶ. ಕೃಷ್ಣಾ ಈ ತಾಲ್ಲೂಕಿನ ಮುಖ್ಯ ನದಿ. ತಾಲ್ಲೂಕಿನ ವಾಯವ್ಯದಂಚಿನಲ್ಲಿ ಕೃಷ್ಣಾನದಿ ಪ್ರವೇಶಿಸಿ ತಾಲ್ಲೂಕಿನ ನಡುವೆ ಆಗ್ನೇಯಾಭಿಮುಖವಾಗಿ ಮುಂದುವರಿದು ಬೀಳಗಿ ತಾಲ್ಲೂಕನ್ನು ಪ್ರವೇಶಿಸುತ್ತದೆ.

ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ 576.99 ಮಿಮೀ. ಕೃಷ್ಣಾ ನದಿಯ ಎರಡೂ ದಂಡೆಯ ಮೈದಾನಗಳಲ್ಲಿ ಅನೇಕ ಬೆಳೆಗಳನ್ನು ಬೆಳೆಯುತ್ತಾರೆ. ಜೋಳ, ಗೋದಿ, ಸಜ್ಜೆ, ಸೇಂಗ, ಬತ್ತ, ದ್ವಿದಳ ಧಾನ್ಯಗಳು, ಕಬ್ಬು ಮತ್ತು ಹತ್ತಿ ತಾಲ್ಲೂಕಿನ ಮುಖ್ಯ ಬೆಳೆಗಳು.

ಸುಣ್ಣದಕಲ್ಲಿನ ಗಣಿಗಳು ತಾಲ್ಲೂಕಿನಲ್ಲಿ ಹೇರಳವಾಗಿವೆ. ಸುಣ್ಣದ ತಯಾರಿಕೆ ಒಂದು ಮುಖ್ಯ ಕಸಬಾಗಿದೆ. ಮನೆಮನೆಯಲ್ಲಿ ಕೈಮಗ್ಗದ ಬಟ್ಟೆಗಳು ತಯಾರಾಗುತ್ತವೆ. ಇಲ್ಲಿಯ ಕೈಮಗ್ಗದ ಬಟ್ಟೆಗಳಿಗೆ ಸಾಕಷ್ಟು ಬೇಡಿಕೆ ಉಂಟು. ಮರಗೆಲಸ ಇಲ್ಲಿನ ಒಂದು ಮುಖ್ಯ ಉದ್ಯೋಗ.

1948ಕ್ಕೆ ಮೊದಲು ಜಮಖಂಡಿ ಒಂದು ಚಿಕ್ಕ ಸಂಸ್ಥಾನವಾಗಿತ್ತು. ಪಟವರ್ಧನ ಸಂಸ್ಥಾನವೆಂದು ಇದನ್ನು ಕರೆಯಲಾಗುತ್ತಿತ್ತು. ಹರಿಭಟ್ಟನೆಂಬುವನು ಈ ಸಂಸ್ಥಾನದ ಮೂಲಪುರುಷ. ಇವನು ಬಾಳಾಜಿ ವಿಶ್ವನಾಥನ ಜೊತೆಗೆ ಇಲ್ಲಿಗೆ ಬಂದು ಈ ಸಂಸ್ಥಾನವನ್ನು ಸ್ಥಾಪಿಸಿದ. 1821ರಲ್ಲಿ ಬ್ರಿಟಿಷರೊಡನೆ ಆದ ಸಂಧಿಗೆ ಅನುಗುಣವಾಗಿ ಈ ಸಂಸ್ಥಾನಿಕರು ಅವರಿಗೆ ಪ್ರತಿವರ್ಷ ರೂ.20,840 ಕಪ್ಪ ಕೊಡುತ್ತಿದ್ದರು. ಈ ಸಂಸ್ಥಾನಿಕರಲ್ಲಿ ಒಬ್ಬನಾಗಿದ್ದ ಪರಶುರಾಮ ಭಾವು ವಿದ್ವಾಂಸ. ಇವನ ಕಾಲದಲ್ಲಿ ಜಮಖಂಡಿ ಸಂಸ್ಥಾನ ಅತ್ಯುನ್ನತ ಶಿಖರ ಮುಟ್ಟಿತ್ತು. 1948ರಲ್ಲಿ ಈ ಸಂಸ್ಥಾನ ಬೊಂಬಾಯಿ

ರಾಜ್ಯದಲ್ಲಿ ವಿಲೀನವಾಯಿತು.

ಜಮಖಂಡಿ ತಾಲ್ಲೂಕಿನಲ್ಲಿ ಅನೇಕಮುಖ್ಯ ಗ್ರಾಮಗಳಿವೆ. ಆಸಂಗಿ ಗ್ರಾಮ ಕೃಷ್ಣಾ ನದಿಯ ದಕ್ಷಿಣ ದಂಡೆಯ ಮೇಲಿದೆ. ಜಮಖಂಡಿಗೆ 16ಕಿಮೀ ದೂರದಲ್ಲಿದೆ. ಈ ಗ್ರಾಮಕ್ಕೆ ಹತ್ತಿರದಲ್ಲೆ ಅಸಗಿ ಎಂಬ ಗ್ರಾಮವೂ ಇದೆ. ಇಲ್ಲಿ ಜಮಖಂಡಿ ರಾಜರು ವಾಸಿಸುತ್ತಿದ್ದ ಅರಮನೆಯ ಅವಶೇಷವನ್ನು ಕಾಣಬಹುದು. ಅರಮನೆಯ ಆವರಣದಲ್ಲಿ ವೇಣುಗೋಪಾಲ ದೇವಾಲಯವಿದೆ. ಅಸಗಿಯಲ್ಲಿ ಅಗಸ್ತ್ಯಮುನಿಯ ಆಶ್ರಮವಿತ್ತೆಂದೂ ಇಲ್ಲಿ ಹರಿಯುವ ಕೃಷ್ಣಾ ನದಿಯನ್ನು ಒಂದು ತೀರ್ಥವೆಂದೂ ಹೇಳುತ್ತಾರೆ. ಜಮಖಂಡಿಗೆ ನೈಋತ್ಯದಲ್ಲಿ 24ಕಿಮೀ ದೂರದಲ್ಲಿರುವ ಚಿಮ್ಮಡ ಗ್ರಾಮದಲ್ಲಿ ರಘುನಾಥ ಮಹಾರಾಜ ಮಠವಿದೆ. ಪ್ರತಿವರ್ಷ ನಾಗರ ಪಂಚಮಿಯ ದಿನ ಇಲ್ಲಿ ರಥೋತ್ಸವ ಜರಗುವುದು. ಬನಹಟ್ಟಿಗೆ 5ಕಿಮೀ ದೂರದಲ್ಲಿರುವ ಕುಲಹಳ್ಳಿಯ ಬಳಿ ಇರುವ ಗೊಂಬೆಗುಡ್ಡದಲ್ಲಿ ಚರಿತ್ರಪೂರ್ವ ಕಾಲದ ಚಿತ್ರಗಳು ಸಿಕ್ಕಿವೆ. ರಬಕವಿ-ಬನಹಟ್ಟಿ, ಹೊಸೂರು ಮತ್ತು ರಾಮಪುರ ಒಂದು ಪುರಸಭಾಡಳಿತಕ್ಕೆ ಸೇರಿವೆ. ಜಮಖಂಡಿಗೆ 16ಕಿಮೀ ದೂರದಲ್ಲಿರುವ ಬನಹಟ್ಟಿ ಪುರಸಭಾ ಕೇಂದ್ರ. ಬನಹಟ್ಟಿಯಲ್ಲಿ ಕಾಡಸಿದ್ದೇಶ್ವರ ದೇವಾಲಯವಿದೆ. ಜಮಖಂಡಿಗೆ ಪಶ್ಚಿಮದಲ್ಲಿ 4ಕಿಮೀ ದೂರದಲ್ಲಿರುವ ರಾಮತೀರ್ಥದಲ್ಲಿ ಹಿಂದಿನ ರಾಜರ ಅರಮನೆ ರಾಮಚಂದ್ರ ಪ್ರಸಾದ ಇದೆ. ಇಲ್ಲಿ ತ್ರಿಪುರಸುಂದರಿ ದೇವಾಲಯ ಅಮೃತಶಿಲೆಯಲ್ಲಿ ಕಟ್ಟಲಾಗಿದೆ. ಇನ್ನೊಂದು ದೇವಾಲಯ ರಾಮೇಶ್ವರನದು. ಕುಶಲ ಕೈಗಾರಿಕಾ ತರಬೇತಿ ಕೇಂದ್ರ ಒಂದಿದೆ. ಜಮಖಂಡಿಗೆ ಉತ್ತರದಲ್ಲಿ 10ಕಿಮೀ ದೂರಕ್ಕಿರುವ ಶೂರ್ಪಾಲಿ ಗ್ರಾಮ ಕೃಷ್ಣಾನದಿ ದಂಡೆಯಲ್ಲಿದೆ. ಇಲ್ಲೊಂದು ಪುರಾತನ ಲಕ್ಷ್ಮೀನರಸಿಂಹ ದೇವಾಲಯವಿದೆ. ಜಮಖಂಡಿಗೆ ಪಶ್ಚಿಮದಲ್ಲಿ ಸು.32ಕಿಮೀ ದೂರದಲ್ಲಿರುವ ತೇರದಾಳ (ನೋಡಿ) ಹೋಬಳಿ ಕೇಂದ್ರ. ಇಲ್ಲಿ ಪ್ರಭುಸ್ವಾಮಿ, ನೇಮಿನಾಥ ಮೊದಲಾದವರ ದೇವಾಲಯಗಳಿವೆ. ಜಮಖಂಡಿಯ ಉತ್ತರಕ್ಕೆ 22ಕಿಮೀ ದೂರದಲ್ಲಿರುವ ತುಂಗಳ ಗ್ರಾಮ ಉಣ್ಣೆಯ ಕಂಬಳಿಗಳಿಗೆ ಪ್ರಸಿದ್ಧ. ಬನಹಟ್ಟಿಗೆ ಸು.3ಕಿಮೀ ದೂರದಲ್ಲಿ ಯಳಹಟ್ಟಿ ಗ್ರಾಮ ಇದೆ. ಇದರ ಹತ್ತಿರ ಇರುವ ಬಂದಿಗಾಣಿ ಬೆಟ್ಟದಲ್ಲಿರುವ ನೈಸರ್ಗಿಕ ಗುಹೆಗಳಲ್ಲಿ ಇತಿಹಾಸಪೂರ್ವಕಾಲದ ಚಿತ್ರಗಳು ಕಂಡುಬಂದಿವೆ.

*

ಜಮಖಂಡಿ ಪಟ್ಟಣ ಈ ತಾಲ್ಲೂಕಿನ ಮತ್ತು ಜಮಖಂಡಿ ಉಪ ವಿಭಾಗದ ಆಡಳಿತ ಕೇಂದ್ರ. ಕುಡಚಿ ರೈಲ್ವೆ ನಿಲ್ದಾಣದಿಂದ 54ಕಿಮೀ ದೂರದಲ್ಲೂ ಬಿಜಾಪುರದ ನೈಋತ್ಯಕ್ಕೆ 62ಕಿಮೀ ದೂರದಲ್ಲೂ ಇದೆ. ಜನಸಂಖ್ಯೆ 57,887. ಜಮಖಂಡಿ ಒಂದು ವ್ಯಾಪಾರ ಕೇಂದ್ರ. ಇಲ್ಲಿ ವರ್ಷಕ್ಕೊಮ್ಮೆ ಏಪ್ರಿಲ್‌ನಲ್ಲಿ ನಡೆಯುವ ದನಗಳ ಜಾತ್ರೆ ಸುಪ್ರಸಿದ್ಧ.

ಉಮಾರಾಮೇಶ್ವರ, ಜಂಬುಕೇಶ್ವರ, ಕಲ್ಮೇಶ್ವರ ಮತ್ತು ಬಸವಣ್ಣ - ಇವು ಇಲ್ಲಿನ ಮುಖ್ಯ ದೇವಾಲಯಗಳು. ಪಟ್ಟಣದ ಹೊರಗೂ ಅನೇಕ ದೇವಾಲಯಗಳುಂಟು. ಜಮಖಂಡಿಯಿಂದ ಸು.5ಕಿಮೀ ದೂರದಲ್ಲಿರುವ ಎಲ್ಲಮ್ಮನ ದೇವಾಲಯ ಸುಂದರವಾದುದು. ವೆಂಕಟರಮಣನ ಗುಡಿಯೊಂದು ಜಮಖಂಡಿಯಿಂದ ಸು.10ಕಿಮೀ ದೂರದಲ್ಲಿದೆ. ಪಟ್ಟಣದಲ್ಲಿ ಅನೇಕ ಸುಂದರ ಕಟ್ಟಡಗಳುಂಟು. ದರ್ಬಾರ್ ಭವನ ಈಗ ಕಾಲೇಜೊಂದರ ಸಭಾಭವನ. ರಾಮನಿವಾಸ ಎಂಬ ವಿಶ್ರಾಂತಿ ಮಂದಿರವೊಂದು ಗುಡ್ಡದ ಮೇಲುಂಟು.

(ಎನ್.ಸಿ.ವಿ.)

**ಜಮಾಲಾಬಾದ್ :** ದಕ್ಷಿಣ ಕನ್ನಡ ಜಿಲ್ಲೆ ಬೆಳ್ತಂಗಡಿ ತಾಲ್ಲೂಕಿನಲ್ಲಿ ಬೆಳ್ತಂಗಡಿಯಿಂದ ಸು.6ಕಿಮೀ ಉತ್ತರಕ್ಕೆ ಕುದುರೆಮುಖ ಶ್ರೇಣಿಯ ಚಾಚಿನ ಕೊನೆಯಲ್ಲಿ 545ಮೀ ಎತ್ತರಕ್ಕೆ ಎದ್ದು ನಿಂತಿರುವ ಕಡಿದಾದ ಶಿಖರದ ಮೇಲೆ ಕಟ್ಟಲಾದ ದುರ್ಗ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಳಿದುಳಿದಿರುವ ಕೋಟೆಕೊತ್ತಳಗಳಲ್ಲೆಲ್ಲ ಹೆಚ್ಚು ಸ್ವಾರಸ್ಯಕರವಾದ್ದು. ಈ ಶಿಖರದ ಅಡಿವಾರದಲ್ಲಿರುವ ನರಸಿಂಹಂಗಡಿ ಎಂಬ ಹಳೆಯ ಊರಿಗೂ ಜಮಾಲಾಬಾದ್ ಎಂಬ ಹೊಸ ಹೆಸರೇ ಅಂಟಿಕೊಂಡಿದೆ. ಆ ಊರಿಗೆ 'ನಡ' ಎಂಬ ಹೆಸರೂ ಇದೆ. ದುರ್ಗಕ್ಕೆ ಇರುವುದು ಒಂದೇ ಒಂದು ಇಕ್ಕಟ್ಟಿನ ದಾರಿ. ಫೆಬ್ರುವರಿ-ಮೇ ತಿಂಗಳ ಅವಧಿಯನ್ನು ಬಿಟ್ಟರೆ ಉಳಿದ ಕಾಲದಲ್ಲಿ ಈ ದಾರಿ ದುರ್ಗಮವಾದ್ದು.

1784ರಲ್ಲಿ ಮಂಗಳೂರಿನಿಂದ ಹಿಂದಿರುಗುತ್ತಿದ್ದ ಟಿಪ್ಪು ಸುಲ್ತಾನ್ ಈ ಶಿಖರದ ದುರ್ಗಮ ಸ್ಥಿತಿಸ್ಥಾನಗಳನ್ನು ಮನಗಂಡು, ಅಲ್ಲಿಯ ಪಾಳುಬಿದ್ದ ಹಳೆಯ ಕೋಟೆಯ ಅವಶೇಷಗಳ ಮೇಲೆ ಹೊಸ ದುರ್ಗವೊಂದನ್ನು ನಿರ್ಮಿಸಿದ. ಅದಕ್ಕೆ ತನ್ನ ತಾಯಿ ಜಮಾಲ್ ಬೀಯ ಗೌರವಾರ್ಥವಾಗಿ ಜಮಾಲಾಬಾದ್ ಎಂದು ಹೆಸರಿಟ್ಟು, ಅಲ್ಲಿ ನಾನೂರು ಯೋಧರ ಕಾವಲು ದಂಡೊಂದನ್ನೂ ಅಡಿವಾರದ ಜಮಾಲಾಬಾದಿನಲ್ಲಿ ತನ್ನ ಅಧಿಕಾರಿಯೊಬ್ಬನನ್ನೂ ನಿಲ್ಲಿಸಿದನೆಂದು ತಿಳಿಯುತ್ತದೆ.

ಕಲ್ಲಿನಲ್ಲಿ ಕಡಿಯಲಾದ ಮೆಟ್ಟಿಲುಗಳನ್ನು ಶ್ರಮವಹಿಸಿ ಹತ್ತಿ ಕೋಟೆಯನ್ನು ಪ್ರವೇಶಿಸುವವರು ಮೇಲ್ಮಟ್ಟದ ಯಂತ್ರಶಿಲ್ಪಜ್ಞಾನವನ್ನು ಬಳಸಿ ಬಂಡೆಗಳನ್ನು ಕೊರೆದು ನಿರ್ಮಿಸಲಾಗಿರುವ ಓಣಿಗಳನ್ನು ಕಾಣಬಹುದು. ದುರ್ಗದ ಗೋಡೆಗಳನ್ನೂ ಕೊತ್ತಳಗಳನ್ನೂ ಪ್ರವೇಶದ್ವಾರಗಳನ್ನೂ ಬೆಣಚುಕಲ್ಲಿನ ದಿಮ್ಮಿಗಳಿಂದ ರಚಿಸಲಾಗಿದೆ. ಕೋಟೆಯೊಳಗೆ ಎರಡು ಕೆರೆಗಳೂ ಸಿಹಿ ನೀರಿನ ಒಂದು ಸಣ್ಣ ಬುಗ್ಗೆಯೂ ಇವೆ. ಯುರೋಪಿನಲ್ಲಿ ತಯಾರಿಸಲಾದ ಫಿರಂಗಿಯೊಂದು ಕೋಟೆಯ ಜೀರ್ಣ ಕೊತ್ತಲವೊಂದರಲ್ಲಿ ಬಿದ್ದಿರುವುದನ್ನು ಇಂದಿಗೂ ಕಾಣಬಹುದು. ದುರ್ಗವನ್ನು ತಲುಪುವ ದಾರಿ ದುಸ್ತರವಾದ್ದರಿಂದ, ಹಿಂದೆ ಆಕ್ರಮಣ ಕಾಲದಲ್ಲಿ ಕೆಳಗಿನಿಂದ ಯೋಧರು ಮೇಲಕ್ಕೆ ಹೋಗಿ ಹೋರಾಡುವುದು ಆಕ್ರಮಣ ಕಾರರನ್ನು ತಡೆಗಟ್ಟುವುದೂ ಅಷ್ಟೇ ಕಷ್ಟದ ಕೆಲಸವಿದ್ದಿರಬೇಕು. ಕೆಲವೇ ಸೈನಿಕರು ಫಿರಂಗಿಗಳ ಸಹಾಯದಿಂದ ದುರ್ಗದ ಎಷ್ಟೇ ದೊಡ್ಡ ರಕ್ಷಣಾಸೇನೆಯನ್ನೂ ಸ್ಥಾನಬದ್ಧಗೊಳಿಸುವುದು ಸುಲಭವೇ ಆಗಿದ್ದಿರಬೇಕು.

1799ರಲ್ಲಿ ಮೈಸೂರು ಯುದ್ಧ ನಡೆಯುತ್ತಿದ್ದಂತೆ ಜಮಾಲಾಬಾದಿನ ಅಡಿವಾರದ ಊರನ್ನು ಕೊಡಗಿನವರು ನಾಶಗೊಳಿಸಿದರು. ಯುದ್ಧದಲ್ಲಿ ಟಿಪ್ಪುವಿಗೆ ಆದ ಪರಾಭವದಿಂದಾಗಿ ಪಶ್ಚಿಮ ಕರಾವಳಿ ಪ್ರದೇಶದ ಆಧಿಪತ್ಯ ಇಂಗ್ಲಿಷರದಾಯಿತು. ಅದೇ ವರ್ಷ ಅವರು ಜಮಾಲಾಬಾದ್ ದುರ್ಗವನ್ನು ವಶಪಡಿಸಿಕೊಂಡರಾದರೂ ಕೆಲವೇ ದಿನಗಳಲ್ಲಿ ಮೈಸೂರು ಸಿಂಹಾಸನದ ಸುಳ್ಳು ಹಕ್ಕುದಾರನೊಬ್ಬನ ಬೆಂಬಲಿಗನಾದ ತಿಮ್ಮನಾಯಕನೆಂಬಾತ ಇಂಗ್ಲಿಷರನ್ನು ಓಡಿಸಿ ಕೋಟೆಯನ್ನು ಆಕ್ರಮಿಸಿಕೊಂಡ. ಮೂರು ತಿಂಗಳು ಸತತ ಮುತ್ತಿಗೆಯ ಅನಂತರ (1800) ಇಂಗ್ಲಿಷರು ಆ ದುರ್ಗವನ್ನು ಸ್ವಾಧೀನಪಡಿಸಿಕೊಂಡರು.

(ಕೆ..ವಿ..ಆರ್.)

**ಜಯಂತಿ[1] :** ಕನ್ನಡದ ಪ್ರಸಿದ್ಧ ಚಿತ್ರನಟಿ. ಬಳ್ಳಾರಿಯಲ್ಲಿ ಜನಿಸಿದರು. ಇವರ ಮೊದಲ ಹೆಸರು ಕಮಲಕುಮಾರಿ. ಬಾಲ್ಯದಲ್ಲಿಯೇ ಕಾಳಹಸ್ತಿಗೆ ವಲಸೆ ಹೋದರು. 1959ರಲ್ಲಿ ಮದರಾಸಿನ ಖ್ಯಾತ ನಾಟ್ಯಾ ಚಾರ್ಯ ಜಗನ್ನಾಥಶರ್ಮ ಹಾಗೂ ಜೈಮಿನಿಚಂದ್ರ ಇವರ ಬಳಿ ನಾಟ್ಯಾಭ್ಯಾಸ ಮಾಡಿದರು. ಕೃಷ್ಣಲೀಲೆ ಹಾಗೂ ಚೆಂಚುಲಕ್ಷ್ಮಿ ಎಂಬ ತೆಲುಗು ಚಿತ್ರಗಳಲ್ಲಿ ನಾಯಕಿಯಾಗಿ ಕಾಣಿಸಿಕೊಂಡ ಮೇಲೆ ಜಯಂತಿ ಎಂಬ ಹೆಸರು ಸ್ಥಿರವಾಗಿ ನಿಂತಿತು. ಅನಂತರ ತಮಿಳು ಮತ್ತು ತೆಲುಗು ಚಿತ್ರಗಳ ಖ್ಯಾತ ನಟರಾದ ಶಿವಾಜಿ ಗಣೇಶನ್, ಎಂ.ಜಿ.ರಾಮಚಂದ್ರನ್, ಎನ್.ಟಿ.ರಾಮರಾವ್, ಎ.ನಾಗೇಶ್ವರರಾವ್ ಅವರ ಜೊತೆ ಸಣ್ಣಪುಟ್ಟ ಪಾತ್ರಗಳಲ್ಲಿ ನಟಿಸಿದರು. ವೈ.ಆರ್.ಸ್ವಾಮಿ ನಿರ್ದೇಶಿಸಿದ ಜೇನುಗೂಡು ಚಿತ್ರದ ಮೂಲಕ ಕನ್ನಡ ಚಿತ್ರರಂಗವನ್ನು ಪ್ರವೇಶಿಸಿದರು. ಭಗವಾನ್ ದೊರೈ ನಿರ್ಮಿಸಿದ ಚಂದವಳ್ಳಿಯ ತೋಟದಲ್ಲಿ (1964) ಶೋಕಪ್ರಧಾನ ಪಾತ್ರವನ್ನು ಗಂಭೀರವಾಗಿ ನಿರ್ವಹಿಸಿ ಎಲ್ಲರ ಗಮನ ಸೆಳೆದರು. ಆ ವರ್ಷದ ಅತ್ಯುತ್ತಮ ಚಿತ್ರವಾಗಿ ಅದು ಪ್ರಶಸ್ತಿ ಗಳಿಸಿತು. ಪೆಕೇಟಿ ಶಿವರಾಂ ನಿರ್ದೇಶಿಸಿದ ಚಕ್ರತೀರ್ಥದಲ್ಲಿ ದ್ವಿಪಾತ್ರದಲ್ಲಿ (ತಾಯಿ ಮತ್ತು ಮಗಳು) ಉತ್ತಮ ಅಭಿನಯ ನೀಡಿದರು. ಈ ಚಿತ್ರ 1967ರ ಉತ್ತಮ ಚಿತ್ರವೆಂದು ಪರಿಗಣಿತವಾಯಿತು. 1964ರಿಂದ ಇತರ ಭಾಷೆಯ ಚಿತ್ರಗಳು ಸೇರಿದಂತೆ ಇವರು 100ಕ್ಕೂ ಹೆಚ್ಚು ಚಿತ್ರಗಳಲ್ಲಿ ನಟಿಸಿದ್ದಾರೆ. ಕನ್ನಡದಲ್ಲಿ 80ಕ್ಕೂ ಹೆಚ್ಚು ಚಿತ್ರಗಳಲ್ಲಿ ನಟಿಸಿದ್ದಾರೆ. ಅವುಗಳಲ್ಲಿ 30ಕ್ಕೂ ಹೆಚ್ಚು ಚಿತ್ರಗಳಲ್ಲಿ ರಾಜಕುಮಾರ್ ಜೊತೆ ನಾಯಕಿಯಾಗಿ ಕಾಣಿಸಿಕೊಂಡಿದ್ದಾರೆ. ಪದ್ಮಿನಿ ಚಿತ್ರಸಂಸ್ಥೆಯವರ ವರ್ಣಚಿತ್ರ ಶ್ರೀ ಕೃಷ್ಣದೇವರಾಯ ಇವರ 50ನೆಯ ಚಿತ್ರ. ಚಂದವಳ್ಳಿಯ ತೋಟ, ಮಿಸ್ ಲೀಲಾವತಿ, ಚಕ್ರತೀರ್ಥ, ಶ್ರೀ ಕೃಷ್ಣದೇವರಾಯ, ಗೃಹಲಕ್ಷ್ಮಿ, ಎರಡು ಮುಖ, ಕುಲಗೌರವ, ಬೆಟ್ಟದ ಹುಲಿ, ರೌಡಿರಂಗಣ್ಣ, ದೇವರ ಮಕ್ಕಳು, ಬದುಕು

ಬಂಗಾರವಾಯಿತು, ಮಸಣದ ಹೂವು ಇವು ಇವರು ನಟಿಸಿರುವ ಮುಖ್ಯ ಚಿತ್ರಗಳು. ಪುಟ್ಟಣ್ಣ ಕಣಗಾಲ್ ನಿರ್ದೇಶಿಸಿದ ಎಡಕಲ್ಲು ಗುಡ್ಡದ ಮೇಲೆ ಎಂಬ ವರ್ಣಚಿತ್ರದ ಅತ್ಯುತ್ತಮ ಅಭಿನಯಕ್ಕಾಗಿ ಇವರಿಗೆ ರಾಜ್ಯ ಪ್ರಶಸ್ತಿ ಲಭಿಸಿತು.



ಕನ್ನಡ ಅಭಿಮಾನಿಗಳಿಂದ ಇವರು ಕಲಾಕೋಕಿಲೆ ಹಾಗೂ ಅಭಿನಯಶಾರದೆ ಎಂಬ ಬಿರುದುಗಳನ್ನು ಪಡೆದಿದ್ದಾರೆ. ದಾದ್, ಲಾಲ್ ಬಂಗಾಲಾ, ಏಕ್ ಫೂಲ್ ಏಕ್ ಭೂಲ್, ತೀನ್ ಬಹುರಾಣಿಯಾ, ತುಂಸೆ ಅಚ್ಛಾ ಕೌನ್ ಹೈ ಮೊದಲಾದ ಹಿಂದಿ ಚಿತ್ರಗಳಲ್ಲಿಯೂ ಪ್ರೇಂ ನಜೀರ್ ನಾಯಕನಾಗಿರುವ ಒಂದು ಮಲೆಯಾಳಂ ಚಿತ್ರದಲ್ಲಿಯೂ ಅಭಿನಯಿಸಿ ಪಂಚಭಾಷಾ ತಾರೆ ಎನಿಸಿಕೊಂಡಿದ್ದಾರೆ. ರಾಜಕೀಯ ರಂಗದ ಬಗ್ಗೆ ಆಸಕ್ತರಾದ ಇವರು 2004ರಲ್ಲಿ ನಡೆದ ಲೋಕಸಭೆ ಚುನಾವಣೆಯಲ್ಲಿ ಸ್ಪರ್ಧಿಸಿ ಸೋತರು. ಜಯಂತಿಯವರು ವಿವಿಧ ಸಾಮಾಜಿಕ, ಸಾಂಸ್ಕೃತಿಕ ಕಾರ್ಯಗಳಲ್ಲಿ ತಮ್ಮನು ತೊಡಗಿಸಿಕೊಂಡಿದ್ದಾರೆ. (ಎಸ್.ಎಸ್.ಎಂಯು.)

**ಜಯಂತಿ² :** ಧಾರವಾಡದಿಂದ ಪ್ರಕಟವಾಗುತ್ತಿದ್ದ ಕನ್ನಡ ಮಾಸ ಪತ್ರಿಕೆ. ಮರಾಠಿಯ ಕಿರ್ಲೋಸ್ಕರದಂಥ ಒಂದು ಪತ್ರಿಕೆ ಕನ್ನಡದಲ್ಲಿರಬೇಕೆಂದು ವಿ.ವೈ.ಜಠಾರ, ಶಂಕರರಾವ್ ಜಠಾರ, ಸಿ.ಡಿ.ದೇಶಪಾಂಡೆ, ಮಾಧವರಾವ್ ಪಾಟೀಲ ಇವರು 1938ರ ಮೇ ತಿಂಗಳಲ್ಲಿ ಈ ಪತ್ರಿಕೆ ಯನ್ನು ಪ್ರಾರಂಭಿಸಿದರು. ಬೆಟ ಗೇರಿ ಕೃಷ್ಣಶರ್ಮರು ಸಂಪಾದ ಕತ್ವದ ಹೊಣೆ ಹೊತ್ತರು. ಇವರ ಜೊತೆಗೆ ಮೊದಲ ವರ್ಷ ಮಾಧವರಾವ್ ಪಾಟೀಲರೂ ಸಂಪಾದಕರಾಗಿದ್ದರು. 1941ರಲ್ಲಿ ಆರ್ಥಿಕ ಕಾರಣಗಳಿಂದಾಗಿ ಪತ್ರಿಕೆಯನ್ನು ನಿಲ್ಲಿಸ ಬೇಕೆಂದಿದ್ದಾಗ ಬೆಟಗೇರಿ ಯವರು ತಮ್ಮ ಕೆಲವು ಸ್ನೇಹಿತರ ಸಹಾಯದಿಂದ ಪತ್ರಿಕೆಯನ್ನು ತಾವೇ ವಹಿಸಿಕೊಂಡು 1961ರ ಜುಲೈವರೆಗೆ ನಡೆಸಿಕೊಂಡು ಬಂದರು. ಸೆಪ್ಟೆಂಬರ್ 1961ರಲ್ಲಿ ಸಿ.ಎಸ್.ಕುಲಕರ್ಣಿ ಇದನ್ನು ವಹಿಸಿಕೊಂಡರು. ಎರಡು ವರ್ಷ ತಮ್ಮ ಸಂಪಾದಕತ್ವದಲ್ಲಿ ಪತ್ರಿಕೆಯನ್ನು ನಡೆಸಿ 1963ರಲ್ಲಿ ಹೊರಡಿಯವರಿಗೆ ಪತ್ರಿಕೆಯನ್ನು ವಹಿಸಿಕೊಟ್ಟರು. ರಾಮಚಂದ್ರ ಕೊಟ್ಟಲಗಿಯವರೂ ಸ್ವಲ್ಪಕಾಲ ಈ ಪತ್ರಿಕೆಯ ಸಂಪಾದಕರಾಗಿದ್ದರು. 1964ರ ಹೊತ್ತಿಗೆ ಪತ್ರಿಕೆಯ ಪ್ರಕಟಣೆ ನಿಂತಿತು.




ಜಯಂತಿಗೆ ಅನೇಕ ಪ್ರಮುಖರು ಲೇಖನಗಳನ್ನು ಬರೆಯುತ್ತಿದ್ದರು. ಹೊಸ ಲೇಖಕರಿಗೆ ಪ್ರೋತ್ಸಾಹ ದೊರೆಯಿತು. ವಿಮರ್ಶೆಯ ಶಿಕ್ಷಣರಂಗ ವಿಭಾಗದ ಮೂಲಕ ಜನರಿಗೆ ವಿಮರ್ಶೆಯ ವಿಷಯದಲ್ಲಿ ತಿಳಿವಳಿಕೆ ನೀಡಲಾಗುತ್ತಿತ್ತು. ಒಳಹೊರನಾಡುಗಳ ಕನ್ನಡಿಗರ ಚಟುವಟಿಕೆಗಳಿಗೆ ಪತ್ರಿಕೆ ಪ್ರಚಾರ ನೀಡಿತು. ಲಲಿತ ಸಾಹಿತ್ಯವನ್ನೇ ಹೆಚ್ಚಾಗಿ ಪ್ರಕಟಿಸುತ್ತಿದ್ದ ಜಯಂತಿ ಒಂದು ಉತ್ತಮ ಮಾಸಪತ್ರಿಕೆ ಎಂಬ ಹೆಸರು ಪಡೆದಿತ್ತು. (ಎಸ್.ವಿ.ಪಿ.)

**ಜಯಕರ್ನಾಟಕ :** ಧಾರವಾಡದಿಂದ ಪ್ರಕಟವಾಗುತ್ತಿದ್ದ ಮಾಸ ಪತ್ರಿಕೆ. 1923ರ ನವೆಂಬರ್‌ನಲ್ಲಿ ಆಲೂರ ವೆಂಕಟರಾಯರು ಈ ಪತ್ರಿಕೆಯನ್ನು ಪ್ರಾರಂಭಿಸಿ ಸಂಪಾದಕತ್ವದ ಹೊಣೆ ಹೊತ್ತರು. ಕನ್ನಡ ನಾಡು ನುಡಿ ಇತಿಹಾಸ ಸಂಸ್ಕೃತಿ ಗಳ ಪರಿಚಯ ಮತ್ತು ಪ್ರಚಾರ ಈ ಪತ್ರಿಕೆಯ ಗುರಿಯಾಗಿತ್ತು. ಪತ್ರಿಕೆಯಲ್ಲಿ ಮೇಲ್ಮಟ್ಟದ ಪ್ರಬಂಧಗಳೂ ರಾಜಕೀಯ ಸಾಮಾಜಿಕ ವಿಚಾರಗಳೂ ಪ್ರಕಟವಾಗಿ ಕನ್ನಡದ ಮಾಡರ್ನ್ ರಿವ್ಯೂ ಎಂಬ ಹೆಸರು ಪಡೆ ಯಿತು. ಹೊಸ ಕವಿಗಳಿಗೆ ಕಥೆಗಾರರಿಗೆ ಪ್ರೋತ್ಸಾಹ ವಿತ್ತು ಈ ಪತ್ರಿಕೆ ಲೇಖಕರ ಬಳಗವನ್ನೇ ಸೃಷ್ಟಿಸಿತು.




1929ರಿಂದ ಧಾರವಾಡದ ಗೆಳೆಯರ ಗುಂಪಿನವರು ಈ ಪತ್ರಿಕೆಯನ್ನು ಮೂರು ವರ್ಷ ಪರ್ಯಂತ ನಡೆಸಿಕೊಂಡು ಬಂದು ಅನಂತರ ಬೆಳಗಾಂವಿ (ವಿನೀತ) ರಾಮಚಂದ್ರರಾಯರಿಗೆ ವಹಿಸಿಕೊಟ್ಟರು. ಇವರು ಹಲವು ವರ್ಷಗಳ ಕಾಲ ನಡೆಸಿ ಅನಂತರ ಶಿ.ಶಿ.ಬಸವನಾಳರಿಗೆ ಒಪ್ಪಿಸಿ ಕೊಟ್ಟರು. ಬಸವನಾಳರು ಈ ಮಾಸಪತ್ರಿಕೆಯೊಂದಿಗೆ ಅದೇ ಹೆಸರಿನ ವಾರಪತ್ರಿಕೆಯನ್ನೂ ಪ್ರಾರಂಭಿಸಿದರು. ಶಿ.ಶಿ.ಬಸವನಾಳರು 1951ರ ಡಿಸೆಂಬರಿನಲ್ಲಿ ಮೃತರಾದುದರಿಂದ ಅವರ ತಮ್ಮಂದಿರಾದ ವಿ.ಎಸ್.ಬಸವನಾಳರು ಮಾಸಪತ್ರಿಕೆ ಮತ್ತು ವಾರಪತ್ರಿಕೆ ಎರಡನ್ನೂ ವಹಿಸಿಕೊಂಡರು. ಮುಂದೆ ಈ ಎರಡೂ ಪತ್ರಿಕೆಗಳು ಮೂರು-ನಾಲ್ಕು ವರ್ಷ ಮಾತ್ರ ಪ್ರಕಟವಾಗಿ ಅನಂತರ ನಿಂತವು. (ಬಿ.ಕೆ.)

**ಜಯಕೀರ್ತಿ :** 11ನೆಯ ಶತಮಾನದ ಜೈನ ಲಾಕ್ಷಣಿಕ. ಛಂದೋನುಶಾಸನ ಎಂಬ ಸಂಸ್ಕೃತ ಛಂದೋಗ್ರಂಥದ ಕರ್ತೃ. ಪ್ರಸಿದ್ಧ ಜೈನಸಂನ್ಯಾಸಿ ಹಾಗೂ ಗ್ರಂಥಕರ್ತೃ ಹೇಮಚಂದ್ರ ಮತ್ತು ಮದನತಿಲಕದ ಕರ್ತೃ ಚಂದ್ರರಾಜ (ಸು.1025) ಇವನ ಸಮಕಾಲೀನರು. ಜಯಕೀರ್ತಿ ದಿಗಂಬರಪಂಥದ ಜೈನಸಂನ್ಯಾಸಿಯಾಗಿರಬಹುದು ಎಂಬ ಊಹೆಯಿದೆ. ಕನ್ನಡ ಕವಿ, ಕಾವ್ಯ ಮತ್ತು ಛಂದಸ್ಸುಗಳ ಹೆಚ್ಚಿನ ಪರಿಜ್ಞಾನವನ್ನು ಪ್ರಕಟಿಸುವ ಹಲವು ಉಲ್ಲೇಖಗಳು ಈತನ ಛಂದೋಗ್ರಂಥಗಳಲ್ಲಿ ದೊರೆಯುವುದರಿಂದ ಈತ ದಾಕ್ಷಿಣಾತ್ಯನೆಂದೂ ಈತನ ಮಾತೃಭಾಷೆ ಕನ್ನಡವಾಗಿರಬೇಕೆಂದೂ ತಿಳಿಯಲಾಗಿದೆ. ಕಾಲವನ್ನು ತಿಳಿಯಲು ಗ್ರಂಥದಲ್ಲಿ ನೇರವಾದ ಆಧಾರವಿಲ್ಲ. ಅಲ್ಲಿ ಉಕ್ತವಾಗಿರುವ ಸ್ವಯಂಭು ಮತ್ತು ಅಸಗ ಕವಿಗಳ ಹಾಗೂ ಕರ್ನಾಟಕ ಮಾಲತೀಮಾಧವ ಕಾವ್ಯದ ಈಚೆಗೆ ಎಂದರೆ ಸು.1000ದಿಂದೀಚೆಗೆ, ಛಂದೋನುಶಾಸನದ ಜೈಸಲ್ಮೇರ್ ಹಸ್ತಪ್ರತಿಯ ಕಾಲಕ್ಕೆ ಮೊದಲು ಎಂದರೆ 1133ಕ್ಕೆ ಮೊದಲು ಆ ಗ್ರಂಥದ ಕರ್ತೃವಿದ್ದನೆಂದೂ ಸ್ಥೂಲವಾಗಿ ಆತನ ಕಾಲ 11ನೆಯ ಶತಮಾನವೆಂದೂ ಆ ಕೃತಿಯನ್ನು ಸಂಪಾದಿಸಿ ಪ್ರಕಟಿಸಿರುವ ಎಚ್.ಡಿ. ವೇಲಣಕರ್ ಅಭಿಪ್ರಾಯಪಟ್ಟಿರುತ್ತಾರೆ. 1ನೆಯ ನಾಗವರ್ಮನ ಕನ್ನಡ ಛಂದೋಂಬುಧಿಯನ್ನು ಈತ ತನ್ನ ಗ್ರಂಥದಲ್ಲಿ ಅನುಸರಿಸಿರುವುದಕ್ಕೆ ಅಲ್ಲಲ್ಲಿ ಕೆಲವು ಆಧಾರಗಳು ದೊರೆಯುತ್ತವೆ.

ಛಂದೋನುಶಾಸನದಲ್ಲಿ ಒಟ್ಟು 8 ಅಧಿಕಾರಗಳಿವೆ. ಅವುಗಳಿಗೆ ಕ್ರಮವಾಗಿ ಸಂಜ್ಞಾ, ಸಮವೃತ್ತ, ಅರ್ಧ ಸಮವೃತ್ತ, ವಿಷಮವೃತ್ತ, ಆರ್ಯಾಜಾತಿ-ಮಾತ್ರಾ ಶ್ರಮಿಕಜಾತಿ, ಮಿಶ್ರ, ಕರ್ನಾಟವಿಷಯಭಾಷಾಜಾತಿ. ಪ್ರಸ್ತಾರಾದಿಪ್ರತ್ಯಯ ಎಂಬ ಹೆಸರುಗಳಿವೆ. ವಿಷಯದಲ್ಲಿಯೂ

ನಿರೂಪಣೆಯಲ್ಲಿಯೂ ಕನ್ನಡ ಛಂದಸ್ಸಿನ ಹಾಗೂ ಛಂದೋಗ್ರಂಥದ ಪ್ರಭಾವ ಅನುಸರಣೆಗಳು ಸ್ವಲ್ಪಮಟ್ಟಿಗೆ ಅಲ್ಲಲ್ಲಿ ಗೋಚರಿಸುವುದು, ಸಪ್ತಮಾಧಿಕಾರ ಪೂರ್ತಿಯಾಗಿ ಕನ್ನಡ ಛಂದಸ್ಸಿಗೆ ಮೀಸಲಾಗಿರುವುದು ಈ ಗ್ರಂಥ ಕನ್ನಡಿಗರ ಆದರಣೆಗೆ ಪಾತ್ರವಾಗಲು ಕಾರಣಗಳಾಗಿವೆ. ಮಾಲಾವೃತ್ತ, ರಗಳೆ, ಪ್ರಾಸ, ಕೆಲವು ವರ್ಣವೃತ್ತಗಳು ಹಾಗೂ ವೃತ್ತನಾಮಗಳು ಸ್ಕಂಧ ಮತ್ತು ಸಂಕೀರ್ಣಗಳೆಂಬ ಮಾತ್ರಾವೃತ್ತಗಳು, ಗುಣಿ, ದ್ವಿಪದಿ, ಉತ್ಸವ ಮತ್ತು ಲಯೋತ್ತರಗಳೆಂಬ ಮಿಶ್ರ ಅಥವಾ ಮಾತ್ರಾವರ್ಣವೃತ್ತಗಳು ಉತ್ಸವ, ದಂಡಕ, ಅಕ್ಕರ, ತ್ರಿಪದಿ ಮುಂತಾದ ಕನ್ನಡದ ದೇಶ್ಯವೃತ್ತಗಳು - ಇಂಥ ಕೆಲವು ಛಂದೋವಿಷಯಗಳ ವಿವೇಚನೆಯಲ್ಲಿ ಈ ಪ್ರಭಾವವನ್ನೂ ಅನುಸರಣೆಯನ್ನೂ ಕಾಣಬಹುದಾಗಿದೆ. ಉಳಿದೆಡೆಗಳಲ್ಲಿ ಸಂಸ್ಕೃತ ಛಂದಸ್ಸಿನ ಚರ್ಚೆಯಿದೆ. ಪ್ರಾಕೃತ ಕಾವ್ಯ ಮತ್ತು ಛಂದಸ್ಸಿನ ಬಗ್ಗೆ ಈ ಗ್ರಂಥದಲ್ಲಿ ಯಾವುದೇ ಮಾಹಿತಿ ದೊರೆಯುವುದಿಲ್ಲ. ಕನ್ನಡ ಛಂದಸ್ಸಿನ ವಿವೇಚನೆಗೆ ಪೂರಕವಾದ ಅಂಶಗಳು ಇಲ್ಲಿ ದೊರೆಯುವುದರಿಂದ ಈ ಗ್ರಂಥ ಕನ್ನಡ ಛಂದಸ್ಸಿನ ಖಚಿತವಾದ ತಿಳಿವಳಿಕೆಗೆ ಸಹಾಯಕವಾಗಿದೆ.

ಜಯಕೀರ್ತಿಯು ಶೀಲೋಪದೇಶಮಾಲ ಎಂಬ ನೈತಿಕ ಕಾವ್ಯವನ್ನು 116 ಪ್ರಾಕೃತ ಗಾಥೆಗಳಲ್ಲಿ ರಚಿಸಿದಂತೆಯೂ ತಿಳಿದು ಬ ರ ’ ು ತ ’ ್ ದ ’ .

(ಟಿ.ವಿ.ವಿ., ಎಚ್.ವಿ.ಎಸ್.)

**ಜಯಕೇಶಿ I :** ಗೋವ ಕದಂಬ ಮನೆತನದ ದೊರೆ (ಸು.1050-78); ಇಮ್ಮಡಿ ಷಷ್ಠದೇವನ ಮಗ. ಸು.1072ರವರೆಗೆ ಈತ ತನ್ನ ತಂದೆಯೊಡನೆಯೇ ರಾಜ್ಯಭಾರ ಮಾಡುತ್ತಿದ್ದ. ಮೊದಲು ಜಯಕೇಶಿ ಚಾಳುಕ್ಯ 1ನೆಯ ಸೋಮೇಶ್ವರನ ಸಾಮಂತನಾಗಿದ್ದು, ಸೋಮೇಶ್ವರನಿಗೂ ಚೋಳರಿಗೂ ಸ್ನೇಹ ಬೆಸೆಯುವುದರಲ್ಲಿ ಕಾರಣನಾದ. 1ನೆಯ ಸೋಮೇಶ್ವರನ ತಮ್ಮ 6ನೆಯ ವಿಕ್ರಮಾದಿತ್ಯ ಜಯಕೇಶಿಯ ಮಗಳನ್ನು ಮದುವೆಯಾಗಿದ್ದರಿಂದ ಮುಂದೆ ಚಾಳುಕ್ಯ ಸಾಮ್ರಾಟತ್ವಕ್ಕಾಗಿ ಅಣ್ಣತಮ್ಮಂದಿರಲ್ಲಿ ಸ್ಪರ್ಧೆ ನಡೆದಾಗ ಜಯಕೇಶಿ ತನ್ನ ಅಳಿಯ ವಿಕ್ರಮಾದಿತ್ಯನ ಪರ ಹೋರಾಡಿ ಅವನಿಗೆ ಸಿಂಹಾಸನ ಸಾಧಿಸಿ ಕೊಟ್ಟ. ಜಯಕೇಶಿ ಬನವಾಸಿಯ ಕೀರ್ತಿರಾಜ ಮತ್ತು ಕಾಮದೇವ ಎಂಬ ರಾಜರನ್ನು ಸೋಲಿಸಿದ. ಕಪರ್ದಿಕ ದ್ವೀಪದ ದೊರೆಯನ್ನು ಕೊಂದ, ಪರಮಾರ ಮತ್ತು ಲಾಟ ದೊರೆಗಳ ಮೇಲೂ ವಿಜಯ ಸಾಧಿಸಿದ ಎಂದು ಶಾಸನಗಳು ತಿಳಿಸುತ್ತವೆ.

ಗೋವ-ಕೊಂಕಣ ಪ್ರದೇಶವಲ್ಲದೆ ಧಾರವಾಡ ಮತ್ತು ಬೆಳಗಾಂವಿ ಜಿಲ್ಲೆಯ ಕೆಲವು ಭಾಗಗಳೂ ಜಯಕೇಶಿಯ ರಾಜ್ಯಕ್ಕೆ ಸೇರಿದ್ದುವು. ಇವನ ಕಾಲದಲ್ಲಿ ಗೋವ ಪಟ್ಟಣ ಕದಂಬ ರಾಜ್ಯದ ರಾಜಧಾನಿಯಾಗಿ ಪ್ರಮುಖ ವಾಣಿಜ್ಯ ಕೇಂದ್ರವಾಗಿಯೂ ಬೆಳೆಯಿತು. ಜಯಕೇಶಿ ಅರಬರೊಡನೆ ಬೆಳೆಸಿದ್ದ ಸ್ನೇಹ ಮತ್ತು ಇವನು ಕಟ್ಟಿದ್ದ ನೌಕಾಬಲ ಇವುಗಳಿಂದ ಸಮುದ್ರವ್ಯಾಪಾರ ಬಹುವಾಗಿ ಕುದುರಿದ್ದು ಗೋವದ ಬೆಳೆವಣಿಗೆಗೆ ಕಾರಣವಾಗಿರಬೇಕು. ಅಣಿಲಾಪುರ (ಅಳಣಾವರ, ಧಾರವಾಡ ಜಿಲ್ಲೆ) ಮತ್ತು ಚಂದ್ರಾಪುರ (ಗೋವೆಯ ಚಾಂದೋರ್) ಸಹ ಇವನ ರಾಜಧಾನಿಗಳಾಗಿದ್ದುವೆಂದು ಇವನ ಕಾಲದ ಕೆಲವು ಶಾಸನಗಳು ತಿಳಿಸುತ್ತವೆ.

ಜಯಕೇಶಿಗೆ ಗೂವಲದೇವ III ಮತ್ತು ವಿಜಯಾದಿತ್ಯ ಎಂಬ ಪುತ್ರರಿದ್ದರು. ಚಾಳುಕ್ಯ 6ನೆಯ ವಿಕ್ರಮಾದಿತ್ಯ ಮತ್ತು ಗುಜರಾತಿನ ಚೌಳುಕ್ಯ ಕರ್ಣ ಇವನ ಅಳಿಯಂದಿರು.

(ಎ.ವಿ.ವಿ.)

**ಜಯಕೇಶಿ II :** ಗೋವೆಯ ಕದಂಬ ವಂಶಕ್ಕೆ ಸೇರಿದ ದೊರೆ (ಸು.1125-47). ಕಲ್ಯಾಣ ಚಾಳುಕ್ಯರ ಸಾಮಂತನಾಗಿ ಪಲಸಿಗೆ, ಕೊಂಕಣ ಮುಂತಾದ ಪಶ್ಚಿಮ ಕರಾವಳಿಯ ಪ್ರದೇಶಗಳನ್ನು ಗೋವೆ ರಾಜಧಾನಿಯಿಂದ ಆಳುತ್ತಿದ್ದ. ಈತನ ದೊಡ್ಡಪ್ಪ ಗೂವಲದೇವನಿಗೆ (ಸು.1078-1125) ಮಕ್ಕಳಿರಲಿಲ್ಲ. ತಂದೆಯಾದ ವಿಜಯಾದಿತ್ಯ ಮೊದಲೇ ಮರಣ ಹೊಂದಿದ್ದ. ಆದ್ದರಿಂದ ಕೆಲವು ವರ್ಷಗಳು ಜಯಕೇಶಿ ಗೂವಲದೇವನೊಡನೆ ಅಧಿಕಾರವಹಿಸಿದ್ದುಂಟು. ಅನಂತರ ಇವನೇ ಸಿಂಹಾಸನವನ್ನೇರಿದ.

ಒಂದನೆಯ ಜಯಕೇಶಿಯ ಮಗಳನ್ನು ಮದುವೆಯಾಗಿದ್ದ ಆರನೆಯ ವಿಕ್ರಮಾದಿತ್ಯ ತನ್ನ ಮಗಳಾದ ಮೈಳಲದೇವಿಯನ್ನು ಇಮ್ಮಡಿ ಜಯಕೇಶಿಗೆ 1104ರಲ್ಲಿ ಮದುವೆ ಮಾಡಿಕೊಟ್ಟಿದ್ದ. ಈಕೆಯ ತಾಯಿ ಮಲಯಮತಿ ಮಹಾದೇವಿ. ಮದುವೆಯ ಸಮಯದಲ್ಲಿ ಪಲಸಿಗೆ 12000ದ ಪ್ರಾಂತ್ಯವನ್ನು ಅರಸನು ಅಳಿಯನಿಗೆ ಬಳುವಳಿಯಾಗಿ ನೀಡಿದ. ಆ ಪ್ರಾಂತದ ಮೇಲೆ ಜಯಕೇಶಿ ಸ್ವತಂತ್ರವಾದ ಆಧಿಪತ್ಯವನ್ನು ಪಡೆದಂತೆ ತೋರುತ್ತದೆ.

ಹೊಯ್ಸಳರು ಚಾಳುಕ್ಯ ಮಾಂಡಲಿಕತ್ವವನ್ನು ಕಳಚಿಕೊಂಡು ಸ್ವತಂತ್ರವಾಗಿ ಆಳುವ ಹವಣಿಕೆಯಲ್ಲಿದ್ದ ಸಂಧಿಯನ್ನು ಸಾಧಿಸಿ ಜಯಕೇಶಿಯೂ ಪರಮಾಧಿಕಾರವನ್ನು ಪಡೆಯಲು ಬಯಸಿದ. ಆದರೆ 1122ರ ಸುಮಾರಿಗೆ ಚಾಳುಕ್ಯರ ನಿಷ್ಠ ಸಾಮಂತರಾಗಿದ್ದ ಸಿಂದವಂಶದ ಇಮ್ಮಡಿ ಆಚುಗಿ ಮತ್ತು ಆತನ ಮಗ ಇಮ್ಮಡಿ ಪೆರ್ಮಾಡಿ ಈತನನ್ನು ಅಡಗಿಸಿದರು. ಇದರ ಫಲವಾಗಿ ಗೋವೆಯ ಕದಂಬರ ರಾಜ್ಯದ ಹಲವು ಪ್ರಾಂತ್ಯಗಳು ಅವರ ಕೈಬಿಟ್ಟವು. 1122ರಲ್ಲಿ ಕೊಂಕಣ 900, ಪಲಸಿಗೆ 12000, ಕವಡಿದ್ವೀಪ ಸವಲಕ್ಷ, ಪಾನುಂಗಲ್ 500, ಹೈವೆ 500, ವೇಣುಗ್ರಾಮ 70, ಉತ್ಸುಗ್ರಾಮ 30, ಸಬ್ಬಿ 30, ಪೊಳಲಗುಂದ 30, ಉಣಕಲ್ 30 - ಈ ಭಾಗಗಳನ್ನು ಗೂವಲದೇವನ ಜೊತೆಯಲ್ಲಿ ಜಯಕೇಶಿ ಆಳುತ್ತಿದ್ದ. ಆದರೆ 1125ರಲ್ಲಿ ಪಲಸಿಗೆ 12000, ಕೊಂಕಣ 900, ಹೈವೆ 500, ಕವಡಿದ್ವೀಪ ಸವಲಕ್ಷಗಳು ಮಾತ್ರ ಇವನಿಗೆ ಉಳಿದಿದ್ದವು. ಕೆಲಕಾಲಾನಂತರ ಹೈವೆ 500ರ ಮೇಲಿನ ಅಧಿಕಾರವೂ ಇವನ ಕೈತಪ್ಪಿತು.

ಜಯಕೇಶಿ ಸು.1125ರಿಂದ ಸ್ವತಂತ್ರವಾಗಿ ಆಳಿದಂತೆ ತೋರುತ್ತದೆ. ಸು.1130ರಲ್ಲಿ ಹೊಯ್ಸಳ ವಿಷ್ಣುವರ್ಧನ ಇವನನ್ನು ಸೋಲಿಸಿ ಪಲಸಿಗೆ ಪ್ರಾಂತ್ಯವನ್ನು ಕಸಿದುಕೊಂಡ. ಆದರೆ ಇವನ ಬಲ ಇದರಿಂದ ಕುಗ್ಗಲಿಲ್ಲ. ಕೊಲ್ಲಾಪುರದ ಶಿಲಾಹಾರ ಇಮ್ಮಡಿ ಭೋಜನ ತಂದೆ ವಿಜಯಾದಿತ್ಯ ಇವನಿಗೆ ನೆರವಿತ್ತ. ಇವನು ಉತ್ತರ ಕೊಂಕಣದ ಇನ್ನೊಂದು ಶಿಲಾಹಾರ ಮನೆತನದ ಅಪರಾದಿತ್ಯನನ್ನು ಸೋಲಿಸಿ ಕವಡಿದ್ವೀಪದ ಕೆಲವು ಭಾಗಗಳನ್ನು ಕಸಿದುಕೊಂಡ.

ಜಯಕೇಶಿ ಸು.1147ರವರೆಗೆ ಆಳಿದ. ಈತನಿಗೆ ಪೆರ್ಮಾಡಿ (ಶಿವಚಿತ್ತ) ಮತ್ತು ವಿಜಯಾದಿತ್ಯ (ವಿಷ್ಣುಚಿತ್ತ) ಎಂಬ ಇಬ್ಬರು ಮಕ್ಕಳು. ಜೊತೆಯಾಗಿ ಆಳಿದ ಇವರಿಬ್ಬರನ್ನೂ ಶಾಸನಗಳು ರಾಮಲಕ್ಷ್ಮಣರೆಂದು ವರ್ಣಿಸಿವೆ. ಸಾವಿತ್ರಿ ಎಂಬಾಕೆ ಇವನ ಹಿರಿಯ ಮಗಳು. ಬಹುಶಃ ಹಾನಗಲ್ಲಿನ ಕದಂಬ ವಂಶಕ್ಕೆ ಸೇರಿದ ತೈಲಪನೃಪನ ಮಗನಾದ ಗಂಗಿದೇವನಿಗೆ ಇವಳನ್ನು ಮದುವೆಮಾಡಿಕೊಡಲಾಗಿತ್ತು.

ಜಯಕೇಶಿಗೆ ಪದ್ಮಲದೇವಿ ಎಂಬ ಅಕ್ಕ, ಉದಯವರ್ಮದೇವ ಮತ್ತು ತ್ರಿಭುವನಮಲ್ಲದೇವ ಎಂಬ ತಮ್ಮಂದಿರು ಇದ್ದರು. ಪದ್ಮಲದೇವಿ ಹಾನಗಲ್ಲಿನ ಕದಂಬವಂಶದ ಮಾವುಲದೇವನ ಮಗ ಹಾಕಿಬಲ್ಲನನ್ನು ಮದುವೆಯಾಗಿದ್ದಳು.

(ಬಿ.ಆರ್.ಜಿ.)

**ಜಯಚಾಮರಾಜ ಒಡೆಯರ್ :** 1919-74. ಮೈಸೂರು ಸಂಸ್ಥಾನದ ಕೊನೆಯ ದೊರೆ (ಆಳಿಕೆ 1940-50). ತತ್ತ್ವಜ್ಞಾನಿ, ಸಂಗೀತಜ್ಞ, ರಾಜನೀತಿಜ್ಞ.

ಜಯಚಾಮರಾಜರು ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ಅವರ ಏಕಮಾತ್ರ ಪುತ್ರರು. ತಾಯಿ ಕೆಂಪುಚೆಲುವಾಜಮ್ಮಣ್ಣಿ. 1919 ಜುಲೈ 18ರಂದು ಜನಿಸಿದರು. ಇವರ ಮೊದಲಿನ ವಿದ್ಯಾಭ್ಯಾಸ ರಾಜಮನೆತನದ ಪ್ರತ್ಯೇಕ ಶಾಲೆಯಲ್ಲಿ ನಡೆಯಿತು. ಚಿಕ್ಕಂದಿನಲ್ಲಿ ಇವರು ಸ್ಕೌಟ್ ದಳದ ಹುಡುಗರ ವಿಭಾಗದ ನಾಯಕರಾಗಿದ್ದರು. 1936ರಲ್ಲಿ ಮೈಸೂರಿನ ಮಹಾರಾಜ ಕಾಲೇಜಿನ ವಿದ್ಯಾರ್ಥಿಯಾಗಿ 1938ರಲ್ಲಿ ಬಿ.ಎ. ಪದವೀಧರರಾದರು. ಇಲ್ಲಿ ರಾಜನೀತಿ - ಅರ್ಥಶಾಸ್ತ್ರಗಳ ಅಧ್ಯಯನವನ್ನು ನಡೆಸಿ ಉತ್ತಮ ಪಾಂಡಿತ್ಯಕ್ಕೆ ಮೀಸಲಾದ ಐದು ಬಹುಮಾನಗಳು ಮತ್ತು ಸುವರ್ಣಪದಕಗಳನ್ನು ಗಳಿಸಿದರು. ಮೈಸೂರಿನ ಮಹಾರಾಜ ಕಾಲೇಜಿನ ಹಿಸ್ಟಾರಿಕಲ್ ಅಸೋಸಿಯೇಷನ್ನಿನ ಗೌರವ ಅಧ್ಯಕ್ಷರೂ ಆಗಿದ್ದರು. ಆ ಕಾಲದಲ್ಲಿ ರಾಜಕೀಯ ಸಮಸ್ಯೆಗಳಲ್ಲಿ ಮತ್ತು ಸಾರ್ವಜನಿಕ ಆಡಳಿತದಲ್ಲಿ ವಿಶೇಷ ಆಸಕ್ತಿ ಹೊಂದಿದ್ದರು. 1937ರಲ್ಲಿ ಆಗ್ನೇಯ ಏಷ್ಯ ದೇಶಗಳಲ್ಲಿ ಸಂಚಾರ ಕೈಗೊಂಡರು.

ಪದವೀಧರರಾದ ಅನಂತರ ಇಂಡಿಯನ್ ಸಿವಿಲ್ ಸರ್ವಿಸ್

ಹುದ್ದೆಯಲ್ಲಿದ್ದ ಎಲ್ವಿನ್ ಅವರನ್ನು ಇವರಿಗೆ ಆವಶ್ಯಕವಾದ ಆಡಳಿತ ತರಬೇತಿಯನ್ನು ಕೊಡಲು ನೇಮಿಸಲಾಯಿತು. ಜಯ ಚಾಮರಾಜರು ಸಂಸ್ಥಾನದ ಆಡಳಿತದ ಎಲ್ಲಾ ಶಾಖೆಗಳ ಅಧ್ಯಯನವನ್ನು ನಡೆಸಿ, ರೈತಾಪಿ ವರ್ಗದವರ ಸ್ಥಿತಿ ಗತಿಗಳನ್ನು ಖುದ್ದಾಗಿ ತಿಳಿಯಲು ಮೈಸೂರು ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲೂ ಸಂಚರಿಸಿದರು. 1939ರಲ್ಲಿ ಪ್ರಥಮವಾಗಿ ಯುರೋಪಿನಲ್ಲಿ ಸಂಚಾರ ಮಾಡಿದರು. ಲಂಡನ್ನಿನ ಅನೇಕ ಸಂಘ ಸಂಸ್ಥೆಗಳಿಗೆ ಭೇಟಿಕೊಟ್ಟು ಅನೇಕ ವಿದ್ವಾಂಸರ, ಕಲಾವಿದರ ಪರಿಚಯ ಮಾಡಿಕೊಂಡು, ಅವರ ನಿಕಟಸಂಬಂಧ ಹೊಂದಿದ್ದರು.



ಇವರು ನಾಲ್ವಡಿ ಕೃಷ್ಣರಾಜ ಒಡೆಯರ ಉತ್ತರಾಧಿಕಾರಿಗಳಾಗಿ 1940 ಸೆಪ್ಟೆಂಬರ್ 8ರಂದು ಮೈಸೂರು ಸಂಸ್ಥಾನದ ಸಿಂಹಾಸನ ವನ್ನೇರಿದರು. 1947ರಲ್ಲಿ ಭಾರತ ಸ್ವಾತಂತ್ರ್ಯ ಗಳಿಸಿದಾಗ ಮೈಸೂರು ಸಂಸ್ಥಾನ ಭಾರತ ಒಕ್ಕೂಟದಲ್ಲಿ ಸೇರುವುದಕ್ಕೆ ಒಪ್ಪಿ, ಸಂಸ್ಥಾನದಲ್ಲಿ ಪ್ರಜಾಸರ್ಕಾರ ಸ್ಥಾಪನೆಗೆ ಅನುವು ಮಾಡಿದರೂ 1950 ಜನವರಿ 26ರಂದು ಭಾರತ ಗಣರಾಜ್ಯವಾಗಿ ಘೋಷಿತವಾಗುವವರೆಗೂ ಮಹಾರಾಜರಾಗಿ ಮುಂದುವರಿದರು. ಅನಂತರ ರಾಜಪ್ರಮುಖರಾದರು (1950-56). ರಾಜ್ಯಗಳ ಪುನರ್ವಿಂಗಡಣೆಯಾದಾಗ ವಿಶಾಲ ಮೈಸೂರಿನ (ಇಂದಿನ ಕರ್ನಾಟಕ) ಪ್ರಥಮ ರಾಜ್ಯಪಾಲರಾದರು (1956-64). ಮುಂದೆ ಮದರಾಸು ರಾಜ್ಯದ ರಾಜ್ಯಪಾಲರಾಗಿ ನೇಮಕಗೊಂಡರು (1964-67). ಅನಂತರ ಮೈಸೂರಿನಲ್ಲೇ ನೆಲಸಿದರು.

ಇವರಿಗೆ ಸತ್ಯಪ್ರೇಮಕುಮಾರಿ ಮತ್ತು ತ್ರಿಪುರಸುಂದರಮ್ಮಣ್ಣಿ ಎಂಬ ಇಬ್ಬರು ಮಡದಿಯರು. ಐವರು ಹೆಣ್ಣು ಮಕ್ಕಳು. ಇವರ ಪುತ್ರ ಶ್ರೀಕಂಠದತ್ತನರಸಿಂಹರಾಜ ಒಡೆಯರ್.

(ಎ.ವಿ.ವಿ.)

ಜಯಚಾಮರಾಜ ಒಡೆಯರ್ ಅವರು ಸಂಸ್ಥಾನದ ಮಹಾರಾಜರಾಗಿದ್ದ ಹೆಚ್ಚು ಕಾಲ ಎರಡನೆಯ ಮಹಾಯುದ್ಧ ನಡೆಯುತ್ತಿದ್ದ ಕಾಲವಾಗಿದ್ದು ಪ್ರಪಂಚದ ಇತರೆಡೆಗಳಂತೆ ಮೈಸೂರು ಸಹ ಆರ್ಥಿಕ ಸಂಕಷ್ಟಗಳನ್ನು ಎದುರಿಸಬೇಕಾಗಿತ್ತು. ಆರ್ಥಿಕ ರಂಗದಲ್ಲಿ ಹೆಚ್ಚಿನ ಸಾಧನೆಗಳಿಗೆ ಅವಕಾಶ ಇರಲಿಲ್ಲ. ಮಹಾರಾಜರೂ ಆಡಳಿತ ವ್ಯವಸ್ಥೆಯಲ್ಲಿ ಮುಖ್ಯ ಅಧಿಕಾರಿಗಳಾಗಿದ್ದ ದಿವಾನರೂ (ಮಿರ್ಜಾ ಇಸ್ಮಾಯಿಲ್ 1941ರ ಮೇ ವರೆಗೆ; ನ್ಯಾಪತಿ ಮಾಧವರಾವ್ 1941-46; ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ 1946-49) ಸಂಸ್ಥಾನದ ಹಣಕಾಸು ಸ್ಥಿತಿಯನ್ನು ಸರಿದೂಗಿಸುವುದಕ್ಕೆ ಶ್ರಮಿಸಿದರು. ರಾಜಕೀಯ ಜಾಗೃತಿ ಬೆಳೆದಿದ್ದ ಕಾಲದಲ್ಲಿ ಅದಕ್ಕೆ ಅನುವಾಗುವ ಹಲವು ಸುಧಾರಣೆಗಳು ನಡೆದವು. ಪ್ರಜಾಪ್ರತಿನಿಧಿ ಸಭೆಗೆ ಹೊಸ ಸ್ವರೂಪವನ್ನು ಕೊಡಲಾಯಿತು. ಅದಕ್ಕಾಗಿ ಚುನಾವಣೆಗಳು 1941 ಮತ್ತು 1945ರಲ್ಲಿ ನಡೆದುವು. 1945ರಲ್ಲಿ ನಡೆದ ಚುನಾವಣೆಗಳಲ್ಲಿ ಕಾಂಗ್ರೆಸ್ ಸದಸ್ಯರು ಬಹುಮತದಿಂದ ಆರಿಸಿಬಂದು ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ಒತ್ತಾಯ ಮಾಡಿದರು. ಆದರೆ ಅಂದಿನ ದಿವಾನರ ಧೋರಣೆಗಳಿಂದ ಸ್ವಲ್ಪಮಟ್ಟಿನ ವಿರಸವುಂಟಾದರೂ ದೇಶ ಸ್ವತಂತ್ರವಾದಾಗ ಭಾರತ ಒಕ್ಕೂಟದಲ್ಲಿ ತಮ್ಮ ಸಂಸ್ಥಾನವನ್ನು ಸೇರಿಸುವಲ್ಲಿ ಜಯಚಾಮರಾಜರು ಮೊದಲಿಗರಾದರು.

ಪ್ರಜಾಹಿತದೃಷ್ಟಿಯಿದ್ದ ಮಹಾರಾಜರು ಜನಪ್ರಿಯರಾಗಿದ್ದರು. ಮೈಸೂರು ನಗರದಲ್ಲಿ ಇವರು ಆಚರಿಸಿಕೊಂಡು ಬರುತ್ತಿದ್ದ ವೈಭವೋಪೇತ ದಸರ ಉತ್ಸವಕ್ಕೆ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಮಹತ್ವ ಬಂದಿತ್ತು. ಆಗ ಪ್ರತಿ ನಿತ್ಯ ಸಂಜೆ ಅರಮನೆಯಲ್ಲಿ ನಡೆಯುತ್ತಿದ್ದ ದರ್ಬಾರು ಮತ್ತು ರಾಜಸಭೆಗಳು, ಮಹಾನವಮಿಯ ಆಯುಧ ಪೂಜೆ, ವಿಜಯ ದಶಮಿಯ ಜಂಬೂಸವಾರಿ - ಇವೆಲ್ಲ ಲಕ್ಷಾಂತರ ಪ್ರವಾಸಿಗರನ್ನು ಆಕರ್ಷಿಸಿದ್ದವು. ವಿಶಾಲ ಕರ್ನಾಟಕದ ಕನಸನ್ನು ಬಹುಹಿಂದೆಯೇ ಕಂಡಿದ್ದ ಇವರು ಅದು ನನಸಾಗುವಲ್ಲಿ ರಾಜತ್ವವನ್ನು ತ್ಯಜಿಸಲೂ ಸಿದ್ಧವೆಂದು ಹೇಳಿದ್ದರು. ಮೈಸೂರಿನ ರಾಜ್ಯಪಾಲರಾಗಿದ್ದ ಸಂದರ್ಭದಲ್ಲಿ ಇವರು ಸಂಬಳವನ್ನೂ ಸ್ವೀಕರಿಸುತ್ತಿರಲಿಲ್ಲ. ಅಲ್ಲದೆ ಜನಹಿತ ಕಾರ್ಯಕ್ಕಾಗಿ ಇವರು ಕೊಡುಗೈದಾನಿಯಾಗಿದ್ದರು. ಮೈಸೂರು ನಗರದಲ್ಲಿರುವ ಶ್ರೀ ಜಯಚಾಮರಾಜೇಂದ್ರ ಚಿತ್ರಶಾಲೆಗಾಗಿ ಅಮೂಲ್ಯ ವಸ್ತುಗಳನ್ನು ಸಂಗ್ರಹಿಸಿಕೊಟ್ಟರು. ಕೇಂದ್ರೀಯ ಆಹಾರ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ ಮುಂತಾದವುಗಳಿಗಾಗಿ ನಿವೇಶನ ಮತ್ತು ಕಟ್ಟಡಗಳನ್ನು ದೊರಕಿಸಿಕೊಡುವುದರಲ್ಲಿ ನೆರವಾದರು. ತಮ್ಮ ಹಲವಾರು ಕಟ್ಟಡ, ನಿವೇಶನಗಳನ್ನು ಸಾರ್ವಜನಿಕ ಉಪಯೋಗಕ್ಕಾಗಿ ಇವರು ದಾನಮಾಡಿದರು.

ಜಯಚಾಮರಾಜರು ಕ್ರೀಡಾಪಟುವಾಗಿದ್ದರು. ಒಳ್ಳೆಯ ಕುದುರೆ ಸವಾರರೂ ಟೆನಿಸ್ ಆಟವಾಡುವುದರಲ್ಲಿ ನಿಪುಣರೂ ನುರಿತಶಿಕಾರಿಯೂ ಆಗಿದ್ದರು. ವನ್ಯಮೃಗಗಳ ಬಗ್ಗೆ ಇವರಿಗೆ ಹೆಚ್ಚಿನ ಆಸಕ್ತಿ ಇತ್ತು. ಭಾರತೀಯ ವನ್ಯಮೃಗ ಮಂಡಳಿಯ ಅಧ್ಯಕ್ಷರಾಗಿದ್ದರಲ್ಲದೆ, ಮೈಸೂರು ನಗರದಲ್ಲಿನ ತಮ್ಮ ಸ್ವಂತ ಮೃಗಾಲಯವನ್ನು ಸರ್ಕಾರಕ್ಕೆ ವಹಿಸಿಕೊಟ್ಟು ಅದರ ಅಭಿವೃದ್ಧಿಗೆ ಕಾಣರಾದರು.

ಒಡೆಯರಿಗೆ ಸಂಗೀತವೆಂದರೆ ಪಂಚಪ್ರಾಣ. ಪ್ರತಿನಿತ್ಯ ಇವರು ಶಿವಪೂಜೆಗೆ ಕುಳಿತಾಗ ಸು.4-5 ಗಂಟೆಗಳ ವರೆಗೆ ಅರಮನೆಯ ಸಂಗೀತ ವಿದ್ವಾಂಸರು ಸರದಿಯ ಮೇಲೆ ಹಾಡುತ್ತಿದ್ದರು. ಈ ಕಾರ್ಯಕ್ರಮ ಒಂದೊಂದು ದಿನ ಬೆಳಗಿನ ಜಾವ 3-4 ಗಂಟೆಯಿಂದಲೇ ಪ್ರಾರಂಭವಾಗುತ್ತಿತ್ತು. ಅನೇಕ ವಿದ್ವಾಂಸರನ್ನು ಇವರು ಆಸ್ಥಾನ ವಿದ್ವಾಂಸರನ್ನಾಗಿ ಗೌರವಿಸಿದುದೂ ಉಂಟು. ಸಂಸ್ಕೃತದಲ್ಲಿ ಇವರು ರಚಿಸಿರುವ ಸಂಗೀತ ಕೃತಿಗಳು ಸು.94 ಎನ್ನಲಾಗಿದೆ. ಹಲವನ್ನು ವಿದ್ವಾಂಸರು ಬಳಸಿಕೊಂಡು ಹಾಡುತ್ತಿದ್ದಾರೆ. ಪ್ರಾಯಃ ದೀಕ್ಷಿತ ಸಂಪ್ರದಾಯವೆಂದು ಹೇಳಲಾಗಿರುವ ಇವರ ಕೀರ್ತನೆಗಳಲ್ಲಿ ಅಕ್ಷರಕ್ಕೆ ಹೆಚ್ಚು ಪ್ರಾಧಾನ್ಯ. ವಿದ್ಯಾರಾಜ ಯೋಗೀಂದ್ರ ಮುಂತಾದ ಸಂಕೇತಗಳು ಇವರ ಕೀರ್ತನೆಗಳ ಅಂಕಿತಗಳು. ಈಗ ಬಳಕೆಯಲ್ಲಿರುವ ರಾಗಗಳಲ್ಲದೆ ಬೃಹಸ್ಪತಿಪ್ರಿಯ ಮುಂತಾದ ಕೆಲವು ನೂತನ ರಾಗಗಳನ್ನೂ ಇವರು ಸೃಜಿಸಿದ್ದಾರೆ ಎನ್ನಲಾಗಿದೆ. ಇವರ ಕೃತಿಗಳು ನಾದಮಾಧುರ್ಯಕ್ಕೆ ಅರ್ಥಾಭಿವ್ಯಕ್ತಿಗೆ ಹೆಸರಾಗಿವೆ.

ಪಾಶ್ಚಾತ್ಯ ಸಂಗೀತದಲ್ಲೂ ಇವರಿಗೆ ವಿಶೇಷ ಆಸಕ್ತಿ ಇತ್ತು. ಆ ಸಂಗೀತವನ್ನು ಕುರಿತಂತೆ ಭಾರತದಲ್ಲೇ ಅತಿ ದೊಡ್ಡದೆನಿಸುವ ಗ್ರಂಥಭಂಡಾರವನ್ನು ಇವರು ತಮ್ಮ ಅರಮನೆಯಲ್ಲಿ ಕೂಡಿಸಿದ್ದರು. ವಿಶ್ವದ ಹೆಸರಾಂತ ಸಂಗೀತಗಾರರೊಂದಿಗೆ ಇವರಿಗೆ ಸಂಪರ್ಕವಿತ್ತು. ಖ್ಯಾತ ಆಪೇರಾಗಳ ಕರ್ತೃವಾದ ಜರ್ಮನಿಯ ರಿಚರ್ಡ್ ವ್ಯಾಗ್ನರ್ (1813-83), ಪ್ರಸಿದ್ಧ ಜರ್ಮನ್ ಸಂಗೀತಗಾರ ಲಡ್ವಿಗ್ ಫಾನ್ ಬೇತೋವನ್ (1770-1827), ಬಾಕ್ ಮನೆತನದ ಸಂಗೀತ ವಿದ್ವಾಂಸರು ಮುಂತಾದವರು ಇವರ ಮೆಚ್ಚಿನ ಸಂಗೀತಗಾರರಾಗಿದ್ದರು.

ಇವರು ಪಂಡಿತರು, ವಿದ್ವತ್ಪ್ರೇಮಿಗಳು, ರಾಜ್ಯಶಾಸ್ತ್ರ, ಚರಿತ್ರೆ, ಅರ್ಥಶಾಸ್ತ್ರ, ಆಫ್ರಿಕನ್ ವಿಷಯಗಳಲ್ಲಿ ವಿಶೇಷ ಪರಿಣತಿ ಪಡೆದಿದ್ದರು. ತತ್ತ್ವಶಾಸ್ತ್ರದಲ್ಲಿ ವಿಶೇಷ ಆಸಕ್ತಿ. ಅರಮನೆಯ ನುರಿತ ಪಂಡಿತರಲ್ಲಿ ಸಂಸ್ಕೃತಭಾಷೆಯನ್ನೂ ತತ್ತ್ವಗ್ರಂಥಗಳನ್ನೂ ಆಳವಾಗಿ ಅಭ್ಯಾಸ ಮಾಡಿದರು. ಹಠಯೋಗವನ್ನೂ ಸ್ವಲ್ಪ ಅಭ್ಯಾಸ ಮಾಡಿದ್ದುಂಟು. ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ, ಜಯಚಾಮರಾಜೇಂದ್ರ ವೇದರತ್ನಮಾಲಾ ಎಂಬ ಪ್ರಕಟನಾಮಾಲೆಗಳಲ್ಲಿ ತತ್ತ್ವಶಾಸ್ತ್ರ ಮೊದಲಾದ ವಿಷಯಗಳು, ವೇದ, ಉಪನಿಷತ್ತು, ಪುರಾಣಗಳನ್ನು ಕನ್ನಡಕ್ಕೆ ಅನುವಾದ ಮಾಡಿಸಿ ಪ್ರಕಟಿಸಿದರು. ಈ ಸರಣಿಗಳಲ್ಲಿ ಅಚ್ಚಾದ ಕೃತಿಗಳ ಪುಟಗಳು ಒಂದು ಲಕ್ಷವನ್ನೂ ಮೀರುತ್ತವೆ. ಕನ್ನಡ ಸಾರಸ್ವತ ಪ್ರಪಂಚಕ್ಕೆ ಇವು ಅಮೂಲ್ಯ ಕೊಡುಗೆಗಳು.

ಜಯಚಾಮರಾಜರು ಸ್ವಂತವಾಗಿಯೂ ಹಲವು ಗ್ರಂಥಗಳನ್ನು



ಜಂಬೂಸವಾರಿಯಲ್ಲಿ ನಾಲ್ವಡಿಯವರೊಡನೆ ಜಯಚಾಮರಾಜಒಡೆಯರ್

ಇವರ ಆಳವಾದ ತತ್ತ್ವಶಾಸ್ತ್ರಾಧ್ಯಯನದ ಫಲವೇ ಆಂಗ್ಲ ಭಾಷೆಯಲ್ಲಿ ರಚಿತವಾಗಿರುವ ದತ್ತಾತ್ರೇಯ-ದಿ ವೇ ಅಂಡ್ ದಿ ಗೋಲ್. ಇದಕ್ಕೆ ಭಾರತದ ರಾಷ್ಟ್ರಪತಿಗಳಾಗಿದ್ದ ಎಸ್.ರಾಧಾಕೃಷ್ಣನ್ ಅವರು ಮುನ್ನುಡಿ ಬರೆದಿದ್ದಾರೆ. ಇದು ಇವರು ರಚಿಸಿರುವ ಮೇಲ್ಮಟ್ಟದ ಗ್ರಂಥವೆನಿಸಿದೆ. ಈ ಗ್ರಂಥದ ಐದು ಪ್ರಕರಣಗಳಲ್ಲಿ ಅನುಕ್ರಮವಾಗಿ ಮಾನವನಿಗೆ ಈಶ್ವರಾನುಗ್ರಹದ ಅಗತ್ಯ, ದತ್ತಾತ್ರೇಯನ ಪರತತ್ತ್ವ ಸ್ವರೂಪ, ದತ್ತಾತ್ರೇಯ ಉಪೇಯ ಮತ್ತು ಉಪಾಯ ಎರಡೂ ಆಗಿದ್ದಾನೆ ಎಂಬುದು, ದತ್ತಾದ್ವೈತಸ್ವರೂಪ ಮತ್ತು ಜೀವನ್ಮುಕ್ತಗೀತೆ ಇವು ಬರುತ್ತವೆ. ಅನಂತರ ಅವಧೂತ ಗೀತೆಗಳ ಭಾಷಾಂತರ, ಕಡೆಯಲ್ಲಿ ಇದಕ್ಕೆ ಹಿನ್ನೆಲೆಯಾಗಿ ದತ್ತಾದ್ವೈತದ ತೌಲನಿಕ ವಿಮರ್ಶೆ ಬಂದಿದೆ.

ದಿ ಗೀತಾ ಅಂಡ್ ಇಂಡಿಯನ್ ಕಲ್ಚರ್ ಎಂಬುದು ಮತ್ತೊಂದು ಅವಲೋಕನೀಯ ಗ್ರಂಥ. ಇದು ಧರ್ಮ ಮತ್ತು ಗೀತೆ, ಭಗವದ್ಗೀತೆಯಲ್ಲಿನ ಕ್ಷೇತ್ರ ಮತ್ತು ಕ್ಷೇತ್ರಜ್ಞ ಎಂಬ ಕಲ್ಪನೆಗಳ ಸ್ವರೂಪ ಎಂಬ ಎರಡು ಪ್ರಬಂಧಗಳ ಸಂಕಲನ. ರಾಜಕೀಯ, ವೈಜ್ಞಾನಿಕ ಹಾಗೂ ತಾತ್ತ್ವಿಕ ಸಮಸ್ಯೆಗಳಿಂದ ಪರಸ್ಪರ ಸೌಹಾರ್ದ ಕಳೆಚುತ್ತಿರುವ ಸಮಯದಲ್ಲಿ ಭಾರತೀಯ ವಿಚಾರಧಾರೆ ಎಷ್ಟು ಅಗತ್ಯ ಎಂದು ತೋರಿಸುವುದೇ ಈ ಸಂಕಲನದ ಮುಖ್ಯ ಉದ್ದೇಶ.

ಭಾರತೀಯ ಸಂಸ್ಕೃತಿ ಮತ್ತು ತತ್ತ್ವಶಾಸ್ತ್ರದ ಅನಧಿಕೃತ ರಾಯಭಾರಿಯಾಗಿ ಇವರು ಅನೇಕ ಸಲ ದೇಶವಿದೇಶಗಳ ಪ್ರವಾಸ ಕೈಗೊಂಡಿದ್ದರು. ಆಗ ಇವರು ಅಲ್ಲಲ್ಲಿ ಮಾಡಿದ ಭಾಷಣಗಳು ವಿಚಾರಪರಿಪೂರಿತವಾಗಿವೆ.

ಬನಾರಸ್ ವಿಶ್ವವಿದ್ಯಾಲಯ ಇವರಿಗೆ ಗೌರವ ಡಾಕ್ಟರ್ ಆಫ್ ಲಾಸ್ ಪದವಿಯನ್ನೂ (1942) ಅಣ್ಣಾಮಲೈ ವಿಶ್ವವಿದ್ಯಾಲಯ ಡಿ.ಲಿಟ್. ಪದವಿಯನ್ನೂ (1965) ನೀಡಿ ಗೌರವಿಸಿವೆ. ಇದಕ್ಕೂ ಮುನ್ನ (1937) ಲಂಡನ್ನಿನ ಗಿಲ್ಡ್ ಹಾಲ್ ಸಂಗೀತಶಾಲೆಯ ಲೈಸೆನ್ಶಿಯೇಟ್ ಪದವೀಧರರಾಗಿದ್ದರು. ಅನಂತರ ಇವರು 1945ರಲ್ಲಿ ಲಂಡನ್ನಿನ ಟ್ರಿನಿಟಿ ಸಂಗೀತ ಕಾಲೇಜಿನ ಗೌರವ ಫೆಲೊ ಆದರು. ಇವರ ಪಾಂಡಿತ್ಯ ಮತ್ತು ಪ್ರತಿಭೆಗಳನ್ನು ಮನಗಂಡು ಆಸ್ಟ್ರೇಲಿಯದ ಕ್ವೀನ್ಸ್‌ಲೆಂಡ್ ವಿಶ್ವವಿದ್ಯಾಲಯ ಇವರಿಗೆ ಡಿ.ಲಿಟ್. ಪದವಿ ನೀಡಿ (1936) ಸನ್ಮಾನಿಸಿತು. ಬ್ರಿಟಿಷ್ ಸರ್ಕಾರ ಇವರಿಗೆ 1945 ರಲ್ಲಿ ಜಿ.ಸಿ.ಎಸ್.ಐ. ಬಿರುದನ್ನೂ 1946ರಲ್ಲಿ ಜಿ.ಸಿ.ಬಿ. ಬಿರುದನ್ನೂ ನೀಡಿತು.

ತಮ್ಮ ಕೊನೆಯ ದಿನಗಳನ್ನು ಪುರಾಣ ಮತ್ತು ಧಾರ್ಮಿಕ ಗ್ರಂಥಗಳ ಶ್ರವಣದಲ್ಲೇ ಕಳೆಯುತ್ತಿದ್ದ ಇವರು ಶ್ವಾಸಕೋಶದ ಉರಿಯೂತಕ್ಕೆ ಬಲಿಯಾಗಿ 1974 ಸೆಪ್ಟೆಂಬರ್ 23ರಂದು ಬೆಂಗಳೂರು ಅರಮನೆಯಲ್ಲಿ ನಿಧನರಾದರು.

(ಎ.ವಿ.ವಿ., ಎಂ.ಜಿ.ಎನ್.)

**ಜಯಚಾಮರಾಜೇಂದ್ರ ಚಿತ್ರಶಾಲೆ :** ಮೈಸೂರು ನಗರದಲ್ಲಿರುವ ಪ್ರಸಿದ್ಧ ಚಿತ್ರಶಾಲೆ. ಇದನ್ನು ಮೊದಲಿಗೆ ಜಗನ್ಮೋಹನ ಚಿತ್ರಶಾಲೆ ಎಂದು ಕರೆಯಲಾಗುತ್ತಿತ್ತು. ಇದಿರುವುದು ಮುಮ್ಮಡಿ ಕೃಷ್ಣರಾಜ ಒಡೆಯರು 1861 ರಲ್ಲಿ ಕಟ್ಟಿಸಿದ ಜಗನ್ಮೋಹನ ಅರಮನೆಯಲ್ಲಿ, ಮೈಸೂರು ಮಹಾರಾಜರುಗಳ ಸತತ ಪ್ರಯತ್ನದಿಂದ ಈ ಚಿತ್ರಶಾಲೆಯಲ್ಲಿ ಉತ್ತಮ ಚಿತ್ರಗಳು ಮತ್ತು ಶಿಲ್ಪಕೃತಿಗಳ ಅಪಾರ ಸಂಗ್ರಹವಿದೆ.

ಚಿತ್ರಶಾಲೆ ಇರುವ ಕಟ್ಟಡ ಎರಡು ಉಪ್ಪರಿಗೆಗಳಿಂದ ಕೂಡಿದೆ. ಕೆಳಭಾಗದಲ್ಲಿ ನಾಲ್ಕು ವಿಶಾಲವಾದ ಹಜಾರಗಳುಂಟು. ಪ್ರತಿಯೊಂದು ಹಜಾರಕ್ಕೂ ಲಗತ್ತಿಸಿದಂತೆ ಎಡಬಲಗಳಲ್ಲಿ ಎರಡೆರಡು ಕೋಣೆಗಳಿವೆ. ಮೊದಲನೆಯ ಮತ್ತು ಎರಡನೆಯ ಉಪ್ಪರಿಗೆಗಳಲ್ಲಿ ಕ್ರಮವಾಗಿ ಮೂರು ಮತ್ತು ಎರಡು ಹಜಾರಗಳು ಮತ್ತು ಅವಕ್ಕೆ ಸೇರಿದಂತೆ ಕಿರು ಕೋಣೆಗಳು ಇವೆ.

ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿಯೆ ಚಿತ್ರಿಸಲಾದ ಭಿತ್ತಿಚಿತ್ರಗಳನ್ನು ಎರಡನೆಯ ಉಪ್ಪರಿಗೆಯ ಮೂರು ಕೋಣೆಗಳಲ್ಲಿ ಕಾಣಬಹುದು. ಮೊದಲ ಉಪ್ಪರಿಗೆಯ ನೆಲದ ಭಾಗವನ್ನು ಮರದಿಂದ ಅಳವಡಿಸಲಾಗಿದೆ. ಹಿಂದೆ ಇದು ನೃತ್ಯಾಲಯವಾಗಿತ್ತು.

1915ರ ಸುಮಾರಿಗೆ ನಾಲ್ವಡಿ ಕೃಷ್ಣರಾಜ ಒಡೆಯರ ಸವಿನೆನಪಿಗಾಗಿ ಈ ಚಿತ್ರಶಾಲೆಯನ್ನು ವ್ಯವಸ್ಥೆಗೊಳಿಸಲಾಯಿತು. ಇದರಲ್ಲಿ ಆ ವರೆಗೆ ಅರಮನೆಯಲ್ಲಿ ಕಾಲಕಾಲಕ್ಕೆ ಸಂಗ್ರಹವಾಗಿದ್ದ ಕಲಾವಸ್ತುಗಳನ್ನೆಲ್ಲ



ಜಯಚಾಮರಾಜೇಂದ್ರ ಚಿತ್ರಶಾಲೆಯನ್ನು ಒಳಗೊಂಡಿರುವ ಜಗನ್ಮೋಹನ ಅರಮನೆ

ಈ ಚಿತ್ರಶಾಲೆಗೆ ಪ್ರತಿವರ್ಷವೂ ಅನೇಕ ಉತ್ತಮ ಚಿತ್ರಗಳನ್ನು ಕೊಳ್ಳಲಾಯಿತು (1932-37). ಮೆಕ್‌ಆಲ್‌ಫೀ ಎಂಬಾತ ಕನ್ನಡ ಕಲಾವಿದ ಕೆ.ವೆಂಕಟಪ್ಪನವರ ಸಹಾಯದಿಂದ ಸಂಗ್ರಹಾಲಯವನ್ನು ಸುವ್ಯವಸ್ಥೆಗೊಳಿಸಿ ಚಿತ್ರಪಟಗಳನ್ನು ಹೊಸತಾಗಿ ಜೋಡಿಸಿ ಪ್ರದರ್ಶಿಸಿದ. ತಿರುವಾಂಕೂರಿನ ಲಲಿತಕಲಾ ಸಂಸ್ಥೆಯ ಮುಖ್ಯಸ್ಥನಾಗಿದ್ದ ಜೇಮ್ಸ್, ಎಚ್.ಕಜಿನ್ಸ್ ಈ ಚಿತ್ರಶಾಲೆಯ ಅಧಿಕಾರಿಗಳಾಗಿದ್ದ ಮದನಗೋಪಾಲರಾಜ ಅರಸರೊಂದಿಗೆ ಕೆಲಸಮಾಡಿ ಇಲ್ಲಿನ ಕಲಾಕೃತಿಗಳನ್ನು ಮತ್ತೊಮ್ಮೆ ಜೋಡಿಸಿ ಹೊಸ ರೂಪಕೊಟ್ಟ. 1942ರಲ್ಲಿ ಇವನ ಸಂಪಾದಕತ್ವದಲ್ಲಿ ಚಾರಿತ್ರಿಕ ವ್ಯಕ್ತಿಗಳ ರೂಪಚಿತ್ರಗಳ ಪಟ್ಟಿಯೊಂದು ಪ್ರಕಟವಾಯಿತು.

ಈ ಚಿತ್ರಶಾಲೆಯಲ್ಲಿ ಹೈದರ್, ಟಿಪ್ಪು ಮತ್ತು ಇಂಗ್ಲಿಷ್ ಅಧಿಕಾರಿಗಳ ಅನೇಕ ಚಿತ್ರಗಳಿದ್ದವು. ಅವನ್ನೆಲ್ಲ ತೆಗೆದುಕೊಂಡು ಹೋಗಿ ಕಾವೇರಿ ನದಿಯ ತೀರದಲ್ಲಿದ್ದ ಸ್ಕಾಟ್ ಬಂಗಲೆಯ ಚಿತ್ರಶಾಲೆಯಲ್ಲಿ ಪ್ರದರ್ಶಿಸಲಾಯಿತು (1942). ಸ್ಕಾಟ್ ಬಂಗಲೆಯಲ್ಲಿದ್ದ ಚಿತ್ರಗಳೆಲ್ಲ ಮತ್ತೆ ಜಯಚಾಮರಾಜೇಂದ್ರ ಚಿತ್ರಶಾಲೆಗೆ ಮರಳಿ ಬಂದುವು (1950).

ಮೈಸೂರು ದಸರ ಕಲಾಪ್ರದರ್ಶನ ನಡೆಯುತ್ತಿದ್ದಾಗ ಅಲ್ಲಿ ಪ್ರದರ್ಶನಗೊಂಡು ಪ್ರಶಸ್ತಿ ಪಡೆದ ಉತ್ತಮ ಚಿತ್ರಗಳನ್ನೂ ಖರೀದಿಸಿ ಚಿತ್ರಶಾಲೆಗೆ ಸೇರಿಸಲಾಯಿತು. ಚಿತ್ರಶಾಲೆಯ ಮೇಲ್ವಿಚಾರಕರಾಗಿ ಬಂದ ಚನ್ನರಾಜ ಅರಸರು ಪುನಃ ಕಲಾಕೃತಿ ಮಾಡಿದರು (1946). ಇದರಿಂದಾಗಿ ಭಾರತದ ಚಿತ್ರಕಲಾ ಸಂಪ್ರದಾಯದ ವಿವಿಧ ರೀತಿಯ ಚಿತ್ರಗಳನ್ನು ವೀಕ್ಷಿಸುವ ಅವಕಾಶ ಏರ್ಪಟ್ಟಿತು.

ನಾಲ್ವಡಿ ಕೃಷ್ಣರಾಜ ಒಡೆಯರ ವಿವಾಹ ಮಹೋತ್ಸವಕ್ಕಾಗಿ ಬಂಗಲೆಯ ಮುಂಭಾಗವನ್ನು ಸಭಾಂಗಣವಾಗಿ ವಿಸ್ತಾರಗೊಳಿಸಲಾಯಿತು (1900). ಅಲ್ಲಿಂದೀಚೆಗೆ ಅಲ್ಲಿ ಪ್ರಜಾಪ್ರತಿನಿಧಿ ಸಭೆಗಳೂ ಮೈಸೂರು ವಿಶ್ವವಿದ್ಯಾನಿಲಯದ ಘಟಿಕೋತ್ಸವ ಸಮಾರಂಭಗಳೂ ಅನೇಕವರ್ಷ ಜರುಗುತ್ತ ಬಂದುವು. ನಾಲ್ವಡಿಯವರು ಲಾರ್ಡ್ ಕರ್ಜನ್ನನೊಂದಿಗೆ ದರ್ಬಾರು ನಡೆಸಿದ್ದೂ ಇದೇ ಸಭಾಂಗಣದಲ್ಲಿಯೇ (1902).

ಚಿತ್ರಶಾಲೆಯ ಚಿತ್ರಗಳಿರುವುದು ಸಭಾಂಗಣದ ಹಿಂಬದಿಯ ಮಹಲಿನಲ್ಲಿ. ಇಲ್ಲಿನ ಬಹುಪಾಲು ಚಿತ್ರಗಳು ಕನ್ನಡನಾಡಿನ ಅರಸು ಮನೆತನಕ್ಕೆ ಸೇರಿದವಾಗಿವೆ. ಈ ಕಲಾಗಾರಕ್ಕೆ ಹಾಗೂ ಕಲೆಗೆ ಹೆಚ್ಚು ಪ್ರೋತ್ಸಾಹ ನೀಡಿದ ರಾಜರಲ್ಲಿ ಮುಮ್ಮಡಿ ಮತ್ತು ನಾಲ್ವಡಿ ಕೃಷ್ಣ ರಾಜರನ್ನು ಹೆಸರಿಸಬೇಕು. ಮುಮ್ಮಡಿ ಕೃಷ್ಣರಾಜರ ಆಳ್ವಿಕೆಯ ಕಾಲದಲ್ಲಿ ಕನ್ನಡದ ಅನೇಕ ಚಿತ್ರಕಾರರು ರಚಿಸಿದ ಭಿತ್ತಿಚಿತ್ರಗಳನ್ನು ಎರಡನೆಯ ಉಪ್ಪರಿಗೆಯಲ್ಲಿ ಕಾಣಬಹುದು. ಇವರ ಕಾಲದ ಚಿತ್ರಕಾರರಲ್ಲಿ ಶಿಕಾರಿಪುರದ ಚಿತ್ರಗಾರ ಮನೆತನದ ತಿಪ್ಪಯ್ಯ, ಮೈಸೂರಿನ ಕೊಂಡಯ್ಯ, ವೀರಣ್ಣ, ಬಸಣ್ಣ, ಯಲ್ಲಪ್ಪ ಮುಂತಾದವರು ಮುಖ್ಯರು. ಇವರ ಅನೇಕ ಚಿತ್ರಗಳು ಈಗಲೂ ಮಾಸದೆ ಚಿರನೂತನವಾಗಿವೆ.

ಕರ್ನಾಟಕದ ಚಿತ್ರಶೈಲಿಯನ್ನು ಮೆರೆಯುವ ಈ ಭಿತ್ತಿಚಿತ್ರಗಳನ್ನು ಗಮನಿಸುವುದು ಇಲ್ಲಿ ಮುಖ್ಯ. ಎರಡನೆಯ ಉಪ್ಪರಿಗೆಯ ಮೂರು ಕೋಣೆಗಳ ಗೋಡೆಗಳೆಲ್ಲ ವರ್ಣಮಯವಾಗಿವೆ. ಎಲ್ಲಿ ನೋಡಿದರಲ್ಲಿ ಮುಮ್ಮಡಿ ಕೃಷ್ಣರಾಜಒಡೆಯರ ಆಳಿಕೆಯ ಸಂಕೇತದ ಚಿತ್ರಗಳೇ ಇವೆ. ಮುಮ್ಮಡಿಕೃಶ್ಮರಾಜ ಒಡೆಯವರ ವಂಶವೃಕ್ಷ ಎಲೆಯಾಕಾರದಲ್ಲಿ ಚಿತ್ರಿತವಾಗಿದೆ. ಆದಿಯಿಂದ ಮುಮ್ಮಡಿಯವರ ವರೆಗಿನ ವಂಶಾವಳಿಯನ್ನು ನಿರ್ದೇಶಿಸುವ ಸಂತಾನಾಂಬುಜ, ವಿಜ... ಕಟ್ಟಿದ ರಥದಲ್ಲಿ ಮುಮ್ಮಡಿಯವರ ... ಕೊತ್ತಾಗಾಲ, ಚಟ್ಟಹಳ್ಳಿಗಳಲ್ಲಿ ನಡೆದ ... ಕಾಡಿನಲ್ಲಿ ಪಟ್ಟದಾನೆಯಾದ ಕೆಂಪನಂ... ಚದುರಂಗದಾಟವನ್ನು ಆಡುತ್ತಿರುವ ... ಮುಮ್ಮಡಿಯವರು ಆಚರಿಸುತ್ತಿರುವ ... ಮುಂತಾದ ಭಿತ್ತಿಚಿತ್ರಗಳಿವೆ. ಮುಮ್... ರಾಜಬಂಧುಗಳ ಮತ್ತು ಅಧಿಕಾ... ರಣಜಿತ್‌ಸಿಂಗ್, ನಾನಾ ಫಡ್ನವೀಸ್, ... ರಾಜರುಗಳ, ಇತರ ನವಾಬರನೇಕರ ... ಬಿಡಿಸಲಾಗಿದೆ. ಪ್ರಸನ್ನಪಾರ್ವತಿ, ದುರದು... ಚಾಮುಂಡಿ, ವರಚಾಮುಂಡಿ, ಚೆಲುವೆ ... ವಿಜಯ ಎಂಬ ಪಟ್ಟದ ಕುದುರೆಯನ್ನೂ ... ಎಂಬ ಮೋಹಕ ಕನ್ಯೆಯರನ್ನೂ ಇಲ್ಲಿ ...



ಭಕ್ಷಿ ನರಸಪ್ಪಾಜಿಯವರ ಮಕ್ಕಳಾದ ಚಾಮರಾಜ ಒಡೆಯರವರನ್ನು ಮುಮ್ಮಡಿ ಕೃಷ್ಣರಾಜ ಒಡೆಯರು ದತ್ತು ಮಗನಾಗಿ ಸ್ವೀಕರಿಸುತ್ತಿರುವುದು, ಕರ್ನಾಟಕ ಚಿತ್ರಶೈಲಿಯ ಒಂದು ನಿದರ್ಶನ

ಶಿಕಾರಿಪುರದ ತಿಪ್ಪಯ್ಯ ಕಾಗದದ ಮೇಲೆ ಕಪ್ಪುಶಾಯಿಯಲ್ಲಿ ಬಹುಸೂಕ್ಷ್ಮವಾಗಿ ಬಿಡಿಸಿದ (1886) ಭೀಷ್ಮಾರ್ಜುನ ಯುದ್ಧದ ಸುಂದರ ಚಿತ್ರ ಈ ಸಂಗ್ರಹಾಲಯದಲ್ಲಿಯೇ ಅಪರೂಪವಾದದ್ದು.

ದೈವಿಕ ಚಿತ್ರಗಳ ಮೇಲೆ ಚಿತ್ರಕಾರ ತನ್ನ ಹೆಸರನ್ನು ಬರೆದಿರುವುದಿಲ್ಲ. ಅವನ ಹೆಸರು ಸಿಕ್ಕಬೇಕಾದರೇ ಏನಿದ್ದರೂ ಲೌಕಿಕ ಚಿತ್ರಗಳ ಅಡಿಯಲ್ಲಿ ಮಾತ್ರ. ಮುಮ್ಮಡಿಯವರ ಚಿತ್ರಪಟದಲ್ಲಿ ಎಲ್ಲೋ ಒಂದು ಮೂಲೆಯಲ್ಲಿ ಪಾದಚಾರಕನಾದ ಕೊಂಡಯ್ಯ ಬರೆದು ಒಪ್ಪಿಸಿದ್ದು ಎಂದಿದೆ. ಈ ಚಿತ್ರ ಕೆಳಭಾಗದ ಮೊದಲ ಕೋಣೆಯಲ್ಲಿದೆ. ಇದೇ ಶೈಲಿಯ ಮತ್ತೊಂದು ಹೆಸರಿಸಬಹುದಾದ ಕೃತಿಯೆಂದರೆ ಶಿವ ಎಂಬ ಎರಡು ಕನ್ನಡ ಅಕ್ಷರಗಳನ್ನೂ ರೇಖೆಗಳಾಗಿ ಬಳಸಿಕೊಂಡು ಮುಮ್ಮಡಿ ಭೂಪರು ಸಿಂಹಾಸನಾರೂಢರಾಗಿರುವಂತೆ ಚಿತ್ರಿಸಿರುವುದು ಅತ್ಯಮೋಘವಾಗಿದೆ. ಇದನ್ನು ವೀಕ್ಷಿಸಲು ಭೂತಕನ್ನಡಿಯೇಬೇಕು.

ಮುಮ್ಮಡಿಯವರ ಅನಂತರ ಬಂದ ಚಾಮರಾಜರ ಕಾಲದ ಪ್ರಮುಖ ಕಲಾವಿದರಲ್ಲಿ ಕೆ.ವೆಂಕಟಪ್ಪನವರ ತಾತಂದಿರಾದ ದುರ್ಗದ ವೆಂಕಟಪ್ಪನವರೂ ಒಬ್ಬರು. ಇವರು ರಚಿಸಿದ ಚಿತ್ರಗಳನ್ನು ಇಲ್ಲಿ ಕಾಣಬಹುದು.

ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ದೊರೆತ ಕಲಾ ಪ್ರೋತ್ಸಾಹದಿಂದಾಗಿ ಒಳನಾಡು ಹಾಗೂ ಹೊರನಾಡುಗಳಿಂದ ಕಲಾವಿದರು ರಾಜಾಶ್ರಯ ಪಡೆದು ಕಲಾಸೇವೆ ಸಲ್ಲಿಸಿದ್ದಾರೆ. ಇವರ ಕಾಲದಲ್ಲಿ ಪಾಶ್ಚಾತ್ಯ ತಂತ್ರದ ಅನೇಕ ಕೃತಿಗಳು ಬೆಳಕು ಕಂಡವು. ಅವನ್ನು ಬಹುಪಾಲು ಪಾಶ್ಚಾತ್ಯ ಹಾಗೂ ಭಾರತೀಯ ಕಲಾವಿದರು ರಚಿಸಿದ್ದಾರೆ. ರಾಜಾಶ್ರಯ ಪಡೆದ ಹೊರನಾಡಿನ ಕಲಾವಿದರಾದ ಜರ್ಮನಿಯ ಜೆರಾರ್ಡ್‌ಟನ್, ಇಂಗ್ಲೆಂಡಿನ ಸ್ಟರ್ಲಿನ್, ಶಿಲ್ಪಿ ಕೋಲ್‌ಟನ್, ವೆಕ್ಸ್‌ಲರ್, ತಿರುವಾಂಕೂರಿನ ರಾಜಾ ರವಿವರ್ಮ ಮತ್ತು ಅವನ ಸೋದರ ರಾಮವರ್ಮ ಮುಂತಾದವರ ತೈಲವರ್ಣದ ಬೃಹದಾಕಾರದ ಚಿತ್ರಗಳನ್ನು ಇಲ್ಲಿ ನೋಡಬಹುದಾಗಿದೆ. ರಷ್ಯದ



ಹಿಮಾಲಯ: ಜಲವರ್ಣ ಚಿತ್ರ, ಕ...

ಇಲ್ಲಿಯ ಕಲಾಕೃತಿಗಳನ್ನು ... ತೈಲ ಹಾಗೂ ಜಲವರ್ಣದ ಚಿತ್ರ... ವಸ್ತುನಿಷ್ಠ ಚಿತ್ರಣಗಳು, ಪ್ರಕೃತಿ ... ಮರದಲ್ಲಿ, ಅಮೃತ ಶಿಲೆಯಲ್ಲಿ ಕೆ... ವಸ್ತುಗಳು, ಕತ್ತಿ, ಗುರಾಣಿ, ಫಿರಂಗಿ... ಕಲಾವಸ್ತುಗಳು, ಹಿಂದಿನ ಕಾಲದ ವಸ್ತ್ರ... ಸಂಗೀತ ವಾದ್ಯಗಳು.

ಸಂಗ್ರಹಾಲಯದ ಕೆಳಭಾಗದ ... ಉಪ್ಪರಿಗೆಯ 8 ಕೋಣೆಗಳಲ್ಲೂ ಚಿತ್ರ... ಜಿ. ವೆಂಕಟಾಚಲಂ ಅವರು ಕಲಾವಿದ ... ಕಲಾಕೃತಿಗಳನ್ನು ಹೊಸದಾಗಿ ವಿಂಗಡಿಸಿ...



ಕೃಷ್ಣದೌತ್ಯ, ರವಿವರ್ಮನ ಕಲಾಕೃತಿ

ಸದಾ ನೆನಪಿನಲ್ಲಿರುವ ಮುಖ್ಯ ಕೃತಿಗಳಲ್ಲಿ ಮುಂಬಯಿಯ ಎಸ್.ಎಲ್.ಹಳ್ದಂಕರ ಅವರು ರಚಿಸಿದ, ಬೆಳಗುವ ದೀಪ ಹಿಡಿದು ನಿಂತ ಯುವತಿಯ ಚಿತ್ರ ಪ್ರಮುಖವಾದದ್ದು. ಇದು ತುಂಬ ಜನಪ್ರಿಯತೆ ಗಳಿಸಿದೆ. ಅಬನೀಂದ್ರನಾಥ ಠಾಕೂರರ ಶಿಷ್ಯರಾದ ಕೆ.ವೆಂಕಟಪ್ಪನವರ ಭಾರತೀಯ ಶೈಲಿಯ ನಾಲ್ಕು ಚಿತ್ರಗಳಲ್ಲಿ ವೀಣೆ ಹುಚ್ಚು ಮತ್ತು ಮಹಾಶಿವರಾತ್ರಿ ಬಹು ಪ್ರಸಿದ್ಧ ಕೃತಿಗಳು. ಇಲ್ಲಿನ ಸೂಕ್ಷ್ಮ ಕುಸುರಿ ಕಲೆಗಾರಿಕೆ, ವರ್ಣಸಂಯೋಜನೆ ಅಪ್ರತಿಮವಾದುದು.

ರಾಜಾ ರವಿವರ್ಮನ ಬೃಹದಾಕಾರದ ಚಿತ್ರಗಳು ಇಲ್ಲಿವೆ. ಈತ ಪಾಶ್ಚಾತ್ಯ ಸಂಪ್ರದಾಯದಲ್ಲಿ ಹೆಸರಾದ ಭಾರತದ ಕಲಾವಿದ. ಇಲ್ಲಿರುವ ಇವನ ಹದಿನಾರು ಪೌರಾಣಿಕ ಹಾಗೂ ಚಾರಿತ್ರಿಕ ತೈಲವರ್ಣದ ಚಿತ್ರಗಳು ಕಲಾಪ್ರೇಮಿಗಳ ಹೃದಯವನ್ನು ಸೂರೆಗೊಂಡಿವೆ. ಎರಡನೆಯ ಉಪ್ಪರಿಗೆಯ ಹಿಂಬದಿಯ ಹಜಾರದಲ್ಲಿರುವ ಬೆಳದಿಂಗಳ ಮೋಹಿನಿ, ಮಲಬಾರ್ ಹೆಣ್ಣು, ಹಾಲು ಕುಡಿಯುವ ಮಗು, ದಾನ ಮಾಡುವ ಸ್ತ್ರೀ, ಶ್ರೀರಾಮನ ಸಾಗರದರ್ಪಹರಣ, ಕೀಚಕನ ಮನೆಯತ್ತ ಸಾಗಿರುವ ದ್ರೌಪದಿ ಸೈರಂಧ್ರಿ, ಪತ್ರಲೇಖೆ, ಶಕುಂತಲ, ಮತ್ಸ್ಯಗಂಧಿ, ಹಂಸಗೀತೆ, ಜಟಾಯು ವಧೆ, ಇಂದ್ರಜಿತು ವಿಜಯ, ಕೃಷ್ಣದೌತ್ಯ, ರಾಮಬಲರಾಮ ಮುಂತಾದ ಚಿತ್ರಗಳು ಅಮೋಘವಾಗಿವೆ. ಹರಿಶ್ಚಂದ್ರ ತನ್ನ ಮಡದಿ ಮಕ್ಕಳನ್ನು ಮಾರುವ ದೃಶ್ಯದ ಚಿತ್ರವನ್ನು ರಚಿಸಿದವ ರಾಮವರ್ಮ.

ಚಿತ್ರಶಾಲೆಯ ಎಡಭಾಗದ ಮಹಾದ್ವಾರವನ್ನು ಪ್ರವೇಶಿಸಿದಾಗ ಮುಮ್ಮಡಿಯವರ ಹುಟ್ಟು ಹಬ್ಬದ ಮತ್ತು ಚಾಮರಾಜರ ದಸರ ಮೆರವಣಿಗೆಯ ಚಿತ್ರಗಳು ಕಾಣುತ್ತವೆ. ನಾಲ್ವಡಿಯವರ ದರ್ಬಾರು ಚಿತ್ರವೂ

ಬೆಳ್ಳಿಯ ಮೇಲೆ, ಗಾಜಿನ ಮೇಲೆ
ಉಬ್ಬುಚ್ಚಿನ ಚಿತ್ರಗಳೂ ಆಕರ್ಷಕವಾಗಿವೆ

ಸಭಾಂಗಣದ ನಡುವೆ ರ
ಕೃತಿಗಳಿವೆ. ಪಕ್ಕದಲ್ಲೇ ಹೈದರ್, ಟಿ
ಹಾಗೂ ಛಾಯಾಚಿತ್ರಗಳೂ ಮೈಸೂ
ಮುಂತಾದ ಅರಸರ ಛಾಯಾಚಿತ್ರಗಳೂ



ಚತುರ್ಮುಖ ಬ್ರಹ್ಮ (ಚಂದನ ಕೃತಿ), ಸೊರಬದ ಗುಡಿಗಾರ ವಾಮನಪ್ಪನವರ ಕಲಾಕೃತಿ

ಮೊದಲ ಒಳಾಂಗಣಕ್ಕೆ ಬಂದರೆ ಅಲ್ಲಿ ಮೈಸೂರಿನ ರಾಜರುಗಳ ಬೃಹದಾಕಾರದ ತೈಲವರ್ಣದ ಚಿತ್ರಗಳೂ ಕೆಲವು ಅಮೃತಶಿಲೆಯಲ್ಲಿನ ಅರ್ಧ ದೇಹಾಕೃತಿಗಳೂ ಜೊತೆ ಜೊತೆಯಾಗಿ ಕನ್ನಡ ಕಲಾವಿದರು ರಚಿಸಿರುವ ರೂಪಚಿತ್ರಗಳೂ ಇವೆ. ಪ್ರಸಿದ್ಧ ಆಂಗ್ಲ ಚಿತ್ರಕಾರ ಸ್ಟರ್ಲಿಂಗ್ ರಚಿಸಿದ ಮುಮ್ಮಡಿಯವರೊಡನೆ ಇಂಗ್ಲಿಷರ ದರ್ಬಾರು ಚಿತ್ರ (1853) ಸೊಗಸಾಗಿದೆ. ಚಿತ್ರಕಾರ ತನ್ನನ್ನೂ ಈ ಚಿತ್ರದಲ್ಲಿ ರೂಪಿಸಿಕೊಂಡಿರುವುದು ಇಲ್ಲಿನ ಒಂದು ವೈಶಿಷ್ಟ್ಯ.

ಮತ್ತೊಂದು ಒಳಾಂಗಣದಲ್ಲಿ ಖ್ಯಾತ ಚಿತ್ರಕಾರರಾದ ವೈಕ್ಸ್‌ಲರ್ ಮತ್ತು ಜರಾಲ್ಡೀನ್ ರಚಿಸಿದ ನಾಲ್ವಡಿಯವರ ಚಿತ್ರಗಳು ಅಮೋಘವಾಗಿವೆ. ಉಡ್‌ವಿಲ್ ಎಂಬ ಚಿತ್ರಕಾರ ಚಾಮರಾಜ ಒಡೆಯರ ಹುಟ್ಟುಹಬ್ಬದ ಮೆರವಣಿಗೆಯ ಚಿತ್ರವನ್ನು ರಚಿಸಿದ್ದಾನೆ. ಚಾಮರಾಜರ ಪಟ್ಟಾಭಿಷೇಕದ ಚಿತ್ರರಚಿಸಿದ ಕಲಾವಿದ ಕರ್ನಾಟಕದ ವೆಂಕಟಸುಬ್ಬಯ್ಯ. ಅಜೀಜ್, ಕೇಶವಯ್ಯ, ನಾಗರಾಜು, ರಾಮನರಸಯ್ಯ ಮುಂತಾದವರೂ ರಾಜರುಗಳ ಚಿತ್ರಗಳನ್ನು ಬರೆದಿದ್ದಾರೆ. ನಾಲ್ವಡಿ ಕೃಷ್ಣರಾಜರ ವಿವಾಹ ಮಹೋತ್ಸವದ (1910) ಚಿತ್ರವನ್ನು ವೈಕ್ಸ್‌ಲರ್ ತುಂಬ ಶ್ರಮದಿಂದ ಸ್ವಾಭಾವಿಕವಾಗಿ ರೂಪಿಸಿದ್ದಾನೆ.

ಕೆಳಗಿನ ಮೂರನೆಯ ಒಳಾಂಗಣದಲ್ಲಿ ಪಾಶ್ಚಾತ್ಯ ತಂತ್ರದ ಅನೇಕ ತೈಲವರ್ಣ ಚಿತ್ರಗಳಿವೆ, ಗಾಜಿನ ಕಲಾವಸ್ತುಗಳಿವೆ, ಮಣ್ಣಿನ ಪ್ರತಿಮೆಗಳಿವೆ. ಆನೆಗಳನ್ನು ಹಿಡಿಯುವ ಖೆಡ್ಡದ ಮೂರು ಚಿತ್ರಗಳನ್ನು ರಾಮವರ್ಮ ರಚಿಸಿದ್ದಾನೆ. ಸೈನ್ಯಾಧಿಕಾರಿ ಸ್ಕಾಟ್, ರೆಂಬ್ರಾಂಟ್, ಗ್ಲಾಡ್‌ಸ್ಟನ್, ಜೇಮ್ಸ್ ಗೋರ್ಡನ್ ಮತ್ತು ವೆಲ್ಲೆಸ್ಲಿ ಮುಂತಾದವರ ರೂಪಚಿತ್ರಗಳಿವೆ. ವಿಶ್ವವಿಖ್ಯಾತ ಕಲಾವಿದ ಟಿಷನ್ ಹಾಗೂ ರೂಬನ್ಸರ ಚಿತ್ರಗಳೂ ಇಲ್ಲಿವೆ. ರೆಂಬ್ರಾಂಟನ ಚಿತ್ರಗಳನ್ನು ಕಲಾವಿದ ಎನ್.ಜಿ.ಪಾವಂಜೆ ಸ್ವಾಭಾವಿಕವಾಗಿ ನಕಲು ಮಾಡಿದ್ದಾರೆ. ಅವೂ ಇಲ್ಲಿವೆ. ಈ ಒಳಾಂಗಣಕ್ಕೆ ಲಗತ್ತಿಸಿರುವ ಸುಮಾರು ಏಳು ಕೋಣೆಗಳಲ್ಲಿ ರರಿಕ್ ಅವರ ಚಿತ್ರಗಳನ್ನೂ ರಜಪೂತ, ಮೊಗಲ್ ಶೈಲಿಯ, ಕನ್ನಡ ಶೈಲಿಯ ಚಿತ್ರಗಳನೇಕವನ್ನೂ ಕಾಣಬಹುದು. ರರಿಕ್ ಅವರ ಚಿತ್ರಗಳ ಕೋಣೆಯಲ್ಲಿ ಹಿಮಾಲಯ, ಲಡಾಕ್ ಪ್ರದೇಶದ ಆರು ಪ್ರಕೃತಿ ಚಿತ್ರಗಳನ್ನು ಪ್ರದರ್ಶಿಸಲಾಗಿದೆ. ರಜಪೂತ ಮತ್ತು ಮೊಗಲ್ ತಂತ್ರದ ಮೂವತ್ತೆರಡು ಚಿತ್ರಗಳನ್ನು ಹಿಂಬದಿಯ ಕೋಣೆಯಲ್ಲಿರಿಸಲಾಗಿದೆ.

ಕೆಳಗಡೆಯ ಮೊದಲ ಹಜಾರದ ಬಲಕೋಣೆಗೆ ಬಂದು ಅಲ್ಲಿನ ಹಂತಗಳನ್ನು ಏರಿ ಮೇಲುಪ್ಪರಿಗೆಗೆ ಹೋಗುವಾಗ ಹದಿನೈದು ಜಲವರ್ಣದ ನಿಸರ್ಗ ಚಿತ್ರಗಳನ್ನು ಕಾಣಬಹುದು. ಲಖನೌ, ಗುಜರಾತ್, ಮದರಾಸು, ಆಂಧ್ರ, ಶಾಂತಿನಿಕೇತನ, ನವದೆಹಲಿ, ಕೋಲ್ಕತ, ಕೇರಳ, ಅಜ್ಮೀರ್, ಬೆಂಗಳೂರು ಮತ್ತು ಮೈಸೂರು ಮುಂತಾದ ಕಡೆಯ ಪ್ರಖ್ಯಾತ ಕಲಾವಿದರಿಂದ ರಚಿತವಾದ 101 ಚಿತ್ರಗಳು ಮೊದಲ ಉಪ್ಪರಿಗೆಯಲ್ಲಿವೆ. ಇವುಗಳಲ್ಲಿ ಚಾರಿತ್ರಿಕ ಸಂಯೋಗ ಚಿತ್ರಗಳು ಹೆಚ್ಚಿನವು. ಕೆಲವು ಪ್ರಕೃತಿ ಚಿತ್ರಗಳು.

ಕೆ.ವೆಂಕಟಪ್ಪನವರ ಐದು ಚಿತ್ರಗಳಿಗೇ ಒಂದು ಕೋಣೆ ಮೀಸಲಾಗಿದೆ. ಅಲ್ಲಿ ಬಂಗಾಲಿ ಶೈಲಿಯ ಭಾರತೀಯ ಸಂಪ್ರದಾಯದ ಚಿತ್ರಗಳೂ ಕೆಲವಿವೆ. ಶಾಂತಿನಿಕೇತನದ ಗಗನೇಂದ್ರನಾಥ ಠಾಕೂರ್, ಅಬನೀಂದ್ರನಾಥ್ ಠಾಕೂರ್, ಬ್ಯಾನರ್ಜಿ ಮತ್ತು ಕೋಲ್ಕತದ, ಪ್ರಮೋದಕುಮಾರ ಚಟರ್ಜಿಯವರಿಂದ ರೂಪಿತವಾದ ಚಿತ್ರಗಳಿವು.

ಕರ್ನಾಟಕದ ಕಲಾವಿದರ ಕೃತಿಗಳಿಗೇ ಒಂದು ಪ್ರತ್ಯೇಕ ಕೋಣೆ ಇದೆ. ಮುಂಬಯಿಯ ಎಸ್.ಎಲ್.ಹಳ್ದಂಕರರ ಪ್ರಸಿದ್ಧ ಕೃತಿ ಬೆಳಗುವ ದೀಪ ಹಿಡಿದಿರುವ ಸ್ತ್ರೀ ಬಿಟ್ಟರೆ ಉಳಿದ ಚಿತ್ರಗಳೆಲ್ಲ ಕೇಶವಯ್ಯ, ಸುಬ್ಬಕೃಷ್ಣ, ರಾಮಚಂದ್ರ, ವೀರಪ್ಪ, ಪಿ.ಆರ್.ತಿಪ್ಪೇಸ್ವಾಮಿ, ರಾಮನರಸಯ್ಯ ಮುಂತಾದವರವು.

ಪಾರಸಿ ಸಂಪ್ರದಾಯದ ಚಿತ್ರ ರಚಿಸುವ ಲಖನೌನ ರಹಮಾನ್ ಚುಗ್ತಾಯ್‌ನ ಒಂಬತ್ತು ಚಿತ್ರಗಳು ಬೇರೊಂದು ಕೋಣೆಯಲ್ಲಿವೆ.

ಅನಂತರ ರಂಗಮಹಲಿಗೆ ಬರುವಾಗ ಹಂತಗಳ ಕೋಣೆಯ ಗೋಡೆಯಲ್ಲಿ ತೂಗುವ ಹದಿನಾರು ಜಲವರ್ಣದ ಕೃತಿಗಳನ್ನು ಮರೆಯುವಂತಿಲ್ಲ. ಮಹಲಿಗೆ ಕಾಲಿಟ್ಟೊಡನೆ ವಿವಿಧ ಸಂಗೀತ ವಾದ್ಯಗಳನ್ನು ನೋಡುತ್ತೇವೆ. ಅದರ ಪಕ್ಕದ ಸಭಾಂಗಣದ ಭಿತ್ತಿಗಳೆಲ್ಲ ಕರ್ನಾಟಕ ಶೈಲಿಯ ಚಿತ್ರಗಳಿಂದ ತುಂಬಿಹೋಗಿವೆ. ಅಲ್ಲದೆ ಅಲ್ಲಿ ರಾಜರುಗಳು ವಿನೋದಕ್ಕಾಗಿ ಇಸ್ಪೀಟಿನಂತೆ ಆಡಲು ಬಳಸುತ್ತಿದ್ದ ಗಂಜೀಫಿನ ಎಲೆಗಳಿವೆ.

ಉಪ್ಪರಿಗೆಯಿಂದ ಕೆಳಭಾಗದ ಹಿಂಬದಿಯ ನಾಲ್ಕನೆಯ ಗಾಜಿನ ಪಡಸಾಲೆಯಲ್ಲಿ ಅನೇಕ ಕಲಾತ್ಮಕವಾದ ಕಂಚು, ಹಿತ್ತಾಳೆ, ತಾಮ್ರ, ಗಂಧ, ಮತ್ತು ದಂತದ ವಸ್ತುಗಳಿವೆ. ಕೆಲವು ಅಪರೂಪದ ಕರಕುಶಲ ವಸ್ತುಗಳನ್ನು ಇಲ್ಲಿ ಹೆಸರಿಸಬಹುದು. ತಂಜಾವೂರಿನ ಕಡೆಯ ತಾಮ್ರದ ತಟ್ಟೆಯೊಂದರಲ್ಲಿ ಮಹಾಭಾರತದ ದೃಶ್ಯವನ್ನು ಉಬ್ಬುಚ್ಚಿನಲ್ಲಿ ಬಿಡಿಸಿದ್ದಾರೆ. ದ್ರೌಪದಿ ಕಲ್ಯಾಣ, ಪಗಡೆಯಾಟ, ಅಶ್ವಮೇಧಯಾಗ,
ಕರ್ಣಾರ್ಜುನರ ಯುದ್ಧ ಇವನ್ನು
ರೂಪಿಸಿದ್ದಾರೆ. ಅನೇಕ ಹಿತ್ತಾಳೆಯ ದ

ದಂತದ ಕೃತಿಗಳಲ್ಲಿ ಆನೆ,
ಹಸು, ಎಮ್ಮೆ ಮುಂತಾದ ಪ್ರಾಣಿ
ಫಿರಂಗಿ, ಭರಣಿ, ಪಗಡೆ ಆಟದ ವಸ್ತು
ಚಾಮುಂಡೇಶ್ವರಿ, ಶ್ರೀರಾಮ ಮುಂತಾ
ಬಾಚಣಿಗೆ, ಸೀರಣಿಗೆಗಳನ್ನೂ ನೋಡಬ
ದಂತದ ಫಲಕದ ಮೇಲೆ ಮೈಸೂರಿನ
ರೂಪಚಿತ್ರಗಳನ್ನು ಬಿಡಿಸಿದ್ದಾರೆ.
ರಾಮರಾವಣರ ಯುದ್ಧ, ಕೈಲಾಸದ
ಮೋಕ್ಷ, ಶೇಷಶಯನ, ಮಾರ್ಕಂ
ಮುಂತಾದುವು ಅತ್ಯಂತ ಕುಸುರಿ ಕೆ
ಕೀರ್ತಿಯನ್ನು ಬೆಳಗುವಂತಿವೆ. ಒಂದು
ವಿಶ್ವವನ್ನೇ ಸೃಷ್ಟಿಸಲಾಗಿದೆ. ತಾಂಡವನ
ಮೋಹಕ ಕೃತಿಗಳಾಗಿವೆ.



ಹಂಪೆಯ ಕಾವಲು ಗೋಪುರ: ಪಿ.ಆರ್.ತಿಪ್ಪೇಸ್ವಾಮಿಯವರ ಜಲವರ್ಣಚಿತ್ರ

ಸೀಸೆಯೊಂದರಲ್ಲಿ ಮಂದಹಾಸದಲ್ಲಿ ಕುಳಿತ ರಾಜನ ಪ್ರತಿಮೆ ಇದೆ. ಒಂದೊಂದು ಅಕ್ಕಿಕಾಳಿನ ಮೇಲೆ ಒಂದೊಂದರಂತೆ ಶಿವಾಜಿ, ಗಾಂಧಿ, ಕೃಷ್ಣ, ಈಶ್ವರ, ಲಕ್ಷ್ಮೀ, ಸರಸ್ವತಿ, ತಾಜಮಹಲ್ ಮತ್ತು ನವಿಲುಗಳನ್ನು ವರ್ಣಗಳಲ್ಲಿ ಚಿತ್ರಿಸಲಾಗಿದೆ. ಇವು ಕೃಷ್ಣಗಿರಿಯ ವೈದ್ಯನಾಥನ ಕುಸುರಿ ಕೆಲಸ.

ಗಂಧದಲ್ಲಿ ಸೀತಾಪಂಚವಟಿ, ಕೃಷ್ಣಜಲಕ್ರೀಡೆಗಳನ್ನು ಸೊಗಸಾಗಿ ರಚಿಸಿದವ ಸೊರಬದ ಸಿದ್ಧಾಪುರ ತಿಮ್ಮಣ್ಣ. ಅಹಲ್ಯಾ ಶಾಪವಿಮೋಚನೆ, ಭಗವದ್ಗೀತೆ, ಚಾಮುಂಡೇಶ್ವರಿ, ಚತುರ್ಮುಖ ಬ್ರಹ್ಮ ಕೃತಿಗಳನ್ನು ಸೊರಬದ ಗುಡಿಗಾರ ವಾಮನಪ್ಪ, ಎಚ್.ವೆಂಕಟಪ್ಪ ಮುಂತಾದವರು ಸುಂದರವಾಗಿ ರಚಿಸಿದ್ದಾರೆ.

ಇಲ್ಲಿನ ಈಶ್ವರ, ವಿಷ್ಣು, ಬ್ರಹ್ಮ ಮೊದಲಾದ ನೇಪಾಳದ ಕೃತಿಗಳು ನವರತ್ನದಲ್ಲಿ ರಚಿತವಾಗಿವೆ.

ಚಿತ್ರಶಾಲೆಯ ಹಿಂಬದಿಯ ಹಳೆಯ ಕೋಣೆಯಲ್ಲಿ ಮೈಸೂರು ಅರಮನೆಯ ಅಮೃತಶಿಲೆಯ ಮಾದರಿಯೊಂದಿದೆ. ಅನೇಕ ಮರದ ಮೂರ್ತಿಗಳೂ ಇವೆ. ಲಾರ್ಡ್ ಡಾಲ್‌ಹೌಸಿ ಮೈಸೂರು ಅರಸರಿಗೆ ಕಳುಹಿಸಿದ ಟಿಪ್ಪುವಿನ ಮಡದಿಯ ಮರದ ಮೇನೆಯೊಂದನ್ನು ಇಲ್ಲಿರಿಸಲಾಗಿದೆ. ಮೈಸೂರಿನ

ರಾಜರು ಉಪಯೋಗಿಸಿ ಮೆರೆದ ನೂರ ಎರಡು ವಿವಿಧಾಕಾರದ ಸುಂದರ ಕಲಾತ್ಮಕ ಕೈಚಿತ್ರಗಳಿವೆ. ಚಾಮುಂಡೇಶ್ವರಿಯ ಮರದ ರಥದ ಮಾದರಿಯೂ ಇಲ್ಲಿದೆ. ರಾಜರು ಉಪಯೋಗಿಸಿದ ಕಾಶ್ಮೀರಿ ಶಾಲುಗಳೂ ಮೊಸಳೆಯ ಚರ್ಮದಲ್ಲಿ ಮಾಡಿದ ಚಾಮುಂಡಿ ಪಾದದ ಕೃತಿಯೂ ಇದೆ. ಚಿತ್ರ ಕೊರೆತದ ತೆಂಗಿನ ಕರಟ, ನಾನಾ ಆಕಾರದ ರೂಪದ ಕತ್ತಿಗಳು, ಗುರಾಣಿಗಳು, ಬಂದೂಕುಗಳು, ಇತರ ಆಯುಧಗಳು, ಗಂಟೆಗಳು ಇಲ್ಲಿ ಕಾಣಸಿಗುತ್ತವೆ. ಇದರ ನೆರೆಯ ಕೋಣೆಯಲ್ಲಿ ಪೂಜಾಮಂದಿರವಿದೆ. ಅದರ ಬಿತ್ತಿಗಳಲ್ಲಿ ಶಾಸ್ತ್ರೀಯ ರೀತಿಯಲ್ಲಿ ಅನೇಕ ದೇವರುಗಳನ್ನು ಚಿತ್ರಿಸಲಾಗಿದೆ.

ಈ ಚಿತ್ರಶಾಲೆ ಮೈಸೂರಿಗೆ ಬರುವ ಪ್ರವಾಸಿಗರ ಆಕರ್ಷಣೆಯ ಕೇಂದ್ರಗಳಲ್ಲೊಂದಾಗಿದೆ.

*

**ಜಯತೀರ್ಥ** : ಪ್ರಸಿದ್ಧ ವಿದ್ವಾಂಸ, ವೇದಾಂತಿ. ಬ್ರಹ್ಮಸೂತ್ರಗಳಿಗೆ ಮಧ್ವಾಚಾರ್ಯರು ಬರೆದ ಮಹಾಭಾಷ್ಯವನ್ನು ಸಮಂಜಸವಾಗಿ ಅರ್ಥಮಾಡಿಕೊಳ್ಳಲು ಇವರು ಬರೆದ ತತ್ತ್ವಪ್ರಕಾಶಿಕಾದಿ ವ್ಯಾಖ್ಯಾನಗಳಿಗೇ ಮೊರೆಹೋಗಬೇಕು. ಹೀಗಾಗಿ ಇವರು ಟೀಕಾಚಾರ್ಯ ಎಂಬ ಹೆಸರಿನಿಂದಲೂ ಜನಪ್ರಿಯರಾಗಿದ್ದಾರೆ. ಮಧ್ವವೇದಾಂತದಲ್ಲಿ ಪ್ರವೇಶ ಪಡೆಯುವುದಕ್ಕೆ ಮಹಾದ್ವಾರವಿದ್ದಂತಿದೆ ಇವರ ಪ್ರಮಾಣ ಪದ್ಧತಿ ಎಂಬ ಗ್ರಂಥ. ತತ್ತ್ವವಾದದಲ್ಲಿ ಸಾಮರ್ಥ್ಯ ಸಂಪಾದನೆಗೆ ಇವರ ವಾದಾವಳಿ ಎಂಬ ಗ್ರಂಥ ಸಹಾಯಕವಾಗಿದೆ. ಶ್ರೀಮನ್ ನ್ಯಾಯಸುಧಾ ಇವರ ಬೃಹದ್‍ಗ್ರಂಥ. ಮಾಧ್ವದ್ವೈತ ವೇದಾಂತದ ಪರಮ ಸಮರ್ಥನಾತ್ಮಕವಾದ ವ್ಯಾಖ್ಯಾನ ಗ್ರಂಥವಿದು. ತಾವು ಶಬ್ದಾಬ್ಧಿಯ ಗಾಢತೆಯನ್ನೂ ನಿಗಮಚರ್ಚಾ ಚಾತುರ್ಯವನ್ನೂ ನ್ಯಾಯ ಪ್ರೌಢಿಮೆಯನ್ನೂ ಹೆಚ್ಚಾಗಿ ಸಂಪಾದಿಸಿದವರಲ್ಲವೆಂದು ಜಯತೀರ್ಥರು ಹೇಳಿಕೊಂಡಿರುವರಾದರೂ ಇವರ ಗ್ರಂಥ ಇವೆಲ್ಲದರಲ್ಲಿಯೂ ಇವರಿಗಿದ್ದ ಪ್ರಕಾಂಡ ಪಾಂಡಿತ್ಯ, ಸಾಮರ್ಥ್ಯಗಳಿಗೆ ಸಾಕ್ಷಿಯಾಗಿದೆ.

ಇವರು ಸು.14ನೆಯ ಶತಮಾನದವರು. ಮಹಾರಾಷ್ಟ್ರದ ಅಂಚಿನಲ್ಲಿ ಇರುವ ಮಂಗಳವೇಡೆ ಗ್ರಾಮದ ದೇಶಪಾಂಡೆ ಮನೆತನದಲ್ಲಿ ಜನಿಸಿದರು. ಧೋಂಡೂಪಂತ ಇವರ ಬಾಲ್ಯನಾಮ. ತಂದೆ ರಘುನಾಥರಾಯ. ಶ್ರೀಮಂತಿಕೆ ಮತ್ತು ರಾಜಕೀಯ ಅಧಿಕಾರಗಳು ಹೇರಳವಾಗಿದ್ದ ಮನೆಯಲ್ಲಿ ಬೆಳೆದವರಾಗಿ ಇವರು ಸ್ವೇಚ್ಛೆಯಾಗಿ ಉಂಡು ತಿಂದು, ಕುದುರೆ ಸವಾರಿ, ಓಡಾಟಗಳಲ್ಲಿ ಕಾಲಕಳೆಯುತ್ತ ದೊಡ್ಡವರಾದರು. ಒಮ್ಮೆ, ಮದುವೆಯಾದ ಹೊಸದರಲ್ಲಿ ಕುದುರೆ ಸವಾರಿ ಹೊರಟ ಇವರಿಗೆ ಭೀಮಾನದಿಯನ್ನು ತಲಪುವ ಹೊತ್ತಿಗೆ ಮಧ್ಯಾಹ್ನವಾಗಿ ಬಾಯಾರಿಕೆ ಯಾಯಿತಂತೆ. ಭೀಮಾನದಿಯಲ್ಲಿ ಕುದುರೆಯನ್ನು ಈಜುಬಿಟ್ಟು ಕುದುರೆ ಮುಳುಗುವಷ್ಟು ಬಂದ ನದೀ ಪ್ರವಾಹಕ್ಕೆ ಬಾಯಿ ಹಚ್ಚಿ ನೀರು ಕುಡಿಯಲಾರಂಭಿಸಿದರಂತೆ. ಎದುರು ದಡದಲ್ಲಿ ಕುಳಿತು ಇದನ್ನೆಲ್ಲ ನೋಡುತ್ತಿದ್ದ ವೃದ್ಧ ತಾಪಸ ಯತಿ ಅಕ್ಷೋಭ್ಯತೀರ್ಥ ಇವರು ಕೂಗಿ ಕರೆದು ಕಿಂ ಪಶುಃ ಪೂರ್ವದೇಹೇ - ಹಿಂದಿನ ಜನ್ಮದಲ್ಲಿ ನೀನು ಪಶುವೇನಾದರೂ ಆಗಿದ್ದೆಯಾ ಎಂದು ಕೇಳಿದನಂತೆ. ಈ ಪ್ರಶ್ನೆ ಇವರ ಜಾಗ್ರತಿಗೆ ಕಾರಣವಾಯಿತು. ಹಿಂದಿನ ಜನ್ಮದಲ್ಲಿ ತಾವು ಮಧ್ವಾಚಾರ್ಯರ ಗ್ರಂಥಭಾರವನ್ನು ಹೊತ್ತ ಎತ್ತು ಎಂಬ ಭಾವ ಸ್ಫುರಿಸಿ ತಮ್ಮ ಮೇಲೆ ದ್ವೈತ ವೇದಾಂತ ಜ್ಞಾನಸಂಪಾದನೆ ಹಾಗೂ ಸಮರ್ಥನೆಗಳ ಭಾರವಿದೆಯೆಂಬ ಪ್ರಜ್ಞೆ ಉದಯವಾಯಿತು. ಯತಿಯ ಸಾನ್ನಿಧ್ಯ ತರುಣರಾದ ಇವರನ್ನು ಪೂರ್ಣ ಪರಿವರ್ತಿಸಿತು. ಗೃಹಸ್ಥ ಜೀವನವನ್ನು ತ್ಯಜಿಸಿ ಅಕ್ಷೋಭ್ಯ ತೀರ್ಥರಿಂದ ಸಂನ್ಯಾಸ ದೀಕ್ಷೆ ಸ್ವೀಕರಿಸಿ ವೇದಾಂತಾಧ್ಯಯನದಲ್ಲಿ ತೊಡಗಿದರು.

ಮಧ್ವಾಚಾರ್ಯರ ನಾಲ್ಕು ಜನ ಪ್ರಮುಖ ಶಿಷ್ಯರಲ್ಲಿ ಒಬ್ಬರಾದ ಅಕ್ಷೋಭ್ಯತೀರ್ಥರ ಗರಡಿಯಲ್ಲಿ ತಯಾರಾದ ಇವರು ಅವರನ್ನು ಮೀರಿಸಿದರು. ಇವರಿಬ್ಬರೂ ಪ್ರಖ್ಯಾತ ಅದ್ವೈತ ಯತಿಗಳಾದ ವಿದ್ಯಾರಣ್ಯರ ಸಮಕಾಲೀನರು. ಇಬ್ಬರೂ ವಿದ್ಯಾರಣ್ಯರೊಂದಿಗೆ ಶಾಸ್ತ್ರಾರ್ಥ ವಿಚಾರಗಳನ್ನು ಚರ್ಚಿಸಿದಂತೆ ಉಲ್ಲೇಖಗಳೂ ಆಖ್ಯಾಯಿಕೆಗಳೂ ಇವೆ.

ಇವರು ಹೈದರಾಬಾದು ಹಾಗೂ ಮಹಾರಾಷ್ಟ್ರ ವಿಭಾಗಗಳಲ್ಲಿ ದ್ವೈತಮತ ಹಾಗೂ ಭಕ್ತಿಮಾರ್ಗ ಪ್ರಚಾರಕ್ಕೆ ಕಾರಣರಾದರು. ಗುಲ್ಬರ್ಗ ಜಿಲ್ಲೆಯ ಸೇಡಂ ತಾಲ್ಲೂಕಿನಲ್ಲಿ ಕಾಗಿಣನದಿಯ ತೀರದಲ್ಲಿ ಇದ್ದ ಮಳಖೇಡ, ರಾಷ್ಟ್ರಕೂಟರ ಕಾಲದ ಮಾನ್ಯಖೇಟ ಇವರ ಕಾರ್ಯ ಕೇಂದ್ರವಾಗಿತ್ತು.

ರಾಷ್ಟ್ರಕೂಟರ ಕಾಲದಲ್ಲಿ ಪ್ರಸಿದ್ಧಿ ಪಡೆದ ಮಾನ್ಯಖೇಟ ಮಳಖೇಡವಾಗಿ ಮತ್ತೊಮ್ಮೆ ಪ್ರಸಿದ್ಧಿ ಪಡೆದುದು ಇವರಿಂದ. ಅಲ್ಲಿನ ಕಾಗಿಣನದಿಯ ದಂಡೆಯ ಮೇಲೆ ಇವರ ವೃಂದಾವನ ಇದೆ. ಇವರು ಕುಳಿತು ಗ್ರಂಥರಚನೆ ಮಾಡುತ್ತಿದ್ದ ಗುಹೆಯೊಂದು ಗುಲ್ಬರ್ಗ ಜಿಲ್ಲೆ ಯಾದಗಿರಿ ತಾಲ್ಲೂಕಿನ ಯರಗೋಳವೆಂಬ ಗ್ರಾಮದ ಹತ್ತಿರದ ಮರಡಿಯ ಮೇಲೆ ಇದೆ. ಮಳಖೇಡದಲ್ಲಿ ಈಗಲೂ ಪುಣ್ಯತಿಥಿಯನ್ನು ಟೀಕಾರಾಯರ ಪಂಚಮಿಯೆಂದು ಪ್ರತಿವರ್ಷ ದೊಡ್ಡ ಪ್ರಮಾಣದಲ್ಲಿ ಆಚರಿಸಲಾಗುತ್ತದೆ. *

**ಜಯತೀರ್ಥ ರಾಜಪುರೋಹಿತ** : 1925-86. ಆಡಳಿತ ಹಾಗೂ ಸಾಹಿತ್ಯರಚನೆ ಎರಡೂ ಕ್ಷೇತ್ರಗಳಲ್ಲಿ ಕೆಲಸ ಮಾಡಿದ ಕರ್ನಾಟಕದ ಐ.ಎ.ಎಸ್. ಅಧಿಕಾರಿ. ಕನ್ನಡ ಅಭಿವೃದ್ಧಿಗಾಗಿ ಹಾಗೂ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡುವ ದಿಕ್ಕಿನಲ್ಲೂ ಇವರ ಕೊಡುಗೆ ಅಪಾರವಾದುದು.

ಗಂಗಾವತಿ ತಾಲ್ಲೂಕಿನ ಕನಕಗಿರಿ ಗ್ರಾಮ ಇವರ ಪೂರ್ವಜರ ಸ್ಥಳ. ಇದು ವಿಜಯನಗರ ಸಾಮ್ರಾಜ್ಯದ ಪತನಾನಂತರ ಒಂದು ಸಣ್ಣ ಪಾಳೆಯಪಟ್ಟಾಗಿತ್ತು. ಈ ಸಂಸ್ಥಾನಕ್ಕೆ ಗುಜ್ಜಲು ವಂಶದವರು ಒಡೆಯರು. ಈ ನಾಯಕರ ರಾಜಮನೆತನಕ್ಕೆ ಜಯತೀರ್ಥರ ಪೂರ್ವಜರು ರಾಜಪುರೋಹಿತರಾಗಿದ್ದರು. ಜಯತೀರ್ಥರದು ಆಗರ್ಭಶ್ರೀಮಂತ ಮನೆತನವಲ್ಲದಿದ್ದರೂ ನಿತ್ಯ ಅಕ್ಕಿಯ ಅನ್ನ ಉಣ್ಣುವಷ್ಟು ಶ್ರೀಮಂತಿಕೆಯಿತ್ತು. ರಾಜಪೌರೋಹಿತ್ಯ ಹಾಗೂ ಇಪ್ಪತ್ತು ಹಳ್ಳಿಗಳ ಜೋಯಿಸತನ ಇವರ ಆಸ್ತಿ. ಇವರು 1925 ಜುಲೈ 1ರಂದು ಜನಿಸಿದರು. ಶೇಷಾಚಾರ್ಯ ಹಾಗೂ ರಂಗಮ್ಮ ಇವರ ತಂದೆತಾಯಿಗಳು. ಹನ್ನೆರಡು ಮಕ್ಕಳನ್ನು ಹೆತ್ತ ಆ ತಾಯಿಗೆ ಉಳಿದದ್ದು ಎರಡೇಮಕ್ಕಳು. ಜಯ ತೀರ್ಥ ಹಾಗೂ ನರಸಿಂಹ. ಈ ಇಬ್ಬರ ಮಧ್ಯದ ಅಂತರ 16 ವರ್ಷ. ಇವರ ಬಾಲ್ಯ ಮನೆಯಲ್ಲಿ, ಎಲ್ಲರ ಪ್ರೀತಿಯ ಆಸರೆ ಯಲ್ಲಿ, ಅದರಲ್ಲೂ ಅಜ್ಜಿ ಜೀವಮ್ಮನವರ ಅಕ್ಕರೆಯ ಮಡಿಲಲ್ಲಿ ಕಳೆಯಿತು. ಶಾಲೆಯಲ್ಲಿ ಗುರು ಬಸವಲಿಂಗಯ್ಯನವರೂ ಮನೆಯಲ್ಲಿ ಸಂಸ್ಕೃತ ಪಂಡಿತರಾದ ತಂದೆಯವರೂ ಇವರಿಗೆ ಸಂಸ್ಕೃತ, ಮಾಧ್ವಪಂಥಕ್ಕೆ ಸಂಬಂಧಿಸಿದ ಸಾಹಿತ್ಯ ಹಾಗೂ ಹರಿದಾಸರ ಹಾಡುಗಳ ಅಭ್ಯಾಸ ಮಾಡಿಸಿದರು. ತಂದೆಗೆ ಮಗ ಸಂಸ್ಕೃತ ವಿದ್ವಾಂಸನಾಗಬೇಕೆಂಬ ಹಂಬಲ. ಇವರು ಚಿಕ್ಕವರಿರುವಾಗಲೇ ಜಾತ್ರೆ ಹಾಗೂ ಉತ್ಸವಗಳಲ್ಲಿ ಹರಿಕಥೆಗಳನ್ನೂ ಹೇಳಿ ಸೈ ಎನ್ನಿಸಿಕೊಂಡರು. ಆರೋಗ್ಯ ಕೆಟ್ಟಿದ್ದರಿಂದ ಶಾಲೆಗೆ ಶರಣುಹೊಡೆದು ಲಗ್ನ, ಶ್ರಾದ್ಧ ಹಾಗೂ ಸತ್ಯನಾರಾಯಣ ಪೂಜಾಕಾರ್ಯಗಳಲ್ಲಿ ನಿರತರಾದರು. ತಂದೆಯ ಒತ್ತಡಕ್ಕೆ ಹಾಗೂ ಉತ್ತರಾದಿಮಠದ ಯತಿವರ್ಯ ಸತ್ಯಧ್ಯಾನತೀರ್ಥರ ಸೂಚನೆಯ ಮೇರೆಗೆ ಕೊಪ್ಪಳದ ಖ್ಯಾತ ವಿದ್ವಾಂಸರಾದ ಹುಲಗಿ ಹುಚ್ಚಾಚಾರ್ಯರಲ್ಲಿ ಸಂಸ್ಕೃತದ ತರ್ಕಶಾಸ್ತ್ರದ ತರ್ಕಸಂಗ್ರಹ ಪಾಠ ಆರಂಭವಾಯಿತು. ಈ ಅಧ್ಯಯನ ಶುದ್ಧ ಗುರುಕುಲ ಪದ್ಧತಿಯದು. ರಾಜಪುರೋಹಿತರಿಗೆ ಇದು ಸರಿಬೀಳಲಿಲ್ಲ. ಇದಕ್ಕೆ ಆಸರೆಯಾಗಿ ಲೌಕಿಕ ಅಭ್ಯಾಸ ಮುಂದುವರಿಸಲು ಅಲ್ಲಿಯ ಸ್ಕೂಲಿನ ಹೆಡ್ಮಾಸ್ಟರ್ ಸಂಗಪ್ಪನವರ ಪ್ರೋತ್ಸಾಹ. ಹೊಸ ಜಗತ್ತಿನ ಆಧುನಿಕ ಅಭ್ಯಾಸದ ಆಮಿಷ ಒಂದು ಕಡೆ. ಮನೆಯ ತುಂಬ ಹಾಗೂ ಮನೆಯ ಹೊರಗೆ ಮಡಿಮಡಿ ಎಂಬ ವಾತಾವರಣ ಇನ್ನೊಂದು ಕಡೆ. ಹೀಗಾಗಿ ಪರಂಪರಾಗತ ಅಧ್ಯಯನಕ್ಕೆ ಶರಣು ಹೊಡೆದು ಅಲ್ಲಿಂದ ಪಲಾಯನ ಮಾಡಿದರು. ಪ್ರಯಾಣ ಬೆಳೆಸಿ ರಾಯಚೂರನ್ನು ತಲಪಿದರು. ಗದ್ವಾಲ್ ಸಂಸ್ಥಾನದ ಆಸ್ಥಾನಕ್ಕೆ ಹೋಗಿ ತಮ್ಮ ವಿದ್ಯೆಯನ್ನು ಪ್ರದರ್ಶಿಸಿ ಒಂದಷ್ಟು ಹಣ ಪಡೆದರು. ಹೀಗೆ ಮಂತ್ರಾಲಯದ ಆರಾಧನೆಗೆ ಹೋದಾಗ ಇವರನ್ನೇ ಹುಡುಕುತ್ತ ಹೊರಟಿದ್ದ ತಂದೆಯ ಕೈಗೆ ಸಿಕ್ಕಿ ಬಿದ್ದರು.

ಸಂಗೀತ ಕಲಿಯಲು ಬರೋಡಕ್ಕೆ ಹೋಗಬೇಕೆಂದು ಆಸೆಪಟ್ಟಿದ್ದ ಇವರು ತಂದೆಯ ಜೊತೆಗೆ ಊರಿಗೆ ಹಿಂದಿರುಗಿದರು. ಆ ವೇಳೆಗಾಗಲೇ ಚೆಂಡಿಕೆಯ ಜಾಗದಲ್ಲಿ ಕ್ರಾಪುಕಟ್ಟು ಮಾಡಿಸಿ ಹೊಸಹಾದಿ ತುಳಿದಿದ್ದರು. ಮದುವೆಯ ಹಂಬಲದಿಂದಾಗಿ ಹುಡುಗ ಓಡಿಹೋಗಿರಬೇಕೆಂದು ತರ್ಕಿಸಿದ ಹಿರಿಯರು ಇವರ ಮದುವೆಯ ಏರ್ಪಾಟು ಮಾಡಿದರು. ಅನಂತರ ವಿದ್ವಾಂಸರಾದ ರಾಮಚಂದ್ರರಾವ್ ಪಟವಾರಿ ಅವರ ಪುತ್ರಿ ಸೀತಾ ಜೊತೆಗೆ

ಇವರ ವಿವಾಹವಾಯಿತು. ಆಕೆ ಏಳನೆಯ ತರಗತಿಯವರೆಗೆ ಓದಿದ್ದರು. ಈ ಮದುವೆ ಇವರ ಜೀವನದಲ್ಲಿ ಹೊಸ ತಿರುವನ್ನು ತಂದಿತು. ಮತ್ತೆ ಲೌಕಿಕ ವಿದ್ಯಾರ್ಜನೆಯ ಕಡೆಗೆ ಮುಖ ಮಾಡಿದರು. ಬನಾರಸ್ ಹಿಂದು ವಿಶ್ವವಿದ್ಯಾಲಯದ ಎಸ್.ಎಸ್.ಎಲ್.ಸಿ. ಅಡ್‌ಮಿಷನ್ ಎಕ್ಸಾಮಿನೇಷನ್ ಸರ್ಟಿಫಿಕೇಟ್ ಮುಗಿಸಿದರು. ಖಾಸಗಿಯಾಗಿಯೇ ಅಜಮೇರ್ ಇಂಟರ್ ಪರೀಕ್ಷೆ ಪಾಸಾದರು. ಅನಂತರ ಹೈದರಾಬಾದಿನಲ್ಲಿ ಉಸ್ಮಾನಿಯ ವಿಶ್ವವಿದ್ಯಾಲಯದಿಂದ ಬಿ.ಎ. ಪದವಿಯನ್ನು ರ್‍ಯಾಂಕ್‌ನೊಂದಿಗೆ ಗಳಿಸಿದರು.

ಹೈದರಾಬಾದಿನಲ್ಲಿ ನಡೆದ ಅಖಿಲ ಭಾರತ 26ನೆಯ ಕನ್ನಡ ಸಾಹಿತ್ಯ ಸಮ್ಮೇಳನ (1941) ಇವರಿಗೆ ಅನೇಕ ಸಾಹಿತಿಗಳ ಸಂಪರ್ಕಕ್ಕೆ ಕಾರಣವಾಯಿತು. ಈ ಅವಧಿಯಲ್ಲಿಯೇ ಇವರು ತಮ್ಮನ್ನು ಕನ್ನಡ ಸಾಹಿತ್ಯ ರಚನೆ, ಸಾಮಾಜಿಕ ಹಾಗೂ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡರು. ಈ ಸಮ್ಮೇಳನದ ಅಧ್ಯಕ್ಷರಾಗಿದ್ದ ಎ.ಆರ್.ಕೃಷ್ಣ ಶಾಸ್ತ್ರಿಯವರು ರಾಜಪುರೋಹಿತರ ಮಾವ ರಾಮಚಂದ್ರರಾವ್ ಪಟವಾರಿ ಅವರ ಖಾಸಾ ಗುರುಗಳಲ್ಲಿ ಒಬ್ಬರು. ಕನ್ನಡದ ದೀಕ್ಷೆಗೆ ಈ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ಧೀರ ಭಾಷಣವೇ ಇವರಿಗೆ ಆಂತರಿಕ ಪ್ರೇರಣೆಯನ್ನೊದಗಿಸಿತು. ಇಂಗ್ಲಿಷ್ ಪ್ರಾಧ್ಯಾಪಕರಾದ ವಿ.ಕೃ.ಗೋಕಾಕರ ಸಹಯೋಗವೂ ಈ ದಿಕ್ಕಿನಲ್ಲಿ ನೆರವಾಯಿತು. ಇವರು 1949ರಲ್ಲಿ ಲೋಕಸೇವಾ ಆಯೋಗದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ತಹಸೀಲ್ದಾರರಾಗಿ ನೇಮಕಗೊಂಡರು. ಅನಂತರ ಡೆಪ್ಯುಟಿ ಕಮಿಷನರ್, ಮುನಿಸಿಪಲ್ ಕಮಿಷನರ್, ವಿಶ್ವವಿದ್ಯಾಲಯದ ಪರೀಕ್ಷಾ ನಿಯಂತ್ರಣಾಧಿಕಾರಿ, ನೀರಾವರಿ ಯೋಜನೆಗಳ ಆಡಳಿತಾಧಿಕಾರಿ, ವಿಶೇಷ ಜಿಲ್ಲಾಧಿಕಾರಿ, ಕನ್ನಡ ಅಭಿವೃದ್ಧಿ ನಿರ್ದೇಶನಾಲಯದ ಪ್ರಥಮ ನಿರ್ದೇಶಕ, ವಿದ್ಯಾ ಇಲಾಖೆಯ ಉಪಕಾರ್ಯದರ್ಶಿ, ಸ್ಥಾಪನೆ ಆಗಬೇಕಾಗಿದ್ದ ಗುಲ್ಬರ್ಗ ವಿಶ್ವವಿದ್ಯಾಲಯ ನಿಯೋಜಿತ ಅಧಿಕಾರಿ, ವಿಶ್ವವಿದ್ಯಾಲಯ ಸ್ಥಾಪನೆಗೊಂಡಾಗ ಅದರ ಮೊದಲ ಕುಲಸಚಿವ-ಹೀಗೆ ವಿವಿಧ ಹುದ್ದೆ ಹಾಗೂ ಜವಾಬ್ದಾರಿಗಳಲ್ಲಿ ದುಡಿದರು. ಕನ್ನಡ ಅಭಿವೃದ್ಧಿ ನಿರ್ದೇಶನಾಲಯದ ನಿರ್ದೇಶಕರಾಗಿದ್ದ ಸಂದರ್ಭದಲ್ಲಿ ಆ ಇಲಾಖೆಗೊಂದು ಭದ್ರ ಬುನಾದಿಯನ್ನು ಹಾಕಿ ಕನ್ನಡ ಅಭಿವೃದ್ಧಿಯ ದಿಕ್ಕುದೆಸೆಗಳನ್ನು ರೂಪಿಸಿದರು.

ರಾಜಪುರೋಹಿತರು ದಕ್ಷ ಆಡಳಿತಗಾರರೆಂದು ಹೆಸರು ಗಳಿಸಿರುವಂತೆ ಉತ್ತಮ ಸಾಹಿತಿಯಾಗಿಯೂ ಹೆಸರು ಗಳಿಸಿದ್ದಾರೆ. ಕಾದಂಬರಿ, ಸಣ್ಣಕಥೆ, ನಾಟಕ, ಜೀವನ ಚರಿತ್ರೆ, ಕನ್ನಡ ತೀರ್ಪುಗಳು, ಆಡಳಿತ ಕನ್ನಡ ಹೀಗೆ ಹಲವು ವಿಷಯಗಳನ್ನು ಕುರಿತು ಗ್ರಂಥಗಳನ್ನೂ ಲೇಖನಗಳನ್ನೂ ಬರೆದಿದ್ದಾರೆ. ಹಾಲುಜೇನು, ಸುಳಿಗಾಳಿ, ಅನಂತರ, ಜೇನಸುಳಿ, ಜೊಹರಾ, ಕಡಲತೋಳ (ಜಾಕ್ ಲಂಡನ್‌ನ ಸೀವುಲ್ಫ್ ಕಾದಂಬರಿಯ ಅನುವಾದ)– ಇವು ಕಾದಂಬರಿಗಳು. ಸುಳಿಗಾಳಿ ಕಾದಂಬರಿಗೆ ಸುಧಾ ವಾರ ಪತ್ರಿಕೆಯ ರಾಜ್ಯಮಟ್ಟದ ಬಹುಮಾನವೂ ರಾಜ್ಯ ಸಾಹಿತ್ಯ ಅಕಾಡೆಮಿಯ ಪುರಸ್ಕಾರವೂ ದೊರೆತಿವೆ. ಜೊಹರಾ ಬಿಜಾಪುರದ ಇತಿಹಾಸಕ್ಕೆ ಸಂಬಂಧಿಸಿದ ಒಂದು ಐತಿಹಾಸಿಕ ಕಾದಂಬರಿ. ಜೊಹರಾ ಮತ್ತು ಅಬ್ಬಾಸ್‌ಖಾನರ ಪ್ರೀತಿ, ಅವರು ಎದುರಿಸಿದ ಅನೇಕ ಎಡರುತೊಡರುಗಳು, ಸವಾಗಮ ಇವೇ ಈ ಕಾದಂಬರಿಯ ಕೇಂದ್ರಬಿಂದು. ಮುದ್ಗಲ್ಲಿನಲ್ಲಿ ಮೇರಿಯಾ ಎಂಬ ಇವರದೇ ಸಣ್ಣಕಥೆಯ ವಿಸ್ತೃತರೂಪವೇ ಈ ಕಾದಂಬರಿ. ಪಾರಪ್ಪನ ಪಂಚಾಯಿತಿ, ರೋಹಿಣಿ, ಮೌಲ್ಯಗಳು ಮತ್ತು ಶಿಥಿಲಿಶಿಲೆ ಇವು ಸಣ್ಣ ಕಥೆಗಳ ಸಂಕಲನಗಳು. ತುಂಗೆಯಂಗಳದಲ್ಲಿ (ಗೀತರೂಪಕ), ಕುಮಾರವ್ಯಾಸ, ಜಯಬಾಂಗ್ಲಾ – ಇವು ನಾಟಕಗಳು. ವ್ಯಾಸರಾಯ, ಜಗನ್ನಾಥದಾಸರು, ಸುರಪುರದ ಶೂರನಾಯಕರು, ಸ್ವಾಮಿ ರಾಮತೀರ್ಥ, ಕೃಷ್ಣದೇವರಾಯ – ಇವು ಜೀವನಚರಿತ್ರೆಗಳು.

ಕನ್ನಡ ತೀರ್ಪುಗಳು ಎಂಬ ಕೃತಿ ಇವರಿಗೆ ಖ್ಯಾತಿಯನ್ನು ತಂದುಕೊಟ್ಟಿತು. ನ್ಯಾಯಾಲಯದಲ್ಲಿ ಕನ್ನಡವನ್ನು ಅನುಷ್ಠಾನಗೊಳಿಸುವ ದಿಕ್ಕಿನಲ್ಲಿ ಈ ಕೃತಿ ತುಂಬ ಮಹತ್ವದ ಪಾತ್ರವಹಿಸಿತೆಂದು ಹೇಳಬಹುದು. ಆಡಳಿತದಲ್ಲಿ ಕನ್ನಡ (ಈ ಕೃತಿ ಇಂಗ್ಲಿಷ್‌ನಲ್ಲೂ ಇದೆ) ಇವರ ಇನ್ನೊಂದು ಗ್ರಂಥ. ಕನ್ನಡ ತೀರ್ಪುಗಳು ಕೃತಿಗೆ ವಿಶೇಷ ರಾಜ್ಯ ಪ್ರಶಸ್ತಿ ಲಭ್ಯವಾಗಿದೆ. ತುಂಗಾತರಂಗ, ಕಬೇರಿ ಕೈಪಿಡಿ, ಪಂಪಾ ಸಂಪದ, ಪಂಪಾ ತುಂತುರು, ಆಡಳಿತ ಭಾಷಾ ಸಮಸ್ಯೆಯ ವಿಶ್ಲೇಷಣೆ, ಬಹುಮಾನಿತ ಕನ್ನಡ ತೀರ್ಪುಗಳು -ಇವು ಇವರು ಇತರರೊಡನೆ ಸಂಪಾದಿಸಿರುವ ಕೃತಿಗಳು. ಇವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ ಲಭ್ಯವಾಗಿದೆ (1978).

ಇವರು 1986 ಏಪ್ರಿಲ್ 26ರಂದು ರಾಯಚೂರಿನಲ್ಲಿ ನಿಧನರಾದರು. *

**ಜಯದೇವಿತಾಯಿ ಲಿಗಾಡೆ :** 1912-86. ಆಧುನಿಕ ಕನ್ನಡದ ಪ್ರಸಿದ್ಧ ಕವಯಿತ್ರಿ. ಕರ್ನಾಟಕದ ಏಕೀಕರಣಕ್ಕಾಗಿ, ಗಡಿನಾಡ ಕನ್ನಡಿಗರ ಏಳ್ಗೆಗಾಗಿ ಹೋರಾಡಿದ ಧೀರ ಮಹಿಳೆ ಹಾಗೂ ಶಿವಶರಣೆ. ಜನನ ಸೊಲ್ಲಾಪುರದ ಶ್ರೀಮಂತ ಮನೆತನದಲ್ಲಿ (1912 ಜೂನ್ 23). ಇವರ ತಂದೆ ಮಡಿಕೆ ಚೆನ್ನಬಸಪ್ಪ, ತಾಯಿ ಸಂಗಮ್ಮ. ಇಬ್ಬರೂ ದೈವಭಕ್ತರು, ಉದಾರಿಗಳು ಹಾಗೂ ಸಮಾಜ ಸೇವೆಯಲ್ಲಿ ಆಸಕ್ತಿಯುಳ್ಳವರು. ಜಯದೇವಿ ಯವರ ಮಾತೃಭಾಷೆ ಕನ್ನಡವಾದರೂ ಚಿಕ್ಕಂದಿನಲ್ಲಿ ಮರಾಠಿ ಯಲ್ಲಿ ಶಿಕ್ಷಣ ನಡೆಯಿತು. ಆಕಾಲದ ಸಂಪ್ರದಾಯ ದಂತೆ ಇವರಿಗೆ ಚಿಕ್ಕ ವಯಸ್ಸಿನಲ್ಲಿಯೇ (14 ವರ್ಷ) ವಿವಾಹವಾಯಿತು (1926). ಪತಿ ಸೊಲ್ಲಾ ಪುರದ ಮತ್ತೊಂದು ಶ್ರೀಮಂತಮನೆತನದ ಚೆನ್ನಮಲ್ಲಪ್ಪ ಮಹ ದೇವರಾಯ ಲಿಗಾಡೆ. ಜಯದೇವಿಯವರದು ತುಂಬು ಸಂಸಾರ. ಇವರಿಗೆ 5 ಜನ ಮಕ್ಕಳು: ಮೂರು ಗಂಡು, ಎರಡು ಹೆಣ್ಣು. ಮಕ್ಕಳನ್ನು ಚೆನ್ನಾಗಿ ಪೋಷಿಸಿ ಬೆಳೆಸಿ ವಿದ್ಯಾವಂತರನ್ನಾಗಿಸಬೇಕೆಂದು ಆಶಿಸುತ್ತಿರುವಾಗಲೇ ಇವರಿಗೆ ಪತಿವಿಯೋಗವುಂಟಾಯಿತು (1946). ಸಂಸಾರದ ನೊಗಕ್ಕೆ ಹೆಗಲು ಕೊಟ್ಟರು.

ಇವರಿಗೆ ಕನ್ನಡ ಭಾಷೆಯ ಮೇಲೆ ಅಪಾರ ಅಭಿಮಾನ. ಮೂರು ಮಕ್ಕಳ ತಾಯಿಯಾಗಿದ್ದಾಗ ಇವರು ಕನ್ನಡವನ್ನು ಕಲಿತರು. ಕನ್ನಡ ಮತ್ತು ಮರಾಠಿ ಭಾಷೆಗಳಲ್ಲಿ ಪಾಂಡಿತ್ಯವನ್ನು ಬೆಳೆಸಿಕೊಂಡರು. ಇವರಿಗೆ ಹಿಂದಿ ಭಾಷೆಯಲ್ಲೂ ಸ್ವಲ್ಪ ಪರಿಶ್ರಮವಿತ್ತು. ಅನಂತರ ಇವರು ಸಾಹಿತ್ಯ ಕೃಷಿಗೆ ತೊಡಗಿದರು. ಇವರು ಕನ್ನಡ ಹಾಗೂ ಮರಾಠಿ ಭಾಷೆಯಲ್ಲಿ ಸುಮಾರು 25ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದರು. ಜಯಗೀತ (1952), ತಾಯಿಯ ಪದಗಳು (1959), ಸಿದ್ಧರಾಮೇಶ್ವರ ಪುರಾಣ (1965), ತಾರಕ ತಂಬೂರಿ (1968), ಸಿದ್ಧರಾಮ - ಇವು ಕನ್ನಡದಲ್ಲಿ ರಚಿತವಾದ ಇವರ ಮುಖ್ಯ ಕೃತಿಗಳು. ಜಯಗೀತ 40 ಕವನಗಳುಳ್ಳ, ಹೆಚ್ಚಾಗಿ ಕವಿಯ ಭಕ್ತಿ, ಅಂತರಂಗದ ಹೋರಾಟ, ಆತ್ಮತೃಪ್ತಿ ಮೊದಲಾದ ಭಾವಗಳನ್ನು ಚಿತ್ರಿಸುವ ಗ್ರಂಥ. ಈ ಸಂಕಲನದ ಹಿಗ್ಗುತಿದೆ ವಿಶ್ವ ಎಂಬ ಒಂದು ಗೀತೆ ಭಾರತದ 14 ಭಾಷೆಗಳಿಗೆ ಅನುವಾದವಾಗಿದೆ. ತಾಯಿಯ ಪದಗಳು ಎಂಬ ಕೃತಿಯಲ್ಲಿ ಧರ್ಮ, ನೀತಿ, ದೇಶಭಕ್ತಿ, ಹೋರಾಟ, ಸ್ವಾತಂತ್ರ್ಯ, ಚರಿತ್ರೆ, ರಾಜಕಾರಣ ಮೊದಲಾದ ವಿಷಯಗಳು ಅಡಕವಾಗಿವೆ. ತಾರಕ ತಂಬೂರಿ 39 ಅನುಭಾವ ಹಾಡುಗಬ್ಬಗಳ ಸಂಕಲನ. ಸಿದ್ಧರಾಮ ಎಂಬ ಕಿರುಹೊತ್ತಗೆ ಇವರಿಂದ ಮಕ್ಕಳಿಗಾಗಿ ರಚಿತವಾದ ಗದ್ಯಗ್ರಂಥ.

ಸಿದ್ಧರಾಮೇಶ್ವರ ಪುರಾಣ ಇವರ ಮಹಾಕಾವ್ಯ. ಇದು ಇವರ 10 ವರ್ಷಗಳ ವಾಙ್ಮಯ ತಪಸ್ಸಿನ ಫಲ. ಸಂಪೂರ್ಣವಾಗಿ ತ್ರಿಪದಿ ಛಂದಸ್ಸಿನಲ್ಲಿ ರಚಿತವಾಗಿರುವ ಈ ಕೃತಿ 12ನೆಯ ಶತಮಾನದ ಪ್ರಮುಖ ವಚನಕಾರರಲ್ಲೊಬ್ಬನಾದ ಸಿದ್ಧರಾಮನ ಜೀವನ ಸಾಧನೆ ಸಿದ್ಧಿಯನ್ನೊಳಗೊಂಡಿದೆ. ಇದರಲ್ಲಿ 41 ಸಂಧಿ, 4100 ಪದ್ಯಗಳಿವೆ. ಈ ನೂತನ ಪುರಾಣದಲ್ಲಿ ರಾಘವಾಂಕನ ಸಿದ್ಧರಾಮಪುರಾಣ, ಶೂನ್ಯ ಸಂಪಾದನೆಯಲ್ಲಿರುವ ಸಿದ್ಧರಾಮನ ಪ್ರಸಂಗ, ಚಾಮರಸನ ಪ್ರಭುಲಿಂಗಲೀಲೆ, ಸಿದ್ಧರಾಮನ ಷಟ್ಸ್ಥಲ ವಚನ, ಕಾಲಜ್ಞಾನವಚನ, ಮಂತ್ರಗೋಪ್ಯ, ಅಷ್ಟಾವರಣ ಸ್ತೋತ್ರ ತ್ರಿವಿಧಿ ಮೊದಲಾದ ಗ್ರಂಥಗಳ ಸಾರವಿದ್ದು ಭಕ್ತಿರಸಭರಿತವಾಗಿದೆ. ಜನತೆಯ ಮನಮುಟ್ಟಲು ಸರಳ ಜನಪದ ಶೈಲಿಯೇ ಉತ್ತಮ ಎಂದು ತಿಳಿದಿದ್ದ ಜಯದೇವಿಯವರು ತಮ್ಮ ಕೃತಿಗಳನ್ನು ತ್ರಿಪದಿಯಲ್ಲಿ ರಚಿಸಿ ಜನಮನದ ಹತ್ತಿರಕ್ಕೆ ಕಾವ್ಯವನ್ನು ಕೊಂಡೊಯ್ದರು. ತ್ರಿಪದಿ ಇವರ ಕಾವ್ಯಾಭಿವ್ಯಕ್ತಿಯ ಪ್ರಮುಖ ಮಾಧ್ಯಮವಾಗಿ ತನ್ನ ಪ್ರಖ್ಯಾತಿಯನ್ನು ಹೆಚ್ಚಿಸಿಕೊಂಡಿತು.

ಮರಾಠಿ ಭಾಷೆಯನ್ನು ಚೆನ್ನಾಗಿ ಬಲ್ಲವರಾಗಿದ್ದ ಇವರು ಮಹಾರಾಷ್ಟ್ರೀಯರಿಗೆ ಕನ್ನಡ ಶರಣರ ಪರಿಚಯ ಮಾಡಿಕೊಟ್ಟಿರುವುದಷ್ಟೇ ಅಲ್ಲದೆ ಕನ್ನಡಕ್ಕೇ ವಿಶಿಷ್ಟ ಶೈಲಿಯಾದ ವಚನವನ್ನು ಪರಿಚಯ ಮಾಡಿಸುವುದರ ಮೂಲಕ ಕನ್ನಡ, ಮರಾಠಿ ಭಾಷಾಸಾಹಿತ್ಯಗಳೆರಡಕ್ಕೂ ಉತ್ತಮ ಸೇವೆ

ಸಲ್ಲಿಸಿದ್ದಾರೆ. ಸಿದ್ಧವಾಣಿ, ಬಸವದರ್ಶನ, ಮಹಾಯೋಗಿನಿ, ಸಿದ್ಧರಾಮಾಂಚಿ ತ್ರಿವಿಧಿ, ಸಮೃದ್ಧ ಕರ್ನಾಟಕಾಂಚಿ ರೂಪರೇಷಾ, ಬಸವ ವಚನಾಮೃತ - ಇವು ಇವರಿಂದ ಮರಾಠಿ ಭಾಷೆಯಲ್ಲಿ ರಚಿತವಾದ ಕೃತಿಗಳು. ತೋಂಟದ ಸಿದ್ಧಲಿಂಗೇಶ್ವರ ವಚನಗಳನ್ನೂ ಇವರು ಮರಾಠಿ ಭಾಷೆಯಲ್ಲಿ ತಂದಿದ್ದಾರೆ.

ಜಯದೇವಿಯವರು ಉತ್ತಮ ಸಾಹಿತಿಯಾಗಿದ್ದಂತೆ ಉತ್ಕಟ ಕನ್ನಡಾಭಿಮಾನಿಯೂ ಹೌದು. ಮಹಾರಾಷ್ಟ್ರದಲ್ಲಿ ಹುಟ್ಟಿ ಬೆಳೆದು ಮರಾಠಿಯಲ್ಲೇ ಶಿಕ್ಷಣ ಪಡೆದೂ ಕನ್ನಡತಿ ಎಂದು ಹೇಳಿಕೊಳ್ಳುವುದರಲ್ಲಿ ಇವರಿಗೆ ಹೆಮ್ಮೆ. ಬೇಲೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ (1952) ಎರಡು ಕರ್ನಾಟಕವಾಗಬೇಕೆಂಬ ವಾದವೆದ್ದಾಗ ಅದನ್ನು ತಮ್ಮ ದೃಢವಾಣಿಯಿಂದ ಪ್ರಬಲವಾಗಿ ವಿರೋಧಿಸಿದ ಕೆಚ್ಚು ಇವರದು. ಹೈದರಾಬಾದಿಗೆ ಸೇರಿದ್ದ ಕನ್ನಡ ಪ್ರದೇಶಗಳಲ್ಲಿ ಕನ್ನಡ ಪ್ರಚಾರಮಾಡುವ ಸಂದರ್ಭದಲ್ಲಿ ಸ್ವತಃ ನಿಜಾಮನ ವಿರೋಧವನ್ನೂ ಇವರು ಲೆಕ್ಕಿಸಲಿಲ್ಲ. ದಾನಧರ್ಮಗಳಲ್ಲೂ ಜಯದೇವಿಯವರದು ಉದಾರಹಸ್ತ. ರಜಾಕಾರ ಹಾವಳಿಯ ಸಂದರ್ಭದಲ್ಲಿ ಹೈದರಾಬಾದಿನಿಂದ ನಿರಾಶ್ರಿತರಾಗಿ ಬಂದವರಿಗೆಲ್ಲಾ ತಾವೇ ಬಿಡಾರಗಳನ್ನು ಏರ್ಪಡಿಸಿ ಆಶ್ರಯ ನೀಡಿದರು. ಅನೇಕ ವಿದ್ಯಾಸಂಸ್ಥೆಗಳಿಗೆ ಇವರು ಉದಾರ ಸಹಾಯಮಾಡಿದ್ದರು. ಒಮ್ಮೆ ಇವರಿಗೆ ಸನ್ಮಾನವಾಗಿ ಬಂದ 40 ಸಾವಿರ ರೂಪಾಯಿಗಳನ್ನು ವಿದ್ಯಾಸಂಸ್ಥೆಗೆ ದಾನವಾಗಿ ನೀಡಿದರು. ಕನ್ನಡನಾಡು ಇವರಿಗೆ ಹಲವಾರು ಗೌರವಗಳನ್ನಿತ್ತು ಸನ್ಮಾನಿಸಿತು. ಇವರ ಸಾಹಿತ್ಯ ಸೇವೆಯನ್ನು ಪರಿಗಣಿಸಿ ರಾಜ್ಯ ಸಾಹಿತ್ಯ ಅಕಾಡೆಮಿ ಸಿದ್ಧರಾಮೇಶ್ವರ ಪುರಾಣಕ್ಕೆ ಪ್ರಶಸ್ತಿಯನ್ನಿತ್ತು ಗೌರವಿಸಿತು (1968). ಇದೇ ಗ್ರಂಥಕ್ಕೆ ದೇವರಾಜ ಬಹದ್ದೂರ ಬಹುಮಾನವೂ ಬಂದಿದೆ. 1950ರಲ್ಲಿ ಮುಂಬಯಿಯಲ್ಲಿ ನಡೆದ 32ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಇವರು ಮಹಿಳಾಗೋಷ್ಠಿಯ ಅಧ್ಯಕ್ಷೆ ಯಾಗಿದ್ದರು. ಹುಬ್ಬಳ್ಳಿ ಮತ್ತು ತುಮಕೂರುಗಳಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಿಳಾ ಪರಿಷತ್ತುಗಳ ಅಧ್ಯಕ್ಷೆಯಾಗಿದ್ದರು. ಇವರು ಕೇಂದ್ರ ಸಾಹಿತ್ಯ ಅಕಾಡೆಮಿಯ ಸದಸ್ಯೆಯೂ ಆಗಿದ್ದರು. ಉಡುಪಿಯಲ್ಲಿ



ನಡೆದ ವಿಶ್ವಹಿಂದೂ ಪರಿಷತ್ತಿನ ಮಹಿಳಾ ಗೋಷ್ಠಿಯ ಅಧ್ಯಕ್ಷರೂ ಆಗಿದ್ದರು. ಅನಂತರ 1974ರಲ್ಲಿ ಮಂಡ್ಯದಲ್ಲಿ ನಡೆದ 48ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಇವರನ್ನು ಅಧ್ಯಕ್ಷಸ್ಥಾನಕ್ಕೆ ಆಯ್ಕೆಮಾಡಲಾಯಿತು. ಇವರು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನು ವಹಿಸಿದ ಮೊತ್ತಮೊದಲ ಮಹಿಳೆ.

ಇವರಿಗೆ ಕರ್ನಾಟಕ ವಿಶ್ವವಿದ್ಯಾಲಯ ಗೌರವ ಡಿ.ಲಿಟ್ ನೀಡಿದೆ (1976). ಇವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರೂ ಆಗಿದ್ದರು (1971).

ಜಯದೇವಿತಾಯಿಯವರ ವ್ಯಕ್ತಿತ್ವ ಸರಳತೆ ಸೌಜನ್ಯ ನಯವಿನಯ ಗಳಿಂದ ಕೂಡಿದ್ದು, ಸಿದ್ಧರಾಮೇಶ್ವರ ಪುರಾಣದಂಥ ಕೃತಿಯನ್ನು ರಚಿಸಿ ಸಾಹಿತ್ಯಕ ಸಿದ್ಧಿಯನ್ನು ತಲುಪಿದಾಗಲೂ ಇವರು ವಿನಯವನ್ನೇ ಮೆರೆದರು

ಎಲ್ಲ ಬಲ್ಲವಳೆಂಬ ಇಲ್ಲವದು ಭ್ರಮೆ ಎನಗೆ
ಬಲ್ಲವರ ಪಾದ ಹಿಡಿಯುವೆ ಬಲ್ಲಿದರು

ಕಲಿಸಿರಿ ಮತ್ತೆ ನುಡಿಸಿರಿ

ಇವರ ಲೌಕಿಕ ಮತ್ತು ಆಧ್ಯಾತ್ಮಿಕ ಜೀವನದಲ್ಲಿ ಬಿಡಿಸಿ ಬೇರ್ಪಡಿಸಲಾಗದ ಸಾಮರಸ್ಯವಿತ್ತು. ಇವರು ಉತ್ತಮ ಸಂಗೀತಗಾರ್ತಿ; ಉತ್ತಮ ವಾಗ್ಮಿಯೂ ಆಗಿದ್ದರು. ಕನ್ನಡನಾಡಿಗೆ ಕರ್ನಾಟಕ ಎಂಬ ಹೆಸರಾದಾಗ ಅದರಿಂದ ಬಹಳ ಸಂತೋಷಪಟ್ಟರು. ಆದರೆ ಗಡಿಭಾಗದಲ್ಲಿ ವಿವಾದಾಸ್ಪದವಾಗಿ ಉಳಿದಿರುವ ಅನೇಕ ಪ್ರದೇಶಗಳು, ಸೊಲ್ಲಾಪುರವೂ ಸೇರಿದಂತೆ ಹಲವು ಕನ್ನಡ ಭಾಷಿಕ ಪ್ರದೇಶಗಳು ಕರ್ನಾಟಕಕ್ಕೆ ಸೇರಿಲ್ಲ ಎನ್ನುವ ಕೊರಗು ಇವರನ್ನು ಸದಾ ಕಾಡುತ್ತಿತ್ತು. ಇವರು ಗಡಿನಾಡಿನಲ್ಲಿ ಕನ್ನಡದ ಉಳಿವಿಗಾಗಿ ಹೋರಾಟ ನಡೆಸಿದರು. 1986 ಜುಲೈ 25ರಂದು ನಿಧನರಾದರು.

(ಎಚ್.ಎಸ್.ಪಿ.)

**ಜಯಮಂಗಲಿ :** ತುಮಕೂರು ಜಿಲ್ಲೆಯಲ್ಲಿ ಹುಟ್ಟಿ ಹರಿದು ಮುಂದೆ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆಗೆ ಸಾಗಿ ಉತ್ತರಪಿನಾಕಿನಿಯನ್ನು ಸೇರುವ ಚಿಕ್ಕ ನದಿ. ತುಮಕೂರಿಗೆ 14ಕಿಮೀ ಪೂರ್ವದಲ್ಲಿ ದೇವರಾಯನದುರ್ಗದ ಜಲಗೊಂಡಿ ಎಂಬ ಕಮರಿಯಲ್ಲಿ ಮಂಗಲಿ ನದಿ ಉದ್ಭವಿಸುತ್ತದೆ. ದುರ್ಗದ ಮತ್ತಷ್ಟು ಮೇಲೆ ಜಯತೀರ್ಥ ಎಂಬ ಮತ್ತೊಂದು ತೊರೆ ಹುಟ್ಟಿ ಹರಿದು ಇವೆರಡೂ ದೇವರಾಯನದುರ್ಗದ ತಪ್ಪಲಿನ ಇರುಕಸಂದ್ರ ಬಳಿ ಕೂಡಿಕೊಂಡು ಮುಂದೆ ಜಯಮಂಗಲಿ ಎಂಬ ಹೆಸರಿನಿಂದ ಹರಿಯುವುದು. ದೇವರಾಯನದುರ್ಗವನ್ನು ಬಿಟ್ಟು ಜಯಮಂಗಲಿ ಉತ್ತರಕ್ಕೆ ಕೊರಟಗೆರೆ ತಾಲ್ಲೂಕಿನತ್ತ ಸಾಗುವುದು. ದೇವರಾಯನದುರ್ಗದ ಆಗ್ನೇಯ ಭಾಗದ ಬೆಟ್ಟಗಳ ಮಧ್ಯ ಹುಟ್ಟುವ ಗರುಡಾಚಲ ತೊರೆ ಸಹ ಉತ್ತರಕ್ಕೆ ಕೊರಟಗೆರೆಯ ಕಡೆ ಹರಿದು ಅಲ್ಲಿಂದ 8ಕಿಮೀ ದೂರದಲ್ಲಿ ಹೊಳವನಹಳ್ಳಿ ಬಳಿ ಜಯಮಂಗಲಿಯನ್ನು ಸೇರಿಕೊಳ್ಳುವುದು. ಕೊರಟ ಗೆರೆಯ ಮುಂದೆ ಈ ನದಿಗೆ ರಾಂಪುರ ಗ್ರಾಮದ ಬಳಿ ಪಶ್ಚಿಮದಿಂದ ಹರಿದು ಬರುವ ಸುವರ್ಣಮುಖಿ ನದಿ ಕೂಡಿಕೊಳ್ಳುತ್ತದೆ. ಹೀಗೆ ಗರುಡಾಚಲ ಹಾಗೂ ಸುವರ್ಣಮುಖಿ ನದಿಗಳನ್ನು ಕೂಡಿಕೊಂಡು ಹರಿಯುವ ಜಯಮಂಗಲಿ, ಮಧುಗಿರಿ ತಾಲ್ಲೂಕಿನ ಪೂರ್ವಭಾಗದಲ್ಲಿ ಉತ್ತರಪಿನಾಕಿನಿಯ ಸಮಾಂತರದಲ್ಲಿ ಸ್ವಲ್ಪ ದೂರ ಹರಿದು, ಕರ್ನಾಟಕದ ಗಡಿಯನ್ನು ಬಿಟ್ಟು ಅನಂತಪುರ ಜಿಲ್ಲೆಯ ಪರಿಗಿ ಎಂಬಲ್ಲಿ ಉತ್ತರಪಿನಾಕಿನಿಯೊಂದಿಗೆ ಸಂಗಮವಾಗುತ್ತದೆ. ಈ ನದಿ ತುಮಕೂರು ತಾಲ್ಲೂಕಿನಲ್ಲಿ 13ಕಿಮೀ ಕೊರಟಗೆರೆ ಮತ್ತು ಮಧುಗಿರಿ ತಾಲ್ಲೂಕುಗಳಲ್ಲಿ ಒಟ್ಟು 51ಕಿಮೀ ದೂರ ಹರಿಯುತ್ತದೆ.

ಜಯಮಂಗಲಿ ನಿರಂತರ ಹರಿಯುವ ನದಿಯಲ್ಲ. ಅರೆ ಬೆಂಗಾಡು ಪ್ರದೇಶದಲ್ಲಿ ಹುಟ್ಟಿ ಹರಿಯುವ ಈ ನದಿಗೆ ಮಳೆಗಾಲದ ನೀರೇ ಆಧಾರ. ನದಿಯ ಅಂಚಿನಲ್ಲಿ ಕಪಿಲೆ ಬಾವಿಗಳನ್ನು ತೋಡಿ ತೋಟಗಳಿಗೆ ನೀರು ಹಾಯಿಸಿಕೊಳ್ಳುತ್ತಾರೆ. ತುಮಕೂರು ಜಿಲ್ಲೆಯಲ್ಲಿ ನದಿಯ ಮರಳಿನಲ್ಲಿ ಗುಂಡಿತೋಡಿ ಅದರಲ್ಲಿ ಬರುವ ನೀರನ್ನು ಉಪಯೋಗಿಸುವ ಪದ್ಧತಿ ರೂಢಿಯಲ್ಲಿದೆ. ಇಂಥ ತಲಪರಿಗೆಗಳನ್ನು ಜಯಮಂಗಲಿ ನದಿಯ ಉದ್ದಕ್ಕೂ ಜನವಾಸವಿರುವ ಕಡೆಗಳಲ್ಲಿ ಕಾಣಬಹುದು.

(ಎ.ಜಿ.ಕೆ.)

**ಜಯಮ್ಮ, ಬಿ. :** 1915-98. ಕನ್ನಡ ಚಲನಚಿತ್ರ ಮತ್ತು ರಂಗ ಭೂಮಿ ಕಲಾವಿದೆ. ಮೂಕಿ ಚಿತ್ರಗಳ ಕಾಲದಿಂದ ಬಣ್ಣದ ಚಿತ್ರಗಳ ವರೆಗೆ ದೀರ್ಘಕಾಲ ಚಲನಚಿತ್ರ ಹಾಗೂ ರಂಗ ಭೂಮಿಯೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡಿದ್ದ ಇವರು 1915ರಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ಇವರ ತಂದೆ ಪೋಲೀಸ್ ಇನ್ಸ್‌ಪೆಕ್ಟರಾಗಿದ್ದ ಟಿ.ಎನ್. ಮಲ್ಲಪ್ಪನವರು, ತಾಯಿ ಕಮಲಮ್ಮ. ತಾಯಿಯ ಮನೆತನದವರೆಲ್ಲ ನಾಟಕ ಮತ್ತು ಸಂಗೀತದಲ್ಲಿ ಪರಿಶ್ರಮವಿದ್ದವರೇ. ಇವರ ದೊಡ್ಡಮ್ಮ ಬಿ.ಸುಂದರಮ್ಮ ಕೂಡ ಆ ಕಾಲದ ಪ್ರಸಿದ್ಧ ನಟಿ. ಈ ಸಂಪರ್ಕದಿಂದಾಗಿ ಜಯಮ್ಮ ನವರಿಗೆ ಬಾಲ್ಯದಿಂದಲೂ ನಾಟಕದಲ್ಲಿ ಆಸಕ್ತಿ ಬೆಳೆ ಯಿತು. ಇವರ ತಂದೆಗೆ ಮಗಳು ಓದಿ ವೈದ್ಯಳಾಗ ಬೇಕೆಂಬ ಆಸೆ. ಆದರೆ ತಂದೆಯ ಅನಿರೀಕ್ಷಿತ ನಿಧನದಿಂದ ಇವರ ಶಾಲಾ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹವಿಲ್ಲವಾಯಿತು. ಒಂಬತ್ತನೆಯ ವಯಸ್ಸಿನಲ್ಲಿಯೇ ರಸಿಕ ಜನಾನಂದ ನಾಟಕ ಸಭೆಯವರ ಸೀತಾಕಲ್ಯಾಣ ನಾಟಕದಲ್ಲಿ ಸೀತೆಯಾಗಿ ಅಭಿನಯಿಸಿದರು. ಇದೇ ಇವರ ಪ್ರಥಮ ವೃತ್ತಿನಾಟಕ.

ಹದಿಮೂರು ವರ್ಷದವರಾಗಿದ್ದಾಗ ಬಾಳಪ್ಪ ಬಸವೇಗೌಡರ ಕಂಪನಿಯಲ್ಲಿ ಉಪನಾಯಕಿಯ ಪಾತ್ರಗಳನ್ನು ವಹಿಸುತ್ತಿದ್ದರು. 1928ರಲ್ಲಿ ಗುಬ್ಬಿ ವೀರಣ್ಣನವರ ಶ್ರೀ ಚನ್ನಬಸವೇಶ್ವರಸ್ವಾಮಿ ನಾಟಕ ಸಭಾ ಸೇರಿದರು. ಅಲ್ಲಿ ರಾಜಭಕ್ತಿ, ಸದಾರಮೆ, ಕಬೀರದಾಸ, ದಶಾವತಾರ ಮತ್ತು ತೆಲುಗು ನಾಟಕ ಕುರುಕ್ಷೇತ್ರದಲ್ಲೂ ಪಾತ್ರವಹಿಸಿ ಕರ್ನಾಟಕ ಮತ್ತು ಆಂಧ್ರ -ಈ ಎರಡು ಪ್ರದೇಶಗಳಲ್ಲೂ ಹೆಸರು ಪಡೆದರು. ಗುಬ್ಬಿ ವೀರಣ್ಣನವರ ಕರ್ನಾಟಕ ಕಾರ್ಪೊರೇಷನ್ ಸಂಸ್ಥೆಯ ಮೂಕಿ ಚಿತ್ರಗಳಲ್ಲಿ ನಾಯಕಿಯಾದರು. ಮುಂದೆ ವೀರಣ್ಣನವರೊಂದಿಗೆ ಇವರ ವಿವಾಹವಾಯಿತು.

ಹಿಸ್ ಲವ್ ಅಫೇರ್ ಚಿತ್ರದಲ್ಲಿ ಹಾಲಿವುಡ್ಡಿನ ನಿರ್ದೇಶಕರ ಮುಂದೆ ಪ್ರಥಮವಾಗಿ ನಟಿಸಿ ಚಲನಚಿತ್ರರಂಗಕ್ಕೆ ಅಡಿಯಿಟ್ಟರು. ಇದಾದ ಅನಂತರ ವೈ.ವಿ.ರಾವ್ ನಿರ್ದೇಶಿಸಿದ ಜಾಂಬವತಿ ಚಿತ್ರದಲ್ಲಿ ಅಭಿನಯಿಸಿದರು.

ಗುಬ್ಬಿ ಕಂಪನಿಯ ನಾಟಕಗಳಲ್ಲಿ ಪಾತ್ರವಹಿಸುತ್ತಿದ್ದುದರ ಜೊತೆಗೇ ಸದಾರಮೆ, ಸುಭದ್ರ, ಜೀವನ ನಾಟಕ, ಹೇಮರೆಡ್ಡಿ ಮಲ್ಲಮ್ಮ, ತ್ಯಾಗಯ್ಯ ಮುಂತಾದ ವಾಕ್ಚಿತ್ರಗಳಲ್ಲೂ ನಾಯಕಿಯ ಪಾತ್ರವಹಿಸಿ ಪ್ರಸಿದ್ಧರಾದರು. ಕನ್ನಡದಲ್ಲಿ ಮಾತ್ರವಲ್ಲದೆ ತೆಲುಗಿನ ಸ್ವರ್ಗಸೀಮಾ, ತಮಿಳಿನ ಭರ್ತೃಹರಿ ಮುಂತಾದ ಚಿತ್ರಗಳಲ್ಲಿ ಅಭಿನಯಿಸಿ ತ್ರಿಭಾಷಾತಾರೆ ಎಂದು ಹೆಸರು ಪಡೆದರು. ಮುಕ್ತಿ, ಸಾಕ್ಷಾತ್ಕಾರ, ಗುಣಸಾಗರಿ, ರಾಜಾವಿಕ್ರಮ, ಪ್ರೇಮಮಯಿ, ಮಾವನ ಮಗಳು, ಅಣ್ಣತಂಗಿ – ಇವು ಇವರು ಪಾತ್ರವಹಿಸಿದ ಕೆಲವು ಪ್ರಮುಖ ಚಿತ್ರಗಳು.

ಇವರಿಗೆ ಅಭಿನಯದಂತೆ ಸಂಗೀತದಲ್ಲೂ ಆಸಕ್ತಿಯಿತ್ತು. ಅನೇಕ ಸಂಗೀತ ಕಛೇರಿಗಳನ್ನೂ ಮಾಡಿ ಸಂಗೀತ ಸುಧಾ, ಸಂಗೀತಸರಸ್ವತಿ ಮುಂತಾದ ಪ್ರಶಸ್ತಿಗಳನ್ನು ಪಡೆದರು. ಸಾಮಾಜಿಕ ಚಟುವಟಿಕೆಗಳಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದ ಇವರು ಬಹುಕಾಲ ಕನ್ನಡ ಲೇಖಕಿಯರ ಸಂಘದ ಅಧ್ಯಕ್ಷೆಯಾಗಿದ್ದರು. ಅಶಕ್ತ ಕಲಾವಿದರ ಸಂಘದ ಆಡಳಿತ ವರ್ಗದಲ್ಲೂ ಇವರು ಸೇವೆ ಸಲ್ಲಿಸಿದ್ದರು. ಇವರ ಅಭಿನಯ ಕಲೆಗಾಗಿ ಕರ್ನಾಟಕ ರಾಜ್ಯಸರ್ಕಾರ ಸನ್ಮಾನಿಸಿತ್ತು.

(ಎಚ್.ಎಸ್.ಪಿ.)



**ಜಯಮ್ಮ ಶಾಸ್ತ್ರಿ :** 1950-. ಅರ್ಜುನ ಪ್ರಶಸ್ತಿ ಪಡೆದ ಬಾಲ್ ಬ್ಯಾಡ್ಮಿಂಟನ್ ಕ್ರೀಡಾಪಟು. 1950 ಸೆಪ್ಟೆಂಬರ್ 5ರಂದು ತಮಿಳುನಾಡಿನ ತೂತುಕುಡಿಯಲ್ಲಿ ಜನಿಸಿದರು. ಇವರದು ಕ್ರೀಡಾಪಟುಗಳಿಂದ ಹಾಗೂ ಕ್ರೀಡಾಪ್ರೇಮದಿಂದ ಕೂಡಿದ ಮನೆತನ. ತಂದೆ ವಿ.ಟಿ.ಶ್ರೀನಿವಾಸನ್ ಬಿಲಿಯರ್ಡ್ಸ್ ಹಾಗೂ ಟೆನ್ನಿಸ್ ಆಟದಲ್ಲಿ ಅನುಭವಿ ವೃತ್ತಿ ಆಟಗಾರರು. ಅಣ್ಣಂದಿರಾದ ಕಣ್ಣನ್ ಮತ್ತು ರಂಗರಾಜನ್ ರಾಜ್ಯಮಟ್ಟದ ಟೇಬಲ್ ಟೆನ್ನಿಸ್ ಆಟಗಾರರು. ಈ ಹಿನ್ನೆಲೆಯಲ್ಲಿ ಜಯಮ್ಮನವರ ಕ್ರೀಡಾ ಬದುಕು ರೂಪುಗೊಂಡಿತು. ಇವರು ಬಾಲ್‌ಬ್ಯಾಡ್ಮಿಂಟನ್ ಕ್ರೀಡೆಯಲ್ಲಿ ಸರ್ವಶ್ರೇಷ್ಠ ಆಟಗಾರ್ತಿಯಾದರು. ಬೆಂಗಳೂರಿನ ಸೇಂಟ್‌ಆನ್ಸ್ ಹೆಣ್ಣು ಮಕ್ಕಳ ಪ್ರೌಢಶಾಲೆ ಹಾಗೂ ಮೌಂಟ್ ಕಾರ್ಮೆಲ್ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡಿದರು. ಶಾಲಾದಿನಗಳಲ್ಲೇ ಬಾಲ್‌ಬ್ಯಾಡ್ಮಿಂಟನ್ ಕ್ರೀಡೆಯಲ್ಲಿ ಇವರಿಗೆ ಆಸಕ್ತಿ ಮೂಡಿತು. ಸತತವಾಗಿ 1964-76ರ ತನಕ ರಾಷ್ಟ್ರೀಯ ಚಾಂಪಿಯನ್‌ಷಿಪ್‌ನಲ್ಲಿ ಕರ್ನಾಟಕವನ್ನು ಪ್ರತಿನಿಧಿಸಿದರು. ಕರ್ನಾಟಕ 21 ವರ್ಷಗಳ ಕಾಲ ಮಹಿಳಾ ಬಾಲ್‌ಬ್ಯಾಡ್ಮಿಂಟನ್ ಆಟದಲ್ಲಿ ಅಗ್ರಸ್ಥಾನದಲ್ಲಿತ್ತು. ಅಖಿಲ ಭಾರತ ಬಾಲ್ ಬ್ಯಾಡ್ಮಿಂಟನ್ ಪಂದ್ಯಾ ವಳಿಗಳಲ್ಲಿ ಇಂದಿಗೂ ಕರ್ನಾಟಕ ತನ್ನ ಅದ್ವಿತೀಯ ಸಾಧನೆಯನ್ನು ಮುಂದುವರಿಸುತ್ತ ಬಂದಿರುವುದಕ್ಕೆ ಬುನಾದಿ ಹಾಕಿದವರಲ್ಲಿ ಜಯಮ್ಮ ನವರೂ ಒಬ್ಬರು. ಇವರು 1967-70ರ ತನಕ ಕರ್ನಾಟಕ ರಾಜ್ಯ ತಂಡದ ನಾಯಕಿಯಾಗಿದ್ದರು. ಇವರ ಕಾರ್ಯಸಾಧನೆಗಾಗಿ ಅನೇಕ ಪ್ರಶಸ್ತಿ, ಗೌರವಗಳು ಲಭಿಸಿವೆ. ಕರ್ನಾಟಕ ರಾಜ್ಯ ಸರ್ಕಾರ ರಾಜ್ಯೋತ್ಸವ ಪ್ರಶಸ್ತಿ ನೀಡಿದೆ (1969). ಇವರಿಗೆ 1975ರಲ್ಲಿ ಕರ್ನಾಟಕ ಸರ್ಕಾರದ ಕ್ರೀಡಾ ಪರಿಷತ್ತಿನ ಸರ್ವಶ್ರೇಷ್ಠ ಮಹಿಳಾ ಕ್ರೀಡಾಪಟು ಪ್ರಶಸ್ತಿ ದೊರಕಿದೆ. ಭಾರತ ಸರ್ಕಾರ ಇವರಿಗೆ 1972ರಲ್ಲಿ ಅರ್ಜುನ ಪ್ರಶಸ್ತಿ ನೀಡಿ ಗೌರವಿಸಿದೆ.

(ಎಸ್.ಆರ್.ಯು.)

**ಜಯಮಾಲ :** ಕನ್ನಡ ಚಲನಚಿತ್ರ ತಾರೆ. ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರಿನಲ್ಲಿ ಹುಟ್ಟಿದರು. ಕಾಸ್‌ದಾಯೆ ಕಂಡನೆ ತುಳು ಚಿತ್ರದ ಮೂಲಕ ತಮ್ಮ 13ನೆಯ ವಯಸ್ಸಿನಲ್ಲಿ ಚಿತ್ರರಂಗ ಪ್ರವೇಶಿಸಿದರು. 35 ವರ್ಷಗಳ ಅವಧಿಯಲ್ಲಿ 75ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಇವರು ನಟಿಸಿದ ಪ್ರಥಮ ಚಿತ್ರದಲ್ಲೇ ಶ್ರೇಷ್ಠ ಕಲಾವಿದೆ ಪ್ರಶಸ್ತಿ ಪಡೆದು ಕೊಂಡರು. ದಕ್ಷಿಣಭಾರತದ ಐದೂ ಭಾಷೆಗಳ ಚಲನ ಚಿತ್ರಗಳಲ್ಲಿ ಅಭಿನಯಿಸಿ ಪಂಚಭಾಷಾ ತಾರೆ ಎಂಬ ಹೆಗ್ಗಳಿಕೆಗೆ ಪಾತ್ರರಾದರು. ರಾಜ್‌ಕುಮಾರ್ ಅವ ರೊಂದಿಗೆ ಅನೇಕ ಜನ ಪ್ರಿಯ ಚಿತ್ರಗಳಲ್ಲಿ ನಾಯಕಿಯಾಗಿದ್ದ ಇವರು ಆ ಕಾಲದ ಎಲ್ಲ ನಾಯಕ ನಟರೊಂದಿಗೂ ಅಭಿನಯಿಸಿದ್ದಾರೆ. ವಾಣಿಜ್ಯ ಸಿನಿಮಾಗಳು ಸೃಷ್ಟಿಸಿದ ಸಾಂದರ್ಭಿಕ ಒತ್ತಡಗಳ ನಡುವೆಯೂ ತಮ್ಮೊಳಗಿನ ಕಲಾವಿದೆಯನ್ನು ಇವರು ಜೀವಂತವಾಗಿ ಕಾಪಾಡಿಕೊಂಡು ಬಂದರು. ಅಲ್ಲಿ ಇಲ್ಲಿ ಮಾಯಾವಾಪ್ಪುಗದಂತೆ ಮಿನುಗುತ್ತಿದ್ದ ಇವರ ನೈಜ ಪ್ರತಿಭೆ ಪೂರ್ಣಪ್ರಮಾಣದಲ್ಲಿ ಬೆಳಕಿಗೆ ಬಂದದ್ದು ಸ್ವಂತ ತಯಾರಿಕೆಯ ತಾಯಿಸಾಹೇಬ (1998) ಚಿತ್ರದ ಮೂಲಕ. ಗಿರೀಶ ಕಾಸರವಳ್ಳಿ ಈ ಚಿತ್ರದ ನಿರ್ದೇಶಕರು. ಈ ಚಿತ್ರಕ್ಕೆ ಕೇಂದ್ರ ಸರ್ಕಾರದ ಸ್ವರ್ಣಕಮಲ ಪ್ರಶಸ್ತಿ ಲಭ್ಯವಾಯಿತು. ಅತ್ಯುತ್ತಮ ಅಭಿನಯಕ್ಕಾಗಿ ತೀರ್ಪುಗಾರರ ಮಂಡಳಿಯ ವಿಶೇಷ ಪ್ರಶಸ್ತಿಗೂ ಜೊತೆಗೆ 1999ನೆಯ ಸಾಲಿನ ಅತ್ಯುತ್ತಮ ಚಿತ್ರವೆಂದು ರಾಜ್ಯ ಸರ್ಕಾರದ ಪ್ರಶಸ್ತಿಗೂ ಪಾತ್ರವಾಯಿತು. ಈ ಚಿತ್ರದಲ್ಲಿನ ಶ್ರೇಷ್ಠ ಅಭಿನಯಕ್ಕಾಗಿರವರು ಶ್ರೇಷ್ಠನಟಿ ಪ್ರಶಸ್ತಿ ಪಡೆದರು. ತಾಯಿ ಸಾಹೇಬ ಕೆಲವು ಅಂತಾರಾಷ್ಟ್ರೀಯ ಚಲನ ಚಿತ್ರೋತ್ಸವಗಳಲ್ಲಿ ಭಾರತವನ್ನು ಪ್ರತಿನಿಧಿಸಿತು.

1986ರಲ್ಲಿ ಬಿಡುಗಡೆಯಾದ ಅಗ್ನಿಪರೀಕ್ಷೆ ಇವರು ಸ್ವಂತವಾಗಿ ನಿರ್ಮಿಸಿದ ಮೊದಲ ಚಿತ್ರ. ನಟಿಯಾಗಿ ಕಲಾತ್ಮಕ ಹಾಗೂ ವಾಣಿಜ್ಯ ಚಿತ್ರಗಳೆರಡರಲ್ಲೂ ಸಮತೋಲನವನ್ನು ಕಂಡುಕೊಳ್ಳಲು ಹೆಣಗಿದ ಇವರು ಎರಡೂ ಬಗೆಯ ಚಿತ್ರಗಳಲ್ಲಿನ ಪ್ರಬುದ್ಧ ಅಭಿನಯದಿಂದ ಗಮನ ಸೆಳೆದವರು. ಹೊಸ ಅಲೆಯ ಚಿತ್ರಗಳೆಂದು ಹೆಸರು ಮಾಡಿದ ಸಂಗೀತಾ, ಗಂಗವ್ವ ಗಂಗಾಮಾಯಿ, ಖಂಡವಿದೆಕೋ ಮಾಂಸವಿದೆಕೋ ಎಂಬ ಚಿತ್ರಗಳಲ್ಲಿ ಇವರ ಅಭಿನಯ ಪ್ರೇಕ್ಷಕರ ನೆನಪಿನಲ್ಲಿ ಸದಾ ಉಳಿಯುವಂಥದ್ದು.

ಕನ್ನಡ ಚಿತ್ರೋದ್ಯಮದೊಂದಿಗೆ ಮೂರು ದಶಕಗಳಿಗಿಂತಲೂ ಹೆಚ್ಚಿನ ಸಂಪರ್ಕವಿರಿಸಿಕೊಂಡಿರುವ ಇವರು ಅದರ ನಿಜವಾದ ಬಣ್ಣವನ್ನು, ಒಳಹೊರಗನ್ನು ಚೆನ್ನಾಗಿ ಬಲ್ಲವರು. ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯಲ್ಲಿ ಸಕ್ರಿಯವಾಗಿ ದುಡಿದವರು. ಆ ಸಂಸ್ಥೆಯ ಕಾರ್ಯಕಾರಿ ಸಮಿತಿಯ ಮೊಟ್ಟ ಮೊದಲ ಮಹಿಳಾಸದಸ್ಯೆಯಾಗಿ, ಖಜಾಂಚಿಯಾಗಿ, ಉಪಾಧ್ಯಕ್ಷೆಯಾಗಿ ಕೆಲಸ ಮಾಡಿದ್ದಾರೆ. ಕರ್ನಾಟಕ ಚಿತ್ರೋದ್ಯಮ ಸಹಕಾರ ಸಂಘದ ಸಂಸ್ಥಾಪಕ ನಿರ್ದೇಶಕಿಯಾಗಿಯೂ ಕಾರ್ಯನಿರ್ವಹಿಸಿದ್ದಾರೆ. ಇಂಡಿಯನ್ ಪನೋರಮ 2000ದ ತೀರ್ಪುಗಾರರ ಮಂಡಳಿ ಸದಸ್ಯೆಯಾಗಿ, 2000-01ನೆಯ ಸಾಲಿನ ಕರ್ನಾಟಕ ರಾಜ್ಯ ಚಲನಚಿತ್ರ ಪ್ರಶಸ್ತಿಗಳ ಆಯ್ಕೆ ಮಂಡಳಿ ಅಧ್ಯಕ್ಷೆಯಾಗಿ ದುಡಿದಿರುವ ಇವರು ಹಲವಾರು ಅಂತಾರಾಷ್ಟ್ರೀಯ ಚಿತ್ರೋತ್ಸವಗಳ ಸ್ವಾಗತ ಸಮಿತಿಗೆ ಆಹ್ವಾನಿತರಾಗಿದ್ದಾರೆ. ರಾಜ್ಯಶಾಸ್ತ್ರದಲ್ಲಿ ಸ್ನಾತಕೋತ್ತರ ಪದವೀಧರೆಯಾಗಿರುವ, ಕನ್ನಡದೊಂದಿಗೆ ತುಳು, ತಮಿಳು, ತೆಲುಗು, ಹಿಂದಿ, ಇಂಗ್ಲಿಷ್ ಭಾಷೆಗಳಲ್ಲೂ ವ್ಯವಹರಿಸುವ ಕೌಶಲವಿರುವ ಇವರು ಸದ್ಯದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಪದವಿಗಾಗಿ ಅಧ್ಯಯನ ನಡೆಸುತ್ತಿರುವುದು ಇವರ ಕ್ರಿಯಾಶೀಲ ವ್ಯಕ್ತಿತ್ವಕ್ಕೆ ಸಾಕ್ಷಿ.

ಚಲನಚಿತ್ರ ಮತ್ತು ಸಮಾಜಸೇವಾ ಕ್ಷೇತ್ರಗಳಿಗೆ ಇವರಿಂದ ಸಂದಿರುವ ಕೊಡುಗೆಗಾಗಿ ಇವರಿಗೆ ಅಂತಾರಾಷ್ಟ್ರೀಯ ಭಾವೈಕ್ಯತಾ ಪ್ರಶಸ್ತಿ, ರಾಜೀವಗಾಂಧಿ ರಾಷ್ಟ್ರೀಯ ಐಕ್ಯತಾ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (2001) ದೊರಕಿವೆ. (ಬಿ.ಆರ್‌ಎ.)

**ಜಯರಾಮ್, ಕೆ.ವಿ. :** 1950-. ಚಲನಚಿತ್ರ ನಿರ್ದೇಶಕ, ನಿರ್ಮಾಪಕ. ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನ ಎಲೆಕೊಪ್ಪದಲ್ಲಿ ಫೆಬ್ರುವರಿ 14ರಂದು ಜನಿಸಿದರು. ಇವರ ತಂದೆ ವೈಕುಂಟೇಗೌಡ, ತಾಯಿ ಕೆಂಪಮ್ಮ.

ಇವರು ತಮ್ಮ ಪ್ರೌಢಶಾಲಾ ಶಿಕ್ಷಣವನ್ನು ಮೈಸೂರಿನ ಪ್ರಾದೇಶಿಕ ಶಿಕ್ಷಣ ಸಂಸ್ಥೆಯಲ್ಲಿ ಪೂರೈಸಿದರು. ಉನ್ನತ ಶಿಕ್ಷಣ ಕೊಡಿಸುವುದು ತಂದೆಯ ಹಂಬಲವಾಗಿತ್ತು. ಆದರೆ ಇವರು ಓದಿಗಿಂತ ಚಲನಚಿತ್ರ ಜಗತ್ತಿನಲ್ಲಿ ಹೆಚ್ಚಿನ ಆಸಕ್ತಿ ಹೊಂದಿದ್ದು ತಮ್ಮ ಹದಿನಾರನೆಯ ವಯಸ್ಸಿನಿಂದಲೇ ಚಿತ್ರಜಗತ್ತಿನ ಕನಸು ಕಾಣುತ್ತಿದ್ದರು. ಚಲನಚಿತ್ರ ನಿರ್ದೇಶಕನಾಗಬೇಕೆಂಬುದು ಇವರ ಹೆಬ್ಬಯಕೆಯಾಗಿತ್ತು. ಮೊದಲಿಗೆ ಸುಮಾರು ಹತ್ತು ವರ್ಷಗಳ ಕಾಲ ಚಿತ್ರನಿರ್ದೇಶಕರಾದ ಎಂ.ಆರ್.ವಿಠ್ಠಲ ಅವರ ಬಳಿ ಸಹಾಯಕ ನಿರ್ದೇಶಕರಾಗಿ ದುಡಿದರು. ಸುಮಾರು ಅರವತ್ತು ಚಿತ್ರಗಳಿಗೆ ಸಹಾಯಕ ಸಂಕಲನಕಾರರಾಗಿ ದುಡಿದು ಅಪಾರ ಅನುಭವ ಗಳಿಸಿದರು.

ಕನ್ನಡದ ಹೆಸರಾಂತ ಕಾದಂಬರಿಕಾರ ಟಿ.ಕೆ.ರಾಮರಾವ್ ಅವರ ಮರಳು ಸರಪಣಿ ಕಾದಂಬರಿ ಆಧಾರಿತ ಚಿತ್ರವನ್ನು ನಿರ್ದೇಶಿಸುವುದರೊಂದಿಗೆ ಸ್ವತಂತ್ರವಾಗಿ ನಿರ್ದೇಶಕರಾದರು (1979). ಅನಂತರ ಬಾಡದ ಹೂವು ಚಿತ್ರ ನಿರ್ದೇಶಿಸಿದರು (1982). ವರ್ಷಕ್ಕೆ ಎರಡಕ್ಕಿಂತ ಹೆಚ್ಚು ಚಿತ್ರಗಳನ್ನು ನಿರ್ದೇಶಿಸುವುದರ ಮೂಲಕ ಯಶಸ್ವೀ ನಿರ್ದೇಶಕರಾಗಿಯೂ ಚಿತ್ರ ನಿರ್ಮಾಪಕರಾಗಿಯೂ ಹೆಸರು ಗಳಿಸಿದರು.

ಬೆತ್ತಲೆ ಸೇವೆ, ಇಬ್ಬನಿ ಕರಗಿತು, ಮುದುಡಿದ ತಾವರೆ ಅರಳಿತು, ಒಲವೇ ಬದುಕು, ಶ್ವೇತಗುಲಾಬಿ, ಹೊಸ ನೀರು, ಅರುಣರಾಗ, ವರ್ಣಚಕ್ರ, ಒಲವಿನ ಆಸರೆ, ಶರವೇಗದ ಸರದಾರ, ಮತ್ಸರ, ಕೆರಳಿದ ಕೇಸರಿ, ಹೊಸ ರಾಗ, ಪೋಲಿಕಿಟ್ಟಿ, ಮೇಘ ಮಂದಾರ, ರಂಜಿತ, ರಶ್ಮಿ ಮತ್ತು ಗಾಜಿನ ಮನೆ - ಇವು ಇವರು ನಿರ್ದೇಶಿಸಿ ನಿರ್ಮಿಸಿದ ಕೆಲವು ಚಿತ್ರಗಳು. ಕಾದಂಬರಿ ಆಧಾರಿತ ಚಿತ್ರಗಳ ನಿರ್ದೇಶನ ಇವರ ವೈಶಿಷ್ಟ್ಯ.

ಇವರು ನಿರ್ದೇಶಿಸಿದ ಅನೇಕ ಚಿತ್ರಗಳು ಶತದಿನೋತ್ಸವವನ್ನು ಆಚರಿಸಿವೆ. ಇವರ ಅನೇಕ ಚಿತ್ರಗಳು ತಮಿಳು, ತೆಲುಗು ಹಾಗೂ ಬಂಗಾಲಿ ಭಾಷೆಗಳಿಗೆ ಡಬ್ ಆಗಿವೆ. ಇವರು ಹೆಚ್ಚಾಗಿ ತಮ್ಮ ಚಿತ್ರಗಳಲ್ಲಿ ಮಹಿಳಾ ಸಮಸ್ಯೆಗಳು ಹಾಗೂ ಮಹಿಳಾ ಸಬಲೀಕರಣವನ್ನು ವಸ್ತುವನ್ನಾಗಿ ಆರಿಸಿಕೊಂಡಿದ್ದಾರೆ. ಚಿತ್ರಜಗತ್ತಿಗೆ ಅನೇಕ ಹೊಸ ಪ್ರತಿಭೆಗಳನ್ನು ಪರಿಚಯಿಸಿದ ಹಾಗೂ ಹೊಸ ಪ್ರತಿಭೆಗಳನ್ನು ಗುರುತಿಸಿ ಬೆಳಕಿಗೆ ತಂದ ಕೀರ್ತಿ ಇವರಿಗೆ ಸಲ್ಲುತ್ತದೆ.

ಇವರಿಗೆ ಅನೇಕ ಪ್ರಶಸ್ತಿ ಸನ್ಮಾನಗಳು ಲಭಿಸಿವೆ. ಬಾಡದ ಹೂ ಚಿತ್ರಕ್ಕೆ ಕರ್ನಾಟಕ ಸರ್ಕಾರದ ಅತ್ಯುತ್ತಮ ಚಲನಚಿತ್ರ ನಿರ್ದೇಶಕ ಪ್ರಶಸ್ತಿ (1982), ಇದೇ ಚಿತ್ರಕ್ಕೆ ಮತ್ತು ಹೊಸ ನೀರು ಹಾಗೂ ರಂಜಿತ ಚಿತ್ರಗಳಿಗೆ ಫಿಲ್ಮ್‌ಫೇರ್ ಪ್ರಶಸ್ತಿ ದೊರಕಿದೆ (1982). ಅತ್ಯುತ್ತಮ ನಿರ್ಮಾಪಕ ಪ್ರಶಸ್ತಿ, ಅತ್ಯುತ್ತಮ ಚಿತ್ರಕಥೆ ಪ್ರಶಸ್ತಿಗಳೂ ಜೀವಮಾನದ ಸಾಧನೆಗಾಗಿ ಪುಟ್ಟಣ್ಣ ಕಣಗಾಲ್ ಪ್ರಶಸ್ತಿಯೂ ಇವರಿಗೆ ಲಭ್ಯವಾಗಿವೆ. ಇವರು ಕಿರುತೆರೆಯಲ್ಲಿ ಮಂದಾರ ಎಂಬ ಧಾರಾವಾಹಿಯನ್ನು ನಿರ್ದೇಶಿಸಿದ್ದಾರೆ.

(ಎಸ್‌ಯು.ಎಂ.)

**ಜಯರಾಯಾಚಾರ್ಯ, ನರಹರಿ :** –1910. ಹತ್ತೊಂಬತ್ತನೆಯ ಶತಮಾನದ ಅಂತ್ಯಭಾಗ ಮತ್ತು ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಮೈಸೂರಿನಲ್ಲಿ ಬದುಕಿ ಬಾಳಿದ ಕವಿ. ಇವರು ಆಸ್ಥಾನ ವಿದ್ವಾಂಸರಾಗಿದ್ದರು. ಮಹಾರಾಣಿ ಬಾಲಿಕಾ ಪಾಠಶಾಲೆಯಲ್ಲಿ ಅಧ್ಯಾಪಕರಾಗಿಯೂ ಕೆಲಸ ಮಾಡಿದರು. ಮುದ್ದಣನ ಸಮಕಾಲೀನರಾಗಿದ್ದ ಇವರು ಹಳೆಗನ್ನಡದಲ್ಲಿ ಕೃತಿರಚನೆ ಮಾಡಿದ್ದೇ ಅಲ್ಲದೆ ಕಂದ, ವೃತ್ತ ಮೊದಲಾದ ನಾನಾ ಛಂದಸ್ಸಿನಲ್ಲಿ ಪದ್ಯಗಳನ್ನು ರಚಿಸಿದ್ದಾರೆ. ಇವರು ರಚಿಸಿದ, ಅನುವಾದಿಸಿದ ಕೃತಿಗಳ ಸಂಖ್ಯೆ ಸುಮಾರು ಮೂವತ್ತನಾಲ್ಕು. ಅವುಗಳ ವಿಷಯವೈವಿಧ್ಯ ಬೆರಗುಗೊಳಿಸುವಂಥದು. ಪಾಕಶಾಸ್ತ್ರ, ವೈದ್ಯ ಗ್ರಂಥಗಳಂಥ ಜನೋಪಯೋಗಿ ಕೃತಿಗಳು, ನಿಘಂಟು, ಅಲಂಕಾರಶಾಸ್ತ್ರಗಳಂಥ ಶಾಸ್ತ್ರಗ್ರಂಥಗಳು, ಕರ್ನಾಟಕ ವೇಣೀಸಂಹಾರನಾಟಕಂ, ಚಂಡಕೌಶಿಕ ನಾಟಕ, ಚಂದ್ರಹಾಸ, ಮದಾಲಸಾಪರಿಣಯ, ಮಹಾಬಧಿರಪ್ರಹಸನ ಮೊದಲಾದ ನಾಟಕಗಳು, ಭವಿಷ್ಯೋತ್ತರ ಪುರಾಣವೆಂಬ ಚಂಪೂಕೃತಿ, ಸಂಗೀತ ಕೃತಿಗಳು, ರಾಮವರ್ಮ ಲೀಲಾವತಿಯಂಥ (ರೋಮಿಯೊ ಜ್ಯೂಲಿಯೆಟ್) ಪಾಶ್ಚಾತ್ಯ ಪ್ರಸಿದ್ಧ ಕೃತಿಯ ಕನ್ನಡ ರೂಪಾಂತರ, ದ್ರೌಪದಿ ಸ್ವಯಂವರ, ಅನಸೂಯಾಚರಿತ್ರೆ, ಪದ್ಮಾವತೀ ಕಲ್ಯಾಣ, ಕನಕಾಂಗಿ ಕಲ್ಯಾಣ, ಚಂದ್ರಹಾಸ ಕಥೆ, ವಾಮನಾವತಾರದ ಕಥೆ ಮುಂತಾದ ಜನಪ್ರಿಯ ಕಥೆಗಳು ಇವರಿಂದ ರಚಿತವಾಗಿವೆ. ಇವರ ಸೋಮೇಶ್ವರ ಶತಕ ವೃತ್ತಛಂದಸ್ಸಿನಲ್ಲಿದೆ. ಪಾಕಶಾಸ್ತ್ರ ಗ್ರಂಥ ತಮಿಳು ಮತ್ತು ತೆಲುಗಿಗೆ ಭಾಷಾಂತರಗೊಂಡಿದೆ.



ಅ ಳಿ ಯ ಲಿಂಗರಾಜಕೃತ ನರಪತಿಚರಿತೆ (1899), ಚಲುವಾಂಬೆ (ಚೆಲುವಾಜಮ್ಮಣ್ಣಿ) ಕೃತ ಶ್ರೀವರನಂದೀಕಲ್ಯಾಣ (1901) ಎಂಬ ಕೃತಿಗಳು ಇವರಿಂದ ಪರಿಷ್ಕೃತಗೊಂಡು ಪ್ರಕಟವಾಗಿವೆ. ಹೊಸಗನ್ನಡ ಸಾಹಿತ್ಯ ನವೋದಯಕ್ಕೂ ಮುಂಚೆ ವಿಪುಲ ಹಾಗೂ ವೈವಿಧ್ಯಮಯ ಕೃತಿಗಳಿಂದ ಕನ್ನಡ ಸಾರಸ್ವತ ಪ್ರಪಂಚದ ಒಡಲನ್ನು ತುಂಬಿದ ಇವರು 1910ರಲ್ಲಿ ನಿಧನರಾದಂತೆ ತಿಳಿದುಬರುತ್ತದೆ.

(ಎಚ್.ಕೆ.ಜೆ.)

**ಜಯರಾವ ಮಧ್ವರಾವ ದೇಶಪಾಂಡೆ :** 1887-1922. ಪತ್ರಿಕೋದ್ಯಮಿ, ಸ್ವಾತಂತ್ರ್ಯ ಹೋರಾಟಗಾರ. ಬಿಜಾಪುರ ಜಿಲ್ಲೆ ಬೀಳಗಿ ಪೇಟಾದ ನಾಗರಾಳದ ಪ್ರಸಿದ್ಧ ದೇಶಪಾಂಡೆ ಮನೆತನದಲ್ಲಿ ಜನಿಸಿದ ಇವರು 1905ರಲ್ಲಿ ಧಾರವಾಡದಿಂದ ಮ್ಯಾಟ್ರಿಕ್, 1909ರಲ್ಲಿ ಬಿ.ಎ., 1912ರಲ್ಲಿ ಎಲ್.ಎಲ್‌ಬಿ. ಪಡೆದರು. ಕನ್ನಡ ವಿಷಯ ತೆಗೆದುಕೊಂಡು ವ್ಯಾಸಂಗಮಾಡಿದ ಮುಂಬಯಿ ವಿಶ್ವವಿದ್ಯಾಲಯದ ಎಂ.ಎ. ಪದವೀಧರರಲ್ಲಿ ಇವರು ಮೊದಲಿಗರು. ಬಿಜಾಪುರದಲ್ಲಿ ವಕೀಲಿ ಆರಂಭಿಸಿ ಬಹಳ ಬೇಗ ಪ್ರಮುಖ ವಕೀಲರೆಂದು ಖ್ಯಾತಿಪಡೆದರು. ವಿದ್ವತ್ತು, ವಾಕ್ಕೌಶಲ, ನಿರ್ಭಯ ವೃತ್ತಿ ಮತ್ತು ಉದಾರತೆಗೆ ಹೆಸರಾಗಿದ್ದರು. ಮೊದಲು ಸ್ಥಳೀಯ ಕರ್ನಾಟಕ ವೈಭವ ಪತ್ರಿಕೆಯಲ್ಲಿ ಲೇಖನಗಳನ್ನು ಬರೆಯುತ್ತಿದ್ದು 1918ರಿಂದ ಆ ಪತ್ರಿಕೆಯ ಸಂಪಾದಕರಾದರು. ಇವರ ದೇಶಾಭಿಮಾನಿ ಬರೆಹಗಳಿಂದ ಅಸಹಕಾರ ಯುಗದಲ್ಲಿ ಪತ್ರಿಕೆಯ ಪ್ರಸಾರ ಬಹಳ ಹೆಚ್ಚಿತು. ನಾಗಪುರ ಕಾಂಗ್ರೆಸ್ ಅಧಿವೇಶನದಲ್ಲಿ ಕರ್ನಾಟಕಕ್ಕೆ ಪ್ರತ್ಯೇಕ ಪ್ರಾಂತವಿರಬೇಕೆಂದು ಪ್ರಯತ್ನಿಸಿದ ಪ್ರಮುಖರಲ್ಲಿ ಇವರೂ ಒಬ್ಬರು. ಬಳಿಕ ಸ್ಥಾಪಿತವಾದ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಸಮಿತಿಯ ಮೂವರು ಕಾರ್ಯದರ್ಶಿಗಳಲ್ಲಿ ಒಬ್ಬರಾಗಿದ್ದರು. ಕಾಂಗ್ರೆಸ್ಸಿನ ಕರೆಯಂತೆ ವಕೀಲಿಯನ್ನು ಬಿಟ್ಟು ಜಿಲ್ಲೆಯಲ್ಲೆಲ್ಲ ಸಂಚರಿಸಿ ಅಸಹಕಾರದ ಪ್ರಚಾರ ಮಾಡಿದರು. ಭಾಷಣ ಲೇಖನಗಳಿಂದ ಇವರು ಮಾಡಿದ ಪ್ರಚಾರದಿಂದ ಬ್ರಿಟಿಷರು ಇವರ ಮೇಲೆ ಖಟ್ಲೆ ಹಾಕಿದರು. ಇವರು ಜಾಮೀನು ಪಡೆಯದೆ ತುರಂಗವಾಸವನ್ನು ಅನುಭವಿಸಲು ಮುಂದಾದರು. ಆದರೆ ಆ ಕಾಲದಲ್ಲಿ ಕ್ಷಯರೋಗ ಪೀಡಿತರಾಗಿದ್ದರಿಂದ ಕೊನೆಗೆ ಜಾಮೀನುಕೊಟ್ಟು ಹೊರಬರಬೇಕಾಯಿತು. ಅನಂತರ ಇವರು 1922ರ ಜೂನ್ ಕೊನೆಯಲ್ಲಿ ಬಾಗಲಕೋಟೆಯಲ್ಲಿ ತಮ್ಮ 35ನೆಯ ವಯಸ್ಸಿನಲ್ಲಿ ನಿಧನಹೊಂದಿದರು. (ಎಚ್.ಆರ್.ಪಿ.)

**ಜಯಲಕ್ಷ್ಮೀ ಶ್ರೀನಿವಾಸನ್ :** 1911-2001. ಹಿರಿಯ ತಲೆಮಾರಿನ

ಹೆಸರಾಂತ ಲೇಖಕಿ. ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ ಪುರಸ್ಕೃತರು. 1911 ಡಿಸೆಂಬರ್ 12ರಂದು ತಮಿಳುನಾಡಿನ ಕರೂರು ಜಿಲ್ಲೆ ವಾಂಗಲ್‌ನಲ್ಲಿ ಜನಿಸಿದರು. ಇವರ ತಂದೆ ಎ.ವಿ.ರಾಮನಾಥನ್ ಮೈಸೂರು ಸಂಸ್ಥಾನದಲ್ಲಿ ವಿವಿಧ ಆಡಳಿತ ಹುದ್ದೆಗಳಲ್ಲಿ ಕೆಲಸ ಮಾಡಿ ರಾಜಮಂತ್ರ ಪ್ರವೀಣ ಎಂಬ ಬಿರುದು ಪಡೆದು ನಿವೃತ್ತರಾದ ಅನಂತರ ಭರತಪುರ ಸಂಸ್ಥಾನದ ದಿವಾನರಾಗಿದ್ದರು. ತಾಯಿ ಸೀತಾಲಕ್ಷ್ಮಿ. ಜಯಲಕ್ಷ್ಮಿಯವರಿಗೆ ಒಂಬತ್ತನೆಯ ತರಗತಿಯಲ್ಲಿದ್ದಾಗಲೇ ವಿವಾಹವಾಗಿತ್ತು. ಇವರ ಪತಿ ಶ್ರೀನಿವಾಸನ್ ಐ.ಎ.ಎಸ್. ಅಧಿಕಾರಿಯಾಗಿದ್ದರು. ಜಯಲಕ್ಷ್ಮಿಯವರು ಓದಿದ್ದು ಎಸ್.ಎಸ್.ಎಲ್.ಸಿ. ವರೆಗೆ ಮಾತ್ರ. 'ಸರೋಜ' ಇವರ ಕಾವ್ಯನಾಮ. ಇವರು ಕನ್ನಡ, ಇಂಗ್ಲಿಷ್, ತಮಿಳು ಮತ್ತು ಹಿಂದಿ ಭಾಷೆಗಳಲ್ಲಿ ಪರಿಣತರಾಗಿದ್ದರು. ತಮಿಳು ಮತ್ತು ಕನ್ನಡ ಈ ಎರಡೂ ಭಾಷೆಗಳಲ್ಲಿ ಬರೆಯುತ್ತಿದ್ದರು. ಬೆಂಗಳೂರಿನ ಅರ್ಥಸಾಧಕ ಪತ್ರಿಕೆಯಲ್ಲಿ ಪ್ರಕಟಗೊಂಡ ಗ್ರಾಮೋದ್ಧಾರಕ ರಾಮಚಂದ್ರ ಎಂಬ ಕಾದಂಬರಿ ಇವರ ಮೊದಲ ಪ್ರಕಟಿತ ಕೃತಿ (1929). ಅನಂತರ ಸುಶೀಲೆ ಮತ್ತು ಶಿಶು ಸಂರಕ್ಷಣೆ, ಕುಮುದಿನಿ ಕೃಪಾ ಶಂಕರ್, ಚಂಚಲೆ ಎಂಬ ಮೂರು ಕಾದಂಬರಿಗಳನ್ನು ಬರೆದು ಪ್ರಕಟಿಸಿದರು (1930). ಸುಶೀಲೆ ಮತ್ತು ಶಿಶು ಸಂರಕ್ಷಣೆ ಎಂಬುದು ಭಾರತೀಯ ರೆಡ್ ಕ್ರಾಸ್ ಸೊಸೈಟಿಯಿಂದ ರಾಜ್ಯಾದ್ಯಂತ ವಿತರಣೆಗೊಂಡ ಆರೋಗ್ಯ ಸಂಬಂಧಿತ ಪುಸ್ತಕ. ಅ ಲಿ ್ಲ ಂ ದ ,



ಇವರ ಸಾಹಿತ್ಯ ರಚನೆ ರಭಸದಿಂದ ಮುಂದುವರಿಯಿತು. ಪರಿಮಳೆ, ಸುಲೋಚನೆ ಮತ್ತು ಪುಷ್ಪಹಾರ (1950), ಪರಿಣಯ (1952) ಎಂಬ ಕಾದಂಬರಿಗಳು ಪ್ರಕಟಗೊಂಡವು. ಸರೋಜ ನಳಿನಿ ಎಂಬುದು



ಜೀವನ ಚರಿತ್ರೆ(1937). ದೀಪಾವಳಿ ಮತ್ತು ಇತರ ಕಥೆಗಳು(1940), ಮೊಗ್ಗು, ವಾತ್ಸಲ್ಯ (1943) -ಇವು ಕಥಾ ಸಂಕಲನಗಳು. ಮೂರು ಮುತ್ತುಗಳು (1960), ಮೋಹನ್, ಮಿಠಾಯಿ (1974), ಐಸ್ ಕ್ರೀಂ (1970), ಬೇಡಿ ಬೇಡನ್ ಪವೆಲ್(1979) - ಇವು ಮಕ್ಕಳ ಕಥಾ ಸಂಕಲನಗಳು. ಗೃಹ ವಿಜ್ಞಾನ ಕುರಿತದ್ದು 'ವೈಭವದ ಮನೆ' (1971). ಅಮೆರಿಕೆಯ ಪ್ರವಾಸ, ನಾನು ಕಂಡ ಜರ್ಮನಿ (1970) - ಇವು ಪ್ರವಾಸ ಕಥನಗಳು. ಮೂಢ ನಂಬಿಕೆಗಳು, ಮಹಿಳೆಯರ ಪ್ರಗತಿಗೆ ಅಡ್ಡಿಯಾಗಿರುವ ಸಂಪ್ರದಾಯಗಳು ವರ್ಗಭೇದಗಳು - ಇವುಗಳ ಬಗ್ಗೆ ಇವರು ಬಹುಹಿಂದೆಯೇ ತಮ್ಮ ಹೊಸ ಚಿಂತನೆಗಳನ್ನು ಹರಿಸಿದ್ದರು. ಇವರು ತಮಿಳಿನಲ್ಲೂ ಕಥೆಗಳನ್ನು ಬರೆದಿದ್ದಾರೆ. ಜೊತೆಗೆ ಕನ್ನಡದ ಅನೇಕ ಕೃತಿಗಳನ್ನು ತಮಿಳಿಗೆ ಅನುವಾದಿಸಿದ್ದಾರೆ. ಆರ್. ಕಲ್ಯಾಣಮ್ಮ, ಕೊಡಗಿನ ಗೌರಮ್ಮ, ವಾಣಿ ಮತ್ತು ಅ.ನ.ಕೃ. ಅವರ ಕೆಲವು ಕಥೆ ಹಾಗೂ ಕಾದಂಬರಿಗಳನ್ನು ತಮಿಳಿಗೂ ಸಿ.ರಾಜಗೋಪಾಲಾಚಾರಿಯವರ ಕೆಲವು ಕಥೆಗಳನ್ನು ಕನ್ನಡಕ್ಕೂ ಅನುವಾದಿಸಿದ್ದಾರೆ. ಇಂಗ್ಲೆಂಡ್, ಫ್ರಾನ್ಸ್, ಮತ್ತು ಪಶ್ಚಿಮ ಜರ್ಮನಿ ಮೊದಲಾದ ವಿದೇಶಗಳಲ್ಲಿ ಇವರು ಪ್ರವಾಸ ಕೈಗೊಂಡಿದ್ದರು.

ಇವರು ಸಾಹಿತ್ಯಕ್ಕೆ ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಇವರಿಗೆ ಹಲವು ಪ್ರಶಸ್ತಿ ಗೌರವಗಳು ಸಂದಿವೆ. ಅವುಗಳಲ್ಲಿ ಪ್ರಮುಖವಾದವು: ಮದರಾಸು ಮಕ್ಕಳ ಸಾಹಿತ್ಯ ಸಮ್ಮೇಳನದ ಸನ್ಮಾನ, ತಿರುಕೋಯಿಲೂರು ತಪೋವನದ ಸ್ವಾಮಿಗಳಿಂದ ವಿದ್ಯಾರತ್ನ ಎಂಬ ಬಿರುದು, ಹೈದರಾಬಾದಿನ ಅಖಿಲ ಭಾರತ ಲೇಖಕಿಯರ ಸಮ್ಮೇಳನದ ಸನ್ಮಾನ, ಕನ್ನಡ ಸಾಹಿತ್ಯ ಪರಿಷತ್ತಿನಿಂದ ಅತ್ಯುತ್ತಮ ಲೇಖಕಿ ಎಂಬ ಗೌರವ, ಕರ್ನಾಟಕ ಅಕಾಡೆಮಿಯ ಉತ್ತಮ ಲೇಖಕಿ ಗೌರವ ಪ್ರಶಸ್ತಿ (1979), ಬೆಂಗಳೂರಿನ ಸ್ವರ ಲಿಪಿ ಪ್ರತಿಷ್ಠಾನದ ಲಿಪಿ ಪ್ರಾಜ್ಞೆ ಪ್ರಶಸ್ತಿ, ಶಾಶ್ವತಿ ಸಂಸ್ಥೆಯ ಸನ್ಮಾನ, ಕರ್ನಾಟಕ ಸರ್ಕಾರದ ಅತ್ತಿಮಬ್ಬೆ ಪ್ರಶಸ್ತಿ ಇವರಿಗೆ ಸಂದಿದೆ (2000). ಇವರು 2001 ಮಾರ್ಚ್ 3ರಂದು ನಿಧನಹೊಂದಿದರು. (ಕೆ.ಎಂ.ವಿ.)

**ಜಯವಂತಿದೇವಿ, ಹಿರೇಬೆಟ್ :** 1927-. ಸುಗಮ ಸಂಗೀತ ಕಲಾವಿದೆ. ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿ 1927 ಏಪ್ರಿಲ್ 24ರಂದು ಜನಿಸಿದರು. ತಂದೆ ಪಡುಕೋಣೆ ರಮಾನಂದರಾಯ, ತಾಯಿ ಸೀತಾದೇವಿ. ಇವರದು ಅತ್ಯಂತ ಸುಸಂಸ್ಕೃತ ಮನೆತನ. ಇವರ ಅಜ್ಜ ಪ್ರಸಿದ್ಧ ಸಮಾಜಸೇವಕ ಮೊಳೆಹಳ್ಳಿ ಶಿವರಾಯರು. ಪಡುಕೋಣೆ ರಮಾನಂದರಾಯರ ತಂದೆ ಪಡುಕೋಣೆ ನರಸಿಂಹರಾಯರು ಮಣ್ಣಿನ ಕಲಾಕೃತಿಗಳನ್ನು ಮಾಡುವುದರಲ್ಲೂ ತೆಂಗಿನಚಿಪ್ಪಿನ ಕಲಾಕೃತಿಗಳನ್ನು ಮಾಡುವುದರಲ್ಲೂ ಪ್ರಸಿದ್ಧರಾಗಿದ್ದರು. ಹೆಸರಾಂತ ಹಿಂದಿಚಿತ್ರನಟ ಗುರುದತ್ ಹಾಗೂ ದಿಗ್ದರ್ಶಕ ಆತ್ಮಾರಾಮ್ ಅವರು ನರಸಿಂಹರಾಯರ ಸಹೋದರರಾದ ಶಿವಶಂಕರ್ ಅವರ ಮಕ್ಕಳು. ಇಂಥ ಕಲಾ ಪರಿಸರದಿಂದಾಗಿ ಸಹಜವಾಗಿಯೇ ಜಯವಂತಿಗೆ ಸಂಗೀತ, ಸಾಹಿತ್ಯ, ನಾಟಕಗಳತ್ತ ಒಲವು ಬೆಳೆದು ಬಂತು. ಇವರ ಸೋದರಿ ಚಂದ್ರಭಾಗಾದೇವಿ (ನೋಡಿ) ಕೂಡ ಪ್ರಸಿದ್ಧ ನೃತ್ಯ ಕಲಾವಿದೆ.

ಜಯವಂತಿದೇವಿಯವರ ಶಾಲಾಶಿಕ್ಷಣ ಪುತ್ತೂರಿನಲ್ಲಿ ಎಂಟನೆಯ ತರಗತಿಯವರೆಗಾಗಿತ್ತು. ಶಿವರಾಮಕಾರಂತರ ಬಾಲವನದಲ್ಲಿಯೂ ಇವರು ಒಂದು ವರ್ಷ ವಿದ್ಯಾರ್ಜನೆ ನಡೆಸಿದರು. ಅನಂತರ ಇವರ ತಂದೆಗೆ ವರ್ಗವಾಗಿ ಮದರಾಸಿಗೆ ತೆರಳಿದ್ದರಿಂದ ಅಲ್ಲಿ ಕನ್ನಡ ಶಾಲೆಯ ಸೌಲಭ್ಯವಿಲ್ಲದೆ ಶಿಕ್ಷಣ ಅರ್ಧಕ್ಕೆ ನಿಂತಿತು. ಅಲ್ಲಿ ಇವರ ನೆರೆಮನೆಯವರಾದ ಪ್ರಸಿದ್ಧ ಚಲನಚಿತ್ರ ನಟ, ನಿರ್ದೇಶಕ, ಸಂಗೀತಗಾರ ವಿ.ನಾಗಯ್ಯನವರು ಇವರ ಸಂಗೀತ ಜ್ಞಾನವನ್ನು ಮನಗಂಡು ಎಚ್.ಎಂ.ವಿ. ಕಂಪನಿಯ ವತಿಯಿಂದ ಭಾಗ್ಯದ ಲಕ್ಷ್ಮಿಬಾರಮ್ಮ, ಹೂವ ತರುವರ ಮನೆಗೆ ಎಂಬ ಎರಡು ಧ್ವನಿಮುದ್ರಿಕೆಗಳನ್ನು ಹೊರತರಲು ಕಾರಣರಾದರು (1944 - 45). ಅವರೇ ಈ ಧ್ವನಿ ಮುದ್ರಿಕೆಗಳಿಗೆ ಸಂಗೀತ ಸಂಯೋಜನೆಯನ್ನು



ಮಾಡಿದರು. ತ್ಯಾಗಯ್ಯ ಎಂಬ ಚಲನಚಿತ್ರದಲ್ಲಿ ಗಾಯಕಿಯ ಒಂದು ಪಾತ್ರದಲ್ಲಿಯೂ ಜಯವಂತಿ ಕಾಣಿಸಿಕೊಂಡರು. ಇದೇ ಸಮಯದಲ್ಲಿ ಉದಯಶಂಕರ್ ತಯಾರಿಸಿದ ಕಲ್ಪನಾ ಎಂಬ ಹಿಂದಿ ಚಿತ್ರದಲ್ಲಿ ಹಿನ್ನಲೆ ಗಾಯಕಿಯ ಅವಕಾಶ ಲಭಿಸಿತು. ಇದರಿಂದಾಗಿ ಮದರಾಸಿನ ಅಕಾಶವಾಣಿಯ ಕಲಾವಿದರಾಗಿ ಹಿಂದಿ ಭಜನೆಗಳನ್ನು ಹಾಡಲು ಪ್ರಾರಂಭಿಸಿದರು. ಅನಂತರದ ದಿನಗಳಲ್ಲಿ ಇವರೇ ಸಂಗೀತ ಸಂಯೋಜಕಿಯಾಗಿ ತಾವು ಹಾಡುವ ಹಾಡುಗಳಿಗೆ ರಾಗ ಸಂಯೋಜಿಸಿದರು. ದಿನಕರ್ ಹಿರೇಬೆಟ್ ಎಂಬವರೊಂದಿಗೆ ಇವರ ವಿವಾಹ ನಡೆಯಿತು. ಅನಂತರ ಪುಣೆಗೆ ಬಂದರು (1947). ಇವರು ಹಾಡಿದ ಕನ್ನಡ, ಕೊಂಕಣಿ, ಹಿಂದಿ ಹಾಡುಗಳು ಮುಂಬಯಿ ಆಕಾಶವಾಣಿಯಿಂದ ಪ್ರಸಾರವಾದವು. ಇದಲ್ಲದೆ ದೆಹಲಿ, ಬೆಂಗಳೂರು, ಧಾರವಾಡ ಆಕಾಶವಾಣಿಗಳ ಆಹ್ವಾನಿತ ಶ್ರೋತೃಗಳ ಸಮ್ಮುಖದಲ್ಲಿ ಹಾಡಿ ಜನಪ್ರಿಯ ಗಾಯಕಿ ಎನಿಸಿದರು.

ಇವರ ಸಂಗೀತ ಸೇವೆಯನ್ನು ಗುರುತಿಸಿ ಬೆಂಗಳೂರಿನ ಸಂಗೀತ ಗಂಗಾ ಸಂಸ್ಥೆ ಕನ್ನಡ ಸಂಗೀತ ಸಮ್ಮೇಳನದ ಅಧ್ಯಕ್ಷಸ್ಥಾನವನ್ನಿತ್ತು ಗೌರವಿಸಿದೆ (1966). ಸುಗಮ ಸಂಗೀತ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ್ದಕ್ಕಾಗಿ ಇವರಿಗೆ ಕರ್ನಾಟಕ ಸರ್ಕಾರ ಸಂತ ಶಿಶುನಾಳಷರೀಫ್ ಪ್ರಶಸ್ತಿ ನೀಡಿ ಗೌರವಿಸಿದೆ (1995).

ಜಯವಂತಿದೇವಿ ಈಗ ತಮ್ಮ ಪತಿಯೊಂದಿಗೆ ಪುಣೆಯಲ್ಲಿ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ. (ಎಚ್.ಆರ್.ಎಲ್.)

**ಜಯವೆಂಕಟಾಚಾರ್ಯ :** ಸು.1727. ಕನ್ನಡದಲ್ಲಿ ವಿರಳವಾಗಿರುವ ದಂಡಕ ಹಾಗೂ ಭಟ್ಟಂಗಿಗಳ ಕರ್ತೃ. ಒಂದು ಗಳಿಗೆಯಲ್ಲಿ ನೂರು ಶ್ಲೋಕಗಳನ್ನು ರಚಿಸಬಲ್ಲ ಹೆಗ್ಗಳಿಕೆ ತನ್ನದೆಂದು ಹೇಳಿಕೊಂಡಿದ್ದಾನಾದರೂ ಈಗ ಉಪಲಬ್ಧವಾಗಿರುವುದು ಈತನ ಒಂದು ದಂಡಕ ಮತ್ತು ಇಪ್ಪತ್ತೆಂಟು ಭಟ್ಟಂಗಿಗಳು ಮಾತ್ರ. ಇಂದಿನ ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಕನಕಗಿರಿ ಈತನ ಸ್ಥಳ. ಶ್ರೀನಿಧಿ ಆಚಾರ್ಯ ಈತನ ತಂದೆ ಹಾಗೂ ಗುರು. ಕನಕಗಿರಿ ಸಂಸ್ಥಾನವನ್ನು ಅಂದಿಗೆ ಆಳುತ್ತಿದ್ದ ರಂಗಪ್ಪನಾಯಕ ಕವಿಗೆ ಆಶ್ರಯವಿತ್ತಂತೆ ತಿಳಿದುಬರುತ್ತದೆ. ಈತನ ವಂಶದವರಿಗೆ ಅರಳಿಹಳ್ಳಿ, ನರಸಾಪುರ ಎಂಬ ಹಳ್ಳಿಗಳು ಜಹಗೀರುಗಳಾಗಿ ಮೊನ್ನೆ ಮೊನ್ನೆಯವರೆಗೂ ಅನುಭೋಗದಲ್ಲಿದ್ದವು. ಈತ ಬಾಲ್ಯದಲ್ಲಿ ಚಂಚಲಚಿತ್ತನಾಗಿದ್ದು ಸಂಜೀವ ಮುಖ್ಯ ಪ್ರಾಣನ ವರದಿಂದ ಪಾಂಡಿತ್ಯ ಸಂಪಾದಿಸಿದನೆಂದು ಜನಜನಿತ ಕಥೆ. ಒಮ್ಮೆ ಅದ್ವೈತ ಸನ್ಯಾಸಿಯೊಬ್ಬನೊಂದಿಗೆ ವಾದವಿವಾದದಲ್ಲಿ ಕೈಗೆ ಕೈ ಹತ್ತಿ ಈತ ಮುಸ್ಲಿಮ್

ನ್ಯಾಯಾಧೀಶನ ಎದುರಿಗೆ ನಿಲ್ಲುವ ಪ್ರಸಂಗ ಬಂತಂತೆ. ಸಮಯ ಸ್ಫೂರ್ತಿಯಿಂದ ದ್ವೈತ ಮತ್ತು ಇಸ್ಲಾಂನ ಸಮನ್ವಯವನ್ನು ಈತ ಸಾರಿದ ರೀತಿ ಕುತೂಹಲಕರವಾಗಿದೆ. ಆ ಪದ್ಯ ಹೀಗಿದೆ:

ಅಲ್ಲಾ ದೇವೋ ದೇವಪೂಜಾ ನಮಾಜಾ
ಖಾಜೀ ವಿದ್ವಾನ್ ಪಂಡಿತಃ ತತ್ರ ಮುಲ್ಲಃ
ಪುರಾಣಃ ಕುರಾನಃ ಕಿತಾಬಂ ಚ ಶಾಸ್ತ್ರಂ
ಭಾಷಾಭೇದೋ ನೈವ ಶಾಸ್ತ್ರೇಷು ಭೇದಃ

ಈತ ವಿಪುಲವಾಗಿ ದೇಶಾಟನ ಮಾಡಿದ್ದನೆಂದು ಇವನ ಒಂದು ಭಟ್ಟಂಗಿಯಿಂದ ತಿಳಿಯುತ್ತದೆ. ಬಾಲ್ಯದಲ್ಲಿ ತಾನು ರಸಿಕ ಜೀವನಕ್ಕೆ ಮಾರುಹೋಗಿದ್ದುದು, ಕನಕಗಿರಿಯ ಮೇಲೆ ಆದ ದಾಳಿ, ತನಗೆ ಕೊನೆಗಾಲಕ್ಕೆ ಬಂದ ಕಷ್ಟಗಳು ಮೊದಲಾದವನ್ನು ಕವಿ ತನ್ನ ಕೃತಿಯಲ್ಲಿ ಸೂಚ್ಯವಾಗಿ ತಿಳಿಸಿದ್ದಾನೆ. ಈತನ ಭಟ್ಟಂಗಿಗಳಲ್ಲಿ ಕಾವ್ಯಸೌಂದರ್ಯವನ್ನೂ ಕಾಣಬಹುದು. ಈ ಕವಿಯ ದೃಷ್ಟಿಗೆ ಲಕ್ಷ್ಮೀದೇವಿ 'ಮದನನು ಮತ್ತೆ ತನ್ನ ಜೈಭೇರಿಯ ಹೊಯ್ಸುತಾ| ಕದನದಿ ಮೂರು ಲೋಕವ ಗೆದ್ದಮೇಲೆ ಫಲವಿಲ್ಲದ ಭೇರಿಯ ಡಬ್ಬುಹಾಕಿ ತನ್ನ ಹಸನದಿ ತೋರ್ಪ ಕುಚಕುಂಭಗಳೋಳ್ ಸಮಸ್ತ ಸೌಂದರೀ ಅಮಿತಗುಣಾಭಿರಾಮ ಕನಕಾಚಲರಂಗನ ಪಟ್ಟದೊಲ್ಲಭೆ'ಯಾಗಿ ಕಾಣುತ್ತಾಳೆ. ಈತನಿಗೆ ಭಾಷೆಯ ಮೇಲಿದ್ದ ಹಿಡಿತಕ್ಕೆ 'ಅಂಬೇ ದಯಾಕದಂಬೇ ನೆರೆನಂಬಿದೆ ನಿನ್ನ ಪದಾಂಬುಜದ್ವಯಾ' ಮುಂತಾದ ಪಂಕ್ತಿಗಳು ಸಾಕ್ಷಿಯಾಗಿವೆ. ಈ ಕವಿ ಪಡೆದ ದರ್ಶನ ಇಲ್ಲಿದೆ:

ಮೇರೂ ಪೀಠವಾಗಿ ಇನಚಂದ್ರರು ತಾವು ಸೂರ್ಯಪಾನಗಳಾಗಿ
ತಾರಕೆಯು ದಿವ್ಯ ಪುಷ್ಪಗಳಾಗಿ ಧ್ರುವಮಂಡಳವು ದೀಪ್ತಕಿರೀಟವಾಗಿ
ಧಾರುಣಿಯು ರಾಣಿಯಾಗಿ ಶ್ರೀದೇವಿಯು ಭೂಷಣವಾಗಿ
ಪಾರ್ವತಿಯು ದಿವಾಣಕಾಯ್ದ ವಿಭವ ರಕ್ಷಿಸೋ ವೆಂಕಟಶೈಲವಲ್ಲಭಾ

ಈತನ ದಂಡಕದ ಶೈಲಿಯೂ ಮನೋಹರವಾದುದು. ಈತ ಸಂಸ್ಕೃತ ಗ್ರಂಥಗಳನ್ನೂ ರಚಿಸಿರುವನೆಂದು ಪ್ರತೀತಿ. ಆದರೆ ಈತನವೆಂದು ಹೇಳಲಾಗುವ ಒಂದೆರಡು ಶ್ಲೋಕಗಳ ಹೊರತು ಯಾವ ಗ್ರಂಥವೂ ಇದುವರೆಗೆ ದೊರೆತಿಲ್ಲ. (ಜೆ.ಆರ್.ಪಿ.)

**ಜಯಶ್ರೀ, ಬಿ. :** 1950-. ಕನ್ನಡ ರಂಗಭೂಮಿ ಹಾಗೂ ಚಲನಚಿತ್ರ ರಂಗದ ಪ್ರಸಿದ್ಧ ಕಲಾವಿದೆ. ಕನ್ನಡ ರಂಗಭೂಮಿಯ ಪಿತಾಮಹ ಗುಬ್ಬಿವೀರಣ್ಣನವರ (ನೋಡಿ) ಮೊಮ್ಮಗಳು. 1950 ಜೂನ್ 9ರಂದು ಬೆಂಗಳೂರಿನಲ್ಲಿ ಜನಿಸಿದರು. ರಂಗಭೂಮಿ ಕಲಾವಿದರಾದ ಕೆ.ಎಸ್.ಬಸವರಾಜ್ ಹಾಗೂ ಮಾಲತಮ್ಮ ಇವರ ತಂದೆ ತಾಯಿಗಳು. ರಂಗಭೂಮಿ ಇವರ ವಂಶಕ್ಕೆ ಅಂಟಿಕೊಂಡು ಬಂದ ನಂಟು.

ಜಯಶ್ರೀ ಅವರು ದೆಹಲಿಯ ರಾಷ್ಟ್ರೀಯ ನಾಟಕ ಶಾಲೆಯಿಂದ (ಎನ್.ಎಸ್.ಡಿ.) ಪದವಿ ಪಡೆದರು (1973). ಇ.ಅಲ್ಕಾಜಿ, ಬಿ.ವಿ.ಕಾರಂತ, ಜಿ.ವಿ.ಶಿವಾನಂದ್, ಪ್ರಸನ್ನ, ನಾಗಾಭರಣ, ಅಶೋಕ್ ಮಂದಣ್ಣ, ಚಿ.ಶ್ರೀನಿವಾಸಪ್ರಭು, ಶಂಕರನಾಗ್, ಎಂ.ಎಸ್.ಸತ್ಯು, ರಾಣೀರಾವ್ ಮತ್ತು ಸುರೇಂದ್ರನಾಥ್ ಮೊದಲಾದವರ ನಿರ್ದೇಶನದ ಕುರುಡು ಕಾಂಚಾಣ, ಜೋಕುಮಾರಸ್ವಾಮಿ, ಟಿಂಗರಬುಡ್ಡಣ್ಣ, ಹಯವದನ, ಚೆಗೆವಾರ, ತಾಯಿ, ಅಂತಿಮಯಾತ್ರೆ, ಸೂರ್ಯಾಸ್ತದಿಂದ ಸೂರ್ಯೋದಯದವರೆಗೆ, ಬ್ಯಾರಿಸ್ಟರ್, ನಾಗಮಂಡಲ ಮೊದಲಾದ ನಾಟಕಗಳಲ್ಲಿ ಅಭಿನಯಿಸಿದ ಹೆಗ್ಗಳಿಕೆ ಇವರದು.

ಜಯಶ್ರೀ ಅನೇಕ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಜನಪದ ಕಲೆಗಳನ್ನು ಕುರಿತಂತೆ ಸಂಶೋಧನೆ ಮಾಡಿ ಅವುಗಳನ್ನು ರಂಗಭೂಮಿಗೆ ಅಳವಡಿಸಿ ಪ್ರಯೋಗಿಸುವಲ್ಲಿ ಯಶಸ್ವಿಯಾಗಿದ್ದಾರೆ. ಘಾಶಿರಾಮ್ ಕೊತ್ವಾಲ್, ಜಸ್ಮಾಓಡಾನ್, ನೀಲಿಕುದುರೆ, ಕರಿಮಾಯಿ, ಯಕ್ಷನಗರಿ, ಲಕ್ಷಾಪತಿ ರಾಜನಕಥೆ, ವೈಶಾಖ, ಅಗ್ನಿಪಥ, ಸಿರಿಸಂಪಿಗೆ, ಚಿತ್ರಪಟ ಮೊದಲಾದವು ಇವರು ನಿರ್ದೇಶಿಸಿದ ನಾಟಕಗಳು. ಈ ನಾಟಕಗಳನ್ನು ಸ್ಪಂದನ ನಾಟಕ ತಂಡದ ಮೂಲಕ ಪ್ರಯೋಗಿಸಿದ್ದಾರೆ. ಇವರು ನಿರ್ದೇಶಿಸಿದ ಲಕ್ಷಾಪತಿರಾಜನ ಕಥೆ ಕೈರೋ ಮತ್ತು ತಾಷ್ಕೆಂಟ್ ನಗರಗಳಲ್ಲಿ ನಡೆದ ಅಂತಾರಾಷ್ಟ್ರೀಯ ನಾಟಕೋತ್ಸವಗಳಲ್ಲಿ ಭಾರತವನ್ನು ಪ್ರತಿನಿಧಿಸಿತು.

ಕುರಿದೊಡ್ಡಿ ಕುರುಕ್ಷೇತ್ರ, ನಾಗಮಂಡಲ, ಕೌರವ, ಕೊಟ್ರೇಶಿ ಕನಸು ಮೊದಲಾದ ಚಲನಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಜೊತೆಗೆ



ಕಂಠದಾನ ಕಲಾವಿದೆಯಾಗಿ ರಾಜ್ ಸಂಸ್ಥೆಯ ಚಿತ್ರಗಳ ನಾಯಕಿಯರಿಗೆ ದನಿ ಕೊಟ್ಟಿದ್ದಾರೆ. ಚಿತ್ರರಂಗದಲ್ಲಿ ಹಾಗೂ ನಾಟಕ ರಂಗದಲ್ಲಿ ತಮ್ಮ ವಿಶಿಷ್ಟ ಕಂಠಸಿರಿಗೆ ಹೆಸರುವಾಸಿಯಾಗಿದ್ದಾರೆ. ಆದಿತ್ಯ ಚಿತ್ರದ 'ರಂಭೆ ನೀ ವಯ್ಯಾರದ ರಂಭೆ', ಯಾರೇ ನೀನು ಚೆಲುವೆ ಚಿತ್ರದ 'ಚಕ್ಕೋತ ಚಕ್ಕೋತ', ನಾಗಮಂಡಲ ಚಿತ್ರದ 'ಗೆದಿಯಬೇಕು ಮಗಳಾ' ನಾಗತಿಹಳ್ಳಿ ಚಂದ್ರಶೇಖರ್ ರವರ ನನ್ನ ಪ್ರೀತಿಯ ಹುಡುಗಿ ಚಿತ್ರದ 'ಕಾರ್‌ಕಾರ್' ಮುಂತಾದ ಗೀತೆಗಳಿಂದ ಹಿನ್ನೆಲೆ ಗಾಯಕಿಯಾಗಿ ಚಿತ್ರರಸಿಕರ ಮನಸೂರೆಗೊಂಡಿದ್ದಾರೆ. ಹಿನ್ನೆಲೆಗಾಯನಕ್ಕಾಗಿ ಇವರಿಗೆ ಹಲವು ಪ್ರಶಸ್ತಿ ಪುರಸ್ಕಾರಗಳು ಬಂದಿವೆ. ಈಜಿಪ್ಟ್, ರಷ್ಯ, ಸ್ವೀಡನ್ ನಾಟಕೋತ್ಸವ ಗಳಲ್ಲಿಯೂ ಇವರು ಭಾಗವಹಿಸಿದ್ದಾರೆ. ಎಡಿನ್‌ಬರ್ಗ್‌ನಲ್ಲಿ ನಿರ್ದೇಶಕ ರಾಬರ್ಟ್ ರೇ ಅವರೊಂದಿಗೆ ಮಕ್ಕಳ ನಾಟಕದ ಸಹ ನಿರ್ದೇಶಕಿಯಾಗಿ ಕಾರ್ಯನಿರ್ವಹಿಸಿದ್ದಾರೆ (1977).

ನಾಡಿನಾದ್ಯಂತ ರಂಗಭೂಮಿ ಹಾಗೂ ಚಲನಚಿತ್ರಕ್ಕೆ ಇವರು ಸಲ್ಲಿಸಿರುವ ಸೇವೆಗಾಗಿ ಹಲವು ಪ್ರಶಸ್ತಿಗಳು ಪುರ ಸ್ಕಾರಗಳು ದೊರೆತಿವೆ. ಅವುಗಳಲ್ಲಿ ಮುಖ್ಯವಾದವು ಉತ್ತರ ಪ್ರದೇಶ ಸರ್ಕಾರದ ಸಫ್ದರ್ ಹಷ್ಮಿ ಪ್ರಶಸ್ತಿ (1991), ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ (1996), ದೆಹಲಿಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ (1997), ನಾಗಮಂಡಲ ಚಿತ್ರದ ಕುರುಡವ್ವನ ಪಾತ್ರಾಭಿನಯಕ್ಕಾಗಿ ಇವರಿಗೆ ಕರ್ನಾಟಕ ಸರ್ಕಾರ ನೀಡುತ್ತಿರುವ ಚಲನಚಿತ್ರ ಪ್ರಶಸ್ತಿಯಲ್ಲಿ ಅತ್ಯುತ್ತಮ ಪೋಷಕ ನಟಿ ಪ್ರಶಸ್ತಿ ಲಭಿಸಿದೆ (1996-97). (ಎಸ್.ಜಿ.ಪಿ.)

**ಜಯಸಿಂಹ II :** ಸು.1015-44. ಕಲ್ಯಾಣದ ಚಾಳುಕ್ಯ ಮನೆತನದ ರಾಜ. ಐದನೆಯ ವಿಕ್ರಮಾದಿತ್ಯನ ಕಿರಿಯ ತಮ್ಮ ಮತ್ತು ಉತ್ತರಾಧಿಕಾರಿ. ಸಿಂಗದೇವ ಎಂಬುದು ಇವನ ಇನ್ನೊಂದು ಹೆಸರು. ಒಂದನೆಯ ಜಗದೇಕಮಲ್ಲ ಎಂದೂ ಪ್ರಸಿದ್ಧನಾಗಿರುವ ಈತನಿಗೆ ತ್ರೈಲೋಕ್ಯಮಲ್ಲ, ಮಲ್ಲಿಕಾಮೋದ, ವಿಕ್ರಮಸಿಂಹ ಎಂಬ ಬಿರುದುಗಳೂ ಇದ್ದುವು. ಇವನ ಆಳಿಕೆಯ ಆರಂಭದ ವರ್ಷಗಳಲ್ಲಿ ಪರಮಾರ ವಂಶದ ಭೋಜ, ಕಳಚುರಿ ಗಾಂಗೇಯದೇವ ಮತ್ತು ಚೋಳ ರಾಜೇಂದ್ರ ಒಂದುಗೂಡಿ ಚಾಳುಕ್ಯ ರಾಜ್ಯವನ್ನು ಆಕ್ರಮಿಸುವ ಸನ್ನಾಹ ನಡೆಸಿದರು. ಗೋದಾವರಿ ದಂಡೆಯಲ್ಲಿ ನಡೆದ ಘೋರ ಯುದ್ಧದಲ್ಲಿ ಜಯಸಿಂಹ ಈ ಶತ್ರುಕೂಟವನ್ನು ಹಿಮ್ಮೆಟ್ಟಿಸಿದ. ಇದೇ ಸಂದರ್ಭದಲ್ಲಿ ಚೋಳ ರಾಜೇಂದ್ರ ರಾಜಧಾನಿ ಮಾನ್ಯಖೇಟವನ್ನು ಸುಟ್ಟ. ಭೋಜ ಕೊಂಕಣದ ಮೇಲೆ ದಾಳಿ ಮಾಡಿದ. ಆದರೆ ಶೀಘ್ರದಲ್ಲೇ ಜಯಸಿಂಹ ಚೇತರಿಸಿಕೊಂಡು ತನ್ನ ರಾಜ್ಯವನ್ನು ಸ್ಥಿರಪಡಿಸಿಕೊಂಡ. ಈ ಸಾಧನೆಗಳಿಗೆ ಇವನ ದಂಡನಾಯಕ ವಾವಣರಸ ಮುಖ್ಯ ಕಾರಣನಾಗಿದ್ದ.

ಜಯಸಿಂಹ ತನ್ನ ರಾಜ್ಯದಲ್ಲಿ ಶತ್ರುನಿಗ್ರಹ ಯಶಸ್ವಿಯಾಗಿ ಸಾಧಿಸಿದರೂ ಹೊರಗೆ ಅವರಿನ್ನೂ ಪ್ರಬಲರಾಗಿದ್ದರು. ಅವರಲ್ಲಿ ಚೋಳ ರಾಜೇಂದ್ರ ಸದಾ ದ್ವೇಷ ಮಸೆಯುತ್ತಲೇ ಇದ್ದ. ಈ ಕಾಲದಲ್ಲಿ ಚೋಳರು ವೆಂಗಿಯ ರಾಜಕೀಯದಲ್ಲಿ ಪ್ರಭಾವಿಯಾಗಿದ್ದರು. ಆಗ ಅಲ್ಲಿ

ಆಳುತ್ತಿದ್ದವನು ಚೋಳರ 1ನೆಯ ರಾಜರಾಜ ಚೋಳ ರಾಜೇಂದ್ರನ ಅಳಿಯ. ಆದರೆ ಜಯಸಿಂಹ ವೆಂಗಿಯ 7ನೆಯ ವಿಜಯಾದಿತ್ಯನನ್ನು ಅಲ್ಲಿಯ ಪ್ರಭುವಾಗಿಸಲು ಪ್ರಯತ್ನಿಸಿದ. ಇದರಿಂದಾಗಿ ಚೋಳ ರಾಜೇಂದ್ರನಿಗೂ ಜಯಸಿಂಹನಿಗೂ ಮುಸಂಗಿಯಲ್ಲಿ (ರಾಯಚೂರು ಜಿಲ್ಲೆಯ ಮಸ್ಕಿ) ಘೋರ ಯುದ್ಧ ನಡೆಯಿತು (ಸು.1021). ಮೊದಲು ಚಾಳುಕ್ಯರ ಬಲ ಹಿಂಜರಿದರೂ ಕೊನೆಗೆ ಇವರ ಕೈ ಮೇಲಾಯಿತು. 1031ರ ಹೊತ್ತಿಗೆ ಜಯಸಿಂಹನ ದಂಡನಾಯಕ ಚಾವಣರಸ ವೆಂಗಿಗೆ ನುಗ್ಗಿ ವಿಜಯವಾಡವನ್ನು ಆಕ್ರಮಿಸಿದ್ದ. ಪ್ರಾಯಶಃ ಈ ದಾಳಿ 7ನೆಯ ವಿಜಯಾದಿತ್ಯನ ಪರವಾಗಿ ನಡೆದದ್ದು. ವಿಜಯಾದಿತ್ಯ ವೆಂಗಿ ಸಿಂಹಾಸನವನ್ನೇರಿದ. ಆದರೆ ಈ ಸಾಧನೆ ಬಹುಕಾಲ ನಿಲ್ಲಲಿಲ್ಲ. ಕೆಲವೇ ವರ್ಷಗಳಲ್ಲಿ ಒಂದನೆಯ ರಾಜರಾಜ ಪುನಃ ವೆಂಗಿಯನ್ನು ಗೆದ್ದುಕೊಂಡ.

ಜಯಸಿಂಹ ಸು.1044ರಲ್ಲಿ ಮೃತನಾದ. ಅನಂತರ ಇವನ ಹಿರಿಯ ಮಗ 1ನೆಯ ಸೋಮೇಶ್ವರ ಪಟ್ಟಕ್ಕೆ ಬಂದ. ಇವನಲ್ಲದೆ ಸಮರೈಕಮಲ್ಲನೆಂಬ ಬಿರುದು ಧರಿಸಿದ್ದ ಜಯಸಿಂಹ ಎಂಬ ಇನ್ನೊಬ್ಬ ಪುತ್ರ ಸಹ ಇಮ್ಮಡಿ ಜಯಸಿಂಹನಿಗಿದ್ದ. ಸುಗ್ಗಲದೇವಿ, ನೊಳಂಬ ವಂಶದ ದೇವಲದೇವಿ ಮತ್ತು ಲಕ್ಷ್ಮೀದೇವಿ ಎಂಬುವರು ಇಮ್ಮಡಿ ಜಯಸಿಂಹನ ಪತ್ನಿಯರು. ಸುಗ್ಗಲದೇವಿ ಶೈವ ಪಂಥಾನುಯಾಯಿ ಎಂದು ಶಾಸನಗಳಿಂದ ತಿಳಿಯುತ್ತದೆ. ಜೈನನಾಗಿದ್ದ ಜಯಸಿಂಹ ಈಕೆಯ ಪ್ರಭಾವದಿಂದ ಶೈವಮತವನ್ನವಲಂಬಿಸಿದ ಎಂಬ ಹೇಳಿಕೆ ಬಸವಪುರಾಣದಲ್ಲಿದೆ. ಈಕೆ ದೇವರ ದಾಸಿಮಯ್ಯನೆಂಬ ವೀರಶೈವ ಶರಣನ ಭಕ್ತೆಯಾಗಿದ್ದಳು ಎಂಬ ಹೇಳಿಕೆಯೂ ಉಂಟು. ಜಯಸಿಂಹನ ಮಗಳಾದ ಅವ್ವಲ್ಲದೇವಿ ಯಾದವ ಮಾಂಡಳಿಕ ಮೂರನೆಯ ಭಿಲ್ಲಮನನ್ನು ವರಿಸಿದ್ದಳು. ಜಯಸಿಂಹನ ಅಕ್ಕ ಅಕ್ಕಾದೇವಿ ಕದಂಬ ರಾಜನನ್ನು ಮದುವೆಯಾಗಿದ್ದಳು. ರಣಭೈರವಿ ಎಂಬ ಬಿರುದನ್ನು ಹೊಂದಿ ಪ್ರಾಯಶಃ ಯುದ್ಧ ನಿಪುಣೆಯಾಗಿದ್ದ ಈಕೆ ಕಿಸುಕಾಡನ್ನು ಆಳುತ್ತಿದ್ದಳು.

ಜಯಸಿಂಹನ ಆಸ್ಥಾನದಲ್ಲಿ ಹಿರಿಯ ಅಧಿಕಾರಿಯಾಗಿದ್ದ (ಸಂಧಿವಿಗ್ರಹಿ) ದುರ್ಗಸಿಂಹ ಕನ್ನಡ ಪಂಚತಂತ್ರವನ್ನು ಬರೆದಿದ್ದಾನೆ. ಎರಡನೆಯ ಚಾವುಂಡರಾಯ ಜ್ಯೋತಿಶ್ಶಾಸ್ತ್ರ, ಆಯುರ್ವೇದ, ಪಾಕಶಾಸ್ತ್ರ, ವಾಸ್ತುವಿದ್ಯೆ ಮುಂತಾದ ವಿಚಾರಗಳಿಗೆ ಸಂಬಂಧಿಸಿದ ಸಂಗತಿಗಳಿರುವ ಲೋಕೋಪಕಾರ ಎಂಬ ಗ್ರಂಥವನ್ನು ಕನ್ನಡದಲ್ಲಿ ಬರೆದ. ಜಯಸಿಂಹನ ಆಸ್ಥಾನಿಕನಾಗಿದ್ದ ವಾದಿರಾಜ ಸಂಸ್ಕೃತದಲ್ಲಿ ಯಶೋಧರ ಚರಿತಂ ಎಂಬ ಜೈನಕಾವ್ಯವನ್ನು ರಚಿಸಿದ್ದಾನೆ. (ಕೆ.ಎಸ್.ಎಸ್.,ಟಿ.ಎಸ್.ಎಸ್.ಎನ್.)

**ಜಯಸಿಂಹ III :** ಕಲ್ಯಾಣದ ಚಾಳುಕ್ಯ ಮನೆತನದ ಯುವರಾಜ (ಸು.1072-80). ಮೊದಲನೆಯ ಸೋಮೇಶ್ವರನ ಮಗ. ಈತ ರಾಜನಾಗಿ ಆಳ್ವಿಕೆ ನಡೆಸದಿದ್ದರೂ ಇವನ ಅಣ್ಣ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಪ್ರಸಿದ್ಧಿಗೆ ಬಂದ.

ಎರಡನೆಯ ಸೋಮೇಶ್ವರನ ಆಡಳಿತದ ಕಾಲದಲ್ಲಿ ಮೂರನೆಯ ಜಯಸಿಂಹ ನೊಳಂಬವಾಡಿ ಪ್ರಾಂತ್ಯಕ್ಕೆ ಅಧಿಪತಿಯಾಗಿ 1072ರಲ್ಲಿ ಆಳಿಕೆ ನಡೆಸುತ್ತಿದ್ದನೆಂದೂ ಅವನ ರಾಜಧಾನಿ ಗೌಡವಾಡಿಯಾಗಿತ್ತೆಂದೂ ಚಿತ್ರದುರ್ಗದ ಜಟಿಂಗರಾಮೇಶ್ವರದ ಶಾಸನದಿಂದ ಗೊತ್ತಾಗುತ್ತದೆ. ಈ ಸಂದರ್ಭದಲ್ಲಿ ಈತ ತ್ರೈಲೋಕ್ಯಮಲ್ಲ ನೊಳಂಬ ಪೆರ್ಮಾನಡಿ ಎಂಬ ಬಿರುದನ್ನೂ ಧರಿಸಿದ್ದ. 6ನೆಯ ವಿಕ್ರಮಾದಿತ್ಯ ಸಿಂಹಾಸನವನ್ನೇರಿದ ಮೇಲೆ, ಮೂರನೆಯ ಜಯಸಿಂಹ ಅವನಿಗೆ ಸ್ವಲ್ಪಕಾಲ ನೆರವಿಗೆ ನಿಂತು ರಾಜ್ಯ ವಿಸ್ತರಣೆಯಲ್ಲೂ ದಂಗೆಗಳನ್ನು ಅಡಗಿಸುವುದರಲ್ಲೂ ಸಹಾಯ ಮಾಡಿದ. ಮೂರನೆಯ ಜಯಸಿಂಹ ಬನವಾಸಿ 12000, ಸಾಂತಲಿಗೆ 1000, ಬೆಳ್ವೊಲ 300, ಪುಲಿಗೆರೆ 300 ಮತ್ತು ಬಾಸವಳ್ಳಿ 1000 ಪ್ರದೇಶಗಳನ್ನು 6ನೆಯ ವಿಕ್ರಮಾದಿತ್ಯನ ಕಾಲದಲ್ಲಿ ಮಹಾಮಂಡಳೇಶ್ವರನಾಗಿ 1080ರವರೆಗೆ ಆಳಿಕೆ ನಡೆಸಿದನೆಂದು ಶಾಸನಗಳಿಂದ ಗೊತ್ತಾಗುತ್ತದೆ. ಮಹಾಮಂಡಳೇಶ್ವರನಾಗಿದ್ದ ಕಾಲದಲ್ಲಿ ಇವನಿಗೆ ಯುವರಾಜ ಎಂಬ ಬಿರುದಿತ್ತು. 1080ರವರೆಗೆ ಅಣ್ಣ ತಮ್ಮಂದಿರಲ್ಲಿ ಸ್ನೇಹವಿದ್ದಂತೆ ತೋರುತ್ತದೆ. ಆದರೆ ಅಣ್ಣನಾದ 6ನೆಯ ವಿಕ್ರಮಾದಿತ್ಯನ ಉತ್ತರೋತ್ತರಾಭಿವೃದ್ಧಿ ತಮ್ಮನ ಮನಸ್ಸಿನಲ್ಲಿ ಮಾತ್ಸರ್ಯವನ್ನು ಮೂಡಿಸಿದಂತೆ ತೋರುತ್ತದೆ. ಅಣ್ಣನನ್ನು ಪಟ್ಟದಿಂದ ಕಿತ್ತೊಗೆಯುವ ಹವಣಿಕೆಯಿಂದ ಜಯಸಿಂಹ ದಂಗೆಯೆದ್ದ. ತಮ್ಮನ ವಂಚನೆಯಿಂದ ಪ್ರಕ್ಷುಬ್ಧ ಹೃದಯನಾದ ವಿಕ್ರಮಾದಿತ್ಯ ಸೈನ್ಯ ಸಮೇತನಾಗಿ ಕೃಷ್ಣಾನದೀ ದಡಕ್ಕೆ ನಡೆದ. ಅಲ್ಲಿ ಅವನ ಸಾಮಂತರೂ ಬಂದು ಸೇರಿಕೊಂಡರು. ಅಣ್ಣ ತಮ್ಮಂದಿರೊಳಗೆ ಭೀಕರ ಕದನ ನಡೆಯಿತು. ವಿಕ್ರಮಾದಿತ್ಯ ಗೆದ್ದು, ಜಯಸಿಂಹನನ್ನು ಹಿಡಿದು ಕೊಂಚ ಕಾಲ ಸೆರೆಯಲ್ಲಿಟ್ಟ (ಸು.1080). ಇದರ ಅನಂತರ ಇವನ ವಿಷಯವೇನೂ ತಿಳಿಯುವುದಿಲ್ಲ. ಆದರೆ ಜಯಸಿಂಹ ವಿಕ್ರಮಾದಿತ್ಯನಿಗಿಂತ ಮೊದಲೇ ಮೃತನಾದಂತೆ ತೋರುತ್ತದೆ. (ಕೆ.ಎಸ್.ಎಸ್.)

**ಜರಮಲೆ :** ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲ್ಲೂಕಿನಲ್ಲಿ ಕೂಡ್ಲಿಗಿಯ ನೈಋತ್ಯಕ್ಕೆ ಸು.15ಕಿಮೀ ದೂರದಲ್ಲಿರುವ ಒಂದು ಬೆಟ್ಟ ಹಾಗೂ ಹಳ್ಳಿ. ಸಮುದ್ರಮಟ್ಟದಿಂದ 2,750' ಎತ್ತರವಿದ್ದು ಸುತ್ತಲ ಪ್ರದೇಶದಿಂದ 800' ಮೇಲ್ಮಟ್ಟದಲ್ಲಿರುವ ಈ ಬೆಟ್ಟ ಸುತ್ತಲ ಪ್ರದೇಶಕ್ಕೆ ಮುಖ್ಯ ಗುರುತು ತಾಣದಂತಿದೆ. ಬೆಟ್ಟದ ಮೇಲೆ ಒಂದು ಕೋಟೆ ಇದೆ. ಅದು ಬಹುಮಟ್ಟಿಗೆ ಶಿಥಿಲವಾಗಿದೆ.

ಜರಮಲೆ ಹಿಂದೊಮ್ಮೆ ಪಾಳೆಯಗಾರರ ಆವಾಸಸ್ಥಾನವಾಗಿತ್ತು. ಈ ಪಾಳೆಯಗಾರರ ಮೊದಲಿಗ ಪೆನ್ನಪ್ಪನಾಯಕ. ಇವನು ವಿಜಯನಗರದ ಅಚ್ಯುತರಾಯನ ಕಾಲದಲ್ಲಿ ದಂಗೆಕೋರ ಮುಖಂಡನೊಬ್ಬನನ್ನು ಅಡಗಿಸುವುದರಲ್ಲಿ ಸಹಕರಿಸಿದ್ದರಿಂದ ಜರಮಲೆಯನ್ನು ಬಳುವಳಿಯಾಗಿ ಪಡೆದನಲ್ಲದೆ, 15300 ಪಗೋಡ ಬೆಲೆಬಾಳುವ ವೈಯಕ್ತಿಕ ಜಹಗೀರಿಯನ್ನೂ 35150 ಪಗೋಡ ಬೆಲೆಬಾಳುವ ಭೂಮಿಯನ್ನೂ ಬಹುಮಾನವಾಗಿ ಪಡೆದ. ಜರಮಲೆಯ ಪಾಳೆಯಗಾರರು ವಿಜಯನಗರದ ಪ್ರಭುತ್ವಕ್ಕೆ ಅಧೀನರಾಗಿದ್ದರು. ಅವರು ಯುದ್ಧ ಕೈಗೊಂಡ ಸಮಯಗಳಲ್ಲಿ 500 ಅಶ್ವಗಳು ಮತ್ತು 3000 ಕಾಲಾಳು ಸೈನ್ಯವನ್ನು ಒದಗಿಸುವ ಕರಾರು ಮಾಡಿಕೊಂಡಿದ್ದರು.

ವಿಜಯನಗರದ ಪತನದ ಅನಂತರ ಜರಮಲೆಯ ಅನೇಕ ಭಾಗಗಳು ಬಿಜಾಪುರದ ಆದಿಲ್ ಷಾನ ಕೈವಶವಾದವು. ಉಳಿದ ಸ್ವಲ್ಪ ಪ್ರದೇಶಗಳು ಇವರ ವಶದಲ್ಲಿದ್ದರೂ ಅವುಗಳಿಂದ ಬಂದ ಬಹುಭಾಗದ ಆದಾಯವನ್ನು ಸುಲ್ತಾನನಿಗೆ ಒಪ್ಪಿಸಬೇಕಿತ್ತು. ವರ್ಷವೊಂದಕ್ಕೆ 30,000 ರೂಪಾಯಿಗಳಲ್ಲದೆ ಯುದ್ಧ ಸಮಯದಲ್ಲಿ 300 ಅಶ್ವಗಳು ಮತ್ತು 3,000 ಸೈನಿಕರನ್ನು ಒದಗಿಸುವ ಒಪ್ಪಂದವಿತ್ತು. ಬಿಜಾಪುರದ ಪತನಾನಂತರ ಈ ಪಾಳೆಯಗಾರರು ಮುಗಲರ ಅಧೀನರಾದರು. ಔರಂಗಜೇಬನ ಕಾಲದಲ್ಲಿ ವಾರ್ಷಿಕ ತೆರಿಗೆ 50,000 ರೂಪಾಯಿಗಳಿಗೆ ಏರಿತು.

ಆದರೆ 1742ರಲ್ಲಿ ಚಿತ್ರದುರ್ಗ ಮತ್ತು ಹರಪನಹಳ್ಳಿಯ ಪಾಳೆಯಗಾರರು ಜರಮಲೆಯವರ ಆಸ್ತಿಪಾಸ್ತಿಯನ್ನೆಲ್ಲ ಕಿತ್ತುಕೊಂಡು ಕೋಟೆಯ ಸುತ್ತ ಇದ್ದ ಕೆಲವೇ ಹಳ್ಳಿಗಳನ್ನು ಮಾತ್ರ ಬಿಟ್ಟರು. ಅನಂತರ ಕೇವಲ ಹತ್ತು ವರ್ಷಗಳಲ್ಲಿ ಚಿತ್ರದುರ್ಗದ ಪಾಳೆಯಗಾರನ ಆಶ್ರಯ ಕೇಳುವ ಸ್ಥಿತಿ ಇವರಿಗೆ ಒದಗಿ ಬಂತು. 1767ರಲ್ಲಿ ಚಿತ್ರದುರ್ಗದ ಪಾಳೆಯಗಾರ ತನಗೆ ಕೊಟ್ಟ ತೊಂದರೆಗಳನ್ನೂ ನಡೆಸಿಕೊಂಡ ಬಗೆಯನ್ನೂ ಹೈದರ್ ಅಲಿಯಲ್ಲಿ ನಿವೇದಿಸಿಕೊಂಡ. ಇದನ್ನು ತಿಳಿದ ಚಿತ್ರದುರ್ಗದ ಪಾಳೆಯಗಾರನು ಜರಮಲೆಯ ಪಾಳೆಯಗಾರನನ್ನು ಕೊಂದು ತನ್ನ ಸೇಡು ತೀರಿಸಿಕೊಂಡ. ಜರಮಲೆಯ ಪಾಳೆಯಗಾರನ ಮಗ ಹೆದರಿ ಸೊಲ್ಲಾಪುರಕ್ಕೆ ಓಡಿಹೋದ.

1777ರಲ್ಲಿ ಹೈದರ್ ಅಲಿ ಚಿತ್ರದುರ್ಗವನ್ನು ವಶಪಡಿಸಿಕೊಳ್ಳುವ ಸಂದರ್ಭದಲ್ಲಿ ತಲೆಮರೆಸಿಕೊಂಡು ಹೋಗಿದ್ದ ಜರಮಲೆಯ ಪಾಳೆಯಗಾರನ ಮಗ ಹಿಂತಿರುಗಿ ಬಂದು ದುರ್ಗದ ಮುತ್ತಿಗೆಯಲ್ಲಿ ಸಹಕರಿಸಿದ್ದ. ಇದರಿಂದ ಸಂತೋಷಗೊಂಡ ಹೈದರ್ ಕೈ ಬಿಟ್ಟುಹೋಗಿದ್ದ ಜರಮಲೆಯನ್ನು ಅವನಿಗೆ ಹಿಂದಕ್ಕೆ ಕೊಟ್ಟು ವರ್ಷವೊಂದಕ್ಕೆ 2000 ಪಗೋಡ ಕಾಣಿಕೆಯನ್ನು ಒಪ್ಪಿಸುವಂತೆ ಆಜ್ಞಾಪಿಸಿದ. 1780ರಲ್ಲಿ ನಡೆದ ಮೈಸೂರು ಕದನದಲ್ಲಿ 100 ಕಾಲಾಳುಗಳೊಂದಿಗೆ ಆತ ಯುದ್ಧದಲ್ಲಿ ಭಾಗವಹಿಸಿದ್ದನೆಂದು ತಿಳಿದುಬರುತ್ತದೆ.

ಮುಂದೆ ಟಿಪ್ಪುಸುಲ್ತಾನ ಪಾಳೆಯಗಾರನಿಗೆ ಕೊಟ್ಟಿದ್ದ ಪ್ರದೇಶಗಳನ್ನು ಹಿಂದಕ್ಕೆ ಪಡೆದು ಅವನನ್ನು ಶ್ರೀರಂಗಪಟ್ಟಣಕ್ಕೆ ಬರಮಾಡಿಕೊಂಡು ತನ್ನಲ್ಲಿ ಒಬ್ಬ ಸಾಮಾನ್ಯ ಅಧಿಕಾರಿಯನ್ನಾಗಿ ನೇಮಿಸಿಕೊಂಡ. ಟಿಪ್ಪು ತನ್ನನ್ನು ಮತಾಂತರಗೊಳಿಸುವನೆಂಬ ವದಂತಿಯನ್ನು ತಿಳಿದು ಜರಮಲೆಯ ಪಾಳೆಯಗಾರ ಸೊಲ್ಲಾಪುರಕ್ಕೆ ಓಡಿಹೋದ. ಟಿಪ್ಪು ಮತ್ತು ಮರಾಠರಿಗೆ ನಡೆದ ಎರಡನೆಯ ಮೈಸೂರು ಯುದ್ಧದ ಸಮಯದಲ್ಲಿ ಜರಮಲೆ ಮರಾಠರ ವಶವಾಯಿತು. ಪಾಳೆಯಗಾರ ಅವರಿಂದ ಮತ್ತೆ ಜರಮಲೆಯನ್ನೂ ಪಡೆದು 38000 ರೂಪಾಯಿ ಪೊಗದಿಯನ್ನು ಅವರಿಗೆ ಕೊಡಲೊಪ್ಪಿದ್ದ. ಆದರೆ 1792ರಲ್ಲಿ ಮರಾಠರಿಗೂ ಟಿಪ್ಪುವಿಗೂ ಏರ್ಪಟ್ಟ ಶಾಂತಿಸಂಧಾನದಿಂದಾಗಿ ಟಿಪ್ಪುವಿನಿಂದ ಪಾಳೆಯಗಾರನ ಉಚ್ಚಾಟನೆಯಾಯಿತು.

1799ರ ವಿಭಜನೆಯ ಒಪ್ಪಂದದ ಪ್ರಕಾರ ಜರಮಲೆ ಹೈದರಾಬಾದು ನಿಜಾಮನ ಆಡಳಿತಕ್ಕೆ ಸೇರಿತು. ಪಾಳೆಯಗಾರ ಕೆಲವು ಹಳ್ಳಿಗಳನ್ನು ನಿಜಾಮನಿಂದ ಗೇಣಿಯಾಗಿ ಪಡೆದು ಕೊನೆಗೆ ಕೊಡಬೇಕಾದ ಹಣವನ್ನು ಬೊಕ್ಕಸಕ್ಕೆ ಕಟ್ಟಲಾರದೆ 1800ರಲ್ಲಿ ಬಳ್ಳಾರಿ ಜಿಲ್ಲೆ ಕಂಪನಿ ಸರ್ಕಾರದ ವಶವಾದ ಸಂದರ್ಭದಲ್ಲಿ ಕಂಪನಿ ಸರ್ಕಾರದ ಆಶ್ರಯವನ್ನು ಕೋರಿದ. ಈ ವಂಶದ ಮೂರು ಮಂದಿ ಸರ್ಕಾರದಿಂದ ಸ್ವಲ್ಪ ಕಾಲ ಸಂಭಾವನೆಯನ್ನು ಪಡೆದರೆಂದು ತಿಳಿದುಬರುತ್ತದೆ. (ಎಸ್.ಎನ್.ಜಿ.)

**ಜಲದುರ್ಗ :** ರಾಯಚೂರು ಜಿಲ್ಲೆ ಲಿಂಗಸುಗೂರು ತಾಲ್ಲೂಕಿನಲ್ಲಿ ಕೃಷ್ಣಾ ನದಿಯ ಒಂದು ನಡುಗಡ್ಡೆಯ ಮೇಲೆ ಕಟ್ಟಿರುವ ಕೋಟೆ. ಲಿಂಗಸುಗೂರು ಹಾಗೂ ಸುರಪುರ ತಾಲ್ಲೂಕುಗಳ ಗಡಿಯಲ್ಲಿ ಲಿಂಗಸುಗೂರಿನಿಂದ ಸು.16ಕಿಮೀ ಹಾಗೂ ನಾರಾಯಣಪುರದ ಬಳಿಯ ಕೃಷ್ಣಾಮೇಲ್ದಂಡೆಯ ಯೋಜನೆಯ ಅಣೆಕಟ್ಟಿನಿಂದ ಸು.9ಕಿಮೀ ಅಂತರದಲ್ಲಿದೆ. ಛಾಯಾಭಗವತಿ (ನೋಡಿ) ದೇವಸ್ಥಾನ ದಾಟಿದ ಮೇಲೆ ಸು.3ಕಿಮೀ ಅಂತರದಲ್ಲಿ ಕೃಷ್ಣಾನದಿ ಎರಡು ಟಿಸಿಲಾಗಿ ಹರಿದು ಮತ್ತೆ ಸುಲ್ತಾನಪುರದ ಬಳಿಯಲ್ಲಿ ಒಂದಾಗುತ್ತದೆ. ಈ ಎರಡು ಟಿಸಿಲುಗಳ ಮಧ್ಯದಲ್ಲಿನ ಬೆಟ್ಟದ ಮೇಲೆ ಜಲದುರ್ಗದ ಕೋಟೆ ನಿಂತಿದೆ. ಅಲ್ಲಿ ಇದ್ದ ದೇವಗಿರಿಯ ಯಾದವರ ಕಾಲದ ಶಾಸನವೊಂದರ ಆಧಾರದ ಮೇಲೆ ಈ ಕೋಟೆಯನ್ನು ಸು. 12ನೆಯ ಶತಮಾನದಲ್ಲಿ ಕಟ್ಟಲಾಯಿತೆಂದು ಹೇಳಲಾಗಿದೆ. ಜಲದುರ್ಗ ಎಂಬ ಹೆಸರು ಅನ್ವರ್ಥ ಎನಿಸಿದೆ, ಸುಂದರವಾಗಿದೆ.

ಕೃಷ್ಣಾ ನದಿಯ ಈ ದ್ವೀಪದಲ್ಲಿ ಸು.300-400 ಅಡಿಗಿಂತಲೂ ಹೆಚ್ಚು ಎತ್ತರದಲ್ಲಿ ಬೆಟ್ಟದ ಮೇಲೆ ಕೋಟೆಯನ್ನು ಕಟ್ಟಿದೆ. ಇದು ಏಳು ಸುತ್ತಿನ ಕೋಟೆ. ಇದು ಅಲ್ಲಲ್ಲಿ ಈಗ ಬಿದ್ದಿದೆ. ಒಂದೊಂದು ಸುತ್ತಿಗೂ ಒಂದೊಂದು ಮಹಾದ್ವಾರ (ಅಗಸೆ ಬಾಗಿಲು) - ಹೀಗೆ ಏಳು ದ್ವಾರಗಳು ಇವೆ. ಮೊದಲಿನ ದ್ವಾರ ದಾಟಿದ ಕೂಡಲೆ ದೇವಿಯ ಸಣ್ಣ ದೇವಾಲಯವಿದೆ. ಕೋಟೆಯ ಒಳಗೆ ಕೊನೆಯ ಬಾಗಿಲು ದಾಟಿದ ಮೇಲೆ ಒಂದೆಡೆ ಸಂಗಮೇಶ್ವರನ (ಬಸವೇಶ್ವರ) ದೇವಸ್ಥಾನವಿದೆ. ದೇವಸ್ಥಾನದ ಆವರಣದಲ್ಲಿಯೇ ಒಂದು ಸಣ್ಣ ಪುಷ್ಕರಿಣಿ ಇದೆ. ಯಾತ್ರಿಕರು ತಮ್ಮ ರುಮಾಲು ಬಿಚ್ಚಿ ನೀರನ್ನು ಸೇದಿ ದೇವರನ್ನು ಪೂಜಿಸುವರು. ನದಿಯ ನೀರು ಬಳಸುವುದು ಇಲ್ಲಿ ನಿಷಿದ್ಧ. ಹಳೆಯ ಮನೆ-ಮಹಲು, ಎಲ್ಲ ಈಗ ಬಿದ್ದು ಹೋಗಿವೆ. ಒಂದು ಸ್ಥಳವನ್ನು ಮುದ್ದಿನ ಮಹಲು ಎಂದು ತೋರಿಸಲಾಗುತ್ತದೆ. ಇನ್ನೊಂದೆಡೆ ಜೈಲು, ಅದರ ಬಳಿಯಲ್ಲೆ ಸೂಲ್ದ (ಶೂಲದ) ಕಲ್ಲು ಇದೆ. ಶೂಲದ ಕಲ್ಲಿಗೆ ಒಂದು ತೊಟ್ಟಿಲು ಇತ್ತಂತೆ. ಶಿಕ್ಷೆಗೊಳಗಾದ ವ್ಯಕ್ತಿಯನ್ನು ಅದರಲ್ಲಿ ಕೂರಿಸಿ ತೂಗಿಬಿಡುತ್ತಿದ್ದರಂತೆ. ಹಾಗೆ ಕೆಳಕ್ಕೆ ನೂಕಿದವ ಬಿದ್ದು ಹೆಣವಾಗಿ ನದಿಯ ಅತ್ಯಂತ ಆಳವಾದ ಮಡುವಿಗೆ ಉರುಳಿ ಬೀಳುತ್ತಿದ್ದನಂತೆ. ಈ ಭೂಭಾಗದಲ್ಲಿ ನಿಂತು ಸುತ್ತಲಿನ ಪ್ರದೇಶವನ್ನು ನೋಡುವುದೂ ಒಂದು ಆನಂದದಾಯಕ ಅನುಭವ. ದಕ್ಷಿಣ, ಪಶ್ಚಿಮ ಹಾಗೂ ಉತ್ತರ ದಿಕ್ಕುಗಳಲ್ಲಿ ಕೃಷ್ಣೆಯ ಕಪ್ಪು ನೀರು. ಪೂರ್ವದಲ್ಲಿ ವೃಕ್ಷರಾಜಿಯ ವಿಸ್ತಾರದ ಹಸುರು ಕಣ್ಣಿಗೆ ಕಟ್ಟುತ್ತವೆ. ಮೆಡೋಸ್ ಟೇಲರನ ನೋಬಲ್ ಕ್ವೀನ್ ಎಂಬ ಕಾದಂಬರಿಯಲ್ಲಿ ಈ ದುರ್ಗ ಸುಂದರವಾಗಿ ವರ್ಣಿತವಾಗಿದೆ.

ಜಲದುರ್ಗ ಯಾದವರ, ವಿಜಯನಗರದ ಹಾಗೂ ಆದಿಲ್‌ಶಾಹಿಗಳ ಕಾಲದಲ್ಲಿ ಒಂದು ಮುಖ್ಯ ಕೋಟೆಯಾಗಿತ್ತು. ಇದರ ಪಕ್ಕದಲ್ಲಿ ನದಿಯ ಆಚೆ ತಾಳೀಕೋಟೆ ಕದನ ಜರುಗಿದ ರಕ್ಕಸತಂಗಡಿ ಹಾಗೂ ತಂಗಡಬೈಲ ಅಮ್ಮಾಪುರದ ಮೈದಾನ, ಪಶ್ಚಿಮದಲ್ಲಿ ಅತಿಪ್ರಸಿದ್ಧ ಛಾಯಾಭಗವತಿ ತೀರ್ಥಕ್ಷೇತ್ರ ಇವೆ. ಅದರ ಪಕ್ಕದಲ್ಲಿಯೇ ಸ್ವಲ್ಪ ದೂರದಲ್ಲಿ ರಮಣೀಯವಾದ ಧನುಷ್ಕೋಟಿ ಎಂಬ ಜಲಪಾತವಿದೆ. ಇದನ್ನು ಜಲದುರ್ಗದ ಜಲಪಾತ ಎಂದೂ ಹೇಳಲಾಗುತ್ತದೆ. ಇದು ಗುಲ್ಬರ್ಗ ಜಿಲ್ಲೆ ಸುರಪುರ ತಾಲ್ಲೂಕಿನ ಗಡಿಯಲ್ಲಿದೆ; ಕೃಷ್ಣಾನದಿಯ ಜಲಪಾತಗಳಲ್ಲಿ ಇದಕ್ಕೊಂದು ವಿಶಿಷ್ಟ ಸ್ಥಾನವಿದೆ. ಇಲ್ಲಿ ನದಿ ಸು.200 ಅಡಿ ಎತ್ತರದಿಂದ ಕೆಳಕ್ಕೆ ಧುಮುಕುತ್ತದೆ. ಜಲದುರ್ಗವನ್ನು ನೋಡಲು ಹೋದವರಿಗೆ ಇದೊಂದು ಕಣ್ಸವಿ ತಾಣ. (ಎಸ್.ಜಿ.ಎ.)

**ಜವರಪ್ಪಗೌಡ, ಪಿ.ಎನ್. :** ಸು.1916-2003. ಹಿರಿಯ ಸ್ವಾತಂತ್ರ್ಯ ಹೋರಾಟಗಾರರು, ಸಮಾಜ ಸೇವಕರು, ಪತ್ರಕರ್ತರು. ತಂದೆ ನರಸೇಗೌಡ, ತಾಯಿ ಕರಿಯಮ್ಮ. ಈ ದಂಪತಿಗಳ ಏಳು ಮಕ್ಕಳಲ್ಲಿ ಜವರಪ್ಪಗೌಡರು



ಮೊದಲ ಗಂಡುಮಗು, ಎರಡನೆಯ ಮಗು. ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿಗೆ ಸೇರಿದ ಪಾಲ ಗ್ರಹಾರ ಇವರ ಹುಟ್ಟೂರು. ಶಾಲೆಯಾಗಲಿ ರಸ್ತೆಯಾಗಲಿ ಇಲ್ಲದಿದ್ದ ಆ ಪುಟ್ಟ ಹಳ್ಳಿಯಲ್ಲಿ ಗೌಡರ ತಂದೆ ನರಸೇಗೌಡರ ಪ್ರಯತ್ನದಿಂದ ಪ್ರಾರಂಭವಾದ ಕೂಲಿಮಠ ದಲ್ಲಿ, ಹರಡಿದ ಮರಳಿನ ಮೇಲೆ ತೋರುಬೆರಳಿನಿಂದ ಬರೆಯುವ ವಿಧಾನದಲ್ಲಿ ಇವರ ಅಕ್ಷರಾಭ್ಯಾಸವಾಯಿತು. ಅನಂತರ ನಾಗಮಂಗಲದ ಶಾಲೆಯೊಂದರಲ್ಲಿ ಎಂಟನೆಯ ತರಗತಿಯವರೆಗೆ (ಲೋಯರ್ ಸೆಕೆಂಡರಿ) ವಿದ್ಯಾಭ್ಯಾಸ ಮಾಡಿದರು. ಆ ಸಂದರ್ಭದಲ್ಲಿ ಸ್ವಾತಂತ್ರ್ಯ ಚಳವಳಿ ಕಾವೇರತೊಡಗಿತ್ತು. ದೇಶದ ತುಂಬ ಮಹಾತ್ಮ ಗಾಂಧಿಯವರ ಹೆಸರು ಮೊಳಗುತ್ತಿತ್ತು. ಅವರ ಆದರ್ಶಗಳು ಎಳೆಯ ಮನಸ್ಸುಗಳನ್ನು ಸೂಜಿಗಲ್ಲಿನಂತೆ ಆಕರ್ಷಿಸತೊಡಗಿತ್ತು. ಇವರೂ ಇಂಥ ಸೆಳೆತಕ್ಕೆ ಒಳಗಾದರು. ಗೆಳೆಯರೊಡನೆ ಚಳವಳಿಗಳಲ್ಲಿ ಮಗ ಭಾಗವಹಿಸುತ್ತಿರುವ ಸುದ್ದಿ ಕಿವಿಗೆ ಬಿದ್ದು ತಂದೆ ನರಸೇಗೌಡರು ಕೆಂಡಮಂಡಲವಾಗುತ್ತಿದ್ದರು. ಆದರೆ ಇವರಿಗೆ ತಾಯಿಯ ರಕ್ಷಣೆ ಹಾಗೂ ಬೆಂಬಲಗಳಿದ್ದವು.

ಸ್ವಾತಂತ್ರ್ಯ ಚಳವಳಿಯ ಆಕರ್ಷಣೆಯಿಂದಾಗಿ ಇವರು ತಮ್ಮ ವಿದ್ಯಾಭ್ಯಾಸವನ್ನು ತೊರೆದರು. ಆ ಸಂದರ್ಭದಲ್ಲೇ ಪ್ರಕಟವಾದ ಕುವೆಂಪು ಅವರ ಹಾಳೂರು ಕೃತಿ ಇವರ ಮೇಲೆ ಅಪಾರ ಪ್ರಭಾವ ಬೀರಿತು. ತಮ್ಮ ಹೋರಾಟಕ್ಕೆ ಪೂರಕವಾಗಿ ಇವರು ಹಾಳೂರಿನ ಕವನಗಳನ್ನು ಬಳಸಿಕೊಳ್ಳುತ್ತಿದ್ದರು.

ಶಿವಪುರದ ಧ್ವಜಸತ್ಯಾಗ್ರಹದ ಪ್ರಮುಖ ಕಾರ್ಯಕರ್ತರಾಗಿ ಗೌಡರು ಹೋರಾಡಿದ್ದರು. ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಬೇಕೆಂಬ ಹೋರಾಟದಲ್ಲಿಯೂ ಇವರದು ಪ್ರಮುಖ ಪಾತ್ರ. ಕ್ವಿಟ್ ಇಂಡಿಯಾ ಚಳವಳಿ, ವಿದುರಾಶ್ವತ್ಥ ಸಮಾವೇಶ, ಇರ್ವಿನ್ ನಾಲೆ ಚಳವಳಿ, ವರುಣಾ ನಾಲಾ ಪ್ರತಿಭಟನೆ, ಗೋಕಾಕ್ ಚಳವಳಿ - ಹೀಗೆ ಇವರು ಭಾಗವಹಿಸಿದ ಚಳವಳಿಗಳು ಹಲವು. ಒಟ್ಟು ಹತ್ತು ವರ್ಷಗಳಿಗೂ ಹೆಚ್ಚು ಕಾಲದ ಸೆರೆವಾಸ ಅನುಭವಿಸಿದ್ದರು. ಆ ಅವಧಿಯಲ್ಲಿ ಇವರು ಕರ್ನಾಟಕದ ಎಲ್ಲ ಸೆರೆಮನೆಗಳಲ್ಲೂ ಇದ್ದದ್ದು ಒಂದು ದಾಖಲೆ.

ಹಳೆಯ ಮೈಸೂರು ಸಂಸ್ಥಾನದಲ್ಲಿ ಕರ್ನಾಟಕ ಏಕೀಕರಣದ ಬಗ್ಗೆ ಅಷ್ಟಾಗಿ ಒಲವು ಇರಲಿಲ್ಲ. ಪರಿಣಾಮವಾಗಿ ಅಲ್ಲಲ್ಲಿ ಏಕೀಕರಣದ ವಿರುದ್ಧ ಹೋರಾಟಗಳು ನಡೆಯುತ್ತಿದ್ದುವು. 1952ರಲ್ಲಿ ಎಚ್.ಕೆ.ವೀರಣ್ಣ ಗೌಡರ ನೇತೃತ್ವದಲ್ಲಿ ನಡೆದ ಅಂಥ ಚಳವಳಿಯಲ್ಲಿ ಇವರದು ಪ್ರಮುಖ ಪಾತ್ರ. ಅದೇ ಕಾಲದಲ್ಲಿ ಅನಾರೋಗ್ಯಕ್ಕೆ ತುತ್ತಾದ ಇವರು ಚಿಕಿತ್ಸೆಗಾಗಿ ಬೆಂಗಳೂರಿಗೆ ಹೋದರು. ಚೇತರಿಸಿಕೊಂಡ ಮೇಲೆ ಬೆಂಗಳೂರಿನಲ್ಲೇ ಒಂದು ಮುದ್ರಣಾಲಯ ತೆರೆದು ವಿಶ್ವಾಮಿತ್ರ ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು. ಅದು ಏಕೀಕರಣವನ್ನು ವಿರೋಧಿಸುವ ಸಲುವಾಗಿಯೇ ಹುಟ್ಟಿಕೊಂಡ ಪತ್ರಿಕೆಯಾಗಿತ್ತು. ಏಕೀಕರಣದ ವಿರುದ್ಧ ಸತತವಾಗಿ ಲೇಖನಗಳು ಅದರಲ್ಲಿ ಕಾಣಿಸಿಕೊಂಡುವು. ಆದರೆ ಕಡೆಗೂ ಹೋರಾಟ ಯಶಸ್ವಿಯಾಗಲಿಲ್ಲ. ಕೆ.ವಿ.ಶಂಕರಗೌಡ, ಎಂ.ಕೆ.ಶಿವನಂಜಪ್ಪ, ಜಿ.ಎಸ್.ಬೊಮ್ಮೇಗೌಡ ಅವರುಗಳ ಪ್ರೇರಣೆಯಿಂದ ಮತ್ತೆ ಮಂಡ್ಯಕ್ಕೆ ವಾಪಸಾಗಿ ಮುದ್ರಣಾಲಯ ಸ್ಥಾಪಿಸಿ ನೆಲೆನಿಂತರು.

ತಂದೆ ನರಸೇಗೌಡರ ಸಹಕಾರಿ ಗುಣ ಮತ್ತು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗಿಯಾದ ಪರಿಣಾಮವಾಗಿ ಇವರು ಜಿಲ್ಲೆಯ ಸಹಕಾರಿ ಚಳವಳಿಯಲ್ಲಿ ಪ್ರಮುಖರಲ್ಲೊಬ್ಬರಾಗಿ ದುಡಿದರು. ಮಂಡ್ಯದ ರೈತ ಸಹಕಾರ ಸಂಘ, ಡಿಸಿಸಿ ಬ್ಯಾಂಕ್, ಪಿ.ಇ.ಎಸ್. ಶಿಕ್ಷಣ ಸಂಸ್ಥೆ ಮುಂತಾದ ಹಲವು ಸಂಸ್ಥೆಗಳ ಹಿಂದೆ ಇವರ ಶ್ರಮವಿತ್ತು.

ಗೌಡರು ಅನಕ್ಷರತೆಯ ವಿರುದ್ಧ ಸತತವಾಗಿ ಹೋರಾಡಿದರು. ಮಂಡ್ಯಕ್ಕೆ ವಾಪಸಾಗಿ ಮುದ್ರಣಾಲಯವನ್ನು ನಡೆಸುತ್ತಿದ್ದ ಕಾಲದಲ್ಲಿಯೇ ವಯಸ್ಕರ ಶಿಕ್ಷಣದ ಸಕ್ರಿಯ ಕಾರ್ಯಕರ್ತರಾಗಿ ಸ್ವಯಂ ಪ್ರೇರಣೆಯಿಂದ ಅನಕ್ಷರಸ್ಥ ವಯಸ್ಕರನ್ನು ಸಂಘಟಿಸುವುದು, ಅಕ್ಷರ ಕಲಿಯಲು ಪ್ರೇರೇಪಿಸುವುದು, ಅವರಿಗಾಗಿ ರಾತ್ರಿ ಶಾಲೆಗಳನ್ನು ನಡೆಸುವುದು ಮುಂತಾದ ಕಾರ್ಯಗಳಲ್ಲಿ ತೊಡಗಿದ್ದರು. ಜೊತೆ ಜೊತೆಗೇ ಜನವಾಣಿ ಎಂಬ ಪತ್ರಿಕೆಗೆ ವರದಿಗಾರರಾಗಿಯೂ ಸೇವೆ ಸಲ್ಲಿಸುತ್ತಿದ್ದರು. ಅಧಿಕಾರದಿಂದ ದೂರ ಉಳಿಯುವುದೇ ಇವರ ಪ್ರವೃತ್ತಿಯಾಗಿತ್ತು. ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿ ನೇಮಕವಾದ ಇವರು ಹಲವು ದಾಖಲೆಗಳನ್ನು ಸಾಧಿಸಿದರು. ಸಂಸ್ಥೆಯ ಶ್ರೇಷ್ಠಮಟ್ಟದ ಕಾರ್ಯವನ್ನು ಗಮನಿಸಿ "ನೆಹರು ರಾಷ್ಟ್ರೀಯ ಸಾಕ್ಷರತಾ ಪ್ರಶಸ್ತಿ" ಇವರನ್ನು ಹುಡುಕಿಕೊಂಡು ಬಂತು. ಸಂಯುಕ್ತ ಕರ್ನಾಟಕ ಪತ್ರಿಕೆಯ ಬೆಂಗಳೂರು ಮುದ್ರಣ ಪ್ರಾರಂಭವಾದಾಗಿನಿಂದ (1947-48) 1980ರವರೆಗೆ ಅದರ ವರದಿ ಗಾರರಾಗಿದ್ದರು. ಪತ್ರಕರ್ತರಾಗಿ ಇವರದು ಐವತ್ತು ವರ್ಷಗಳ ಅನುಭವ.

ಇವರು ಕುವೆಂಪು ಅವರ ಮಂತ್ರಮಾಂಗಲ್ಯ ವಿವಾಹ ವಿಧಾನದಿಂದ ಬಹಳವಾಗಿ ಪ್ರಭಾವಿತರಾಗಿದ್ದರು. 1976ರಲ್ಲಿ ಪತ್ನೀಸಮೇತರಾಗಿ ಕುವೆಂಪು ಅವರನ್ನು ಭೇಟಿ ಮಾಡಿದ ಮೇಲೆ ಮಂತ್ರ ಮಾಂಗ್ಯಲದ ಹರಿಕಾರರಾಗಿ ರೂಪುಗೊಂಡರು. 1977ರಲ್ಲಿ ತಮ್ಮ ಮೊದಲ ಮಗ ಚೈತನ್ಯಕುಮಾರ್‌ನ ಮದುವೆಯನ್ನು ಮಂತ್ರಮಾಂಗಲ್ಯ ವಿಧಾನದಲ್ಲಿ ಮಾಡಿದರು. ಮಂಡ್ಯ ಜಿಲ್ಲೆಯಲ್ಲಿ ಅದು ಆ ಬಗೆಯ ಮೊದಲ ಮದುವೆಯಾಗಿತ್ತು. ಸಾಮಾಜಿಕ ಕ್ರಾಂತಿಯೊಂದನ್ನು ತನ್ನ ಒಡಲಲ್ಲಿ ಹುದುಗಿಸಿಕೊಂಡಿದ್ದ ಮಂತ್ರಮಾಂಗಲ್ಯ ವಿಧಾನವು ಹಳ್ಳಿಹಳ್ಳಿಗೂ ವ್ಯಾಪಿಸಿಕೊಳ್ಳಬೇಕೆಂಬ ಉದ್ದೇಶದಿಂದ ಇವರು ಅದರ ಸಾವಿರಾರು ಪ್ರತಿಗಳನ್ನು ಮುದ್ರಿಸಿ ಉಚಿತವಾಗಿ ಹಂಚಿದರು. ಇವರ ಈ ಸಾಮಾಜಿಕ ಸೇವೆಯ ಪರಿಣಾಮವಾಗಿ ಮಂಡ್ಯ ಜಿಲ್ಲೆಯೊಂದರಲ್ಲಿ 25 ಸಾವಿರಕ್ಕೂ ಹೆಚ್ಚು ಮದುವೆಗಳು ಮಂತ್ರಮಾಂಗಲ್ಯ ವಿಧಾನದಲ್ಲಿ ನಡೆದವೆಂದು ತಿಳಿದುಬರುತ್ತದೆ.

ಕುವೆಂಪು ಅವರ ಬಗ್ಗೆ ಇವರಿಗೆ ಅಪಾರ ಅಭಿಮಾನ. ಮಂಡ್ಯದಲ್ಲಿ ಕುವೆಂಪು ಅವರ ಆಳುದ್ದದ ಪ್ರತಿಮೆ ಸ್ಥಾಪಿಸುವಲ್ಲಿ ಇವರದೇ ಮುಖ್ಯ ಪಾತ್ರ. ಕೊಮ್ಮೇರಹಳ್ಳಿಯಲ್ಲಿ ಆದಿಚುಂಚನಗಿರಿ ಕ್ಷೇತ್ರದ ವತಿಯಿಂದ ಪ್ರಾರಂಭವಾದ 'ವಿಶ್ವಮಾನವ ಕ್ಷೇತ್ರ' ವನ ಪ್ರಾರಂಭಕ್ಕೆ ಮತ್ತು ಅದರ ಹೆಸರಿಗೆ ಇವರ ಕೊಡುಗೆ ಅಮೂಲ್ಯ ವಾದದ್ದು. ಸರಳ ಸ್ವಭಾವದ ಮತ್ತು ಸರಳ ಜೀವನದ ಇವರು ನೇರ ನಡೆನುಡಿಗೂ ಹೆಸರುವಾಸಿಯಾಗಿದ್ದರು. ಈ ಗುಣ ಇವರ ವ್ಯಕ್ತಿತ್ವದ ವಿಶೇಷತೆಯಾಗಿತ್ತು.

ಪತ್ರಿಕಾ ಅಕಾಡೆಮಿ ಪ್ರಶಸ್ತಿ, ಸ್ವಾತಂತ್ರ್ಯ ಸುವರ್ಣ ಮಹೋತ್ಸವ ಪ್ರಶಸ್ತಿ, ಸರ್ದಾರ್ ವೆಂಕಟರಾಮಯ್ಯ ಸ್ವಾತಂತ್ರ್ಯ ಹೋರಾಟಗಾರ ಪ್ರಶಸ್ತಿ ಮುಂತಾದ ಪ್ರಶಸ್ತಿಗಳು ಇವರಿಗೆ ಲಭ್ಯವಾಗಿವೆ. ಇವರ ಜೀವನ ಸಾಧನೆಗಳನ್ನು ಒಳಗೊಂಡ ಒಂದು ಅಮೂಲ್ಯ ದಾಖಲೆಯಾಗಿ ಸಾಹಸಯಾತ್ರಿ ಎಂಬ ಗೌರವ ಗ್ರಂಥ ಪ್ರಕಟವಾಗಿದೆ (1989). (ಕೆ.ಆರ್.)

**ಜವರೇಗೌಡ, ದೇ. :** 1918-. ದೇಜಗೌ ಎಂಬ ಸಂಕ್ಷಿಪ್ತನಾಮ ದಿಂದ ಪ್ರಸಿದ್ಧರು. ಕನ್ನಡನಾಡಿನ ಹೆಸರಾಂತ ಗದ್ಯ ಲೇಖಕರಲ್ಲೊಬ್ಬರು. ಕನ್ನಡಕ್ಕೆ ಸೂಕ್ತ ಸ್ಥಾನಮಾನವನ್ನು ದೊರಕಿಸಿಕೊಡುವ ಹೋರಾಟದಲ್ಲಿ ಇವರು ವಹಿಸಿದ ಪಾತ್ರ ಹಿರಿದು. ಕನ್ನಡ ಮಾಧ್ಯಮವಾಗಬೇಕು, ಕನ್ನಡ ಆಡಳಿತ ಭಾಷೆಯಾಗಬೇಕು, ಕನ್ನಡನಾಡಿನಲ್ಲಿ ಕನ್ನಡವೇ ಅಗ್ರಪೀಠದಲ್ಲಿ ಪ್ರತಿಷ್ಠಾಪಿತವಾಗಬೇಕು; ಕನ್ನಡ ಸಂಸ್ಕೃತಿ, ಇತಿಹಾಸ, ಕಾವ್ಯ ಪರಂಪರೆಯಿಂದ ಕನ್ನಡಿಗರು ಚೈತನ್ಯವನ್ನು ತುಂಬಿಕೊಂಡು ರಾಷ್ಟ್ರದಲ್ಲಿ ತಲೆಯೆತ್ತಿ ಮೆರೆಯಬೇಕು, ಕನ್ನಡಕ್ಕೆ ವಿಶ್ವಮಾನ್ಯತೆ ದೊರೆಯಬೇಕು ಎಂಬ ಹಂಬಲವನ್ನು ತುಂಬಿಕೊಂಡು ಅವಿರತವಾಗಿ ಶ್ರಮಿಸಿದ ಕೀರ್ತಿ ಇವರದು. ಕನ್ನಡ ಮತ್ತು ದೇಜಗೌ ಈ ಎರಡರ ಸಂಬಂಧ ನಾಡಿನಾದ್ಯಂತ ಜನಜನಿತವಾಗಿದೆ.

ಇವರು ಬೆಂಗಳೂರು ಜಿಲ್ಲೆ ಚನ್ನಪಟ್ಟಣ ತಾಲ್ಲೂಕಿನ ಚಕ್ಕೆರೆ ಗ್ರಾಮದ ಬಡ ರೈತ ಕುಟುಂಬ ಒಂದರಲ್ಲಿ 1918 ಜುಲೈ 6ರಂದು ಜನಿಸಿದರು. ಇವರ ತಂದೆ ದೇವೇಗೌಡರು, ತಾಯಿ ಚೆನ್ನಮ್ಮ. ಬಡತನದಲ್ಲಿದ್ದರೂ ನಿಷ್ಠೆಯ, ಪ್ರಾಮಾಣಿಕತೆಯ ಜೀವನವನ್ನು



ನಡೆಸಿದವರು. ಊರಿನ ಧನಿಕರ ವಿರೋಧವಿದ್ದರೂ ಮಗನನ್ನು ಓದಿಸಲೇಬೇಕೆಂಬ ಛಲವನ್ನು ತುಂಬಿಕೊಂಡವರು. ತಂದೆಯ ಸದ್ಗುಣಗಳನ್ನೆಲ್ಲ ತುಂಬಿಕೊಂಡು ಬೆಳೆದ ಜವರೇಗೌಡರು ಕುವೆಂಪು ಅವರ ಶಿಷ್ಯರಾಗಿ, ಅವರ ಮಾರ್ಗದರ್ಶನದಲ್ಲಿ ಕನ್ನಡದಲ್ಲಿ ಎಂ.ಎ. ಪದವಿ ಪಡೆದರು. ಸ್ವಲ್ಪ ಕಾಲ ಅಠಾರ ಕಚೇರಿಯಲ್ಲಿ ಗುಮಾಸ್ತ ರಾಗಿ ಕೆಲಸ ಮಾಡಿದರು. ಒಳ್ಳೆಯ ರೈತನಾಗಬೇಕೆಂಬ ಹಂಬಲವಿದ್ದ ಇವರು ಕನ್ನಡದ ಕರೆಗೆ ಓಗೊಟ್ಟು ಗುಮಾಸ್ತನ ಕೆಲಸವನ್ನು ತೊರೆದು, 1946ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾಗಿ ಸೇರಿದರು. ಅನಂತರ ಪ್ರಕಟಣ ಶಾಖೆಯ ಕಾರ್ಯದರ್ಶಿಯಾದರು (1954). ಹಗಲಿರುಳೂ ದುಡಿದು ಪ್ರಕಟಣಶಾಖೆಯನ್ನು ವ್ಯಾಪಕವಾಗಿ ಬೆಳೆಸಿದರು. 1955ರಲ್ಲಿ ಕನ್ನಡದ ಉಪ-ಪ್ರಾಧ್ಯಾಪಕರಾದರು. ಕುವೆಂಪು ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಉಪಕುಲಪತಿಗಳಾದಾಗ ಇವರ ಕಾರ್ಯದಕ್ಷತೆಯನ್ನು ಗಮನಿಸಿ ಇವರನ್ನು 1957ರಲ್ಲಿ ವಿಶ್ವವಿದ್ಯಾನಿಲಯದ ಪ್ರಪ್ರಥಮ ಪರೀಕ್ಷಾ ನಿಯಂತ್ರಣಾಧಿಕಾರಿಯನ್ನಾಗಿ ನೇಮಿಸಿದರು. ಇವರು ಪರೀಕ್ಷಾ ವಿಭಾಗಕ್ಕೆ ಹೊಸ ಜೀವವನ್ನು ತುಂಬಿ ಅನೇಕ ಹೊಸ ಸುಧಾರಣೆಗಳನ್ನು ತಂದರು.

1960ರಲ್ಲಿ ಇವರು ಶಿವಮೊಗ್ಗದ ಸಹ್ಯಾದ್ರಿ ಕಾಲೇಜಿನ ಪ್ರಿನ್ಸಿಪಾಲರಾಗಿ ನೇಮಿಸಲ್ಪಟ್ಟರು. ಅದೇ ವರ್ಷ ಮಾನಸಗಂಗೋತ್ರಿಯ ಕನ್ನಡ ಇಲಾಖೆಗೆ ಕನ್ನಡ ರೀಡರ್ ಆಗಿ ಆಯ್ಕೆಯಾದರು. ಪ್ರಾಧ್ಯಾಪಕ ತೀನಂಶ್ರೀ ಅವರೊಡನೆ ಇಲಾಖೆಯ ಉತ್ಕರ್ಷಕ್ಕಾಗಿ ದುಡಿದುದರ ಜೊತೆಗೆ ಮಾನಸಗಂಗೋತ್ರಿಯ ಬೆಳವಣಿಗೆಗೂ ಮೂಲಪ್ರೇರಕರಾದರು. ಮಹಾರಾಜ ಕಾಲೇಜಿನಿಂದ ಆಗಿನ್ನೂ ಬರಡಾಗಿದ್ದ ಗಂಗೋತ್ರಿಯ ದಿಬ್ಬಕ್ಕೆ ಕೆಲವು ಇಲಾಖೆಗಳನ್ನು ವರ್ಗಾಯಿಸಲು ಇವರು ಹೋರಾಟವನ್ನೇ ನಡೆಸಿದರು.

ಇದರಿಂದಾಗಿ ಅಲ್ಲಿಗೆ ಕನ್ನಡ ಇಲಾಖೆ ಮೊದಲು ಕಾಲಿಟ್ಟು, ಇತರರೂ ಅತ್ತ ಹೊರಳಲು ಪ್ರೇರಕವಾಯಿತು.

1962ರಲ್ಲಿ ಇವರು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕರೂ ಇಲಾಖಾ ಮುಖ್ಯರೂ ಆದರು. ಇಲಾಖೆಯನ್ನು ವ್ಯಾಪಕವಾಗಿ ಬೆಳೆಸುವ, ಕನ್ನಡದ ಅಭಿವೃದ್ಧಿಗಾಗಿ ಯೋಜನೆಗಳನ್ನು ಸಿದ್ಧಗೊಳಿಸುವ ಗುರುತರ ಹೊಣೆಗಾರಿಕೆ ಇವರ ಪಾಲಿಗೆ ಬಂತು. ತಾವು ಪ್ರಾಧ್ಯಾಪಕರಾದ ಮೇಲೆ ತಮ್ಮ ಪ್ರಿಯ ವಿಷಯವಾದ ಜಾನಪದವನ್ನು ಸ್ನಾತಕೋತ್ತರ ತರಗತಿಗಳ ಐಚ್ಛಿಕ ವಿಷಯವಾಗಿ ಸೇರಿಸಿ ಕ್ರಾಂತಿಕಾರಕ ಹೆಜ್ಜೆಯನ್ನಿಟ್ಟರು. ವ್ಯಾಕರಣ, ಭಾಷಾವಿಜ್ಞಾನ, ಜಾನಪದಗಳಲ್ಲಿ ವಿಶೇಷ ತಜ್ಞತೆಯನ್ನು ಪಡೆದುಕೊಂಡಿದ್ದ ಇವರು ಉತ್ತಮ ಪ್ರಾಧ್ಯಾಪಕರಾಗಿ ಬಹುಬೇಗ ಕೀರ್ತಿಗಳಿಸಿದರು. ಇವರ ಕಾಲದಲ್ಲಿ ಕನ್ನಡ ಇಲಾಖೆ ಒಂದು ಸಂಸ್ಥೆಯಾಗಿ ರೂಪುಗೊಂಡಿತು. ಕನ್ನಡ ಅಧ್ಯಯನ ಸಂಸ್ಥೆಯ ಕನಸನ್ನು ಕಂಡು ಅದನ್ನು ಸ್ಥಾಪಿಸಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡಕ್ಕೆ ಮೊದಲ ಸ್ಥಾನವನ್ನು ದೊರಕಿಸಿಕೊಟ್ಟರು. ಆ ಸಂಸ್ಥೆಗೆ ಗಂಗೋತ್ರಿಯ ಹೃದಯಸ್ಥಾನದಲ್ಲಿ ಭವ್ಯಕಟ್ಟಡವನ್ನೂ ಒದಗಿಸಿ ಸಂಸ್ಥೆಯ ಪ್ರಥಮ ನಿರ್ದೇಶಕರಾದರು (1966). ಕನ್ನಡದ ಸರ್ವತೋಮುಖವಾದ ಅಭಿವೃದ್ಧಿಗೆ ವಿವಿಧ ಯೋಜನೆಗಳನ್ನು ಸಿದ್ಧಗೊಳಿಸಿ ಕನ್ನಡದ ಬಹುಮುಖ ಕಾರ್ಯಗಳು ಅಧ್ಯಯನ ಸಂಸ್ಥೆಯಲ್ಲಿ ನಡೆಯುವಂತೆ ಮಾಡಿದರು. ಸರ್ಕಾರಿ ಇಲಾಖೆಯಲ್ಲಿದ್ದ ಕನ್ನಡ ವಿಶ್ವಕೋಶದ ಯೋಜನೆಯನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ದಕ್ಕಿಸಿಕೊಂಡು ಉತ್ತಮ ಕೆಲಸಗಾರರನ್ನು ಆರಿಸಿಕೊಂಡು ಆ ಕೆಲಸ ತ್ವರಿತಗತಿಯಿಂದ ಸಾಗುವಂತೆ ಚಾಲನೆ ನೀಡಿದರು. ನಮ್ಮ ಪರಂಪರಾನುಗತ ಸಂಸ್ಕೃತಿಯ ವಿವಿಧ ಸ್ತರಗಳನ್ನು ಗುರುತಿಸುವ ಜಾನಪದ ವಸ್ತುಸಂಗ್ರಹಾಲಯದ ಕಲ್ಪನೆಯನ್ನು ಕಾರ್ಯಗತಗೊಳಿಸಿ ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ದೊಡ್ಡ ವಸ್ತುಸಂಗ್ರಹಾಲಯವೊಂದು ಪ್ರಪ್ರಥಮವಾಗಿ ರೂಪುಗೊಳ್ಳಲು ಕಾರಣಕರ್ತರಾದರು. ಪ್ರಾಚ್ಯವಿದ್ಯಾಸಂಶೋಧನಾಲಯದ ಕನ್ನಡ ಸಂಪಾದನ ವಿಭಾಗವನ್ನು ಪ್ರತ್ಯೇಕಿಸಿ ಅದನ್ನು ಕನ್ನಡ ಅಧ್ಯಯನ ಸಂಸ್ಥೆಯ ತೆಕ್ಕೆಗೆ ತೆಗೆದುಕೊಂಡು ಪ್ರಾಚೀನ ಗ್ರಂಥಗಳು ಹೆಚ್ಚು ಹೆಚ್ಚಾಗಿ ಸಂಗ್ರಹಿತವಾಗಿ ಸಂಪಾದಿತವಾಗಿ ಹೊರಬರಲು ಕಾರಣರಾದರು. ಭಾಷಾಂತರ ಇಲಾಖೆಯ ಬಹುಮುಖ ಪ್ರಯೋಜನವನ್ನು ಕಂಡುಕೊಂಡು ಅದನ್ನು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಆರಂಭಿಸಿ ಆ ವಿಷಯಕ್ಕೆ ಒಂದು ಮಾನ್ಯತೆಯನ್ನು ತಂದುಕೊಟ್ಟರು. ಕನ್ನಡ ಸರ್ವಶಕ್ತವಾಗಿ ಬೆಳೆಯಲು ಅನ್ಯಭಾಷೆಯ ಕೃತಿಗಳು ಕನ್ನಡದಲ್ಲಿ ಬರಬೇಕು, ಪಠ್ಯಪುಸ್ತಕಗಳು ಹೇರಳವಾಗಿ ಪ್ರಕಟವಾಗಬೇಕು ಎಂಬ ದೂರದೃಷ್ಟಿಯಲ್ಲಿ ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗವನ್ನು ರೂಪಿಸಿದರು. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ಕೊರತೆಯನ್ನು ಕಂಡುಕೊಂಡು ಹತ್ತು ಸಂಪುಟಗಳಲ್ಲಿ ಅದು ಪ್ರಕಟವಾಗುವ ಯೋಜನೆಯನ್ನೂ ರೂಪಿಸಿದರು. ಜಾನಪದ, ಭಾಷಾಂತರ ಮುಂತಾದ ವಿಷಯಗಳಲ್ಲಿ ಡಿಪ್ಲೊಮಾ ತರಗತಿಗಳನ್ನು ಆರಂಭಿಸಿದರು. ಕನ್ನಡ ಉಪಭಾಷಾ ಪರಿವೀಕ್ಷಣೆಯನ್ನು ಕೈಗೊಂಡು ಹಾ.ಮಾ.ನಾಯಕರೊಡನೆ ಕ್ಷೇತ್ರಕಾರ್ಯವನ್ನು ನಾಡಿನ ನಾನಾ ಕಡೆಗಳಲ್ಲಿ ನಡೆಸಿದರು.

ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಜಾನಪದ ಪರಿಷತ್ತು, ರಾಜ್ಯ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿಗಳಲ್ಲಿ ಹಲವು ಪ್ರಮುಖ ಪಾತ್ರವಹಿಸಿ ಗೌಡರು ದುಡಿದಿದ್ದಾರೆ. ಕನ್ನಡದ ಬೆಳವಣಿಗೆಗಾಗಿ ಇವರು ನಡೆಸಿದ ಪ್ರಯತ್ನಗಳೂ ರೂಪಿಸಿದ ಯೋಜನೆಗಳೂ ಇವರಿಗೆ ನಾಡಿನಾದ್ಯಂತ ಒಳ್ಳೆಯ ಕೀರ್ತಿಯನ್ನು ತಂದವು. ಇವರ ಸೇವೆಯನ್ನೂ ದಕ್ಷತೆಯನ್ನೂ ಪ್ರಾಮಾಣಿಕ ದುಡಿಮೆಯನ್ನೂ ಗಮನಿಸಿ ಕರ್ನಾಟಕ ಸರ್ಕಾರ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಇವರನ್ನು 1969ರಲ್ಲಿ ಕುಲಪತಿಯನ್ನಾಗಿ ನೇಮಿಸಿತು.ಇವರು ಕುಲಪತಿಯಾದ ಮೇಲೆ ವಿಶ್ವವಿದ್ಯಾನಿಲಯದ ಸರ್ವಪ್ರಗತಿಗೂ ಅಪಾರವಾಗಿ ಶ್ರಮಿಸಿದರು. ರಾಜ್ಯ ಸರ್ಕಾರ ವಿಶ್ವವಿದ್ಯಾನಿಲಯಗಳ ಧನಸಹಾಯ ಆಯೋಗ ಹಾಗೂ ಇತರ ಮೂಲಗಳಿಂದ ಯಥೇಚ್ಛವಾಗಿ ಹಣ ತಂದು ವಿಶ್ವವಿದ್ಯಾನಿಲಯದ ಸರ್ವತೋಮುಖ ಬೆಳವಣಿಗೆಗೂ ಕಾರಣರಾದರು. ಇವರ ದಕ್ಷ ಆಡಳಿತ ಹಾಗೂ ಇವರ ಕಾಲದಲ್ಲಿ ವಿಶ್ವವಿದ್ಯಾನಿಲಯದ ತೀವ್ರಪ್ರಗತಿಯನ್ನು ಗಮನಿಸಿ ವಿಶ್ವವಿದ್ಯಾನಿಲಯದ ಧನ ಸಹಾಯ ಆಯೋಗದ ಅಧ್ಯಕ್ಷರೂ ಇತರರೂ ಇವರ ಸೇವೆಯನ್ನು ಬಹುವಾಗಿ ಪ್ರಶಂಸಿಸಿದರು. ರಾಜ್ಯ ಸರ್ಕಾರ ಇವರ ನಿಷ್ಠೆ, ಕಾರ್ಯತತ್ಪರತೆ, ಪ್ರಾಮಾಣಿಕ ದುಡಿಮೆಗಳನ್ನು ಮನಗಂಡು ಎರಡನೆಯ ಅವಧಿಗೆ ಇವರನ್ನು ಮತ್ತೆ ಕುಲಪತಿಯನ್ನಾಗಿ ಆರಿಸಿತು. ಇವರು ಆರು ವರ್ಷಗಳ ಕಾಲ ಕುಲಪತಿ ಹುದ್ದೆಯಲ್ಲಿದ್ದರು.

ಇವರು ಕುಲಪತಿಗಳಾಗಿದ್ದ ಕಾಲದಲ್ಲಿ ಮೈಸೂರು ವಿಶ್ವ ವಿದ್ಯಾನಿಲಯದಲ್ಲಿ ಒಂದು ಶೈಕ್ಷಣಿಕ ಕ್ರಾಂತಿಯೇ ಆಯಿತೆನ್ನಬಹುದು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಪ್ಪತ್ತನಾಲ್ಕಕ್ಕೂ ಮೀರಿ ಹೊಸ ಸ್ನಾತಕೋತ್ತರ ಪದವಿ ತರಗತಿಗಳು ಆರಂಭಿಸಲ್ಪಟ್ಟವು. ಅನೇಕ ಡಿಪ್ಲೊಮಾ ಹಾಗೂ ಸರ್ಟಿಫಿಕೇಟ್ ಕೋರ್ಸುಗಳನ್ನು ತೆರೆಯಲಾಯಿತು. ಇವರಿಂದ ಆರಂಭಿಸಲ್ಪಟ್ಟ ನ್ಯಾಯಶಾಸ್ತ್ರ, ಗೃಹವಿಜ್ಞಾನ, ಗ್ರಂಥಾಲಯವಿಜ್ಞಾನ, ಭಾಷಾವಿಜ್ಞಾನ, ಜಾನಪದ, ದಕ್ಷಿಣ ಭಾರತೀಯ ಅಧ್ಯಯನ, ಮಾನವಶಾಸ್ತ್ರ ಮೊದಲಾದ ಕೆಲವು ಸ್ನಾತಕೋತ್ತರ ತರಗತಿಗಳನ್ನು ಇಲ್ಲಿ ಹೆಸರಿಸಬಹುದು. ಕನ್ನಡ ಅಧ್ಯಯನ ಸಂಸ್ಥೆ, ವಿದೇಶೀ ಭಾಷೆಗಳ ಅಧ್ಯಯನ ಸಂಸ್ಥೆ, ಅಭಿವೃದ್ಧಿ ಅಧ್ಯಯನ ಸಂಸ್ಥೆ, ಮಿನರಲಾಜಿಕಲ್ ಅಧ್ಯಯನ ಸಂಸ್ಥೆ ಮುಂತಾದ ಸಂಸ್ಥೆಗಳ ಸ್ಥಾಪನೆ ಹಾಗೂ ಬೆಳವಣಿಗೆಗಳಲ್ಲಿ ಇವರ ಪಾತ್ರ ಹಿರಿದಾದುದು. ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆ ಇವರ ಕಾಲದಲ್ಲಿ ವ್ಯಾಪಕವಾಗಿ ಬೆಳೆಯಿತು. ಅದೀಗ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯವಾಗಿದೆ. ಎಂ.ಎಸ್ಸಿ.ಎಡ್ ಹಾಗೂ ಎಂ.ಫಿಲ್ ಮುಂತಾದ ಹೊಸ ಶಿಕ್ಷಣ ತರಗತಿಗಳು, ಬಯೋಫಿಸಿಕ್ಸ್, ಎನ್‌ವಿರಾನ್‌ಮೆಂಟಲ್ ಸ್ಟಡೀಸ್, ಹ್ಯೂಮನ್ ಜಿಯಾಗ್ರಫಿ, ಅಗ್ರಿಕಲ್ಚರಲ್ ಮಾರ್ಕೆಟಿಂಗ್, ಮರೀನ್ ಜಿಯಾಲಜಿ, ಇನ್‌ಫರ್ಮೇಷನ್ ಸೈನ್ಸಸ್, ಭಾಷಾಂತರ, ನಾಟಕಶಾಸ್ತ್ರ ಮುಂತಾದ ಅನೇಕ ಹೊಸ ಹೊಸ ವಿಷಯಗಳ ಸ್ನಾತಕ ಶಿಕ್ಷಣವನ್ನು ಆರಂಭಿಸಿದ ದೂರದೃಷ್ಟಿ ಇವರದು. ಶಿವಮೊಗ್ಗದ ಬಿ.ಆರ್. ಪ್ರಾಜೆಕ್ಟ್‌ನಲ್ಲಿ ಆರಂಭವಾದ ಸ್ನಾತಕೋತ್ತರ ಕೇಂದ್ರವೂ ಇವರ ಕಾಣಿಕೆ. ಈಗ ಅದು ಕುವೆಂಪು ವಿಶ್ವವಿದ್ಯಾಲಯವಾಗಿದೆ. ಭಾರತೀಯ ಭಾಷಾ ಸಂಸ್ಥಾನ ಹಾಗೂ ಊಟಿಯಲ್ಲಿದ್ದ ಭಾರತೀಯ ಪುರಾತತ್ತ್ವ ಸರ್ವೇಕ್ಷಣಕ್ಕೆ ಸೇರಿದ ಮುಖ್ಯ ಶಾಸನ ತಜ್ಞರ ಕಚೇರಿ ಮೈಸೂರಿಗೆ ಬರಲು ಗೌಡರು ಕಾರಣ. 1969ಕ್ಕೆ ಮುಂಚೆ ಮಾನಸಗಂಗೋತ್ರಿಯ ಪ್ರದೇಶ 350 ಎಕರೆಯಿದ್ದು ಇವರ ಕಾಲದಲ್ಲಿ ಮತ್ತೆ 150 ಎಕರೆಯಷ್ಟು ವಿಸ್ತಾರವಾದ ಪ್ರದೇಶವನ್ನು ವಿಶ್ವವಿದ್ಯಾನಿಲಯ ಪಡೆದುಕೊಂಡಿತು. ಗಂಗೋತ್ರಿಯ ಆವರಣದಲ್ಲಿ ಅನೇಕ ಭವ್ಯ ಕಟ್ಟಡಗಳು ನಿರ್ಮಾಣಗೊಂಡವು. ತೋಟಗಾರಿಕೆ ಇಲಾಖೆ ವ್ಯಾಪಕವಾಗಿ ಬೆಳೆದು ಗಂಗೋತ್ರಿ ತರುರಾಜಿಯಿಂದ ಕಂಗೊಳಿಸುವಂತಾಯಿತು. ಇವರು ಕುಲಪತಿಯಾದ ಮೇಲೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅನೇಕ ಸುಧಾರಣೆಗಳಾದವು. ಅವುಗಳಲ್ಲಿ ಪರೀಕ್ಷಾ ಸುಧಾರಣೆ ಇವರ ಕ್ರಾಂತಿಕಾರಕ ಹೆಜ್ಜೆಗಳಲ್ಲಿ ಒಂದು.

ಕುವೆಂಪು ವಿದ್ಯಾವರ್ಧಕ ಟ್ರಸ್ಟ್ (ನೋಡಿ) ದೇಜಗೌ ಕನಸಿನ ಮತ್ತೊಂದು ಕುಡಿ. ತಮ್ಮ ಗುರು ರಾಷ್ಟ್ರಕವಿ ಕುವೆಂಪು ಅವರ ಹೆಸರಿನಲ್ಲಿ ಈ ಸಂಸ್ಥೆಯನ್ನು ಕಟ್ಟಿರುವ ದೇಜಗೌ ಅದನ್ನು ಸಂಸ್ಕೃತಿ, ಸಾಹಿತ್ಯ ಹಾಗೂ ಸಾಮಾಜಿಕ ವಿಷಯಗಳಿಗೆ ಸಂಬಂಧಿಸಿದ ಸಂಶೋಧನೆಗಳ ಕೇಂದ್ರವನ್ನಾಗಿ ಬೆಳೆಸುತ್ತಿದ್ದಾರೆ. ಸ್ವಂತ ಮನೆಯನ್ನೇ ಕುವೆಂಪು ಟ್ರಸ್ಟಿಗೆ ಧಾರೆಯೆರೆದಿದ್ದಾರೆ. ಅನೇಕ ಶೈಕ್ಷಣಿಕ ಸಂಸ್ಥೆಗಳನ್ನು ಆರಂಭಿಸಿ ಆ ಮೂಲಕ ಗ್ರಾಮಾಂತರ ಪ್ರತಿಭೆಯ ವಿಕಾಸಕ್ಕೆ ನೆರವಾಗಿದ್ದಾರೆ. ತಮ್ಮ ಗ್ರಂಥಗಳಿಂದ ಇತರೆ ಬರವಣಿಗೆಗಳಿಂದ ಬರುವ ಗೌರವಧನವನ್ನೆಲ್ಲ ಅರ್ಪಿಸಿ ಒಂದು ದತ್ತಿಯನ್ನು ದೇಜಗೌ ಟ್ರಸ್ಟ್ ಎಂಬ ಹೆಸರಿನಲ್ಲಿ ಬೆಳೆಸಿ, ಆ ಮೂಲಕವೂ ಸಂಶೋಧನೆ, ವಿಮರ್ಶೆಗಳಿಗೆ ಪ್ರೋತ್ಸಾಹ ನೀಡುತ್ತಿದ್ದಾರೆ.

ದೇಜಗೌ ಕನ್ನಡದ ಗದ್ಯ ಲೇಖಕರಲ್ಲಿ ಅಗ್ರಗಣ್ಯರು. ಕನ್ನಡ ಹಾಗೂ ಇಂಗ್ಲಿಷ್ ಈ ಎರಡು ಭಾಷೆಗಳಲ್ಲೂ ಕೃತಿರಚನೆ ಮಾಡಿರುವ ಇವರು 135ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ. ಹೋರಾಟದ ಬದುಕು (1968, 1987) ಇವರ ಬದುಕಿನ ಪ್ರಾಮಾಣಿಕ ಚಿತ್ರವನ್ನು ನೀಡುವ ಗಮನಾರ್ಹ ಕೃತಿ. ನೆನಪಿನ ಬುತ್ತಿ (1994), ನನ್ನ ಉಪವಾಸದ ಕಥೆ (1994), ಕುಲಪತಿ ದಿನಚರಿ (1973) - ಇವು ಆತ್ಮ ಕಥೆಗಳು. ಇವರು ಅನೇಕ ಭಾಷಾಂತರಗಳನ್ನು ಹೊರ ತಂದಿದ್ದಾರೆ. ಇವರ

ಭಾಷಾಂತರ ಕೃತಿಗಳಲ್ಲಿ ಮುಖ್ಯವಾದವು: ನೆನಪು ಕಹಿಯಲ್ಲ (ಕೃಷ್ಣ ಹಲೇಸಿಂಗ್, 1949), ಪುನರುತ್ಥಾನ (ಟಾಲ್‌ಸ್ಟಾಯ್, 1965), ಯುದ್ಧ ಮತ್ತು ಶಾಂತಿ (ಟಾಲ್‌ಸ್ಟಾಯ್, 1989), ಅನ್ನಾ ಕರೆನಿನ (ಟಾಲ್‌ಸ್ಟಾಯ್, 1991), ಹಮ್ಮು-ಬಿಮ್ಮು (ಜೇನ್ ಆಸ್ಟಿನ್, 1961). ಟಾಲ್‌ಸ್ಟಾಯ್ ಅವರ ಎರಡು ನಾಟಕಗಳನ್ನೂ ಇವರು ಕನ್ನಡಕ್ಕೆ ತಂದಿದ್ದಾರೆ. ಪುನರುತ್ಥಾನ ಕೃತಿಯ ಅನುವಾದಕ್ಕೆ ಇವರಿಗೆ ಸೋವಿಯತ್‌ಲ್ಯಾಂಡ್ ನೆಹರುಪ್ರಶಸ್ತಿ ಲಭಿಸಿದೆ (1967).

ಇವರು ಸಂಪಾದಿಸಿದ ಪ್ರಮುಖ ಕೃತಿಗಳಿವು: ಕಬ್ಬಿಗರ ಕಾವ (1964), ಗಿರಿಜಾ ಕಲ್ಯಾಣ ಮಹಾಪ್ರಬಂಧಂ (1951), ಚಿಕುಪಾಧ್ಯಾಯನ ರುಕ್ಮಾಂಗದ ಚರಿತ್ರೆ (1982), ಜೈಮಿನಿ ಭಾರತ ಸಂಗ್ರಹ (1959), ಧರ್ಮಾಮೃತ ಸಂಗ್ರಹ (1957), ನಳಚರಿತ್ರೆ (1965). ಆರು ಸಂಪುಟಗಳಲ್ಲಿ ಪ್ರಕಟವಾಗಿರುವ ಕುಲಪತಿಯ ಭಾಷಣಗಳು, ಕುಲಪತಿಯ ಪತ್ರಗಳು - ಮುಂತಾದ ಗ್ರಂಥಗಳು ವಿಚಾರ ಪ್ರಚೋದಕ ಬರೆಹಗಳಿಂದ ಕೂಡಿವೆ. ಸಮಾಜ ಶಿಕ್ಷಣ, ಸಂಸ್ಕೃತಿ, ನಾಡು ನುಡಿ ಮುಂತಾದ ಅನೇಕ ಗಹನ ವಿಷಯಗಳ ಮೇಲೆ ದೇಜಗೌ ಹರಿಸಿರುವ ವಿಚಾರಧಾರೆ ಇವರ ಚಿಂತನಶೀಲತೆಗೆ ಸಾಕ್ಷಿಯಾಗಿದೆ.

ಪ್ರವಾಸ ಸಾಹಿತ್ಯಕ್ಕೆ ದೇಜಗೌ ಅವರ ಕಾಣಿಕೆ ಹಿರಿದಾದುದು. ಇವರ ರಷ್ಯ, ಯುರೋಪ್, ಅಮೆರಿಕ ಹಾಗೂ ಆಫ್ರಿಕ, ಸ್ವಿಟ್ಸರ್‌ಲೆಂಡ್ ಮೊದಲಾದ ದೇಶಗಳ ಪ್ರವಾಸದ ಹಿನ್ನೆಲೆಯಲ್ಲಿ ರಚಿತವಾಗಿರುವ ವಿದೇಶದಲ್ಲಿ ನಾಲ್ಕು ವಾರ (1970), ಪ್ರವಾಸಿಯ ದಿನಚರಿ (1974), ಆಫ್ರಿಕಯಾತ್ರೆ (1975), ಯೇಸು ವಿಭೀಷಣರ ನಾಡಿನಲ್ಲಿ (1978), ಹಚ್ಚ ಹಸುರಿನ ನಾಡಿನಲ್ಲಿ ಮೊದಲಾದ ಪ್ರವಾಸ ಕಥನಗಳೂ ಕೇವಲ ಪ್ರವಾಸ ನಿರೂಪಣೆಯಾಗಿರದೆ ಅನೇಕ ಶೈಕ್ಷಣಿಕ ಅಂಶಗಳನ್ನೊಳಗೊಂಡಿವೆ. ಜೀವನ ಚರಿತ್ರೆಗಳ ಪ್ರಕಾರಕ್ಕೂ ದೇಜಗೌ ಇವರ ಕಾಣಿಕೆ ಸಂದಿದೆ. ಮೋತಿಲಾಲ್ ನೆಹರು (1961), ರಾಷ್ಟ್ರಕವಿ ಕುವೆಂಪು (1967), ತೀನಂಶ್ರೀ (1970), ಲೋಕನಾಯಕ (1980), ಲೋಕದ ಬೆಳಕು (1983) ಮುಂತಾಗಿ 25ಕ್ಕೂ ಹೆಚ್ಚು ಜೀವನಚರಿತ್ರೆಗಳನ್ನು ಇವರು ಪ್ರಕಟಿಸಿ ಆ ಕ್ಷೇತ್ರದಲ್ಲಿ ಒಂದು ದಾಖಲೆಯನ್ನೇ ಸ್ಥಾಪಿಸಿದ್ದಾರೆ. ಕರ್ನಾಟಕದಲ್ಲಿ ಜಾನಪದ ಅಧ್ಯಯನಕ್ಕೆ ಇವರು ಹೊಸ ದಿಕ್ಕನ್ನು ತೋರಿಸಿದರು. ಈ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಅನೇಕ ಕೃತಿಗಳನ್ನು ರಚಿಸಿ ಜಾನಪದದ ಹಿರಿಮೆಯನ್ನು ಮೆರೆದಿದ್ದಾರೆ. ಜಾನಪದ ಅಧ್ಯಯನ (1976), ಜಾನಪದ ಸೌಂದರ್ಯ (1977), ಜನಪದ ಗೀತಾಂಜಲಿ (1978), ಜಾನಪದ ವಾಹಿನಿ (1983) - ಇವೇ ಮೊದಲಾದವು ಉಲ್ಲೇಖನೀಯ ಕೃತಿಗಳು. ಫೋಕ್‌ಲೋರ್ ಸೊಸೈಟಿ ಆಫ್ ಸೌತ್ ಇಂಡಿಯನ್ ಲ್ಯಾಂಗ್ವೆಜಸ್‌ನ ಅಧ್ಯಕ್ಷರಾಗಿಯೂ ಇವರು ಸೇವೆ ಸಲ್ಲಿಸಿದ್ದಾರೆ.

ಕುವೆಂಪು ಸಾಹಿತ್ಯದ ಅಧ್ಯಯನಕ್ಕೆ ದೇಜಗೌ ಮಹತ್ತರ ಕೊಡುಗೆ ನೀಡಿದ್ದಾರೆ. ಶ್ರೀರಾಮಾಯಣದರ್ಶನಂ ವಚನಚಂದ್ರಿಕೆ (1954), ಆ ಮಹಾಕಾವ್ಯದ ಗದ್ಯರೂಪ. ಕುವೆಂಪು ಸಾಹಿತ್ಯ: ಕೆಲವು ಅಧ್ಯಯನಗಳು ನಾಲ್ಕು ಸಂಪುಟಗಳಲ್ಲಿ ಪ್ರಕಟವಾಗಿದೆ (1954). ಶ್ರೀ ಕುವೆಂಪು ಅವರ ದಾಂಪತ್ಯ ದರ್ಶನದ ನಾಲ್ಕು ಮೆಗಾ ಕವನಗಳು (1986) ಎಂಬ ಕೃತಿ ದೇಜಗೌ ಅವರ ವ್ಯಾಖ್ಯಾನ ಪ್ರತಿಭೆಗೆ ನಿದರ್ಶನ. ಇವಲ್ಲದೆ ಕುವೆಂಪು ಅವರ ದರ್ಶನ ಮತ್ತು ಸಂದೇಶ (1975), ರಾಷ್ಟ್ರಕವಿ ಸಂದರ್ಶನ (1984), ಕುವೆಂಪು ಶೈಲಿ (1991), ಕುವೆಂಪು ವಿಶ್ವಮಾನವ ಸಂದೇಶ (1993), ಕುವೆಂಪು ಅವರ ಕೊನೆ ದಿನಗಳು - ಇವು ಕವಿಯ ಬದುಕು ಮತ್ತು ಸಾಧನೆಯನ್ನು ಕುರಿತ ಕೃತಿಗಳಾಗಿವೆ.

ಕನ್ನಡದಲ್ಲಿ ಕೆಲವು ವೈಚಾರಿಕ ಕೃತಿಗಳನ್ನು ಇವರು ರಚಿಸಿದ್ದಾರೆ. ಕನ್ನಡಿಗರೇ ಎಚ್ಚರಗೊಳ್ಳಿ (1951), ಕನ್ನಡಕ್ಕಾಗಿ ಕೈ ಎತ್ತು (1981), ಕನ್ನಡಕ್ಕೆ ನಮನ (1985), ರಾಷ್ಟ್ರೀಯ ಮೂಲಭೂತ ಸಮಸ್ಯೆ (1991) - ಇಂಥ ಕೃತಿಗಳು. ಕಡುಗಲಿ ಕುಮಾರರಾಮ (1961) ಇವರು ರಚಿಸಿದ ಐತಿಹಾಸಿಕ ಕಾದಂಬರಿ. ಕಲ್ಚರ್, ಎಜ್ಯುಕೇಷನ್ ಅಂಡ್ ಸೊಸೈಟಿ (1974), ಪೊಯೆಮ್ಸ್ ಆಫ್ ಕುವೆಂಪು (1988) - ಇವರು ಇತರರೊಡನೆ ಸೇರಿ ರೂಪಿಸಿದ ಇಂಗ್ಲಿಷ್ ಕೃತಿಗಳು.

ದೇಜಗೌ ಅವರ ಸಾಹಿತ್ಯಕ ದುಡಿಮೆ ವ್ಯಾಪಕವಾದುದು. ಹಲವು ವರ್ಷ ಇವರು ಪ್ರಬುದ್ಧ ಕರ್ಣಾಟಕದ ಸಂಪಾದಕರಾಗಿದ್ದರು. ಅನೇಕ ಸಂಭಾವನ ಗ್ರಂಥಗಳ ಸಂಪಾದಕರಾಗಿಯೂ ಕೃತಿಗಳನ್ನು ಹೊರತಂದಿದ್ದಾರೆ. ವಯಸ್ಕರ ಶಿಕ್ಷಣ ಸಮಿತಿ, ಬೆಂಗಳೂರಿನ ಕರ್ನಾಟಕ ಸಹಕಾರೀ ಪ್ರಕಾಶನ, ಜ್ಞಾನಗಂಗೋತ್ರಿಯ ಸಂಪುಟಗಳು - ಇಲ್ಲೆಲ್ಲ ಇವರ ಪಾತ್ರ ಇದ್ದೇ ಇದೆ. ಕನ್ನಡದ ಪುರೋಭಿವೃದ್ಧಿಗಾಗಿ ದೇಜಗೌ ಅವರ ದುಡಿಮೆಯನ್ನು ಮತ್ತು ಇವರ ಅಪಾರ ಸಂಖ್ಯೆಯ ಕೃತಿಗಳನ್ನು ಗಮನಿಸಿ ಬೆಂಗಳೂರಿನಲ್ಲಿ ನಡೆದ 47ನೆಯ ಕನ್ನಡ ಸಾಹಿತ್ಯ ಸಮ್ಮೇಳನದ (1970) ಅಧ್ಯಕ್ಷರನ್ನಾಗಿ ಆರಿಸುವುದರ ಮೂಲಕ ಕನ್ನಡ ಜನತೆ ಇವರಿಗೆ ತನ್ನ ಗೌರವವನ್ನು ಸಲ್ಲಿಸಿತು.

ಕನ್ನಡ ಸಾಹಿತ್ಯ, ಶಿಕ್ಷಣ, ಸಂಸ್ಕೃತಿ ಕ್ಷೇತ್ರಗಳಲ್ಲಿ ಸಲ್ಲಿಸಿದ ಅಪಾರ ಸೇವೆಗಾಗಿ ದೇಜಗೌ ಅವರಿಗೆ ಕರ್ನಾಟಕ ವಿಶ್ವವಿದ್ಯಾಲಯ ಗೌರವ ಡಾಕ್ಟೊರೇಟ್ ಪದವಿಯನ್ನು ನೀಡಿ ಗೌರವಿಸಿತು (1975). ಜಾನಪದ ಕ್ಷೇತ್ರಕ್ಕೆ ಇವರು ಸಲ್ಲಿಸಿದ ಅಮೂಲ್ಯ ಸೇವೆಯನ್ನು ಪರಿಗಣಿಸಿ ಇವರನ್ನು ಕರ್ನಾಟಕ ವಿಶ್ವವಿದ್ಯಾಲಯದ ಜಾನಪದ ಸಮ್ಮೇಳನಕ್ಕೆ ಅಧ್ಯಕ್ಷರನ್ನಾಗಿ ಆರಿಸಲಾಯಿತು (1976). ಇವರು ಕುರುಕ್ಷೇತ್ರದಲ್ಲಿ ಜರುಗಿದ ಅಖಿಲ ಭಾರತ ಪ್ರಾಚ್ಯ ವಿದ್ಯಾಲಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು (1974). ಕರ್ನಾಟಕ ವಯಸ್ಕರ ಶಿಕ್ಷಣ ಸಮಿತಿ ಪ್ರಕಟಿಸುತ್ತಿದ್ದ ಪುಸ್ತಕ ಪ್ರಪಂಚ ಮಾಸಪತ್ರಿಕೆಯ ಪ್ರಧಾನ ಸಂಪಾದಕರಾಗಿಯೂ ಇವರು ಸೇವೆ ಸಲ್ಲಿಸಿದ್ದಾರೆ (1977-90).

ದೇಜಗೌರವರಿಗೆ ಹಲವು ಪ್ರಶಸ್ತಿ – ಗೌರವಗಳು ಸಂದಿವೆ. ತಿರುವಾಂಕೂರಿನ ದ್ರಾವಿಡ ಭಾಷಾವಿಜ್ಞಾನ ಸಂಸ್ಥೆಯ ಸೀನಿಯರ್ ಫೆಲೋ ಗೌರವ (1979), ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1984), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1985), ಕರ್ನಾಟಕ ಸರ್ಕಾರದ ಪ್ರತಿಷ್ಠಿತ ಪಂಪ ಪ್ರಶಸ್ತಿ (1998), ಹಂಪಿಯ ಕನ್ನಡ ವಿಶ್ವವಿದ್ಯಾಲಯದ 'ನಾಡೋಜ' ಗೌರವ ಡಿ.ಲಿಟ್. ಪದವಿ ಇವು ಪ್ರಮುಖವಾದವು. ಇವರಿಗೆ ಹಲವು ಅಭಿನಂದನ ಗ್ರಂಥಗಳು ಅರ್ಪಣೆಯಾಗಿವೆ. ಅವೆಂದರೆ ಅಂತಃಕರಣ, ದೇಜಗೌ ವ್ಯಕ್ತಿ ಮತ್ತು ಸಾಹಿತ್ಯ, ರಸಷಷ್ಠಿ, 70ರ ಹೊಸ್ತಿಲಲ್ಲಿ, ಅಮೃತವರ್ಷ ಮತ್ತು ಅಪೂರ್ವ, ನಮ್ಮ ನಾಡೋಜ. ಇವರ ಸಿದ್ಧಿ ಸಾಧನೆಗಳನ್ನು ಕುರಿತಂತೆಯೂ ಹಲವು ಗ್ರಂಥಗಳು ಪ್ರಕಟವಾಗಿವೆ. ಕನ್ನಡದ ಕಣ್ಮಣಿ, ಕನ್ನಡ ಸೇನಾನಿ, ಕರ್ಮಯೋಗಿ, ಕುಲಪತಿಯ ಸಾಧನೆಗಳು, ಗುಡಿಸಲಿನಿಂದ ಗಂಗೋತ್ರಿಗೆ, ದೇಜಗೌ 75 - ಸಂದರ್ಶನ ಇತ್ಯಾದಿ.

ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಯಾಗಿ ಆರು ವರ್ಷಗಳ ಕಾಲ ಸೇವೆ ಸಲ್ಲಿಸಿದ ದೇಜಗೌ ಮತ್ತೆ ತಮ್ಮ ಮಾತೃ ಸಂಸ್ಥೆಗೆ ಪ್ರಾಧ್ಯಾಪಕರಾಗಿ ಮರಳಿ ದಕ್ಷಿಣ ಭಾರತದಲ್ಲಿಯೇ ಒಂದು ಹೊಸ ಮೇಲ್ಪಂಕ್ತಿಯನ್ನು ಹಾಕಿದರು. ಬೋಧನೆ, ಸಾಹಿತ್ಯ ರಚನೆ, ಅಧ್ಯಯನಗಳಲ್ಲಿ ಅಪಾರ ಸಂತೋಷವನ್ನು ಕಂಡುಕೊಂಡರು. ನಿವೃತ್ತಿಯ ಅನಂತರ ಈಗ ದೇಜಗೌ ಅವರು ತಾವು ಕಟ್ಟಿದ ಶ್ರೀಕುವೆಂಪು ವಿದ್ಯಾವರ್ಧಕ ಟ್ರಸ್ಟಿನ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆ. ಸಾಹಿತ್ಯ ಸಂಸ್ಕೃತಿಗಳ ಸಂವರ್ಧನೆಯಲ್ಲಿ ಈ ಸಂಸ್ಥೆ ಗಣ್ಯ ಪಾತ್ರವನ್ನು ವಹಿಸಬೇಕೆಂಬುದೇ ಇವರ ಹೆಗ್ಗನಸು.

ಇವರ ಪತ್ನಿ ಸಾವಿತ್ರಮ್ಮ. ಜೆ.ಶಶಿಧರ ಪ್ರಸಾದ್ ಇವರ ಮಗ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಭೌತವಿಜ್ಞಾನದ ಪ್ರಾಧ್ಯಾಪಕರಾಗಿರುವ ಇವರು ಈಗ ಕುಲಪತಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ (1 ಸೆಪ್ಟೆಂಬರ್ 2003ರಿಂದ). ತಂದೆ ಮತ್ತು ಮಗ ಇಬ್ಬರೂ ಒಂದೇ ವಿಶ್ವವಿದ್ಯಾನಿಲಯದಲ್ಲಿ ಕುಲಪತಿಯಾದದ್ದು ಭಾರತೀಯ ವಿಶ್ವವಿದ್ಯಾಲಯಗಳ ಶೈಕ್ಷಣಿಕ ಕ್ಷೇತ್ರದಲ್ಲಿ ಅಪರೂಪದ ಸಂಗತಿಯಾಗಿದೆ. (ಜೆ.ಎಸ್.ಪಿ.)

**ಜವಾಬ್ದಾರಿ ಸರ್ಕಾರ :** ಶಾಸಕಾಂಗಕ್ಕೆ ಜವಾಬ್ದಾರಿಯಾಗಿರುವ ಅಥವಾ ಉತ್ತರವಾದಿಯಾಗಿರುವ ಸರ್ಕಾರ (ರೆಸ್ಪಾನ್ಸಿಬಲ್ ಗವರ್ನ್‌ಮೆಂಟ್). ವಸಾಹತಿನ ವಿದೇಶಾಂಗ ನೀತಿ, ರಕ್ಷಣೆ ಮುಂತಾದ ಕೆಲವು ಅಧಿಕಾರಗಳನ್ನು ಸಾಮ್ರಾಜ್ಯ ಸರ್ಕಾರ ಉಳಿಸಿಕೊಂಡು ಆಂತರಿಕ ಆಡಳಿತವನ್ನು ವಸಾಹತಿನವರಿಗೆ ನೀಡುವುದನ್ನೇ ಹಿಂದಿನ ಬ್ರಿಟಿಷ್ ಸಾಮ್ರಾಜ್ಯದ ಕಾಲದಲ್ಲಿ ಜವಾಬ್ದಾರಿ ಸರ್ಕಾರ ಎಂದು ಕರೆಯಲಾಗಿತ್ತು. ಈ ಬಗೆಯ ವ್ಯವಸ್ಥೆಯನ್ನು

ಉತ್ತರ ಅಮೆರಿಕದಲ್ಲಿ ಈಗಿನ ಕೆನಡದ ಪ್ರದೇಶಕ್ಕೆ ನೀಡಬೇಕೆಂಬುದಾಗಿ ಸಲಹೆ ಬಂದಿತ್ತು. ಭಾರತದ ಸ್ವಾತಂತ್ರ್ಯ ಹೋರಾಟದ ಪ್ರಾರಂಭಕಾಲದಲ್ಲಿ ಈ ಬಗೆಯ ಸರ್ಕಾರವನ್ನು ಭಾರತ ರಾಷ್ಟ್ರೀಯ ಕಾಂಗ್ರೆಸ್ ಸ್ವರಾಜ್ಯವೆಂದಿತು. ಸಾಮ್ರಾಜ್ಯದೊಂದಿಗೆ ಯಾವ ಸಂಪರ್ಕವೂ ಇಲ್ಲದೆ ಸ್ವತಂತ್ರ ರಾಷ್ಟ್ರವಾಗಿರುವ ಸ್ಥಿತಿಯನ್ನು ಪೂರ್ಣಸ್ವರಾಜ್ಯವೆಂದು ಕರೆಯಲಾಗಿತ್ತು.

ಉತ್ತರ ಮತ್ತು ದಕ್ಷಿಣ ಕೆನಡದಲ್ಲಿ ಬ್ರಿಟಿಷ್ ವಸಾಹತುಗಳಲ್ಲಿ (ಈಗಿನ ಆಂಟೇರಿಯೊ ಮತ್ತು ಕ್ವಿಬೆಕ್ ಪ್ರಾಂತ್ಯಗಳು) 1837ರಲ್ಲಿ ದಂಗೆಗಳಾದಾಗ, ವಸಾಹತುಗಳ ಪರಿಸ್ಥಿತಿಯನ್ನು ಪರೀಕ್ಷಿಸಿ ಅವುಗಳಿಗೆ ಯಾವ ಮಾದರಿಯ ಸರ್ಕಾರ ಇರಬೇಕೆಂಬ ಬಗ್ಗೆ ವರದಿ ನೀಡಬೇಕೆಂದು ಬ್ರಿಟಿಷ್ ಸರ್ಕಾರ ಉತ್ತರ ಅಮೆರಿಕದ ವಸಾಹತುಗಳ ಗವರ್ನರ್-ಜನರಲ್ ಆಗಿದ್ದ ಲಾರ್ಡ್‌ಡರ್ಹಾಮನನ್ನು ನೇಮಿಸಿತು. ಅವನು 1839ರಲ್ಲಿ ಒಂದು ವರದಿ ಒಪ್ಪಿಸಿ, ಆ ಪ್ರದೇಶದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪಿಸಬೇಕೆಂದು ಸಲಹೆ ಮಾಡಿದ. ಉತ್ತರ ಮತ್ತು ದಕ್ಷಿಣ ಕೆನಡ ಪ್ರಾಂತ್ಯಗಳು ಮತ್ತು ಇತರ ಪ್ರದೇಶಗಳಿಗೆ ಜವಾಬ್ದಾರಿ ಸರ್ಕಾರದ ಮೂಲಕ ಸ್ಥಳೀಯ ವ್ಯವಹಾರಗಳ ಆಡಳಿತ ವಹಿಸಬಹುದೆಂಬುದು ಅವನ ಶಿಫಾರಸು. ಪ್ರತಿವಸಾಹತಿನಲ್ಲೂ ವಿಧಾನ ಮಂಡಲದ ಬಹುಮತ ಪಡೆದ ವ್ಯಕ್ತಿಗಳಿಂದ ಕೂಡಿದ ಕಾರ್ಯನಿರ್ವಾಹಕ ಪರಿಷತ್ತು ಆಡಳಿತ ನಡೆಸಬೇಕೆಂದೂ ಅವರು ವಿಧಾನಮಂಡಲದ ವಿಶ್ವಾಸವನ್ನು ಕಳೆದುಕೊಂಡಾಗ ರಾಜೀನಾಮೆ ನೀಡಬೇಕೆಂದೂ ಅವನು ಸೂಚಿಸಿದ. ಇಂಗ್ಲೆಂಡಿನಲ್ಲಿದ್ದಂತೆ ಅಲ್ಲೂ ಹೊಣೆಗಾರ ಸಂಪುಟ ವ್ಯವಸ್ಥೆ ಏರ್ಪಡಿಸಬೇಕೆಂಬುದು ಅವನ ಅಭಿಪ್ರಾಯ. ವಸಾಹತಿನ ರಾಜ್ಯಪಾಲ ಎಲ್ಲ ಸ್ಥಳೀಯ ವಿಚಾರಗಳಲ್ಲೂ ಕಾರ್ಯನಿರ್ವಾಹಕ ಪರಿಷತ್ತಿನ ಸಲಹೆಯನ್ನು ಅನುಸರಿಸಬೇಕೆಂದೂ ಹೇಳಿದ.

ಆಧುನಿಕ ರಾಜಕೀಯ ವ್ಯವಸ್ಥೆಯಲ್ಲಿ ಜವಾಬ್ದಾರಿ ಸರ್ಕಾರಕ್ಕೆ ಮೂರು ಅರ್ಥಗಳಿವೆ. (1) ಸಾರ್ವಜನಿಕ ಅಭಿಪ್ರಾಯಕ್ಕೆ ಹೊಣೆಯುಳ್ಳ ಸರ್ಕಾರ ಪದ್ಧತಿ. ಈ ಅರ್ಥದಲ್ಲಿ ಜವಾಬ್ದಾರಿ ಸರ್ಕಾರ ಪ್ರಜಾಭಿಪ್ರಾಯವನ್ನು ಪಡೆಯಲು ಬದ್ಧವಾಗಿರುವ ಪ್ರಜಾಸತ್ತಾತ್ಮಕ ಸರ್ಕಾರಕ್ಕೂ ನಿರಂಕುಶ ಪ್ರಭುವಿನ ಅಧಿಕಾರಕ್ಕೆ ವ್ಯಕ್ತಿಯ ಹಕ್ಕುಗಳು ಒಳಪಟ್ಟಿರುವ ಸರ್ವಾಧಿಕಾರಕ್ಕೂ ಭಿನ್ನವಾದ್ದು. (2) ಸಾರ್ವಜನಿಕರ ಹಿತಕ್ಕಾಗಿ ಸರ್ಕಾರ ನಿರ್ವಹಿಸುವ ಕೆಲಸ ಮತ್ತು ಆ ಬಗ್ಗೆ ಅದರ ನೈತಿಕ ಜವಾಬ್ದಾರಿ. ರಾಷ್ಟ್ರೀಯ ಹಿತಾಸಕ್ತಿ ಸಾರ್ವಜನಿಕ ಅಭಿಪ್ರಾಯಕ್ಕೆ ವಿರುದ್ಧವಾಗಿದ್ದರೆ ಸರ್ಕಾರ ರಾಷ್ಟ್ರೀಯ ಹಿತಾಸಕ್ತಿಯನ್ನೇ ಪ್ರಧಾನವೆಂದು ಪರಿಗಣಿಸಬೇಕು. ಬ್ರಿಟಿಷ್ ಸಾಮ್ರಾಜ್ಯಕ್ಕೆ ಸೇರಿದ ಒಂದು ಸರ್ಕಾರ ತನ್ನನ್ನು ನೇಮಿಸಿದವರಿಗೆ ಮತ್ತು ತನ್ನನ್ನು ಅಧಿಕಾರದಲ್ಲಿರಿಸಿದವರಿಗೆ, ಒಬ್ಬ ನೇಮಕಗೊಂಡ ಪ್ರತಿನಿಧಿ ತನ್ನ ಯಜಮಾನನಿಗೆ ಜವಾಬ್ದಾರನಾಗಿರುವಂತೆ, ಜವಾಬ್ದಾರಿ ಹೊಂದಿರುವುದಲ್ಲದೆ ಒಂದು ಸ್ವತಂತ್ರ ಸಂಸ್ಥೆಯೂ ಆಗಿರುತ್ತದೆಂದು ಎಲ್.ಎಸ್.ಅಮೆರಿ ಅಭಿಪ್ರಾಯಪಟ್ಟಿದ್ದ. ಇಂಥ ಸ್ವತಂತ್ರ ಸಂಸ್ಥೆ ಅಧಿಕಾರಕ್ಕೆ ಬಂದಮೇಲೆ ತನ್ನ ಸ್ವಂತ ವಿವೇಚನೆ ಮತ್ತು ಆತ್ಮಸಾಕ್ಷಿಗೆ ಅನುಸಾರವಾಗಿ ಸಂಸತ್ತಿಗೆ ಮತ್ತು ರಾಷ್ಟ್ರಕ್ಕೆ ಮಾರ್ಗದರ್ಶನ ನೀಡುವ ಜವಾಬ್ದಾರಿ ಹೊತ್ತಿದೆಯೆಂದು ಆತ ಹೇಳಿದ. (3) ಜನರಿಂದ ಚುನಾಯಿತವಾದ ಸಭೆಗೆ ಸರ್ಕಾರ ಮತ್ತು ಸರ್ಕಾರದ ಪ್ರತಿಯೊಬ್ಬ ಮಂತ್ರಿಯೂ ಹೊಣೆ ಎಂಬ ಅರ್ಥದಲ್ಲಿ ಜವಾಬ್ದಾರಿ ಸರ್ಕಾರ ಎಂಬ ಪರಿಭಾಷೆ ಈಗ ಬಳಕೆಯಲ್ಲಿದೆ. ಸಂಸದೀಯ ಪದ್ಧತಿ ಇರುವ ಎಲ್ಲ ದೇಶಗಳಲ್ಲೂ ಈ ಪದ್ಧತಿ ರೂಢಿಯಲ್ಲಿದೆ. ಸರ್ಕಾರದ ಕಾರ್ಯನೀತಿಯ ಬಗ್ಗೆ ಮಂತ್ರಿಮಂಡಲ ಸಾಮೂಹಿಕವಾಗಿ ಮತ್ತು ತನ್ನ ಇಲಾಖೆಗೆ ಸಂಬಂಧಪಟ್ಟಂತೆ ಮಂತ್ರಿ ಮಂಡಲದ ಪ್ರತಿಯೊಬ್ಬ ಮಂತ್ರಿಯೂ ವೈಯಕ್ತಿಕವಾಗಿ ಸಂಸತ್ತಿಗೆ ಹೊಣೆಯಾಗಿರಬೇಕು. ಈ ಸರ್ಕಾರಪದ್ಧತಿಯಲ್ಲಿ ಚುನಾಯಿತ ಸಭೆ ವಾಸ್ತವಿಕವಾಗಿ ಪರಮಾಧಿಕಾರವುಳ್ಳ ಸಂಸ್ಥೆ.

ಜವಾಬ್ದಾರಿ ಸರ್ಕಾರದ ಈ ಮೂರು ಪರಿಕಲ್ಪನೆಗಳಲ್ಲಿ ಸೂಚಿತವಾದ ಉದ್ದೇಶಗಳು ಪರಸ್ಪರ ಸಂಗತವಾಗಿರದಿದ್ದರೂ ಅವು ಪ್ರಜಾಸತ್ತಾತ್ಮಕ ರಾಜ್ಯಕ್ಕೆ ಅನ್ವಯಿಸುತ್ತವೆ. ಉದಾಹರಣೆಗೆ, ಸಾರ್ವಜನಿಕ ಅಭಿಪ್ರಾಯವು ಯುಕ್ತವಾದ ಇಲ್ಲವೆ ವಾಸ್ತವಿಕವಾದ ವಿಚಾರಗಳ ಬಗ್ಗೆ ಎಲ್ಲ ಕಾಲಗಳಲ್ಲಿ ಒಂದೇ ರೀತಿ ಇರಲಾರದು. ಸಾರ್ವಜನಿಕ ಅಭಿಪ್ರಾಯದಿಂದ ಮಾರ್ಗದರ್ಶನ ಪಡೆಯುವ ಸರ್ಕಾರ ವ್ಯತಿರಿಕ್ತ ಕಾರ್ಯನೀತಿಗಳನ್ನು ಅನುಸರಿಸುವ ಸಾಧ್ಯತೆಯುಂಟು. ಪರಸ್ಪರ ವಿರುದ್ಧವಾದ ಉದ್ದೇಶಗಳ ವಿಷಯದಲ್ಲಿ ಯುಕ್ತಸಾಮರಸ್ಯವನ್ನು ತಂದುಕೊಂಡು ಆಡಳಿತ ವಹಿಸುವುದೇ ಸರ್ಕಾರಕ್ಕಿರುವ ಉತ್ತಮ ಮಾರ್ಗ. ಈ ಪ್ರಕ್ರಿಯೆಯಲ್ಲಿ ಪ್ರಾತಿನಿಧ್ಯ ಪದ್ಧತಿ ಬಹುಮುಖ್ಯ ಪಾತ್ರ ವಹಿಸುತ್ತದೆ. ಪ್ರಾತಿನಿಧ್ಯ ಪದ್ಧತಿಯನ್ನು ಪರಿಗಣಿಸದೆ ಯಾವ ರೂಪದಲ್ಲೇ ಆಗಲಿ ಜವಾಬ್ದಾರಿ ಸರ್ಕಾರವನ್ನು ರೂಢಿಸಿ ತರಲು ಸಾಧ್ಯವಿಲ್ಲ. ಎ.ಎಚ್.ಬರ್ಚ್ ಹೇಳುವಂತೆ, ಪ್ರಜೆಗಳ ಬೇಡಿಕೆಗಳು ಪ್ರಾತಿನಿಧ್ಯ ಪದ್ಧತಿಯ ಮೂಲಕ ವ್ಯಕ್ತವಾಗಿ, ಚರ್ಚೆಯಲ್ಲಿ ಒಂದಿಷ್ಟು ಬದಲಾವಣೆಗೊಂಡು ಸರ್ಕಾರದ ಪರಿಶೀಲನೆಗೆ ಬರುತ್ತವೆ. ರಾಜಕೀಯ ಪಕ್ಷಗಳು ಚರ್ಚಾಸ್ಪದ ವಿಚಾರಗಳ ಬಗ್ಗೆ ಅಭಿಪ್ರಾಯಗಳನ್ನು ಗ್ರಹಿಸಿ ಅವನ್ನು ಆಯ್ಕೆಮಾಡಿಕೊಳ್ಳಬಹುದಾದ ಹಲವಾರು ಕಾರ್ಯನೀತಿಗಳ ರೂಪಕ್ಕೆ ಇಳಿಸುತ್ತವೆ. ರಾಜಕೀಯ ಮುಖಂಡರು ಪಕ್ಷ ಸಭೆಗಳ ಮತ್ತು ಚುನಾವಣಾ ಪ್ರಚಾರ ಸಭೆಗಳ ಮೂಲಕ ತಮ್ಮ ಕಾರ್ಯಕ್ರಮಗಳಿಗೆ ಜನರ ಬೆಂಬಲ ಪಡೆದುಕೊಳ್ಳುತ್ತಾರೆ.

**ಕರ್ನಾಟಕದಲ್ಲಿ :** ಈಗ ಕರ್ನಾಟಕಾಂತರ್ಗತವಾಗಿರುವ ಹಳೆಯ ಮೈಸೂರು ಸಂಸ್ಥಾನದಲ್ಲಿ ಪ್ರಜಾಪ್ರತಿನಿಧಿ ಸಭೆಯ ರೂಪದಲ್ಲಿ ಜವಾಬ್ದಾರಿ ಸರ್ಕಾರದ ಬೀಜವನ್ನು ಬಿತ್ತಿದವರು ದಿವಾನ್ ರಂಗಾಚಾರ್ಲು (1881). 1800ರಿಂದಲೂ ಮೈಸೂರು ಸಂಸ್ಥಾನದಲ್ಲಿ ಒಳಾಡಳಿತದಲ್ಲಿ ಪ್ರಜೆಗಳಿಗೆ ಅವಕಾಶವಿರಲಿಲ್ಲ. ಪ್ರಜಾಪ್ರತಿನಿಧಿ ಸಭೆ 1881ರಲ್ಲಿ ಸ್ಥಾಪಿತವಾದ ಮೇಲೆ, 50 ರೂ.ಗಳಿಂದ 500 ರೂ.ಗಳ ವಾರ್ಷಿಕ ಕಂದಾಯ ಸಲ್ಲಿಸುವವರು ಆ ಸಭೆಗೆ ನಾಮನಿರ್ದೇಶನಗೊಳ್ಳಬಹುದಾಗಿತ್ತು. ಸದಸ್ಯರ ನಾಮನಿರ್ದೇಶನಕ್ಕೆ ಬದಲಾಗಿ ಅವರು ಜನರಿಂದ ಚುನಾಯಿತರಾಗಬೇಕೆಂಬ ಒತ್ತಾಯ 1889ರಲ್ಲಿ ರಂಗದಾಸಪ್ಪನವರಿಂದ ಬಂತು. 1890ರಲ್ಲಿ ದಿವಾನ್ ಕೆ.ಶೇಷಾದ್ರಿ ಅಯ್ಯರ್ ಅದನ್ನು ಒಪ್ಪಿದರು. ಆಗಿನ ಪ್ರಜಾಪ್ರತಿನಿಧಿ ಸಭೆ ಕೇವಲ ಸಮಾಲೋಚಕ ಸಭೆಯಾಗಿತ್ತೇ ಹೊರತು ಆಡಳಿತದ ಮೇಲೆ ಅದಕ್ಕೆ ನಿಯಂತ್ರಣಾಧಿಕಾರವಿರಲಿಲ್ಲ. ಶಾಸನ ರಚನೆಯ ಬಗ್ಗೆ ನಿರ್ಣಯ ಕೈಗೊಳ್ಳಲು ಸಹ ಅದಕ್ಕೆ ಅಧಿಕಾರವಿರಲಿಲ್ಲ. 1907ರಲ್ಲಿ ಮೊದಲ ಬಾರಿಗೆ ನ್ಯಾಯವಿಧಾಯಕ ಸಭೆ ರಚಿತವಾಯಿತು. ಅದಕ್ಕೆ ಶಾಸನ ರಚನೆಯ ಅಧಿಕಾರವಿತ್ತು. ಅದು ದಿವಾನರು, ಸಚಿವರು ಹಾಗೂ ಸರ್ಕಾರದಿಂದ ನೇಮಕಗೊಂಡ 15 ಮಂದಿ ಸದಸ್ಯರಿಂದ ಕೂಡಿತ್ತು. ದಿವಾನ್ ವಿಶ್ವೇಶ್ವರಯ್ಯನವರ ಕಾಲದಲ್ಲಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಿಗೆ ಆಯವ್ಯಯ ಪತ್ರದ ಮೇಲೆ ಚರ್ಚೆಮಾಡುವ ಜವಾಬ್ದಾರಿಯನ್ನು ನೀಡಲಾಯಿತು (1919). ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆಗಳಲ್ಲಿ ಪ್ರಶ್ನೆ ಕೇಳುವ ಅಧಿಕಾರ ಸದಸ್ಯರಿಗೆ ಇತ್ತು. ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯಾಗಬೇಕೆಂಬ ಕೇಳಿಕೆ 1919ರ ಹೊತ್ತಿಗೆ ಹೆಚ್ಚಾಯಿತು. ಸಂಸ್ಥಾನದ ಕೌನ್ಸಿಲ್‌ಗೆ ಅಧಿಕಾರೇತರ ಸದಸ್ಯರನ್ನು ನೇಮಕಮಾಡುವ ಪರಿಪಾಠಕ್ಕೆ ಅವಕಾಶ ಕಲ್ಪಿಸಲಾಯಿತು. 1921ರಲ್ಲಿ ದಿವಾನ್ ಮತ್ತು ಇತರ ಸಚಿವರಿಂದ ಕೂಡಿದ, ಮಹಾರಾಜರಿಗೆ ಉತ್ತರದಾಯಿಯಾದ ಪರಿಷತ್ತಿನ ರಚನೆಯಾಯಿತು. ಪ್ರಜಾಪ್ರತಿನಿಧಿ ಮತ್ತು ನ್ಯಾಯವಿಧಾಯಕ ಸಭೆಗಳ ಸ್ಥಾನಮಾನಗಳು ಹೆಚ್ಚಿದ್ದುವು. ಈ ವೇಳೆಗೆ ಕಾಂಗ್ರೆಸ್ ಹೂಡಿದ ಸ್ವಾತಂತ್ರ್ಯ ಹೋರಾಟ ಭಾರತದ ದೇಶೀಯ ಸಂಸ್ಥಾನಗಳಿಗೂ ವ್ಯಾಪಿಸಿತು. 1935ರ ಭಾರತ ಸರ್ಕಾರದ ಅಧಿನಿಯಮದ ಪ್ರಕಾರ ಬ್ರಿಟಿಷ್ ಪ್ರಾಂತ್ಯಗಳಲ್ಲಿ ಪ್ರಜಾಪ್ರತಿನಿಧಿಗಳಿಂದ ಕೂಡಿದ ವಿಧಾನ ಸಭೆಗಳು ರಚಿತವಾದವು. ಹಿಂದಿನ ಮುಂಬಯಿ ಮತ್ತು ಮದ್ರಾಸ್ ಪ್ರಾಂತಗಳಿಗೆ ಸೇರಿದ್ದ ಕರ್ನಾಟಕದ ಭಾಗಗಳಿಂದ ಜನಪ್ರತಿನಿಧಿಗಳು ಆಯಾ ಪ್ರಾಂತಗಳ ಸರ್ಕಾರಗಳಿಗೆ ಚುನಾಯಿತರಾಗುತ್ತಿದ್ದರು. ದೇಶೀಯ ಸಂಸ್ಥಾನಗಳಲ್ಲೂ ಪ್ರಜೆಗಳಿಗೆ ಆ ಬಗೆಯ ಅಧಿಕಾರ ಲಭಿಸಬೇಕೆಂಬ ಒತ್ತಡ ಹೆಚ್ಚಿತು. 1937ರಲ್ಲಿ ಪಟ್ಟಾಭಿಸೀತಾರಾಮಯ್ಯ ಮತ್ತು ಬಲವಂತರಾಯ ಮೆಹತಾ ಇವರು ಮೈಸೂರು ಸಂಸ್ಥಾನದ ನಾನಾ ಭಾಗಗಳಲ್ಲಿ ಅಭಿಪ್ರಾಯ ಸಂಗ್ರಹಿಸಿ, ಮೈಸೂರು ಸಂಸ್ಥಾನದಲ್ಲಿ ಜನಪ್ರಿಯ ಸರ್ಕಾರ ಸ್ಥಾಪಿತವಾಗಬೇಕೆಂದು ಅಭಿಪ್ರಾಯಪಟ್ಟರು.

ಮೈಸೂರಿನ ಜವಾಬ್ದಾರಿ ಸರ್ಕಾರ ಸ್ಥಾಪನೆಯ ಇತಿಹಾಸ ಕಾಂಗ್ರೆಸ್ ಇತಿಹಾಸದೊಂದಿಗೆ ಹಾಸುಹೊಕ್ಕಾಗಿದೆ. ಬ್ರಿಟಿಷರು ಭಾರತದ ಆಡಳಿತದ ಜವಾಬ್ದಾರಿಯನ್ನು ಭಾರತೀಯರಿಗೆ ವರ್ಗಾಯಿಸಿದ ಮೇಲೆ 1947 ಅಕ್ಟೋಬರ್ 24ರಂದು ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ

ಸ್ಥಾಪನೆಯಾಗಿ ಹೊಸ ಮಂತ್ರಿ ಮಂಡಲ ರಚನೆಯಾಯಿತು. 1950ರ ಭಾರತ ಸಂವಿಧಾನದ ಪ್ರಕಾರ ಕರ್ನಾಟಕ ಮತ್ತು ಇತರ ರಾಜ್ಯಗಳಲ್ಲೂ ಕೇಂದ್ರದಲ್ಲೂ ವಿಧಾನ ಮಂಡಲ ಅಥವಾ ಸಂಸತ್ತಿಗೆ ಹೊಣೆಯಾದ ಸಂಪುಟ ಸರ್ಕಾರಗಳು ಆಡಳಿತ ನಿರ್ವಹಿಸುತ್ತಿವೆ. ಇವು ಜವಾಬ್ದಾರಿ ಸರ್ಕಾರಗಳು. *

**ಜಹಗೀರದಾರ್,ಆರ್.ಎ. :** 1889-1963. ನ್ಯಾಯವಾದಿ ಮತ್ತು ದೇಶಭಕ್ತ. ಖ್ಯಾತ ವಕೀಲರಾಗಿದ್ದು ಮುಂಬಯಿ ಶ್ರೇಷ್ಠ ನ್ಯಾಯಾಲಯದ ನ್ಯಾಯಾಧೀಶ ಹುದ್ದೆಯಿಂದ ನಿವೃತ್ತರಾದ ಅನಂತರ ಕರ್ನಾಟಕ ವಿಶ್ವವಿದ್ಯಾಲಯದ (ನೋಡಿ) ಪ್ರಥಮ ಉಪಕುಲಪತಿಗಳಾಗಿ ನೇಮಕಗೊಂಡರು (1949-51). 1949ರ ಅಕ್ಟೋಬರ್‌ನಲ್ಲಿ



ಧಾರವಾಡದ ಗಂಡುಮಕ್ಕಳ ತರಬೇತಿ ಕಾಲೇಜಿನ ಮೂರು ಕೋಣೆಗಳಲ್ಲಿ ಪ್ರಾರಂಭವಾದ ಈ ವಿಶ್ವ ವಿದ್ಯಾಲಯಕ್ಕೆ ಛೋಟ ಮಹಾಬಲೇಶ್ವರದ ವಿಶಾಲ ಭೂಮಿ ಇವರ ಕಾಲದಲ್ಲಿ ದೊರಕಿತು. 1950ರಲ್ಲಿ ಕುಲಸಚಿವರಾಗಿ ನೇಮಕ ಗೊಂಡ ಎಸ್.ಎಸ್. ಒಡೆಯರೂ ಇವರೂ ಕೂಡಿ ವಿಶ್ವವಿದ್ಯಾಲಯದ ಮುಂದಿನ ಪ್ರಗತಿಗೆ ದುಡಿದರು. 1951ರ ಮಾರ್ಚ್ 30ರಂದು ಅಂದಿನ ರಾಷ್ಟ್ರಪತಿಗಳಾಗಿದ್ದ ಬಾಬು ರಾಜೇಂದ್ರ ಪ್ರಸಾದರು ವಿಶ್ವವಿದ್ಯಾಲಯದ ಹೊಸ ನಿವೇಶನದ ಅಡಿಗಲ್ಲನ್ನಿಟ್ಟು ಶುಭ ಕೋರಿದರು. ವಿಶ್ವವಿದ್ಯಾಲಯದ ಕಾನೂನು, ಕಟ್ಟಳೆ ಮತ್ತು ನಿಬಂಧನೆಗಳನ್ನು ರಚಿಸುವಲ್ಲಿ ಇವರ ಕುಶಾಗ್ರಬುದ್ಧಿ, ಕಾಯಿದೆ ಜ್ಞಾನ ಮತ್ತು ಪ್ರಜಾಪ್ರಭುತ್ವವಾದಿ ಧೋರಣೆ ಬಹಳಷ್ಟು ಸಹಕಾರಿಯಾದವು.

ಉಪಕುಲಪತಿಗಳಾಗಿ ಸೇವೆಸಲ್ಲಿಸಿದ ಇವರರು ದೇಶಪ್ರೇಮಿಗಳೂ ಆಗಿದ್ದರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸುತ್ತಿದ್ದ ಕಾಂಗ್ರೆಸ್ ಮುಖಂಡರಿಗೆ, ಕಾರ್ಯಕರ್ತರಿಗೆ ಇವರು ಎಲ್ಲ ರೀತಿಯ ಸಹಾಯವನ್ನೂ ಒದಗಿಸುತ್ತಿದ್ದರು. (ಎನ್.ಕೆ.ಕೆ.)

**ಜಾಂಬೋಟಿ :** ಬೆಳಗಾಂವಿ ಜಿಲ್ಲೆ ಖಾನಾಪುರ ತಾಲ್ಲೂಕಿನಲ್ಲಿರುವ ಒಂದು ಗ್ರಾಮ. ಖಾನಾಪುರದಿಂದ 17ಕಿಮೀ ದೂರದಲ್ಲಿ ವಜ್ರಪೋಹಾ ಜಲಪಾತಕ್ಕೆ ಹೋಗುವ ಮಾರ್ಗದಲ್ಲಿ ನಿತ್ಯ ಹಸುರುನಿಂದ ಕೂಡಿದ ಗುಡ್ಡದ ಬದಿಯಲ್ಲಿದೆ. ಸ್ಥಳಪುರಾಣದ ಪ್ರಕಾರ ಇದು ಜಾಂಬುವಂತನ ಮಗಳಾದ ಜಾಂಬುವತಿಯ ಜನ್ಮಸ್ಥಳ. ಈ ಸ್ಥಳದ ಸುತ್ತಮುತ್ತಲಿರುವ ಕಾಡುಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕರಡಿಗಳಿರುವುದು ಈ ನಂಬಿಕೆಗೆ ಕಾರಣ ವಾಗಿರಬಹುದು. 1820ರಲ್ಲಿ ಈ ಸ್ಥಳಕ್ಕೆ ಭೇಟಿ ಕೊಟ್ಟಿದ್ದ ಮಾರ್ಷಲ್ ಎಂಬಾತ ಈ ಊರು ಮರಾಠರ ಸರದೇಸಾಯಿ ವೆಂಕಟರಾವ್‌ನಿಂದ ಆಳಲ್ಪಡುತ್ತಿತ್ತೆಂದೂ ಜಾಂಬೋಟಿ ಬೆಟ್ಟ ಹುಲಿಗಳಿಂದ ತುಂಬಿತ್ತೆಂದೂ ದೇಸಾಯಿ ಪ್ರತಿವರ್ಷ ಹುಲಿಬೇಟೆಯಾಡುತ್ತಿದ್ದನೆಂದೂ ತನ್ನ ದಿನಚರಿ ಪುಸ್ತಕದಲ್ಲಿ ಉಲ್ಲೇಖಿಸಿದ್ದಾನೆ. ಈ ಊರ ರಾಮಪುರ ಪೇಟೆಯಲ್ಲಿ ವಿಶಾಲವಾದ ಪ್ರಾಂಗಣವಿರುವ ಮತ್ತು ಅಮೃತಶಿಲೆಯ ರಾಮ, ಸೀತೆ, ಲಕ್ಷ್ಮಣ ಮೂರ್ತಿಗಳಿರುವ ಹೊಸದಾಗಿ ಕಟ್ಟಲ್ಪಟ್ಟ ರಾಮಮಂದಿರವಿದೆ. ರಾಮನವಮಿಯಲ್ಲಿ ಇಲ್ಲಿ ಜಾತ್ರೆ ನಡೆಯುವುದು.

ಇತ್ತೀಚೆಗೆ ಕಟ್ಟಲ್ಪಟ್ಟ ರೋಮನ್ ಕೆಥೊಲಿಕ್ ಚರ್ಚ್ ಹಾಗೂ ಒಂದು ಮಸೀದಿ ಇಲ್ಲಿವೆ. ಒಂದು ಪ್ರವಾಸಿ ಮಂದಿರವಿದೆ. (ಆರ್.ಐ.)

**ಜಾತ್ರೆ :** ವ್ಯಾಪಾರ ವ್ಯವಹಾರಗಳೊಂದಿಗೆ ಜನಪದರಿಗೆ ಮನರಂಜನೆಯನ್ನೂ ಒದಗಿಸುವ, ವರ್ಷದ ಯಾವುದೋ ಒಂದು ನಿರ್ದಿಷ್ಟ ಕಾಲದಲ್ಲಿ ನಡೆಯುವ ಸಾಮಾಜಿಕ ಚಟುವಟಿಕೆ. ಜಾತ್ರೆ ಶಬ್ದ ಯಾತ್ರಾದ ತದ್ಭವ ರೂಪ. ಜಾತ್ರೆಯ ಮುಖ್ಯ ಬಂಡವಾಳ ಜನ. 'ಜನ ಸೇರಿದರೆ ಜಾತ್ರೆ', 'ಜನ ಮರುಳೋ ಜಾತ್ರೆ ಮರುಳೋ' ಇತ್ಯಾದಿ ಗಾದೆಗಳು ಇದನ್ನು ದೃಢಪಡಿಸುತ್ತವೆ. ಹೀಗೆ ಒಂದೆಡೆ ಸೇರಿದ ಜನಕ್ಕೆ ಬೇಕಾಗುವಂಥ ಸಾಮಾನು ಸರಂಜಾಮುಗಳನ್ನು ಮಾರಲು ಅಂಗಡಿ ಮುಂಗಟ್ಟುಗಳೂ ಇಲ್ಲಿ ಬಂದು ಸೇರುತ್ತವೆ. ಕೆಲವು ಜಾತ್ರೆಗಳಲ್ಲಿ ದನಗಳ ಪ್ರದರ್ಶನವೂ ವ್ಯಾಪಾರವೂ ನಡೆಯುತ್ತವೆ. ಇಂಥವುಗಳಲ್ಲಿ ಹಾಸನ, ರಾಮನಾಥಪುರ, ಗೊರೂರು, ಹೊಳೆನರಸೀಪುರ, ಚುಂಚನಗಿರಿ, ಎಡೆಯೂರು, ಹೇಮಗಿರಿ, ಮದ್ದೂರು, ಮಾಗಡಿ, ಸಿದ್ಧಗಂಗೆ, ಚುಂಚನಕಟ್ಟೆ ಮುಂತಾದ ಕಡೆಗಳಲ್ಲಿ ನಡೆಯುವ ಜಾತ್ರೆಗಳು ಗಮನಾರ್ಹವಾದುವು. ಜನಕ್ಕೆ ಸಾಕಷ್ಟು ವ್ಯಾಪಾರ ಸಾಪಾರ ಮನರಂಜನೆ ಒದಗುತ್ತವೆ. ಒಟ್ಟಾರೆ ಜಾತ್ರೆಯ ಸ್ಥಳದಲ್ಲಿ ಸಾಮಾನ್ಯವಾಗಿ ಒಂದಿಲ್ಲೊಂದು ದೇವತೆಯ ಪೂಜೆ ಉತ್ಸವಗಳು ಜರುಗುವುದು ಕಂಡುಬರುತ್ತದೆ. ಇದನ್ನು ಪರಿಷೆ ಎಂದು ಕರೆಯುವುದೂ ರೂಢಿ.

ಜಾತ್ರೆ ಯಶಸ್ವಿಯಾಗಿ ನೆರವೇರಬೇಕಾದರೆ ಮುಖ್ಯವಾಗಿ ಜಾತ್ರೆ ನಡೆಯುವ ಸ್ಥಳದಲ್ಲಿ ನೀರು ನೆರಳಿನ ಸೌಕರ್ಯ, ಜನ ಜಾನುವಾರುಗಳಿಗೆ ಬೇಕಾದ ಆಹಾರ ಸರಬರಾಜು ಇರಬೇಕು. ವಿಶೇಷವಾಗಿ ಜಾತ್ರೆಯ ಕ್ಷೇತ್ರ ದೇವರ ಮಹಿಮೆಯಿಂದ ಕೂಡಿದ್ದು ದೇವರ ಉತ್ಸವ, ರಥೋತ್ಸವ, ಜನಪದ ಕಲೆಗಳಾದ ಕೋಲಾಟ, ಲಾವಣಿ, ದೊಣ್ಣೆವರಸೆಯೇ ಆದಿಯಾದ ಸಾಧನೆ, ಕುಸ್ತಿ, ಕಂಸಾಳೆ ನೃತ್ಯ, ಗಾರುಡಿಗನೃತ್ಯ ಮುಂತಾದವುಗಳ ಉತ್ತಮ ಪ್ರದರ್ಶನ, ಸಿನಿಮಾ ನಾಟಕ ಸರ್ಕಸ್‌ಗಳ ಆಕರ್ಷಣೆ, ಬಣ್ಣದ ಭಿತ್ತಿ ಪತ್ರ, ರೆಕಾರ್ಡ್ ಸಂಗೀತ ಮುಂತಾದ್ದರ ಪ್ರದರ್ಶನ, ಹೋಟೆಲುಗಳ ಸೌಕರ್ಯ ಇತ್ಯಾದಿಗಳು ವ್ಯವಸ್ಥಿತವಾಗಿದ್ದರೆ ಇದಕ್ಕೆ ಹೊಸ ರಂಗು ಬರುತ್ತದೆ. ಜನಪದರು ತಮ್ಮ ವಾರ್ಷಿಕ ಉತ್ಪನ್ನಗಳನ್ನು ಸಾಮಾನ್ಯವಾಗಿ ಸುಗ್ಗಿ ಕಳೆದ ತಕ್ಷಣವೇ ಆರಂಭವಾಗುವ ಬೇಸಗೆಯ ಜಾತ್ರೆಗಳಲ್ಲಿ ಮಾರಾಟ ಮಾಡಿ, ತಮಗೆ ಅಗತ್ಯವಾದ ಸಲಕರಣೆಗಳನ್ನು ನಿತ್ಯೋಪಯೋಗಿ ವಸ್ತುಗಳನ್ನು ಕೊಳ್ಳುತ್ತಾರೆ. ಆದ್ದರಿಂದ ಜಾತ್ರೆಯನ್ನು ಗ್ರಾಮೀಣ ಪ್ರದೇಶಗಳ ಮುಖ್ಯ ವ್ಯಾಪಾರ ಕೇಂದ್ರವೆಂದು ಕರೆಯಬಹುದು.

ಆದರೆ ಈಚೆಗೆ ಮೋಜಿನ ಜಾತ್ರೆ, ವಸ್ತುಪ್ರದರ್ಶನದ ಜಾತ್ರೆ, ದನದ ಜಾತ್ರೆ ಮುಂತಾದ ಬಹುಬಗೆಯ ಸುಧಾರಿತ ಜಾತ್ರೆಗಳು ರೂಢಿಗೆ ಬರುತ್ತಿರುವುದನ್ನು ಕಾಣಬಹುದು. ಅಲ್ಲದೆ ಜಾತ್ರೆಗಳು ಹೆಚ್ಚು ಹೆಚ್ಚು ನಾಗರಿಕವಾಗುತ್ತ ನಡೆದಿವೆ. ಶುದ್ಧೀಕರಣಗೊಂಡ ಕುಡಿಯುವ ನೀರಿನ ಸರಬರಾಜು, ಜನ ದನಗಳಿಗೆ ಔಷಧೋಪಚಾರ, ಆಹಾರ ಸರಬರಾಜು, ಸಾರಿಗೆ ಸೌಲಭ್ಯ, ವಿದ್ಯುತ್ ದೀಪದ ವ್ಯವಸ್ಥೆ, ಜಾನುವಾರುಗಳ ತಂಗಣೆಗೆ ತಕ್ಕಂಥ ತಾತ್ಕಾಲಿಕ ಮಾಡುಗಳ ನಿರ್ಮಾಣ, ಜನಪದರಿಗೆ ಹಿತವೆನ್ನಿಸುವಂಥ ಉತ್ತಮ ಮನರಂಜನೆಯ ಏರ್ಪಾಡು - ಇತ್ಯಾದಿ ಸೌಲಭ್ಯಗಳನ್ನೊದಗಿಸಲಾಗುತ್ತಿದೆ. ವಿಶೇಷವಾಗಿ ನಾಡಿನಲ್ಲಿ ತಲೆದೋರಿರುವ ನಾನಾ ಮುಖದ ಪ್ರಗತಿಯನ್ನು ಪ್ರತಿಬಿಂಬಿಸುವಂಥ ವಸ್ತುಪ್ರದರ್ಶನಗಳನ್ನು ಸರ್ಕಾರದ ವತಿಯಿಂದ ಏರ್ಪಡಿಸುತ್ತಿರುವುದು ಜಾತ್ರೆಯ ಒಂದು ದೊಡ್ಡ ಆಕರ್ಷಣೆ. ಇದರ ಮುಖಾಂತರ ಜನರಂಜನೆಯೊಂದಿಗೆ ಜನತಾ ಶಿಕ್ಷಣವೂ ಒದಗಿದಂತಾಗುತ್ತದೆ. ನಾಡು ಹಾಗೂ ರಾಷ್ಟ್ರದ ಕಲೆ, ಸಂಸ್ಕೃತಿ, ಸಂಗೀತದ ಪ್ರಸಾರ ಸುಲಭವಾಗಿ ಜನಸಾಮಾನ್ಯರಿಗೆ ಮುಟ್ಟುತ್ತದೆ. ಹೀಗೆ ಬಹುಜನೋಪಯೋಗಿಯಾಗಿರುವ ಜಾತ್ರೆಗಳು ಸಂಕೀರ್ಣ ಸ್ವರೂಪದ ಸಾಮಾನ್ಯ ಜನತಾ ಸೇವಾಕೇಂದ್ರಗಳಾಗಿಯೂ ಪರಿಣಮಿಸಿವೆ. (ಎನ್.ಟಿ.)

**ಜಾನಪದ :** ಜಾನಪದ ವಿಷಯಗಳಿಗೆ ಮೀಸಲಾಗಿದ್ದ ಅರ್ಧವಾರ್ಷಿಕ ಪತ್ರಿಕೆ, ಮೈಸೂರಿನ ಮಾನಸಗಂಗೋತ್ರಿಯ ಕರ್ನಾಟಕ ಜಾನಪದ ಪರಿಷತ್ತಿನ ವತಿಯಿಂದ 1969ರ ಜನವರಿಯಿಂದ ಪ್ರಕಟಣೆಯನ್ನು ಆರಂಭಿಸಿತು. ದೇ.ಜವರೇಗೌಡರು ಇದರ ಪ್ರಧಾನ ಸಂಪಾದಕರೂ ಹಾ.ಮಾ.ನಾಯಕ ಹಾಗೂ ಜೀ.ಶಂ.ಪರಮಶಿವಯ್ಯ ಸಂಪಾದಕರೂ ಆಗಿದ್ದರು. ಜಾನಪದ ವಿಷಯಗಳ ಮೇಲೆ ಸಂಶೋಧನಾತ್ಮಕ ವಿಮರ್ಶನಾತ್ಮಕ ಪರಿಚಯಾತ್ಮಕ

ಲೇಖನಗಳನ್ನು ಹಾಗೂ ಇತರ ಸಂಗ್ರಹಗಳನ್ನು ಪ್ರಕಟಿಸುವುದೂ ಸಂಗ್ರಾಹಕರಿಗೆ ವಿದ್ಯಾರ್ಥಿಗಳಿಗೆ ಜಾನಪದ ಅಭಿಮಾನಿಗಳಿಗೆ ಸ್ಫೂರ್ತಿ




ಮತ್ತು ಮಾರ್ಗದರ್ಶನ ನೀಡುವುದೂ ಈ ಪತ್ರಿಕೆಯ ಮುಖ್ಯ ಉದ್ದೇಶವಾಗಿತ್ತು. (ಕೆ.ಆರ್.)

**ಜಾನಪದ ಅಧ್ಯಯನ :** ಭಾರತೀಯ ಜಾನಪದ ಅಧ್ಯಯನ ಭಾರತ ಶಾಸ್ತ್ರದ ಅಂಗವಾಗಿ 19ನೆಯ ಶತಮಾನದಲ್ಲಿಯೇ ಆರಂಭವಾಯಿತು. ಕಥೆಗಳು, ಗಾದೆಗಳು, ಸಂಪ್ರದಾಯಗಳನ್ನು ಕುರಿತ ಸಂಕಲನ ಕೃತಿಗಳು ಉತ್ತರ ಭಾರತದ ಪ್ರದೇಶದಿಂದ ಪ್ರಕಟಗೊಂಡವು. ದಕ್ಷಿಣ ಭಾರತ ಭಾಗದಲ್ಲಿ ಕೆಲಸ ಮಾಡಿದ ಪಾಶ್ಚಾತ್ಯ ವಿದ್ವಾಂಸರು ಕಥೆ, ಗೀತೆ, ಲಾವಣಿ, ಗಾದೆ ಮುಂತಾದ ಜನಪದ ಸಾಹಿತ್ಯ ಪ್ರಕಾರಗಳ ಕ್ಷೇತ್ರದಲ್ಲಿ ತಕ್ಕಮಟ್ಟಿಗೆ ಕೆಲಸ ಮಾಡಿದರೂ ಇತರ ಕ್ಷೇತ್ರಗಳಲ್ಲಿ ನಡೆದಷ್ಟು ಕೆಲಸ ಇಲ್ಲಿ ನಡೆಯಲಿಲ್ಲ.

ಭಾರತೀಯ ಜನಪದ ಜೀವನ ವಿಷಯದಲ್ಲಿ ಆಸಕ್ತಿವಹಿಸಿದ ಆದ್ಯ ವಿದ್ವಾಂಸರಲ್ಲಿ ಗಣ್ಯನಾದ ಅಬ್ಬೆ ಡುಬಾಯಿ ಕರ್ನಾಟಕದಲ್ಲಿ ಬಹಳ ಕಾಲ ಇದ್ದವನು. ಭಾರತೀಯ ಸಾಹಿತ್ಯ, ಧರ್ಮವಿಚಾರದಲ್ಲಿ ಆಸಕ್ತನಾಗಿದ್ದ ಇವನು ಭಾರತೀಯ ಜನಪದ ಜೀವನ ಮತ್ತು ಸಂಸ್ಕೃತಿಯನ್ನು ಸಾಕಷ್ಟು ವಿಸ್ತಾರವಾಗಿ ಅಭ್ಯಸಿಸಿ ಪ್ರಕಟಿಸಿದ ದಿ ಹಿಂದು ಕಸ್ಟಮ್ಸ್ ಮ್ಯಾನರ್ಸ್ ಅಂಡ್ ಸೆರೆಮೊನೀಸ್ ಎಂಬ ಗ್ರಂಥ ಅನೇಕ ದೃಷ್ಟಿಗಳಿಂದ ಗಣನೀಯ ಕೃತಿ ಎನಿಸಿದೆ. 1792ರಲ್ಲಿ ಕ್ರೈಸ್ತ ಧರ್ಮ ಪ್ರಚಾರಕ್ಕಾಗಿ ಭಾರತಕ್ಕೆ ಬಂದ ಈತ ಪಾಂಡಿಚೇರಿಯ ಮಿಷನ್‌ನಲ್ಲಿ ಕೆಲಕಾಲ ಇದ್ದು ಮದರಾಸು ಸಂಸ್ಥಾನದ ಕೆಲವು ಜಿಲ್ಲೆಗಳಲ್ಲಿ ಕೆಲಸ ಮಾಡಿ ಅನಂತರ ಮೈಸೂರಿಗೆ ಬಂದ. ಇಲ್ಲಿ ಪಾಂಡವಪುರದ ಸಮೀಪದಲ್ಲಿದ್ದುಕೊಂಡು ತನ್ನ ಮತ ಪರಿವರ್ತನೆಯ ಕಾರ್ಯದ ಜೊತೆಗೆ ಇಲ್ಲಿಯ ಸಂಸ್ಕೃತಿಯನ್ನೂ ಅಧ್ಯಯನ ಮಾಡಿದ. ಹಾಸನದ ಬಳಿಯ ಸಾತೇನಹಳ್ಳಿಯಲ್ಲಿಯೂ ಕೆಲವು ವರ್ಷ ಇದ್ದ ಇವನು ಸಿಡುಬು ರೋಗದ ನಿರ್ಮೂಲನಕ್ಕಾಗಿ ಕೆಲಸ ಮಾಡಿ 'ದೊಡ್ಡಸ್ವಾಮಿ' ಎಂದು ಪ್ರಖ್ಯಾತನಾದ. ಜನಸಾಮಾನ್ಯರ ಬದುಕನ್ನು ನಿಕಟವಾಗಿ ಅಭ್ಯಾಸಮಾಡಿ ಅವರ ಸಂಪ್ರದಾಯಗಳು ನಂಬಿಕೆ ಆಚರಣೆಗಳು ಆ ಬಗೆಗಿನ ಸಾಮಗ್ರಿಯನ್ನು ಕಲೆಹಾಕತೊಡಗಿದ. ಈತನ ಕೃತಿಯಲ್ಲಿ ಭಾರತೀಯ ಸಂಸ್ಕೃತಿಯ ಸಾಮಾನ್ಯಚಿತ್ರ ಸಿಕ್ಕುವುದರ ಜೊತೆಗೆ ಜನಪದ ಸಂಸ್ಕೃತಿಗೆ ಸಂಬಂಧಿಸಿದ ವಿಪುಲ ಸಾಮಗ್ರಿ ಅಡಕವಾಗಿದೆ. ಸತಿ ಸಹಗಮನದಂಥ ವಿಲಕ್ಷಣ ಸಂಪ್ರದಾಯಗಳು, ಹಬ್ಬ ಹರಿದಿನಗಳು, ಕಥೆಗಳು, ಗಾದೆಗಳು ಮುಂತಾದುವನ್ನೆಲ್ಲ ಅಭ್ಯಾಸ ಮಾಡಿ ಸಂಗ್ರಹ ನಡೆಸಿ ತನ್ನ ಕೃತಿಯಲ್ಲಿ ಅಳವಡಿಸಿದ್ದಾನೆ.

ಈ ಕ್ಷೇತ್ರದಲ್ಲಿ ಹೆಸರಿಸಬಹುದಾದ ಮತ್ತೊಂದು ಗಮನಾರ್ಹ ಹೆಸರು ಚಾರ್ಲ್ಸ್ ಇ.ಗೋವರನದು. ಈತನ ಕೃತಿ 'ಫೋಕ್‌ಸಾಂಗ್ಸ್ ಆಫ್ ಸದರನ್ ಇಂಡಿಯ' 1871ರಲ್ಲಿ ಪ್ರಕಟವಾಯಿತು. ಈತ ಕನ್ನಡ, ಕೊಡಗು, ಬಡಗ, ತಮಿಳು, ಮಲಯಾಳಂ ಭಾಷೆಗಳ ಜನಪದ ಗೀತೆಗಳನ್ನು ಬೇರೆ ಬೇರೆ ವಿದ್ವಾಂಸರಿಂದ ಕಲೆ ಹಾಕಿ, ಅವನ್ನು ಇಂಗ್ಲಿಷಿಗೆ ಭಾಷಾಂತರಿಸಿ, ಪ್ರತಿಯೊಂದು ಭಾಷಾ ಅವತರಣಿಕೆಗೂ ಉತ್ತಮ ಟಿಪ್ಪಣಿ ಒದಗಿಸಿ, ಬೆಲೆಯುಳ್ಳ ಪ್ರಸ್ತಾವನೆಯೊಂದನ್ನು ಬರೆದು ಪ್ರಕಟಿಸಿದ. ಕನ್ನಡಕ್ಕೆ ಸಂಬಂಧಿಸಿದ ಇಪ್ಪತ್ತೆಂಟು ಹಾಡುಗಳು ಕನ್ನಡ ಜನಪದ ಗೀತೆಗಳು ಎಂಬ ವಿಭಾಗದಲ್ಲಿವೆ. ಇವನ ಸಂಗ್ರಹದ ಹಾಡುಗಳೆಲ್ಲ ಬಹುಮಟ್ಟಿಗೆ ದಾಸರ ಕೀರ್ತನೆಗಳೇ ಆಗಿವೆ. ಈ ಗ್ರಂಥದಲ್ಲಿ ಕೊಡವ ಹಾಡುಗಳ ಭಾಗ ಮಹತ್ತ್ವದ್ದು. ಕೊಡವ ಸಂಸ್ಕೃತಿಯ ವಿಶಿಷ್ಟ ರಚನೆಗಳು ಇಲ್ಲಿ ಲಭ್ಯವಾಗುತ್ತವೆ. ಹುತ್ತರಿ ಹಾಡುಗಳು, ಮದುವೆ ಪದಗಳು, ಶಿಶು ಪ್ರಾಸಗಳು ಇಲ್ಲಿ ಹೆಸರಿಸಬಹುದಾದ ಸಾಹಿತ್ಯ.

ಇವರಲ್ಲದೆ ಕರ್ನಾಟಕ ಜಾನಪದ ಅಧ್ಯಯನಕ್ಕೆ ಕೈಹಾಕಿದ ವಿದೇಶಿ ವಿದ್ವಾಂಸರುಗಳ ಪೈಕಿ ಕರ್ನಲ್ ಮೆಕೆಂಜಿ, ಲೇಡನ್, ಮೋಗ್ಲಿಂಗ್, ಮೇರಿ ಫ್ರೆರಿ, ಟೆಂಪಲ್, ಕಿಟ್ಟೆಲ್, ಫ್ಲೀಟ್, ಮ್ಯಾನರ್, ಬರ್ನೆಲ್, ಪೀಟರ್‌ಕ್ಲಾಸ್, ಮಾರ್ತಾ ಆಸ್ಟಿನ್, ಲಾರಿ ಹಾಂಕೊ, ಮಾರ್ಕ್ ನಿಕ್ಟರ್, ಬ್ರೂಕ್ನರ್ ಮೊದಲಾದವರು ಮುಖ್ಯರಾಗುತ್ತಾರೆ.

ಸ್ಕಾಟ್‌ಲೆಂಡಿನ ಕರ್ನಲ್ ಮೆಕೆಂಜಿ ಗಣಿತಶಾಸ್ತ್ರದ ಬಗೆಗೆ ದೊರಕುವ ಮಾಹಿತಿಯನ್ನು ಸಂಗ್ರಹಿಸುವ ಉದ್ದೇಶದಿಂದ 1783ರಲ್ಲಿ ಭಾರತಕ್ಕೆ ಬಂದ. 1796-1816ರ ಅವಧಿಯಲ್ಲಿ ಹಳ್ಳಿ ಹಳ್ಳಿಗೆ ಹೋಗಿ ಪಂಡಿತರಿಂದ, ಊರ ಮುಖಂಡರಿಂದ ವಿಷಯ ವಿವರಗಳನ್ನೊಳಗೊಂಡ ಕೈಫಿಯತ್ತುಗಳನ್ನು ಬರೆಸಿದ. ಕೆಲವು ವಿದ್ವಾಂಸರನ್ನು ಸಹಾಯಕರಾಗಿ ನೇಮಿಸಿಕೊಂಡು ಮಾಹಿತಿಗಳನ್ನು ಸಂಗ್ರಹಿಸಿದ.

ಮೆಕೆಂಜಿಯ ಕೈಫಿಯತ್ತುಗಳಲ್ಲಿ ಕನ್ನಡ ಜಾನಪದಕ್ಕೆ ಸಂಬಂಧಿಸಿದ ಅನೇಕ ಅಮೂಲ್ಯ ಮಾಹಿತಿಗಳಿವೆ. ಈ ಕೈಫಿಯತ್ತುಗಳಲ್ಲಿ ಶಾಸನಗಳು, ಐತಿಹಾಸಿಕ ವಿಚಾರಗಳು, ಐತಿಹ್ಯಗಳು, ಸ್ಥಳನಾಮಗಳು, ಅರಸು ಮನೆತನಗಳು, ಭೌಗೋಳಿಕ ಪರಿಚಯ, ಊರುಗಳ ವಿವರ, ಅಲ್ಲಿನ ಜನರ ಆಚಾರ ವಿಚಾರ, ಭಾಷೆ ನಂಬಿಕೆಗಳು ಜಾತಿ ರಿವಾಜುಗಳು, ವೈದ್ಯ, ವ್ಯಾಪಾರ ವ್ಯವಹಾರ, ಕೃಷಿ, ಆಡಳಿತ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ - ಹೀಗೆ ಎಲ್ಲ ವಿವರಗಳಿವೆ. ಸಮಗ್ರ ಜನಪದ ಬದುಕನ್ನು ದಾಖಲಿಸುವುದೇ ಇಲ್ಲಿನ ಉದ್ದೇಶವಾಗಿದೆ. ಮೆಕೆಂಜಿ ಆ ಕಾಲಕ್ಕೆ ಸಂಗ್ರಹಿಸಿದ ಸಾಮಾಜಿಕ ಇತಿಹಾಸ ಮಹತ್ವದ ಕೈಫಿಯತ್ತುಗಳು, ಒದಗಿಸಿದ ಮಾಹಿತಿಗಳು ಜಾನಪದ ಅಧ್ಯಯನ ಕಾರರಿಗೆ ಇಂದಿಗೂ ಉಪಯುಕ್ತವಾಗಿವೆ.

ಬುಕನಾನ್ ಎಂಬಾತ ಟಿಪ್ಪುವಿನ ಪತನದಿಂದಾಗಿ ಕಂಪನಿಯ ಆಡಳಿತಕ್ಕೆ ಬಂದ ಪ್ರದೇಶಗಳನ್ನು ಕಣ್ಣಾರೆ ಕಂಡು ಆ ಪ್ರದೇಶಗಳ ವಿವರವಾದ ಮಾಹಿತಿಯನ್ನು 'ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಅಂಡ್ ಮಲಬಾರ್' ಎಂಬ ಗ್ರಂಥದಲ್ಲಿ ದಾಖಲಿಸಿದ್ದಾನೆ (1807). ಪ್ರವಾಸದ ಸಂದರ್ಭದಲ್ಲಿ ತಾನು ಕಂಡ, ಕೇಳಿದ ಮಾಹಿತಿಗಳನ್ನು ಯಾವುದೇ ಪೂರ್ವಗ್ರಹವಿಲ್ಲದೆ ವಸ್ತುನಿಷ್ಠವಾಗಿ ನಿರೂಪಿಸುತ್ತ ಹೋಗಿದ್ದಾನೆ. ಇದರಲ್ಲಿ ಆಯಾ ಪ್ರದೇಶಗಳ ಕೃಷಿ, ವಾಣಿಜ್ಯ, ಕಲೆ, ಧರ್ಮ, ರೀತಿ ನೀತಿಗಳು, ಇತಿಹಾಸ, ಪ್ರಾಚೀನ ಪಳೆಯುಳಿಕೆಗಳ ಬಗೆಗೆ ವಿವರಗಳು ಸಿಗುತ್ತವೆ.

ಇದೇ ಅವಧಿಯಲ್ಲಿ ಶ್ರೀರಂಗಪಟ್ಟಣದಲ್ಲಿ ಟಿಪ್ಪುವಿನ ಪತನಾನಂತರ ಒದಗಿದ ದುಸ್ಥಿತಿಯನ್ನು ಕುರಿತು ರಚಿತವಾಗಿದ್ದ ಲಾವಣಿಯೊಂದನ್ನು ಜಾನ್ ಲೇಡನ್ ಎಂಬಾತ ಮೌಖಿಕ ಪರಂಪರೆಯಿಂದ ದೊರಕಿಸಿಕೊಂಡು ಇಂಗ್ಲಿಷಿಗೆ ಭಾಷಾಂತರಿಸಿ ಪ್ರಕಟಿಸಿದ (1803). ಹರ್ಮನ್ ಮೋಗ್ಲಿಂಗ್ ಪ್ರಕಟಿಸಿದ ಮೂರು ಸಾವಿರ ಗಾದೆಗಳು ಕನ್ನಡದ ಮೊತ್ತ ಮೊದಲ ಗಾದೆಗಳ ಸಂಕಲನ ಎನಿಸಿದೆ (1847). 1868ರಲ್ಲೇ ಪ್ರಕಟಗೊಂಡಿರುವ

ಮೇರಿ ಫ್ರೀರೆಯ 'ಓಲ್ಡ್ ಡೆಕ್ಕನ್ ಡೇಸ್' ಇಪ್ಪತ್ತೈದು ಜನಪದ ಕಥೆಗಳ ಒಂದು ಮಹತ್ವದ ಸಂಕಲನ. ತನ್ನ ವಕ್ತೃ ಅನ್ನ ಲಿಬೆರ್ಟಾ ಡಿಸೋಜಾ ಮೂಲತಃ ಲಿಂಗಾಯತರವಳಾಗಿದ್ದು ಅವಳಿಂದ ತಾನು ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಈ ಕಥೆಗಳನ್ನು ಸಂಗ್ರಹಿಸಿರುವುದಾಗಿ ಫ್ರೀರೆ ಒದಗಿಸಿರುವ ಮಾಹಿತಿ ಮಹತ್ವದ್ದಾಗಿದೆ. ಅನ್ನ ಲಿಬೆರ್ಟಾಳ ತಾತ ಕಲ್ಲಿಕೋಟೆಯಲ್ಲಿ ಇದ್ದವನು. ಆತ ಬ್ರಿಟಿಷ್ ಸೈನ್ಯದಲ್ಲಿದ್ದು ನಾಲ್ಕನೆಯ ಮೈಸೂರು ಯುದ್ಧದಲ್ಲಿ ಭಾಗವಹಿಸಿದ್ದ. ಲಿಬೆರ್ಟಾಳ ಅಜ್ಜಿ ಒಳ್ಳೆಯ ಕಥೆಗಾರ್ತಿ. ಅವಳು ತನ್ನ ಮೊಮ್ಮಕ್ಕಳಿಗೆ ಹೇಳಿದ ಕಥೆಗಳೇ ಮೇರಿ ಫ್ರೀರೆ ಲಿಬರ್ಟಾಳಿಂದ ಸಂಗ್ರಹಿಸಿದ ಕತೆಗಳು. ಲಿಬೆರ್ಟಾಳ ಅಜ್ಜಿ ಕನ್ನಡತಿಯೇ ಆಗಿದ್ದಳು ಎಂಬುದಕ್ಕೆ ಈ ಸಂಕಲನದ ಅನೇಕ ಕಥೆಗಳು ಸಾಕ್ಷಿಯಾಗಿವೆ. ಕನ್ನಡ ಜನಪದ ಸಾಹಿತ್ಯ ಕ್ಷೇತ್ರದಲ್ಲಿ ಜೆ.ಎಫ್.ಫ್ಲೀಟರ (ನೋಡಿ) ಹೆಸರು ಚಿರಸ್ಮರಣೀಯವಾದುದು. ಫ್ಲೀಟ್ ಸಂಗ್ರಹಿಸಿದ 5 ಲಾವಣಿಗಳು "ಇಂಡಿಯನ್ ಆಂಟಿಕ್ವರಿ" ಪತ್ರಿಕೆಯಲ್ಲಿ ಪ್ರಕಟವಾಗಿವೆ (1885-90). ಒಟ್ಟು ಎಂಟು ಲಾವಣಿಗಳನ್ನು ತಾವು ಸಂಗ್ರಹಿಸಿದಂತೆ ಫ್ಲೀಟ್ ಪಟ್ಟಿಯನ್ನು ಕೊಟ್ಟಿದ್ದಾರೆ. ಕಿತ್ತೂರಿನ ಈರವ್ವ, ರಾಯಣ್ಣನ ದಂಗೆ, ರಾಣಿಮಂಡಲದ ಕೋಟೆಯ ವಶ, ನರಗುಂದದ ವಶ, ಆದಾಯ ತೆರಿಗೆಯ ಜಾರಿ, ಹಲಗಲಿ ಬೇಡರ ದಂಗೆ, ಹಳ್ಳಿಯ ಸಾಹುಕಾರನ ಕೊಲೆ, ಇಂಗ್ಲಿಷ್ ರಾಷ್ಟ್ರದ ವೈಭವದ ಹಾಡು - ಈ ಲಾವಣಿಗಳಲ್ಲಿ ಐದು ಲಾವಣಿಗಳು ಮಾತ್ರ ಅಚ್ಚಾಗಿವೆ. ಇವರು ಇಲ್ಲಿನ ಕೆಲವೊಂದು ಲಾವಣಿಗಳನ್ನು ದಾಸರಿಂದ ಸಂಗ್ರಹಿಸಿರುವುದಾಗಿ ಹೇಳುತ್ತಾನೆ. ಬ್ರಿಟಿಷ್ ಆಡಳಿತಾಧಿಕಾರಿಯಾಗಿದ್ದ ಫ್ಲೀಟ್ ಉತ್ತರ ಕರ್ನಾಟಕದ ಹಳ್ಳಿ ಹಳ್ಳಿಗಳಲ್ಲಿ ಸಂಚರಿಸುತ್ತಿದ್ದ ಸಂದರ್ಭಗಳಲ್ಲಿ ಈ ಹಾಡುಗಳನ್ನು ದಾಖಲಿಸಿಕೊಂಡಿದ್ದಾರೆ. ಇವರು ಇಲ್ಲಿನ ಲಾವಣಿಗಳ ಕನ್ನಡ ಮೂಲದೊಂದಿಗೆ ಇಂಗ್ಲಿಷ್ ಸಂಗ್ರಹಾನುವಾದವನ್ನು ನೀಡಿದ್ದಾರೆ. ಪ್ರತಿಲಾವಣಿಯ ಮೊದಲಿಗೆ ಆಯಾ ಲಾವಣಿಗೆ ಸಂಬಂಧಿಸಿದಂತೆ ಅದರ ರಾಜಕೀಯ ಸಾಮಾಜಿಕ ಹಿನ್ನೆಲೆಯನ್ನು ಕುರಿತು ಬರೆದಿದ್ದಾರೆ. ಹಾಡುವ ಕ್ರಮವಿಧಾನ ಹಾಗೂ ಲಯದ ಏರಿಳಿತಗಳನ್ನು ಗುರುತಿಸಿದ್ದಾರೆ. ಹೀಗೆ ಜಾನಪದ ವೈಜ್ಞಾನಿಕ ಸಂಗ್ರಹಣೆ ಫ್ಲೀಟರಿಂದಲೇ ಆರಂಭವಾಯಿತು ಎನ್ನಬೇಕು. ಫ್ಲೀಟ್ ಲಾವಣಿಗಳು ಬ್ರಿಟಿಷ್ ಆಳರಸರ ದೌರ್ಜನ್ಯ, ದುಷ್ಟತನ, ಬ್ರಿಟಿಷರ ಅನ್ಯಾಯಕ್ಕೆ ಹಳ್ಳಿಗರು ಎದೆತೆರೆದು ನಡೆಸಿದ ಪ್ರತಿಭಟನೆ, ಹೋರಾಟ, ಇಂಗ್ಲಿಷರ ಕ್ರೌರ್ಯದ ವಿಜಯ, ವೈಭವಗಳಿಗೆ ಸಂಬಂಧಿಸಿವೆ. ಒಬ್ಬ ಉನ್ನತ ಬ್ರಿಟಿಷ್ ಅಧಿಕಾರಿಯಾಗಿದ್ದು ಇಂಗ್ಲಿಷರ ವಿರುದ್ಧದ ಲಾವಣಿಗಳನ್ನು ಸಂಗ್ರಹಿಸುವಲ್ಲಿ ಪ್ರಕಟಿಸುವಲ್ಲಿ ಫ್ಲೀಟ್ ತೋರಿದ ಐತಿಹಾಸಿಕ ಪ್ರಜ್ಞೆ ಗಮನಾರ್ಹವಾದುದು.

ಇವರ ಅನಂತರ ಹೆಸರಿಸಬೇಕಾದ ಮತ್ತೊಂದು ಮುಖ್ಯ ಹೆಸರೆಂದರೆ ಕಿಟ್ಟೆಲ್ ಫರ್ಡಿನೆಂಡ್ (ನೋಡಿ) ಅವರದು. 1894ರಲ್ಲಿ ಪ್ರಕಟವಾದ ಇವರ ಕನ್ನಡ ಇಂಗ್ಲಿಷ್ ಕೋಶದಲ್ಲಿ ಕನ್ನಡದಲ್ಲಿ ಪ್ರಚಲಿತವಿದ್ದ 4168 ಗಾದೆಗಳನ್ನು ಶಬ್ದ ಪ್ರಯೋಗಾರ್ಥವಾಗಿ ನೀಡಿದ್ದಾರೆ. ಕನ್ನಡ ನಾಡಿನ ಎಲ್ಲ ಕಡೆಗಳ ಗಾದೆಗಳು ಇದರಲ್ಲಿ ಸೇರಿವೆ. ಆ ಮೊದಲೇ ಕರ್ನಾಟಕದಲ್ಲಿ ಕೆಲವು ಗಾದೆಗಳ ಸಂಕಲನಗಳು ಪ್ರಕಟವಾಗಿದ್ದುವು. 1852ರಷ್ಟು ಹಿಂದೆಯೇ ಗಾದೆಗಳ ಕಲ್ಲಚ್ಚಿನ ಪ್ರತಿಯೊಂದು ಮಂಗಳೂರಿನಿಂದ ಪ್ರಕಟವಾಗಿತ್ತು. 1859ರಲ್ಲಿ ಮೋಗ್ಲಿಂಗ್ ಕನ್ನಡ ಗಾದೆಗಳು ಎಂಬ ಕೃತಿಯನ್ನು ಹೊರತಂದರು. 1886ರಲ್ಲಿ ಕೊಡವ ಪಡಿಮು ಎಂಬ ಕೊಡವ ಗಾದೆಗಳ ಸಂಕಲನವೊಂದು ಪ್ರಕಟವಾಗಿತ್ತು. ಸಹಸ್ರಗಾಥಾಮೃತ ಕಲಶವು ಎಂಬ ಮತ್ತೊಂದು ಸಂಕಲನ 1874ರಲ್ಲೇ ಪ್ರಕಟವಾಗಿತ್ತು. ಪಾಪ್ಯುಲರ್ ಕೆನರೀಸ್ ಪ್ರಾವರ್ಬ್ಸ್ ಅಂಡ್ ದೇರ್ ಇಂಗ್ಲಿಷ್ ಈಕ್ವವಲೆಂಟ್ಸ್ ಎಂಬ ಕೃತಿ 1894ರಲ್ಲೇ ಪ್ರಕಟವಾಗಿತ್ತು. ಅದೇ ವರ್ಷ ಬೆಳಗಾಂವಿಯ ಹನುಮಂತ ಗೋವಿಂದ ಜೋಶಿ ಅವರು ಸಾಮತಿ ಸಂಗ್ರಹ ಎಂಬ ಸಂಕಲನವನ್ನು ಪ್ರಕಟಿಸಿದ್ದರು. ಕಿಟ್ಟೆಲ್ ಅವರು ಈ ಎಲ್ಲ ಸಂಕಲನಗಳಿಗೂ ಋಣಿಯಾಗಿದ್ದರೆ ಆಶ್ಚರ್ಯವಿಲ್ಲ.

ಹತ್ತೊಂಬತ್ತನೆಯ ಶತಮಾನದ ಜಾನಪದ ಸಂಗ್ರಹ ಕಾರ್ಯದಲ್ಲಿ ಪಾಶ್ಚಾತ್ಯ ವಿದ್ವಾಂಸರು ತೋರಿದ ಆಸಕ್ತಿ ಮತ್ತು ಮಾಡಿದ ಸಾಧನೆ ದೇಶೀಯ ವಿದ್ವಾಂಸರ ಮೇಲೆ ಅಷ್ಟೇನೂ ಪ್ರಭಾವ ಬೀರಲಿಲ್ಲ. ಆದರೂ ಅಲ್ಲಲ್ಲಿ ಕೆಲವು ಜಾನಪದ ಸಂಕಲನಗಳನ್ನು ಸ್ಥಳೀಯ ವಿದ್ವಾಂಸರೂ ಪ್ರಕಟಿಸಿದರು. 1891ರಲ್ಲಿ ಪ್ರಕಟವಾದ ಲಾವಣಿ ಸಂಗ್ರಹ (ಮೊದಲನೆಯ ಭಾಗ), 1893ರಲ್ಲಿ ಪ್ರಕಟವಾದ ಬಾಗಿಲು ತಡೆಯುವ ಪದಗಳು, 1896ರಲ್ಲಿ ಪ್ರಕಟವಾದ ಅರ್ಜುನ ಜೋಗಿ ಹಾಡು ಮುಂತಾದವು ಗಮನಾರ್ಹ.

20ನೆಯ ಶತಮಾನದ ಆರಂಭದ ದಶಕಗಳಲ್ಲಿ ಕನ್ನಡ ಜಾನಪದ ಅಧ್ಯಯನ ಅಷ್ಟು ವ್ಯಾಪಕವಾಗಿ ನಡೆಯಲಿಲ್ಲ. ಲಾವಣಿ ಹಾಗೂ ಗಾದೆಗಳಿಗೆ ಸಂಬಂಧಿಸಿದ ಕೆಲವು ಕೃತಿಗಳೂ ಕೆಲವು ಲೇಖನಗಳೂ ಈ ಅವಧಿಯಲ್ಲಿ ಪ್ರಕಟವಾದವು. ಕಲ್ಕಿ ತುರಾಯಿ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಅಲ್ಲೊಂದು ಇಲ್ಲೊಂದು ಕೃತಿಗಳು ಬೆಳಕು ಕಂಡವು. ತುರಾಲಾವಣಿ ಜವಾಬುಗಳು ಎಂಬ ಕೃತಿ 1902ರಲ್ಲೇ ಅಚ್ಚಾಗಿದೆ. ಮೈಸೂರಿನ ಪ್ರಕಾಶಕರೊಬ್ಬರು ಈ ಕೃತಿಯನ್ನು ಪ್ರಕಟಿಸಿದ್ದಾರೆ. 1912ರಲ್ಲಿ ಲಾವಣೀ ಪದಗಳು ಎಂಬ ಸಂಕಲನ ಬಳ್ಳಾರಿಯಿಂದ ಪ್ರಕಟವಾಯಿತು. ಮುಂದೆ 1918ರಲ್ಲಿ ಯುರೋಪು ಖಂಡದ ಮಹಾಯುದ್ಧದ ಲಾವಣಿಗಳು ಎಂಬ ಕೃತಿ ಬೆಳಗಾಂವಿಯಿಂದ ಹೊರಬಂದಿತು. ಲಾವಣಿಗಳ ಬಗ್ಗೆ ಕರ್ನಾಟಕ ದಾದ್ಯಂತ ತೀವ್ರವಾದ ಆಸಕ್ತಿ ಇದ್ದಿತೆಂಬುದನ್ನು ಈ ಕೃತಿಗಳು ಸಾದರಪಡಿಸುತ್ತವೆ. 1929ರಲ್ಲಿ ಮೈಸೂರಿನ ಈರಮುದ್ದಿ ಎಂಬವರು ತುರಾಲಾವಣಿ ಎಂಬ ಶೀರ್ಷಿಕೆಯಲ್ಲಿ ನಾಲ್ಕು ಲಾವಣಿಗಳನ್ನೊಳಗೊಂಡ ಪುಟ್ಟ ಸಂಕಲನವನ್ನು ಹೊರತಂದಿದ್ದಾರೆ.

19ನೆಯ ಶತಮಾನದಲ್ಲಿ ಗಾದೆಗಳ ಕ್ಷೇತ್ರದಲ್ಲಿ ನಡೆದ ವ್ಯಾಪಕವಾದ ಸಂಗ್ರಹಕಾರ್ಯ 20ನೆಯ ಶತಮಾನದ ಆದಿಭಾಗದಲ್ಲಿಯೂ ತಕ್ಕಮಟ್ಟಿಗೆ ಮುಂದುವರಿಯಿತು. 1903ರಲ್ಲಿ ಬಾಸೆಲ್ ಮಿಷನ್ ಟ್ರಸ್ಟಿನವರು ಹೊರತಂದ ತ್ರೀ ಹಂಡ್ರೆಡ್ ಕೆನರೀಸ್ ಪ್ರಾವರ್ಬ್ಸ್ ಹಾಗೂ 1912ರಲ್ಲಿ ಪ್ರಕಟವಾದ ಎ ಹ್ಯಾಂಡ್ ಬುಕ್ ಆಫ್ ಕೆನರೀಸ್ ಪ್ರಾವರ್ಬ್ಸ್ ವಿತ್ ಇಂಗ್ಲಿಷ್ ಈಕ್ವವಲೆಂಟ್ಸ್ - ಇವು ಕನ್ನಡ ಗಾದೆಗಳನ್ನು ಪಾಶ್ಚಾತ್ಯ ಜಗತ್ತಿಗೆ ಪರಿಚಯ ಮಾಡಿದ ಸಮರ್ಥ ಕೃತಿಗಳಾಗಿವೆ.

ಜಾನಪದ ಅಧ್ಯಯನದ ಇತಿಹಾಸದಲ್ಲಿ ಅತ್ಯಂತ ಮಹತ್ವದ ಸ್ಥಾನಕ್ಕೆ ಅರ್ಹವಾದ ಪಟ್ಟೋಲೆಪಳಮೆ ತೀರ ಇತ್ತೀಚಿನವರೆಗೆ ಅಜ್ಞಾತವಾಗಿಯೇ ಉಳಿದು ಹೋಗಿದ್ದ ಕೃತಿ. ಸಮಗ್ರ ಜಾನಪದ ದೃಷ್ಟಿಯಿಂದ ನೋಡಿದಾಗ ಗಮನಾರ್ಹವಾದ ಈ ಕೃತಿಯ ಪ್ರಥಮ ಆವೃತ್ತಿ 1924ರಲ್ಲೇ ಪ್ರಕಟವಾಗಿದ್ದರೂ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಿಂದ ಅದರ ಎರಡನೆಯ ಆವೃತ್ತಿ ಪ್ರಕಟವಾಗುವವರೆಗೆ (1973) ಅದರ ಬಗ್ಗೆ ಯಾರೂ ಬರೆದಂತೆ ತೋರುವುದಿಲ್ಲ. ಕೊಡಗಿನ ನಡಿಕೇರಿಯಂಡ ಚಿಣ್ಣಪ್ಪ (1875-1931) ಅವರು ಕೊಡವ ಸಂಸ್ಕೃತಿಯನ್ನು ವಿವರವಾಗಿ ಅಧ್ಯಯನ ಮಾಡಿ ಈ ಗ್ರಂಥವನ್ನು ಪ್ರಕಟಿಸಿದ್ದಾರೆ. ಕೊಡವರ ಆಚಾರ ವಿಚಾರಗಳು, ಸಂಪ್ರದಾಯಗಳು, ಹಬ್ಬಗಳು, ಗಾದೆಗಳು, ಒಗಟುಗಳು, ಲಾವಣಿಗಳು, ಗೀತೆಗಳು, ನಂಬಿಕೆಗಳು ಮುಂತಾದ ಕೊಡವ ಜಾನಪದದ ಎಲ್ಲ ಮುಖಗಳನ್ನೂ ಈ ಗ್ರಂಥ ಪರಿಚಯ ಮಾಡಿಕೊಡುತ್ತದೆ.

1920ರ ಅನಂತರ ಕನ್ನಡ ಜಾನಪದದ ಕೆಲವು ಪ್ರಕಾರಗಳ ಮೇಲೆ ವಿಚಾರ ವಿಮರ್ಶೆ ಬೆಳೆಯತೊಡಗಿತು. ಕೆ.ಎಚ್.ಮಲ್ಲಪ್ಪ ಅವರ ಕನ್ನಡ ಗಾದೆಗಳ ಜೀರ್ಣೋದ್ಧಾರ ಎಂಬ ಬರೆಹ 1921ರಲ್ಲಿ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟವಾಗಿ ಸಮಗ್ರ ಜಾನಪದದ ಜೀರ್ಣೋದ್ಧಾರದ ಕಡೆಗೆ ಕನ್ನಡಿಗರ ದೃಷ್ಟಿಯನ್ನು ಸೆಳೆಯುವ ಆದ್ಯ ಲೇಖನವೆನಿಸಿತು. ಆದರೆ ಈ ಮುನ್ನ 1907ರ ಸುಮಾರಿಗೇ ಎಸ್.ಜಿ.ನರಸಿಂಹಾಚಾರ್ಯರು ಕನ್ನಡ ಗ್ರಂಥಕರ್ತರ ಸಮ್ಮೇಳನದಲ್ಲಿ ಜಾನಪದ ಕುರಿತು ಕೆಲವು ವಿಚಾರಗಳನ್ನು ಪ್ರಸ್ತಾಪಿಸಿದ್ದರು. ಮುಂದೆ ಸಾಹಿತ್ಯ ಸಮ್ಮೇಳನಗಳ ವೇದಿಕೆಯಲ್ಲಿಯೂ ಜಾನಪದದ ಬಗ್ಗೆ ವಿಚಾರಾತ್ಮಕ ಪ್ರಬಂಧಗಳು ಮಂಡಿತವಾದವು. ಬಿಜಾಪುರದಲ್ಲಿ 1923ರಲ್ಲಿ ನಡೆದ 9ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಧುರಚೆನ್ನರು ಬೀಸುವ ಕಲ್ಲಿನ ಹಾಡು ಎಂಬ ಲೇಖನವನ್ನು ಪಿ.ಧೂಲಾ ಅವರು ಲಾವಣಿಗಳ ಲಾವಣ್ಯ ಎಂಬ ಬರೆಹವನ್ನು ಓದಿ, ಜನಪದ ಸಾಹಿತ್ಯದ ಸಾಹಿತ್ಯಕ ಸೊಗಸಿನ ಕಡೆ ಕನ್ನಡಿಗರ ಆಸಕ್ತಿಯನ್ನು ಸೆಳೆದರು. ಈ ಅವಧಿಯಲ್ಲಿ ಹಣಮಂತಗೌಡ

ಮೊದಲಾದವರು ಲಾವಣಿಗಳ ಬಗ್ಗೆ ಮಾತನಾಡಿ ಅವುಗಳ ಅಧ್ಯಯನದತ್ತ ಎಲ್ಲರ ಗಮನ ಸೆಳೆಯಲು ಪ್ರಯತ್ನಿಸಿದರು. 1925ರಲ್ಲಿ ಸಾಹಿತ್ಯ ಪರಿಷತ್ಪತ್ರಿಕೆ ಪ್ರಕಟಿಸಿದ ಮಾಸ್ತಿಯವರ ಕನ್ನಡ ಲಾವಣಿ ಸಾಂಗತ್ಯ ಎಂಬ ಬರೆಹ ಅನೇಕ ದೃಷ್ಟಿಗಳಿಂದ ತುಂಬ ಮಹತ್ವದ್ದು ಎನಿಸುತ್ತದೆ. ಕನ್ನಡ ಜನಪದ ಸಾಹಿತ್ಯದ ನಾನಾ ವೈವಿಧ್ಯದ ಕಡೆ ಮಾಸ್ತಿಯವರು ನಮ್ಮ ಆಸಕ್ತಿಯನ್ನು ಸೆಳೆದು, ಅನೇಕ ಗೀತ ಸಂಪ್ರದಾಯಗಳ ಮೇಲೆ, ಲಾವಣಿ ಸಂಪ್ರದಾಯಗಳ ಮೇಲೆ ಬೆಳಕು ಚೆಲ್ಲಿದರು.

ಕನ್ನಡ ಜಾನಪದ ಅಧ್ಯಯನದಲ್ಲಿ 1930ರಿಂದ 1950ರ ನಡುವಣ ಅವಧಿ ಅತ್ಯಂತ ಮಹತ್ವದ ಕಾಲವೆಂದು ಗುರುತಿಸಬಹುದು. ಕರ್ನಾಟಕದಲ್ಲಿ ನವೋದಯ ಸಾಹಿತ್ಯದ ಜೊತೆಯಲ್ಲಿಯೇ ಜಾನಪದದ ಬಗೆಗಿನ ತಿಳಿವಳಿಕೆಯೂ ಬದಲಾಯಿತು. ನವೋದಯ ಕಾಲದ ಅಗ್ರಗಣ್ಯ ಲೇಖಕರೆಲ್ಲ ಒಂದಲ್ಲ ಒಂದು ವಿಧದಲ್ಲಿ ಜಾನಪದದ ಬಗೆಗಿನ ತಿಳಿವಳಿಕೆಯನ್ನು ಇಟ್ಟುಕೊಂಡವರೇ ಆಗಿದ್ದರು. ಜನಪದ ಸಾಹಿತ್ಯದ ವಿವಿಧ ಮೌಲ್ಯಗಳನ್ನು ಮನಗಂಡು ಈ ವಿದ್ವಾಂಸರ ಶ್ರೇಣಿ ಆ ಕ್ಷೇತ್ರದಲ್ಲಿ ಕೆಲಸ ಮಾಡುವವರಿಗೆ ಹುರಿದುಂಬಿಸುತ್ತ ಬಂದಿತು. ಇದರಿಂದಾಗಿ ಹಲವು ಉತ್ಕೃಷ್ಟ ಜನಪದ ಸಂಕಲನಗಳು ಹೊರಬರಲು ಕಾರಣವಾಯಿತು. 1931ರಲ್ಲಿ ಕನ್ನಡದ ಮೊದಲ ತ್ರಿಪದಿಗಳ ಸಂಕಲನವಾದ 'ಗರತಿಯ ಹಾಡು' ಪ್ರಕಟವಾಯಿತು. ಈ ಕೃತಿ ಇಂದಿಗೂ ಕನ್ನಡದ ಅತ್ಯುತ್ತಮ ಗೀತಸಂಕಲನವಾಗಿದೆ. ಅನಂತರದಲ್ಲಿ ಸಿಂಪಿ ಲಿಂಗಣ್ಣ ಮತ್ತು ಪಿ.ಧೂಲಾವರು ಕಲ್ಕಿತುರಾಯಿ ಸಂಪ್ರದಾಯದ ಉತ್ಕೃಷ್ಟ ಸಂಕಲನವೊಂದನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸಿದರು (1933). ಈ ಸಂಪ್ರದಾಯದ ಲಾವಣಿಗಳ ಅನೇಕ ಸಂಕಲನಗಳು ಆವರೆಗೆ ಪ್ರಕಟವಾಗಿದ್ದರೂ ಅವು ಜನಪ್ರಿಯ ಆವೃತ್ತಿಗಳಾಗಿ ಕಿರು ಹೊತ್ತಗೆಗಳ ರೂಪದಲ್ಲಿ ಪ್ರಕಟವಾಗಿದ್ದುವು. ಜೀವನ ಸಂಗೀತ, ಹಳೆಯ ಸಂಪ್ರದಾಯದ ಹದಿನಾಲ್ಕು ಲಾವಣಿಗಳನ್ನೊಳಗೊಂಡ ಉತ್ತಮ ಸಂಕಲನವಾಗಿ ಹೊರಬಂದಿತು. ಮಲ್ಲಿಗೆದಂಡೆ ಸಂಕೀರ್ಣ ಜನಪದ ಗೀತೆಗಳ ಸಂಕಲನವಾಗಿ ಪ್ರಕಟವಾಯಿತು (1935). ಕಥೆಯ ಹಾಡುಗಳು, ಮದುವೆಯ ಹಾಡುಗಳು, ಸೋಬಾನದ ಹಾಡುಗಳು ಇಂಥ ಕೆಲವು ಪ್ರಮುಖ ವಿಭಾಗಗಳ ಜೊತೆಗೆ ಪ್ರಣಯ, ಹಾಸ್ಯ ಮೊದಲಾದ ವಿಷಯಗಳಿಗೆ ಸಂಬಂಧಿಸಿದ ಆಕರ್ಷಕ ಗೀತೆಗಳನ್ನೊಳಗೊಂಡ ಈ ಕೃತಿ ತನ್ನ ಸಾಹಿತ್ಯಕ ಸತ್ವದಿಂದ ತುಂಬ ಜನಪ್ರಿಯವಾಯಿತು.

ಈ ಬಗೆಯ ಕೃತಿಗಳ ಪ್ರಕಟಣೆಯಿಂದ ಕನ್ನಡ ಜನಪದ ಸಾಹಿತ್ಯದ ನವೋದಯ ಆರಂಭವಾಯಿತು. ಇಂಥ ಒಂದು ಹೊಸ ಬೆಳವಣಿಗೆಗೆ ಕಾರಣರಾದವರು ಹಲಸಂಗಿ ಸೋದರರು. ಮುಂದೆ ಮೂರು ದಶಕಗಳವರೆಗೆ ಈ ಕೃತಿಗಳ ಮಹತ್ವ ಕುಗ್ಗಲಿಲ್ಲ. ಅನೇಕರು ಜಾನಪದ ಆಸಕ್ತಿಯನ್ನು ಬೆಳೆಸಿಕೊಂಡು ಆ ಕ್ಷೇತ್ರವನ್ನು ಪ್ರವೇಶಿಸಲು ಪ್ರೇರಕವಾಯಿತು.

ಉತ್ತರ ಕರ್ನಾಟಕದಲ್ಲಿ ಆರಂಭವಾದ ಈ ಪ್ರಯತ್ನ ದಕ್ಷಿಣದ ಕಡೆಗೂ ವ್ಯಾಪಿಸಿತು. ಗೊರೂರು ರಾಮಸ್ವಾಮಿ ಅಯ್ಯಂಗಾರ್, ಮತಿಘಟ್ಟ ಕೃಷ್ಣಮೂರ್ತಿ - ಇವರು ಈ ಕ್ಷೇತ್ರದ ಕಡೆ ಹೊರಳಿ ಸಂಗ್ರಹಕಾರ್ಯವನ್ನು ಆರಂಭಿಸಿದರು. ಈ ಈರ್ವರೂ ದಕ್ಷಿಣಕರ್ನಾಟಕದ ಜನಪದ ಸಾಹಿತ್ಯದ ಅಭ್ಯಾಸವನ್ನು ಸಾಕಷ್ಟು ನಡೆಸಿದ್ದರೂ ಇವರಿಗೆ ಮೊದಲೇ ಈ ಕ್ಷೇತ್ರದಲ್ಲಿ ಕೆಲಸ ಮಾಡಿ ಉತ್ತಮ ಕೃತಿಯೊಂದನ್ನು ಹೊರತಂದ ಅರ್ಚಕ ಬಿ.ರಂಗಸ್ವಾಮಿಯವರ (ನೋಡಿ) ಹೆಸರು ಮುಖ್ಯವಾದುದು. ಇವರು 1933ರಲ್ಲಿ ಹುಟ್ಟಿದ ಹಳ್ಳಿ, ಹಳ್ಳಿಯ ಹಾಡು ಎಂಬ ಕೃತಿಯನ್ನು ಹೊರತಂದರು. ಇದರಲ್ಲಿ ರಂಗಸ್ವಾಮಿಯವರು ಬಯಲುಸೀಮೆಯ ಜನಜೀವನ, ಆಚಾರ ವಿಚಾರ, ಸಂಪ್ರದಾಯ, ಆಚರಣೆ, ಹಬ್ಬ, ಉತ್ಸವ, ಗಾದೆ, ನಡೆನುಡಿ, ಕುಣಿತ, ಕಲೆ ಮುಂತಾದುವನ್ನು ಕ್ರಮಬದ್ಧವಾಗಿ ಸಂಗ್ರಹಿಸಿ ಅದಕ್ಕೆ ಒಂದು ಕೃತಿರೂಪವನ್ನು ಕೊಟ್ಟರು. ಈ ಕೃತಿಯ ಹೆಸರೇ ಸೂಚಿಸುವಂತೆ 'ಹುಟ್ಟಿದ ಹಳ್ಳಿ' ಆ ಹಳ್ಳಿಯ ವಿವರಗಳನ್ನು ಜನಜೀವನ-ಸಂಸ್ಕೃತಿಗಳನ್ನೂ ಪ್ರತಿನಿಧಿಸಿದರೆ ಹಳ್ಳಿಯ ಹಾಡು ಈ ಕೃತಿಯಲ್ಲಿ ಸಂಕಲಿತವಾಗಿರುವ ಜನಪದ ಗೀತೆಗಳನ್ನು ಪ್ರತಿನಿಧಿಸುತ್ತದೆ. ಇವರು ಮೈಸೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ಸಂಗ್ರಹಿಸಿದ ಜನಪದ ಗೀತೆಗಳನ್ನೆಲ್ಲ ಹಳ್ಳಿಯ ಪದಗಳು ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ (1940). ತ್ರಿಪದಿಗಳನ್ನು ಮಾತ್ರ ಸಂಗ್ರಹಿಸುವುದರಲ್ಲಿ ಆಸಕ್ತಿ ತೋರಿದ ಇವರು ದೇವರು, ಮದುವೆ ಮತ್ತು ಬಾಂಧವ್ಯ ಸಂಬಂಧವಾದ ಗೀತೆಗಳನ್ನು ಹೆಚ್ಚಾಗಿ ಕಲೆ ಹಾಕಿದ್ದಾರೆ.

ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು (ನೋಡಿ) ಕನ್ನಡದ ಆದ್ಯಜಾನಪದ ಸಂಗ್ರಾಹಕರಲ್ಲೊಬ್ಬರು. ಸಾಹಿತ್ಯ ಕ್ಷೇತ್ರದಲ್ಲಿ ಇವರು ರಚಿಸಿರುವ ಬಹುಪಾಲು ಕೃತಿಗಳು ಗ್ರಾಮೀಣ ಜೀವನದ ಹಿನ್ನೆಲೆಯಲ್ಲಿಯೇ ಮೂಡಿ ಬಂದಿರುವುದರಿಂದ ಜನಪದ ಸಂಸ್ಕೃತಿ ಇವರಿಗೆ ರಕ್ತಗತವಾಗಿತ್ತು. ಇವರು ಹಾಸನ ಮತ್ತು ಮೈಸೂರು ಜಿಲ್ಲೆಗಳ ಹಾಡುಗಳನ್ನೊಳಗೊಂಡ ಹಳ್ಳಿಯ ಹಾಡುಗಳು ಎಂಬ ಸಂಕಲನವನ್ನು ಪ್ರಕಟಿಸಿದರು (1938).

ದಕ್ಷಿಣ ಕರ್ನಾಟಕದ ಜನಪದ ಗೀತ ಸಂಗ್ರಹಗಳಲ್ಲೆಲ್ಲ ಅತ್ಯಂತ ಗಮನಾರ್ಹ ಸಂಕಲನ 'ನಾಡಪದಗಳು'. ಗುಣದ ದೃಷ್ಟಿಯಿಂದ, ವೈವಿಧ್ಯದ ದೃಷ್ಟಿಯಿಂದ, ಶಾಸ್ತ್ರೀಯ ಸಂಪಾದನೆಯ ದೃಷ್ಟಿಯಿಂದ ಇದೊಂದು ಮಹತ್ವದ ಕೃತಿಯಾಗಿದೆ. ಈ ಕೃತಿ 1947ರಲ್ಲಿ ಪ್ರಕಟವಾಯಿತು. ಹಳೇಬೀಡು ಪ್ರಾಂತ್ಯದ ಪ್ರಾತಿನಿಧಿಕ ಗೀತೆಗಳು ಈ ಸಂಕಲನದಲ್ಲಿವೆ; ಒಂದೇ ಗ್ರಾಮದಲ್ಲಿ ಸಂಕಲನಗೊಂಡ ಹಾಡುಗಳಿವು. ಒಕ್ಕಲಿಗರ ಹಾಡುಗಳು, ಬ್ರಾಹ್ಮಣರ ಹಾಡುಗಳು ಎಂದು ಎರಡು ಪ್ರಧಾನ ವರ್ಗಗಳಲ್ಲಿ ಕೃತಿಯನ್ನು ವಿಭಾಗ ಮಾಡಿಕೊಂಡು ಎರಡೂ ವರ್ಗಗಳು ಸಮರ್ಪಕವಾಗಿ ಪರಿಚಯವಾಗುವಂತೆ ಸಂಗ್ರಾಹಕರು ಸಾಹಿತ್ಯವನ್ನು ಒದಗಿಸಿದ್ದಾರೆ.

ಸ್ವಾತಂತ್ರ್ಯಪೂರ್ವ ದಿನಗಳಲ್ಲಿ ಕರ್ನಾಟಕ ಜಾನಪದ ಅಧ್ಯಯನ ವ್ಯಾಪಕವಾಗಿ ನಡೆಯದಿದ್ದರೂ ನಡೆದಷ್ಟು ಕೆಲಸದಲ್ಲಿ ಅಚ್ಚುಕಟ್ಟು ಮತ್ತು ಪ್ರಾಮಾಣಿಕ ದೃಷ್ಟಿಯನ್ನು ಕಾಣಬಹುದು. ಆಗಿನ ಅನೇಕ ಸಂಗ್ರಾಹಕರಲ್ಲಿ ಸಾಹಿತ್ಯಕ ದೃಷ್ಟಿಯು ಜೊತೆಗೆ ಆ ಸಾಹಿತ್ಯದ ಶುದ್ಧತೆಯನ್ನು ಕಾಪಾಡಿಕೊಳ್ಳುವ, ಕೇವಲ ಕಲಾತ್ಮಕ ಮೌಲ್ಯದ ಸಾಹಿತ್ಯವನ್ನು ಮಾತ್ರ ಸಂಕಲನಗಳಲ್ಲಿ ನೀಡುವ ಆಯ್ಕೆಯ ದೃಷ್ಟಿ ಕಂಡುಬರುತ್ತದೆ. ಆದರೆ ಸ್ವಾತಂತ್ರ್ಯೋತ್ತರ ದಿನಗಳಲ್ಲಿ ಜಾನಪದ ಸಂಗ್ರಹದ ದಿಕ್ಕು ಬದಲಾಯಿತು. ಒಂದೊಂದು ಪ್ರಕಾರದ ಮೂಲವನ್ನು ಹಿಡಿದು ಸಾಹಿತ್ಯವನ್ನು ಕಲೆ ಹಾಕುವುದು, ಒಂದೊಂದು ಪ್ರದೇಶದಲ್ಲಿ ವ್ಯಾಪಕವಾಗಿ ಸಂಗ್ರಹಕಾರ್ಯ ನಡೆಸುವುದು, ಸಾಧ್ಯವಾದ ಮಟ್ಟಿಗೂ ಜಾನಪದದ ಬೇರೆ ಬೇರೆ ಪ್ರಕಾರಗಳಲ್ಲಿ ಕೈಯಾಡಿಸುವುದು ಕಂಡುಬರತೊಡಗಿತು.

ಸ್ವಾತಂತ್ರ್ಯೋತ್ತರ ದಿನಗಳಲ್ಲಂತೂ ಜಾನಪದದ ಬೇರೆ ಬೇರೆ ಪ್ರಕಾರಗಳಿಗೆ ಸಂಬಂಧಪಟ್ಟಂತೆ ಗಮನಾರ್ಹವಾದ ಕೆಲಸ ನಡೆಯಿತು. ಇದರಲ್ಲಿ ಹಾಡು, ಲಾವಣಿ ಹಾಗೂ ಕಾವ್ಯಗಳಿಗೆ ಸಂಬಂಧಪಟ್ಟ ಕಾರ್ಯದ ವ್ಯಾಪ್ತಿ ದೊಡ್ಡದು. ವಾಕ್ಪರಂಪರೆಯ ಜನಪದ ಕಾವ್ಯದ ಮೂರು ಮುಖಗಳಾದ ಹಾಡು, ಲಾವಣಿ ಹಾಗೂ ಕಾವ್ಯಗಳ ಕ್ಷೇತ್ರದಲ್ಲಿ ಕರ್ನಾಟಕದ ಬಹುತೇಕ ಎಲ್ಲ ಪ್ರದೇಶಗಳಲ್ಲಿಯೂ ಸಾಕಷ್ಟು ಸಂಗ್ರಹ ಕಾರ್ಯ ನಡೆದಿದೆ. ಹೊಸ ಕಾವ್ಯಸಂಪ್ರದಾಯಗಳನ್ನು ಗುರುತಿಸಿ ಆ ಸಂಪ್ರದಾಯಗಳ ಸಾಹಿತ್ಯವನ್ನು ಸಾಕಷ್ಟು ಸಮಗ್ರವಾಗಿ ಕಲೆಹಾಕುವ ಪ್ರಯತ್ನದ ಜೊತೆಗೆ ಹಳೆಯ ಜಾಡಿನಲ್ಲಿಯೇ ಸಂಗ್ರಹಗಳನ್ನು ಹೊರತರುತ್ತಿರುವ ಪ್ರಯತ್ನಗಳೂ ಕಂಡುಬರುತ್ತಿವೆ.

ಸ್ವಾತಂತ್ರ್ಯಾನಂತರ ಜಾನಪದ ಅಧ್ಯಯನವನ್ನು ಯಶಸ್ವಿಯಾಗಿ ಮುಂದುವರಿಸಿದವರು ಬಿ.ಎಸ್.ಗದ್ದಗಿಮಠ (ನೋಡಿ). ಅವರು ಉತ್ತರ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಸಂಚರಿಸಿ ಸಾಹಿತ್ಯ ಸಂಗ್ರಹ ಮಾಡಿದ ಇವರು ಅಲ್ಲಿನ ಸಂಪ್ರದಾಯಗಳನ್ನು ಜಾನಪದದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದರು. 'ಕನ್ನಡ ಜಾನಪದ ಗೀತೆಗಳು' ಎಂಬ ಇವರ ಮಹಾಪ್ರಬಂಧಕ್ಕೆ ಕರ್ನಾಟಕ ವಿಶ್ವವಿದ್ಯಾಲಯ ಪಿಎಚ್.ಡಿ.ಪದವಿಯನ್ನು ನೀಡಿದೆ. ಈ ಮಹಾಪ್ರಬಂಧದಲ್ಲಿ ಇವರು ಉತ್ತರ ಕರ್ನಾಟಕದ ಎಲ್ಲ ಪ್ರಮುಖ ಗೀತಸಂಪ್ರದಾಯಗಳನ್ನೂ ಕಲೆಗಳನ್ನೂ ದೃಷ್ಟಿಯಲ್ಲಿಟ್ಟುಕೊಂಡು ಅಧ್ಯಯನ ನಡೆಸಿದ್ದಾರೆ. ಇದರ ಜೊತೆಗೆ ಇವರು ಕೆಲವು ಗೀತಸಂಕಲನಗಳನ್ನೂ ಹೊರತಂದಿದ್ದಾರೆ. ನಾಲ್ಕು ನಾಡಪದಗಳು (1952) ಹಂತಿಯ ಸಂಪ್ರದಾಯದ ಸುಂದರ ಗೀತೆಗಳನ್ನೊಳಗೊಂಡ ಸಂಕಲನ. ಜನಪದ ಸಾಹಿತ್ಯದಲ್ಲಿ ಶಿವಶರಣರನ್ನು ಕುರಿತ ಸಾಹಿತ್ಯದ ಸ್ವರೂಪವನ್ನು ಅರಿಯಲು ಈ ಕೃತಿ ಸಹಾಯಕವಾಗಿದೆ. ಇವರ ಜನತಾ ಗೀತೆಗಳು

(1959) ಸಂಕೀರ್ಣ ಜನಪದ ಗೀತೆಗಳನ್ನೊಳಗೊಂಡ ಸಂಕಲನ. ಇದು ಗರತಿಯ ಹಾಡು, ಮಲ್ಲಿಗೆ ದಂಡೆ ಮುಂತಾದ ಸಂಕಲನಗಳ ಅನಂತರ ಉತ್ತರ ಕರ್ನಾಟಕದ ಉತ್ಕೃಷ್ಟ ಗೀತಸಾಹಿತ್ಯದ ವೈವಿಧ್ಯವನ್ನು ಪರಿಚಯ ಮಾಡಿಕೊಟ್ಟ ಕೃತಿಯಾಗಿದೆ. ಕುಮಾರರಾಮನ ದುಂದುಮೆ (1955) ಕಂಬಿಯ ಸಂಪ್ರದಾಯದ ಹಾಡುಗಳನ್ನೂ ಮೊದಲ ಬಾರಿಗೆ ಪರಿಚಯ ಮಾಡಿಕೊಡುವ ಕೃತಿ. ಮಲ್ಲ ಮಲ್ಲಾಣಿ (1959) ಒಂದು ಸುಂದರ ಜನಪದ ಶೃಂಗಾರ ಕಾವ್ಯ. ತ್ರಿಪದಿಯಲ್ಲಿ ರಚನೆಗೊಂಡ ಈ ಕಾವ್ಯದ ಕರ್ತೃ ಶಿವಶರಣೆ ಶಾವಂತ್ರಾದೇವಿ ಎಂದು ಹೇಳಲಾಗಿದೆ. ಆದರೆ ಇದು ಜನಪದ ಕಾವ್ಯ ಸಂಪ್ರದಾಯದ ಕಾವ್ಯವೇ ಆಗಿದ್ದು ಶಾವಂತ್ರಾದೇವಿಯವರು ಅದನ್ನು ಹಾಡಿ ಜನಪ್ರಿಯಗೊಳಿಸಿದವರಲ್ಲಿ ಒಬ್ಬರಾಗಿರಬಹುದು. ಲೋಕಗೀತೆಗಳು, ಸಾಕಷ್ಟು ವಿಸ್ತಾರವಾದ ಸಂಕಲನ. ಕೋಲಾಟ ಹಾಗೂ ಮದುವೆ ಸಂಪ್ರದಾಯದ ಗೀತೆಗಳನ್ನೊಳಗೊಂಡ ಈ ಕೃತಿ ಮೊದಲಬಾರಿಗೆ ಉತ್ತರ ಕರ್ನಾಟಕದ ಈ ಎರಡು ಸಂಪ್ರದಾಯಗಳನ್ನು ಸಮರ್ಥವಾಗಿ ಪರಿಚಯಿಸಿತು.

ಉತ್ತರ ಕರ್ನಾಟಕದಲ್ಲಿ ಗದ್ದಗಿಮಠ ಅವರು ಜಾನಪದ ಅಧ್ಯಯನವನ್ನು ಕೈಗೊಂಡಂತೆಯೇ ದಕ್ಷಿಣ ಕರ್ನಾಟಕದಲ್ಲಿ ಜೀ.ಶಂ. ಪರಮಶಿವಯ್ಯನವರು (ನೋಡಿ) ಕ್ಷೇತ್ರಕಾರ್ಯ ನಡೆಸಿದರು. ಜನಪದ ಗೀತೆ, ಲಾವಣಿ, ಕಥೆಗಳ ಜೊತೆಗೆ ದಕ್ಷಿಣ ಕರ್ನಾಟಕ ಪ್ರದೇಶದ ವೃತ್ತಿಗಾಯಕ ಪರಂಪರೆಗಳನ್ನು ಗುರುತಿಸಿ ಅವುಗಳ ಅಧ್ಯಯನ ನಡೆಸಿದರು. 'ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು' ಎಂಬ ಇವರ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಹಳೆಯ ಮೈಸೂರು ಭಾಗದ ಎಲ್ಲ ಜನಪದ ಕಾವ್ಯ ಸಂಪ್ರದಾಯಗಳನ್ನು ಪರಿಚಯಿಸುವ ಪ್ರಯತ್ನ ಮಾಡಲಾಗಿದೆ. ಲಾವಣಿ ಮತ್ತು ಖಂಡಕಾವ್ಯಗಳ ಸ್ವರೂಪ ಲಕ್ಷಣಗಳನ್ನು ಕುರಿತು ಈ ಮಹಾ ಪ್ರಬಂಧದಲ್ಲಿ ಚರ್ಚಿಸಲಾಗಿದೆ. ಮಲೆಯ ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಎಲ್ಲಮ್ಮನ ಕಾವ್ಯಗಳ ಸ್ಥೂಲ ಪರಿಚಯ ಈ ಅಧ್ಯಯನದ ವಿಶೇಷ. ಇನ್ನೂ ಹಲವು ಕಾವ್ಯಗಳ ಪರಿಚಯವೂ ಇಲ್ಲಿ ಲಭ್ಯವಾಗುತ್ತದೆ. ಅವರ ನೆನೆದೇವು, ಜನಪದ ಕಾವ್ಯಕಥೆಗಳು, ಜನಪದ ಸಾಹಿತ್ಯ ಸಮೀಕ್ಷೆ - ಇವು ಜನಪದ ಗೀತೆ, ಲಾವಣಿ ಹಾಗೂ ಕಾವ್ಯಗಳಿಗೆ ಸಂಬಂಧಿಸಿದ ಜಾನಪದ ಕೃತಿಗಳು. ವೃತ್ತಿಗಾಯಕರ ಹಲವಾರು ಕಾವ್ಯಗಳನ್ನು ಬೇರೆ ಬೇರೆ ಸಂಕಲನಗಳಲ್ಲಿ ಪ್ರಕಟಿಸಲಾಗಿದೆ. ಜನಪದ ವೀರಕಾವ್ಯಗಳು, ದೊಂಬಿದಾಸರ ಲಾವಣಿಗಳು, ಹೆಳವರ ಕಾವ್ಯಗಳು ಮುಂತಾದ ಕೆಲವು ಗಮನಾರ್ಹ ಕೃತಿಗಳನ್ನು ಇಲ್ಲಿ ಹೆಸರಿಸಬಹುದು.

ದಕ್ಷಿಣ ಕರ್ನಾಟಕ ಭಾಗದ ಜಾನಪದ ಸಂಗ್ರಾಹಕರ ಪೈಕಿ, ಕ.ರಾ.ಕೃಷ್ಣಸ್ವಾಮಿ (ಕ.ರಾ.ಕೃ.) ಅವರ ಹೆಸರು ಮಹತ್ವಪೂರ್ಣವಾದುದು. ಇಪ್ಪತ್ತೈದಕ್ಕೂ ಹೆಚ್ಚು ಸಂಕಲನಗಳನ್ನು ಪ್ರಕಟಿಸಿರುವ ಕರಾಕೃ ಅವರು ಜನಪದಗೀತೆ ಹಾಗೂ ಲಾವಣಿಗಳ ಕ್ಷೇತ್ರದಲ್ಲಿ ಸಾಕಷ್ಟು ಸಂಗ್ರಹಕಾರ್ಯ ಮಾಡಿದ್ದಾರೆ. 1957ರಲ್ಲಿ ಜೇನಹನಿಗಳು ಸಂಕಲನದಿಂದ ಈ ಕ್ಷೇತ್ರವನ್ನು ಪ್ರವೇಶಿಸಿದ ಇವರು ಮಲ್ಲಿಗೆ ನಗುತಾವೆ, ಜಾನಪದ ಕಥನ ಗೀತೆಗಳು, ಶ್ರೀಆದಿಚುಂಚನಗಿರಿ, ಹಣತೆ ಉರಿಯುತ್ತಿದೆ ಮುಂತಾದ ಸಂಕಲನಗಳನ್ನು ಪ್ರಕಟಿಸಿದರು. ಇವರ ಸಂಕಲನಗಳ ಪೈಕಿ ಹೆಣ್ಣು ಕೊಟ್ಟೇವು ಮತ್ತು ಕೋಲು ಮಲ್ಲಿಗೆ ಕೋಲೆ ಎರಡು ಮುಖ್ಯ ಸಂಪ್ರದಾಯಗಳನ್ನು ಪ್ರತಿನಿಧಿಸುತ್ತವೆ. ಚನ್ನಿಗ ಚಲುವಯ್ಯ, ಗಿರಿಕಾಣೆ ಮೂಡಲಗಿರಿ, ಶ್ರೀಆದಿಚುಂಚನಗಿರಿ, ಮಲೆಮಾದೇಶ್ವರ ಮುಂತಾದವು ಒಂದೊಂದು ಧಾರ್ಮಿಕಕ್ಷೇತ್ರಕ್ಕೆ ಸಂಬಂಧಪಡುವ ಸಂಕಲನಗಳು. ಪಾಳೆಯಗಾರರ ಪದಗಳು, ಸೂಸಿ ಹರಿದಾಳೆ ಶಿವಗಂಗೆ, ಮೈಲಾರಲಿಂಗ ಈರಬಡಪ್ಪ, ಹಚ್ಚ ಹೊಂಬಾಳೆ ಕುಣಿದಾವೆ, ಕಾಳಿಂಗರಾಯ, ನಾಡಕತೆಗಳು ಮುಂತಾದ ಅನೇಕ ಸಂಕಲನಗಳಲ್ಲಿ ಇವರ ವ್ಯಾಪಕ ಕ್ಷೇತ್ರಕಾರ್ಯವನ್ನೂ ಗುರುತಿಸಬಹುದಾಗಿದೆ.

ಸ.ಚ.ಮಹಾದೇವನಾಯಕ ಅವರು ಮೈಸೂರು ಜಿಲ್ಲೆಗಷ್ಟೇ ತಮ್ಮ ಕ್ಷೇತ್ರಕಾರ್ಯವನ್ನು ಸೀಮಿತಗೊಳಿಸಿಕೊಂಡು 1958ರಿಂದ 1971ರ ಅವಧಿಯಲ್ಲಿ ನಾಲ್ಕು ಸಂಕಲನಗಳನ್ನು ಹೊರತಂದಿದ್ದಾರೆ. ಹಳೆಯ ಮೈಸೂರು ಪ್ರದೇಶದ ಬೇರೆ ಬೇರೆ ಭಾಗಗಳಲ್ಲಿ ಸಂಚರಿಸಿ ಹಾಡುಗಳನ್ನು ಹಾಡಿ ಜನಪದ ಸಂಸ್ಕೃತಿಯ ಪ್ರಸಾರ ಕಾರ್ಯವನ್ನು ಕೈಗೊಂಡವರ ಪೈಕಿ ಎಸ್.ಕೆ.ಕರೀಂಖಾನ್ (ನೋಡಿ) ಹಾಗೂ ಕೆ.ಆರ್.ಲಿಂಗಪ್ಪ (ನೋಡಿ) ಅವರ ಹೆಸರು ಪ್ರಮುಖವಾದವು. 1950ರ ಈಚೆಗೆ ಈ ಇಬ್ಬರೂ ಗಾಯಕರು ಸಾಹಿತ್ಯ ಸಂಗ್ರಹದಲ್ಲೂ ತೊಡಗಿಸಿಕೊಂಡು ಹಾಡುಗಾರಿಕೆಯನ್ನೂ ಜೊತೆ ಜೊತೆಯಲ್ಲೇ ನಡೆಸಿಕೊಂಡು ಹೋದರು. ಜನಪದ ಕಾವ್ಯ ಸಾಹಿತ್ಯಕ್ಕೆ ಸಾಕಷ್ಟು ಪ್ರಚಾರವನ್ನು ದೊರಕಿಸಿಕೊಟ್ಟರು. ಕರೀಂಖಾನ್ ಅವರು ಅತ್ಯುತ್ತಮ ಹಾಡುಗಳನ್ನೂ ಕಥನಗೀತೆಗಳನ್ನೂ ಆಯ್ದು ಸಂಕಲನಗಳನ್ನು ಹೊರತಂದಿದ್ದಾರೆ. ಕೆ.ಆರ್.ಲಿಂಗಪ್ಪ ಅವರು ಪ್ರಕಟಿಸಿರುವ ಮಾನವಮಿ ಪದಗಳು, ಮಾನವಮಿ ಸಂಪ್ರದಾಯ ಮತ್ತು ಸಾಹಿತ್ಯವನ್ನು ಪರಿಚಯ ಮಾಡಿಕೊಡುವ ವಿಶಿಷ್ಟ ಕೃತಿ.

ಗೊ.ರು.ಚನ್ನಬಸಪ್ಪನವರ ಮೈದುನ ರಾಮಣ್ಣ, ಬಾಗೂರು ನಾಗಮ್ಮ ಮತ್ತು ಇತರ ಹಾಡುಗಳು ಎಂಬ ಗೀತ ಸಂಕಲನಗಳು, ಆರ್.ಎಸ್.ಪಂಚಮುಖಿ ಅವರು ಸಂಪಾದಿಸಿ ಹೊರತಂದಿರುವ 'ಕರ್ನಾಟಕ ಜಾನಪದ ಗೀತೆಗಳು' - ಐವತ್ತರ ದಶಕದ ಉತ್ತಮ ಸಂಕಲನಗಳು. ದೊಡ್ಡ ಭಾವೆಪ್ಪ ಮೂಗಿ ಅವರ ಕಿತ್ತೂರ ಕಾಳಗ ಕಿತ್ತೂರಿನಂಥ ಐತಿಹಾಸಿಕ ಮಹತ್ವದ ಸ್ಥಳಕ್ಕೆ ಸಂಬಂಧಪಟ್ಟ ಸುದೀರ್ಘ ಲಾವಣಿ ಯನ್ನೊಳಗೊಂಡಿದೆ. ಎಂ.ಬಿ.ಮರಕ್ಕಿಣಿ, ಸಿರಿಪತಿ ಮೊದಲಾದವರು ಕಡಲ ತಡಿಯ ಜನಪದ ಗೀತೆಗಳನ್ನು ಪ್ರಕಟಿಸಿದ್ದಾರೆ. 1950ರಿಂದ 1965ರ ಅವಧಿಯ ಗೀತಸಾಹಿತ್ಯದ ಅಧ್ಯಯನದಲ್ಲಿ ಲಾವಣಿಗಳು, ತತ್ತ್ವದ ಪದಗಳು, ಗೀಗೀ ಪದಗಳು-ಹೀಗೆ ಅನೇಕ ಬಗೆಯ ಕಿರುಸಂಕಲನಗಳೂ ಸೇರುತ್ತವೆ.

1966ರ ಅನಂತರ ಕರ್ನಾಟಕ ಜಾನಪದ ಅಧ್ಯಯನದಲ್ಲಿ ಹೊಸ ತಿರುವು ಕಾಣಿಸಿಕೊಂಡಿತು. ಜಾನಪದವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಪ್ರವೃತ್ತಿ ಬೆಳೆಯಿತು. ಅಧ್ಯಯನದ ವ್ಯಾಪ್ತಿ ಜನಪದ ಸಾಹಿತ್ಯ ಸಂಗ್ರಹಕ್ಕಷ್ಟೇ ಸೀಮಿತವಾಗದೆ. ಸಾಹಿತ್ಯ ಹಾಗೂ ಇತರ ಕ್ಷೇತ್ರಗಳ ಬಗೆಗೆ ವಿಷಯ ಸಂಗ್ರಹಣೆ ವಿಶ್ಲೇಷಣೆ - ಈ ಕಾರ್ಯಗಳೂ ನಡೆಯತೊಡಗಿವೆ. ಜಾನಪದ ಅಧ್ಯಯನ ಕ್ಷೇತ್ರ ವಿಸ್ತಾರಗೊಂಡಿತು.

1966ರಲ್ಲಿ ಜಾನಪದವನ್ನು ಒಂದು ಅಧ್ಯಯನ ವಿಷಯವಾಗಿ ಕನ್ನಡ ಸ್ನಾತಕೋತ್ತರ ಪದವಿಗೆ ಅಳವಡಿಸುವುದರ ಮೂಲಕ ಮೈಸೂರು ವಿಶ್ವವಿದ್ಯಾನಿಲಯ ಭಾರತೀಯ ಜಾನಪದ ಅಧ್ಯಯನದಲ್ಲಿ ಒಂದು ಹೊಸ ಅಧ್ಯಾಯವನ್ನು ಆರಂಭಿಸಿತು. ಅದೇ ವರ್ಷ ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣಮಹೋತ್ಸವದ ಅಂಗವಾಗಿ ನಡೆದ ಲೇಖಕರ ಸಮ್ಮೇಳನದ ಜಾನಪದ ಗೋಷ್ಠಿ ಅನಂತರದ ಜಾನಪದ ಅಧ್ಯಯನದ ಮೇಲೆ ವಿಶಿಷ್ಟ ಪ್ರಭಾವವನ್ನು ಬೀರಿತು. ಹಾ.ಮಾ.ನಾಯಕ ಅವರು ಮಂಡಿಸಿದ ಜನಪದ ಸಾಹಿತ್ಯ ಮತ್ತು ಅದರ ಸ್ವರೂಪ ಎಂಬ ಪ್ರಬಂಧ ಜಾನಪದದ ವೈಜ್ಞಾನಿಕ ಅಧ್ಯಯನದ ವ್ಯಾಪ್ತಿ ಉದ್ದೇಶಗಳತ್ತ ಕನ್ನಡಿಗರ ಆಸಕ್ತಿಯನ್ನು ಸೆಳೆದು ಜಾನಪದದ ಸಮಗ್ರ ಸ್ವರೂಪವನ್ನು ಕನ್ನಡ ವಿದ್ವತ್ ಲೋಕಕ್ಕೆ ಪರಿಚಯ ಮಾಡಿಕೊಟ್ಟಿತು. ಜಾನಪದ ಶಬ್ದ ಪ್ರಯೋಗ ಮತ್ತು ವಿಷಯಗಳ ಬಗೆಗೆ ವಿವರಿಸುವ ಪ್ರಯತ್ನವನ್ನು 1936ರಲ್ಲೇ ದೇವುಡು ನರಸಿಂಹಶಾಸ್ತ್ರಿಗಳು ತಮ್ಮ 'ಕರ್ನಾಟಕ ಸಂಸ್ಕೃತಿ' ಗ್ರಂಥದಲ್ಲಿ ಮಾಡಿದ್ದರು. ಆದರೆ ಶಿಷ್ಟಸಂಸ್ಕೃತಿ ಹಾಗೂ ಜನಪದ ಸಂಸ್ಕೃತಿಗಳ ಅಂತರವನ್ನು ಗುರುತಿಸುವಲ್ಲಿ ಅವರು ಯಶಸ್ವಿಯಾಗಿರಲಿಲ್ಲ. ಗದ್ದಗಿಮಠ ಅವರು ತಮ್ಮ ಮಹಾಪ್ರಬಂಧದಲ್ಲೂ ಈ ವಿಷಯವನ್ನು ಪ್ರಸ್ತಾಪಿಸಿದ್ದರು. ಆದರೆ ಜನಪದ ಸಾಹಿತ್ಯ ಮತ್ತು ಜಾನಪದ ಪರಿಕಲ್ಪನೆಗಳ ವ್ಯತ್ಯಾಸವನ್ನೂ ಸರಿಯಾಗಿ ಗುರುತಿಸದೆ ಫೋಕ್‌ಲೋರ್‌ಗೆ ಸಂವಾದಿಯಾಗಿ 'ಜಾನಪದ ಸಾಹಿತ್ಯ' ಎಂದೇ ಬಳಸಿದ್ದಾರೆ. 'ಫೆಸ್ಟಿವಲ್ ಆಫ್ ಡಾನ್ಸಸ್' ಅಂಗವಾಗಿ 1966ರಲ್ಲಿ ಬೆಂಗಳೂರಿನಿಂದ ಪ್ರಕಟವಾದ ಒಂದು ವಿಶೇಷಾಂಕದಲ್ಲಿ ಜೀ.ಶಂ. ಪರಮಶಿವಯ್ಯ ಅವರು ಕನ್ನಡದಲ್ಲಿ ನಡೆದು ಬಂದ ಜಾನಪದ ಅಧ್ಯಯನ ಕೇವಲ ಗೀತಪ್ರಕಾರಕ್ಕಷ್ಟೇ ಸೀಮಿತವಾದರೆ ಸಾಲದು, ಜಾನಪದದಂಥ ವ್ಯಾಪಕವಾದ ವಿಷಯದ ಎಲ್ಲ ಕ್ಷೇತ್ರಗಳಲ್ಲಿಯೂ ಕೆಲಸ ನಡೆಯಬೇಕು ಎಂದು ಸೂಚಿಸಿ ಪಾಶ್ಚಾತ್ಯದೇಶಗಳ ಜಾನಪದ ಅಧ್ಯಯನದ ಕಡೆ ಗಮನ ಸೆಳೆದರು. ಆದರೆ ಇವರಾರೂ ಹಾ.ಮಾ. ನಾಯಕರಂತೆ 'ಜಾನಪದ'ದ ಸಮಗ್ರ ಅಧ್ಯಯನ ಹಾಗೂ ಅದನ್ನು ಒಂದು ವಿಜ್ಞಾನವಾಗಿ ಅದರ ಸ್ವರೂಪವನ್ನು ಪರಿಶೀಲಿಸಲಿಲ್ಲ. ಫೋಕ್‌ಲೋರ್ ಎಂದರೇನು?

ಅದರ ವಿವಿಧ ಕ್ಷೇತ್ರಗಳಾವುವು? ಫೋಕ್ ಮತ್ತು ಲೋರ್‌ಗಳ ಸಂಬಂಧವೇನು? ಆ ಶಬ್ದಗಳ ವಿವಿಧ ಅರ್ಥ ಛಾಯೆಗಳೇನು? ಕನ್ನಡದಲ್ಲಿ ಫೋಕ್‌ಲೋರ್ ಶಬ್ದಕ್ಕೆ ಸಂವಾದಿಯಾಗಿ 'ಜಾನಪದ' ಎಂಬ ಪ್ರಯೋಗವನ್ನು ಹೇಗೆ ಬಳಸಬಹುದು? ಎಂಬೆಲ್ಲ ವಿಷಯಗಳ ಮೇಲೆ ವಿವರವಾಗಿ ಚರ್ಚಿಸಿ ನಮ್ಮ ಜಾನಪದ ಅಧ್ಯಯನಕ್ಕೆ ಹೊಸ ಆಯಾಮವನ್ನು ಒದಗಿಸಿದವರು ಹಾ.ಮಾ. ನಾಯಕರು. ಮುಂದೆ 1967ರಲ್ಲಿ ಪ್ರಕಟವಾದ 'ಹೊನ್ನ ಬಿತ್ತೇವು ಹೊಲಕೆಲ್ಲ' ಎಂಬ ಪ್ರಥಮ ಜಾನಪದ ಸಮ್ಮೇಳನದ ನೆನಪಿನ ಗ್ರಂಥದಲ್ಲಿಯೂ ಹಾ.ಮಾ. ನಾಯಕರು 'ಜಾನಪದ ವೈಜ್ಞಾನಿಕ ಅಧ್ಯಯನ' ಎಂಬ ವಿಷಯದ ಮೇಲೆ ಪ್ರಬಂಧವೊಂದನ್ನು ಪ್ರಕಟಿಸಿ, ಜಾನಪದದ ವೈಜ್ಞಾನಿಕ ಅಧ್ಯಯನ ಸ್ವರೂಪವನ್ನು ವಿವರಿಸಿದರು.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಜಾನಪದ ಅಧ್ಯಯನ ಆರಂಭವಾಗಲು ಮುಖ್ಯ ಕಾರಣಕರ್ತರಾದ ದೇಜಗೌ ಅವರು ಅದೇ ವರ್ಷ ಪ್ರಕಟವಾದ 'ಜನಪದ ಸಾಹಿತ್ಯ ಸಮೀಕ್ಷೆ' ಎಂಬ ಗ್ರಂಥಕ್ಕೆ ತಾವು ಬರೆದ ವಿಸ್ತಾರವಾದ ಮುನ್ನುಡಿಯಲ್ಲಿ ಜಾನಪದದ ಮೂಲಚೂಲಗಳನ್ನೆಲ್ಲ ವಿವರಿಸಿ ಅದರ ಸಮಗ್ರ ಸ್ವರೂಪವೇನು ಎಂಬುದನ್ನು ಸಮರ್ಥವಾಗಿ ವಿವರಿಸಿದ್ದರು. ಜನಜೀವನದಲ್ಲಿ ಜಾನಪದ ಹೇಗೆ ಹಾಸುಹೊಕ್ಕಾಗಿದೆ, ಅದು ವಾಕ್ಸಂಪ್ರದಾಯದಲ್ಲಿ ಮಾತ್ರವಲ್ಲದೆ ಭೌತಿಕ ವಸ್ತುವಿಶೇಷಗಳ ರೂಪದಲ್ಲಿಯೂ ಹೇಗೆ ಇರಬಲ್ಲದು, ಜಾನಪದ ಸಂಗ್ರಾಹಕರು ಹೇಗೆ ಸಮಸ್ತ ವಸ್ತು ವಿಷಯಗಳನ್ನು ಸಂಗ್ರಹಿಸಬೇಕು, ಹಾಗೆ ಸಂಗ್ರಹಿಸುವುದರ ಮಹತ್ವವೇನು ಎಂಬ ಅಂಶಗಳನ್ನು ಚರ್ಚಿಸಿ ಜಾನಪದ ಅಧ್ಯಯನಕ್ಕೆ ಹೊಸ ಸ್ಫೂರ್ತಿಯನ್ನು ತುಂಬಿದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಜಾನಪದ ವಸ್ತು ಸಂಗ್ರಹಾಲಯ ರೂಪುಗೊಳ್ಳಲು ಜಾನಪದ ವಿಭಾಗ ಸುಪುಷ್ಟಗೊಳ್ಳಲು ಕಾರಣಕರ್ತರಾದ ದೇಜಗೌ, ಹಾ.ಮಾ.ನಾಯಕ, ಜೀ.ಶಂ.ಪರಮಶಿವಯ್ಯ ಮತ್ತು ಪಿ.ಆರ್.ತಿಪ್ಪೇಸ್ವಾಮಿ ಅವರ ಹೆಸರು ಕರ್ನಾಟಕ ಜಾನಪದ ಅಧ್ಯಯನದ ಇತಿಹಾಸದಲ್ಲಿ ಅಗ್ರಪಂಕ್ತಿಯಲ್ಲಿ ನಿಲ್ಲುತ್ತದೆ.

ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಜಾನಪದ ವಸ್ತುಸಂಗ್ರಹಾಲಯ ಸಾಂಸ್ಕೃತಿಕ ಮಹತ್ವದ ಅಪೂರ್ವ ವಸ್ತುವಿಶೇಷಗಳಿಂದ ಬೇರೆ ಬೇರೆ ಕ್ಷೇತ್ರದ ವಿದ್ವಾಂಸರ, ಸಂಶೋಧಕರ, ಸಂದರ್ಶಕರ ಆಸಕ್ತಿಯನ್ನು ಸೆಳೆದಿದೆ. ಪರಂಪರಾನುಗತ ಜನಪದ ಸಂಸ್ಕೃತಿಯ ವಿವಿಧ ಮಜಲುಗಳನ್ನು ಗುರುತಿಸುವ, ಜನಜೀವನದ ಪ್ರಾಚೀನ ವೈಭವವನ್ನು ಚಿತ್ರಿಸುವ ಕನ್ನಡಿಗರ ಜೀವನ ಶ್ರದ್ಧೆ, ಕಲಾರಾಧನೆ, ವೃತ್ತಿ ವೈವಿಧ್ಯಗಳನ್ನು ಪರಿಚಯ ಮಾಡಿಕೊಡುವ ಈ ವಸ್ತುಸಂಗ್ರಹಾಲಯ ಭಾರತಕ್ಕೆ ಹೊಸದು. ಈ ವಸ್ತುಸಂಗ್ರಹಾಲಯದ ಬೆಳವಣಿಗೆಯಲ್ಲಿ ಜೀ.ಶಂ.ಪರಮಶಿವಯ್ಯ, ಪಿ.ಆರ್.ತಿಪ್ಪೇಸ್ವಾಮಿ ಮತ್ತು ಯು.ಎಸ್.ರಾಮಣ್ಣ ಮೊದಲಾದರು ಶ್ರಮಿಸಿದ್ದಾರೆ. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಸಂಚರಿಸಿ ಸಂಗ್ರಹಕಾರ್ಯವನ್ನು ನಡೆಸಲಾಗಿದೆ.

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಜಾನಪದ ವಿಭಾಗ ಜಾನಪದ ಮಾಲೆಯಲ್ಲಿ ಇದುವರೆಗೆ ಅರುವತ್ತಾರು ಶೀರ್ಷಿಕೆಗಳನ್ನು ಹೊರತಂದಿದೆ (2002). ಇದರ ಜೊತೆಗೆ ವಿವಿಧ ಪ್ರದೇಶಗಳಲ್ಲಿ ಜಾನಪದ ಪರಿವೀಕ್ಷಣೆಯ ಕಾರ್ಯವನ್ನು ಕೈಗೊಂಡು ಅಧ್ಯಯನ ನಡೆಸುತ್ತಿದೆ. ಇಲ್ಲಿಯ ಸಂಶೋಧಕರು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಸಂಚರಿಸಿ ಜಾನಪದ ಸಂಗ್ರಹಕಾರ್ಯ ನಡೆಸಿದ್ದಾರೆ. ಜನಪದ ಗೀತೆ, ಲಾವಣಿ, ನಾಟಕ ಮುಂತಾದವನ್ನು ಧ್ವನಿಮುದ್ರಣ ಮಾಡಿ ಸಂರಕ್ಷಿಸಿ ಇಡಲಾಗುತ್ತಿದೆ. ಸಂಶೋಧನೆ, ಪ್ರಕಟಣೆಗಳ ಜೊತೆಗೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಜಾನಪದ ಅಧ್ಯಯನಕ್ಕೆ ವಿಶೇಷ ಅವಕಾಶವನ್ನು ಕಲ್ಪಿಸಿಕೊಡಲಾಗಿದೆ. ಜಾನಪದದಲ್ಲಿ ಸ್ನಾತಕೋತ್ತರ ಪದವಿ ಶಿಕ್ಷಣವನ್ನು ಆರಂಭಿಸಿದುದು ಒಂದು ಕ್ರಾಂತಿಕಾರಕ ಹೆಜ್ಜೆ. ಜಾನಪದದಲ್ಲಿ ಡಿಪ್ಲೊಮಾ, ಕನ್ನಡ ಸ್ನಾತಕೋತ್ತರ ಪದವಿಯಲ್ಲಿ ಮತ್ತು ದಕ್ಷಿಣ ಭಾರತ ಅಧ್ಯಯನದಲ್ಲಿ ಜಾನಪದ ಅಧ್ಯಯನಕ್ಕೆ ಅವಕಾಶ ಹೀಗೆ ನಾನಾ ರೀತಿಯಲ್ಲಿ ಜಾನಪದಕ್ಕೆ ಪ್ರತಿಷ್ಠಿತ ಸ್ಥಾನವನ್ನು ಕಲ್ಪಿಸಲಾಗಿದೆ.

ಕರ್ನಾಟಕ ವಿಶ್ವವಿದ್ಯಾಲಯವೂ ಜಾನಪದ ಅಧ್ಯಯನ ಮತ್ತು ಪ್ರಕಟಣೆಗಳಿಗೆ ಆದ್ಯತೆ ನೀಡಿದೆ. ಕರ್ನಾಟಕ ವಿಶ್ವವಿದ್ಯಾಲಯ ಮೊದಲಿಗೆ ಜನಪದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಸ್ನಾತಕೋತ್ತರ ಪದವಿ ಶಿಕ್ಷಣವನ್ನು ನೀಡುತ್ತಿತ್ತು. ಇತ್ತೀಚೆಗೆ ಜನಪದ ಸಾಹಿತ್ಯಕ್ಕೆ ಬದಲಾಗಿ ಜಾನಪದದಲ್ಲಿ ಸ್ನಾತಕೋತ್ತರ ಶಿಕ್ಷಣವನ್ನು ನೀಡುತ್ತಿದೆ. ಕಳೆದ ಕಾಲು ಶತಮಾನದಿಂದ ಕರ್ನಾಟಕ ವಿಶ್ವವಿದ್ಯಾಲಯ ತಪ್ಪದೆ ನಡೆಸಿಕೊಂಡು ಬರುತ್ತಿರುವ ಅಖಿಲ ಕರ್ನಾಟಕ ಜಾನಪದ ಸಮ್ಮೇಳನ ಹಾಗೂ ಗೋಷ್ಠಿಗಳಲ್ಲಿ ಮಂಡನೆಗೊಂಡ ಪ್ರಬಂಧಗಳ ಸಂಕಲನಗಳನ್ನು ಹೊರತರುತ್ತಿರುವುದು ಮಹತ್ವದ ಸಂಗತಿಯಾಗಿದೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಜಾನಪದ ವಿಭಾಗ ಮತ್ತು ಬುಡಕಟ್ಟು ಅಧ್ಯಯನ ವಿಭಾಗಗಳು ವ್ಯಾಪಕ ಕ್ಷೇತ್ರಕಾರ್ಯ ಕೈಗೊಂಡು ಬೃಹತ್ ಗಾತ್ರದ ಸಂಪುಟಗಳನ್ನು ಹೊರತರುತ್ತಿವೆ. ಇಲ್ಲಿ ಸ್ನಾತಕೋತ್ತರ ಜಾನಪದ ಪದವಿ ಶಿಕ್ಷಣವನ್ನೂ ಆರಂಭಿಸಲಾಗಿದೆ. 2002-03ನೆಯ ಸಾಲಿನಿಂದ ಬೆಂಗಳೂರು ಮತ್ತು ಮಂಗಳೂರು ವಿಶ್ವವಿದ್ಯಾಲಯಗಳೂ ಜಾನಪದ ಅಧ್ಯಯನ ಮತ್ತು ಪ್ರಕಟಣೆಗಳಿಗೆ ಗಮನ ಹರಿಸುತ್ತ ಬಂದಿವೆ. ಕುವೆಂಪು ವಿಶ್ವವಿದ್ಯಾಲಯ ಹಾಗೂ ಗುಲ್ಬರ್ಗ ವಿಶ್ವವಿದ್ಯಾಲಯಗಳಲ್ಲೂ ಜಾನಪದ ಪ್ರಕಟಣೆಗಳು ಹೊರಬಂದಿವೆ. ಬಹುತೇಕ ಎಲ್ಲ ವಿಶ್ವವಿದ್ಯಾಲಯಗಳಲ್ಲೂ ಕನ್ನಡ ಎಂ.ಎ. ವಿದ್ಯಾರ್ಥಿಗಳಿಗೆ ಜಾನಪದ ಅಧ್ಯಯನ ನಡೆಸಲು ಅವಕಾಶ ಕಲ್ಪಿಸಲಾಗಿದೆ. ಇದೇ ಜಾಡಿನಲ್ಲಿ ನಾಡಿನ ಬೇರೆ ಬೇರೆ ಸಂಘ ಸಂಸ್ಥೆಗಳೂ ಕೆಲಸ ಮಾಡುತ್ತಿರುವುದು ಗಮನಾರ್ಹ. ಕರ್ನಾಟಕ ಜಾನಪದ ಪರಿಷತ್ತು, 60ರ ದಶಕದಲ್ಲಿ ತನ್ನ ಚಟುವಟಿಕೆಗಳಿಂದ ನಾಡಿನಾದ್ಯಂತ ಜಾನಪದದತ್ತ ಆಸಕ್ತಿ ಕುದುರಿಸಿತ್ತು. ಪರಿಷತ್ತು ಹೊರತರುತ್ತಿದ್ದ ಜಾನಪದ ಎಂಬ ಪತ್ರಿಕೆ ಜಾನಪದ ಸಂಶೋಧನೆಯ ಕ್ಷೇತ್ರದಲ್ಲಿ ಮಹತ್ವದ ಸ್ಥಾನವನ್ನು ಪಡೆದಿತ್ತು. ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕರ್ನಾಟಕ ಜಾನಪದ ಟ್ರಸ್ಟ್, ಉಡುಪಿಯ ಪ್ರಾದೇಶಿಕ ಜನಪದ ಕಲೆಗಳ ಕೇಂದ್ರ ಮುಂತಾದ ಸಂಸ್ಥೆಗಳು 80ರ ದಶಕದಿಂದೀಚೆಗೆ ಜಾನಪದ ಕ್ಷೇತ್ರದ ಕಡೆ ತೀವ್ರ ಆಸಕ್ತಿ ತಳೆದು ಸಂಶೋಧನೆ, ಪ್ರಕಟಣೆ, ಕಲೆಗಳ ಸಂವರ್ಧನೆ, ಕಲಾವಿದರ ಪೋಷಣೆ ಮುಂತಾದ ಕಾರ್ಯಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದು ನಾಲ್ಕು ನಿಟ್ಟಿನಿಂದ ಜಾನಪದ ಕ್ಷೇತ್ರ ಸುಮುಖವಾಗಿ ಬೆಳೆಯಲು ಕಾರಣವಾಗಿದೆ.

ಜಾನಪದ ಅಧ್ಯಯನಕ್ಕೆ ಅರವತ್ತರ ದಶಕದಲ್ಲಿ ಹೊಸ ತಿರುವು ಬಂದ ಮೇಲೆ ಅಪಾರ ಸಂಖ್ಯೆಯ ಉತ್ಸಾಹಿಗಳು ಕ್ಷೇತ್ರಕಾರ್ಯಕ್ಕೆ ತೊಡಗಿ ಗಣನೀಯ ಪ್ರಮಾಣದಲ್ಲಿ ಜಾನಪದ ಕೃತಿರಾಶಿ ಬೆಳಕು ಕಂಡಿದೆ. ಇಲ್ಲಿನ ಸಾಧನೆ ಹೊಸ ದಿಗಂತವನ್ನೇ ತೆರೆದಿದೆ. ಜಾನಪದದ ಸಾಹಿತ್ಯಿಕ ಬಗೆ, ಕ್ರಿಯಾತ್ಮಕ ಬಗೆ ಹಾಗೂ ವೈಜ್ಞಾನಿಕ ಬಗೆಗಳಲ್ಲಿ ಸಾಕಷ್ಟು ಕ್ಷೇತ್ರಕಾರ್ಯ ನಡೆದಿರುವುದು ಗಮನಾರ್ಹ ಅಂಶವಾಗಿದೆ. ಅಲಕ್ಷಿತ ಜಾನಪದ ಕ್ಷೇತ್ರಗಳಲ್ಲಿ ಹೊಸ ಪೀಳಿಗೆಯ ಅಧ್ಯಯನಕಾರರು ಆಸಕ್ತಿವಹಿಸಿ ಆ ನಿಟ್ಟಿನಲ್ಲಿ ಕೆಲಸ ಮಾಡುತ್ತಿದ್ದಾರೆ. 70ರ ದಶಕದ ಅನೇಕ ಶೀರ್ಷಿಕೆಗಳು ವಿದ್ವಜ್ಜನರ ಸಂಶೋಧಕರ ಆಸಕ್ತಿಯನ್ನು ಸೆಳೆದಿವೆ. ಹಾ.ಮಾ.ನಾಯಕ ಅವರು ಸಿದ್ಧಪಡಿಸಿದ ಜಾನಪದ ಗ್ರಂಥಸೂಚಿ 1974ರವರೆಗಿನ ಜಾನಪದ ಶೀರ್ಷಿಕೆಗಳ ವಿವರಗಳನ್ನು ನೀಡುತ್ತದೆ. ಕಾವ್ಯ, ಲಾವಣಿ, ಕಥೆ, ಐತಿಹ್ಯ, ಭಾಷಾಂತರ ಕೃತಿಗಳು, ಗಾದೆ, ಒಗಟು, ನಾಟಕ, ರಂಗಭೂಮಿ, ವಿಚಾರ, ವಿಮರ್ಶೆ, ಸಂಶೋಧನೆ ಹಾಗೂ ಸಂಕೀರ್ಣ ಸ್ವರೂಪದ ಕೃತಿ ಮಾಲೆಯಲ್ಲಿ ಐನೂರಕ್ಕೂ ಹೆಚ್ಚು ಕೃತಿಗಳು ಕನ್ನಡದಲ್ಲಿ ಪ್ರಕಟಗೊಂಡಿರುವುದನ್ನು ಅಲ್ಲಿ ಲಕ್ಷಿಸಲಾಗಿದೆ. ಈ ಗ್ರಂಥಸೂಚಿಯ ಪ್ರಕಟಣೆಯ ಮೂಲಕ ಹಾ.ಮಾ.ನಾಯಕ ಅವರು ದೊಡ್ಡ ಸಂಖ್ಯೆಯ ಅಜ್ಞಾತ ಕೃತಿಗಳನ್ನು ಬೆಳಕಿಗೆ ತಂದಿದ್ದಾರೆ. ಜೊತೆಗೆ ಈ 70ರ ದಶಕದಲ್ಲಿ ಜಾನಪದ ಅಧ್ಯಯನ ಮೈಗೂಡಿಕೊಂಡ ರೀತಿಗೂ ಈ ಕೃತಿ ಸಾಕ್ಷಿಯಾಗಿದೆ.

70ರ ದಶಕದಲ್ಲಿ ಅತ್ಯಂತ ಮಹತ್ವದ ಅಧ್ಯಯನ ನಡೆದಿರುವುದು ವೃತ್ತಿಗಾಯಕ ಕ್ಷೇತ್ರಕ್ಕೆ ಸಂಬಂಧಿಸಿದಂತೆ. ದಕ್ಷಿಣ ಕರ್ನಾಟಕದ ವೃತ್ತಿಗಾಯಕ ಕಾವ್ಯ ಸಂಪ್ರದಾಯಗಳನ್ನು ಕುರಿತು ಸಾಕಷ್ಟು ಅಧ್ಯಯನಗಳು ನಡೆದಿರುವುದು ಗಮನಾರ್ಹ. ಕಂಸಾಳೆಯವರು, ನೀಲಗಾರರು, ಚೌಡಿಕೆಯವರು ಮುಂತಾದ ವೃತ್ತಿಗಾಯಕರ ಕಾವ್ಯಗಳು ಸಂಗ್ರಹಗೊಂಡು ಪ್ರಕಟವಾಗಿವೆ. ಈ ಸಂಕಲನಗಳಿಂದ ಕರ್ನಾಟಕದ ಪ್ರಮುಖ ವೃತ್ತಿಗಾಯಕ ಸಂಪ್ರದಾಯಗಳ

ಹಿನ್ನೆಲೆ ಹಾಗೂ ಕಾವ್ಯಗಳ ಸ್ವರೂಪ ಮನದಟ್ಟಾಗುವಂತೆ ಇದ್ದರೂ ಇನ್ನೂ ಸಮಗ್ರವಾದ ಅಧ್ಯಯನ ನಡೆಯಬೇಕಾಗಿದೆ. ಜೀ.ಶಂ. ಪರಮಶಿವಯ್ಯನವರ ಜನಪದ ಕಾವ್ಯಕಥೆಗಳು ಪ್ರಮುಖ ವೃತ್ತಿಗಾಯಕ ಸಂಪ್ರದಾಯಗಳ ಮೇಲೆ ಬೆಳಕು ಚೆಲ್ಲುವ ಕೃತಿ. ಇವರ ಮಂಟೇಸ್ವಾಮಿ ಕಾವ್ಯ, ದೊಂಬಿದಾಸರ ಲಾವಣಿಗಳು, ಹೆಳವರ ಕಾವ್ಯಗಳು, ಎರಡು ಜನಪದ ಕಾವ್ಯಗಳು, ಜನಪದ ವೀರ ಕಾವ್ಯಗಳು, ಪಿರಿಯಾಪಟ್ಟಣದ ಕಾಳಗ, ವೃತ್ತಿಗಾಯಕ ಕಾವ್ಯಗಳು ಮುಂತಾದ ಶೀರ್ಷಿಕೆಗಳು ವಿವಿಧ ವೃತ್ತಿಗಾಯಕ ಕಾವ್ಯಗಳನ್ನೊಳಗೊಂಡ ಗಮನಾರ್ಹ ಸಂಕಲನಗಳು. ಪಿ.ಕೆ.ರಾಜಶೇಖರ ಅವರ ಮಲೆಯಮಾದೇಶ್ವರ ಜನಪದ ಮಹಾಕಾವ್ಯ, ಕನ್ನಡ ವಿಶ್ವವಿದ್ಯಾಲಯದ ಮಲೆಮಾದೇಶ್ವರ, ಮಂಟೇಸ್ವಾಮಿ, ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ, ಜುಂಜಪ್ಪ, ವಿವಿಧ ವೃತ್ತಿಗಾಯಕ ಪರಂಪರೆ ಮತ್ತು ಕಾವ್ಯ ಸ್ವರೂಪವನ್ನು ಪರಿಚಯಿಸುವ ಶೀರ್ಷಿಕೆಗಳು ಈ ಅಧ್ಯಯನಕ್ಕೆ ಹೊಸ ಆಯಾಮ ತಂದುಕೊಟ್ಟಿವೆ. ತಂಬೂರಿ ಹಾಡುಗಾರಿಕೆ ಸಂಪ್ರದಾಯವನ್ನು ಕುರಿತು ಹಾ.ತಿ.ಕೃಷ್ಣೇಗೌಡ, ಅಂಬಳಿಕೆ ಹಿರಿಯಣ್ಣ, ಚಂದ್ರುಕಾಳೇನಹಳ್ಳಿ ಅವರು ಅನುಕ್ರಮವಾಗಿ ಗಜಮೋಹಿನಿ (1977) ತಂಬೂರಿ ಸಂಪ್ರದಾಯದ ಕಾವ್ಯಗಳು (1980) ತಂಬೂರಿ ಕಾವ್ಯಗಳು (1978) ಎಂಬ ಸಂಕಲನಗಳನ್ನೂ ಹೊರತಂದಿದ್ದಾರೆ. ಕರ್ನಾಟಕದ ವೃತ್ತಿಗಾಯಕರ ಪೈಕಿ ಗೊಂದಲಿಗರನ್ನು ಕುರಿತು ಕೆಲಸ ಮಾಡಿದವರು ಕ್ಯಾತನಹಳ್ಳಿ ರಾಮಣ್ಣ. ಅವರ ಶಿವಮೊಗ್ಗ ಜಿಲ್ಲೆಯ ಗೊಂದಲಿಗರ ಕಥೆಗಳು ಒಂದು ಗಮನಾರ್ಹ ಸಂಕಲನವಾಗಿದೆ (1975).

ವೃತ್ತಿಗಾಯಕರ ಈ ಕಾವ್ಯ ಸಂಪ್ರದಾಯಗಳ ಜೊತೆಗೆ ಬೇರೆ ಗೀತ ಸಂಪ್ರದಾಯಗಳ ಬಗೆಗೂ ಅಧ್ಯಯನಗಳು ನಡೆದಿವೆ. ಮಲೆನಾಡು ಮತ್ತು ಬಯಲುನಾಡುಗಳ ಅವಳಿ ಸಂಪ್ರದಾಯಗಳಾದ ಅಂಟಿಕೆ ಪಂಟಿಕೆ (ನೋಡಿ) ಹಾಗೂ ಭಾಗವಂತಿಕೆ ಸಂಪ್ರದಾಯಗಳ ಮೇಲೆ ಅನೇಕರು ಕೆಲಸ ಮಾಡಿದ್ದಾರೆ. ಅಂಟಿಕೆ ಪಂಟಿಕೆ ಗೀತ ಸಂಪ್ರದಾಯ ಕುರಿತು ಡಿ.ಟಿ.ಚಂದ್ರಶೇಖರ, ಕೆ.ವಿ.ಸುಬ್ಬಣ್ಣ, ಹಾ.ಮಾ.ನಾಯಕ, ಶ್ರೀಕಂಠಕೂಡಿಗೆ, ಅಂಬಳಿಕೆ ಹಿರಿಯಣ್ಣ, ಜೆ.ಕೆ.ರಮೇಶ ಮೊದಲಾದವರು ಅಧ್ಯಯನ ಮಾಡಿದ್ದಾರೆ. ಭಾಗವಂತಿಕೆ ಸಂಪ್ರದಾಯ ಕುರಿತು ಜೀಶಂಪ ಅವರ ಭಾಗವಂತಿಕೆ ಮೇಳ, ಹಿರಿಯಣ್ಣ ಮೇಟಿಕೆರೆ ಅವರ ಭಾಗವಂತಿಕೆ ಪದಗಳು ಪ್ರಕಟಗೊಂಡಿವೆ. ಅರವಿಂದ ಮಾಲಗತ್ತಿ ಅವರ ಆಣೇಪೀಣೆ ಕೂಡ ದೀಪಾವಳಿ ಸಂದರ್ಭದಲ್ಲಿ ಉತ್ತರ ಕರ್ನಾಟಕ ಭಾಗದಲ್ಲಿ ಪ್ರಚಲಿತವಿರುವ ಹಾಡುಗಾರಿಕೆ ಸಂಪ್ರದಾಯವನ್ನೇ ಕುರಿತದ್ದಾಗಿದೆ.

80 ಮತ್ತು 90ರ ದಶಕಗಳಲ್ಲಿ ನಡೆದಿರುವ ಬಹುಮಟ್ಟಿನ ಅಧ್ಯಯನವೆಲ್ಲ ಸಾಹಿತ್ಯಕ ಬಗೆಗಳಿಗೆ ಸಂಬಂಧಪಡುತ್ತದೆ. ಗೀತೆ, ಕಥನಗೀತೆ, ಲಾವಣಿ, ಕಥೆ, ಒಗಟು, ಗಾದೆ, ಶಿಶುಪ್ರಾಸ ಹಾಗೂ ರಂಗಕಲೆಗಳಿಗೆ ಸಂಬಂಧಿಸಿದಂತೆ ತಕ್ಕಮಟ್ಟಿನ ಸಂಗ್ರಹಕಾರ್ಯ ಹಾಗೂ ಅಧ್ಯಯನಗಳು ನಡೆದಿವೆ. ಈ ದಶಕಗಳ ವೈಶಿಷ್ಟ್ಯವೆಂದರೆ ಸಂಗ್ರಹ ಸಂಪಾದನೆಗಳಿಗಿಂತ ಅಧ್ಯಯನ ಸಂಶೋಧನೆಗಳ ಮೊತ್ತವೇ ಅಧಿಕವಾಗಿರುವುದು.

ಅರವಿಂದ ಮಾಲಗತ್ತಿಯವರ ಜಾನಪದ ಶೋಧ (1990), ದೈವಾರಾಧನೆ ಮತ್ತು ವಿಶಿಷ್ಟ ಸಂಪ್ರದಾಯಾಚರಣೆಗಳನ್ನು ಅರ್ಥೈಸಲು ಅವರು ವಿಶೇಷವಾಗಿ ದೊರಕಿಸಿಕೊಂಡಿರುವ ಸಾಮಗ್ರಿಯ ಬಾಹುಳ್ಯ ಹಾಗೂ ಕ್ಷೇತ್ರಕಾರ್ಯದ ವೈಖರಿ ಮಹತ್ವದವಾಗಿವೆ. ತುಳುನಾಡಿನ ಸಂಸ್ಕೃತಿಯನ್ನು ಅರಿಯುವ ಪ್ರಯತ್ನ ಮಾಲಗತ್ತಿಯವರ ಭೂತಾರಾಧನೆ (1991). ಜಾನಪದ ಅಧ್ಯಯನಕ್ಕೆ ಈ ಕೃತಿ ಹೊಸ ಆಯಾಮ ಒದಗಿಸಿದೆ. ಅಂತಾರಾಷ್ಟ್ರೀಯ ನೆಲೆಯಿಂದ ಮಾಲಗತ್ತಿಯವರು ನಡೆಸಿದ ಸಂಶೋಧನೆ ತುಳುವರ ಆಟಿ ಕಳೆಂಜ (1993); ಇದು ಕ್ಷೇತ್ರ ಕಾರ್ಯಾಧ್ಯಯನ. ತುಳುನಾಡಿನ ಸಂಸ್ಕೃತಿಯ ಅಧ್ಯಯನಕ್ಕೆ ಇದೊಂದು ಆಕರ ಗ್ರಂಥ. ಪುರಾಣ ಜಾನಪದ ಮತ್ತು ದೇಶೀವಾದ (1998) ಗ್ರಂಥದಲ್ಲಿ ಮಾಲಗತ್ತಿಯವರು ಪುರಾಣ ಗಳನ್ನು ಕುರಿತು ವೈಚಾರಿಕ ನೆಲೆಯಿಂದ ಅಧ್ಯಯನ ನಡೆಸಿದ್ದಾರೆ.

1980ರ ದಶಕದಲ್ಲಿ ಹೊರ ಬಂದ ಕಥನಗೀತ ಸಂಕಲನಗಳ ಪೈಕಿ ಕೃಷ್ಣಮೂರ್ತಿ ಹನೂರರ ಕತ್ತಲ ದಾರಿ ದೂರ ಗಮನಾರ್ಹವಾದ ಸಂಗ್ರಹ. ಮಹಾಸತಿಯರು ಮತ್ತು ಸ್ತ್ರೀ ಬಲಿದಾನವನ್ನು ಕುರಿತ ರಚನೆಗಳು ಇಲ್ಲಿವೆ. ಸಂಗ್ರಾಹಕರು ಇಲ್ಲಿ ಸತಿ ಪದ್ಧತಿಯ ಬಗೆಗೆ ಉಪಯುಕ್ತ ವಿವರಗಳನ್ನು ಒದಗಿಸಿದ್ದಾರೆ. ಸಂದರ್ಭೋಚಿತವಾಗಿ ಒದಗಿಸಿರುವ ವಕ್ತೃ ಸಂದರ್ಶನ ವಿವರ ಆಯಾ ಕಥನಗೀತೆಯ ಗಟ್ಟಿತನಕ್ಕೆ ಸಾಕ್ಷಿಯಾಗಿವೆ. ಇದೇ ಅವಧಿಯಲ್ಲಿ ಉತ್ತರ ಕರ್ನಾಟಕ ಪ್ರದೇಶದಿಂದ ಹೊರಬಂದ ಜೀವನ ಜೋಕಾಲಿ ಮಾಲೆಯ ಕೃತಿಗಳು (ಕರ್ನಾಟಕ ವಿಶ್ವವಿದ್ಯಾಲಯ), ಸುಶೀಲ ಪಟ್ಟಣಶೆಟ್ಟಿಯವರ ಗುಣದಮ್ಮನ ಕಥೆ, ಟಿ.ಎಸ್.ರಾಜಪ್ಪನವರ ಬೆಳಗಾಂವಿ ಜಿಲ್ಲೆಯ ಲಾವಣಿಗಳು, ಎಲ್.ಆರ್.ಹೆಗಡೆಯವರ ತಿಮ್ಮಕ್ಕನ ಪದಗಳು, ಕೆಲವು ಲಾವಣಿಗಳು, ಪರಮೇಶ್ವರಿಯ ಪದಗಳು ಮುಂತಾದವು ಗಮನಾರ್ಹ ಸಂಕಲನಗಳು. ನಿಂಗಣಸಣ್ಣಕ್ಕಿ ಅವರು ಸಂಪಾದಿಸಿದ ಬಾಳಗೋಪಾಳನ ಲಾವಣಿಗಳು ಕಲ್ಕಿತುರಾಯಿ ಸಂಪ್ರದಾಯದ ಒಂದು ವಿಶಿಷ್ಟ ಕೃತಿ. 1981ರಲ್ಲಿ ಅವರು ಹೊರತಂದ ಸಾತು ಕ್ಯಾಮಣ್ಣನ ಲಾವಣಿಗಳು ಜನಪದ ಸಾಹಿತ್ಯ ಕ್ಷೇತ್ರಕ್ಕೆ ಸಂದ ಒಂದು ವಿಶಿಷ್ಟ ಕೊಡುಗೆಯಾಗಿದೆ. ಕರಾವಳಿ ಪ್ರದೇಶದ ಕೆಲವು ಲಾವಣಿಗಳನ್ನು ಕೈಲಿಯ ಕರೆದ ನೊರೆ ಹಾಲು ಎಂಬ ಸಂಕಲನದಲ್ಲಿ ಗುಂಡ್ಮಿ ಚಂದ್ರಶೇಖರ ಐತಾಳ ಸಂಗ್ರಹಿಸಿ ಕೊಟ್ಟಿದ್ದಾರೆ. ಇಲ್ಲಿನ ಕೆಲವು ಲಾವಣಿಗಳು ಅನನ್ಯವಾಗಿವೆ. ಕೊಡಗು ಪ್ರದೇಶದ ಲಾವಣಿಗಳನ್ನು ಕೆರೆ ಹೊನ್ನಮ್ಮ ಮತ್ತು ಇತರ ಲಾವಣಿಗಳು ಎಂಬ ಹೆಸರಿನಲ್ಲಿ ಬೆಳಕಿಗೆ ತಂದವರು ಟಿ.ಎಸ್.ರಾಜಪ್ಪ.

ಜನಪದ ಲಾವಣಿ, ಕಾವ್ಯಗಳಿಗೆ ಸಂಬಂಧಪಟ್ಟಂತೆ ದಕ್ಷಿಣ ಕರ್ನಾಟಕದಲ್ಲಿ ಸಾಕಷ್ಟು ವ್ಯಾಪಕವಾಗಿ ಕೆಲಸ ನಡೆದಿದೆ. ಮರುಳಸಿದ್ದಪ್ಪನವರ ಲಾವಣಿಗಳು, ಕಾಳೇಗೌಡ ನಾಗವಾರರ ಬಯಲು ಸೀಮೆಯ ಲಾವಣಿಗಳು, ಅಂಬಳಿಕೆ ಹಿರಿಯಣ್ಣನವರ ತೀರ್ಥಹಳ್ಳಿ ಸುತ್ತಿನ ಲಾವಣಿಗಳು (1976), ಕಾಡುಗೊಲ್ಲರ ಜನಪದ ಗೀತೆಗಳು, ಪಿ.ಕೆ.ರಾಜಶೇಖರ ಅವರ ಬೆಟ್ಟದ ಚಾಮುಂಡಿ ಮುಂತಾದ ಕೆಲವನ್ನು ಇಲ್ಲಿ ಹೆಸರಿಸಬಹುದು. ಬಿ.ಸಿದ್ಧಗಂಗಯ್ಯ ಕಂಬಾಳು ಅವರ ಚಂದುಳ್ಳ ಮಕ್ಕಳ ಒಂಬತ್ತು ಕೊಡು ಸ್ವಾಮಿ ಜನಪದ ಗೀತೆಗಳನ್ನು ಅಧ್ಯಯನ ದೃಷ್ಟಿಯಿಂದ ಸೂಕ್ತ ರೀತಿಯಲ್ಲಿ ವಿಭಾಗಿಸಿ ಅಭ್ಯಸಿಸಿದ ಸಂಗ್ರಹ. ಗ್ರಂಥ'ಕ್ಕೆ ಉಪಯುಕ್ತವಾದ ಪ್ರಸ್ತಾವನೆ ಮತ್ತು ಸಂದರ್ಶನ ಭಾಗಗಳನ್ನು ನೀಡಿ ಕೃತಿಯ ಮೌಲ್ಯ ಹೆಚ್ಚುವಂತೆ ಮಾಡಿದ್ದಾರೆ. ಮುಖ್ಯವಾಗಿ ಅವಹೇಳನಕ್ಕೆ ಗುರಿಯಾಗಿರುವ ಬಂಜೆತನವನ್ನು ಸಾಮಾಜಿಕ ದೃಷ್ಟಿಕೋನದಿಂದ ಇಲ್ಲಿ ಅಭ್ಯಸಿಸಲಾಗಿದೆ. ಎಂ.ಬಿ.ನಳಿನಿ ಅವರ ಕಾಡುಮಲ್ಲಿಗೆ ಒಂದು ಸುಂದರ ಕಥನಗೀತ ಸಂಕಲನ. ಮಲೆನಾಡಿನ ಗರ್ಭವಾದ ತೀರ್ಥಹಳ್ಳಿ ಭಾಗದ ವಿರಳ ಲಾವಣಿಗಳು ಇಲ್ಲಿವೆ. ಎನ್.ಆರ್.ನಾಯಕ ಅವರ ಹೇಳುತೇವೋ ಗುಮ್ಟೆ ಪದನಾವಾ (1983) ಮತ್ತು ಕೂಸಾಯ್ತು ನಮ್ಮ ಕೊಮರಾಗೆ ಸಂಗ್ರಹಗಳು ಅಭ್ಯಾಸಯೋಗ್ಯವಾಗಿವೆ. ಒಂದೇ ಜಿಲ್ಲೆಯ ಎಂಟು ಸಮೂಹಗಳಲ್ಲಿ ಮದುವೆಯ ವಿಧಿ ವಿಧಾನಗಳು ಹೇಗೆ ಭಿನ್ನವಾಗಿವೆ ಎಂದು ತೌಲನಿಕ ಅಧ್ಯಯನ ನಡೆಸುವುದಕ್ಕೆ ಈ ಸಂಗ್ರಹ ಸಾಕಷ್ಟು ಸಾಮಗ್ರಿ ಒದಗಿಸುತ್ತದೆ.

ಚನ್ನಣ್ಣ ವಾಲೀಕಾರ (1983) ಸಂಪಾದಿಸಿಕೊಟ್ಟಿರುವ ಗುಲಬರ್ಗಾ ಜಿಲ್ಲೆಯ ಮೊಹರಂ ಪದಗಳು ಕೃತಿ ಕನ್ನಡ ಜನಪದ ಗೀತೆಗಳಲ್ಲಿ ಒಂದು ವಿಶಿಷ್ಟ ವರ್ಗಕ್ಕೆ ಸೇರುತ್ತದೆ. ಜನಪದ ಸಾಹಿತ್ಯದಲ್ಲಿ ಹಿಂದು-ಮುಸ್ಲಿಂ ಸಾಮರಸ್ಯದ ಅರ್ಥಪೂರ್ಣ ಗೀತೆಗಳಾಗಿ ಉಳಿದುಬಂದಿರುವ ಈ ಕೃತಿ ಒಂದು ಗಮನಾರ್ಹ ಸಂಕಲನ. ಬಿ.ಎಸ್.ತಲ್ವಾಡಿ ಅವರ ಕ್ರೈಸ್ತ ಜನಪದ ಗೀತೆಗಳು ಸಮ್ಮಿಶ್ರ ಸಂಸ್ಕೃತಿಯ ಅಂಗವೆಂದೇ ಹೇಳಬೇಕು. ಕ್ರೈಸ್ತ ಜನಪದ ಗೀತೆಗಳ ರಚನೆಯಲ್ಲಿ ಒಂದು ವಿಚಾರಾರ್ಹ ವಿಶೇಷತೆ ಇದೆ. ಮೈಲಹಳ್ಳಿ ರೇವಣ್ಣ ಅವರು ಸಂಪಾದಿಸಿರುವ ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು (1984) ಸ್ತ್ರೀಯರೇ, ಅದರಲ್ಲೂ ಮುಖ್ಯವಾಗಿ ಹರಿಜನ ಮಾದಿಗ ಜನಾಂಗದವರು ಹಾಡಿರುವಂತಹವುಗಳಾಗಿವೆ.

ಇವೇ ಅಲ್ಲದೆ ಪ್ರಮುಖವಾಗಿ ಹೆಸರಿಸಬೇಕಾದ ಕೆಲವು ಸಂಕೀರ್ಣ ಸ್ವರೂಪದ ಕೃತಿಗಳನ್ನೂ ನೋಡಬಹುದು. ಎಚ್.ಎಲ್. ನಾಗೇಗೌಡ ಅವರ ಸೋಬಾನೆ ಚಿಕ್ಕಮ್ಮನ ಪದಗಳು 1970-80ರ ದಶಕದಲ್ಲಿ ಪ್ರಕಟವಾದ ಉತ್ತಮ ಸಂಕಲನಗಳಲ್ಲೊಂದು. ಇಲ್ಲಿ ಒಬ್ಬಳೇ ಅನುಭವಿ ಗಾಯಕಿಯ ಹಾಡುಗಳನ್ನೂ ಹಾಡ್ಗತೆಗಳನ್ನೂ ಕ್ರಮಬದ್ಧ ರೀತಿಯಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಡಿ.ಲಿಂಗಯ್ಯ ಅವರ ಬಯಲು ಸೀಮೆಯ

ಜನಪದ ಗೀತೆಗಳು ಕೂಡ ಒಂದು ಒಳ್ಳೆಯ ಸಂಕಲನ. ಇಲ್ಲಿ ವಿವಿಧ ಸಂಪ್ರದಾಯದ ಹಾಡುಗಳೂ ಹಾಡ್ಗತೆಗಳೂ ಸೇರಿವೆ. ಇಂಥ ಸಂಕೀರ್ಣ ಸ್ವರೂಪದ ಕೃತಿಗಳಲ್ಲಿ ಹೆಸರಿಸಬೇಕಾದ ಹೆಬ್ಬೊತ್ತಗೆ ಮತಿಘಟ್ಟ ಕೃಷ್ಣಮೂರ್ತಿಯವರ ಕನ್ನಡ ಜನಪದ ಸಾಹಿತ್ಯ ಭಂಡಾರ - ಗೀತೆಗಳು ಎಂಬ ಕೃತಿ. ಈ ಸಂಪುಟದಲ್ಲಿ ಕೃಷ್ಣಮೂರ್ತಿಗಳು ಅನೇಕ ವರ್ಷಗಳಿಂದ ತಾವು ಸಂಗ್ರಹಿಸಿದ ಗೀತೆಗಳನ್ನೂ ಹಾಡ್ಗತೆಗಳನ್ನೂ ವಿವಿಧ ಸಂಪ್ರದಾಯಕ್ಕೆ ಸಂಬಂಧಿಸಿದ ಹಾಡುಗಳನ್ನೂ ಅಳವಡಿಸಿದ್ದಾರೆ. ಜಿ.ಆರ್.ತಿಪ್ಪೇಸ್ವಾಮಿ ಮತ್ತು ಚಂದ್ರಶೇಖರ ಕಂಬಾರರು ಕ್ಷೇತ್ರಕಾರ್ಯ ನಡೆಸಿ. ನನ್ನ ಜಡೆವೊಳಗೆ ಎಂಬ ಜನಪದ ಗೀತಸಂಕಲನ ಪ್ರಕಟಿಸಿದ್ದಾರೆ (1981). ವೈ.ಸಿ.ಭಾನುಮತಿಯವರ ಪುಟ್ಟ ಮಲ್ಲಿಗೆ ಹಿಡಿ ತುಂಬ (2003) ಎಂಬ ಗೀತ ಸಂಕಲನದಲ್ಲಿ ಹಾಸನ ಜಿಲ್ಲೆಯ ಮಲೆನಾಡು ಭಾಗದ ವಿವಿಧ ಸಂಪ್ರದಾಯದ ಹಾಡುಗಳು, ಹಾಡ್ಗತೆಗಳು ಇವೆ.

ಜಮಖಂಡಿಯ ಸುತ್ತಿನ ಗೀತೆಯನ್ನು ಸಂಗ್ರಹಿಸಿ ಬಿ.ಜಿ.ಖಾಡೆ ಅವರು ಕಾಡು ಹೂಗಳು ಎಂಬ ಹೆಸರಿನಲ್ಲಿ ಪ್ರಕಟಿಸಿ ಆ ಭಾಗದ ಸಾಹಿತ್ಯ ಮೊದಲ ಬಾರಿಗೆ ಜಾನಪದ ಸಂಶೋಧಕರಿಗೆ ಲಭ್ಯವಾಗುವಂತೆ ಮಾಡಿದ್ದಾರೆ. ಜ್ಯೋತಿ ಹೊಸೂರ ಅವರು ಬೆರಸಿ ಇಟ್ಟೀನ ಬೆಲ್ಲ ನೆನಗೆಡಲೆ ಎಂಬ ಸಂಕಲನದ ಮೂಲಕ ಬೆಳಗಾಂವಿ ಭಾಗದ ಜನಪದ ಗೀತೆಗಳನ್ನು ಕಲೆ ಹಾಕಿ ನೀಡಿದ್ದಾರೆ. ಇಲ್ಲಿಯ ತ್ರಿಪದಿಗಳು ಉತ್ತಮ ಕಾವ್ಯಸತ್ವದಿಂದ ಕೂಡಿ ನಮ್ಮ ಆಸಕ್ತಿಯನ್ನು ಸೆಳೆದುಕೊಳ್ಳುತ್ತವೆ. ಉತ್ತರ ಕನ್ನಡ ಜಿಲ್ಲೆಯ ಅನೇಕ ಬುಡಕಟ್ಟು ಸಮೂಹಗಳಲ್ಲಿ ಜನಪದ ಸಾಹಿತ್ಯ ದಟ್ಟವಾಗಿ ಹುದುಗಿದೆ ಎಂಬುದನ್ನು ಆ ಭಾಗದಿಂದ ಪ್ರಕಟಗೊಳ್ಳುತ್ತಿರುವ ಸಂಕಲನಗಳಿಂದ ಗುರುತಿಸಬಹುದಾಗಿದೆ. ಎಲ್.ಆರ್.ಹೆಗಡೆಯವರು ಸಂಗ್ರಹಿಸಿದ ಗೀತೆಗಳಲ್ಲಿ ಪ್ರಮುಖವಾದವು ಹಾಡುಂಟೆ ನನ್ನ ಮಡಿಲಲ್ಲಿ (1971), ಸುವ್ವಿ ಸುವ್ವಿ ಸುವ್ವಾಲೆ (1971), ಪರಮೇಶ್ವರಿಯ ಪದಗಳು (1972). ಎನ್.ಆರ್.ನಾಯಕ ಅವರ ಸುಗ್ಗಿಯ ಪದಗಳು (1986) ಸಂಗ್ರಹದ ಪ್ರಸ್ತಾವನೆಯಲ್ಲಿ ಸುಗ್ಗಿ ಹಬ್ಬದ ಪೂರ್ಣ ವಿವರಗಳನ್ನು ನೀಡಲಾಗಿದೆ. ಟಿ.ಎಸ್.ರಾಜಪ್ಪನವರ ಬಳ್ಳಾರಿ ಜಿಲ್ಲೆಯ ಜನಪದ ಗೀತೆಗಳು ಕೃತಿ, ತ್ರಿಪದಿಗಳು, ಗೀತೆಗಳು, ಶಿಶುಪ್ರಾಸಗಳು, ಕಥನಗೀತೆಗಳನ್ನೊಳಗೊಂಡ ಒಂದು ಸುಂದರ ಸಂಕಲನ. ಟಿ.ಕೇಶವಭಟ್ಟರ ಹವ್ಯಕರ ಶೋಬಾನೆಗಳು ಹವ್ಯಕರು ಮೈಗೂಡಿಸಿಕೊಂಡಿರುವ ಸದ್ಭಾವನೆ, ಸದಾಚಾರಗಳನ್ನು ಬಿಂಬಿಸುತ್ತವೆ. ಎನ್.ಆರ್.ನಾಯಕ ಅವರ ತುಳಸಿ ತಿಮ್ಮಪ್ಪರಾಯ (1987) ಸಂಗ್ರಹದಲ್ಲಿ ತುಳಸಿಯ ಹಾಡನ್ನು ಕಲೆಹಾಕಲಾಗಿದೆ. ಅದೇವರ್ಷ ಹೊರತಂದಿರುವ ಕೃಷ್ಣಮೂರ್ತಿ ಹನೂರು ಅವರ ಜನಪದ ವೀರಗೀತೆಗಳು, ಮ್ಯಾಸಬೇಡರು, ಕುಂಚಿಟಿಗರು, ಹರಿಜನರು ಹಾಡಿರುವ ಕಾವ್ಯಗಳು ಇಲ್ಲಿ ಸೇರಿರುವುದರಿಂದ ಈ ಸಂಕಲನದ ವೈವಿಧ್ಯ ಹೆಚ್ಚಿದೆ. ಗಾಯತ್ರಿ ನಾವಡ ಅವರ ಚಿತ್ತಾರ ಬರೆದ ಬದುಕು (1989) ಸಮಾಜಶಾಸ್ತ್ರೀಯ ದೃಷ್ಟಿಕೋನವುಳ್ಳದ್ದಾಗಿದೆ. ಸಂಪ್ರದಾಯ ಗೀತೆಗಳ ಹಿನ್ನೆಲೆಯಲ್ಲಿ ಹೆಣ್ಣಿನ ಒಂದು ಜೀವನಾವರ್ತನವನ್ನು ಗಮನದಲ್ಲಿರಿಸಿಕೊಂಡು ಸಂಕಲನಿಸಿದ ಕೃತಿ. ಜಯಲಕ್ಷ್ಮೀ ಸೀತಾಪುರ ಅವರ ನಮ್ಮ ಸುತ್ತಿನ ಜನಪದ ಕಥನ ಗೀತೆಗಳು (1992) ಹೆಣ್ಣಿನ ನೋವು ನಲಿವುಗಳನ್ನು ಚಿತ್ರಿಸಿದೆ.

ಮೇಲೆ ಹೆಸರಿಸಲಾದ ಸಂಕಲನಗಳ ಜೊತೆಗೆ ಇನ್ನೂ ಅನೇಕ ಗೀತ ಸಂಕಲನಗಳು ಹೊರಬಂದಿವೆ. ಗುಂಡ್ಮಿ ಚಂದ್ರಶೇಖರ ಐತಾಳರ ಮದ್ದುಂಟೆ ಜನನ ಮರಣಕ್ಕೆ ಸಾಕಷ್ಟು ವೈವಿಧ್ಯಮಯ ಸಾಹಿತ್ಯವನ್ನು ಒದಗಿಸುತ್ತದೆ. ಕೆ.ಶಿವರಾಮ ಐತಾಳರ ದಕ್ಷಿಣ ಕನ್ನಡ ಜನಪದ ಸಾಹಿತ್ಯ ಹಾಗೂ ಟಿ. ಕೇಶವಭಟ್ಟರ ಹಾಡಿನ ಚೂಡಾಮಣಿ ಮತ್ತೆರಡು ಗಮನಾರ್ಹ ಸಂಕಲನಗಳು. ಐತಾಳರು ತಮ್ಮ ವಿಸ್ತಾರವಾದ ಪ್ರಸ್ತಾವನೆಯಲ್ಲಿ ಜನಪದ ಗೀತೆಯ ಸ್ವರೂಪ, ಲಕ್ಷಣ ಸಂಪಾದನೆ ಮುಂತಾದ ವಿಷಯಗಳನ್ನು ಕುರಿತು ಪ್ರಸ್ತಾಪಿಸಿದ್ದಾರೆ. ಹಿಂದಿನ ಸಂಕಲನಗಳ ಸಾಲಿನಲ್ಲಿ ಈ ಕೃತಿಗಳನ್ನು ಇಟ್ಟು ನೋಡಿದಾಗ ಕನ್ನಡ ಜನಪದ ಗೀತೆಗಳ ವೈವಿಧ್ಯ ನಮಗೆ ಆಶ್ಚರ್ಯವನ್ನು ತರುತ್ತದೆ. ಗೀತೆಗಳು, ಗೀತ ಸಂಪ್ರದಾಯಗಳು, ಲಾವಣಿಗಳು, ಲಾವಣಿ ಸಂಪ್ರದಾಯಗಳು ಈ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ತೃಪ್ತಿಕರವಾದ ಕೆಲಸ ಕರ್ನಾಟಕದಲ್ಲಿ ಆಗಿದ್ದರೂ ಇನ್ನೂ ಅಪಾರ ಗೀತ ಸಾಹಿತ್ಯ ಲಭ್ಯವಾಗುವುದರಲ್ಲಿ ಸಂದೇಹವಿಲ್ಲ. ಸಾಮುದಾಯಿಕವಾಗಿ, ಪ್ರಾದೇಶಿಕವಾಗಿ ಗೀತ ಸಾಹಿತ್ಯದ ಕ್ರಮಬದ್ಧ ಸಂಗ್ರಹ ನಡೆದು ಶಾಸ್ತ್ರೀಯ ಅಧ್ಯಯನ ಅಗತ್ಯವಾಗಿ ನಡೆಯಬೇಕಾಗಿದೆ.

ಸಂಗ್ರಹ, ಸಂಪಾದನೆ, ಪ್ರಕಟಣೆಯ ದೃಷ್ಟಿಯಿಂದ ಪದ್ಯಸಾಹಿತ್ಯದ ಅನಂತರ ಗದ್ಯ ಸಾಹಿತ್ಯವನ್ನು ಲಕ್ಷಿಸಬೇಕಾಗುತ್ತದೆ. ಕನ್ನಡ ಜನಪದ ಕಥೆಗಳ ಅಧ್ಯಯನ ಆರಂಭವಾದುದೇ ಎಪ್ಪತ್ತರ ದಶಕದಲ್ಲಿ. ಈ ನಿಟ್ಟಿನ ಸಂಗ್ರಹಕಾರ್ಯ ತಡವಾಗಿ ಆರಂಭವಾದರೂ ಸಾಕಷ್ಟು ತೀವ್ರಗತಿಯ ಕೆಲಸ ನಡೆದು ದೊಡ್ಡ ಸಂಖ್ಯೆಯ ಕಥೆಗಳು ಬೆಳಕು ಕಂಡಿವೆ. ಸ್ಥಳೀಯ ಪರಂಪರೆಯ ಜೊತೆಗೆ ವಿಶ್ವಮಾದರಿಗಳೂ ಕರ್ನಾಟಕದಲ್ಲಿ ದೊರೆತಿವೆ. ಸರಳ ಕಥೆಗಳು, ಸಂಕೀರ್ಣ ಕಥೆಗಳು, ವಿವರಣಾತ್ಮಕ ಕಥೆಗಳು, ಸಂಚಿತ ಕಥೆಗಳು, ಸೂತ್ರ ಕಥೆಗಳು ಹೀಗೆ ಎಲ್ಲ ಗುಂಪಿಗೂ ಕನ್ನಡ ಜನಪದ ಕಥಾ ಪ್ರಪಂಚ ಉತ್ತಮ ಮಾದರಿಗಳನ್ನೊದಗಿಸಿದೆ. ಜೀಶಂಪ ಅವರ ಕನ್ನಡ ಜನಪದ ಕಥೆಗಳು ಮತ್ತು ಆಯ್ದ ಜನಪದ ಕಥೆಗಳು ದಕ್ಷಿಣ ಕರ್ನಾಟಕದ ವಿವಿಧ ಭಾಗಗಳ ಕಥೆಗಳನ್ನೊಳಗೊಂಡ ಸಂಕಲನಗಳು. ರಾಗೌ ಅವರ ಕರ್ನಾಟಕ ಜಾನಪದ ಕಥೆಗಳು 63 ಕಥೆಗಳನ್ನೊಳಗೊಂಡ ಮತ್ತೊಂದು ಗಮನಾರ್ಹ ಸಂಕಲನ. ಮಂಡ್ಯ, ಮೈಸೂರು, ಬೆಂಗಳೂರು, ಹಾಸನ ಮೊದಲಾದ ಜಿಲ್ಲೆಗಳ ಕಥೆಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಎಚ್.ಜೆ.ಲಕ್ಕಪ್ಪಗೌಡರ ಜನಪದ ಕಥಾವಳಿ ಮತ್ತೊಂದು ಉಲ್ಲೇಖನೀಯ ಸಂಕಲನ.

ಜಾನಪದ ಕಥಾಮೃತ - 1 ಮತ್ತು ಜಾನಪದ ಕಥಾಮೃತ - 2 ಎಂಬ ಎರಡು ಒಳ್ಳೆಯ ಸಂಕಲನಗಳ ಮೂಲಕ ಜನಪದ ಕಥೆಗಳ ವ್ಯಾಪಕ ಅಧ್ಯಯನದ ಕಡೆ ಮೊದಲು ಗಮನ ಸೆಳೆದವರು ಧವಳಶ್ರೀಯವರು. ಜನಪದ ಕಥೆಗಳ ಮೂಲದ ಸೊಗಡನ್ನು ಹಿಡಿದಿಡುವಲ್ಲಿ ಮೂಲದ ಭಾಷೆ ಮತ್ತು ನುಡಿಗಟ್ಟುಗಳನ್ನು ಉಳಿಸಿಕೊಳ್ಳುವಲ್ಲಿ ಅವರು ಯಶಸ್ವಿಯಾಗಿರುವುದು ಗಮನಾರ್ಹ.

ಕನ್ನಡ ಜನಪದ ಕಥೆಗಳು, ಆಯ್ದ ಜನಪದ ಕಥೆಗಳು, ಸಂಕೀರ್ಣ ಜನಪದ ಕಥೆಗಳು, ಬೆಳಗಾಂ ಜಿಲ್ಲೆಯ ಜನಪದ ಕಥೆಗಳು, ಧಾರವಾಡ ಜಿಲ್ಲೆಯ ಜನಪದ ಕಥೆಗಳು, ನಮ್ಮ ಜನಪದ ಕಥೆಗಳು, ಶಿವಮೊಗ್ಗ ಜಿಲ್ಲೆಯ ಜನಪದ ಕಥೆಗಳು ಮುಂತಾದ ಸಂಕಲನಗಳನ್ನು ಪ್ರಕಟಿಸಿ ಆ ಮೂಲಕ ಕನ್ನಡ ಜನಪದ ಕಥೆಗಳ ಅಧ್ಯಯನಕ್ಕೆ ಒಳ್ಳೆಯ ಪ್ರವೇಶವನ್ನು ದೊರಕಿಸಿದ ಕೀರ್ತಿ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯದು.

ನಮ್ಮ ಜನಪದ ಕಥೆಗಳು, ಉತ್ತರ ಕನ್ನಡ ಜನಪದ ಕಥೆಗಳು ಜನಪದ ಮತ್ತು ಗಿರಿಜನರ ಕಥೆಗಳು, ಸಿದ್ದಿಯರ ಕಥೆಗಳು ಮುಂತಾದ ಸಂಕಲನಗಳ ಮೂಲಕ ಎಲ್.ಆರ್.ಹೆಗಡೆಯವರು ಜಾನಪದ ಕ್ಷೇತ್ರದಲ್ಲಿ ಅಗ್ರಸ್ಥಾನವನ್ನು ಗಳಿಸಿಕೊಂಡಿದ್ದಾರೆ. ಜನಪದ ಮತ್ತು ಗಿರಿಜನರ ಕಥೆಗಳು ಹೆಗಡೆಯವರ ಬಹುದೊಡ್ಡ ಸಂಗ್ರಹ. ಸಿದ್ದಿಗಳ ಕಥೆಗಳು ಸಂಗ್ರಹದಲ್ಲಿ 35 ಕಥೆಗಳಿವೆ. ಎಪ್ಪತ್ತು ಪುಟಗಳ ಪೀಠಿಕೆ ಇದೆ. ಹೆಗಡೆಯವರ ಕಥೆಗಳು ಆಡು ಮಾತಿನಲ್ಲಿದ್ದು ಭಾಷಾಶಾಸ್ತ್ರ ಅಧ್ಯಯನಕ್ಕೆ ಸಹಕಾರಿಯಾಗಿವೆ. ಈ ಭಾಗದ ಉತ್ತಮ ಕಥೆಗಳ ಶಾಸ್ತ್ರೀಯ ಸಂಪಾದನೆಯ ಮೂಲಕ ಅವರು ಕನ್ನಡ ಜನಪದ ಕಥೆಗಳ ಕ್ಷೇತ್ರಕ್ಕೆ ಉತ್ತಮ ಕಾಣಿಕೆಯನ್ನು ನೀಡಿದ್ದಾರೆ.

ಬಳದರೆ ಬೋರೇಗೌಡ ಅವರ ಗ್ರಾಮಾಂತರ ಕಥೆಗಳು ಸಂಕಲನ ಕಥೆಗಳ ಮೂಲಭಾಷೆ ಹಾಗೂ ಸಹಜ ನಿರೂಪಣೆಗಳಿಂದಾಗಿ ವೈಶಿಷ್ಟ್ಯಪೂರ್ಣ ಕೃತಿಯೆನಿಸಿದೆ. ಬೋರೇಗೌಡರು ಮೊದಲ ಬಾರಿಗೆ ಜನಪದ ಕಥೆಗಳನ್ನು ಅದರ ಮೂಲ ನಿರೂಪಕನ ಭಾಷೆಯಲ್ಲಿಯೇ ಹಿಡಿದಿಡುವ ಪ್ರಯತ್ನ ಮಾಡಿರುವುದು ಗಮನಾರ್ಹ. ಪಡಿನೆರಳು ಮತ್ತು ಮಣ್ಣಿನ ಮಿಡಿತ ಸಂಕಲನಗಳ ಮೂಲಕ ಬಯಲುಸೀಮೆಯ ಕಥೆಗಳನ್ನು ಒದಗಿಸಿದವರು ಡಿ. ಲಿಂಗಯ್ಯ ಅವರು. ಮಂಡ್ಯ ಜಿಲ್ಲೆಯ ಕಥೆಗಳನ್ನೇ ವಿಶೇಷವಾಗಿ ಸಂಗ್ರಹಿಸಿದವರು ಜಿ.ವಿ. ದಾಸೇಗೌಡ ಅವರು. ಕನ್ನಡ ಜನಪದ ಕಥೆಗಳ ಸಾಲಿನಲ್ಲಿ ವಿವರಣಾತ್ಮಕ ಕಥೆಗಳ ಅಧ್ಯಯನಕ್ಕೆ ಒಳ್ಳೆಯ ಆರಂಭವನ್ನು ಒದಗಿಸಿದವರು ಅವರು. ಅವರ ಜನಪದ ವಿವರಣಾತ್ಮಕ ಕಥೆಗಳು ಈ ನಿಟ್ಟಿನಲ್ಲಿ ಮಾಡಿದ ಮೊದಲ ಪ್ರಯತ್ನ ಎನಿಸಿದೆ.

70ರ ದಶಕದಲ್ಲಿ ಜನಪದ ಕಥೆಗಳನ್ನು ದೊಡ್ಡ ಪ್ರಮಾಣದಲ್ಲಿ ಸಂಗ್ರಹಿಸಿ ಸಂಕಲನಗಳನ್ನು ಹೊರತಂದವರ ಪೈಕಿ ಸಿ.ವೀರಣ್ಣ ಮತ್ತು ಕೆ.ವೈ. ಶಿವಕುಮಾರ್ ಮುಖ್ಯರು. ಶಿವಕುಮಾರ್ ಅವರು ಎಪ್ಪತ್ತೊಂದು ಜನಪದ ಕಥೆಗಳು ಎಂಬ ಸಂಕಲನವನ್ನು ಹೊರತಂದಿದ್ದಾರೆ (1976). ಒಂದು ಪ್ರದೇಶದ ಕಥೆಗಳನ್ನೆಲ್ಲ ಸಂಗ್ರಹಿಸಿ ಸಂಶೋಧಕರಿಗೆ ದಾರಿ ಮಾಡಿಕೊಡುವಂಥ ಇಂಥ ಪ್ರಯತ್ನಗಳು ವಿರಳ. ಒಬ್ಬನೇ ಕಥೆಗಾರನ ಕಥೆಗಳನ್ನು ಅವುಗಳ ನಿರೂಪಣಾಕ್ರಮ ವೈವಿಧ್ಯಕ್ಕಾಗಿ ಹಾಗೂ ವಸ್ತುವಿಗಾಗಿ ಸಂಗ್ರಹಿಸಿ ಒಬ್ಬನೇ ಹೇಳಿದ ಇಪ್ಪತ್ತೆರಡು ಜನಪದ ಕಥೆಗಳು ಎಂಬ ಹೆಸರಿನಲ್ಲಿ ಹೊರತಂದವರು ಸಿ.ವೀರಣ್ಣನವರು. ಈ ರೀತಿ ಒಬ್ಬನೇ ಕಥೆಗಾರನ ಕಥೆಗಳನ್ನೆಲ್ಲ ಸಂಗ್ರಹಿಸಿ ಅಧ್ಯಯನ ಮಾಡುವ ದೃಷ್ಟಿ ಗಮನಾರ್ಹವಾದದು.

ಜನಪದ ಕಥೆಗಳ ವಿಶಿಷ್ಟ ಸಂಗ್ರಹಗಳೂ ಪ್ರಕಟವಾಗಿವೆ. ಶಿವರಾಮ ಕಾರಂತರ ಅನುವಾದ ಕಥೆಗಳ ಕೊಪ್ಪರಿಗೆ [ಮೂಲ: ಜೆ.ಸಿ.ಜೈನ್ (1969)], ದೇಜಗೌ ಅವರ ಅನುವಾದ ಭಾರತದ ಜನಪದ ಕಥೆಗಳು [ಮೂಲ: ಬೇಲಾ ತಿಸ್ಲೆರೋವ (1971)], ಹಿ.ಶಿ.ರಾಮ ಚಂದ್ರೇಗೌಡರ ಹಾಸನ ಜಿಲ್ಲೆಯ ಜನಪದ ಕಥೆಗಳು (1971), ಕ್ಯಾತನಹಳ್ಳಿ ರಾಮಣ್ಣ ಅವರ ಗೊಂದಲಿಗರ ಕಥೆಗಳು (1972), ಸೇವನಮಿರಾಜ ಮಲ್ಲರ ಭೂತಾರಾಧನೆಯ ಕಥೆಗಳು (1973), ಹ.ಕ.ರಾಜೇಗೌಡರ ಜಗತ್ತಿನ ಜನಪದ ಕಥೆಗಳು (1980) - ಇವು ಉಲ್ಲೇಖನೀಯವಾಗಿವೆ.

ಜೇನಹಳ್ಳಿ ಸಿದ್ದಲಿಂಗಪ್ಪ ಅವರ ಕಥೆ ಕೇಳೇ ಗುಬಲಾಡಿ (1981) ಶಿವಮೊಗ್ಗ ಜಿಲ್ಲೆಯ ಜೇನಹಳ್ಳಿ ಹಾಗೂ ಹೊನ್ನಾಳಿ ತಾಲ್ಲೂಕಿನ ಪರಿಸರದ ಹಳ್ಳಿಗಳಿಂದ ಸಂಗ್ರಹಿಸಿದ ಹದಿನೇಳು ಕಥೆಗಳ ಸಂಕಲನ. ಪ್ರಾದೇಶಿಕ ಅನನ್ಯತೆಯನ್ನು ಅರಿಯುವುದಕ್ಕಾಗಿ ಒಂದೊಂದೂ ಪ್ರದೇಶದ ಕಥೆಗಳ ಸಂಗ್ರಹಕಾರ್ಯ ಕ್ರಮಬದ್ಧವಾಗಿ ನಡೆಯಬೇಕಾಗಿದೆ. ಎಂ.ಎ.ಜಯಚಂದ್ರರ 'ಸಂಸಾರಿ ಹೆಚ್ಚೋ ಸನ್ಯಾಸಿ ಹೆಚ್ಚೋ' ಇಪ್ಪತ್ತೆಂಟು ನಿರೂಪಕರಿಂದ ಸಂಗ್ರಹಿಸಿರುವ ನಲವತ್ತೈದು ಕಥೆಗಳ ಸಂಕಲನ. ನಿರೂಪಕರೆಲ್ಲ ಬೇರೆ ಬೇರೆ ಪ್ರದೇಶದವರಾದುದರಿಂದ ವೈವಿಧ್ಯಪೂರ್ಣ ಭಾಷಾಬಳಕೆಯನ್ನು ನೋಡಬಹುದಾಗಿದೆ. ಸಂಗ್ರಾಹಕರು ಇಲ್ಲಿ ಜನಪದ ಕಥೆಗಳ ವಸ್ತು ಶಿಷ್ಟಕಾವ್ಯರಚನೆಗೆ ಹೇಗೆ ಸ್ಫೂರ್ತಿ ಒದಗಿಸುತ್ತದೆ ಎಂಬುದರ ಜೊತೆಗೆ ಪಂಚತಂತ್ರ, ವಡ್ಡಾರಾಧನೆ ಮುಂತಾದ ಗ್ರಂಥಗಳ ಕಥೆಗಳೊಡನೆ ಈ ಸಂಕಲನದ ಕಥೆಗಳನ್ನು ಹೋಲಿಸಿರುವುದು ಗಮನಾರ್ಹ. ಕುರುವ ಬಸವರಾಜ್ ಅವರ ಗುಲಗಂಜಿ ಮಾದೇವಿ ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಆಸುಪಾಸಿನಲ್ಲಿ ಸಂಗ್ರಹಿಸಿದ ಹದಿನಾಲ್ಕು ಜನಪದ ಕಥೆಗಳ ಸಂಕಲನ. ಈಗಾಗಲೇ ಪ್ರಕಟಗೊಂಡಿರುವ ಕಥೆಗಳ ಭಿನ್ನರೂಪಗಳೇ ಅಲ್ಲದೆ ಒಂದೆರಡು ಹೊಸ ಮಾದರಿಗಳೂ ಇಲ್ಲಿವೆ. ಇಲ್ಲಿಯ ಅತಿಮಾನುಷ ಮತ್ತು ಕಿನ್ನರ ಕಥೆಗಳು ವಿವಿಧ ಆಶಯಗಳ ಸೇರ್ಪಡೆ ಯಿಂದ ಅತಿ ದೀರ್ಘವಾಗಿ ಬೆಳೆದಿರುವುದು ಗಮನಿಸತಕ್ಕ ಅಂಶ. ಒಟ್ಟಾರೆ ಒಂದು ಪ್ರದೇಶದಲ್ಲಿ ಪ್ರಚಲಿತವಿರುವ ಕಥನ ಮಾದರಿಗಳನ್ನು ತಿಳಿಯುವುದಕ್ಕೆ ಈ ಕೃತಿ ಉಪಯುಕ್ತವಾಗಿದೆ. ಶಾಂತಿನಾಯಕ ಅವರ ಉತ್ತರ ಕನ್ನಡದ ಹವ್ಯಕರ ಜನಪದ ಕಥೆಗಳು ಸಂಗ್ರಹದಲ್ಲಿ ಅರವತ್ತೂರು ಕಥೆಗಳಿವೆ.

ಸುಧಾಕರ ಅವರ ಶಿವಗಂಗೆ ಸುತ್ತಿನ ಜನಪದ ಕಥೆಗಳು ಶಿವಗಂಗೆ ಸುತ್ತಿನ ನೆಲಮಂಗಲ ಮತ್ತು ಮಾಗಡಿ ತಾಲ್ಲೂಕಿಗೆ ಸೇರಿದ ಹಳ್ಳಿಗಳಲ್ಲಿ ಸಂಗ್ರಹಿಸಿದ ಇಪ್ಪತ್ತೇಳು ಕಥೆಗಳ ಸಂಕಲನ. ಕಥಾವಸ್ತು, ಆಶಯ ಇತ್ಯಾದಿಗಳಿಗೆ ಅನುಗುಣವಾಗಿ ಈ ಕಥೆಗಳನ್ನು ಐದು ವಿಭಾಗಗಳಾಗಿ ವರ್ಗೀಕರಿಸಲಾಗಿದೆ. ಬಸವರಾಜ ನೆಲ್ಲೀಸರ ಅವರ ಹಕಮಾರಿ ಹೆಣ್ಣು ಮತ್ತು ಇತರ ಜನಪದ ಕಥೆಗಳು ಚಿತ್ರದುರ್ಗ ಮತ್ತು ಶಿವಮೊಗ್ಗ ಜಿಲ್ಲೆಯಲ್ಲಿ ಸಂಗ್ರಹಿಸಿದ ಮೂವತ್ತೆರಡು ಕಥೆಗಳನ್ನು ಒಳಗೊಂಡಿದೆ. ಇಲ್ಲಿಯ ಕಥೆಗಳಲ್ಲಿ ವಸ್ತು ಮತ್ತು ಭಾಷೆ ಎರಡನ್ನೂ ಗಮನದಲ್ಲಿಟ್ಟುಕೊಂಡು ಸಂಗ್ರಹಿಸುವ ಜಾಣ್ಮೆ ವ್ಯಕ್ತಗೊಂಡಿದೆ. ಜೊತೆಗೆ ಇದು ಪ್ರಾದೇಶಿಕ ಭಾಷೆಯ ವೈಶಿಷ್ಟ್ಯ, ಅಲ್ಲಿಯ ಜನರ ಸಾಂಸ್ಕೃತಿಕ ಸ್ತರಗಳನ್ನು ಅರ್ಥ ಮಾಡಿಕೊಳ್ಳಲು ಸಹಾಯವಾಗುತ್ತದೆ. 1982ರಲ್ಲಿ ಪ್ರಕಟವಾದ ಸಂಕಲನಗಳ ಪೈಕಿ ಗಾತ್ರ ಮತ್ತು ಗುಣದ ದೃಷ್ಟಿಯಿಂದ ನಮ್ಮ ಗಮನ ಸೆಳೆಯುವ ಮತ್ತೊಂದು ಸಂಗ್ರಹ ಕಾಶಿಪುಟ್ಟ ಸೋಮಾರಾಧ್ಯ ಅವರ ತಳಗವಾದಿ ಮಲ್ಲವ್ವ ಹೇಳಿದ ಪರಸಂಗಗಳು. ಇದರಲ್ಲಿ ಇಪ್ಪತ್ತೈದು ವಿಶಿಷ್ಟ ಕಥೆಗಳಿವೆ. ಆಡುಭಾಷೆಯನ್ನೇ ಯಥಾವತ್ತಾಗಿ ಉಳಿಸಿಕೊಂಡಿರುವುದು ಇಲ್ಲಿಯ ವಿಶೇಷ. ಎಲ್.ಆರ್.ಹೆಗಡೆ ಅವರ ಮಲೆನಾಡ ಸೆರಗಿನ ಕಥೆಗಳು ಹದಿನೈದು ಕಥೆಗಳ ಸಂಕಲನ. ಇದರಲ್ಲಿ ಹತ್ತು ಕಥೆಗಳು ವೃತ್ತಿಗಾಯಕರವು. ಸಂಗ್ರಾಹಕರು ಈ ಕಥೆಗಳನ್ನು ಮೇಳ ರೂಪದಲ್ಲಿ ಗುರುತಿಸದೆ ಗದ್ಯದಲ್ಲಿ ಹೇಳಿಸಿಕೊಂಡು ದಾಖಲೀಕರಣ ಮಾಡಿದ್ದರಿಂದ ಈ ಕಥೆಗಳ ಎಷ್ಟೋ ಅಂಶಗಳು ನಷ್ಟವಾಗಿವೆ. ಇದೇ ರೀತಿ ವೃತ್ತಿಗಾಯಕ ಮೂಲದಿಂದ ಬಂದ ಜಿ. ವಿಶ್ವೇಶ್ವರಪ್ಪನವರ ಚಿತ್ರದುರ್ಗ ಜಿಲ್ಲೆಯ ಜನಪದ ಕಥೆಗಳು ದಾವಣಗೆರೆ ಸುತ್ತಿನ ಸಂಕೀರ್ಣ ಕಥೆಗಳ ಒಂದು ಸಂಕಲನ. ಇಲ್ಲಿನ ಒಂದೊಂದೂ ಕಥೆಯೂ ತನ್ನದೇ ಆದ ವೈಶಿಷ್ಟ್ಯದಿಂದ ಪ್ರಾದೇಶಿಕ ಗುಣಗಳಿಂದ ಚಿತ್ರದುರ್ಗ ಜಿಲ್ಲೆಯ ಭಾಷಾ ವೈಖರಿಯಿಂದ, ನಿರೂಪಣಾ ಕೌಶಲದಿಂದ ಗಮನ ಸೆಳೆಯುತ್ತವೆ. ಮೈಲಹಳ್ಳಿ ರೇವಣ್ಣ ಅವರ ಅಡವಿ ಗುಮಾರ ಮತ್ತು ಇತರ ಜನಪದ ಕಥೆಗಳು (1985) ಪ್ರಾದೇಶಿಕ ವೈಶಿಷ್ಟ್ಯ ಉಳಿಸಿಕೊಂಡಿರುವ ಜನಾಂಗೀಕ ಸಂಕಲನ. ಜನಪದ ಕಥಾಕ್ಷೇತ್ರಕ್ಕೆ ಇದೊಂದು ಮೌಲಿಕ ಕೊಡುಗೆ. ಮಲ್ಲಿಕಾರ್ಜುನ ಅವರ ಕಲಮರಳ್ಳಿಯ ಕಥೆಗಳು ಭೌಗೋಳಿಕ ಅಧ್ಯಯನಕ್ಕೆ ಪೂರಕವಾಗುವ ಸಾಮಗ್ರಿಯನ್ನೊದಗಿಸುತ್ತದೆ. ವಿನೂತನ ರೀತಿಯ ಈ ಸಂಕಲನ ನಿರೂಪಕರೊಡನೆ ಉತ್ತಮ ಸಂಬಂಧ ಬೆಳೆಸಿದೆ. ಈ ರೀತಿಯ ಕೆಲಸ ಕನ್ನಡ ಜನಪದ ಕಥೆಗಳ ಸಂಗ್ರಹದಲ್ಲಿ ಇದೇ ಮೊದಲು. ವೈ.ಸಿ.ಭಾನುಮತಿ ಅವರು ಪ್ರಕಟಿಸಿರುವ ಇಬ್ಬೇಡಿನ ಜನಪದ ಕಥೆಗಳು (1989) ಸಂಗ್ರಹದ ಮಾಹಿತ್ರ(ವಕ್ತೃ) ವಿವರ, ಕತೆಗಳ ಭೌಗೋಳಿಕತೆ, ಸಾಮಾಜಿಕ ಅಧ್ಯಯನಕ್ಕೆ ಉತ್ತಮ ಮಾದರಿ. ಎಂ.ಜಿ.ಈಶ್ವರಪ್ಪ ಅವರ ಬಂಗಾರ ಕೂದಲ ಜೈರಾಣಿ ಉಲ್ಲೇಖನೀಯ ಸಂಕಲನ.

ಕನ್ನಡ ಜನಪದ ಕಥೆಗಳನ್ನೊಳಗೊಂಡ ಸಂಕಲನಗಳ ಜೊತೆಗೆ ಅನ್ಯಭಾಷೆಯ ಕಥೆಗಳನ್ನೂ ಕನ್ನಡಕ್ಕೆ ಅನುವಾದ ಮಾಡಿಕೊಡುವ ಪ್ರಯತ್ನ ಮೊದಲಿನಿಂದಲೂ ನಡೆದಿದೆ. ಬಹುಮಟ್ಟಿಗೆ ಜನಪ್ರಿಯ ಆವೃತ್ತಿಗಳೇ ಈ ನಿಟ್ಟಿನಲ್ಲಿ ಕಂಡುಬರುತ್ತವೆ. ಜಗತ್ತಿನ ಬೇರೆ ಬೇರೆ ಸಂಸ್ಕೃತಿಗಳಿಂದ, ಭಾಷಾ ವರ್ಗಗಳಿಂದ ಐವತ್ತೂರು ಕಥೆಗಳನ್ನು ಆಯ್ಕೆ ಮಾಡಿಕೊಂಡು ಜಗತ್ತಿನ ಜನಪದ ಕಥೆಗಳು ಎಂಬ ಹೆಸರಿನಲ್ಲಿ ಕನ್ನಡಕ್ಕೆ ದೊರಕಿಸಿಕೊಟ್ಟವರು ಹ.ಕ.ರಾಜೇಗೌಡರು. ಗೌರಮ್ಮ ಕೆ.ಬಸವಯ್ಯನವರ ದೇಶವಿದೇಶದ ಜನಪದ ಕಥೆಗಳು ಸಂಕಲನ ಕೂಡ ಈ ದೃಷ್ಟಿಯಿಂದ ಗಮನಾರ್ಹವಾದ ಪ್ರಯತ್ನವೇ ಆಗಿದೆ. ಭಾರತದ ವಿವಿಧ ಪ್ರದೇಶಗಳ ಜನಪದ ಕಥೆಗಳನ್ನು ಜಿ.ಎಸ್.ಭಟ್ಟ ಭಾಷಾಂತರಿಸಿದ್ದಾರೆ.

ಜಾನಪದ ಭಾಷಿಕ ಬಗೆಗಳಲ್ಲಿ ಗಾದೆ, ಒಗಟು, ನುಡಿಗಟ್ಟು ಮುಂತಾದ ಕೆಲವು ಪ್ರಕಾರಗಳಲ್ಲಿ ಬಂದಿರುವ ಸಂಗ್ರಹಗಳೂ ಗಮನಾರ್ಹವಾಗಿವೆ. ನಮ್ಮ ಆಡುಭಾಷೆಯ ಸತ್ವ ವೈಖರಿಗಳನ್ನು ಅರಿಯುವ ದೃಷ್ಟಿಯಿಂದ ಒಗಟು, ಗಾದೆಗಳ ಸಂಕಲನಗಳು ಪರಿಶೀಲನಾರ್ಹವಾಗಿವೆ. ಕಳೆದ ಶತಮಾನದ ಮಧ್ಯಭಾಗದಿಂದಲೂ ಸಂಗ್ರಾಹಕರ ಮತ್ತು ಅಧ್ಯಯನಾಸಕ್ತರ ಆಸಕ್ತಿಯನ್ನು ಕೆರಳಿಸುತ್ತ ಬಂದ ಸುಪುಷ್ಟ ಕ್ಷೇತ್ರ ಗಾದೆಯದು. ಈ ನಿಟ್ಟಿನಲ್ಲಿ ರಾಗೌ ಅವರ ನಮ್ಮ ಗಾದೆಗಳು (1973) ಒಂದು ಗಮನಾರ್ಹ ಸಂಕಲನ. ಬಿ.ಎ.ವಿವೇಕ ರೈ ಅವರ ತುಳುಗಾದೆಗಳು (1971), ಸುಧಾಕರ ಅವರ ನಮ್ಮ ಸುತ್ತಿನ ಗಾದೆಗಳು (1973), ಲಕ್ಕೆಯವರ ಉತ್ತರ ಕರ್ನಾಟಕದ ಗಾದೆಗಳು, ಕಾಳೇಗೌಡ ನಾಗವಾರರ ಬೀದಿ ಮಕ್ಕಳು ಬೆಳೆದೊ ಮುಂತಾದ ಸಂಕಲನಗಳು ಪ್ರಾದೇಶಿಕ ಗಾದೆಗಳ ಸ್ವರೂಪ ವೈಶಿಷ್ಟ್ಯಗಳನ್ನು ಪರಿಚಯ ಮಾಡಿಕೊಡುವುದರ ಜೊತೆಗೆ ಕನ್ನಡ ಗಾದೆಗಳ ವೈವಿಧ್ಯದ ಮೇಲೂ ಬೆಳಕು ಚೆಲ್ಲುತ್ತವೆ. ಎಚ್.ಎಸ್.ಅಚ್ಚಪ್ಪನವರ ಗ್ರಂಥಸ್ಥ ಗಾದೆಗಳು ಎಂಬ ಬೃಹತ್ ಸಂಪುಟದಲ್ಲಿ ಪ್ರಾಚೀನ ಗ್ರಂಥಗಳಲ್ಲಿ ಸೇರಿ ಹೋದ ಗಾದೆಗಳನ್ನೆಲ್ಲ ಕಲೆಹಾಕಲಾಗಿದೆ. ಬಿ.ಕೃಷ್ಣಪ್ಪ ರೆಡ್ಡಿ ಅವರ ಗ್ರಾಮೀಣ ಗಾದೆಗಳು (1981) ಸಂಗ್ರಹದಲ್ಲಿ ಈವರೆಗಿನ ಗಾದೆಗಳ ಸಂಕಲನದಲ್ಲಿ ಸೇರಿರದ ಸುಮಾರು 1224 ಗಾದೆಗಳನ್ನು ಅಳವಡಿಸಿಕೊಟ್ಟಿದ್ದಾರೆ. ಇಲ್ಲಿನ ಬಹುಮಟ್ಟಿನ ಗಾದೆಗಳು ಸಹಜ ಜನಪದ ಸೊಗಡಿನಿಂದ ಕಂಗೊಳಿಸುತ್ತವೆ. ಲಿಪಿಯೇ ಇಲ್ಲದ ಲಂಬಾಣಿಗರ 200ಕ್ಕೂ ಹೆಚ್ಚಿನ ಗಾದೆಗಳನ್ನು ಕನ್ನಡ ಅನುವಾದದೊಡನೆ ಸಣ್ಣರಾಮ ಅವರು ಲಂಬಾಣಿ ಗಾದೆಗಳು (1982) ಎಂಬ ಸಂಕಲನ

ರೂಪದಲ್ಲಿ ಕೊಟ್ಟಿದ್ದಾರೆ. ಲಂಬಾಣಿಗರ ಆಚಾರವಿಚಾರ, ನ್ಯಾಯನೀತಿ ಧೋರಣೆ, ಸಂಪ್ರದಾಯ ಮೊದಲಾದವುಗಳನ್ನು ಈ ಗಾದೆಗಳಲ್ಲಿ ಗುರುತಿಸಬಹುದಾಗಿದೆ. ಅಲ್ಲಲ್ಲಿ ಗಾದೆಗಳಿಗೆ ಸಂಬಂಧಿಸಿದಂತೆ ಜನಪದ ಕಥೆಗಳನ್ನೂ ನಿರೂಪಿಸಲಾಗಿದೆ. ಪಿ.ಕೆ.ರಾಜಶೇಖರ ಅವರ ಭೂಮಿ ತೂಕದ ಮಾತು (1991) 1501 ಗಾದೆಗಳನ್ನೊಳಗೊಂಡ ಒಂದು ದೊಡ್ಡ ಸಂಗ್ರಹ. ಸಾಮಾಜಿಕ ಮತ್ತು ಭಾಷಿಕ ಕಾರಣಗಳಿಂದ ಇದೊಂದು ಉತ್ತಮ ಅಧ್ಯಯನ ಯೋಗ್ಯ ಕೃತಿಯಾಗಿದೆ. ಮೈಲಹಳ್ಳಿ ರೇವಣ್ಣ ಅವರ ದೀಪದ ಕೆಳಗೆ ಕತ್ತಲೆ (2003) ಹಲವು ವಿಶಿಷ್ಟ ಗಾದೆಗಳ ಸಂಕಲನ.

ಒಗಟುಗಳ ಕ್ಷೇತ್ರದಲ್ಲಿಯೂ ಗಾದೆಗಳಂತೆಯೇ ಸಂಗ್ರಹಕಾರ್ಯ ನಡೆದಿರುವುದು ಕಂಡುಬಂದಿದೆ. ಕನ್ನಡದಲ್ಲಿ ಒಗಟುಗಳ ಸಂಗ್ರಹಕ್ಕೆ ಹೊಸ ತಿರುವನ್ನು ಕೊಟ್ಟ ಜೀಶಂಪ ಅವರ ಕನ್ನಡ ಒಗಟುಗಳು (1967) ಪ್ರಕಟವಾದ ಮೇಲೆ ಅನೇಕ ಸಂಕಲನಗಳು ಬಂದಿವೆ. ಎಚ್.ಜೆ.ಲಕ್ಕಪ್ಪ ಗೌಡರ ಒಗಟುಗಳು (1973), ಬಿ.ಎ.ವಿವೇಕ ರೈ ಅವರ ತುಳು ಒಗಟುಗಳು (1971), ರಾಗೌ ಅವರ ನಮ್ಮ ಒಗಟುಗಳು, ಸೋಮಶೇಖರ ಇಮ್ರಾಪುರ ಅವರ ಸಾವಿರ ಒಗಟುಗಳು (1976), ಸುಧಾಕರ ಅವರ ಜನಪದ ಬೆಡಗಿನ ವಚನಗಳು, ನಂ.ನಾರಾಯಣ ಗೌಡ ಅವರ ಜನಪದ ಒಗಟುಗಳು, ಎಂ.ಎಸ್.ಲಠ್ಠೆ ಅವರ ಉತ್ತರ ಕರ್ನಾಟಕದ ಒಗಟುಗಳು ಮುಂತಾದ ಸಂಕಲನಗಳನ್ನು ಈ ನಿಟ್ಟಿನಲ್ಲಿ ಹೆಸರಿಸಬಹುದಾಗಿದೆ. ಒಗಟುಗಳ ಕ್ಷೇತ್ರದಲ್ಲಿ ಸೋಮಶೇಖರ ಇಮ್ರಾಪುರ ಅವರು ಮಹಾಪ್ರಬಂಧ ರಚಿಸಿ ಈ ಕ್ಷೇತ್ರಕ್ಕೆ ಒಳ್ಳೆಯ ಕೊಡುಗೆ ನೀಡಿದ್ದಾರೆ. ವೀರಣ್ಣ ರಾಜೂರ ಮತ್ತಿತರರು ಪ್ರಕಟಿಸಿರುವ ಜಾನಪದ ಜಾಣ್ಮೆ ಪರಿಶೀಲನಾಯೋಗ್ಯವಾದ ಕೃತಿ (1981). ಜನಪದರ ಅನುಭವದ ಗಣಿಗಳಾಗಿರುವ ಜನಪದ ಲೆಕ್ಕಗಳನ್ನು ಕುರಿತಂತೆ ಉತ್ತರ ಕರ್ನಾಟಕ ಭಾಗದಲ್ಲಿ ಪ್ರಥಮ ಬಾರಿಗೆ ಸಂಗ್ರಹಗೊಂಡಿರುವ 196 ಒಗಟುಗಳು ಇಲ್ಲಿವೆ. ಲೆಕ್ಕಗಳಲ್ಲಿ ಹೆಚ್ಚು ವೈವಿಧ್ಯವಿರುವ ಜಾನಪದ ಜಾಣ್ಮೆ ಅಭ್ಯಾಸಯೋಗ್ಯವಾಗಿದೆ. ಜೀನಹಳ್ಳಿ ಸಿದ್ಧಲಿಂಗಪ್ಪ ಅವರ ಜನಪದ ಜಾಣಗಣಿತ ಮತ್ತು ಭಾಷಾಚಮತ್ಕಾರ ಅಭ್ಯಾಸಯೋಗ್ಯವಾದ ಒಂದು ಉತ್ತಮ ಸಂಕಲನ. ಜನಪದ ಗಣಿತ ಇಂದಿನ ಗಣಿತಶಾಸ್ತ್ರಕ್ಕೆ ಹೊರತಾದುದಲ್ಲ. ಕೂಡುವ ಕಳೆಯುವ ಭಾಗಿಸುವ ಗುಣಿಸುವ ವಿಧಾನಗಳಲ್ಲಿ ಎರಡರಲ್ಲೂ ಸಮಾನ ಅಂಶಗಳಿವೆ. ನಂ.ತಪಸ್ವೀಕುಮಾರ ಅವರ ಕನ್ನಡ ಒಗಟುಗಳ ಸಮೀಕ್ಷೆ (1979), ಸೋಮಶೇಖರ ಇಮ್ರಾಪುರ ಅವರ ಒಗಟುಗಳು ಕೃತಿಗಳು ಒಗಟುಗಳ ಹುಟ್ಟು ಬೆಳೆವಣಿಗೆ ಹಿನ್ನೆಲೆ ಹಾಗೂ ಅವುಗಳ ಅಂತರಾಳದಲ್ಲಿ ಅಡಗಿರುವ ಮಹತ್ವಪೂರ್ಣ ಸಂಗತಿಗಳನ್ನು ಬಹಳ ಗಂಭೀರವಾಗಿ ಪರಿಶೀಲಿಸುತ್ತವೆ.

ಮೇಲಿನ ಪ್ರಮುಖ ಜಾನಪದ ಪ್ರಕಾರಗಳ ಜೊತೆಗೆ ಇನ್ನೂ ಕೆಲವು ಪ್ರಕಾರಗಳತ್ತ ಸಂಗ್ರಾಹಕರು ತಮ್ಮ ದೃಷ್ಟಿಯನ್ನು ಹರಿಸುತ್ತಿದ್ದಾರೆ. ಜನಪದ ಭಾಷಿಕ ಬಗೆಗಳಲ್ಲಿ ಒಡಪು ಮುಖ್ಯವಾದ ಒಂದು ಬಗೆ. ಜನಪದ ಪ್ರಾಸ ವ್ಯಾಮೋಹವೇ ಒಡಪು ರಚನೆಗಳಲ್ಲಿ ಎದ್ದು ಕಾಣುವ ಆಕರ್ಷಣೆ. ಜನಪದ ಬುದ್ಧಿಮತ್ತೆಯ ದ್ಯೋತಕ ಎಂದೆನಿಸುವ ಇವುಗಳ ಸಂಗ್ರಹವೂ ನಡೆದಿದೆ. ಉತ್ತರ ಕರ್ನಾಟಕದಿಂದ ಪ್ರಕಟವಾಗಿರುವ ಒಡಪುಗಳ ಸಂಕಲನಗಳು (ಹೆಸರು ಹೇಳ್ತೀನಿ ಒಡಪ ಕಟ್ಟಿ, ಒಲವಿನ ಒಡಪುಗಳು) ಪತಿ ಪತ್ನಿಯರ ಹೆಸರುಗಳನ್ನು ಹೇಳುವಾಗ ಬಳಸುವ ಪದ್ಯರೂಪದ ರಚನೆಗಳನ್ನು ಪರಿಚಯಿಸುತ್ತವೆ. ವೈಜ್ಞಾನಿಕ ದೃಷ್ಟಿಯಿಂದ ಒಡಪುಗಳನ್ನು ಸಂಗ್ರಹಿಸಿದವರು ಜ್ಯೋತಿ ಹೊಸೂರ. ಹೆಸರು ಹೇಳ್ತೀನಿ ಒಡಪುಕಟ್ಟಿ (1971) ಸಂಗ್ರಹ ಗಮನಾರ್ಹವಾದುದು. ಎಂ.ಎಸ್.ಲಠ್ಠೆಯವರ ಉತ್ತರ ಕರ್ನಾಟಕದ ಒಡಪುಗಳು (1974), ಶಾಂತಾ ಇಮ್ರಾಪುರ ಅವರ ಜನಪದ ಒಡಪುಗಳು (1979), ಸಾಹಿತ್ಯಾನಂದರ ಬಳ್ಳಾರಿ ಜಿಲ್ಲೆಯ ಒಡಪುಗಳು ಉಲ್ಲೇಖನೀಯ. ಶಂಕರಾನಂದ ಉಲ್ಲಾಸರ ಜನಪದ ಒಡಪುಗಳು ಬಿಜಾಪುರ ಜಿಲ್ಲೆಯಲ್ಲಿ ಪ್ರಚಲಿತವಿರುವ ಒಡಪುಗಳ ಒಂದು ಸಂಕಲನ. ಆ ಪ್ರದೇಶದ ಪ್ರಾದೇಶಿಕ ಭಾಷಾ ಸೊಗಡನ್ನು ಪಡೆದ ಈ ಪುಸ್ತಕದಲ್ಲಿ ನವೀನತೆ ಇದೆ. ನಮ್ಮ ಒಡಪುಗಳು (1991) ಮೈಲಹಳ್ಳಿ ರೇವಣ್ಣ ಅವರು ಸಂಗ್ರಹಿಸಿದ ದಕ್ಷಿಣ ಕರ್ನಾಟಕದ ಒಡಪುಗಳಾಗಿವೆ. ಮೈಲಹಳ್ಳಿ ರೇವಣ್ಣನವರ ಜಂಬುನೇರಲೆಹಣ್ಣು ಜಗ್ಗಿ ಬಿದ್ದಾವೆ (1992), ಜನಪದರ ಜಾಣ್ಮೆ ಕೌಶಲ ಚಾತುರ್ಯಗಳನ್ನು ಸಮರ್ಥವಾಗಿ ಬಿಂಬಿಸುವ ಇನ್ನೊಂದು ಕೃತಿ.

ಸಾಹಿತ್ಯೇತರ ಜಾನಪದ ಪ್ರಕಾರಗಳ ಸಂಬಂಧ ನಡೆದಿರುವ ಅಧ್ಯಯನವಂತೂ ಗುಣ ಮತ್ತು ಗಾತ್ರ ಎರಡೂ ದೃಷ್ಟಿಯಿಂದ ಗಮನಾರ್ಹವಾದುದು. ಮೌಖಿಕ ಸಾಹಿತ್ಯದ ಸಂಗ್ರಹ ಸಂಪಾದನೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಅಧ್ಯಯನಗಳು ಪ್ರಕಟಗೊಂಡಿರುವುದು ವಿಶೇಷವೆಂದೇ ಹೇಳಬೇಕು. ಡಿ.ಕೆ. ರಾಜೇಂದ್ರರ ನಮ್ಮ ಸುತ್ತಿನ ನಂಬಿಕೆಗಳು, ಜಿ.ವಿ. ದಾಸೇಗೌಡರ ನಮ್ಮ ಜನಪದ ನಂಬಿಕೆಗಳು, ರಾಗೌ ಮತ್ತು ವಸಂತಕುಮಾರ ಅವರ ಜನಪದ ನಂಬಿಕೆಗಳು ಎಲ್ಲ ಪ್ರದೇಶಗಳ ನಂಬಿಕೆ ಸಂಪ್ರದಾಯಗಳ ಅಧ್ಯಯನಕ್ಕೆ ಒತ್ತಾಸೆ ನೀಡಿದವು. ಅರವಿಂದ ಮಾಲಗತ್ತಿಯವರ ಕೊರಗ ಜನಾಂಗ ವಿಶ್ಲೇಷಣಾತ್ಮಕ ಅಧ್ಯಯನ ಕೊರಗ ಸಮಾಜವನ್ನು ಅರಿಯುವ ಒಂದು ಉತ್ತಮ ಪ್ರಯತ್ನ. ಅಂಬಳಿಕೆ ಹಿರಿಯಣ್ಣನವರ ಮಲೆನಾಡ ಜನಪದ ಸಂಪ್ರದಾಯಗಳು, ತ.ಚಿ.ಚಲುವೇಗೌಡರ ಕೆಲವು ಜನಪದ ಸಂಪ್ರದಾಯಗಳು, ವೈ.ಸಿ. ಭಾನುಮತಿ ಅವರ ಮಲೆನಾಡ ಶೈವ ಒಕ್ಕಲಿಗರು ಜಾನಪದೀಯ ಅಧ್ಯಯನ (1994), ತೀ.ನಂ.ಶಂಕರನಾರಾಯಣ ಅವರ ಕಾಡುಗೊಲ್ಲರ ನಂಬಿಕೆ ಮತ್ತು ಸಂಪ್ರದಾಯಗಳು ಮೊದಲಾದ ಗ್ರಂಥಗಳು ಕರ್ನಾಟಕದ ಬೇರೆ ಬೇರೆ ಭಾಗದ ಜನ ಸಮೂಹಗಳ ಜೀವನ ವಿಧಾನವನ್ನು ಅರಿಯಲು ಸಹಾಯಕವಾಗಿವೆ. ಯು.ಎಸ್.ರಾಮಣ್ಣನವರ ಸಂಪಾದಕತ್ವದಲ್ಲಿ ಹೊರ ಬಂದ ಜಾನಪದ ವಸ್ತುಸಂಗ್ರಹಾಲಯ (2004). ಕರ್ನಾಟಕದಲ್ಲಿರುವ ಜಾನಪದ ಸಂಗ್ರಹಾಲಯಗಳ ಜೊತೆಗೆ ಭಾರತದ ಮತ್ತು ಜಗತ್ತಿನ ಸಂಗ್ರಹಾಲಯಗಳತ್ತಲೂ ನೋಟಬೀರುತ್ತದೆ. ಜನಪದ ವೈದ್ಯ ಪದ್ಧತಿಗೆ ಸಂಬಂಧಿಸಿದಂತೆ ಹೊರಬಂದಿರುವ ಕೃತಿಗಳು ಆಯಾ ಪ್ರದೇಶದ ಜನರ ವೈದ್ಯಕೀಯ ಜ್ಞಾನ ಪರಿಜ್ಞಾನಗಳನ್ನು ಪರಿಚಯಿಸುತ್ತವೆ. ಪಿ.ವಿ.ನಾಯಕ ಅವರ ಅಳಲೆಕಾಯಿ, ಬೋಳೂರು ಎಸ್.ರಾವ್ ಅವರ ಊರ ಔಷಧಿಗಳು ಮತ್ತು ಇತರ ಉಪಯುಕ್ತ ಸೂಚನೆಗಳು, ಬಳ್ಕೂರು ಸುಬ್ರಾಯ ಅಡಿಗರ ಗೃಹ ವೈದ್ಯ, ಕೊರಡ್ಕಲ್ ವೆಂಕಟರಾವ್ ಅವರ ಮನೆಮದ್ದು, ಎಂ.ಜಿ.ಮೂತ್ತೂರು ಬ್ರದರ್ಸ್ ಅವರ ಹಳ್ಳಿಯ ವೈದ್ಯ ಮುಂತಾದವು ಕೆಲವು ಗಮನಾರ್ಹ ಕೃತಿಗಳಾಗಿವೆ. ಪಶುವೈದ್ಯಕ್ಕೆ ಸಂಬಂಧಿಸಿದಂತೆಯೂ ಪ್ರಕಟವಾಗಿರುವ ಪಶುವೈದ್ಯ ಚಿಂತಾಮಣಿ ಜನಪದ ವೈದ್ಯದ ಇನ್ನೊಂದು ಮುಖವನ್ನು ಪರಿಚಯ ಮಾಡಿಕೊಡುತ್ತದೆ. ಜನಪದ ಪಶುವೈದ್ಯ ಕೃತಿಯನ್ನು ಜಿ.ಎಸ್.ಭಟ್ಟರು ರಚಿಸಿದ್ದಾರೆ.

ಆಭರಣಗಳ ಅಧ್ಯಯನವೂ ಬಹುಮಟ್ಟಿಗೆ ಜಾನಪದದ ವ್ಯಾಪ್ತಿಗೆ ಬರುತ್ತದೆ. ದಾನೇಶ ಎ.ಚೆಕ್ಕಿ ಅವರ ಆಭರಣಗಳ ಬಗೆಗೆ ಸಾಮಾಜಿಕ ದೃಷ್ಟಿಕೋನಗಳು ಎಂಬ ಕೃತಿ, ಕೆ.ಸೌಭಾಗ್ಯವತಿಯವರ ಮೈಸೂರು ನಗರದ ಜನಪದ ಆಭರಣಗಳ ಅಧ್ಯಯನ (2000), ಹೇಮಲತಾ ಅವರ ಸೌಭಾಗ್ಯ ಚಿಹ್ನೆಗಳು ಜನಪದ ಆಭರಣ ಸಂಪ್ರದಾಯಗಳನ್ನು ಪರಿಚಯ ಮಾಡಿಕೊಡುತ್ತವೆ. ಮಹಿಳೆಯರ ಅಲಂಕಾರ ಕೂಡ ಈ ಸಾಲಿಗೆ ಸೇರುವ ಕೃತಿ. ಸವಿತಾ ನಾಯಕ ಅವರ ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟು ಪ್ರಸಾಧನಗಳು ಬುಡಕಟ್ಟು ಸಮೂಹಗಳಲ್ಲಿ ಕಂಡುಬರುವ ಪ್ರಸಾಧನಗಳನ್ನು ಸ್ಥೂಲವಾಗಿ ಪರಿಚಯಿಸುವ ಗ್ರಂಥ. ಇಷ್ಟಾದರೂ ಜನಪದ ಸಾಹಿತ್ಯ ಪ್ರಕಾರಗಳನ್ನು ಕುರಿತಂತೆ ನಡೆದಿರುವ ವ್ಯಾಪಕ ಸಂಗ್ರಹಕಾರ್ಯ ಸಾಹಿತ್ಯೇತರ ಕ್ಷೇತ್ರಗಳಿಗೆ ಇನ್ನೂ ಹೆಚ್ಚು ವ್ಯಾಪಿಸಬೇಕಾಗಿದೆ.

ಕ್ಷೇತ್ರವಿಜ್ಞಾನ ಎನಿಸಿರುವ ಜಾನಪದಕ್ಕೆ ಸಂಬಂಧಿಸಿದಂತೆ ಕ್ರಮಬದ್ಧವಾದ ಸಂಗ್ರಹಕಾರ್ಯ ನಡೆಯಬೇಕಾದುದು ಅನಿವಾರ್ಯ. ಅದರ ಜೊತೆ ಜೊತೆಯಲ್ಲೇ ಅಧ್ಯಯನ ಕಾರ್ಯವೂ ನಡೆಯಬೇಕಾದುದು ಅತ್ಯಗತ್ಯ. ಈ ದೃಷ್ಟಿಯಿಂದ ನೋಡಿದಾಗ ಕನ್ನಡದಲ್ಲಿ ನಡೆದಿರುವ ಅಧ್ಯಯನ, ಸಂಗ್ರಹಕ್ಕೆ ಹೋಲಿಸಿಕೊಂಡಾಗ ಇನ್ನೂ ಬೆಳೆವಣಿಗೆಯನ್ನು ಸಾಧಿಸಿಕೊಳ್ಳಬೇಕಾಗಿದೆ. ಪ್ರದರ್ಶನಾತ್ಮಕ ಕಲೆಗಳ ಸಂಬಂಧವಾಗಿ ನಡೆದಿರುವ ಸಂಗ್ರಹ ಅಧ್ಯಯನ ವಿಶೇಷ ಲಕ್ಷ್ಯಾರ್ಹವಾದುದು. ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಯ ವಿದ್ವಾಂಸರ ಯಕ್ಷಗಾನ ಆಸಕ್ತಿಯ ಫಲವಾಗಿ ಆ ಕ್ಷೇತ್ರದ ಸಂಶೋಧನೆ ಸಾಕಷ್ಟು ನಡೆದಿರುವುದು ಸಮಾಧಾನದ ಸಂಗತಿ. ಶಿವರಾಮ ಕಾರಂತರು ಪ್ರಕಟಿಸಿರುವ ಯಕ್ಷಗಾನ ಬಯಲಾಟವನ್ನು ಕುರಿತ ಕನ್ನಡ ಹಾಗೂ ಇಂಗ್ಲಿಷ್ ಕೃತಿಗಳು, ಕುಕ್ಕಿಲ ಕೃಷ್ಣಭಟ್ಟರ ಪಾರ್ತಿಸುಬ್ಬನ ಯಕ್ಷಗಾನಗಳು (1975), ಆರ್.ಜಿ.ಕುಲಕರ್ಣಿ ಹಾಗೂ ಎಂ.ಎಸ್.ಸುಂಕಾಪುರ ಅವರ ಶ್ರೀಕೃಷ್ಣಪಾರಿಜಾತ, ಕೆ.ಚೆನ್ನಪ್ಪಗೌಡ

ಮತ್ತು ಪ್ರಭಾಕರ ಜೋಷಿ ಅವರ ಬರೆಹಗಳು ಇಲ್ಲಿ ಮುಖ್ಯವಾದವು. ಕು.ಶಿ.ಹರಿದಾಸಭಟ್ಟರು ಸಂಪಾದಿಸಿರುವ ಸಮಗ್ರ ಯಕ್ಷಗಾನ, ಪರಂಪರೆ ಮತ್ತು ಪ್ರಯೋಗ (1978), ಬಸವರಾಜ ಮಲಶೆಟ್ಟಿಯವರ ಉತ್ತರ ಕರ್ನಾಟಕ ಬಯಲಾಟಗಳು (1983), ಕೆ.ಆರ್.ದುರ್ಗಾದಾಸ್ ಅವರ ಬಳ್ಳಾರಿ ಜಿಲ್ಲೆಯ ಬಯಲಾಟಗಳು, ಎನ್.ಆರ್.ನಾಯಕ ಅವರ ಕನ್ನಡ ಬಯಲಾಟ ಪರಂಪರೆ, ಡಿ.ಕೆ.ರಾಜೇಂದ್ರ ಅವರ ದಕ್ಷಿಣ ಕರ್ನಾಟಕದ ಜನಪದ ರಂಗಭೂಮಿ (1980), ಜಿ.ಎಸ್.ಭಟ್ಟರ ಯಕ್ಷಗಾನ ಪರಿಶೀಲನ (1995), ಜಿ.ಎಸ್.ಹೆಗಡೆಯವರ ಯಕ್ಷಗಾನ ಹಸ್ತಾಭಿನಯ ದರ್ಪಣ, ಸಂಗಮೇಶ ಸವದತ್ತಿಯವರ ದುರದುಂಡೀಶನ ಎರಡು ಯಕ್ಷಗಾನಗಳು (1997), ಪ್ರಭಾಕರ ಜೋಷಿಯವರ ಜಾಗರ (1984), ಕೇದಗೆ (1985), ಕೃಷ್ಣಭಟ್ಟರ ಯಕ್ಷಗಾನದಲ್ಲಿ ಅರ್ಥಗಾರಿಕೆ (1990) ಮುಂತಾದವು ಯಕ್ಷಗಾನ ಬಯಲಾಟಗಳನ್ನು ಕುರಿತು ಹೊರಬಂದಿರುವ ಮಹತ್ವದ ಸಂಶೋಧನ ಗ್ರಂಥಗಳು. ಜಿ.ಆರ್.ತಿಪ್ಪೇಸ್ವಾಮಿ ಅವರ ದಾಸಸಾಹಿತ್ಯ ಮತ್ತು ಜಾನಪದ, ಜಾನಪದ ಪರಿಭಾವನೆ, ಮಧುಗಿರಿ ನರಸಿಂಹಮೂರ್ತಿ ಅವರ ಮಧುಗಿರಿ ದಂಡಿನ ಮಾರಮ್ಮ, ಜಾನಪದ ಪರಾಗ ಉಲ್ಲೇಖನೀಯ. ಕರ್ನಾಟಕದ ವಿವಿಧ ಜನಪದ ಕಲೆ, ಆಚರಣೆ, ಸಂಪ್ರದಾಯಗಳನ್ನು ಕುರಿತ ಒಂದು ಸಮಗ್ರ ರೂಪದ ಗ್ರಂಥವನ್ನು ಕನ್ನಡ ವಿಶ್ವವಿದ್ಯಾಲಯ ಕರ್ನಾಟಕ ಜನಪದ ಕಲೆಗಳ ಕೋಶ (1996) ಎಂಬ ಶೀರ್ಷಿಕೆಯಲ್ಲಿ ಹೊರತಂದಿದ್ದು ಕರ್ನಾಟಕದ ಜನಪದ ಕಲೆಗಳ ಸ್ಥೂಲ ಪರಿಚಯವನ್ನು ಒದಗಿಸುತ್ತದೆ. ಎಸ್.ಸಿ.ಪಾಟೀಲ ಅವರ ಕರ್ನಾಟಕ ಜನಪದ ಚಿತ್ರಕಲೆ (1993), ವಿ.ಎಂ.ಚಂದ್ರಶೇಖರಯ್ಯನವರ ಕರ್ನಾಟಕ ಕರಕುಶಲ ಕಲೆಗಳು ಕರ್ನಾಟಕದ ಚಿತ್ರಕಲೆ ಮತ್ತು ಕರಕುಶಲ ಕಲೆಗಳ ಅಧ್ಯಯನಕ್ಕೆ ಬೇಕಾದ ಸಾಮಗ್ರಿಗಳನ್ನು ಒದಗಿಸುವಂಥ ಗ್ರಂಥಗಳಾಗಿವೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಉಪಸಂಸ್ಕೃತಿ ಅಧ್ಯಯನ ಮಾಲೆಯಲ್ಲಿ 36 ಬುಡಕಟ್ಟುಗಳನ್ನು ಗುರುತಿಸಿ ಪುಸ್ತಕ ಪ್ರಕಟಿಸಿದೆ. ಕರ್ನಾಟಕ ಯಕ್ಷಗಾನ ಮತ್ತು ಜಾನಪದ ಅಕಾಡೆಮಿ ಕರ್ನಾಟಕ ಬುಡಕಟ್ಟುಗಳನ್ನು ಕುರಿತಂತೆ ಎರಡು ಸಂಪುಟ ಪ್ರಕಟಿಸಿದೆ (1998). ಕನ್ನಡ ವಿಶ್ವವಿದ್ಯಾಲಯ ಬುಡಕಟ್ಟು ಮಾಲೆಯಲ್ಲಿ ಹೊರತಂದಿರುವ ಮಲೆಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ ಸಂಪುಟಗಳು, ಸೋಮಶೇಖರ ಇಮ್ರಾಪುರ ಅವರ ಜಾನಪದ ಆಲೋಕನ (2002) ಜಾನಪದ ವಿಮರ್ಶಾ ಸಂಕಲನ ಜನಪದ ಕಾವ್ಯಾಸಕ್ತರಿಗೆ, ಸಂಸ್ಕೃತಿ ಚಿಂತಕರಿಗೆ ಉತ್ತಮ ಆಕರಗಳಾಗಿವೆ. ಜನಪದ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆ ನೀಡಿದವರಲ್ಲಿ ಉತ್ತರ ಕರ್ನಾಟಕದ ವಿದ್ವಾಂಸರೆಂದರೆ ಎಂ.ಎಸ್. ಸುಂಕಾಪುರ, ಎಂ.ಎಸ್.ಲಠ್ಠೆ, ಸೋಮಶೇಖರ ಇಮ್ರಾಪುರ, ದೇವೇಂದ್ರ ಕುಮಾರ ಹಕಾರಿ, ಮ.ಗುಂ.ಬಿರಾದಾರ, ಶಿವಾನಂದ ಗುಬ್ಬಣ್ಣನವರ್, ಬಸವರಾಜ ಮಲಶೆಟ್ಟಿ, ಚೆನ್ನಣ್ಣವಾಲೀಕಾರ, ಪಿ.ಕೆ.ಖಂಡೋಬ, ವೀರಣ್ಣ ದಂಡೆ, ಎಂ.ಎಂ.ಕಲಬುರ್ಗಿ, ಕೆ.ಆರ್.ದುರ್ಗಾದಾಸ್. ಜನಪದ ಸಾಹಿತ್ಯ ಸಂಗ್ರಹಣೆಯಲ್ಲಿ ದುಡಿದವರಲ್ಲಿ ಜಿ.ವಿ.ದಾಸೇಗೌಡ, ಟಿ.ಕೇಶವಭಟ್ಟ, ಕೆ.ಆರ್.ಸಂಧ್ಯಾರೆಡ್ಡಿ, ಸಿ.ಸಿ.ಎ.ಪೈ, ಚಂದ್ರು ಕಾಳೇನಹಳ್ಳಿ, ನಿಂಗಣ್ಣ ಸಣ್ಣಕ್ಕಿ ಮೊದಲಾದವರನ್ನು ಹೆಸರಿಸಬಹುದು. ಕರ್ನಾಟಕದ ಜಾತ್ರೆಗಳನ್ನು ಕುರಿತಂತೆ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪುಸ್ತಕಗಳನ್ನು ಪ್ರಕಟಿಸಿದೆ. ಅವುಗಳಲ್ಲಿ ಮುಖ್ಯವಾದವು ವೀರಭದ್ರ ಜಾತ್ರೆ, ದೇವರಗುಡ್ಡರ ಜಾತ್ರೆ, ಶಿರಸಿ ಶ್ರೀಮಾರಿಕಾಂಬೆ ಜಾತ್ರೆ. ಸವದತ್ತಿ ಎಲ್ಲಮ್ಮನ ಜಾತ್ರೆ, ಮಲೆಮಾದೇಶ್ವರ ಜಾತ್ರೆ. ಪ್ರತಿವರ್ಷ ಪತ್ರಿಕೆಗಳಲ್ಲಿ ಪ್ರಕಟವಾಗುವ ಜಾನಪದ ಲೇಖನಗಳನ್ನು ಸಂಗ್ರಹಿಸಿ ಸಂಕಲನಗಳನ್ನು ಜಾನಪದ ಅಕಾಡೆಮಿ 1991ರಿಂದಲೂ ಪ್ರಕಟಿಸುತ್ತಿದೆ. ಈ ಮಾಲಿಕೆಯಲ್ಲಿ ಆರು ಪುಸ್ತಕಗಳು ಪ್ರಕಟವಾಗಿವೆ.

ಕನ್ನಡದಲ್ಲಿ 1975ರಿಂದ 2000 ಜನವರಿಯವರೆಗೆ ಪ್ರಕಟವಾದ ಜಾನಪದ ಗ್ರಂಥಗಳನ್ನು ಹಂಪಿಯ ಕನ್ನಡ ವಿಶ್ವವಿದ್ಯಾಲಯ ಕನ್ನಡ ಜಾನಪದ ಗ್ರಂಥಸೂಚಿ ಶೀರ್ಷಿಕೆಯಲ್ಲಿ ಪ್ರಕಟಿಸಿದೆ (2000).

ಕರ್ನಾಟಕ ಜಾನಪದ ಅಧ್ಯಯನದ ಮೇಲೆ ವಿಶೇಷ ಪ್ರಭಾವ ಬೀರಿದ ಸುವರ್ಣ ಸಂಚಯ, ಹೊನ್ನಬಿತ್ತೇವು ಹೊಲಕೆಲ್ಲ, ಕರ್ನಾಟಕ ಜಾನಪದ, ಸುವರ್ಣ ಸಂಪುಟ ಭಾಗ -1 ಮತ್ತು -2 ಸಂಕಲನಗಳು ವಿಶೇಷ ಉಲ್ಲೇಖನಾರ್ಹವಾಗಿವೆ. ಕರ್ನಾಟಕ ಜಾನಪದದ ವಿವಿಧ ಮುಖಗಳನ್ನು ಪರಿಚಯಿಸುವುದರೊಂದಿಗೆ ಜಾನಪದ ಅಧ್ಯಯನಕ್ಕೆ ಪೂರಕವಾದ ಅನೇಕ ಉಪಯುಕ್ತ ಅಂಶಗಳನ್ನು ಒಳಗೊಂಡ ಈ ಪ್ರಕಟಣೆಗಳು ಒಂದೊಂದೂ ದೊಡ್ಡ ಸಾಧನೆ ಎಂದೇ ಹೇಳಬೇಕು. ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗ ಪ್ರಕಟಿಸಿರುವ ಜಾನಪದ ಸಾಹಿತ್ಯದರ್ಶನ ಸಂಪುಟಗಳು ಕೂಡ ಈ ನಿಟ್ಟಿನ ಉತ್ತಮ ಕೊಡುಗೆಗಳಾಗಿವೆ. ದೊಡ್ಡ ಸಂಖ್ಯೆಯ ವಿದ್ವಾಂಸರ ಅಭ್ಯಾಸಪೂರ್ಣ ಬರೆಹಗಳನ್ನೊಳಗೊಂಡ ಈ ಪ್ರಕಟಣೆಗಳು ಕರ್ನಾಟಕದಲ್ಲಿ ಜಾನಪದ ಆಸಕ್ತಿ ಆಳವಾಗಿ ಬೇರೂರಿರುವುದಕ್ಕೆ ಸಾಕ್ಷಿಯಾಗಿದೆ.

ಕರ್ನಾಟಕದಲ್ಲಿ ಜಾನಪದದ ವೈಜ್ಞಾನಿಕ ಅಧ್ಯಯನ ಆರಂಭವಾದುದು 20ನೆಯ ಶತಮಾನದ 60ರ ದಶಕದಲ್ಲಿ. ಪ್ರಕೃತ ಸಮೀಕ್ಷೆ ಕನ್ನಡದಲ್ಲಿ ಈ ವರೆಗೆ ನಡೆದ ಜಾನಪದ ಅಧ್ಯಯನದ ವಿವಿಧ ಮಜಲುಗಳನ್ನು ಸ್ಥೂಲವಾಗಿ ಗುರುತಿಸುತ್ತದೆ. ಕರ್ನಾಟಕದ ವಿವಿಧ ಭಾಗಗಳಲ್ಲಿ ಜಾನಪದ ಅಧ್ಯಯನಕ್ಕೆ ದೊರೆತ ಆದ್ಯತೆ, ವೈಜ್ಞಾನಿಕ ತಳಹದಿಯ ಮೇಲೆ ಈಗೀಗ ಈ ಅಧ್ಯಯನ ರೂಪುಗೊಳ್ಳುತ್ತಿರುವ ಬಗೆ, ಈ ಅಧ್ಯಯನಕ್ಕೆ ಅಗತ್ಯವೆನಿಸಿದ ಸಮಗ್ರ ಹಾಗೂ ಸಮರ್ಪಕ ಕ್ಷೇತ್ರಕಾರ್ಯ ಹಾಗೂ ದಾಖಲೀಕರಣ, ಜಾನಪದ ಸಂವರ್ಧನೆ ಹಾಗೂ ಪ್ರಸಾರ ಕಾರ್ಯ ಮುಂತಾದ ಚಟುವಟಿಕೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪರಿಶೀಲಿಸಿದಾಗ ಕರ್ನಾಟಕ ಜಾನಪದ ಅಧ್ಯಯನ ಅರ್ಥಪೂರ್ಣವಾಗಿ ಸಾಗುತ್ತಿದೆ ಎಂದು ಹೇಳಬಹುದು. (ಜಿ.ಎಸ್.ಪಿ.;ಎ.ಎಚ್.)

**ಜಾನಪದ ಕ್ಷೇತ್ರಕಾರ್ಯ :** ಒಂದು ವಿಷಯ ಕುರಿತು ಆಮೂಲಾಗ್ರ ಅಧ್ಯಯನಕ್ಕಾಗಿ ಅಗತ್ಯ ದತ್ತಾಂಶ (ಡಾಟ) ಸಂಗ್ರಹಿಸಲು ಒಂದೆಡೆ ನೆಲೆನಿಂತು ಅಥವಾ ವಿವಿಧೆಡೆ ಸಂಚರಿಸುತ್ತ ಮಾಹಿತಿ ಸಂಗ್ರಹಿಸುವ ಕೆಲಸವನ್ನು (ಫೀಲ್ಡ್‌ವರ್ಕ್) ಕ್ಷೇತ್ರ ಕಾರ್ಯವೆಂದು ಕರೆಯುವುದು ರೂಢಿಯಲ್ಲಿದೆ. ಒಂದೊಂದು ವಿಷಯಕ್ಕೆ ಸಂಬಂಧಿಸಿ ದಂತೆಯೂ ಕ್ಷೇತ್ರಕಾರ್ಯದ ಸ್ವರೂಪ, ಅಗತ್ಯ ಹಾಗೂ ಲಕ್ಷಣಗಳು ಭಿನ್ನಭಿನ್ನವಾಗಿರುತ್ತವೆ. ಸತ್ಯಾನ್ವೇಷಣೆ, ವಿಷಯದ ಖಚಿತ ಜ್ಞಾನ ಕ್ಷೇತ್ರ ಕಾರ್ಯದ ಮುಖ್ಯ ಉದ್ದೇಶ. ಕ್ಷೇತ್ರಕಾರ್ಯಕರ್ತನಲ್ಲಿ ಮೂಲಭೂತವಾಗಿ ಮೂರು ಗುಣಗಳಿರಬೇಕು: ಬಿಚ್ಚು ಮನಸ್ಸು, ಪ್ರಾಮಾಣಿಕತೆ, ಸಂಗ್ರಹಸಾಮರ್ಥ್ಯ. ಕ್ಷೇತ್ರ ಕಾರ್ಯಕರ್ತನಲ್ಲಿ ಇರಬೇಕಾದ ಇನ್ನೊಂದು ಅರ್ಹತೆ ಶಿಸ್ತು. ಇದು ಕ್ಷೇತ್ರದಲ್ಲಿ ಸಂಚರಿಸುವಾಗಿನ ಅವನ ನಡೆವಳಿಕೆಯಾಗಿರಬಹುದು, ಸಂಗ್ರಹಣೆಯ ಉದ್ದೇಶವನ್ನೂ ಗುರಿಯನ್ನೂ ಕುರಿತದ್ದಾಗಿರಬಹುದು, ಸಂಗ್ರಹಿತ ಸಾಮಗ್ರಿಯನ್ನು ಕ್ರಮಬದ್ಧ ವರ್ಗೀಕರಣಕ್ಕೆ ಒಳಪಡಿಸುವಂಥದ್ದಾಗಿರಬಹುದು.

ಜಾನಪದ ಕ್ಷೇತ್ರಕಾರ್ಯದ ಕೆಲಸ ಮೂರು ಹಂತಗಳಲ್ಲಿ ಜರುಗುತ್ತದೆ: 1. ಪ್ರಾರಂಭಿಕ ಹಂತ, 2. ಸಂಗ್ರಹಣೆ, 3. ವಿಶ್ಲೇಷಣೆ.

1. **ಪ್ರಾರಂಭಿಕ ಹಂತ :** ಒಂದು ಗೊತ್ತಾದ ಸ್ಥಳದಲ್ಲಿ ಯಾವ ಮಾಹಿತಿಯನ್ನು ಸಂಗ್ರಹಿಸಬೇಕಾಗಿದೆಯೋ ಅದರ ಬಗ್ಗೆ ಕ್ಷೇತ್ರ ಕಾರ್ಯಕರ್ತನಿಗೆ ಸ್ಪಷ್ಟ ಕಲ್ಪನೆ ಇರಬೇಕು. ಕ್ಷೇತ್ರಕಾರ್ಯಕ್ಕೆ ತೊಡಗುವ ಪ್ರದೇಶ, ಆ ಪ್ರದೇಶದ ಜನಜೀವನ, ಭಾಷೆ ಇತ್ಯಾದಿಗಳನ್ನು ಕ್ಷೇತ್ರಕಾರ್ಯಕರ್ತ ಗಮನಿಸಬೇಕಾಗುತ್ತದೆ.

2. **ಸಂಗ್ರಹಣೆ :** ಸಂಗ್ರಹಿಸಲು ಉದ್ದೇಶಿಸಿರುವ ನಿರ್ದಿಷ್ಟ ಗುರಿಯ ಕಡೆಗೆ ಮನಸ್ಸನ್ನು ಕೇಂದ್ರೀಕರಿಸಬೇಕು ಮತ್ತು ಉಳಿದ ಪ್ರಕಾರಗಳನ್ನೂ ಕಡೆಗಣಿಸಬಾರದು.

3. **ವಿಶ್ಲೇಷಣೆ :** ಸಂಗ್ರಹಿಸಿ ತಂದ ಸಾಮಗ್ರಿಯನ್ನು ವಿಂಗಡಿಸಿ ವಿಶ್ಲೇಷಿಸಿ ಅಧ್ಯಯನ ನಡೆಸುವುದು.

ಹೀಗೆ ತನ್ನ ಗುರಿಗೆ ಸಂಬಂಧಿಸಿದ ಮುಖ್ಯ ಸಂಗ್ರಹ ಹಾಗೂ ಉಪಸಂಗ್ರಹಗಳನ್ನು ಸೂಕ್ತ ರೀತಿಯಲ್ಲಿ ವಿಂಗಡಿಸಿ ಸಮಾಜ ವಿಜ್ಞಾನ, ಮಾನವ ವಿಜ್ಞಾನ, ಭಾಷಾ ವಿಜ್ಞಾನ ಇತ್ಯಾದಿ ಸಂಬಂಧಪಟ್ಟ ವಿಷಯಗಳ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಬೇಕಾಗುತ್ತದೆ.

ಚಾರಿತ್ರಿಕ ಅಧ್ಯಯನಕ್ಕಾಗಿ ಹಾಡುಗಳನ್ನು ಸಂಗ್ರಹಿಸುವುದು ಮುಖ್ಯ ಗುರಿಯಾಗಿದ್ದಾಗ ಚಾರಿತ್ರಿಕ ಸಂಗತಿಗಳು, ಪಾತ್ರಗಳ ಹೆಸರುಗಳಲ್ಲಿನ ವ್ಯತ್ಯಾಸಗಳು, ರೀತಿ ನೀತಿಗಳು ಮೊದಲಾದ ಪೂರಕಾಂಶಗಳು 'ಉಪಸಂಗ್ರಹ'ಗಳೆನಿಸುತ್ತವೆ. ಗುರಿಯೆನಿಸುವ ಹಾಡುಗಳು ನೃತ್ಯದೊಡನೆ ಆಂತರಿಕ ಸಂಬಂಧ ಹೊಂದಿದ್ದರೆ ನೃತ್ಯಕ್ಕೆ ಸಂಬಂಧಿಸಿದ ಟಿಪ್ಪಣಿಗಳು, 'ಉಪಸಂಗ್ರಹ'ಗಳೆನಿಸುತ್ತವೆ. ಆದ್ದರಿಂದ ಉಪಸಂಗ್ರಹಗಳಿಲ್ಲದೆ ಕ್ಷೇತ್ರಕಾರ್ಯಗಳಾಗಲಿ, ಅಧ್ಯಯನಗಳಾಗಲಿ ಪೂರ್ಣಗೊಳ್ಳಲಾರವು.

ಸಂಗ್ರಹಕಾರರಲ್ಲಿ ಎರಡು ಬಗೆಗಳಿವೆ. ವೃತ್ತಿನಿರತ ಸಂಗ್ರಹಕಾರ, ಹವ್ಯಾಸಿ ಸಂಗ್ರಹಕಾರ. ಸ್ವಂತ ಆಸಕ್ತಿಯಿಂದ ಮಾಹಿತಿ ಸಂಗ್ರಹಿಸುತ್ತಾ ಪರಿಣತಿ ಗಳಿಸಿಕೊಳ್ಳುವವನು ವೃತ್ತಿನಿರತ ಸಂಗ್ರಹಕಾರ. ಪರಿಣತರ ಬೋಧನೆಗಳ ಮೂಲಕ ತರಬೇತಿ ಹೊಂದಿದವನು ಹವ್ಯಾಸಿ ಸಂಗ್ರಹಕಾರ. ಇವರಲ್ಲಿ ಒಬ್ಬ ಮೇಲು ಒಬ್ಬ ಕೀಳು ಎಂಬ ಭೇದವಿಲ್ಲ. ಯಾರು ಹೆಚ್ಚು ಪ್ರಾಮಾಣಿಕವಾಗಿ, ಪರಿಣಾಮಕಾರಿಯಾಗಿ ಸಂಗ್ರಹಕಾರ್ಯ ನಡೆಸಿದ್ದಾರೆ ಎಂಬುದಷ್ಟೆ ಮುಖ್ಯ. ಸಂಗ್ರಹದೊಂದಿಗೆ, ಅದನ್ನು ಕುರಿತು ವಿಸ್ತೃತ ಅಧ್ಯಯನಾತ್ಮಕ ಪ್ರಸ್ತಾವನೆ ಟಿಪ್ಪಣಿಗಳು, ಅರ್ಥಕೋಶ, ಸಂಗ್ರಹವಿವರ ಇತ್ಯಾದಿಗಳನ್ನು ರೂಪಿಸುವ ಮೂಲಕ ಯಶಸ್ಸನ್ನು ಸಾಧಿಸಬೇಕಾಗುತ್ತದೆ. ಸಂಗ್ರಹಕಾರ ಅಪ್ರಾಮಾಣಿಕನಾದರೆ ಅಗತ್ಯ ವಿವರಗಳೂ ಮೂಲ ದಾಖಲೆಗಳೂ ಶುದ್ಧ ರೂಪದಲ್ಲಿ ದೊರೆಯದೆ ಹೋಗಬಹುದು. ಆಗ ಆ ಅಧ್ಯಯನ ಅಷ್ಟರಮಟ್ಟಿಗೆ ದೋಷಯುಕ್ತವಾಗುತ್ತದೆ. ಗುರಿಬದ್ಧ, ಕಾಲಬದ್ಧ, ಕ್ಷೇತ್ರಕಾರ್ಯ ಶೀಘ್ರ ಫಲಕಾರಿಯಾಗಿ ಪರಿಣಮಿಸುತ್ತದೆ. ಈ ಕ್ರಮವೇ ವೈಜ್ಞಾನಿಕ ಅನ್ವೇಷಣೆ.

ವೈಜ್ಞಾನಿಕ ಅನ್ವೇಷಣೆ ಅನೇಕ ಘಟ್ಟಗಳಲ್ಲಿ ರೂಪುಗೊಳ್ಳುತ್ತದೆ: 1. ಪರಿಹರಿಸಬೇಕಾದ ಸಮಸ್ಯೆಗಳನ್ನು ಕಂಡುಕೊಳ್ಳುವುದು, 2. ಸಂದರ್ಭೋಚಿತವಾದ ದತ್ತಾಂಶಗಳನ್ನು ಗುರುತಿಸುವುದು ಮತ್ತು ಅವನ್ನು ಪಡೆದುಕೊಳ್ಳುವ ಸೂಕ್ತ ವಿಧಾನಗಳನ್ನು ಕಂಡುಕೊಳ್ಳುವುದು, 3. ದತ್ತಾಂಶ ಸಂಗ್ರಹಣೆ, 4. ಸಂಶೋಧನಾಂಶಗಳನ್ನು ಪ್ರಸ್ತುತಪಡಿಸುವುದು, 5. ದತ್ತಾಂಶಗಳ ವ್ಯಾಖ್ಯಾನ ಮತ್ತು ವಿಶ್ಲೇಷಣೆಗಳ ಆಧಾರದಿಂದ ಪೂರ್ವ ಸಿದ್ಧಾಂತಗಳ ಸಾಧ್ಯತೆಗಳನ್ನು ಅಂಗೀಕರಿಸುವುದು.

ಸಂದರ್ಭೋಚಿತ ಸಾಮುಗ್ರಿಗಳನ್ನೂ ದತ್ತಾಂಶಗಳನ್ನೂ ಪಡೆದುಕೊಳ್ಳಬೇಕಾದರೆ ನಿರ್ದಿಷ್ಟ ವಿಧಾನಗಳಿವೆ. ಇವೇ ಕ್ಷೇತ್ರವಿಧಾನಗಳು ಅಥವಾ ಸಂಗ್ರಹ ವಿಧಾನಗಳು.

**1. ಮುಕ್ತ ಪದ್ಧತಿ :** ಕ್ಷೇತ್ರಕ್ಕೆ ಕಾಲಿಡದೆ ನಾವು ಇದ್ದಲ್ಲಿಗೇ ಪತ್ರ ವ್ಯವಹಾರದ ಮೂಲಕ ಮಾಹಿತಿ ಸಂಗ್ರಹಿಸುವ ವಿಧಾನ.

**2. ಸಮೀಪ ಪದ್ಧತಿ :** ಕ್ಷೇತ್ರದೊಳಗೆ ಮುಖತಃ ವಕ್ತೃಗಳನ್ನು ಭೇಟಿ ಮಾಡಿ ನೇರವಾಗಿ ಸಂಗ್ರಹಿಸುವ ವಿಧಾನ. ಕ್ಷೇತ್ರದೊಳಗೆ ಸಂಚರಿಸಿ ನೇರವಾಗಿ ಸಂಗ್ರಹಿಸಿ ತಂದುದರಲ್ಲಿ, ವರ್ಗೀಕರಿಸುವ ಹಂತದಲ್ಲೋ ಸಂಶೋಧನೆಯ ಹಂತದಲ್ಲೋ ಸಂಶಯಗಳು ಉದ್ಭವಿಸಿದರೆ, ಅಂಥವನ್ನು ಪತ್ರವ್ಯವಹಾರದ ಮೂಲಕ ಪರಿಹರಿಸಿಕೊಳ್ಳಲು ಸಾಧ್ಯವಿದೆಯೇ ಹೊರತು, ನಾವು ಸಂಗ್ರಹಿಸಲು ಉದ್ದೇಶಿಸಿರುವ ಎಲ್ಲ ಬಗೆಯ ಸಾಮುಗ್ರಿಗಳನ್ನೂ ಹಾಗೆ ಸಂಗ್ರಹಿಸಲು ಸಾಧ್ಯವಿಲ್ಲ; ಅಂಥ ಸಾಮುಗ್ರಿ ಹೆಚ್ಚು ವಿಶ್ವಾಸಾರ್ಹವಲ್ಲ.

**3. ಪರಿವೀಕ್ಷಣಾ ವಿಧಾನ :** ನಿರ್ದಿಷ್ಟ ಪ್ರದೇಶದ, ನಿರ್ದಿಷ್ಟ ಸಂಸ್ಕೃತಿಯ, ನಿರ್ದಿಷ್ಟ ಸಂಪ್ರದಾಯದ ಅಥವಾ ವ್ಯಕ್ತಿಯ, ಜಾನಪದ ಭಂಡಾರದಲ್ಲಿ ಸಂಕ್ಷಿಪ್ತ ಮಾದರಿಗಳನ್ನಷ್ಟೆ ಸಂಗ್ರಹಿಸಿ ಹೇಳಿಕೆಗಳನ್ನಾಗಲಿ ಸಿದ್ಧಾಂತಗಳನ್ನಾಗಲಿ ರೂಪಿಸುವಿಕೆಯೇ ಈ ವಿಧಾನ. ಸ್ಥೂಲವಾದ ಒಟ್ಟು ನೋಟವನ್ನಷ್ಟೆ ಇದರಿಂದ ಗ್ರಹಿಸಲು ಸಾಧ್ಯ. ಮಾದರಿಗಳನ್ನು ಸಂಗ್ರಹಿಸುವುದು ಕೂಡ ಈ ವಿಧಾನದ ಒಂದು ಲಕ್ಷಣ.

**4. ಸಮಗ್ರ ವಿಧಾನ :** ಒಂದು ಪ್ರದೇಶದ ಎಲ್ಲ ಬಗೆಯ ಜಾನಪದ ದತ್ತಾಂಶಗಳನ್ನೂ ಸಮಗ್ರವಾಗಿ ಸಂಗ್ರಹಿಸುವುದು ಇದರ ಗುಣ. ಇದು ಅತ್ಯಮೂಲ್ಯ ವಿಧಾನ. ಕಾಲ ಮತ್ತು ಸಹನೆ ಹೆಚ್ಚು ಬೇಕು. ಈ ವಿಧಾನದಲ್ಲಿ ಸಮಾನ ಆಸಕ್ತಿಯ ಸಮೂಹ ಶ್ರಮ ಹೆಚ್ಚು ಫಲಕಾರಿಯಾಗುತ್ತದೆ.

**5. ಸ್ಥಳೀಯ ವಿಧಾನ :** ತನ್ನದೇ ಕುಟುಂಬದವರಿಂದ, ನೆರೆಹೊರೆಯವರಿಂದ, ಮಕ್ಕಳಿಂದ, ವಿದ್ಯಾರ್ಥಿಗಳಿಂದ, ವಿವಿಧ ವೃತ್ತಿಗಳವರಿಂದ ಸಂಗ್ರಹಿಸುವ ವಿಧಾನವಿದು. ಈ ಮೇಲಿನ ವಿಧಾನಗಳು ಒಂದು ರೀತಿಯಲ್ಲಿ ಯೋಜನಾಬದ್ಧ ಎಂದೇ ಗುರುತಿಸಲ್ಪಡುತ್ತವೆ.

**6. ಆಕಸ್ಮಿಕ ವಿಧಾನ ಅಥವಾ ಪ್ರಾಸಂಗಿಕ :** ಈ ವಿಧಾನ ಯಾವುದೇ ರೀತಿ ಯಲ್ಲೂ ಯೋಜನಾಬದ್ಧ ಎನಿಸಿಕೊಳ್ಳದೆ, ಆದರೆ ಎಲ್ಲ ವಿಧಾನಗಳಿಗಿಂತ ಹೆಚ್ಚು ಪರಿಣಾಮಕಾರಿಯಾದ ವಿಧಾನವಾಗಿದೆ. ಗುರಿಯ ಪರಿಧಿಯೊಳಗೋ ಗುರಿಯಾಚೆಗೋ ಅನಿರೀಕ್ಷಿತವಾಗಿ ಸಾಮಗ್ರಿ ಲಭ್ಯವಾಗುವ ಸಂದರ್ಭಗಳು ಬರುತ್ತವೆ. ಸಿದ್ಧಪಡಿಸಿಕೊಂಡ ಪ್ರಶ್ನಾವಳಿಯನ್ನು ಇಂಥ ಸಂದರ್ಭಗಳಲ್ಲಿ ಬಳಸಲು ಸಾಧ್ಯವಿಲ್ಲ. ಆದರೂ ಸಂಗ್ರಹಕಾರ್ಯ ಯಶಸ್ವಿಯೆನಿಸಿಕೊಳ್ಳುತ್ತದೆ. ಆದ್ದರಿಂದ ಇದೊಂದು ಅನಿವಾರ್ಯ ವಿಧಾನ.

**7. ಅವಲೋಕನ ವಿಧಾನ :** ಇಲ್ಲಿ ನಮ್ಮ ಸಂಪರ್ಕಕ್ಕೆ ಬರುವ ಪ್ರತಿಯೊಂದು ವಸ್ತುವನ್ನೂ ಗಮನಿಸಲಾಗುವುದು. ಒಂದು ವಸ್ತುವನ್ನು ಕಂಡಾಗ ಆ ವಸ್ತುವಿನ ಹೆಸರು, ಯಾವ ಯಾವ ಮೂಲವಸ್ತುಗಳನ್ನು ಬಳಸಿ ಅದನ್ನು ರೂಪಿಸಲಾಗಿದೆ, ಯಾವ ಯಾವ ಸಂದರ್ಭಗಳಲ್ಲಿ ಯಾವ ಯಾವ ಉದ್ದೇಶಗಳಿಗಾಗಿ ಅದನ್ನು ಬಳಸಲಾಗುತ್ತದೆ ಈ ಮುಂತಾದ ವಿವರಗಳನ್ನು ದಾಖಲಿಸಿಕೊಳ್ಳುವ ಕಾರ್ಯ ಈ ವಿಧಾನದಡಿ ನಡೆಯುತ್ತದೆ.

**8. ಸಂದರ್ಶನ ವಿಧಾನ :** ವಕ್ತೃ ಮತ್ತು ಸಂಗ್ರಹಕಾರನ ನಡುವೆ ಪರಸ್ಪರ ನಂಬಿಕೆ ಹುಟ್ಟುವಷ್ಟು ವಿಶ್ವಾಸ ಬೆಳೆದ ಮೇಲೆ, ಪರಸ್ಪರ ಕಷ್ಟಸುಖಗಳನ್ನು ವಿಚಾರಿಸಿಕೊಳ್ಳುವಂಥ ಇಬ್ಬರ ಮನಸ್ಸೂ ತಿಳಿಯಾಗುವಂಥ, ವಾತಾವರಣ ನಿರ್ಮಾಣ ಆದಮೇಲೆ ಈ ವಿಧಾನ ಸಾಧಿತವಾಗಬೇಕು. ವಕ್ತೃ ಪ್ರಸ್ತಾಪಿಸುವ ಅನೇಕ ಸಂಗತಿಗಳು ಅನಗತ್ಯ ಎನ್ನಿಸಬಹುದು. ಆದರೆ ಎಲ್ಲವನ್ನೂ ಒಟ್ಟುಗೂಡಿಸಿದಾಗ ಆ ವಕ್ತೃವಿನ ಒಳನೋಟ ಲಭ್ಯವಾಗುತ್ತದೆ. ಇದರಿಂದ ಅವನ ಸಂಸ್ಕೃತಿಯ ಬಗ್ಗೆ, ಜಾನಪದ ಸಂಬಂಧಿಯಾದ ಅಂಶಗಳ ಬಗ್ಗೆ ವಿಶ್ಲೇಷಿಸಲು ಸಾಧ್ಯವಾಗುತ್ತದೆ. ಪ್ರಶ್ನಾವಳಿಯನ್ನು ಸಿದ್ಧಪಡಿಸುವ ಹಂತದಲ್ಲೇ ಈ ಬಗ್ಗೆ ಯೋಚಿಸಿರಬೇಕಾಗುತ್ತದೆ.

**9. ಜಂಗಮ ವಿಧಾನ :** ಇದನ್ನು ಆಕಸ್ಮಿಕ ವಿಧಾನದಡಿಯಲ್ಲಿ ಗುರುತಿಸಬಹುದು. ಕ್ಷೇತ್ರ ಕಾರ್ಯಕ್ಕಾಗಿ ಹೋಗುವಾಗಲೋ ಕ್ಷೇತ್ರಕಾರ್ಯ ಮುಗಿಸಿ ವಾಪಸ್ಸು ಬರುವಾಗಲೋ ಘಂಟೆಗಟ್ಟಲೆ ರೈಲಿನಲ್ಲೋ ಬಸ್ಸಿನಲ್ಲೋ ಪ್ರಯಾಣ ಮಾಡುವ ಸಂದರ್ಭಗಳಲ್ಲಿ ಸಹ ಪ್ರಯಾಣಿಕರೊಡನೆ ಮಾತುಕತೆಯಲ್ಲಿ ತೊಡಗುವುದರಿಂದಲೂ ಸಂಗ್ರಹಕಾರ್ಯ ನಡೆಸುವ ವಿಧಾನ ಇದು. ಇಲ್ಲಿ ಮಾಹಿತಿ ಸಂಗ್ರಹ ಪ್ರಧಾನ ಪಾತ್ರ ವಹಿಸುತ್ತದೆ. ಇತರ ಸಾಹಿತ್ಯ ರೂಪಗಳ ಸಂಗ್ರಹವೂ ಸಾಧ್ಯವಾಗುತ್ತದೆ.

ಕಾಲಕ್ಕೆ ಸಂಬಂಧಿಸಿದಂತೆ ಎರಡು ವಿಧಗಳಿವೆ. ನಿರ್ದಿಷ್ಟ ಕಾಲದ ಅವಧಿಯನ್ನು ಗೊತ್ತುಪಡಿಸಿಕೊಂಡು, ಆ ಅವಧಿಯಲ್ಲಿ ಎಷ್ಟು ಸಂಗ್ರಹ ಮಾಡಬಹುದೋ ಅಷ್ಟನ್ನು ಮಾತ್ರ ಮಾಡಿಕೊಳ್ಳುವುದು ಒಂದು ವಿಧ. ಒಂದು ಆಚರಣೆಯ ಅಥವಾ ಜಾತ್ರೆಯ ಅಥವಾ ಹಬ್ಬದ ಸಂಪೂರ್ಣ ಮಾಹಿತಿ ಸಂಗ್ರಹಕ್ಕಾಗಿ ಎಷ್ಟು ಕಾಲ ಬೇಕಾಗಬಹುದೋ ಅಷ್ಟು ಕಾಲದ ಅವಧಿಯನ್ನು ಗೊತ್ತುಪಡಿಸಿಕೊಳ್ಳುವುದು ಇನ್ನೊಂದು ವಿಧ.

ಅಲ್ಪ ಕಾಲದ ಅವಧಿಗಿಂತ ದೀರ್ಘ ಕಾಲದ ಅವಧಿಯು ಕ್ಷೇತ್ರಕಾರ್ಯಕ್ಕೆ ಹೆಚ್ಚು ಅನುಕೂಲ. ಅವಧಿಯ ಗಾತ್ರ ದೊಡ್ಡದಾದಷ್ಟೂ ಹೆಚ್ಚು ಸಾಮುಗ್ರಿಯನ್ನು ಸಂಗ್ರಹಿಸಲು ಸಾಧ್ಯವಾಗುತ್ತದೆ; ಒಮ್ಮೊಮ್ಮ ಸಮಗ್ರವಾಗಿಯೂ ಸಂಗ್ರಹಿಸಬಹುದು. ಆದರೆ ಇದು ಸ್ವಲ್ಪಮಟ್ಟಿಗೆ ಅಪಾಯಕಾರಿಯೂ ಹೌದು. ವಕ್ತೃಗಳೊಡನೆ ಸಲುಗೆ ಹೆಚ್ಚಿದಷ್ಟೂ ವಸ್ತುನಿಷ್ಠತೆಯಿಂದ ವ್ಯಕ್ತಿನಿಷ್ಠತೆಯೆಡೆಗೆ ಜಾರುವ ಅಪಾಯ ಇದ್ದೇ ಇರುತ್ತದೆ.

ಸ್ಥಳೀಯ ಉಪಭಾಷೆಯನ್ನು ಅರ್ಥಮಾಡಿಕೊಳ್ಳುವ ಸಂಗ್ರಹಕಾರನ ಸಾಮರ್ಥ್ಯ ಕೂಡ ಕಾಲದ ಮೇಲೆ ಪರಿಣಾಮ ಬೀರುತ್ತದೆ. ಸ್ಥಳೀಯ ಜನರ ಪೂರ್ವಕಲ್ಪನೆಗಳು, ಪೂರ್ವಗ್ರಹಗಳೇನಾದರೂ ಇದ್ದರೆ ಅವು, ಅವರ ಭಯ ಆತಂಕ ಇತ್ಯಾದಿಗಳು ಕೂಡ ಸಂಗ್ರಹಕಾರನ ಕಾಲವನ್ನು ಹಿಗ್ಗಿಸುವ ಸಾಧ್ಯತೆಗಳಿರುತ್ತವೆ. ಈ ಎಲ್ಲವನ್ನೂ ಎದುರಿಸಿ ಗೆಲ್ಲುವ ಶಕ್ತಿ, ಚಾಕಚಕ್ಯತೆ ಸಂಗ್ರಹಕಾರನಿಗೆ ಇರಬೇಕಾಗುತ್ತದೆ.

ಕ್ಷೇತ್ರಕಾರ್ಯಕ್ಕಾಗಿ ಉದ್ದೇಶಿತ ಪ್ರದೇಶವನ್ನು ಹೊಕ್ಕ ಕೂಡಲೆ ಸಂಗ್ರಹಕಾರ ಬಿಡುವಿಲ್ಲದವನಾಗುತ್ತಾನೆ. ಆದ್ದರಿಂದ ಕ್ಷೇತ್ರಕ್ಕೆ ಹೊರಡುವ ಮೊದಲೇ ಸರ್ವಸಿದ್ಧತೆಗಳನ್ನೂ ಮಾಡಿಕೊಳ್ಳಬೇಕು. ಮುದ್ರಿತ ಲಭ್ಯ ಆಕರಗಳ ಸಹಾಯದಿಂದ ಉದ್ದೇಶಿತ ಪ್ರದೇಶಕ್ಕೆ ಸಂಬಂಧಿಸಿದ ಸಾಮಾಜಿಕ ಇತಿಹಾಸ, ವೃತ್ತಿಯಾಧಾರಿತ ಹವ್ಯಾಸಗಳು, ಶಿಕ್ಷಣ, ಧರ್ಮ, ಹಣಕಾಸು, ರಾಜಕೀಯ ಇತ್ಯಾದಿ ಪರಿಸ್ಥಿತಿಗಳನ್ನು ಅರಿತುಕೊಳ್ಳಬೇಕು. ಉಪಭಾಷೆ ಬೇರೆಯಾಗಿದ್ದಾಗ ಭಾಷೆಯನ್ನು ಕುರಿತು ತೀಕ್ಷ್ಣವಾಗಿ ಗಮನಿಸಬೇಕು. ಉದ್ದೇಶಿತ ಪ್ರದೇಶದ ನಕ್ಷೆ, ಹಳ್ಳಿಯಿಂದ ಹಳ್ಳಿಗೆ ಇರುವ ಅಂತರ, ಭೌಗೋಳಿಕ ಸ್ಥಿತಿಗತಿ, ಹವಾಮಾನ, ರಸ್ತೆಗಳ ಪರಿಸ್ಥಿತಿ, ವಾಹನ ಸೌಲಭ್ಯ, ಆಹಾರ ಸೌಲಭ್ಯ ಇತ್ಯಾದಿ ತಿಳಿದಿರಬೇಕು.

ಈ ಎಲ್ಲ ಸಿದ್ಧತೆಗಳೊಂದಿಗೆ ಉದ್ದೇಶಿತ ಪ್ರದೇಶದಲ್ಲಿ ಸಿಗಬಹುದಾದ ಜಾನಪದ ಸಾಮಗ್ರಿಗಳ ಬಗ್ಗೆಯೂ ತಿಳಿದುಕೊಳ್ಳಲು ಪ್ರಯತ್ನಿಸಬೇಕು. ಆ ಪ್ರದೇಶದಲ್ಲಿ ಈಗಾಗಲೇ ಏನೇನು ಸಂಗ್ರಹಿತವಾಗಿದೆ ಎಂಬುದನ್ನು ತಿಳಿಯಬೇಕು. ಅಲ್ಲಿ ಈಗಾಗಲೇ ಬೇರೊಬ್ಬರು ಸಂಗ್ರಹಕಾರ್ಯ ನಡೆಸಿದ್ದರೆ ಅಂಥ ಸಂಗ್ರಹಕಾರನೊಡನೆ ಸಂಪರ್ಕ ಬೆಳೆಸಿ ಏನೇನು ಸಂಗ್ರಹವಾಗಿದೆ ಎಂಬುದನ್ನು ತಿಳಿಯಲು ಪ್ರಯತ್ನಿಸಬೇಕು.

ಸಂಗ್ರಹಕಾರ್ಯಕ್ಕೆ ಹೊರಡುವ ಮೊದಲು ಪ್ರಶ್ನಾವಳಿಯನ್ನು ಸಿದ್ಧಪಡಿಸಿಕೊಳ್ಳುವುದು ಬಹಳ ಮುಖ್ಯ ಸಂಗತಿಯಾಗಿರುತ್ತದೆ. ಈ ಪ್ರಶ್ನಾವಳಿಯಲ್ಲಿ ವಕ್ತೃವಿನ ಹೆಸರು, ವಯಸ್ಸು, ಜಾತಿ, ವಿದ್ಯಾಭ್ಯಾಸ, ಕೌಟುಂಬಿಕ ವಿವರಗಳು, ಆರ್ಥಿಕ ಪರಿಸ್ಥಿತಿ, ಪೂರ್ವಿಕರ ವಿವರಗಳು, ಕಲಿತದ್ದು ಯಾರಿಂದ, ಯಾರಿಗಾದರೂ ಕಲಿಸಿದ್ದೀರಾ ಇತ್ಯಾದಿ ಪ್ರಶ್ನೆಗಳಿರುತ್ತವೆ.

ಕೆಲವೊಮ್ಮೆ ಪ್ರಶ್ನಾವಳಿಗಳನ್ನು ಸಂದರ್ಭಕ್ಕೆ, ಸನ್ನಿವೇಶಕ್ಕೆ ತಕ್ಕಂತೆ ಕೂಡ ಬದಲಾಯಿಸಿಕೊಳ್ಳುವ ಪರಿಸ್ಥಿತಿ ನಿರ್ಮಾಣವಾಗುವುದುಂಟು. ಹಾಗಾಗಿ ಯಾವಾಗಲೂ ಸಿದ್ಧ ಪ್ರಶ್ನಾವಳಿಯನ್ನು ಆಧರಿಸಿರುವುದು ಸಾಧ್ಯವಾಗದೇ ಹೋಗಬಹುದು. ಪ್ರಯಾಣ ಸಿದ್ಧತೆಯ ಸಂದರ್ಭದಲ್ಲಿ ಬೇಕಾದ ಅನೇಕ ನಿತ್ಯೋಪಯೋಗಿ ವಸ್ತುಗಳಿರುತ್ತವೆ. ಅವುಗಳನ್ನೆಲ್ಲ ಜತನ ಮಾಡಬೇಕಾಗುತ್ತದೆ. ಹೊರಡುವ ಮೊದಲೇ ರಕ್ಷಣಾ ವ್ಯವಸ್ಥೆಗಳೂ ಆಗಿರಬೇಕು. ಉದ್ದೇಶಿತ ಪ್ರದೇಶದ ತಹಶೀಲ್ದಾರರಿಗೆ, ಪೋಲೀಸರಿಗೆ, ಪತ್ರಗಳ ಮೂಲಕ ತಿಳಿಸುವುದೂ ಅಗತ್ಯ.

ಜಾನಪದ ಕ್ಷೇತ್ರದಲ್ಲಿ ಶೀಘ್ರಲಿಪಿಯ ಬಳಕೆ ನಿಷಿದ್ಧ. ಶ್ರೀಘ್ರಲಿಪಿ ಗೊತ್ತಿರುವ ಸಂಗ್ರಹಕಾರನಾಗಿದ್ದರೆ ಟಿಪ್ಪಣಿಗಳನ್ನು ನಮೂದಿಸಲು ಮಾತ್ರ ಅದನ್ನು ಬಳಸಬಹುದು. ಕ್ಷೇತ್ರಕಾರ್ಯದಲ್ಲಿ ಇನ್ನೊಂದು ಬಹುಮುಖ್ಯ ಅಂಶವೆಂದರೆ ವಿಶ್ವಾಸಗಳಿಕೆ. ಸ್ಥಳೀಯರ ವಿಶ್ವಾಸವನ್ನು ಗಳಿಸಿಕೊಂಡು ಸಂಗ್ರಹದ ಕೆಲಸ ಮುಗಿಯುವವರೆಗೆ ಅದನ್ನು ಕಾಯ್ದುಕೊಳ್ಳಬೇಕು.

ಹೀಗೆ ವಿಶ್ವಾಸಗಳಿಸಿಕೊಳ್ಳುವಲ್ಲಿಂದ ಹಿಡಿದು, ಸಹಾಯಕನನ್ನು ಗೊತ್ತುಮಾಡಿಕೊಳ್ಳುವ, ಇತರರ ನೆರವು ಪಡೆಯುವ, ವಕ್ತೃಗಳ ಮನಸ್ಸನ್ನು ನಮ್ಮ ಉದ್ದೇಶಕ್ಕಾಗಿ ಸಿದ್ಧಗೊಳಿಸುವ, ಉದ್ದೇಶ ಈಡೇರಿಸಿಕೊಳ್ಳುವ, ಇತ್ಯಾದಿ ಎಲ್ಲ ಹಂತಗಳಲ್ಲೂ ಸಂಗ್ರಹಕಾರನು ಬಹಳ ಎಚ್ಚರಿಕೆಯಿಂದ ಕಾರ್ಯನಿರ್ವಹಿಸಬೇಕಾದುದು ತೀರ ಅನಿವಾರ್ಯ.

ಜನಪದ ಕ್ಷೇತ್ರಕಾರ್ಯದಲ್ಲಿ ವಕ್ತೃವಿನ ಆರ್ಥಿಕ ಸ್ಥಿತಿಗತಿಗಳನ್ನೂ ಗಮನಿಸಿ ಕ್ಷೇತ್ರಕಾರ್ಯ ನಿರ್ವಹಿಸಬೇಕಾಗಬಹುದು. ಸಾಮಾನ್ಯವಾಗಿ ಇಂಥ ಸಂದರ್ಭವೇ ಹೆಚ್ಚು. ಆಗ ಸಂಗ್ರಹಕಾರ ಆರ್ಥಿಕವಾಗಿ ಮಾತ್ರವಲ್ಲ, ಮಾನವೀಯವಾಗಿಯೂ ಕಷ್ಟಸುಖಗಳಲ್ಲಿ ಭಾಗಿಯಾಗಬೇಕಾಗುತ್ತದೆ. ಅವರಲ್ಲಿರುವ ಸಾಂಸ್ಕೃತಿಕ ಭಂಡಾರವನ್ನು ಅವರಿಗೆ ಮನವರಿಕೆಯಾಗುವಂತೆ ವಿವರಿಸಿ ಅವರನ್ನು ಪ್ರಚೋದಿಸಬೇಕಾಗುತ್ತದೆ. ಸದಾ ದುಡಿಯುವ ಯೋಚನೆಯನ್ನೇ ತಲೆಯಲ್ಲಿ ತುಂಬಿಕೊಂಡಿರುವ ಅವರಲ್ಲಿ ಸಾಂಸ್ಕೃತಿಕ ಮಹತ್ವವನ್ನು, ಉತ್ಸಾಹವನ್ನು ತುಂಬಬೇಕಾಗುತ್ತದೆ. ಅವರು ಬಯಸಿದ ವಸ್ತುವನ್ನೋ ಹಣವನ್ನೋ ನೀಡುವ ಆಮಿಷವನ್ನೂ ಕೆಲವೊಮ್ಮೆ ಒಡ್ಡಬೇಕಾಗಿ ಬರಬಹುದು.

ಕ್ಷೇತ್ರಕಾರ್ಯದಲ್ಲಿ ಎದುರಾಗುವ ಸಮಸ್ಯೆಗಳನ್ನು ಎರಡು ಬಗೆಯಾಗಿ ವಿಂಗಡಿಸಬಹುದು. 1. ಪ್ರಾಕೃತಿಕ ಹಾಗೂ ಲೌಕಿಕ ಸಮಸ್ಯೆಗಳು: ಮಳೆ, ಬಿಸಿಲು, ಕತ್ತಲು ಉಪವಾಸಗಳಂಥವು. ದಾರಿಯ ಬದಿಯಲ್ಲಿ, ಹೊಲಗಳಲ್ಲಿ, ಹಾಳುಮಂಟಪಗಳಲ್ಲಿ, ಶಾಲಾ ಜಗಲಿಗಳಲ್ಲಿ, ರಾತ್ರಿಗಳನ್ನು ಕಳೆಯಬೇಕಾದ ಸಂದರ್ಭಗಳು, ಒಂಟಿಯಾಗಿ ಸಂಚರಿಸುವಾಗ ಕಳ್ಳರ ಕೈಗೆ ಸಿಕ್ಕಿಕೊಳ್ಳುವಂಥ ಕ್ಷಣಗಳು, ನಿರೀಕ್ಷೆಗೂ ಮೀರಿ ಕೈಬಿಟ್ಟು ಹೋಗುವ ಹಣ, ದೂರದೂರುಗಳಲ್ಲಿ ಹಲವಾರು ದಿನಗಳ ಕಾಲ ನಡೆಸುವ ದೀರ್ಘಕಾಲದ ಅವಧಿಯ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಒಯ್ದ ಹಣವೆಲ್ಲ ಮುಗಿದು ಅನುಭವಿಸಬೇಕಾದ ಅನಾಥ ಸ್ಥಿತಿ ಇತ್ಯಾದಿ. 2. ಸಾಂಸ್ಕೃತಿಕ ಸಮಸ್ಯೆಗಳು: ಬಾಯಿಯಿಂದ ಬಾಯಿಗೆ ಹರಿದು ಬರುವ ಒಂದೇ ವಿಚಾರ ಒಬ್ಬೊಬ್ಬರ ಬಾಯಿಯಲ್ಲೂ ಭಿನ್ನರೂಪದಲ್ಲಿ ಗೋಚರಿಸುವ, ಒಬ್ಬನೇ ವ್ಯಕ್ತಿಯ ಬಾಯಿಯಲ್ಲಿಯೇ ಕಾಲದಿಂದ ಕಾಲಕ್ಕೆ ವ್ಯತ್ಯಾಸಗೊಳ್ಳುತ್ತಾ ಸಾಗುವ, ಜನಪದ ಸಾಹಿತ್ಯ; ಕೈಯಿಂದ ಕೈಯಿಗೆ, ತಲೆಯಿಂದ ತಲೆಗೆ, ಮಾರ್ಪಾಡುಗಳನ್ನು ಕಂಡುಕೊಳ್ಳುತ್ತಾ ಸಾಗುವ ಜಾನಪದದ ಇತರ ಅಂಗಗಳು. ಗ್ರಂಥಸಂಪಾದನೆಯನ್ನು ಮೀರಿಸುವಂಥ ಇತರ ಜಟಿಲ ಸಮಸ್ಯೆಗಳು, ಕಥೆಗಾರನು ಅಭಿನಯಪೂರ್ವಕವಾಗಿ ಹೇಳುವ ದೇಹಭಾಷೆ (ಬಾಡಿ ಲ್ಯಾಂಗ್ವೇಜ್)ಯನ್ನು ಅಕ್ಷರಕ್ಕೆ ಇಳಿಸುವಿಕೆ, ಬಳಕೆ ತಪ್ಪಿರುವ ಶಬ್ದಗಳು ಹಾಗೂ ಕೇವಲ ಉಚ್ಚಾರದಲ್ಲಿ ಮಾತ್ರ ಸಾಧ್ಯವಾಗುವ ಶಬ್ದವಿಶೇಷಗಳು - ಇವನ್ನು ಅರ್ಥಪೂರ್ಣವಾಗಿ ಅಕ್ಷರಗೊಳಿಸುವಿಕೆ, ಅಶುದ್ಧ ಶಬ್ದಗಳನ್ನು ತಿದ್ದಬೇಕೋ ತಿದ್ದಬಾರದೋ ಎಂಬ ಸಂದಿಗ್ಧ ಇತ್ಯಾದಿ.

ಕ್ಷೇತ್ರಕಾರ್ಯ ಮುಗಿಸಿ ಬಂದ ಅನಂತರ ಸಂಗ್ರಹಿತ ಮಾಹಿತಿಯನ್ನು ಬರಹ ರೂಪಕ್ಕೆ ತರುವುದು, ಅಗತ್ಯಕ್ಕೆ ತಕ್ಕಂತೆ ಸ್ಫುಟ ಪ್ರತಿ ತಯಾರಿಸುವುದು, ಪ್ರಕಟಣೆಗೆ ಸಿದ್ಧಪಡಿಸುವುದು ಸಂಗ್ರಹಕಾರನ ತುರ್ತು ಕೆಲಸವಾಗಿರುತ್ತದೆ.

ಪ್ರಕಟಣೆಗೆ ಸಿದ್ಧಪಡಿಸುವಲ್ಲಿ ಈ ಮುಂದಿನ ಐದು ಅಂಶಗಳನ್ನು ಮುಖ್ಯವಾಗಿ ಗಮನಿಸಬೇಕು. 1. ವಕ್ತೃವಿನ ಹೆಸರು, ವಯಸ್ಸು, ಲಿಂಗ, ಜಾತಿ, ಶಿಕ್ಷಣ, ಊರು, ದೇಶ; 2. ಕಥೆಯಾಗಿದ್ದರೆ ಅದರೊಳಗೆ ಬರುವ ನಾಯಕರು ಖಳನಾಯಕರು ಅಥವಾ ದುಷ್ಟಶಕ್ತಿಗಳು; ಹಾಡಾಗಿದ್ದರೆ ಅದು ಬಿಡಿ ಹಾಡೇ ಅಥವಾ ಕಥನಗೀತೆಯೇ, ಕಥನಗೀತೆಯಾಗಿದ್ದರೆ ವಸ್ತು ಪಾತ್ರ ಇತ್ಯಾದಿ. 3. ಭಾಷೆಯ ಸ್ವರೂಪ, ಅಂದರೆ, ಸಂಗ್ರಹಿತ ಪ್ರದೇಶದ ಉಪಭಾಷೆ ಹಾಗೂ ಅದು ಎಷ್ಟರಮಟ್ಟಿಗೆ ಶುದ್ಧರೂಪದಲ್ಲಿ ಉಳಿದಿದೆ ಎಂಬ ಅಂಶಗಳು 4. ಸಂಗ್ರಹಿಸಿದ ಸ್ಥಳ ಮತ್ತು ದಿನಾಂಕ. 5.ಸಂಗ್ರಹಕಾರನ ವಿವರಗಳು. ಈ ಸೂಚಿಯ ಆಧಾರದ ಮೇಲೆ ಇನ್ನೆರಡು ಸೂಚಿಗಳನ್ನು ರೂಪಿಸಿಕೊಳ್ಳಬೇಕು - ವರ್ಗಸೂಚಿ (ಟೈಪ್ ಇಂಡೆಕ್ಸ್) ಮತ್ತು ಆಶಯ ಸೂಚಿ (ಮೋಟಿಫ್ ಇಂಡೆಕ್ಸ್).

ಕ್ಷೇತ್ರಕಾರ್ಯದಲ್ಲಿ ಸಾಹಿತ್ಯ ಸಂಗ್ರಹದ ಜೊತೆಗೆ ಜನಪದ ಬದುಕಿನ ದಿನನಿತ್ಯದ ಬಳಕೆಯ ವಸ್ತುಗಳ ಸಂಗ್ರಹಣೆಯೂ ಒಳಗೊಳ್ಳುತ್ತದೆ.

ಮಾನವ ವಿಜ್ಞಾನ, ಮನೋವಿಜ್ಞಾನ, ಇತಿಹಾಸ, ಸಂಗೀತ, ಭಾಷಾ ವಿಜ್ಞಾನ, ಸಮಾಜ ವಿಜ್ಞಾನ ಮುಂತಾದುವುಗಳಂತೆ ಜಾನಪದವೂ ಒಂದು ವಿಜ್ಞಾನವಾದುದರಿಂದ ಪರಂಪರಾಗತ ಸಾಹಿತ್ಯವನ್ನು ಅರ್ಥೈಸಲು ಸೈದ್ಧಾಂತಿಕ ನೆಲೆಯೊಂದರ ಅಗತ್ಯ ಇದೆ. ಅಂಥ ನೆಲೆಯೊಂದನ್ನು ಕಂಡುಕೊಳ್ಳಬೇಕಾದರೆ ಸಂಗ್ರಹಕಾರ ಸಂಶೋಧಕನಾಗಿಯೂ ಕೆಲಸ ನಿರ್ವಹಿಸಬೇಕಾಗುತ್ತದೆ. ಇದಕ್ಕಾಗಿ ಪೂರ್ವಶಿಕ್ಷಣವೊಂದರ ಅಗತ್ಯ ಕಂಡುಬಂದರೂ ಗ್ರಂಥಾಲಯದ ಬಳಕೆಯಿಂದ ತನ್ನ ಅನುಭವಗಳ ಆಧಾರದಿಂದ, ಸಿದ್ಧಾಂತವೊಂದನ್ನು ಮಂಡಿಸಲು ಸಾಧ್ಯವಾಗಬಹುದು. (ಕೆ.ಆರ್.)

**ಜಾನಪದ ಲೋಕ :** ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ಸು.15 ಎಕರೆ ಪ್ರದೇಶದಲ್ಲಿ ಸ್ಥಾಪಿಸಲಾಗಿರುವ (1994) ಒಂದು ಸಾಂಸ್ಕೃತಿಕ ಕೇಂದ್ರ. ಹೆಸರಾಂತ ಜಾನಪದ ವಿದ್ವಾಂಸ ಎಚ್.ಎಲ್.ನಾಗೇಗೌಡ (ನೋಡಿ) ಇದರ ಸ್ಥಾಪಕರು. ಸರ್ಕಾರಿ ಸೇವೆಯಿಂದ ನಿವೃತ್ತರಾದ ಬಳಿಕ (1979) ತಮ್ಮ ಅಭಿಮಾನಿಗಳು ಬೆಂಗಳೂರಿನಲ್ಲಿ ತಮಗೆ ಸಾರ್ವಜನಿಕ ಸನ್ಮಾನ ಸಮಾರಂಭದಲ್ಲಿ ಅರ್ಪಿಸಿದ ಒಂದು ಲಕ್ಷ ಹದಿನೈದು ಸಾವಿರ ರೂಪಾಯಿ ನಿಧಿಯಿಂದ ಕರ್ನಾಟಕ ಜಾನಪದ ಟ್ರಸ್ಟ್ (ರಿ) ಸಂಸ್ಥೆಯನ್ನು ಪ್ರಾರಂಭಿಸಿದರು. ಜನಪದ ಸಾಹಿತ್ಯ, ಸಂಗೀತ, ನೃತ್ಯ, ನಾಟಕ, ಕುಶಲಕಲೆ, ಚಿತ್ರಕಲೆ ಮುಂತಾದವುಗಳ ಸಂರಕ್ಷಣೆ ಇದರ ಮೂಲ ಉದ್ದೇಶ. ಜಾನಪದ ಲೋಕ ಈ ಟ್ರಸ್ಟಿನ ನಿರ್ಮಾಣ. ನಿರ್ಭಾಗ್ಯ ಜನಪದ ಕಲಾವಿದರ ಬಾಳಿಗೆ ಭರವಸೆ ತುಂಬುವ ಕೆಲಸ ಜಾನಪದ ಲೋಕದ ಆಶಯ. ಜನಪದ ಸಂಸ್ಕೃತಿಯ ಸೌರಭವನ್ನು ನಾಡಿನಾದ್ಯಂತ ಹರಡುವುದು, ಜನಪದರ ಬದುಕು, ಕಲೆ, ಆಚರಣೆ, ಹಬ್ಬ ಹರಿದಿನ, ಕುಣಿತ ಮೆರೆತ, ಹಾಡು ಪಾಡುಗಳ ಸಂಗ್ರಹ ಹಾಗೂ ಸಂಶೋಧನೆ ಜಾನಪದ ಲೋಕದ ಗುರಿ.

ಈ ಕೇಂದ್ರದಲ್ಲಿ ಹನ್ನೆರಡು ಘಟಕಗಳಿವೆ. ಇವುಗಳಿಗೆ ಅರ್ಥಪೂರ್ಣವಾದ ಹೆಸರುಗಳನ್ನು ಕೊಡಲಾಗಿದೆ.



ಜಾನಪದ ಲೋಕದ ಪ್ರವೇಶದ್ವಾರ

**ಲೋಕಮಾತಾ ಮಂದಿರ :** ಗ್ರಾಮೀಣ ಮಹಿಳೆಯರ ಚಿತ್ರಕಲೆ, ಮನೆಬಳಕೆ ವಸ್ತುಗಳಿಗೆ ಮೀಸಲಾದ ಕಟ್ಟಡ. ಗ್ರಾಮೀಣ ಮಹಿಳೆಯರ ಕರಕುಶಲತೆಯನ್ನು ಇಲ್ಲಿನ ಹೆಚ್ಚಿನ ವಸ್ತುಗಳು ಪ್ರತಿಬಿಂಬಿಸುತ್ತವೆ. ಚಿತ್ತಾರಗಳು, ಪಟಗಳು ಮನ ಸೆಳೆಯುತ್ತವೆ. ಸಾಗರದ ದೀವರ ಸಮುದಾಯದ ಮನೆಯ ಹಸೆಗೋಡೆ ಚಿತ್ತಾರಗಳು, ಬುಟ್ಟಿ ಚಿತ್ತಾರಗಳು, ಕುಸರಿ ಕೆಲಸಗಳು ಚಿತ್ತಾಕರ್ಷಕವಾಗಿವೆ. ಹಾಲಕ್ಕಿ ಒಕ್ಕಲಿಗರು, ಗೊಂಡರು, ಮುಕ್ರಿಯರು, ಕುಡುಬಿಯರು, ಗೌಳಿಗರು ಬಳಸುವ ಬಿದಿರು, ಬೆತ್ತ, ಮರದಿಂದ ಮಾಡಿದ ಅಡುಗೆ ಮನೆ ಸಲಕರಣೆಗಳು ಅವರ ಕುಶಲ ಕಲೆಯ ಉತ್ಕೃಷ್ಟ ಉದಾಹರಣೆಗಳಾಗಿವೆ. ವಾಡೆ, ಗುಡಾಣ, ಮಡಕೆಗಳೂ ಮರದ ಪೆಠಾರಿ ಪೆಟ್ಟಿಗೆಗಳೂ ತೊಟ್ಟಿಲುಗಳೂ ಗಮನ ಸೆಳೆಯುತ್ತವೆ.

**ಚಿತ್ರಕುಟೀರ :** ಇಲ್ಲಿ ಧ್ವನಿಮುದ್ರಿಕೆಗಳ ಆಡಿಯೊ, ವಿಡಿಯೊ ಕ್ಯಾಸೆಟ್‌ಗಳೂ ಸ್ಲೈಡುಗಳೂ ಛಾಯಾಚಿತ್ರಗಳೂ ವಸ್ತುಗಳೂ ಪುಸ್ತಕಗಳೂ ಹಸ್ತಪ್ರತಿಗಳೂ ಅಪರೂಪದ ಗ್ರಂಥಗಳ ಸಂಗ್ರಹವೂ ಪ್ರದರ್ಶನಗೊಂಡಿವೆ. ನಾಡಿನ ಹಬ್ಬ, ಕಲೆ, ಆಚರಣೆ, ಜಾತ್ರೆಗಳನ್ನು ಕಣ್ಣ ಮುಂದೆ ತಂದು ನಿಲ್ಲಿಸುವ ಆಕರ್ಷಕ ವರ್ಣಚಿತ್ರಗಳಿವೆ.

**ಲೋಕಮಹಲ್ :** ಇದು ವಸ್ತು ಸಂಗ್ರಹಾಲಯ. ಎರಡಂತಸ್ತಿನ ಕಟ್ಟಡ. ಇದರ ವಿನ್ಯಾಸ ಮನಮೋಹಕವಾಗಿದೆ. ಮದುವೆಯಲ್ಲಿ ಬಳಸುವ ಚಿತ್ತಾರದ ಹಸೆಮಣೆ, ತೇವಟಿಗೆಮಣೆ, ಬಳುವಳಿ ಸಟ್ಟುಗ, ನಾನಾ ಬಗೆಯ ಬಾಸಿಂಗಗಳು, ಬೇಸಾಯದ ಉಪಕರಣಗಳು, ಮೆಕ್ಕೆಕಟ್ಟೆಯ 15 ಅಡಿ ಎತ್ತರದ ಬೃಹತ್ ವಿಗ್ರಹಗಳ ಮಿನಿಮಾದರಿ ವಿಗ್ರಹಗಳು, ತೊಗಲು ಗೊಂಬೆಗಳು ಮೊದಲಾದ ವಸ್ತುಗಳ ವೈವಿಧ್ಯಮಯ ಸಂಗ್ರಹ ಇಲ್ಲಿದೆ. ಸೂತ್ರದ ಗೊಂಬೆಗಳು, ಯಕ್ಷಗಾನ ವೇಷಗಳ ಮಾದರಿಗಳು, ಕರ್ನಾಟಕ ಜನಪದ ವಾದ್ಯಗಳ ಸಂಗ್ರಹ ಅಪಾರವಾಗಿದೆ. ಹೆರಳು, ಕೊರಳು, ಕೈಗಳ ಆಭರಣಗಳನ್ನೂ ಪ್ರದರ್ಶಿಸಲಾಗಿದೆ. ತೂಕ, ಅಳತೆ ಮಾಪನಗಳೂ, ಇಲ್ಲಿವೆ. ಗಂಜೀಫ ಕಲೆಯ ಚಿತ್ರಗಳು, ಮಕ್ಕಳ ಆಟಿಕೆಗಳೂ, ಸೋಮನ ಮುಖವಾಡಗಳು, ಹರಿಗೆ, ಮರದ ಆಳೆತ್ತರದ ಭೂತದ ವಿಗ್ರಹಗಳು ಆಕರ್ಷಕವಾಗಿವೆ.

**ಶಿಲ್ಪಮೇಳ :** ಇಲ್ಲಿರುವ ವೀರಗಲ್ಲು, ಸತೀಕಲ್ಲುಗಳು, ಶಾಸನ ಕಲ್ಲುಗಳು, ರಥ, ಫಿರಂಗಿ ಮೊದಲಾದವು ಗತಕಾಲದ ಚರಿತ್ರೆಯನ್ನು ಸಾರುತ್ತವೆ. ರಾಜ ಮಹಾರಾಜರುಗಳ ಕಾಲದ ಬೃಹದಾಕಾರದ ಕಲ್ಲಿನ ತೊಟ್ಟಿಗಳೂ ಇಲ್ಲಿವೆ.

**ಆಯಗಾರರ ಮೇಳ :** ಕಣ್ಮರೆಯಾಗುತ್ತಿರುವ ಹಳ್ಳಿಯ ಹನ್ನೆರಡು ಬಗೆಯ ಕಸಬುಗಳಾದ ಕುಂಬಾರಿಕೆ, ಕಮ್ಮಾರಿಕೆಯ ಉಪಕರಣಗಳು, ಮರದ ಹಾಗೂ ಕಬ್ಬಿನ ಗಾಣ, ಎಣ್ಣೆಗಾಣ, ಕೊಟ್ಟಣ, ಬೇಸಾಯದ ಸಲಕರಣೆಗಳು ಇಲ್ಲಿ ಪ್ರದರ್ಶನಗೊಂಡಿವೆ. ಬಲೆಗಳು, ನಾಡದೋಣಿಗಳು, ಮೀನು ಕುಣಿಗಳು, ಬೇಟೆಯ ಸಲಕರಣೆಗಳು ಮುಂತಾದ ವಸ್ತುಗಳಿವೆ.

**ದೊಡ್ಡಮನೆ :** ಇದೊಂದು ತೊಟ್ಟಿ ಮನೆ. ಇದು ಎಚ್.ಎಲ್. ನಾಗೇಗೌಡರ ವಂಶದ ದೊಡ್ಡ ಮನೆಯನ್ನು ನೆನಪಿಗೆ ತರುವಂಥ ಪ್ರಯತ್ನ. ಸಭೆಗಳಿಗೆ, ಕಮ್ಮಟ, ಶಿಬಿರಗಳಿಗೆ, ಅತಿಥಿಗಳ ಊಟ ವಸತಿಗೆ ಅತ್ಯಂತ ಅನುಕೂಲಕರವಾಗಿದೆ.

**ಮಹಾದ್ವಾರ :** ಇದು ಬೃಹದಾಕಾರವಾದ ಕೊಂಬುಕಹಳೆ ಹಾಗೂ ಹರಿಗೆಗಳಿಂದ ಅಲಂಕೃತವಾದ ಇಪ್ಪತ್ತು ಅಡಿ ವಿಶಾಲವಾದ ಮಹಾದ್ವಾರ. ದ್ವಾರದ ಎರಡೂ ಬದಿಯಲ್ಲಿ, ಆಕಾಶಕ್ಕೆ ಚಾಚಿನಿಂತ 26 ಅಡಿ ಎತ್ತರದ ಹಿತ್ತಾಳೆಯ ನಂದಿ ಧ್ವಜಗಳಿವೆ. ಮುಖವಾಡದ ಹರಿಗೆ ವೈಷ್ಣವ ಸಂಪ್ರದಾಯವನ್ನು ಪ್ರತಿನಿಧಿಸಿದರೆ, ನಂದಿಧ್ವಜಗಳು ಶೈವ ಸಂಪ್ರದಾಯದ ಪ್ರತೀಕ. ಕಹಳೆಗಳು ಜನಪದ ಸಂಸ್ಕೃತಿಯ ಪ್ರತಿರೂಪ. ಮಹಾದ್ವಾರ ಮುಚ್ಚಿದರೆ, ಎದುರು ಮತ್ತು ಹಿಂಬದಿ ಎರಡರಲ್ಲೂ ಒಂದೇ ಬಗೆಯ ವಿನ್ಯಾಸವನ್ನು ಕಾಣಬಹುದಾಗಿದೆ.

**ಲಾಂಛನ :** ಬೀಸುವ ಕಲ್ಲಿನ ಮುಂದೆ ಕೂತ ಹಳ್ಳಿಯ ಹೆಣ್ಣಿನ ಚಿತ್ರ ಜಾನಪದ ಲೋಕದ ಲಾಂಛನವಾಗಿದೆ. ಗ್ರಾಮೀಣ ಬದುಕಿನಲ್ಲಿ ಬೀಸುವ ಕಲ್ಲು ನಿರಂತರ ಕಾಯಕಕ್ಕೆ ಸಂಕೇತ. ಕಲ್ಲಮ್ಮ ತಾಯಿ ಮೆಲ್ಲಮ್ಮ ರಾಗೀಯ ಜಲ್ಲ ಜಲ್ಲಾನೆ ಉದುರಮ್ಮ ಎಂದು ಹಳ್ಳಿಯ ಹೆಣ್ಣುಮಗಳು ರಾಗಿಕಲ್ಲನ್ನು ಸ್ತುತಿಸುತ್ತಾಳೆ. ಬೀಸುವಕಲ್ಲಿನಿಂದ ಉದುರುವುದು ನುರಿದ ರಾಗಿ ಹಿಟ್ಟು ಮಾತ್ರವಲ್ಲ ಇಡೀ ಜನಪದ ಕಾವ್ಯ ಭಂಡಾರ. ಈ ಅಂಶವನ್ನು ಸಂಕೇತಿಸುವಂತೆ ಎಪ್ಪತ್ತೈದು ವರ್ಷ ಹಳೆಯದಾದ ಒಂದು ಬೃಹತ್ತಾದ ಬೀಸುವ ಕಲ್ಲು ಲೋಕಮಾತಾ ಮಂದಿರದ ಮುಂದೆ ಸ್ಥಾಪಿತವಾಗಿದೆ. ಎರಡು ಎತ್ತು ಅಥವಾ ಕೋಣಗಳನ್ನು ಕಟ್ಟಿ ತಿರುಗಿಸಬೇಕಾದಷ್ಟು ದೊಡ್ಡದಾದ ಬೀಸುವ ಕಲ್ಲು ಜಾನಪದ ಲೋಕದ ವಿಸ್ಮಯಗಳಲ್ಲೊಂದು.

**ಲೋಕನಿವಾಸ :** ಇದು ಜಾನಪದ ಲೋಕದ ಕಚೇರಿ.

**ಬಯಲು ರಂಗಮಂದಿರ :** ಗ್ರೀಕ್ ರಂಗಭೂಮಿ ಮಾದರಿಯಲ್ಲಿ 800 ಪ್ರೇಕ್ಷಕರು ಕುಳಿತುಕೊಳ್ಳಬಹುದಾದಷ್ಟು ವಿಶಾಲವಾದ ಬಯಲು ರಂಗಮಂದಿರ. ಜಾನಪದ ಲೋಕದ ಸಮಸ್ತ ಚಟುವಟಿಕೆಗಳು ಇಲ್ಲಿ ನಡೆಯುತ್ತವೆ.

(ಎಸ್.ಎಚ್.ಎಂ.)

**ಜಾವಗಲ್ ಶ್ರೀನಾಥ್ :** 1969– ಭಾರತದ ಕ್ರಿಕೆಟ್ ಆಟಗಾರ. ವೇಗದ ಬೋಲರ್. 1969 ಆಗಸ್ಟ್ 31ರಂದು ಮೈಸೂರಿನಲ್ಲಿ ಜನಿಸಿದರು. ಕರ್ನಾಟಕ, ಗ್ಲೌಸೆಸ್ಟರ್‌ಷೈರ್, ಲೀಸೆಸ್ಟರ್‌ಷೈರ್ ಮತ್ತು ಭಾರತ ತಂಡಗಳ ಪರವಾಗಿ ಆಡಿದರು. ಬಲಗೈ ಮಧ್ಯಮ ವೇಗದ ಎಸೆತಗಾರರೆಂದು (ಬೋಲರ್) ಪರಿಣತಿ ಪಡೆದರು. ಬ್ಯಾಟಿಂಗ್ ಪ್ರದರ್ಶನವನ್ನೂ ಮಾಡಿದ್ದಾರೆ. ಅದರಲ್ಲೂ ಬಲಗೈ ಆಟಗಾರರೇ. ಮೈಸೂರಿನ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರಿಂಗ್‌ನ ವಿದ್ಯಾರ್ಥಿ. ಬಿ.ಇ. ಪದವೀಧರ.

ಇವರು 1989ರಲ್ಲಿ ಪ್ರಥಮ ದರ್ಜೆಯ ಪಂದ್ಯಗಳಲ್ಲಿ ಆಡತೊಡಗಿದರು. ಟೆಸ್ಟ್ ಪಂದ್ಯದಲ್ಲಿ ಆಡಲು ಪ್ರವೇಶ ಪಡೆದಾಗ ವೆಸ್ಟ್ ಇಂಡಿಸ್ ಮತ್ತು ದಕ್ಷಿಣ ಆಫ್ರಿಕದ ವೇಗದ ಬೋಲರುಗಳಿಗೆ ಸರಿಸಮರೆಂಬ ಪ್ರತೀತಿ ಇತ್ತು. ಆಸ್ಟ್ರೇಲಿಯ ಪ್ರವಾಸ ತಂಡದ ಆಲನ್ ಬಾರ್ಡರರಿಂದ ಸೈ ಎನಿಸಿಕೊಂಡರು. ಅನಂತರ ದಕ್ಷಿಣ ಆಫ್ರಿಕದ ಪ್ರವಾಸದಲ್ಲೂ (1992) ಒಳ್ಳೆಯ ಪ್ರದರ್ಶನ ನೀಡಿದರು. ಭಾರತದಲ್ಲಿ ಟೆಸ್ಟ್ ಪಂದ್ಯಾವಳಿಯಲ್ಲಿ ಇವರಿಗೆ ಸ್ಥಾನ ದೊರೆಯಲಿಲ್ಲ. ಕಪಿಲ್‌ದೇವ್ ನಿವೃತ್ತಿಯ ಅನಂತರ ಶ್ರೀನಾಥ್ ಹೆಚ್ಚು ಪ್ರಕಾಶಕ್ಕೆ ಬಂದರು. ಕಪಿಲ್‌ದೇವರ ಸ್ವಿಂಗ್ ಎಸೆತಗಳು ಕ್ರಿಕೆಟ್ ಅಭಿಮಾನಿಗಳ ಮನ ಸೂರೆಗೊಂಡಿದ್ದವು. ಅನಂತರ ಬಂದ ಜಾವಗಲ್ಲರು ಆ ಶೈಲಿಯನ್ನು ಮುಂದುವರಿಸಿದರೆನ್ನಲಾಗಿದೆ. ಹನ್ನೊಂದು ವರ್ಷಗಳ ಕಾಲ ಅಂತಾಷ್ಟ್ರೀಯ ಪಂದ್ಯಾಟಗಳಲ್ಲಿ ಪಾಲ್ಗೊಂಡು ಇವರು ಆ ಕ್ಷೇತ್ರದಿಂದ ನಿರ್ಗಮಿಸಿದರು. ಕಪಿಲದೇವ್ ಅನಂತರದ ಪಟ್ಟ ಇವರದೇ ಎನಿಸಿಕೊಂಡರು. ಇವರ ಎಸೆತದ ಪ್ರಧಾನ ಲಕ್ಷಣವೆಂದರೆ ಭುಜಪರಾಕ್ರಮ. ಪಿಚ್ಚಿಗೆ ನೇರವಾಗಿ



ಅತ್ಯಂತ ಬಲದಿಂದ ಕೂಡಿ ಪ್ರಹಾರ ಮಾಡುವುದರಲ್ಲಿ ನಿಷ್ಣಾತರೆಂದು ಹೆಸರು ಮಾಡಿದರು. ತುಂಬ ಸಪ್ಪೆಯ ವಿಕೆಟ್ಟಿನ ಮೇಲೂ ವೇಗ ಮತ್ತು ಪುಟಿತ ಸಾಧಿಸು ತ್ತಿದ್ದರು. ಅನಿರೀಕ್ಷಿತ ಇನ್ ಸ್ವಿಂಗರ್ ಮತ್ತು ವಿಳಂಬಿತ ಹಾಗೂ ಮಾರಕ ಮಾರ್ಕ ರುಗಳಿಂದಲೂ ಬ್ಯಾಟ್ ದಾರರಿಗೆ ಯಮಸದೃಶ ಎನಿಸಿಕೊಂಡಿದ್ದರು. ಲೈನ್ ಮತ್ತು ಲೆಂಗ್ತ್ ವಿಚಾರದಲ್ಲಿ ಬೋಲಿಂಗಿನ ಮೂಲಭೂತ ಗುಣಲಕ್ಷಣವನ್ನು ಕುರಿತಂತೆ ಎಂದಿಗೂ ರಾಜಿಯ ಮನೋಧರ್ಮ ತೋರಿಸಲಿಲ್ಲ. ಲೈನು ಮತ್ತು ಲೆಂಗ್ತುಗಳನ್ನು ಯಾವಾಗಲೂ ಕಾಪಾಡಿಕೊಳ್ಳುತ್ತಿದ್ದರು.

ಒಂದು ದಿನದ ಅಂತಾರಾಷ್ಟ್ರೀಯ ಪಂದ್ಯದಲ್ಲಿ ಪ್ರಥಮತಃ ಇವರು ಭಾಗವಹಿಸಿದ್ದು ಪಾಕಿಸ್ತಾನದ ವಿರುದ್ಧ. ಷಾರ್ಜದಲ್ಲಿ ವಿಲ್ಸ್ ಟ್ರೋಫಿಗಾಗಿ ಭಾರತ ಆಡಿದ ಆಟದಲ್ಲಿ. ಟೆಸ್ಟ್ ಆಟದಲ್ಲಿ ಇವರು ಪ್ರಥಮತಃ ಭಾಗವಹಿಸಿದ್ದು 1991-92ರಲ್ಲಿ. ಭಾರತದ ಆಸ್ಟ್ರೇಲಿಯ ಪ್ರವಾಸದ ಅಂಗವಾಗಿ ಬ್ರಿಸ್‌ಬೇನ್‌ನಲ್ಲಿ ನಡೆದ ಪ್ರಥಮ ಪಂದ್ಯದಲ್ಲಿ ಭಾರತದ ವೇಗದ ಆಕ್ರಮಣ ಶೀಲ ಆಟದ ನಾಯಕತ್ವ ಶ್ರೀನಾಥರದಾಗಿತ್ತು. ವೆಸ್ಟ್ ಇಂಡಿಸ್ ತಂಡದ ವಿರುದ್ಧವಾಗಿಯೂ ಇವರು ಆಡಿದರು.

ಶ್ರೀನಾಥರು ಒಂದು ದಿನದ ಅಂತಾರಾಷ್ಟ್ರೀಯ ಆಟದಲ್ಲಿ ಒಳ್ಳೆಯ ದಾಖಲೆ ಸಾಧಿಸಿದರು. ಡೆನಿಸ್‌ಲಿಲೀ ಮತ್ತು ವಾಕಾರ್‌ಯೂನಸ್ ಬಿಟ್ಟರೆ ಬೇರೆ ಯಾರೂ ಇವರಷ್ಟು ಕಡಿಮೆ ಆಟಗಳಲ್ಲಿ ನೂರು ವಿಕೆಟ್ಟುಗಳನ್ನು ಬಗಲಿಗೆ ಹಾಕಿಕೊಂಡಿರಲಿಲ್ಲ. ಇವರು ಇನಿಂಗ್ಸ್ ಕೊನೆಯ ಬ್ಯಾಟ್‌ದಾರರಾಗಿ ಅತ್ಯಂತ ವೇಗದಲ್ಲಿ ರನ್ನು ಮಾಡಿದ್ದೂ ಉಂಟು. ಇವರು 752 ಒಂದು ದಿನದ ಅಂತಾರಾಷ್ಟ್ರೀಯ ಆಟಗಳಲ್ಲಿ ಬ್ಯಾಟ್ ಮಾಡಿ ಒಟ್ಟು 830ರನ್ನು ಗಳಿಸಿದ್ದರು. ಇವರು ಗಳಿಸಿದ ಅತಿ ಹೆಚ್ಚಿನ ರನ್ 53, ಅರ್ಧ ಶತಕ. ಇವರು ಬೋಲರ್ ಆಗಿ ಗಳಿಸಿದ ವಿಕೆಟುಗಳು 267. 23ರನ್ನು ಕೊಟ್ಟು 5 ವಿಕೆಟ್ ತೆಗೆದುಕೊಂಡಿದ್ದು ಇವರ ಅತ್ಯುತ್ತಮ ಸಾಧನೆ. ಗಳಿಸಿದ ಅತಿ ಹೆಚ್ಚಿನ ರನ್ 76. ಬೋಲ್ ಮಾಡಿ ಪಡೆದ ವಿಕೆಟುಗಳು 185. ಅತ್ಯುತ್ತಮ ಸಾಧನೆಯೆಂದರೆ 86ಕ್ಕೆ 8 ವಿಕೆಟ್ ಪಡೆದದ್ದು.

ಮೈಸೂರು ಎಕ್ಸ್‌ಪ್ರೆಸ್ ಎಂಬ ಹೊಗಳಿಕೆಗೆ ಭಾಜನರಾಗಿದ್ದ ಶ್ರೀನಾಥ್ ಅವರು 1997-98ರಲ್ಲಿ ಗಾಯಗೊಂಡು ಶಸ್ತ್ರಚಿಕಿತ್ಸೆ ಪಡೆಯಬೇಕಾಯಿತು. ಅತಿಯಾಗಿ ಬೋಲ್ ಮಾಡಿದ್ದರ ಪರಿಣಾಮವಿದು ಎನ್ನಲಾಗಿದೆ. ಆಮೇಲೆ ಪೂರ್ಣವಾಗಿ ಚೇತರಿಸಿಕೊಂಡರು. ಭಾರತದ ವಿಶ್ವಕಪ್ ಆಟದಲ್ಲಿ ಇವರು ತಮ್ಮ ಹಿಂದಿನ ಸಾಧನೆಯನ್ನು ಮೀರಿಸುವ ರೀತಿಯಲ್ಲಿ ಆಡಿದರು. ಅನಂತರ ಅಂತಾರಾಷ್ಟ್ರೀಯ ಪಂದ್ಯಗಳಿಂದ ನಿವೃತ್ತರಾದರು. 1996ರಲ್ಲಿ ಭಾರತ ಸರ್ಕಾರ ಇವರಿಗೆ ಅರ್ಜುನ ಪ್ರಶಸ್ತಿ ನೀಡಿ ಗೌರವಿಸಿತು. ಈಗ ಇವರು ಎಳೆಯರಿಗೆ ಕ್ರಿಕೆಟ್ ಆಟದಲ್ಲಿ ಮಾರ್ಗದರ್ಶನ ನೀಡುತ್ತಿದ್ದಾರೆ. (ಎಚ್.ಎಸ್.ಕೆ.)

**ಜಾವಗಲ್ಲು :** ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕಿನಲ್ಲಿರುವ ಒಂದು ದೊಡ್ಡ ಹಳ್ಳಿ. ಐತಿಹಾಸಿಕ ಸ್ಥಳ ಹೋಬಳಿ ಕೇಂದ್ರ. ಹಾಸನದಿಂದ 35ಕಿಮೀ ದೂರದಲ್ಲಿ, ಹಳೇಬೀಡಿನಿಂದ 14ಕಿಮೀ ಪೂರ್ವಕ್ಕೆ ಬಾಣಾವರ ರಸ್ತೆಯಲ್ಲಿದೆ.

ಇಲ್ಲಿರುವ ಲಕ್ಷ್ಮೀನರಸಿಂಹ ದೇವಾಲಯ ಹೊಯ್ಸಳ ವಾಸ್ತುಶೈಲಿಯ ಉತ್ತಮ ನಿರ್ಮಾಣಗಳಲ್ಲೊಂದು. ಇದು ಬಳಪದ ಕಲ್ಲಿನಲ್ಲಿ ಕಟ್ಟಿರುವ ತ್ರಿಕೂಟಾಚಲ. ದೇವಾಲಯ ನಕ್ಷತ್ರಾಕಾರದ ಜಗತಿಯ ಮೇಲಿದ್ದು, ಮೂರು ಗರ್ಭಗೃಹಗಳು, ಒಂದು ನವರಂಗ ಮತ್ತು ಮುಖಮಂಟಪವನ್ನೊಳಗೊಂಡಿದೆ. ಆದರೆ ಒಂದು ಶಿಖರ ಮಾತ್ರ ಉಳಿದು ಬಂದಿದೆ. ಹೊರಮೈ ವಿನ್ಯಾಸದಲ್ಲಿ ಹೊಯ್ಸಳ ಶೈಲಿಗೆ ಸಹಜವಾದ ಶಿಲ್ಪ ಪಟ್ಟಿಕೆಗಳು ತಳದಲ್ಲೂ ಅದರ ಮೇಲ್ಭಾಗದಲ್ಲಿ ದೇವ ಶಿಲ್ಪಗಳ ಸಾಲೂ ಅದರ ಮೇಲೆ ಮಕರತೋರಣಾದಿ ವಿಮಾನಗಳೂ ಇವೆ. ಅಧಿಷ್ಠಾನದಲ್ಲಿ ಆನೆ, ಅಶ್ವ, ಲತಾ, ಪೌರಾಣಿಕ ಕಥೆ, ಮಕರ, ಸಿಂಹ, ಹಂಸ - ಇವುಗಳಿಂದ ಕೂಡಿದ ಆರು ಪಟ್ಟಿಕೆಗಳಿವೆ. ಪೌರಾಣಿಕ ಕಥೆ ಇರುವ ಪಟ್ಟಿಕೆಯಲ್ಲಿ ರಾಮಾಯಣದ ಕಥೆ, ನರಸಿಂಹ ಅವತಾರ ಮೊದಲಾದುವು ಶಿಲ್ಪಿತವಾಗಿವೆ. ರಾಮಾಯಣದ ಕಥೆಯಲ್ಲಿ ವಿಶ್ವಾಮಿತ್ರನ ಯಜ್ಞದ ಭಾಗದಿಂದ ಆರಂಭವಾಗಿ ರಾಮಪಟ್ಟಾಭಿಷೇಕದವರೆಗಿನ ಘಟನೆಗಳನ್ನು ನಿರೂಪಿಸಲಾಗಿದೆ. ಇವುಗಳಲ್ಲಿನ ಒಂದು ಶಿಲ್ಪದಲ್ಲಿ ಹನುಮಂತ ದೂರದರ್ಶಕದಿಂದ (ಟೆಲಿಸ್ಕೋಪ್) ಲಂಕೆಯನ್ನು ನೋಡುತ್ತಿರುವಂತೆ ತೋರಿಸಿರುವುದು ಕುತೂಹಲಕಾರಿಯಾದುದು. ಭಿತ್ತಿಯ ಮೇಲಿನ ದೇವಶಿಲ್ಪಗಳಲ್ಲಿ ಹರಿಹರ, ಕಾಳಿಂಗಮರ್ದನ, ಪರಶುರಾಮ, ಕೇಶವ ಮೊದಲಾದ ಶಿಲ್ಪಗಳಿವೆ. ಶಿಖರ ನಕ್ಷತ್ರಾಕಾರದ ಅಡ್ಡಕೊಯ್ತ ವಿನ್ಯಾಸದ್ದು. ಹಿಂದಿದ್ದ ಕೋನಾಕಾರದ ಮೂಲಶಿಖರದ ಮೂರು ಅಂತಸ್ತುಗಳು ಮಾತ್ರ ಈಗ ಉಳಿದಿವೆ. ಅದರ ಮೇಲೆ ಇರುವ ಇಟ್ಟಿಗೆಯ ಭಾಗ ಮತ್ತು ಕಳಶ ಇತ್ತೀಚಿನ ರಚನೆಗಳು. ಒಳಗೆ ದಕ್ಷಿಣದ ಗರ್ಭಗುಡಿಯಲ್ಲಿ ವೇಣುಗೋಪಾಲ, ಉತ್ತರದಲ್ಲಿ ಲಕ್ಷ್ಮೀನರಸಿಂಹ, ಪಶ್ಚಿಮದಲ್ಲಿ ಶ್ರೀಧರ - ಈ ವಿಗ್ರಹಗಳನ್ನು ಸ್ಥಾಪಿಸಲಾಗಿದೆ. ಮುಖ್ಯ ಗರ್ಭಗುಡಿಯ ಸುಕನಾಸಿ ದ್ವಾರದಲ್ಲಿ ಜಾಲಂಧ್ರ ಮತ್ತು ಮೇಲ್ಛಾವಣಿಯಲ್ಲಿ ಒಂಬತ್ತು ಪದ್ಮಗಳು ಮೊದಲಾದ ಅಲಂಕರಣವಿದೆ. ಎಲ್ಲ ಅಲಂಕರಣವೂ ಹೊಯ್ಸಳ ಶೈಲಿಯ ಸಹಜಸುಂದರ ರೂಪದವು. ಮುಂದುಗಡೆಯ ಮುಖಮಂಟಪದಲ್ಲಿ ಹಳೆಯ ಕಲ್ಲಿನ ಜಗತಿಗಳು ಮತ್ತು ದುಂಡುಸ್ತಂಭಗಳು ಮತ್ತು ಅಷ್ಟದಿಕ್ಪಾಲಕಯುತ ಭುವನೇಶ್ವರಿ ಇವೆ. ಇದರ ಮುಂದೆ ಇನ್ನೊಂದು ಮಂಟಪ ಇದೆ. ಇದು ಪಾಳೆಯಗಾರರ ಕಾಲದ ನಿರ್ಮಾಣ. ಮುಂದುಗಡೆ ಇರುವ ಮಹಾದ್ವಾರ ವಿಜಯನಗರ ಕಾಲದ್ದು. ಅದರ ಮೇಲೆ ಈಗ ಗೋಪುರವಿಲ್ಲ. ನರಸಿಂಹ ಗುಡಿಯ ದಕ್ಷಿಣದಲ್ಲಿ ಲಕ್ಷ್ಮೀ ಗುಡಿಯಿದೆ. ಇದೂ ವಿಜಯನಗರ ಕಾಲದ್ದು. ಆದರೆ ಹಳೆಯ ಹೊಯ್ಸಳ ಗುಡಿಯೊಂದರ ಕಲ್ಲು ಮತ್ತು ಕಂಬಗಳನ್ನು ಕೆಲವೆಡೆ ಇದಕ್ಕೆ ಉಪಯೋಗಿಸಲಾಗಿದೆ. ಮೂಲ ದೇವಾಲಯದ ಲಕ್ಷ್ಮೀನರಸಿಂಹ ಪ್ರಧಾನ ಗರ್ಭಗುಡಿಯಲ್ಲಿ ಸ್ಥಾಪಿತವಾಗಿಲ್ಲದಿದ್ದರೂ ಗುಡಿ ಲಕ್ಷ್ಮೀನರಸಿಂಹ ದೇವಾಲಯವೆಂದೇ ಪ್ರಸಿದ್ಧವಾಗಿದೆ. ಈ ನರಸಿಂಹ ವಿಗ್ರಹ ಹರಿಹರೇಶ್ವರ ಬೆಟ್ಟದಲ್ಲಿತ್ತೆಂದೂ

ವಿಷ್ಣುವರ್ಧನ ಇದನ್ನು ಕನಸಿನಲ್ಲಿ ಕಂಡು ಅಲ್ಲಿಂದ ತಂದು ಇಲ್ಲಿ ಸ್ಥಾಪಿಸಿದನೆಂದೂ ಸ್ಥಳ ಪ್ರತೀತಿ. ದೇವಾಲಯದ ರಚನೆಯ ಕಾಲದ ಬಗ್ಗೆ ಶಾಸನಾಧಾರಗಳಿಲ್ಲ. ಆದರೆ ಇಲ್ಲಿನ ಹಲವು ಶಿಲ್ಪಗಳ ಮೇಲೆ ಮಲ್ಲಿತಮ್ಮನ ಹೆಸರಿರುವುದರಿಂದ ಈ ಗುಡಿ 13ನೆಯ ಶತಮಾನದ ಮಧ್ಯಭಾಗದಲ್ಲಿ ರಚಿತವಾಗಿರಬೇಕೆಂದು ಊಹಿಸಲಾಗಿದೆ.

ನರಸಿಂಹ ದೇವಾಲಯದ ಉತ್ತರದಲ್ಲಿ ಗಂಗಾಧರೇಶ್ವರ ಗುಡಿ ಇದೆ. ಇದೂ ಹೊಯ್ಸಳ ಕಾಲದ ಕಟ್ಟಡ. ಗರ್ಭಗುಡಿ, ಉತ್ತರ-ದಕ್ಷಿಣದಲ್ಲಿ ದ್ವಾರಗಳಿರುವ ಸುಕನಾಸಿ ಮತ್ತು ಮುಖಮಂಟಪ ಈ ದೇವಾಲಯದಲ್ಲಿರುವ ಅಂಗಗಳು.

ಇವಲ್ಲದೆ ಈ ಊರಿನಲ್ಲಿ ಬಹು ಶಿಥಿಲವಾಗಿರುವ ಒಂದು ವೀರಭದ್ರ ದೇವಾಲಯ ಮತ್ತು ಒಂದು ಜೈನಬಸದಿ (ಚಂದ್ರನಾಥ) ಇವೆ. ಜೈನಬಸದಿಯನ್ನು ಹಳೆಯ ಹೊಯ್ಸಳ ದೇವಾಲಯಗಳ ಶಿಲೆಗಳನ್ನು ಉಪಯೋಗಿಸಿ ಕಟ್ಟಲಾಗಿದೆ. ಗೋಡೆಯ ಮೇಲೆ ಕೆಲವು ತೀರ್ಥಂಕರರ ವಿಗ್ರಹಗಳಿವೆ. ಈ ಊರಿನಲ್ಲಿ ಒಂದು ಬನಶಂಕರಿ ದೇವಾಲಯ ಸಹ ಇದೆ. (ಎ.ಎಂ.ಎ.)

**ಜಿನನಾಥಪುರ :** ಹಾಸನ ಜಿಲ್ಲೆ ಚನ್ನರಾಯಪಟ್ಟಣ ತಾಲ್ಲೂಕಿನ ಶ್ರವಣಬೆಳಗೊಳದ ಚಿಕ್ಕಬೆಟ್ಟಕ್ಕೆ ಉತ್ತರದಲ್ಲಿರುವ ಒಂದು ಹಳ್ಳಿ. ಇಲ್ಲಿರುವ ಸುಂದರವಾದ ಜೈನಬಸದಿಯೊಂದರಿಂದ ಈ ಹಳ್ಳಿ ಪ್ರಸಿದ್ಧವಾಗಿದೆ. 12ನೆಯ ಶತಮಾನದ ಆದಿಭಾಗದಲ್ಲಿ ಹೊಯ್ಸಳ ವಿಷ್ಣುವರ್ಧನನ ಹಿರಿಯ ದಂಡನಾಯಕನಾಗಿದ್ದ ಗಂಗರಾಜ ಬೆಳಗೊಳ ತೀರ್ಥಕ್ಕೆ ಹೊಂದಿಕೊಂಡಂತೆ ಜಿನನಾಥಪುರವನ್ನು ಮಾಡಿದನೆಂದು ಶಾಸನವೊಂದು ತಿಳಿಸುತ್ತದೆ. ಆದರೆ ಅವನು ಅಲ್ಲಿ ಬಸದಿಯನ್ನು ನಿರ್ಮಿಸಿದನೇ ಎಂಬುದು ತಿಳಿಯದು. ಊರ ಮುಂದಿರುವ ಬಂಡೆಯ ಮೇಲೆ ನಿರಾಡಂಬರವಾದ ಬಸದಿಯೊಂದು ನಿಂತಿದೆ. ಗರ್ಭಗೃಹ, ಸುಕನಾಸಿ ಮತ್ತು ದೊಡ್ಡದಾದ ನವರಂಗಗಳಿಂದ ಕೂಡಿ ಎತ್ತರವಾದ ಜಗತಿಯ ಮೇಲೆ ನಿಂತಿರುವ, ಸರಳವಾದ ಹೊರಗೋಡೆಗಳುಳ್ಳ ಈ ಬಸದಿಯನ್ನು ಗಂಗರಾಜನ ಹಿರಿಯಣ್ಣನಾದ ಬಮ್ಮಚಮೂಪತಿಯ ಮಗ ಏಚ ಚಮೂಪ ಕಟ್ಟಿಸಿದ. ಆದರೆ ಅವನು ಗರ್ಭಗೃಹದಲ್ಲಿ ಪ್ರತಿಷ್ಠೆ ಮಾಡಿಸಿದ ಜಿನಬಿಂಬ ಈಗ ಇಲ್ಲ. ಅದರ ಪೀಠ ಮಾತ್ರ ಅಲ್ಲಿಯ ನವರಂಗದಲ್ಲಿದೆ. ಅದು ಯಾವ ಜಿನನ ಮೂರ್ತಿಯಾಗಿತ್ತೆಂಬುದೂ ತಿಳಿಯದು. ಅದಕ್ಕೆ ಬದಲಾಗಿ ಈಗ ಅಮೃತಶಿಲೆಯ ದೊಡ್ಡದಾದ ಪಾರ್ಶ್ವನಾಥನ ಮೂರ್ತಿ ಇದೆ. ಅದನ್ನು 1889ರಲ್ಲಿ ಭುಜಬಲಯ್ಯ ಎನ್ನುವವರು ಪ್ರತಿಷ್ಠೆ ಮಾಡಿಸಿದರು. ಗರ್ಭಗೃಹದಲ್ಲೂ ಸುಕನಾಸಿಯಲ್ಲೂ ಬೇರೆಡೆಗಳಿಂದ ತಂದು ಇಟ್ಟಿರುವ ಚತುರ್ವಿಂಶತಿ ತೀರ್ಥಂಕರರು, ಪಂಚಪರಮೇಷ್ಠಿಗಳು, ನವದೇವತಾಬಿಂಬ, ನಂದೀಶ್ವರ ಮುಂತಾದ ಸುಂದರವಾದ ಲೋಹಮೂರ್ತಿಗಳಿವೆ.

ಊರಿನ ಪಶ್ಚಿಮಕ್ಕಿರುವ ಶಾಂತಿನಾಥ ಬಸದಿ ಇಲ್ಲಿಯ ಮುಖ್ಯ ಆಕರ್ಷಣೆ. ಬಳಪದ ಕಲ್ಲಿನಲ್ಲಿ ಹೊಯ್ಸಳ ಶೈಲಿಯಲ್ಲಿರುವ ಬಸದಿಯನ್ನು ಕಟ್ಟಿಸಿದವನು ಮೊದಲು ಕಳಚುರಿಗಳಲ್ಲಿ ಮಂತ್ರಿಯಾಗಿದ್ದು ಅನಂತರ ಹೊಯ್ಸಳ ಇಮ್ಮಡಿ ಬಲ್ಲಾಳನಲ್ಲಿ ದಂಡನಾಯಕನಾದ ವಸುಧೈಕಬಾಂಧವ ರೇಚಣ. ಇದರ ನಿರ್ಮಾಣ ಕಾಲ ಸು.1200. ಬಸದಿಯನ್ನು ರೇಚಣ ದಂಡನಾಯಕ ಮಾಡಿಸಿದನೆಂದು ಹೊರಭಿತ್ತಿಯ ಮೇಲಿನ ಶಾಸನ ತಿಳಿಸುತ್ತದೆ. ಅವನು ಶಾಂತಿನಾಥ ದೇವರ ಪ್ರತಿಷ್ಠೆಯನ್ನು ಮಾಡಿ ತನ್ನ ಗುರುಗಳಾದ ಸಾಗರನಂದಿ ಸಿದ್ಧಾಂತ ದೇವರಿಗೆ ಬಿಟ್ಟುದಾಗಿ ಗರ್ಭಗೃಹದ ಮೂರ್ತಿಯ ಪೀಠದ ಮೇಲಿನ ಶಾಸನ ತಿಳಿಸುತ್ತದೆ.

ತಳವಿನ್ಯಾಸದ ಹೊರ ಆಕಾರವನ್ನೇ ಅನುಸರಿಸುವ ಜಗತಿಯ ಮೇಲೆ ನಿರ್ಮಿತವಾಗಿರುವ ಈ ಬಸದಿಗೆ ಗರ್ಭಗೃಹ, ಸುಕನಾಸಿ ಮತ್ತು ನವರಂಗಗಳಿವೆ. ಸುಂದರವಾದ ಈ ಬಸದಿಯ ಗರ್ಭಗೃಹದ ಮೇಲೆ ಅಷ್ಟೇ ಸುಂದರವಾಗಿದ್ದ ಗೋಪುರವೂ ಇದ್ದಿರಬೇಕು. ಆದರೆ ಈಗ ಅದರ ಕುರುಹುಗಳೇನೂ ಉಳಿದುಬಂದಿಲ್ಲ. ತಳವಿನ್ಯಾಸ ಚೌಕಾಕಾರವಾಗಿದ್ದರೂ ಹೊರ ಭಿತ್ತಿಯನ್ನು ಕಚ್ಚುಕಚ್ಚಾಗಿ ಹಲವು ಮುಖಗಳನ್ನಾಗಿ ವಿಭಾಗಿಸಿ ಈ ಮುಖಗಳು ಮುಂಚಾಚಿಯೋ ಒಳಸರಿದೋ ಇರುವಂತೆ ನಿರ್ಮಿಸಿದೆ. ಮುಂಚಾಚಿದ ಮುಖಗಳ ಮೇಲೆ ಅರೆಗಂಬಗಳ ನಡುವೆ ಅರೆಮಂಟಪವಿದೆ. ಅದರ ಮೇಲೆ ಮುತ್ತಿನ ತೋರಣವನ್ನುಳ್ಳ ಕಾರ್ನಿಸುಗಳುಂಟು. ಮೇಲೆ 5 ಅಂತಸ್ತಿನ ಅರೆಗೋಪುರಗಳಿವೆ. ಮಂಟಪಗಳಲ್ಲಿ ಜಿನನ ಅಥವಾ ಯಕ್ಷಯಕ್ಷಿಯರ ಮೂರ್ತಿಗಳುಂಟು. ಒಳಸರಿದ ಮುಖಗಳಲ್ಲಿ ಅರೆಗಂಬದ ಮೇಲೆ ಅರೆಗೋಪುರ, ಅದರ ಮೇಲೆ ಕೀರ್ತಿಮುಖ, ಕೀರ್ತಿಮುಖದ ಎರಡು ಕೋರೆಗಳಿಂದಲೂ ಇಳಿಬಿದ್ದಿರುವ ಬಳ್ಳಿ ಸುರುಳಿಗಳಿವೆ. ಅರೆಗಂಬದ ಮುಂದೆ ಮೂರ್ತಿಶಿಲ್ಪವಿದೆ. ಒಂದೊಂದು ದಿಕ್ಕಿನ ಗೋಡೆಯ ಮಧ್ಯದ ಅರೆಮಂಟಪದ ಇಕ್ಕೆಲಗಳಲ್ಲೂ ಲತಾವಿತಾನಗಳ ಕೆಳಗೆ ಹಲವು ಭಂಗಿಗಳಲ್ಲಿರುವ, ಗೀತವಾದ್ಯ ನೃತ್ಯಗಳಲ್ಲಿ ನಿರತರಾದ ಗಂಡು ಹೆಣ್ಣುಗಳನ್ನೂ ಯಕ್ಷಯಕ್ಷಿಯರನ್ನೂ ಸರಸ್ವತಿ ಬ್ರಹ್ಮಮೋಹಿನಿ ಮನ್ಮಥರನ್ನೂ ಕಾಣಬಹುದು. ನಾಟ್ಯದ ಕೆಲವು ಭಂಗಿಗಳಂತೂ ಮೋಹಕವಾಗಿವೆ. ಕಾಲಿಗೆ ಗೆಜ್ಜೆಯ ಪಟ್ಟಿಯೊಂದನ್ನು ಕಟ್ಟಿ ಅರೆ ಬಾಗಿ ತ್ರಿಭಂಗಿಯಲ್ಲಿರುವ, ಅಕ್ಕಪಕ್ಕದವರ ತಾಳಮದ್ದಳೆಯ ಲಯಕ್ಕೆ ಸರಿಯಾಗಿ ಹೆಜ್ಜೆ ಹಾಕುತ್ತಾ ಚಾಮರ ಹಾಕುತ್ತಿರುವ ನರ್ತಕನೊಬ್ಬನ ಮೂರ್ತಿಯನ್ನು ಇಲ್ಲಿ ಗಮನಿಸಬಹುದು. ವಿತಾನಗಳ ಮೇಲೆ ಅರೆಗಂಬಗಳ ನಡುವೆ ಸುರುಳಿ ಸುರುಳಿಯಾಗಿ ಅಲೆಯಲೆಯಾಗಿ ಮೇಲೆ ಹಬ್ಬಿ ಹೋಗುತ್ತಿರುವಂತೆ ಬಿಡಿಸಿರುವ ಬಳ್ಳಿಗಳು ಇಲ್ಲಿಯ ವೈಶಿಷ್ಟ್ಯ. ಇವನ್ನು ಹೊಯ್ಸಳ ಶಿಲ್ಪದಲ್ಲೆ ಅಪೂರ್ವವೆನಿಸುವಷ್ಟು ಅತ್ಯಂತ ಸೂಕ್ಷ್ಮವಾಗಿಯೂ ನವುರಾಗಿಯೂ ಬಿಡಿಸಲಾಗಿದೆ. ಮೂವತ್ತಕ್ಕೂ ಹೆಚ್ಚು ಅರೆಗೋಪುರಗಳಲ್ಲಿ ಒಂದೊಂದೂ ಒಂದೊಂದು ಬಗೆಯಾಗಿದೆ. ಮಣಿತೋರಣಗಳಿಂದ, ಕೀರ್ತಿಮುಖಗಳ ಸಾಲಿನಿಂದ, ಬಳ್ಳಿಸುರುಳಿಯ ಪಟ್ಟಿಕೆಯಿಂದ ಅಲಂಕೃತವಾದ ತಿರುಗಣೆಯಲ್ಲಿ ಕಡೆದ ಹೊಯ್ಸಳ ರೀತಿಯ ಕಂಬಗಳು ನವರಂಗದ ಒಳಹೊಗುತ್ತಿದ್ದಂತೆಯೇ ಕಣ್ಣನ್ನು ಸೆಳೆಯುತ್ತವೆ. ಒಂದು ಕಂಬವನ್ನು ಮಾತ್ರ ಪೂರ್ತಿಗೊಳಿಸಿಲ್ಲ. ನವರಂಗದ ಎರಡು ಕಡೆಯೂ ಎದುರುಬದುರಾಗಿ, ಗೋಡೆಗೆ ಸೇರಿದಂತೆ ಇರುವ, ಕುಸುರಿಕೆಲಸದಿಂದ ತುಂಬಿ ಹೋಗಿರುವ ಎರಡು ಅರೆಮಂಟಪಗಳುಂಟು. ನವರಂಗದ ಒಳಚಾವಣಿಯಲ್ಲಿ ಆಳವಾದ, ಹಲವು ಆಕೃತಿಗಳಲ್ಲಿರುವ ಭುವನೇಶ್ವರಿಗಳಲ್ಲಿಯೂ ಶಿಲ್ಪಚತುರತೆಯನ್ನು ಕಾಣಬಹುದು. ಗರ್ಭಗೃಹದಲ್ಲಿರುವ ಗಂಭೀರ ಮುಖಮುದ್ರೆಯುಳ್ಳ ನೇರನಿಲುವಿನ ಶಾಂತಿನಾಥನ ಮೂರ್ತಿ ಸುಂದರವಾದ್ದು. ಒಟ್ಟಿನಲ್ಲಿ ಶಾಂತಿನಾಥ ಬಸದಿಯಷ್ಟು ಸೂಕ್ಷ್ಮಾಲಂಕರಣದಿಂದ ಕೂಡಿದ ಬಸದಿ ಕರ್ನಾಟಕದಲ್ಲೇ ಬೇರೊಂದು ಇಲ್ಲವೆಂದು ಹೇಳಬಹುದು.

ಊರಿಗೆ ನೈಋತ್ಯದಲ್ಲಿ ಸಮಾಧಿಮಂಟಪವೊಂದುಂಟು. ಐದು ಅಡಿ ಎತ್ತರವಿರುವ, ಚೌಕನಾದ, ನಾಲ್ಕು ಕಡೆಗಳಲ್ಲೂ ಮುಚ್ಚಿರುವ ಈ ಮಂಟಪದ ಮೇಲೆ ಒಂದು ಕಿರುಗೋಪುರ ಇದೆ. 13ನೆಯ ಶತಮಾನದಲ್ಲಿ ಬಾಲಚಂದ್ರದೇವನ ಮಗನೊಬ್ಬ ತೀರಿಕೊಂಡಾಗ ಅವನ ದಹನಸ್ಥಾನದಲ್ಲಿ ನಿರ್ಮಿಸಿದ ಶಿಲಾಕೂಟವಿದೆಂದು ಅದರ ಮೇಲಿನ ಶಾಸನ ತಿಳಿಸುತ್ತದೆ.

ಹೊಯ್ಸಳ ನರಸಿಂಹನ ಮಂತ್ರಿ ಹುಳ್ಳಪ ಈ ಊರಿನಲ್ಲಿ ಒಂದು ಕಲ್ಲಿನ ದಾನಶಾಲೆಯನ್ನು ಕಟ್ಟಿಸಿದನೆಂದು ಶ್ರವಣಬೆಳಗೊಳದ ಒಂದು ಶಾಸನ ತಿಳಿಸುತ್ತದೆ. ಆದರೆ ಈಗ ಅದು ಉಳಿದುಬಂದಿಲ್ಲ. *

**ಜಿನಸೇನಾಚಾರ್ಯ :** ಸು.838. ಪ್ರಸಿದ್ಧ ಜೈನ ಆಚಾರ್ಯರು ಹಾಗೂ ಕವಿ. ಸೇನ ಸಂಘಕ್ಕೆ ಸೇರಿದ ಇವರಿಂದ ಮುಂದೆ ಸೇನಾನ್ವಯ ಅಥವಾ ಸೇನಗಣ ತುಂಬ ಪ್ರಸಿದ್ಧವಾಯಿತು. ಪಂಚಸ್ತೂಪಾನ್ವಯಕ್ಕೆ ಸೇರಿದ ವೀರಸೇನ ಇವರ ಗುರು. ತಮ್ಮ ಗುರುಗಳಂತೆ ಇವರ ವಿದ್ವತ್ತೆಯು ಅಗಾಧವೂ ವಿಶಾಲವೂ ಆಗಿತ್ತು. ಇವರು ಆಜನ್ಮ ಬ್ರಹ್ಮಚಾರಿಗಳಾಗಿದ್ದುಕೊಂಡು ತಮ್ಮ ಇಡೀ ಜೀವನವನ್ನು ವಿದ್ಯಾವ್ಯಾಸಂಗದಲ್ಲೂ ಸಮಾಜೋದ್ಧಾರದಲ್ಲೂ ಕಳೆದರು. ಕರ್ನಾಟಕ ಇವರ ಪ್ರಧಾನ ವಿಹಾರಕ್ಷೇತ್ರವಾಗಿತ್ತು. ವೀರಸೇನ ಮತ್ತು ಜಯಸೇನರಂಥ ವಿದ್ಯಾನಿಧಿಗಳಲ್ಲಿ ವಿದ್ಯಾಭ್ಯಾಸ ನಡೆಸಿದ ಇವರು ಚಿಕ್ಕಂದಿನಲ್ಲೆ ಸರ್ವಶಾಸ್ತ್ರಗಳಲ್ಲಿ ಅಸೀಮಪಾಂಡಿತ್ಯ ಪಡೆದಿದ್ದರು. ಪಾಂಡಿತ್ಯದ ಜೊತೆಗೆ ಪ್ರತಿಭಾಸಂಪತ್ತಿಯೂ ಇತ್ತು. ಇವರ ವಿದ್ವತ್ತು ಪ್ರತಿಭೆ ಕಾವ್ಯಶಕ್ತಿಯನ್ನು ಕುರಿತು ಇವರ ಸಮವಯಸ್ಕರೂ ಸಮಕಾಲೀನರೂ ಹರಿವಂಶಪುರಾಣದ ಕರ್ತೃವೂ ಪುನ್ನಾಟ ಸಂಘಕ್ಕೆ ಸೇರಿದ ಆಚಾರ್ಯರೂ ಆದ ಇನ್ನೊಬ್ಬ ಜಿನಸೇನರು ಪ್ರಶಂಸಿಸಿದ್ದಾರೆ. ರಾಷ್ಟ್ರಕೂಟ ದೊರೆ ಅಮೋಘವರ್ಷ (814-78) ಇವರ ಶಿಷ್ಯವರ್ಗದಲ್ಲಿ ಒಬ್ಬನಾಗಿದ್ದು ಈತ ಜಿನಸೇನಾಚಾರ್ಯರ ಪಾದಗಳಿಗೆ

ವಂದನೆ ಮಾಡಿದ ದಿನದಂದು ತಾನು ಪುನೀತನಾದೆನೆಂದು ಭಾವಿಸುತ್ತಿದ್ದನೆಂದು ಉತ್ತರ ಪುರಾಣದ ಕರ್ತೃ ಗುಣಭದ್ರಾಚಾರ್ಯರು ಹೇಳಿದ್ದಾರೆ. ಪಾರ್ಶ್ವಾಭ್ಯುದಯ, ಜಯಧವಲಾ ಟೀಕೆ, ಪೂರ್ವಪುರಾಣ (ಆದಿಪುರಾಣ) - ಇವು ಜಿನಸೇನರ ಕೃತಿಗಳು.

ಪಾರ್ಶ್ವಾಭ್ಯುದಯ ಒಂದು ಸಂಸ್ಕೃತ ಖಂಡಕಾವ್ಯ. ಇದರಲ್ಲಿ 334 ಮಂದಾಕ್ರಾಂತ ವೃತ್ತಗಳಿವೆ. ಇಲ್ಲಿ ಕಾಳಿದಾಸ ಮಹಾಕವಿಯ ವಿಪ್ರಲಂಭ ಶೃಂಗಾರರಸವಾಹಿನಿಯಾದ ಮೇಘಸಂದೇಶದ ಪದ್ಯಗಳ ಒಂದು ಅಥವಾ ಎರಡು ಪಾದಗಳನ್ನು ತೆಗೆದುಕೊಂಡು ಅವುಗಳಿಗೆ ಸ್ವಂತ ರಚನೆಯ ಪಾದಗಳನ್ನು ಜೋಡಿಸಿ ಪದ್ಯಗಳನ್ನು ರಚನೆ ಮಾಡಿ ವೈರಾಗ್ಯ ಭಾವಪೂರಿತವಾದ ಪಾರ್ಶ್ವನಾಥ ಚರಿತೆಯನ್ನು ಹೆಣೆಯಲಾಗಿದೆ. ಮೇಘಸಂದೇಶದ ಪದ್ಯಗಳ ಅಂತಿಮ ಪಾದಗಳನ್ನು ಅಳವಡಿಸಿಕೊಂಡು ಸ್ವತಂತ್ರ ಕಾವ್ಯರಚನೆ ಮಾಡಲಾಗಿರುವ ಉದಾಹರಣೆಗಳಿರುವುವಾದರೂ ಅದರ ಎಲ್ಲ ಶ್ಲೋಕಗಳನ್ನಳವಡಿಸಿಕೊಂಡು ತದ್ವಿರುದ್ಧ ಭಾವಪೋಷಕವೂ ಸ್ವತಂತ್ರವೂ ಆದ ಕಾವ್ಯರಚನೆ ಮಾಡಲಾಗಿರುವ ಕೃತಿಯೆಂದರೆ ಇದೊಂದೇ.

ಜಯಧವಲಾ ಟೀಕಾಗ್ರಂಥ. ತಮ್ಮ ಗುರು ವೀರಸೇನರು ಕಷಾಯ ಪಾಹುಡ ಎಂಬ ಗ್ರಂಥಕ್ಕೆ ವ್ಯಾಖ್ಯಾನವನ್ನು ಬರೆಯಲು ಪ್ರಾರಂಭಿಸಿದ್ದರು. ಅಪೂರ್ಣವಾಗಿದ್ದ ಆ ವ್ಯಾಖ್ಯಾನವನ್ನು ಗುರುಗಳ ಆದೇಶದಂತೆ ಜಿನಸೇನರು ಪೂರ್ಣಗೊಳಿಸಿದರು. ಈ ವ್ಯಾಖ್ಯಾನ ಜಿನಸೇನರ ಆಗಮ ವಿದ್ಯಾಪರಿಣತಿಗೆ ಸಾಕ್ಷಿಯಾಗಿದೆ.

ಪೂರ್ವಪುರಾಣ ಅರವತ್ತುಮೂರು ಶಲಾಕಾ ಪುರುಷರ ಚರಿತ್ರವನ್ನು ನಿರೂಪಿಸುವ ಮಹಾಪುರಾಣ ಗ್ರಂಥ. ಇದು ಪೂರ್ವಪುರಾಣ ಮತ್ತು ಉತ್ತರ ಪುರಾಣ ಎಂಬ ಎರಡು ಭಾಗಗಳನ್ನು ಒಳಗೊಂಡಿದೆ. ಮೊದಲನೆಯ ಭಾಗದಲ್ಲಿ (ಆದಿಪುರಾಣ) 12 ಸಾವಿರ ಶ್ಲೋಕಗಳೂ 47 ಪರ್ವಗಳೂ ಇವೆ. ಇದರಲ್ಲಿ 42 ಪರ್ವಗಳು ಮತ್ತು 43ನೆಯ ಪರ್ವದ 3 ಶ್ಲೋಕಗಳನ್ನು ಮಾತ್ರ ಇವರು ಬರೆದು ಮುಗಿಸಿ ಕೃತಿ ಪೂರ್ಣಗೊಳ್ಳುವ ಮುನ್ನ ನಿಧನ ಹೊಂದಿದರು. ಪೂರ್ವಪುರಾಣದ ಉಳಿದ ಭಾಗವನ್ನೂ ಉತ್ತರಪುರಾಣವನ್ನೂ (23 ತೀರ್ಥಂಕರರ ಚರಿತ್ರೆ) ಇವರ ಶಿಷ್ಯ ಗುಣಭದ್ರಾಚಾರ್ಯರು ಪೂರ್ಣಗೊಳಿಸಿದರು. ಪೂರ್ವಪುರಾಣ ಪುರಾಣವಷ್ಟೇ ಅಲ್ಲದೆ ಮಹಾಕಾವ್ಯದ ಗುಣವನ್ನೂ ಪಡೆದಿದೆ. ಶೈಲಿ ಅಲಂಕಾರ ಯುಕ್ತವಾಗಿದೆ; ಕಾವ್ಯ ರಸಭರಿತವಾಗಿದೆ. (ಎ.ಎನ್.ಯು.,ಎಂ.ಡಿ.ವಿ.)

**ಜೀವನ :** 1939ರ ನವೆಂಬರಿನಲ್ಲಿ ಆರಂಭವಾದ ಸಾಹಿತ್ಯ ಪ್ರಧಾನ ಮಾಸ ಪತ್ರಿಕೆ. ಮೊದಲ ನಾಲ್ಕು ವರ್ಷ ಧಾರವಾಡದಿಂದ ಪ್ರಕಟವಾಗುತ್ತಿತ್ತು. ದ.ರಾ.ಬೇಂದ್ರೆ, ವಿ.ಕೃ.ಗೋಕಾಕ, ರಂ.ಶ್ರೀ.ಮುಗಳಿ - ಇವರು ಸಂಪಾದಕರಾಗಿದ್ದರು.




ನಡುವೆ ಒಂದು ವರ್ಷ, 1942ರಲ್ಲಿ ಪತ್ರಿಕೆ ತ್ರೈಮಾಸಿಕವಾಗಿ ಬರುತ್ತಿತ್ತು. 1944ರಲ್ಲಿ ಇದು ಬೆಂಗಳೂರಿಗೆ ವರ್ಗವಾಯಿತು. 1944ರ ಮೇ ತಿಂಗಳಿಂದ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಸಂಪಾದಕತ್ವದಲ್ಲಿ ಇದು ಪ್ರಕಟವಾಗುತ್ತಿತ್ತು. 1965ರ ಜೂನ್‌ನಲ್ಲಿ ಕೆ.ಗೋಪಾಲಕೃಷ್ಣರಾಯರು, ಅನಂತರ ಸಿದ್ಧವನಹಳ್ಳಿ ಕೃಷ್ಣ ಶರ್ಮರು ಪತ್ರಿಕೆಯ ಸಂಪಾದಕತ್ವವನ್ನು ವಹಿಸಿಕೊಂಡರು. 1969ರ ಜನವರಿಯಿಂದ ಹಂಪ ನಾಗರಾಜಯ್ಯ ಸಂಪಾದಕರಾದರು. ಪತ್ರಿಕೆ ಆಗಾಗ ವಿಶೇಷ ಸಂಚಿಕೆಗಳನ್ನು ಹೊರತರುತ್ತಿತ್ತು. ಸಾಹಿತ್ಯದಲ್ಲಿ ಒಳ್ಳೆಯದನ್ನು ಬೆಳೆಯಬೇಕು, ಜನಜೀವನದ ಕಂಠವಾಗಿ ಪತ್ರಿಕೆ ತನ್ನ ಮಾತನ್ನು ದಿಟ್ಟವಾಗಿ ಹೇಳಬೇಕು, ಅತ್ಯುಚ್ಚ ಸಾಹಿತ್ಯ-ಸಂಸ್ಕೃತಿಯ ಪರಿಪಕ್ವ ಫಲಗಳನ್ನು ಜನತೆಗೆ ನೀಡಬೇಕು ಎಂಬುದು ಪತ್ರಿಕೆಯ ಸ್ಥೂಲ ಉದ್ದೇಶ. ಕವಿತೆ, ಕಥೆ, ವಿಮರ್ಶೆ, ಪ್ರಬಂಧ, ಪ್ರವಾಸಕಥನ, ಅನುವಾದ, ಕಿರುನಾಟಕ, ಪುಸ್ತಕಪರಿಚಯ ಮೊದಲಾದ ಸಾಹಿತ್ಯದ ಬರೆಹಗಳನ್ನಷ್ಟೇ ಪತ್ರಿಕೆ ಪ್ರಕಟಿಸುತ್ತ ಬಂತು. ಈ ಪತ್ರಿಕೆ ಅನೇಕ ಹೊಸ ಲೇಖಕರನ್ನು ಬೆಳಕಿಗೆ ತಂದಿತು.

ಮಾಸ್ತಿ ವೆಂಕಟೇಶಅಯ್ಯಂಗಾರ್ ಸಂಪಾದಕರಾಗಿದ್ದಾಗ ಬರೆಯುತ್ತಿದ್ದ ಅವರ ಸಂಪಾದಕೀಯ ಬರೆಹಗಳು ವೈಶಿಷ್ಟ್ಯ ಪೂರ್ಣವಾಗಿದ್ದವು. ಪ್ರಚಲಿತ ವಿಚಾರಗಳನ್ನು ಕುರಿತ, ಪೂರ್ವಗ್ರಹವಿಲ್ಲದ ಉತ್ತಮ ಸಮೀಕ್ಷೆಗೆ ಇವು ಮಾದರಿಗಳಾಗಿವೆ. *

**ಜುಂಜಪ್ಪ :** ಕಾಡುಗೊಲ್ಲ ಸಮುದಾಯದ ಒಬ್ಬ ಸಾಂಸ್ಕೃತಿಕ ವೀರ. ಆ ಸಮುದಾಯದ ಸಂಸ್ಕೃತಿಯನ್ನು ರೂಪಿಸಿ ಉನ್ನತಿಯನ್ನು ಬೆಳಗಿದವನೆಂದು ಪ್ರಸಿದ್ಧನಾದವ.



ಕಲಾವಿದ ಪಿ.ಆರ್.ತಿಪ್ಪೇಸ್ವಾಮಿಯವರ ರಚನೆ

ಕಾಡುಗೊಲ್ಲರು ತುಮಕೂರು, ಚಿತ್ರದುರ್ಗ ಜಿಲ್ಲೆಗಳಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ. ಗೋವುಗಳ ಸಂರಕ್ಷಣೆ ಹಾಗೂ ಬೆಣ್ಣೆ ತುಪ್ಪಗಳನ್ನು ಮಾರಿ ಜೀವಿಸುವುದು ಈ ಜನಾಂಗದ ಮುಖ್ಯ ಕಸಬು. ವ್ಯವಸಾಯವನ್ನು ಅವಲಂಬಿಸಿದವರೂ ಕುರಿ ಸಾಕಣೆಯಲ್ಲಿ ತೊಡಗಿದವರೂ ಈಗ ಹೆಚ್ಚಾಗಿ ಕಂಡುಬರುತ್ತಾರೆ. ಪ್ರತ್ಯೇಕ ನೆಲೆಗಳಲ್ಲಿ ವಾಸಿಸುವ ಇವರು ಮುಖ್ಯ ಗ್ರಾಮವೊಂದರ ಸಮೀಪದಲ್ಲಿ ಹಟ್ಟಿಯೊಂದನ್ನು ಕಟ್ಟಿಕೊಂಡು ವಾಸಿಸುತ್ತಾರೆ. ಆ ಹಟ್ಟಿಗೆ ಪ್ರತ್ಯೇಕ ಹೆಸರಿರುವುದು ವಿರಳ. ಹಾಗಲವಾಡಿ ಹಟ್ಟಿ, ಜೀರಹಳ್ಳಿ ಹಟ್ಟಿ, ತರಮಕೋಟೆ ಹಟ್ಟಿ - ಹೀಗೆ ಹತ್ತಿರವಿರುವ ಮುಖ್ಯ ಊರುಗಳ ಹೆಸರುಗಳೊಡನೆ ಸೇರಿದಂತೆ ಆ ಹಟ್ಟಿಗಳನ್ನು ಗುರುತಿಸಲಾಗುತ್ತದೆ. ಹಟ್ಟಿಗಳ ನಡುವೆ ಅವರ ಆರಾಧ್ಯದೈವಗಳ ದೇವಾಲಯಗಳು (ಗುಬ್ಬ) ಇರುತ್ತವೆ. ಸಮುದಾಯದ ಮುಖಂಡನೇ ಅಲ್ಲಿನ ಪೂಜಾರಿ. ಮೂಲ ಸಂಸ್ಕೃತಿಯನ್ನು ಇಂದಿಗೂ ನಿಚ್ಚಳವಾಗಿ ಉಳಿಸಿಕೊಂಡು ಬಂದಿರುವ ಕಾಡುಗೊಲ್ಲ ಸಮುದಾಯ ಊರುಗೊಲ್ಲರಿಗಿಂತ ಭಿನ್ನವಾದುದು. ಆದರೆ ಈ ಎರಡೂ ಸಮುದಾಯದವರೂ ತಮ್ಮನ್ನು ಯಾದವ ಮೂಲಕ್ಕೆ

ಆರೋಪಿಸಿಕೊಳ್ಳುತ್ತಾರೆ. ಅದರ ಪ್ರಕಾರ ಇವರು ಕೃಷ್ಣನ ಪರಂಪರೆಗೆ ಸೇರಿದವರು. ಸೋದರಮಾವ ಕಂಸನ ಕಿರುಕುಳವನ್ನು ಕೊನೆಯವರೆಗೂ ಸಹಿಸದ ಶ್ರೀ ಕೃಷ್ಣ ಅವನನ್ನು ಕೊಂದು ತನ್ನ ಸಾಮರ್ಥ್ಯವನ್ನು ಮೆರೆದಂತೆ ಜುಂಜಪ್ಪನ ಕಥೆಯೂ ಕೃಷ್ಣನಕಥೆಯ ಚೌಕಟ್ಟಿನಲ್ಲೇ ಬರುತ್ತದೆ. ಇವನೂ ಕಾಡುಮೇಡುಗಳಲ್ಲಿ ದನಗಳನ್ನು ಕಾದುಕೊಂಡು ಗಣೆಯನ್ನು ಊದಿಕೊಂಡು ತನ್ನ ವಿರೋಧಿಗಳನ್ನು ಸದೆಬಡಿದು ಮಹಿಮಾವಂತನೆನಿಸಿಕೊಳ್ಳುತ್ತಾನೆ. ಇವನಿಗೆ ಕೊನೆಯವರೆಗೂ ಸೋದರ ಮಾವಂದಿರ ಕಿರುಕುಳ ಹೆಚ್ಚಾಗಿರುತ್ತದೆ. ಏಳುಗೂಡಿನ ದನಗಳಿಗೆ ಒದಗಿದ ಕಷ್ಟಗಳಿಗೆಲ್ಲ ಅವನ ಸೋದರಮಾವಂದಿರ ಅಸೂಯೆಯೇ ಕಾರಣ. ಕೊನೆಗೆ ಅವರು ಜುಂಜಪ್ಪನಿಗೆ ವಿಷ ಉಣ್ಣಿಸಿ ಕೊಲ್ಲಲು ಪ್ರಯತ್ನಿಸುತ್ತಾರೆ. ಜುಂಜಪ್ಪ ವಿಷದ ಕಜ್ಜಾಯವನ್ನು ಸೇವಿಸುತ್ತಾನೆ. ಸತ್ತು, ಏಳನೆಯ ದಿವಸಕ್ಕೆ ಮತ್ತೆ ಕಾಣಿಸಿಕೊಳ್ಳುತ್ತಾನೆ. ಉರಿಬಾಣಗಳನ್ನು ಬಿಟ್ಟು ಮಾವಂದಿರನ್ನು ಕೊಂದು ಅವರ ಹಟ್ಟಿಯನ್ನು ನಾಶಮಾಡುತ್ತಾನೆ.

ಜುಂಜಪ್ಪ ಐತಿಹಾಸಿಕ ಪುರುಷನೆಂಬುದಕ್ಕೆ ಸ್ಪಷ್ಟವಾದ ಆಧಾರಗಳು ಸಿಕ್ಕದಿದ್ದರೂ ಹಾಗಲವಾಡಿ, ರಾಯಕಳವೇರಹಳ್ಳಿ ಮುಂತಾದ ಸ್ಥಳಗಳಲ್ಲಿ; ಗುಬ್ಬಿ, ಶಿರಾ, ಚಿಕ್ಕನಾಯಕನಹಳ್ಳಿ ತಾಲ್ಲೂಕುಗಳ ಕೆಲವು ನೆಲೆಗಳಿಗೆ ಸಂಬಂಧಿಸಿದ ಮಾಹಿತಿಗಳಲ್ಲಿ ಜುಂಜಪ್ಪ ಒಬ್ಬ ಮಹಿಮಾವಂತ ಮಾನವವೀರನಾಗಿಯೇ ಬದುಕಿದ್ದವನು ಎಂಬುದು ಸ್ಪಷ್ಟವಾಗುತ್ತದೆ. ಜುಂಜಪ್ಪ ಕರಡಿಯ ಗೊಲ್ಲರ ವಂಶಕ್ಕೆ ಸೇರಿದವ. ಇವನ ತಂದೆ ಕೆಲವು ಜನಪದ ಕಾವ್ಯಗಳ ಪ್ರಕಾರ ಕೆಂಪನ ಮಲ್ಲೇಗೌಡ. ಕೆಲವು ಕಾವ್ಯಗಳ ಪ್ರಕಾರ ಕೆಂಗುರಿ ಮಲ್ಲೇಗೌಡ. ದಕ್ಷಿಣ ಸಂಪ್ರದಾಯದ ಜನಪದ ಗಾಯಕರು ಜುಂಜಪ್ಪನ ವಂಶಾವಳಿಯನ್ನು ಹೀಗೆ ಗುರುತಿಸುತ್ತಾರೆ.

ಪೂಜಾರಿ ಕೊಂಡಪ್ಪ
|
ಕೆಂಗುರಿ ಮಲ್ಲೇಗೌಡ
|
ಕೆಂಪನ ಮಲ್ಲೇಗೌಡ

| ಜುಂಜಪ್ಪ | ಮಾರಣ್ಣ | ಮೈಲಣ್ಣ | ಮಾರಕ್ಕ |
|---|---|---|---|

ಉತ್ತರ ಸಂಪ್ರದಾಯದ ಕಥೆಯ ಪ್ರಕಾರ ಜುಂಜಪ್ಪನ ವಂಶದ ಮೂಲಪುರುಷ ಯಾರು ಎಂಬುದು ಸ್ಪಷ್ಟವಾಗುವುದಿಲ್ಲ. ಚಿತ್ರದೇವರ ಗುಡಿಯ ಏಳು ಮಂದಿ ಗುರಿಕಾರರಲ್ಲಿ ದೇವರ ದಯಮಾರ ಕೊನೆಯವ. ಅವನ ಮಗ ಕೆಂಗುರಿ ಮಲ್ಲೇಗೌಡ. ಅವನ ಹಿರಿಯ ಮಗನೇ ಜುಂಜಪ್ಪ. ಅವನಿಗೆ ಮಾರಣ್ಣ, ಮೈಲಣ್ಣ ಎಂಬ ಇಬ್ಬರು ಸೋದರರು, ಮಾರಕ್ಕ ಎಂಬ ಒಬ್ಬಳೇ ತಂಗಿ.

ಶಿರಾ ತಾಲ್ಲೂಕಿನ ರಾಯಕಳವೇರಹಳ್ಳಿ ಜುಂಜಪ್ಪನ ಮೂಲನೆಲೆಯೆಂದು ಆ ಸುತ್ತಿನವರೂ ಗುಬ್ಬಿ ತಾಲ್ಲೂಕಿನ ಹಾಗಲವಾಡಿ ಮೂಲನೆಲೆಯೆಂದು ಆ ಸುತ್ತಿನವರೂ ಹೇಳುತ್ತಾರೆ. ಇದರಿಂದಾಗಿ ಜುಂಜಪ್ಪನ ಹೆಸರು ಹಾಗಲವಾಡಿಯೊಂದಿಗೆ ಸೇರಿಕೊಂಡು ಹಾಗಲವಾಡಿ ಜುಂಜಪ್ಪ ಎಂದೂ ಪ್ರಸಿದ್ಧವಾಗಿದೆ. ಹಾಗಲವಾಡಿಯ ಹಟ್ಟಿಯಲ್ಲಿ ಜುಂಜಪ್ಪನ ಒಂದು ದೇವಾಲಯವಿದೆ. ಅಲ್ಲಿ ದೀವಳಿಗೆಯಲ್ಲಿ ದೊಡ್ಡ ಜಾತ್ರೆಯೊಂದು ನಡೆಯುತ್ತದೆ. ಹಾಗಲವಾಡಿಯ ಪಶ್ಚಿಮಕ್ಕೆ ಕೆಲವು ಕೂಗಿನ ದೂರದಲ್ಲಿ ಗಿರಿಶ್ರೇಣಿಯ ತಪ್ಪಲಲ್ಲಿ ಜುಂಜಪ್ಪನ ಹಟ್ಟಿ ಇದೆ. ಈ ಹಟ್ಟಿಯಿಂದಾಗಿ ಹಾಗಲವಾಡಿಯ ಹೆಸರು ಹೆಚ್ಚಾಗಿ ಕೇಳಿಬರುತ್ತದೆ.

ಜನಪದ ಕಾವ್ಯಗಳಲ್ಲಿ ಜುಂಜಪ್ಪನನ್ನು ಕುರಿತ ಕಾವ್ಯ ಪ್ರಮುಖವಾದುದು. ಅದು ಜುಂಜಪ್ಪನ ಪೂರ್ವಜರ ಕಥೆ, ಜುಂಜಪ್ಪನ ಕಥೆ - ಹೀಗೆ ಎರಡು ಮುಖವಾದುದು. ಸಾಕಷ್ಟು ವಿಸ್ತಾರವಾದ ಈ ಕಾವ್ಯದಲ್ಲಿ ಗೊಲ್ಲಸಮುದಾಯದ ಸಮಗ್ರ ಸಂಸ್ಕೃತಿಯ ಸಾರವನ್ನೇ ಕಾಣಬಹುದು. ಈ ದೃಷ್ಟಿಯಿಂದ ಇದನ್ನು ಅವರ ಕಾಲಪುರಾಣ ಎಂದು ಕರೆಯಬಹುದು. ಈ ಕಾವ್ಯದ ಪ್ರಕಾರ ಜುಂಜಪ್ಪ ಅವತಾರಪುರುಷ. ವೀರಭದ್ರನೇ ಶಿವನ ಕೋರಿಕೆಯಂತೆ ಜುಂಜಪ್ಪನಾಗಿ ಹುಟ್ಟಿದ. ಕಲಿವೀರ ಜುಂಜಪ್ಪ ಎಂಬುದು ಇವನ ಪೂರ್ಣ ಹೆಸರು. ಈತನ ತಾಯಿ ಚಿನ್ನಮ್ಮ. ಅವಳು ಕಂಬೇರ ಗೊಲ್ಲರ ವಂಶದವಳು. ತಾಯಿಯ ಬೆನ್ನಿನಲ್ಲಿ ಹುಟ್ಟಿದ್ದ ಜುಂಜಪ್ಪ ಮಹಿಮೆಗಳಿಂದ, ಗೊಲ್ಲ ಸಮುದಾಯದ ನಾಯಕನೆನಿಸಿ, ಆ ಸಮುದಾಯದ ಸಂಸ್ಕೃತಿಯನ್ನು ರೂಪಿಸಿ, ಅವರ ದೈವವೇ ಆಗಿ ಪೂಜೆಗೊಂಡವನು.

ಜುಂಜಪ್ಪ ಸಂಚರಿಸಿದ ಅನೇಕ ಸ್ಥಳಗಳ ಪ್ರಸ್ತಾಪವೂ ಜನಪದ ಕಾವ್ಯಗಳಲ್ಲಿ ಬರುತ್ತದೆ. ಶಿವಗಂಗೆ, ಮಾಗಡಿ, ಚಿಕ್ಕಮಗಳೂರಿನ ಸಮೀಪದ ಬಾಬಾಬುಡನ್ ಗಿರಿ, ಈಗಿನ ಮಾರಿಕಣಿವೆ ಪ್ರದೇಶ, ಮದಗದ ಗುಡ್ಡ, ಚೋಳೂರು, ಶಿರಾ ಮುಂತಾದ ಪ್ರದೇಶಗಳಲ್ಲಿ ಈತ ಸಂಚರಿಸಿ ತನ್ನ ಏಳುಗೂಡಿನ ದನಗಳನ್ನು ಇಲ್ಲಿನ ಕಾವಲುಗಳಲ್ಲಿ ಮೇಯಿಸಿ, ಅಲ್ಲಲ್ಲಿನ ಬಲಿಷ್ಠ ವ್ಯಕ್ತಿಗಳನ್ನೆಲ್ಲ ಸದೆಬಡಿದು ತನ್ನ ತಮ್ಮಂದಿರಾದ ಮಾರಣ್ಣ, ಮೈಲಣ್ಣ ಇವರನ್ನು ಕೂಡಿಕೊಂಡು ಗೋಪಾಲಕನಾಗಿಯೇ ಸ್ವಶಕ್ತಿ ಸಾಮರ್ಥ್ಯದಿಂದ ಅದ್ವಿತೀಯನಾಗಿ ಮೆರೆದನೆಂದು ಈ ಕಥೆಗಳು ನಿರೂಪಿಸುತ್ತವೆ.

ಜುಂಜಪ್ಪನ ಹೆಸರಿನಲ್ಲಿ ಊರಾಡಲು ಬರುವ ಭಕ್ತರು ಜುಂಜಪ್ಪನ ಗಣೆ ಎಂಬ ಸಾಧನವನ್ನು ತಮ್ಮ ಹೆಗಲಿನಲ್ಲಿ ಹೊತ್ತು ಜುಂಜಪ್ಪನ ಕಾಣಿಕೆ ಎಂದು ಸಾರಿಕೊಂಡು ಬರುತ್ತಾರೆ. ಜುಂಜಪ್ಪನ ಪ್ರತೀಕವಾದ ಈ ಗಣೆ ಒಂದು ಬಿದಿರ ಕೋಲು. ಅದಕ್ಕೆ ನಾನಾರೀತಿಯ ವಸ್ತ್ರಗಳನ್ನು ಸುತ್ತಿ ನಾಗರಹೆಡೆಯನ್ನು ಸಿಕ್ಕಿಸಿ, ನವಿಲುಗರಿಗಳಿಂದ ಅಲಂಕರಿಸಿರುತ್ತಾರೆ. ಜುಂಜಪ್ಪನಿಗೆ ಹರಕೆಹೊತ್ತವರು ಈ ಗಣೆಯವರಿಗೆ ಕಾಣಿಕೆ ಸಲ್ಲಿಸುತ್ತಾರೆ.

ಜುಂಜಪ್ಪನ ಸಂಪ್ರದಾಯದ ಗಣೆ ಎಂಬ ಮತ್ತೊಂದು ವಾದ್ಯ ಅತ್ಯಂತ ಜನಪ್ರಿಯವಾಗಿದೆ. ಸುಮಾರು ಎರಡೂವರೆ ಅಡಿ ಉದ್ದದ ಈ ಬಿದಿರ ಕೊಳವೆ ಒಂದು ದೊಡ್ಡ ಕೊಳಲು-ಪಿಳ್ಳಂಗೋವಿ. ಇದನ್ನು ಊದಿಕೊಂಡು ಗೊಲ್ಲರು ದೇವರನ್ನು ಮೈದುಂಬಿಸಿಕೊಂಡು ಕಣಿ ಹೇಳುತ್ತಾರೆ. ಜುಂಜಪ್ಪನ ಕಾವ್ಯವನ್ನು ಹಾಡುವಾಗ ಹಿಮ್ಮೇಳದ ಜೊತೆಗೆ ಶ್ರುತಿಗಾಗಿ ಈ ಕೊಳಲನ್ನೇ ಬಳಸಲಾಗುತ್ತದೆ. ಗಣೆಯ ನಾದ ಇಂಪಾದುದು, ಮೋಹಕವಾದುದು. ಜುಂಜಪ್ಪ ಕಂಚಿನ ಗಣೆಯನ್ನು ಬಳಸುತ್ತಿದ್ದನೆಂದೂ ಗಣೆಯೂದಿ ತನ್ನ ದನಗಳನ್ನೆಲ್ಲ ಅವನು ತಿರುವುತ್ತಿದ್ದನೆಂದೂ ಕಾವ್ಯದಲ್ಲಿ ವರ್ಣಿತವಾಗಿದೆ. ಒಮ್ಮೆ ಬಟ್ಟನ್ನ ಬಡಮೈಲ ಎಂಬ ಜುಂಜಪ್ಪನ ನೆಚ್ಚಿನ ಹೋರಿಯನ್ನು ಚೋಳೂರು ಪಾಳೆಯಗಾರರು ಕೋಟೆಯಲ್ಲಿ ಕೂಡಿಕೊಂಡಾಗ ಮದಗದ ಗುಡ್ಡವನ್ನೇರಿ ಜುಂಜಪ್ಪ ತನ್ನ ಗಣೆಯನ್ನು ಊದಲು ಆ ಗಣೆಯ ನಾದಕ್ಕೆ ರೋಮಾಂಚನಗೊಂಡ ಬಡಮೈಲ ಕೋಟೆಯನ್ನು ಹಾರಿ ತನ್ನ ಸ್ವಾಮಿಯನ್ನು ಸೇರಿಕೊಂಡಿತು ಎಂಬ ಅದ್ಭುತವಾದ ವರ್ಣನೆಯೂ ಈ ಕಾವ್ಯದಲ್ಲಿ ಬರುತ್ತದೆ.

ಜುಂಜಪ್ಪನ ಕಾವ್ಯ ನಮ್ಮ ಜನಪದ ಕಾವ್ಯಗಳಲ್ಲೆಲ್ಲ ಅತ್ಯುತ್ಕೃಷ್ಟವಾದುದು. ಕಾಡುಮೇಡುಗಳಲ್ಲಿ ದನದ ಹಿಂಡಿನ ಜೊತೆಯಲ್ಲಿ ಅಡ್ಡಾಡಿಕೊಂಡಿದ್ದ ಜುಂಜಪ್ಪನ ಮಹಿಮೆಯನ್ನಷ್ಟೇ ಅದು ಬಣ್ಣಿಸದೆ ಯಾವುದೋ ಗತಕಾಲದ ಜೀವನ ವೈವಿಧ್ಯವನ್ನೂ ಮಾಟಮಂತ್ರಗಳ ಪ್ರಭಾವವನ್ನೂ ಚಿತ್ರಿಸುತ್ತದೆ. ಮಂತ್ರವಾದಿಗಳನ್ನು, ಮಾಟಗಾರರನ್ನು, ಇತರ ದರ್ಪಿಷ್ಠರನ್ನು ಕ್ರಮವಾಗಿ ಜುಂಜಪ್ಪ ಗೆದ್ದುಕೊಂಡು ಹೋದ ಕೌತುಕದ ಕಥೆಯೇ ಈ ಕಾವ್ಯದ ವಸ್ತು. ಈ ಉದಾತ್ತವೀರನ ಅಪೂರ್ವ ವ್ಯಕ್ತಿತ್ವವನ್ನು ಕಾವ್ಯದಲ್ಲಿ ಸುಂದರವಾಗಿ ಕಡೆಯಲಾಗಿದೆ.

ಜುಂಜಪ್ಪನಿಗೆ ಕಾಡುಗೊಲ್ಲರು ಅತ್ಯಂತ ಭಯ, ಭಕ್ತಿ, ಶ್ರದ್ಧೆಗಳಿಂದ ನಡೆದುಕೊಳ್ಳುತ್ತಾರೆ. ಇತರ ಸಮುದಾಯದವರೂ ನಡೆದುಕೊಳ್ಳುತ್ತಾರೆ. ಜುಂಜಪ್ಪನ ಸಂಕೇತವಾಗಿ ಕಾಡುಗೊಲ್ಲರು ತಮ್ಮ ಬಳಿಯಿರುವ ಗಣೆಯನ್ನು ಪೂಜಿಸುತ್ತಾರೆ. ಹಾವು, ಚೇಳುಗಳ ಅಧಿದೈವವಾಗಿಯೂ ಜುಂಜಪ್ಪ ಆರಾಧಿಸಲ್ಪಡುತ್ತಾನೆ. ಮನೆಯಲ್ಲಿ ಹಾವು, ಚೇಳು, ಜರಿ ಮೊದಲಾದ ದುಷ್ಟಪ್ರಾಣಿಗಳು ಕಾಣಿಸಿಕೊಂಡಾಗ, ಕಷ್ಟಕಾರ್ಪಣ್ಯಗಳು ತಲೆದೋರಿದಾಗ ಜುಂಜಪ್ಪನ ಹೆಸರಿನಲ್ಲಿ ಹರಕೆ ಹೊತ್ತರೆ ದುಷ್ಟಪ್ರಾಣಿಗಳು ಕಾಣಿಸಿಕೊಳ್ಳುವುದಿಲ್ಲವೆಂದೂ ಜುಂಜಪ್ಪ ತಮ್ಮೆಲ್ಲ

ಕಷ್ಟಗಳನ್ನು ಪಾರುಮಾಡುವನೆಂದೂ ಜನ ನಂಬುತ್ತಾರೆ. ಕೆಲವು ಪ್ರದೇಶಗಳಲ್ಲಿ ಹರಕೆಯನ್ನು ಹಾವು, ಚೇಳು ಮೊದಲಾದ ಪ್ರಾಣಿಗಳ ಪ್ರತಿಮೆಯನ್ನು ಚಿನ್ನ ಅಥವಾ ಬೆಳ್ಳಿಯಲ್ಲಿ ಮಾಡಿಸಿ ಒಪ್ಪಿಸುವುದುಂಟು. ಬಹುಶಃ ಉರಗ ಭೂಷಣನಾದ ಶಿವನ ವರಪ್ರಸಾದದಿಂದ ಹುಟ್ಟಿದುದರಿಂದ ಜುಂಜಪ್ಪನಿಗೂ ಹಾವು ಚೇಳು ಮುಂತಾದ ಪ್ರಾಣಿಗಳಿಗೂ ಸಂಬಂಧವನ್ನು ಕಲ್ಪಿಸಿರುವಂತೆ ತೋರುತ್ತದೆ. ಜುಂಜಪ್ಪನ ಸಂಪ್ರದಾಯ ಸಂಶೋಧಕರ ಕುತೂಹಲವನ್ನು ಕೆರಳಿಸುವ ಆಸಕ್ತಿದಾಯಕ ಕ್ಷೇತ್ರವಾಗಿದೆ. (ಎಸ್.ಎನ್.ಡಿ.)

**ಜೇನುಸಾಕಣೆ :** ಕರ್ನಾಟಕದಲ್ಲಿ ಪುರಾತನ ಕಾಲದಿಂದಲೂ ರೂಢಿಯಲ್ಲಿರುವ ಒಂದು ಉದ್ಯಮ. ಹಳೆಯ ಕ್ರಮದ ಜೇನುಸಾಕಣೆಯಲ್ಲಿ ಜೇನುನೊಣಗಳ ಆವಶ್ಯಕತೆಗಳನ್ನು ಪೂರೈಸಲಾಗುತ್ತಿರಲಿಲ್ಲವಾದ್ದರಿಂದ ಜೇನು ತುಪ್ಪದ ಉತ್ಪತ್ತಿ ಹೆಚ್ಚಾಗಿರುತ್ತಿರಲಿಲ್ಲ. ಅಲ್ಲದೆ ಕೈಯಿಂದ, ಬಟ್ಟೆಯಿಂದ ಹಿಂಡಿ ಜೇನನ್ನು ತೆಗೆಯುತ್ತಿದ್ದುದರಿಂದ ಅದು ಉತ್ತಮ ಮಟ್ಟದ್ದಾಗಿರುತ್ತಿರಲಿಲ್ಲ. ಆಧುನಿಕ ಜೇನುಕೃಷಿಪದ್ಧತಿಯಲ್ಲಿ ಉತ್ತಮವಾದ ಮರದಿಂದ, ಸರಿಯಾದ ಅಳತೆಯಲ್ಲಿ ತಯಾರುಮಾಡಿದ ಪೆಟ್ಟಿಗೆಗಳಲ್ಲಿ ಜೇನುನೊಣಗಳ ಕುಟುಂಬಗಳನ್ನು ಸಾಕಲಾಗುತ್ತದೆ. ಸಂಸಾರ ಬೆಳೆಸುವ ಅನುಕೂಲತೆಗೂ ಹೆಚ್ಚಾಗಿ ಬರುವ ಜೇನುತುಪ್ಪದ ಶೇಖರಣೆಗೂ ಬೇರೆ ಬೇರೆ ಕೋಣೆಗಳನ್ನು ಒದಗಿಸುವುದರಿಂದ ಮತ್ತು ಜೇನುತುಪ್ಪವನ್ನು ಸುಧಾರಿತ ರೀತಿಯ ಯಂತ್ರದ ಸಹಾಯದಿಂದ ತೆಗೆಯುವುದರಿಂದ ಉತ್ತಮವಾದ ಜೇನುತುಪ್ಪ ದೊರೆಯುತ್ತದೆ. ಈ ಪದ್ಧತಿಯಲ್ಲಿ ಜೇನುನೊಣಗಳ ಆವಶ್ಯಕತೆಯನ್ನು ಆಗಿಂದಾಗ್ಗೆ ಪೂರೈಸಿಕೊಡಲಾಗುತ್ತಿರುವುದರಿಂದಲೂ ಕುಟುಂಬಕ್ಕೆ ಸಾಕಷ್ಟು ಆಹಾರವನ್ನು ಒದಗಿಸುವುದರಿಂದಲೂ ಜೇನು ಕುಟುಂಬಗಳು ಹೆಚ್ಚು ವರ್ಷಗಳವರೆಗೆ ಗೂಡುಗಳಲ್ಲಿ ಉಳಿದು ಆರ್ಥಿಕ ದೃಷ್ಟಿಯಿಂದ ಹೆಚ್ಚು ಲಾಭವನ್ನು ಒದಗಿಸಿಕೊಡುತ್ತವೆ.

ಜೇನುಕೃಷಿ ಲಾಭದಾಯಕವಾಗಿರಬೇಕಾದರೆ ಕೆಳಗಿನ ಮೂರು ಅಂಶಗಳು ಅಗತ್ಯ.

1 ಜೇನು ನೊಣಗಳಿಗೆ ಧಾರಾಳವಾಗಿ ಮಕರಂದ ಮತ್ತು ಪರಾಗವನ್ನು ಒದಗಿಸಿಕೊಡುವ ಗಿಡಮರಗಳಿರಬೇಕು.

2 ಜೇನುಕೃಷಿಯನ್ನು ಪ್ರಾರಂಭಿಸುವ ಸ್ಥಳದಲ್ಲಿ ನಿಸರ್ಗದ ಜೇನುಕುಟುಂಬಗಳು ಹೇರಳವಾಗಿ ಬರುತ್ತಿರಬೇಕು.

3 ಸಾಕಣೆಗಾರರಿಗೆ ಜೇನುಸಾಕಣೆಯಲ್ಲಿ ಆಸಕ್ತಿ ಇರಬೇಕು.

ಕರ್ನಾಟಕದಲ್ಲಿ ಹೆಚ್ಚಾಗಿ ಮಲೆನಾಡು ಪ್ರದೇಶಗಳಲ್ಲಿ ಕೊಡಗು, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಉಡುಪಿ, ಉತ್ತರ ಕನ್ನಡ ಜಿಲ್ಲೆಗಳಲ್ಲಿ ಮತ್ತು ಹಾಸನ, ಶಿವಮೊಗ್ಗ, ಧಾರವಾಡ, ಬೆಳಗಾಂವಿ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಜೇನುಸಾಕಣೆ ಹೆಚ್ಚು ಲಾಭದಾಯಕವಾದ ಕುಶಲ ಕೈಗಾರಿಕೆಯಾಗಿದೆ. ರಾಜ್ಯದ ಉಳಿದ ಜಿಲ್ಲೆಗಳಲ್ಲಿ, ಅಂದರೆ ಬೆಂಗಳೂರು, ಮೈಸೂರು, ಚಾಮರಾಜನಗರ, ಮಂಡ್ಯ, ತುಮಕೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ಕೆಲವು ನೈಸರ್ಗಿಕ ವನಸ್ಪತಿಗಳ ಮತ್ತು ವ್ಯವಸಾಯದ ಬೆಳೆಗಳ ಅವಲಂಬನೆಯಲ್ಲಿ ಜೇನುಸಾಕಣೆ ನಡೆಸುವುದಿದೆ. ಜೇನುನೊಣಗಳು ವ್ಯವಸಾಯದ ಬೆಳೆಗಳ ಪರಾಗಸ್ಪರ್ಶ ಕಾರ್ಯವನ್ನು ನಡೆಸಿ ಬೆಳೆಯ ಉತ್ಪತ್ತಿಯನ್ನು ಹೆಚ್ಚು ಮಾಡುವುದರಿಂದ ಎಲ್ಲ ಕಡೆಗಳಲ್ಲೂ ಜೇನುಸಾಕಣೆಗೆ ಆದ್ಯತೆ ನೀಡಲಾಗಿದೆ.

ಜೇನುಸಾಕಣೆಗೆ ರಾಜ್ಯ ಸರ್ಕಾರದ ಪ್ರೋತ್ಸಾಹವೊಂದೇ ಅಲ್ಲದೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಗಳ ಮತ್ತು ಜೇನುಕೃಷಿಕರ ಸಹಕಾರ ಸಂಘಗಳ ನೆರವೂ ಉಂಟು. ಜೇನುಕೃಷಿಗೆ ಅಗತ್ಯವಾದ ಜೇನುಪೆಟ್ಟಿಗೆ ಮತ್ತು ಇತರ ಉಪಕರಣಗಳನ್ನು ಈ ಸಂಘ ಸಂಸ್ಥೆಗಳು ಒದಗಿಸಿ ಕೊಡುತ್ತವೆ. ಈ ಕೃಷಿಯಲ್ಲಿ ಪರಿಣತರಾದವರನ್ನು ಅಲ್ಲಲ್ಲಿ ನೇಮಿಸಿ ಅವರಿಂದ ಗ್ರಾಮಾಂತರ ಜನರಿಗೆ ಜೇನುಕೃಷಿಯನ್ನು ಮಾಡಲು ಅನುಕೂಲವಾದ ಮಾಹಿತಿಯನ್ನು, ತಾಂತ್ರಿಕ ಜ್ಞಾನವನ್ನು ಒದಗಿಸಲಾಗುತ್ತಿದೆ. ಜೇನುತುಪ್ಪಕ್ಕೆ ಯೋಗ್ಯಮಾರುಕಟ್ಟೆ ಸಿಕ್ಕುವಂತೆ ತಕ್ಕ ಏರ್ಪಾಟೂ ಉಂಟು. ಜೇನುಕೃಷಿಯಲ್ಲಿ ಹೆಚ್ಚು ತಿಳಿವಳಿಕೆಯನ್ನು ಕೊಡುವ ಸಲುವಾಗಿ ರಾಜ್ಯಸರ್ಕಾರ ಎರಡು ತಿಂಗಳ ಅವಧಿಯ ತರಬೇತಿ ನೀಡುವ ವ್ಯವಸ್ಥೆ ಮಾಡಿದೆ.

ಬೆಂಗಳೂರು ಮತ್ತು ಮಡಿಕೇರಿಯಲ್ಲಿ ಜೇನುಸಾಕಣೆಯ ಎರಡು ಪ್ರಮುಖ ಕೇಂದ್ರಗಳುಂಟು. ಕೊಡಗಿನ ಭಾಗಮಂಡಲದಲ್ಲಿ ಜೇನುಕೃಷಿ ತರಬೇತಿಕೇಂದ್ರ ಇದೆ. (ಕೆ.ಎಂ.ಜೆ.)

**ಜೇವರಗಿ :** ಗುಲ್ಬರ್ಗ ಜಿಲ್ಲೆಯ ಒಂದು ತಾಲ್ಲೂಕು ಮತ್ತು ತಾಲ್ಲೂಕಿನ ಮುಖ್ಯ ಪಟ್ಟಣ. ಇದು ಗುಲ್ಬರ್ಗದಿಂದ 44ಕಿಮೀ ದೂರದಲ್ಲಿದೆ. ಈ ತಾಲ್ಲೂಕನ್ನು ಪೂರ್ವದಲ್ಲಿ ಚಿತ್ತಾಪುರ, ಆಗ್ನೇಯದಲ್ಲಿ ಶಹಾಪುರ, ದಕ್ಷಿಣದಲ್ಲಿ ಸುರಪುರ, ಉತ್ತರದಲ್ಲಿ ಗುಲ್ಬರ್ಗ, ವಾಯವ್ಯದಲ್ಲಿ ಅಫ಼ಜಲಪುರ ತಾಲ್ಲೂಕುಗಳೂ ಪಶ್ಚಿಮದಲ್ಲಿ ಬಿಜಾಪುರ ಜಿಲ್ಲೆಯೂ ಸುತ್ತುವರಿದಿವೆ. ಈ ತಾಲ್ಲೂಕು ಯಾದಗಿರಿ ಉಪವಿಭಾಗಕ್ಕೆ ಸೇರಿದೆ. ಇದನ್ನು ಜೇವರಗಿ, ಇಚೆರಿ, ನಲೋಗಿ, ಯಡ್ರಾಮಿ ಮತ್ತು ಅಂದೋಲಾ ಎಂಬ ಐದು ಕಂದಾಯ ವಲಯಗಳಾಗಿ ವಿಂಗಡಿಸಲಾಗಿದೆ. 158 ಗ್ರಾಮಗಳಿಂದ ಕೂಡಿದ ಈ ತಾಲ್ಲೂಕಿನ ವಿಸ್ತೀರ್ಣ 1812.7ಚ.ಕಿಮೀ. ಜನಸಂಖ್ಯೆ 2,34,825.

ಇಂದಿನ ಜೇವರಗಿ ತಾಲ್ಲೂಕು ಸು.1707ರಿಂದ 1857ರವರೆಗೆ ಸುರಪುರದ ನಾಯಕರ ಆಳಿಕೆಗೊಳಪಟ್ಟಿತ್ತು. 1857ರಲ್ಲಿ ವೆಂಕಟಪ್ಪನಾಯಕ ಬ್ರಿಟಿಷರನ್ನು ಎದುರಿಸಿ ಯುದ್ಧಮಾಡಿದ ಕಾರಣದಿಂದ ಆತನ ಸಂಸ್ಥಾನವನ್ನು ಬ್ರಿಟಿಷರು ರದ್ದುಮಾಡಿ ಅದನ್ನು ನಿಜಾಮ ದೊರೆಗೆ ವಹಿಸಿಕೊಟ್ಟರು. ನಿಜಾಮ ಇದನ್ನು ತನ್ನ ಸರಫ್ ಎ ಖಾಸ್‌ಗೆ ಸೇರಿಸಿದ. ಅಂದಿನಿಂದ ಹೈದರಾಬಾದು ಸಂಸ್ಥಾನ ಸ್ವತಂತ್ರ ಭಾರತದಲ್ಲಿ ವಿಲೀನವಾಗುವವರೆಗೆ ಈ ತಾಲ್ಲೂಕು ಸರಫ್ ಎ ಖಾಸ್ ದಲ್ಲಿಯೇ ಇತ್ತು. 1921ರಲ್ಲಿ ತಾಲ್ಲೂಕಿನ ಮುಖ್ಯ ಸ್ಥಳ ಜೇವರಗಿಗೆ ಸ್ಥಳಾಂತರವಾಗುವವರೆಗೆ ಈ ತಾಲ್ಲೂಕು ಅಂದೋಲಾ ತಾಲ್ಲೂಕು ಎನಿಸಿಕೊಂಡಿತ್ತು. ಸು.1863ರಿಂದ 1921ರವರೆಗೆ ಸರ್ಕಾರಿ ದಾಖಲೆಗಳಲ್ಲೆಲ್ಲ ಆಂದೋಲಾ ತಾಲ್ಲೂಕು ಎಂದೇ ಇದೆ.

ಜೇವರಗಿ ತಾಲ್ಲೂಕಿನ ಭೂಮಿ ಸಮುದ್ರಮಟ್ಟದಿಂದ ಸು.1000'-1500' ಎತ್ತರದಲ್ಲಿದೆ. ಭೂಮಿ ಸಮಪಾತಳಿಯಾಗಿದೆ. ಯಡ್ರಾಮಿಯ ಸಮೀಪ ಕರಿಕಲ್ಲಿನ ಚಿಕ್ಕಬೆಟ್ಟದ ಶ್ರೇಣಿಯೊಂದಿದೆ. ಕಲ್ಯಾಣದ ಚಾಳುಕ್ಯರ ಕಾಲದ ದೇವಾಲಯಗಳನ್ನು ನಿರ್ಮಿಸಿರುವುದು ಇಲ್ಲಿಯ ಕಲ್ಲುಗಳಿಂದ. ಇಲ್ಲಿನ ಮಣ್ಣು ಕಪ್ಪು ಎರೆಭೂಮಿ; ನದಿಯ ದಂಡೆಯಲ್ಲಿ ಮೆಕ್ಕಲುಮಣ್ಣಿದೆ. ಇದು ಫಲವತ್ತಾದ ಭೂಮಿಯಾಗಿದೆ. ಭೀಮಾ ನದಿಯ ದಂಡೆಯುದ್ದಕ್ಕೂ ಪದರಗಲ್ಲುಗಳು ಚೆನ್ನಾಗಿ ಹಬ್ಬಿಕೊಂಡಿವೆ. ಇಲ್ಲಿ ಸುಣ್ಣದಕಲ್ಲು ಹೇರಳವಾಗಿ ದೊರಕುತ್ತದೆ. ಇದನ್ನು ವಾಡಿ ಹಾಗೂ ಶಾಹಬಾದ ಸಿಮೆಂಟ್ ಕಾರ್ಖಾನೆಗಳಿಗೆ ಕಳಿಸಲಾಗುತ್ತದೆ. ತಾಲ್ಲೂಕಿನ ದಕ್ಷಿಣ ಭಾಗ ಧಾರವಾಡ ಶಿಲಾಗುಂಪಿಗೆ ಸೇರಿದ ಭೂಮಿ.

ಭೀಮಾ ನದಿ ಈ ತಾಲ್ಲೂಕಿನ ಉತ್ತರ ಗಡಿಯಲ್ಲಿ ಪಶ್ಚಿಮದಿಂದ ಆಗ್ನೇಯಕ್ಕೆ ಹರಿದು ಅಫ಼ಜಲಪುರ, ಗುಲ್ಬರ್ಗ ಮತ್ತು ಚಿತ್ತಾಪುರ ತಾಲ್ಲೂಕುಗಳನ್ನು ಬೇರ್ಪಡಿಸಿದೆ. ಜೇವರಗಿಯ ಹತ್ತಿರ ಈ ನದಿಗೆ ಸೇತುವೆಯೊಂದು ಇರುವುದರಿಂದ ಗುಲ್ಬರ್ಗಕ್ಕೆ ನೇರ ಸಂಪರ್ಕವುಂಟು. ಭೀಮಾ ಯೋಜನೆಯಿಂದ ಈ ಭಾಗಕ್ಕೆ ನೀರಾವರಿಯ ಸೌಲಭ್ಯ ಉಂಟಾಗುತ್ತದೆ. ನದಿಯ ದಂಡೆಯಲ್ಲಿ ಕಪ್ಪುಮಣ್ಣಿನ ಭೂಮಿ ಇದ್ದು ಹತ್ತಿಬೆಳೆಗೆ ಪ್ರಸಿದ್ಧವಾಗಿದೆ. ತಾಲ್ಲೂಕಿನ ಒಟ್ಟು ಮುಕ್ಕಾಲು ಭಾಗಕ್ಕಿಂತಲೂ ಹೆಚ್ಚು ಭೂಮಿ ಸಾಗುವಳಿಗೆ ಒಳಪಟ್ಟಿದೆ. ಇದರಲ್ಲಿ ನೀರಾವರಿಯ ಸೌಲಭ್ಯವನ್ನು ಪಡೆದಿರುವ ಭಾಗ ಅಲ್ಪ. ಉಳಿದ ಭಾಗದಲ್ಲಿ ಮಳೆಯನ್ನೇ ಆಶ್ರಯಿಸಿ ಬೆಳೆಯನ್ನು ತೆಗೆಯಬೇಕಾಗಿದೆ. ಇಲ್ಲಿನ ವಾರ್ಷಿಕ ಸರಾಸರಿ ಮಳೆ 600ಮಿಮೀ. ಈ ತಾಲ್ಲೂಕಿನದು ಆರೋಗ್ಯಕರವಾದ ಶುಷ್ಕ ವಾಯುಗುಣ. ಕೃಷಿ ಇಲ್ಲಿಯ ಜನರ ಪ್ರಧಾನ ಕಸಬು. ಜೋಳ, ಸಜ್ಜೆ, ಮೆಣಸಿನಕಾಯಿ, ತೊಗರಿ, ಹತ್ತಿ, ಎಣ್ಣೆಕಾಳುಗಳು, ಬಿಳಿಜೋಳ, ಗೋದಿ, ಕಬ್ಬು-ಇವು ಇಲ್ಲಿಯ ಕೃಷಿ ಉತ್ಪನ್ನಗಳು. ನದಿಯ ದಂಡೆಗುಂಟ ಅಲ್ಲಲ್ಲಿ ನೀರನ್ನು ಬಳಸಿಕೊಂಡು ತೋಟಗಾರಿಕೆ ಬೇಸಾಯ ಮಾಡಲಾಗುತ್ತಿದೆ.

ಜೇವರಗಿ ತಾಲ್ಲೂಕಿನಲ್ಲಿ ಅರಣ್ಯವಿಲ್ಲವೆನ್ನಬಹುದು. ಬೇವು, ಮಾವು, ಬಸಲಿ, ಜಾಲಿ ಮರಗಳನ್ನು ಅಲ್ಲಲ್ಲಿ ಕಾಣಬಹುದು. ಕಾಡು ಪ್ರಾಣಿಗಳಲ್ಲಿ ನರಿ, ಗುಂಜಾನರಿ, ತೋಳ, ಚಿಗರೆ, ಮೊಲ ಸಾಮಾನ್ಯ.

ಈ ತಾಲ್ಲೂಕಿನ ಆಂದೋಲಾ, ಮದ್ರಕ ಮೊದಲಾದ ಸ್ಥಳಗಳಲ್ಲಿ ಬೃಹತ್ ಶಿಲಾ ಸಮಾಧಿಗಳಿವೆ. ಅರಳಗುಂಡಿಗೆ ಶರಣಬಸವೇಶ್ವರರ ಜನ್ಮಸ್ಥಾನ, ಕಡಕೋಳ ಎಂಬ ಗ್ರಾಮ ಕೈವಲ್ಯ ವಾಕ್ಯಾಮೃತದ ಕರ್ತೃ ಮಡಿವಾಳಪ್ಪ ಮಹಾಂತಯೋಗಿ ಎಂಬ ವಚನಕಾರರಿದ್ದ ಸ್ಥಳ. ಸೊನ್ನ ಗ್ರಾಮ ಸಿದ್ಧಲಿಂಗಯೋಗಿ (ಸು.1600) ಎಂಬ ವಚನಕಾರರು ಇದ್ದ ಸ್ಥಳ. ಕೋಳಕೂರು ಎಂಬಲ್ಲಿ ಸೊಪ್ಪೆಯಮಠ ಎಂಬ ವೀರಶೈವ ಮಠವಿದೆ. ಇಲ್ಲಿ ಇದ್ದ ಸೊಪ್ಪೆಯ ಸಿದ್ಧಬಸವ ಎಂಬ ವಚನಕಾರ ತೋಂಟದ ಸಿದ್ಧಲಿಂಗೇಶ್ವರರ (ಸು.1470) ಸಮಕಾಲೀನ. ಇವನ ಚರಿತ್ರೆ ಲಕ್ಕಣದಂಡೇಶನ ಶಿವತತ್ತ್ವಚಿಂತಾಮಣಿಯಲ್ಲಿದೆ. ಹೊನಗುಂಟೆಯಲ್ಲಿ ಉಂಡುಪವಾಸಿ ಎಂಬ ವಚನಕಾರ ಇದ್ದನೆಂದು ತಿಳಿದುಬರುತ್ತದೆ. ಇಲ್ಲಿ ಚಂದ್ರಲಾಪರಮೇಶ್ವರಿಯ ದೇವಸ್ಥಾನವೂ ಉಂಟು. ಸನ್ನತಿಯ ಚಂದ್ರಲಾಪರಮೇಶ್ವರಿಯ ಇನ್ನೊಂದು ಪಾದವೇ ಇಲ್ಲಿ ಇದೆಯೆಂದು ಜನರ ನಂಬುಗೆ. ರಾಮಪುರ ನಿಜಶರಣನ ತ್ರಿವಿಧಿಯ ಕರ್ತೃ ಬೊಕ್ಕಪ್ಪ (17ನೆಯ ಶತಮಾನ) ಎಂಬ ವಚನಕಾರನ ಜನ್ಮಸ್ಥಳ. ಯಡ್ರಾಮಿ ಒಂದು ಪುರಾತನ ತೀರ್ಥಕ್ಷೇತ್ರ. ಸಿಂಹಪರ್ಷೆಯ ಪಾಶುಪತರಿಗೆ ಇದು ಒಂದು ಮಹಾ ಕ್ಷೇತ್ರವಾಗಿತ್ತು. 6ನೆಯ ವಿಕ್ರಮಾದಿತ್ಯನ ಹಲವು ಶಾಸನಗಳಲ್ಲಿ ಇದರ ಪ್ರಸ್ತಾಪವುಂಟು. ಕುಳಗೇರಿಯಲ್ಲಿ ಕಲ್ಯಾಣದ ಚಾಳುಕ್ಯರ ಕಾಲದ ಕೆಲವು ಶಾಸನಗಳೂ ದೇವಸ್ಥಾನಗಳೂ ಇವೆ. ಇದರ ಇತಿಹಾಸ, ಪೌರಾಣಿಕ ಕಥೆ ಚಂದ್ರಹಾಸನಿಗೆ ಸಂಬಂಧಪಟ್ಟಿದ್ದು. ಚಂದ್ರಹಾಸನ ರಾಜಧಾನಿ ಕುಂತಳ ಪ್ರದೇಶ ಇದರ ಸುತ್ತಲಲ್ಲೆ ಇತ್ತೆಂದು ಪ್ರತೀತಿ.

ಜೇವರಗಿ ಈ ತಾಲ್ಲೂಕಿನ ಆಡಳಿತ ಕೇಂದ್ರ. ಗುಲ್ಬರ್ಗ ಕಿಮೀ ದೂರದಲ್ಲಿದೆ. ಜನಸಂಖ್ಯೆ 19,174. ಶಾಹಪುರ ಗುಲ್ಬರ್ಗ ಮಾರ್ಗ ಮತ್ತು ಗುಲ್ಬರ್ಗ ಬಿಜಾಪುರ ಮಾರ್ಗಗಳು ಈ ಪಟ್ಟಣದ ಮುಖಾಂತರ ಹಾದುಹೋಗಿವೆ. ಜೇವರಗಿ ಪಟ್ಟಣದ ಉತ್ತರದಲ್ಲಿ ಭೀಮಾ ನದಿ ದಕ್ಷಿಣಾಭಿಮುಖವಾಗಿ ಹರಿಯುತ್ತದೆ. ಇಲ್ಲಿ ಕೆಲವು ಜೈನ ಬಸದಿಗಳಿವೆ. ಇದು ಜೈನರ ಯಾತ್ರಾಸ್ಥಳ. 17ನೆಯ ಶತಮಾನದ ಮಧ್ಯದಲ್ಲಿದ್ದ ಷಣ್ಮುಖಸ್ವಾಮಿಗಳು ಇಲ್ಲಿನ ವೀರಶೈವ ಪುರಾತನ ಮಠದಲ್ಲಿ ಇದ್ದು ಅಖಂಡೇಶ್ವರ ಎಂಬ ಅಂಕಿತದಲ್ಲಿ ವಚನಗಳನ್ನು ಬರೆದಂತೆ ತಿಳಿದುಬರುತ್ತದೆ. (ಎಸ್.ಜೆ.ಎ.)

**ಜೈತುಗಿ I :** ಸೇವುಣ ವಂಶದ ಅರಸ (ಸು.1192-99). ತನ್ನ ತಂದೆ ಐದನೆಯ ಭಿಲ್ಲಮನ ತರುವಾಯ ಪಟ್ಟವನ್ನೇರಿದ. ಇವನಿಗೆ ಜೈತ್ರಪಾಲ ಮತ್ತು ಜೈತ್ರಸಿಂಹ ಎಂಬ ಹೆಸರುಗಳೂ ಇದ್ದುವು. ಇವನು ಪಟ್ಟಕ್ಕೆ ಬಂದಾಗ ಹೊಯ್ಸಳ ಎರಡನೆಯ ಬಲ್ಲಾಳ ದಕ್ಷಿಣದಲ್ಲಿ ಪ್ರಬಲನಾಗಿದ್ದ. ಇದನ್ನು ಮನಗಂಡ ಜೈತುಗಿ ಪೂರ್ವದತ್ತ ರಾಜ್ಯವಿಸ್ತರಿಸಲು 1193ರಲ್ಲಿ ಕಾಕತೀಯರ ಮೇಲೆ ಯುದ್ಧ ಹೂಡಿದ. ಈ ಯುದ್ಧದಲ್ಲಿ ಕಾಕತೀಯ ರುದ್ರ ಸತ್ತ. ಸೇಡು ತೀರಿಸಿಕೊಳ್ಳಲು ಮತ್ತೆ ಏರಿಬಂದ ಅವನ ತಮ್ಮ ಮಹಾದೇವನೂ ಮರಣವನ್ನಪ್ಪಿದ. ಇವನ ಮಗ ಗಣಪತಿ ಸೇವುಣರ ಬಂದಿಯಾದ. ಕೆಲಕಾಲದ ಅನಂತರ ಜೈತುಗಿ ಅವನನ್ನು ಸೆರೆವಾಸದಿಂದ ವಿಮುಕ್ತಿಗೊಳಿಸಿ ಕಾಕತೀಯ ಸಿಂಹಾಸನದಲ್ಲಿ ಸ್ಥಾಪಿಸಿದ. ಜೈತುಗಿಯ ಮರಣಾನಂತರ (ಸು.1200) ಇವನ ಮಗ ಸಿಂಘಣ ರಾಜ್ಯಭಾರವನ್ನು ವಹಿಸಿಕೊಂಡ. (ಆರ್.ಟಿ.ಎಸ್.ಜಿ.)

**ಜೈನಧರ್ಮ :** ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಜೈನಧರ್ಮ ಮಹತ್ತ್ವದ ಸ್ಥಾನವನ್ನು ಪಡೆದಿದೆ. ಈ ಧರ್ಮ ಉತ್ತರ ಭಾರತದಲ್ಲಿ ಉಗಮವಾದುದಾದರೂ ಕರ್ನಾಟಕದಲ್ಲಿ ಪ್ರಚಾರಗೊಂಡಂದಿನಿಂದ ಇಲ್ಲಿನ ಸಾಹಿತ್ಯ, ಕಲೆ, ಭಾಷೆ, ವಿದ್ಯಾಪ್ರಸಾರ ಮತ್ತು ಸಾಮಾನ್ಯ ಜನರ ಜೀವನ ವಿಧಾನ ಹಾಗೂ ನೈತಿಕ ಮೌಲ್ಯಗಳನ್ನು ರೂಪಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದೆ. ಈ ಸಂದರ್ಭದಲ್ಲಿ ಶ್ರವಣಬೆಳಗೊಳ, ಕಾರ್ಕಳ, ಮೂಡಬಿದರೆ, ಹುಮಚ, ಲಕ್ಷ್ಮೇಶ್ವರ ಮೊದಲಾದೆಡೆಗಳ ಜೈನ ವಾಸ್ತುಶಿಲ್ಪ ಕೃತಿಗಳನ್ನೂ ಕನ್ನಡ ಸಾಹಿತ್ಯದಲ್ಲಿ ಜೈನಯುಗವೆಂದೇ ಹೆಸರಾಗಿರುವ 10-12ನೆಯ ಶತಮಾನಗಳ ಅವಧಿಯಲ್ಲಿ ಹುಟ್ಟಿದ ಉತ್ಕೃಷ್ಟ ಸಾಹಿತ್ಯವನ್ನೂ ನೆನೆಯಬಹುದು. ಜೈನಧರ್ಮದ ಕೊಡುಗೆಗಳಿಂದ ಕರ್ನಾಟಕ ಸಂಸ್ಕೃತಿ ಸಂಪದ್ಭರಿತವಾದಂತೆ, ಜೈನಧರ್ಮಕ್ಕೆ ಕರ್ನಾಟಕದ ಕಾಣಿಕೆ ಅಲ್ಪವಾದುದೇನಲ್ಲ. ತೀರ್ಥಂಕರರೆಲ್ಲ ಉತ್ತರ ಭಾರತದಲ್ಲೆ ಜನಿಸಿ ಧರ್ಮಪ್ರಚಾರ ಮಾಡಿದವರಾದರೂ ಮುಂದೆ ಜೈನಧರ್ಮಕ್ಕೆ ಸಂಬಂಧಿಸಿದ ಶಾಸ್ತ್ರಗ್ರಂಥಗಳನ್ನು ರಚಿಸಿ ಆಚಾರ ವಿಚಾರಗಳನ್ನು ಪ್ರಚುರಗೊಳಿಸಿದ ಆಚಾರ್ಯರುಗಳಲ್ಲಿ ಹೆಚ್ಚಿನವರು ಕರ್ನಾಟಕದವರೇ ಆಗಿದ್ದಾರೆ. ಕುಂದಕುಂದಾಚಾರ್ಯ (ಕೊಂಡಕುಂದಾಚಾರ್ಯ), ಸಮಂತಭದ್ರ, ಪೂಜ್ಯಪಾದ, ಅಕಲಂಕ, ವೀರಸೇನ, ಜಿನಸೇನ ಮೊದಲಾದ ಈ ನಾಡಿನ ಆಚಾರ್ಯರು ಜೈನಧರ್ಮದ ಇತಿಹಾಸದಲ್ಲಿ ಗೌರವಾನ್ವಿತ ಸ್ಥಾನವನ್ನು ಗಳಿಸಿದವರಾಗಿದ್ದಾರೆ.

**ಇತಿಹಾಸ :** ಕರ್ನಾಟಕದಲ್ಲಿ ಜೈನಧರ್ಮ ಕ್ರಿಸ್ತಪೂರ್ವದ ಕಾಲದಿಂದಲೇ ಹರಡಿರಬೇಕೆಂಬುದಕ್ಕೆ ಅನಂತರಕಾಲದ ಹಲವು ಸಾಹಿತ್ಯಕ ಮತ್ತು ಶಾಸನಗಳ ಆಧಾರಗಳು ದೊರಕುತ್ತವೆ. ಸು.10ನೆಯ ಶತಮಾನದಲ್ಲಿ ರಚಿತವಾದ ವಡ್ಡಾರಾಧನೆಯಲ್ಲಿರುವ ಈ ಸಂಬಂಧದ ಒಂದು ಕಥೆ ಹೀಗಿದೆ. ಭದ್ರಬಾಹು ಭಟಾರರು ಉಜ್ಜಯಿನಿಯಲ್ಲಿದ್ದಾಗ ಉತ್ತರ ದೇಶದಲ್ಲಿ 12 ವರ್ಷಗಳ ಕಾಲ ಕ್ಷಾಮವುಂಟಾಗುತ್ತದೆ ಎಂಬುದನ್ನು ಅರಿತು ತಮ್ಮ ಶಿಷ್ಯರೊಡಗೂಡಿ ದಕ್ಷಿಣ ದೇಶಕ್ಕೆ ಬರುತ್ತಾರೆ. ಅವರೊಡನೆ ಬಂದ ಶಿಷ್ಯರಲ್ಲಿ ಉಜ್ಜಯಿನಿಯ ರಾಜನಾಗಿದ್ದ ಸಂಪ್ರತಿ ಚಂದ್ರಗುಪ್ತನು ಒಬ್ಬ. ಭದ್ರಬಾಹು ಭಟಾರರು ಕಟ್ವಪ್ಪ ನಾಡನ್ನು (ಶ್ರವಣಬೆಳಗೊಳ) ಸಮೀಪಿಸಿದಾಗ ತಮ್ಮ ಅವಸಾನಕಾಲ ಹತ್ತಿರವಾಯಿತೆಂದು ತಿಳಿದು ಶಿಷ್ಯ ಚಂದ್ರಗುಪ್ತನೊಡನೆ ಅಲ್ಲಿಯೇ ಉಳಿಯುತ್ತಾರೆ. ಭದ್ರಬಾಹು ಮುನಿಗಳು ಸಮಾಧಿ ಮರಣವನ್ನು ಹೊಂದಿದ ಮೇಲೆ ಚಂದ್ರಗುಪ್ತ ಅವರ ನಿಸಿದಿಗೆಯನ್ನು ಪೂಜಿಸುತ್ತ ಅಲ್ಲೇ ಉಳಿದಿರುತ್ತಾನೆ. ದ್ರಾವಿಡದೇಶಕ್ಕೆ ಹೋಗಿದ್ದ ಋಷಿಸಮುದಾಯ ಹಿಂದಕ್ಕೆ ಬಂದು ಚಂದ್ರಗುಪ್ತನಿಗೆ ಸಂನ್ಯಾಸವನ್ನು ಕೊಟ್ಟು ಮಧ್ಯದೇಶಕ್ಕೆ ಹಿಂತಿರುಗುತ್ತದೆ. ಇದು ಈ ನಾಡಿಗೆ ಜೈನಧರ್ಮದ ಆಗಮನದ ಬಗ್ಗೆ ಸಿಗುವ ಪ್ರಾಚೀನ ಹೇಳಿಕೆ. ಈ ಕಥೆ ಪರಂಪರೆಯಿಂದ ಬಂದಿರಬೇಕು. ಸು.600ರ ಶ್ರವಣಬೆಳಗೊಳದ ಒಂದು ಶಾಸನ, ಹರಿಷೇಣನ ಬೃಹತ್ಕಥೆ (931) ಮತ್ತು ಮುಂದಿನ ಕಾಲದ ಹಲವು ಶಾಸನಗಳಲ್ಲೂ ಈ ವಿಷಯ ಪ್ರಸ್ತಾಪಿತವಾಗಿದೆ. ಈ ಶಾಸನಗಳಲ್ಲಿ ಬರುವ ಚಂದ್ರಗುಪ್ತನು ಮೌರ್ಯವಂಶದ ಸ್ಥಾಪಕ ಚಂದ್ರಗುಪ್ತ ಎಂದು ಲೂಯಿ ರೈಸ್ ಮೊದಲು ಪ್ರತಿಪಾದಿಸಿದರು. ಈ ಹೇಳಿಕೆ ಇತಿಹಾಸಸಿದ್ಧವೆಂಬ ಅಭಿಪ್ರಾಯ ವಿಶೇಷವಾಗಿದೆ. ಹಾಗಿದ್ದಲ್ಲಿ ಜೈನಧರ್ಮ ಕರ್ನಾಟಕಕ್ಕೆ ಮೊದಲು ಕಾಲಿಟ್ಟದ್ದು ಕ್ರಿ.ಪೂ.3ನೆಯ ಶತಮಾನದಲ್ಲಿ. ಇಲ್ಲಿನ ಭದ್ರಬಾಹು ಕ್ರಿ.ಪೂ.30-31ರಲ್ಲಿ ಇದ್ದ. ಇಮ್ಮಡಿ ಭದ್ರಬಾಹು ಮತ್ತು ಅವನ ಶಿಷ್ಯನಾದ ಗುಪ್ತಿಗುಪ್ತ ಎಂಬುವನೆ ಚಂದ್ರಗುಪ್ತ, ಭದ್ರಬಾಹುವಿನೊಡನೆ ಬಂದ ಚಂದ್ರಗುಪ್ತ ಅಶೋಕನ ಮೊಮ್ಮಗ ಸಂಪ್ರತಿ ಚಂದ್ರಗುಪ್ತ (ಕ್ರಿ.ಪೂ.2ನೆಯ ಶತಮಾನ), ನಂದವಂಶದ ಅರಸನಾದ ನಂದ ಚಂದ್ರಗುಪ್ತ (ಕ್ರಿ.ಪೂ.4ನೆಯ ಶತಮಾನ) ಇತ್ಯಾದಿ ಇತರ ಅಭಿಪ್ರಾಯಗಳೂ ಇವೆ. ಈ ಎಲ್ಲ ವಿದ್ವಾಂಸರೂ ಒಂದು ವಿಷಯದಲ್ಲಿ ಎಂದರೆ ಕರ್ನಾಟಕಕ್ಕೆ ಜೈನಧರ್ಮದ ಆಗಮನಕ್ಕೆ, ಭದ್ರಬಾಹು-ಚಂದ್ರಗುಪ್ತರು, ಕಾರಣರು ಎಂಬುದರಲ್ಲಿ ಸರಿಸುಮಾರು ಏಕಾಭಿಪ್ರಾಯವುಳ್ಳವರಾಗಿದ್ದಾರೆ.

ಭದ್ರಬಾಹು-ಚಂದ್ರಗುಪ್ತರ ಆಗಮನಕ್ಕೆ ಮುಂಚೆಯೇ ಜೈನಧರ್ಮ ಕರ್ನಾಟಕದಲ್ಲಿ ಇದ್ದಿರಬೇಕೆಂಬ ಊಹೆಯೂ ಇದೆ. ಕರ್ನಾಟಕಕ್ಕೆ ಜೈನಧರ್ಮ ಪ್ರವೇಶಿಸಿದ ಕಾಲದ ವಿಷಯ ಜಟಿಲವಾದದ್ದು. ಹೀಗೆಯೇ ಎಂದು ಹೇಳಲು ಗಟ್ಟಿ ಆಧಾರಗಳಿಲ್ಲ. ಭದ್ರಬಾಹು ಕರ್ನಾಟಕಕ್ಕೆ ಬಂದಾಗ ಇಲ್ಲಿ ಜೈನಧರ್ಮೀಯರು ಇದ್ದಿರಲಾರರೆಂಬುದಕ್ಕೆ ವಡ್ಡಾರಾಧನೆಯಲ್ಲಿಯ ಕಥೆಯ ವಿವರಗಳೇ ಸೂಚಕಗಳಾಗಿವೆ. ಚಂದ್ರಗುಪ್ತ ಮಾಡುತ್ತಿದ್ದ ಮುನಿಯ ಸೇವೆಯನ್ನು ಮೆಚ್ಚಿ ಅವನಿಗೆ ವನದೇವತೆಗಳು ಭಿಕ್ಷೆ ನೀಡುತ್ತಿದ್ದುವು. ಅವನಿಗೆ ದೀಕ್ಷೆ ಕೊಟ್ಟವರು ಮೊದಲು ಮಧ್ಯದೇಶದಿಂದ ಬಂದು ದ್ರಾವಿಡ ದೇಶಕ್ಕೆ ತೆರಳಿ ವಾಪಸು ಬರುತ್ತಿದ್ದ ಮುನಿಗಣದವರು ಎಂದು ಆ ಕಥೆಯಲ್ಲಿ ಹೇಳಿದೆ. ಈ ಮೊದಲೇ ಇಲ್ಲಿ ಶ್ರಾವಕರು ಅಥವಾ ಮುನಿಗಳು ಇದ್ದ ಬಗ್ಗೆ ಸೂಚನೆಯೇ ಇಲ್ಲ. ಭದ್ರಬಾಹುವಿನೊಡನೆ ಬಂದ ಚಂದ್ರಗುಪ್ತನು ಮೌರ್ಯ ಸಾಮ್ರಾಜ್ಯವನ್ನು ಸ್ಥಾಪಿಸಿ ಚಕ್ರಾಧಿಪತಿಯಾಗಿದ್ದ

ಚಂದ್ರಗುಪ್ತನಾಗಿರುವುದಕ್ಕಿಂತಲೂ ಮೌರ್ಯ ಸಾಮ್ರಾಜ್ಯ ಛಿದ್ರವಾದ ಕಾಲದಲ್ಲಿದ್ದ ಅಶೋಕನ ಮೊಮ್ಮಗ ಸಂಪ್ರತಿ ಚಂದ್ರಗುಪ್ತ ಇರಬಹುದೆಂಬ ಊಹೆ ಪ್ರಾಯಃ ಸಾಧುವಾಗಿದೆ. ಈ ದೃಷ್ಟಿಯಿಂದ ಜೈನಧರ್ಮ ಕರ್ನಾಟಕಕ್ಕೆ ಬಂದ ಕಾಲ ಕ್ರಿ.ಪೂ.2ನೆಯ ಶತಮಾನದ ಆದಿಭಾಗ ಆಗಬಹುದು.



ಪಾರ್ಶ್ವನಾಥ, ಹಿಂಭಾಗದಲ್ಲಿ 1008 ಹೆಡೆಗಳ ಸರ್ಪ

ಭದ್ರಬಾಹು-ಚಂದ್ರಗುಪ್ತರ ಕಥೆಯ ಆಧಾರ ಬಿಟ್ಟರೆ, ಕ್ರಿ.ಶ. 5ನೆಯ ಶತಮಾನದವರೆಗೆ ಜೈನಧರ್ಮ ಇಲ್ಲಿದ್ದ ಬಗ್ಗೆ ಯಾವ ನೇರ ಪುರಾತತ್ತ್ವ ಆಧಾರವೂ ದೊರಕಿಲ್ಲ. ಕದಂಬ ಮೃಗೇಶವರ್ಮನ ಹಲಶಿ ತಾಮ್ರಪಟವೇ (ಸು.500) ಸದ್ಯದಲ್ಲಿ ಅತಿ ಪ್ರಾಚೀನ ಆಧಾರ. ಆದರೂ ದಕ್ಷಿಣ ಭಾರತದಲ್ಲಿ ಜೈನಧರ್ಮದ ಇತಿಹಾಸವನ್ನು ಗಮನಿಸಿದಲ್ಲಿ ಕರ್ನಾಟಕ ಅದರ ನೆಲೆವೀಡಾಗಿತ್ತು ಎಂಬ ಅಂಶ ಶ್ರುತವಾಗುತ್ತದೆ. ಒಂದು ಅಭಿಪ್ರಾಯದಲ್ಲಿ ದಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಕರ್ನಾಟಕ ಜೈನಧರ್ಮದ ಇತಿಹಾಸವೇ. ಜೈನ ಪರಂಪರೆಯ ಪ್ರಕಾರ ಪ್ರಸಿದ್ಧ ಜೈನಾಚಾರ್ಯರಲ್ಲಿ ಒಬ್ಬರಾದ ಕುಂದಕುಂದಾಚಾರ್ಯರು (ನೋಡಿ) ದಾಕ್ಷಿಣಾತ್ಯರು. ಕರ್ನಾಟಕದಲ್ಲಿ ಇವರ ಪ್ರಭಾವ ಸಾಕಷ್ಟಿರುವುದು ಮುಂದಿನ ಕಾಲದ ಜೈನ ಶಾಸನಗಳಲ್ಲಿ ಎದ್ದು ಕಾಣುತ್ತದೆ. ಇಲ್ಲಿನ ಸುಮಾರು ಎಲ್ಲ ಜೈನಸಂಘೀಯರೂ ತಾವು ಕೊಂಡಕುಂದಾನ್ವಯಕ್ಕೆ ಸೇರಿದವರೆಂದು ಹೇಳಿಕೊಂಡಿದ್ದಾರೆ. ಈ ಕೊಂಡಕುಂದಾಚಾರ್ಯರು ಸು.ಕ್ರಿಶ.1-2 ನೆಯ ಶತಮಾನದವರಾಗಿರಬೇಕೆಂಬ ಊಹೆ ಇದೆ. ಇವರ ಶಿಷ್ಯ ಉಮಾಸ್ವಾತಿ ಸಹ ದಾಕ್ಷಿಣಾತ್ಯನೇ. ಈತನ ಉಲ್ಲೇಖ ಕರ್ನಾಟಕದ ಶಾಸನಗಳಲ್ಲಿ ಅನೇಕ ಕಡೆ ಬರುತ್ತದೆ. ಕೊಂಡಕುಂದಾಚಾರ್ಯರಂಥ ಅನ್ವಯಪ್ರವರ್ತಕರೂ ಉಮಾಸ್ವಾತಿಯಂಥವರೂ ಕರ್ನಾಟಕದಲ್ಲಿ ಇದ್ದಿರಬೇಕಾದರೆ ಜೈನಧರ್ಮ ಇಲ್ಲಿ ಸಾಕಷ್ಟು ಮಟ್ಟಿಗೆ ಹರಡಿರಬೇಕು. ಪಾದಲಿಪ್ತಾಚಾರ್ಯರೆಂಬ ಜೈನ ಗುರುಗಳು (ಸು.1ನೆಯ ಶತಮಾನ) ದಕ್ಷಿಣಕ್ಕೆ ಬಂದಾಗ ಮಾನ್ಯಖೇಟದ ಬಳಿ ಜೈನರು ಇದ್ದರೆಂದು ಹರಿಭದ್ರಸೂರಿಯ ಒಂದು ಗ್ರಂಥ ತಿಳಿಸುತ್ತದೆ.

ಬನವಾಸಿಯ ಕದಂಬ ಅರಸರ ಕಾಲದಲ್ಲಿ ಜೈನಧರ್ಮಕ್ಕೆ ಸ್ವಲ್ಪಮಟ್ಟಿನ ರಾಜಪ್ರೋತ್ಸಾಹ ದೊರಕಿತು. ಯುವರಾಜನಾಗಿದ್ದ ಕದಂಬ ಕಾಕುತ್ಸ್ಥವರ್ಮ ಪಲಾಸಿಕೆಯಲ್ಲಿದ್ದಾಗ (ಬೆಳಗಾಂವಿ ಜಿಲ್ಲೆಯ ಹಲಶಿ) ಅರ್ಹಂತರಿಗೆ ಭೂಮಿದಾನ ಮಾಡಿದನೆಂದು ಹಲಶಿ ತಾಮ್ರಪಟದಲ್ಲಿ ಹೇಳಿದೆ. ಮೃಗೇಶವರ್ಮ ತನ್ನ ತಂದೆಯ ಜ್ಞಾಪಕಾರ್ಥವಾಗಿ ಪಲಾಸಿಕಾನಗರದಲ್ಲಿ ಜಿನಾಲಯವೊಂದನ್ನು ಕಟ್ಟಿಸಿ, ಯಾಪನೀಯ ನಿರ್ಗ್ರಂಥ ಮತ್ತು ಕೂರ್ಚಕರಿಗೆ ದತ್ತಿಗಳನ್ನು ಕೊಟ್ಟಂತೆ ಇನ್ನೊಂದು ಹಲಶಿ ತಾಮ್ರಪಟ ತಿಳಿಸುತ್ತದೆ. ಇದೇ ಅರಸ ಬಹೃತ್ಪರಲೂರ ಎಂಬ ಗ್ರಾಮದ ಚೈತ್ಯಾಲಯದಲ್ಲಿ ಸಮ್ಮಾರ್ಜನ, ಉಪಲೇಪನ, ಅಭ್ಯರ್ಚನ, ಭಿನ್ನ ಸಂಸ್ಕಾರ, ಮಹಿಮೆಗಳನ್ನು (ಉತ್ಸವ) ನಡೆಸಲು ಅರ್ಹಂತರಿಗೆ ಭೂಮಿದಾನ ಮಾಡಿದನೆಂದೂ ಅಲ್ಲದೆ ಕಾಲವಾಟಿಕಾಗ್ರಾಮದಲ್ಲಿ ಒಂದು ಭಾಗವನ್ನು ಜಿನೇಂದ್ರದೇವರಿಗೆ, ಒಂದು ಭಾಗವನ್ನು ಶ್ವೇತಪಟ ಮಹಾಸಂಘಕ್ಕೆ ಉಳಿದುದನ್ನು ನಿರ್ಗ್ರಂಥ ಮಹಾಶ್ರವಣ ಸಂಘಕ್ಕೆ ಕೊಟ್ಟನೆಂದೂ ದೇವಗಿರಿಯ ಎರಡು ತಾಮ್ರ ಪಟಗಳು ಹೇಳುತ್ತವೆ. ಹಲಶಿಯ ಜಿನಾಲಯಕ್ಕೆ ದತ್ತಿ ನೀಡಿದ ಬಗ್ಗೆ ರವಿವರ್ಮನ ಕಾಲದ ಶಾಸನಗಳೂ ಇವೆ. ರವಿವರ್ಮ ತನ್ನ ರಾಜಧಾನಿಯಲ್ಲಿ ಅರಮನೆಯ ಬಳಿಯಲ್ಲೇ ಕಾಮಜಿನಾಲಯವೊಂದನ್ನು ಕಟ್ಟಿಸಿ ಅಲ್ಲಿ ಪೂಜೆ ಉತ್ಸವಾದಿಗಳಿಗೆ ವ್ಯವಸ್ಥೆ ಮಾಡಿದ್ದನೆಂದು ಗುಡ್ನಾಪುರ ಶಾಸನದಿಂದ ತಿಳಿಯುತ್ತದೆ. ಹರಿವರ್ಮನ 4ನೆಯ ವರ್ಷದ ಹಲಶಿ ತಾಮ್ರಶಾಸನದಲ್ಲಿ ಸಿಂಹಸೇನಾಪತಿಯ ಮಗನಾದ ಮೃಗೇಶ ಪಲಾಸಿಕದಲ್ಲಿ ಕಟ್ಟಿಸಿದ ಅರ್ಹದಾಯತನದಲ್ಲಿಯ ಪೂಜಾ ಪುರಸ್ಕಾರಾರ್ಥವಾಗಿ ಕೂರ್ಚಕ ಸಂಘಕ್ಕೆ ಒಂದು ಗ್ರಾಮವನ್ನು ಅರಸ ದಾನ ಮಾಡಿದ ಎಂದು ಹೇಳಿದೆ. ದೇವಶರ್ಮನೆಂಬ ಕದಂಬ ಯುವರಾಜ ಯಾಪನೀಯ ಸಂಘಕ್ಕೆ ದತ್ತಿಗಳನ್ನು ನೀಡಿದ್ದ. ಕದಂಬರ ಕಾಲದಲ್ಲಿ ಜೈನರು ರಾಜರ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿದ್ದಂತೆ ಕಾಣುತ್ತದೆ. ರವಿಮಹಾರಾಜನು ವಿದ್ವಜ್ಜನರಲ್ಲಿ ಪ್ರಮುಖನಾಗಿದ್ದ ಜೈನ ಕುಮಾರದತ್ತನಿಂದ ರಾಜ್ಯ ಹಾಗೂ ಧರ್ಮದ ವಿಷಯದಲ್ಲಿ ಸಲಹೆ ಪಡೆಯುತ್ತಿದ್ದನೆಂದು ಒಂದು ಶಾಸನ ತಿಳಿಸುತ್ತದೆ.

ಬಾದಾಮಿಯ ಚಳುಕ್ಯರು ವಿಶೇಷವಾಗಿ ಹಿಂದು ಧರ್ಮಾನುಯಾಯಿಗಳಾಗಿದ್ದರೂ ಅವರ ಕಾಲದಲ್ಲಿ ಕೂಡ ರಾಜರ ಹಾಗೂ ಶ್ರೀಮಂತರ ಪ್ರೋತ್ಸಾಹ ಜೈನಧರ್ಮಕ್ಕಿತ್ತು. ದೊರೆ ಮಂಗಲೀಶ ನಿರ್ಮಿಸಿದ ಪ್ರಸಿದ್ಧ ವಿಷ್ಣುಗೃಹವಾದ ಬಾದಾಮಿಯ 3ನೆಯ ಗುಹೆಯ ಜೊತೆಯಲ್ಲೇ ನಾಲ್ಕನೆಯದಾಗಿ ಜೈನಗುಹೆಯೊಂದು ಇರುವುದು ಗಮನಾರ್ಹ. ಐಹೊಳೆಯಲ್ಲಿ ಸಹ ಎರಡು ಚಿಕ್ಕ ಜಿನಗುಹಾಲಯಗಳಿವೆ. ಇಲ್ಲಿ ಇಮ್ಮಡಿ ಪುಲಕೇಶಿಯ ಆತ್ಮೀಯನಾಗಿದ್ದ ರವಿಕೀರ್ತಿ 634ರಲ್ಲಿ ಕಟ್ಟಿಸಿದ ಮೇಗುಟಿಯ ಜಿನಾಲಯ ಬಹು ಪ್ರಸಿದ್ಧ. ಅಲ್ಲದೆ ಚಳುಕ್ಯರ ಕಾಲದವೆನ್ನಬಹುದಾದ ಇನ್ನೂ ಎರಡು ಜಿನಾಲಯಗಳು ಐಹೊಳೆಯಲ್ಲಿವೆ. ಪಟ್ಟದಕಲ್ಲಿನಲ್ಲಿ ಸಹ ಒಂದಿದೆ. ಜೇಬುಳಗೇರಿಯ ಜೈನ ಪ್ರಮುಖನಾದ ಕಲಿಯಮ್ಮ ಎಂಬುವನು ಇಮ್ಮಡಿ ಕೀರ್ತಿವರ್ಮನ ಕಾಲದಲ್ಲಿ ಅಣ್ಣಿಗೇರಿಯಲ್ಲಿ ಒಂದು ಜಿನಚೈತ್ಯಾಲಯವನ್ನು ಕಟ್ಟಿಸಿದ. ಚಳುಕ್ಯ ವಿನಯಾದಿತ್ಯನ ತಂಗಿ ಕುಂಕುಮದೇವಿ ಪುಲಿಗೆರೆಯಲ್ಲಿ (ಲಕ್ಷ್ಮೇಶ್ವರ) ಜಿನಭವನವೊಂದನ್ನು ಕಟ್ಟಿಸಿದಳು. ಲಕ್ಷ್ಮೇಶ್ವರ (ಧಾರವಾಡ ಜಿಲ್ಲೆ) ಆ ಕಾಲದಲ್ಲಿ ಒಂದು ಪ್ರಸಿದ್ಧ ಜೈನ ಕೇಂದ್ರವಾಗಿತ್ತು. ಅಲ್ಲಿಯ ಶಂಖಜಿನಾಲಯಕ್ಕೆ ಹಲವು ಚಳುಕ್ಯ ಅರಸರು ಪ್ರೋತ್ಸಾಹವಿತ್ತಿದ್ದರೆಂಬುದಕ್ಕೆ ಶಾಸನೋಲ್ಲೇಖಗಳಿವೆ. ಇಮ್ಮಡಿ ಪುಲಕೇಶಿಯ ಕಾಲದಲ್ಲಿ ಅವನ ಸಾಮಂತನಾಗಿದ್ದ ಸೇಂದ್ರಕ ದುರ್ಗಶಕ್ತಿ, 683ರಲ್ಲಿ ವಿನಯಾದಿತ್ಯ, 723 ಮತ್ತು 730ರಲ್ಲಿ ವಿಜಯಾದಿತ್ಯ, 735ರಲ್ಲಿ ಇಮ್ಮಡಿ ವಿಕ್ರಮಾದಿತ್ಯ - ಇವರು ದತ್ತಿಗಳನ್ನು ನೀಡಿದ್ದರು. ಒಂದು ಶಾಸನದಲ್ಲಿ ಅಲ್ಲಿದ್ದ ಗುರುಪರಂಪರೆಯ ಪ್ರಸ್ತಾಪವಿದೆ. ದೇವಗಣವೆಂಬ ಜೈನಶಾಖೆಯ ಪ್ರವರ್ತಕರೂ ಜೈನೇಂದ್ರ ವ್ಯಾಕರಣವನ್ನು ಬರೆದವರೂ ಆದ ಆಚಾರ್ಯ ಪೂಜ್ಯಪಾದರು ಲಕ್ಷ್ಮೇಶ್ವರದಲ್ಲಿ ಇದ್ದಿರಬಹುದೆಂದು ಅಲ್ಲಿಯ ಶಾಸನಗಳಿಂದ ಊಹಿಸಬಹುದಾಗಿದೆ. ಅವರ ಪ್ರಶಿಷ್ಯರಾದ ನಿರವದ್ಯ ಪಂಡಿತರು ವಿಜಯಾದಿತ್ಯನಿಂದ ದತ್ತಿಗಳನ್ನು ಸ್ವೀಕರಿಸಿದರು. ಈ ಕಾಲದಲ್ಲಿ ಕೊಪ್ಪಳವೂ ಜೈನಕ್ಷೇತ್ರವಾಗಿತ್ತು. ಶ್ರವಣಬೆಳಗೊಳದ ಶಾಸನಗಳಲ್ಲಿ ಇದನ್ನು ಮಹಾತೀರ್ಥ, ಆದಿತೀರ್ಥ ಎಂದು ಕರೆಯಲಾಗಿದೆ.

ತಲಕಾಡಿನ ಗಂಗರಸರು ಜೈನಧರ್ಮದ ಅನುಯಾಯಿಗಳಾಗಿದ್ದರು; ಈ ಧರ್ಮ ಆ ಭಾಗದಲ್ಲಿ ವ್ಯಾಪಕವಾಗಿತ್ತು ಎಂಬ ಅಭಿಪ್ರಾಯ

ಬಹುವಾಗಿ ಕಂಡುಬರುತ್ತದೆ. ಆದರೆ ಪ್ರಸ್ತುತ ಅವಧಿಯ ಶಾಸನಾಧಾರಗಳು ಈ ಕಲ್ಪನೆಗೆ ಪುಷ್ಟಿ ನೀಡುವುದಿಲ್ಲ. ಗಂಗ ಅರಸರಿಗೆ ರಾಜ್ಯ ದೊರಕಿದ್ದೇ ಸಿಂಹನಂದಿ ಎಂಬ ಜೈನ ಆಚಾರ್ಯರಿಂದ ಎಂಬ ಒಂದು ಹೇಳಿಕೆ ಇದೆ. ಈ ವಿಷಯ ಮೊದಲು ದೊರಕುವುದು 1122ರ ಒಂದು ಶಾಸನದಲ್ಲಿ. ಆದರೆ ಮಾಧವ, ಹರಿವರ್ಮ, ವಿಷ್ಣುಗೋಪ ಇತ್ಯಾದಿ ಹೆಸರುಗಳು ನಾರಾಯಣಚರಣಾನುಧ್ಯಾತ ಗುರುಗೋಬ್ರಾಹ್ಮಣಪೂಜಕ, ತ್ರ್ಯಂಬಕ ಚರಣಾನುಧ್ಯಾತ, ಕಮಲೋದರ ಚರಣಕಮಲಾನುಧ್ಯಾತ, ಕಾತ್ಯಾಯನೀಚರಣಪಂಕೇರುಹ ಪರಿಚರವಿದ್ವಾನ್ತರಾತ್ಮ, ದ್ವಿಜಗುರು ಪೂಜಾ ತತ್ಪರ ಇತ್ಯಾದಿ ಬಿರುದುಗಳು ಮೊದಲ ಗಂಗ ದೊರೆಗಳು ಬೇರೆಯೇ ದೇವರುಗಳ ಆರಾಧಕರಾಗಿದ್ದ ವಿಷಯವನ್ನು ಸೂಚಿಸುತ್ತವೆ. ಈ ಕಾಲದಲ್ಲಿ ಜೈನಧರ್ಮಕ್ಕೆ ರಾಜಾಶ್ರಯ ಎಷ್ಟಿತ್ತೆಂಬುದರ ಬಗ್ಗೆ ಅನುಮಾನ ವ್ಯಕ್ತಪಡಿಸಬಹುದಾದರೂ ಈ ಧರ್ಮ ಗಂಗವಾಡಿ ಭಾಗದಲ್ಲಿ ಪ್ರಾಚುರ್ಯದಲ್ಲಿತ್ತು ಎಂಬುದರ ಬಗ್ಗೆ ಅನುಮಾನವಿಲ್ಲ. ಆ ಸೀಮೆಯ ಶ್ರವಣಬೆಳಗೊಳ ಪ್ರಖ್ಯಾತ ಜೈನತೀರ್ಥಕ್ಷೇತ್ರವಾಗಿತ್ತೆಂಬ ವಿಷಯ ಆ ಕಾಲಕ್ಕೆ ಸೇರುವ ಸುಮಾರು ನೂರು ಶಾಸನಗಳು ಆ ಸ್ಥಳದಲ್ಲಿರುವುದರಿಂದಲೇ ಸ್ಪಷ್ಟವಾಗುತ್ತದೆ. ಆ ಕಾಲದಲ್ಲಿ ತಮಿಳು ನಾಡಿನಿಂದಲೂ ಜೈನಸಾಧಕರು ಇಲ್ಲಿಗೆ ಬರುತ್ತಿದ್ದರೆಂದು ಶಾಸನಗಳಿಂದ ತಿಳಿಯುತ್ತದೆ. ಗಂಗರಾಜ್ಯದ ಇತರ ಕೆಲವು ಸ್ಥಳಗಳಲ್ಲೂ ಜೈನಧರ್ಮವಿದ್ದ ಬಗ್ಗೆ ಒಂದೆರಡು ಆಧಾರಗಳು ದೊರಕುತ್ತವೆ. ವಿಜಯಕೀರ್ತಿ ಎಂಬ ಒಬ್ಬ ಮುನಿ ಜನರ ಕಷ್ಟ ನಿವಾರಣೆ ಮಾಡುತ್ತಿದ್ದನೆಂದೂ ವಿದ್ವಜ್ಜನರಿಗೆ ಆಧಾರನಾಗಿದ್ದನೆಂದೂ ಗುಬ್ಬಿ ತಾಲ್ಲೂಕಿನ 812ರ ಒಂದು ತಾಮ್ರಪಟದಲ್ಲಿ ಹೇಳಿದೆ. ನಂದಿಬೆಟ್ಟದ ಈಶಾನ್ಯದಲ್ಲಿರುವ ಗೋಪಿನಾಥಗುಡ್ಡದಲ್ಲಿ ಶ್ರೀರಾಮ ಕಟ್ಟಿಸಿದ ಬಸದಿಯೊಂದಿತ್ತೆಂದೂ ಕುಂತಿ ಅದನ್ನು ಹೊಸದು ಮಾಡಿಸಿದಳೆಂದೂ ಈ ಬಸದಿಯಿಂದಾಗಿ ಅದು ಪವಿತ್ರಸ್ಥಳವಾಗಿತ್ತು ಎಂದೂ ಜಿನಮುನಿಗಳ ತಪಸ್ಸಿಗೆ ಬೇಕಾದ ಗುಹೆಗಳು ಅಲ್ಲಿದ್ದುವು ಎಂದೂ ಸು. 720ರ ಅಲ್ಲಿಯ ಒಂದು ಶಾಸನ ತಿಳಿಸುತ್ತದೆ.

ರಾಷ್ಟ್ರಕೂಟ ಅರಸರ ಕಾಲ ಕರ್ನಾಟಕದಲ್ಲಿ ಜೈನಧರ್ಮದ ಪ್ರಗತಿಯುಗ. ಈ ಕಾಲದಲ್ಲಿ ಅರಸರಷ್ಟೇ ಅಲ್ಲದೆ ಅನೇಕ ಅಧಿಕಾರಿಗಳು ಹಾಗೂ ಸಾಮಂತರೂ ಅನೇಕ ರೀತಿಯಲ್ಲಿ ಈ ಧರ್ಮಕ್ಕೆ ಪ್ರೋತ್ಸಾಹವಿತ್ತರು. ಹಲವು ದೇಗುಲಗಳು ನಿರ್ಮಾಣವಾದುವು. ದಾನದತ್ತಿಗಳು ಹೆಚ್ಚಿದುವು. ಹಲವು ಆಚಾರ್ಯರು ಧರ್ಮಬೋಧನೆಯಲ್ಲಿ ನಿರತರಾಗಿದ್ದರಲ್ಲದೆ ಶಾಸ್ತ್ರಗ್ರಂಥಗಳ ರಚನೆಯನ್ನೂ ಮಾಡಿದರು. ಅಮೋಘವರ್ಷ ನೃಪತುಂಗ ಜೈನಧರ್ಮಕ್ಕೆ ಬಹುವಾಗಿ ಪ್ರೋತ್ಸಾಹ ನೀಡಿದ. ಗಣಿತಸಾರಸಂಗ್ರಹ ಎಂಬ ಗ್ರಂಥದಲ್ಲಿ ಅಮೋಘವರ್ಷ ಸ್ಯಾದ್ವಾದಮತದ ಅನುಯಾಯಿಯಾಗಿದ್ದ, ಅಕಿಂಚನತಾನೀತಿಯನ್ನು ಅನುಸರಿಸಿ ಕೆಲವು ಕಾಲ ಸಿಂಹಾಸನವನ್ನು ತ್ಯಜಿಸಿದ್ದ ಎನ್ನಲಾಗಿದೆ. ಜಿನಸೇನರ ಪಾರ್ಶ್ವಾಭ್ಯುದಯದಲ್ಲಿ ಅಮೋಘವರ್ಷ ಆತನ ಶಿಷ್ಯನೆಂತಲೂ ರಾಜನು ಅವನ ಸ್ಮರಣಮಾತ್ರದಿಂದಲೆ ಪರಿಶುದ್ಧನಾಗುತ್ತಿದ್ದನೆಂತಲೂ ಹೇಳಿದೆ. ಉತ್ತರ ಪುರಾಣದ ಕರ್ತೃ ಗುಣಭದ್ರಾಚಾರ್ಯರು ಇಮ್ಮಡಿ ಕೃಷ್ಣನ ಗುರುವಾಗಿದ್ದರು. ಅನೇಕ ರಾಷ್ಟ್ರಕೂಟ ಸಾಮಂತರೂ ಜಿನಧರ್ಮವನ್ನು ಅನುಸರಿಸುತ್ತಿದ್ದರು.

ಬಹುಶಃ ರಾಷ್ಟ್ರಕೂಟರ ಸಾಮಂತರಾಗಿದ್ದ ಕಾಲದಿಂದ ಗಂಗ ಅರಸರೂ ಜೈನಧರ್ಮಕ್ಕೆ ಹೆಚ್ಚಿನ ಒಲವನ್ನೂ ತೋರಿಸಿದಂತೆ ಕಾಣುತ್ತದೆ. ರಾಚಮಲ್ಲ ಕೊಡಗಿನಲ್ಲಿ ಜಿನಭವನಗಳನ್ನು ಕಟ್ಟಿಸಿದ. ತನ್ನ ವಿಜಯಸಾಧನೆಯ ನೆನಪಿಗಾಗಿ ವಳ್ಳಿಮಲೈ ಎಂಬಲ್ಲಿ ಜೈನ ದೇವಾಲಯ ವೊಂದನ್ನು ಕಟ್ಟಿಸಿದ. ಲಕ್ಷ್ಮೇಶ್ವರದಲ್ಲಿ ರಾಯರಾಚಮಲ್ಲ ವಸದಿ, ಗಂಗಪೆರ್ಮಾಡಿಚೈತ್ಯಾಲಯ, ಗಂಗಕಂದರ್ಪಚೈತ್ಯಮಂದಿರ ಎಂಬ ಜಿನಭವನಗಳಿದ್ದುವು. ಅಮೋಘವರ್ಷನ ದಂಡನಾಯಕನಾಗಿ ಬನವಾಸಿಯಲ್ಲಿದ್ದ ಬಂಕೆಯ ಜೈನಬಸದಿಯೊಂದಕ್ಕೆ ದಾನನೀಡಿದ್ದ. ಬಂಕೆಯನ ಮಗ ಲೋಕಾದಿತ್ಯ ಜೈನಧರ್ಮದ ಪೋಷಕನೆಂದು ಅವನ ಗುರು ಗುಣಭದ್ರಾಚಾರ್ಯರು ಹೊಗಳಿದ್ದಾರೆ. ಸಾಮಂತರಾದ ಚಾಳುಕ್ಯ ನರಸಿಂಹ, ಶ್ರೀವಿಜಯ ಮೊದಲಾದವರೂ ಜಿನಧರ್ಮವನ್ನನುಸರಿಸುತ್ತಿದ್ದರು.

ಈ ಅವಧಿಯ ವೀರಸೇನ, ಜಿನಸೇನ, ಗುಣಭದ್ರ, ಅಕಳಂಕ ಮೊದಲಾದವರು ಜೈನಧರ್ಮ ಮತ್ತು ಸಾಹಿತ್ಯಗಳಿಗೆ ಅಮೂಲ್ಯ ಕಾಣಿಕೆಗಳನ್ನಿತ್ತಿದ್ದಾರೆ. ಸಹಜವಾಗಿ ಈ ದಿಶೆಯಲ್ಲಿ ಇಷ್ಟೊಂದು ಸಾಧನೆಗಳಿರಬೇಕಾದರೆ ಜೈನಧರ್ಮ ಸಾಕಷ್ಟು ಪ್ರೋತ್ಸಾಹ, ಬೆಂಬಲವನ್ನು ಗಳಿಸಿಕೊಂಡಿದ್ದು ಪ್ರಭಾವಿಯಾಗಿದ್ದ ಕಾಲವೇ ಆಗಿರಬೇಕು. ಒಟ್ಟಿನಲ್ಲಿ ಕ್ರಿಸ್ತಪೂರ್ವ ಕಾಲದಲ್ಲಿ ಇಲ್ಲಿ ಉಪಸ್ಥಿತವಾದ ಜೈನಧರ್ಮ ಕ್ರಮೇಣ ತನ್ನ ಪ್ರಭಾವವನ್ನು ಸ್ವಲ್ಪ ಸ್ವಲ್ಪವಾಗಿ ಬೆಳೆಸಿಕೊಳ್ಳುತ್ತ 8-9ನೆಯ ಶತಮಾನದ ಹೊತ್ತಿಗೆ ಬಹುಮುಖವಾಗಿ ಏಳ್ಗೆಯನ್ನು ಪಡೆಯಿತು ಎಂದು ಹೇಳಬಹುದು.

ಈ ಅವಧಿಯಲ್ಲಿ ಜೈನಧರ್ಮದ ವಿವಿಧ ಪ್ರಕಾರಗಳು ಕರ್ನಾಟಕದಲ್ಲಿ ಹರಡಿದ್ದುವು. ದಿಗಂಬರ ಮತ್ತು ಶ್ವೇತಾಂಬರ ಪಂಥಗಳು ಪ್ರಸಿದ್ಧವಾದುವು. ಮೂಲ ಜೈನಧರ್ಮ ಈ ಪಂಥಗಳಾಗಿ ಒಡೆಯಲು ಜೈನಸಂಘದ ದಕ್ಷಿಣದ ಯಾತ್ರೆಯೇ ಒಂದು ಮುಖ್ಯ ಕಾರಣವಾಗಿದ್ದಂತೆ ತೋರುತ್ತದೆ. ದಿಗಂಬರ ಸಂಪ್ರದಾಯದ ಜೈನಕಥೆಗಳಲ್ಲಿ ಜೈನಸಂಘ ದಕ್ಷಿಣಕ್ಕೆ ಬಂದ ಸಂದರ್ಭದಲ್ಲಿ ಅದು ಜೈನಧರ್ಮದ ಮೂಲ ಧಾರ್ಮಿಕ ಸ್ವರೂಪವನ್ನು ಉಳಿಸಿಕೊಂಡಿತು. ಉತ್ತರದಲ್ಲಿ ಉಳಿದಿದ್ದ ಜೈನಪಂಥೀಯರು ಬದಲಾವಣೆಗೆ ಒಳಗಾಗಿ ಶ್ವೇತಾಂಬರರಾದರು ಎಂದು ಹೇಳುವುದರಿಂದ ಕರ್ನಾಟಕದಲ್ಲಿ ಬಹುಮಟ್ಟಿಗೆ ಪ್ರಚಾರವಾಗಿದ್ದುದು ದಿಗಂಬರ ಜೈನಪಂಥವೆಂದು ತಿಳಿಯಬಹುದಾಗಿದೆ. ಆದರೆ ಶ್ವೇತಾಂಬರ ಪಂಥ ಸಹ ಇಲ್ಲಿದ್ದುದಕ್ಕೆ ಸಾಹಿತ್ಯ ಹಾಗೂ ಶಾಸನಗಳ ಆಧಾರಗಳು ದೊರಕುತ್ತವೆ. ಹರಿಭದ್ರನ ಹೇಳಿಕೆಯ ಪ್ರಕಾರ ಕ್ರಿಸ್ತಶಕ ಒಂದನೆಯ ಶತಮಾನದಲ್ಲಿ ಶ್ವೇತಾಂಬರರು ಮಾನ್ಯಖೇಟದ ಸುತ್ತಮುತ್ತ ಇದ್ದರು. ಮೃಗೇಶವರ್ಮನ ಪಲಶಿ ತಾಮ್ರಪಟದಿಂದ ಅಲ್ಲಿ ಶ್ವೇತಪಟಮಹಾಶ್ರಮಣ ಸಂಘ ಮತ್ತು ನಿರ್ಗ್ರಂಥ ಮಹಾಶ್ರಮಣ ಸಂಘಗಳು ಇದ್ದುದು ತಿಳಿಯುತ್ತದೆ. ಈ ಕಾಲದಲ್ಲಿ ಪ್ರಾಯಶಃ ದಿಗಂಬರರಷ್ಟೇ ಪ್ರಭಾವಶಾಲಿಯಾಗಿದ್ದ ಇನ್ನೊಂದು ಜೈನಪಂಥ ಯಾಪನೀಯರದು. ಇದರ ಹೆಚ್ಚಿನ ವ್ಯಾಪ್ತಿ ಕಂಡುಬರುವುದು ಉತ್ತರ ಕರ್ನಾಟಕ ಮತ್ತು ಸುತ್ತಮುತ್ತಲ ಪ್ರದೇಶಗಳಲ್ಲಿ. ಈ ಸಂಘದ ಸ್ಥಾಪಕ ಕಲಶಆಚಾರ್ಯ ಎಂಬ ಶ್ವೇತಾಂಬರ ಮುನಿ. ಈತ ಕಲ್ಯಾಣದಲ್ಲಿ (ಗುಲ್ಬರ್ಗ ಜಿಲ್ಲೆ) 148ರಲ್ಲಿ ಇದನ್ನು ಸ್ಥಾಪಿಸಿದ ಎಂಬ ಹೇಳಿಕೆ ಇದೆ. ದಕ್ಷಿಣಾಪಥದಲ್ಲಿ ಸಾಮಲಿಪುತ್ರ ಎಂಬ ಶ್ವೇತಭಿಕ್ಷು ಚಾಪುಲ (ಯಾಪನೀಯ) ಸಂಘಕ್ಕೆ ಮೊದಲಿಗನಾದ. ಕರಹಾಟಕದ ರಾಣಿಯೊಬ್ಬಳು ಇದಕ್ಕೆ ಕಾರಣಳಾದಳು ಎಂಬ ಕಥೆ ಸಹ ಇದೆ. ಈ ಉಲ್ಲೇಖಗಳಿಂದ ಯಾಪನೀಯ ಸಂಘ ಹುಟ್ಟಿದ್ದು ಕರ್ನಾಟಕದಲ್ಲಿ ಎಂಬುದು ಅರಿವಾಗುತ್ತದೆ. ಮೃಗೇಶವರ್ಮನ ತಾಮ್ರಪಟದಲ್ಲಿ ಯಾಪನೀಯರ ಸ್ಪಷ್ಟ ಉಲ್ಲೇಖವಿದೆ.

ಈ ಕಾಲದ ಅನೇಕ ಶಾಸನಗಳು ಈ ಪಂಥಗಳಲ್ಲೂ ವಿವಿಧ ಶಾಖೆಗಳಿದ್ದುವೆಂಬುದನ್ನು ತಿಳಿಸುತ್ತವೆ. ಅವು ಸಂಘ, ಗಣ, ಗಚ್ಛ, ಅನ್ವಯ ಎಂಬ ಹೆಸರುಗಳಲ್ಲಿ ಪ್ರಚಲಿತವಾಗಿದ್ದುವು. ಇವುಗಳಲ್ಲಿ ಪ್ರಧಾನವಾದುದು ಸಂಘ, ಅನಂತರ ಗಚ್ಛ; ಗಚ್ಛದ ಶಾಖೆಗಳು ಅನ್ವಯಗಳು. ಅನ್ವಯ ಅಥವಾ ಗಚ್ಛಗಳ ಸಮುದಾಯಗಳು ಗಣಗಳು. ಇವುಗಳಲ್ಲಿ ಕೆಲವು, ವ್ಯಕ್ತಿಗಳ ಅಥವಾ ಊರುಗಳ ಹೆಸರುಗಳಲ್ಲಿ ಪ್ರಚಲಿತವಾಗಿವೆ. ಮೂಲ ಕೂಟದಿಂದ ಹೊರಟು ಮುಂದೆ ತಮ್ಮದೇ ಆದ ಸಂಪ್ರದಾಯವನ್ನು ಸ್ಥಾಪಿಸಿದಾಗ ಹಾಗೆ ಸ್ಥಾಪಿಸಿದ ವ್ಯಕ್ತಿಗಳ ಅಥವಾ ಸ್ಥಾಪನೆಯ ಸ್ಥಳಗಳ ಹೆಸರುಗಳು ಇವಕ್ಕೆ ಬಂದಿರಬೇಕು ಎಂಬ ಊಹೆ. ಪ್ರಸ್ತುತ ಕಾಲದ ಶಾಸನಗಳಲ್ಲಿ ಆ ವಿವಿಧ ಶಾಖೆಗಳ ಬಗ್ಗೆ ಹೆಚ್ಚು ವಿವರಗಳು ದೊರಕುವುದಿಲ್ಲ. ಕಿತ್ತೂರ ಸಂಘ, ಕೊಳತ್ತೂರ ಸಂಘ, ನವಿಲೂರ ಸಂಘ ಮತ್ತು ಶ್ರೀ ಸಂಘಗಳ ಹೆಸರು ಶ್ರವಣಬೆಳಗೊಳದ ಶಾಸನಗಳಲ್ಲಿ ಕಾಣುತ್ತವೆ. ಲಕ್ಷ್ಮೇಶ್ವರದ ಮೂರು ಶಾಸನಗಳಲ್ಲಿ ಮೂಲಸಂಘದ ಪ್ರಸ್ತಾಪ ಇದೆ. ಎರಡು ಶಾಸನಗಳಲ್ಲಿ ಮೂಲಸಂಘದ ದೇವಗಣದ ಹೆಸರಿದೆ.ಈ ವಿವಿಧ ಶಾಖೆಗಳಲ್ಲಿ ಎಷ್ಟು ಮಟ್ಟಿನ ತಾತ್ತ್ವಿಕ ವ್ಯತ್ಯಾಸಗಳು ಇದ್ದುವು ಎಂಬುದು ತಿಳಿಯದು. ಕೆಲವು ಅನಂತರದ ಕಾಲದ ಶಾಸನಗಳಿಂದ ಬೇರೆ ಬೇರೆ ಶಾಖೆಯವರಿಗೆ ಪ್ರತ್ಯೇಕ ಬಸದಿಗಳಿದ್ದುವು ಎಂದು ತಿಳಿಯುತ್ತದೆ. ಮೇಲೆ ಹೇಳಿರುವ ಕದಂಬ ಶಾಸನಗಳಿಂದ ಯಾಪನೀಯ, ದಿಗಂಬರ, ಶ್ವೇತಾಂಬರರ ಪ್ರತ್ಯೇಕ ಬಸದಿಗಳು ಇದ್ದುವೆಂದು

ಸೂಚಿತವಾಗುತ್ತದೆ. ಈ ಸಂಘ ಗಣ, ಗಚ್ಛ ಇತ್ಯಾದಿಗಳು ಹೆಚ್ಚಿನ ಮಟ್ಟಿಗೆ ಮುನಿಸಮುದಾಯಗಳ ಜೊತೆಗೆ ಸೇರಿ ಬರುವುದು ಗಮನಾರ್ಹ. ಈ ಶಾಖೆ ಅನ್ವಯಗಳಿಗೆ ಪ್ರತ್ಯೇಕ ಗುರುಪರಂಪರೆಗಳಿದ್ದುವೆಂದು ತೋರುತ್ತದೆ.

ಈ ಕಾಲದಲ್ಲಿ ಜೈನಧರ್ಮದ ಸೈದ್ಧಾಂತಿಕ ತತ್ತ್ವಗಳು, ದಶವಿಧ ಆಚರಣಾ ಮಾರ್ಗಗಳು, ಶ್ರವಣ, ಕಂತಿ, ಶ್ರಾವಕ, ಶ್ರಾವಕಿ ಸಂಪ್ರದಾಯಗಳು ಇತ್ಯಾದಿಗಳೆಲ್ಲ ಕರ್ನಾಟಕದಲ್ಲಿ ಹರಡಿದವು. ವರ್ಧಮಾನ ಮತ್ತು ಪಾರ್ಶ್ವನಾಥರ ಪೂಜೆ ಈ ಕಾಲದಲ್ಲಿ ವಿಶೇಷವಾಗಿ ಪ್ರಚಲಿತವಾಗಿತ್ತು ಎಂದು ಪ್ರಸ್ತುತ ಕಾಲದ ಪುರಾತತ್ತ್ವ ಆಧಾರಗಳಿಂದ ತಿಳಿಯುತ್ತದೆ. ಈ ದೇಶದಲ್ಲಿ ವಿಶೇಷವಾಗಿ ಪ್ರಚಲಿತವಾಗಿದ್ದ ಇನ್ನೊಂದು ಜೈನಪೌರಾಣಿಕ ಕಲ್ಪನೆ ಗೊಮ್ಮಟನದು. ಪ್ರಾಯಶಃ ಸು.5-8ನೆಯ ಶತಮಾನದ ಹೊತ್ತಿಗೇ ಈ ಕಲ್ಪನೆ ಕರ್ನಾಟಕದಲ್ಲಿದ್ದಿರಬೇಕೆಂಬುದಕ್ಕೆ ಗುಡ್ನಾಪುರ ಶಾಸನದಲ್ಲಿ ಸೂಚನೆಯಿದೆ. ಪಾರಂಪರ್ಯವಾಗಿ ವ್ಯವಸ್ಥಿತವಾಗಿದ್ದ ಜೈನಧರ್ಮದ ವ್ಯವಹಾರಗಳ ಬಗ್ಗೆ ಸಮಕಾಲೀನ ಶಾಸನಗಳು ಬೆಳಕು ಚೆಲ್ಲುತ್ತವೆ. ಮುನಿಗಳ ಕಠಿಣ ತಪಸ್ಸಿನ ಬಗ್ಗೆ ಶ್ರವಣಬೆಳಗೊಳದ ಶಾಸನಗಳು ಮಾಹಿತಿ ನೀಡುತ್ತವೆ. ಸಲ್ಲೇಖನವ್ರತ ಜೈನರಲ್ಲಿ ವ್ಯಾಪಕವಾಗಿತ್ತು. ಇದಕ್ಕೆ ಕೆಲವು ಶಾಸ್ತ್ರನಿಷ್ಕೃಷ್ಟ ವಿಧಿಗಳಿದ್ದುವು. ಇಂಗಿನೀಮರಣ, ಪಾಉಗ್ಗಮರಣ - ಈ ರೀತಿಯ ಪ್ರಭೇದಗಳೂ ಇದ್ದುವು. ಮುನಿಗಳೂ ಕಂತಿಯರೂ ಸಂಸಾರಿಗಳಾದ ಸ್ತ್ರೀಪುರುಷರೂ ಈ ಸಮಾಧಿಮರಣವಿಧಿಯನ್ನು ಅನುಸರಿಸಬಹುದಾಗಿತ್ತು. ಈ ವಿಧಿಯಿಂದ ಮಡಿದವರಿಗೆ ಸ್ಮಾರಕಗಳನ್ನು ನಿಲ್ಲಿಸುತ್ತಿದ್ದರು. ಇವೇ ನಿಸಿದಿ ಕಲ್ಲುಗಳು. ಈ ನಿಸಿದಿ ಕಲ್ಲುಗಳು ಪವಿತ್ರಸ್ಥಾನಗಳೆಂದು ಪರಿಗಣಿತವಾಗಿದ್ದುವು.

ಶ್ರಾವಕರ ಧರ್ಮಶ್ರದ್ಧೆಯಿಂದ ಜಿನಪೂಜೆಗಾಗಿ ಜೈನ ದೇವಾಲಯಗಳೂ ನಿರ್ಮಾಣವಾಗುತ್ತಿದ್ದುವು. ಪ್ರಾಯಶಃ ಮುನಿಗಳು ಅಲ್ಲಿ ವಾಸಿಸುತ್ತಿದ್ದುದರಿಂದ ಅವುಗಳಿಗೆ ಬಸದಿ (ವಸತಿ) ಎಂಬ ಹೆಸರು ರೂಢಿಗೆ ಬಂದಂತೆ ತೋರುತ್ತದೆ. ಶಾಸನಗಳಲ್ಲಿ ಜಿನಗೃಹ, ಚೈತ್ಯಾಲಯ ಎಂಬ ಮಾತುಗಳೇ ಹೆಚ್ಚಾಗಿ ಬರುತ್ತವೆ. ಇಂಥ ಅನೇಕ ಚೈತ್ಯಾಲಯಗಳನ್ನು ರಾಜರು, ಸಾಮಂತರು ಮತ್ತು ಇತರ ವ್ಯಕ್ತಿಗಳು ನಿರ್ಮಾಣಮಾಡುತ್ತಿದ್ದರು. ಈ ಬಸದಿಗಳಲ್ಲಿದ್ದ ಪೂಜಾವಿಧಾನ ಈಗ ಹಿಂದು ಜೈನಧರ್ಮಗಳಲ್ಲಿ ಕಾಣುವ ವಿಧಾನಕ್ಕಿಂತ ಬೇರೆಯಾಗಿರಲಿಲ್ಲ. ಜಿನಭವನಗಳಲ್ಲಿ ಪೂಜೆ, ಉತ್ಸವ, ಹಬ್ಬ, ಆಹಾರದಾನಗಳು ನಡೆಯುತ್ತಿದ್ದುವು. ಜೈನಧರ್ಮದ ಪ್ರಸಾರದೊಡನೆ ಅದರ ಪರಿಭಾಷೆ ತತ್ಕಾಲದ ಭಾಷೆಯಲ್ಲೂ ಭಾವನೆಗಳಲ್ಲೂ ಬೆರೆತುಕೊಂಡಿತು. ಆ ಧರ್ಮಕ್ಕೆ ಸಂಬಂಧಿಸಿದ ಶಾಸ್ತ್ರಪುರಾಣಗಳ ಪ್ರಸಾರ ಬಹುಮಟ್ಟಿಗೆ ನಡೆಯಿತು. ಇದರಿಂದ ಕನ್ನಡ ಸಾಹಿತ್ಯವೂ ಸಂಪದ್ಭರಿತವಾಯಿತು. ಪಂಪ, ರನ್ನ, ಪೊನ್ನ ಮೊದಲಾದವರು ಉತ್ತಮ ಜೈನಕಾವ್ಯಗಳನ್ನು ರಚಿಸಿದರು.

11ನೆಯ ಶತಮಾನದವರೆಗೆ ದಿನೇ ದಿನೇ ಪ್ರವರ್ಧಮಾನ ವಾಗುತ್ತಿದ್ದ ಜೈನಧರ್ಮ ಆ ಶತಮಾನದ ಪ್ರಾರಂಭದ ಆಸುಪಾಸಿನಲ್ಲಿ, ದೇಶದಲ್ಲಿ ಆದ ಹಲವು ರಾಜಕೀಯ ಆಗುಹೋಗುಗಳ ಪರಿಣಾಮವಾಗಿ ಹಲವು ಬದಲಾವಣೆಗಳನ್ನು ಕಂಡಿತು. ದಕ್ಷಿಣ ಕರ್ನಾಟಕದ ಆಗ್ನೇಯದ ಬಹುಭಾಗ ಚೋಳರ ಆಕ್ರಮಣಕ್ಕೆ ಒಳಪಟ್ಟಾಗ ಜೈನಧರ್ಮಕ್ಕೆ ಆ ಭಾಗದಲ್ಲಿ ಪ್ರತಿಷ್ಠಿತರ ಪ್ರೋತ್ಸಾಹ ದೊರಕಲಿಲ್ಲ. ಹಾಗೆಯೇ ಉತ್ತರ ಕರ್ನಾಟಕದಲ್ಲಿ ಆಳಿದ ಚಾಳುಕ್ಯ ಅರಸರು ಸ್ವತಃ ಹಿಂದು ಧರ್ಮಾವಲಂಬಿಗಳಾಗಿದ್ದರಾಗಿ ಅಲ್ಲಿಯೂ ಸುಮಾರು ಇದೇ ಸ್ಥಿತಿ ಒದಗಿಬಂತು. ಚೋಳರು ಆಳಿದ ಭಾಗಗಳಲ್ಲಿ ಹುಟ್ಟಿಕೊಂಡ ಶಾಸನಗಳು ಹಾಗೂ ವಾಸ್ತುಕೃತಿಗಳನ್ನು ಗಮನಿಸಿದರೆ ಜೈನಧರ್ಮೀಯವಾದದ್ದು ಕಂಡುಬರುವುದೇ ಇಲ್ಲವೇನೋ ಅನಿಸುತ್ತದೆ. ಹೊರಗಿನಿಂದ ಬಂದ ಚೋಳರು ಸ್ಥಳೀಯ ರೀತಿನೀತಿಗಳಿಗೆ ಗಮನ ನೀಡದಿದ್ದುದು ಇದಕ್ಕೆ ಕಾರಣವೆನ್ನಬಹುದು. ಆದರೆ ಸ್ಥಳೀಯರೇ ಆದ ಕಲ್ಯಾಣದ ಚಾಳುಕ್ಯರು ಹಿಂದಿನ ಧರ್ಮಸಹಿಷ್ಣುತೆಯ ಪರಂಪರೆಯನ್ನು ಉಳಿಸಿಕೊಂಡು ಬಂದದ್ದರಿಂದಲೂ ಆ ಕಾಲದ ಜನಸಮೂಹದಲ್ಲಿ ಬಹುಶಃ ಹೆಚ್ಚು ಸಂಖ್ಯೆಯಲ್ಲಿ ಜೈನರಿದ್ದುದರಿಂದಲೂ ಈ ಧರ್ಮಕ್ಕೆ ಸ್ವಲ್ಪಮಟ್ಟಿನ ಬೆಂಬಲ ಮುಂದುವರಿಯುವಂತಾಯಿತು. ಹೆಚ್ಚಿನ ಸಂಖ್ಯೆಯಲ್ಲಿಲ್ಲದಿದ್ದರೂ ಕೆಲವು ಸಾಮಂತ ರಾಜಕುಲದವರು ತಮ್ಮ ಜಿನಭಕ್ತಿಯನ್ನು ಪ್ರದರ್ಶಿಸುತ್ತಿದ್ದರು. ವಣಿಕ ಸಂಘಗಳ ಉದಾರತೆಯೂ ಕುಂಠಿತವಾಗಲಿಲ್ಲ. ರಾಜರೂ ಈ ಕಾಲದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮೆರೆದ ಬ್ರಾಹ್ಮಣ ದಂಡನಾಯಕರೂ ಸಹಿಷ್ಣುತೆಯನ್ನು ತೋರಿದರೂ ರಚನಾತ್ಮಕ ಪ್ರೋತ್ಸಾಹಗಳೇನೂ ಆಗಿರಲಿಲ್ಲವೆನ್ನಬಹುದು. ಬಹುಶಃ ಈ ಕಾರಣಗಳಿಂದ ಉತ್ತರ ಕರ್ನಾಟಕದ ಭಾಗದಲ್ಲಿ ಸು.11ನೆಯ ಶತಮಾನದ ಮಧ್ಯದ ಹೊತ್ತಿಗೆ ಜೈನಧರ್ಮದ ಇಳಿಮುಖ ಚಿಹ್ನೆಗಳು ಕಾಣಿಸಿಕೊಳ್ಳಲಾರಂಭಿಸಿದುವು. ಮುಂದೆ ಇದು ತ್ವರಿತಗತಿಯಲ್ಲಿ ಸಾಗಿತು. ಆದರೆ ದಕ್ಷಿಣಕರ್ನಾಟಕದ ಮಲೆನಾಡು ಪ್ರದೇಶದಲ್ಲಿದ್ದ ಹೊಯ್ಸಳ, ಚಂಗಾಳ್ವ, ಸಾಂತರ ಇತ್ಯಾದಿ ರಾಜವಂಶಗಳು ಜೈನಧರ್ಮದ ಒಲವನ್ನು ಈ ಕಾಲದಲ್ಲೂ ಮುಂದುವರಿಸಿಕೊಂಡು ಬಂದುವು. ಮುಂದೆ ಚೋಳೋಚ್ಚಾಟನೆಯಾಗಿ ಹೊಯ್ಸಳರಾಜ್ಯ ಸ್ಥಾಪನೆಯಾದಾಗ, ಆ ಭಾಗದ ಸಂಪ್ರದಾಯ ರೀತಿ ನೀತಿ ಮತ್ತು ಶಕ್ತಿಗಳಿಗೆ ಪುನಃ ಚಾಲನೆ ದೊರೆಯಿತು. ಹೊಯ್ಸಳ ರಾಜಧಾನಿಯಲ್ಲಿ ಹುಟ್ಟಿದ ಜಿನಾಲಯಗಳು, ರಾಣಿ ಶಾಂತಲೆ ಕಟ್ಟಿಸಿದ ಜೈನಬಸದಿಗಳು, ಶ್ರವಣಬೆಳಗೊಳದಲ್ಲಿ ಹೊಯ್ಸಳರ ಕಾಲದಲ್ಲಿ ನಡೆದ ಜೀರ್ಣೋದ್ಧಾರ ಕಾರ್ಯಗಳು ಮತ್ತು ನವೀನ ರಚನೆಗಳು ಈ ಗೌರವ ಪ್ರೋತ್ಸಾಹಗಳ ಕುರುಹಾಗಿವೆ. ಅಲ್ಲದೆ ಆ ಕಾಲದ ಪ್ರಸಿದ್ಧ ದಂಡನಾಯಕರಾಗಿದ್ದ ಗಂಗರಾಜ, ಬೀಚ, ಹುಳ್ಳ ಮೊದಲಾದವರು ನೂರಾರು ಜಿನಾಲಯಗಳನ್ನು ನಿರ್ಮಿಸಿದರೆಂದೂ ಹಾಳುಬಿದ್ದಿದ್ದ ಹಲವು ಜಿನಾಲಯಗಳನ್ನು ಜೀರ್ಣೋದ್ಧಾರ ಮಾಡಿದರೆಂದೂ ಶಾಸನಗಳು ತಿಳಿಸುತ್ತವೆ. ಚೋಳರಾಜ್ಯದಲ್ಲಿ ಮಸುಕಾಗಿದ್ದ ಜೈನಧರ್ಮ ಹೊಯ್ಸಳರ ಕಾಲದಲ್ಲಿ ಮತ್ತೆ ಮೆರೆಯುವಂತಾಯಿತು.

ಜೈನಶ್ರಾವಕರಲ್ಲಿ ಪೂಜೆ, ದಾನ, ಉಪವಾಸಗಳು ಹಿಂದಿನಂತೆಯೇ ಆಚರಣಾ ರಂಗದಲ್ಲಿ ಮುಂದುವರಿದುವು. ಅಲ್ಲದೆ ಹಿಂದುಗಳಂತೆಯೇ ಅನೇಕ ಹಬ್ಬಗಳನ್ನು ಆಚರಿಸುವುದು ರೂಢಿಯಲ್ಲಿತ್ತು. ಜೀವದಯಾಷ್ಟಮಿ, ನಂದೀಶ್ವರ ಅಷ್ಟಮಿ, ಸಿದ್ಧಚಕ್ರದ ನೋಂಪಿ, ಶ್ರುತಪಂಚಮಿ ಮೊದಲಾದ ಹಬ್ಬದ ಹೆಸರುಗಳು ಸಮಕಾಲೀನ ಶಾಸನಗಳಲ್ಲಿ ದೊರಕುತ್ತವೆ. ಇವುಗಳ ಜೊತೆಗೆ ಜೈನಪುರಾಣಗಳ ಶ್ರವಣ ಪ್ರಸಾರಗಳೂ ಧರ್ಮಶ್ರದ್ಧೆಯ ಭಾಗವಾಗಿದ್ದಂತೆ ತೋರುತ್ತದೆ.

12ನೆಯ ಶತಮಾನದ ಮಧ್ಯಭಾಗದಿಂದ ಉತ್ತರ ಕರ್ನಾಟಕದಲ್ಲಿ ಆಳಿದ ಕಳಚುರಿಗಳು ಮತ್ತು ಅನಂತರ ಅಲ್ಲಿ ಪ್ರಾಬಲ್ಯಕ್ಕೆ ಬಂದ ಸೇವುಣರು ಸ್ವಧರ್ಮ ಯಾವುದೇ ಆದರೂ ಸರ್ವಧರ್ಮಸಮಾನತೆಯ ತತ್ತ್ವವನ್ನು ಆಚರಿಸುವುದು ಅಂದಿನ ರಾಜನೀತಿಯಾಗಿದ್ದುದರಿಂದ ಜೈನಧರ್ಮಕ್ಕೂ ಸಂಬಂಧಿಸಿದಂತೆ ಪ್ರೋತ್ಸಾಹಕಾರ್ಯಗಳನ್ನು ಸ್ವಲ್ಪಮಟ್ಟಿಗೆ ಮುಂದುವರಿಸಿದರು. ಉದಾಹರಣೆಗೆ, ಜೈತುಗಿಯ ಒಬ್ಬ ಅಧಿಕಾರಿಯನ್ನು ಜೈನಾಗಮವಾರ್ಧಿಸೋಮ ಎಂದು ಒಂದು ಶಾಸನ ಕರೆದಿದೆ. ಎರಡನೆಯ ಸಿಂಘಣನ ಮಂತ್ರಿಯಾದ ಬೀಚಿಸೆಟ್ಟಿಯ ಹೆಂಡತಿ ಲಕ್ಷ್ಮೇಶ್ವರದ ವಿಜಯ ಜಿನಾಲಯದ ಜೀರ್ಣೋದ್ಧಾರ ಮಾಡಿದಳು. ಇವರ ಮಗ ಕಲ್ಲೇರಿ ಎಂಬಲ್ಲಿ ಒಂದು ಬಸದಿಯನ್ನು ಕಟ್ಟಿಸಿದ. ಸೇವುಣ ಮಹಾದೇವ ಮತ್ತು ರಾಮಚಂದ್ರರ ಕಾಲದಲ್ಲಿ ಲಕ್ಷ್ಮೇಶ್ವರ ಮತ್ತು ಡಂಬಳಗಳಲ್ಲಿಯ ಬಸದಿಗಳು ದಾನ ಗಳಿಸಿದವು. ಆದರೆ ಉತ್ತರ ಕರ್ನಾಟಕದ ಈ ಕಾಲದ ಅಗಾಧ ಶಾಸನಸಾಮಗ್ರಿಯನ್ನು ಪರೀಕ್ಷಿಸಿದಲ್ಲಿ, ಜೈನಧರ್ಮದ ಬಗ್ಗೆ ಬರುವ ಪ್ರಸ್ತಾಪ ಬಹು ಕಡಿಮೆ ಎನ್ನುವುದು ವೇದ್ಯವಾಗುತ್ತದೆ. ಆ ಕಾಲದ ರಾಜಕೀಯ ಪರಿಸ್ಥಿತಿಯು ತ್ವರಿತಗತಿಯಲ್ಲಿ ಬದಲಾಯಿಸುತ್ತಿದ್ದುದು, ಚಾಳುಕ್ಯ ಕಳಚುರಿ ಯಾದವ ಇವರಲ್ಲಿನ ಅಧಿಕಾರದ ಬದಲಾವಣೆಗಳು ಮುಂತಾದ ಸಂದರ್ಭಗಳಲ್ಲಿ ಆ ವರ್ಗಗಳಿಂದ ಧರ್ಮಕ್ಕೆ ಪ್ರೋತ್ಸಾಹ ಹಿಂದಿನಿಂದ ಒದಗಿ ಬರುವುದು ಅಷ್ಟೇನೂ ಸುಲಭವಾಗಿರಲಿಲ್ಲ.

ಇದೇ ಕಾಲದಲ್ಲಿ ಶೈವಧರ್ಮ ವ್ಯಾಪಕವಾಗಿದ್ದುದು, ವೀರಶೈವಧರ್ಮ ಉದ್ಭವವಾಗಿದ್ದುದು ಇವುಗಳಿಂದ ಈ ಹೊತ್ತಿಗೆ ಜನಸಾಮಾನ್ಯದ ಸಂಪರ್ಕವನ್ನು ಕಳೆದುಕೊಳ್ಳುತ್ತಿದ್ದ ಜೈನಧರ್ಮ ಆ ಜನರಿಂದಲೂ ಹೆಚ್ಚಿನ ಬೆಂಬಲವನ್ನು ಗಳಿಸಲಾರದೆ ಹೋಯಿತು. ಧಾರವಾಡ ಜಿಲ್ಲೆಯ ಅಬ್ಬಲೂರಿನಲ್ಲಿ ದೊರಕಿರುವ ಶಾಸನಗಳು ಅಂದಿನ ಪರಿಸ್ಥಿತಿಯ ಸ್ಪಷ್ಟಸೂಚಕಗಳಾಗಿವೆ. ಏಕಾಂತರಾಮಯ್ಯನ ವೀರಪವಾಡಗಳು, ಆತ

ಜೈನರೊಡನೆ ಸೆಣಸಿ ವಿಜಯಿಯಾಗಿ ಜಿನಾಲಯದಲ್ಲಿ ಲಿಂಗಸ್ಥಾಪನೆ ಮಾಡಿದ್ದು ಇಂಥ ಆಂದೋಲನಗಳು ನಡೆದುವು. ಅಷ್ಟೇ ಅಲ್ಲದೆ ಅವನ ಈ ವೀರಕಾರ್ಯಗಳನ್ನು ಶಿಲ್ಪಗಳಲ್ಲಿ ನಿರೂಪಿಸಿ ಶಾಸನದಲ್ಲಿ ದಾಖಲಿಸಿ ಸಾರ್ವಜನಿಕವಾಗಿ ದೇವಾಲಯದಲ್ಲಿ ಪ್ರದರ್ಶಿಸಿರುವುದು ಕೂಡ ಗಮನಾರ್ಹ ವಿಷಯ. ಸರ್ವಧರ್ಮ ಸಹಿಷ್ಣುತೆಯನ್ನು ಪ್ರತಿಪಾದಿಸುತ್ತಿದ್ದ ಈ ನಾಡಿನಲ್ಲಿ ಅಂಥ ಕಾರ್ಯಗಳು ನಡೆಯಬೇಕಾದರೆ, ಆ ಕಾಲದಲ್ಲಿ ಜೈನಧರ್ಮ ಜನಸಾಮಾನ್ಯರ ಹಾಗೂ ಅಂದಿನ ಆಳರಸರ ಬೆಂಬಲವನ್ನು ಉಳಿಸಿಕೊಳ್ಳಲಾರದ ಸ್ಥಿತಿಗೆ ಇಳಿದಿತ್ತೆಂಬುದನ್ನು ಸೂಚಿಸುತ್ತದೆ. ಆಕಸ್ಮಿಕವಾಗಿ ಆಳುವವರ ನೆರವನ್ನು ಗಳಿಸಿದರೂ ಜೈನಧರ್ಮದ ಅಸ್ತಿತ್ವ ಅಷ್ಟೇನೂ ಸುಲಭವಾಗಿರಲಿಲ್ಲ. ಬಿಜಾಪುರ ಜಿಲ್ಲೆಯ ತೇರದಾಳದ 1181ರ ಒಂದು ಶಾಸನದಲ್ಲಿ ದೊರಕುವ ವಿಷಯ ಈ ಸಂದರ್ಭದಲ್ಲಿ ಕುತೂಹಲಕರವಾಗಿದೆ. ಆ ಊರಿನ ನೇಮಿತೀರ್ಥೇಶ್ವರ ಜಿನಾಲಯ ಹಿಂದೆ ಕೊಲ್ಲಾಪುರದ ರೂಪನಾರಾಯಣ ಬಸದಿಯ ಆಡಳಿತ ಕಕ್ಷೆಯಲ್ಲಿತ್ತು. ಆದರೆ ಆ ಊರಿನ ಸಮಗ್ರ ನಕರಗಳ ಪ್ರಾರ್ಥನೆಯಂತೆ ಕೊಲ್ಲಾಪುರದ ಘಟಿಕಾಸ್ಥಾನದ ಆಚಾರ್ಯರು ಮತ್ತು 'ಏಳ್ಕೋಟಿಯಸಂಖ್ಯಾತ ಗಣಂಗಳು' ಒಂದುಗೂಡಿ ಆ ಜಿನಾಲಯವನ್ನು ಅದೇ ಊರಿನ ಕಲಿದೇವ ದೇವಾಲಯಕ್ಕೆ ಪ್ರತಿಬದ್ಧ ಮಾಡಿದರು. ಇದಕ್ಕೆ ಕಾರಣ ಆ ಶಾಸನದ ಕೊನೆಯಲ್ಲಿರುವ ವಾಕ್ಯಗಳಿಂದ ಸ್ಪಷ್ಟವಾಗುತ್ತದೆ. 'ಬಸದಿಯ ಮೇಲೆ ಶೂದ್ರಕನ ಸಿಂಹದ ಚಕ್ರದಾ ಚಿಹ್ನೆಮೆಂಬಿವಂ ಕಿಸುಳದ ಘಂಟೆಯಿಂಪಱಿಯ ನಾಗನಿಪ್ಪುವನ್ನೇಳುಕೋಟಿ ತಾಪಸರ್ಗೆ ಮಹಾವೀರೊಧಿಯರನೀಶ್ವರವೈರಿ' ಎಂಬುದು ಅಲ್ಲಿರುವ ಮಾತು. ಅಂದು ನಡೆಯುತ್ತಿದ್ದ ಧಾರ್ಮಿಕ ಆಂದೋಲನ ಚಿತ್ರವನ್ನೂ ಅಂಥ ದುರ್ಘಟನೆ ತೇರದಾಳದ ಬಸದಿಗೆ ಒದಗಬಾರದೆಂಬ ಉದ್ದೇಶದಿಂದ ಶೈವರಕ್ಷೆಯನ್ನೇ ಬೇಡಿದ ಒಂದು ಸಂದರ್ಭವನ್ನೂ ನಿರೂಪಿಸುವ ಈ ಶಾಸನ 12ನೆಯ ಶತಮಾನದ ಉತ್ತರಾರ್ಧದಲ್ಲಿ ಉತ್ತರ ಕರ್ನಾಟಕದಲ್ಲಿ ಜೈನಧರ್ಮ ಯಾವ ಸ್ಥಿತಿಯಲ್ಲಿದ್ದಿತೆಂಬುದಕ್ಕೆ ಸೂಚಕವಾಗಿದೆ. 13ನೆಯ ಶತಮಾನದಲ್ಲಿ ಇದೇ ಪರಿಸ್ಥಿತಿ ಮುಂದುವರಿದಿರಬೇಕು. ಈಗ ಉತ್ತರ ಕರ್ನಾಟಕದಲ್ಲಿ ಕಾಣುವ ಹಲವು ಶಿವಾಲಯಗಳು ಮೂಲತಃ ಜೈನಾಲಯಗಳಾಗಿದ್ದುವೆಂಬುದನ್ನೂ ಈ ಪರಿವರ್ತನೆ ಬಹು ಹಿಂದೆ ನಡೆದಿರಬೇಕೆಂಬುದನ್ನೂ ಅನೇಕ ಸಾಂದರ್ಭಿಕ ಸಾಕ್ಷ್ಯಗಳಿಂದ ಊಹಿಸಬಹುದು. 13ನೆಯ ಶತಮಾನದ ಉತ್ತರಾರ್ಧ ಮತ್ತು 14ನೆಯ ಶತಮಾನದ ಪೂರ್ವಾರ್ಧದ ಇಸ್ಲಾಮೀಯರ ದಾಳಿಗಳು, ಅದನ್ನು ಅನುಸರಿಸಿ ಬಂದ ಇಸ್ಲಾಮೀ ರಾಜ್ಯ ಸ್ಥಾಪನೆ - ಇವು ಈ ಪ್ರದೇಶದಲ್ಲಿ ಜೈನಧರ್ಮ ಮತ್ತೆ ಚೇತರಿಸಿಕೊಳ್ಳುವ ಅವಕಾಶವನ್ನೂ ಮೂಲೆಗೊತ್ತಿದುವು.

ಈ ಕಾಲದಲ್ಲಿ ಹೊಯ್ಸಳರ ಕಕ್ಷೆಯಲ್ಲಿದ್ದ ದಕ್ಷಿಣ ಕರ್ನಾಟಕದಲ್ಲಾದರೋ ಸರ್ವಧರ್ಮ ಸಹಿಷ್ಣುತೆಯ ತತ್ತ್ವ ಸಾಕಷ್ಟು ಬಲವಾಗಿಯೇ ಇತ್ತು. ಹಲವು ಅರಸರು, ಸಾಮಂತರು, ಅಧಿಕಾರಿಗಳು ಜೈನಧರ್ಮಕ್ಕೂ ಪ್ರೋತ್ಸಾಹ ನೀಡುತ್ತಿದ್ದರು. ಅರಸೀಕೆರೆ, ಶ್ರವಣಬೆಳಗೊಳ, ನಿಟ್ಟೂರು, ಕಂಬದಹಳ್ಳಿ ಮೊದಲಾದ ಹಲವು ಸ್ಥಳಗಳಲ್ಲಿ ಹೊಸ ಬಸದಿಗಳು ರಚನೆಯಾದುದು, ಹಿಂದಿದ್ದ ಬಸದಿಗಳ ಜೀರ್ಣೋದ್ಧಾರ ವಾದುದು, ದಾನ ದತ್ತಿಗಳನ್ನು ಪಡೆದುದು ಮೊದಲಾದ ಕಾರ್ಯಗಳು ನಡೆದ ಬಗ್ಗೆ ಶಾಸನೋಲ್ಲೇಖಗಳು ದೊರಕುತ್ತವೆ. ಅಂದಿನ ಜೈನಶಾಸನಗಳಲ್ಲಿ ರಾಜರು ಮತ್ತು ಅಧಿಕಾರಿಗಳಿಂದ ಗೌರವಪಡೆದಿದ್ದ ಗುರುವರ್ಗದವರ ಪ್ರಸ್ತಾಪ ಅಲ್ಲಲ್ಲಿ ದೊರಕುತ್ತದೆ. ಆದರೆ ಅಂದಿನ ಶಾಸನಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿದರೆ ಎರಡು ಅಂಶಗಳು ಸ್ಪಷ್ಟಗೊಳ್ಳುತ್ತವೆ. ಮೊದಲನೆಯದಾಗಿ ಆ ಕಾಲದ ಜೈನಶಾಸನಗಳ ಸಂಖ್ಯೆ ಹೆಚ್ಚಿಲ್ಲ; ಇದು ಹಿಂದಿನ ಕಾಲದಲ್ಲಿದ್ದ ಪ್ರಮಾಣಕ್ಕಿಂತ ಬಹು ಕಡಿಮೆ ಎಂಬುದು. ಎರಡನೆಯದಾಗಿ ಈ ಎರಡು ಶತಮಾನಗಳ ಅವಧಿಯಲ್ಲಿ ಜೈನಧರ್ಮಕ್ಕಿದ್ದ ಬೆಂಬಲ ಕ್ರಮೇಣ ಇಳಿಮುಖವಾಗುತ್ತಿದ್ದುದು. ಶೈವ ಮತ್ತು ವೀರಶೈವದ ಆಂದೋಲನದ ಪ್ರಭಾವ ಈ ಭಾಗಕ್ಕೂ ಹರಡಿದ್ದರೆ ಆಶ್ಚರ್ಯವಿಲ್ಲ. ಉತ್ತರ ಕರ್ನಾಟಕದಲ್ಲಿ ಆದಂತೆ ಜೈನರು ಮತ್ತು ಜೈನಸಂಸ್ಥೆಗಳ ಮೇಲೆ ದಾಳಿಗಳೇನೂ ನಡೆಯಲಿಲ್ಲವಾದರೂ ಬೆಂಬಲದ ಕ್ಷೀಣತೆ ಮಾತ್ರ ಗಮನಾರ್ಹವಾಗಿ ಕಾಣಿಸಿಕೊಳ್ಳುತ್ತದೆ.

ನಾಡಿನ ಬಹುಭಾಗದಲ್ಲಿ ಜೈನಧರ್ಮ ಅವನತಿ ಹೊಂದುತ್ತಿದ್ದರೂ ಹೊಸ ಆಂದೋಲನದ ಪ್ರಭಾವಕ್ಕೆ ಒಳಗಾಗದಿದ್ದ ಪಶ್ಚಿಮ ಕರಾವಳಿಯ ಭಾಗದಲ್ಲಿ ಈ ಧರ್ಮ ಹೊಸ ನೆಲೆಯನ್ನು ಕಂಡುಕೊಂಡಿತು. ತುಳುನಾಡಿನ ಆಡಳಿತ ಕಾಲದಲ್ಲಿ ಜೈನಧರ್ಮ ಸ್ವಲ್ಪಮಟ್ಟಿನ ಪ್ರೋತ್ಸಾಹವನ್ನು ಗಳಿಸಿತು. ಆ ಭಾಗಕ್ಕೆ ಸಂಬಂಧಿಸಿದಂತೆ ಇದು ಜೈನಧರ್ಮದ ಪ್ರಾರಂಭಕಾಲ ಎಂದು ತೋರುತ್ತದೆ. (ಎಸ್.ಎಸ್.)

14ನೆಯ ಶತಮಾನದ ಮಧ್ಯಭಾಗದಿಂದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗುತ್ತಿದ್ದಂತೆಯೇ ದೇಶದಲ್ಲಿ ಉಂಟಾಗಿದ್ದ ಆಂತರಿಕ ಧಾರ್ಮಿಕ ಸಂಘರ್ಷಣೆಯ ಸ್ಥಿತಿ ಕಳೆದು ಒಂದು ರೀತಿಯ ಸಮವ್ಯವಸ್ಥೆ ರೂಪಿತವಾಯಿತು. ಇಂಥ ಕಾರ್ಯದಲ್ಲಿ ವಿಜಯನಗರದ ಅರಸರು ಆಸ್ಥೆವಹಿಸಿದ ಬಗ್ಗೆ ಶ್ರವಣಬೆಳಗೊಳ ಇತ್ಯಾದಿ ಎಡೆಗಳಲ್ಲಿ ಇರುವ ಬುಕ್ಕನ ಶಾಸನ ಸೂಚನೆ ನೀಡುತ್ತದೆ. ಆ ಶಾಸನದಲ್ಲಿ ಜೈನರಿಗೂ ಶ್ರೀವೈಷ್ಣವರಿಗೂ ಇದ್ದ ವೈಮನಸ್ಸನ್ನು ಪರಿಹರಿಸಿ ಈ ಎರಡು ಧರ್ಮೀಯರೂ ಸ್ನೇಹದಿಂದಿರಲು ವ್ಯವಸ್ಥೆಮಾಡಿದ ವಿವರಗಳಿವೆ. ಇಂಥ ರಚನಾತ್ಮಕ ಕಾರ್ಯಗಳಿಂದ ಹಿಂದಿನಿಂದಲೂ ಕರ್ನಾಟಕದಲ್ಲಿ ನೆಲೆಗೊಂಡಿದ್ದ ಧರ್ಮಸಹಿಷ್ಣುತಾ ತತ್ತ್ವ ಮತ್ತೆ ಬೆಳೆಯಿತು. ಈ ಹೊತ್ತಿಗೆ ಜೈನ ಧರ್ಮೀಯರು ಸಂಖ್ಯಾದೃಷ್ಟಿಯಿಂದ ಕಡಿಮೆಯಾಗಿದ್ದರೂ ಇವರು ತಮ್ಮ ಧರ್ಮವಿಚಾರಗಳನ್ನು ರೂಢಿಸಿ ಆಚರಿಸಿಕೊಂಡು ಬರಲು ತೊಂದರೆಯೊದಗಲಿಲ್ಲ. ಬೈಚಪ್ಪ, ಇರುಗಪ್ಪ ಮೊದಲಾದ ಜೈನ ದಂಡನಾಯಕರು, ಭೀಮಾದೇವಿಯಂಥ ರಾಣಿಯರು ಜೈನಧರ್ಮೀಯರೇ ಆಗಿದ್ದು ಧರ್ಮಪ್ರೋತ್ಸಾಹಕಾರ್ಯವನ್ನು ಮುಂದುವರೆಸಿದರು. ವಿಜಯನಗರದ ಅರಸರ ಕಾಲದಲ್ಲಿ ಪುನಃ ವ್ಯವಸ್ಥಿತವಾದ ಧಾರ್ಮಿಕರಂಗದ ಶಾಂತಸ್ಥಿತಿ ಅವರ ಉತ್ತರಾಧಿಕಾರಿಗಳಾದ ಕೆಳದಿಯ ಅರಸರು, ಮೈಸೂರು ಒಡೆಯರು ಮುಂತಾದವರ ಕಾಲದಲ್ಲೂ ಮುಂದುವರೆಯಿತು. ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಯ ಪ್ರದೇಶಗಳಲ್ಲಿ ಆಳಿದ ಭೈರರಸರು, ಚೌಟರು, ಅಜಿಲರು, ಸಾಳುವರು ಮೊದಲಾದ ಚಿಕ್ಕ ರಾಜಮನೆತನಗಳವರೂ ಜೈನಧರ್ಮೀಯರೇ ಆಗಿದ್ದರು. ಶ್ರವಣಬೆಳಗೊಳ, ಮೂಡಬಿದರೆ, ಕಾರ್ಕಳ ಮೊದಲಾದ ಸ್ಥಳಗಳಲ್ಲಿ ಜೈನವಾಸ್ತುಕೃತಿಗಳು ಹುಟ್ಟಿರುವುದೂ ಮಧುರ, ಪಂಚಬಾಣ, ರತ್ನಾಕರವರ್ಣಿ, ದೇವಚಂದ್ರ ಮೊದಲಾದ ಜೈನಧರ್ಮೀಯರು ಕೃತಿರಚನೆಗಳನ್ನು ಮಾಡಿರುವುದೂ ಈ ಕಾಲದ ಜೈನಧರ್ಮದ ಸ್ಥಿತಿಯ ಬಗ್ಗೆ ಸೂಚಕಗಳಾಗಿವೆ.

**ಆಧುನಿಕ ಕಾಲ :** ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿಯೂ ಇಂದು ಜೈನ ಧರ್ಮೀಯರು ಕಂಡುಬರುತ್ತಾರೆ. ಕನ್ನಡವನ್ನು ಇನ್ನೂ ಮಾತೃಭಾಷೆಯನ್ನಾಗಿ ಉಳಿಸಿಕೊಂಡಿರುವ ಜೈನರು ಕರ್ನಾಟಕದ ಗಡಿಪ್ರದೇಶ, ಕೇರಳದ ವೈನಾಡು, ಮಹಾರಾಷ್ಟ್ರದ ಸಾಂಗಲಿ, ಕೊಲ್ಲಾಪುರ, ಸೊಲ್ಲಾಪುರ ಜಿಲ್ಲೆಗಳಲ್ಲಿ, ಆಂಧ್ರದ ಹಿಂದೂಪುರ, ಅಮರಾಪುರಗಳಲ್ಲೂ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ.

ಜೈನಧರ್ಮದಲ್ಲಿ ಬೋಗಾರ, ಕಾಸಾರ, ಪಂಚಮಿ, ಚತುರ್ಥ, ಸೇತುವಾಳ, ಸಾದ, ಗೌಡ ಮೊದಲಾದ ಕೆಲವು ಒಳಪಂಗಡಗಳು ಇವೆ. ಅರ್ಚಕ ವರ್ಗಕ್ಕೆ ದಕ್ಷಿಣ ಕರ್ನಾಟಕದ ಭಾಗದಲ್ಲಿ ಪುರೋಹಿತ, ದಕ್ಷಿಣ ಕನ್ನಡದಲ್ಲಿ ಇಂದ್ರ, ಉತ್ತರ ಕರ್ನಾಟಕದಲ್ಲಿ ಉಪಾಧ್ಯಾಯ ಹೀಗೆ ಹೆಸರುಗಳಿವೆ.

ಜೈನ ಸಮಾಜದ ಮೇಲೆ ತಮ್ಮ ಪ್ರಭಾವವನ್ನು ಉಳಿಸಿ ಕೊಂಡಿರುವ ಜೈನಮಠಗಳು ಕೆಲವು ಮುಖ್ಯ ಧಾರ್ಮಿಕ ಕ್ಷೇತ್ರಗಳಲ್ಲಿವೆ. ಶ್ರವಣಬೆಳಗೊಳ, ಕಾರ್ಕಳ, ಮೂಡಬಿದರೆ, ಹೊಂಬುಜ (ಹುಂಚ), ಸಿಂಹನ ಗದ್ದೆ (ನರಸಿಂಹರಾಜಪುರ) ಮತ್ತು ಸೋದೆ - ಈ ಮಠಗಳು ಪ್ರಮುಖವಾದುವು. ಇಲ್ಲಿನ ಮಠಾಧಿಪತಿಗಳು ಆಯಾ ಕ್ಷೇತ್ರದ ಪಾಲನೆ ಮಾಡಿದುದೇ ಅಲ್ಲದೆ ತಮ್ಮ ಮಠಗಳು ಜೈನ ಸಿದ್ಧಾಂತದ ಅಧ್ಯಯನಕೇಂದ್ರ ಗಳೂ ಆಗುವಂತೆ ನೋಡಿ ಕೊಂಡರು. ಹಾಗಾಗಿ ಈ ಮಠಗಳಲ್ಲಿ ಅಮೂಲ್ಯವಾದ ಕನ್ನಡ, ಸಂಸ್ಕೃತ, ಪ್ರಾಕೃತ ಗ್ರಂಥಗಳ ಹಸ್ತಪ್ರತಿ ಭಂಡಾರಗಳಿವೆ.

ಶ್ರವಣಬೆಳಗೊಳ, ಸಿಂಹನಗದ್ದೆ ಮಠಗಳಲ್ಲಿ ಜೈನಾಗಮವನ್ನು ಕಲಿಸುವ ವ್ಯವಸ್ಥೆಯಿದೆ. ಹೊಂಬುಜದಲ್ಲಿ ಕುಂದಕುಂದ ವಿದ್ಯಾಪೀಠವಿದೆ. ಕಾರ್ಕಳದಲ್ಲಿ ಭುಜಬಲಿ ಬ್ರಹ್ಮಚರ್ಯಾಶ್ರಮ, ಸ್ತವನಿಧಿಯಲ್ಲಿ ಪಾರ್ಶ್ವನಾಥ ಗುರುಕುಲ, ಬೆಲ್ಲದ ಬಾಗೇವಾಡಿಯಲ್ಲಿ ಭರತೇಶ ವಿದ್ಯಾಲಯ, ತೇರದಾಳದಲ್ಲಿ ಜಿನಸೇನ ಗುರುಕುಲ, ಅಕ್ಕಿವಾಟದಲ್ಲಿ ವಿದ್ಯಾಸಾಗರ ಗುರುಕುಲ ಇವೆ. ಇಲ್ಲೆಲ್ಲ ವಿದ್ಯಾರ್ಥಿಗಳು ಪೂರ್ಣಾವಧಿ ಗುರುಕುಲಗಳಲ್ಲೇ ಇದ್ದು ಶಾಲಾಶಿಕ್ಷಣದ ಜೊತೆಯಲ್ಲೇ ಧಾರ್ಮಿಕ ತಿಳಿವಳಿಕೆಯನ್ನೂ ಪಡೆಯುತ್ತಾರೆ. ಕಾರ್ಕಳದಲ್ಲಿ ಹೆಣ್ಣುಮಕ್ಕಳಿಗಾಗಿಯೇ ಒಂದು ಶ್ರಾವಿಕಾಶ್ರಮವಿದೆ. ವೈನಾಡಿನಲ್ಲಿ ವಸತಿಗೃಹ ಸಹಿತವಾದ ಒಂದು ಶಾಲೆಯಿದೆ. ಆಧುನಿಕ ಶಿಕ್ಷಣವು ಇಲ್ಲಿ ಮಲಯಾಳಂ, ಇಂಗ್ಲಿಷ್ ಭಾಷೆಗಳಲ್ಲಿ ದೊರಕಿದರೂ ಧಾರ್ಮಿಕ ಶಿಕ್ಷಣ ಕನ್ನಡದಲ್ಲಿ ಮಾತ್ರ ದೊರೆಯುತ್ತದೆ. ಇಲ್ಲಿಗೆ ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಬಂದು ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಾರೆ.

ಲಠ್ಠೆ ಎಜುಕೇಶನ್ ಸೊಸೈಟಿಯವರ ವಿದ್ಯಾಸಂಸ್ಥೆಗಳು ಉತ್ತರ ಕರ್ನಾಟಕದಲ್ಲಿವೆ. ಮೂಡಬಿದರೆಯಲ್ಲಿ ಜೈನ್ ಹೈಸ್ಕೂಲ್,ಜೈನ್ ಜೂನಿಯರ್ ಕಾಲೇಜು ಇವೆ. ಬೆಂಗಳೂರಿನ ಮಹಾವೀರ ಮಿಷನ್ ಕರ್ನಾಟಕದಾದ್ಯಂತ ಶಾಲಾ ಕಾಲೇಜು ವಿದ್ಯಾರ್ಥಿಗಳಿಗೆ ಪ್ರತಿವರ್ಷವೂ ವಿದ್ಯಾರ್ಥಿ ವೇತನವನ್ನು ನೀಡುತ್ತದೆ. ನಗರ ಪ್ರದೇಶಗಳಲ್ಲಿರುವ ಕೆಲವು ಮಹಿಳಾ ಸಮಾಜ ಹಾಗೂ ಯುವಕರ ಸಂಘಗಳು ಮಹಾವೀರ ಜಯಂತಿ ದಶಲಕ್ಷಪರ್ವ ಮೊದಲಾದ ಸಂದರ್ಭಗಳಲ್ಲಿ ಚಟುವಟಿಕೆಯಿಂದ ಕೆಲಸ ಮಾಡುವುದೇ ಅಲ್ಲದೆ ಕೆಲವು ಕಡೆಗಳಲ್ಲಿ ಬೇಸಗೆ ಧಾರ್ಮಿಕ ಶಿಬಿರಗಳನ್ನು ನಡೆಸಿ ಅಲ್ಲಿ ಧಾರ್ಮಿಕ ಶಿಕ್ಷಣವನ್ನು ಅಲ್ಪಾವಧಿಯಲ್ಲಿ ನೀಡುವ ಪ್ರಯತ್ನ ಮಾಡುತ್ತಿವೆ. ಮೈಸೂರು, ಬೆಂಗಳೂರು, ಮಂಗಳೂರು, ಹುಬ್ಬಳ್ಳಿ, ಧಾರವಾಡ, ಬೆಳಗಾಂವಿ ಮೊದಲಾದ ನಗರಗಳಲ್ಲಿ ಜೈನ ವಿದ್ಯಾರ್ಥಿನಿಲಯಗಳಿವೆ.

ಕರ್ನಾಟಕಕ್ಕೆ ವ್ಯಾಪಾರದ ಉದ್ದೇಶಕ್ಕಾಗಿ ಉತ್ತರ ಭಾರತದ ಗುಜರಾತ್, ರಾಜಸ್ಥಾನಗಳಿಂದ ಬಂದು ಇಲ್ಲಿಯೇ ನೆಲಸಿರುವ ಶ್ವೇತಾಂಬರ ಪಂಥ'ದ ಜೈನರು ನಗರ ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಇವರಲ್ಲಿ ಮಂದಿರ ಮಾರ್ಗಿ, ಸ್ಥಾನಕವಾಸಿ ಎಂಬ ಎರಡು ಪಂಗಡಗಳಿವೆ. ಜಿನಮಂದಿರಗಳನ್ನೂ ಮೂರ್ತಿಪೂಜೆಯನ್ನೂ ಮಾಡುವವರು ಮಂದಿರ ಮಾರ್ಗಿಗಳು. ಸ್ಥಾನಕವಾಸಿಗಳು ಮೂರ್ತಿಪೂಜೆಯನ್ನು ಮಾಡುವುದಿಲ್ಲ. ಅಲ್ಲಿ ಧಾರ್ಮಿಕ ಅಧ್ಯಯನ ಪ್ರವಚನ ನಡೆಯುತ್ತವೆ. ಧಾರ್ಮಿಕ ಗ್ರಂಥಗಳಿರುತ್ತವೆ. ಸಾಮಾಜಿಕ ಸೇವಾ ಕಾರ್ಯಗಳಲ್ಲೂ ಗೋಶಾಲೆಗಳ ವ್ಯವಸ್ಥೆಯಲ್ಲೂ ಇವರು ಪ್ರಧಾನ ಪಾತ್ರ ವಹಿಸುತ್ತಿದ್ದಾರೆ.

ಧಾರ್ಮಿಕ, ಸಾಹಿತ್ಯಕ ಚಟುವಟಿಕೆಗಳಿಗೆ ಮೀಸಲಾದ ಪತ್ರಿಕೆಗಳನ್ನು ಜೈನ ಸಮಾಜ ನಡೆಸಿಕೊಂಡು ಬಂದಿದೆ. ಒಂದು ಕಾಲಕ್ಕೆ ನಿಯತವಾಗಿ ಪ್ರಕಟವಾಗುತ್ತಿದ್ದ ವಿಶ್ವಬಂಧು, ಜಿನವಿಜಯ ಮತ್ತು ವಿವೇಕಾಭ್ಯುದಯ ಪತ್ರಿಕೆಗಳು ಈಗ ನಿಂತು ಹೋಗಿವೆ. ಆದರೆ ಗುರುದೇವ, ಸನ್ಮತಿ, ಜಿನವಾಣಿ ಮಾಸಪತ್ರಿಕೆಗಳು ಪ್ರಕಟವಾಗುತ್ತಿವೆ. ಜೈನಸಂಸ್ಕೃತಿ ಸಂರಕ್ಷಕ ಸಂಘ (ಕೊಲ್ಹಾಪುರ), ಜೈನ ಸಾಹಿತ್ಯ ಪ್ರಚಾರ ಸಂಘ (ಮೈಸೂರು), ಶಾಂತಿಸೇವಾ ಸದನ (ಶೇಡಬಾಳ), ವಿವೇಕೋದಯ ಗ್ರಂಥ'ಮಾಲೆ (ಗುಡಿಬಂಡೆ) ಮೊದಲಾದ ಸಂಸ್ಥೆಗಳು ಕನ್ನಡದಲ್ಲಿ ಜೈನ ಧಾರ್ಮಿಕ ಸಾಹಿತ್ಯಕ ಗ್ರಂಥ'ಗಳನ್ನು ಬೆಳಕಿಗೆ ತರುತ್ತಿವೆ. ಸಂದರ್ಭಾನುಸಾರ ವೈಯಕ್ತಿಕವಾಗಿ ಧಾರ್ಮಿಕ ಗ್ರಂಥಗಳನ್ನು ಪ್ರಕಟಿಸಿ ಶಾಸ್ತ್ರದಾನವೆಂಬುದಾಗಿ ಹಂಚುವ ಪದ್ಧತಿ ಇಂದಿಗೂ ನಡೆದುಕೊಂಡು ಬಂದಿದೆ. ಜೈನಶಾಸ್ತ್ರದ ಅಧ್ಯಯನ, ಸಂಶೋಧ'ನೆಗಾಗಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸ್ನಾತಕೋತ್ತರ ವಿಭಾಗವಿದೆ. (ಎಸ್.ಪಿ.)

**ಜೊಯಿಡ** : ಉತ್ತರ ಕನ್ನಡ ಜಿಲ್ಲೆ ಸುಪ ತಾಲ್ಲೂಕಿನ ಆಡಳಿತ ಕೇಂದ್ರ. ಕಾರವಾರ - ಬೆಳಗಾಂವಿ ರಸ್ತೆಯಲ್ಲಿ ಕಾರವಾರದಿಂದ 70ಕಿಮೀ ದೂರದಲ್ಲಿದೆ. ಹಿಂದಿನ ಸುಪ ತಾಲ್ಲೂಕಿನ ಆಡಳಿತ ಕೇಂದ್ರವಾಗಿದ್ದ ಸುಪ ಪಟ್ಟಣ ಕಾಳಿ ನದಿಗೆ ಅಡ್ಡಲಾಗಿ ನಿರ್ಮಿಸಲಾದ ಸುಪ ಅಣೆಕಟ್ಟಿನಿಂದ ಮುಳುಗಿಹೋದದ್ದರಿಂದ ಜೊಯಿಡಾವನ್ನು 1981ರಿಂದ ಸುಪ ತಾಲ್ಲೂಕಿನ ಆಡಳಿತ ಕೇಂದ್ರವಾಗಿ ಮಾಡಲಾಗಿದೆ. ಇದು ಈಗ ತಾಲ್ಲೂಕು ಕೇಂದ್ರವಾಗಿ ಅಭಿವೃದ್ಧಿ ಹೊಂದುತ್ತಿದೆ. ಮಲೆನಾಡು ಮತ್ತು ಬಯಲು ನಾಡುಗಳ ಸ್ಥಿತ್ಯಂತರ ಪ್ರದೇಶದಲ್ಲಿದೆ. ಇಲ್ಲಿ ಸರಾಸರಿ 2,667.9ಮಿಮೀ ಮಳೆಯಾಗುತ್ತದೆ. ಈ ಊರಿನಲ್ಲಿ ಸಿದ್ಧೇಶ್ವರ, ಜಾಲ್ಮಿ ಮತ್ತು ನಾಗನಾಥ ದೇವಾಲಯಗಳಿವೆ. ಇವೆಲ್ಲ ಹೆಂಚಿನ ಛಾವಣಿ ಹೊಂದಿರುವ ದೇವಾಲಯಗಳು. (ನೋಡಿ: ಸುಪ) (ಬಿ.ಎನ್.ಎಂ.)

**ಜೋಕಿನ್, ಅರ್ಬುದಂ** : ಕೊಳೆಗೇರಿ ನಿವಾಸಿಗರ ಜೀವನ ಸುಧಾರಣೆಗಾಗಿ, ಶೋಷಣೆಯ ನಿವಾರಣೆಗಾಗಿ ಹೋರಾಟ ನಡೆಸುತ್ತಿರುವ, ಈಗ ಮುಂಬಯಿಯಲ್ಲಿ ನೆಲೆಸಿರುವ ಮ್ಯಾಗ್ಸೆಸೆ ಪ್ರಶಸ್ತಿ ಪಡೆದ ಸಮಾಜ ಸೇವಕರು; ಅಚ್ಚಕನ್ನಡಿಗರು. ಕೋಲಾರದ ಚಿನ್ನದ ಗಣಿ ಪ್ರದೇಶದಲ್ಲಿ ಜನಿಸಿದರು. ಅರ್ಬುದಂ ಚಿನ್ನದ ಗಣಿಯಲ್ಲಿ ಇಂಜನಿಯರ್‌ರಾಗಿದ್ದರು. ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲ್ಗೊಂಡದ್ದಕ್ಕಾಗಿ ಕೆಲಸ ಕಳೆದುಕೊಂಡರು. ಜೀವನೋಪಾಯವಾಗಿ ವ್ಯಾಪಾರ ಆರಂಭಿಸಿದರು. ಆದರೆ ರಾಜಕೀಯ ಚಟುವಟಿಕೆಗಳಿಂದಾಗಿ ವ್ಯಾಪಾರದಲ್ಲಿ ಯಶಸ್ವಿಯಾಗಲಿಲ್ಲ. ಒಂಬತ್ತನೆಯ ಇಯತ್ತೆಯವರೆಗೆ ಓದಿದ್ದ ಜೋಕಿನ್ ಸಂಸಾರದ ನಿರ್ವಹಣೆಗಾಗಿ ಕೆಲಸ ಹುಡುಕಿಕೊಂಡು ಬೆಂಗಳೂರಿಗೆ ಹೋದರು.

ಬೆಂಗಳೂರಿನಲ್ಲಿ ಇವರು ಮಣ್ಣು ಹೊತ್ತರು; ಚರಂಡಿ ಸ್ವಚ್ಛಗೊಳಿಸುವ ಕೆಲಸ ಕೈಗೊಂಡರು. ಮಾವನಿಂದ ಮರಗೆಲಸದ ತರಬೇತಿ ಪಡೆದು ಅವರಲ್ಲೇ ಕೆಲಸಕ್ಕೆ ಸೇರಿಕೊಂಡರು. ಅವರಲ್ಲಿ ಉದ್ಯೋಗ ಮಾಡುವುದನ್ನು ಬಿಟ್ಟು ಸ್ವತಂತ್ರವಾಗಿ ಆ ಕೆಲಸ ಕೈಗೊಂಡು ಯಶಸ್ವಿಯಾದರು. ನಾಲ್ವರು ಸಹೋದರರು ಮತ್ತು ಮೂವರು ಸಹೋದರಿಯರ ನಿರ್ವಹಣೆಯ ಜವಾಬ್ದಾರಿ ಹೊತ್ತರು.

1963ರಲ್ಲಿ ಇವರು ಮುಂಬಯಿಗೆ ಬಂದರು. ಮನಖುರ್ದನ ಜನತಾ ಕಾಲೋನಿಯೆಂಬ ಕೊಳೆಗೇರಿಯಲ್ಲಿ ವಾಸಮಾಡುತ್ತ ಕೊಳೆಗೇರಿಯ ಜನರ ಕಷ್ಟ, ಬವಣೆ, ಯಾತನೆಗಳನ್ನು ನೋಡಿ ಅವುಗಳ ಪರಿಹಾರ ಕಾರ್ಯದಲ್ಲಿ ತೊಡಗಿದರು. ಅಲ್ಲಿನ ಬಾಲಕರನ್ನೂ ಯುವಕರನ್ನೂ ಸಂಘಟಿಸಿ ಒಂದು ವಾದ್ಯಮೇಳವನ್ನು ಸ್ಥಾಪಿಸಿದರು. ಇಪ್ಪತ್ತು ವರ್ಷಗಳಿಂದ ಹೀನಸ್ಥಿತಿಯಲ್ಲಿದ್ದ ಶೌಚಾಲಯವನ್ನು ಶುಚಿಗೊಳಿಸಿ ಅದರ ಜೀರ್ಣೋದ್ಧಾರ ಮಾಡಿದರು. ಆ ಕಾಲೋನಿಯಲ್ಲಿನ 70,000 ನಿವಾಸಿಗಳನ್ನು ಒಂದುಗೂಡಿಸಲು ರಾಷ್ಟ್ರೀಯ ಕೊಳೆಗೇರಿ ನಿವಾಸಿಗಳ ಒಕ್ಕೂಟ ಸ್ಥಾಪಿಸಿದರು. ಕಾಲುಹಾದಿಯ ನಿವಾಸಿಗಳ ಸಂಘಟನೆಯಲ್ಲಿ ತೊಡಗಿದಾಗ, ಬಡವರಿಗೆ ಆಗುತ್ತಿದ್ದ ಶೋಷಣೆಯ ವಿರುದ್ಧ ದನಿಯೆತ್ತಿ ಚಳವಳಿಯನ್ನು ಸಂಘಟಿಸಿ ಬಂಧನಕ್ಕೊಳಗಾದರು. ಪರಮಾಣುಶಕ್ತಿ ಕೇಂದ್ರಕ್ಕಾಗಿ ಜನತಾ ಕಾಲೋನಿಯನ್ನು ಚೀತಾ ಕ್ಯಾಂಪಿಗೆ ಸ್ಥಳಾಂತರಿಸುವಾಗ ಆ ನಿವಾಸಿಗಳಿಗೆ ನ್ಯಾಯ ದೊರಕಿಸಿಕೊಡಲು ಹೋರಾಟದಲ್ಲಿ ತೊಡಗಿದರು.

ಇವರು ಸ್ಥಾಪಿಸಿದ ರಾಷ್ಟ್ರೀಯ ಕೊಳೆಗೇರಿ ನಿವಾಸಿಗಳ ಒಕ್ಕೂಟ ಬೃಹತ್ ಸಂಸ್ಥೆಯಾಗಿ ಬೆಳೆದು ಮುಂಬಯಿ ನಗರದ ಎಲ್ಲ ಕೊಳೆಗೇರಿಗಳ ಪ್ರಾತಿನಿಧಿಕ ಸಂಸ್ಥೆಯಾಗಿ ರೂಪುಗೊಂಡಿತು. ಈ ಸಂಸ್ಥೆಯ ಪ್ರಯತ್ನದಿಂದ ಕೊಳೆಗೇರಿಗಳಿಗೆ ಶೌಚಾಲಯ, ನಲ್ಲಿನೀರು ವ್ಯವಸ್ಥೆ, ಒಳಚರಂಡಿ ವ್ಯವಸ್ಥೆ, ವಿದ್ಯುತ್‌ದೀಪ ಮತ್ತು ವೈದ್ಯಕೀಯ ಸೇವೆ ದೊರಕಿದುವು. ಸುಮಾರು ಮೂವತ್ತು ಸಾವಿರ ನಿರ್ವಸಿತರಿಗೆ ವಸತಿ ದೊರಕುವಂತಾಯಿತು. ಬ್ಯಾಂಕ್ ಸಾಲ ದೊರಕಿತು. ಚೆಂಬೂರ್ ಬಳಿ ಮಹುಲ್‌ನಲ್ಲಿ 2,000 ಕಾಲುಹಾದಿ ನಿವಾಸಿಗಳಿಗೆ ವಸತಿ ಸೌಲಭ್ಯ ದೊರಕಿತು. ಭಾರತದಾದ್ಯಂತ ರಾಷ್ಟ್ರೀಯ ಕೊಳೆಗೇರಿ ನಿವಾಸಿಗಳ ಒಕ್ಕೂಟದ 34 ಶಾಖೆಗಳಿವೆ. ಆಫ್ರಿಕ, ನಮೀಬಿಯ, ನೇಪಾಲ, ಶ್ರೀಲಂಕಾ ಮೊದಲಾದ ದೇಶಗಳಲ್ಲೂ ಇದರ ಹನ್ನೊಂದು ಶಾಖೆಗಳಿವೆ. ಇದು ಕ್ಷೇತ್ರ ಸಂಪನ್ಮೂಲ ಕೇಂದ್ರಾಭಿವೃದ್ಧಿ ಸಂಘದ ಸಹಯೋಗದಲ್ಲಿ 'ಮಹಿಳಾ ಮಿಲನ್' ಎಂಬ ಸಂಸ್ಥೆಯನ್ನು ಸ್ಥಾಪಿಸಿದೆ.

ಕಾಲುಹಾದಿ ಮಹಿಳಾ ನಿವಾಸಿಗಳ ಹಿತರಕ್ಷಣೆಗೆ ಹೋರಾಟ ನಡೆಸಿದೆ. ಬಡವರ ಧ್ವನಿಯಾಗಿ ಮುಂಬಯಿ ಮಹಾನಗರಪಾಲಿಕೆ, ಮಹಾರಾಷ್ಟ್ರ ಸರ್ಕಾರ, ಸಂಯುಕ್ತ ರಾಷ್ಟ್ರ ಸಂಘ ಇವು ಜೋಕಿನ್‌ರ ಸಲಹೆ ಪಡೆಯುತ್ತಿವೆ.

ಇವರ ಸಮಾಜಸೇವಾ ಕಾರ್ಯಕ್ಕಾಗಿ ಅನೇಕ ಪ್ರಶಸ್ತಿ, ಗೌರವಗಳು ಲಭ್ಯವಾಗಿವೆ. ವಿಶ್ವಸಂಸ್ಥೆಯ ವಿಶ್ವನಿವಾಸ (1999), ರಾಮೋನ್ ಮ್ಯಾಗ್ಸೆಸೆ ಪ್ರತಿಷ್ಠಾನ ಪ್ರಶಸ್ತಿ (2000) ಇವರಿಗೆ ದೊರಕಿವೆ. ಇವರ ಪತ್ನಿ ರೀಟಾಡಿಸೌಜಾ ಕೂಡ ಮೂಲತಃ ಕನ್ನಡತಿ, ಮಂಗಳೂರಿನವರು. (ಎಸ್.ಎಂ.ಕೆ.)

**ಜೋಗ :** ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಕಾರ್ಗಲ್ ಗ್ರಾಮಕ್ಕೆ ಸೇರಿದ ಒಂದು ಸಣ್ಣ ಊರು. ಪ್ರಸಿದ್ಧವಾದ ಪ್ರವಾಸಿ ಕೇಂದ್ರ. ಸಾಗರದ ವಾಯವ್ಯಕ್ಕೆ 32ಕಿಮೀ ದೂರದಲ್ಲೂ ಶಿವಮೊಗ್ಗದಿಂದ 105ಕಿಮೀ ಅಂತರದಲ್ಲೂ ಇದೆ.

ಈ ಊರಿನ ಸಮೀಪವೇ ಪ್ರಪಂಚ ಪ್ರಸಿದ್ಧ ಜೋಗ ಜಲಪಾತ ಇದೆ. ಇಲ್ಲಿ ಶರಾವತಿ ನದಿ 228ಮೀ. ವಿಸ್ತಾರವಾದ ಪಾತ್ರದಲ್ಲಿ ಹರಿದು, ರಾಜ, ರಾಣಿ, ರೋರರ್ ಮತ್ತು ರಾಕೆಟ್ ಎಂಬ ನಾಲ್ಕು ಸೀಳುಗಳಾಗಿ 292.8ಮೀ ಆಳದ ಕಮರಿಗೆ ದುಮುಕುತ್ತದೆ. ಈ ಚೇತೋಹಾರಿ ದೃಶ್ಯವನ್ನು ನೋಡಲು ಸಾವಿರಾರು ಪ್ರವಾಸಿಗರು ಇಲ್ಲಿಗೆ ಬರುತ್ತಾರೆ. ಈ ಜಲಪಾತದಷ್ಟು ಪ್ರಸಿದ್ಧವಾದುದಲ್ಲವಾದರೂ ಬಹಳ ಸುಂದರ ಸನ್ನಿವೇಶದಲ್ಲಿರುವ ಇನ್ನೊಂದು ಜಲಪಾತ ಜೋಗದಿಂದ ಸು.3ಕಿಮೀ ಪಶ್ಚಿಮದಲ್ಲಿದೆ. ಇಲ್ಲಿ ತಲಕಳಲೆ ನದಿ ಸು.100ಮೀ. ಆಳದ ಕಂದಕಕ್ಕೆ ಎರಡು ಹಂತಗಳಲ್ಲಿ ಚಿಮ್ಮುತ್ತದೆ.



ಜೋಗದಲ್ಲಿ ಶರಾವತಿ ನದಿಯ ಕಮರಿಯಲ್ಲಿ ಕಟ್ಟಲಾಗಿರುವ ಮಹಾತ್ಮ ಗಾಂಧೀ ವಿದ್ಯುದಾಗರವೂ (ಸ್ಥಾಪನೆ 1948) ಇಲ್ಲಿಂದ ಸ್ವಲ್ಪ ದೂರದಲ್ಲಿರುವ ಶರಾವತಿ ವಿದ್ಯುದಾಗರವೂ (ಸ್ಥಾಪನೆ 1965) ಪ್ರಸಿದ್ಧವಾದವು. ಈ ಶರಾವತಿ ಜಲವಿದ್ಯುತ್ ಸ್ಥಾವರ ಆಗ್ನೇಯ ಏಷ್ಯದಲ್ಲೇ ಅತಿ ದೊಡ್ಡದಾಗಿದ್ದು ಹತ್ತು ಲಕ್ಷ ಕಿಲೋವಾಟ್ ವಿದ್ಯುತ್ ಉತ್ಪಾದಿಸುವ ಸಾಮರ್ಥ್ಯವನ್ನು ಪಡೆದಿದೆ. ಈ ವಿದ್ಯುದಾಗರಗಳಿಗೆ ನೀರನ್ನು ಒದಗಿಸುವ ಬೃಹತ್ ಅಣೆಕಟ್ಟು ಜೋಗದಿಂದ ಸು.10ಕಿಮೀ ದೂರದ ಲಿಂಗನಮಕ್ಕಿಯಲ್ಲೂ ನೀರನ್ನು ನಿಯಂತ್ರಿಸಲು ರಚಿಸಿರುವ ಕಾರ್ಗಲ್ ಮತ್ತು ತಲಕಳಲೆ ಅಣೆಕಟ್ಟುಗಳು ಕೇವಲ 3ಕಿಮೀ ಫಾಸಲೆಯಲ್ಲೂ ಇವೆ. ಮಹಾತ್ಮಗಾಂಧೀ ವಿದ್ಯುದಾಗರಕ್ಕೆ ಇಳಿಯುವ ಕೊಳಾಯಿಗಳಿಗೆ ನೀರನ್ನು ಬಿಡಲು ಜೋಗದಲ್ಲೇ ಒಂದು ಚಿಕ್ಕ ಕಟ್ಟೆಯನ್ನು ನಿರ್ಮಿಸಲಾಗಿದೆ. ಈ ಎಲ್ಲ ಜಲಾಶಯಗಳೂ ಹಸುರು ಕಾನನದ ಮಧ್ಯೆ ಇದ್ದು ಸುಂದರ ತಾಣಗಳಾಗಿವೆ.

ಜೋಗದಲ್ಲಿ ಸರ್ಕಾರಿ ಪ್ರವಾಸಿ ಮಂದಿರ, ಹೋಟೆಲುಗಳು, ಪ್ರೌಢಶಾಲೆ, ಆಸ್ಪತ್ರೆ ಮತ್ತು ಅಂಚೆ-ತಂತಿ, ಸೌಲಭ್ಯಗಳು ಇವೆ. *

**ಜೋಗಜಲಪಾತ :** ಶರಾವತಿ ನದಿಯ ಜಲಪಾತ. ಗೇರುಸೊಪ್ಪೆ ಎಂದೂ ಪ್ರಸಿದ್ಧ. ಶಿವಮೊಗ್ಗ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಗಡಿ ಮಧ್ಯೆ ಇರುವ ಈ ಜಲಪಾತ ಸಾಗರ ತಾಲ್ಲೂಕಿನ ತಾಳಗುಪ್ಪ ರೈಲು ನಿಲ್ದಾಣಕ್ಕೆ 16ಕಿಮೀ ದೂರದಲ್ಲಿದೆ. ಜಲಪಾತ ಶಿವಮೊಗ್ಗದಿಂದ 100ಕಿಮೀ ದೂರದಲ್ಲೂ ಹೊನ್ನಾವರದಿಂದ 56ಕಿಮೀ ದೂರದಲ್ಲೂ ಇದೆ. ಇಲ್ಲಿ ಶರಾವತಿ ನದಿ 252.7ಮೀ (829') ಆಳದ ಪ್ರಪಾತಕ್ಕೆ ದುಮುಕುತ್ತದೆ. ಸೌಂದರ್ಯಪೂರ್ಣ ಔನ್ನತ್ಯದಲ್ಲಿ ಗೇರುಸೊಪ್ಪೆಯನ್ನು ಮೀರಿಸುವ ಜಲಪಾತ ಪ್ರಪಂಚದಲ್ಲೆಲ್ಲೂ ಇಲ್ಲ. ಆಲ್ಪ್ಸ್ ಪರ್ವತದಲ್ಲಿರುವ ಸೆರೊಸೊಲಿ (2,400'), ಎವಾನ್ಸನ್ (1,200') ಮತ್ತು ಆರ್ವೆ (1,100') ಜೋಗ ಜಲಪಾತಕ್ಕಿಂತ ಎತ್ತರವಾಗಿವೆಯಾದರೂ ಅವುಗಳಲ್ಲಿ ಜೋಗದಷ್ಟು ಜಲಸಮೃದ್ಧಿ ಇಲ್ಲ. ನಯಾಗರ ಜಲಪಾತದ ನೀರಿನ ಮೊತ್ತ ಜೋಗದ್ದಕ್ಕಿಂತ ಅಧಿಕವಾಗಿದ್ದರೂ ಅದರ ಎತ್ತರ (164') ಗೇರುಸೊಪ್ಪೆಯಷ್ಟು ಇಲ್ಲ. ಶರಾವತಿ ನದಿ ಹರಿದು ದುಮುಕುವ ಕಮರಿಯ ಬಂಡೆ 25ಮೀ.ಗಳಷ್ಟು ಉದ್ದವಾಗಿವೆ. ನಾಲ್ಕು ಪ್ರತ್ಯೇಕ ಬಿರುಕುಗಳಿಂದ ನದಿ ರಭಸದಿಂದ ಇಳಿದು ಕಮರಿಗೆ ಬೀಳುತ್ತದೆ. ಅದು ಬೀಳುವ ಶೀವಿ ಮನಮೋಹಕವಾದ್ದು. ಜಲಪಾತದ ನಾಲ್ಕು ಕವಲುಗಳ ಪೈಕಿ ರಾಜ ಸು.252.7ಮೀ ಆಳಕ್ಕೆ ದುಮುಕುತ್ತದೆ. ರಾಜ ಬೀಳುತ್ತಿರುವಂತೆಯೇ ಸ್ವಲ್ಪ ಕೆಳಗೆ, ಬಂಡೆಯ ಬಿರುಕಿನಿಂದ ಹರಿದು ಬೀಳುವ ರೋರರ್ ಜಲಪಾತವನ್ನು ಅಪ್ಪಿಕೊಂಡು, ಅದರೊಂದಿಗೆ ಕಮರಿಗೆ ಬೀಳುತ್ತದೆ. ಮೂರನೆಯ ಜಲಪಾತ ರಾಕೆಟ್ ಬಂಡೆಯ ಮೇಲಿಂದ ಹಲವು ಧಾರೆಗಳಲ್ಲಿ ಚಿಮ್ಮಿ ತಳಕ್ಕೆ ಕುಪ್ಪಳಿಸುತ್ತದೆ. ನಾಲ್ಕನೆಯ ರಾಣಿ ಜಲಪಾತ (ಲೇಡಿಬ್ಲಾಂಚೆ) ಬೀಳುವ ರಭಸದಿಂದೇಳುವ ನೊರೆಯಿಂದ ತುಂಬಿ ಸೊಗಸುಗಾತಿಯಂತೆ ಪ್ರಪಾತಕ್ಕೆ ಇಳಿಯುತ್ತದೆ.

ಮಳೆಗಾಲದಲ್ಲಿ ಹೆಚ್ಚು ನೀರು ರಭಸದಿಂದ ಬೀಳುವ ಕಾರಣ ನೀರಿನಿಂದ ಏಳುವ ಧೂಮ ಪ್ರಪಾತವನ್ನು ಆವರಿಸಿದ್ದು ನೀರಿನ ಭೋರ್ಗರೆತದ ಮೊರೆಯುವ ಶಬ್ದ ಹೃದಯವನ್ನು ಕಂಪಿಸು ವಂತಿರುತ್ತದೆ. ಮಳೆಗಾಲದ ಅನಂತರದ ತಿಂಗಳುಗಳಲ್ಲಿ ನದಿಯ ಪ್ರವಾಹ ಸರಿಯಾದ ಪ್ರಮಾಣದಲ್ಲಿರುವುದರಿಂದ ಜಲಪಾತ ನೋಡಲು ರಮ್ಯ ವಾಗಿರುತ್ತದೆ. ಜಲಪಾತದ ಪೂರ್ಣ ದೃಶ್ಯವನ್ನು ಶಿವಮೊಗ್ಗ ಗಡಿ ಭಾಗದಿಂದ ಕಾಣಬಹುದು. ಜಲಪಾತದ ಬಂಡೆಯ ಅಂಚುಗಳಲ್ಲಿರುವ ಪೊಟರೆಗಳಲ್ಲಿ ಕಾಡು ಪಾರಿವಾಳಗಳು ಮನೆಮಾಡಿಕೊಂಡು ಪ್ರಪಾತದ ಬಳಿ ಗುಂಪುಗುಂಪಾಗಿ ಹಾರುತ್ತಿರುತ್ತವೆ. ಸೂರ್ಯಕಿರಣಗಳಿಂದ ಜಲಪಾತ ದಿನದ ವಿವಿಧ ಸಮಯಗಳಲ್ಲಿ ವೈವಿಧ್ಯ ತಾಳುತ್ತದೆ. ಜಲಪಾತದ ಏಕತಾನದ ನಾದ ಹತ್ತಿರ ನಿಂತು ಕೇಳುವವರ ಕಿವಿಗಳಿಗೆ ಘನಗರ್ಜನೆಯಂತೆ ಕೇಳಿಸುತ್ತದೆ. ಅದರ ಮೇಘನಾದದ ಗಾಂಭೀರ್ಯ ನಿಸರ್ಗಸಂಗೀತದ ಒಂದು ನಿರುಪಮ ಮಾದರಿ. ಮೌನವನ್ನು ಸೀಳುವ ಆ ನಿತ್ಯನಾದವನ್ನು ಆಲಿಸುತ್ತ ನಿಂತವರಿಗೆ ಒಮ್ಮೆ ನಾದಸಮಾಧಿಯನ್ನು ಉಂಟುಮಾಡಬಹುದು. ಜೊತೆಗೆ ಬಿಸಿಲು ಹರಿದಂತೆ ಜಲಧಾರೆಗಳ ಮೇಲಿನ ಕಾಮನಬಿಲ್ಲುಗಳು ನಿತ್ಯನವ್ಯವಾಗಿ

ಕಾಣಿಸುವುವು; ಬೆಳದಿಂಗಳ ರಾತ್ರಿಯಲ್ಲೂ ಕಾಮನಬಿಲ್ಲು ಕಾಣಿಸುವುದುಂಟು. ಈ ಜೀವಂತ ಪ್ರವಾಹದ ಸೌಮ್ಯ-ಭೀಕರತೆಗಳ ವರ್ಣನೆ ಮಾತಿಗೆ ನಿಲುಕದ್ದು.

ಗೇರುಸೊಪ್ಪೆ ಜಲಪಾತದ ಮಾಹಿತಿಗಳನ್ನು ಸಂಗ್ರಹಿಸಲು ಮಾರ್ಚ್ 1856ರಲ್ಲಿ ಬಂದ ಇಬ್ಬರು ಬ್ರಿಟಿಷ್ ನೌಕಾಧಿಕಾರಿಗಳ ವರದಿಯಂತೆ ಪ್ರಪಾತದ ಆಳ 829', ಪ್ರಪಾತದ ತಳದಲ್ಲಿ ನದಿ ಕೊರೆದಿರುವ ಮಡುವಿನ ಆಳ 139', ನದಿಯ ಅಡ್ಡಗಲ ಉತ್ತರ ಕನ್ನಡ ಮತ್ತು ಶಿವಮೊಗ್ಗ ದಂಡೆಗಳ ಮೇಲಿರುವ ಬಂಗಲೆಗಳ ನಡುವೆ 2130'.

1869ರ ಜನವರಿಯಲ್ಲಿ ಜಲಪಾತ ಪ್ರದೇಶಕ್ಕೆ ಭೇಟಿ ನೀಡಿದ್ದ ಲೂಯಿ ಬ್ರೌನಿಂಗ್ ತಿಳಿಸಿರುವಂತೆ ಆಗ ಶಿವಮೊಗ್ಗ ಜಿಲ್ಲೆಯ ಅಂಚಿನ ಕಡೆ ಜಲಪಾತದ ಸಮೀಪದಲ್ಲಿ ಡೇರೆಯನ್ನು ಹಾಕಲು ಸಹ ಸಾಧ್ಯವಿಲ್ಲದಂತೆ ಒತ್ತಾದ ಕಾಡು ಬೆಳೆದಿತ್ತು. ಈಗ ಜಲಪಾತದ ಎದುರಿಗೆ, ನದಿ ಭೋರ್ಗರೆದು ಸಾಗುವ ಸುಂದರವಾದ ಸ್ಥಳದಲ್ಲಿ ಪ್ರವಾಸಿ ಬಂಗಲೆ, ಉಪಹಾರಗೃಹ ಮತ್ತು ಅಂಚೆ ಕಚೇರಿ ಇವೆ. ಅಕ್ಟೋಬರಿನಿಂದ ಫೆಬ್ರವರಿಯವರೆಗೆ ಸಹಸ್ರಾರು ಪ್ರವಾಸಿಗಳು ಪ್ರಪಂಚ ಪ್ರಸಿದ್ಧವಾದ ಈ ಮನೋಹರ ಸ್ಥಳಕ್ಕೆ ಭೇಟಿ ನೀಡುವುದುಂಟು. *

**ಜೋಗಪ್ಪ :** ಆದಿಚುಂಚನಗಿರಿ ಭೈರವ ಪಂಥಕ್ಕೆ ಸೇರಿದ್ದ ಗುಡ್ಡರನ್ನು ಜೋಗಪ್ಪಗಳೆಂದು ಸಂಬೋಧಿಸುತ್ತಾರೆ. ಕೇವಲ ದೈವಸಂಬಂಧವಾದ ಆಚರಣೆಗಳನ್ನು ನಡೆಸಿಕೊಂಡು ಬರುವ ದೇವರ ಮಕ್ಕಳು ಇವರು. ತಿರುಪತಿ ವೆಂಕಟರಮಣನ ಒಕ್ಕಲುಗಳಿಗೆ ಸಂಬಂಧಪಡುವ ದಾಸಯ್ಯಗಳಂತೆ ಈ ಜೋಗಪ್ಪಗಳು ಚುಂಚನಗಿರಿಯ ಭೈರವನ ಒಕ್ಕಲಿನವರಿಗೆ ಸಂಬಂಧಪಡುತ್ತಾರೆ. ಆ ಒಕ್ಕಲುಗಳು ಇರುವ ಕಡೆಗಳಲ್ಲೆಲ್ಲ ಗ್ರಾಮಕ್ಕೊಬ್ಬನೋ ಹಲವು ಗ್ರಾಮಕ್ಕೆ ಒಬ್ಬನೋ ಜೋಗಪ್ಪ ಇದ್ದು ಅವರ ಧಾರ್ಮಿಕ ಸಂಪ್ರದಾಯಗಳಲ್ಲಿ ಆಚರಣೆಗಳಲ್ಲಿ ಪಾಲುಗೊಳ್ಳಬೇಕು; ಮುಖ್ಯಸೂತ್ರಧಾರನಾಗಿ ಪೂಜೆಯನ್ನು ನಡೆಸಿಕೊಡಬೇಕು. ಉತ್ತರ ಕರ್ನಾಟಕದ ಎಲ್ಲಮ್ಮನ ಭಕ್ತಭಕ್ತೆಯರಲ್ಲಿ ಸಂನ್ಯಾಸಿಗಳಾಗಿರುವ ಜೋಗಪ್ಪ, ಜೋಗಿತಿಯರುಂಟು, ಅವರಿಗೂ ಇವರಿಗೂ ಯಾವುದೇ ಸಂಬಂಧವಿಲ್ಲ. ಹಾಗೆಯೇ ವೃತ್ತಿ ಗಾಯಕರಾದ ಕಿನ್ನರಿ ಜೋಗಿಗಳಿಗೂ ಜೋಗಪ್ಪಗಳಿಗೂ ಯಾವ ಸಂಬಂಧವೂ ಇಲ್ಲ. (ಎನ್.ಟಿ)

ಚುಂಚನಗಿರಿ ಕ್ಷೇತ್ರಕ್ಕೆ ಎಲ್ಲ ಜಾತಿಮತಗಳಿಗೆ ಸಂಬಂಧಪಟ್ಟವರೂ ನಡೆದುಕೊಳ್ಳುತ್ತಾರಾದ್ದರಿಂದ ಅಲ್ಲಿ ವಿವಿಧ ಮತಕ್ಕೆ ಸಂಬಂಧಪಟ್ಟ ಜೋಗಿಗಳೂ ಕಂಡುಬರುತ್ತಾರೆ. ಚುಂಚನಗಿರಿಯ ಸಮೀಪದ ಚುಂಚನಹಳ್ಳಿ, ಕಂಚನಹಳ್ಳಿ, ಪಾಳ್ಯ - ಈ ಗ್ರಾಮಗಳಲ್ಲಿ ಮಾತ್ರ ಕಾಪಾಲಿಕ ಮತಕ್ಕೆ ಸೇರಿದ ಜೋಗಪ್ಪಗಳು ಹೆಚ್ಚಾಗಿದ್ದಾರೆ. ಜೋಗಪ್ಪಗಳಿಗೆ ವಿವಾಹಪೂರ್ವದಲ್ಲಿ ಚುಂಚನಗಿರಿ ಮಠದ ಅಧ್ಯಕ್ಷರು ದೀಕ್ಷೆ ನೀಡುತ್ತಾರೆ. ದೀಕ್ಷೆ ದೇವರ ಪ್ರೇರಣೆಯ ಮೇಲೆ ಆಗುತ್ತದೆ ಎಂದು ನಂಬಿಕೆ. ಸ್ವಪ್ನದಲ್ಲಿ ದೇವರು ಜೋಗಿಯನ್ನು ಬಿಡುವಂತೆ ಕೇಳಬಹುದು. ಜೋಗಿಯಾಗುತ್ತಾನೆಂದು ಜ್ಯೋತಿಶ್ಶಾಸ್ತ್ರದಲ್ಲಿ ಹೇಳಿರಬಹುದು. ಕಷ್ಟಕಾರ್ಪಣ್ಯಗಳು ಒದಗಿದಾಗ ಹರಕೆ ಹೊತ್ತು ಹಿರಿಯ ಮಗನನ್ನು ಜೋಗಿ ಬಿಡಬಹುದು. ವಂಶಪಾರಂಪರ್ಯವಾಗಿಯೂ ಜೋಗಪ್ಪನನ್ನು ಬಿಡುವ ಸಂಪ್ರದಾಯ ಉಂಟು.

ದೀಕ್ಷೆಯ ದಿನ ವಟುವನ್ನು, ಬಂಧುಬಳಗದೊಡನೆ ಚುಂಚನಗಿರಿಗೆ ಕರೆದೊಯ್ಯಲಾಗುವುದು. ಅಲ್ಲಿ ಒಂದು ಪುಟ್ಟ ಸಮಾರಂಭವೇ ನಡೆಯುತ್ತದೆ. ಗುರುವಿನಿಂದ ದೀಕ್ಷೆಯಾದಮೇಲೆ ವಟುವಿನ ಮೆರವಣಿಗೆ ನಡೆಯುತ್ತದೆ. ಲಾಂಛನವಾಗಿ ಈ ಮರಿಜೋಗಿಗೆ ಒಂದು ಸಿಂಗನಾದ, ಕಿವಿಗೆ ಚಿನ್ನದ ಅಥವಾ ಹಿತ್ತಾಳೆಯ ಮುದ್ರೆ, ಒಂದು ತಾಮ್ರದ ಪಾತ್ರೆ (ಹರಿವಾಣ) ಕೊಡಲಾಗುವುದು. ಕೊರಳ ರುದ್ರಾಕ್ಷಿ, ಹಣೆಯ ವಿಭೂತಿ - ಇವೂ ಜೋಗಿಯ ಸಂಕೇತಗಳೇ. ದೀಕ್ಷೆಯ ದಿನ ಮುಕ್ಕಣ್ಣ ಕುಲಾವಿಯನ್ನು ಜೋಗಿಗೆ ತೊಡಿಸಲಾಗುವುದು. ಆದರೆ ಇವನ್ನು ಜೋಗಪ್ಪ ಕೊನೆಯವರೆಗೂ ಉಳಿಸಿಕೊಳ್ಳಬೇಕಾಗಿಲ್ಲ. ಏಕೆಂದರೆ ಈತ ಮುಂದೆ ಸಂಸಾರಿಯಾಗಿ ಬದುಕುತ್ತಾನೆ. ಧಾರ್ಮಿಕ ಆಚರಣೆಗಳಲ್ಲಿ ಮಾತ್ರ ಇವನ ಪಾತ್ರ ಮುಖ್ಯವಾದುದು.

ಸಿಂಗನಾದ ಜೋಗಪ್ಪಗಳ ವಾದ್ಯ. ಇದು ಯಾವ ಹಾಡುಗಾರಿಕೆಗೂ ಸಂಬಂಧಪಡುವುದಿಲ್ಲ. ಕೇವಲ ಪೂಜಾ ಸಂದರ್ಭದಲ್ಲಿ ಊದುವುದಕ್ಕಾಗಿ ಇದನ್ನು ಬಳಸಲಾಗುತ್ತದೆ. ಸಿಂಗನಾದ ಸಂಸ್ಕೃತದ ಶೃಂಗನಾದದಿಂದ ಬಂದದ್ದು (ಶೃಂಗ-ಸಿಂಗ-ಕೋಡು ಅಥವಾ ಕೊಂಬು); ಇದು ಜಿಂಕೆಯ ಕೊಂಬಿನಿಂದ ಮಾಡಿದ ವಾದ್ಯ; 1/2 ಅಥವಾ 1ಅಡಿ ಉದ್ದವಿರಬಹುದು. ಜಿಂಕೆಯ ಕೊಂಬು ಸಿಕ್ಕದ ಕಡೆ ಬೆಳ್ಳಿಯ ಸಿಂಗನಾದವನ್ನು ಬಳಸುತ್ತಾರೆ. ಸಿಂಗನಾದ ಜೋಗಪ್ಪನ ಕೊರಳಲ್ಲಿ ಸದಾ ಇರಬೇಕಾದ ಲಾಂಛನ (ಲಿಂಗವಂತರಲ್ಲಿ ಕರಡಿಗೆ ಇರುವಂತೆ). ಕುರಿಯ ಉಣ್ಣೆಯಿಂದ ಹೊಸೆದ ದಾರವೊಂದನ್ನು ಇದಕ್ಕೆ ಕಟ್ಟಿ ಕೊರಳಿನಿಂದ ಇಳಿಬಿಟ್ಟಿರುತ್ತಾರೆ. ಜೋಗಪ್ಪಗಳು ನಿತ್ಯವೂ ದೇವರ ಹೆಸರನ್ನು ಹೇಳಿ ಸಿಂಗನಾದವನ್ನು ಒಮ್ಮೆ ಊದಿ ಯಾವುದೇ ಕಾರ್ಯಕ್ಕೆ ತೊಡಗುತ್ತಾರೆ.

ಜೋಗಪ್ಪನ ಪಾತ್ರೆ ವಿಶಿಷ್ಟವಾದುದು. ಕಪಾಲದ ಆಕಾರದ ಈ ಪಾತ್ರೆ ಬ್ರಹ್ಮಕಪಾಲದ ಸಂಕೇತವೇ ಇರಬೇಕು. ಇದನ್ನು ಕಡ್ಡಾಯವಾಗಿ ಧಾರ್ಮಿಕ ಆಚರಣೆಗಳಲ್ಲಿ ತರಬೇಕು. ಒಂದು ಎಡೆಯನ್ನು ಈ ಪಾತ್ರೆಗೂ ಅರ್ಪಿಸಲಾಗುವುದು.

ಜೋಗಪ್ಪಗಳು ಭಾನುವಾರವನ್ನು ಆಚರಿಸುತ್ತಾರೆ. ಅದು ಭೈರವನ ವಾರ. ಆ ದಿನ ಮನೆಯನ್ನು ಸಾರಿಸಿ, ಮಡಿಕೆ ಕುಡಿಕೆಗಳನ್ನು ತೊಳೆದು ಮಿಂದು ಮಡಿಯುಟ್ಟು ಒಂದು ಹೊತ್ತು ಮಾತ್ರ ಊಟ ಮಾಡಬೇಕು. ಬಿರುದುಗಳನ್ನೆಲ್ಲ ಮನೆಯಲ್ಲಿ ಇಟ್ಟು ಪೂಜಿಸಬೇಕು. ಜೋಗಪ್ಪಗಳು ಮೊದಲಿಗೆ ಭಾನುವಾರ ಭಿಕ್ಷೆ ಎತ್ತುವ ಸಂಪ್ರದಾಯ ಇದ್ದಿರಬೇಕು. ಜನಪದ ಸಾಹಿತ್ಯದಲ್ಲಿ ಇದಕ್ಕೆ ಆಧಾರವಿದೆ.

ಮೈಸೂರು ಕಡೆಯಲ್ಲಿ ಭೈರವಭಕ್ತರಾದ ಜೋಗಪ್ಪಗಳು ಆದಿತ್ಯವಾರ ತಮ್ಮ ಎಲ್ಲ ಬಿರುದುಗಳನ್ನೂ ಧರಿಸಿ, ಕಾವಿಯ ವಸ್ತ್ರ ಉಟ್ಟು ಹೆಗಲಲ್ಲಿ ದೊಡ್ಡ ತ್ರಿಶೂಲವನ್ನು ಇಟ್ಟುಕೊಂಡು ಸಿಂಗನಾದವನ್ನು ಊದುತ್ತ ಭಿಕ್ಷಾಟನೆಗೆ ಬರುವುದನ್ನು ಕಾಣಬಹುದು. ಭೈರವನ ಒಕ್ಕಲಿನವರು ಅನೇಕ ಆಚರಣೆಗಳಲ್ಲಿ ಜೋಗಪ್ಪನನ್ನು ಬರಮಾಡಿಕೊಳ್ಳುತ್ತಾರೆ. ದೇವರ ತೇರು, ಹಬ್ಬ, ಭುಕ್ತಿ, ಪಿತೃಪಕ್ಷ, ಉತ್ತರಕ್ರಿಯೆ, ಮದುವೆ ಮುಂತಾದ ಸಂದರ್ಭಗಳಲ್ಲಿ ಮನೆದೇವರ ಪ್ರತಿನಿಧಿಯಾದ ಜೋಗಪ್ಪ ತನ್ನ ಬಿರುದುಗಳನ್ನೂ ದೇವರನ್ನೂ ತೆಗೆದುಕೊಂಡು ಬರುವನು. ಇಲ್ಲಿ ದೇವರು ಎಂದರೆ ಒಂದು ತ್ರಿಶೂಲ ಅಷ್ಟೆ. ಮದುವೆಯ ಹಿಂದಿನ ದಿನ ಚಪ್ಪರದ ಶಾಸ್ತ್ರ. ಆ ರಾತ್ರಿ ಜೋಗಪ್ಪ ಬಂದು ದೇವರ ಎಡೆಯನ್ನು ಪೂಜಿಸಬೇಕು. ಎಡೆಗೆ ಮುಂಚೆ ಜೋಗಪ್ಪ ಮಡಿಬಟ್ಟೆಯನ್ನು ಹಾಸಿ, ಮೇಲೆ ಅಗ್ರದ ಬಾಳೆಯ ಎಲೆ ಹಾಕಿ, ಗೋಡೆಯ ಬದಿಯಲ್ಲಿ ತೊಳೆದ ಮಣೆಯೊಂದನ್ನು ಇಟ್ಟು ತಾನು ತಂದ ಎರಡು ಮೂರು ತ್ರಿಶೂಲಗಳನ್ನು ಇಡುತ್ತಾನೆ. ಮೂರು ಎಡೆಗಳನ್ನು ಇಡಲಾಗುವುದು. ಆ ದಿನ ಮಾಡಿದ ವಿಶೇಷ ಅಡುಗೆಯನ್ನೆಲ್ಲ ಎಡೆಗೆ ಇಡುತ್ತಾರೆ. ಮೂರು ಎಡೆಗಳಲ್ಲಿ ಒಂದು ಜೋಗಪ್ಪನಿಗೆ ಇನ್ನೊಂದು ಅವನ ಪಾತ್ರೆಗೆ. ಉಳಿದ ಒಂದು ಮನೆಯವರಿಗೆ. ಪೂಜೆಯ ಅನಂತರ ಮನೆಯವರೆಲ್ಲರೂ ಜೋಗಪ್ಪನಿಂದ ವಿಭೂತಿ ಇಡಿಸಿಕೊಳ್ಳುತ್ತಾರೆ.

ಭೈರವನಿಗೆ ಹರಕೆ ಮಾಡಿಕೊಂಡು ಒಂದು ವಿಶೇಷ ಆಚರಣೆಯನ್ನು ನಡೆಸಲಾಗುವುದು. ಇದನ್ನು ಭುಕ್ತಿ ಎಂದು ಕರೆಯಲಾಗುತ್ತದೆ. ಈ ಆಚರಣೆಗೂ ಜೋಗಪ್ಪ ಬರಬೇಕು. ಭುಕ್ತಿಯ ಬೆಳಗ್ಗೆ ದೇವರಿಗೆ ಮೊಸರು ಅನ್ನದ ತಳಿಗೆಯನ್ನು ಅರ್ಪಿಸಲಾಗುವುದು. ಜೋಗಪ್ಪ ಬಂದು ದೇವರನ್ನು ಪೂಜಿಸಿ, ಹರಕೆಯ ಮರಿಗೆ ತೀರ್ಥ ಹಾಕುವನು. ಅನಂತರ ದೇವರ ಹೆಸರಿನಲ್ಲಿ ಮರಿಯನ್ನು ಕಡಿಯಲಾಗುವುದು. ಈ ಮರಿ, ಕುರಿ ಅಥವಾ ಮೇಕೆ ಆಗಬಹುದು. ಅನಂತರ ಅಡುಗೆಯನ್ನು ಮಾಡಿ ಜೋಗಪ್ಪನಿಂದ ದೇವರ ಪೂಜೆ ಮಾಡಿಸಲಾಗುವುದು. ಮಾಂಸದ ಎಡೆಯನ್ನು ಆರು ದೊನ್ನೆಗಳಲ್ಲಿ ಇಡುತ್ತಾರೆ. ಆರರಲ್ಲಿ ಎರಡು ಮನೆಯವರಿಗೆ, ನಾಲ್ಕು ಜೋಗಪ್ಪನಿಗೆ. ತೇರು ಹಬ್ಬ, ಪಿತೃಪಕ್ಷಗಳಲ್ಲಿಯೂ ಜೋಗಪ್ಪನನ್ನು ಕರೆಸಿ ಇದೇ ಕ್ರಮದಲ್ಲಿ ದೇವರಿಗೆ ಎಡೆ ಅರ್ಪಿಸಲಾಗುವುದು. ಪಿತೃಪಕ್ಷದಲ್ಲಿ ಬ್ರಾಹ್ಮಣ ಪುರೋಹಿತರನ್ನು ಕರೆಸಿ ಮಧ್ಯಾಹ್ನ ಪಿತೃಗಳಿಗೆ ತರ್ಪಣ ಅರ್ಪಿಸಿದರೂ ರಾತ್ರಿ ಜೋಗಪ್ಪನನ್ನು ಕರೆಸಿ ಎಡೆಯನ್ನು ಪೂಜಿಸುವರು.

ಪಿತೃಗಳಿಗೆ ಅರ್ಪಿಸುವ ಎಡೆ ಜೋಗಪ್ಪನ ಮೂಲಕವೇ ಸಲ್ಲಬೇಕೆಂಬುದು ನಂಬಿಕೆ. ಇಲ್ಲಿ ತಿಲತರ್ಪಣಕ್ಕಿಂತ ಎಡೆ ಇಡುವುದಕ್ಕೆ ವಿಶೇಷವಾದ ಮಹತ್ವ ಕೊಡಲಾಗಿದೆ. ಮನೆಯ ಯಜಮಾನ ಆ ದಿನ ಉಪವಾಸವಿದ್ದು ರಾತ್ರಿ ಎಡೆ ಇಟ್ಟು ಆದಮೇಲೆ ಜೋಗಪ್ಪ ಬಂದು ಪೂಜೆ ಮಾಡಿದ ಮೇಲೆ, ಊಟ ಮಾಡಬೇಕು.

ಮನೆಯ ಸೂತಕವನ್ನು ಕಳೆಯಲು, ಉತ್ತರಕ್ರಿಯೆಯಂದು ದೇವರನ್ನು ಪೂಜಿಸಲು ಜೋಗಪ್ಪ ಬರಲೇಬೇಕು. ಒಟ್ಟಿನಲ್ಲಿ ಜೋಗಪ್ಪ ದೇವರ ಪ್ರತಿನಿಧಿ, ಧರ್ಮಪ್ರಸಾರಕ. ಆದಿಚುಂಚನಗಿರಿ ಮಠವನ್ನು ಜೋಗಿಯ ಮಠ ಎಂದೂ ಕರೆಯಲಾಗಿದೆ.

ಇಲ್ಲಿ ಹರ ಗುರು ಜೋಗಪ್ಪಗಳ ನಡುವೆ ಯಾವ ಭಿನ್ನ ಭಾವವನ್ನೂ ಭಕ್ತರು ವ್ಯಕ್ತಪಡಿಸುವುದಿಲ್ಲ. ಹರನೇ ಬೆಟ್ಟದ ಮೇಲಿನ ಶ್ರೀಮಠದಲ್ಲಿ ಗುರುವಾಗಿದ್ದಾನೆ. ಆ ಗುರುವಿನ ಪ್ರತಿನಿಧಿಯಾದ ಜೋಗಪ್ಪನೂ ಭೈರವನ ಸ್ವರೂಪಿ. ಆದುದರಿಂದಲೇ ಚುಂಚನಗಿರಿಯ ಒಕ್ಕಲುಗಳಲ್ಲಿ ಜೋಗಪ್ಪನಿಗೆ ವಿಶೇಷವಾದ ಸ್ಥಾನ, ಆದರ.

ಜೋಗಿ ಎಂಬ ಹೆಸರು ಯೋಗಿ ಎಂಬುದರಿಂದ ಬಂದಿದೆ. ಈ ಜೋಗಿಗಳು ಮೂಲತಃ ಭೈರವನ ಕರಸೇವಕರು. ಪುರಾಣ ಕಾಲದಿಂದಲೂ ಭೈರವ ದೇವಸ್ಥಾನಗಳು ಮತ್ತು ಮಠಗಳು ಇರುವೆಡೆ ಈ ಜೋಗಪ್ಪಗಳು ನೆಲಸಿ ಭೈರವ ದೇವರ ಪೂಜಾ ಕಾರ್ಯಗಳಲ್ಲಿ, ಉತ್ಸವಗಳಲ್ಲಿ ಸೇವೆ ಮಾಡುತ್ತಾ ಬಂದಿದ್ದಾರೆ. ಉತ್ತರ ಭಾರತದ ಕಾಶಿ ಮತ್ತು ನೇಪಾಲದ ಕಠ್ಮಂಡುಗಳಲ್ಲಿ ಇವರ ನೆಲೆಗಳಿವೆ. ಭಾರತದಾದ್ಯಂತ ಭೈರವ ಮಠಗಳಿದ್ದು ಹನ್ನೆರಡು ವರ್ಷಗಳಿಗೊಮ್ಮೆ ಮಹಾರಾಷ್ಟ್ರದಿಂದ ಈ ಮಠಗಳ ಭಕ್ತರು ಜೋಗಿಗಳು ಮತ್ತು ಗುರುಗಳು 'ಝುಂಡಿ' ಎಂಬ ಯಾತ್ರೆ ಹೊರಟು ದಕ್ಷಿಣ ಭಾರತದ ವಿವಿಧ ಮಠಗಳನ್ನು ಸಂದರ್ಶಿಸುತ್ತಾರೆ. ಅಂತಹ ಸಂದರ್ಭದಲ್ಲಿ ಆಯಾ ಮಠದ ಗುರುಗಳನ್ನು ಅಗತ್ಯಬಿದ್ದರೆ ಬದಲಾಯಿಸಲಾಗುತ್ತದೆ. ಚಿಕ್ಕಮಗಳೂರು ಜಿಲ್ಲೆಯ ವಿವಿಧ ಭೈರವ ದೇವಾಲಯಗಳಿರುವಲ್ಲಿ ಈ ಜೋಗಿಗಳಿದ್ದಾರೆ. ಮೂಡಿಗೆರೆ ತಾಲ್ಲೂಕಿನ ದೇವರಮನೆ ಮತ್ತು ಭೈರಾಪುರದ ಭೈರವ ದೇವಾಲಯಗಳಿಗೆ ನಡೆದುಕೊಳ್ಳುವ ಜೋಗಿಗಳಿದ್ದಾರೆ. ಅವರಲ್ಲಿ ನಿರ್ದಿಷ್ಟ ವ್ಯಕ್ತಿಗೆ ದೀಕ್ಷೆ ಕೊಡುವ ಸಂಪ್ರದಾಯವಿದೆ. ಮಂಗಳೂರಿನ ಕದ್ರಿ ಮಠದ ಕರಸೇವಕರಾಗಿ ಜೋಗಿಗಳಿದ್ದಾರೆ. ಮಹಾರಾಷ್ಟ್ರದಲ್ಲಿ ಈ ಜೋಗಿ ಮಠಗಳ ಜಾಲವೇ ಇದೆ. ಇದರಿಂದ ಈ ಜೋಗಿಗಳು ವಿಶೇಷವಾಗಿ ಭೈರವನ ಒಕ್ಕಲಾಗಿ ಕಂಡುಬರುತ್ತಾರೆ.

ಇತ್ತೀಚೆಗೆ ವ್ಯವಸಾಯವನ್ನು ಅವಲಂಬಿಸಿ ಜೀವಿಸುವ ಬಹುಪಾಲು ಜೋಗಪ್ಪಗಳು ಭಿಕ್ಷಾಟನೆಯನ್ನು ಕೈಬಿಡುತ್ತಿದ್ದಾರೆ. ತಮ್ಮ ಧಾರ್ಮಿಕ ಆಚರಣೆಗಳಲ್ಲಿ ಮಾತ್ರ ಲಾಂಛನಗಳನ್ನೂ ಬಿರುದುಗಳನ್ನೂ ಧರಿಸುತ್ತಾರೆ. (ಜಿ.ಎಸ್.ಪಿ.)

**ಜೋಗಿತಿ ಸಂಪ್ರದಾಯ** : ಜನಪದ ಧಾರ್ಮಿಕ ವೃತ್ತಿಗಾಯಕರಲ್ಲಿ ಗೊಂದಲಿಗರು ಮತ್ತು ಜೋಗಿಯರು ಎಲ್ಲಮ್ಮನಿಗೆ ನಡೆದುಕೊಳ್ಳುವ ಒಂದು ಸಂಪ್ರದಾಯಕ್ಕೆ ಈ ಹೆಸರಿದೆ. ಈ ಸಂಪ್ರದಾಯ ತಲತಲಾಂತರದಿಂದ ಬೆಳೆದು ಉಳಿದುಬಂದಿದೆ.

ಬೆಳಗಾಂವಿ ಜಿಲ್ಲೆಯ ಸವದತ್ತಿಗೆ ಸಮೀಪದಲ್ಲಿರುವ ಎಲ್ಲಮ್ಮನ ಗುಡ್ಡದಲ್ಲಿ ಪ್ರತಿ ಹುಣ್ಣಿಮೆಗೂ ಜಾತ್ರೆ ನಡೆಯುತ್ತದೆ. ಮೊಟ್ಟಮೊದಲ ಸಲಕ್ಕೆ ಜಾತ್ರೆಗೆ ಹೋದ ಯಾರೂ ತಬ್ಬಿಬ್ಬಾಗುವಂಥ' ವಿಚಿತ್ರ ನೋಟವೊಂದು ಕಣ್ಣಿಗೆ ಬೀಳುತ್ತದೆ. ಸೊಂಟಕ್ಕೆ ಸಿಕ್ಕಿಸಿಕೊಂಡಿರುವ ಸಣ್ಣ ಚೀಲವೊಂದರಿಂದ ಎಲ್ಲಮ್ಮನ ಭಂಡಾರವೆಂದು ಹೇಳುವ ಹಳದಿ ಪುಡಿಯನ್ನು ಬಂದವರ ಹಣೆಗೆಲ್ಲ ಹಚ್ಚಿ ಕಾಸಿಗಾಗಿ ಕೈಯೊಡ್ಡುವವರು ಗಂಡಸರೋ ಹೆಂಗಸರೋ ಎಂಬುದನ್ನು ಅವರ ವೇಷ ಭೂಷಣಗಳಿಂದ ನಿರ್ಧರಿಸಲಾಗದ ಸೋಜಿಗವನ್ನು ಅಲ್ಲಿ ಕಾಣಬಹುದು.

ಗಂಡಸರೂ ಹೆಂಗಸರಂತೆ ಓಲೆ, ತಾಲಿ, ಮೂಗುತಿ, ಬಳೆ, ಬುಗಡಿ, ಕಡಗ, ಕಾಲಂದುಗೆ, ಸೀರೆ, ರವಿಕೆ, ಎಲ್ಲಮ್ಮನ ಮುತ್ತಿನ ಸರ, ಕವಡೆಸರ, ಕಾಸಿನಗಲ ಕುಂಕುಮಗಳನ್ನು ಧರಿಸಿ, ಬೆಡಗುಬಿನ್ನಾಣಗಳಿಂದ, ಒನಪು ಒಯ್ಯಾರಗಳಿಂದ ಓಡಾಡುವ ದೃಶ್ಯ ಭಯವಿಸ್ಮಯವನ್ನು ಹುಟ್ಟಿಸುತ್ತದೆ. ದಷ್ಟಪುಷ್ಟ ಬಲಿಷ್ಠ ಗಂಡಸು ಹೀಗೆ ನಪುಂಸಕನಂತೆ ನುಲುಚಾಡುವ ಪರಿಸ್ಥಿತಿ ಅವನಾಗಿಯೇ ಅಭಿಮಾನದಿಂದ ಬರಮಾಡಿಕೊಂಡದ್ದಲ್ಲ; ಹುಟ್ಟಿನಿಂದಲೂ ಆತ ನಪುಂಸಕನಾಗಿರುವುದಿಲ್ಲ. ಆದರೆ ಅವನು ತನ್ನ ಪುರುಷತ್ವವನ್ನು ತನ್ನ ಜನಾಂಗದ ಹಿರಿಯರ ಆದೇಶದ ಮೇರೆಗೆ ಬಲಿಕೊಡಬೇಕಾಗಿ ಬರುವ ಈ ಸಂಪ್ರದಾಯ ಇಂದಿಗೂ ಜೀವಂತವಾಗಿದ್ದು ಯಾವ ನಾಗರಿಕತೆಯ ಪ್ರಭಾವಕ್ಕೂ ವಶವಾಗದೆ ಉಳಿದುಬಂದಿದೆ. ಲೈಂಗಿಕ ಭಾವನೆಗಳು ಅರಳುವ ಮುನ್ನವೇ ಮುಗ್ಧ ಬಾಲಕನ ಬಾಳನ್ನು ಈ ಸ್ಥಿತಿಗೆ ಇಳಿಸುವ ಸಂಪ್ರದಾಯವೇ ಜೋಗಿತಿ ಸಂಪ್ರದಾಯದ ಒಂದು ಕ್ರಮ.



ಎಲ್ಲಮ್ಮ ಜೋಗಿತಿ

ಗಂಡಸಿಗೆ ಹೆಣ್ಣುಡಿಗೆಗಳನ್ನು ತೊಡಿಸುವಂತೆ ಹೆಂಗಸಿಗೆ ಹಳದಿ ಬಣ್ಣದ ನಿಲುವಂಗಿಯನ್ನು ತೊಡಿಸುತ್ತಾರೆ. ಹೆಂಗಸಾಗಲಿ ಗಂಡಸಾಗಲಿ ಎಲ್ಲಮ್ಮನ ಸೇವೆಗೆಂದು ಹೀಗೆ ತಮ್ಮನ್ನು ಅರ್ಪಿಸಿಕೊಳ್ಳುವವರನ್ನು ಜೋಗಿತಿ ಎಂದು ಕರೆಯುತ್ತಾರೆ. ಹೆಣ್ಣು ಗಂಡು ಎಂದು ಗುರುತಿಸಬೇಕಾದಾಗ ಜೋಗಪ್ಪ - ಜೋಗವ್ವ ಎಂದು ಸಂಬೋಧಿಸುತ್ತಾರೆ. ಜೋಗವ್ವನನ್ನು ಎಲ್ಲಮ್ಮನ ಸೂಳೆ ಅಥವಾ ಎಲ್ಲಮ್ಮನ ಬಸವಿ ಎಂಬುದಾಗಿಯೂ ಕರೆಯುತ್ತಾರೆ.

ಎಲ್ಲಮ್ಮನನ್ನು ಕುರಿತ ಜನಪದ ಕಾವ್ಯಗಳಲ್ಲಿ ಜೋಗಿತಿ ಸಂಪ್ರದಾಯ ಐತಿಹಾಸಿಕ ಸತ್ಯವೇನೋ ಎಂಬಂತಿರುವ ಓರಂಗಲ್ಲು

ಪ್ರತಾಪರುದ್ರನ ಕಥೆ ಇದೆ. ಅಪೂರ್ವ ತೇಜದ ಮನೋಹರ ರೂಪಲಾವಣ್ಯಗಳಿಂದಲೂ ಮಹಿಮಾತಿಶಯ ಶಕ್ತಿಗಳಿಂದಲೂ ಪ್ರಖ್ಯಾತಳಾಗಿದ್ದ ಎಲ್ಲಮ್ಮಳ ಸುರಸೌಂದರ್ಯದ ಸುದ್ದಿಯನ್ನು ಕೇಳಿದ ಪ್ರತಾಪರುದ್ರ ಅವಳಲ್ಲಿ ಮೋಹಗೊಂಡು ಆಕೆಯನ್ನು ಒಪ್ಪಿಸಿ ತಪ್ಪದೆ ಕರೆತರಬೇಕೆಂದು ದೂತರನ್ನಟ್ಟುತ್ತಾನೆ. ಕಾಮಿಯಾದರೂ ತಾನು ಸ್ವಾಮಿ ಎಂಬ ಹೆಗ್ಗಳಿಕೆಯಿಂದ ಬಳಿಯಟ್ಟಿದ ರುದ್ರನನ್ನು ಕಂಡು ಎಲ್ಲಮ್ಮ ಕಿಡಿಕಿಡಿಯಾಗಿ ಅವನ ಹಮ್ಮನ್ನು ಮುರಿಯುವ ಪಣ ತೊಡುತ್ತಾಳೆ. ರುದ್ರ ತನ್ನ ಕಾಮುಕತೆಗೆ ಪ್ರಾಯಶ್ಚಿತ್ತವಾಗಿ ಬಗೆಬಗೆಯ ಯಾತನೆಯನ್ನು ಅನುಭವಿಸಿ ಪುರುಷತ್ವವನ್ನು ಕಳೆದುಕೊಂಡು ಎಲ್ಲಮ್ಮನಿಗೆ ಶರಣಾಗತನಾಗಿ ಸ್ತ್ರೀವೇಷ ಧರಿಸಿಕೊಂಡು ಜಗವನ್ನು ಹೊತ್ತುಕೊಂಡು ಊರೂರುಗಳ ಕೇರಿಕೇರಿಗಳ ಮೇಲೆ ಮೆರೆಯಬೇಕಾಗುತ್ತದೆ. ಹೀಗೆ ಜೋಗಿತಿ ಸಂಪ್ರದಾಯ ಪ್ರತಾಪರುದ್ರನಿಂದ ಪ್ರಾರಂಭವಾಗಿ ಅದೇ ಪರಂಪರೆಯಲ್ಲಿ ನಡೆದುಬರುತ್ತಿದೆ. ಎಲ್ಲಮ್ಮನ ನಿಜವಾದ ಭಕ್ತರೆನಿಸಿಕೊಳ್ಳಬೇಕಾದರೆ ಜೋಗಿತಿಯಾಗಿ ಪರಿವರ್ತನೆ ಹೊಂದಲೇಬೇಕೆಂಬ ನಂಬಿಕೆ ಭಕ್ತರಲ್ಲಿ ಬಲವಾಗಿ ಬೇರೂರಿಬಿಟ್ಟಿದೆ.



ಚೌಡಿಕೆ ಹಿಡಿದಿರುವ ಎಲ್ಲಮ್ಮ ಜೋಗಿತಿ

ಜೋಗಿತಿ ಮನೆತನದವರಿರುವ ಊರುಗಳಲ್ಲಿ ಊರಿಗೊಬ್ಬಳನ್ನಾದರೂ ಜೋಗಿತಿಯಾಗಿ ಬಿಡಬೇಕೆಂಬ ನಿಯಮವಿದೆ. ಜೋಗಿತಿ ಎಲ್ಲಮ್ಮನ ತಂಗಿ ಮಾತಂಗಿ ಎಂದು ಭಾವನೆ. ತನ್ನ ಅಕ್ಕ ಎಲ್ಲಮ್ಮನ ಸೇವೆ ಮಾಡುವುದು, ಊರಿನ ಎಲ್ಲಮ್ಮನ ಗುಡಿಯ ಪೂಜಾಕಾರ್ಯವನ್ನು ನಡೆಸಿಕೊಂಡು ಬರುವುದು ತಂಗಿ ಜೋಗಿತಿಯ ಕರ್ತವ್ಯ. ಎಲ್ಲಮ್ಮನನ್ನು ಎಲ್ಲ ಜಾತಿಯವರು ಆರಾಧಿಸಿದರೂ ಜೋಗಿತಿ ಬಿಡುವ ಸಂಪ್ರದಾಯ ನಿಮ್ನವರ್ಗದವರಲ್ಲಿ ಮಾತ್ರ ಉಳಿದುಬಂದಿರುವಂತೆ ಕಾಣುತ್ತದೆ.

ಮುಗ್ಧಕನ್ಯೆಯೊಬ್ಬಳನ್ನು ಜೋಗಿತಿ ಬಿಡುವುದು ಅಪರಾಧವೆಂದಾಗಲಿ, ಅನ್ಯಾಯವೆಂದಾಗಲಿ ಎಲ್ಲಮ್ಮನ ಒಕ್ಕಲಿನವರು ಭಾವಿಸುವುದಿಲ್ಲ. ಅದು ಅವರಿಗೆ ಒಂದು ಧಾರ್ಮಿಕವಾದ ಪವಿತ್ರಕಾರ್ಯ; ಆ ಜನಾಂಗದ ಆ ಮನೆತನದ ಕುಲಧರ್ಮ. ಜೋಗಿತಿ ಬಿಡದಿದ್ದರೆ ಎಲ್ಲಮ್ಮ ಮುನಿದು ಕಷ್ಟಪರಂಪರೆಯ ಜಾಲವನ್ನೇ ಆ ಒಕ್ಕಲಿನ ಮೇಲೆ ಬೀಸುತ್ತಾಳಂತೆ. ಕೆಲವೊಮ್ಮೆ ಎಲ್ಲಮ್ಮನೇ ಯಾರಾದರೊಬ್ಬನ ಮೇಲೆ ಮೈದುಂಬಿ ಬಂದು ಜೋಗಿತಿ ಬಿಡದೇ ಹೋದುದಕ್ಕಾಗಿಯೇ ಇಂತೆಲ್ಲ ಕಷ್ಟಗಳನ್ನು ಕೊಟ್ಟಿದ್ದೇನೆಂದು ತಿಳಿಸುತ್ತಾಳೆ. ಇಂಥ ಸಂದರ್ಭಗಳಲ್ಲಿ ಆ ಊರಿನ ಎಲ್ಲ ಹಿರಿಯರೂ ಸೇರಿ ಚಿಕ್ಕ ಪ್ರಾಯದ ಹೆಣ್ಣುಮಗಳೊಬ್ಬಳನ್ನು ಜೋಗ್ತಿ ಬಿಡಲು ಆಯ್ಕೆಮಾಡುತ್ತಾರೆ. ಕೆಲವು ತಂದೆತಾಯಿಗಳು ತಮ್ಮ ಮಗಳೇ ಜೋಗಿತಿಯಾಗಲಿ ಎಂದು ಹಂಬಲಿಸುವ ನಿದರ್ಶನಗಳೂ ಉಂಟು.

ಹೆಣ್ಣುಮಕ್ಕಳನ್ನು ಜೋಗಿತಿ ಬಿಡಬೇಕಾದರೆ ಅವಳಿಗೆ ಏಳು ವರ್ಷಕ್ಕಿಂತ ಹೆಚ್ಚು ವಯಸ್ಸಾಗಿರಕೂಡದು, ಹಲ್ಲು ಬಿದ್ದಿರಬಾರದು, ಹಲ್ಲು ಬಿದ್ದು ಹುಟ್ಟಿದ ಅಥವಾ ಋತುಮತಿಯಾದ ಹೆಣ್ಣು ಜೋಗಿತಿಯಾಗುವ ಅರ್ಹತೆಯನ್ನು ಕಳೆದುಕೊಳ್ಳುತ್ತಾಳೆ. ಗಂಡುಮಕ್ಕಳು ಮದುವೆಯಾದ ಮೇಲೆ ಜೋಗಿತಿಯಾಗುವಂತಿಲ್ಲ. ಇದಕ್ಕೆ ಅಪವಾದಗಳೂ ಉಂಟು. ಮದುವೆಯಾಗಿ ಮಧುರ ಜೀವನವನ್ನು ನಡೆಸುತ್ತಿದ್ದ ಹೆಂಗಸಿನ ಮೇಲೆ ಅಥವಾ ಗಂಡಸಿನ ಮೇಲೆ ಎಲ್ಲಮ್ಮನ ದೃಷ್ಟಿ ಬಿದ್ದರೆ ಅವರಿಗೆ ಸಂಸಾರದಲ್ಲಿ ವಿರಕ್ತಿ ಹುಟ್ಟಿ ಅವರು ಕ್ರಮೇಣ ಜಡ್ಡು ಹಿಡಿದು ಮಲಗಿಬಿಡುತ್ತಾರೆ. ಇದಕ್ಕೆಲ್ಲ ಎಲ್ಲಮ್ಮ ಕಾಡಲು ತೊಡಗಿರುವುದೇ ಕಾರಣವೆಂದು ನಂಬುವ ಜನ ಜಡ್ಡು ಹತ್ತಿ ನೆಲಕಚ್ಚಿರುವವರನ್ನು ಜೋಗಿತಿ ಮಾಡುವುದಾಗಿ ಹರಕೆ ಹೊರುತ್ತಾರೆ. ಆ ಕ್ಷಣದಲ್ಲಿ ಅವರ ಜಡ್ಡು ಹೇಳಹೆಸರಿಲ್ಲದಂತಾಗುತ್ತದಂತೆ. ಹೀಗೆ ಮಡದಿಯಿದ್ದು ಎಲ್ಲಮ್ಮನ ಸೆಳೆತಕ್ಕೆ ಸಿಕ್ಕಿದ ಗಂಡಸು ಜೋಗಿತಿಯಾದರೆ ನಪುಂಸಕನಾಗುತ್ತಾನಂತೆ. ಅವನಿಗೆ ಆಸೆ ಆಮಿಷಗಳೇ ಇರುವುದಿಲ್ಲವಂತೆ. ಅವನು ತನ್ನ ಹೆಂಡತಿಯನ್ನು

ಚಿತ್ತ ಚಂಚಲವಾಗಿ
ಎತ್ತಲಾದರು ಹೋಗಿ
ಹುಲ್ಲಿದ್ದ ಕಡೆ ಮೇದು
ನೀರಿದ್ದ ಕಡೆ ಕುಡಿದು
ಒಂದು ಉತ್ತಮವಾದ ಸ್ಥಳ ಸೇರಿ
ಬದುಕಿಕೋ ಉಧೋ ಎಕ್ಕುಲ್ದೋ ಉಧೋ

ಎಂದು ಹೇಳಿ ಬೀಳ್ಕೊಡುತ್ತಾನೆ.

ಬಾಲ್ಯದಲ್ಲೇ ಜೋಗಿತಿಯಾದ ಸ್ತ್ರೀ ಪ್ರಾಯಕ್ಕೆ ಬಂದಾಗ ಬಯಸಿದ ಪುರುಷನನ್ನು ಕೂಡಿ ತನ್ನ ಲೈಂಗಿಕ ತೃಷೆಯನ್ನು ತೀರಿಸಿಕೊಳ್ಳಲು ಅವಕಾಶವುಂಟು. ಇಚ್ಛೆಪಟ್ಟರೆ ಜೀವನವಿಡೀ ಒಬ್ಬನೇ ಪುರುಷನನ್ನು ನೆಚ್ಚಿ ಸಂಸಾರವನ್ನು ನಡೆಸಬಹುದು. ಇಲ್ಲವೇ ತಾನು ಬಯಸುವವರೊಂದಿಗೆ ಕೂಡಬಹುದು.

ಬಾಲ್ಯದಲ್ಲಿ ಜೋಗಿತಿಯಾದ ಬಾಲಕ ತನ್ನ ವಯಸ್ಸಿನ ಕಾಲದಲ್ಲಿ ಹೇಗೆ ಬದುಕುತ್ತಾನೆಂಬುದು ಒಂದು ರಹಸ್ಯ. ಎಲ್ಲಮ್ಮನ ಜೋಗಿತಿಯಾಗಿರುವುದರಿಂದ ಆತ ನಪುಂಸಕನಾಗಿರುತ್ತಾನೆಂದು ಜನ ಭಾವಿಸುತ್ತಾರೆ. ಇದು ವೈಜ್ಞಾನಿಕ ಸತ್ಯವಾಗಿದ್ದರೆ ಚರ್ಚೆಯ ಆವಶ್ಯಕತೆಯೇ ಇಲ್ಲ. ಇದರ ಸಾಧ್ಯಾಸಾಧ್ಯತೆಯ ಬಗ್ಗೆ ಏನೊಂದನ್ನೂ ಹೇಳಲಾಗುತ್ತಿಲ್ಲ. ಸಲಿಂಗರತಿ ಇವರಲ್ಲಿರಬಹುದೇ ಎಂಬುದಕ್ಕೆ ಉತ್ತರ ಪಡೆಯುವುದು ಅಷ್ಟು ಸುಲಭವಲ್ಲ. ಅವರು ತಾವು ಲೈಂಗಿಕ ವಿಷಯಗಳ ಬಗ್ಗೆ ನಿರಾಸಕ್ತರೆಂದು ಹೇಳಿಕೊಂಡಿದ್ದಾರೆ. ಆದ್ದರಿಂದ ಜೋಗಿತಿಯರಾಗುವ ಪುರುಷರ ಲೈಂಗಿಕ ನಿಷ್ಕ್ರಿಯೆಗೆ ವೈಜ್ಞಾನಿಕ ಪರೀಕ್ಷೆಯ ಅಗತ್ಯವಿದೆಯೆಂದಷ್ಟೇ ಹೇಳಬಹುದು. ಒಟ್ಟಿನಲ್ಲಿ ಇವರಲ್ಲಿ ಜೋಗಿತಿ ಸತಿ, ಎಲ್ಲಮ್ಮ ಪತಿ ಎನ್ನುವ ಕಲ್ಪನೆ ಇದ್ದ ಹಾಗೆ ತೋರುತ್ತದೆ.

ಜೋಗಿತಿಯಾಗಲು ಆಯ್ಕೆಯಾದ ಹೆಣ್ಣುಮಗಳೊಬ್ಬಳನ್ನು ಸೂಳೆ ಬಿಡುವ, ಬಸವಿ ಬಿಡುವ, ಜೋಗಿತಿಯಾಗಿಸುವ ಕಾರ್ಯವನ್ನು ಯಾವುದಾದರೊಂದು ಮಂಗಳವಾರ ಅಥವಾ ಶುಕ್ರವಾರ ಇಟ್ಟುಕೊಳ್ಳಲಾಗುತ್ತದೆ. ಇದಕ್ಕೆ ಪರಂಪರೆಯಿಂದ ಬಂದ ಕಟ್ಟುನಿಟ್ಟಾದ ವಿಧಿವಿಧಾನಗಳುಂಟು. ಆಯಾ ಊರಿನ ಎಲ್ಲಮ್ಮನ ಗುಡಿಯ ಮುಂದೆ ಶುಚಿ ಮಾಡಿ ಸಾರಿಸಿ, ದೇವರಿಗೆ ಎದುರಾಗಿ ಕುಂಕುಮ, ಭಂಡಾರ, ಕರ್ಕು (ಇದ್ದಿಲು ಪುಡಿ) ರಂಗೋಲಿ, ಹಳದಿ, ಬಿಳಿ, ಕೆಂಪು, ಹಸುರು, ನೀಲಿ – ಈ ಒಂಬತ್ತು ಬಗೆಯ ಬಣ್ಣದ ಪುಡಿಗಳಲ್ಲಿ ಒಂದೊಂದನ್ನೂ ಐದೈದು ಸೇರಿನಂತೆ ಸಂಗ್ರಹಿಸಿ ನೆಲದ ಮೇಲೆ ಜೋಗ್ತಿ ಪಟ್ಟದ ಚಿತ್ರವನ್ನು ಬಿಡಿಸಲಾಗುತ್ತದೆ. ಅದರ ನಾಲ್ಕು ಮೂಲೆಗೂ ಹೊಂಬಾಳೆ, ವೀಳೆಯದೆಲೆ, ಅಂಗನೂಲು, ಅಕ್ಷತೆ, ಗಂಧಗಳಿಂದ ಅಲಂಕರಿಸಿದ ಕಳಸಗಳನ್ನಿಡಲಾಗುತ್ತದೆ. ಎಲ್ಲ ಕಳಸಗಳಿಗೂ ಒಂದು ವಿಭೂತಿಪಟ್ಟೆ, ಒಂದಚ್ಚು ಬೆಲ್ಲ, ಒಂದು ಚಿಪ್ಪು ಬಾಳೆಹಣ್ಣು, ಎಲೆ, ಅಡಕೆ, ಐದೈದು ಹಣಗಳನ್ನಿಡುತ್ತಾರೆ. ನಾಲ್ಕೂ ಕಳಸಗಳನ್ನು ಬಳಸಿ ಬರುವಂತೆ ಮೂರೆಳೆ ಹಸಿನೂಲನ್ನು ಬಿಡುತ್ತಾರೆ. ಪಟ್ಟದ ನಡುವೆ ಜೋಗಿತಿಯಾಗಲಿರುವ ಹೆಣ್ಣುಮಗಳನ್ನು ಕುಳ್ಳಿರಿಸಿ ನಾಲ್ಕು ಕಳಸಗಳ ಕುತ್ತಿಗೆಯಿಂದಲೂ ಒಂದೊಂದೆಳೆ ಹಸಿ ನೂಲನ್ನು ಎಳೆದುಕೊಂಡು ಅದನ್ನು ಅವಳ ಕುತ್ತಿಗೆಗೆ

ಕಟ್ಟುತ್ತಾರೆ. ಅನಂತರ ಎಲ್ಲಮ್ಮನ ವಂಶಜನೆಂದು ಹೇಳುವ ಕ್ಷತ್ರಿಯ ಕುಲದ ತಾನಿಕ (ಸ್ಥಾನಿಕ) ದರ್ಶನಮಣಿ ಅಥವಾ ಮುತ್ತು ಎಂದು ಕರೆಯಲಾಗುವ 2 ಅಥವಾ 5 ಅಥವಾ 9 ಹಾಲುಮಣಿಗಳನ್ನು ಪೋಣಿಸಿದ ದಾರವನ್ನು ಗುಡಿಯಲ್ಲಿರುವ ಎಲ್ಲಮ್ಮನ ಕೈಗೆ ಒಂದು ತುದಿಯನ್ನೂ ಜೋಗಿತಿಯಾಗುವವಳ ಕುತ್ತಿಗೆಗೆ ಮತ್ತೊಂದು ತುದಿಯನ್ನೂ ಕಟ್ಟುತ್ತಾನೆ. ಈಗ ಎಲ್ಲಮ್ಮ ದೇವಿಯನ್ನು ಚೌಡಿಕೆ ದನಿಯೊಡನೆ ಧೂಪದೀಪಗಳಿಂದ ಬಗೆಬಗೆಯಾಗಿ ಅರ್ಚಿಸುವ ತಾನಿಕ ಎಲ್ಲಮ್ಮನ ಕೈಗೆ ಕಟ್ಟಿದ ದಾರದ ತುದಿಯಿಂದ ದರ್ಶನಮಣಿಗಳನ್ನು ಜೋಗಿತಿಯ ಕುತ್ತಿಗೆಯವರೆಗೂ ಸರಿಸಿಕೊಂಡು ಬಂದು ಉಧೋ ಎಲ್ಲಮ್ಮ, ಉಧೋ ಜಯ ಎಂದು ಹೇಳಿ ಮುತ್ತನ್ನು ಕುತ್ತಿಗೆಗೆ ಕಟ್ಟುತ್ತಾನೆ. ಇಷ್ಟಾದ ಮೇಲೆ ತಾನಿಕ ಹೊಸ ಜೋಗಿತಿಗೆ ಪರಂಪರೆಯಿಂದ ಬಂದ ಕೆಲವು ಸಿದ್ಧಪ್ರಶ್ನೆಗಳನ್ನು ಕೇಳಿ ಸಿದ್ಧ ಉತ್ತರಗಳನ್ನು ಪಡೆಯುತ್ತಾನೆ. ಅನಂತರ ಉಧೋ ಎಲ್ಲಮ್ಮ, ಉಧೋ ಜಯ, ಎಕ್ಕಲ್ದೋ ಉಧೋ, ಜೋಗಲ್ದೋ ಉಧೋ ಎಂದು ಹೇಳಿ ಜೋಗಿತಿ ತಲೆಮೇಲೆ ಎಲ್ಲಮ್ಮನ ಜಗ ಹೊರಿಸುತ್ತಾನೆ. ಗಂಡಸಾದರೆ ಜಗಕ್ಕೆ ಹಾಡುತ್ತ ಬದಲಾಗಿ ಕೈಗೆ ಚೌಡಿಕೆ ಕೊಡುತ್ತಾನೆ. ಉಳಿದವರೆಲ್ಲ ಚೌಡಿಕೆಯನ್ನು ನುಡಿಸುತ್ತ ಕುಣಿಯುತ್ತ ಮುಂದಾಗುತ್ತಾರೆ. ಅವರ ಹಿಂದೆ ಜೋಗಿತಿ ನಡೆಮಡಿಯ ಮೇಲೆ ಊರುಕೇರಿಯನ್ನು ಪ್ರವೇಶಿಸುತ್ತಾಳೆ.

ಊರ ಜನ ಹೊಸ ಜೋಗಿತಿಯನ್ನು ಭಕ್ತಿಯಿಂದ ಬರಮಾಡಿಕೊಳ್ಳುತ್ತಾರೆ. ಮೊರದಲ್ಲಿ ಅಕ್ಕಿ, ಅರಿಸಿನ, ಕುಂಕುಮ, ಊದುಗಡ್ಡಿ, ಎಲೆಯಡಿಕೆ, ಒಂದು ಹಣ ಮುಂತಾದವನ್ನಿಟ್ಟುಕೊಂಡು ಬಂದು ಜಗಕ್ಕೆ ಅಥವಾ ಚೌಡಿಕೆಗೆ ಭಯಭಕ್ತಿಯಿಂದ ಪೂಜೆಮಾಡಿ ಜೋಗಿತಿಯ ಪಾದಕ್ಕೆ ನಮಸ್ಕಾರಮಾಡಿ ಕಣ್ಣಿಗೊತ್ತಿಕೊಂಡು ಭಿಕ್ಷೆ ನೀಡುತ್ತಾರೆ. ಭಿಕ್ಷೆಪಡೆದ ಜೋಗಿತಿ ಅವರ ಹಣೆಗೆ ಎಲ್ಲಮ್ಮನ ಭಂಡಾರವನ್ನು ಹಚ್ಚಿ ಮುಂದೆ ಸಾಗುತ್ತಾಳೆ. 3 ಅಥವಾ 5 ಅಥವಾ 9 ಮನೆಗಳಲ್ಲಿ ಉಪಾದಾನ ಮಾಡಿಸುತ್ತಾರೆ. ಭಿಕ್ಷದಿಂದ ಬಂದ ಅಕ್ಕಿಯಲ್ಲಿ ಬೆಲ್ಲದನ್ನ ಮತ್ತು ಉಗ್ಗೀದನ್ನವನ್ನು (ಅರಿಸಿನದ ಅನ್ನ) ಮಾಡಿ ಎಲ್ಲಮ್ಮನಿಗೆ ತಳಿಗೆ ಎರೆಯುತ್ತಾರೆ. ಈ ಪ್ರಸಾದವನ್ನು ಎಲ್ಲರೂ ಭಕ್ತಿಯಿಂದ ಕಣ್ಣಿಗೊತ್ತಿಕೊಂಡು ಸೇವಿಸುತ್ತಾರೆ. ಇದು ಅವರವರ ಊರಿನಲ್ಲೇ ಜೋಗ್ತಿ ಬಿಡುವ ಕ್ರಮ. ಇಷ್ಟೆಲ್ಲ ವೆಚ್ಚವನ್ನು ಭರಿಸಲಾರದವರು ಸವದತ್ತಿಯ ಎಲ್ಲಮ್ಮನ ಗುಡ್ಡಕ್ಕೋ ಚಂದ್ರಗುತ್ತಿ ಎಲ್ಲಮನ ಗುಡಿಗೋ ಹೋಗಿ ಜೋಗಿತಿಯನ್ನು ಎಲ್ಲಮ್ಮನಿಗೆ ಲಗ್ನ ಮಾಡಿಕೊಡುತ್ತಾರೆ.

ಎಲ್ಲಮ್ಮನ ಗುಡ್ಡದಲ್ಲೇ ಜೋಗಿತಿ ಬಿಡುವ ಕ್ರಮ ತುಂಬ ಸರಳವಾದುದು. ಐದು ಜನ ಜೋಗಿತಿಯರು ಜೋಗಿತಿಯಾಗಲಿರುವವಳನ್ನು ಗುಡ್ಡದಲ್ಲಿರುವ ಎಣ್ಣೆಹೊಂಡದಲ್ಲಿ ಮೀಸುತ್ತಾರೆ. ಮಿಂದು ಮಡಿಯುಟ್ಟು ಜೋಗಿತಿಯನ್ನು ಎಲ್ಲಮನ ಗುಡಿಗೆ ಕರೆದುಕೊಂಡು ಬಂದು ಪ್ರತಿಜ್ಞಾವಾಕ್ಯಗಳನ್ನು ಹೇಳಿಸಿ ಮುತ್ತನ್ನು ದೇವಿಯ ಪಾದಕ್ಕೆ ಮುಟ್ಟಿಸಿ ಜೋಗಿತಿ ತನ್ನ ಊರಿಗೆ ಹಿಂದಿರುಗಿದ ಮೇಲೆ ಐದು ಮಂಗಳವಾರಗಳು ತಪ್ಪದೆ ಉಪಾದಾನ ಮಾಡಿ ಬಂದ ಭಿಕ್ಷೆಯನ್ನು ಗುಡ್ಡಕ್ಕೆ ತಂದು ಅದರಿಂದ ಮಾಡಿದ ಅಡಿಗೆಯನ್ನು ಮಾತಂಗಿ ಗುಡಿಗೆ ತೆಗೆದುಕೊಂಡು ಹೋಗಿ ಪೂಜೆ ಮಾಡಿ ಐದಾರು ಜನ ಜೋಗಿತಿಯರಿಗೆ ಬಡಿಸಿ ತಾನೂ ಉಣ್ಣಬೇಕು. ಹೀಗೆ ಶಾಸ್ತ್ರೀಯವಾಗಿ ಚೌಡಿಕೆ ಹಿಡಿದವರು ಮಾತ್ರ ಜೋಗಿತಿಯಾಗಿರುತ್ತಾರೆಯೇ ಹೊರತು ಚೌಡಿಕೆ ಹಿಡಿದವರೆಲ್ಲರೂ ಜೋಗಿತಿಯರೆಂದು ತಿಳಿಯುವಂತಿಲ್ಲ. ನೂರಾರು ಜನ ಚೌಡಿಕೆಯವರಿರುವ ಊರಿಗೆ ಜೋಗಿತಿಯರು ಒಬ್ಬಿಬ್ಬರು ಮಾತ್ರ.

ಯಾರಾದರೂ ಗಂಡಹೆಂಡಿರು ಜೊತೆಯಲ್ಲಿ ಮಲಗಿರುವುದನ್ನು ಜೋಗಿತಿ ಕಂಡರೆ ಅದನ್ನು ಬೇರೆಯವರ ಜೊತೆ ಹೇಳಕೂಡದು. ಕಟ್ಟಿದ್ದ ಕರು ಕಿತ್ತುಕೊಂಡು ಹಸುವಿನ ಮೊಲೆಯುಣ್ಣುತ್ತಿದ್ದರೆ ಕರು ಹಾಲನ್ನುಂಡುಕೊಳ್ಳುತ್ತಿದೆ ಎಂದು ಹೇಳಬಾರದು. ಹಸು ಹೊಲವನ್ನೇ ಮೇಯುತ್ತಿದ್ದರೂ ಅದನ್ನು ಓಡಿಸಲು ಹೇಳಬಾರದು. ಸುಳ್ಳುಪಳ್ಳು ಹೇಳಿ ಸುಖಪಡೆಯಲು ಪ್ರಯತ್ನಿಸಬಾರದು. ಎಲ್ಲೂ ಊಟ ಸಿಗದಿದ್ದರೆ ತಾನು ಹಸಿದಿರುವ ವಿಷಯವನ್ನು ಯಾರ ಮುಂದೂ ತೋಡಿಕೊಳ್ಳಕೂಡದು. ಬೇರೆಯವರ ತುತ್ತಿಗೆ ಆಸೆ ಪಡಬಾರದು. ಬಿಸಿಲಲ್ಲಿರುವವರನ್ನು ಕಂಡರೆ ನೆರಳಿಗೆ ಕರೆಯಬೇಕು; ಹಸಿದಿದ್ದವರನ್ನು ಕಂಡರೆ ತನ್ನ ತುತ್ತಿನಲ್ಲಿ ಅವರಿಗೂ ಸ್ವಲ್ಪ ಕೊಡಬೇಕು. ಬಾಯಾರಿದವರಿಗೆ ನೀರೆರೆಯಬೇಕು. ಕಷ್ಟದಲ್ಲಿರುವವರಿಗೆ ತಮ್ಮ ಕೈಲಾದ ಸಹಾಯವನ್ನು ಮಾಡಬೇಕು. ಯಾರಾದರೂ ಬೈದರೆ ಹೊಡೆದರೆ ಹಿಂದಿರುಗಿ ಬೈಯುವುದಾಗಲಿ ಹೊಡೆಯುವುದಾಗಲಿ ಕೂಡದು. ಸತ್ತುಕೆಟ್ಟವರನ್ನು ಕಂಡರೆ ಸ್ನಾನಮಾಡಿ ಎಲ್ಲಮ್ಮನನನ್ನು ಪೂಜಿಸಿ ಅನಂತರ ಊಟ ಮಾಡಬೇಕು. ಅವರಿವರ ಎಂಜಲನ್ನು ನಾಲಿಗೆಗೆ ಸೋಂಕಿಸಕೂಡದು. ಕುಂತಲ್ಲಿ ನಿಂತಲ್ಲಿ ಎಲ್ಲಮ್ಮ ಎನ್ನುವ ಸೊಲ್ಲನ್ನು ಮರೆಯಕೂಡದು. ಪ್ರತಿನಿತ್ಯವೂ ಎಲ್ಲಮ್ಮ ದೇವಿಯನ್ನು ತಪ್ಪದೆ ಪೂಜಿಸಬೇಕು. ಇವು ಜೋಗಿತಿಯ ಮುಖ್ಯ ಕರ್ತವ್ಯಗಳು.

ಜೋಗಿತಿಯನ್ನು ಯಾರೂ ಯಾವ ಕಾರಣಕ್ಕೂ ಬೈಯುವಂತಿಲ್ಲ; ಹೊಡೆಯುವಂತಿಲ್ಲ. ಎಲ್ಲಮ್ಮ ದೇವಿಯ ಕಾರ್ಯಕ್ಕೆಂದೇ ಮೀಸಲಾದ ಜೋಗಿತಿಯನ್ನು ಎಲ್ಲರೂ ಗೌರವದಿಂದ ನಡೆಸಿಕೊಳ್ಳುತ್ತಾರೆ. ಹೀಯಾಳಿಸಿ ಮಾತನಾಡಿದವರಿಗೆ, ಪ್ರತಾಪರುದ್ರ ಅಹಂಕಾರದಿಂದ ಪತನಹೊಂದಿದ ಕಥೆಯನ್ನು ನೆನಪು ಮಾಡಿ ಎಚ್ಚರಿಸುತ್ತಾರೆ.

ಜೋಗಿತಿಯಾದ ಹೆಂಗಸು ಎಲ್ಲಮ್ಮನ ಸತಿಯಾಗುವುದರಿಂದ ಅವಳು ಇತರರಂತೆ ಶಾಸ್ತ್ರೀಯವಾಗಿ ಮದುವೆಯಾಗುವಂತಿಲ್ಲ. ಆದರೆ ಅವಳು ಬಯಸಿದ ಉಪಚಾರದ ಗಂಡನೊಡನೆ ಕೂಡುವ ದಿನದಲ್ಲಿ ಹೆಚ್ಚಟ್ಟೆ ಮಾಡುತ್ತಾರೆ. ಈ ಶೋಭನದ ಕಾರ್ಯ ಎಲ್ಲಮ್ಮನ ಪೂಜೆಯ ಪವಿತ್ರ ಕಾರ್ಯದಷ್ಟೇ ಮಹತ್ತ್ವಪೂರ್ಣವಾದುದೆಂದು ಭಾವನೆ. ಜೋಗಿತಿಯ ತಲೆಯ ನೀಳ್ಗೂದಲು ಜಡೆಗಟ್ಟಿಕೊಂಡರೆ ಅವಳನ್ನು ಸಾಕ್ಷಾತ್ ಎಲ್ಲಮ್ಮನೆಂದು ಭಾವಿಸಲಾಗುವುದರಿಂದ ಆ ಹೆಣ್ಣುಮಗಳು ಕಟ್ಟುನಿಟ್ಟಾಗಿದ್ದು ತನ್ನ ಲೈಂಗಿಕಬಯಕೆಗಳನ್ನು ತ್ಯಾಗಮಾಡಬೇಕಾಗುತ್ತದೆ. ಆ ಸಮುದಾಯದ ಪುರುಷರೂ ಅವಳನ್ನು ಬಯಸಲು ಹೆದರುತ್ತಾರೆ. ಜಡೆಗಟ್ಟದಿದ್ದ ಜೋಗಿತಿಯರು ಯಾರನ್ನಾದರೂ ಕೂಡಿ ಬಸುರಾಗಿ ಪಡೆದ ಕಂದಮ್ಮಗಳನ್ನು ಉಳಿದೆಲ್ಲ ಜೋಗಿತಿಯರು ಸೇರಿ ಪೋಷಿಸಿ, ಜೋಗಿತಿಯರನ್ನಾಗಿ ಮಾಡುತ್ತಾರೆ.

ಜೋಗಿತಿ ಬಿಡುವ ಸಂಪ್ರದಾಯ ಎಷ್ಟು ವಿಚಿತ್ರವೋ ಜೋಗಿತಿಯರ ಶವ ಸಂಸ್ಕಾರಾದಿಗಳೂ ಅಷ್ಟೇ ವಿಚಿತ್ರವಾಗಿವೆ. ಜೋಗಿತಿಯ ಸಾವಿನ ಸೂಚನೆಯಾಗಿ ಮನೆ ಮುಂದೆ ಬೆಂಕಿಕೊಳ್ಳಿ ಉರಿಸುತ್ತಾರೆ. ಹೆಣದ ತಲೆದೆಸೆಯಲ್ಲಿ ಕೈಯೆಣ್ಣೆ ದೀಪ ಹಚ್ಚಿಟ್ಟು, ಹಿಡಿ ಉಪ್ಪಿನ ಗಂಟನ್ನು ಎದೆಯ ಮೇಲಿರಿಸುತ್ತಾರೆ. ಅನಂತರ ಜೋಗಿತಿ ಬಿಡುವಾಗ ಮಾಡಿದಂತೆ ಅಷ್ಟಗಲ ನೆಲವನ್ನು ಸಾರಿಸಿ 'ಸೆರಗುಪಟ್ಟ' ಎಂಬ ಹೆಸರಿನ ಚಿತ್ರವನ್ನು ಒಂಬತ್ತು ಬಣ್ಣಗಳ ಪುಡಿಗಳಿಂದ ಬಿಡಿಸುತ್ತಾರೆ. ಇದರ ನಡುವೆ ಮೈತೊಳೆದ ಹೆಣವನ್ನು ಮೂಡುಮುಖ ಮಾಡಿ ಕುಳ್ಳಿರಿಸುತ್ತಾರೆ. ನಾಲ್ಕು ಮೂಲೆಗೂ ನಾಲ್ಕು ಕಳಸಗಳನ್ನು ಇಟ್ಟು ಪೂಜಿಸಿ, ಪ್ರತಿಯೊಂದು ಕಳಸಕ್ಕೂ ಅರಸಿನ, ಕುಂಕುಮ, ಹೂವು, ಎಲೆ, ಅಡಿಕೆ, ಅಲರಂಗದ ಬಟ್ಟೆಯನ್ನು ಇಡುತ್ತಾರೆ. ನಾಲ್ಕು ಕಳಸಗಳನ್ನು ಒಳಗೊಳ್ಳುವಂತೆ ಮೂರು ಸುತ್ತು ಹಸಿನೂಲೆಳೆ ಬಿಡುತ್ತಾರೆ. ನಾಲ್ಕು ಕಳಸಗಳಿಂದಲೂ ಒಂದೊಂದು ಎಳೆ ಹಸಿನೂಲನ್ನು ಎಳೆದುಕೊಂಡು ಹೆಣದ ಕುತ್ತಿಗೆಗೆ ಕಟ್ಟುತ್ತಾರೆ. ಮಿಂದು ಮಡಿಯುಟ್ಟ ಜೋಗಿತಿಯೊಬ್ಬಳಿಗೆ ಕಣ್ಣುಕಟ್ಟಿ ಹೆಣಕ್ಕೆ ಬೆನ್ನು ಮಾಡಿ ಅಷ್ಟು ದೂರದಲ್ಲಿ ನಿಲ್ಲಿಸುತ್ತಾರೆ. ಅವಳನ್ನು ಹಿಂದುಹಿಂದಕ್ಕೆ ಕರೆದುಕೊಂಡು ಬಂದು ಅವಳೆರಡು ಕೈಗಳನ್ನು ಬೆನ್ನಿನ ಕಡೆಗೆ ನೂಕಿ ಹೆಣದ ಕುತ್ತಿಗೆಯಲ್ಲಿರುವ ದರ್ಶನಮಣಿಹಾರವನ್ನು ನಾಲ್ಕು ಕಳಸಗಳಿಂದ ಎಳೆದುಕೊಂಡಿದ್ದ ನಾಲ್ಕು ದಾರಗಳನ್ನೂ ಕೀಳಿಸುತ್ತಾರೆ. ಹೀಗೆ ಕಿತ್ತೆಸೆಯುವುದರಿಂದ ಜೋಗ್ತಿಯ ಪ್ರಾಣ ದೇವರ ಸೆರಗಿನಿಂದ ಬಿಡಿಸಿಕೊಂಡಂತಾಯಿತೆಂದು ನಂಬುತ್ತಾರೆ. ಈಗ ಜೋಗಿತಿಯ ಪ್ರಾಣ ಎಲ್ಲಮ್ಮನ ಸತಿಯಾಗಿರದೆ ಮಾನವಪ್ರಾಣವಾಗುತ್ತದೆ. ಹೀಗೆ ಮಾಡದೆ ಹೋದಲ್ಲಿ ಅದು ದೇವರ ಸೆರೆಯಲ್ಲಿದ್ದು ದೇವಗಣಕ್ಕೂ ಸೇರದೆ ಮಾನವ ಗಣಕ್ಕೂ ಸೇರದೆ ಅಂತರಪಿಶಾಚಿಯಾಗುತ್ತದೆಯಂತೆ, ಅದಕ್ಕಾಗಿಯೇ ಸೆರಗಿನಿಂದ ಬಿಡಿಸುವ ಈ ಕಾರ್ಯ ನಡೆಯುತ್ತದೆ. ಈಗ ಆ ಪ್ರಾಣ ಪುಣ್ಯಕರ್ಮಾನುಸಾರ ಯಾವ ಗಣಕ್ಕಾದರೂ ಸೇರಿಕೊಳ್ಳುತ್ತದೆ. ಸೆರಗಿನಿಂದ ಬಿಡುಗಡೆಯಾಗಿ ಪಟ್ಟ ಇಳಿದ ಹೆಣವನ್ನು ಚಿತೆಗೇರಿಸಬಹುದು, ಇಲ್ಲವೇ ಮಣ್ಣು ಮಾಡಬಹುದು. ಲೋಕರೂಢಿಯಂತೆ ತಿಥಿ ಇತ್ಯಾದಿ ಉತ್ತರಕ್ರಿಯೆಗಳು ನಡೆಯುತ್ತವೆ. ಚೌಡಿಕೆಯವರು ಆ ದಿನ ಬೆಳಗಾನ ಎಲ್ಲಮ್ಮನ ಕಥೆ ಮಾಡುತ್ತಾರೆ. (ಪಿ.ಕೆ.ಆರ್.)

**ಜೋಗುಳ :** ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ಜೋ ಜೋ ಎಂಬ ಪಲ್ಲವಿಯೊಂದಿಗೆ ಜೀಕುತ್ತ (ತೂಗುತ್ತ) ಹಾಡುವ ಹಾಡು. ಇದನ್ನು ಲಾಲಿ ಹಾಡುವುದು ಎಂದೂ ಕರೆಯುವುದುಂಟು. ಈ ಕೆಲಸವನ್ನು ಹೆಚ್ಚಾಗಿ ಮಗುವಿನ ತಾಯಿ ಮಾಡುವಳು:

ಜೋ ಜೋ ಮುದ್ದಿನ ಪುಟಾಣಿ ಕಂದ
ಜೋ ಜೋ ಲಲ್ಲೆಯ ಮಾತಿನ ಅಂದ
ಜೋ ಜೋ ಗೆಜ್ಜೆಯ ಝಣಝಣ ಚಂದ
ಜೋ ಜೋ ತಾರಾಕುವರಿ ಆನಂದ || ಜೋ- ಜೋ ||

ಹೀಗೆ ಜೋಗುಳ ಹಾಡುವುದರಿಂದ ಅಳುವ ಕೂಸು ಸ್ವಲ್ಪ ಮಟ್ಟಿಗೆ ಸಮಾಧಾನಗೊಳ್ಳುತ್ತದೆ. ಮಗುವಿನ ಮುಗ್ಧ ಸೌಂದರ್ಯವನ್ನೂ ಅದರ ಆಟ, ನೋಟ, ತುಂಟತನ ಮೊದಲಾದ ಗುಣಗಳನ್ನೂ ಬಣ್ಣಿಸಿ ಹಾಡುವುದರಿಂದ ತಾಯಿಯ ಎದೆಯಳಲು ಸ್ವಲ್ಪಮಟ್ಟಿಗೆ ಕರಗಿ ಅವಳ ಮನಸ್ಸಿಗೂ ಉಲ್ಲಾಸ ಉಂಟಾಗುತ್ತದೆ. ಇದರಿಂದ ಮಗುವಿನ ಬಗ್ಗೆ ವಾತ್ಸಲ್ಯ, ಮಮತೆ ಇನ್ನೂ ಹೆಚ್ಚಾಗುತ್ತದೆ. ಜನಪದ ಕವಿಗಳು ಮಕ್ಕಳ ಆಟಪಾಟಗಳನ್ನೂ ನಗು-ಅಳುವನ್ನೂ ಕುರಿತು ಸುಂದರವಾಗಿ ವರ್ಣಿಸಿರುವುದುಂಟು. ಮಗು ಅಳುವುದಕ್ಕೆ ನಾನಾ ಕಾರಣಗಳಿರಬಹುದು. ಹೊಟ್ಟೆ ಹಸಿದಿರುವುದುಂಟು ಅಥವಾ ಏನಾದರೂ ನೋವಾಗಿರಬಹುದು. ಹೀಗೆ ಮಗು ಅತ್ತಾಗ ಒಬ್ಬ ತಾಯಿ 'ಹಾಲು ಬೇಡಿ ಅತ್ತಾನ, ಕೋಲ ಬೇಡಿ ಕುಣಿದಾನ, ಮೊಸರು ಬೇಡಿ ಕೆಸರು ತುಳಿದಾನ' ಎಂದು ತನಗೆ ತಾನೇ ಪ್ರಶ್ನೆ ಕೇಳಿಕೊಳ್ಳುತ್ತಾಳೆ. ಬಿಂದಿಗೆ ಹಾಲು ತಂದು ಸುರುವೆಂದೂ ರಾತ್ರಿ ಚಂದ್ರಮನ ಕಟ್ಟಿ ನಿಲ್ಲಿಸೆಂದೂ ಹಟ ಮಾಡುವ, ಕಾಯದ ಹಾಲಿನ ಕೆನೆಯನ್ನು ಬೇಡಿ ಕರೆಕರೆಪಡುವ ಮಕ್ಕಳೂ ಇರುವುದುಂಟು. ಆಗ 'ಅತ್ತರೂ ಅಳಲಿ, ಮನೆಗೆಲಸ ಕೆಟ್ಟರೂ ಕೆಡಲಿ ಈ ಕಂದನಂಥ ಮಕ್ಕಳು ಮನೆ ತುಂಬ ಇರಬೇಕೆಂದು ಬಯಸುವ' ತಾಯಂದಿರೂ ಇದ್ದಾರೆ. ಎಂದೂ ಅಳದಿದ್ದ ಮಗು ಒಮ್ಮೆ ಅತ್ತಾಗ 'ಅಳು ಬಂದು ಅತ್ತರಿಯದ ಹಸಿವು ಬಂದು ಉಂಡರಿಯದ ಹಾಗೂ ಎತ್ತಿಕೊಳ್ಳಲೇಬೇಕೆಂಬ ಹಟವರಿಯದ ನನ ಕಂದ ಅಳದಾತನು ಅತ್ತ ಬಗೆಯೇನು' ಎಂದು ಒಬ್ಬ ತಾಯಿ ದಿಗಿಲುಪಡುತ್ತಾಳೆ. ಇನ್ನೊಮ್ಮೆ ಅಳುತ್ತಿರುವ ಮಗುವಿನಲ್ಲೇ ಆಕೆ ಸೌಂದರ್ಯವನ್ನು ಕಾಣುತ್ತಾಳೆ. ಅಳುವ ಕಂದನ ತುಟಿಯು ಹವಳಾದ ಕುಡಿಹಂಗ ಕುಡಿಹುಬ್ಬು ಬೇವಿನೆಸಳಂಗ ಕಣ್ಣೋಟ ಶಿವನ ಕೈಯಲಗು ಹೊಳೆದಂಗ-ಈ ತ್ರಿಪದಿ ಅಳುವ ಮಗುವಿನ ಕೋಮಲ ಸೌಂದರ್ಯವನ್ನು ತುಂಬ ಸುಂದರವಾಗಿ ಚಿತ್ರಿಸುತ್ತದೆ. ಆಡಿ ಬಾ ನನ ಕಂದ ಅಂಗಾಲ ತೊಳೆದೇನು ತೆಂಗಿನ ಕಾಯಿ ತಿಳಿನೀರ ತಕ್ಕೊಂಡು ಬಂಗಾರ ಮೋರೆ ತೊಳೆದೇನು ಎನ್ನುವಲ್ಲಿ ತಾಯಿಯ ಮನಸ್ಸಿನ ವಾತ್ಸಲ್ಯಪೂರಿತ ಕೋಮಲ ಭಾವನೆಗಳು ಘನೀಭೂತವಾಗಿ ಅಭಿವ್ಯಕ್ತವಾಗಿವೆ. ಜೋಗುಳದ ಹಾಡುಗಳನ್ನು ಕುರಿತು ಗೌರಾಂಬಿಕಾದೇವಿ ಹಂಜಗಿಮಠ ಅವರು ಜೋಗುಳ ಪದಗಳು ಎಂಬ ಸಂಕಲವನ್ನು ಹೊರತಂದಿದ್ದಾರೆ. (ಎಸ್.ಎಲ್.)

**ಜೋದರ ಮಾಯಣ್ಣ :** 12ನೆಯ ಶತಮಾನದ ಶಿವಶರಣ ಹಾಗೂ ವಚನಕಾರ. ಈತನ ವಿಷಯ ಬಸವೇಶ್ವರಪುರಾಣ, ಪಾಲ್ಕುರಿಕೆ ಸೋಮೇಶ್ವರ ಪುರಾಣ, ಭೈರವೇಶ್ವರಕಾವ್ಯದ ಕಥಾಮಣಿಸೂತ್ರರತ್ನಾಕರ, ಚೆನ್ನಬಸವಪುರಾಣ, ಪ್ರಭುದೇವರ ಪುರಾಣಗಳಲ್ಲಿ ಕಂಡುಬರುತ್ತದೆ. ಆ ಕಥೆ ಹೀಗಿದೆ :

ಮಾಯಣ್ಣ ಬಿಜ್ಜಳನ ಆಸ್ಥಾನದಲ್ಲಿ ಆನೆಪಡೆಯ ಮೇಲಧಿಕಾರಿಯಾಗಿದ್ದು ತನ್ನ ವರಮಾನದಿಂದ ಜಂಗಮದಾಸೋಹವನ್ನು ನಡೆಸುತ್ತಿದ್ದ. ಒಂದು ದಿನ ಪರದೇಶದ ರಾಜಕುಮಾರನೊಬ್ಬ ಆನೆಯ ಮೇಲೆ ಕಲ್ಯಾಣಕ್ಕೆ ಬಂದು ಒಬ್ಬ ವೇಶ್ಯೆಯ ಮನೆಯಲ್ಲಿ ಉಳಿದ. ಅದನ್ನು ನೋಡಿದ ಮತ್ತೊಬ್ಬ ವೇಶ್ಯೆ ತನಗೆ ಒಲಿದಿದ್ದ ಮಿಂಡ ಜಂಗಮನನ್ನು ಕುರಿತು, ಆ ರಾಜಕುಮಾರನಂತೆ ಬಿಜ್ಜಳನ ಪಟ್ಟದಾನೆಯನ್ನು ತನ್ನ ಮನೆಯ ಮುಂದೆ ನಿಲ್ಲಿಸಬಲ್ಲೆಯಾ ಎಂದು ಪ್ರಶ್ನಿಸಿದಳು. ಆಗ ಆ ವಿಟಜಂಗಮ ಹಾಗೆಯೇ ಆಗಲೆಂದು ಒಪ್ಪಿಕೊಂಡು ಆನೆಯನ್ನು ಬೇಡುವುದಕ್ಕಾಗಿ ಬಸವಣ್ಣನಲ್ಲಿಗೆ ಹೊರಟ. ದಾರಿಯಲ್ಲಿ ಬಿಜ್ಜಳನ ಪಟ್ಟದಾನೆಯೊಂದಿಗೆ ಎದುರಾದ ಮಾಯಣ್ಣನನ್ನು ಕಂಡ ಜಂಗಮ ತಾನು ಬಸವಣ್ಣನಲ್ಲಿಗೆ ಹೋಗುತ್ತಿರುವ ವಿಷಯವನ್ನು ತಿಳಿಸಿದ. ಅದನ್ನು ಕೇಳಿದ ಮಾಯಣ್ಣ ಆ ಜಂಗಮನಿಗೆ ಬಿಜ್ಜಳನ ಪಟ್ಟದ ಆನೆಯನ್ನು ಕೊಟ್ಟುಕಳುಹಿಸಿದ. ಆ ವಿಟಜಂಗಮ ತನ್ನ ವೇಶ್ಯೆಯ ಮನೆಯ ಮುಂದೆ ಬಿಜ್ಜಳನ ಪಟ್ಟದ ಆನೆಯನ್ನು ಕಟ್ಟಿದ. ಇದನ್ನು ಕಂಡವರು ಬಿಜ್ಜಳನಿಗೆ ವಿಷಯವನ್ನು ತಿಳಿಸಿದರು. ಆಗ ಬಿಜ್ಜಳ ಮಾಯಣ್ಣನನ್ನೂ ಬಸವಣ್ಣನನ್ನೂ ಕರೆಸಿ ಕೇಳಲಾಗಿ ಮಾಯಣ್ಣ ಪಟ್ಟದ ಆನೆ ಗಜಶಾಲೆಯಲ್ಲಿದೆ ಎಂದು ಹೇಳಿದ. ಅದನ್ನು ಪರೀಕ್ಷಿಸಬೇಕೆಂದು ಬಿಜ್ಜಳ ಗಜಶಾಲೆಗೆ ಬಂದು ನೋಡಿದಾಗ ಪಟ್ಟದಾನೆ ಅಲ್ಲೇ ಇತ್ತು. ಅಂಥದೇ ಇನ್ನೊಂದು ಆನೆ ವಿಟಜಂಗಮನ ವೇಶ್ಯೆಯ ಮನೆಯ ಮುಂದೆಯೂ ಇದ್ದುದನ್ನು ಕಂಡು ಆಶ್ಚರ್ಯ ಚಕಿತನಾಗಿ ಬಿಜ್ಜಳ ಮಾಯಣ್ಣನನ್ನು ಗೌರವಿಸಿದ.

ಈತ ಶಂಭುಸೋಮನಾಥಲಿಂಗ ಎಂಬ ಅಂಕಿತವನ್ನಿಟ್ಟುಕೊಂಡು ವಚನಗಳನ್ನು ರಚಿಸಿದ್ದಾನೆ. ಸದ್ಯದಲ್ಲಿ ಈತನ ಮೂರು ವಚನಗಳು ದೊರೆತಿವೆ. ತನ್ನ ಒಂದು ವಚನದಲ್ಲಿ ಈತ ಬಲ್ಲಾಳನನ್ನು ಸ್ಮರಿಸಿದ್ದಾನೆ. ಇವನ ಒಂದು ವಚನ ಹೀಗಿದೆ:

ಮುನ್ನ ಪರಸತಿ ಪಾರ್ವತಿಯೆಂದು ನಡೆಸಿತ್ತು ನುಡಿಸಿತ್ತು ಗುರುವಚನ ಬಳಿಕ ಯೆನ್ನ ಶರಣಸತಿಯೆಂದು ನಡೆಸಿತ್ತು ನುಡಿಸಿತ್ತು ಗುರುವಚನ; ಇನ್ನು ಸತಿಯರೆಲ್ಲಾ ಗುರುಸತಿಯರೆಂದು ನಡೆಸಿತ್ತು ನುಡಿಸಿತ್ತು ಗುರುವಚನ; ನಡೆದುದು ತಪ್ಪದೆ ನುಡಿದುದು ಹುಸಿಯದೆ ನಡೆಸಿತು ನುಡಿಸಿತ್ತು ಗುರುವಚನ; ಅಚ್ಚಿಗವಿಲ್ಲದೆ ಮುಚ್ಚಿದ ಮನವನು ನಿಶ್ಚಿಂತವ ಮಾಡಿತ್ತು ಗುರುವಚನ; ಶಂಭುಸೋಮನಾಥಲಿಂಗ ಸಂಗಸುಸಂಗವ ಮಾಡಿತ್ತು ಗುರುವಚನ. (ಎನ್.ಬಿ.)

**ಜೋಯಿಸ್, ಎಂ.ಎನ್. :** 1905-2002. ಸುಪ್ರಸಿದ್ಧ ಸ್ವಾತಂತ್ರ್ಯ ಹೋರಾಟಗಾರರು. ಇವರ ಪೂರ್ಣನಾಮ ಎಂ.ನರಸಿಂಹಜೋಯಿಸ್. 1905 ಡಿಸೆಂಬರ್ 14ರಂದು ಮೈಸೂರಿನಲ್ಲಿ ಜನಿಸಿದರು. ತಂದೆ ಎಂ.ನಾರಾಯಣ ಜೋಯಿಸ್, ತಾಯಿ ನಂಜಮ್ಮ.

ಇವರು ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಯಾಗಿದ್ದಾಗಲೇ ಸ್ವಾತಂತ್ರ್ಯ ಹೋರಾಟಕ್ಕೆ ಸೆಳೆಯಲ್ಪಟ್ಟರು. ಆಗ ಇವರು ಓದುತ್ತಿದ್ದ ಮರಿಮಲ್ಲಪ್ಪ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದವರು ಎಂ.ವೆಂಕಟಕೃಷ್ಣಯ್ಯನವರು. ಜೋಯಿಸರ ತಂದೆಯೂ ಅದೇ ಶಾಲೆಯಲ್ಲಿ ಉಪಾಧ್ಯಾಯರಾಗಿದ್ದರು. ಸಾರ್ವಜನಿಕ ಜೀವನದಲ್ಲಿ ತಾತಯ್ಯನವರೆಂದೇ ಪ್ರಸಿದ್ಧರಾಗಿದ್ದ ಎಂ.ವೆಂಕಟಕೃಷ್ಣಯ್ಯನವರಿಂದ ಪ್ರಭಾವಿತರಾಗಿ ಸ್ವಾತಂತ್ರ್ಯ ಹೋರಾಟದಲ್ಲೂ ಸಾರ್ವಜನಿಕ ಜೀವನದಲ್ಲೂ ಪತ್ರಿಕಾರಂಗದಲ್ಲೂ ಮಹತ್ತರ ಸಾಧನೆಗಳನ್ನು ಮಾಡಿದ ಅನೇಕ ವಿದ್ಯಾರ್ಥಿಗಳ ಪೈಕಿ ಜೋಯಿಸರೂ ಒಬ್ಬರು.

1920ರಲ್ಲಿ ಲೋಕಮಾನ್ಯ ಟಿಳಕರು ತೀರಿಕೊಂಡಾಗ ಅವರಿಗೆ ಗೌರವ ಸಮರ್ಪಣೆಗಾಗಿ ಮೈಸೂರು ನಗರದಲ್ಲಿ ನಡೆದ ಬೃಹತ್ ಮೌನ ಮೆರವಣಿಗೆಯಲ್ಲಿ ಪಾಲುಗೊಂಡಿದ್ದ ಜೋಯಿಸ್ ಅವರು ಮುದವೀಡು ಕೃಷ್ಣರಾಯರ ವ್ಯಕ್ತಿತ್ವ ಮತ್ತು ಸಾಧನೆಗಳಿಂದ ಪ್ರಭಾವಿತರಾಗಿ ಸ್ವಾತಂತ್ರ್ಯ ಹೋರಾಟಕ್ಕೆ ದುಮುಕಿದರು. ಪ್ರಸಿದ್ಧ ಸ್ವಾತಂತ್ರ್ಯ ಹೋರಾಟಗಾರರಾದ ಮುದುವೀಡು ಕೃಷ್ಣರಾಯರು ಮೈಸೂರಿಗೆ ಬಂದು ಒಂದು ವಾರ 'ಸ್ವದೇಶಿ ಸಪ್ತಾಹದ' ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಸದ್ವಿದ್ಯಾ ಪಾಠಶಾಲೆಯ ಹೊರ ಅಂಗಣದಲ್ಲಿ ಅವರ ಭಾಷಣಗಳು ನಡೆಯುತ್ತಿದ್ದವು. ಸಪ್ತಾಹದ ಕೊನೆಯದಿನ ವಿದೇಶಿ ವಸ್ತುಗಳ ದಹನ ಕಾರ್ಯಕ್ರಮವಿತ್ತು. ಬಾಲಕ ಜೋಯಿಸರು ತಮ್ಮ ಉಡುಪನ್ನು ಬಿಚ್ಚಿ ಬೆಂಕಿಗೆ ಹಾಕಿದರು. ಬರೀ ಲಂಗೋಟಿಯಲ್ಲಿ ಮನೆಗೆ ಬಂದಾಗ ತಂದೆಯಿಂದ ಹೊಡೆತ ತಿಂದರು. ಆದರೂ ಇವರು ಖಾದಿಧಾರಿಯಾಗಿ ಮುಂದುವರಿದರು. ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಬಿ.ಎ. ಪದವಿ ಪಡೆದರು. ಸ್ವಾತಂತ್ರ್ಯ ಹೋರಾಟದಲ್ಲಿ ಮುಂದುವರಿದರು. 1924ರಲ್ಲಿ ಇವರ ವಿವಾಹವಾಯಿತು. ಪತ್ನಿ ಸುಬ್ಬಮ್ಮನವರೂ ಪತಿಯೊಡನೆ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದರು.

1928ರಲ್ಲಿ ಎಂ.ವೆಂಕಟಕೃಷ್ಣಯ್ಯನವರ ನೇತೃತ್ವದಲ್ಲಿ ನಡೆದ ಮೈಸೂರು ಸಂಸ್ಥಾನ ಕಾಂಗ್ರೆಸ್ ಸಮಾವೇಶದಲ್ಲಿ ಸಕ್ರಿಯವಾಗಿ ಭಾಗವಹಿಸಿದ ಜೋಯಿಸರು ಮೈಸೂರು ಜಿಲ್ಲಾ ಕಾಂಗ್ರೆಸ್‌ನ ಪ್ರಧಾನ ಕಾರ್ಯದರ್ಶಿಯಾಗಿ ಹತ್ತು ವರ್ಷಗಳ ಕಾಲ ಕೆಲಸ ಮಾಡಿದರು. ಈ ಮಧ್ಯೆ ಗಾಂಧೀಜಿ ಆರಂಭಿಸಿದ (1930) ಉಪ್ಪಿನ ಸತ್ಯಾಗ್ರಹದ ಅಂಗವಾಗಿ ದೇಶದಾದ್ಯಂತ ಕರನಿರಾಕರಣ ಚಳವಳಿ ಜರುಗಿತ್ತು. ಉತ್ತರ ಕರ್ನಾಟಕದ ಸಿರಸಿ, ಸಿದ್ದಾಪುರ ಮತ್ತು ಕಾರವಾರ ತಾಲ್ಲೂಕುಗಳಲ್ಲಿ ವ್ಯಾಪಕವಾಗಿ ಜನರು ಈ ಚಳವಳಿಯಲ್ಲಿ ಭಾಗವಹಿಸಿದರು. ಮೈಸೂರು ಸಂಸ್ಥಾನದಿಂದ ಅಲ್ಲಿಗೆ ಹೋಗಿ ಹೋರಾಡಿದವರಲ್ಲಿ ಮುಖ್ಯವಾಗಿ ಜೋಯಿಸ್, ಸುಬ್ಬಮ್ಮಜೋಯಿಸ್, ಸರ್ದಾರ್ ವೆಂಕಟರಾಮಯ್ಯ. ಅವರ ಪತ್ನಿ ಗೌರಮ್ಮ, ಸುಬ್ಬರಾವ್ ಉಪಾಧ್ಯಾಯ ಮತ್ತು ಎಲ್.ವಿ.ರಾಜಗೋಪಾಲ್ ಪ್ರಮುಖರು. ಈ ಸತ್ಯಾಗ್ರಹದಲ್ಲಿ ಪಾಲ್ಗೊಂಡಿದ್ದ ಜೋಯಿಸರಿಗೆ ಸರ್ಕಾರ ಎರಡು ವರ್ಷಗಳ ಕಠಿಣ ಸಜೆ ವಿಧಿಸಿತು. ಮೊದಲು ಇವರನ್ನು ಕಾರವಾರ ಜೈಲಿನಲ್ಲಿಡಲಾಗಿತ್ತು. ಇವರು ಅಲ್ಲಿ ಬಂದಿಯಾಗಿ ತಮ್ಮ ಜೊತೆಗಾರ ಕೈದಿಗಳೊಂದಿಗೆ ರಸ್ತೆಗಾಗಿ ಜಲ್ಲಿ ಒಡೆಯುವುದೇ ಅಲ್ಲದೆ ರಸ್ತೆ ಸಮ ಮಾಡಲು ಉರುಳುಗಲ್ಲನ್ನು ಎಳೆಯ ಬೇಕಾಗಿತ್ತು. ಅನಂತರ ಇವರು ವಿಲಾಸಪುರ ಜೈಲಿಗೆ ವರ್ಗವಾಗಿ ಅಲ್ಲೂ ಚಿತ್ರಹಿಂಸೆಯನ್ನು ಅನುಭವಿಸಿದರು. ಇವರ ಹೆಂಡತಿ ಸುಬ್ಬಮ್ಮ ಜೋಯಿಸರನ್ನು ಸೆರೆಮನೆಗೆ ಒಯ್ದಾಗ ಅವರು ಹಾಕಿಕೊಂಡಿದ್ದ ಮಾಂಗಲ್ಯವನ್ನು ತೆಗೆದುಕೊಡಬೇಕೆಂದು ಅಧಿಕಾರಿಗಳು ಒತ್ತಾಯ ಮಾಡಿದರು. ಅದಕ್ಕೆ ಸುಬ್ಬಮ್ಮ ಒಪ್ಪದೆ ಸೆರೆಮನೆಯಲ್ಲೇ ಉಪವಾಸ ಸತ್ಯಾಗ್ರಹ ಮಾಡಿದರು. ಅವರ ಜೊತೆಯಲ್ಲಿ ಸೆರೆಮನೆಯಲ್ಲಿದ್ದ ಕಮಲಾದೇವಿಚಟ್ಟೋಪಾಧ್ಯಾಯ ಮತ್ತಿತರ ಮಹಿಳೆಯರ ಪ್ರತಿಭಟನೆಯಿಂದ ಜೈಲಿನ ಅಧಿಕಾರಿಗಳು ತಮ್ಮ ಒತ್ತಾಯವನ್ನು ಕೈಬಿಟ್ಟರು. ಈ ಘಟನೆಯ ಅನಂತರ ಸುಬ್ಬಮ್ಮ ಜೋಯಿಸ ಅವರನ್ನು 'ಮಾಂಗಲ್ಯದ ಸುಬ್ಬಮ್ಮ' ಎಂದೇ ಕರೆಯಲಾಗುತ್ತಿತ್ತು.



ಸಿರಸಿ, ಸಿದ್ದಾಪುರದ ಸತ್ಯಾಗ್ರಹ ಮುಗಿದ ಮೇಲೆ ಮೈಸೂರಿಗೆ ಹಿಂದಿರುಗಿದ ಜೋಯಿಸ ದಂಪತಿಗಳಿಗೆ ಇವರ ಕುಟುಂಬದವರೇ ಬಹಿಷ್ಕಾರ ಹಾಕಿದರು. ಜೀವನ ನಿರ್ವಹಣೆಯೂ ಕಷ್ಟವಾಯಿತು. ಮೋಟಾರು ಗಾಡಿಗಳನ್ನು ತೊಳೆಯುವುದರಿಂದ ಹಿಡಿದು ಅನೇಕ ಬಗೆಯ ದುಡಿಮೆಯಲ್ಲಿ ತೊಡಗಿ, ಬಂದ ಅಲ್ಪ ಸಂಪಾದನೆಯಿಂದಲೇ ಜೀವನ ಸಾಗಿಸುತ್ತಿದ್ದರು. 1938 ಜನವರಿ 26ರಂದು ಸ್ವಾತಂತ್ರ್ಯ ಸಾಧನೆಗಾಗಿ ಪ್ರತಿಜ್ಞೆ ತೆಗೆದುಕೊಳ್ಳುವ ದಿನಾಚರಣೆಯ ಸಂಬಂಧವಾಗಿ ಸುಬ್ಬಮ್ಮ ಜೋಯಿಸ ಸುಬ್ಬರಾಯನಕೆರೆಯಲ್ಲಿ ಕಾಂಗ್ರೆಸ್‌ನ ತ್ರಿವರ್ಣಧ್ವಜ ಹಾರಿಸಿದಾಗ ಅವರನ್ನು ದಸ್ತಗಿರಿ ಮಾಡಲಾಯಿತು. ಅವರು ಮೂರು ತಿಂಗಳ ಮಗುವಿನೊಂದಿಗೆ ಸೆರೆಮನೆಗೆ ಸೇರಿದರು.

1938ರ ಏಪ್ರಿಲ್‌ನಲ್ಲಿ ನಡೆದ ಶಿವಪುರ ಕಾಂಗ್ರೆಸ್ ಅಧಿವೇಶನದಲ್ಲಿ ಸರ್ಕಾರದ ಪ್ರತಿಬಂಧಕಾಜ್ಞೆಯನ್ನು ಮುರಿದು ಧ್ವಜಾರೋಹಣ ಮಾಡಿದ ಜೋಯಿಸರು ಮೈಸೂರು ಸಂಸ್ಥಾನದ ಮುಂಚೂಣಿಯ ನಾಯಕರಾದರು. 1942ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಬಂಧಿತರಾದ ಇವರು ಸುಮಾರು ಎರಡು ವರ್ಷ ಕಾಲ ಸೆರೆಯಲ್ಲಿದ್ದರು. 1947 ಸೆಪ್ಟೆಂಬರ್‌ನಲ್ಲಿ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ನಡೆದ 'ಮೈಸೂರು ಚಲೋ' ಸತ್ಯಾಗ್ರಹ ಸಂಘಟನೆಯಲ್ಲಿ ಇವರು ಪ್ರಧಾನ ಪಾತ್ರ ವಹಿಸಿದರು. ಆಗ ಸ್ವಾತಂತ್ರ್ಯ ಹೋರಾಟದ ಮುಖವಾಣಿ ಎನಿಸಿದ 'ಪೌರವಾಣಿ' ಪತ್ರಿಕೆಯ ಸ್ಥಾಪಕರಲ್ಲಿ ಜೋಯಿಸರೂ ಒಬ್ಬರು.

ಸ್ವಾತಂತ್ರ್ಯ ಪೂರ್ವದಲ್ಲಿ ಕೆಲವು ವರ್ಷಗಳ ಕಾಲ ಮೈಸೂರು ಸಂಸ್ಥಾನದ ಪ್ರಜಾಪ್ರತಿನಿಧಿಸಭೆಯ ಸದಸ್ಯರಾಗಿಯೂ ಸ್ವಾತಂತ್ರ್ಯೋತ್ತರ ಕಾಲದಲ್ಲಿ ವಿಧಾನ ಪರಿಷತ್ತಿನ ಸದಸ್ಯರಾಗಿಯೂ (1952-58) ಇದ್ದ ಜೋಯಿಸರು ಒಳ್ಳೆಯ ಮಾತುಗಾರರು, ವಿಚಾರವಾದಿ, ಸಂಸದೀಯ ಪಟುವೆಂದು ಖ್ಯಾತಿ ಪಡೆದಿದ್ದರು. ಜೀವನ ನಿರ್ವಹಣೆಗಾಗಿ ನ್ಯೂ ಇಂಡಿಯಾ ಇನ್‌ಷೂರೆನ್ಸ್ ಕಂಪನಿಯ ಪ್ರತಿನಿಧಿಯಾಗಿ ಕೆಲಸ ಮಾಡುತ್ತಿದ್ದ ಇವರು ಜೀವವಿಮೆ ರಾಷ್ಟ್ರೀಕರಣವಾದ ಮೇಲೆ ಕೆಲವು ವರ್ಷಗಳ ಕಾಲ ಜೀವವಿಮಾ ಸಂಸ್ಥೆಯ ವಿಭಾಗೀಯ ಪ್ರಬಂಧಕರಾಗಿ ಸೇವೆ ಸಲ್ಲಿಸಿ ನಿವೃತ್ತರಾದರು.

ಜೋಯಿಸ್ ಮತ್ತು ಇವರ ಪತ್ನಿ ಸುಬ್ಬಮ್ಮಜೋಯಿಸ್ ಅವರಿಗೆ ಭಾರತ ಸರ್ಕಾರ ತಾಮ್ರಪತ್ರ ನೀಡಿ ಗೌರವಿಸಿದೆ. ಇವರಿಗೆ ರಾಷ್ಟ್ರವೀರ ಪ್ರಶಸ್ತಿಯೂ ಸಂದಿತ್ತು. ಜೀವನದ ಕೊನೆಯವರೆಗೂ ಜನಪರ ಹೋರಾಟಗಳಿಗೆ ಸ್ಪಂದಿಸುತ್ತಿದ್ದ ಜೋಯಿಸ್‌ರು ತಮ್ಮ 97ನೆಯ ವಯಸ್ಸಿನಲ್ಲಿ 2002 ಮಾರ್ಚ್ 29ರಂದು ಮೈಸೂರಿನಲ್ಲಿ ನಿಧನಹೊಂದಿದರು. (ಬಿ.ಆರ್.ಪಿ.)

**ಜೋಶಿ, ಜಿ.ಬಿ. :** 1904-93. ಜಡಭರತ, ಅನಾಮಧೇಯ ಎಂಬ ಕಾವ್ಯನಾಮಗಳಿಂದ ಪ್ರಸಿದ್ಧರಾದ ನಾಟಕಕಾರರು ಹಾಗೂ ಪ್ರಕಾಶಕರು. ಗೋವಿಂದ ಭೀಮಾಚಾರ್ಯ ಜೋಶಿ ಇವರ ಪೂರ್ಣ ಹೆಸರು. 1904 ಜುಲೈ 29ರಂದು ಗದಗ ತಾಲ್ಲೂಕಿನ ಹೊಂಬಳದಲ್ಲಿ ಜನಿಸಿದರು. ಇವರ ತಾಯಿ ಭಾರತೀಬಾಯಿ. ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಇಂಟರ್ ಮಿಡಿಯೇಟ್‌ವರೆಗೆ ಇವರ ವಿದ್ಯಾಭ್ಯಾಸ ನಡೆಯಿತು. ಸಾಹಿತಿಯಾಗಿ ಕವನ, ಕಾದಂಬರಿ, ನಾಟಕಗಳನ್ನು ರಚಿಸಿದ ಇವರು ಮನೋಹರ ಗ್ರಂಥಮಾಲೆ ಎಂಬ ಪ್ರಕಾಶನ ಸಂಸ್ಥೆಯನ್ನು ಆರಂಭಿಸಿ (1933) ಕನ್ನಡದಲ್ಲಿ ಕೆಲವು ಅತ್ಯುತ್ತಮ ಕೃತಿಗಳನ್ನು, ಲೇಖಕರನ್ನು ಬೆಳಕಿಗೆ ತಂದರು. ಕಲೋಪಾಸಕ ಮಂಡಲ ಎಂಬ ಹವ್ಯಾಸಿ ನಾಟಕ ತಂಡವನ್ನು ಕಟ್ಟಿ, ಹೊಸ ಹೊಸ ನಾಟಕಗಳನ್ನು ರಂಗಕ್ಕೆ ತಂದ ಇವರು ಪಂಡಿತ ಭೀಮಸೇನ ಜೋಶಿ, ಪ್ರಭುದೇವ ಸರದಾರರಂತಹವರನ್ನೂ ರಂಗಭೂಮಿಗೆ ತಂದರು.

ಇವರು ಧರ್ಮಸೆರೆ (1934) ಎಂಬ ಕಾದಂಬರಿಯನ್ನೂ ಜಡಭರತನ ಕನಸುಗಳು (1949), ಸ್ವಪ್ನ ಕಥನ ಎಂಬ ಕೃತಿಗಳನ್ನೂ ಜೀವಫಲ (1957) ಎಂಬ ಕವನ ಸಂಗ್ರಹವನ್ನೂ ಮೂಕಬಲಿ (1956), ಕದಡಿದ ನೀರು (1963), ಆ ಊರು ಈ ಊರು (1973), ಸತ್ತವರ ನೆರಳು (1974), ನಾನೇ ಬಿಜ್ಜಳ (1979), ಪರಿಮಳ ದವರು (1986), ಜರ್ಮನ್ ಬಂಗ್ಲೆ (1994) ಮೊದಲಾದ ಏಳು ನಾಟಕಗಳನ್ನೂ ರಚಿಸಿದ್ದಾರೆ. ಇವರ ಕೃತಿಗಳಲ್ಲಿ ಕುಸಿಯುತ್ತಿರುವ ಮೌಲ್ಯಗಳ ಬಗ್ಗೆ ಕಾಳಜಿ, ಗ್ರಾಮೀಣ ಬದುಕಿನ ಮೌಲ್ಯಗಳ ಜತನ, ಇತಿಹಾಸದಲ್ಲಿನ ಸತ್ಯಾನ್ವೇಷಣೆ ಮುಖ್ಯ ಆಶಯವಾಗಿದೆ.



ಮೊದಲಿಗೆ ಅಂಬಿಕಾತನಯದತ್ತರ ನೇತೃತ್ವದಲ್ಲಿ ಗೆಳೆಯರ ಗುಂಪಿನೊಂದಿಗೆ ತಮ್ಮನ್ನು ಗುರುತಿಸಿಕೊಂಡ ಜೋಶಿಯವರು, ಜಯಕರ್ನಾಟಕ ಪತ್ರಿಕೆಯ ಗುಂಪಿನಿಂದ ಹೊರಬಂದು ಪ್ರಹ್ಲಾದ ನರೇಗಲ್, ಗೋವಿಂದರಾವ್ ಚುಳುಕಿ, ಬೆಟಗೇರಿ ಕೃಷ್ಣಶರ್ಮರು ಆರಂಭಿಸಿದ ಮನೋಹರ ಗ್ರಂಥಮಾಲೆಯಲ್ಲಿ ಸೇರಿಕೊಂಡರು. ಮುಂದೆ ಒಂದೇ ವರ್ಷದಲ್ಲಿ ಈ ಗ್ರಂಥಮಾಲೆಯ ಸಂಪೂರ್ಣ ವ್ಯವಹಾರವನ್ನು ಕೈಗೆತ್ತಿಗೊಂಡು ತಮ್ಮ ಆಯುಷ್ಯ ಪೂರ್ತ ಇದನ್ನು ಕರ್ನಾಟಕದ ಪ್ರತಿಷ್ಠಿತ ಪ್ರಕಟಣ ಸಂಸ್ಥೆಯಾಗಿ ಬೆಳೆಸಿದರು. ಈ ಗ್ರಂಥಮಾಲೆಯಲ್ಲಿ ದ.ರಾ.ಬೇಂದ್ರೆ, ವಿ.ಕೃ.ಗೋಕಾಕ್,

ರಂ.ಶ್ರೀ.ಮುಗಳಿ, ಕೀರ್ತಿನಾಥ ಕುರ್ತಕೋಟಿ ಇವರು ಸಾಹಿತ್ಯ ಸಲಹೆಗಾರರಾಗಿದ್ದರು.

ಮೂರು ಸಂಪುಟಗಳಲ್ಲಿ ಪ್ರಕಟವಾದ ನಡೆದು ಬಂದದಾರಿ (1958-60), ಐದು ಸಂಪುಟಗಳಲ್ಲಿ ಪ್ರಕಟವಾದ ಪುಟಬಂಗಾರ (1986-88) ಮನೋಹರ ಗ್ರಂಥಮಾಲೆಯ ಮಹತ್ವದ ಪ್ರಕಟಣೆಗಳಾಗಿವೆ. ಈ ಪ್ರಕಟಣೆಗಳ ಹಿಂದೆ ಜೋಶಿಯವರ ಶ್ರಮ, ನೆರವು ಅಪಾರವಾಗಿತ್ತು. ಇವರು ವಿಮರ್ಶೆಗೆ ಮೀಸಲಾದ ಮನ್ವಂತರ ಎಂಬ ಷಾಣ್ಮಾಸಿಕ ಪತ್ರಿಕೆಯ ಸಂಪಾದಕರಾಗಿದ್ದರು (1962-75). ಇವರು ಸಂಪಾದಿಸಿದ, ಪ್ರಕಟಿಸಿದ ಕೃತಿಗಳಲ್ಲಿ ಹೊಸನೋಟ, ಹೊಸ ವಿಚಾರಗಳನ್ನು ಪುರಸ್ಕರಿಸುವ ಧೋರಣೆಯನ್ನು ಕಾಣಬಹುದಾಗಿದೆ.

ಇವರ ಸಾಹಿತ್ಯ ಸಾಧನೆಗಾಗಿ ಅನೇಕ ಗೌರವ ಪ್ರಶಸ್ತಿಗಳು ಲಭ್ಯವಾಗಿವೆ. ಮೂಕಬಲಿ, ಕದಡಿದ ನೀರು, ಸತ್ತವರ ನೆರಳು, ನಾನೇ ಬಿಜ್ಜಳ, ಪರಿಮಳದವರು - ಈ ನಾಟಕಗಳಿಗೆ ವರ್ಷದ ಅತ್ಯುತ್ತಮ ನಾಟಕ ಪ್ರಶಸ್ತಿ ಬಂದಿದೆ. 1963ರಲ್ಲಿ ಇವರಿಗೆ ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ದೊರಕಿತು. 1986ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ಹಾಗೂ ಪದ್ಮಶ್ರೀ ಪ್ರಶಸ್ತಿ, 1989ರಲ್ಲಿ ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಶ್ರೇಷ್ಠ ನಾಟಕಕಾರ ಪ್ರಶಸ್ತಿ ಇವರಿಗೆ ಲಭ್ಯವಾಗಿದೆ. ಭಾರತೀಯ ಭಾಷೆಗಳಲ್ಲಿನ ಉತ್ತಮ ಪ್ರಕಾಶನಕ್ಕಾಗಿ 1993ರಲ್ಲಿ ಇವರಿಗೆ ಅಖಿಲ ಭಾರತ ಪ್ರಕಾಶಕರ ಫೆಡರೇಶನ್ ಪ್ರಶಸ್ತಿಯನ್ನು ನೀಡಲಾಯಿತು.

ಇವರು 1993 ಡಿಸೆಂಬರ್ 26ರಂದು ಧಾರವಾಡದಲ್ಲಿ ನಿಧನರಾದರು. (ಎಸ್.ಎಂ.ಕೆ.)

**ಜೋಶಿ, ಶಂ. ಬಾ. :** 1896-1991. ಪ್ರಸಿದ್ಧ ಸಂಶೋಧಕರು, ವಿಮರ್ಶಕರು. ಪೂರ್ಣ ಹೆಸರು ಶಂಕರ ಬಾಳದೀಕ್ಷಿತ ಜೋಶಿ. 1896 ಜನವರಿ 4ರಂದು ಬೆಳಗಾಂವಿ ಜಿಲ್ಲೆಯ ಗುರ್ಲಹೊಸೂರಿನಲ್ಲಿ ಜನಿಸಿದ ಜೋಶಿಯವರು ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡರು. ಇದ್ದೂರಲ್ಲೇ ಮುಲ್ಕಿಯವರೆಗೂ ಓದಿದರು. ಅನಂತರ ಪ್ರಾಥಮಿಕ ಶಿಕ್ಷಕರ ತರಬೇತಿ ಶಾಲೆಯಲ್ಲಿ 3 ವರ್ಷ ಕಲಿತು, ಚಿಕ್ಕೋಡಿಯಲ್ಲಿ ಶಿಕ್ಷಕರಾದರು. 1924ರಲ್ಲಿ ಅಸಹಕಾರ ಚಳವಳಿಗೆ ಸಿಕ್ಕಿ, ನೌಕರಿಗೆ ಶರಣುಹೊಡೆದರು. ಪತ್ರಿಕೋದ್ಯಮಿಯಾಗಿ ಧಾರವಾಡದ ಕರ್ಮವೀರ, ಜಯಕರ್ನಾಟಕಗಳ ಸಂಪಾದಕ ಮಂಡಲಿಯಲ್ಲಿ ಸೇರಿಕೊಂಡರು. ಇದೇ ಸಮಯಕ್ಕೆ ಪ್ರಾರಂಭವಾದ ರಾಷ್ಟ್ರೀಯ ವಿದ್ಯಾಲಯದಲ್ಲಿ ಶಿಕ್ಷಕರಾದರು. ಕರ್ನಾಟಕ ಹೈಸ್ಕೂಲ್, ವಿಕ್ಟೋರಿಯ ಹೈಸ್ಕೂಲುಗಳಲ್ಲಿ ದೀರ್ಘಸೇವೆಯ ಅನಂತರ ರಾಜೀನಾಮೆ ಸಲ್ಲಿಸಿ, ಸಂಶೋಧನೆಯಲ್ಲಿ ನಿರತರಾದರು. ಗುರ್ಲಹೊಸೂರಿನ ವೈಚಾರಿಕ-ಆಧ್ಯಾತ್ಮಿಕ ವಾತಾವರಣ ಜೋಶಿಯವರ ಬುದ್ಧಿಯನ್ನು ವೈಚಾರಿಕತೆಯತ್ತ ತಿರುಗಿಸಿತು. ಮಾತೃಭಾಷೆ ಮರಾಠಿಯಾಗಿದ್ದರಿಂದ ಪುಣೆಯ ವಸಂತ ವ್ಯಾಖ್ಯಾನ ಮಾಲೆ, ಟಿಳಕರ ಕೇಸರಿ ಪತ್ರಿಕೆಗಳಿಂದ ಪ್ರಭಾವಿತರಾದರು. ಕನ್ನಡದ ನೆಲೆ, ಹುಟ್ಟುಗಳ ಬಗ್ಗೆ ಸ್ವತಂತ್ರವಾಗಿ ಚಿಂತಿಸಿದರು. ಇರಾವತಿ ಕರ್ವೆ, ಸುಕಥಣಕರರಂಥ ಮೇಧಾವಿಗಳ ಪ್ರಭಾವದಿಂದ ಪ್ರಾಚೀನ ಗ್ರಂಥಗಳನ್ನು ವೈಜ್ಞಾನಿಕ ದೃಷ್ಟಿಯಿಂದ ಅಭ್ಯಸಿಸುವ ಕ್ರಮವನ್ನು ಬೆಳೆಸಿಕೊಂಡರು.



ಜೋಶಿಯವರು ಅರವಿಂದರ ರಾಜಕೀಯ ಆಧ್ಯಾತ್ಮಿಕತೆಯಿಂದ ಪ್ರಭಾವಿತರಾಗಿ ಅರವಿಂದ ಚರಿತ್ರೆಯನ್ನು ರಚಿಸಿದರು (1920). ರಾನಡೆಯವರ ಉಪನಿಷದ್ರಹಸ್ಯ ಗ್ರಂಥದ ಅನುವಾದಕರಲ್ಲಿ ಇವರೊಬ್ಬರು. ಕಣ್ಮರೆಯಾದ ಕನ್ನಡ (1933) ಎಂಬ ಕೃತಿಯಲ್ಲಿ ದೇಶಿಕದಂಥ ಶಬ್ದಗಳ ಮೂಲಕ್ಕೆ ಇರುವ ಸಂಸ್ಕೃತಿಯ ಅಧೋಗತಿಯ ಚಿತ್ರಣವಿದೆ. ಮಹಾರಾಷ್ಟ್ರದಲ್ಲಿ ತೆರಳು ಹುಟ್ಟಿಸಿದ ಮಹಾರಾಷ್ಟ್ರದ ಮೂಲ (1934) ಗ್ರಂಥದಲ್ಲಿ ಮಹಾರಾಷ್ಟ್ರದ ಉಗಮ ವರ್ಹಾಡದಲ್ಲಿ ಎಂದು ಹೇಳಿದೆ. ಕಂನುಡಿಯ ಹುಟ್ಟು (1937) ಭಾಷಾಭ್ಯಾಸಿಗಳಿಗೆ ಉಪಯುಕ್ತ ಕೈಪಿಡಿಯಾಗಿದೆ. ಕಂನುಡಿಯ ಜೀವಾಳ (1944) ಕರ್ನಾಟಕದ ಕುಲಗಳ ಏರುಪೇರುಗಳ ಮೇಲಿಂದ ಕಟ್ಟಿದ ಸಾಂಸ್ಕೃತಿಕ ಪುನರ್ರಚನೆಯಾಗಿದೆ. ವ್ಯಾಸ, ಪಂಪ ಹಾಗೂ ಕುಮಾರವ್ಯಾಸ-ಈ ಮೂವರು ಮಹಾಕವಿಗಳು ಚಿತ್ರಿಸಿರುವ ಕರ್ಣನ ಪಾತ್ರವನ್ನು ಕುರಿತ ತೌಲನಿಕ ವಿಮರ್ಶೆಯನ್ನು ಕರ್ಣನ ಮೂರು ಚಿತ್ರಗಳು (1947) ಗ್ರಂಥದಲ್ಲಿ ಮಾಡಿದ್ದಾರೆ. ಎಡೆಗಳು ಹೇಳುವ ಕಂನಾಡ ಕತೆಯಲ್ಲಿ (1947) ಕರ್ನಾಟಕದ ಊರುಗಳ ಹೆಸರುಗಳಿಂದ ಸೂಚಿತ ಸಂಸ್ಕೃತಿಯ ವಿಶ್ಲೇಷಣೆ ಇದೆ. ಕನ್ನಡದ ಒಡಪುಗಳು (1950) ಸಾಂಸ್ಕೃತಿಕ ಅಭ್ಯಾಸದ ಗ್ರಂಥ. ಈ ಎಲ್ಲ ಗ್ರಂಥಗಳಲ್ಲೂ ಪ್ರಧಾನವಾಗಿ ಎದ್ದುಕಾಣುವುದು ಜೋಶಿಯವರ ಸಾಂಸ್ಕೃತಿಕ ಹವ್ಯಾಸ. ಇಲ್ಲಿಂದ ಮುಂದೆ ಇವರು ಮೆಲ್ಲನೆ ತಮ್ಮ ಮುಖ್ಯ ಸಿದ್ಧಾಂತದತ್ತ ಹೊರಳುತ್ತಾರೆ. ಹಾಲುಮತದರ್ಶನ (1960) ಗ್ರಂಥದಿಂದ ಪ್ರಾರಂಭವಾದ ಇವರ ಜಾನಪದ ವಿಶ್ವಾಸ-ದೇವತಾ-ಶ್ರದ್ಧೆಗಳ ಅಭ್ಯಾಸ, ಕರ್ನಾಟ ಸಂಸ್ಕೃತಿಯ ಪೂರ್ವ ಪೀಠಿಕೆಯಲ್ಲಿ (1970) ಪರಿಣತಿಗೊಂಡಿರುವುದನ್ನು ಗುರುತಿಸಬಹುದು. ಕರ್ನಾಟಕದ ಪೂರ್ವೇತಿಹಾಸವನ್ನು ಇಂಥ ಜಾನಪದ ವಿಶ್ವಾಸಗಳ ಸಹಾಯದಿಂದ ಪುನರ್ರಚಿಸುವುದು ಈ ಗ್ರಂಥದ ಆಶಯವಾಗಿದೆ.

ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದಿಂದ ಪ್ರಕಟವಾದ (1971) ಇವರ ಋಗ್ವೇದಸಾರ: ನಾಗಪ್ರತಿಮಾ ವಿಚಾರ ಎಂಬುದು ಸಹಸ್ರಪುಟಗಳಿಗೂ ಮೀರಿರುವ ಬೃಹದ್ಗ್ರಂಥ. ಮಹಾಭಾರತದಲ್ಲಿ ಆದಂತೆ ಋಗ್ವೇದದಲ್ಲೂ ಒಂದು ಅವಸ್ಥೆಯಲ್ಲಿ ಸಂಪೂರ್ಣ ಮೌಲ್ಯಪಲ್ಲಟವಾಯಿತೆಂದೂ ಅದರ ಮೂಲದ ಆಶಾವಾದ-ಪ್ರಕಾಶ ಸಂಪ್ರದಾಯದ ಸುತ್ತಲೂ-ಜೀವನ-ಹೇಯ ಸಂನ್ಯಾಸ ಮಾರ್ಗದ ಪದರುಗಳು ಕೂಡಿದವೆಂದೂ ಆದ್ದರಿಂದ ಅದರ ಮೂಲ ಆಶಾವಾದದತ್ತ ಹೊರಳದೆ ಭಾರತೀಯ ಸಂಸ್ಕೃತಿಗೆ ಮುಕ್ತಿಯಿಲ್ಲವೆಂದೂ ಈ ಗ್ರಂಥದಲ್ಲಿ ವಿವರಿಸಿದ್ದಾರೆ. ಭಾಷೆ ಮತ್ತು ಸಂಸ್ಕೃತಿ (1975) ಎಂಬ ಕೃತಿಯಲ್ಲಿ ಸಂಸ್ಕೃತಿಯ ಉನ್ನತಿ ಅವನತಿಗೂ ಭಾಷೆಯ ಉನ್ನತಿ ಅವನತಿಗೂ ಇರುವ ಪರಸ್ಪರ ನಿಕಟಸಂಬಂಧದ ವಿವರಣೆಯಿದೆ. ಸತ್-ತ್ಯ ಮತ್ತು ಸತ್ಯ ಗ್ರಂಥದಲ್ಲಿ ನಾಗಪ್ರತಿಮಾ ವಿಚಾರದ ವಿಷಯಗಳ ಹೆಚ್ಚಿನ ವಿವರಣೆ ದೊರೆಯುತ್ತದೆ.

ಮರಾಠಿ ಸಂಸ್ಕೃತಿ ಕೆಲವು ಸಮಸ್ಯೆಗಳು (1980) ಇವರದೇ ಮರಾಠಿ ಪುಸ್ತಕದ ಅನುವಾದ. ಇವರು ರಚಿಸಿದ ಇತರ ಗ್ರಂಥಗಳಿವು: ಶ್ರೀಮದ್ ಭಗವದ್ಗೀತೆಯಲ್ಲಿ ಹುದುಗಿರುವ ರಾಜಯೋಗದ ಸ್ವರೂಪ (1997), ಸಾಂಸ್ಕೃತಿಕ ಮೂಲದಲ್ಲಿನ ತಾತ್ವಿಕ ಚಿಂತನೆಗಳು (1978), ಜೀವನದ ಅರ್ಥಗ್ರಹಣ ಪದ್ಧತಿ (1986), ಕಂನಾಡವರ ಸಂಸ್ಕೃತಿಯ ಗತಿಸ್ಥಿತಿ (1981), ಪ್ರವಾಹ ಪತಿತರ ಕರ್ಮ ಹಿಂದೂ ಎಂಬ ಧರ್ಮ (1976), ವೈವಸ್ವತಮನು ಪ್ರಣೀತ ಮಾನವ ಧರ್ಮದ ಆಕೃತಿ (1979), ಬುದ್ಧನ ಜಾತಕ (1980), ಬಿತ್ತಿದ್ದನ್ನು ಬೆಳಕೊ (1984) ಶಂಬಾ ಕೃತಿ ಸಂಪುಟ (6 ಸಂಪುಟಗಳು) (1999), ಶಂಬಾ ಅವರ ಆಯ್ದ ಲೇಖನಗಳು (1997).

ಜೋಶಿಯವರ ಕರ್ನಾಟ ಸಂಸ್ಕೃತಿಯ ಪೂರ್ವಪೀಠಿಕೆ ಗ್ರಂಥಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಬಹುಮಾನ ದೊರೆತಿದೆ (1970). ಮೈಸೂರು ವಿಶ್ವವಿದ್ಯಾನಿಲಯ ಇವರಿಗೆ ಗೌರವ ಡಿ.ಲಿಟ್. ಪದವಿ ನೀಡಿ ಗೌರವಿಸಿದೆ (1973). ಮಡಿಕೇರಿಯಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ (1981) ಅಧ್ಯಕ್ಷರನ್ನಾಗಿ ಆರಿಸಿ ಇವರಿಗೆ ಗೌರವ ಸೂಚಿಸಲಾಗಿದೆ. ಇವರು 1991 ಸೆಪ್ಟಂಬರ್ 28ರಂದು ನಿಧನರಾದರು. (ಎಸ್.ಎಂ.ಪಿ.)

**ಜೋಳ :** ಕರ್ನಾಟಕದ ಪ್ರಮುಖ ಆಹಾರ ಬೆಳೆಗಳಲ್ಲಿ ಒಂದು. ಸುಮಾರು 18.5ಲಕ್ಷ ಹೆಕ್ಟೇರು ಪ್ರದೇಶದಲ್ಲಿ ಜೋಳವನ್ನು ಬೆಳೆಸಲಾಗುತ್ತಿದೆ (1998-99). ಕರ್ನಾಟಕದಲ್ಲಿ ಬಿಜಾಪುರ, ಧಾರವಾಡ, ಗುಲ್ಬರ್ಗ, ರಾಯಚೂರು, ಬೆಳಗಾಂವಿ, ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಗಳು ಇದರ ಕೃಷಿಗೆ ಪ್ರಸಿದ್ಧವಾಗಿವೆ. ಬಾಗಲಕೋಟೆ, ಬಿಜಾಪುರ ಜಿಲ್ಲೆಗಳಲ್ಲಿ ಒಟ್ಟು 4.59 ಲಕ್ಷ ಹೆಕ್ಟೇರುಗಳಷ್ಟು ಕ್ಷೇತ್ರದಲ್ಲಿ ಜೋಳದ ಬೇಸಾಯ ಉಂಟು. ಜೋಳವನ್ನು ವರ್ಷದಲ್ಲಿ ಎರಡು ಸಲ ಅಂದರೆ ಮುಂಗಾರು ಹಾಗೂ ಹಿಂಗಾರು ಕಾಲಗಳಲ್ಲಿ ಬೆಳೆಸಲಾಗುತ್ತದೆ. ಮುಂಗಾರು ಜೋಳವನ್ನು ಜೂನ್-ಜುಲೈ ತಿಂಗಳುಗಳಲ್ಲಿ ಬಿತ್ತಿ, ನವೆಂಬರ್-ಡಿಸೆಂಬರ್ ವೇಳೆಗೆ ಕೊಯ್ಲು ಮಾಡಲಾಗುತ್ತದೆ. ಈ ಜೋಳದ ಜೊತೆಯಲ್ಲಿ ತೊಗರಿ, ಹೆಸರು, ಉದ್ದು, ಅಲಸಂದೆ ಮುಂತಾದ ದ್ವಿದಳ ಧಾನ್ಯಗಳನ್ನು ಬೆಳೆಸುವ ಕ್ರಮವೂ ರೂಢಿಯಲ್ಲುಂಟು. ಕಪ್ಪು ಎರೆಮಣ್ಣು ಇರುವ ಪ್ರದೇಶದಲ್ಲಿ ಹಿಂಗಾರು ಜೋಳವನ್ನು ಬೆಳೆಸಲಾಗುತ್ತದೆ. ಇದರ ಬಿತ್ತನೆಯ ಕಾಲ ಅಕ್ಟೋಬರ್-ನವೆಂಬರ್. ಕೊಯ್ಲಿನ ಕಾಲ ಮಾರ್ಚ್ ತಿಂಗಳು. ಕೆಲವೆಡೆಗಳಲ್ಲಿ ಹಿಂಗಾರು ಜೋಳದೊಂದಿಗೆ ಕಡಲೆ, ಕುಸುಮೆ, ಅಗಸೆಗಳನ್ನು ಮಿಶ್ರಬೆಳೆಯಾಗಿ ಬೆಳೆಸುವುದಿದೆ. ರಾಜ್ಯದಲ್ಲಿ 1998-99ರ ಸಾಲಿನಲ್ಲಿ ಜೋಳದ ಉತ್ಪನ್ನ 14.43ಲಕ್ಷ ಮೆಟ್ರಿಕ್ ಟನ್ನುಗಳು. ಹೀಗೆ ರಾಜ್ಯದ ಪ್ರಮುಖ ಬೆಳೆಯಾದ ಜೋಳದ ತಳಿಯ ಅಭಿವೃದ್ಧಿಯ ಕಡೆಗೂ ಹೆಚ್ಚು ಗಮನ ಕೊಡಲಾಗಿದೆ. 1950ರಲ್ಲಿ ರಾಜ್ಯದ ಕೃಷಿ ಇಲಾಖೆ ಎಣೆಗಾರ ತಳಿಯಿಂದ ಪಡೆದ ಜಿ.ಎಸ್.560-1-1 ಎಂಬ ತಳಿಯನ್ನು ಬಿಡುಗಡೆ ಮಾಡಿತು. ಬೆಂಗಳೂರಿನ ಕೃಷಿ ವಿಶ್ವವಿದ್ಯಾಲಯದಲ್ಲಿ 1968ರಲ್ಲಿ ಗಿಡ್ಡ ಮಾಲ್ದಂಡಿಯಿಂದ ಶುದ್ಧ ಆಯ್ಕೆ ಮಾಡಿ ಪಡೆದ ಜಿ.ಎಮ್.2-3-1 ಎಂಬ ತಳಿಯನ್ನು ಬೈಲಹೊಂಗಲದಲ್ಲಿ ಬಿಡುಗಡೆ ಮಾಡಲಾಗಿದೆ. ಇದು ಹೆಕ್ಟೇರಿಗೆ 15 ಕ್ವಿಂಟಾಲ್ ಧಾನ್ಯ ಮತ್ತು 20-25 ಟನ್ ಒಣಮೇವನ್ನು ಕೊಡುತ್ತದೆ. ಇದಲ್ಲದೆ ಮಹಾರಾಷ್ಟ್ರದ ಸ್ಥಳೀಯ ಮಾಲ್ದಂಡಿ ತಳಿಯಿಂದ ಆಯ್ಕೆ ಮಾಡಿ ಪಡೆದ 335-1 ಎಂಬ ತಳಿ ಹಿಂಗಾರಿ ಪ್ರದೇಶಗಳಲ್ಲಿ ಹೆಚ್ಚಾಗಿ ಬೆಳೆಯಲ್ಪಡುತ್ತಿದೆ. ಇದು ಅನಾವೃಷ್ಟಿಯಲ್ಲೂ ಬೆಳೆಯಬಲ್ಲ ತಳಿ. ಕರ್ನಾಟಕದಲ್ಲಿ ತಳಿಸಂಕರಣದಿಂದಲೂ ಜೋಳದ ಬೆಳೆಯ ಸುಧಾರಣೆಯಲ್ಲಿ ಬಹಳ ಪ್ರಗತಿಯನ್ನು ಸಾಧಿಸಲಾಗಿದೆ. ತುಂಗಭದ್ರಾ ಜಲಾಶಯದ ಕಾಲುವೆ ನೀರಾವರಿ ಪ್ರದೇಶಗಳಲ್ಲಿ ಬೆಳೆಸಲಾಗುವ ಮುಂಗಾರು ತಳಿ ಪಿ7-1195 (ನೀರುಜೋಳ) ತಳಿಯನ್ನು ಡಿ-340 ಮತ್ತು ಪಿ2-9ರ ನಡುವೆ ಸಂಕರಣದಿಂದ ಪಡೆಯಲಾಗಿದೆ. ಪಿ10-2 ಎಂಬ ಮೇವಿಗೆ ಹೆಸರುವಾಸಿಯಾಗಿರುವ ತಳಿಯೊಡನೆ ಎಂ35-1 ಎಂಬ ತಳಿಯನ್ನು ಸಂಕರ ಮಾಡಿ ಹಿಂಗಾರಿ ಜೋಳ 5-4-1 (ಮೂಗುತಿ ಜೋಳ) ಎಂಬುದನ್ನು ಅಭಿವೃದ್ಧಿಗೊಳಿಸಲಾಗಿದೆ. ಇದು ಹೆಚ್ಚು ಇಳುವರಿ ಕೊಡುವುದಲ್ಲದೆ ರುಚಿಯಾದ ಒಣಮೇವನ್ನು ಒದಗಿಸುತ್ತದೆ. ಅಣ್ಣಿಗೇರಿ-1 ಎಂಬ ತಳಿಯನ್ನು ಅಭಿವೃದ್ಧಿಗೊಳಿಸಲಾಗಿದೆ.

ಭಾರತೀಯ ಕೃಷಿ ಸಂಶೋಧನ ಸಂಸ್ಥೆ, ರಾಕ್‌ಫೆಲರ್ ಸಂಸ್ಥೆಯ ಸಹಕಾರದಿಂದ ಸಂಕರಣ (ಹೈಬ್ರಿಡ್) ಯೋಜನೆಯನ್ನು ಪ್ರಾರಂಭಿಸಿತು. ಈ ಕಾರ್ಯದ ಅಂಗವಾಗಿ 1964ರಲ್ಲಿ ಸಿಎಸ್‌ಎಚ್-1 ಮತ್ತು 1965ರಲ್ಲಿ ಸಿಎಸ್‌ಎಚ್-2 ಎಂಬುವನ್ನು ಬಿಡುಗಡೆ ಮಾಡಲಾಯಿತು. ಇವು ಮುಂಗಾರು ಕಾಲದಲ್ಲಿ ಹಾಗೂ ನೀರಾವರಿ ಸೌಕರ್ಯವಿರುವೆಡೆ ಬೇಸಗೆಯಲ್ಲಿ ಬೆಳೆಯಲು ಯೋಗ್ಯವಾಗಿವೆ. 1968ರಲ್ಲಿ ಸ್ವರ್ಣ ಎಂಬ ತಳಿಯನ್ನು ಬಿಡುಗಡೆ ಮಾಡಲಾಯಿತು. ತರುವಾಯ ಸಿಎಸ್‌ಎಚ್-5 ಎಂಬುದನ್ನು ವೃದ್ಧಿಸಲಾಗಿದೆ. ಇದನ್ನು ಬೇಸಗೆಯಲ್ಲಿ ನೀರಾವರಿ ಅನುಕೂಲವಿರುವಾಗ ಬೆಳೆಯಬಹುದು. ಇದು ಹಿಂದೆ ಬಿಡುಗಡೆ ಮಾಡಿದ ಹೈಬ್ರಿಡ್ ತಳಿಗಳಿಗಿಂತ ಉತ್ತಮವಾಗಿದೆ. ಜೋಳದ ತಳಿಸಂಶೋಧನೆ ಹಾಗೂ ಅಭಿವೃದ್ಧಿ ಕಾರ್ಯ ಧಾರವಾಡ ಕೃಷಿ ವಿಶ್ವವಿದ್ಯಾಲಯದಲ್ಲಿ ತೀವ್ರತರವಾಗಿ ನಡೆಯುತ್ತಿದೆ. ಸಂಕರ ತಳಿಗಳಲ್ಲಿ ಮೇವಿಗಿಂತ ಕಾಳಿನ ಇಳುವರಿ ಹೆಚ್ಚು. ಸಂಕರ ತಳಿ ಜೋಳದಿಂದ ನೀರಾವರಿಯಲ್ಲಿ ಹೆಕ್ಟೇರಿಗೆ 50-65 ಕ್ವಿಂಟಾಲ್ ಕಾಳು ಮತ್ತು 10-12 ಟನ್ ಮೇವು ಸಿಕ್ಕುತ್ತದೆ. ಮಳೆಯ ಆಶ್ರಯದಲ್ಲಿ 20-30 ಕ್ವಿಂಟಾಲ್ ಕಾಳು ಮತ್ತು 5-7 ಟನ್ ಮೇವು ಸಿಕ್ಕುತ್ತದೆ. (ಕೆ.ಆರ್.ಜ.)

# ಟ

**ಟಿಪ್ಪುಸುಲ್ತಾನ್ :** 1750-1799. ಮೈಸೂರು ಸಂಸ್ಥಾನದ ಪ್ರಖ್ಯಾತ ಸುಲ್ತಾನ (1782-1799). ಹೈದರ್ ಅಲಿಯ ಮಗ. 1750 ನವೆಂಬರ್ 10ರಂದು ಬೆಂಗಳೂರು ಜಿಲ್ಲೆಯ ದೇವನಹಳ್ಳಿಯಲ್ಲಿ ಜನಿಸಿದ. ಟಿಪ್ಪುಮಸ್ತಾನ್ ಔಲಿಯಾ ಎಂಬ ಸಂತನ ಹೆಸರನ್ನು ಇವನಿಗೆ ಇಡಲಾಯಿತು. ಟಿಪ್ಪು ಬಾಲ್ಯದಿಂದಲೇ ಉತ್ತಮ ವಿದ್ಯಾಭ್ಯಾಸವನ್ನು ಪಡೆದು ತನ್ನ ಕಾಲದ ವಿವಿಧ ರೀತಿಯ ಕಲೆಗಳಲ್ಲಿ, ಪಾಂಡಿತ್ಯದಲ್ಲಿ ಪರಿಶ್ರಮವನ್ನು ಸಾಧಿಸಿದ್ದ. ಬಹು ಚಿಕ್ಕವನಾಗಿದ್ದಾಗಲೇ ತಂದೆಯ ಜೊತೆ ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದ. 1763ರಲ್ಲಿ ಹೈದರ್ ಮಲಬಾರನ್ನು ಮುತ್ತಿದಾಗ ಟಿಪ್ಪು ಅವನೊಡನೆ ಇದ್ದ. ಒಂದನೆಯ ಮೈಸೂರು ಯುದ್ಧದ ಕಾಲದಲ್ಲಿ ಹೈದರಾಬಾದಿನ ನಿಜಾಮನೊಡನೆ ಮಾತುಕತೆಗಳನ್ನು ನಡೆಸಿದ. ನಿಜಾಮ ಇವನಿಗೆ ಫತೆ ಅಲಿ ಖಾನ್ ಎಂಬ ಬಿರುದನ್ನು ನೀಡಿದ. ಈ ಯುದ್ಧ ನಡೆದ ಕಾಲದಲ್ಲಿ ಟಿಪ್ಪು ಮದರಾಸಿನವರೆಗೂ ಹೋಗಿ ಮದರಾಸಿನ ಕೌನ್ಸಿಲರ್‌ಗಳ ಮನೆಗಳನ್ನು ಲೂಟಿ ಮಾಡಿದ. 1769-1772ರಲ್ಲಿ ನಡೆದ ಮೈಸೂರು-ಮರಾಠ ಯುದ್ಧದಲ್ಲಿ ಸಕ್ರಿಯವಾಗಿ ಭಾಗವಹಿಸಿದ. ಅದೇ ರೀತಿ 1780ರಲ್ಲಿ ಆರಂಭವಾದ ಎರಡನೆಯ ಮೈಸೂರು ಯುದ್ಧದಲ್ಲೂ ಪ್ರಧಾನ ಪಾತ್ರ ವಹಿಸಿದ. ಸೆಪ್ಟೆಂಬರ್ 1780ರಲ್ಲಿ ಪೊಳ್ಳಿಲೂರ್ ರಣರಂಗದಲ್ಲಿ ಕರ್ನಲ್ ಬೆಯಿಲಿಯನ್ನು ಸೋಲಿಸಿದಾಗ ಮತ್ತು ಫೆಬ್ರವರಿ 1782ರಲ್ಲಿ ಅನ್ನಗುಡಿ ಕದನದಲ್ಲಿ ಕರ್ನಲ್ ಬ್ರೈತ್‌ವೈಟ್‌ನನ್ನು ಸೋಲಿಸಿ ಹಿಮ್ಮೆಟ್ಟಿಸಿದಾಗ ಟಿಪ್ಪುವಿನ ಸಾಮರ್ಥ್ಯ ಪ್ರಕಾಶಕ್ಕೆ ಬಂತು.

ಎರಡನೆಯ ಮೈಸೂರು ಯುದ್ಧ ಸಾಗುತ್ತಿದ್ದ ಕಾಲದಲ್ಲೆ ಡಿಸೆಂಬರ್ 1782ರಲ್ಲಿ ಹೈದರ್ ಮರಣಹೊಂದಿದನಾಗಿ ಟಿಪ್ಪು ಅಧಿಕಾರಕ್ಕೆ ಬಂದ. ಉತ್ತರದಲ್ಲಿ ಕೃಷ್ಣಾನದಿಯಿಂದ ದಕ್ಷಿಣದ ದಿಂಡಿಗಲ್ಲಿನವರೆಗೂ ಅವನು ಪಶ್ಚಿಮದಲ್ಲಿ ಮಲಬಾರಿನಿಂದ ಪೂರ್ವಘಟ್ಟ ಪ್ರದೇಶಗಳವರೆಗೂ ವಿಸ್ತಾರವಾಗಿದ್ದು ಒಂದು ಲಕ್ಷ ಚದರ ಮೈಲಿಗಳಿಗೂ ಹೆಚ್ಚು ವಿಸ್ತೀರ್ಣವನ್ನು ಪಡೆದಿದ್ದ ಸಾಮ್ರಾಜ್ಯಕ್ಕೆ ಟಿಪ್ಪು ಉತ್ತರಾಧಿಕಾರಿಯಾದ. ಇಂಗ್ಲಿಷರೊಡನೆ ಯುದ್ಧವನ್ನು ಮುಕ್ತಾಯಗೊಳಿಸುವುದು ಇವನ ಮೊದಲ ಕೆಲಸವಾಗಿತ್ತು. ಯುದ್ಧವು ಪೂರ್ವ ಮತ್ತು ಪಶ್ಚಿಮ ಕರಾವಳಿಯ ಪ್ರದೇಶಗಳಲ್ಲಿ ನಡೆಯುತ್ತಿತ್ತು. ಯುದ್ಧವನ್ನು ಮತ್ತಷ್ಟು ಬಿರುಸಾಗಿ ನಡೆಸಿದ. ಇಂಗ್ಲಿಷರು ಅದರಿಂದ ತತ್ತರಿಸಿ ಶಾಂತಿಸಂಧಾನವನ್ನು ಏರ್ಪಡಿಸಿಕೊಳ್ಳುವುದಕ್ಕೆ ಕಾತರರಾದರು. ಪಶ್ಚಿಮದ ಕರಾವಳಿ ಪ್ರದೇಶದಲ್ಲಿ ತನ್ನ ಎಲ್ಲಾ ನೆಲೆಗಳನ್ನು ಮರಳಿ ಗಳಿಸಿಕೊಂಡು, ದಕ್ಷಿಣ ಭಾಗದಿಂದ ಬ್ರಿಟಿಷರು ಮೈಸೂರಿನತ್ತ ಸಾಗಿಬರುವ ಪ್ರಯತ್ನಗಳನ್ನು ವಿಫಲಗೊಳಿಸಿದ. ನಾಲ್ಕು ವರ್ಷಗಳ ಸತತವಾದ ಹೋರಾಟದ ಅನಂತರವೂ ಮೈಸೂರಿನವರನ್ನು ಆರ್ಕಾಟಿನಿಂದ ಹಿಮ್ಮೆಟ್ಟಿಸಲು ಇಂಗ್ಲಿಷರು ಅಸಮರ್ಥರಾದರು. ಆದ್ದರಿಂದ ಲಾರ್ಡ್ ಮಕಾರ್ಟನಿ ಟಿಪ್ಪುವಿನೊಡನೆ ಶಾಂತಿ ಮಾತುಕತೆಗಳನ್ನು ಆರಂಭಿಸಿದ. ಈ

ಕಾರ್ಯಕ್ಕಾಗಿ ಇವನು ಸಾಡ್‌ಲಿಯನ್ ಮತ್ತು ಸ್ಟಾನ್‌ಟನ್ ಎಂಬ ಇಬ್ಬರು ಇಂಗ್ಲಿಷ್ ಕಮಿಷನರುಗಳನ್ನು ಮಂಗಳೂರಿಗೆ ಕಳುಹಿಸಿಕೊಟ್ಟ. ಮಂಗಳೂರಿನಲ್ಲಿ 1784ರ ಮಾರ್ಚ್ 11 ರಂದು ಒಪ್ಪಂದಕ್ಕೆ ಸಹಿ ಬಿತ್ತು. ಇಂಡೊ-ಬ್ರಿಟಿಷ್ ಇತಿಹಾಸದಲ್ಲೇ ಪ್ರಖ್ಯಾತವಾದ ಹಾಗೂ ಪ್ರಮುಖವಾದ ದಾಖಲೆಯಾಗಿರುವ ಈ ಒಪ್ಪಂದ ಇಂಗ್ಲಿಷರಿಗೆ ಎಷ್ಟರಮಟ್ಟಿಗೆ ನಿರಾಶೆಯನ್ನುಂಟುಮಾಡಿತೆಂದರೆ, ಹೇಸ್ಟಿಂಗ್ಸ್ ಅದನ್ನು ಒಂದು ಅವಮಾನಕರವಾದ ಶಾಂತಿ ಒಪ್ಪಂದ ಎಂದು ಕರೆದ. ಯಾವ ಷರತ್ತಿನ ಮೇಲಾದರೂ ಶಾಂತಿಗೆ ಬರಲು ಒಪ್ಪಿಕೊಳ್ಳಬೇಕಾಗಿ ಬಂದ ಈ ಒಪ್ಪಂದ ಬ್ರಿಟಿಷರ ಪ್ರತಿಷ್ಠೆಗೆ ಕೊಡಲಿಪೆಟ್ಟನ್ನು ಕೊಟ್ಟಿತು.



ಅನಂತರ ಟಿಪ್ಪು 1785-87ರ ಅವಧಿಯವರೆಗೆ ಮರಾಠರು ಮತ್ತು ನಿಜಾಮರ ವಿರುದ್ಧ ಹೋರಾಡಬೇಕಾಗಿ ಬಂತು. ಮಂಗಳೂರಿನ ಒಪ್ಪಂದ ಈ ಇಬ್ಬರು ನೆರೆಯವರಲ್ಲಿ ಅಸೂಯೆಯನ್ನುಂಟುಮಾಡಿತು. ಮೈಸೂರಿನ ಉತ್ತರಕ್ಕೆ ಇದ್ದ ತಾವು ಹಿಂದೆ ಕಳೆದುಕೊಂಡಿದ್ದ ಪ್ರದೇಶಗಳನ್ನು ಪುನಃ ವಶಪಡಿಸಿಕೊಳ್ಳಲು ಅಸಮರ್ಥರಾದುದರಿಂದಲೂ ಮತ್ತು ತಮ್ಮ ಮಧ್ಯಸ್ಥಿಕೆಯ ಆವಶ್ಯಕತೆ ಕಂಡುಬರದಿದ್ದರಿಂದಲೂ ಅವರಿಗೆ ನಿರಾಶೆಯಾಗಿತ್ತು. ಕೃಷ್ಣಾ ನದಿಯ ಪ್ರದೇಶಗಳನ್ನು ಕಳೆದುಕೊಂಡಿದ್ದನ್ನು ಮರಾಠರು ಮರೆಯುವಂತಿರಲಿಲ್ಲ. ಆದುದರಿಂದ 1783ರ ಅಕ್ಟೋಬರ್‌ನಲ್ಲಿ ಮರಾಠರು ಟಿಪ್ಪುವಿನ ವಿರುದ್ಧ ಇಂಗ್ಲಿಷರೊಡನೆ ಸ್ನೇಹವನ್ನು ಬೆಳೆಸಿಕೊಂಡರು. ಈ ಒಪ್ಪಂದದ ಪ್ರಕಾರ ಮರಾಠರು ಟಿಪ್ಪು ಗೆದ್ದಿದ್ದ ಕರ್ನಾಟಕದ ಪ್ರದೇಶಗಳನ್ನು ಮರಾಠರಿಗೆ ಬಿಟ್ಟು ಕೊಡಲು ಕೇಳಬೇಕೆಂದೂ ಹಾಗೆ ಅವನು ಬಿಟ್ಟುಕೊಡಲು ನಿರಾಕರಿಸಿದ ಪಕ್ಷದಲ್ಲಿ ಮರಾಠರು ಮೈಸೂರಿನ ಮೇಲೆ ಯುದ್ಧ ಮಾಡತಕ್ಕದೆಂದೂ ತೀರ್ಮಾನವಾಯಿತು. ಟಿಪ್ಪುವನ್ನು ಹಣ್ಣು ಮಾಡಲು ನಿಜಾಮನಿಗೂ ಆತುರವಿತ್ತು. ಆದರೆ ಒಬ್ಬನೇ ಟಿಪ್ಪುವಿನ ಮೇಲೆ ಬೀಳಲು ಸಮರ್ಥನಲ್ಲದ್ದರಿಂದ, ಮರಾಠರೋ ಅಥವಾ ಇಂಗ್ಲಿಷರೋ ಟಿಪ್ಪುವಿನ ಮೇಲೆ ಯುದ್ಧಕ್ಕೆ ಹೋಗುವ ಅವಕಾಶವನ್ನು ತಾನು ಉಪಯೋಗಿಸಿಕೊಳ್ಳಲು ನಿರ್ಧರಿಸಿದ. ಉತ್ತರ ಕರ್ನಾಟಕದಲ್ಲಿ ಟಿಪ್ಪುವಿನ ಸಾಮಂತನಾಗಿದ್ದ ನರಗುಂದದ ದೇಸಾಯಿ 1780ರಿಂದಲೂ ವಾರ್ಷಿಕ ಕಪ್ಪ ಕಾಣಿಕೆಯನ್ನು ಸಲ್ಲಿಸದ ಪ್ರಶ್ನೆಯೇ ಯುದ್ಧಕ್ಕೆ ತಕ್ಷಣದ ಕಾರಣವಾಯಿತು. ಟಿಪ್ಪು ಹಣವನ್ನು ಕೇಳಿದಾಗ, ದೇಸಾಯಿ ಮರಾಠರ ಸಹಾಯವನ್ನು ಬೇಡಿದ. ಈ ಸಂದರ್ಭದಲ್ಲಿ ಉಂಟಾದ ಬಿಕ್ಕಟ್ಟು ಮೇ 1786ರಲ್ಲಿ ಯುದ್ಧ ಆರಂಭವಾಗುವುದಕ್ಕೆ ಅವಕಾಶವಾಯಿತು. ನಿಜಾಮ ಮತ್ತು ಮರಾಠರು ಬಾದಾಮಿಯನ್ನು ಮುತ್ತಿದರು. ಜೂನ್ 1786ರಲ್ಲಿ ಹರಿಪಂತ ಗಜೇಂದ್ರಗಡದತ್ತ ನುಗ್ಗಿದ. ನಿಜಾಮನಿಗೆ ಸೇರಿದ್ದ ಆದವಾನಿಯ ಕೋಟೆಯನ್ನು ಟಿಪ್ಪು ಮುತ್ತಿ ಹಿಡಿದ. ಬಹದ್ದೂರ್ ಬಾಂಡ ಕೋಟೆಯನ್ನು ಹಿಡಿದು ಟಿಪ್ಪು ಹರಿಪಂತನನ್ನು ಚಕಿತಗೊಳಿಸಿದ. ಫೆಬ್ರವರಿ 1787ರವರೆಗೂ ಯುದ್ಧವನ್ನು ಮುಂದುವರೆಸಿಕೊಂಡು ಹೋದ. ಆ ವರ್ಷ ಏಪ್ರಿಲ್‌ನಲ್ಲಿ ಗಜೇಂದ್ರಗಡದ ಒಪ್ಪಂದಕ್ಕೆ ಸಹಿ ಬಿದ್ದು ಯುದ್ಧ ಮುಕ್ತಾಯವಾಯಿತು. ಈ ಯುದ್ಧದಲ್ಲಿ ಯಾರಿಗೂ ಲಾಭವಾಗಲಿಲ್ಲ.

ರಣರಂಗಗಳಲ್ಲಿ ಟಿಪ್ಪುವಿಗೆ ಲಾಭದಾಯಕವಾದ ಸ್ಥಾನಗಳಿದ್ದಾಗ್ಯೂ ಇಂಗ್ಲಿಷರೊಡನೆ ನಡೆಯುವ ತನ್ನ ಹೋರಾಟದಲ್ಲಿ ಅವರ ಬೆಂಬಲ ದೊರೆಯುವುದೆಂಬ ಆಸೆಯ ಮೇರೆಗೆ, ತನ್ನ ಶತ್ರುಗಳ ಬಗ್ಗೆ ಹೆಚ್ಚು ಉದಾರವಾಗಿಯೇ ನಡೆದುಕೊಂಡ. ಆದರೆ ಈ ದಿಶೆಯಲ್ಲಿ ಟಿಪ್ಪುವಿಗೆ ತುಂಬಾ ನಿರಾಶೆ ಉಂಟಾಯಿತು. ತನ್ನ ಕಡೆ ಸೇರಿಸಿಕೊಳ್ಳಬೇಕೆಂದು ಬಯಸಿದ್ದ ರಾಜ್ಯಗಳೇ ಇಂಗ್ಲಿಷರ ಕುತಂತ್ರಗಳಿಂದ ಇವನ ವಿರುದ್ಧವಾಗಿ ರೂಪಗೊಂಡ ಒಕ್ಕೂಟಕ್ಕೆ ಸೇರಿಕೊಳ್ಳುವಂತಾಯಿತು.

ಭಾರತೀಯ ರಾಜ್ಯಗಳಿಗೆ ಪರಂಪರೆಯಿಂದಲೂ ಬಂದಿದ್ದ ದುರ್ಬಲತೆ ಮತ್ತು ಅನೈಕ್ಯತೆಯ ದೆಸೆಯಿಂದ ಟಿಪ್ಪು ಹೊರಗಡೆಯಿಂದ ಸಹಾಯವನ್ನು ನಿರೀಕ್ಷಿಸುವಂತೆ ಮಾಡಿತು, ಇದಕ್ಕಾಗಿ ಇವನು ಫ್ರಾನ್ಸ್, ತುರ್ಕಿ, ಇರಾನ್ ಮತ್ತು ಆಫ್ಘಾನಿಸ್ತಾನಗಳೊಡನೆ ಸಂಪರ್ಕವನ್ನು ಬೆಳೆಸಿದ. ರಾಜಕೀಯ ಬೆಂಬಲವನ್ನು ಹಾಗೂ ಕುಶಲಕರ್ಮಿಗಳನ್ನೂ ಪಡೆಯುವ ಮತ್ತು ವ್ಯಾಪಾರವಾಣಿಜ್ಯಗಳನ್ನು ಅಭಿವೃದ್ಧಿಪಡಿಸುವ ಉದ್ದೇಶಗಳನ್ನು ಇವನು ಈ ದಿಶೆಯಲ್ಲಿ ಹೊಂದಿದ್ದ. ವಾಣಿಜ್ಯ ವಸ್ತುಗಳಾದ ಮೆಣಸು, ಏಲಕ್ಕಿ, ಗಂಧ, ದಂತ, ರೇಷ್ಮೆ, ತೆಂಗಿನಕಾಯಿ, ಹೊಗೆಸೊಪ್ಪು ಮತ್ತು ಆನೆಗಳ ಮೇಲೆ ಮೈಸೂರು ಏಕಸ್ವಾಮ್ಯವನ್ನು ಪಡೆದಿದ್ದು, ಈ ವಸ್ತುಗಳಿಗೆ ಪರದೇಶಗಳಲ್ಲಿ ಅಪಾರವಾದ ಬೇಡಿಕೆಯಿತ್ತು. ಆದುದರಿಂದ, ಆಟ್ಟೋಮನ್ ಸಾಮ್ರಾಜ್ಯ, ಚೀನ, ಮಸ್ಕತ್, ಪೆಗು, ಆರ್ಮೇನಿಯ, ಜಿದ್ದಾ, ಆರ್ಮುಜ್ ಮೊದಲಾದ ವಿದೇಶೀ ರಾಷ್ಟ್ರಗಳೊಡನೆ ವಾಣಿಜ್ಯ ಸಂಬಂಧಗಳನ್ನು ಏರ್ಪಡಿಸಿದ. 1784-85ರಲ್ಲಿ ಟಿಪ್ಪು ಕಾನ್ಸ್ಟಾಂಟಿನೋಪಲ್‌ಗೆ ರಾಯಭಾರವನ್ನು ಕಳುಹಿಸಿ ಕೊಟ್ಟ. ತುರ್ಕಿಯ ಸುಲ್ತಾನ್ ಅಬ್ದುಲ್ ಹಮೀದನಿಗೆ ಬರೆದ ಪತ್ರದಲ್ಲಿ, ಇಂಗ್ಲಿಷರು ಭಾರತವನ್ನು ಹೇಗೆ ಆಕ್ರಮಿಸಿಕೊಂಡರು ಎಂಬುದನ್ನು ವಿಶದವಾಗಿ ವಿವರಿಸಿ, ಮೈಸೂರು ಮತ್ತು ತುರ್ಕಿಯ ನಡುವೆ ಮಿಲಿಟರಿ ಸಹಕಾರಕ್ಕೆ ಸಂಬಂಧಪಟ್ಟಂತೆ ಒಂದು ಒಪ್ಪಂದ ಏರ್ಪಡಬೇಕೆಂದು ಸೂಚಿಸಿದ. ಒಪ್ಪಂದದ ಮತ್ತೊಂದು ಭಾಗ ತಂತ್ರಜ್ಞರು ಮತ್ತು ಕುಶಲಕರ್ಮಿಗಳಿಗೆ ಸಂಬಂಧಿಸಿದ್ದಾಗಿತ್ತು. ಆದರೆ ತುರ್ಕಿಯ ಸುಲ್ತಾನ ರಷ್ಯನರ ವಿರುದ್ಧ ನಡೆಯುತ್ತಿದ್ದ ಯುದ್ಧದಲ್ಲಿ ಬಿಡುವಿಲ್ಲದ ಹೋರಾಟ ನಡೆಸುತ್ತಿದ್ದುದರಿಂದ ಟಿಪ್ಪುವಿನೊಡನೆ ಮಿಲಿಟರಿ ಒಪ್ಪಂದ ಏರ್ಪಡಿಸಿಕೊಳ್ಳಲು ನಿರಾಕರಿಸಿದ. ಇದಲ್ಲದೆ, ತುರ್ಕಿಯೊಡನೆ ಇಂಗ್ಲಿಷರು ಸ್ನೇಹದಿಂದಿದ್ದರು. ರಾಯಭಾರಿಗಳು 1789ರಲ್ಲಿ ಭಾರತಕ್ಕೆ ನಾಲ್ಕು ವರ್ಷಗಳ ಅನಂತರ ಹಿಂತಿರುಗಿದರು. ತುರ್ಕಿರಿಂದ ಸಹಾಯ ಪಡೆಯಲು ನಡೆಸಿದ ಪ್ರಯತ್ನ ಸಫಲವಾಗದೆ ಇದ್ದಾಗ, ಟಿಪ್ಪು ಫ್ರೆಂಚರ ಕಡೆ ವಾಲಿದ. ಇವನು ಫ್ರಾನ್ಸಿನ ಚಕ್ರವರ್ತಿಯಾಗಿದ್ದ 16ನೆಯ ಲೂಯಿಯ ಬಳಿಗೆ ನಿಯೋಗವೊಂದನ್ನು ಕಳುಹಿಸಿಕೊಟ್ಟು, ಮಿಲಿಟರಿ ನೆರವು ಮತ್ತು ರಕ್ಷಣಾ ಒಪ್ಪಂದ ಇವುಗಳನ್ನು ಮಾಡಿಕೊಳ್ಳಲು ಪ್ರಯತ್ನಿಸಿದ. ಮದರಾಸು, ಬೊಂಬಾಯಿ ಮತ್ತು ಬಂಗಾಲಗಳಲ್ಲಿ ಇಂಗ್ಲಿಷರನ್ನು ಸದೆಬಡಿಯಲು 10,000 ಫ್ರೆಂಚ್ ಸೈನಿಕರ ಸಹಾಯವನ್ನು ಬೇಡಿದ. 1787ರಲ್ಲಿ ಈ ನಿಯೋಗ ಭಾರತವನ್ನು ಬಿಟ್ಟು 16ನೆಯ ಲೂಯಿಯನ್ನು 1788ರ ಆಗಸ್ಟ್ 3ರಂದು ಭೇಟಿಮಾಡಿ 1789ರಲ್ಲಿ ಭಾರತಕ್ಕೆ ಬರಿಕೈಯಿಂದ ಹಿಂತಿರುಗಿತು. ಫ್ರಾನ್ಸ್ ಆಗ ಕ್ರಾಂತಿಪಥದಲ್ಲಿ ಸಾಗಿತ್ತು. ಆದುದರಿಂದ ಟಿಪ್ಪುವಿನ ನೆರವಿಗೆ ಅದು ಬರುವ ವಿಷಯ ದೂರವೇ ಆಯಿತು. ರಾಜಕೀಯವಾಗಿ ವಿಫಲವಾದಾಗ್ಯೂ ಟಿಪ್ಪು ವಿದೇಶಗಳೊಡನೆ ವಾಣಿಜ್ಯ ಸಂಬಂಧಗಳನ್ನು ಬೆಳೆಸಿಕೊಳ್ಳುವುದರಲ್ಲಿ ಸಫಲನಾದ.

ಇಂಗ್ಲಿಷರೊಡನೆ ಮತ್ತೊಂದು ಯುದ್ಧ ಅನಿವಾರ್ಯವಾಯಿತು. ನಿಜಾಮ ಮತ್ತು ಮರಾಠರು ಸಹ ತಮ್ಮ ಕೈಬಿಟ್ಟುಹೋಗಿದ್ದ ಪ್ರದೇಶಗಳು ದೊರಕದೆ ಇದ್ದುದರಿಂದ ಅಸಂತೃಪ್ತರಾಗಿದ್ದರು. ತಿರುವಾಂಕೂರು ಪ್ರಶ್ನೆಯನ್ನುಪಯೋಗಿಸಿಕೊಂಡು ಅವರು ಟಿಪ್ಪುವಿನ ವಿರುದ್ಧ ಇಂಗ್ಲಿಷರೊಡನೆ ತೃತೀಯ ಒಕ್ಕೂಟವನ್ನು ರಚಿಸಿಕೊಂಡರು. ತಿರುವಾಂಕೂರು ರಾಜ ಕೊಚ್ಚಿಯ ರಾಜನ ಭೂಮಿಯಲ್ಲಿ ಒತ್ತಾಗಿ ಬೊಂಬುಗಳನ್ನು ನೆಟ್ಟು ರಕ್ಷಣಾವ್ಯವಸ್ಥೆಯನ್ನು ಮಾಡಿಕೊಂಡಿದ್ದ. ಕೊಚ್ಚಿಯ ರಾಜ ಟಿಪ್ಪುವಿನ ಸಾಮಂತನಾದ್ದರಿಂದ, ಅವನು ರಕ್ಷಣಾಬೇಲಿಗಳನ್ನು ನಾಶಮಾಡುವಂತೆ ತಿರುವಾಂಕೂರು ರಾಜನಿಗೆ ಹೇಳಿದ. ಆದರೆ ಆ ರಾಜ ಅದನ್ನು ತಿರಸ್ಕರಿಸಿದ. ಆದ್ದರಿಂದ ಯುದ್ಧ ಆರಂಭವಾಯಿತು. ಇದರ ಜೊತೆಗೆ ಮತ್ತೊಂದು ಜಗಳವೂ ಏರ್ಪಟ್ಟಿತು. ಕ್ರಾಂಗನೂರು ಮತ್ತು ಅಯಿಕೋಟಗಳಲ್ಲಿ ಎರಡು ಡಚ್ ಕೋಟೆಗಳಿದ್ದವು. ಟಿಪ್ಪು ಅವನ್ನು ತಾನೇ ನೋಡಿಕೊಳ್ಳಲು ತೀವ್ರವಾದ ಆಸೆಯನ್ನು ವ್ಯಕ್ತಪಡಿಸಿದಾಗ್ಯೂ ಸಹ ಡಚ್ಚರು ಅವುಗಳನ್ನು ತಿರುವಾಂಕೂರಿನ ರಾಜನಿಗೆ ಮಾರಿದ್ದರಿಂದ, ಟಿಪ್ಪು ತಿರುವಾಂಕೂರಿನ ಮೇಲೆ ದಂಡೆತ್ತಿಹೋದ (1789). (ಬಿ.ಎಸ್.ಎ.)



ಟಿಪ್ಪು ಅರಮನೆ

ತಿರುವಾಂಕೂರು ದೇಶವನ್ನೆಲ್ಲ ಕೊಳ್ಳೆಹೊಡೆದು, ಅನೇಕರನ್ನು ಸಂಹರಿಸಿದ. ಈ ದಾಳಿಯಿಂದ ತಿರುವಾಂಕೂರು ಮಹಾರಾಜ ತತ್ತರಿಸಿದ. ಬ್ರಿಟಿಷರ ಮಿತ್ರನಾದ ಆತ ತನ್ನ ರಕ್ಷಣೆಗೆ ಕೂಡಲೇ ಬರಬೇಕೆಂದು ಮದರಾಸು ಕೌನ್ಸಿಲನ್ನು ಪ್ರಾರ್ಥಿಸಿಕೊಂಡ. ಕಾರನ್‌ವಾಲೀಸ್ ತತ್‌ಕ್ಷಣ ಕ್ರಮ ತೆಗೆದುಕೊಂಡಿದ್ದರಿಂದ ಟಿಪ್ಪು ಮದರಾಸು ಪ್ರಾಂತ್ಯವನ್ನು ಕೊಳ್ಳೆ ಹೊಡೆಯುವುದು ತಪ್ಪಿತು. ಶ್ರೀರಂಗಪಟ್ಟಣದ ಮೇಲೆ ದಾಳಿ ಮಾಡುವ ಮೊದಲೇ ಕಾರನ್‌ವಾಲೀಸ್ ಪುಣೆಯ ಪೇಷ್ವೆ ಮತ್ತು ಹೈದರಾಬಾದಿನ ನಿಜಾಮರೊಡನೆ 1790ನೆಯ ಜೂನ್ ಮತ್ತು ಜುಲೈಗಳಲ್ಲಿ ಒಂದು ಒಪ್ಪಂದವನ್ನು ಮಾಡಿಕೊಂಡು ಟಿಪ್ಪುವಿನ ವಿರುದ್ಧ ಒಂದು ತ್ರಿಪಕ್ಷ ಕೂಟವನ್ನು ರಚಿಸಿದ್ದ. ತ್ರಿಪಕ್ಷಕೂಟದ ಸದಸ್ಯರು ಸಾಕಷ್ಟು ಪ್ರಮಾಣದಲ್ಲಿ ತಮ್ಮ ತಮ್ಮ ಸೇನೆಯನ್ನು ದಾಳಿಗೆ ಕಳುಹಿಸಿಕೊಟ್ಟು ಯುದ್ಧಾನಂತರ ಗಳಿಸಿದ ಲಾಭವನ್ನು ಸಮನಾಗಿ ಹಂಚಿಕೊಳ್ಳಲು ಒಪ್ಪಿಕೊಂಡಿದ್ದರು. ಆದರೆ ಮರಾಠರಾಗಲಿ ಅಥವಾ ನಿಜಾಮನಾಗಲಿ ಇಂಗ್ಲಿಷರಿಗೆ ಸಾಕಷ್ಟು ಸಹಾಯವನ್ನು ಪೂರೈಸುವ ಸ್ಥಿತಿಯಲ್ಲಿರಲಿಲ್ಲ. ಆದಾಗ್ಯೂ ಇಂಗ್ಲಿಷರಿಗೆ ಬೇಕಾದದ್ದು ಅಂದಿನ ಪರಿಸ್ಥಿತಿಯಲ್ಲಿ, ಅವರ ಸಹಾಯಕ್ಕಿಂತ ಹೆಚ್ಚಾಗಿ ಅವರು ಮೈಸೂರಿನೊಂದಿಗೆ ಸೇರದಿರುವುದು ಮಾತ್ರ. 1790ರಲ್ಲಿ ಜನರಲ್ ಮೆಡೋಸ್ ಮೊದಲು ಆಕ್ರಮಣ ಮಾಡಿದ. ಆದರೆ ಇದು ಪರಿಣಾಮಕಾರಿಯಾಗಿರಲಿಲ್ಲ. ಅದೇ ವರ್ಷದ ಡಿಸೆಂಬರ್‌ನಲ್ಲಿ ಗವರ್ನರ್ ಜನರಲ್ ತಾನೇ ಸೇನಾನಾಯಕತ್ವವನ್ನು ವಹಿಸಿ, ಘಟ್ಟಗಳ ಮೂಲಕ ಹತ್ತಿ ಮೈಸೂರು ದೇಶವನ್ನು ಪ್ರವೇಶಿಸಿದ. 1791ರ ಮಾರ್ಚ್‌ನಲ್ಲಿ ಬೆಂಗಳೂರು ನಗರವನ್ನು ವಶಪಡಿಸಿಕೊಂಡ. ಅನಂತರ ರಾಜಧಾನಿ ಶ್ರೀರಂಗಪಟ್ಟಣದ ಕಡೆ ಹೊರಟ. ಮೇ ತಿಂಗಳಿನಲ್ಲಿ ತಾವೇ ಆಯ್ದುಕೊಂಡ ಪ್ರದೇಶದಲ್ಲಿ ನಡೆದ ಯುದ್ಧದಲ್ಲಿ ಅವನು ಟಿಪ್ಪುವನ್ನು ಸೋಲಿಸಿದ. ಕಾರನ್‌ವಾಲೀಸನಿಗೆ ಅದೊಂದು ಕಷ್ಟಕರವಾದ ಕದನವಾಗಿತ್ತು. ಯುದ್ಧೋಪಕರಣಗಳ ಪೂರೈಕೆ ಸಮರ್ಪಕವಾಗಿರಲಿಲ್ಲವಾಗಿ ಬೆಂಗಳೂರು ಕಡೆಗೆ ವಾಪಸು ನಡೆದ. ಅಲ್ಲಿ ತನ್ನ ಸೈನ್ಯವನ್ನು ಪುನಃ ಸಜ್ಜುಗೊಳಿಸಿಕೊಂಡು ಮಾರನೆಯ ವರ್ಷ ಶ್ರೀರಂಗಪಟ್ಟಣದ ಮೇಲೆ ನುಗ್ಗಿದ. ಶ್ರೀರಂಗಪಟ್ಟಣದ ಹೊರವಲಯದಲ್ಲಿದ್ದ ಪ್ರದೇಶಗಳೆಲ್ಲವನ್ನೂ ವಶಪಡಿಸಿಕೊಂಡು, ಟಿಪ್ಪು ಕೋಟೆಯೊಳಗೇ ರಕ್ಷಣೆ ಪಡೆಯುವಂತೆ ಮಾಡಿದ. 1792ರ ಫೆಬ್ರವರಿ 6ರಂದು ಒಂದು ಚಕಿತವಾದ ದಾಳಿಯಲ್ಲಿ ಕಾರನ್‌ವಾಲೀಸ್ ಶ್ರೀರಂಗಪಟ್ಟಣದತ್ತ ನುಗ್ಗಿ ಬಂದು ಟಿಪ್ಪು ಶರಣಾಗುವಂತೆ ಮಾಡಿದ. ಶ್ರೀರಂಗಪಟ್ಟಣದಲ್ಲಿ ಒಪ್ಪಂದವಾಯಿತು. ಟಿಪ್ಪು ಶಾಂತಿಭಿಕ್ಷೆ ಬೇಡಬೇಕಾಯಿತು. ಇಂಗ್ಲಿಷರಿಗೆ ಮೂರು ಕೋಟಿ ರೂಪಾಯಿ ಪರಿಹಾರ ಕೊಡುವುದಾಗಿ ಒಪ್ಪಿಕೊಂಡ. ಇದಕ್ಕಾಗಿ ತನ್ನ ಇಬ್ಬರು ಮಕ್ಕಳನ್ನು ಒತ್ತೆ ಇಡಬೇಕಾಯಿತು. ಒಪ್ಪಂದದ ಪ್ರಕಾರ ಇವನ ರಾಜ್ಯದ ಅರ್ಧಭಾಗವನ್ನು ಇಂಗ್ಲಿಷರು ಆಕ್ರಮಿಸಿಕೊಂಡರು. ದಿಂಡಿಗಲ್ ಅದರ ಸುತ್ತಮುತ್ತಲಿನ ಪ್ರದೇಶಗಳು, ಪೂರ್ವಕ್ಕೆ ಬಾರಾಮಹಲ್ ಮತ್ತಿತರ ಕಣಿವೆಗಳು ಇಂಗ್ಲಿಷರ ಕೈಸೇರಿದುವು. ಅವರ ಮಿತ್ರನಾದ ನಿಜಾಮನಿಗೆ ಮೈಸೂರಿನ ಈಶಾನ್ಯ ಭಾಗದ ಬಳ್ಳಾರಿ ಮತ್ತು ಕಡಪ ಜಿಲ್ಲೆಗಳು ಸೇರಿದುವು. ವಾಯುವ್ಯ ಭಾಗಕ್ಕೆ ಮರಾಠರು ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ನಡುವಣ ಪ್ರದೇಶವನ್ನು ಪಡೆದರು. ಈ ಯುದ್ಧ ಟಿಪ್ಪುವಿಗೆ ಬಹುಕಠಿಣವಾದ ಪೆಟ್ಟನ್ನು ಕೊಟ್ಟಿತು. ದಕ್ಷಿಣದ ರಾಜ್ಯಗಳೆಲ್ಲಾ ಒಂದುಗೂಡಿ ಟಿಪ್ಪುವನ್ನು ಎದುರಿಸಿದ್ದರ ಪರಿಣಾಮವಿದು. (ಬಿ.ಎಸ್.ಎ.;ಬಿ.ಎಂ.)

ಯುದ್ಧ ಮುಗಿದ ಮೇಲೆ, ಅತಿಸ್ವಲ್ಪಕಾಲದಲ್ಲೇ ಟಿಪ್ಪು ಯುದ್ಧದಿಂದಾದ ನಷ್ಟವನ್ನು ಸರಿಪಡಿಸಿ, ಯುದ್ಧದ ಖರ್ಚನ್ನು ಇಂಗ್ಲಿಷರಿಗೆ ಕೊಟ್ಟು ತನ್ನ ಇಬ್ಬರು ಮಕ್ಕಳನ್ನು ಮದರಾಸಿನಿಂದ ಬಿಡಿಸಿಕೊಂಡು ಬಂದ. ಆದರೆ ಇವನು ತನಗಾಗಿದ್ದ ಅವಮಾನವನ್ನು ಎಂದೆಂದಿಗೂ ಮರೆಯಲಿಲ್ಲ. ಉಳಿದ ತನ್ನೆಲ್ಲ ಜೀವಿತಕಾಲವನ್ನು ತಾನು ಕಳೆದುಕೊಂಡಿದ್ದ ಪ್ರದೇಶಗಳನ್ನು ಗಳಿಸಿಕೊಂಡು ಪ್ರತಿಷ್ಠೆಯನ್ನು ಪುನಃ ಸ್ಥಾಪಿಸುವುದರಲ್ಲೇ ಕಳೆದ. ಆಡಳಿತವನ್ನು ಸಂಪೂರ್ಣವಾಗಿ ಪುನರ್ ರಚಿಸಿದ. ಸರ್ ಜಾನ್ ಷೋರ್ ಎಂಬ ಮೆದುಸ್ವಭಾವದ ಗವರ್ನರ್ ಜನರಲ್ ಬಂದಿದ್ದರಿಂದ ಟಿಪ್ಪುವಿಗೆ ಉಸಿರಾಡಲು ಅವಕಾಶವಾದ ಹಾಗಾಯಿತು. ಈ ಕಾಲವನ್ನು ತನ್ನ ಸಿದ್ಧತೆಗೆ ಉಪಯೋಗಿಸಿಕೊಂಡ. ಫ್ರೆಂಚ್ ಸಾಹಸಿಯಾದ ರಿಪಾಡ್ ಎಂಬುವನು ಇವನ ಆಸ್ಥಾನಕ್ಕೆ ಬಂದು ದೊಡ್ಡದಾದ ಫ್ರೆಂಚ್ ಸೇನೆಯೊಂದು ಫ್ರಾನ್ಸ್ ದ್ವೀಪದಲ್ಲಿ ನೆಲೆ ಮಾಡಿದೆಯೆಂದು ತಿಳಿಸಿದಾಗ, ಟಿಪ್ಪು ಅವನನ್ನು ನಂಬಿ, ಅವರ ಸಹಾಯವನ್ನಪೇಕ್ಷಿಸಿ ಒಂದು ನಿಯೋಗವನ್ನು ಕಳುಹಿಸಿಕೊಟ್ಟ. ಆದರೆ ಅಲ್ಲಿ ಕಳುಹಿಸಲು ಸೈನ್ಯವೇ ಇರಲಿಲ್ಲ. ಟಿಪ್ಪುವಿನ ಸೈನ್ಯವನ್ನು ಸೇರಲು ಘೋಷಣೆಯನ್ನು ಮಾತ್ರ ಹೊರಡಿಸಲಾಗಿತ್ತು. ಇದು ಆಗಿನ ಗವರ್ನರ್ ಜನರಲ್ ವೆಲ್ಲೆಸ್ಲಿಯನ್ನು ಟಿಪ್ಪುವಿನ ಮೇಲೆ ಯುದ್ಧ ಘೋಷಿಸುವಂತೆ ಪ್ರಚೋದಿಸಿತು. ಟಿಪ್ಪು ನೆಪೋಲಿಯನ್ನನೊಡನೆಯೂ ಸಂಪರ್ಕ ಬೆಳೆಸಿದ. ಈಜಿಪ್ಟಿನಿಂದ ನೆಪೋಲಿಯನ್ ಟಿಪ್ಪುವಿಗೆ ಬರೆದ ಪತ್ರದಲ್ಲಿ ಭಾರತದಿಂದ ಇಂಗ್ಲಿಷರನ್ನು ಹೊಡೆದೋಡಿಸಲು ತಾನು ಸಹಕಾರ ನೀಡುವುದಾಗಿ ತಿಳಿಸಿದ್ದ. ಸಿರಿಯಾದವರೆಗೂ ನೆಪೋಲಿಯನ್ ಬಂದಿದ್ದ. ಆದರೆ ಅಲ್ಲಿ ಸೋಲನ್ನನುಭವಿಸಿ ಫ್ರಾನ್ಸಿಗೆ ಹಿಂತಿರುಗಿ ಹೋಗಬೇಕಾಯಿತು. ಟಿಪ್ಪು ಒಂದು ಸಂಚನ್ನು ಹೂಡಿ, ಆಫ್ಘಾನಿಸ್ತಾನದ ಜಮಾನ್ ಷಾನನ್ನು (ಅಬ್ದಾಲಿಯ ಉತ್ತರಾಧಿಕಾರಿ) ದೆಹಲಿಯಲ್ಲಿದ್ದ ಮುಗಲ್ ಚಕ್ರವರ್ತಿಯನ್ನು ಇಂಗ್ಲಿಷರಿಂದ ಬಿಡುಗಡೆ ಮಾಡಲು ಭಾರತಕ್ಕೆ ದಂಡೆತ್ತಿ ಬರುವಂತೆ ಮಾಡಿದ. ಈ ಯೋಜನೆ ವಿಫಲವಾಯಿತು. ಏಕೆಂದರೆ ವೆಲ್ಲೆಸ್ಲಿ ಬುದ್ಧಿಯನ್ನು ಉಪಯೋಗಿಸಿ ಇರಾನಿನ ರಾಜನಾಗಿದ್ದ ಬಾಬಾಖಾನನ ಸಹಾಯ ಪಡೆದು, ಅಲ್ಲಿಂದಲೇ ಆಫ್ಘನ್ನರನ್ನು ತಡೆಯಲು ಪ್ರಯತ್ನಿಸಿದ. ಕೊನೆಯದಾಗಿ ಟಿಪ್ಪು ರೆಮಾಂಡ್ ಎಂಬ ಫ್ರೆಂಚ್ ಅಧಿಕಾರಿಯ ನೇತೃತ್ವದಲ್ಲಿ 14,000 ಸೇನೆಯೊಂದನ್ನು ಸಿದ್ಧಪಡಿಸಲು ನಿಜಾಮನಿಗೆ ಪ್ರಚೋದನೆ ನೀಡಿದ. ಇಂಗ್ಲಿಷರ ವಿರುದ್ಧ ಇದನ್ನು ಬಳಸಿಕೊಳ್ಳಬಹುದೆಂದನ್ನಿವನ ಆಸೆಯಾಗಿತ್ತು. 1795ರಲ್ಲಿ ನಿಜಾಮ ಮರಾಠರ ವಿರುದ್ಧ ನಡೆಸಿದ ಯುದ್ಧದಲ್ಲೂ ಟಿಪ್ಪು ಸಹಾಯ ನೀಡಿದ್ದ. ಆದರೆ ವೆಲ್ಲೆಸ್ಲಿ ಈ ಯೋಜನೆಯನ್ನು ಮಣ್ಣುಗೂಡಿಸಿದ. ನಿಜಾಮ

ಪರಸ್ಪರ ಸಹಾಯಕ ಸೈನ್ಯಪದ್ಧತಿಗೆ ಒಪ್ಪಿಗೆ ನೀಡುವಂತೆ ಮಾಡಿದ. ಅದರ ಪ್ರಕಾರ ಫ್ರೆಂಚರ ಸೇನೆಯನ್ನು ವಜಾಮಾಡಲಾಯಿತು. ಅವರ ಸ್ಥಾನವನ್ನು ಇಂಗ್ಲಿಷರು ಆಕ್ರಮಿಸಿಕೊಂಡರು.

ಟಿಪ್ಪುವಿನ ಮೇಲೆ ಯುದ್ಧ ಘೋಷಿಸಲು ವೆಲ್ಲೆಸ್ಲಿ ತಡ ಮಾಡಲಿಲ್ಲ. ಇಂಗ್ಲಿಷರನ್ನು ಸೇರಿಕೊಳ್ಳುವಂತೆ ನಿಜಾಮನನ್ನು ಪ್ರಚೋದಿಸಿದ. ಆದರೆ ಮರಾಠರನ್ನು ಈ ಯುದ್ಧದಲ್ಲಿ ಭಾಗವಹಿಸುವಂತೆ ಮಾಡಲು ಆಗಲಿಲ್ಲ. ದೊಡ್ಡ ಸೈನ್ಯವನ್ನು ಕಟ್ಟಿಕೊಂಡು ಬ್ರಿಟಿಷರು ಎಲ್ಲಾ ದಿಕ್ಕುಗಳಿಂದಲೂ ನುಗ್ಗಿಬಂದರು. ಬೊಂಬಾಯಿ ಕಡೆಯಿಂದ ಆರ್ಥರ್ ವೆಲ್ಲೆಸ್ಲಿ (ಅನಂತರ ಡ್ಯೂಕ್ ಆಫ್ ವೆಲ್ಲಿಂಗ್‌ಟನ್) ಮತ್ತು ಮದರಾಸಿನ ಕಡೆಯಿಂದ ಜನರಲ್ ಹ್ಯಾರಿಸ್ ನುಗ್ಗಿಬಂದರು. ಶ್ರೀರಂಗಪಟ್ಟಣವನ್ನು ಮುತ್ತಿದರು. 1799ರ ಮೇ 4ರಂದು ಇಂಗ್ಲಿಷರು ಕೋಟೆಯ ಮೇಲೆ ದಾಳಿ ನಡೆಸಿದರು. ಒಂದು ಗಂಟೆಯಲ್ಲಿ ಟಿಪ್ಪುವಿಗೆ ಸುದ್ದಿ ಬಂದಿತು. ಭೀಕರ ಹೋರಾಟ ನಡೆಯಿತು, ಇಂಗ್ಲಿಷರ ಸೇನೆಗೆ ಜಯವಾಯಿತು. ಟಿಪ್ಪು ಯುದ್ಧರಂಗದಲ್ಲಿ ಹೋರಾಡುತ್ತ ಮಡಿದ. ಇವನು ಬಳಸುತ್ತಿದ್ದನೆಂದು ಹೇಳಲಾದ ಖಡ್ಗವೊಂದನ್ನು ಇತ್ತೀಚೆಗೆ (2004) ವಿಜಯಮಲ್ಯ ಅವರು ಇಂಗ್ಲೆಂಡಿನಿಂದ ಹರಾಜಿನಲ್ಲಿ ಹಿಡಿದು ಕೊಂಡು ತಂದು ಟಿಪ್ಪುಸುಲ್ತಾನ್ ಸ್ಮಾರಕ ಸಂರಕ್ಷಣಾ ಸಮಿತಿಗೆ ಒಪ್ಪಿಸಲಾಗಿದೆ.

ಅಲ್ಪಕಾಲವಾದರೂ ಬಿರುಗಾಳಿಯೋಪಾದಿಯಲ್ಲಿದ್ದ ಟಿಪ್ಪುವಿನ ಆಳಿಕೆ ಕರ್ನಾಟಕ ಹಾಗೂ ಭಾರತ ಇತಿಹಾಸದ ಪ್ರಮುಖ ಅಧ್ಯಾಯ. ನೂರು ವರ್ಷಗಳ ಕಾಲ ಸಾಮಾನ್ಯವಾಗಿ ಜೀವನ ನಡೆಸುವುದಕ್ಕಿಂತ, ಒಂದು ವರ್ಷ ಸಿಂಹದಂತೆ ಬದುಕುವುದು ಉತ್ತಮವೆಂಬುದು ಇವನ ಜೀವನದ ಆದರ್ಶವಾಗಿತ್ತು. ಭಾರತದಲ್ಲಿ ಬ್ರಿಟಿಷರ ವಿರುದ್ಧ ಪ್ರಬಲ ವ್ಯವಸ್ಥಿತ ಹೋರಾಟ ನಡೆಸಿದ್ದವರಲ್ಲಿ ಟಿಪ್ಪು ಮೊದಲಿಗ. ಇಂಗ್ಲಿಷರನ್ನು ಭಾರತದಿಂದ ಓಡಿಸುವುದನ್ನೆ ತನ್ನ ಜೀವನದ ಪರಮ ಆಕಾಂಕ್ಷೆಯನ್ನಾಗಿ ಮಾಡಿಕೊಂಡಿದ್ದು, ಅದಕ್ಕಾಗಿ ತನ್ನ ಎಲ್ಲ ಐಶ್ವರ್ಯ, ಶಕ್ತಿ ಕೊನೆಗೆ ತನ್ನ ಜೀವನವನ್ನೇ ಪಣವಾಗಿ ಇರಿಸಿದ. ಇಂಗ್ಲಿಷರ ಬಗ್ಗೆಯಿದ್ದ ದ್ವೇಷದ ಭಾವನೆಯೇ ಇವನ ವ್ಯಕ್ತಿತ್ವದ ಪ್ರಮುಖ ಲಕ್ಷಣವಾಗಿತ್ತು. ಈ ವಿಷಯದಲ್ಲಿ ಯಾವ ಕರುಣೆ, ಅನುಕಂಪ, ರಾಜಿ, ನಂಬಿಕೆಗಳಿಗೂ ಬಗ್ಗುತ್ತಿರಲಿಲ್ಲ. ಇವನೇ ಬರೆದಿಟ್ಟಿರುವಂತೆ ಈತ ಕನಸಿನಲ್ಲೂ ಇಂಗ್ಲಿಷರ ವಿರುದ್ಧ ಅವಿಶ್ರಾಂತವಾದ ಹೋರಾಟ ನಡೆಸುತ್ತಿದ್ದ. ಭಾರತದ ರಾಜ್ಯವೊಂದರ ವಿರುದ್ಧವಾಗಿ ಇವನೆಂದೂ ಪರಕೀಯರೊಡನೆ ಸೇರಲಿಲ್ಲ. ಆದರ್ಶಗಳನ್ನು ಕೊನೆಯುವರೆಗೂ ಬಿಟ್ಟುಕೊಡಲಿಲ್ಲ. ಅವಮಾನದ ಬದುಕಿಗಿಂತ ಸಾವನ್ನೇ ಆರಿಸಿಕೊಂಡ ಈತ ಸೀಸರನಂತೆ ಅಂತಿಮವಾಗಿ ಕುತಂತ್ರ ಹಾಗೂ ದ್ರೋಹದ ಒಳಸಂಚಿಗೆ ಬಲಿಯಾದ. ಆದರೆ ಭಾರತೀಯರ ಸ್ವಾತಂತ್ರ್ಯಕ್ಕೆ ಬ್ರಿಟಿಷರಿಂದ ಬರುವ ಅಪಾಯದ ಬಗ್ಗೆ ತನ್ನ ದೇಶದ ಬಾಂಧವರಿಗೆ ಎಚ್ಚರಿಕೆಯನ್ನು ನೀಡುವುದನ್ನು ಮರೆಯಲಿಲ್ಲ. ಬ್ರಿಟಿಷರ ದ್ವೇಷದ ಜೊತೆಗೆ ಇವನ ವ್ಯಕ್ತಿತ್ವದಲ್ಲಿ ಜನರು ಮೆಚ್ಚುವಂಥ ಅಂಶಗಳೂ ಇದ್ದವು. ಇವನಲ್ಲಿ ಪ್ರೀತಿ ತೋರುವ ಗುಣವಿತ್ತು. ಸ್ನೇಹಿತರಿಗೆ ಆಪ್ತನಾಗಿದ್ದ. ಮಿಲ್ ಹೇಳುವಂತೆ ಇವನ ಜ್ಞಾನ ಅಪಾರವಾಗಿತ್ತು. ಇವನ ಬುದ್ಧಿ ಕ್ರಿಯಾಶೀಲವಾಗಿಯೂ ಚುರುಕಾಗಿಯೂ ಸಂಶೋಧನಾದೃಷ್ಟಿಯಿಂದ ಕೂಡಿಯೂ ಇತ್ತು. ಇವನೊಬ್ಬ ಪ್ರತಿಭಾವಂತ, ಪ್ರಜಾಪಾಲನೆಯೇ ಧ್ಯೇಯವಾಗಿಯುಳ್ಳ ರಾಜ್ಯಾಡಳಿತಪಟು. ಅನೇಕ ಯುದ್ಧಗಳನ್ನು ನಡೆಸಬೇಕಾದ ಸಂದರ್ಭ ಒದಗಿ ಬಂದಾಗ್ಯೂ ಇವನು ವ್ಯಾಪಾರ-ವಾಣಿಜ್ಯ, ಕೈಗಾರಿಕೆ ಮತ್ತು ವ್ಯವಸಾಯ ಕ್ಷೇತ್ರಗಳ ಅಭಿವೃದ್ಧಿಯನ್ನು, ಸರ್ವತೋಮುಖವಾದ ಪ್ರಗತಿಯನ್ನು ಕಡೆಗಣಿಸಲಿಲ್ಲ. ಕರ್ನಾಟಕವನ್ನು ಸಮೃದ್ಧವಾದ ರಾಜ್ಯವಾಗಿ ಮಾಡಲು ಅವಿಶ್ರಾಂತವಾಗಿ ಶ್ರಮಿಸಿದ. ವಾಣಿಜ್ಯ ಕ್ಷೇತ್ರದಲ್ಲಿ ಅನೇಕ ಆಶ್ಚರ್ಯಕರವಾದ ಪ್ರಯೋಗಗಳನ್ನು ಇವನು ಮಾಡಿದ. ವಿಶೇಷವಾಗಿ ಹಾಗೂ ಪ್ರತ್ಯೇಕವಾಗಿ ವಾಣಿಜ್ಯ ಇಲಾಖೆಯನ್ನು ಏರ್ಪಡಿಸಿದ್ದ. ದೇಶದ ದೂರದೂರದ ಪ್ರದೇಶಗಳಲ್ಲೂ ಹಾಗೂ ಪರದೇಶಗಳಲ್ಲೂ ವ್ಯಾಪಾರದ ಕೋಠಿಗಳನ್ನು ಸ್ಥಾಪಿಸಿದ್ದ. ಕೋವಿ, ಕಾಗದ, ಇತರ ಅನೇಕ ಪದಾರ್ಥಗಳನ್ನು ತಯಾರಿಸುವ ಸಲುವಾಗಿ ವಿದೇಶಗಳಿಂದ ತಜ್ಞರನ್ನು ಕರೆಸಿಕೊಂಡಿದ್ದು ಹಣಕಾಸು, ತೂಕ, ಅಳತೆ, ಬ್ಯಾಂಕಿಂಗ್, ಕಂದಾಯ, ನ್ಯಾಯಾಡಳಿತ, ಸೈನ್ಯ, ನೌಕಾದಳ-ಇವುಗಳ ಆಡಳಿತ ರೀತಿನೀತಿಗಳ ಬಗ್ಗೆ ನಡೆಸಿದ ಸುಧಾರಣೆಗಳು ಇತಿಹಾಸದಲ್ಲಿ ಇವನಿಗೆ ಗಣ್ಯಸ್ಥಾನವನ್ನು ಗಳಿಸಿಕೊಟ್ಟಿವೆ. ಇವನು ಒಳ್ಳೆಯ ನೌಕಾಪಡೆಯನ್ನೂ ವ್ಯಾಪಾರಿ ಹಡಗುಗಳ ಪಡೆಯನ್ನೂ ಕಟ್ಟಿದ. ಆಗ ಇವನ ರಾಜ್ಯದಲ್ಲಿ ಮೂರು ನೌಕಾನಿರ್ಮಾಣ ಕೇಂದ್ರಗಳಿದ್ದವು. ನೌಕಾಧಿಕಾರಿಗಳಿಗೆ ಶಿಕ್ಷಣ ನೀಡಲು ನೌಕಾ ಶಾಲೆಯೊಂದಿತ್ತು. ಸಮರ್ಥವಾಗಿ ಆಡಳಿತ ವ್ಯವಸ್ಥೆಯನ್ನು ಸ್ಥಾಪಿಸಿದ ಟಿಪ್ಪು ಪಾಶ್ಚಿಮಾತ್ಯ ತತ್ತ್ವಗಳನ್ನು ಸಂಸ್ಥಾನಗಳ ಆಡಳಿತದಲ್ಲಿ ಅಳವಡಿಸಿದವರಲ್ಲಿ ಮೊದಲಿಗನೆಂದು ಹೇಳಬಹುದು. ಉಳುವವರಿಗೆ ಭೂ-ಒಡೆತನ ಎಂಬ ತತ್ತ್ವದ ಆಧಾರದ ಮೇಲೆ ರಚಿಸಲ್ಪಟ್ಟ ಕಂದಾಯ ವ್ಯವಸ್ಥೆಯ ಮೂಲಕವೂ ಬಂಜರು ಭೂಮಿಯನ್ನು ಕೆಲವು ವರ್ಷಗಳ ಕಾಲ ತೆರಿಗೆರಹಿತ ಗುತ್ತಿಗೆ ಕೊಡುವ ಕ್ರಮದಿಂದಲೂ ತೆರಿಗೆ ವಸೂಲಿ ಮಾಡುವ ಕ್ರಮದಲ್ಲಿ ಮಧ್ಯವರ್ತಿಗಳನ್ನು ತೆಗೆದು ಹಾಕಿ ಅವರ ಸ್ಥಾನದಲ್ಲಿ ಕಂದಾಯ ಅಧಿಕಾರಿಗಳನ್ನು ನೇಮಿಸುವುದರ ಮೂಲಕವೂ ಜಹಗೀರಿ ಪದ್ಧತಿಯನ್ನು ರದ್ದು ಮಾಡಿ, ಅದಕ್ಕೆ ಬದಲಾಗಿ ಅಧಿಕಾರಿಗಳಿಗೆ ಸಂಬಳವನ್ನು ನಿಗದಿ ಮಾಡುವುದರ ಮೂಲಕವೂ ಟಿಪ್ಪು ಕೃಷಿಯ ಸರ್ವತೋಮುಖವಾದ ಅಭಿವೃದ್ಧಿಗೆ ಪ್ರೋತ್ಸಾಹ ನೀಡಿದ. ನ್ಯಾಯವನ್ನು ವಿಶಿಷ್ಟ ರೀತಿಯಲ್ಲಿ ನಡೆಯುವಂತೆ ಬೇಕಾದ ಏರ್ಪಾಡುಗಳನ್ನು ಮಾಡಿದ್ದು ನಾಣ್ಯ ಹಾಗೂ ಪಂಚಾಂಗದ ಸುಧಾರಣೆ ಇವನ ಇತರ ಸಾಧನೆಗಳು. (ಬಿ.ಎಸ್.ಎ.)

**ನಾಣ್ಯಗಳು :** ಭಾರತೀಯ ನಾಣ್ಯಚರಿತ್ರೆಯಲ್ಲಿ ಟಿಪ್ಪು ಸುಲ್ತಾನನ ನಾಣ್ಯಗಳಿಗೆ ಒಂದು ವಿಶಿಷ್ಟ ಸ್ಥಾನವಿದೆ. ಸದಾ ಯುದ್ಧಗಳಲ್ಲಿಯೇ ನಿರತನಾಗಿದ್ದರೂ ಟಿಪ್ಪು ತನ್ನ ನಾಣ್ಯಗಳ ಬಗ್ಗೆ ವಿಶೇಷ ಆಸಕ್ತಿಯನ್ನು ವಹಿಸಿ ಸುಂದರವೂ ಕಲಾತ್ಮವೂ ವೈವಿಧ್ಯಪೂರ್ಣವೂ ಆದ ಅನೇಕ ನಮೂನೆಯ ನಾಣ್ಯಗಳನ್ನು ಅಚ್ಚುಹಾಕಿಸಿದ್ದಾನೆ.

ಟಿಪ್ಪುವಿನ ಕಾಲದಲ್ಲಿ ಕೊನೆಯ ಪಕ್ಷ ಹದಿನೈದು ವಿವಿಧ ಸ್ಥಳಗಳಲ್ಲಿ ಟಂಕಸಾಲೆಗಳಿದ್ದವು. ಇವುಗಳಲ್ಲಿ ಮುಖ್ಯವಾದವು-ಶ್ರೀರಂಗಪಟ್ಟಣ, ನಗರ, ಗುತ್ತಿ, ಬೆಂಗಳೂರು, ಚಿತ್ರದುರ್ಗ, ಕಲ್ಲಿಕೋಟೆ, ಫರೋಕ್, ಸತ್ಯಮಂಗಲ, ದಿಂಡಿಗಲ್, ಗುರ್‍ರಂಕೊಂಡ, ಧಾರವಾಡ ಮತ್ತು ಮೈಸೂರು. ಶಿವಮೊಗ್ಗದ ಹೊಳೆಹೊನ್ನೂರಿನಲ್ಲಿಯೂ ಒಂದು ಟಂಕಸಾಲೆಯಿತ್ತೆಂದು ತಿಳಿದುಬರುತ್ತದೆ. ಆದರೆ ಇಲ್ಲಿಯ ನಾಣ್ಯಗಳು ದೊರಕಿಲ್ಲ. ಈ ಟಂಕಸಾಲೆಗಳಿಗೆ ಟಿಪ್ಪು ಕಾಲ್ಪನಿಕ ಹೆಸರುಗಳನ್ನು ಕೊಟ್ಟಿದ್ದ. ಹೊಳೆಹೊನ್ನೂರಿನ ಟಂಕಸಾಲೆಯನ್ನು ಅಸದೃಶವಾದುದು (ಬೇನಜೀರ್) ಎಂದು ಕರೆದಿದ್ದಾನೆ.

ಟಿಪ್ಪು ತಾನು ಅಚ್ಚುಹಾಕಿಸಿದ ಪ್ರತಿಯೊಂದು ನಾಣ್ಯಕ್ಕೂ ಒಂದೊಂದು ಹೆಸರನ್ನು ಕೊಟ್ಟ. ಆ ಹೆಸರುಗಳು ಸಾಮಾನ್ಯವಾಗಿ ಪ್ರವಾದಿ ಮಹಮ್ಮದ್, ಕಲೀಫರು ಮತ್ತು ನಕ್ಷತ್ರಗಳು ಇವರಿಗೆ ಸಂಬಂಧಿಸಿದವು. ಇವುಗಳನ್ನು ಈ ರೀತಿ ಹೆಸರಿಸಬಹುದು. ನಾಲ್ಕು ಪಗೋಡಗಳ ನಾಣ್ಯ-ಅಹ್ಮದೀ, ಎರಡು ಪಗೋಡ-ಸಾದಿಕೀ, ಒಂದು ಪಗೋಡ-ಫರೂಕೀ, ಎರಡು ರೂಪಾಯಿ-ಹೈದರೀ, ರೂಪಾಯಿ-ಇಮಾಮೀ, ಅರ್ಧ ರೂಪಾಯಿ-ಆಬಿದೀ, ಕಾಲು ರೂಪಾಯಿ-ಬಾಖರೀ, ಎಂಟನೆಯ ಒಂದು ರೂಪಾಯಿ-ಜಾಫರೀ, ಹದಿನಾರನೆಯ ಒಂದು ರೂಪಾಯಿ-ಖಾಸಿಮೀ, ಮೂವತ್ತೆರಡನೆಯ ಒಂದು ರೂಪಾಯಿ-ಕೈಸರೀ, ಎರಡು ಪೈಸೆ-ಉಸ್ಮಾನೀ ಅಥವಾ ಮುಷ್ತರೀ, ಒಂದು ಪೈಸಾ-ಜೋಹ್ರ, ಅರ್ಧ ಪೈಸಾ-ಬಹ್ರಾಮ್, ಕಾಲು ಪೈಸಾ-ಅಖ್ತರ್, ಎಂಟನೆಯ ಒಂದು ಪೈಸಾ-ಕುತ್ಬ್. ಈ ರೀತಿಯ ಹೆಸರಿಲ್ಲದ ನಾಣ್ಯವೆಂದರೆ ಚಿನ್ನದ ಪಣ. ಇದು ಬಹು ಸಣ್ಣ ನಾಣ್ಯವಾದುದರಿಂದ ಇದರ ಮೇಲೆ ನಾಣ್ಯದ ಹೆಸರನ್ನು ಮುದ್ರಿಸುವಷ್ಟು ಸ್ಥಳವಿರಲಿಲ್ಲವೆಂದು ನಾಣ್ಯಶಾಸ್ತ್ರಜ್ಞ ಹೆಂಡರ್‌ಸನ್ ಅಭಿಪ್ರಾಯಪಡುತ್ತಾರೆ.

ನಾಣ್ಯಗಳ ಮೇಲೆ ಕಾಲವನ್ನು ನಮೂದಿಸುವ ವಿಷಯದಲ್ಲಿಯೂ ಟಿಪ್ಪು ಅನೇಕ ಬದಲಾವಣೆಗಳನ್ನು ಮಾಡಿದ. ತನ್ನ ಆಳ್ವಿಕೆಯ ಮೊದಲ ನಾಲ್ಕು ವರ್ಷಗಳು ನಾಣ್ಯಗಳ ಮೇಲೆ ಹಿಜಿರ ಕಾಲವನ್ನು ಅಚ್ಚುಹಾಕಿಸಿದ. ಐದನೆಯ ವರ್ಷದಿಂದ ತನ್ನ ಆಳಿಕೆಯ ಮೌಲೂದೀ ಕಾಲಮಾನವನ್ನು ಅಚ್ಚುಹಾಕಿಸಿದ. ಇದರಲ್ಲಿ ಸಂಖ್ಯೆಗಳು ಬಲದಿಂದ ಎಡದ ಕಡೆಗೆ ಬರೆಯಲ್ಪಡುತ್ತವೆ. ನಾಣ್ಯಗಳ ಮೇಲೆ ವರ್ಷಗಳನ್ನು ಸೂಚಿಸುವಾಗ

ಮೊದಲು ಅಬ್ಜದ್ ಎಂಬ ಪ್ರಕಾರವನ್ನೂ ಅನಂತರ ಅಭ್ತತ್ ಎಂಬ ಪ್ರಕಾರವನ್ನೂ ಅನುಸರಿಸಿದ. ಇವೆರಡರಲ್ಲಿಯೂ ಅರಬ್ಬೀ ಅಕ್ಷರಗಳಿಗೆ ಕೆಲವು ಸಂಖ್ಯಾಮೌಲ್ಯಗಳನ್ನು ಕೊಡುವ ಕ್ರಮವಿದೆ.



ಅಹ್ಮದೀ, ಸಾದಿಕೀ, ಫರೂಕೀ, ಪಣಂ- ಟಿಪ್ಪು ನಾಣ್ಯಗಳು

ಟಿಪ್ಪುವಿನ ಚಿನ್ನದ ನಾಣ್ಯಗಳನ್ನು ನಾಲ್ಕು ವಿಧವಾಗಿ ವಿಂಗಡಿಸಬಹುದು. ಅವುಗಳು ಅಹ್ಮದೀ, ಸಾದಿಕೀ, ಫರೂಕೀ (ಪಗೋಡ) ಮತ್ತು ಪಣಂ. ಅಹ್ಮದೀ ನಾಣ್ಯ ಸುಮಾರು 211 ಗ್ರೇನ್ ತೂಕವಾಗಿದ್ದು ನಾಲ್ಕು ಪಗೋಡಗಳಿಗೆ ಸಮನಾಗಿತ್ತು. ಆ ರೀತಿಯ ನಾಣ್ಯದ ಮುಮ್ಮುಖದಲ್ಲಿ 'ಅಹ್ಮದನ' ಧರ್ಮ ಈ ಪ್ರಪಂಚದಲ್ಲಿ ಹೈದರನ ವಿಜಯಗಳಿಂದ ಪ್ರಕಾಶಗೊಂಡಿದೆ' ಎಂಬ ಅರ್ಥ ಬರುವ ಪರ್ಷಿಯನ್ ಬರೆಹದ ಮತ್ತು ಕಾಲದ ಉಲ್ಲೇಖ ಕಂಡುಬರುತ್ತದೆ. ಸಾದಿಕೀ ನಾಣ್ಯಗಳು 106 ಗ್ರೇನ್ ತೂಕವಿದ್ದು ಹೆಚ್ಚುಕಡಿಮೆ ಅಹ್ಮದೀ ನಾಣ್ಯಗಳನ್ನೇ ಹೋಲುತ್ತವೆ. ಫರೂಕೀ ನಾಣ್ಯ ಸುಮಾರು 52 ಗ್ರೇನ್ ತೂಕವುಳ್ಳದ್ದಾಗಿದ್ದು ಹೈದರನ ಮೊದಲನೆ ಅಕ್ಷರ ಹೆ ಮತ್ತು ಕಾಲ, ಟಂಕಸಾಲೆಯ ಹೆಸರುಗಳನ್ನು ಹೊಂದಿವೆ. ಪಣಂ ಎಂಬ ನಾಣ್ಯ ಬಹು ಸಣ್ಣದಾಗಿದ್ದು ಸುಮಾರು 5-6 ಗ್ರೇನ್ ತೂಗುತ್ತದೆ. ಇದು ದಕ್ಷಿಣಭಾರತದಲ್ಲೇ ಬಹಳ ಜನಾನುರಾಗಿಯಾಗಿದ್ದ ನಾಣ್ಯ. ಇವುಗಳಲ್ಲಿಯೂ ಹೆ ಎಂಬ ಅಕ್ಷರ ಮತ್ತು ಕಾಲದ ಉಲ್ಲೇಖವಿದೆ.

ಟಿಪ್ಪು ಸುಲ್ತಾನನ ಏಳು ರೀತಿಯ ಬೆಳ್ಳಿಯ ನಾಣ್ಯಗಳು, ಬೆಳಕಿಗೆ ಬಂದಿವೆ. ಇವುಗಳಲ್ಲಿ ಎರಡು ರೂಪಾಯಿನ ಹೈದರೀ ನಾಣ್ಯ ಶ್ರೀರಂಗಪಟ್ಟಣ, ನಗರ ಮತ್ತು ಕಲ್ಲಿಕೋಟೆಗಳಲ್ಲಿಯೂ ಒಂದು ರೂಪಾಯಿನ ಇಮಾಮೀ ನಾಣ್ಯ ಶ್ರೀರಂಗಪಟ್ಟಣ, ನಗರ ಮತ್ತು ಧಾರವಾಡಗಳಲ್ಲಿಯೂ 1/2 ರೂಪಾಯಿನ ಆಬಿದೀ ನಾಣ್ಯ ಶ್ರೀರಂಗಪಟ್ಟಣ ಮತ್ತು ನಗರಗಳಲ್ಲಿಯೂ ಬಾಖರೀ, ಜಾಫರೀ, ಕಾಜಿಮೀ, ಖಿಸ್ರೀ ನಾಣ್ಯಗಳು ಶ್ರೀರಂಗಪಟ್ಟಣದಲ್ಲಿ ಮಾತ್ರವೂ ಅಚ್ಚಾದವು. ಎರಡು ರೂಪಾಯಿನ ಹೈದರೀ ನಾಣ್ಯಗಳಲ್ಲಿ ಅಹ್ಮದೀ ಚಿನ್ನದ ನಾಣ್ಯಗಳಲ್ಲಿರುವಂತೆಯೇ ಬರೆಹಗಳಿವೆ. ಇದರ ತೂಕ ಸುಮಾರು 355 ಗ್ರೇನ್. ಒಂದು ರೂಪಾಯಿನ ಇಮಾಮೀ ನಾಣ್ಯ ಸುಮಾರು 175 ಗ್ರೇನ್ ತೂಕವಾಗಿದ್ದು ಹೈದರೀ ನಾಣ್ಯದಂತೆಯೇ ಬರೆಹ ಹೊಂದಿವೆ. ಜಾಫರೀ ಕಾಜಿಮೀ ಮತ್ತು ಖಿಸ್ರೀ ನಾಣ್ಯಗಳಲ್ಲಿ ಬರೆಹ ಕಡಿಮೆ. ಜಾಫರೀ ನಾಣ್ಯದಲ್ಲಿ ಮಹಮ್ಮದ್ ಎಂಬ ಬರೆಹದ ಜೊತೆಗೆ ಟಂಕಸಾಲೆಯ ಹೆಸರಿದೆ. ಕೇವಲ 5 ಗ್ರೇನ್ ತೂಕದ ಖಿಸ್ರೀ ನಾಣ್ಯದಲ್ಲಿ ಟಂಕಸಾಲೆಯ ಹೆಸರು ಮತ್ತು ಕಾಲಗಳು ಮಾತ್ರ ಉಲ್ಲೇಖಿತವಾಗಿವೆ.

ಟಿಪ್ಪು ಸುಲ್ತಾನನ ತಾಮ್ರದ ನಾಣ್ಯಗಳು ಐದು ವಿಧದ ಮೌಲ್ಯಗಳಲ್ಲಿವೆ. ಸಾಮಾನ್ಯವಾಗಿ ಈ ತಾಮ್ರದ ನಾಣ್ಯಗಳು ಎಲ್ಲ ಟಂಕಸಾಲೆಗಳಲ್ಲಿಯೂ ಮುದ್ರಿತವಾಗಿದ್ದುವೆಂದು ಹೇಳಬಹುದು. ತಾಮ್ರದ ನಾಣ್ಯಗಳ ಮೇಲೆ ಸಾಮಾನ್ಯವಾಗಿ ಆನೆಯ ಚಿತ್ರವಿರುವುದು ವಿಶೇಷ ಸಂಗತಿ. ಸುಮ್ಮನೆ ನಿಂತಿರುವ, ಇಲ್ಲವೇ ಸೊಂಡಿಲನ್ನು ಮೇಲೆತ್ತಿ ಸಲಾಂ ಮಾಡುತ್ತಿರುವಂತೆ ತೋರಿಸಿರುವ ಆನೆಯ ಚಿತ್ರ ಬಹು ಸುಂದರವಾಗಿಯೂ ಸ್ಫುಟವಾಗಿಯೂ ಇರುತ್ತದೆ. ಆನೆ ವಿವಿಧ ರೀತಿಯ ಆಭರಣಗಳಿಂದ ಅಲಂಕೃತವಾಗಿರುವುದು ಗಮನಾರ್ಹ ಸಂಗತಿ. ಸಾಮಾನ್ಯವಾಗಿ ತಾಮ್ರದ ನಾಣ್ಯಗಳ ಮೇಲೆ ಬರವಣಿಗೆ ಕಡಿಮೆ. ಕೆಲವು ನಾಣ್ಯಗಳಲ್ಲಂತೂ ಬರವಣಿಗೆ ಹಿಮ್ಮುಖಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಆನೆಯ ಮೇಲೆ ಕೆಲವು ನಾಣ್ಯಗಳಲ್ಲಿ ಒಂದು ಧ್ವಜವಿರುವುದು ಕಾಣಬರುತ್ತದೆ. ಎರಡು ಪೈಸೆ ಮೌಲ್ಯದ ಉಸ್ಮಾನೀ ನಾಣ್ಯದ ಮುಮ್ಮುಖದಲ್ಲಿ ಸೊಂಡಿಲನ್ನು ಎತ್ತಿಕೊಂಡಿರುವ ಆನೆ, ಬಾಲದ ಮೇಲೆ ನಾಣ್ಯ ಮುದ್ರಣ ಗೊಂಡ ಕಾಲ ಮತ್ತು ಆನೆಯ ಮೇಲೆ ಧ್ವಜದ ಚಿತ್ರಗಳಿವೆ. ಇದರ ಹಿಮ್ಮುಖದಲ್ಲಿ ನಾಣ್ಯದ ಟಂಕಸಾಲೆಯ ಹೆಸರು ಕಾಣಬರುತ್ತದೆ. ಅತ್ಯಂತ ಚಿಕ್ಕ ಮೌಲ್ಯದ 1.8 ಪೈಸಾ ಅಥವಾ ಕುತ್ಬ್ ತಾಮ್ರನಾಣ್ಯ ಸುಮಾರು 18 ರಿಂದ 21 ಗ್ರೇನ್ ತೂಗುತ್ತದೆ. ಆ ನಾಣ್ಯ ಶ್ರೀರಂಗಪಟ್ಟಣ, ನಗರ, ಬೆಂಗಳೂರು, ಚಿತ್ರದುರ್ಗ ಮತ್ತು ಸತ್ಯಮಂಗಲ ಟಂಕಸಾಲೆಗಳಲ್ಲಿ ಮಾತ್ರ ಅಚ್ಚುಹಾಕಲ್ಪಟ್ಟಿತು. ಈ ನಾಣ್ಯಗಳಲ್ಲಿ ಮುಮ್ಮುಖದಲ್ಲಿ ಆನೆಯ ಚಿತ್ರ ಮತ್ತು ಹಿಮ್ಮುಖದಲ್ಲಿ ನಾಣ್ಯದ ಮತ್ತು ಟಂಕಸಾಲೆಯ ಹೆಸರು ಮುದ್ರಿತವಾಗಿದೆ. (ಎ.ವಿ.ಎನ್.)

**ವಾಸ್ತುರಚನೆಗಳು :** ಟಿಪ್ಪುವಿನ ಕಾಲದ ವಾಸ್ತುಕೃತಿಗಳನ್ನು ಸ್ಥೂಲವಾಗಿ ಎರಡು ಬಗೆಯಾಗಿ ವಿಂಗಡಿಸಬಹುದು. ರಕ್ಷಣಾದೃಷ್ಟಿಯಿಂದ ರಾಜ್ಯದ ನಾನಾ ಭಾಗಗಳಲ್ಲಿ ಕಟ್ಟಿಸಿರುವ ಕೋಟೆಕೊತ್ತಲಗಳು, ಮದ್ದಿನ ಮನೆಗಳು, ಭದ್ರವಾದ ನೆಲಮಾಳಿಗೆಯ ಕಾರಾಗೃಹಗಳು ಒಂದು ಬಗೆಯಾದರೆ ಅರಮನೆಗಳು, ಮಸೀದಿಗಳು, ಸಮಾಧಿಗಳು ಇನ್ನೊಂದು ಬಗೆಯವು.

ಹೈದರ್ ಮತ್ತು ಟಿಪ್ಪು ಹೊಸ ಹೊಸ ಪ್ರದೇಶಗಳನ್ನು ಗೆದ್ದು ರಾಜ್ಯವನ್ನು ವಿಸ್ತರಿಸುತ್ತ ಹೋದಂತೆಲ್ಲ ಅಲ್ಲಲ್ಲಿ ಸುಭದ್ರವಾದ ಕೋಟೆಗಳನ್ನು ನಿರ್ಮಿಸುತ್ತ ಹೋದರು; ಹಿಂದೆಯೇ ನಿರ್ಮಿಸಿದ್ದ ಕೋಟೆಗಳನ್ನು ಹೊಸ ಯುದ್ಧತಂತ್ರಕ್ಕೆ ಅಳವಡಿಸಿದರು. ದೊಡ್ಡ ದೊಡ್ಡ ಕಲ್ಲಿನ ತುಂಡುಗಳನ್ನು ಪೇರಿಸಿ ಕಟ್ಟಲಾಗಿದ್ದ ಹಳೆಯ ಹಿಂದು ರೀತಿಯ ಕೋಟೆಗಳು ಫಿರಂಗಿಯ ಗುಂಡಿನ ಏಟುಗಳಿಗೆ ಉರುಳಿ ಬೀಳುವ ಸಂಭವ ಹೆಚ್ಚಾಗಿದ್ದುದರಿಂದ ಟಿಪ್ಪು ಕೋಟೆಗಳಿಗೆ ಗಾರೆ-ಗಚ್ಚುಗಳನ್ನು ಹಾಕಿ ಭದ್ರಪಡಿಸಿದ. ಜೊತೆಗೆ ಮದ್ದು ಗುಂಡುಗಳ ಬಳಕೆಗೆ ಉಪಯೋಗವಾಗುವಂತೆ ಕೋಟೆಯ ಮೇಲಿನ ಅಡ್ಡಗೋಡೆಗಳಲ್ಲಿ ಕಿಂಡಿಗಳನ್ನು, ಫಿರಂಗಿಗಳನ್ನು ಸುತ್ತಲು ತಿರುಗಿಸಿ ಹಾರಿಸುವುದಕ್ಕೆ ಅನುಕೂಲವಾಗುವಂತೆ ಗುಂಡು ಬತೇರಿಗಳನ್ನು, ಈ ಕೋಟೆಗಳಲ್ಲಿ ಅಳವಡಿಸಿದ. ದೇವನಹಳ್ಳಿ, ಬಳ್ಳಾರಿ, ಚಿತ್ರದುರ್ಗ, ಬೆಂಗಳೂರು, ಪಾವಗಡ, ಮಿಡಿಗೇಶಿ, ರಹಮಾನ್ ದುರ್ಗ ಮುಂತಾದೆಡೆಗಳಲ್ಲೆಲ್ಲ ಈಗಲೂ ಸುಭದ್ರವಾಗಿ ನಿಂತಿರುವ ಕೋಟೆಗಳನ್ನು ನೋಡಬಹುದು. ಅನೇಕ ಕೋಟೆಗಳನ್ನು ಕಟ್ಟುವಲ್ಲಿ ಫ್ರೆಂಚ್ ವಾಸ್ತುತಜ್ಞರ ಸಹಾಯವನ್ನು ಪಡೆದು ಐರೋಪ್ಯ ವಾಸ್ತುತಂತ್ರಗಳನ್ನು ಅಳವಡಿಸಲಾಗಿದೆ. ಟಿಪ್ಪುವಿನ

ರಾಜಧಾನಿಯಾಗಿದ್ದ ಶ್ರೀರಂಗಪಟ್ಟಣದ ಕೋಟೆಯಲ್ಲಿ ಕೋಟೆ ಗೋಡೆಸಾಲುಗಳು ಕೆಲವು ಕಡೆ ಎರಡು ಮೂರು ಇದ್ದು, ಇವು ಇಟ್ಟಿಗೆಗಾರೆಗಳಿಂದ ನಿರ್ಮಿಸಿದ್ದರೂ ಭದ್ರವಾಗಿವೆ. ಯುದ್ಧಕಾಲದಲ್ಲಿ ಕೆಲವು ಕೋಟೆಯ ಮೇಲೆ ಯೋಧರಿಗೆ ಮದ್ದನ್ನು ಸರಬರಾಜು ಮಾಡಲು ಕೋಟೆಗೆ ಸಮೀಪವಾಗಿ ಅಲ್ಲಲ್ಲಿ ಅರ್ಧಭಾಗ ಭೂಮಿಯಲ್ಲಿಯೇ ಇರುವಂತೆ ಗುಂಡು ಹೊಡೆದರೂ ಬಿರಿಯಬಾರದ ಅತ್ಯಂತ ಭದ್ರವಾದ ದಪ್ಪಗೋಡೆಗಳೂ ಇಳಿಜಾರು ಚಾವಣಿಗಳಿಂದ ಕಟ್ಟಿರುವ ಮದ್ದಿನ ಮನೆಗಳೂ ಸೆರೆಸಿಕ್ಕ ಶತ್ರುಗಳನ್ನು ಕಟ್ಟಿಹಾಕಲು ಕೋಟೆಯ ಬುಡದಲ್ಲಿಯೇ ನಿರ್ಮಿಸಿದ್ದ ತಗ್ಗಾದ ಗುಹೆಯಂತಿರುವ ಕಟ್ಟಡಗಳೂ ಟಿಪ್ಪುವಿನ ಕಾಲದ ವಿಶಿಷ್ಟ ಕಟ್ಟಡಗಳು. ಶ್ರೀರಂಗಪಟ್ಟಣದ ಕೋಟೆಯಲ್ಲಿರುವ ಇನ್ಮನ್ ಮತ್ತು ಕರ್ನಲ್ ಬೈಲಿಯ ಹೆಸರಿನ (ಅವರನ್ನು ಬಂಧಿಸಿದ್ದ) ನೆಲಮಾಳಿಗೆಗಳು ಇಟ್ಟಿಗೆಗಾರೆಯಿಂದ ಕಟ್ಟಿದ್ದು ದಪ್ಪನಾದ ಚೌಕ ಕಂಬಗಳ ಸಾಲು ಮತ್ತು ಕಮಾನುಗಳೊಡನೆ ಭೂಮಿಯ ಒಳಭಾಗಕ್ಕೆ ಹೆಚ್ಚು ಇಳಿದಿವೆ. ಇವುಗಳಲ್ಲಿ ಗೋಡೆಗೆ ಸೇರಿಸಿರುವ ಕಲ್ಲುಗಳ ಸಾಲಿದ್ದು ಅವುಗಳ ಕಿಂಡಿಗಳಿಗೆ ಶತ್ರುಕೈದಿಗಳನ್ನು ಸರಪಣಿಯಿಂದ ಬಿಗಿಯಲಾಗುತ್ತಿತ್ತು. ಪೂರ್ವದಿಕ್ಕಿನಲ್ಲಿರುವ ಕೋಟೆಯ ಬಾಗಿಲುಗಳ ಮುಂದಿನ ಕಂದಕದ ಮೇಲೆ ಹಾದುಹೋಗಲು ತೂಗುಸೇತುವೆಗಳನ್ನು ನಿರ್ಮಿಸಿದ್ದು ಶತ್ರುದಾಳಿಯ ಸಮಯದಲ್ಲಿ ಆ ಸೇತುವೆಯನ್ನು ಮೇಲಕ್ಕೆತ್ತುವ ವ್ಯವಸ್ಥೆ ಇದ್ದುದನ್ನು ಈಗಲೂ ಕಾಣಬಹುದು. ಬೆಂಗಳೂರಿನಲ್ಲಿಯೂ ಕೋಟೆಯ ಬಳಿ ಮದ್ದಿನ ಮನೆಗಳಿದ್ದುವು. ಈಗ ಒಂದು ಮಾತ್ರ ಉಳಿದುಬಂದಿದೆ.

ಸಕಲೇಶಪುರಕ್ಕೆ ಸು.6ಕಿಮೀ ದೂರದಲ್ಲಿ ಮಂಜರಾಬಾದ್ (ನೋಡಿ) ಎಂಬಲ್ಲಿ 200ಅಡಿ ಎತ್ತರದ ಒಂದು ಜಂಬುಕಲ್ಲಿನ ಗುಡ್ಡದ ಮೇಲಿರುವ ಟಿಪ್ಪು ಕಟ್ಟಿಸಿದ ಒಂದು ಚಿಕ್ಕ ಕೋಟೆಯ ವಿನ್ಯಾಸ ಅಪರೂಪವಾದುದು. ಅಷ್ಟಕೋನಾಕಾರದ ನಕ್ಷತ್ರದಂತಿರುವ ಆ ಕೋಟೆಯ ಪ್ರವೇಶದ್ವಾರದ ಮುಂದೆ ಮತ್ತೊಂದು ಅಡ್ಡ ಗೋಡೆಯಿದ್ದು ಒಳಹೋಗಬೇಕಾದರೆ ಮೂರು ಬಾಗಿಲುಗಳುಂಟು. ಹೊರಬಾಗಿಲು ಅರೆಗೋಲಾಕೃತಿಯ ಕಮಾನು, ಬಳ್ಳಿಸುರುಳಿ ಮತ್ತು ಹುಲಿಯ ಪಟ್ಟೆಗಳ ಅಲಂಕರಣಗಳಿಂದ ಕೂಡಿದ ದ್ವಾರಬಂಧಗಳಿಂದ ಕೂಡಿ ದ್ವಾರದ ಒಳಚಾವಣಿಯಲ್ಲಿ ಕೋಟೆಯ ವಿನ್ಯಾಸವನ್ನು ಬಿಡಿಸಿದೆ. ಎಂಟು ಮೂಲೆಗಳಲ್ಲಿಯೂ ಗುಂಡಾದ ರಕ್ಷಕರ ಕೋಣೆಗಳಿದ್ದು, ಕೋಟೆಯ ನಡುವೆ ಎತ್ತರವಾದ ಬುರುಜು ಮತ್ತು ಕೊಳಗಳಿವೆ. ಈ ಕೋಟೆಯಿಂದ ಸುತ್ತಮುತ್ತಲ ನೋಟ ರಮಣೀಯವಾಗಿದೆ.



ದರಿಯಾದೌಲತ್, ಶ್ರೀರಂಗಪಟ್ಟಣ

ಟಿಪ್ಪು ಕಟ್ಟಿಸಿದ ಇತರ ಕಟ್ಟಡಗಳಲ್ಲಿ ಮುಖ್ಯವಾದುವುಗಳೆಲ್ಲ ಶ್ರೀರಂಗಪಟ್ಟಣದಲ್ಲಿಯೇ ಇವೆ. ಕೋಟೆಯೊಳಗೆ ರಂಗನಾಥಸ್ವಾಮಿ ದೇವಾಲಯದ ಎದುರಿನಲ್ಲಿ ಟಿಪ್ಪುವಿನ ಅರಮನೆಯಿತ್ತು. ಇದು ಪಶ್ಚಿಮಾಭಿಮುಖವಾಗಿದ್ದು ದರಿಯಾದೌಲತ್ತಿನ ಮಾದರಿಯಲ್ಲಿಯೇ ಈ ಅರಮನೆಯೂ ಇದ್ದುದಾಗಿ ತೋರುತ್ತದೆ. ಬ್ರಿಟಿಷರು ಶ್ರೀರಂಗಪಟ್ಟಣವನ್ನು ಆಕ್ರಮಿಸಿದ ಕೂಡಲೇ ಈ ಕಟ್ಟಡವನ್ನು ಹಾಳುಗೆಡವಿದರು. ಕೋಟೆಯಿಂದ ಹೊರಗೆ ಪೂರ್ವಕ್ಕೆ ಒಂದು ದೊಡ್ಡದಾದ ತೋಟದ ನಡುವೆ 1784ರಲ್ಲಿ ಇವನು ಕಟ್ಟಿಸಿದ ಬೇಸಿಗೆ ಅರಮನೆ ದರಿಯಾ ದೌಲತ್ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇದು ಈಗ ಉಳಿದು ಬಂದಿರುವ ಇವನ ಕಟ್ಟಡಗಳಲ್ಲಿಯೇ ಅತ್ಯಂತ ಸುಂದರವಾದುದು. ಎತ್ತರವಾದ ಜಗತಿಯ ಮೇಲೆ ಕಮಲದಾಕೃತಿಯಲ್ಲಿ ಬುಡ ದಪ್ಪನಾಗಿದ್ದು ಮೇಲೇರುತ್ತ ಕಿರಿದಾಗುವ ಎತ್ತರವಾದ ಮರದ ಕಂಬಗಳುಳ್ಳ ದೊಡ್ಡ ಸೆಜ್ಜೆ. ಅದರ ಇಕ್ಕೆಲಗಳಲ್ಲಿಯೂ ಕಿರುಕೋಣೆಗಳಿದ್ದು ಪಾರಸೀ ಅರಮನೆಗಳ ಮಾದರಿಯನ್ನನುಸರಿಸಿ ಕಟ್ಟಿರುವ ಈ ಕಟ್ಟಡ ಭಾರತದಲ್ಲಿಯೇ ಅಪರೂಪವಾದುದು. ಈ ಅರಮನೆಯ ಗೋಡೆಗಳು, ಚಾವಣಿಗಳು, ಕಮಾನುಗಳು, ಕಂಬಗಳು ಇವುಗಳ ಮೇಲೆಲ್ಲ ಗಾಢವಾದ ಬಣ್ಣಗಳನ್ನು ಉಪಯೋಗಿಸಿ ರಚಿಸಿರುವ ಚಿತ್ರಗಳು ತುಂಬಿವೆ. ಹೈದರ್ ಮತ್ತು ಟಿಪ್ಪು ಬ್ರಿಟಿಷರ ಮೇಲೆ ನಡೆಸಿದ ಯುದ್ಧಚಿತ್ರಗಳು, ಅವರ ಕಾಲದಲ್ಲಿ ಭಾರತದಲ್ಲಿದ್ದ ನಾನಾ ರಾಜರು, ನವಾಬರು, ಅಧಿಕಾರಿಗಳ ವ್ಯಕ್ತಿಚಿತ್ರಗಳು, ಬಗೆಬಗೆಯ ಗಿಡಬಳ್ಳಿಗಳು ಮತ್ತು ಇತರ ವಿನ್ಯಾಸಗಳಿಂದ ಅತ್ಯಂತ ಆಕರ್ಷಕವಾಗಿ ಚಿತ್ರಿತವಾಗಿವೆ.



ಟಿಪ್ಪು ಸಮಾಧಿ, ಶ್ರೀರಂಗಪಟ್ಟಣ

ಟಿಪ್ಪು ಕಟ್ಟಿಸಿದ ಮತ್ತೊಂದು ಕಟ್ಟಡ ಹೈದರನ ಸಮಾಧಿ. ಕಾವೇರಿಯ ಕವಲುಗಳು ಮತ್ತೆ ಕೂಡುವ ಸ್ಥಳದಲ್ಲಿ ವಿಶಾಲವಾದ ತೋಟದ ನಡುವೆ ಕಟ್ಟಿರುವ ಈ ಗುಂಬಜ್ ವಿಶಾಲವಾದ ಜಗತಿಯ ಮೇಲಿರುವ ಚೌಕವಿನ್ಯಾಸದ ಕಟ್ಟಡ. ಸುತ್ತಲೂ ಅತಿನುಣುಪಾಗಿ ಹೊಳಪು ಬರುವಂತೆ ಕಡೆದಿರುವ ಕರಿಯ ಕಲ್ಲಿನ ಕಂಬಗಳಿರುವ ಕೈಸಾಲೆ, ನಾಲ್ಕು ಕಡೆಗೂ ಅದೇ ರೀತಿಯ ಕಲ್ಲಿನ ಬಾಗಿಲುವಾಡಗಳನ್ನುಳ್ಳ ಚೌಕ, ಸಮಾಧಿ ಕೋಣೆ, ಚೌಕನಾಗಿಯೇ ಮತ್ತೊಂದು ಅಂತಸ್ತು ಮೇಲೆದ್ದು ಅದರ ಮೇಲೆ ದೊಡ್ಡದಾದ ಗುಮ್ಮಟವಿರುವ ಈ ಕಟ್ಟಡ ಮುಸ್ಲಿಂ ಶೈಲಿಯಲ್ಲಿಯೇ ವಿಶಿಷ್ಟವಾದುದಾದರೂ ಇದರ ಎತ್ತರಕ್ಕೆ ಸುತ್ತಲಿನ ಕೈಸಾಲೆ ತಗ್ಗಾಗಿದ್ದು ತೂಕ ತಪ್ಪಿದಂತಿದೆ. ಕೋಟೆಯೊಳಗೆ 1787ರಲ್ಲಿ ಟಿಪ್ಪು ಕಟ್ಟಿಸಿದ ಜುಮ್ಮಾಮಸೀದಿಯ ಮುಖ್ಯ ಆಕರ್ಷಣೆ ಅದರ ಎರಡು ಉನ್ನತವಾದ ಮಿನಾರುಗಳು. ಇದು ಹತ್ತಿಹೋಗಲು ಸುತ್ತಿಕೊಂಡು ಮೇಲೇರುವ ಮೆಟ್ಟಲು, ಅಷ್ಟಕೋನಾಕಾರದ ಹೊರಮೈ ಮೇಲೆ ಪುಷ್ಪಾಲಂಕರಣ, ಮೇಲೆ ಗುಮ್ಮಟ, ತುದಿಯಲ್ಲಿ ಒಂದು ರೀತಿಯ ಲೋಹ ಕಲಶ-ಇವುಗಳಿಂದ ಕೂಡಿ ಆಕರ್ಷಕವಾಗಿವೆ.

ಟಿಪ್ಪುವಿನ ಮತ್ತೊಂದು ಭವ್ಯವಾದ ಕಟ್ಟಡ ಬೆಂಗಳೂರಿನಲ್ಲಿರುವ ಇವನ ಅರಮನೆ. ದರಿಯಾ ದೌಲತ್ ಮಾದರಿಯಲ್ಲಿಯೇ ತೆರೆದ ಸಜ್ಜೆಗಳಿಂದ ಕೂಡಿದ ಈ ಅರಮನೆಗೆ ಅಷ್ಟು ಎತ್ತರವಾದ ಜಗತಿಯಿಲ್ಲ. ಕಟ್ಟಡದ ಒಳಚಾವಣಿಗಳು, ಕಂಬಗಳು, ಕಮಾನುಗಳು ಚಿತ್ರಿತವಾಗಿದ್ದ ಕುರುಹು ಅಲ್ಲಲ್ಲಿ ಉಳಿದಿವೆ. ಚನ್ನಪಟ್ಟಣದಲ್ಲಿರುವ

ಅಕಲ್‌ಷಾ ಖಾದ್ರಿ ದರ್ಗಾ ಮತ್ತು ಸಯ್ಯದ್ ಇಬ್ರಾಹೀಂ ಗೋರಿಗಳು ಕ್ರಮವಾಗಿ ಹೈದರನ ಗುರುವಿನ ಮತ್ತು ಬೆಂಗಳೂರಿನ ಸೇನಾಧಿಕಾರಿಯ ಗೋರಿಗಳು ಚೌಕವಾದ ವಿನ್ಯಾಸ, ಮುಗಲ್ ರೀತಿಯಲ್ಲಿರುವ ಕುಳ್ಳಾದ ಗುಮ್ಮಟ, ಸುತ್ತಲೂ ಅಗಲವಾದ ವರಾಂಡ, ಈ ವರಾಂಡಕ್ಕೆ ದೇವಾಲಯಗಳ ಕಂಬಗಳಂತಿರುವ ಕಲ್ಲಿನ ಕಂಬಗಳಿದ್ದು-ಇವು ಸರಳವಾದ ಮತ್ತು ಸಾಮಾನ್ಯವಾದ ಕಟ್ಟಡಗಳು. ಇವಲ್ಲದೆ ಚಿತ್ರದುರ್ಗ, ನಂದಿದುರ್ಗ, ರಹಮಾನ್ ದುರ್ಗ, ನಗರ ಮುಂತಾದ ಅನೇಕ ಕಡೆಗಳಲ್ಲಿಯೂ ಟಿಪ್ಪು ತನ್ನ ವಾಸಕ್ಕಾಗಿ ಚಿಕ್ಕ ಚಿಕ್ಕ ಸೌಧಗಳನ್ನು ಕಟ್ಟಿಸಿದ್ದ. ಆದರೆ ಅವು ಅಷ್ಟೇನೂ ಆಕರ್ಷಕವಲ್ಲದ ಕಟ್ಟಡಗಳು. ಕೆಲವು ಮಾತ್ರ ಈಗ ಉಳಿದುಬಂದಿವೆ. ಈಗ ಇಲ್ಲವಾಗಿರುವ ಕಟ್ಟಡಗಳಲ್ಲಿ ಮೈಸೂರಿನಲ್ಲಿದ್ದ ಅವನ ಅರಮನೆಯೂ ಒಂದು.

ಕರ್ನಾಟಕದ ದಕ್ಷಿಣ ಭಾಗದಲ್ಲಿರುವ ಮುಸ್ಲಿಂ ರೀತಿಯ ಕೆಲವೇ ಕಟ್ಟಡಗಳಲ್ಲಿ ಟಿಪ್ಪು ಕಟ್ಟಿಸಿದ ಕಟ್ಟಡಗಳು ಅತ್ಯಂತ ಪ್ರಾಮುಖ್ಯವನ್ನು ಪಡೆದಿವೆ. (ಎಂ.ಎಚ್.)

**ಟೇಕಲ್ :** ಕೋಲಾರ ಜಿಲ್ಲೆ ಮಾಲೂರು ತಾಲ್ಲೂಕಿನಲ್ಲಿರುವ ಗ್ರಾಮ. ಬೆಂಗಳೂರು-ಮದರಾಸು ರೈಲುಮಾರ್ಗದಲ್ಲಿ ಮಾಲೂರು-ಬಂಗಾರಪೇಟೆ ಮಧ್ಯದಲ್ಲಿರುವ ನಿಲ್ದಾಣ. ಕೋಲಾರದಿಂದ 18ಕಿಮೀ ದೂರದಲ್ಲಿದೆ. ಟೇಕಲ್ ಮಾರ್ಗವಾಗಿ ಮಾಲೂರಿನಿಂದ ಬಂಗಾರಪೇಟೆಗೆ ದೊಡ್ಡ ರಸ್ತೆ ಸಹ ಇದೆ.

ಹಿಂದೆ ಈ ಊರು ಟೇಕಲ್‌ನಾಡು ಎಂಬ ಪ್ರಾಂತ್ಯದ ಕೇಂದ್ರವಾಗಿತ್ತು. ಇಲ್ಲಿ ಹಲವು ಐತಿಹಾಸಿಕ ಅವಶೇಷಗಳಿವೆ. ಇಲ್ಲಿಯ ವರದರಾಜ ದೇವಸ್ಥಾನ ಸುಂದರವಾದ ದೊಡ್ಡ ಗುಡಿ. ಅದರ ಮಹಾದ್ವಾರ ದ್ರಾವಿಡಶೈಲಿಯಲ್ಲಿದ್ದು ಪಶ್ಚಿಮಾಭಿಮುಖವಾಗಿದೆ. ಅನೇಕ ತಮಿಳು ಶಾಸನಗಳನ್ನು ಹೊಂದಿದೆ. ಜೀರ್ಣವಾಗಿರುವ ಶಿಂಗಪ್ಪೆರುಮಾಳ್ ದೇವಸ್ಥಾನ ಕೂಡ ಉತ್ತಮ ಕಟ್ಟಡವಾಗಿದ್ದು ಶಿಲ್ಪಿತ ಶಿಲಾಸ್ತಂಭಗಳಿಂದ ಕೂಡಿದೆ. ಆಂಜನೇಯ ದೇವಸ್ಥಾನದಲ್ಲಿ ಕೈ ಮುಗಿದು ನಿಂತಿರುವ 7' ಎತ್ತರದ ಆಂಜನೇಯ ಮೂರ್ತಿ ಇದೆ. ಭಗ್ನವಾಗಿರುವ ಪಟಾಳಮ್ಮ ದೇವಸ್ಥಾನದಲ್ಲಿ 3' ಎತ್ತರದ 4 ಕೈಗಳುಳ್ಳ ಕುಳಿತ ಭಂಗಿಯಲ್ಲಿರುವ ದೇವತೆಯಿದೆ. ಈ ಗ್ರಾಮದಲ್ಲಿ ಇನ್ನೂ ಅನೇಕ ಪಾಳುಬಿದ್ದ ದೇವಾಲಯಗಳಿವೆ. ಒಂದು ಕಾಲದಲ್ಲಿ ಈ ಗ್ರಾಮ 101 ದೇವಾಲಯಗಳನ್ನೂ 101 ಹೊಂಡಗಳನ್ನೂ ಹೊಂದಿತ್ತೆಂದು ಪ್ರತೀತಿ.

ದೊಡ್ಡ ಬಂಡೆ ಮತ್ತು ಶಿಲೆಗಳಿಂದ ಕೂಡಿರುವ ಟೇಕಲ್ ಬೆಟ್ಟದಲ್ಲಿ ಭೀಮನ ಗರಡಿಯಾಗಿತ್ತೆಂದು ಪ್ರಸಿದ್ಧವಾಗಿರುವ ಒಂದು ಗುಹೆಯಿದೆ. ಇದಕ್ಕೆ ಹೋಗುವ ಮಾರ್ಗ ಬಹಳ ಕಠಿಣ. ಗುಹೆಯು ಅಳತೆ 150'x70'x50' ಪದರಗಳಿಂದ ಕೂಡಿದ ಮೃದುಮಣ್ಣಿನ ನೆಲದಲ್ಲಿ ಅನೇಕ ಗುಂಡಿಗಳಿವೆ. ಭೀಮ ಬಳಿದುಕೊಳ್ಳಲು ಕೈಬೊಗಸೆಯಲ್ಲಿ ಮಣ್ಣನ್ನು ಎತ್ತಿಕೊಳ್ಳುತ್ತಿದ್ದುದರಿಂದ ಆ ಗುಂಡಿಗಳು ಆದುವು ಎಂದು ನಂಬಿಕೆ.

ಟೇಕಲ್‌ನಿಂದ ಉತ್ತರಕ್ಕೆ ಭೂಪತಿಯಮ್ಮನ ಗುಡ್ಡ ಇದೆ. ಹಿಂದೆ ಅರಸರು ಹಣ ಬಚ್ಚಿಡುತ್ತಿದ್ದರೆಂದು ಹೇಳಲಾಗುವ ಇಲ್ಲಿನ ಕಿರುಗವಿಯೊಂದನ್ನು ರೊಕ್ಕದ ಗವಿಯೆಂದು ಕರೆಯುತ್ತಾರೆ. ಹಿಂದೆ ಟೇಕಲ್‌ನಲ್ಲಿ ಉಪ್ಪು ತಯಾರಿಸಲಾಗುತ್ತಿತ್ತು. (ಕೆ.ವಿ.ಟಿ.)

**ಟೇಲರ್, ಮೆಡೋಸ್ :** 1808-1876. ಭಾರತದಲ್ಲಿದ್ದ ಒಬ್ಬ ಬ್ರಿಟಿಷ್ ಅಧಿಕಾರಿ, ಕಾದಂಬರಿಕಾರ, ಪುರಾತತ್ತ್ವಜ್ಞ. ಫಿಲಿಪ್ ಮೆಡೋಸ್ ಟೇಲರ್ ಎಂಬುದು ಇವನ ಪೂರ್ಣ ಹೆಸರು. ಲಿವರ್‌ಪೂಲ್‌ನ ವರ್ತಕನೊಬ್ಬನ ಮಗನಾದ ಈತ 1808ರಲ್ಲಿ ಹುಟ್ಟಿದ. ಇವನು ತನ್ನ 16ನೆಯ ವಯಸ್ಸಿನಲ್ಲಿ ಭಾರತಕ್ಕೆ ಬಂದು ಹೈದರಾಬಾದ್ ನಿಜಾಮನ ಸೈನ್ಯಕ್ಕೆ ಸೇರಿ ದೊಡ್ಡ ಹುದ್ದೆಗೆ ಏರಿದ. ಸು.1840ರಿಂದ ಸುರಪುರ ನಾಯಕರ ಸಂಸ್ಥಾನದ ಆಗಿನ ಬ್ರಿಟಿಷ್ ಸರ್ಕಾರದ ರಾಜಕೀಯ ಪ್ರತಿನಿಧಿಯಾಗಿ, ಸಂಸ್ಥಾನದ ಏಳಿಗೆಗಾಗಿ ಶ್ರಮಿಸಿ ದಕ್ಷನೆಂದು ಪ್ರಸಿದ್ಧಿಪಡೆದ. ಇವನು ಬರುವ ಮುನ್ನ ಆ ಸಂಸ್ಥಾನದ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿ ತೀರ ಹದಗೆಟ್ಟಿತ್ತು. ಕೃಷ್ಣಪ್ಪನಾಯಕನ ಮರಣಾನಂತರ ಅವನ ಹಿರಿಯ ರಾಣಿ ಈಶ್ವರಮ್ಮ ತನ್ನ ಚಿಕ್ಕವಯಸ್ಸಿನ ಮಗ ವೆಂಕಟಪ್ಪನಾಯಕನ ಹೆಸರಿನಲ್ಲಿ ಸಂಸ್ಥಾನವನ್ನು ಆಳುತ್ತಿದ್ದಳು. ರಾಜಮನೆತನದಲ್ಲಿ ಅಧಿಕಾರಕ್ಕಾಗಿ ನಡೆಯುತ್ತಿದ್ದ ಒಳಜಗಳಗಳನ್ನು ತಪ್ಪಿಸಲು ಟೇಲರ್ ತಾಳ್ಮೆಯಿಂದಲೂ ಚತುರತೆಯಿಂದಲೂ ಪ್ರಯತ್ನಿಸಿದ. ಸಂಸ್ಥಾನದ ಸುಧಾರಣೆಗಾಗಿ ದುಡಿದ. 10 ವರ್ಷದ ವೆಂಕಟಪ್ಪನಾಯಕನಿಗೆ ಸಿಂಹಾಸನದ ಮೇಲೆ ಕೂರಿಸಿ, ಪಟ್ಟಾಭಿಷೇಕ ನೆರವೇರಿಸಿದ. ವೆಂಕಟಪ್ಪನಾಯಕನಿಗೆ ವಿದ್ವಾಂಸರಿಂದ ಶಿಕ್ಷಣ ಕೊಡಿಸಿದ. ರಾಜ್ಯದಲ್ಲಿ ರೈತರಿಗಾಗುತ್ತಿದ್ದ ತೊಂದರೆಗಳನ್ನು ನಿವಾರಿಸಿ ಸುರಪುರದ ಮೇಲೆ ಅನ್ಯಾಯದ ಸಾಲದ ಹೊರೆ ಏರಿಸಿದ್ದನ್ನು ತಪ್ಪೆಂದು ತೋರಿಸಿ ಅವರಿಂದಲೇ ಸುರಪುರಕ್ಕೆ 11 ಲಕ್ಷ ರೂ. ಬರುವ ಹಾಗೆ ಮಾಡಿದ. ಇವನ ಸುವ್ಯವಸ್ಥಿತ ಆಡಳಿತದಿಂದ ಸಂಸ್ಥಾನದಲ್ಲಿ ದರೋಡೆಗಳು ಕಡಿಮೆಯಾದುವು. ಜೋನಾಳ, ಕಚಕನೂರು ಮುಂತಾದೆಡೆಗಳಲ್ಲಿ ಕೆರೆಗಳು ನಿರ್ಮಾಣವಾದುವು. ರಾಜ್ಯದ ಖರ್ಚನ್ನು ಕಡಿಮೆ ಮಾಡಿ ಆದಾಯವನ್ನು ಹೆಚ್ಚಿಸಿದ. ರಾಜ ವೆಂಕಟಪ್ಪನಾಯಕನು ಇವನಿಂದ ಬ್ರಿಟಿಷರ ರಾಜ್ಯ ಪದ್ಧತಿ, ಸ್ವಾಭಿಮಾನ, ಸ್ವಾತಂತ್ರ್ಯಪ್ರಿಯತೆ ಮುಂತಾದವನ್ನು ಕಲಿತುಕೊಂಡ. 1853ರ ಜೂನ್ 2ರಂದು ಟೇಲರ್ ಆಡಳಿತದ ಅಧಿಕಾರವನ್ನು ವೆಂಕಟಪ್ಪನಾಯಕನಿಗೆ ಒಪ್ಪಿಸಿ ಬೀರಾರ್ ಜಿಲ್ಲಾಧಿಕಾರಿಯ ಹುದ್ದೆ ವಹಿಸಿಕೊಂಡ. ರಾಜ ವೆಂಕಟಪ್ಪನಾಯಕ ಟೇಲರ್‌ನ ಪ್ರೀತಿಯ ಮತ್ತು ಉತ್ತಮ ಕಾರ್ಯಗಳ ಜ್ಞಾಪಕಾರ್ಥವಾಗಿ ಅವನು ಸುರಪುರದಲ್ಲಿ ವಾಸಿಸುತ್ತಿದ್ದ ಬಂಗ್ಲೆಯನ್ನು ಕೃತಜ್ಞತಾಪೂರ್ವಕವಾಗಿ 20,000 ರೂ.ಗಳಿಗೆ ಕೊಂಡ. ಇದನ್ನು ಟೇಲರ್ ಮಂಜಿಲ್ ಎಂದು ಕರೆಯುತ್ತಾರೆ. ಈಗ ಇದು ಕರ್ನಾಟಕ ಸರ್ಕಾರದ ಪುರಾತತ್ತ್ವ ಶಾಖೆಯ ರಕ್ಷಣೆಯಲ್ಲಿದೆ. ಇವನು ಹೈದರಾಬಾದ್ ಸಂಸ್ಥಾನದಲ್ಲಿ ರೆಸಿಡೆಂಟ್ ಜನರಲ್ ಆಗಿದ್ದಾಗ ಠಕ್ಕರನ್ನು ಅಡಗಿಸಿದ್ದು ಇವನ ಇನ್ನೊಂದು ಮುಖ್ಯ ಸಾಧನೆ.

ಕರ್ನಾಟಕ ಪ್ರಾಗಿತಿಹಾಸ ಸಂಶೋಧನೆಯಲ್ಲಿ ಟೇಲರ್‌ನ ಪಾತ್ರ ದೊಡ್ಡದು. ಈತ 1851-62ರಲ್ಲಿ ಸುರಪುರ ಭಾಗದಲ್ಲಿಯ ಹಗರಟಗಿ, ರಾಜನಕೋಳೂರು ಮತ್ತು ಚಿಕನಹಳ್ಳಿ, ಶಾಹಪುರ ತಾಲ್ಲೂಕಿನ ಶಾಹಪುರ, ವಿಭೂತಿಹಳ್ಳಿ ಮತ್ತು ಗೋಗಿ, ಜೇವರಗಿ ತಾಲ್ಲೂಕಿನ ಜೇವರಗಿ, ಆಂದೋಲಾ ಮುಂತಾದ ಕಡೆಗಳಲ್ಲಿ, ಕರ್ನಾಟಕದಲ್ಲೇ ಪ್ರಥಮ ಬಾರಿಗೆ, ಬೃಹತ್ ಶಿಲಾ ಸಂಸ್ಕೃತಿಯ ಕಲ್ಗೋರಿಗಳ ನೆಲೆಗಳನ್ನು ಶೋಧಿಸಿದ. ಅವುಗಳಲ್ಲಿ ಕೆಲವನ್ನು ಉತ್ಖನನ ಮಾಡಿದ. ಈ ಉತ್ಖನನಗಳಿಂದ ತಿಳಿದ ವಿಷಯಗಳನ್ನು ಸ್ಪಷ್ಟವಾದ, ಪ್ರಾಮಾಣಿಕವಾದ, ಆಗಿನ ಸಂಶೋಧನ ಮಟ್ಟದಿಂದ ಅತ್ಯುತ್ತಮವೆನ್ನಬಹುದಾದ, ವಿಮರ್ಶಾತ್ಮಕವಾದ ವಿವರಣೆಗಳಿಂದಲೂ ಚಿತ್ರಗಳಿಂದಲೂ ಕೂಡಿದ ಮೂರು ಲೇಖನಗಳನ್ನು ಜರ್ನಲ್ ಆಫ್ ದಿ ಬೆಂಗಾಲ್ ರಾಯಲ್ ಏಷ್ಯಾಟಿಕ್ ಸೊಸೈಟಿಯಲ್ಲೂ ಟ್ರಾನ್ಸಾಕ್ಷನ್ಸ್ ಆಫ್ ದಿ ರಾಯಲ್ ಐರಿಷ್ ಅಕಾಡೆಮಿಯಲ್ಲೂ ಪ್ರಕಟಿಸಿದ. ಈ ಲೇಖನಗಳನ್ನು ಸಂಗ್ರಹಿಸಿ ಹಿಂದಿನ ಹೈದರಾಬಾದ್ ಸರ್ಕಾರ ಮೆಗಾಲಿತಿಕ್ ರಿಮೇನ್ಸ್ ಇನ್ ದಿ ಡೆಕ್ಕನ್ ಎಂಬ ಪುಸ್ತಕವಾಗಿ ಪ್ರಕಟಿಸಿತು. ದಕ್ಷಿಣ ಭಾರತದ ಪ್ರಾಗಿತಿಹಾಸದಲ್ಲಿ ಒಂದು ವಿಶಿಷ್ಟಸ್ಥಾನ ಪಡೆದಿರುವ ಬೃಹತ್ ಶಿಲಾಸಂಸ್ಕೃತಿಯ ಬಗ್ಗೆ ಪ್ರಪ್ರಥಮ ಉತ್ಖನನ ನಡೆಸಿ ಶ್ರೇಷ್ಠಮಟ್ಟದ ಸಂಶೋಧನೆ ನಡೆಸಿದ ಕೀರ್ತಿ ಟೇಲರನದು. ಇವನು ಬ್ರಿಟಿಷ್ ಸರ್ಕಾರದಿಂದ ಸಿ.ಎಸ್.ಐ. ಪ್ರಶಸ್ತಿ ಗಳಿಸಿದ.

ಭಾರತದ ಜನಜೀವನವನ್ನು ಕುರಿತು ಇವನು ಕೆಲವು ಕಾದಂಬರಿಗಳನ್ನು ಬರೆದಿದ್ದಾನೆ. ಕನ್ಫೆಷನ್ಸ್ ಆಫ್ ಎ ಠಗ್ (1839), ತಾರಾ (1863), ಎ ನೋಬಲ್ ಕ್ವೀನ್ (1878) ಇವು ಮುಖ್ಯ ಕೃತಿಗಳು. ದಿ ಸ್ಟೋರಿ ಆಫ್ ಮೈ ಲೈಫ್ ಎಂಬುದು ಈತನ ಆತ್ಮಕಥೆ. (ಎ.ಎಸ್.,ಎಚ್.ವಿ.ಎಸ್.)

# ಡ

**ಡಂಬಳ :** ಗದಗ ಜಿಲ್ಲೆ ಮುಂಡರಗಿ ತಾಲ್ಲೂಕಿನಲ್ಲಿರುವ ಒಂದು ಗ್ರಾಮ. ಗದಗಿನ ಆಗ್ನೇಯಕ್ಕೆ ಸು.20ಕಿಮೀ ದೂರದಲ್ಲಿದೆ. ಸುಂದರ ಪ್ರಾಚೀನ ದೇವಾಲಯಗಳಿಂದ ಪ್ರಸಿದ್ಧವಾಗಿದೆ. 1862ರಲ್ಲಿ ಈ ಊರು ಮುಂಡರಗಿ ತಾಲ್ಲೂಕಿಗೆ ವರ್ಗಾವಣೆಯಾಗುವವರೆಗೆ ಇದೇ ಆಡಳಿತ ವಿಭಾಗದ ಕೇಂದ್ರವಾಗಿತ್ತು. ದ್ರಾಕ್ಷಿ, ಸೀಬೆ ಇಲ್ಲಿಯ ವಿಶೇಷ ಬೆಳೆಗಳು. ಕೈಮಗ್ಗದಲ್ಲಿ ಕಂಬಳಿಗಳನ್ನು ತಯಾರಿಸುವ ಉದ್ಯಮ ಈ ಊರಲ್ಲಿದೆ.

10-12ನೆಯ ಶತಮಾನಗಳಲ್ಲಿ ಇದಕ್ಕಿದ್ದ ಹೆಸರು ಧರ್ಮಪುರ ಅಥವಾ ಧರ್ಮವೊಳಲ್. 6ನೆಯ ವಿಕ್ರಮಾದಿತ್ಯನ ಅರಸಿ ಲಕ್ಷ್ಮೀದೇವಿ ಇಲ್ಲಿಂದ ಆಳುತ್ತಿದ್ದಳು. ಇಲ್ಲಿ ದೊರಕಿರುವ ಒಂದು ಶಾಸನದಿಂದ ಈ ಊರು 10-12ನೆಯ ಶತಮಾನಗಳಲ್ಲಿ ಬೌದ್ಧಕೇಂದ್ರವಾಗಿತ್ತೆಂದೂ ಬುದ್ಧ ಹಾಗೂ ತಾರಾ ದೇವತೆಗಳಿದ್ದ ಎರಡು ವಿಹಾರಗಳಿದ್ದವೆಂದೂ ತಿಳಿಯುತ್ತದೆ. ಆದರೆ ಈಗ ಬೌದ್ಧ ಅವಶೇಷಗಳು ಯಾವುವೂ ಉಳಿದಿಲ್ಲ. ಮತ್ತೆ ಕೆಲವು ಶಾಸನಗಳಿಂದ ಇಲ್ಲಿ ಚೈತ್ಯಾಲಯ, ಅಜ್ಜಮೇಶ್ವರ ಶಿವಭವನ ಮತ್ತು ಸ್ವಯಂಭು ಮೈಲಭೇಶ್ವರ ಎಂಬ ದೇವಾಲಯಗಳು 11 ಮತ್ತು 12ನೆಯ ಶತಮಾನಗಳಲ್ಲಿ ಕಟ್ಟಲಾದುವು ಎಂದು ತಿಳಿದುಬರುತ್ತದೆ. ಈ ಕಾಲದ ಎರಡು ದೇವಾಲಯಗಳು ಮಾತ್ರ ಈಗ ಚೆನ್ನಾಗಿ ಉಳಿದಿವೆ. ಜೈನ ದೇವಾಲಯದ ಮುಂಭಾಗದ ಗೋಡೆಯ ಶಾಸನದಲ್ಲಿ ಇದನ್ನು ಚೈತ್ಯಾಲಯ ಅಥ'ವಾ ನಗರ ಜಿನಾಲಯವೆಂದು ಹೇಳಿದೆ. ಇದನ್ನು ಸಂಗವಸೆಟ್ಟಿ ಎಂಬುವನು 1098ರಲ್ಲಿ ಕಟ್ಟಿಸಿದ. ಇದು ಆಗಿನ ಕಾಲದ ಸಾಮಾನ್ಯವಾದ ಶೈಲಿಯಲ್ಲಿರುವ ಸರಳ ಕಟ್ಟಡ.



ದೊಡ್ಡಬಸಪ್ಪ ದೇವಾಲಯ

ಇದರ ಸಮೀಪದಲ್ಲಿ ಇರುವ ಈಗ ದೊಡ್ಡ ಬಸವಣ್ಣನೆಂದು ಕರೆಸಿಕೊಳ್ಳುತ್ತಿರುವ ದೇವಾಲಯ ಮಾತ್ರ ವಿಶಿಷ್ಟ ಶೈಲಿಯದು. ಇದೇ ಪ್ರಾಯಶಃ 1124 ಅಥವಾ 1126ರಲ್ಲಿ ಅಜ್ಜಯ್ಯ ನಾಯಕನೆಂಬುವನು ಕಟ್ಟಿಸಿದ ಅಜ್ಜಮೇಶ್ವರ ಶಿವಭವನ. ಇದು ಗರ್ಭಗೃಹ, ಅರ್ಧಮಂಟಪ ಮತ್ತು ಸಭಾಮಂಟಪ, ಪೂರ್ವ ಮತ್ತು ದಕ್ಷಿಣಾಭಿಮುಖವಾಗಿರುವ ಎರಡು ಮುಖಮಂಟಪಗಳಿಂದ ಕೂಡಿದೆ. ಹೆಚ್ಚಾಗಿ ಅಲಂಕರಣವಿಲ್ಲದೆ ಸರಳವಾಗಿದ್ದರೂ ಇದರ ತಳವಿನ್ಯಾಸದ ಹಾಗೂ ಊರ್ಧ್ವವಿನ್ಯಾಸದ ವೈಶಿಷ್ಟ್ಯವೇ ಈ ದೇವಾಲಯವನ್ನು ಅಪೂರ್ವವಾಗಿ ಮಾಡಿದೆ. ಗರ್ಭಗೃಹವಷ್ಟೇ ಅಲ್ಲದೆ ಅರ್ಧಮಂಟಪ ಮತ್ತು ಸಭಾಮಂಟಪವೂ ಕೂಡಿ ವೃತ್ತಾಕಾರದ ನಕ್ಷತ್ರಾಕೃತಿಯ ತಳವಿನ್ಯಾಸದಲ್ಲಿದೆ. ತತ್ಪರಿಣಾಮವಾಗಿ ಊರ್ಧ್ವವಿನ್ಯಾಸದಲ್ಲಿ ಶಿಖರದ ತನಕ ಉದ್ದನೆ ಪಟ್ಟಿಗಳನ್ನು ವರ್ತುಳಾಕಾರದಲ್ಲಿ ಕ್ರಮಬದ್ಧವಾಗಿ ಜೋಡಿಸಿಟ್ಟಂತೆ ಎದ್ದುಕಾಣುವುದು. ಗೋಡೆಗಳು ಇದಕ್ಕನುಗುಣವಾಗಿ ಮುಂದಕ್ಕೆ ಚಾಚಿ ಹಿಂದಕ್ಕೆ ಸರಿದು ಉಬ್ಬುತಗ್ಗುಗಳಿಂದ ಕೂಡಿವೆ. ಅಧಿಷ್ಠಾನವನ್ನು ಅಡ್ಡಪಟ್ಟಿಕೆಗಳಿಂದ ಮಡಿಕೆ ಮಡಿಕೆಯಾಗಿ ಬಿಡಿಸಲಾಗಿದೆ. ಗೋಡೆಗಳ ಏರು-ತಗ್ಗುಗಳಲ್ಲಿ ಒಂದಾದಮೇಲೆ ಒಂದರಂತೆ ಆಲಂಕಾರಿಕ ತೋರಣ ಮತ್ತು ಕಂಬಗಳ ಉಬ್ಬುಶಿಲ್ಪಗಳಿವೆ. ಇವುಗಳ ಮೇಲೆ ದೇವ ದೇವತೆಗಳ ಸಣ್ಣಸಣ್ಣ ಅಲ್ಪ ಉಬ್ಬಿನ ಶಿಲ್ಪಗಳಿವೆ.

ಊರ ಹೊರಗೆ ತೋಟದಸ್ವಾಮಿ ಮಠವಿದೆ. ಇದು ಕರಿಕಲ್ಲಿನಲ್ಲಿ ಕಟ್ಟಿರುವ ಈಚಿನ ಕಟ್ಟಡ. ಇಲ್ಲಿ ಹಲವು ಚಾಳುಕ್ಯ ವಾಸ್ತು ಸಂಪ್ರದಾಯದ ಅಂಶಗಳ ಅಳವಡಿಕೆ ಪ್ರಯತ್ನ ನಡೆದಿದೆ. ಆ ಮಠಕ್ಕೆ ಸುತ್ತಲ ಪ್ರದೇಶದಲ್ಲಿ ಅನೇಕ ಉಪಮಠಗಳಿವೆ. ಸ್ವಲ್ಪ ದೂರದಲ್ಲಿ ಹಳೆಯ ಕಾಲದ ಕೋಟೆಯ ಅವಶೇಷಗಳಿವೆ. ಈ ಕೋಟೆಯಲ್ಲಿ ಸು.1842ರವರೆಗೂ ವಸತಿ ಇತ್ತು. ಡಂಬಳದ ಬಳಿ ಇರುವ ಕೆರೆ ದೊಡ್ಡದು. ಇದು ಸು.400 ವರ್ಷಗಳಷ್ಟು ಹಳೆಯದು ಎನ್ನಲಾಗಿದೆ. (ಎ.ಎಸ್.)

**ಡಕ್ಕೆಯ ಬೊಮ್ಮಣ್ಣ :** 12ನೆಯ ಶತಮಾನದ ಶಿವಶರಣ ಹಾಗೂ ವಚನಕಾರ. ಹುನಗುಂದ ತಾಲ್ಲೂಕಿನ ಕಂದಗಲ್ಲು (ಸ್ಕಂದಶಿಲೆ) ಈತನ ಜನ್ಮಸ್ಥಳ. ವೀರಶೈವಾಮೃತ ಮಹಾಪುರಾಣದಲ್ಲಿ ಈತನನ್ನು ಡಕ್ಕೆಯ ಮಾರಿತಂದೆ ಎಂದು ಕರೆದಿದ್ದರೆ, ಪ್ರೌಢರಾಯನ ಕಾವ್ಯದಲ್ಲಿ ಡಕ್ಕೆಯ ಮಾರಿದೇವಯ್ಯನೆಂದೂ ಭೈರವೇಶ್ವರಕಾವ್ಯದಲ್ಲಿ ಡಕ್ಕೆಯ ಬ್ರಹ್ಮದೇವನೆಂದೂ ಹೇಳಲಾಗಿದೆ. ಭೈರವೇಶ್ವರಕಾವ್ಯದ ಕಥಾಮಣಿಸೂತ್ರರತ್ನಾಕರದಲ್ಲಿ ಡಕ್ಕೆಯ ಮಾರಯ್ಯಗಳು ಭಕ್ತರಂಗಳದಲ್ಲಿ ಡಕ್ಕೆಯಂ ಬಾರಿಸಿ, ಮಾರಿಯಂ ಕುಣಿಸಿ, ಉಡಿಯಲ್ಲಿ ತಲೆಯಲ್ಲಿ ಬೇವಿನ ಸೊಪ್ಪಂ ಕಟ್ಟಿಕೊಂಡು, ಮಾರಿಯಂ ಮುಂದಿಟ್ಟುಕೊಂಡು ಆಚಾರವಂ ತೋರಿ ಸಾರುತ್ತಿಹರು ಎಂಬ ಕಥೆ ಬರುತ್ತದೆ. ಆದ್ಯರ ವಚನಗಳನ್ನು ಉಗ್ಗಡಿಸಿ, ನೀತಿ ವಿನಯ ಭಕ್ತಿ ಸದಾಚಾರಗಳನ್ನು ಜನರಿಗೆ ಕಲಿಸುತ್ತಿದ್ದ ಈತ ಮಾರಿಯನ್ನು ತನ್ನ ಕಾಯಕದ ಸಾಧನವನ್ನಾಗಿ ಮಾಡಿ ಅದನ್ನು ಇಷ್ಟಲಿಂಗದ ಎತ್ತರಕ್ಕೆ ಏರಿಸಿದ.

ಇದುವರೆಗೆ ಇವನ 89 ವಚನಗಳು ಉಪಲಬ್ಧವಿವೆ. ಕಾಲಾಂತಕ ಭೀಮೇಶ್ವರ ಲಿಂಗ ಎಂಬ ಅಂಕಿತವನ್ನಿಟ್ಟುಕೊಂಡು ವಚನಗಳನ್ನು ಬರೆದಿದ್ದಾನೆ. ಶೈಲಿ ಸುಸಂಸ್ಕೃತವೂ ಪ್ರೌಢವೂ ಆತ್ಮೀಯವೂ ಆಗಿದೆ. ಇವನ ವಚನಗಳಲ್ಲಿ ಕಾಯಕ, ಜ್ಞಾನ, ಭಕ್ತಿ, ದಾಸೋಹ, ಮಾಯೆ, ಮಾರಿ ಮುಂತಾದವುಗಳನ್ನು ಕುರಿತ ಹೊಸ ವಿಚಾರಗಳು ನಿರೂಪಿತವಾಗಿವೆ. ಮಹಾದೇವನನ್ನು ಮರೆದವರಿಗೆ ಮಾಯಾಂಗನೆ ಮಾರಿಯಾದಳು; ಸತ್‌ಶ್ರೀ ಸಜ್ಜನಯುಕ್ತಿಯಿಂದ ಸದಾಶಿವನನರಿಯಲಾಗಿ ಉಮಾದೇವಿಯಾದಳು; ಆವ ಕಾಯಕವಾದರೂ ಭಾವಶುದ್ಧವಾಗಿ ಮಾಡುವುದೇ ಜಂಗಮಪೂಜೆ, ನಿಯಮ ಕ್ರಿಯೆ ತಪ್ಪದೆ ಮಾಡುವುದೇ ದೇವಪೂಜೆ; ಡಕ್ಕೆಯ ದನಿ ಬಿಟ್ಟಾಗ ಭವ ಹಿಂಗುವುದು-ಮುಂತಾದ ಸುಂದರ ವಚನಗಳಿಂದ ಅಂದಿನ ಕಾಲದ ಧಾರ್ಮಿಕ ಜೀವನಕ್ಕೆ ಒಂದು ಹೊಸ ತಿರುವು ಕೊಟ್ಟ. ಈತನ ಚರಿತೆ ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣ, ಅದೃಶ್ಯ ಕವಿಯ ಪ್ರೌಢರಾಯನಕಾವ್ಯ, ಎಳಂದೂರು ಹರೀಶ್ವರನ ಪ್ರಭುದೇವರ ಪುರಾಣ, ಕಿಕ್ಕೇರಿ ಆರಾಧ್ಯ ನಂಜುಂಡನ ಭೈರವೇಶ್ವರಕಾವ್ಯ ಮೊದಲಾದ ಗ್ರಂಥಗಳಲ್ಲಿ ನಿರೂಪಿತವಾಗಿದೆ. (ಎಸ್.ಆರ್‌ಎ.;ಕೆ.ಎಂ.)

**ಡಾಬಸ್ ಪೇಟೆ :** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕಿನಲ್ಲಿ ಶಿವಗಂಗೆಗೆ ಸು.8ಕಿಮೀ ಉತ್ತರಕ್ಕಿರುವ ಸಣ್ಣ ಊರು. 1899-1901ರ ನಡುವೆ ಮೈಸೂರು ಸಂಸ್ಥಾನದ ಅಸಿಸ್ಟೆಂಟ್ ರೆಸಿಡೆಂಟನಾಗಿದ್ದ ಮೇಜರ್ ಜನರಲ್ ಎಚ್.ಆರ್.ಸಿ.ಡಾಬ್ಸ್ ಎಂಬಾತನ ನೆನಪಿಗಾಗಿ ಈ ಊರಿಗೆ ಈ ಹೆಸರಿಡಲಾಗಿದೆ.

ಶಿವಗಂಗಾ ಕ್ಷೇತ್ರಕ್ಕೆ ಹೋಗುವ ಯಾತ್ರಿಕರು ತುಮಕೂರು-ಬೆಂಗಳೂರು ರೈಲುಮಾರ್ಗದ ನಿಡುವಂದ ಸ್ಟೇಷನ್ನಿಗೆ ಸಮೀಪದಲ್ಲಿ ಇಳಿದು ಈ ಊರಿನ ಮೂಲಕ ಹೋಗುತ್ತಾರೆ. ಈ ಊರು ಹಲವು ರಸ್ತೆಗಳು ಸೇರುವ ಸ್ಥಳ. ಕೊರಟಗೆರೆ, ದೊಡ್ಡಬಳ್ಳಾಪುರ, ತ್ಯಾಮಗೊಂಡ್ಲು, ನಿಡುವಂದ, ಎಲೆಕ್ಯಾತನಹಳ್ಳಿ ಮೊದಲಾದ ಸ್ಥಳಗಳಿಗೆ ಇಲ್ಲಿಂದ ರಸ್ತೆಗಳಿವೆ. (ವಿ.ಜಿ.ಕೆ.)

**ಡಿಕ್ಕಿ ಮಾಧವರಾವ್ :** ಕನ್ನಡ ವೃತ್ತಿರಂಗಭೂಮಿಯ ಹಿರಿಯ ಕಲಾವಿದ. ಇವರು ಹುಟ್ಟಿದ್ದು 1919ರಲ್ಲಿ ಜನಿಸಿದರು. ಇವರ ತಂದೆ



ಅಮಲ್ದಾರ್ ಮೈಲಾರಿರಾವ್. ಮಾಧವರಾವ್ ಚಿಕ್ಕವರಾಗಿದ್ದಾಗಲೇ ನಾಟಕದ ಗೀಳು ಹಚ್ಚಿಸಿಕೊಂಡಿದ್ದರು. ಶಾಲೆಯಲ್ಲಿ ಓದುತ್ತಿದ್ದಾಗ ಶಾಲೆಯ ವಾರ್ಷಿಕೋತ್ಸವ ಸಮಾರಂಭದ ಅಂಗವಾಗಿ ನಡೆದ ನಾಟಕದಲ್ಲಿ ಪಾತ್ರ ವಹಿಸಿದ್ದರು. ರಂಗಭೂಮಿಯಲ್ಲಿ ಖ್ಯಾತನಾಮರಾದ ಮಹಮದ್ ಪೀರ್, ಎಚ್.ಎಲ್.ಎನ್.ಸಿಂಹ ಇವರಿಗಿಂತ ಹಿರಿಯರಾಗಿದ್ದರು. ಒಮ್ಮೆ ನಾಟಕವನ್ನು ನೋಡಲು ಬಂದಿದ್ದ ಎ.ವಿ.ವರದಾಚಾರ್ಯರು ಇವರ ಅಭಿನಯವನ್ನು ತುಂಬ ಮೆಚ್ಚಿಕೊಂಡರು. ಮಾರನೆಯ ದಿನವೇ ತಮ್ಮ ರತ್ನಾವಳಿ ಥಿಯೇಟರ್‌ನ ನಾಟಕಗಳಲ್ಲಿ ಪಾತ್ರ ವಹಿಸುವ ಅವಕಾಶವನ್ನು ಇವರಿಗೆ ಒದಗಿಸಿಕೊಟ್ಟರು. ವರದಾಚಾರ್ಯರ ಪ್ರೇರಣೆಯಿಂದ ಚಿಕ್ಕ ಪಾತ್ರಗಳ ಅಭಿನಯದೊಂದಿಗೆ ರಂಗಭೂಮಿಯನ್ನು ಪ್ರವೇಶಿಸಿದರು. ಆದರೆ ಆ ಕಂಪನಿಯಲ್ಲೇ ಉಳಿಯದೆ ಮೈಸೂರಿನ ಚಾಮುಂಡೇಶ್ವರಿ ಕರ್ನಾಟಕ ನಾಟಕ ಸಭಾ, ಗುಬ್ಬಿ ಕಂಪನಿ, ಮಹಮದ್‌ಪೀರ್ ಕಂಪನಿ ಮೊದಲಾದವುಗಳಲ್ಲಿ ತಮ್ಮ ಪ್ರತಿಭೆಯನ್ನು ಹೊಮ್ಮಿಸಿದರು. ಆ ಸಂದರ್ಭದಲ್ಲಿ ಇವರಿಗೆ ಹೆಸರು ತಂದ ನಾಟಕಗಳು ಮತ್ತು ಪಾತ್ರಗಳೆಂದರೆ ಎಚ್ಚಮನಾಯಕದ ಎಚ್ಚಮನಾಯಕನ ಪಾತ್ರ, ಸಂಸಾರನೌಕೆಯ ಡಿಕ್ಕಿಯ ಪಾತ್ರ.

ಸಂಸಾರ ನೌಕೆ ಕನ್ನಡ ವೃತ್ತಿರಂಗಭೂಮಿಯಲ್ಲಿ ಯಶಸ್ಸು ಗಳಿಸಿದ ಮೊದಲ ಸಾಮಾಜಿಕ ನಾಟಕ. ಇದರಲ್ಲಿ ಡಿಕ್ಕಿಯ ಪಾತ್ರದಲ್ಲಿ ಇವರ ಅದ್ಭುತ ಅಭಿನಯದಿಂದ ಇವರ ಹೆಸರಿನೊಂದಿಗೆ ಡಿಕ್ಕಿ ಸೇರ್ಪಡೆಯಾಯಿತು. ಸಂಸಾರನೌಕೆ ಚಲನಚಿತ್ರವಾದಾಗಲೂ ಡಿಕ್ಕಿಯ ಪಾತ್ರ ಇವರಿಗೇ ಮೀಸಲಾಗಿತ್ತು. ಈ ಚಿತ್ರದಲ್ಲಿ ಇವರ ಅಭಿನಯ ಸೊಗಸಾಗಿ ಮೂಡಿಬಂದಿದೆ. ಮಹಮದ್ ಪೀರ್ ಕಂಪನಿಯಲ್ಲಿದ್ದಾಗ ಬಿ.ಆರ್. ಪಂತುಲು ಅವರಂಥ ನಟರು ಇವರಿಗಿಂತ ಕಿರಿಯರಾಗಿದ್ದರು. ಈ ನಾಟಕಗಳಲ್ಲದೆ ಇನ್ನೂ ಅನೇಕ ನಾಟಕಗಳಲ್ಲಿ ಇವರು ಅಭಿನಯಿಸಿದ್ದರು. ಸದಾರಮೆ (ಕಳ್ಳ-ಜಯವೀರ), ಕಾಳಿದಾಸ (ಭೋಜ), ಸುಭದ್ರೆ (ಅರ್ಜುನ-ಬಭ್ರುವಾಹನ), ದಾನಶೂರ ಕರ್ಣ (ದುರ್ಯೋಧನ-ಕರ್ಣ-ವಿದುರ)-ಇವು ಇವರು ಪಾತ್ರ ವಹಿಸಿದ ಇತರ ಕೆಲವು ನಾಟಕಗಳು. ಇವರ ಅಭಿನಯವನ್ನು ಮೆಚ್ಚಿದ ಜನರಿಂದ ಇವರು ಅರವತ್ತೆರಡಕ್ಕೂ ಹೆಚ್ಚು ಚಿನ್ನದ ಪದಕಗಳನ್ನು ಪಡೆದಿದ್ದರು. ಇವರು ನಾಟಕಗಳಲ್ಲೇ ಅಲ್ಲದೆ ಸಂಸಾರ ನೌಕೆ, ರಾಧಾರಮಣ, ವಾಣಿ, ಕೃಷ್ಣಲೀಲಾ, ಶಿವಪಾರ್ವತಿ, ಸತಿ ತುಳಸಿ, ಮೊದಲತೇದಿ, ಪಂಚರತ್ನ, ಶ್ರೀಶೈಲ ಮಹಾತ್ಮೆ, ವರದಕ್ಷಿಣೆ, ರತ್ನಗಿರಿರಹಸ್ಯ, ಮನೆ ಅಳಿಯ, ಸ್ಕೂಲ್ ಮಾಸ್ಟರ್ ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿ ತಮ್ಮ ಅಭಿನಯದಿಂದ ಕಲಾಭಿಮಾನಿಗಳ ಹೃದಯವನ್ನು ಗೆದ್ದಿದ್ದರು. ಮೊದಲ ತೇದಿಯಲ್ಲಿ ಇವರು ಹಾಡಿದ ಹಾಡೊಂದು (ಒಂದರಿಂದ ಇಪ್ಪತ್ತರವರೆಗೆ) ಅಪಾರ ಜನಪ್ರಿಯವಾಯಿತು. (ಜಿ.ಆರ್.ಟಿ.)

**ಡೆಪ್ಯುಟಿ ಚೆನ್ನಬಸಪ್ಪ :** 1834-81. ಉತ್ತರ ಕರ್ನಾಟಕದಲ್ಲಿ ಕನ್ನಡದ ಅಭಿವೃದ್ಧಿಗಾಗಿ ಶ್ರಮಿಸಿದ ಕಳೆದ ತಲೆಮಾರಿನ ಹಿರಿಯರು. ಶಿಕ್ಷಣ ತಜ್ಞರೂ ಸಾಹಿತಿಗಳೂ ಆಗಿದ್ದ ಇವರು ಬಹಳ ವರ್ಷಗಳ ಕಾಲ ಡೆಪ್ಯುಟಿ ಇನ್ಸ್‌ಪೆಕ್ಟರ್ ಆಗಿದ್ದುದರಿಂದ ಡೆಪ್ಯುಟಿ ಚೆನ್ನಬಸಪ್ಪ ಎಂದೇ ಪ್ರಸಿದ್ಧರಾಗಿದ್ದರು. ಇವರ ಪೂರ್ಣ ಹೆಸರು ಚೆನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಎಂದು. ಧಾರವಾಡದ ಸಾಮಾನ್ಯ ಕುಟುಂಬವೊಂದರಲ್ಲಿ ಜನಿಸಿದ ಇವರು, ಉದ್ದಕ್ಕೂ ಪ್ರತಿಕೂಲ ಪರಿಸ್ಥಿತಿಯೊಂದಿಗೆ ಹೋರಾಡಿ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡರು. ತಮ್ಮ ಆರನೆಯ ವಯಸ್ಸಿಗೆ ತಂದೆಯನ್ನು ಕಳೆದುಕೊಂಡು, ತಾಯಿಯ ಆಶ್ರಯದಲ್ಲಿ ಬೆಳೆದು ಬಡತನದಲ್ಲಿಯೇ ಕಲಿತರು. ಆರಂಭದ ವ್ಯಾಸಂಗವನ್ನು ಧಾರವಾಡದಲ್ಲಿ ಮುಗಿಸಿ, ಮುಂದಿನ ವ್ಯಾಸಂಗಕ್ಕೆಂದು ಪುಣೆಗೆ ಹೋಗಿ, ಅಲ್ಲಿಯ ಉದಾರಿ ಶ್ರೀಮಂತರೊಬ್ಬರ ಆಶ್ರಯ ಪಡೆದು, ಎಂಜಿನಿಯರಿಂಗ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿದರು. ಅನಂತರ ಕಾಲೇಜಿನಲ್ಲಿ ಕೆಲವು ವರ್ಷ ಅಧ್ಯಾಪಕರಾಗಿಯೂ ಕೆಲಸ ಮಾಡಿದರು. ಆದರೆ ಕನ್ನಡ ನಾಡುನುಡಿಗಳ ಮೋಹಕ್ಕೆ ಸಿಕ್ಕಿ ಧಾರವಾಡಕ್ಕೆ ಹಿಂದಿರುಗಿದರು. ಕೆಲಕಾಲ ಅಂಚೆ ಇಲಾಖೆಯಲ್ಲಿದ್ದು ಅನಂತರ ಶಿಕ್ಷಣ ಇಲಾಖೆಯನ್ನು ಸೇರಿದರು. ಬೆಳಗಾಂವಿಯ ನಾರ್ಮಲ್ ಶಾಲೆಯ ಪ್ರಿನ್ಸಿಪಾಲರಾಗಿ 1856ರಲ್ಲಿ ನೇಮಕಗೊಂಡ ಇವರು ಐದು ವರ್ಷಗಳ ಅನಂತರ ಡೆಪ್ಯುಟಿ ಇನ್ಸ್‌ಪೆಕ್ಟರ್ ಆಗಿ ಬೆಳಗಾಂವಿ ಮತ್ತು ಧಾರವಾಡಗಳಲ್ಲಿ ಕೆಲಸಮಾಡಿದರು. ಆಗ್ಗೆ ಉತ್ತರ ಕರ್ನಾಟಕದ ಕನ್ನಡ ಶಾಲೆಗಳಲ್ಲಿ ಕನ್ನಡ ವಿದ್ಯಾರ್ಥಿಗಳು ಮರಾಠಿಯನ್ನು ಕಡ್ಡಾಯವಾಗಿ ಕಲಿಯಬೇಕಾಗಿತ್ತು. ಇಂಥ ಪರಿಸ್ಥಿತಿಯಲ್ಲಿ ಇವರು ಕನ್ನಡ ಅಭಿವೃದ್ಧಿಗಾಗಿ



ತಮ್ಮ ಅಧಿಕಾರದ ಉದ್ದಕ್ಕೂ ಶ್ರಮಿಸಿದರು. ಕನ್ನಡ ವಿದ್ಯಾರ್ಥಿಗಳು ಕನ್ನಡ ಕಲಿಯುವಂತಾಗಲು ಅನೇಕ ಸೌಲಭ್ಯಗಳನ್ನು ಕಲ್ಪಿಸಿದರು. ಕನ್ನಡ ಬಲ್ಲ ಶಿಕ್ಷಕರ ನೇಮಕ, ಕನ್ನಡದಲ್ಲಿ ಕ್ರಮಿಕ ಪುಸ್ತಕಗಳ ರಚನೆ, ಕನ್ನಡ ಪಂಡಿತರಿಗೆ ಪ್ರೋತ್ಸಾಹ-ಇಂಥ ಹಲವು ಕೆಲಸಗಳನ್ನು ಅವರು ಮಾಡಿದರು. ಕನ್ನಡದಲ್ಲಿ ಬರೆಯ ಬಲ್ಲ ಸಂಪ್ರದಾಯ ಪಂಡಿತರನ್ನು ಗುರುತಿಸಿ ಪ್ರೋತ್ಸಾಹ ಕೊಟ್ಟು ಅವರಿಂದ ಕನ್ನಡಕ್ಕೆ ಹೆಚ್ಚಿನ ಸೇವೆ ಸಲ್ಲುವಂತೆಯೂ ಮಾಡಿದರು. ಅಂಥವರಲ್ಲಿ ಗಂಗಾಧರ ಮಡಿವಾಳೇಶ್ವರ ತುರಮುರಿ, ವೆಂಕಟರಂಗೋಕಟ್ಟಿ, ಪಾಂಡುರಂಗ ಚಿಂತಾಮಣಿ ಪೇಟಕರ ಮೊದಲಾದವರನ್ನು ಹೆಸರಿಸಬಹುದು.

ಚೆನ್ನಬಸಪ್ಪನವರು ಸ್ವತಃ ಷೇಕ್ಸ್‌ಪಿಯರ್ ಕವಿಯ 'ಕಾಮೆಡಿ ಆಫ್ ಎರರ್ಸ್' ಮತ್ತು 'ಮ್ಯಾಕ್‌ಬೆತ್' ಎಂಬ ಎರಡು ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಗಣಿತಶಾಸ್ತ್ರದಲ್ಲಿ ತಜ್ಞರಾಗಿದ್ದ ಇವರು ಆ ವಿಷಯವನ್ನು ಕುರಿತು ಅನೇಕ ಲೇಖನಗಳನ್ನು ಬರೆದಿದ್ದರೆನ್ನಲಾಗಿದೆ.

ಧಾರವಾಡವನ್ನು ಕನ್ನಡದ ಸಾಂಸ್ಕೃತಿಕ ಕೇಂದ್ರವನ್ನಾಗಿ ಮಾಡಲು ತಮ್ಮ ಜೀವನದುದ್ದಕ್ಕೂ ಶ್ರಮಿಸಿದ ಚೆನ್ನಬಸಪ್ಪನವರು 1881 ಜನವರಿ 5ರಂದು ಧಾರವಾಡದಲ್ಲಿ ನಿಧನಹೊಂದಿದರು. (ಆರ್.ವೈ.ಡಿ.)

**ಡೊಳ್ಳು :** ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಿ ಕುರುಬ ಜನಾಂಗಕ್ಕೆ ಸೇರಿದವರು ಹಬ್ಬಗಳಲ್ಲಿ, ಉತ್ಸವಗಳಲ್ಲಿ, ತಮ್ಮ ಸಮುದಾಯದ ಸಿದ್ಧಪುರುಷರ ಜಾತ್ರೆಗಳಲ್ಲಿ ಡೊಳ್ಳುವಾದ್ಯದೊಂದಿಗೆ ಹಾಡುತ್ತ ಕುಣಿವ ಮೇಳ. ಇದನ್ನು ಡೊಳ್ಳಿನ ಓಲಗ ಎಂದೂ ಕರೆಯುವರು. ಡೊಳ್ಳು ಒಂದು ಚರ್ಮವಾದ್ಯ. ಇದರ ಗಾತ್ರ ದೊಡ್ಡದು, ಭಾರ ಹೆಚ್ಚು, ನಾದವೂ ಹಿರಿದು. ಇದನ್ನು ಮಾವಿನ ಮರದ ಇಲ್ಲವೆ ಹೊನ್ನೆಮರದ ದಪ್ಪನೆ ಬೊಡ್ಡೆಯ ಟೊಳ್ಳಾದ ಅಖಂಡ ಭಾಗದ ಎರಡೂ ಬದಿಗೆ ಆಡಿನ ಅಥವಾ ಕುರಿಯ ತೊಗಲನ್ನು ನೂಲಿನ ಹಗ್ಗದಿಂದ ಬಿಗಿದು ತಯಾರಿಸುವರು. ಬಲ ಬದಿಯ ಚರ್ಮಕ್ಕೆ ಮಾತ್ರ ಎಣ್ಣೆಯ ಜಿಗಿಯನ್ನು ಲೇಪಿಸುವುದುಂಟು (ಕುಸುಬೆ ಎಣ್ಣೆ ಇದಕ್ಕೆ ಹೆಚ್ಚು ಒಳ್ಳೆಯದು). ಹೀಗೆ ಲೇಪಿಸುವುದರಿಂದ ಡೊಳ್ಳಿನ ಬಲಭಾಗದ ನಾದಮಾಧುರ್ಯ ಗಂಭೀರವಾಗಿರುತ್ತದೆ. ಎಡಬದಿಯ ನಾದ ವಿರುದನಿಯಾಗಿ ನುಣುಪಾಗಿ ಕೇಳಿಸುತ್ತದೆ. ಡೊಳ್ಳನ್ನು ಗೋಣಿಗೆ ನೇತುಹಾಕಿಕೊಳ್ಳುವ ವ್ಯವಸ್ಥೆಯಿದ್ದು ಬಾರಿಸಲು ಗುಣಿ ಎಂಬ ಒಂದು ಅಡಿ ಉದ್ದವುಳ್ಳ ದಪ್ಪನೆ ಹಾಗೂ ಗಟ್ಟಿಯಾದ ಕೋಲು ಬಳಸುತ್ತಾರೆ.



ಡೊಳ್ಳು ಕುಣಿತ

ಡೊಳ್ಳಿನ ಸೃಷ್ಟಿಯ ಬಗ್ಗೆ ಒಂದು ಸ್ವಾರಸ್ಯಕರ ಜನಪದ ಕಥೆ ದೊರೆಯುತ್ತದೆ. ಒಂದು ದಿನ ಪರಶಿವ ಮತ್ತು ಪಾರ್ವತಿ ಹೊತ್ತುಕಳೆಯಲು ನೆತ್ತ ಆಡಲು ಕುಳಿತರಂತೆ. ಸೋತವರು ತಮ್ಮ ಸರ್ವಸ್ವವನ್ನು ಬಿಟ್ಟುಕೊಟ್ಟು ಕೈಲಾಸದಿಂದ ಹೊರಬಿದ್ದು ಯಾರಿಗೂ ಕಾಣದಂತೆ ವಾಸಿಸಬೇಕು ಎಂದು ಜಿದ್ದು ಕಟ್ಟಿದರು. ಆಟದಲ್ಲಿ ಶಿವ ಸೋತು ಭೂಲೋಕಕ್ಕೆ ಬಂದು ಒಂದು ಕಲ್ಲುಗವಿಯಲ್ಲಿ ಕಲ್ಲಾಗಿ ಬಿದ್ದ. ಇವನ ಕಾವಲಿಗಾಗಿ ಮಾಯಾಮೂರ್ತಿ ಮಾಯೆ ರೂಪದಿಂದ ಸುಳಿದಾಡುತ್ತಿದ್ದು ದಿನ, ಪಕ್ಷ, ಮಾಸಗಳು ಉರುಳಿದವು. ಶಿವನಿಲ್ಲದ ಜಗತ್ತು ಶಿವನಿಗಾಗಿ ಗೋಳಾಡಿತು. ಪಾರ್ವತಿಗೆ ಲೋಕಪಾಲನೆಯ ಭಾರ ಸಾಕಾಗಿ ಶಿವನ ಹುಡುಕಾಟಕ್ಕೆ ವಾಯುದೇವನನ್ನು ಕಳುಹಿಸಿದರೂ ಏನೂ ಪ್ರಯೋಜನವಾಗಲಿಲ್ಲ. ಅನಂತರ ನಾರದ ಶಿವನ ನೆಲೆಯನ್ನು ಪತ್ತೆಹಚ್ಚಿ ಮಾಯಾಮೂರ್ತಿಯನ್ನು ಸಂಹರಿಸಿ ಶಿವನನ್ನು ಕರೆದುತರುವಾಗ ಶಿವ ತನಗೆ ಕಾವಲಿದ್ದ ಸ್ವಾಮಿನಿಷ್ಠ ಮಾಯಾಮೂರ್ತಿಯ ಕಳೇಬರವನ್ನು ಬಿಟ್ಟು ಬರಲಾರದೆ ಅದರಿಂದ ಡೊಳ್ಳುಮಾಡಿಕೊಂಡ. ನಾರದ ಇದನ್ನು ಬಾರಿಸುತ್ತ ಹಾಡುತ್ತ ಕೈಲಾಸಕ್ಕೆ ಬಂದ. ಈಗಲೂ ಡೊಳ್ಳುಪದಗಳ ಆರಂಭದಲ್ಲಿ ಬರುವ 'ದೇವಿ ನಿಮ್ಮಯ ದೇವರ ಬಂದಾನ ಬನ್ನಿರೇ' ಎಂಬ ಮಾತು ನಾರದ ಪಾರ್ವತಿಗೆ ಹೇಳಿದ್ದೆಂದೂ 'ಸ್ವಾಮಿ ನಮ್ಮಯ ದೇವರ ಬಂದಾನ ಬನ್ನಿರೇ' ಎಂಬ ಮಾತು ಪಾರ್ವತಿ ತನ್ನ ಗಂಡ ಬಂದದ್ದನ್ನು ಕಂಡು ಸಂಭ್ರಮದಿಂದ ಸಖಿಯರನ್ನು ಕರೆದದ್ದೆಂದೂ ನಂಬಿಕೆಯಿದೆ.

ಡೊಳ್ಳು ಕುಣಿತದಲ್ಲಿ ಹತ್ತರಿಂದ ಇಪ್ಪತ್ತು ಜನ ಭಾಗವಹಿಸುತ್ತಾರೆ. ಒಮ್ಮೊಮ್ಮೆ ಇದಕ್ಕೂ ಅಧಿಕ ಸಂಖ್ಯೆಯ ಜನರಿರುವುದೂ ಉಂಟು. ಕುಣಿತದ ಮೊದಲಿಗೆ ವೃತ್ತಾಕಾರದಲ್ಲಿ ನಿಂತ ಡೊಳ್ಳಿನವರು ಒಂದೇ ಗತ್ತು ಹಾಗೂ ಒಂದೇ ನಾದದಲ್ಲಿ ಡೊಳ್ಳು ಬಡಿಯುವುದು ಪ್ರಾರಂಭವಾಗುತ್ತದೆ. ಅನಂತರ ಆವೇಶ ಬಂದವನೊಬ್ಬ ಮಧ್ಯ ನುಸುಳಿ ತನ್ನ ಡೊಳ್ಳಿನ ಗತ್ತು ಬದಲಿಸಿ ಬಡಿಯುತ್ತ ಲಾಗ ಹಾಕುತ್ತಾನೆ. ಉಳಿದವರು ಅವನ ಗತ್ತನ್ನೇ ಅನುಸರಿಸಿ ಅವನನ್ನು ಹುರಿದುಂಬಿಸಲು ಉಬ್ಬುಬ್ಬಿ ಜೋರಾಗಿ ಡೊಳ್ಳು ಬಾರಿಸುವರು. ಆವೇಶ ಬಂದ ವ್ಯಕ್ತಿ ಸುಸ್ತಾಗುವವರೆಗೂ ಹುರುಪಿನಿಂದ ಕುಣಿದು ಆವೇಶ ಇಳಿದ ಮೇಲೆ ಡೋಲು ಬಾರಿಸುತ್ತಿದ್ದ ತನ್ನ ಗುಣಿ ಬಿಸಾಡಿ ಎರಡೂ ಕೈಗಳಿಂದ ದುಪ್ ದುಪ್ಪಾಂಗ್ . . . ದುಪ್ ದುಪ್ಪಾಂಗ್ ಎಂಬ ಗತ್ತಿನಲ್ಲಿ ನಿಧಾನವಾಗಿ ಬಾರಿಸುತ್ತ ತನ್ನ ಸ್ವಸ್ಥಾನಕ್ಕೆ ಬಂದು ನಿಲ್ಲುತ್ತಾನೆ. ಆಗ ಉಳಿದವರು ಒಂದೇ ಗತ್ತಿನಲ್ಲಿ ಡೊಳ್ಳು ಬಾರಿಸುತ್ತಿರುತ್ತಾರೆ. ಇಷ್ಟರಲ್ಲಿ ಸರತಿ ಕಾಯುತ್ತಿರುವ ಮತ್ತೊಬ್ಬ ಮಧ್ಯದಲ್ಲಿ ನುಸುಳಿ ಇನ್ನೊಂದು ಗತ್ತು ಬಾರಿಸುತ್ತ ಕುಣಿಯುವನು. ಉಳಿದವರು ಮೊದಲಿನಂತೆಯೇ ಡೊಳ್ಳು ಬಾರಿಸಿ ಇವನಿಗೆ ಆವೇಶ ತುಂಬುವರು. ಹೀಗೆ ನಿಪುಣರಾದವರೆಲ್ಲ ಸರತಿಯಂತೆ ಒಬ್ಬೊಬ್ಬರಾಗಿ ಮುಂದೆ ಬಂದು ಕುಣಿತದಲ್ಲಿ ಭಾಗವಹಿಸಿ ತಮ್ಮ ಜಾಣ್ಮೆ ಪ್ರದರ್ಶಿಸುವರು. ಇಂಥ ಕುಣಿತ ಸಾಮಾನ್ಯವಾಗಿ ಒಂದು ಅಥವಾ ಎರಡು ಗಂಟೆಯವರೆಗೂ ಸಾಗುತ್ತದೆ. ಕುಣಿತದಲ್ಲಿ ಇಬ್ಬರು ಎದುರು ಬದುರು ನಿಂತು ಜೋಡುಕೋಲು (ಗುಣಿ) ಬಾರಿಸುತ್ತ ಕಥೆ ಹೇಳುವ ಪರಿಪಾಠವೂ ಉಂಟು. ಆಗ ವರ್ತುಲಾಕಾರದಲ್ಲಿ ನಿಂತು ಡೊಳ್ಳು ಬಡಿಯುತ್ತಿದ್ದವರು ಹಾಗೆಯೆ ಕುಳಿತು ಕಥೆ ಕೇಳುವರು. ಕಥೆ ಹೇಳುವವರಲ್ಲಿ ಒಬ್ಬನು 'ನಮ್ಮಯ ದ್ಯಾವರ ಕತೆಯೊಂದ ಹೇಳ್ತೀನಿ ಕೇಳಣ್ಣಾ' ಎಂದರೆ ಇನ್ನೊಬ್ಬನು 'ಹೂಂ, ಮುಂದೇನು ಮತ್ತೆ ಹೇಳಣ್ಣಾ' ಎನ್ನುತ್ತಾನೆ. 'ಮುಂದೇನಾಯ್ತಂದ್ರೆ ಗುಡ್ಡದ ವಾರ್‍ಯಾಗ ಗುಗ್ಗರ ಹೊಗೆನೆದ್ದು ಅಪ್ಪ ಭೂತಪ್ಪನ ಶಿವಪೂಜೆ ನಡೆದೈತ್ರಿ ಕೇಳ್ರಣ್ಣಾ'-ಎಂದಾಗ 'ಹೌದಂದೆ ಮತ್ತೆ ಮುಂದೇನಾಯ್ತಣ್ಣಾ' ಎನ್ನುವನು. ಹೀಗೆ ಕಥೆ ಮುಂದುವರಿಯುತ್ತದೆ. ಮಾತಿಗೊಮ್ಮೊಮ್ಮೆ ಗುಣಿಯ ಬಡಿತದ ಸಪ್ಪಳ ನಿಲ್ಲುತ್ತಿರುತ್ತದೆ.

**ಡೊಳ್ಳಿನ ಪದಗಳು :** ಡೊಳ್ಳಿನ ಪದಗಳನ್ನು ಈ ಮೇಳದವರು ಪ್ರತಿ ಅಮಾವಾಸ್ಯೆ ರಾತ್ರಿ ಅಥವಾ ಪ್ರತಿ ಸೋಮವಾರ ರಾತ್ರಿ ಸಾಮೂಹಿಕವಾಗಿ ಹಾಡುವುದು ವಾಡಿಕೆ. ಇಲ್ಲಿ ಪದ ಹಾಡುವಾತ ಒಬ್ಬನಾದರೆ ಮೂವರು ಡೊಳ್ಳು, ಜೌಗಡಿ, ತಾಳ ಬಾರಿಸುವರು. ಉಳಿದವರು ಹಿಮ್ಮೇಳದಲ್ಲಿ ಪಲ್ಲವಿಯನ್ನು ಅನುಸರಿಸಿ ಹಾಡುವರು. ಹಿಮ್ಮೇಳದಲ್ಲಿ ಹೆಚ್ಚು ಜನರಿದ್ದಷ್ಟೂ ಅನುಕೂಲ ಹೆಚ್ಚು. ಹಾಡು ಹೇಳುವಾಗ ಡೊಳ್ಳಿನಾತ ಬಹುಮೆಲ್ಲನೆ ದುಪ್ಪಾಂಗ್ ದುಪ್ಪಾಂಗ್ ದುಪ್ಪಡ ದುಪ್ಪಾಂಗ್ ಎಂಬ ನಾದದೊಂದಿಗೆ ತಾಳವನ್ನು ಅನುಸರಿಸುತ್ತಾನೆ. ಹಾಡಿನ ಪಲ್ಲವಿ ಮುಗಿಯುತ್ತಲೇ ಎಲ್ಲ ವಾದ್ಯಗಳ ಸಪ್ಪಳ ಜೋರಾಗಿ ಕೇಳಿಬಂದು ಕೊನೆಗೆ ನಿಲ್ಲುತ್ತದೆ, ಈ ಪದಗಳಲ್ಲಿ ದೇವರ ಸ್ತುತಿ, ಸಿದ್ಧಪುರುಷರ ಜೀವನ ಚರಿತ್ರೆ, ಪವಾಡಗಳು, ನೀತಿ-ತತ್ತ್ವದ ಕಥೆಗಳು ಇರುತ್ತವೆ. ಕೆಲವು ನೀಳ್ಗತೆಗಳಂತೆ ದೊಡ್ಡದಾಗಿರುತ್ತವೆ. ಉದಾಹರಣೆಗೆ–

ನಮ್ಮಯ ದೇವರು ಬಂದಾನ ಬನ್ನಿರೇ
ನಮ್ಮಯ ಸ್ವಾಮಿ ದೇವರು ಬಂದಾನ ಬನ್ನಿರೆ ||ಪಲ್ಲವಿ||
ಅಂಗ್ಯೆಜೋಳಿಗೆ ಮುಂಗ್ಯೆಬೆತ್ತ ತುದಿಬೆರಳೀಬತ್ತಿ ಹಚ್ಯಾನೆ
ತುದಿಬೆರಳೀಬತ್ತಿ ಹಚ್ಯಾನೆ ಅವ ಕಗ್ಗಾಲ ಕಣವಿ ಹಿಡಿದಾನೆ
ಕಗ್ಗಾಲ ಕಣವಿ ಹಿಡಿದಾನೆ ಅವ ಮುಗ್ಗಾಲದಾರಿಗೆ ಬಂದಾನೆ
ಮುಗ್ಗಾಲದಾರಿಗೆ ಬಂದಾನೆ ಅವ ಗೌಳೇರಣ್ಣನ ಕಂಡಾನೆ
ಗೌಳೇರಣ್ಣ ಗೌಳೇರತಮ್ಮ ಹಾಲಿನ ಭಿಕ್ಷಾ ಬೇಡ್ಯಾನೆ

ಬಾರೋ ಬಾರೋ ಹೇ ನನ್ನ ಗುರುವೆ ಕಂಬಳಿ ಗದ್ದುಗೆ ಮಾಡುವನೆ
ಕಂಬಳಿ ಗದ್ದುಗೆ ಮಾಡ್ಯಾನೆ ಅವ ಶಿವನಲಿ ಮೂರುತನಾದಾನೆ
ಮುಂದಾಲ ಕರುಗಳ ಬಿಟ್ಟ್ಯಾನೆ ಅವ ಹಿಂದಾಲೆ ಹಾಲು ಹಿಂಡ್ಯಾನೆ
ಕರುವುಂಡಹಾಲ ಎಂಜಲೆಂಜಲೆಂದ ನಮ್ಮಯ್ಯ ಹಿಂದಕೆ ಹೊಂಟಾನೆ

ನಮ್ಮಯ್ಯ ಹಿಂದಕೆ ಹೊಂಟಾನೆ ಅವ ಮುಗ್ಗಾಲದಾರಿಗೆ ಬಂದಾನೆ
ಮುಗ್ಗಾಲದಾರಿಗೆ ಬಂದಾನೆ ಅವ ಕಗ್ಗಾಲ ಕಣವಿಯ ಹಿಡಿದಾನೆ
ಕಗ್ಗಾಲ ಕಣವಿಯ ಹಿಡಿದಾನೆ ಅವ ಕುರುಬರಣ್ಣನ ಕಂಡಾನೆ
ಕುರುಬರ ಅಣ್ಣಾ ಕುರುಬರ ತಮ್ಮ ಹಾಲಿನ ಭಿಕ್ಷಾ ನೀಡಂದಾನೆ

ಬಾರೊ ಬಾರೋ ಹೇ ನನ ಗುರುವೆ ಕಂಬಳಿ ಗದ್ದುಗೆ ಮಾಡುವೆನೆ
ಕಂಬಳಿ ಗದ್ದುಗೆ ಮಾಡ್ಯಾನೆ ಅವ ಶಿವನಲ್ಲಿ ಮೂರುತನಾದಾನೆ
ಮುಂದಾಲ ಹಾಲ ಹಿಂಡ್ಯಾನೆ ಅವ ಹಿಂದಾಲ ಕರುಗಳ ಬಿಟ್ಟ್ಯಾನೆ
ಹಾಲು ಉಂಡು ಹಾರೈಸುತ ನಮ್ಮಯ್ಯ ಹಿಂದಕೆ ಹರಸುತ ಹೊಂಟಾನೆ

ಡೊಳ್ಳು ಕುಣಿತದ ಸಾಹಿತ್ಯವನ್ನು ಕುರಿತಂತೆ ಎ.ಸಿ.ಅಂಜಗಿಮಠ ಅವರ ಡೊಳ್ಳಿನ ಪದಗಳು(1959), ಅತ್ತೀಕೊಳ್ಳ ಯಲ್ಲನಗೌಡ ಅವರ ಡೊಳ್ಳಿನ ಪದಗಳು, ಎ.ಎಂ.ಕರಡಿ ಅವರ ಡೊಳ್ಳಿನ ಪದಗಳು(1961). ಹಾಲೇಶ ಎಂ.ಮೇಟಿ ಅವರ ಡೊಳ್ಳಿನ ಹಾಡುಗಳು(1959) ಎಂಬ ಸಂಕಲನಗಳು ಹೊರಬಂದಿವೆ. (ಇ.ಪಿ.ಪಿ.)

**ಡೋಣಿ :** ಬಿಜಾಪುರ ಜಿಲ್ಲೆಯ ಒಂದು ನದಿ. ಮಹಾರಾಷ್ಟ್ರ ರಾಜ್ಯದ ಸಾಂಗ್ಲಿ ಜಿಲ್ಲೆಯ ಜತ್ ಪಟ್ಟಣದ ದಕ್ಷಿಣಕ್ಕೆ ಸು.7ಕಿಮೀ ದೂರದಲ್ಲಿ ಹುಟ್ಟಿ ಪೂರ್ವಕ್ಕೆ ಹರಿದು ಬಿಜಾಪುರ ಜಿಲ್ಲೆಯನ್ನು ಪ್ರವೇಶಿಸಿ ಅನಂತರ ಆಗ್ನೇಯಾಭಿಮುಖವಾಗಿ ಹರಿದು ಗುಲ್ಬರ್ಗ ಜಿಲ್ಲೆಯ ಜಮಾಲಪುರ ಗ್ರಾಮದ ಹತ್ತಿರ ಕೃಷ್ಣಾ ನದಿಗೆ ಕೂಡುತ್ತದೆ. ಡೋಣಿ ನದಿ ಬಿಜಾಪುರ ಜಿಲ್ಲೆಯಲ್ಲಿ ಬಿಜಾಪುರ, ಬಾಗೇವಾಡಿ, ಸಿಂದಗಿ ಮತ್ತು ಮುದ್ದೇಬಿಹಾಳ ತಾಲ್ಲೂಕುಗಳಲ್ಲಿ ಹರಿಯುತ್ತದೆ. ಈ ನದಿ ಮಹಾರಾಷ್ಟ್ರ ಬಿಟ್ಟ ಅನಂತರ ಬೆಳಗಾಂವಿ ಜಿಲ್ಲೆಯಲ್ಲಿ 12ಕಿಮೀ ಬಿಜಾಪುರ ಜಿಲ್ಲೆಯಲ್ಲಿ 140ಕಿಮೀ ಮತ್ತು ಗುಲ್ಬರ್ಗ ಜಿಲ್ಲೆಯಲ್ಲಿ 24ಕಿಮೀ ಅಂದರೆ ಕರ್ನಾಟಕದಲ್ಲಿ ಒಟ್ಟು 176ಕಿಮೀ ದೂರ ಹರಿದು ಕೃಷ್ಣಾನದಿಯನ್ನು ಸೇರುತ್ತದೆ. ಈ ನದಿಗೆ ಎರಡೂ ಬದಿಗಳಿಂದ ಬಂದು ಸೇರುವ ಅನೇಕ ಸಣ್ಣಪುಟ್ಟ ಹೊಳೆ ಹಳ್ಳಗಳಲ್ಲಿ ಮುಖ್ಯವಾದವು ಬಸವನ ಬಾಗೇವಾಡಿ ತಾಲ್ಲೂಕಿನ ಹಂಚಿನಾಳ ಗ್ರಾಮದ ಹತ್ತಿರ ಸಣ್ಣ ಡೋಣಿ ನದಿ, ಮುದ್ದೇಬಿಹಾಳ ತಾಲ್ಲೂಕಿನ ಹಡಗಿನಾಳ ಗ್ರಾಮದ ಹತ್ತಿರ ಸೊಗ್ಲಿ ನದಿ ಮತ್ತು ಗುಲ್ಬರ್ಗ ಜಿಲ್ಲೆಯ ಹಿರಾ ನದಿ. ಈ ನದಿಯ ಒಟ್ಟು ಜಲಾನಯನ ಕ್ಷೇತ್ರ ಸುಮಾರು 1025ಚ.ಕಿಮೀ. ಈ ನದಿ ಗದಗ-ಸೊಲ್ಲಾಪುರ ರೈಲುಮಾರ್ಗ ಮತ್ತು ರಸ್ತೆ ಗಳೆರಡನ್ನೂ ಹೊನಗನಹಳ್ಳಿಯ ಹತ್ತಿರವೂ ಜಮಖಂಡಿ-ಬಿಜಾಪುರ ರಸ್ತೆಯನ್ನು ಸಾರವಾಡದ ಹತ್ತಿರವೂ ಅಥಣಿ-ಬಿಜಾಪುರ ರಸ್ತೆಯನ್ನು ಬೊನವಾಡದ ಹತ್ತಿರವೂ ಹೂವಿನಹಿಪ್ಪರಗಿ-ತಾಳಿಕೋಟೆ ಹಾಗೂ ಮುದ್ದೇಬಿಹಾಳ-ತಾಳಿಕೋಟೆ ರಸ್ತೆಗಳನ್ನು ಅಡ್ಡದಾಟುತ್ತದೆ. ಈ ಸ್ಥಳಗಳಲ್ಲಿ ಸೇತುವೆಗಳನ್ನು ಕಟ್ಟಲಾಗಿದೆ. ಹೊನವಾಡ, ಸಾರವಾಡ, ಉಕ್ಕಲಿ, ಯಾಳವಾರ ಮತ್ತು ತಾಳಿಕೋಟೆ-ಇವು ಡೋಣಿ ನದಿಯ ದಂಡೆಯ ಮೇಲಿರುವ ಮುಖ್ಯ ಸ್ಥಳಗಳಾಗಿವೆ.

ಡೋಣಿ ನದಿ ಅಂಕುಡೊಂಕಾಗಿದ್ದು ತಿರುವು ಪ್ರದೇಶಗಳಲ್ಲಿ ಬೇಸಗೆಯ ಕಾಲದಲ್ಲಿ ಉಪ್ಪು ನೀರಿನ ಪರಿಣಾಮವಾಗಿ ದಂಡೆಗಳ ಮೇಲೆ ಉಪ್ಪಿನ ಪದರ ಉಂಟಾಗುತ್ತದೆ. ಈ ನದಿಯ ಕಣಿವೆ ಫಲವತ್ತಾದ ರೇವೆಮಣ್ಣಿನಿಂದ ಹಾಗೂ ಹೊರಭಾಗವು ಆಳವಾದ ಕಪ್ಪುಮಣ್ಣಿನಿಂದ ಕೂಡಿದ್ದು ಇದರ ಜಲಾನಯನ ಕ್ಷೇತ್ರ ಬಹಳ ಫಲವತ್ತಾಗಿದ್ದು ಸಮೃದ್ಧ ಆಹಾರ ಧಾನ್ಯಗಳ ಉತ್ಪಾದನೆಗಾಗಿ ಪ್ರಸಿದ್ಧವಾಗಿದೆ. ಜೋಳ, ಗೋದಿ ಮತ್ತು ಕುಸುಬೆ ಸಮೃದ್ಧವಾಗಿ ಬೆಳೆಯುತ್ತವೆ.

ಡೋಣಿ ನದಿಯ ಕಣಿವೆ ಪ್ರದೇಶ ಬಿಜಾಪುರ ಜಿಲ್ಲೆಯ ಧಾನ್ಯದ ಕಣಜವೆನಿಸಿದೆ. 'ಡೋಣಿ ಬೆಳೆದರೆ ಓಣೆಲ್ಲ ಕಾಳು' ಎಂಬ ಗಾದೆ ಮಾತಿದೆ. ಬಿಜಾಪುರ ಜಿಲ್ಲೆಯಲ್ಲಿ ನಾರಾಯಣಪುರ ಯೋಜನೆಯ ಅಂಗವಾಗಿ ಡೋಣಿ ನದಿಗೆ ಅಡ್ಡಲಾಗಿ ಎಪ್ಪತ್ತು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಅಣೆಕಟ್ಟು ನಿರ್ಮಿಸುವ ಯೋಜನೆಯನ್ನು ಅಂಗೀಕರಿಸಲಾಗಿದೆ.

ಡೋಣಿ ನದಿಯ ನೀರು ಮಳೆಗಾಲದ ಹೊರತಾಗಿ ಉಳಿದ ಕಾಲಗಳಲ್ಲಿ ಉಪ್ಪುಪ್ಪಾಗಿರುವುದರಿಂದ ಈ ಪ್ರದೇಶದಲ್ಲಿ ಬೇಸಗೆಯಲ್ಲಿ ಕುಡಿಯುವ ನೀರಿನ ಕೊರತೆಯುಂಟಾಗುತ್ತದೆ. ಮಳೆಗಾಲದಲ್ಲಿ ಈ ನದಿಯಲ್ಲಿ ಮಹಾಪೂರ ಬಂದು ಸಣ್ಣ ಪ್ರಮಾಣದ ಒಡ್ಡುಗಳು ಒಡೆಯುವುದು, ಕೆಲವು ಕಡೆಗಳಲ್ಲಿ ದಪ್ಪವಾಗಿ ಕೆಸರು ಸಂಚಯವಾಗುವುದು ಸಾಮಾನ್ಯ. (ಎಸ್.ಎಸ್.ಎನ್.)

**ಡೋಹರ ಕಕ್ಕಯ್ಯ :** ಹನ್ನೆರಡನೆಯ ಶತಮಾನದಲ್ಲಿದ್ದ ಶಿವಶರಣ ಹಾಗೂ ವಚನಕಾರ. ಡೋಹರ ಕುಲದಲ್ಲಿ ಹುಟ್ಟಿ ಚರ್ಮ ಹದಮಾಡುವ ಕಾಯಕದಲ್ಲಿ ನಿರತನಾಗಿದ್ದ ಈತ ಮಾಳವ ದೇಶದಿಂದ ಕಲ್ಯಾಣಕ್ಕೆ ಬಂದು ನೆಲಸಿದವ. ಕಾಯಕದಲ್ಲಿಯೇ ಕೈಲಾಸ ಕಂಡ ವ್ಯಕ್ತಿ. ಶಿವನಿಂದೆಯನ್ನು ಕೇಳೆ ಎಂಬ ನಿಯಮ ಪಾಲಿಸುತ್ತಿದ್ದ ಈತ ಒಮ್ಮೆ ಕಲ್ಯಾಣದ ಬೀದಿಯಲ್ಲಿ ಹರಿಮಹಿಮೆಯ ಪುರಾಣ ಹೇಳುತ್ತಿದ್ದ ಬ್ರಾಹ್ಮಣನನ್ನೂ ಮತ್ತೊಮ್ಮೆ ಲಿಂಗವನ್ನು ಕಲ್ಲೆಂದ ವೆಂಗಿಭೂಪನನ್ನೂ ಕೊಂದನೆಂದು ವೀರಶೈವಪುರಾಣಗಳು ಹೇಳುತ್ತವೆ. ಈತನ ಪ್ರಸಾದ ಪವಿತ್ರತಮವೆಂದು ಭಾವಿಸಿದ್ದ ಬಸವಣ್ಣ ತನ್ನ ಕೆಲವು ವಚನಗಳಲ್ಲಿ ಈತನನ್ನು 'ಅಪ್ಪನು ಡೋಹರ ಕಕ್ಕಯ್ಯ, ಕಿರಿಯಯ್ಯಾ ಡೋಹರ ಕಕ್ಕಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ, ಕಕ್ಕಯ್ಯ ಹಿರಿಯಯ್ಯನೊಕ್ಕುದನಿಕ್ಕು ನೋಡಯ್ಯ' - ಎಂದು ಮೊದಲಾಗಿ ಕೊಂಡಾಡಿದ್ದಾನೆ. ಬಿಜ್ಜಳನ ಮರಣದ ಅನಂತರ ಉಳುವಿಯತ್ತ ಹೊರಟಿದ್ದ ಶರಣರನ್ನು ರಕ್ಷಿಸಲು ಕಕ್ಕಯ್ಯ ವೀರಾವೇಶದಿಂದ ಹೋರಾಡಿದನೆಂದೂ ವೀರಶೈವ ಪುರಾಣಗಳಲ್ಲಿ ಹೇಳಿದೆ. ಬೆಳಗಾಂವಿ ಜಿಲ್ಲೆಯ ಕಕ್ಕೇರಿಯಲ್ಲಿ ಇವನ ಹೆಸರಿನ ಎರಡು ಜಲಾಶಯಗಳು, ಒಂದು ದೇವಾಲಯ ಹಾಗೂ ಸಮಾಧಿ ಇವೆ.

ಅಭಿನವ ಮಲ್ಲಿಕಾರ್ಜುನ ಎಂಬುದು ಇವನ ವಚನಗಳ ಅಂಕಿತ. ಇವನು ಎಷ್ಟು ವಚನಗಳನ್ನು ಬರೆದಿದ್ದಾನೆ ಎಂಬುದು ತಿಳಿದಿಲ್ಲ. ಈತನ ವಚನಗಳಲ್ಲಿ ಅನುಭಾವ ದೃಷ್ಟಿ ಕಂಡುಬರುತ್ತದೆ. 'ನೆನೆಯಲರಿಯೆ ನಿರ್ಧರಿಸಲರಿಯೆ-ಮನವಿಲ್ಲಾಗಿ ಭಾವಿಸಲರಿಯೆ ಬೆರಸಲರಿಯೆ-ಭಾವ ನಿರ್ಭಾವವಾಯಿತ್ತಾಗಿ ಧ್ಯಾನ ಮೌನವನರಿಯೆ ಧ್ಯಾನಾತೀತ ತಾನೆಯಾಯಿತ್ತಾಗಿ ಜ್ಞಾತೃ ಜ್ಞಾನ ಜ್ಞೇಯಂಗಳೆಲ್ಲವ ಮೀರಿ ಅಭಿನವಮಲ್ಲಿಕಾರ್ಜುನನಲ್ಲಿ ಪರಮಸುಖಿಯಾಗಿರ್ಪೆ ಎಂಬ ವಚನ ಇವನ ಅನುಭಾವದೃಷ್ಟಿಗೆ ಸಾಕ್ಷಿಯಾಗಿದೆ. (ಕೆ.ಎಂ.)

**ಡ್ಯಾಲ್ಯೆಲ್, ರಾಬರ್ಟ್ ಆನ್‌ಸ್ಟ್ರುಥರ್:** 1831-90. ಮೈಸೂರು ಸಂಸ್ಥಾನದ ಚೀಫ್ ಕಮಿಷನರ್ (1875-77). 1831ರ ಮೇ 5ರಂದು ಫೈಫ್‌ಷೈರಿನ ಲಿಂಗೋವಿನಲ್ಲಿ ಜನಿಸಿದ. ಜಾನ್ ಡ್ಯಾಲ್ಯೆಲನ ಹಿರಿಯ ಮಗ. ಚೆಲ್ಟನ್‌ಹ್ಯಾಮ್ ಮತ್ತು ಹೈಲ್ಬರಿಯ ಈಸ್ಟ್ ಇಂಡಿಯಾ ಕಂಪನಿ ಕಾಲೇಜುಗಳಲ್ಲಿ ವಿದ್ಯಾಭ್ಯಾಸ ಮುಗಿಸಿದ ಈತ 1851ರಲ್ಲಿ ಮದರಾಸು ಸಿವಿಲ್ ಸರ್ವಿಸ್‌ಗೆ ಸೇರಿದ. 1861ರಲ್ಲಿ ಮದರಾಸು ಸರ್ಕಾರದ ಕಂದಾಯ ಇಲಾಖೆಯ ಸಹಕಾರ್ಯದರ್ಶಿಯೂ ಅನಂತರ 1867ರಲ್ಲಿ ಅದೇ ಇಲಾಖೆಯ ಮುಖ್ಯ ಕಾರ್ಯದರ್ಶಿಯೂ ಆಗಿ ನೇಮಕಗೊಂಡ. 1865-66ರ ಅವಧಿಯಲ್ಲಿ ಕೇಂದ್ರ ಕ್ಷಾಮಪರಿಹಾರ ಸಮಿತಿಯ ಕಾರ್ಯದರ್ಶಿಯೂ ಆಗಿದ್ದು ಇದಕ್ಕೆ ಸಂಬಂಧಿಸಿದ ವರದಿಯೊಂದನ್ನು ಈತ ಸಲ್ಲಿಸಿದ. ಇದೇ ಸಮಿತಿಯಲ್ಲಿ ಕೆಲಸಮಾಡುತ್ತಿದ್ದ ನೌಕರರಿಗೆ ಈತನ ವರದಿ ಒಂದು ಉತ್ತಮ ಮಾರ್ಗದರ್ಶಿಯಾಯಿತು. ಕಂದಾಯ ಇಲಾಖೆಯ ಹೆಚ್ಚುವರಿ ಸದಸ್ಯನಾಗಿ ನೇಮಕಗೊಂಡು ಸುಂಕದ ಸಂಬಂಧವಾಗಿ ವಿಚಾರಣೆಯನ್ನು ನಡೆಸಿ ಉತ್ತಮ ವರದಿಯೊಂದನ್ನು ಸಿದ್ಧಪಡಿಸಿದನಲ್ಲದೆ, ಮದರಾಸು, ಮೈಸೂರು, ಪಂಜಾಬು ಹಾಗೂ ವಾಯುವ್ಯ ಪ್ರಾಂತ್ಯಗಳ ಆಡಳಿತ, ಸುಧಾರಣೆ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದ ಅನೇಕ ಸಂಶೋಧನೆಗಳನ್ನು ಕೈಗೊಂಡ.

1875ರಲ್ಲಿ ಮೈಸೂರಿನ ಚೀಫ್ ಕಮಿಷನರ್ ಆಗಿ ನೇಮಕಗೊಂಡ ಈತ ಕೆಲವು ಗಮನಾರ್ಹ ಸುಧಾರಣೆಗಳನ್ನು ಮಾಡಿದ. ತನ್ನ ಕಾಲದಲ್ಲಿ

ಮೈಸೂರು ಪ್ರಾಂತ್ಯದಲ್ಲಿ ಕಾಣಿಸಿಕೊಂಡ ಕ್ಷಾಮದಿಂದ ಉಂಟಾದ ನಷ್ಟವನ್ನು ಹಾಗೂ ಜನರ ಸ್ಥಿತಿಗತಿಗಳನ್ನು ಸುಧಾರಿಸಲು ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಂಡ. ಕಾಫಿ ಬೆಳೆಯ ಮೇಲೆ ವಿಧಿಸುತ್ತಿದ್ದ ಹಾಳತವೆಂಬ ತೆರಿಗೆಗೆ ಬದಲಾಗಿ ಕಾಫಿ ಬೆಳೆಯುವ ಒಟ್ಟು ಎಕರೆಯ ಆಧಾರದ ಮೇಲೆ ತೆರಿಗೆ ಹಾಕುವುದನ್ನು ಅನುಮೋದಿಸಿದವರಲ್ಲಿ ಈತ ಪ್ರಮುಖನಾದವ.

1873-77ರವರೆಗೆ ಭಾರತದ ಶಾಸನಸಭೆಯಲ್ಲಿ ಮದರಾಸನ್ನು ಪ್ರತಿನಿಧಿಸಿದ್ದನಲ್ಲದೆ 1877ರಲ್ಲಿ ಕೌನ್ಸಿಲ್ ಆಫ್ ಸೆಕ್ರೆಟರಿ ಆಫ್ ದಿ ಸ್ಟೇಟ್ ಫಾರ್ ಇಂಡಿಯಾದ ಸದಸ್ಯನಾಗಿದ್ದು 1883ರಲ್ಲಿ ಅದೇ ಸಮಿತಿಯ ಉಪಾಧ್ಯಕ್ಷನೂ ಆದ. ಫೆಬ್ರವರಿ 1879ರಲ್ಲಿ ಸೇವೆಯಿಂದ ನಿವೃತ್ತಿ ಹೊಂದಿದ. ಅದೇ ವರ್ಷದ ಜುಲೈ ತಿಂಗಳಲ್ಲಿ ಸಿ.ಎಸ್.ಐ. ಬಿರುದು, 1885ರಲ್ಲಿ ಆ್ಯಂಡ್ರೂಸ್ ವಿಶ್ವವಿದ್ಯಾನಿಲಯದಿಂದ ಎಲ್.ಎಲ್.ಡಿ. ಪದವಿ, 1887ರಲ್ಲಿ ಕೆ.ಸಿ.ಐ.ಇ. ಬಿರುದು ಇವನಿಗೆ ಲಭಿಸಿದುವು. ಲಂಡನ್ನಿನ ರಾಯಲ್ ಸ್ಟ್ಯಾಟಿಸ್ಟಿಕಲ್ ಸೊಸೈಟಿಯ ಸದಸ್ಯನೂ ರಾಯಲ್ ಅಂಡ್ ಏನ್ಷೆಂಟ್ ಗೋಲ್ಫ್ ಕ್ಲಬ್ಬಿನ ಕ್ಯಾಪ್ಟನನೂ ಅನೇಕ ಸಂಘ ಸಂಸ್ಥೆಗಳಿಗೆ ಸದಸ್ಯನೂ ಆಗಿದ್ದ ಈತ ಕೊನೆಯವರೆಗೂ ಅವಿವಾಹಿತನಾಗಿಯೇ ಉಳಿದು 1890 ಫೆಬ್ರವರಿ 15ರಂದು ಎಡಿನ್‌ಬರೋ ನ್ಯೂ ಕ್ಲಬ್‌ನಲ್ಲಿ ನಿಧನಹೊಂದಿದ. (ಎಸ್.ಎನ್.ಜ.)

# ತ

**ತಂಡಗ :** ತುರುವೇಕೆರೆ ತಾಲ್ಲೂಕಿನಲ್ಲಿ ನೊಣವಿನಕೆರೆಗೆ 8ಕಿಮೀ ದೂರದಲ್ಲಿರುವ ಗ್ರಾಮ. ಹಳೇ ತಂಡಗ ಎಂದೂ ಹೆಸರು.

ಇದು ಒಂದು ಹಳೆಯ ಅಗ್ರಹಾರ. ಶಾಸನಗಳಲ್ಲಿ ಶಂಕರನಾರಾಯಣಪುರ ಎಂದು ಕರೆಯಲಾಗಿದೆ. ಶಾಲಿವಾಹನ ಇಲ್ಲಿ ಹುಟ್ಟಿದನೆಂದು ಐತಿಹ್ಯ. ಇಲ್ಲಿರುವ ಸು.14ನೆಯ ಶತಮಾನದ ಚೆನ್ನಕೇಶವ ದೇವಾಲಯು ಹೊಯ್ಸಳ ಶೈಲಿಯಲ್ಲಿರುವ ರಚನೆ. ದೇವಾಲಯದಲ್ಲಿ ಉಪಯೋಗಿಸಿರುವ ಪ್ರತಿ ಕಲ್ಲಿನ ಮೇಲೂ ರಚನೆಯಲ್ಲಿ ಅವುಗಳು ಇರಬೇಕಾದ ಸ್ಥಳ ಮೊದಲಾದವನ್ನು ಅವುಗಳ ಮೇಲೆ ಶಾಸನ ರೂಪದಲ್ಲಿ ಕೆತ್ತಿರುವುದು ಇಲ್ಲಿಯ ವೈಶಿಷ್ಟ್ಯ. ಈ ದೇವಾಲಯದಲ್ಲಿ ಜಗತಿ ಇಲ್ಲದಿದ್ದರೂ ತಳ ಪಟ್ಟಿಕೆಗಳು, ಭಿತ್ತಿವಿಗ್ರಹಗಳು ಮುಂತಾದ ಹೊಯ್ಸಳ ಶೈಲಿಯ ಅಂಗಗಳೂ ಮೂರು ಮೆಟ್ಟಲಾಗಿ ಏರುವ ವಿಮಾನವೂ ಇವೆ. ಗರ್ಭಗೃಹ ಮತ್ತು ಸುಕನಾಸಿಗಳು ಸುಮಾರಾಗಿ ಒಂದೇ ಆಯದವು. ನವರಂಗ ಸ್ವಲ್ಪ ದೊಡ್ಡದು. ದೇವಾಲಯದ ಎಲ್ಲ ದ್ವಾರಗಳೂ ನವರಂಗದ ಆಳದ ಭುವನೇಶ್ವರಿಗಳೂ ನವರಂಗ ಹಾಗೂ ಮುಂದಿನ ಅರ್ಧಮಂಟಪದಲ್ಲಿರುವ ಸ್ತಂಭಗಳೂ ಹೊಯ್ಸಳ ಶೈಲಿಯಲ್ಲಿದ್ದು ಉತ್ತಮ ರಚನೆಗಳಾಗಿವೆ. ಹೊರಭಿತ್ತಿಯ ಮೇಲೆ ನರಸಿಂಹ, ವಿಷ್ಣು, ಉಮಾಮಹೇಶ್ವರ ಮುಂತಾದ ವಿಗ್ರಹಗಳಿವೆ. ಈ ಗರ್ಭಗುಡಿಯಲ್ಲಿರುವ ಕೇಶವ ವಿಗ್ರಹ ಹೊಸದು. ಮೂಲ ವಿಗ್ರಹ ಭಿನ್ನವಾಗಿದ್ದು ಹೊರಗೆ ನಿಂತಿದೆ.

ಇಲ್ಲಿನ ಮಲ್ಲೇಶ್ವರ ದೇವಾಲಯ ಮೂಲತಃ 10-11ನೆಯ ಶತಮಾನದ ದ್ರಾವಿಡ ರೀತಿಯ ರಚನೆ. ಆದರೆ ಈಗ ಇದು ನವೀಕೃತ. ಇನ್ನೊಂದು ಈಶ್ವರ ದೇವಾಲಯ, ಈಚಿನದು. ಇದರಲ್ಲಿ ಪೂರ್ವಭಾಗದಲ್ಲಿ ಮೂರು ಅಂಕಣಗಳಿರುವ ವರಾಂಡ ಮತ್ತು ದಕ್ಷಿಣಕ್ಕೆ ಒಂದು ಸಣ್ಣ ಮುಖಮಂಟಪ ಇವೆ. ವರಾಂಡದಲ್ಲಿ ಸಿಂಹಗಳು ಮತ್ತು ಸವಾರರ ಚಿತ್ರಗಳಿಂದ ಕೂಡಿದ ನಾಲ್ಕು ಕಂಬಗಳೂ ಅವುಗಳ ಮೇಲೆ ಶಿವನ ಲಿಂಗೋದ್ಭವಮೂರ್ತಿ, ಗಜಾಸುರಮರ್ದನ, ತಾಂಡವೇಶ್ವರ, ವಿಷ್ಣು, ಬ್ರಹ್ಮ, ಪ್ರಾಜ್ಞವ್ಯಾಘ್ರಪಾದ, ಬೇಡರ ಕಣ್ಣಪ್ಪ, ಶಿವ-ಪಾರ್ವತಿ ಮುಂತಾದ ಶಿಲ್ಪಗಳಿವೆ.

ತಂಡಗಕ್ಕೆ ಒಂದೂವರೆ ಕಿಮೀ ದೂರದಲ್ಲಿ ಕುಂಬಾರರ ಕರಿಕಲ್ಲು ಎಂಬ ಗುಡ್ಡದಲ್ಲಿ ಗವಿಸಿದ್ಧೇಶ್ವರ ಗುಹೆ ಇದೆ. ಇದು ಒಂದು ಯಾತ್ರಾಸ್ಥಳವಾಗಿದೆ. (ಡಿ.ಎಸ್.ಜೆ.)

**ತಂಬೂರಿಯವರು :** ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆ ಹಾಗೂ ಉತ್ತರ ಕೊಡಗಿನ ಸುತ್ತಮುತ್ತಲ ಪ್ರದೇಶಗಳಲ್ಲಿ ಕಂಡುಬರುವ ಲೌಕಿಕ ವೃತ್ತಿ ಗಾಯಕರು. ಇವರ ವಾದ್ಯ ತಂಬೂರಿ, ಜೊತೆಗೆ ಬಟ್ಟುತಾಳ ಹಾಗೂ ಗುಮಟೆ (ಗುಮ್ಮಿ) ಬಳಸುತ್ತಾರೆ. ತಂಬೂರಿಯನ್ನು ಕಣಿಗಲೆ, ಪಕ್ಷೀ, ಕೂಳಿ, ತೇಗ, ಹಲಸು ಮುಂತಾದ ಮರಗಳಲ್ಲಿ ಯಾವುದಾದರೂ ಒಂದರಿಂದ ಮಾಡಿಕೊಳ್ಳುತ್ತಾರೆ. ಸುಮಾರು ಮೂರೂವರೆ ಅಡಿ ಉದ್ದವಿರುವ ತಂಬೂರಿಯ ಮೇಲು ಭಾಗದಲ್ಲಿ ನಾಗರಹಾವಿನ ಹೆಡೆಯ ಕೆತ್ತನೆ ಇರುತ್ತದೆ.



ಇರುವ ನಾಲ್ಕು ಉಕ್ಕಿನ ತಂತಿಗಳನ್ನು ಶ್ರುತಿ ಮಾಡಿಕೊಳ್ಳಲು ನಾಲ್ಕು ಬಿರಡೆಗಳಿರುತ್ತವೆ. ಮಂಟೇಸ್ವಾಮಿಯ 'ಸಿಸು' ಮಕ್ಕಳಾದ ನೀಲಗಾರರಂತೆ ಇವರೂ ತಂಬೂರಿಯನ್ನೇ ವಾದ್ಯವನ್ನಾಗಿ ಬಳಸುತ್ತಾರಾದರೂ ವಾದ್ಯವಿಶೇಷದ ಏಕತೆಯಿಂದಲೇ ಈ ಎರಡು ಸಂಪ್ರದಾಯಗಳಿಗೂ ಒಂದೇ ಮೂಲವನ್ನು ಆರೋಪಿಸುವುದಕ್ಕಾಗುವುದಿಲ್ಲ. ನೀಲಗಾರ ಸಂಪ್ರದಾಯಕ್ಕೆ ಧಾರ್ಮಿಕ ಪರಿವೇಷವಿದೆ; ಶೂದ್ರ ವರ್ಗದ ಎಲ್ಲರೂ ನೀಲಗಾರರಾಗಿದ್ದಾರೆ. ನೀಲಗಾರರು ತಂಬೂರಿ ಜೊತೆಗೆ ಬಳಸುವ ಸಾಧನ ಗಗ್ಗರ; ನೀಲಗಾರರು ಹಾಡುವ ಪ್ರಧಾನ ಕಥೆಯಾದ ಧರೆಗೆ ದೊಡ್ಡವರ ವಚನ-ತಂಬೂರಿಯವರಿಗೆ ಅಪರಿಚಿತ ವಸ್ತು. ಆ ಕಾರಣಗಳಿಂದ ತಂಬೂರಿಯವರನ್ನು ಧಾರ್ಮಿಕ ವೃತ್ತಿಗಾಯಕರಾದ ನೀಲಗಾರರ ಸಂಪ್ರದಾಯದೊಡನೆ ಸೇರಿಸುವುದು ಸಮಂಜಸವಲ್ಲ.

ಲೌಕಿಕ ವೃತ್ತಿಗಾಯಕರಲ್ಲಿ ತಂಬೂರಿಯವರಿಗೆ ಶ್ರೇಷ್ಠ ಸ್ಥಾನ ಲಭ್ಯವಾಗಿರುವುದು ಇವರು ಹಾಡುವ ರಾಮಾಯಣ ಹಾಗೂ ಮಹಾಭಾರತಗಳಿಂದ. ಇವುಗಳಲ್ಲದೆ ಇವರು ಇಪ್ಪತ್ತಕ್ಕೂ ಮೀರಿ ಪೌರಾಣಿಕ, ಐತಿಹಾಸಿಕ ಹಾಗೂ ಇತರ ಕಾವ್ಯಗಳನ್ನೂ ಹಾಡುತ್ತಾರೆ. ಜನಪದ ಕಥೆಗಳನ್ನು ಕಾವ್ಯವನ್ನಾಗಿ ಮಾರ್ಪಡಿಸಿಕೊಂಡಿರುವುದೇ ಇವರ ಕಾವ್ಯಸಂಪತ್ತಿನ ಹೆಚ್ಚಳಕ್ಕೆ ಕಾರಣವಾಗಿದೆ. ಸತ್ಯಭೋಜರಾಜ, ಕಾಡು ಸಿದ್ದಮ್ಮ, ಸರ್ಜಪ್ಪನಾಯಕ, ಲೋಹಿತಕುಮಾರ ಬಸವಕುಮಾರ, ತಿರುಪತಿ ತಿಮ್ಮಪ್ಪ, ಅಂಜನಾದೇವಿ ಕಥೆ, ಲವಕುಶರ ಕಾಳಗ, ನಿರ್ವಾಣಸ್ವಾಮಿ ಕಥೆ, ಎಲ್ಲಮ್ಮನ ಕಥೆ, ಬಾಲನಾಗಮ್ಮ, ಅರಣ್ಯಕುಮಾರ, ಗಜಾವತಿ ಅಥವಾ ಗಜಮೋಹಿನಿ, ಕೊಡಗಿನ ದೊರೆ, ಬಂಜೆ ಹೊನ್ನಮ್ಮ, ನಂಜುಂಡೇಶ್ವರ, ಭೂದೇವಿ-ಬಸವಣ್ಣ, ಭೂತಾಳಿ ಪಟ್ಟಣದ ಋಷಿ, ಬಾಣಂತಿ ಹಾಡು, ಗೊಲ್ಲರ ಹಾಡು, ರಾಮಾಯಣ, ಮಹಾಭಾರತ ಮುಂತಾದ ಕಾವ್ಯಗಳು ತಂಬೂರಿಯವರು ಕನ್ನಡ ಜನಪದ ಕಾವ್ಯ ಭಂಡಾರಕ್ಕೆ ಕೊಟ್ಟಿರುವ ಕೊಡುಗೆಗಳು, ಇವುಗಳ ಜೊತೆಗೆ ಕಥೆಯ ನಡುವೆ ಕೆಲವು ವಿನೋದ ಲಾವಣಿಗಳನ್ನೂ ಇವರು ಹಾಡುತ್ತಾರೆ.

ಎಲ್ಲ ವೃತ್ತಿಗಾಯಕರಲ್ಲಿ ಕಂಡುಬರುವ ವಚನ ಇವರಲ್ಲಿಯೂ ಕಂಡುಬಂದರೂ ಪದ್ಯಭಾಗಗಳಿಗೇ ಹೆಚ್ಚು ಪ್ರಾಚುರ್ಯ. ಇವರ ಎಲ್ಲ ಕಾವ್ಯಗಳೂ ರಗಳೆಯನ್ನು ಹೋಲುವ ಛಂದಸ್ಸಿನಲ್ಲೇ ಹರಿಯುತ್ತವೆ. ಕಥೆ ಮಾಡಲು ಕೊನೆಯ ಪಕ್ಷ ಇಬ್ಬರು ಮೂವರು ಜನರಾದರೂ ಬೇಕು. ಪ್ರಧಾನ ಗಾಯಕನೊಡನೆ ಉಳಿದವರು ಸೊಲ್ಲು ಕೊಡುತ್ತಾರೆ. ಜೊತೆಗೆ ವಚನ ಬಂದಾಗ ಹೌದೌದು ಎಂದು ಹೇಳುತ್ತ ಕಥೆಯ ಬೆಳವಣಿಗೆಗೆ ಸ್ವಾರಸ್ಯ ತಂದುಕೊಡುತ್ತಾರೆ. ಇವರು ವೃತ್ತಿಗಾಯಕರಾಗಿ ವಿಶಿಷ್ಟ ಸಂಪ್ರದಾಯಕ್ಕೆ ಸೇರಿದವರಾಗಿರುವುದರ ಜೊತೆಗೆ ಊರೊಟ್ಟಿನ ಮದುವೆ ಮುಂಜಿಗಳಲ್ಲಿ ವಾದ್ಯವನ್ನೂ ನುಡಿಸುತ್ತಾರೆ. ಇವರ ಚಿಟ್‌ಮೇಳ (ನೋಡಿ) ಕರಡೆ, ಕೋಲು, ಡುಮ್ಮಿ, ಮೋರಿಗೆಗಳಿಂದ ಕೂಡಿದ ಜನಪದ ನೃತ್ಯ, ಗುರುಶಿಷ್ಯ ಬಾಂಧವ್ಯ, ಧಾರ್ಮಿಕ ವೃತ್ತಿಗಾಯಕರಲ್ಲಿ ಇರುವಷ್ಟು ಗುರುತರವಾಗಿ ಇವರಲ್ಲಿ ಕಂಡುಬರುವುದಿಲ್ಲ.

ತಂಬೂರಿಯವರು ಹರಿಜನರ ಚಲವಾದಿ ಹಾಗೂ ಹಣತರು ಎಂಬ ಉಪಜಾತಿಗೆ ಸೇರಿದವರು. ಇವರ ಮನೆದೇವರು ಕರಿಯಮ್ಮ. ಇವಳನ್ನು ಇವರು ಲಕ್ಷ್ಮೀ ಎಂದು ಭಾವಿಸುತ್ತಾರೆ. ಈ ದೇವತೆಯನ್ನು ಕುರಿತ ಕಥನಕಾವ್ಯ ಯಾವುದನ್ನೂ ಇವರು ಹಾಡುವಂತೆ ಕಾಣುವುದಿಲ್ಲ. ಆದರೆ ಈ ದೇವತೆಯನ್ನು ಕುರಿತ ತ್ರಿಪದಿಗಳನ್ನು ಹಾಡುತ್ತಾರೆ. ತಂಬೂರಿಯವರನ್ನು ಕುರಿತಂತೆ ಗಜಮೋಹಿನಿ (ಹಾ.ತಿ.ಕೃಷ್ಣೇಗೌಡ, 1977), ತಂಬೂರಿ ಕಾವ್ಯಗಳು (ಚಂದ್ರಕಾಳೇನಹಳಿ, 1978), ತಂಬೂರಿ ಸಂಪ್ರದಾಯದ ಕಾವ್ಯಗಳು (ಅಂಬಳಿಕೆ ಹಿರಿಯಣ್ಣ, 1980) ಎಂಬ ಕೃತಿಗಳೂ ತಾಳಬಂದೋ ತಂಬೂರಿಬಂದೋ (ರಾಜೇಗೌಡ ಹೊಸಹಳ್ಳಿ, 2001) ಎಂಬ ಸಂಶೋಧನ ಮಹಾಪ್ರಬಂಧವೂ ಪ್ರಕಟವಾಗಿವೆ. (ಪಿ.ಕೆ.ಆರ್.)

**ತಗಡೂರು ರಾಮಚಂದ್ರರಾವ್ :** 1897-1988. ಸುಪ್ರಸಿದ್ಧ ಸ್ವಾತಂತ್ರ್ಯ ಹೋರಾಟಗಾರರು. ಮೈಸೂರು ಜಿಲ್ಲೆ ನಂಜನಗೂಡು ತಾಲ್ಲೂಕು ಹನುಮನಪುರದಲ್ಲಿ 1897 ಅಕ್ಟೋಬರ್ 10ರಂದು ಜನಿಸಿದರು. ತಂದೆ ಸೂರ್ಯನಾರಾಯಣಪ್ಪ. ತಾಯಿ ಲಕ್ಷ್ಮಮ್ಮ. ಈ ದಂಪತಿಗಳಿಗೆ ಇವರು ಮೂರನೆಯ ಮಗ. ಚಿಕ್ಕಂದಿನಲ್ಲಿಯೇ ತಾಯಿಯನ್ನು ಕಳೆದುಕೊಂಡು ದೊಡ್ಡಮ್ಮನ ಕೈಗೂಸಾಗಿ ಬೆಳೆದರು. ಇವರ ತಂದೆ ಶಾನುಭೋಗರು. ತಮ್ಮ ಧಾರಾಳತನದಿಂದ ಪೂರ್ವಿಕರ ಆಸ್ತಿಯನ್ನು ಕಳೆದುಕೊಂಡರು. ಬಡತನ, ಏಕಾಂತಜೀವನ ಇವು ಇವರನ್ನು ಅಂತರ್ಮುಖಿಯಾಗಿ ಚಿಂತಿಸುವಂತೆ ಮಾಡಿದುವು. ತಂದೆಯು ಬಡತನ ಮತ್ತು ಅವರು ಎರಡನೆಯ ಮದುವೆಯಾದುದರಿಂದ ಅಕ್ಕನ ಆಸರೆಯನ್ನು ಪಡೆದರು. ಭಾವನಿಗೆ ಬಹಳಷ್ಟು ದಿನಗಳು ಭಾರವಾಗಬಾರದೆಂಬ ಭಾವನೆ ಇವರಲ್ಲಿ ಬೆಳೆಯಿತು. ಭಾವನ ಆಶ್ರಯ ತೊರೆದು ಸಂಗಡಿಗರೊಂದಿಗೆ ಜೀವಿಸತೊಡಗಿದರು. ನಿರಂತರವಾಗಿ ಬಂದೊದಗಿದ ಕಷ್ಟಗಳಿಂದಾಗಿ ಮಾನಸಿಕ ನೆಮ್ಮದಿ ಕೆಟ್ಟಿತು. ಇಂಥ ಸಂದರ್ಭದಲ್ಲಿ ಭಾರತವನ್ನು ಸುತ್ತಿದರು. ಹೀಗಾಗಿ ಸರಿಯಾದ ವಿದ್ಯಾಭ್ಯಾಸ ಇವರ ಪಾಲಿಗೆ ದೊರೆಯಲಿಲ್ಲ. ಮೈಸೂರು ಮತ್ತೆ ಇವರನ್ನು ಆಕರ್ಷಿಸಿತು. ಜೀವನೋಪಾಯಕ್ಕೆ ಸಣ್ಣ ವ್ಯಾಪಾರ ಆರಂಭಿಸಿದರು. ಈ ವ್ಯಾಪಾರದ ಮೂಲಕ ಹಲವು ಬಗೆಯ ಸ್ನೇಹಿತರು ಇವರಿಗೆ ದೊರೆತರು. ಚಳವಳಿಗಾರರಾಗುವ ಪ್ರೇರಣೆಯೂ ಒದಗಿತ್ತು. ಜನರಲ್ ಡಯರ್‌ನ ಜಲಿಯನ್‌ವಾಲಾಬಾಗ್‌ನ ಹತ್ಯಾಕಾಂಡದ ಚಿತ್ರಗಳು ಮಾರಾಟಕ್ಕಾಗಿ ಮಾರುಕಟ್ಟೆಗೆ ಬಂದುವು. ಈ ಚಿತ್ರಗಳ ಮಾರಾಟವನ್ನು ನಿಷೇಧಿಸಲಾಗಿತ್ತು. ಈ ಚಿತ್ರಗಳನ್ನು ತಮ್ಮ ತಳ್ಳಂಗಡಿಯಲ್ಲಿ ಮಾರಾಟ ಮಾಡುವುದರ ಮೂಲಕ ಸ್ವಲ್ಪ ಹಣವೂ ಇವರಿಗೆ ದೊರೆಯಿತು. ಹೋರಾಟದ ಮನೋಭಾವ ಮತ್ತು ಆತ್ಮಸ್ಥೈರ್ಯವೂ ಬೆಳೆಯಿತು. ಈ ಉದ್ಯೋಗವನ್ನು 1919ರಲ್ಲಿ ಬಿಟ್ಟು ತಗಡೂರು ಸೇರಿದರು. ಮುಂದೆ ಇದು ಇವರ ಎಲ್ಲ ರೀತಿಯ ಕಾರ್ಯಚಟುವಟಿಕೆಗಳಿಗೆ ಕೇಂದ್ರವಾಯಿತು.

ರಾಮಚಂದ್ರರಾವ್ ಅವರನ್ನು ಒಮ್ಮೆ ಮುದವೀಡು ಕೃಷ್ಣರಾಯರು ತಗಡೂರ್ ಎಂದು ಕರೆದರು. ಮುಂದೆ ಜನ ಇವರನ್ನು ಇದೇ ಹೆಸರಿನಿಂದ ಗುರುತಿಸಿದರು. ದೇಶಭಕ್ತರಾಗಿದ್ದ ಇವರ ಉಡುಪು ಕೂಡ ಸ್ವದೇಶಿಯ ಸಂಕೇತವನ್ನು ಅನುಕರಿಸುತ್ತಿತು; ರಾಷ್ಟ್ರಧ್ವಜವನ್ನು ಪ್ರತಿನಿಧಿಸುತ್ತಿತ್ತು. ತಲೆಗೆ ಕೇಸರಿ ವರ್ಣದ ಗಾಂಧಿ ಟೋಪಿ, ಹಸುರು ಬಣ್ಣದ ಜುಬ್ಬ, ಬಿಳಿ ಪಂಚೆಯಿಂದ ವ್ರತನಿಷ್ಠರಾಗಿದ್ದರು. ತಾವು ತೊಡುವ ಉಡುಪಿನ ಮೇಲೆಯೇ ಹಲವಾರು ಘೋಷಣೆಗಳನ್ನು ಬರೆದುಕೊಂಡು ಓಡಾಡುವ ಜಾಹೀರಾತಿನ ಮಾಧ್ಯಮವೂ ಆಗಿದ್ದರು. ಇದು ಇವರ ಸ್ವಾತಂತ್ರ್ಯ ಹೋರಾಟದ ತೀವ್ರತೆಯನ್ನು ಪರಿಚಯಿಸುತ್ತದೆ. ಹಲವಾರು ಚಳವಳಿ, ಸತ್ಯಾಗ್ರಹಗಳಲ್ಲಿ ಪಾಲ್ಗೊಳ್ಳುವುದರ ಮೂಲಕ ಇವರು ತಗಡೂರಿನ ಬಾಪೂಜಿ ಎನಿಸಿದರು. ತಗಡೂರು ಇವರ ಸತ್ಯಾಗ್ರಹದ ಕೇಂದ್ರವಾದರೆ ಮೈಸೂರು ಇವರ ಬಿಡಾರ ಕೇಂದ್ರ. ಮೈಸೂರಿನ ಹಲವು ಗಣ್ಯವ್ಯಕ್ತಿಗಳ ಸಹಕಾರ ಮತ್ತು ಸಹಾಯ ಇವರ ಹೋರಾಟಕ್ಕೆ ಸ್ಫೂರ್ತಿನೀಡಿತು. ತಗಡೂರಿನ ಮತ್ತು ಸುತ್ತಮುತ್ತಲಿನ ಹಳ್ಳಿಗಳಲ್ಲಿ ಚರಕದ ಮಹತ್ತ್ವಸಾರಿ ನೂಲುವ ಮತ್ತು ನೇಯುವ ಕಾರ್ಯದಲ್ಲಿ ಜನರನ್ನು ತೊಡಗಿಸಿದರು. ಮನೆಗಳಲ್ಲಿ ಧೂಳು ತಿನ್ನುತ್ತಿದ್ದ ರಾಟೆಗಳನ್ನು ಹೊರತರುವಂತೆ ಪ್ರೇರೇಪಿಸಿದರು. ಹರಿಜನರಲ್ಲಿ ಆತ್ಮವಿಶ್ವಾಸ ಹೆಚ್ಚಿಸಿ ಖಾದಿ ಕೆಲಸ ಜೀವನೋಪಾಯಕ್ಕೆ ಮಾರ್ಗವಾಗುವಂತೆ ಮಾಡಿದರು. ಹರಿಜನರ ಕ್ರೈಸ್ತ ಮತಾಂತರದ ವಿರುದ್ಧ ಹೋರಾಟ ನಡೆಸಿದರು. ತಗಡೂರಿನಲ್ಲಿ ಖಾದಿ ಉತ್ಪತ್ತಿಗಾಗಿ ಕರ್ನಾಟಕ ಖದ್ದರ್ ಪರಸ್ಪರ ಸಹಕಾರ ಸಂಘವನ್ನು ಸ್ಥಾಪಿಸಿದರು (1925). ಸರ್ಕಾರ ಪತ್ರಿಕೆಗಳ ವಿರುದ್ಧ ಕರಾಳ ಶಾಸನವನ್ನು ಜಾರಿಗೆ ತಂದಾಗ ಇದರ ವಿರುದ್ಧ ಮೈಸೂರು ಪ್ರಾಂತ್ಯದಲ್ಲಿ ಹೋರಾಟವನ್ನು ಪ್ರಾರಂಭಿಸಿದರು. ಈ ಶಾಸನವನ್ನು ಹಿಂದಕ್ಕೆ ತೆಗೆದು ಕೊಳ್ಳುವವರೆಗೂ ಹೋರಾಟ ಕೈಬಿಡಲಿಲ್ಲ. ಸೈಮನ್ ಕಮಿಷನ್ನಿನ ವಿರುದ್ಧ ಸತ್ಯಾಗ್ರಹ ಮಾಡಿ ಮೊದಲ ಬಾರಿಗೆ ಜೈಲುವಾಸವನ್ನು ಅನುಭವಿಸಿದರು (1928). ಖಾದಿಯನ್ನು ಉಳಿಸಿ ಬೆಳೆಸಲು ಹಲವು ಬಾರಿ ಸತ್ಯಾಗ್ರಹ ಕೈಗೊಂಡರು. ಇವರ ವಿರೋಧಿಗಳು ತಗಡೂರಿನ ಆಶ್ರಮಕ್ಕೆ ಅಗ್ನಿಸ್ಪರ್ಶಮಾಡಿ ನಾಶಮಾಡಿದಾಗಲೂ ಎದೆಗುಂದದೆ ತಮ್ಮ ಧ್ಯೇಯ, ಧೋರಣೆಗಳನ್ನು ಮುಂದುವರೆಸಿದರು. ಖಾದಿ ಪ್ರಚಾರಕ್ಕಾಗಿ ಗಾಂಧೀಜಿ ಮೈಸೂರಿಗೆ ಬಂದಾಗ ತಗಡೂರಿಗೆ ಭೇಟಿ ನೀಡಿದರು. ಆ ಸಂದರ್ಭದಲ್ಲಿ ತಗಡೂರರ ಕೆಲಸಕಾರ್ಯಗಳನ್ನು ಮೆಚ್ಚಿ ಪ್ರೋತ್ಸಾಹಿಸಿದರು. ಗಾಂಧೀಜಿ ತಗಡೂರಿಗೆ ನೀಡಿದ ಈ ಭೇಟಿಯ ಜ್ಞಾಪಕಾರ್ಥವಾಗಿ ಇವರು ಹರಿಜನ ವಿದ್ಯಾರ್ಥಿನಿಲಯವನ್ನು ಪ್ರಾರಂಭಿಸಿದರು.



1941ರಲ್ಲಿ ಸುಶೀಲಾಬಾಯಿ ಎಂಬುವರನ್ನು ಪಶ್ಚಿಮವಾಹಿನಿಯಲ್ಲಿ ಹಲವಾರು ಹಿತೈಷಿಗಳ ಸಮ್ಮುಖದಲ್ಲಿ ಇವರು ಮದುವೆಯಾದರು. ಬ್ರಿಟಿಷರೇ ಭಾರತಬಿಟ್ಟು ತೊಲಗಿ ಆಂದೋಲನ ಪ್ರಾರಂಭವಾದಾಗ (1942) ಅದರಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ದೇಶೀರಾಜರ ವಿರುದ್ಧ ಹೋರಾಟ ನಡೆಸಿದರು. ಮೈಸೂರು ಮಹಾರಾಜರು ಈ ಚಳವಳಿಗೆ ಸೇರಬೇಕೆಂದು ಒತ್ತಾಯಿಸಿದರು. ಮಹಾರಾಜರನ್ನು ಅಣಕಮಾಡಿದ್ದರ ನೆಪದಿಂದ ಸರ್ಕಾರ ಎರಡು ವರ್ಷಗಳ ಕಾಲ ಇವರಿಗೆ ಜೈಲು ಶಿಕ್ಷೆ ವಿಧಿಸಿತು. 1957ರಲ್ಲಿ ವಿನೋಬಾಭಾವೆ ಅವರ ಜೊತೆ ಸೇರಿ ಭೂದಾನ ಚಳವಳಿಯ ಯಾತ್ರೆ ಕೈಗೊಂಡರು. ಮೈಸೂರಿನಲ್ಲಿ ಕಾಂಗ್ರೆಸ್ಸಿನ ಉದಯಕ್ಕೂ ಬೆಳವಣಿಗೆಗೂ ಕಾರಣರಾದವರಲ್ಲಿ ಇವರೂ ಒಬ್ಬರು. ಇವರೊಬ್ಬ ದಿಟ್ಟ ಹೋರಾಟಗಾರರು, ರಚನಾತ್ಮಕ ಕಾರ್ಯಕರ್ತರು. ಗ್ರಾಮೀಣ ಅಭಿವೃದ್ಧಿಗಾಗಿ ತಮ್ಮ ಜೀವನವನ್ನೇ ಅರ್ಪಿಸಿಕೊಂಡರು. ಇವರ ಪ್ರಯತ್ನದ ಫಲವಾಗಿ ತಗಡೂರಿನ ಖಾದಿ ಕೇಂದ್ರ ಹೆಸರಾಗಿದೆ. ಖಾದಿ ಕೇಂದ್ರದ ಉತ್ಪತ್ತಿಯ ನೆರವಿನಿಂದ ಊರಿನಲ್ಲೊಂದು ಪ್ರೌಢಶಾಲೆಯೂ ತಲೆ ಎತ್ತಿದೆ.

ಇವರ ಸೇವೆಯನ್ನು ಗುರುತಿಸಿದ ಮೈಸೂರಿನ ಅಭಿಮಾನಿಗಳು 'ಕರ್ಮಯೋಗಿ' ಎಂಬ ಅಭಿನಂದನ ಗ್ರಂಥವನ್ನು ಇವರಿಗೆ ಅರ್ಪಿಸಿದರು (1974). ಈ ಗ್ರಂಥ' ತಗಡೂರರ ಆತ್ಮಕಥೆಯನ್ನು ಒಳಗೊಂಡಿದೆ. ಜಮನ್‌ಲಾಲ್ ಪ್ರತಿಷ್ಠಾನ ಇವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ (1983). ಭಾರತ ಚೀನ ಸ್ನೇಹಸಂಘದ ಮತ್ತು ಭಾರತ ರಷ್ಯ ಸ್ನೇಹಸಂಘದ ಮೈಸೂರು ಪ್ರಾಂತ್ಯದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದ ಇವರು 1988 ಡಿಸೆಂಬರ್ 28ರಂದು ನಿಧನರಾದರು. *

**ತಡಿಯಂಡಮೋಳ್ :** ಕೊಡಗು ಜಿಲ್ಲೆಯ ಅತ್ಯಂತ ಉನ್ನತ ಶಿಖರ. ಸಮುದ್ರಮಟ್ಟದಿಂದ 1,745ಮೀ ಎತ್ತರವಿದೆ. ಸಹ್ಯಾದ್ರಿ ಪರ್ವತದ ಮಾಲೆಗಳ ಅಲೆಗಳ ಮಧ್ಯದಲ್ಲಿ ಮಡಿಕೇರಿ ತಾಲ್ಲೂಕಿನ ನಾಪೊಕ್ಲು ಪಟ್ಟಣದಿಂದ ಸು.16ಕಿಮೀ ನೈಋತ್ಯಕ್ಕಿದೆ. ಇಲ್ಲಿಗೆ ಮಡಿಕೇರಿಯಿಂದ ಸು.38ಕಿಮೀ ದೂರ, ವಿರಾಜಪೇಟೆಯಿಂದ 32ಕಿಮೀ. ಈ ಬೆಟ್ಟದ ತಳಭಾಗ ಸು.19ಕಿಮೀ ಉದ್ದವಿದ್ದು 12-13ಕಿಮೀ ಅಗಲವಾಗಿದೆ. ಈ ಬೆಟ್ಟದ ಬುಡದಲ್ಲಿ ನಾಲ್ಕು ನಾಡು ಅರಮನೆ ಇದೆ.

ತಡಿಯಂಡಮೋಳ್ ಶಿಖರವನ್ನೇರಲು ಹೋಗಬೇಕಾದ ಕಾಲುದಾರಿ ಈ ಅರಮನೆಯಿಂದಲೇ ಆರಂಭವಾಗುವುದು. ಬೆಟ್ಟದ ಬುಡದಲ್ಲಿ ಭೀಮಾಕಾರದ ಮರಗಳ ನಿಬಿಡ ಕಾಡಿದೆ. ಪರ್ವತದ ಎದೆಭಾಗದಿಂದ ಮೇಲಿನ ಭಾಗವೆಲ್ಲ 5 ರಿಂದ 10 ಅಡಿಗಳ ಎತ್ತರಕ್ಕೂ ಬೆಳೆದಿರುವ ದರ್ಭೆಯಂಥ' ಆನೆ ಹುಲ್ಲಿನಿಂದ ತುಂಬಿದೆ. ಅಲ್ಲೊಂದು ಇಲ್ಲೊಂದು ದೊಡ್ಡ ಮರ ವಿರಳವಾಗಿ ಬೆಳೆದಿದೆ. ಹುಲ್ಲು ಬೆಳೆದ ಈ ಗಿರಿಶಿಖರ, ದೂರದ ನೋಟಕ್ಕೆ ಹಸಿರು ಶಾಲು ಹೊದ್ದುಕೊಂಡ ಪರ್ವತರಾಜನ ಗಾಂಭೀರ್ಯ ತೋರಿಸುವಂತಿದೆ. ಈ ಹುಲ್ಲಿನ ಮಧ್ಯದಿಂದ ಮುಂದುವರಿದರೆ ಅನೇಕ ಸಣ್ಣದೊಡ್ಡ ದಿಬ್ಬಗಳು, ಬಂಡೆಕಲ್ಲುಗಳು ಕಾಣುತ್ತವೆ. ಕೆಲವೆಡೆ ಎರಡೂ ಬೆಟ್ಟಗಳು ಒಂದುಗೂಡುವಲ್ಲಿ ಆಳವಾದ ಕಣಿವೆಗಳುಂಟು. ಈ ಕಂದಕದ ತಳದಲ್ಲಿ ನೀರಿನ ಪ್ರವಾಹ ಹರಿಯುತ್ತಿರುತ್ತದೆ.

ಶಿಖರದ ಮೇಲ್ಭಾಗ ವಿಸ್ತಾರವಾಗಿದೆ. ವರ್ಷದ ಎಲ್ಲ ಕಾಲದಲ್ಲೂ ಸಾಮಾನ್ಯವಾಗಿ ಈ ಭಾಗದಲ್ಲಿ ಮಂಜು ಕವಿರುತ್ತದೆ. ಇಲ್ಲಿ ನಿಂತು ಸುತ್ತ ನೋಡಿದಾಗ ಪಶ್ಚಿಮದ ಅರಬ್ಬೀ ಸಮುದ್ರ ಮತ್ತು ಅಲ್ಲಿ ಸಾಗುತ್ತಿರುವ ಚಿಕ್ಕದೊಡ್ಡ ನೌಕೆಗಳು ಕಾಣಿಸುವುದುಂಟು. ಕೊಡಗಿನ ಎಲ್ಲ ಭಾಗಗಳ ಹಾಗೂ ಕೇರಳದ ಕೆಲಭಾಗಗಳ ಪಕ್ಷಿನೋಟ ಒದಗುತ್ತದೆ. ಬೆಟ್ಟದ ಮೇಲಿಂದ ಮಡಿಕೇರಿಯ ಕೋಟೆ, ಅರಮನೆಗಳು ಮಸುಕಾಗಿ ತೋರುತ್ತವೆ. ಎಡಬದಿಗೆ ನೋಡಿದರೆ ತಲಕಾವೇರಿಯ ಬ್ರಹ್ಮಗಿರಿ ಕಾಣುತ್ತದೆ. ಇಲ್ಲಿಂದ ಸೂರ್ಯಾಸ್ತ ಸೂರ್ಯೋದಯಗಳನ್ನು ನೋಡುವುದಂತೂ ಅಪೂರ್ವ ಆನಂದಾನುಭವ. ಬೆಟ್ಟದ ಬುಡದಲ್ಲಿ ಬತ್ತದ ಗದ್ದೆಗಳು, ಕಾಫಿ ತೋಟಗಳು ಇವೆ. ತಡಿಯಂಡಮೋಳ್ ಕೊಡಗಿನ ಬೆಡಗಿನ ಅಂದದ ಮುಡಿ ಎಂಬ ಉದ್ಗಾರಕ್ಕೆ ಪಾತ್ರವಾಗಿರುವ ರಮಣೀಯ ಸ್ಥಳ. (ಕೆ.ಆರ್.ಯು.)

**ತದಡಿ :** ಉತ್ತರ ಕನ್ನಡ ಜಿಲ್ಲೆ ಕುಮಟ ತಾಲ್ಲೂಕಿನ ಒಂದು ಸಣ್ಣ ಬಂದರು ಗ್ರಾಮ. ಅಘನಾಶಿನಿ ನದಿ ಅರಬ್ಬೀ ಸಮುದ್ರ ಸೇರುವ ಸಂಗಮಸ್ಥಳ. ಗೋಕರ್ಣಕ್ಕೆ 3ಕಿಮೀ ದೂರದಲ್ಲಿದೆ. ಪ್ರಾಚೀನ ಕಾಲದಲ್ಲಿ ಇಲ್ಲಿಂದ ವಿದೇಶಿ ವಾಣಿಜ್ಯ ನಡೆಯುತ್ತಿತ್ತೆಂದು ತಿಳಿದುಬರುತ್ತದೆ. ಇಲ್ಲಿ ಒಂದು ಕೋಟೆ ಇದ್ದು ಈ ಸ್ಥಳವನ್ನು ಮೀನುಗಾರಿಕೆಗಾಗಿ ಬಳಸಲಾಗುತ್ತಿದೆ. ಪ್ರಕೃತಿ ಸೌಂದರ್ಯದಿಂದ ಕೂಡಿರುವ ಈ ಸ್ಥಳದಿಂದ ಸೂರ್ಯಾಸ್ತವನ್ನು ವೀಕ್ಷಿಸಬಹುದು. ಇಂಡೊ ಡೆನಿಷ್ ಮೀನುಗಾರಿಕೆ ಯೋಜನೆಯ ಕೇಂದ್ರವಿದೆ. ನಾವಿಕರಿಗೆ ದಿಕ್ಸೂಚಿಯಾಗಿ ಇಲ್ಲೊಂದು ಲೈಟ್ ಹೌಸ್ ಇದೆ.

ತದಡಿಗೆ ಹೋಗುವ ಮಾರ್ಗದಲ್ಲಿ ತೊರ್ಕೆ ಎಂಬಲ್ಲಿ ಸಿದ್ದೇಶ್ವರ ದೇವಾಲಯವಿದೆ. ಸಮೀಪದ ಸಾಣಿಕಟ್ಟೆ ಉಪ್ಪು ತಯಾರಿಕೆಗೆ ಪ್ರಸಿದ್ಧವಾಗಿದೆ. ಇಲ್ಲಿ ಮಹಾಬಲಾನಂದ ಸ್ವಾಮಿಗಳು ಸ್ಥಾಪಿಸಿದ (1956) ನಿತ್ಯಾನಂದ ಆಶ್ರಮವಿದೆ. ತದಡಿಯ ಎದುರು ದಡದಲ್ಲಿರುವ ಅಘನಾಶಿನಿ ಎಂಬ ಸ್ಥಳದಲ್ಲಿ ಅಗಸ್ತ್ಯ ವಿನಾಯಕ ದೇವಾಲಯವಿದೆ. ಕಿರುಬೆಲೆ ಎಂಬಲ್ಲಿ ಅಗಸ್ತ್ಯ ಗುಹೆ ಇದೆ. (ಎಸ್.ಎಚ್.ಇ.)

**ತತ್ತ್ವದ ಪದಗಳು :** ಕನ್ನಡದಲ್ಲಿ ತತ್ತ್ವದ ಪದಗಳ ಪ್ರಚಾರ ಪ್ರಾರಂಭವಾದುದು ಸುಮಾರು ಹದಿನೈದನೆಯ ಶತಮಾನದಲ್ಲಿ. ಇದಕ್ಕೂ ಮೊದಲು ಸಂಸ್ಕೃತ ಸಾಹಿತ್ಯದ ಛಾಯೆ ಕನ್ನಡದ ಮೇಲೆ ಮೂಡಿ ತತ್ತ್ವದ ಬಗೆಗೆ ಅಲ್ಲಲ್ಲಿ ವಿಚಾರಗಳು ದಾಖಲೆಯಾಗಿವೆ. ಅದ್ವೈತ, ವಿಶಿಷ್ಟಾದ್ವೈತ ಈ ವಾದಗಳನ್ನು ಕನ್ನಡದಲ್ಲಿ ಪಂಡಿತರು ಮೌಖಿಕವಾಗಿ ಶರಣರ ಕಾಲಕ್ಕಿಂತಲೂ ಮೊದಲು ವಿಚಾರ ಮಾಡಿದಂತಿದೆ. ಜೈನಧರ್ಮದ ಪ್ರಣಾಳಿಕೆಗಳು ತತ್ತ್ವದ ನೀತಿಗೆ ಬೆಂಬಲವಾಗಿವೆ. ರತ್ನಾಕರವರ್ಣಿಯ ಅಣ್ಣನ ಪದಗಳು ನಿಜಕ್ಕೂ ತತ್ತ್ವದ ಪದಗಳಾಗಿವೆ. ಮೌಖಿಕವಾಗಿದ್ದ ಇಂಥ' ದಾಖಲೆಗಳನ್ನು ರತ್ನಾಕರವರ್ಣಿ ಮಾರ್ಗದಾಖಲೆಗಳನ್ನಾಗಿ ಮಾಡಿದ್ದಾನೆ. ಇಂಗಳಿಗಿಯ ಕವಿಯೊಬ್ಬ ಅನುಭವಸಾರಲೀಲಾ ಎಂಬ ತತ್ತ್ವದ ಪದಗಳನ್ನು ಶರಣರ ತತ್ತ್ವದ ಪದಗಳು ಎಂದು ಹಾಡಿ ಪ್ರಚಾರ ಮಾಡಿದ. ಮಾರ್ಗ ಸಾಹಿತ್ಯದಲ್ಲಿ ತತ್ತ್ವ ಬಹಳಷ್ಟು ಮೂಡಿಬಂದಿದೆ. ಈ ದೃಷ್ಟಿಯಿಂದ ನಿಜಗುಣಶಿವಯೋಗಿಯ ಕೈವಲ್ಯಪದ್ಧತಿ, ಸರ್ಪಭೂಷಣ ಶಿವಯೋಗಿಯ ಕೈವಲ್ಯಕಲ್ಪವಲ್ಲರಿ, ಚಿದಾನಂದಾವಧೂತರ ಕೈವಲ್ಯನವನೀತ, ಮುಪ್ಪಿನ ಷಡಕ್ಷರಿಯ ಸುಬೋಧಸಾರ, ಬಾಲಲೀಲಾಮಹಂತ ಶಿವಯೋಗಿಗಳ ತತ್ತ್ವಲೀಲೆಗಳು- ಈ ಮೊದಲಾದವು ಕನ್ನಡ ಜನಮನದಲ್ಲಿ ತತ್ತ್ವದ ಪದಗಳಾಗಿ ಮೂಡಿವೆ. ಇತ್ತೀಚೆಗೆ ಕೂಡಲುಕೇಶ ಎಂಬ ಕವಿಯಿಂದ ತತ್ತ್ವದ ಪದಗಳು ಹುಟ್ಟಿಕೊಂಡಿವೆ. ಆರ್.ಡಿ.ರಾನಡೆ (ಗುರುದೇವ ರಾನಡೆ) ಅವರಿಂದ ತತ್ತ್ವದ ಪದಗಳು ರಚನೆಯಾಗಿವೆ. ಇವುಗಳನ್ನು ಉತ್ತರ ಕರ್ನಾಟಕದಲ್ಲಿ ನಿತ್ಯಭಜನಾವಳಿ ಪದಗಳೆಂದು ಜನ ಹಾಡುತ್ತಾರೆ.



ತತ್ತ್ವದ ಪದಗಳ ಗಾಯಕರು

19-20ನೆಯ ಶತಮಾನಗಳಲ್ಲಿ ತತ್ತ್ವದ ಪದಗಳು ಬಹುವಾಗಿ ಪ್ರಸಾರಗೊಂಡಿವೆ. ಕಡಕೋಳ ಮಡಿವಾಳಪ್ಪ ಹಾಡಿದ ಹಾಲ ಕಾಸ ತಂಗಿ, ಹಾಲಕಾಸ ತಂಗಿ ಎಂಬ ಪದ, ತಳೆವಾಡಿ ನಬಿ ಎಂಬುವನು ತನ್ನ

ಆಟದಲ್ಲಿ ಹಾಡಿದ ಒಂಬತ್ತು ಬಾಗಿಲ ಹಚ್ಚಿ, ಬಾಗಿಲಕೊಂದೊಂದು ಸಾಚಾ ಹಚ್ಚಿ ಪದಗಳು ತತ್ತ್ವದ ಆಳವನ್ನು ಸೂಚಿಸಿವೆ. ಕರ್ನಾಟಕದಲ್ಲಿ ವೃತ್ತಿಗಾಯಕರಾಗಿ ಅಲೆಯುವ ದಂಡಿಗಿದಾಸರು (ಸ್ಪೃಶ್ಯರು, ಕಟ್ಟಿಗೆಯ ತಂಬೂರಿ ಹಿಡಿದವರು), ಹೊಲಿದಾಸರು (ಅಸ್ಪೃಶ್ಯರು, ಏಕತಾರಿ ಹಿಡಿದವರು) ಜಾತ್ರೆಗಳಲ್ಲಿ ಸಮೂಹಗಳಲ್ಲಿ ತತ್ತ್ವದ ಪದಗಳನ್ನು ಹಾಡುತ್ತ ಜನರ ಮನಸ್ಸನ್ನು ತಿದ್ದುವ ಕಾರ್ಯ ಮಾಡಿದ್ದಾರೆ. ಹೊಲಿದಾಸರ ಹೆಣ್ಣುಮಕ್ಕಳು ಸಹ ಏಕತಾರಿ ಹಿಡಿದು ತತ್ತ್ವದ ಪದಗಳನ್ನು ಹಾಡುವುದು ಕಂಡುಬರುತ್ತದೆ. ಅವುಗಳಲ್ಲಿ ಕೆಲವು ಹೀಗಿವೆ:

ಮಾಡ ಗ್ವಾಡಿಯ ಹಿಡಿದಿತ್ತು, ಅಲ್ಲಿ ಆಡ ಆನಿಯ ನುಂಗಿತ್ತು. ಬುದ್ಧಿವಂತ ಇಲಿಯು ಹೋಗಿ, ಗುದ್ದಿ ಬೆಕ್ಕನು ಕೊಂದಿತ್ತು; ಸ್ವಾರಿ ಹೋಗುನು ಬನ್ನಿರೋ, ಶಿವಶರಣರೆಲ್ಲ ಕೂಡಿರೋ.

ಕರ್ನಾಟಕದಲ್ಲಿ ಗೊಂದಲಿಗರು ಎಂಬ ವೃತ್ತಿಗಾಯಕರು ತತ್ತ್ವದ ಪದಗಳನ್ನು ಕಥೆಗಳಲ್ಲಿ ಉಪಕಥೆಗಳಲ್ಲಿ ಹೆಣೆದು ಸಾಕಷ್ಟು ಪ್ರಚಾರ ಮಾಡಿದ್ದಾರೆ. ಇವರು ಹಾಡುವ ತತ್ತ್ವದ ಪದಗಳಲ್ಲಿ ಕೆಲವು ಹೀಗಿವೆ:

ಕೇಳ ತಂಗಿ ನನ ಮಾತ, ಕೇಳ ತಾಯವ್ವ ನನ ಮಾತ, ಸತ್ಯದಿಂದಲೆ ಶಕ್ತಿ, ಸತ್ಯದಿಂದಲೆ ಮುಕ್ತಿ, ಗಂಡನಿಂದಲೆ ಶಕ್ತಿ, ಗಂಡನಿಂದಲೆ ಮುಕ್ತಿ;

ಗುರುವೆ ನಿಮ್ಮ ಸ್ಮರಣೆಯ ನಾನು ಮರೆಯಲಾರೆನು;

ತಿಳಿ ಕರಿ ತೆಲಿ ಮಾನವ, ತಳಬುಡ ತಿಳಿ ನೀ, ಅಪ್ಪುದು ಒಪ್ಪುದು ತಿಳಿ, ಬಪ್ಪುದು ಬಾರದು ತಿಳಿ, ಒಪ್ಪತ್ತಾದರ ನೀ, ಉಪ್ಪು ಸಪ್ಪ ನೀ ಮೊದಲು ತಿಳಿ.

ಇತ್ತೀಚಿನ ದಿನಗಳಲ್ಲಿ ಸದಾನಂದಯೋಗಿಯ (ನಿತ್ಯಾತ್ಮ ಎಂಬುದು ಕವಿಯ ಅಂಕಿತ) ಬಳ್ಳಾರಿ ತತ್ತ್ವದ ಪದಗಳು, ಭಟಕಳ ಅಪ್ಪಯ್ಯನ (ವಿನಯಾನಂದ ಎಂಬುದು ಅಂಕಿತ) ಕಾರವಾರ ತತ್ತ್ವದ ಪದಗಳು, ರಾಯಚೂರಿನ ಕಡಕೋಳ ಮಡಿವಾಳಪ್ಪನ ತತ್ತ್ವದ ಪದಗಳು, ರಾಯಚೂರಿನ ಹಸನ ಸಾಹೇಬನ ತತ್ತ್ವದ ಪದಗಳು, ಬಿಜಾಪುರದ ಹಲಸಂಗಿ ಖಾಜಾಸಾಹೇಬನ ತತ್ತ್ವದ ಪದಗಳು ಬಹು ಪ್ರಚಲಿತವಿವೆ. ಗೋಕಾವಿಯ ಸಾತು ಶ್ಯಾಮಣ್ಣನ ತತ್ತ್ವದ ಪದಗಳು, ಹಲಸಂಗಿಯವರ ತತ್ತ್ವದ ಪದಗಳು, ಪರಮಾನಂದವಾಡಿಯ ತತ್ತ್ವದ ಪದಗಳು, ಬೀಳೂರ ಕವಿಯ ತತ್ತ್ವದ ಪದಗಳು ವೃತ್ತಿಗಾಯಕರ ನಾಲಗೆಯಲ್ಲಿ ಇಂದಿಗೂ ಉಳಿದುಬಂದಿವೆ. ಶಿಶುನಾಳ ಶರೀಫ ಶಿವಯೋಗಿಗಳ ಹಾಗೂ ಗೋವಿಂದಭಟ್ಟರ ತತ್ತ್ವದ ಪದಗಳು ಜನಪದ ಸಾಹಿತ್ಯದಲ್ಲಿ ತತ್ತ್ವದ ಪದಗಳಲ್ಲಿ ಪ್ರಸಿದ್ಧವಾಗಿದ್ದು ಇವುಗಳನ್ನು ವೃತ್ತಿಗಾಯಕರೂ ಭಜನಾ ಮಂಡಳದವರೂ ಹಾಡುತ್ತಿದ್ದಾರೆ. ವೃತ್ತಿಗಾಯಕರಾಗಿರುವ ದಾಸರು ಭಜನೆಗಳಲ್ಲಿ ಶೈವ ಮತ್ತು ವೈಷ್ಣವ ತತ್ತ್ವದ ಪದಗಳನ್ನು ಹಾಡುತ್ತಿದ್ದು ಇವರಿಗೆ ಪುರಂದರದಾಸ, ಕನಕದಾಸ, ವಿಜಯದಾಸರ ಕೀರ್ತನೆಗಳು ತತ್ತ್ವದ ಪದಗಳಾಗಿವೆ.

ವೀರಶೈವರಲ್ಲೂ ತತ್ತ್ವದ ಪದಗಳನ್ನು ಹಾಡುವವರಿದ್ದಾರೆ. ಇವರು ವಾದ್ಯಮೇಳಗಳನ್ನು ಮಾಡಿಕೊಂಡಿದ್ದಾರೆ. ವಾದ್ಯಮೇಳದಲ್ಲಿ ದಮಡಿ, ತಾಳ, ಸಂಬಾಳದೊಂದಿಗೆ ತತ್ತ್ವದ ಪದಗಳನ್ನು ಹೇಳುತ್ತಾರೆ. ಹಾಡುವ ಗಾಯಕರು ಧೋತ್ರ ಉಟ್ಟು, ದಡಿಧೋತ್ರ ನಡುವಿಗೆ ಕಟ್ಟಿ, ಕೈಯಲ್ಲಿ ವಸ್ತ್ರ ಹಿಡಿದು, ಹಣೆಗೆ ವಿಭೂತಿ ಹಚ್ಚಿ, ಕೊರಳಲ್ಲಿ ರುದ್ರಾಕ್ಷಿಮಾಲೆ ಹಾಕಿಕೊಂಡಿರುತ್ತಾರೆ. ಮದುವೆ ಮುಂಜಿಗಳಲ್ಲಿ, ಜಾತ್ರೆ ಓಕುಳಿಗಳಲ್ಲಿ ತತ್ತ್ವದ ಪದಗಳನ್ನು ಹಾಡುವುದು ಹೆಚ್ಚು. ಕಂಬಿಯವರು, ಸಾರುವ ಅಯ್ಯಂದಿರು, ಕರಪಾಲದವರು, ಬಹುರೂಪಿಯವರು ಸಹ ತತ್ತ್ವದ ಪದಗಳನ್ನು ಹಾಡುತ್ತಾರೆ. ಇಂಥ ಪದಗಳು ಗ್ರಂಥರೂಪದಲ್ಲೂ ಪ್ರಕಟವಾಗಿವೆ. ನಲುಂದಪುರ (ನರಗುಂದ) ತತ್ತ್ವದ ಪದಗಳು, ಧಾರವಾಡ ತತ್ತ್ವದ ಪದಗಳು ಎಂಬ ಪುಸ್ತಕಗಳನ್ನು ವಾಗ್ವಿಲಾಸ ಹುಬ್ಬಳ್ಳಿಯವರು, ಕೊಡೆಕಲ್ಲು ತತ್ತ್ವದ ಪದಗಳು, ಮುಚಕಂಡಿ ತತ್ತ್ವದ ಪದಗಳು ಎಂಬ ಪುಸ್ತಕಗಳನ್ನು ಬಳ್ಳಾರಿಶೆಟ್ಟರು ಪ್ರಕಟಿಸಿದ್ದಾರೆ. (ಎನ್.ಎಸ್.ಎಸ್.)

ತತ್ತ್ವದ ಪದಗಳಲ್ಲಿ ಅದ್ವೈತ, ರಾಜಯೋಗ, ಅಚಲವೇದಾಂತ, ವೈರಾಗ್ಯ, ಗುರುಭಕ್ತಿ, ಅಹಿಂಸೆ ಇತ್ಯಾದಿ ವಿಷಯಗಳಿರುತ್ತವೆ. ಜನರಿಗೆ ಪರಿಚಿತವಾಗುವ ಭಾಷೆ, ಉಪಮಾನ, ರೂಪಕಗಳ ಮೂಲಕ ಈ ಗೀತೆಗಳು ಸೃಷ್ಟಿಯಾಗಿದ್ದು, ವೇದಾಂತ ಜನಸಾಮಾನ್ಯರ ಮಟ್ಟಕ್ಕೂ ನಿಲುಕುವಂತಿರುತ್ತದೆ. ತತ್ತ್ವದ ಪದಗಳನ್ನು ಉಪನಿಷತ್ತುಗಳಿಗೆ ಹೋಲಿಸಬಹುದು. ಉಪನಿಷತ್ತುಗಳಲ್ಲಿಯೂ ಪ್ರಪಂಚ ಸೃಷ್ಟಿ, ಜೀವಾತ್ಮ, ಪರಮಾತ್ಮ, ಸುಖದುಃಖ, ಮರಣಾನಂತರ ಜೀವನ ಇತ್ಯಾದಿಗಳನ್ನು ಕುರಿತ ವಿಚಾರಗಳಿರುತ್ತವೆ. ಈ ದೃಷ್ಟಿಯಿಂದ ಉಪನಿಷತ್ತುಗಳು ಮಹರ್ಷಿಗಳ ತಾತ್ತ್ವಿಕ ಚಿಂತನಪೀಠಗಳಾದರೆ, ತತ್ತ್ವದ ಪದಗಳು ಜನಪದರ ನಿಸರ್ಗಮನೋಹರ ಗೀತೆಗಳಾಗಿವೆ. (ಆರ್.ವಿ.ಎಸ್.ಎಸ್.)

**ತಮ್ಮಯ ಕವಿ :** ಸು.1834. ಬ್ರಾಹ್ಮಣ ಕವಿ. ರಾಜವಂಶ ರತ್ನ ಪ್ರಭೆ ಎಂಬ ಗ್ರಂಥದ ಕರ್ತೃ. ಈತ ಮೈಸೂರು ದೊರೆ ಮುಮ್ಮಡಿ ಕೃಷ್ಣರಾಜ ಒಡೆಯರ ಕೃಪಾಪೋಷಿತನಾಗಿದ್ದ. ಇವನಿಗೆ ವೆಂಕಟಕೃಷ್ಣ ಎಂಬ ಹೆಸರೂ ಇದೆ. ಹಾಸನ ಇವನ ಜನ್ಮಸ್ಥಳ. ತನ್ನನ್ನು ಹೊಸಲ ಕುಲತಿಲಕ ಎಂದು ಕರೆದುಕೊಂಡಿದ್ದಾನೆ.

ರಾಜವಂಶ ರತ್ನಪ್ರಭೆ ಸಂಸ್ಕೃತಭೂಯಿಷ್ಠವಾದ ಚಂಪೂ ಗ್ರಂಥ. ಇದರಲ್ಲಿ ರುಚಿಪ್ರಚಾರ ಎಂಬ ಐದು ಭಾಗಗಳಿವೆ. ಅಲ್ಲಲ್ಲಿ ಕೆಲವು ಸೀಸಪದ್ಯಗಳಿವೆ. ಈ ಗ್ರಂಥವನ್ನು ರಾಜನ ಆಜ್ಞಾನುಸಾರ 1834ರಲ್ಲಿ ಬರೆದು ಮುಗಿಸಿದಂತೆ ತಿಳಿಯುತ್ತದೆ. ಇದರಲ್ಲಿ ಮುಮ್ಮಡಿ ಕೃಷ್ಣರಾಜರ ವರೆಗಿನ ಮೈಸೂರು ಅರಸರ ಚರಿತ್ರೆಯೂ ಮುಮ್ಮಡಿ ಕೃಷ್ಣರಾಜರು ಮಾಡಿದ ಧರ್ಮಕಾರ್ಯಗಳೂ ಅವರು ರಚಿಸಿದ ಗ್ರಂಥಗಳೂ ವರ್ಣಿಸಲ್ಪಟ್ಟಿವೆ. ದೊರೆಯ ಜೀವನ ಕಾರ್ಯವನ್ನು ಕವಿ ಉಪಕಾರರತ್ನ, ಕೀರ್ತಿರತ್ನ ಸಾರಸತರತ್ನ ಮುಂತಾದ ನವರತ್ನಗಳ ಮೂಲಕ ಉಲ್ಲೇಖಿಸಿದ್ದಾನೆ. ಕಾವ್ಯಶೈಲಿ ಪ್ರೌಢವಾಗಿದೆ. ಅಲಂಕಾರಗಳನ್ನು ಯಥೇಚ್ಛವಾಗಿ ಬಳಸಿದ್ದಾನೆ. ಕವಿಗೆ ಸಂಸ್ಕೃತ ಭಾಷೆಯ ಮೇಲಿರುವ ಹಿಡಿತ ಮೆಚ್ಚುವಂಥದ್ದು. ಇವನ ಶೈಲಿಗೆ ಒಂದು ಉದಾಹರಣೆ:

ಆರಾಜಕ್ಷಿತಿಪಾಲ ಖಡ್ಗನಿಹತಾರಾತ್ಯಾದಿ ವಿಶ್ವಂಭರಾ
ಭಾರಾಸಕ್ತನೃಪೌಘರೋಷದಳಿತಪ್ರಾಭಾಕರೋನ್ಮಂಡಲ
ಸ್ವಾರಾನಲ್ಪಮಹಾಕ್ಷತಕ್ಷರದಸೃಗ್ವಾರ ಪ್ರವಾಹಂಗಳಾ
ತಾರಾಮಾರ್ಗವನೈದಿ ಕಾಣಿಸೆ ಜನರ್ ತಾಂ ಸಂಜೆಗೆಂಪೆನ್ನುವರ್

(ಎಸ್.ಆರ್.ಎಸ್.)

**ತರೀಕೆರೆ :** ಚಿಕ್ಕಮಗಳೂರು ಜಿಲ್ಲೆಯ ಒಂದು ತಾಲ್ಲೂಕು ಮತ್ತು ತಾಲ್ಲೂಕು ಕೇಂದ್ರ. ಚಿಕ್ಕಮಗಳೂರು ಪಟ್ಟಣದ ಉತ್ತರಕ್ಕೆ 56ಕಿಮೀ ದೂರದಲ್ಲಿದೆ. ಬೆಂಗಳೂರಿನಿಂದ 235ಕಿಮೀ ದೂರದಲ್ಲಿದೆ. ಈ ತಾಲ್ಲೂಕಿನ ಪೂರ್ವಕ್ಕೆ ಚಿತ್ರದುರ್ಗ ಜಿಲ್ಲೆಯೂ ಉತ್ತರಕ್ಕೆ ಶಿವಮೊಗ್ಗ ಜಿಲ್ಲೆಯೂ ದಕ್ಷಿಣದಲ್ಲಿ ಕಡೂರು, ಚಿಕ್ಕಮಗಳೂರು ತಾಲ್ಲೂಕುಗಳೂ ಪಶ್ಚಿಮದಲ್ಲಿ ನರಸಿಂಹರಾಜಪುರ ತಾಲ್ಲೂಕೂ ಇವೆ. ಅಮೃತಾಪುರ, ತರೀಕೆರೆ, ಅಜ್ಜಂಪುರ, ಶಿವನಿ, ಲಿಂಗದಹಳ್ಳಿ ಮತ್ತು ಲಕ್ಕವಳ್ಳಿ ಹೋಬಳಿಗಳಿದ್ದು ಒಟ್ಟು 245 ಗ್ರಾಮಗಳಿವೆ. ತಾಲ್ಲೂಕಿನ ವಿಸ್ತೀರ್ಣ 1224ಚ.ಕಿಮೀ. ಜನಸಂಖ್ಯೆ 2,24,093.

ಈ ತಾಲ್ಲೂಕಿನ ಕೆಲವು ಭಾಗ ಬೆಟ್ಟಗುಡ್ಡಗಳಿಂದಲೂ ಮತ್ತೆ ಕೆಲವು ಭಾಗ ಬಯಲು ಪ್ರದೇಶಗಳಿಂದಲೂ ಕೂಡಿದೆ. ಇಲ್ಲಿನ ಮಣ್ಣು ಮತ್ತು ವಾಯುಗುಣ ಸ್ಥಳದಿಂದ ಸ್ಥಳಕ್ಕೆ ಬದಲಾಗುತ್ತವೆ. ವಾರ್ಷಿಕ ಸರಾಸರಿ ಮಳೆ 861ಮಿಮೀ. ಈ ತಾಲ್ಲೂಕಿನ ಉತ್ತರಕ್ಕೆ ಉಬ್ರಾಣಿ ಗುಡ್ಡಗಳಿದ್ದು ಅದು ಹಿಂದೆ ದಟ್ಟವಾದ ಬಿದಿರು ಮೆಳೆಗಳಿಂದ ಕೂಡಿತ್ತು. ಅಜ್ಜಂಪುರ ಮತ್ತು ಪೂರ್ವದ ಗಡಿಗೆ ಸೇರಿದಂತೆ ತಾಲ್ಲೂಕಿನ ಈ ಪ್ರದೇಶದಲ್ಲಿ ಕಪ್ಪು ತೆರನ ಮಣ್ಣಿದ್ದು ಅಡಕೆ, ತೆಂಗು, ಗೋದಿ, ಹತ್ತಿ ಮತ್ತು ದ್ವಿದಳಧಾನ್ಯಗಳನ್ನು ಬೆಳೆಯಲಾಗುತ್ತದೆ. ಈ ಭಾಗದಲ್ಲಿ ಮರಗಿಡಗಳು ಕಡಿಮೆ. ತಾಲ್ಲೂಕಿನ ಇತರ ಭಾಗಗಳಲ್ಲಿ ಮರಳು ಮತ್ತು ಸಣ್ಣ ಸಣ್ಣ ಕಲ್ಲುಗಳಿಂದ ಕೂಡಿದ ಕೆಂಪುಮಣ್ಣು ಕಂಡುಬರುತ್ತದೆ. ರಾಗಿ ಮತ್ತು ಅನೇಕ ಬಗೆಯ ದ್ವಿದಳಧಾನ್ಯಗಳು ಮುಖ್ಯ ಬೆಳೆಗಳಾಗಿವೆ.

ತಾಲ್ಲೂಕಿನ ಪಶ್ಚಿಮ ಭಾಗ ಮಲೆನಾಡು ಪ್ರದೇಶವಾಗಿದೆ. ಇದು ಬಾಬಾಬುಡನ್ ಗಿರಿ ಬೆಟ್ಟದ ಸಾಲಿನ ಒಂದು ಭಾಗವಾಗಿದ್ದು ತಾಲ್ಲೂಕಿನ ನೈಋತ್ಯ ಭಾಗದಲ್ಲಿದೆ. ಬೆಟ್ಟದ ಇಳಿಜಾರು ಪ್ರದೇಶ ದಟ್ಟವಾದ ಕಾಡುಗಳಿಂದ ಕೂಡಿದೆ. ಕೆಲಭಾಗಗಳಲ್ಲಿ ಕಾಡುಗಳನ್ನು ಕಡಿದು ಕಾಫಿ ತೋಟಗಳನ್ನು ಮಾಡಿದ್ದಾರೆ. ಉಬ್ರಾಣಿ ಬೆಟ್ಟ ಮತ್ತು ಲಿಂಗದಹಳ್ಳಿಗಳಲ್ಲಿ ಉತ್ತಮವಾದ ಕಬ್ಬಿಣದ ಅದುರು ಸಿಕ್ಕುತ್ತದೆ.

ಬೆಂಗಳೂರು-ಪುಣೆ ಹಾಗೂ ಬೀರೂರು-ತಾಳಗುಪ್ಪ ರೈಲುಮಾರ್ಗಗಳು ಈ ತಾಲ್ಲೂಕಿನಲ್ಲಿ ಹಾದುಹೋಗಿವೆ. ಬೆಂಗಳೂರು - ಶಿವಮೊಗ್ಗ ರಸ್ತೆ, ಲಕ್ಕವಳ್ಳಿ-ಆಗುಂಬೆ ಘಾಟ್ ರಸ್ತೆ ಮತ್ತು ಚಿಕ್ಕಮಗಳೂರು ರಸ್ತೆ ಮಾರ್ಗಗಳು ಇಲ್ಲಿನ ಮುಖ್ಯವಾದ ಮಾರ್ಗಗಳಾಗಿವೆ.

ಅಜ್ಜಂಪುರ, ಅಮೃತಾಪುರ, ಶಿವನಿ, ಲಕ್ಕವಳ್ಳಿ, ಕೂಡ್ಲೂರು, ಲಿಂಗದಹಳ್ಳಿ ಮತ್ತು ಹುಣಸಗಟ್ಟ ಇವು - ಈ ತಾಲ್ಲೂಕಿನ ಮುಖ್ಯ ಗ್ರಾಮಗಳು. ತರೀಕೆರೆ ತಾಲ್ಲೂಕು ಪ್ರಾಚೀನ ಇತಿಹಾಸ ಹೊಂದಿದೆ. ಇಲ್ಲಿನ ಲಿಂಗದಹಳ್ಳಿ ಮತ್ತು ಶಿವನಿ ಬಳಿ ಶಿಲಾಯುಗದ ನೆಲೆಗಳು ಕಂಡುಬಂದಿವೆ. ಹೊಯ್ಸಳರ ಕಾಲದ ಅಮೃತಾಪುರದ (ನೋಡಿ) ಅಮೃತೇಶ್ವರ ದೇವಾಲಯ ವಾಸ್ತುಶಿಲ್ಪಕ್ಕೆ ಅತ್ಯಂತ ಪ್ರಸಿದ್ಧವಾಗಿದೆ.

ತರೀಕೆರೆ ಹೋಬಳಿ ಮತ್ತು ತಾಲ್ಲೂಕಿನ ಆಡಳಿತ ಕೇಂದ್ರ. ಚಿಕ್ಕಮಗಳೂರಿನ ಉತ್ತರಕ್ಕೆ 56ಕಿಮೀ ದೂರದಲ್ಲಿ ಬೀರೂರು-ಶಿವಮೊಗ್ಗ ರೈಲು ಮಾರ್ಗದಲ್ಲೂ ಬೆಂಗಳೂರು-ಶಿವಮೊಗ್ಗ ರಸ್ತೆಮಾರ್ಗದಲ್ಲೂ ಇದೆ. ಜನಸಂಖ್ಯೆ 34,073. ತರೀ ಎಂಬ ಮರಗಳಿಂದ ಈ ಊರಿಗೆ ತರೀಕೆರೆ ಎಂಬ ಹೆಸರು ಬಂದಿದೆ ಎಂದು ಹೇಳುತ್ತಾರೆ. ಉತ್ತಮ ರಸ್ತೆ ಸಂಪರ್ಕಗಳಿರುವುದರಿಂದ ಈ ಊರು ವ್ಯಾಪಾರಕೇಂದ್ರವಾಗಿ ಬೆಳೆಯುತ್ತಿದೆ. ಇಲ್ಲಿ ಅನೇಕ ಮರ ಕೊಯ್ಯುವ ಕಾರ್ಖಾನೆಗಳಿವೆ. ತರೀಕೆರೆ ಒಂದು ರೈಲ್ವೆ ನಿಲ್ದಾಣವಾಗಿದೆ.

ತರೀಕೆರೆ ಹೊಯ್ಸಳರ ಕಾಲದಲ್ಲಿ ಒಂದು ಅಗ್ರಹಾರವಾಗಿತ್ತು. ಇಲ್ಲಿ ಶರಣೆ ಅಕ್ಕ, ನಾಗಮ್ಮನ ಗದ್ದುಗೆ ಇದೆ. ಕೆರೆಗಳು, ಮಠಗಳು, ದೇವಾಲಯಗಳಿಂದ ಕೂಡಿರುವ ಈ ಊರೊಂದು ಸಾಂಸ್ಕೃತಿಕ ಕೇಂದ್ರ. ವಿಜಯನಗರದ ಕಾಲಾನಂತರ ಇದು ರಾಜಕೀಯವಾಗಿ ಮಹತ್ವ ಪಡೆದು ಒಂದು ಪಾಳೆಯಪಟ್ಟಿನ ಕೇಂದ್ರವಾಗಿತ್ತು. (ಎಂ.)

**ತರೀಕೆರೆ ಪಾಳೆಯಗಾರರು :** 16-18ನೆಯ ಶತಮಾನಗಳಲ್ಲಿ ತರೀಕೆರೆಯಿಂದ ಆ ಸುತ್ತಣ ಪ್ರಾಂತ್ಯಗಳನ್ನು ಆಳಿದ ಪಾಳೆಯಗಾರರು.

ತರೀಕೆರೆಯ ಪಾಳೆಯಗಾರರ ಮೂಲಪುರುಷರು ಮೊದಲು ದಾವಣಗೆರೆ ಜಿಲ್ಲೆಯ ಬಸವಾಪಟ್ಟಣದಲ್ಲಿ ರಾಜ್ಯವಾಳುತ್ತಿದ್ದರೆಂದು (ನೋಡಿ: ಬಸವಾಪಟ್ಟಣದ ಪಾಳೆಯಗಾರರು) ತರೀಕೆರೆ ಪಾಳೆಯಗಾರರ ವಂಶವೃಕ್ಷದಿಂದ ತಿಳಿಯುತ್ತದೆ.

ಈ ಪಾಳೆಯಗಾರರು ಪುವ್ವಲಿ ವಂಶದವರು. ಹನುಮಂತನ ಆರಾಧಕರು. ಈ ವಂಶದಲ್ಲಿ ಕೆಂಗಪ್ಪನಾಯಕ, ಹಿರಿಯ ಹನುಮಪ್ಪನಾಯಕ, ಇಮ್ಮಡಿ ಹನುಮಪ್ಪನಾಯಕ, ನಿಚ್ಚ ಮದುವಣಿಗ ಹನುಮಪ್ಪನಾಯಕ, ಸರ್ಜಾ ಹನುಮಪ್ಪನಾಯಕ, ಸೀತಾರಾಮಪ್ಪನಾಯಕ-ಇವರು ಕ್ರಮವಾಗಿ ಆಳಿದರೆಂದು ಶಾಸನಗಳಿಂದ ತಿಳಿಯುತ್ತದೆ. ಆದರೆ ಕೆಂಗಪ್ಪನಾಯಕನಿಂದ ತೊಡಗಿ ಸರ್ಜಾ ಹನುಮಪ್ಪನಾಯಕನವರೆಗೆ ಹತ್ತು ಜನ ಪಾಳೆಯಗಾರರು ಆಗಿಹೋದರೆಂದು ಪಾಳೆಯಗಾರರ ವಂಶವೃಕ್ಷ ತಿಳಿಸುತ್ತದೆ.

ಬಿಜಾಪುರದ ಸುಲ್ತಾನ ಬಸವಾಪಟ್ಟಣದ ಮೇಲೆ ದಾಳಿ ಇಡಲು (1636) ಅಲ್ಲಿದ್ದ ಕೆಂಗಪ್ಪನಾಯಕ ರಾಜಧಾನಿಯನ್ನು ತರೀಕೆರೆಗೆ ಬದಲಾಯಿಸಿದ. ನಾಯಕರ ಕುಲದೈವವಾದ ಸಂತೆಬೆನ್ನೂರಿನ ಶ್ರೀರಂಗನಾಥ ದೇವಾಲಯವನ್ನು ರಣದುಲ್ಲಾಖಾನ್ ನಾಶಪಡಿಸಿ ಮಸೀದಿಯನ್ನಾಗಿ ಮಾಡಿದ್ದ. ಕೆಂಗಪ್ಪನಾಯಕ ಶತ್ರುಗಳನ್ನು ಅಲ್ಲಿಂದ ಓಡಿಸಿ ದೇವಾಲಯವನ್ನು ಜೀರ್ಣೋದ್ಧಾರ ಮಾಡಿ ಅಲ್ಲಿ ಒಂದು ಕೊಳವನ್ನು ನಿರ್ಮಿಸಿದ. ಸರ್ಜಾ ಹನುಮಪ್ಪನಾಯಕ ಹೈದರ್‌ಅಲಿಯ ಸಮಕಾಲೀನನಾಗಿದ್ದು ತನ್ನ ಶೌರ್ಯ ಸ್ಥೈರ್ಯಗಳಿಂದ ನವಾಬನ ಗೌರವಾದರಗಳಿಗೆ ಪಾತ್ರವಾಗಿ ಸರ್ಜಾ ಎಂಬ ಬಿರುದನ್ನು ಪಡೆದನೆಂದು ತಿಳಿಯುತ್ತದೆ. ಇವನು ಸ್ಫುರದ್ರೂಪಿಯಾಗಿದ್ದುದರಿಂದ ನಿಚ್ಚ ಮದುವಣಿಗನೆಂಬ ಜನಪ್ರಿಯ ಬಿರುದನ್ನೂ ಪಡೆದಿದ್ದ. ಹೈದರನಿಗೆ ಸಲ್ಲಿಸಬೇಕಾಗಿದ್ದ ಪೊಗದಿ ಬಾಕಿ ನಿಲ್ಲಲು ಹೈದರ್ ಇವನ ರಾಜ್ಯವನ್ನು ಸ್ವಾಧೀನಕ್ಕೆ ತೆಗೆದುಕೊಂಡು ಇದಕ್ಕೆ ಬದಲಾಗಿ 1782 ವರಹದ ಮಂಜರಾಬಾದು ಪ್ರದೇಶವನ್ನು ಇವನಿಗೆ ಕೊಟ್ಟನೆಂದೂ ತಿಳಿದುಬರುತ್ತದೆ. ಇವನ ಮೊಮ್ಮಗನೇ ಮೈಸೂರು ಇತಿಹಾಸದಲ್ಲಿ ಪ್ರಸಿದ್ಧಿಪಡೆದ ಸರ್ಜಾ ರಂಗಪ್ಪನಾಯಕ (1774-1832). ಇವನು ಮೂರನೆಯ ಹಾಗೂ ನಾಲ್ಕನೆಯ ಮೈಸೂರು ಯುದ್ಧಗಳಲ್ಲಿ ಭಾಗವಹಿಸಿದ್ದ.



ತರೀಕೆರೆ ಪಾಳೆಯಗಾರರ ವಂಶಸ್ಥರಲ್ಲಿರುವ ವಿವಿಧರೀತಿಯ ಹಳೆಯ ಆಯುಧಗಳು

ಟಿಪ್ಪು ಸುಲ್ತಾನ್ ಮಡಿದು ಮುಮ್ಮಡಿ ಕೃಷ್ಣರಾಜ ಒಡೆಯರ್ ದೊರೆಯಾದಾಗ, ಅವನ ರಕ್ಷಣೆಗಾಗಿ ಇಂಗ್ಲಿಷರ ದಂಡು ಶ್ರೀರಂಗಪಟ್ಟಣದಲ್ಲಿ ನೆಲೆಯಾಗಿ ನಿಂತಿತು. ಇದು ಕೆಲವು ಸ್ವಾಮಿನಿಷ್ಠ ಪಾಳೆಯಗಾರರಿಗೆ ಸಹನೆಯಾಗಲಿಲ್ಲ. ಅತೃಪ್ತ ಜನತೆಯ ಪಕ್ಷಕಟ್ಟಿ ರಂಗಪ್ಪನಾಯಕನೂ ಅವನ ಮಗ ಸರ್ಜಾ ಹನುಮಪ್ಪ ನಾಯಕನೂ ನಿಂತರು. ಇಂಗ್ಲಿಷರು ಇವರನ್ನು ಸೆರೆಹಿಡಿದು ಶ್ರೀರಂಗಪಟ್ಟಣದಲ್ಲಿ ದೀರ್ಘಕಾಲ ಸೆರೆಯಲ್ಲಿಟ್ಟರು. ಅಲ್ಲಿಂದ ಇವರು ತಪ್ಪಿಸಿಕೊಂಡು ಬಂದರು. ಆ ಸಮಯದಲ್ಲಿ ದೇಶದಲ್ಲಿ ತಲೆದೋರಿದ್ದ ಆಡಳಿತ ಅವ್ಯವಸ್ಥೆ, ಅಧಿಕಾರಿಗಳ ನಿರಂಕುಶ ದಬ್ಬಾಳಿಕೆ ಶೋಷಣೆಗಳಿಂದ ಜನರು ಕೆರಳಿ ಸಾಮೂಹಿಕವಾಗಿ ದಂಗೆ ಎದ್ದರು. ಮೈಸೂರು ಸೈನ್ಯದಲ್ಲಿದ್ದ 1500 ಮಂದಿ ಬೇಡಕಂದಾಚಾರದ ಸಿಪಾಯಿಗಳೂ ಇವರ ಕಡೆ ಸೇರಿದ್ದರು. ಈ ನಾಯಕರು ಈ ದಂಗೆಯಲ್ಲಿ ಮುಖ್ಯ ಪಾತ್ರ ವಹಿಸಿದ್ದರು. ಇವರ ಪಾತ್ರದಿಂದ ಇದಕ್ಕೆ ಬೂದಿಬಸವಪ್ಪನ ದಂಗೆ ಎಂದೂ ರಂಗಪ್ಪನಾಯಕನ ಅಡಾವುಡಿ ಎಂದೂ ಹೆಸರಾಯಿತು. ಇಂಗ್ಲಿಷರು ದಂಗೆಯನ್ನು ಅಡಗಿಸಿ ಸರ್ಜಾ ಹನುಮಪ್ಪನಾಯಕನನ್ನು ಸೆರೆ ಹಿಡಿದು ಬೆಂಗಳೂರಿನಲ್ಲಿ ಗಲ್ಲಿಗೇರಿಸಿದರು. ರಂಗಪ್ಪನಾಯಕ ಮಾತ್ರ ಶತ್ರುಗಳೊಂದಿಗೆ ಹೋರಾಡುತ್ತ ನಿಧನಹೊಂದಿದ.

ಇಂದಿಗೂ ಜನರು ಈ ನಾಯಕರ ಬಗ್ಗೆ ಪದ ಕಟ್ಟಿ ಅವರ ಶೌರ್ಯಸಾಹಸಗಳ ದುರಂತಕಥೆಯನ್ನು ನೆನೆದುಕೊಳ್ಳುತ್ತಾರೆ. (ಎಸ್.ಕೆ.ಬಿ.)

**ತಲಕಾಡು :** ಮೈಸೂರು ಜಿಲ್ಲೆ ತಿರುಮಕೂಡಲು ನರಸೀಪುರ ತಾಲ್ಲೂಕಿನಲ್ಲಿ ಕಾವೇರಿ ನದಿಯ ಉತ್ತರ ದಂಡೆಯಲ್ಲಿರುವ ಊರು. ಇದೊಂದು ಪುಣ್ಯಕ್ಷೇತ್ರ, ಇತಿಹಾಸಪ್ರಸಿದ್ಧ ಸ್ಥಳ. ಮೈಸೂರಿನಿಂದ 90ಕಿಮೀ ದರೂದಲ್ಲಿದೆ.

ತಲಾ, ಕಾಡ ಎಂಬ ಕಿರಾತ ಸೋದರರಿಂದ ಈ ಊರಿಗೆ ತಲಕಾಡು ಎಂಬ ಹೆಸರೂ ಆನೆಯ ಜನ್ಮ ಪಡೆದಿದ್ದ ಸೋಮದತ್ತ ಎಂಬ ಋಷಿ ಮತ್ತು ಆತನ ಶಿಷ್ಯರು ಇಲ್ಲಿ ಮೋಕ್ಷ ಪಡೆದುದರಿಂದ ಗಜಾರಣ್ಯ ಕ್ಷೇತ್ರವೆಂಬ ಹೆಸರೂ ಬಂತೆಂದು ಪೌರಾಣಿಕ ಕಥೆ. ಮೊದಲು ಇಲ್ಲಿ ದಟ್ಟವಾದ ಅರಣ್ಯವಿದ್ದು ಇದಕ್ಕೆ ತಲಕಾಡೆಂಬ ಹೆಸರು

ಬಂದಿರುವುದು ಸಂಭವನೀಯ. ತಲವನಪುರ ಎನ್ನುವುದು ಇದಕ್ಕೆ ಇದ್ದ ಮತ್ತೊಂದು ಹೆಸರು.



ತಲಕಾಡಿನ ಕಾವೇರಿನದಿಯಲ್ಲಿ ಪುಣ್ಯಸ್ನಾನದ ದೃಶ್ಯ

ತಲಕಾಡು ಹಿಂದೆ ಗಂಗ ಅರಸರ ರಾಜಧಾನಿಯಾಗಿತ್ತು. ಮೊದಲು ಕೋಲಾಲದಲ್ಲಿ ಆಳುತ್ತಿದ್ದ ಗಂಗರು ಸು.500ರ ಹೊತ್ತಿಗೆ ತಲಕಾಡಿಗೆ ತಮ್ಮ ರಾಜಧಾನಿಯನ್ನು ಬದಲಾಯಿಸಿರಬೇಕು. ಗಂಗರಾಜ ಹರಿವರ್ಮ ಇಲ್ಲಿ ನೆಲೆಸಿದ್ದನೆಂದು ಒಂದು ಶಾಸನ ತಿಳಿಸುತ್ತದೆ. ಶ್ರೀಪುರುಷನ ಕಾಲದ ಗಂಗ ಶಾಸನಗಳು ಇಲ್ಲಿ ದೊರತಿವೆ. ಚೋಳರ ಆಳಿಕೆಗೆ ಒಳಪಟ್ಟಾಗ ಅವರು ಇದನ್ನು ರಾಜರಾಜಪುರ ಎಂದು ಕರೆದರು. ಚೋಳರು ಆಳಿದ ನೂರು ವರ್ಷಗಳಲ್ಲಿ ಈ ಸ್ಥಳ ಏಳಿಗೆ ಪಡೆದಿತ್ತಾದರೂ ಮುಂದೆ 1116ರಲ್ಲಿ ಹೊಯ್ಸಳರ ಆಳಿಕೆಗೆ ಒಳಪಟ್ಟಾಗ ಈ ಪಟ್ಟಣ ಅತ್ಯಂತ ಉಚ್ಛ್ರಾಯ ಸ್ಥಿತಿಯನ್ನು ಪಡೆಯಿತು. ಆಗ ಏಳು ಪುರಗಳೂ ಪಂಚಮಠಗಳೂ ಇಲ್ಲಿದ್ದಂತೆ ತಿಳಿದುಬರುತ್ತದೆ. ಆ ಕಾಲದಲ್ಲಿ ಈ ಊರು ಹೊಯ್ಸಳ ರಾಜ್ಯದ ಒಂದು ಉಪರಾಜಧಾನಿಯಾಗಿತ್ತು. ವಿಜಯನಗರ ಸಾಮ್ರಾಜ್ಯ ಪ್ರಾಬಲ್ಯಕ್ಕೆ ಬಂದ ಮೇಲೆ ತಲಕಾಡಿನವನೇ ಆಗಿದ್ದ ಮಾಧವ ಮಂತ್ರಿ ಈ ಊರಿನ ಸಮೀಪದಲ್ಲಿ ಕಾವೇರಿಗೆ ಒಂದು ಅಣೆಕಟ್ಟನ್ನು ಕಟ್ಟಿಸಿದುದಲ್ಲದೆ (ಸು.1342) ಅನೇಕ ಅಭಿವೃದ್ಧಿ ಕಾರ್ಯಗಳನ್ನೂ ನಡೆಸಿದ. ಆದರೆ ಮುಂದೆ ಇದರ ಅವನತಿ ಆರಂಭವಾಯಿತು. ಇದಕ್ಕೆ ಬಹುಶಃ ಮುಖ್ಯ ಕಾರಣ ಮಾಧವ ಮಂತ್ರಿ ಅಣೆಕಟ್ಟೆಯೇ. ಕಟ್ಟೆಯ ಹಿಂದೆ ಉಂಟಾದ ಮರಳು ಹರವಿನಿಂದ ಗಾಳಿಕಾಲದಲ್ಲಿ ತೂರಿ ಬರುವ ಕಣಗಳಿಂದ ಊರಿನ ಮೇಲೆ ಮರಳಿನ ದಿಣ್ಣೆಗಳು ಆವರಿಸುತ್ತ ಬಂದು ಊರು ಮರಳುಮಯವಾಯಿತು. ಈ ಮರಳು ಆವರಿಸುವ ಬಗ್ಗೆ ಒಂದು ಜನಜನಿತ ಕಥೆ ಇದೆ: ವಿಜಯನಗರದ ಪ್ರತಿನಿಧಿಯಾಗಿ ಸೋಮರಾಜ ಅಥವಾ ಶ್ರೀರಂಗರಾಯ ಎಂಬುವನು ಶ್ರೀರಂಗಪಟ್ಟಣದಲ್ಲಿ ಆಳುತ್ತಿದ್ದ. ಅವನಿಗೆ ಯಾವುದೋ ರೋಗ ಹತ್ತಿರಲು ನಿವಾರಣೆಗಾಗಿ ವೈದ್ಯೇಶ್ವರನಿಗೆ ಪೂಜೆ ಅರ್ಪಿಸಲು ತಲಕಾಡಿಗೆ ಬಂದ. ಇವನು ಮರಣಾವಸ್ಥೆಯಲ್ಲಿರುವನೆಂದು ಭಾವಿಸಿ ಅವನ ಹೆಂಡತಿಯೂ ಬಂದಿದ್ದಳು. ರಾಜ ಮೃತನಾದಾಗ ಮೈಸೂರಿನ ರಾಜ ಒಡೆಯ ಆಕೆಯ ಅಮೂಲ್ಯವಾದ ಮೂಗುಬಟ್ಟನ್ನು ಪಡೆಯಲು ಸೈನ್ಯಸಮೇತ ಧಾವಿಸಿದ. ಮನನೊಂದ ಶ್ರೀರಂಗರಾಯನ ರಾಣಿ ಆ ಆಭರಣವನ್ನು ಕಾವೇರಿಯ ಮಾಲಿಂಗಿ ಮಡುವಿಗೆ ಎಸೆದು, ಮಾಲಿಂಗಿ ಮಡುವಾಗಿ, ತಲಕಾಡು ಮರಳಾಗಿ, ಮೈಸೂರು ರಾಜರಿಗೆ ಮಕ್ಕಳಾಗದಿರಲಿ ಎಂದು ಶಾಪವಿತ್ತು ತಾನೂ ಮಾಲಿಂಗಿಯಲ್ಲಿ ಬಿದ್ದು ಪ್ರಾಣತೆತ್ತಳು.



ಐತಿಹಾಸಿಕ ಮಹತ್ತ್ವವುಳ್ಳ ತಲಕಾಡಿನಲ್ಲಿ ಮೂವತ್ತಕ್ಕಿಂತಲೂ ಹೆಚ್ಚು ದೇವಾಲಯಗಳು ಇದ್ದುದಾಗಿ ತಿಳಿದುಬಂದರೂ ಹೆಚ್ಚಿನವು ಉಳಿದಿಲ್ಲ. ಗಂಗರ, ಚೋಳರ ಕಾಲದ ಬಸದಿಗಳೂ ದೇವಾಲಯಗಳೂ ಬಹುಶಃ ಮರಳಿನ ರಾಶಿಯಲ್ಲಿ ಹೂತು ಹೋಗಿರಬಹುದು, ಇಲ್ಲವೇ ನಾಶವಾಗಿ ಹೋಗಿರಬಹುದು. ಇತ್ತೀಚೆಗೆ ನಡೆದ ಉತ್ಖನನಗಳಿಂದ ತಲಕಾಡಿನ ಕೆಲವು ದೇವಾಲಯಗಳ ಅವಶೇಷಗಳು ಬೆಳಕಿಗೆ ಬಂದಿವೆ. ಅವುಗಳಲ್ಲಿ ಪೂರ್ಣ ಸುಸ್ಥಿತಿಯಲ್ಲಿರುವ ದೇವಾಲಯಗಳೂ ಕೊಳಗಳೂ ಇವೆ. ಜೊತೆಗೆ ಇಲ್ಲಿ ಕ್ರಿಸ್ತಪೂರ್ವ ಕೆಲವು ಶತಮಾನಗಳ ಹಿಂದಿನಿಂದಲೂ ಜನವಸತಿ ಇದ್ದ ಬಗ್ಗೆ ಪುರಾವೆಗಳು ದೊರೆತಿವೆ. ಗಂಗರ ಕಾಲದ ವಾಸ್ತು ಅವಶೇಷಗಳನ್ನು ಮರಳೇಶ್ವರ, ಪಾತಾಳೇಶ್ವರ, ಅರ್ಕೇಶ್ವರ, ದೇವಾಲಯಗಳಲ್ಲಿ ಗುರುತಿಸಬಹುದು. ಚೋಳ ದೇವಾಲಯಗಳಾದ ರಾಜರಾಜೇಶ್ವರ, ವೈಕುಂಠನಾರಾಯಣ ದೇವಾಲಯಗಳು ಈಗ ಕಣ್ಮರೆಯಾಗಿವೆ. ಪಂಚಲಿಂಗೇಶ್ವರ, ಗೋಕರ್ಣೇಶ್ವರ, ವೀರಭದ್ರ, ಆನಂದೇಶ್ವರ ಮುಂತಾದ ದೇವಾಲಯಗಳು ಈಚೆಗೆ ಕಟ್ಟಿಸಿರುವ ಕೆಲವು ಸಾಮಾನ್ಯ ಗುಡಿಗಳು.

ಕೀರ್ತಿನಾರಾಯಣ ಇಲ್ಲಿರುವ ಏಕಮಾತ್ರ ಹೊಯ್ಸಳ ದೇವಾಲಯ. ವಿಷ್ಣುವರ್ಧನ ಚೋಳರ ಮೇಲೆ ಸಾಧಿಸಿದ ವಿಜಯದ ಕುರುಹಾಗಿ 1117ರಲ್ಲಿ ಇದನ್ನು ಕಟ್ಟಿಸಿದ. ಇದು ಹೊಯ್ಸಳ ಕಾಲದ ದೇವಾಲಯವಾದರೂ ಕಗ್ಗಲ್ಲು ಮತ್ತು ಇಟ್ಟಿಗೆಗಳಿಂದ ನಿರ್ಮಿತವಾಗಿದೆ. ಎತ್ತರವಾದ ಜಗತಿಯ ಮೇಲೆ ಗರ್ಭಗುಡಿ, ಸುಕನಾಸಿ ಮತ್ತು ನವರಂಗಗಳಿದ್ದು, ನವರಂಗದ ಮೂರು ಕಡೆಯೂ ದ್ವಾರಗಳಿವೆ. ಹೊರಗೋಡೆಗಳ ಮೇಲೆ ಅರೆಗಂಬಗಳು, ಅವುಗಳ ನಡುವೆ ಅರೆಗೋಪುರಗಳು ನಡುನಡುವೆ ಅರೆಮಂಟಪಗಳಿವೆ. ನವರಂಗ ವಿಶಾಲವಾಗಿದ್ದು ಅದರ ನಡುವೆ ಬಳಪದ ಕಲ್ಲಿನ ನಾಲ್ಕು ದಪ್ಪ ಕಂಬಗಳಿವೆ. ಇವು ಹೊಯ್ಸಳ ರೀತಿಯಲ್ಲಿ ತಿರುಗಣೆಯಲ್ಲಿ ಕಡೆದವು. ಉಳಿದ ಕಂಬಗಳು ಎಂಟು ಅಥವಾ ಹದಿನಾರು ಮೂಲೆಯ ನಕ್ಷತ್ರಾಕಾರದಲ್ಲಿಯೋ ಅಷ್ಟಮುಖವಾಗಿಯೋ ಇವೆ. ಚಾವಣಿಗಳು ಸಾಮಾನ್ಯವಾಗಿ ಚಪ್ಪಟೆ. ಕೆಲವು ಅಂಕಣಗಳಲ್ಲಿ ಮಾತ್ರ ಭುವನೇಶ್ವರಿಯ ಆಕಾರಗಳಿದ್ದು ಅಂದವಾಗಿ ಕಡೆದ ಬಳ್ಳಿಯ ಸಾಲು, ತಾವರೆ, ಆನೆ, ಸಿಂಹ, ನರ್ತಕಿಯರು ಮುಂತಾದ ಶಿಲ್ಪಗಳಿಂದ ಅಲಂಕೃತವಾಗಿದೆ.



ಕೀರ್ತಿನಾರಾಯಣ ದೇವಾಲಯ

ಕೀರ್ತಿನಾರಾಯಣದ ಮೂಲವಿಗ್ರಹ ಹತ್ತು ಅಡಿ ಎತ್ತರವಿದೆ. ಇದು ಸಮಭಂಗದಲ್ಲಿ ನಿಂತ ಚತುರ್ಭುಜ ಮೂರ್ತಿ. ಈ ಮೂರ್ತಿಯ ಪ್ರಭಾವಳಿಯ ಮೇಲೆ ವಿಷ್ಣುವಿನ ದಶಾವತಾರಗಳನ್ನು ನೋಡಬಹುದು. ಗಂಭೀರವಾದ ಮುಖಮುದ್ರೆಯಿಂದ ಕೂಡಿದ ಈ ಮೂರ್ತಿ ಸುಂದರವಾಗಿದೆ. ನವರಂಗದಲ್ಲಿರುವ ನಮ್ಮಾಳ್ವಾರ್, ವೇದಾಂತ ದೇಶಿಕರ್

ಮೊದಲಾದ ಮೂರ್ತಿಗಳು ಮತ್ತು ಲಕ್ಷ್ಮಿಯ ವಿಗ್ರಹ ವಿಜಯನಗರದ ಕಾಲದವು.

ಈ ದೇವಾಲಯದ ಮೇಲೆ ಇರುವ ಚಪ್ಪಟೆಯಾದ ಇಟ್ಟಿಗೆಯ ಗೋಪುರ ಬಹುಶಃ ವಿಜಯನಗರದ ಕಾಲದಲ್ಲಿ ಮೂಲ ಹೊಯ್ಸಳ ಗೋಪುರವನ್ನನುಸರಿಸಿ ಮಾಡಿದ್ದು. ಸುಮಾರು ನೂರು ವರ್ಷಗಳ ಹಿಂದೆ ಮರಳಿನ ರಾಶಿಯನ್ನು ತೆಗೆದುಹಾಕಿ ದೇವಸ್ಥಾನವನ್ನು ಬಿಡಿಸಲಾಯಿತು. (ಎಂ.ಎಚ್.)

ವೈದ್ಯೇಶ್ವರನದು ಊರಿನ ಪ್ರಮುಖ ದೇವಾಲಯ. ಬಹುಶಃ ಚೋಳ ಪ್ರತಿಷ್ಠೆ. ಆದರೆ ಇಂದಿರುವ ಕಟ್ಟಡ ಪೂರ್ಣವಾಗಿ ವಿಜಯನಗರದ ಅರಸರ ಕಾಲದಲ್ಲಿ 14ನೆಯ ಶತಮಾನದ ಮಧ್ಯಭಾಗದಲ್ಲಿ ಪ್ರಾಯಶಃ ಈ ಊರಿನವನೇ ಆದ ಮಾಧವ ಮಂತ್ರಿಯಿಂದ ರಚಿತವಾದದ್ದು. ಕಣಶಿಲೆಯಲ್ಲಿ ಕಟ್ಟಿರುವ ಈ ಕಟ್ಟಡದಲ್ಲಿ ಉತ್ತಮ ಶಿಲ್ಪಾಲಂಕರಣಗಳಿದ್ದು, ದ್ರಾವಿಡ ಹಾಗೂ ಹೊಯ್ಸಳ ಶೈಲಿಗಳ ಬೆರಕೆ ಕಂಡುಬರುವುದು ಈ ಗುಡಿಯ ವೈಶಿಷ್ಟ್ಯ. ಮೂಲಗುಡಿಯ ಸುತ್ತ ದೊಡ್ಡ ಪ್ರಾಕಾರವಿದ್ದು ಅದಕ್ಕೆ ಸೇರಿದಂತೆ ಅನೇಕ ಸಣ್ಣ ಗುಡಿಗಳಿವೆ. ಇವು ಈಚಿನವು. ಹೊಯ್ಸಳ ವಾಸ್ತು ಶೈಲಿಯ ರೀತಿಯಲ್ಲಿ ದೇವಾಲಯವನ್ನು ದೊಡ್ಡ ಜಗತಿಯ ಮೇಲೆ ಎತ್ತಲಾಗಿದೆ. ಇದರಲ್ಲಿ ಗರ್ಭಗೃಹ, ಮುಂದೆ ಒಂದಂಕಣದ ಅಂತರಾಳ, ಮಧ್ಯದಲ್ಲಿ ನವರಂಗ, ಅದರ ನಾಲ್ಕು ಕಡೆಗಳಲ್ಲೂ ಮೂರು ಅಂಕಣಗಳ ಸಾಲುಗಳು ಇವೆ. ಪೂರ್ವ ಮತ್ತು ದಕ್ಷಿಣದಲ್ಲಿ ಪ್ರವೇಶ ದ್ವಾರಗಳಿವೆ. ಮೂರಂಕಣದ ಪೂರ್ವದ ಮಂಟಪ ಸು.1633ರ ರಚನೆ. ಇಲ್ಲಿರುವ 10 ಅಡಿ ಎತ್ತರದ ದ್ವಾರಪಾಲ ವಿಗ್ರಹಗಳು ಬಹುಶಃ ಕರ್ನಾಟಕದಲ್ಲೇ ದೊಡ್ಡವು. ದಕ್ಷಿಣ ದ್ವಾರ ಮತ್ತು ಮುಮ್ಮಂಟಪ ಹಳೆಯವು. ಈ ಭಾಗದಲ್ಲಿ ವಿಜಯನಗರದ ರೀತಿಯ ಕಂಬಗಳಿದ್ದು, ಉತ್ತಮ ಶಿಲ್ಪಗಳಿಂದ ಕೂಡಿ ಸುಂದರವಾಗಿವೆ. ಹೊರಭಿತ್ತಿಯ ಮೇಲೆ ತಳದಲ್ಲಿ ಅಡ್ಡಪಟ್ಟಿಕೆಗಳ ಮೇಲೆ ನಾನಾ ದೇವರುಗಳ ಶಿಲ್ಪಗಳ ಅಲಂಕರಣ ಇವೆ. ಇಲ್ಲಿಯ ಶಿಲ್ಪವೈವಿಧ್ಯ ಮೂರ್ತಿಶಾಸ್ತ್ರ ಅಭ್ಯಾಸಿಗಳಿಗೆ ಆಸಕ್ತಿಕರವಾಗಿದೆ. ಮೇಲಂಚಿನಲ್ಲಿ ಬಾಗುಕಪೋತ, ಅದರ ಮೇಲೆ ಸಿಂಹಮುಖಗಳಿರುವ ಕೈಪಿಡಿ ಗೋಡೆ ಇದೆ. ಶಿಖರ ಇಟ್ಟಿಗೆಯದು. ದ್ರಾವಿಡ ಶೈಲಿಯಲ್ಲಿದೆ. ಬಹಶಃ 17ನೆಯ ಶತಮಾನದ್ದು. ದೇವಾಲಯದ ಒಳಗಿರುವ ನವರಂಗದ ಬಾಗಿಲುಗಳು, ಕಂಬಗಳು ಹಾಗೂ ಚಾವಣಿಗಳು ಬಹು ಸುಂದರವಾಗಿ ಬಿಡಿಸಿರುವ ಭಾಗಗಳು. ದೇವಾಲಯದ ಒಳಗೆ ಅನೇಕ ಬಿಡಿ ಶಿಲ್ಪಗಳಿವೆ. ಇಲ್ಲಿನ ನಟರಾಜನ ಕಂಚಿನ ವಿಗ್ರಹ (18ನೆಯ ಶತಮಾನ) ಕಳಲೆ ನಂಜರಾಜಯ್ಯನ ಸೇವೆ.



ಅರ್ಕೇಶ್ವರ ದೇವಾಲಯ

ಈ ಊರಿನ ಗೌರೀಶಂಕರ ದೇವಾಲಯ ಚಿಕ್ಕದೇವರಾಜ ಒಡೆಯರ ಕಾಲದ ಕಟ್ಟಡ. ಆನಂದೇಶ್ವರ ದೇವಾಲಯವನ್ನು ಹೈದರನ ಸಮಕಾಲೀನನಾಗಿದ್ದ ಚಿದಾನಂದಸ್ವಾಮಿ ಕಟ್ಟಿಸಿದಂತೆ ತಿಳಿಯುತ್ತದೆ. ಆನಂದೇಶ್ವರ ದೇವಾಲಯ ಶಿಥಿಲವಾಗಿದ್ದ ಕಾರಣ ಅಲ್ಲಿನ ಲಿಂಗವನ್ನು ವೈದ್ಯೇಶ್ವರ ದೇವಾಲಯದ ಬಳಿ ಸ್ಥಾಪಿಸಲಾಗಿದೆ (1932).

ತಲಕಾಡಿನಲ್ಲಿ ಜೈನ ದೇವಾಲಯಗಳೂ ಇದ್ದವೆಂಬುದಕ್ಕೆ ಸೂಚನೆಯಾಗಿ ಸಮೀಪದ ಹೊಲವೊಂದರಲ್ಲಿ 10ನೆಯ ಶತಮಾನದ ಶಾಸನವುಳ್ಳ ಜಿನವಿಗ್ರಹವೊಂದು ನಿಂತಿದೆ. ಕೃಷ್ಣಾನಂದ ಮಠ ಅಥವಾ ಕೊಪ್ಪಳ ಮಠ ಎಂದು ಕರೆಯುವ ಭಾಗವತ ಸಂಪ್ರದಾಯದ ಸ್ಮಾರ್ತ ಮಠವೊಂದು ಈ ಊರಲ್ಲಿದೆ. ಇಲ್ಲಿನ ಗುರು ಪರಂಪರೆಯನ್ನು ಶಂಕರಾಚಾರ್ಯರ ಶಿಷ್ಯರಾದ ಪದ್ಮಪಾದರಿಂದ ವಿಷ್ಣುಸ್ವಾಮಿ, ಕೃಷ್ಣಾನಂದ ಸ್ವಾಮಿ - ಇವರುಗಳ ಮೂಲಕ ಬಂದಿದ್ದೆಂದು ಸ್ಥಳೀಯ ದಾಖಲೆಗಳು ತಿಳಿಸುತ್ತವೆ. ಮಾಧವ ಮಂತ್ರಿ ಮತ್ತು ತಲಕಾಡಿನ ಕೆಲವು ಪ್ರಭುಗಳು ಈ ಮಠಕ್ಕೆ ದಾನಗಳನ್ನಿತ್ತ ದಾಖಲೆಗಳು ಮಠದಲ್ಲಿವೆ. ವೀರಶೈವ ಸಂಪ್ರದಾಯಕ್ಕೆ ಸೇರಿದ ಅತ್ತಿಕೇರಿ ಶಿವಸ್ವಾಮಿ ಮಠ, ಕೊಡಗಣ್ಣ ಸ್ವಾಮಿ ಮಠ ಮತ್ತು ತೋಪಿನ ಮಠ ಇವೆ. ತೋಪಿನ ಮಠದಲ್ಲಿ ಹಾವು ಕಚ್ಚಿದವರಿಗೆ ವಿಷಾಪಹಾರಿ ಮಂತ್ರೌಷಧ ಹಾಕಲಾಗುವುದು.



ವೈದ್ಯೇಶ್ವರ ದೇವಾಲಯ

ಈಗ ತಲಕಾಡು ಹೋಬಳಿ ಕೇಂದ್ರ. 1868ರಲ್ಲಿ ತಿರುಮಕೂಡಲು ನರಸೀಪುರ ಕಸಬೆಯಾಗುವವರೆಗೆ ಇದೇ ತಾಲ್ಲೂಕಿನ ಕೇಂದ್ರವೂ ಆಗಿತ್ತು. ಮೂರು ದಿನಗಳ ಕಾಲ ವಿವಿಧ ಕಾರ್ಯಕ್ರಮಗಳೊಡನೆ ನಡೆಯುವ ಇಲ್ಲಿಯ ಗ್ರಾಮದೇವತೆ ಬಂಡರಸಮ್ಮನ ಜಾತ್ರೆ ಸುತ್ತಲ ಜನಗಳನ್ನು ಆಕರ್ಷಿಸುತ್ತದೆ. ಮಾಧವ ಮಂತ್ರಿ ಅಣೆಕಟ್ಟಿನ ಒಂದು ನಾಲೆ ತಲಕಾಡಿನ ಮೂಲಕವೇ ಹರಿದುಹೋಗುತ್ತದೆ.

ತಲಕಾಡು ಇಂದು ಹೆಸರಾಗಿರುವುದು ಪುಣ್ಯಕ್ಷೇತ್ರವಾಗಿ. ಇಲ್ಲಿ ತತ್ಪುರುಷ ಮುಖದಿಂದ ಕಾವೇರಿಯ ಉತ್ತರವಾಹಿನಿಯ ಹತ್ತಿರ ಅರ್ಕೇಶ್ವರನಾಗಿಯೂ ಪೂರ್ವವಾಹಿನಿಯ ಹತ್ತಿರ ಅಘೋರಮುಖದಿಂದ ವಾಸುಕೀಶ್ವರನಾಗಿಯೂ (ಪಾತಾಳೇಶ್ವರ) ದಕ್ಷಿಣ ವಾಹಿನಿಯ ಹತ್ತಿರ ಸದ್ಯೋಜಾತ ಮುಖದಿಂದ ಸೈಕತೇಶ್ವರನಾಗಿಯೂ (ಮರಳೇಶ್ವರ) ಪಶ್ಚಿಮ ವಾಹಿನಿಯ ಹತ್ತಿರ (ಮುಡುಕು ತೊರೆಯಲ್ಲಿ) ವಾಮದೇವ ಮುಖದಿಂದ ಮಲ್ಲಿಕಾರ್ಜುನೇಶ್ವರನಾಗಿಯೂ ಮತ್ತು ಮಧ್ಯದಲ್ಲಿ ಈಶಾನ್ಯ ಮುಖದಿಂದ ವೈದ್ಯನಾಥೇಶ್ವರನಾಗಿಯೂ ಪಂಚ ಬ್ರಹ್ಮಮಯನಾದ ಪರಶಿವನು ನೆಲೆಸಿರುವನೆಂದು ಪುರಾಣಗಳು ತಿಳಿಸುತ್ತವೆ.

ಕಾರ್ತಿಕ ಬಹುಳ ಅಮಾವಾಸ್ಯೆಯ ಸೋಮವಾರವಾಗಿದ್ದು, ಸೂರ್ಯಚಂದ್ರರಿಬ್ಬರೂ ವೃಶ್ಚಿಕರಾಶಿಯಲ್ಲಿ ಸೇರಿದಾಗ, ಆ ದಿನ ಉಷಃ ಕಾಲದಲ್ಲಿ ಬರುವ ಕುಹೂಯೋಗ ಈ ಪಂಚಲಿಂಗಗಳ ದರ್ಶನಕ್ಕೆ ಅತ್ಯಂತ ಫಲಪ್ರದವಾದುದು. ಇಂಥ ದಿನ ಸುಮಾರು 4ರಿಂದ 14 ವರ್ಷಗಳ ಸಮಯದಲ್ಲಿ ಒಂದು ಸಲ ಮಾತ್ರ ಬರುತ್ತದೆ. ಆ ದಿನ ಕ್ರಮಬದ್ಧವಾಗಿ ಪಂಚಲಿಂಗದರ್ಶನ ಮಾಡಿದವರಿಗೆ ಸುಖ, ಮುಕ್ತಿ ದೊರೆಯುವುದೆಂದು ನಂಬಿಕೆ. ಪಂಚಲಿಂಗದರ್ಶನಕ್ಕೆ ನಾಡಿನ ನಾನಾ ಕಡೆಗಳಿಂದ ಲಕ್ಷಾಂತರ ಮಂದಿ ಬರುತ್ತಾರೆ. *

**ತಲಕಾವೇರಿ :** ಕಾವೇರಿ ನದಿಯ ಉಗಮಸ್ಥಾನ. ಪವಿತ್ರ ಕ್ಷೇತ್ರ. ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ಭಾಗಮಂಡಲ ಹೋಬಳಿಯಲ್ಲಿ ಭಾಗಮಂಡಲಕ್ಕೆ ಪಶ್ಚಿಮದಲ್ಲಿ ಪಶ್ಚಿಮಘಟ್ಟಗಳ ಶಿಖರಗಳಲ್ಲಿ ಒಂದಾದ ಬ್ರಹ್ಮಗಿರಿಯ ಇಳಿಜಾರಿನಲ್ಲಿದೆ. ಭಾಗಮಂಡಲದಿಂದ 8ಕಿಮೀ ವಾಹನಯೋಗ್ಯವಾದ ರಸ್ತೆಯ ಮುಖಾಂತರ, ಇಲ್ಲವೆ ಸು.6ಕಿಮೀ ಕಾಲುದಾರಿಯ ಮೂಲಕ ತಲಕಾವೇರಿಯನ್ನು ತಲುಪಬಹುದು. ಮಡಿಕೇರಿಯಿಂದ 40ಕಿಮೀ ದೂರದಲ್ಲಿರುವ ಭಾಗಮಂಡಲಕ್ಕೆ ಜಿಲ್ಲೆಯ ಇತರ ಭಾಗಗಳಿಂದಲೂ ಬಸ್ಸುಗಳ ಸೌಕರ್ಯವಿದೆ.



ಕಾವೇರಿ ಉಗಮ ಸ್ಥಾನ (ಕುಂಡಿಗೆ)

ತಲಕಾವೇರಿಯಲ್ಲಿ ಅಗಸ್ತ್ಯೇಶ್ವರ ದೇವಾಲಯ ಮತ್ತು ಗಣಪತಿ ದೇವಾಲಯ ಇವೆ. ಅಗಸ್ತ್ಯೇಶ್ವರ ದೇವಾಲಯದಲ್ಲಿರುವ ಲಿಂಗವನ್ನು ಅಗಸ್ತ್ಯ ಋಷಿ ಸ್ಥಾಪಿಸಿದನೆಂದು ಪ್ರತೀತಿ. ಈ ದೇವಾಲಯಗಳ ಕೆಳಗಿನ ತಗ್ಗಿನಲ್ಲಿ ಕಾವೇರಿ ನದಿ ಉದ್ಭವವಾಗುವ ಒಂದು ಚಚ್ಚೌಕದ ಚಿಕ್ಕ ಕೊಳವೂ ಅದರ ಮುಂದುಗಡೆ ಯಾತ್ರಾರ್ಥಿಗಳು ಸ್ನಾನ ಮಾಡುವ ಒಂದು ದೊಡ್ಡ ಕೊಳವೂ ಇವೆ. ಕಾವೇರಿ ನದಿ ಹುಟ್ಟುವ ಚಿಕ್ಕ ಕೊಳಕ್ಕೆ ಕುಂಡಿಗೆ ಎಂದು ಹೆಸರು. ಈ ತೀರ್ಥಕ್ಕೆ ಒಂದು ಚಿಕ್ಕದಾದ ಮಂಟಪ ಕಟ್ಟಲಾಗಿದೆ.

ತಲಕಾವೇರಿಯಲ್ಲಿ ತುಲಾಮಾಸದ ಸಂಕ್ರಮಣದಿಂದ ವೃಶ್ಚಿಕ ಮಾಸದ ಸಂಕ್ರಮಣದವರೆಗೆ ಜಾತ್ರೆ ನಡೆಯುತ್ತದೆ. ತುಲಾಸಂಕ್ರಮಣದ ದಿವಸ ಒಂದು ನಿಶ್ಚಿತ ಮುಹೂರ್ತದಲ್ಲಿ ಕಾವೇರಿ ನದಿಯ ತೀರ್ಥ ಕೊಳದಿಂದ ಉಕ್ಕಿ ಹರಿಯುತ್ತದೆ. ಆ ದಿವಸ ತಲಕಾವೇರಿಗೆ ಕೊಡಗು ಜಿಲ್ಲೆಯ ಎಲ್ಲ ಭಾಗಗಳಿಂದ ಮೈಸೂರು, ಹಾಸನ, ದಕ್ಷಿಣ ಕನ್ನಡ ಜಿಲ್ಲೆಗಳಿಂದ, ತಮಿಳುನಾಡು ಮತ್ತು ಕೇರಳದಿಂದ ಸಾವಿರಾರು ಯಾತ್ರಿಕರು ಬಂದು ಸ್ನಾನ ಕೊಳದಲ್ಲಿ ಸ್ನಾನಮಾಡಿ ಕುಂಡಿಗೆಯ ತೀರ್ಥವನ್ನು ಕುಡಿದು ತಮ್ಮ ಮನೆಗಳಿಗೆ ತೆಗೆದುಕೊಂಡು ಹೋಗುತ್ತಾರೆ. ಇಲ್ಲಿ ಯಾತ್ರಿಕರಿಗೆ ಉಳಿದುಕೊಳ್ಳಲು ವಿಶ್ರಾಂತಿಗೃಹಗಳಿವೆ. ಇಲ್ಲಿಂದ ಸು.300 ಅಡಿ ಎತ್ತರದಲ್ಲಿರುವ ಬ್ರಹ್ಮಗಿರಿಯನ್ನು ಹತ್ತಿ ಅಲ್ಲಿ ಸಪ್ತ ಋಷಿಗಳು ಹೋಮ ಮಾಡಿದ್ದರೆಂದು ಹೇಳುವ ಏಳು ಸಣ್ಣ ಗುಂಡಿಗಳನ್ನು ನೋಡಬಹುದು. ಬ್ರಹ್ಮಗಿರಿಯ ತುದಿಯಿಂದ ಆಕಾಶ ಶುಭ್ರವಾಗಿರುವಾಗ ದೂರದ ಬೆಟ್ಟದ ಪುರದ ಬೆಟ್ಟ, ನೀಲಗಿರಿ ಬೆಟ್ಟ ಹಾಗೂ ಉತ್ತರದ ಕುದುರೆಮುಖ ಶಿಖರಗಳನ್ನೂ ಪಶ್ಚಿಮದಲ್ಲಿ ಬೆಟ್ಟದ ಕೆಳಗಿನ ಕರಾವಳಿ ಪ್ರದೇಶವನ್ನೂ ಅಲ್ಲಿ ಸರ್ಪಾಕೃತಿಯಲ್ಲಿ ಡೊಂಕಾಗಿ ಹರಿಯುವ ನದಿಗಳು ಮತ್ತು ಅವುಗಳ ಆಚೆ ಅರಬ್ಬೀ ಸಮುದ್ರವನ್ನೂ ಕಾಣಬಹುದು.

ತಲಕಾವೇರಿಗೆ ಕಾಲುದಾರಿಯ ಬೆಟ್ಟ ಹತ್ತಿ ಹೋಗುವಾಗ ದಾರಿಯಲ್ಲಿ ಭೀಮನಕಲ್ಲು ಎಂದು ಕರೆಯಲ್ಪಡುವ ಒಂದು ದೊಡ್ಡ ಬಂಡೆಕಲ್ಲಿದೆ. ಪಾಂಡವರು ಹಿಂದೆ ವನವಾಸದ ಸಮಯದಲ್ಲಿ ಕೊಡಗಿಗೆ ಬಂದಿದ್ದರೆಂದೂ ಭೀಮ ಊಟ ಮಾಡುತ್ತಿದ್ದಾಗ ಅನ್ನದಲ್ಲಿ ಸಿಕ್ಕಿದ ಕಲ್ಲಿನ ಚೂರನ್ನು ತೆಗೆದಿಟ್ಟನೆಂದೂ ಹಾಗೆ ತೆಗೆದಿಟ್ಟ ಕಲ್ಲಿನ ಚೂರೇ ಭೀಮನಕಲ್ಲು ಎಂದೂ ಐತಿಹ್ಯ. ಅಲ್ಲಿಂದ ಮುಂದೆ ಬಂದರೆ ಯಾತ್ರಿಕರಿಗೆ ಸಲಾಮ್ ಕಲ್ಲು ಎಂದು ಹೆಸರಾಗಿರುವ ಒಂದು ಬಂಡೆಯಿರುವ ಪ್ರದೇಶ ಸಿಗುವುದು. ಮೈಸೂರಿನ ಟಿಪ್ಪುಸುಲ್ತಾನನು ಕೊಡಗನ್ನು ತನ್ನ ವಶಪಡಿಸಿಕೊಂಡಿದ್ದಾಗ ತಲಕಾವೇರಿಯ ದೇವಸ್ಥಾನಗಳನ್ನು ಕೊಳ್ಳೆಹೊಡೆಯಲು ತನ್ನ ಸೈನ್ಯಸಮೇತ ಈ ಕಲ್ಲಿನವರೆಗೆ ಬಂದು, ಈ ಕಲ್ಲಿರುವ ಪ್ರದೇಶದಲ್ಲಿ ನಿಂತು ಕಾವೇರಿಗೆ ನಮಸ್ಕರಿಸಿ ಹಿಂದಕ್ಕೆ ಹೋದನೆಂದು ಪ್ರತೀತಿ. *

**ತಾತಾ, ಆರ್. :** 1876-1932. ಪ್ರಸಿದ್ಧ ವಿದ್ವಾಂಸರು ಮೈಸೂರಿನವರು. ಪೂರ್ಣ ಹೆಸರು ತಾತಾಚಾರ್ಯ ಎಂದು ಅತ್ತರ್ (ಎಟಿಟಿಎಸ್) ಎಬುದು ಇವರ ಕಾವ್ಯನಾಮ ಇವರದು ಪಂಡಿತ ಮನೆತನ. ಇವರ ತಂದೆ ರಾಜಕವಿ ತಿರುಮಲೆ ವೆಂಕಟಾಚಾರ್ಯರು ಎ.ವಿ. ವರದಾಚಾರ್ಯರಿಗೆ ನಾಟಕಗಳನ್ನು ಬರೆದುಕೊಡುತ್ತಿದ್ದರು. ಹೀಗಾಗಿ ತಾತಾಚಾರ್ಯರಿಗೆ ಬಾಲ್ಯದಲ್ಲಿಯೇ ಕವಿಗಳ, ವಿದ್ವಾಂಸರ ಪರಿಚಯವಾಯಿತು. ಸಂಪ್ರದಾಯ ವ್ಯಾಸಂಗದ ಜೊತೆಗೆ ಆಧುನಿಕ ವಿದ್ಯಾಭ್ಯಾಸವನ್ನು ಮಾಡಿದ ಇವರು ಆಗಿನ್ನೂ ಹಸ್ತಪ್ರತಿಯಲ್ಲಿಯೇ ಇದ್ದ ಪೊನ್ನನ ಶಾಂತಿಪುರಾಣದ ಮೇಲೆ ವಿಮರ್ಶಾತ್ಮಕ ಪ್ರಬಂಧವನ್ನು ಬರೆದು ಮದರಾಸು ವಿಶ್ವವಿದ್ಯಾಲಯದಿಂದ ಎಂ.ಎ. ಪದವಿ ಪಡೆದರು. ಅನಂತರ ಎಲ್.ಟಿ. ಪದವಿ ಪಡೆದು ಮದರಾಸು ವಿದ್ಯಾ ಇಲಾಖೆಯಲ್ಲಿ ಕೆಲಸಕ್ಕೆ ಸೇರಿ, ರಾಜಮಹೇಂದ್ರಿಯ ಸರ್ಕಾರಿ ಕಾಲೇಜಿನಲ್ಲಿ ಅಧ್ಯಾಪಕರಾಗಿ, ಮದರಾಸು ಟೀಚರ್ಸ್ ಟ್ರೈನಿಂಗ್ ಕಾಲೇಜಿನ ವೈಸ್ ಪ್ರಿನ್ಸಿಪಾಲರಾಗಿ ಸೇವೆ ಸಲ್ಲಿಸಿದರು. ಸ್ವಲ್ಪಕಾಲ ಇವರು ಗೋದಾವರಿ ಜಿಲ್ಲೆಯ ವಿದ್ಯಾಧಿಕಾರಿಗಳೂ ಆಗಿದ್ದರು.

ಇವರ ಕಾರ್ಯಕ್ಷೇತ್ರವೆಲ್ಲ ಕನ್ನಡ ನಾಡಿನ ಹೊರಗೇ ಇದ್ದರೂ ಕನ್ನಡದ ಬಗ್ಗೆ ಇವರಿಗಿದ್ದ ಅಭಿಮಾನ ದೊಡ್ಡ ಮಟ್ಟದ್ದು. ಜೈನ ಮತ್ತು ವೀರಶೈವ ಸಿದ್ಧಾಂತಗಳನ್ನು ಆಳವಾಗಿ ಅಭ್ಯಾಸಮಾಡಿದ್ದರು. ಇವರು ಬರೆದಿರುವ ಕಿತ್ತೀಳೆಯೂ ಕನ್ನಡವೂ ಕನ್ನಡ ಶಬ್ದದ ವ್ಯುತ್ಪತ್ತಿ ಮುಂತಾದ ಪ್ರೌಢಲೇಖನಗಳು ಇವರ ಪಾಂಡಿತ್ಯಕ್ಕೆ ಸಾಕ್ಷಿಯಾಗಿವೆ. ಗಿರಿಮಲ್ಲಿಕಾರ್ಜುನ ಶತಕಂ, ಮರುನ್ನಂದನ ಶತಕಂ ಎಂಬ ಎರಡು ಶತಕಗಳನ್ನು ಬರೆದಿದ್ದಾರೆ. ಧರ್ಮಾಮೃತದ ಒಂದು ಕಥೆಯನ್ನು ಆಧರಿಸಿಕೊಂಡು ಗುರುದತ್ತರಾಯನ ಚರಿತ್ರೆ ಎಂಬ ಗ್ರಂಥವನ್ನು ರಚಿಸಿದ್ದಾರೆ. ಎ. ವೆಂಕಟರಾವ್ ಮತ್ತು ಎ. ಶೇಷ ಅಯ್ಯಂಗಾರ್ ಅವರು ಸಂಪಾದಿಸಿ ಪ್ರಕಟಿಸಿರುವ ಪೊನ್ನನ ಶಾಂತಿಪುರಾಣಕ್ಕೆ ಇವರು ಬೆಲೆಯುಳ್ಳ ಪೀಠಿಕೆ ಬರೆದಿದ್ದಾರೆ.

ಇವರು ಒಳ್ಳೆಯ ಲೇಖಕರಾಗಿದ್ದಂತೆ ವಾಗ್ಮಿಗಳೂ ಆಗಿದ್ದರು. ಇವರ ಕನ್ನಡ ಸೇವೆಯನ್ನು ಗಮನಿಸಿ 1927ರಲ್ಲಿ ಮಂಗಳೂರಿನಲ್ಲಿ ನಡೆದ 13ನೆಯ ಕನ್ನಡ ಸಾಹಿತ್ಯ ಸಮ್ಮೇಳನಕೆ ಇವರನ್ನು ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಲಾಯಿತು. (ಪಿ.ಎಸ್.ಎಸ್.)

**ತಾತಾಚಾರ್, ಟಿ.ಎಸ್. :** 1917-2001. ಪ್ರಸಿದ್ಧ ಪಿಟೀಲು ವಿದ್ವಾಂಸರು. ಕರ್ಣಾಟಕ ಶಾಸ್ತ್ರೀಯ ಸಂಗೀತವನ್ನು ಜನಪ್ರಿಯ ಗೊಳಿಸಿದವರಲ್ಲಿ ಅಗ್ರಗಣ್ಯರು. 1917 ಮೇ 22ರಂದು ತುಮಕೂರು ಜಿಲ್ಲೆಯ ಪಾವಗಡದಲ್ಲಿ ಜನಿಸಿದರು. ತಂದೆ ಟಿ.ಶ್ರೀನಿವಾಸಾಚಾರ್, ತಾಯಿ ಬಕುಲಮ್ಮ. ತಂದೆ ಶ್ರೀನಿವಾಸಾಚಾರ್ ಮತ್ತು ಚಿಕ್ಕಪ್ಪ ಶೇಷಾಚಾರ್ ಇಬ್ಬರೂ ಪಿಟಿಲು ವಿದ್ವಾಂಸರು.

ತಾತಾಚಾರ್ ಅವರು ಲೋಯರ್ ಸೆಕೆಂಡರಿ ಶಿಕ್ಷಣವನ್ನು ತಮ್ಮ ಹುಟ್ಟೂರಲ್ಲೇ ಮುಗಿಸಿದರು. ಬಳಿಕ ಬೆಂಗಳೂರಿನ ಕೋಟೆ ಪ್ರೌಢಶಾಲೆಯಲ್ಲಿ ಶಿಕ್ಷಣವನ್ನು ಮುಂದುವರೆಸಿದರು. ಸೀನಿಯರ್ ಇಂಟರ್ ಓದುತ್ತಿರುವಾಗ ತಂದೆಯವರ ಅನಾರೋಗ್ಯದ ಸಮಾಚಾರ ತಿಳಿದು ಊರಿಗೆ ತೆರಳಿದರು. ಇವರ ಬರುವನ್ನೇ ಎದುರುನೋಡುತ್ತಿದ್ದವರಂತೆ ಸಂಗೀತದಲ್ಲಿ ಮಗನಿಗಿದ್ದ ಒಲವನ್ನು ತಿಳಿದಿದ್ದ ತಂದೆ ಮಗನನ್ನು ಸಂಗೀತ ವಿದ್ವಾಂಸನಾಗುವಂತೆ ಹರಸಿ ವಿಧಿವಶರಾದರು.

ತಂದೆಯವರ ಪಿಟೀಲು ವಾದನವನ್ನು ಏಕಾಗ್ರಚಿತ್ತರಾಗಿ ಗ್ರಹಿಸುತ್ತಿದ್ದ ಇವರಿಗೆ ಸಂಗೀತ ಸಾಕಷ್ಟು ಹೃದ್ಗತವಾಗಿತ್ತು. ಸಂಗೀತದಲ್ಲಿ ಹೆಚ್ಚಿನ ಶಿಕ್ಷಣವನ್ನು ಬೆಂಗಳೂರಿನಲ್ಲಿ ವಿದ್ವಾನ್ ಕೃಷ್ಣಮಾಚಾರ್ ಅವರಲ್ಲಿ ಪಡೆಯುತ್ತಿದ್ದರು. ಸೀನಿಯರ್ ಇಂಟರ್‌ನಲ್ಲಿ ನಪಾಸಾದ ಸುದ್ದಿಯಿಂದ ಇವರು ನಿರಾಶರಾದರು. ಆಗ ಇವರ ಸಂಗೀತಾಸಕ್ತಿ ತಿಳಿದಿದ್ದ ಇವರ ದೊಡ್ಡಪ್ಪನವರು ತಮ್ಮ ಸ್ನೇಹಿತರೂ ಸಂಗೀತತಜ್ಞರೂ ಆದ ರಾಳ್ಳಪಲ್ಲಿ ಅನಂತ ಕೃಷ್ಣ ಶರ್ಮರಲ್ಲಿ ಸಂಗೀತ ಮುಂದುವರೆಸುವಂತೆ ಸಲಹೆ ನೀಡಿದರು. ಅದರಂತೆ ಮೈಸೂರಿಗೆ ಹೋಗಿ ರಾಳ್ಳಪಲ್ಲಿಯವರಲ್ಲಿ ಶಿಷ್ಯತ್ವ ಪಡೆದರು. ಸರಳರೂ ಸಹೃದಯರೂ ಬಹುಮುಖ ಪ್ರತಿಭೆಯುಳ್ಳವರೂ ವಿದ್ವಾಂಸರೂ ವಿಮರ್ಶಕರೂ ಆಗಿದ್ದ ರಾಳ್ಳಪಲ್ಲಿಯವರು ಸಂಗೀತ ದಿಗ್ಗಜರಾದ ಮುತ್ತಯ್ಯ ಭಾಗವತರ್, ಅರಿಯಾಕುಡಿ ರಾಮಾನುಜ ಅಯ್ಯಂಗಾರ್, ದ್ವಾರಂ ವೆಂಕಟಸ್ವಾಮಿ ನಾಯ್ಡು, ಮೈಸೂರು ವಾಸುದೇವಾಚಾರ್ ಮುಂತಾದವರ ಆಪ್ತಸ್ನೇಹಿತರಾಗಿದ್ದರು. ಇವರೆಲ್ಲರ ಸಹವಾಸದಿಂದ ತಾತಾಚಾರ್ಯರ ಸಂಗೀತವಿದ್ಯೆ ಸಂಪೂರ್ಣ ವಿಕಸಿಸಲು ಸಾಧ್ಯವಾಯಿತು.



ಇವರ ಸಂಗೀತ ಪ್ರೌಢಿಮೆ ಮನೆಮಾತಾಗುತ್ತಿದ್ದಂತೆ ಚೌಡಯ್ಯನವರ ಮುಖಾಂತರ ಮದರಾಸಿನ ಆಕಾಶವಾಣಿಯಲ್ಲಿ ನಿಲಯದ ಕಲಾವಿದರಾಗಿ ನೇಮಕಗೊಂಡರು. ಇದರಿಂದಾಗಿ ಅನೇಕ ಪ್ರೌಢ ಕಲಾವಿದರೊಡನೆ ಸಂಗೀತ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಸುವರ್ಣಾವಕಾಶ ಇವರಿಗೆ ದೊರೆಯಿತು. ಅನಂತರ ಮೈಸೂರು ಆಕಾಶವಾಣಿಯಲ್ಲಿ, ಬೆಂಗಳೂರು ಆಕಾಶವಾಣಿಯಲ್ಲಿ ನಿಲಯ ಕಲಾವಿದರಾಗಿ ದುಡಿದರು. ನಿವೃತ್ತರಾದ ಬಳಿಕ ಪೂರ್ಣಾವಧಿ ಸಂಗೀತಸೇವೆ ಮುಂದುವರಿಸಿ ಭಾರತದಾದ್ಯಂತ ಯಶಸ್ವೀ ಕಾರ್ಯಕ್ರಮಗಳನ್ನು ನೀಡಿ ಕರ್ನಾಟಕ ಶಾಸ್ತ್ರೀಯ ಸಂಗೀತವನ್ನು ಜನಪ್ರಿಯಗೊಳಿಸಿದ ಹಿರಿಮೆ ಇವರದು.

ಅರವತ್ತು ವರ್ಷಗಳಿಗೂ ಹೆಚ್ಚು ಕಾಲ ಸಂಗೀತಸೇವೆ ಸಲ್ಲಿಸಿದ ಇವರಿಗೆ ಅನೇಕ ಸಂಘ ಸಂಸ್ಥೆಗಳು, ವಿದ್ವನ್ಮಣಿಗಳು, ಸರ್ಕಾರ ನೀಡಿರುವ ಬಿರುದು ಸನ್ಮಾನಗಳು ಹಲವಾರು. ಅವುಗಳಲ್ಲಿ ಮುಖ್ಯವಾದವು: ಕರ್ನಾಟಕ ನೃತ್ಯ ಅಕಾಡೆಮಿಯ ಕರ್ನಾಟಕ ಕಲಾತಿಲಕ, ಗಾನಕಲಾ ಪರಿಷತ್ತಿನ ಗಾನಕಲಾಭೂಷಣ, ತ್ಯಾಗರಾಜ ಗಾನಸಭೆಯ ಕಲಾಭೂಷಣ, ಬೆಂಗಳೂರಿನ ಅಕಾಡೆಮಿ ಆಫ್ ಮ್ಯೂಸಿಕ್‌ನ ಚೌಡಯ್ಯ ಪ್ರಶಸ್ತಿ, ದಸರಾ ಸಂಗೀತ ವಿದ್ವಾನ್ (2000). ಇವರು 2001 ಡಿಸೆಂಬರ್ 7ರಂದು ನಿಧನಹೊಂದಿದರು.

(ಎಸ್‌ಯು.ಎಂ.)

**ತಾಯಿನಾಡು :** ಕರ್ನಾಟಕದಲ್ಲಿ ಪ್ರಕಟವಾಗುತ್ತಿದ್ದ ಕನ್ನಡ ದಿನಪತ್ರಿಕೆ. ಪಿ.ಆರ್.ರಾಮಯ್ಯನವರು ಇದನ್ನು ಮೊದಲು ಮೈಸೂರಿನಲ್ಲಿ 1927ರಲ್ಲಿ ಆರಂಭಿಸಿ ಅನಂತರ ಬೆಂಗಳೂರಿಗೆ ವರ್ಗಾಯಿಸಿದರು. ಆಗಿನ ಕಾಲದಲ್ಲಿ ಪತ್ರಿಕೋದ್ಯಮ ಅತ್ಯಂತ ಕಷ್ಟಕರವಾಗಿತ್ತು. ಮೈಸೂರು ಸಂಸ್ಥಾನಾಧೀಶರು ಬ್ರಿಟಿಷ್ ಸಾರ್ವಭೌಮತ್ವಕ್ಕೆ ಅಧೀನರಾಗಿದ್ದುದರಿಂದ ಪತ್ರಿಕೋದ್ಯಮ ಒಂದು ಕಡೆ ರಾಜಪ್ರಭುತ್ವಕ್ಕೂ ಇನ್ನೊಂದು ಕಡೆ ಬ್ರಿಟಿಷ್ ಆಡಳಿತದ ಕ್ರೂರ ಕ್ರಮಗಳಿಗೂ ಒಳಗಾಗಿತ್ತು. ಆದರೂ ರಾಮಯ್ಯನವರು ಧೈರ್ಯಗೆಡದೆ ಹತ್ತಾರು ಅಭಿಮಾನಿಗಳ ಸಹಾಯದಿಂದ ಮುದ್ರಣ ಯಂತ್ರವನ್ನು ಪಡೆದು ತಮ್ಮದೇ ಆದ ಸ್ವಂತ ಮುದ್ರಣಾಲಯವನ್ನು ಬೆಂಗಳೂರಿನ ಕಿಲಾರಿ ರಸ್ತೆಯಲ್ಲಿ ನೆಲೆಗೊಳಿಸಿ, ನಾಲ್ಕು ಪುಟಗಳ ದಿನಪತ್ರಿಕೆಯನ್ನು ಸಂಪಾದಿಸಿ ಪ್ರಕಟಿಸತೊಡಗಿದರು. ಆಗ ದೇಶವಿದೇಶಗಳ ಸುದ್ದಿಗಳು ರಾಯಿಟರ್ ಮತ್ತು ಅಸೋಸಿಯೇಟೆಡ್ ಪ್ರೆಸ್ ಆಫ್ ಇಂಡಿಯಾ ಸಂಸ್ಥೆಗಳಿಂದ ಒದಗಿಬರುತ್ತಿತ್ತು. ಸಣ್ಣ ಪತ್ರಿಕೆಗಳಿಗೆ ರಿಯಾಯಿತಿ ದರದಲ್ಲಿ ಸುದ್ದಿಯನ್ನೊದಗಿಸುವ ಸೌಲಭ್ಯವನ್ನು ಪಡೆದು ತಾಯಿನಾಡು ದಿನಪತ್ರಿಕೆ ಪತ್ರಿಕಾರಂಗದಲ್ಲಿ ಇನ್ನೊಂದು ಹೆಜ್ಜೆ ಮುಂದಿಟ್ಟಿತು. ತಂತಿ ವಾರ್ತೆಗಳನ್ನು ತರಿಸಿಕೊಳ್ಳತೊಡಗಿದ ಮೊಟ್ಟಮೊದಲ ಕನ್ನಡ ಪತ್ರಿಕೆ ತಾಯಿನಾಡು. ಆ ಪತ್ರಿಕಾಲಯದಲ್ಲಿ ತಮ್ಮ ನೇತೃತ್ವದಲ್ಲಿ ತರಬೇತುಪಡೆದ ಪಿ.ಬಿ.ಶ್ರೀನಿವಾಸನ್ ಅವರನ್ನು ರಾಮಯ್ಯನವರು ಅದರ ಸಂಪಾದಕರನ್ನಾಗಿ ನೇಮಿಸಿದರು.

ಪತ್ರಿಕೆಯದು ರಾಷ್ಟ್ರೀಯ ನೀತಿಯಾಗಿತ್ತು. ಭಾರತದ ಸ್ವಾತಂತ್ರ್ಯ ಸಂಪಾದನೆ, ಮೈಸೂರು ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆ, ರಾಜಕೀಯದಲ್ಲಿ ಪರಿಶುದ್ಧತೆ, ಜನಜೀವನದಲ್ಲಿ ಪ್ರಾಮಾಣಿಕ ಭಾವನೆ, ವ್ಯಾಪಾರ ವಾಣಿಜ್ಯ ವಲಯಗಳಲ್ಲಿ ಶಿಷ್ಟಾಚಾರ, ಸಕಲರಿಗೂ ಜಾತಿ ಮತ ವರ್ಗ ಭೇದವಿಲ್ಲದೆ ಸನ್ಮಂಗಳವಾಗಲೆಂಬ ಬಯಕೆ - ಇಂಥ ಧ್ಯೇಯಗಳಿಂದ ತಾಯಿನಾಡು ಪತ್ರಿಕೆ ಜನಾನುರಾಗ ಪಡೆಯಿತು. ಜನಸಾಮಾನ್ಯರಿಗೆ ಅರ್ಥವಾಗುವ ತಿಳಿಗನ್ನಡ ಶೈಲಿಯಲ್ಲಿ ಸಂಪಾದಕೀಯವನ್ನು ಇದು ಪ್ರಕಟಿಸುತ್ತಿತ್ತಲ್ಲದೆ ವರದಿ ನಿರೂಪಣೆಗಳಲ್ಲೂ ಸುಲಭ ಶೈಲಿಯನ್ನನುಸರಿಸಿ ಎಲ್ಲರ ಮೆಚ್ಚುಗೆಗೂ ಪಾತ್ರವಾಯಿತು.

1930-1935ರಲ್ಲಿ ಪತ್ರಿಕೆಯಲ್ಲಿ ಹೊಸಹೊಸ ಪ್ರಯೋಗಗಳು ನಡೆದುವು. ಕೇಂದ್ರ ಶಾಸನ ಸಭೆಯ ದಿನದಿನದ ಕಾರ್ಯಕಲಾಪಗಳನ್ನು ವರದಿ ಮಾಡಲು ದೆಹಲಿಗೆ ಕಛೇರಿಯ ಪ್ರತಿನಿಧಿಗಳನ್ನು ಪತ್ರಿಕೆ ಕಳುಹಿಸಿ ಕೊಟ್ಟಿತು. ಲಾಬಿವರದಿ, ನಗರ ಸಂಚಾರಿಯ ಡೈರಿ, ಜನರ ನಿತ್ಯ ಸಂಕಟಗಳ ವರದಿ - ಇವು ಪತ್ರಿಕೆಯ ವೈಶಿಷ್ಟ್ಯವನ್ನು ಹೆಚ್ಚಿಸಿದುವು. ಇವುಗಳಿಂದ ಪತ್ರಿಕೆ ಮೇಲು ದರ್ಜೆ ಸಂಪಾದಿಸಿಕೊಂಡಿತು.

ತಾಯಿನಾಡು ಪತ್ರಿಕೆ ಆರಂಭವಾದಾಗ ಪತ್ರಿಕಾ ಶಾಸನವಿರಲಿಲ್ಲ. ಸರ್ಕಾರದ ಅನುಮತಿಪತ್ರ ದೊರಕಿಸಿಕೊಂಡು ಪತ್ರಿಕೆಯನ್ನು ಆರಂಭಿಸಬೇಕಾಗಿತ್ತು. ಹಳೆಯ ಮೈಸೂರು ಕಾಂಗ್ರೆಸ್ಸಿನ ಜವಾಬ್ದಾರಿ ಸರ್ಕಾರ ಹೋರಾಟಕ್ಕೂ ಭಾರತದ ಸ್ವಾತಂತ್ರ್ಯ ಚಳವಳಿಗೂ ಪತ್ರಿಕೆ ಪೂರ್ಣ ಬೆಂಬಲ ನೀಡಿತು. 1938ರಲ್ಲಿ ವಿದುರಾಶ್ವತ್ಥದ ಗಲಭೆಯ ಸಂದರ್ಭದಲ್ಲಿ ಸರ್ಕಾರದವರು ಪತ್ರಿಕೆಯನ್ನು ನಿಲ್ಲಿಸಿಬಿಟ್ಟರು. ಅನಂತರ ಮತ್ತೆ ಅದಕ್ಕೆ ಅನುಮತಿ ದೊರಕಿತು. 1942ರ ಚಳವಳಿಯಲ್ಲಿ ಸಂಪಾದಕರು ಸೆರೆವಾಸವನ್ನನುಭವಿಸಿದರು. 1947ರ ಮೈಸೂರು ಚಲೋ ಚಳವಳಿಯ ಕಾಲಕ್ಕೆ ಸೆನ್ಸಾರ್‌ಶಿಪ್ ಆಜ್ಞೆಯ ಪ್ರಕಾರ ಪತ್ರಿಕೆಯನ್ನು ನಿಲ್ಲಿಸಬೇಕಾಯಿತು.

1936ರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ವಿದೇಶಯಾತ್ರೆ ಕೈಗೊಂಡಾಗ ಪತ್ರಿಕೆ ಸ್ವಂತ ಖರ್ಚಿನಲ್ಲಿ ತನ್ನ ಬಾತ್ಮೀದಾರರನ್ನು ಅವರೊಂದಿಗೆ ವಿದೇಶಗಳಿಗೆ ಕಳುಹಿಸಿಕೊಟ್ಟಿತು. ಈ ಬಾತ್ಮೀದಾರರು ಆ ಸಮಯದಲ್ಲಿ ಇಂಗ್ಲೆಂಡ್ ಮತ್ತು ಇತರ ಐರೋಪ್ಯ ದೇಶಗಳ ಪತ್ರಿಕೆಗಳು ನಡೆಯುವ ಬಗೆಯನ್ನು ಅರಿತುಕೊಂಡು ಬಂದರು. 1946ರಲ್ಲಿ ತಾಯಿನಾಡು ಬಾತ್ಮೀದಾರರಿಗೆ ಯುದ್ಧ ವರದಿಗೆ ಆಹ್ವಾನ ಬಂದಿತ್ತು. 1952ರಲ್ಲಿ ಅಮೆರಿಕ ಸರ್ಕಾರ ಸ್ಮಿತ್ ಮಾಂಟ್ ಅನುದಾನ ನೀಡಿ ಪತ್ರಿಕೆಯ ಬಾತ್ಮೀದಾರರನ್ನು ಆ ದೇಶಕ್ಕೆ ಕರೆಸಿಕೊಂಡಿತು.

ಮೊದಮೊದಲು ಪತ್ರಿಕೆಯ ವ್ಯವಸ್ಥಾಪನೆಗೆ ರಾಮಯ್ಯನವರೂ ಅವರ ಪತ್ನಿ ಜಯಲಕ್ಷಮ್ಮನವರೂ ಸೋದರರೂ ಕುಟುಂಬವರ್ಗದ ಇತರರೂ ದುಡಿದರು. ಅವರ ಮನೆಯ ಹುಡುಗರು ಪತ್ರಿಕೆಗಳನ್ನು

ಮಾರಾಟ ಮಾಡಿ, ಪತ್ರಿಕೆಯ ಯಶಸ್ಸಿಗೆ ಕಾರಣರಾದರು. ಪತ್ರಿಕೆಯ ಪ್ರಸಾರ, ಜನಪ್ರಿಯತೆ ಅಧಿಕವಾದಂತೆಲ್ಲ ಮುದ್ರಣ ಸೌಲಭ್ಯಗಳನ್ನು ವಿಸ್ತರಿಸಲಾಯಿತು. ರೋಟರಿ ಮುದ್ರಣ ಯಂತ್ರವನ್ನು ಅಳವಡಿಸಲಾಯಿತು. ಅದಕ್ಕೆ ಹೊಸ ಕಟ್ಟಡ ಬಂತು. 1930-34ರಲ್ಲಿ ಕೇವಲ ಇಬ್ಬರು ಮೂವರು ಸಿಬ್ಬಂದಿ ಇದ್ದ ಪತ್ರಿಕೆಗೆ 1950ರ ವೇಳೆಗೆ ಸುಮಾರು 16 ಉಪಸಂಪಾದಕರೂ ವರದಿಗಾರರೂ ಇದ್ದರು. ಕನ್ನಡ ನಾಡಿನ ಮೂಲೆ ಮೂಲೆಗಳಿಗೂ ಪತ್ರಿಕೆಯ ರವಾನೆ ಆಗುತ್ತಿತ್ತು. ಪತ್ರಿಕೆಗೆ ಅನೇಕ ಸ್ಥಳಗಳಲ್ಲಿ ಸ್ವಂತ ಬಾತ್ಮೀದಾರರಿದ್ದರು.

1957ರಲ್ಲಿ ತಾಯಿನಾಡು ಪತ್ರಿಕೆಯ ಒಡೆತನದಲ್ಲಿ ಬದಲಾವಣೆ ಆಯಿತು. ಅದನ್ನು ಎಂ.ಎಸ್.ರಾಮಯ್ಯನವರು ಕೊಂಡರು. ಅನಂತರ ಅನುಕ್ರಮವಾಗಿ ರುಮಾಲೆ ಚೆನ್ನಬಸವಯ್ಯನವರೂ ಟಿ.ಸಿದ್ದಪ್ಪನವರೂ ಅದರ ಸಂಪಾದಕರಾಗಿದ್ದರು. 1969ರಲ್ಲಿ ಪತ್ರಿಕೆ ನಿಂತುಹೋಯಿತು. *

**ತಾವರೆಕೆರೆ :** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ ತಾಲ್ಲೂಕಿನ ಒಂದು ಗ್ರಾಮ. ಹೋಬಳಿ ಕೇಂದ್ರ. ಬೆಂಗಳೂರು-ಮಾಗಡಿ ಹಾದಿಯಲ್ಲಿ ಬೆಂಗಳೂರಿನಿಂದ 25ಕಿಮೀ ದೂರದಲ್ಲಿದೆ.

ಈಗಿನ ಬಸ್ ನಿಲ್ದಾಣಕ್ಕೆ ಸಮೀಪದಲ್ಲಿರುವ ಕೆರೆಯಲ್ಲಿ ತಾವರೆ ಹೂ ಬಿಡುತ್ತಿದ್ದುದರಿಂದ ಊರಿಗೆ ತಾವರೆಕೆರೆ ಎಂಬ ಹೆಸರು ಬಂತೆಂದು ಹೇಳುವರು. 13ನೆಯ ಶತಮಾನದ ಇಲ್ಲಿನ ಒಂದು ಶಾಸನದಲ್ಲಿ ತಾವರೆಕೆರೆಯ ಉಲ್ಲೇಖವಿದೆ. ತಾವರೆಕೆರೆಗೆ 5ಕಿಮೀ ದೂರದಲ್ಲಿ ತಿಪ್ಪಗೊಂಡನಹಳ್ಳಿ ಜಲಾಶಯ ಮತ್ತು ನೀರೆತ್ತುವ ಯಂತ್ರ ಸ್ಥಾವರವಿದೆ. ವಿಹಾರದಾಣವಾಗಿ ಪ್ರಸಿದ್ಧವಾಗಿರುವ ದೊಡ್ಡ ಆಲದಮರ ಈ ಹೋಬಳಿಗೆ ಸೇರಿದ್ದು. ಇಲ್ಲಿ ವರ್ಷಕ್ಕೊಮ್ಮೆ ಮಾರಮ್ಮನ ಜಾತ್ರೆ ನಡೆಯುತ್ತದೆ. ಕೊಂಡ ಹಾಯುವುದು, ಉಯ್ಯಾಲೆ ತೂಗುವುದು ಆಗಿನ ಮುಖ್ಯ ಕಾರ್ಯಕ್ರಮಗಳು. ಇತ್ತೀಚೆಗೆ ಊರಿನಲ್ಲಿ ಪಂಚಮುಖಿ ಗಣಪತಿಯನ್ನು ಸ್ಥಾಪಿಸಲಾಗಿದೆ. ವರ್ಷಕ್ಕೊಮ್ಮೆ ಇದರ ರಥೋತ್ಸವ ನಡೆಯುತ್ತದೆ. ಈ ಪಂಚಮುಖಿ ಗಣಪತಿ ಹೆಸರಿನಲ್ಲಿ ಒಂದು ಪ್ರೌಢಶಾಲೆಯನ್ನೂ ನಡೆಸಲಾಗುತ್ತಿದೆ. ಇಲ್ಲಿಂದ ಸುತ್ತಲ ಪ್ರದೇಶಗಳಿಗೆ ಉತ್ತಮ ಮಾರ್ಗ ಸಂಪರ್ಕವಿದೆ. (ಡಿ.ಇ.ಕೆ.ಆರ್.)

**ತಾಳಗುಂದ :** ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕಿನಲ್ಲಿ ಬಳ್ಳಿಗಾವೆಗೆ ಸು.3ಕಿಮೀ ಈಶಾನ್ಯದಲ್ಲಿ ಇರುವ ಐತಿಹಾಸಿಕ ಪ್ರಾಮುಖ್ಯದ ಒಂದು ಗ್ರಾಮ. ಆದ್ಯ ಕದಂಬರ ಕಾಲದಲ್ಲಿ ಇದು ಸ್ಥಾನಗಂ ದೂರ ಎಂಬ ಹೆಸರಿನ ಪ್ರಸಿದ್ಧ ಅಗ್ರಹಾರವಾಗಿತ್ತು. ಈ ಅಗ್ರಹಾರವನ್ನು ಕದಂಬ ಮಯೂರಶರ್ಮನ ಪೂರ್ವಜನಾದ ಮುಕ್ಕಣ್ಣ ಅಥವಾ ತ್ರಿನೇತ್ರ ಸ್ಥಾಪಿಸಿದ. ಅಹಿಚ್ಛತ್ರವೆಂಬ ಸ್ಥಳದಿಂದ 32 ಬ್ರಾಹ್ಮಣ ಕುಟುಂಬಗಳನ್ನು ಕರೆಸಿ ಇಲ್ಲಿ ನೆಲೆಸುವಂತೆ ಮಾಡಿದ. ಇಲ್ಲಿ 12,000 ಅಥವಾ 32,000 ಬ್ರಾಹ್ಮಣರಿದ್ದರೆಂದು ಉಲ್ಲೇಖಗಳಿವೆ. ಬಹುಶಃ ಇದೇ ಕರ್ನಾಟಕದಲ್ಲಿ ಸ್ಥಾಪನೆಯಾದ ಪ್ರಾಚೀನತಮ ಅಗ್ರಹಾರ. ಈ ಊರಿನಲ್ಲಿ ಅನೇಕ ಪ್ರಾಚೀನ ಶಾಸನಗಳಿವೆ. ಇವುಗಳಲ್ಲಿ ಇಲ್ಲಿನ ಪ್ರಣವೇಶ್ವರ ದೇವಾಲಯದ (ಪಶುಪತಿ) ಮುಂದಿನ ಸ್ತಂಭದ ಮೇಲೆ ಕೆತ್ತಿರುವ ಶಾಸನ ಬಹು ಮುಖ್ಯವಾದುದು. ಕದಂಬ ಶಾಂತಿವರ್ಮನ ಕಾಲದ ಈ ಶಾಸನ (ಸು.450) ಪೆಟ್ಟಿಗೆ ತಲೆಯ ಲಿಪಿಯಲ್ಲಿ ಬರೆಯಲಾಗಿದೆ. ಕುಬ್ಜ ಎಂಬ ಕವಿಯಿಂದ ಭಾವಪೂರ್ಣವಾಗಿ ರಚಿತವಾಗಿರುವ ಸಂಸ್ಕೃತ ಶ್ಲೋಕಗಳಿರುವ ಈ ಶಾಸನ ಕದಂಬ ಇತಿಹಾಸದ ಮುಖ್ಯ ಆಧಾರಗಳಲ್ಲೊಂದು. ಈ ಶಾಸನದಲ್ಲಿ ಸಾತಕರ್ಣಿಯೇ ಮೊದಲಾದ ರಾಜರಿಂದ ಅರ್ಚಿತವಾದ ಮಹಾದೇವ ದೇವಾಲಯ ಮತ್ತು ಅದರ ಸಮೀಪದಲ್ಲಿ ಕಾಕುತ್ಸ್ಥವರ್ಮ ನಿರ್ಮಿಸಿದ ಕೆರೆ - ಇವುಗಳ ಉಲ್ಲೇಖವೂ ಇದೆ.

ಸ್ತಂಭದ ಎದುರಿನಲ್ಲೇ ಇರುವ ಪ್ರಣವೇಶ್ವರ ದೇವಾಲಯವೇ ಮೇಲಿನ ಶಾಸನೋಕ್ತ ಗುಡಿ. ಬಹುಶಃ ಕರ್ನಾಟಕದ ಅತಿ ಪ್ರಾಚೀನ ದೇವಾಲಯ. ಈಗ ಗರ್ಭಗೃಹ ಮತ್ತು ಸುಕನಾಸಿ ಮಾತ್ರ ಇರುವ ಬಹು ಸರಳ ಕಟ್ಟಡ. ಈಚೆಗೆ ನವೀಕೃತವಾಗಿದ್ದು ಹಳೆಯ ವಾಸ್ತು ಅಂಶಗಳೂ ಅಷ್ಟಾಗಿ ಉಳಿದಿಲ್ಲ. ಗರ್ಭಗುಡಿಯಲ್ಲಿ ಪೀಠದ ಮೇಲೆ 6 ಅಡಿ ಎತ್ತರದ ಲಿಂಗವಿದೆ. ತಳದಲ್ಲಿ ಅದು 5 ಅಡಿ ಸುತ್ತಳತೆಯುಳ್ಳದ್ದಾಗಿದೆ. ಇದು ಮೂಲ ಲಿಂಗವಿದ್ದಂತೆ ತೋರುತ್ತದೆ. ಗರ್ಭಗೃಹದ ದ್ವಾರದ ತೋಳಿನ ಮೇಲೆ ಕದಂಬ ಕಾಲದ ಇನ್ನೊಂದು ಶಾಸನವಿದೆ. ದೇವಾಲಯದ ಸಮೀಪದಲ್ಲಿ ಪ್ರಣವನ ಕೆರೆ ಎಂಬ ಚಿಕ್ಕ ಕೆರೆಯಿದೆ. ಇದು ಕಾಕುತ್ಸ್ಥವರ್ಮ ಕಟ್ಟಿಸಿದ ತಟಾಕವಿರಬಹುದು. ತಾಳಗುಂದ ಮತ್ತು ಪ್ರಣವೇಶ್ವರ ದೇವಾಲಯಗಳು ಸು.12-13ನೆಯ ಶತಮಾನಗಳವರೆಗೂ



ತಾಳಗುಂದ ಶಾಸನಸ್ತಂಭ

ಉಚ್ಛ್ರಾಯಸ್ಥಿತಿಯಲ್ಲಿದ್ದುವೆಂಬುದಕ್ಕೆ ಶಾಸನೋಲ್ಲೇಖಗಳಿವೆ. ಹನ್ನೆರಡನೆಯ ಶತಮಾನದ ಮಧ್ಯಕಾಲದಲ್ಲಿ ಈ ದೇವಾಲಯದಲ್ಲಿ ಚಿಕ್ಕದಾದರೂ ಪ್ರಸಿದ್ಧಿಪಡೆದಿದ್ದ ಒಂದು ವಿದ್ಯಾಪೀಠವಿತ್ತು. ಇಲ್ಲಿ 48 ಮಂದಿ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದರು. ಈ ಉನ್ನತ ಶಿಕ್ಷಣ ಕೇಂದ್ರದ ಪಠ್ಯಕ್ರಮದಲ್ಲಿ ಯಜುರ್ವೇದ, ಸಾಮವೇದ, ಪ್ರಭಾಕರ ಮೀಮಾಂಸೆ, ವೇದಾಂತ, ಭಾಷಾಧ್ಯಯನ, ಕನ್ನಡ ಮುಂತಾದ ವಿಷಯಗಳು ಸೇರಿದ್ದುವು. ಪ್ರತಿ ಅಧ್ಯಾಪಕರೂ ಎಂಟು ಮಂದಿಗೆ ಪಾಠ ಹೇಳುತ್ತಿದ್ದರು. ಅವರು

ತಮ್ಮ ವಿಶಿಷ್ಟ ವಿಷಯದಲ್ಲಿ ಆಳವಾದ ಪಾಂಡಿತ್ಯವನ್ನು ಸಾಧಿಸಿದ್ದರು. ವಿದ್ಯಾರ್ಥಿಗಳಿಗೆ ಉಚಿತ ಊಟದ ವ್ಯವಸ್ಥೆಯಿತ್ತು. ಅದಕ್ಕಾಗಿ ಇಬ್ಬರು ಅಡಿಗೆಭಟ್ಟರಿದ್ದರು. ದೇವಾಲಯಕ್ಕೆ ಬರುತ್ತಿದ್ದ ಆದಾಯವನ್ನು ಅಧ್ಯಾಪಕರ ಸಂಬಳಕ್ಕೂ ವಿದ್ಯಾರ್ಥಿಗಳ ಊಟೋಪಚಾರಗಳಿಗೂ ಬಳಸುತ್ತಿದ್ದರು. ತಾಳಗುಂದದಲ್ಲಿ ಗಂಗಾಧರೇಶ್ವರ ಮತ್ತು ವೀರಭದ್ರ ಎಂಬ ಇನ್ನೆರಡು ದೇವಾಲಯಗಳೂ ಇವೆ. ಗ್ರಾಮದ ಪೂರ್ವದಲ್ಲಿ ಪ್ರಭುದೇವರ ಗದ್ದುಗೆ ಇರುವ ವಿರಕ್ತ ಮಠವಿದೆ. ಪ್ರಭುದೇವರು ಕೈಲಾಸವಾಸಿಯಾದದ್ದು ಬಳ್ಳಿಗಾವೆಯಲ್ಲಲ್ಲ ತಾಳಗುಂದದಲ್ಲಿ ಎಂಬ ನಂಬಿಕೆ ಇದೆ. ಮತ್ತಷ್ಟು ಪೂರ್ವದಲ್ಲಿ ದೋಣನ ಗುಡ್ಡ ಎಂಬ ಬೆಟ್ಟವಿದೆ. ಸ್ಥಳಪುರಾಣದ ಪ್ರಕಾರ ಭೀಮ ದೋಣನನ್ನು (ಬಕಾಸುರ) ಕೊಂದದ್ದು ಇಲ್ಲಿ; ಏಕಚಕ್ರನಗರ ಈ ಗುಡ್ಡದ ಬಳಿ ಇತ್ತಂತೆ. (ಎನ್.ಎಸ್.ವಿ.)

**ತಾಳಗುಪ್ಪ :** ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಒಂದು ಸ್ಥಳ. ಬೆಂಗಳೂರು-ಮೀರಜ್ ರೈಲು ಮಾರ್ಗದಲ್ಲಿರುವ ಬೀರೂರು ಜಂಕ್ಷನ್‌ನಿಂದ ಕವಲೊಡೆದು ಚಿಕ್ಕಮಗಳೂರು ಶಿವಮೊಗ್ಗ ಜಿಲ್ಲೆಗಳಲ್ಲಿ ಭದ್ರಾವತಿ ಶಿವಮೊಗ್ಗಗಳ ಮೂಲಕ ಸಾಗರವನ್ನು ತಲಪಿ ಮುಂದುವರಿಯುವ ರೈಲು ಮಾರ್ಗದ ಕೊನೆಯ ನಿಲ್ದಾಣ. ಬೀರೂರಿನಿಂದ 16ಕಿಮೀ, ಶಿವಮೊಗ್ಗದಿಂದ 100ಕಿಮೀ ಮತ್ತು ಸಾಗರದಿಂದ 16ಕಿಮೀ ದೂರದಲ್ಲಿದೆ. ಶರಾವತಿ ಕಣಿವೆಯೂ ಜೋಗ್ ಜಲಪಾತವೂ ತಾಳಗುಪ್ಪದಿಂದ 20ಕಿಮೀ ದೂರದಲ್ಲಿವೆ. ರೈಲು ಮಾರ್ಗವನ್ನು ಇಲ್ಲಿಂದ ಮುಂದುವರಿಸಿ ಪಶ್ಚಿಮ ತೀರದಲ್ಲಿರುವ ಭಟ್ಕಳ ರೇವಿಗೆ ರೈಲ್ವೆ ಸಂಪರ್ಕ ಏರ್ಪಡಿಸಬೇಕೆಂದು ಹಿಂದಿನ ಮೈಸೂರು ಸಂಸ್ಥಾನ ಸರ್ಕಾರದ ಉದ್ದೇಶವಾಗಿತ್ತು. ಇದರಿಂದ ಮಲೆನಾಡಿನ ಉತ್ಪನ್ನಗಳನ್ನೂ ಸಿದ್ಧವಸ್ತುಗಳನ್ನೂ ಸುಲಭವೆಚ್ಚದಲ್ಲಿ ರಫ್ತು ಮಾಡುವುದು ಸಾಧ್ಯವಾಗುವುದೆಂದು ಭಾವಿಸಲಾಗಿತ್ತು. ಆದರೆ ಸಂಸ್ಥಾನ ಸರ್ಕಾರದ ಈ ಉದ್ದೇಶ ಪೂರೈಸಲಿಲ್ಲ. ಈಗ ಅದು ಹಿಂದಿನ ಮಹತ್ತ್ವವನ್ನು ಹೊಂದಿಲ್ಲದಿದ್ದರೂ ಸುಂದರವಾದ ದೃಶ್ಯಗಳಿಂದ ಕೂಡಿದ್ದು ಪ್ರವಾಸಿ ತಾಣವಾಗಿದೆ. *

**ತಾಳಮದ್ದಲೆ :** ಯಕ್ಷಗಾನ ಸಂಪ್ರದಾಯದಲ್ಲಿ ವೇಷಭೂಷಣ ನರ್ತನಾದಿಗಳಿಲ್ಲದೆ ಕುಳಿತಲ್ಲಿಯೇ ಪಾತ್ರಧಾರಿಗಳು ರಸಭಾವವಿನ್ಯಾಸಗಳೊಂದಿಗೆ ಪದ್ಯಕ್ಕೆ ತಕ್ಕ ಅರ್ಥ ಹೇಳಿ ಯಾವುದಾದರೊಂದು ಆಖ್ಯಾನವನ್ನು ಪ್ರದರ್ಶಿಸುವ ಒಂದು ಸಂಪ್ರದಾಯ. ಭಾಗವತ ಹಿಮ್ಮೇಳದೊಡನೆ ಕುಳಿತು ಪ್ರಸಂಗವನ್ನು ಹಾಡುತ್ತಿದ್ದರೆ ಪಾತ್ರಧಾರಿಗಳು ಮಾತುಗಳಿಂದ ಅರ್ಥಪ್ರತಿಪಾದನೆ ಮಾಡುತ್ತಾರೆ. ಇಲ್ಲಿ ಭಾಗವತನ ಪಾತ್ರವೆಂಬುದು ಕಥಾಸರಣಿಯನ್ನು ಒದಗಿಸುವುದಕ್ಕೆ ಮಾತ್ರ; ಬಯಲಾಟದಲ್ಲಿ ಅವನ ಕೆಲಸ ಇನ್ನೂ ಹೆಚ್ಚಿರುತ್ತದೆ.

ತಾಳಮದ್ದಲೆಯ ಗೀತ ಸಾಹಿತ್ಯ ಸಂವಾದಗಳಲ್ಲಿ ಬಯಲಾಟದ ಪೂರ್ಣಪ್ರಮಾಣದ ತೀಕ್ಷ್ಣತೆ, ಭಾವಾವೇಶ, ರಂಜನೆಗಳು, ತೋರಿಬರುವುದು ಸಾಧ್ಯವಿಲ್ಲವಾದರೂ ಬಹುಮಟ್ಟಿಗೆ ತಾಳಮದ್ದಲೆ ಬಯಲಾಟದ ಉದ್ದೇಶವನ್ನು ಸಾಧಿಸುತ್ತದೆ. ಬಯಲಾಟದಲ್ಲಿನಂತೆ ಸಭಾಲಕ್ಷಣ, ಪೂರ್ವಪೀಠಿಕೆಗಳು ತಾಳಮದ್ದಳೆಯ ಪ್ರಾರಂಭಕ್ಕೆ ಇಲ್ಲ.

ಹಿಂದೆ ಐಗಳ ಮಠಗಳಲ್ಲಿ ಯಕ್ಷಗಾನ ಪ್ರಸಂಗಗಳ ಹಾಡುಗಾರಿಕೆ, ಅರ್ಥ ಹೇಳುವ ಕ್ರಮ, ಮದ್ದಲೆಯ ವಾದನ - ಇವೂ ಪಾಠ ಕ್ರಮಗಳಲ್ಲಿದ್ದುವು. ವಿದ್ಯಾರ್ಥಿಗಳು ತಾವು ಕಲಿತ ಪ್ರಸಂಗಗಳನ್ನು ತಾಳಮದ್ದಲೆಯ ರೂಪದಲ್ಲಿ ಪ್ರದರ್ಶಿಸುತ್ತಿದ್ದರು. ನವರಾತ್ರಿ ಕಾಲದಲ್ಲಿ ಗುರುಗಳು ತಮ್ಮ ಶಿಷ್ಯರನ್ನು ಒಡಗೂಡಿಕೊಂಡು ತಾಳಮದ್ದಲೆ ನಡೆಸುತ್ತ ಗ್ರಾಮಗಳಲ್ಲಿ ಸಂಚರಿಸಿ ಗುರುಕಾಣಿಕೆ ಪಡೆಯುವ ಕ್ರಮ ಇತ್ತು. ಈ ಸಂಪ್ರದಾಯವನ್ನೇ ಹೂವಿನ ಕೋಲು ಎಂದೂ ಕರೆಯುತ್ತಾರೆ. ಕೈಯಲ್ಲಿ ಅಲಂಕೃತವಾದ ಬೆಂಡಿನ ಹೂವಿನ ಕೋಲನ್ನು ಹಿಡಿದುಕೊಂಡಿರುವ ಅಲಂಕೃತರಾದ ಐಗಳ ಮಠದ ಶಿಷ್ಯರು ಆರಂಭದಲ್ಲಿ ಮಾರನವಮಿ ಚೌಪದದ ಒಂದು ತುಂಡನ್ನು ಹಾಡಿ ಸಮಸ್ತ ಜನಕ್ಕೆ ಕಲ್ಯಾಣವನ್ನು ಕೋರಿ ತಮ್ಮ ಗುರುಗಳಿಗೆ ಯಥೋಚಿತ ಉಡುಗೊರೆ ಬೇಡಿ - ತದನಂತರ ತಾವು ಅಭ್ಯಸಿಸಿದ ಯಾವುದೇ ಒಂದು ಯಕ್ಷಗಾನ ಪ್ರಸಂಗದ ಭಾಗವನ್ನು ತಾಳಮದ್ದಲೆ ರೂಪದಲ್ಲಿ ಪ್ರದರ್ಶಿಸುತ್ತಿದ್ದರು. ಗುರುಗಳೇ ಸ್ವತಃ ಭಾಗವತಿಕೆ ನಡೆಸುತ್ತಿದ್ದರು. ಕಲಾವಿದರಿಗೆ ತರಬೇತಿ ನೀಡುವುದು ತಾಳಮದ್ದಲೆಯ ಇನ್ನೊಂದು ಉದ್ದೇಶ ಎಂಬುದು ಇದರಿಂದ ವೇದ್ಯವಾಗುತ್ತದೆ.

ಯಕ್ಷಗಾನ ಸಾಹಿತ್ಯದಲ್ಲಿ ಹೆಚ್ಚಿನವು ವೀರರಸಪ್ರಧಾನವಾಗಿದ್ದರೂ ಶೃಂಗಾರ ಹಾಸ್ಯರಸ ಪ್ರಧಾನವಾದ ಪ್ರಸಂಗಗಳೇ ತಾಳಮದ್ದಲೆಗೆ ಹೆಚ್ಚು ಒಲಿಯುತ್ತವೆ. ಕರುಣರಸವೂ ತಾಳಮದ್ದಲೆಯಲ್ಲಿ ಸ್ಫುಟಗೊಳ್ಳುತ್ತದೆ. ನೃತ್ಯದ ಪರಿಶ್ರಮವಿಲ್ಲದ, ವೇಷಭೂಷಣಗಳ ಹೊರೆ ಹೊರಲಾರದ, ಆದರೆ ಪುರಾಣಾದಿ ಕಥನಗಳಲ್ಲಿ ತಜ್ಞತೆ ಪಡೆದ ಶ್ರೇಷ್ಠ ವಾಗ್ಮಿಗಳಿಗೆ ತಮ್ಮ ಪ್ರತಿಭಾ ಪ್ರಕಾಶನಕ್ಕೆ ತಾಳಮದ್ದಲೆ ಒಂದು ಯೋಗ್ಯ ಕ್ಷೇತ್ರ. ಶ್ರೇಷ್ಠ ಭಾಗವತರು, ಯೋಗ್ಯ ಹಿಮ್ಮೇಳಗಳ ಸಂಯೋಜನೆ ಹಾಗೂ ಪಾಂಡಿತ್ಯಪೂರ್ಣವಾದ ಪಾತ್ರಧಾರಿಗಳ ಕೊಡುವಿಕೆಯಿಂದ ಜರುಗುವ ಯಾವುದೇ ತಾಳಮದ್ದಲೆಯು ಪ್ರದರ್ಶನ ಬಯಲಾಟದ ಉದ್ದೇಶವನ್ನು ಸಾಧಿಸುತ್ತದೆ. (ಬಿ.ವಿ.ಕೆ.)

**ತಾಳೀಕೋಟೆ :** ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕಿನಲ್ಲಿ ಕಸಬೆಯಿಂದ 35ಕಿಮೀ ಈಶಾನ್ಯಕ್ಕಿರುವ ಒಂದು ಪಟ್ಟಣ. ಡೋಣಿನದಿಯ ಎಡದಂಡೆಯಲ್ಲಿದೆ. ಜನಸಂಖ್ಯೆ 26,217. ವಿಜಯನಗರದ ಪತನಕ್ಕೆ ಕಾರಣವಾದ 1565ರ ನಿರ್ಣಾಯಕ ಯುದ್ಧ ನಡೆದದ್ದು ಇದರ ಸಮೀಪದಲ್ಲಿಯೇ. 1750ರಲ್ಲಿ ಪೇಶ್ವೆ ಬಾಲಾಜಿ ಬಾಜೀರಾವ್ ತಾಳೀಕೋಟೆಯನ್ನು ತನ್ನ ಮೈದುನ ಆನಂದರಾವ್‌ಗೆ ಜಾಗೀರಿಯಾಗಿ ಕೊಟ್ಟಿದ್ದ. ಪೇಶ್ವೆಗಳ ಪತನಾನಂತರ ಆನಂದರಾವ್‌ನ ಮೊಮ್ಮಗ ಇದನ್ನು ತನ್ನ ಆಡಳಿತ ಕೇಂದ್ರವಾಗಿ ಮಾಡಿಕೊಂಡು ಇಲ್ಲಿ ಒಂದು ವಾಡೆಯನ್ನು ಕಟ್ಟಿಸಿದ. ಇನಾಂ ರದ್ದಿಯಾತಿಯವರೆಗೂ ಈ ಗ್ರಾಮ 'ಸರಂಜಾಂ ಇನಾಂ' ಗ್ರಾಮವಾಗಿತ್ತು.

ತಾಳೀಕೋಟೆ ಈ ಸುತ್ತಣಪ್ರದೇಶದ ಮುಖ್ಯ ವ್ಯಾಪಾರ ಕೇಂದ್ರ. ಇಲ್ಲಿ ರೆಗ್ಯುಲೇಟೆಡ್ ಮಾರ್ಕೆಟ್ ಇದೆ. ಜೋಳ, ಸೇಂಗಾ, ಹತ್ತಿ, ಎಳ್ಳು ಹೆಚ್ಚು ವ್ಯಾಪಾರವಾಗುತ್ತದೆ. ಇಲ್ಲಿ ಎರಡು ಪ್ರವಾಸಿ ಮಂದಿರಗಳೂ ಒಂದೊಂದು ಪ್ರೌಢಶಾಲೆ, ಕಾಲೇಜು ಮತ್ತು ಗ್ರಂಥಾಲಯ ಇವೆ. ಊರು ಪಟ್ಟಣ ಪಂಚಾಯತಿಯ ಆಡಳಿತದಲ್ಲಿದೆ.

ಇಲ್ಲಿ ಊರ ಸುತ್ತ ಕೋಟೆಯಿತ್ತು. ಈಗ ಊರು ಅದನ್ನೂ ಮೀರಿ ಬೆಳೆದಿದೆ. ಇಲ್ಲಿರುವ ಎರಡು ಮಸೀದಿಗಳಲ್ಲಿ ಪಾಂಚ್‌ಪೀರ್ ಮಸೀದಿ ಎಂಬುದು ಪಂಚಪಾಂಡವ ದೇವಸ್ಥಾನವೆಂದು ಹಿಂದುಗಳಿಗೂ ಪವಿತ್ರವೆನಿಸಿದೆ. ಇಲ್ಲಿರುವ ನಗರೇಶ್ವರ ಮತ್ತು ಸಿದ್ಧೇಶ್ವರ ದೇವಾಲಯಗಳು ಕಲ್ಯಾಣದ ಚಾಳುಕ್ಯರ ಕಾಲದ ರಚನೆಗಳೆಂದು ಹೇಳಲಾಗಿದೆ.

ತಾಳೀಕೋಟೆ ಪ್ರದೇಶ ಭೂವೈಜ್ಞಾನಿಕ ದೃಷ್ಟಿಯಿಂದ ಮುಖ್ಯವಾಗಿದೆ. ಈ ಊರಿನ ಸುತ್ತಮುತ್ತಲ ಸಮತಲವಾದ ಪ್ರದೇಶದಲ್ಲಿ ಶಿಲಾ ವಯಸ್ಸಿನ ದೃಷ್ಟಿಯಿಂದ ಅತ್ಯಂತ ಪುರಾತನವಾದ ಪ್ರೀಕೇಂಬ್ರಿಯನ್ ಯುಗಕ್ಕೆ ಸೇರಿದ ಶಿಲಾಸ್ತೋಮಗಳು ಭೂಗರ್ಭದಲ್ಲಿ ಹುದುಗಿಕೊಂಡಿವೆ. ಹಿರಿಯ ಪ್ರೀಕೇಂಬ್ರಿಯನ್ (3,000 ಕೋಟಿಗೂ ಮಿಕ್ಕು ವರ್ಷಗಳು) ರೂಪಾಂತರ ಶಿಲೆಗಳು (ಮುಖ್ಯವಾಗಿ ಪದರಶಿಲೆಗಳು) ತಾಳೀಕೋಟೆಯ ಆಗ್ನೇಯದಲ್ಲಿ ಮುದ್ದೇಬಿಹಾಳದ ಪೂರ್ವದಲ್ಲಿ ಗೆದ್ದಲ ಮಾರಿ ಎಂಬ ಹಳ್ಳಿಯ ಸುತ್ತಲೂ ಇವೆ. ಈ ಶಿಲೆಗಳು ಗ್ರಾನೈಟ್ ಶಿಲೆಗಳಿಂದ ಭೇದಿಸಲ್ಪಟ್ಟಿವೆ. ಈ ಹಿರಿಯ ಪ್ರೀಕೇಂಬ್ರಿಯನ್ ಶಿಲೆಗಳ ಮೇಲೆ ಕಾಲಾಂತರದಲ್ಲಿ ಹರಡಿದ ಕಿರಿಯ ಪ್ರೀಕೇಂಬ್ರಿಯನ್ ಶಿಲಾಸ್ತೋಮವಿದೆ. ಭೀಮಾ ಶಿಲಾಸ್ತೋಮಗಳು ಎಂಬ ಹೆಸರಿನ ಈ ಕಿರಿಯ ಪ್ರೀಕೇಂಬ್ರಿಯನ್ ಶಿಲಾಸಮುದಾಯದಲ್ಲಿ ಪೆಂಟ್ಸೆ ಶಿಲೆ, ಮರಳುಶಿಲೆ, ಸುಣ್ಣಶಿಲೆ ಮತ್ತು ಮಡ್ಡಿಶಿಲೆ (ಗ್ಲಾಕೊನೈಟ್ ಖನಿಜಾಂಶವುಳ್ಳದ್ದು) ಎಂಬ ಶಿಲಾವೈವಿಧ್ಯಗಳು ಗೊತ್ತಾದ ಸ್ತರಗಳಲ್ಲಿ ಸೇರಿಸಲ್ಪಟ್ಟಿವೆ. ಈ ಎಲ್ಲ ಜಲಜ ಶಿಲೆಗಳನ್ನು ತಾಳೀಕೋಟೆಯ ಆಗ್ನೇಯದಿಂದ ವಾಯುವ್ಯಕ್ಕೆ ಮುದ್ದೇಬಿಹಾಳ, ಜಾಮಲದಿನ್ನಿ, ಇಣಚಘಟ್ಟ, ಮಸಾನಗೇರಿ, ಜೆಕ್ಕೆರಾಳ ಎಂಬ ಹಳ್ಳಿಗಳ ಸುತ್ತ ಕಾಣಬಹುದು.

ಮೇಲೆ ತಿಳಿಸಿದ ಜಲಜ ಶಿಲಾಸಮುದಾಯದಲ್ಲಿ, ಆರ್ಥಿಕ ದೃಷ್ಟಿಯಿಂದ ಅತಿ ಮುಖ್ಯವಾದವು ಸುಣ್ಣಶಿಲೆಗಳು. ಸಾಧಾರಣವಾಗಿ

ಸಮತಲ ಭೂಮಿಯಿಂದ ಮೇಲೆ ಚಾಚದಿರುವ ಈ ಸುಣ್ಣಕಲ್ಲಿನ ಸ್ತರಗಳನ್ನು ತಾಳೀಕೋಟೆ, ಮಿಣಜಗಿ, ಮೂಕೀಹಾಳ ಮತ್ತು ಇತರ ಕೆಲವೆಡೆಗಳಲ್ಲಿ ಖಾಸಗಿ ಕಂಟ್ರಾಕ್ಟರುಗಳು ಚದರಗಳಾಗಿ ಕತ್ತರಿಸಿ ತೆಗೆದು ಕಟ್ಟಡಗಳಲ್ಲಿ ಹಾಸುಗಲ್ಲುಗಳಾಗಿ ಉಪಯೋಗಿಸುತ್ತಾರೆ. ಇಂಥ ಖಾಸಗಿ ಗಣಿಗಳಲ್ಲಿ ಭೂಮಿಯ ಮೇಲ್ಮೈಯಿಂದ 40-50 ಅಡಿಗಳ ಆಳದವರೆಗೂ ಸುಣ್ಣಕಲ್ಲಿನ ಸ್ತರಗಳನ್ನು ಕಾಣಬಹುದು. ವಿಪುಲವಾದ ಈ ಸುಣ್ಣಶಿಲಾಸಂಗ್ರಹವನ್ನು ರಾಜ್ಯದ ಗಣಿ ಮತ್ತು ಭೂವಿಜ್ಞಾನ ವಿಭಾಗದವರು, ಭಾರತೀಯ ಭೂವೈಜ್ಞಾನಿಕ ಸರ್ವೇಕ್ಷಣ ವಿಭಾಗದವರು, ಅಸೋಸಿಯೇಟೆಡ್ ಸಿಮೆಂಟ್ ಕಂಪೆನಿಯವರು ಮತ್ತು ಸಿಮೆಂಟ್ ಕಾರ್ಪೊರೇಷನ್ ಆಫ್ ಇಂಡಿಯಾದವರು ಅನ್ವೇಷಿಸಿ, ಉತ್ತಮ ದರ್ಜೆಯ ಸಿಮೆಂಟ್ ತಯಾರು ಮಾಡುವಂಥ ಸುಣ್ಣಕಲ್ಲುಗಳು ಮತ್ತು ಡಾಲೊಮೈಟ್ ಅಂಶವುಳ್ಳ ಸುಣ್ಣಕಲ್ಲುಗಳು ಎಂದು ವಿಭಾಗಿಸಿದ್ದಾರೆ. ಡಾಲೊಮಿಟಿಕ್ ಸುಣ್ಣಶಿಲೆಗಳು ಇಲ್ಲಿ ದೊರೆಯುತ್ತವೆ. (ಎಸ್.ಎ.ಎಸ್.)

**ತಿಂಗಳುಮಾವನ ಪೂಜೆ :** ಮಳೆ ಬಾರದೆ ಇದ್ದಾಗ ಮಳೆರಾಯನನ್ನು ಕಳಿಸಿಕೊಡು ಎಂದು ಜನಪದರು ಮಳೆರಾಯನ ಒಡೆಯನಾದ ತಿಂಗಳುಮಾವನನ್ನು (ಚಂದ್ರ) ಬೇಡಿಕೊಳ್ಳುವ ಮತ್ತು ಮಳೆರಾಯನ ಬರವಿಗಾಗಿ ಕೈಗೊಳ್ಳುವ ಒಂದು ಪೂಜೆ ಹಾಗೂ ಜನಪದ ಧಾರ್ಮಿಕ ಸಂಪ್ರದಾಯ. ತುಮಕೂರು, ಹಾಸನ ಜಿಲ್ಲೆಗಳಲ್ಲಿ ವಿಶೇಷವಾಗಿ ಮತ್ತು ಮಂಡ್ಯ, ಚಿಕ್ಕಮಗಳೂರು ಜಿಲ್ಲೆಗಳ ಕೆಲವು ಭಾಗಗಳಲ್ಲಿ ಸ್ವಲ್ಪಮಟ್ಟಿಗೆ ಆಚರಣೆಯಲ್ಲಿ ಕಂಡುಬರುವ ಈ ಪೂಜೆಯನ್ನು ಸಾಮಾನ್ಯವಾಗಿ ಚೈತ್ರದಿಂದ ಕಾರ್ತಿಕ ಮಾಸಗಳವರೆಗಿನ ಶುಕ್ಲಪಕ್ಷದ ದಿನಗಳಲ್ಲಿ ಆಚರಿಸಲಾಗುತ್ತದೆ. ಸಕಾಲಕ್ಕೆ ಮಳೆ ಬರದಿದ್ದರೆ ಮಳೆರಾಯನಾದ ದೇವೇಂದ್ರ ಕೋಪಗೊಂಡಿರುವನೆಂದು ನಂಬುವ ಹಳ್ಳಿಯ ಜನ ತಿಂಗಳುಮಾವನಿಗೆ ಮೊರೆಹೋಗುತ್ತಾರೆ. ಪೂಜೆಗೆ ಮುನ್ನ ಹಳ್ಳಿಯ ಹೆಂಗಸರು ಹಾಗೂ ಮಕ್ಕಳು (ವಿಶೇಷವಾಗಿ ಹೆಣ್ಣುಮಕ್ಕಳು) ಊರಿನ ದೇವಸ್ಥಾನದ ಮುಂಭಾಗದ ಅಂಗಳವನ್ನಾಗಲಿ ಒಂದು ಕೇರಿಯ ವಿಶಾಲವಾದ ಅಂಗಳವನ್ನಾಗಲಿ ಗುಡಿಸಿ, ಸಗಣಿಯಿಂದ ಸಾರಿಸಿದ ಅನಂತರ ತೇರು, ಹಲುಬೆ, ನೇಗಿಲು, ಸರ್ಪ, ಹನುಮ, ಚಂದ್ರ ಮುಂತಾದ ಚಿತ್ರಗಳನ್ನು ರಂಗವಲ್ಲಿಯಿಂದ ಬರೆಯುತ್ತಾರೆ. ಇದನ್ನು ತಿಂಗಳುಮಾವನನ್ನು ಬಿಡುವುದು ಎಂದು ಕರೆಯುತ್ತಾರೆ. ರಂಗವಲ್ಲಿಯಲ್ಲಿ ಬರೆದ ಅರ್ಧಚಂದ್ರನ ಮುಂದೆ ಒಂದು ಮಣೆ ಹಾಗೂ ಅದರ ಮೇಲೊಂದು ಕಳಸವನ್ನು ಪೂರ್ವಾಭಿಮುಖವಾಗಿ ಇಟ್ಟು ತಿಂಗಳುಮಾವನ ಎಡೆಗೆ ಮುದ್ದೆ ಅಥವಾ ರೊಟ್ಟಿಯನ್ನಿಟ್ಟು, ಕಾಯಿ ಒಡೆದು ಗಂಧದ ಕಡ್ಡಿ ಹಚ್ಚಿ ಪೂಜಿಸುತ್ತಾರೆ. ಅನಂತರ ಹೆಂಗಸರು ತಿಂಗಳುಮಾವನಿಗೆ ಹಾಗೂ ಮಳೆರಾಯನಿಗೆ ಸಂಬಂಧಿಸಿದ ಹಾಡುಗಳನ್ನು ಹಾಡುತ್ತಾರೆ. ಪ್ರತಿದಿನವೂ ಹುಡುಗರು ತಿಂಗಳುಮಾವನ ಎಡೆಯನ್ನು ಕದಿಯುವ ಪದ್ಧತಿ ಇರುತ್ತದೆ. ಕೆಲವು ಕಡೆ ನೀರು ತುಂಬಿರುವ ಮಿಳ್ಳೆಯ ಬಾಯಿಗೆ ಒಂದು ಎಕ್ಕದ ಎಲೆಯನ್ನು ಮುಚ್ಚಿ, ಪೂಜೆ ಮುಗಿದ ಅನಂತರ ಅದನ್ನು ತಲೆಕೆಳಗು ಮಾಡಿ ಅಂಗೈಯಿಂದ ಒತ್ತಿ ಹಿಡಿದು ಗ್ರಾಮದೇವತೆಯ ಗುಡಿ ಹತ್ತಿರಕ್ಕೆ ಬರುತ್ತಾರೆ. ದೇವತೆಗೆ ಪೂಜೆ ಮಾಡಿದ ಅನಂತರ ಒತ್ತಿ ಹಿಡಿದಿದ್ದ ಅಂಗೈಯನ್ನು ಬಿಡುತ್ತಾರೆ. ಆಗ ನೀರು ಎಕ್ಕದ ಎಲೆಯನ್ನು ತಳ್ಳಿಕೊಂಡು ತಕ್ಷಣವೇ ಕೆಳಗೆ ಸುರಿದರೆ ಬೇಗ ಮಳೆಯಾಗುತ್ತದೆ ಎಂದೂ ನಿಧಾನವಾಗಿ ಬಿದ್ದರೆ ತಡವಾಗಿ ಮಳೆಯಾಗುತ್ತದೆಯೆಂದೂ ಬೀಳದೆ ತಡೆದು ನಿಂತರೆ ಮಳೆ ಆಗುವುದಿಲ್ಲವೆಂದೂ ನಂಬಿಕೆ. ತಿಂಗಳು ಗುಡಿಗಟ್ಟಿದರೆ (ಚಂದ್ರನ ಸುತ್ತ ಪರಿವೇಷ ಕಾಣಿಸಿಕೊಳ್ಳುವುದು) ಆ ತಿಂಗಳೆಲ್ಲ ಮಳೆ ಆಗುತ್ತದೆ ಎಂದು ಜನ ನಂಬುತ್ತಾರೆ.

3, 5, 9 ಅಥವಾ 12ನೆಯ ದಿನ ತಿಂಗಳುಮಾವನನ್ನು ಬಿಡುವ ಕಾರ್ಯಕ್ರಮವಿರುತ್ತದೆ. ಸಾಮಾನ್ಯವಾಗಿ ಹುಣ್ಣಿಮೆಯ ದಿನ ಪೂಜೆ ಮುಕ್ತಾಯವಾಗುತ್ತದೆ. ಅಂದು ಪ್ರತಿಮನೆಯಿಂದ ನಿಗದಿ ಮಾಡಿದಷ್ಟು ಹಣ, ಮತ್ತಿತರ ಅಗತ್ಯ ಸಾಮಾನುಗಳನ್ನು ಸಂಗ್ರಹಿಸಿ, ವಿಶಾಲವಾದ ಅಂಗಳವನ್ನು ಸಾರಿಸಿ ಎಂದಿನಂತೆ ರಂಗವಲ್ಲಿಯಿಂದ ಚಿತ್ರಗಳನ್ನು ಬರೆದು ಬಾಳೆಕಂಬ ತೋರಣಾದಿಗಳನ್ನು ಕಟ್ಟಿ ಸಿಂಗರಿಸುತ್ತಾರೆ. ಇಬ್ಬರು ಹುಡುಗರಿಗೆ ಮದುವಣಿಗ ಮದುವಣಗಿತ್ತಿಯರಂತೆ ಸಿಂಗರಿಸಿ ಹಸೆಕೂರಿಸಿ ಸೋಬಾನೆ ಪದಗಳನ್ನೂ ತಿಂಗಳುಮಾವನ ಪದಗಳನ್ನೂ ಹಾಡಿ ತಿಂಗಳುಮಾವನ ಮದುವೆ ಕಾರ್ಯವನ್ನು ಮುಗಿಸುತ್ತಾರೆ. ಪ್ರತಿ ಮನೆಯಿಂದ ತಂದ ತಂಬಿಟ್ಟಿನ ಆರತಿಗಳನ್ನು ಬೆಳಗಿ ಹೆಣ್ಣುಗಂಡುಗಳನ್ನು ದೇವಸ್ಥಾನಕ್ಕೆ ಕರೆದೊಯ್ದು ದೇವರಿಗೆ ಹಣ್ಣುಕಾಯಿ ಮಾಡಿಸಿ ಹಿಂತಿರುಗಿದ ಅನಂತರ ಅಲ್ಲಿ ಸೇರಿದ್ದವರಿಗೆಲ್ಲ ಚರುಪು (ಪ್ರಸಾದ) ಹಂಚುತ್ತಾರೆ. ಈ ಆಚರಣೆಯ ಕೊನೆಯ ದಿನವೂ ಎಂದಿನಂತೆ ಹಿಟ್ಟು ಅಥವಾ ರೊಟ್ಟಿಯನ್ನು, ಕಾಯಿ ಹೋಳುಗಳನ್ನು ಕದಿಯುವುದು, ಹೆಂಗಸರು ಕದಿಯುವವರಿಗೆ ನೀರು ಎರಚುವುದು ಅಥವಾ ಬೆರಣಿಯಿಂದ ಹೊಡೆಯುವುದು - ಇವೇ ಮುಂತಾದ ಮನರಂಜನೆಯ ಕಾರ್ಯಗಳಿರುತ್ತವೆ.

ತಿಂಗಳುಮಾವನ ಆಚರಣಾವಿಧಾನಗಳಲ್ಲಿ ಪ್ರಾದೇಶಿಕ ಭಿನ್ನತೆ ಕಂಡುಬಂದರೂ ಮೂಲ ಆಶಯ ಮಾತ್ರ ಒಂದೇ ಆಗಿದೆ. ತಿಂಗಳು ಮಾವನ ಊಟಕ್ಕೆ ಕೆಲವು ಕಡೆ ರೊಟ್ಟಿಯನ್ನಿಟ್ಟರೆ ಮತ್ತೆ ಕೆಲವು ಕಡೆ ರಾಗಿಮುದ್ದೆಯನ್ನಿಟ್ಟು ತೆಂಗಿನ ಕಾಯಿ ಒಡೆಯುತ್ತಾರೆ. ಹಾಸನ, ಚಿಕ್ಕಮಗಳೂರು ಮತ್ತು ಅರಸೀಕೆರೆ ಈ ಒಳನಾಡಿನ ಪ್ರದೇಶಗಳಲ್ಲಿ ರೊಟ್ಟಿಗಳನ್ನು ಬೆರಣಿಗಳ ಜೊತೆ ಅಡಗಿಸಿಟ್ಟಿರುತ್ತಾರೆ. ರೊಟ್ಟಿ ಕದಿಯಬರುವವನನ್ನು (ಬಸವ) ಬೆರಣಿಯಿಂದ ಹೊಡೆಯಲು ಹೆಣ್ಣುಮಕ್ಕಳು ಎರಡು ಕಡೆಗಳಲ್ಲೂ ಸಾಲಾಗಿ ನಿಂತಿರುತ್ತಾರೆ. ಅವರ ಕಣ್ಣು ತಪ್ಪಿಸಿ ರೊಟ್ಟಿ ಕದ್ದವನು ಯಾರಿಗೂ ಸಿಕ್ಕದೆ ಓಡಿಹೋಗಿ ಕೆರೆಯ ಹತ್ತಿರದ ಒಂದು ಮರದ ಮೇಲೆ ಕುಳಿತು ರೊಟ್ಟಿಯನ್ನು ತಿಂದು, ಗುರುತಿಗೆ ಒಂದು ರೆಂಬೆಯನ್ನು ಮುರಿದು ತರಬೇಕು. ಆದರೆ ತಿಪಟೂರಿನ ಸುತ್ತಮುತ್ತಲ ಹಳ್ಳಿಗಳಲ್ಲಿ ರೊಟ್ಟಿಯ ಬದಲು ಮುದ್ದೆ ಮತ್ತು ತೆಂಗಿನಕಾಯಿ ಹೋಳುಗಳನ್ನು ಇಟ್ಟಿರುತ್ತಾರೆ. ಅವುಗಳನ್ನು ಕದಿಯಲು ಬಂದವನಿಗೆ ತಂಬಿಗೆಯಿಂದ ನೀರನ್ನು ಎರಚುತ್ತಾರೆ. ಅದಕ್ಕೆ ಅಂಜದೆ ಕದ್ದುಕೊಂಡು ಹೋದವನು ಮುದ್ದೆಯನ್ನು ಕರುಗಲ್ಲಿಗೆ (ಮುಂಗಾರು ದೇವರ ಕಲ್ಲು) ಮುಟ್ಟಿಸಿದ ಮೇಲೆ ನಾಯಿಗೆ ಹಾಕಿ ಕಾಯಿ ಹೋಳುಗಳನ್ನು ತನ್ನ ಸ್ನೇಹಿತರಿಗೆ ಹಂಚಿ ತಿನ್ನುತ್ತಾನೆ. ಅಲ್ಲಿಗೆ ಪೂಜೆ ಮುಕ್ತಾಯವಾಗುತ್ತದೆ.

ತಿಂಗಳುಮಾವನ ಪೂಜೆಗೆ ಸಂಬಂಧಿಸಿದಂತೆಯೇ ಹೇಳುವ ಜನಪದ ಗೀತೆಗಳನ್ನು ಮೂರು ಗುಂಪಾಗಿ ವಿಂಗಡಿಸಬಹುದು: i. ತಿಂಗಳುಮಾವನನ್ನು ಸ್ತುತಿಸುವುದು:

'ಕೋಲುಮಲ್ಲಿಗೆ ಕೋಲೆ, ನಾಗಸಂಪಿಗೆ ಕೋಲೆ' ಎಂಬ ಸೊಲ್ಲಿನಿಂದ ಪ್ರಾರಂಭಿಸಿ

ತಿಂಗಳು ತಿಂಗಳಿಗೂ ತಿಂಗಳ ಮಾವನ ಪೂಜೆ
ಗರುಡನಾ ಪೂಜೆ ಘನಪೂಜೆ ಹಾಗಲವಾಡಿ
ಹನುಮನಾ ಪೂಜೆ ಶನಿವಾರ

ಎಂದು ಮೊದಲಾಗಿ ಹಾಡುತ್ತಾರೆ. ಅನಂತರ ತಿಂಗಳುಮಾವನನ್ನು ಆಹ್ವಾನಿಸುವುದು ನಡೆಯುತ್ತದೆ. ತಿಂಗಳುಮಾವ ಪಂಜಿನ ಬೆಳಕಿನಲ್ಲಿ ಮಾತ್ರ ಹೊರಬರುವನೆಂದೂ ಒಂದೆರಡು ಪಂಜಿನ ಬೆಳಕಿನಲ್ಲೇ ಹೊರಗೆ ಬಾ ಎಂದು ಪ್ರಾರಂಭಿಸಿ ಕೊನೆಗೆ ಐದಾರು ಪಂಜಿಗಾದರೂ ಹೊರಡು ಎಂದು ಕೇಳಿಕೊಳ್ಳುವುದೂ ಅದಕ್ಕೆ ಅವನು ಮುನ್ನೂರು, ನಾನೂರು, ಐನೂರು ಪಂಜನ್ನು ತರಿಸಿದರೆ ಹೊರಬರುತ್ತೇನೆ ಎನ್ನುವುದೂ ಐನೂರು ಪಂಜಿಗೆ ಎಣ್ಣೆ ತರಲು ಬಡವರು ಎಂದು ಹೇಳುವ ಪದಗಳೂ ಈ ರೀತಿ ಇವೆ:

ಒಂದೆ ಚಿಬ್ಬುಲಿಗೆ ಒಂದಚ್ಚು ಬೆಲ್ಲನಿಟ್ಟು ಒಂದೆಲೇಮಾವ ಚಿಗುರೆಲೆ, ತಿಂಗಳು ಮಾವ ಒಂದೇ ಪಂಜಿಗೆ ಹೊರಹೊಂಡೊ;

ಒಂದೇ ಪಂಜಾಗೆ ನಾನ್ಹೆಂಗೆ ಹೊರಡಾಲಿ ಐನೂರು ಪಂಜ ತರಿಸಮ್ಮ; ಐನೂರು ಪಂಜಿಗೆ ಐಗೋಳೆಣ್ಣೆ ಬೇಕು ನಾವೆಲ್ಲರುವಾನ ಬಡವರು;

ಅನಂತರ ತಿಂಗಳುಮಾವ ಎಷ್ಟು ಹೊತ್ತಾದರೂ ಹೊರಟು ಬರದೆ ಇರಲು ಕಾರಣ ಅವನನ್ನು ಚಿಕ್ಕೇರಿ ದೊಡ್ಡೇರಿ ಸೂಳೆಯರು ತಡೆದಿರಬಹುದೆಂದು ಶಂಕಿಸುತ್ತಾರೆ.

ಚಿಕ್ಕುಚಿಕ್ಕು ಸೌತೆಕಾಯಿ ಮುರಿದು ಚಿಕ್ಕಮಟ್ಟೆ ಕಟ್ಟಿಕೊಂಡು
ಚಿಕ್ಕೇರಿ ಮ್ಯಾಲೆ ಬರುವೋನೆ ತಿಂಗಳುಮಾವ ಚಿಕ್ಕೇರಿ ಸೂಳೆ ತಡದಾಳೋ

- ಎಂದು ಹಾಡುತ್ತ ಮುಂದುವರಿದು ಸೂಳೆಯರು ತಡೆದಿದ್ದರಿಂದಲೇ ಅವನು ಮನೆಗೆ ಬರಲಾಗದೆ ಮನೆಯಲ್ಲಿದ್ದ ಮಂಚ ಬರಿದಾಗಿ ಗಿಲಿಗಿಲಿ ಎಂದು ಶಬ್ದ ಮಾಡುತ್ತಿತ್ತೆಂದು ಹೇಳುವ ಕಲ್ಪನೆ ಸೊಗಸಾಗಿದೆ. ಅನಂತರ ತಿಂಗಳುಮಾವನಿಗೆ ಸ್ನಾನಮಾಡಿಸುವುದು, ಅವನಿಗೆ ಮದುವೆ ಇಲ್ಲವೆಂದು ಜರಿಯುವುದು, ಅವನ ಆರು ಮಂದಿ ತಂಗಿಯರ ಸಂಗತಿ ಮೊದಲಾದ ವಿಷಯಗಳಿಗೆ ಸಂಬಂಧಿಸಿದ ಹಾಡುಗಳನ್ನು ಹಾಡುತ್ತಾರೆ.

ಈ ಸಂದರ್ಭದಲ್ಲಿ ಮಳೆರಾಯನನ್ನು ಕರೆಯುವ ಗೀತೆಗಳನ್ನು ಹಾಡುತ್ತಾರೆ. ಅವನು ತಮ್ಮ ಊರಿಗೆ ಬರದುದಕ್ಕೆ ಕಾರಣವನ್ನು ಹೇಳಿ ಯಾರೂ ಅವನನ್ನು ನಿಂದಿಸಕೂಡದು ಎಂದು ಹೇಳುವ ಗೀತೆಯನ್ನು 'ಯಾರೇನಂದೆವು ಬಾರೋ ದೇವೇಂದ್ರುರಾಯ, ಮತ್ತೇ ನೆನೆದೇವು ಬಾರೋ' ಎಂಬ ಸೊಲ್ಲಿನಿಂದ ಆರಂಭಿಸಿ, 'ಮಳೆ ಹೋಯ್ತಂತಾ ಮಾನ್ಯವರ ಬಯ್ಯಬೇಡಿ ಸಾಲಕ್ಹೋಗವನೆ ಮಳೆರಾಯ, ಆರು ಸಾವಿರದೆಡೆ ಸರ್ಪನ ಸುತಿಗೊಂಡು ಹಡಗೀಗೆ ಮಳೆಯಿಲ್ಲ ಅಂತಾ ಮಳೆರಾಯನ್ನ ಬೈಬೇಡಿ ; ಮಳೆರಾಯ್ನ ಹೆಂಡ್ತಿ ಮಕ್ಕಳೊಂದಿಗಿತ್ತಿ, ಮಳೆ ಬಂದಾರೆಲ್ಲಿ ತಳಗ್ಯಾಳೊ, ಮಳೆ ಬಂದಾರೆಲ್ಲಿ ತಳಗ್ಯಾಳೋ ತಿಂಗಳುಮಾವ ಎಳಿಯ ಹೊಂಬಾಳೆ ಸುಳಿಯಲ್ಲಿ' ಎಂದು ಹಾಡುತ್ತ ಮಳೆರಾಯ ಬರದೆ ಇರುವುದಕ್ಕೆ ಕಾರಣ ಕೊಡುತ್ತಾರೆ. ಮಳೆ ಇಲ್ಲದೆ ಧರೆಯ ಸ್ಥಿತಿ ಎಷ್ಟು ದಾರುಣವಾಗಿದೆ ಎಂಬುದನ್ನು ಮಳೆರಾಯನಿಗೆ ಈ ರೀತಿ ಹೇಳುತ್ತಾರೆ: 'ಹಣ್ಣಾದೊ ಈ ಭೂಮಿ ಹಣ್ಣಾದೋ ಈ ಭೂಮಿ ಅಣ್ಣೆಕಡ್ಯಾದೋ ದನಕಾರ, ರಾಜ್ಯದ ಮ್ಯಾಲೆ ಅಣ್ಣಾ ನೀ ನೋಡಿ ಕರುಣಿಸೋ; ಸಪ್ಯಾದೊ ಈ ಭೂಮಿ ಸಪ್ಯಾದೊ ಈ ಭೂಮಿ ಸಪ್ಪೇ ದಂಟಾದೊ ಕುರಿದಾನ, ಲೋಕುದ ಮ್ಯಾಲೆ ಅಪ್ಪಾ ನೀ ನೋಡಿ ಕರುಣಿಸೋ' -ಈ ಮಾತುಗಳಲ್ಲಿ ಕ್ಷಾಮದಿಂದುಂಟಾದ ಭೀಕರ ಚಿತ್ರ ಕಣ್ಣಿಗೆ ಕಟ್ಟುತ್ತದೆ. ಊರಿನ ಕೆರೆ ತುಂಬಿ ಹನ್ನೆರಡು ಕೋಡಿ ಹರಿದು ಸಣ್ಣಕ್ಕಿ ಬಯಲು ಬೆಳೆಯಲಿ ಎಂದು ಕೊನೆಗೆ ಮಳೆರಾಯನನ್ನು ಪ್ರಾರ್ಥಿಸಿಕೊಳ್ಳುತ್ತಾರೆ.

ಈ ಸಂದರ್ಭದಲ್ಲಿ ಗುಡಿದುಂಬಿಸುವ ಪದಗಳನ್ನು ಹಾಡುತ್ತಾರೆ. ಐದಾರು ಪಂಜುಗಳಿಗೆ ಹೊರಹೊರಡು ಎಂದು ಹಾಡಿದಂತೆಯೇ ಐದಾರು ಪಂಜುಗಳಿಗೆ ಗುಡಿದುಂಬು ಎಂದು ತಿಂಗಳುಮಾವನನ್ನು ಕೇಳಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ತಿಂಗಳುಮಾವನನ್ನು ಕುರಿತ ಪದ್ಯಗಳನ್ನಲ್ಲದೆ ತಾವು ಕಲಿತ ಇತರ ಪದಗಳನ್ನೂ ಹಾಡಿಕೊಳ್ಳುವುದುಂಟು.

ತಿಂಗಳುಮಾವನ ಪೂಜೆಯ ಪ್ರಾಚೀನತೆಯ ಬಗ್ಗೆ ಸ್ಪಷ್ಟ ಮಾಹಿತಿಗಳು ದೊರೆಯುವುದಿಲ್ಲ. ಈ ಪೂಜೆ ಶಿಷ್ಟ ಸಾಹಿತ್ಯದಲ್ಲಿ ಕಂಡುಬರುವ ಕೌಮುದಿ ಮಹೋತ್ಸವದ ಉಳಿಕೆಯಾಗಿರಬಹುದೆಂಬ ಅಭಿಪ್ರಾಯವಿದೆ. ಆದರೆ ಇದನ್ನು ಒಪ್ಪುವುದು ಕಷ್ಟ. ಜನಪದರಿಗೆ ಚಂದ್ರ ಹತ್ತಿರದ ಬಂಧುವಾಗಿದ್ದಾನೆ, ಸಲುಗೆಯ ಮಾವನಾಗಿದ್ದಾನೆ. ಅವನ ಪೂಜೆ ಒಂದು ರೀತಿಯ ಸಖ್ಯ ಭಕ್ತಿಯೇ ಆಗಿದೆ. ಈ ಭಾವನೆಯ ಅಭಿವ್ಯಕ್ತಿಯನ್ನು ತಿಂಗಳುಮಾವನ ಪದಗಳಲ್ಲಿ ಕಾಣಬಹುದು. ಈ ಪೂಜೆ ಒಂದು ರೀತಿಯಲ್ಲಿ ಹಳ್ಳಿಗರಿಗೆ ಧಾರ್ಮಿಕ ಸಂಪ್ರದಾಯವಾದರೆ ಮತ್ತೊಂದು ರೀತಿಯಲ್ಲಿ ಹೆಂಗಸರು ಮಕ್ಕಳಿಗೆ ಮನರಂಜನೆ ನೀಡುವ ಉತ್ಸವವೂ ಆಗಿದೆ. ಊರಿನ ಎಲ್ಲರೂ ಸೇರಿ ಕೈಗೊಳ್ಳುವ ಈ ಆಚರಣೆ ಗ್ರಾಮೀಣರಲ್ಲಿ ಏಕತಾಭಾವವನ್ನು ಉಂಟುಮಾಡುವಲ್ಲಿ ಸಹಾಯಕವಾಗಿದೆ.

ತಿಂಗಳುಮಾವನ ಪೂಜೆಯ ಪದಗಳನ್ನೇ ಸಂಪೂರ್ಣವಾಗಿ ಒಳಗೊಂಡ ಪ್ರತ್ಯೇಕ ಸಂಕಲನಗಳಿಲ್ಲವಾದರೂ ಎಚ್.ಎಲ್.ನಾಗೇಗೌಡರ ಸೋಬಾನೆ ಚಿಕ್ಕಮ್ಮನ ಪದಗಳು (1972), ಮತಿಘಟ್ಟ ಕೃಷ್ಣಮೂರ್ತಿ ಅವರ ನಾಡಪದಗಳು (1947), ಜಿ.ಎಸ್.ಭಟ್ಟ ಉಬರಡ್ಕ ಅವರ ಸಿರಿಗಂಧ ಸೂಸ್ಯಾವೆ (1968) ಮತ್ತು ಕರಾಕೃ ಅವರ ಕೆಲವು ಸಂಕಲನಗಳಲ್ಲಿ ತಿಂಗಳುಮಾವನನ್ನು ಕುರಿತ ಕೆಲವು ಬಿಡಿ ಪದಗಳು ಸಂಕಲನಗೊಂಡಿವೆ. (ಎಸ್.ಎನ್.ಜಿ.)

**ತಿಂಥಿಣಿ :** ಗುಲ್ಬರ್ಗ ಜಿಲ್ಲೆ ಷೋರಾಪುರ ಅಥವಾ ಸುರಪುರ ತಾಲ್ಲೂಕಿನಲ್ಲಿ ಷೋರಾಪುರಕ್ಕೆ 19ಕಿಮೀ ಅಂತರದಲ್ಲಿ ಬೀದರ್-ಬೆಂಗಳೂರು ಹೆದ್ದಾರಿಯ ಮೇಲೆ ಕೃಷ್ಣಾ ನದಿಯ ತಟದಲ್ಲಿರುವ ಗ್ರಾಮ. ಇಲ್ಲಿ ಈ ನದಿಗೆ ದೊಡ್ಡ ಸೇತುವೆಯನ್ನು ಕಟ್ಟಲಾಗಿದೆ. ಇದಕ್ಕೆ ತಿಂಥಿಣಿ ಸೇತುವೆಯೆಂದೇ ಕರೆಯುತ್ತಾರೆ. ಈ ಸೇತುವೆಯ ನಿರ್ಮಾಣದಿಂದ ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಗಳ ನಡುವೆ ನೇರ ಸಂಪರ್ಕ ಉಂಟಾಗಿದೆ.



ಮೌನೇಶ್ವರ ರಥೋತ್ಸವ

ಈ ಗ್ರಾಮದ ಮಹತ್ತ್ವಕ್ಕೆ ಸೇತುವೆ ಒಂದು ಕಾರಣವಾದರೆ, ಮೋನಪ್ಪಯ್ಯ ಇಲ್ಲವೆ ಮೋನೇಶ್ವರನ ದೇವಾಲಯ ಮತ್ತೊಂದು ಮಹತ್ತ್ವದ ಕಾರಣ. ಈ ಮೋನಪ್ಪಯ್ಯನಿಗೆ ಮೌನೇಶ್ವರ, ಮೋನಪ್ಪ ಎಂಬ ಪರ್ಯಾಯ ನಾಮಗಳಿವೆ. ಮೋನಪ್ಪಯ್ಯ 15 ಇಲ್ಲವೆ 16ನೆಯ ಶತಮಾನದಲ್ಲಿ ಸುಮಾರು 120 ವರ್ಷಗಳ ಕಾಲ ಬಾಳಿದ ಒಬ್ಬ ಸಂತ. ಈತ ಸುರಪುರ ತಾಲ್ಲೂಕಿನ ಗೋನಾಳೆ ಎಂಬಲ್ಲಿ ವಿಶ್ವಕರ್ಮ ಸಮುದಾಯಕ್ಕೆ ಸೇರಿದ ಹಾವಪ್ಪ ಹಾವಮ್ಮರ ಮಗನಾಗಿ ಆ ಊರಿನ ಗ್ರಾಮದೇವತೆಯಾದ ಮೌನೇಶ್ವರನ ವರಪ್ರಸಾದದಿಂದ ಹುಟ್ಟಿದವನು. ಈತ ತನ್ನ ಇಡೀ ಆಯುಷ್ಯವನ್ನೇ ಹಿಂದು-ಮುಸ್ಲಿಮರ ಏಕತೆಗಾಗಿ ಮೀಸಲಿಟ್ಟು ಮಾನವಕುಲವೆಲ್ಲ ಒಂದೇ ಎಂಬುದನ್ನು ಸಾಧಿಸಿದ ಸಮನ್ವಯ ಶರಣ. ಅಂತೆಯೇ ಈತನ ಕಾಲದಲ್ಲಿ ಆಳುತ್ತಿದ್ದ ಬಿಜಾಪುರದ ಖಲಂದರ್ ಷಾ ಎಂಬುವನ ಮನಸ್ಸನ್ನು ಪರಿವರ್ತಿಸಿದ. ಆ ಪರಿಣಾಮದಿಂದ ಅವನು ಗದಗಿನ ಹತ್ತಿರವಿರುವ ಮರವಿಯಲ್ಲಿ ಉದ್ಭವಿಸಿದ ಲಿಂಗಕ್ಕೆ ಸುಂದರವಾದ ಮಂದಿರವನ್ನು ಕಟ್ಟಿಸಿಕೊಟ್ಟ. ಏಕಲಾಖ ಐಸೀ ಹಜಾರ ಪಾಂಚೋ ಪೀರ ಪೈಗಂಬರ್ ಮೌನದೀನ ಎಂಬ ಘೋಷಣೆಯನ್ನು ಈ ಸಂತ ಜನಜನಿತ ಮಾಡಿದ. ಈ ಘೋಷಣೆ ಮುಸ್ಲಿಮರ ಪರವಾಗಿ ಕಂಡರೂ ಪ್ರಪಂಚದ ಸಕಲ ಜೀವರಾಶಿಗಳಿಗೆ ಆಧಾರಸ್ವರೂಪನಾದ ಪರಮಾತ್ಮ ಎಂದರೆ

ಪಂಚಮುಖ ಈಶ್ವರನೇ (ಪಾಂಚೋಪೀರ್) ಪೈಗಂಬರನು; ಅವನೇ ಮೌನ ಎಂಬ ಅರ್ಥವಿದ್ದು ಇದರಲ್ಲಿ ಹಿಂದು ಮತಪರವಾದ ವಿಷಯಗಳೂ ಅಡಕವಾಗಿವೆ. ಈತ ಈ ಸಮನ್ವಯತತ್ತ್ವವನ್ನು ಗದಗ, ಬಿಜಾಪುರ, ಬಸವಕಲ್ಯಾಣ, ಗುಲ್ಬರ್ಗ, ಅಳ್ಳೊಳ್ಳಿ, ಸಗರ, ಶಾಹಪುರ, ಗೊಗ್ಗಲು, ದೇವದುರ್ಗ ಮೊದಲಾದ ಪ್ರದೇಶಗಳಲ್ಲೆಲ್ಲ ಪ್ರಚಾರಮಾಡಿ ತಿಂಥಿಣಿಯ ಬಳಿ ಕೃಷ್ಣಾನದಿಯ ಆಚೆಯ ದಡದಲ್ಲಿ ಬಂದು ಒಂದು ಕಟ್ಟೆಯ ಮೇಲೆ ಕುಳಿತ. ಆಗ ಕೃಷ್ಣಾ ನದಿ ಪ್ರವಾಹದಿಂದ ತುಂಬಿಸೂಸುತ್ತಿತ್ತು. ಅಂಬಿಗರು ಈತನನ್ನು ಹರಿಗೋಲಿನಲ್ಲಿ ಕರೆದುಕೊಂಡು ಹೋಗಲು ನಿರಾಕರಿಸಿದರು. ತನ್ನ ಆತ್ಮಬಲದಿಂದ ನೀರಿನ ಮೇಲೆ ಕಂಬಳಿಯನ್ನು ಹಾಸಿ ಅದರ ಮೇಲೆ ಕುಳಿತು ತಿಂಥಿಣಿಯನ್ನು ಸೇರಿದ. ಈತ ಆಚೆಯ ದಡದಲ್ಲಿ ಕೆಲವು ಸಮಯ ಕುಳಿತ ಕಟ್ಟೆಗೆ ಈಗ ಶಾಸನ ಕಟ್ಟೆ ಎಂದು ಜನ ಕರೆಯುತ್ತಾರೆ.

ಮೋನಪ್ಪಯ್ಯ ತಿಂಥಿಣಿ ಗ್ರಾಮದ ಹೊರಗಡೆ ಪ್ರಶಾಂತವಾದ ವಾತಾವರಣದಲ್ಲಿ ಕೆಲವು ದಿವಸ ತತ್ತ್ವದ ಅನುಸಂಧಾನ, ಬೋಧನೆ ಪ್ರಸಾರ ಮಾಡಿ ಅಲ್ಲಿಯೇ ಒಂದು ಗುಹೆಯಲ್ಲಿ ಐಕ್ಯವಾದ. ಅನಂತರ ಅಲ್ಲಿರುವ ಈತನ ಸಮಾಧಿಯ ಸ್ಥಳವನ್ನು ಹಿಂದುಗಳು ದೇವಾಲಯವೆಂದೂ ಮುಸ್ಲಿಮರು ಮೋನಪ್ಪಯ್ಯನ ದರ್ಗಾ ಎಂದೂ ಕರೆಯತೊಡಗಿದರು. ಈತನು ಬಳಸುತ್ತಿದ್ದ ಹೂಜಿ, ಚಪಗೊಡಲಿ, ಪರಸು ಬಟ್ಟಲು, ಪುರುಷಮಣಿ ಮೊದಲಾದ ಐದು ವಸ್ತುಗಳೂ ಇನ್ನೂ ಅಲ್ಲಿ ಪೂಜೆಗೊಳ್ಳುತ್ತವೆ. ಪ್ರತಿವರ್ಷ ಮಾಘ ಶುದ್ಧ 10ರಿಂದ ಪೌರ್ಣಿಮೆಯ ವರೆಗೆ ನಡೆಯುವ ಜಾತ್ರೆಯ ಸಮಯದಲ್ಲಿ ಆ ಪವಿತ್ರ ವಸ್ತುಗಳಿಗೆ ವಿಶೇಷ ಪೂಜೆಯನ್ನು ಸಲ್ಲಿಸಲಾಗುತ್ತದೆ.

ಮೋನಪ್ಪಯ್ಯನ ಸಮಾಧಿಯ ಪೂಜಾರಿಗಳು ಅಕ್ಕಸಾಲಿಗರು. ಈತ ಚೆನ್ನಬಸವೇಶ್ವರನ ಅವತಾರವೆಂದೂ ಅಲ್ಲಮಪ್ರಭುವಿನ ಶಿಷ್ಯನೆಂದೂ ಹೇಳಿಕೊಂಡಿದ್ದಾನೆ. ಈತ ಆರಂಭದಲ್ಲಿ ಓರ್ವ ಸೂಫಿ ತಾತ್ತ್ವಿಕನ ಶಿಷ್ಯನಾಗಿರಬೇಕು. ಅನಂತರ ವೀರಶೈವ ವಿರಕ್ತರ ಪ್ರಭಾವಕ್ಕೆ ಒಳಗಾದಂತೆ ಕಾಣುತ್ತದೆ. ಅಂತೆಯೇ ಇವನು ಹಿರಿಯ ಸಮನ್ವಯ ಶರಣ. ಈತನ ಸಮಕಾಲೀನ ಶರಣರೆಂದರೆ ಕೊಡೇಕಲ್ಲಿನ ಬಸವಪ್ಪಯ್ಯ ಹಾಗೂ ಗಗನಾಪುರದ ಗಂಗಪ್ಪಯ್ಯ.

ಮೋನಪ್ಪಯ್ಯ ಅನೇಕ ವಚನಗಳನ್ನು ಹಾಡಿದ್ದಾನೆ. ಆ ವಚನಗಳ ಕೊನೆಗೆ ಕೇಳಾ ಬಸವಣ್ಣಾ ಎಂಬ ಅಂಕಿತವಿದೆ. ಈತನ ಎಲ್ಲ ವಚನಗಳಲ್ಲಿ ನಿಚ್ಚಳ ಮನಸ್ಸಿನ ಸತ್ಯಸಾತ್ತ್ವಿಕರೂಪದ ಅಭಿವ್ಯಕ್ತಿ ಕಂಡುಬರುತ್ತದೆ. ಮಾದರಿಗಾಗಿ ಒಂದು ವಚನ:

ಅಡ್ಡ ಬಡಿದವ ಹರಭಕ್ತ ಉದ್ದ ಬಡಿದವ ಹರಿಭಕ್ತ
ಅಡ್ಡ ಉದ್ದ ಎರಡೂ ಕಾಣದ ಸಾಹೇಬ ಶೂನಗನಂತೆ
ಬೊಗಳಿದರೆ ಲೋಕಕ್ಕೊಬ್ಬನೇ ಇದ್ದ ದೇವ, ದೈವ ಕಾಣಲಿಲ್ಲ
ಕೇಳಾ ಬಸವಣ್ಣಾ (ವಿ.ಕೆ.)

ತಿಂಥಿಣಿ ಪ್ರದೇಶ ಭೂವೈಜ್ಞಾನಿಕ ದೃಷ್ಟಿಯಿಂದಲೂ ಮುಖ್ಯವಾದುದು. ಇದು ಹಟ್ಟಿ ಚಿನ್ನದಗಣಿಗೆ 29ಕಿಮೀ ದೂರದಲ್ಲಿದೆ. ಇಲ್ಲಿ ದೊರಕಿರುವ ಮೂಸೆಗಳು ಮತ್ತು ಕುಲುಮೆಗಳ ಅವಶೇಷಗಳು ಈ ಪ್ರದೇಶದ ಗಣಿ ಉದ್ಯಮದ ಪ್ರಾಚೀನತೆಗೆ ಕುರುಹುಗಳಾಗಿವೆ. ಕಳೆದ ಶತಮಾನದ ಆದಿಯಲ್ಲಿ ಜಾನ್ ಟೇಲರ್ ಕಂಪನಿ ಪ್ರಥಮವಾಗಿ ತಿಂಥಿಣಿಯ ಸುತ್ತಮುತ್ತ ತಾಮ್ರ ಮತ್ತು ಚಿನ್ನದ ನಿಕ್ಷೇಪಗಳಿಗಾಗಿ ವೈಜ್ಞಾನಿಕ ಸಮೀಕ್ಷೆಯನ್ನು ನಡೆಸಿತು. ಅನಂತರ ಭಾರತದ ಭೂವಿಜ್ಞಾನ ಸರ್ವೇಕ್ಷಣ ವಿಭಾಗದವರು ತಾಮ್ರ ನಿಕ್ಷೇಪದ ವಿವರವಾದ ಮಾಹಿತಿಯನ್ನು ಪ್ರಕಟಿಸಿದರು. ಕರ್ನಾಟಕ ಸರ್ಕಾರದ ಗಣಿ ಮತ್ತು ಭೂವಿಜ್ಞಾನ ಇಲಾಖೆಯವರು 20ಕ್ಕೂ ಹೆಚ್ಚು ಕೋರೆಗಳನ್ನು ಹಾಕಿ ನಿಖರವಾದ ಮಾಹಿತಿಯನ್ನು ಒದಗಿಸಿದರು.

ತಿಂಥಿಣಿಯ ಬಳಿ ದೊರಕುವ ಶಿಲೆಗಳಲ್ಲಿ ಕ್ಲೋಸ್‌ಪೇಟೆ ಶಿಲಾಸಮುದಾಯಕ್ಕೆ ಸೇರಿದ ಕೆಂಪು ಕಣಶಿಲೆ, ಮಿಗ್‌ಮಟೈಟ್ ಮತ್ತು ಮೆಟಾ ಡಯಾಬೇಸ್ ಮುಖ್ಯವಾದ ಶಿಲಾರೂಪಗಳು. ತಾಮ್ರದ ಖನಿಜಗಳ ದೊರೆಯುವಿಕೆ ಮೆಟಾ ಡಯಬೇಸ್ ಶಿಲೆಗೆ ಸೀಮಿತವಾಗಿದೆ. ಈ ಶಿಲೆಯು ಪೂರ್ವಪಶ್ಚಿಮವಾಗಿ 15 ಮೀಟರ್‌ಗಳವರೆಗೆ ಪ್ರಸರಿಸಿದ್ದು ಅನೇಕ ಮಾರ್ಪಾಡುಗಳನ್ನು ಹೊಂದಿದೆ. ಡಯಾಬೇಸ್ ಶಿಲೆಯು ಒರೆ $80^0$ ಉತ್ತರಕ್ಕಿದೆ. ಡಯಾಬೇಸ್ ಶಿಲೆ ಅನೇಕ ಬಿರುಕುಗಳನ್ನು ಹೊಂದಿದ್ದು, ಬಿರುಕುಗಳು ಶಿಲೆಯ ಓಟಕ್ಕೆ ಸಮಾನಾಂತರವಾಗಿದೆ. ಚಾಲ್ಕೋಪೈರೈಟ್ ಅತಿ ಮುಖ್ಯ ತಾಮ್ರದ ಖನಿಜವಾಗಿದ್ದು, ತಾಮ್ರದ ಅಂಶ ಸೇ.1.2 ರಷ್ಟಿದೆ. ಈ ಖನಿಜದೊಂದಿಗೆ ಬೆಣಚುಕಲ್ಲು ಕ್ಯಾಲ್‌ಸೈಟ್ ಮತ್ತು ಹಿಮಟೈಟ್‌ಗಳೂ ಅಲ್ಪ ಪ್ರಮಾಣದಲ್ಲಿ ದೊರೆಯುತ್ತವೆ. ಪ್ರಾಯೋಗಿಕ ಪರೀಕ್ಷೆಗಳ ಅನಂತರ ಇಲ್ಲಿನ ತಾಮ್ರದ ಗಣಿಕಾರ್ಯವನ್ನು ಹಟ್ಟಿ ಚಿನ್ನದ ಗಣಿ ಆಡಳಿತಕ್ಕೆ ವಹಿಸಲಾಗಿದೆ. (ಟಿ.ಆರ್.ಎಸ್.)

**ತಿಟ್ಟೆ ಕೃಷ್ಣ ಅಯ್ಯಂಗಾರ್ :** 1902-97. ಕರ್ನಾಟಕ ಸಂಗೀತ ವಿದ್ವಾಂಸರು. 1902 ನವೆಂಬರ್ 24ರಂದು ಮೈಸೂರಿನಲ್ಲಿ ಜನಿಸಿದರು. ತಂದೆ ನಾರಾಯಣ ಅಯ್ಯಂಗಾರ್. ಇವರ ಪೂರ್ವಜರು ತಮಿಳುನಾಡಿನ ತಂಜಾವೂರು ಜಿಲ್ಲೆಯ ತಿಟ್ಟೆ ಎಂಬ ಗ್ರಾಮದವರು. ಇವರು ತಾತ ರಂಗಾಚಾರ್ಯರು ತ್ಯಾಗರಾಜರ ನೇರ ಶಿಷ್ಯರಾಗಿದ್ದ ತಿಟ್ಟೆ ಸ್ವಾಮಿ ರಾಮಯ್ಯಂಗಾರ್ಯರ ಶಿಷ್ಯರು. ಅವರು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಮೈಸೂರಿನಲ್ಲಿ ನೆಲೆಸಿದರು. ಕೃಷ್ಣಅಯ್ಯಂಗಾರರ ತಂದೆ ನಾರಾಯಣ ಅಯ್ಯಂಗಾರರು ನಾಲ್ವಡಿ ಕೃಷ್ಣರಾಜ ಒಡೆಯರ ಆಸ್ಥಾನ ವಿದ್ವಾಂಸರಾಗಿದ್ದರು. ಪರಂಪರೆ, ಸಂಸ್ಕಾರ ಮತ್ತು ಪರಿಸರಗಳ ಪ್ರಭಾವದಿಂದ ತಿಟ್ಟೆ ಕೃಷ್ಣ ಅಯ್ಯಂಗಾರ್ಯರು ಹಿರಿಯ ಸಂಗೀತ ಕಲಾವಿದರಾದರು. ತಂದೆಯವರೇ ಇವರ ಮೊದಲ ಗುರು. ಸಂಗೀತಕ್ಕೆ ಪೂರ್ಣವಾಗಿ ಒಲಿದಿದ್ದ ಅಯ್ಯಂಗಾರ್ಯರಿಗೆ ಶಾಲೆಯ ವ್ಯಾಸಂಗದಲ್ಲಿ ಆಸಕ್ತಿ ಇರಲಿಲ್ಲ. ಚಿಕ್ಕಂದಿನಲ್ಲಿ ಇವರು ಶಾಲೆಗೆ ಹೋಗುವುದಾಗಿ ಹೇಳಿ ವಿದ್ವಾಂಸರ ಮನೆಗಳಿಗೆ ಹೋಗಿ ಅಲ್ಲಿ ಸಂಗೀತ ಕೇಳುತ್ತಿದ್ದರು. ಸಂಗೀತಾಭ್ಯಾಸ ಮಾಡುತ್ತಿದ್ದರು. ವೀಣೆ ಶೇಷಣ್ಣನವರು, ಸುಬ್ಬಣ್ಣನವರು ಹಾಗೂ ಬಿಡಾರಂ ಕೃಷ್ಣಪ್ಪನವರು ಇವರ ಗುರುಗಳಾಗಿದ್ದರು.

ತಿಟ್ಟೆ ಕೃಷ್ಣ ಅಯ್ಯಂಗಾರ್ಯರದು ಘನಗಂಭೀರವಾದ ಕಂಚಿನ ಕಂಠ. ತ್ಯಾಗರಾಜ ಆರಾಧನೋತ್ಸವದ ಸಂದರ್ಭದಲ್ಲಿ ಇವರ ಮೊತ್ತ ಮೊದಲನೆಯ ಕಚೇರಿ ತಿರುವಯ್ಯಾರಿನಲ್ಲಿ ನಡೆಯಿತು. ಆಗ ಇವರಿಗೆ 16 ವರ್ಷ. ಇವರು 1924ರಲ್ಲಿ ಮೈಸೂರು ಅರಸರ ಆಸ್ಥಾನ ವಿದ್ವಾಂಸರಾಗಿ ನೇಮಕಗೊಂಡರು. ಅಲ್ಲಿಯ ಸಹ ವಿದ್ವಾಂಸರ ಸತ್ಸಂಗದಿಂದ ಇವರ ಜ್ಞಾನಾಭಿವೃದ್ಧಿಯಾಯಿತು. ಹಲವು ವಿದ್ವನ್‌ಮಣಿಗಳ ಸಂಗೀತ ಆಲಿಸುತ್ತ ತಮ್ಮದೇ ಆದ ಶೈಲಿಯನ್ನು ರೂಪಿಸಿಕೊಂಡರು. ಇವರು ತಾನವನ್ನು ಹಾಡುವುದರಲ್ಲಿ ಒಂದು ವಿಶೇಷತೆ ಪಡೆದಿದ್ದರು. ಹತ್ತು ಹನ್ನೆರಡು ತಾನ ಪ್ರಭೇದಗಳನ್ನು ಪಾಂಡಿತ್ಯಪೂರ್ಣವಾಗಿ ಹಾಡುತ್ತಿದ್ದರು. ತಮ್ಮ ಭಾವಪೂರ್ಣ ಗಾಯನದಿಂದ ರಸಿಕರ ಎದೆಯ ಬಾಗಿಲನ್ನು ತಟ್ಟುತ್ತಿದ್ದರು. ಇವರ ಶೈಲಿಯನ್ನು ಇತರರು ಅನುಕರಿಸುವುದು ಸಾಧ್ಯವಿರಲಿಲ್ಲ. ಇವರಿಗೆ ಗಾಯನವಲ್ಲದೆ ವೀಣೆ ಹಾಗೂ ಜಲತರಂಗ್ ವಾದ್ಯಗಳಲ್ಲೂ ಪರಿಣತಿ ಇತ್ತು.

ಇವರು ಭಾರತದಾದ್ಯಂತ ಅನೇಕ ಪ್ರತಿಷ್ಠಿತ ಸಂಗೀತ ಸಭೆಗಳಲ್ಲಿ ಕಚೇರಿ ನೀಡಿ ಗೌರವಕ್ಕೆ ಪಾತ್ರರಾಗಿದ್ದರು. ನಾಡಿನ ಪ್ರಮುಖ ಉತ್ಸವಗಳಲ್ಲೂ ಗಾಯನ ಕಚೇರಿ ನೀಡಿದರು. ಆಕಾಶವಾಣಿ ಹಾಗೂ ದೂರದರ್ಶನಗಳಲ್ಲೂ ಅನೇಕ ಕಾರ್ಯಕ್ರಮಗಳನ್ನು ನೀಡಿದರು. ಮಹಾತ್ಮಾಗಾಂಧಿಯವರ ಸಮ್ಮುಖದಲ್ಲಿ ಹಾಡಿ ಅವರ ಪ್ರಶಂಸೆ ಹಾಗೂ ಆಶೀರ್ವಾದವನ್ನು ಪಡೆದರು.

ಇವರು ವಾಗ್ಗೇಯಕಾರರು ಕೂಡ. ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಸ್ವಾಮಿ ವಿವೇಕಾನಂದರನ್ನು ಕುರಿತದ್ದೂ ಒಂದು. ಕರ್ನಾಟಕ ಸಂಗೀತ ಲಕ್ಷ್ಯ ಲಕ್ಷಣ ಪದ್ಧತಿ, ವೀಣೆ ಸುಬ್ಬಣ್ಣನವರ ಅಪರೂಪ ಕೃತಿಗಳು - ಇವು ಇವರ ಪ್ರಕಟಿತ ಗ್ರಂಥಗಳು.

ಇವರ ವಿದ್ವತ್ತನ್ನು ಗುರುತಿಸಿ ಅನೇಕ ಸಂಘ ಸಂಸ್ಥೆಗಳು ಹಾಗೂ ಸರ್ಕಾರ ಇವರಿಗೆ ಗೌರವವನ್ನು ಸಲ್ಲಿಸಿವೆ. ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ರಾಜ್ಯ ಸರ್ಕಾರದ ಕನಕ-ಪುರಂದರ ಪ್ರಶಸ್ತಿ, ರಾಜ್ಯ ಸಂಗೀತ ನೃತ್ಯ ಅಕಾಡೆಮಿ ಪ್ರಶಸ್ತಿ - ಇವು ಇವರಿಗೆ ಸಂದ

ಗೌರವಗಳು. ಇವರು ಮೈಸೂರು ಮಹಾರಾಜರಿಂದ ಗಾನವಿಶಾರದ, ಮೈಸೂರು ಪ್ರಸನ್ನ ಸೀತಾರಾಮ ಮಂದಿರದ ಸಂಗೀತ ಸಮ್ಮೇಳನದ ಅಧ್ಯಕ್ಷರಾಗಿ ಗಾನಕಲಾಸಿಂಧು, ಗಾಯನ ಸಮಾಜದ ಸಂಗೀತ ಸಮ್ಮೇಳನದ ಅಧ್ಯಕ್ಷರಾಗಿ ಸಂಗೀತ ಕಲಾರತ್ನ, ರಾಜ್ಯ ಸಂಗೀತ ನೃತ್ಯ ಅಕಾಡೆಮಿಯ ಕರ್ನಾಟಕ ಕಲಾತಿಲಕ ಎಂಬ ಬಿರುದುಗಳನ್ನು ಪಡೆದಿದ್ದರು. ಮದರಾಸು ಮ್ಯೂಸಿಕ್ ಅಕಾಡೆಮಿ, ಬೆಂಗಳೂರಿನ ಗಾಯನ ಸಮಾಜ ಹಾಗೂ ಗಾನಕಲಾ ಪರಿಷತ್ತಿನ ತಜ್ಞರ ಸಮಿತಿಯ ಸದಸ್ಯರಾಗಿದ್ದ ಇವರು ಅನೇಕ ಪ್ರದರ್ಶನ ಭಾಷಣಗಳನ್ನೂ ನೀಡಿದ್ದರು. ಇವರು 1997 ಮಾರ್ಚ್ 16ರಂದು ನಿಧನರಾದರು. (ಎಚ್.ಆರ್.ಎಲ್.)

**ತಿಪಟೂರು :** ತುಮಕೂರು ಜಿಲ್ಲೆಯ ಒಂದು ತಾಲ್ಲೂಕು; ತಿಪಟೂರು ಉಪವಿಭಾಗದ ಮತ್ತು ತಾಲ್ಲೂಕಿನ ಕೇಂದ್ರ. ಈ ತಾಲ್ಲೂಕನ್ನು ಪಶ್ಚಿಮದಲ್ಲಿ ಹಾಸನ ಜಿಲ್ಲೆ, ಉತ್ತರದಲ್ಲಿ ಚಿಕ್ಕನಾಯಕನಹಳ್ಳಿ, ಪೂರ್ವದಲ್ಲಿ ಗುಬ್ಬಿ ಮತ್ತು ತುರುವೇಕೆರೆ ತಾಲ್ಲೂಕುಗಳು ಸುತ್ತುವರಿದಿವೆ. ಈ ತಾಲ್ಲೂಕಿನ ವಿಸ್ತೀರ್ಣ 783ಚ.ಕಿಮೀ. ತಾಲ್ಲೂಕಿನಲ್ಲಿ ಕಿಬ್ಬನಹಳ್ಳಿ, ನೊಣವಿನಕೆರೆ, ತಿಪಟೂರು ಮತ್ತು ಹೊನ್ನವಳ್ಳಿ ಹೋಬಳಿಗಳು; ಒಂದು ಪಟ್ಟಣ ಮತ್ತು 216 ಗ್ರಾಮಗಳಿವೆ. ಜನಸಂಖ್ಯೆ 2,16,826.



ಮಹಿಷಾಸುರಮರ್ದಿನಿ, ಲಕ್ಷ್ಮೀನರಸಿಂಹ ದೇವಾಲಯ, ವಿಷ್ಣುಸಂತೆ

ತಿಪಟೂರು ತಾಲ್ಲೂಕಿನಲ್ಲಿ ಕೆಂಪು ಮಣ್ಣು, ದಪ್ಪ ಮರಳು ಮತ್ತು ಸಣ್ಣ ಕಲ್ಲಿನಿಂದ ಕೂಡಿದ ಭೂಮಿ ಇದೆ. ಹತ್ತಿ ಬೆಳೆಗೆ ಉಪಯುಕ್ತವಾದಂಥ ಕಪ್ಪುಮಣ್ಣಿನ ಭೂಮಿ ಮರಳು ಮಿಶ್ರಿತ ಜೇಡಿಮಣ್ಣಿನ ಭೂಮಿಯಿಂದಲೂ ಈ ಪ್ರದೇಶ ಕೂಡಿದೆ. ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ 730ಮಿಮೀ. ರಾಗಿ, ಬತ್ತ, ನವಣೆ, ಹುರುಳಿ, ಶೇಂಗ, ತೊಗರಿ ಇಲ್ಲಿಯ ಮುಖ್ಯ ಬೆಳೆಗಳು. ತಿಪಟೂರು ತಾಲ್ಲೂಕು ತೆಂಗುಬೆಳೆಗೆ ಪ್ರಸಿದ್ಧವಾದುದು.

ತಾಲ್ಲೂಕಿನಲ್ಲಿ ಕೊಬ್ಬರಿ ಎಣ್ಣೆ ತೆಗೆಯುವ, ಮರ ಕೊಯ್ಯುವ ಕಾರ್ಖಾನೆಗಳು ಇವೆ. ಬೆಂಕಿಕಡ್ಡಿ, ಮರ ಮತ್ತು ಕಬ್ಬಿಣ ಕೆಲಸ, ಸಾಬೂನು ತಯಾರಿಕೆ ಮುಂತಾದ ಕೈಗಾರಿಕೆಗಳಿವೆ. ರೇಷ್ಮೆ ಹತ್ತಿ ಉಣ್ಣೆ ನೇಯ್ಗೆ ಮತ್ತು ತೆಂಗಿನ ನಾರಿನ ಉದ್ಯಮದ ಸಹಕಾರ ಸಂಘಗಳಿವೆ.

ತಾಲ್ಲೂಕಿನಲ್ಲಿ ಉತ್ತಮ ರಸ್ತೆ ಸಂಪರ್ಕವಿದೆ. ಬೆಂಗಳೂರು - ಅರಸೀಕೆರೆ ರೈಲ್ವೆ ಮಾರ್ಗ ಈ ತಾಲ್ಲೂಕಿನಲ್ಲಿ ಹಾದುಹೋಗಿದೆ. ಇದರ ಮುಖಾಂತರ ತಾಲ್ಲೂಕಿನ ವ್ಯವಸಾಯ ಉತ್ಪನ್ನಗಳು ಮತ್ತು ತೆಂಗಿನ ಉತ್ಪಾದನೆಯೂ ಸುತ್ತಲ ಜಿಲ್ಲೆಗಳಿಗೆ ಹಾಗೂ ಇತರ ರಾಜ್ಯಗಳಿಗೆ ಸಾಗುವುವು.

ತಾಲ್ಲೂಕಿನಲ್ಲಿ ವಿದ್ಯುಚ್ಛಕ್ತಿ, ಅಂಚೆ, ತಂತಿ, ದೂರವಾಣಿ, ಸಾರ್ವಜನಿಕ ಆಸ್ಪತ್ರೆ, ಆಯುರ್ವೇದ ಔಷಧಾಲಯಗಳು ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರ, ಪ್ರಾಥಮಿಕ, ಮಾಧ್ಯಮಿಕ ಪ್ರೌಢಶಾಲೆಗಳೂ ಒಂದು ಕಾಲೇಜು ಇವೆ.

ಈ ತಾಲ್ಲೂಕಿನ ಹೊನ್ನವಳ್ಳಿಯಲ್ಲಿ ಚೋಳರ ಕಾಲದ್ದೆಂದು ಹೇಳುವ ಲಕ್ಷ್ಮೀನಾರಾಯಣಸ್ವಾಮಿ ದೇವಾಲಯವಿದೆ. ಇಲ್ಲಿಯ ಎಳನೀರು ಪ್ರಸಿದ್ಧ. ತಿಪಟೂರಿನಿಂದ 6ಕಿಮೀ ದೂರದಲ್ಲಿರುವ ಕೆರೆಗೋಡಿಯಲ್ಲಿ ಸುಂದರವಾದ ಶಂಕರೇಶ್ವರ ದೇವಾಲಯವಿದೆ. ದೇವಾಲಯದ ಒಳಗೆ ಬುದ್ಧ, ವಿಘ್ನೇಶ್ವರ, ನಂದಿ ವಿಗ್ರಹಗಳು ಇವೆ. ಇಲ್ಲಿ ಕೆರೆಗೋಡಿ ಸಂಸ್ಥಾನ ವೀರಶೈವ ಮಠವಿದೆ. ತಿಪಟೂರಿನ ಆಗ್ನೇಯಕ್ಕೆ 13ಕಿಮೀ ದೂರದಲ್ಲಿರುವ ನೊಣವಿನಕೆರೆ ಅನೇಕ ಪ್ರಾಚೀನ ದೇವಾಲಯಗಳಿಂದ ಪ್ರಸಿದ್ಧಿ ಪಡೆದಿದೆ. ತಿಪಟೂರಿನ ದಕ್ಷಿಣಕ್ಕೆ 6ಕಿಮೀ ದೂರದಲ್ಲಿರುವ ರಂಗಾಪುರದಲ್ಲಿ ರಂಗನಾಥ ದೇವಾಲಯವಿದೆ. ವಿಷ್ಣುಸಂತೆಯಲ್ಲಿ ಹೊಯ್ಸಳ ಶೈಲಿಯ ಲಕ್ಷ್ಮೀನರಸಿಂಹ ದೇವಾಲಯವಿದೆ. ಇದನ್ನು 1286ರಲ್ಲಿ ಹೊಯ್ಸಳ ದೊರೆ 3ನೆಯ ನರಸಿಂಹನ ಕಾಲದಲ್ಲಿ ಕಟ್ಟಿದ್ದೆಂದು ಹೇಳುವರು. ಇಲ್ಲಿ ಬಾಲಲಿಂಗೇಶ್ವರ ಮತ್ತು ಬನಶಂಕರಿ ದೇವಾಲಯಗಳೂ ಇವೆ.

ತಿಪಟೂರು ಈ ತಾಲ್ಲೂಕಿನ ಆಡಳಿತ ಕೇಂದ್ರ. ತುಮಕೂರು ಜಿಲ್ಲೆಯ ಎರಡನೆಯ ದೊಡ್ಡ ಪಟ್ಟಣ. ತುಮಕೂರಿನ ಪಶ್ಚಿಮಕ್ಕೆ 71ಕಿಮೀ ದೂರದಲ್ಲಿದೆ. ಜನಸಂಖ್ಯೆ 53,043. ಇದು ಬೆಂಗಳೂರು-ಪುಣೆ ರೈಲ್ವೆ ಮಾರ್ಗದ ಒಂದು ಮುಖ್ಯ ನಿಲ್ದಾಣ. ತುಮಕೂರು-ಶಿವಮೊಗ್ಗ ಹೆದ್ದಾರಿಯ ಸಂಪರ್ಕವಿದೆ. ಶ್ರೀಕೃಷ್ಣರಾಜೇಂದ್ರ ಬಡಾವಣೆ ಮತ್ತು ಗಾಂಧೀನಗರ ಇವೆರಡು ಬಡಾವಣೆಗಳು ಬೆಳೆಯುತ್ತಿರುವ ತಿಪಟೂರಿಗೆ ಸೇರಿವೆ. ಊರು ನಗರಸಭಾ ಆಡಳಿತಕ್ಕೆ ಒಳಪಟ್ಟಿದೆ. ರಕ್ಷಿತ ಕುಡಿಯುವ ನೀರು ಸರಬರಾಜು, ವಿದ್ಯುಚ್ಛಕ್ತಿ, ಅಂಚೆ, ತಂತಿ, ದೂರವಾಣಿ, ಸಾರ್ವಜನಿಕ ಆಸ್ಪತ್ರೆ ಮುಂತಾದ ಸೌಲಭ್ಯಗಳಿವೆ. ಕೊಬ್ಬರಿ ಎಣ್ಣೆಯ ಮತ್ತು ಮರಕೊಯ್ಯುವ ಕಾರ್ಖಾನೆಗಳಿವೆ. ಈ ಊರು ಪ್ರಮುಖ ವ್ಯಾಪಾರ ಸ್ಥಳ. ಅನೇಕ ವಾಣಿಜ್ಯ ಬ್ಯಾಂಕುಗಳುಂಟು. ತೆಂಗಿನ ಉತ್ಪಾದನೆಗಳ ವ್ಯಾಪಾರ ಇಲ್ಲಿ ವಿಶೇಷವಾಗಿದೆ.

ಕಲ್ಲೇಶ್ವರ, ತಿಪಟೂರಮ್ಮ, ಆಂಜನೇಯಸ್ವಾಮಿ, ಮಲ್ಲಿಕಾರ್ಜುನ, ಕಾಶೀವಿಶ್ವೇಶ್ವರ ಮತ್ತು ಕನ್ಯಕಾಪರಮೇಶ್ವರಿ ಇವು ಈ ಊರಿನ ಇತರ ಪ್ರಮುಖ ದೇವಾಲಯಗಳು. (ಪಿ.ಜಿ.;ಡಿ.ಸಿ.ಜಿ.)

**ತಿಪ್ಪಣಾರ್ಯ :** ಸು.1750. ಹನುಮದ್ವಿಲಾಸ, ಕಾಳಿಂಗಮರ್ದನ, ಕುಚೇಲೋಪಾಖ್ಯಾನ (ಸುಧಾಮ ಚರಿತ್ರೆ), ಕೃಷ್ಣಬಾಲಲೀಲೆ ಎಂಬ ಯಕ್ಷಗಾನಗಳ ಕರ್ತೃ. ಕವಿಚರಿತೆಕಾರರು ಈತನನ್ನು ತಿಪ್ಪಯಾರ್ಯ ಎಂದಿದ್ದಾರೆ. ರಂಗಾರ್ಯ ಮತ್ತು ಗಿರಿಯಮ್ಮ ಇವರ ಮಗನಾದ ಈತ ತನ್ನ ಪಿತಾಮಹನನ್ನು ಸರಸ ಕವಿ ನರಸಿಂಹಾರ್ಯ (ನರಕಂಠೀರವ) ಎಂದು ಹೇಳಿಕೊಂಡಿದ್ದಾನೆ. ಈತನ ಗುರು ಚಂದ್ರರಸಾಯನ. ಈತ ಮಾಧ್ವ ಸಂಪ್ರದಾಯದ ಉಲಚುಕಮ್ಮೆ ಬ್ರಾಹ್ಮಣನೆಂದೂ ವಿಶ್ವಾಮಿತ್ರ ಗೋತ್ರದ ಯಜುಶ್ಶಾಖಾಧ್ಯಾಯಿಯೆಂದೂ ಈತನ ಗ್ರಂಥ'ದಿಂದ ತಿಳಿದುಬರುತ್ತದೆ.

ಕವಿ ಕುಲವೃತ್ತಿಯಾಗಿದ್ದ ಶ್ಯಾನುಭೋಗಿಕೆಯನ್ನು ಮಾಡುತ್ತಿದ್ದನೆಂದೂ ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡ ಆಪಾದನೆ ಮೇಲೆ ಕಾರಾಗೃಹ ಸೇರಿ ಅಲ್ಲಿ ಭಗವಚ್ಚಿಂತನಾಶೀಲನಾಗಿರುತ್ತಿದ್ದನೆಂದೂ ಒಂದು ರಾತ್ರಿ ಶ್ರೀಮದಾಂಜನೇಯಸ್ವಾಮಿ ಸ್ವಪ್ನದಲ್ಲಿ ಕಾಣಿಸಿಕೊಂಡು ಕುಲದೇವತೆ ಖಾದ್ರೀ ನೃಸಿಂಹಾಂಕಿತದಿಂದ ಹನುಮನ ಕಥೆಯನ್ನು ಹೇಳೆಂದು ಆಜ್ಞಾಪಿಸಿದ ಮೇರೆಗೆ ಹನುಮದ್ವಿಲಾಸವನ್ನು ರಚಿಸಿದನೆಂದೂ ತಿಳಿದುಬರುತ್ತದೆ. ಕೃಷ್ಣಬಾಲಲೀಲೆಯಲ್ಲಿ ಕನ್ನಡ, ತೆಲುಗು, ತಮಿಳು, ಉರ್ದು, ಮರಾಠಿ - ಈ ಐದೂ ಭಾಷೆಗಳ ಪದ್ಯಗಳನ್ನು ಅಳವಡಿಸಿರುವುದು ಒಂದು ವೈಶಿಷ್ಟ್ಯ.

ಈತ ತನ್ನ ಎಲ್ಲ ಗ್ರಂಥಗಳನ್ನೂ ಯಕ್ಷಗಾನಗಳೆಂದು ಕರೆದಿದ್ದಾನಾದರೂ ಇವುಗಳಲ್ಲಿ ಪಾತ್ರಗಳಾವುವೂ ಬರುವುದಿಲ್ಲ; ಕಥೆಯ ನಿರೂಪಣೆ ವಿವಿಧ ಛಂದಸ್ಸಿನ ಮಟ್ಟುಗಳಿಂದ ಮುಂದುವರಿಯುತ್ತದೆ. ಹಲವಾರು ವೃತ್ತ, ಕಂದ, ರಗಳೆಗಳು, ಕುರುಕು ಜಂಪೆ, ಸೀಸಪದ್ಯ, ದ್ವಿಪದಿ - ಇವೆಲ್ಲವನ್ನೂ ಇವನ ಕೃತಿಗಳಲ್ಲಿ ಕಾಣಬಹುದಾಗಿದೆ. *

**ತಿಪ್ಪೇರುದ್ರಸ್ವಾಮಿ, ಎಚ್. :** 1928-94. ಕನ್ನಡದ ಪ್ರಸಿದ್ಧ ವಿದ್ವಾಂಸರು, ವಿಮರ್ಶಕರು, ಕಾದಂಬರಿಕಾರರು. ಇವರು ಹುಟ್ಟಿದ್ದು ದಾವಣಗೆರೆ ಜಿಲ್ಲೆಯ ಹೊನ್ನಾಳಿಯಲ್ಲಿ. ಹುಟ್ಟೂರಿನಲ್ಲಿ ಪ್ರಾಥಮಿಕ ಶಿಕ್ಷಣವನ್ನೂ ತೀರ್ಥಹಳ್ಳಿಯಲ್ಲಿ ಪ್ರೌಢಶಾಲೆಯ ಓದನ್ನೂ ಮುಗಿಸಿದರು. ಗುರುಗಳಾದ ಕೆ.ನರಸಿಂಹಶಾಸ್ತ್ರಿಗಳಿಂದ ಕನ್ನಡದ ಬಗೆಗಿನ ಒಲವು



ಜಾಗೃತವಾಯಿತು. ಮೈಸೂರು ವಿಶ್ವವಿದ್ಯಾನಿಲಯದಿಂದ ಕನ್ನಡ ಬಿ.ಎ. (ಆನರ್ಸ್, 1951) ಮತ್ತು ಎಂ.ಎ. (1952) ಪದವಿಗಳನ್ನು ಪಡೆದರು. 1952ರಲ್ಲಿ ಅದೇ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಅಧ್ಯಾಪಕರಾಗಿ ಸೇರಿ, ಅನಂತರ ಮಾನಸಗಂಗೋತ್ರಿಯ ಸ್ನಾತಕೋತ್ತರ ಕೇಂದ್ರದ ಕನ್ನಡ ವಿಭಾಗದಲ್ಲಿ ಅಧ್ಯಾಪಕರಾಗಿಯೂ (1964-73) ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯ ನಿರ್ದೇಶಕರಾಗಿಯೂ (1973-75) ಶಿವಮೊಗ್ಗ ಸ್ನಾತಕೋತ್ತರ ಕೇಂದ್ರದಲ್ಲಿ (ಭದ್ರಾಪ್ರಾಜೆಕ್ಟ್) ಪ್ರಾಧ್ಯಾಪಕರಾಗಿಯೂ (1975-84) ದುಡಿದರು. ಅನಂತರ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ ಸೇವೆಸಲ್ಲಿಸಿ (1984-87) ಸ್ವಇಚ್ಛೆಯಿಂದ ನಿವೃತ್ತಿ ಪಡೆದರು.

ಕಾದಂಬರಿ, ಕಥೆ, ಕವನ ಮತ್ತು ನಾಟಕ ಕ್ಷೇತ್ರಗಳಲ್ಲಿ ಇವರು ಸೃಜನಾತ್ಮಕ ಬರೆಹಗಳನ್ನು ನೀಡಿದ್ದಾರೆ. ಧರ್ಮ ಮತ್ತು ಕರ್ನಾಟಕ ಸಂಸ್ಕೃತಿಗೆ ಸಂಬಂಧಿಸಿದ ಸಂಶೋಧನ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಸಾಹಿತ್ಯ ವಿಮರ್ಶೆ, ಅದರಲ್ಲೂ ವಿಶೇಷವಾಗಿ ವಚನಸಾಹಿತ್ಯಕ್ಕೆ ಸಂಬಂಧಿಸಿದಂತೆಯೂ ಕಾವ್ಯ ಮೀಮಾಂಸೆ ಮತ್ತು ವಿಮರ್ಶಾತತ್ತ್ವಗಳನ್ನು ಕುರಿತೂ ಬರೆದಿದ್ದಾರೆ. ಬೇಂದ್ರೆ, ಕುವೆಂಪು, ಮಾಸ್ತಿ, ಡಿ.ವಿ.ಜಿ. ಮುಂತಾದ ಸಾಹಿತಿಗಳು ಇವರ ಮೇಲೆ ಪ್ರಭಾವ ಬೀರಿದ್ದಾರೆ. ಹಲವು ವರ್ಷ ಮಾನಸಗಂಗೋತ್ರಿಯ ಗಾಂಧೀ ಭವನದ ನಿರ್ದೇಶಕರಾಗಿ ಕೆಲಸ ಮಾಡಿರುವ ಇವರು ಗಾಂಧೀವಾದಿಯಾಗಿದ್ದರು. ಇವರ ಕೃತಿಗಳನ್ನು ಗಮನಿಸಿದಾಗ ಎದ್ದುಕಾಣುವ ಅಂಶವೆಂದರೆ ಶರಣರ ತತ್ತ್ವ ಮತ್ತು ಜೀವನ ಹೇಗೆ ಇವರನ್ನು ವಿಶೇಷವಾಗಿ ಆಕರ್ಷಿಸಿದೆ ಎಂಬುದು. ಕರ್ನಾಟಕ ಇತಿಹಾಸ ಇವರಿಗೆ ಬಹು ಪ್ರಿಯವಾದ ವಿಷಯ.

ಇವರ ಮಹಾಪ್ರಬಂಧವಾದ ಶರಣರ ಅನುಭಾವ ಸಾಹಿತ್ಯ ಎಂಬುದು ಕರ್ನಾಟಕ ವಿಶ್ವವಿದ್ಯಾಲಯದ ಡಾಕ್ಟರೇಟ್ ಪಡೆದ ಕೃತಿ (1963). ಶರಣರ ಅನುಭಾವ ಸಾಹಿತ್ಯದ ಸಮಗ್ರ ಸ್ವರೂಪವನ್ನು ವಿಶೇಷವಾಗಿ ಶರಣರ ವಚನಗಳನ್ನು ಮುಂದಿಟ್ಟುಕೊಂಡು ಇಲ್ಲಿ ಪರಿಶೀಲಿಸಲಾಗಿದೆ. ವೀರಶೈವ ಸಿದ್ಧಾಂತದ ವಿಕಾಸ, ಶರಣರ ತತ್ತ್ವ ಮತ್ತು ಸಾಧನೆ, ಅವರ ವಿಚಾರ ಮತ್ತು ಅನುಭಾವ ಮಾರ್ಗ, ವಚನಗಳ ಸಾಹಿತ್ಯ ಸ್ವರೂಪ ಮುಂತಾದ ಅಂಶಗಳನ್ನು ಇಲ್ಲಿ ವಿವೇಚಿಸಲಾಗಿದೆ. ವಚನಗಳಲ್ಲಿ ವೀರಶೈವಧರ್ಮ ಎಂಬ ಗ್ರಂಥದಲ್ಲಿ (1969) ವೀರಶೈವಧರ್ಮದ ಹಿನ್ನೆಲೆಯಲ್ಲಿ ರಚಿತವಾದ ವಚನಗಳಲ್ಲಿ ಅಭಿವ್ಯಕ್ತವಾಗಿರುವ ಮೂಲಭೂತ ತತ್ತ್ವಗಳನ್ನು ವಿವೇಚಿಸಲಾಗಿದೆ. ಕರ್ನಾಟಕ ಸಂಸ್ಕೃತಿ ಪರಂಪರೆಯನ್ನು ಇಡಿಯಾಗಿ ನೋಡುವ ಪ್ರಯತ್ನವನ್ನು 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' ಎಂಬ ಗ್ರಂಥದಲ್ಲಿ ಮಾಡಿದ್ದಾರೆ. ಭಾರತೀಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ರಾಜಕೀಯ, ಜನಪದ, ಶಾಸನ, ಸಾಹಿತ್ಯ, ವಾಸ್ತು, ಶಿಲ್ಪ, ಸಂಗೀತ, ನೃತ್ಯ, ಚಿತ್ರಕಲೆಗಳನ್ನು ಕುರಿತಿರುವ ಈ ಗ್ರಂಥದ ಹರಹು ಅಚ್ಚರಿಗೊಳಿಸುವಂಥದು. ಇಲ್ಲಿನ ಒಂದೊಂದು ಅಧ್ಯಾಯದ ವಿಷಯವೂ ಒಂದೊಂದು ವ್ಯಾಪಕ ಕ್ಷೇತ್ರ. ಇಲ್ಲಿ ಕರ್ನಾಟಕ ಸಂಸ್ಕೃತಿ ಪರಂಪರೆಯನ್ನು ಸಮೀಕ್ಷಿಸುವ ನಿಟ್ಟಿನಿಂದ ಈ ಎಲ್ಲ ವಿಷಯಗಳ ಒಟ್ಟಂದವನ್ನು ಸೆರೆಹಿಡಿಯಲು ಯತ್ನಿಸಲಾಗಿದೆ.

1963ರಲ್ಲಿ ಪ್ರಕಟವಾದ ಶೂನ್ಯತತ್ತ್ವವಿಕಾಸ ಮತ್ತು ಶೂನ್ಯಸಂಪಾದನೆ, 1973ರಲ್ಲಿ ಪ್ರಕಟವಾದ ಶೂನ್ಯಸಂಪಾದನೆ: ವಿವರಣಾತ್ಮಕ ಪರಿಚಯ - ಈ ಗ್ರಂಥಗಳಲ್ಲಿ ಶೂನ್ಯ ಸಂಪಾದನೆಗಳು ಬೆಳೆದು ಬಂದ ಬಗೆ, ಅಲ್ಲಿಯ ಆಧ್ಯಾತ್ಮಿಕ ನಿಲುವು, ಅಲ್ಲಿಯ ವ್ಯಕ್ತಿಗಳು ಮತ್ತು ಪ್ರಸಂಗಗಳು, ಶೂನ್ಯಸಂಪಾದನೆಯ ಸಾಹಿತ್ಯಸ್ವರೂಪ ಮತ್ತು ಸಾಧನೆ ಈ ಮುಂತಾದ ಅಂಶಗಳನ್ನು ಚರ್ಚಿಸಲಾಗಿದೆ. ವಿಮರ್ಶೆಯ ಉದ್ದೇಶ, ವ್ಯಾಪ್ತಿ, ಸ್ವರೂಪ, ಆನ್ವಯಿಕ ವಿಮರ್ಶೆ - ಈ ಸಂಗತಿಗಳನ್ನು ಕುರಿತ ಗ್ರಂಥ ಸಾಹಿತ್ಯ ವಿಮರ್ಶೆಯ ಮೂಲತತ್ತ್ವಗಳು (1970). ಕುವೆಂಪು ಅವರ ನಾಟಕಗಳನ್ನು ಕುರಿತ ಅಧ್ಯಯನ - ಕುವೆಂಪು ಅವರ ನಾಟಕಗಳು (1969). ಈ ಗುಂಪಿಗೆ ಸೇರುವ ಇವರ ಇತರ ಗ್ರಂಥಗಳು - ಕನ್ನಡದಲ್ಲಿ ಅನುಭಾವ ಸಾಹಿತ್ಯ (1960), ಚಾಮರಸ, ಭೀಮಕವಿ (1970).

ಸಂಶೋಧನೆ ಮತ್ತು ವಿಮರ್ಶೆಗಳನ್ನು ಬಿಟ್ಟರೆ ತಿಪ್ಪೇರುದ್ರಸ್ವಾಮಿಯವರ ಇನ್ನೊಂದು ಪ್ರಧಾನ ಕೃಷಿಕ್ಷೇತ್ರ ಕಾದಂಬರಿ. ಕರ್ನಾಟಕದ ಐತಿಹಾಸಿಕ ಸಂಗತಿಗಳು ಇವರ ಕಾದಂಬರಿಯ ವಸ್ತು. ಶರಣರ ಮತ್ತು ಇತಿಹಾಸ ವ್ಯಕ್ತಿಗಳ ಉನ್ನತ ವ್ಯಕ್ತಿತ್ವವನ್ನು ಕಾದಂಬರಿ ರೂಪದಲ್ಲಿ ಸೆರೆಹಿಡಿಯುವುದು ಇಲ್ಲಿ ಇವರ ಉದ್ದೇಶ. ಅಲ್ಲಮಪ್ರಭುವನ್ನು ಕುರಿತ ಕಾದಂಬರಿಯಾದ ಪರಿಪೂರ್ಣದೆಡೆಗೆ ಎಂಬುದು 1959ರಲ್ಲಿ ರಾಜ್ಯಸಾಹಿತ್ಯ ಅಕಾಡೆಮಿಯ ಬಹುಮಾನ ಪಡೆಯಿತು. ಅಕ್ಕಮಹಾದೇವಿಯನ್ನು ಕುರಿತ ಕದಳಿಕರ್ಪೂರ (1971), ಇಮ್ಮಡಿ ಪುಲಿಕೇಶಿಯನ್ನು ಕುರಿತ ಸತ್ಯಾಶ್ರಯ ಸಾಮ್ರಾಜ್ಯ (1967), ವಿಜಯನಗರದ ಪ್ರೌಢದೇವರಾಯನಿಗೆ ಸಂಬಂಧಿಸಿದ ವಿಜಯಕಲ್ಯಾಣ (1969), ಹರಿಹರ ರಾಘವಾಂಕರನ್ನು ಕುರಿತ ವಚನ ವಿರೂಪಾಕ್ಷ (1972), ನೆರಳಿನಾಚೆಯ ಬೆಳಗು (1980) - ಇವು ಇವರ ಇತರ ಕಾದಂಬರಿಗಳು. ನಿಜಗುಣ ಶಿವಯೋಗಿಯ ವಿಷಯವಾಗಿ ಪರಂಪರೆಯಿಂದ ಬೆಳೆದು ಬಂದ ಕಥೆಯ ಸೂಕ್ಷ್ಮ ಎಳೆಯನ್ನಾಧರಿಸಿ, ಅವರ ಕೃತಿಗಳನ್ನು ಆಧಾರವಾಗಿಟ್ಟುಕೊಂಡು ಅವರ ಜೀವನವನ್ನು ಕಟ್ಟಲು ಯತ್ನಿಸಿರುವುದನ್ನು ಜ್ಯೋತಿ ಬೆಳಗುತಿದೆ (1971) ಎಂಬ ಕಾದಂಬರಿಯಲ್ಲಿ ಕಾಣಬಹುದು. ಬಸವಣ್ಣನವರ ವಿವಿಧ ಮುಖಗಳನ್ನು ಕಾದಂಬರಿಯ ರೂಪದಲ್ಲಿ ಅಡಕಗೊಳಿಸುವ ಯತ್ನದ ಫಲವಾಗಿ 1072 ಪುಟಗಳ ಮೂರು ಸಂಪುಟಗಳ ಕರ್ತಾರನ ಕಮ್ಮಟ (1972) ಬೆಳಕು ಕಂಡಿದೆ.

ಘಟ್ಟಿವಾಳಯ್ಯ, ಮೋಳಿಗೆ ಮಾರಯ್ಯ ಮತ್ತು ಸಕಲೇಶ ಮಾದರಸರನ್ನು ಕುರಿತ ನಾಟಕಗಳೇ ಶರಣರ ಮೂರು ನಾಟಕಗಳು (1973). ವಿಧಿಪಂಜರ (1960) ಮತ್ತು ನಿಜಗುಣ ಶಿವಯೋಗಿ ಇವರ ಇತರ ನಾಟಕಗಳು. ತಪೋರಂಗ (1961) ಇವರ ಒಂದು ಕವನಸಂಕಲನ: ಸಾಹಿತ್ಯ ಚಿತ್ರಗಳು (1961) ಕಥಾ ಸಂಕಲನ. ಶಿಸ್ತುಗಾರ ಶಿವಪ್ಪನಾಯಕ (1966) ಎಂಬ ಕೃತಿ ಶಿವಪ್ಪನಾಯಕನ ಜೀವನ ಚರಿತ್ರೆ. ಎ.ಆರ್.ಕೃ.: ಜೀವನ ಮತ್ತು ಸಾಧನೆ (ಹಾ.ಮಾ.ನಾಯಕರೊಂದಿಗೆ), ಪ್ರಸಾದ (1964), ಶ್ರೀ ಶರಣಚರಿತಮಾನಸ (1956), ಅಮುಗಿದೇವಯ್ಯಗಳ ಸಾಂಗತ್ಯ (1965), ಸಿದ್ಧರಾಮಚರಿತೆ (1975)- ಇವು ಇವರ ಸಂಪಾದಿತ ಕೃತಿಗಳು. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ತೌಲನಿಕ ಕಾವ್ಯಮಿಮಾಂಸೆ, ಸಾಹಿತ್ಯ ಮತ್ತು ಸಮಕಾಲೀನ ವಾಸ್ತವಿಕತೆ (1979), ಆಂಡಯ್ಯ, ಬಸವಕಲ್ಯಾಣ, ಚೆನ್ನಬಸವಣ್ಣ ಮೊದಲಾದ ಮಕ್ಕಳ ಸಾಹಿತ್ಯವನ್ನು ರಚಿಸಿದ್ದಾರೆ.

ಇವರ ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಗ್ರಂಥಕ್ಕೆ 1969ರ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿದೆ. ಕರ್ನಾಟಕ ರಾಜ್ಯ ಸಾಹಿತ್ಯ

ಅಕಾಡೆಮಿ ಪ್ರಶಸ್ತಿ ಲಭ್ಯವಾದದ್ದು 1985ರಲ್ಲಿ. ಸದಾ ಕಾಯಕನಿಷ್ಠರಾಗಿದ್ದ ಇವರು ಕರ್ನಾಟಕ ವಚನಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿಯೂ ಸೇವೆಸಲ್ಲಿಸಿದ್ದಾರೆ. ಇವರು 1994ರಲ್ಲಿ ನಿಧನಹೊಂದಿದರು. *

**ತಿಪ್ಪೇಸ್ವಾಮಿ, ಪಿ.ಆರ್. :** 1922-2000. ಖ್ಯಾತ ಚಿತ್ರಕಲಾವಿದ, ಲೇಖಕ, ಜಾನಪದ ತಜ್ಞ, ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನ ಹರ್ತಿಕೋಟೆಯಲ್ಲಿ 1922 ಆಗಸ್ಟ್ 12ರಂದು ಜನಿಸಿದರು. ಇವರದು ಹೆಸರಾಂತ ಜಮೀನ್ದಾರರ ಮನೆತನ. ಬಾಲ್ಯದಲ್ಲಿಯೇ ಚಿತ್ರಕಲೆಯ ಕಡೆಗೆ ಆಕರ್ಷಿತರಾದವರು. ಇವರು ಸ್ವತಂತ್ರ ಪ್ರವೃತ್ತಿಯ, ಸಾಹಸ ಮನೋಭಾವದ, ಸೇವಾ ದೃಷ್ಟಿಯ ಕಲಾವಿದ. ಕಲಾ ವಿಮರ್ಶಕರಾಗಿ, ಜಾನಪದ ಕ್ಷೇತ್ರ ಕಾರ್ಯಕರ್ತರಾಗಿ, ಅಂಕಣಕಾರರಾಗಿ ಹೆಸರಾಗಿದ್ದರು. ಕಲೆಯ ಸ್ಥಾನಮಾನದ ಬಗ್ಗೆ, ಕಲಾವಿದರ ಹಕ್ಕು ಬಾಧ್ಯತೆಯ ಬಗ್ಗೆ ಹೋರಾಡುವ ಮನೋಭಾವ ಇವರದಾಗಿತ್ತು.



ಮೈಸೂರಿನ ಚಿತ್ರಕಲೆಗೆ ತಮ್ಮ ನಿಸರ್ಗ ಚಿತ್ರಗಳ ಮೂಲಕ ಇವರು ವೈವಿಧ್ಯವನ್ನೂ ಶೋಭೆಯನ್ನೂ ತಂದುಕೊಟ್ಟರು. ಪ್ರತಿಭೆ, ಅನುಭವ, ಕಲ್ಪನಾಶಕ್ತಿಗಳ ಮೂಲಕ ವರ್ಣಚಿತ್ರಕಲೆಯಲ್ಲಿ ಒಂದು ಮೋಡಿಯನ್ನು ಸಾಧಿಸಿದ್ದರು. ತಮ್ಮ ಹಿಂದಿನವರ ಕೃತಿಗಳನ್ನೆಲ್ಲಾ ಅಭ್ಯಾಸ ಮಾಡಿದ್ದರೂ ಇವರ ಮೂಲಸ್ಫೂರ್ತಿ ನಿಸರ್ಗವೇ ಆಗಿತ್ತು. ನಿಸರ್ಗ ಚಿತ್ರಕಲೆಯಲ್ಲಿ, ಅದರಲ್ಲೂ ಕಷ್ಟಕರವಾದ ಜಲವರ್ಣ ಚಿತ್ರಕಲೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ನಿಲ್ಲುವ ಕಲಾವಿದರಾಗಿದ್ದರು. ನಿಸರ್ಗ ಚಿತ್ರಕಾರರಾಗಿ ಅಪ್ರತಿಮ ಸಾಧನೆ ತೋರಿದ್ದ ಇವರ ತ್ರಿವರ್ಣ ಚಿತ್ರಗಳು ಆಗಿನ ಪ್ರಬುದ್ಧ ಕರ್ನಾಟಕ, ಸುಧಾ ಮುಂತಾದ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಇವರ ರೇಖಾ ಚಿತ್ರಗಳು ಅನೇಕ ಸಾಹಿತ್ಯ ಕೃತಿಗಳಲ್ಲಿ ಪ್ರಕಟಗೊಂಡಿವೆ. ವ್ಯಂಗ್ಯಚಿತ್ರಗಳು, ಕೊರವಂಜಿ, ವಿನೋದಗಳಲ್ಲಿ ಬೆಳಕು ಕಂಡಿವೆ.

ಮೂಲೆಗುಂಪಾಗಿದ್ದ ಕರ್ನಾಟಕದ ಶಿಲ್ಪಿಗಳನ್ನೂ ಕಲಾವಿದರನ್ನೂ ಸಂಘಟಿಸಿದ್ದು ಇವರ ಬಹು ಮುಖ್ಯ ಸಾಧನೆಗಳಲ್ಲಿ ಒಂದು. ಅಜ್ಞಾತ ಕಲಾವಿದರನ್ನು ಹುಡುಕಿ ಅವರ ಕೃತಿಗಳ ಬಗ್ಗೆ, ಜೀವನದ ಬಗ್ಗೆ ನಾಡಿನ ಪತ್ರಿಕೆಗಳಲ್ಲಿ ಸತತವಾಗಿ ಬರೆಯುತ್ತ ನಾಡಿನ ಕಲಾಪ್ರಜ್ಞೆಯನ್ನು ಜಾಗೃತಗೊಳಿಸಿದರು. ಇವರು ಕನ್ನಡ ನಾಡಿನ ಬಹುತೇಕ ಎಲ್ಲ ಕಲಾವಿದರನ್ನೂ ಕುರಿತು ಬರೆದಿದ್ದಾರೆ. ಅವರ ಕಲಾಕೃತಿಗಳನ್ನು ವಿಮರ್ಶಿಸಿದ್ದಾರೆ. ಕಲಾವಿದರಿಗೆ ದೊರೆಯಬೇಕಾದ ಗೌರವ ಪ್ರಶಸ್ತಿ ಪುರಸ್ಕಾರ ಮಾಸಾಶನಗಳಿಗಾಗಿ ಹೋರಾಟ ನಡೆಸಿದ್ದಾರೆ.

ಚಿತ್ರಕಲೆಗೆ ಸಂಬಂಧಿಸಿದಂತೆ ಇವರು ಅನೇಕ ಲೇಖನಗಳನ್ನೂ ಕೃತಿಗಳನ್ನೂ ರಚಿಸಿದ್ದಾರೆ. ಜಗತ್ತಿನ ಪ್ರತಿಭಾವಂತ ಕಲಾವಿದರನ್ನು ಕುರಿತೂ ಬರೆದಿದ್ದಾರೆ. ಭಾರತೀಯ ಚಿತ್ರಕಲೆ ಇವರ ಮಹತ್ವದ ಕೃತಿ. ಹೋರಾಟಗಾರ ಕೆಂಚಪ್ಪ, ರಸಯಾತ್ರೆ, ಕಲಾವಿದ ಕಂಡ ಫ್ರಾನ್ಸ್ ಇತರ ಮುಖ್ಯ ಕೃತಿಗಳು. ಪರುತಿ ಕಾವ್ಯನಾಮದಿಂದ ಪುಸ್ತಕ ವಿಮರ್ಶಕರಾಗಿಯೂ ಇವರು ಹೆಸರು ಗಳಿಸಿದ್ದರು.

ಇವರ ಬದುಕಿನ ಅತ್ಯಂತ ಸಾರ್ಥಕ ಸಂದರ್ಭ ಎಂದರೆ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಜಾನಪದ ವಸ್ತುಸಂಗ್ರಹಾಲಯಕ್ಕಾಗಿ ಕ್ಯೂರೇಟರ್ ಆಗಿ ಅಹರ್ನಿಶಿ, ದುಡಿದದ್ದು. ಕರ್ನಾಟಕದಾದ್ಯಂತ ಸಂಚರಿಸಿ ಅಪೂರ್ವ ಜನಪದ ವಸ್ತುಗಳನ್ನು ಬಹುಪಾಲು ಉಚಿತವಾಗಿ ಸಂಗ್ರಹಿಸಿ ತಂದು ವಸ್ತುಸಂಗ್ರಹಾಲಯವನ್ನು ಕಟ್ಟಿ ಬೆಳೆಸಿದರು.

ಜನಪದ ಸಾಹಿತ್ಯ ಕ್ಷೇತ್ರಕ್ಕೂ ತಿಪ್ಪೇಸ್ವಾಮಿಯವರ ಸೇವೆ ಸಂದಿದೆ. ಕರಾಕ್ರ ಅವರೊಂದನೆ ಸಾಹಿತ್ಯ ಸಂಗ್ರಹ ಯಾತ್ರೆ ಕೈಗೊಂಡು ಸಾಹಿತ್ಯ ಹಾಗೂ ಅಪೂರ್ವ ಜನಪದ ವಸ್ತುಗಳನ್ನು ಸಂಗ್ರಹಿಸಿರುವುದು ಇಲ್ಲಿ ಉಲ್ಲೇಖಾರ್ಹ. ಕರ್ನಾಟಕ ಜಾನಪದ ಪರಿಷತ್ತಿನ ಸಕ್ರಿಯ ಸದಸ್ಯರಾಗಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಸದಸ್ಯರಾಗಿಯೂ ಇವರು ಸೇವೆ ಸಲ್ಲಿಸಿದರು.

ಇವರ ಪ್ರತಿಭೆಗೆ ಪ್ರಶಸ್ತಿ ಪುರಸ್ಕಾರಗಳೂ ಸಂದಿವೆ. ಅವುಗಳಲ್ಲಿ ಮುಖ್ಯವಾದುವು: ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1974), ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ (1981). ಇವರು ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದರು (1991-95). ಚಿತ್ರಕಲೆಗೆ ಮಹತ್ತರ ಸೇವೆ ಸಲ್ಲಿಸಿದ ಇವರಿಗೆ ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ ಲಭಿಸಿದೆ (1997). ಜನಪದ ಕಲೆ, ಚಿತ್ರಕಲೆ, ಸಾಹಿತ್ಯ ಮೊದಲಾದ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದ ಇವರು 7 ಏಪ್ರಿಲ್ 2000ರಂದು ಮೈಸೂರಿನಲ್ಲಿ ನಿಧನಹೊಂದಿದರು. (ಎ.ಎಚ್.)

**ತಿಮ್ಮ :** ಸು.1600. ಕನ್ನಡ ಆಲಂಕಾರಿಕ, ನವರಸಾಲಂಕಾರದ ಕರ್ತೃ. ಕಾವ್ಯಮೀಮಾಂಸೆಯಲ್ಲಿ ಅಲಂಕಾರ, ರೀತಿ, ಧ್ವನಿ - ಇವು ಪ್ರಸ್ಥಾನತ್ರಯ ಎಂದು ಪ್ರಸಿದ್ಧವಾಗಿವೆ. ರಸವಿಚಾರ ಭರತನ ನಾಟ್ಯಶಾಸ್ತ್ರದಲ್ಲಿ ಮೊಟ್ಟಮೊದಲು ಪ್ರತಿಪಾದಿತವಾಗಿದ್ದು, ಆನಂದವರ್ಧನನಿಂದ (9ನೆಯ ಶತಮಾನ) ಈಚೆಗೆ ಪ್ರಾಧಾನ್ಯ ಪಡೆಯಿತು. ಈ ಕಾರಣದಿಂದ ಸಂಸ್ಕೃತ ಲಾಕ್ಷಣಿಕರಾದ ಭಾಮಹ, ದಂಡಿ, ವಾಮನ, ರುದ್ರಟ ಇವರನ್ನು ಅನುಸರಿಸಿ ಬರೆದಿರುವ ಕವಿರಾಜಮಾರ್ಗ, ಉದಯಾದಿತ್ಯಾಲಂಕಾರ, ಕಾವ್ಯಾವಲೋಕನ - ಈ ಕನ್ನಡ ಅಲಂಕಾರಶಾಸ್ತ್ರ ಗ್ರಂಥಗಳು ರಸವಿಚಾರವನ್ನು ಪ್ರಾಸಂಗಿಕವಾಗಿ ಪ್ರಸ್ತಾವಿಸಿವೆಯೇ ಹೊರತು ಅದನ್ನು ವಿಸ್ತಾರವಾಗಿ ಪ್ರತಿಪಾದಿಸುವ ಗೋಜಿಗೆ ಹೋಗಿಲ್ಲ. ಕವಿಕಾಮನ ಶೃಂಗಾರರತ್ನಾಕರ (ಸು.1200) ರಸವಿಚಾರವನ್ನು ಪ್ರತಿಪಾದಿಸುವ ಮೊದಲ ಕನ್ನಡ ಲಕ್ಷಣ ಗ್ರಂಥ; ಇದರಲ್ಲಿ ಶೃಂಗಾರರಸಕ್ಕೆ ಪ್ರಾಧಾನ್ಯ. ಎರಡನೆಯದು ಸಾಳ್ವನ (ಸು.1550) ರಸರತ್ನಾಕರ. ಮೂರನೆಯದೇ ತಿಮ್ಮನ ನವರಸಾಲಂಕಾರ. ಇದಕ್ಕೆ ಅಲಂಕಾರಸಾರಸಂಗ್ರಹ ಎಂಬ ಹೆಸರೂ ಇರುವಂತಿದೆ.

ಕವಿಯ ವಿಚಾರವಾಗಿ ಹೆಚ್ಚು ಸಂಗತಿಗಳು ತಿಳಿದುಬಂದಿಲ್ಲ. ಆಂತರಿಕ ಪ್ರಮಾಣಗಳಿಂದ ಹೇಳುವುದಾದರೆ ಈತ ಬ್ರಾಹ್ಮಣ ಕವಿ; ರಾಯಣನ ಮಗ; ತಿಮ್ಮಣಾರ್ಯ, ತಿಮ್ಮಣ್ಣ ಎಂದು ಹೆಸರು; ಕವಿಕುಲಚಕ್ರವರ್ತಿ, ಕವಿಭಾಳಲೋಚನ, ರಸಿಕಬ್ರಹ್ಮ, ಉಭಯ ಕವಿಶರಭಭೇರುಂಡ ಬಿರುದುಗಳು. ಸಾಳ್ವನ ರತ್ನಾಕರದ ಹಲಕೆಲವು ಸೂತ್ರಗಳೂ ವಾಕ್ಯಗಳೂ ಇವನ ಕೃತಿಯಲ್ಲಿ ಕಂಡುಬರುವುದರಿಂದ ಈತ ಅವನಿಗಿಂತ ಈಚಿನವನು ಎಂಬುದು ಸ್ಪಷ್ಟ.

ನವರಸಾಲಂಕಾರ ಸಾಳ್ವನ ರಸರತ್ನಾಕರದಂತೆ ಗದ್ಯಪದ್ಯಗಳಿಂದ ಕೂಡಿದೆ. ಆದರೂ ಇದು ಕಾವ್ಯವಲ್ಲವಾದ್ದರಿಂದ ಚಂಪೂ ಎಂಬ ಹೆಸರು ಇದಕ್ಕೆ ಸಲ್ಲುವುದಿಲ್ಲ. ತನಗೆ ಹಿಂದಿನವರಾದ ಶೃಂಗಾರರತ್ನಾಕರದ ಕವಿಕಾಮ, ಕಾವ್ಯಾವಲೋಕನದ ಎರಡನೆಯ ನಾಗವರ್ಮ - ಈ ಕನ್ನಡ ಆಲಂಕಾರಿಕರನ್ನೂ ಹೇಮಚಂದ್ರ, ಅಮೃತಾನಂದ, ಸಿಂಹಭೂಪಾಲ ಎಂಬ ಸಂಸ್ಕೃತ ಆಲಂಕಾರಿಕರನ್ನೂ ತಾನು ಅನುಸರಿಸಿರುವುದಾಗಿ ಹೇಳಿಕೊಂಡಿದ್ದಾನೆ. ಒಟ್ಟಿನ ಮೇಲೆ, ರಸಪ್ರಕ್ರಿಯೆಯ ವಿಚಾರದಲ್ಲಿ ಈತನ ಕೃತಿ ಪೂರ್ವ ಅಲಂಕಾರ ಗ್ರಂಥಗಳ ಸಾರಸಂಗ್ರಹವೇ ಸರಿ; ಇದರಲ್ಲಿ ಸ್ವಂತರಚನೆಯ ಪ್ರಮಾಣ ಬಹು ಕಡಿಮೆ. ಪಂಪ, ಪೊನ್ನ, ನಾಗಚಂದ್ರ, ನೇಮಿಚಂದ್ರ ಮುಂತಾದ ಪೂರ್ವಕವಿಗಳ ಪದ್ಯಗಳನ್ನು ಲಕ್ಷ್ಯಗಳಾಗಿ ಉದಾಹರಿಸಿದ್ದಾನೆ. ಇದೊಂದು ವಿಶೇಷ. ವಿಭಾವಾನುಭಾವ ಸಂಚಾರಿ ಸಾತ್ವಿಕಗಳಿಂ ಉತ್ಸಾಹಸ್ಥಾಯಿ ಪುಷ್ಟಮಾಗೆ ವೀರರಸಂ ಎಂಬ ವಾಕ್ಯವನ್ನು ನೋಡಿದರೆ ರಸನಿಷ್ಪತ್ತಿ ವಿಚಾರದಲ್ಲಿ ಭರತನ ಸೂತ್ರವನ್ನೇ ಈತ ಅನುಸರಿಸಿರುವುದು ಸ್ಪಷ್ಟವಾಗಿ ಕಾಣುತ್ತದೆ. ಎತ್ತ ನೋಡಿದರೂ ವೃತ್ತ ಕಂದಗಳೇ

ತುಂಬಿಕೊಂಡಿರುವಾಗ ಇವುಗಳ ನಡುವೆ ಎರಡು ಷಟ್ಪದಿಗಳೂ ಒಂದು ತ್ರಿಪದಿಯೂ ಕಾಣಿಸಿಕೊಳ್ಳುವುದು ಗಮನಾರ್ಹವಾಗಿದೆ ಎಂದು ಹೇಳಿ, ಶಕುಂತಲೆ ಗಿಡಬಳ್ಳಿಗಳಿಗೆ ನೀರೆರೆಯುತ್ತಿರುವಾಗ ದುಷ್ಯಂತ ಮರೆಯಿಂದ ಅವಳನ್ನು ನೋಡಿದ ಸನ್ನಿವೇಶವನ್ನು ಚಿತ್ರಿಸಿರುವ ಒಂದು ವಾರ್ಧಕ ಷಟ್ಪದಿಯ ಪದ್ಯವನ್ನು ತೀ.ನಂ.ಶ್ರೀಕಂಠಯ್ಯನವರು ತಮ್ಮ ಭಾರತೀಯ ಕಾವ್ಯಮೀಮಾಂಸೆಯಲ್ಲಿ ಉದಾಹರಿಸಿದ್ದಾರೆ. ಕಾಳಿದಾಸನ ಶಾಕುಂತಲ ನಾಟಕವನ್ನು ಅವಲಂಬಿಸಿ ಯಾರೋ ಬರೆದಿದ್ದ ಷಟ್ಪದಿಕಾವ್ಯದಿಂದ ತಿಮ್ಮ ಈ ವರ್ಣನೆಯ ಪದ್ಯವನ್ನು ಆರಿಸಿಕೊಂಡಿರಬೇಕು ಎಂದು ಅವರು ಊಹಿಸಿದ್ದಾರೆ. ವಿರಾಜತೇ ರಾಯಣ ತಿಮ್ಮಣಾರ್ಯೋ ಭಾಷಾದ್ವಯೀ ನಿರ್ಮಿತ ಕಾವ್ಯಶೇಷಃ ಎಂಬ ಕವಿಯ ಹೇಳಿಕೆಯನ್ನೂ ಮುಖ್ಯವಾಗಿ ಉಭಯಕವಿಶರಭಭೇರುಂಡ ಎಂಬ ಬಿರುದು ಮತ್ತು ಇತರ ಬಿರುದುಗಳನ್ನೂ ಗಮನಿಸಿದರೆ ಈತ ಕನ್ನಡ ಸಂಸ್ಕೃತಗಳೆರಡರಲ್ಲೂ ಕಾವ್ಯರಚನೆ ಮಾಡಿದ್ದನೆಂಬುದರಲ್ಲಿ ಸಂದೇಹವಿಲ್ಲ. ಆದರೆ ಈತನ ಯಾವ ಕಾವ್ಯವೂ ಸಿಕ್ಕಿಲ್ಲ. ಗ್ರಂಥದಲ್ಲಿ ಉದ್ಧೃತವಾಗಿರುವ ಶಕುಂತಲಾದರ್ಶನ ಸನ್ನಿವೇಶವನ್ನು ವರ್ಣಿಸುವ ಪದ್ಯವನ್ನು ತಿಮ್ಮ ತನ್ನ ಸ್ವಂತ ಕಾವ್ಯದಿಂದಲೇ ತೆಗೆದುಕೊಂಡಿರಬಹುದು ಎಂದು ಊಹಿಸುವುದಕ್ಕೂ ಅವಕಾಶವಿದೆ. ತ್ರಿಪದಿಯನ್ನು ಮಾತ್ರ ಜನ್ನನ ಅನಂತನಾಥ' ಪುರಾಣದಿಂದ ತೆಗೆದುಕೊಂಡಿದ್ದಾನೆ. *

**ತಿಮ್ಮಣ್ಣಕವಿ :** ಹದಿನಾರನೆಯ ಶತಮಾನದ ಪೂರ್ವಾರ್ಧದಲ್ಲಿ ಕೃತಿ ರಚನೆ ಮಾಡಿದ ಕವಿಗಳಲ್ಲಿ ಮುಖ್ಯನಾದವ. ಅರ್ಧದಲ್ಲಿಯೇ ನಿಂತುಹೋಗಿದ್ದ ಕನ್ನಡ ಭಾರತವನ್ನು ಪೂರ್ಣ ಮಾಡಿದ ಯಶಸ್ಸು ಇವನದು. ಈತ ವಿಜಯನಗರದ ಕೃಷ್ಣದೇವರಾಯನ (1509-29) ಆಸ್ಥಾನ ಕವಿಯಾಗಿದ್ದ. ಕರ್ನಾಟಕವಿಕುಲಸಾರ್ವಭೌಮ ಎಂಬುದು ಈತನ ಬಿರುದು. ಇವನ ತಂದೆ ಭಾರದ್ವಾಜಗೋತ್ರದ ಭಾನುಭಟ್ಟನೆಂಬ ಕವಿ. ಆದರೆ ಈ ಭಾನುಭಟ್ಟ ಬರೆದ ಕಾವ್ಯಗಳಾವುವೂ ಲಭಿಸಿಲ್ಲ.

ಕುಮಾರವ್ಯಾಸ ಬರೆಯದೆ ಬಿಟ್ಟ ಭಾರತ ಭಾಗವನ್ನು 'ನೀ ಸಕಲ ಜಗ ಮೆಚ್ಚುವಂತೆ ವಿಲಾಸದಲಿ ಪೇಳು' ಎಂದು ಕೃಷ್ಣದೇವರಾಯ ಅಪ್ಪಣೆ ಕೊಡಲು ರಾಜಾಜ್ಞೆಯನ್ನು ಶಿರಸಾವಹಿಸಿ ತಿಮ್ಮಣ್ಣ ತನ್ನ ಅಷ್ಟಪರ್ವಭಾರತವನ್ನು ಭಾಮಿನೀಷಟ್ಪದಿಯಲ್ಲಿ ರಚಿಸಿದ. ರಾಜಪ್ರೇರಣೆಯಿಂದಲೇ ಕೈಕೊಂಡ ಕೃತಿಯಾದ್ದರಿಂದ ಇದನ್ನು ದೊರೆಗೇ ಅಂಕಿತ ಮಾಡಿ ಶ್ರೀಕೃಷ್ಣರಾಯಭಾರತಕಥಾಮಂಜರಿ ಎಂಬ ಹೆಸರು ಕೊಟ್ಟಿದ್ದಾನೆ. ಇದರಲ್ಲಿ 40 ಸಂಧಿಗಳೂ 3736 ಪದ್ಯಗಳೂ ಇವೆ. ಕವಿ ತಾನು ಪದವಾಕ್ಯಪ್ರಮಾಣಜ್ಞನೆಂದು ಹೇಳಿಕೊಂಡಿದ್ದಾನೆ. ಈ ಭಾರತ ಭಾಗವನ್ನಲ್ಲದೆ ಈತ ಇನ್ನಾವ ಕೃತಿಯನ್ನಾದರೂ ರಚಿಸಿರುವನೋ ಇಲ್ಲವೋ ತಿಳಿಯದು.

ತಿಮ್ಮಣ್ಣನಿಗೆ ಕುಮಾರವ್ಯಾಸಯೋಗೀಂದ್ರನಿಗೆ ಲಭಿಸಿದ ಪ್ರಾಸಾದಿಕವಾಣಿ ಇಲ್ಲ. ಅವನ ಪ್ರತಿಭಾತಿಶಯವೂ ಕಾಣುವುದಿಲ್ಲ. ಸಾಲದುದಕ್ಕೆ ಕವಿ ಮೂಲ ಭಾರತವನ್ನು ಓದಿ ತನಗೆ ಸರಿತೋರಿದಂತೆ ಸಂಗ್ರಹಿಸಿ ಸ್ವತಂತ್ರವಾಗಿ ಅನುವಾದ ಮಾಡಿದ್ದರೆ ಕಾವ್ಯ ಇನ್ನೂ ಸ್ವಲ್ಪ ಕಳೆಕಟ್ಟಬಹುದಾಗಿತ್ತು. ಆದರೆ ತಿಮ್ಮಣ್ಣ ಹಾಗೆ ಮಾಡಿಲ್ಲ. ಆ ವೇಳೆಗೆ ಆಂಧ್ರದಲ್ಲಿ ಸುಪ್ರಸಿದ್ಧವಾಗಿದ್ದ ತಿಕ್ಕನಸೋಮಯಾಜಿಯ ಆಂಧ್ರಭಾರತವನ್ನು ಮಾದರಿಯಾಗಿಟ್ಟುಕೊಂಡು ಆತನ ಮಾತುಗಳನ್ನೇ ಕನ್ನಡ ಷಟ್ಪದಿಗೆ ಅಳವಡಿಸಲು ಶ್ರಮಿಸಿ ವಿಫಲನಾಗಿದ್ದಾನೆ. ಸ್ವತಂತ್ರವಾಗಿ ಬರೆಯದೆ ಮಹಾಕವಿ ತಿಕ್ಕನ ಹಾದಿಯಲ್ಲಿ ಹೆಜ್ಜೆಯಿಡಲು ಹವಣಿಸಿ ಕವಿ ತನ್ನ ಕಾವ್ಯವನ್ನು ನೀರಸವಾಗಿಸಿದ್ದಾನೆ. ಅನೇಕ ಭಾಗಗಳಲ್ಲಿ ತೆಲುಗು ಕವಿಯ ಮಾತುಗಳು ಉಂಡುಂಡೆಯಾಗಿ ಬಂದಿವೆ. (ಕೆ.ವಿ.ಇ.)

**ತಿಮ್ಮಪ್ಪದಾಸ :** 1770-1860. ಪ್ರಸಿದ್ಧ ವಾಗ್ಗೇಯಕಾರ ಹಾಗೂ ಕವಿ. ನಿಜಗುಣ ಶಿವಯೋಗಿಯನ್ನು ಬಿಟ್ಟರೆ ಅದ್ವೈತ ಸಿದ್ಧಾಂತವನ್ನು ಕೀರ್ತನೆಗಳ ರೂಪದಲ್ಲಿ ನಿರೂಪಣೆ ಮಾಡಿರುವವರಲ್ಲಿ ಅಗ್ರಗಣ್ಯರು. ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ಇವರ ಜನ್ಮಸ್ಥಳ. ವೆಂಕಟರಮಣಸ್ವಾಮಿ ಇವರ ಇಷ್ಟದೈವ. ಯತಿಗಳೆಂದು ಪ್ರಸಿದ್ಧರಾಗಿದ್ದ ವಾಸುದೇವಾರ್ಯ ಇವರ ಅಜ್ಜ ಹಾಗೂ ಗುರು. ನೀಲಕಂಠಾರ್ಯ ಇವರ ಇನ್ನೊಬ್ಬ ಗುರು. ದಾಸರು ರಾಮಕೃಷ್ಣಾರ್ಯರೆಂಬ ಗುರುವಿನ ಬಳಿ ಸಂಗೀತ ಹಾಗೂ ಸಾಹಿತ್ಯ ವಿಷಯಗಳನ್ನು ಅಧ್ಯಯನ ಮಾಡಿದ್ದರೆಂದು ತಿಳಿದುಬರುತ್ತದೆ.

ಇವರ ಗುರು ಹಾಗೂ ಅಜ್ಜ ವಾಸುದೇವಾರ್ಯ ಉಪದೇಶ ಮಾಡಿದ ಅದ್ವೈತ ವೇದಾಂತವನ್ನೂ ಜ್ಞಾನಭಕ್ತಿ ವೈರಾಗ್ಯಗಳನ್ನೂ ಕನ್ನಡದಲ್ಲಿ ನೂರಾರು ಕೀರ್ತನೆಗಳ ರೂಪದಲ್ಲಿ ಹೃದಯಂಗಮವಾಗಿ ನಿರೂಪಿಸಿದ್ದಾರೆ. ಪೂಜಾವಿಧಾನ ಕೀರ್ತನೆಗಳು, ಗುರುಸ್ತುತಿ ಕೀರ್ತನೆಗಳು, ಶ್ರೀಕೃಷ್ಣಬಾಲಲೀಲೆ ಮತ್ತು ಅಕ್ರೂರ ಪ್ರಕರಣ (ಕೀರ್ತನೆಗಳು), ಭಾಗವತ ಕೀರ್ತನೆಗಳು, ಉದ್ಯೋಗಪರ್ವದ ಭಾರತದ ಕಥೆ ಅಥವಾ ಕೃಷ್ಣಸಂಧಾನದ ಕೀರ್ತನೆಗಳು, ಜೀವಕಾಯಸಂವಾದ (ವೈರಾಗ್ಯಪರ ಕೀರ್ತನೆಗಳು ಮತ್ತು ಕಂದಪದ್ಯಗಳು), ಧ್ರುವಚರಿತ್ರೆ (ಸಾಂಗತ್ಯ ಕಾವ್ಯ), ಪರಬ್ರಹ್ಮಪ್ರಕಾಶಿಕೆ (ವೇದಾಂತವಿಷಯಕ ಗದ್ಯಗ್ರಂಥ'), ಭಾಗವದ್ವಿಲಾಸದಾಟ (ಅಸಮಗ್ರ ಗದ್ಯಗ್ರಂಥ') ಎಂಬ ಕೃತಿಗಳನ್ನು ರಚಿಸಿದ್ದಾರೆ. ಧ್ರುವಚರಿತ್ರೆ ಮತ್ತು ಶ್ರೀಕೃಷ್ಣಬಾಲಲೀಲೆ ಕಾವ್ಯ ಗುಣದಿಂದಲೂ ಕೂಡಿವೆ. ಸಾಧಾರಣವಾಗಿ ಇವರ ಕೀರ್ತನೆಗಳಲ್ಲಿ ಚಿಕ್ಕನಾಗಪುರದ ತಿರುಪತಿ ವೆಂಕಟರಮಣ ಎಂಬ ಮುದ್ರಿಕೆ ಕಂಡುಬರುತ್ತದೆ. ಅನೇಕ ಕೀರ್ತನೆಗಳಲ್ಲಿ ದೇವತಾಮುದ್ರಿಕೆಯೊಂದಿಗೆ ಗುರು ವೆಂಕಟರಮಣರ ಹೆಸರು ಇದೆ. ಕೆಲವು ಕೀರ್ತನೆಗಳಲ್ಲಿ ತಿಂಮದಾಸ ಎಂಬ ಸ್ವನಾಮ ಮುದ್ರಿಕೆಯೂ ಕಾಣಿಸಿಕೊಳ್ಳುತ್ತದೆ. ದಾಸರು ತಮ್ಮ ಗುರುವಿನ ಉಪದೇಶದಂತೆ ಚಿಕ್ಕನಾಯಕನಹಳ್ಳಿಯ ಪ್ರಾಂತದಲ್ಲಿ ಭಜನೆಯ ಸಂಪ್ರದಾಯವನ್ನು ಬೆಳೆಸಿಕೊಂಡು ಬಂದರು. ಇವರ ಭಗವದ್ಭಕ್ತಿಯನ್ನು ಕೇಳಿ ಮೆಚ್ಚಿ ಇವರನ್ನು ಮುಮ್ಮಡಿ ಕೃಷ್ಣರಾಜ ಒಡೆಯರು ಮೈಸೂರಿಗೆ ಕರೆಸಿಕೊಂಡು ಸನ್ಮಾನಿಸಿದರು. ಅಲ್ಲಿ ಅರಸರ ಆದೇಶದಂತೆ ದಾಸರು ಕೋಟೆಯ ತ್ರಿಣಯನೇಶ್ವರಸ್ವಾಮಿ ದೇವಸ್ಥಾನದಲ್ಲಿ ನೆಲಸಿ ತಮ್ಮ ಇಡೀ ಜೀವಮಾನವನ್ನು ಪೂಜೆ ಭಜನೆಯಲ್ಲಿ ಕಳೆದರು. ಭಗವದನುಭವವನ್ನೂ ಗಹನ ವೇದಾಂತ ತತ್ತ್ವಗಳನ್ನೂ ಜನಸಾಮಾನ್ಯಕ್ಕೆ ಸುಲಭ ಭಾಷೆಯಲ್ಲಿ ದೊರಕಿಸಿಕೊಟ್ಟಿರುವ ತಿಮ್ಮಪ್ಪದಾಸರು ಪುರಂದರದಾಸ, ನಿಜಗುಣ ಶಿವಯೋಗಿ, ಕನಕದಾಸ, ತ್ಯಾಗರಾಜ - ಈ ಪರೋಪಕಾರಿಗಳ ಪಂಕ್ತಿಗೆ ಸೇರಿದವರು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ದಾಸರ 108 ಪೂಜಾ ವಿಧಾನ ಕೀರ್ತನೆಗಳು ಅರ್ಚನ ಎಂಬ ಹೆಸರಿನಲ್ಲಿ ಮೊದಲ ಬಾರಿಗೆ 1971ರಲ್ಲಿ ಪ್ರಕಟಗೊಂಡಿವೆ. ಇವರ ಆಧ್ಯಾತ್ಮಿಕ ಕೀರ್ತನೆಗಳಿಗೆ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನ ಸಲ್ಲುತ್ತದೆ. ಇವರ ಜೇಷ್ಠಪುತ್ರ ನಾರಾಯಣದಾಸರೂ ಕೀರ್ತನೆಗಳನ್ನು ರಚಿಸಿದ್ದಾರೆ. (ಎಂ.ವಿ.ಎಸ್.)

**ತಿಮ್ಮಪ್ಪನಾಯಕ :** 1897-1974. ಉತ್ತರ ಕನ್ನಡ ಜಿಲ್ಲೆಯಲ್ಲಿ ಕರ್ನಾಟಕ ಗಾಂಧಿ ಎಂದು ಪ್ರಸಿದ್ಧರಾಗಿದ್ದ ಸ್ವಾತಂತ್ರ್ಯ ಹೋರಾಟಗಾರರು ಮತ್ತು ಸಮಾಜಸುಧಾರಕರು.



ಸಿದ್ದಾಪುರದಲ್ಲಿ 1897ರಲ್ಲಿ ಬಡ ಗೌಡಸಾರಸ್ವತ ಕುಟುಂಬವೊಂದರಲ್ಲಿ ಹುಟ್ಟಿದರು. ಕುಮಟದ ಗಿಬ್ಸ್ ಪ್ರೌಢಶಾಲೆಯಲ್ಲಿ ಶಿಕ್ಷಣ ಮುಗಿಸಿ, ಮುಂದಿನ ವಿದ್ಯಾಭ್ಯಾಸಕ್ಕಾಗಿ ಪುಣೆಗೆ ತೆರಳಿದರು. ಅಲ್ಲಿ ರ್‍ಯಾಂಗ್ಲರ್ ಪರಂಜಪೆಯವರ ತ್ಯಾಗಮಯ ಜೀವನದಿಂದ ಪ್ರಭಾವಿತರಾದರು. 1918ರಲ್ಲಿ ಬಿ.ಎ. ಪದವಿ ಪಡೆದು, ನೌಕರಿಗಾಗಿ ಮುಂಬಯಿಗೆ ಹೋದರು. ಅಲ್ಲಿ ನೌಕರಿ ಜೊತೆಗೆ ಖಾಸಗಿಯಾಗಿ ಎಂ.ಎ. ಅಭ್ಯಾಸಮಾಡುತ್ತಿರುವಾಗ ಬೇನೆಯಿಂದ ನರಳಿ ಗುಣಮುಖರಾದ ಮೇಲೆ ಹಿಂದಿರುಗಿ ಶಿರಸಿಯ ಶ್ರೀಮಾರಿಕಾಂಬಾ ಮಾಧ್ಯಮಿಕ ಶಾಲೆಯಲ್ಲಿ 1920ರಲ್ಲಿ ಮುಖ್ಯಾಧ್ಯಾಪಕರಾಗಿ ಕೆಲವರ್ಷ ಶಿಕ್ಷಣರಂಗದಲ್ಲಿ ಸೇವೆಸಲ್ಲಿಸಿದರು.

ಗಾಂಧೀಜಿಯವರ ಯಂಗ್ ಇಂಡಿಯಾ ಪತ್ರಿಕೆಯ ಬರೆಹಗಳಿಂದ ಪ್ರಭಾವಿತರಾಗಿ 1921ರಲ್ಲಿ ನೌಕರಿಯನ್ನು ತ್ಯಜಿಸಿದರು. ಆಗ ಶಿರಸಿಯಲ್ಲಿ ವಾಮನ ಹೊದಿಕೆಯವರು ನಡೆಯಿಸುತ್ತಿದ್ದ ರಾಷ್ಟ್ರೀಯ ಶಾಲೆಯ ಅಧ್ಯಾಪಕರಾಗಿ ಸೇರಿದರು. 1922ರಲ್ಲಿ ಶಿರಸಿಯಲ್ಲಿ ಸ್ವಾಮಿ ಧರ್ಮಾನಂದರು ರಾಜಕೀಯ ಭಾಷಣ ಮಾಡಿದರು. ಅಂದು ಸ್ವಾತಂತ್ರ್ಯಕ್ಕಾಗಿ ಎಂಥ ತ್ಯಾಗಕ್ಕಾದರೂ ಸಿದ್ಧರಾಗಿ, ಬ್ರಿಟಿಷರ ವಿರುದ್ಧ ನಿಂತು ಹೋರಾಡುವುದು ಪ್ರತಿಯೊಬ್ಬನ ಕರ್ತವ್ಯ ಎಂದು ನಾಯಕರು ಸಾರಿದರು. ಈ ಭಾಷಣಕ್ಕಾಗಿ ಇವರಿಗೆ ಒಂದು ವರ್ಷ ಕಠಿಣ ಶಿಕ್ಷೆಯಾಯಿತು. ಉತ್ತರ ಕನ್ನಡ ಜಿಲ್ಲೆಯ ಪ್ರಥಮ ರಾಜಕೀಯ ಕೈದಿಯಾದವರೂ ಇವರೇ.

1930ರಲ್ಲಿ ಅಂಕೋಲದಲ್ಲಿ ಉಪ್ಪಿನ ಸತ್ಯಾಗ್ರಹವನ್ನು ಅತಿ ದೊಡ್ಡ ಪ್ರಮಾಣದಲ್ಲಿ ಸಂಘಟಿಸಿದರು. ಆಗ ಮೂರು ತಿಂಗಳ ಶಿಕ್ಷೆಯಾಯಿತು. ಉತ್ತರ ಕನ್ನಡ ಜಿಲ್ಲೆಯಲ್ಲಿ ಅನೇಕ ಬಾರಿ ಅರಣ್ಯಸತ್ಯಾಗ್ರಹ, ಹುಲ್ಲುಬನ್ನಿ ಸತ್ಯಾಗ್ರಹ, ಕರನಿರಾಕರಣ ಚಳವಳಿ ಮೊದಲಾದುವನ್ನು ಸಂಘಟಿಸಿದುದರಿಂದ ಇವರಿಗೆ ಅನೇಕ ಬಾರಿ ಸೆರೆಮನೆವಾಸ ಒದಗಿತು. ಶಿರಸಿ ಹಾಗೂ ಸಿದ್ಧಾಪುರಗಳಲ್ಲಿ ನಡೆದ ಕರನಿರಾಕರಣ ಚಳವಳಿ ಇಡೀ ಭಾರತದಲ್ಲಿ ಯಶಸ್ವಿಯೆನಿಸಿದ್ದಕ್ಕೆ ಇವರ ಕಾರ್ಯನಿರ್ವಹಣೆಯೂ ಪ್ರಮುಖ ಪಾತ್ರ ವಹಿಸಿತು. ರಾಜೇಂದ್ರಪ್ರಸಾದ್, ರಂಗನಾಥ ದಿವಾಕರ, ಹಣಮಂತರಾವ್ ಕೌಜಲಗಿ, ಕಾಕಾ ಕಾರಖಾನೀಸ ಮೊದಲಾದವರು ತಿಮ್ಮಪ್ಪನಾಯಕರನ್ನು ತಮ್ಮ ಸಮಾನ ಅಂತಃಸ್ಥಿತ ಆತ್ಮೀಯ ಗೆಳೆಯರಾಗಿ ಪರಿಗಣಿಸುತ್ತಿದ್ದರು.

ತಮ್ಮ ತ್ಯಾಗ ಸೇವೆಯಿಂದಾಗಿ ಬರಬರುತ್ತ ಉತ್ತರ ಕನ್ನಡ ಜಿಲ್ಲೆಯಲ್ಲಿ ಕರ್ನಾಟಕ ಗಾಂಧೀ ಎಂದು ಇವರು ಪರಿಚಿತರಾದರು. ಸ್ವಾತಂತ್ರ್ಯಾನಂತರವೂ ಗಾಂಧೀಜಿ ಹೇಳಿದ ಮಾರ್ಗದಲ್ಲಿಯೇ ಸಾಗಿ ನೂರಾರು ಜನರಿಗೆ ಉದ್ಯೋಗ ನೀಡುತ್ತಿದ್ದ ಅಂಕೋಲದ ಗ್ರಾಮಸೇವಾ ಸಮಿತಿಯ ಮಾರ್ಗದರ್ಶಕರಾಗಿ ಕೆಲಸ ಮಾಡಿದರು. ಅದು ಜಿಲ್ಲೆಗೆ ಪ್ರಥಮವೆನಿಸಿದ ಹೊಸ ಮಾದರಿಯ ವಿಧಾಯಕಕಾರ್ಯಕ್ಷೇತ್ರ. ಗ್ರಾಮಾಂತರ ಪ್ರದೇಶದ ಜನತೆಯ ಕಲ್ಯಾಣಕ್ಕಾಗಿ ಅಲ್ಲಿ ಇವರು ಒಂದೇ ಸಮನೆ ದುಡಿದರು.

ರಾಷ್ಟ್ರಸೇವೆ, ಕ್ರಾಂತಿಕಾರಿ ಹೋರಾಟ, ಸ್ವಾತಂತ್ರ್ಯ ಪ್ರಾಪ್ತಿ, ಸಮಾಜ ಸೇವೆ, ಹರಿಜನಸೇವೆ ಮುಂತಾದ ವಿಷಯಗಳ ಮೇಲೆ ವಿವಿಧ ಪತ್ರಿಕೆಗಳಲ್ಲಿ ಅನೇಕ ಲೇಖನಗಳನ್ನು ಇವರು ಪ್ರಕಟಿಸಿದ್ದಾರೆ. ಧರ್ಮಸಮನ್ವಯ ದರ್ಶನ, ಗಾಂಧೀಜಿಯವರ ಆಧ್ಯಾತ್ಮಿಕ ಜೀವನ, ಶಿವಶರಣರ ಸಾಧನಪಥ - ಇವು ಇವರು ರಚಿಸಿರುವ ಗ್ರಂಥಗಳು.

ಗಾಂಧೀಜಿಯವರ ಕನಸಿನ ಆದರ್ಶವನ್ನು ನನಸಾಗಿಸಲು ಯತ್ನಿಸಿದವರಲ್ಲಿ ತಿಮ್ಮಪ್ಪನಾಯಕರು ಅಗ್ರಗಣ್ಯರು. ತಮ್ಮ ಜೀವನದ ಕೊನೆಯವರೆಗೂ ತಮ್ಮ ಧ್ಯೇಯ ಮತ್ತು ಆದರ್ಶಗಳನ್ನು ಇವರು ನಡೆಸಿಕೊಂಡು ಬಂದರು. ರಚನಾತ್ಮಕ ಕಾರ್ಯಕರ್ತರಾಗಿ, ಸ್ವಾರ್ಥತ್ಯಾಗಿಗಳಾಗಿ, ಸ್ವಾತಂತ್ರ್ಯ ಹೋರಾಟಗಾರರಾಗಿ, ದೇಶಪ್ರೇಮಿಯಾಗಿ, ಆಧ್ಯಾತ್ಮಿಕ ಬಾಳನ್ನು ಬಾಳಿದ ಈ ಕರ್ಮಯೋಗಿ 26 ನವೆಂಬರ್ 1974ರಂದು ನಿಧನಹೊಂದಿದರು.

*

**ತಿಮ್ಮಯ್ಯ, ಕೆ.ಎಸ್. :** 1906-65. ಭಾರತದ ಮಾಜಿ ಶ್ರೇಷ್ಠ ಸೇನಾನಾಯಕ, ಹಿರಿಯ ಮುತ್ಸದ್ದಿ, ದಕ್ಷ ಆಡಳಿತಗಾರ. 1906 ಮಾರ್ಚ್ 31ರಂದು ಕೊಡಗಿನಲ್ಲಿ ಕೊಡಂದೆರ ತಿಮ್ಮಯ್ಯ ಮತ್ತು ಸೀತವ್ವ ದಂಪತಿಗಳ ಮಗನಾಗಿ ಜನಿಸಿದರು. ಮಗುವಿಗೆ ಸುಬ್ಬಯ್ಯ ಎಂದು ಹೆಸರಿಟ್ಟರು. ಆದರೆ ಶಾಲೆಗೆ ಸೇರಿಸುವಾಗ ಇವರ ಹೆಸರು ಕೆ.ಎಸ್. ತಿಮ್ಮಯ್ಯ ಎಂದು ದಾಖಲಾದ್ದದರಿಂದ ಈ ಹೆಸರೇ ಇವರಿಗೆ ಶಾಶ್ವತವಾಗಿ ಉಳಿಯಿತು. ಶ್ರೀಮಂತ ಮನೆತನದಲ್ಲಿ ಜನಿಸಿದ ಇವರ ವಿದ್ಯಾಭ್ಯಾಸ ಕೂನೂರಿನ ಸೇಂಟ್ ಜೋಸೆಫ್ ಮತ್ತು ಬೆಂಗಳೂರಿನ ಬಿಷಪ್ ಕಾಟನ್ ಶಾಲೆಯಲ್ಲಿ ನಡೆಯಿತು. ಹುಟ್ಟಿನಿಂದಲೇ ಉತ್ತಮ ದೇಹದಾರ್ಢ್ಯ ಮತ್ತು ವ್ಯಕ್ತಿತ್ವ ಪಡೆದಿದ್ದ ಇವರು ಡೆಹರಾಡೂನಿನ ರಾಯಲ್ ಇಂಡಿಯನ್ ಮಿಲಿಟರಿ ಶಾಲೆಗೆ ಸೇರಿದರು. ಅಲ್ಲಿನ ಸೇನಾಶಿಕ್ಷಣದಲ್ಲಿ ತೇರ್ಗಡೆಗೊಂಡ ಇವರನ್ನು ಅಂತಿಮ ಶಿಕ್ಷಣಕ್ಕಾಗಿ ಇಂಗ್ಲೆಂಡಿನ ಸ್ಯಾಂಡ್‌ಹರ್ಸ್ಟ್ ಮಿಲಿಟರಿ ಕಾಲೇಜಿಗೆ ಕಳುಹಿಸಲಾಯಿತು. ಆಗಿನ ಭಾರತದ ವೈಸ್‌ರಾಯರು ಸಾವಿರಾರು ಮಂದಿ ಭಾರತೀಯ ಯುವಕರ ಪೈಕಿ ಆರಿಸಿದ ಆರು ಮಂದಿಯಲ್ಲಿ ತಿಮ್ಮಯ್ಯನವರು ಒಬ್ಬರು.

ಸ್ಯಾಂಡ್‌ಹರ್ಸ್ಟ್‌ನ ಶಿಕ್ಷಣಾವಧಿಯನ್ನು ತುಂಬ ಹಿರಿಮೆಯಿಂದ ಪೂರೈಸಿ ಭಾರತಕ್ಕೆ ಮರಳಿದ ಇವರು ಸೆಕೆಂಡ್ ಲೆಫ್ಟಿನೆಂಟ್ ಆಗಿ ಬೆಂಗಳೂರಿನಲ್ಲಿದ್ದ ಹೈಲೆಂಡ್ ಲೈಟ್ ಇನ್‌ಫೆಂಟ್ರಿಗೆ ಬಂದರು (4-2-1926). ಅಲ್ಲಿಂದ ಹೈದರಾಬಾದ್ ರೆಜಿಮೆಂಟಿಗೆ ವರ್ಗವಾಗಿ



(25-5-1927) ಬಾಗ್‌ದಾದಿಗೆ ತೆರಳಿದರು. ಮರುವರ್ಷ ತಮ್ಮ ಬೆಟಾಲಿಯನ್ನಿನೊಡನೆ ಸ್ವದೇಶಕ್ಕೆ ಮರಳಿ ಅಲಹಾಬಾದಿನಲ್ಲಿ ನೆಲೆಸಿದರು. ಆ ವೇಳೆಗೆ ದೇಶದಲ್ಲಿ ಸ್ವಾತಂತ್ರ್ಯ ಸಮರದ ಕಾವು ಕ್ರಮೇಣ ಪಸರಿಸುತ್ತಿತ್ತು. ಬ್ರಿಟಿಷ್ ಸೇನೆಯಲ್ಲಿ ಅಧಿಕಾರಿಗಳಾಗಿದ್ದ ತಿಮ್ಮಯ್ಯನವರಂಥ ತರುಣ ಭಾರತೀಯ ಅಧಿಕಾರಿಗಳು ತಾವು ಕೂಡ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಬೇಕೆಂದು ಬಯಸಿದರು. ಆದರೆ ಅಂದಿನ ದಿನಗಳಲ್ಲಿ ಪ್ರಭಾವೀ ನೇತಾರರಾಗಿದ್ದ ಮೋತೀಲಾಲರು (1930) "ಇಂದಲ್ಲದಿದ್ದರೆ ನಾಳೆ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಲಭಿಸುವುದು ಶತಸ್ಸಿದ್ಧ. ಬ್ರಿಟಿಷರು ತೊಲಗಿಹೋದ ಬಳಿಕ ನಾವೇ ನಮ್ಮನ್ನು ರಕ್ಷಿಸಿಕೊಳ್ಳಬೇಕಾಗುತ್ತದೆ. ಅಂಥ ದಿನ ಬಂದಾಗ ನಮ್ಮ ಉಳಿವು ನಿಮ್ಮಂಥವರನ್ನೇ ಅವಲಂಬಿಸಿರುವುದು. ಆದ್ದರಿಂದ ನೀವು ನಿಮ್ಮ ಹುದ್ದೆಗಳಲ್ಲೇ ಮುಂದುವರೆಯಿರಿ" ಎಂದು ಆದೇಶವಿತ್ತರು.

ಮುಂದೆ ಸ್ವಲ್ಪಕಾಲ ತಿಮ್ಮಯ್ಯನವರು ಬಲೂಚಿಸ್ಥಾನದ ಗಡಿನಾಡಿನಲ್ಲಿ ದುಡಿದು ಅನಂತರ ಕ್ವೆಟ್ಟಾದ ಬ್ರಿಟಿಷ್ ಸೇನಾಕೇಂದ್ರಕ್ಕೆ ವರ್ಗವಾಗಿದ್ದಾಗ ನೀನಾ ಕಾರ್ಯಪ್ಪ ಅವರನ್ನು ಮದುವೆಯಾದರು. ದಂಪತಿಗಳು ಕ್ವೆಟ್ಟಾಕ್ಕೆ ಮರಳುವ ಹೊತ್ತಿಗೆ (1935) ಆ ಇಡೀ ವಲಯ ಭೀಕರ ಭೂಕಂಪಕ್ಕೆ ಈಡಾಗಿತ್ತು. ನೊಂದ ಜನರಿಗೆ ಸಾಂತ್ವನ ನೀಡಿ ಅವರನ್ನು ಪುನರ್ವಸಿತರನ್ನಾಗಿಸುವಲ್ಲಿ ಇವರು ಅಮೋಘ ಸೇವೆ ಸಲ್ಲಿಸಿದರು. ಮುಂದೆ ತಿಮ್ಮಯ್ಯನವರು ಮದರಾಸು ವಿಶ್ವವಿದ್ಯಾಲಯದ 5ನೆಯ ಮದರಾಸು ಬೆಟಾಲಿಯನ್ ಯೂನಿವರ್ಸಿಟಿ ಟ್ರೈನಿಂಗ್ ಕೋರ್‌ನ ಅಡ್ಜುಟೆಂಟ್ ಆಗಿದ್ದರು.

ಎರಡನೆಯ ಮಹಾಯುದ್ಧ ಪ್ರಾರಂಭವಾದಾಗ ಇವರನ್ನು ಸಿಂಗಪುರಕ್ಕೆ ವರ್ಗ ಮಾಡಲಾಯಿತು (1939). ಆಗ ಅಲ್ಲಿ ಬ್ರಿಟಿಷರ ದಬ್ಬಾಳಿಕೆಯ ನೀತಿಯನ್ನು ಖಂಡಿಸಿ ಭಾರತೀಯ ಯೋಧರು ಮುಷ್ಕರ ಹೂಡಿದ್ದರು. ಅವರ ಮನವೊಲಿಸಿ ಅವರನ್ನು ಮತ್ತೆ ಕಾರ್ಯಪ್ರವೃತ್ತರನ್ನಾಗಿಸುವ ಹಾಗೂ ಅವರ ಧೃತಿ ಆತ್ಮಗೌರವಗಳನ್ನು ಪುನರ್ಭರಿಸುವ ಹೊಣೆಯನ್ನು ಇವರು ಅತ್ಯಂತ ದಕ್ಷರಾಗಿ ಸಾಧಿಸಿದರು.

1941ರಲ್ಲಿ ಭಾರತಕ್ಕೆ ಮರಳಿದ ತಿಮ್ಮಯ್ಯನವರನ್ನು ಆಗ್ರಾದಲ್ಲಿ ನೇಮಿಸಿಲಾಯಿತು. ಮರುವರ್ಷ ಸ್ವಾತಂತ್ರ್ಯ ಸಮರ ಉಲ್ಬಣಾವಸ್ಥೆಗೆ ತಿರುಗಿದಾಗ ಇವರು ಎಲ್ಲಿಯೂ ಗುಂಡುಗರೆಯದೆ ಮಾತಿನ ಮೋಡಿಯಿಂದಲೇ ಶಾಂತಿಪಾಲನೆ ಮಾಡಿದರು. ಆಗ್ರಾದಿಂದ ಸ್ವಲ್ಪ ಕಾಲ ಮಲಯಾಕ್ಕೆ ಹೋಗಿ ಅಲ್ಲಿಂದ ಮರಳಿದೊಡನೆ ಕ್ವೆಟ್ಟಾದಲ್ಲಿನ ಮಿಲಿಟೆರಿ ಸ್ಟಾಫ್ ಕಾಲೇಜಿನಲ್ಲಿ ಉನ್ನತ ಶಿಕ್ಷಣ ಪಡೆದರು. ಮುಂದೆ ಇವರು ಲೆಫ್ಟಿನೆಂಟ್ ಕರ್ನಲ್ ದರ್ಜೆ ಗಳಿಸಿ (1944) ಅರಕ್ಕಾನ್‌ನಲ್ಲಿದ್ದ 25ನೆಯ ಇಂಡಿಯನ್ ಡಿವಿಜನ್ನನ್ನು ಸೇರಿದರು. ಈ ವಲಯದ ಒಂದು ಬೆಟ್ಟ ಕೋಡಿಯ ಆಯಕಟ್ಟಿನ ಪ್ರದೇಶದಲ್ಲಿ ಜಪಾನೀಯರು ನೆಲೆಸಿ ಮಿತ್ರ ಸೈನ್ಯಗಳಿಗೆ ಘಾಸಿ ಉಂಟುಮಾಡುತ್ತಿದ್ದರು. ಇವರು ಈ ಹೋರಾಟಕ್ಕೆ

ಬೇಕಾದ ಸವಿವರ ಯೋಜನೆಯನ್ನು ತಯಾರಿಸಿ ಮೇಲಧಿಕಾರಿಗಳಿಗೆ ಸಲ್ಲಿಸಿದರು. ಇವರ ಯೋಜನೆಯನ್ನೇನೋ ಅವರು ಒಪ್ಪಿಕೊಂಡರು. ಆದರೆ ನಿಭಾಯಿಸುವ ಹೊಣೆಯನ್ನು ಬ್ರಿಟಿಷ್ ಅಧಿಕಾರಿಯೋರ್ವನಿಗೆ ವಹಿಸಿದರು. ಈ ಆಕ್ರಮಣದಲ್ಲಿ ಬ್ರಿಟಿಷ್ ಅಧಿಕಾರಿ ವಿಪರೀತ ಹೊಡೆತ ತಿಂದು ಸೋತು ಹಿಂತಿರುಗಿದ. ತಿಮ್ಮಯ್ಯನವರು ತಮ್ಮ ಸ್ವಂತ ಜವಾಬ್ದಾರಿಯ ಮೇಲೆ ತಮ್ಮ ಯೋಧರ ತಂಡದೊಡನೆ ಹೋಗಿ ಜಪಾನೀಯರನ್ನು ಸದೆಬಡಿದು ಬೆಟ್ಟದ ನೆತ್ತಿಯನ್ನು ವಶಪಡಿಸಿಕೊಂಡರು. ವರಿಷ್ಠರು ಇವರ ದಿಟ್ಟತನವನ್ನು ಶ್ಲಾಘಿಸಿದರು. ಮುಂದೆ ಬರ್ಮ ವಲಯದ ವಿವಿಧ ಕದನಗಳಲ್ಲಿ ತಿಮ್ಮಯ್ಯನವರು ಜಯಗಳಿಸಿದರು. ಯುದ್ಧರಂಗದಲ್ಲಿ ಬ್ರಿಗೇಡ್ ನಾಯಕನಾದ ಪ್ರಥಮ ಭಾರತೀಯ ತಿಮ್ಮಯ್ಯನವರೇ. ಇವರ ಹಿರಿಮೆಯನ್ನು ಗುರುತಿಸಿ ಸರ್ಕಾರ ಇವರಿಗೆ ಡಿಸ್ಟಿಂಗ್ವಿಷ್ಡ್ ಸರ್ವಿಸ್ ಆರ್ಡರ್ (ಡಿ.ಎಸ್.ಓ.) ಪ್ರಶಸ್ತಿ ನೀಡಿ ಸನ್ಮಾನಿಸಿತು.

ಮುಂದೆ ಜಪಾನೀಯರು ಶರಣಾಗತರಾದಾಗ (1946) ಸಿಂಗಪುರದಲ್ಲಿ ನಡೆದ ಶಾಂತಿಸಭೆಯಲ್ಲಿ ತಿಮ್ಮಯ್ಯನವರಿಗೆ ಹಾಜರಾಗುವ ಗೌರವ ದೊರೆತಿತ್ತು. ಜಪಾನನ್ನು ಮಿತ್ರಸೇನಾಬಲಗಳು ವಶಪಡಿಸಿಕೊಂಡಾಗ ಅಲ್ಲಿನ ಒಂದು ವಿಭಾಗದ ನಾಯಕರಾಗಿ ಇವರನ್ನು ನೇಮಿಸಲಾಯಿತು. ಆದರೆ ಇವರು ಭಾರತ ಸೇನಾಬಲಗಳ ರಾಷ್ಟ್ರೀಕರಣ ಸಮಿತಿಯನ್ನು (ನವದೆಹಲಿ) ಜನವರಿ 1947ರಲ್ಲಿ ಸೇರಿಕೊಂಡರು. ಭಾರತದ ವಿಭಜನೆಯ ದಿನಗಳಂದು ಮೇಜರ್ ಜನರಲ್ ಆಗಿದ್ದ ಇವರು ಲಾಹೋರ್ ವಿಭಾಗದಲ್ಲಿದ್ದರು. ಜಾತೀಯ ಗಲಭೆಗಳನ್ನು ತಡೆಗಟ್ಟುವುದು, ಪ್ರವಾಹ ರೂಪದಲ್ಲಿ ಬರುತ್ತಿದ್ದ ಮತ್ತು ಹೋಗುತ್ತಿದ್ದ ನಿರ್ವಸಿತರನ್ನು ಕಾಪಾಡುವುದು, ಸಾಮೂಹಿಕ ಶಾಂತಿಯನ್ನು ರಕ್ಷಿಸುವುದು ಇವೇ ಮುಂತಾದ ಹೊಣೆಯನ್ನು ಯಶಸ್ವಿಯಾಗಿ ನಿರ್ವಹಿಸಿದರು.

ಭಾರತಕ್ಕೆ ಸ್ವಾತಂತ್ರ್ಯ ಬಂದ ತರುಣದಲ್ಲಿಯೇ ನಡೆದ ಕಾಶ್ಮೀರದ ಮೇಲಿನ ದಾಳಿಯನ್ನು ಎದುರಿಸುವಲ್ಲಿ ತಿಮ್ಮಯ್ಯನವರು ದಿಟ್ಟ ಪಾತ್ರವಹಿಸಿದ್ದರು. ಶ್ರೀನಗರದಿಂದ ನಾಲ್ಕು ಮೈಲು ದೂರದವರೆಗೆ ದಾಳಿಕೋರರು ಮುಂದೊತ್ತಿಬಂದಿದ್ದ ಸನ್ನಿವೇಶದಲ್ಲಿ (ಏಪ್ರಿಲ್ 1948) ಇವರು ಪರಿಸ್ಥಿತಿಯನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಜೂನ್ 1ರಂದು ಪ್ರತಿ ಆಕ್ರಮಣಮಾಡಿ ದಾಳಿಕಾರರನ್ನು ತೊಡೆದುಹಾಕಿ ಕಾಶ್ಮೀರದಲ್ಲಿ ಶಾಂತಿ ಸ್ಥಾಪಿಸಿದರು.

ಕಾಶ್ಮೀರ ರಂಗದಿಂದ ಇವರನ್ನು ಡೆಹರಾಡೂನಿನ ನ್ಯಾಷನಲ್ ಡಿಫೆನ್ಸ್ ಅಕಾಡೆಮಿಯ ಮುಖ್ಯಾಧಿಕಾರಿಯಾಗಿ ವರ್ಗಮಾಡಿದರು. ಮುಂದೆ ಕ್ವಾರ್ಟರ್ ಮಾಸ್ಟರ್ ಜನರಲ್ ಆಗಿ ನೇಮಕಗೊಂಡರು. ಸೇನೆಯ ಸೇವಾ ವ್ಯವಸ್ಥೆಗಳಲ್ಲಿ ಇವರು ಶಾಶ್ವತವಾದ ಸುಧಾರಣೆಗಳನ್ನು ತಂದರು. 1953ರ ತರುಣದಲ್ಲಿ ಇವರು ಲೆಫ್ಟಿನೆಂಟ್ ಜನರಲ್ ಪದವಿಯನ್ನು ಪಡೆದು ಪಶ್ಚಿಮ ವಿಭಾಗದ ಮುಖ್ಯಸ್ಥರಾಗಿ ನೇಮಕಗೊಂಡರು. 1953ರ ಮೇ ತಿಂಗಳಿನಲ್ಲಿ ಭಾರತ ಸರ್ಕಾರ ಇವರನ್ನು ವಿಶ್ವಸಂಸ್ಥೆಯ ತಟಸ್ಥ ರಾಷ್ಟ್ರಗಳ ಪುನರ್ದೇಶಾವರ್ತನ ಆಯೋಗದ ಅಧ್ಯಕ್ಷರಾಗಿ ಯುದ್ಧ ಜರ್ಝರಿತ ಕೊರಿಯಕ್ಕೆ ಕಳಿಸಿತು. ಅಲ್ಲಿ ಇವರು ನಡೆದುಕೊಂಡ ರೀತಿ ಇವರಿಗೂ ಭಾರತಕ್ಕೂ ಅಪಾರ ಗೌರವವನ್ನು ತಂದಿತು. ಕೊರಿಯ ವೀರನಾಗಿ ಸ್ವದೇಶಕ್ಕೆ ಮರಳಿದ (1954) ಇವರನ್ನು ರಾಜಾಜಿಯವರು ಸೈನಿಕಋಷಿ ಎಂದು ಕರೆದರು. ಭಾರತ ಸರ್ಕಾರ ಪದ್ಮಭೂಷಣ ಪ್ರಶಸ್ತಿಯನ್ನು ನೀಡಿ ಈ ಯುದ್ಧ ವೀರ ಮತ್ತು ಶಾಂತಿದೂತನನ್ನು ಗೌರವಿಸಿತು.

1957 ಮೇ 4ರಂದು ತಿಮ್ಮಯ್ಯನವರು ಜನರಲ್ ದರ್ಜೆ ಸಮೇತ ಭಾರತದ ವರಿಷ್ಠ ಸೇನಾನಾಯಕರಾಗಿ ನೇಮಕಗೊಂಡರು. ದೇಶದ ಅವಿಭಾಜ್ಯ ಅಂಗವಾಗಿ ಸ್ವತಂತ್ರ ಭಾರತದ ಸೈನ್ಯಕ್ಕೆ ವ್ಯಕ್ತಿತ್ವವನ್ನು ಮತ್ತು ಕ್ರಿಯಾಪಾತ್ರವನ್ನು ನೀಡುವಲ್ಲಿ ಬಹುವಾಗಿ ಶ್ರಮಿಸಿದರು. ಇವರು ಏಪ್ರಿಲ್ 1961ರಲ್ಲಿ ತಮ್ಮ ಸೇನಾ ವೃತ್ತಿಯಿಂದ ನಿವೃತ್ತರಾದರು.

ಅನಂತರ ಇವರ ಸೇವೆಯನ್ನು ವಿಶ್ವಸಂಸ್ಥೆಯ ಪರವಾಗಿ ಸೈಪ್ರಸ್‌ಗೆ ನೀಡಲಾಯಿತು (1964). ಗ್ರೀಕರಿಗೂ ತುರ್ಕಿಯವರಿಗೂ ನಡುವೆ ಶಾಂತಿಪಾಲನೆ ಮಾಡುವುದು ಈ ಸೇನಾನಿಯ ಹೊಣೆಯಾಗಿತ್ತು. ಉಭಯ ಪಕ್ಷಗಳ ಪ್ರೀತಿ ವಿಶ್ವಾಸಗಳನ್ನು ಗಳಿಸಿ ತಮ್ಮ ಕಾರ್ಯವನ್ನು ಸಮರ್ಥವಾಗಿ ನೆರವೇರಿಸುತ್ತಿದ್ದರು. ಆ ವೇಳೆಯಲ್ಲಿ 1965, ಡಿಸೆಂಬರ್ 18ರಂದು ಹೃದಯಾಘಾತದಿಂದ ನಿಧನರಾದರು. (ಬಿ.ಸಿ.ಪಿ.)

**ತಿಮ್ಮರಸ :** ವಿಜಯನಗರದ ಕೃಷ್ಣದೇವರಾಯನ (1509-29) ಪ್ರಧಾನ ಮಂತ್ರಿ. ರಾಚಯ ಎಂಬುವನ ಮಗ. ವೇಮಯನ ಮೊಮ್ಮಗ. ಪೋರ್ಚುಗೀಸ್ ಪ್ರವಾಸಿಗರು ಈತನನ್ನು ತೆಮೆರಸ, ಸಾಲ್ವತಿನಿಕ, ಸಲ್ವತಿನ, ಸಲ್ವತಿಮ್ಯ ಮುಂತಾಗಿ ಹೆಸರಿಸಿದ್ದಾರೆ. ಈತನ ಪೂರ್ಣ ಹೆಸರು ಸಾಳುವ ತಿಮ್ಮಯ್ಯ. ಆದರೆ ಶಾಸನಗಳಲ್ಲಿ ಸಾಳುವತಿಮ್ಮ ಎಂದು ಕರೆಯಲಾಗಿದೆ.

1509ರಲ್ಲಿ ಸಾಳುವ ಇಮ್ಮಡಿ ವೀರನರಸಿಂಹ ತನ್ನ ಮರಣಕ್ಕೆ ಮುಂಚೆ, ತನ್ನ ಎಂಟು ವರ್ಷದ ಮಗನನ್ನು ರಾಜನನ್ನಾಗಿ ಮಾಡಲು ಪ್ರಧಾನಮಂತ್ರಿ ಸಾಳುವ ತಿಮ್ಮನ ನೆರವಿನಿಂದ ಕೃಷ್ಣದೇವರಾಯನ ಕಣ್ಣು ಕೀಳಿಸಲು ಪ್ರಯತ್ನಿಸಿದ. ಆಗ ತಿಮ್ಮ ಕೃಷ್ಣದೇವರಾಯನನ್ನು ರಕ್ಷಿಸಿದ್ದಲ್ಲದೆ ಅವನನ್ನು ಪೋಷಿಸಿ ರಾಜನನ್ನಾಗಿ ಮಾಡಿದುದರಿಂದ ಕೃಷ್ಣದೇವರಾಯ ಈತನನ್ನು ತಂದೆಯೋಪಾದಿಯಲ್ಲಿ ಕಾಣುತ್ತಿದ್ದ. ಆದುದರಿಂದ ತಿಮ್ಮರಸನಿಗೆ ಅಪ್ಪಾಜಿ ಎಂಬ ಹೆಸರು ಬಂತು.

ತಿಮ್ಮರಸನ ರಾಜಕೀಯ ತಂತ್ರ, ಕಾರ್ಯನಿರ್ವಹಣ ಶಕ್ತಿ ಮತ್ತು ಆಡಳಿತ ಕುಶಲತೆಯನ್ನು ಕೃಷ್ಣದೇವರಾಯ ಸಂಪೂರ್ಣವಾಗಿ ಉಪಯೋಗಿಸಿಕೊಂಡ. ಈತನನ್ನು ತಂತ್ರನಾಯಕನೆಂದೂ ಕರೆಯುತ್ತಿದ್ದರು. ಈತ ಪ್ರಧಾನಿ, ಪ್ರಾಂತ್ಯಾಧಿಕಾರಿ ಹಾಗೂ ಸೈನ್ಯಾಧಿಕಾರಿಯೂ ಆಗಿದ್ದ. ರಾಜನ ದಂಡಯಾತ್ರೆಗಳಲ್ಲಿ ರಾಜನೊಡನೆ ಹೋಗಿ ವಶಪಡಿಸಿಕೊಂಡ ಪ್ರದೇಶದ ಆಡಳಿತ ವ್ಯವಸ್ಥೆಮಾಡುತ್ತಿದ್ದ. ಕೊಂಡವೀಡನ್ನು ಆಕ್ರಮಿಸಿದುದಕ್ಕೆ ಪ್ರತಾಪ-ಸಾಲುವ-ತಿಮ್ಮರಸಯ್ಯ ಎಂಬ ಬಿರುದನ್ನು ಪಡೆದ. ಕೆಲಕಾಲ ಕೊಂಡವೀಡುವಿನ ಪ್ರಾಂತ್ಯಾಧಿಕಾರಿಯಾಗಿದ್ದ. ಕೃಷ್ಣದೇವರಾಯನಿಗೆ ಈತನಲ್ಲಿ ಸಂಪೂರ್ಣ ನಂಬಿಕೆ ಇದ್ದಿತು. ಆದರೆ ಕೃಷ್ಣದೇವರಾಯ ತನ್ನ ಚಿಕ್ಕ ಮಗ ತಿರುಮಲದೇವನಿಗೆ ತಿಮ್ಮರಸ ಒಮ್ಮೆ ವಿಷಪ್ರಾಶನ ಮಾಡಲು ಪ್ರಯತ್ನಿಸಿದನೆಂದು ಇವನನ್ನು ಬಹಿರಂಗವಾಗಿ ಅವಮಾನಗೊಳಿಸಿದ. ಇವನನ್ನೂ ಮತ್ತು ಇವನ ಇಬ್ಬರು ಮಕ್ಕಳನ್ನೂ ಸೆರೆಯಲ್ಲಿಟ್ಟ. ಅನಂತರ ತಿಮ್ಮರಸನ ಕಣ್ಣುಕೀಳಿಸಿದ ಎಂಬ ಹೇಳಿಕೆಯೂ ಇದೆ. (ಎ.ವಿ.ವಿ.)

**ತಿಮ್ಮಾಮಾತ್ಯ :** ಸು.1750. ರಾಮಾಭ್ಯುದಯ ಕಥಾಕುಸುಮಮಂಜರಿ ಎಂಬ ಗ್ರಂಥದ ಕರ್ತೃ. ಈತ ಬೆಂಗಳೂರು ತಾಲ್ಲೂಕಿನ ನಗರದವ ನಿರಬಹುದೆಂದು ತೋರುತ್ತದೆ.

ರಾಮಾಭ್ಯುದಯ ಕಥಾಕುಸುಮಮಂಜರಿ ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿದೆ. ಇದರಲ್ಲಿ 7 ಕಾಂಡ, 78 ಸಂಧಿ, 3,446 ಪದ್ಯ ಇವೆ. ಇದಕ್ಕೆ ಆನಂದ ರಾಮಾಯಣ ಎಂಬ ಹೆಸರೂ ಇದೆ. ಈ ಕಾವ್ಯವನ್ನು ಆನೇಕಲ್ಲು ತಾಲ್ಲೂಕು ಸಹದೇವಪುರದ (ಸಾದನಹಳ್ಳಿ) ತಿರುಮಲದೇವರ ಅಂಕಿತದಲ್ಲಿ ರಚಿಸಿದುದಾಗಿ ಕವಿ ಹೇಳಿಕೊಂಡಿದ್ದಾನೆ. ಇದು ಎಲ್ಲ ರಾಮಾಯಣಗಳ (ಅದ್ಭುತರಾಮಾಯಣ, ಮಾರ್ಕಂಡೇಯ ರಾಮಾಯಣ, ಶಂಕರರಾಮಾಯಣ, ಕೌಶಿಕರಾಮಾಯಣ, ಅಧ್ಯಾತ್ಮರಾಮಾಯಣ, ಉತ್ತರ ರಾಮಾಯಣ, ಜೈನ ರಾಮಾಯಣ ಇತ್ಯಾದಿ) ಕಥಾಸಾರವನ್ನೊಳ ಗೊಂಡಿರುವುದಲ್ಲದೆ ವರಾಹ ನೃಸಿಂಹಾವತಾರಗಳ ಮತ್ತು ರಾವಣ ದಿಗ್ವಿಜಯದ ಕಥೆಯನ್ನು ಸಹ ಬಾಲ ಕಾಂಡದಲ್ಲಿಯೇ ಸೇರಿಸಿ ಉತ್ತರ ಕಾಂಡದಲ್ಲಿ ಶ್ರೀರಾಮನ ರಾಜ್ಯಭಾರ, ದಿಗ್ವಿಜಯ, ಅಶ್ವಮೇಧ ಮೊದಲಾದ ಕಥೆಯನ್ನು ಸೇರಿಸಿ ರಚಿಸಲ್ಪಟ್ಟಿದೆ. (ಜಿ.ಜಿ.ಎಮ್.)

**ತಿರುಮಕೂಡಲು ನರಸೀಪುರ :** ಮೈಸೂರು ಜಿಲ್ಲೆಯ ಒಂದು ತಾಲ್ಲೂಕು ಮತ್ತು ಅದರ ಮುಖ್ಯಸ್ಥಳ. ಮೈಸೂರಿನ ಪೂರ್ವಕ್ಕಿರುವ ಈ ತಾಲ್ಲೂಕನ್ನು ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ, ಮಂಡ್ಯ, ಮಳವಳ್ಳಿ ತಾಲ್ಲೂಕುಗಳೂ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ, ಚಾಮರಾಜನಗರ, ಮೈಸೂರು ಜಿಲ್ಲೆಯ ಮೈಸೂರು ಮತ್ತು ನಂಜನಗೂಡು, ತಾಲ್ಲೂಕುಗಳೂ ಸುತ್ತುವರಿದಿವೆ. ಬನ್ನೂರು, ಸೋಸಲೆ, ತಿರುಮಕೂಡಲು ನರಸೀಪುರ, ಮೂಗೂರು ಮತ್ತು ತಲಕಾಡು ಹೋಬಳಿಗಳು, 133 ಗ್ರಾಮಗಳಿರುವ ಈ ತಾಲ್ಲೂಕಿನ ವಿಸ್ತೀರ್ಣ 594ಚ.ಕಿಮೀ. ಜನಸಂಖ್ಯೆ 2,78,156.

1882ರವರೆಗೆ ಈ ತಾಲ್ಲೂಕಿನ ಹೆಚ್ಚು ಪ್ರದೇಶ ತಲಕಾಡು ತಾಲ್ಲೂಕಿನಲ್ಲಿ ಸೇರಿತ್ತು. ಆ ವರ್ಷ ಹಳೆಯ ಅಷ್ಟಗ್ರಾಮ ತಾಲ್ಲೂಕಿನಿಂದ ಬನ್ನೂರು ಮತ್ತು ಬೇವಿನಹಳ್ಳಿಗಳನ್ನು ಈ ತಾಲ್ಲೂಕಿಗೂ ಇಲ್ಲಿದ್ದ ತಾಯೂರು ಹೋಬಳಿಯನ್ನು ನಂಜನಗೂಡು ತಾಲ್ಲೂಕಿಗೂ ಸೇರಿಸಿ

ತಿರುಮಕೊಡಲು ನರಸೀಪುರಕ್ಕೆ ಆಡಳಿತ ಕೇಂದ್ರವನ್ನು ವರ್ಗಾಯಿಸಲಾಯಿತು. 1886ರಲ್ಲಿ ಇಲ್ಲಿದ್ದ ಪೂರಿಗಾಲಿ ಹೋಬಳಿಯನ್ನು ಮಳವಳ್ಳಿ ತಾಲ್ಲೂಕಿಗೆ ವರ್ಗಾಯಿಸಲಾಯಿತು.

ಈ ತಾಲ್ಲೂಕು ಬಹುತೇಕ ಮೈದಾನ ಪ್ರದೇಶ. ವಿರಳವಾಗಿ ಅಲ್ಲಲ್ಲಿ ಕೆಲವು ಬೆಟ್ಟಗಳುಂಟು. ಈ ಬೆಟ್ಟಗಳಲ್ಲಿ ಮಳವಳ್ಳಿ ಎಲ್ಲೆಯ ಬಳಿ ಇರುವ ಕುಂದೂರು ಬೆಟ್ಟ ಎತ್ತರವಾದದ್ದು. ಇಲ್ಲಿನ ಹೆಚ್ಚಿನ ಪ್ರದೇಶದಲ್ಲಿ ಕಣಶಿಲೆ ತಳಶಿಲೆಯಾಗಿ ಕಂಡುಬರುತ್ತದೆ. ಈ ತಾಲ್ಲೂಕಿನ ಕುಪ್ಪ ಬಳಿ ಕೆಂಪು ಕುರಂದಶಿಲೆ ದೊರೆಯುತ್ತದೆ.

ಕಾವೇರಿ ಮತ್ತು ಕಪಿಲಾ ಈ ತಾಲ್ಲೂಕಿನ ಮುಖ್ಯ ನದಿಗಳು. ತಾಲ್ಲೂಕಿನ ವಾಯವ್ಯ ಭಾಗದಿಂದ ಕಾವೇರಿನದಿ ಬನ್ನೂರು ಹೋಬಳಿಯ ಪಶ್ಚಿಮ ಮತ್ತು ನೈಋತ್ಯದ ಎಲ್ಲೆಯಾಗಿ ದಕ್ಷಿಣಾಭಿಮುಖವಾಗಿ ಹರಿದು ತಿರುಮಕೂಡಲು ನರಸೀಪುರದವರೆಗೂ ಬಂದು ಅನಂತರ ಈಶಾನ್ಯಾಭಿಮುಖವಾಗಿ ಸ್ವಲ್ಪ ದೂರ ಹರಿದು ಮಳವಳ್ಳಿ ತಾಲ್ಲೂಕಿನ ಗಡಿಯಾಗಿ ಅನಂತರ ನೇರ ದಕ್ಷಿಣಕ್ಕೆ ಹರಿದು ತಲಕಾಡನ್ನು ಬಳಸಿ ಮತ್ತೆ ಸ್ವಲ್ಪ ದೂರ ಈಶಾನ್ಯಾಭಿಮುಖವಾಗಿ ಹರಿಯುವಾಗ ಕೊಳ್ಳೇಗಾಲ ತಾಲ್ಲೂಕನ್ನು ಬೇರ್ಪಡಿಸಿ ಮುಂದೆ ಪೂರ್ವಾಭಿಮುಖವಾಗಿ ಹರಿಯುವುದು. ನಂಜನಗೂಡಿನ ಮುಖಾಂತರ ಹರಿದು ಬರುವ ಕಪಿಲಾ ನದಿ ಈ ತಾಲ್ಲೂಕನ್ನು ಪಶ್ಚಿಮದಲ್ಲಿ ಪ್ರವೇಶಿಸಿ ಪೂರ್ವಾಭಿಮುಖವಾಗಿ ಹರಿದು ತಿರುಮಕೂಡಲ ಬಳಿ ಕಾವೇರಿನದಿಯನ್ನು ಸಂಗಮಿಸುವುದು. ಈ ತಾಲ್ಲೂಕಿನಲ್ಲಿ ಕಾವೇರಿನದಿ ಮರಳಿನಿಂದ ಕೂಡಿದ ಅಗಲವಾದ ಪಾತ್ರದಲ್ಲಿ ಹರಿಯುವುದರಿಂದ ಪ್ರವಾಹ ಕಾಲ ಬಿಟ್ಟು ಉಳಿದ ಕಾಲಗಳಲ್ಲಿ ಇದನ್ನು ಹಾಯುವುದು ಸಾಧ್ಯ. ಈ ನದಿಯ ಎರಡು ದಡಗಳಲ್ಲೂ ಪಕ್ಕದ ತಗ್ಗು ಪ್ರದೇಶಗಳಲ್ಲೂ ಕಪ್ಪುಮಣ್ಣಿನ ಭೂಮಿ ಇದೆ. ತಾಲ್ಲೂಕಿನ ಎತ್ತರದ ಪ್ರದೇಶಗಳಲ್ಲಿ ಮತ್ತು ಪಶ್ಚಿಮ ಭಾಗದಲ್ಲಿ ಭೂಮಿ ಫಲವತ್ತಾಗಿಲ್ಲ. ತಾಲ್ಲೂಕಿನಲ್ಲಿ ಅರಣ್ಯ ಪ್ರದೇಶ ಇಲ್ಲವೆನ್ನಬಹುದು. ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ 644ಮಿಮೀ.

ಈ ತಾಲ್ಲೂಕಿನ ತರಿ ವ್ಯವಸಾಯಕ್ಕೆ ಕಾವೇರಿ ನದಿ ನಾಲೆಗಳ ನೀರೇ ಮುಖ್ಯ ಆಧಾರ. ರಾಮಸ್ವಾಮಿ ಅಣೆಕಟ್ಟಿನಿಂದ ತೆಗೆದಿರುವ ಎರಡು ಕಾಲುವೆಗಳಲ್ಲಿ ಎಡದಂಡೆಯ ರಾಮಸ್ವಾಮಿನಾಲೆ ಸೋಸಲೆ, ಬನ್ನೂರು ಹೋಬಳಿಗಳ ಗದ್ದೆಗಳಿಗೆ ನೀರನ್ನು ಒದಗಿಸಿ ತಲಕಾಡಿಗೆ ಸು.13ಕಿಮೀ ದೂರದಲ್ಲಿ ಕೊನೆಗೊಳ್ಳುವುದು. ಬಲದಂಡೆಯ ರಾಜಪರಮೇಶ್ವರಿನಾಲೆ ತಾಲ್ಲೂಕಿನ ಪಶ್ಚಿಮ ಪ್ರದೇಶಕ್ಕೆ ನೀರನ್ನು ಒದಗಿಸುವುದು. ತಲಕಾಡಿನಿಂದ 3ಕಿಮೀ ಮೇಲೆ ಹೆಮ್ಮಿಗೆಯ ಬಳಿ ಇರುವ ಮಾಧವಮಂತ್ರಿ ಅಣೆಕಟ್ಟಿನಿಂದ ಹೊರಡುವ ನಾಲೆ ತಲಕಾಡಿನ ಉತ್ತರದಲ್ಲಿ ಹರಿದು ಮೂರು ಶಾಖೆಗಳಾಗಿ ಒಡೆಯುವುದು. ತಾಲ್ಲೂಕಿನಲ್ಲಿರುವ ಸುಮಾರು 35 ಕೆರೆಗಳು ನೀರಾವರಿಗೆ ಉಪಯುಕ್ತ.

ಈ ತಾಲ್ಲೂಕಿನ ಮುಖ್ಯ ಬೆಳೆ ಬತ್ತ. ಇದರೊಂದಿಗೆ ರಾಗಿ, ಜೋಳ, ಹುರಳಿ, ಹತ್ತಿ, ಹುರುಳಿ ಮುಂತಾದವನ್ನು ಬೆಳೆಯುತ್ತಾರೆ. ಸೌತೆಕಾಯಿ, ಕಲ್ಲಂಗಡಿ, ಕರಬೂಜ, ಮಾವು ಮುಂತಾದ ಹಣ್ಣುಗಳ ಜೊತೆಗೆ ಬಾಳೆ ಮತ್ತು ದ್ರಾಕ್ಷಿ ಬೆಳೆಯುತ್ತಾರೆ. ನಾನಾ ವಿಧವಾದ ತರಕಾರಿಗಳನ್ನೂ ಬೆಳೆಯುವುದುಂಟು.

ತಾಲ್ಲೂಕಿನಲ್ಲಿ ಕೈಮಗ್ಗದ ಬಟ್ಟೆ ತಯಾರಿಕೆ ಮತ್ತು ರೇಷ್ಮೆ ಹುಳು ಸಾಕಣೆ ಅಲ್ಪ ಪ್ರಮಾಣದಲ್ಲಿದ್ದು ದೊಡ್ಡ ಪ್ರಮಾಣದ ಕೈಗಾರಿಕೆಗಳು ಅಭಿವೃದ್ಧಿಯಾಗಿಲ್ಲ. ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯ ಉತ್ತೇಜನದಿಂದ ಕೆಲವೊಂದು ಗ್ರಾಮೋದ್ಯೋಗಗಳು ಮುಂದುವರಿಯುತ್ತಿವೆ.

ತಿರುಮಕೂಡಲು ನರಸೀಪುರ ತಾಲ್ಲೂಕಿನಲ್ಲಿ ರೈಲ್ವೆ ಮಾರ್ಗವಿಲ್ಲದಿದ್ದರೂ ಸುತ್ತಲ ಊರು ಮತ್ತು ಗ್ರಾಮಗಳಿಗೆ ನರಸೀಪುರದಿಂದ ಯಳಂದೂರು, ಕೊಳ್ಳೇಗಾಲ, ತಲಕಾಡು, ನಂಜನಗೂಡು, ಮೈಸೂರು, ಮಳವಳ್ಳಿ ಕಡೆಗಳಿಗೆ ಹೋಗುವ ರಸ್ತೆಗಳು ತಾಲ್ಲೂಕಿನ ಉತ್ತಮ ಸಂಪರ್ಕ ಸಾಧನಗಳಾಗಿವೆ. ಈ ತಾಲ್ಲೂಕಿನಲ್ಲಿ ತಿರುಮಕೂಡಲ ಬಳಿ ಕಾವೇರಿ ಮತ್ತು ಕಪಿಲಾ ನದಿಗಳಿಗೂ ಬನ್ನೂರಿನ ಬಳಿ ಕಾವೇರಿಗೂ ಕಟ್ಟಿರುವ ಸೇತುವೆಗಳು ಮುಖ್ಯವಾದವು.

ಈ ತಾಲ್ಲೂಕಿನಲ್ಲಿ ಇರುವ ಗರ್ಗೇಶ್ವರಿಯಲ್ಲಿ ಗರ್ಗೇಶ್ವರಿ ದೇವಾಲಯ, ಸೋಸಲೆಯ ಜನಾರ್ದನ, ಹೊಸ್ನಾದೇವಿ ದೇವಾಲಯಗಳೂ ತಲಕಾಡಿನ ಬಳಿಯ ಮುಡುಕುತೊರೆ ಬೆಟ್ಟದ ಮೇಲಿನ ಮಲ್ಲಿಕಾರ್ಜುನ ದೇವಾಲಯವೂ ಕಾವೇರಿ ಕಪಿಲಾ ನದಿಗಳು ಸೇರುವ ಸ್ಥಳವಾದ ತಿರುಮಕೂಡಲಿನಲ್ಲಿ ಅಗಸ್ತ್ಯೇಶ್ವರ ದೇವಾಲಯವೂ ಪ್ರಸಿದ್ಧವಾದವು. ಮೂಗೂರು, ಬನ್ನೂರು, ತಲಕಾಡು ಮತ್ತು ಸೋಸಲೆ ಈ ತಾಲ್ಲೂಕಿನ ದೊಡ್ಡ ಸ್ಥಳಗಳು. ಸೋಮನಾಥಪುರ ಹೊಯ್ಸಳರ ಕಾಲದ ಚನ್ನಕೇಶವ ದೇವಾಲಯದ ಪ್ರಸಿದ್ಧ. ತಲಕಾಡಿನ ಹತ್ತಿರವಿರುವ ವಿಜಯಪುರದಲ್ಲಿ ಅರ್ಕೇಶ್ವರ ದೇವಾಲಯವಿದ್ದು ಅದರಲ್ಲಿರುವ ಲಿಂಗ ತಲಕಾಡಿನ ಪಂಚಲಿಂಗಗಳಲ್ಲಿ ಒಂದಾಗಿದೆ.

ತಿರುಮಕೂಡಲು ಕಾವೇರಿ ಮತ್ತು ಕಪಿಲಾ ನದಿಗಳ ಮಧ್ಯೆ ಸಂಗಮದ ಬಳಿ ಇದೆ. ತಳದಲ್ಲಿ ಗುಪ್ತವಾದ ಸ್ಫಟಿಕ ಸರೋವರವೂ ಇಲ್ಲಿರುವುದೆಂಬ ಐತಿಹ್ಯವಿದೆಯಾಗಿ ಈ ಸಂಗಮಕ್ಕೆ ಹಾಗೂ ಸ್ಥಳಕ್ಕೆ ತಿರುಮಕೂಡಲು (ತಿರು-ಮುಕ್ಕೂಡಲ್) ಎಂಬ ಹೆಸರು ಬಂದಿದೆ. ಆಗಾಗ್ಗೆ ನದಿಯ ಪ್ರವಾಹದ ಹಾವಳಿಗೆ ಒಳಗಾಗುವುದರಿಂದ ಇಲ್ಲಿನ ಗ್ರಾಮ ಅಷ್ಟಾಗಿ ಬೆಳೆದಿಲ್ಲ. ಆದರೆ ಪವಿತ್ರ ಕ್ಷೇತ್ರಗಳಲ್ಲಿ ಒಂದೆಂದು ಪರಿಗಣಿತವಾಗಿದ್ದು ಸಾಮಾನ್ಯವಾಗಿ ವರ್ಷಪೂರ್ತ ಯಾತ್ರಾರ್ಥಿಗಳು ಸಂದರ್ಶಿಸುತ್ತಾರೆ. ಇಲ್ಲಿರುವ ಅಗಸ್ತ್ಯೇಶ್ವರ ದೇವಾಲಯ ಪ್ರಮುಖ ಆಕರ್ಷಣೆ.

ಅಗಸ್ತ್ಯಋಷಿ ಲಿಂಗಪೂಜೆ ಮಾಡಬೇಕೆಂದು ಬಯಸಿ ಹನುಮಂತನಿಗೆ ನರ್ಮದೆಯಿಂದ ಒಂದು ಲಿಂಗವನ್ನು ತರುವಂತೆ ನಿರ್ದೇಶಿಸಿದನೆಂದೂ ಆದರೆ ಹನುಮಂತ ಸರಿಯಾದ ಸಮಯಕ್ಕೆ ಬಾರದಿದ್ದುದರಿಂದ ಅಗಸ್ತ್ಯ ಸ್ವತಃ ಮರಳಿನಿಂದ ಲಿಂಗವನ್ನು ನಿರ್ಮಿಸಿ ಪೂಜಿಸಿದನೆಂದೂ ಪೌರಾಣಿಕ ಐತಿಹ್ಯ. ಇದೇ ಅಗಸ್ತ್ಯೇಶ್ವರ ಮೂಲಲಿಂಗ. ಹನುಮಂತ ಹಿಂತಿರುಗಿ ಬಂದು ಈ ಕಾರ್ಯವನ್ನು ನೋಡಿ ಕೋಪಗೊಂಡು ಈ ಲಿಂಗವನ್ನು ಬೇರುಸಹಿತ ಕಿತ್ತೆಸೆಯಲು ಉದ್ಯುಕ್ತನಾದನೆಂದೂ ಆದರೆ ಈತನ ಬಲ ಸಾಧ್ಯವಾಗಲಿಲ್ಲವೆಂದೂ ಲಿಂಗ ಬಹಳ ಕಚ್ಚುಕಚ್ಚಾಗಿ ತಲೆಯ ಮೇಲೆ ಮೂರು ಪೊಳ್ಳುಗಳುಂಟಾದವೆಂದೂ ಕಥೆ. ಈಗ ಪೊಳ್ಳು ಯಾವಾಗಲೂ ಜಲಭರಿತವಾಗಿರುತ್ತದೆ. ಪವಿತ್ರವಾದ ಈ ಜಲವನ್ನು ಭಕ್ತಾದಿಗಳಿಗೆ ಹಂಚುತ್ತಾರೆ. ಹನುಮಂತ ತಂದ ಲಿಂಗವನ್ನು ಅನಂತರ ಹನುಮಂತೇಶ್ವರ ದೇವಾಲಯದಲ್ಲಿ ಸ್ಥಾಪಿಸಲಾಯಿತಂತೆ.



ಅಗಸ್ತ್ಯೇಶ್ವರ ದೇವಾಲಯ

ಅಗಸ್ತ್ಯೇಶ್ವರ ದೇವಾಲಯ ದ್ರಾವಿಡ ಶೈಲಿಯಲ್ಲಿರುವ ಕಟ್ಟಡ. ಗರ್ಭಗುಡಿ ಸೇರಿದಂತಿರುವ ಮೂಲಭಾಗ ಬಹುಶಃ 10-11ನೆಯ ಶತಮಾನದ ನಿರ್ಮಾಣ. ಮುಂದಿರುವ ನವರಂಗ ಮಂಟಪ ಸ್ವಲ್ಪಕಾಲಾನಂತರದಲ್ಲಿ ಕಟ್ಟಲಾದುದು. ಇದರಲ್ಲಿನ ಅನೇಕ ಕಂಬಗಳ ಮೇಲೆ ಪಿಟೀಲುವಾದಕಿ, ದುರ್ಗಾ ಮೊದಲಾದ ಸುಂದರ ಶಿಲ್ಪಗಳಿವೆ. ನವರಂಗದಲ್ಲಿ ಸುಬ್ರಹ್ಮಣ್ಯ, ಹೊಯ್ಸಳ ಕಾಲದ ಮಹಿಷಾಸುರಮರ್ದಿನಿ, ಸೂರ್ಯ ಮೊದಲಾದ ಶಿಲಾಶಿಲ್ಪಗಳಿವೆ. ವಿಜಯನಗರ ಕಾಲದ ಕೆಲವು ಕಂಚಿನ ವಿಗ್ರಹಗಳೂ ಇಲ್ಲವೆ. ಇದರ ಉತ್ತರದಲ್ಲಿರುವ ಒಂದು ಕೋಣೆಯಲ್ಲಿ ಉತ್ಸವಮೂರ್ತಿ

ಇದೆ. ಈ ಮೂಲಗುಡಿಯ ವಾಯವ್ಯದಲ್ಲಿ ಪಾರ್ವತಿ ಗುಡಿ ಇದೆ. ಇದು ಪಾಳೆಯಗಾರರ ಕಾಲದ ನಿರ್ಮಾಣ. ಈ ದೇವಿಯನ್ನು ಪೂರ್ಣಮಂಗಳ ಕಾಮಾಕ್ಷಿಯೆಂದು ಕರೆಯುತ್ತಾರೆ. ಈಕೆಯ ವಿಗ್ರಹ ಸುಂದರವಾಗಿದ್ದು ಸುಮಾರು ನಾಲ್ಕು ಅಡಿ ಎತ್ತರವಿದೆ. ಸುತ್ತಲೂ ಪ್ರಾಕಾರದ ಒಳಭಾಗದಲ್ಲಿ ನಂದಿ, ವಿಷ್ಣು, ದಕ್ಷಿಣಾಮೂರ್ತಿ ಮೊದಲಾದ ಅನೇಕ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದೆ. ಇಲ್ಲಿರುವ ಅಶ್ವತ್ಥನಾರಾಯಣನ ಮೂರ್ತಿ ವಿಶಿಷ್ಟ ಕೃತಿ. ಇದು ಸುಮಾರು ಎರಡು ಅಡಿ ಎತ್ತರವಾಗಿದ್ದು ನೃತ್ಯಭಂಗಿಯಲ್ಲಿದ್ದು ಅಷ್ಟಕರಗಳಿಂದ ಕೂಡಿದೆ. ದೇವಾಲಯದಲ್ಲಿ ಅಗಸ್ತ್ಯೇಶ್ವರ ಲಿಂಗವಲ್ಲದೆ ಸೋಮೇಶ್ವರ ಮತ್ತು ಮಾರ್ಕಂಡೇಶ್ವರ ಲಿಂಗಗಳೂ ಇವೆ. ಮುಂದಿರುವ ಮಹಾದ್ವಾರದ ಮೇಲೆ ಚಿಕ್ಕ ಗೋಪುರವಿದೆ. ದೇವಾಲಯದ ಮುಂದೆ ಒಂದು ದೊಡ್ಡ ಉಯ್ಯಾಲೆ ಕಂಬ (ತೋರಣ) ಮತ್ತು ಎರಡು ಎತ್ತರದ ದೀಪಸ್ತಂಭಗಳಿವೆ.

ದೇವಾಲಯದ ಹೊರಗಡೆ ಇರುವ ಅಶ್ವತ್ಥಮರ (ಅಶ್ವತ್ಥನಾರಾಯಣ) ಬಹು ಪವಿತ್ರವಾದುದೆಂದು ನಂಬಿಕೆ. ಇದು ಅನಾದಿಯಿಂದಲೂ ಇದೆಯೆಂದು, ಇದನ್ನು ಮೊದಲು ಬ್ರಹ್ಮ ಪೂಜಿಸಿದನೆಂದು ಪ್ರತೀತಿ. ಇದರ ಸುತ್ತ ಅನೇಕ ನಾಗರಕಲ್ಲುಗಳನ್ನೂ ಹನುಮಂತ ವಿಗ್ರಹಗಳನ್ನೂ ಪ್ರತಿಷ್ಠಾಪಿಸಿದೆ. ಇದರ ಸಮೀಪದಲ್ಲೇ ವ್ಯಾಸರಾಯ ಮಠವಿದ್ದು ಅದರಲ್ಲಿ ಆ ಮಠದ ಕೆಲವು ಗುರುಗಳ ಬೃಂದಾವನಗಳಿವೆ. ತಿರುಮಕೂಡಲಿನ ಎದುರಿಗೆ ಕಾವೇರಿಯ ಎಡದಂಡೆಯಲ್ಲಿ ಆನಂದೇಶ್ವರ, ಭಿಕ್ಷೇಶ್ವರ ಎಂಬ ಎರಡು ಶಿವಾಲಯಗಳಿವೆ. ಆನಂದೇಶ್ವರ ದೇವಾಲಯವನ್ನು ಸು. 18ನೆಯ ಶತಮಾನದಲ್ಲಿ ಚಿದಾನಂದಸ್ವಾಮಿ ಎಂಬ ಯತಿ ಕಟ್ಟಿಸಿದನೆಂದು ಹೇಳಲಾಗುತ್ತದೆ. (ಎಂ.ಎಲ್.ಎಸ್.)

ತಿರುಮಕೂಡಲು ನರಸೀಪುರ ತಾಲ್ಲೂಕಿನ ಆಡಳಿತ ಕೇಂದ್ರ ಮತ್ತು ದೊಡ್ಡ ಊರು. ಮೈಸೂರು ನಗರದಿಂದ ಆಗ್ನೇಯದಲ್ಲಿ 30ಕಿಮೀ ದೂರದಲ್ಲಿ ಕಾವೇರಿ ಕಪಿಲಾ ನದಿಗಳ ಸಂಗಮದ ಬಳಿ ಬಲದಂಡೆಯ ಮೇಲಿದೆ. 1868ರಿಂದ ಇದು ತಾಲ್ಲೂಕು ಕೇಂದ್ರವಾಗಿ 1882ರಲ್ಲಿ ಇದರ ಹೆಸರು ತಾಲ್ಲೂಕಿಗೂ ಬಂತು. ಜನಸಂಖ್ಯೆ 9930.

ತಿರುಮಕೂಡಲನ್ನೂ ನರಸೀಪುರವನ್ನೂ ಸೇರಿಸುವ ಸೇತುವೆಯೊಂದನ್ನು ಕಪಿಲಾ ನದಿಗೆ ಅಡ್ಡಲಾಗಿ ಕಟ್ಟಲಾಗಿದೆ. ತಿರುಮಕೂಡಲಿನಿಂದ ಕಾವೇರಿಯ ಎಡದಂಡೆಗೂ ಒಂದು ಸೇತುವೆ ಇದೆ. ಸುತ್ತಲ ಊರುಗಳೊಡನೆ ಉತ್ತಮ ರಸ್ತೆ ಸಂಪರ್ಕವನ್ನು ಹೊಂದಿರುವ ಈ ಊರು ಈ ಭಾಗಕ್ಕೆ ಮುಖ್ಯ ವ್ಯಾಪಾರಸ್ಥಳ. ಪುರಸಭೆ ಇದೆ. ಇಲ್ಲಿ ಒಂದು ರೇಷ್ಮೆ ನೂಲಿನ ಕಾರ್ಖಾನೆ ಸಹ ಇದೆ. (ಎಚ್.ಜಿ.)



ಗುಂಜಾನರಸಿಂಹ ದೇವಾಲಯ

ನರಸೀಪುರಕ್ಕೆ ಈ ಹೆಸರು ಬಂದಿರುವುದು ಇಲ್ಲಿಯ ಗುಂಜಾನರಸಿಂಹ ದೇವಾಲಯದಿಂದಾಗಿ. ಊರಿನ ಉತ್ತರಕ್ಕೆ ನದಿಯ ದಂಡೆಯಲ್ಲಿ ಉತ್ತರಾಭಿಮುಖವಾಗಿರುವ ಈ ದೇವಾಲಯ ಸುಮಾರು ದೊಡ್ಡ ಕಟ್ಟಡ. ಈ ದೇವಾಲಯ ವಿಜಯನಗರದ ಕಾಲದ ರಚನೆ. ಇಲ್ಲಿ ದೊರೆತಿರುವ ಪ್ರಾಚೀನತಮ ಶಾಸನ ಕೃಷ್ಣದೇವರಾಯನ ಕಾಲದ್ದಾಗಿದ್ದು ದೇವಾಲಯಕ್ಕೆ ನೀಡಿದ ದತ್ತಿಯ ವಿಚಾರವನ್ನು ತಿಳಿಸುತ್ತದೆ. ಮೂಗೂರ ಅರಸರು ಹಾಗೂ ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು ಈ ದೇವಾಲಯವನ್ನು ಮತ್ತಷ್ಟು ವಿಸ್ತರಿಸಿದರು. ದ್ರಾವಿಡ ಶೈಲಿಯಲ್ಲಿ ನಿರ್ಮಿತವಾಗಿರುವ ಈ ದೇವಾಲಯ ಗರ್ಭಗೃಹ, ಸೊಗಸಾದ ಮಂಟಪ, ಪ್ರಾಕಾರ, ಮಹಾದ್ವಾರ ಮತ್ತು ಗೋಪುರ - ಇವುಗಳಿಂದ ಕೂಡಿದ ವಿಶಾಲ ಕಟ್ಟಡ. ಮಂಟಪದ ಮುಂದೆ ಬಲಿಪೀಠದ ಬಳಿ ಪರಸ್ಪರ ಎದುರಿರುವ ಕಂಬಗಳ ಮೇಲೆ ತುಂಬ ಅಲಂಕೃತವಾದ, ಅಂಜಲಿಬದ್ಧವಾಗಿ ನಿಂತಭಂಗಿಯಲ್ಲಿರುವ ಮತ್ತು ಗಡ್ಡಧಾರಿಯಾದ ಎರಡು ಮೂರ್ತಿಗಳನ್ನು ಕೆತ್ತಿದೆ. ಇವು ಮೂಗೂರ ಅರಸ ಹಾಗೂ ದೇವಾಲಯದ ಈ ಭಾಗವನ್ನು ಕಟ್ಟಿಸಿದ ಅವನ ಸೋದರರನ್ನು ಪ್ರತಿನಿಧಿಸುತ್ತವೆಂದು ಹೇಳಲಾಗಿದೆ. ಇದೇ ರೀತಿ ಮಹಾದ್ವಾರದ ಬಳಿ ಇರುವ ಮೂರ್ತಿಯೊಂದು ಗೋಪುರವನ್ನು ಕಟ್ಟಿಸಿದ ಇನ್ನೊಬ್ಬ ಮೂಗೂರ ಅರಸನನ್ನು ಪ್ರತಿನಿಧಿಸುತ್ತದೆ. ದೇವಾಲಯದ ಪ್ರಾಕಾರದೊಳಗೆ ರಾಮ, ಕೃಷ್ಣ, ವರದರಾಜ, ಆಂಡಾಳ್ ಮುಂತಾದ ಮೂರ್ತಿಗಳನ್ನೊಳಗೊಂಡ ಕೆಲವು ಚಿಕ್ಕ ಗುಡಿಗಳಿವೆ. ದೇವಾಲಯದ ಸುತ್ತ ಇರುವ ಮೇಲ್ಭಾಗದ ಕೈಪಿಡಿಗೋಡೆಯಲ್ಲಿ ವಿಷ್ಣುವಿನ ವಿವಿಧ ರೂಪ ಮತ್ತು ಅವತಾರಗಳ ಗಾರೆಯ ಮೂರ್ತಿಗಳಿವೆ. ಕೆಲವು ಮೂರ್ತಿಗಳ ಕೆಳಗೆ ಹೆಸರುಗಳನ್ನೂ ಕೆತ್ತಿದೆ. ಕೃಷ್ಣನ ಲೀಲೆಗಳನ್ನು ವಿವರಿಸುವ ಮೂರ್ತಿಗಳೂ ಇಲ್ಲಿವೆ. ಕೆಲವು ವಿಚಿತ್ರ ಮೂರ್ತಿಗಳು ಅಲ್ಲಲ್ಲಿ ಕಾಣಸಿಗುತ್ತವೆ. ದಕ್ಷಿಣ ಹಾಗೂ ಪಶ್ಚಿಮದ ಕೈಪಿಡಿ ಗೋಡೆಯಲ್ಲಿ ಹಿರಣ್ಯಕಶಿಪು ಸಂಹಾರ, ಯೋಗಾನರಸಿಂಹ, ಲಕ್ಷ್ಮೀನರಸಿಂಹ, ಅಷ್ಟಪಾಣಿ ನರಸಿಂಹ ಇತ್ಯಾದಿಯಾಗಿ ನರಸಿಂಹನ ಒಂಬತ್ತು ವಿವಿಧ ರೂಪಗಳನ್ನು ಚಿತ್ರಿಸಲಾಗಿದೆ.

ಮೂಲದೇವರಾದ ನರಸಿಂಹನ ಬಲಗೈಯ ಹೆಬ್ಬೆರಳು ಮತ್ತು ತೋರುಬೆರಳುಗಳ ನಡುವೆ ಗುಂಜಾಸಸ್ಯದ ಕಾಂಡವೊಂದನ್ನು ಬಿಡಿಸಲಾಗಿದೆ. ಈ ಕ್ಷೇತ್ರ ಪಾವಿತ್ರ್ಯದಲ್ಲಿ ಕಾಶಿಗಿಂತ ಒಂದು ಗುಂಜಿ ತೂಕ ಹೆಚ್ಚು ಎಂಬ ಅಂಶವನ್ನು ಇದು ಸೂಚಿಸುತ್ತದೆಂಬ ನಂಬುಗೆ ಇದೆ. ಈ ದೇವಾಲಯದ ಎಡಭಾಗಕ್ಕೆ ಅನತಿ ದೂರದಲ್ಲಿ ಸೊಗಸಾದ ಜನಾರ್ದನ ಮೂರ್ತಿಯುಳ್ಳ ಚಿಕ್ಕ ಗುಡಿಯೊಂದಿದೆ. ಅದರ ಪಶ್ಚಿಮಕ್ಕೆ 1855ರಲ್ಲಿ ನಿರ್ಮಿತವಾದ ಪ್ರಹ್ಲಾದ ಮಂಟಪವಿದೆ.

ಊರಿನ ಪೂರ್ವಕ್ಕೆ ನದಿ ದಂಡೆಯಲ್ಲಿ ಮೂಲಸ್ಥಾನೇಶ್ವರ ಗುಡಿ ಇದೆ. ಇದು ಬಹುಶಃ 1300ರ ರಚನೆಯಾಗಿದ್ದು ಅನಂತರ 19ನೆಯ ಶತಮಾನದಲ್ಲಿ ಪುನರ್ನಿರ್ಮಿತವಾದ ದ್ರಾವಿಡ ಶೈಲಿಯ ಚಿಕ್ಕ ಗುಡಿ. (ಎಚ್.ಎಂ.ಎನ್.ಆರ್.)

ತಿರುಮಕೂಡಲು ನರಸೀಪುರದ ಎದುರಿಗೆ ಕಾವೇರಿ ನದಿಯ ಎಡದಂಡೆಯ ಮೇಲೆ ಒಂದು ಪುರಾತನ ನಿವೇಶನವಿದೆ. ಇದನ್ನು ರಾಬರ್ಟ್ ಬ್ರೂಸ್‌ಫುಟ್ 19ನೆಯ ಶತಮಾನದ ಉತ್ತರಾರ್ಧದಲ್ಲಿ ಮೊಟ್ಟ ಮೊದಲಿಗೆ ಕಂಡುಹಿಡಿದ. ಈ ಪ್ರಾಕ್ತನ ನೆಲೆಯಲ್ಲಿ ಎಂ.ಶೇಷಾದ್ರಿಯವರ ನೇತೃತ್ವದಲ್ಲಿ ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಸಂಶೋಧನ ಇಲಾಖೆ 1959 ರಿಂದ 1965ರ ವರೆಗೆ 6 ವರ್ಷಗಳ ಕಾಲ ಉತ್ಖನನ ನಡೆಸಿತು (1959-65). ಅದರ ಫಲವಾಗಿ ಕ್ರಿ.ಪೂ.2000 ವರ್ಷಗಳಷ್ಟು ಹಿಂದೆ ಈ ಪ್ರದೇಶದಲ್ಲಿ ಅಸ್ತಿತ್ವಕ್ಕೆ ಬಂದ ನವಶಿಲಾಯುಗ ಸಂಸ್ಕೃತಿಯಿಂದ ಆರಂಭಿಸಿ ಕಬ್ಬಿಣಯುಗ ಮತ್ತು ಇತಿಹಾಸಯುಗದ ಪ್ರಾರಂಭ ಹಂತವನ್ನೂ ಒಳಗೊಂಡಂತೆ ಕ್ರಿ.ಶ.200-300ರ ವರೆಗಾದರೂ ಜನವಸತಿ ಇದ್ದ ವಿಷಯವಲ್ಲದೆ ಆ ಸಂಸ್ಕೃತಿಗಳ ಅನೇಕ ವಿವರಗಳೂ ತಿಳಿದುಬಂದವು. (ಬಿ.ಕೆ.ಜಿ.)

**ತಿರುಮಲಭಟ್ಟ :** ಸು.1600. ಬ್ರಾಹ್ಮಣಕವಿ. ಶಿವಗೀತೆ ಎಂಬ ಗ್ರಂಥದ ಕರ್ತೃ. ಈತ ಕೆಳದಿಯ ದೊರೆ ವೆಂಕಟಪ್ಪನಾಯಕನ (1582-1629) ಆಶ್ರಯದಲ್ಲಿದ್ದು ಆತನ ಪ್ರೇರಣೆಯ ಮೇರೆಗೆ ಶಿವಗೀತೆಯನ್ನು ರಚಿಸಿದುದಾಗಿ ತಿಳಿದುಬರುತ್ತದೆ. ಈತನ ತಂದೆ

ವಿಷ್ಣುಸೂರಿ. ಮಗ ಶಂಭುಲಿಂಗಭಟ್ಟ (ಈ ಶಂಭುಲಿಂಗಭಟ್ಟನಿಗೆ ವೆಂಕಟಪ್ಪನಾಯಕನ ಮೊಮ್ಮಗನಾದ ವೀರಭದ್ರನಾಯಕ ಭೂದಾನ ಮಾಡಿದುದಾಗಿ 1631ರ ಸಾಗರದ 41ನೆಯ ಶಾಸನ ತಿಳಿಸುತ್ತದೆ).

ಶಿವಗೀತೆ ವಾರ್ಧಕ ಷಟ್ಪದಿಯಲ್ಲಿದೆ. ಇದರಲ್ಲಿ ಹದಿನಾರು ಸಂಧಿಗಳೂ ಮುನ್ನೂರ ಎಪ್ಪತ್ತೇಳು ಪದ್ಯಗಳೂ ಇವೆ. ಕೃತಿ ಪದ್ಮ ಪುರಾಣದ ಉತ್ತರಕಾಂಡದಲ್ಲಿರುವ ಶಿವಗೀತೆಯ ಭಾಷಾಂತರ. ಕವಿ ಹೀಗೆ ಪದ್ಮಪುರಾಣದ ಶಿವಗೀತೆಯನ್ನು ಭಾಷಾಂತರಿಸಿದ ವಿಷಯವನ್ನು ಕೆಳದಿನೃಪವಿಜಯದಲ್ಲಿ ಉಲ್ಲೇಖಿಸಲಾಗಿದೆ. ತೆಂಗಿನಕಾಯಿಯು ಒಳಗೆ ಅಮೃತಕ್ಕೆ ಸಮಾನವಾದ ತಿರುಳಿದ್ದರೂ ಗಿಳಿಗಳ ಹಿಂಡು ಹೊರಗೆ ಒರಟು ಸಿಪ್ಪೆ ಕರಟಗಳಿರುವುದನ್ನು ನೋಡಿ ಅದನ್ನು ಮುಟ್ಟದೆ ಬೇರೆ ಫಲಗಳನ್ನು ಅರಸುವಂತೆ ಅರಸಿಕರಾದ ಜನ ಒಳ್ಳೆಯ ಅರ್ಥವಿದ್ದರೂ ಕಠಿಣವಾದ ಕೃತಿಗಳನ್ನು ಗಮನಿಸುವುದಿಲ್ಲ. ಆದ್ದರಿಂದ ಎಲ್ಲರಿಗೂ ತಿಳಿಯುವಂತೆ ಮೃದುಪದಗಳಿಂದ, ಋಜುಮಾರ್ಗದಿಂದ ಈ ಕೃತಿಯನ್ನು ರಚಿಸಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. ತನ್ನ ಗ್ರಂಥ ಭಗವದ್ಗೀತೆಗೆ ಸಮಾನವಾದುದೆಂದೂ ಅಭಿಪ್ರಾಯಪಟ್ಟಿದ್ದಾನೆ. ಈತನ ಕಾವ್ಯಶೈಲಿ ಸರಳವಾಗಿದೆ. ಭಾಷಾಂತರವಾದರೂ ಇದರಲ್ಲಿ ಕವಿ ಸ್ವಂತಿಕೆಯನ್ನು ಮೆರೆದಿದ್ದಾನೆ. ಈತನ ಕಲ್ಪನಾವಿಲಾಸ, ವರ್ಣನಾವೈಖರಿ, ಮೃದುಪದ ಪ್ರಯೋಗ, ಪ್ರಾಸಾನು ಪ್ರಾಸಗಳ ಬಳಕೆ ಓದುಗರಿಗೆ ಹಿತವನ್ನುಂಟುಮಾಡುವಂತಿದೆ. (ಎಂ.ಸಿ.ವಿ.)

**ತಿರುಮಲರಾಯ I :** ವಿಜಯನಗರ ಸಾಮ್ರಾಜ್ಯದ ಆರವೀಡು ವಂಶದ ರಾಜ (1570-78). ಆ ವಂಶದ ಸ್ವತಂತ್ರ ಆಳಿಕೆಯ ಸ್ಥಾಪಕ. ಇವನು ಅಳಿಯ ರಾಮರಾಯನ ಸೋದರ. ಅಖಂಡ ವಿಜಯನಗರ ಸಾಮ್ರಾಜ್ಯದ ಕೊನೆಯ ಅರಸು ಸದಾಶಿವನ ಕಾಲದಲ್ಲಿ ಇವನು ತನ್ನ ಸೋದರರೊಂದಿಗೆ ರಾಜ್ಯದ ಆಡಳಿತದಲ್ಲಿ ಪ್ರಮುಖ ಪಾತ್ರವಹಿಸಿದ. ರಾಮರಾಜನಿಗೆ ಬೆಂಬಲವಾಗಿ ನಿಂತು ಸೈನಿಕ ಕಾರ್ಯಾಚರಣೆಗಳನ್ನು ನಡೆಸುತ್ತಿದ್ದ. 1565ರಲ್ಲಿ ನಡೆದ ತಾಳೀಕೋಟೆ ಯುದ್ಧದಲ್ಲಿ ಬಹಮನೀ ಸುಲ್ತಾನರಿಂದ ಆಕಸ್ಮಿಕ ಪರಾಜಯವನ್ನು ಅನುಭವಿಸಬೇಕಾಗಿಬಂದಾಗ ಅಳಿದುಳಿದ ಸಂಪತ್ತನ್ನು ಸಂಗ್ರಹಿಸಿ ರಾಜಮನೆತನದವರನ್ನು ಕೂಡಿಕೊಂಡು ಇವನು ತಿರುಮಲೆಗೆ ಓಡಿಹೋದ. ಸುಲ್ತಾನರು ಹಂಪೆಯನ್ನು ತೊರೆದಾಗ ಇವನು ಮರಳಿ ಬಂದು ರಾಜಧಾನಿಯ ಪುನರುಜ್ಜೀವನಕ್ಕೆ ಅಗಾಧ ಪ್ರಯತ್ನ ನಡೆಸಿದನೆಂದು ತಿಳಿದುಬರುತ್ತದೆ. ಪೋರ್ಚುಗೀಸರೊಂದಿಗೆ ಪುನಃ ವ್ಯಾಪಾರ ಸಂಬಂಧವನ್ನು ಕುದುರಿಸಲು ಯತ್ನಿಸಿದ. ಆದರೆ ಅವರಿಗೆ ಕೊಡಬೇಕಾದ ಬಾಕಿಯನ್ನು ಕೊಡಲು ತಪ್ಪಿದುದರಿಂದ ಈ ಸಂಬಂಧ ಹಳಸಿತು. ಬಹಮನೀ ಸುಲ್ತಾನರು ವಿಜಯದ ತರುವಾಯ ಬಹುಬೇಗ ತಮ್ಮತಮ್ಮಲ್ಲೇ ಭಿನ್ನಾಭಿಪ್ರಾಯ ತಳೆದಿದ್ದುದರಿಂದ ಅವರೆಲ್ಲರ ಒಟ್ಟಿನ ದಾಳಿಯ ಅಪಾಯದಿಂದ ತಿರುಮಲ ತಪ್ಪಿಸಿಕೊಂಡ. ಆದರೆ ಬಿಜಾಪುರದ ಸುಲ್ತಾನ ಆಗಾಗ ವಿಜಯನಗರ ಸಾಮ್ರಾಜ್ಯದ ಮೇಲೆ ದಾಳಿಗಳನ್ನು ನಡೆಸುತ್ತಿದ್ದ. ಇವೆಲ್ಲದರಿಂದ ಬೇಸತ್ತ ತಿರುಮಲ 1567ರ ಜುಲೈನಲ್ಲಿ ಅಂತಿಮವಾಗಿ ರಾಜಧಾನಿಯನ್ನು ಪೆನುಕೊಂಡೆಗೆ ಬದಲಾಯಿಸಿದ.

ಆಡಳಿತ ಸೂತ್ರ ತಿರುಮಲನ ಕೈಯಲ್ಲಿ ಇದ್ದರೂ ಸದಾಶಿವರಾಯ ನಾಮಮಾತ್ರ ದೊರೆಯಾಗಿದ್ದ. ಸದಾಶಿವ 1570ರಲ್ಲಿ ಮರಣಹೊಂದಿದ ಮೇಲೆ ತಿರುಮಲ ಸ್ವತಃ ಸಾರ್ವಭೌಮನೆಂದು ಘೋಷಿಸಿಕೊಂಡ. ಅವನನ್ನು ತಿರುಮಲನ ಮಗನೇ ಕೊಂದನೆಂದು ಕೆಲವು ವಿದ್ವಾಂಸರ ಅಭಿಪ್ರಾಯ. ಇವನ ಆಳಿಕೆಯಿಂದ ಅರವೀಡುವಂಶದ ಉದಯವಾಯಿತು. 1560ರಲ್ಲಿಯೇ ಇವನು ಸಾಮ್ರಾಜ್ಯವನ್ನು ಮೂರು ಮಂಡಲಗಳನ್ನಾಗಿ ವಿಂಗಡಿಸಿದ್ದ. ತನ್ನ ಮಕ್ಕಳಾದ ಶ್ರೀರಂಗ, ರಾಮ ಮತ್ತು ವೆಂಕಟಾದ್ರಿಗಳನ್ನು ಕ್ರಮವಾಗಿ ಪೆನುಕೊಂಡೆ, ಶ್ರೀರಂಗಪಟ್ಟಣ ಮತ್ತು ಚಂದ್ರಗಿರಿಗಳಿಗೆ ಮಂಡಲಾಧಿಪತಿಗಳನ್ನಾಗಿ ನೇಮಿಸಿದ್ದ. ತಿರುಮಲ 1578ರಲ್ಲಿ ತನ್ನ ಮಗ ಶ್ರೀರಂಗನಿಗೆ ಸಿಂಹಾಸನವನ್ನು ಬಿಟ್ಟುಕೊಟ್ಟು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದನೆನ್ನುವ ಹಾಗೂ ಅದೇ ವರ್ಷ ನಿಧನಹೊಂದಿದ ಎಂದು ಹೇಳುವ ಅಭಿಪ್ರಾಯಗಳೂ ಇವೆ.

ಇವನ ಕಾಲದಲ್ಲಿ ಮದುರೆ, ತಂಜಾವೂರು ಮತ್ತು ಜಿಂಜಿ ಸಾಮಂತರು ಸ್ವತಂತ್ರರಾದರು. ಕೆಳದಿ, ವೆಲ್ಲೂರಿನ ನಾಯಕರು ಮತ್ತು ಮೈಸೂರಿನ ಒಡೆಯರು ಪೆನುಕೊಂಡೆಗೆ ನಿಷ್ಠರಾಗಿದ್ದರು. ಬಿಜಾಪುರದ ಅಲಿ ಆದಿಲ್ ಷಾ ಈ ಕಾಲದಲ್ಲಿ ತನ್ನ ರಾಜ್ಯವನ್ನು ದಕ್ಷಿಣದತ್ತ ವಿಸ್ತರಿಸುವ ಹವಣಿಕೆಯಲ್ಲಿದ್ದ. ಧಾರವಾಡ ಆದಿಲ್ ಷಾನ ವಶವಾಯಿತು. ಅವನ ಸೈನ್ಯ ಬಂಕಾಪುರದವರೆಗೂ ಮುನ್ನಡೆದು ಶ್ರೀರಂಗನ ಕಾಲಕ್ಕೆ ಅದನ್ನು ವಶಪಡಿಸಿಕೊಂಡಿತು. ತಿರುಮಲ ಆ ಕಾಲದಲ್ಲಿ ರಾಜ್ಯದ ಹೊಣೆ ಹೊರುವಷ್ಟು ದಕ್ಷನಾಗಿರಲಿಲ್ಲವೆಂಬ ಅಭಿಪ್ರಾಯವಿದೆ. ಆದರೂ ನಿರ್ನಾಮ ವಾಗಬೇಕಾಗಿದ್ದ ವಿಜಯನಗರದ ರಾಜತ್ವವನ್ನು ಉಳಿಸಿ ಮುಂದೆ ಹಲವು ವರ್ಷಗಳ ಕಾಲ ಆಳಿದ ಹೊಸ ಅರವೀಡು ವಂಶದ ಸ್ಥಾಪನೆಗೆ ಕಾರಣವಾದ ಹೆಗ್ಗಳಿಕೆಗೆ ಇವನು ಪಾತ್ರನಾಗುತ್ತಾನೆ. ಸಾಮಂತರನ್ನು ಕುಶಲಮತಿಯಿಂದ ನಡೆಸಿಕೊಂಡು ಅವರ ವಿಶ್ವಾಸ ಗಳಿಸಿಕೊಂಡಿದ್ದು, ಒರಿಸ್ಸ ಮತ್ತು ಆಂಧ್ರದಲ್ಲಿ ನಡೆದ ಕೆಲವು ದಂಗೆಗಳನ್ನು ಅಡಗಿಸಿದು. ಆಡಳಿತ ಸುಭದ್ರತೆಯನ್ನು ಕಾಯ್ದುಕೊಳ್ಳಲು ರಾಜ್ಯವನ್ನು ಮಂಡಲಗಳಾಗಿ ವಿಭಜಿಸಿದ್ದು, ಅಹಮದ್ ನಗರದ ರಾಜಮಾತೆಯ ಸಹಕಾರ ಪಡೆದು ಮುಸ್ಲಿಂ ಆಕ್ರಮಣಗಳನ್ನು ನಿಯಂತ್ರಿಸಿದ್ದು ಇವೆಲ್ಲ ಇವನ ಸಾಧನೆಗೆ ನಿದರ್ಶನಗಳಾಗಿವೆ. (ಡಿ.ಎಸ್.ಜಿ.)

**ತಿರುಮಲಾಂಬಾ :** ವಿಜಯನಗರದ ರಾಜ ಅಚ್ಯುತರಾಯನ (1529-42) ಪತ್ನಿ; ವರದಾಂಬಿಕಾಪರಿಣಯ ಎಂಬ ಕಾವ್ಯವನ್ನು ಸಂಸ್ಕೃತದಲ್ಲಿ ಬರೆದ ಕವಯಿತ್ರಿ. ಈಕೆ ತನ್ನ ಗ್ರಂಥದಲ್ಲಿ ಕಾವ್ಯ, ನಾಟಕ ಪುರಾಣಗಳನ್ನು ಬಲ್ಲವಳು, ಗ್ರಹಣಶಕ್ತಿಯುಳ್ಳವಳು, ಅನೇಕ ಭಾಷೆಗಳನ್ನು ಬಲ್ಲವಳು, ಮಧುರ ಕಂಠದವಳು, ಕವಿಗಳಿಗೆ ಆಶ್ರಯವನ್ನಿತ್ತವಳು, ದತ್ತಿಶಾಸನಗಳನ್ನು ಬರೆದವಳು ಎಂಬುದಾಗಿ ತನ್ನನ್ನು ಕುರಿತು ಹೇಳಿಕೊಂಡಿದ್ದಾಳೆ.

ವರದಾಂಬಿಕಾಪರಿಣಯ ಐತಿಹಾಸಿಕ ಚಂಪೂಕಾವ್ಯ. ಅಚ್ಯುತರಾಯ ವರದಾಂಬಿಕೆಯನ್ನು ಪ್ರೀತಿಸಿ ವರಿಸಿದ ಪ್ರಸಂಗವೇ ಮುಖ್ಯವಸ್ತು. ಕಾವ್ಯದ ಆರಂಭದಲ್ಲಿ ತುಳುವ ಮನೆತನದ ನರಸನಾಯಕನ ವಂಶದ ಪೂರ್ವ ಇತಿಹಾಸವನ್ನು ಹೇಳುತ್ತ ಆ ದೊರೆಗಳು ಚಂದ್ರವಂಶಕ್ಕೆ ಸೇರಿದವರೆಂದು ತಿಳಿಸುತ್ತಾಳೆ. ಇವಳ ಕಾವ್ಯದಲ್ಲಿ ನರಸರಾಜನ ದಿಗ್ವಿಜಯ, ಅಚ್ಯುತರಾಯನ ಯೌವನದ ವರ್ಣನೆ, ವರದಾಂಬಿಕೆಯ ಪರಿಣಯ, ಚಿನವೆಂಕಟಾದ್ರಿಯ ಜನನ, ಯುವರಾಜಪಟ್ಟ ಇತ್ಯಾದಿ ವರ್ಣನೆಗಳು ತುಂಬಿವೆ. ಆದರೆ ಅಚ್ಯುತರಾಯನಿಗಿಂತ ಸದ್ಯ ಹಿಂದೆ ಆಳಿದ ಕೃಷ್ಣದೇವರಾಯನ ಹೆಸರನ್ನೇ ಹೇಳದಿರುವುದು ಆಶ್ಚರ್ಯಕರವಾಗಿದೆ. ಕಾವ್ಯದಲ್ಲಿ ಶಬ್ದಾಲಂಕಾರಗಳ ಬಳಕೆ ಹೆಚ್ಚಾಗಿದ್ದರೂ ಅಚ್ಯುತರಾಯನ ಚರಿತೆ ಸರಳ ಸಹಜ ಅಲಂಕಾರಗಳಿಂದ ಕೂಡಿದೆ. ಅಲ್ಲಲ್ಲಿ ಬರುವ ದೀರ್ಘಸಮಾಸೋಕ್ತಿಗಳೂ ಶ್ಲೇಷೆ, ವಿರೋಧಾಭಾಸ, ಅಲಂಕಾರ ಮುಂತಾದುವುಗಳೂ ಇವಳ ವಿಶೇಷ ಪಾಂಡಿತ್ಯಕ್ಕೆ ಸಾಕ್ಷಿಯಾಗಿವೆ. (ಕೆ.ಎನ್.ಎಸ್.)

**ತಿರುಮಲಾಂಬಾ, ನಂಜನಗೂಡು :** 1887-1982. ಪ್ರಥಮ ಕನ್ನಡ ಲೇಖಕಿ, ಸಂಪಾದಕಿ, ಪ್ರಕಾಶಕಿ, ಸಮಾಜ ಸೇವಕಿ. ಇವರು 1887 ಮಾರ್ಚ್ 25ರಂದು ನಂಜನಗೂಡಿನಲ್ಲಿ ಜನಿಸಿದರು. ತಂದೆ ವೆಂಕಟಕೃಷ್ಣ ಅಯ್ಯಂಗಾರ್, ತಾಯಿ ಅಲಮೇಲಮ್ಮ, ಪತಿ ನರಸಿಂಹಯ್ಯಂಗಾರ್. ಇವರದು ಬಾಲ್ಯವಿವಾಹ. 14ನೆಯ ವಯಸ್ಸಿಗೇ ವಿಧವೆಯಾದರು (1901). ಪ್ರಾಥಮಿಕ ಶಿಕ್ಷಣ ಮಾತ್ರ ಪಡೆದಿದ್ದ ಇವರು ತಂದೆಯ ಪ್ರೇರಣೆ, ಪ್ರೋತ್ಸಾಹಗಳಿಂದ ಲೇಖಕಿಯಾಗಿ ರೂಪಿತ ಗೊಂಡರು. ಸತೀ ಹಿತೈಷಿಣೀ ಎಂಬುದು ಇವರ ಕಾವ್ಯನಾಮ. ಸಂಸ್ಕೃತ, ತಮಿಳು, ಕನ್ನಡ, ತೆಲುಗು ಭಾಷೆಗಳನ್ನು ಇವರು ಬಲ್ಲವರಾಗಿದ್ದರು.

ಇವರು ಅನೇಕ ಸಾಮಾಜಿಕ ಕಾದಂಬರಿಗಳನ್ನೂ ಪತ್ತೇದಾರಿ ಕಾದಂಬರಿಗಳನ್ನೂ ಪೌರಾಣಿಕ ನಾಟಕಗಳನ್ನೂ ಸಣ್ಣಕಥೆಗಳನ್ನೂ ಪ್ರಬಂಧಗಳನ್ನೂ ಕವಿತೆಗಳನ್ನೂ ಬರೆದಿದ್ದಾರೆ. ಸುಶೀಲೆ (1913), ಸಭಾ (1914), ವಿರಾಗಿಣಿ (1915), ವಿದ್ಯುಲ್ಲತಾ (1914), ಮಾತೃ ನಂದಿನಿ (1916), ರವಿವರ್ಮ (1936) ಮಣಿಮಾಲಾ (1939)- ಇವು ಇವರ ಕೆಲವು ಸಾಮಾಜಿಕ ಕಾದಂಬರಿಗಳು. ತಾವು ಕಂಡ ಸಾಮಾಜಿಕ ಪರಿಸರ, ವ್ಯವಸ್ಥೆಯ ವಿವಿಧ ಮುಖಗಳನ್ನು ಈ ಕೃತಿಗಳಲ್ಲಿ ಚಿತ್ರಿಸಿದ್ದಾರೆ. ದಕ್ಷಕನ್ಯಾ (1915), ವಿಕ್ರಮ (1916) - ಇವು ಪತ್ತೇದಾರಿ ಕಾದಂಬರಿಗಳು. ರಮಾನಂದ ಒಂದು ಸಾಮಾಜಿಕ ನಾಟಕ. ಚಂದ್ರವದನಾ (1916), ವಿವೇಕೋದಯ (1922), ಭಾರ್ಗವ ಗರ್ವಭಂಗ (1927) - ಇವು

ಪೌರಾಣಿಕ ನಾಟಕಗಳು. ಸಚ್ಚರಿತ ಸುಧಾರ್ಣವ (1927) ಎಂಬುದು ಸಣ್ಣಕಥಾ ಸಂಕಲನ. ವಿದ್ಯಾವಿಚಾರ (1922), ಅಬಲಾ ದೌರ್ಜನ್ಯಂ (1931) - ಇವು ಪ್ರಬಂಧ ಸಂಕಲನಗಳು. ಇವರ ಸಂಪಾದಕತ್ವದಲ್ಲಿ 16 ಕೃತಿಗಳು ಪ್ರಕಟಗೊಂಡಿವೆ.

ಇವರ ಕೆಲವು ಕಾದಂಬರಿಗಳು ಹಾಗೂ ಒಂದು ನಾಟಕ ಮೈಸೂರು, ಮದರಾಸು, ಮುಂಬಯಿ ಪ್ರಾಂತ್ಯಗಳ ವಿದ್ಯಾ ಇಲಾಖೆಯಲ್ಲಿ ವಿವಿಧ ತರಗತಿಗಳಿಗೆ ಪಠ್ಯಪುಸ್ತಕಗಳಾಗಿದ್ದುವು.

ಇವರು ಕರ್ನಾಟಕ ನಂದಿನಿ (1916-20) ಎಂಬ ಪತ್ರಿಕೆಯ



ಸಂಪಾದಕಿಯಾಗಿದ್ದರು. ಇದು ಕನ್ನಡದಲ್ಲಿ ಸ್ತ್ರೀಯರಿಂದ ಸ್ತ್ರೀಯರಿಗಾಗಿ ಪ್ರಕಟಗೊಂಡ ಮೊತ್ತಮೊದಲ ಪತ್ರಿಕೆ. ಮಕ್ಕಳಿಗಾಗಿ ಸನ್ಮಾರ್ಗದರ್ಶಿ (1922-26) ಎಂಬ ಮಾಸ ಪತ್ರಿಕೆಯನ್ನೂ ಪ್ರಕಟಿಸು ತ್ತಿದ್ದರು. ಇವರು ಕನ್ನಡದ ಪ್ರಪ್ರಥಮ ಮಹಿಳಾ ಪ್ರಕಾ ಶಕಿಯೂ ಆಗಿದ್ದರು. ಸತೀ ಹಿತೈಷಿಣೀ ಎಂಬ ಗ್ರಂಥ ಮಾಲೆ ಪ್ರಕಾಶನ ಸಂಸ್ಥೆ ಯನ್ನು ಆರಂಭಿಸಿ (1913) ತಮ್ಮ ಅನೇಕ ಕೃತಿಗಳನ್ನೂ ಇತರರ ಕೃತಿಗಳನ್ನೂ ಸಂಪಾದಿಸಿ ಪ್ರಕಟಿ ಸಿದರು. ಇದಲ್ಲದೆ ಸನ್ಮಾರ್ಗ, ನಂದಿನಿ ಎಂಬ ಗ್ರಂಥಮಾಲೆಗಳನ್ನೂ ಸ್ಥಾಪಿಸಿದ್ದರು.

ಇವರ ಬಹುಪಾಲು ಕೃತಿಗಳು ಸಂಪ್ರದಾಯದ ಚೌಕಟ್ಟಿನಲ್ಲಿಯೇ ರಚಿತವಾದಂಥವು. ಆದರೆ ಕೆಲವೊಮ್ಮೆ ಈ ಸಂಪ್ರದಾಯದ ನಡುವೆಯೂ ವೈಚಾರಿಕತೆಯನ್ನು ಎತ್ತಿ ಹಿಡಿದದ್ದು ಇವರ ಬರೆಹದ ವಿಶೇಷತೆಯಾಗಿದೆ. ಸ್ತ್ರೀಪರ ಚಿಂತನೆ ಇವರ ಪ್ರಮುಖ ಕಾಳಜಿಗಳಲ್ಲೊಂದಾಗಿತ್ತು.

ಇವರಿಗೆ ಮೈಸೂರು, ಬೊಂಬಾಯಿ, ಮದರಾಸು ಸರ್ಕಾರದ ವಿದ್ಯಾ ಇಲಾಖೆಯಿಂದ ಅನೇಕ ಬಹುಮಾನಗಳು ದೊರಕಿವೆ. ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಶಸ್ತಿ (1980), ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1981) ಇವರಿಗೆ ಲಭ್ಯವಾಗಿದ್ದವು. ಚಿ.ನ.ಮಂಗಳಾ ಅವರ ಪ್ರಯತ್ನದ ಫಲವಾಗಿ ಇವರ ಹೆಸರಿನಲ್ಲಿ ಶಾಶ್ವತಿ ಎಂಬ ಮಹಿಳಾ ಅಧ್ಯಯನ ಕೇಂದ್ರವೊಂದನ್ನು ಬೆಂಗಳೂರಿನಲ್ಲಿ ಸ್ಥಾಪಿಸಿಲಾಗಿದೆ. ತಿರುಮಲಾಂಬಾ ಹೆಸರಿನಲ್ಲಿ ಮಹಿಳೆಯರಿಗಾಗಿ ಪ್ರತಿವರ್ಷ ಪ್ರಶಸ್ತಿಯನ್ನು ನೀಡಲಾಗುತ್ತಿದೆ.

ಇವರು 1982 ಆಗಸ್ಟ್ 31ರಂದು ನಿಧನರಾದರು. ಅಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆಯನ್ನು ರಚಿಸುವಲ್ಲಿ ಅನೇಕ ಪ್ರಥಮಗಳಿಗೆ ಆದ್ಯರಾದ ತಿರುಮಲಾಂಬಾ ಅವರನ್ನು ಮರೆಯುವಂತಿಲ್ಲ. *

**ತಿರುಮಲಾರ್ಯ :** 1645-1706. ಬ್ರಾಹ್ಮಣ ಕವಿ. ಈತ ಚಿಕ್ಕ ದೇವರಾಜ ಒಡೆಯರ (1673-1704) ಆಸ್ಥಾನ ಕವಿಯಾಗಿದ್ದ. ಮೈಸೂರು ಜಿಲ್ಲೆಯ ಶ್ರೀರಂಗಪಟ್ಟಣ ಇವನ ಜನ್ಮಸ್ಥಳ. ತಂದೆ ಅಳಸಿಂಗರಾರ್ಯ, ತಾಯಿ ಸಿಂಗಾರಮ್ಮ, ತಮ್ಮ ಸಿಂಗರಾರ್ಯ (ಮಿತ್ರವಿಂದಾಗೋವಿಂದದ ಕರ್ತೃ). ಕವಿ ಬಾಲ್ಯದಿಂದಲೂ ಚಿಕ್ಕದೇವರಾಜನ ಒಡನಾಡಿಯಾಗಿ, ಸಹಪಾಠಿಯಾಗಿ, ಆತ್ಮೀಯ ಗೆಳೆಯನಾಗಿ ಬೆಳೆದು ಆಸ್ಥಾನ ಕವಿಯಾಗಿ ಪಂಡಿತನಾಗಿ ಕೊನೆಗೆ ಮಂತ್ರಿಯಾಗಿ ಗೌರವ ಪಡೆದ. ಈತ ಕೆಲವು ಕಾಲ ಮಧುರೆ ನಾಯಕನ ಹೆಂಡತಿ ಮಂಗಮ್ಮನ ಬಳಿಯೂ ಮಂತ್ರಿಯಾಗಿದ್ದಂತೆ ತಿಳಿಯುತ್ತದೆ. ದೇವಚಂದ್ರನ ರಾಜಾವಳೀ ಕಥೆಯಲ್ಲಿ (ಸು.1832) ಇವನನ್ನು ವಿದ್ಯಾವಿಶಾರದನೆಂದು ಕರೆದಿದೆ. ಅಪ್ರತಿಮ ವೀರಚರಿತೆ, ಚಿಕದೇವರಾಜ ವಂಶಾವಳಿ, ಚಿಕದೇವರಾಜವಿಜಯ, ಚಿಕದೇವರಾಜ ಶತಕ - ಇವು ಈತನ ಕೃತಿಗಳು. ಚಿಕ್ಕದೇವರಾಜರ ಹೆಸರಿನಲ್ಲಿರುವ ಗೀತ ಗೋಪಾಲ, ಚಿಕದೇವರಾಜ ಬಿನ್ನಪಗಳನ್ನೂ ಇವನು ರಚಿಸಿರಬೇಕೆಂಬ ಊಹೆ ಇದೆ. ಇದಕ್ಕೆ ಸಾಕಷ್ಟು ಸಮರ್ಥನೆಯೂ ದೊರೆಯುತ್ತದೆ. ಚಿಕ್ಕದೇವರಾಜ ಈತನ ಎಲ್ಲ ಕೃತಿಗಳ ಕಥಾನಾಯಕನಾಗಿದ್ದಾನೆ. ಕೆಲವೊಮ್ಮೆ ಸ್ವಾಮಿಭಕ್ತಿ, ಆತ್ಮೀಯತೆಯ ಅತಿರೇಕದಿಂದಾಗಿ ಕಾವ್ಯಶಕ್ತಿ ಕುಂಠಿತವಾಗಿದೆ. ಚಿಕದೇವರಾಜ ಶತಕ ಉಪಲಬ್ಧವಿಲ್ಲ.

ಚಿಕದೇವರಾಜ ವಂಶಾವಳಿ ಹಳಗನ್ನಡ ಗದ್ಯಗ್ರಂಥ; ಕೃತಿ ಅಪೂರ್ಣವಾಗಿದೆ. ಇದರಲ್ಲಿ ರಾಜ ಒಡೆಯರಿಂದ ಚಿಕ್ಕದೇವರಾಜ ಒಡೆಯರವರೆಗಿನ ಮೈಸೂರು ಒಡೆಯರ ಇತಿಹಾಸ ನಿರೂಪಿತವಾಗಿದ್ದರೂ ಕವಿಯಲ್ಲಿ ಕಲ್ಪನಾವಿಲಾಸವಿದೆಯೇ ಹೊರತು ಇತಿಹಾಸಕಾರನ ವಸ್ತುಸ್ಥಿತಿಯ ಖಚಿತತೆಯಾಗಲೀ, ಪ್ರಮಾಣಜ್ಞಾನವಾಗಲೀ, ಐತಿಹಾಸಿಕ ಪ್ರಜ್ಞೆಯಾಗಲೀ ಇಲ್ಲ. ರಾಜ ಒಡೆಯರ ಚರಿತ್ರೆಯ ಭಾಗದಲ್ಲಿ ಕಲ್ಪನೆ, ಇತಿಹಾಸ ಎರಡೂ ಬೆರೆತಿದ್ದರೆ ದೊಡ್ಡದೇವರಾಜರ ಚರಿತ್ರೆಯಲ್ಲಿ ಕಲ್ಪನೆ ನಿರಾತಂಕವಾಗಿ ಬೆಳೆದಿದೆ. ಕೆಲವೊಮ್ಮೆ ವರ್ಣನೆಗಳಿಗೆ ಗಟ್ಟಿಯಾದ ಆಧಾರವಿಲ್ಲದೆ ಕೃತಿ ಶಿಲ್ಪದ ಒಟ್ಟಂದದ ಪ್ರಮಾಣ ಮೀರಿ ಅತಿರೇಕವಾಗಿದೆ. ರಣಧೀರನೆಂದು ಇತಿಹಾಸದಲ್ಲಿ ಸುಪ್ರಸಿದ್ಧನಾದ ಕಂಠೀರವ ನರಸರಾಜನ ಜೀವನ ವೃತ್ತಾಂತ ಮೊಟಕಾಗಿದೆ. ಗದ್ಯಶೈಲಿ ಈ ಕೃತಿಯ ಜೀವಾಳ. ಇವನ ಗದ್ಯ ಸಂಸ್ಕೃತ ಹಾಗೂ ಕನ್ನಡಗಳೆರಡರ ಸತ್ವವನ್ನು ಹೀರಿ ಬೆಳೆದು ಪರಿಪುಷ್ಟವಾದ ವೈಯಕ್ತಿಕತೆಯಿಂದ ಕೂಡಿದೆ. ವಡ್ಡಾರಾಧನೆಯ ದೇಸಿಯ ಸೊಬಗು, ಚಾವುಂಡರಾಯ ಪುರಾಣದ ಬಿಗಿಯಾದ ಶೈಲಿ ಇಲ್ಲದಿದ್ದರೂ ಹಳಗನ್ನಡದ ಬೆಳೆವಣಿಗೆಯ ಗದ್ಯಕೃತಿಗಳಲ್ಲಿ ಇದೂ ಒಂದು ಎಂಬ ದೃಷ್ಟಿಯಿಂದ ಈ ಗ್ರಂಥಕ್ಕೆ ಮಹತ್ವ ದೊರೆತಿದೆ. ಗದ್ಯಕೃತಿಯಾದ ಕಾರಣ ಘಟನಾಪ್ರಧಾನವಾಗಿದ್ದಿದ್ದರೆ ಪ್ರಥಮ ಐತಿಹಾಸಿಕ ಕಾದಂಬರಿಯಾಗಬಹುದಿತ್ತು.

ಚಿಕದೇವರಾಜವಿಜಯ ಆರು ಆಶ್ವಾಸಗಳುಳ್ಳ ಚಂಪೂಕಾವ್ಯ. ವರ್ಣವೃತ್ತಗಳಲ್ಲದೆ ತ್ರಿಪದಿ, ಸಾಂಗತ್ಯ, ಹಾಡುಗಳನ್ನೂ ಒಳಗೊಂಡಿದೆ. ಕೃತಿ ಸಂಪೂರ್ಣವಾಗಿಲ್ಲ. ಇದರಲ್ಲಿ ಮೈಸೂರು ಅರಸರ ಪೂರ್ವೇತಿಹಾಸ ಕಾವ್ಯಮಯವಾಗಿ ವರ್ಣಿತವಾಗಿದೆ. ಚಿಕ್ಕದೇವರಾಜ ಒಡೆಯರ ಬಾಲ್ಯ, ವಿದ್ಯಾಭ್ಯಾಸ, ಸಂಗೀತನೈಪುಣ್ಯ ವಿವರವಾಗಿ ಹೃದಯಂಗಮವಾಗಿ ಬಂದಿದೆ. ಆದರೆ ರಾಜ್ಯಭಾರ ವೈಭವವಾಗಲೀ ಯುದ್ಧ ಸಾಹಸ ವಿಜಯವಾಗಲೀ ನಿರೂಪಿತವಾಗಿಲ್ಲ. ವರ್ಣನೆಯಲ್ಲಿ ಸೊಬಗಿದೆ. ಸಂಗೀತದ ವರ್ಣನೆಯಿಂದಲೇ ನಾದಸುಖದ ಅನುಭವವನ್ನುಂಟುಮಾಡಬಲ್ಲ ಶಕ್ತಿ, ಪ್ರಕೃತಿವರ್ಣನೆಯಲ್ಲಿಯ ನಾವೀನ್ಯ ಈ ಕೃತಿಯ ಗುಣಮೌಲ್ಯವನ್ನು ಹೆಚ್ಚಿಸಿವೆ.

ಅಪ್ರತಿಮವೀರಚರಿತೆ ಅಲಂಕಾರ ಗ್ರಂಥ. ಇದರಲ್ಲಿ ನಾಲ್ಕು ಪ್ರಕರಣಗಳಿವೆ. ಚಂದ್ರಾಲೋಕ, ಕಾವ್ಯಪ್ರಕಾಶ, ಮುಖ್ಯವಾಗಿ ಕುವಲಯಾನಂದ - ಈ ಗ್ರಂಥಗಳನ್ನು ಆಧರಿಸಿ ಇದು ರಚಿತವಾಗಿದೆ. ಒಂದನೆಯ ಪ್ರಕರಣದಲ್ಲಿ ಕಾವ್ಯಲಕ್ಷಣ, ಶಬ್ದಗುಣ, ಅರ್ಥಗುಣಗಳನ್ನು ಹೇಳಿದೆ. ಎರಡನೆಯದರಲ್ಲಿ ರೀತಿ, ಶಯ್ಯೆ, ಪಾಕ, ವೃತ್ತಿ, ಅನುಪ್ರಾಸ ಮೊದಲಾದ ಶಬ್ದಾಲಂಕಾರಗಳನ್ನು ಹೇಳಿದೆ. ಮೂರನೆಯ ಪ್ರಕರಣದಲ್ಲಿ ಉಪಮೆ ಮೊದಲಾದ ನೂರು ಅರ್ಥಾಲಂಕಾರಗಳೂ ನಾಲ್ಕನೆಯದರಲ್ಲಿ ರಸಾಲಂಕಾರಗಳೂ ನಿರೂಪಿತವಾಗಿವೆ. ತಾನು ಈ ಗ್ರಂಥವನ್ನು ಚಿಕ್ಕದೇವರಾಜರ ಆಜ್ಞಾನುಸಾರ ಬರೆದಂತೆ ಕವಿ ಹೇಳಿಕೊಂಡಿದ್ದಾನೆ. ಕೆಲವು ಸಂಸ್ಕೃತ ಗ್ರಂಥಗಳ ಲಕ್ಷಣಪದ್ಯಗಳಿಗೆ ಕನ್ನಡ ವೃತ್ತಿ ಬರೆದಿದೆ. ಉದಾಹರಣಾ ಪದ್ಯಗಳು ಚಿಕ್ಕದೇವರಾಜರ ಸ್ತುತಿರೂಪಕವಾಗಿವೆ. ಈ ಪದ್ಯಗಳೆಲ್ಲವೂ ಸ್ವರಚಿತವೆಂಬ ಅಂಶ ಗಮನಿಸಬೇಕಾದದ್ದು. ಆದರೆ ಕೆಲವೊಮ್ಮೆ ಲಕ್ಷಣ ಲಕ್ಷ್ಯ ಹೊಂದಾಣಿಕೆಯ ಸೊಗಸು ಅಸ್ಪಷ್ಟವಾಗಿದೆ. (ಎಂ.ಎಚ್.ಕೆ.)

**ತಿರುಮಲೆ ತಾತಾಚಾರ್ಯ ಶರ್ಮ :** 1897-1973. ಕನ್ನಡದ ಪ್ರಸಿದ್ಧ ಪತ್ರಿಕೋದ್ಯಮಿ, ಸ್ವಾತಂತ್ರ್ಯ ಹೋರಾಟಗಾರ, ಸಂಶೋಧಕ ಹಾಗೂ ಸಾಹಿತಿ. ಇವರದು ವಿಜಯನಗರದ ರಾಜಗುರು ಮನೆತನ. ಜನಿಸಿದ್ದು ಚಿಕ್ಕಬಳ್ಳಾಪುರದಲ್ಲಿ. ತಂದೆ ಶ್ರೀನಿವಾಸ ತಾತಾಚಾರ್ಯ, ತಾಯಿ ಜಾನಕಿ. ತಿರುಮಲೆ ಮನೆತನದ ಹೆಸರು. ಹಿರಿಯರಿಟ್ಟ ಹೆಸರು ಲಕ್ಷ್ಮೀಕುಮಾರ ತಾತಾಚಾರ್ಯ. ಎಂಟನೆಯ ವರ್ಷದಲ್ಲಿ ಬ್ರಹ್ಮೋಪದೇಶವಾದಾಗ ಇವರ ತಂದೆಯ ಚಿಕ್ಕಪ್ಪನವರು ಇವರನ್ನು ದತ್ತು ಸ್ವೀಕರಿಸಿದರು. ತಾತನ ಜೊತೆಯಲ್ಲಿ

ಕುದುರೆಸವಾರಿ, ಸಂಸ್ಕೃತ, ತೆಲುಗು, ಕನ್ನಡ ವಿದ್ಯಾಭ್ಯಾಸ; ಪ್ರೌಢಶಾಲೆ ವ್ಯಾಸಂಗ ನಡೆದುದು ಹಾಸನದಲ್ಲಿ. ಪದವಿ ವ್ಯಾಸಂಗಕ್ಕೆಂದು ಮೈಸೂರಿನ ಮಹಾರಾಜ ಕಾಲೇಜಿಗೆ ಶರ್ಮರು ಸೇರಿದರಾದರೂ ವ್ಯಾಸಂಗವನ್ನು ಮುಂದುವರಿಸದೆ ಬೆಂಗಳೂರಿಗೆ ಹೋದರು. ಅಲ್ಲಿ ಅಮೆಚೂರ್ ನಾಟಕ ಮಂಡಲಿಯನ್ನು ಪ್ರವೇಶಿಸಿ, ಕೈಲಾಸಂರ ಆಪ್ತಸ್ನೇಹಿತರಾದರು. ತಮ್ಮ ಚಿಕ್ಕಪ್ಪನವರು ಅಪೂರ್ಣವಾಗಿ ಬರೆದ ಲಂಕಾದಹನ ನಾಟಕವನ್ನು ಇವರು ಪೂರ್ಣಗೊಳಿಸಿದರು.

ಶಾಸನ, ಸಂಶೋಧನೆ ಗಳಲ್ಲಿ ಆಸಕ್ತಿ ತಾಳಿದ ಶರ್ಮರು 1919ರಲ್ಲಿ ಭಾರತ ಸರ್ಕಾರದ ಶಾಸನ ಇಲಾಖೆಯಲ್ಲಿ (ಉದಕಮಂಡಲ) ತೆಲುಗು-ಕನ್ನಡ ಸಹಾಯಕರಾಗಿ ಕೆಲಸಕ್ಕೆ ಸೇರಿದರು. ಬ್ರಾಹ್ಮೀ, ಖರೋಷ್ಠಿ, ದೇವನಾಗರಿ ಲಿಪಿಗಳ ಅದ್ವಿತೀಯ ಓದುಗರಾಗಿದ್ದ ಇವರು ಸಹಸ್ರಾರು ಶಿಲಾಶಾಸನಗಳ ಸಾರವನ್ನು ಕಂಠಸ್ಥ ಮಾಡಿದರು. ಶಾಸನಗಳಲ್ಲಿ ಕಂಡುಬರುವ ಕನ್ನಡ ಕವಿಗಳು ಎಂಬ ಪುಸ್ತಕವನ್ನು ಇವರು ಪ್ರಕಟಿಸಿದ್ದಾರೆ.

ರಾಷ್ಟ್ರಾದ್ಯಂತ ಮೊಳಗುತ್ತಿದ್ದ ಗಾಂಧೀಜಿಯವರ ಅಸಹಕಾರ ಚಳವಳಿಗೆ ಓಗೊಟ್ಟು ಇವರು 1923ರಲ್ಲಿ ನೌಕರಿಗೆ ರಾಜೀನಾಮೆ ಕೊಟ್ಟರು. ಗಾಂಧೀಜಿಯವರ ಸಲಹೆಯಂತೆ 1925ರ ವಿಜಯದಶಮಿಯಂದು ತುಮಕೂರಿನಿಂದ ಹೊರಡುತ್ತಿದ್ದ ಮೈಸೂರು ಕ್ರಾನಿಕಲ್ ಪತ್ರಿಕೆಯನ್ನು ವಹಿಸಿಕೊಂಡು ಅದನ್ನು ವಿಶ್ವಕರ್ನಾಟಕ ಎಂಬ ಹೆಸರಿನಿಂದ ವಾರಪತ್ರಿಕೆಯಾಗಿ ಪ್ರಕಟಿಸಿದರು. 1934ರಲ್ಲಿ ವಿಶ್ವಕರ್ನಾಟಕ ಸಾಪ್ತಾಹಿಕ ಒಳಗೊಂಡ ದಿನಪತ್ರಿಕೆಯಾಯಿತು. ಸುಮಾರು ಇಪ್ಪತ್ತೆರಡು ವರ್ಷಗಳಷ್ಟು ದೀರ್ಘಕಾಲ ಆ ಪತ್ರಿಕೆಯನ್ನು ನಡೆಸಿದ ಶರ್ಮರು ಆ ಮೂಲಕ ಸ್ವರಾಜ್ಯಕ್ಕಾಗಿ ಬ್ರಿಟಿಷರ ವಿರುದ್ಧ ಆಂದೋಳನ ನಡೆಸಿ ಕೃತಾರ್ಥರಾದರು. ಗಾಂಧೀಜಿಯವರ ಆತ್ಮಕಥೆ ಕನ್ನಡದಲ್ಲಿ ಮೊಟ್ಟಮೊದಲು ಪ್ರಕಟವಾದದ್ದು ವಿಶ್ವಕರ್ನಾಟಕದಲ್ಲಿ.



ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ನಡೆದ ಚಳವಳಿಯಲ್ಲೂ ಭಾಗವಹಿಸಿದ್ದ ಶರ್ಮರು ಕೆಲವು ತಿಂಗಳುಗಳ ಕಾಲ ಕಾರಾಗೃಹವಾಸವನ್ನೂ ಅನುಭವಿಸಿದರು.

ಕನ್ನಡ, ಇಂಗ್ಲಿಷ್, ಸಂಸ್ಕೃತ, ಪ್ರಾಕೃತ ಭಾಷೆಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿಕೊಂಡಿದ್ದ ಇವರು ಶಾಸನ, ಸಾಹಿತ್ಯ, ಸಂಸ್ಕೃತಿ, ಇತಿಹಾಸ ಮುಂತಾದ ಹತ್ತಾರು ವಿಷಯಗಳನ್ನು ಕುರಿತು ನೂರಾರು ಲೇಖನಗಳನ್ನೂ ಹತ್ತಾರು ಗ್ರಂಥಗಳನ್ನೂ ಪ್ರಕಟಿಸಿದ್ದಾರೆ. ಇವರ ಅನನ್ಯ ಉತ್ಸಾಹ, ಶ್ರದ್ಧೆ, ಆಳವಾದ ಪಾಂಡಿತ್ಯಗಳ ಫಲವೇ ರಾಮರಾಯನ ಬಖೈರು, ಕರ್ನಾಟಕದಲ್ಲಿ ಸ್ವಾತಂತ್ರ್ಯಸಂಗ್ರಾಮ, ಹೈದರನಾಮೆ, ವಿಕ್ರಾಂತ ಭಾರತ, ವಿಚಾರ, ಕರ್ನಾಟಕ, ಮೋಕ್ಷಗುಂಡಂ ವಿಶ್ವೇಶ್ವರಯ್ಯ, ಮಾಸ್ತಿಯವರ ಮನೋಧರ್ಮ, ಜೂಲಿಯಸ್ ಸೀಸರ್, ಕರ್ಮಫಲ - ಈ ಮುಂತಾದ ಕೃತಿಗಳು.

ಇವರು ಸಲ್ಲಿಸಿದ ಸಾರ್ವಜನಿಕ ಸೇವೆ ಗಣ್ಯವಾದದ್ದು. 1943ರಲ್ಲಿ ಮೈಸೂರು ಪತ್ರಿಕೋದ್ಯೋಗಿಗಳ ಸಂಘದ ಅಧ್ಯಕ್ಷರಾಗಿದ್ದ ಇವರು ಬೆಂಗಳೂರು ಮುನಿಸಿಪಲ್ ಕೌನ್ಸಿಲರೂ (1944-50) ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ (1947-49) ಆಗಿದ್ದರು. ಮೈಸೂರು ಸ್ವಾತಂತ್ರ್ಯ ಚಳವಳಿಯ ಇತಿಹಾಸ ರಚನಾ ಸಮಿತಿ, ಕನ್ನಡ ಟೈಪ್‌ರೈಟರ್ ಸಮಿತಿ ಮುಂತಾದ ಸಮಿತಿಗಳ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದರು. ಇವರ ನಾಡುನುಡಿಗಳ ಸೇವೆಯನ್ನು ಗಮನಿಸಿ ಕನ್ನಡ ಜನತೆ 1947ರಲ್ಲಿ ಕಾಸರಗೋಡಿನಲ್ಲಿ ನಡೆದ 31ನೆಯ ಕನ್ನಡಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಿತು.

ಕನ್ನಡದ ಮೂಲಕವೇ ಕರ್ನಾಟಕದ ಮೋಕ್ಷ ಎಂಬುದನ್ನು ತಮ್ಮ ಜೀವನದುದ್ದಕ್ಕೂ ಪಠಿಸಿದ ಇವರು ತಮ್ಮ 76ನೆಯ ವಯಸ್ಸಿನಲ್ಲಿ ಬೆಂಗಳೂರಿನಲ್ಲಿ ನಿಧನರಾದರು. (ಎಂ.ಕೆ.ಆರ್.)

**ತಿರುವಳ್ಳೂರು ಶ್ರೀನಿವಾಸ ರಾಘವಾಚಾರ್ಯ :** 1871-1942. ಪ್ರಾಚೀನ ಪಂಡಿತವರ್ಗದಲ್ಲಿ ಗಣ್ಯರಾದವರು. ಮೈಸೂರಿನ ಸಂಸ್ಕೃತ ಮಹಾಪಾಠಶಾಲೆ, ಕರ್ನಾಟಕ ಭಾಷೋಜ್ಜೀವಿನಿ ಪಾಠಶಾಲೆ, ಗೌರ್ನಮೆಂಟ್ ಟೀಚರ್ಸ್ ಕಾಲೇಜುಗಳಲ್ಲಿ ವ್ಯಾಸಂಗಮಾಡಿ ಸಂಸ್ಕೃತ ಸಾಹಿತ್ಯ ವಿದ್ವತ್ತು, ಸಂಸ್ಕೃತ ಸಾಂಖ್ಯಯೋಗ ಪರೀಕ್ಷೆ, ಕರ್ನಾಟಕ ಪಂಡಿತ ಪರೀಕ್ಷೆ, ಮೈಸೂರು ಗೌರ್ನಮೆಂಟ್ ಟೀಚರ್ಸ್ ಎಕ್ಸಾಮಿನೇಷನ್ ಮೊದಲಾದ ಪರೀಕ್ಷೆಗಳಲ್ಲಿ ತೇರ್ಗಡೆಹೊಂದಿ ಸಂಸ್ಕೃತ - ಕನ್ನಡ ಭಾಷಾಸಾಹಿತ್ಯಗಳಲ್ಲಿ ಪಾಂಡಿತ್ಯವನ್ನು ಗಳಿಸಿಕೊಂಡರು. ಮೈಸೂರು ವಿದ್ಯಾಭ್ಯಾಸದ ಇಲಾಖೆಯಲ್ಲಿ ಕನ್ನಡ ಪಂಡಿತರಾಗಿದ್ದರು (1894-1926).

ಶೃಂಗೇರಿ ನರಸಿಂಹಭಾರತೀಸ್ವಾಮಿಗಳ ಚರಿತ್ರೆ, ಶ್ರೀಮನ್ಮಹಾರಾಜರ ವಂಶಾವಳಿ ಮೊದಲಾದ ಗ್ರಂಥಗಳನ್ನು ಇವರು ಬರೆದಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾಗಿರುವ ಕನ್ನಡ ಕೈಪಿಡಿಗೆ ಛಂದೋಭಾಗವನ್ನು ರಚಿಸಿದ್ದಾರೆ. ಡಿ.ಎಲ್.ನರಸಿಂಹಾಚಾರ್ಯರೊಡನೆ ಪಂಪರಾಮಾಯಣ ಸಂಗ್ರಹವನ್ನು ಸಂಪಾದಿಸಿದ್ದಾರೆ. ಕವಿಸಮಯ ಎಂಬುದು ಇವರ ಇನ್ನೊಂದು ಗ್ರಂಥ.

ಮೈಸೂರಿನ ಸಂಸ್ಕೃತ ಮಹಾಪಾಠಶಾಲೆಯ ಕಾರ್ಯನಿರ್ವಾಹಕ ಸಭೆ, ಸಂಸ್ಕೃತ ವಿದ್ವತ್ಪರೀಕ್ಷೆಗಳ ಬೋರ್ಡು, ಪಠ್ಯಪುಸ್ತಕ ಸಮಿತಿ, ಮೈಸೂರು ಓರಿಯಂಟಲ್ ಲೈಬ್ರರಿ ಕಮಿಟಿ, ಮೈಸೂರು ನಗರ ಕರ್ನಾಟಕ ಸಂಘ, ಮುಮ್ಮಡಿ ಕೃಷ್ಣರಾಜ ಒಡೆಯರ ಜಯಂತ್ಯುತ್ಸವ ಸಮಿತಿ ಮೊದಲಾದವುಗಳಲ್ಲಿ ಅನೇಕ ಕಾಲ ಸದಸ್ಯರಾಗಿದ್ದರು. ಮೈಸೂರು ಅರಮನೆಯ ಮುಜರಾಯಿ ಇಲಾಖೆಯಲ್ಲಿ ಹಲವು ವರ್ಷ ಧರ್ಮ ದರ್ಶಿಗಳೂ ಅನಂತರ ಧರ್ಮಾಧಿಕಾರಿಗಳೂ ಆಗಿದ್ದರು (1938-42). ಪರಕಾಲ ಮಠದಲ್ಲಿ ಗೌರವ ಮೇಲ್ವಿಚಾರಕರಾಗಿಯೂ ಶ್ರೀಕಾರ್ಯ ಕರ್ತರಾಗಿಯೂ ಸೇವೆ ಸಲ್ಲಿಸಿದರು (1926-1942). ಉದಾರ ದಾನಿಗಳಾಗಿದ್ದ ಇವರು ಮೈಸೂರು ಸಂಸ್ಕೃತ ಮಹಾಪಾಠಶಾಲೆ, ವೇದಶಾಸ್ತ್ರ ಪೋಷಿಣೀ ಸಭಾ, ಮೈಸೂರು ಟ್ರೇನಿಂಗ್ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ವೇದಾಂತ ದೇಶಿಕ ವಿಹಾರ ಸಭೆ, ವಿದ್ಯೋದಯ ಸಭೆ, ಕನ್ನಡ ಸಾಹಿತ್ಯ ಪರಿಷತ್ತು ಮೊದಲಾದವುಗಳಿಗೆ ದಾನದತ್ತಿಗಳನ್ನು ನೀಡಿದ್ದಾರೆ. ಇವರು ಪ್ರಾಚೀನ ಮಾದರಿಯ ಪಂಡಿತರಾಗಿದ್ದರೂ ಆಧುನಿಕ ಯುಗಕ್ಕೆ ಹೊಂದಿಕೊಂಡಿದ್ದ ಪ್ರಗತಿಶೀಲ ವಿದ್ವಾಂಸರಾಗಿದ್ದರು. (ಎಸ್.ಎ.ಆರ್.)

**ತಿಳವಳ್ಳಿ :** ಹಾವೇರಿ ಜಿಲ್ಲೆ ಹಾನಗಲ್ಲು ತಾಲ್ಲೂಕಿನ ಒಂದು ಗ್ರಾಮ. ಹಾನಗಲ್ಲಿನ ಆಗ್ನೇಯಕ್ಕೆ 16ಕಿಮೀ ದೂರದಲ್ಲಿ, ಬ್ಯಾಡಗಿಯಿಂದ 40ಕಿಮೀ ಅಂತರದಲ್ಲಿದೆ.

ಈ ಊರು ಹಾನಗಲ್ಲು ತಾಲ್ಲೂಕಿನ ಪ್ರಗತಿಪರ ಗ್ರಾಮಗಳಲ್ಲಿ ಒಂದು. ಇಲ್ಲಿ ಗ್ರಾಮಪಂಚಾಯಿತಿ ಇದೆ. ಅನೇಕ ಸಹಕಾರಿ ಸಂಘಗಳಿವೆ. ಪೂರ್ಣ ಹೆಣ್ಣು ಮಕ್ಕಳ ಹಾಗೂ ಗಂಡುಮಕ್ಕಳ ಪ್ರಾಥಮಿಕ ಶಾಲೆಗಳಿವೆ. ಮಾದರಿ ಕೇಂದ್ರಶಾಲೆ ಇದೆ. ಶಾಂತೇಶ್ವರ ಪ್ರೌಢಶಾಲೆ ನಡೆಯುತ್ತಿದೆ. ಆರೋಗ್ಯ ಕೇಂದ್ರವಿದೆ. ತಂತಿಕಚೇರಿ, ದೂರವಾಣಿ ಸೌಲಭ್ಯಗಳಿವೆ.

ಪ್ರಾಚೀನ ಕಾಲದಲ್ಲಿ ಇದು ನಾಗರಖಂಡ-30 ಎಂಬ ವಿಭಾಗದಲ್ಲಿ ನೆಲೆಗೊಂಡಿದ್ದ ಖ್ಯಾತಿವೆತ್ತ ಅಗ್ರಹಾರವಾಗಿತ್ತು. ಕಲ್ಯಾಣದ ಚಾಳುಕ್ಯರ ಮತ್ತು ಸೇವುಣರ ಕಾಲದ ಸುಮಾರು ಇಪ್ಪತ್ತೈದು ಶಿಲಾಶಾಸನಗಳು ಇಲ್ಲಿ ದೊರೆತಿವೆ. ಇದು ಧಾರ್ಮಿಕ ಕ್ಷೇತ್ರವೂ ಆಗಿತ್ತು. ಇಲ್ಲಿ ಜನಾರ್ದನ, ಮೂಲೇಶ್ವರ, ಅಭಿನವ ಶಂಕರದೇವ, ವೀರನಾರಾಯಣ, ಬಸವೇಶ್ವರ, ಸಾವಂತೇಶ್ವರ, ಬಂಟೇಶ್ವರ ಮೊದಲಾದ ಅನೇಕ ದೇವಾಲಯಗಳಿದ್ದವು.

ಊರ ಮಧ್ಯದಲ್ಲಿರುವ ಶಾಂತೇಶ್ವರ ದೇವಾಲಯ ಇಲ್ಲಿನ ಉತ್ತಮ ವಾಸ್ತು ಕೃತಿ. ಗರ್ಭಗುಡಿ, ಸುಕನಾಸಿ, ಮಂಟಪಗಳನ್ನೊಳಗೊಂಡಿರುವ ಈ ದೇವಾಲಯದಲ್ಲಿ ಮೂರ್ತಿಶಿಲ್ಪಗಳು ಹೆಚ್ಚಿಲ್ಲದಿದ್ದರೂ ಹೊರಮೈ ಕಳಶ ಮತ್ತು ತೋರಣಗಳನ್ನು ಹೊತ್ತಿರುವ ಒಂಟಿ ಅರೆಗಂಬಗಳು, ಶಿಖರಗಳನ್ನು ಎತ್ತಿರುವ ಜೋಡಿ ಅರೆಗಂಬಗಳು ಮುಂತಾದವುಗಳಿಂದ ಸುಂದರವಾಗಿ ಅಲಂಕೃತವಾಗಿದೆ. ಗರ್ಭಗುಡಿಯ ಮೇಲೆ ವೇಸರ ಮಾದರಿಯ ಶಿಖರವಿದೆ. ವಿವಿಧ ಭಾಗಗಳ ಸಮತೋಲ ಪ್ರಮಾಣ ಮತ್ತು ನಾಜೂಕಿನ ಅಲಂಕರಣಗಳಿಂದ ದೇವಾಲಯದ ಸೌಂದರ್ಯ ವರ್ಧಿಸಿದೆ. ಸಿಂಘಣನ ಅಧಿಕಾರಿಯಾದ ಸಾವಂತ ಠಕ್ಕೂರ ಯುದ್ಧದಲ್ಲಿ ಮಡಿಯಲು ಕಲಿದೇವ ಮತ್ತು ರನ್ನುಗಿ ಎಂಬ ಅವನ ಮಕ್ಕಳು ತಂದೆಯ ಹೆಸರಿನಲ್ಲಿ ಸಾವಂತೇಶ್ವರ ದೇವಾಲಯವನ್ನು 1238ರಲ್ಲಿ ಕಟ್ಟಿಸಿ ಆ ದೇವರ ಪೂಜಾರ್ಥವಾಗಿ ಐದು ಹಳ್ಳಿಗಳನ್ನು ಕೊಂಡುಕೊಂಡು ಆ ದೇವರಿಗೆ ಬಿಟ್ಟರೆಂದು ಈ ದೇವಾಲಯದಲ್ಲಿರುವ ಒಂದು ದೊಡ್ಡ ಶಾಸನದಿಂದ ತಿಳಿದುಬರುತ್ತದೆ. (ಎಸ್.ಎಸ್.ಬಿ.)

**ತೀರ್ಥಹಳ್ಳಿ :** ಶಿವಮೊಗ್ಗ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಅದರ ಮುಖ್ಯ ಊರು. ಜಿಲ್ಲೆಯ ದಕ್ಷಿಣಕ್ಕಿರುವ ಈ ತಾಲ್ಲೂಕನ್ನು ಈಶಾನ್ಯದಲ್ಲಿ ಶಿವಮೊಗ್ಗ, ಉತ್ತರ ಮತ್ತು ಪಶ್ಚಿಮದಲ್ಲಿ ಹೊಸನಗರ ತಾಲ್ಲೂಕುಗಳೂ, ಪೂರ್ವ, ಆಗ್ನೇಯ ಮತ್ತು ದಕ್ಷಿಣದ ಸ್ವಲ್ಪ ಭಾಗ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ, ಕೊಪ್ಪ ಮತ್ತು ಶೃಂಗೇರಿ ತಾಲ್ಲೂಕುಗಳೂ ನೈಋತ್ಯದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ಮತ್ತು ಕಾರ್ಕಳ ತಾಲ್ಲೂಕುಗಳೂ ಸುತ್ತುವರಿದಿವೆ. ಅಗ್ರಹಾರ, ತೀರ್ಥಹಳ್ಳಿ, ಆಗುಂಬೆ, ಮುತ್ತೂರು ಮತ್ತು ಮಂಡಗದ್ದೆ ಹೋಬಳಿಗಳೂ 247 ಗ್ರಾಮಗಳೂ ಇವೆ. ವಿಸ್ತೀರ್ಣ 1,247ಚ.ಕಿಮೀ. ಜನಸಂಖ್ಯೆ 1,43,209.

ಈ ತಾಲ್ಲೂಕು ಮಲೆನಾಡಿಗೆ ಸೇರಿದ್ದು ಬೆಟ್ಟಗುಡ್ಡ, ಕಾಡು, ನದಿ, ಝರಿಗಳಿಂದ ಕೂಡಿರುವ ರಮ್ಯ ಪ್ರದೇಶ. ತಾಲ್ಲೂಕಿನ ಪಶ್ಚಿಮ ಪ್ರದೇಶ ಪಶ್ಚಿಮ ಘಟ್ಟಗಳಿಗೆ ಸೇರಿದ ಭಾಗ. ಕವಲೆದುರ್ಗ, ಕಬ್ಬಿಣದ ಗುಡ್ಡ ಮತ್ತು ಕುಂದದ ಗುಡ್ಡ - ಇವು ತಾಲ್ಲೂಕಿನ ಎತ್ತರದ ಬೆಟ್ಟಗಳು. ಕುಂದದ ಗುಡ್ಡ ಪ್ರಸಿದ್ಧ ಆಗುಂಬೆ ಶ್ರೇಣಿಗೆ ಸೇರಿದ್ದು. ಕಬ್ಬಿಣದ ಗುಡ್ಡದಲ್ಲಿ ದೊರೆಯುವ ಕಬ್ಬಿಣ ಉತ್ತಮ ದರ್ಜೆಯದೆಂದು ಪರಿಗಣಿತವಾಗಿದೆ.

ಈ ತಾಲ್ಲೂಕಿನ ಮುಖ್ಯ ನದಿ ತುಂಗಾ. ಆಗ್ನೇಯದಲ್ಲಿ ಚಿಕ್ಕಮಗಳೂರು ಜಿಲ್ಲೆಯಿಂದ ಹರಿದು ಬರುವ ಈ ನದಿ ಭಂಡಿಗಡಿ ಗ್ರಾಮದ ಪಶ್ಚಿಮದಲ್ಲಿ ತಾಲ್ಲೂಕನ್ನು ಪ್ರವೇಶಿಸಿ ಉತ್ತರಾಭಿಮುಖವಾಗಿ ಹರಿದು ಈಶಾನ್ಯಕ್ಕೆ ತಿರುಗಿ ಬಲಗಾರಮಠದ ಹತ್ತಿರ ದಕ್ಷಿಣಮುಖವಾಗಿ ದಿಬ್ಬನ ಗಡ್ಡೆಯನ್ನು ಬಳಸಿಕೊಂಡು ಮಹಿಷಿ ಮತ್ತು ಹೆದ್ದೂರು ಗ್ರಾಮಗಳ ನಡುವೆ ಮತ್ತೆ ಉತ್ತರಾಭಿಮುಖವಾಗಿ ಅನಂತರ ಈಶಾನ್ಯಾಭಿಮುಖವಾಗಿ ಹರಿದು ಮುಂದೆ ಶಿವಮೊಗ್ಗ ತಾಲ್ಲೂಕನ್ನು ಪ್ರವೇಶಿಸುತ್ತದೆ. ತುಂಗಾನದಿಗೆ ಮುಳಬಾಗಿಲ ದಕ್ಷಿಣದಲ್ಲಿ ಆಗುಂಬೆಯ ಹತ್ತಿರದಿಂದ ಹರಿದು ಬರುವ ಮಾಲತಿ ಹೊಳೆಯೂ ಮುಳಬಾಗಿಲ ಗ್ರಾಮದ ಹತ್ತಿರವೇ ಹರಿಯುವ ಬೈರೆಹೊಳೆಯೂ ಇತರ ಸಣ್ಣಪುಟ್ಟ ಹಳ್ಳ, ತೊರೆಗಳೂ ಬಂದು ಸೇರುತ್ತವೆ.

ತಾಲ್ಲೂಕಿನ ಪಶ್ಚಿಮ ಭಾಗ ದಟ್ಟಕಾಡುಗಳಿಂದ ಕೂಡಿದೆ. ಬಹು ಎತ್ತರದ ಬೆಟ್ಟಗಳ ಶಿಖರ ಭಾಗಗಳು ಬೋಳಾಗಿರುವುದು ಇಲ್ಲಿಯ ವೈಶಿಷ್ಟ್ಯ. ಕಾಡಿನ ಮಧ್ಯೆ ಹುಲ್ಲುಗಾವಲುಗಳಿವೆ. ತಾಲ್ಲೂಕಿನ ದಕ್ಷಿಣ ಮತ್ತು ಪೂರ್ವಭಾಗದಲ್ಲೂ ಸ್ವಲ್ಪಮಟ್ಟಿಗೆ ಕಾಡಿದೆ. ಅಡಕೆ ತೋಟಗಳಿಗಾಗಿ, ಎಲೆಗೊಬ್ಬರಕ್ಕಾಗಿ ಕಾಡಿನ ಮರಗಳನ್ನು ಹೆಚ್ಚು ಕಡಿಯಲಾಗಿದ್ದು ಈಚೆಗೆ ಕಾಡಿನ ಪ್ರದೇಶ ಕಡಿಮೆಯಾಗುತ್ತಿದೆ. ತಾಲ್ಲೂಕಿನ ಕಾಡಿನಲ್ಲಿ ಕರಿಮರ, ಹೊನ್ನೆ, ಮತ್ತಿ, ತೇಗ, ಗಂಧ, ಅಳಲೆ, ಸಂಪಾಜಿ, ಅರಸೆಂಬಿಗ, ಬಿರಡಿ, ಬಿಲವಾರ, ಬಾಗಿ, ಜಂಬೆ, ದಿಂಡಿಗ, ನಂದಿ ಮುಂತಾದ ಬೆಲೆ ಬಾಳುವ ಮರಗಳಿವೆ. ಕಾಡುಕೋಣ, ಹಂದಿ, ಹುಲಿ, ಚಿರತೆ, ಕರಡಿ, ಮೊಲ, ನರಿ ಮುಂತಾದ ಕಾಡುಪ್ರಾಣಿಗಳೂ ನದಿಯಲ್ಲಿ ಮೊಸಳೆಗಳೂ ಇವೆ.

ತಾಲ್ಲೂಕಿನ ಅರಣ್ಯಪ್ರದೇಶದಲ್ಲಿ ಜೇಡಿಮಣ್ಣಿನ ಫಲವತ್ತಾದ ಭೂಮಿಯೂ ಬೆಟ್ಟಗಳ ಮೇಲೆ ಕೆಂಪು ಜೇಡಿಮಣ್ಣಿನ ಭೂಮಿಯೂ ಸಾಮಾನ್ಯವಾಗಿ ಕಂಡುಬರುತ್ತದೆ. ಹೆಚ್ಚು ಬೆಟ್ಟಗಳಿಲ್ಲದೆ ಸ್ವಲ್ಪ ತೆರೆದಂತಿರುವ ತಾಲ್ಲೂಕಿನ ಉತ್ತರ ಭಾಗದಲ್ಲಿ ಫಲವತ್ತಾದ ಕರಿಮಣ್ಣಿದೆ. ಈ ತಾಲ್ಲೂಕಿನ ಭಾಗದಲ್ಲಿ ಮಳೆ ಹೆಚ್ಚು. ಆದರೆ ಮಳೆಯ ಪರಿಮಾಣ ಪಶ್ಚಿಮದಿಂದ ಪೂರ್ವಕ್ಕೆ ಬರುತ್ತಿದ್ದಂತೆ ಕಡಿಮೆಯಾಗುತ್ತದೆ. ಉದಾಹರಣೆಗೆ ಆಗುಂಬೆಯಲ್ಲಿ ಮಳೆಯ ವಾರ್ಷಿಕ ಸರಾಸರಿ ಸು. 8,051 ಮಿಮೀ. ಅದೇ ತೀರ್ಥಹಳ್ಳಿಯಲ್ಲಿ ಸು. 2,978 ಮಿಮೀ. ಜಲ, ಸಸ್ಯಸಮೃದ್ಧವಾದ ಈ ತಾಲ್ಲೂಕಿನಲ್ಲಿ ಬತ್ತ ಮತ್ತು ಅಡಕೆ, ಏಲಕ್ಕಿ, ಮೆಣಸು ಮುಖ್ಯ ಬೆಳೆಗಳು. ರಾಗಿ, ಜೋಳ, ಕಬ್ಬು, ಹುರುಳಿ, ತೊಗರಿ, ಅವರೆ, ಮೆಣಸಿನಕಾಯಿ ಇವುಗಳನ್ನೂ ಬೆಳೆಯುತ್ತಾರೆ. ಅನೇಕ ಕೃಷಿ ಉತ್ಪನ್ನಗಳು ಸುತ್ತಲ ಪ್ರದೇಶಕ್ಕೆ ರಫ್ತಾಗುತ್ತವೆ. ಜೇನುಸಾಕಣೆ ಇದ್ದು ಅರಣ್ಯ ಮತ್ತು ವ್ಯವಸಾಯಕ್ಕೆ ಸಂಬಂಧಪಟ್ಟ ಉಪಕಸಬುಗಳಿವೆ. ಕವಲೆದುರ್ಗದ ಬಳಪದ ಕಲ್ಲಿನ ವಸ್ತುಗಳೂ ತೀರ್ಥಹಳ್ಳಿಯ ಬೆಳ್ಳಿಯ ಪಾತ್ರೆಗಳೂ ಪ್ರಸಿದ್ಧ. ಮರ ಕೊಯ್ಯುವ ಕಾರ್ಖಾನೆಗಳೂ ಅಕ್ಕಿ ಗಿರಣಿಗಳೂ ಇಲ್ಲಿವೆ.



ಅಡಕೆ ತೋಟ

ಈ ತಾಲ್ಲೂಕಿನಲ್ಲಿ ರೈಲ್ವೆ ಮಾರ್ಗವಿಲ್ಲದಿದ್ದರೂ ಇತರ ಮಾರ್ಗಗಳಿಂದ ಸುತ್ತಲ ಊರುಗಳಿಗೆ ಸಂಪರ್ಕ ಸುಲಭವಾಗಿದೆ. ಉಡುಪಿ ಜಿಲ್ಲೆಗೆ ಹೋಗುವ ಆಗುಂಬೆ ಘಾಟ್ ಮಾರ್ಗ ಮುಖ್ಯ ಹಾದಿ. ತೀರ್ಥಹಳ್ಳಿಯಿಂದ ಶಿವಮೊಗ್ಗ, ಕೊಪ್ಪ, ಹೊಸನಗರಗಳಿಗೆ ಹೋಗುವ

ರಸ್ತೆಗಳು ತಾಲ್ಲೂಕಿನ ಇತರ ಮುಖ್ಯ ರಸ್ತೆಗಳು. ತಾಲ್ಲೂಕಿನಲ್ಲಿ ವಿದ್ಯುಚ್ಛಕ್ತಿ, ಅಂಚೆ, ತಂತಿ, ದೂರವಾಣಿ ಮುಂತಾದ ಸೌಲಭ್ಯಗಳ ಜೊತೆಗೆ ಶಾಲಾ ಕಾಲೇಜುಗಳೂ ವೈದ್ಯಕೀಯ ಕೇಂದ್ರಗಳೂ ಇವೆ.

ಅಗ್ರಹಾರ, ಮಂಡಗದ್ದೆ, ಮುತ್ತೂರು, ಮೇಗರವಳ್ಳಿ ಮತ್ತು ಆಗುಂಬೆ ತಾಲ್ಲೂಕಿನ ದೊಡ್ಡ ಸ್ಥಳಗಳು. ಆಗುಂಬೆಯ ಪ್ರಕೃತಿ ಸೌಂದರ್ಯ ಪ್ರಪಂಚ ವಿಖ್ಯಾತ. ಈ ತಾಲ್ಲೂಕಿನ ಆರಗ ಒಂದು ಇತಿಹಾಸಪ್ರಸಿದ್ಧ ಸ್ಥಳ. ಕವಲೆದುರ್ಗ ಪಾಂಡವರಿದ್ದ ಕಾಮ್ಯಕವನ ಪ್ರದೇಶವೆಂದು ಪ್ರತೀತಿ. ಅದು ಕೆಳದಿ ಅರಸರ ಕಾಲದ ಒಂದು ಪ್ರಖ್ಯಾತ ಗಿರಿದುರ್ಗ. ಈ ತಾಲ್ಲೂಕಿನ ಕುಪ್ಪಳಿ ಪ್ರಸಿದ್ಧ ಕವಿ ಕುವೆಂಪು ಅವರ ಊರು.

*

ತೀರ್ಥಹಳ್ಳಿ ಈ ತಾಲ್ಲೂಕಿನ ಆಡಳಿತ ಕೇಂದ್ರ ಮತ್ತು ದೊಡ್ಡ ಊರು. ಈ ನಗರ ತುಂಗಾ ನದಿಯ ಎಡದಂಡೆಯ ಮೇಲೆ ಶಿವಮೊಗ್ಗದ ನೈರುತ್ಯದಲ್ಲಿ ಶಿವಮೊಗ್ಗ-ಆಗುಂಬೆ ಮಾರ್ಗದಲ್ಲಿ 61ಕಿಮೀ ದೂರದಲ್ಲಿದೆ. ಜನಸಂಖ್ಯೆ 14,806.

1882ರವರೆಗೆ ಕವಲೆದುರ್ಗ ತಾಲ್ಲೂಕಿನ ಕೇಂದ್ರವಾಗಿದ್ದ ತೀರ್ಥಹಳ್ಳಿ ಅನಂತರ ಅದೇ ಹೆಸರಿನ ತಾಲ್ಲೂಕು ಕೇಂದ್ರವಾಯಿತು. ಇಲ್ಲಿನ ತುಂಗಾನದಿಯಲ್ಲಿ ಅನೇಕ ತೀರ್ಥಗಳು ಇರುವುದರಿಂದ ಇದಕ್ಕೆ ತೀರ್ಥಹಳ್ಳಿ ಎಂಬ ಹೆಸರು ಬಂದಿತೆನ್ನಲಾಗಿದೆ. ನದಿಯ ಶಿಲಾತಳದಲ್ಲಿ ನೀರಿನಿಂದ ಕೊರೆಯಲ್ಪಟ್ಟಿರುವ ವರ್ತುಲಾಕಾರದ ಅನೇಕ ಡೊಗರುಗಳಿವೆ (ಕುಳಿ). ಅಂಥ ಒಂದು ವಿಶಾಲ ಕುಳಿ ಕೊಳದ ಆಕಾರವನ್ನು ಪಡೆದಿದೆ. ಇಲ್ಲಿನ ನೀರನ್ನು ಪ್ರೋಕ್ಷಿಸಿಕೊಳ್ಳುವುದರಿಂದ ಪಾಪಗಳು ನಿರ್ಮೂಲವಾಗುತ್ತವೆ ಎಂಬ ನಂಬಿಕೆ ಇದೆ. ಪರಶುರಾಮ ತನ್ನ ಕೊಡಲಿಯಿಂದ ಈ ಕುಳಿಯನ್ನು ಮಾಡಿದನೆಂದು ಪ್ರತೀತಿ. ಮಾರ್ಗಶಿರ ಮಾಸದಲ್ಲಿ ಮೂರು ದಿನಗಳವರೆಗೆ ಇಲ್ಲಿ ರಾಮೇಶ್ವರ ಜಾತ್ರೆ ನಡೆಯುವುದು. ಆಗ ಇಲ್ಲಿನ ಡೊಗರಿನ ಮುಖಾಂತರ ಯಾತ್ರಿಕರು ಹಾದು ಹೋಗುತ್ತಾರೆ. ನದೀಪಾತ್ರದಲ್ಲಿನ ಕಲ್ಲುಗುಂಡುಗಳನ್ನು ಹಾಯ್ದು ನದಿಯನ್ನು ದಾಟುತ್ತಾರೆ.

ಊರಿನ ಪಶ್ಚಿಮಕ್ಕೆ ಒತ್ತಾದ ನಿತ್ಯಹರಿದ್ವರ್ಣದ ಕಾಡುಗಳಿದ್ದು ಈ ಊರಿನ ಸುತ್ತಮುತ್ತ ವಿಸ್ತೃತವಾದ ಅಡಕೆ ತೋಟಗಳಿವೆ. ಆಗುಂಬೆಯ ಬಳಿ ಸ್ವಾಭಾವಿಕವಾಗಿ ಬೆಳೆಯುವ ಏಲಕ್ಕಿಯೂ ಇಲ್ಲಿಗೆ ರವಾನೆಯಾಗಿ ವ್ಯಾಪಾರವಾಗುತ್ತದೆ. ಊರಿನಲ್ಲಿ ಮರ ಕೊಯ್ಯುವ ಹಲವು ಕಾರ್ಖಾನೆಗಳು ಇವೆ. ಅಕ್ಕಿ ಗಿರಣಿಗಳೂ ಹೆಚ್ಚಾಗಿವೆ. ಚರ್ಮ ಹಾಗೂ ರಬ್ಬರ್ ವಸ್ತುಗಳ ತಯಾರಿಕಾ ಕೇಂದ್ರ ಮತ್ತು ಅಡಕೆ ಸಂಶೋಧನೆ ಕೇಂದ್ರಗಳಿವೆ. ಈ ಊರು ಬೆಳ್ಳಿ ವಸ್ತುಗಳ ತಯಾರಿಕೆಗೆ ಹಿಂದಿನಿಂದಲೂ ಪ್ರಸಿದ್ಧಿ ಪಡೆದಿದೆ.

ಈ ಊರು ಹೊಸನಗರ ಹಾಗೂ ಕೊಪ್ಪ ತಾಲ್ಲೂಕುಗಳಿಗೆ ಪ್ರಧಾನ ವಾಣಿಜ್ಯ ಕೇಂದ್ರ. ಆಗುಂಬೆ ಮತ್ತು ಹುಲಿಕಲ್ ಘಾಟ್‍ಗಳ ಮುಖಾಂತರ ಕರಾವಳಿ ಪ್ರದೇಶಗಳಿಂದ ತೆಂಗಿನಕಾಯಿ, ಕೊಬ್ಬರಿ ಎಣ್ಣೆ ಬರುತ್ತವೆ. ಮೈದಾನದ ತಾಲ್ಲೂಕುಗಳಿಂದ ವಿವಿಧ ರೀತಿಯ ಬೇಳೆಗಳು, ಬಟ್ಟೆಗಳು, ಎತ್ತುಗಳು ಬರುತ್ತವೆ.

ಈ ಊರಿನಲ್ಲಿ ಹವೀಕ ಮತ್ತು ಪುತ್ತಿಗೆ ಮಠಗಳಿವೆ. ನದಿಯ ದಂಡೆಗಾದಂತೆ ಊರಿನಿಂದ 5ಕಿಮೀ ದೂರದಲ್ಲಿ ಮುಳಬಾಗಿಲು ಮಠವಿದೆ. ಅಲ್ಲಿಂದ ಒಂದೂವರೆ ಕಿಮೀ ದೂರದಲ್ಲಿ ಭೀಮನಕಟ್ಟೆ ಮಠವಿದೆ. ಈ ಮಠ ಪೌರಾಣಿಕ ಪ್ರಾಚೀನತೆಯನ್ನು ಹೊಂದಿದೆಯೆಂಬ ಕಾರಣದಿಂದ ತೀರ್ಥಹಳ್ಳಿ ವೈಷ್ಣವರ ಒಂದು ಪ್ರಮುಖ ಯಾತ್ರಾಸ್ಥಳವಾಗಿದೆ. ಈ ತಾಲ್ಲೂಕಿನ ಕುಪ್ಪಳಿ ರಾಷ್ಟ್ರಕವಿ ಕುವೆಂಪು ಅವರ ಸ್ವಂತ ಊರಾಗಿದ್ದು ಅಲ್ಲಿ ಅವರಿಗೆ ಪ್ರಿಯವಾಗಿದ್ದ ಕವಿಶೈಲ, ಕುವೆಂಪು ಪ್ರತಿಷ್ಠಾನದ ಸಂಶೋಧನ ಕೇಂದ್ರ ಮತ್ತು ಕವಿಗಳ ರುದ್ರಭೂಮಿ ಇವೆ. (ಕೆ.ಆರ್.ಆರ್.)

**ತುಂಗಭದ್ರಾ :** ತುಂಗಾ ಮತ್ತು ಭದ್ರಾ ಎಂಬ ಎರಡು ನದಿಗಳು ಕೂಡಿ ಮುಂದೆ ತುಂಗಭದ್ರಾ ಎಂಬ ಹೆಸರನ್ನು ಗಳಿಸಿ ಕರ್ನಾಟಕದ ಮಧ್ಯಭಾಗದಲ್ಲಿ ಈಶಾನ್ಯಾಭಿಮುಖವಾಗಿ ಹರಿಯುವ ದೊಡ್ಡ ನದಿ. ದೇಶದ ಆರ್ಥಿಕತೆಯಲ್ಲಿ ಪ್ರಾಚೀನ ಕಾಲದಿಂದಲೂ ಉಪಯುಕ್ತ ಪಾತ್ರ ವಹಿಸಿದ್ದು, ದಕ್ಷಿಣಗಂಗೆಯೆಂದು ಪವಿತ್ರವೆನಿಸಿರುವ ಜೀವನದಿ.

ಪಶ್ಚಿಮಘಟ್ಟಗಳಲ್ಲಿ ಹುಟ್ಟಿ ಈಶಾನ್ಯಾಭಿಮುಖವಾಗಿ ಹರಿಯುವ ತುಂಗಾ (ನೋಡಿ) ಮತ್ತು ಭದ್ರಾ (ನೋಡಿ) ನದಿಗಳು ಕೂಡುವುದು ಶಿವಮೊಗ್ಗದ ಈಶಾನ್ಯದಲ್ಲಿ ಸು.16ಕಿಮೀ ದೂರದಲ್ಲಿರುವ ಕೂಡಲಿಯಲ್ಲಿ. ಇಲ್ಲಿಂದ ಪ್ರಾರಂಭವಾಗುವ ತುಂಗಭದ್ರಾ ಶಿವಮೊಗ್ಗ ಜಿಲ್ಲೆಯನ್ನು ಬಿಡುವವರೆಗೂ ಉತ್ತರಗಾಮಿನಿಯಾಗಿದೆ. ಕೂಡಲಿ ಮತ್ತು ದಾವಣಗೆರೆ ಜಿಲ್ಲೆಯ ಹೊನ್ನಾಳಿಯ ಮಧ್ಯೆ ಮಾತ್ರ ಮೂರು ಸುತ್ತು ಬಳಸುಗಳಿವೆ. ಇಲ್ಲಿಂದ ಮುಂದೆ ಕರ್ನಾಟಕದ ರಾಜ್ಯವನ್ನು ಬಿಡುವವರೆಗೂ ಎಡಭಾಗದಲ್ಲಿ ಹಾವೇರಿ, ಗದಗ, ಕೊಪ್ಪಳ ಮತ್ತು ರಾಯಚೂರು ಜಿಲ್ಲೆಗಳು, ಬಲಭಾಗದಲ್ಲಿ ದಾವಣಗೆರೆ, ಬಳ್ಳಾರಿ ಜಿಲ್ಲೆಗಳು ಮತ್ತು ಸ್ವಲ್ಪ ದೂರ ಆಂಧ್ರಪ್ರದೇಶ ಇವುಗಳ ಮಧ್ಯದ ಗಡಿರೇಖೆಯಾಗಿ ನದಿ ಹರಿಯುತ್ತದೆ. ಶಿವಮೊಗ್ಗ ಜಿಲ್ಲೆಯಂಚಿನಿಂದ ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕಿನ ಕೊಡಿಯಾಲದವರೆಗೆ ಈಶಾನ್ಯಗಮನ. ಅಲ್ಲಿಂದ ಕೋಣನತಂಬಿಗಿವರೆಗೆ ಉತ್ತರಾಭಿಮುಖವಾಗಿ ಹರಿದು ಮುಂದೆ ಸ್ವಲ್ಪ ಪಶ್ಚಿಮಕ್ಕೆ ತಿರುಗಿ ಪುನಃ ಹಾವನೂರಿನಿಂದ ಸ್ವಲ್ಪ ಉತ್ತರದವರೆಗೆ ಉತ್ತರಕ್ಕೆ ಸಾಗಿ, ಮತ್ತೆ ಗದಗ ಜಿಲ್ಲೆಯ ಅಂಚನ್ನು ಬಿಡುವವರೆಗೆ ಈಶಾನ್ಯಕ್ಕೆ ಹರಿಯುತ್ತದೆ. ಅಲ್ಲಿಂದ ಸು.20ಕಿಮೀ ದೂರದವರೆಗೆ ಪೂರ್ವಾಭಿಮುಖವಾಗಿ, ಮತ್ತೆ ಬಳ್ಳಾರಿ ಜಿಲ್ಲೆಯಂಚಿನವರೆಗೆ ಮತ್ತು ಮುಂದೆ 15ಕಿಮೀ ದೂರದವರೆಗೆ ಈಶಾನ್ಯಕ್ಕೆ ಸಾಗಿ ಮುಂದೆ ರಾಜ್ಯದ ಎಲ್ಲೆಯನ್ನು ಬಿಡುವ ತನಕ ಪೂರ್ವಕ್ಕೆ ಹರಿಯುತ್ತದೆ. ಅಲ್ಲಿಂದ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯಲ್ಲಿ ಸಾಗಿ ಕರ್ನೂಲು ಪಟ್ಟಣದಿಂದ ಸ್ವಲ್ಪ ಮುಂದೆ ಕೃಷ್ಣಾನದಿಯಲ್ಲಿ ಸಂಗಮವಾಗುತ್ತದೆ. ಕರ್ನಾಟಕದಲ್ಲಿ ತುಂಗಭದ್ರಾ ನದಿಯು ಹರಿವಿನ ಒಟ್ಟು ಉದ್ದ 403ಕಿಮೀ. (ಎಸ್.ವಿ.ಪಿ.)



ತುಂಗಭದ್ರಾ ಅಣೆಕಟ್ಟು ಸಮೀಪದ ಉದ್ಯಾನವನ

ಕೂಡಲಿಯಿಂದ ಬಳ್ಳಾರಿ ಜಿಲ್ಲೆಯಂಚನ್ನು ತಲಪುವವರೆಗೂ ಕಡಿದಾದ ಎತ್ತರ ದಂಡೆಗಳ ಮಧ್ಯೆ ಹರಿದು ಬರುತ್ತದೆ. ನದಿಯ ಪಾತ್ರ ಸು.100ರಿಂದ 200ಮೀ. ಅಗಲವಾಗಿದ್ದು ಇಲ್ಲಿ ಹಾಗೂ ಇನ್ನೂ ಮುಂದೆ ಸಹ ಬಹುತೇಕ ಬಂಡೆಗಳಿಂದ ಕೂಡಿದೆ. ಅಲ್ಲಲ್ಲಿ ಮಡುಗಳು, ಸುಳಿಗಳು ಸಾಮಾನ್ಯ. ಬಳ್ಳಾರಿ ಜಿಲ್ಲೆಯ ಹಿಂದಿನ ವಲ್ಲಭಪುರಿ ಅಣೆಕಟ್ಟಿನ ಹತ್ತಿರದವರೆಗೂ ನದಿಯ ಇಳಿವು ಸಾಮಾನ್ಯವಾಗಿ ಒಂದು ಕಿಮೀ ದೂರಕ್ಕೆ 40ಸೆಂಮೀ. ಗಳಷ್ಟು ಮಾತ್ರ. ಇಲ್ಲಿಂದ ಮುಂದೆ ಕಂಪ್ಲಿಯವರೆಗೆ ನದಿ ಇಳಿಜಾರಿನಲ್ಲಿ ವೇಗವಾಗಿ ಹರಿಯುತ್ತ ಸು.115 ಮೀಗಳಷ್ಟು ಕೆಳಗಿಳಿಯುತ್ತದೆ. ಅಂದರೆ ಸರಾಸರಿ ಮಟ್ಟದ ಇಳಿತ ಕಿಮೀಗೆ 280ಸೆಂಮೀ. ಇಲ್ಲಿಂದ ಮುಂದೆ ನದಿಯ ಮಟ್ಟದ ಇಳಿತ ಪುನಃ ಸಾಧಾರಣವಾಗಿರುತ್ತದೆ. ಬಳ್ಳಾರಿ ಜಿಲ್ಲೆಯ ಕೆಲವೆಡೆಗಳಲ್ಲಿ ನದಿಯ

ದಂಡೆಗಳಲ್ಲಿ ಗುಂಡುಕಲ್ಲಿನ ಹರಹುಗಳಿರುವುದುಂಟು. ಕೆಲವು ಕಡೆಗಳಲ್ಲಿ ಇಂಥ ಹರಹುಗಳು ಈಗಿನ ನದಿಯ ಮಟ್ಟಕ್ಕಿಂತ ಸು.20-30 ಮೀಗಳಷ್ಟು ಮೇಲಿದ್ದು, ಇವು ಹಿಂದೆ ನದಿ ಎತ್ತರದಲ್ಲಿ ಹರಿಯುತ್ತಿದ್ದುದಕ್ಕೆ ಸೂಚಕವಾಗಿವೆ. ನದಿ ವಿಶೇಷವಾಗಿ ಬಂಡೆಗಳಲ್ಲಿನ ಪಾತ್ರದಲ್ಲಿ ಹರಿಯುವುದರಿಂದ ಅಲ್ಲಲ್ಲಿ ಅನೇಕ ಕಡೆ ಸೀಳುಗಳಾಗಿ ಒಡೆದು ದ್ವೀಪಗಳನ್ನು ನಿರ್ಮಿಸಿರುವುದುಂಟು. ಹೊಸಪೇಟೆಯಿಂದ ಸ್ವಲ್ಪ ಮುಂದೆ ರೈಲುಹಾದಿ ಹಾದುಹೋಗುವ ಬಳಿ ಇರುವ ದ್ವೀಪ ದೊಡ್ಡದು. ಮುಂದೆ ಸಿರಗುಪ್ಪ ತಾಲ್ಲೂಕಿನ ಕೆಂಚನಗುಡ್ಡದ ಬಳಿ ಮೂರು ದೊಡ್ಡ ದ್ವೀಪಗಳಿವೆ. ಇವುಗಳಲ್ಲಿ ಕೊನೆಯದಾದ ದೇಸನೂರು ಗ್ರಾಮವಿರುವ ದ್ವೀಪ ಸು.10ಕಿಮೀ ವ್ಯಾಪಿಸಿದೆ. ತುಂಗಭದ್ರಾ ಜೀವನದಿಯಾಗಿದ್ದು ವರ್ಷದ ಎಲ್ಲಾ ಕಾಲದಲ್ಲೂ ನೀರು ಹರಿಯುವುದಾದರೂ ಬೇಸಗೆಯಲ್ಲಿ ಹರಿಯುವ ನೀರಿನ ಪ್ರಮಾಣ ಬಹಳ ಕಡಿಮೆ. ಈ ಕಾಲದಲ್ಲಿ ಪಾತ್ರದಲ್ಲಿ ನದಿ ಹಲವು ಸೀಳುಗಳಾಗಿ ಒಡೆದು ಹರಿಯುವುದು ಸಾಮಾನ್ಯ ದೃಶ್ಯ. ಆಗ ಹಲವು ಕಡೆಗಳಲ್ಲಿ ಸುಲಭವಾಗಿ ನದಿಯನ್ನು ದಾಟಬಹುದು. ಮಳೆಗಾಲದಲ್ಲಿ ನದಿ ಏಕಪ್ರವಾಹವಾಗಿ ತುಂಬಿ ಹರಿಯುತ್ತದೆ. ಆಗ ನದಿಯಲ್ಲಿ ಸರಾಸರಿ ಸು.30,000 ಕ್ಯೂಸೆಕ್ಕುಗಳಷ್ಟು ನೀರು ಹರಿಯುವುದೆಂದು ಅಂದಾಜು ಮಾಡಲಾಗಿದೆ. ಹರಿಹರ ಸೇತುವೆಯ ಬಳಿಯ ಮಾಪನ ಕೇಂದ್ರದಲ್ಲಿ ಒಮ್ಮೆ ನದಿಯಲ್ಲಿ 2,07,843 ಕ್ಯೂಸೆಕ್ಕು ನೀರು ಹರಿದಿದ್ದನ್ನು ಗುರುತಿಸಲಾಗಿದೆ. ಬಹುಶಃ ಇದೇ ಅತ್ಯಧಿಕ ಪ್ರವಾಹ. ಬಂಡೆ ಪ್ರಾಂತ್ಯದಿಂದ ಕೂಡಿರುವ ಈ ನದಿ ಜಲಯಾನಕ್ಕೆ ಉಪಯುಕ್ತವಾಗಿಲ್ಲ.



ತುಂಗಭದ್ರಾ ಅಣೆಕಟ್ಟು

ತುಂಗಭದ್ರಾ ನದಿಯ ಮುಖ್ಯ ಉಪನದಿಗಳಲ್ಲಿ ಮೊದಲು ಸೇರುವುದು ಕುಮುದ್ವತಿ. ಶಿಕಾರಿಪುರ, ಹಿರೇಕೆರೂರು ತಾಲ್ಲೂಕುಗಳಲ್ಲಿ ಹರಿದು ಬರುವ ಈ ನದಿ ಹರಿಹರದಿಂದ ಸ್ವಲ್ಪ ಮೇಲೆ ರಾಣೆಬೆನ್ನೂರು ತಾಲ್ಲೂಕಿನ ಮುದೇನೂರು ಬಳಿಯಲ್ಲಿ ತುಂಗಭದ್ರಾ ನದಿಯನ್ನು ಎಡಭಾಗದಿಂದ ಬಂದು ಕೂಡುತ್ತದೆ. ಮುಂದೆ ಸೇರುವ ವರದಾ ಸಹ ಎಡಭಾಗದ ಉಪನದಿ. ಶಿರಸಿ, ಹಾನಗಲ್ಲು ತಾಲ್ಲೂಕುಗಳಲ್ಲಿ ಹರಿದುಬರುವ ಈ ನದಿ ಕರಜಗಿ ತಾಲ್ಲೂಕಿನ ಗಳಗನಾಥದ ಬಳಿ ಸಂಗಮವಾಗುತ್ತದೆ. ಇಲ್ಲಿಂದ ಮುಂದೆ ಎಡಭಾಗದಿಂದ ಬಂದು ಸೇರುವವುಗಳೆಲ್ಲ ಸಣ್ಣ ಪುಟ್ಟ ಹಳ್ಳಗಳು. ಇವುಗಳಲ್ಲಿ ರಾಯಚೂರು ಜಿಲ್ಲೆಯಲ್ಲಿ ಲಿಂಗಸುಗೂರು, ಸಿಂಧನೂರು ತಾಲ್ಲೂಕುಗಳಲ್ಲಿ ಮಾನ್ವಿಯಿಂದ ಸು.12ಕಿಮೀ ದಕ್ಷಿಣದಲ್ಲಿ ತುಂಗಭದ್ರಾ ನದಿಯನ್ನು ಸೇರುವ ಹಿರೇಹಳ್ಳ ಮತ್ತು ಮಸ್ಕಿನಾಲಾ ಸ್ವಲ್ಪ ದೊಡ್ಡವು. ಬಲದಂಡೆಯ ಉಪನದಿಗಳಲ್ಲಿ ಚಿಕ್ಕಹಗರಿ ಮತ್ತು ಹಗರಿ ಮುಖ್ಯವಾದವು. ಚಿಕ್ಕ ಹಗರಿ ಹರಪನಹಳ್ಳಿ, ಕೂಡ್ಲಿಗಿ ತಾಲ್ಲೂಕುಗಳಲ್ಲಿ ಹರಿದು ಹಗರಿಬೊಮ್ಮನಹಳ್ಳಿಯಿಂದ ಸ್ವಲ್ಪ ಉತ್ತರದಲ್ಲಿ ತುಂಗಭದ್ರಾ ಅಣೆಕಟ್ಟಿನ ಹಿನ್ನೀರನ್ನು ಸೇರುತ್ತದೆ. ಪಶ್ಚಿಮ ಘಟ್ಟಗಳಲ್ಲಿ ಹುಟ್ಟಿ ಚಿಕ್ಕಮಗಳೂರು, ಚಿತ್ರದುರ್ಗ ಜಿಲ್ಲೆಗಳನ್ನು ಹಾದು ಬರುವ ಹಗರಿ ಬಳ್ಳಾರಿ ಜಿಲ್ಲೆಯ ಸಿರಗುಪ್ಪದಿಂದ ಈಶಾನ್ಯಕ್ಕೆ ಹಳೇಕೋಟೆ ಬಳಿ ತುಂಗಭದ್ರಾ ನದಿಯನ್ನು ಸೇರುತ್ತದೆ. ಬಲದಂಡೆಯ ಹಳ್ಳಗಳಲ್ಲಿ ಹರಿಹರದ ಬಳಿ ಸೇರುವ ಸ್ಯಾಗಲಹಳ್ಳ (ಹರಿದ್ರಾ, ಸೂಳೇಕೆರೆಹಳ್ಳ), ಹಗರಿಬೊಮ್ಮನ ಹಳ್ಳಿಯಿಂದ ಸ್ವಲ್ಪ ಈಶಾನ್ಯದಲ್ಲಿ ಸೇರುವ ಹಂಪಾಪಟ್ಟಣ ಹಳ್ಳ, ಕಂಪ್ಲಿಯಿಂದ ಸ್ವಲ್ಪ ಪೂರ್ವದಲ್ಲಿ ಕೂಡುವ ರಾಮಪ್ಪವಂಕ ಇವನ್ನು ಹೆಸರಿಸಬಹುದು.

ತುಂಗಭದ್ರಾ ನದಿಯ ನೀರನ್ನು ಸಾಕಷ್ಟುಮಟ್ಟಿಗೆ ವ್ಯವಸಾಯಕ್ಕೆ ಬಳಸಿಕೊಳ್ಳಲಾಗುತ್ತಿದೆ. ನದಿ ಬಳ್ಳಾರಿ ಜಿಲ್ಲೆಯವರೆಗೆ ಬರುವವರೆಗೂ ಕಡಿದಾದ ದಂಡೆಗಳಿರುವುದರಿಂದ ಆ ಭಾಗದಲ್ಲಿ ಯಾವ ಅಣೆಕಟ್ಟುಗಳೂ ಇಲ್ಲ. ಆದರೆ ಈಚೆಗೆ ಕೊಪ್ಪಳ ಮತ್ತು ಹರಿಹರ ತಾಲ್ಲೂಕುಗಳ ಭಾಗದಲ್ಲಿ ಎತ್ತುನೀರಾವರಿಯನ್ನು ಪ್ರೋತ್ಸಾಹಿಸಲಾಗಿದೆ. ಇಲ್ಲಿಂದ ಮುಂದೆ ನದಿಗೆ ಅಡ್ಡಲಾಗಿ ಅನೇಕ ಅಣೆಕಟ್ಟುಗಳನ್ನು ನಿರ್ಮಿಸಲಾಗಿದೆ. ಇವುಗಳಲ್ಲಿ ಕೆಲವು ಬಹುಪ್ರಾಚೀನವಾದವು. ಅನೇಕ ಅಣೆಕಟ್ಟುಗಳು ವಿಜಯನಗರದ ಕಾಲದಲ್ಲಿ ರಚಿತವಾದವು. ದೊಡ್ಡ ಬಂಡೆಗಳನ್ನು ನದಿಗೆ ಅಡ್ಡಲಾಗಿ ಕಿರುಗೋಡೆಯಂತೆ ಪೇರಿಸಿ ನೀರನ್ನು ನಾಲೆಗಳಿಂದ ಎರಡು ದಂಡೆಗಳಲ್ಲಿ ಹರಿಯುವಂತೆ ವ್ಯವಸ್ಥಿತವಾಗಿರುವ ಒಂಬತ್ತು ಪ್ರಾಚೀನ ಅಣೆಕಟ್ಟುಗಳು ಕರ್ನಾಟಕದ ಭಾಗದಲ್ಲಿವೆ. ಇವನ್ನು ಕೃಷ್ಣದೇವರಾಯನ ದಣ್ಣಾಯಕ ಮುದ್ದ ಎಂಬುವವನು ಕಟ್ಟಿಸಿದನೆಂದು ಪ್ರತೀತಿ. ಇವುಗಳಲ್ಲಿ ಮೊದಲನೆಯದು ಹೊಸಪೇಟೆಯಿಂದ ಸು.10ಕಿಮೀ ಪಶ್ಚಿಮದಲ್ಲಿ ವಲ್ಲಭಪುರ ಎಂಬಲ್ಲಿತ್ತು. ಇದು ಹಾಗೂ ಇದರ ಮುಂದೆ ಕೆಲವೇ ಕಿಮೀ ಕೆಳಗಿದ್ದ ಹೊಸಪೇಟೆ ಅಣೆಕಟ್ಟುಗಳು ಈಗ ತುಂಗಭದ್ರಾ ಜಲಾಶಯದಲ್ಲಿ ಮುಳುಗಿಹೋಗಿವೆ. ಆದರೆ ಇವುಗಳಿಂದ ಹೊರಟು ಹೊಸಪೇಟೆ ತಾಲ್ಲೂಕಿನ ಭಾಗಗಳಿಗೆ ನೀರುಣಿಸುತ್ತಿದ್ದ ಬಸವಣ್ಣ ನಾಲಾ (ಉದ್ದ 10ಕಿಮೀ) ಮತ್ತು ರಾಯನಾಲಾ (28ಕಿಮೀ) ಇವುಗಳಿಗೆ ತುಂಗಭದ್ರಾ ಅಣೆಕಟ್ಟೆಯಿಂದಲೇ ನೀರು ಪೂರೈಸಲಾಗುತ್ತಿದೆ. ಇಲ್ಲಿಂದ ಮುಂದೆ ಹೊಸಪೇಟೆ ಬಳಿ ಇರುವ ತುಂಗಭದ್ರಾ ಅಣೆಕಟ್ಟು ಈಚಿನ ರಚನೆ. ಇದು ಕರ್ನಾಟಕದ ಬೃಹತ್ ನೀರಾವರಿ ಯೋಜನೆಗಳಲ್ಲಿ ಒಂದಾಗಿದ್ದು ಕರ್ನಾಟಕದ ಬಳ್ಳಾರಿ, ರಾಯಚೂರು ಜಿಲ್ಲೆಗಳನ್ನೂ ಮುಂದೆ ಆಂಧ್ರ ಪ್ರದೇಶದ ಬಹುಭಾಗಗಳನ್ನೂ ತನ್ನ ಎಡ ಹಾಗೂ ಬಲದಂಡೆ ನಾಲೆಗಳಿಂದ ಸಮೃದ್ಧವಾಗಿಸಿದೆ. ತುಂಗಭದ್ರಾ ಅಣೆಕಟ್ಟೆಯಿಂದ ಸ್ವಲ್ಪ ಕೆಳಗೆ ಹೊಸಪೇಟೆಯ ಹತ್ತಿರದಲ್ಲಿ ಇರುವ ಹೊಸೂರು ಅಣೆಕಟ್ಟು ಮುಂದಿನದು. ಇಲ್ಲಿಂದ ಹೊರಡುವ ಕಲಘಟ್ಟ ನಾಲಾ (ಉದ್ದ ಆರೂವರೆ ಕಿಮೀ) ಹೊಸಪೇಟೆ ತಾಲ್ಲೂಕಿನ ಭಾಗಕ್ಕೆ ಮತ್ತು ಎಡದಂಡೆಯ ಹುಲ್ಗಿ ನಾಲಾ (ಉದ್ದ 5ಕಿಮೀ) ಗಂಗಾವತಿ ತಾಲ್ಲೂಕಿನ ಸ್ವಲ್ಪ ಭಾಗಕ್ಕೆ ನೀರೊದಗಿಸುತ್ತವೆ. ಮತ್ತಷ್ಟು ಕೆಳಗೆ ಹಂಪೆಯಿಂದ ಸುಮಾರು 3ಕಿಮೀ ಪಶ್ಚಿಮಕ್ಕಿರುವ ತೂರ್ತ ಅಣೆಕಟ್ಟಿನಿಂದ ಹೊರಡುವ ತೂರ್ತ ಬಲದಂಡೆ ನಾಲೆ (ಉದ್ದ 16ಕಿಮೀ) ಹಂಪೆಯ ಭಾಗಕ್ಕೂ ಎಡದಂಡೆಯ ಆನೆಗೊಂದಿ ನಾಲೆ, ಗಂಗಾವತಿ ತಾಲ್ಲೂಕಿನ ಆನೆಗೊಂದಿ ಭಾಗಕ್ಕೂ ಉಪಯುಕ್ತವಾಗಿವೆ. ಮುಂದೆ ಹಂಪೆಯಿಂದ ಸುಮಾರು 5ಕಿಮೀ ಕೆಳಗೆ ಇರುವ ರಾಮಸಾಗರ ಅಣೆಕಟ್ಟಿನಿಂದ ಬಲದಂಡೆಯ ರಾಮಸಾಗರ ನಾಲೆ (ಉದ್ದ 16ಕಿಮೀ) ಇದೆ. ಎಡದಂಡೆಯ ನಾಲೆ ಮೇಗಣ ಮತ್ತು ಕೆಳಗಣ ಗಂಗಾವತಿ ನಾಲೆಗಳಾಗಿ ಕವಲೊಡೆದು ಗಂಗಾವತಿ, ಹೊಸಹಳ್ಳಿ ಭಾಗಗಳಿಗೆ ನೀರೊದಗಿಸುತ್ತವೆ. ರಾಮಸಾಗರದಿಂದ ಸುಮಾರು 3ಕಿಮೀ ಕೆಳಗೆ ಕಂಪ್ಲಿ ಅಣೆಕಟ್ಟಿದೆ. ಇದಕ್ಕೆ ಬಲದಂಡೆಯ ನಾಲೆ ಮಾತ್ರವಿದ್ದು ಅದೇ ಕಂಪ್ಲಿ ಪ್ರದೇಶದಲ್ಲಿ ಕಂಪ್ಲಿ ನಾಲೆಯಾಗಿ 23ಕಿಮೀ ದೂರಕ್ಕೆ ಹರಿದು ಮುಂದೆ ಬೆಲಗೋಡುಹಾಳು ನಾಲೆಗೂ (ಉದ್ದ 11ಕಿಮೀ) ನೀರೊದಗಿಸುತ್ತದೆ. ಈ ಅಣೆಕಟ್ಟುಗಳೆಲ್ಲಾ ಹತ್ತಿರಹತ್ತಿರದಲ್ಲೇ ಇದ್ದರೆ ಮುಂದಿನವು ಇಲ್ಲಿಂದ ಸು.40ಕಿಮೀ ಕೆಳಗೆ ಸಿರಗುಪ್ಪ ಬಳಿ ಇವೆ. ಸಿರಗುಪ್ಪದಿಂದ ಪಶ್ಚಿಮದಲ್ಲಿ ಸು.6ಕಿಮೀ ದೂರದಲ್ಲಿ ಸಿರಗುಪ್ಪ ಅಣೆಕಟ್ಟಿನಿಂದ ಬಲದಂಡೆ ನಾಲೆ ಹೊರಟು 19ಕಿಮೀ ದೂರ ಸಾಗುತ್ತದೆ. ಸಿರಗುಪ್ಪ ಅಣೆಕಟ್ಟಿನಿಂದ ಸ್ವಲ್ಪವೇ ಕೆಳಗೆ ತುಂಗಭದ್ರಾ ನದಿಯ ಒಂದು ಕವಲಿಗೆ ದೇಸನೂರು ಅಣೆಕಟ್ಟನ್ನು ಕಟ್ಟಲಾಗಿದೆ. ಇಲ್ಲಿನ ನಾಲೆ ದೇಸನೂರು ದ್ವೀಪದ ಭಾಗದಲ್ಲಿ 10ಕಿಮೀ ದೂರ ಹರಿಯುತ್ತದೆ. ಮುಂದಿನದು ಮಾನ್ವಿಯಿಂದ ಸು.15ಕಿಮೀ ಆಗ್ನೇಯದಲ್ಲಿರುವ ರಾಜುಲಬಂಡ

ಅಣೆಕಟ್ಟೆ. 1947ರಲ್ಲಿ ಹೈದರಾಬಾದ್ ಸರ್ಕಾರದಿಂದ ಪ್ರಾರಂಭವಾದ ಈ ಅಣೆಕಟ್ಟೆ ಯೋಜನೆ ಕರ್ನಾಟಕ ಮತ್ತು ಆಂಧ್ರಪ್ರದೇಶ ಸರ್ಕಾರಗಳ ಸಂಯುಕ್ತ ಯೋಜನೆಯಾಗಿ 1962ರಲ್ಲಿ ಪೂರ್ಣವಾಯಿತು. ಇದರಿಂದ ಹೊರಡುವ ಎಡದಂಡೆಯ ನಾಲೆ ರಾಯಚೂರು ಜಿಲ್ಲೆಯ ಮಾನ್ವಿ ಮತ್ತು ರಾಯಚೂರು ತಾಲ್ಲೂಕಿನ ಭಾಗಗಳಲ್ಲಿ ಹರಿದು ಮುಂದೆ ಆಂಧ್ರ ಪ್ರದೇಶವನ್ನು ಪ್ರವೇಶಿಸುತ್ತದೆ. ಇಲ್ಲಿಂದ ಕೆಲವೇ ಕಿಮೀ ಕೆಳಗೆ ಇರುವ ಒಂದು ಚಿಕ್ಕ ಅಣೆಕಟ್ಟಿನಿಂದ ಹೊರಡುವ ಬೋಚಲ ನಾಲೆ ಮಾನ್ವಿ ಮತ್ತು ರಾಯಚೂರು ತಾಲ್ಲೂಕಿನಲ್ಲಿ ತುಂಗಭದ್ರಾ ಅಂಚಿನಲ್ಲೇ ಸುಮಾರು 20ಕಿಮೀ ಸಾಗುತ್ತದೆ. ಇದು ವಿಜಯನಗರದ ನಿರ್ಮಾಣ.

ತುಂಗಭದ್ರಾ ನದಿಯು ಅನೇಕ ಕಡೆ ಇರುವ ಹಾಯ್ಗಡಗಳು ನೀರು ಕಡಿಮೆ ಇರುವ ಬೇಸಗೆಯ ದಿನಗಳಲ್ಲಿ ಆಯಾ ಪ್ರದೇಶದ ಜನರಿಗೆ ಉಪಯುಕ್ತ ಸಂಪರ್ಕ ಮಾರ್ಗಗಳಾಗುತ್ತವೆ. ಪ್ರವಾಹಕಾಲದಲ್ಲಿ ದೋಣಿ, ಹರಿಗೋಲುಗಳನ್ನು ಉಪಯೋಗಿಸಲಾಗುತ್ತದೆ. ಉತ್ತರ ಮತ್ತು ದಕ್ಷಿಣ ಕರ್ನಾಟಕದ ಮಧ್ಯಭಾಗದಲ್ಲಿ ಆಯಕಟ್ಟಿನ ಸ್ಥಳದಲ್ಲಿ ಹರಿಯುವ ಈ ನದಿಗೆ ಹಿಂದಿನ ಕಾಲದಿಂದಲೂ ಸೇತುವೆಗಳಿದ್ದಿರಬೇಕು. ವಿಜಯನಗರದ ಕಾಲದಲ್ಲಿ ನಿರ್ಮಾಣವಾದ ಒಂದು ಸೇತುವೆಯ ಅವಶೇಷಗಳನ್ನು ಹಂಪೆಯ ಬಳಿಯಲ್ಲಿ ಈಗಲೂ ಕಾಣಬಹುದು. ಈಚಿನ ದಿನಗಳಲ್ಲಿ ಅನೇಕ ಸೇತುವೆಗಳು ನಿರ್ಮಾಣವಾಗಿವೆ. ನದಿಯು ಪ್ರಾರಂಭದಿಂದ ಸಿಗುವ ಮೊದಲ ಸೇತುವೆ ಹರಿಹರ-ಶಿವಮೊಗ್ಗ ಮಾರ್ಗದಲ್ಲಿ ಹೊನ್ನಾಳಿಯ ಬಳಿ ಇದೆ. ಮುಂದಿನದು ಬೆಂಗಳೂರು-ಮುಂಬಯಿ ರಾಷ್ಟ್ರೀಯ ಹೆದ್ದಾರಿಯಲ್ಲಿರುವ ಹರಿಹರ ಸೇತುವೆ (1868). ಇಲ್ಲಿ ಬೆಂಗಳೂರು-ಹುಬ್ಬಳ್ಳಿ ಮಾರ್ಗದ ರೈಲು ಸೇತುವೆ ಸಹ ಇದೆ. ಮುಂದಿನ ಸೇತುವೆ ಹಾವನೂರು (ಹಾವೇರಿ-ಹರಪನಹಳ್ಳಿ ಮಾರ್ಗ) ಬಳಿ ಇದೆ. ಮುಂದಿನ ತುಂಗಭದ್ರಾ ಅಣೆಕಟ್ಟು ಸಂಚಾರಕ್ಕೂ ಉಪಯುಕ್ತ. ಇದರ ಕೆಳಗೆ ಸುಮಾರು 5ಕಿಮೀ ದೂರದಲ್ಲಿ ಕೊಪ್ಪಳ-ಹೊಸಪೇಟೆ-ಬಳ್ಳಾರಿ ರಸ್ತೆಗಾಗಿ ಹುಲ್ಗಿಯ ಬಳಿ ಒಂದು ಸೇತುವೆ ಇದೆ. ಇಲ್ಲಿ ಗುಂತಕಲ್ಲು-ಹುಬ್ಬಳ್ಳಿ ರೈಲುಮಾರ್ಗದ ಸೇತುವೆಯೂ ಇದೆ. ಮುಂದೆ ಕ್ರಮವಾಗಿ ಕಂಪ್ಲಿ (ಗಂಗಾವತಿ-ಬಳ್ಳಾರಿ ಮಾರ್ಗ) ಧಡೆಸುಗೂರು (ಸಿಂಧನೂರು-ಸಿರಗುಪ್ಪ ಮಾರ್ಗ) – ಈ ಸ್ಥಳಗಳಲ್ಲಿ ಸೇತುವೆಗಳು ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಗಳಿಗೆ ಸಂಪರ್ಕವನ್ನೊದಗಿಸುತ್ತವೆ. ಮುಂದಿರುವ ರಾಯಚೂರು–ಗುಂತಕಲ್ಲು ರೈಲುಮಾರ್ಗದ ಸೇತುವೆ ರಾಯಚೂರು ತಾಲ್ಲೂಕಿನ ಗಿಲೇಸುಗೂರು ಬಳಿ ಇದೆ. ಇಲ್ಲಿ ಇತ್ತೀಚೆಗೆ ಒಂದು ಹೊಸ ಸೇತುವೆಯನ್ನೂ ನಿರ್ಮಿಸಲಾಗಿದ್ದು ಇದು ರಾಯಚೂರಿನಿಂದ ಬೆಂಗಳೂರಿಗೆ ಆದವಾನಿ-ಅನಂತಪುರ ಮಾರ್ಗವಾಗಿ ನೇರ ಸಂಪರ್ಕವನ್ನು ಒದಗಿಸುತ್ತದೆ.

ತುಂಗಭದ್ರಾ ನದಿ ಪ್ರಾಗಿತಿಹಾಸಕಾಲದಿಂದಲೂ ಜನೋಪಯೋಗಿ ಯಾಗಿದ್ದು ಇಲ್ಲಿ ಅನೇಕ ಸಂಸ್ಕೃತಿಗಳು ಬೆಳೆಯಲು ಕಾರಣವಾಗಿದೆ. ನದಿಯ ದಂಡೆಯಲ್ಲಿ ಇರುವ ನಿಟ್ಟೂರು, ಹಂಪಸಾಗರ ಮೊದಲಾದ ಪ್ರಾಗಿತಿಹಾಸ ಕಾಲದ ನೆಲೆಗಳು ಇದಕ್ಕೆ ಸಾಕ್ಷಿ. ಇತಿಹಾಸಯುಗದಲ್ಲೂ ಈ ನದಿ ಕರ್ನಾಟಕದ ರಾಜಕೀಯ-ಭೌಗೋಳಿಕ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸಿತ್ತು. ಹಲವು ರಾಜ್ಯಗಳ ಗಡಿಯಾಗಿ ಇರುತ್ತಿತ್ತಲ್ಲದೆ, ಇದರ ದಂಡೆಯಲ್ಲಿ ಹಂಪೆ, ಕಂಪಿಲಿಯಂಥ ರಾಜಧಾನಿಗಳು, ಮಂಗಳ ಮೊದಲಾದ ಕೋಟೆಗಳು ರಚಿತವಾಗಿದ್ದುವು. ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ, ಚಿತ್ರದುರ್ಗ ಜಿಲ್ಲೆಯ ಹರಿಹರ, ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಕಂಪ್ಲಿ ಮತ್ತು ಸಿರಿಗುಪ್ಪ, ರಾಯಚೂರು ಜಿಲ್ಲೆಯ ಗಂಗಾವತಿ ಈಗ ತುಂಗಭದ್ರಾ ನದಿಯ ದಡದಲ್ಲಿರುವ ದೊಡ್ಡ ಊರುಗಳು. ಹಂಪೆ ಪವಿತ್ರ ಕ್ಷೇತ್ರವೂ ಆಗಿದೆ. ಶಿವಮೊಗ್ಗ ಜಿಲ್ಲೆಯ ಕೂಡಲಿ, ಚಿತ್ರದುರ್ಗ ಜಿಲ್ಲೆಯ ಹರಿಹರ, ಬಳ್ಳಾರಿ ಜಿಲ್ಲೆಯ ಕುರವತ್ತಿ ಮತ್ತು ಮೈಲಾರ, ಧಾರವಾಡ ಜಿಲ್ಲೆಯ ಗಳಗನಾಥ, ರಾಯಚೂರು ಜಿಲ್ಲೆಯ ಆನೆಗೊಂದಿ (ನವಬೃಂದಾವನ), ಮುಕ್ಕುಂದ - ಇವು ನದಿಯ ದಡದಲ್ಲಿರುವ ಇತರ ಪವಿತ್ರಕ್ಷೇತ್ರಗಳು.

ಪುರಾಣಗಳಲ್ಲಿ ತುಂಗಭದ್ರಾ ನದಿ ಬಗ್ಗೆ ಅನೇಕ ಉಲ್ಲೇಖಗಳಿವೆ. ರಾಮಾಯಣದಲ್ಲಿ ಇದು ಪಂಪಾ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಭಾಗವತದಲ್ಲೂ ಈ ನದಿಯ ಉಲ್ಲೇಖ ಬರುತ್ತದೆ. ಬ್ರಹ್ಮಾಂಡಪುರಾಣದ ತುಂಗಭದ್ರಾ ಮಹಾತ್ಮ್ಯೆಯಲ್ಲಿ ಈ ನದಿಯ ಮೂಲವನ್ನು ಹೀಗೆ ಹೇಳಿದೆ: ಹಿಂದೆ ಹಿರಣ್ಯಾಕ್ಷ ಭೂದೇವಿಯನ್ನು ಅಪಹರಿಕೊಂಡು ಸಮುದ್ರದಲ್ಲಿ ಬಚ್ಚಿಟ್ಟುಕೊಂಡಿದ್ದಾಗ, ದೇವತೆಗಳು ವಿಷ್ಣುವನ್ನು ಪ್ರಾರ್ಥಿಸಿದರು. ಆಗ ವಿಷ್ಣು ವರಾಹ ಅವತಾರ ತಾಳಿ ಹಿರಣ್ಯಾಕ್ಷನನ್ನು ಕೊಂದು ಭೂದೇವಿಯನ್ನು ಕಾಪಾಡಿ, ವಿಶ್ರಾಂತಿಗಾಗಿ ಪಶ್ಚಿಮಘಟ್ಟದ ಮೇಲೆ ಕುಳಿತುಕೊಂಡ. ಅದೇ ವರಾಹ ಪರ್ವತವಾಯಿತು. ವರಾಹನ ಬಲ ಕೊಂಬಿನಿಂದ ಸುರಿದ ಬೆವರೇ ಭದ್ರಾನದಿ, ಎಡಕೊಂಬಿನಿಂದ ಸುರಿದ ಬೆವರೇ ತುಂಗಾನದಿ. ಮತ್ಸ್ಯಪುರಾಣದಲ್ಲಿ ತುಂಗಭದ್ರಾ ನದಿಯನ್ನು ಪವಿತ್ರ ನದಿ ಎಂದು ಕರೆದಿದೆ. ಮಹಾಭಾರತದಲ್ಲಿ ಗಂಗಾ, ಕೃಷ್ಣಾ ನದಿಗಳ ಜೊತೆಗೆ ತುಂಗಭದ್ರಾ ನದಿಯನ್ನು ಸೇರಿಸಿ ಈ ಮೂರೂ ಪವಿತ್ರ ನದಿಗಳೆಂದು ಹೇಳಿದೆ.

**ತುಂಗಭದ್ರಾ ಯೋಜನೆ :** ಕರ್ನಾಟಕದ ಬೃಹತ್ ನೀರಾವರಿ ಯೋಜನೆ ಗಳಲ್ಲಿ ಒಂದು. ಈ ಯೋಜನೆಯ ಮುಖ್ಯವಾದ ಅಂಶಗಳು ಇವು:

1. ತುಂಗಭದ್ರಾ ನದಿಗೆ ಅಡ್ಡಲಾಗಿ ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ಮಲ್ಲಾಪುರದಲ್ಲಿ 133ಟಿ.ಎಂ.ಸಿ ನೀರನ್ನು ಹಿಡಿಯುವ ಕಟ್ಟೆಯ ಹಿಂದಿನ ಸರೋವರ. 2. ಎಡದಡದ ರಾಯಚೂರು ಜಿಲ್ಲೆಯಲ್ಲಿ 5.8ಲಕ್ಷ ಎಕರೆಗೆ ನೀರನ್ನು ಒದಗಿಸುವ 225.6ಕಿಮೀ ಉದ್ದವಾದ ನಾಲೆ. 3. ಬಲದಡದಲ್ಲಿ 347.2ಕಿಮೀ ಉದ್ದವಾದ ಕೆಳಮಟ್ಟದ ನಾಲೆ. ಈ ನಾಲೆಯಿಂದ ಬಳ್ಳಾರಿ ಜಿಲ್ಲೆಯಲ್ಲಿ 92,435 ಎಕರೆಗಳಿಗೂ ಆಂಧ್ರ ಪ್ರದೇಶದ ಕರ್ನೂಲ್ ಜಿಲ್ಲೆಯಲ್ಲಿ 1,56,913 ಎಕರೆಗಳಿಗೂ ನೀರಾವರಿ ಒದಗುತ್ತದೆ. 4. ಬಲದಡದಲ್ಲಿ ಪೆನ್ನಾರ್ ಕಣಿವೆಯವರೆಗೆ 195ಕಿಮೀ ಉದ್ದವಾದ ಮೇಲುಮಟ್ಟದ ನಾಲೆ. ಈ ನಾಲೆಯಿಂದ ಬಳ್ಳಾರಿ ಜಿಲ್ಲೆಯಲ್ಲಿ 2ಲಕ್ಷ ಎಕರೆಗಳಿಗೂ ಆಂಧ್ರ ಪ್ರದೇಶದಲ್ಲಿ 2.4ಲಕ್ಷ ಎಕರೆಗೂ ನೀರಾವರಿ ಒದಗುತ್ತದೆ. 5. ತುಂಗಭದ್ರಾ ಕಟ್ಟೆಯಲ್ಲಿ ಒಂದೊಂದು ದಡದಲ್ಲಿಯೂ ಒಂದು ವಿದ್ಯುದುತ್ಪಾದನ ಕೇಂದ್ರವಿದೆ. ನಾಲೆಯ ಮೇಲೆ 5 ವಿದ್ಯುತ್ಕೇಂದ್ರಗಳಿವೆ. ಇವುಗಳಿಂದ ಒಟ್ಟು 1,72,500 ಕಿಲೋವ್ಯಾಟ್ ವಿದ್ಯುತ್ ಉತ್ಪಾದನೆಯಾಗುತ್ತದೆ.

ಕಟ್ಟೆಯ ಬಳಿ ನದಿಯ ಜಲಾನಯನ ಭೂಮಿ 28,178.1ಚ.ಕಿಮೀ.

ತುಂಗಭದ್ರಾ ಕಟ್ಟೆಯಲ್ಲಿ ಐದು ಭಾಗಗಳಿವೆ :

1. ನದಿಯ ಮಧ್ಯದಲ್ಲಿ ಕಲ್ಲುಗಾರೆಯ ಓಗೀ ಆಕಾರದ ಕೋಡಿ 701.04ಮೀ. 2. ಎಡದಡದಲ್ಲಿ 81.4ಮೀ ಉದ್ದದ ಮುಂದುಗಡೆ ಕಲ್ಲುಗಾರೆ, ಹಿಂದೆ ಮಣ್ಣಿನ ಏರಿ. 3. ಬಲದಡದಲ್ಲಿ 958.6ಮೀ ಉದ್ದದ ಮೇಲುನೀರು ಹರಿಯದ ಕಟ್ಟೆ. 4. ಮೊದಲನೆಯ ನೀರುನೆತ್ತಿಯಲ್ಲಿ ಓಗೀ ಕಟ್ಟೆಯ ಎಡಗಡೆ 152.4ಮೀ ಉದ್ದದ ಮಣ್ಣಿನ ಏರಿ. 5. ಎಡದಡದ ಕೊನೆಯಲ್ಲಿ 472.4ಮೀ ಉದ್ದವಾದ ಮಣ್ಣಿನ ಏರಿ.

ಕಟ್ಟೆಯ ಎತ್ತರ ಆಳವಾದ ತಳಪಾಯದ ಮೇಲೆ 49.4ಮೀ ತಳದಲ್ಲಿ ಅಗಲ 19.4ಮೀ ಮೇಲಿನ ಅಗಲ 6.72ಮೀ ಜಲಾಶಯದ ತುಂಬುಮಟ್ಟ ಸಮುದ್ರಮಟ್ಟದ ಮೇಲೆ 497.7ಮೀ ಸರೋವರದಲ್ಲಿ 133ಟಿ.ಎಂ.ಸಿ ನೀರು ಹಿಡಿಯುತ್ತದೆ. ನೀರು ಹರವಿನ ವಿಸ್ತೀರ್ಣ 378ಚ.ಕಿಮೀ. ಮುಳುಗಿರುವ ಹಳ್ಳಿಗಳ ಸಂಖ್ಯೆ 73.

ಕಟ್ಟೆಯಲ್ಲಿ 37 ಮಿಲಿಯ ಘನ ಅಡಿ ಕಲ್ಲುಗಾರೆ ಸೇರಿದೆ. ಮುಂಭಾಗ ಮೇಲುಗಡೆ ಲಂಬವಾಗಿದ್ದು ಕೆಳಗಡೆ 20ಕ್ಕೆ 1ರಂತೆ ಓಟವಾಗಿದೆ. ಹಿಂಭಾಗ ಮೇಲಿನ 6ಮೀ ಲಂಬವಾಗಿದ್ದು ನಯವಾದ ಬಾಗಿನಲ್ಲಿ ಇಳಿಯುತ್ತದೆ. ಕಟ್ಟೆಯನ್ನು ಕಲ್ಲು ಮತ್ತು ಸುಣ್ಣಸುರ್ಕಿ ಗಾರೆಯಿಂದ ಕಟ್ಟಲಾಗಿದೆ. ಮುಂದಿನ ಮುಖದ 5.3ಮೀ ಹಿಂದೆ 1534 (ಆರ್.ಎಲ್.) ಅಡಿಗಳ ಮಟ್ಟದಲ್ಲಿ ತಳಪಾಯದಿಂದ ಕಟ್ಟೆಯೊಳಗಡೆ ಜಿನುಗಿದ ನೀರನ್ನು ಸಾಗಿಸುವುದಕ್ಕೂ ಪರಿಶೀಲನೆಗೂ 1.5ಮೀ ಅಗಲ

2.3ಮೀ ಎತ್ತರದ ಗೋಡನ್ನು ಉದ್ದಕ್ಕೂ ನಿರ್ಮಿಸಿ ತಳದಲ್ಲಿ ಹೊಳೆಯ ಕಡೆಗೆ ಒಂದು ಆಳವಾದ ಚರಂಡಿಯನ್ನು ಕಲ್ಲುಗಾರೆಯಿಂದ ಕಟ್ಟಿ ಅದರಲ್ಲಿ ಜಿನುಗಿದ ನೀರನ್ನು ಅಲ್ಲಲ್ಲಿ ಕೂಡಿಸಿ ಪಂಪುಗಳಿಂದ ಮೇಲಕ್ಕೆ ಎತ್ತಲಾಗುತ್ತದೆ.

491.6ಮೀ ಮಟ್ಟದಲ್ಲಿ 18.3ಮೀ ಅಗಲ, 6ಮೀ ಎತ್ತರದ 33 ಕೋಡಿಯ ಬಾಗಿಲುಗಳಿವೆ. ಕೋಡಿಯು ಓಗೀ ಆಕಾರವಾಗಿದ್ದು ಕೆಳಗಡೆ ಬಾಗಿದ ಬಕೆಟ್ಟು. ಅದರ ಹಿಂದುಗಡೆ ತಗ್ಗಿಸಿದ ನದೀತಳ ಮತ್ತು 30.5ಮೀ ಅಗಲದ ಕಲ್ಲುಗಾರೆಯ ನೆಲ ಹಾಸಿದೆ. ಕೋಡಿಯ ಕಂಬಗಳ ಅಗಲ 3ಮೀ, ಮೇಲುಗಡೆ 6.7ಮೀ ಅಗಲವಾದ ರಸ್ತೆಯುಳ್ಳ ಸೇತುವೆಯಿದೆ. ಈ ಸೇತುವೆ ನೀರು ಉರುಳದೆ ಇರುವ ಕಟ್ಟೆಯ ಮೇಲೂ ಇದೆ.



ತುಂಗಭದ್ರಾ ಕಾಲುವೆ

ಇದುವರೆಗೆ ಹೊಳೆಯಲ್ಲಿ ಬಂದ ಮಹಾಪ್ರವಾಹ 3.3ಲಕ್ಷ ಕ್ಯೂಸೆಕ್ಕುಗಳು. ಆದರೆ ಕೋಡಿಯನ್ನು 6.5ಲಕ್ಷ ಕ್ಯೂಸೆಕ್ಕುಗಳ ಮಹಾಪ್ರವಾಹವನ್ನು ಸುರಕ್ಷಿತವಾಗಿ ಸಾಗಿಸುವಂತೆ ಸಂವಿಧಾನ ಮಾಡಿದೆ. ಕೋಡಿಯ ಒಂದೊಂದು ಬಾಗಿಲೂ 50ಟನ್ ತೂಕವಾಗಿದೆ.

ಎಡ ದಂಡೆಯ ಮಣ್ಣಿನ ಏರಿಗೆ ಮುಂಭಾಗದ ಇಳುಕಲಿನಲ್ಲಿ ಕಲ್ಲುಕಟ್ಟಣೆಯನ್ನೂ ಹಿಂಭಾಗದಲ್ಲಿ ಹೆಪ್ಪನ್ನೂ ಕಟ್ಟಿದೆ. ಸಂಕೀರ್ಣ ನಮೂನೆಯ ಕಟ್ಟೆಯಲ್ಲಿ ಮುಂದುಗಡೆ ಕಲ್ಲುಗಾರೆಯ ಗೋಡೆಯೂ ಹಿಂದುಗಡೆ ಮಣ್ಣಿನ ಏರಿಯೂ ಇದೆ. ಈ ಗೋಡೆಯ ತಳಪಾಯವನ್ನು ಗಟ್ಟಿ ಬಂಡೆಯವರೆಗೂ ತೆಗೆದುಕೊಂಡು ಹೋಗಿ ಭದ್ರವಾಗಿ ಕಟ್ಟಿದೆ. ಹಿಂದುಗಡೆಯ ಏರಿಯನ್ನು ಸುಮಾರಾಗಿ ನೀರು ಜಿನುಗುವ ಮಣ್ಣಿನಿಂದ 0.6ಮೀ ಮಟ್ಟಕ್ಕೆ 0.3048ಮೀ ಲಂಬದ ಇಳುಕಲಿನಲ್ಲಿ ಕಟ್ಟಿದೆ. ಏರಿಯ ಭದ್ರತೆಗಾಗಿ ಈ ಏರಿಯಲ್ಲಿ ಅಲ್ಲಲ್ಲಿ ಮಟ್ಟವಾದ ಜಗಲಿಗಳನ್ನು ಬಿಟ್ಟು ಇಳುಕಲಿಗೆ ಹೆಪ್ಪನ್ನು ಕಟ್ಟಿದೆ. ಏರಿಯ ತಳದಲ್ಲಿ ಕಲ್ಲಿನ ಫಿಲ್ಟರುಗಳನ್ನು ಕಟ್ಟಿ ಒಳಕ್ಕೆ ಇಳಿಯುವ ನೀರು ಸರಾಗವಾಗಿ ಹೊರಗೆ ಹೋಗುವಂತೆ ಬಂಡೆಗಳಿಂದ ತುಂಬಿದೆ.

ನೀರಾವರಿಗೆ ತೂಬುಗಳನ್ನೂ ವಿದ್ಯುತ್ತಿನ ಉತ್ಪಾದನೆಗಾಗಿ ಪೆನ್‌ಸ್ಟಾಕ್ ಕೊಳವೆಗಳನ್ನೂ ಕಟ್ಟೆಯಲ್ಲಿ ಇಟ್ಟಿದೆ. ಇದಲ್ಲದೆ ಈ ಭಾಗದಲ್ಲಿನ ಪ್ರಾಚೀನ ನಾಲೆಗಳಿಗೆ ಅವಶ್ಯವಾದರೆ ನೀರನ್ನು ಬಿಡುವಂತೆ ಅನುಕೂಲವನ್ನು ಮಾಡಿದೆ. ಕಟ್ಟೆಯ ಒಂದೊಂದು ದಡದಲ್ಲಿಯೂ ಒಂದೊಂದು ವಿದ್ಯುತ್ಕೇಂದ್ರವಿದೆ. ಬಲದಂಡೆಯಿಂದ ಪೆನ್‌ಸ್ಟಾಕಿನ ತಳಮಟ್ಟ 472.4ಮೀ. ಎಡದಂಡೆಯ ಪೆನ್‌ಸ್ಟಾಕಿನ ತಳ 3ಮೀ ಎತ್ತರವಾಗಿದೆ. ಈ ಕೇಂದ್ರಗಳ ಬೀಳುನೀರನ್ನು ನೀರಾವರಿಯ ನಾಲೆಗಳಿಗೆ ಒಯ್ದಿದ್ದಾರೆ.

ಕಟ್ಟೆಯ ಎರಡು ದಡಗಳಲ್ಲಿಯೂ 483ಮೀ ಮಟ್ಟದಲ್ಲಿ ನೀರಾವರಿಗಾಗಿ ಮೇಲ್ಮಟ್ಟದ ತೂಬುಗಳಿವೆ. ಇವು ಮೇಲ್ಮಟ್ಟದ ನಾಲೆಗಳಿಗೆ ನೀರನ್ನು ಬಿಡುತ್ತವೆ. ಬಲದಂಡೆಯ ಮೇಲ್ಮಟ್ಟದ ನಾಲೆ ಬಳ್ಳಾರಿ ಜಿಲ್ಲೆಯ 2ಲಕ್ಷ ಎಕರೆಗಳಿಗೂ ಅನಂತಪುರ, ಕರ್ನೂಲು ಮತ್ತು ಕಡಪ ಜಿಲ್ಲೆಗಳಲ್ಲಿ 2.4ಲಕ್ಷ ಎಕರೆಯ ಕ್ಷಾಮಪೀಡಿತ ಪ್ರದೇಶಗಳಿಗೂ ನೀರನ್ನು ಒದಗಿಸುತ್ತದೆ. ಇದು 184.6ಕಿಮೀ ಹರಿದ ಮೇಲೆ ಗುಂತಕಲ್ಲು ಶಾಖೆ, ಉರವಕೊಂಡದ ತೋಡು - ಎಂಬ ಎರಡು ಸೀಳುಗಳಾಗುತ್ತದೆ. ಈ ತೋಡಿನಿಂದ ಪೆನ್ನಾರ್ ನದಿಯ ನೀರು 2,000 ಕ್ಯೂಸೆಕ್ಕುಗಳಷ್ಟು ಹೆಚ್ಚುತ್ತದೆ. ಇಲ್ಲಿ ನೀರು ಹರಿಯುವಾಗ 20,000 ಕಿಲೋವ್ಯಾಟ್ ವಿದ್ಯುತ್ತು ಉತ್ಪತ್ತಿಯಾಗುತ್ತದೆ. ಪೆನ್ನಾರ್ ನದಿಗೆ ಅಡ್ಡಲಾಗಿ ಪೆನಕಚರಲದ ಹತ್ತಿರ ನಿಯಂತ್ರಕವನ್ನು ಕಟ್ಟಿ ಅದರಿಂದ ಉತ್ತರಕ್ಕೆ ಒಂದು, ದಕ್ಷಿಣಕ್ಕೆ ಒಂದು ನಾಲೆಯನ್ನು ಒಯಲಾಗಿದೆ. ಚಿತ್ರಾವತಿ ನದಿಯ ಸಂಗಮದ ಕೆಳಗೆ ಈ ನದಿಗೆ ಅಡ್ಡಲಾಗಿ ಒಂದು ಅಣೆಕಟ್ಟನ್ನು ಕಟ್ಟಿ ಕಡಪ ಮತ್ತು ಜಮ್ಮಲಮಡಗು ತಾಲ್ಲೂಕುಗಳಿಗೆ ನೀರನ್ನು ಸಾಗಿಸಲಾಗುತ್ತದೆ. ಈ ನಾಲೆ ಒಂದು ಗುಡ್ಡವನ್ನು 309.8ಮೀ ಉದ್ದವಾದ ಸುರಂಗದ ಮೂಲಕ ದಾಟುತ್ತದೆ. ಅನೇಕ ಕಡೆಗಳಲ್ಲಿ ಗುಡ್ಡದ ತಪ್ಪಲುಗಳಲ್ಲಿಯೂ ಆಳವಾದ ತೋಡುಗಳಲ್ಲಿಯೂ ಹೋಗಿ ಎರಡು ಕಮರಿಗಳನ್ನು ಭದ್ರಕಾಂಕ್ರೀಟಿನ ಮೇಲುಗಾಲುವೆಯ ಮೇಲೆ ದಾಟುತ್ತದೆ.

ಎಡ ದಂಡೆಯ ಮೇಲ್ಮಟ್ಟದ ನಾಲೆಯ ತಳದ ಅಗಲ 25.6ಮೀ, ಆಳ 4.3ಮೀ, ತಳಮಟ್ಟ 483ಮೀ. ಇದು ಪ್ರಾರಂಭದಲ್ಲಿ 2000 ಕ್ಯೂಸೆಕ್ಕುಗಳ ನೀರನ್ನು ಸಾಗಿಸುತ್ತದೆ. ಮೊದಲನೆಯ 36 ಕಿಮೀಗಳಲ್ಲಿ ನಾಲೆ ಒರಟಾದ ಭೂಮಿಯ ಮೂಲಕ ಹೋಗುತ್ತದೆ. ಇದಕ್ಕೆ, 203ಕಿಮೀ ಉದ್ದಕ್ಕೂ ನೆಲವು ನೀರನ್ನು ಹೀರದ ಹಾಗೆ ಅಂಚನ್ನು ಕಟ್ಟಿದೆ. ಈ ನಾಲೆ ರಾಯಚೂರು ಜಿಲ್ಲೆಯಲ್ಲಿ 5.8 ಲಕ್ಷ ಎಕರೆಗಳಿಗೆ ನೀರನ್ನು ಒದಗಿಸುತ್ತದೆ. ಈ ನಾಲೆ 30 ಮೈಲಿಯ 1084ಮೀ. ಉದ್ದದ ಸುರಂಗವನ್ನು ಪ್ರವೇಶಿಸಿ ಹೊರಕ್ಕೆ ಬರುತ್ತದೆ. 112ಕಿಮೀನಲ್ಲಿ ಮಸ್ಕಿ ಹಳ್ಳವನ್ನು ದಾಟುವ ಭದ್ರಕಾಂಕ್ರೀಟಿನ ಮೇಲುಗಾಲುವೆ 8.01ಮೀ ಅಗಲ, 5ಮೀ ಎತ್ತರವಾಗಿದೆ. ಕಲ್ಲುಗಾರೆಯ ಕಂಬಗಳು ಮರಳಿನಲ್ಲಿ 9ಮೀ ಆಳಕ್ಕೆ ಇಳಿಸಿದ್ದು ಗುಂಡಾದ ಬಾವಿಗಳ ಮೇಲೆ ನಿಂತಿವೆ. ಹಳ್ಳದಲ್ಲಿ 45,540 ಕ್ಯೂಸೆಕ್ಕುಗಳ ಪ್ರವಾಹವನ್ನು ಸಾಗಿಸುವ 14ಮೀ ಅಗಲ, 7.65ಮೀ ಎತ್ತರವಾದ 11 ಕಣ್ಣುಗಳಿವೆ.

ಬಲ ದಂಡೆಯ ಕೆಳಮಟ್ಟದ ನಾಲೆ 360ಕಿಮೀ ಉದ್ದವಾಗಿದ್ದು ಬಳ್ಳಾರಿ ಜಿಲ್ಲೆಯಲ್ಲಿ 92,345 ಎಕರೆಗಳಿಗೂ ಆಂಧ್ರದ ಕರ್ನೂಲು ಜಿಲ್ಲೆಯಲ್ಲಿ 1,56,913 ಎಕರೆಗಳಿಗೂ ನೀರನ್ನು ಒದಗಿಸುತ್ತದೆ. ನಾಲೆಯ ಅಗಲ ಪ್ರಾರಂಭದಲ್ಲಿ 21.9ಮೀ ಆಳ 3.2ಮೀ ನಾಲೆಯ ತಳ 10,000ಕ್ಕೆ 1ರಂತೆ ಇಳಿದು ಸೆಕೆಂಡಿಗೆ 0.9ಮೀ ವೇಗದಲ್ಲಿ 2500 ಕ್ಯೂಸೆಕ್ಕು ನೀರನ್ನು ಸಾಗಿಸುತ್ತದೆ. ಇದರ ಕೆಳಗೆ ಒಟ್ಟು 8.6ಲಕ್ಷ ಎಕರೆ ಭೂಮಿಯೂ ಬಳ್ಳಾರಿ ಜಿಲ್ಲೆಯ 82 ಮೈಲಿಯವರೆಗೆ 2.5ಲಕ್ಷ ಎಕರೆ ಭೂಮಿಯೂ ಇದೆ. ಈ ನಾಲೆಯ 80ನೆಯ ಮೈಲಿಯಲ್ಲಿ ಹಗರಿ ನದಿಯನ್ನು 10.5ಮೀ ಕಣ್ಣಿನ 58 ಕಮಾನುಗಳ ಮೇಲುಗಾಲುವೆಯಲ್ಲಿ ದಾಟುತ್ತದೆ. ಮೇಲುಗಾಲುವೆ 3.7ಮೀ ಅಗಲ, 2.8ಮೀ ಎತ್ತರವಾಗಿರುವ ಅವಳಿತೊಟ್ಟಿಗಳ ರೂಪದಲ್ಲಿವೆ. ಕೆಳಗಡೆ ಹೊಳೆ 1,85,000 ಕ್ಯೂಸೆಕ್ಕುಗಳ ಪ್ರವಾಹವನ್ನು ಸಾಗಿಸುತ್ತದೆ.

ತುಂಗಭದ್ರಾ ಯೋಜನೆ ವಿವಿಧೋದ್ದೇಶ ಯೋಜನೆ. ನೀರಾವರಿಯೇ ಅಲ್ಲದೆ ವಿದ್ಯುದುತ್ಪಾದನೆ, ಜಲಯಾನ, ಪಟ್ಟಣಗಳಿಗೆ ನೀರಿನ ಸರಬರಾಜು ಮತ್ತು ವಿಹಾರಾನುಕೂಲಗಳು ಯೋಜನೆಯಲ್ಲಿ ಸೇರಿವೆ. ಇದರ ನಾಲೆಗಳಲ್ಲಿ ಕಟ್ಟೆಯ ಕೆಳಗಡೆ ಇರುವ ವಿದ್ಯುತ್ಕೇಂದ್ರಗಳಲ್ಲದೆ ಹಂಪೆಯ ಬಳಿ ಎಡ ದಂಡೆಯ ನಾಲೆಯ ಮೇಲೆ ನಾಲ್ಕು ವಿದ್ಯುತ್ಕೇಂದ್ರಗಳಿವೆ. ಮೊದಲನೆಯ ಘಟ್ಟದಲ್ಲಿ ಇವುಗಳಿಂದ 36,000 ಕಿಲೋವ್ಯಾಟ್ ವಿದ್ಯುತ್ ಉತ್ಪತ್ತಿಯಾಗುತ್ತದೆ.

ಈ ಕೆಲಸದಲ್ಲಿ ಉಪಯೋಗಿಸಲಾದ ಎಲ್ಲ ಕೋಡಿಯ ಮತ್ತು ತೂಬಿನ ಬಾಗಿಲುಗಳನ್ನೂ ಕಟ್ಟೆಯ ಬಳಿ 1952ರಲ್ಲಿ ಸ್ಥಾಪಿತವಾದ ಕಾರ್ಖಾನೆಯಲ್ಲಿ ತಯಾರಿಸಲಾಯಿತು. ಇವಲ್ಲದೆ ಒರಿಸ್ಸದಲ್ಲಿ ಹಿರಾಕುಡ್, ರಾಜಸ್ಥಾನದಲ್ಲಿ ಜವೈ ಕಟ್ಟೆಗಳಲ್ಲಿ ಉಪಯೋಗಿಸಿದ ತೂಬಿನ ಬಾಗಿಲುಗಳನ್ನೂ ಇಲ್ಲಿ ತಯಾರು ಮಾಡಲಾಯಿತೆಂದು ತಿಳಿದುಬರುತ್ತದೆ.

(ಎಸ್.ವಿ.ಪಿ)

**ತುಂಗಾ :** ಕರ್ನಾಟಕದ ಪ್ರಸಿದ್ಧ ನದಿಗಳಲ್ಲೊಂದು. ಶೃಂಗೇರಿ ತಾಲ್ಲೂಕಿನ ಅಂಚಿನಲ್ಲಿ ಶೃಂಗೇರಿಗೆ ಸುಮಾರು 25ಕಿಮೀ ನೈಋತ್ಯದಲ್ಲಿ ಪಶ್ಚಿಮ ಘಟ್ಟ ಶ್ರೇಣಿಯಲ್ಲಿರುವ ವರಾಹಪರ್ವತದ ಗಂಗಾಮೂಲ ಎಂಬ ಸ್ಥಳದಲ್ಲಿ ಹುಟ್ಟುತ್ತದೆ. ಉಗಮಸ್ಥಾನದಿಂದ ಈಶಾನ್ಯಾಭಿಮುಖವಾಗಿ ಪ್ರವಹಿಸುತ್ತ ಶೃಂಗೇರಿಯನ್ನು ಹಾದು ಬಗ್ಗುಂಜಿ ಎಂಬಲ್ಲಿಗೆ ಬಂದು ಅಲ್ಲಿ ಇದ್ದಕ್ಕಿದ್ದಂತೆ ವಾಯುವ್ಯದಿಕ್ಕಿಗೆ ತಿರುಗಿ ಹರಿಹರಪುರವನ್ನು ದಾಟಿ ಶಿವಮೊಗ್ಗ ಜಿಲ್ಲೆಯನ್ನು ಪ್ರವೇಶಿಸಿ ತೀರ್ಥಹಳ್ಳಿಯನ್ನು ಮುಟ್ಟುತ್ತದೆ. ಇಲ್ಲಿ ಪುನಃ ಈಶಾನ್ಯ ದಿಕ್ಕಿಗೆ ತಿರುಗಿ ಸ್ವಲ್ಪ ದೂರ ದಕ್ಷಿಣದತ್ತ ತಿರುಗಿ ಮಂಡಗದ್ದೆ ಎಂಬಲ್ಲಿಗೆ ಬರುತ್ತದೆ. ಇದೇ ಸ್ಥಳಕ್ಕೆ ಸಮೀಪದಲ್ಲಿ ತುಂಗಾನದಿ ಸ್ವಲ್ಪ ದೂರದವರೆಗೆ ಏಳು ಸೀಳುಗಳಾಗಿ ಹರಿದು ಮುಂದೆ ಸೇರುತ್ತದೆ. ಇದಕ್ಕೆ ಏಳುಕಾಲುಸೀಳು ಎನ್ನುತ್ತಾರೆ. ಇಲ್ಲಿಂದ ಸುಮಾರು ನೇರವಾಗಿ ಈಶಾನ್ಯಕ್ಕೆ ಪ್ರವಹಿಸಿ ಶಿವಮೊಗ್ಗಕ್ಕೆ ಬಂದು ಅನಂತರ ಮುಂದೆ ಕೂಡಲಿ ಎಂಬಲ್ಲಿ ಭದ್ರಾನದಿಯೊಡನೆ ಕೂಡಿಕೊಂಡು ತುಂಗಭದ್ರಾ (ನೋಡಿ) ಎಂಬ ಹೆಸರಿನಿಂದ ಮುಂದೆ ಸಾಗುತ್ತದೆ. ತುಂಗಾನದಿಯ ಹರಿವಿನ ಒಟ್ಟು ಉದ್ದ ಸು.130ಕಿಮೀ. ಈ ನದಿಗೆ 75ಕ್ಕೂ ಹೆಚ್ಚು ಹಳ್ಳಗಳು ಮತ್ತು ಉಪನದಿಗಳೂ ಬಂದು ಸೇರುತ್ತವೆ. ಇವುಗಳಲ್ಲಿ ನಂದಿನಿ, ನಳಿನಿ, ಬೇಗಾರಹಳ್ಳ, ಮಾಲತಿ ಹಳ್ಳ ಮುಂತಾದುವು ಕೆಲವು. ಇವೆಲ್ಲಾ ಪಶ್ಚಿಮಘಟ್ಟಗಳಲ್ಲಿ ಹುಟ್ಟುತ್ತವೆ. ಮಳೆಯೇ ಮುಖ್ಯ ಆಧಾರವಾಗಿರುವ ಈ ನದಿ ಸದಾಕಾಲದಲ್ಲಿಯೂ ತುಂಬಿ ಹರಿಯುವುದಿಲ್ಲ. ಕರ್ನಾಟಕ ರಾಜ್ಯದ ಎಲ್ಲ ನದಿಗಳ ಹಾಗೆ ಇದು ಮಳೆಗಾಲದಲ್ಲಿ ಉಕ್ಕಿ ಹರಿಯುವುದು, ಬೇಸಗೆಯಲ್ಲಿ ಕೃಶವಾಗುವುದು. ದಟ್ಟವಾದ ಕಾಡು, ಬೆಟ್ಟಗುಡ್ಡಗಳಿಂದ ತುಂಬಿರುವ ಅಚ್ಚ ಹಸುರಿನ ಪ್ರದೇಶ ಈ ನದಿಯ ಎರಡು ಕಡೆಗಳಲ್ಲೂ ಹಬ್ಬಿದೆ. ಈ ನದಿಯ ದಡಗಳು ಭದ್ರಾ ನದಿಯ ದಡಗಳ ಹಾಗೆ ತೀರ ಕಡಿದಾಗಿಲ್ಲ. ಆದರೂ ಪ್ರವಾಹದ ಭೀತಿ ಬಹಳವಿಲ್ಲ. ನದಿ ತೀವ್ರಗತಿಯಿಂದ ಹರಿಯುವುದರಿಂದ, ಬಂಡೆಗಳಿಂದ ಕೂಡಿರುವುದರಿಂದ ಜಲಸಂಚಾರಕ್ಕೆ ಅನುಕೂಲವಾಗಿಲ್ಲ. ಈ ನದಿಗೆ ತೀರ್ಥಹಳ್ಳಿ, ಶಿವಮೊಗ್ಗಗಳಲ್ಲಿ ಬೃಹದಾಕಾರವಾದ ಸೇತುವೆಗಳನ್ನು ಕಟ್ಟಿದ್ದಾರೆ. ಇವೆರಡರ ಮಧ್ಯೆ ಮುಡಬ ಎಂಬಲ್ಲಿ ಇನ್ನೊಂದು ದೊಡ್ಡ ಸೇತುವೆಯನ್ನು ಕಟ್ಟಿದ್ದಾರೆ. ಹರಿಹರಪುರದ ಬಳಿ ಮತ್ತೊಂದು ಸೇತುವೆ ಇದೆ.

ಈ ನದಿಯ ದಡದಲ್ಲಿ ಶೃಂಗೇರಿ, ತೀರ್ಥಹಳ್ಳಿ, ಶಿವಮೊಗ್ಗ - ಈ ನಗರಗಳೂ ಶೃಂಗೇರಿ, ತೀರ್ಥಹಳ್ಳಿ, ಹರಿಹರಪುರ, ಭೀಮನಕಟ್ಟೆ, ತೀರ್ಥ, ಮುತ್ತೂರು ಮೊದಲಾದ ಪವಿತ್ರ ಕ್ಷೇತ್ರಗಳೂ ಇವೆ. ಮಂಡಗದ್ದೆಯ ಬಳಿ ಪಕ್ಷಿಧಾಮವಿದೆ. ಶಿವಮೊಗ್ಗದಿಂದ ಸು.11ಕಿಮೀ ನೈಋತ್ಯದಲ್ಲಿರುವ ಗಾಜನೂರು (ಸಕ್ರೆಬೈಲು) ಬಳಿ ತುಂಗಾ ನದಿಗೆ ಅಡ್ಡಲಾಗಿ ಅಣೆಕಟ್ಟನ್ನು ನಿರ್ಮಿಸಿದ್ದಾರೆ. ಈ ಅಣೆಕಟ್ಟಿನ ಎರಡು ದಂಡೆಗಳ ನಾಲೆಗಳಿಂದ ಶಿವಮೊಗ್ಗ ಜಿಲ್ಲೆಯ 8.70 ಸಾವಿರ ಹೆಕ್ಟೇರ್ ಕ್ಷೇತ್ರಕ್ಕೆ ನೀರಾವರಿ ಸೌಲಭ್ಯ ದೊರೆತಿದೆ.

ಈ ನದಿಯ ನೀರಿನಿಂದ ಮುಖ್ಯವಾಗಿ ಬತ್ತ, ಕಬ್ಬು ಮತ್ತು ಅಡಕೆಯನ್ನು ವಿಶೇಷವಾಗಿ ಬೆಳೆಯುತ್ತಾರೆ. ತುಂಗಾನದಿಯ ನೀರು ಬಹಳ ರುಚಿಕರವಾದುದು. ಗಂಗಾಸ್ನಾನ ಮತ್ತು ತುಂಗಾಪಾನ ಎಂಬ ನಾಣ್ಣುಡಿಯೇ ಇದೆ.

ಹಿರಣ್ಯಾಕ್ಷ ಭೂಮಿಯನ್ನು ಸಾಗರದಲ್ಲಿ ಅವಿತಿಟ್ಟಿದ್ದಾಗ ವಿಷ್ಣು ವರಾಹಾವತಾರವನ್ನು ತಾಳಿ ಭೂಮಿಯನ್ನು ಮೇಲೆತ್ತಿ ತಂದು ಈ ಪರ್ವತದ ಮೇಲೆ ನಿಂತನೆಂದು, ಆಗ ಅವನ ಕೋರೆಗಳಿಂದ ತೊಟ್ಟಿಕ್ಕಿದ ನೀರೇ ತುಂಗಾ ಮತ್ತು ಭದ್ರಾ ಎಂಬ ಎರಡು ನದಿಗಳಾದುವೆಂದು ಪುರಾಣಕಥೆ ಇದೆ. ವರಾಹದ ತನ್ನ ಉದ್ದವಾದ ಎಡಕೋರೆಯನ್ನು (ತುಂಗ) ಆಯುಧವಾಗಿಯೂ ಬಲವಾದ ಬಲಕೋರೆಯನ್ನು (ಭದ್ರ) ಭೂಮಿಯನ್ನೆತ್ತಲು ಸಾಧನವಾಗಿಯೂ ಉಪಯೋಗಿಸಿದನೆಂದು 3 ವರಾಹದ ಕಣ್ಣಿನಿಂದ (ನೇತ್ರ) ಸುರಿದ ಹನಿಗಳೇ ನೇತ್ರಾವತಿ ನದಿಯಾಯಿತೆಂದೂ ಐತಿಹ್ಯ. (ಕೆ.ಎಂ.ಎಸ್.)

**ತುಂಬಲೂರಾಚಾರ್ಯ :** ಸು.710. ಪಂಪಪೂರ್ವಯುಗದ ಜೈನ ಆಚಾರ್ಯ ಹಾಗೂ ಚೂಡಾಮಣಿ ಎಂಬ ಗ್ರಂಥದ (ಅನುಪಲಬ್ಧ) ಕರ್ತೃ. ಶ್ರೀವರ್ಧದೇವ ಎಂಬುದು ಇವನ ನಿಜನಾಮ. ತುಂಬಲೂರಾಚಾರ್ಯನೆಂದೇ (ತುಂಬಲೂರು ಗ್ರಾಮದ ಆಚಾರ್ಯ) ಪ್ರಸಿದ್ಧನಾಗಿದ್ದಾನೆ. ಕನ್ನಡದ ಹಲವಾರು ಕವಿಗಳು ಇವನನ್ನು ಸ್ಮರಿಸಿದ್ದಾರೆ. ದೇವಚಂದ್ರನ ರಾಜಾವಳೀ ಕಥೆಯಲ್ಲಿ ತುಂಬಲೂರು ನಾಮಾಚಾರ್ಯರ ಎಂಬತ್ತು ನಾಲ್ಕು ಸಾವಿರ ಗ್ರಂಥಕರ್ತೃಗಳಾಗಿ ಕರ್ನಾಟಕ ಭಾಷೆಯಿಂ ಚೂಡಾಮಣಿ ವ್ಯಾಖ್ಯಾನಮಂ ಮಾಡಿದರ್ ಎಂದು ಹೇಳಿದೆ. ಚಾವುಂಡರಾಯ (ಸು.978) ತೆಂಬಳೂರಾಚಾರ್ಯನೆಂಬ ಗುರುವನ್ನು ಸ್ತೋತ್ರ ಮಾಡಿದ್ದಾನೆ. ಭಟ್ಟಾಕಳಂಕ (ಸು.1604) ತನ್ನ ಶಬ್ದಾನುಶಾಸನದಲ್ಲಿ ತೊಂಬತ್ತಾರು ಸಾವಿರ ಗ್ರಂಥಸಂಖ್ಯೆಯ ಚೂಡಾಮಣಿ ಎಂಬ ವ್ಯಾಖ್ಯಾನ ರೂಪದ ಶಾಸ್ತ್ರ ಗ್ರಂಥವನ್ನು ಹೆಸರಿಸಿದ್ದಾನೆ. ಇಂದ್ರನಂದಿ ತನ್ನ ಶ್ರುತಾವತಾರದಲ್ಲಿ ತುಂಬಲೂರಾಚಾರ್ಯ ಎಂಬತ್ತುನಾಲ್ಕು ಸಾವಿರ ಗ್ರಂಥಸಂಖ್ಯೆಯ ಚೂಡಾಮಣಿ ವ್ಯಾಖ್ಯಾನವನ್ನು ಕನ್ನಡದಲ್ಲಿ ರಚಿಸಿರುವನೆಂದು ತಿಳಿಸಿದ್ದಾನೆ. ಶ್ರವಣಬೆಳಗೊಳದ 1129ರ ಶಾಸನವೊಂದರಲ್ಲಿ ಕವಿಚೂಡಾಮಣಿಯಾದ ಶ್ರೀವರ್ಧದೇವ ಚೂಳಾಮಣಿ ನಾಮ ಸೇವ್ಯಕಾವ್ಯವನ್ನು ರಚಿಸಿರುವನೆಂದೂ ಕಾವ್ಯಾದರ್ಶ ಎಂಬ ಸಂಸ್ಕೃತ ಲಕ್ಷಣಗ್ರಂಥದ ಕರ್ತೃ ದಂಡಿ (7ನೆಯ ಶತಮಾನದ ಅಂತ್ಯ) ಈ ಕವಿಯನ್ನು ಹೊಗಳಿದ್ದಾನೆಂದೂ ಹೇಳಿದೆ. ಈ ಎಲ್ಲ ಹೇಳಿಕೆಗಳ ಆಧಾರದ ಮೇಲೆ ಶ್ರೀವರ್ಧದೇವನೇ ತುಂಬಲೂರಾಚಾರ್ಯನೆಂದೂ ಚೂಡಾಮಣಿ ಎಂಬ ಕನ್ನಡ ವ್ಯಾಖ್ಯಾನ ಗ್ರಂಥದ ಕರ್ತೃವೆಂದೂ ಕಾಲ ಸು.650 ಎಂದೂ ಕವಿಚರಿತಕಾರರು ಅಭಿಪ್ರಾಯಪಟ್ಟಿದ್ದಾರೆ. ಚೂಡಾಮಣಿ ಕಾವ್ಯಕರ್ತೃ ಶ್ರೀವರ್ಧದೇವನೂ ಚೂಡಾಮಣಿ ವ್ಯಾಖ್ಯಾನ ಗ್ರಂಥದ ಕರ್ತೃ ತುಂಬಲೂರಾಚಾರ್ಯನೂ ಬೇರೆ ಬೇರೆ ವ್ಯಕ್ತಿಗಳೆಂದು ವೆಂಕಟಸುಬ್ಬಯ್ಯನವರು ಅಭಿಪ್ರಾಯಪಟ್ಟಿದ್ದಾರೆ. ಶಾಸನದಲ್ಲಿ ಹೇಳಿರುವ ಚೂಡಾಮಣಿ ಕಾವ್ಯ ಶ್ರೀವರ್ಧದೇವನೆಂಬ ನಾಮಾಂತರವುಳ್ಳ ತೋಲಾಮಟಿದೇವರೆಂಬ ಜೈನಕವಿಯಿಂದ ರಚಿತವಾದ ಚೂಳಾಮಣಿಯೆಂಬ ಪುರಾತನ ತಮಿಳು ಕಾವ್ಯವಾಗಿರಬಹುದೆಂದು ಕವಿಚರಿತಕಾರರು ತಮ್ಮ ಅಭಿಪ್ರಾಯವನ್ನು ಅನಂತರ ಮಾರ್ಪಡಿಸಿಕೊಂಡರು.

ಕನ್ನಡದಲ್ಲಿ ಚೂಡಾಮಣಿ ಎಂಬ ಕಾವ್ಯವೊಂದು ಇದ್ದಿತ್ತೆಂಬುದರಲ್ಲಿ ಸಂದೇಹವಿಲ್ಲ. ಸಂಸ್ಕೃತ ಛಂದೋನುಶಾಸನದ ಕರ್ತೃ ಜಯಕೀರ್ತಿ (11ನೆಯ ಶತಮಾನ) ಕರ್ನಾಟಕ ವಿಷಯ ಭಾಷಾಜಾತ್ಯಧಿಕಾರದಲ್ಲಿ ಚತುಷ್ಪದಿಕಾವೃತ್ತ 'ಚೂಡಾಮಣಿ' ಕಾವ್ಯದಲ್ಲಿ ಪ್ರಸಿದ್ಧ ಎಂದು ತಿಳಿಸಿದ್ದಾನೆ. ಶಾಸನದಲ್ಲಿ ತಿಳಿಸಿರುವಂತೆ ದಂಡಿ ಹೊಗಳಿರುವ ಶ್ರೀವರ್ಧದೇವ ತಮಿಳು ಚೂಳಾಮಣಿಯ ಕರ್ತೃವಾಗಿರಲಾರ. ಆದ್ದರಿಂದ ತಮಿಳು ಚೂಳಾಮಣಿಗೂ ಕನ್ನಡ ಚೂಡಾಮಣಿಗೂ ಯಾವುದೇ ಸಂಬಂಧವಿಲ್ಲವೆಂಬುದು ಇದರಿಂದ ತಿಳಿಯುತ್ತದೆ. ಹಾಗೆಯೇ 10ನೆಯ ಶತಮಾನದ ಕವಿ ಕಂದರ್ಪ ಕೃತ ಚೂಡಾಮಣಿ ಕಾವ್ಯವೊಂದಿದ್ದು ಆ ಗ್ರಂಥಕ್ಕೂ ಇದಕ್ಕೂ ಯಾವುದೇ ವಿಧವಾದ ಸಂಬಂಧವಿಲ್ಲ. ಚೂಡಾಮಣಿ ವ್ಯಾಖ್ಯಾನಗ್ರಂಥವಾದರೂ ಕಾವ್ಯ ಎಂಬ ಮನ್ನಣೆಗೆ ಪಾತ್ರವಾಗಿದೆ. (ಎಂ.ವಿ.ಎಸ್.)

**ತುಮಕೂರು :** ಕರ್ನಾಟಕ ರಾಜ್ಯದ ಒಂದು ಜಿಲ್ಲೆಯ, ತಾಲ್ಲೂಕು ಮತ್ತು ಆಡಳಿತ ಕೇದ್ರ, $12^0 45'$ ಮತ್ತು $14^0 20'$ ಉತ್ತರ ಅಕ್ಷಾಂಶ; $76^0 20'$ ಮತ್ತು $77^0 31'$ ಪೂರ್ವ ರೇಖಾಂಶ -ಇವುಗಳ ನಡುವೆ ಇರುವ ಈ ಜಿಲ್ಲೆ ಉತ್ತರದಲ್ಲಿ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆ, ವಾಯುವ್ಯ ಮತ್ತು ಪಶ್ಚಿಮಕ್ಕೆ ಚಿತ್ರದುರ್ಗ, ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಗಳು, ದಕ್ಷಿಣಕ್ಕೆ ಮಂಡ್ಯ ಜಿಲ್ಲೆ, ಪೂರ್ವಕ್ಕೆ ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳಿವೆ. ಈ ಜಿಲ್ಲೆಯ ಪಾವಗಡ ತಾಲ್ಲೂಕನ್ನು ಆಂಧ್ರ ಪ್ರದೇಶ ಸುತ್ತುವರಿದಿದೆ. ವಾಯುವ್ಯದಲ್ಲಿ ಮಾತ್ರ ಚಿತ್ರದುರ್ಗ ಜಿಲ್ಲೆಯ ಪೂರ್ವ ದಂಚಿಗೆ ಕೂಡಿಕೊಂಡಿದೆ. ಜಿಲ್ಲೆಯನ್ನು ಮೂರು ಉಪವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ತುಮಕೂರು ಉಪವಿಭಾಗಕ್ಕೆ ಗುಬ್ಬಿ, ತುಮಕೂರು ಮತ್ತು ಕುಣಿಗಲು ತಾಲ್ಲೂಕುಗಳೂ ತಿಪಟೂರು ಉಪವಿಭಾಗಕ್ಕೆ ಚಿಕ್ಕನಾಯಕನಹಳ್ಳಿ, ತಿಪಟೂರು, ತುರುವೇಕೆರೆ

ತಾಲ್ಲೂಕುಗಳೂ ಮಧುಗಿರಿ ಉಪವಿಭಾಗಕ್ಕೆ ಕೊರಟಗೆರೆ, ಪಾವಗಡ, ಮಧುಗಿರಿ ಮತ್ತು ಶಿರಾ ತಾಲ್ಲೂಕುಗಳೂ ಸೇರಿವೆ. ಜಿಲ್ಲೆಯಲ್ಲಿ ಒಟ್ಟು 49 ಹೋಬಳಿಗಳೂ 12 ಪಟ್ಟಣಗಳೂ 2,725 ಗ್ರಾಮಗಳೂ ಇವೆ. ಜಿಲ್ಲೆಯ ಪೂರ್ವದಿಂದ ಪಶ್ಚಿಮಕ್ಕೆ ಇರುವ ಅಂತರ ಸು.180ಕಿಮೀ. ಉತ್ತರದಿಂದ ದಕ್ಷಿಣಕ್ಕೆ ಸು.164ಕಿಮೀ. ತುಮಕೂರು ಜಿಲ್ಲಾ ಆಡಳಿತ ಕೇಂದ್ರ. ಜಿಲ್ಲೆಯ ಒಟ್ಟು ವಿಸ್ತೀರ್ಣ 10,606ಚ.ಕಿಮೀ. ಜನಸಂಖ್ಯೆ 25,79,516.

ಜಿಲ್ಲೆಯ ಪೂರ್ವಭಾಗದಲ್ಲಿ ಉತ್ತರದ ನಿಡುಗಲ್ ಬೆಟ್ಟಗಳಿಂದ ದಕ್ಷಿಣದ ಹುಲಿಯೂರುದುರ್ಗದವರೆಗಿನ ಬೆಟ್ಟಗಳ ಸಾಲಿನಲ್ಲಿ ಕಾಮನದುರ್ಗ, ನಿಡುಗಲ್ಲು, ಮಿಡಿಗೇಶಿದುರ್ಗ, ಮಧುಗಿರಿ ಬೆಟ್ಟ, ಚನ್ನರಾಯದುರ್ಗ, ಕೊರಟಗೆರೆ ಬೆಟ್ಟ, ದೇವರಾಯನದುರ್ಗ, ನಿಜಗಲ್ಲು ಬೆಟ್ಟ, ಹುತ್ರಿದುರ್ಗ, ಹುಲಿಯೂರು ದುರ್ಗ ಮುಖ್ಯವಾದುವು. ಈ ಬೆಟ್ಟ ಸಾಲು ಮುಂದೆ ಬೆಂಗಳೂರು ಜಿಲ್ಲೆಯ ಪಶ್ಚಿಮಕ್ಕೆ ಶಿವಗಂಗೆ ಮತ್ತು ಸಾವನದುರ್ಗಗಳತ್ತ ಸಾಗಿದೆ. ತುಮಕೂರು ಜಿಲ್ಲೆಯ ಇತರ ಬೆಟ್ಟಗಳೆಂದರೆ ರಾಮದೇವರ ಬೆಟ್ಟ, ಸೀತೆಕಲ್ಲು ಬೆಟ್ಟ, ದೊಡ್ಡ ನಾರವಂಗಲ, ಬ್ಯಾಲ, ಪಾವಗಡ, ಬೊಮ್ಮನಹಳ್ಳಿ ಬೆಟ್ಟ, ಚೌಡೇನಹಳ್ಳಿ ಬೆಟ್ಟ ಮತ್ತು ರಂಗಸ್ವಾಮಿ ಬೆಟ್ಟ.

ಜಿಲ್ಲೆಯಲ್ಲಿ ಖನಿಜ ಶಿಲೆ, ಭಿನ್ನಸ್ತರ ಶಿಲೆ ಮತ್ತು ಕಣಶಿಲೆಗಳಿಂದ ಕೂಡಿದ ಭೂವಿಭಾಗಗಳಿವೆ. ಖನಿಜಪದರ ಶಿಲೆಗಳು ಹುಲಿಯೂರಿನ ಪೂರ್ವಕ್ಕೆ ಉತ್ತರದಿಂದ ದಕ್ಷಿಣಕ್ಕೆ ಸಾಗಿದೆ. ಚಿಕ್ಕನಾಯಕನಹಳ್ಳಿ ಭಿನ್ನಸ್ತರ ಶಿಲಾವಿಭಾಗ. ಬೆಳ್ಳಾರದ ಬಳಿ ಚಿನ್ನದ ಪದರಶಿಲೆಗಳಿವೆ. ಕಣಶಿಲೆಯ ಭಾಗ ದೇವರಾಯನದುರ್ಗ, ಸಿದ್ಧಬೆಟ್ಟ, ಮಧುಗಿರಿ ಮತ್ತು ಪಾವಗಡದಲ್ಲಿ ಹರಡಿದೆ. ಕಟ್ಟಡಕ್ಕೆ ಯೋಗ್ಯವಾದ ಕಣಶಿಲೆ ಕ್ಯಾತಸಂದ್ರ ಮತ್ತು ಕರಡಿಗಳಲ್ಲಿವೆ. ಸುಣ್ಣಕಲ್ಲಿನೊಡನೆ ಮಿಶ್ರವಾಗಿರುವ ಮ್ಯಾಂಗನೀಸ್ ದೊಡ್ಡಗುಣಿ ಎಂಬಲ್ಲಿ ದೊರೆಯುವುದು. ಇದು ಸು.100 ಮಿಲಿಯ ಮೆಟ್ರಿಕ್ ಟನ್‌ಗಳಷ್ಟಿರಬಹುದೆಂದು ಅಂದಾಜು ಮಾಡಲಾಗಿದೆ. ಓಬಳಾಪುರದ ಬಳಿಯೂ ಈ ನಿಕ್ಷೇಪವಿರುವುದು ತಿಳಿದುಬಂದಿದೆ. ಕೊಂಡ್ಲಿ, ದೊಡ್ಡಗುಣಿ, ಅಬ್ಬಿಗೆ ಗುಡ್ಡ, ಕಾರೆಕುರ್ಚಿ ಮತ್ತು ಜಾಣೇಹಾರುಗಳಲ್ಲಿ ಒಟ್ಟು 35 ಮಿಲಿಯ ಟನ್ ಕಬ್ಬಿಣದ ಅದಿರಿನ ನಿಕ್ಷೇಪವಿದೆಯೆಂದು ಅಂದಾಜು ಮಾಡಲಾಗಿದೆ. ಕೊರಟಗೆರೆ ಮತ್ತು ಪಾವಗಡ ತಾಲ್ಲೂಕುಗಳಲ್ಲಿ ಸು.64ಕಿಮೀ ಪ್ರದೇಶದಲ್ಲಿ ಕುರಂಗದ ಕಲ್ಲಿದ್ದು ಅದರ ಪೂರ್ಣ ಬಳಕೆಯಾಗುತ್ತಿಲ್ಲ. ಕೊರಟಗೆರೆ ಪಶ್ಚಿಮದಲ್ಲಿ ಮತ್ತು ಇನ್ನು ಕೆಲವು ಪ್ರದೇಶಗಳಲ್ಲಿ ಸು.10,000 ಟನ್ ಕಣಶಿಲೆ, ಗುಬ್ಬಿ, ತಿಪಟೂರು ಮತ್ತು ಚಿಕ್ಕನಾಯಕನಹಳ್ಳಿ ತಾಲ್ಲೂಕುಗಳಲ್ಲಿ ಸು.25,000 ಟನ್‌ಗಳಷ್ಟು ಉತ್ತಮದರ್ಜೆಯ ಗಾಜುಮರಳು ಇದೆ. ಜಿಲ್ಲೆಯಲ್ಲಿ ಅಧಿಕ ಪ್ರಮಾಣದಲ್ಲಿ ಜೇಡಿಮಣ್ಣು ಇದ್ದು ಚಿಕ್ಕನಾಯಕನಹಳ್ಳಿ ಮತ್ತು ಶಿರಾ ತಾಲ್ಲೂಕುಗಳಲ್ಲಿ ದೊರೆಯುವುದು ಅತ್ಯುತ್ತಮವೆನ್ನಲಾಗಿದೆ. ಕಾವಿಮಣ್ಣು, ಬಳಪದ ಕಲ್ಲು ಈ ಜಿಲ್ಲೆಯಲ್ಲಿ ದೊರೆಯುತ್ತವೆ. ಹುಲಿಯೂರು, ಓಬಳಾಪುರ, ಕೊಂಡ್ಲಿ - ಈ ಗ್ರಾಮಗಳ ಸುತ್ತ ಸುಣ್ಣ ಕಲ್ಲು ಸಿಗುತ್ತದೆ. ಬಾಣಸಂದ್ರದ ಬಳಿ ಬಳಪದ ಕಲ್ಲು ಅಧಿಕವಾಗಿದೆ.

ಜಯಮಂಗಲಿ, ಶಿಂಷಾ, ಸುವರ್ಣಮುಖಿ, ಗರುಡಾಚಲ ಮತ್ತು ಉತ್ತರ ಪಿನಾಕಿನಿ ಈ ಜಿಲ್ಲೆಯ ನದಿಗಳು. ಇವುಗಳ ಜೊತೆಗೆ ಮಳೆಗಾಲದಲ್ಲಿ ತುಂಬಿ ಹರಿಯುವ ಅನೇಕ ತೊರೆಗಳಿವೆ. ದೇವರಾಯನದುರ್ಗದ ಜಲದಗೊಂಡಿ ಎಂಬಲ್ಲಿ ಹುಟ್ಟುವ ಜಯಮಂಗಲಿ ನದಿ ಉತ್ತರಾಭಿಮುಖವಾಗಿ ಹರಿದು ಮಧುಗಿರಿ ತಾಲ್ಲೂಕನ್ನು ಪ್ರವೇಶಿಸಿ ತಾಲ್ಲೂಕಿನ ಪೂರ್ವಭಾಗದಲ್ಲಿ ಈಶಾನ್ಯಾಭಿಮುಖವಾಗಿ ಹರಿಯುತ್ತದೆ. ಜಿಲ್ಲೆಯಲ್ಲಿ ಈ ನದಿ ಒಟ್ಟು 64ಕಿಮೀ ದೂರ ಹರಿದು ಮುಂದೆ ಉತ್ತರ ಪಿನಾಕಿನಿಯನ್ನು ಸೇರಿಸಿಕೊಳ್ಳುವುದು. ಸುವರ್ಣಮುಖಿ ನದಿ ಚನ್ನರಾಯದುರ್ಗದಲ್ಲಿ ಹುಟ್ಟಿ ಕೊರಟಗೆರೆ ತಾಲ್ಲೂಕಿನಲ್ಲಿ 24ಕಿಮೀ ಸಾಗಿ ಮುಂದೆ ರಾಮಪುರದ ಬಳಿ ಜಯಮಂಗಲಿಯನ್ನು ಸೇರುವುದು. ಗರುಡಾಚಲ ತೊರೆ ದೇವರಾಯನದುರ್ಗದ ಆಗ್ನೇಯದಲ್ಲಿ ಹುಟ್ಟಿ ಕೊರಟಗೆರೆ ತಾಲ್ಲೂಕಿನಲ್ಲಿ ಹರಿದು ಹೊಳವನಹಳ್ಳಿ ಬಳಿ ಜಯಮಂಗಲಿಯನ್ನು ಸೇರಿಕೊಳ್ಳುವುದು. ಕೋಲಾರ ಜಿಲ್ಲೆಯ ನಂದಿದುರ್ಗದಲ್ಲಿ ಹುಟ್ಟಿ ಹರಿಯುವ ಉತ್ತರ ಪಿನಾಕಿನಿ ನದಿ ಈ ಜಿಲ್ಲೆಯ ಪಾವಗಡ ತಾಲ್ಲೂಕಿನಲ್ಲಿ ಕೆಲವೇ ಕಿಮೀಗಳ ದೂರ ಹರಿದು ಮುಂದೆ ಸಾಗುವುದು. ಕುಮುದ್ವತಿ ಮಧುಗಿರಿ ತಾಲ್ಲೂಕಿನ ಅತ್ಯಂತ ಪೂರ್ವದಲ್ಲಿ ಉತ್ತರಾಭಿಮುಖವಾಗಿ ಹರಿಯುವುದು. ಶಿಂಷಾನದಿ ದೇವರಾಯನದುರ್ಗದ ದಕ್ಷಿಣದಲ್ಲಿ ಹುಟ್ಟಿ ತುಮಕೂರು, ಗುಬ್ಬಿ, ತುರುವೇಕೆರೆ ಮತ್ತು ಕುಣಿಗಲು ತಾಲ್ಲೂಕುಗಳಲ್ಲಿ ದಕ್ಷಿಣಾಭಿಮುಖವಾಗಿ ಒಟ್ಟು 99ಕಿಮೀ ಹರಿದು ಮುಂದೆ ಕಾವೇರಿಯನ್ನು ಸೇರುವುದು. ಈ ನದಿ ತುಮಕೂರು ಜಿಲ್ಲೆಗೆ ಹೆಚ್ಚು ಪ್ರಯೋಜನಕಾರಿ. ನಾಗಿಣಿ ನದಿ ಕುಣಿಗಲು ತಾಲ್ಲೂಕಿನಲ್ಲಿ 10ಕಿಮೀ ದೂರ ಹರಿದು ಶಿಂಷಾ ನದಿಯನ್ನು ಕೂಡಿಕೊಳ್ಳುವುದು. ಈ ನದಿಗಳು ಜಿಲ್ಲೆಯ ಕೆಲವು ವ್ಯವಸಾಯೋಪಯೋಗಿ ಕೆರೆಗಳಿಗೆ ಆಸರೆಯಾಗಿವೆ.

ಜಿಲ್ಲೆಯ ಬೇಸಗೆಯ ಗರಿಷ್ಠ ಉಷ್ಣಾಂಶ $41^0$ ಸೆ.: ಚಳಿಗಾಲದ ಕನಿಷ್ಠ ಉಷ್ಣಾಂಶ $10^0$ ಸೆ. ವಾರ್ಷಿಕ ಸರಾಸರಿ ಮಳೆ 969ಮಿಮೀ.

ತುಮಕೂರು ಜಿಲ್ಲೆ ಬಹುಮಟ್ಟಿಗೆ ಬಯಲುನಾಡೆಂದು ಹೇಳಬಹುದು. ಈ ಜಿಲ್ಲೆಯ ಅರಣ್ಯಗಳು ಹೆಚ್ಚಾಗಿ ಬೆಟ್ಟಪ್ರದೇಶದ ಸುತ್ತಲೂ ಗುಂಪುಗುಂಪಾಗಿ ಹರಡಿವೆ. ದೇವರಾಯನದುರ್ಗ, ಮಧುಗಿರಿ, ಚಿಕ್ಕನಾಯಕನಹಳ್ಳಿ, ಶಿರಾ, ಕೊರಟಗೆರೆ, ಕಿಬ್ಬನಹಳ್ಳಿ, ಬುಕ್ಕಾಪಟ್ಟಣ, ಹುಲಿಯೂರುದುರ್ಗ, ಕುದುರೆಕಣಿವೆ ಮುಂತಾದ ಕಡೆ ಅರಣ್ಯವಿದ್ದು ಜಿಲ್ಲೆಯ ಒಟ್ಟು ಅರಣ್ಯಪ್ರದೇಶ 883ಚ.ಕಿಮೀ ಇದೆ. ಈ ಅರಣ್ಯಗಳಲ್ಲಿ ಜಾಲರಿ, ದಿಂಡಿಗ, ಹೊನ್ನೆ, ಕರಿಮತ್ತಿ, ಅಳಲೆ, ತೋರಮತ್ತಿ, ಹುಣಸೆ, ತೇಗ, ಗಂಧ, ಬಾಗೆ, ಧೂಪ, ಕರ್ಚಿ, ಕಕ್ಕೆ, ಕಗ್ಗಲಿ, ಚಿಜ್ಜಲು, ತಂಗಡಿ, ಸೀತಾಫಲ ಮುಂತಾದ ಮರಗಿಡಗಳನ್ನು ಕಾಣಬಹುದು. ಈ ಜಿಲ್ಲೆಯ ಅರಣ್ಯಗಳಲ್ಲಿ ಹಿಂದೆ ಹುಲಿ, ಚಿರತೆ ಮುಂತಾದವು ಆಗಾಗ್ಗೆ ಕಾಣಿಸಿಕೊಳ್ಳುತ್ತಿದ್ದವು. ಈಗ ಅಪರೂಪವಾಗಿವೆ. ಕರಡಿ, ಕಾಡುಹಂದಿ, ಚುಕ್ಕೆ ಜಿಂಕೆಗಳು ಇವೆ. ಕಾಡುಕೋಳಿ, ಜೀವಂಜೀವ, ಗಿಣಿ, ಕಾಡುಪಾರಿವಾಳ, ಮೈನ ಮೊದಲಾದವೂ ನೀರುಕೋಳಿ, ಕೊಕ್ಕರೆ ಮುಂತಾದ ಜಲಚರ ಪಕ್ಷಿಗಳೂ ಇಲ್ಲಿವೆ.

ಈ ಜಿಲ್ಲೆಯ ದಕ್ಷಿಣ ಮತ್ತು ಉತ್ತರ ತಾಲ್ಲೂಕುಗಳಲ್ಲಿ ಕೆಂಪುಮಣ್ಣಿನ ಭೂಮಿಯೂ ಪೂರ್ವಭಾಗದಲ್ಲಿ ಮರಳು ಮಿಶ್ರಿತ ಭೂಮಿಯೂ ಉತ್ತರದಲ್ಲಿ ಸ್ವಲ್ಪಮಟ್ಟಿಗೆ ಕಪ್ಪುಮಣ್ಣೂ ಇದೆ. ಕೆಂಪು ಮತ್ತು ಕಪ್ಪುಜೇಡಿಮಣ್ಣಿನ ಭೂಮಿಯೂ ಜಿಲ್ಲೆಯಲ್ಲಿದೆ.

ಜಿಲ್ಲೆಯಲ್ಲಿ ನೀರಾವರಿಗೆ ಹೆಚ್ಚಾಗಿ ಕೆರೆ ಹಾಗೂ ತಲಪರಿಗೆಗಳ ಉಪಯೋಗ ಉಂಟು. ಕುಣಿಗಲು ತಾಲ್ಲೂಕಿನಲ್ಲಿ ಶಿಂಷಾನದಿಗೆ ಕಟ್ಟಿರುವ ಅಮೃತೂರಿನ ಮಾರ್ಕೋನಹಳ್ಳಿ ಜಲಾಶಯ, ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಸುವರ್ಣಮುಖಿ ನದಿಯ ಬೋರನಕಣಿವೆ ಜಲಾಶಯ, ಮಾಗಡಿ ಕೆಂಪೇಗೌಡ ಕಟ್ಟಿಸಿದ ದೀಪಾಂಬುಧಿ ಕೆರೆ, ಕುಣಿಗಲು ತಾಲ್ಲೂಕು ಮಂಗಳಗ್ರಾಮದ ಬಳಿ ನಾಗಿಣಿ ನದಿ ಜಲಾಶಯ ಮುಂತಾದವು ಜಿಲ್ಲೆಯ ನೀರಾವರಿಗಾಗಿ ಕಟ್ಟಿರುವ ಕೆಲವು ಮುಖ್ಯ ಕಟ್ಟೆಗಳು. ಹಾಸನ ಜಿಲ್ಲೆಯ ಗೊರೂರು ಬಳಿ ನಿರ್ಮಿಸಲಾಗಿರುವ ಹೇಮಾವತಿ ಜಲಾಶಯದ ಎಡದಂಡೆ ನಾಲೆ ಈ ಜಿಲ್ಲೆಗೆ ನೀರಾವರಿ ಸೌಕರ್ಯವನ್ನು ಒದಗಿಸಿದೆ. ಕುಣಿಗಲು, ತುರುವೇಕೆರೆ, ಗುಬ್ಬಿ ಮತ್ತು ತುಮಕೂರು ತಾಲ್ಲೂಕುಗಳು ಈ ನೀರಾವರಿ ಯೋಜನೆಯಿಂದ ಹೆಚ್ಚಿನ ಪ್ರಯೋಜನ ಪಡೆಯುವ ತಾಲ್ಲೂಕುಗಳು. ಎಲ್ಲ ಮೂಲಗಳಿಂದ ಒಟ್ಟು ಜಿಲ್ಲೆಯ ನೀರಾವರಿ ಪ್ರದೇಶ 1,12,235 ಹೆಕ್ಟೇರ್‌ಗಳು (1988-89).

ಜಿಲ್ಲೆಯ ಮುಖ್ಯ ಬೆಳೆಗಳು ಬತ್ತ, ರಾಗಿ, ಜೋಳ, ಹುರುಳಿ, ನೆಲಗಡಲೆ. ಇವುಗಳ ಜೊತೆಗೆ ಮೆಣಸಿನಕಾಯಿ, ತೆಂಗು, ಅಡಕೆ, ಬಾಳೆ ಬೆಳೆಯುವರಲ್ಲದೆ ಹರಳು, ಎಳ್ಳು ಮೊದಲಾದ ಎಣ್ಣೆ ಬೀಜಗಳನ್ನೂ ಬೆಳೆಯುತ್ತಾರೆ. ಚಿಕ್ಕನಾಯಕನಹಳ್ಳಿ, ಗುಬ್ಬಿ, ತಿಪಟೂರು ತಾಲ್ಲೂಕುಗಳಲ್ಲಿ ತೆಂಗು ಮತ್ತು ಅಡಕೆ ಬೆಳೆ ಅಧಿಕ. ಕೊರಟಗೆರೆ ತಾಲ್ಲೂಕು ಅಗ್ರಹಾರದಲ್ಲಿ ಬಜೆ ಮೂಲಿಕೆ ಬೆಳೆಯುತ್ತಾರೆ. ಹಲಸು, ಮಾವು ಜಿಲ್ಲೆಯ ಮುಖ್ಯ ಫಲ ಉತ್ಪಾದನೆಗಳು.

2001ರ ಅಂಕಿಅಂಶಗಳ ಪ್ರಕಾರ ಜಿಲ್ಲೆಯ ವಿವಿಧ ಪ್ರಮುಖ ಬೆಳೆಗಳು ಹಾಗೂ ಆ ಬೆಳೆಗಳನ್ನು ಬೆಳೆಯುವ ಪ್ರದೇಶ ಹೆಕ್ಟೇರ್‌ಗಳಲ್ಲಿ

ಹೀಗಿದೆ: ಬತ್ತ (47,448), ರಾಗಿ (2,06,568), ಜೋಳ (4,579), ಮುಸುಕಿನ ಜೋಳ (6,219), ಒಟ್ಟು ಏಕದಳ ಧಾನ್ಯಗಳು ಮತ್ತು ಉಪತೃಣ ಬೆಳೆಗಳು (2,68,871), ಕಡಲೆ (474), ತೊಗರಿ (15,946), ಒಟ್ಟು ದ್ವಿದಳ ಧಾನ್ಯಗಳು (69,514), ನೆಲಗಡಲೆ (1,90,123), ಕಬ್ಬು (1,017), ಹತ್ತಿ (1,343), ಹಿಪ್ಪುನೇರಳೆ (11,015) (1998-99).

ಜಿಲ್ಲೆಯಲ್ಲಿ ಪಶುಸಂಪತ್ತು ಅಧಿಕ. ಜಿಲ್ಲೆಯಲ್ಲಿ 15 ಪಶುವೈದ್ಯ ಆಸ್ಪತ್ರೆಗಳು, 54 ಪಶು ಚಿಕಿತ್ಸಾಲಯಗಳು, 127 ಪ್ರಾಥಮಿಕ ಪಶುವೈದ್ಯ ಕೇಂದ್ರಗಳು ಇವೆ (2000).

ಜಿಲ್ಲೆಯ ಕುಣಿಗಲು ತಾಲ್ಲೂಕಿನಲ್ಲಿ ಪ್ರಸಿದ್ಧ ಕುದುರೆ ಸಾಕಣೆ ಕೇಂದ್ರ ಉಂಟು. ಮಾರ್ಕೋನಹಳ್ಳಿ, ಬೋರನ ಕಣಿವೆ, ಕಡಬ, ಮಲ್ಲಘಟ್ಟ, ಚಂದ್ರಶೇಖರಪುರ, ಕಲ್ಲೂರು, ನಿಟ್ಟೂರು, ಮೈದಾಳ, ತುಂಬಡಿ, ಮಾವತ್ತೂರು, ತುರುವೇಕೆರೆ ಮತ್ತು ಕುಣಿಗಲು ದೊಡ್ಡಕೆರೆ ಮುಂತಾದ ಕೆರೆಗಳು ಮತ್ತು ಜಯಮಂಗಲಿ, ಕುಮುದ್ವತಿ, ಶಿಂಷಾ, ಉತ್ತರ ಪಿನಾಕಿನಿ ನದಿಗಳಲ್ಲಿ ಮತ್ಸ್ಯೋದ್ಯಮ ಬೆಳೆಯುತ್ತಿದೆ. ವಾರ್ಷಿಕವಾಗಿ 13,555 ಟನ್ ಮೀನು ಹಿಡಿಯಲಾಗುತ್ತದೆ.

ತುಮಕೂರು ಜಿಲ್ಲೆಗೆ 1929ರಲ್ಲಿ ವಿದ್ಯುತ್ ಸೌಲಭ್ಯ ಒದಗಿತು. ಜೊತೆಗೆ ಜಿಲ್ಲೆಯಲ್ಲಿ ಸಾಕಷ್ಟು ವಿವಿಧ ಖನಿಜಸಂಪತ್ತಿದ್ದರೂ ಈ ಜಿಲ್ಲೆ ಕೈಗಾರಿಕೆಯಲ್ಲಿ ಸಾಕಷ್ಟು ಪ್ರಗತಿ ಸಾಧಿಸಿಲ್ಲ. ಈ ಜಿಲ್ಲೆಯ ಬೆಳ್ಳಾರದಲ್ಲಿ ಸ್ವಲ್ಪಕಾಲ ಚಿನ್ನ ತೆಗೆಯಲಾಗುತ್ತಿತ್ತು.

ಇಡೀ ಜಿಲ್ಲೆಗೆ ದೊಡ್ಡ ಪ್ರಮಾಣದ ಕೈಗಾರಿಕೆಯೆಂದರೆ ಅಮ್ಮಸಂದ್ರದ ಸಿಮೆಂಟ್ ಕಾರ್ಖಾನೆ. ತುಮಕೂರಿನಲ್ಲಿ ಹೆಚ್.ಎಂ.ಟಿ. ಗಡಿಯಾರ ಕಾರ್ಖಾನೆ ಸ್ಥಾಪಿತವಾಗಿದೆ. ಜಿಲ್ಲೆಯಲ್ಲಿ ಸಣ್ಣ ಕೈಗಾರಿಕೆಗಳು ಅನೇಕವಿದ್ದು ಅವುಗಳಲ್ಲಿ ಎಣ್ಣೆ ಮತ್ತು ಬತ್ತದ ಗಿರಣಿಗಳು, ವ್ಯವಸಾಯದ ಉಪಕರಣಗಳ ತಯಾರಿಕೆ, ಮುದ್ರಣಾಲಯಗಳು, ಕಬ್ಬಿಣ ಮತ್ತು ಮರಗೆಲಸ, ಬೆಂಕಿಕಡ್ಡಿ, ಗೃಹೋಪಕರಣಗಳು, ಸಾಬೂನು, ಇಟ್ಟಿಗೆ ಮತ್ತು ಹೆಂಚು, ಬೋಲ್ಟು ಮತ್ತು ನಟ್ಟುಗಳು, ಬೀಡಿ, ಸ್ಲೇಟ್ ಮತ್ತು ಪೆನ್ಸಿಲ್, ರಿಬ್ಬನ್ ಮುಂತಾದವುಗಳ ತಯಾರಿಕೆಯುಂಟು. ಇದರೊಂದಿಗೆ ಗ್ರಾಮೋದ್ಯೋಗಗಳಾದ ಕೈಮಗ್ಗದ ಹತ್ತಿ, ರೇಷ್ಮೆ ಮತ್ತು ಉಣ್ಣೆ ಬಟ್ಟೆಗಳ ತಯಾರಿಕೆ, ಮಣ್ಣಿನ ವಸ್ತುಗಳನ್ನು ಮಾಡುವುದು, ಚರ್ಮ ಹದಮಾಡುವುದು, ಗಾಣದ ಎಣ್ಣೆ, ಚಾಪೆ ಮತ್ತು ಬುಟ್ಟಿಗಳ ತಯಾರಿಕೆ, ನಾರಿನ ಕೈಗಾರಿಕೆ, ಸುಣ್ಣ, ಬಾಚಣಿಗೆ ಮುಂತಾದವುಗಳ ಉತ್ಪಾದನೆ ಇದ್ದು ತಾಮ್ರ ಮತ್ತು ಹಿತ್ತಾಳೆ ಪಾತ್ರೆಗಳ ತಯಾರಿಕೆಯೂ ಉಂಟು. ಜಿಲ್ಲೆಯಲ್ಲಿ ಉದ್ಯೋಗಸಂಬಂಧ ಸಹಕಾರ ಸಂಘಗಳೂ ವ್ಯವಸಾಯ ಮತ್ತು ಕೈಗಾರಿಕಾಭಿವೃದ್ಧಿಗೆ ಉತ್ತೇಜನಕಾರಿಯಾಗಿ ಆರ್ಥಿಕ ಸಹಾಯಸೌಲಭ್ಯ ನೀಡುವಂಥ ವಿವಿಧ ವಾಣಿಜ್ಯ ಸಹಕಾರಿ ಬ್ಯಾಂಕುಗಳೂ ಇವೆ. ಜಿಲ್ಲೆಯಲ್ಲಿ ಒಟ್ಟು 205 ಕಾರ್ಖಾನೆಗಳಿದ್ದು ಉದ್ಯೋಗಿಗಳ ಸಂಖ್ಯೆ 13,276. ಕೈಗಾರಿಕಾ ಎಸ್ಟೇಟ್‌ಗಳು 7, ಕೈಗಾರಿಕಾ ಶೆಡ್ಡುಗಳು 128 (2000). ಜಿಲ್ಲೆಯಲ್ಲಿ 137 ವಾಣಿಜ್ಯ ಬ್ಯಾಂಕುಗಳು, 47 ಗ್ರಾಮೀಣ ಬ್ಯಾಂಕುಗಳು, 12 ಸಹಕಾರಿ ಬ್ಯಾಂಕುಗಳು 10 ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು ಇವೆ.

ಈ ಜಿಲ್ಲೆಯಲ್ಲಿ ವ್ಯಾಪಾರ ವ್ಯವಹಾರಕ್ಕೆ ಅನುಕೂಲಿಸುವಂತೆ ತಿಪಟೂರು, ತುಮಕೂರು, ಶಿರಾ, ತುರುವೇಕೆರೆ, ಮಧುಗಿರಿ, ಕುಣಿಗಲು, ಹುಳಿಯಾರು, ಚಿಕ್ಕನಾಯಕನಹಳ್ಳಿ ಮತ್ತು ಗುಬ್ಬಿಯಲ್ಲಿ ನಿಯಂತ್ರಿತ ಮಾರುಕಟ್ಟೆಗಳಿವೆ. ಬೆಳ್ಳಾವೆ, ಗುಬ್ಬಿ, ನಿಡಸಾಲೆಗಳಲ್ಲಿ ಸೋಮವಾರವೂ ತಿಪಟೂರಿನಲ್ಲಿ ಶನಿವಾರ ಮತ್ತು ಭಾನುವಾರವೂ ಸಂತೆ ನಡೆಯುತ್ತದೆ. ಈ ಜಿಲ್ಲೆಯಿಂದ ಬೆಂಗಳೂರು, ಆಂಧ್ರ ಪ್ರದೇಶದ ಹಿಂದೂಪುರ ಮುಂತಾದ ಸುತ್ತಲ ಜಿಲ್ಲೆಗಳಿಗೆ ಕೊಬ್ಬರಿ, ಅಕ್ಕಿ, ರಾಗಿ, ಹುರುಳಿ, ಹರಳು, ಹುಣಿಸೆಹಣ್ಣು, ಬೆಲ್ಲ, ಅಡಕೆ ಮುಂತಾದವೂ ಮುಂಬಯಿ, ಪುಣೆ, ಬೆಂಗಳೂರು, ಅಹಮದಾಬಾದ್, ದೆಹಲಿ, ಕಾನ್‌ಪುರ ಮುಂತಾದ ಕಡೆಗಳಿಗೆ ತೆಂಗಿನಕಾಯಿ ಮತ್ತು ಕೊಬ್ಬರಿ ಹೆಚ್ಚಾಗಿ ರಫ್ತಾಗುತ್ತವೆ. ಗೋದಿ, ಜೋಳ, ಸಕ್ಕರೆ, ತುಪ್ಪ, ಕಾಫಿ, ಮೆಣಸು, ಏಲಕ್ಕಿ, ಮೆಣಸಿನಕಾಯಿ, ಹತ್ತಿ, ಚಿನ್ನ, ಬೆಳ್ಳಿ ಮತ್ತು ಕಬ್ಬಿಣ - ಇವು ಜಿಲ್ಲೆಯ ಮುಖ್ಯ ಆಮದುಗಳಾಗಿವೆ. ಈ ಜಿಲ್ಲೆಯಲ್ಲಿ ಬೆಂಗಳೂರು-ಪುಣೆ ರೈಲುಮಾರ್ಗ ಜಿಲ್ಲೆಯ ಪೂರ್ವದಿಂದ ಪಶ್ಚಿಮಕ್ಕೆ 98ಕಿಮೀ ದೂರ ಸಾಗುತ್ತದೆ. ಈ ಜಿಲ್ಲೆಯಲ್ಲಿ ಹಾದುಹೋಗುವ ಪ್ರಮುಖ ರಸ್ತೆಗಳಲ್ಲಿ ಬೆಂಗಳೂರು-ಪುಣೆ ರಾಷ್ಟ್ರೀಯ ಹೆದ್ದಾರಿ, ಬೆಂಗಳೂರು-ಮಂಗಳೂರು ರಸ್ತೆ, ತುಮಕೂರು-ಬಳ್ಳಾರಿ ರಸ್ತೆ, ತುಮಕೂರು-ಕುಣಿಗಲು-ಮದ್ದೂರು ರಸ್ತೆ, ಪಾವಗಡ-ಅರಸೀಕೆರೆ ರಸ್ತೆ ಮುಖ್ಯವಾದವು.

ಜಿಲ್ಲೆಯಲ್ಲಿ 195ಕಿಮೀ ರಾಷ್ಟ್ರೀಯ ಹೆದ್ದಾರಿ, 471ಕಿಮೀ ರಾಜ್ಯ ಹೆದ್ದಾರಿ, 1902ಕಿಮೀ ಜಿಲ್ಲಾ ಮುಖ್ಯ ರಸ್ತೆ, 2203ಕಿಮೀ ಗ್ರಾಮ ರಸ್ತೆಗಳು, 3513ಕಿಮೀ ತಾಲ್ಲೂಕು ಮಂಡಲಿ ರಸ್ತೆಗಳಿವೆ (1999). 20 ದೊಡ್ಡ ಸೇತುವೆಗಳಿವೆ. ಒಟ್ಟು ರೈಲು ಮಾರ್ಗದ ಉದ್ದ 978ಕಿಮೀ. 14 ರೈಲು ನಿಲ್ದಾಣಗಳಿವೆ. ಈ ಜಿಲ್ಲೆಯ ತುಮಕೂರು, ಕುಣಿಗಲು, ಗುಬ್ಬಿ, ಮಧುಗಿರಿ, ಶಿರಾ, ಕೊರಟಗೆರೆ, ಪಾವಗಡ, ಹೊಸಕೋಟೆ, ತಿಪಟೂರು, ಚಿಕ್ಕನಾಯಕನಹಳ್ಳಿ ಮತ್ತು ತುರುವೇಕೆರೆಗಳಲ್ಲಿ ಪುರಸಭಾಡಳಿತವಿದೆ.



ಬೃಹತ್ ನಂದಿ: ತುರುವೇಕೆರೆ

ಜಿಲ್ಲೆಯಲ್ಲಿ ವಿದ್ಯಾಭ್ಯಾಸಕ್ಕೆ ಅನುಕೂಲವಿದ್ದು ಅನೇಕ ಸರ್ಕಾರಿ ಮತ್ತು ಖಾಸಗಿ ಶಾಲಾ ಕಾಲೇಜುಗಳಿವೆ. 2000ದ ಅಂಕಿ ಅಂಶಗಳ ಪ್ರಕಾರ 3772 ಪ್ರಾಥಮಿಕ ಶಾಲೆಗಳ 541 ಪ್ರೌಢಶಾಲೆಗಳಿದ್ದುವು. 141 ಪದವಿಪೂರ್ವ ಕಾಲೇಜುಗಳು, 39 ಕಾಲೇಜುಗಳು, 5 ಪಾಲಿಟೆಕ್ನಿಕ್‌ಗಳಿವೆ. 4 ಎಂಜಿನಿಯರಿಂಗ್ ಕಾಲೇಜುಗಳು, 1 ವೈದ್ಯಕೀಯ ಕಾಲೇಜು, ಒಂದು ದಂತ ವೈದ್ಯಕೀಯ ಕಾಲೇಜುಗಳಿವೆ. ನ್ಯಾಯಶಾಸ್ತ್ರ, ಶಿಕ್ಷಣ ತರಬೇತಿ ಕಾಲೇಜುಗಳೂ ಕೈಗಾರಿಕಾ ತರಬೇತಿ ಕಾಲೇಜುಗಳೂ ಉಪಾಧ್ಯಾಯ ತರಬೇತಿ ಮತ್ತು ಸಂಸ್ಕೃತ ಶಾಲೆಗಳೂ ಇವೆ. ಸಂಜೆ ಕಾಲೇಜೂ ತುಮಕೂರಿನಲ್ಲಿದ್ದು ಉದ್ಯೋಗಿಗಳೂ ವಿದ್ಯಾಭ್ಯಾಸವನ್ನು ಮುಂದುವರೆಸಲು ಅನುಕೂಲವಾಗಿದೆ. ಬೆಂಗಳೂರು ವಿಶ್ವವಿದ್ಯಾಲಯದ ಸ್ನಾತಕೋತ್ತರ

ಕೇಂದ್ರವಿದೆ. ಈಗ ಈ ಕೇಂದ್ರವನ್ನು ತುಮಕೂರು ವಿಶ್ವವಿದ್ಯಾಲಯವಾಗಿ ಪರಿವರ್ತಿಸಲಾಗಿದೆ (2004). ಶಾಲಾಕಾಲೇಜು ಗ್ರಂಥಾಲಯಗಳ ಜೊತೆಗೆ ಜಿಲ್ಲಾ ಸಾರ್ವಜನಿಕ ಗ್ರಂಥಭಂಡಾರಗಳಿವೆ. ಸಿದ್ಧಗಂಗಾ ಮಠವು ಜಿಲ್ಲೆಯ ಮತ್ತು ರಾಜ್ಯದ ಬಡವಿದ್ಯಾರ್ಥಿಗಳಿಗೆ ವಿದ್ಯಾ ದಾಸೋಹ ನೀಡುತ್ತಿರುವ ಪ್ರಮುಖ ಧಾರ್ಮಿಕ ಸಂಸ್ಥೆಯಾಗಿದೆ.

ಜಿಲ್ಲೆಯಲ್ಲಿ 4 ಸರ್ಕಾರಿ ಆಸ್ಪತ್ರೆಗಳು ಇವೆ. ತಾಲ್ಲೂಕು ಮತ್ತು ಗ್ರಾಮ ಮಟ್ಟಗಳಲ್ಲಿ 97 ಪ್ರಾಥಮಿಕ ಆರೋಗ್ಯ ಕೇಂದ್ರಗಳೂ 39 ಪ್ರಾಥಮಿಕ ಆರೋಗ್ಯ ಘಟಕಗಳೂ 127 ಆಯುರ್ವೇದ ಹಾಗೂ ಯುನಾನಿ ಔಷಧಾಲಯಗಳೂ ಇವೆ.

ಜಿಲ್ಲೆಯಲ್ಲಿ ಶಿಲ್ಪಕ್ಕೆ ಪ್ರಸಿದ್ಧವಾದ ಹೊಯ್ಸಳ, ದ್ರಾವಿಡ ಶೈಲಿಯ ದೇವಾಲಯಗಳಿವೆ. ಕೆಲವು ಕಡೆ ವೀರಗಲ್ಲುಗಳು ಹಾಗೂ ಮಹಾಸತಿಕಲ್ಲುಗಳಿವೆ. ಶಿರಾ ಪಟ್ಟಣದ ಜುಮ್ಮಾಮಸೀದಿ (1696) ಮತ್ತು ಮಲ್ಲಿಕ್ ರಿಹಾನ್ ಸಮಾಧಿ - ಇವು ಹೆಸರುವಾಸಿಯಾದ ಮುಗಲ್ ಶೈಲಿಯ ಕಟ್ಟಡಗಳು. ಮಧುಗಿರಿ, ಮಿಡಿಗೇಶಿ, ಪಾವಗಡ, ನಿಡುಗಲ್ಲು, ಕೊರಟಗೆರೆ, ದೇವರಾಯನದುರ್ಗ, ಹುಲಿಯೂರು ದುರ್ಗ, ಹುತ್ರಿದುರ್ಗ - ಇವುಗಳಲ್ಲಿರುವ ಹಿಂದಿನ ಕೋಟೆಗಳು ನೋಡತಕ್ಕವು. ಜಿಲ್ಲೆಯ ಪ್ರತಿ ತಾಲ್ಲೂಕಿನಲ್ಲೂ ಹೆಸರಿಸುವಂಥ ದೇವಾಲಯಗಳಿವೆ. ಅವುಗಳಲ್ಲಿ ದೇವರಾಯನದುರ್ಗದ ನರಸಿಂಹಸ್ವಾಮಿ ದೇವಾಲಯ, ಮಧುಗಿರಿಯ ಮಲ್ಲೇಶ್ವರ ಮತ್ತು ವೆಂಕಟರಮಣಸ್ವಾಮಿ ಗುಡಿಗಳು, ದೊಡ್ಡ ದಾಳಿವಟ್ಟದ ಲಕ್ಷ್ಮೀನರಸಿಂಹ ದೇವಾಲಯ, ಜಕಣಾಚಾರಿ ನಿರ್ಮಿಸಿದ್ದೆಂದು ಹೇಳಲಾದ ಕೈದಾಳದ ಕೇಶವ ದೇವಾಲಯ, ಗೂಳೂರು ಗಣಪತಿ ದೇವಾಲಯ, ಕೊರಟಗೆರೆಯ ಬೆಟ್ಟದ ಮೇಲಿನ ಗಂಗಾಧರೇಶ್ವರ, ಹುಳಿಯಾರಿನ ರಂಗನಾಥ, ಪಂಕಜನಹಳ್ಳಿಯ ಮಲ್ಲಿಕಾರ್ಜುನ, ಸೆಟ್ಟಿಕೆರೆಯ ಯೋಗಮಾಧವ - ಇವು ಪ್ರಸಿದ್ಧ ದೇವಾಲಯಗಳು. ಕುಣಿಗಲಿನ ದೇವಾಲಯಗಳು, ಎಡೆಯೂರಿನ ಸಿದ್ಧಲಿಂಗೇಶ್ವರ, ತುರುವೇಕೆರೆಯ ಬೇಟೆರಾಯ, ನಾಗಲಾಪುರದ ಚೆನ್ನ ಕೇಶವ ಮತ್ತು ಕೇದಾರೇಶ್ವರ ಗುಡಿಗಳು, ನೊಣವಿನಕೆರೆಯ ಗುಡಿಗಳು, ಪಾವಗಡದ ಬೆಟ್ಟದ ಆಂಜನೇಯ ಮೊದಲಾದ ದೇವಾಲಯಗಳು ಉಲ್ಲೇಖಾರ್ಹವಾದವು.

ತುಮಕೂರು ತಾಲ್ಲೂಕಿನ ನರಸಿಂಹಸ್ವಾಮಿ ರಥೋತ್ಸವ, ಸಿದ್ಧಗಂಗಾ ಜಾತ್ರೆ, ದೇವರಾಯನದುರ್ಗದ ನರಸಿಂಹಸ್ವಾಮಿ ತೇರು, ಮಧುಗಿರಿಯ ದಂಡಿ ಮಾರಮ್ಮನ ಜಾತ್ರೆ, ರಟ್ಟನಾಯಕನಹಳ್ಳಿಯ ಗಂಗಬ್ರಹ್ಮೇಶ್ವರ ಜಾತ್ರೆ, ನಾಗಲ ಮಡಕೆಯ ಸುಬ್ರಹ್ಮಣ್ಯಸ್ವಾಮಿ ಜಾತ್ರೆ, ಚಿಕ್ಕನಾಯಕನಹಳ್ಳಿಯ ಹುಲಿಯೂರು ಆಂಜನೇಯ ಸ್ವಾಮಿ ಜಾತ್ರೆ, ಕೆರಗೋಡಿಯ ಶಂಕರೇಶ್ವರಸ್ವಾಮಿ ಜಾತ್ರೆ, ತುರುವೇಕೆರೆಯ ಕಂತೂರಮ್ಮನ ಜಾತ್ರೆ, ಕುಣಿಗನ ಬೈಲಹಳ್ಳಿ ಮಾರಮ್ಮ ಜಾತ್ರೆ, ಎಡೆಯೂರು ಸಿದ್ಧಲಿಂಗೇಶ್ವರ ಸ್ವಾಮಿ ಜಾತ್ರೆ, ಗುಬ್ಬಿ ಚನ್ನಬಸವೇಶ್ವರ ಸ್ವಾಮಿ ರಥೋತ್ಸವ, ಕ್ಯಾಮೇನಹಳ್ಳಿ ಆಂಜನೇಯ ಸ್ವಾಮಿ ರಥೋತ್ಸವ ಮುಂತಾದವು ಜಿಲ್ಲೆಯಲ್ಲಿ ನಡೆಯುವ ದೊಡ್ಡ ಜಾತ್ರೆಗಳು.

ಈ ಜಿಲ್ಲೆಯ ಕಿಬ್ಬನಹಳ್ಳಿ ಬಳಿಯಲ್ಲಿ ಶಿಲಾಯುಗದ ಅವಶೇಷಗಳು ದೊರಕಿವೆ. ಕದಂಬ, ಗಂಗ ರಾಜವಂಶಗಳ ಆಳಿಕೆಯಲ್ಲಿದ್ದ ಈ ಜಿಲ್ಲೆಯಲ್ಲಿ 9-10ನೆಯ ಶತಮಾನದಲ್ಲಿ ನೊಳಂಬರು ಆಳುತ್ತಿದ್ದರು. ಶಿರಾ ತಾಲ್ಲೂಕಿನ ಉತ್ತರದ ಗಡಿಯ ಹತ್ತಿರ ಇರುವ ಮಡಕಶಿರ, ಇಂದಿನ ಹೇಮಾವತಿ (ಹೆಂಜೇರು) - ಇವರ ರಾಜಧಾನಿಯಾಗಿದ್ದು ನಿಡುಗಲ್ಲುದುರ್ಗ ಇವರ ರಕ್ಷಣಾಸ್ಥಳವಾಗಿತ್ತೆಂದು ತಿಳಿದುಬರುತ್ತದೆ. ತುಮಕೂರು ಜಿಲ್ಲೆಯ ಪೂರ್ವಭಾಗ ನೊಳಂಬವಾಡಿ 32,000ಕ್ಕೆ ಸೇರಿತ್ತೆಂದು ತಿಳಿದುಬರುವುದು. ಹೊಯ್ಸಳರ ಆಡಳಿತಕ್ಕೆ ಮುಂದೆ ಈ ಜಿಲ್ಲೆ ಸೇರಿತ್ತೆಂದೂ ಹೆಂಜೇರು ಮತ್ತು ನಿಡುಗಲ್ಲುಗಳಲ್ಲಿ ಆಳುತ್ತಿದ್ದ ಇರುಂಗೊಳ ಚೋಳನನ್ನು ಹೊಯ್ಸಳರು ಗೆದ್ದರೆಂದೂ ಅನೇಕ ಹೊಯ್ಸಳ ಶಾಸನಗಳಿಂದ ತಿಳಿದುಬರುತ್ತದೆ. ಹೊಯ್ಸಳ ಒಂದನೆಯ ನರಸಿಂಹನ ರಾಣಿ ಲೋಕಾಂಬಿಕೆಯ ತವರೂರು ತುರುವೇಕೆರೆಯೆಂದೂ ದೇವಸ್ಥಾನ ಒಂದಕ್ಕೆ ಈಕೆ ದಾನಮಾಡಿದ ಗ್ರಾಮಕ್ಕೆ ಲೋಕಮ್ಮನ ಹಳ್ಳಿಯೆಂದೂ ಹೆಸರಿಸಲಾಗಿದೆ. ವಿಜಯನಗರದ ಅರಸುಗಳ ಸಾಮಂತರಾಗಿ ಅನೇಕ ಪಾಳೆಯಗಾರರು ಈ ಪ್ರಾಂತ್ಯವನ್ನಾಳಿದರು. ಅವರಲ್ಲಿ ನಿಡುಗಲ್ಲು, ಹೊಳವನಹಳ್ಳಿ, ಮಧುಗಿರಿ, ಹಾಗಲವಾಡಿ ಮತ್ತು ಹೆಬ್ಬೂರು ಪಾಳೆಯಗಾರರು ಮುಖ್ಯವಾದವರು. ಬೆಂಗಳೂರು ಕೆಂಪೇಗೌಡನ ಮನೆತನವು ಕುಣಿಗಲನ್ನು ತನ್ನ ಪ್ರಮುಖ ನೆಲೆಯನ್ನಾಗಿ ಮಾಡಿಕೊಂಡಿತ್ತು. ವಿಜಯನಗರದ ಅವನತಿಯ ಅನಂತರ 1638ರಲ್ಲಿ ಬಿಜಾಪುರದ ರಣದುಲ್ಲಾಖಾನ್ ಜಿಲ್ಲೆಯ ಉತ್ತರಭಾಗವನ್ನು ಆಕ್ರಮಿಸಿದ. ಈ ಭಾಗದ ಆಡಳಿತವನ್ನು ಶಿವಾಜಿಯ ತಂದೆ ಶಹಾಜಿಗೆ ವಹಿಸಿಕೊಡಲಾಯಿತು. 1687ರಲ್ಲಿ ಔರಂಗಜೇಬ್ ಗೋಲ್ಕೊಂಡ, ಬಿಜಾಪುರಗಳನ್ನು ಹಿಡಿದಾಗ ಶಿರಾವನ್ನು ತನ್ನ ಆಡಳಿತಕೇಂದ್ರವನ್ನಾಗಿ ಮಾಡಿಕೊಂಡು ಖಾಸಿಂ ಖಾನನನ್ನು ಸುಬೇದಾರನನ್ನಾಗಿ ನೇಮಿಸಿದ. ಅನಂತರ 1757ರಲ್ಲಿ ಶಿರಾವನ್ನು ಮರಾಠರು ಗೆದ್ದರು. 1761ರಲ್ಲಿ ಶಿರಾವನ್ನು ಹೈದರ್ ವಶಪಡಿಸಿಕೊಂಡು ತನ್ನ ಸುಬೇದಾರನನ್ನು ಅಲ್ಲಿ ನೇಮಿಸಿದ. 1766ರಲ್ಲಿ ಇದನ್ನು ಮರಾಠರು ಮತ್ತೆ ತಮ್ಮ ವಶಪಡಿಸಿಕೊಂಡರೂ 1784ರಲ್ಲಿ ಟಿಪ್ಪುಸುಲ್ತಾನ್ ಇದನ್ನು ತನ್ನ ವಶಕ್ಕೆ ತೆಗೆದುಕೊಂಡ. ಮುಂದೆ ಈ ಜಿಲ್ಲೆ ಮೈಸೂರು ಒಡೆಯರ ಆಡಳಿತಕ್ಕೆ ಸೇರಿತು. ಪೂರ್ಣಯ್ಯನವರ ಕಾಲದಲ್ಲಿ ಜಿಲ್ಲೆ ಮಧುಗಿರಿ ಫೌಜುದಾರಿಯ ಭಾಗವಾಗಿತ್ತು. ಕಮಿಷನ್ ಆಡಳಿತದ ಕಾಲದಲ್ಲಿ ತುಮಕೂರು ಡಿವಿಜನ್ ಏರ್ಪಟ್ಟಿತು (1832). 1863ರಲ್ಲಿ ಡಿವಿಜನ್ ರದ್ದಾಗಿ ತುಮಕೂರು ನಂದಿದುರ್ಗ ಡಿವಿಜನ್ನಿಗೆ ಸೇರಿತು. 1886ರಲ್ಲಿ ಚಿತ್ರದುರ್ಗವನ್ನು ಜಿಲ್ಲೆಯಾಗಿ ಏರ್ಪಡಿಸಿದಾಗ ಪಾವಗಡ ತಾಲ್ಲೂಕು ತುಮಕೂರು ಜಿಲ್ಲೆಗೆ ಸೇರಿತು. ತರುವಾಯ ಈ ಜಿಲ್ಲೆ ಮೈಸೂರು ರಾಜ್ಯದ 9 ಜಿಲ್ಲೆಗಳಲ್ಲಿ ಒಂದಾಗಿತ್ತು.

ಈ ಜಿಲ್ಲೆಯ ಕೆಲವು ಕೇಂದ್ರಗಳಲ್ಲಿ ಧಾರ್ಮಿಕ ಚಟುವಟಿಕೆಗಳೊಂದಿಗೆ ಸಾಹಿತ್ಯದ ಬೆಳೆವಣಿಗೆಯೂ ಆಗುತ್ತಿದೆ. ಈ ಜಿಲ್ಲೆಯ ಶಿವಕುಮಾರಸ್ವಾಮಿ, ಗುಬ್ಬಿಯಮಲ್ಲಣಾರ್ಯ, ಶಾಂತೇಶ, ನಿಟ್ಟೂರು ನಂಜಯ್ಯ, ನಂಜುಂಡ ಶಿವಯೋಗಿ ಮುಂತಾದವರು ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ವಿದ್ವಾಂಸರಾಗಿದ್ದು ಗ್ರಂಥಗಳನ್ನು ರಚಿಸಿದ್ದಾರೆ. ಇತ್ತೀಚಿನವರಲ್ಲಿ ಗರಣಿ ಕೃಷ್ಣಾಚಾರ್ಯ, ಬಿ.ಸೋಮನಾಥಯ್ಯ, ಹೊಸಕೆರೆ ಚಿದಂಬರಯ್ಯ, ಬೆಳ್ಳಾವೆ ನರಹರಿಶಾಸ್ತ್ರಿ, ಬೆಳ್ಳಾವೆ ವೆಂಕಟನಾರಣಪ್ಪ, ತೀ.ನಂ.ಶ್ರೀಕಂಠಯ್ಯ ಮತ್ತು ಬಿ.ಶಿವಮೂರ್ತಿಶಾಸ್ತ್ರೀ ಮೊದಲಾದ ವಿದ್ವಾಂಸರು ಈ ಜಿಲ್ಲೆಗೆ ಸೇರಿದವರು. ಗುಬ್ಬಿ ಚಂದಣ್ಣ, ಸಾಹುಕಾರ ನೀಲಕಂಠಪ್ಪ, ನಾಟಕರತ್ನ ಗುಬ್ಬಿ ವೀರಣ್ಣ, ದೊಡ್ಡಪ್ಪ, ಶ್ರೀಮತಿ ರಾಜಮ್ಮ, ಜಯಮ್ಮ, ರೇವಣ್ಣ, ಹಿರಣ್ಣಯ್ಯ ಮೊದಲಾದ ಸಂಗೀತ ನಾಟಕ ಕಲಾಕಾರರು ಈ ಜಿಲ್ಲೆಯವರು.

**ತಾಲ್ಲೂಕು :** ಈ ತಾಲ್ಲೂಕಿನ ಪಶ್ಚಿಮದಲ್ಲಿ ಗುಬ್ಬಿ, ವಾಯವ್ಯಕ್ಕೆ ಶಿರಾ, ಉತ್ತರ, ಈಶಾನ್ಯ ಮತ್ತು ಪೂರ್ವದಲ್ಲಿ ಕೊರಟಗೆರೆ, ದಕ್ಷಿಣಕ್ಕೆ ಕುಣಿಗಲು ತಾಲ್ಲೂಕುಗಳೂ ಆಗ್ನೇಯ ಮತ್ತು ಪೂರ್ವದಲ್ಲಿ ಬೆಂಗಳೂರು ಜಿಲ್ಲೆಯ ಮಾಗಡಿ ಮತ್ತು ನೆಲಮಂಗಲ ತಾಲ್ಲೂಕುಗಳೂ ಇವೆ. ಬೆಂಗಳೂರಿಗೆ ವಾಯುವ್ಯದಲ್ಲಿರುವ ಈ ತಾಲ್ಲೂಕಿನಲ್ಲಿ ಹೆಬ್ಬೂರು, ತುಮಕೂರು, ಕೋರ, ಗೂಳೂರು, ಬೆಳ್ಳಾವೆ ಮತ್ತು ಉರ್ಡಗೆರೆ ಹೋಬಳಿಗಳು ಇವೆ. ಈ ತಾಲ್ಲೂಕಿನ ಗ್ರಾಮಗಳ ಸಂಖ್ಯೆ 351. ವಿಸ್ತೀರ್ಣ 1,025ಚ.ಕಿಮೀ. ಜನಸಂಖ್ಯೆ 2,09,539.

ತಾಲ್ಲೂಕಿನ ಹೆಚ್ಚು ಭಾಗ ಸುಮಾರು ಏರುಪೇರು ಮಾತ್ರವಿರುವ ಮೈದಾನ ಪ್ರದೇಶ. ಪೂರ್ವಭಾಗದಲ್ಲಿ ಮಾತ್ರ ದೇವರಾಯನದುರ್ಗದ ಬೆಟ್ಟಗಳ ಸಾಲಿದೆ. ಈ ತಾಲ್ಲೂಕಿನಲ್ಲಿ 1,18,362 ಎಕರೆ ಕೆಂಪು ಮಣ್ಣಿನ, 24,176 ಎಕರೆ ಜೇಡಿ ಮಣ್ಣಿನ, 30,036 ಎಕರೆ ಕೆಂಪು ಎರೆಮಣ್ಣಿನ ಮತ್ತು 61,100 ಎಕರೆ ಮರಳು ಮಿಶ್ರಿತ ಎರೆಮಣ್ಣಿನ ಭೂಮಿ ಇದೆ. ವಾರ್ಷಿಕ ಸರಾಸರಿ ಮಳೆ 969 ಮಿಮೀ. ಈ ತಾಲ್ಲೂಕಿನ ದೇವರಾಯನದುರ್ಗದ ಉತ್ತರದಲ್ಲಿ ಹುಟ್ಟುವ ಜಯಮಂಗಲಿ ನದಿ ತಾಲ್ಲೂಕಿನಲ್ಲಿ ಸು.13ಕಿಮೀ ದೂರ ಉತ್ತರಾಭಿಮುಖವಾಗಿ ಹರಿದು ಕೊರಟಗೆರೆ-ಮಧುಗಿರಿ ತಾಲ್ಲೂಕುಗಳಲ್ಲಿ ಮುಂದುವರಿಯುತ್ತದೆ. ಇದೇ ತಾಲ್ಲೂಕಿನ ದೇವರಾಯನದುರ್ಗದ ದಕ್ಷಿಣದಲ್ಲಿ ಹುಟ್ಟುವ ಶಿಂಷಾನದಿ ತಾಲ್ಲೂಕಿನಲ್ಲಿ ಸು.28ಕಿಮೀ ದೂರ ಪ್ರವಹಿಸುವುದು.

ವ್ಯವಸಾಯ ಪ್ರಧಾನವಾದರೂ ತಾಲ್ಲೂಕಿನಲ್ಲಿ ಸಣ್ಣ ಪ್ರಮಾಣದ ಗೃಹ ಕೈಗಾರಿಕೆಗಳಿವೆ. ಜಿಲ್ಲಾ ಕೇಂದ್ರವಾದ ತುಮಕೂರು ನಗರ ತಾಲ್ಲೂಕು

ಕೇಂದ್ರವೂ ಆಗಿರುವುದರಿಂದ ನಗರೀಕರಣದ ಪ್ರಭಾವ ತಾಲ್ಲೂಕಿನ ಮೇಲೆ ಆಗಿದೆ. ಎಣ್ಣೆ ಕಾರ್ಖಾನೆಗಳು, ಅಕ್ಕಿ ಗಿರಣಿಗಳು, ಮರ ಕೊಯ್ಯುವ ಕಾರ್ಖಾನೆಗಳು ಇವೆ. ವ್ಯವಸಾಯೋಪಕರಣಗಳು, ಬೆಂಕಿಕಡ್ಡಿ, ಕಬ್ಬಿಣ ಮತ್ತು ಮರದ ವಸ್ತುಗಳು, ಗೃಹೋಪಕರಣಗಳು, ಸಾಬೂನು, ಇಟ್ಟಿಗೆ ಮತ್ತು ಹೆಂಚು, ನಟ್ ಮತ್ತು ಬೋಲ್ಟ್ - ಇವನ್ನು ತಯಾರಿಸುವ ಕಾರ್ಖಾನೆಗಳಿವೆ. ಬೀಡಿ, ಟೇಪು, ಸ್ಲೇಟ್, ಪೆನ್ಸಿಲ್ ಮುಂತಾದವುಗಳ ತಯಾರಿಕೆಯೂ ಉಂಟು. ಗ್ರಾಮೋದ್ಯೋಗವಾಗಿ ತಾಲ್ಲೂಕಿನಲ್ಲಿ ಹತ್ತಿ, ಉಣ್ಣೆ, ರೇಷ್ಮೆ ಕೈಮಗ್ಗದ ಬಟ್ಟೆ ತಯಾರಿಕೆ, ಕಬ್ಬಿಣ ಮತ್ತು ಮರಗೆಲಸ, ಮಣ್ಣಿನ ವಸ್ತುಗಳನ್ನು ತಯಾರಿಸುವುದು ಎಣ್ಣೆ ಉತ್ಪಾದನೆ ಮತ್ತು ಚರ್ಮ ಹದಮಾಡುವುದು, ಚಾಪೆ ಬುಟ್ಟಿಗಳನ್ನು ಹೆಣೆಯುವುದು, ತೆಂಗಿನನಾರಿನ ಉದ್ಯೋಗ, ಹಿತ್ತಾಳೆ ಹಾಗೂ ತಾಮ್ರಪಾತ್ರೆಗಳ ತಯಾರಿಕೆ, ಮರದ ಬಾಚಣಿಗೆ ಮತ್ತು ಸುಣ್ಣ ತಯಾರಿಕೆ ಮುಂತಾದವು ತಾಲ್ಲೂಕಿನಲ್ಲಿ ಅಭಿವೃದ್ಧಿ ದೆಶೆಯಲ್ಲಿವೆ. ಈ ಉದ್ಯೋಗಕ್ಕೆ ಸಂಬಂಧಪಟ್ಟ ಸಹಕಾರಿ ಸಂಘಗಳಿವೆ. ಈ ತಾಲ್ಲೂಕಿನ ವ್ಯವಸಾಯ, ಉದ್ಯೋಗ ಮತ್ತು ಕೈಗಾರಿಕೆಗಳಿಗೆ ಸಹಾಯಕವಾದ ಕೆಲವು ವಾಣಿಜ್ಯ ಮತ್ತು ಸಹಕಾರಿ ಬ್ಯಾಂಕುಗಳಿವೆ.

ತಾಲ್ಲೂಕಿನಲ್ಲಿ ವಿದ್ಯಾಭ್ಯಾಸ ಮುಂದುವರಿದಿದ್ದಾಗಿದೆ. ಪ್ರಥಮ ದರ್ಜೆ ಕಾಲೇಜು, ಕಲಾ ಮತ್ತು ವಿಜ್ಞಾನ ಕಾಲೇಜು, ರಾತ್ರಿ ಕಾಲೇಜು, ಎಂಜಿನಿಯರಿಂಗ್ ಕಾಲೇಜು, ವೈದ್ಯಕೀಯ ಕಾಲೇಜು, ಕಾನೂನು ಶಿಕ್ಷಣ, ಶಿಕ್ಷಕ ತರಬೇತಿ ಮುಂತಾದ ಕಾಲೇಜುಗಳಿವೆ. ಈ ತಾಲ್ಲೂಕಿನಲ್ಲಿ ಜಿಲ್ಲಾ ಮಟ್ಟದ ಸಾರ್ವಜನಿಕ ಸರ್ಕಾರಿ ಆಸ್ಪತ್ರೆ ಮತ್ತು ಆರೋಗ್ಯ ಕೇಂದ್ರಗಳಿವೆ.

ಈ ತಾಲ್ಲೂಕಿನಲ್ಲಿ ಬೆಂಗಳೂರು-ಹೊನ್ನಾವರ ಮತ್ತು ಬೆಂಗಳೂರು -ಚಿತ್ರದುರ್ಗ ಹೆದ್ದಾರಿಗಳು ಹಾದು ಹೋಗುತ್ತವೆ. ಸುತ್ತಲ ನಗರಗಳಾದ ಬೆಂಗಳೂರು, ಕೋಲಾರ, ಮಂಡ್ಯ, ಹಾಸನ, ಚಿಕ್ಕಮಗಳೂರು ಮುಂತಾದೆಡೆಗೆ ಉತ್ತಮ ಮಾರ್ಗಗಳಿದ್ದು ವಾಹನಸಂಪರ್ಕವಿದೆ. ಬೆಂಗಳೂರು-ಅರಸೀಕೆರೆ ರೈಲ್ವೆ ಮಾರ್ಗ ತಾಲ್ಲೂಕಿನಲ್ಲಿ ಹಾದುಹೋಗಿದ್ದು ವ್ಯಾಪಾರಾಭಿವೃದ್ಧಿಗೆ ಅನುಕೂಲವಾಗಿದೆ.



ಕೋಟಿಲಿಂಗ ದೇವಾಲಯ

ತುಮಕೂರಿಗೆ ಸು.3ಕಿಮೀ ದೂರದಲ್ಲಿ ಇರುವ ಬೆಳಗುಂಬ ಬೆಟ್ಟದ ಮೇಲೆ ಸಿದ್ಧರಾಮೇಶ್ವರ ದೇವಾಲಯವಿದ್ದು ಸಿದ್ಧರಾಮೇಶ್ವರ ಕ್ಷೇತ್ರವೆಂದು ಪ್ರಸಿದ್ಧವಾಗಿದೆ. ತುಮಕೂರಿನ ವಾಯವ್ಯದಲ್ಲಿ ಸು.13ಕಿಮೀ ದೂರದಲ್ಲಿರುವ ಬೆಳ್ಳಾವೆಯಲ್ಲಿ ಪ್ರಸಿದ್ಧ ಸೋಮೇಶ್ವರಸ್ವಾಮಿ ದೇವಾಲಯವೂ ಸೈಕಲ್ ಬಿಡಿ ಭಾಗಗಳನ್ನು ತಯಾರಿಸುವ ಒಂದು ಸಣ್ಣ ಪ್ರಮಾಣದ ಕಾರ್ಖಾನೆಯೂ ಇವೆ. ಗೂಳೂರು (ನೋಡಿ) ಗಣಪತಿ ಪೂಜೆಗೆ ಪ್ರಸಿದ್ಧ. ಹೆಬ್ಬೂರು (ನೋಡಿ) ತುಮಕೂರು-ಕುಣಿಗಲು ಮಾರ್ಗದಲ್ಲಿರುವ ಒಂದು ದೊಡ್ಡ ಗ್ರಾಮ. ತುಮಕೂರಿಗೆ 19ಕಿಮೀ ದೂರದಲ್ಲಿ ಬೆಂಗಳೂರು-ತುಮಕೂರು ಮಾರ್ಗದಲ್ಲಿರುವ ಹಿರೇಹಳ್ಳಿ ಅಡಕೆ ತೋಟಗಳಿಗೆ ಪ್ರಸಿದ್ಧ. ಇಲ್ಲೊಂದು ಅಡಕೆ ಸಂಶೋಧನ ಕೇಂದ್ರವಿದೆ. ಕೈದಾಳ (ನೋಡಿ) ಜಕಣಾಚಾರಿಯ ಹುಟ್ಟೂರೆಂದು ಹೇಳುವರು. ಮರಳೂರಿನಲ್ಲಿ ರಾಮದೇವಾಲಯವಿದೆ. ನಿಜಗಲ್ಲು (ನೋಡಿ) ದೇವಾಲಯಗಳಿರುವ ಒಂದು ಬೆಟ್ಟ. ಶೆಟ್ಟಿಹಳ್ಳಿಯ ಆಂಜನೇಯ ದೇವಾಲಯ ಪ್ರಸಿದ್ಧ. ಸಿದ್ಧಗಂಗಾ (ನೋಡಿ) ತುಮಕೂರು ನಗರಕ್ಕೆ ಸು.4ಕಿಮೀ ದೂರದಲ್ಲಿರುವ ಒಂದು ಯಾತ್ರಾಸ್ಥಳ. ಧಾರ್ಮಿಕ ಮತ್ತು ವಿದ್ಯಾಭ್ಯಾಸ ಕಾರ್ಯಗಳ ಕೇಂದ್ರ.

**ಪಟ್ಟಣ :** ತುಮಕೂರು ಈ ಜಿಲ್ಲೆ ಮತ್ತು ತಾಲ್ಲೂಕಿನ ಆಡಳಿತ ಕೇಂದ್ರ ಹಾಗೂ ದೊಡ್ಡ ಪಟ್ಟಣ. ಬೆಂಗಳೂರಿನ ವಾಯವ್ಯಕ್ಕೆ 70ಕಿಮೀ ದೂರದಲ್ಲಿದೆ. ಜನಸಂಖ್ಯೆ 2,48,592.

ತುಮಕೂರು ನಗರ ದೇವರಾಯನದುರ್ಗಬೆಟ್ಟ ಶ್ರೇಣಿಯ ವಾಯವ್ಯದ ಇಳಿಜಾರು ಪ್ರದೇಶದಲ್ಲಿ ಹರಡಿಕೊಂಡಿದೆ. ಇದರ ಪಕ್ಕದಲ್ಲಿ ವಿಶಾಲವಾದ ಮೈದಾಳ ಕೆರೆ ಇದೆ. ನಗರಕ್ಕೆ ಈ ಕೆರೆಯಿಂದ ನೀರು ಸರಬರಾಜಾಗುತ್ತಿದೆ. ಪಶ್ಚಿಮ, ಉತ್ತರ ಮತ್ತು ದಕ್ಷಿಣ ಭಾಗಗಳಲ್ಲಿ ನಗರ ಬೆಳೆಯುತ್ತಿದೆ. ಸಂತೇಪೇಟೆ, ಮಂಡಿಪೇಟೆ, ಗಾಂಧೀನಗರ, ಸೋಮೇಶ್ವರ ಮತ್ತು ಕೃಷ್ಣರಾಜೇಂದ್ರ ಬಡಾವಣೆಗಳು ನಗರದ ಪ್ರಮುಖ ಭಾಗಗಳು. ಈಗ ನಗರ ಕ್ಯಾತ್ಸಂದ್ರವರೆಗೂ ವಿಸ್ತರಿಸಿದ್ದು ಅನೇಕ ಹೊಸ ಬಡಾವಣೆಗಳನ್ನು ಒಳಗೊಂಡಿದೆ. ನಗರದಲ್ಲಿ ಪುರಭವನ, ಸರ್ಕಾರಿ ಪ್ರೌಢಶಾಲೆ, ಕಲೆ, ವಿಜ್ಞಾನ, ನ್ಯಾಯಶಾಸ್ತ್ರ, ಉಪಾಧ್ಯಾಯ ತರಬೇತಿ, ತಾಂತ್ರಿಕ ಕಾಲೇಜುಗಳು ಇವೆ. ಸಾರ್ವಜನಿಕ ಆಸ್ಪತ್ರೆ, ಕೃಷ್ಣರಾಜೇಂದ್ರ ಸಾರ್ವಜನಿಕ ಗ್ರಂಥಾಲಯ, ಅಂಚೆ ತಂತಿ, ದೂರವಾಣಿ, ವಿದ್ಯುಚ್ಛಕ್ತಿ ಮುಂತಾದ ಸೌಲಭ್ಯಗಳಿದ್ದು ಜಿಲ್ಲಾಧಿಕಾರಿಯ ಕಚೇರಿ ಹಾಗೂ ವಿವಿಧ ಇಲಾಖೆಗಳ ಜಿಲ್ಲಾಮಟ್ಟದ ಅಧಿಕಾರಿಗಳ ಕಚೇರಿಗಳು ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ ಪ್ರಥಮ ದರ್ಜೆಯ ಮ್ಯಾಜಿಸ್ಟ್ರೇಟ್ ನ್ಯಾಯಾಲಯ ಹಾಗೂ ಮುನ್ಸಿಫ್ ನ್ಯಾಯಾಲಯ ಇವೆ. ಸರ್ಕಾರಿ ಬಸ್ ನಿಲ್ದಾಣ, ರೈಲ್ವೆ ನಿಲ್ದಾಣ ಸಹ ಇದ್ದು ತುಮಕೂರು ಬೆಳೆಯುತ್ತಿರುವ ಒಂದು ಪ್ರಮುಖ ವಾಣಿಜ್ಯ ಕೇಂದ್ರವಾಗಿದೆ.

ಇದು ನಗರಸಭಾಡಳಿತಕ್ಕೆ ಸೇರಿದೆ. ಇಲ್ಲಿನ ಲಕ್ಷ್ಮೀನಾರಾಯಣ ದೇವಸ್ಥಾನ ಸು.1560ರಲ್ಲಿ ರಚಿತವಾದುದು.

ಹಿಂದೆ ತುಮಕೂರು ಕ್ರೀಡಾಪುರದ (ಇಂದಿನ ಕೈದಾಳ) ಅರಸನಿಗೆ ಸೇರಿತ್ತು ಎಂದು ಪ್ರತೀತಿ. ಕ್ರೀಡಾಪುರದ ರಾಜ ಈ ಊರನ್ನು ಟುಮಕಿ (ಡೋಲು) ಬಾರಿಸುವವನಿಗೆ ಕೊಟ್ಟಿದ್ದ ಕಾರಣ ಇದಕ್ಕೆ ತುಮಕೂರು ಎಂಬ ಹೆಸರಾಯಿತೆಂದು ಹೇಳಿಕೆ. 10ನೆಯ ಶತಮಾನದ ಶಾಸನವೊಂದರಿಂದ ಈ ಸ್ಥಳಕ್ಕೆ ತುಮೆಗೂರು (ತುಂಬೆ ಊರು) ಎಂಬ ಹೆಸರಿದ್ದಿತೆಂದು ತಿಳಿದುಬರುತ್ತದೆ. ಹಿಂದೆ ಇದು ಆನೆಬಿದ್ದಜರಿ ಪ್ರಾಂತ್ಯಕ್ಕೆ ಸೇರಿತ್ತು. ಮೈಸೂರು ರಾಜವಂಶದ ಕಾಂತೇ ಅರಸು ತುಮಕೂರಿನ ಕೋಟೆಯನ್ನು ಕಟ್ಟಿಸಿದ್ದ. ಇಂದು ಆ ಕೋಟೆಯ ಭಾಗ ನೆಲಸಮವಾಗಿದೆ. (ವಿ.ಜಿ.ಕೆ.)

**ತುರುಗಾಹಿ ರಾಮಣ್ಣ :** 12ನೆಯ ಶತಮಾನದ ಶಿವಶರಣ ಹಾಗೂ ವಚನಕಾರ. ಈತ ಗೋವುಗಳನ್ನು ಕಾಯುವ ಕಾಯಕದಲ್ಲಿ ನಿರತನಾಗಿದ್ದು ದಿವ್ಯಾನುಭವವನ್ನು ಪಡೆದಂತೆ ತಿಳಿಯುತ್ತದೆ. ಈತ ಗೋಪೀನಾಥ ವಿಶ್ವೇಶ್ವರಲಿಂಗ ಎಂಬ ಅಂಕಿತವನ್ನಿಟ್ಟುಕೊಂಡು ವಚನಗಳನ್ನು ಬರೆದಿದ್ದಾನೆ. ಇದುವರೆಗೆ 45 ವಚನಗಳು ದೊರಕಿವೆ. ಇವುಗಳಲ್ಲಿ ಕಾಯಕದ ಮಹತ್ವವನ್ನು ಹೃದಯಂಗಮವಾಗಿ ನಿರೂಪಿಸಿದ್ದಾನೆ. ಕ್ರಿಯಾಶುದ್ಧತೆಯಾದಲ್ಲಿ ಭಾವಶುದ್ಧವಾಗಿಪ್ಪುದು, ಭಾವಶುದ್ಧವಾಗಿದ್ದಲ್ಲಿ ಸರ್ವೇಂದ್ರಿಯಗಳು ಏಕೇಂದ್ರಿಯವಾಗಿ ಚಿತ್ತಶುದ್ಧವಾಗಿಪ್ಪುದು, ಚಿತ್ತಶುದ್ಧಿ ಸಿದ್ಧಿಯಾದಲ್ಲಿ ಸರ್ವಜ್ಞಾನಸಂಪನ್ನವಪ್ಪುದು ಎಂಬುದು ಇವನ ಜೀವನ ಸೂತ್ರವಾಗಿತ್ತು. ಕೋಲೊಂದರಲ್ಲಿ ಹಲವು ಕುಲದ ಗೋವುಗಳ ಚಲಿಸದೆ ನಿಲ್ಲಿಸುವಂತೆ ಏಕಚಿತ್ತನಾಗಿ ಸರ್ವವಿಕಾರಂಗಳ ಕಟ್ಟುವಡೆದು, ಇಂದ್ರಿಯಂಗಳ ಇಚ್ಛೆಯಲ್ಲಿ ಹಿಡಿದಿರುಹುವರ ಸಂಧಿಯಲ್ಲಿ ನುಸುಳದೆ ವಸ್ತುವಿನ ಅಂಗದಲ್ಲಿಯೆ ತನ್ನಿಂದ ತಲ್ಲೀನವಾಗಿಪ್ಪುದೆ ಮಹಾನಿಜದ ನೆಲೆ ಗೋಪೀನಾಥ; ವಿಶ್ವೇಶ್ವರಲಿಂಗವನರಿವುದಕ್ಕೆ ಇದೇ ಬಟ್ಟೆ ಎಂಬ ವಚನ ಇವನ ಅನುಭಾವಸಂಪತ್ತಿಗೆ ಸಾಕ್ಷಿಯಾಗಿದೆ. (ಬಿ.ಎಸ್.ಎಸ್.)

**ತುರುವನೂರು :** ಚಿತ್ರದುರ್ಗ ತಾಲ್ಲೂಕಿನಲ್ಲಿ ಚಿತ್ರದುರ್ಗದಿಂದ ಈಶಾನ್ಯಕ್ಕೆ 22ಕಿಮೀ ದೂರದಲ್ಲಿರುವ ಪಟ್ಟಣ. ಹೋಬಳಿ ಕೇಂದ್ರ.

ತುರುವನೂರು ಪ್ರಾಚೀನ ಊರು. ಇಲ್ಲಿ 8ನೆಯ ಶತಮಾನದ ನೊಳಂಬ ಶಾಸನವೊಂದು ದೊರಕಿದೆ. ಶಾಸನದ ಬಳಿ ಇರುವ ರಾಮಲಿಂಗ ದೇವಾಲಯ ಮೂಲತಃ ನೊಳಂಬರ ಕಾಲದಲ್ಲಿ ಕಟ್ಟಿದ್ದು. ಈಗ ದೇವಾಲಯದ ಕಟ್ಟಡ ಬಹುವಾಗಿ ನವೀಕೃತವಾಗಿದೆ. ಆದರೆ ಇಲ್ಲಿರುವ ಲಿಂಗ ಮತ್ತು ನಂದಿ ವಿಗ್ರಹ ನೊಳಂಬಕಾಲದವು. ನಂದಿವಿಗ್ರಹ ಸುಂದರ ಶಿಲ್ಪಕೃತಿ. 17ನೆಯ ಶತಮಾನದಲ್ಲಿ ಇದೊಂದು ಆಯಕಟ್ಟಿನ ಸ್ಥಳವಾಗಿತ್ತು. ಊರಿನ ಸುತ್ತ ಹಬ್ಬಿರುವ ಕಂದಕದಿಂದ ಸುತ್ತುವರಿದಿದ್ದು ಎತ್ತರದ ಗೋಡೆಗಳು, ಅಟ್ಟಾಲಕಗಳು, ಹರನಾಲಗೆಗಳು, ಬಂದೂಕರಂಧ್ರಗಳು - ಇವುಗಳಿಂದ ಕೂಡಿರುವ ಆ ಕಾಲದ ಕೋಟೆ ಇನ್ನೂ ಸುಸ್ಥಿತಿಯಲ್ಲಿದೆ. ಕೋಟೆಯ ಒಳಗೆ ಕೆಲವು ಚಿಕ್ಕ ದೇವಾಲಯಗಳಿವೆ. ಕೋಟೆಯ ದಕ್ಷಿಣ ಭಾಗದಲ್ಲಿ ತುರುವಪ್ಪನ ಗುಡಿ ಎಂಬ ದೇವಾಲಯವಿದೆ. ಇದು ಇಲ್ಲಿದ್ದ ತುರುವ ಅಥವಾ ತುರುವಪ್ಪ ಎಂಬ ಸ್ಥಳೀಯ ನಾಯಕನ ನೆನಪಿಗಾಗಿ ಕಟ್ಟಿದ ದೇವಾಲಯವೆಂದೂ ಅವನಿಂದ ಊರಿಗೆ ಈಗಿನ ಹೆಸರು ಬಂದಿರಬೇಕೆಂದೂ ಊಹಿಸಲಾಗಿದೆ. ಈ ದೇವಾಲಯ ಬಹು ಸಾಮಾನ್ಯ ರೀತಿಯ ಆಧುನಿಕ ಕಟ್ಟಡ. ಗರ್ಭಗುಡಿಯಲ್ಲಿ ಕೆಲವು ಕಲ್ಲುಗುಂಡುಗಳನ್ನು ಸಾಲಾಗಿಟ್ಟು ಪೂಜಿಸಲಾಗುತ್ತಿದೆ. *

ಪಟ್ಟಣ ನಗರಸಭಾಡಳಿತಕ್ಕೆ ಒಳಪಟ್ಟಿದೆ. ಶಾಲೆಗಳು, ಆರೋಗ್ಯಕೇಂದ್ರ, ಪಶುವೈದ್ಯಾಲಯ, ಅಂಚೆ, ತಂತಿ ದೂರವಾಣಿ ಮತ್ತು ವಿದ್ಯುತ್ ಸೌಲಭ್ಯಗಳಿವೆ. ಇಲ್ಲಿಂದ ಜಗಳೂರು, ನಾಯಕನಹಟ್ಟಿ, ಚಿತ್ರದುರ್ಗ - ಮುಂತಾದೆಡೆಗಳಿಗೆ ಉತ್ತಮ ರಸ್ತೆಗಳಿವೆ. ಈ ಊರು ವ್ಯಾಪಾರಕೇಂದ್ರವಾಗಿ ಬೆಳೆದಿದೆ. ಇಲ್ಲಿ ತಯಾರಾಗುವ ಕಂಬಳಿಗಳು ಚಿತ್ರದುರ್ಗ ಕಂಬಳಿಗಳೆಂದು ಪ್ರಸಿದ್ಧವಾಗಿವೆ. (ಎ.ಜಿ.ಕೆ)

**ತುರುವೇಕೆರೆ :** ತುಮಕೂರು ಜಿಲ್ಲೆಯ ಒಂದು ತಾಲ್ಲೂಕು ಮತ್ತು ತಾಲ್ಲೂಕು ಕೇಂದ್ರ. ತಿಪಟೂರು ಉಪವಿಭಾಗಕ್ಕೆ ಸೇರಿರುವ ಈ ತಾಲ್ಲೂಕನ್ನು ದಕ್ಷಿಣದಲ್ಲಿ ಮಂಡ್ಯ ಜಿಲ್ಲೆಯೂ ಪಶ್ಚಿಮ ಮತ್ತು ವಾಯವ್ಯದಲ್ಲಿ ತಿಪಟೂರು, ಉತ್ತರ, ಪೂರ್ವ ಮತ್ತು ಈಶಾನ್ಯದಲ್ಲಿ ಗುಬ್ಬಿ ಮತ್ತು ಆಗ್ನೇಯದಲ್ಲಿ ಕುಣಿಗಲು - ಈ ತಾಲ್ಲೂಕುಗಳು ಸುತ್ತುವರಿದಿವೆ. ತಾಲ್ಲೂಕಿನಲ್ಲಿ ದಂಡಿನಶಿವರ, ತುರುವೇಕೆರೆ, ಮಾಯಸಂದ್ರ ಮತ್ತು ದಬ್ಬೆಗಟ್ಟ ಹೋಬಳಿಗಳಿದ್ದು ಒಟ್ಟು 222 ಗ್ರಾಮಗಳಿವೆ. ವಿಸ್ತೀರ್ಣ 778ಚ.ಕಿಮೀ. ಜನಸಂಖ್ಯೆ 1,73,615.

ದೇವರಾಯನದುರ್ಗದ ದಕ್ಷಿಣದಲ್ಲಿ ಹುಟ್ಟುವ ಶಿಂಷಾ ನದಿ ದಕ್ಷಿಣಾಭಿಮುಖವಾಗಿ ತುರುವೇಕೆರೆ ತಾಲ್ಲೂಕಿನ ಪೂರ್ವಭಾಗದಲ್ಲಿ ಸು.14ಕಿಮೀ ಹರಿದು ಕುಣಿಗಲು ತಾಲ್ಲೂಕನ್ನು ಸೇರುತ್ತದೆ. ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ 796ಮಿಮೀ. ಈ ತಾಲ್ಲೂಕಿನಲ್ಲಿ ಒಟ್ಟು 77 ಕೆರೆಗಳೂ 407 ಬಾವಿಗಳೂ ಇದ್ದು ವ್ಯವಸಾಯಕ್ಕೆ ಸಹಾಯಕವಾಗಿವೆ. 54,200 ಎಕರೆ ಕೆಂಪು ಮಣ್ಣಿನ ಭೂಮಿ, 10,000 ಎಕರೆ ದಪ್ಪ ಮರಳಿನ ಭೂಮಿ, 10,500 ಎಕರೆ ಮರಳು ಬೆರೆತ ಫಲವತ್ತಾದ ಜೇಡಿಮಣ್ಣಿನ ಭೂಮಿ, 75,489 ಎಕರೆ ಕೆಂಪು ಜೇಡಿ ಮಣ್ಣಿನ ಭೂಮಿ ಮತ್ತು ಹತ್ತಿಬೆಳೆಗೆ ಉಪಯುಕ್ತವಾದ 1,500 ಎಕರೆ ಕಪ್ಪುಮಣ್ಣಿನ ಭೂಮಿ ಇದೆ. ಈ ತಾಲ್ಲೂಕಿನ ವ್ಯವಸಾಯಯೋಗ್ಯ ಭೂಮಿಯಲ್ಲಿ ರಾಗಿ, ಬತ್ತ, ಹಾರಕ, ನವಣೆ, ಹುರುಳಿ, ಅವರೆ, ತೊಗರಿ, ನೆಲಗಡಲೆ, ಕಬ್ಬು ಹಾಗೂ ಜೋಳದ ಬೆಳೆಗಳನ್ನು ಬೆಳೆಯುತ್ತಾರೆ. ಈ ತಾಲ್ಲೂಕಿನ ಪ್ರಮುಖ ಬೆಳೆಗಳಲ್ಲಿ ತೆಂಗೂ ಒಂದಾಗಿದೆ.

ತಾಲ್ಲೂಕಿನಲ್ಲಿ ಪಶುಪಾಲನೆಗೂ ಗಮನ ನೀಡಲಾಗಿದೆ. ತುರುವೇಕೆರೆಯಲ್ಲಿ ತಾಲ್ಲೂಕು ಮಟ್ಟದ ಪಶುವೈದ್ಯಾಲಯವಿದ್ದು ಮಾಯಸಂದ್ರ, ತಂಡಗ ಮತ್ತು ದಂಡಿನಶಿವರಗಳಲ್ಲಿ ಗ್ರಾಮಮಟ್ಟದ ಪಶುವೈದ್ಯಾಲಯಗಳಿವೆ. ವರ್ಷಕ್ಕೊಮ್ಮೆ ನಡೆಯುವ ದನಗಳ ಜಾತ್ರೆಯಲ್ಲಿ ದನಗಳ ವ್ಯಾಪಾರ ನಡೆಯುತ್ತದೆ. ತುರುವೇಕೆರೆಯ ಕೆರೆಯಲ್ಲೂ ಮತ್ತು ತಾಲ್ಲೂಕಿನ ಇತರ ಕೆರೆಗಳಲ್ಲೂ ಮೀನುಸಾಕಣೆ ಉಂಟು.

ಕೊಬ್ಬರಿ, ತೆಂಗು, ಬೆಲ್ಲ, ರಾಗಿ, ಜೋಳ, ಅಡಕೆ ಮುಂತಾದ ವ್ಯವಸಾಯೋತ್ಪನ್ನಗಳ ವಿಲೇವಾರಿಗೆ ತಾಲ್ಲೂಕು ನಿಯಂತ್ರಿತ ಮಾರುಕಟ್ಟೆ ಇದೆ.

ತಾಲ್ಲೂಕಿನ ಮಾವಿನಕೆರೆ ಗ್ರಾಮ ನೇಯ್ಗೆಬಟ್ಟೆಗೆ ಪ್ರಸಿದ್ಧ. ಮುನಿಯೂರು, ದಂಡಿನಶಿವರ ಮತ್ತು ಮಾವಿನಕೆರೆ ಗ್ರಾಮಗಳಲ್ಲಿ ಹತ್ತಿ ಮತ್ತು ರೇಷ್ಮೆ ನೇಯ್ಗೆಯವರ ಸಂಘಗಳೂ ಮಡಕೆ ಮಾಡುವವರ, ಕಬ್ಬಿಣ ಮತ್ತು ಮರಗೆಲಸದವರ ಸಹಕಾರ ಸಂಘಗಳೂ ಇವೆ. ತಾಲ್ಲೂಕಿನ ವ್ಯಾಪಾರಾಭಿವೃದ್ಧಿಗೆ ಅನುಕೂಲಿಸುವಂತೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಮತ್ತು ಇತರ ಕೆಲವು ವಾಣಿಜ್ಯ ಬ್ಯಾಂಕುಗಳಿವೆ. ತುಮಕೂರಿನ ನೈಋತ್ಯಕ್ಕಿರುವ ಈ ತಾಲ್ಲೂಕಿಗೆ ಉತ್ತಮ ಮಾರ್ಗಗಳಿವೆ. ಬೆಂಗಳೂರು-ಅರಸೀಕೆರೆ ರೈಲುಮಾರ್ಗ ತಾಲ್ಲೂಕಿನ ಉತ್ತರ ಭಾಗದಲ್ಲಿ ಹಾದುಹೋಗಿದೆ. ತಾಲ್ಲೂಕಿನಲ್ಲಿ ಕಿರಿಯ ಪ್ರಾಥಮಿಕ ಮತ್ತು ವಿಸ್ತರಿತ ಪ್ರಾಥಮಿಕ ಶಾಲೆಗಳೂ ಮಾದರಿ ಮಾಧ್ಯಮಿಕ ಶಾಲೆಗಳೂ ಪ್ರೌಢಶಾಲೆಗಳೂ ಇವೆ. ತಾಲ್ಲೂಕು ಮಟ್ಟದ ಹೆರಿಗೆ ಆಸ್ಪತ್ರೆ, ಪ್ರಾಥಮಿಕ ಆರೋಗ್ಯ ಕೇಂದ್ರಗಳಿವೆ. ಮಾಯಸಂದ್ರ, ದಂಡಿನ ಶಿವರ, ಬಾಣಸಂದ್ರ ಮತ್ತು ತಂಡಗ ಮುಂತಾದೆಡೆಗಳಲ್ಲಿ ಔಷಧಾಲಯಗಳಿವೆ.

ಈ ತಾಲ್ಲೂಕಿಗೆ ಸೇರಿದ ಕೆಲವು ಸ್ಥಳಗಳು ಉಲ್ಲೇಖಾರ್ಹ. ಅಮ್ಮಸಂದ್ರದಲ್ಲಿ 1960ರಲ್ಲಿ ಸ್ಥಾಪಿತವಾದ ಸಿಮೆಂಟ್ ಕಾರ್ಖಾನೆ ಇದೆ. ದುಮ್ಮನಹಳ್ಳಿ ದುಮ್ಮಿಒಡೆಯರ ಪಾಳೆಯಪಟ್ಟಾಗಿತ್ತು. ಹೊಸಹಳ್ಳಿಯಲ್ಲಿ ಹೊಯ್ಸಳರ ಕಾಲದ ಕಲ್ಲೇಶ್ವರ ದೇವಾಲಯವಿದೆ. ಕಡಸೂರಿನ ಭೈರವ ದೇವಾಲಯ ಪ್ರಸಿದ್ಧವಾದದ್ದು. ಮಾಯಸಂದ್ರದಲ್ಲಿ ಮಾಯಮ್ಮ, ಕೊಲ್ಲಾಪುರದಮ್ಮ ದೇವಾಲಯಗಳಿವೆ. ಮಾಯಸಂದ್ರಕ್ಕೆ ಹತ್ತಿರವಿರುವ ರಾಮಸಾಗರದ ವರದರಾಜ ದೇವಾಲಯ ಹೆಸರಾದುದು. ನಾಗಲಾಪುರದಲ್ಲಿ ಹೊಯ್ಸಳರ ಕಾಲದ ಪಾಳುಬಿದ್ದಿರುವ ವಿಷ್ಣು ಮತ್ತು ಶಿವ ದೇವಾಲಯಗಳು ಇವೆ. ಸಂಪಿಗೆಯು ತೆಂಗಿನ ತೋಟಗಳಿಗೆ ಪ್ರಸಿದ್ಧ. ಇಲ್ಲಿ ವೆಂಕಟರಮಣಸ್ವಾಮಿ ದೇವಾಲಯವಿದೆ. ಸೂಳೆಕೆರೆಯಲ್ಲಿ ಹೊಯ್ಸಳ ಶೈಲಿಯ ಈಶ್ವರ ದೇವಾಲಯವೂ ವೀರಭದ್ರನ ದೇವಸ್ಥಾನವೂ ಇದೆ. ತಂಡಗ ಹೊಯ್ಸಳ ಶೈಲಿಯ ದೇವಾಲಯಕ್ಕೆ ಪ್ರಸಿದ್ಧ. *

ತುರುವೇಕೆರೆ ಈ ತಾಲ್ಲೂಕಿನ ಆಡಳಿತ ಕೇಂದ್ರ. ಇದು ಬೆಂಗಳೂರು-ಪುಣೆ ರೈಲುಮಾರ್ಗದಲ್ಲಿರುವ ಬಾಣಸಂದ್ರ ರೈಲುನಿಲ್ದಾಣದ ದಕ್ಷಿಣಕ್ಕೆ ಸು.13ಕಿಮೀ ದೂರದಲ್ಲಿದೆ. ಈ ನಗರ ಈಗ ವಿನೋಬನಗರ, ಸುಬ್ರಹ್ಮಣ್ಯ ನಗರ, ಗಾಂಧೀನಗರ ಮೊದಲಾದ ಬಡಾವಣೆಗಳಿಂದ ವಿಸ್ತಾರಗೊಂಡು ಬೆಳೆಯುತ್ತಿದೆ. ಜನಸಂಖ್ಯೆ 13,275.

ಊರಿನ ಉತ್ತರಕ್ಕೆ ಇರುವ ದೊಡ್ಡ ಕೆರೆ ಮೊದಲಿನಿಂದಲೂ ವ್ಯವಸಾಯಕ್ಕೆ ಮತ್ತು ಕುಡಿಯುವ ನೀರಿಗೆ ಆಧಾರವಾಗಿದೆ. ತುಮಕೂರಿನ ನೈಋತ್ಯಕ್ಕಿರುವ ಈ ಊರು ಒಂದು ವ್ಯಾಪಾರಕೇಂದ್ರವಾಗಿ ಅಭಿವೃದ್ಧಿಹೊಂದುತ್ತಿದ್ದು ಸುತ್ತಲ ಊರುಗಳಿಗೆ ಉತ್ತಮ ಸಂಪರ್ಕ ಪಡೆದಿದೆ. ವಿವಿಧ ನಾಗರಿಕ ಸೌಲಭ್ಯಗಳನ್ನು ಪಡೆದಿದೆ. ಈ ಊರಿನ ಒಂದು ಭಾಗಕ್ಕೆ ಅರಳೇಪೇಟೆ ಎಂಬ ಹೆಸರಿದ್ದು ತುರುವೇಕೆರೆ ಒಂದು ಕಾಲಕ್ಕೆ ಹತ್ತಿಯ ದೊಡ್ಡ ವ್ಯಾಪಾರಕೇಂದ್ರವಾಗಿತ್ತೆಂದು ಹೇಳಲಾಗಿದೆ.

ಹದಿಮೂರನೆಯ ಶತಮಾನದಲ್ಲಿ ಹೊಯ್ಸಳರ ಮೂರನೆಯ ನರಸಿಂಹನ ದಂಡನಾಯಕ ಸೋಮಣ್ಣ ಈ ಊರನ್ನು 1268ರಲ್ಲಿ ಸರ್ವಜ್ಞ ಶ್ರೀವಿಜಯ ನರಸಿಂಹಪುರ ಎಂಬ ಹೆಸರಿನಿಂದ ಬ್ರಾಹ್ಮಣರಿಗೆ ಅಗ್ರಹಾರವಾಗಿ ಕೊಟ್ಟನೆಂದು ಇಲ್ಲಿನ ಒಂದು ಶಾಸನದಿಂದ ತಿಳಿದುಬರುತ್ತದೆ. ತುರುವೇಕೆರೆ ಎಂಬ ಇಂದಿನ ಹೆಸರಿಗೆ ಊರಿನ ಉತ್ತರ ಭಾಗಕ್ಕಿರುವ ದೊಡ್ಡ ಕೆರೆಯೇ ಕಾರಣವೆಂದು ತಿಳಿದುಬರುತ್ತದೆ. ಹದಿನಾರನೆಯ ಶತಮಾನದಲ್ಲಿ ಹಾಗಲವಾಡಿಯ ಸಲನಾಯಕ ಎಂಬುವನು ಈ ಊರನ್ನು ವಶಪಡಿಸಿಕೊಂಡು ಅವನ ಸಹೋದರರಾದ ಚಿಕ್ಕನಾಯಕ ಮತ್ತು ಅಣ್ಣನಾಯಕ ಎಂಬುವರಿಗೆ ವಹಿಸಿದ. ಅವರು ಇಲ್ಲಿನ ಹೊರಕೋಟೆಯನ್ನು ಕಟ್ಟಿಸಿ ಕೆರೆಯನ್ನು ವಿಸ್ತರಿಸಿದರು. 1676ರಲ್ಲಿ ಈ ಊರು ಮೈಸೂರು ರಾಜವಂಶದ ಚಿಕ್ಕದೇವರಾಜನಿಗೆ ಸೇರಿತು. (ಕೆ.ಎಸ್.ಎನ್.)

ತುರುವೇಕೆರೆಯಲ್ಲಿ ಪ್ರಾಚೀನ ಕಾಲದ ಹಲವು ಅವಶೇಷಗಳಿವೆ. ಇಲ್ಲಿರುವ ಚನ್ನಕೇಶವ ಮತ್ತು ಮೂಲೇಶಂಕರ ದೇವಾಲಯಗಳು ಹೊಯ್ಸಳ ಕಾಲದವು. ಸೋಮನಾಥಪುರದ ಕೇಶವ ದೇವಾಲಯವನ್ನು ನಿರ್ಮಿಸಿದ ಸೋಮಣ್ಣ ದಂಡನಾಯಕನೇ ಇವುಗಳನ್ನು ಕಟ್ಟಿಸಿದ. ಚನ್ನಕೇಶವ ದೇವಾಲಯ ಪೂರ್ವಾಭಿಮುಖವಾಗಿದೆ. ಇದರಲ್ಲಿ ಗರ್ಭಗೃಹ, ಸುಕನಾಸಿ, ನವರಂಗ, ಮುಂದೆ ಮುಖಮಂಟಪ ಇವೆ. ಗರ್ಭಗೃಹದ ಮೇಲೆ ಹೆಚ್ಚು ಕೆತ್ತನೆಯಿಲ್ಲದ ಶಿಲಾಶಿಖರವಿದೆ. ಹೊರಭಿತ್ತಿ ಅರೆಗಂಬಗಳಿಂದ ಅಲಂಕೃತವಾಗಿದೆ. ಆದರೆ ಶಿಲ್ಪಗಳಿಲ್ಲ. ನವರಂಗ, ಸುಕನಾಸಿ ಭಾಗದಲ್ಲಿ ಆಳವಾದ ಶಿಲ್ಪಿತ ಭುವನೇಶ್ವರಿಗಳಿವೆ. ಸುಕನಾಸಿಯ ಬಾಗಿಲ ಇಕ್ಕೆಲದಲ್ಲಿ ಜಾಲಂಧ್ರಗಳನ್ನು ಕೆತ್ತಲಾಗಿದೆ. ಮೂಲೇಶಂಕರ ದೇವಾಲಯದ ವಿನ್ಯಾಸವೂ ಸುಮಾರು ಮೇಲಿನದರ ರೀತಿಯಿದೆ. ಆದರೆ ಪ್ರವೇಶದ್ವಾರ ಮತ್ತು ಮುಖ ಮಂಟಪಗಳು ದಕ್ಷಿಣಾಭಿಮುಖವಾಗಿವೆ. ಮೂಲ ಲಿಂಗ ಮಾತ್ರ ಪೂರ್ವಾಭಿಮುಖವಾಗಿಯೇ ಇದೆ. ಈ ದೇವಾಲಯದ ಶಿಖರದಲ್ಲಿ ಅನೇಕ ಚಿಕ್ಕ ಶಿಖರ ರೂಪುಗಳನ್ನು ಸಾಲಾಗಿ ಮೇಲೆ ಕಾಣುವಂತೆ ತೋರಿಸಲಾಗಿದೆ. ನವರಂಗದಲ್ಲಿ ಹೊಯ್ಸಳ ಕಾಲದ ಭೈರವ, ವೀರಭದ್ರ ಮತ್ತು ಸುಬ್ರಹ್ಮಣ್ಯ ಶಿಲ್ಪಗಳಿವೆ. ಹೊರಗಡೆ ಅಡಿಪಟ್ಟಿಕೆಗಳ ಮೇಲೆ ಸರೋಜ, ಜಕ್ಕಣ್ಣ, ಈಶ್ವರ ಎಂಬ ಶಿಲ್ಪಿಗಳ ಹೆಸರುಗಳಿವೆ. ಇವುಗಳಲ್ಲಿ ಜಕ್ಕಣ್ಣನ ಹೆಸರು ಕುತೂಹಲಕಾರಿಯಾಗಿದೆ. ಈ ಶಿಲ್ಪಿಗೂ ಐತಿಹ್ಯ ಪ್ರಸಿದ್ಧನಾದ ಜಕ್ಕಣಾಚಾರಿಗೂ ಸಂಬಂಧವಿದೆಯೇ ಎಂಬುದು ತಿಳಿಯದು.



ಮೂಲೇಶಂಕರ ದೇವಾಲಯ

ಗಂಗಾಧರೇಶ್ವರ ಮತ್ತು ಬೇಟೆರಾಯ ದೇವಾಲಯಗಳು ಇಲ್ಲಿನ ಇತರ ಮುಖ್ಯ ಗುಡಿಗಳು. ಗಂಗಾಧರೇಶ್ವರ ಗುಡಿ ದ್ರಾವಿಡ ಶೈಲಿಯ ಕಟ್ಟಡ. ಉತ್ತರಾಭಿಮುಖವಾಗಿರುವ ಈ ದೇವಾಲಯದಲ್ಲಿ ದೊಡ್ಡ ಪ್ರಾಕಾರ, ಶಿವ ಮತ್ತು ಪಾರ್ವತಿ ಗುಡಿಗಳಿವೆ. ದೇವಾಲಯದ ಮುಂದಿರುವ ಕಲ್ಲಿನ ದೀಪಸ್ತಂಭದ ಮೇಲೆ ಭಕ್ತದಂಪತಿಗಳ ವಿಗ್ರಹವಿದ್ದು, ಅದನ್ನು ಈ ದೇವಾಲಯವನ್ನು ರಚಿಸಿದ ಅಯ್ಯಣನಾಯಕ ಎಂಬ ಪಾಳೆಯಗಾರ ಮತ್ತು ಅವನ ಪತ್ನಿಯ ವಿಗ್ರಹ ಎಂದು ಹೇಳಲಾಗುತ್ತದೆ. ಪಾತಾಳಾಂಕಣದಲ್ಲಿರುವ ಒಂದು ಮಂಟಪದಲ್ಲಿ ಬೃಹತ್ ನಂದಿಯೊಂದಿದೆ. ಇದೊಂದು ಆಕರ್ಷಕ ಶಿಲ್ಪ. ಇಲ್ಲಿನ ಉತ್ಸವ ವಿಗ್ರಹದಲ್ಲಿ ಶಿವನ ಜೊತೆಗೆ ಪಾರ್ವತಿ ಮತ್ತು ದಾಕ್ಷಾಯಿಣಿ ವಿಗ್ರಹಗಳೂ ಇರುವುದು ಒಂದು ವಿಶೇಷ.

ಬೇಟೆರಾಯ ದೇವಾಲಯ ಊರಿನ ಮುಖ್ಯಗುಡಿ. ಪೂರ್ವಾಭಿಮುಖವಾಗಿರುವ ಈ ದೇವಾಲಯದಲ್ಲಿ ಗರ್ಭಗುಡಿ, ಸುಕನಾಸಿ, ನವರಂಗ, ಹಜಾರ ಇವೆ. ನವರಂಗದ ಉತ್ತರಕ್ಕೆ ಒಂದು ಅರ್ಧಮಂಟಪ ಮತ್ತು ದಕ್ಷಿಣದೆಡೆಗೆ ಒಂದು ಕೋಣೆ ಇವೆ. ಈ ಮೂಲ ಘಟಕದ ಮುಂದೆ ಸ್ವಲ್ಪ ಕೆಳಮಟ್ಟದ ಪಾತಾಳಾಂಕಣವಿದೆ. ಸುತ್ತ ಪ್ರಾಕಾರವಿದ್ದು ಪೂರ್ವದೆಡೆ ಎತ್ತರದ ಮಹಾದ್ವಾರವಿದೆ. ದೇವಾಲಯ ದ್ರಾವಿಡಶೈಲಿಯ ಸಾಮಾನ್ಯ ವಾಸ್ತುಕೃತಿ. ಮಹಾದ್ವಾರದ ಒಳಕಂಬದ ಮೇಲೆ ಇರುವ ಒಂದು ಭಕ್ತವಿಗ್ರಹವನ್ನು ಈ ದೇವಾಲಯವನ್ನು ಕಟ್ಟಿಸಿದ ಚೌಡಪ್ಪಯ್ಯನದು (ವರದ ಬೇಟೆರಾಯ) ಎಂದು ತೋರಿಸಲಾಗುತ್ತದೆ. ಈ ದೇವಾಲಯದಲ್ಲಿ ಪ್ರತಿ ಫಾಲ್ಗುಣ ಮಾಸದಲ್ಲಿ ಜಾತ್ರೆ ಜರುಗುತ್ತದೆ. *

**ತುಳು :** ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ ಮುಖ್ಯ ಭಾಷೆಗಳಲ್ಲಿ ಒಂದು. ಕರ್ನಾಟಕದ ಪಶ್ಚಿಮ ಕರಾವಳಿ ತುಳು ದೇಶ. ಇಲ್ಲಿನ ಜನರು ತುಳುವರು. ಇವರದು ತುಳು ಸಂಸ್ಕೃತಿ. ಇವರು ಮಾತಾಡುವ ಭಾಷೆ ತುಳು.

ತುಳು ಭಾಷೆಯನ್ನಾಡುವವರು ಈಗ ದಕ್ಷಿಣ ಕನ್ನಡ ಜಿಲ್ಲೆಯ ಉತ್ತರ ಭಾಗದ ಕಲ್ಯಾಣಪುರ ಹೊಳೆಯಿಂದ ದಕ್ಷಿಣದಲ್ಲಿ ಕೇರಳದ ಕಾಸರಗೋಡು ಪ್ರದೇಶದ ಚಂದ್ರಗಿರಿ ನದಿಯ ತನಕವಿರುವ ಪ್ರದೇಶದಲ್ಲಿ ವಾಸಿಸುತ್ತಾರೆ. ಪಶ್ಚಿಮದಲ್ಲಿ ಅರಬ್ಬೀಸಮುದ್ರ ಹಾಗೂ ಪೂರ್ವದಲ್ಲಿ ಪಶ್ಚಿಮ ಘಟ್ಟ ಇದರ ಗಡಿಗಳು. ಹಿಂದೆ ತುಳುನಾಡಿನ ಗಡಿ ಇನ್ನೂ ವಿಸ್ತಾರವಾಗಿದ್ದು ಉತ್ತರದಲ್ಲಿ ಉತ್ತರ ಕನ್ನಡದ ಗೋಕರ್ಣ ಗೇರಸೊಪ್ಪೆವರೆಗೂ ದಕ್ಷಿಣದಲ್ಲಿ ಚಂದ್ರಗಿರಿ ಹೊಳೆಗಿಂತಲೂ ದಕ್ಷಿಣಕ್ಕೆ ಶಿರ್ಕರಪುರದವರೆಗೂ ತುಳುನಾಡು ಹರಡಿತ್ತು ಎಂಬುದು ಇತಿಹಾಸಕಾರರ ಅಭಿಪ್ರಾಯ. ಈ ಪ್ರದೇಶದಲ್ಲಿ ತುಳು ಮಾತ್ರವಲ್ಲದೆ ಕನ್ನಡ, ಮಲಯಾಳಂ, ಕೊಂಕಣಿ, ಮರಾಠಿ, ಬ್ಯಾರಿ (ಮಾಪಿಳ್ಳ) ಭಾಷೆಗಳನ್ನಾಡುವ ಜನರೂ ಇದ್ದಾರೆ. ಆದರೆ ತುಳು ಮಾತಾಡುವವರ ಸಂಖ್ಯೆ ಅಧಿಕವಾಗಿದ್ದು ಜನಸಾಮಾನ್ಯರ ಸಂಪರ್ಕ ಭಾಷೆಯಾಗಿ ತುಳುವೇ ಹೆಚ್ಚು ಪ್ರಚಾರದಲ್ಲಿದೆ. ರಾಜ್ಯ ಭಾಷೆ ಕನ್ನಡವಾದುದರಿಂದ ವಿದ್ಯಾಭ್ಯಾಸದ ಮಾಧ್ಯಮ ಕನ್ನಡ ಭಾಷೆಯಾಗಿದೆ.

ತುಳು ಶಬ್ದದ ಅರ್ಥವೇನೆಂಬುದರ ಬಗ್ಗೆ ವಿದ್ವಾಂಸರಲ್ಲಿ ಮತಭೇದವಿದೆ. ತೂಳು 'ಯುದ್ಧ ಮಾಡು' ಎಂಬ ಮೂಲದಿಂದ ಬಂದ ಈ ಶಬ್ದ ತುಳುವರ ಶೌರ್ಯ ಪರಾಕ್ರಮಗಳನ್ನು ಸೂಚಿಸುತ್ತದೆ ಎಂಬ ಅಭಿಪ್ರಾಯವಿದೆ. ಕರಾವಳಿಯ ತುಳುವ ಹಲಸಿನಕಾಯಿಯ ತೊಳೆಯಂತೆ ತುಳುವರು ಮೃದು ಸ್ವಭಾವದವರಾದುದರಿಂದ ಅವರಿಗೆ ಈ ಹೆಸರು ಬಂತು ಎಂಬ ಅಭಿಪ್ರಾಯವಿದೆ. ತುರುಗಳನ್ನು, ಅಂದರೆ ಜಾನುವಾರುಗಳನ್ನು ಸಾಕುವವರಾದುದರಿಂದ ಈ ಹೆಸರು ಬಂತು ಎಂದು ಇನ್ನೊಂದು ಅಭಿಪ್ರಾಯ. ತುಳು ಎಂಬುದು ಜಲವಾಚಕ ಪದವಾದುದರಿಂದ ಜಲಾವೃತವಾದ ಈ ಪ್ರದೇಶ ತುಳು ಪ್ರದೇಶವೆಂದು ಪ್ರಸಿದ್ಧಿ ಪಡೆಯಿತು ಎಂಬುದು ಮತ್ತೆ ಕೆಲವರ ವಾದ.

ತುಳುನಾಡಿನ ಮೂಲದ ಬಗೆಗೆ ಹಲವಾರು ಐತಿಹ್ಯಗಳಿವೆ. ಒಂದು ಜನಪದ ನಂಬಿಕೆಯಂತೆ ಮೊದಲು ತುಳುರಾಜ್ಯವನ್ನು ನಂದೂರಾಯ ಎಂಬ ಬಿರುದು ಪಡೆದ ಹುಬಶಿಕ ಎಂಬ ಹರಿಜನ ವರ್ಗದ ಅರಸ ಆಳುತ್ತಿದ್ದನಂತೆ. ಅನಂತರ ಇತರ ವರ್ಗದ ಜನರು ಇಲ್ಲಿಗೆ ಬಂದು ಆತನನ್ನು ಸೋಲಿಸಿ ತಮ್ಮ ಆಧಿಪತ್ಯವನ್ನು ಸ್ಥಾಪಿಸಿದರಂತೆ. ಭೂತಾಳ ಪಾಂಡ್ಯನೆಂಬ ಅರಸ ಇಲ್ಲಿ ಅಳಿಯಸಂತಾನ ಕಟ್ಟುಪಾಡುಗಳನ್ನು ಪ್ರಚಾರಕ್ಕೆ ತಂದ ಎಂಬ ನಂಬಿಕೆಯೂ ಇದೆ. ಈ ಭೂತಾಳ ಪಾಂಡ್ಯನ ಕಾಲ ಕ್ರಿ.ಪೂ.ಒಂದನೆಯ ಶತಮಾನವೆಂದೂ ಆತ ದಕ್ಷಿಣದ ಪಾಂಡ್ಯ ವಂಶಕ್ಕೆ ಸೇರಿದವನಿರಬೇಕೆಂದೂ ಇತಿಹಾಸಕಾರರು ಊಹಿಸುತ್ತಾರೆ. ಆತನ ಸೋದರಮಾವ ದೇವಪಾಂಡ್ಯ ದೊಡ್ಡ ಹಡಗೊಂದನ್ನು ಕಟ್ಟಿಸಿ ಅದನ್ನು ಸಮುದ್ರಕ್ಕೆ ಇಳಿಸುವ ಮುನ್ನ ಕುಂಡೋದರ ಎಂಬ ಭೂತಕ್ಕೆ ನರಬಲಿ ಕೊಡಬೇಕಾಗಿ ಬಂದ ಸಂದರ್ಭದಲ್ಲಿ ಆತನ ಪತ್ನಿ ತನ್ನ ಮಕ್ಕಳಲ್ಲಿ ಒಬ್ಬನನ್ನೂ ಬಿಟ್ಟು ಕೊಡಲಿಲ್ಲ. ಆಗ ಆತನ ತಂಗಿ ತನ್ನ ಒಬ್ಬನೇ ಮಗನಾಗಿದ್ದವನನ್ನು ಬಿಟ್ಟುಕೊಟ್ಟಳು. ಈ ತ್ಯಾಗಕ್ಕೆ ಮೆಚ್ಚಿದ ಭೂತ ಆತನ ಬಲಿ ತೆಗೆದುಕೊಳ್ಳದೆ ಇನ್ನು ಮುಂದೆ ಸಹೋದರಿಯ ಮಕ್ಕಳಿಗೆ ಆಸ್ತಿಯ ಅಧಿಕಾರ ಸಿಕ್ಕಲಿ ಎಂದು ಕಟ್ಟಳೆ ಮಾಡಿತಂತೆ. ಈ ಕಥೆ ತುಳುನಾಡಿನಲ್ಲಿ ಅಳಿಯಸಂತಾನ ಕಟ್ಟಿನ ಉಗಮ ಹಾಗೂ ಭೂತಾರಾಧನೆಯ ಪ್ರಾಚೀನ ಸಂಪ್ರದಾಯದ ಬಗ್ಗೆ ಬೆಳಕು ಬೀರುತ್ತದೆ. ತುಳುನಾಡಿನ ಹೆಚ್ಚಿನ ಮುಖ್ಯ ವರ್ಗದವರು - ಅಂದರೆ ಬಂಟರು, ಬಿಲ್ಲವರು, ಬೆಸ್ತರು, ಕುಂಬಾರರು

ಮುಂತಾದವರು ಈ ಅಳಿಯ ಕಟ್ಟನ್ನು ಅನುಸರಿಸುತ್ತಾರೆ. ಸ್ವಾತಂತ್ರ್ಯ ಬಂದ ಅನಂತರ ಆಸ್ತಿ ಸಂಪತ್ತುಗಳ ಒಡೆತನಕ್ಕೆ ಸಮಾನ ಕಾನೂನು ಬಂದರೂ ಇತರ ಸಾಮಾಜಿಕ ಸಾಂಸ್ಕೃತಿಕ ಆಚರಣೆಗಳಲ್ಲಿ ಇಲ್ಲಿಯ ಜನ ಅಳಿಯಸಂತಾನ ಕಟ್ಟಿನ ಸಂಪ್ರದಾಯಗಳನ್ನೇ ಅನುಸರಿಸುತ್ತಾರೆ. ಸಾಮಾಜಿಕ ಧಾರ್ಮಿಕ ಆಚರಣೆಗಳಲ್ಲಿ ಸೋದರ ಮಾವನಿಗೆ ಬಹಳ ಮುಖ್ಯವಾದ ಸ್ಥಾನ ಹಾಗೂ ಹೊಣೆಗಾರಿಕೆಯಿರುತ್ತದೆ.

ಸು.2ನೆಯ ಶತಮಾನದಲ್ಲಿ ರಚಿತವಾದ ತಮಿಳಿನ ಸಂಗಂ ಸಾಹಿತ್ಯದಲ್ಲಿ ತುಳುನಾಡಿನ ವನಗಳಲ್ಲಿ ಗರಿ ಬಿಚ್ಚಿ ಕುಣಿಯುವ, ಸುಂದರ ಕಣ್ಣುಗಳ ನವಿಲುಗಳನ್ನು ನೋಡುವುದು ಕಣ್ಣಿಗೆ ಮಹದಾನಂದ ಎಂಬ ವರ್ಣನೆಯಿದೆ. ತುಳುನಾಡಿನ ಬಗ್ಗೆ ಸಿಗುವ ಲಿಖಿತ ದಾಖಲೆಗಳಲ್ಲಿ ಇದೇ ಮೊದಲನೆಯದು ಎನ್ನಬಹುದು. ಪಲ್ಲವ ಎರಡನೆಯ ನಂದಿವರ್ಮನ ಶಾಸನವೊಂದರಲ್ಲಿ (ಸು.8ನೆಯ ಶತಮಾನ) ಆ ರಾಜನ ಆಸ್ಥಾನದಲ್ಲಿ ಉದ್ಯೋಗ ಪಡೆಯಲು ತುಳುವರೂ ಸೇರಿದಂತೆ ಬೇರೆ ಬೇರೆ ಪ್ರದೇಶದ ಜನರು ಬಂದು ಕಾಯುತ್ತಿದ್ದರು ಎಂಬ ಉಲ್ಲೇಖವಿದೆ. 14ನೆಯ ಶತಮಾನದಲ್ಲಿ ತಮಿಳು ವ್ಯಾಕರಣ ಗ್ರಂಥಕ್ಕೆ ಬರೆದ ವ್ಯಾಖ್ಯಾನದಲ್ಲಿ ತಮಿಳು ಪ್ರಾಂತ್ಯ ಕೊಡಗು, ವಡಗು, ತುಳುವ, ಕನ್ನಡ ಪ್ರದೇಶಗಳಿಂದ ಆವೃತವಾಗಿದೆ ಎಂದು ಬರೆದಿದೆ. ತಮಿಳು ಭಾಷೆಗೆ ಸೇರಿದ ಇತರ ಭಾಷಾ ಪದಗಳ ಬಗ್ಗೆ ಚರ್ಚಿಸುವಾಗ ತುಳುವಿನ ಕುಕ್ಕು (ಮಾವಿನ ಹಣ್ಣು) ಬಗ್ಗೆಯೂ ಆ ಗ್ರಂಥದಲ್ಲಿ ಉಲ್ಲೇಖ ಕಂಡುಬರುತ್ತದೆ.

ತಮಿಳು, ಮಲಯಾಳಂ, ಕನ್ನಡ ಭಾಷೆಗಳ ಜನಪದ ಸಾಹಿತ್ಯದಲ್ಲಿಯೂ ತುಳು ದೇಶ, ತುಳು ಜನ, ತುಳು ಭಾಷೆ ಮುಂತಾದವುಗಳ ಬಗ್ಗೆ ವಿವರಗಳು ದೊರೆಯುತ್ತವೆ. ಮಲಯಾಳಂ ಜನಪದ ಸಾಹಿತ್ಯದಲ್ಲಿ ತುಳುವರ ಯುದ್ಧ ಕೌಶಲದ ಬಗ್ಗೆ ವರ್ಣನೆಯಿದ್ದು ಕಳರಿಪಯಿತ್ತು ಎಂಬ ಯುದ್ಧ ವಿದ್ಯೆಯನ್ನು ಕಲಿಯಲು ಯೋಧರು ಕೇರಳದಿಂದ ತುಳುನಾಡಿಗೆ ಬರುತ್ತಿದ್ದರು ಎಂದು ತಿಳಿದುಬರುತ್ತದೆ.

ಸು.2ನೆಯ ಶತಮಾನದಿಂದ ವಿಜಯನಗರ ರಾಜ್ಯ ಸ್ಥಾಪನೆಯಾಗುವವರೆಗೆ ಸುಮಾರು ಹನ್ನೆರಡು ಶತಮಾನಗಳ ಕಾಲ ಆಳುಪ ವಂಶದ ಅರಸರು ತುಳುನಾಡನ್ನು ಆಳುತ್ತಿದ್ದರು. ವಿಜಯನಗರದ ಅರಸರ ಕಾಲದಲ್ಲಿ ಅವರ ಪ್ರತಿನಿಧಿಗಳು ಜಿಲ್ಲೆಯ ಆಡಳಿತ ನಡೆಸುತ್ತಿದ್ದರು. ಮುಂದಿನ ಮೂರು ಶತಮಾನಗಳ ಕಾಲದಲ್ಲಿ ಕೆಳದಿ ಅರಸರೂ ಇಲ್ಲಿನ ಭೈರ, ಅಜಿಲ, ಚೌಟ ಮುಂತಾದ ಚಿಕ್ಕಪುಟ್ಟ ರಾಜಮನೆತನದವರು ಇಲ್ಲಿ ಮೆರೆದರು. ಹತ್ತೊಂಬತ್ತನೆಯ ಶತಮಾನದಲ್ಲಿ ಈ ಪ್ರದೇಶ ಬ್ರಿಟಿಷರ ಆಡಳಿತಕ್ಕೊಳಗಾಯಿತು.

ಭಾಷಾವೈಜ್ಞಾನಿಕವಾಗಿ ಪರಿಶೀಲನೆ ಮಾಡುವಾಗ ತುಳು ಭಾಷೆ ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ ಮುಖ್ಯ ಭಾಷೆಗಳಲ್ಲೊಂದು ಎಂದು ತಿಳಿಯುತ್ತದೆ. ತಮಿಳು, ತೆಲುಗು, ಕನ್ನಡ ಮಲಯಾಳಂದಷ್ಟು ವಿಪುಲವಾದ ಸಾಹಿತ್ಯಸೃಷ್ಟಿ ಆಗದಿದ್ದರೂ ತುಳು ಚೆನ್ನಾಗಿ ಬೆಳೆದ, ವಿಕಾಸವಾದ ಭಾಷೆ ಎಂದು ಈಗ್ಗೆ ನೂರ ಐವತ್ತು ವರ್ಷಕ್ಕೆ ಹಿಂದೆಯೇ ಭಾಷಾತಜ್ಞರು ಅಭಿಪ್ರಾಯಪಟ್ಟಿದ್ದಾರೆ.

ತುಳು ಭಾಷೆಯ ಪ್ರಾಚೀನತೆಯನ್ನು ವಿದ್ವಾಂಸರು ಕ್ರಿ.ಪೂ.6ನೆಯ ಶತಮಾನದಷ್ಟು ಹಿಂದಕ್ಕೆ ಕೊಂಡೊಯ್ಯುವ ಪ್ರಯತ್ನ ಮಾಡಿದ್ದಾರೆ. ಕ್ರಿಸ್ತಶಕ ಒಂದನೆಯ ಶತಮಾನದಲ್ಲಿ ಬರೆದ ಒಂದು ಗ್ರೀಕ್ ನಾಟಕದಲ್ಲಿ ಗ್ರೀಸಿನ ಒಂದು ಹಡಗು ಇಲ್ಲಿನ ಸಮುದ್ರತೀರಕ್ಕೆ ಬಂದಾಗ ಅದರಲ್ಲಿನ ಹುಡುಗಿಯೊಬ್ಬಳನ್ನು ಇಲ್ಲಿನ ವೀರರು ಅಪಹರಿಸುವ ಕಥೆಯಿದೆ. ಆಕೆಯ ಸಹಚರರು ಇಲ್ಲಿನವರಿಗೆ ಶರಾಬು ಕುಡಿಸಿ ಅವರು ಪಾನಮತ್ತರಾಗಿದ್ದಾಗ ಆಕೆಯನ್ನು ಬಿಡಿಸಿಕೊಂಡು ಹೋಗುವ ಘಟನೆ ಅದರಲ್ಲಿ ವರ್ಣಿತವಾಗಿದೆ. ನಾಟಕದಲ್ಲಿ ಇಲ್ಲಿನ ಜನರು ಇಲ್ಲಿನ ಭಾಷೆಯಲ್ಲಿಯೇ ಮಾತಾಡುತ್ತಾರೆ, ಆ ಸಂಭಾಷಣೆಗಳಲ್ಲಿ ಸುಮಾರು ನೂರಐವತ್ತು ಶಬ್ದಗಳು ಬರುತ್ತವೆ, ಅವೆಲ್ಲ ತುಳು ಶಬ್ದಗಳು ಎಂಬುದನ್ನು ಪಿ.ಎಸ್.ರೈ ಎಂಬುವವರು ತೋರಿಸಿಕೊಟ್ಟಿದ್ದಾರೆ. ಸುಮಾರು ಎರಡು ಸಾವಿರ ವರ್ಷಗಳ ಹಿಂದಿನ ತುಳು ರೂಪಗಳು ನಮಗೆ ಹೀಗೆ ದೊರಕುತ್ತವೆ.

ಆದರೆ ಮುಂದೆ ತಮಿಳು, ಕನ್ನಡಗಳಲ್ಲಿ ಸಾಹಿತ್ಯ ಸೃಷ್ಟಿಯಾದ ಕಾಲದಲ್ಲಿ ತುಳುವಿನಲ್ಲಿ ಹೆಚ್ಚು ಸಾಹಿತ್ಯ ಗ್ರಂಥಗಳು ಮೂಡಿ ಬರಲಿಲ್ಲ. ತುಳು ಅರಸರು ಕನ್ನಡ ರಾಜರ ಅಧೀನದಲ್ಲಿದ್ದುದರಿಂದ ತುಳುವಿನಲ್ಲಿ ಸಾಹಿತ್ಯರಚನೆಗೆ ಪ್ರೋತ್ಸಾಹ ದೊರಕದೆ ಹೋಗಿರಬಹುದಾದ ಸಾಧ್ಯತೆಯಿದೆ. ಆದರೆ ತುಳುವಿನಲ್ಲಿ ಜನಪದ ಸಾಹಿತ್ಯ ವಿಪುಲವಾಗಿದೆ. ಪಾಡ್ದನ ಅಥವಾ ಪಾರ್ತನ ಎಂದು ಕರೆಯುವ ಈ ಸಾಹಿತ್ಯವನ್ನು ಧಾರ್ಮಿಕ ಹಾಗೂ ಸಾಮಾಜಿಕ ಎಂಬುದಾಗಿ ವಿಂಗಡಿಸಬಹುದು. ಧಾರ್ಮಿಕ ಸಾಹಿತ್ಯಕೃತಿಗಳು ಭೂತಗಳ ಪುರಾಣಗಳಾಗಿವೆ. ಈ ಭೂತಗಳನ್ನು ಶಿವಗಣಗಳು, ಮಾತೃದೇವತೆಗಳು, ಪ್ರಾಣಿಗಳ ಅಂತರ್ಯಾಮಿ ಶಕ್ತಿಗಳು, ಸತ್ತು ದೈವತ್ವಕ್ಕೇರಿದ ವೀರಪುರುಷರು ಹಾಗೂ ವೀರ ವನಿತೆಯರು ಮುಂತಾಗಿ ವರ್ಗೀಕರಿಸಬಹುದು. ಕೋಟಿ ಚೆನ್ನಯ, ಸಿರಿ, ಕೋಡಡಬ್ಬು, ಕಲ್ಕುಡ ಕಲ್ಲುರ್ಟಿ, ಕೊರಗ, ತನಿಯ ಮುಂತಾದವರು ಸಾಂಸ್ಕೃತಿಕ ವೀರರಾಗಿ ಹೋರಾಡಿ ಸತ್ತ ಮೇಲೆ ದೈವಗಳಾದವರು. ಪಂಜುರ್ಲಿ, ಪಿಲಿ ಚಾಮುಂಡಿ, ನಂದಿಗೋಣ ಮುಂತಾದವರು ಪ್ರಾಣಿಗಳ ಅಂತರ್ಯಾಮಿ ಶಕ್ತಿಗಳು. ಉಳ್ಳಾಳ್ತಿ, ಭಗವತಿ, ಪೂರಿಯಮ್ಮ ಮುಂತಾದವರು ಮಾತೃ ದೇವತೆಯ ಅವತಾರಗಳು. ವೀರಭದ್ರ, ಜುಮಾದಿ ಮುಂತಾದವರು ಶಿವನ ಅನುಚರರು. ಈ ಎಲ್ಲ ದೈವಗಳ ಅಥವಾ ಭೂತಗಳ ಆರಾಧನೆ ವಿಜೃಂಭಣೆಯಿಂದ ನಡೆಯುತ್ತದೆ (ನೋಡಿ: ಭೂತಾರಾಧನೆ).

ಭೂತ ನರ್ತಕರ ಹಾಗೂ ನಾಗ ನರ್ತಕರ ಕುಣಿತ ಮಾತ್ರ ವಲ್ಲದೆ ಕಲಾವಿದರು ಮನೆಮನೆಗೆ ಹೋಗಿ ಮಾಡುವ ಆಟಿಕಳಂಜ, ಮಾದಿರ, ಮಾಂಕಾಳಿ ಕುಣಿತ, ಜೆನ್ನು ನಲಿಕೆ, ಸಿದ್ದವೇಷ, ಪಿಲಿ ಪಂಜಿ ಕುಣಿತ, ಮರುಸೆಲ್ ಮುಂತಾದ ಹಲವಾರು ಜನಪದ ಕುಣಿತಗಳೂ ಪರಿಶಿಷ್ಟವರ್ಗದ ಜನರು ಮಾಡುವ ದುಡಿ ಕುಣಿತ, ಕೋಲು ಕುಣಿತ ಮುಂತಾದವುಗಳೂ ಇಲ್ಲಿ ಕಾಣಸಿಗುತ್ತವೆ. ಕಂಬಳ (ನೋಡಿ) ಕೆಸರು ಗದ್ದೆಯಲ್ಲಿ ಕೋಣಗಳನ್ನು ಓಡಿಸುವ ಸ್ಪರ್ಧೆ. ಕೋಳಿ ಅಂಕ (ನೋಡಿ) ಕೋಳಿಗಳ ಕಾಳಗ. ಇವು ತುಳುವರ ವಿಶಿಷ್ಟ ಮನರಂಜನ ಕಾರ್ಯಕ್ರಮಗಳು. ಕರಾವಳಿಯ ಯಕ್ಷಗಾನ ಬಯಲಾಟವೂ ಒಂದು ಪ್ರಸಿದ್ಧ ಜನಪದ ರಂಗಭೂಮಿಯಾಗಿ ಬೆಳೆದು ಕರ್ನಾಟಕದ ಹೊರಗೂ ದೇಶದ ಹೊರಗೂ ಸಂಚಾರ ಮಾಡಿ ಜಯಭೇರಿ ಬಾರಿಸಿದೆ. ಇದರಲ್ಲಿ ತುಳು ಪ್ರಸಂಗಗಳೂ ಕನ್ನಡ ಪ್ರಸಂಗಗಳೂ ಇವೆ (ನೋಡಿ: ಯಕ್ಷಗಾನ).

ತುಳು ಭಾಷೆಗೆ ಲಿಪಿಯಿಲ್ಲ ಎಂಬ ಭಾವನೆ ಕೆಲವು ಕಾಲ ಜನರಲ್ಲಿತ್ತು. ಈಗ ಕನ್ನಡ ಲಿಪಿಯನ್ನೇ ಬಳಸಿದರೂ ಹಿಂದೆ ತುಳುವಿಗೊಂದು ಪ್ರತ್ಯೇಕ ಲಿಪಿಯಿತ್ತು. ದಕ್ಷಿಣ ಕನ್ನಡದ ಬ್ರಾಹ್ಮಣರು ಶಾಸ್ತ್ರಾಭ್ಯಾಸಕ್ಕೆಂದು ಕೇರಳಕ್ಕೆ ಹೋಗುತ್ತಿದ್ದಾಗ ಅವರೂ ಕೇರಳದ ನಂಬೂದಿರಿಗಳೂ ಸೇರಿ ಸಂಸ್ಕೃತ ಬರೆಯಲಿಕ್ಕಾಗಿ ಗ್ರಂಥ' ಲಿಪಿಯ ಆಧಾರದ ಮೇಲೆ ಹೊಸತೊಂದು ಲಿಪಿಯನ್ನು ರೂಢಿಸಿಕೊಂಡರು. ಅದಕ್ಕೆ ತುಳು-ಮಲಯಾಳ ಲಿಪಿ ಎಂದು ಹೆಸರಿಟ್ಟರು. ಆಮೇಲೆ ಆ ಲಿಪಿಯ ಒಂದು ಪ್ರಭೇದದಲ್ಲಿ ಸಂಸ್ಕೃತ ಮಂತ್ರಗಳನ್ನು ಬರೆಯುವುದರ ಜೊತೆಗೆ ಮಲಯಾಳ ಸಾಹಿತ್ಯವನ್ನೂ ಬರೆಯತೊಡಗಿದರು. ಇನ್ನೊಂದು ಪ್ರಭೇದದಲ್ಲಿ ತುಳುವರು ಸಂಸ್ಕೃತ ಮಂತ್ರಗಳನ್ನೂ ತುಳು ಸಾಹಿತ್ಯವನ್ನೂ ಬರೆಯುತೊಡಗಿದರು. ಈಗ ಇಲ್ಲಿನ ಬ್ರಾಹ್ಮಣರು ಈ ತುಳು ಲಿಪಿಯನ್ನು ಸಂಸ್ಕೃತ ಮಂತ್ರ ಬರೆಯಲಿಕ್ಕಾಗಿ ಮಾತ್ರ ಉಪ ಯೋಗಿಸುತ್ತಾರೆ. ಆದರೆ ಎರಡು ಮೂರು ಶತಮಾನಗಳ ಹಿಂದೆ ಇದರ ಮೂಲಕ ಸಾಹಿತ್ಯ ರಚನೆಯನ್ನೂ ಮಾಡುತ್ತಿದ್ದರು ಎಂಬುದು ಇತ್ತೀಚೆಗೆ ಬೆಳಕಿಗೆ ಬಂದಿದೆ. ತಾಡವಾಲೆಯಲ್ಲಿ ಬರೆದ ನಾಲ್ಕು ಗ್ರಂಥಗಳು ಈ ಲಿಪಿಯಲ್ಲಿ ಸಿಕ್ಕಿವೆ. ಇವು ಹದಿನಾಲ್ಕು ಹಾಗೂ ಹದಿನೇಳನೆಯ ಶತಮಾನದಲ್ಲಿ ರಚನೆಯಾದುವು ಎಂಬುದು ಅವುಗಳ ಲೇಖಕರು ಬರೆದ ದಿನಾಂಕಗಳ ಆಧಾರದಿಂದಲೂ ಅವರು ಉಪಯೋಗಿಸಿದ ಭಾಷೆಯಿಂದಲೂ ತಿಳಿದುಬರುತ್ತದೆ.

'ಶ್ರೀ ಭಾಗವತೊ' ಎಂಬುದು ಭಾಗವತದ ಕಥೆಯನ್ನು ತುಳುವಿನಲ್ಲಿ ಬರೆದ ಮಹಾಕಾವ್ಯ. ತುಳು ಲಿಪಿಯಲ್ಲಿ ತಾಡವಾಲೆಗಳಲ್ಲಿ ಬರೆದ ಎರಡು ಸಾವಿರ ಪದ್ಯಗಳುಳ್ಳ ಈ ಮಹಾಕಾವ್ಯವನ್ನು ಈಗ ಕನ್ನಡ ಲಿಪಿಯಲ್ಲಿ

ಬರೆದು ಮುದ್ರಿಸಿದೆ. ಕಾಸರಗೋಡು ಪ್ರದೇಶದಲ್ಲಿ ಸಿಕ್ಕಿದ ಈ ಹಸ್ತಪ್ರತಿಯನ್ನು ವೆಂಕಟರಾಜ ಪುಣಿಂಚತ್ತಾಯರು ಸಂಪಾದಿಸಿದ್ದಾರೆ. ಇವರ ಸಂಪಾದಕತ್ವದಲ್ಲಿ ಪ್ರಕಟವಾದ ತುಳು ಲಿಪಿಯಲ್ಲಿ ಸಿಕ್ಕಿದ ಇತರ ಗ್ರಂಥಗಳೆಂದರೆ 'ಕಾವೇರಿ', 'ತುಳುದೇವಿ ಮಹಾತ್ಮೆ' ಹಾಗೂ ಮಹಾಭಾರತೋ. ಕಾವೇರಿ, ಪದ್ಯರೂಪದಲ್ಲಿದ್ದರೆ, ದೇವಿ ಮಹಾತ್ಮೆ ಗದ್ಯದಲ್ಲಿದೆ. ಮಹಾಭಾರತೊ ಎಂಬುದು ಮತ್ತೊಂದು ಮಹಾಕಾವ್ಯ. ಈ ಸಾಹಿತ್ಯ ಕೃತಿಗಳನ್ನು ಮಾತ್ರವಲ್ಲದೆ ಕೆಲವು ಶಿಲಾ ಶಾಸನಗಳಲ್ಲೂ ಈ ಲಿಪಿಯಲ್ಲಿ ಬರೆಯಲಾಗಿದೆ. ಹದಿನೈದನೆಯ ಶತಮಾನದಲ್ಲಿ ಕಾಸರಗೋಡಿನ ಅನಂತಪುರದಲ್ಲಿ ಕೆತ್ತಿಸಿದ ಶಿಲಾಶಾಸನ ಈ ತುಳು ಲಿಪಿಯಲ್ಲಿದೆ. ಅಲ್ಲದೆ ಕನ್ನಡ ಭಾಷೆಯ ವಾಕ್ಯಗಳನ್ನು ತುಳು ಲಿಪಿಯಲ್ಲಿ ಕೆತ್ತಿಸಿದ ಶಾಸನಗಳೂ ದೊರೆತಿವೆ.

ಹತ್ತೊಂಬತ್ತನೆಯ ಶತಮಾನದ ಮಧ್ಯದಲ್ಲಿ (ಸು.1834) ಕ್ರಿಶ್ಚಿಯನ್ ಮಿಶನರಿಗಳು ದಕ್ಷಿಣ ಕನ್ನಡ ಜಿಲ್ಲೆಗೆ ಬಂದು ಬೈಬಲ್ ಗ್ರಂಥಗಳನ್ನು ತುಳುವಿಗೆ ಅನುವಾದ ಮಾಡಿ ಅವುಗಳನ್ನು ಕನ್ನಡ ಲಿಪಿಯಲ್ಲಿ ಮುದ್ರಿಸಲಿಕ್ಕೆ ಪ್ರಾರಂಭಿಸಿದರು. ಅಂದಿನಿಂದ ತುಳು ಸಾಹಿತ್ಯ ಗ್ರಂಥಗಳು ಕನ್ನಡ ಲಿಪಿಯಲ್ಲಿಯೇ ಪ್ರಕಟವಾಗುವ ಸಂಪ್ರದಾಯ ಬೆಳೆಯತೊಡಗಿತು. ಸ್ವಾತಂತ್ರ್ಯ ಚಳವಳಿಯ ಕಾಲದಲ್ಲಿ ಅಂದರೆ ಸುಮಾರು 1925-45ರ ದಶಕಗಳಲ್ಲಿ ಎಸ್.ಯು.ಪಣಿಯಾಡಿ ಎಂಬುವರ ನೇತೃತ್ವದಲ್ಲಿ ಅನೇಕ ತುಳು ಪುಸ್ತಕಗಳು ಪ್ರಕಟವಾದುವು. ಎನ್.ಎಸ್.ಕಿಲ್ಲೆ, ಶೀನಪ್ಪ ಹೆಗ್ಗಡೆ, ಸತ್ಯಮಿತ್ರ ಬಂಗೇರ, ಪಣಿಯಾಡಿ, ಎಂ.ವಿ. ಹೆಗ್ಗಡೆ, ತಿಂಗಳಾಯ, ನರಸಿಂಗರಾವ್, ಹೊನ್ನಯ್ಯ ಶೆಟ್ಟಿ ಮೊದಲಾದ ಹಲವರು ತುಳು ಸಾಹಿತ್ಯವನ್ನು ಬೆಳೆಸಿದರು.

ಸ್ವಾತಂತ್ರ್ಯಾನಂತರ ತುಳು ಸಾಹಿತ್ಯ ವಿಪುಲವಾಗಿ ಬೆಳೆಯತೊಡಗಿತು. ಮಂದಾರ ಕೇಶವ ಭಟ್ಟ, ಕೆದಂಬಾಡಿ ಜತ್ತಪ್ಪ ರೈ, ಅಮೃತ ಸೋಮೇಶ್ವರ, ಕುದ್ಕಾಡಿ ವಿಶ್ವನಾಥ ರೈ, ಸೀತಾರಾಮ ಆಳ್ವ, ರಾಮಕೃಷ್ಣ ಆಚಾರ್, ವೆಂಕಟರಾಜ ಪುಣಿಂಚತ್ತಾಯ, ದೂಮಪ್ಪ ಮಾಸ್ಟರ್, ವಾಮನ ನಂದಾವರ, ಪೊಳಲಿ ಬಾಲಕೃಷ್ಣ ಶೆಟ್ಟಿ, ಎಸ್.ಪಿ.ಮಂಚಿ ಮುಂತಾದ ಹಲವರು ತುಳು ಸಾಹಿತ್ಯವನ್ನು ಶ್ರೀಮಂತಗೊಳಿಸುತ್ತಿದ್ದಾರೆ. ನಾಟಕ ಹಾಗೂ ಯಕ್ಷಗಾನ ಸಾಹಿತ್ಯವೂ ಸಾಕಷ್ಟು ಬೆಳೆದಿದೆ. ಕೆಮ್ತೂರು ದೊಡ್ಡಣ್ಣ ಶೆಟ್ಟರಿಂದ ಪ್ರಾರಂಭವಾದ ತುಳು ನಾಟಕ ಪರಂಪರೆಗೆ ಟೈಲರ್, ಕಿರೋಡಿಯಾನ್, ಚಂದರ್, ಭಂಡಾರಿ, ಮಚ್ಚೇಂದ್ರನಾಥ್, ಕುಲಾಲ್, ಎ.ಎಸ್.ರಾವ್, ಕ್ಯಾತರಿನ್ ರೋಡ್ರಿಗ್ಸ್ ಮುಂತಾದವರ ಕಾಣಿಕೆಯೂ ಗಣನೀಯವಾದುದು. ಹಲವು ಚಲನಚಿತ್ರಗಳೂ ತುಳು ಭಾಷೆಯಲ್ಲಿ ನಿರ್ಮಿತವಾಗಿವೆ.

ಆಧುನಿಕ ಸಾಹಿತ್ಯಕ್ಕೆ ಕಲಶಪ್ರಾಯವಾಗಿರುವ ಕೃತಿಯೆಂದರೆ ಮಂದಾರ ಕೇಶವಭಟ್ಟರ ಮಂದಾರ ರಾಮಾಯಣ ಎಂಬ ಮಹಾಕಾವ್ಯ. ಇದರಲ್ಲಿ ತುಳುನಾಡಿನ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನಳವಡಿಸಿಕೊಂಡು ರಾಮಾಯಣದ ಕಥೆಯನ್ನು ಹೆಣೆಯಲಾಗಿದೆ. ಹಳೆಯ ತುಳುವಿನ ಶ್ರೀಭಾಗವತೊ, ಮಹಾಭಾರತೊ ಹಾಗೂ ಹೊಸ ತುಳುವಿನ ಮಂದಾರ ರಾಮಾಯಣ ಈ ಮೂರು ಮಹಾಕಾವ್ಯಗಳು ತುಳು ಸಾಹಿತ್ಯಕ್ಕೆ ಭಾರತದ ಇತರ ಹದಿನೇಳು ಸಾಹಿತ್ಯ ಭಾಷೆಗಳ ಸಾಲಿನಲ್ಲಿ ಗೌರವದ ಸ್ಥಾನ ಗಳಿಸಿಕೊಟ್ಟಿವೆ. ಆಧುನಿಕ ಗದ್ಯ ಸಾಹಿತ್ಯವನ್ನು ಶ್ರೀಮಂತಗೊಳಿಸಿದವರಲ್ಲಿ ಕೆದಂಬಾಡಿಯವರು ಅಗ್ರಗಣ್ಯರು. ಅವರ ಹೆಚ್ಚಿನ ಕೃತಿಗಳು ಪ್ರಖ್ಯಾತ ಕನ್ನಡದವಾದರೂ ತುಳುವಿಗೊಂದು ಸತ್ವಶಾಲಿ ಗದ್ಯಶೈಲಿಯನ್ನು ರೂಪಿಸಿಕೊಳ್ಳುವ ಸಂದರ್ಭದಲ್ಲಿ ಅವರು ಉತ್ತಮ ಮಾದರಿಗಳನ್ನೊದಗಿಸಿಕೊಟ್ಟರು. ಅಮೃತರ ಗೊಂದೋಲು, ರಾಯರಾವುತೆ, ತುಳುನಾಡ ಕಲ್ಕುಡೆ, ಕೆ.ವಿ.ರೈ. ಅವರ ಸಂಕ್ರಾಂತಿ, ಮಂಜತ ಕಾಪಡೆ, ದೂಮಪ್ಪ ಮಾಸ್ಟರ್ ಅವರ ಮಾದಿರನ ಗಾದೆಗಳು, ಸೀತಾರಾಮ ಆಳ್ವರ ಗೀತೆ, ತಿರ್ಲ್ ಪಾವೆಂ ಅವರ ಬಯ್ಯಮಲ್ಲಿಗೆ, ಪುಣಿಂಚತ್ತಾಯರ ಅಲಡೆ, ಪಾಲ್ತಾಡಿಯವರ ಪಜ್ಜೆಕುರಲ್, ರತ್ನ ಕುಮಾರರ ರಕುಮನ ಪಡ, ವಾಮನ ನಂದಾವರರ ಬೀರ, ತುಳುವೆರೆ ಕುಸಾಲ್ ಕುಸೆಲ್, ಸುನೀತಾ ಶೆಟ್ಟಿ ಅವರ ಪಿಂಗಾರ, ಬಾಲಕೃಷ್ಣ ಶೆಟ್ಟಿಯವರ ಪೊಡಂಬು ತಿಮ್ಮನ ಕಗ್ಗ, ಬಾ.ಸಾಮಗರ ಕಿನ್ನಿ ಕತೆಕುಲು ಮುದ್ದು, ಮೂಡಬಿಳ್ಳಿಯವರ ಉದಿಪು, ಕೃಷ್ಣಾನಂದ ಹೆಗ್ಗಡೆಯವರು ಸಂಪಾದಿಸಿದ ಅರ್ಲು ಕಬಿತೆಲು ಮೊದಲಾದ ಕೃತಿಗಳು ತುಳು ಸಾಹಿತ್ಯವನ್ನು ಸಂಮೃದಗೊಳಿಸಿವೆ. ಕರ್ನಾಟಕದಲ್ಲಿನ ತುಳು ಸಾಹಿತ್ಯ ಅಕಾಡೆಮಿ ತುಳು ಭಾಷೆ ಹಾಗೂ ಸಾಹಿತ್ಯ ಸಂಸ್ಕೃತಿಗಳ ಅಭಿವೃದ್ಧಿಗೆ ನೆರವಾಗುತ್ತಿದೆ.

ತುಳು ಒಂದು ಚಿಕ್ಕ ಪ್ರದೇಶಕ್ಕೆ ಸೀಮಿತವಾದ ಭಾಷೆಯಾದರೂ ಅದರಲ್ಲಿ ಹಲವಾರು ಉಪಭಾಷೆಗಳಿವೆ. ಪ್ರಾದೇಶಿಕವಾಗಿಯೂ ಸಾಮಾಜಿಕವಾಗಿಯೂ ಭಾಷಾ ವ್ಯತ್ಯಾಸ ಕಾಣುತ್ತದೆ. ಮಂಗಳೂರಿನಿಂದ ಉತ್ತರದಲ್ಲಿ ಮಾತಾಡುವ ತುಳುವಿಗೂ ಮಂಗಳೂರಿನಿಂದ ದಕ್ಷಿಣಕ್ಕೆ ಮಾತಾಡುವ ತುಳುವಿಗೂ ವ್ಯತ್ಯಾಸವಿದೆ. ಹಾಗೆಯೇ ಬ್ರಾಹ್ಮಣರ ತುಳು, ಹರಿಜನರ ತುಳು, ಜೈನರ ತುಳು, ಇತರ ಪ್ರಮುಖ ವರ್ಗಗಳಾದ ಬಂಟ, ಬಿಲ್ಲವ, ಮೊಗವೀರ ಮುಂತಾದವರ ತುಳು- ಇವುಗಳೊಳಗೆ ಹಲವಾರು ವ್ಯತ್ಯಾಸಗಳಿವೆ. ಸಾಮಾನ್ಯವಾಗಿ ಬಂಟ, ಬಿಲ್ಲವ, ಬಿಸ್ಸ, ಕುಂಬಾರ ಮುಂತಾದವರು ಮಾತನಾಡುವ ತುಳುವನ್ನು 'ಸಾಮಾನ್ಯ ತುಳು' ಎನ್ನಬಹುದು. ಇದೇ ತುಳುವರೆಲ್ಲರ ಸಂಪರ್ಕ ಭಾಷೆಯಾಗಿದೆ. ಸಾರ್ವಜನಿಕ ಸ್ಥಳಗಳಲ್ಲಿ ಮಾರುಕಟ್ಟೆಗಳಲ್ಲಿ ಈ ಪ್ರಭೇದವನ್ನೇ ಇತರ ಎಲ್ಲ ವರ್ಗದವರೂ ಸಂಪರ್ಕ ಭಾಷೆಯಾಗಿ ಬಳಸುತ್ತಾರೆ. ಆಕಾಶವಾಣಿಯಲ್ಲಿ, ಪತ್ರಿಕೆಗಳಲ್ಲಿ, ಸಾಹಿತ್ಯಕೃತಿಗಳಲ್ಲಿ, ಸಾರ್ವಜನಿಕ ಭಾಷಣಗಳಲ್ಲಿ ಈ ಸಾಮಾನ್ಯ ತುಳು ಎಂಬ ಉಪಭಾಷೆಯನ್ನೇ ಬಳಸಲಾಗುತ್ತದೆ.

ತುಳು ಭಾಷೆಯ ಬಗ್ಗೆ ಪುಣೆ, ಅಣ್ಣಾಮಲೈ, ಕೇರಳ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆಗಳು ನಡೆದು ಹಲವಾರು ಗ್ರಂಥಗಳು ಪ್ರಕಟವಾಗಿವೆ. ಅಮೆರಿಕ ಹಾಗೂ ಯುರೋಪಿನ ವಿಶ್ವವಿದ್ಯಾಲಯಗಳಲ್ಲಿಯೂ ತುಳು ಭಾಷೆ ಹಾಗೂ ಜಾನಪದದ ಬಗೆಗೆ ಅಧ್ಯಯನಗಳು ನಡೆಯುತ್ತಿವೆ. ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗ ಹಾಗೂ ಉಡುಪಿಯ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ತುಳು ಸಂಶೋಧನೆಯ ಬಗ್ಗೆ ಯೋಜನೆಗಳನ್ನು ಹಾಕಿಕೊಂಡು ಕಾರ್ಯಪ್ರವೃತ್ತವಾಗಿವೆ. ಮಂಗಳೂರು ವಿಶ್ವವಿದ್ಯಾಲಯದಲ್ಲಿ ಧರ್ಮಸ್ಥಳದ ಹೆಗ್ಗಡೆ ಹಾಗೂ ಕರ್ನಾಟಕ ಸರ್ಕಾರದ ಅನುದಾನದಿಂದ ತುಳು ಅಧ್ಯಯನ ಪೀಠದ ಸ್ಥಾಪನೆಯಾಗಿದೆ. ಉಡುಪಿಯಲ್ಲಿ ಯು.ಪಿ.ಉಪಾಧ್ಯಾಯರ ಸಂಪಾದಕತ್ವದಲ್ಲಿ ಆರು ಸಂಪುಟಗಳ ತುಳು ಶಬ್ದಕೋಶ ಪ್ರಕಟವಾಗಿದೆ. ತುಳುವಿನ ಉಪಭಾಷೆಗಳ ಸರ್ವೇಕ್ಷಣೆ ಹಾಗೂ ತುಳು ಜನಪದ ಸಾಹಿತ್ಯ ಹಾಗೂ ಕಲೆಗಳ ಸಂಗ್ರಹ, ವಿಶ್ಲೇಷಣೆ ಇತ್ಯಾದಿ ಕೆಲಸಗಳು ನಡೆಯುತ್ತಿವೆ. ಬಿ.ಎ.ವಿವೇಕ ರೈ, ಯು.ಪಿ.ಉಪಾಧ್ಯಾಯ, ಸುಶೀಲಾ ಉಪಾಧ್ಯಾಯ, ಕನರಾಡಿ ವಾದಿರಾಜ ಭಟ್ಟ, ಚಿನ್ನಪ್ಪಗೌಡ, ಪುರುಷೋತ್ತಮ ಬಿಳಿಮಲೆ, ಎ.ವಿ.ನಾವಡ, ಪಾಲ್ತಾಡಿ, ವಾಮನ ನಂದಾವರ ಮುಂತಾದ ವಿದ್ವಾಂಸರು ತುಳು ಜಾನಪದದ ಬಗ್ಗೆ ಸಂಶೋಧನೆ ನಡೆಸಿ ಗ್ರಂಥಗಳನ್ನು ಬರೆದಿದ್ದಾರೆ. ಡಿ.ಎನ್.ಶಂಕರಭಟ್ಟ, ಎ.ಎಸ್.ಆಚಾರ್ಯ, ಯು.ಪಿ.ಉಪಾಧ್ಯಾಯ, ಎಂ.ರಾಮ, ಕೆ.ವಿ.ಜಲಜಾಕ್ಷಿ, ಎಸ್.ಎಲ್.ಭಟ್ಟ, ಮಲ್ಲಿಕಾದೇವಿ, ರಾಮಕೃಷ್ಣಶೆಟ್ಟಿ, ಪದ್ಮನಾಭ ಕೇಕುಣ್ಣಾಯ ಮುಂತಾದವರು ತುಳುವಿನ ಭಾಷಾ ವೈಜ್ಞಾನಿಕ ಅಧ್ಯಯನ ನಡೆಸಿದ್ದಾರೆ.

ಹಿಂದಿನ ದಶಕಗಳಲ್ಲಿ ಕೆಲವು ತುಳು ಮಾಸಪತ್ರಿಕೆಗಳು ಪ್ರಕಟವಾಗುತ್ತಿದ್ದುವು. ಈಗ ಅವು ನಿಂತುಹೋಗಿವೆ. ಈಗ ಮಂಗಳೂರಿನಿಂದ ತುಳುರಾಜ್ಯ ಎಂಬ ಮಾಸಪತ್ರಿಕೆ ಹಾಗೂ ತುಳುವೆರೆ ತುದರ್ ಎಂಬ ವಾರಪತ್ರಿಕೆ ಹಾಗೂ ದೆಹಲಿಯಿಂದ ತುಳುವೆರ್ ಎಂಬ ಮಾಸಪತ್ರಿಕೆ ಹೊರಬರುತ್ತಿವೆ. ಜಿಲ್ಲೆಯ ಕೆಲವು ಸಂಜೆ ಪತ್ರಿಕೆಗಳು ಹಾಗೂ ವಾರಪತ್ರಿಕೆಗಳು ತುಳು ಅಂಕಣಗಳನ್ನು ಪ್ರಕಟಿಸುತ್ತಿವೆ. (ಯು.ಪಿ.ಯು.)

**ತುಳುನಾಡು :** ತುಳುವ, ತುಳವನಾಡು, ತುಳುದೇಶ ಎಂಬುದಾಗಿಯೂ ಕರೆಯಲ್ಪಡುವ ತುಳುನಾಡು ಕರ್ನಾಟಕ ರಾಜ್ಯದ ಈಗಿನ ದಕ್ಷಿಣ ಕನ್ನಡ ಜಿಲ್ಲೆಯೆಂದು ಸ್ಥೂಲವಾಗಿ ಹೇಳಬಹುದು. ಇತಿಹಾಸದ ಕೆಲವು ಕಾಲಗಳಲ್ಲಿ ಇದು ಉತ್ತರ ಕನ್ನಡದ ಕೆಲವು ಭಾಗಗಳನ್ನೂ ಪಶ್ಚಿಮ ಘಟ್ಟದ ಮೇಲಿನ ಕೆಲವು ಪ್ರದೇಶಗಳನ್ನೂ ಒಳಗೊಂಡಿತ್ತು. ಪರಂಪರಾತ್ಮಕ ಹೇಳಿಕೆಗಳ ಪ್ರಕಾರ ಸಹ್ಯಾದ್ರಿ ಮತ್ತು ಪಶ್ಚಿಮ ಘಟ್ಟಗಳ ನಡುವೆ ದಕ್ಷಿಣದಲ್ಲಿ ಚಂದ್ರಗಿರಿ ಹೊಳೆಯಿಂದ (ಇದು ಈಗ ಕೇರಳದಲ್ಲಿದೆ) ಉತ್ತರದಲ್ಲಿ ಕಲ್ಯಾಣಪುರದ ವರೆಗೆ ಇರುವ ಕರಾವಳಿ ಪ್ರದೇಶವೇ ತುಳುನಾಡು.

ತುಳು ಶಬ್ದದ ವ್ಯುತ್ಪತ್ತಿಯ ಬಗ್ಗೆ ವಿದ್ವಾಂಸರಲ್ಲಿ ಅಭಿಪ್ರಾಯ ಭೇದವಿದೆ. ತುಬು ಎಂಬ ಶಬ್ದದಿಂದ ತುಳು ಬಂತೆಂಬುದು ಒಂದು ಅಭಿಪ್ರಾಯವಾದರೆ ತುಳುವೆ (ಮೃದು, ಮೃದುನೆಲ) ಎಂಬ ಶಬ್ದದಿಂದ ಬಂತೆಂಬುದು ಇನ್ನೊಂದು. ತುಳು ಎಂಬುದು ಪ್ರದೇಶವಾಚಕವೂ ಹೌದು, ಭಾಷಾವಾಚಕವೂ ಹೌದು. ತುಳುನಾಡಿನ ಕಲ್ಯಾಣಪುರದ ಉತ್ತರ ಭಾಗದಲ್ಲಿ ತುಳುಭಾಷೆ ಇಲ್ಲದಿರುವಾಗ ತುಳು ಎಂಬ ಶಬ್ದ ಮೂಲತಃ ಪ್ರದೇಶವಾಚಕವೇ ಇದ್ದಿರಬೇಕು. ಈ ಪ್ರದೇಶಕ್ಕೆ ಮತ್ತೆ ಬಂದು ನೆಲಸಿದ ಜನಾಂಗವೊಂದರ ಭಾಷೆಯೂ ತುಳು ಎಂಬ ಅಭಿಧಾನವನ್ನು ಪಡೆದಿರಬಹುದು. ತುಳು ಭಾಷೆ ದಕ್ಷಿಣದ ಇತರ ದ್ರಾವಿಡ ಭಾಷೆಗಳಲ್ಲಿ ಯಾವುದಕ್ಕೆ ಹತ್ತಿರವಾದುದು ಎಂಬುದನ್ನು ಕುರಿತ ಅಭಿಪ್ರಾಯ ಭಿನ್ನತೆಯಿಂದ ಮೇಲಿನ ಸಂದೇಹ ಬಲಪಡುತ್ತದೆ. ತುಳು ಭಾಷೆ ಬಳಕೆಯಲ್ಲಿಲ್ಲದ ಬಾರಕೂರು, ಬಸರೂರು, ಹಾಡುವಳ್ಳಿ, ಗೇರಸೊಪ್ಪೆಗಳು ತುಳುನಾಡಿನ ಕೇಂದ್ರಗಳಾಗಿದ್ದುವು. ಸ್ಕಾಂದಪುರಾಣದ ಪ್ರಕ್ಷಿಪ್ತ ಭಾಗವಾದ ಸಹ್ಯಾದ್ರಿ ಖಂಡದಲ್ಲಿ ತುಳುನಾಡಿಗೆ ಸಂಬಂಧಿಸಿದ ಹಲವು ಅಸಂಬದ್ಧ ವಿಚಾರಗಳಿವೆ. ತುಳುನಾಡು ಪರಶುರಾಮಕ್ಷೇತ್ರದ ಭಾಗವೆಂಬ ಕಥೆಯೂ ಇದೆ. ಕನ್ನಡ ಸಹ್ಯಾದ್ರಿಖಂಡದಲ್ಲಿ ತುಳುನಾಡಿನ ಸಪ್ತಕ್ಷೇತ್ರವೂ ಸೇರಿದಂತೆ ಹಲವು ಕ್ಷೇತ್ರತೀರ್ಥಗಳ ವೃತ್ತಾಂತವಿದೆ.

ಅಶೋಕನ ಶಿಲಾಲೇಖನದಲ್ಲಿ ಬರುವ ಸತಿಯಪುತ ತುಳುನಾಡಿರಬಹುದು. 1ನೆಯ ಶತಮಾನದ ಟಾಲೆಮಿಯ ಭೂಗೋಳದಲ್ಲಿ ನಮೂದಿತವಾದ ಒಲೊಖೊಯ್ರಾ ತುಳುನಾಡಿನ ನಾಮಾಂತರವಾದ ಆಳ್ವಖೇಡವಿರಬೇಕು. 3-4ನೆಯ ಶತಮಾನದ ತಮಿಳಿನ ಸಂಗಮ್ ಸಾಹಿತ್ಯದಲ್ಲಿ ತುಳುನಾಡಿನ ಉಲ್ಲೇಖವಿದೆ. ಪಲ್ಲವ ಅರಸನಾದ 2ನೆಯ ನಂದಿವರ್ಮನ ಕಾಲದ (731-795) ಪಟ್ಟಟ್ಟಾಲ್ ಮಂಗಲಮ್ ತಾಮ್ರ ಶಾಸನದಲ್ಲೂ 1012ರ ಕೊಂಗಾಳ್ವನ ಬಲ್ಮುರಿಯ ಶಾಸನದಲ್ಲೂ ತುಬು ಪದದ ಉಲ್ಲೇಖವಿದೆ. ಎರಡನೆಯದು ಕನ್ನಡ ಭಾಷೆಯಲ್ಲಿ ತುಬುವನ್ನು ಕುರಿತ ಮೊದಲ ಶಾಸನೋಲ್ಲೇಖ. ತುಳುನಾಡಿನಲ್ಲಿ ತುಳುನಾಡಿನ ಉಲ್ಲೇಖ ಮೊದಲು ದೊರಕುವುದು 11ನೆಯ ಶತಮಾನದ ಬಂಕಿಯಾಳುಪೇಂದ್ರನ ಕಾಲದ ಬಾರಕೂರು ಶಾಸನದಲ್ಲಿ. ಹೊಯ್ಸಳ ವಿಜಯನಗರ ಕಾಲದ ಶಾಸನಗಳಲ್ಲಿ ತುಳುನಾಡಿನ ಉಲ್ಲೇಖಗಳು ಹೇರಳವಾಗಿ ದೊರೆಯುತ್ತವೆ. ರತ್ನಾಕರವರ್ಣಿಯ ಭರತೇಶವೈಭವ ಕೃತಿಯಲ್ಲಿ ಮೊದಲಾಗಿ ತುಳು ವಾಕ್ಯವೂ ತುಳುವ ಶಬ್ದವೂ ಸಿಗುತ್ತವೆ.

ಕ್ರಿಸ್ತಪೂರ್ವ ಸುಮಾರು 3-2ನೆಯ ಶತಮಾನಗಳಲ್ಲಿ ಇಲ್ಲಿ ಬೃಹತ್ ಶಿಲಾಸಮಾಧಿ ಸಂಸ್ಕೃತಿ ಹರಡಿದ್ದಂತೆ ತೋರುತ್ತದೆ. ಕ್ರಿ.ಶ. ಆರಂಭದಿಂದ 15ನೆಯ ಶತಮಾನದವರೆಗೆ ಆಳುಪರು (ಆಳುವರು) ಇಲ್ಲಿ ಆಳಿದರು. ಮುಂದೆ ವಿಜಯನಗರದ ಅರಸರ ಆಳಿಕೆಯ ಕಾಲದಲ್ಲಿ ತುಳುನಾಡು ಬಾರಕೂರು ಮತ್ತು ಮಂಗಳೂರು ಪ್ರಾಂತ್ಯಗಳಾಗಿ ವಿಭಾಗವಾಯಿತು. ಅವರಿಂದ ನೇಮಿತರಾದ ರಾಜ್ಯಪಾಲರು ಇದನ್ನು ಆಳುತ್ತಿದ್ದರು. ತುಳುವ ವಂಶದ ಕೃಷ್ಣದೇವರಾಯನ ಪೂರ್ವಜರು ಮೂಲತಃ ತುಳುನಾಡಿನ ಪಾಡುವಳ್ಳಿಯವರೆಂದು ಕೆಲವರ ಅಭಿಪ್ರಾಯವಿದೆ. ವಿಜಯನಗರ ಕಾಲದಲ್ಲಿ ಮತ್ತು ಅನಂತರ ಸುರಾಲಿನ ತೊಳಹರರು (ಈಗಿನ ತೋಳಾರರು), ಬಂಗಾಡಿಯ ಬಂಗರು, ಪುತ್ತಿಗೆಯ ಚೌಟರು ಮೊದಲಾದ ಹಲವು ಕಿರು ಅರಸುಮನೆತನಗಳು ತುಳುನಾಡಿನ ವಿವಿಧ ಭಾಗಗಳ ಮೇಲೆ ಒಡೆತನ ಹೊಂದಿದ್ದುವು. ತುಳುನಾಡು ಕೆಲಕಾಲ ಕೆಳದಿ ಸಂಸ್ಥಾನಕ್ಕೂ ಸೇರಿತ್ತು. ಕೆಳದಿಯ ಅರಸರ ಬಳಿಕ ತುಳುನಾಡು ಹೈದರ್ ಅಲಿಯ ಅಧೀನವಾಯಿತು. ಅದು 19ನೆಯ ಶತಮಾನದಲ್ಲಿ ಬ್ರಿಟಿಷರ ಕೈಸೇರಿ ದಕ್ಷಿಣ ಕನ್ನಡ, ಉತ್ತರ ಕನ್ನಡಗಳಾಗಿ ವಿಭಜಿತವಾಗಿ ದಕ್ಷಿಣ ಕನ್ನಡ ಮದರಾಸು ಪ್ರಾಂತ್ಯಕ್ಕೂ ಉತ್ತರ ಕನ್ನಡ ಬೊಂಬಾಯಿ ಪ್ರಾಂತ್ಯಕ್ಕೂ ಸೇರಿದವು. ಭಾಷಾನುಗುಣ ರಾಜ್ಯ ರಚನೆಯಾದಾಗ ಕಾಸರಗೋಡು ಬಿಟ್ಟು ಉಳಿದ ತುಳುನಾಡು ಕರ್ನಾಟಕಕ್ಕೆ ಸೇರಿತು.

ಪಶ್ಚಿಮಘಟ್ಟಗಳಿಂದಾಗಿ ಈ ನಾಡು ಕರ್ನಾಟಕದ ಇತರ ಭಾಗಗಳಿಂದ ಬಹಳ ಕಾಲ ಬೇರೆಯಾಗಿ ಇದ್ದುದರಿಂದ ಇದು ತನ್ನದೇ ಆದ ಸಂಸ್ಕೃತಿ, ನಡೆನುಡಿ, ಆಚಾರವಿಚಾರಗಳನ್ನು ಕಂಡುಕೊಳ್ಳುವಂತಾಗಿದೆ. ಈ ವಿಶಿಷ್ಟ ಸಂಸ್ಕೃತಿ ಇಂದಿಗೂ ಉಳಿದುಬಂದಿದೆ. ತುಳು ಭಾಷೆ, ಅಳಿಯ ಸಂತಾನ ಪದ್ಧತಿ, ಭೂತಾರಾಧನೆ, ಯಕ್ಷಗಾನ ತಾಳಮದ್ದಲೆಗಳು, ಕೋಲ, ಕೋಳಿ ಅಂಕ, ಕಂಬಳ - ಈ ಪ್ರದೇಶದ ಸಂಸ್ಕೃತಿಯ ಕೆಲವು ವೈಶಿಷ್ಟ್ಯಗಳು. (ನೋಡಿ: ಆಳುಪವಂಶ, ತುಳು, ದಕ್ಷಿಣಕನ್ನಡ) (ಪಿ.ಜಿ.ಬಿ.)

**ತೂಬುಗೆರೆ :** ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಕಸಬೆಗೆ ಈಶಾನ್ಯದಲ್ಲಿ 13ಕಿಮೀ ದೂರದಲ್ಲಿರುವ ಒಂದು ಗ್ರಾಮ. ಹೋಬಳಿ ಕೇಂದ್ರ.

ಇಲ್ಲಿನ ವೆಂಕಟರಮಣಸ್ವಾಮಿ ದೇವಾಲಯ ಸ್ವಲ್ಪ ಪ್ರಾಚೀನವಾದದ್ದು. ವರ್ಷಕ್ಕೊಮ್ಮೆ ಈ ದೇವರ ರಥೋತ್ಸವ ನಡೆಯುತ್ತದೆ. ಊರಿನಲ್ಲಿರುವ ಮಾರಮ್ಮನ ದೇವಾಲಯದಲ್ಲಿ ವರ್ಷಕ್ಕೊಮ್ಮೆ ದೀಪಗಳು ಬೆಳಗುತ್ತವೆ. ದನಕರುಗಳ ರೋಗಗಳು ಕಾಣಿಸಿಕೊಂಡರೆ ರೋಗಪರಿಹಾರಕ್ಕಾಗಿ ವರ್ಷದ ಮಧ್ಯದಲ್ಲಿಯೂ ದೇಗುಲದಲ್ಲಿ ದೀಪಗಳು ಬೆಳಗುತ್ತವೆ.

ಇದು ಒಂದು ವ್ಯಾಪಾರ ಸ್ಥಳ. ಇಲ್ಲಿ ವೈಜ್ಞಾನಿಕವಾಗಿ ಬಿತ್ತನೆಬೀಜ ಸಂಸ್ಕರಿಸುವ ಒಂದು ಖಾಸಗಿ ಕಾರ್ಖಾನೆಯಿದೆ. ಸರ್ಕಾರಿ ಪ್ರೌಢಶಾಲೆ, ವಿದ್ಯುತ್, ಅಂಚೆ, ವೈದ್ಯಕೀಯ ಮುಂತಾದ ಸೌಲಭ್ಯಗಳಿವೆ. (ಡಿ.ಕೆ.ಆರ್.)

**ತೆಂಗಿನ ಘಟ್ಟ :** ಮಂಡ್ಯ ಜಿಲ್ಲೆ ಕೃಷ್ಣರಾಜಪೇಟೆ ತಾಲ್ಲೂಕಿನಲ್ಲಿ ಕಸಬೆಯಿಂದ 18ಕಿಮೀ ವಾಯವ್ಯದಲ್ಲಿರುವ ಗ್ರಾಮ.

ಇಲ್ಲಿನ ಶಿವದೇವಾಲಯ ಹೊಯ್ಸಳ ಕಾಲದ ಒಂದು ಸುಂದರ ವಾಸ್ತು ಕೃತಿ. ದೇವಾಲಯದ ಸಮೀಪದಲ್ಲಿರುವ ಶಾಸನವೊಂದರಿಂದ ಈ ಗುಡಿಗೆ ಹೊಯ್ಸಳೇಶ್ವರ ಎಂದು ಹೆಸರಿತ್ತೆಂದೂ ಇದನ್ನು ಒಂದನೆಯ ನರಸಿಂಹನ ಕಾಲದಲ್ಲಿ (1142-73) ವ್ಯಾಪಾರಿಯೊಬ್ಬ ಕಟ್ಟಿಸಿದನೆಂದೂ ತಿಳಿಯುತ್ತದೆ. ದೇವಾಲಯ ಸ್ವಲ್ಪಮಟ್ಟಿಗೆ ಶಿಥಿಲವಾಗಿದ್ದರೂ ಗರ್ಭಗೃಹ, ತೆರೆದ ಸುಕನಾಸಿ, ನವರಂಗ ಮತ್ತು ಮುಖಮಂಟಪ ಭಾಗಗಳು ಇವೆ. ಸುಕನಾಸಿಯಲ್ಲಿ ಹೊಯ್ಸಳ ಶೈಲಿಯ ಸಪ್ತಮಾತೃಕಾ ಮತ್ತು ಉಮಾಮಹೇಶ್ವರ ವಿಗ್ರಹಗಳು ಇವೆ. ಸುಕನಾಸಿಯ ದ್ವಾರಬಂಧ ಅಲ್ಲಿಯ ಹಾಗೂ ನವರಂಗದ ಕಂಬಗಳೂ ಬಹು ನಾಜೂಕಿನ ಕೆತ್ತನೆಗಳು. ನವರಂಗದ ಒಂಬತ್ತು ಭುವನೇಶ್ವರಿಗಳಲ್ಲಿ ಒಂದೊಂದೂ ಸುಮಾರು 2 ಅಡಿಗಳಷ್ಟು ಆಳವಾಗಿದ್ದು ಮಧ್ಯದಲ್ಲಿ ವಿವಿಧ ರೀತಿಯಲ್ಲಿ ಕಮಲ ವಿನ್ಯಾಸಗಳಿಂದ ಅಲಂಕೃತವಾಗಿವೆ. ಮಧ್ಯದಿಂದ ಇಳಿಬಿದ್ದ ಕಮಲದ ಮೊಗ್ಗು ಮತ್ತು ಅದರ ಸುತ್ತಲೂ ಸೆಟೆದೆದ್ದ ಎಂಟು ಸಿಂಹಗಳ ಕೆತ್ತನೆಯಿರುವ ಮಧ್ಯಾಂಕಣದ ಭುವನೇಶ್ವರಿ ಬಹುಶಃ ಹೊಯ್ಸಳ ಕಾಲದ ಅತ್ಯುತ್ತಮ ಭುವನೇಶ್ವರಿಗಳ ಸಾಲಿನಲ್ಲಿ ನಿಲ್ಲುತ್ತದೆ. ಭುವನೇಶ್ವರಿಗಳನ್ನು ವಿವಿಧ ಬಣ್ಣಗಳಲ್ಲಿ ಅಲಂಕರಿಸಲಾಗಿದುದ್ದರ ಕುರುಹುಗಳು ಉಳಿದಿವೆ. ದೇವಾಲಯದ ಹೊರ ಗೋಡೆಗಳ ಮೇಲೆ ಕೆಲವು ಅರೆಗಂಬಗಳ ಅಲಂಕರಣ ಮಾತ್ರ ಇದೆ. ಗೋಪುರ ಉಳಿದಿಲ್ಲ. ಈ ದೇವಾಲಯದ ಸಮೀಪದಲ್ಲಿಯೇ ಭೈರವಶಿಲ್ಪವಿರುವ ಇನ್ನೊಂದು ಚಿಕ್ಕಗುಡಿ ಇದೆ. *

**ತೆಂಗು :** ಕರ್ನಾಟಕದ ಮುಖ್ಯ ಬಹುವಾರ್ಷಿಕ ಬೆಳೆ. ಭಾರತದ ಪ್ರಮುಖ ರಫ್ತು ಬೆಳೆಗಳಲ್ಲೊಂದು. ಭಾರತದ ತೆಂಗಿನ ಕೃಷಿಯಲ್ಲಿ ಕರ್ನಾಟಕ ಎರಡನೆಯ ಸ್ಥಾನವನ್ನು ಪಡೆದಿದೆ. ಕೇರಳಕ್ಕೆ ಪ್ರಥಮ ಸ್ಥಾನ. ತಮಿಳುನಾಡಿನದು ಮೂರನೆಯ ಸ್ಥಾನ.

ಕರ್ನಾಟಕದಲ್ಲಿ ತೆಂಗನ್ನೇ ಪೂರ್ಣ ಬೆಳೆಸಾಗಿ ಕೃಷಿಮಾಡುವುದರ ಜೊತೆಗೆ ಪ್ರತಿ ಮನೆಯಲ್ಲಿ ಒಂದೆರಡು ಗಿಡಗಳನ್ನು ನೆಡುವುದು, ತೋಟದಂಚು, ಬೇಲಿ ಪಕ್ಕ ಮುಂತಾದ ಸ್ಥಳಾವಕಾಶವಿರುವೆಡೆಗಳಲ್ಲೆಲ್ಲ ನೆಡುವುದರಿಂದ ಇದರ ವಿಸ್ತೀರ್ಣವನ್ನು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಸು.40-50 ಸಸಿಗಳಿಗೆ 1 ಎಕರೆ ಪ್ರದೇಶ ಅಗತ್ಯವೆಂದು ಪರಿಗಣಿಸಲಾಗಿದೆ.

ಮರಗಳ ಬೆಳೆವಣಿಗೆ ಮತ್ತು ಫಲಾವಧಿಯ ಆಧಾರದ ಮೇಲೆ ತೆಂಗಿನಲ್ಲಿ ಕುಳ್ಳಮರಗಳು ಮತ್ತು ನೀಳಮರಗಳೆಂಬ ಎರಡು ಗುಂಪುಗಳನ್ನು ಗುರುತಿಸಬಹುದು. ಇವುಗಳಲ್ಲಿ ಕೆಂಪು, ಬಿಳಿ, ಹಳದಿ ಮತ್ತು

ಹಸುರುಕಾಯಿಗಳುಳ್ಳ ತಳಿಗಳಿವೆ. ಇವುಗಳ ತಿರುಳು ತೆಳುವಾಗಿದ್ದು ಎಳನೀರಿಗೆ ಮಾತ್ರ ಉತ್ತಮವೆನಿಸಿವೆ. ಉದ್ದ ಮರಗಳು ನಿಧಾನವಾಗಿ ಬೆಳೆಯುವವು. ಆದರೆ ಇವುಗಳ ತಿರುಳು ಮಂದ. ಇತ್ತೀಚೆಗೆ ಈ ಎರಡರ ಸಂಕರದಿಂದ ಅಧಿಕ ಇಳುವರಿಯ ಸಂಕರ ತಳಿಗಳನ್ನು ವೃದ್ಧಿಸಲಾಗಿದೆ. ಭೂ ಮತ್ತು ಇತರ ಅನುಕೂಲತೆಗಳನ್ನು ಅವಲಂಬಿಸಿ, ಕುಳ್ಳುಬಗೆಯ ತೆಂಗಿನ ಗಿಡಗಳು 3ನೆಯ ವರ್ಷದಿಂದಲೂ ಇತರ ಸಾಮಾನ್ಯ ಬಗೆಯವು 5-6ನೆಯ ವರ್ಷದಿಂದಲೂ ಸಿಂಗಾರ (ಹೊಂಬಾಳೆ) ಉತ್ಪನ್ನ ಮಾಡುತ್ತವೆ. 90 ಭಾಗದಷ್ಟು ಗಿಡಗಳು ತಮ್ಮ 10ನೆಯ ವರ್ಷದೊಳಗೆ ಪೂರ್ಣ ಉತ್ಪತ್ತಿ ಕೊಡಲುಪಕ್ರಮಿಸುತ್ತವೆ. ಉತ್ತಮ ಮರದಲ್ಲಿ ವಾರ್ಷಿಕವಾಗಿ 100-150 ಕಾಯಾಗಬಹುದು. ಇನ್ನೂ ಹೆಚ್ಚು ಕಾಯಿಗಳನ್ನು ಬಿಡುವ ಮರಗಳೂ ಉಂಟು. ಅದು ಭೂಮಿಯ ಫಲವತ್ತತೆ ಮತ್ತು ಹವಾಗುಣವನ್ನವಲಂಬಿಸಿದೆ. ಗೊನೆಯಲ್ಲಿ ಹೂಗಳ ಸಂಖ್ಯೆ ಹೆಚ್ಚಾಗಿದ್ದಷ್ಟೂ ಕಾಯಿಗಳ ಗಾತ್ರ ಕಡಿಮೆಯಾಗುವುದುಂಟು. ಕಾಯಿಗಳ ಗಾತ್ರದಲ್ಲೂ ಬಣ್ಣದಲ್ಲೂ ಭಿನ್ನತೆಯಿದೆ. ಅವು ಉರುಟು, ಉದ್ದ ಮತ್ತು ಅಂಡಾಕಾರದವಾಗಿರಬಹುದು. ಹಾಗೆಯೇ ಹಳದಿ, ಕೆಂಪು, ಮಾಸಲು ಮತ್ತು ಹಸುರು ಬಣ್ಣದವಾಗಿರಬಹುದು.

ತೆಂಗು ವಿವಿಧ ಭೂ ಮತ್ತು ವಾಯುಗುಣಕ್ಕೆ ಹೊಂದಿಕೊಂಡು ಬೆಳೆಯುತ್ತದಾದರೂ ಇದು ಮೂಲತಃ ಉಷ್ಣವಲಯದ ಬೆಳೆಯಾದ್ದರಿಂದ ಉಷ್ಣತೆ ಹೆಚ್ಚಾಗಿದ್ದರೆ ಉತ್ತಮವಾಗಿ ಬೆಳೆಯುವುದು. ಉಷ್ಣವಲಯದಲ್ಲಿ ಸಮುದ್ರಮಟ್ಟದಿಂದ 3000' ಎತ್ತರದವರೆಗೂ ತೆಂಗನ್ನು ಬೆಳೆಯಬಹುದು. ಸಕಾಲದ 635ಮಿಮೀ ಮಳೆ ಅದಕ್ಕೆ ಸಾಕಾಗುತ್ತದೆ. ಆದರೂ 75" ಮಳೆಯಾದರೆ ಉತ್ತಮ. ಸುಲಭವಾಗಿ ನೀರು ಬಸಿಯುವ ಮರಳು ಅಥವಾ ಜಂಬಿಟ್ಟಿಗೆ ಮಣ್ಣು ತೆಂಗಿನ ಕೃಷಿಗೆ ಸೂಕ್ತವಾದ್ದು. ಆದ್ದರಿಂದ ಇಂತಹ ಅನುಕೂಲವಿರುವ ಕರಾವಳಿ ಪ್ರದೇಶದಲ್ಲಿ ತೆಂಗಿನ ಗಿಡಗಳು ಹೆಚ್ಚಾಗಿರುವುದು. ತೆಂಗಿಗೆ ತಾಯಿಬೇರಿಲ್ಲ. ಆದ್ದರಿಂದ ಹೆಚ್ಚು ನೀರು ಆವಶ್ಯಕ. ಆದರೆ ಜೌಗು ಒಳ್ಳೆಯದಲ್ಲ. ತೆಂಗಿಗೆ ಅತೀವ ಉಷ್ಣ ಅಥವಾ ರೇಕ ಕೊರೆ ಸಹಿಸುವ ಸಾಮರ್ಥ್ಯವಿಲ್ಲ. $25^0$-$32^0$ಸೆ. ಉಷ್ಣತೆ ಅತ್ಯಂತ ಹಿತಕರ.

ಪ್ರತಿವರ್ಷವೂ ಉತ್ತಮ ಫಸಲು ಕೊಡುವ ತೋಟಪ್ರದೇಶವನ್ನು ಗುರುತಿಸಿ, ಅಲ್ಲಿ ಅತ್ಯಧಿಕ ಇಳುವರಿ ಕೊಡುವ ತೋಟವನ್ನಾರಿಸಿ, ಉತ್ತಮ ಇಳುವರಿಯ ತಾಯಿಮರಗಳನ್ನು ಗುರುತಿಸಲಾಗುವುದು. ಪ್ರತಿವರ್ಷ 80-100 ದಪ್ಪಕಾಯಿ ಕೊಡುವಂಥ ತಾಯಿಮರವನ್ನು ಆಯ್ದು ಕಾಯಿ ಚೆನ್ನಾಗಿ ಬಲಿತು ಸಾಧ್ಯವಾದಲ್ಲಿ ಪೂರ್ಣ ಹಣ್ಣಾಗಿ ಉದುರುವಂಥ ಹಣ್ಣನ್ನು ಮಾತ್ರ ಆಯ್ದುಕೊಳ್ಳಲಾಗುತ್ತದೆ. ಫೆಬ್ರುವರಿ-ಮೇ ಅವಧಿಯಲ್ಲಿ ಆರಿಸಿಕೊಂಡಂಥವು ಉತ್ತಮವೆನ್ನಲಾಗಿದೆ. ಆರಿಸಿದ ತಳ್ಳನ್ನು (ಬೀಜದ ಕಾಯಿ) ಒಂದು ತಿಂಗಳು ನೆರಳಿನಲ್ಲಿ ಒಣಗಿಸಲಾಗುವುದು. ಚೆನ್ನಾಗಿ ಬಿಸಿಲು ಬೀಳುವಲ್ಲಿ ಮರಳು ಅಥವಾ ಮರಳು ಮಿಶ್ರಿತ ಭೂಮಿಯಲ್ಲಿ 1.2-1.5ಮೀ ಅಗಲದ ಮಡಿಗಳನ್ನು ಮಾಡಿ ಮಧ್ಯೆ ನೀರು ಹಾಯಿಸಲು ಕಾಲುವೆಗಳೇರ್ಪಡಿಸಿ, ಕಾಯಿಯ ತೊಟ್ಟು ಮೇಲಿರುವಂತೆ ಅಥವಾ ಅಡ್ಡವಾಗಿರುವಂತೆ ಇಟ್ಟು ನೆಡಲಾಗುತ್ತದೆ. 12-14 ತಿಂಗಳಲ್ಲಿ ಸಸಿಗಳನ್ನು ಕಿತ್ತು ಬೇರೆಡೆಗೆ ನೆಡುವುದಾದರೆ ಬೀಜದಿಂದ ಬೀಜಕ್ಕೆ 254-635ಮಿಮೀ ಅಂತರವನ್ನೂ 2-3 ವರ್ಷ ಬಿಟ್ಟು ಕೀಳುವುದಾದರೆ 0.8-1.4ಮೀ ಅಂತರವನ್ನೂ ಕೊಡಲಾಗುತ್ತದೆ. ನೆಟ್ಟಮೇಲೆ ಸಸಿಯ ತೊಟ್ಟು ಕಣ್ಣಿಗೆ ಕಾಣುವಂತೆ ಭೂಮಟ್ಟದಿಂದ ಮೇಲಿರುವಂತೆ ಮಾಡಲಾಗುತ್ತದೆ. ಆಗಿಂದಾಗ್ಗೆ ಸಾಕಷ್ಟು ನೀರು ಒದಗಿಸುತ್ತಿದ್ದು ತೀಕ್ಷ್ಣಬಿಸಿಲಿರುವಲ್ಲಿ ಸೊಪ್ಪು ಅಥವಾ ಹುಲ್ಲನ್ನು ಮಡಿಗಳ ಮೇಲೆ ಹರಡಿ ಸಸಿಗಳಿಗೆ ನೆರಳು ಒದಗಿಸಲಾಗುವುದು. ಕಾಯಿ ನೆಟ್ಟ 11-12 ವಾರಗಳಲ್ಲಿ ಮೊಳಕೆಯೊಡೆಯಲು ಆರಂಭಿಸುವುವು. 6 ತಿಂಗಳ ತರುವಾಯವೂ ಮೊಳಕೆಯೊಡೆಯದವನ್ನು ತೆಗೆದುಹಾಕಲಾಗುತ್ತದೆ. ಸಸಿಗಳನ್ನು ನಾಟಿ ಮಾಡಲಾಗುವ ಜಮೀನು ಸಾಧ್ಯವಾದಷ್ಟು ಮಟ್ಟಸವಾಗಿರುವಂತೆ ನೋಡಿಕೊಳ್ಳಲಾಗುತ್ತದೆ. ಜೌಗು ಮತ್ತು ತಗ್ಗು ಭೂಮಿಗಳಲ್ಲಿ ಸಾಕಷ್ಟು ಕಡಗು ತೆಗೆದು ಸಸಿ ಹಾಕುವುದು ರೂಢಿಯಲ್ಲಿರುವ ಕ್ರಮ. ಮರದಿಂದ ಮರಕ್ಕೆ 7.6-9.1ಮೀ ಅಂತರವಿರುವಂತೆ ಸಸಿಗಳನ್ನು ನಾಟಿ ಮಾಡಲಾಗುತ್ತದೆ. ಅಂತರ ಕಡಮೆಯಾದಲ್ಲಿ ಇಳುವರಿ ಕಡಿಮೆಯಾಗುತ್ತದೆ.

ತೆಂಗು ಸು.60 ವರ್ಷಗಳ ಕಾಲ ಫಲ ಕೊಡುತ್ತದೆ. ಅನಂತರ ಇಳುವರಿ ಕಡಿಮೆಯಾಗುತ್ತದೆ. ಆಗ ಹಳೆಯ ಮರಗಳ ಮಧ್ಯೆ ಎಡೆ (ಹೊಸ ಸಸಿಗಳನ್ನು) ನೆಡಲಾಗುತ್ತದೆ. ಇವು ಫಲಕ್ಕೆ ಬಂದಾಗ ಹಳೆಯ ಮರಗಳನ್ನು ತೆಗೆದುಹಾಕುವುದಿದೆ. ಎಡೆ ನೆಟ್ಟಾಗ ಹಳೆಯ ಹಾಗೂ ಹೊಸ ಗಿಡಗಳಿಗೆ ಸಾಕಷ್ಟು ಗೊಬ್ಬರ ಒದಗಿಸಬೇಕು.

ಕರ್ನಾಟಕದಲ್ಲಿ ತೆಂಗಿನ ಬೆಳೆಗೆ ಸುಳಿ ಕೊಳೆಯುವ ರೋಗ, ಎಲೆ ಕೊಳೆಯುವ ರೋಗ, ಎಲೆ ಮಚ್ಚೆ ಮತ್ತು ಚುಕ್ಕೆ, ಕಾಯಿ ಉದುರುವಿಕೆ, ಕಾಯಿ ಕೊಳೆ, ನುಸಿ ರೋಗ ಕಂಡುಬರುತ್ತವೆ. ಕೀಟಗಳಲ್ಲಿ ಆನೇಕೊಂಬಿನ ದುಂಬಿ ಅತ್ಯಂತ ವಿನಾಶಕಾರಿ ಪಿಡುಗು. ತೆಂಗಿನ ಸುಳಿಯಲ್ಲಿ ತೂತು ಉಂಟಾಗಿದ್ದಲ್ಲಿ ತುದಿ ಬಾಗಿರುವ ಕಬ್ಬಿಣದ ಕೊಂಡಿಯನ್ನು ಚುಚ್ಚಿ ಕೀಟವನ್ನು ಹೊರತೆಗೆದು ನಾಶಪಡಿಸಲಾಗುತ್ತದೆ. ಗೊಣ್ಣೆಹುಳು ಹಾಗೂ ಗೆದ್ದಲುಗಳು ಮಣ್ಣಿನೊಳಗೆ ವಾಸಿಸುವ ಇನ್ನಿತರ ಪಿಡುಗುಗಳು. ಮೂತಿಹುಳು, ತೆಂಗಿನ ಪತಂಗ, ನೊಣಗಳು, ಕೆಂಪಿರುವೆ, ಸಾಮಾನ್ಯ ಪೀಡಕಗಳು. ಇಲಿಗಳೂ ಬಾವಲಿಗಳೂ ತೆಂಗಿಗೆ ನಷ್ಟವುಂಟುಮಾಡುವುವು.

ತೆಂಗಿನಿಂದ ರಸವನ್ನು ನೇರವಾಗಿ ತೆಗೆದು ನೀರಾ ಎಂದು ಕುಡಿಯಲೂ ಅದನ್ನು ಕಾಯಿಸಿ ಬೆಲ್ಲ ಪಡೆಯಲೂ ಅಥವಾ ಹುಳಿ ಬರಿಸಿ ಹೆಂಡ ತಯಾರಿಸಲೂ ಉಪಯೋಗಿಸಲಾಗುತ್ತದೆ. ತೆಂಗಿನ ಹೆಂಡ ಇದರ ಸಂಬಂಧಿ ಸಸ್ಯಗಳದ್ದಕ್ಕಿಂತ ರುಚಿಕರವಾದದ್ದು. ಮರದಿಂದ ಯಾವ ತಿಂಗಳಲ್ಲಾದರೂ ರಸ ತೆಗೆಯಲು ಪ್ರಾರಂಭಿಸಿ ವರ್ಷವಿಡೀ ತೆಗೆಯಬಹುದು. ಮಳೆಗಾಲದಲ್ಲಿ ರಸ ಹೆಚ್ಚಾಗುತ್ತದೆ. ಹೊಂಬಾಳೆಯ ತಳಭಾಗ ಬಲಿಯತೊಡಗಿ ಅದರ ಬುಡ ದಪ್ಪವಾದಾಗ ತಳದಿಂದ ಮುಕ್ಕಾಲು ಭಾಗವನ್ನು ನಾರಿನಿಂದ ಬಿಗಿದು ಬೆಳಗ್ಗೆ-ಸಂಜೆ ಮೃದುವಾಗಿ ತಟ್ಟುತ್ತಿದ್ದು 6-7 ದಿನಗಳ ಅನಂತರ ತುದಿಯನ್ನು 19ಮಿಮೀ ನಷ್ಟು ಕೊಯ್ದು, ಎಲೆಚೂರನ್ನು ತುದಿಗೆ ಕೆಳಗೆ ವಾಲಿದಂತೆ ಸಿಕ್ಕಿಸಿ ತಟ್ಟುತ್ತಿದ್ದಲ್ಲಿ ರಸ ಸೋರಲು ಪ್ರಾರಂಭವಾಗುತ್ತದೆ. ಉತ್ತಮವಾಗಿ ರಸ ಒಸರಲು 10-20 ದಿನ ಬೇಕಾಗುತ್ತದೆ. ಬೆಳಗ್ಗೆ-ಸಂಜೆ ಮಡಕೆ ಕಟ್ಟಿ ಇದನ್ನು ಶೇಖರಿಸಲಾಗುತ್ತದೆ. ಕ್ರಮವರಿತು ರಸ ತೆಗೆದಲ್ಲಿ ಗಿಡಕ್ಕೆ ಹಾನಿಯಿಲ್ಲ. ಆದರೆ ದೀರ್ಘಕಾಲ ತೆಗೆಯುತ್ತಿದ್ದರೆ ಹಾನಿಯಾಗುತ್ತದೆ. ಕೆಲವು ಕರಟುಬಿದ್ದ ಮರಗಳಲ್ಲಿ ಹೆಚ್ಚು ರಸ ತೆಗೆಯಬಹುದೆಂದು ಕಂಡುಬಂದಿದೆ.

ತೆಂಗಿನ ಮರದ ಪ್ರತಿಯೊಂದು ಭಾಗವೂ ಉಪಯುಕ್ತ. ಕಾಯಿ, ಜುಂಗು (ನಾರು), ಚಿಪ್ಪು, ಹೊಂಬಾಳೆ, ಎಲೆ ಮತ್ತು ಕಾಂಡಭಾಗಗಳ ವಿವಿಧ ಉತ್ಪನ್ನಗಳು ಸಾಮಾನ್ಯ ಜನಜೀವನದ ನಿತ್ಯಬಳಕೆಯಲ್ಲಿ ಉಪಯುಕ್ತವಾಗಿವೆ. ಎಳನೀರು, ತೆಂಗಿನಕಾಯಿ, ಚಿಪ್ಪು, ಕೊಬ್ಬರಿ ಎಣ್ಣೆ ಮತ್ತು ಹಿಂಡಿ, ಜುಂಗಿನಿಂದ ಚಾಪೆ, ಜಮಖಾನೆ, ಹಗ್ಗಗಳನ್ನು ತಯಾರಿಸುವುದಿದೆ. ಅದರ ಪುಡಿ ಹಾಸಿಗೆ, ದಪ್ಪ ರಟ್ಟು ಮತ್ತು ಉರುವಲಾಗಿ ಉಪಯುಕ್ತವೆನಿಸಿದೆ. ಚಿಪ್ಪು ಪಾತ್ರೆಯಾಗಿ, ಸೌದೆಯಾಗಿ, ಚಿತ್ರಕೌಶಲ ವಸ್ತುಗಳಿಗಾಗಿ, ದಂತಚೂರ್ಣ ಮತ್ತು ಪೊಟ್ಯಾಷ್ ಗೊಬ್ಬರಕ್ಕಾಗಿ ಉಪಯುಕ್ತವಾಗುತ್ತಿದೆ. ತೆಂಗಿನ ರಸದಿಂದ ನೀರಾ, ಬೆಲ್ಲ, ಕೆಂಪುಸಕ್ಕರೆ, ಹೆಂಡ, ಸಾರಾಯಿ ಮತ್ತು ವಿನಿಗರ್ ಉತ್ಪನ್ನ ಮಾಡಲಾಗುತ್ತದೆ. ಎಲೆಗಳು ಮಾಡುಹೊದಿಕೆ, ತಟ್ಟೆ, ಮರಚು ಮತ್ತು ಪೊರಕೆಗಳಿಗೆ ಉಪಯುಕ್ತ. ಬಿದ್ದ ಹೊಂಬಾಳೆಗಳೂ ಎಲೆಯ ಬುಡ, ಗೊಂಚಲು ತಾಳುಗಳೂ ಉತ್ತಮ ಸೌದೆ. ಮರದ ಕಾಂಡದಿಂದ ತೊಲೆ, ತೀರು ತಯಾರಿಸಬಹುದು. ಕರ್ನಾಟಕದಲ್ಲಿ ಈ ಎಲ್ಲ ರೀತಿಯಲ್ಲೂ ತೆಂಗಿನ ಉಪಯೋಗವನ್ನು ಪಡೆಯುವುದು ಸಾಮಾನ್ಯವಾದದ್ದು. ಈ ನಾಡಿನ ಆರ್ಥಿಕತೆಯಲ್ಲಿ ಹೆಚ್ಚು ಜನರಿಗೆ ಉದ್ಯೋಗ ಒದಗಿಸುವುದರಲ್ಲಿ ಇದರ ಪಾತ್ರ ಮುಖ್ಯವಾಗಿದೆ. (ಜಿ.ವಿ.ಬಿ.ಎನ್.)

ಇಂದು ತೆಂಗಿನ ಬೆಳೆ ಕರ್ನಾಟಕದಲ್ಲಿ ವಿಶೇಷವಾಗಿ ಕಂಡುಬಂದರೂ ಈ ಮರ ಮೂಲತಃ ಈ ಪ್ರದೇಶದ್ದಲ್ಲ. ಇದು ಬಹುಶಃ ಶಾಂತಿಸಾಗರದ ದ್ವೀಪಗಳು, ಆಗ್ನೇಯ ಏಷ್ಯ ಈ ಪ್ರದೇಶದಿಂದ

ಬಂದಿರಬಹುದೆಂಬ ಅಭಿಪ್ರಾಯ ಇದೆ. ದಕ್ಷಿಣ ಭಾರತದ ಜನಪದ ಮತ್ತು ಧಾರ್ಮಿಕ ಆಚರಣೆಗಳಲ್ಲಿ ತೆಂಗಿನಕಾಯಿ, ಹೊಂಬಾಳೆ ಮಹತ್ತ್ವದ ಸ್ಥಾನ ಪಡೆದಿರುವುದರಿಂದ ಇದರ ಕೃಷಿ ಬಹಳ ಪ್ರಾಚೀನ ಕಾಲದಲ್ಲೇ ಪ್ರಾರಂಭವಾಗಿರಬೇಕು. ಅದರಲ್ಲೂ ಔತ್ತರೇಯ ವೈದಿಕ ಯಜ್ಞಯಾಗಾದಿಗಳ ಸಂಬಂಧದಲ್ಲಿ ಇದರ ಆಚರಣೆ ಕಾಣಿಸದೆ, ಆರ್ಯಪೂರ್ವ ಸಂಸ್ಕೃತಿಯ ಮುಂದುವರಿಕೆ ಎನ್ನಲಾಗುವ ದೇವಪೂಜಾವಿಧಾನದಲ್ಲಿ ಇದರ ಪಾತ್ರ ಮಹತ್ತ್ವದ್ದಾಗಿರುವುದು ಈ ಸಂದರ್ಭದಲ್ಲಿ ಗಮನಿಸಬೇಕಾದ ವಿಷಯ. ಮೂಲತಃ ಪಾಲಿನೇಷ್ಯ, ಆಗ್ನೇಯ ಏಷ್ಯ ಭಾಗದಿಂದ ಆಸ್ಟ್ರೊ ಏಷ್ಯಾಟಿಕ್ ಭಾಷೆಗಳನ್ನು ಆಡುತ್ತಿದ್ದ, ಆಸ್ಟ್ರಲಾಯಿಡ್ ವರ್ಗದ ಜನ ಪ್ರಾಗಿತಿಹಾಸ ಕಾಲದಲ್ಲಿ ಭಾರತಕ್ಕೆ ವಲಸೆ ಬಂದರೆಂದೂ ಬಹುಶಃ ಆ ಜನರೇ ತೆಂಗಿನ ಕೃಷಿಯನ್ನು ಸಹ ಇಲ್ಲಿ ರೂಢಿಸಿರಬೇಕೆಂದೂ ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆಸ್ಟ್ರಲಾಯಿಡ್ ವರ್ಗದ ಜನರ ಅವಶೇಷಗಳು ಕರ್ನಾಟಕದಲ್ಲಿ ನವಶಿಲಾಯುಗದ ಕಾಲದಿಂದಲೂ (ಕ್ರಿ.ಪೂ.ಸು.2500) ಕಂಡುಬಂದಿದೆಯಾದರೂ ಆ ಕಾಲದಲ್ಲಿ ಇಲ್ಲಿ ತೆಂಗಿನ ಕೃಷಿ ಇದ್ದ ಬಗ್ಗೆ ಸ್ಪಷ್ಟ ಮಾಹಿತಿಗಳು ದೊರಕಿಲ್ಲ. ಮುಂದೆ ಸು.4-5ನೆಯ ಶತಮಾನದಾರಭ್ಯ ಕರ್ನಾಟಕದ ಶಾಸನಗಳಲ್ಲಿ ತೆಂಗು, ತೆಂಗಿನ ತೋಟ ಇವುಗಳ ಬಗ್ಗೆ ಸ್ಪಷ್ಟ ಉಲ್ಲೇಖಗಳು ದೊರಕುತ್ತವೆ. *

**ತೆಕ್ಕಲಕೋಟೆ :** ಬಳ್ಳಾರಿ ಜಿಲ್ಲೆ ಶಿರಗುಪ್ಪ ತಾಲ್ಲೂಕಿನ ಒಂದು ಊರು. ಬಳ್ಳಾರಿಯಿಂದ 44ಕಿಮೀ ದೂರದಲ್ಲಿದೆ. ಇದು ನವ ಶಿಲಾಯುಗ ಕಾಲದ ಅವಶೇಷಗಳಿಗೆ ಪ್ರಸಿದ್ಧವಾಗಿದೆ. ವಿಜಯನಗರದ ಪತನಾನಂತರ ಈ ಗ್ರಾಮ ಬಳ್ಳಾರಿ ಮತ್ತು ಕುರುಗೋಡಿನ ಪಾಳೆಯಗಾರ ಬಾಲದ ಹನುಮಪ್ಪ ನಾಯಕ ಎಂಬುವನಿಗೆ ಕೊಡುಗೆಯಾಗಿ ಸೇರಿತ್ತು. ಆದವಾನಿಯ ಮಹಮ್ಮದೀಯ ಅಧಿಪತಿಗಳು ಈ ಗ್ರಾಮವನ್ನು ನಾಯಕ ಮನೆತನದವರಿಂದ ಕಸಿದುಕೊಂಡರು. 1775ರಲ್ಲಿ ಹೈದರ್‌ಅಲಿ ಈ ಗ್ರಾಮವನ್ನು ವಶಪಡಿಸಿಕೊಂಡು ಚೌಕಾಕಾರದ ಕೋಟೆಯನ್ನು ಕಟ್ಟಿಸಿದ.

ಗ್ರಾಮದ ನೈಋತ್ಯ ದಿಕ್ಕಿನಲ್ಲಿರುವ 'ಹುಡೇದ ಗುಡ್ಡ' ಎಂಬ ಗುಡ್ಡದಲ್ಲಿ ನವಶಿಲಾಯುಗದ 19 ವಾಸದ ನೆಲೆಗಳು ಬೆಳಕಿಗೆ ಬಂದಿವೆ.

1963-64ರಲ್ಲಿ ಇಲ್ಲಿ ನಡೆಸಿದ ಭೂಶೋಧನೆಯಿಂದ ಕರ್ನಾಟಕದ ನವಶಿಲಾಯುಗದ ಜನಜೀವನದ ಬಗ್ಗೆ ಉತ್ತಮವಾದ ಮಾಹಿತಿ ದೊರೆತಿದೆ. ಇಂಗಾಲ-14 ಕಾಲಮಾಪನದ ಪ್ರಕಾರ ತೆಕ್ಕಲಕೋಟೆಯ ನೂತನ ಶಿಲಾಯುಗದ ಕಾಲ ಕ್ರಿ.ಪೂ.1700ರಿಂದ ಕ್ರಿ.ಪೂ.1000ದವರೆಗೆ ಎಂದು ಹೇಳಬಹುದು. ಇಲ್ಲಿ ದೊರೆತ ಸಾಂಸ್ಕೃತಿಕ ಅವಶೇಷಗಳ ಆಧಾರದ ಮೇಲೆ ನೂತನ ಶಿಲಾಯುಗ ಸಂಸ್ಕೃತಿಯಲ್ಲಿ ಎರಡು ಘಟ್ಟಗಳನ್ನು ಕಾಣಬಹುದು.

ಮೊದಲನೆಯ ಘಟ್ಟ ಈ ಸ್ಥಳದ ಅತ್ಯಂತ ಪ್ರಾಚೀನ ಕಾಲಕ್ಕೆ ಸೇರಿದ್ದು. ಈ ಕಾಲದ ನುಣುಪಾಗಿ ಮಾಡಿದ ಕಲ್ಲಿನ ಕೊಡಲಿಗಳು, ಚಕಮಕಿ ಕಲ್ಲಿನಲ್ಲಿ ಮಾಡಿದ ಆಯುಧಗಳು, ಬಂಗಾರದ ಆಭರಣಗಳು, ತಾಮ್ರದ, ಎಲುಬಿನ ಆಯುಧಗಳು ಹಾಗೂ ಅನೇಕ ವಿಧವಾದ ಮಣಿಗಳು, ಕಂದುಬಣ್ಣದ ನುಣುಪಾದ ಮೃತ್ಪಾತ್ರೆಗಳು ದೊರೆತಿವೆ. ಕೆಲವು ವೇಳೆ ಈ ಮಡಕೆಗಳನ್ನು ಸುಟ್ಟ ಅನಂತರ ಕೆಂಪುಮಣ್ಣನ್ನು ಅಂಚುಗಳಲ್ಲಿ ಸವರಿ ಅವನ್ನು ಅಲಂಕರಿಸಿರುವುದು ಕಂಡುಬರುತ್ತದೆ. ಈ ಕಾಲದ ಕೆಲವು ಸಮಾಧಿಗಳು ಸಹ ದೊರೆತಿವೆ.

ಇಲ್ಲಿನ ನವಶಿಲಾಯುಗದ ಎರಡನೆಯ ಘಟ್ಟದಲ್ಲಿ ಕೆಲವು ವೈಶಿಷ್ಟ್ಯಗಳು ಕಂಡುಬರುತ್ತವೆ. ಈ ಕಾಲದಲ್ಲಿ ತಾಮ್ರವಸ್ತುಗಳೂ ಕಲ್ಲಿನ ನುಣುಪಾದ ಕೊಡಲಿಗಳೂ ಚಕಮಕಿ ಕಲ್ಲಿನ ಆಯುಧಗಳೂ ಹೆಚ್ಚು ಹೆಚ್ಚಾಗಿ ದೊರೆಯುತ್ತವೆ. ಆದರೆ ಅತಿ ಪ್ರಮುಖ ಬದಲಾವಣೆಗಳು ಮೃತ್ಪಾತ್ರೆಗಳಲ್ಲಿ ಕಂಡುಬರುತ್ತವೆ. ಕೆಂಪು ಸುದ್ದೆಯಿಂದ ಲೇಪಿತವಾದ ಕಂದುಪಾತ್ರೆಗಳು ಕಡಿಮೆಯಾಗುತ್ತವೆ. ಕೆಂಪು ಹಾಗೂ ಕಪ್ಪುವರ್ಣದ ಚಿತ್ರಿತ ಪಾತ್ರೆಗಳು ಹೊಸದಾಗಿ ಕಂಡುಬರುತ್ತವೆ. ಅಲ್ಲದೆ, ಶ್ವೇತವರ್ಣದಿಂದ ಚಿತ್ರಿತವಾದ ಕಪ್ಪು-ಕೆಂಪಿನ ಬಟ್ಟಲುಗಳು ದೊರೆಯುತ್ತವೆ. ಈ ಕಾಲದ ಅನೇಕ ಸಮಾಧಿಗಳು ಸಹ ದೊರೆತಿವೆ.

ತೆಕ್ಕಲಕೋಟೆಯ ಭೂಶೋಧನೆಯ ಫಲವಾಗಿ, ನವಶಿಲಾಯುಗದ ಜನಜೀವನವನ್ನು ಕ್ರಿ.ಪೂ.1700ರಿಂದ ಚಿತ್ರಿಸಬಹುದು. ಈ ಜನರು ಗುಡ್ಡ ಪ್ರದೇಶದಲ್ಲಿ ವಾಸಿಸುತ್ತಿದ್ದರು; ಗುಡ್ಡದ ಬಂಡೆಗಳು ಸ್ವಾಭಾವಿಕವಾದ ಕೋಟೆಗಳಂತಿದ್ದು ಇದರಿಂದ ಆ ಜನರಿಗೆ ರಕ್ಷಣೆ ದೊರೆಯುತ್ತಿದ್ದಿತು. ಗುಡ್ಡದ ತಪ್ಪಲು ವ್ಯವಸಾಯಕ್ಕೆ ಅನುಕೂಲವಾಗಿದ್ದಿತು. ಸಂಶೋಧನೆಯಲ್ಲಿ ಗುಡಿಸಲುಗಳ ಅವಶೇಷಗಳು ದೊರೆತಿವೆ. ಈ ಕಾಲದಲ್ಲಿ ದುಂಡು ಗುಡಿಸಲುಗಳಿದ್ದುವು. ಅವುಗಳ ಗೋಡೆಗೆ ಹೆಣೆದ ಬೊಂಬಿನ ಚಾಪೆಗಳನ್ನಿಟ್ಟು, ಮಣ್ಣಿನಿಂದ ಮೆತ್ತುತ್ತಿದ್ದರು. ಅಲ್ಲಲ್ಲಿ ಬೊಂಬಿನ ಕಂಬಗಳನ್ನು ನೆಟ್ಟು ಗೋಡೆಯನ್ನು ಗಟ್ಟಿ ಮಾಡುತ್ತಿದ್ದರು. ಗುಡಿಸಿಲಿನ ಒಳಭಾಗದ ನೆಲವನ್ನು ಗಟ್ಟಿಮಾಡಿ, ಆಗಾಗ್ಗೆ ಸಾರಿಸುತ್ತಿದ್ದರು. ಗುಡಿಸಿಲಿನ ಗೋಡೆ ಗಟ್ಟಿಯಾಗಿರಲೆಂದು, ಹೊರಭಾಗದಲ್ಲಿ ಕಲ್ಲುಗುಂಡುಗಳನ್ನು ಆಸರೆಯಾಗಿ, ಸುತ್ತಲೂ ಜೋಡಿಸುತ್ತಿದ್ದರು. ಇಂತಹ ಗುಡಿಸಲುಗಳ, ಅವಶೇಷಗಳು ಉತ್ಖನನದಲ್ಲಿ ದೊರೆತಿವೆ.

ಈ ಕಾಲದಲ್ಲಿ ತಿಗರಿಯ (ಕುಂಬಾರನ ಚಕ್ರ) ಉಪಯೋಗ ಇರಲಿಲ್ಲ. ಮಡಕೆಗಳನ್ನು ಕೈಯಿಂದಲೇ ರೂಪಿಸುತ್ತಿದ್ದರು. ಕಾಳುಗಳನ್ನು ಶೇಖರಿಸಲು ದೊಡ್ಡ ರಂಜಣಿಗೆಗಳು, ದುಂಡು ಮಡಕೆಗಳು ಮತ್ತು ಬಟ್ಟಲುಗಳು ದೊರೆತಿವೆ. ಕೆಲವು ಪಾತ್ರೆಗಳ ತಳಭಾಗದಲ್ಲಿ ರಂಧ್ರಗಳು ಕಂಡುಬಂದಿವೆ. ದೊಡ್ಡ ಮಡಕೆಗಳನ್ನು ಸಮಾಧಿಗಳಲ್ಲೂ ಉಪಯೋಗಿಸುತ್ತಿದ್ದರು. ಕಪ್ಪು ಮತ್ತು ಕೆಂಪು ಬಣ್ಣದ ಬಟ್ಟಲುಗಳನ್ನು ವಿಶೇಷವಾಗಿ, ಸಮಾಧಿಗಳಲ್ಲಿ ಉಪಯೋಗಿಸುತ್ತಿದ್ದರು. ಉತ್ಖನನದಲ್ಲಿ ಆಕಳು, ಕುರಿ, ಜಿಂಕೆ, ಅಳಿಲು ಮತ್ತು ಇಲಿಗಳ ಎಲುಬುಗಳು ದೊರಕಿವೆ. ಕೆಲವು ಪ್ರಾಣಿಗಳನ್ನು ಆಹಾರಕ್ಕಾಗಿ ಉಪಯೋಗಿಸಿದ್ದಿರಬಹುದು. ಅನೇಕ ಸುಟ್ಟ ಎಲುಬುಗಳು ದೊರೆತಿರುವುದರಿಂದ, ಮಾಂಸವನ್ನು ಬೇಯಿಸಿ ತಿನ್ನುತ್ತಿದ್ದರೆಂದು ಹೇಳಬಹುದು. ಈ ಜನ ವ್ಯವಸಾಯವನ್ನೂ ಮಾಡುತ್ತಿದ್ದರು. ಉತ್ಖನನದಲ್ಲಿ ಆ ಕಾಲದ ಹುರುಳಿಕಾಳು ದೊರೆತಿರುವುದು ಇದಕ್ಕೆ ಸಾಕ್ಷಿ.

ನುಣುಪುಕಲ್ಲಿನ ಕೈಗೊಡಲಿಗಳು ಮತ್ತು ಚಕಮಕಿ ಕಲ್ಲಿನ ಹರಿತವಾದ ಸಣ್ಣ ಆಯುಧಗಳನ್ನು ಇಲ್ಲೇ ತಯಾರಿಸಿಕೊಳ್ಳುತ್ತಿದ್ದರು. ಇವಲ್ಲದೆ ಎಲುಬಿನ ಆಯುಧಗಳು, ತಾಮ್ರದ ಕೊಡಲಿ ಮತ್ತು ಮೀನಿನ ಗಾಳಗಳು ದೊರೆತಿವೆ. ಇಲ್ಲಿ ಸಿಕ್ಕಿರುವ ಸುಟ್ಟ ಮಣ್ಣಿನ, ಎಲುಬಿನ ಮತ್ತು ಹರಳಿನ ಮಣಿಗಳು ನವಶಿಲಾಯುಗದ ಜನರು ಅಲಂಕಾರಪ್ರಿಯರು ಎಂಬುದನ್ನು ತೋರಿಸುತ್ತದೆ. ಚಿನ್ನದ ಕಿವಿಯ ಆಭರಣಗಳೂ ದೊರೆತಿವೆ. ಇಲ್ಲಿ ದೊರೆತ ಒಂದು ಮಣ್ಣಿನ ಮುಚ್ಚಳಿಕೆಯ ಮೇಲೆ ಎರಡು ನವಿಲುಗಳು, ಹಾವು, ಗೂಳಿ ಮತ್ತು ಜಿಂಕೆಗಳನ್ನು ಚುಚ್ಚು ಚಿತ್ರವಾಗಿ ಚಿತ್ರಿಸಿದ್ದಾರೆ. ಇದು ಕರ್ನಾಟಕದಲ್ಲಿ ದೊರೆತಿರುವ ಅತಿ ಪ್ರಾಚೀನ ಕಲಾಕೃತಿಗಳಲ್ಲೊಂದು.

ತೆಕ್ಕಲಕೋಟೆಯ ನವಶಿಲಾಯುಗದ ಪ್ರಥಮ ಘಟ್ಟದ ಜನರು ಹೆಣವನ್ನು ಕೆಲವು ಕಾಲ ಹೊರಗಿಟ್ಟು ಅನಂತರ ತಲೆಬುರುಡೆ, ಕೈಕಾಲುಗಳ ಎಲುಬುಗಳನ್ನು ಶೇಖರಿಸಿ, ಗುಂಡಿಯಲ್ಲಿ ಹೂಳುತ್ತಿದ್ದರೆಂದು ಕಾಣಬರುತ್ತದೆ. ಇಂಥ ಒಂದು ಸಮಾಧಿಯಲ್ಲಿ ಮೂವರು ವ್ಯಕ್ತಿಗಳ ಅಸ್ಥಿ ಅವಶೇಷಗಳು ಕಂಡುಬಂದುವು. ಇದರ ಬದಿಯಲ್ಲೇ ದೊರೆತ ಮತ್ತೊಂದು ಸಮಾಧಿಯಲ್ಲಿ ಪೀಠವುಳ್ಳ ಬಟ್ಟಲನ್ನು ತಲೆಯ ಬಳಿ ಇಟ್ಟಿದ್ದರು.

ನವಶಿಲಾಯುಗದ ಎರಡನೆಯ ಘಟ್ಟದಲ್ಲಿ ಶವಸಂಸ್ಕಾರ ಪದ್ಧತಿಯಲ್ಲಿ ಸ್ವಲ್ಪ ಬದಲಾವಣೆಯಾದಂತೆ ಕಂಡುಬರುತ್ತದೆ. ಈ ಜನ ಪೂರ್ಣ ಶವವನ್ನೇ ಗುಂಡಿಯಲ್ಲಿ ಹೂಳುತ್ತಿದ್ದರು. ಅದೇ ಗುಂಡಿಯಲ್ಲಿ ಅನೇಕ ಪಾತ್ರೆಗಳನ್ನು ಇಡುತ್ತಿದ್ದರು. ವಿಶೇಷವೆಂದರೆ ಕಪ್ಪು ಮತ್ತು ಕೆಂಪು ವರ್ಣದ ಬಟ್ಟಲುಗಳನ್ನು ತಪ್ಪದೆ ಇಡುತ್ತಿದ್ದರು. ಕೆಲವು ನಿದರ್ಶನಗಳಲ್ಲಿ, ಇಂಥ ಕಪ್ಪು-ಕೆಂಪು ಬಟ್ಟಲುಗಳು ಶ್ವೇತವರ್ಣರೇಖೆಗಳಿಂದ ರಂಜಿತವಾಗಿರುತ್ತಿದ್ದವು. ಅಲ್ಲದೆ, ಶವಗಳನ್ನು ಅಡ್ಡಡ್ಡವಾಗಿ ತಳ ಒಡೆದು ಸಾಲಾಗಿ ಜೋಡಿಸಿದ ಮಡಕೆಗಳಲ್ಲಿಟ್ಟು, ಗುಂಡಿಗಳಲ್ಲಿ ಹೂಳುವ ನಿದರ್ಶನಗಳೂ ತೆಕ್ಕಲಕೋಟೆಯಲ್ಲಿ ಇವೆ. ವಯಸ್ಕರನ್ನು 5 ಮಡಕೆಗಳಲ್ಲಿಯೂ ಮಕ್ಕಳನ್ನು ಒಂದು ಅಥವಾ ಎರಡು ಮಡಕೆಗಳಲ್ಲಿಯೂ

ಸಮಾಧಿ ಮಾಡಿರುವುದು ಇಲ್ಲಿ ಕಂಡುಬಂದಿವೆ. ಈ ಗುಂಡಿಗಳಲ್ಲಿಯೂ ಮಣ್ಣಿನ ಪಾತ್ರೆಗಳನ್ನು ಜೋಡಿಸುತ್ತಿದ್ದರು.

ಎಲ್ಲ ಸಮಾಧಿಗಳೂ ಜನ ವಾಸಮಾಡುತ್ತಿದ್ದಲ್ಲಿಯೇ ಕಂಡುಬಂದಿವೆ. ಕೆಲವು ವೇಳೆ ಅವರು ವಾಸಿಸುತ್ತಿದ್ದ ಗುಡಿಸಿಲಿನ ನೆಲದಲ್ಲಿಯೇ ಅವನ್ನು ಹುಗಿದಿದ್ದಾರೆ. ಸಮಾಧಿ ಮಾಡಿ ಗುಂಡಿಗಳಲ್ಲಿ ಬಹುಶಃ ಆಹಾರಪೂರಿತ ಪಾತ್ರೆಗಳನ್ನು ಹೂಳುತ್ತಿದ್ದುದು, ಇವರಿಗೆ ಮರಣೋತ್ತರ ಜೀವನದಲ್ಲಿ ನಂಬಿಕೆ ಇತ್ತೆಂಬುದನ್ನು ತೋರಿಸುತ್ತದೆ. ಇಂಥ ಸಮಾಧಿಗಳು ಮಹಾರಾಷ್ಟ್ರದ ಸಮಕಾಲೀನ ಸಾಂಸ್ಕೃತಿಕ ಅವಶೇಷಗಳನ್ನು ಹೊಂದಿರುವ ಬಹಾಳ-ಟೇಕವಾಡ, ನೆವಾಸ, ದಾಯಿಮಾಬಾದ್ ಮತ್ತು ಚಂದೋಳಿಗಳಲ್ಲಿ ದೊರೆತಿವೆ. ಇವುಗಳ ಆಧಾರದ ಮೇಲೆ ಕರ್ನಾಟಕದ ನವಶಿಲಾಯುಗದ ಜನಾಂಗಕ್ಕೂ ಮಹಾರಾಷ್ಟ್ರದ ತಾಮ್ರ-ಪಾಷಾಣಯುಗದ ಜನಾಂಗಕ್ಕೂ ಪರಸ್ಪರ ಸಾಂಸ್ಕೃತಿಕ ಸಂಬಂಧವಿತ್ತೆಂದು ಊಹಿಸಬಹುದು.

ತೆಕ್ಕಲಕೋಟೆಯ ಗುಡ್ಡದಲ್ಲಿ ಅನೇಕ ಸ್ವಾಭಾವಿಕ ಗುಹೆಗಳಿವೆ. ಅವುಗಳನ್ನು ನವಶಿಲಾಯುಗದ ಜನರು ಉಪಯೋಗಿಸುತ್ತಿದ್ದರೆಂಬುದಕ್ಕೆ ಆ ಗುಹೆಗಳಲ್ಲಿ ಇರುವ ಕೆಂಪುಮಣ್ಣಿನ ಚಿತ್ರಗಳೇ ಸಾಕ್ಷಿ. ಅಲ್ಲಿ ಚಿತ್ರಿಸಿರುವುದು ಗೂಳಿಗಳು ಮತ್ತು ಮಾನವರನ್ನು. ಇವು ಶೈಲಿಯಲ್ಲಿ ತಾಮ್ರ ಶಿಲಾಯುಗದ ಮಡಕೆಗಳ ಮೇಲಿರುವ ಚಿತ್ರಗಳನ್ನು ಹೋಲುತ್ತವೆ.

ತೆಕ್ಕಲಕೋಟೆಯ ಮತ್ತೊಂದು ವೈಶಿಷ್ಟ್ಯವೆಂದರೆ ಇಲ್ಲಿನ ನವಶಿಲಾಯುಗದ ಅನೇಕ ಸಾಂಸ್ಕೃತಿಕ ಅಂಶಗಳು ಇಂದಿಗೂ ಈ ಸ್ಥಳದಲ್ಲಿ ವಾಸವಾಗಿರುವ ಆದಿವಾಸಿ ಬೇಟೆಗಾರರಾದ ಬೋಯ ಜನಾಂಗದವರಲ್ಲಿ ಉಳಿದಿರುವುದು. ಈ ಜನ ಪ್ರತಿವರ್ಷವೂ ಯುಗಾದಿ ಹಬ್ಬದಂದು ಹುಡೇದ ಗುಡ್ಡಕ್ಕೆ ಬೇಟೆಗಾಗಿ ಹೋಗಿ ಮೊಲ ಮುಂತಾದುವುಗಳನ್ನು ಬೇಟೆಯಾಡಿ, ಸಂಜೆಗೆ ಸಾಮೂಹಿಕ ನೃತ್ಯ ಮಾಡಿ, ಬೇಟೆ ಮಾಡಿದ ಪ್ರಾಣಿಗಳನ್ನು ಸಾಮೂಹಿಕವಾಗಿ ಭುಜಿಸುತ್ತಾರೆ. ಇದೇ ವಸ್ತುವಾಗುಳ್ಳ, ಸುಮಾರು ನವಶಿಲಾಯುಗ ಕಾಲದ ಒಂದು ವರ್ಣಚಿತ್ರ ತೆಕ್ಕಲಕೋಟೆಯ ಗುಹೆಯೊಂದರಲ್ಲಿ ಇದೆ. ಇದರಲ್ಲಿ ಮುಖ್ಯಸ್ಥನೊಬ್ಬನು ಒಂದು ಪ್ರಾಣಿಯ ಮೇಲೆ ಕುಳಿತು ಬೇಟೆಗೆ ಹೊರಟಿದ್ದಾನೆ. ಅನಂತರ ಕೈಕೈಹಿಡಿದು ಸಾಮೂಹಿಕ ನೃತ್ಯ ಮಾಡುತ್ತಿರುವ ಚಿತ್ರವಿದೆ. ಈ ಚಿತ್ರದಲ್ಲಿ ಚಿತ್ರಿಸಿರುವಂತೆ, ಮನುಷ್ಯರ ಚಿತ್ರಗಳನ್ನು ಬೋಯ ಗುಡಿಸಿಲಿನ ಹೊರಗೆ ಕೆಂಪು ಮಣ್ಣಿನಿಂದ ಇಂದಿಗೂ ಚಿತ್ರಿಸುತ್ತಾರೆ. ಈ ಚಿತ್ರದ ವ್ಯಕ್ತಿಗಳು ದುಷ್ಟಶಕ್ತಿಗಳನ್ನು ಗುಡಿಸಿಲಿನಿಂದ ಹೊರಗಿಡುತ್ತಾರೆಂಬುದು ಅವರ ನಂಬಿಕೆ. ಬೋಯ ಜನರ ಗುಡಿಸಿಲುಗಳು ಸಹ ತೆಕ್ಕಲಕೋಟೆಯ ನವ ಶಿಲಾಯುಗ ಕಾಲದ ಗುಡಿಸಿಲುಗಳಂತೆಯೇ ಇವೆ. ಅವುಗಳೂ ದುಂಡಾಕಾರವಾಗಿದ್ದು ಒಳಭಾಗ, ಗೋಡೆ ಮತ್ತು ನೆಲ ಮಣ್ಣಿನಿಂದ ಸಾರಿಸಲ್ಪಡುತ್ತವೆ. ಚಾಪೆ ಅಥವಾ ಜೊಂಡಿನಿಂದ ಮಾಡಿದ ಗೋಡೆಯನ್ನು ಭದ್ರವಾಗಿರಿಸಲು ಕಲ್ಲು ಗುಂಡುಗಳನ್ನು ಗುಡಿಸಿಲಿನ ಸುತ್ತಲೂ ದುಂಡಾಕಾರವಾಗಿ ಜೋಡಿಸುತ್ತಾರೆ. ಈ ರೀತಿಯ ಹಲವು ಸಾಂಸ್ಕೃತಿಕ ಅಂಶಗಳು ತೆಕ್ಕಲಕೋಟೆಯ ಬೋಯ ಜನಾಂಗದಲ್ಲಿ ಇಂದಿಗೂ ಉಳಿದುಕೊಂಡು ಬಂದಿರುವುದು. ಆ ಜನರೇ ನವಶಿಲಾಯುಗದ ಜನಾಂಗದ ಆನುವಂಶಿಕರೆಂದು ಊಹೆ ಮಾಡಲು ಅವಕಾಶ ಒದಗಿಸಿದೆ.

ಬಹು ಪ್ರಾಚೀನವಾದ ನವಶಿಲಾಯುಗದ ಸಂಸ್ಕೃತಿಯ ಬಗ್ಗೆ ಹೊಸ ಬೆಳಕನ್ನೂ ಕರ್ನಾಟಕದ ಜನಪದ ಸಂಪ್ರದಾಯಗಳ ಪ್ರಾಚೀನತೆಯ ಬಗ್ಗೆ ಕುರುಹನ್ನೂ ಒದಗಿಸಿರುವ ತೆಕ್ಕಲಕೋಟೆಯ ಪ್ರಾಗೈತಿಹಾಸಿಕ ಅಧ್ಯಯನ ಕರ್ನಾಟಕದಲ್ಲಿ ಇತ್ತೀಚೆಗೆ ನಡೆದಿರುವ ಒಂದು ಮುಖ್ಯ ಸಂಶೋಧನ ಕಾರ್ಯವಾಗಿದೆ. (ಎಂ.ಎಸ್.ಎನ್.ಆರ್.)

**ತೆರಕಣಾಂಬಿ :** ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಕಸಬೆಯಿಂದ 11ಕಿಮೀ ದೂರದಲ್ಲಿ ಚಾಮರಾಜನಗರದ ರಸ್ತೆಯಲ್ಲಿರುವ ಊರು. ಇದೇ ಹೆಸರಿನ ಹೋಬಳಿಯ ಮುಖ್ಯ ಸ್ಥಳ. ದ್ರಾವಿಡ, ಕೇರಳ ಮತ್ತು ಹದಿನಾಡು ಅಥವಾ ದಕ್ಷಿಣ ಕರ್ನಾಟಕ ಇಲ್ಲಿ ಕೂಡುತ್ತಿದ್ದುದರಿಂದ ಇದು ಕೂಡುಗಲ್ಲೂರು ಎಂದೂ ತ್ರಿಕದಂಬಪುರ ಎಂದೂ ಹೆಸರಾಯಿತೆಂದು ಪ್ರತೀತಿ. ಆರನೆಯ ಶತಮಾನದಲ್ಲಿ ಕರ್ನಾಟಕದ ದಕ್ಷಿಣ ಭಾಗದಲ್ಲಿ ಆಳುತ್ತಿದ್ದ ಕದಂಬ ವಂಶದ ತ್ರಿನೇತ್ರ ಕದಂಬ (ಲಂಬಕರ್ಣರಾಯ) ಎಂಬುವನು ಈ ಕೂಡು ಸ್ಥಳದಲ್ಲಿ ತ್ರಿಕದಂಬ ಅಥವಾ ಮುಕ್ಕಣ್ಣನ (ಶಿವ) ದೇವಾಲಯವನ್ನು ಕಟ್ಟಿಸಿದ್ದ. ಈ ಕಾರಣದಿಂದ ಈ ಊರಿಗೆ ತೆರಕಣಾಂಬಿ ಹೆಸರು ಬಂತು ಎಂಬುದೂ ಒಂದು ಅಭಿಪ್ರಾಯ.

ತೆರಕಣಾಂಬಿಯಲ್ಲಿ ಶಿವಸಮುದ್ರದ ಮಾಧವರಾಯ ಆಳುತ್ತಿದ್ದ ಎನ್ನಲಾಗಿದೆ. ಹೊಯ್ಸಳ ರಾಜ್ಯದಲ್ಲಿದ್ದ ಈ ಊರನ್ನು ಅನಂತರ ವಿಜಯನಗರದ ಹರಿಹರ ವಿಸ್ತರಿಸಿದ. 16ನೆಯ ಶತಮಾನದಲ್ಲಿ ಈ ಊರು ಉಮ್ಮತ್ತೂರಿನ ನಾಯಕನ ವಶದಲ್ಲಿತ್ತು. ತರುವಾಯ ಇದರ ಸುತ್ತಮುತ್ತಲ ಪ್ರದೇಶವು ತೆಲುಗುಮೂಲದ ದಾಳಿಕೋರರ ಲೂಟಿಗೆ ಒಳಗಾಯಿತು. 1624ರಲ್ಲಿ ಇದು ಮೈಸೂರಿನ ರಾಜ ಒಡೆಯರ ಅಧೀನಕ್ಕೊಳಪಟ್ಟಿತು. ಈ ಕಾಲದಲ್ಲಿ ಇದರ ಮಹತ್ತ್ವ ಕುಗ್ಗುತ್ತ ಬಂದು ಗುಂಡ್ಲುಪೇಟೆ ಮುಖ್ಯ ಸ್ಥಳವಾಯಿತು. ಹಾಗೆಯೇ ಇದು ಇಬ್ಭಾಗವಾಗಿ ಅವಲ್ ತೆರಕಣಾಂಬಿ ಮತ್ತು ದುಯಂ ತೆರಕಣಾಂಬಿ ಎಂದಾಯಿತು. ಪೂರ್ಣಯ್ಯನವರು ಇವೆರಡನ್ನೂ ಗುಂಡ್ಲುಪೇಟೆ ತಾಲ್ಲೂಕಿಗೆ ಸೇರಿಸಿದರು. 1747ರಲ್ಲಿ ಮರಾಠರು ಈ ಊರಿನ ಕೋಟೆಯನ್ನು ನಾಶಪಡಿಸಿದರು. ಇಂದೂ ಸಹ ಐದು ಪ್ರಾಕಾರದ ಭಗ್ನಕೋಟೆ, ಹಳೆಯ ಅರಮನೆಯ ನಿವೇಶನ ಉಳಿದಿವೆ. ಅರಮನೆ ಆರು ಮಹಡಿಗಳಿಂದ ಕೂಡಿತ್ತೆಂದು ಸ್ಥಳೀಯ ಐತಿಹ್ಯ. ಉಮ್ಮತ್ತೂರು ನಾಯಕರುಗಳು ಬರೆಸಿದ ಶಾಸನಗಳು (1489-1504) ಮತ್ತು ಕೃಷ್ಣದೇವರಾಯನ ಒಂದು ಶಾಸನ (1520) ಇಲ್ಲಿ ದೊರೆತಿವೆ.

ತೆರಕಣಾಂಬಿಯಲ್ಲಿ 12 ದೇವಾಲಯಗಳ ಅವಶೇಷಗಳಿವೆ. ಮುಖ್ಯದೇವಾಲಯ ಲಕ್ಷ್ಮೀವರದರಾಜ ಸ್ವಾಮಿಯದು. ಇದು ಸುಂದರವಾದ ಕಂಬಗಳಿರುವ ದ್ರಾವಿಡ ಶೈಲಿಯ ಕಟ್ಟಡ. ಮುಮ್ಮಡಿ ಕೃಷ್ಣರಾಜ ಒಡೆಯರು ಇದರ ವಿಗ್ರಹವನ್ನು ಮೈಸೂರಿನ ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನಕ್ಕೆ ಸಾಗಿಸಿ, ಬದಲಿಯಾಗಿ ಬೇರೊಂದನ್ನು ಮಾಡಿಸಿಕೊಟ್ಟಿದ್ದಾರೆ. ಬಾಲಕೃಷ್ಣ, ಬಾಲಬಲರಾಮ, ಕೃಷ್ಣನಿಗೆ ಹಾಲೂಡಿಸುತ್ತಿರುವ ಯಶೋಧೆ - ಈ ಕಂಚಿನ ಶಿಲ್ಪಗಳು ದೇವಾಲಯದಲ್ಲಿವೆ.

ಸುಗ್ರೀವ ದೇವಾಲಯದಲ್ಲಿ 6 ಅಡಿ ಎತ್ತರದ ಸುಗ್ರೀವನ ವಿಗ್ರಹವಿದೆ. ಹನುಮಂತ ದೇವಾಲಯ ಉತ್ತಮ ವಾಸ್ತುಕೃತಿ. 1640ರಲ್ಲಿ ಒಬ್ಬ ವ್ಯಾಪಾರಿ ಇದನ್ನು ಕಟ್ಟಿಸಿದ. ಈ ಊರಿನ ಸುತ್ತಮುತ್ತ ಅನೇಕ ಕೆರೆಗಳಿದ್ದುದು ಹಾಗೂ ರಾಮಭದ್ರ ದೇವಾಲಯದ ಬೃಹತ್ ಅವಶೇಷ ಈಗಲೂ ಕಂಡುಬರುತ್ತದೆ. ಪ್ರತಿ ಗುರುವಾರ ತೆರಕಣಾಂಬಿಯಲ್ಲಿ ದೊಡ್ಡ ಸಂತೆ ನಡೆಯುತ್ತದೆ. (ಕೆ.ಎಸ್.ಎನ್.)

**ತೆರಕಣಾಂಬಿಯ ಬೊಮ್ಮರಸ :** ಸು.1485. ಜೈನಕವಿ. ಸನತ್ಕುಮಾರ ಚರಿತೆ, ಜೀವಂಧರಸಾಂಗತ್ಯ ಎಂಬ ಕಾವ್ಯಗಳ ಕರ್ತೃ. ಮೈಸೂರು ಜಿಲ್ಲೆಯ ತೆರಕಣಾಂಬಿ ಈತನ ಜನ್ಮಸ್ಥಳ. ವಿಜಯನಗರದ ಪ್ರೌಢರಾಯನ (1424-46) ಆಸ್ಥಾನದ ವಿದ್ವಾಂಸರನ್ನು ವಾದದಲ್ಲಿ ಸೋಲಿಸಿದನೆಂದು ಕವಿ ಹೇಳಿರುವ ನೇಮಿಚಂದ್ರ ಈತನ ಅಜ್ಜ, ತಂದೆ ಬೊಮ್ಮರಸೋಪಾಧ್ಯಾಯ.

ಸನತ್ಕುಮಾರಚರಿತೆ ಭಾಮಿನೀಷಟ್ಪದಿಯಲ್ಲಿ ರಚಿತವಾಗಿದೆ. ಇದರಲ್ಲಿ 17 ಸಂಧಿ, 870 ಪದ್ಯ ಇವೆ. ಹಸ್ತಿನಾಪುರದ ರಾಜ ವಿಶ್ವಸೇನನ ಮಗ ಸನತ್ಕುಮಾರನ ಕಥೆ ಕಾವ್ಯವಸ್ತು. ಕಥಾನಿರೂಪಣೆ ನೇರವಾಗಿದೆ, ವರ್ಣನೆಗಳು ಸುಂದರವಾಗಿವೆ. ಅದರಲ್ಲೂ ಭಕ್ಷ್ಯಭೋಜ್ಯಗಳನ್ನು ಕುರಿತ ವರ್ಣನೆಗಳಂತೂ ಮನೋಹರವಾಗಿವೆ.

ಜೀವಂಧರಸಾಂಗತ್ಯ ಸಾಂಗತ್ಯ ಗ್ರಂಥ. ಇದರಲ್ಲಿ 20 ಸಂಧಿಗಳೂ 1,494 ಪದ್ಯಗಳೂ ಇವೆ. ರಾಜಪುರಿಯ ಸತ್ಯಂಧರ ರಾಜನ ಮಗ ಜೀವಂಧರನ ಚರಿತ್ರೆ ಕಾವ್ಯವಸ್ತು. ಭಾಸ್ಕರನ (ಸು.1424) ಜೀವಂಧರಚರಿತೆ ಹಾಗೂ ವಾದೀಭಸಿಂಹ ಸೂರಿಯ ಸಂಸ್ಕೃತ ಜೀವಂಧರಚರಿತೆ ಈ ಕಾವ್ಯಕ್ಕೆ ಆಕರಗಳು. ಸಾಂಗತ್ಯ ಶೈಲಿ ಸರಸವೂ ಸರಳವೂ ಆಗಿದೆ. (ಎಂ.ಎಚ್.ಕೆ.)

**ತೆಲುಗು ಜಂಗಮರು :** ತುಮಕೂರು ಜಿಲ್ಲೆಯಲ್ಲಿ ವಿಶೇಷವಾಗಿ ಕಾಣಸಿಗುವ ಲೌಕಿಕ ವೃತ್ತಿಗಾಯಕರು. ಇವರ ಮನೆಮಾತು ತೆಲುಗಾದರೂ ಹಾಡುವ ಕಾವ್ಯಗಳ ಭಾಷೆ ಕನ್ನಡ. ಹಾಡುವಾಗ ಏಕತಾರಿ ಎಂಬ



ವಾದ್ಯ ಹಾಗೂ ಬಟ್ಟುತಾಳವನ್ನೂ ಕೆಲವೊಮ್ಮೆ ಬಟ್ಟುತಾಳಕ್ಕೆ ಬದಲಾಗಿ ಚಿಟಗಿಯನ್ನೂ ಬಳಸುತ್ತಾರೆ. ಮೂಲದಲ್ಲಿ ಇವರು ಏಕ ತಾರಿಯೊಡನೆ ತತ್ತ್ವ ಪದಗಳನ್ನು ಹೇಳುತ್ತ ಊರೂರುಗಳ ಮೇಲೆ ಸುತ್ತುತ್ತಿದ್ದು ಕ್ರಮೇಣ ಜೀವನ ನಿರ್ವಹಣೆಗಾಗಿ ಕೆಲವು ಕಥೆಗಳನ್ನು ಹಾಡಲು ಕಲಿತರೆಂದು ತೋರು ತ್ತದೆ. ಬಾಲನಾಗಮ್ಮ, ಗಂಗೆ-ಗೌರಿ ಜಗಳ, ನಂಜುಂಡೇಶ್ವರ, ಅಣ್ಣತಂಗಿ, ಕೆಂಪೇಗೌಡನ ಲಾವಣಿ-ಇವು ಇವರು ಹಾಡುವ ಮುಖ್ಯ ಕಾವ್ಯಗಳು. ಇವರ ಕುಲದೇವತೆಗಳು ವೀರಭದ್ರಸ್ವಾಮಿ ಮತ್ತು ಗಂಗಮ್ಮ. ಮನೆದೇವತೆಗಳು ನಂಜುಂಡೇಶ್ವರ ಹಾಗೂ ಸುಬ್ರಹ್ಮಣ್ಯ. ಆಂಧ್ರದ ಚಿತ್ತೂರಿನ ಕುಳ್ಳಂಪಲ್ಲಿಯ ವೀರ ಭದ್ರಸ್ವಾಮಿ ಮಠಕ್ಕೆ ಇವರು ನಡೆದುಕೊಳ್ಳುತ್ತಾರೆ. ಇತ್ತೀಚೆಗೆ ತೆಲುಗು ಜಂಗಮರು ಬೇಸಾಯ ಮುಂತಾದ ಬೇರೆ ಬೇರೆ ವೃತ್ತಿಗಳನ್ನು ಅವಲಂಬಿಸಿದ್ದಾರೆ. (ಪಿ.ಕೆ.ಆರ್.)

**ತೆಲುಗು ಜೊಮ್ಮಯ್ಯ :** ಸು.1160. ವಚನಕಾರ. ಬಸವಣ್ಣನ ಸಮಕಾಲೀನ. ಈತನ ಅಂಕಿತ ತೆಲುಗೇಶ್ವರ ಎಂದು ಹೇಳಿದ ಕವಿಚರಿತೆಕಾರರು ಮುಂದೆ ತಮ್ಮ ಅಭಿಪ್ರಾಯವನ್ನು ಬದಲಾಯಿಸಿ,ಈ ಅಂಕಿತ ತೆಲುಗೇಶ ಮಸಣಯ್ಯನದೆಂದು ತಿದ್ದಿಕೊಂಡರು. ಹೀಗಾಗಿ ತೆಲುಗು ಜೊಮ್ಮಯ್ಯ ವಚನಗಳನ್ನು ಬರೆದಿದ್ದಾನೆಯೋ ಇಲ್ಲವೋ ಖಚಿತವಾಗಿ ಹೇಳುವಂತಿಲ್ಲವೆಂಬುದು ಡಿ.ಎಲ್.ನರಸಿಂಹಾಚಾರ್ಯರ ಅಭಿಪ್ರಾಯ. ಈತನ ಕಾಲ ಕ್ರಿ.ಶ. ಸು.1160 ಎಂದು ಆರ್.ನರಸಿಂಹಾಚಾರ್ಯರು ಹೇಳಿದರೆ, ಈತ ಪೆರ್ಮಾಡಿ ಜಗದೇಕಮಲ್ಲನಿಗೆ ಸಮಕಾಲೀನನೆಂಬ ಆಧಾರವನ್ನು ಗಮನಿಸಿ ಡಿ.ಎಲ್.ನರಸಿಂಹಾಚಾರ್ಯರು ಈತನ ಕಾಲವನ್ನು ಸು.1144 ಎಂದು ಹೇಳುತ್ತಾರೆ. ಬಸವಣ್ಣ ತನ್ನ ವಚನಗಳಲ್ಲಿ ಉಲ್ಲೇಖಿಸಿರುವ ಶರಣರು, ವಚನಕಾರರಲ್ಲಿ ಈತನೂ ಸೇರಿದ್ದಾನೆ.

ಈತನ ಕಥೆ ಹರಿಹರನ ಒಂದು ರಗಳೆಗೆ ವಸ್ತುವಾಗಿದೆ. ಇದು ಮತ್ತು ಇತರ ಮೂಲಗಳಿಂದ ತಿಳಿದುಬರುವ ಈತನ ಕಥೆಯನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು:

ಈತ ಕಲ್ಯಾಣದಲ್ಲಿ ರಾಜ್ಯಭಾರ ಮಾಡುತ್ತಿದ್ದ ಪೆರ್ಮಾಡಿ ರಾಜನ ಮಂತ್ರಿಯಾಗಿದ್ದ. ರಾಜನ ಹೆಂಡತಿ ಲಕುಮಾದೇವಿ, ಶಿವಭಕ್ತೆ. ಒಮ್ಮೆ ರಾಜನ ಪುರಾಣಿಕ ಹರಿಪುರಾಣವನ್ನು ಹೇಳುತ್ತ ಶಿವನಿಂದೆ ಮಾಡಿದ. ಆಗ ಜೊಮ್ಮಯ್ಯ ಕೋಪದಿಂದ ಆತನನ್ನು ಇರಿದು ಕೊಂದ. ಇದರಿಂದ ಅಸಮಾಧಾನಗೊಂಡ ರಾಜ ಜೊಮ್ಮಯ್ಯನನ್ನು ಶಿಕ್ಷಿಸಲು ಪ್ರಯತ್ನಿಸಿದಾಗ ಜೊಮ್ಮಯ್ಯ ಮೆರೆದ ಒಂದು ಪವಾಡದಿಂದ ನಿಜವನ್ನು ಅರಿತ ರಾಜ ಭಕ್ತಿಯಿಂದ ಜೊಮ್ಮಯ್ಯನನ್ನು ಪುರಸ್ಕರಿಸಿದ.

ಬೇಟೆಯ ಕಾಯಕದಿಂದ ಜೊಮ್ಮಯ್ಯ ಗುರು ಲಿಂಗ ಜಂಗಮದ ಆರಾಧನೆ ನಡೆಸುತ್ತಿದ್ದ. ಈತನನ್ನು ಕಂಡು ಗೌರವಿಸಲೆಂದು ಒಮ್ಮೆ ಕೊಂಡುಗುಳಿ ಕೇಶಿರಾಜ ಬಂದ. ಜೊಮ್ಮಯ್ಯನ ಮನೆಯಲ್ಲಿ ಮಾಂಸವಿರುವುದನ್ನು ಕಂಡ ಕೇಶಿರಾಜ ಅಸಹ್ಯಪಟ್ಟು ಹಿಂದಿರುಗಿದ. ಬೇಟೆಯಿಂದ ಮರಳಿದ ಜೊಮ್ಮಯ್ಯನಿಗೆ ಇದು ಗೊತ್ತಾಗಿ ತಾನೇ ಹೋಗಿ ಕೇಶಿರಾಜನನ್ನು ಕರೆದ. ಆದರೆ ಕೇಶಿರಾಜ ಬರಲಿಲ್ಲ. ಅನಂತರ ಕೇಶಿರಾಜ ಮನೆಯಲ್ಲಿ ಶಿವಪೂಜೆಗೆ ಕುಳಿತಾಗ ಜೊಮ್ಮಯ್ಯನ ಮನೆಯಲ್ಲಿ ಲಿಂಗಪೂಜೆ ನಡೆಸಬೇಕೆಂದು ಶಿವಲಿಂಗ ಅಪ್ಪಣೆ ಮಾಡಿತು. ಅದರಂತೆ ಕೇಶಿರಾಜ ಅಲ್ಲಿ ಹೋಗಿ ಲಿಂಗಪೂಜೆ ನಡೆಸಿದ. ತಟ್ಟೆಯಲ್ಲಿಟ್ಟಿದ್ದ ಮಾಂಸ ಜೊಮ್ಮಯ್ಯನ ಮಹಿಮೆಯಿಂದ ಪಕ್ವಾನ್ನವಾಗಿತ್ತು. ಶಾಪಗ್ರಸ್ತರಾಗಿ ಮೃಗ ಜೀವನ ನಡೆಸುತ್ತಿದ್ದ ಇಬ್ಬರು ಗಂಧರ್ವರನ್ನು ಮತ್ತು ಅಮರಿಯರನ್ನು ಜೊಮ್ಮಯ್ಯ ಕೊಂದು ಅವರ ಶಾಪ ವಿಮೋಚನೆ ಮಾಡಿದ.

ಜಂಗಮದಾಸೋಹಕ್ಕಾಗಿ ಬೇಟೆಯಾಡುತ್ತಿದ್ದ ಜೊಮ್ಮಯ್ಯನಿಗೆ ಒಮ್ಮೆ ಶಿವ ವ್ಯಾಘ್ರ ರೂಪದಲ್ಲಿ ಕಾಣಿಸಿಕೊಂಡ. ಅದನ್ನು ಕಂಡು ಹೆದರಿದ ಜೊಮ್ಮಯ್ಯ ಬಿಲ್ವಪತ್ರದ ಮರವನ್ನು ಏರಿಕುಳಿತ. ಶಿವ ಲಿಂಗರೂಪದಲ್ಲಿ ಅದೇ ಮರದ ಕೆಳಗೆ ನೆಲಸಿದ. ಕೆಳಗೆ ಲಿಂಗವನ್ನು ಕಂಡ ಜೊಮ್ಮಯ್ಯ ಬಿಲ್ವಪತ್ರೆಯನ್ನು ಕಿತ್ತು ಹಾಕತೊಡಗಿದ. ಶಿವ ಅದನ್ನು ಸ್ವೀಕರಿಸಿ ಜೊಮ್ಮಯ್ಯನಿಗೆ ಮುಕ್ತಿಯನ್ನು ಕರುಣಿಸಿದ. *

**ತೆಲುಗು ಬಣಜಿಗರು :** ಕೋಲಾರ, ಬೆಂಗಳೂರು, ತುಮಕೂರು ಜಿಲ್ಲೆಗಳಲ್ಲಿ ಹರಡಿಕೊಂಡಿರುವ ಲೌಕಿಕ ವೃತ್ತಿಗಾಯಕರು. ಮೂಲದಲ್ಲಿ ಇವರು ಜೀವನ ಸಾಗಿಸಲು ಬಳೆ, ಕುಂಕುಮ ಮುಂತಾದ ಮಂಗಳದ್ರವ್ಯಗಳನ್ನು ಮಾರುತ್ತಿದ್ದರಂತೆ. ಗಂಗೆ ಇವರ ಕುಲದೇವತೆ. ಇವರ ಮನೆಮಾತು ತೆಲುಗು. ಆದರೆ ಹಾಡುವ ಕಾವ್ಯಗಳ ಭಾಷೆ ಕನ್ನಡ. ಹಾಡುವಾಗ ಏಕತಾರಿ ಹಾಗೂ ಬಟ್ಟುತಾಳಗಳನ್ನು ಉಪಯೋಗಿಸುತ್ತಾರೆ. ದೊಂಬಿದಾಸರು ಹಾಗೂ ತೆಲುಗು ಜಂಗಮರು ಹಾಡುವ ಗಂಗೆ-ಗೌರಿ ಜಗಳ, ಸತ್ಯಭೋಜರಾಜ, ಬಾಲನಾಗಮ್ಮ, ಮಾಗಡಿ ಕೆಂಪೇಗೌಡ, ಅಣ್ಣ-ತಂಗಿ, ಬಂಜೆ ಹೊನ್ನಮ್ಮ, ಕಲಿಯುಗದ ಬಾಲೆ ಮುಂತಾದ ಕಾವ್ಯಗಳನ್ನೇ ಇವರೂ ಹಾಡುತ್ತಾರೆ. ತೆಲುಗು ಜಂಗಮರು, ತೆಲುಗು ಬಣಜಿಗರು, ದೊಂಬಿದಾಸರು - ಈ ಮೂರು ಕಾವ್ಯಸಂಪ್ರದಾಯಗಳಿಗೂ ಒಂದೇ ಮೂಲವಿರುವಂತೆ ತೋರುತ್ತದೆ. ವಿಜಯನಗರದ ಪತನಾನಂತರ ತೆಲುಗು ಪ್ರದೇಶಗಳಿಂದ ಇವರು ಬೇರೆ ಬೇರೆ ಕಡೆಗೆ ಚದುರಿ ಹೋದಂತೆ ತಿಳಿದು ಬರುತ್ತದೆ. (ಪಿ.ಕೆ.ಆರ್.)

**ತೆಲುಗೇಶ ಮಸಣಯ್ಯ :** ಸು.1160. ಬಸವಣ್ಣನವರ ಸಮ ಕಾಲೀನನಾದ ಒಬ್ಬ ವಚನಕಾರ. ತೆಲುಗೇಶ್ವರ ಅಥವಾ ಶಂಭು ತೆಲುಗೇಶ್ವರ ಎಂಬುದು ಈತನ ವಚನಾಂಕಿತ. ಸದ್ಯಕ್ಕೆ ಈತನ ನಾಲ್ಕು ವಚನಗಳು ಮಾತ್ರ ದೊರೆತಿವೆ. ಇವನು ಆಂಧ್ರಪ್ರದೇಶದ ಲಿಂಗಪಲ್ಲಿಯವನೆಂದೂ ಗೋವುಗಳನ್ನು ಕಾಯುವ ಕಾಯಕದವನೆಂದೂ ಹೇಳಲಾಗಿದೆ. ಎಸೆವ ಸರ್ವಾಂಗದೊಳ್ ಮಿಸುಪ ಲಿಂಗಂಗಳ ವಶಮಾಡಿದನು ತೆಲುಗೇಶ ಮಸಣಯ್ಯ ಎಂದು ನಂಜುಂಡ ಕವಿಯು ಭೈರವೇಶ್ವರ ಕಾವ್ಯದಲ್ಲಿ ವರ್ಣಿಸಲಾಗಿದೆ.

ಈತ ಮೊದಲು ಬೇಟೆಯಾಡುವ ಕಾಯಕದಿಂದಿದ್ದು, ಮೊದಲು ಸಿಕ್ಕ ಮೃಗವನ್ನು ಶಿವನಿಗರ್ಪಿಸುವ ನೇಮದಿಂದಿದ್ದನೆಂದೂ ಒಂದು ಸಲ ಚಿನ್ನದ ಮೃಗ ಸಿಕ್ಕಿ ಅದನ್ನು ಬಿಟ್ಟ. ಮತ್ತೆ ಮತ್ತೆ ಅದೇ ದೊರೆಯಲು ಕೋಪದಿಂದ ತನ್ನ ಕಾಯಕಕ್ಕೆ ಬೇಸರಪಟ್ಟನೆಂದೂ ಆಗ ಹರ ಕರುಣಾವಾಯಿತೆಂದೂ ಹೇಳಲಾಗಿದೆ. ವೀರಶೈವವನ್ನು ಸ್ವೀಕರಿಸಿದ ತೆಲುಗೇಶ ಅಂದಿನಿಂದ ಶಿವಭಕ್ತರ ದನಗಳನ್ನು ಕಾಯುವ ಕಾಯಕವನ್ನು ಕೈಕೊಂಡ.

ಪಾಲ್ಕುರಿಕೆ ಸೋಮನಾಥ ಈತನನ್ನು ತನ್ನ ಸಹಸ್ರಗಣನಾಮದಲ್ಲಿ ಸೇರಿಸಿದ್ದಾನೆ. ಹಳದಿಯ ಸೀರೆಯನ್ನುಟ್ಟು, ಬಳಹದೋಲೆ ಕಿವಿಯಲ್ಲಿ, ಮೊಳೆಯ ದಂಗೆಯ ಪಿಡಿದು, ಗುರುಗಂಜಿ ದಂಡೆಯ ಕಟ್ಟಿ, ತುತ್ತುಱು ತುಱು ಎಂದು ಬಾರಿಸುತ್ತ, ಅಪಳ ಚಪಳನೆಂಬ ಉಲಿವ ಘಂಟೆಯ ಕಟ್ಟಿ ತತ್ತುಱು ಜಂಗುಳಿ ದೈವಗಳನೆಲ್ಲವ ಹಿಂಡುಮಾಡಿ ಕಾವ ನಮ್ಮ ಶಂಭು ತೆಲುಗೇಶ್ವರನ ಮನೆಯ ಗೋವಳನೀತ ಎಂಬುದು ಈತನ ವಚನಗಳಲ್ಲೊಂದಾಗಿದೆ.

**ತೇರದಾಳ** : ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನಲ್ಲಿ ಕಸಬೆಯಿಂದ 29ಕಿಮೀ ಪಶ್ಚಿಮಕ್ಕಿರುವ ಪಟ್ಟಣ. ಐತಿಹಾಸಿಕ ಸ್ಥಳ. 1949ರವರೆಗೆ ಈ ಊರು ಸಾಂಗ್ಲಿ ಸಂಸ್ಥಾನದ ಉಪವಿಭಾಗದ ಕೇಂದ್ರವಾಗಿತ್ತು. ನೇಯ್ಗೆ ಉದ್ಯಮ ಈ ಊರಿನಲ್ಲಿ ಸಾಕಷ್ಟಿದೆ. ಜನಸಂಖ್ಯೆ 23,642.

ಊರಿನ ಸುತ್ತಲೂ ಮುಸಲ್ಮಾನ-ಮರಾಠರ ಕಾಲದ ಕಂದಕದಿಂದ ಆವರಿಸಲ್ಪಟ್ಟ ಒಂದು ಕಲ್ಲಿನ ಕೋಟೆಯಿದೆ. ಈ ಊರಿನಲ್ಲಿ 11-12ನೆಯ ಶತಮಾನದ ಹಲವಾರು ಶಾಸನಗಳು ದೊರಕಿದ್ದು ಹಿಂದೆ ಅನೇಕ ವಣಿಕ ಶ್ರೇಣಿಗಳು ನೆಲೆಸಿದ್ದ ವ್ಯಾಪಾರ ಕೇಂದ್ರವಾಗಿತ್ತೆಂದು ತಿಳಿಯುತ್ತದೆ. 6ನೆಯ ವಿಕ್ರಮಾದಿತ್ಯನ ಸಾಮಂತನಾದ ಗೌರ ಎಂಬುವನು ಮಹಾಮಂಡಲೇಶ್ವರ ಕಾರ್ತವೀರ್ಯನ ಆಜ್ಞೆಯ ಪ್ರಕಾರ ಕಟ್ಟಿಸಿದ ನೇಮಿನಾಥ ದೇವಾಲಯ ಇಂದೂ ಬಳಕೆಯಲ್ಲಿದೆ. ಇದು ಕಲ್ಯಾಣ ಚಾಳುಕ್ಯ ಶೈಲಿಯಲ್ಲಿರುವ ಸುಂದರ ಕಟ್ಟಡ.

17ನೆಯ ಶತಮಾನದ ಉತ್ತರಾರ್ಧದಲ್ಲಿ ಇಲ್ಲಿದ್ದರೆನ್ನಲಾದ ಪ್ರಭುಸ್ವಾಮಿ ಎಂಬ ವೀರಶೈವ ಸಂತರ ದೇವಾಲಯ ಊರಿನ ಪ್ರಮುಖ ದೇಗುಲಗಳಲ್ಲೊಂದು. ನಗರದ ಉತ್ತರದಂಚಿನಲ್ಲಿ ಸುಡುಗಾಡ ಲಕ್ಷ್ಮೀ ದೇವಾಲಯವಿದೆ. ಅಬಶಾನ್ ಪೀರರ ದರ್ಗಾ ಊರಿನ ಆಗ್ನೇಯಕ್ಕಿದೆ.

ಈ ಊರಿನ ಪರಿಸರದಲ್ಲಿ ಹಲವು ಪ್ರಾಗೈತಿಹಾಸಿಕ ನೆಲೆಗಳಿವೆ. ಊರಿನ ಪಶ್ಚಿಮ ದಿಕ್ಕಿಗೆ ಸುಮಾರು 5ಕಿಮೀ ದೂರದಲ್ಲಿ ಬೂದಿ ಮಣ್ಣು ಮತ್ತು ಇತರ ಜನವಸತಿಯ ಅವಶೇಷಗಳಿಂದ ಕೂಡಿದ ಒಂದು ಹಾಳು ಭೂಮಿ ಇದೆ. ಊರಿನ ಎತ್ತರದ ಗುಡ್ಡಪ್ರದೇಶದಲ್ಲಿ ಮತ್ತು ಸಮೀಪದಲ್ಲಿಯ ಹನಗಂಡಿ, ಹಳಿಂಗಳಿ, ಮಾದಲಮಟ್ಟಿ ಮತ್ತು ಆಸಂಗಿ ಮೊದಲಾದ ಹಳ್ಳಿಗಳ ಪ್ರದೇಶದಲ್ಲಿ ಸು.1000 ಬೃಹತ್ ಶಿಲಾಗೋರಿಗಳು ಬಹುಶಃ 5ಕಿಮೀ ದೂರದವರೆಗೆ ಅಲ್ಲಲ್ಲಿ ಗುಂಪುಗುಂಪಾಗಿವೆ. 1964-66ರಲ್ಲಿ ಇಲ್ಲಿನ ಕೆಲವು ಸ್ಥಳಗಳಲ್ಲಿ ಉತ್ಖನನಗಳನ್ನು ನಡೆಸಲಾಯಿತು.

ತೇರದಾಳ ಪ್ರದೇಶದ ಬೃಹತ್ ಶಿಲಾಗೋರಿಗಳಲ್ಲಿ ಕೋಣೆ ಗೋರಿಗಳು ವಿಶಿಷ್ಟ ರೀತಿಯವು. ಕೋಣೆಗೋರಿಗಳಲ್ಲಿ ಎರಡು ವಿಧಗಳಿವೆ - ವರ್ತುಲಾಕಾರದ ದಾರಿ ಕೋಣೆಗೋರಿಗಳು ಮತ್ತು ಶಿಲುಬೆಯಾಕಾರದ ದಾರಿ ಕೋಣೆಗೋರಿಗಳು. ಶಿಲುಬೆಯಾಕಾರದ ದಾರಿ ಕೋಣೆಗೋರಿಗಳಲ್ಲಿ ಕೆಲವಕ್ಕೆ ದಾರಿಯು ಉದ್ದವಿರುತ್ತದೆ. ಪ್ರತಿಯೊಂದು ಬದಿಯಲ್ಲಿಯೂ ಒಂದೊಂದೇ ದೊಡ್ಡ ದೊಡ್ಡ ಚಪ್ಪಡಿ ಕಲ್ಲನ್ನು ನೆಟ್ಟಗೆ ನಿಲ್ಲಿಸಿ ಕೋಣೆಯನ್ನು ನಿರ್ಮಿಸಲಾಗಿರುತ್ತದೆ. ಕೋಣೆ ಮತ್ತು ಅದರ ದಾರಿಯನ್ನು ನಾಲ್ಕಾರು ಚಪ್ಪಡಿಕಲ್ಲುಗಳನ್ನು ಮೇಲೆ ಅಡ್ಡಲಾಗಿಟ್ಟು ಮುಚ್ಚಲಾಗಿರುತ್ತದೆ. ಚಾವಣಿಗೆ ಆಧಾರವಾಗಿ ಕೋಣೆಯೊಳಗೆ ನಾಲ್ಕು ಕಂಬಗಳಿರುತ್ತವೆ. ಕೋಣೆಯ ಹೊರಬದಿಯಲ್ಲಿ ಸಣ್ಣ ಸಣ್ಣ ಕಲ್ಲುಗಳನ್ನು ಒತ್ತೊತ್ತಾಗಿ ರಾಶಿ ಹಾಕಿ, ಈ ರಾಶಿಯು ಚೆಲ್ಲಾಪಿಲ್ಲಿಯಾಗದ ಹಾಗೆ ಸುತ್ತಲೂ ತುಂಡು ಕಲ್ಲುಗಳಿಂದ ಕೋಣೆಯಷ್ಟೇ ಎತ್ತರದ ಅಥವಾ ಕಡಿಮೆ ಎತ್ತರದ ಚೌಕೋನದ ಕಟ್ಟೆಯೊಂದನ್ನು ಕಟ್ಟಲಾಗಿರುತ್ತದೆ. ಒಂದೊಂದು ವೇಳೆ ದುಂಡಾದ ಕಟ್ಟೆಯಿದ್ದು ಅದರ ಹೊರಬದಿಯಲ್ಲಿ ಒತ್ತೊತ್ತಾಗಿ ಕಲ್ಲಿನ ರಾಶಿಯಿದ್ದು, ಅದರ ಸುತ್ತಲೂ ಮತ್ತೆ ಚೌಕೋನದ ಕಟ್ಟೆಯಿರುತ್ತದೆ. ವರ್ತುಲಾಕಾರದ ದಾರಿ - ಕೋಣೆ ಗೋರಿಯಲ್ಲಿ ಒಂದರ ಪಕ್ಕದಲ್ಲಿ ಮತ್ತೊಂದು ಕಲ್ಲನ್ನು ನಿಲ್ಲಿಸಿ, ಮಾಡಿದ ಕೋಣೆಯು ದುಂಡಾಗಿದ್ದು ಅದಕ್ಕೆ ದಾರಿ ಸಣ್ಣದಿರುತ್ತದೆ. ಕೋಣೆಯ ಒಳಗಡೆ ಮೇಲೆ ಮುಚ್ಚಲು ಅಡ್ಡಲಾಗಿ ಹಾಕಿದ ಕಲ್ಲುಚಪ್ಪಡಿಗಳನ್ನು ಹೊರಲು 3 ಅಥವಾ 4 ಕಂಬಗಳಿರುತ್ತವೆ. ಹೊರಬದಿಯಲ್ಲಿ ಒತ್ತೊತ್ತಾಗಿ ಕಲ್ಲುರಾಶಿಯಿದ್ದು ಅದು ಭದ್ರವಾಗಿ ಒಂದು ಅಥವಾ ಎರಡು ದುಂಡುಕಟ್ಟೆಯಿಂದ ಆವರಿಸಲ್ಪಟ್ಟಿರುತ್ತದೆ. ಇವಲ್ಲದೆ ಸುಮಾರು 15 ಕಲ್ಲುರಾಶಿಗಳನ್ನೊಳಗೊಂಡ ದುಂಡುಕಟ್ಟೆಗಳೂ ಉಂಟು.

ಈ ಮೂರು ವಿಧವಾದ ಬೃಹತ್ ಶಿಲಾಗೋರಿಗಳಲ್ಲಿ ಕೆಲವನ್ನು ಉತ್ಖನನ ಮಾಡಲಾಯಿತು (1966). ಆದರೆ ಇವೆಲ್ಲವೂ ಹಿಂದೆಯೇ ಅಗೆಯಲ್ಪಟ್ಟು ಅವುಗಳಲ್ಲಿದ್ದ ವಸ್ತುಗಳು ನಾಶವಾಗಿದ್ದುದು ಕಂಡುಬಂದಿತು. ಕೋಣೆಗೋರಿಗಳಲ್ಲಿ ಮಾನವನ ಅಸ್ಥಿಗಳ ಚೂರುಗಳು, ಮೃತ್‌ಪಾತ್ರೆಗಳು ಮತ್ತು ಕಬ್ಬಿಣದ ವಸ್ತುಗಳ ಭಗ್ನಾವಶೇಷಗಳು ಅಸ್ತವ್ಯಸ್ತವಾಗಿದ್ದವು. ದಾರಿಯುಳ್ಳ ದುಂಡು ಕೋಣೆಗೋರಿಗಳಲ್ಲಿ ಕೆಂಪುವರ್ಣದ ಒಂದು ಮಡಿಕೆಯಲ್ಲಿ ಅಸ್ಥಿಯ ಚೂರುಗಳಿದ್ದವು. ದುಂಡು ಕಟ್ಟೆಗಳಲ್ಲಿ ಮಾತ್ರ ಕೆಲವೇ ಮೃತ್‌ಪಾತ್ರೆಯ ಚೂರುಗಳು ದೊರೆತವು.

ಅಸ್ಥಿಯ ಚೂರುಗಳು ಅವುಗಳಿಗೆ ಸಂಬಂಧಿಸಿದ ವ್ಯಕ್ತಿಗಳ ವಯಸ್ಸು, ಲಿಂಗ, ಪ್ರಮಾಣ ಮತ್ತು ಜನಾಂಗ ತಿಳಿಯಲಾಗದಷ್ಟು ಸಣ್ಣ ಸಣ್ಣವಾಗಿದ್ದವು. ಪ್ರಾಯಶಃ ಒಂದೊಂದು ಕೋಣೆಗೋರಿಯಲ್ಲಿ ಒಬ್ಬರಿಗಿಂತ ಹೆಚ್ಚಿನ ವ್ಯಕ್ತಿಗಳ ಅಸ್ಥಿಗಳಿದ್ದ ಹಾಗೆ ತೋರುವುದು. ಮೃತ್‌ಪಾತ್ರೆಗಳಲ್ಲಿ ಹೊಳಪಾದ ಕೆಂಪು ವರ್ಣದ್ದೇ ಹೆಚ್ಚಾಗಿದ್ದುವು. ಕೆಲವೇ ಮಾತ್ರ ಕಪ್ಪು-ಕೆಂಪು ವರ್ಣದವು. ಇನ್ನು ಕೆಲವು ದೊರಗುಮೈಯುಳ್ಳವುಗಳಾಗಿ ಲೇಪನವಿಲ್ಲದವು. ಬಲವಾದ ದಪ್ಪ ಹಿಡಿಕೆಯುಳ್ಳ ಕೊಡ, ಗಡಿಗೆ, ಬಾನಿ, ಚೊಂಬು, ಅರ್ಧಗೋಲಾಕೃತಿಯ ಪಾತ್ರೆ, ಬದಿಯನ್ನು ನೆಟ್ಟಗೆ ಮಡಿಸಿದ ತಟ್ಟೆಗಳು, ಸಣ್ಣ ಬುಡದ ಅಗಲ ಬಾಯುಳ್ಳ ಲೋಟಗಳು, ಕಾಲು ಬಟ್ಟಲು ಮುಂತಾದವು. ತಾಮ್ರದ ತಗಡಿನ ಪಟ್ಟಿಗಳು, ಕಬ್ಬಿಣದ ತೂಗುದೀಪದ ತರಹದ ಹಣತೆ, ತಂತಿ ಇತ್ಯಾದಿಗಳೂ ದೊರಕಿದುವು. ಈ ಕೋಣೆಗೋರಿಗಳ ಕಾಲಮಾನ ಸು. ಕ್ರಿ.ಪೂ.1000-800 ಎಂದು ತೋರುವುದು.

ಬೃಹತ್ ಶಿಲಾಗೋರಿಯ ರೀತಿಯಲ್ಲಿದ್ದ ಸು.6ಮೀ ವ್ಯಾಸದ ಒಂದು ದುಂಡು ಕಲ್ಲುಗುಪ್ಪೆಯನ್ನೂ ಇಲ್ಲಿ ಅಗೆಯಲಾಯಿತು. ಅನಿರೀಕ್ಷಿತವಾಗಿ ಇದರಲ್ಲಿ ಶಿಲಾ-ತಾಮ್ರ ಸಂಸ್ಕೃತಿ ಜನವರ್ಗದವರ ಒಂದು ಶವಕುಣಿ ಕಂಡುಬಂದಿತು. ಇದರಲ್ಲಿ ಒಂದು ವ್ಯಕ್ತಿಯ ತಲೆ, ಎದೆ ಹಾಗೂ ತೊಡೆಯ ಭಾಗದ ಅಸ್ಥಿಯ ಚೂರುಗಳನ್ನು ಪೂರ್ವ-ಈಶಾನ್ಯ ಅಭಿಮುಖವಾಗಿ ಉದ್ದಕ್ಕೆ ಇಡಲಾಗಿದ್ದಿತು. ಜೊತೆಗೆ, ಬೂದುವರ್ಣದ ಮೂರು ಮೃತ್‌ಪಾತ್ರೆಗಳ ಅವಶೇಷಗಳು, ಒಂದು ತಾಮ್ರದ ಬಳೆ ಮತ್ತು ಕೆಲವು ಅತಿ ಸಣ್ಣ ಸಣ್ಣ ಕಲ್ಲಿನ ಆಯುಧಗಳು ಇದ್ದವು. ಆದರೆ ಶಿಲಾ-ತಾಮ್ರಯುಗದ ಶವಕುಣಿಗೆ ಹೀಗೆ ಕಲ್ಲುಗುಪ್ಪೆಯಿದ್ದುದು ಕಂಡು ಬಂದಿರುವುದು ಪ್ರಥಮವಾಗಿ ಇಲ್ಲಿಯೇ.

ಶಿಲಾ-ತಾಮ್ರಯುಗದ ಹಾಳು ಬಹುಮಟ್ಟಿಗೆ ನಶಿಸಿದೆ. ಇಲ್ಲಿನ ಸಣ್ಣ ಪ್ರಮಾಣದ ಉತ್ಖನನದಲ್ಲಿ ಸುಟ್ಟುಹೋದ ಮರದ ಕಂಬಗಳು, ವರ್ಣಚಿತ್ರವುಳ್ಳ ಮತ್ತು ಸಾದಾಮಣ್ಣಿನ ಪಾತ್ರೆಗಳು ಕಲ್ಲಿನ ಸೂಕ್ಷ್ಮ ಆಯುಧಗಳು - ಇವುಗಳ ಉಳಿಕೆಗಳು ದೊರಕಿದವು. ಸ್ಥಳೀಯ ರೀತಿಯ ಶಿಲಾ ತಾಮ್ರಯುಗೀನ ಮೃತ್‌ಪಾತ್ರೆಗಳ ಜೊತೆಗೆ ತಪತಿ ನದಿಯ ಬಯಲಿನಲ್ಲಿರುವ ಸಾವಳ್ದ ಮುಂತಾದ ಪ್ರದೇಶಗಳ ರೀತಿಯವೂ ದೊರಕಿವೆ. (ಎ.ಎಸ್.)

**ತೇರು** : ದೇವಾಲಯಗಳಲ್ಲಿರುವ ಚರಮೂರ್ತಿಗಳನ್ನು ಕೂರಿಸಿ ಮೆರೆಸುವ ಒಂದು ವಾಹನ. ಇದನ್ನು ರಥ ಎಂದೂ ಕರೆಯುವುದುಂಟು. ತೇರು ಒಂದು ದೇವಾಲಯವಿದ್ದಂತೆಯೇ. ದೇವಾಲಯಗಳಿಗೆ ವಿಮಾನಗಳಿರುವಂತೆ ತೇರುಗಳಿಗೂ ಉಂಟು. ತೇರುಗಳು ಸಾಮಾನ್ಯವಾಗಿ ಸುಂದರ ಮರದ ರಚನೆಗಳು. ರಥದ ನಾಲ್ಕೂ ಕಡೆಯಲ್ಲಿ ನಾನಾ ರೀತಿಯ ಮರದ ಕೆತ್ತನೆಗಳನ್ನು ಅಳವಡಿಸಲಾಗಿರುತ್ತದೆ. ಭಾರತೀಯ ಶಿಲ್ಪ ಪರಂಪರೆಯಲ್ಲಿ ಈ ದಾರುಶಿಲ್ಪಗಳಿಗೆ ವಿಶಿಷ್ಟ ಸ್ಥಾನವಿದೆ.

ಕರ್ನಾಟಕದ ದೇಗುಲಗಳಲ್ಲಿ ರಥೋತ್ಸವ ಮೊದಲಾದುವುಗಳಲ್ಲಿ ಬಳಸುವ ರಥ ಹಾಗೂ ಬಂಡಿಗಳ ಮಾದರಿಗಳನ್ನು ವಿಶೇಷವಾಗಿ ಕಾಣಬಹುದು. ರಥೋತ್ಸವದ ಸಂಪ್ರದಾಯ ಈ ನಾಡಿನಲ್ಲಿ ಬಹು ಹಿಂದಿನಿಂದ ಪ್ರಚಲಿತವಾಗಿರುವಂತೆ ತೋರುತ್ತದೆ. ನಂಜನಗೂಡು, ಮೇಲುಕೋಟೆ ಮೊದಲಾದೆಡೆಗಳ ರಥಗಳು ಸು.18-19ನೆಯ ಶತಮಾನವೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಶ್ರವಣಬೆಳಗೊಳದ ತೇರಿನ ಬಸದಿಯಲ್ಲಿ ಬಾಹುಬಲಿಯ ಮುಂದೆ ಒಂದು ತೇರು ಇದ್ದು ಇದನ್ನು ಮಂದರವೆಂದು

ಕರೆಯುತ್ತಾರೆ. ಹಂಪೆಯ ವಿಜಯವಿಠಲ ದೇಗುಲದ ಮುಂದೆ ಬಹು ಸುಂದರವಾದ ನಾಲ್ಕು ಗಾಲಿಗಳುಳ್ಳ ಕಲ್ಲಿನ ರಥವಿದೆ. ಅನೇಕ ಖ್ಯಾತ ದೇವಾಲಯಗಳ ಭಿತ್ತಿಗಳಲ್ಲಿ ಮೆರವಣಿಗೆಗಳಲ್ಲಿ ಸಾಗುತ್ತಿರುವ ರಥಗಳನ್ನು ಕಾಣಬಹುದಾಗಿದೆ.



ಶರಣ ಬಸವೇಶ್ವರ ತೇರು: ಗುಲ್ಬರ್ಗ

ಉತ್ಸವಕ್ಕೆ ತೇರುಗಳನ್ನು ಸಿದ್ಧಮಾಡುವ ಬಗೆಯೂ ಆಯಾ ಪ್ರದೇಶಗಳಿಗೆ ಅನುಗುಣವಾಗಿರುತ್ತದೆ. ತೇರು ಕಟ್ಟಲು ಕೆಲವು ಕಡೆ ಕತ್ತಾಳೆನಾರಿನ ಹಗ್ಗಗಳಿಂದ ಬಿಗಿಕೊಟ್ಟು ಹಂತಗಳ ಕಂಬಸಾಲನ್ನು ಬಿಗಿಪಡಿಸುತ್ತಾರೆ. ಕೊನೆಯ ಹಂತದಲ್ಲಿ ಬಿದಿರಿನ ಗೋಳಾಕಾರದ ಶಿಖರವನ್ನು ರಚಿಸಿ ತೇರಿಗೆ ಸೇರಿಸುತ್ತಾರೆ. ಅದರ ಮೇಲೆ ಬಣ್ಣದ ಬಟ್ಟೆಯನ್ನು ಅಳವಡಿಸುತ್ತಾರೆ. ಕಳಸವನ್ನು ಅದರ ಹೊಕ್ಕುಳ ಗೂಟಕ್ಕೆ ಸೇರಿಸುತ್ತಾರೆ. ಈ ಕಳಸ ಒಂದರಿಂದ ಐದರತನಕ ಇರಬಹುದು. ಇದು ಹಿತ್ತಾಳೆಯದಾಗಿರುತ್ತದೆ. ಇಲ್ಲವೆ ಸ್ವರ್ಣದ ಲೇಪನದಿಂದ ಕೂಡಿರುತ್ತದೆ. ಇದಕ್ಕೆ ಸೇರಿದಂತೆ ಕೆಲವು ಬಣ್ಣದ ನಿಶಾನಿ ಅಥವಾ ಛತ್ರಿಯನ್ನು ನಿಲ್ಲಿಸಿರುತ್ತಾರೆ. ಪ್ರತಿಯೊಂದು ಅಂತಸ್ತಿನಲ್ಲೂ ನಾಲ್ಕು ಅಥವಾ ಎಂಟು ಮೂಲೆಗಳಲ್ಲೂ ವಿವಿಧ ವರ್ಣದ ಬಾವುಟಗಳನ್ನು (ದಾಳು) ಸೇರಿಸುತ್ತಾರೆ. ಹಂತದ ಬೋದಿಗೆಯ ಸುತ್ತಲೂ ಬಟ್ಟೆಯ ತೋರಣವಿರುತ್ತದೆ. ಮೂಲೆಗಳಲ್ಲಿ ನಾಲ್ಕು ಐದು ಅಡಿಯ ಬಣ್ಣಗಳ ಪಟ್ಟೆಪಟ್ಟೆಯ ದಂಡೆ ನೇತುಬಿಡುತ್ತಾರೆ. ಇದರ ಒಳಗೆ ಒಣಹುಲ್ಲು ಇಲ್ಲವೆ ಹೊಟ್ಟನ್ನು ತುಂಬಿರುತ್ತಾರೆ. ದೇವರು ಕೂರಿಸಲು ಪೀಠವನ್ನು ಮೊದಲ ಅಂತಸ್ತಿನಲ್ಲಿ ನಡುಭಾಗದಲ್ಲಿ ನಿರ್ಮಿಸಿರುತ್ತಾರೆ. ಕೆಲವು ಕಡೆ ಈ ಪೀಠವನ್ನು ಸರಪಣಿಗಳಿಂದ ತೂಗುಹಾಕಿರುತ್ತಾರೆ. ದೇವರನ್ನು ಈ ಪೀಠಕ್ಕೆ ಸಾಗಿಸಲು ಮರದ ಅಥವಾ ಕಬ್ಬಿಣದ ಏಣಿಗಳನ್ನು ಬಳಸುತ್ತಾರೆ. ತೇರಿನ ವಸ್ತ್ರಾಲಂಕಾರದ ವೈಶಿಷ್ಟ್ಯ ಆಯಾ ಪ್ರದೇಶಗಳಿಗೆ ತಕ್ಕಂತೆ ಇರುತ್ತದೆ. ತೇರನ್ನು ಎಳೆಯಲು ತಂತಿ ಅಥವಾ ನಾರಿನಿಂದ ಮಾಡಿದ ಹಗ್ಗವನ್ನು ಬಳಸಲಾಗುತ್ತದೆ.

ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಗಳ ತೇರುಗಳು ಬಹಳ ಸುಂದರವಾಗಿರುತ್ತವೆ. ಕೊಟ್ಟೂರು, ಹಂಪೆ, ನಂಜನಗೂಡು, ಕನಕಗಿರಿ, ಉಡುಪಿ, ನಾಯಕನಹಟ್ಟಿ, ತೆಕ್ಕಲಕೋಟೆ ಈ ಮುಂತಾದ ಕಡೆಗಳಲ್ಲಿರುವ ತೇರುಗಳು ಬಹಳ ಎತ್ತರವಾಗಿದ್ದು ತುಂಬ ಸುಂದರವಾಗಿರುತ್ತವೆ. ನಂಜನಗೂಡಿನ ನಂಜುಂಡೇಶ್ವರನಿಗೆ ಪಂಚರಥಗಳು ಇವೆ. ಮಲೆಮಹದೇಶ್ವರನಿಗೆ ಎರಡು ತೇರುಗಳಿವೆ. ಸಾಮಾನ್ಯವಾಗಿ ಅನೇಕ ದೇವರುಗಳಿಗೆ ಎರಡು ರಥಗಳು ಇರುತ್ತವೆ. ಒಂದನ್ನು ಹೂವಿನ ತೇರು ಅಥವಾ ಚಿಕ್ಕತೇರು ಎಂದೂ ಮತ್ತೊಂದನ್ನು ದೊಡ್ಡತೇರು ಎಂದೂ ಕರೆಯುವುದು ವಾಡಿಕೆ.



ಮೂರುಸಾವಿರಮಠದ ತೇರು, ಹುಬ್ಬಳ್ಳಿ

ಪ್ರತಿಯೊಂದು ಕ್ಷೇತ್ರಕ್ಕೂ ಸಂಬಂಧಿಸಿದಂತೆ ರಥೋತ್ಸವಗಳು ನಡೆಯುತ್ತವೆ. ಈ ಸಂದರ್ಭದಲ್ಲಿ ಭಕ್ತಾದಿಗಳು ಬಂದು ಸೇರುತ್ತಾರೆ. ಹರಕೆಯ ಜನ ತೇರಿನಲ್ಲಿ ಕುಳಿತ ಉತ್ಸವಮೂರ್ತಿಗೆ ಬಾಳೆಹಣ್ಣು, ಮೆಣಸು, ಪುರಿ, ಉತ್ತುತ್ತೆ, ಬೆಲ್ಲ ಮುಂತಾದವುಗಳನ್ನು ತೂರಿಬಿಡುತ್ತಾರೆ. ಇದನ್ನು ಸೂರುಬೆಲ್ಲ ಎನ್ನುತ್ತಾರೆ. ಕೆಲವೊಮ್ಮೆ ನಾಣ್ಯಗಳನ್ನು ತೂರಿ ತಮ್ಮ ಭಕ್ತಿ ಭಾವವನ್ನು ತೋರುವುದೂ ರೂಢಿಯಲ್ಲಿದೆ. ಕೆಲವೆಡೆ ಬಾಳೆಹಣ್ಣಿಗೆ ದವನವನ್ನು ಸಿಕ್ಕಿಸಿ ದೇವರತ್ತ ತೂರಿ ಎಸೆಯುತ್ತಾರೆ. ಕರ್ನಾಟಕದ ಜನಜೀವನದಲ್ಲಿ ಈ ರಥೋತ್ಸವಗಳ ಪಾತ್ರ ಸಾಕಷ್ಟಿದೆ. ಈ ಜಾತ್ರೆಯ ದಿನಗಳು ಆ ಸುತ್ತಿನ ಜನರಿಗೆ ಪವಿತ್ರ ಹಾಗೂ ಸಂಭ್ರಮದ ದಿನಗಳಾಗಿರವುದಲ್ಲದೆ, ಬೇರೆಬೇರೆಡೆಗಳಿಂದ ಜನರೂ ಬರುತ್ತಾರಾಗಿ ವ್ಯಾಪಾರ ಉದ್ಯಮಗಳನ್ನು ಬೆಳೆಸಲು ಸಹಾಯಕವಾಗಿರುತ್ತವೆ. (ಪಿ.ಆರ್.ಟಿ.)

**ತೈಲಪ II :** ಕಲ್ಯಾಣದ ಚಾಳುಕ್ಯ ಮನೆತನದ ಅರಸ (973-97). ಆ ವಂಶದ ಆಳಿಕೆಯ ಸ್ಥಾಪಕ. ತೈಲ, ತೈಲಪಯ್ಯ, ತೈಲಪ್ಪ, ನೂರ್ಮಡಿ ತೈಲ ಎಂಬುವು ಇವನ ಪ್ರತಿನಾಮಗಳು. ಆಹವಮಲ್ಲ ಎಂಬುದು ಬಿರುದು. ಈತನಿಗೆ ಮಹಾರಾಜಾಧಿರಾಜ, ಪರಮಭಟ್ಟಾರಕ ಮುಂತಾದ ಸಾಮ್ರಾಜ್ಯ ಪ್ರಶಸ್ತಿ ಸೂಚಕವಾದ ಅನೇಕ ಬಿರುದುಗಳೂ ಇದ್ದುವು. 4ನೆಯ ವಿಕ್ರಮಾದಿತ್ಯ ಇವನ ತಂದೆ. ಇವನ ತಾಯಿ ಚೇದಿ ಅರಸು ಲಕ್ಷ್ಮಣನ ಮಗಳು ಬೊಂತಾದೇವಿ.

957 ಮತ್ತು 965ರಲ್ಲಿ ಈತ ರಾಷ್ಟ್ರಕೂಟರಾಜ ಮುಮ್ಮಡಿ ಕೃಷ್ಣನಿಗೆ ಸಾಮಂತನಾಗಿ ಬಿಜಾಪುರ ಜಿಲ್ಲೆಯಲ್ಲಿ ಆಳುತ್ತಿದ್ದ ಎಂದು ಶಾಸನಗಳಿಂದ ತಿಳಿಯುತ್ತದೆ. ರಾಷ್ಟ್ರಕೂಟರ ಅಧೀನದಲ್ಲಿ ಮೊದಲು ಚಿಕ್ಕದೊಂದು ನಾಡಿನ ನಾಯಕನಾಗಿದ್ದು ಬರುಬರುತ್ತ ಮಹಾಸಾಮಂತ ಪದವಿಗೆ ಏರಿದ. ಮುಮ್ಮಡಿ ಕೃಷ್ಣನ ಉತ್ತರಾಧಿಕಾರಿಗಳು ದುರ್ಬಲರಾಗುತ್ತಹೋದಂತೆ ಈತ ತನ್ನ ಸ್ಥಾನಬಲವನ್ನೂ ಸಾಮರ್ಥ್ಯವನ್ನೂ ಬೆಳೆಸಿಕೊಂಡ. ಪರಮಾರವಂಶದ ಇಮ್ಮಡಿ ಸೀಯಕ ಹರ್ಷ ಮಾನ್ಯ ಖೇಟದ ಮೇಲೆ ದಾಳಿಮಾಡಿದಾಗ (ಸು.972) ಉದ್ಭವಿಸಿದ ರಾಜಕೀಯ ಅಸ್ತವ್ಯಸ್ತ ಸ್ಥಿತಿಯನ್ನು ಉಪಯೋಗಿಸಿಕೊಂಡು ಶೀಘ್ರದಲ್ಲೇ ರಾಷ್ಟ್ರಕೂಟ ಇಮ್ಮಡಿ ಕಕ್ಕನ ಮೇಲೆ ದಂಡೆತ್ತಿಹೋದ. ಆ ಯುದ್ಧದಲ್ಲಿ (ಸು.973) ಕಕ್ಕ ಮೃತನಾದಮೇಲೆ ಸ್ವತಂತ್ರ ಪ್ರಭುವಾಗಿ ತನ್ನ ವಂಶದ ಆಳಿಕೆಯನ್ನು ಉದ್ಘಾಟಿಸಿದ.

ಆಹವಮಲ್ಲ ತೈಲಪನ ಏಳಿಗೆಯಿಂದ ಹೊಸದಾಗಿ ಉದಿಸಿದ ಚಾಳುಕ್ಯ ಸಾಮ್ರಾಜ್ಯಕ್ಕೆ ಈವರೆಗೆ ರಾಷ್ಟ್ರಕೂಟರಿಗೆ ಸಾಮಂತರಾಗಿದ್ದವರು ತಮ್ಮ ವಿಧೇಯತೆಯನ್ನು ತೋರಿಸಲು ಮೊದಲು ಮಾಡಿದರು. ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನಲ್ಲಿ ಆಳುತ್ತಿದ್ದ ಬ್ರಹ್ಮಕ್ಷತ್ರಿಯಕುಲದ ಶಾಂತಿವರ್ಮ ಮೊದಲು ಕಕ್ಕಲದೇವನಿಗೆ ಅಧೀನನಾಗಿದ್ದು, ಅನಂತರ ಆಹವಮಲ್ಲನಿಗೆ ಅಧೀನನಾದ. ಗಂಗ ಮಾರಸಿಂಹನ ಅನಂತರ ಗಂಗದೇಶವನ್ನು ಸು.974-75ರಲ್ಲಿ ಆಳುತ್ತಿದ್ದ, ಚಾಳುಕ್ಯರಿಗೆ ಸಿಂಹಪ್ರಾಯನೆಂದು ತನ್ನನ್ನು ಕರೆದುಕೊಂಡು ಮೆರೆಯುತ್ತಿದ್ದ ಪಾಂಚಾಲದೇವನನ್ನು ತೈಲಪ ಶಿವಮೊಗ್ಗ ಜಿಲ್ಲೆಯ ಸಿರಿವೂರಿನಲ್ಲಿ ಬೀಡುಬಿಟ್ಟಿದ್ದಾಗ (ಸು.975) ಯುದ್ಧರಂಗದಲ್ಲಿ ಶಿರಚ್ಛೇದನಮಾಡಿ ಕೊಂದ. 976ರಿಂದ ತೈಲ ಸಾಮ್ರಾಜ್ಯ ಪ್ರಶಸ್ತಿಗಳ ಸಹಿತವಾಗಿ ವರ್ಣಿತವಾಗಿರುವುದು ಬಳ್ಳಾರಿ ಜಿಲ್ಲೆಯ ಶಾಸನಗಳಿಂದ ತಿಳಿದುಬರುತ್ತದೆ. ಮುಮ್ಮಡಿ ಕೃಷ್ಣನ ಕೃಪೆಯಿಂದ ಅಭ್ಯುದಯಕ್ಕೆ ಬಂದ ಸೌಂದತ್ತಿಯ ರಟ್ಟರು ಪ್ರವರ್ಧಮಾನಕ್ಕೆ ಬರುತ್ತಿದ್ದ ತೈಲಪನ ಅಧೀನತೆಯನ್ನು ಒಪ್ಪಿಕೊಂಡ ಹಾಗೆ ಸು.980ರಲ್ಲಿ ಲಿಖಿತವಾದಂತೆ ಭಾವಿಸುವ ಎರಡು ಶಾಸನಗಳಿಂದ ತಿಳಿದುಬರುತ್ತದೆ. ಚೋಳದೊರೆಯೊಬ್ಬನನ್ನು (ಪ್ರಾಯಶಃ ರಾಜರಾಜ) ಸೋಲಿಸಿ ಆತನಿಂದ 150 ಆನೆಗಳನ್ನು ಸೆಳೆದುಕೊಂಡು ಅನಂತಪುರ ಜಿಲ್ಲೆಯ ದೊಡ್ಡ ಶಿಬಿರದಿಂದ ತೈಲಪ ರಾಜ್ಯವಾಳುತ್ತಿದ್ದ ವಿಷಯವನ್ನು ತೈಲಪನ ಕಾಲದ್ದೇ ಆದ ಕೋಗಳಿಯ ಶಾಸನದಲ್ಲಿ (992) ಹೇಳಿದೆ. ತೈಲಪನ ಮಹತ್ಸಾಧನೆಗಳಲ್ಲಿ ಗಣ್ಯವಾದದ್ದು ಎಂದರೆ ಈತ ಮಾಳವ ದೇಶದ ಪರಮಾರ ಮುಂಜನನ್ನು ಸೋಲಿಸಿದ್ದು.ಈ ಮುಂಜ ಸೀಯಕ ಹರ್ಷನ ತರುವಾಯದಲ್ಲಿ ಮಾಳವ ದೇಶವನ್ನಾಳುತ್ತಿದ್ದ ವಾಕ್ಪತಿ ಮುಂಜನೆಂಬುದಾಗಿ ಗುರುತಿಸಲಾಗಿದೆ. ತೈಲಪ ರಾಷ್ಟ್ರಕೂಟರಿಗೆ ಅಧೀನನಾಗಿದ್ದಾಗಲೇ ಅವರ ಶತ್ರುಗಳಾದ ಪರಮಾರರೊಡನೆ ಕಾದಿದ್ದ. ಈತ ಪರಮಾರ ಮುಂಜನನ್ನು ಸೆರೆಹಿಡಿದ ವಿಷಯವನ್ನು ಕಾಶೆಂ ಶಾಸನಗಳಲ್ಲೂ (1003), ಕೊಂದ ವಿಷಯವನ್ನು ವಿಕ್ರಮಾದಿತ್ಯನ ಗದಗ ಶಾಸನದಲ್ಲೂ ಉಲ್ಲೇಖಿಸಿದೆ. ಮುಂಜ ನಿಧನಹೊಂದಿದ್ದು ಸು.995 ಎಂದು ಊಹಿಸಲಾಗಿದೆ. ಈತ ಚಾಳುಕ್ಯರ ಕೈಯಲ್ಲಿ ಸಿಕ್ಕಿ ಪಾಡುಪಟ್ಟಿದ್ದನ್ನು ಮೇರುತುಂಗನ ಪ್ರಬಂಧ ಚಿಂತಾಮಣಿಯಲ್ಲಿ ವರ್ಣಿಸಿದೆ. ತೈಲಪನ ದಂಡನಾಯಕ ಬಾರಪನು ಲಾಟ ರಾಜ್ಯದ ಮೇಲೆ ದಾಳಿಮಾಡಿದ. ಗುಜರಾತಿನ ಮೂಲ ರಾಜನನ್ನು ಸೋಲಿಸಿದ್ದರಿಂದ ಗೂರ್ಜರಭಯಜ್ವರ ಎಂಬ ಬಿರುದನ್ನು ತೈಲಪ ಪಡೆದ.

ಆಹವಮಲ್ಲ ತೈಲಪನ ಸಾಮಂತವರ್ಗದಲ್ಲಿ ಬಿಜಾಪುರ ಜಿಲ್ಲೆಯ ಸಿಂದರು, ಉತ್ತರ ಕೊಂಕಣದ ಶಿಲಾಹಾರರು, ಸೇವುಣದೇಶದ ಯಾದವರು, ಸೊಸವೂರ ಹೊಯ್ಸಳರು ನೊಳಂಬ ಪಲ್ಲವರು ಸೇರಿದ್ದರು. ಬನವಾಸಿ ಪ್ರಾಂತ್ಯವನ್ನಾಳುತ್ತಿದ್ದವರಲ್ಲಿ ಶೋಭನರಸನೆಂಬಾತ ತೈಲಪನಿಗೆ ಆಪ್ತನಾದ ದಂಡಾಧಿಪನಾದ. ಬನವಾಸಿ, ಸಾಂತಲಿಗೆ, ಕಿಸುಕಾಡು ನಾಡುಗಳಲ್ಲಿ ರಾಜಪ್ರತಿನಿಧಿಯಾಗಿ ಆಳುತ್ತಿದ್ದ ಭೀಮರಸ ಎಂಬುವನು ತೈಲಪನ ಅಂಕಕಾರನೆನಿಸಿದ್ದ. ಅಂತೂ ಆಹವಮಲ್ಲ ಸಮಗ್ರ ರಾಷ್ಟ್ರಕೂಟರ ಸಾಮ್ರಾಜ್ಯಕ್ಕೆ ಒಡೆಯನಾಗಿ, ರಟ್ಟಪಾಡಿ ಏಳೂವರೆ ಲಕ್ಷ ಪ್ರಾಂತ್ಯವನ್ನು ಆಳಿದನೆಂದು ತಿಳಿಯುವುದು.

ತೈಲಪ, ಕವಿ ರನ್ನನಿಗೆ ಆಶ್ರಯದಾತೃವಾಗಿದ್ದ. ರನ್ನ ಸು.990ರಲ್ಲಿ ತೈಲಪನ ಆಸ್ಥಾನವನ್ನು ಪ್ರವೇಶಿಸಿರಬೇಕೆಂದೂ ಅಲ್ಲಿಯೇ ಅಜಿತ ತೀರ್ಥಂಕರಪುರಾಣತಿಲಕ ಎಂಬ ತನ್ನ ಕಾವ್ಯವನ್ನು ರಚಿಸಿರಬೇಕೆಂದೂ ಸು.991-92ರಲ್ಲಿ ಆತನಿಂದಲೇ ಕವಿಚಕ್ರವರ್ತಿ ಎಂಬ ಬಿರುದನ್ನು ಪಡೆದಿರಬೇಕೆಂದೂ ವಿದ್ವಾಂಸರು ಊಹಿಸಿದ್ದಾರೆ. ಚಕ್ರವರ್ತಿಯಾದ ತೈಲಪನಿಂದ ಮಹಿಮೋನ್ನತಿಯೂ ಕವಿಚಕ್ರವರ್ತಿ ಬಿರುದನ್ನೂ ತಾನು ಪಡೆದುಕೊಂಡುದಾಗಿ ರನ್ನನೇ ತನ್ನ ಇನ್ನೊಂದು ಕಾವ್ಯವಾದ ಸಾಹಸಭೀಮವಿಜಯದಲ್ಲಿ ಹೇಳಿಕೊಂಡಿದ್ದಾನೆ. ರನ್ನನ ಆ ಎರಡು ಗ್ರಂಥಗಳಲ್ಲೂ ಅಲ್ಲಲ್ಲಿ ತೈಲಪನ ವಿಚಾರ ಬಂದಿದೆ. ಚಕ್ರಿಗಳೊಳಗಾಹವಮಲ್ಲಂ ಮಿಗಿಲೆನಿಕುಂ ಅವನಿಪರೊಳ್ ನಿಜಭುಜಚಕ್ರವರ್ತಿ ರಣಜಯಕೆ ತೈಲನೆಂತಸಹಾಯಂ, ಜಗತೀ ಚಕ್ರಮನಾಳ್ಗೆ ತೈಲನೃಪನೇಕಚ್ಛತ್ರದಿಂ - ಎಂಬಂಥ ಮಾತುಗಳು ಅಜಿತಪುರಾಣದಲ್ಲಿ ಬಂದಿವೆ. ರನ್ನ ತನ್ನ ಗದಾಯುದ್ಧದಲ್ಲಿ ತೈಲಪನನ್ನು ಸಮಸ್ತಭುವನಾಶ್ರಯಂ ಶ್ರೀಪೃಥ್ವೀವಲ್ಲಭಂ, ಮಹಾರಾಜಾಧಿರಾಜಂ, ರಾಜಪರಮೇಶ್ವರಂ, ಪರಮಭಟ್ಟಾರಕಂ, ಕರಹಟಭಯಂಕರಂ, ಜಾವಿಳಾಂದ್ರಕುಲೀನಭುವನಸದ್ಗುಣಮಣಿ ವಿಭೂಷಣಂ, ಸಿಂಧುರಕಂಧರಾಧಿರೂಢಪಲ್ಲಿಕೋಟಿಮಲ್ಲಂಘುನಂ, ಭದ್ರಕವಿದ್ರಾವಣಂ, ಕೊಂಕಣಭಯಂಕರಂ, ಉಭಯಬಲದಲ್ಲಣಂ, ಮಾರ್ಮಲೆವರಿ ಗಜಗೇಸರಿ, ಕರೀಂದ್ರಕಂಠೀರವಮಲ್ಲಂ, ವೈರಿಫಣೀಂದ್ರಸೌಪರ್ಣಂ, ಕ್ರಾಕಲಿಕ ರಾಜಗಜಕೇಸರಿ, ರಣಕುಂಭಿಕುಂಭಕಂಠೀರವಂ, ಯಾದವಕುಲಾಂಬರದ್ಯುಮಣಿ, ರಣರಂಗಭೀಷಣಂ, ರಿಪುಬಲಪುಂಜಗಜಘಟಾಭಂಜನಂ, ಸಾಮಂತಮೃಗಶಾರ್ದೂಲ, ರಣರಂಗರಾಕ್ಷಸಂ, ಅಕಲಂಕರಾಮಂ, ತಳವರ್ಗತಳಪ್ರಾಕಾರಂ, ಅರಿಷ್ಟಘರಟ್ಟಂ ರಾಷ್ಟ್ರಕೂಟ ಕಾಳಕೂಟಂ, ನಿಜಭು, ಚಕ್ರವರ್ತಿ, ಪಾಂಚಾಲಮದೇಭಪಂಚಾನನಂ, ಸಂಹಾರಸಿಂಹಿತ್ವಘೂರ್ಜರವಜ್ರದಂಡಂ, ಘೂರ್ಜರಭಯಜ್ವರಂ, ಸಮಸ್ತ ಮಾಳವಸಪ್ತಾರ್ಚಿ, ಶತ್ರುಗ್ರಹೋಚಾಟನನುಂ ಮತ್ತಂ ಅನೇಕ ದೇಶಾಧೀಶ್ವರಂ ಪರನೃಪ ಮದಗಜಘಟಾಭಂಜನನುಂ ಶ್ರೀಮನ್ನೂರ್ಮಡಿ ತೈಲಪ ನೆನಿಸಿದಾಹವಮಲ್ಲದೇವನಿಂ ಎಂಬುದಾಗಿ ನಾನಾವಿಧವಾಗಿ ಕೀರ್ತಿಸಿದ್ದಾನೆ. ಇದರಲ್ಲಿರುವ ಚಾರಿತ್ರಿಕಾಂಶಗಳು ಹಿಂದೆ ಹೇಳಿರುವ ಘಟನೆಗಳಲ್ಲಿ ಕೆಲವನ್ನು ಘೋಷಿಸುತ್ತವೆ.

ಈ ತೈಲಪ ಮಾನ್ಯಖೇಟವನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡಿದ್ದನೆಂದು ತೋರುತ್ತದೆ. ರಾಷ್ಟ್ರಕೂಟ 2ನೆಯ ಕೃಷ್ಣನ ಮಗಳು ಜಾಕವ್ವೆ ಈತನ ಹೆಂಡತಿ. ಇವನಿಗೆ ಸತ್ಯಾಶ್ರಯ ಮತ್ತು ದಶವರ್ಮ (ಯಶೋವರ್ಮ) ಎಂಬ ಇಬ್ಬರು ಮಕ್ಕಳಿದ್ದರು. ತೈಲಪನ ಮರಣಾನಂತರ ಇವನ ಹಿರಿಯ ಮಗ ಸತ್ಯಾಶ್ರಯ ಪಟ್ಟವೇರಿದ. (ಪಿ.ಕೆ.ಎನ್.)

**ತೈಲಪ III :** ಕಲ್ಯಾಣದ ಚಾಳುಕ್ಯವಂಶದ ರಾಜ (1149-62). ಮೂರನೆಯ ಸೋಮೇಶ್ವರನ ಕಿರಿಯ ಮಗ. ಅಣ್ಣ ಪೆರ್ಮ ಜಗದೇಕಮಲ್ಲನ ಅನಂತರ ಪಟ್ಟಕ್ಕೆ ಬಂದ. ಈತನಿಗೆ ತ್ರಿಭುವನಮಲ್ಲ, ತ್ರೈಲೋಕ್ಯಮಲ್ಲ ಎಂಬ ಬಿರುದುಗಳಿದ್ದುವು. ಇವನನ್ನು ನೂರ್ಮಡಿ ತೈಲಪ, ತೈಲ, ಚಾಳುಕ್ಯ ಚಕ್ರವರ್ತಿ, ರಕ್ಕಸಗಂಗ, ತ್ರಿಭುವನಮಲ್ಲ, ವೀರಗಂಗ ಎಂದೂ ಉಲ್ಲೇಖಿಸಲಾಗಿದೆ.

ಇವನ ತಂದೆಯ ಕಾಲದಲ್ಲಿ ಮಹಾದಂಡನಾಥನಾಗಿದ್ದ ಕಳಚುರಿ ಬಿಜ್ಜಳ ತುಂಬಾ ಪ್ರಬಲನಾಗಿದ್ದ. ಆದ್ದರಿಂದ ಅವನ ಅನುಯಾಯಿಗಳು ಕೆಲವರು ಮಂಡಳೇಶ್ವರರಾಗಿದ್ದರು. ಇದನ್ನೆಲ್ಲ ತಿಳಿದಿದ್ದ ತೈಲಪ ಬಿಜ್ಜಳನೊಂದಿಗೆ ಹೊಂದಿಕೊಂಡೇ ತನ್ನಾಳಿಕೆಯ ಆರಂಭದ ಕಾಲದಲ್ಲಿ ಕಾಲ ಹಾಕಿದ್ದ. ಸು.1153ರವರೆಗೆ ಬಿಜ್ಜಳ, ಕಾಕತೀಯ ಪ್ರೋಲ ಮೊದಲಾದವರು

ತೈಲಪನನ್ನೇ ಸಾರ್ವಭೌಮನೆಂದು ಪರಿಗಣಿಸಿದ್ದರು. ಆದರೆ ಅನಂತರ ಬಿಜ್ಜಳ, ಶಿಲಾಹಾರರು ಮತ್ತು ಕಾಕತೀಯರು ತೈಲಪನ ನಿರ್ಬಲತೆಯನ್ನು ಕಂಡು ಸ್ವತಂತ್ರರಾದರು. ಈ ರಾಜವಂಶದವರ ಶಾಸನಗಳಲ್ಲಿ ತೈಲಪನ ಉಲ್ಲೇಖವಿಲ್ಲದಿರುವುದೂ ತೈಲಪನ ಶಾಸನಗಳೆಲ್ಲ ಚಾಳುಕ್ಯ ರಾಜ್ಯದ ಮಧ್ಯಪ್ರಾಂತ್ಯಕ್ಕಷ್ಟೇ ಸೀಮಿತವಾಗಿರುವುದೂ ಇದಕ್ಕೆ ಸೂಚಕವಾಗಿದೆ. ತೈಲಪನ ಕೊನೆಗಾಲದಲ್ಲಿ ಇವನಿಗೂ ಕಾಕತೀಯ ರುದ್ರನಿಗೂ ಯುದ್ಧವಾಗಿ ತೈಲಪ ಸೋತಂತೆ ತೋರುತ್ತದೆ. ಅಲ್ಲದೆ ಬಿಜ್ಜಳನ ಹಿಡಿತದಿಂದ ದೂರವಿರಬೇಕೆಂಬ ಉದ್ದೇಶದಿಂದ ಅಣ್ಣಿಗೇರಿಗೆ ತನ್ನ ರಾಜಧಾನಿಯನ್ನು ವರ್ಗಾಯಿಸಿಕೊಂಡ. ಇದರಿಂದ ತನ್ನ ಬಲವರ್ಧಿಸಿಕೊಳ್ಳಲು ಬಿಜ್ಜಳನಿಗೆ ಅನುವಾಗಿ ಅವನು ತೈಲಪನ ಬೆನ್ನಟ್ಟಿದ. ತೈಲಪ ಅಣ್ಣಿಗೇರಿಯಿಂದ ಬನವಾಸಿಗೆ ವರ್ಗಾಯಿಸಿಕೊಂಡ. ಅಲ್ಲಿ 1162ರವರೆಗೆ ರಾಜ್ಯಭಾರ ಮಾಡಿದಂತೆ ತಿಳಿದುಬರುತ್ತದೆ. ಇವನ ಅನಂತರ ರಾಜ್ಯಾಧಿಕಾರ ಸಂಪೂರ್ಣವಾಗಿ ಕಳಚುರಿ ಬಿಜ್ಜಳನ ಕೈಗೆ ಸೇರಿತು. ರಾಜ್ಯವನ್ನು ವಹಿಸಿಕೊಂಡ ಬಿಜ್ಜಳ ಚಾಳುಕ್ಯವಂಶದ ಹಲವರನ್ನು ವಧಿಸಿದಂತೆ ತೋರುತ್ತದೆ. ಹಾಗೆ ಪ್ರಾಣತೆತ್ತವರಲ್ಲಿ 3ನೆಯ ತೈಲನೂ ಒಬ್ಬ ನಾಗಿರಬಹುದು. (ಪಿ.ಕೆ.ಎನ್.)

**ತೊಗಲುಗೊಂಬೆ ಆಟ** : ಕರ್ನಾಟಕ ಜನಪದ ರಂಗಭೂಮಿಯ ಒಂದು ಪ್ರಮುಖ ಕಲೆ. ಇದು ಕರಾವಳಿ ಮತ್ತು ಮಲೆನಾಡಿನ ಪ್ರದೇಶಗಳನ್ನುಳಿದು ಇತರ ಕಡೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಈ ಆಟವನ್ನು ಮಾಡುವ ಜನರನ್ನು ಗೊಂಬೆರಾಮರು, ಕಿಳ್ಳೆಕ್ಯಾತರು, ಶಿಳ್ಳೆಕ್ಯಾತರು ಎಂದು ಕರೆಯುವುದು ರೂಢಿ (ಶಿಳ್ಳೆಕ್ಯಾತ ಒಂದು ತೊಗಲುಗೊಂಬೆಯ ಹೆಸರೂ ಹೌದು). ಇವರು ಬಹುಪಾಲು ಅಲೆಮಾರಿಗಳು, ಬಹುಶಃ ಮಹಾರಾಷ್ಟ್ರದಿಂದ ಕರ್ನಾಟಕ ಹಾಗೂ ಆಂಧ್ರಪ್ರದೇಶಗಳಿಗೆ ವಲಸೆ ಬಂದವರಿರಬೇಕು. ತಮ್ಮನ್ನು ಮರಾಠಿ ಒಕ್ಕಲಿಗರು, ಚಿತ್ರಮರಾಠಿಗರು ಎಂದೂ ಕರೆದುಕೊಳ್ಳುತ್ತಾರೆ. ಇವರು ಆಡುವ ಭಾಷೆ ಮರಾಠಿಗೆ ಹತ್ತಿರವಾದುದೆಂಬ ಅಭಿಪ್ರಾಯವಿದೆ. ಇವರು ವರ್ಣಚಿತ್ರ ರಚನೆಯಲ್ಲಿ ಪರಿಣತರು ಎಂಬುದನ್ನು ಇವರು ರಚಿಸಿಕೊಳ್ಳುವ ಗೊಂಬೆಗಳು ನಿದರ್ಶಿಸುತ್ತವೆ.



ಪಲ್ಲಕ್ಕಿಯಲ್ಲಿ ರಾಣಿ

ತೊಗಲುಗೊಂಬೆ ಆಟ ಸಾಮಾನ್ಯವಾಗಿ ಒಂದೊಂದು ಕುಟುಂಬಕ್ಕೆ ಸೀಮಿತವಾಗಿದ್ದು ಕುಟುಂಬದ ಯಜಮಾನ ಮುಖ್ಯ ನೇತಾರನಾಗಿರುತ್ತಾನೆ. ಇವನಿಗೆ ಕುಟುಂಬದ ಗಂಡಸರು ಮತ್ತು ಹೆಂಗಸರು ಸಹಾಯಕರಾಗಿದ್ದು ಅಗತ್ಯ ಕಂಡುಬಂದಲ್ಲಿ ತಮ್ಮ ಬಂಧುಗಳಿಂದಲೂ ಸಹಾಯಪಡೆಯುವುದುಂಟು. ಸಾಧಾರಣವಾಗಿ ಒಂದೊಂದು ಕುಟುಂಬದವರು ಇಷ್ಟು ಹಳ್ಳಿಗಳೆಂದು ಹಂಚಿಕೊಂಡು ಸಾಧ್ಯವಾದಷ್ಟು ಆ ಪರಿಧಿಯಲ್ಲಿಯೆ ನಾಟಕ ಆಡಿ ಸಂಚರಿಸುತ್ತ ಜೀವನ ಸಾಗಿಸುತ್ತಾರೆ.



ಹಂದಿಯನ್ನು ಹೊತ್ತ ಬೇಟೆಗಾರರು

ಈ ಆಟದಲ್ಲಿ ಮೂರು ಪ್ರಾದೇಶಿಕ ಭಿನ್ನತೆಗಳನ್ನು ಗುರುತಿಸಬಹುದು.

1. ಬಡಗಲಪಾಯ - ಉತ್ತರ ಕರ್ನಾಟಕ
2. ತೆಂಕಲಪಾಯ - ಹಳೆಯ ಮೈಸೂರು
3. ಮೂಡಲಪಾಯ - ಕರ್ನಾಟಕ ಆಂಧ್ರಗಳ ಗಡಿಭಾಗ

ಬಡಗಲಪಾಯ ಮತ್ತು ತೆಂಕಲಪಾಯಗಳಲ್ಲಿ ಕುಳಿತು ಗೊಂಬೆಗಳನ್ನು ಕುಣಿಸುತ್ತಾರೆ. ಇದಕ್ಕೆ ಹೊಂದಿಕೆಯಾಗುವಂತೆ ಚಾಪೆ ಹಾಗೂ ತಡಿಕೆಗಳ ಸಹಾಯದಿಂದ ಅಡಕವಾದ ಚಿಕ್ಕ ರಂಗಮಂದಿರವನ್ನು ನಿರ್ಮಿಸಿಕೊಳ್ಳುವರು. ರಂಗಮಂಚದ ಮುಂಭಾಗದಲ್ಲಿ ಮಾತ್ರ ಪರದೆಯಂತೆ ಕೆಳಭಾಗಕ್ಕೆ ಎರಡೂವರೆ ಅಡಿಯಷ್ಟು ಎತ್ತರ ಕರಿ ಕಂಬಳಿಯನ್ನೂ ಮೇಲುಭಾಗಕ್ಕೆ ತೆಳುವಾದ ಬಿಳಿ ಪಂಚೆಯನ್ನೂ ಕಟ್ಟುತ್ತಾರೆ. ಇದರಿಂದಾಗಿ ಕಂಬಳಿ ಹಿಂಭಾಗದಲ್ಲಿರುವ ಗೊಂಬೆಗಳನ್ನು ಕುಣಿಸುವಾತ ಪ್ರೇಕ್ಷಕರಿಗೆ ಗೋಚರಿಸುವುದಿಲ್ಲ. ರಂಗದ ಒಳಗೆ ಪಂಚೆಯ ಹಿಂಬದಿಯಲ್ಲಿ ಒಂದು ಪಕ್ಕಕ್ಕೆ ದೀಪವನ್ನು ತೂಗುಹಾಕಿರುತ್ತಾರೆ. ಇದರ ಬೆಳಕು ಪಂಚೆಯ ಹಿಂದೆ ಹಿಡಿದ ಗೊಂಬೆಗಳ ಮೇಲೆ ಬಿದ್ದು ಅವುಗಳ ಪ್ರತಿಬಿಂಬ ಹೊರಗೆ ಕುಳಿತ ಪ್ರೇಕ್ಷಕರಿಗೆ ಆಕರ್ಷಕವಾಗಿ ಕಾಣುತ್ತದೆ. ಹಗಲು ನೋಡಿದಾಗ ಮಸಕುಮಸಕಾಗಿ ಕಾಣುವ ಈ ಗೊಂಬೆಗಳು ರಾತ್ರಿ ಹೊತ್ತು ದೀಪದ ಬೆಳಕಿನಲ್ಲಿ ಬಹಳ ಸುಂದರವಾಗಿ ಕಾಣುತ್ತವೆ. ಬಿಜಾಪುರ, ಬೆಳಗಾಂವಿ–ಈ ಭಾಗಗಳಲ್ಲಿ ಡೋಲು ಬಾರಿಸುವವನು ರಂಗದ ಹೊರಗೆ ಜನರ ಮಧ್ಯೆ ಉಳಿದು, ಕುಣಿಸುವವನು ಮಾತ್ರ ಒಳಗೆ ಸೇರಿಕೊಳ್ಳುತ್ತಾನೆ.

ಮೂಡಲಪಾಯದಲ್ಲಿ ಗೊಂಬೆಗಳ ಆಕೃತಿ ದೊಡ್ಡದಾಗಿರುವುದರಿಂದ ಅಷ್ಟದಂತೆ ದೊಡ್ಡದಾದ ರಂಗಮಂಟಪವನ್ನು ರಚಿಸುತ್ತಾರೆ. ಇಲ್ಲಿ ಕಲಾವಿದ ನಿಂತು ಗೊಂಬೆ ಕುಣಿಸುವುದುಂಟು. ಹೀಗೆ ಕುಣಿಸುವಾಗ ತಾನೂ ಕಾಲಿಗೆ ಗೆಜ್ಜೆ ಕಟ್ಟಿ ಗೊಂಬೆಕುಣಿತಕ್ಕೆ ತಕ್ಕಂತೆ ಹೆಜ್ಜೆಹಾಕುತ್ತಾನೆ.

ಗೊಂಬೆಗಳನ್ನು ಸಾಮಾನ್ಯವಾಗಿ ಜಿಂಕೆ ಅಥವಾ ಎಳೆ ಆಡಿನ ಚರ್ಮದಿಂದ ಮಾಡುತ್ತಾರೆ. ಕೆಲವು ಕಡೆಗಳಲ್ಲಿ ಕುರಿ, ಕತ್ತೆ ಮತ್ತು ಎಮ್ಮೆ ಇವುಗಳ ಚರ್ಮ ಬಳಸುವರು. ಚಿತ್ರ ತಯಾರಿಸಲು ಮೊದಲಿಗೆ ಚರ್ಮ ಹದಮಾಡಿಕೊಂಡು ಅನಂತರ ಅದರ ಮೇಲೆ ಚಿತ್ರ ಬರೆದು ಅನೇಕ ಗಿಡಮೂಲಿಕೆಗಳು, ಚಕ್ಕೆಗಳು ಮತ್ತು ಕೆಲವು ರಾಸಾಯನಿಕ ದ್ರವ್ಯಗಳನ್ನೆಲ್ಲಾ ಒಂದು ನಿಯಮಿತ ಕಾಲದವರೆಗೆ ಕರಗಿಸಿ ಬಣ್ಣ ತಯಾರುಮಾಡಿ ಹಾಕುತ್ತಾರೆ. ಅನಂತರ ಅವುಗಳನ್ನು ನೆರಳಿನಲ್ಲಿ

ಒಣಗಿಸುವರು. ಗೊಂಬೆಗಳು ಒಣಗಿ ಒರಟಾಗದೆ ಮೃದುವಾಗಿರುವ ಸಲುವಾಗಿ ಗಿಡಮೂಲಿಕೆಗಳಿಂದ ತಯಾರುಮಾಡಿದ ಎಣ್ಣೆಯನ್ನು ಆಗಾಗ್ಗೆ



ಪಕ್ಷಿ

ಲೇಪಿಸುವುದುಂಟು. ಗೊಂಬೆಗಳು ನೇರವಾಗಿ ನಿಲ್ಲಲು ಅವುಗಳಿಗೆ ಬಿದಿರಿನ ಕಡ್ಡಿ ಅಥವಾ ಲಾಳದ ಕಡ್ಡಿಗಳನ್ನು ಜೋಡಿಸಿರುತ್ತಾರೆ. ಗೊಂಬೆ ಆಡಿಸುವಾಗ ಶ್ರುತಿಗಾಗಿ ಉಪ್ಪಂಗ, ಮದ್ದಲೆ, ಮುಖವೀಣೆ - ಇವುಗಳ ಜೊತೆಗೆ ಹಾರ್ಮೋನಿಯಂ ಬಳಸುವುದುಂಟು. ಕೆಲವೆಡೆ ಜೋಳದ



ರಾಕ್ಷಸಿ

ಕಡ್ಡಿಯಿಂದ ಮಾಡಿದ ಬುರಿ ಬುರಿ ಅಥವಾ ಪಾವರೆ ಎಂಬ ವಾದ್ಯವನ್ನು ಬಳಸುವರು. ಹಿಮ್ಮೇಳವನ್ನು ಹೆಂಗಸರು ಗಂಡಸರು ಸೇರಿ ಹಾಡುತ್ತಾರೆ. ಶಿಳ್ಳೆಕ್ಯಾತ ಎಂಬ ತೊಗಲುಗೊಂಬೆ ಈ ಆಟದ ಜೀವನಾಡಿ. ಈ ಗೊಂಬೆ ನಾಟಕದ ಮೊದಲಿಂದ ಕೊನೆಯವರೆಗೆ ಅನೇಕ ಬಾರಿ ತನ್ನ ಮಡದಿ ಬಂಗಾರಕ್ಕನೊಡನೆ ರಂಗದ ಮೇಲೆ ಕಾಣಿಸಿಕೊಂಡು ಪ್ರೇಕ್ಷಕರ ಕುತೂಹಲವನ್ನು ಕೆರಳಿಸುತ್ತದೆ. ವ್ಯಂಗ್ಯ ಹಾಗೂ ಹಾಸ್ಯದ ಮಾತಿನಿಂದ ಜನರನ್ನು ನಗಿಸುವುದಷ್ಟೆ ಅಲ್ಲದೆ ಪಾತ್ರಗಳ ಜೊತೆಯಲ್ಲಿ ಕುಣಿಯುವುದು, ಅವರನ್ನು ಪ್ರೇಕ್ಷಕರಿಗೆ ಪರಿಚಯಿಸುವುದು ಮೊದಲಾದ ಕಾರ್ಯಗಳಲ್ಲಿ ತೊಡಗಿ ಜನರಿಗೆ ಮನರಂಜನೆ ಒದಗಿಸುತ್ತದೆ. ಇದರ ಅಭಿನಯ ಸೊಗಸಾಗಿರುತ್ತದೆ.



ಕುದುರೆ ಸವಾರ

ತೊಗಲುಗೊಂಬೆಯಾಟ ಆಡಿಸಿದರೆ ಮಳೆ ಬರುತ್ತದೆಂಬ ನಂಬಿಕೆ ಕೆಲವು ಕಡೆ ಕಂಡುಬರುತ್ತದೆ. ರಾಮಾಯಣ, ಮಹಾಭಾರತ ಮತ್ತು ಭಾಗವತ - ಇವುಗಳಿಗೆ ಸಂಬಂಧಿಸಿದ ಕಥೆಗಳು ಈ ಆಟದಲ್ಲಿ ಜನಪ್ರಿಯವಾಗಿವೆ. (ಟಿ.ಎಸ್.ಆರ್.)

**ತೊಣಚಿ** : ಮಂಡ್ಯ ಜಿಲ್ಲೆ ಕೃಷ್ಣರಾಜಪೇಟೆ ತಾಲ್ಲೂಕಿನ ಒಂದು ಗ್ರಾಮ. ಹೊಯ್ಸಳರ ಕಾಲದಲ್ಲಿ ಪವಿತ್ರ ಸ್ಥಳವಾಗಿ ಪ್ರಾಮುಖ್ಯ ಪಡೆದಿತ್ತು. ತೊಳಂಚೆ ಅಂದಿನ ಹೆಸರು. ಇಲ್ಲಿ ದೊರಕಿರುವ 1047ರ ಒಂದು ಶಾಸನ ಹೊಯ್ಸಳ ಆಳಿಕೆಯ ಪ್ರಾಚೀನ ಶಾಸನಗಳಲ್ಲೊಂದು. ಗ್ರಾಮದ ಈಶಾನ್ಯದಲ್ಲಿ ಹೊಯ್ಸಳ ಶೈಲಿಯ ಎರಡು ಚಿಕ್ಕ ಶಿವಾಲಯಗಳು ಅಕ್ಕಪಕ್ಕದಲ್ಲಿವೆ. ಇವುಗಳಲ್ಲಿ ಉತ್ತರದ ಕಡೆ ಇರುವುದು ಬಸವೇಶ್ವರ ದೇವಾಲಯ. ಇದರಲ್ಲಿ ಗರ್ಭಗೃಹ, ಸುಕನಾಸಿ, ನವರಂಗ, ಅರ್ಧಮಂಟಪ ಮತ್ತು ನಂದಿಮಂಟಪಗಳಿವೆ. ನಂದಿಮಂಟಪದಲ್ಲಿರುವ ದೊಡ್ಡ ಬಸವನ ವಿಗ್ರಹದಿಂದ ದೇವಾಲಯಕ್ಕೆ ಈ ಹೆಸರು ಬಂತೆಂದು ತೋರುತ್ತದೆ. ಮೂಲತಃ ಇದಕ್ಕೆ ಸಿದ್ಧನಾಥ ದೇವಾಲಯವೆಂಬ ಹೆಸರಿತ್ತೆಂದೂ ಸು.1132ರ ರಚನೆಯೆಂದೂ ಇಲ್ಲಿನ ಶಾಸನದಿಂದ ತಿಳಿಯುತ್ತದೆ. ದೇವಾಲಯ ಚಿಕ್ಕದಾದರೂ ಸುಂದರ ಕಟ್ಟಡ. ನವರಂಗದ ನಾಲ್ಕು ಕಂಬಗಳನ್ನು

ನಾಜೂಕಾಗಿ ಕೆತ್ತಲಾಗಿದೆ. ಗರ್ಭಗೃಹ, ಸುಕನಾಸಿ, ನವರಂಗ ಹಾಗೂ ನಂದಿ ಮಂಟಪಗಳಲ್ಲಿ ಸುಂದರವಾದ ಆಳವಾಗಿ ಕೆತ್ತಿರುವ ಪದ್ಮಭುವನೇಶ್ವರಿಗಳಿವೆ. ನವರಂಗದಲ್ಲಿ ಹೊಯ್ಸಳ ಕಾಲದ ಗಣಪತಿ, ಸಪ್ತಮಾತೃಕಾ ಮತ್ತು ಸೂರ್ಯ ವಿಗ್ರಹಗಳಿವೆ. ಪಕ್ಕದ ಒಂದು ಕೋಣೆಯಲ್ಲಿ ಚೆನ್ನಿಗರಾಯ (ಕೇಶವ) ವಿಗ್ರಹವಿದೆ. ಗರ್ಭಗೃಹದ ಮೇಲೆ ಕಲ್ಲಿನ ಶಿಖರವಿದೆ (ಇದಕ್ಕೆ ಗಾರೆ ಬಳಿಯಲಾಗಿದೆ). ದಕ್ಷಿಣದೆಡೆಗಿರುವ ಇನ್ನೊಂದು ದೇವಾಲಯ ಸಾಮಾನ್ಯ ರೀತಿಯ ರಚನೆ. 1047ರ ಹೊಯ್ಸಳ ಶಾಸನದಲ್ಲಿ ಉಲ್ಲೇಖಿತವಾಗಿರುವ ಅಂಕಕಾರೇಶ್ವರ ದೇವಾಲಯ ಇದೇ ಇರಬಹುದೆಂದು ಊಹಿಸಲಾಗಿದೆ. ಹಾಗಿದ್ದಲ್ಲಿ ಹೊಯ್ಸಳ ಶೈಲಿಯ ಉಗಮಕ್ಕೆ ಮುಂಚಿನ ಹೊಯ್ಸಳ ಕಾಲದ ದೇವಾಲಯದಲ್ಲಿ ಇದೂ ಒಂದೆಂದು ಪರಿಗಣಿಸಬಹುದು. (ಎಸ್.ಇ.)

**ತೊಣ್ಣೂರು :** ಮಂಡ್ಯ ಜಿಲ್ಲೆ ಪಾಂಡವಪುರ ತಾಲ್ಲೂಕಿನ ಒಂದು ಹಳ್ಳಿ. ಕಸಬೆಯಿಂದ ವಾಯವ್ಯಕ್ಕೆ 8ಕಿಮೀ ದೂರದಲ್ಲಿದೆ. ಶಾಸನಗಳಲ್ಲಿ ಇದು ಯಾದವಪುರ, ಯಾದವನಾರಾಯಣಪುರ, ಯಾದವನಾರಾಯಣ ಚತುರ್ವೇದಿ ಮಂಗಲಂ ಎಂದು ಉಲ್ಲೇಖವಾಗಿದೆ. ತೊಂಡ ಎಂದರೆ ಭಕ್ತ, ತೊಂಡನೂರು ಎಂದರೆ ಭಕ್ತನ ಊರು ಎಂದು ಅರ್ಥ. ಇದು ಹಿಂದೆ ಹೊಯ್ಸಳರ ಉಪರಾಜಧಾನಿಯಾಗಿತ್ತೆಂದು ತಿಳಿದುಬರುತ್ತದೆ.



ನರಸಿಂಹಸ್ವಾಮಿ ವಿಗ್ರಹ, ತೊಣ್ಣೂರು

ವಿಷ್ಣುವರ್ಧನ ಚೋಳವಿಜಯದ ಕುರುಹಾಗಿ ಕಟ್ಟಿಸಿದ ಮೂರು ನಾರಾಯಣ (ಬೇಲೂರಿನ ವಿಜಯನಾರಾಯಣ, ತಲಕಾಡಿನ ಕೀರ್ತಿನಾರಾಯಣ, ತೊಣ್ಣೂರಿನ ನಂಬಿನಾರಾಯಣ) ದೇವಾಲಯಗಳಲ್ಲಿ ಒಂದಾದ ನಂಬಿನಾರಾಯಣ ದೇವಾಲಯ ಇಲ್ಲಿರುವ ದೇವಾಲಯಗಳಲ್ಲೆಲ್ಲ ದೊಡ್ಡದೂ ಪ್ರಾಚೀನವೂ ಆಗಿದೆ. ಈ ದೇವಸ್ಥಾನ ವಿಷ್ಣುವರ್ಧನನ ಮೇಲ್ವಿಚಾರಣೆಯಲ್ಲಿ ದಂಡನಾಯಕ ಸುರಗಿಯ ನಾಗಯ್ಯನಿಂದ ಕಟ್ಟಲ್ಪಟ್ಟಿತ್ತೆಂದು ದೇವಸ್ಥಾನದ ನವರಂಗದಲ್ಲಿರುವ ಶಾಸನದಿಂದಲೂ ಮತ್ತು ಲಕ್ಷ್ಮೀಗುಡಿಯ ಮುಂದಿರುವ ಕಂಬದ ಮೇಲಿನ ಶಾಸನದಿಂದಲೂ ತಿಳಿಯುತ್ತದೆ. ಮೂಲೆಗಳಲ್ಲಿ ಸಿಂಹಲಲಾಟಗಳೂ ಮೇಲ್ಛಾವಣಿಯ



ನಂಬಿನಾರಾಯಣ ದೇವಸ್ಥಾನ

ಮಧ್ಯಭಾಗದಲ್ಲಿ ಪದ್ಮವೂ ಇರುವ ಗರ್ಭಗುಡಿಯಲ್ಲಿ ಗರುಡಪೀಠದ ಮೇಲೆ 6' ಎತ್ತರದ ನಾರಾಯಣ ವಿಗ್ರಹವಿದೆ. ಹೂವಿನ ಮತ್ತು ಮಣಿಗಳ ಕೆಲಸ ಮಾಡಿರುವ ನವರಂಗದ ಬಳಪದ ಕಲ್ಲಿನ ಕಂಬಗಳು ಹೊಯ್ಸಳ ಶೈಲಿಯಲ್ಲಿವೆ. ಗೋಡೆಗಂಬಗಳೂ ಗೂಡುಗಳೂ ಇರುವ ಹೊರಗಿನ ಗೋಡೆಯು ಕಣಶಿಲೆಯಿಂದ ಕಟ್ಟಲಾಗಿದ್ದರೂ ಹೊಯ್ಸಳ ಛಾಯೆ ಇದೆ. ಇಟ್ಟಿಗೆಯಲ್ಲಿ ಕಟ್ಟಲಾಗಿರುವ ವಿಮಾನದ ಮೇಲಿನ ಗೋಪುರವೂ ವರ್ತುಲಾಕಾರದ 50 ಕಂಬಗಳಿರುವ ಮುಖಮಂಟಪವೂ ಅಷ್ಟಮುಖಾಕೃತಿಯ 40 ಕಂಬಗಳಿರುವ ಪಾತಾಳಾಂಕಣವೂ ಹೊಯ್ಸಳರ ಅನಂತರಕಾಲದ ಕಟ್ಟಡಗಳು. ಆದರೆ ಹೊರಪ್ರಾಕಾರದಲ್ಲಿರುವ ಲಕ್ಷ್ಮೀಗುಡಿ ವಿಷ್ಣುವರ್ಧನನ ಕಾಲದಲ್ಲೇ ಕಟ್ಟಲಾಗಿದೆ ಎಂದು ಹೇಳುವುದಕ್ಕೆ ಅಲ್ಲಿಯೇ ಕಂಬದ ಮೇಲಿರುವ ವಿಷ್ಣುವರ್ಧನನ ಶಾಸನ ಆಧಾರ. ಮಹಾದ್ವಾರದ ಮುಂದೆ 16 ಮೂಲೆಗಳುಳ್ಳ ಗರುಡಗಂಬವಿದೆ.

ಗುಡ್ಡದ ಮೇಲಿರುವ ಯೋಗಾನರಸಿಂಹ ದೇವಸ್ಥಾನ 12ನೆಯ ಶತಮಾನದಲ್ಲಿ ನಿರ್ಮಿತವಾದ್ದು. ಇಲ್ಲಿ ರಾಮಾನುಜರು ಏಕಕಾಲಕ್ಕೆ ಸಾವಿರ ಜೈನರೊಡನೆ ವಾದಮಾಡಿ ಗೆದ್ದರೆಂಬುದಾಗಿ ಐತಿಹ್ಯ. ಅದರ ಕುರುಹಾಗಿ ಗಾರೆಯಲ್ಲಿ ಮಾಡಿರುವ ತಲೆಯ ಮೇಲೆ ಏಳು ಹೆಡೆಯ ಆದಿಶೇಷನಿರುವ ರಾಮಾನುಜರ ಮೂರ್ತಿ ಇಲ್ಲಿದೆ. ಇದು ಬಹಳ ಈಚಿನದೆಂದು ಕಂಡುಬರುತ್ತದೆ. ರಾಮಾನುಜರು ತೊಣ್ಣೂರಿಗೆ ಭೇಟಿಕೊಟ್ಟಿದ್ದರೆಂಬುದಾಗಿಯೂ ವಿಷ್ಣುವರ್ಧನ, ನರಸಿಂಹ, ಬಲ್ಲಾಳ ಮುಂತಾದ ಹೊಯ್ಸಳ ರಾಜರು ರಾಮಾನುಜ ಕೂಟಕ್ಕೆ ದತ್ತಿಗಳನ್ನು ಬಿಟ್ಟಿರುವುದಾಗಿಯೂ ತೊಣ್ಣೂರಿನಲ್ಲಿರುವ ಶಾಸನಗಳಿಂದ ತಿಳಿಯುತ್ತದೆ. ಪಾಳುಬಿದ್ದಿರುವ ಕೈಲಾಸೇಶ್ವರ ದೇವಸ್ಥಾನ ಮತ್ತು ವಿಟ್ಟಿರುಂದ ಪೆರುಮಾಳ್ (ವೀಟ್ರಿರುಂದ-ಕುಳಿತಿರುವ) ಅಥವಾ ಕೃಷ್ಣನ ದೇವಸ್ಥಾನ 1ನೆಯ ನರಸಿಂಹನ ಕಾಲದಲ್ಲಿ 1158ರಲ್ಲಿ ಕಾರ್ಯಗುಡಿಯ ಕೂತ್ತಾಡಿ ದಂಡನಾಯಕನಿಂದ ನಿರ್ಮಿಸಲಾದವು.

ತೊಣ್ಣೂರಿಗೆ ನೈಋತ್ಯದಲ್ಲಿ ಸಣ್ಣ ಗುಡ್ಡದ ಮೇಲೆ ಸೈಯದ್ ಸಾಲಾರ್ ಮಸೂದ್ ಘಾಜಿಯ ದರ್ಗಾ ಇದೆ. ಇದರ ಕಾಲ 760 ಹಿಜ್ರಿ (1358) ಎಂದು ಬರೆಯಲಾಗಿದೆ. ಇಲ್ಲಿನ ಹಜಾರದಲ್ಲಿರುವ ಅನೇಕ ಕಂಬಗಳ ಮೇಲೆ ಹಿಂದು ದೇವತೆಗಳ ಶಿಲ್ಪಗಳನ್ನು ಕಾಣಬಹುದು. ಬಾಗಿಲಿನ ಹತ್ತಿರ ಅನೇಕ ಮಾಸ್ತಿಕಲ್ಲುಗಳಿವೆ. ಇದರ ಹತ್ತಿರವಿರುವ ಎರಡು ಸಮಾಧಿಗಳು ಟಿಪ್ಪುವಿನ ಸಂಬಂಧಿಕರದು.

ಇಲ್ಲಿರುವ ಮೋತೀತಲಾಬ್ ಎಂಬ ಕೆರೆಯನ್ನು ರಾಮಾನುಜರು ಕಟ್ಟಿಸಿ ಅದಕ್ಕೆ ತಿರುಮಲಸಾಗರ ಎಂದು ಹೆಸರಿಟ್ಟಿದ್ದಾಗಿ ಐತಿಹ್ಯ. ಈ ಕೆರೆಯಲ್ಲಿ ಅವರಿಗೆ ಒಂದು ಕೃಷ್ಣನ ವಿಗ್ರಹ ಸಿಕ್ಕಿತು. ಆ ವಿಗ್ರಹವೇ ಈಗಿನ ಅಹೋಬಲ ಮಠದಲ್ಲಿರುವ ಕೃಷ್ಣನ ವಿಗ್ರಹ ಎಂಬ ಹೇಳಿಕೆ

ಇದೆ. ಹೊಯ್ಸಳರ ಕಾಲದ ಕಟ್ಟಡದ ಕಲ್ಲುಗಳನ್ನು ಸೋಪಾನ ಕಟ್ಟುವುದಕ್ಕೆ ಉಪಯೋಗಿಸಲಾಗಿದೆ. ಈ ಸೋಪಾನದಲ್ಲಿ ಸಳ, ಗಜೇಂದ್ರಮೋಕ್ಷ ಮುಂತಾದ ಹೊಯ್ಸಳ ಶಿಲ್ಪಗಳು ಅಲ್ಲಲ್ಲಿ ಕಾಣುತ್ತವೆ. ಈ ಸೋಪಾನವೂ ಹೊಯ್ಸಳರ ಕಾಲದಲ್ಲಿ ಕಟ್ಟಲ್ಪಟ್ಟು ಟಿಪ್ಪುವಿನ ಕಾಲದಲ್ಲಿ ಜೀರ್ಣೋದ್ಧಾರವಾದುದೆಂದು ಹೇಳಲಾಗಿದೆ. 1764ರಲ್ಲಿ ದಖನ್ನಿನ ಸುಬೇದಾರನಾದ ನಾಸಿರ್ ಜಂಗ್ ಎಂಬುವನು ಅದರ ತಿಳಿಯಾದ ನೀರನ್ನು ನೋಡಿ ಮೋತೀತಲಾಬ್ (ಮುತ್ತಿನ ಸರೋವರ) ಎಂದು ಕರೆದ. (ಆರ್.ಪಿ.)

**ತೊರವಿ (ತೊರವೆ) :** ಬಿಜಾಪುರ ಜಿಲ್ಲೆಯ ಅದೇ ತಾಲ್ಲೂಕಿನ ಒಂದು ಗ್ರಾಮ. ಬಿಜಾಪುರದ ಪಶ್ಚಿಮಕ್ಕೆ 8ಕಿಮೀ ದೂರದಲ್ಲಿ ಅಥಣಿಗೆ ಹೋಗುವ ಮಾರ್ಗದಲ್ಲಿದೆ. ಇದನ್ನು ತ್ವರಿತಾಲಯ, ನೌಲಾಖಿಪುರ, ನವರಸಪುರ ಎಂಬ ಹೆಸರುಗಳಿಂದಲೂ ಕರೆಯುವುದುಂಟು. ಇಲ್ಲಿ ಒಂದು ತೊರೆ ಹರಿಯುವುದರಿಂದ ತೊರವಿ ಎಂಬ ಹೆಸರು ಬಂದಿರುವಂತೆ ತೋರುತ್ತದೆ. ಪ್ರಾಚೀನದಲ್ಲಿ ತೊರವಿ ಒಂಬತ್ತು ಲಕ್ಷ ಮನೆಗಳಿಂದ ಕೂಡಿದ ಪ್ರಸಿದ್ಧ ಪಟ್ಟಣವಾಗಿದ್ದು ದಕ್ಷಿಣಕಾಶಿ ಎಂದು ಹೆಸರುವಾಸಿಯಾಗಿತ್ತು. ಬಾದಾಮಿಯ ಚಳುಕ್ಯರ ಹಾಗೂ ದೇವಗಿರಿಯ ಸೇವುಣರ ಕಾಲದ ಅನೇಕ ಕನ್ನಡ ಶಾಸನಗಳಲ್ಲಿ ತೊರವಿಯ ಉಲ್ಲೇಖವಿದೆ.

2ನೆಯ ಇಬ್ರಾಹಿಂ ಆದಿಲ್‌ಷಾ ತನ್ನ ಆಳಿಕೆಯ ಕಾಲದಲ್ಲಿ ಇಲ್ಲಿ ಹೊಸ ರಾಜಧಾನಿಯನ್ನು ಸ್ಥಾಪಿಸುವ ಉದ್ದೇಶದಿಂದ ಅನೇಕ ಅರಮನೆ ಮತ್ತು ಇತರ ಕಟ್ಟಡಗಳನ್ನು ಕಟ್ಟಿಸಿದ. ಇಂದು ಅವುಗಳ ಅವಶೇಷ ಮಾತ್ರ ಉಳಿದಿವೆ. ಇವುಗಳಲ್ಲಿ ನವರಸ್ ಅಥವಾ ಸಂಗೀತ ಮಹಲ್ ಪ್ರಖ್ಯಾತವಾದದ್ದು. ಇದು ಬಿಜಾಪುರಕೋಟೆಯ ಒಳಗಿರುವ ಗಗನಮಹಲ್ ರಚನೆಯನ್ನು ಹೋಲುತ್ತದೆ. ಈ ಮಹಲನ್ನು ಎರಡು ಸಣ್ಣ ತೊರೆಗಳು ಸುತ್ತುವರಿದಿವೆ. ಬೆಟ್ಟ ಗುಡ್ಡಗಳ ಹಿನ್ನೆಲೆ ಈ ಕಟ್ಟಡಕ್ಕೆ ಸೌಂದರ್ಯವನ್ನು ಒದಗಿಸಿದೆ. ಒಂದು ಕಾಲಕ್ಕೆ ತೊರವಿ, ಬಿಜಾಪುರ ಒಂದೇ ಆಗಿದ್ದವು. ಇಂದು ತೊರವಿಯಿಂದ ಬಿಜಾಪುರದವರೆವಿಗೂ ಇರುವ ರಸ್ತೆಯ ಇಕ್ಕೆಲಗಳಲ್ಲಿ ರಾಶಿಬಿದ್ದಿರುವ ಮಣ್ಣು ದಿಬ್ಬಗಳು ಈ ಎರಡೂ ಊರುಗಳ ನಡುವೆ ಇದ್ದ ಉತ್ತಮ ಹೆದ್ದಾರಿಯೊಂದರ ಕುರುಹುಗಳಾಗಿವೆ. ಇಲ್ಲಿ ಅನೇಕ ದೇವಾಲಯಗಳೂ ಮಸೀದಿಗಳೂ ಇವೆ. ಇಲ್ಲಿರುವ ನರಸಿಂಹ ದೇವಾಲಯ ಹೆಚ್ಚು ಪ್ರಸಿದ್ಧವಾದುದು. ಹಿರಣ್ಯಕಶಿಪುವನ್ನು ವಧಿಸುವ ಭಂಗಿಯಲ್ಲಿರುವ ಉಗ್ರನರಸಿಂಹನ ವಿಗ್ರಹ 3 ಅಡಿ ಎತ್ತರವಿದ್ದು ಇದನ್ನು ಸಾಲಿಗ್ರಾಮ ಶಿಲೆಯಿಂದ ತಯಾರಿಸಲಾಗಿದೆ. ಈ ವಿಗ್ರಹವನ್ನು ಬಾಗೇವಾಡಿ ತಾಲ್ಲೂಕಿನ ಚಿಮ್ಮಲಗಿ ಗ್ರಾಮದಿಂದ ತಂದು ಸ್ಥಾಪಿಸಲಾಗಿದೆಯೆಂದು ಪ್ರತೀತಿ. ವಿಗ್ರಹದ ಬಳಿ ಒಂದು ಶಿವಲಿಂಗವಿದೆ. ಸೋಮನಾಥಕವಿ (ಸು.1650) ತನ್ನ ರುಕ್ಮಾಂಗದ ಚರಿತೆಯಲ್ಲಿ ತೊರವೆಯ ನರಸಿಂಹನನ್ನು ಸ್ಮರಿಸಿದ್ದಾನೆ. ಪುರಂದರದಾಸರು ತೊರವೆಯ ನರಸಿಂಹನ ಬಗೆಗೆ ಅನೇಕ ಪದಗಳನ್ನು ರಚಿಸಿದ್ದಾರೆ. ತೊರವೆ ರಾಮಾಯಣವನ್ನು ರಚಿಸಿದ ಕುಮಾರ ವಾಲ್ಮೀಕಿ (ನೋಡಿ: ತೊರವೆ ನರಹರಿ) ಇಲ್ಲಿಯವನೆಂದು ನಂಬಲಾಗಿದೆ. ಊರಿನ ಒಳಗೆ 400 ಗಜ ಚಚ್ಚೌಕವುಳ್ಳ ನರಸಿಂಹತೀರ್ಥ ಎಂಬ ಒಂದು ಕೊಳವಿದೆ. ತೊರವಿಯಲ್ಲಿ ಏಪ್ರಿಲ್ ತಿಂಗಳಿನಲ್ಲಿ ಒಂದು ದಿನದ ಮಟ್ಟಿಗೆ ವಾರ್ಷಿಕ ಜಾತ್ರೆ ನಡೆಯುತ್ತದೆ. (ಎಲ್.ಆರ್.ಕೆ.)

**ತೊಳಹರ :** ಉಡುಪಿ ಜಿಲ್ಲೆ ಉಡುಪಿ ತಾಲ್ಲೂಕಿನ ಸುರಾಲದಲ್ಲಿ ಹೆಸರಾಂತ ತುಳುವ ತುಂಡರಸರಾಗಿ ಮೆರೆದ ಒಂದು ಮನೆತನ. ಸು.11ನೆಯ ಶತಮಾನದ ಹೊತ್ತಿಗೆ ಉಚ್ಛ್ರಾಯ ಸ್ಥಿತಿಗೇರಿದ ಈ ಮನೆತನದವರು ಬಹುಶಃ ಮೂಲತಃ ಸಾಂತಳಿಗೆಯವರು. 12ನೆಯ ಶತಮಾನದಲ್ಲಿ ಉಡುಪಿ ಮತ್ತು ಕುಂದಾಪುರ ತಾಲ್ಲೂಕುಗಳಲ್ಲಿ ಪ್ರಬಲಗೊಂಡರು. ಸುರಾಲ, ಶಂಕರನಾರಾಯಣ, ಕುಡಿ ಮುಂತಾದ ಸ್ಥಳಗಳಲ್ಲಿ ದಾನದತ್ತಿಗಳನ್ನು ಬಿಟ್ಟ ಶಿಲಾಶಾಸನಗಳು ಇವರ ವೀರತೆಯನ್ನು ಹೇರಳವಾಗಿ ಪ್ರಶಂಸಿಸಿರುವುವು. ಇಕ್ಕೇರಿ ಪ್ರಭುತ್ವ ಕಾಲದಲ್ಲಿ ಇವರ ಆಳಿಕೆ ಶಿಥಿಲಗೊಂಡಿತು.

ಇವರು ಜೈನ ಮತಸ್ಥರಾದರೂ ಸುರಾಲದ ಮಹಲಿಂಗೇಶ್ವರನ ಭಕ್ತರಾಗಿದ್ದರು. ವಿಜಯನಗರದ ಅರಸರ ಬಲಗೈ ಎನಿಸಿದ್ದರು. ಸೂಳನಿಗಂಬ ತೊಳಹ, ಬೊಮ್ಮಣ್ಣಾಡಿ ತೊಳಹ, ಮಾದಾಡಿ ತೊಳಹ, ನಾಗಾಚ ತೊಳಹ ಮೊದಲಾದವರು ಈ ವಂಶದವರಲ್ಲಿ ಪ್ರಮುಖರು. (ಆರ್.ಟಿ.ಎಸ್.)

**ತೋಗೆರೆ ನಂಜುಂಡಶಾಸ್ತ್ರಿ :** 20ನೆಯ ಶತಮಾನದ ಆರಂಭದ ದಶಕಗಳಲ್ಲಿ ಕನ್ನಡ ಭಾಷೆ ಸಾಹಿತ್ಯ ವಿಮರ್ಶೆಗಳ ಕ್ಷೇತ್ರದಲ್ಲಿ ಗಣನೀಯ ಕೆಲಸ ಮಾಡಿದ ಪಂಡಿತರಲ್ಲೊಬ್ಬರು. ಆಗಿನ ಮೈಸೂರು ಸರ್ಕಾರದ ಶಾಸನ ಇಲಾಖೆಯಲ್ಲಿ ಆರ್.ನರಸಿಂಹಾಚಾರ್ಯರ ಸಿಬ್ಬಂದಿಯಲ್ಲಿ ಒಬ್ಬರಾಗಿ ಸ್ವಲ್ಪ ಕಾಲ ಕೆಲಸ ಮಾಡಿದ ಇವರು ಅನಂತರ ಮೈಸೂರು ಮಹಾರಾಣಿಯವರ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿಯೂ ಇದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಪಂಡಿತರಲ್ಲಿ ಒಬ್ಬರಾಗಿದ್ದ ಇವರು, ಪರಿಷತ್ತಿನ ವಿದ್ವತ್ಸಂಬಂಧವಾದ ಕಾರ್ಯಗಳಲ್ಲಿ ಹಲವು ಬಗೆಯಲ್ಲಿ ಶ್ರಮಿಸಿದರು. ಪಂಪಭಾರತದ ಸಂಪಾದನ ಕಾರ್ಯದಲ್ಲಿ ಬೆಳ್ಳಾವೆ ವೆಂಕಟನಾರಣಪ್ಪನವರಿಗೆ ನೆರವಾಗಿದ್ದರು. ಪಂಪಭಾರತದಲ್ಲಿಯ ಕ್ಲಿಷ್ಟಪದಗಳ ನಿಘಂಟನ್ನು ಸಿದ್ಧಪಡಿಸುವಲ್ಲಿ ಇವರಿಂದ ಹೆಚ್ಚಿನ ಸಹಾಯ ದೊರೆತಂತೆ ತಿಳಿಯುತ್ತದೆ. ಕನ್ನಡ ಭಾಷೆ ಸಾಹಿತ್ಯಗಳಿಗೆ ಸಂಬಂಧಿಸಿದಂತೆ ಕರ್ಣಾಟಕ (ಕನ್ನಡ) ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಕೆಲವು ವಿದ್ವತ್ಪೂರ್ಣ ಲೇಖನಗಳನ್ನು ಪ್ರಕಟಿಸಿದ್ದಾರೆ. ಕರ್ಣಾಟಕ ಭಾಷಾಲಿಪಿ, ಕರ್ಣಾಟಕ ವರ್ಣಸಮಾಮ್ನಾಯ, ಕನ್ನಡದಲ್ಲಿಯ ಕೆಲವು ಶಬ್ದಗಳ ಸಾಧುತ್ವ ವಿಚಾರ, ನಾಟಕ ವಿಮರ್ಶೆ, ರಸ ನಿರೂಪಣಂ - ಇವು ಇವರ ಲೇಖನಗಳಲ್ಲಿ ಕೆಲವು. ಇವುಗಳಲ್ಲಿ ಇವರ ಆಧುನಿಕ ಸಂಶೋಧನ ದೃಷ್ಟಿಯು ನಿಷ್ಕೃಷ್ಟ ಪಾಂಡಿತ್ಯವನ್ನು ಗುರುತಿಸಬಹುದು. (ಟಿ.ವಿ.ವಿ.)

**ತೋನ್ಸೆ :** ಉಡುಪಿ ಜಿಲ್ಲೆ ಉಡುಪಿ ತಾಲ್ಲೂಕಿನ ಒಂದು ಗ್ರಾಮ. ಕಲ್ಯಾಣಪುರ-ಕೆಮ್ಮಣ್ಣು ಹಾದಿಯಲ್ಲಿ ಉಡುಪಿಯಿಂದ 8ಕಿಮೀ ಉತ್ತರಕ್ಕೆ ಅರಬ್ಬೀ ಸಮುದ್ರದ ದಂಡೆಯ ಮೇಲಿದೆ.

ಇಲ್ಲಿ ಖಂಡಿಗೆ ವಿನಾಯಕ, ದುರ್ಗಾಪರಮೇಶ್ವರಿ, ಪಟ್ಟಾಭಿ ರಾಮಚಂದ್ರ, ಪಡುಕುದುರು ಗಣಪತಿ, ಜನಾರ್ದನ, ಲಕ್ಷ್ಮೀನಾರಾಯಣ ಎಂಬ ದೇವಾಲಯಗಳಿವೆ. ಇವುಗಳಲ್ಲಿ ದುರ್ಗಾ ಮತ್ತು ಗಣಪತಿ ದೇವಾಲಯಗಳು ವಿಜಯನಗರ ಕಾಲದವು. ಇಲ್ಲಿ ಒಂದು ಇಗರ್ಜಿ, ಐದು ಮಸೀದಿಗಳು, ಆರು ಭಜನಮಂದಿರಗಳು, ಐದು ಪ್ರಾಥಮಿಕ ಶಾಲೆ, ಒಂದು ಜೂನಿಯರ್ ಕಾಲೇಜು, ಒಂದು ಬಾಲಿಕೆಯರ ಪ್ರೌಢಶಾಲೆ, ಒಂದು ವಾಣಿಜ್ಯ ಶಾಲೆ, ಒಂದು ಗ್ರಂಥಾಲಯ ಇವೆ.

ಇಲ್ಲಿನ ಹವೆ ತುಂಬ ಹಿತಕರವಾಗಿದೆ. ಇಲ್ಲಿನ ಕಡಲದಂಡೆ ಸುಂದರ ತಾಣ. ತೋನ್ಸೆಗೆ ಸಮೀಪದ ತೋನ್ಸೆಪಾಡು ಎಂಬ ದ್ವೀಪ ಪ್ರವಾಸಿಗರ ಕಣ್ಮನಸೆಳೆಯುವ ವಿಹಾರಕೇಂದ್ರವಾಗಿದೆ.

ಶಾಸನಗಳಲ್ಲಿ ಉಲ್ಲೇಖಿತವಾದ ತೋನ್ಸೆ ಅಥವಾ ತೊಣಾಚಿ ಎಂಬ ಹೆಸರು ಸೇಂಟ್ ಥಾಮಸ್ ಎಂಬುದರಿಂದ ಬಂದಿರಬಹುದೆಂದು ಚರಿತ್ರಕಾರರು ಅಭಿಪ್ರಾಯಪಡುತ್ತಾರೆ. (ಎಸ್.ಪಿ.ಕೆ.)

**ತ್ರಿಭುವನತಾತ :** ಕನ್ನಡದಲ್ಲಿ ಕೆಲವು ರಗಳೆಗಳನ್ನು ಬರೆದಿರುವ ಕವಿ. ಸು.1165ರಲ್ಲಿದ್ದಂತೆ ತಿಳಿದುಬರುತ್ತದೆ. ಈತ ಆಂಧ್ರ ಪ್ರದೇಶ ನಿವಾಸಿ. ವೈಷ್ಣವ ಬ್ರಾಹ್ಮಣ. ಈ ಕವಿಯ ವಿಚಾರವಾಗಿ ಪದ್ಮಣಾಂಕ (ಸು.1385) ಪದ್ಮರಾಜಪುರಾಣದಲ್ಲಿ ತನ್ನ ವಂಶಸ್ಥನಾದ ಕೆರೆಯ ಪದ್ಮರಸನ ಮಹಿಮೆಯನ್ನು ಹೊಗಳುವಾಗ ಪ್ರಸ್ತಾಪಿಸಿದ್ದಾನೆ.

ತ್ರಿಭುವನತಾತ 'ಕೇಶವಂಗಧಿಕ ದೈವವಿಲ್ಲಾ ವೈಷ್ಣವವೆ ಶಾಶ್ವತಂ ಇನಿತರ್ಕೆ ಸಂದೇಹವಿಲ್ಲ' ಎಂದು ಹೋದ ಕಡೆಯಲ್ಲೆಲ್ಲ ಸಾರುತ್ತ ಕಡೆಗೆ ಕರ್ನಾಟಕಕ್ಕೆ ಬಂದು ದೋರಸಮುದ್ರದ ರಾಜ ನರಸಿಂಹ ಬಲ್ಲಾಳನನ್ನು ಕಂಡ. ಬಲ್ಲಾಳನ ಮಂತ್ರಿ ಕೆರೆಯ ಪದ್ಮರಸನಿಗೂ ತಾತನಿಗೂ ನಡೆದ ವಾದದಲ್ಲಿ ಪದ್ಮರಸ ಗೆದ್ದು ಶಿವಪಾರಮ್ಯವನ್ನು ಸ್ಥಾಪಿಸಿದ. ಮೊದಲೇ

ಮಾಡಿಕೊಂಡ ಕರಾರಿನಂತೆ ತ್ರಿಭುವನತಾತ ಪದ್ಮರಸನಿಗೆ ಶಿಷ್ಯನಾಗಿ ವೀರಶೈವ ಮತವನ್ನು ಸ್ವೀಕರಿಸಿದ.

ಪದ್ಮರಾಜ ಪುರಾಣದಲ್ಲಿ ಬರುವ ಈ ವಿಷಯವನ್ನು ಕೆರೆಯ ಪದ್ಮರಸನ ಮಗನಾದ ಪದ್ಮರಸ (ಸು.1180) ತನ್ನ ಕೃತಿಯಾದ ಸಾನಂದಚರಿತೆಯ ಕಥಾಗರ್ಭ ಸಂಧಿಯಲ್ಲೂ ಮುಂದೆ ದೋರಾಂಬುಧಿಯ ರಾಮಣ್ಣ, ಹಂಪೆಯ ರಾಘವಾಂಕ, ಹುಲಿಗೆರೆಯ ಮಾಯಿದೇವ, ಗುರುಭಕ್ತ ಕಾಮಣ್ಣ, ದೇವರಸ ಮೊದಲಾದ ಶಿವಶರಣರೂ ಪುಷ್ಟೀಕರಿಸಿದ್ದಾರೆ.

ತ್ರಿಭುವನತಾತ ಲಲಿತ ರಗಳೆಯಲ್ಲಿ ಬರೆದಿರುವ ಗುರುರಗಳೆ ಗುರುವಿನ ಮಹಿಮೆಯನ್ನು ಕೊಂಡಾಡುತ್ತದೆ. ಗುರುಶರಣು ಎಂಬುದಾಗಿ ಪ್ರತಿಪಂಕ್ತಿಯಲ್ಲಿಯೂ ಅಂತ್ಯಗೊಳ್ಳುವ ಈ ರಗಳೆಗೆ ಆದಿ ಅಂತ್ಯಗಳಲ್ಲಿ ಬರುವ ಕಂದಗಳು ಗುರು ವಿಶ್ವೇಶ ಎಂಬ ಅಂಕಿತದಿಂದೊಡಗೂಡಿವೆ. ಈ ರಗಳೆಗೆ ಶಾಂತಮಲ್ಲ (ಸು.1650) ಒಂದು ಟೀಕೆ ಬರೆದಿದ್ದಾನೆ. ಮಹಾದೇವ ಎಂದು ಮುಗಿಯುವ, ಉತ್ಸಾಹಛಂದಸ್ಸಿನಲ್ಲಿರುವ ಮಹಾದೇವ ರಗಳೆ ಶಿವನ ಪಾರಮ್ಯವನ್ನು ಹೊಗಳುತ್ತದೆ. ಇದರಲ್ಲಿ ತಿರುನೀಲಕಂಠ, ಗುಂಡಬೊಮ್ಮಯ್ಯ, ಸಿರಿಯಾಳ ಚೋಳಿಯಕ್ಕ ಮೊದಲಾದ ಶಿವಶರಣರನ್ನು ಹೆಸರಿಸಿದೆ. ಈ ರಗಳೆಯ ಅಂತ್ಯದಲ್ಲಿರುವ ಕಂದಪದ್ಯದಲ್ಲಿಯೂ ಗುರು ವಿಶ್ವೇಶ ಎಂಬ ಅಂಕಿತ ದೊರಕುತ್ತದೆ. ಇದೇ ರೀತಿಯ ಅಂಕಿತ ಅಮ್ಮವ್ವೆಯ ರಗಳೆ, ಪಗಲ್ಚೋಳನ ರಗಳೆ, ಚೋಳಿಯಕ್ಕನ ರಗಳೆಗಳಲ್ಲಿ ಉಕ್ತವಾಗಿರುವುದರಿಂದ ಈ ರಗಳೆಗಳ ಕರ್ತೃವೂ ತ್ರಿಭುವನತಾತನೇ ಎಂಬುದು ಸ್ಪಷ್ಟ.

ತ್ರಿಭುವನತಾತನ ಗುರುವಾದ ಕೆರೆಯ ಪದ್ಮರಸನ ಇಷ್ಟದೈವ ವಿಶ್ವೇಶ; ಇವನ ಇಷ್ಟದೈವ ಹಾಗೂ ಅಂಕಿತ ಗುರುವಿಶ್ವೇಶ. *

**ತ್ರಿವಿಕ್ರಮ ಪಂಡಿತ :** ಸು.1188. ಒಬ್ಬ ಶಾಸನಕವಿ. ಎರಡನೆಯ ವೀರಬಲ್ಲಾಳನ (1173-1220) ಆಸ್ಥಾನ ವಿದ್ವಾಂಸನಾಗಿದ್ದಂತೆ ತೋರುತ್ತದೆ. ಈತ ಅರಸೀಕೆರೆಯ 55(1187), 7(1189) ಹಾಗೂ 44(1189)ನೆಯ ಶಾಸನಗಳನ್ನು ಬರೆದಂತೆಯೂ ಹರಿಹರಸೂರಿ ಬರೆದ 139ನೆಯ (1194) ಶಾಸನವನ್ನು (ಹಳೆಯ ಶಾಸನ ಸಂಪುಟ) ತಿದ್ದಿದಂತೆಯೂ ತಿಳಿದುಬರುತ್ತದೆ. ಅರಸೀಕೆರೆಯ 205ನೆಯ ಶಾಸನವನ್ನೂ ಈತನೇ ಬರೆದಂತೆ ಆ ಶಾಸನದ ಕೊನೆಯ ತ್ರಿವಿಕ್ರಮಪಂಡಿತರ ಪದ್ಯ ಎಂಬ ಮಾತಿನಿಂದ ತಿಳಿಯುತ್ತದೆ. ಈ ಶಾಸನಗಳಲ್ಲಿ ಬಳಕೆಯಾಗಿರುವ ಕಂದ ಮತ್ತು ವೃತ್ತಗಳ ರಚನೆ ಪ್ರೌಢವಾಗಿದೆ, ಪಾಂಡಿತ್ಯಪೂರ್ಣವಾಗಿದೆ. ಇದನ್ನು ನೋಡಿದರೆ ಈತ ಒಳ್ಳೆಯ ಕವಿಯಾಗಿದ್ದನೆಂಬುದರಲ್ಲಿ ಸಂಶಯವಿಲ್ಲ. ಈತನಿಗೆ ಕವೀಶ್ವರ ಎಂಬ ಬಿರುದಿದ್ದಂತೆ ತಿಳಿದುಬಂದಿದ್ದರೂ ಕನ್ನಡದಲ್ಲಿ ಕಾವ್ಯರಚನೆ ಮಾಡಿದಂತೆ ಕಂಡುಬರುವುದಿಲ್ಲ. ಸಂಸ್ಕೃತದಲ್ಲಿ ಉಷಾಹರಣ ವೆಂಬ ಕಾವ್ಯವನ್ನು ರಚಿಸಿದ್ದಾನೆ. ಇವನಿಗೆ ನಾರಾಯಣಪಂಡಿತನೆಂಬ ಮಗ ನಿದ್ದು ಆತನೂ ಹೊಯ್ಸಳ ರಾಜಾಶ್ರಯದಲ್ಲಿ ಮಧ್ವವಿಜಯವೆಂಬ ಸಂಸ್ಕೃತ ಕಾವ್ಯವನ್ನು ರಚಿಸಿದನೆಂದು ಕವಿಚರಿತ್ರೆಕಾರರ ಹೇಳಿಕೆ. (ಕೆ.ವಿ.ಆರ್.ಜಿ.)

**ತ್ರಿವೇಣಿ :** 1928-63. ಪ್ರಸಿದ್ಧ ಕಾದಂಬರಿಗಾರ್ತಿ. ಮಂಡ್ಯ ಜಿಲ್ಲೆಯವರಾದ ಇವರು ಬಿ.ಎಂ.ಕೃಷ್ಣಸ್ವಾಮಿ ಮತ್ತು ತಂಗಮ್ಮ ಅವರ ದ್ವಿತೀಯ ಪುತ್ರಿ. ಇವರ ತಂದೆ ಕನ್ನಡದ ಕಣ್ವ ಎನಿಸಿದ ಬಿ.ಎಂ.ಶ್ರೀ ಅವರ ಸಹೋದರ. ತ್ರಿವೇಣಿಯವರ ಹುಟ್ಟು ಹೆಸರು ಭಾಗೀರಥಿ. ಕರೆದ ಹೆಸರು ಅನಸೂಯ. ಮನೆಯಲ್ಲಿ ಎಲ್ಲರೂ ಮೆಚ್ಚಿ ಕೂಗಿದ್ದು ಅಂಚು ಎಂದು. ಲೇಖಕಿ ಎಂ.ಕೆ.ಇಂದಿರಾ ಅವರು ಇವರನ್ನು ಒಮ್ಮೆ ತ್ರಿವೇಣಿ ಎಂದು ಕರೆದರು. ಸಾಹಿತ್ಯ ಪ್ರಪಂಚದಲ್ಲಿ ಪ್ರಸಿದ್ಧವಾದ ಈ ಹೆಸರು ಇವರ ನಿಜಜೀವನದಲ್ಲೂ ಸ್ಥಿರವಾಯಿತು.

ಇವರು ತಮ್ಮ ಎಂಟನೆಯ ವಯಸ್ಸಿನಲ್ಲಿ ತೀವ್ರ ಗೂರಲಿನಿಂದ ಬಳಲಿದರು. ಆ ಸಮಯದಲ್ಲಿ ಕಾಲವನ್ನು ಕಳೆಯಲು ಇವರು ವ್ಯಾಸಂಗನಿರತರಾದರು. ಇದೇ ಇವರು ಮುಂದೆ ಸಾಹಿತ್ಯ ಪ್ರಪಂಚದಲ್ಲಿ ದುಮುಕಲು ಕಾರಣವಾಯಿತು ಎನ್ನಬಹುದು. ಇವರು ತಮ್ಮ ಪ್ರೌಢಶಾಲಾ ವಿದ್ಯಾಭ್ಯಾಸವನ್ನು ಮಂಡ್ಯದಲ್ಲಿ ಮುಗಿಸಿ, ಮೈಸೂರಿನಲ್ಲಿ ಅಜ್ಜಿ ಮನೆ ಸೇರಿ ಮಹಾರಾಜ ಕಾಲೇಜಿನ ವಿದ್ಯಾರ್ಥಿನಿಯಾಗಿ, ಮನಶ್ಶಾಸ್ತ್ರವನ್ನು ಮುಖ್ಯ ವಿಷಯವನ್ನಾಗಿ ಆಯ್ದುಕೊಂಡು ವ್ಯಾಸಂಗ ಮಾಡಿ 1948ರಲ್ಲಿ ಚಿನ್ನದ



ಪದಕದೊಂದಿಗೆ ಬಿ.ಎ. ಪದವಿಯನ್ನು ಪಡೆದರು. ಅನಂತರ ಸ್ವಲ್ಪ ಕಾಲ ಮಂಡ್ಯದಲ್ಲಿ ಅಧ್ಯಾಪಕ ವೃತ್ತಿಯನ್ನವಲಂಬಿಸಿದರಾದರೂ ಅದು ನೀರಸವೆನಿಸಿತು. ಇವರು ಬದಲಾಗುತ್ತಿರುವ ಸಮಾಜವನ್ನು ಸೂಕ್ಷ್ಮವಾಗಿ ಗಮನಿಸತೊಡಗಿದರು. ಕಂಡು ಕೇಳಿದ ಘಟನೆಗಳ ಬೆನ್ನೇರಿ ಕಲ್ಪನೆಯನ್ನು ಕುದುರಿಸಿ ಸಣ್ಣಕಥೆಗಳನ್ನು ಬರೆದರು. ಒಟ್ಟು ಇವರು 41 ಸಣ್ಣ ಕಥೆಗಳನ್ನು ಬರೆದಿದ್ದಾರೆ. ಹೆಂಡತಿಯ ಹೆಸರು, ಎರಡು ಮನಸ್ಸು, ಸಮಸ್ಯೆಯ ಮಗು ಎಂಬ ಮೂರು ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ.

1950ರಲ್ಲಿ ತ್ರಿವೇಣಿಯವರು ತಮ್ಮ ಸಮೀಪ ಸಂಬಂಧಿ ಎಸ್.ಎನ್.ಶಂಕರ್ ಅವರನ್ನು ವಿವಾಹವಾದರು. ಪತಿಯ ಪ್ರೋತ್ಸಾಹದಿಂದಾಗಿ ಚಿಕ್ಕಂದಿನಿಂದ ಬೆಳೆದು ಬಂದಿದ್ದ ಸಾಹಿತ್ಯಾಸಕ್ತಿ ವಿಕಾಸಗೊಳ್ಳಲು ಅವಕಾಶವೊದಗಿತು. ಇವರ ಪ್ರಥಮ ಕಾದಂಬರಿ ಅಪಸ್ವರ ಅಷ್ಟು ಯಶಸ್ವಿಯಾಗಲಿಲ್ಲ. ಮುಂದೆ ಹೂವು-ಹಣ್ಣು ಕೃತಿ ಪ್ರಕಟವಾಯಿತು. ಕೇವಲ ಒಂದು ದಶಕದ ಅವಧಿಯಲ್ಲಿ 20 ಕಾದಂಬರಿಗಳನ್ನು ಇವರು ರಚಿಸಿದರು. ಅಪೂರ್ಣವಾಗಿದ್ದ ಇವರ ಕೊನೆಯ ಕಾದಂಬರಿ 'ಅವಳ ಮಗಳು' ಎಂ.ಸಿ.ಪದ್ಮಾರವರಿಂದ ಪೂರ್ಣಗೊಂಡಿತು.

ತ್ರಿವೇಣಿಯವರ ಕಾದಂಬರಿಗಳನ್ನು ಸಾಮಾಜಿಕ ಹಾಗೂ ಮನಶ್ಶಾಸ್ತ್ರಕ್ಕೆ ಸಂಬಂಧಿಸಿದವೆಂದು ಎರಡು ಗುಂಪಾಗಿ ವಿಂಗಡಿಸಬಹುದು. ಬೆಕ್ಕಿನ ಕಣ್ಣು, ದೂರದ ಬೆಟ್ಟ, ಮುಚ್ಚಿದ ಬಾಗಿಲು ಮತ್ತು ಶರಪಂಜರ - ಇವು ಮನಶ್ಶಾಸ್ತ್ರದ ಗುಂಪಿಗೆ ಸೇರುವ ಕಾದಂಬರಿಗಳು. ಸಾಮಾಜಿಕ ವಸ್ತುವನ್ನು ಚಿತ್ರಿಸುವ ಹೂವು-ಹಣ್ಣು, ಸೋತು ಗೆದ್ದವಳು, ಅಪಸ್ವರ, ಅಪಜಯ, ಕಂಕಣ, ಮುಕ್ತಿ, ಬೆಳ್ಳಿಮೋಡ, ಹಣ್ಣೆಲೆ ಚಿಗುರಿದಾಗ, ಅವಳ ಮನೆ, ಮೊದಲ ಹೆಜ್ಜೆ, ಕೀಲುಗೊಂಬೆ - ಈ ಕಾದಂಬರಿಗಳಲ್ಲೂ ಪಾತ್ರಗಳ ಆಂತರಿಕ ತೊಳಲಾಟ ಘರ್ಷಣೆ ಮುಂತಾದ ಮನೋವಿಜ್ಞಾನಕ್ಕೆ ಸಂಬಂಧಿಸಿದಂಥ ಸನ್ನಿವೇಶಗಳು ಕಂಡುಬಂದರೂ ವಸ್ತುವಿನ ದೃಷ್ಟಿಯಿಂದ ಇವು ಸಾಮಾಜಿಕ ಕಾದಂಬರಿಗಳ ಗುಂಪಿಗೆ ಸೇರುತ್ತವೆ. ಕೇವಲ ಮನರಂಜನೆಯ ದೃಷ್ಟಿಯಿಂದಲೇ ರಚಿತವಾಗಿರುವ ಇವರ ಇತರ ಕಾದಂಬರಿಗಳಿವು: ಹೃದಯಗೀತ, ವಸಂತಗಾನ, ಕಾಶಿಯಾತ್ರೆ, ಬಾಳು ಬೆಳಗಿತು.

ತ್ರಿವೇಣಿಯವರ ಸಮಸ್ಯೆಯ ಮಗು ಕಥಾಸಂಕಲನಕ್ಕೆ ರಾಜ್ಯ ಸರ್ಕಾರದ ಬಹುಮಾನ ಬಂದಿದೆ. ಇವರ ಸಣ್ಣಕಥೆಯೊಂದಕ್ಕೆ ಎಸ್.ಸಿದ್ದೇಗೌಡರ ಬಂಗಾರದ ಪದಕ ಮತ್ತು ತಾತಯ್ಯನವರ ವಿಶೇಷ ಪಾರಿತೋಷಕಗಳು ಲಭಿಸಿವೆ. ಇವರ ಬೆಳ್ಳಿಮೋಡ, ಹಣ್ಣೆಲೆ ಚಿಗುರಿದಾಗ, ಶರಪಂಜರ, ಕಂಕಣ, ಹೂವುಹಣ್ಣು - ಈ ಕಾದಂಬರಿಗಳು ರಜತಪರದೆಯ ಮೇಲೆಯೂ ಕಾಣಿಸಿಕೊಂಡಿವೆ. ಪುಟ್ಟಣ್ಣ ಕಣಗಾಲ್ ನಿರ್ದೇಶಿಸಿದ ಮಲಯಾಳಂ ಚಿತ್ರ ಪೂಜಿಕಣ್ಣು ಇವರ ಬೆಕ್ಕಿನ ಕಣ್ಣು ಕಾದಂಬರಿ ಆಧರಿಸಿದ್ದು.

ತಾಯ್ತನಕ್ಕೆ ಹೆಚ್ಚಿನ ಬೆಲೆಯಿತ್ತಿದ್ದ ತ್ರಿವೇಣಿ ಅದಕ್ಕಾಗಿ ಹಂಬಲಿಸಿದರು. ಹಂಬಲವೇನೋ ಈಡೇರಿತು. ಆದರೆ ಹೆಣ್ಣುಮಗುವೊಂದಕ್ಕೆ ಜನ್ಮ ಕೊಟ್ಟ ಹತ್ತು ದಿನಗಳಲ್ಲಿಯೇ ಇವರು ಆಸ್ಪತ್ರೆಯಲ್ಲಿ ತಮ್ಮ 35ನೆಯ ವಯಸ್ಸಿನಲ್ಲಿ ತೀರಿಕೊಂಡರು. *

# ದ

**ದಂಡಾವತಿಮಠ, ಜಿ.ಎಸ್. :** 1900-78. ಕಲಾಗುರು ಎಂದೇ ಪ್ರಸಿದ್ಧರಾಗಿರುವ ಚಿತ್ರ ಕಲಾವಿದ. ಗಂಗಾಧರಯ್ಯ ಶಂಕರಯ್ಯ ದಂಡಾವತಿಮಠ ಇವರ ಪೂರ್ಣ ಹೆಸರು. ಬೆಳಗಾವಿ ಜಿಲ್ಲೆ ಬೈಲಹೊಂಗಲದಲ್ಲಿ 1900 ಆಗಸ್ಟ್ 20ರಂದು ಜನಿಸಿದರು. ಪ್ರಾಥಮಿಕ ಶಿಕ್ಷಣ ಮುಗಿದ ಬಳಿಕ ದಾಯಿ (ದೇವಿ) ಹಾಕುವ ವ್ಯಾಕ್ಸಿನೇಟರ್ ಆಗಿ ಸರ್ಕಾರಿ ನೌಕರಿಗೆ ಸೇರಿದರು. ಇವರಿಗೆ ಬಾಲ್ಯದಿಂದಲೂ ಚಿತ್ರ ಕಲೆಯ ಬಗ್ಗೆ ವಿಶೇಷ ಆಸಕ್ತಿ ಇತ್ತು. ಕುದುರೆಯ ಮೇಲೆ ಹಳ್ಳಿ ಹಳ್ಳಿಗೆ ಹೋಗಿ ಮೈಲಿ ಚುಚ್ಚುಮದ್ದು ನೀಡುವುದು ಇವರ ಉದ್ಯೋಗವಾಗಿತ್ತು. ಹೀಗೆ ತಿರುಗಾಡುವಾಗ ಪ್ರಕೃತಿ ಸೌಂದರ್ಯವನ್ನು ಸವಿದು ತಮಗೆ ಆಕರ್ಷಕವಾಗಿ ಕಂಡ ದೃಶ್ಯಗಳನ್ನು ಗುರುತು ಮಾಡಿಕೊಳ್ಳುತ್ತಿದ್ದರು. ಧಾರವಾಡಕ್ಕೆ ಹೋದಾಗ ಕಲಾಶಿಕ್ಷಕ ಎನ್.ಎಂ. ನೇರ್ಲೆಕರರನ್ನು ಕಂಡು, ತಾವು ರಚಿಸಿದ ಚಿತ್ರಗಳನ್ನು ತೋರಿಸಿದರು. ಅವರು ದಂಡಾವತಿಯವರಲ್ಲಿದ್ದ ಕಲಾ ಪ್ರತಿಭೆಯನ್ನು ಗುರುತಿಸಿ ಮುಂಬಯಿಯ ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್ ಕಲಾಶಾಲೆಗೆ ಸೇರಲು ತಿಳಿಸಿದರು. ಅದರಂತೆ ಮುಂಬಯಿಗೆ ಹೋಗಿ (1923) ಡಿಪ್ಲೊಮಾ ಪದವಿ ಪಡೆದರು (1931). ನೈಜ ಹಾಗೂ ಭಾವಚಿತ್ರಗಳ ರಚನೆಯಲ್ಲಿ ಇವರು ಸಿದ್ಧಹಸ್ತರು. ಇವರು ರಚಿಸಿದ ಜಲವರ್ಣ ಚಿತ್ರಕ್ಕೆ ಮುಂಬಯಿ ಆರ್ಟ್ ಸೊಸೈಟಿಯ ಪ್ರಥಮ ಬಹುಮಾನ (1920), ಬಳಪದ ವರ್ಣಚಿತ್ರಕ್ಕೆ ಮದರಾಸು ಮತ್ತು ಮುಂಬಯಿ ಆರ್ಟ್ ಸೊಸೈಟಿಗಳ ಪಾರಿತೋಷಕ, ಕನ್ನಡ ಸಾಹಿತ್ಯ ಸಮ್ಮೇಳನವೊಂದರಲ್ಲಿ ಏರ್ಪಡಿಸಿದ್ದ ಚಿತ್ರಕಲಾ ಸ್ಪರ್ಧೆಯಲ್ಲಿ ಸುವರ್ಣ ಪದಕ ಗಳಿಸಿದರು. ಇವರು ರಚಿಸಿರುವ ಕಾಶ್ಮೀರಿ ಭಿಕ್ಷುಕ, ಕೈಯಲ್ಲಿ ಕುಂಚ ಹಿಡಿದು ನಿಂತ ಕಲಾವಿದೆ, ನೆಹರೂ, ಮಹಾತ್ಮಾ ಗಾಂಧೀಜಿ, ವಲ್ಲಭಭಾಯಿ ಪಟೇಲ, ರೊದ್ದ ಶ್ರೀನಿವಾಸರಾಯ, ಎ.ಎಸ್.ಅಡಕೆ ಮೊದಲಾದ ತೈಲವರ್ಣ ಚಿತ್ರಗಳು ಇವರ ಪ್ರತಿಭೆಗೆ ಸಾಕ್ಷಿ. ಇವರ ಚಿತ್ರಗಳು ದೆಹಲಿ, ಮುಂಬಯಿ, ಪುಣೆ, ಮದರಾಸು ಮೊದಲಾದ ಪ್ರಮುಖ ನಗರಗಳಲ್ಲಿ ಪ್ರದರ್ಶನಗೊಂಡಿವೆ.



ಮುಂಬಯಿಯಲ್ಲಿ ನೂತನ ಕಲಾಮಂದಿರ (1935) ಎಂಬ ಸಂಸ್ಥೆಯನ್ನು ಇವರು ಕಟ್ಟಿ ಬೆಳೆಸಿದರು. ಇಂಗ್ಲೆಂಡಿನ ರಾಯಲ್ ಅಕಾಡೆಮಿಯಲ್ಲಿ ಕಲಾಪದವಿ ಪಡೆದು ತಾಯ್ನಾಡಿಗೆ ಮರಳಿ ಬಂದ ಡಿ.ಜಿ.ಬಡಿಗೇರ, ವಿ.ಆರ್.ರಾವ್ ಮತ್ತು ದಂಡಾವತಿಮಠ ಮೂವರೂ ಸೇರಿ ಆರಂಭಿಸಿದ ಈ ಸಂಸ್ಥೆಯನ್ನು ಮುಂದೆ ದಂಡಾವತಿಮಠ ಒಬ್ಬರೇ ನಡೆಸಬೇಕಾಯಿತು. ಕಲಾಮಂದಿರದ ಪ್ರಾಂಶುಪಾಲರಾಗಿ ದಕ್ಷತೆಯಿಂದ ಅಗನಲು ನಿರ್ವಹಿಸಿ, ಸಂಸ್ಥೆ ಒಳ್ಳೆಯ ಹೆಸರು ಗಳಿಸುವಂತೆ ಮಾಡಿದರು. ಈ ಶಾಲೆಯ ವಿದ್ಯಾರ್ಥಿಗಳಲ್ಲಿ ಪ್ರಮುಖ ಕಲಾವಿದರೆಂದರೆ ಕೆ.ಕೆ.ಹೆಬ್ಬಾರ, ಎ.ಎ.ಅಲಮೇಲಕರ, ಎಸ್.ಎಂ.ಪಂಡಿತ, ರಾಯೂ, ಲಕ್ಷಣ ಪೈ, ಗಾಯತೊಂಡೆ ಮೊದಲಾದವರು. ಇವರೆಲ್ಲ ದೇಶ ವಿದೇಶಗಳಲ್ಲಿ ಕೀರ್ತಿ ಗಳಿಸಿದರು. ಕಲಾಶಿಕ್ಷಣದಿಂದ ಬುದ್ಧಿಮಾಂದ್ಯ ಮಕ್ಕಳ ಮಾನಸಿಕ ಚಟುವಟಿಕೆ ಸಾಧ್ಯವೆಂದು ಸಾಬೀತುಪಡಿಸಲು ಧಾರವಾಡದಲ್ಲಿ ಕಿವುಡ-ಮೂಕರಿಗೆ ಕಲಾಶಾಲೆಯನ್ನು ಪ್ರಾರಂಭಿಸಿದ್ದರು. ಪ್ರಾಂಶುಪಾಲರ ಹುದ್ದೆಯಿಂದ ನಿವೃತ್ತರಾದ (1966) ಅನಂತರ ತಮ್ಮ ವಿಶ್ರಾಂತಿ ಜೀವನವನ್ನು ಇವರು ಧಾರವಾಡದಲ್ಲಿ ಕಳೆದರು.

ಇವರಿಗೆ ಅನೇಕ ಸಂಘ ಸಂಸ್ಥೆಗಳು ಸನ್ಮಾನಿಸಿ ಗೌರವಿಸಿವೆ. ಕರ್ನಾಟಕ ಲಲಿತಕಲಾ ಅಕಾಡೆಮಿ ಇವರಿಗೆ ಪ್ರಶಸ್ತಿ ನೀಡಿದೆ (1969). ಇವರು 1978 ನವೆಂಬರ್ 15 ರಂದು ನಿಧನರಾದರು. (ಆರ್.ಜಿ.ಆರ್.)

**ದಂತದ ಕೆತ್ತನೆ :** ಕೆತ್ತನೆಯ ಕೆಲಸದಲ್ಲೆಲ್ಲ ಬಹು ನಾಜೂಕಿನದು. ಈ ಕಸಬು ಮಾಡುವ ಶಿಲ್ಪಿಗಳು ಮೊಟ್ಟಮೊದಲು ಕಟ್ಟಿಗೆ ಹಾಗೂ ಗಂಧದ ಮರ ಕೆತ್ತನೆಯ ಕೆಲಸ ಮಾಡಿ ಪ್ರಾವೀಣ್ಯ ಹೊಂದಿದ ಅನಂತರವೇ ಈ ಕೆತ್ತನೆಗೆ ಕೈ ಹಾಕುತ್ತಾರೆ. ಮೊಗಲರ ಕಾಲದಲ್ಲಿ ಹಸ್ತಿದಂತದಲ್ಲಿ ಕೊರೆದ ಅನೇಕ ಉಬ್ಬು ಭಾವಚಿತ್ರಗಳು, ಜಪಾನ್ ಚೀನ ಹಾಗೂ ಭಾರತದ ಅನೇಕಾನೇಕ ಹಸ್ತಿದಂತದ ಒಳ್ಳೆಯ ಕಲಾಕೃತಿಗಳು ಮೈಸೂರು ಜಗನ್ಮೋಹನ ವಸ್ತು ಸಂಗ್ರಹಾಲಯಗಳಲ್ಲಿ ಇಂದಿಗೂ ಕಾಣದೊರೆಯುತ್ತಿದ್ದು ಕಲಾವಿದನ ಸೌಂದರ್ಯ ಪ್ರಜ್ಞೆ, ಪರಿಷ್ಕೃತ ಜ್ಞಾನ ಸೂಕ್ಷ್ಮ ಕಲಾ ಕೌಶಲ್ಯ ಹಾಗೂ ಕಲಾ ಪ್ರತಿಭೆಗಳಿಗೆ ಹೆಸರಾಗಿವೆ.



ರಾಧಕೃಷ್ಣ ಕೃತಿ ರಚನೆ: ಎಚ್. ವೆಂಕಪ್ಪ

ದಂತ ಕೆತ್ತನೆಯ ಕರ್ಮಶಾಲಿಗಳು ವಿವಿಧ ರೀತಿಯ ಉಕ್ಕಿನ ಚಾಣ, ಚಾಣ ಹೊಡೆಯಲು ಕಟ್ಟಿಗೆಯ ಪಟ್ಟಿಯುಂತಿರುವ ಕೊಡತಿ, ಮರಳುಕಾಗದ, ಉಳಿ, ಅರೆ, ಬೈರಿಗೆ ಯಂತ್ರ, ಪಾಲಿಶ್ ಮಾಡಲು ಬತ್ತದ ದಂಟು, ಮೀನು ಚರ್ಮ, ದಂತದ ಪುಡಿ, ಗರಗಸ, ಇತ್ಯಾದಿಗಳನ್ನು ಉಪಯೋಗಿಸುತ್ತಾರೆ. ಹಸ್ತಿದಂತದ ಮೇಲೆ ಸ್ವಾಭಾವಿಕವಾಗಿ ಇರುವ ತೆಳುವಾದ ಪೊರೆಯನ್ನು ಆಮ್ಲ ರಾಸಾಯನಿಕ ಕ್ರಿಯೆಯಿಂದ ಇಲ್ಲವೆ ಕಾಯಿಸಿ, ಅಥವಾ ತೀವ್ರ ತಂಪು ಮಾಡಿ ತೆಗೆದುಹಾಕಿದ ಅನಂತರವೇ ಕೆತ್ತನೆಯ ಕೆಲಸಕ್ಕೆ ಅನುಕೂಲವಾಗುವುದು. ದಂತವನ್ನು ಪ್ರಮಾಣಕ್ಕೆ ತಕ್ಕಂತೆ ಗರಗಸದಿಂದ ಕತ್ತರಿಸಿ ಅದರ ಮೇಲೆ ನಿರ್ದಿಷ್ಟ ಆಕೃತಿಯನ್ನು ಸೀಸದಕಡ್ಡಿಯಿಂದ ಬರೆದುಕೊಂಡು ಕೆತ್ತಲು ಪ್ರಾರಂಭಿಸುತ್ತಾರೆ. 10" ಎತ್ತರವಿರುವ ವಿಗ್ರಹವೊಂದರ ಬೆಲೆ ಅದರ ಕಲಾಕೌಶಲ್ಯಕ್ಕೆ ಅನುಸಾರವಾಗಿ ಸಾವಿರಾರು ರೂಪಾಯಿಗಳವರೆಗೆ ಇರುವುದು.

ದಂತದಿಂದ ಉಡುಪಿನ ಗುಂಡಿಗಳು, ಕೂದಲ ಸೂಜಿ, ಸೀರೆ ಸೂಜಿ, ಕುಂಕುಮ ಕರಡಿಗೆ, ಚದುರಂಗದ ಕಾಯಿಗಳು, ಉಂಗುರ, ಬಳೆ, ನಕ್ಷೆಪೆಟ್ಟಿಗೆ, ಪೌಡರ್ ಕರಂಡಕಗಳು, ದೇವರ ಮೂರ್ತಿಗಳು, ವ್ಯಕ್ತಿಗಳ ಉಬ್ಬುಚಿತ್ರ, ಪ್ರಾಣಿ, ಪಕ್ಷಿ, ಸಿಂಹಾಸನ, ಊರುಗೋಲು, ಹಿಡಿಕೆ, ಮಣಿಗಳು, ಕಂಠಹಾರಗಳು, ಅಂಗಿಯ ತೋಳಿನ ಗುಂಡಿಗಳು, ದಂತ ಖಚಿತ

ಚಹಮೇಜು, ಆಸನಗಳು, ದೀಪದ ಅಡ್ಡಣಿಗೆ, ತೂಗುದೀಪ, ಫೋಟೊಫ್ರೇಮು, ನಶ್ಯದ ಡಬ್ಬಿ, ಬಿಲಿಯರ್ಡ್ ಚೆಂಡು, ಸಿಗರೇಟ್ ಪೆಟ್ಟಿಗೆ, ಟ್ರೇ, ಸಂದರ್ಶಕ ಚೀಟಿ (ವಿಜಿಟಿಂಗ್ ಕಾರ್ಡ್) ತೊಡೆಯು ಹಿಡಿಕೆ, ಬೀಸಣಿಗೆ, ಹಾರ್ಮೋನಿಯಂ ಸಾಮಗ್ರಿಗಳು, ಆಟದ ವಸ್ತುಗಳು, ತಂತಿ ವಾದ್ಯಗಳಲ್ಲಿ ಹಸ್ತಿದಂತದ ಇನ್‌ಲೇ (ಖಚಿತ) ಕೆಲಸ, ಅಲಂಕಾರಿಕ ಮತ್ತು ಗೃಹಕೃತ್ಯದ ವಸ್ತುಗಳು, ಲೆಕ್ಕಣಿಕೆ ಮತ್ತು ಕಾಗದ ಕತ್ತರಿಸುವ ಚಾಕು ಇತ್ಯಾದಿಗಳನ್ನು ಅಂದವಾಗಿ ತಯಾರಿಸುತ್ತಾರೆ.

ಕರ್ನಾಟಕದ ಮೈಸೂರು ಭಾಗದಲ್ಲಿ ಪ್ರಖ್ಯಾತ ಕುಂದಣ ಕೆಲಸದ ವಸ್ತುಗಳು ಹೆಚ್ಚು ಜನಾದರಣೀಯವಾಗಿವೆ. ಭಾರತದಲ್ಲಿ ಯಾವ ಭಾಗದಲ್ಲಿಯೂ ಕಾಣಸಿಗದಷ್ಟು ಕುಶಲಕೆಲಸಗಾರರು ಇಲ್ಲಿ ಇದ್ದಾರೆ. ಈ ಕೈಗಾರಿಕೆಯಲ್ಲಿ ಹೆಚ್ಚಾಗಿ ತೊಡಗಿದವರು ಮಹಮ್ಮದೀಯರು. ಅವರು ಮಾಡಿದ ಮೇಜು, ಚಹಮೇಜು, ಮಡಿಸುವ ತೆರೆ, ಫೋಟೊ ಚೌಕಟ್ಟುಗಳು, ಪೆಟ್ಟಿಗೆಗಳು ಹಾಗೂ ಫಲಕಗಳು ಪ್ರಪಂಚಮಾನ್ಯತೆ ಪಡೆದಿವೆ. ಜಗತ್ತಿನ ವಿವಿಧ ಭಾಗಗಳಿಗೆ ಆ ವಸ್ತುಗಳು ರಫ್ತಾಗುತ್ತವೆ. ಮೈಸೂರಿನ ಮೀರ್ ಷೌಕತ್ ಅಲಿ ಅವರ ಕಲಾ ಪ್ರೌಢಿಮೆಯನ್ನು ಮೆಚ್ಚಿ ಅಖಿಲ ಭಾರತ ಕುಶಲ ಕೈಗಾರಿಕಾ ಮಂಡಳಿಯವರು ಪ್ರಶಸ್ತಿ ನೀಡಿದ್ದಾರೆ. ರಾಜ್ಯ ಸರ್ಕಾರ ಕೂಡ ಪ್ರಶಸ್ತಿಯನ್ನಿತ್ತು ಗೌರವಿಸಿದೆ. ಭಾರತ ಸರ್ಕಾರ 1966ರಲ್ಲಿ ರಾಷ್ಟ್ರಪ್ರಶಸ್ತಿಯನ್ನು ಕೊಟ್ಟು ಗೌರವಿಸಿದೆ. ಹಾಜಿ ಮಿರ್ಜಾನಯಾಜ್ ವೊಂದ್ ಅಲಿ ಹಾಗೂ ಪರಮಾಚಾರ್ ಅವರೂ ಈ ಕಲೆಯಲ್ಲಿ ಪ್ರಸಿದ್ಧರು.

ದಂತ ಕೆತ್ತನೆ, ಕಟ್ಟಿಗೆ ಕೆತ್ತನೆ, ಕುಂದಣ ಕಲಾಕೃತಿಗಳ ಉತ್ತಮ ಗುಣ ಮೌಲ್ಯವನ್ನು ಕಾದುಕೊಂಡು ಕಲೆಯ ಅಭಿವೃದ್ಧಿಪಡಿಸಲು ನಿಯಂತ್ರಣ ಕಾಯಿದೆಯನ್ನು ಕರ್ನಾಟಕ ಸರ್ಕಾರ 1964ರಲ್ಲಿ ಜಾರಿಗೊಳಿಸಿತು. ಕುಶಲ ಕೈಗಾರಿಕೆಯ ಸಿದ್ಧವಸ್ತುಗಳಿಗೆ ಯೋಗ್ಯ ಮಾರುಕಟ್ಟೆಯನ್ನು ದೊರಕಿಸಲು ಹಾಗೂ ವಿದೇಶಿ ವಿನಿಮಯ ಪಡೆಯಲು ಅಖಿಲ ಭಾರತ ಮತ್ತು ರಾಜ್ಯದ ಕರಕುಶಲ ಕೈಗಾರಿಕಾ ಮಂಡಳಿಗಳು ಕಾರ್ಯ ಶೀಲವಾಗಿವೆ. ದಂತ ಮತ್ತು ಗಂಧ ಕೆತ್ತನೆ ಕೆಲಸಗಾರರಿಗೆ ಅಗತ್ಯವಾದ ದಂತ ಹಾಗೂ ಗಂಧದ ಮರವನ್ನು ಸಹಕಾರೀ ಸಂಘಗಳ ಮುಖಾಂತರ ಒದಗಿಸಲಾಗುತ್ತದೆ. ಜಪಾನ್‌ನಲ್ಲಿ ಜರುಗಿದ ಎಕ್ಸ್‌ಪೊ 70ರ ವಸ್ತುಪ್ರದರ್ಶನಗಳಿಗೆ ರವಾನಿಸಲಾದ ಕರ್ನಾಟಕ ರಾಜ್ಯದ ಕರಕುಶಲ ದಂತಕೆತ್ತನೆ ಹಾಗೂ ಕುಂದಣ ಒಡವೆ ವಸ್ತುಗಳು ವಿದೇಶೀಯರನ್ನು ಆಕರ್ಷಿಸಿದವು. ಕರಕುಶಲ ಕಲಾವಸ್ತುಗಳ ಮಾರಾಟದ ಮಳಿಗೆಗಳು (ಎಂಪೋರಿಯಂ) ಪ್ರತಿರಾಜ್ಯದಲ್ಲಿ ಇವೆ. ಪ್ರತಿರಾಜ್ಯದಲ್ಲಿಯೂ ಕುಶಲಕಲಾ ಕೈಗಾರಿಕಾ ತರಬೇತಿ ಕೇಂದ್ರಗಳನ್ನು ತೆರೆಯಲಾಗಿದೆ. ಕರ್ನಾಟಕ ರಾಜ್ಯದ ಮೈಸೂರಿನ ಶ್ರೀ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆ, ಬೆಂಗಳೂರಿನ ಕೇಂದ್ರ ಸರ್ಕಾರದ ಡಿಸೈನ್ ಸೆಂಟರಿನಲ್ಲಿ ವಿದ್ಯಾರ್ಥಿವೇತನ ಕೊಟ್ಟು ಕಲಿಸುವ ಏರ್ಪಾಡು ಮಾಡಲಾಗಿದೆ.

ಎಚ್.ವೆಂಕಪ್ಪನವರು, ಹೊನ್ನಾವರ; ಎಸ್.ನಂಜುಂಡಸ್ವಾಮಿ, ಮೈಸೂರು; ಹಿರಣ್ಯಪ್ಪ, ಮಾಡುಗೋಡ, ಸೊರಬ; ವೆಂಕಟಗಿರಿ ಚಿತ್ರಕ್, ಸಿದ್ದಾಪುರ; ರಘುವೀರಶೆಟ್ಟಿ, ಕುಮಟ; ಸುಬ್ರಾಯ ಆರ್.ಶೆಟ್ಟಿ ಗುಡಿಕಾರ, ಕುಮಟ; ಮಾಧವ ಗಣಪತಿಶೆಟ್ಟಿ, ಗುಡಿಲ್ಲಾರ, ಕುಮಟ; ಗಣಪತಿ ಮಂಜುನಾಥಶೆಟ್ಟಿ ಗುಡಿಗಾರ, ಹೊನ್ನಾವರ; ಮಂಜುನಾಥಪ್ಪ ಪಾಂಡಪ್ಪ ಗುಡಿಗಾರ, ಸಾಗರ; ವಿಠ್ಠಲ್ ರಾಮಚಂದ್ರ ಶೆಟ್ಟಿ, ಕುಮಟ; ವಿಠ್ಠಲ್ ಮಂಜುನಾಥಶೆಟ್ಟಿ, ಹೊನ್ನಾವರ; ಇವರೆಲ್ಲರೂ ಕರ್ನಾಟಕದ ಶ್ರೇಷ್ಠದಂತ ಕೆತ್ತನೆಯ ಕಲಾವಿದರು.

ಮೈಸೂರು, ಸೊರಬ, ಸಾಗರ, ಶಿವಮೊಗ್ಗ, ಹೊನ್ನಾವರ ಮತ್ತು ಕುಮಟ ದಂತ ಕೆತ್ತನೆಯ ಕುಶಲ ಕೆಲಸಗಾರರು ಇಂದಿಗೂ ಕಸುಬಿನಲ್ಲಿ ನಿರತರಾಗಿದ್ದಾರೆ.

*

**ದಂತಿದುರ್ಗ :** ಸು.735-56. ರಾಷ್ಟ್ರಕೂಟ ರಾಜ್ಯದ ಸ್ಥಾಪಕ. ಇಮ್ಮಡಿ ಇಂದ್ರನ ಮಗ.

ದಂತಿದುರ್ಗ ಪ್ರಾರಂಭದಲ್ಲಿ ಚಳುಕ್ಯರ ಸಾಮಂತನಾಗಿದ್ದ. ಆದರೆ ಈ ವೇಳೆಯಲ್ಲಿದ್ದ ರಾಜಕೀಯ ಪರಿಸ್ಥಿತಿ ರಾಷ್ಟ್ರಕೂಟರಿಗೆ ಸಾಮಂತತ್ವದಿಂದ ಸಾಮ್ರಾಟತ್ವದೆಡೆಗೆ ಜಿಗಿಯುವುದಕ್ಕೆ ಸಹಕಾರಿಯಾಗಿತ್ತು. ದಂತಿದುರ್ಗನ ತಂದೆ ಇಂದ್ರರಾಜನ ಕಾಲಕ್ಕಾಗಲೇ ರಾಷ್ಟ್ರಕೂಟರು ಪ್ರಬಲರಾಗಿದ್ದರು. ಇಂದ್ರರಾಜನು ಚಳುಕ್ಯ ರಾಜಪುತ್ರಿ ಭವನಾಗಾ ಎಂಬುವಳನ್ನು ವಿವಾಹ ಮಂಟಪದಿಂದ ಅಪಹರಿಸಿ ರಾಕ್ಷಸ ವಿವಾಹ ಮಾಡಿಕೊಂಡನೆಂದು ಅನೇಕ ಶಾಸನಗಳಿಂದ ತಿಳಿಯುತ್ತದೆ. ಈ ಪ್ರಸಂಗದ ಬಗ್ಗೆ ತಿಳಿಯುವ ವಿವರಗಳಿಂದ ಭವನಾಗಾ ಗುಜರಾತಿನ ಚಾಳುಕ್ಯ ಶಾಖೆಯವಳೆಂದೂ ಆಗ್ಗೆ ಇಂದ್ರ ಆ ಅರಸರನ್ನು ಎದುರಿಸುವಷ್ಟು ಶಕ್ತಿಯನ್ನು ಪಡೆದಿದ್ದನೆಂದೂ ಊಹಿಸಬಹುದು. ಈ ವಿವಾಹದಿಂದಾಗಿ ಜನಿಸಿದ ದಂತಿದುರ್ಗ ಚಳುಕ್ಯರ ನೆಂಟನೇ ಆಗಿದ್ದ. ಅಲ್ಲದೆ ರಾಷ್ಟ್ರಕೂಟ ಶಾಸನಗಳಿಂದ ಇವನು ಕಾಂಚಿ, ಕೋಸಲ, ಶ್ರೀಶೈಲ, ಮಾಳವ ಮತ್ತು ಲಾಟದೇಶಗಳನ್ನು ಗೆದ್ದನೆಂದು ತಿಳಿಯುತ್ತದೆ. ಪಟ್ಟಿಯಲ್ಲಿನ ಹಲವು ಸಾಧನೆಗಳು, ಅದರಲ್ಲೂ ಕಾಂಚಿ ನಗರದ ಮೇಲಿನ ವಿಜಯ ಚಳುಕ್ಯ ಸಾಮ್ರಾಟ ವಿಕ್ರಮಾದಿತ್ಯನ ಜೊತೆಗೂಡಿ (ಅಥವಾ ಕೀರ್ತಿವರ್ಮನ ಜೊತೆ 743ರಲ್ಲಿ) ಮಾಡಿದ್ದಾಗಿರಬೇಕು. ಅಲ್ಲದೆ ಅರಬ್ಬರು ಸಿಂಧ್ ಪ್ರಾಂತ್ಯವನ್ನು ಗೆದ್ದು ಗುಜರಾತಿನ ಮೇಲೆ ದಾಳಿ ಮಾಡಿದಾಗ ಅವರನ್ನು ಹಿಮ್ಮೆಟ್ಟಿಸುವಲ್ಲಿ ಗುಜರಾತಿನ ಅವನಿಜನಾಶ್ರಯ ಪುಲಕೇಶಿಗೆ ಸಹಾಯ ಮಾಡಿದ್ದಂತೆಯೂ ತೋರುತ್ತದೆ. ಇದರಿಂದಾಗಿ ಪೃಥ್ವೀವಲ್ಲಭ, ಖಡ್ಗಾವಲೋಕ ಎಂಬ ಬಿರುದುಗಳನ್ನು ಚಳುಕ್ಯ ಇಮ್ಮಡಿ ವಿಕ್ರಮಾದಿತ್ಯ ಇವನಿಗೆ ನೀಡಿರಬಹುದು.

ಒಟ್ಟಿನಲ್ಲಿ ಈತ ಪ್ರವರ್ಧಮಾನಕ್ಕೆ ಬರುತ್ತಿದ್ದ. ಇಮ್ಮಡಿ ವಿಕ್ರಮಾದಿತ್ಯ ಮರಣಹೊಂದಿದ ಸ್ವಲ್ಪಕಾಲದ ಮೇಲೆ ಈ ವಿಶಿಷ್ಟ ಸಾಧನೆಗಳಿಂದ ಯುದ್ಧತಂತ್ರದಲ್ಲಿ ನುರಿತಿದ್ದ ದಂತಿದುರ್ಗ ಚಳುಕ್ಯ ಅಧಿಪತಿಯನ್ನು ಧಿಕ್ಕರಿಸಿ ಸ್ವತಂತ್ರ ಸಾಮ್ರಾಜ್ಯವನ್ನು ಸ್ಥಾಪಿಸುವ ಯತ್ನ ನಡೆಸಿದ. ಆ ಕಾಲದಲ್ಲಿ ದಂತಿದುರ್ಗನ ರಾಜ್ಯ ಉತ್ತರ ಮಹಾರಾಷ್ಟ್ರ ಮತ್ತು ಪಶ್ಚಿಮ ಮಧ್ಯಪ್ರದೇಶಗಳನ್ನು ಒಳಗೊಂಡಿತ್ತು. ರಾಜತಂತ್ರಚತುರನಾದ ಈತ ಮೊದಲು ಬಾದಾಮಿಯ ಚಳುಕ್ಯರ ಮೇಲೆ ನೇರವಾಗಿ ಸ್ಪರ್ಧಿಸದೆ ತನ್ನ ರಾಜ್ಯದ ಪೂರ್ವ, ಪಶ್ಚಿಮದಲ್ಲಿದ್ದ ಪ್ರದೇಶಗಳನ್ನು ಆಕ್ರಮಿಸ ತೊಡಗಿದ. ಅರಬ್ಬರ ಆಕ್ರಮಣದಿಂದ ಶಿಥಿಲವಾಗಿದ್ದ ನವಸಾರಿಯ ಚಾಳುಕ್ಯ ಮತ್ತು ನಾಂದೀಪುರಿಯ ಗೂರ್ಜರ ರಾಜ್ಯಗಳನ್ನು ವಶಮಾಡಿಕೊಂಡ. ಈ ಕಾರ್ಯಾಚರಣೆಯಲ್ಲಿ ಸಹಾಯಮಾಡಿದ ಇವನ ಸಂಬಂಧಿ ಧ್ರುವನ ಮಗ ಗೋವಿಂದನಿಗೆ ದಕ್ಷಿಣ ಗುಜರಾತ್ ಪ್ರದೇಶದ ಆಳಿಕೆಯನ್ನು ವಹಿಸಿದ.

ಪೂರ್ವದಲ್ಲಿ ಮಾಳವ ದೇಶಕ್ಕೆ ನುಗ್ಗಿ ಗೂರ್ಜರ ಪ್ರತೀಹಾರರನ್ನು ಸೋಲಿಸಿ ಉಜ್ಜಯಿನಿಯಲ್ಲಿ ಹಿರಣ್ಯಗರ್ಭ ಮಹಾಯಜ್ಞವನ್ನು ನಡೆಸಿದ. ಆದರೆ ಆ ಪ್ರಾಂತ್ಯವನ್ನು ವಶಪಡಿಸಿಕೊಂಡಂತೆ ತೋರುವುದಿಲ್ಲ. ಅನಂತರ ಮಹಾಕೋಸಲವನ್ನೂ (ಛತ್ತೀಸ್‌ಗರ್ ವಿಭಾಗ) ಗೆದ್ದ ದಂತಿದುರ್ಗ ಉತ್ತರ ಮಹಾರಾಷ್ಟ್ರ, ಮಧ್ಯಪ್ರದೇಶ ಮತ್ತು ಗುಜರಾತಿನ ಸಾರ್ವಭೌಮನಾದ. ಇವುಗಳಲ್ಲಿ ದಕ್ಷಿಣ ಗುಜರಾತ್ ವಿನಾ ಮಿಕ್ಕವು ಚಳುಕ್ಯ ಸಾಮ್ರಾಜ್ಯಕ್ಕೆ ಸೇರಿದ್ದಿಲ್ಲವಾದರೂ ಸಾಮ್ರಾಟ ಕೀರ್ತಿವರ್ಮ ಏರುತ್ತಿದ್ದ ಸಾಮಂತನೊಬ್ಬನ ಪ್ರಭಾವವನ್ನು ಸಹಿಸುವಂತಿರಲಿಲ್ಲ. ಇವರಿಬ್ಬರಲ್ಲಿ ಯುದ್ಧ ಅನಿವಾರ್ಯವಾಯಿತು. 754ಕ್ಕೆ ಸ್ವಲ್ಪ ಮುಂಚೆ ನಡೆದ ಯುದ್ಧದಲ್ಲಿ ದಂತಿದುರ್ಗ ವಿಜಯಿಯಾದ. ಮಹಾರಾಷ್ಟ್ರದ ಬಹುಭಾಗ ಇವನ ದೊರೆತನಕ್ಕೆ ಒಳಪಟ್ಟಿತು. 754ರಲ್ಲಿ ಈತ ಸಾತಾರಾ ಜಿಲ್ಲೆಯಲ್ಲಿ ಗ್ರಾಮವೊಂದನ್ನು ದತ್ತಿ ನೀಡಿದ. ಪ್ರಾಯಶಃ ಚಳುಕ್ಯ ಕೀರ್ತಿವರ್ಮನನ್ನು ಪೂರ್ಣವಾಗಿ ಮೂಲೆಗೊತ್ತಲು ಇವನು ಪ್ರಯತ್ನಿಸುತ್ತಿದ್ದಿರಬೇಕು. ಆದರೆ ಅಷ್ಟರಲ್ಲೇ ಅಕಾಲ ಮರಣಕ್ಕೆ ತುತ್ತಾದ (756).

ಇಷ್ಟೆಲ್ಲ ಸಾಧನೆಗಳಿದ್ದರೂ ಅನಂತರದ ರಾಷ್ಟ್ರಕೂಟ ಅರಸರ ಶಾಸನಗಳ ವಂಶಾವಳಿ ಭಾಗದಲ್ಲಿ ದಂತಿದುರ್ಗನ ಪ್ರಸ್ತಾಪ ಅಷ್ಟಾಗಿ ಕಂಡುಬರುವುದಿಲ್ಲ. ಅವುಗಳ ಪ್ರಕಾರ ಚಳುಕ್ಯರನ್ನು ಜಯಿಸಿ ರಾಜ್ಯಸ್ಥಾಪನೆಯನ್ನು ಮಾಡಿದವನು ಒಂದನೆಯ ಕೃಷ್ಣ. ಆದರೆ ಈ ಕೃಷ್ಣನ ಶಾಸನಗಳಲ್ಲಿ ದಂತಿದುರ್ಗನೇ ಈ ಸಾಧನೆಗೆ ಮೂಲಕಾರಣನೆಂದು ಸ್ಪಷ್ಟಪಡಿಸುವುದರಿಂದ ಈತನೇ ರಾಷ್ಟ್ರಕೂಟ ಸಾಮ್ರಾಜ್ಯದ ಸ್ಥಾಪಕನೆಂಬುದರಲ್ಲಿ ಅನುಮಾನವಿಲ್ಲ.

ಮಹಾರಾಷ್ಟ್ರದ ಔರಂಗಾಬಾದ್ ಜಿಲ್ಲೆಯ ಎಲ್ಲೋರ ಅಥವಾ ಅಮರಾವತಿ ಜಿಲ್ಲೆಯ ಅಚಲಪುರ (ಎಲಿಚ್‌ಪುರ) ಈತನ ರಾಜಧಾನಿಯಾಗಿದ್ದಿರಬೇಕು. ದಂತಿದುರ್ಗ ಪರಮಧಾರ್ಮಿಕನಾಗಿದ್ದನೆಂದೂ ತನ್ನ ತಾಯಿಯ ಮಾತಿನಂತೆ ಅನೇಕ ದಾನಗಳನ್ನು ಮಾಡಿದನೆಂದೂ ಹಲವು ಯಜ್ಞಗಳನ್ನು ಮಾಡಿದನೆಂದೂ ಶಾಸನಗಳಿಂದ ತಿಳಿಯುತ್ತದೆ. ಈತನಿಗೆ ಮಕ್ಕಳಿರಲಿಲ್ಲವಾಗಿ ಇವನ ಅನಂತರ ಇವನ ಚಿಕ್ಕಪ್ಪನಾದ ಒಂದನೆಯ ಕೃಷ್ಣ ರಾಷ್ಟ್ರಕೂಟ ಸಿಂಹಾಸನವನ್ನೇರಿದ. (ಕೆ.ವಿ.ಎಸ್.ಆರ್.)

**ದಕ್ಷಿಣ ಕನ್ನಡ ಜಿಲ್ಲೆ :** ಕರ್ನಾಟಕ ರಾಜ್ಯದ ಪಶ್ಚಿಮ ಕರಾವಳಿಯಲ್ಲಿರುವ ಒಂದು ಜಿಲ್ಲೆ. ಉತ್ತರಕ್ಕೆ ಉಡುಪಿ ಮತ್ತು ಚಿಕ್ಕಮಗಳೂರು ಜಿಲ್ಲೆಗಳು, ದಕ್ಷಿಣಕ್ಕೆ ಕೇರಳ ರಾಜ್ಯದ ಕಾಸರಗೋಡು ತಾಲ್ಲೂಕು ಮತ್ತು ಕೊಡಗು ಜಿಲ್ಲೆ, ಪೂರ್ವಕ್ಕೆ ಚಿಕ್ಕಮಗಳೂರು, ಹಾಸನ ಹಾಗೂ ಕೊಡಗು ಜಿಲ್ಲೆಗಳು ಮತ್ತು ಪಶ್ಚಿಮಕ್ಕೆ ಅರಬ್ಬೀ ಸಮುದ್ರ ಇವೆ. ಈ ಜಿಲ್ಲೆಯ ವಿಸ್ತೀರ್ಣ 14,843ಚ.ಕಿಮೀ. ಜನಸಂಖ್ಯೆ 18,96,403. 1997ರಲ್ಲಿ ನಡೆದ ಜಿಲ್ಲೆಗಳ ಪುನರ್ವಿಂಗಡಣೆ ಯಾದಾಗ ಇದರ ಕೆಲವು ತಾಲ್ಲೂಕುಗಳನ್ನು ಸೇರಿಸಿ ಉಡುಪಿ ಜಿಲ್ಲೆಯನ್ನು (ನೋಡಿ) ರಚಿಸಲಾಗಿದೆ. ಹಾಲಿ ಜಿಲ್ಲೆಯಲ್ಲಿ ಪುತ್ತೂರು, ಸುಳ್ಯ, ಬೆಳ್ತಂಗಡಿ, ಮಂಗಳೂರು ಮತ್ತು ಬಂಟ್ವಾಳ ಎಂಬ 5 ತಾಲ್ಲೂಕುಗಳು 17 ಹೋಬಳಿಗಳೂ 371 ಗ್ರಾಮಗಳೂ 68 ಪಟ್ಟಣಗಳೂ ಇವೆ.

ಜಿಲ್ಲೆಯನ್ನು ಮುಖ್ಯವಾಗಿ ಮೂರು ಭೌಗೋಳಿಕ ವಿಭಾಗಗಳಾಗಿ ವಿಂಗಡಿಸಬಹುದು. ಅವು ಪೂರ್ವಭಾಗದ ಘಟ್ಟಪ್ರದೇಶ ಮತ್ತು ಇದಕ್ಕೂ ಸಮುದ್ರಕ್ಕೂ ಮಧ್ಯೆ ಇರುವ ಸುಮಾರು ಮಟ್ಟವಾದ ಪ್ರದೇಶ ಹಾಗೂ ಕರಾವಳಿ ಪ್ರದೇಶ. ಈ ಭಾಗಗಳು ಸುಮಾರು ದಕ್ಷಿಣೋತ್ತರವಾಗಿ ಹಬ್ಬಿವೆ. ಪೂರ್ವಭಾಗ ಪಶ್ಚಿಮಘಟ್ಟಶ್ರೇಣಿಯ ಪ್ರದೇಶ. ಕೆಲವೆಡೆ ಶಿಖರಗಳ ಎತ್ತರ 910ರಿಂದ 1,830 ಮೀಟರುಗಳಷ್ಟಿದೆ. ಬೆಳ್ತಂಗಡಿಗೆ ಪೂರ್ವಾಭಿಮುಖವಾಗಿ ಹಬ್ಬಿರುವ ಕುದುರೆ ಮುಖ ಎತ್ತರವಾಗಿದೆ. ಚಾರ್ಮಾಡಿ ಘಾಟ್‌ನ ದಕ್ಷಿಣಕ್ಕಿರುವ ಕಟ್ಟೆಗುಡ್ಡ (1,328ಮೀ), ಬಿಸಿಲೆಘಾಟ್‌ಗೆ ಎದುರಾಗಿರುವ ಸುಳ್ಯ ತಾಲ್ಲೂಕಿನ ಸುಬ್ರಹ್ಮಣ್ಯ (1,727ಮೀ) ಮತ್ತು ಹಳೆ ಸಿಸಲ ಘಾಟ್ ಮೇಲಿರುವ ಸಿಸಲಕಲ್ ಶಿಖರ (1,195ಮೀ) ಇವೆ. ಜಿಲ್ಲೆಯ ಭಾಗದಲ್ಲಿರುವ ಪಶ್ಚಿಮ ಘಟ್ಟ ಶ್ರೇಣಿ ಉತ್ತರದ ಕಡೆ ಕಡಿದಾದ ಗೋಡೆಗಳಾಗಿ ಮೇಲೆದ್ದಿದೆ. ದಕ್ಷಿಣ ಭಾಗದಲ್ಲಿನ ಶ್ರೇಣಿ ಸಮುದ್ರದಿಂದ ಹೆಚ್ಚು ದೂರವಿದ್ದು, ಹಲವು ಸಮಾನಾಂತರ ಶ್ರೇಣಿಗಳು ಇದರಿಂದ ಪಶ್ಚಿಮಕ್ಕೆ ಹಬ್ಬಿ, ಮಧ್ಯೆಮಧ್ಯೆ ಕಂದರಗಳು ಮತ್ತು ಕಣಿವೆಗಳನ್ನು ನಿರ್ಮಿಸಿವೆ. ದಕ್ಷಿಣ ಕನ್ನಡ ಜಿಲ್ಲೆಯ ಅನೇಕ ನದಿಗಳು ಉಗಮಿಸಿ ಪ್ರವಹಿಸುವುದು ಇಲ್ಲಿಯೇ. ಈ ಘಟ್ಟಗಳ ಹಂದರದ ನಡುನಡುವೆ ಕಣಿವೆಗಳ ಕೆಳಭಾಗದಲ್ಲಿರುವ ಕಿರುಬಯಲುಗಳು ಘಟ್ಟದ ಮೇಲಿನಿಂದ ನೋಡುವವರಿಗೆ ಇಡೀ ಭೂದೃಶ್ಯಕ್ಕೆ ಅಲ್ಲಲ್ಲಿ ಹಸುರು ಬೊಟ್ಟು ಇಟ್ಟಂತೆ ಕಂಡುಬರುತ್ತವೆ. ಈ ಪರ್ವತಪ್ರದೇಶ ದಟ್ಟವಾದ ಅರಣ್ಯಗಳಿಂದ ಕೂಡಿ ಜಲ ಮತ್ತು ಪ್ರಾಣಿ ಹಾಗೂ ಅರಣ್ಯಸಂಪತ್ತಿನ ಆಗರವಾಗಿದೆ. ಅಡ್ಡ ಶ್ರೇಣಿಗಳಲ್ಲಿ ಬಲ್ಲಾಳರಾಯನದುರ್ಗದಿಂದ ಧರ್ಮಸ್ಥಳದವರೆಗೆ ಹಬ್ಬಿರುವ ಚಿಬ್ಬದ್ರಿ ಪರ್ವತ ಶ್ರೇಣಿ ಅತಿ ಉದ್ದವಾಗಿದೆ. ಕುದುರೆಮುಖದಿಂದ ಹೊರಟು ಜಮಾಲಾಬಾದ್ - ಮೂಡಬಿದರೆ ಎಡೆಗೆ ಹಾಯುವ ಮತ್ತೊಂದು ಪಂಕ್ತಿ ಸಹ ದೊಡ್ಡದು.

ಈ ಘಟ್ಟ ಪ್ರದೇಶದಿಂದ ಇಳಿದು ಪಶ್ಚಿಮದಲ್ಲಿ ಮುಂದೆ ಹೋದರೆ ಕಡಿಮೆ ಎತ್ತರದ ಬಯಲು ಪ್ರದೇಶ ಬರುತ್ತದೆ. ಹಾಗೇ ಮುಂದೆ ಹೋದಂತೆಲ್ಲ ಎತ್ತರವಲ್ಲದ ಗುಡ್ಡಗಳು ವಿರಳವಾಗಿ ಕಂಡುಬರುತ್ತವೆ. ಅಲ್ಲಿ ಸಾಗುವಳಿಗೆ ಯೋಗ್ಯವಾದ ಬಯಲುಗಳು ಮತ್ತು ಎತ್ತರದ ಬರಡು ಪ್ರದೇಶಗಳಿವೆ. ಈ ಜಿಲ್ಲೆಯ ತೀರಪ್ರದೇಶ ಬಹುತೇಕ ನೇರವಾಗಿದೆ. ಆದರೆ ನದಿಗಳು ಸಮುದ್ರ ಸೇರುವ ಸ್ಥಳಗಳಲ್ಲಿ ಮತ್ತು ಇನ್ನಿತರೆಡೆಗಳಲ್ಲಿ ಕೊರೆತದಿಂದ ಕೊಲ್ಲಿ ಹಾಗೂ ಒಳಚಾಚುಗಳುಂಟಾಗಿವೆ.



ಮಂಜುನಾಥಸ್ವಾಮಿ ದೇವಾಲಯ, ಕದ್ರಿ

ಕೋಟೆ ಕಟ್ಟಿದಂತಿರುವ ಪಶ್ಚಿಮ ಘಟ್ಟ ಶ್ರೇಣಿಗಳು. ಅವುಗಳ ಮೇಲೆ ಗೆರೆ ಎಳೆದಂತೆ ಕಾಣುವ ರಸ್ತೆಗಳು, ವೈಭವೋಪೇತ ಅರಣ್ಯರಾಶಿ. ಅದ್ಭುತವಾದ ಗಿರಿಕಂದರಗಳು, ಪರ್ವತಗಳ ಇಳಿಜಾರಿನಿಂದ ದೌಡಾಯಿಸುವ ಅಸಂಖ್ಯಾತ ತೊರೆಗಳು, ರೋಮಾಂಚನಗೊಳಿಸುವ ಶಿಖರಸಮೂಹ, ಮನೋಲ್ಲಾಸಕ್ಕೂ ಸಾಹಸ ಪ್ರವೃತ್ತಿಗೂ ಪ್ರಚೋದಕವಾದ ಸಮುದ್ರತೀರ - ಇವು ಅಲ್ಲಿಯ ಸ್ವಾಭಾವಿಕ ಸನ್ನಿವೇಶವನ್ನು ಜೀವಂತಗೊಳಿಸಿವೆ.

ಜಿಲ್ಲೆಯ ಭೂಶಿಲಾರಚನೆಗಳನ್ನು ಧಾರವಾಡ ಶಿಲಾವರ್ಗ, ಮಧ್ಯಂತರ ಸೇರ್ಪಡೆಗಳು ಮತ್ತು ಈಚಿನ ರಚನೆಗಳು ಎಂದು ವಿಂಗಡಿಸಬಹುದು. ಕೊನೆಯದನ್ನು ಬಿಟ್ಟು ಮಿಕ್ಕವು ಬಹು ಪ್ರಾಚೀನವಾದ ಆರ್ಕೇಯಿಯನ್ ಯುಗಕ್ಕೆ ಸೇರಿದವು. ಧಾರವಾಡ ಶಿಲಾವರ್ಗದಲ್ಲಿ ಅನೇಕ ಸ್ವರೂಪಾಂತರಿಕ ಪ್ರಾಚೀನ ಶಿಲೆಗಳಿವೆ. ಇವುಗಳಲ್ಲಿ ಮುಖ್ಯವಾಗಿ ಪದರಯುತ ಕಬ್ಬಿಣ ಮಿಶ್ರಿತ ಕ್ವಾರ್ಟ್‌ಸೈಟ್ ಮತ್ತು ಸ್ವಲ್ಪಮಟ್ಟಿಗೆ ಟಾಲ್ಕ್ ಮತ್ತು ಹಾರ್ನ್‌ಬ್ಲೆಂಡ್ ಶಿಸ್ಟ್ ಕಂಡುಬರುತ್ತವೆ. ಕ್ವಾರ್ಟ್‌ಸೈಟ್‌ಗಳು ಜಿಲ್ಲೆಯ ಪೂರ್ವಭಾಗದಲ್ಲಿ ಐದು ಶ್ರೇಣಿಗಳಲ್ಲಿ ಹಬ್ಬಿವೆ. ಬಯೋಟೈಟ್ ನೈಸ್‌ಗಳ

ಮಧ್ಯೆ ಸಣ್ಣ ಪದರಗಳಲ್ಲಿ ಟಾಲ್ಕ್ ಕಾಣುತ್ತದೆ. ಅವುಗಳಲ್ಲಿನ ಇತ್ತೀಚಿನ ಒಂದು ಹೊಡೆಪೊರೆ ಬೆಳ್ತಂಗಡಿ ಬಳಿ ಇದೆ. ಹಾರ್ನಬ್ಲೆಂಡ್ ಹೊಡೆಪೊರೆಗಳು ಅಲ್ಲಲ್ಲಿ ಅಪರೂಪವಾಗಿ ಕಾಣಸಿಗುತ್ತವೆ. ಬಯೋಟೈಟ್ ನೈಸ್ ಶಿಲೆ ಜಿಲ್ಲೆಯಲ್ಲಿ ವಿಸ್ತಾರವಾಗಿ ಹರಡಿದೆ. ಇವುಗಳ ಹರವು ಸುಮಾರು ಪಶ್ಚಿಮ ಘಟ್ಟಗಳಿಗೆ ಸಮಾನಾಂತರವಾಗಿದೆ. ಇವುಗಳ ಮಧ್ಯೆ ಅಲ್ಲಲ್ಲಿ ಸ್ಟೆರಾಕ್ಸೈನೈಟ್, ಆಂಫಿ ಬಯೋಟೈಟ್, ಡಾಲರೈಟ್ ಮೊದಲಾದವುಗಳ ಹೊಡೆ ಶಿಲೆಗಳಿರುವುದುಂಟು. ಜಂಬುಕಲ್ಲು ಕರಾವಳಿ ಪ್ರದೇಶದಲ್ಲಿ ಬಹುಮಟ್ಟಿಗೂ ಒಳಭಾಗದಲ್ಲಿ ಸ್ವಲ್ಪಮಟ್ಟಿಗೂ ಇದೆ. ಕರಾವಳಿ ಪ್ರದೇಶದ ಮೆಕ್ಕಲು, ಜೇಡಿ ಮತ್ತು ಸುಣ್ಣಕಲ್ಲು ಪದರಗಳು ಈಚಿನ ರಚನೆಗಳು.



ಪಣಂಬೂರು, ಸಾಗರ ತೀರ

ಈಚೆಗೆ ನಡೆದಿರುವ ಪರಿಶೋಧನೆಗಳಿಂದ ಈ ಜಿಲ್ಲೆಯಲ್ಲಿ ಉಪಯುಕ್ತ ಖನಿಜಗಳಿರುವುದು ತಿಳಿದುಬಂದಿದೆ. ಜೋಗಿಮಲೈ ಬೆಟ್ಟ ಮತ್ತು ಉಪ್ಪಿನಂಗಡಿ ಬಳಿ ಕುರಂಗದ ಕಲ್ಲುಗಳ ನಿಕ್ಷೇಪಗಳಿವೆ. ಸುಬ್ರಹ್ಮಣ್ಯ ಮತ್ತು ಸುಳ್ಯ ತಾಲ್ಲೂಕಿನ ಗುಂಡಿಯ ಮೊದಲಾದೆಡೆಗಳಲ್ಲಿ ಗಾರ್ನೆಟ್ ದೊರಕುತ್ತದೆ. ಪುತ್ತೂರು ತಾಲ್ಲೂಕಿನ ಮುದನೂರು ಹೊಳೆಯ ಮೆಕ್ಕಲು ಮಣ್ಣಿನಲ್ಲಿ ಬಂಗಾರ ಕಂಡುಬಂದಿದೆ. ಪುತ್ತೂರು ಮತ್ತು ಬೆಳ್ತಂಗಡಿ ತಾಲ್ಲೂಕುಗಳಲ್ಲಿ ಹಲವೆಡೆ ಕಬ್ಬಿಣ ನಿಕ್ಷೇಪಗಳಿವೆ. ಇಲ್ಲಿ ಸಿಕ್ಕುವ ಅದಿರಿನಲ್ಲಿ ಸೇ.54ರಿಂದ 57ರವರೆಗೆ ಕಬ್ಬಿಣ ಇರುವುದು ಕಂಡುಬಂದಿದೆ. ಪಣಂಬೂರು ಬಳಿ ಮತ್ತು ಮಂಗಳೂರು ತಾಲ್ಲೂಕು ಹಾಗೂ ಇತರೆಡೆಗಳಲ್ಲಿ ಗ್ರಾನೈಟಿಕ್ ರೂಪದ ಬೆಣಚುಕಲ್ಲನ್ನು ಬಂದರು ಮತ್ತು ಕಟ್ಟಡಗಳ ರಚನೆಗಾಗಿ ಅಗಾಧ ಪ್ರಮಾಣದಲ್ಲಿ ತೆಗೆದು ಬಳಸಲಾಗುತ್ತಿದೆ. ಕ್ಯಾನೈಟ್, ಸುಣ್ಣದ ಚಿಪ್ಪು, ಸಿಲಿಕ ಮರಳು, ಸಿಲಿಮನೈಟ್ ಮತ್ತು ಸೋಪುಕಲ್ಲು ಹಾಗೂ ಹೆಂಚಿನ ಜೇಡಿಮಣ್ಣುಗಳು ಜಿಲ್ಲೆಯ ವಿವಿಧ ಭಾಗಗಳಲ್ಲಿ ದೊರೆಯುತ್ತವೆ.

ಇಲ್ಲಿನ ಭೌಗೋಳಿಕ ಸ್ವರೂಪದಿಂದಾಗಿ ಈ ಜಿಲ್ಲೆ ಹೆಚ್ಚಿನ ಜಲಸಮೃದ್ಧಿ ಪಡೆದಿದೆ. ಪಶ್ಚಿಮ ಘಟ್ಟಗಳು ಮುಂಗಾರು ಮಾರುತಗಳನ್ನು ತಡೆಯುವುದರಿಂದ ಇಲ್ಲಿ ಜೂನ್‌ನಿಂದ ಸೆಪ್ಟೆಂಬರ್‌ವರೆಗೆ ಭಾರಿ ಮಳೆ ಬೀಳುತ್ತದೆ. ಘಟ್ಟದ ಪಶ್ಚಿಮ ಭಾಗಕ್ಕೆ ಬಿದ್ದ ನೀರೆಲ್ಲ ಈ ಜಿಲ್ಲೆಯಲ್ಲಿಯೇ ಹರಿದು ಸಮುದ್ರ ಸೇರುತ್ತದೆ. ಇಲ್ಲಿ ಹುಟ್ಟುವ ನದಿಗಳು ಸಾಮಾನ್ಯವಾಗಿ 150ರಿಂದ 160ಕಿಮೀ ಗಳಿಗಿಂತ ಹೆಚ್ಚು ಉದ್ದವಿಲ್ಲ. ಮಳೆಯ ಜೊತೆಗೆ ಭೂಗರ್ಭದಿಂದ ಚಿಮ್ಮುವ ನೀರು ಕೂಡ ಪಶ್ಚಿಮದ ಇಳಿಜಾರಿನ ಕಡೆಯೇ ಹರಿಯುವುದರಿಂದ ಇಲ್ಲಿನ ನದಿಗಳು ಮಳೆ ಗಾಲದಲ್ಲಿ ತುಂಬಿ ಹರಿಯುತ್ತವೆ. ಇದರಿಂದ ಭಾರಿ ಪ್ರವಾಹ ಉಂಟಾಗುತ್ತದೆ. ಇಲ್ಲಿ ನದಿಗಳ ಉದ್ದ ಕಡಿಮೆ ಇರುವುದರಿಂದ ಪ್ರವಾಹವು ಬೇಗ ಇಳಿಯುವ ಸಾಧ್ಯತೆ ಇದೆ.

ನೇತ್ರಾವತಿ, ಗುರುಪುರ ಮತ್ತು ಕುಮಾರಧಾರಾ – ಇವು ಈ ಜಿಲ್ಲೆಯಲ್ಲಿ ಹರಿಯುವ ಮುಖ್ಯ ನದಿಗಳು. ಕುದುರೆಮುಖದಲ್ಲಿ ಹುಟ್ಟುವ ನೇತ್ರಾವತಿ ನದಿ ಕುಮಾರಧಾರಾ ಮತ್ತು ಗುರುಪುರ ಉಪನದಿಗಳನ್ನು ಕೂಡಿಕೊಂಡು ಮಂಗಳೂರಿನ ಬಳಿ ಸಮುದ್ರವನ್ನು ಸೇರುತ್ತದೆ. ನದಿಗಳು ಸಮುದ್ರ ಸೇರುವ ಎಡೆಗಳಲ್ಲಿ ಮರಳಿನಿಂದ ಕೂಡಿದ ವಿಶಾಲ ಭಾಗಗಳಿವೆ. ಈ ಪ್ರದೇಶ ದೋಣಿಸಂಚಾರಕ್ಕೆ ಅನುಕೂಲವಾಗಿದೆ. ಕೆಲವೊಮ್ಮೆ ಈ ನದಿಗಳ ಪ್ರವಾಹದಿಂದ ಭಾರಿ ಹಾನಿಯಾಗುವುದೂ ಉಂಟು. ಈ ನದಿಗಳಲ್ಲದೆ ಅನೇಕ ಕೆರೆಗಳೂ ಇವೆ.

ಈ ಜಿಲ್ಲೆಯಲ್ಲಿ ಒಟ್ಟು 1,28,478 (1988-89) ಹೆಕ್ಟೇರ್‌ಗಳ ಅರಣ್ಯ ಪ್ರದೇಶವಿದ್ದು ಜಿಲ್ಲೆಯ ಒಟ್ಟು ವಿಸ್ತೀರ್ಣದಲ್ಲಿ ಸೇ.29 ಭಾಗವನ್ನು ಆವರಿಸಿದೆ. ಕಾಡುಗಳಲ್ಲಿ ನಿತ್ಯ ಹರಿದ್ವರ್ಣ ಮತ್ತು ಎಲೆ ಉದುರುವ ಸಸ್ಯವರ್ಗಗಳಿವೆ. ಮರಮುಟ್ಟಿಗೆ ಉಪಯುಕ್ತವಾಗುವ ಮತ್ತಿ, ನಂದಿ, ಮರವು, ಕರಿಮರ, ಸಾಗುವಾನಿ, ಕೋಗಿಲೆ, ಕೀರಲ್‌ಭೋಗಿ, ಸಿರಿಹೊನ್ನೆ, ತೇಗ, ಹಲಸು, ದಬ್ಬೆ ಮೊದಲಾದವಲ್ಲದೆ ಆಲ, ಅತ್ತಿ, ಅರಳೆ, ಬೇವು, ಮಾವು ಮುಂತಾದ ಮರಗಳೂ ಇವೆ. ಕಾಡಿನಲ್ಲಿ ಬಿದಿರು, ಬೆತ್ತ, ವಾಟೆ, ಕೇದಿಗೆ, ಈಚಲು, ಬಗನಿ ಮೊದಲಾದವೂ ಇವೆ. ಏಲಕ್ಕಿ, ಮೆಣಸು, ಸೀಗೆ, ವೀಳ್ಯದೆಲೆ, ತೆಂಗು, ಶುಂಠಿ, ಗೇರು - ಇವು ಕಾಡುಗಳಲ್ಲೂ ತೋಟಗಳಲ್ಲೂ ಕಂಡುಬರುವ ಮುಖ್ಯ ವಾಣಿಜ್ಯ ಬೆಳೆಗಳಾಗಿವೆ. ನಿಂಬೆ, ಕಾಡುಕಂಚಿ ಹುಳಿ, ದೊಡ್ಡೆಳ್ಳಿಕಾಯಿ, ಸಿಯಾಲಿ ಹಣ್ಣು, ಕಾಡುಕಿತ್ತಲೆ, ಚಕ್ಕೋತ, ನೆಲ್ಲಿಕಾಯಿ ಮೊದಲಾದ ಹುಳಿಫಲಗಳನ್ನೀಯುವ ಸಸ್ಯಗಳೂ ಇವೆ.

ದಕ್ಷಿಣ ಭಾರತದ ಕಾಡುಗಳಲ್ಲಿ ಕಂಡುಬರುವ ಬಹುತೇಕ ಪ್ರಾಣಿವರ್ಗಗಳೆಲ್ಲ ಇಲ್ಲಿವೆ. ಜಿಂಕೆ, ಕಾಟಿ, ಕಡವೆ, ಹುಲಿ, ಚಿರತೆ, ಕಾಡುಹಂದಿ, ಕುರಿ, ತೋಳ ಮುಂತಾದ ದೊಡ್ಡ ಪ್ರಾಣಿಗಳಿಂದ ಹಿಡಿದು ಉಡು, ಚಿಪ್ಪಿಗ, ಹಾರಬೆಕ್ಕು, ಕೆಂಜಳಿಲು ಮೊದಲಾದ ಪ್ರಾಣಿಗಳು ಇಲ್ಲಿ ಕಂಡುಬರುತ್ತವೆ. ಮಲೆನಾಡಿನಿಂದ ಬರುವ ಆನೆಗಳು ಕೆಲವೊಮ್ಮೆ ಇಲ್ಲಿಯ ಅರಣ್ಯಗಳಲ್ಲಿ ಕಾಣಿಸಿಕೊಳ್ಳುವುದೂ ಉಂಟು. ಹೆಬ್ಬಾವಿನಿಂದ ಹಿಡಿದು ಹಸುರು ಹಾವಿನವರೆಗೆ ವಿವಿಧ ಉರಗ ಜಾತಿಗಳಿವೆ. ಕಾಡುಕೋಳಿ, ಕೋಗಿಲೆ, ಹದ್ದು, ಗಿಡಗ, ಗಿಣಿ ಮೊದಲಾದ ವಿವಿಧ ಪಕ್ಷಿ ಜಾತಿಗಳನ್ನೂ ನದಿಗಳಲ್ಲಿ ಮೊಸಳೆಗಳನ್ನೂ ಕಾಣಬಹುದು.



ಹಳೆಯ ಬಂದರು, ಮಂಗಳೂರು

ಈ ಜಿಲ್ಲೆಯ ವಾಯುಗುಣದ ಮುಖ್ಯ ಲಕ್ಷಣಗಳೆಂದರೆ ಅತ್ಯಧಿಕ ಮಳೆ, ಅಧಿಕ ತೇವಾಂಶ ಮತ್ತು ಭಾರಿ ಸೆಕೆ. ಜೂನ್‌ನಿಂದ ಸೆಪ್ಟೆಂಬರ್‌ವರೆಗೆ ಅಧಿಕ ಮಳೆ ಇರುತ್ತದೆ. ಮಾರ್ಚಿಯಿಂದ ಮೇವರೆಗೆ ಸೆಕೆ ಹೆಚ್ಚು. ಈ ಜಿಲ್ಲೆಯ ಬಹುಭಾಗ ಸಮುದ್ರಮಟ್ಟಕ್ಕೆ ಹೆಚ್ಚು ಎತ್ತರವಿಲ್ಲದ್ದರಿಂದ ವರ್ಷದ ಬಹು ಕಾಲದಲ್ಲಿ ಸೆಕೆಯ ಅನುಭವ

ವಾಗುತ್ತದೆ. ಜಿಲ್ಲೆಯ ವಾರ್ಷಿಕ ಸರಾಸರಿ ಮಳೆ 3,930ಮಿಮೀ. ಇಲ್ಲಿ ಬಿರುಗಾಳಿಯಿಂದ ಕೂಡಿದ ಮಳೆ ಆಗಾಗ ಬರುವುದುಂಟು. ಕೆಲವೆಡೆಗಳಲ್ಲಿ ಒಂದೇ ದಿನದಲ್ಲಿ 20" ಗಿಂತ ಹೆಚ್ಚು ಮಳೆಯಾಗುವ ಸಂಭವವುಂಟು. ಬೇಸಗೆಯಲ್ಲಿ ಅತಿ ಗರಿಷ್ಠ ಉಷ್ಣಾಂಶ $37.8^0$ ಸೆ., ಅತಿ ಕನಿಷ್ಠ ಉಷ್ಣಾಂಶ $16.7^0$ ಸೆ.



ಕುಕ್ಕೆ ಸುಬ್ರಹ್ಮಣ್ಯ ದೇವಾಲಯ

ಜಿಲ್ಲೆಯ ಒಟ್ಟು ವಿಸ್ತೀರ್ಣದಲ್ಲಿ ಸೇಕಡ 30 ಭಾಗದಷ್ಟು ಪ್ರದೇಶದಲ್ಲಿ ಮಾತ್ರ ಬೆಳೆ ಬೆಳೆಯಲಾಗುತ್ತಿದೆ. ಬತ್ತ, ಕಬ್ಬು, ಅಡಕೆ, ಏಲಕ್ಕಿ, ಮೆಣಸು, ರಾಗಿ, ರಬ್ಬರ್, ಗೇರು ಮೊದಲಾದ ಬೆಳೆಗಳನ್ನು ಬೆಳೆಯುತ್ತಾರೆ. ತೀರಪ್ರದೇಶದ ಕಡೆ ಇರುವ ಬಯಲುಗಳಲ್ಲಿ ಮಣ್ಣು ಹೆಚ್ಚು ಫಲವತ್ತಾಗಿದ್ದು ವ್ಯವಸಾಯಕ್ಕೆ ಹೆಚ್ಚು ಉಪಯುಕ್ತವಾಗಿದೆ. ಜಿಲ್ಲೆಯಲ್ಲಿ ಸಣ್ಣ ಹಿಡುವಳಿಗಳೇ ಅಧಿಕ ಸಂಖ್ಯೆಯಲ್ಲಿವೆ. ಬೆಳೆ ಬೆಳೆಯುವುದನ್ನು ಅನುಸರಿಸಿ ಗದ್ದೆಗಳನ್ನು ಕೊಳಕೆಗದ್ದೆ, ಬೈಲುಗದ್ದೆ, ಮತ್ತು ಪಟ್ಲ್ ಗದ್ದೆ ಎಂದು ಕರೆಯುತ್ತಾರೆ. ತೆಂಗು, ಅಡಕೆ, ಏಲಕ್ಕಿ ಬೆಳೆಯುವ ತೋಟಗಳಿಗೆ ಬಾಗಾಯ್ತು ಎಂದು ಕರೆಯುತ್ತಾರೆ. ಅಲ್ಲಲ್ಲಿ ರಬ್ಬರ್ ಸಾಗುವಳಿ ನಡೆದಿದೆ. ಕುತ್ಪಾಜೆಯಲ್ಲಿ ರಬ್ಬರ್ ಹದಮಾಡುವ ಕಾರ್ಖಾನೆ ಇದೆ. ಪಶ್ಚಿಮ ಘಟ್ಟದ ತಗು ಪ್ರದೇಶದಲ್ಲಿ ಮೆಣಸು, ಏಲಕ್ಕಿ ಬೆಳೆಯುತ್ತಾರೆ. ಈ ಬೆಳೆಗಳಲ್ಲದೆ ಕೆಲವು ವಿದೇಶಿ ಸಸ್ಯಗಳನ್ನು ತಂದು ಇಲ್ಲಿ ಸಾಗುವಳಿ ಮಾಡಲಾಗಿದೆ. ಅವುಗಳಲ್ಲಿ ಕೋಕೊ, ಕೆಂಪು ಎಣ್ಣೆ ತಾಳೆ ಮುಖ್ಯವಾದವು. ಇತ್ತೀಚೆಗೆ ವೆನಿಲ ಬಳ್ಳಿ ಬೆಳೆಯುವುದು ಕಂಡುಬರುತ್ತಿದೆ. ಆಹಾರ ಬೆಳೆಗಳಲ್ಲಿ 67,754 ಹೆಕ್ಟೇರ್‌ಗಳಲ್ಲಿ ಬತ್ತದ ಬೆಳೆ ಇದೆ. ನೂರಾರು ಹೆಕ್ಟೇರ್‌ಗಳಲ್ಲಿ ರಾಗಿಯನ್ನೂ ಉದ್ದನ್ನೂ ಬೆಳೆಯುತ್ತಾರೆ. ಇತರ ದ್ವಿದಳ ಧಾನ್ಯ ಬೆಳೆಯುವ ಕ್ಷೇತ್ರ 4,497 ಹೆಕ್ಟೇರುಗಳು. 565ಹೆಕ್ಟೇರ್‌ಗಳಲ್ಲಿ ಕಬ್ಬನ್ನು ಬೆಳೆಯುತ್ತಾರೆ. (1998-99). ಕಬ್ಬನ್ನು ಹೆಚ್ಚಾಗಿ ಕರಾವಳಿ ಮತ್ತು ನದಿಗಳ ತೀರದಲ್ಲಿ ಬೆಳೆಯುತ್ತಾರೆ. ಆಲೂಗೆಡ್ಡೆ, ನೆಲಗಡಲೆ, ಮೆಣಸಿನಕಾಯಿ ಮೊದಲಾದವನ್ನೂ ಬೆಳೆಯುವುದುಂಟು. ವಾರ್ಷಿಕ ಅಕ್ಕಿಯ ಉತ್ಪಾದನೆ 1,41,211 ಟನ್‌ಗಳು. ಕಬ್ಬಿನ ಉತ್ಪಾದನೆ 45,087 ಟನ್‌ಗಳು.

ವ್ಯವಸಾಯದ ನೆರವಿಗಾಗಿ 1968ರಲ್ಲಿ ಮಂಗಳೂರಿನಲ್ಲಿ ಮಣ್ಣು ಪರೀಕ್ಷಣಾ ಪ್ರಯೋಗಾಲಯವನ್ನು ಸ್ಥಾಪಿಸಲಾಯಿತು. ಮಂಗಳೂರಿಗೆ ಸು.4ಕಿಮೀ ದೂರದ ಜಪ್ಪಿನಮೊಗರುವಿನಲ್ಲಿ 1944ರಲ್ಲಿ ಸ್ಥಾಪಿತವಾದ ವ್ಯವಸಾಯ ಸಂರಕ್ಷಣಾ ಕೇಂದ್ರವಿದೆ. ತೋಟಗಾರಿಕೆ ಇಲಾಖೆಯು ತೆಂಗು, ಅಡಕೆ, ಪರಂಗಿ, ಬಾಳೆಹಣ್ಣು, ಗೋಡಂಬಿ, ದಾಲ್ಚಿನ್ನಿ ಮರ, ಮೆಣಸು, ಬೆಳ್ಳುಳ್ಳಿ ಮೊದಲಾದ ಸಂಬಾರ ಪದಾರ್ಥಗಳ ಬೆಳೆಗಳನ್ನು ಅಭಿವೃದ್ಧಿಪಡಿಸುತ್ತಿದೆ. ಈ ಜಿಲ್ಲೆಯಲ್ಲಿ 4 ಬಿತ್ತನೆ ಬೀಜದ ಫಾರಂಗಳಿವೆ. ಈ ಜಿಲ್ಲೆಯಲ್ಲಿ ಬಯಲುಗಳು ಕಿರಿದಾಗಿ ಹೆಚ್ಚು ಏರುತಗ್ಗುಗಳಿಂದ ಕೂಡಿರುವುದರಿಂದ ಭಾರಿ ನೀರಾವರಿ ಯೋಜನೆಗಳನ್ನು ಕೈಗೊಳ್ಳಲಾಗಿಲ್ಲ. ಸಣ್ಣ ಪ್ರಮಾಣದ ನೀರಾವರಿ ಯೋಜನೆಗಳು ಫಲಪ್ರದವಾಗಿ ನಡೆದಿವೆ. ಅವುಗಳಲ್ಲಿ ಪುತ್ತೂರು ತಾಲ್ಲೂಕಿನ ಗೌರಿಹೊಳೆ, ಬಂಟ್ವಾಳ ತಾಲ್ಲೂಕಿನ ಹಂಚಿಕಟ್ಟೆ ಮತ್ತು ನೇತ್ರಾವತಿ ಹಾಗೂ ಕಟ್ಟೆಹೊಳೆ ಜಲಾಶಯ ಯೋಜನೆ - ಇವು ಮುಖ್ಯವಾದವು. ಕೆರೆಗಳು, ಬಾವಿಗಳು ಮತ್ತಿತರ ಸಾಧನಗಳಿಂದ ಒಟ್ಟು 66,015 ಹೆಕ್ಟೇರುಗಳಿಗೆ ನೀರಾವರಿ ಒದಗಿಸಲಾಗಿದೆ (1998-99).

ಜಾನುವಾರುಗಳ ಸಂಪತ್ತಿನಲ್ಲಿ ಜಿಲ್ಲೆ ಉತ್ತಮವಾಗಿದೆ. ಜಿಲ್ಲೆಯಲ್ಲಿ ಈ ಜಾನುವಾರುಗಳ ಆರೈಕೆಗಾಗಿ 9 ಪಶುವೈದ್ಯ ಆಸ್ಪತ್ರೆಗಳು, 20 ಚಿಕಿತ್ಸಾಲಯಗಳು, 54 ಪ್ರಾಥಮಿಕ ಪಶುವೈದ್ಯ ಕೇಂದ್ರಗಳಿವೆ (2000). 5 ಸಂಚಾರಿ ಚಿಕಿತ್ಸಾಲಯಗಳು, 5 ಕೃತಕ ಗರ್ಭಧಾರಣಾ ಕೇಂದ್ರಗಳಿವೆ. ಮತ್ಸ್ಯಸಂಪತ್ತಿಗೆ ಜಿಲ್ಲೆ ಹೆಸರಾದುದು. 2000-01ರಲ್ಲಿ ಮತ್ಸ್ಯೋತ್ಪನ್ನ 81,410 ಮೆಟ್ರಿಕ್ ಟನ್‌ಗಳು.

ದಕ್ಷಿಣ ಕನ್ನಡ ಜಿಲ್ಲೆ ಕೈಗಾರಿಕೆಯಲ್ಲೂ ಗಣನೀಯ ಪ್ರಗತಿ ಸಾಧಿಸಿದೆ. ಇಲ್ಲಿನ ಅರಣ್ಯೋತ್ಪನ್ನಗಳು, ವ್ಯವಸಾಯ ಬೆಳೆಗಳು ಮತ್ತು ಇಲ್ಲಿನ ಬಂದರುಗಳಿಂದಾಗಿ ಕೈಗಾರಿಕೆ ಬೆಳೆದಿದೆ. ಈ ಜಿಲ್ಲೆಯಲ್ಲಿ ನೋಂದಣಿಯಾದ ಕಾರ್ಖಾನೆಗಳ ಸಂಖ್ಯೆ 4475. ಅವುಗಳಲ್ಲಿ 32,202 ಉದ್ಯೋಗಿಗಳಿದ್ದಾರೆ (2001). 7 ಕೈಗಾರಿಕಾ ಎಸ್ಟೇಟುಗಳಿವೆ, 306 ಕೈಗಾರಿಕಾ ಷೆಡ್ಡುಗಳಿವೆ (1998-99).

ಈ ಜಿಲ್ಲೆಯಲ್ಲಿ ಕೆಲವು ದೊಡ್ಡ ಔದ್ಯೋಗಿಕ ಯೋಜನೆಗಳು ಅಸ್ತಿತ್ವಕ್ಕೆ ಬಂದಿವೆ. ಪಣಂಬೂರಿನಲ್ಲಿರುವ ಮಂಗಳೂರು ರಾಸಾಯನಿಕ ಮತ್ತು ಗೊಬ್ಬರ ಕಾರ್ಖಾನೆ, ಮಂಗಳೂರು ಬಂದರು ನಿರ್ಮಾಣ ಯೋಜನೆ ಹಾಗೂ ಜಿಲ್ಲೆಯ ಇತರ ಸಣ್ಣ ಬಂದರುಗಳ



ಗೋಕರ್ಣೇಶ್ವರ ದೇವಾಲಯ, ಮಂಗಳೂರು

ಅಭಿವೃದ್ಧಿ ಯೋಜನೆಗಳು ಹೆಚ್ಚು ಉದ್ಯೋಗಾವಕಾಶಗಳನ್ನು ಒದಗಿಸುತ್ತವೆ. ರಾಷ್ಟ್ರೀಯ ಖನಿಜಾಭಿವೃದ್ಧಿ ಸಂಸ್ಥೆ ಕೈಗೊಂಡಿರುವ ಕುದುರೆಮುಖ ಕಬ್ಬಿಣದ ಅದಿರು ತೆಗೆಯುವ ಯೋಜನೆ ರಾಷ್ಟ್ರದಲ್ಲೇ ಒಂದು ಭಾರಿ ಉದ್ಯಮವಾಗಿದ್ದು ಇದಕ್ಕೆ ಸಂಬಂಧಪಟ್ಟ ಇತರ ಕೈಗಾರಿಕೆಗಳ ಅಭಿವೃದ್ಧಿಗೂ ಜಿಲ್ಲೆಯಲ್ಲಿ ಅವಕಾಶ ಒದಗಿದೆ.

ಇಲ್ಲಿನ ಸಣ್ಣ ಕೈಗಾರಿಕೆಗಳು ಆರ್ಥಿಕ ಚಟುವಟಿಕೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ. 17 ಬಟ್ಟೆ ಗಿರಣಿಗಳು, 10 ರಾಸಾಯನಿಕ ಕಾರ್ಖಾನೆಗಳು, 51 ಎಂಜಿನಿಯರಿಂಗ್ ಘಟಕಗಳು, 397 ಇತರ ಸಣ್ಣ ಕೈಗಾರಿಕಾ ಘಟಗಳಿವೆ. ಹೆಂಚಿನ ತಯಾರಿಕೆಯಲ್ಲಿ ಈ ಜಿಲ್ಲೆ ಅಂತಾರಾಷ್ಟ್ರೀಯ ಪ್ರಸಿದ್ಧಿ ಪಡೆದಿದೆ. ಹಡಗು ಮತ್ತು ದೋಣಿಗಳ ದುರಸ್ತಿ ಕೇಂದ್ರಗಳಲ್ಲಿ ಬಹಳಷ್ಟು ಜನರಿಗೆ ಉದ್ಯೋಗ ಒದಗಿದೆ. ಗೇರುಬೀಜ ಹದಮಾಡುವ ಕಾರ್ಖಾನೆಗಳು, ಬೀಡಿ ಉದ್ಯಮ ಘಟಕಗಳು ಉಕ್ಕಿನ

ತಂತಿ, ಯಂತ್ರ ಬಿಡಿಭಾಗಗಳನ್ನು ತಯಾರಿಸುವ ಘಟಕಗಳು ಲಕ್ಷಾಂತರ ಜನರಿಗೆ ಆಸರೆಯಾಗಿವೆ. ವ್ಯವಸಾಯ ಉಪಕರಣಗಳು, ಗೃಹಬಳಕೆ ಪಾತ್ರೆಗಳು, ಟಿನ್ ಡಬ್ಬಗಳು ಮೊದಲಾದವನ್ನು ತಯಾರಿಸುವ ಘಟಕಗಳು ಇವೆ. ವಾಹನಗಳ ಹೊರಕವಚ ರಚನೆ, ವಿದ್ಯುತ್ ಉಪಕರಣಗಳ ತಯಾರಿಕೆ ಮೊದಲಾದವುಗಳಿಗೆ ಸಂಸ್ಕರಿಸುವ ಕಾರ್ಯಾಗಾರಗಳಿವೆ. ಜಿಲ್ಲೆಯಲ್ಲಿ ಸೋಪಿನ ಕಾರ್ಖಾನೆಗಳಿವೆ. ಮರದ ವಸ್ತುಗಳನ್ನು ಸಿದ್ಧಪಡಿಸುವ ಘಟಕಗಳಿವೆ. ಇಲ್ಲಿ ಕಾಫಿಬೀಜ ಸಿದ್ಧಪಡಿಸುವ ಗಿರಣಿಗಳೂ ಕೊಬ್ಬರಿ ಎಣ್ಣೆತಯಾರಿಸುವ ಗಿರಣಿಗಳೂ ಇವೆ. ಮೀನು ಸಂಸ್ಕರಣ ಕಾರ್ಖಾನೆಗಳೂ ಶೈತ್ಯೀಕರಣ ಕಾರ್ಖಾನೆಗಳೂ ಇವೆ. ತಂತ್ರಾಂಶ ಕಂಪೆನಿಗಳು ಈಚೆಗೆ ಆರಂಭವಾಗಿವೆ.



ಸುಲ್ತಾನ್ ಬತೇರಿ

ದಕ್ಷಿಣ ಕನ್ನಡ ಜಿಲ್ಲೆ ಪ್ರಾಚೀನ ಕಾಲದಿಂದಲೂ ದೇಶವಿದೇಶಗಳ ನಡುವೆ ವ್ಯಾಪಾರ ಸಂಬಂಧವಿಟ್ಟುಕೊಂಡಿತ್ತೆಂದು ಐತಿಹಾಸಿಕ ಆಧಾರಗಳಿಂದ ತಿಳಿದುಬರುತ್ತದೆ. ಆಧುನಿಕ ಕಾಲದಲ್ಲೂ ಈ ಜಿಲ್ಲೆ ಪಡೆದಿರುವ ವಿಶೇಷ ಬಂದರು ಸೌಲಭ್ಯಗಳಿಂದಾಗಿ ಇಲ್ಲಿ ವಾಣಿಜ್ಯ ಪ್ರವರ್ಧಮಾನವಾಗುತ್ತಿದೆ. ಮಂಗಳೂರು ಕರ್ನಾಟಕದ ಅತಿ ದೊಡ್ಡ ಬಂದರು. ಜಿಲ್ಲೆಯ ಮುಖ್ಯ ಪಟ್ಟಣವಾದ ಮಂಗಳೂರಿಗೆ ಮುಂಬಯಿ, ಕೊಚ್ಚಿಗಳ ನಡುವೆ ಸಮುದ್ರ ಸಂಪರ್ಕವೂ ಬೆಂಗಳೂರು ಮತ್ತು ಮದರಾಸುಗಳ ನಡುವೆ ರೈಲು ಸಂಪರ್ಕವೂ ಇದ್ದು ಉತ್ತಮ ವಾಣಿಜ್ಯ ಕೇಂದ್ರವೆನಿಸಿದೆ. ಗೋಡಂಬಿ, ಸಂಸ್ಕರಿಸಿದ ಕಾಫಿಬೀಜ, ಅಡಕೆ, ಮರಮುಟ್ಟು, ಮರದ ದಿಮ್ಮಿಗಳು, ಮೀನಿನ ಉತ್ಪನ್ನಗಳು, ಹೆಂಚು, ತೆಂಗು, ಮೆಣಸು, ಕಾಫಿ, ಏಲಕ್ಕಿ, ಕಬ್ಬಿಣದ ಅದಿರು, ಮ್ಯಾಂಗನೀಸ್ ಮೊದಲಾದ ವಸ್ತುಗಳು ಮಂಗಳೂರು ಬಂದರಿನಿಂದ ವಿದೇಶಗಳಿಗೆ ರಫ್ತಾಗುತ್ತವೆ. ಹಾಗೆಯೇ ಈ ಬಂದರಿನ ಮೂಲಕ ಆಹಾರ ಧಾನ್ಯಗಳು, ರಾಸಾಯನಿಕ ಗೊಬ್ಬರ, ಯಂತ್ರಗಳು, ಕಾಗದ ಮೊದಲಾದವು ವಿದೇಶಗಳಿಂದ ಆಮದಾಗುತ್ತವೆ. ಮುಲ್ಕಿ, ಹಂಗಾರಕಟ್ಟೆ, ಪಣಂಬೂರು, ಉಪ್ಪಿನಂಗಡಿ, ಬೆಳ್ತಂಗಡಿ, ಬಂಟವಾಳ, ಉಳ್ಳಾಲ, ಪುತ್ತೂರು ಮೊದಲಾದವು ಜಿಲ್ಲೆಯ ಇತರ ವ್ಯಾಪಾರ ಕೇಂದ್ರಗಳಾಗಿವೆ. ಅಲ್ಲಲ್ಲಿ ನಡೆಯುವ ಸಂತೆಗಳು ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ನಡೆಯುವ ಜಾತ್ರೆಗಳಲ್ಲಿ ವ್ಯಾಪಾರ ನಡೆಯುತ್ತದೆ.

ದಕ್ಷಿಣ ಕನ್ನಡ ಜಿಲ್ಲೆ ವ್ಯಾಪಾರ ಮತ್ತು ಬ್ಯಾಂಕಿಂಗ್ ಉದ್ಯಮದಲ್ಲಿ ಮುಂದಿದೆ. 1906ರಲ್ಲಿ ಇಲ್ಲಿ ಕೆನರಾ ಬ್ಯಾಂಕ್ ಅಸ್ತಿತ್ವಕ್ಕೆ ಬಂತು. 1913ರಲ್ಲಿ ಜಿಲ್ಲಾ ಸಹಕಾರ ಬ್ಯಾಂಕ್ ಸ್ಥಾಪನೆಯಾಯಿತು. ಸಿಂಡಿಕೇಟ್ ಮತ್ತು ಕೆನರಾ ಬ್ಯಾಂಕುಗಳಂಥ' ರಾಷ್ಟ್ರೀಕರಣಗೊಂಡ ಬ್ಯಾಂಕುಗಳು ಪ್ರಾರಂಭಗೊಂಡದ್ದು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ. ಇಲ್ಲಿಯ ಕರ್ನಾಟಕ ಮತ್ತು ವಿಜಯಾಬ್ಯಾಂಕುಗಳೂ ರಾಷ್ಟ್ರೀಯ ವ್ಯಾಪ್ತಿಯಲ್ಲಿ ಬೆಳೆದಿವೆ. ಈಗ 13 ಸಹಕಾರಿ ಬ್ಯಾಂಕುಗಳೂ 299 ವಾಣಿಜ್ಯ ಬ್ಯಾಂಕುಗಳೂ ಇವೆ (2001). ಇವುಗಳಲ್ಲದೆ ಕೆಲವು ಹಣಕಾಸಿನ ಕಾರ್ಪೋರೇಷನ್‌ಗಳೂ ಕೈಗಾರಿಕಾ ಸಹಕಾರ ಬ್ಯಾಂಕುಗಳೂ ಇವೆ. ಇಲ್ಲಿಯ ಜನಸಂಖ್ಯೆಯ ದೃಷ್ಟಿಯಿಂದ ರಾಜ್ಯಗಳ ರಾಜಧಾನಿಗಳ ಹೊರತು ಭಾರತದ ಯಾವುದೇ ಜಿಲ್ಲೆಗಿಂತಲೂ ಇಲ್ಲಿ ಅತ್ಯಧಿಕ ಬ್ಯಾಂಕು ಶಾಖೆಗಳಿವೆ. ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು, ಕೃಷಿ ಸಾಲ ನೀಡಿಕೆ ಸಂಘಗಳು, ರೆಗ್ಯುಲೇಟೆಡ್ ಮಾರುಕಟ್ಟೆಗಳೂ ಇವೆ.

ಸಾರಿಗೆ-ಸಂಪರ್ಕಕ್ಕೆ ಇಲ್ಲಿನ ಭೌಗೋಳಿಕ ಸನ್ನಿವೇಶ ಅನುಕೂಲಕರವಾಗಿಲ್ಲದಿದ್ದರೂ ಹೆಚ್ಚಿನ ಸೌಲಭ್ಯಗಳನ್ನು ಒದಗಿಸಲಾಗಿದೆ. ಶಿರಾಡಿ ಘಾಟ್ ರಸ್ತೆ, ಬಿಸಿಲೆ ಘಾಟ್ ರಸ್ತೆ, ನಗೋಡಿ ಘಾಟ್ ರಸ್ತೆ ಮತ್ತು ಸಂಪಾಜೆ ಘಾಟ್ ರಸ್ತೆ – ಇವು ಕೊಡಗು, ಹಾಸನ, ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಗಳೊಂದಿಗೂ ಒಳನಾಡಿಗೂ ಸಂಪರ್ಕ ಒದಗಿಸುತ್ತವೆ. ಮಂಗಳೂರು-ಹಾಸನ ರಸ್ತೆ ಮಾರ್ಗವನ್ನು ರಾಷ್ಟ್ರೀಯ ಹೆದ್ದಾರಿಯೆಂದು ಪರಿಗಣಿಸಲಾಗಿದೆ. ಪಶ್ಚಿಮ ಕರಾವಳಿಯಲ್ಲಿ ಮುಂಬಯಿಯಿಂದ ಕನ್ಯಾಕುಮಾರಿಗೆ ಹೋಗುವ ರಾಷ್ಟ್ರೀಯ ಹೆದ್ದಾರಿ ಇದೆ. ಇದು ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಯೊಂದಿಗೆ ಸಂಪರ್ಕ ಕಲ್ಪಿಸಿದೆ. ಈಗ ಜಿಲ್ಲೆಯಲ್ಲಿರುವ ಒಟ್ಟು ರಾಷ್ಟ್ರೀಯ ಹೆದ್ದಾರಿಯ ಉದ್ದ 177ಕಿಮೀ.

ಈ ಜಿಲ್ಲೆಯಲ್ಲಿ ಉತ್ತಮ ರಸ್ತೆ ಸಂಪರ್ಕವಿದೆ. ಜಿಲ್ಲೆಯಲ್ಲಿ 849ಕಿಮೀ ಜಿಲ್ಲಾ ಮುಖ್ಯ ರಸ್ತೆ 1269ಕಿಮೀ ಗ್ರಾಮಾಂತರ ರಸ್ತೆಗಳಿವೆ. ತಾಲ್ಲೂಕು ಅಭಿವೃದ್ಧಿ ಮಂಡಲಿ ರಸ್ತೆಗಳ ಉದ್ದ 368ಕಿಮೀ (1999). ಹಾಸನ - ಮಂಗಳೂರು ರೈಲು ಮಾರ್ಗದ ಒಟ್ಟು ಉದ್ದ 189ಕಿಮೀ ಇದರಲ್ಲಿ 112ಕಿಮೀ ಉದ್ದದ ಮಾರ್ಗ ಈ ಜಿಲ್ಲೆಯಲ್ಲಿಯೇ ಹಾದು ಹೋಗುತ್ತದೆ. ಜಿಲ್ಲೆಯಲ್ಲಿ ಒಟ್ಟು 155ಕಿಮೀ ರೈಲು ಮಾರ್ಗವಿದೆ. ಕೊಂಕಣ ರೈಲು ಮಾರ್ಗದಿಂದಾಗಿ ಜಿಲ್ಲೆ ಪಶ್ಚಿಮ ಭಾರತದೊಂದಿಗೆ ನೇರ ಸಂಪರ್ಕ ಹೊಂದಿದೆ. ಇತ್ತೀಚೆಗೆ ಮಂಗಳೂರಿನಲ್ಲಿ ಕಟ್ಟಲಾಗಿರುವ ಹೊಸ ಬಂದರು ಕರ್ನಾಟಕದ ಹಾಗೂ ಈ ಜಿಲ್ಲೆಯ ಅತಿದೊಡ್ಡ ಬಂದರು.



ಮಂಗಳಾದೇವಿ ದೇವಾಲಯ, ಮಂಗಳೂರು

ಇದಲ್ಲದೆ ಇತರ ಚಿಕ್ಕ ಬಂದರುಗಳು ಚಿಕ್ಕ ಹಡಗುಗಳ ಮತ್ತು ದೋಣಿಗಳ ಸಂಚಾರಕ್ಕೆ ಅನುಕೂಲಕರವಾಗಿವೆ. ನದಿಗಳ ಮುಖಾಂತರ ಒಳನಾಡ ದೋಣಿ ಸಂಚಾರಕ್ಕೂ ಅವಕಾಶವಿದೆ. ಮಂಗಳೂರಿನಿಂದ ಬೆಂಗಳೂರು, ಬೆಳಗಾಂವಿ, ಮುಂಬಯಿಗಳಿಗೆ ವಿಮಾನ ಸಂಚಾರವಿದೆ.

ದಕ್ಷಿಣ ಕನ್ನಡ ಜಿಲ್ಲೆ ವಿದ್ಯಾಭ್ಯಾಸದಲ್ಲಿ ಗಣನೀಯ ಪ್ರಗತಿ ಸಾಧಿಸಿದೆ. ಈ ಜಿಲ್ಲೆಯಲ್ಲಿ ಸೇ.83.47 ಸಾಕ್ಷರತೆ ಇದೆ (2001).

ಕರ್ನಾಟಕ ರಾಜ್ಯದಲ್ಲಿ ಬೆಂಗಳೂರು ನಗರ ಜಿಲ್ಲೆಯನ್ನು ಬಿಟ್ಟರೆ ಈ ಜಿಲ್ಲೆ ಅತಿ ಹೆಚ್ಚಿನ ಪ್ರಮಾಣದ ಸಾಕ್ಷರತೆಯುಳ್ಳ ಜಿಲ್ಲೆಯಾಗಿದೆ. ಇಲ್ಲಿ ಸರ್ಕಾರ, ಖಾಸಗಿ ಮತ್ತು ಧಾರ್ಮಿಕ ಸಂಸ್ಥೆಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳಿವೆ. ಜಿಲ್ಲೆ ಉನ್ನತ ಶಿಕ್ಷಣ ಮತ್ತು ಸಾಮಾನ್ಯ ಶಿಕ್ಷಣದ ತವರಾಗಿದೆ. ಜಿಲ್ಲೆಯಲ್ಲಿ 1284 ಪ್ರಾಥಮಿಕ ಶಾಲೆಗಳು, 290 ಪ್ರೌಢ ಶಾಲೆಗಳು, 82 ಪದವಿಪೂರ್ವ ಕಾಲೇಜುಗಳು ಇವೆ. 44 ಸಾಮಾನ್ಯ ಶಿಕ್ಷಣ ಕಾಲೇಜುಗಳು, 5 ಪಾಲಿಟೆಕ್ನಿಕ್‌ಗಳಿವೆ. ಎಂಜಿನಿಯರಿಂಗ್ ಕಾಲೇಜುಗಳ ಸಂಖ್ಯೆ 3, ಒಂದು ವೈದ್ಯಕೀಯ ಕಾಲೇಜು, ಒಂದು ಹೋಮಿಯೊಪತಿ ಕಾಲೇಜು, 3 ಭಾರತೀಯ ಪದ್ಧತಿ ವೈದ್ಯ ಕಾಲೇಜುಗಳಿವೆ. ಎರಡು ದಂತ ವೈದ್ಯಕೀಯ ಕಾಲೇಜುಗಳಿವೆ (2001). ಒಂದು ಸರ್ಕಾರಿ ತಾಂತ್ರಿಕ ಶಾಲೆಯೂ ಇದೆ. 1969ರಲ್ಲಿ ಮಂಗಳೂರಿನಲ್ಲಿ ಮತ್ಸ್ಯೋದ್ಯಮ ಕಾಲೇಜು ಸ್ಥಾಪನೆಯಾಯಿತು. ವಾಣಿಜ್ಯ ಶಿಕ್ಷಣ ಸಂಸ್ಥೆಗಳು ಮತ್ತು ಸಂಸ್ಕೃತ ಪಾಠಶಾಲೆಗಳಿವೆ.

1968ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಮಂಗಳೂರಿನ ಬಳಿ ಕೊಣಾಜೆ ಎಂಬಲ್ಲಿ ಮಂಗಳಗಂಗೋತ್ರಿ ಎಂಬ ಒಂದು ಸ್ನಾತಕೋತ್ತರ ಶಿಕ್ಷಣ ಕೇಂದ್ರವನ್ನು ತೆರೆಯಿತು. ಅಲ್ಲಿ ಮೊದಲಿಗೆ ವಿಜ್ಞಾನ ಮತ್ತು ಮಾನವಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಐದು ವಿಭಾಗಗಳು ಪ್ರಾರಂಭವಾದವು. 1980ರಲ್ಲಿ ಈ ಕೇಂದ್ರ ಪ್ರತ್ಯೇಕ ವಿಶ್ವವಿದ್ಯಾನಿಲಯವಾಗಿ ರೂಪುಗೊಂಡಿತು. (ನೋಡಿ: ಮಂಗಳೂರು ವಿಶ್ವವಿದ್ಯಾಲಯ).

ಇಲ್ಲಿ 6 ಸರ್ಕಾರಿ ಆಸ್ಪತ್ರೆಗಳು, 64 ಪ್ರಾಥಮಿಕ ಆರೋಗ್ಯ ಕೇಂದ್ರಗಳು, 40 ಪ್ರಾಥಮಿಕ ಆರೋಗ್ಯ ಘಟಕಗಳು, 28 ಕುಟುಂಬ ಯೋಜನಾ ಕೇಂದ್ರಗಳಿವೆ. ಇತರ ಖಾಸಗಿ ಡಿಸ್ಪೆನ್ಸರಿಗಳಿವೆ.

ಜಿಲ್ಲೆಯ ಜನಸಂಖ್ಯೆಯಲ್ಲಿ ಸೇ.38.41ರಷ್ಟು ಪಟ್ಟಣವಾಸಿಗಳು. ಪಟ್ಟಣಗಳಲ್ಲಿ ಜನಸಾಂದ್ರತೆ ಹೆಚ್ಚುತ್ತಿದೆ. ಜಿಲ್ಲೆಯ ಜನಸಾಂದ್ರತೆ ಚ.ಕಿಮೀಗೆ 371.8. ಈ ಜಿಲ್ಲೆಯ ಜನರು ಹೊರರಾಜ್ಯಗಳಲ್ಲಿ ಹಾಗೂ ಕರ್ನಾಟಕದ ಇತರೆಡೆಗಳಲ್ಲಿ ಗಣನೀಯ ಸಂಖ್ಯೆಯಲ್ಲಿ ನೆಲೆಸಿ, ಸರ್ಕಾರಿ ನೌಕರಿ, ಬ್ಯಾಂಕಿಂಗ್ ಉದ್ಯಮ, ತಂತ್ರಾಂಶ, ಪ್ಲಾಂಟೇಷನ್, ಕೃಷಿ, ವ್ಯಾಪಾರ ಮತ್ತು ಹೋಟೆಲು ಉದ್ಯಮಗಳಲ್ಲಿ ನಿರತರಾಗಿದ್ದಾರೆ.



ಕೊಳ, ಮಂಜುನಾಥ ದೇವಾಲಯ, ಕದ್ರಿ

ಇಲ್ಲಿ ಶೈವ, ಭಾಗವತ, ಮಾಧ್ವ, ಬೌದ್ಧ, ಜೈನ ಮೊದಲಾದ ಮತಾನುಯಾಯಿಗಳಿದ್ದಾರೆ. ಕ್ರೈಸ್ತ ಹಾಗೂ ಇಸ್ಲಾಂ ಮತಾನುಯಾಯಿಗಳೂ ಸಾಕಷ್ಟಿದ್ದಾರೆ. ಜನರು ಹೆಚ್ಚಾಗಿ ದ್ರಾವಿಡ ಸಂಸ್ಕೃತಿಯ ವಿವಿಧ ರೀತಿಯ ಶಕ್ತಿಪೂಜೆಗಳನ್ನು ನಡೆಸಿಕೊಂಡು ಬಂದಿದ್ದಾರೆ. ಮಾರಿ ಮತ್ತು ದುರ್ಗಿ ಪೂಜೆಗಳು, ಭೂತಾರಾಧನೆ, ಕೋಲಕಟ್ಟುವುದು ಮೊದಲಾದ ಜನಪದ ಆರಾಧನಾ ಪದ್ಧತಿಗಳು ಪ್ರಚಲಿತವಾಗಿವೆ. ಈ ಜಿಲ್ಲೆಯ ಧಾರ್ಮಿಕ ಕ್ಷೇತ್ರಗಳಾದ ಧರ್ಮಸ್ಥಳ, ಸುಬ್ರಹ್ಮಣ್ಯ, ಕದ್ರಿ ಸಹಸ್ರಾರು ಭಕ್ತರನ್ನು ಆಕರ್ಷಿಸುತ್ತವೆ. ಯಕ್ಷಗಾನ ಈ ಜಿಲ್ಲೆಯ ವಿಶಿಷ್ಟ ಜನಪದ ಕಲೆ. ಕೋಳಿ ಅಂಕ ಮತ್ತು ಕಂಬಳ ಇಲ್ಲಿ ವಿಶೇಷವಾಗಿ ಪ್ರಚಲಿತವಿದೆ.

ಈ ಜಿಲ್ಲೆಯಲ್ಲಿ ಧಾರ್ಮಿಕ ಸಮನ್ವಯತೆ ಮತ್ತು ವಿದ್ಯಾದಾನಕ್ಕೆ ಹೆಸರಾದ ಧರ್ಮಸ್ಥಳ, ವೀರಶೈವ ಮಠ ಪರಂಪರೆಯನ್ನು ನಡೆಸಿಕೊಂಡು ಬರುತ್ತಿರುವ ಗುರುಪುರ, ದೇವಾಲಯಗಳಿಗೆ ಹೆಸರಾದ ನಂದಾವರ, ನಾರವಿ, ಪೊಳಲಿ ದುರ್ಗಾಪರಮೇಶ್ವರಿ ದೇವಾಲಯವಿರುವ ಕಟೀಲು, ಆದಿಶಂಕರಾಚಾರ್ಯರು ಸಂದರ್ಶಿಸಿದ ಸುಬ್ರಹ್ಮಣ್ಯ, ಕದ್ರಿ, ಕಡಬ, ಕರಿಮಂಜೇಶ್ವರ, ಪುಣ್ಯಕ್ಷೇತ್ರವೂ ರಮ್ಯದೃಶ್ಯ ತಾಣವೂ ಆದ ಉಪ್ಪಿನಂಗಡಿ, ಸಿಸಿಲ, ಮುಸ್ಲಿಮರ ಯಾತ್ರಾಸ್ಥಳವಾದ ಹಾಗೂ ಹಳೆಯ ಕಾಲದ ಚರ್ಚ್ ಇರುವ ಉಲ್ಲಾಳ - ಮೊದಲಾದ ಧಾರ್ಮಿಕ ಪರಂಪರೆಯನ್ನು ಪಡೆದ ಸ್ಥಳಗಳು ಇವೆ. ಬೈಲಂಗಡಿ, ಬಂಗಾಡಿ, ಮಂಗಳೂರು, ಸಿಸಿಲ, ವೇಣೂರು, ವಿಟ್ಲ ಮೊದಲಾದ ಐತಿಹಾಸಿಕ ಸ್ಥಳಗಳಿವೆ. ಅಳಿಕೆ, ಸುರತ್ಕಲ್, ಉಜಿರೆ ಮೊದಲಾದವು ಶಿಕ್ಷಣಕ್ಕೆ ಪ್ರಸಿದ್ಧ.



ರೋಜಾದ್ರಿಯೋ ಕೆಥಡ್ರಲ್

ದಕ್ಷಿಣ ಕನ್ನಡ ಜಿಲ್ಲೆ ಪ್ರಾಚೀನ ಕಾಲದಿಂದಲೂ ವಿದೇಶಗಳೊಂದಿಗೆ ಸಂಪರ್ಕ ಹೊಂದಿತ್ತು. ರೋಮನ್ ಮತ್ತು ಗ್ರೀಕ್ ಹಾಗೂ ಅರಬ್ ವರ್ತಕರು ಇಲ್ಲಿನ ಬಂದರುಗಳಿಗೆ ಬಂದು ಹೋಗುತ್ತಿದ್ದರು. ಐತಿಹಾಸಿಕವಾಗಿ ಆಳುಪ ವಂಶದ ಅರಸರು ಈ ಪ್ರದೇಶವನ್ನು 7ನೆಯ ಶತಮಾನದಿಂದ 14ನೆಯ ಶತಮಾನದವರೆಗೂ ಆಳಿದರು. ಅವರು ಇಲ್ಲಿನ ಸಂಸ್ಕೃತಿ ಮತ್ತು ನಾಗರಿಕತೆಗಳಿಗೆ ಭದ್ರ ಬುನಾದಿ ಹಾಕಿದರು. ಉದ್ಯಾವರ, ಮಂಗಳೂರು ಮತ್ತು ಬಾರಹ ಕನ್ಯಾಪುರ ಅವರ ರಾಜಧಾನಿಯಾಗಿದ್ದವು (ನೋಡಿ: ಉಡುಪಿ ಜಿಲ್ಲೆ). ಅವರ ರಾಜ್ಯವು ಘಟ್ಟದ ಮೇಲಿನ ಮಲೆನಾಡಿನ ಭಾಗದಲ್ಲೂ ವಿಸ್ತರಿಸಿದ್ದಿತು. ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ಮಂಗಳೂರು ಮತ್ತು ಬಾರಕೂರನ್ನು ಕೇಂದ್ರವಾಗಿ ಹೊಂದಿ ಅಲ್ಲಿಂದ ಪ್ರಾಂತ್ಯಾಧಿಕಾರಿಗಳು ಆಳುತ್ತಿದ್ದರು. ಅವರ ಸಾಮಂತರಾಗಿ ಕಾರ್ಕಳದ ಭೈರರಸರು, ಮೂಡಬಿದರೆಯ ಚೌಟರಸರು, ವೇಂಬಾರಿನ ಅಜಿಲರು, ಬಂಗವಾಡಿಯ ಬಂಗರು ಆಳುತ್ತಿದ್ದರು. ಇವರೆಲ್ಲ ಹೆಚ್ಚಾಗಿ ಜೈನಧರ್ಮಕ್ಕೆ ಪ್ರೋತ್ಸಾಹ ನೀಡಿದರು.

ಕೆಳದಿ ಅರಸರ ಕಾಲದಲ್ಲಿ ಇಲ್ಲಿ ಐರೋಪ್ಯ ವಸಾಹತುಕಾರರನ್ನು ನಿಗ್ರಹಿಸುವ ಕಾರ್ಯ ನಡೆಯಿತು. ದಕ್ಷಿಣ ಕನ್ನಡ ಪ್ರದೇಶ 1763ರಲ್ಲಿ ಬಿದನೂರಿನೊಂದಿಗೆ ಹೈದರ್ ಅಲಿಯ ವಶವಾಗಿ ಮುಂದೆ ಅವನ ಮಗ ಟಿಪ್ಪುವಿನ ಆಳಿಕೆಗೆ ಸೇರಿತು. ಶ್ರೀರಂಗಪಟ್ಟಣದ ಪರಾಭವದಿಂದ 1799ರಲ್ಲಿ ಬ್ರಿಟಿಷರ ಆಡಳಿತಕ್ಕೆ ಬಂತು. ಬ್ರಿಟಿಷರ ಆಳಿಕೆಯ ಕಾಲದಲ್ಲಿ ಅವರು ದಕ್ಷಿಣ ಮತ್ತು ಉತ್ತರ ಕನ್ನಡ ಪ್ರದೇಶಗಳನ್ನು ಒಂದಾಗಿಸಿ ಮದರಾಸು ಪ್ರಾಂತ್ಯದ ಆಡಳಿತಕ್ಕೆ ಸೇರಿಸಿದರು. 1860ರಲ್ಲಿ ಮತ್ತೆ ಇದನ್ನು ದಕ್ಷಿಣ, ಉತ್ತರ ಎಂಬುದಾಗಿ ಎರಡಾಗಿ ಒಡೆದು 1862ರಲ್ಲಿ ಉತ್ತರ ಕನ್ನಡ ಜಿಲ್ಲೆಯನ್ನು ಬೊಂಬಾಯಿ ಪ್ರಾಂತ್ಯಕ್ಕೆ ಸೇರಿಸಿ ದಕ್ಷಿಣ ಕನ್ನಡ ಜಿಲ್ಲೆಯನ್ನು ಮದರಾಸು ಪ್ರಾಂತ್ಯದಲ್ಲೇ ಉಳಿಸಲಾಯಿತು.

1895ರಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಆಗ ಅಮೀನ್ ದೀವಿ ದ್ವೀಪಗಳನ್ನೂ ಒಳಗೊಂಡಿತ್ತು. 1896ರಲ್ಲಿ ಈ ಜಿಲ್ಲೆಯಲ್ಲಿ ಮಂಗಳೂರು, ಕುಂದಾಪುರ, ಉಡುಪಿ, ಕಾಸರಗೋಡು ಮತ್ತು ಉಪ್ಪಿನಂಗಡಿ ತಾಲ್ಲೂಕುಗಳು ಮಾತ್ರ ಇದ್ದವು. 1912ರಲ್ಲಿ ಕಾರ್ಕಳ ತಾಲ್ಲೂಕೂ ಸೇರಿತು. 1954ರಲ್ಲಿ ಬೆಳ್ತಂಗಡಿ ತಾಲ್ಲೂಕನ್ನು ರಚಿಸಲಾಯಿತು. 1956ರ ನವೆಂಬರ್ 1ರ ವರೆಗೂ ಈ ಜಿಲ್ಲೆ ಮದರಾಸು ಪ್ರಾಂತ್ಯದ ಆಡಳಿತದಲ್ಲೇ ಇದ್ದು ರಾಜ್ಯ ಪುನರ್ವಿಂಗಡಣೆಯ ಪ್ರಕಾರ ವಿಶಾಲ ಕರ್ನಾಟಕ ಪ್ರಾಂತ್ಯಕ್ಕೆ ಸೇರಿತು. 1966ರಲ್ಲಿ ಪುತ್ತೂರನ್ನು ಸುಳ್ಯ ಮತ್ತು ಪುತ್ತೂರು ತಾಲ್ಲೂಕುಗಳಾಗಿ ವಿಭಾಗಿಸಲಾಯಿತು. 1997ರಲ್ಲಿ ಮತ್ತೆ ಜಿಲ್ಲೆ ವಿಭಜಿತವಾಯಿತು. ಅದರ ಒಂದು ಭಾಗದಿಂದ ಉಡುಪಿ ಜಿಲ್ಲೆಯನ್ನು ರಚಿಸಲಾಗಿದೆ. *

**ದಕ್ಷಿಣ ಪಿನಾಕಿನಿ :** ಕರ್ನಾಟಕದ ಪೂರ್ವಭಾಗದಲ್ಲಿ ಹರಿಯುವ ನದಿ. ಇದಕ್ಕೆ ದಕ್ಷಿಣ ಪೆನ್ನಾರ್ ಎಂದೂ ಹೆಸರಿದೆ. ತಮಿಳುನಾಡಿನ ಭಾಗದಲ್ಲಿ ಇದರ ಹೆಸರು ಪೊನ್ನೈಯಾರ್, ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ ತಾಲ್ಲೂಕಿನ ನಂದಿಬೆಟ್ಟದ ವಾಯವ್ಯಕ್ಕೆ ಇರುವ ಚೆನ್ನರಾಯನ ಬೆಟ್ಟದಲ್ಲಿ ಹುಟ್ಟಿ, ಪೂರ್ವಾಭಿಮುಖವಾಗಿ ಶಿಡ್ಲಘಟ್ಟದವರೆಗೂ ಹರಿದು ಅನಂತರ ದಕ್ಷಿಣಾಭಿಮುಖವಾಗಿ ಬೆಂಗಳೂರು ಜಿಲ್ಲೆಯ ದೇವನಹಳ್ಳಿ ತಾಲ್ಲೂಕನ್ನು ವಿಜಯಪುರದ ದಕ್ಷಿಣದಲ್ಲಿ ಪ್ರವೇಶಿಸುತ್ತದೆ. ಮುಂದೆ ಹೊಸಕೋಟೆ ತಾಲ್ಲೂಕಿನ ಮಧ್ಯದಲ್ಲಿ ದಕ್ಷಿಣಾಭಿಮುಖವಾಗಿ ಹರಿದು, ಆ ತಾಲ್ಲೂಕಿನ ಗುಂಡೂರಿನ ಬಳಿ ಕರ್ನಾಟಕದ ಎಲ್ಲೆಯನ್ನು ಬಿಡುತ್ತದೆ. ಮುಂದೆ ತಮಿಳು ನಾಡಿನ ಧರ್ಮಪುರಿ ಮತ್ತು ದಕ್ಷಿಣ ಆರ್ಕಾಟ್ ಜಿಲ್ಲೆಗಳ ಮುಖಾಂತರ ಕಡಲೂರಿನ ಉತ್ತರದಲ್ಲಿ ಬಂಗಾಲ ಕೊಲ್ಲಿಯನ್ನು ಸೇರುತ್ತದೆ. ನದಿಯ ಒಟ್ಟು ಉದ್ದ ಸು.400ಕಿಮೀ. ಕರ್ನಾಟಕದಲ್ಲಿ ಉಗಮಸ್ಥಾನದಿಂದ ಸು.80ಕಿಮೀ ದೂರ ಹರಿಯುತ್ತದೆ. ಜಂಗಮಕೋಟೆ ಮತ್ತು ಹೊಸಕೋಟೆ ಕೆರೆಗಳು ಈ ನದಿಗೆ ಅಡ್ಡಲಾಗಿ ಕಟ್ಟಿರುವ ದೊಡ್ಡ ಕೆರೆಗಳು. ಅಲ್ಲದೆ ಅಲ್ಲಲ್ಲಿ ಸಣ್ಣ ಕೆರೆಗಳು ಮತ್ತು ಒಡ್ಡುಗಳು ಸಹ ಇವೆ. ಕೋಲಾರ ಬೆಂಗಳೂರು ಜಿಲ್ಲೆಗಳಲ್ಲಿ ಈ ನದಿ ಹರಿಯುವ ಪ್ರದೇಶ ಫಲವತ್ತಾಗಿದ್ದು ನದಿಯಲ್ಲಿನ ಸು.90 ಭಾಗ ನೀರನ್ನು ವ್ಯವಸಾಯಕ್ಕೆ ಉಪಯೋಗಿಸಿಕೊಳ್ಳಲಾಗುತ್ತಿದೆ.

ನಂದಿಬೆಟ್ಟದ ಸಾಲಿನಲ್ಲಿ ಹುಟ್ಟುವ ದಕ್ಷಿಣ ಮತ್ತು ಉತ್ತರ ಪಿನಾಕಿನಿ ನದಿಗಳು ಶಿವನ ಬಿಲ್ಲಾದ ಪಿನಾಕದಂತೆ ಕಮಾನಾಗಿ ಹರಿಯುವುದರಿಂದ ಇವಕ್ಕೆ ಪಿನಾಕಿನಿ ಎಂಬ ಹೆಸರು ಬಂದಿದೆ ಎಂದು ಪ್ರತೀತಿ. (ಎಂ.)

**ದತ್ತಾತ್ರೇಯ, ಎಚ್.ಜಿ. :** 1942-. ರಂಗಭೂಮಿ ಹಾಗೂ ಚಲನಚಿತ್ರರಂಗದ ಪ್ರಸಿದ್ಧ ನಟ. 1942 ಏಪ್ರಿಲ್ 20ರಂದು ಚಿತ್ರದುರ್ಗ ಜಿಲ್ಲೆಯಲ್ಲಿ ಜನಿಸಿದರು. ತಂದೆ ಹರಿಹರ ಗುಂಡೂರಾಯ, ತಾಯಿ ವೆಂಕಮ್ಮ. ಇವರ ಪ್ರಾಥಮಿಕ ವಿದ್ಯಾಭ್ಯಾಸ ಚಿತ್ರದುರ್ಗದಲ್ಲಿ ಆಯಿತು. ಅನಂತರ ರಾಜ್ಯಕ್ಕೆ ಪ್ರಥಮ ಸ್ಥಾನ ಪಡೆದು ಎಸ್.ಎಸ್.ಎಲ್.ಸಿ. ಪೂರೈಸಿದರು (1958). ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲಿ ರಾಜ್ಯಕ್ಕೆ ದ್ವಿತೀಯ ಸ್ಥಾನ ಪಡೆದು ಉತ್ತೀರ್ಣರಾದರು (1959). ಬೆಂಗಳೂರಿನ ವಿಶ್ವೇಶ್ವರಯ್ಯ ಎಂಜಿನಿಯರಿಂಗ್ ಕಾಲೇಜಿನಲ್ಲಿ ಎಲೆಕ್ಟ್ರಿಕಲ್ ಇಂಜಿನಿಯರಿಂಗ್‌ನಲ್ಲಿ ಬಿ.ಇ. ಪದವಿ ಪಡೆದು, ಅನಂತರ ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನಲ್ಲಿ ಎಂ.ಇ. ಪದವಿ ಪಡೆದರು (1977). ಇದಲ್ಲದೆ ಇವರು ಹಿರಿಯ ಆಡಳಿತ ತಾಂತ್ರಿಕ ಅಧಿಕಾರಿಗಳ ತರಬೇತಿ ಕೋರ್ಸನ್ನು ಭಾರತೀಯ ವಾಯುಪಡೆ ತಾಂತ್ರಿಕ ಕಾಲೇಜಿನಲ್ಲಿ ಪಡೆದರು.

ಭಾರತೀಯ ವಾಯುಪಡೆಯ ಏರೋನಾಟಿಕಲ್ ಎಲೆಕ್ಟ್ರಾನಿಕ್ಸ್ ವಿಭಾಗದಲ್ಲಿ ಪೈಲಟ್ ಅಧಿಕಾರಿಯಾಗಿ ತಮ್ಮ ವೃತ್ತಿಜೀವನವನ್ನು ಪ್ರಾರಂಭಿಸಿದರು. ನವದೆಹಲಿ, ಕಾನ್ಪುರ, ಭಟಿಂಡ, ಚಂಡೀಘಡ, ನಿಕೋಬಾರ್ ದ್ವೀಪ ಹಾಗೂ ಬೆಂಗಳೂರಿನಲ್ಲಿ ವಿಂಗ್‌ಕಮ್ಯಾಂಡರ್ ಆಗಿ ಕಾರ್ಯನಿರ್ವಹಿಸಿದರು. ಅನಂತರ ಹಿಂದೂಸ್ಥಾನ್ ಏರೋನಾಟಿಕಲ್ಸ್ ಸಂಸ್ಥೆಗೆ ವರ್ಗಾವಣೆ ಹೊಂದಿ ಡೆಪ್ಯುಟಿ ಜನರಲ್ ಮ್ಯಾನೇಜರ್ ಆಗಿ ಕಾರ್ಯನಿರ್ವಹಿಸಿದರು. ಎಚ್.ಎ.ಎಲ್. ಸ್ಟಾಫ್ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದರು (1987-94).

ಶಾಲಾ ದಿನಗಳಿಂದಲೇ ಹವ್ಯಾಸಿ ರಂಗಭೂಮಿಯ ಬಗ್ಗೆ ವಿಶೇಷ ಒಲವನ್ನು ಹೊಂದಿದ್ದ ಇವರು ದೆಹಲಿಯ ಕನ್ನಡ ಭಾರತೀ, ಬೆಂಗಳೂರಿನ ಸಮುದಾಯ,



ಕಲಾಗಂಗೋತ್ರಿ, ಮಲ್ಲಿಕಾ, ಗೆಳೆಯರ ಬಳಗ, ವೇದಿಕೆ, ದಕ್ಷಿಣೆ ಮುಂತಾದ ಹಲವು ಹವ್ಯಾಸಿ ರಂಗತಂಡಗಳ ಮೂಲಕ ನಾಟಕಗಳಲ್ಲಿ ಪ್ರಮುಖ ಪಾತ್ರಗಳನ್ನು ನಿರ್ವಹಿಸಿದರು. ನಾನೇ ಬಿಜ್ಜಳ, ಸಂಕ್ರಾಂತಿ, ದೇವದಾಸಿ, ಹಿಟ್ಟಿನ ಹುಂಜ, ಸಿಂಗಾರೆವ್ವ ಮತ್ತು ಅರಮನೆ, ಸಿಕ್ಕು, ಮಳೆ ನಿಲ್ಲುವವರೆಗೂ, ಮೀನಿನ ಹೆಜ್ಜೆ, ಕೊಂದು ಕೂಗಿತ್ತು ನೋಡಾ, ಈ ಮುಖದವರು - ಇವರು ನಟಿಸಿದ ಕೆಲವು ಹೆಸರಾಂತ ನಾಟಕಗಳು. ಇವರು ಹಿಂದಿ ಭಾಷೆಯ ಪುರುಷ್, ರುಡಾಲಿ, ರಕ್ತ, ಕಲ್ಯಾಣಿ, ಸಯನಾರಾ ಮುಂತಾದ ನಾಟಕಗಳಲ್ಲೂ ಪ್ರಮುಖ ಪಾತ್ರ ನಿರ್ವಹಿಸಿದ್ದಾರೆ.

ಟಿ.ಎಸ್.ರಂಗಾ ಅವರ ಉದ್ಭವ್ ಎಂಬ ಹಿಂದಿ ಕಿರುಚಿತ್ರದ ಮೂಲಕ ಚಲನಚಿತ್ರ ರಂಗ ಪ್ರವೇಶಿಸಿದರು (1987). ಇವರ ಪೂರ್ಣಪ್ರಮಾಣದ ಪ್ರಥಮ ಕನ್ನಡ ಚಲನಚಿತ್ರ ಟಿ.ಎಸ್.ನಾಗಾಭರಣರ 'ಆಸ್ಫೋಟ'. ಅನಂತರ ಸಂಪೂರ್ಣವಾಗಿ ಚಿತ್ರ ಜಗತ್ತಿನಲ್ಲಿ ತಮ್ಮನ್ನು ತೊಡಗಿಸಿಕೊಂಡ ಇವರು ಮೈಸೂರುಮಲ್ಲಿಗೆ, ಸಂತ ಶಿಶುನಾಳ ಶರೀಫ, ನಾಗಮಂಡಲ, ಹರಕೆಯ ಕುರಿ, ಕ್ರೌರ್ಯ, ಅಮೆರಿಕ-ಅಮೆರಿಕ, ಶರವೇಗದ ಸರದಾರ, ಹೂಮಳೆ, ಚಿನ್ನಾರಿ ಮುತ್ತ, ಕೊಟ್ರೇಶಿ ಕನಸು, ಚೈತ್ರದ ಚಿಗುರು, ಉಲ್ಟಾ ಪಲ್ಟಾ, ಊರ್ವಶಿ, ಮುನ್ನುಡಿ, ಅತಿಥಿ, ಮೌನಿ, ದೇವಾಸುರ, ಮರೀಚಿಕೆ, ಕನಕಾಂಬರಿ, ಸೈನಿಕ ಮೊದಲಾದ ಸುಮಾರು ಎಪ್ಪತ್ತಕ್ಕೂ ಹೆಚ್ಚು ಚಿತ್ರಗಳಲ್ಲಿ ನಟಿಸಿ ಜನ ಮೆಚ್ಚುಗೆ ಗಳಿಸಿದ್ದಾರೆ. ಇವರು ತಿಲದಾನಂ ಎಂಬ ತೆಲುಗು ಚಿತ್ರದಲ್ಲೂ ನಟಿಸಿದ್ದಾರೆ.

ಕಿರುತೆರೆಯ ಅನೇಕ ಖಾಸಗಿ ಮತ್ತು ದೂರದರ್ಶನ ವಾಹಿನಿಗಳಲ್ಲೂ ನಟಿಸಿ ತಮ್ಮ ಅಗಾಧ ಪ್ರತಿಭೆಯಿಂದ ಇವರು ಮನೆಮಾತಾದರು. ಇವರು ನಟಿಸಿದ ಮಾಯಾಮೃಗ, ಬಂಡಾಯ, ಸೃಷ್ಟಿ - ಇವು ಜನಮನ್ನಣೆ ಪಡೆದ ಕೆಲವು ಧಾರಾವಾಹಿಗಳು. ಇವರು ಹಿಂದಿ ಕಿರುತೆರೆಯ ಧಾರಾವಾಹಿಗಳಲ್ಲೂ ಅನೇಕ ಕಿರುಚಿತ್ರಗಳಲ್ಲೂ ಸಾಕ್ಷ್ಯ ಚಿತ್ರಗಳಲ್ಲೂ ನಟಿಸಿದ್ದಾರೆ. ಆಕಾಶವಾಣಿಯ ಹಲವು ಕಾರ್ಯಕ್ರಮಗಳಲ್ಲೂ ಪಾತ್ರವಹಿಸಿದ್ದಾರೆ. ಮುಖ್ಯವಾಗಿ ಸಂಧ್ಯಾರಾಗ ಕಾದಂಬರಿಯ ನಿರೂಪಕನಾಗಿ ಕಾರ್ಯನಿರ್ವಹಿಸಿದ್ದಾರೆ.

ಜಿ.ವಿ.ಅಯ್ಯರ್, ನಾಗತಿಹಳ್ಳಿ ಚಂದ್ರಶೇಖರ, ಕೆ.ವಿ.ಜಯರಾಂ, ಯು.ಪ್ರಭಾಕರರಾವ್, ಸಿ.ಆರ್.ಸಿಂಹ, ಟಿ.ಎನ್.ಸೀತಾರಾಂ, ಪಿ.ಶೇಷಾದ್ರಿ, ನಾಗಾಭರಣ, ಸಿದ್ದಲಿಂಗಯ್ಯ ಮೊದಲಾದ ಅನೇಕ ಹೆಸರಾಂತ ಚಲನಚಿತ್ರ ನಿರ್ದೇಶಕರೊಂದಿಗೆ ದುಡಿದ ಅನುಭವ ಇವರದು.

ಪಾತ್ರದೊಂದಿಗೆ ತಲ್ಲೀನತೆ ಇವರ ಅಭಿನಯದ ವಿಶಿಷ್ಟ ಗುಣ. ಮಾಯಾಮೃಗದ ಶಾಸ್ತ್ರಿಗಳ ಪಾತ್ರ ಇದಕ್ಕೆ ಸಾಕ್ಷಿ. ಇವರಿಗೆ ಅನೇಕ ಪ್ರಶಸ್ತಿಗಳು ಸಂದಿವೆ. ಮುನ್ನುಡಿ ಚಿತ್ರಕ್ಕೆ ಅತ್ಯುತ್ತಮ ಪೋಷಕನಟ - ರಾಷ್ಟ್ರ ಪ್ರಶಸ್ತಿ (2001), ಆಸ್ಫೋಟ ಚಿತ್ರಕ್ಕೆ ಅತ್ಯುತ್ತಮ ಪೋಷಕನಟ - ರಾಜ್ಯ ಪ್ರಶಸ್ತಿ (1987), ಚನ್ನೈ ಚಲನಚಿತ್ರ ಅಭಿಮಾನಿಗಳ ಸಂಘದ ಪ್ರಶಸ್ತಿ ಉಲ್ಲೇಖಾರ್ಹವಾದವು. (ಎಸ್‌ಯು.ಎಂ.)

**ದಲಿತ ಸಾಹಿತ್ಯ :** ಕನ್ನಡ ಸಾಹಿತ್ಯ ಪರಂಪರೆಯಲ್ಲಿ ದಲಿತ ಸಾಹಿತ್ಯಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ವಿಶಿಷ್ಟ ಧ್ವನಿ ಇದೆ. ಕರ್ನಾಟಕದಲ್ಲಿ 'ದಲಿತ' ಪದ ಬಳಕೆಗೆ ಬರಲು ಮೂಲ ಪ್ರೇರಣೆ ಮಹಾರಾಷ್ಟ್ರದ ದಲಿತ ಚಳವಳಿ. ಬುದ್ದಣ್ಣ ಹಿಂಗಮಿರೆ ಮತ್ತಿತರರು ಸೇರಿ 1973ರಲ್ಲಿ 'ದಲಿತ' ಪತ್ರಿಕೆ ಪ್ರಾರಂಭಿಸಿದರು. ಮುಂದೆ ಪ್ರಗತಿ ಪಂಥದಲ್ಲಿ ಒಂದು ಅಂಗವಾಗಿ 'ದಲಿತ ಪಂಥ' ಕಾಣಿಸಿಕೊಂಡಿತು. ಇದಕ್ಕೆ ಮೂಲ ಕಾರಣ ಬಿ.ಬಸವಲಿಂಗಪ್ಪನವರ 'ಬೂಸಾ ಪ್ರಕರಣ'. ಅನಂತರ 1974-75ರ ವೇಳೆಗೆ ಬಿ.ಕೃಷ್ಣಪ್ಪನವರ ನೇತೃತ್ವದಲ್ಲಿ 'ದಲಿತ ಸಂಘರ್ಷದ ಸಮಿತಿ' ರೂಪುಗೊಂಡು 1976ರಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಮೈತಳೆಯಿತು. ಇದೇ ಸಂದರ್ಭದಲ್ಲಿ ರೂಪುಗೊಂಡ 'ದಲಿತ ಲೇಖಕರ ಮತ್ತು ಕಲಾವಿದರ ಒಕ್ಕೂಟ' ದಲಿತ ಸಂಘರ್ಷ ಸಮಿತಿಯೊಂದಿಗೆ ಒಗ್ಗೂಡಿ ಹಲವಾರು ಕಾರ್ಯಕ್ರಮ, ಜಾಥಾಗಳ ಮೂಲಕ, 'ಪಂಚಮ' ಪತ್ರಿಕೆಯ ಮೂಲಕ ಎಲ್ಲರ ಗಮನ ದಲಿತದ ಕಡೆಗೆ ಸೆಳೆಯುವಂತೆ ಮಾಡಿತು.

ದಲಿತ ಸಾಹಿತ್ಯವನ್ನು ಗಮನಿಸುವಾಗ 'ದಲಿತ'. 'ದಲಿತರು', 'ದಲಿತ ಪ್ರಜ್ಞೆ' ಮೊದಲಾದ ತಾತ್ವಿಕ ಪರಿಕಲ್ಪನೆಗಳ ಸ್ಪಷ್ಟ ಅರಿವು ಅಗತ್ಯವೆನಿಸುತ್ತದೆ. ವಿದ್ವಾಂಸರ ಪ್ರಕಾರ 1943ರಲ್ಲಿ ಕಾಣಿಸಿಕೊಂಡ ಪ್ರಗತಿಶೀಲ ಚಳವಳಿ 1975ರಲ್ಲಿ ಮತ್ತೆ 'ಪ್ರಗತಿ ಪಂಥ' ಎಂಬ ಹೆಸರಿನಿಂದ ಕಾಣಿಸಿಕೊಂಡ ಸಂದರ್ಭದಲ್ಲಿ ದಲಿತ ಎಂಬ ಪದವೂ ಮೊದಲ ಬಾರಿಗೆ ಬಳಕೆಯಾಯಿತು. ದಲಿತ ಎಂಬ ಪದಕ್ಕೆ 'ದಳ' 'ಗುಂಪು', 'ಸೈನ್ಯ' 'ಶೋಷಿತ', 'ದಮನಕ್ಕೆ ಒಳಗಾದವರು' ಎಂಬ ನಾನಾ ಅರ್ಥಗಳು ಶಬ್ದಕೋಶದಲ್ಲಿ ಇವೆ. ಭಾರತದಾದ್ಯಂತ ಅಸ್ಪೃಶ್ಯತೆಗೆ ದಲಿತ ಎಂಬ ಪದವನ್ನು ಬಳಸಲಾಯಿತು. ಮೊದಲಿಗೆ ಅಂಬೇಡ್ಕರ್ 'ಡಿಪ್ರೆಸ್ಡ್' ಎಂಬ ಪದವನ್ನು ಬಳಸಿದರು. ಮರಾಠಿ ಭಾಷೆಯಲ್ಲಿ ದಲಿತ ಪದಕ್ಕೆ ಬದಲಾಗಿ ಬೌದ್ಧ ಶಬ್ದವನ್ನು ಬಳಸುವ ಪ್ರಯತ್ನವೂ ನಡೆಯಿತು.

ದಲಿತ ಎಂದರೆ ಯಾರು ಎಂಬ ಬಗ್ಗೆ ಸಾಕಷ್ಟು ಚರ್ಚೆಗಳು ನಡೆದಿವೆ. ವಿಭಿನ್ನವಾದಗಳಿಗೆ ಸಂಬಂಧಿಸಿದ ಚಿಂತಕರು ತಮ್ಮದೇ ಆದ ನೆಲೆಯಲ್ಲಿ ಇದನ್ನು ವ್ಯಾಖ್ಯಾನಿಸಿದ್ದಾರೆ. ಶೋಷಣೆ ಎಂಬ ಪದಕ್ಕೆ ಜಾತಿಭೇದವಿಲ್ಲ; ಆರ್ಥಿಕ, ಸಾಮಾಜಿಕ, ರಾಜಕೀಯ ರಂಗದಲ್ಲೆಲ್ಲ ಶೋಷಣೆಗೆ ಒಳಗಾದ ಎಲ್ಲ ಜನರೂ ದಲಿತರೆಂದು ಮಾರ್ಕ್ಸ್‌ವಾದಿಗಳು ವ್ಯಾಖ್ಯಾನಿಸಿದರೆ, ಪಂಚಮ ಅಥವಾ ಬಹಿಷ್ಕೃತರು ಎಂದು ಕರೆಯಿಸಿಕೊಳ್ಳುವ ಅಸ್ಪೃಶ್ಯರೆಲ್ಲರೂ ದಲಿತರೆಂದು ಅಂಬೇಡ್ಕರ್‌ವಾದಿಗಳು ಪ್ರತಿಪಾದಿಸಿದ್ದಾರೆ. ಆದರೆ ಲೋಹಿಯಾವಾದಿಗಳು ಅಸ್ಪೃಶ್ಯರೂ ಸೇರಿದಂತೆ ಎಲ್ಲ ಆರ್ಥಿಕ, ಸಾಮಾಜಿಕ, ರಾಜಕೀಯ ರಂಗದಲ್ಲಿ ಶೋಷಣೆಗೊಳಗಾದ ಬಡವರೂ ದಲಿತರೇ ಎಂದು ಸಾರಿದರು. ಅರವಿಂದ ಮಾಲಗತ್ತಿಯವರು ಈ ಮೂರು ವ್ಯಾಖ್ಯಾನಗಳ ಅಂತಃಸತ್ವವನ್ನು ಒಳಗೊಂಡಂತೆ. "ಶತಮಾನಗಳಿಂದ ಜನ ಸಮುದಾಯದಲ್ಲಿ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಶೈಕ್ಷಣಿಕವಾಗಿ ಶೋಷಣೆಗೆ ಒಳಗಾದವರು ಒಟ್ಟು ಮನುಷ್ಯ ಸಮಾಜದಲ್ಲಿ ಬದುಕಲಾಗದೆ, ಕೀಳುವೃತ್ತಿಗೆ ಅವಲಂಬಿತರಾಗಿ ಹೆಸರು ಹೇಳಿಕೊಳ್ಳಲು ನಾಚಿಕೆಪಡುವ ಅಸ್ಪೃಶ್ಯರು ದಲಿತರೆನ್ನಿಸಿಕೊಳ್ಳುತ್ತಾರೆ" ಎಂದು ಪ್ರತಿಪಾದಿಸಿದ್ದನ್ನು ಹೆಚ್ಚು ವಿದ್ವಾಂಸರು ಮಾನ್ಯಮಾಡಿರುವುದು ಕಂಡುಬರುತ್ತದೆ.

ಮೇಲಿನ ವ್ಯಾಖ್ಯಾನಕ್ಕೆ ಸಂಬಂಧಿಸಿದಂತೆ ದಲಿತರನ್ನು ಕುರಿತು ಯಾರೇ ಬರೆದರೂ ದಲಿತ ಸಾಹಿತ್ಯವಾಗುತ್ತದೆ ಎಂಬುದು ಒಂದು ವಾದವಾದರೆ, ದಲಿತರೇ ಬರೆದದ್ದು ದಲಿತ ಸಾಹಿತ್ಯವಾಗುತ್ತದೆ ಎನ್ನುವ ವಾದವೂ ಇದೆ. ಆದರೆ ಈ ವಾದಗಳನ್ನು ಸಮೀಕರಿಸಿ ಅಧ್ಯಯನಕ್ಕೆ ಹೆಚ್ಚು ಅನುಕೂಲಕರವಾಗಿ ವ್ಯಾಖ್ಯಾನಿಸಿದ ಸ್ವರೂಪ ಬಳಕೆಯಲ್ಲಿರುವುದು ಕಂಡುಬರುತ್ತದೆ.

'ದಲಿತಪ್ರಜ್ಞೆ' ಎಂದರೆ ಅದು ಮಾನವೀಯತೆಯನ್ನು ಮೆರೆಯುವ ಪ್ರಜ್ಞೆ, 'ಮಾನವಪ್ರಜ್ಞೆ' ಎಂದು ವಿವರಿಸಲಾಗಿದೆ. ಇದು ವ್ಯಕ್ತಿಗತವಲ್ಲ, ಸಮೂಹ ನಿಷ್ಠವಾದದ್ದು. ಸಮಾಜದ ಸಾಮಾಜಿಕ, ಆರ್ಥಿಕ, ರಾಜಕೀಯ ಮೊದಲಾದ ಎಲ್ಲ ಸ್ತರಗಳಲ್ಲಿಯೂ ದಲಿತರ ಮೇಲೆ ನಡೆದ, ನಡೆಯುವ, ನಡೆಯುತ್ತಿರುವ, ನಡೆಯಲಿರುವ ದೌರ್ಜನ್ಯ, ಶೋಷಣೆ ಇತ್ಯಾದಿಗಳ ಬಗೆಗಿನ ಅರಿವು ಅಥವಾ ಪ್ರಜ್ಞೆಯೇ ದಲಿತಪ್ರಜ್ಞೆ ಎನಿಸಿಕೊಳ್ಳುತ್ತದೆ. ದಲಿತಪ್ರಜ್ಞೆ ಇರಲೇ ಬೇಕು ಎಂದರೆ ಅಸ್ಪೃಶ್ಯತೆ, ದಾಸ್ಯ, ವಿಷಮತೆ, ದುಃಖ- ಇತ್ಯಾದಿಗಳನ್ನು, ಸನಾತನ ಮೌಲ್ಯಗಳನ್ನು, ವರ್ಣ ಹಾಗೂ ಜಾತಿ ಶ್ರೇಷ್ಠತೆಯನ್ನು ವಿರೋಧಿಸುವುದೆಲ್ಲ 'ದಲಿತಪ್ರಜ್ಞೆ'ಯಾಗುತ್ತದೆ.

ಹೀಗೆ ದಲಿತ, ದಲಿತರು, ದಲಿತಪ್ರಜ್ಞೆ ಈ ಮೂರರ ಜಿಜ್ಞಾಸೆಯಿಂದ ದಲಿತಸಾಹಿತ್ಯವನ್ನು ಪ್ರವೇಶಿಸಿದಾಗ ದಲಿತಸಾಹಿತ್ಯ ಎಂದು ಯಾವುದನ್ನು ಕರೆಯಬೇಕೆಂಬ ವಿಚಾರದಲ್ಲಿಯೂ ಬಹಳಷ್ಟು ಚರ್ಚೆಗಳು ನಡೆದಿರುವುದು ಗಮನಕ್ಕೆ ಬರುತ್ತದೆ. "ದಲಿತರು, ದಲಿತೇತರರು ದಲಿತಪ್ರಜ್ಞೆಯಿಂದ ದಲಿತರ ಕುರಿತು ಸೃಷ್ಟಿಸಿದ ಸಾಹಿತ್ಯವೇ ದಲಿತ ಸಾಹಿತ್ಯ; ಇದರಲ್ಲಿ ದಲಿತೀಯ ದಲಿತೇಯ ಮತ್ತು ಆಂಶಿಕ ಸಾಹಿತ್ಯವೂ ಒಳಗೊಳ್ಳುತ್ತದೆ. ದಲಿತರು ದಲಿತಪ್ರಜ್ಞೆಯಿಂದ ದಲಿತತ್ವದ ಕುರಿತು ಬರೆದ ಸಾಹಿತ್ಯ ದಲಿತೀಯ ಸಾಹಿತ್ಯವಾದರೆ, ದಲಿತೇತರರು ದಲಿತಪ್ರಜ್ಞೆಯಿಂದ ದಲಿತರನ್ನು ಕುರಿತು ಬರೆದ ಸಾಹಿತ್ಯವೇ ದಲಿತೇಯ ಅಥವಾ ಅದಲಿತೀಯ ಸಾಹಿತ್ಯವಾಗುತ್ತದೆ". ಸಾಹಿತ್ಯದಲ್ಲಿ ದಲಿತಸಾಹಿತ್ಯವೆಂದು ವರ್ಗೀಕರಿಸುವುದೇ ತಪ್ಪು ಎಂಬ ವಾದವೂ ಬಳಕೆಯಲ್ಲಿದೆ. ಮಾಲಗತ್ತಿಯವರು ಹೇಳುವಂತೆ "ಅಸ್ಪೃಶ್ಯತೆಯ ಪರಿಕಲ್ಪನೆ ಏನಿದ್ದರೂ ಮನುಷ್ಯನಲ್ಲಿಯೇ ವಿನಾ ಸಾಹಿತ್ಯ ಭೂಮಿಕೆಗಲ್ಲ. ದಲಿತಸಾಹಿತ್ಯ ಜಾತಿವಾದಿ ಸಾಹಿತ್ಯವಲ್ಲ. ಇತರ ಸಾಹಿತ್ಯಕ ಪಂಥಗಳಂತೆ ಇದು ಕೂಡ ಒಂದು. ದಲಿತರೇ ಬರೆದದ್ದು ಸಾಹಿತ್ಯವಾಗುತ್ತದೆಂದು ನಂಬಿ ಹೊರಟದ್ದೇ ಆದರೆ ಸಾಹಿತ್ಯದಲ್ಲಿ ಮತ್ತೊಂದು ಅಸ್ಪೃಶ್ಯರ ಕೇರಿಯನ್ನು ಸೃಷ್ಟಿಸಿದಂತಾಗುತ್ತದೆ." ದಲಿತೇತರರು ಬರೆಯುವಾಗ ಸಾಹಿತ್ಯದಲ್ಲಿ ದಲಿತರೇ ಕೇಂದ್ರ ಬಿಂದುವಾಗಿರಬೇಕೆಂಬ ನಿರ್ಬಂಧವೇನೂ ಇಲ್ಲ.

ಆರಂಭದ ದಲಿತ ಸಾಹಿತ್ಯದಲ್ಲಿ ಕವನ-ಲೇಖನಗಳು ಬಿಡಿಬಿಡಿಯಾಗಿ ಕಂಡುಬಂದರೂ ದಲಿತ ಸಾಹಿತ್ಯದ ಅಧಿಕೃತ ಆರಂಭವನ್ನು 1975ರಲ್ಲಿ ಪ್ರಕಟವಾದ ಸಿದ್ದಲಿಂಗಯ್ಯ ಅವರ 'ಹೊಲೆಮಾದಿಗರ ಹಾಡು' ಸಂಕಲನದಿಂದ ಗುರುತಿಸಲಾಗಿದೆ. ತೆಲುಗಿನಲ್ಲಿ 1972ರ ವೇಳೆಗೆ ಬಂದಿದ್ದ ಈ ನಿಟ್ಟಿನ ಕವನ ಸಂಕಲನಗಳು ಹಾಗೂ 1971ರಲ್ಲಿ ಹೊರಬಂದ ಕರ್ನಾಟಕ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು ಹೊರತಂದ 'ದಿಗಂಬರ' ಕವನ ಸಂಕಲನ ಹಾಗೂ ಹಾ.ಮು. ಪಟೇಲರ' 'ಶೂದ್ರ' (1972) ಈ ಎಲ್ಲದರ ಪ್ರಭಾವ 'ಹೊಲೆಮಾದಿಗರ ಹಾಡು' ಕೃತಿಗೆ ಪ್ರೇರಣೆ ನೀಡಿರಬಹುದಾದ ಸಾಧ್ಯತೆಗಳಿವೆ.

ದಲಿತ ಸಾಹಿತ್ಯವನ್ನು ಸಮಗ್ರವಾಗಿ ತೆಗೆದುಕೊಂಡಾಗ ವರ್ಣ ಮತ್ತು ಜಾತಿವ್ಯವಸ್ಥೆಯ ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಯ ಅನ್ಯಾಯಗಳನ್ನು ಪ್ರಶ್ನಿಸುವುದು ಕೇಂದ್ರ ಭಾವವಾಗಿ ಕಾಣುತ್ತದೆ. "ಆವೇಶ, ಆದ್ರತೆ, ವಿಡಂಬನ ಸ್ವರೂಪದ ಅಭಿವ್ಯಕ್ತಿಯೇ ಕೇಂದ್ರವಾಗಿದ್ದು, ಪರಂಪರಾಗತ ಮೌಢ್ಯದ ಮೌಲ್ಯಗಳನ್ನು ಅನಾದರಣೆಯಿಂದ ಕಾಣುವುದು ಕಂಡುಬರುತ್ತದೆ". ದಲಿತ ಸಾಹಿತ್ಯ ಆರಂಭದ ವಸ್ತುನಿಷ್ಠತೆಯ ಕಡೆಯಿಂದ ಸಮಷ್ಟಿಯ ಕಡೆಗೆ ಹೆಜ್ಜೆ ಹಾಕುತ್ತಿರುವುದನ್ನು ಸದ್ಯದಲ್ಲಿ ಗುರುತಿಸಬಹುದು. *

ಯಾವುದೇ ಸಾಹಿತ್ಯಪರಂಪರೆ ತನ್ನ ಸಾಧ್ಯತೆಗಳನ್ನು ಪೂರೈಸಿಕೊಂಡು ಸ್ಥಗಿತವಾಗುವ ಸಮಯಕ್ಕೆ ಮತ್ತೊಂದು ಸಾಹಿತ್ಯಪರಂಪರೆ ಹುಟ್ಟಿಕೊಳ್ಳುವುದಕ್ಕೆ ಬೇಕಾಗಿರುವ ಆಶಯಗಳನ್ನು ತನ್ನ ಗರ್ಭದಲ್ಲಿಯೇ ಹುದುಗಿಸಿಕೊಂಡಿರುತ್ತದೆ. ಪ್ರಮುಖವಾದ ಈ ಆಶಯದ ಜೊತೆಗೆ ಬೇರೆ ದೇಶದ, ಬೇರೆ ಕಾಲದ, ಬೇರೆ ಶಿಸ್ತಿನ ಹಲವು ಸಂಗತಿಗಳು ನೂತನ ಸಾಹಿತ್ಯದ ನಿರ್ಮಾಣಕ್ಕೆ ಕಾರಣವಾಗಿರುತ್ತವೆ. ಈ ಮಾತುಗಳು ಸಾಹಿತ್ಯದ ಶ್ರೇಷ್ಠತೆಯನ್ನು ಗುರುತಿಸಲು ಬೇಕಾಗುವ ಸೃಜನಶೀಲತೆಯ ನೆಲೆಯನ್ನು ಅರ್ಥಮಾಡಿಸುವುದಕ್ಕೆ ಭದ್ರವಾದ ನೆಲೆಗಟ್ಟನ್ನು ಒದಗಿಸುತ್ತದೆ. ನೋವಿನ ನೆಲೆಯಿಂದ ಬಂದ ಅಂಬೇಡ್ಕರ್ ಅವರು ಸಮಾಜವನ್ನು ಅತ್ಯಂತ ಸೂಕ್ಷ್ಮವಾಗಿ ನೋಡಿದ್ದರು. ಇವರ ಶಿಕ್ಷಣ ಪ್ರಸಾರ ಯೋಜನೆಗಳಿಂದಲೂ ದಲಿತರು ಪ್ರಭಾವಿತರಾದರು. ಹಾಗಾಗಿ ತಮ್ಮ ಅನುಭವಗಳನ್ನು ಹಂಚಿಕೊಳ್ಳತೊಡಗಿದರು. ಅಂಬೇಡ್ಕರ್ ಅವರು 1956ರಲ್ಲಿ ಹಿಂದು ಧರ್ಮವನ್ನು ಬಿಟ್ಟು ಬೌದ್ಧ ಧರ್ಮವನ್ನು ಅವಲಂಬಿಸಿದರು. ದಲಿತರಲ್ಲಿ ಇದು ಮಹತ್ವಪೂರ್ಣ ಬದಲಾವಣೆಯನ್ನು ಉಂಟುಮಾಡಿತು. ಅಂಬೇಡ್ಕರರ ಈ ಧರ್ಮ ಬದಲಾವಣೆ ಮೂಲತಃ

ಮೌಲ್ಯಾಂತರವಾಗಿತ್ತು. ದಲಿತರ ನಿಜವಾದ ಪ್ರತಿಭಟನಾ ಸಾಹಿತ್ಯ ಹುಟ್ಟಲು ಇದೂ ಮುಖ್ಯವಾಯಿತು. ಹಿಂದು ಧರ್ಮದಲ್ಲಿನ ಸ್ಥಗಿತತೆಯನ್ನು, ಅಮಾನುಷತೆಯನ್ನು ವಿರೋಧಿಸುತ್ತ ಬೌದ್ಧ ಧರ್ಮದ ಮಾನವೀಯ ನೆಲೆಗಳನ್ನು ಆಪ್ತವಾಗಿ ಕಾಣತೊಡಗಿದ್ದುಂಟು. ದಲಿತರಲ್ಲಿ ಇದರ ಅರಿವು ಮೂಡುತ್ತಲೇ ತಮ್ಮ ಸಂಕಟಗಳಿಗೆ ಉಂಟಾಗಬಹುದಾದ ಮೂಲಭೂತ ಕಾರಣಗಳನ್ನು ಅರಿಯತೊಡಗಿದರು. ಅಸಮಾನತೆ, ಕ್ರೌರ್ಯ, ಮೌಢ್ಯ, ಅನ್ಯಾಯಗಳ ವಿರುದ್ಧ ಸಮರ ನಡೆಸುತ್ತ ಬಂದ ಅಂಬೇಡ್ಕರರ ಪ್ರಭಾವ ದಲಿತ ಲೇಖಕರ ಮೇಲೆ ಗಾಢವಾಯಿತು. ಇಡೀ ದಲಿತ ವರ್ಗಕ್ಕೆ ಅಂಬೇಡ್ಕರ್ ಸ್ಫೂರ್ತಿಯ ಕೇಂದ್ರವಾದರು, ಅವರ ಬದುಕಿನ ಬದಲಾವಣೆಗೆ ನಿಶ್ಚಿತವಾಗಿ ಕಾರಣರಾದರು.

ದಲಿತ ಸಾಹಿತ್ಯದ ಹುಟ್ಟಿಗೆ ಇನ್ನೊಂದು ಕಾರಣವೆಂದರೆ, ಆಧುನಿಕ ಸಾಹಿತ್ಯದಲ್ಲಿ ಪಾಶ್ಚಾತ್ಯರನ್ನು ಅನುಕರಿಸುವುದೇ ಅತಿಯಾದದ್ದು. ಅನುಕರಣೆ ಸಮಕಾಲೀನ ಸಂದರ್ಭಕ್ಕೆ ಪ್ರಸ್ತುತವಾಗಿರಲಿಲ್ಲ. ಪ್ರೀತಿ, ಪ್ರಣಯವನ್ನು ವಿಜೃಂಭಿಸಿ ಬರೆಯಲಾಗುತ್ತಿತ್ತು. ಧರ್ಮ ಮತ್ತು ಪುರಾಣದ ಸಂಗತಿಗಳನ್ನು ವೈಭವೀಕರಿಸಲಾಯಿತು. ಹೀಗಾಗಿ ಸಮಾಜದ ಬಹುಸಂಖ್ಯಾತ ಜನರ ಕಡೆಗೆ ಒಲವು ತೋರದೆ ವೈಯಕ್ತಿಕ ನೆಲೆಯಲ್ಲಿಯೇ ತನ್ನ ತೆವಲುಗಳನ್ನು ತೀರಿಸಿಕೊಂಡಿತು. ಆದ್ದರಿಂದ ಹಳ್ಳಿಯಿಂದ ಮತ್ತು ಅಸ್ಪೃಶ್ಯ ನೆಲೆಯಿಂದ ಬಂದವರಿಗೆ ಈ ಸಾಹಿತ್ಯ ಪರಕೀಯವಾಗೇ ಉಳಿಯಿತು. ಹಲವಾರು ಕ್ಷೇತ್ರದಲ್ಲಿ ಬದಲಾವಣೆಗಳು ಆಗಿದ್ದರೂ ಸಾಹಿತ್ಯ ಮಾತ್ರ ತನ್ನ ದಿಕ್ಕನ್ನು ಬದಲಾಯಿಸಿರಲಿಲ್ಲ. ದಲಿತ ಸಾಹಿತ್ಯ ನಿರ್ಮಾಣವಾಗಲು ಈ ಬೆಳವಣಿಗೆಗಳೂ ಕಾರಣವಾಗಿದ್ದವು. ಮಾನವಜಾತಿ ತಾನೊಂದೆ ವಲಂ ಎಂಬ ಪಂಪನ ಕಾವ್ಯದಿಂದ ಹಿಡಿದು ನವೋದಯ ಮತ್ತು ನವ್ಯದವರೆಗೆ ಅಲ್ಲಲ್ಲಿ ದಲಿತ ಧ್ವನಿಗಳು ಕೇಳಿಬರುತ್ತವೆ. ಆಯಾಕಾಲದ ಸಂದರ್ಭಗಳಿಗೆ ತಕ್ಕಂತೆ ಅವು ಅಭಿವ್ಯಕ್ತಗೊಂಡಿವೆ. ಆದರೆ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿನ ಈ ದಲಿತಪರ ಧ್ವನಿಗಳು ಆಧುನಿಕ ದಲಿತ ಪ್ರಜ್ಞೆಗಿಂತ ಭಿನ್ನವಾದವು. ನಿರೂಪಣೆಯ ಸ್ವರೂಪದಲ್ಲಿಯೂ ಭಿನ್ನತೆ ಹೊಂದಿವೆ. ದಲಿತ ಸಾಹಿತ್ಯವನ್ನು ಅವಲೋಕಿಸುವ ಸಂದರ್ಭದಲ್ಲಿ 12ನೆಯ ಶತಮಾನದ ವಚನ ಚಳವಳಿಯನ್ನು ಮತ್ತು ಅದರ ಪ್ರಭಾವವನ್ನು ಮರೆಯುವಂತಿಲ್ಲ. ಕರ್ನಾಟಕದ ಚರಿತ್ರೆಯಲ್ಲಿ 12ನೆಯ ಶತಮಾನ ಒಂದು ವಿಶಿಷ್ಟ ಕಾಲಘಟ್ಟ. ಈ ಕಾಲದ ಚಳವಳಿ ಸೃಷ್ಟಿಸಿದ ಸಾಹಿತ್ಯ, ನಡೆಸಿದ ಪ್ರಯೋಗಗಳು ಜಾಗತಿಕ ಮಟ್ಟದ ಸಾಹಿತ್ಯದ ವಲಯದಲ್ಲಿ ಚರ್ಚೆಯ ವಸ್ತುವಾದವು. ಗತ ಇತಿಹಾಸದಲ್ಲಿ ಕಂಡರಿಯದಷ್ಟು ಸುಧಾರಣೆಗಳನ್ನು ಕಂಡ ಘಟ್ಟವಿದು. ರಾಜಕೀಯವಾಗಿ ಬಸವಣ್ಣ ಉನ್ನತ ಸ್ಥಾನದಲ್ಲಿದ್ದುಕೊಂಡೇ ಕ್ರಾಂತಿಕಾರಕ ಬದಲಾವಣೆಗಳಿಗೆ ಕಾರಣನಾದ. ಈತನ ಬೆಂಬಲದಿಂದಾಗಿ ಶರಣ ಚಳವಳಿಯಲ್ಲಿ ಅಲ್ಲಿಯವರೆಗೂ ಮೂಕರಾಗಿದ್ದವರಿಗೆ ಮಾತನಾಡುವ ಅವಕಾಶ ಒದಗಿಬಂತು. ಕೆಳವರ್ಗದ ವಚನಕಾರರು ಮೊದಲಬಾರಿಗೆ ನಿರ್ಭಿಡೆಯಿಂದ ಬಾಯಿ ಬಿಟ್ಟರು. ಇಂಥವರೆಲ್ಲ ತಮ್ಮ ವಚನಗಳ ಮೂಲಕ ಆತ್ಮವಿಮರ್ಶೆಯನ್ನು, ಸಮಾಜವಿಮರ್ಶೆಯನ್ನು ಮಾಡಿಕೊಂಡದ್ದಲ್ಲದೆ ಸಮಾಜೋಧಾರ್ಮಿಕ ಆಂದೋಲನವಾಗಿ ಪರಿವರ್ತಿತವಾದ ಈ ಚಳವಳಿಯಲ್ಲಿ ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ, ಮಾದಾರ ಧೂಳಯ್ಯ ಮೊದಲಾದ ದಲಿತ ವರ್ಗದ ಅನುಭಾವಿಗಳು ಮುಂಚೂಣಿಯಲ್ಲಿ ನಿಂತದ್ದು ಚಾರಿತ್ರಿಕ ದಾಖಲೆ. ಚಳವಳಿಯ ಭಾಗವಾಗಿ ನಿರ್ಮಾಣಗೊಂಡ ವಚನಗಳಲ್ಲಿ ಇವರೆಲ್ಲ ತಮ್ಮ ಅನುಭವಗಳಿಗೆ ರೂಪ ನೀಡಿದರು. ಇವರಲ್ಲಿ ದಲಿತ ಮಹಿಳೆಯರ ಪಾತ್ರವನ್ನೂ ನಾವು ಮರೆಯುವಂತಿಲ್ಲ.

20ನೆಯ ಶತಮಾನದಲ್ಲಿ ಜರುಗಿದ ಕೆಲವು ಸುಧಾರಣೆಗಳು, ಸಮಕಾಲೀನ ಶಿಕ್ಷಣ, ಶ್ರಮಜೀವಿಗಳ ಪರವಾದ ಚಿಂತನೆಗಳು ಇವೆಲ್ಲದರಿಂದಾಗಿ ದಲಿತರಲ್ಲಿ ಅರಿವಿನ ವಾತಾವರಣ ಮೂಡತೊಡಗಿತು. ಕಳೆದ ಶತಮಾನದ 60ರ ದಶಕದಲ್ಲಿ ಮಹಾರಾಷ್ಟ್ರದಲ್ಲಿ ಜನಪ್ರಿಯತೆ ಗಳಿಸಿದ ದಲಿತಸಾಹಿತ್ಯ ಚಳವಳಿ ಕನ್ನಡ ನಾಡಿನ ದಲಿತರ ಮೇಲೆ ಯಥೇಚ್ಛವಾಗಿ ಬೀರಿತು. ಅಂಬೇಡ್ಕರ್ ದಲಿತರಿಗೆ ನಾಯಕರಾದುದರಿಂದಲೂ ಈ ಪ್ರಭಾವ ಅನಿವಾರ್ಯವಾಯಿತು. ಈ ನಡುವೆ ದಯಾ ಪವಾರ್, ನಾಮದೇವ ಡಸಾಳ, ಲತೀಫಾ, ಕೇಶವಮೇಶ್ರಾಮ್, ವಾಮನ ನಿಂಬಾಳ್ಕರ್, ಅರುಣ್ ಕಾಂಬ್ಳೆ, ಬಾಬುರಾವ್ ಬಾಗುಲ್ ಮೊದಲಾದವರ ಸಾಹಿತ್ಯಪ್ರಭಾವ ಮತ್ತು ಪ್ರೇರಣೆ ಕನ್ನಡ ದಲಿತ ಲೇಖಕರ ಮೇಲೆ ಆಗಿರುವುದನ್ನು ಗಮನಿಸಬಹುದು. ಕರ್ನಾಟಕದ ಜನಪರ ಚಳವಳಿಗಳಿಗೆ ಇದರಿಂದ ಸಾಕಷ್ಟು ಲಾಭವಾಯಿತು. ಜೊತೆಗೆ ಹಿಂದಿಯಲ್ಲಿ ಮಾರ್ಕ್ಸ್‌ವಾದಿಗಳ ಪ್ರಭಾವದಿಂದ ಕಾಣಿಸಿಕೊಂಡ ಜನವಾದಿ ಸಾಹಿತ್ಯ, ಕೇರಳದ ಮಾರ್ಕ್ಸ್‌ವಾದಿ ಲೇಖಕರ ಸಾಹಿತ್ಯ, ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಭಾವ ಬೀರುತ್ತಿರುವ ಕಪ್ಪುಸಾಹಿತ್ಯ, ಗೆರಿಲ್ಲಾ ಸಾಹಿತ್ಯ ಮುಂತಾದುವೆಲ್ಲ ದಲಿತಸಾಹಿತ್ಯದ ಮೇಲೆ ಪ್ರಭಾವ ಬೀರಿವೆ.

ಕನ್ನಡದ ದಲಿತ ಬರೆಹಗಾರರಿಗೆ ಮುಖ್ಯವಾಗಿ ಪ್ರೇರಣೆ ದೊರೆತದ್ದು, ಮಹಾರಾಷ್ಟ್ರದ ದಲಿತ ಪ್ಯಾಂಥರ್ ಚಳವಳಿಯಿಂದ. ಪ್ಯಾಂಥರ್ ಚಳವಳಿ ಹಿಂದು ಧರ್ಮದ ಅನಿಷ್ಟಗಳಾದ ಚಾತುರ್ವರ್ಣ್ಯ, ಜಾತೀಯತೆ, ಅಸ್ಪೃಶ್ಯತೆ, ದೇವರ ಪರಿಕಲ್ಪನೆ, ಡಂಭಾಚಾರ, ಧರ್ಮದ ದುರ್ಬಲಕೆ, ದೌರ್ಜನ್ಯ, ವಂಚನೆ ಮೊದಲಾದವುಗಳ ವಿರುದ್ಧ ಪ್ರತಿಭಟಿಸಿ ನಡೆಸಿದ ಚಳವಳಿಯಾಗಿದೆ. ದಲಿತ ಪ್ಯಾಂಥರ್ಸ್‌ನವರು ದಲಿತರ ಭವಿಷ್ಯ ದಲಿತರ ಕೈಯಲ್ಲಿಯೇ ಇದೆ ಎಂದದ್ದಲ್ಲದೆ ದಲಿತರ ಮೇಲೆ ಮೇಲ್ಜಾತಿಯವರು ಕಟ್ಟಿದ ಭೋಗಜೀವನವನ್ನು ಖಂಡಿಸಿದರು. ಕಪ್ಪು ಸಾಹಿತ್ಯದ ಪ್ರತಿಭಟನೆಯಂತೂ ಭಾರತದ ಬೇರೆಬೇರೆ ಭಾಷೆಗಳಲ್ಲಿ ಜರುಗತೊಡಗಿತ್ತು. ಇವೆಲ್ಲದರ ಪ್ರಭಾವ ಕನ್ನಡ ದಲಿತ ಸಾಹಿತ್ಯದ ಮೇಲೂ ಉಂಟಾಗತೊಡಗಿತು.

ಈ ಸಂದರ್ಭದಲ್ಲಿ ಸಾಹಿತ್ಯಕ ಪ್ರೇರಣೆಗಳ ಜೊತೆಗೆ ಸಾಹಿತ್ಯೇತರ ಪ್ರೇರಣೆಗಳೂ ಕೆಲಸ ಮಾಡಿದವು. ಮುಖ್ಯವಾಗಿ ಎಡಪಂಥೀಯ ಸಿದ್ಧಾಂತಗಳೆಲ್ಲವೂ ದಲಿತ ಸಾಹಿತ್ಯದ ಮೇಲೆ ಪ್ರಭಾವ ಬೀರಿದವು. ಇದರ ಮೂಲಕವಾಗಿಯೂ ಈ ಪಂಥದ ಲೇಖಕರ ಸೃಜನಶೀಲ ಚಟುವಟಿಕೆಗಳಿಗೆ ಬೆಂಬಲ ಒದಗಿತು. ಮೀಸಲಾತಿಯಿಂದ ದಲಿತರಲ್ಲಾದ ಸುಧಾರಣೆಗಳು, ಮತಾಂತರದ ಪ್ರಸಂಗಗಳು, ವ್ಯಾಪಕವಾಗಿ ಜರುಗುತ್ತಿರುವ ಉಪಸಂಸ್ಕೃತಿಗಳ ಅಧ್ಯಯನ - ಈ ಎಲ್ಲ ನೆಲೆಗಳಿಂದಾಗಿ ದಲಿತರಲ್ಲಿ ಜಾಗೃತಿ ಮೂಡಿ, ಇವರಲ್ಲಿ ಪಟ್ಟ ಪಾಡುಗಳನ್ನು ಸಾಹಿತ್ಯವಾಗಿಸುವ ದಿಸೆಯಲ್ಲಿ ದಲಿತ ಲೇಖಕರು ಕಾರ್ಯೋನ್ಮುಖರಾದರು. ಅಖಂಡ ದುಃಖ ದುಮ್ಮಾನಗಳೇ ದಲಿತ ಸಾಹಿತ್ಯದ ಮೂಲ ಸ್ಫೋಟವಾಯಿತು. ಭೂ ಆಕ್ರಮಣ ಹೋರಾಟಗಳು, ವೆಂಕಟಸ್ವಾಮಿ ಆಯೋಗದ ವರದಿ, ಗಾಂಧಿ ಚಲನ ಚಿತ್ರದ ಬಹಿಷ್ಕಾರ, ಖೋಟಾ ಜಾತಿ ಪತ್ರಗಳ ಹಂಚಿಕೆ ವಿರುದ್ಧದ ಹೋರಾಟ, ಬೆತ್ತಲೆ ಸೇವೆ, ದೇವದಾಸಿ ಪದ್ಧತಿ ವಿರುದ್ಧದ ಹೋರಾಟ, ಬೆಲ್ಚಿ, ಕುದುರೆ ಮೋತಿ ಪ್ರಕರಣ, ಕಂಬಾಲಪಲ್ಲಿ ಪ್ರಕರಣ, ಬೆಂಡಿಗೇರಿ ಪ್ರಕರಣ, ಚುನಾವಣಾ ಬಹಿಷ್ಕಾರ ಮುಂತಾದ ಘಟನೆಗಳು ದಲಿತ ಚಳವಳಿ ಹೆಚ್ಚು ಚಾಲನೆಗೊಳ್ಳಲು ಕಾರಣವಾದವಲ್ಲದೆ ದಲಿತ ಸಾಹಿತ್ಯ ರಚನೆಯ ಸಂದರ್ಭದಲ್ಲೂ ಪರಿಣಾಮಕಾರಿಯಾಗಿ ಕೆಲಸ ಮಾಡಿದುವು.

ದಲಿತ ಸಾಹಿತ್ಯದ ಆರಂಭದ ಬೆಳವಣಿಗೆಯಲ್ಲಿ ಸಿಟ್ಟು, ಅಬ್ಬರ, ಆಕ್ರೋಶಗಳು ಪ್ರಧಾನವಾಗಿ ಕಂಡುಬಂದರೂ ಆಗಿನ ಸಂದರ್ಭಕ್ಕೆ ಅದು ಅನಿವಾರ್ಯವಾಗಿತ್ತು. ಆಳವಾದ ನೋವನ್ನು ಅಭಿವ್ಯಕ್ತಿಸಲು ಕಂಡುಕೊಂಡ ಮಾರ್ಗವಾಗಿತ್ತು. 20ನೆಯ ಶತಮಾನದ 70ರ ದಶಕದಲ್ಲಿ ಇಂತಹ ಬರೆವಣಿಗೆ ದಲಿತ ಸಾಹಿತ್ಯದ ಲಕ್ಷಣವಾಗಿಯೇ ಗೋಚರವಾಯಿತು. ಜೋರಾಗಿ ಹಾಡಿಕೊಂಡಾಗ ಮಾತ್ರ ಕವಿಯ ಭಾವನೆಗಳು ಮನ ದಟ್ಟಾಗುತ್ತವೆಂಬ ಆಶಯವನ್ನು ವ್ಯಕ್ತಪಡಿಸುವ ಮೂಲಕ ಗೇಯತೆಯ ಗುಣಗಳನ್ನು ಒಳಗೊಂಡ ದಲಿತಕಾವ್ಯ ರಚನೆಯಾಯಿತು. ಈ ಗುಣಗಳು ಕನ್ನಡ ಸಾಹಿತ್ಯಕ್ಕೆ ಹೊಸ ಸೇರ್ಪಡೆಗಳೆನಿಸಿದವು. ಇದರಿಂದಾಗಿಯೂ ಕನ್ನಡ ಕಾವ್ಯಕ್ಕೆ ದಲಿತಕಾವ್ಯ ಒಂದು ಶಕ್ತಿಯನ್ನು ನೀಡಿತು. ಹೊಲೆಮಾದಿಗರ ಹಾಡು ಕವನಸಂಕಲನವನ್ನು ಕೊಡುವುದರ ಮೂಲಕ ಕನ್ನಡ ಕಾವ್ಯಕ್ಕೆ ಚುರುಕು ಮುಟ್ಟಿಸಿದ ಸಿದ್ಧಲಿಂಗಯ್ಯ ಅವರು ನೊಂದವರನ್ನು ಕಾವ್ಯದ ವಸ್ತುವಾಗಿಸುವ ಜನಪರ ಆಶಯದಿಂದ ಜನಪರ ಛಂದಸ್ಸಿನಲ್ಲಿ ಕಾವ್ಯ ಕಟ್ಟಿದ್ದು ಗಮನಾರ್ಹ. ಇವರ ಕಪ್ಪು ನಾಡಿನ ಹಾಡು ಕಲಾತ್ಮಕತೆಯ ಜೊತೆಗೆ ಪ್ರಯೋಗಶೀಲತೆಯನ್ನು ಎತ್ತಿ ಹಿಡಿಯುವ ಕವನಸಂಕಲನ. ಅನಂತರ ಬಂದ ಸಾವಿರಾರು ನದಿಗಳು ಸಂಕಲನದಲ್ಲಿ ವೈಯಕ್ತಿಕ ಕೋಪಕ್ಕಿಂತ ಸಾರ್ವತ್ರಿಕ ಸ್ವರೂಪದ ಕೋಪವೇ ಗಾಢವಾಯಿತು.

ವಿ.ಮುನಿವೆಂಕಟಪ್ಪ, ಮ.ನ.ಜವರಯ್ಯ, ಮುಳ್ಳೂರು ನಾಗರಾಜ, ಸತ್ಯಾನಂದ ಪಾತ್ರೋಟ, ಅರವಿಂದ ಮಾಲಗತ್ತಿ, ಎಲ್.ಹನುಮಂತಯ್ಯ, ಚೆನ್ನಣ್ಣ ವಾಲೀಕಾರ, ಕೆ.ಬಿ.ಸಿದ್ದಯ್ಯ, ಜಂಬಣ್ಣ ಅಮರಚಿಂತ, ಬರಗೂರು ರಾಮಚಂದ್ರಪ್ಪ, ಅನಸೂಯ ಕಾಂಬಳೆ, ಸುಕನ್ಯಾ ಮಾರುತಿ, ಗಂಗಾರಾಂ ಚಂಡಾಳ, ಕೆ.ರಾಮಯ್ಯ ಮೊದಲಾದ ಕವಿಗಳು ಶೋಷಿತರ ಸ್ಥಿತಿಯ ಸೂಕ್ಷ್ಮಗಳ ಶೋಧನೆಗೆ ತೊಡಗುವುದರ ಮೂಲಕ ಮಹತ್ವದ ಕಾವ್ಯಸೃಷ್ಟಿಗೆ ಕಾರಣರಾದರು. ಅರವಿಂದ ಮಾಲಗತ್ತಿಯವರ 'ಕಪ್ಪುಕಾವ್ಯ', 'ಮೂಕನಿಗೆ ಬಾಯಿ ಬಂದಾಗ', 'ನಾದನಿನಾದ' ಸಂಕಲನಗಳಲ್ಲಿ ಮಾನವನ ಕ್ಷುದ್ರತೆಗಳು ಕಾವ್ಯರೂಪದಲ್ಲಿ ದಾಖಲಾಗುತ್ತಾ ಹೋಗಿವೆ. ಜಮೀನ್ದಾರಿ ಪದ್ಧತಿ, ಅದರಿಂದಾದ ಆರ್ಥಿಕ ಅನ್ಯಾಯ, ಅದರ ವಿರುದ್ಧ ಬಂಡೆದ್ದ ವಿವರಗಳು ಇವೂ ದಲಿತಕಾವ್ಯರಚನೆಯಲ್ಲಿ ಮುಖ್ಯವಾದವು. ಸಿಟ್ಟು, ಆಕ್ರೋಶಗಳ ನಡುವೆಯೂ ಪ್ರೇಮ, ಅನುರಾಗ, ಪ್ರಣಯ ಇತ್ಯಾದಿ ಶೃಂಗಾರ ಭಾವಗಳೂ ಕಾವ್ಯಾಭಿವ್ಯಕ್ತಿಯಲ್ಲಿ ಕಾಣಿಸಿಕೊಂಡವು.

ದಲಿತಕವಿಗಳು ಸಾಮಾನ್ಯವಾಗಿ ಸ್ಥಳೀಯ ಸಮಸ್ಯೆಗಳಿಗೆ ತಮ್ಮ ಕಾವ್ಯಗಳಲ್ಲಿ ಪ್ರಾತಿನಿಧ್ಯ ನೀಡುತ್ತಲೇ ಬಂದಿದ್ದಾರೆ. ದಲಿತರ ಮೇಲೆ ನಡೆದ ಹಲ್ಲೆಗಳು, ಕ್ರೌರ್ಯಗಳು ಇವು ದಲಿತಕವಿಗಳಲ್ಲಿ ಹಾಡಾಗಿ ಪರಿಣಮಿಸಿವೆ. ಆದರೆ ಮರಾಠಿ ದಲಿತಕವಿಗಳಲ್ಲಿ ಇಂಥ ಪ್ರಸಂಗಗಳು ಹಾಡುಗಳಾಗದೆ ಕೇವಲ ಕಾವ್ಯವಾಗಿವೆ. ನೋವು, ಅವಮಾನ ಎರಡೂ ಭಾಷೆಯಲ್ಲಿ ಸ್ಥಾಯಿಯಾಗಿದೆ ನಿಜ. ಶ್ರೀಮಂತರನ್ನು, ಬಡ್ಡಿ ಸಾಲ ವಸೂಲಿಗಾರರನ್ನು ಕಾವ್ಯದಲ್ಲಿ ತರಾಟೆಗೆ ತೆಗೆದುಕೊಳ್ಳಲಾಗಿದೆ. ಆದರೂ ಕರ್ನಾಟಕೇತರ ರಾಜ್ಯಗಳ ಎಷ್ಟೋ ದಲಿತರ ನೋವಿನ ಘಟನೆಗಳು, ಸಮಸ್ಯೆಗಳು ಕನ್ನಡ ದಲಿತ ಕಾವ್ಯವನ್ನು ಪ್ರವೇಶಿಸಿಯೇ ಇಲ್ಲವೆಂಬುದು ಆಶ್ಚರ್ಯದ ಸಂಗತಿ.

ಕನ್ನಡ ಸಾಹಿತ್ಯದಲ್ಲಿ ಕಥಾವಾಹಿನಿಗೆ ಸಿಕ್ಕ ಪ್ರಾಶಸ್ತ್ಯ ಅನನ್ಯವಾದುದು. ನವೋದಯದಿಂದ ದಲಿತ ಬಂಡಾಯದವರೆಗೆ ಆಯಾ ಪಂಥಗಳ ಆಶಯಗಳಿಗೆ ತಕ್ಕಂತೆಯೇ ಕಥಾಸಾಹಿತ್ಯ ಸೃಷ್ಟಿಯಾಗುತ್ತ ಬಂತು. ಕಾವ್ಯದ ಅನಂತರದ ಸ್ಥಾನ ಕಥೆಗಳಿಗೇ ಸಲ್ಲುತ್ತದೆ. ಮಾಸ್ತಿ, ಕುವೆಂಪು, ಆನಂದ, ಬಸವರಾಜ ಕಟ್ಟೀಮನಿ, ನಿರಂಜನ, ಅನುಪಮಾ ನಿರಂಜನ, ತೇಜಸ್ವಿ, ಅನಂತಮೂರ್ತಿ, ಲಂಕೇಶ್ ಮುಂತಾದವರೆಲ್ಲ ವಿಶಿಷ್ಟ ಸಂವೇದನಾಶೀಲ ಕಥೆಗಳನ್ನು ನೀಡಿದವರು. ದಲಿತ ಚಳವಳಿಯ ಪ್ರಭಾವದಿಂದಾಗಿ ಬಂದ ಕಥೆಗಳು ಸಹ ಕನ್ನಡ ಕಥಾಸಾಹಿತ್ಯದಲ್ಲಿ ಹೊಸ ಅಲೆಗೆ ಹೆಸರಾದವು. ಹಸಿವು, ದುಃಖ; ದುಮ್ಮಾನ, ಶೋಷಣೆ, ಹತಾಶೆ, ಕ್ರೌರ್ಯ, ದೌರ್ಜನ್ಯ, ಅಮಾಯಕತೆಗಳು ಕಥೆಯ ವಸ್ತುಗಳಾದವು. ಇಂಥ ಘಟನೆ, ಪ್ರಸಂಗಗಳನ್ನು ಸೆರೆಹಿಡಿದು ಕಲಾತ್ಮಕವಾಗಿ ಅಭಿವ್ಯಕ್ತಿ ನೀಡಿದ ಕಥೆಗಾರರು ಹಲವರಿದ್ದಾರೆ. ಅವರ ಕಥಾ ಸಂಕಲನಗಳೂ ಕನ್ನಡ ಕಥಾ ಸಾಹಿತ್ಯ ಲೋಕದಲ್ಲಿ ವಿಶಿಷ್ಟ ಮನ್ನಣೆಗೆ ಪಾತ್ರವಾದವು. ದಲಿತ ಸಾಹಿತ್ಯದ ಶಕ್ತಿಯುತ ಭಾಗವಾಗಿ ಈ ಸಣ್ಣಕಥೆಗಳು ಕಾಣಿಸಿಕೊಂಡಿವೆ. ದೇವನೂರು ಮಹಾದೇವ ಅವರ ದ್ಯಾವನೂರು, ಚೆನ್ನಣ್ಣ ವಾಲೀಕಾರರ ಕಪ್ಪುಕಲೆಗಳು, ಕುತ್ತದಲ್ಲಿ ಕುದ್ದವರ ಕತೆಗಳು, ಬರಗೂರು ರಾಮಚಂದ್ರಪ್ಪ ಅವರ ಸುಂಟರಗಾಳಿ, ಕಪ್ಪುನೆಲದ ಕೆಂಪುಕಾಲು, ಬಯಲಾಟದ ಭೀಮಣ್ಣ, ಅರವಿಂದ ಮಾಲಗತ್ತಿ ಅವರ ಮುಗಿಯದ ಕತೆಗಳು, ಮ.ನ.ಜವರಯ್ಯ ಅವರ ಬುರುಡೆಗೆ ಸ್ವರ್ಗ, ಮೊಗಳ್ಳಿ ಗಣೇಶರ ಬುಗುರಿ, ಭೂಮಿ, ಜನಾರ್ದನ ಎರ್ಪಕಟ್ಟೆ ಅವರ ಪ್ರಕ್ರಿಯೆ, ತಿರಸ್ಕೃತರು, ಭದ್ರಯ್ಯ ತಿಮ್ಮಸಂದ್ರ ಅವರ ಬಾಗಿಲ ಬೀಗ ಮತ್ತು ರೇಣು, ಎಚ್ ಬಾಲರಾಜು ಅವರ ಸೂರ್ಯ, ಕತ್ತಲು, ಬೆಳಕು, ಹೊಂಗಳ್ಳಿ ಸೋಮಣ್ಣ ಅವರ ತಮ್ಮಟೆ, ನಟರಾಜ್ ಹುಳಿಯಾರ್ ಅವರ ಮತ್ತೊಬ್ಬ ಸರ್ವಾಧಿಕಾರಿ ಇವೆಲ್ಲ ದಲಿತ ಪ್ರಜ್ಞೆಯನ್ನು ಉಳಿಸಿಕೊಂಡು ಕಲಾತ್ಮಕತೆಗೆ ಹೆಸರಾದಂಥವು. ಹಾಗೆಯೇ ಈರಣ್ಣ ಕೋಸಗಿ, ಬಿ.ಚಿನ್ನಸ್ವಾಮಿ, ಬಿ.ಟಿ.ಜಾಹ್ನವಿ, ಬಸವಲಿಂಗಯ್ಯ, ಬಾನಂದೂರು ಕೆಂಪಯ್ಯ, ಮೋಹನ ನಾಗಮ್ಮನವರ, ಎಸ್.ಆರ್. ಗುರುನಾಥ, ರಾಮಕೃಷ್ಣ ಗುಂಡಿ, ಲಕ್ಷ್ಮಣ್, ಸುಬ್ಬು ಹೊಲೆಯಾರ್, ವೀರಯ್ಯ ಕಾಡುಕೊತ್ತನಹಳ್ಳಿ, ಬಸವರಾಜ ಕುಕ್ಕರಹಳ್ಳಿ, ಚಂದ್ರಕಾಂತವಡ್ಡು, ಕುಂ.ವೀರಭದ್ರಪ್ಪ, ಬಿ.ಟಿ.ಲಲಿತಾನಾಯಕ್ ಮೊದಲಾದವರು ತಮ್ಮ ವಲಯದ ಜೀವನಾನುಭವಗಳನ್ನು ಕಥೆಯಾಗಿಸುವಲ್ಲಿ ಯಶಸ್ಸನ್ನು ಹೊಂದಿದವರಾಗಿದ್ದಾರೆ. ಅನೇಕರು ದಲಿತ ಬದುಕಿನ ಸಾಂಸ್ಕೃತಿಕ ವಿವರಗಳನ್ನು ಕಥಾಹಂದರದಲ್ಲಿ ನೀಡುವಲ್ಲಿ ಸಫಲರಾಗಿದ್ದಾರೆ.

ಕಾದಂಬರಿಯ ಪ್ರಕಾರದ ಮೂಲಕವೂ ದಲಿತ ಲೇಖಕರು ತಮ್ಮ ಭಾವನೆಗಳನ್ನು, ಸಿದ್ಧಾಂತಗಳನ್ನು, ತಾವು ತಲುಪಬೇಕಾದ ಗುರಿಯ ಬಗೆಗಿನ ಚಿಂತನೆಗಳನ್ನು ಹಂಚಿಕೊಂಡಿದ್ದಾರೆ. ಒಂದೊಂದು ಚಳವಳಿಯ ಸಂದರ್ಭದಲ್ಲೂ ಕಾದಂಬರಿಗಳು ಬಿಟ್ಟುಕೊಟ್ಟ ಧೋರಣೆಗಳು ವಿಶಿಷ್ಟ ವಾದವು. ದಲಿತ ಚಳವಳಿಯ ಕಾಲದಲ್ಲಿ ಕಾದಂಬರಿಗಳು ಗ್ರಾಮಾಂತರ ನೆಲೆಗಳ ದಲಿತ ಕುಟುಂಬಗಳ ಸಮಸ್ಯೆಗಳು ಅವರ ಸಾಂಸ್ಕೃತಿಕ ಸಂಪನ್ನತೆಯನ್ನು, ಸ್ಥಿತ್ಯಂತರಗೊಳ್ಳುತ್ತಿರುವ ಮೌಲ್ಯಗಳೊಂದಿಗಿನ ಹೋರಾಟವನ್ನು, ತಮ್ಮ ಸಮಸ್ಯೆಗಳ ಬಗೆಗಿನ ತಿಳುವಳಿಕೆಗಳನ್ನು ನಿರೂಪಿಸುವಲ್ಲಿ ಯಶಸ್ಸನ್ನು ಹೊಂದಿವೆ. ಜಿ.ವೆಂಕಟಯ್ಯ ಅವರ ನೊಂದಜೀವ, ದೇವನೂರರ ಒಡಲಾಳ, ಕುಸುಮಬಾಲೆ, ಮ.ನ.ಜವರಯ್ಯ ಅವರ ಮಾಗಿ, ಅರವಿಂದ ಮಾಲಗತ್ತಿ ಅವರ ಕಾರ್ಯ, ಮುಳ್ಳೂರು ನಾಗರಾಜರ ಮರಣ ಮಂಡಲ ಮಧ್ಯದೊಳಗೆ, ದಂಡಕಾರಣ್ಯ, ಶಿವರುದ್ರ ಕಲ್ಲೋಳಿಕರ್ ಅವರ ಹೊಲಗೇರಿಯ ರಾಜಕುಮಾರ, ಚೆನ್ನಣ್ಣ ವಾಲೀಕಾರರ ಬೆಳ್ಯ, ಹುಲಿಗೆಮ್ಮ, ಕೋಟೆಬಾಗಿಲು, ಒಂದು ಹೆಣ್ಣಿನ ಒಳಜಗತ್ತು, ಬಿ.ಟಿ.ಲಲಿತಾನಾಯಕರ ಗತಿ, ಗೀತಾ ನಾಗಭೂಷಣರ ಮಾಪುರ ತಾಯಿಯ ಮಕ್ಕಳು, ನೋವು ಮುಂತಾದ ಕಾದಂಬರಿಗಳು ದಲಿತ ಸಮುದಾಯದ ವಿವಿಧ ಆಯಾಮಗಳನ್ನು ಗ್ರಹಿಸಿದ್ದಲ್ಲದೆ ಪ್ರಾದೇಶಿಕ ಭಾಷೆಯಲ್ಲಿ ಅವನ್ನು ಅಭಿವ್ಯಕ್ತಿಸಲು ಪ್ರಯತ್ನಿಸಿದ್ದು ಉಪಸಂಸ್ಕೃತಿಗಳ ಅಧ್ಯಯನದ ದೃಷ್ಟಿಯಿಂದ ಪ್ರಮುಖವೆನಿಸಿತು. ಸಾಂಸ್ಕೃತಿಕ ಸಂಘರ್ಷದ ವಿಶ್ಲೇಷಣೆಯಲ್ಲಿಯೂ ಅವು ತೊಡಗಿದವು. ದಲಿತರ ಜಾಗೃತಿಯೂ ಸ್ಥಿತ್ಯಂತರಗೊಳ್ಳುತ್ತಿರುವ ಸಂದರ್ಭದಲ್ಲಿ ಸಮಾಜದ ಸಮಸ್ಯಾತ್ಮಕ ನೆಲೆಗಳು ಅತ್ಯಂತ ಪರಿಣಾಮಕಾರಿಯಾಗಿಯೇ ಚಿತ್ರಿಸಲ್ಪಟ್ಟವು. ಕಥೆ ಮತ್ತು ಕಾದಂಬರಿ ಕ್ಷೇತ್ರದಲ್ಲಿ ನಿರೀಕ್ಷೆಗೂ ಮೀರಿದ ಸಾಹಿತ್ಯಾಭಿವ್ಯಕ್ತಿಯನ್ನು ಗುರುತಿಸಬಹುದು.

ಇನ್ನು ದಲಿತ ವಸ್ತುವನ್ನಾಧರಿಸಿದ ಶೂದ್ರ ತಪಸ್ವಿ, ಜಲಗಾರ, ಬೆರಳ್ಗೆ ಕೊರಳ್ (ಕುವೆಂಪು), ಏಕಲವ್ಯ (ಕೈಲಾಸಂ) ಮತ್ತು 12ನೆಯ ಶತಮಾನದ ಅಂತರ್ಜಾತೀಯ ವಿವಾಹವನ್ನು ಕುರಿತ ನಾಟಕಗಳು ಬೆಳಕುಕಂಡಿವೆ. ಇಂಥ ನಾಟಕಗಳನ್ನು ಬಿಟ್ಟರೆ ದಲಿತ ಪ್ರಜ್ಞೆಯ ನಾಟಕಗಳು ಹೊರಬಂದಿರುವುದು ತೀರಾ ವಿರಳ. 70ರ ದಶಕದಲ್ಲಿ ದಲಿತ ಪ್ರಜ್ಞೆಯ ನಾಟಕಗಳು ರಂಗಭೂಮಿಯನ್ನು ಪ್ರವೇಶಿಸಿರುವುದಂತೂ ನಿಜ. ಬೆಲ್ಚಿ, ಕುದುರೆ ಮೋತಿ ಪ್ರಸಂಗ, ಬೆಳ್ಳಿಗೇರಿ ಪ್ರಕರಣ, ಪತ್ರೆ ಸಂಗಪ್ಪನ ಕೊಲೆ, ಶೇಷಗಿರಿಯಪ್ಪನ ಕೊಲೆ - ಈ ಘಟನೆಗಳನ್ನು ಆಧರಿಸಿದ ಬೀದಿ ನಾಟಕಗಳು ಹುಟ್ಟಿಕೊಂಡವು. ಆ ಸಂದರ್ಭದಲ್ಲಿ ಇವು ದಲಿತ ಲೋಕದ ಪ್ರಮುಖ ನಾಟಕಗಳಾಗಿದ್ದವು. ದಲಿತ ಜನಾಂಗವನ್ನು ಜಾಗೃತಗೊಳಿಸಲು ಅವರ ಭಾಷೆ, ಸಮಸ್ಯೆಯಲ್ಲಿ ಮೂಡಿದಕಾರ್ಯ ಇದಾಗಿತ್ತು. ಸಿದ್ದಲಿಂಗಯ್ಯ ಅವರ ಪಂಚಮ ನೆಲಸಮ, ಏಕಲವ್ಯ ನಾಟಕಗಳು ದಲಿತರ ಬಾಳಿನ ಆಧುನಿಕ ಸಮಸ್ಯೆಗಳನ್ನು ಸಮರ್ಥವಾಗಿ ನಿರೂಪಿಸಿದವು. ಅಲ್ಲದೆ ಇವರ ಪ್ರಸಿದ್ಧ ಕವಿತೆಗಳಾದ ಕತ್ತೆ ಮತ್ತು ಧರ್ಮ, ಅಲ್ಲೆ ಕುಂತವರೆ, ಕೊಲೆಯ ಹಿಂದಿನ ರಾತ್ರಿಗಳು ಬೀದಿ ನಾಟಕಗಳಾಗಿ ರೂಪಿತಗೊಂಡು ಪ್ರಯೋಗವಾಗಿ ಜನಪ್ರಿಯತೆ ಗಳಿಸಿದವು. ವರ್ಣ ಹೋರಾಟದಿಂದ ಆರಂಭವಾಗುವ ದಲಿತ ಸಾಹಿತ್ಯ ವರ್ಗ ಹೋರಾಟಕ್ಕೆ ಬಂದು ನಿಲ್ಲಬೇಕೆಂಬುದನ್ನು ತಿಳಿಸುವ ಸಿದ್ದಲಿಂಗಯ್ಯ ಅವರ ಕೃತಿಗಳು ದಲಿತ ರಂಗಭೂಮಿಯ ಮಹತ್ವದ ಕೊಡುಗೆಗಳಾಗಿವೆ. ದೇವನೂರರ ಒಡಲಾಳ, ಕುಸುಮಬಾಲೆ, ಒಂದು ದಹನದ ಕತೆ ಇತ್ಯಾದಿಗಳು ರಂಗರೂಪಕಗಳಾಗಿ ಪ್ರದರ್ಶನಗೊಂಡಿವೆ. ಸತ್ಯಾನಂದ ಪಾತ್ರೋಟರ ಮತ್ತೊಬ್ಬ ಏಕಲವ್ಯ ಮತ್ತು ಯಾರೂ ಇಲ್ಲೋ ಯಪ್ಪಾ, ನಮಗೆ ಸಾಕ್ಷಿ – ಇವು ಸಹ ಗಮನಿಸಬೇಕಾದ ನಾಟಕಗಳು. ಸಮಾಜದ ಏರುಪೇರುಗಳನ್ನು ದಲಿತ ಲೋಕದ ಸಮಸ್ಯೆಗಳನ್ನು ತೆಗೆದುಕೊಂಡು ಜಾನಪದೀಯ ಲೇಪದಿಂದ ನಾಟಕ ರಚಿಸಿದವರಲ್ಲಿ ಚೆನ್ನಣ್ಣ ವಾಲೀಕಾರ ಪ್ರಮುಖರು. ವೇಶ್ಯಾ ಸಮಸ್ಯೆಯ ಟೊಂಕದ ಕೆಳಗಿನ ಜನ, ದೇವದಾಸಿ ಪದ್ಧತಿಯ ಜೋಗತಿ, ಭೂಮಿ ವಿವಾದದ ಜನವೆಂಬ ಆಸ್ತಿ ಮೊದಲಾದುವು ಗಮನಾರ್ಹ. ಜಾತಿಯ ಕ್ರೂರ ಸಂಕೋಲೆಗಳಿಂದಾಗುವ ಪರಿಣಾಮಗಳನ್ನು ಬಿ.ಚಿನ್ನಸ್ವಾಮಿ ಅವರು ಕೆಂಡಮಂಡಲದಲ್ಲಿ ಅಭಿವ್ಯಕ್ತಿಸಿದ್ದಾರೆ. ಜಮೀನ್ದಾರಿ ಪದ್ಧತಿ ಹಾಗೂ ಜಾತಿ ವ್ಯವಸ್ಥೆಯ ವಿರುದ್ಧ ಬಂಡೇಳುವ ಜಾಜ ಎಂಬ ನಾಟಕವನ್ನು ಮಲ್ಲಿಕಾ ಘಂಟಿ ರಚಿಸಿದ್ದಾರೆ. ಅರವಿಂದ ಮಾಲಗತ್ತಿ ಅವರ ಸಮುದ್ರದೊಳಗಣಉಪ್ಪು

ಮೀಸಲಾತಿಯನ್ನು ಕುರಿತ ವೈಚಾರಿಕ ನಾಟಕ. ವಸ್ತುವಿನ ವಿಭಿನ್ನ ನೆಲೆಗಳನ್ನು ತೆರೆದಿಡುವ ಈ ನಾಟಕದಲ್ಲಿ ಪಾತ್ರಗಳು ಪ್ರಧಾನವಾಗಿರದೆ ವಿಚಾರವೇ ಪ್ರಧಾನವಾಗಿದೆ. ಅಸ್ಪೃಶ್ಯತೆ, ನಗರ ಮತ್ತು ಗ್ರಾಮದ ಪರಿಕಲ್ಪನೆಗಳು, ಪ್ರೀತಿ ಪ್ರೇಮಗಳ ಮಧುರ ಬಾಂಧವ್ಯಗಳನ್ನು ಒಂದೆಡೆ ತೋರಿಸಿದರೆ ಸಾಮಾಜಿಕ ವಿಘಟನೆಯನ್ನು ಮತ್ತೊಂದೆಡೆಗೆ ತೋರಿಸುತ್ತದೆ. ಇದಲ್ಲದೆ ರಾಜಕೀಯ ಕುತಂತ್ರಗಳು, ಧರ್ಮದ ಒಳ ಸಂಘರ್ಷಗಳು, ಕೌಟುಂಬಿಕ ಬಿಕ್ಕಟ್ಟುಗಳನ್ನು ಮುಖಕ್ಕೆ ರಾಚುವಂತೆ ಮುಂದಿಡುವ ಸಂಪೂರ್ಣ ಹೊಸ ಆವಿಷ್ಕಾರದ ನಾಟಕವಾಗಿದೆ. ಇದರ ಕೆಲವು ಭಾಗಗಳು ರಂಗ ಪ್ರಯೋಗಕ್ಕೆ ಒಳಗಾದಂತೆ ಇವರ ಆತ್ಮಕಥೆ, ಗೌರ್ಮೆಂಟ್ ಬ್ರಾಹ್ಮಣದ ಕೆಲವು ಭಾಗಗಳು ಪ್ರದರ್ಶನಕ್ಕೆ ಒಳಗಾಗಿವೆ. ಮ.ನ. ಜವರಯ್ಯ ಜಲ ನಾಟಕದ ಮೂಲಕ ಎರಡು ಸಾವಿರ ವರ್ಷಗಳಷ್ಟು ಹಳೆಯದಾದ ಬುದ್ಧನಿಗೆ ಸಂಬಂಧಿಸಿದ ಅಜ್ಞಾತವಾದೊಂದು ಕಥೆಯನ್ನು ಬೆಳಕಿಗೆ ತಂದಿದ್ದಾರೆ. ನೀರಿಗೆ ಸಂಬಂಧಿಸಿದ ವಿಚಾರ ಸರಣಿಯನ್ನು ಪ್ರಸ್ತುತ ನಾಟಕ ಒಳಗೊಂಡಿದೆ. ನೀರಿಗಾಗಿ ಅಂಬೇಡ್ಕರ್ ನಡೆಸಿದ ಹೋರಾಟವನ್ನು ಕುರಿತಂತೆ ಟಿ.ಎಂ.ಭಾಸ್ಕರ್ ನೀರು ಬೇಕು ನೀರು ಎಂಬ ನಾಟಕವನ್ನು ರಚಿಸಿದ್ದಾರೆ. ಭಾಷೆ ಶಿಷ್ಟವೆನಿಸಿದರೂ ಶೈಲಿ, ತಂತ್ರ, ನಿರೂಪಣೆ ಸಮರ್ಥವಾಗಿ ಮೂಡಿ ಬಂದಿದೆ. ಇದಲ್ಲದೆ ಈ ಕ್ಷೇತ್ರದಲ್ಲಿ ಚೆನ್ನಣ್ಣ ವಾಲೀಕಾರ, ಕುಂ.ವೀರಭದ್ರಪ್ಪ ಕೃಷಿ ಮಾಡಿದ್ದರೂ ನಿರೀಕ್ಷಿತ ಪ್ರಮಾಣದಲ್ಲಿ ಫಸಲು ಬಾರದೆ ಹೋಗಿದೆ.

ಇಪ್ಪನೆಯ ಶತಮಾನದ 70ರ ದಶಕದಲ್ಲಿ ಕನ್ನಡ ಸಾಹಿತ್ಯದಲ್ಲಾದ ಬದಲಾವಣೆಗಳು ಹಲವಾರು. ಭಾರೀ ಪ್ರಮಾಣದಲ್ಲಿ ಹೊಸ ವಿಚಾರಗಳ ಅಲೆಯೇ ಕಾಣಿಸಿಕೊಂಡಿತು. ಪಾಶ್ಚಿಮಾತ್ಯ ವಿಚಾರಧಾರೆಗಳಿಗಿಂತ ಸ್ವದೇಶಿ ನೆಲೆಯ ಚಿಂತನಧಾರೆಗಳೇ ಅಧಿಕೃತತೆ ಪಡೆದವು. ಇದರ ಫಲವಾಗಿ ಆರ್ಥಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯ ವಿಚಾರಕ್ರಾಂತಿಯನ್ನು ಒಳಗೊಂಡ ಚಿಂತನಶೀಲರು ಸೃಷ್ಟಿಯಾದರು. ಸಾಮಾಜಿಕ ಪ್ರಜ್ಞೆಯ ಹಿನ್ನೆಲೆಯಲ್ಲಿ ಶೋಷಣೆಯ ಸ್ವರೂಪ, ಸ್ವಭಾವ, ವ್ಯಾಪ್ತಿ ಮೊದಲಾದ ದೃಷ್ಟಿಕೋನಗಳಲ್ಲಿ ಮುಕ್ತ ಮನಸ್ಸಿನ ಚರ್ಚೆ ನಡೆಸಿದರು. ಜಾತಿ ವ್ಯತ್ಯಾಸಗಳ ನೆಲೆಯಲ್ಲಿ ಚಿಂತನಶೀಲತೆ ಒಂದೆಡೆ ಕಂಡುಬಂದರೆ, ಮಾರ್ಕ್ಸ್, ಲೋಹಿಯಾ, ಅಂಬೇಡ್ಕರ್ ವಿಚಾರಧಾರೆಯ ಸಾಹಿತ್ಯವನ್ನು ಇನ್ನೊಂದೆಡೆ ಕಾಣುತ್ತೇವೆ. ಜೊತೆಗೆ ಸೈದ್ಧಾಂತಿಕ ನೆಲೆಯೂ ಗೋಚರವಾಯಿತು. ಒಟ್ಟಾರೆ ಬಹುಮುಖೀ ನೆಲೆಯಲ್ಲಾದ ಬದಲಾವಣೆಯ ಫಲವಾಗಿ ಮೂಡಿದ ವಿಚಾರ ಕ್ರಾಂತಿಯ ಪರಿಣಾಮವಾಗಿ ಹಲವಾರು ವೈಚಾರಿಕ ಕೃತಿಗಳು ಹುಟ್ಟಿಕೊಂಡವು. ಹೊಸ ಅಲೆ (ಸಿ.ಪಿ.ಸಿದ್ಧಾಶ್ರಮ), ದಲಿತಯುಗ ಮತ್ತು ಕನ್ನಡ ಸಾಹಿತ್ಯ, ದಲಿತ ಸಾಹಿತ್ಯ ಚಳವಳಿಯ ತಾತ್ವಿಕ ಚಿಂತನ, ದಲಿತ ಪ್ರಜ್ಞೆ, ಸಾಹಿತ್ಯ ಮತ್ತು ಸಮಾಜ, ಸಾಂಸ್ಕೃತಿಕ ದಂಗೆ, ದಲಿತ ಸಾಹಿತ್ಯ ಪ್ರವೇಶಿಕೆ, (ಅರವಿಂದ ಮಾಲಗತ್ತಿ), ಕರ್ನಾಟಕ ದಲಿತ ಚಳವಳಿ ಮತ್ತು ಅಂಬೇಡ್ಕರ್ (ಚಂಡಾಳ), ದಲಿತ ಲೋಕದೊಳಗೆ (ಎಲ್.ಹನುಮಂತಯ್ಯ), ದಲಿತ ವರ್ಗದ ಶರಣರು ಮತ್ತು ಶರಣೆಯರು (ಮ.ನ.ಜವರಯ್ಯ), ದಲಿತ ಜಗತ್ತು (ಪುರುಷೋತ್ತಮ ಬಿಳಿಮಲೆ), ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು (ದೇವಯ್ಯ ಹರವೆ), ಹಕ್ಕಿನೋಟ (ಸಿದ್ಧಲಿಂಗಯ್ಯ), ಕನ್ನಡ ದಲಿತ ಸಾಹಿತ್ಯದ ನೆಲೆ (ಜಿ.ಆರ್.ತಿಪ್ಪೇಸ್ವಾಮಿ), ಮತಾಂತರ ಮತ್ತು ಇತರ ಲೇಖನಗಳು (ಮುನಿವೆಂಕಟಪ್ಪ) ಮುಂತಾದ ಕೃತಿಗಳನ್ನು ಸ್ಮರಿಸಬಹುದಾಗಿದೆ. ಪೋಲಂಕಿ ರಾಮಮೂರ್ತಿ, ರಹಮತ್ ತರೀಕೆರೆ, ಎಚ್.ಎಸ್. ರಾಘವೇಂದ್ರರಾವ್, ಕೆ.ಕೇಶವಮೂರ್ತಿ, ಆರ್ಕೆ ಮಣಿಪಾಲ ಮೊದಲಾದವರ ದಲಿತ ಸಾಹಿತ್ಯವನ್ನು ಕುರಿತ ವಿಚಾರ ವಿಮರ್ಶೆ ಚಿಂತನೆಗಳು ದಲಿತ ಚಿಂತನೆ ಹದಗೊಳ್ಳುವಲ್ಲಿ ಸಹಕರಿಸಿವೆ.

ಮರಾಠಿ ದಲಿತ ಸಾಹಿತ್ಯದಲ್ಲಿ ಬಂದಿರುವಷ್ಟು ಲೇಖಕರ ಆತ್ಮಕಥೆಗಳು ಕನ್ನಡದಲ್ಲಿ ಬಂದಿಲ್ಲ. ಅಲ್ಲಿಯ ಬರೆಹಗಳಲ್ಲಿ ದಲಿತ ಲೇಖಕರು ವೈಯುಕ್ತಿಕ ವಿಚಾರಗಳನ್ನು ಹೇಳಿಕೊಂಡಿದ್ದಾರೆ. ಮತಾಂತರ ಮತ್ತು ಇತರ ಲೇಖನಗಳು ಕೃತಿಯಲ್ಲಿ ಮುನಿವೆಂಕಟಪ್ಪ ಅಂತ್ಯಜನ ಆತ್ಮ ಕಥೆ ಎಂಬ ಶೀರ್ಷಿಕೆಯಡಿಯಲ್ಲಿ ಕೆಲವಾರು ಸಂಗತಿಗಳನ್ನು ಪ್ರಸ್ತಾಪಿಸಿದ್ದಾರೆ. ಸಿದ್ಧಲಿಂಗಯ್ಯನವರು ಅವತಾರಗಳು ಕೃತಿಯಲ್ಲಿ ತಮ್ಮ ವೈಯುಕ್ತಿಕ ವಿಚಾರಗಳನ್ನು ಹಾಸ್ಯದ ಲೇಪದೊಂದಿಗೆ ಹರಿಯಬಿಟ್ಟಿದ್ದಾರೆ. ಪೂರ್ಣಪ್ರಮಾಣದಲ್ಲಿ ಹೊರ ಬಂದಿರುವ ಆತ್ಮಚರಿತ್ರೆಗಳೆಂದು ಕರೆಸಿಕೊಳ್ಳುವ ಕೃತಿಗಳಿವು: ಅರವಿಂದ ಮಾಲಗತ್ತಿಯವರ ಗೌರ್ಮೆಂಟ್ ಬ್ರಾಹ್ಮಣ, ಸಿದ್ಧಲಿಂಗಯ್ಯನವರ ಊರು-ಕೇರಿ, ರಾಮಯ್ಯನವರ ಮಣೇಗಾರ, ಗೋವಿಂದರಾಜು ಅವರ ಮನವಿಲ್ಲದವರ ಮಧ್ಯೆ. ಕನ್ನಡದ ಮೊದಲ ದಲಿತ ಆತ್ಮಕಥೆ ಎಂದು ಕರೆಯಿಸಿಕೊಂಡ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಕವಿತೆ, ಕಾದಂಬರಿಗಳಲ್ಲಿ ಬಳಸಿಕೊಳ್ಳಲಾಗದ ವಿಭಿನ್ನ ಅನುಭವಗಳನ್ನು ಸಹಜವಾಗಿ, ಪ್ರಖರವಾಗಿ ತೆರೆದಿಟ್ಟಿದೆ.

ಇದೇ ಸಂದರ್ಭದಲ್ಲಿ ದಲಿತ ಸಾಹಿತ್ಯ ವಿಮರ್ಶೆಯ ಬಗೆಗೆ ಒಂದೆರಡು ಮಾತುಗಳನ್ನು ಹೇಳಬಹುದು. ದಲಿತ ಸಾಹಿತ್ಯ ತನ್ನ ಅಭಿವ್ಯಕ್ತಿ ವಿಧಾನದಲ್ಲಿ ಸರಳ ಸೂತ್ರಗಳನ್ನು ಅನ್ವಯಿಸಿಕೊಂಡಿದ್ದರಿಂದ ಸಾಹಿತ್ಯ ವಾಚ್ಯವಾಗಿದ್ದರಿಂದ ಲೇಖಕರಿಗೂ ಸಾಮಾನ್ಯ ಓದುಗರಿಗೂ ನೇರ ಸಂಪರ್ಕ ಉಂಟಾಯಿತು. ಹಾಗಾಗಿ ವಿಮರ್ಶೆ ಹಾಗೂ ವಿಮರ್ಶಕ ಇಲ್ಲಿ ಮುಖ್ಯವಾಗಲಿಲ್ಲ. ಇದರಿಂದ ದೂರ ಸರಿದ ವಿಮರ್ಶಕರು ದಲಿತ ಸಾಹಿತ್ಯ ಕೃತಿಗಳನ್ನು ಗಂಭೀರವಾಗಿ ಪರಿಗಣಿಸಲೇ ಇಲ್ಲ. ಹಾಗೊಮ್ಮೆ ವಿಮರ್ಶೆಗೆ ಪರಿಗಣಿಸಿದ್ದರೂ ನವ್ಯ ವಿಮರ್ಶೆಯ ಮಾನದಂಡಗಳನ್ನೇ ದಲಿತ ಬಂಡಾಯ ಕೃತಿಗಳೊಂದಿಗೆ ಅನ್ವಯಿಸತೊಡಗಿದ್ದುಂಟು. ಇದರ ಪರಿಣಾಮವಾಗಿ ಕೃತಿಯ ವಸ್ತುನಿಷ್ಠ ಮೌಲ್ಯಮಾಪನಕ್ಕಿಂತ ಸಾರಾಸಗಟಾಗಿ ತಳ್ಳಿಹಾಕುವ ವಿಮರ್ಶೆ ಆರಂಭವಾಯಿತು. ಆಕ್ರೋಶ, ಅಬ್ಬರ, ಸರಳತೆ, ಘೋಷಿತ ಬಂಡಾಯ ಇವೆಲ್ಲ ಸಾಹಿತ್ಯಕ ಮೌಲ್ಯಗಳೇ ಅಲ್ಲ ಎಂಬ ಅಭಿಪ್ರಾಯ ವಿಮರ್ಶೆಯಲ್ಲಿ ವ್ಯಕ್ತವಾಯಿತು. ಕೆಲವು ವಿಮರ್ಶಕರು ದಲಿತ ಸಾಹಿತ್ಯದ ಮೌಲ್ಯಮಾಪನ ಹಾಗೂ ವಿಮರ್ಶೆಗೆ ಪ್ರತ್ಯೇಕ ಮಾನದಂಡಗಳನ್ನೇ, ವಿಮರ್ಶೆಯ ಪರಿಕಲ್ಪನೆಯನ್ನೇ ಹೊಸದಾಗಿ ಕಂಡುಕೊಳ್ಳಬೇಕಾಗಿದೆ ಎಂದೂ ಅಭಿಪ್ರಾಯಪಟ್ಟರು. ಕನ್ನಡ ಸಾಹಿತ್ಯ ಪರಂಪರೆಯ ಮುಖ್ಯ ವಾಹಿನಿಯಲ್ಲಿಯೇ ಬರುವ ದಲಿತ ಸಾಹಿತ್ಯ ವಿಮರ್ಶೆಗೆ ಪ್ರತ್ಯೇಕ ಮಾನದಂಡಗಳ ಅಗತ್ಯತೆಯನ್ನು ಕೆಲವರು ತಳ್ಳಿ ಹಾಕಿದರು. ಈಗಿರುವ ಸಾಹಿತ್ಯಕ ಮಾನದಂಡಗಳಿಂದಲೇ ವಿಮರ್ಶೆ ಸಾಧ್ಯವೆಂದು ಹೇಳಿದರು. ದಲಿತ ಸಾಹಿತ್ಯವನ್ನು ಕುರಿತು ಸಮರ್ಥ ವಿಮರ್ಶೆಗಳು ಈವರೆಗೆ ಬಂದಿಲ್ಲ. ದಲಿತರೇ ವಿಮರ್ಶೆಯ ಕ್ಷೇತ್ರಕ್ಕೆ ಇಳಿದಾಗ ಅರ್ಥೈಸುವಿಕೆ ಮತ್ತು ವ್ಯಾಖ್ಯಾನಗಳೇ ಬದಲಾಗಬಹುದು ಎನ್ನುವ ವಾದವು ಎದುರಾಗಿದೆ. ಈ ಚರ್ಚೆ ಈಗಲೂ ಮುಂದುವರಿದಿದೆ. ಒಟ್ಟಾರೆ ಆತ್ಮವಿಮರ್ಶೆ ಮಾಡಿಕೊಳ್ಳಬೇಕಾದ ಸಂದರ್ಭದಲ್ಲಿ ದಲಿತ ಸಾಹಿತ್ಯ ಚಟುವಟಿಕೆಗಳು ನಡೆಯುತ್ತಿವೆ. (ಜಿ.ಆರ್.ಟಿ.)

ಸಾಹಿತ್ಯ ವಿಮರ್ಶೆಯನ್ನು ಪ್ರಸ್ತಾಪಿಸುವಾಗ ಸ್ತ್ರೀವಾದ, ಸ್ತ್ರೀವಾದಿ ಚಳವಳಿ, ಸ್ತ್ರೀವಾದಿ ವಿಮರ್ಶೆಗಳನ್ನು ನಾವು ಮರೆಯುವಂತಿಲ್ಲ. ಸ್ತ್ರೀವಾದಿ ವಿಮರ್ಶೆಯ ಬಗೆಗೆ ಚಿಂತಿಸುವಾಗ ದಲಿತೀಯ ಸ್ತ್ರೀವಾದದ ವಿಚಾರವೂ ಪ್ರಸ್ತಾಪಗೊಳ್ಳುತ್ತದೆ. ದಲಿತ, ಬಂಡಾಯ, ಸ್ತ್ರೀವಾದಿ ಚಳವಳಿಗಳಿಗೆ ಪ್ರಧಾನವಾಗಿರುವ ನೆಲೆ ಸಾಮಾಜಿಕವಾದದ್ದು. ಈ ಸಾಮಾಜಿಕ ನೆಲೆಯಿಂದ ತಾತ್ವಿಕವಾಗಿ ಹೋರಾಡಲು ಈ ವಾದಗಳು ಬಯಸುತ್ತವೆ. ಈ ವಾದಗಳ ಆಶಯ, ಆಲೋಚನೆಗಳಲ್ಲಿ ಹಲವೆಡೆ ಸಮಾನ ಮನಃಸ್ಥಿತಿಗಳನ್ನು ಗುರುತಿಸಲು ಸಾಧ್ಯವಿದೆ.

ಮಹಿಳೆಯರೆಲ್ಲರೂ ಒಂದೇ; ಎಲ್ಲರೂ ಶೋಷಣೆಯ ನೋವುಂಡವರೇ ಎಂಬ ವಿಚಾರಗಳಿದ್ದರೂ ಸ್ತ್ರೀವಾದದಲ್ಲಿ ದಲಿತೀಯ ಸ್ತ್ರೀವಾದ ಸ್ವಲ್ಪ ಭಿನ್ನ ಆಶಯಗಳೊಂದಿಗೆ ತನ್ನ ಪ್ರಸ್ತುತತೆಯನ್ನು ಸ್ಥಾಪಿಸಿಕೊಂಡಿದೆ. ದಲಿತೀಯ ಸ್ತ್ರೀವಾದಕ್ಕೆ ಅರವಿಂದ ಮಾಲಗತ್ತಿಯವರು ಕೊಡುವ ವ್ಯಾಖ್ಯಾನದಲ್ಲಿ ಅದರ ಆಶಯಗಳ ಸ್ಪಷ್ಟ ಅರಿವು ಮೂಡುತ್ತದೆ. "ದಲಿತ ಸ್ತ್ರೀವಾದ ಎನ್ನುವುದು ತಮ್ಮನ್ನು ತಾವು ಅರಿಯಲು, ಬೇರೆಯವರನ್ನು ಅರಿತುಕೊಳ್ಳಲು ಹಾಗೂ ತಾವು ರಕ್ಷಿಸಿಕೊಳ್ಳುವುದರೊಂದಿಗೆ, ಬಂಧನದಿಂದ ಬಿಡುಗಡೆಗೊಳ್ಳುತ್ತ ಇತರರನ್ನು ಬಿಡುಗಡೆಗೊಳಿಸುವಲ್ಲಿ ಸಹಕರಿಸುತ್ತ, ತಾನೂ ಬೆಳೆಯುವುದು ಮತ್ತು ಇತರರನ್ನೂ ಬೆಳೆಸುವಂತಹದ್ದಾಗಿದೆ."

ಸ್ತ್ರೀವಾದಿಗಳು 'ಮಹಿಳೆಯರೆಲ್ಲ ಒಂದೇ' ಎಂಬ ಧೋರಣೆ ಹೊತ್ತವರಾದರೂ ದಲಿತ ಸ್ತ್ರೀವಾದಿ ಪ್ರಜ್ಞೆಯ ಅರಿವು ಮತ್ತು ಜಾತಿವಾದಿ ಧೋರಣೆಗಳಿಂದ ಮುಕ್ತ ಮನಃಸ್ಥಿತಿಯನ್ನು ಹೊಂದಬೇಕಾಗಿರುವ ದಿಶೆಯಲ್ಲಿ

ದಲಿತ ಸ್ತ್ರೀವಾದಕ್ಕೆ ಒಂದು ಪ್ರತ್ಯೇಕ ಅಧ್ಯಯನದ ನೆಲೆಯ ಆವಶ್ಯಕತೆಯನ್ನು ವಿಮರ್ಶಕರು ಒತ್ತಿ ಹೇಳುತ್ತಾರೆ. ದಲಿತ ಮಹಿಳೆ ದಲಿತತ್ವದ ಹಿನ್ನೆಲೆಯ ಸಮಸ್ಯೆಗಳು ಕೇಂದ್ರವಾಗುವುದರೊಂದಿಗೆ ಒಬ್ಬ ಸಾಮಾನ್ಯ ಮಹಿಳೆಯಾಗಿ ಪ್ರತಿಕ್ರಿಯಿಸುವ ಗುಣ ಕಂಡುಬರುತ್ತದೆ. ಮತ್ತು ದಲಿತ ಮಹಿಳೆಗೆ ದಲಿತ ಪರಿಕಲ್ಪನೆಯು ಒಳಗಡೆಯೇ ಎದುರಿಸುವ ಸಮಸ್ಯೆಗಳು ಇನ್ನೊಂದು ಸ್ವರೂಪದ್ದಾಗಿದೆ.

ಸುಕನ್ಯಾಮಾರುತಿ, ಮಲ್ಲಿಕಾಘಂಟಿ, ಲಲಿತಾನಾಯಕ, ಧರಣಿದೇವಿ, ಸರಸ್ವತಿ, ಸಮತಾ ದೇಶಮಾನೆ, ಮಿತಾದೇವನೂರು ಹೀಗೆ ಹಲವರು ತಮ್ಮ ವಿಚಾರ, ಬರೆಹ, ಕವನ ಇತ್ಯಾದಿಗಳ ಮೂಲಕ ದಲಿತೀಯ ಚಿಂತನೆಗಳಲ್ಲಿ ಭಾಗಿಯಾಗಿದ್ದಾರೆ. ಸ್ತ್ರೀವಾದ, ದಲಿತ ವಾದಗಳ ಸಹಯೋಗದಿಂದ ಸ್ತ್ರೀಕೇಂದ್ರಿತ ಪರಿಕಲ್ಪನೆಗಳು ಹೊಸ ಮಾರ್ಗ, ಹೊಸ ಜೀವಕಳೆಗಳನ್ನು ಹೊಂದಲು ಸಾಧ್ಯವಿದೆ ಎಂಬ ಅಭಿಪ್ರಾಯಗಳು ಇತ್ತೀಚಿನ ದಿನಗಳಲ್ಲಿ ಹೆಚ್ಚಾಗಿ ಕಂಡುಬರುತ್ತಿವೆ. *

**ದಶಗಣ ಸಿಂಗಿದೇವಯ್ಯ :** ಸು.1160. ಶಿವಶರಣ, ವಚನಕಾರ, ಬಸವಣ್ಣನವರ ಸಮಕಾಲೀನ. ಲಕ್ಕಣ್ಣದಂಡೇಶ ಮೊದಲಾದ ಅನೇಕ ವೀರಶೈವ ಕವಿಗಳು ಈತನನ್ನು ಹೆಸರಿಸಿದ್ದಾರೆ. ಈತ ಹಾಗೂ ಬೊಮ್ಮಕಟ್ಟಿ, ಸಂಗವ್ವೆ, ದೇವರಸ, ಬಸವಯ್ಯ, ಬಾಚಿದೇವ ಮೊದಲಾದವರು ತೇರಸರೆಂದು ಪ್ರಸಿದ್ಧಿ ಪಡೆದಿದ್ದಾರೆ.

ಈತ ತನ್ನ ವಚನಗಳ ಅಂಕಿತದಲ್ಲಿ ತನ್ನ ಗುರುವಾದ ನಾಚಯ್ಯನ ಹೆಸರನ್ನೂ ಸೇರಿಸಿಕೊಂಡಿದ್ದಾನೆ. ಉಪಲಬ್ಧವಿರುವ ಇವನ ಕೆಲವೇ ವಚನಗಳಲ್ಲಿ ಅರ್ಪಣಾಭಾವ, ನಿಃಸ್ವಾರ್ಥತೆ ಗುರುಭಕ್ತಿಗಳನ್ನು ಕಾಣಬಹುದು. ಇವನ ಒಂದು ವಚನ:

ಸತಿಸುತ ಮಾತಾಪಿತರಿಗೆಂದು ಹಡೆದಡೆ ನಿಮ್ಮಾಣೆ ಕಂಡಯ್ಯ
ಮಾನವಸೇವೆ ಮಾಡಿದಡೆ ನಿಮ್ಮಾಣೆ ಕಂಡಯ್ಯ
ನೀವಲ್ಲದನ್ಯಕ್ಕೆರಗಿದಡೆ ನಿಮ್ಮಾಣೆ ಕಂಡಯ್ಯ
ಎನ್ನ ಸತಿಯಲ್ಲದನ್ಯಸತಿಗಳಪ್ಪಿದಡೆ ನಿಮ್ಮಾಣೆ ಕಂಡಯ್ಯ
ತನುಮನ ವಂಚನೆಯಾದಡೆ ನಾಚಯ್ಯ ಪ್ರಿಯ ಮಲ್ಲಿನಾಥಯ್ಯ
ನಿಮ್ಮಾಣೆ ಕಂಡಯ್ಯ *

**ದಸರ :** ಆಶ್ವೀಜ ಶುದ್ಧ ಪಾಡ್ಯದಿಂದ ದಶಮಿಯವರೆಗೆ ಹತ್ತು ದಿನಗಳು ನಡೆಯುವ ಹಬ್ಬ. ದಶಹರ, ದಶರಾತ್ರಿ ನವರಾತ್ರಿ ಎಂದೂ ಈ ಹಬ್ಬಸಾಲನ್ನು ಕರೆಯುವುದಿದೆ. ಈ ಸಾಲಿನ ಕೊನೆಯಲ್ಲಿ ಬರುವ ಮಹಾನವಮಿ ಮತ್ತು ವಿಜಯದಶಮಿ ಬಹು ಮುಖ್ಯ ದಿನಗಳು. ದಾನವರಿಗೂ ದೇವತೆಗಳಿಗೂ ನಡೆದ ಯುದ್ಧದಲ್ಲಿ ದೇವತೆಗಳಿಗೆ ಉಂಟಾದ ವಿಜಯವನ್ನಾಚರಿಸುವ ಪದ್ಧತಿ ಬೆಳೆದುಬಂದುದಾಗಿ ಪುರಾಣಗಳು ಸಾರುತ್ತವೆ. ರಾಮ ಲಂಕೆಯ ಮೇಲೆ ದಂಡೆತ್ತಿ ರಾವಣನನ್ನು ಕೊಂದು ವಿಜಯ ಸಾಧಿಸಿದ ದಿನ ವಿಜಯದಶಮಿ. ಹೀಗೆ ದಾನವ ಶಕ್ತಿಯ ಮೇಲೆ ದೈವೀಶಕ್ತಿ ಪಡೆದ ಮೇಲುಗೈಯನ್ನು ಸಂಭ್ರಮದಿಂದ ಆಚರಿಸುವ ಪದ್ಧತಿ ಪ್ರಾಚೀನ ಕಾಲದಿಂದಲೂ ಭಾರತದ ಎಲ್ಲೆಡೆ ನಡೆದುಬಂದಿದೆ. ಈ ದಿನಗಳಲ್ಲಿ ಶಕ್ತಿಪೂಜೆಗೆ ವಿಶೇಷ ಮಹತ್ವ.

ಇತರೆಡೆಗಳಂತೆ ಕರ್ನಾಟಕದಲ್ಲಿಯೂ ಈ ಹಬ್ಬದ ಆಚರಣೆ ಬಹು ಹಿಂದಿನ ಕಾಲದಿಂದಲೂ ಅನೂಚಾನವಾಗಿ ನಡೆದು ಬಂದಿದ್ದರೂ ಇಲ್ಲಿ ಈ ಹಬ್ಬಕ್ಕೆ ವಿಶಿಷ್ಟತೆಯುಂಟು. ಅದರಲ್ಲಿಯೂ ವಿಜಯನಗರದ ಅರಸರು ಅತ್ಯಂತ ಸಂಭ್ರಮದಿಂದ ವೈಭವದಿಂದ ಈ ಹಬ್ಬವನ್ನು ಆಚರಿಸುತ್ತಿದ್ದುದಕ್ಕೆ ಹಲವು ದಾಖಲೆಗಳಿವೆ. ಹೊರದೇಶದ ಯಾತ್ರಿಕರು ಈ ವೈಭವವನ್ನು ಕಂಡು ಮೂಕವಿಸ್ಮಿತರಾಗಿದ್ದಾರೆ. ತಮ್ಮ ಅನಿಸಿಕೆಗಳನ್ನು ಬರೆದಿಟ್ಟಿದ್ದಾರೆ. ಅಬ್ದುಲ್ ರಜಾಕ್, ಪೆಯಸ್, ನ್ಯೂನಿಜ್ ಮೊದಲಾದವರು ಇದನ್ನು ವಿವರವಾಗಿ ವರ್ಣಿಸಿದ್ದಾರೆ. ಮಳೆಗಾಲ ಕಳೆದು ಯುದ್ಧಕ್ಕೆ ಹೊರಡಲು ಸಿದ್ಧತೆ ಮಾಡಿಕೊಳ್ಳಲು ಇದು ಸೂಕ್ತ ಕಾಲ. ಅಂತೆಯೇ ಸೈನ್ಯಗಳ ಜಮಾವಣೆ ನಡೆಯುತ್ತಿದ್ದುದು ಆಗ. ಎಲ್ಲ ಸಾಮಂತರೂ ಮಂಡಲಾಧಿಪತಿಗಳೂ ದಂಡನಾಯಕರೂ ತಮ್ಮತಮ್ಮ ಸೈನ್ಯಗಳೊಡನೆ ರಾಜಧಾನಿಗೆ ಬಂದು ತಮ್ಮ ಸೈನ್ಯಗಳ ಪ್ರದರ್ಶನ ನಡೆಸಬೇಕಾಗಿತ್ತು. ಕಪ್ಪಕಾಣಿಕೆಗಳನ್ನೊಪ್ಪಿಸಬೇಕಾಗಿತ್ತು. ಇದರ ವೀಕ್ಷಣೆಗಾಗಿ ಒಂದು



ಮಹಾನವಮಿ ದಿಬ್ಬ, ಹಂಪಿ

ಉನ್ನತವಾದ ಸುಂದರವಾದ ಮಂಟಪ ನಿರ್ಮಾಣವಾಗಿತ್ತು. ಹಂಪೆಯಲ್ಲಿ ಅದರ ಅವಶೇಷಗಳು ಉಳಿದುಬಂದಿದೆ. ಮಹಾನವಮಿ ದಿಬ್ಬ ಎಂದು ಈಗಲೂ ಅದನ್ನು ಗುರುತಿಸುತ್ತಾರೆ. ಆ ದಿಬ್ಬದ ಸುತ್ತಲೂ ಇರುವ ಶಿಲ್ಪಗಳು ಆಗ ಚಕ್ರವರ್ತಿಯ ಮುಂದೆ ನಡೆಯುತ್ತಿದ್ದ ಸೈನಿಕ ಕವಾಯತುಗಳು, ಆಟಪಾಟಗಳು, ನೃತ್ಯಗಳು ಮುಂತಾದುವನ್ನು ಸೂಚಿಸುತ್ತವೆ. ನವರಾತ್ರಿಯ ಒಂಬತ್ತು ದಿನಗಳಲ್ಲೂ ಸಂಜೆ ರಾಜನು ಈ ಉನ್ನತವಾದ ಮಂಟಪದಲ್ಲಿ ರತ್ನಖಚಿತವಾದ ಹೇಮ ಸಿಂಹಾಸನದ ಮೇಲೆ ಮಂಡಿಸುತ್ತಿದ್ದ.



ಮೈಸೂರು ಅರಮನೆಯೊಳಗೆ ಸಾಂಪ್ರದಾಯಿಕ ಮೆರವಣಿಗೆ

ಮುಂದೆ ವಿಶಾಲವಾದ ಬಯಲಿನಲ್ಲಿ ಸಾಮಂತರು, ಅಧಿಕಾರಿಗಳು ತಮ್ಮ ತಮ್ಮ ಅಂತಸ್ತಿಗೆ ತಕ್ಕಂತೆ ಬಿಡಾರ ಹೂಡುತ್ತಿದ್ದರು. ಮೊದಲು ಪೂಜೆ ರಣಬಲಿಗಳಾದ ಮೇಲೆ ಸಾಲಂಕೃತವಾದ ಪಟ್ಟದ ಕುದುರೆಗಳು, ಆನೆಗಳು ಉತ್ಸವದಲ್ಲಿ ರಾಜನ ಮುಂದೆ ಬಂದಾಗ ಪುರೋಹಿತರು ಅವುಗಳನ್ನು ಪೂಜಿಸುತ್ತಿದ್ದರು. ಅನಂತರ ಸಹಸ್ರ ನರ್ತಕಿಯರ ತಂಡದಿಂದ ನೃತ್ಯ ಗಾಯನಗಳು. ಇದು ಮುಗಿಯುತ್ತಿದ್ದಂತೆಯೇ ಅಲಂಕೃತವಾದ ಕುದುರೆ ಆನೆಗಳ ಸೈನ್ಯ ಪ್ರದರ್ಶನ ಕಡೆಯದಾಗಿ ರಾಣಿವಾಸದ ಅತ್ಯಂತ ಸುಂದರಿಯರಾದ 36 ಜನರು ಚಿನ್ನದ ಕಳಶ, ಆರತಿಗಳೊಂದಿಗೆ ಬಂದಾಗ ಅಂದಿನ ಕಲಾಪ ಮುಗಿದಂತೆ. ಲೆಕ್ಕವಿಲ್ಲದಷ್ಟು ಮಷಾಲುಗಳ ಬೆಳಕಿನಲ್ಲಿ ದಿನದಿನವೂ ಹೊಸ ಹೊಸ ಪ್ರದರ್ಶನಗಳು ನಡೆಯುತ್ತಿದ್ದ ಆ ಆವರಣವೆಲ್ಲ ಕಿನ್ನರಲೋಕದಂತೆ ಭಾಸವಾಗುತ್ತಿತ್ತು. ಇವುಗಳಲ್ಲಿ ಮುಖ್ಯವಾದ ಪ್ರದರ್ಶನವೆಂದರೆ ಮಲ್ಲಯುದ್ಧ. ಸಹಸ್ರ ಮಲ್ಲರು ಇದರಲ್ಲಿ

ಭಾಗವಹಿಸುತ್ತಿದ್ದರು. ಗೆದ್ದವರಿಗೆ ರಾಜ ಬಹುಮಾನಗಳನ್ನು ಹಂಚುತ್ತಿದ್ದ. ನವಮಿಯಂದು ಆಯುಧಗಳಿಗೆ ಪೂಜೆ; ಅಂದು ವಿಶೇಷ ಬಲಿ. ಆ ಹೊತ್ತಿಗೆ ಎಲ್ಲರೂ ಕಪ್ಪಕಾಣಿಕೆ ಗಳನ್ನೊಪ್ಪಿಸುವುದು ಮುಗಿದಿರುತ್ತಿತ್ತು. ಜೈತ್ರಯಾತ್ರೆಗೆ ಪೂರ್ಣ ಸಿದ್ಧತೆ ನಡೆದಂತಾಗುತ್ತಿತ್ತು.



ದಸರ ಗೊಂಬೆಗಳು

ವಿಜಯನಗರ ಸಾಮ್ರಾಜ್ಯ ಕೊನೆಗೊಂಡ ಅನಂತರ ಇಂಥ ವೈಭವದ ಉತ್ಸವಗಳನ್ನು ಪುನರುಜ್ಜೀವನಗೊಳಿಸಿದವರು ಮೈಸೂರಿನ ಒಡೆಯರು. ಮೊದಲಿನ ರಾಜಧಾನಿ ಶ್ರೀರಂಗಪಟ್ಟಣದಲ್ಲಿ ನಡೆಯುತ್ತಿದ್ದ ದಸರ ಉತ್ಸವದ ಸಂಭ್ರಮ ಹಲವು ಗ್ರಂಥಗಳಲ್ಲಿ ವರ್ಣಿತವಾಗಿದೆ. ಮುಮ್ಮಡಿ ಕೃಷ್ಣರಾಜ ಒಡೆಯರು ಜಂಬೂಸವಾರಿ ನಡೆಸುತ್ತಿದ್ದುದನ್ನು ಜಗನ್ಮೋಹನ ಬಂಗಲೆಯ ಗೋಡೆಯೊಂದರ ಮೇಲೆ ಚಿತ್ರಿಸಿದೆ. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಈ ವೈಭವ, ಆಡಂಬರ ಪರಾಕಾಷ್ಠೆಯನ್ನು ಮುಟ್ಟಿತ್ತು.

ವಿಜಯನಗರದ ಅರಸರು ನಡೆಸುತ್ತಿದ್ದ ಉತ್ಸವದ ಮಾದರಿಯನ್ನೇ ಬಹುತೇಕ ಮೈಸೂರರಸರೂ ಅನುಕರಿಸಿದರು. ದಸರೆಯ ಹತ್ತು ದಿನಗಳಲ್ಲೂ ಅರಮನೆಯಲ್ಲೂ ದೇವಾಲಯಗಳಲ್ಲೂ ವಿಶೇಷ ಪೂಜೆಗಳು ನಡೆಯುತ್ತಿದ್ದವು. ಮೊದಲ ದಿನ ಬೆಳಗ್ಗೆ ಮಹಾರಾಜರು ಅರಮನೆಯ ಮುಂಭಾಗದ ಸೆಜ್ಜೆಯಲ್ಲಿದ್ದ ರತ್ನಸಿಂಹಾಸನವನ್ನು 21 ಕುಶಾಲುತೋಪುಗಳು ಮೊಳಗುತ್ತಿರುವಂತೆ ಅಲಂಕರಿಸಿ ದರ್ಬಾರನ್ನು ನಡೆಸುತ್ತಿದ್ದರು. ಮುಂದಿನ ಬಯಲಿನಲ್ಲಿ ಸೈನ್ಯಗಳ ಕವಾಯತು, ದೇವಾಲಯ ಮಠಗಳಿಂದ, ಋತ್ವಿಜರಿಂದ ಆಶೀರ್ವಚನ, ಅಧಿಕಾರಿಗಳು, ಪುರಪ್ರಮುಖರಿಂದ ನಜರನ್ನು ಒಪ್ಪಿಸುವುದು, ಮಲ್ಲಯುದ್ಧ ಮುಂತಾದುವು ಜರುಗಿದ ಮೇಲೆ ಅರಮನೆಯ ಮಹಿಳೆಯರು ದೊರೆಗೆ ಗೌರವವನ್ನರ್ಪಿಸುತ್ತಿದ್ದರು. ಅಲ್ಲಿಗೆ ದರ್ಬಾರು ಮುಗಿಯುತ್ತಿತ್ತು. ಅನಂತರ ಪ್ರತಿದಿನ ಸಂಜೆ ಇದೇ ರೀತಿಯ ಕಾರ್ಯಕ್ರಮ ಮಹಾನವಮಿಯುವರೆಗೂ ಇರುತ್ತಿತ್ತು. ಈ ದಿನಗಳಲ್ಲಿ ರಾತ್ರಿಯ ವೇಳೆ ಅರಮನೆ ದೀಪಾಲಂಕಾರಗಳಿಂದ ಝುಗಝುಗಿಸುತ್ತಿತ್ತು. ನವಮಿಯ ದಿನ ಬೆಳಗ್ಗೆ ಪಟ್ಟದಕತ್ತಿ, ಪಟ್ಟದ ಆನೆ, ಪಟ್ಟದ ಕುದುರೆ ಮುಂತಾದುವು ಉತ್ಸವದಲ್ಲಿ ಅರಮನೆಯ ಮುಂದೆ ಬಂದಾಗ ಮಹಾರಾಜರು ಅವುಗಳಿಗೆ ಪೂಜೆ ಸಲ್ಲಿಸುತ್ತಿದ್ದರು. ಸ್ವಾತಂತ್ರ್ಯಪೂರ್ವದಲ್ಲಿ ನವಮಿಯ ದಿನ ಸಂಜೆ ಐರೋಪ್ಯ ಅತಿಥಿಗಳಿಗಾಗಿ ವಿಶೇಷ ದರ್ಬಾರ್ ನಡೆಯುತ್ತಿತ್ತು. ದಶಮಿಯ ದಿನದಂದು ಬೆಳಗ್ಗೆ ಪಟ್ಟದ ಕತ್ತಿ, ಕುದುರೆ, ಆನೆ ಮೊದಲಾದವು ಬನ್ನಿಮಂಟಪಕ್ಕೆ ತರೆಳುತ್ತಿದ್ದುವು. ಅಂದು ಸಂಜೆ ಜಗತ್ಪ್ರಸಿದ್ಧವಾದ, ವೈಭವೋಪೇತವಾದ ಜಂಬೂಸವಾರಿ. ಮಹಾರಾಜರು ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ಸಕಲ ಮರ್ಯಾದೆಗಳೊಡನೆ ಬನ್ನಿಮಂಟಪದ ಕಡೆ ರಾಜಬೀದಿಗಳಲ್ಲಿ ಮೆರವಣಿಗೆ ಹೊರಡುತ್ತಿದ್ದುದು ಕಣ್ಣಿಗೊಂದು ಹಬ್ಬವಾಗಿತ್ತು. ಇಡೀ ಮೈಸೂರು ನಗರವೇ ಸಂಭ್ರಮಪಡುತ್ತಿತ್ತು. ಈ ಉತ್ಸವವನ್ನು ನೋಡಲಿಕ್ಕೆಂದೇ ಲಕ್ಷಾಂತರ ಜನ ದೇಶದೇಶಾಂತರಗಳಿಂದ ಬರುತ್ತಿದ್ದರು. ಬನ್ನಿಯ ಮಂಟಪವನ್ನು ತಲುಪಿದ ಮೇಲೆ ಮಹಾರಾಜರು ಆನೆಯಿಂದಿಳಿದು ಕುದುರೆಯ ಮೇಲೆ ಕುಳಿತು ಸೈನ್ಯದ ಪರಿವೀಕ್ಷಣೆ ನಡೆಸುತ್ತಿದ್ದರು. ವಿಜಯನಗರದರಸರ ಕಾಲದಲ್ಲಿ ನಿಜವಾಗಿ ನಡೆಯುತ್ತಿದ್ದ ಕಪ್ಪಕಾಣಿಕೆಗಳ ಸಮರ್ಪಣೆ, ಸೈನ್ಯಗಳ ಪರಿವೀಕ್ಷಣೆ ಅಖಾಡದಲ್ಲಿ ಜೀವದ ಹಂಗು ತೊರೆದು ಜಿದ್ದಾಜಿದ್ದಿನಿಂದ ನಡೆಸುತ್ತಿದ್ದ ಮಲ್ಲಯುದ್ಧ ಮೊದಲಾದುವು ಮೈಸೂರರಸರಲ್ಲಿ ಸಾಂಕೇತಿಕವಾಗಿ ಉಳಿದುಕೊಂಡು ಬಂದಿದ್ದುವು.

ಕೇವಲ ಅರಸರ ವೈಭವದ ಪ್ರದರ್ಶನವಷ್ಟೇ ಆಗಿದ್ದಿದ್ದರೆ ಬಹುಶಃ ಈ ಹಬ್ಬಕ್ಕೆ ಹೆಚ್ಚು ಪ್ರಾಮುಖ್ಯ ಬರುತ್ತಿರಲಿಲ್ಲವೇನೊ. ಕರ್ನಾಟಕದ ಜನತೆಯೂ ಈ ಹಬ್ಬವನ್ನು ಅಷ್ಟೇ ಉತ್ಸಾಹದಿಂದ ಆಚರಿಸುತ್ತಿದ್ದರು. ವಿಜಯನಗರದ ರಾಜಧಾನಿಯಲ್ಲಿ ಮಹಾನವಮಿಯ ಉತ್ಸವಕ್ಕಾಗಿ ಪ್ರತಿ ಮನೆಯ ಮುಂದೆಯೂ ಬೆಲೆ ಬಾಳುವ ಬಟ್ಟೆಗಳಿಂದ ಅಲಂಕರಿಸಿದ ಮಂಟಪಗಳನ್ನೂ ತೋರಣಗಳನ್ನೂ ನಿರ್ಮಿಸುತ್ತಿದ್ದುದನ್ನು ನಿಕೊಲೊ ಕೊಂಟಿ ವರ್ಣಿಸುತ್ತಾನೆ. ಪ್ರತಿ ಮನೆಯಲ್ಲಿಯೂ ಗೊಂಬೆಗಳನ್ನು ಕೂಡಿಸಿ ರಾಜರು ನಡೆಸುತ್ತಿದ್ದ ದರ್ಬಾರುಗಳ ಅನುಕರಣೆಯ ಪ್ರದರ್ಶನಗಳನ್ನು ಅವುಗಳ ಮೂಲಕ ಏರ್ಪಡಿಸುತ್ತಿದ್ದರು. ಗೊಂಬೆಗಳನ್ನು ಕೃತಕವಾದ ಅಲಂಕರಣಗಳು ವಸ್ತ್ರಗಳಿಂದ ಸಿಂಗರಿಸಿ ರಾಜರ, ಅಧಿಕಾರಿಗಳ, ಸೈನ್ಯಗಳ, ಜನಸಾಮಾನ್ಯರ ಪ್ರತೀಕಗಳಾಗಿ ಜನಜೀವನವನ್ನು ಪ್ರತಿಬಿಂಬಿಸುವಂತೆ ಜೋಡಿಸುವುದರಿಂದ ತಮ್ಮ ಕಲೆಗಾರಿಕೆಯ ಜಾಣ್ಮೆಯನ್ನು ಹೊರಗೆಡವುತ್ತಿದ್ದರು. ಹೆಣ್ಣು ಮಕ್ಕಳಿಗೆ



ದಸರ ಮೆರವಣಿಗೆಯಲ್ಲಿ ಸಾಗುತ್ತಿರುವ ಆನೆಗಳು

ಇದೊಂದು ಸಡಗರ. ರಾಮಾಯಣ, ಭಾರತಗಳ ದೃಶ್ಯಾವಳಿಯನ್ನು ಪ್ರದರ್ಶಿಸುತ್ತಿದ್ದುದೂ ಉಂಟು. ಜನಪದ ಕಲೆಗೆ ಇದರಿಂದ ದೊರೆತ

ಪ್ರೋತ್ಸಾಹ ಅಪರಿಮಿತ. ದಸರೆಯ ಹತ್ತುದಿನಗಳಲ್ಲಿಯೂ ಹೆಣ್ಣುಮಕ್ಕಳು ಮನೆ ಮನೆಗೂ ಹೋಗಿ ಈ ಪ್ರದರ್ಶನವನ್ನು ನೋಡುವುದು, ಹಾಡು ಹೇಳಿ ತಿಂಡಿ ಗಿಟ್ಟಿಸಿಕೊಂಡು ಬರುವುದು ಪದ್ಧತಿಯಾಗಿತ್ತು. ಕೋಲು ಹೊಯ್ದು ಕುಣಿಯುತ್ತಿದ್ದುದೂ ಉಂಟು. ಈಚೆಗೆ ಈ ಉತ್ಸಾಹ ಕಡಿಮೆಯಾಗುತ್ತಿದೆ. ಪಟ್ಟಣಗಳಲ್ಲಂತೂ ಅಪರೂಪವೆನ್ನಿಸುತ್ತಿದೆ.



ಚಿನ್ನದ ಅಂಬಾರಿಯಲ್ಲಿ ದೇವಿ ಚಾಮುಂಡೇಶ್ವರಿ

ಹಳ್ಳಿಗಳಲ್ಲಿ ಸಾಮಾನ್ಯವಾಗಿ ಕೂಲಿಮಠಗಳಿದ್ದ ಕಡೆ ಶಾಲೆಗೆ ಸೂಟಿ, ಉಪಾಧ್ಯಾಯರಿಗೆ ವಿದ್ಯಾರ್ಥಿಗಳಿಂದ, ಊರವರಿಂದ ವಿಶೇಷ ಸನ್ಮಾನ. ಹುಡುಗರು, ಉಪಾಧ್ಯಾಯರನ್ನು ಮುಂದಿಟ್ಟುಕೊಂಡು ಮನೆಮನೆಗೂ ಹೋಗಿ ಆಶ್ವೀಜ ಶುದ್ಧ ಮಹಾನವಮಿ ಬರಲೆಂದು ಲೇಸಾಗಿ ಹರಸಿದೆವು ಬಾಲಕರು ಬಂದು ಎಂದು ಮುಂತಾಗಿ ಹಾಡುತ್ತ ಧನ ಧಾನ್ಯಗಳನ್ನು ಸಂಗ್ರಹಿಸಿ ಉಪಾಧ್ಯಾಯರಿಗೆ ಮರ್ಯಾದೆ ಸಲ್ಲಿಸುತ್ತಿದ್ದರು. ಈ ಹತ್ತು ದಿನಗಳೂ ಹಬ್ಬವನ್ನಾಚರಿಸುವುದಲ್ಲದೆ ಸಪ್ತಮಿ ಮೂಲಾನಕ್ಷತ್ರದಂದು ಸರಸ್ವತಿಯ ಪೂಜೆಯನ್ನೂ ಅಷ್ಟಮಿಯಂದು ದುರ್ಗಾಪೂಜೆಯನ್ನೂ ನವಮಿಯಂದು ಆಯುಧಪೂಜೆಯನ್ನೂ ನಡೆಸುವುದು ಪದ್ಧತಿ. ರಾಜರೂ ಅವರ ಸೈನಿಕರೂ ಶತ್ರುನಿಗ್ರಹಕ್ಕಾಗಿ ಉಪಯೋಗಿಸುವ ಆಯುಧಗಳನ್ನು ಪೂಜಿಸುತ್ತಿದ್ದರೆ ಸಾಮಾನ್ಯ ಜನತೆ ತಮ್ಮ ಜೀವನಕ್ಕೆ ದಾರಿ ಮಾಡಿಕೊಡುವ ನೇಗಿಲು, ಕೊಡಲಿ, ಕುಡುಗೋಲು ಮುಂತಾದುವನ್ನು ವಿಶೇಷ ಆಸಕ್ತಿಯಿಂದ ಪೂಜಿಸುತ್ತಾರೆ. ಇದೇ ರೀತಿ ಯಂತ್ರಗಳನ್ನು ಪೂಜಿಸುವ ಪದ್ಧತಿಯೂ ಬೆಳೆದಿದೆ. ವಿಜಯದಶಮಿಯಂದು ಬನ್ನಿ ಮುಡಿಯುವುದು ಒಂದು ವಿಶೇಷ ಆಚರಣೆ. ಗ್ರಾಮ ದೇವತೆಗಳನ್ನೆಲ್ಲ ಆಂಜನೇಯ ಅಥವಾ ಬೇರೆ ದೇವರ ಮುಂದಾಳುತನದಲ್ಲಿ ಉತ್ಸವದಲ್ಲಿ ಕರೆತಂದು ಊರ ಮುಂದೆ ಬನ್ನಿ ಮರದ ಬಳಿ ಸೇರುವುದುಂಟು. ಸುತ್ತಮುತ್ತಲ ಹತ್ತಾರು ಗ್ರಾಮಗಳಿಂದ ದೇವತೆಗಳ ಉತ್ಸವವನ್ನು ನಡೆಸಿಕೊಂಡು ಬಂದು ಇಂಥ ಕಡೆ ಕೂಡಿಕೊಳ್ಳುವುದೂ ಇದೆ. ದೇವರುಗಳಿಗೆ ಪೂಜೆ ಮಂಗಳಾರತಿಗಳಾದ ಅನಂತರ ಅಲ್ಲಿ ನೆರೆದ ಜನರು ಒಬ್ಬರಿಗೊಬ್ಬರು ಬನ್ನಿಯ ಸೊಪ್ಪನ್ನು ವಿನಿಮಯ ಮಾಡಿಕೊಂಡು ಹಿರಿಯರಿಂದ ಆಶೀರ್ವಾದ ಪಡೆಯುವುದು, ಇತರರಿಗೆ ಶುಭ ಕೋರುವುದು ನಡೆಯುತ್ತದೆ. ಹೀಗೆ ಮಾಡುವಾಗ ಶಮೀ ಶಮಯತೇ ಪಾಪಂ ಶಮೀ ಶತ್ರುನಿವಾರಣಂ ಅರ್ಜುನಸ್ಯ ಧನುರ್ಧಾರೀ ರಾಮಸ್ಯ ಪ್ರಿಯದರ್ಶನಂ ಎಂದು ಹೇಳುವುದು ವಾಡಿಕೆ. ಶಮಿಯ ದರ್ಶನ ಶುಭಪ್ರದವೆಂಬ ನಂಬಿಕೆ ಇದೆ.

ಮೈಸೂರಿನಲ್ಲಿ ಒಡೆಯರ ಆಡಳಿತ ಕೊನೆಗೊಂಡ ಮೇಲೆ ರಾಜದರ್ಬಾರು, ಜಂಬೂಸವಾರಿ ಮುಂತಾದುವು ನಿಂತುಹೋದುವು. ಕೆಲವು ವರ್ಷಗಳ ಕಾಲ ಮಾಜಿ ಅರಸರು ಸ್ವಂತವಾಗಿ ಈ ಉತ್ಸವಗಳನ್ನು ನಡೆಸಿದರೂ ಅದರ ಹಿಂದಿನ ವೈಭವ ಉಳಿಯದಾಯಿತು. ಪ್ರವಾಸಿಗಳನ್ನು ಹೆಚ್ಚಾಗಿ ಆಕರ್ಷಿಸುತ್ತಿದ್ದ ಈ ನಗರದ ಆಕರ್ಷಣೆಯನ್ನುಳಿಸಿಕೊಳ್ಳಲು ಹಿಂದಿನಿಂದ ನಡೆದುಬರುತ್ತಿದ್ದ ವಸ್ತುಪ್ರದರ್ಶನ, ಅರಮನೆಯ ದೀಪಾಲಂಕಾರಗಳನ್ನು ಉಳಿಸಿಕೊಂಡು ಬಂದುದಲ್ಲದೆ ಈಗ ಜಂಬೂಸವಾರಿಗೆ ಬದಲು ಅದೇ ರೀತಿಯಲ್ಲಿ ಭುವನೇಶ್ವರಿಯ ಅಥವಾ ಚಾಮುಂಡೇಶ್ವರಿಯ ಮೆರವಣಿಗೆ ನಡೆಸಲಾಗುತ್ತದೆ. ಇದು ಜನತಾ ದಸರೆಯಾಗಿ ಮಾರ್ಪಾಟುಗೊಂಡಿದೆ. ಜಂಬೂಸವಾರಿಯ ಮುಂದೆ ತೆರಳುತ್ತಿದ್ದ ಭವ್ಯ ಸೈನ್ಯದ ಮೆರವಣಿಗೆಯ ಬದಲು ಈಗ ದೇಶದ ಸಂಸ್ಕೃತಿ ನಾಡು ನುಡಿಯ ಬೆಳವಣಿಗೆಗಳನ್ನು ಪ್ರತಿನಿಧಿಸುವ ಸ್ತಬ್ಧಚಿತ್ರಗಳು, ಸ್ವಯಂಸೇವಕ ದಳಗಳು, ಜನಪದ ಕಲಾವಿದರು ಮುಂತಾದವರ ಮೆರವಣಿಗೆ ನಡೆಯುತ್ತದೆ. ಶೃಂಗೇರಿಯಲ್ಲಿ ನಡೆಯುವ ದಸರ ಧಾರ್ಮಿಕ ಪೂಜಾದಿ ಸೇವೆಗಳ ಜೊತೆಗೆ ಕಿರೀಟಧಾರಿಯಾಗಿ ಸ್ವಾಮೀಜಿ ಸಿಂಹಾಸನದ ಮೇಲೆ ಕುಳಿತು ದರ್ಬಾರು ನಡೆಸುವ ವಿಧಿಯೂ ನಡೆದುಕೊಂಡು ಬಂದಿದೆ. ಶಕ್ತಿ ದೇವತೆಗಳಿರುವ ಹಲವು ಕಡೆ ನವರಾತ್ರಿ ಉತ್ಸವ ನಡೆಯುತ್ತದೆ. (ಎಂ.ಎಚ್.)

**ದಾಂಡೇಲಿ:** ಉತ್ತರ ಕನ್ನಡ ಜಿಲ್ಲೆ ಹಳಿಯಾಳ ತಾಲ್ಲೂಕಿನಲ್ಲಿ ಹಳಿಯಾಳದ ನೈಋತ್ಯಕ್ಕೆ 22ಕಿಮೀ. ದೂರದಲ್ಲಿ ಕಾಳಿನದಿಯ ಎಡದಂಡೆಯ ಮೇಲಿರುವ ಒಂದು ಊರು. ಉದ್ಯಮ ಕೇಂದ್ರ. ಜನಸಂಖ್ಯೆ 53,287 ಧಾರವಾಡದಿಂದ ದಾಂಡೇಲಿಗೆ ಅಳ್ನಾವರ ಮೂಲಕ ರೈಲು ಸಂಪರ್ಕವಿದೆ. ತಾಲ್ಲೂಕಿನ ಪ್ರಮುಖ ಊರುಗಳೊಂದಿಗೆ ಉತ್ತಮ ರಸ್ತೆಗಳಿದ್ದು ವಾಹನಸಂಪರ್ಕವಿದೆ.

ದಾಂಡೇಲಿ ಸಾಕಷ್ಟು ನಿಸರ್ಗಸಂಪತ್ತನ್ನೊಳಗೊಂಡು ಅರಣ್ಯ ಮೂಲ ಉದ್ಯಮಗಳಿಗೆ ಅನುಕೂಲವಿದೆ. ಇಲ್ಲಿನ ವೆಸ್ಟ್‌ಕೋಸ್ಟ್ ಪೇಪರ್ ಮಿಲ್ಸ್ ಲಿಮಿಟೆಡ್ ಕಾಗದ ಕಾರ್ಖಾನೆ 1955ರಲ್ಲಿ ಸ್ಥಾಪಿತವಾಗಿದ್ದು. ಇದರ ಮುಖ್ಯ ಕಚೇರಿ ದಾಂಡೇಲಿಯ ಬಾಂಗೂರ್ ನಗರದಲ್ಲಿದ್ದು ಆಡಳಿತ ಕಚೇರಿ ಮುಂಬಯಿಯಲ್ಲಿದೆ.

ಇಂಡಿಯನ್ ಪ್ಲೈವುಡ್ ಕಾರ್ಖಾನೆ 1944ರಲ್ಲಿ ಸ್ಥಾಪಿತವಾದದ್ದು. ಇಂದು ಈ ಕಾರ್ಖಾನೆಯ ಶಾಖೆಗಳು ಧಾರವಾಡ, ತಾಳಗುಪ್ಪ, ಸುಬ್ರಹ್ಮಣ್ಯ (ದ.ಕ.) ಹಂಗಾರಕಟ್ಟೆ, ಅಹಮದಾಬಾದ್, ಇಟಾರ್ಸಿ (ಮಧ್ಯಪ್ರದೇಶ), ಮುಂಬಯಿಗಳಲ್ಲಿವೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಸಂಯುಕ್ತ ಸಹಾಯದಿಂದ ಪ್ರಾರಂಭವಾಗಿದೆ. ಈ ಸಂಸ್ಥೆ ಎಲ್ಲ ವಿಧವಾದ ಪ್ಲೈವುಡ್ ಉತ್ಪಾದಿಸುತ್ತಿದ್ದು ಚಿಪ್‌ಬೋರ್ಡ್ ಕಾರ್ಖಾನೆಯನ್ನೂ ಸ್ಥಾಪಿಸಲಾಗಿದೆ. ಈ ಕಂಪನಿಯ ಮುಖ್ಯ ಕಚೇರಿ ಮುಂಬಯಿಯಲ್ಲಿದೆ.

ಇಲ್ಲಿನ ಫೆರೊ ಮ್ಯಾಂಗನೀಸ್ ಕಾರ್ಖಾನೆ ನಮ್ಮ ದೇಶದಲ್ಲಿ 1956ರಲ್ಲಿ ಸ್ಥಾಪಿಸಲ್ಪಟ್ಟ ಪ್ರಥಮ ಫೆರೊ ಮ್ಯಾಂಗನೀಸ್ ಕಾರ್ಖಾನೆ. ಇಲ್ಲಿ ತಯಾರಾಗುವ ಫೆರೊ ಮ್ಯಾಂಗನೀಸ್ ವಿಶ್ವದಲ್ಲೇ ಅತ್ಯುತ್ತಮವೆಂದು ಪರಿಗಣಿಸಲಾಗಿದೆ. ಇಲ್ಲಿ ಸರ್ಕಾರಿ ಕಟ್ಟಿಗೆ ಕೊರೆಯುವ ಕಾರ್ಖಾನೆ ಸಹ ಇದೆ. ಮೇಲಿನ ಮೂರು ಸ್ವಂತ ಉದ್ದಿಮೆಗಳಾದರೆ ಇದು ಸರ್ಕಾರಿ ಅರಣ್ಯ ಇಲಾಖೆಗೆ ಸೇರಿದೆ. ಈ ಕಾರ್ಖಾನೆಗೆ ಬೇಕಾದ ಕಚ್ಚಾ ಸರಕುಗಳನ್ನು ದಾಂಡೇಲಿಯ ಕಟ್ಟಿಗೆ ಡಿಪೋ ಒದಗಿಸುತ್ತಿದ್ದು. ಈಗ ಇಲ್ಲಿ ರೈಲ್ವೆ ಸ್ಲಿಪರ್ಸ್ ಸಹ ತಯಾರಿಸಲಾಗುತ್ತಿದೆ.

ಕಾಳಿ ಜಲವಿದ್ಯುತ್ ಯೋಜನೆಯ ಕೇಂದ್ರವಾದ ಅಂಬಿಕಾನಗರ (ನೋಡಿ) 22 ಕಿಮೀ ದೂರದಲ್ಲಿದ್ದು ದಾಂಡೇಲಿಯದೇ ಇನ್ನೊಂದು ಭಾಗವೆಂದು ಪರಿಗಣಿಸಲ್ಪಡುತ್ತಿದೆ.

ದಾಂಡೇಲಿಯ ಸುತ್ತಲಿರುವ ಕಾಳಿನದಿಯ ನಿಸರ್ಗಸೌಂದರ್ಯವಲ್ಲದೆ ಇತರ ಕೆಲವು ಆಕರ್ಷಣೆಗಳಲ್ಲಿ ಕಾವಲಾ ಗುಹೆಗಳು, ವಿಂಚೋಲಿ ಧಬಧಬೆ, ನಾಗರಝುರಿ ಕಣಿವೆ, ಸಿಂಥೆರಿರಾಕ್ಸ್, ಹೌರಾ ಮಾದರಿಯ ಗುಂದದ ಪ್ರಾಚೀನ ತೂಗುಸೇತುವೆ ಮತ್ತು ಕಾಳಿ ಬೃಹತ್ ಜಲವಿದ್ಯುತ್ ಯೋಜನೆಯ ಸೈಕ್ಸ್ ಪಾಯಿಂಟ್‌ನ ವಿಹಂಗಮ ನೋಟ - ಇವನ್ನು ಹೆಸರಿಸಬಹುದು. ದಾಂಡೇಲಿ ಅರಣ್ಯ ವನ್ಯಮೃಗ ರಕ್ಷಣಾ ಕೇಂದ್ರದಲ್ಲಿ ಆನೆ, ಕಾಡುಕೋಣ, ಹುಲಿ, ಚಿರತೆ, ಸಾಂಬಾರ್ ಜಿಂಕೆ ಮೊದಲಾದವುಗಳನ್ನು ನೋಡಬಹುದು.

ಪಾಂಡವರು ತಮ್ಮ ವನವಾಸ ಮತ್ತು ಅಜ್ಞಾತವಾಸಗಳಲ್ಲಿ ವಾಸಿಸಿದ ದಂಡಕ ಅರಣ್ಯ ದಾಂಡೇಲಿಯಾಗಿದೆ ಎಂದು ಪುರಾಣಗಳು ಹೇಳುತ್ತವೆ. ಕದಂಬರ ರಾಜ್ಯಕ್ಕೆ ಸೇರಿದ್ದು, ಮಹಾರಾಣಿಯ ಕೋರಿಕೆಯಂತೆ ಕಟ್ಟಲಾದುದೆನ್ನುವ ಕೋಟೆಯೊಂದು ಇಲ್ಲಿತ್ತು. ಕರಿಹೊಳೆಯ ಕಾಳಿ ಅಂಚಿನ ಹಿರೇಬಿದರವಳ್ಳಿಯ ಈ ಕೋಟೆ ಇಂದು ಕಾಳಿನದಿಯ ಗರ್ಭ ಸೇರಿದೆ. (ಪಿ.ಎನ್.ಬಿ.)

**ದಾವಣಗೆರೆ :** ಕರ್ನಾಟಕ ರಾಜ್ಯದ ಒಂದು ಜಿಲ್ಲೆ, ತಾಲ್ಲೂಕು ಮತ್ತು ಅವುಗಳ ಆಡಳಿತ ಕೇಂದ್ರ. 1997ರಲ್ಲಿ ಜಿಲ್ಲಾ ಪುನರ್ವಿಂಗಡಣೆಯಾದಾಗ ಈ ಜಿಲ್ಲೆ ಅಸ್ತಿತ್ವಕ್ಕೆ ಬಂತು. ದಾವಣಗೆರೆ, ಹರಿಹರ ಮತ್ತು ಜಗಳೂರು ತಾಲ್ಲೂಕುಗಳನ್ನು ಹಿಂದಿನ ಚಿತ್ರದುರ್ಗ ಜಿಲ್ಲೆಯಿಂದಲೂ ಚನ್ನಗಿರಿ ಮತ್ತು ಹೊನ್ನಾಳಿ ತಾಲ್ಲೂಕುಗಳನ್ನು ಶಿವಮೊಗ್ಗ ಜಿಲ್ಲೆಯಿಂದಲೂ ಹರಪನಹಳ್ಳಿ ತಾಲ್ಲೂಕನ್ನು ಬಳ್ಳಾರಿ ಜಿಲ್ಲೆಯಿಂದಲೂ ತೆಗೆದುಕೊಂಡು ಆರು ತಾಲ್ಲೂಕುಗಳಿರುವ ಈ ಹೊಸ ಜಿಲ್ಲೆ ರಚಿಸಲಾಗಿದೆ. ಈ ಜಿಲ್ಲೆಯನ್ನು ಉತ್ತರದಲ್ಲಿ ಬಳ್ಳಾರಿ, ಪೂರ್ವದಲ್ಲಿ ಚಿತ್ರದುರ್ಗ, ದಕ್ಷಿಣದಲ್ಲಿ ಶಿವಮೊಗ್ಗ ಮತ್ತು ಚಿಕ್ಕಮಗಳೂರು, ಪಶ್ಚಿಮದಲ್ಲಿ ಶಿವಮೊಗ್ಗ ಮತ್ತು ಹಾವೇರಿ ಜಿಲ್ಲೆಗಳು ಸುತ್ತುವರಿದಿವೆ. ಜಿಲ್ಲೆಯ ವಿಸ್ತೀರ್ಣ 6018ಚಕಿಮೀ. ಹೋಬಳಿಗಳು 24 ಗ್ರಾಮಗಳು, 786. ಜನಸಂಖ್ಯೆ 15,59,222.

**ಭೌತಿಕ ಲಕ್ಷಣಗಳು :** ಪೂರ್ವ ಮತ್ತು ಪಶ್ಚಿಮ ಬೆಟ್ಟಶ್ರೇಣಿಗಳ ನಡುವಿರುವ ಈ ಜಿಲ್ಲೆ ಹೆಚ್ಚು ಎತ್ತರವಲ್ಲದ ಗುಡ್ಡಬೆಟ್ಟಗಳಿಂದ ಮತ್ತು ಸಮತಟ್ಟಾದ ಬಯಲುಗಳಿಂದ ಕೂಡಿದೆ. ಉತ್ತರಕ್ಕೆ ಮತ್ತು ಈಶಾನ್ಯಕ್ಕೆ ಇಳಿಜಾರಾಗಿರುವ ದಖನ್ ಪ್ರಸ್ಥಭೂಮಿಯಲ್ಲಿರುವ ಈ ಜಿಲ್ಲೆ ಒಣ ಪ್ರದೇಶದ ವಲಯದೊಳಗೆ ಬರುತ್ತದೆ. ಇಲ್ಲಿನ ಬಯಲುಗಳ ನಡುವೆ ಸು. 30ಕಿಮೀ ಅಂತರದಲ್ಲಿ ಕಡಿಮೆ ಎತ್ತರದ ಸಮಾನಾಂತವಾಗಿ ವಾಯುವ್ಯ ಆಗ್ನೇಯಾಭಿಮುಖವಾಗಿ ಹಬ್ಬಿದ ಬೆಟ್ಟ ಸಾಲುಗಳಿವೆ. ಈ ಬೆಟ್ಟ ಸಾಲುಗಳ ನಡುವೆ ನದಿ ಕಣಿವೆಗಳು ಕಂಡುಬರುತ್ತವೆ. ಚನ್ನಗಿರಿಪಟ್ಟಣ 671ಮೀ ಎತ್ತರವಿರುವ ಒಂದು ಬೆಟ್ಟ ಸಮೂಹದ ಮೇಲಿದೆ. ಹೊನ್ನಾಳಿ 549ಮೀ ಎತ್ತರದಲ್ಲಿದೆ. ಚನ್ನಗಿರಿ ತಾಲ್ಲೂಕಿನ ದಕ್ಷಿಣ ಮತ್ತು ಪಶ್ಚಿಮ ಭಾಗಗಳಲ್ಲಿ ಗುಡ್ಡ ಸಾಲುಗಳು ಹಬ್ಬಿವೆ. ಹೊನ್ನಾಳಿ ತಾಲ್ಲೂಕಿನ ಕಲ್ವರಂಗನಗಿರಿ 1031ಮೀ ಎತ್ತರವಿದೆ. ಇದು ಜಿಲ್ಲೆಯ ಹೆಚ್ಚು ಎತ್ತರದ ಶಿಖರ. ಜಿಲ್ಲೆಯ ಪಶ್ಚಿಮ ಭಾಗದಲ್ಲಿ ದಕ್ಷಿಣದಿಂದ ಉತ್ತರಕ್ಕೆ ತುಂಗಭದ್ರಾ ನದಿ ಹರಿದರೆ ಪೂರ್ವಕ್ಕೆ ಚಿತ್ರದುರ್ಗ ಜಿಲ್ಲೆಯಲ್ಲಿ ವೇದಾವತಿ ನದಿ ಹರಿಯುತ್ತದೆ. ಮಧ್ಯದಲ್ಲಿ ಜನಗಹಳ್ಳ ಅಥವಾ ಚಿಕ್ಕಹಗರಿಹಳ್ಳ ಹರಿಯುತ್ತದೆ. ಇಲ್ಲಿ ಭೂಮಿಯ ಏರುತಗ್ಗುಗಳು ಈ ನದಿ ಕಣಿವೆಗಳ ಜಾಡಿನಲ್ಲೇ ರೂಪುಗೊಂಡಿವೆ.

ಹೊಸದುರ್ಗದಿಂದ ಪ್ರಾರಂಭವಾಗುವ ಬೆಟ್ಟಸಾಲು ಮಾಯಕೊಂಡದ ಮೂಲಕ ದಾವಣಗೆರೆ ತಾಲ್ಲೂಕಿನಲ್ಲಿ ಅಣಜಿವರೆಗೆ ಹಬ್ಬಿದೆ. ದಾವಣಗೆರೆ ತಾಲ್ಲೂಕಿನ ಮಾಯಾಕೊಂಡದ ಬಳಿ ಮತ್ತು ಹರಪನಹಳ್ಳಿ ದಕ್ಷಿಣ ಭಾಗದಲ್ಲಿ ಬೆಟ್ಟ ಸಮೂಹಗಳಿವೆ. ಇಲ್ಲಿನ ಬೆಟ್ಟಗುಡ್ಡಗಳು ಹೆಚ್ಚಾಗಿ ಕಲ್ಲು ಬಂಡೆಗಳಿಂದ ಕೂಡಿವೆ. ಹರಪನಹಳ್ಳಿ ತಾಲ್ಲೂಕಿನಲ್ಲಿ ಮಲ್ಲಪ್ಪನಗುಡ್ಡ ಶ್ರೇಣಿ ಮತ್ತು ಉತ್ತರಕ್ಕೆ ಕಲ್ಲಹಳ್ಳಗುಡ್ಡ ಶ್ರೇಣಿ ಇವೆ. ಕಲ್ಲಹಳ್ಳಗುಡ್ಡ ಸು.845ಮೀ ಎತ್ತರವಿದೆ. ಚಿಕ್ಕಹಗರಿ ನದಿ ಕಣಿವೆಯಲ್ಲಿರುವ ಶಿಖರ 853ಮೀ ಎತ್ತರವಿದೆ. ಈ ಶ್ರೇಣಿಯಲ್ಲೇ ತೆಲಿಗಿಗುಡ್ಡವಿದೆ. ಹರಪನಹಳ್ಳಿ ಪಟ್ಟಣದ ದಕ್ಷಿಣಕ್ಕೆ ನರಸಿಂಹದೇವರಗುಡ್ಡ (820ಮೀ), ಐತಿಹಾಸಿಕ ಉಚ್ಚಂಗಿದುರ್ಗ (861ಮೀ) ಇವೆ. ಈ ಜಿಲ್ಲೆಯಲ್ಲಿ ಹೆಚ್ಚಾಗಿ ಕುರುಚಲು ಕಾಡುಗಳಿವೆ. ನೀರಾವರಿ ಹೊಂದಿದ ಗದ್ದೆ ಬಯಲುಗಳಿವೆ. ಯಥೇಚ್ಛ ಹುಲ್ಲುಗಾವಲುಗಳು ಕಂಡುಬರುತ್ತವೆ.

ಖನಿಜ ಸಂಪತ್ತು: ಧಾರವಾಡ ಶಿಲಾವರ್ಗ ಮತ್ತು ಗ್ರಾನೈಟ್ ಗುಡ್ಡಗಳು ಇಲ್ಲಿ ಹಾಸುಹೊಕ್ಕಾಗಿವೆ. ಭೂಗರ್ಭ ಕ್ರಿಸ್ಟಲೆನ್ ಶಿಲಾವರ್ಗ ಮತ್ತು ಗ್ರಾನೈಟ್ ಬೆಣಚುಕಲ್ಲಿನಿಂದ ಕೂಡಿದೆ. ಕಣಶಿಲೆಗಳು, ಧಾರವಾಡ ಶ್ರೇಣಿ ಕಲ್ಲುಗಳು ಹೆಚ್ಚಾಗಿವೆ. ಈ ಶಿಲಾ ಹಂದರ ಭಾರತದ ಅತ್ಯಂತ ಪ್ರಾಚೀನ ಶಿಲಾ ರಚನೆಗೆ ಸೇರಿದವು. ಈ ವಲಯ ಚಿತ್ರದುರ್ಗ ಶಿಲಾವಲಯವೆಂದೇ ಪರಿಗಣಿತವಾಗಿದೆ. ಜ್ವಾಲಾಮುಖಿಯ ಲಾವಾ ರಚನೆಗಳೂ ಅಲ್ಲಲ್ಲಿ ಕಂಡುಬರುತ್ತವೆ. ಇಲ್ಲಿನ ಗ್ರಾನೈಟ್ ಶಿಲಾವಲಯ ಹೆಚ್ಚಾಗಿ ನಸು ನೇರಳೆ ಮತ್ತು ಬೂದು ಬಣ್ಣದ್ದು.

ಜಿಲ್ಲೆ ಅಮೂಲ್ಯವಾದ ಖನಿಜ ಸಂಪತ್ತಿನಿಂದ ಕೂಡಿದೆ. ಕಾರ್ಡಿಯರೆಟ್, ಸಿಲಿನಮೈಟ್ ಅಥವಾ ಕಯೊನೈಟ್ ಖನಿಜಗಳಿವೆ. ಮಾಯಾಕೊಂಡದ ಬಳಿ ಕಲ್ನಾರು ದೊರೆಯುತ್ತದೆ. ಆಂಟಿಮನಿ, ತಾಮ್ರ, ಕ್ರೋಮೈಟ್ ಮತ್ತು ಚಿನ್ನದ ಅದುರು ಕಂಡುಬರುತ್ತವೆ. ಕೆಲವು ಝರಿಗಳಲ್ಲಿ ಹಿಂದೆ ಚಿನ್ನದ ಅದುರನ್ನು ಆರಿಸಿ ತೆಗೆಯುತ್ತಿದ್ದ ಬಗ್ಗೆ ತಿಳಿದುಬರುತ್ತದೆ. ದಾವಣಗೆರೆ ತಾಲ್ಲೂಕಿನ ಹಳೆಕಲ್ಲು, ಜಗಳೂರು ತಾಲ್ಲೂಕಿನ ಹೊನ್ನೆಮರಡಿಗಳು ಚಿನ್ನದ ನಿಕ್ಷೇಪವನ್ನು ಹೊಂದಿವೆ. ಕೆಲವಡೆ

ಕಬ್ಬಿಣದ ಅದುರಿದೆ. ಜಗಳೂರು ತಾಲ್ಲೂಕಿನ ಹೊಸಕೆರೆ ಮತ್ತು ದಾವಣಗೆರೆ ತಾಲ್ಲೂಕಿನ ದೇವರಬಿಳಿಕೆರೆಗಳಲ್ಲಿ ಸುಣ್ಣಕಲ್ಲು ಅಗಾಧ ಪ್ರಮಾಣದಲ್ಲಿದೆ. ಪೂರ್ವೋಕ್ತ ಉಭಯ ತಾಲ್ಲೂಕುಗಳಲ್ಲೂ ಅಲ್ಲಲ್ಲಿ ಮ್ಯಾಂಗನೀಸ್ ಅದುರು ಕಂಡುಬರುತ್ತದೆ. ಮಲೆಬೆನ್ನೂರು ಬಳಿ ಜೇಡಿಮಣ್ಣು ಸಿಗುತ್ತದೆ. ಅನೇಕ ಸ್ಥಳಗಳಲ್ಲಿ ಕಲ್ಲು ಚಪ್ಪಡಿಗಳನ್ನು ತೆಗೆಯಲು ಅನುಕೂಲಕರವಾದ ಅರೆಗಳಿವೆ. ಚನ್ನಗಿರಿ ಮತ್ತು ಹೊನ್ನಾಳಿ ತಾಲ್ಲೂಕುಗಳಲ್ಲಿ ಸುಣ್ಣದ ಕಲ್ಲು ಹಾಗೂ ಸಾಬೂನು ಕಲ್ಲುಗಳಿವೆ. ಈ ಜಿಲ್ಲೆಯಲ್ಲಿ ಅನೇಕ ಕಲ್ಲುಗಣಿಗಳಿವೆ.

**ನದಿಗಳು :** ಈ ಜಿಲ್ಲೆಯಲ್ಲಿ, ಬೀಳುವ ಮಳೆ ಪ್ರಮಾಣ ಕಡಿಮೆ ಇರುವುದರಿಂದ ಇಲ್ಲಿ ಹುಟ್ಟಿ ಹರಿಯುವ ದೊಡ್ಡ ನದಿಗಳು ಇಲ್ಲ. ಜಲಸಂಪನ್ಮೂಲವೂ ಕಡಿಮೆ. ಜಿಲ್ಲೆಯ ಸರಾಸರಿ ಮಳೆ 629.10 ಮಿಮೀ. ಆದರೆ ಈ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ರಾಜ್ಯದ ಪ್ರಮುಖ ನದಿಗಳಲ್ಲೊಂದಾದ ತುಂಗಭದ್ರಾ ನದಿ ಹರಿಯುತ್ತದೆ. ಶಿವಮೊಗ್ಗ ಜಿಲ್ಲೆಯಿಂದ ಹೊನ್ನಾಳಿ ತಾಲ್ಲೂಕನ್ನು ಪ್ರವೇಶಿಸುವ ಈ ನದಿ ಮುಂದೆ ಹಾವೇರಿ ಜಿಲ್ಲೆ ಮತ್ತು ದಾವಣಗೆರೆ ಜಿಲ್ಲೆಯ ಗಡಿಯಾಗಿ ಪರಿಣಮಿಸುತ್ತದೆ. ಜಗಳೂರು ತಾಲ್ಲೂಕಿನಲ್ಲಿ ಹುಟ್ಟುವ ಜನಗಹಳ್ಳ ಮುಂದೆ ಚಿಕ್ಕಹಗರಿ ಎನಿಸಿಕೊಂಡು ಹರಪನಹಳ್ಳಿ ತಾಲ್ಲೂಕಿನಲ್ಲಿ ಹರಿದು ಬಳ್ಳಾರಿ ಜಿಲ್ಲೆಯನ್ನು ಪ್ರವೇಶಿಸಿ ತುಂಗಭದ್ರಾ ಜಲಾಶಯದ ಬಳಿ ಹಿನ್ನೀರನ್ನು ಕೂಡಿಕೊಳ್ಳುತ್ತದೆ. ಹೊಳಲ್ಕೆರೆ ತಾಲ್ಲೂಕಿನ ಪಶ್ಚಿಮದ ಬೆಟ್ಟದಲ್ಲಿ ಹುಟ್ಟುವ ಸ್ಯಾಗಲಹಳ್ಳ ದಾವಣಗೆರೆ ತಾಲ್ಲೂಕಿನ ಮುಖಾಂತರ ಹರಿದು ತುಂಗಭದ್ರಾ ನದಿಯನ್ನು ಹರಿಹರ ಪಟ್ಟಣದ ಹತ್ತಿರ ಸೇರುತ್ತದೆ. ಇದನ್ನು ಹರಿದ್ರಾ ಅಥವಾ ಸೂಳೆಕೆರೆಹಳ್ಳ ಎಂದೂ ಕರೆಯುತ್ತಾರೆ. ಚನ್ನಗಿರಿ ತಾಲ್ಲೂಕಿನಲ್ಲಿ ಹಿರಿಹಳ್ಳಿ ಮತ್ತು ಸೊಪ್ಪಿನಹಳ್ಳಿ ಗಳೆಂಬ ಕಿರುತೊರೆಗಳಿಗೆ ಅಡ್ಡಲಾಗಿ ಸೂಳೆಕೆರೆಯನ್ನು ನಿರ್ಮಿಸಲಾಗಿದೆ. ಜಗಳೂರು ತಾಲ್ಲೂಕಿನಲ್ಲಿ ಅನೇಕ ಕಿರುತೊರೆಗಳು ಹುಟ್ಟಿ ಹರಿಯುತ್ತವೆ.

ಸಸ್ಯವರ್ಗ: ಜಿಲ್ಲೆ ಕಡಿಮೆ ಮಳೆ ಬೀಳುವ ಪ್ರದೇಶದಲ್ಲಿರುವುದು, ಭೂಮಿ ಅಲೆಯೋಪಾದಿಯ ಬಯಲಿನಿಂದ ಕೂಡಿರುವುದು, ಅಲ್ಲಲ್ಲಿ ಚಿಕ್ಕಪುಟ್ಟ ಬೆಟ್ಟಸಾಲುಗಳಿರುವುದು ಹೆಚ್ಚಿನ ಸಸ್ಯವರ್ಗದ ಬೆಳೆವಣಿಗೆಗೆ ಅನುಕೂಲಕರವಾಗಿಲ್ಲ. ಒಂದು ಕಾಲದಲ್ಲಿ ಫಲವತ್ತಾದ ಮಣ್ಣು ಮತ್ತು ತೇವಾಂಶವಿರುವ ಕಣಿವೆಗಳಲ್ಲಿ ಮಧ್ಯಮ ಪ್ರಮಾಣದ ಕಾಡು ಬೆಳೆದಿದ್ದ ಎಲ್ಲ ಸಾಧ್ಯತೆಗಳಿವೆ. ಈಗ ಭೂಮಿ ವ್ಯಾಪಕ ಸಾಗುವಳಿಗೊಳಗಾಗಿರುವುದರಿಂದ ಸಸ್ಯವರ್ಗ ಕ್ಷೀಣಿಸಿದೆ. ಕಲ್ಲುಬೆಟ್ಟಗಳ ಮಧ್ಯೆ ಬೆಳೆಯುವ ಹುಣಿಸೆ, ಜಾಲಿ, ಹಿಪ್ಪೆ ಮರಗಳು ಹೆಚ್ಚಾಗಿ ಕಂಡುಬರುತ್ತವೆ. ಕಂದಾಯ ಇಲಾಖೆಯ ದಾಖಲೆಗಳು ಒಂದು ಕಾಲದಲ್ಲಿ ಉತ್ತಮವಾದ ನಾಟ ಮರಗಳು ಇದ್ದುದಕ್ಕೆ ಪುರಾವೆ ಒದಗಿಸುತ್ತವೆ. ಉರುವಲಿಗೆ, ಮರಮುಟ್ಟುಗಳಿಗೆ ಅವ್ಯಾಹತವಾಗಿ ಗಿಡಮರಗಳನ್ನು ಕಡಿದಿದ್ದರಿಂದ ಅವುಗಳಿದ್ದ ಜಾಗ ಈಗ ಬಟಾಬಯಲಾಗಿದೆ. ಇತ್ತೀಚೆಗೆ ಅಲ್ಲಲ್ಲಿ ನೆಡುತೋಪುಗಳನ್ನು ಬೆಳೆಸಲಾಗಿದೆ. ಅಲ್ಲಿ ಹಲಸು, ಬೇವು, ಹುಣಿಸೆ, ಸುಜ್ಜಲು ಮರಗಳು ಕಂಡುಬರುತ್ತವೆ. ದಿಂಡಿಗ, ತರದ (ಕೆಂಪುಕೈರ), ಹೊಂಗೆ, ಕಕ್ಕೆ ಮರಗಳು ಹಳ್ಳ ಕಣಿವೆಗಳಲ್ಲಿ ಕಂಡುಬರುತ್ತವೆ.

ಅರಣ್ಯ ಇಲಾಖೆ ಸಾಲು ಮರಗಳನ್ನು ಸಾಮಾಜಿಕ ಅರಣ್ಯಗಳನ್ನು ಬೆಳೆಸುವ ಯೋಜನೆಯನ್ನು ಕೈಗೊಂಡಿದೆ. ತೇಗದ ಮರ ಬೆಳೆಸುವ ಪ್ರಯತ್ನ ಸಾಗಿದೆ. ಆಗಾಗ ಸಂಭವಿಸುವ ಬರಗಾಲ ಸಸ್ಯಗಳ ಅಭಿವೃದ್ಧಿಗೆ ತಡೆಯಾಗಿದೆ. ಹರಪನಹಳ್ಳಿ, ಜಗಳೂರು ತಾಲ್ಲೂಕುಗಳಲ್ಲಿ ವಿಶೇಷವಾಗಿ ಕುರುಚಲು ಕಾಡು ಹಬ್ಬಿದೆ. ಬಂಜರು ಭೂಮಿಯಲ್ಲಿ ಬೆಳೆಯುವ ಹುಲ್ಲು ಜಾನುವಾರುಗಳಿಗೆ, ಕುರಿಗಳಿಗೆ ಮೇವು ಒದಗಿಸುತ್ತದೆ. ಜಿಲ್ಲೆಯಲ್ಲಿ ವೃಕ್ಷ ಮತ್ತು ತೋಪುಗಳಿರುವ ಪ್ರದೇಶದ ವಿಸ್ತೀರ್ಣ 5048 ಹೆಕ್ಟೇರ್, ಬಂಜರು ಮತ್ತು ಗೋಮಾಳ ಅನುಕ್ರಮವಾಗಿ 9,231 ಹೆಕ್ಟೇರ್ ಮತ್ತು 19,598 ಹೆಕ್ಟೇರ್ (1998-99).

ಪ್ರಾಣಿವರ್ಗ: ಕಾಡು ಹೆಚ್ಚಿಲ್ಲದಿರುವುದರಿಂದ ಪ್ರಾಣಿ ವೈವಿಧ್ಯವೂ ಕಡಿಮೆ. ಆದರೆ ಜಿಲ್ಲೆಯ ಕೆಲವು ಗುಡ್ಡಗಳಲ್ಲಿ ಚಿರತೆ, ಕಿರುಬ, ತೋಳ, ಕರಡಿ, ಕಾಡುಹಂದಿಗಳಿವೆ. ಅಲ್ಲೊಂದು ಇಲ್ಲೊಂದು ಕಪ್ಪುಪಟ್ಟೆ ಹುಲಿ ಕಂಡುಬರುವುದುಂಟು. ಚುಕ್ಕಿ ಜಿಂಕೆಗಳು, ಮುಂಗಸಿ, ಮೊಲ, ಮಂಗಗಳಿವೆ. ಉರಗಗಳಲ್ಲಿ ಮಂಡಲಗಳಂತಹ ಹಾವುಗಳಿವೆ. ಕಾಡುಕೋಳಿ,ಮರಕುಟಿಗ, ಪಾರಿವಾಳ, ಗೌಜಗ, ನೀರುಕೋಳಿ, ಗಿಡುಗ, ಹದ್ದು, ಕಾಜಾಣ ಮೊದಲಾದ ವರ್ಗವಿದೆ.

ವ್ಯವಸಾಯ: ದಾವಣಗೆರೆ ಜಿಲ್ಲೆ ವ್ಯವಸಾಯ ಪ್ರಧಾನವಾದುದು. ಇಲ್ಲಿನ ಜನಸಂಖ್ಯೆಯ ಮೂರನೆಯ ಎರಡರಷ್ಟು ಭಾಗ ಗ್ರಾಮೀಣ ಪ್ರದೇಶದಲ್ಲಿದೆ. ಇಲ್ಲಿನ ಮಣ್ಣು ವ್ಯವಸಾಯಕ್ಕೆ ಅನುಕೂಲಕರವಾಗಿದೆ. ಚನ್ನಗಿರಿ ತಾಲ್ಲೂಕಿನ ಶಾಂತಿಸಾಗರದ ವಾಯುವ್ಯ ಭಾಗದಲ್ಲಿ ಫಲವತ್ತಾದ ಕಪ್ಪುಮಣ್ಣು ಕಂಡುಬರುತ್ತದೆ. ತಾಲ್ಲೂಕಿನ ಈಶಾನ್ಯ ಭಾಗದಲ್ಲಿ ಮರಳುಮಿಶ್ರಿತ ಮಣ್ಣಿದೆ. ಹೊನ್ನಾಳಿ ತಾಲ್ಲೂಕಿನ ಬಹುಭಾಗ ಮರಳುಮಿಶ್ರಿತ ಕೆಂಪು ಮಣ್ಣು, ಇಲ್ಲಿ ಸಾರಜನಕ ಮತ್ತು ರಂಜಕದ ಕೊರತೆ ಕಂಡುಬರುತ್ತದೆ. ಕಪ್ಪುಮಣ್ಣಿನ ಭೂಮಿ ದಾವಣಗೆರೆ ಮತ್ತು ಹರಪನಹಳ್ಳಿಗಳಲ್ಲಿ ಹೆಚ್ಚು. ಒಟ್ಟು ಜಿಲ್ಲೆಯಲ್ಲಿ ಕಪ್ಪು, ಕೆಂಪು ಮತ್ತು ಮಧ್ಯಮ ಕಪ್ಪು ಮಣ್ಣಿದೆ. ಹತ್ತಿ, ನೆಲಗಡಲೆ, ಜೋಳ, ತೊಗರಿ ಮತ್ತು ರಾಗಿ ಬೆಳೆಯಲು ಜಿಲ್ಲೆಯ ನೆಲ ಪ್ರಶಸ್ತವಾಗಿದೆ. ಭದ್ರಾ ಅಣೆಕಟ್ಟು ಮತ್ತು ಶಾಂತಿಸಾಗರದಿಂದಾಗಿ ಸಾಕಷ್ಟು ಪ್ರದೇಶ ನೀರಾವರಿಗೆ ಒಳಪಟ್ಟಿದೆ. ಈ ಅಚ್ಚುಕಟ್ಟು ಪ್ರದೇಶದಲ್ಲಿ ಜೇಡಿಮಣ್ಣು ಅಧಿಕವಿದ್ದು ಹೆಚ್ಚಿನ ಮಣ್ಣು ಪೋಷಣೆಗೆ ಗೊಬ್ಬರ ಹಾಗೂ ಹೊಸಮಣ್ಣು ಹಾಕುವ ಅಗತ್ಯವಿದೆ. ಜಗಳೂರು ತಾಲ್ಲೂಕಿನ ಸಂಗೇನಹಳ್ಳಿ ಮತ್ತು ತುಪ್ಪದಹಳ್ಳ ಕೆರೆಗಳು ಹಾಗೂ ದಾವಣಗೆರೆ ತಾಲ್ಲೂಕಿನ ಅಣಜಿ ಮತ್ತು ಕೊಡಗನೂರು ಕೆರೆಗಳು ಜಿಲ್ಲೆಯ ದೊಡ್ಡಕೆರೆಗಳು. ಚನ್ನಗಿರಿ ಮತ್ತು ಹೊನ್ನಾಳಿ ತಾಲ್ಲೂಕುಗಳಲ್ಲಿ ಮಳೆ ಆಧಾರಿತ ಭೂಮಿಯೇ ಹೆಚ್ಚು. ಅಲ್ಲಲ್ಲಿ ಕೊಳವೆಬಾವಿಗಳನ್ನು ಕೊರೆಸಿ ನೀರಾವರಿಗೆ ವ್ಯವಸ್ಥೆ ಮಾಡಿಕೊಳ್ಳಲಾಗಿದೆ. ಭದ್ರಾ ಜಲಾಶಯದಿಂದ ಬರುವ ನಾಲೆಗಳು ದಾವಣಗೆರೆ ಮತ್ತು ಹರಿಹರ ತಾಲ್ಲೂಕಿನ ಕೆಲವು ಭಾಗಗಳಿಗೆ ನೀರೊದಗಿಸುತ್ತವೆ. ಕಾಲುವೆಗಳಿಂದ ಜಿಲ್ಲೆಯಲ್ಲಿ 74,377 ಹೆಕ್ಟೇರ್ ನೀರೊದಗುತ್ತದೆ. ಕೆರೆಯಿಂದ 4,281 ಹೆಕ್ಟೇರ್, ಬಾವಿಗಳಿಂದ 4835 ಹೆಕ್ಟೇರ್, ಕೊಳವೆ ಬಾವಿಗಳಿಂದ 32,569 ಹೆಕ್ಟೇರ್, ಏತನೀರಾವರಿಯಿಂದ 11,077 ಹೆಕ್ಟೇರ್ ನೀರಾವರಿ ಸೌಲಭ್ಯ ಒದಗಿದೆ.

ಜಿಲ್ಲೆಯಲ್ಲಿ ಬತ್ತ (118,178ಹೆ.), ರಾಗಿ (35,741ಹೆ.), ಜೋಳ (56,587ಹೆ.), ಸಜ್ಜೆ (914ಹೆ.), ಮುಸುಕಿನ ಜೋಳ (103,680 ಹೆ.), ಗೋಧಿ (601ಹೆ.), ಇತರೆ ಏಕದಳ ಧಾನ್ಯ ಮತ್ತು ಉಪತೃಣ ಬೆಳೆಗಳು (3,383ಹೆ.), ಕಡಲೆ (2151ಹೆ.), ತೊಗರಿ (6,657ಹೆ.), ದ್ವಿದಳ ಧಾನ್ಯಗಳು (19,713ಹೆ.), ನೆಲಗಡಲೆ (37,712ಹೆ.), ಕಬ್ಬು (12,519ಹೆ.), ಹತ್ತಿ (26,284ಹೆ.) ಬೆಳೆಯಲಾಗುತ್ತದೆ (1998-99). ಬರಗಾಲದ ಬವಣೆ, ಮಾರುಕಟ್ಟೆಯಲ್ಲಿ ಬೆಲೆಗಳ ಕುಸಿತ, ಸಣ್ಣ ಹಿಡುವಳಿಗಳು ರೈತನ ಋಣಭಾರ ಹೆಚ್ಚಿಸಲು ಕಾರಣವಾಗಿರುವ ಸಂಗತಿಗಳಾಗಿವೆ. ಜಾನುವಾರುಗಳ ಪೋಷಣೆ ಮತ್ತು ಅಭಿವೃದ್ಧಿಗಾಗಿ ಪಶುವೈದ್ಯ ಆಸ್ಪತ್ರೆಗಳನ್ನು ಸ್ಥಾಪಿಸಲಾಗಿದೆ. ಜಿಲ್ಲೆಯಲ್ಲಿ 7 ಪಶುವೈದ್ಯ ಶಾಲೆಗಳು, 44 ಚಿಕಿತ್ಸಾಲಯಗಳು, 85 ಪಶುವೈದ್ಯ ಕೇಂದ್ರಗಳು, 6 ಸಂಚಾರಿ ಚಿಕಿತ್ಸಾಲಯಗಳು, 21 ಕೃತಕ ಗರ್ಭಧಾರಣಾ ಕೇಂದ್ರಗಳಿವೆ. ಮೀನು ಸಾಕಣೆ ಒಂದು ಕೃಷಿ ಉದ್ಯಮವಾಗಿ ಬೆಳೆದಿದ್ದು ವಾರ್ಷಿಕವಾಗಿ 4080ಮೆ. ಟನ್ ಮೀನನ್ನು ಹಿಡಿಯಲಾಗುತ್ತದೆ.

ಕೈಗಾರಿಕೆ: ಕೈಗಾರಿಕೆ ಮತ್ತು ವ್ಯಾಪಾರೋದ್ಯಮಗಳಿಗೆ ದಾವಣಗೆರೆ ಮೊದಲಿನಿಂದಲೂ ಮಹತ್ವ ಪಡೆದಿರುವ ಸ್ಥಳ. ಇಲ್ಲಿನ 11-12ನೆಯ ಶತಮಾನದ ಶಾಸನಗಳಲ್ಲಿ ಈ ಊರಿನಲ್ಲಿ ವರ್ತಕರು ಮತ್ತು ವಿವಿಧ ಉಪಕಸಬುಗಳ ಜನ ನೆಲಸಿ ದೇವಾಲಯಗಳನ್ನು ಕಟ್ಟಿಸಿದ, ವಿವಿಧ ದಾನಧರ್ಮಗಳನ್ನು ಮಾಡಿದ ವಿಚಾರಗಳು ತಿಳಿದುಬರುತ್ತವೆ. ಪ್ರಾಚೀನ ಕಾಲದಿಂದಲೂ ಈ ಊರು ರಾಜ್ಯದ ಮತ್ತು ಅಂತಾರಾಜ್ಯದ ಹೆದ್ದಾರಿಯ ಮುಖ್ಯಸ್ಥಳವಾಗಿದ್ದದ್ದು ಸಹ ಕಂಡುಬರುತ್ತದೆ. 19ನೆಯ ಶತಮಾನದ

ಪ್ರಾರಂಭದ ವರ್ಷದಲ್ಲಿ (1801) ಫ್ರಾನ್ಸಿಸ್ ಬುಕಾನನ್ ಎಂಬ ಪ್ರವಾಸಿ ದಾವಣಗೆರೆಗೆ ಭೇಟಿ ನೀಡಿ ಇದು ವಾಣಿಜ್ಯ ಮತ್ತು ಕೈ ಕಸಬುಗಳ ಕೇಂದ್ರವಾಗಿದ್ದುದನ್ನು ದಾಖಲಿಸಿದ್ದಾನೆ. ಆಗ ಇಲ್ಲಿ 500 ಮನೆಗಳಿದ್ದುದನ್ನೂ ಒಂದು ಹೊಸ ಬಜಾರನ್ನು ಕಟ್ಟುತ್ತಿದ್ದುದನ್ನೂ ಪ್ರಸ್ತಾಪಿಸಿದ್ದಾನೆ. ಅಡಕೆ, ಮೆಣಸು, ಹತ್ತಿ ಕಂಬಳಿ - ಇವೆಲ್ಲ ಇಲ್ಲಿಂದ ಮದರಾಸು ಪಟ್ಟಣದ ಮೂಲಕ ವಿದೇಶಗಳಿಗೆ ರಫ್ತಾಗುತ್ತಿದ್ದ ವಿಷಯವನ್ನು ಪ್ರಸ್ತಾಪಿಸಿದ್ದಾನೆ. ಹತ್ತಿ ಬಟ್ಟೆ ಮತ್ತು ಕಂಬಳಿ ನೇಯ್ಗೆಗೆ ಇದು ಪ್ರಸಿದ್ಧವಾಗಿತ್ತು. ಇಂತಹ ಪ್ರಮುಖ ಕೇಂದ್ರವಾದ ದಾವಣಗೆರೆ ಜಿಲ್ಲಾ ಕೇಂದ್ರವಾದದ್ದು ಇತ್ತೀಚೆಗೆ, ಆದರೆ ಅದರ ಕೈಗಾರಿಕೋದ್ಯಮ 20ನೆಯ ಶತಮಾನದ ಪ್ರಾರಂಭದಿಂದಲೂ ಅಭಿವೃದ್ಧಿ ಹೊಂದುತ್ತ ಬಂದಿತ್ತು. ಬೆಂಗಳೂರಿನಿಂದ ಉತ್ತರ ಕರ್ನಾಟಕ ಮತ್ತು ಮಹಾರಾಷ್ಟ್ರಗಳನ್ನು ಸಂಪರ್ಕಿಸುವ ರಸ್ತೆ ಮತ್ತು ರೈಲು ಮಾರ್ಗಗಳು ದಾವಣಗೆರೆ ಮೂಲಕ ಹಾದುಹೋಗುತ್ತಿದ್ದವು. ಆಗ ದಾವಣಗೆರೆ ಎಲ್ಲ ದಿಕ್ಕುಗಳ ವ್ಯಾಪಾರ ವ್ಯವಹಾರಗಳ ಸ್ಥಳಗಳಿಗೆ ಸಂಪರ್ಕಿಸುವ ಕೂಡುಸ್ಥಳವಾಯಿತು. ಪುಣೆ - ಬೆಂಗಳೂರು ರಾಷ್ಟ್ರೀಯ ಹೆದ್ದಾರಿ, ಮುಂಬಯಿ - ಮೀರಜ್ - ಬೆಂಗಳೂರು ಬ್ರಾಡ್‌ಗೇಜ್ ರೈಲುಮಾರ್ಗ ಇಲ್ಲಿ ಹಾದುಹೋಗುತ್ತದೆ. 19ನೆಯ ಶತಮಾನದ ಪ್ರಾರಂಭದಲ್ಲೇ ಬಟ್ಟೆ ನೇಯ್ಗೆ, ನೂಲು ತೆಗೆಯುವುದು ಮತ್ತು ಎಣ್ಣೆ ತೆಗೆಯುವ ಕಾರ್ಖಾನೆಗಳು ಅಸ್ತಿತ್ವಕ್ಕೆ ಬಂದವು.

1903ರಲ್ಲಿ ಶ್ರೀ ಚಿಗಟೇರಿ ಮಿಲ್ಸ್ ಲಿಮಿಟೆಡ್ ಕಂಪನಿ ಸ್ಥಾಪಿತವಾಯಿತು. ಇದನ್ನು ಜಿಲ್ಲೆಯ ಪ್ರಥಮ ಯಾಂತ್ರೀಕೃತ ಹತ್ತಿಗಿರಣಿ ಎನ್ನಬಹುದು. 1905ರಲ್ಲಿ ಶ್ರೀ ಬಿಹ್ಮಪ್ಪ ತವನಪ್ಪನವರು ಜಿನ್ನಿಂಗ್ ಕಾರ್ಖಾನೆ ತೆರೆದರು. ಅವರದೇ ಕಂಪನಿಯ ಅಡಿಯಲ್ಲಿ 1918ರಲ್ಲಿ ವನಸ್ಪತಿ ಮತ್ತು ಕಡಲೆಕಾಯಿ ಎಣ್ಣೆ ತಯಾರಿಸುವ ಘಟಕ ಕಾರ್ಯರೂಪಕ್ಕೆ ಬಂತು. ಬಿ.ಟಿ.ಬಾರ್ ಸೋಪ್ ತಯಾರಿಸುವ ಸೋಪಿನ ಉದ್ಯಮವೂ ಇವರಿಂದಲೇ ಪ್ರಾರಂಭವಾಯಿತು. ಕೊಟ್ಟೂರ ಬಸವೇಶ್ವರ ಜಿನ್ನಿಂಗ್ ಕಾರ್ಖಾನೆ, ರವಿ ವೆಜಿಟೆಬಲ್ ಆಯಿಲ್ ಮಿಲ್ಸ್‌ಗಳು ಇದೇ ಸಂದರ್ಭದಲ್ಲಿ ಅಸ್ತಿತ್ವಕ್ಕೆ ಬಂದವು. 1939ರಲ್ಲಿ ದಾವಣಗೆರೆ ಕಾಟನ್ ಮಿಲ್ಸ್ (ಡಿ.ಸಿ.ಎಂ.) ತೆರೆಯಲಾಯಿತು. 1954ರಲ್ಲಿ ಶ್ರೀಶಂಕರ ಟೆಕ್ಸ್‌ಟೈಲ್ಸ್ ಮಿಲ್ಸ್, 1946ರಲ್ಲಿ ಶ್ರೀ ಗಣೇಶ್ ಟೆಕ್ಸ್‌ಟೈಲ್ಸ್ ಮಿಲ್ಸ್ ಪ್ರಾರಂಭವಾದವು. ಸ್ವಾತಂತ್ರ್ಯ ಬರುವ ಹೊತ್ತಿಗೆ ಬೆಂಗಳೂರನ್ನು ಬಿಟ್ಟರೆ ದಾವಣಗೆರೆ ಮೈಸೂರು ಸಂಸ್ಥಾನದ ಪ್ರಮುಖ ಕೈಗಾರಿಕಾ ನಗರವೆಂಬ ಕೀರ್ತಿಗೆ ಪಾತ್ರವಾಯಿತು. ಭದ್ರಾ ಜಲಾಶಯ ನಿರ್ಮಾಣದಿಂದ ನೀರಾವರಿ ಪ್ರದೇಶ ವಿಸ್ತರಿಸಿದಂತೆಲ್ಲ ಸಕ್ಕರೆ ಕಾರ್ಖಾನೆಗಳು ಸ್ಥಾಪಿತವಾದವು. ಕಾರ್ಮಿಕರ ಸಂಖ್ಯೆ ಗಣನೀಯವಾಗಿ ಬೆಳೆಯಿತು. ಹೊರಗಿನಿಂದ ವ್ಯವಹಾರಸ್ಥರು, ಉದ್ಯೋಗಾಕಾಂಕ್ಷಿಗಳು ಬಂದು ಇಲ್ಲಿ ನೆಲಸಿದರು. ಆಟದ ವಸ್ತುಗಳು, ಆಹಾರ, ಮುದ್ರಣ, ಚರ್ಮ ಮತ್ತು ಮರದ ವಸ್ತುಗಳಿಗೆ ಸಂಬಂಧಿಸಿದ ನೂರಾರು ಕೈಗಾರಿಕಾ ಘಟಕಗಳು ತಲೆಎತ್ತಿದವು. ವಿದ್ಯುಚ್ಛಕ್ತಿ, ಉತ್ಪಾದನೆ, ಡಿಸ್ಟಿಲರಿ ಘಟಕಗಳು, ಜೈವಿಕ ಗೊಬ್ಬರ ತಯಾರಿಕೆ ಮುಂತಾದ ಕ್ಷೇತ್ರಗಳಲ್ಲೂ ಉದ್ಯಮಗಳು ತಲೆಎತ್ತಿದವು. ಈ ಎಲ್ಲ ಕಾರಣಗಳಿಗಾಗಿ ದಾವಣಗೆರೆ ನಗರ ಕರ್ನಾಟಕದ ಮ್ಯಾಂಚೆಸ್ಟರ್ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು.

ದಾವಣಗೆರೆಯ ಅನಂತರ ಹೆಚ್ಚು ಕಾರ್ಖಾನೆಗಳಿರುವ ಸ್ಥಳ ಹರಿಹರ. ಇಲ್ಲಿನ ಕೈಗಾರಿಕಾ ಪ್ರದೇಶ 1964ರಿಂದ ಅಸ್ತಿತ್ವದಲ್ಲಿದೆ. ಇಲ್ಲಿ ಎಂಜಿನಿಯರಿಂಗ್ ಕಾರ್ಯಾಗಾರಗಳು, ಕಾರ್ಖಾನೆಗಳು ನೆಲೆಗೊಂಡಿವೆ. ಹತ್ತಿ ಗಿರಣಿಗಳಿವೆ. ಹರಿಹರದ ಪಾಲಿಫೈಬರ್ ಕಾರ್ಖಾನೆ ಪ್ರಸಿದ್ಧವಾದುದು. 1900ರಿಂದ ಕೈಗಾರಿಕಾ ಕ್ಷೇತ್ರದಲ್ಲಿ ಗಣನೀಯ ಸಾಧನೆ ಮಾಡಿದ ಮೈಸೂರ್ ಕಿರ್ಲೋಸ್ಕರ್ ಕಂಪನಿ ಹರಿಹರದ ಯಂತ್ರಪುರದಲ್ಲಿ ತನ್ನ ಉದ್ಯಮವನ್ನು ಪ್ರಾರಂಭಿಸಿತು. ಸಣ್ಣ ಕಾರ್ಯಾಗಾರಗಳಿಗೆ ಮತ್ತು ದುರಸ್ತಿ ಕೇಂದ್ರಗಳಿಗೆ ಸೂಕ್ತವೆನಿಸಿದ ಹರಿಹರ ಲೇಥ್‌ಗಳು ಪ್ರಸಿದ್ಧವಾಗಿವೆ. ಜಿಲ್ಲೆಯ ಇತರ ತಾಲ್ಲೂಕು ಕೇಂದ್ರಗಳಲ್ಲೂ ಸಣ್ಣ ಮತ್ತು ಮಧ್ಯಮ ಪ್ರಮಾಣದ ಉದ್ಯಮಗಳು ಸ್ಥಾಪಿತವಾಗಿವೆ. ಈಚೆಗೆ ಹರಪನಹಳ್ಳಿ ತಾಲ್ಲೂಕಿನಲ್ಲಿ ಖಾಸಗಿ ವಲಯದಲ್ಲಿ ಶಾಮನೂರ್ ಕಂಪನಿಯಿಂದ ಸಕ್ಕರೆ ಕಾರ್ಖಾನೆ ಮತ್ತು ವಿದ್ಯುತ್ ಉತ್ಪಾದನಾ ಕೇಂದ್ರ ಪ್ರಾರಂಭವಾಗಿದೆ. ಜಗಳೂರು ಕಂಬಳಿ ನೇಯ್ಗೆಗೆ ಪ್ರಸಿದ್ಧ. ಜಾಗತೀಕರಣದ ಪ್ರಭಾವದಿಂದಾಗಿ ದಾವಣಗೆರೆಯ ಕೈಗಾರಿಕೆಗಳು ಸಂಕಷ್ಟದಲ್ಲಿವೆ. ರಾಜ್ಯದಲ್ಲಿ ಅತಿ ಹೆಚ್ಚು ಕಾರ್ಖಾನೆಗಳನ್ನು ಹೊಂದಿರುವ ಜಿಲ್ಲೆಗಳಲ್ಲಿ ಇದು ಆರನೆಯ ಸ್ಥಾನದಲ್ಲಿದೆ.

ಜಿಲ್ಲೆಯಲ್ಲಿ ಒಟ್ಟು 410 ಉದ್ಯಮಗಳಿವೆ. 2 ಕೈಗಾರಿಕಾ ಪ್ರದೇಶಗಳು, 108 ಕೈಗಾರಿಕಾ ಷೆಡ್ಡುಗಳು, 3 ಸಕ್ಕರೆ ಕಾರ್ಖಾನೆಗಳು, 34 ಹತ್ತಿ ಗಿರಣಿಗಳು, 1 ರಾಸಾಯನಿಕ ಕಾರ್ಖಾನೆ, 12 ಎಂಜಿನಿಯರಿಂಗ್ ಕಾರ್ಖಾನೆಗಳು ಇವೆ. ಜಿಲ್ಲೆಯ ವಿವಿಧೆಡೆ ಮ್ಯಾಂಗನೀಸ್, ಕಬ್ಬಿಣ ಮತ್ತು ತಾಮ್ರದ ಗಣಿಗಳು ಉದ್ಯೋಗ ನಿರ್ಮಾಣಕ್ಕೆ ಕೊಡುಗೆ ನೀಡಿವೆ.

ಜಿಲ್ಲೆಯಲ್ಲಿ 85 ವಾಣಿಜ್ಯ ಬ್ಯಾಂಕುಗಳು ಮತ್ತು 44 ಗ್ರಾಮೀಣ ಬ್ಯಾಂಕುಗಳು ಕಾರ್ಯನಿರತವಾಗಿವೆ. 212 ವ್ಯವಸಾಯ ಸಹಕಾರ ಸಂಘಗಳೂ 97 ವ್ಯವಸಾಯೇತರ ಸಹಕಾರ ಸಂಘಗಳೂ ಅಸ್ತಿತ್ವದಲ್ಲಿವೆ. ನಿಯಂತ್ರಿತಮಾರುಕಟ್ಟೆಗಳ ಸಂಖ್ಯೆ 5, ಉಪಮಾರುಕಟ್ಟೆಗಳು 9.

ಶಿಕ್ಷಣ: ಜಿಲ್ಲೆಯ ಹೆಚ್ಚಿನ ತಾಲ್ಲೂಕುಗಳು ಮೊದಲಿಗೆ ಚಿತ್ರದುರ್ಗ ಜಿಲ್ಲೆಗೆ ಸೇರಿದ್ದವು. ಆದರೆ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಚಿತ್ರದುರ್ಗ ನಗರಕ್ಕಿಂತ ದಾವಣಗೆರೆ ನಗರವೇ ಹೆಚ್ಚಿನ ಪ್ರಗತಿ ಕಂಡಿತ್ತು. ಇದಕ್ಕೆ ಮುಖ್ಯ ಕಾರಣ ಈ ನಗರದ ಕೈಗಾರಿಕೀಕರಣ. 1900ರಲ್ಲಿ ದಾವಣಗೆರೆಯಲ್ಲಿ ಒಂದು ಆಂಗ್ಲೋವರ್ನಾಕ್ಯುಲರ್ ಶಾಲೆ ಪ್ರಾರಂಭವಾಯಿತು. 1913ರಿಂದ ಮೈಸೂರು ಸರ್ಕಾರ ಅನುದಾನ ಯೋಜನೆಯನ್ನು ಜಾರಿಗೆ ತಂದಿದ್ದರಿಂದ ಗ್ರಾಮಗಳ ಹಂತದಲ್ಲೂ ಪ್ರಾಥಮಿಕ ಶಾಲೆಗಳು ಕಾರ್ಯಾರಂಭ ಮಾಡಿದವು. ದಾವಣಗೆರೆಗೆ 1922ರಲ್ಲಿ ಪ್ರೌಢಶಾಲೆ ಬಂತು. ಇಂಟರ್ ಮಿಡಿಯಟ್ ಕಾಲೇಜಿನ ಪ್ರಾರಂಭ (1947), ದಾವಣಗೆರೆ ಶಿಕ್ಷಣ ಕೇಂದ್ರವಾಗಿ ಬೆಳೆಯಲು ಅಂಕುರವಾಯಿತು. ಚಿತ್ರದುರ್ಗದಲ್ಲಿ ಸ್ಥಾಪನೆಯಾದ ಪ್ರಥಮ ದರ್ಜೆ ಕಾಲೇಜು (1948) ಇಲ್ಲಿನ ವಿದ್ಯಾರ್ಥಿಗಳಿಗೆ ಪದವಿ ಶಿಕ್ಷಣಕ್ಕೆ ದಾರಿ ಮಾಡಿತು.

ಸ್ವಾತಂತ್ರ್ಯಾನಂತರ ದಾವಣಗೆರೆ ನಗರ ಶಿಕ್ಷಣ ಕ್ಷೇತ್ರದಲ್ಲಿ ದಾಪುಗಾಲು ಹಾಕಿ ಮುನ್ನಡೆಯಿತು. ಅನೇಕ ಖಾಸಗಿ ಸಂಘ ಸಂಸ್ಥೆಗಳು ಮಠಗಳು ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಲು ಮುಂದೆ ಬಂದವು. 1950ರಲ್ಲಿ ಬಾಲಕಿಯರ ಪ್ರೌಢಶಾಲೆ ಅಸ್ತಿತ್ವಕ್ಕೆ ಬಂತು. 1951ರಲ್ಲಿ ಬ್ರಹ್ಮಪ್ಪ ದೇವೇಂದ್ರಪ್ಪ ತವನಪ್ಪನವರ ಹೆಸರಿನಲ್ಲಿ ಎಂಜಿನಿಯರಿಂಗ್ ಕಾಲೇಜು ಸ್ಥಾಪಿತವಾಯಿತು. ಬಾಪೂಜಿ ಶಿಕ್ಷಣ ಸಂಸ್ಥೆಯ ಆಶ್ರಯದಲ್ಲಿ 1957ರಲ್ಲಿ ಪದವಿ ಕಾಲೇಜಿಗೆ ಅಸ್ತಿಭಾರ ಹಾಕಲಾಯಿತು. ಕೈಗಾರಿಕಾ ತರಬೇತಿ ಸಂಸ್ಥೆ ಮತ್ತು 1960ರಲ್ಲಿ ಶಿಕ್ಷಕರ ತರಬೇತಿ ಸಂಸ್ಥೆಗಳು ತಲೆ ಎತ್ತಿದವು. 1964-65ರಲ್ಲಿ ಸರ್ಕಾರಿ ಆರ್ಟ್ಸ್ ಮತ್ತು ಕ್ರಾಫ್ಟ್ಸ್ ಶಾಲೆ ಜನ್ಮತಳೆಯಿತು. 1965ರಲ್ಲಿ ಬಿ.ಇಡಿ. ಕಾಲೇಜು ಆರಂಭವಾಯಿತು. 1966ರಲ್ಲಿ ಮಹಿಳಾ ಕಾಲೇಜು ಅಸ್ತಿತ್ವಕ್ಕೆ ಬಂದಿತು. 1991ರಲ್ಲಿ ಮತ್ತೊಂದು ಮಹಿಳಾ ಕಾಲೇಜು ಜನ್ಮತಳೆದಿರುವುದು ಇಲ್ಲಿ ಹೆಚ್ಚಿನ ಮಹಿಳಾ ವಿದ್ಯಾಭ್ಯಾಸದ ಬೆಳೆವಣಿಗೆಗೆ ಸಾಕ್ಷಿಯಾಗಿದೆ. ಜಯದೇವ ಜಗದ್ಗುರು ಮುರುಗರಾಜೇಂದ್ರ ವೈದ್ಯಕೀಯ ಕಾಲೇಜು 1965ರಲ್ಲಿ ಸ್ಥಾಪನೆಯಾಯಿತು. ನರ್ಸಿಂಗ್ ಶಾಲೆ (1970), ಅನಂತರ ಬಾಪೂಜಿ ಸಂಸ್ಥೆಯದಂಥ ವಿಜ್ಞಾನ ಕಾಲೇಜು (1979), ಶುಶ್ರೂಷೆ ಕಾಲೇಜು (1991), ಔಷಧೀಯ ಶಾಸ್ತ್ರ (1992) ನೆಲೆಗೊಂಡವು.

ಕುವೆಂಪು ವಿಶ್ವವಿದ್ಯಾಲಯ ಇಲ್ಲಿನ ಲಲಿತಕಲೆ ಮತ್ತು ಕರಕುಶಲ ಶಾಲೆಯನ್ನು ಅಳವಡಿಸಿಕೊಂಡು ಲಲಿತಕಲೆ ಮತ್ತು ವಾಣಿಜ್ಯ (ಅನ್ವಯಿಕ) ಕಲಾ ವಿಷಯಗಳಲ್ಲಿ ಐದು ವರ್ಷದ ಶಿಕ್ಷಣಗಳನ್ನು ತೆರೆದಿದೆ. ದಾವಣಗೆರೆಗೆ ಹೊಂದಿಕೊಂಡಂತೆ 10ಕಿಮೀ ದೂರದ ತೋಳಹುಣಸೆಯಲ್ಲಿರುವ ಶಿವಗಂಗೋತ್ರಿ ಸ್ನಾತಕೋತ್ತರ ಕೇಂದ್ರ ಕುವೆಂಪು ವಿಶ್ವವಿದ್ಯಾಲಯಕ್ಕೆ ಸೇರಿದ. ಸಾರ್ವಜನಿಕ ಗ್ರಂಥ ಭಂಡಾರ, ವಸತಿ ಶಾಲೆಗಳು ಇಲ್ಲಿನ

ಶೈಕ್ಷಣಿಕ ಪರಿಸರಕ್ಕೆ ಪೂರಕವಾಗಿವೆ. ಜಿಲ್ಲೆಯ ಇತರ ತಾಲ್ಲೂಕು ಕೇಂದ್ರಗಳಲ್ಲೂ ವಿವಿಧ ಶಾಲಾ ಕಾಲೇಜುಗಳಿವೆ.

ಜಿಲ್ಲೆಯ ಸಾಕ್ಷರತೆ ಸೇ.67.67ರಷ್ಟಿದೆ. ಪುರುಷ ಸಾಕ್ಷರತೆ ಸೇ.76.44, ಮಹಿಳಾ ಸಾಕ್ಷರತೆ ಸೇ.58.45 (2001), ಜಿಲ್ಲೆಯಲ್ಲಿ 638 ಪ್ರಾಥಮಿಕ ಶಾಲೆಗಳು, 266 ಪ್ರೌಢಶಾಲೆಗಳೂ 86 ಪದವಿಪೂರ್ವ ಕಾಲೇಜುಗಳೂ ಇವೆ. ಸಾಮಾನ್ಯ ಶಿಕ್ಷಣ ಕಾಲೇಜುಗಳು, 3 ಪಾಲಿಟೆಕ್ನಿಕ್, 2 ಎಂಜಿನಿಯರಿಂಗ್ ಕಾಲೇಜುಗಳು, 1 ವೈದ್ಯಕೀಯ ಕಾಲೇಜು, 1 ಭಾರತೀಯ ವೈದ್ಯ ಪದ್ಧತಿ, 2 ದಂತ ವಿಜ್ಞಾನ ಕಾಲೇಜು ಇವೆ (1999 - 2000).

ದಾವಣಗೆರೆ ಜಿಲ್ಲೆ ಆರೋಗ್ಯ ಸೌಲಭ್ಯದ ದೃಷ್ಟಿಯಿಂದ ಇತರ ಕೆಲವು ಜಿಲ್ಲೆಗಳಿಗಿಂತ ಮುಂದಿದೆ. ಇದಕ್ಕೆ ಇಲ್ಲಿನ ಕೈಗಾರಿಕಾ ನಗರ ದಾವಣಗೆರೆ ಮತ್ತು ಇಲ್ಲಿನ ವೈದ್ಯಕೀಯ ಕಾಲೇಜು ಕಾರಣ. ಜಿಲ್ಲೆಯಲ್ಲಿ 5 ಸರ್ಕಾರಿ ಆಸ್ಪತ್ರೆಗಳಿವೆ, 1130 ಹಾಸಿಗೆಗಳಿವೆ. ಒಂದು ಭಾರತೀಯ ವೈದ್ಯ ಪದ್ಧತಿ ಆಸ್ಪತ್ರೆ ಇದೆ. ಖಾಸಗಿ ಆಸ್ಪತ್ರೆಗಳು ಮತ್ತು ಚಿಕಿತ್ಸಾಲಯಗಳು ಸಾಕಷ್ಟಿವೆ. 2 ರಕ್ತ ಬ್ಯಾಂಕುಗಳಿವೆ. 70 ಪ್ರಾಥಮಿಕ ಆರೋಗ್ಯ ಕೇಂದ್ರಗಳೂ 33 ಪ್ರಾಥಮಿಕ ಆರೋಗ್ಯ ಘಟಕಗಳೂ ಇವೆ (2000).

ಸಾರಿಗೆ ಸಂಪರ್ಕ : ದಾವಣಗೆರೆ ಸಾರಿಗೆ ದೃಷ್ಟಿಯಿಂದ ಆಯಕಟ್ಟಿನ ಸ್ಥಳದಲ್ಲಿದೆ. ರಾಷ್ಟ್ರೀಯ ಹೆದ್ದಾರಿಗಳು ಈ ಸ್ಥಳದ ಮೂಲಕ ಹಾದು ಹೋಗುತ್ತವೆ. ಜೊತೆಗೆ ಕರಾವಳಿ ತೀರದಿಂದ ಬಳ್ಳಾರಿ, ಆಂಧ್ರಪ್ರದೇಶ ತಲುಪಲು ಇರುವ ಹೆದ್ದಾರಿ ಈ ಊರಿನ ಮೂಲಕವೇ ಹೋಗಬೇಕು ಉತ್ತರ ಕರ್ನಾಟಕದ ಎಲ್ಲ ಜಿಲ್ಲಾಕೇಂದ್ರಗಳಿಗೂ ಇಲ್ಲಿಂದ ಉತ್ತಮ ರಸ್ತೆ ಸಂಪರ್ಕವಿದೆ. ಈ ಜಿಲ್ಲೆಯಲ್ಲಿ ಸಮತಟ್ಟಾದ ಪ್ರದೇಶ ಹೆಚ್ಚಿರುವುದರಿಂದ ರಸ್ತೆಗಳ ನಿರ್ಮಾಣಕ್ಕೆ ಇರುವ ಅಡೆ ತಡೆಗಳು ಕಡಿಮೆ. ಗ್ರಾಮೀಣ ರಸ್ತೆಗಳಿಗೆ ಇನ್ನೂ ಹೆಚ್ಚಿನ ಆದ್ಯತೆ ದೊರೆಯಬೇಕಾಗಿದೆ.

ಜಿಲ್ಲೆಯಲ್ಲಿ ಬೆಂಗಳೂರು - ಪುಣೆ ಹೆದ್ದಾರಿ ದಾವಣಗೆರೆ, ಹರಿಹರದ ಮೂಲಕ ಹಾದು ಹೋಗುತ್ತದೆ. ಇನ್ನೊಂದು ರಾಷ್ಟ್ರೀಯ ಹೆದ್ದಾರಿ ಚಿತ್ರದುರ್ಗದಿಂದ ಜಿಲ್ಲೆಯ ಜಗಳೂರು ಮೂಲಕ ಮಹಾರಾಷ್ಟ್ರ ರಾಜ್ಯದ ಷೋಲಾಪುರವನ್ನು ತಲುಪುತ್ತದೆ. ಜಿಲ್ಲೆಯಲ್ಲಿ ಈ ಎರಡು ರಾಷ್ಟ್ರೀಯ ಹೆದ್ದಾರಿಗಳ ಒಟ್ಟು ಉದ್ದ 85ಕಿಮೀ, ರಾಜ್ಯ ಹೆದ್ದಾರಿಗಳ ಉದ್ದ 263ಕಿಮೀ, ಮುಖ್ಯ ಜಿಲ್ಲಾ ರಸ್ತೆಗಳು 86ಕಿಮೀ, ಗ್ರಾಮೀಣ ರಸ್ತೆಗಳು 1172ಕಿಮೀ, ತಾಲ್ಲೂಕು ಮಂಡಳಿ ರಸ್ತೆಗಳು 761ಕಿಮೀ. ಜಿಲ್ಲೆಯಲ್ಲಿ ಭಾರಿ ಸೇತುವೆಗಳಿವೆ. ಜಿಲ್ಲೆಯಲ್ಲಿರುವ ಪಕ್ಕಾ ರಸ್ತೆಗಳ ಉದ್ದ 3465ಕಿಮೀ. ಬೆಂಗಳೂರು-ಮೀರಜ್ ರೈಲು ಮಾರ್ಗ ಈ ಜಿಲ್ಲೆಯ ಮೂಲಕ ಹಾದು ಹೋಗುತ್ತದೆ. ಜಿಲ್ಲೆಯಲ್ಲಿ 43ಕಿಮೀ ಬ್ರಾಡ್‌ಗೇಜ್ ರೈಲು ಮಾರ್ಗವಿದೆ. ಹರಿಹರ ಮತ್ತು ದಾವಣಗೆರೆ ಮುಖ್ಯ ರೈಲು ನಿಲ್ದಾಣಗಳು ಹಾಗೂ ಜಂಕ್ಷನ್. ಜಿಲ್ಲೆಯಲ್ಲಿ 258 ಅಂಚೆ ಕಚೇರಿಗಳೂ 44 ದೂರವಾಣಿ ಕೇಂದ್ರಗಳೂ ಇವೆ (2000).

ಸಂಸ್ಕೃತಿ: ದಾವಣಗೆರೆ ಜಿಲ್ಲೆಯದು ಮುಖ್ಯವಾಗಿ ಗ್ರಾಮೀಣ ಸಂಸ್ಕೃತಿ. ವ್ಯವಸಾಯ ಸಂಬಂಧವಾದ ವಿಶಿಷ್ಟ ಹಬ್ಬಗಳನ್ನು ಆಚರಿಸಲಾಗುತ್ತದೆ. ಅವುಗಳಲ್ಲಿ ಸಂಕ್ರಾಂತಿ ಪ್ರಮುಖವಾದುದು. ಈ ಜಿಲ್ಲೆ ವೀರಶೈವ ಸಮುದಾಯದ ಜನಸಂಖ್ಯೆಯನ್ನು ಗಣನೀಯ ಪ್ರಮಾಣದಲ್ಲಿ ಹೊಂದಿರುವುದರಿಂದ ಬಸವಣ್ಣನವರ ಜಯಂತಿ ವಿಜೃಂಭಣೆಯಿಂದ ನಡೆಯುತ್ತದೆ. ಹಾಗೆಯೇ ಉತ್ತರ ಕರ್ನಾಟಕದಲ್ಲಿ ಹೆಚ್ಚು ಜನಪ್ರಿಯವಾದ ಹೋಳಿ ಅಥವಾ ಕಾಮನಹಬ್ಬ ಇಲ್ಲಿ ಸಡಗರದಿಂದ ಆಚರಿಸಲ್ಪಡುತ್ತದೆ. ಜನಪದ ರಂಗಭೂಮಿಯ ಬಯಲಾಟ ಅಥವಾ ಬಯಲನಾಟಕಗಳು, ಲಾವಣಿ ಇನ್ನೂ ಸಕ್ರಿಯವಾಗಿ ಉಳಿದಿವೆ. ಜಿಲ್ಲೆಯಲ್ಲಿ ಅನೇಕ ಜಾತ್ರೆ, ಉತ್ಸವಗಳು ನಡೆಯುತ್ತವೆ.

ದಾವಣಗೆರೆಯಲ್ಲಿ ದುರ್ಗಮ್ಮನ ಜಾತ್ರೆ ಫಾಲ್ಗುಣ ಮಾಸದಲ್ಲಿ ಎರಡು ವರ್ಷಕ್ಕೊಮ್ಮೆ ನಡೆಯುತ್ತದೆ. ಹರಿಹರದಲ್ಲಿ ಉಗಾದಿ ಆಚೀಚೆ ಸಂಗಮೇಶ್ವರ ಜಾತ್ರೆ ಏರ್ಪಡುತ್ತದೆ. ಜಗಳೂರು ತಾಲ್ಲೂಕಿನ ಗುರುಸಿದ್ಧಪುರದಲ್ಲಿ ಮಾರ್ಚ್ ತಿಂಗಳಲ್ಲಿ ಚೌಡೇಶ್ವರಿ ಜಾತ್ರೆ ಅದ್ದೂರಿಯಿಂದ ನಡೆಯುತ್ತದೆ. ಜಗಳೂರು ತಾಲ್ಲೂಕಿನ ಕಲ್ಲೇದೇವರಪುರದಲ್ಲಿ ಏಪ್ರಿಲ್‌ನಲ್ಲಿ ನಡೆಯುವ ಮೇಳ ಪ್ರಸಿದ್ಧವಾಗಿದೆ. ಅದೇ ತಾಲ್ಲೂಕಿನ ಕೋಟೆಗುಡ್ಡೆಯಲ್ಲಿ ವೀರಭದ್ರ ದೇವರ ಬೃಹತ್ ಜಾತ್ರೆ ಜರುಗುತ್ತದೆ. ಹೊನ್ನಾಳಿ ತಾಲ್ಲೂಕಿನ ಮಾರಿಕೊಪ್ಪದಲ್ಲಿ ನಡೆಯುವ ಹಾಲದಮ್ಮನ ಜಾತ್ರೆ ವಿಶೇಷವಾದುದು. ಚನ್ನಗಿರಿ ತಾಲ್ಲೂಕಿನ ದೇವರಹಳ್ಳಿಯ ರಂಗನಾಥ ರಥೋತ್ಸವ ಜನಪ್ರಿಯವಾಗಿದೆ. ಜಗಳೂರು ತಾಲ್ಲೂಕಿನ ಬಿಸ್ತುಹಳ್ಳಿ ಇನ್ನೊಂದು ಜಾತ್ರಾ ಸ್ಥಳ.

ಅನಗೋಡು, ಅಣಜಿ, ಆನೆಕೊಂಡ, ಅಸಗೂಡು, ಹಾಲುವನ, ಹರಿಹರ, ನಂದಿತಾವರೆ, ಶಂಕರನಹಳ್ಳಿ, ಬಾಡ, ಜಗಳೂರು ಕಬ್ಬೂರು, ಕೊಡಗನೂರು, ಕೊಗ್ಗನೂರು, ಲೊಕ್ಕಿಕೆರೆ, ಮಳಲಕೆರೆ ಬಲ್ಲೇಶ್ವರ, ನ್ಯಾಮತಿ, ಬೆಳಗುತ್ತಿ, ಹಾಲವಾಗಲು, ನೀಲಗುಂದ - ಇವು ಈ ಜಿಲ್ಲೆಯ ಪ್ರೇಕ್ಷಣೀಯ ಹಾಗೂ ಐತಿಹಾಸಿಕ ಸ್ಥಳಗಳು. ಹರಪನಹಳ್ಳಿ ತಾಲ್ಲೂಕಿನಲ್ಲಿರುವ ಉಚ್ಚಂಗಿದುರ್ಗ (ನೋಡಿ) ಪಾಂಡ್ಯರ ಪ್ರಾಚೀನ ರಾಜಧಾನಿಯಾಗಿದ್ದು ದುರ್ಗಮವಾದ ದುರ್ಗಕ್ಕೆ ಮಾದರಿಯಾಗಿದೆ. ಹರಪನಹಳ್ಳಿ ತಾಲ್ಲೂಕಿನ ಚಿಗಟೇರಿಯಲ್ಲಿ ತೊರೆಗಳಲ್ಲಿ ತೇಲಿ ಬರುತ್ತಿದ್ದ ಚಿನ್ನದ ಅದುರನ್ನು ಸಂಗ್ರಹಿಸಲಾಗುತ್ತಿತ್ತೆಂದು ಹೇಳಲಾಗಿದೆ. ಸಂತೆಬೆನ್ನೂರಿನಲ್ಲಿ ಬಸವಾಪಟ್ಟಣದ ಪಾಳೆಯಗಾರರ ಅರಮನೆಯಿದೆ. ಚೆನ್ನಗಿರಿ ತಾಲ್ಲೂಕಿನ ಬಸವಾಪಟ್ಟಣ ಅಲ್ಲಿನ ಪಾಳೆಯಗಾರರ ರಾಜಧಾನಿಯಾಗಿತ್ತು. ಹೊನ್ನಾಳಿ ತಾಲ್ಲೂಕಿನ ಬಿಳಗುತ್ತಿ ಪ್ರಾಚೀನ ಸಿಂದರ ರಾಜಧಾನಿಯಾಗಿತ್ತು. ಹರಪನಹಳ್ಳಿಯಲ್ಲಿ ಪಾಳೆಗಾರರು ಆಳುತ್ತಿದ್ದರು.

ಇತಿಹಾಸ: ಜಿಲ್ಲೆಯು ಅನೇಕ ಪೌರಾಣಿಕ ಕಥನಗಳಿಂದ ಕೂಡಿದ ಸ್ಥಳಗಳನ್ನು ಹೊಂದಿದೆ. ಅದರಲ್ಲಿ ಹರಿಹರ ಮುಖ್ಯವಾದುದು. ಹರಿಹರದಲ್ಲಿ ಗುಹಾಸುರನೆಂಬ ರಾಕ್ಷಸನಿದ್ದನೆಂದೂ ಅವನು ತನ್ನ ತಪಸ್ಸಿನಿಂದ ಹರಿಹರ ದೇವತೆಗಳ ಅನುಗ್ರಹಕ್ಕೆ ಪಾತ್ರವಾಗಿ ಯಾರಿಂದಲೂ ತನಗೆ ಮರಣ ಬರದಂತೆ ವರ ಕೇಳಿ ಪಡೆದನೆಂದು ಪೌರಣಿಕ ಕತೆ ಇದೆ. ಆಗ ಇವನ ಉಪಟಳದಿಂದ ಜನರನ್ನು ಪಾರು ಮಾಡಲು ಹರಿಹರರಿಬ್ಬರೂ ಹರಿಹರ ಎಂಬ ಏಕರೂಪ ಧರಿಸಿ ಗುಹಾಸುರನನ್ನು ಸಂಹರಿಸಿದರೆಂದು ಸ್ಥಳಪುರಾಣ. ಧರ್ಮರಾಯ ತಂಗಿದ್ದ ಹರಿಹರದಲ್ಲಿ ಆತನ ಮರಿಮಗ ಜನಮೇಜಯರಾಯ ಹರಿಹರ ದೇವರಿಗೆ ದಾನ ನೀಡಿದನೆಂದು ಪ್ರತೀತಿ. ಹೊನ್ನಾಳಿ ತಾಲ್ಲೂಕಿನ ಕಮ್ಮಾರಗಟ್ಟೆಯಲ್ಲಿ ಪರಶುರಾಮನು ದಿಗ್ವಿಜಯದ ಅನಂತರ ತನ್ನ ಕತ್ತಿಯನ್ನು ತೊಳೆದನೆಂದೂ ಇದು ಕರ್ಮಹಾರ ಕ್ಷೇತ್ರವೆಂದು ಹೆಸರಾಗಿದ್ದಿತೆಂದೂ ಸ್ಥಳ ಪುರಾಣವಿದೆ.

ನೆರೆಯ ಚಿತ್ರದುರ್ಗ ಜಿಲ್ಲೆಯ ಜಟಂಗರಾಮೇಶ್ವರ ಮತ್ತು ಬ್ರಹ್ಮಗಿರಿಗಳಲ್ಲಿ ದೊರೆತಿರುವ ಅಶೋಕ ಮೌರ್ಯನ ಶಾಸನಗಳು ಈ ಪ್ರದೇಶದಲ್ಲಿ ಕ್ರಿ.ಪೂ. 3ನೆಯ ಶತಮಾನದಲ್ಲಿ ರಾಜಕೀಯ ವ್ಯವಸ್ಥೆ ಬೇರೂರಿದ್ದಕ್ಕೆ ಸಾಕ್ಷಿಯಾಗಿದೆ. ನಂದರು ಮತ್ತು ಮೌರ್ಯರು ಈ ಪ್ರದೇಶದಲ್ಲಿ ಆಳಿದರೆಂದು ತಿಳಿದುಬರುತ್ತದೆ. ಪ್ರಾಚೀನ ಕುಂತಲ ದೇಶದಲ್ಲಿ ನಂದರು ಆಳುತ್ತಿದ್ದರೆಂದು ಪ್ರತೀತಿ. ಈ ಜಿಲ್ಲೆಯು ಪ್ರದೇಶವಾದ ಅಶೋಕನ ಶಾಸನದಲ್ಲಿ ಉಕ್ತವಾಗಿರುವ 'ಇಸಿಲ' ಎಂಬ ಸ್ಥಳ ಈಗಿನ ಬ್ರಹ್ಮಗಿರಿ ಎಂದು ಕೆಲವು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. ಮೌರ್ಯರ ಉತ್ತರಾಧಿಕಾರಿಗಳಾದ ಸಾತವಾಹನರು ದಖನ್‌ನ ಬಹುಭಾಗವನ್ನು ಶತಮಾನಗಳ ಕಾಲ ಆಳಿದರು. ಚಂದ್ರವಳ್ಳಿ, ಬ್ರಹ್ಮಗಿರಿ ಮೊದಲಾದೆಡೆಗಳಲ್ಲಿ ದೊರೆತಿರುವ ಆ ಕಾಲದ ನಾಣ್ಯಗಳು ಮತ್ತು ಇತರ ಅವಶೇಷಗಳು ಸಾತವಾಹನರು ಇಲ್ಲಿ ಆಳುತ್ತಿದ್ದುದನ್ನು ದೃಢಪಡಿಸುತ್ತವೆ.

ಉತ್ತರ ಕನ್ನಡ ಜಿಲ್ಲೆಯ ಬನವಾಸಿಯಲ್ಲಿ ರಾಜ್ಯ ಸ್ಥಾಪಿಸಿದ ಕದಂಬರ ರಾಜ್ಯಕ್ಕೆ ಈ ಜಿಲ್ಲೆ ಸೇರಿದ್ದಿತು. ಚಂದ್ರವಳ್ಳಿ ಕಣಿವೆಯಲ್ಲಿ ಈ

ಮನೆತನದ ಸ್ಥಾಪಕ ಮಯೂರಶರ್ಮನ ಪ್ರಾಕೃತ ಶಾಸನ ದೊರೆತಿದೆ. ಕದಂಬರು 4 ರಿಂದ 6ನೆಯ ಶತಮಾನದವರೆಗೂ ಈ ಪ್ರದೇಶವನ್ನು ಆಳಿದರು. 6ನೆಯ ಶತಮಾನದ ಕೊನೆಯ ಹೊತ್ತಿಗೆ ತಮ್ಮ ಪ್ರಾಬಲ್ಯವನ್ನು ಸ್ಥಾಪಿಸಿದ ಚಳುಕ್ಯರು ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ದಕ್ಷಿಣ ಭಾರತದಲ್ಲಿ ಪ್ರಥಮ ಬಾರಿಗೆ ಪ್ರಬಲ ಸಾಮ್ರಾಜ್ಯದ ಸ್ಥಾಪನೆಗೆ ಕಾರಣರಾದರು. ಎರಡನೆಯ ಪುಲಕೇಶಿಯ ಕಾಲದಲ್ಲಿ (610-642) ಈ ಸಾಮ್ರಾಜ್ಯ ಅತ್ಯುನ್ನತ ವೈಭವವನ್ನು ಕಂಡಿತು. 753ರಲ್ಲಿ ರಾಷ್ಟ್ರಕೂಟರ ದಂತಿದುರ್ಗ ಚಾಳುಕ್ಯರ ಆಳ್ವಿಕೆಯನ್ನು ಕೊನೆಗಾಣಿಸಿದ. 973 ರವರೆಗೂ ಆಳಿದ ರಾಷ್ಟ್ರಕೂಟರು ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಎರಡು ಶತಮಾನಗಳ ಕಾಲ ಭಾರತದ ಪ್ರಮುಖ ರಾಜಕೀಯ ಶಕ್ತಿಯಾಗಿ ಆಳಿದರು. ಈ ಅವಧಿಯಲ್ಲಿ ತಲಕಾಡಿನ ಗಂಗರು, ನೊಳಂಬರು - ಈ ಜಿಲ್ಲೆಯ ಕೆಲವು ಭಾಗಗಳನ್ನು ರಾಷ್ಟ್ರಕೂಟರ ಸಾಮಂತರಾಗಿ ಆಳುತ್ತಿದ್ದುದು ತಿಳಿದುಬರುತ್ತದೆ.

ಕಲ್ಯಾಣಿಚಾಳುಕ್ಯ ವಂಶಸ್ಥನಾದ ಎರಡನೆಯ ತೈಲಪ 973ರಲ್ಲಿ ರಾಷ್ಟ್ರಕೂಟರನ್ನು ಪದಚ್ಯುತಗೊಳಿಸಿ ಅಧಿಕಾರಕ್ಕೆ ಬಂದ. ಬಿದರೆ ಜಿಲ್ಲೆಯ ಕಲ್ಯಾಣದಿಂದ ಆಳಿದ ಇವರು ಹಿಂದಿನ ಸಾಮ್ರಾಜ್ಯ ವ್ಯವಸ್ಥೆಯನ್ನು ಮುಂದುವರಿಸಿದರು. ಆದರೆ ಇವರ ಕಾಲದಲ್ಲಿ ಹೊಯ್ಸಳ ವಿಷ್ಣುವರ್ಧನ (1108-42) ಬನವಾಸಿ, ಹಾನಗಲ್ಲು ಮತ್ತು ಉಚ್ಚಂಗಿ ಪ್ರದೇಶಗಳನ್ನು ವಶಪಡಿಸಿಕೊಂಡ. ಮುಂದೆ ಹೊಯ್ಸಳರು ಚಾಳುಕ್ಯರ ಸಾಮಂತರಾಗಿ ಮತ್ತು ಸ್ವತಂತ್ರವಾಗಿ ಈ ಜಿಲ್ಲೆಯ ಮೇಲೆ ಹಿಡಿತ ಹೊಂದಿದ್ದರು. ಚಾಳುಕ್ಯರು 12ನೆಯ ಶತಮಾನದ ಕೊನೆಯ ಹೊತ್ತಿಗೆ ನಿರ್ಗಮಿಸಿದರು. ಮುಂದೆ ಈ ಪ್ರದೇಶ ಹೊಯ್ಸಳರು ಮತ್ತು ದೇವಗಿರಿಯ ಸೇವುಣರ ನಡುವಿನ ಸಂಘರ್ಷದ ವಲಯಕ್ಕೆ ಸೇರಿತು. ರಾಜಕೀಯ ಅಸ್ಥಿರತೆ ಇದ್ದ 12ನೆಯ ಶತಮಾನದ ಉತ್ತರಾರ್ಧ ಭಾಗದಲ್ಲಿ ಉಚ್ಚಂಗಿಯಿಂದ ಪಾಂಡ್ಯ ಮನೆತನದ ಸ್ಥಳೀಯ ಅರಸರು ಆಳುತ್ತಿದ್ದು, ಅವರಿಗೆ ಈ ಜಿಲ್ಲೆಯ ಕೆಲವು ಪ್ರದೇಶಗಳು ಸೇರಿದ್ದವು. ಕದಂಬ ಮನೆತನದ ಸಾಮಂತರು ಇಲ್ಲಿ ಆಳಿದ್ದು ಕಂಡುಬರುತ್ತದೆ. ಸಿಂದರು ಹೊಯ್ಸಳರಿಗೆ ಮತ್ತು ಸೇವುಣರಿಗೆ ಸಾಮಂತರಾಗಿ ಆಳುತ್ತಿದ್ದರು. ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನಿಂದ ಆಳುತ್ತಿದ್ದ ನಿಡಗಲ್ಲು ಚೋಳರಿಗೆ ಈ ಜಿಲ್ಲೆಯ ಕೆಲವು ಭಾಗಗಳು ಸೇರಿದ್ದವು. ಇವರನ್ನು 1285ರಲ್ಲಿ ಹೊಯ್ಸಳ ಎರಡನೆಯ ನರಸಿಂಹ ಮೂಲೋತ್ಪಾಟನೆ ಮಾಡಿದ. ಹೊಯ್ಸಳರು ಮತ್ತು ಸೇವುಣರ ಅಧೀನದಲ್ಲಿ ಬೇರೆ ಬೇರೆ ಕಾಲಕ್ಕೆ ಸಾಮಂತರಾಗಿದ್ದ ಕುಮ್ಮಟದ ಕಂಪಿಲ ಅರಸರು ಕೆಲವು ಕಾಲ ಇಲ್ಲಿನ ಪ್ರದೇಶಗಳ ಮೇಲೆ ನಿಯಂತ್ರಣ ಹೊಂದಿದ್ದರು.

ಹೊಯ್ಸಳರು ಮತ್ತು ಸೇವುಣರು ಅವನತಿ ಹೊಂದಲು 14ನೆಯ ಶತಮಾನದ ಮಧ್ಯಭಾಗದಲ್ಲಿ ದೆಹಲಿಯ ಸುಲ್ತಾನರು ನಡೆಸಿದ ದಾಳಿಗಳು ಪ್ರಮುಖ ಕಾರಣಗಳಾದವು. 1336ರಲ್ಲಿ ಸ್ಥಾಪಿತವಾದ ವಿಜಯನಗರ ಸಾಮ್ರಾಜ್ಯಕ್ಕೆ ತುಂಗಭದ್ರಾ ತಟದ ಹಂಪೆ ರಾಜಧಾನಿಯಾಯಿತು. ಆಗಿನಿಂದ ಶತಮಾನಗಳ ಕಾಲ ಈ ಜಿಲ್ಲೆಯೇ ವಿಜಯನಗರದ ಸಾಮ್ರಾಜ್ಯದ ಭಾಗವಾಗಿತ್ತು. ಆಗ ಇಲ್ಲಿ ಕಟ್ಟಿಸಿದ ದೇವಾಲಯಗಳ ಬಗ್ಗೆ, ನೀಡಿದ ದಾನಗಳ ಬಗ್ಗೆ, ಸ್ಥಾಪಿಸಿದ ಅಗ್ರಹಾರಗಳ ಬಗ್ಗೆ ಹಲವಾರು ಶಾಸನಗಳು ಸಾಕ್ಷಿಯಾಗಿವೆ. ಆಗ ಜಗಳೂರು ಸೀಮೆ, ಹರಿಹರಸೀಮೆ, ಮಲೆಯಬೆನ್ನೂರು ಮೊದಲಾದುವು ಸಾಮ್ರಾಜ್ಯದ ಜಹಗೀರುಗಳಾಗಿದ್ದು ಅವನ್ನು ತಮ್ಮ ಪ್ರೀತಿ ಪಾತ್ರ ಅಧಿಕಾರಿಗಳಿಗೆ ನೀಡಿದ್ದುದು ಶಾಸನಗಳಿಂದ ತಿಳಿದುಬರುತ್ತದೆ.

ವಿಜಯನಗರ ಕಾಲದಲ್ಲಿ ಸಾಮಂತರು ಮತ್ತು ನಾಯಕತನ ಮಾಡಿಕೊಂಡಿದ್ದ ಹಲವಾರು ಅಧೀನ ಆಳ್ವಿಕೆಗಾರರು ಆ ಸಾಮ್ರಾಜ್ಯದ ಪತನದ ಅನಂತರ ತುಂಡರಸರಾಗಿ ಸ್ವತಂತ್ರವಾಗಿ ಆಳತೊಡಗಿದರು. ಅಂತಹ ಕೆಲವು ಪಾಳೆಯಗಾರರ ಮನೆತನಗಳು ಜಿಲ್ಲೆಯ ವಿವಿಧ ಭಾಗಗಳನ್ನು ಬೇರೆ ಬೇರೆ ಕಾಲದಲ್ಲಿ ತಮ್ಮ ಅಧೀನಕ್ಕೊಳಪಡಿಸಿಕೊಂಡಿದ್ದವು. ಅವುಗಳಲ್ಲಿ ಚಿತ್ರದುರ್ಗದ ನಾಯಕ ಮನೆತನ, ನಿಡುಗಲ್, ಹಾರತಿ, ನಾಯಕನಹಟ್ಟಿ, ಮಾಥೋಡು ಹಾಗೂ ಸಂತೆಬೆನ್ನೂರಿನ ಪಾಳೆಯಗಾರರು ಮುಖ್ಯವಾದವರು. ಬಿದನೂರು ರಾಜ್ಯಕ್ಕೆ ಈ ಜಿಲ್ಲೆ ಪೂರ್ವದ ಸರಹದ್ದು ಪ್ರದೇಶವಾಗಿತ್ತು. ರಾಣಿ ಚನ್ನಮಾಜಿ ಚನ್ನಗಿರಿಯಲ್ಲಿ ಕೋಟೆ ಕಟ್ಟಿಸಿದಳು. ಆಕೆಯ ಹೆಸರನ್ನೇ ಈ ಊರಿಗೆ ಇಡಲಾಯಿತು. ಚಿತ್ರದುರ್ಗ ನಾಯಕರ ಬಂಧುಗಳಾಗಿದ್ದ ನಾಯಕ ಮನೆತನವೊಂದು ಹರಪನಹಳ್ಳಿಯಿಂದ ಆಳುತ್ತಿತ್ತು. ಇವರಿಗೆ 460 ಗ್ರಾಮಗಳು ಸೇರಿದ್ದವು. ಹೈದರ್ ಮತ್ತು ಟಿಪ್ಪು ಸುಲ್ತಾನರು ಚಿತ್ರದುರ್ಗ ಮತ್ತು ಹರಪನಹಳ್ಳಿ ಮನೆತನಗಳ ಅಂತ್ಯಕ್ಕೆ ಕಾರಣರಾದರು. ಮರಾಠರು ಮತ್ತು ಬಿಜಾಪುರದ ಸುಲ್ತಾನರು ಆಗಾಗ ಈ ಪ್ರದೇಶಗಳ ಮೇಲೆ ದಾಳಿ ಮಾಡುತ್ತಿದ್ದು ಅವರ ರಾಜಕೀಯ ಹಸ್ತಕ್ಷೇಪ ನಿರಂತರವಾಗಿದ್ದಿತು.

ದಾವಣಗೆರೆ ಜಿಲ್ಲೆ ಸ್ವಾತಂತ್ರ್ಯ ಹೋರಾಟಕ್ಕೆ ಹೆಚ್ಚಿನ ಕೊಡುಗೆ ನೀಡಿದೆ. ಮಹಾನ್ ಸ್ವಾತಂತ್ರ್ಯ ಹೋರಾಟಗಾರ ಮತ್ತು ಸಮಾಜ ಸುಧಾಕರ ಹರ್ಡೇಕರ ಮಂಜಪ್ಪನವರು 1924ರಲ್ಲಿ ಹರಿಹರದಲ್ಲಿ ಸತ್ಯಾಗ್ರಹ ಆಶ್ರಮವನ್ನು ಸ್ಥಾಪಿಸಿದರು. 1931ರಲ್ಲಿ ಚಿತ್ರದುರ್ಗದಲ್ಲಿ ಇವರ ನೇತೃತ್ವದಲ್ಲಿ ಸತ್ಯಾಗ್ರಹಿಗಳ ದೊಡ್ಡ ಸಮಾವೇಶ ಜರುಗಿತು. ದಾವಣಗೆರೆಯಲ್ಲಿ 1932ರಲ್ಲಿ ವಿದೇಶಿ ಬಟ್ಟೆಗಳಿಗೆ ಬೆಂಕಿ ಹಚ್ಚಲಾಯಿತು. ಎಸ್. ನಿಜಲಿಂಗಪ್ಪ, ಚಂದುರ್, ಎಸ್. ವಾಸುದೇವರಾವ್, ಬಳ್ಳಾರಿ ಸಿದ್ದಮ್ಮ, ನಾಗರತ್ನಮ್ಮ, ಎಂ. ಗೋವಿಂದರೆಡ್ಡಿ ಮೊದಲಾದವರ ನೇತೃತ್ವದಲ್ಲಿ ಸ್ವಾತಂತ್ರ್ಯ ಚಳವಳಿ ಮುನ್ನಡೆಯಿತು. 1934ರಲ್ಲಿ ದಾವಣಗೆರೆಗೆ ಮಹಾತ್ಮ ಗಾಂಧೀಜಿಯವರು ಭೇಟಿ ನೀಡಿದ್ದು ಸ್ಥಳೀಯ ಮುಖಂಡರು ಮತ್ತು ಕಾರ್ಯಕರ್ತರಲ್ಲಿ ನವಚೈತನ್ಯ ತುಂಬಿದ್ದಿತು. ಜಿಲ್ಲೆಯಲ್ಲಿ ಚಳವಳಿಯನ್ನು ಸಿದ್ಧಗೊಳಿಸಿ ನಡೆಸುವ ಕಾರ್ಯದಲ್ಲಿ ತೊಡಗಿದ್ದವರಲ್ಲಿ ಅ.ಹಿ. ಶಿವಾನಂದಸ್ವಾಮಿ, ಕೊಟಗಿ ಸಿದ್ದಲಿಂಗಪ್ಪ, 'ಪುಢಾರಿ' ಪತ್ರಿಕೆಯ ಮರಗಯ್ಯ, 'ಪ್ರಜಾಶಕ್ತಿ', ಪತ್ರಿಕೆಯ ಡಿ.ಎಂ. ರೇವಣಸಿದ್ದಯ್ಯ, ಖಾದಿಸಿದ್ದಪ್ಪ, ಎಂ. ಜಿ. ಬಸಪ್ಪ, ಎಚ್.ಎಸ್. ಕೊಟ್ಟೂರಪ್ಪ, ಕೊಟ್ರೆನಂಜಪ್ಪ, ದೊಡ್ಡ ಹನುಮಂತಪ್ಪ, ಕಾಸಲ ಶ್ರೀನಿವಾಸಶೆಟ್ಟರು, ಇಬ್ರಾಹಿಂ ಸಾಬ್, ಗುರುಶಾಂತಪ್ಪ, ಆಲೂರು ಬಸವರಾಜು, ಎಚ್.ಷಣ್ಮುಖಪ್ಪ ಮೊದಲಾದವರ ಹೆಸರುಗಳು ದಾಖಲಾಗಿವೆ.

ಸ್ವಾತಂತ್ರ್ಯ ಹೋರಾಟಕ್ಕೂ ಜನರ ಜ್ಞಾನ ವಿಸ್ತರಣೆಗೂ ಉತ್ತೇಜನ ನೀಡಿದ ಪ್ರಮುಖ ಮಾಧ್ಯಮವೆಂದರೆ ಪತ್ರಿಕೋದ್ಯಮ. 1906 ರಲ್ಲಿ ದಾವಣಗೆರೆಯಲ್ಲಿ ಧನುರ್ಧಾರಿ ಎಂಬ ಪತ್ರಿಕೆಯನ್ನು ಹರ್ಡೇಕರ್ ಮಂಜಪ್ಪನವರು ಪ್ರಾರಂಭಿಸಿ ಜಿಲ್ಲೆಯ ಪತ್ರಿಕೋದ್ಯಮ ರಂಗಕ್ಕೆ ನಾಂದಿ ಹಾಡಿದರು. ಈ ಪತ್ರಿಕೆಯಲ್ಲಿ ಬಾಲಗಂಗಾಧರ ತಿಲಕರ 'ಕೇಸರಿ' ಪತ್ರಿಕೆಯ ಸುದ್ದಿಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸುತ್ತಿದ್ದರು. ಇದರಿಂದ ಅನೇಕ ರಾಷ್ಟ್ರೀಯ ವಿಷಯಗಳು ಜನರಿಗೆ ತಿಳಿಯುತ್ತಿದ್ದವು. ಮಂಜಪ್ಪನವರು ಶರಣ ಸಂದೇಶ ಎಂಬ ಇನ್ನೊಂದು ಪತ್ರಿಕೆಯನ್ನು ಹೊರತಂದು ಮಾನವ ಧರ್ಮದ ಬಗ್ಗೆ ಜನರಿಗೆ ತಿಳಿಯಪಡಿಸುತ್ತಿದ್ದರು, ಖಾದಿ ವಿಜಯ, ಉದ್ಯೋಗ - ಇವು ಇವರು ಆಲಮಟ್ಟಿಯಲ್ಲಿ ನೆಲೆಸಿದಾಗ ಹೊರತಂದ ಪತ್ರಿಕೆಗಳು, ಕಣಕುಪ್ಪಿಗುರುಪಾದಪ್ಪನವರು 1924ರಲ್ಲಿ ದಾವಣಗೆರೆ ಜನಸೇವಕ ಎಂಬ ಪತ್ರಿಕೆ ಆರಂಭಿಸಿದರು. ಅಂದಾನಯ್ಯನವರು 'ಸನ್ಮಾರ್ಗದರ್ಶನ' ಎಂಬ ಕನ್ನಡ ವಾರಪತ್ರಿಕೆ ಹೊರತಂದರು. 1944ರಲ್ಲಿ ಕಡ್ಲೆಬಾಳು ಶಾಮರಾಯರು 'ಸಂಜಯ' ಎಂಬ ಪತ್ರಿಕೆ ಆರಂಭಿಸಿದರು. ಮುಂದೆ ಇವರು ಸಂಯುಕ್ತ ಕರ್ನಾಟಕದ ಪ್ರಸಿದ್ಧ ಸಂಪಾದಕರಾದರು. ಬಸವರಾಜ ಕಟ್ಟೀಮನಿಯವರು ಸ್ವಾತಂತ್ರ್ಯ ಬಂದ ಹೊಸತರಲ್ಲಿ 'ಸ್ವತಂತ್ರ' ವಾರ ಪತ್ರಿಕೆ ಮತ್ತು 'ಉಷಾ' ಮಾಸ ಪತ್ರಿಕೆಯನ್ನು ಇಲ್ಲಿಂದ ಪ್ರಕಟಿಸಿದರು. ಕರ್ನಾಟಕ ಏಕೀಕರಣದ ಪ್ರತಿಪಾದಕ ಇಟಗಿ ವೇದಮೂರ್ತಿಯವರು 'ನೇತಾಜಿ' ಪತ್ರಿಕೆ ಆರಂಭಿಸಿದರು (1948).

ಜಿಲ್ಲೆಯ ಪ್ರಥಮ ದೈನಿಕ 'ಸಮಾಚಾರ'ವನ್ನು ನರಸಿಂಹ ಐಯ್ಯಂಗಾರರು ದಾವಣಗೆರೆಯಿಂದ ಪ್ರಕಟಿಸಿದರು. ಮಹದೇವ ಬಣಕಾರರು ಕೆಲಕಾಲ ಜಾಗೃತಿ ಎಂಬ ಮಾಸಪತ್ರಿಕೆ ನಡೆಸಿದರು. ಅನಂತರ ವಿಚಾರವಾಣಿ, ಬಹಿರಂಗ, ಎಚ್ಚರಿಕೆ, ಛಲದಂಕಮಲ್ಲ, ವಿಚಾರ ಕ್ರಾಂತಿ, ನಗರವಾಣಿ, ಜನತಾವಾಣಿ, ದಾವಣಗೆರೆ ಟೈಮ್ಸ್, ಮಲ್ನಾಡುವಾಣಿ,

ಜನಮಿಡಿತ ಮುಂತಾದ ವಾರ ಹಾಗೂ ದಿನಪತ್ರಿಕೆಗಳು ದಾವಣಗೆರೆ ಜಿಲ್ಲೆಯ ಪತ್ರಿಕೋದ್ಯಮ ರಂಗವನ್ನು ಶ್ರೀಮಂತಗೊಳಿಸಿದವು. (ಡಿ.ಎಸ್.ಜೆ.)

**ದಾವಣಗೆರೆ ತಾಲ್ಲೂಕು :** ತಾಲ್ಲೂಕು ಮತ್ತು ಪಟ್ಟಣ. ತಾಲ್ಲೂಕನ್ನು ಪೂರ್ವದಲ್ಲಿ ಚಿತ್ರದುರ್ಗ, ಈಶಾನ್ಯದಲ್ಲಿ ಜಗಳೂರು, ಆಗ್ನೇಯದಲ್ಲಿ ಹೊಳಲ್ಕೆರೆ, ಪಶ್ಚಿಮದಲ್ಲಿ ಹರಿಹರ ತಾಲ್ಲೂಕುಗಳೂ ಉತ್ತರದಲ್ಲಿ ಬಳ್ಳಾರಿ ಜಿಲ್ಲೆ, ದಕ್ಷಿಣದಲ್ಲಿ ಶಿವಮೊಗ್ಗ ಜಿಲ್ಲೆ ಇವು ಸುತ್ತುವರಿದಿವೆ. ದಾವಣಗೆರೆ ಉಪವಿಭಾಗಕ್ಕೆ ಸೇರಿರುವ ಈ ತಾಲ್ಲೂಕಿನಲ್ಲಿ ಆನಗೋಡು, ದಾವಣಗೆರೆ ಮತ್ತು ಮಾಯಾಕೊಂಡ ಹೋಬಳಿಗಳೂ ಒಟ್ಟು 174 ಗ್ರಾಮಗಳೂ 2 ಪಟ್ಟಣಗಳೂ ಇವೆ. ತಾಲ್ಲೂಕಿನ ವಿಸ್ತೀರ್ಣ 956.6 ಚ.ಕಿಮೀ.

ತಾಲ್ಲೂಕಿನಲ್ಲಿ ಹೆಚ್ಚು ಒಣಭೂಮಿ ಇದೆ. ಮಾಯಾಕೊಂಡದಿಂದ ಅಣಜಿ ವರೆಗೆ ತಾಲ್ಲೂಕಿನ ಪೂರ್ವಭಾಗದಲ್ಲಿ ಬೆಟ್ಟದ ಸಾಲಿದ್ದರೂ ಇದು ಎತ್ತರವಿಲ್ಲದ ಗುಡ್ಡಗಳ ಮಾದರಿ. ಈ ತಾಲ್ಲೂಕಿನ ಮಾಯಕೊಂಡ ಗ್ರಾಮದ ಹತ್ತಿರ ಗಟ್ಟಿ ಎಳೆಯ ಕಲ್ನಾರು ಮತ್ತು ದೇವರಬೆಳ್ಳಿಕೆರೆಯ ಹತ್ತಿರ ಸುಣ್ಣ ಸಿಗುತ್ತವೆ. ತಾಲ್ಲೂಕಿನ ನೈಋತ್ಯದ ಸ್ವಲ್ಪ ಭಾಗದಲ್ಲಿ ಕೆಂಪು ಮಣ್ಣು ಇದೆ. ಉಳಿದ ಭಾಗ ಕಪ್ಪು ಎರೆ ಮಣ್ಣಿನಿಂದ ಕೂಡಿದೆ. ತಾಲ್ಲೂಕಿನ ಸರಾಸರಿ ವಾರ್ಷಿಕ ಮಳೆ 639.9ಮಿಮೀ.

ಈ ತಾಲ್ಲೂಕಿನ ಪಶ್ಚಿಮದಲ್ಲಿ ಧಾರವಾಡ ಮತ್ತು ಚಿತ್ರದುರ್ಗ ಜಿಲ್ಲೆಯ ಗಡಿಯಾಗಿ ಹರಿಯುವ ತುಂಗಭದ್ರಾ ನದಿಯೇ ದಾವಣಗೆರೆ ತಾಲ್ಲೂಕಿಗೆ ಸಮೀಪವಿರುವ ನದಿಯೆನ್ನಬಹುದು.

ಲಕ್ಕವಳ್ಳಿಯ ಭದ್ರಾ ಜಲಾಶಯದಿಂದ ತೆಗೆದಿರುವ ಮಲೆಬೆನ್ನೂರು ಮತ್ತು ದಾವಣಗೆರೆ ಶಾಖೆಯ ಎರಡು ನಾಲೆಗಳು ದಾವಣಗೆರೆಯನ್ನು ಹಾದುಹೋಗುತ್ತವೆ. ಹೊಳಲ್ಕೆರೆ ತಾಲ್ಲೂಕಿನ ಪಶ್ಚಿಮದ ಬೆಟ್ಟದಲ್ಲಿ ಹುಟ್ಟುವ ಸ್ಯಾಗಲಹಳ್ಳ ದಾವಣಗೆರೆ ತಾಲ್ಲೂಕಿನ ಮುಖಾಂತರ ಹರಿದು ತುಂಗಭದ್ರಾವನ್ನು ಹರಿಹರ ನಗರದ ಹತ್ತಿರ ಸೇರುತ್ತದೆ. ಈ ತಾಲ್ಲೂಕಿನಲ್ಲಿ ಹೆಚ್ಚಿನ ವ್ಯವಸಾಯವೆಲ್ಲ ಮಳೆ ಮತ್ತು ಕೆರೆ - ಬಾವಿಗಳ ನೀರನ್ನು ಅವಲಂಬಿಸಿದೆ. ದಾವಣಗೆರೆ ನಾಲೆಯ ಆಶ್ರಯದಲ್ಲಿ ಈ ತಾಲ್ಲೂಕಿನ 56,000 ಎಕರೆಗೆ ನೀರು ಒದಗುತ್ತದೆ. ನೀರನ್ನು ಹೆಚ್ಚು ಹಿಡಿದಿಟ್ಟುಕೊಳ್ಳುವ ಗುಣವುಳ್ಳ ಫಲವತ್ತಾದ ಕರಿಮಣ್ಣಿನ ಭೂಮಿ ಇದ್ದು ಮಳೆಗಾಲದಲ್ಲಿ 50-63 ಸೆಂಮೀ ನಷ್ಟು ಮಳೆ ಬೀಳುವುದರಿಂದ ತಾಲ್ಲೂಕಿನಲ್ಲಿ ವ್ಯವಸಾಯ ಚೆನ್ನಾಗಿದೆ. ಜೋಳ, ಹತ್ತಿ, ನೆಲಗಡಲೆ, ದ್ವಿದಳ ಧಾನ್ಯಗಳು, ರಾಗಿ, ಕಬ್ಬು, ಬತ್ತ - ಇವನ್ನು ಬೆಳೆಯುತ್ತಾರೆ.

ದಾವಣಗೆರೆ ತಾಲ್ಲೂಕು ಇಂದು ಕೈಗಾರಿಕೆಗೆ ಪ್ರಸಿದ್ಧವಾಗಿದೆ. ಇಲ್ಲಿ ಅನೇಕ ಹತ್ತಿ ಮತ್ತು ತೈಲೋತ್ಪಾದನ ಕಾರ್ಖಾನೆಗಳಿವೆ. ಉತ್ತಮ ರೈಲು ಮತ್ತು ವಾಹನ ಸಂಪರ್ಕವುಳ್ಳ ಮಾರ್ಗಗಳಿದ್ದು ತಾಲ್ಲೂಕಿನಲ್ಲಿ ಸಾರಿಗೆ ಸಂಪರ್ಕ ವ್ಯವಸ್ಥಿತವಾಗಿದ್ದು ವ್ಯಾಪಾರವಾಣಿಜ್ಯಾಭಿವೃದ್ಧಿಗೆ ನೆರವಾಗಿವೆ.

ಪ್ರೌಢಶಾಲೆಗಳೂ ವೈದ್ಯಕೀಯ, ತಾಂತ್ರಿಕ ತರಬೇತಿ, ಕುಶಲ ಕೈಗಾರಿಕಾ ತರಬೇತಿ ಶಾಲೆ, ಉಪಾಧ್ಯಾಯ ತರಬೇತಿ ಶಾಲೆಗಳೂ ಇದ್ದು ವಿದ್ಯಾಭ್ಯಾಸಕ್ಕೆ ಅನುಕೂಲವಿದೆ. ಕುವೆಂಪು ವಿಶ್ವವಿದ್ಯಾಲಯವು ಇಲ್ಲಿ ಸ್ನಾತಕೋತ್ತರ ಕೇಂದ್ರವನ್ನು ತೆರೆದಿದೆ. ಮಾಯಾಕೊಂಡ, ಹೊನ್ನೂರು, ಕೊಂಡಗಾಲ ಗ್ರಾಮಗಳಲ್ಲಿ ವೈದ್ಯಕೀಯ ಸೌಲಭ್ಯವಿರುವುದರ ಜೊತೆಗೆ ಸರ್ಕಾರಿ ಸಾರ್ವಜನಿಕ ಆಸ್ಪತ್ರೆ ಇದೆ.

ದಾವಣಗೆರೆಗೆ 16ಕಿಮೀ ಆಗ್ನೇಯದಲ್ಲಿರುವ ಹನ್ನೊಂದನೆಯ ಶತಮಾನದ ಸಿದ್ಧೇಶ್ವರ ದೇವಾಲಯವಿರುವ ಆನಗೋಡು, ಸುಮಾರು 450ರ ಕಾಲದ ಕದಂಬರ ಶಾಸನವಿರುವ ದಾವಣಗೆರೆಯಿಂದ ಪೂರ್ವಕ್ಕೆ 19 ಕಿಮೀ ದೂರದಲ್ಲಿ ಜಗಳೂರು - ದಾವಣಗೆರೆ ಮಾರ್ಗಮಧ್ಯದಲ್ಲಿರುವ ಅಣಜಿ, ದಾವಣಗೆರೆಗೆ ಸಮೀಪದಲ್ಲಿರುವ ಅನೇಕೊಂಡ ತಾಲ್ಲೂಕಿನ ಪ್ರಮುಖ ಸ್ಥಳಗಳಲ್ಲಿ ಕೆಲವು. ಬಾಡ 11-12ನೆಯ ಶತಮಾನದಲ್ಲಿ ಅಭಿವೃದ್ಧಿಹೊಂದಿದ್ದ ಒಂದು ಅಗ್ರಹಾರ ನಗರವಾಗಿತ್ತು. ಹಿಂದಿನ ದೇವಾಲಯಗಳ ಅವಶೇಷಗಳನ್ನು ಇಲ್ಲಿ ಕಾಣಬಹುದು. ಹದಡಿಯಲ್ಲಿ ಪಾಳೆಯಗಾರರರ ಕಾಲದ ಹನುಮಾನ್ ದೇವಾಲಯವಿದೆ. ಕಬ್ಬೂರು ಮಾಯ ಕೊಂಡಕ್ಕೆ 6 ಕಿಮೀ ದೂರದಲ್ಲಿದೆ. 12ನೆಯ ಶತಮಾನದಲ್ಲಿ ಇದೂ ಒಂದು ಅಗ್ರಹಾರವಾಗಿತ್ತು. ಇಲ್ಲಿ ಪ್ರಾಚೀನ ಕಲ್ಲೇಶ್ವರ ದೇವಾಲಯ ಇದೆ. ಹಿಂದೆ ಅಗ್ರಹಾರವಾಗಿದ್ದ ಕೊಡಗನೂರಿನಲ್ಲೂ ಅನೇಕ ಪಾಳು ದೇವಾಲಯಗಳನ್ನು ನೋಡಬಹುದು. ದಾವಣಗೆರೆಯ ಆಗ್ನೇಯಕ್ಕೆ 13 ಕಿಮೀ ದೂರದಲ್ಲಿರುವ ಕೊಗ್ಗನೂರಿನಲ್ಲಿ 11ನೆಯ ಶತಮಾನದ ಈಶ್ವರ ದೇವಾಲಯ ಮತ್ತು ಒಂದು ಹನುಮಂತ ದೇವಾಲಯ ಇದೆ.

ದಾವಣಗೆರೆಯ ದಕ್ಷಿಣಕ್ಕಿರುವ ಲೊಕ್ಕಿಕೆರೆ (ನೋಡಿ) ಚಾಳುಕ್ಯರ ಕಾಲದಲ್ಲಿ ಅಗ್ರಹಾರವಾಗಿತ್ತು. ಮಳಲಕೆರೆ ಗ್ರಾಮದಲ್ಲಿ 1701ರ ಈಶ್ವರ ದೇವಾಲಯವಿದೆ. ವೀರಗಲ್ಲುಗಳೂ ಮತ್ತು ಮಾಸ್ತಿಕಲ್ಲುಗಳೂ ಇಲ್ಲಿವೆ. ಬೆಂಗಳೂರು ಪುಣೇ ರೈಲುಮಾರ್ಗದಲ್ಲಿರುವ ಮಾಯಕೊಂಡದಲ್ಲಿ ಕೇಶವ ಮತ್ತು ಓಬಳ ನರಸಿಂಹ ದೇವಾಲಯಗಳಿವೆ. ಶಂಕರನಹಳ್ಳಿಯಲ್ಲಿ ರಂಗನಾಥಸ್ವಾಮಿ ದೇವಾಲಯವಿದೆ. ಈ ತಾಲ್ಲೂಕಿನ ಆವರಗೊಳದಲ್ಲಿ ಪ್ರತಿ ಮಾಘಮಾಸದಲ್ಲಿ ಜಾತ್ರೆ ನಡೆಯುತ್ತದೆ.

ದಾವಣಗೆರೆ ಈ ತಾಲ್ಲೂಕಿನ ಮುಖ್ಯ ಪಟ್ಟಣ ಮತ್ತು ಆಡಳಿತ ಕೇಂದ್ರ. ಚಿತ್ರದುರ್ಗದ ವಾಯುವ್ಯಕ್ಕೆ ಸುಮಾರು 61 ಕಿಮೀ ದೂರದಲ್ಲಿದೆ. ಈಗ ನಗರ ಕೆಲವು ಬಡಾವಣೆಗಳೊಂದಿಗೆ ವಿಸ್ತಾರಗೊಂಡಿದೆ. ಪುಣೆ-ಬೆಂಗಳೂರು ಹೆದ್ದಾರಿಯಲ್ಲಿದ್ದು ಇದೊಂದು ಪ್ರಮುಖ ರೈಲು ನಿಲ್ದಾಣವಾಗಿ ಸುತ್ತಲ ಅನೇಕ ಊರುಗಳೊಡನೆ ಉತ್ತಮ ರಸ್ತೆ ಸೌಲಭ್ಯವಿದ್ದು ಈ ನಗರ ಕರ್ನಾಟಕದ ಪ್ರಮುಖ ವ್ಯಾಪಾರ ವಾಣಿಜ್ಯ ಕೇಂದ್ರಗಳಲ್ಲೊಂದಾಗಿದೆ.

ಹಳೆ ದಾವಣಗೆರೆ ಪೂರ್ವಕ್ಕೂಹೊಸ ಬಡಾವಣೆ ಪಶ್ಚಿಮಕ್ಕೂ ಮಧ್ಯೆ ರೈಲು ಹಾದಿ ಹಾದುಹೋಗಿದೆ. ಇಡೀ ನಗರ ಒಂದು ಕೈಗಾರಿಕಾ ಕೇಂದ್ರದಂತೆ ಕಾಣುತ್ತದೆ. ಹತ್ತಿ ಕಾರ್ಖಾನೆ ಮತ್ತು ಎಣ್ಣೆ ಉತ್ಪಾದನೆ ಕಾರ್ಖಾನೆಗಳು ಇಲ್ಲಿ ಇದ್ದು ದಾವಣಗೆರೆ ಹತ್ತಿ ಉತ್ಪಾದಿತ ವಸ್ತುಗಳಿಗೆ, ಬಟ್ಟೆಗಳಿಗೆ, ಕಂಬಳಿಗಳಿಗೆ ಮತ್ತು ವನಸ್ಪತಿಗೆ ಪ್ರಸಿದ್ಧವಾಗಿದೆ. ಸರ್ಕಾರ, ನಗರಸಭೆ ಹಾಗೂ ಖಾಸಗಿ ಸಂಸ್ಥೆಗಳು ನಡೆಸುತ್ತಿರುವ ವೈದ್ಯಕೀಯ ಮತ್ತು ಎಂಜಿನಿಯರಿಂಗ್ ಕಾಲೇಜುಗಳೂ ಕೈಗಾರಿಕಾ ಮತ್ತು ಶಿಕ್ಷಣ ತರಬೇತಿ ಶಾಲಾ ಕಾಲೇಜುಗಳೂ ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ಮತ್ತು ಇತರ ಕಾಲೇಜುಗಳೂ ಇವೆ. ಕುಡಿಯಲು ತುಂಗಭದ್ರಾ ನದಿ ನೀರನ್ನು ಬಳಸಿಕೊಳ್ಳುತ್ತಿದ್ದಾರೆ. ಇಲ್ಲಿ ಸುಂದರ ಉದ್ಯಾನವನಗಳಿವೆ. ದಾವಣಗೆರೆ ನಗರಸಭಾಡಳಿತಕ್ಕೆ ಒಳಪಟ್ಟಿದೆ. ಈ ಊರಿನಲ್ಲಿ ವೀರಭದ್ರ, ದೇವಾಲಯ, ಮಹಲಿಂಗರಂಗರ ಸಮಾಧಿ, ಶಿವಶರಣ ಬರಕ್ಕೇಶ್ವರ, ಸಮಾಧಿ ಮತ್ತು ದೇವಾಲಯ, ನಗರದೇವತೆ ದುರ್ಗಾಂಬೆಯ (ದುಗ್ಗಮ್ಮ) ದೇವಾಲಯ ಇವೆ. ಪ್ರತಿ ಫಾಲ್ಗುಣ ಮಾಸದಲ್ಲಿ ಇಲ್ಲಿ ನಡೆಯುವ (ದುಗ್ಗಮ್ಮ) ಜಾತ್ರೆ ವೈಭವದಿಂದ ಜರುಗುತ್ತದೆ. (ಸಿ.ಕೆ.ವೈ.ಡಿ.)

**ದಾಸಪ್ಪ, ಎಚ್. ಸಿ. :** 1894-1964. ಖ್ಯಾತ ಸ್ವಾತಂತ್ರ್ಯಹೋರಾಟಗಾರರು. 1894 ಡಿಸೆಂಬರ್ 5ರಂದು ಕೊಡಗು ಜಿಲ್ಲೆ ಮಡಿಕೇರಿಯಲ್ಲಿ ಜನಿಸಿದರು. ಇವರ ತಂದೆ ಚೆನ್ನಯ್ಯ. ತಾಯಿ ತಿಮ್ಮಮ್ಮ. ಇವರ ಪೂರ್ವಿಕರ ಸ್ಥಳ ಹಳೆಯ ಮೈಸೂರು ಸಂಸ್ಥಾನದ ಹಿರಳ್ಳಿ. ಚೆನ್ನಯ್ಯನವರು ಮಡಿಕೇರಿಯಲ್ಲಿ ನ್ಯಾಯಾಧೀಶರಾಗಿ ಖ್ಯಾತಿಪಡೆದಿದ್ದರು. ಅವರಿಗೆ ಅಂದಿನ ಸರ್ಕಾರ ರಾವ್ ಸಾಹೇಬ್ ಎಂಬ ಬಿರುದನ್ನು ನೀಡಿತ್ತು. ತಮ್ಮ ಕೆಲಸದಿಂದ ನಿವೃತ್ತರಾದ ಮೇಲೆ ಬೆಂಗಳೂರಿಗೆ ಬಂದು ನೆಲಸಿದರು. ಅವರು ಸಂಸ್ಥಾನದಲ್ಲಿ ಹಿಂದುಳಿದ ವರ್ಗದವರ ಏಳಿಗೆಗೆ ಆರಂಭವಾದ ಜಸ್ಟಿಸ್ ಚಳವಳಿಯ ಸ್ಥಾಪಕರಲ್ಲೊಬ್ಬರಾಗಿದ್ದರು.

ದಾಸಪ್ಪನವರು ಮಹಾರಾಜ ಕಾಲೇಜಿನಲ್ಲಿ ಇಂಟರ್ ಮೀಡಿಯೆಟ್ ಪರೀಕ್ಷೆ ಮುಗಿಸಿ ಮದರಾಸಿನಲ್ಲಿ ಬಿ.ಎ. ಪದವಿ ಪಡೆದರು. ಅನಂತರ ಮುಂಬಯಿಗೆ ತೆರಳಿ ಅಲ್ಲಿ ನ್ಯಾಯಶಾಸ್ತ್ರದ ವ್ಯಾಸಂಗಮಾಡಿದರು. 1919ರಲ್ಲಿ ಬೆಂಗಳೂರಿನಲ್ಲಿ ವಕೀಲರಾಗಿ ಉದ್ಯೋಗವನ್ನು ಆರಂಭಿಸಿದ ಇವರು

1921ರಲ್ಲಿ ಮೈಸೂರಿಗೆ ಬಂದು ನೆಲಸಿ ವಕೀಲಿವೃತ್ತಿಯನ್ನೂ ಸಾರ್ವಜನಿಕ ಸೇವಾಕಾರ್ಯವನ್ನೂ ಮುಂದುವರಿಸಿದರು. 1926ರಲ್ಲಿ ಸುಪ್ರಸಿದ್ಧ ಸಮಾಜಸುಧಾರಕ ಕೆ.ಎಚ್.ರಾಮಯ್ಯನವರ ಮಗಳು ಶ್ರೀಮತಿ ಯಶೋಧರಮ್ಮನವರನ್ನು ವಿವಾಹವಾದರು.

1937ರ ವರೆಗೆ ಸಂಯುಕ್ತ ಪ್ರಜಾಪಕ್ಷದ ಮುಖಂಡರಾಗಿ ಮೈಸೂರು ಪುರಸಭೆ ಹಾಗೂ ಸಂಸ್ಥಾನದ ನ್ಯಾಯವಿಧಾಯಕ ಸಭೆಯ ಸದಸ್ಯರಾಗಿ ಹಲವು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಹಿಂದುಳಿದ ವರ್ಗಗಳ ಮುನ್ನಡೆಗೆ ನಡೆದ ಚಳವಳಿಯಲ್ಲಿ ಅಗ್ರನಾಯಕರಾಗಿದ್ದರು. 1937ರಲ್ಲಿ ಮೈಸೂರು ಸಂಸ್ಥಾನದ ಕಾಂಗ್ರೆಸ್ ಪಕ್ಷ ಸೇರಿದರು. 1939ರಲ್ಲಿ ಅದರ ಅಧ್ಯಕ್ಷರಾದರು. ಹಿಂದಿನ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರದ ರಚನೆಗಾಗಿ ನಡೆದ ಸತ್ಯಾಗ್ರಹ ಹೋರಾಟಗಳಲ್ಲಿ ಭಾಗವಹಿಸಿ ಅನೇಕ ಬಾರಿ ಸೆರೆಮನೆಗೆ ಹೋಗಿ ಬಂದರು. ಇವರ ಚಟುವಟಿಕೆಗಳಿಂದ ಕೆರಳಿದ ಅಂದಿನ ಸರ್ಕಾರ ಇವರ ವಕೀಲಿ ಸನ್ನದನ್ನು ರದ್ದು ಮಾಡಿತು. ಆ ಸಂದರ್ಭದಲ್ಲಿ ಮಹಾತ್ಮಾ ಗಾಂಧೀಯವರು 13-7-1940ರ ಹರಿಜನ ಪತ್ರಿಕೆಯಲ್ಲಿ ದಾಸಪ್ಪನವರ ಬಗ್ಗೆ ಈ ರೀತಿ ಬರೆದಿದ್ದಾರೆ: "ಶ್ರೀದಾಸಪ್ಪನವರು ಮೈಸೂರಿನ ಅತ್ಯಂತ ಗೌರವಾನ್ವಿತ ವ್ಯಕ್ತಿ. ಇಪ್ಪತ್ತು ವರ್ಷಗಳ ವಕೀಲಿ ಕೆಲಸದ ಅನುಭವವುಳ್ಳವರು. ಮೈಸೂರಿನ ಒಂದು ಭಾಗದಲ್ಲಿ ಮ್ಯಾಜಿಸ್ಟ್ರೇಟರ ಆಜ್ಞೆಯನ್ನು ಉಲ್ಲಂಘಿಸಿ ಭಾಷಣ ಮಾಡಿದ ಕೆಚ್ಚು ಅವರದು. ಜಸ್ಟಿಸ್ ನಾಗೇಶ್ವರ ಐಯರ್ ಅವರಿಂದ ನಡೆಯಲಿದ್ದ ಅಧಿಕೃತ ವಿಚಾರಣೆಯನ್ನು ಬಹಿಷ್ಕರಿಸಬೇಕೆಂದು ರಾಜಕೀಯ ಕೈದಿಗಳಿಗೆ ತಿಳಿಸಿ ಹೇಳುವ ಸಾಹಸ ಮಾಡಿದ್ದರು. ಆ ಕೆಲಸವನ್ನು ಅವರು ನನ್ನ ಸೂಚನೆಯ ಮೇರೆಗೆ ಮಾಡಿದ್ದರು. ಈ ಗುರುತರ ಅಪರಾಧಗಳಿಗಾಗಿ ದಾಸಪ್ಪನವರು ಎಂದೆಂದಿಗೂ ವಕೀಲಿ ವೃತ್ತಿಯನ್ನು ಕೈಗೊಳ್ಳದಂತೆ ಮಾಡಲಾಗಿದೆ. ದಾಸಪ್ಪನವರನ್ನು ನಾನು ಚೆನ್ನಾಗಿ ಬಲ್ಲೆ. ಅವರು ನಿಷ್ಕಳಂಕ ಚಾರಿತ್ರ್ಯವುಳ್ಳವರು; ಅತ್ಯಂತ ಪ್ರಾಮಾಣಿಕರು; ಅವರು ತಮ್ಮ ಕೈಲಾದಮಟ್ಟಿಗೂ ಅಹಿಂಸೆಯನ್ನು ಅನುಸರಿಸಲು ಸ್ಥೈರ್ಯದಿಂದ ಯತ್ನಿಸುತ್ತಿದ್ದಾರೆ. ಬ್ರಿಟಿಷ್ ಇಂಡಿಯಾದ ದೇಶಭಕ್ತ ವಕೀಲರು ಏನು ಮಾಡಿದ್ದಾರೋ ಅಥವಾ ಇತರ ವಕೀಲರು ಏನು ಮಾಡಲಿಲ್ಲವೋ ಅದನ್ನು ದಾಸಪ್ಪನವರು ಮಾಡಿದ್ದಾರೆ."

ಭಾರತ ಸ್ವಾತಂತ್ರ್ಯ ಪಡೆದ ಅನಂತರ ದಾಸಪ್ಪನವರು ರಾಜಕೀಯ ಹಾಗೂ ವಿಧಾಯಕ ಸೇವಾಕ್ಷೇತ್ರಗಳಲ್ಲಿ ಬಹುವಾಗಿ ದುಡಿದರು. ಶ್ರೀ ರಾಮಕೃಷ್ಣಾಶ್ರಮ, ಕಸ್ತೂರಬಾ ಗಾಂಧೀ ಸ್ಮಾರಕ ಸಂಸ್ಥೆ, ಗಾಂಧೀ ಸ್ಮಾರಕ ನಿಧಿ ಹಾಗೂ ಹಿಂದಿ ಪ್ರಚಾರ ಸಭೆ ಮುಂತಾದ ಸಂಸ್ಥೆಗಳ ಮೂಲಕ ಜನಸೇವೆ ಸಲ್ಲಿಸಿದರು. ಹಿಂದಿನ ಮೈಸೂರು ಸಂಸ್ಥಾನದಲ್ಲಿ 1947ನೆಯ ಅಕ್ಟೋಬರ್‌ನಿಂದ 1952ರ ವರೆಗೆ ಕೈಗಾರಿಕೆ ಮತ್ತು ಹಣಕಾಸಿನ ಮಂತ್ರಿಯಾಗಿದ್ದರು. 1954ರಲ್ಲಿ ರಾಜ್ಯ ಸಭೆಯ ಸದಸ್ಯರಾದರು. ಅನಂತರ 1957ಮತ್ತು 1962ರ ಮಹಾ ಚುನಾವಣೆಗಳಲ್ಲಿ ಲೋಕಸಭೆಗೆ ಚುನಾಯಿತರಾದರು. ಸಂಸತ್ತಿನ ಅಂದಾಜು ಸಮಿತಿ ಅಧ್ಯಕ್ಷರಾಗಿ ಮಹತ್ತರ ಸೇವೆ ಸಲ್ಲಿಸಿದರು. 1963ರಲ್ಲಿ ಕೇಂದ್ರ ಮಂತ್ರಿ ಮಂಡಲದ ರೈಲ್ವೆ ಸಚಿವರಾದರು; ಅನಂತರ ಕೈಗಾರಿಕಾ ಸಚಿವರಾದರು. ಆ ಪದವಿಯಲ್ಲಿರುವಾಗಲೇ 1964 ಅಕ್ಟೋಬರ್ 29ರಂದು ದೆಹಲಿಯಲ್ಲಿ ನಿಧನರಾದರು. (ಬಿ.ಆರ್.ಪಿ.)

**ದಾಸಯ್ಯ:** ಕರ್ನಾಟಕದ ಜನಪದ ಸಂಪ್ರದಾಯದಲ್ಲಿ ವೈಷ್ಣವ ಪಂಥಕ್ಕೆ ಸೇರಿದ ಧಾರ್ಮಿಕ ವ್ಯಕ್ತಿ. ಹಳ್ಳಿಗಳಲ್ಲಿ ಸಾಮಾನ್ಯವಾಗಿ ಶುಭಾಶುಭ ಸಂದರ್ಭಗಳಲ್ಲಿ ಜೋಯಿಸನಂತೆ ಕೆಲಸ ನಿರ್ವಹಿಸುವ ವೃತ್ತಿಯನ್ನು ಕೈಗೊಂಡವ. ಇವನ ಉಡುಗೆತೊಡುಗೆ, ಪರಿಕರಗಳದು ಒಂದು ವೈಶಿಷ್ಟ್ಯ. ತಲೆಗೆ ಹಳದಿ ರುಮಾಲು ಹಾಗೂ ನೂಲಿನ ದಂಡೀಸರ, ಮೈಗೆ ನಿಲುವಂಗಿ, ಕೊರಳಿಗೆ ತುಳಸಿಹಾರ ಹಾಗೂ ಹನುಮಂತ ವಿಗ್ರಹವಿರುವ ದೊಡ್ಡ ಕಂಚಿನ ಪದಕ, ಬಲಗೈಯಲ್ಲಿ ಜಾಗಟೆ, ಎಡಗೈಯಲ್ಲಿ ಶಂಖ, ಹಣೆಯ ಮೇಲೆ ಮೂರು ನಾಮ,ಬಗಲಿಗೆ ಬನವಾಸಿ (ಭಿಕ್ಷೆಯ ಬಿದಿರ ಬುಟ್ಟಿ,) ವಿಶೇಷ ಸಂದರ್ಭಗಳಲ್ಲಿ ಹರೆಗು (ವರ್ತುಳಾಕಾರದ ಬಣ್ಣದ ತಲೆ), ಹನ್ನೆರಡಕ್ಕಿಂತ ಹೆಚ್ಚು ಗಂಟೆಗಳುಳ್ಳ ಬೆಳ್ಳಿ ಬಾಣ ಇವುಗಳನ್ನು ಉಪಯೋಗಿಸುವುದು ಕಂಡುಬರುತ್ತದೆ. ಇವನು ಉಪಯೋಗಿಸುವ ಹರೆಗು ಘಟೋತ್ಕಚನ ತಲೆಯೆಂಬ ನಂಬಿಕೆಯಿದೆ. ಈಗ ದಾಸಯ್ಯಗಳು ಬಾಣವೆಂದು ಹೇಳುವ ಒನಕೆ ಲಕ್ಷ್ಮಣನ ಮೇಲೆ ರಾವಣ ಪ್ರಯೋಗಿಸಿದ ಶಕ್ತ್ಯಾಯುಧವಂತೆ. ಉತ್ಸವಾದಿ ಸಂದರ್ಭಗಳಲ್ಲಿ ಇವರು ಒಡ್ಡುವ ಬಾಣದ ರೀತಿಯನ್ನು ನೋಡಿದರೆ ಹಿಂದೆ ಯುದ್ಧ ಸಮಯದಲ್ಲಿ ಇವರು ಆಯುಧವಾಹಕರಾಗಿಯೋ ರಕ್ಷಕರಾಗಿಯೋ ಇದ್ದಂತೆ ತೋರುತ್ತದೆ. ನೇಕಾರರು ಮತ್ತು ಬೋಯಿಗಳಲ್ಲಿ ದಾಸಯ್ಯಗಳಾಗುವುದು ಹೆಚ್ಚು. ದಾಸ ಒಕ್ಕಲಿಗರಲ್ಲೂ ಗಂಗಡಿಕಾರ ಒಕ್ಕಲಿಗರಲ್ಲೂ ದಾಸಯ್ಯಗಳಾಗುವುದು ಕೆಲವು ಕಡೆ ಕಂಡುಬರುತ್ತದೆ. ದಾಸಯ್ಯನಾಗಬೇಕಾದರೆ ಗುರುವಿನಿಂದ ವಿಧಿವತ್ತಾಗಿ ದೀಕ್ಷೆಪಡೆಯಬೇಕು. ಜೊತೆಗೆ ಅಷ್ಟಾಕ್ಷರೀ ಮಂತ್ರವನ್ನೂ ರಾಮಗದ್ಯ, ನರಸಿಂಹಗದ್ಯ, ವಿಷ್ಣುಪಾರಮ್ಯ ಮುಂತಾದ ಸ್ತೋತ್ರ ಪಾಠಗಳ ಉಪದೇಶವನ್ನೂ ಗುರುವಿನಿಂದ ಪಡೆಯಬೇಕು. ಹೀಗೆ ದೀಕ್ಷೆವಹಿಸಿ ಅನ್ನದಾನ ಮಾಡಿದಮೇಲೆ ಆತ ದಾಸಯ್ಯನಾಗುತ್ತಾನೆ. ದಾಸಯ್ಯಗಳು ತಮ್ಮನ್ನು ಗರುಡಗೋತ್ರದವರೆಂದು ಕರೆದುಕೊಳ್ಳುತ್ತಾರೆ. ಇವರು ಮೂಲತಃ ವಿಷ್ಣುಭಕ್ತರು.

ಶ್ರೀ ರಾಮಾನುಜಾಚಾರ್ಯರು ಸ್ಥಾಪಿಸಿದ ಶ್ರೀವೈಷ್ಣವ ಪಂಥವು ವೈದ್ಯಕೇತರ ವರ್ಗಗಳಲ್ಲಿ ದಾಸಪಂಥ' ಹೆಚ್ಚು ಜನಪ್ರಿಯವಾಗಲು ಕಾರಣವಾಯಿತೆಂದು ತಿಳಿದುಬರುತ್ತದೆ. ವಿಶೇಷವಾಗಿ ಪರಿಶಿಷ್ಟ ಜಾತಿಗಳಲ್ಲಿ 'ದಾಸಯ್ಯ'ಗಳು ಈಗಲೂ ಗ್ರಾಮಾಂತರ ಪ್ರದೇಶಗಳಲ್ಲಿ ಕ್ರಿಯಾಶೀಲರಾಗಿದ್ದಾರೆ. ಮುಖ್ಯ ಹಬ್ಬಗಳಲ್ಲಿ, ಮದುವೆಗಳಲ್ಲಿ, ಹುಟ್ಟು ಸಾವುಗಳಲ್ಲಿ ವಿಶೇಷ ವೇಷಭೂಷಣಗಳನ್ನು ಧರಿಸಿದ ದಾಸಯ್ಯ, ಶಂಖ ಜಾಗಟೆ ಹಿಡಿದು ಕಾಣಿಸಿಕೊಳ್ಳುತ್ತಾನೆ. ಆತನಿಗೆ ಪಸ್ತ್ರದಾನ ಮಾಡುವುದು ಮತ್ತು ಪಡಿಕೊಡುವುದು ಶ್ರೇಯಸ್ಕರವೆಂದು ಜನ ಭಾವಿಸುತ್ತಾರೆ. ಹೀಗೆ ಆತನು ನಿರ್ವಹಿಸಬೇಕಾದ ನಿರ್ದಿಷ್ಟ ಕಾರ್ಯಗಳಿದ್ದವು. ಈಗ ಈ ರೀತಿ ರಿವಾಜುಗಳು ಕಡಿಮೆಯಾಗುತ್ತಿವೆ.

ದಾಸ ಒಕ್ಕಲಿಗರಲ್ಲಿ ಮನೆಯ ಮಕ್ಕಳಲ್ಲಿ ಯಾರನ್ನಾದರೂ ಒಬ್ಬನನ್ನು ದಾಸಯ್ಯನನ್ನಾಗಿ ಬಿಡುವ ಸಂಪ್ರದಾಯವಿದ್ದು ಇದನ್ನು 'ದಾಸನ್ನ ಬಿಡುವುದು' ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಇದು ಮದುವೆಯ ಸಂದರ್ಭದಲ್ಲಿ ನಡೆಯುತ್ತದೆ. ಹೀಗೆ ದಾಸಯ್ಯನಾದವನಿಗೆ ಕೈಗೆ ಕಪ್ಪ ತೊಡಿಸಿ, ಶಂಖ ಜಾಗಟೆ ನೀಡುತ್ತಾರೆ. ಆತ ಯಾವಾಗಲೂ ಭಿಕ್ಷೆ ಬೇಡಬೇಕೆಂದೇನೂ ಕಟ್ಟು ಕಟ್ಟಳೆಗಳಿರುವುದಿಲ್ಲ. ಆದರೆ ವರ್ಷಕ್ಕೊಮ್ಮೆ ಶ್ರಾವಣ ಶನಿವಾರಗಳಲ್ಲಿ ಒಂದು ದಿನವಾದರೂ ಭಿಕ್ಷೆ ಬೇಡಬೇಕು. ದಾಸಯ್ಯ ಸಂಸಾರಿಯೂ ಆಗಿರಬಹುದು.

ವೈಷ್ಣವ ಸಂಪ್ರದಾಯದವರಲ್ಲಿ ತಿರುಪತಿ ತಿಮ್ಮಪ್ಪನ ಒಕ್ಕಲು ಮದುವೆಯಾದರೆ ಶನಿವಾರ ಹರಿಸೇವೆ ಎಂಬ ಸಮಾರಂಭ ನಡೆಯುತ್ತದೆ. ಇದು ಹರಿ ಸೇವೆಗಳಲ್ಲೆಲ್ಲ ಬಹುದೊಡ್ಡದು. ಇದಕ್ಕಾಗಿ ಸುತ್ತಮುತ್ತಲ ದಾಸಪ್ಪಗಳೆಲ್ಲ ಬಂದು ಸೇರಿ ಹತ್ತಾರು ಹರೆಗು ಕಟ್ಟಿ ಉತ್ಸವ ಮಾಡುತ್ತಾರೆ. ಆ ದಿನ ಸಂಜೆ ದಾಸಪ್ಪನು ಬಸವನ ಮೇಲೆ ಕುಳಿತು ಶಂಖು ಜಾಗಟೆ ಬಾರಿಸುತ್ತ ಬರುವನು. ಬರುವ ಬೀದಿಯಲ್ಲಿ ಮಣೇವು ಹಾಕುವುದು (ನೋಡಿ) ವಾಡಿಕೆ. ಹೀಗೆ ಬಂದು ಮನೆಯ ಒಳಗೆ ಪ್ರವೇಶಿಸಿ ಅನಂತರ ಬಾಳೆ ಎಲೆಯ ಮೇಲೆ ಅಕ್ಕಿ ಹಾಕಿ ಬನವಾಸಿ, ಬಾಣ ಇತ್ಯಾದಿಗಳನ್ನು ಇಟ್ಟು ಧೂಪ ದೀಪಗಳಿಂದ ಪೂಜಿಸಿ, ಶಂಖ ಊದಿ ಜಾಗಟೆ ಬಾರಿಸುತ್ತಾನೆ. ಹೀಗೆ ಮನೆಯಲ್ಲಿ ಶಂಖ ಊದಿದರೆ ದುಷ್ಟ ಗ್ರಹಗಳ ಕಾಟ ತಪ್ಪಿ ಮಂಗಳ ಉಂಟಾಗುತ್ತದೆ ಎಂಬ ನಂಬಿಕೆಯಿದೆ. ಶ್ರಾವಣಶನಿವಾರಗಳು ಹಾಗೂ ಸುಗ್ಗಿ ದಾಸಯ್ಯನಿಗೆ ಹೆಚ್ಚು ವರಮಾನ ತಂದುಕೊಡುವ ಕಾಲಗಳು, ಈ ಕಾಲದಲ್ಲಿ ಇವನಿಗೆ ಎಲ್ಲರೂ ದವಸಧಾನ್ಯಗಳನ್ನೊ ಬಟ್ಟೆಬರಿಯನ್ನೊ ನೀಡುತ್ತಾರೆ. ಹಿಂದೆ ತಿರುಪತಿಯಾತ್ರೆಯನ್ನು ಮಾಡತಕ್ಕವರು ದಾಸಯ್ಯನ ಮೂಲಕವೇ ಹೋಗಿ

ಬರುತ್ತಿದ್ದರು. ಹಾಗಾಗಿ ಹಳ್ಳಿಯಲ್ಲಿ ಧಾರ್ಮಿಕ ಸಂಪ್ರದಾಯಗಳ ಆಚರಣೆಗೆ ಈತ ಮೂಲ ಆಧಾರವಾಗಿದ್ದ. ಆದರೆ ಇತ್ತೀಚೆಗೆ ದಾಸಯ್ಯಗಳು ಕಡಿಮೆಯಾಗುತ್ತಿದ್ದು ಇವರ ಪ್ರಭಾವವೂ ಕುಂಠಿತಗೊಂಡಿದೆ. ಜಾಗಟೆಯ ಶ್ರುತಿಯೊಂದಿಗೆ ಈತ ಹೇಳುವ ಕೆಲವು ಸ್ತೋತ್ರಗಳು ಕೇಳಲು ಇಂಪಾಗಿರುತ್ತವೆ. (ಎ.ಬಿ.ಆರ್.)

**ದಿಂಡಗೂರು:** ಹಾಸನ ಜಿಲ್ಲೆ ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಕಸಬೆಯಿಂದ ಈಶಾನ್ಯಕ್ಕೆ ಸು. 6ಕಿಮೀ ದೂರದಲ್ಲಿರುವ ಗ್ರಾಮ. ಇಮ್ಮಡಿ ಹೊಯ್ಸಳ ವೀರಬಲ್ಲಾಳದೇವನ ಮಂತ್ರಿಗಳಲ್ಲೊಬ್ಬನಾದ ಪಂಡಿತ ದಂಡನಾಥ' ಈ ಗ್ರಾಮವನ್ನು ರಾಜನಿಂದ ಬೇಡಿ ಪಡೆದು. ಇಲ್ಲಿ ಅಗ್ರಹಾರವನ್ನು ಸ್ಥಾಪಿಸಿ ಮಲ್ಲಿಕಾರ್ಜುನ ಪುರವೆಂದು ಹೆಸರಿಟ್ಟು ಕೇಶವ ಮತ್ತು ಮಲ್ಲೇಶ್ವರ ದೇವಾಲಯಗಳನ್ನು ಕಟ್ಟಿಸಿದನೆಂದು 1209ರ ಒಂದು ತಾಮ್ರಶಾಸನ ತಿಳಿಸುತ್ತದೆ.

ಕೇಶವ ದೇವಾಲಯದಲ್ಲಿ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖ ಮಂಟಪಗಳಿವೆ. ಗೋಡೆಯ ಮೇಲ್ಮೈ, ಚಜ್ಜದ ಮೇಲಿನ ಅಂಕಣ ಮತ್ತು ಗೋಪುರದ ಕೋನ ಶ್ರೇಣಿಗಳು ಅಲಂಕಾರ ರಹಿತವಾಗಿವೆ. ಮಾಳಿಗೆಯ ಒಳಮೈಗಳನ್ನು ಚೆನ್ನಾಗಿ ರೂಪಿಸಲಾಗಿದೆ. ಮಧ್ಯಮಾಳಿಗೆ ಗುಮ್ಮಟಾಕಾರದಲ್ಲಿದೆ. ಕೇಶವ ವಿಗ್ರಹ ಆರು ಅಡಿ ಎತ್ತರವಿದ್ದು ನಾಲ್ಕು ಹಸ್ತಗಳಲ್ಲಿ ಪದ್ಮ, ಶಂಖ, ಚಕ್ರ ಮತ್ತು ಗದೆಗಳಿವೆ. ನವರಂಗದ ಬಾಗಿಲುವಾಡದ ಹಾಸುಗಲ್ಲಿನ ಮೇಲೆ ವೇಣುಗೋಪಾಲ ವಿಗ್ರಹವನ್ನೂ ಗರ್ಭಗೃಹದ ಬಾಗಿಲುವಾಡದ ಮೇಲೆ ಗಜಲಕ್ಷ್ಮೀ ವಿಗ್ರಹವನ್ನೂ ಕೆತ್ತಲಾಗಿದೆ.

ಮಲ್ಲೇಶ್ವರ ದೇವಾಲಯ ರಚನೆಯಲ್ಲಿ ಕೇಶವ ದೇವಾಲಯವನ್ನೇ ಹೋಲುತ್ತದೆ. ಮಾಳಿಗೆಯಲ್ಲಿ ಸುಂದರವಾದ ಕೆತ್ತನೆಗಳಿವೆ. ದೊಡ್ಡಯ್ಯನೆಂಬುವವನು ಇಲ್ಲಿನ ಮಂಟಪವೊಂದನ್ನು ಕಟ್ಟಿಸಿದನೆಂದು ಹೊರ ಅಂಕಣದಲ್ಲಿರುವ 1651ರ ಶಾಸನ ತಿಳಿಸುತ್ತದೆ. (ಎಸ್.ವಿ.ಎಸ್.)

**ದಿನಕರ ದೇಸಾಯಿ :** 1909 - 82. ಚುಟುಕು ಬ್ರಹ್ಮ ಎಂದೇ ಹೆಸರು ಗಳಿಸಿರುವ ಕವಿ, ಪ್ರತಿಕೋದ್ಯಮಿ, ಶಿಕ್ಷಣತಜ್ಞ, ರಾಜಕಾರಣಿ, ಸಮಾಜ ಸೇವಕ, ಕಾರ್ಮಿಕ ಸಂಘಟಕ. ಉತ್ತರ ಕನ್ನಡ ಜಿಲ್ಲೆ ಅಂಕೋಲದ ಹೊನ್ನೆಕೇರಿಯಲ್ಲಿ 1909 ಸೆಪ್ಟೆಂಬರ್ 10 ರಂದು ಜನಿಸಿದರು. ಇವರ ಮೂಲ ಮನೆ ಕುಮಟ ತಾಲ್ಲೂಕಿನ ಅಂಡರುಹಳ್ಳಿ ಗ್ರಾಮದ ಹೊಂಡದ ಹೊಕ್ಕಲು. ಇವರ ತಂದೆ ದತ್ತಾತ್ರೇಯ ದೇಸಾಯಿ, ಪ್ರಾಥಮಿಕ ಶಾಲೆಯ ಉಪಾಧ್ಯಾಯರಾಗಿದ್ದರು. ತಾಯಿ ಅಂಬಿಕಾ ದೇಸಾಯಿ. ಬಾಲ್ಯದಲ್ಲೇ ತಾಯಿಯನ್ನು ಕಳೆದುಕೊಂಡು ಇವರು ತಂದೆಯ ಪ್ರೀತಿಯ ಆರೈಕೆಯಲ್ಲಿ ಬೆಳೆದರು.

ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ಅಂಕೋಲೆಯ ಅಲಗೇರಿಯಲ್ಲಿ ಪೂರೈಸಿದರು. ಅನಂತರ ಅಂಕೋಲ ಮತ್ತು ಕಾರವಾರಗಳಲ್ಲಿ ಹೈಸ್ಕೂಲು ಶಿಕ್ಷಣ ಮುಗಿಸಿದರು. ಬೆಂಗಳೂರಿನಲ್ಲಿ ಪದವಿ ಪಡೆದ ಬಳಿಕ ಮುಂಬಯಿಯಲ್ಲಿ ಸ್ನಾತಕೋತ್ತರ ಪದವಿ ಹಾಗೂ ಎಲ್.ಎಲ್.ಬಿ. ವ್ಯಾಸಂಗಗಳನ್ನು ಏಕಕಾಲದಲ್ಲಿ ಮಾಡಿದರು. ಕಲ್ಯಾಣಿ ಚಾಳುಕ್ಯರ ಆಡಳಿತದಲ್ಲಿಯ ಮಹಾಮಂಡಲೇಶ್ವರರು ಎಂಬ ಸಂಶೋಧನ ಪ್ರಬಂಧವನ್ನು ಸ್ನಾತಕೋತ್ತರ ಪದವಿಗಾಗಿ ಮಂಡಿಸಿದರು. ಎಂ.ಎ. ಪದವಿಯನ್ನು ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾಗಿ ಸೇಂಟ್ ಜೇವಿಯರ ರಜತ ಪದಕ ಪಡೆದರು. ಬಿ.ಎ. ಪದವಿಯಲ್ಲೂ ಇತಿಹಾಸ ವಿಷಯದಲ್ಲಿ ಗರಿಷ್ಟ ಅಂಕ ಗಳಿಸಿದ್ದಕ್ಕಾಗಿ ಕ್ಯಾಂಡಿ ಪಾರಿತೋಷಕ ಪಡೆದಿದ್ದರು.

ಸ್ನಾತಕೋತ್ತರ ಹಾಗೂ ಕಾನೂನು ಪದವಿ ಪಡೆದ ಇವರಿಗೆ ಹಲವು ಉದ್ಯೋಗಗಳು ಸುಲಭವಾಗಿ ದೊರೆಯಬಹುದಾಗಿತ್ತು. ಆದರೆ ಸಮಾಜ ಸೇವಾಸಕ್ತರಾಗಿದ್ದುದರಿಂದ ಇವನ್ನೆಲ್ಲಾ ಬದಿಗೊತ್ತಿ ಗೋಪಾಲಕೃಷ್ಣ ಗೋಖಲೆಯವರ ಗವರ್‌ನರ್ ಆಫ್ ಇಂಡಿಯಾ ಸೊಸೈಟಿ (ಭಾರತ ಸೇವಕ್ ಸಮಾಜ) ಯನ್ನು ಸೇರಿದರು. ದಿನಕರರು ಸಮಾಜ ಸೇವೆಗಾಗಿ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡರು. ಮುಂಬಯಿ ಪ್ರಾಂತದ ಟ್ರೇಡ್ ಯೂನಿಯನ್ ಕಾರ್ಯದರ್ಶಿ, ಕಡಲ ಕಾರ್ಮಿಕರ ಸಂಘದ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಿದರು. ಕಾರ್ಮಿಕ ನಾಯಕರಾಗಿ ಡೆನ್ಮಾರ್ಕ್ ಮತ್ತು ಅಮೇರಿಕಗಳಲ್ಲಿ ನಡೆದ ಮಹಾಧಿವೇಶನದಲ್ಲಿ ಪಾಲ್ಗೊಂಡರು (1946). ಮುಂಬಯಿ ನಗರ ಪಾಲಿಕೆ ಸದಸ್ಯರಾಗಿಯೂ ಗಣನೀಯ ಸೇವೆ ಸಲ್ಲಿಸಿದರು (1948 - 61). ಅಂಕೋಲೆಯಲ್ಲಿ ರೈತಕೂಟ ಮತ್ತು ಕೆನರಾ ವೆಲ್‌ಫೇರ್ ಟ್ರಸ್ಟ್ ಸ್ಥಾಪಿಸಿದರು. ಮುಂಬಯಿಯಲ್ಲಿದ್ದರೂ ಇವರ ಹೃದಯ ಸದಾ ಹಂಬಲಿಸುತ್ತಿದ್ದುದು ಉತ್ತರ ಕನ್ನಡ ಜಿಲ್ಲೆಯನ್ನು. ರೈತರನ್ನು ಸಂಘಟಿಸಿ ಗೇಣಿ ಪದ್ಧತಿಯಲ್ಲಿದ್ದ ಸಾಮಾಜಿಕ ಅನ್ಯಾಯಗಳನ್ನು ಪ್ರತಿಭಟಿಸಿದರು. ಒಡೆಯನನ್ನು ಘಟ್ಟ ಹತ್ತಿಸಿ ಎಂದು ಘೋಷಿಸಿದರು. ಅಂದಿನ ಮುಂಬಯಿ ಸರ್ಕಾರ ಐದು ವರ್ಷಗಳ ಕಾಲ ದಿನಕರರು ಉತ್ತರ ಕನ್ನಡ ಜಿಲ್ಲೆ ಪ್ರವೇಶಿಸುವುದನ್ನು ನಿಷೇಧಿಸಿತ್ತು. ಇವರು ನಡೆಸುತ್ತಿದ್ದ ರೈತ ಚಳವಳಿ ಹೋರಾಟದಿಂದ ಜಮೀನ್ದಾರರು ಇವರನ್ನು ಹಾವಳಿ ಮಂಜ ಎಂದು ಕರೆದರು. ಲೋಕಸಭಾ ಸದಸ್ಯರಾಗಿ (1967) ಸಂಸತ್ತಿನಲ್ಲಿ ತಮ್ಮ ವಾದ ವೈಖರಿಯ ಮೂಲಕ ಜನರ ಹಿತಾಸಕ್ತಿ ಕಾಪಾಡಲು ತೀವ್ರ ಯತ್ನ ನಡೆಸಿದರು. ಜನಸೇವಕ (ನೋಡಿ) ಎಂಬ ವಾರಪತ್ರಿಕೆಯನ್ನು ಹದಿನೇಳು ವರ್ಷಗಳ ಕಾಲ ಪ್ರಕಟಿಸಿ, ಜನಜಾಗೃತಿಯನ್ನುಂಟುಮಾಡಿದರು. ಜನಸೇವಕ ಪತ್ರಿಕೆ ಪ್ರಜಾಸತ್ತೆಯ ಕಾವಲುಗಾರ ಎಂಬ ಬಿರುದಿಗೆ ಪಾತ್ರವಾಯಿತು. ಇವರು ತಮ್ಮ ವಿಚಾರಗಳನ್ನೂ ಜನಪರ ಕಾಳಜಿಯನ್ನೂ ಪುಸ್ತಕಗಳ ಮೂಲಕ ಪ್ರಕಟಿಸಿದ್ದಾರೆ. ಪ್ರಪಂಚದ ಕೆಲಸಗಾರರು (1953) ಪ್ರೈಮರಿ ಎಜ್ಯುಕೇಶನ್ ಇನ್ ಇಂಡಿಯಾ, ಟುವರ್ಡ್ಸ್ ಲಿಟರೇಟ್ ಬೊಂಬೇ, ಲ್ಯಾಂಡ್ಸ್ ರೆಂಟ್ಸ್ ಇನ್ ನಾರ್ತ್ ಕೆನರಾ, ಮೆರಿಟಾಯಮ್ ಲೇಖರ್ ಇನ್ ಇಂಡಿಯಾ, ಎಮಂಗ್ ಇಂಡಿಯನ್ ಗೇಮನ್ ಇನ್ ಗ್ರೇಟ್ ಬ್ರಿಟನ್, ರೈತರ ಹಾಡುಗಳು ಮುಂತಾದ ಪುಸ್ತಕ, ಕಿರುವರದಿ ಹಾಗೂ ರೈತ ಸಂಘಟನೆಗೆ ಸ್ಫೂರ್ತಿ ನೀಡುವ ಹಾಡುಗಳನ್ನು ಬರೆದಿದ್ದಾರೆ.

ಇವರೊಬ್ಬ ಕ್ರಾಂತದರ್ಶಿ ಕವಿ. ಸಮಾಜವಾದಿ ದೃಷ್ಟಿಕೋನದಿಂದ ರಚನೆಗೊಂಡ ಇವರ ಕವನಗಳು ಜನಪರವಾಗಿವೆ. ಕವನ ಸಂಗ್ರಹ (1951), ಹೂಗೊಂಚಲು (1958), ದಾಸಾಳ ಮೊದಲಾದ ಸಂಕಲನಗಳಲ್ಲಿ ಜನಜೀವನಕ್ಕೆ ಹತ್ತಿರವಾದ ವಿಚಾರ ಪ್ರಚೋದಕ ಸಾಮಾಜಿಕ ಕಳಕಳಿಯುಳ್ಳ ಸರಳವಾದ ಕವನಗಳನ್ನು ಕಾಣಬಹುದಾಗಿದೆ. ದೀನಗಿಂತ ದೇವ ಬಡವ, ನನ್ನ ದೇಹದ ಬೂದಿ, ಕೆಂಪು ದಾಸಾಳ, ಆತ್ಮ ವಿಶ್ವಾಸ, ಬಿರುಗಾಳಿ ಮುಂತಾದ ಕವನಗಳಲ್ಲಿ ಕವಿಯ ಆಶಯ, ಆದರ್ಶ ಒಡಮೂಡಿವೆ. ಅಂಕೋಲ, ಗೋಕರ್ಣ ಸೀಮೆಯ ಹಾಲಕ್ಕಿ ಒಕ್ಕಲಿಗರು ಇವರ ಹಾಡುಗಳನ್ನು ಗುಮಟೆ ಪಾಂಗಿನಲ್ಲಿ ಹಾಡುತ್ತಿದ್ದುದು ಹಾಡಿನ ಜನಪ್ರಿಯತೆಗೆ ಸಾಕ್ಷಿ. ಮಕ್ಕಳಿಗಾಗಿ ಇವರು ಮಕ್ಕಳ ಗೀತೆಗಳು (1951), ಮಕ್ಕಳ ಪದ್ಯ (1976), ಮಕ್ಕಳ ಪದ್ಯಗಳು (1956) ಎಂಬ ಸಂಕಲನವನ್ನು ಪ್ರಕಟಿಸಿದ್ದಾರೆ. ಇಲ್ಲಿಯ ಹಾಡುಗಳು ಮಕ್ಕಳ ಅರಿವಿನ ಕ್ಷಿತಿಜವನ್ನು ವಿಸ್ತರಿಸುವುದರೊಂದಿಗೆ ವೈಜ್ಞಾನಿಕ ಮನೋಭಾವನೆಯನ್ನು ಪೋಷಿಸುವ ಗುಣವನ್ನು ಹೊಂದಿವೆ. ಈ ಹಾಡುಗಳಲ್ಲಿ ವಿಡಂಬನೆ, ಸಾಮಾಜಿಕ ಕಳಕಳಿ, ಸಮಾನತೆಯ ಮನೋಭಾವವನ್ನು ಕವಿ ಬಿತ್ತರಿಸಿದ್ದಾರೆ. ನಾ ಕಂಡ ಪಡುವಣ (1951) ಎಂಬ ಇವರ ಪ್ರವಾಸ ಕಥನ ಇವರ ಉತ್ತಮ ಗದ್ಯಶೈಲಿ ಹಾಗೂ ರಸವತ್ತಾದ ನಿರೂಪಣೆಯಿಂದ ಕುತೂಹಲಕಾರಿಯಾದ ವಿಷಯ ಸಂಗ್ರಹದಿಂದ ಗಮನಾರ್ಹವಾಗಿದೆ.

ಚುಟುಕ ಬ್ರಹ್ಮ ಎಂದೇ ಪ್ರಸಿದ್ಧರಾಗಿರುವ ಇವರು ಐದು ಸಾವಿರಕ್ಕೂ ಹೆಚ್ಚು ಔಷಧಿಗಳನ್ನು ರಚಿಸಿದ್ದಾರೆ. ಇವರು ಬರೆದುದೆಲ್ಲ ಚುರುಕು ಮುಟ್ಟಿಸುವ ಚುಟುಕುಗಳಾಗಿವೆ. ವ್ಯಂಗ್ಯ, ವಿಡಂಬನೆ ಇವರ ಚುಟುಕದ ಜೀವನಾಡಿ. ಆದರ್ಶವನ್ನು ತಮ್ಮ ಕವಿತೆ ಚುಟುಕಗಳಲ್ಲಿ ಬರೆದ ದಿನಕರರು ಅದರಂತೆ ಬದುಕಿದವರು. ಜನಸೇವಕ ಪತ್ರಿಕೆಯಲ್ಲಿ ಇವರು ಬರೆದ ಮುಖಪುಟದ ಲೇಖನ, ಸಂಪಾದಕೀಯ ಹಾಗೂ ಭತ್ತದ ತೆನೆ ಇಂದಿಗೂ ಪ್ರಸ್ತುತ.

ಉತ್ತರ ಕನ್ನಡದ ಹಳ್ಳಿಗಾಡಿನ ನಿರುತ್ತೇಜನಕ ಪರಿಸರದಲ್ಲಿ ಜನತಾ ವಿದ್ಯಾಲಯಗಳನ್ನು ಸ್ಥಾಪಿಸಿ ಶಿಕ್ಷಣ ಪ್ರಚಾರ ಕೈಗೊಂಡರು. ಇವರು ರಚಿಸಿದ ಮಕ್ಕಳ ಗೀತೆಗಳು ಮತ್ತು ಕವನ ಸಂಗ್ರಹ ಪುಸ್ತಕಗಳಿಗೆ ಮುಂಬಯಿ ಸರ್ಕಾರದ ಪ್ರಶಸ್ತಿ ಲಭಿಸಿದೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಇವರ ದಿನಕರ ಚೌಪದಿ ಕೃತಿಗೆ ಪ್ರಶಸ್ತಿ ನೀಡಿದೆ (1980). ಕರ್ನಾಟಕ ವಿಶ್ವವಿದ್ಯಾಲಯದ ಇವರಿಗೆ ಗೌರವ ಡಾಕ್ಟರೇಟ್ ನೀಡಿದೆ (1975). ಗೋಕರ್ಣದ ಪರ್ತಗಾಳಿ ಮಠದ ವಿದ್ಯಾಧಿರಾಜ ಪುರಸ್ಕಾರ, ಜನ್ಮಭೂಮಿ ಟ್ರಸ್ಟಿನ ಪತ್ರಿಕೋದ್ಯಮ ಪ್ರಶಸ್ತಿ ಇವರಿಗೆ ಸಂದಾಯವಾಗಿವೆ (1976). ಇವರು 1982 ರ ನವೆಂಬರ್ 6 ರಂದು ಮುಂಬಯಿಯಲ್ಲಿ ನಿಧನರಾದರು. ಆಗ ವಿ.ಕೃ. ಗೋಕಾಕರು "ದಿನಕರರ ಜೀವನಲತೆಯಲ್ಲಿ ಅರಳಿದ ಎರಡು ಮಂದಾರಗಳು; ಒಂದು ಅವರ ಕಾವ್ಯ, ಇನ್ನೊಂದು ಅವರ ದೇಶಸೇವೆ" ಎಂದು ಬರೆದಿದ್ದಾರೆ. (ಎಸ್.ಎಚ್.ಟಿ.)

**ದಿವಾಕರ, ಆರ್.ಆರ್. :** 1894-1990. ಪ್ರಸಿದ್ಧ ಸ್ವಾತಂತ್ರ್ಯ ಹೋರಾಟಗಾರ. ಕರ್ನಾಟಕ ಏಕೀಕರಣದ ಅಧ್ವರ್ಯು, ಚಿಂತಕ, ಲೇಖಕ, ಪತ್ರಕರ್ತ, ಆಡಳಿತಗಾರ. ದಿವಾಕರ ರಂಗರಾವ್ ರಾಮಚಂದ್ರ ಎಂಬುದು ಇವರ ಪೂರ್ಣ ಹೆಸರು.

1894 ಸೆಪ್ಟೆಂಬರ್ 30ರಂದು ಧಾರವಾಡದ ಮಧ್ಯಮವರ್ಗದ ಕುಟುಂಬವೊಂದರಲ್ಲಿ ಜನಿಸಿದರು. ತಂದೆ ರಾಮಚಂದ್ರ, ತಾಯಿ ಸೀತಾ, ಧಾರವಾಡ, ಬೆಳಗಾಂವಿ, ಪುಣೆ ಹಾಗೂ ಮುಂಬಯಿಗಳಲ್ಲಿ ಶಿಕ್ಷಣ ಪಡೆದು ಎಂ.ಎ. ಪದವೀಧರರಾದರು. ಅನಂತರ ಇಂಗ್ಲಿಷ್ ಅಧ್ಯಾಪಕರಾಗಿ ನೇಮಿತರಾದರು. ಮೊದಲಿನಿಂದಲೂ ಟಿಳಕ, ಅರವಿಂದ ಇವರಿಂದ ಪ್ರಭಾವಿತರಾಗಿದ್ದ ದಿವಾಕರರು ಆ ಕೆಲಸವನ್ನೂ ಬಿಟ್ಟು ಎಲ್.ಎಲ್.ಬಿ. ಪರೀಕ್ಷೆಯಲ್ಲಿ ತೇರ್ಗಡೆಯಾದರೂ (1919) ಪದವಿಯನ್ನು ನಿರಾಕರಿಸಿ ಸ್ವಾತಂತ್ರ್ಯ ಸಂಗ್ರಾಮವನ್ನು ಪ್ರವೇಶಿಸಿದರು (1920). ಗಾಂಧೀಜೀಯವರ ಕರೆಯ ಮೇರೆಗೆ ಅಸಹಕಾರ ಅಂದೋಲನದಲ್ಲಿ ಧುಮುಕಿದರು (1920-21). ಹಲವಾರು ಸಲ ಸೆರೆಮನೆ ವಾಸವನ್ನು ಅನುಭವಿಸಿದರು. 1921ರಲ್ಲಿಯೇ 'ಕರ್ಮವೀರ' ವಾರಪತ್ರಿಕೆಯನ್ನು ಪ್ರಾರಂಭಿಸಿ ತೀಕ್ಷ್ಣವಾದ ಲೇಖನಗಳನ್ನು ಬರೆದು ಜನಜಾಗೃತಿಗಾಗಿ ಶ್ರಮಿಸಿದರು. ಗಾಂಧೀಜಿಯವರು ಕಾಂಗ್ರೆಸ್ಸಿನ ಸುಗಮ ವ್ಯವಸ್ಥೆಗೆ ಭಾಷಾವಿಭಾಗ ಘಟಕಗಳನ್ನು ರೂಡಿಸಿದಾಗ ಇವರು ಕರ್ನಾಟಕಕ್ಕೂ ಒಂದು ಘಟಕವಿರುವಂತೆ ಮಾಡಿದರು. ಕರ್ನಾಟಕ ಏಕೀಕರಣದ ಬಗ್ಗೆ 1928ರಲ್ಲಿ ಒಂದು ಪುಸ್ತಕವನ್ನು ಬರೆದು ಪ್ರಕಟಿಸಿದರು. 1930-31ರಲ್ಲಿ ಶಿರಸಿ, ಸಿದ್ದಾಪುರ, ಅಂಕೋಲ ಮತ್ತು ಹಿರೇಕೆರೂರು ತಾಲ್ಲೂಕುಗಳಲ್ಲಿ ಕರನಿರಾಕರಣ ಅಂದೋಲನ ನಡೆಸಿದರು. ಮುಂದೆ ವೈಯಕ್ತಿಕ ಸತ್ಯಾಗ್ರಹದ ಸಮಯದಲ್ಲಿ. ಅನಂತರ ಚಲೇಜಾವ್ ಚಳವಳಿಯಲ್ಲಿ (1942) ಅದ್ವಿತೀಯವಾದ ಪಾತ್ರ ವಹಿಸಿದರು. ಕರ್ನಾಟಕದಲ್ಲಿ ಈ ಅಂದೋಲನದ ಸೂತ್ರಧಾರರೆನಿಸಿದರು. ಕರ್ನಾಟಕ ಏಕೀಕರಣಕ್ಕಾಗಿ ಶ್ರಮಿಸಿದರು. ಘಟನಾಸಮಿತಿ ಸದಸ್ಯರಾಗಿ ಭಾರತದ ಸಂವಿಧಾನದ ರೂಪಕರಾದರು. ಸ್ವಾತಂತ್ರ್ಯ ದೊರಕಿದ ಮೇಲೆ ಕೇಂದ್ರ ಸರ್ಕಾರದ ಸುದ್ದಿಶಾಖೆ ಮಂತ್ರಿಗಳಾಗಿ ಸೇವೆ ಸಲ್ಲಿಸಿದರು (1948-52). ಅನಂತರ ಬಿಹಾರದ ರಾಜ್ಯಪಾಲರಾದರು (1952-57). 1962-68ರ ವರೆಗೆ ರಾಜ್ಯಸಭೆಯ ಸದಸ್ಯರಾಗಿದ್ದರು.

ದಿವಾಕರರು ಗಾಂಧೀವಾದಿಗಳು. ಮಹಾತ್ಮಾ ಗಾಂಧೀಜಿಯವರ ಪ್ರಭಾವಕ್ಕೆ ಚಿಕ್ಕಂದಿನಲ್ಲಿಯೇ ಸಿಲುಕಿದ ಇವರು ಗಾಂಧೀಜಿ ಹಾಗೂ ಸತ್ಯಾಗ್ರಹದ ಬಗ್ಗೆ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಹಲವು ಗಾಂಧೀ ಸಂಬಂಧ ಸಂಸ್ಥೆಗಳೊಡನೆ ನಿಕಟ ಸಂಪರ್ಕವನ್ನು ಹೊಂದಿದ್ದ ಇವರು ಈಗ ಗಾಂಧೀ ಸ್ಮಾರಕ ನಿಧಿಯ ಅಧ್ಯಕ್ಷರಾಗಿದ್ದರು.

ಪತ್ರಿಕಾ ರಂಗದಲ್ಲಿ ಹಿರಿಯ ವ್ಯಕ್ತಿಗಳಾಗಿದ್ದ ಇವರು ಕರ್ಮವೀರ, ಸಂಯುಕ್ತ ಕರ್ನಾಟಕ, ಕಸ್ತೂರಿ - ಈ ಪತ್ರಿಕೆಗಳ ಸಂಸ್ಥಾಪಕ ಸಂಪಾದಕರಾಗಿದ್ದರು. (ಎಸ್.ವಿ.ಪಿ.)

ಇವರ ಲೇಖನ ವ್ಯವಸಾಯ ಬಹುಮುಖವಾದುದು. ಗಾಂಧೀ ಕೃತಿಗಳು ಮತ್ತು ತತ್ತ್ವ, ಕರ್ನಾಟಕ ಏಕೀಕರಣ, ಧರ್ಮ, ತತ್ತ್ವಶಾಸ್ತ್ರ, ಸಾಹಿತ್ಯ, ಇತಿಹಾಸ - ಈ ಮುಂತಾದ ಹಲವು ವಿಷಯಗಳನ್ನು ಕುರಿತು ಕನ್ನಡ, ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಸೆರೆಮನೆಯಲ್ಲಿದ್ದಾಗ ಇವರು ಪೌರಸ್ತ್ಯ ಪಾಶ್ಚಾತ್ಯ ತತ್ತ್ವಜ್ಞಾನ ಹಾಗೂ ಆಧ್ಯಾತ್ಮಿಕ ಅನುಭಾವ, ಆಗಮ ಮತ್ತು ತಾಂತ್ರಿಕ ಪರಂಪರೆಗಳನ್ನು ಅಭ್ಯಸಿಸಿ ಭಗವದ್ಗೀತೆ, ಉಪನಿಷತ್ತುಗಳನ್ನು ಕುರಿತು ಅನೇಕ ಅನುವಾದ ಮತ್ತು ಸ್ವತಂತ್ರ ಕೃತಿಗಳನ್ನು ರಚಿಸಿದರು. ಕನ್ನಡದ ಶಿವಶರಣರ ವಚನಗಳನ್ನು ಕುರಿತು ಇವರು ಬರೆದಿರುವ ವಚನಶಾಸ್ತ್ರರಹಸ್ಯ ಎಂಬ ಬೃಹತ್ ಕೃತಿ ಆ ವಿಷಯದಲ್ಲಿ ರಚಿತವಾದ ಬಹುಶಃ ಪ್ರಥಮ ತೌಲನಿಕ ಮತ್ತು ವಸ್ತುನಿಷ್ಠ ಗ್ರಂಥವಾಗಿದೆ. ರಾಮಕೃಷ್ಣ ಪರಮಹಂಸರ ಬಗ್ಗೆ ಕನ್ನಡದಲ್ಲಿ, ಅರವಿಂದರ ಬಗ್ಗೆ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಗ್ರಂಥರಚನೆ ಮಾಡಿದ್ದಾರೆ. ಇವರು ತಮ್ಮ ಜೀವನ ದರ್ಶನವನ್ನು ಅಂತರಾತ್ಮನಿಗೆ ಮತ್ತು ವಿಶ್ವಾತ್ಮನಿಗೆ ಎಂಬ ಎರಡು ಗ್ರಂಥಗಳಲ್ಲಿ ಕಾಣಿಸಿದ್ದಾರೆ. ಸೆರೆಯ ಮರೆಯಲ್ಲಿ ಎಂಬ ಗ್ರಂಥದಲ್ಲಿ ಸೆರೆಮನೆಯಲ್ಲಿ ತಮಗಾದ ಅನುಭವಗಳನ್ನು ಹೇಳಿದ್ದಾರೆ. ಎಂ.ಆರ್. ಶ್ರೀನಿವಾಸಮೂರ್ತಿಯವರ ನಾಗರಿಕ ಎಂಬ ಗ್ರಂಥವನ್ನು ಇವರು ಹಿಂದಿಗೆ ಅನುವಾದಿಸಿದ್ದಾರೆ. ಉಪನಿಷತ್ ಪ್ರಕಾಶ, ಉಪನಿಷತ್ ಕಥಾವಲಿ, ಗೀತೆಯ ಗುಟ್ಟು, ಕರ್ಮಯೋಗ, ಹರಿಭಕ್ತಸುಧೆ, ಮಹಾತ್ಮರ ಮನೋರಂಗ - ಇವು ಇವರ ಇತರ ಮುಖ್ಯ ಕೃತಿಗಳು. ಸತ್ಯಾಗ್ರಹ, ಗ್ಲಿಂಪ್ಸಸ್ ಆಫ್ ಗಾಂಧೀಜಿ, ಉಪನಿಷದ್ಸ್ ಇನ್ ಸ್ಟೋರಿ ಅಂಡ್ ಡಯಲಾಗ್, ಭಗವಾನ್ ಬುದ್ಧ - ಇವು ಇವರು ಇಂಗ್ಲಿಷಿನಲ್ಲಿ ಬರೆದಿರುವ ಗ್ರಂಥಗಳು. ಬಿಹಾರ್ ಥ್ರೂ ದಿ ಏಜಸ್, ಕರ್ನಾಟಕ ಥ್ರೂ ದಿ ಏಜಸ್ - ಇವು ಇವರ ಸಂಪಾದಿತ ಗ್ರಂಥಗಳು.

ಇವರ ಸಾಹಿತ್ಯ ಕಾರ್ಯವನ್ನು ಮೆಚ್ಚಿ ಕನ್ನಡ ನಾಡು 1938ರಲ್ಲಿ ಬಳ್ಳಾರಿಯಲ್ಲಿ ಸೇರಿದ್ದ 23ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತು. ಕರ್ನಾಟಕ ವಿಶ್ವವಿದ್ಯಾಲಯ ಇವರಿಗೆ ಗೌರವ ಡಾಕ್ಟರೇಟ್ ಪದವಿ ನೀಡಿ ಸನ್ಮಾನಿಸಿದೆ.

**ದಿವಾಕರ ನಂದಿ :** ಒಬ್ಬ ಜೈನ ಮುನಿ. ಅದಕ್ಕಿಂತ ಮಿಗಿಲಾಗಿ ಒಬ್ಬ ಕನ್ನಡ ವ್ಯಾಖ್ಯಾನಕಾರ. ಇವನ ಗುರುಪರಂಪರೆಯ ಆಧಾರದ ಮೇಲೆ ಹೇಳುವುದಾದರೆ ಈತ ಕೊಂಡಕುಂದಾನ್ವಯ ಮೂಲ ಸಂಘ ದೇಶಿಗಗಣದ ಪುಸ್ತಕಗಚ್ಛಕ್ಕೆ ಸೇರಿದಾತ. ಗೃಧ್ರ ಪಿಂಛಾಚಾರ್ಯ ಎಂಬ ಹೆಸರಿದ್ದ ಉಮಾಸ್ವಾಮಿ ಅಥವಾ ಉಮಾಸ್ವಾತಿ ಸಂಸ್ಕೃತದಲ್ಲಿ ರಚಿಸಿರುವ ತತ್ತ್ವಾರ್ಥ ಸೂತ್ರವೆಂಬ ಜೈನಾಗಮ ಗ್ರಂಥಕ್ಕೆ ಈತ ಕನ್ನಡದಲ್ಲಿ ವ್ಯಾಖ್ಯಾನ ಬರೆದಿದ್ದಾನೆ. ಈ ವ್ಯಾಖ್ಯಾನದ ಸಮಾಪ್ತಿಭಾಗದಲ್ಲಿ ಇದು ಸಕಲಾಗಮ ಸಂಪನ್ನ ಶ್ರೀಮಚ್ಚಂದ್ರ ಕೀರ್ತಿ ಭಟ್ಟಾರಕ ಪದ್ಮನಂದಿ ಸಿದ್ಧಾಂತದೇವ ಶ್ರೀಪಾದ ಪ್ರಸಾದಾಸಾದಿತ ಸಮಸ್ತ ಸಿದ್ಧಾಂತಾಮೃತ ಪಾರಾವಾರಗ ಶ್ರೀಮದ್ದಿವಾಕರ (ಣಂದಿ) ಭಟ್ಟಾರಕ ಮುನೀಂದ್ರ ವಿರಚಿತ ತತ್ತ್ವಾರ್ಥಸೂತ್ರಾನುಗತ ಕರ್ನಾಟಕ ಲಘುವೃತ್ತಿಯೋಳ್ - ಎಂದು ಹೇಳಿದ್ದಾನೆ. ಜಡರೂ ಬಾಲಕರೂ ಬಂಧರೂ ತತ್ತ್ವಾರ್ಥವನ್ನು ತಿಳಿದು ಪಾಪವನ್ನು ಕಳೆದುಕೊಂಡು ಸಮ್ಯಕ್ತ್ವವನ್ನು ಹೊಂದಿ ಪರಮಸ್ಥಾನವನ್ನು ಪಡೆಯಲೆಂದು ಸಿದ್ಧಾಂತ ರತ್ನಾಕರರು ತತ್ತ್ವಾರ್ಥಸೂತ್ರಕ್ಕೆ ಕನ್ನಡದಲ್ಲಿ ವೃತ್ತಿಯನ್ನು ರಚಿಸಿದರೆಂದು ನಗರದ 57ನೆಯ ಶಾಸನದಿಂದ ತಿಳಿದುಬರುತ್ತದೆ. ದಿವಾಕರಣಂದಿಗೆ ಉಭಯ ಸಿದ್ಧಾಂತ ರತ್ನಾಕರ ಎಂಬ ಬಿರುದಿರುವಂತೆ ತಿಳಿದು ಬರುತ್ತದೆ. ಶಕ 984ರ ಒಂದು ಶಾಸನದಿಂದ ಈತ ಚಂದ್ರಕೀರ್ತಿ ಭಟ್ಟಾರಕರ ಅಗ್ರ ಶಿಷ್ಯನೆಂದೂ ಅರ್ಹತ್ ತತ್ತ್ವ ವಸ್ತುವಿಸ್ತಾರಕನೆಂದು ವರ್ಣಿತನಾಗಿದ್ದಾನೆ. 1068ರಲ್ಲಿದ್ದ ಶಾಂತಿನಾಥ ಕವಿಯ ಸುಕುಮಾರ ಚರಿತದಿಂದ ತಿಳಿದುಬರುವಂತೆ ಈತ ವ್ಯಾಕರಣ ತರ್ಕ ಸಿದ್ಧಾಂತ ಈ ಮೂರೂ ವಿದ್ಯೆಗಳಲ್ಲಿ ಪ್ರವೀಣನಾಗಿದ್ದ. ಶ್ರವಣಬೆಳಗೊಳದ ಒಂದು ಶಾಸನ ಕೂಡ ಈತನನ್ನು ಹೀಗೆ ಕೀರ್ತಿಸಿದೆ. ತತ್ತ್ವಾರ್ಥಸೂತ್ರ ಜೈನಧರ್ಮದಲ್ಲಿ ದಿಗಂಬರ ಶ್ವೇತಾಂಬರ ಎರಡೂ ಪರಂಪರೆಗಳಲ್ಲಿ

ಮಾನ್ಯತೆಯನ್ನು ಪಡೆದಿರುವ ಪೂಜ್ಯಗ್ರಂಥ'. ದ್ರವ್ಯಾನುಯೋಗಕ್ಕೆ ಸಂಬಂಧಿಸಿದಂತೆ ಸಂಸ್ಕೃತದಲ್ಲಿ ಇದೇ ಮೊದಲ ಗ್ರಂಥ. ಈ ಗ್ರಂಥದ ಮೇಲೆ ಎರಡೂ ಪರಂಪರೆಗಳಲ್ಲಿ ವಿವಿಧ ವ್ಯಾಖ್ಯಾನಗಳು ರಚನೆಯಾಗಿರುವುದು ಇದರ ಪ್ರಾಮುಖ್ಯವನ್ನು ಸ್ಪಷ್ಟವಾಗಿ ತೋರಿಸುತ್ತದೆ. ಇಂಥ ಒಂದು ಶ್ರೇಷ್ಠ ಗ್ರಂಥಕ್ಕೆ ದಿವಾಕರನಂದಿ ಕನ್ನಡ ವ್ಯಾಖ್ಯಾನವನ್ನು ರಚಿಸಿದ್ದಾನೆ. ಮೂಲದಲ್ಲಿರುವಂತೆಯೆ ಇದರಲ್ಲೂ 10 ಅಧ್ಯಾಯಗಳಿವೆ. ದಿವಾಕರಣಂದಿ ಇಲ್ಲಿ ಮೂಲಸೂತ್ರಗಳನ್ನು ವ್ಯಾಖ್ಯಾನಿಸಿರುವುದೇ ಅಲ್ಲದೆ ಅವುಗಳ ವಿವರಣೆಗೆಂದು ಗೊಮ್ಮಟಸಾರ, ತ್ರಿಲೋಕಸಾರ ಗ್ರಂಥಗಳಿಂದ ಪ್ರಾಕೃತ ಗಾಹೆಗಳನ್ನು ಉದ್ಧರಿಸಿ ಅವನ್ನೂ ಪದಶಃ ಅರ್ಥೈಸಿದ್ದಾನೆ. (ಎಸ್.ಎಚ್.ಷಿ.)

**ದೀಕ್ಷಿತ್, ಉಮಾಶಂಕರ :** 1901- . ಕರ್ನಾಟಕದ ಮಾಜಿ ರಾಜ್ಯಪಾಲರು (1976-77). ಉತ್ತರ ಪ್ರದೇಶದ ಉನ್ನಾವ್ ಜಿಲ್ಲೆಯ ಉಗೂ ಗ್ರಾಮದಲ್ಲಿ 1901 ಜನವರಿ 12ರಂದು ಜನಿಸಿದರು. ತಂದೆ ರಾಮಸ್ವರೂಪ್, ತಾಯಿ ಶಿವ್‌ಪ್ಯಾರಿ. ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಜೈಲುವಾಸ ಅನುಭವಿಸಿದರು. ನವದೆಹಲಿಯ ಇವಾಕ್ಯೂ ಪ್ರಾಪರ್ಟಿಯ ಧರ್ಮದರ್ಶಿ (1948-52), ರಾಷ್ಟ್ರೀಯ ಕೈಗಾರಿಕೆಗಳ ಕಾರ್ಪೊರೇಷನ್ ಗೌರವ ಸಲಹೆಗಾರ (1956), ಬ್ರಿಟಿಷ್ ಇಂಡಿಯನ್ ಕಾರ್ಪೋರೆಷನ್ನಿನ ಅಧ್ಯಕ್ಷ (1971)- ಹೀಗೆ ಹಲವು ಹುದ್ದೆಗಳಲ್ಲಿ ಸೇವೆ ಸಲ್ಲಿಸಿದರು. ಇವರು ಕೇಂದ್ರ ಸರ್ಕಾರದಲ್ಲಿ ಸಚಿವರಾಗಿ ವಸತಿ ಹಾಗೂ ಕಾಮಗಾರಿ (1971-72), ಆರೋಗ್ಯ ಮತ್ತು ಕುಟುಂಬ ಕಲ್ಯಾಣ, ಗೃಹಖಾತೆ (1973-74), ನೌಕಾಯಾನ ಮತ್ತು ಸಾರಿಗೆ (1975) ಮೊದಲಾದ ಹಲವು ಹುದ್ದೆಗಳನ್ನು ನಿರ್ವಹಿಸಿದರು. ಇವರು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಖಜಾಂಚಿಯಾಗಿಯೂ ದುಡಿದಿದ್ದಾರೆ (1970-75). ಸ್ವಾತಂತ್ರ್ಯ ಹೋರಾಟಗಾರರ ಮತ್ತು ಸ್ವಾಮಿ ರಾಮತೀರ್ಥ ಸ್ಮಾರಕ ಸಂಸ್ಥೆ ಅಧ್ಯಕ್ಷರಾಗಿ ಸೇವೆಸಲ್ಲಿಸಿದ್ದಾರೆ. ಜನವರಿ 10, 1976ರಿಂದ 1977 ಆಗಸ್ಟ್ 2ರವರೆಗೆ ಇವರು ಕರ್ನಾಟಕದ ರಾಜ್ಯಪಾಲರಾಗಿದ್ದರು. ಅನಂತರ ಇವರು ಪಶ್ಚಿಮ ಬಂಗಾಲದ ರಾಜ್ಯಪಾಲರಾಗಿಯೂ ಕಾರ್ಯನಿರ್ವಹಿಸಿದರು (1984-86). ದೀಕ್ಷಿತ್ ......................... ರಂದು ನಿಧನರಾದರು. (ಟಿ.ಜಿ.)

**ದೀಕ್ಷಿತ್, ಜಿ. ಎಸ್. :** 1911-2004. ಹೆಸರಾಂತ ಇತಿಹಾಸಕಾರ ಮತ್ತು ಸಂಶೋಧಕ. ಇಂದಿನ ದಾವಣಗೆರೆ ಜಿಲ್ಲೆಯ ಹರಿಹರದಲ್ಲಿ 1911 ಜನವರಿ 10ರಂದು ಜನಿಸಿದರು. ಇವರ ಪೂರ್ತಿ ಹೆಸರು ಗಿರಿರಾವು ಶ್ರೀಧರ ದೀಕ್ಷಿತ್. ತಂದೆ ಗಿರಿರಾವು ದೀಕ್ಷಿತರು ಹರಿಹರೇಶ್ವರ ದೇವಾಲಯದ ಅರ್ಚಕರಾಗಿದ್ದರು. ಇವರು ಹರಿಹರದಲ್ಲಿ ಪ್ರಾಥಮಿಕ ವಿದ್ಯಾಭ್ಯಾಸವನ್ನು ಪೂರೈಸಿ, ದಾವಣಗೆರೆಯಲ್ಲಿ ಪ್ರೌಢಶಾಲಾ ವ್ಯಾಸಂಗವನ್ನು ಮಾಡಿದರು. ಮುಂದೆ ಶಿವಮೊಗ್ಗ ಮತ್ತು ಮೈಸೂರುಗಳಲ್ಲಿ ಕಾಲೇಜು ವಿದ್ಯಾಭ್ಯಾಸ ನಡೆಸಿ ಮೈಸೂರು ವಿಶ್ವವಿದ್ಯಾನಿಲಯದಿಂದ ಇತಿಹಾಸವನ್ನು ಮುಖ್ಯ ವಿಷಯವನ್ನಾಗಿ ತೆಗೆದುಕೊಂಡು ಚಿನ್ನದ ಪದಕ ಮತ್ತು ಮೊದಲ ರ್‍ಯಾಂಕ್ ಸಹಿತ ಪದವಿ ಪಡೆದರು (1932). ಮುಂಬಯಿ ವಿಶ್ವವಿದ್ಯಾನಿಲಯದಿಂದ ಸ್ನಾತಕೋತ್ತರ ಪದವಿ ಗಳಿಸಿದರು.

ಇವರ ವೃತ್ತಿಜೀವನ ಆರಂಭಗೊಂಡದ್ದು ಅಂದಿನ ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿದ್ದ ಮತ್ತು ಈಗ ಒರಿಸ್ಸ ರಾಜ್ಯದಲ್ಲಿರುವ ಪಾರ್ಲಕಿಮೇಡಿನ ಮಹಾರಾಜ ಕಾಲೇಜಿನಲ್ಲಿ ಇತಿಹಾಸದ ಅಧ್ಯಾಪಕನಾಗುವುದರ ಮೂಲಕ. ಅಲ್ಲಿನ ಮಹಾರಾಜರ ಕುಟುಂಬಕ್ಕೆ ಇವರು ಆಪ್ತರಾಗಿದ್ದು ಅವರೊಂದಿಗೆ ಟೆನಿಸ್ ಆಡುತ್ತಿದ್ದುದೂ ಉಂಟು. ದೀಕ್ಷಿತರು 1939ರಲ್ಲಿ ಮೈಸೂರಿನ ಪುರಾತತ್ತ್ವ ಇಲಾಖೆಗೆ ಉತ್ಖನನ ಸಹಾಯಕರಾಗಿ ಸೇರಿದರು. ಪ್ರಸಿದ್ಧ ಪುರಾತತ್ವಜ್ಞ ಎಂ.ಎಚ್.ಕೃಷ್ಣ ಅವರು ನಡೆಸಿದ ಬ್ರಹ್ಮಗಿರಿ ಮತ್ತು ಚಂದ್ರವಳ್ಳಿ ಉತ್ಖನನಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಅನಂತರ ಈ ಹುದ್ದೆಯನ್ನು ಬಿಟ್ಟು ಸಾಂಗ್ಲಿಯ ವಿಲಿಂಗ್ಡನ್ ಕಾಲೇಜನ್ನು ಸೇರಿದರು. ಅಲ್ಲಿ ಇವರಿಗೆ ಖ್ಯಾತ ಇತಿಹಾಸ ಸಂಶೋಧಕ ಎಸ್.ಆರ್. ಶರ್ಮರ ಮಾರ್ಗದರ್ಶನ ದೊರೆಯಿತು. ಆ ಕಾಲೇಜಿನ ಪ್ರಾಂಶುಪಾಲರಾಗಿದ್ದ ವಿ.ಕೃ.ಗೋಕಾಕ್ ಮತ್ತು ಅಧ್ಯಾಪಕರಾಗಿದ್ದ ರಂ.ಶ್ರೀ. ಮುಗಳಿಯವರ ಒಡನಾಟದಿಂದ ಇವರು ಪ್ರಭಾವಿತರಾದರು. ಅನಂತರ ಪುಣೆಯ ಫರ್ಗ್ಯುಸನ್ ಕಾಲೇಜಿಗೆ ವರ್ಗವಾಗಿ ಆರು ವರ್ಷಗಳ ಕಾಲ ಅಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಪುಣೆ ವಿಶ್ವವಿದ್ಯಾಲಯ ಪ್ರಾರಂಭವಾದಾಗ (1949) ಇತಿಹಾಸ ಪಠ್ಯದ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. 1955ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯ ಸೇರಿ ನಿವೃತ್ತರಾಗುವವರೆಗೂ (1971) ಧಾರವಾಡವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡರು. 1961-62ರಲ್ಲಿ ಇವರಿಗೆ ಅಮೆರಿಕದ ಸೀನಿಯರ್ ಫುಲ್‌ಬ್ರೈಟ್ ಸ್ಕಾಲರ್‌ಶಿಪ್ ದೊರೆಯಿತು. ಮುಂದೆ 1971ರಲ್ಲಿ ಟೊರಾಂಟೋ ವಿಶ್ವವಿದ್ಯಾನಿಲಯದಲ್ಲಿ ಭಾರತೀಯ ಇತಿಹಾಸ ಬೋಧಿಸಲು ಅಮೆರಿಕಕ್ಕೆ ತೆರಳಿದರು. ಪ್ರಾಧ್ಯಾಪಕರಾದ ಬಿ.ಎ.ಸಾಲೆತ್ತೂರ್‌ರ ಮಾರ್ಗದರ್ಶನದಲ್ಲಿ ಮಧ್ಯಕಾಲೀನ ಕರ್ನಾಟಕದ ಸ್ಥಳೀಯ ಆಡಳಿತಗಳ ಬಗ್ಗೆ ಸಂಶೋಧನೆ ನಡೆಸಿ ಪಿಎಚ್.ಡಿ. ಪದವಿ ಪಡೆದರು (1962).

ಇವರಿಗೆ ಇತಿಹಾಸ ಸಂಶೋಧನೆಗೆ, ಸಂಬಂಧಿಸಿದ ಹಲವು ಸಂಘ ಸಂಸ್ಥೆಗಳ ಸಂಪರ್ಕವಿತ್ತು. ಇಂಡಿಯನ್ ಹಿಸ್ಟರಿ ಕಾಂಗ್ರೆಸ್, ಇನ್‌ಸ್ಟಿಟ್ಯೂಟ್ ಆಫ್ ಹಿಸ್ಟಾರಿಕಲ್ ಸ್ಟಡೀಸ್, ಇಂಡಿಯನ್ ಹಿಸ್ಟಾರಿಕಲ್ ರೆಕಾರ್ಡ್ಸ್ ಕಮಿಷನ್, ಮಿಥಿಕ್ ಸೊಸೈಟಿ ಮುಂತಾದವು. 1986 ರಿಂದ 1996ರ ವರೆಗೆ ಇವರು ಕರ್ನಾಟಕ ಇತಿಹಾಸ ಅಕಾಡೆಮಿಯ ಸಂಸ್ಥಾಪಕ ಅಧ್ಯಕ್ಷರಾಗಿದ್ದರು. ನಿಧನರಾಗುವವರೆಗೂ ಅದರ ಆಜೀವ ಗೌರವಾಧ್ಯಕ್ಷರಾಗಿ ಮುಂದುವರಿದಿದ್ದರು. ಇವರನ್ನು ಅನೇಕ ಸಂಘ ಸಂಸ್ಥೆಗಳು ಗೌರವಿಸಿವೆ. ಇವರು ಅನೇಕ ಗೋಷ್ಠಿ ಸಮ್ಮೇಳನಗಳ ಅಧ್ಯಕ್ಷರಾಗಿದ್ದರು. 1963ರ ಜನವರಿಯಲ್ಲಿ ಈರೋಡ್‌ನಲ್ಲಿ ನಡೆದ ಇಂಡಿಯನ್ ಹಿಸ್ಟರಿ ಕಾಂಗ್ರೆಸ್ಸಿನ 21ನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಅದೇ ವರ್ಷ ಆಂಧ್ರ ಹಿಸ್ಟರಿ ಕಾಂಗ್ರೆಸ್ಸಿನ, ಹಾಗೆಯೇ ಕರ್ನಾಟಕ ಹಿಸ್ಟರಿ ಕಾಂಗ್ರೆಸ್‌ನ ಸಮ್ಮೇಳನಾಧ್ಯಕ್ಷರಾಗಿದ್ದರು. ಮಿಥಿಕ್ ಸೊಸೈಟಿ ಇವರನ್ನು ಸನ್ಮಾನಿಸಿದೆ (1979). ಇವರ ಅಭಿಮಾನಿಗಳು ಗಿರಿದರ್ಶಿನಿ ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಿ ಗೌರವಿಸಿದ್ದಾರೆ (1987).

ಕನ್ನಡ ನಾಡಿನ ಇತಿಹಾಸ ಸಂಶೋಧನೆಯ ಬೆಳವಣಿಗೆಯಲ್ಲಿ ಮಹತ್ವದ ಪಾತ್ರ ವಹಿಸಿದ ಅಗ್ರಗಣ್ಯ ವ್ಯಕ್ತಿಗಳಲ್ಲಿ ಒಬ್ಬರಾದ ಇವರು ಎಳೆಯರಿಗೆ ಇತಿಹಾಸ ಸಂಶೋಧನೆಯ ಪ್ರೇರಣೆ, ಮಾಗದರ್ಶನ ನೀಡಿದವರು. ತಮ್ಮ ಜೀವಿತದ ಕೊನೆಯ ದಿನಗಳಲ್ಲಿ ಬಸವೇಶ್ವರರನ್ನು ಕುರಿತಂತೆ ಸಂಶೋಧನೆ ನಡೆಸುತ್ತಿದ್ದರು. ಇವರಿಗೆ ಕೃಷ್ಣದೇವರಾಯನ ಇತಿಹಾಸವೆಂದರೆ ಅಚ್ಚುಮೆಚ್ಚು. ಹಾಗೆಯೇ ಚೀನಾದಲ್ಲಿ ಬೌದ್ಧಧರ್ಮ ಬೆಳವಣಿಗೆ ಕುರಿತು ಆಸಕ್ತಿ. ಅನ್ವಯಿಕ ಸಂಶೋಧನೆಯತ್ತ ಒಲವು ಹೊಂದಿದ್ದ ಇವರು ಹಲವು ಕೃತಿಗಳನ್ನು ರಚಿಸಿದ್ದಾರೆ ಹಾಗೂ ಸಂಪಾದಿಸಿದ್ದಾರೆ; ವಿದ್ವದ್ಗೋಷ್ಠಿಗಳಲ್ಲಿ ಮತ್ತು ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ 40ಕ್ಕೂ ಹೆಚ್ಚು ಸಂಪ್ರಬಂಧಗಳನ್ನು ಮಂಡಿಸಿದ್ದರು. ಹಲವು ಕೃತಿಗಳಿಗೆ ಮುನ್ನುಡಿ ಇಲ್ಲವೇ ವಿಮರ್ಶೆ ಬರೆದರು. ವಿಶೇಷ ಉಪನ್ಯಾಸಗಳನ್ನು ನೀಡಿದ್ದುಂಟು. ಇವರು ಬರೆದ ಲೋಕಲ್ ಸೆಲ್ಫ್ ಗವರ್ನಮೆಂಟ್ ಇನ್ ಮಿಡೀವಲ್ ಕರ್ನಾಟಕ (1964), ಕೆಳದಿ ನಾಯಕರು (1976, ದ್ವಿತೀಯ ಆವೃತ್ತಿ), ಹಾಗೂ ಇವರು ಸಂಪಾದಿಸಿದ ಅಮೆರಿಕನ್ ಹಿಸ್ಟರಿ ಬೈ ಇಂಡಿಯನ್ ಹಿಸ್ಟೋರಿಯನ್ಸ್ (1969) ಮತ್ತು ಸ್ಟಡೀಸ್ ಇನ್ ಕೆಳದಿ ಹಿಸ್ಟರಿ (1981) - ಇವು ಮುಖ್ಯವಾದವು. ಇವರೊಬ್ಬ ಒಳ್ಳೆಯ ಭಾಷಾಂತರಕಾರರೂ ಆಗಿದ್ದರು. ಎರಡು ಸಂಪುಟಗಳಲ್ಲಿ ತಾರಾಚಂದರ ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಇಂಡಿಯಾ ಗ್ರಂಥವನ್ನು ಅನುವಾದಿಸಿದ್ದಾರೆ.

ಇವರು 2004 ಜೂನ್ 26ರಂದು ಧಾರವಾಡದಲ್ಲಿ ನಿಧನರಾದರು. (ಎಚ್.ಎಂ.ಎನ್.ಆರ್.)

**ದೀಕ್ಷಿತ್, ದಾಶರಥಿ ಗಿರಿ :** ಕನ್ನಡದ ಪ್ರಸಿದ್ಧ ಹಾಸ್ಯ ಲೇಖಕ,

ನಾಟಕಕಾರ, ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆಯಲ್ಲಿ 1921 ಫೆಬ್ರುವರಿ 2ರಂದು ಜನಿಸಿದರು. ತಂದೆ ಬಾಳ ದೀಕ್ಷಿತ್. ತಾಯಿ ರಂಗೂಬಾಯಿ. ತಂದೆ ಸರ್ಕಾರದಲ್ಲಿ ಶಿರಸ್ತೇದಾರರಾಗಿದ್ದರು. ಮೊಳಕಾಲ್ಮೂರು, ಹಿರಿಯೂರು, ಚಳ್ಳಕೆರೆಗಳಲ್ಲಿ ದೀಕ್ಷಿತರ ಪ್ರಾಥಮಿಕ ವಿದ್ಯಾಭ್ಯಾಸ ನಡೆಯಿತು. ಮಾಧ್ಯಮಿಕ ಶಿಕ್ಷಣ ಹೊಸದುರ್ಗ, ತುರುವನೂರು, ಹೊಳಲ್ಕೆರೆಗಳಲ್ಲಿ. ಇವರ ಪ್ರೌಢ ವಿದ್ಯಾಭ್ಯಾಸ ದಾವಣಗೆರೆ, ಚಿತ್ರದುರ್ಗ, ಬೆಂಗಳೂರು ನಗರಗಳಲ್ಲಿ ಆಯಿತು. ತಂದೆಯವರಿಗೆ ಪದೇ ಪದೇ ಊರಿಂದೂರಿಗೆ ವರ್ಗವಾಗುತ್ತಿದ್ದುದರಿಂದ ಮಗನ ವಿದ್ಯಾಭ್ಯಾಸ ಹೀಗೆ ಹಲವು ಎಡೆಗಳಲ್ಲಿ ಮುಂದುವರಿಯುವುದು ಅನಿವಾರ್ಯವಾಗಿತ್ತು. ಅನಂತರ ಇವರು ಕೆಲಸಕ್ಕಾಗಿ ಹುಡುಕಾಟ ನಡೆಸಿದರು. ವಿದ್ಯುಚ್ಛಕ್ತಿ ಕಾರ್ಖಾನೆಯಲ್ಲಿ ಸ್ವಲ್ಪ ಕಾಲ ಉದ್ಯೋಗಿಯಾಗಿದ್ದು ಅನಂತರ ಹಿಂದೂಸ್ತಾನ್ ವಿಮಾನ ಕಾರ್ಖಾನೆಯನ್ನು ಸೇರಿ ಅಲ್ಲಿ ಮೂವತ್ತಾರು ವರ್ಷಗಳ ಕಾಲ ಸೇವೆ ಸಲ್ಲಿಸಿದರು.

ತಂದೆಯವರು ಶಿರಸ್ತೇದಾರರಾಗಿದ್ದುದ್ದರಿಂದ ಅವರು ಅಧಿಕಾರ ನಡೆಸುತ್ತಿದ್ದ ಊರಿಗೆ ಯಾವುದೇ ನಾಟಕ ಕಂಪನಿ ಬಂದರೂ ಪ್ರದರ್ಶನಕ್ಕೆ ಅವರ ಅನುಮತಿ ಪಡೆಯಬೇಕಾಗುತ್ತಿತ್ತು. ಇದರಿಂದ ದೀಕ್ಷಿತರಿಗೆ ನಾಟಕಗಳನ್ನು ಉಚಿತವಾಗಿ ನೋಡುವ ಅವಕಾಶ ದೊರೆಕಿತು. ಇದರಿಂದಾಗಿ ಸಹಜವಾಗಿಯೇ ಇವರಿಗೆ ಅಭಿನಯದಲ್ಲಿ ಅಭಿರುಚಿ ಮೂಡಿತು. ನಾಟಕಾಭಿನಯದೊಂದಿಗೆ ಇವರು ಸಂಗೀತದಲ್ಲೂ ಪ್ರವೀಣರಾದರು. ಇವರು ಹಾಡುಗಾರಿಕೆ ಮತ್ತು ಹಾರ್ಮೋನಿಯಂ ವಾದನ ಎರಡನ್ನೂ ಕಲಿತರು. ಹರಿಕಥೆಯೊಂದಿಗೂ ಇವರ ಸಂಬಂಧ ಬೆಳೆಯಿತು. ಕೀರ್ತನ ಕಾರ್ಯಕ್ರಮಗಳಲ್ಲಿ ಪಕ್ಕವಾದ್ಯಗಾರರು ದೊರಕದಿದ್ದಾಗ ಇವರೇ ಪಕ್ಕವಾದ್ಯ ಸಹಕಾರ ನೀಡತೊಡಗಿದರು.

ಬೆಂಗಳೂರಿನಲ್ಲಿ ಶಾಶ್ವತವಾಗಿ ನೆಲೆಯೂರಿ ನಿಂತಾಗ ಇವರ ಮನಸ್ಸು ವಿಶೇಷವಾಗಿ ನಾಟಕ ಕಲೆಯ ಕಡೆಗೆ ಹರಿಯಿತು. ಗೆಳೆಯರೊಂದಿಗೆ ಕೂಡಿ ಇವರು ನಾಟಕ ತಂಡ ಕಟ್ಟಿ ನಾಟಕ ಆಡಲೂ ಆಡಿಸಲೂ ಆರಂಭಿಸಿದರು. ಇವರ ನಾಟಕ ತಂಡದ ಹೆಸರು ಗಾಂಪರ ಗುಂಪು. ಇವರು ಸ್ವತಃ ನಾಟಕಗಳನ್ನೂ ಬರೆಯತೊಡಗಿದರು. ಅಜ್ಜಿ ಆಸ್ತಿ ಎಂಬುದು ಇವರು ಬರೆದ ಮೊದಲನೆಯ ನಾಟಕ. ಅಳಿಯ ದೇವರು ಎರಡನೆಯದು. ಇದು ತುಂಬ ಜನಪ್ರಿಯವಾಯಿತು. ಪ್ರೇತ ಸಂಹಾರ, ವೈದ್ಯನ ವಿವಾಹ ಎಂಬುವು ಪ್ರಹಸನಗಳು. ಲಂಬೋದರ, ಗಾಂಪರ ಗುಂಪು ಮುಂತಾದವು ಓದಲೂ ಆಡಲೂ ಅನುವಾಗಿ ಒದಗಿಬಂದವು.

ನಾಟಕಗಳಲ್ಲದೆ ಇವರು ಕಾದಂಬರಿಗಳನ್ನೂ ಇತರ ಕೃತಿಗಳನ್ನೂ ರಚಿಸಿದ್ದಾರೆ. ಬಾಲ ಬಂಧನ, ಮಾವನ ಮನೆ - ಇವು ಕಾದಂಬರಿಗಳು. ಇವರು ಲೇಖನಗಳನ್ನೂ ಕಥೆಗಳನ್ನೂ ಬರೆಯತೊಡಗಿದರು. ಗೆಳೆಯರ ಅಪೇಕ್ಷೆಯಂತೆ ಗಂಭೀರ ಸಾಹಿತ್ಯವನ್ನು ಬಿಟ್ಟು ನಗೆ ಸಾಹಿತ್ಯದಲ್ಲಿ ಹೆಚ್ಚಿನ ಆಸಕ್ತಿ ವಹಿಸಿದರು. ರಾಶಿ ಅವರ ಕೊರವಂಜಿ ಪತ್ರಿಕೆಗೂ ದೀಕ್ಷಿತರಿಗೂ ಸಂಬಂಧ ಬೆಳೆಯಿತು. ಆ ಪತ್ರಿಕೆ ಪ್ರಕಟವಾಗುತ್ತಿದ್ದವರೆಗೂ ಅದಕ್ಕಾಗಿ ಇವರು ಬರೆದರು. ನಗೆ ಜಿಲ್ಲಾಡಿದರು. ಪೋಡಪ್ರಿಯ ದಫೇದಾರ್ ದೇರಣ್ಣ, ಗಾಂಪರು ಇತ್ಯಾದಿ ಪಾತ್ರಗಳನ್ನು ಸೃಷ್ಟಿಸಿದ್ದರು. ಅಪ್ಪಟ ಹಾಸ್ಯಕ್ಕೆ, ಒಂದಿಷ್ಟು ವ್ಯಂಗ್ಯಕ್ಕೆ ಹೆಸರಾದ ಲೇಖನಗಳು ದೀಕ್ಷಿತರವು. ಪ್ರೇತಸಂಹಾರ ಎಂಬುದು ಇಂಥ ಲೇಖನಗಳ ಸಂಕಲನ. ಇದು ರಾಶಿ ಅವರ ಮೆಚ್ಚುಗೆ ಗಳಿಸಿತು.

ನಗೆ ಲೇಖನಗಳ ನಡುವೆಯೇ ಇವರಿಗೆ ಒಮ್ಮೊಮ್ಮೆ ಗಂಭೀರ ಸಾಹಿತ್ಯದ ಕಡೆಗೆ ಮನಸ್ಸು ಹರಿಯುತ್ತಿತ್ತು. ಒಂದು ಗಂಭೀರ ಕಾದಂಬರಿಯನ್ನೂ ಇವರು ಬರೆದಿದ್ದಾರೆ. ಹೆಚ್ಚಾಗಿ ಹಾಸ್ಯ ಕಾದಂಬರಿಗಳನ್ನೇ ರಚಿಸತೊಡಗಿದರು. ಮಾವನ ಮನೆ ಒಂದು ಉತ್ತಮ ಹಾಸ್ಯ ಕಾದಂಬರಿ. 'ಗಂಡಾಗಿ ಕಾದಿದ್ದ ಗುಂಡು' ಇನ್ನೊಂದು. ಮರಳಿ ಮಠಕ್ಕೆ ಎಂಬುದು ಗಾಂಪರ ಗುಂಪಿನ ಪ್ರತಾಪ. ಹೀಗೆ ಇವರು ಒಟ್ಟು ಎಂಟು ನಾಟಕಗಳನ್ನೂಂಟು ಕಾದಂಬರಿಗಳನ್ನೂ ಹನ್ನೆರಡು ನಗೆ ಲೇಖನ ಸಂಕಲನಗಳನ್ನೂ ಪ್ರಕಟಿಸಿದ್ದರು.

ಇವರಿಗೆ ಸೂತ್ರದ ಗೊಂಬೆ ಆಟದಲ್ಲೂ ಆಸಕ್ತಿಯಿತು. ಇದಕ್ಕಾಗಿ ಗೆಳೆಯರೊಂದಿಗೆ ಒಂದು ಸಂಸ್ಥೆ ಕಟ್ಟಿ ಹಲವಾರು ಹಾಸ್ಯ ಪ್ರದರ್ಶನಗಳನ್ನು ನೀಡಿದರು. ಈ ಸಂಸ್ಥೆ ಕರ್ನಾಟಕದ ಹೊರಗೂ ಮೆಚ್ಚುಗೆ ಗಳಿಸಿತು.

ಇವರು ಚಲನಚಿತ್ರ ಕ್ಷೇತ್ರವನ್ನು ಪ್ರವೇಶಿಸಿ ಅನೇಕ ಚಿತ್ರಗಳಲ್ಲಿ ನಟಿಸಿದ್ದರು. ಇವರ ಕಾದಂಬರಿಗಳು ದೂರದರ್ಶನದಲ್ಲೂ ಬಂದುವು. ಇವರ ಗಾಂಪರ ಗುಂಪು ಕೃತಿ ಧಾರಾವಾಹಿಯಾಗಿ ಪ್ರಸಾರವಾಯಿತು.

ದೀಕ್ಷಿತ್ ಅವರ ಹಾಸ್ಯದ ಒಂದು ಮುಖ್ಯ ಲಕ್ಷಣವೆಂದರೆ ಅವು ಕನ್ನಡದ ನೆಲೆಯಲ್ಲೇ, ಕನ್ನಡ ಜನರ ನಡುವಿನಿಂದಲೇ ಮೂಡಿ ಬಂದಂಥವು. ಇವರ ವ್ಯಕ್ತಿ ಚಿತ್ರಗಳಲ್ಲಂತೂ ಈ ಗುಣ ಎದ್ದು ಕಾಣುತ್ತದೆ. ದಫೇದರ್ ದೇರಣ್ಣ, ಗಾಂಪರ ಗುರು ಈ ಪಾತ್ರಗಳು ತಕ್ಕ ಸಹಜತೆಯಿಂದಲೂ, ಸನ್ನಿವೇಶದಿಂದಲೇ ಹೊಮ್ಮುವ ಹಾಸ್ಯದಿಂದಲೂ ಬಹಳ ಜೀವಂತವಾಗಿ ಕಂಗೊಳಿಸುತ್ತವೆ. ಕನ್ನಡದ ಹಾಸ್ಯ ಸಾಹಿತ್ಯದ ಇತಿಹಾಸದಲ್ಲಿ ದೀಕ್ಷಿತರ ಹೆಸರೂ ಶಾಶ್ವತವಾಗಿ ಉಳಿಯುವಂಥದ್ದು.
(ಎಚ್.ಎಸ್.ಕೆ.)

**ದುಮ್ ದುಮೆ ಪದಗಳು :** ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ಪ್ರಚಾರದಲ್ಲಿರುವ ಜನಪದ ಕಥನ ಕಾವ್ಯ ಪ್ರಕಾರ, ಈ ಕಾವ್ಯಗಳನ್ನು ಹಾಡುವಾಗ ದಿಮ್ಮು ಎಂಬ ಚರ್ಮವಾದ್ಯವನ್ನು ಬಳಸುತ್ತಾರೆ. ಆ ವಾದ್ಯದ ದುಮ್ ದುಮ್ಮಿ ಅಥವಾ ದಿಮ್ ದಿಮ್ಮಿ ಎಂಬ ಶಬ್ದದಿಂದ ದುಮ್ ದುಮಿ ಅಥವಾ ದಿಮ್ ದಿಮಿ ಎಂಬ ಪದ ಹುಟ್ಟಿಕೊಂಡಿರಬೇಕು. ದಿಮ್ಮು ವಾದ್ಯವನ್ನು ಈಗಲೂಕರಡೆ ಮಜಲುಗಳಲ್ಲಿ ಹಾಗೂ ಮೋಜು ಮಜಲುಗಳಲ್ಲಿ ಕಾಣಬಹುದಾಗಿದೆ. ದುಮ್ ದಿಮ್ ಎಂಬ ಅನುಕರಣವಾಚಕ ಶಬ್ದದಿಂದಲೆ ದಿಮ್ಮು ಎಂಬ ಹೆಸರು ಆ ವಾದ್ಯಕ್ಕೆ ಬಂದಿದೆ. ದಿಮ್ಮು ಬಳಸಿಕೊಂಡು ಹಾಡುವ ಕಾವ್ಯಗಳೇ ದುಮ್‌ದುಮೆ ಪದಗಳು. ಈ ಪದಗಳ ವೈಶಿಷ್ಟ್ಯ ಆಗಾಗ ತನ್ನ ಗತಿಯನ್ನು ಬದಲಾಯಿಸುವ ದಿಮ್ಮು ವಾದ್ಯದ ತಾಳತಾನಗಳಿಗೆ ಹೊಂದಿಕೊಂಡು ಒಡನುಡಿಯುವುದರಲ್ಲಿ ಅಡಗಿದೆ. ಈ ವಾದ್ಯದ ನೆರವಿಲ್ಲದೆ ಈ ಪದಗಳನ್ನು ಹಾಡುವಂತಿಲ್ಲ. ಹಾಗೆ ಹಾಡಿದರೆ ಅವು ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ಕಾಣಸಿಗುವ ಹೋಳಿಪದಗಳೆನಿಸಿಕೊಳ್ಳುತ್ತವೆ. ಏಕೆಂದರೆ ದುಮ್ಮ್‌ದುಮೆ ಪದಗಳಿಗೂ ಹೋಳಿ ಪದಗಳಿಗೂ ಇರುವ ಮುಖ್ಯ ವ್ಯತ್ಯಾಸ ಬಳಸುವ ವಾದ್ಯಗಳನ್ನು ಅವಲಂಬಿಸಿದ್ದು. ಅವುಗಳ ಭಾಷೆ, ಶೈಲಿ, ರಚನೆ, ತಂತ್ರ ಮುಂತಾದವುಗಳಲ್ಲಿ ಏಕರೀತಿಯನ್ನು ಕಾಣಬಹುದು. ಆದರೆ ಹೋಳಿಪದಗಳು ಶೃಂಗಾರರಸ ಪ್ರಧಾನವಾಗಿರುತ್ತವೆ. ದುಮ್ ದುಮೆ ಪದಗಳಲ್ಲಿ ವೀರರಸ ಪ್ರಧಾನವಾದರೂ ಉಳಿದ ರಸಗಳೂ ಉಂಟು.

ಬಿ.ಎಸ್. ಗದ್ದಗೀಮಠ ಅವರು ದುಮ್ ದುಮೆ ಹಾಗೂ ದುಂದುಭಿ ಎಂಬ ಎರಡು ಕಾವ್ಯ ಪ್ರಕಾರಗಳನ್ನು ಹೇಳುತ್ತಾರೆ. ಇವೆರಡನ್ನೂ ಬಾಜನಗಬ್ಬವೆಂದು ಹೇಳುವ ಅವರು ಪರಸೆ ಕೂಡಿದಾಗ ಎಲ್ಲೆಂದರಲ್ಲಿ ದುಂ ದುಂ ಶಬ್ದಮಾಡುತ್ತ ತಾಳ, ಲಯ, ಗತಿ, ರಾಗಗಳಿಗೆ ಅನುಸಾರ ಹಾಡುವವು ದುಮ್‌ದುಮೆ ಪದಗಳು, ಅರಸಂಗಳದಲ್ಲಿ ರಾಜ ದಿಗ್ವಿಜಯಕ್ಕೆ ಹೊರಟಂದು ದುಂದುಭಿ ವಾದ್ಯಗಳನ್ನು ಮೊಳಗಿಸುತ್ತ ಹಾಡಲಾಗುತ್ತಿದ್ದವು. ದುಂದುಭಿ ಪದಗಳು, ಆದರೆ ಇಲ್ಲಿ ದುಂದುಭಿ ಶಬ್ದ ದುಮ್ ದುಮೆಗೆ ಸಮೀಕರಿಸಲು ಪ್ರಯತ್ನಿಸಿದ ಸಂಸ್ಕೃತ ಶಬ್ದವೆಂದು ಕಾಣುತ್ತದೆ.

ದುಮ್ ದುಮೆ ಪದಗಳಿಗೆ ಕರಡೆ, ಸಂಬಾಳ, ಮದ್ದಲೆ ಮೊದಲಾದ ವಾದ್ಯಗಳನ್ನು ಬಳಸಿಕೊಂಡು ಹಾಡುತ್ತಿದ್ದರೆಂದು ಅಭಿಪ್ರಾಯವೂ ಬಂದಿದೆ. ಈಗಂತೂ ದಿಮ್ಮು ದಮ್ಮಡಿಗಳು ಬಳಕೆಯಲ್ಲಿವೆ.

ದುಮ್‌ದುಮೆ ಪದಗಳು 12ನೆಯ ಶತಮಾನಕ್ಕೂ ಹಿಂದಿನವೆಂಬುದು ಅಭಿಮಾನದ ಮಾತಾದೀತು. ವೀರಶೈವ ಸಮಾಜದಲ್ಲಿ ಕರಡಿಯವರು ಸಂಬಾಳದವರು ಎಂಬ ಪಂಗಡಗಳಿರುವುದರಿಂದ ಇವರೆಲ್ಲ ದುಮ್ ದುಮೆ

ಪದಗಳ ಗಾಯನ ಸಂಪ್ರದಾಯದವರಿರಬೇಕೆಂಬುದು ಗದ್ದಗಿ ಮಠರ ಅಭಿಪ್ರಾಯ. ಶಿವಶರಣರು ತಮ್ಮ ಧರ್ಮಪ್ರಸಾರಕ್ಕಾಗಿ ನೆಯ ಶತಮಾನದಲ್ಲೇ ಈ ಪದಗಳನ್ನು ಬಳಸಿಕೊಂಡರೆಂಬುದಾಗಿ ಹೇಳುವ ಎಂ.ಎಸ್. ಸುಂಕಾಪುರ ಅವರು ಅದರ ಸಮರ್ಥನೆಗಾಗಿ ಕಲಿಕಾಲ ಹೋಳಿ ಎಂಬ ಪದದ ಪಲ್ಲವಿಯನ್ನು ಉದಾಹರಿಸುತ್ತಾರೆ. ಅದರಲ್ಲಿ ಬಂದಿರುವ ದುಮ್‌ದುಮೆ ಬಸವಂತನ ಹಬ್ಬ ಎಂಬುದರಲ್ಲಿರುವ ಬಸವಂತ ಪದದ ಆಧಾರದ ಮೇಲೆ ಇದು ಬಸವಣ್ಣನವರ ಕಾಲದ್ದೆಂದು ಹೇಳುವುದು ಸರಿಯಲ್ಲವೆಂದು ಸಮಂಜಸವೆಂದು ತೋರುವುದಿಲ್ಲ. ಬಹುಶಃ ಇವು 15ನೆಯ ಶತಮಾನದಿಂದೀಚಿನವೆಂದು ಹೇಳುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ವಿಜಯನಗರದ ದೊರೆ ಪ್ರೌಢದೇವರಾಯನ ಕಾಲದಲ್ಲಿ ವೀರಶೈವ ಧರ್ಮದ ಪ್ರಚಾರ ಕಾರ್ಯಕ್ಕೆ ಹೊಸಹುರುಪು ದೊರೆತಿತು. ನೂರೊಂದು ವಿರಕ್ತರು ಅವತರಿಸಿ, ಧರ್ಮ, ತತ್ತ್ವ, ಸಂಸ್ಕೃತಿಗಳ ಸಂವರ್ಧನೆಗೆ ಮನಮುಟ್ಟಿ ದುಡಿದರು. ಅವರಲ್ಲೊಬ್ಬನಾದ ಕರಸ್ಥಳದ ನಾಗಿದೇವ ಈ ಕ್ಷೇತ್ರದಲ್ಲಿ ಬಹುವಾಗಿ ಶ್ರಮಿಸಿದವ. ಅವನ ಸಾಹಿತ್ಯ ಸೇವೆಯೂ ಸ್ಮರಣೀಯವಾದುದು. ಅವನು ಅನೇಕ ಕಾಲಜ್ಞಾನದ ಹಾಡುಗಳನ್ನು ರಚಿಸಿದ್ದಾನೆ. ಆ ಹಾಡುಗಳೆಲ್ಲ ದುಮ್ ದುಮೆಯ ಪದಗಳಾಗಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಅವನ ಹಾಡಿನ ಒಂದು ಪಲ್ಲವಿ ಹೀಗಿದೆ.

ದಿಮ್ಮಿಸಲೆನ್ನಿರೊ ನಮ್ಮವರೆಲ್ಲ ದಿಮ್ಮಿಸಲೆನ್ನಿರೊ

ದಿಮಾಇಸಲೆಂದು ಬಂದೀವಿ ಸತ್ಯವುಳ್ಳ ಶರಣರೆಲ್ಲ

ಇಲ್ಲಿ ಬಂದಿರುವ ದಿಮ್ಮಿಸು ಎನ್ನುವ ಪದವನ್ನು ಗಮನಿಸಿದರೆ (ದಿಮ್ಮು +ಇಸು=ದಿಮ್ಮಿಸು) ಡಂಗುರ ಸಾರು ಎಂದರ್ಥವಾಗುತ್ತದೆ. ಇಂದಿನ ದಿನಗಳಲ್ಲೂ ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ಸಾರ್ವಜನಿಕ ಹೇಳಿಕೆ ನೀಡುವಾಗ ದಿಮ್ಮು ಬಳಸುತ್ತಾರೆ. ಇಂಥ ದಿಮ್ಮು ವಾದ್ಯದ ಜೊತೆಗೆ ಕೇಳಿಸುವ ಹಾಡೇ ದುಮ್ ದುಮೆ ಪದ. ಈ ಬಗೆಯ ಸಾಹಿತ್ಯ ಕಿತ್ತೂರು ಅರಸರ ಆಳ್ವಿಕೆಯ ಕಾಲದಲ್ಲಿ ಅಪಾರವಾಗಿ ಬೆಳೆಯಿತು.

ದುಮ್‌ದುಮೆ ಪದಗಳ ಲಕ್ಷಣಗಳನ್ನು ಹೀಗೆ ಸಂಗ್ರಹಿಸಬಹುದು: ಕಥೆ, ಸನ್ನಿವೇಶಗಳು ವರ್ಣನೆಗಳಿಂದ ಕೂಡಿರುತ್ತವೆ. ವರ್ಣನೆಗಳು ಸಂದರ್ಭೋಚಿತವಾಗಿರುತ್ತವೆಯೇ ಹೊರತು ದೀರ್ಘವಾಗಿ ಅಲ್ಲ. ಕಥನಕ್ರಿಯೆ ತೀವ್ರಗತಿಯಲ್ಲಿ ಮುನ್ನಡೆಯುತ್ತದೆ. ವೀರರಸಕ್ಕೆ ಪ್ರಾಧಾನ್ಯವಿದ್ದರೂ ಉಳಿದ ರಸಗಳೂ ಬರಬಲ್ಲವು. ನೀತಿ ಪ್ರಸಾರ ಕಾರ್ಯವೂ ಇದರ ಮತ್ತೊಂದು ಅಂಗ, ಓಟ, ರಭಸ, ಉತ್ಸಾಹವೇ ಇದರ ಜೀವಾಳ. ಪದಗಳು ಅಂಶಗಣದ ಮಟ್ಟಿನಲ್ಲಿರುತ್ತದೆ. ಶಿಥಿಲತೆ ಇದರ ಒಳಗುಟ್ಟು. ತಾಳಬದ್ಧವಾಗಿ ವಿವಿಧ ರಾಗಗಳಿಗೆ ಹೊಂದಿಕೊಳ್ಳುವುದರ ವೈಶಿಷ್ಟ್ಯ ಶಿಥಿಲತೆಗೆ ಹೆಸರಾದ ಅದರ ಅಂಶಗಣದಲ್ಲಿಯೇ ಅಡಗಿದೆ. ಹಾಡಲು ಬಲ್ಲವರಿಗೆ ಇದರ ಮರ್ಮ ಸ್ಪಷ್ಟವಾಗಿ ಗೋಚರಿಸುತ್ತದೆ. ಇಂತಿಷ್ಟೇ ಪಾದಗಳಿರಬೇಕೆಂಬ ನಿಯಮವಿಲ್ಲದಿದ್ದರೂ ಹತ್ತುಪಾದಗಳಿಗೆ ಮೀರಿ ಬೆಳೆಯುವುದಿಲ್ಲ. ಕೆಲವೊಮ್ಮೆ ಚೌಪದಿಯಲ್ಲೂ ಇರಬಹುದು. ಇಲ್ಲಿನದು ಶುದ್ಧ ಜನಪದ ಭಾಷೆಯಲ್ಲಿಲ್ಲ. ಇವು ಅಕ್ಷರ ಬಲ್ಲವರ ರಚನೆಗಳೆಂಬುದರಲ್ಲಿ ಅನುಮಾನವಿಲ್ಲ. ಇವನ್ನು ಬರೆದ ಕವಿಗಳು ಅಂತ್ಯದಲ್ಲಿ ತಮ್ಮ ನಾಮಾಂಕಿತವನ್ನು ಮುದ್ರಿಸುವುದನ್ನೂ ಮರೆತಿಲ್ಲ. ಈ ಕಾಲಣದಿಂದ ಇವನ್ನು ಸಮಷ್ಟಿ ಸೃಷ್ಟಿಯೆಂದು ಹೇಳುವುದಕ್ಕಾಗುವುದಿಲ್ಲ. ಇವು ಜನಪದ ಸಮುದಾಯಕ್ಕೆ ಸಮೀಪದಲ್ಲಿವೆ. ನಾಗರಿಕ ಸಮುದಾಯಕ್ಕೆ ದೂರವಾಗಿವೆ. ಶಿಷ್ಟ ಭಾಷೆ ಹಾಗೂ ಪ್ರಾಸದ ವೈಭವಕ್ಕೆ ಈ ಉದಾಹರಮೆ ನೋಡಿ.

ಈಶ ಮಾಹೇಶ ಗೌರೀಶ ಗಜಾಂತಕ

ನಾಶಮುಕ್ತೀಶ ಮಲ್ಲೇಶ್ವರನೆ । ಪುರ

ನಾಶ ಭೂತೇಶ ಸರ್ವೇಶ್ವರನೆ । ಜಗ

ದೀಶ ಗಂಗಾಂಬೆಯ ತೋಷ ಭೂಷ ಅಘ

ನಾಶ ರಹಿತ ಆಶ ಸಲಹು ಸೋಮೇಶ

ಮೇಲಿನ ಉದಾಹರಣೆಯಲ್ಲಿ ಆದಿಪ್ರಾಸವನ್ನು ಮಾತ್ರ ಕಾಣುತ್ತೇವೆ. ಉತ್ತರ ಕರ್ನಾಟಕದ ಆಡುನುಡಿಯ ಸೊಗಸಾಗಲಿ ಬನಿಯಾಗಲಿ ಇಲ್ಲಿ ಎಳ್ಳಷ್ಟೂ ಕಂಡುಬರುವುದಿಲ್ಲ.

ಚೌಪದ ರೂಪದ ದುಮ್‌ದುಮೆಗಳಲ್ಲಿ ಆದಿ ಅಂತ್ಯ ಪ್ರಾಸಗಳೆರಡನ್ನೂ ಕಾಣಬಹುದು:

ಕರೆಯಬಂದವರೆಲ್ಲ ಬೆರಗಾಗಿ ನೋಡಿ

ಶರೀರದ ನಾಡಿಯ ಹಿಡಿದು ಮಾತಾಡಿ

ಭರದಿಂದ ಬಂದಾರೊ ಅರಮನಿಗೋಡಿ

ದೊರೆ ಮಲ್ಲ ಸರ್ಜನ ಕಳುಹೊ ದಯಮಾಡಿ

ಈ ಕಾವ್ಯಗಳ ಮೇಲೆ ಶಿಷ್ಟಸಂಪ್ರದಾಯದ ಪ್ರಭಾವ ಹೆಚ್ಚಾಗಿದೆ. ಒಬ್ಬ ದುಮ್‌ದುಮೆ ಕವಿ ಕಾವ್ಯದ ಅಂತ್ಯದಲ್ಲಿ ಒಂದು ಕಂದಪದ್ಯವನ್ನು ಬರೆದಿದ್ದಾನೆ:

ಗುರು ಲಘು ಗಣನೇಮಂಗಳ್

ವರ ಪ್ರಾಸ ಲಕ್ಷಣ ವಡಿಗಳ್ ತಪ್ಪಾಗಿರಲಿ

ನೆರೆಜಾಣರು ತಿದ್ದೆ ನಿಮಗೆ

ಸುರಲೋಕದ ಪದವಿಯನೀವ ತುರುವಿ ಗಿರೀಶಂ

ಕಥೆಯನ್ನು ತೀವ್ರಗತಿಯಲ್ಲಿ ಅದರೂ ಶಕ್ತಿಯುತವಾಗಿ ರೂಪಿಸುವ ಕೌಶಲಕ್ಕೆ ಅಭಿಮನ್ಯುವಿನ ಕಾಳಗದ ಈ ಸಾಲುಗಳನ್ನು ನೋಡಿ:

ಕ್ಷಿತಿಪತಿ ಕೇಳ್ ಚಕ್ರವ್ಯೂಹದೊಳಭಿಮನ್ಯು

ಅತಿರಮ್ಯ ಯುದ್ಧವು ಮಾಡಿದನು । ಬಹು

ಖತಿಯಿಂದ ಶಿರವ ಚಂಡಾಡಿದನು। ಅಲ್ಲೆ

ಹತವಾಗಿ ಮುಕ್ತಿಯ ಕೂಡಿದನು। ಜಯ

ದ್ರಥ ಮಸ್ತಕ ನರಹರಿಯು ಎಚ್ಚನುಯೆಂದು

ಯತಿರಾಯ ಪೇಳಿದ ಹಿತವ ಭೂವರಗೆ

ಸುಭದ್ರೆ ಹಸುಮಗುವನ್ನು ಯುದ್ಧಕ್ಕೆ ಕಳಿಸುವುದೆ ಎಂದಾಗ ಅಭಿಮನ್ಯುವಿನ ಪರಾಕ್ರಮದ ಮಾತುಗಳಿಗಾಗಿ ಈ ಉದಾಹರಣೆ:

ಹಡೆದವ್ವ ನೀ ಎನ್ನ ತಡೆವುದುಚಿತವೇನ

ಕೊಡುಗೆದ್ದು ಬಾ ಎಂದು ಹರಕೆಯನ್ನು। ಶೋಕ

ನುಡಿ ಸಲ್ಲ ಬಿಡು ಬಿಡು ಚಿಂತೆಯನು। ನಿನ್ನ

ನುಡಿ ಗೇಳಿ ಬಿಡೆನು ನಾನು ಕೇಳಿದೆನು। ಎಂದು

ಒಡಗೊಂಡು ಸಾರಥಿ ವೀರ ಬೊಬ್ಬೆಗಳಿಂದ

ಪೊಡಮಟ್ಟು ಬರುವೆನೆಂದನು

ವರ್ಣನೆಗಳಲ್ಲಿ ದುಮ್‌ದುಮೆ ಕವಿ ಹಿತಮಿತ ಚತುರತೆಯನ್ನು ಮೆರೆಯಬಲ್ಲನೆಂಬುದಕ್ಕೆ ಕೀಚಕ ದ್ರೌಪದಿಯನ್ನು ಕಂಡು ಹೇಳುವ ಮಾತುಗಳಿವು:

ಒಬ್ಬ ದೂತನ ವಾರಿಯೊಳು ನಿಂತು ತನ್ನಯ

ಹುಬ್ಬೇಗೆ ಕೈ ಹಚ್ಚಿ ನೋಡಿದನು। ಇಂಥ

ಹೆಣ್ಣೀನ ಸಮನಿಲ್ಲ ನೋಡೆಂದನು| ಬಣ್ಣ
ನಿಂಬೀಯ ಹಣ್ಣು ಕಾಣೆಂದನು| ಇಂಥ
ಹೆಣ್ಣೀನ ರೂಪವ ಕಂಡು ಸೈರಿಸಲಾರೆ
ಇನ್ನೇನು ಗತಿಯೆಂದು ಅಂದ ಕೀಚಕನು
ಬಡನಡು ಬಳುಕುವ ಹೆಣ್ಣೀನ ನಡಿಗೆಯು
ನಡೆದರೆ ಮುದ್ದಾನೆಯುಂದದಲಿ| ಬಲು
ನುಡಿದಳು ಸ್ವರ ಕೋಕಿಲೆಯುಂದದಲಿ| ತಾನು
ಕಡೆಗಣ್ಣ ನೋಟದಿ ನೋಡುತಲಿಹಳು| ಇಂಥ
ಸುಂದರಿ ಸುಗುಣಿ ಇಂದಾಗದಿದೆ ಎನಗೆ
ಇನ್ನೊದಿಗೆ ಆಗೋದು ಎಂದ ಕೀಚಕನು

ದುಮ್‌ದುಮೇ ಪದಗಳನ್ನು ಅನೇಕ ಕವಿಗಳಿಲ್ಲರು ರಚಿಸಿದ್ದಾರೆ. ಈ ವರೆಗೆ ಪ್ರಕಟವಾಗಿರುವ ಕೃತಿಗಳ ವಚನಕಾರರಲ್ಲಿ ಮಲ್ಲಸರ್ಜ ದೊರೆಯ ಆಸ್ಥಾನದಲ್ಲಿದ್ದ ರುದ್ರಕವಿ. ಕುಂದಗೋಳದ ಬಸವಲಿಂಗ, ಚನ್ನಬಸವ, ನವಿಲುಗುಂದದ ಬಸವಲಿಂಗ, ಗುರುಶಾಂತವೀರಣ್ಣ, ಮಾಗಡಿ ಬಸವ, ಮುನಿಪುರದ ಪ್ರಭುವಿನ ಶಿಷ್ಯ, ಉಜ್ಜಯಿನಿ ಮರುಳಸಿದ್ಧನ ಬಾಲಕ, ಗೋಕಾವಿ, ಸಿದ್ಧಸೇವಕ ಮುಂತಾದವರು ಪ್ರಸಿದ್ದರು. ಕೆಲವು ದುಮ್‌ದುಮೆ ಪದಗಳು ಲಾವಣಿ ಎಂಬ ಹೆಸರಿನಿಂದಲೂ ಕೆಲವು ಲಾವಣಿಗಳು ದುಮ್‌ದುಮೆ ಪದಗಳು ಎಂಬ ಹೆಸರಿನಿಂದಲೂ ಪ್ರಕಟವಾಗಿರುವ ಸಾಧ್ಯತೆ ಎದ್ದುಕಾಣುತ್ತವೆ. ಕಿತ್ತೂರಿನ ಐತಿಹಾಸಿಕ ಘಟನೆಗಳನ್ನು ಕುರಿತ ಕಾವ್ಯಗಳಲ್ಲಿ ಈ ಬಗೆಯ ಗೊಂದಲವೇರ್ಪಟ್ಟಿವೆ. ಪ್ರಕಟಿತ ಕೃತಿಗಳಲ್ಲಿ ದೊಡ್ಡ ಭಾವೆಪ್ಪ ಮೂಗಿ ಅವರ ದೊರೆಮಲ್ಲಸರ್ಜನ ದುಮ್‌ದುಮೆ (1951) ಮೊದಲನೆಯದೆಂದು ಕಾಣುತ್ತದೆ. ಅನಂತರ ಗದ್ದಗಿಮಠ ಅದರಿಂದ ಕುಮಾರ ರಾಮನ ದುಮ್‌ದುಮೆ ಪ್ರಕಟವಾಗಿದೆ (1959). ಫ್ಲೀಟ್ ಪ್ರಕಟಿಸಿದ್ದ ಕಿತ್ತೂರಿಗೆ ಸಂಬಂಧಿಸಿದ ಐತಿಹಾಸಿಕ ಕಾವ್ಯಗಳು ಲಾವಣಿಗಳೇ ಅಥವಾ ದುಮ್‌ದುಮೆ ಪದಗಳೇ ಎಂಬಹುದನ್ನು ಜಾನಪದ ವಿದ್ವಾಂಸರು ನಿರ್ಧರಿಸಬೇಕಾಗಿದೆ. ಸುಪ್ರಸಿದ್ಧ ಜನಪದ ಕವಿ ಬಾಳಗೋಪಾಳನ ಕೃತಿಗಳಲ್ಲಿ ಯಾವುವು ದುಮ್‌ದುಮೆ ಪದಗಳೆಂಬುದನ್ನು ಸಂಪಾದಕರು ಗುರುತಿಸಿದಂತೆ ಕಾಣುವುದಿಲ್ಲ. ಸುಂಕಾಪುರ ಅವರ ಸಂಪಾದಕತ್ವದಲ್ಲಿ ಪ್ರಕಟವಾಗಿರುವ ಜೀವನ ಜೋರಾಲಿ 4 ಮತ್ತು 5 ನೆಯ ಸಂಪುಟಗಳು ಕ್ರಮವಾಗಿ ಹೋಳಿಪದ ಹಾಗೂ ದುಮ್‌ದುಮೆಪದ ಎಂಬ ಶೀರ್ಷಿಕೆಯನ್ನು ಹೊತ್ತಿದ್ದರೂ ಹೋಳಿ ಮಾಡಿಯೂ ಅವುಗಳನ್ನು ಕರಾರುವಾಕ್ಕಾಗಿ ವಿಂಗಡಿಸಿ ಪ್ರಕಟಿಸುವಾಗ ಸಂಪಾದಕರು ಗೊಂದಲಕ್ಕೀಡಾಗಿದ್ದಾರೆ. ತಾಡಪತ್ರಗಳಲ್ಲಿ ಹಾಗೂ ಜನತೆಯ ಬಾಯಲ್ಲಿ ಉಳಿದಿರುವ ಈ ಸಂಪ್ರದಾಯದ ಕಾವ್ಯಗಳನ್ನು ಪಾಠಾಂತರಗಳೊಡನೆ ಪರಿಷ್ಕರಿಸಿ ಪ್ರಕಟಿಸುವ ಕಾರ್ಯ ಜರೂರಾಗಿ ಆಗಬೇಕಾಗಿದೆ.

**ದುಗ್ಗಳೆ:** ಹನ್ನೊಂದನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಶಿವಶರಣೆ. ದೇವರ ದಾಸಿಮಯ್ಯನ ಹೆಂಡತಿ. ಅಫಜಲಪುರ ತಾಲ್ಲೂಕಿನ ಗೊಬ್ಬೂರು ಈಕೆಯ ಜನ್ಮಸ್ಥಳ. ಭಕ್ತಿ, ಕಾಯಕ, ದಾಸೋಹ, ಅನುಭಾವ ಮುಂತಾದುವುಗಳ ಆಚರಣೆಯಲ್ಲಿ ಈಕೆ ದೇವರ ದಾಸಿಮಯ್ಯನಷ್ಟೇ ಎತ್ತರಕ್ಕೆ ಏರಿದ್ದಳು. ಧಾರ್ಮಿಕ ಸಾಮಾಜಿಕ ವೈಚಾರಿಕ ಮುಂತಾದ ಎಲ್ಲ ಬಗೆಯ ಸ್ವಾತಂತ್ರ್ಯ ಪಡೆದಿದ್ದಳು. ನೀರಿಲ್ಲದೆ ಅನ್ನ ಮಾಡಿ ನೀಡುವ ಹೆಣ್ಣನ್ನು ಮದುವೆಯಾಗುವೆನೆಂದು ದೇವರ ದಾಸಿಮಯ್ಯ ದಿಬ್ಬವೊಂದನ್ನು ಒಡ್ಡಿದ್ದ. ಜಂಗಮ ಪಾದೋದಕದಿಂದ ಅನ್ನ ಮಾಡಿ ನೀಡಿ ದಾಸಿಮಯ್ಯನನ್ನೊಲಿಸಿ ಕೈಹಿಡಿದು, ಆತ ಕೈಕೊಂಡ ಶರಣಧರ್ಮದ ಪ್ರಸಾದರಲ್ಲಿ ಎಲ್ಲಂದದಿಂದ ನೆರವಿತ್ತು ತನ್ನ ಮುಂದಿನ ಶಿವಶರಣೆಯರಿಗೆ ಆದರ್ಶ ಪ್ರಾಯಳಾದಳು. ಈಕೆಯ ಪತಿಭಕ್ತಿ ಅನುಪಮವಾದುದು.

ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ ಎಂಬ ದೇವರ ದಾಸಿಮಯ್ಯನ ವಚನದಿಂದ, ನೆರೆ ನಂಬೋ ನೆರೆ ನಂಬೋ ದಾಸದುಗ್ಗಳೆಯರಂತೆ ಎಂಬ ಬಸವಣ್ಣನವರ ವಚನದಿಂದ ಇವಳ ಸಾಂಸಾರಿಕ ಜೀವನ ಬಹು ತೃಪ್ತಿಕರವಾಗಿದ್ದು, ಈಕೆಯ ಉನ್ನತಿಗೆ ಕಾರಣವಾಯಿತೆಂದು ಹೇಳಬಹುದು. ಇವಳು ವಚನಗಳನ್ನು ಬರೆದಿರುವಳೋ ಇಲ್ಲವೋ ತಿಳಿಯದು. ಇದುವರೆಗೆ ಯಾವುದೇ ವಚನ ದೊರೆತಿಲ್ಲ. (ಎಸ್.ಆರ್.ಎ.)

**ದುರ್ಗಸಿಂಹ :** ಸು. 1031. ಬ್ರಾಹ್ಮಣಕವಿ. ಪಂಚತಂತ್ರ ಎಂಬ ಗ್ರಂಥದ ಕರ್ತೃ. ಒಂದನೆಯ ಜಗದೇಕಮಲ್ಲನಲ್ಲಿ (1015-44) ಈತ ದಂಡ ನಾಯಕನೂ ಸಂಧಿ ವಿಗ್ರಹಿಯೂ ಆಗಿದ್ದ. ಕಿಸುಕಾಡು ನಾಡಿನ ಸಯ್ಯಡಿಯೆಂಬ ಅಗ್ರಹಾರ ಇವನ ಜನ್ಮಸ್ಥಳ. ಇವನ ಅಜ್ಜ ಧರಾಮರಾಗ್ರಗಣ್ಯನಾದ ದುರ್ಗಮಯ್ಯ, ತಂದೆ ದೇವದ್ವಿಜಗುರುಜನಪದಸೇವಾನಿರತನಾದ ಈಶ್ವರಾರ್ಯ, ತಾಯಿ ದೇವಕಬ್ಬೆ, ಗುರು ಮಹಾಯೋಗಿ ಶಂಕರಭಟ್ಟ, ಕವಿ ಸಯ್ಯಡಿಯಲ್ಲಿ ಹಲವಾರು ಹರಿಹರ ಭವನಗಳನ್ನು ಕಟ್ಟಿಸಿದಂತೆ ತಿಳಿಯುತ್ತದೆ. ಪೂರ್ವಕವಿಗಳಲ್ಲಿ ವಿಷ್ಣುಗುಪ್ತ, ಗುಣಾಢ್ಯ, ವರರುಚಿ, ಕಾಳಿದಾಸ, ಮಯೂರ, ಬಾಣ, ಧನಂಜಯ, ಉದ್ಭಟ, ಭವಭೂತಿ, ಭಾರವಿ, ಮಾಘ, ದಂಡಿ, ರಾಜಶೇಖರ ಮೊದಲಾದ ಸಂಸ್ಕೃತ ಕವಿಗಳನ್ನೂ ಶ್ರೀವಿಜಯ, ಕನ್ನಮಯ್ಯ, ಅಸಗ, ಮನಸಿಜ, ಚಂದ್ರ(ಭಟ್ಟ), ಪಂಪ, ಪೊನ್ನ, ಗಜಾಂಕುಶ ಮೊದಲಾದ ಕನ್ನಡ ಕವಿಗಳನ್ನೂ ಸ್ತುತಿಸಿದ್ದಾನೆ. ತನ್ನ ಗ್ರಂಥವನ್ನು ಕವಿಗಮಕಿವಾಗ್ಮಿಪ್ರವರನಾದ ಶ್ರೀ ಮಾದಿರಾಜ ಮುನಿಪುಂಗವ ತಿದ್ದಿದಂತೆ ಹೇಳಿಕೊಂಡಿದ್ದಾನೆ. ತನ್ನ ಗುಣಾದಿಗಳನ್ನು ದಾನಶೂರನಪವಾದಭೀರು ವಿಜ್ಞಾನಮೂರ್ತಿ ಭುವನೈಕವತ್ಸಲಂ ಮಾನನೀಯ ಗುಣನ್, ನಿಜೇಶ ಕಾರ್ಯಧುರೀಣಂ ವಿನಯಾಂಭೋನಿಧಿ ಸತ್ಯವ್ರತಂ ಉದಯೋತ್ತುಂಗನಗ ಸ್ವಭಾವದಿನಪಂ ಪ್ರೋದ್ದಾಮಧರ್ಮಕ್ಷಮಾಜದ ಬೇರ್ ಸ್ವಾಮಿಹಿತೌಘನಿರ್ಮಲ ಮಹಾರತ್ನಾಕರಂ ನೀತಿಶಾಸ್ತ್ರದ ಮಂತ್ರಕ್ಕಧಿದೈವತಂ ದ್ವಿಜಕುಲಶ್ರೀಕೇಳಿಸಂವಾಸಮೆಂಬುದು ಸರ್ವೋರ್ವರೆಧರ್ಮನಿರ್ಮಳಯಶಸ್ಸದ್ದುರ್ಗನ್ - ಎಂದು ಮೊದಲಾಗಿ ವಿಶೇಷಿಸಿಕೊಂಡಿದ್ದಾನೆ.

ಪಂಚತಂತ್ರ ಚಂಪೂವಿನಲ್ಲಿ ರಚಿತವಾಗಿದೆ. ಬಿಹಾರ ಪ್ರಾಂತ್ಯದ ಆರಾ ಎಂಬಲ್ಲಿಯ ಜೈನಸಿದ್ಧಾಂತ ಭವನದಲ್ಲಿರುವ ಒಂದು ಹಸ್ತಪ್ರತಿಯ ಅಂತ್ಯದಲ್ಲಿ ಬರುವ ಅತಿಸಂಪನ್ನತೆವೆತ್ತ ಸದ್ಗುಹನಿವಾಸಸ್ಥಾನಮಾದೌ ಪ್ರಜಾಪತಿಸಂವತ್ಸರ ಚೈತ್ರಮಾಸಸಿತಪಕ್ಷ ದ್ವಾದಶೀ ತಾರಾಕಾಪತಿವಾರಂ ಬರೆ ಪಂಚತಂತ್ರಮೆಸದತ್ತೀ ಧಾತ್ರಿಯೋಳ್ ದುರ್ಗನಿರ್ಮಿತಮುದ್ಯತ್ಕ [ವಿಶೇಖರಪ್ರ] ಮದಲೀಲಾಪುಷ್ಟಿತಾಮ್ರದ್ರುಮಂ - ಎಂಬ ಪದ್ಯದಿಂದ ಈತ ಈ ಕೃತಿಯನ್ನು 1031ರಲ್ಲಿ ಬರೆದಂತೆ ತಿಳಿಯುತ್ತದೆ. ಇದರಲ್ಲಿ ಭೇದಪ್ರಕರಣ ವರ್ಣನಂ, ಮಿತ್ರಕಾರ್ಯಪ್ರಕರಣಂ ಎಂಬ ಐದು ತಂತ್ರಗಳಿದ್ದು 457 ಪದ್ಯಗಳೂ 230 ಶ್ಲೋಕಗಳೂ 48 ಉಪಕಥೆಗಳೂ ಇವೆ.

ಗುಣಾಢ್ಯನಿಂದ ಪೈಶಾಚಿ ಭಾಷೆಯಲ್ಲಿ ರಚಿತವಾದ ಬೃಹತ್ಕಥೆ ವಸುಭಾಗಭಟ್ಟನ ಸಂಸ್ಕೃತ ಪಂಚತಂತ್ರಕ್ಕೆ ಆಕರ. ತಾನು ಈ ಸಂಸ್ಕೃತ ಕೃತಿಯನ್ನಾಧರಿಸಿ ಕನ್ನಡ ಪಂಚತಂತ್ರವನ್ನು ಬರೆದಿರುವುದಾಗಿ 'ವಸುಭಾಗಭಟ್ಟ ಕೃತಿಯಂ ವಸುಧಾಧಿಪ ಹಿತಮನಖಿಲವಿಬುಧಸ್ತುತಮಂ ಪೊಸತಾಗಿರೆ ವಿರಚಿಸುವೆಂ ವಸುಮತಿಯೊಳ್ ಪಂಚತಂತ್ರಮಂ ಕನ್ನಡದಿಂ' ಎಂಬ ಪದ್ಯದಲ್ಲಿ ಕವಿ ಹೇಳಿಕೊಂಡಿದ್ದಾನೆ. ಈ ಹೇಳಿಕೆಯಿಂದ ವಸುಭಾಗಭಟ್ಟನ ಸಂಸ್ಕೃತ ಪಂಚತಂತ್ರ ಗ್ರಂಥವೊಂದಿತ್ತು ಎಂಬುದಾಗಿ ತಿಳಿದುಬರುತ್ತದೆ. ಇದು ಕವಿಯ ಕಾಲಕ್ಕೆ ಕನ್ನಡನಾಡಿನಲ್ಲಿ ಜನಪ್ರಿಯವಾಗಿದ್ದಿರಬಹುದು. ಇದರಲ್ಲಿ ಇದ್ದುದು ಅಮರಶಕ್ತಿ ಎಂಬ ಅರಸನ ಮೂವರು ಗಂಡುಮಕ್ಕಳು ಮುದ್ದಿನಿಂದ ಬೆಳೆದು ದಾರಿತಪ್ಪಿ ದುಷ್ಟರಾದಾಗ ಅವರನ್ನು ಉಪಾಯವಾಗಿ ತಿದ್ದಿ ವಿವೇಕದ ದಾರಿ ಹಿಡಿಸುವ ಸಲುವಾಗಿ ಅರಸನ ಪ್ರಾರ್ಥನೆಯಂತೆ ಅವನ ಆಸ್ಥಾನಪಂಡಿತ ವಸುಭಾಗಭಟ್ಟ ಕಟ್ಟಿದ ಕಥೆಗಳು. ಈಗ ಈ ಗ್ರಂಥ ಉಪಲಬ್ಧವಿಲ್ಲ. ಆದ್ದರಿಂದ ಕನ್ನಡ ಪಂಚತಂತ್ರ ಅದರ ಕೇವಲ ಅನುವಾದವೇ ಸಾರಸಂಗ್ರಹವೇ ಎಂಬ ವಿವರ ತಿಳಿಯದು.

ಸಂಸ್ಕೃತದಲ್ಲಿ ವಿಷ್ಣುಶರ್ಮನ ಪಂಚತಂತ್ರವೆಂಬ ಇನ್ನೊಂದು ಗ್ರಂಥ ಹೆಸರಾಗಿದೆ. ಈ ಗ್ರಂಥದಲ್ಲಿ ದೊರೆಯದ ಕೆಲವು ಕಥೆಗಳೂ ಜೈನಮತ ತತ್ತ್ವಗಳೂ ಪಾರಿಭಾಷಿಕ ಪದಗಳೂ ಕನ್ನಡ ಪಂಚತಂತ್ರದಲ್ಲಿ ದೊರೆಯುತ್ತವೆ. ಇದರಿಂದ ಈತ ಹೆಚ್ಚಾಗಿ ವಸುಭಾಗಭಟ್ಟನನ್ನು ಅನುಸರಿಸಿದಂತೆ ಊಹಿಸಬಹುದಾಗಿದೆ.

ಪಂಚತಂತ್ರ ಒಂದು ಕಥನಕಾವ್ಯ. ಒಂದೊಂದು ತಂತ್ರದಲ್ಲೂ ಕಥೆಯೊಳಗೆ ಕಥೆ ಬಂದು ಕೃತಿ ಹಲವು ಚಿಕ್ಕದೊಡ್ಡ ಕಥೆಗಳ ಗಣಿಯಾಗಿದೆ. ಇಲ್ಲಿ ಬರುವ ಪಿಂಗಳಕ, ಸಂಜೀವಕ, ಕರಟಕ, ದಮನಕ - ಇವೇ ಮೊದಲಾದ ಹಲವು ಪಾತ್ರಗಳು ಓದುಗರ ಮನಸ್ಸಿನಲ್ಲಿ ಸ್ಥಾಯಿಯಾಗಿ ನಿಂತುಬಿಡುತ್ತವೆ. ನರಿ, ಸಿಂಹ, ಎತ್ತು, ಕಾಗೆ ಮೊದಲಾದ ಪ್ರಾಣಿಗಳ ಕಥೆಗಳಲ್ಲಿ ಮನುಷ್ಯರು ಬೇರೆ ಬೇರೆ ಸಮಯಗಳಲ್ಲಿ ಅನುಸರಿಸಬೇಕಾದ ನೀತಿನಿಯಮಗಳನ್ನು ಕವಿ ಇಲ್ಲಿ ಮಾರ್ಮಿಕವಾಗಿ ನಿರೂಪಿಸಿದ್ದಾನೆ. ಈತನ ಕಥನಕೌಶಲ ಮೆಚ್ಚತಕ್ಕದ್ದು. ಶೈಲಿಯಲ್ಲಿ ಸಂಸ್ಕೃತದ ಪ್ರೌಢಿಮೆ ತೋರಿಬಂದರೂ ಅನೇಕ ಭಾಗಗಳಲ್ಲಿ ಸರಳವಾದ ಕನ್ನಡದಲ್ಲಿ ಗದ್ಯಪದ್ಯರಚನೆ ಕಂಡುಬರುತ್ತದೆ. ಚಂಪೂ ಶೈಲಿ ನವೀನವಾಗಿದ್ದು ಗದ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆ ಸಂದಿದೆ. ಐದು ಪ್ರಕರಣಗಳಲ್ಲಿ ಮೊದಲನೆಯ ಭೇದಪ್ರಕರಣ ಹೆಚ್ಚು ವಿಸ್ತಾರವಾಗಿದೆ. ಇಲ್ಲಿ ಬರುವ ಕಥೆ ಬಹಳ ರಮಣೀಯವಾಗಿದೆ. ನೀತಿನಿರೂಪಣೆ ಕವಿಯ ಮುಖ್ಯ ಉದ್ದೇಶ. ಕೆಲವೊಮ್ಮೆ ಕೆಲವು ವಸ್ತುಗಳಿಗೆ ಸುಲಭವಾದ ಕನ್ನಡ ಪದ್ಯಕ್ಕೆ ಬದಲಾಗಿ ದೊಡ್ಡ ಸಂಸ್ಕೃತ ಪದಗಳನ್ನು ಬಳಸುವಲ್ಲಿ ಆ ವಸ್ತುವನ್ನು ಕುರಿತು ಒಂದು ರೀತಿಯ ಹಾಸ್ಯವೂ ವಿಡಂಬನೆಯ ದೃಷ್ಟಿಯೂ ಕಂಡುಬರುತ್ತದೆ. ಒಟ್ಟಿನಲ್ಲಿ ಜೈನಧರ್ಮಪರವಾಗಿದ್ದು ಉತ್ತಮ ನಿರೂಪಣೆಯಿಂದ ಕೂಡಿರುವ ಈ ಕಾವ್ಯಕ್ಕೆ ಕನ್ನಡ ಗದ್ಯ ಸಾಹಿತ್ಯದಲ್ಲಿ ಗೌರವದ ಸ್ಥಾನ ದೊರಕಿದೆ. (ಬಿ.ಎಸ್.ಎಸ್.ಕೆ.ಪಿ.)

**ದುರ್ವಿನೀತ:** ತಲಕಾಡು ಗಂಗವಂಶದ ರಾಜ ಸು. (529-79). ಅವನೀತನ ಮಗ. ನಿರ್ವಿನೀತ ಎಂಬುದು ಇವನ ಇನ್ನೊಂದು ಹೆಸರು. ಪುನ್ನಾಟ ದೊರೆ ಸ್ಕಂಧವರ್ಮನ ಮಗಳು ಜ್ಯೇಷ್ಠಾದೇವಿ ಇವನ ತಾಯಿ.

ಇವನ ಕಾಲವನ್ನು 5ನೆಯ ಶತಮಾನದ ಉತ್ತರಭಾಗದಿಂದ 7ನೆಯ ಶತಮಾನದ ಉತ್ತರಭಾಗದವರೆಗೂ ಜಗ್ಗುವ ಪ್ರಯತ್ನವನ್ನೂ ಅನೇಕ ವಿದ್ವಾಂಸರು ಮಾಡಿದ್ದಾರೆ. ಒಂದು ಹೇಳಿಕೆಯ ಪ್ರಕಾರ ಚಳುಕ್ಯ ಒಂದನೆಯ ಪುಲಕೇಶಿಯ ತಾತ ಜಯಸಿಂಹನು ದುರ್ವಿನೀತನ ಮೊಮ್ಮಗನಾದರೆ, ಇತರರ ಪ್ರಕಾರ ಒಂದನೆಯ ವಿಕ್ರಮಾದಿತ್ಯ (ಅಥವಾ ವಿಜಯಾದಿತ್ಯ) ಈತನ ದೌಹಿತ್ರ. ದುರ್ವಿನೀತನು ಪಲ್ಲವಸಿಂಹವಿಷ್ಣು ಮತ್ತು ಪೂರ್ವ ಚಾಳುಕ್ಯ ವಂಶದ ಒಂದನೆಯ ವಿಷ್ಣುವರ್ಧನರ ಸಮಕಾಲೀನನೆಂದೂ ಭಾರವಿ ಇವನ ಆಸ್ಥಾನದಲ್ಲಿದ್ದನೆಂದೂ ಹೇಳಿಕೆಗಳಿವೆ. ದುರ್ವಿನೀತ ಅಂದರಿ, ಆಲತೂರಿ, ಪೆರುಬರೆ, ಪೆರ್ನಗರ ಮುಂತಾದೆಡೆಯಲ್ಲಿ ನಡೆದ ಯುದ್ಧಗಳಲ್ಲಿ ಶತ್ರುಗಳನ್ನು ನಿಗ್ರಹಿಸಿದನೆಂದು ಶಾಸನಗಳು ತಿಳಿಸುತ್ತವೆ. ವಿವರಗಳು ದೊರಕುವುದಿಲ್ಲ. (ಪಿ.ಕೆ.ಎನ್.)

ಜೈನ ವೈಯ್ಯಾಕರಣಿ ಪೂಜ್ಯಪಾದ ದುರ್ವಿನೀತನ ಗುರು ಎಂದು ಊಹೆ ಇದೆ. ದುರ್ವಿನೀತ ಶಬ್ದಾವತಾರ (ಪ್ರಾಯಶಃ ಪಾಣಿನಿಯ ಮೇಲಿನ ನ್ಯಾಸ ಗ್ರಂಥ). ಬೃಹತ್ಕಥೆ (ವಡ್ಡಕಥೆಯ ಸಂಸ್ಕೃತರೂಪ) ಇವುಗಳನ್ನಲ್ಲದೆ, ಭಾರವಿಯ ಕಿರಾತಾರ್ಜುನೀಯದ ಹದಿನೈದು (ಅಥವಾ ಹದಿನೈದನೆಯ) ಸರ್ಗಗಳ ಟೀಕಾಕಾರನೆಂದು ಶಾಸನಗಳು ತಿಳಿಸುತ್ತವೆ. ಶಾಸನಗಳಲ್ಲಿ ಈತನನ್ನು ಅನೇಕ ಕಾವ್ಯ ಕಥಾ ನಾಟಕ ಪ್ರಣಯನ ಪ್ರರೂಢ ಪಾಟವ ಎಂದು ಕರೆಯಲಾಗಿದೆ. ವಡ್ಡಕಥಾ ಕೃತಿಯನ್ನು ವಡ್ಡಕಥೆ ಎಂಬ ಹೆಸರಿನಲ್ಲಿ ಈತ ಕನ್ನಡದಲ್ಲಿ ಬರೆದಿರಬಹುದು ಎಂದು ಕೆಲವು ವಿದ್ವಾಂಸರು ಊಹಿಸುತ್ತಾರೆ. ಕವಿರಾಜಮಾರ್ಗಕಾರ ತನಗಿಂತ ಹಿಂದೆ ಇದ್ದ ಕನ್ನಡಗದ್ಯಕವಿಗಳ ಸಾಲಿನಲ್ಲಿ ಈತನನ್ನು ಹೆಸರಿಸಿರುವುದರಿಂದ ಈತ ಗದ್ಯ ಸಾಹಿತ್ಯಕ್ಷೇತ್ರದಲ್ಲಿ ಪ್ರತಿಭಾವಂತನಾಗಿರಬೇಕು. ಹಳಗನ್ನಡ ಚಂಪೂಕಾವ್ಯಗಳ ಮೇಲೆ ಕಿರಾತಾರ್ಜುನೀಯದ ಪ್ರಭಾವ ಬಿದ್ದಿರುವುದಕ್ಕೆ ಈತನೇ ಕಾರಣನೆಂದೂ ಕನ್ನಡ ವ್ಯಾಕರಣಮಾರ್ಗಕ್ಕೂ ಇವನೇ ಕಾರಣನೆಂದೂ ಊಹಿಸಬಹುದಾಗಿದೆ. ಒಟ್ಟಿನಲ್ಲಿ ಕನ್ನಡ ಸಾಹಿತ್ಯದ ತಳಪಾಯವನ್ನು ರಚಿಸಿದವರಲ್ಲಿ ಈತನ ಹೆಸರು ಶಾಶ್ವತವಾಗಿ ನಿಲ್ಲುತ್ತದೆ. (ಕೆ.ಪಿ.ಆರ್.ಜಿ.)

**ದೃಷ್ಟಿ ತೆಗೆಯುವುದು :** ಜನಪದ ನಂಬಿಕೆಗಳಲ್ಲಿ ಒಂದು. ಜನರ ಕೆಟ್ಟ ಕಣ್ಣಿನಿಂದ ಉಂಟಾಗುವ ಹಾನಿಗಳಿಗೆ ಪರಿಹಾರಗಳನ್ನು ಮಾಡುವುದಕ್ಕೆ ಈ ಹೆಸರಿದೆ. ಕೆಲವು ಜನರಿಗೆ ಹುಟ್ಟಿನಿಂದಲೇ ಕೆಟ್ಟಕಣ್ಣು ಇರುತ್ತದೆ. ಮತ್ತೆ ಕೆಲವರಿಗೆ ಅತಿಯಾದ ಅಸೂಯೆ ಮತ್ತು ಕೋಪದಿಂದ ಕೆಟ್ಟಕಣ್ಣಿನ ಶಕ್ತಿ ಉಂಟಾಗುತ್ತದೆ. ವಿಕಾರವಾಗಿರುವವರು ಅಂಗಹೀನರಾಗಿರುವವರು ಮೊದಲಾದ ಜನಗಳಲ್ಲಿ ಕೆಟ್ಟ ಕಣ್ಣಿನ ಶಕ್ತಿ ಉಂಟು; ಅಂಥವರ ನೋಟ ಹಾನಿಕಾರಕವಾದುದು. ಆ ಜನಗಳ ದೃಷ್ಟಿ ಬಿದ್ದರೆ ಊಟ ಮಾಡುತ್ತಿರುವ ವ್ಯಕ್ತಿಗಳಿಗೆ, ಎಳೆಯ ಮಕ್ಕಳಿಗೆ, ಬಸಂಥಿಯನಿಗೆ, ಬಾಣಂತಿಯರಿಗೆ ವಾಂತಿಯಾಗುತ್ತದೆ. ಊಟ ಸೇರುವುದಿಲ್ಲ. ಹೊಟ್ಟೆನೋವು ಬರುತ್ತದೆ. ಹಾಲು ಕೊಡುತ್ತಿರುವ ಹಸುಗಳ, ಎಮ್ಮೆಗಳ ಕೆಚ್ಚಲಿನ ಮೇಲೆ ದೃಷ್ಟಿ ಬಿದ್ದರೆ ಹಾಲಿನ ಬದಲು ರಕ್ತವನ್ನು ಕರೆಯಬೇಕಾದ ಪರಿಸ್ಥಿತಿ ಬರುತ್ತದೆ. ಹಾಲುಕ ಕಾಸಿದರೆ ದುರ್ವಾಸನೆ ಉಂಟಾಗುತ್ತದೆ. ಕೆಟ್ಟ ಕಣ್ಣಿನ ಪ್ರಭಾವ ಜೀವಂತ ವಸ್ತುಗಳ ಮೇಲೆ ಮಾತ್ರವಲ್ಲದೆ ನಿರ್ಜೀವವಾದ ವಸ್ತುಗಳ ಮೇಲೆಯೂ ಉಂಟಾಗುತ್ತದೆ. ಮನುಷ್ಯರಲ್ಲಿ ಮಾತ್ರವಲ್ಲದೆ ಕೆಲವು ಪ್ರಾಣಿಗಳಲ್ಲಿಯೂ ಕೆಟ್ಟಕಣ್ಣಿನ ಪ್ರಭಾವ ಇರುತ್ತದೆ ಎಂಬ ನಂಬಿಕೆಯೂ ಇದೆ. ಈ ರೀತಿಯ ಅನೇಕ ನಂಬಿಕೆಗಳಿಂದ ಕೆಟ್ಟ ಕಣ್ಣಿನಿಂದ ಉಂಟಾಗುವ ದೃಷ್ಟಿದೋಷಕ್ಕೆ ಜನ ವಿಶೇಷವಾಗಿ ಹೆದರುತ್ತಾರೆ.

ದೃಷ್ಟಿದೋಷವಾದಾಗ ಉರಿಯುತ್ತಿರುವ ಹಂಚಿಕಡ್ಡಿಗಳನ್ನು ನಿವಾಳಿಸಿ ಅದರ ಕಪ್ಪನ್ನು ಹಣೆಗೆ ಇಡುವುದು ; ಕೆಟ್ಟಕಣ್ಣು ಹಾಕಿದವರು ಹಾಳಾಗಲಿ ಎಂದು ಲಟಿಗೆ ಮುರಿಯುವುದು ; ಉಪ್ಪು ಮೆಣಸಿನಕಾಯಿ ಎರಡನ್ನೂ ನಿವಾಳಿಸಿ ಒಲೆಗೆ ಹಾಕುವುದು ; ಸಕ್ಕರೆಯನ್ನು ಮಂತ್ರಿಸಿ ತಿನ್ನಲು ಕೊಡುವುದು ; ಕೆಟ್ಟ ಕಣ್ಣುಳ್ಳವರು ಹೋದ ಜಾಗದಲ್ಲಿ ಮೂರು ಸಲ ಉಗುಳುವುದು ; ಕಾಲುರಂಜು ಹಾಕುವುದು ; ಕೆಂಡದ ರಂಜು ಹಾಕುವುದು - ಈ ರೀತಿಯ ಪರಿಹಾರಗಳು ಬಳಕೆಯಲ್ಲಿವೆ. ಹಂಚಿಕಡ್ಡಿಗಳನ್ನು ಉರಿಸುವಾಗ ಅವು ಹೆಚ್ಚು ಚಟಚಟ ಎಂದು ಸದ್ದುಮಾಡುವುದು; ಉಪ್ಪು ಮೆಣಸಿನ ಕಾಯನ್ನು ಒಲೆಗೆ ಹಾಕಿದಾಗ ಮೆಣಸಿನ ಕಾಯಿಯ ಘಾಟು ಕಾಣದೆ ಇರುವುದು ; ಕಾಲುರಂಜು ಕೆಂಡದ ರಂಜು ಅತಿ ಕೆಂಪಾಗಿ ಕಾಣುವುದು - ಇವೆಲ್ಲ ದೃಷ್ಟಿ ದೋಷ ಆಗಿದೆ ಎಂಬುವುದಕ್ಕೆ ರುಜುವಾತು ಎಂದು ಭಾವಿಸುತ್ತಾರೆ. ಮನೆಗಳಿಗೆ, ಬೆಳೆಗಳಿಗೆ ದೃಷ್ಟಿದೋಷ ತಾಗದಿರಲೆಂಬ ಉದ್ದೇಶದಿಂದ ತೆಂಗಿನಕಾಯಿ ಕಟ್ಟುವುದು, ಕುಂಬಳಕಾಯಿ ಕಟ್ಟುವುದು, ಬೆಚ್ಚು ಕಟ್ಟುವುದು ಒಂದು ಕೋಲಿಗೆ ಮನುಷ್ಯನ ಬಟ್ಟೆಗಳನ್ನು ತಗುಲು ಹಾಕಿ ಮೇಲ್ಭಾಗದಲ್ಲಿ ಸುಣ್ಣ ಬಳಿದ ಮಡಕೆಯನ್ನು ನೇತುಹಾಕಿ ಅದನ್ನು ಮನೆಯ ಮೇಲುಭಾಗಕ್ಕೆ ಕಟ್ಟುವುದು ಮೊದಲಾದ ಕ್ರಮಗಳೂ ಉಂಟು.

ದೃಷ್ಟಿದೋಷಕ್ಕೆ ಸಂಬಂಧಿಸಿದ ಈ ರೀತಿಯ ನಂಬಿಕೆಗಳು ಮತ್ತು ದೃಷ್ಟಿತೆಗೆಯುವ ಪರಿಹಾರಗಳು ಕರ್ನಾಟಕ ಹಾಗೂ ಭಾರತದಲ್ಲಿ ಮಾತ್ರವಲ್ಲ, ಪ್ರಪಂಚದ ಎಲ್ಲ ದೇಶಗಳಲ್ಲಿಯೂ ಬಹಳ ಹಿಂದಿನಿಂದಲೂ ಬಳಕೆಯಲ್ಲಿವೆ. ಪ್ರದೇಶದಿಂದ ಪ್ರದೇಶಕ್ಕೆ ಇವುಗಳಲ್ಲಿ ಪ್ರಾದೇಶಿಕ ವೈಶಿಷ್ಟ್ಯಗಳನ್ನು ಕಾಣಬಹುದೇ ಹೊರತು ಮೂಲತಃ ಕೆಟ್ಟ ಕಣ್ಣಿನಿಂದ ದೃಷ್ಟಿದೋಷ ಉಂಟಾಗುತ್ತದೆಂಬ ನಂಬಿಕೆ ಮಾತ್ರ ಸಾರ್ವತ್ರಿಕ.

ಮನುಷ್ಯನ ಮನಸ್ಸು ಇಂದ್ರಿಯಗಳ ಸಹಾಯವಿಲ್ಲದೆ ವಸ್ತುಗಳ ಮೇಲೆ ತನ್ನ ಪ್ರಭಾವ ಬೀರುತ್ತದೆ ಎಂಬ ಅಂಶವೇ ದೃಷ್ಟಿದೋಷಕ್ಕೆ ಆಧಾರವಾಗಿರುವ ನಂಬಿಕೆ. ಇದನ್ನು ವಿಜ್ಞಾನಿಗಳು ಈ ವರೆಗೆ ಒಪ್ಪುತ್ತಿರಲಿಲ್ಲ. ಆದರೆ ಇತ್ತೀಚೆಗೆ ಪರಾಮನೋವಿಜ್ಞಾನದ ಪ್ರಕಾರ ಮಾನವನಲ್ಲಿ ಅತೀಂದ್ರಿಯ ದರ್ಶನ ಶಕ್ತಿ ಮತ್ತು ಮನಃಚಲನಶಕ್ತಿ ಎಂಬ ಶಕ್ತಿಗಳಿವೆಯೆಂದು ತಿಳಿದುಬಂದಿದೆ. ಕೆಟ್ಟ ಕಣ್ಣಿನ ಪ್ರಭಾವ ಮನಃ

ಚಲನಶಕ್ತಿಯ ಒಂದು ಬಗೆ. ಆದ್ದರಿಂದ ದೃಷ್ಟಿದೋಷ ಸಂಪೂರ್ಣವಾಗಿ ಮೂಢನಂಬಿಕೆ ಅಲ್ಲ ಎನಿಸುತ್ತದೆ.

ದೃಷ್ಟಿದೋಷಕ್ಕೆ ಸಂಬಂಧಿಸಿದ ಪರಿಹಾರಗಳಿಂದ ಮಾನಸಿಕವಾಗಿ ಒಂದು ಬಗೆಯ ಸಮಾಧಾನ ದೊರೆತು ಆ ಮೂಲಕ ಸ್ವಲ್ಪಮಟ್ಟಿಗೆ ಕೆಟ್ಟ ಕಣ್ಣಿನ ಪ್ರಭಾವ ಕಡಿಮೆಯಾಗಬಹುದು. ಈ ದೃಷ್ಟಿಯಿಂದ ಮಾಟ ಮಂತ್ರ ಗಳಿಸಿರುವ ಪ್ರಾಮುಖ್ಯ ಇದಕ್ಕೂ ಇದೆ.

*

**ದೆವ್ವ :** ಮಾನವ ಬಹು ಹಿಂದಿನಿಂದಲೂ ದೇವರ ಅಸ್ತಿತ್ವದಲ್ಲಿ ನಂಬಿಕೆಯಿಟ್ಟಿರುವಂತೆ ಕೆಲವು ಅತಿಮಾನುಷ ಶಕ್ತಿಗಳ ಅಸ್ತಿತ್ವದಲ್ಲಿಯೂ ಬಲವಾದ ನಂಬಿಕೆಯನ್ನಿಟ್ಟುಕೊಂಡು ಬಂದಿದ್ದಾನೆ. ಭೂತ, ಕಾತ, ಪ್ರೇತ, ಪೀಡೆ, ಪಿಶಾಚಿ, ಜಟಿಗಾ, ರಣ, ಮುನಿ, ಮೋಹಿನಿ, ರಾಕ್ಷಸ ಮುಂತಾದುವುಗಳು ಅವನ ಬದುಕಿನ ಮೇಲೆ ತಮ್ಮ ಪ್ರಭಾವವನ್ನು ಬೀರಿವೆ. ಇಂಥ ಅತಿಮಾನುಷ ಶಕ್ತಿಗಳ ಕಲ್ಪನೆಗೆ ಹಲವು ಕಾರಣಗಳಿರಬಹುದಾದರೂ ಅವುಗಳಲ್ಲಿ ಮುಖ್ಯವಾದದ್ದು ಆತ್ಮದ ಕಲ್ಪನೆ. ಮಾನವ ಹುಟ್ಟುವುದಕ್ಕೆ ಮುಂಚೆ ಎಲ್ಲಿದ್ದ, ಹೇಗಿದ್ದ, ಅವನು ಸತ್ತ ಮೇಲಿನ ವೃತ್ತಾಂತಗಳೇನು ಎಂಬ ಹುಟ್ಟಿನ ಹಿಂದಿನ, ಸಾವಿನ ಮುಂದಿನ ರಹಸ್ಯಗಳನ್ನು ಕಂಡು ಕೊಳ್ಳುವ ಪ್ರಯತ್ನದಿಂದಾಗಿ ಆತ್ಮದ ಕಲ್ಪನೆ ಹುಟ್ಟಿಕೊಂಡಿರಬೇಕು. ಈ ಆತ್ಮ ದೇಹವನ್ನು ತೊರೆದಮೇಲೆನಾಗುತ್ತದೆ. ಎಲ್ಲಿಗೆ ಹೋಗುತ್ತದೆ ಎನ್ನುವ ಒಗಟುಗಳೇ ಸ್ವರ್ಗನರಕಗಳ ಕಲ್ಪನೆಗೂ ಕಾರಣವಾಗಿರಬೇಕು. ಆಯುಸ್ಸು ತುಂಬಿ ಸತ್ತವರು ಸ್ವರ್ಗಕ್ಕೊ ನರಕಕ್ಕೋ ಹೋಗುತ್ತಾರೆಂದು ನಂಬಿಕೊಂಡಿದ್ದರಿಂದ ಇಲ್ಲಿ ಸಮಸ್ಯೆ ಗಹನವಾಗಲಿಲ್ಲ. ಆದರೆ ರುದ್ರ ಭೀಕರವಾಗಿ ಅಮಾನುಷ ರೀತಿಯಲ್ಲಿ ಆಕಾಲ ಮರಣಕ್ಕೆ ತುತ್ತಾದವರ ಆತ್ಮದ ಬಗ್ಗೆ ಸಾಮಾನ್ಯರು ವಿಶೇಷವನ್ನು ತಲೆಗೆ ಹಚ್ಚಿಕೊಂಡಂತೆ ಕಾಣುತ್ತದೆ. ಇಂಥ ಕಾರಣವೊಂದಾದರೆ ಪ್ರಕೃತಿಯಲ್ಲಿ ಜರುಗುವ ಭಯಾನಕ ಘಟನೆಗಳಿಗೆಲ್ಲ ಆದಿ ಮಾನವ ಉತ್ತರ ಕಂಡುಕೊಳ್ಳಲು ವಿಫಲವಾದಾಗ ಅವೆಲ್ಲವೂ ಅಮಾನುಷ ಶಕ್ತಿಗಳ ಕೈವಾಡವೆಂದು ಭಾವಿಸಿದ್ದು ಇನ್ನೊಂದು ಕಾರಣ. ತನ್ನವರೊಡನೆ ದಟ್ಟ ಕಾಡಿನಲ್ಲಿ ಬರುತ್ತಿರುವಾಗ ದಾರಿ ತಪ್ಪಿಸಿಕೊಂಡ ಆದಿವಾಸಿ ಕೋಡಗಲ್ಲುಗಳ ಮೇಲೆ ನಿಂತು ತನ್ನವರನ್ನು ಕೂಗಿ ಕರೆದಾಗ ಗಿರಿಗಹ್ವರಗಳಿಂದ ಬಂದ ಪ್ರತಿಧ್ವನಿಗಳು ಅವನ ಎದೆ ನಡುಗುವಂತೆ ಮಾಡಿರಬಹುದು. ದೈತ್ಯಾಕಾರದಲ್ಲಿ ಬೆಳೆದ ಹೆಮ್ಮರಗಳ ಕೆಳಗೆ ನಿಂತು ಅವನು ಆಲಿಸಿರಬಹುದಾದ ವಿಚಿತ್ರ ಸದ್ದುಗಳು ಅವನನ್ನು ಭಯಗೊಳಿಸಿರಬಹುದು. ಗುವ್ ಎನ್ನುವ ಕತ್ತಲೆಯಲ್ಲಿ ಬರುವಾಗ ಅವನ ಮಾನಸಿಕ ಶೈಶವಸ್ಥಿತಿ ಚಿತ್ರವಿಚಿತ್ರವಾದ ಆಕಾರಗಳನ್ನು ಸೃಷ್ಟಿಸಿಕೊಂಡು ತತ್ತರಿಸಿ ಹೋಗಿರಬಹುದು. ಕಗ್ಗಾಡಿನ ನಡುವೆ ಯಾವುದೋ ಅಪರಿಚಿತ ಪ್ರಾಣಿಯ ಕೂಗು ಭಯವಿಹ್ವಲನಾಗುವಂತೆ ಮಾಡಿರಬಹುದು. ಕಗ್ಗತ್ತಲಿನಲ್ಲಿ ಕೋರೈಸುವ ಕಣ್ಣುಗಳ ಪ್ರಾಣಿಗಳು ಮರದಿಂದ ಮರಕ್ಕೆ ಜಿಗಿಯುತ್ತ ಮರೆಯಾದುದನ್ನು ಕಂಡು ಆತ ಬೆದರಿ ಹೋಗಿರಬಹುದು. ಅಮಾನುಷ ರೀತಿಯಲ್ಲಿ ಕೊಲೆಗೀಡಾದ ವ್ಯಕ್ತಿಯ ರೂಪವೇ ಭ್ರಮೆಯಿಂದ ಅವನ ಕನಸು ಮನಸುಗಳಲ್ಲಿ ಮತ್ತೆ ಮತ್ತೆ ಗೋಚರಿಸಿ ದಿಗ್ಭ್ರಮೆಗೊಳಿಸಿರಬಹುದು. ಇಂಥ ಹಲವಾರು ಘಟನೆಗಳು ಆದಿವಾಸಿಯನ್ನು ದಿಕ್ಕುತಪ್ಪಿಸಿ ಹೃದಯವನ್ನು ಅತಿಕ್ರಮಿಸಿ ಪೀಡಿಸಿರಬಹುದು. ಹಾಗೆಯೇ ಅತಿಮಾನುಷ ಶಕ್ತಿಗಳ ಕಲ್ಪನೆಗೆ ದಾರಿ ಮಾಡಿಕೊಟ್ಟಿರಬಹುದು.

ವೈಜ್ಞಾನಿಕವಾಗಿ ಈ ಅತಿಮಾನುಷ ಶಕ್ತಿಗಳನ್ನು ಕುರಿತು ವಿಚಾರ ಮಾಡಿದರೆ ಇಂಥ ಕಲ್ಪನೆಗಳು ಬಾಲಿಶವಾದದೆಂದು ತೋರುತ್ತವೆ. ಇಂಥ ಶಕ್ತಿಗಳನ್ನು ಬಲವಾಗಿ ನಂಬಿ ಅತಿಯಾಗಿ ತಲೆ ಹಚ್ಚಿಕಂಡಿರುವವರ ಬಗೆಗೆ ನಗೆ ಬರಬಹುದು ಇಲ್ಲವೆ ಮರುಕ ಹುಟ್ಟಬಹುದು. ಆದರೆ ವಿಜ್ಞಾನ ಬಹಳಷ್ಟು ಆಗೋಚರ ಶಕ್ತಿಗಳಿಂದ ಸಂಭವಿಸಿದ ಘಟನೆಗಳಿಗೆ ವಿವರಣೆ ಕೊಡುವಲ್ಲಿ ಕೆಲವೊಮ್ಮೆ ಸೋತಿರುವುದರಿಂದ ನಾಗರಿಕ ಜನಾಂಗಗಳಲ್ಲೂ ದಟ್ಟವಾಗಿಯಲ್ಲದಿದ್ದರೂ ದೆವ್ವ ಮುಂತಾದ ಅತಿಮಾನುಷ ಶಕ್ತಿಗಳ ಬಗ್ಗೆ ನಂಬಿಕೆ ಉಳಿದಿದೆ. ಅಷ್ಟು ಮಾತ್ರವೇಕೆ ಪರಾಮನೋವಿಜ್ಞಾನ ಅತಿಮಾನುಷ ಶಕ್ತಿಗಳನ್ನು ಒಪ್ಪಿಕೊಂಡಿದೆ. ಹೀಗಾಗಿ ಜಗತ್ತಿನ ಎಲ್ಲ ಜನಾಂಗಗಳಲ್ಲೂ ದೆವ್ವಗಳ ಅಸ್ತಿತ್ವದ ಬಗ್ಗೆ ನಂಬಿಕೆ ಉಳಿದುಬಂದಿದೆ.

ದೆವ್ವಗಳಾಗಲು ಕಾರಣಗಳು ಮನುಷ್ಯನಿಗೆ ಮೂರು ಜೀವಗಳಿವೆಯೆಂದು ನಂಬಲಾಗಿದೆ ಮೇವುಜೀವ, ಬೆದರುಜೀವ ರಕ್ತಜೀವ, ಮೇವುಜೀವ ಇಹಪರಗಳೆರಡರ ನಂಟನ್ನೂ ಪೂರ್ಣವಾಗಿ ಪಡೆದಿರುವಂಥದು. ಇದಕ್ಕೆ ತಾನು ಮಾಡಿದ ಧರ್ಮಕರ್ಮ ಪಾಪಪುಣ್ಯಗಳೆಲ್ಲಕ್ಕೂ ಯಮಲೋಕದಲ್ಲಿ ವಿಚಾರಣೆ ನಡೆದು ಸ್ವರ್ಗ ನಕರ ಅಥವಾ ಪುನರ್ಜನ್ಮ ಪ್ರಾಪ್ತಿಯಾಗುತ್ತದೆ. ಬೆದರು ಜೀವ ಸುಖದುಃಖ ನೋವು ನಲಿವು ಆಶೆಆಕಾಂಕ್ಷೆ. ಹೆದರಿಕೆ ಬೆದರಿಕೆಗಳಲ್ಲಕ್ಕೂ ಕಾರಣವಾದದ್ದು ಮಾನವನ ಎಲ್ಲ ಕ್ರಿಯೆಗಳಿಗೂ ಇದೇ ಕಾರಣ. ಇದರ ಪ್ರೇರಣೆಯಿಂದಾದ ಎಲ್ಲ ಕರ್ಮಗಳೂ ಮೇವು ಜೀವಕ್ಕೆ ಅಂಟುತ್ತವೆ. ರಕ್ತ ಜೀವ ಸಂಪೂರ್ಣವಾಗಿ ಇಹಲೋಹಕ್ಕೆ ಸಂಬಂಧಿಸಿದ್ದು. ಮೇವು ಜೀವ ಬೆದರು ಜೀವಗಳು ಪರಲೋಕಕ್ಕೆ ಹೋಗಬೇಕಾದರೆ ರಕ್ತಜೀವ ಆಯುಸ್ಸು ಮುಗಿದಿರಬೇಕು. ಇಲ್ಲದಿದ್ದರೆ ಅವಕ್ಕೆ ಶಕ್ತಿಯೇ ಇಲ್ಲ. ಇದರ ಆಯುಸ್ಸು ವಿಧಿಬರಹವನ್ನು ಅವಲಂಬಿಸಿರುತ್ತವೆ. ಆಯುಸ್ಸು ಮುಗಿಯದಿದ್ದರೆ, ದೇಹ ಯಾವುದಾದರೂ ಕಾರಣದಿಂದ ನಾಶವಾದರೆ, ಆಶರೀರಿಯಾದ ಇದು ಉಳಿಯಲು ಆಶ್ರಯವಿಲ್ಲದೆ ಪರಲೋಕಕ್ಕೆ ದಾರಿಯಿಲ್ಲದೆ ಗಾಳಿ ಅಥವಾ ದೆವ್ವವಾಗುತ್ತದೆ. ರಕ್ತಜೀವ ನಾನನಾಕಾರಣಗಳಿಂದ ಪರಲೋಕದ ಪರವಾನಗಿಯನ್ನು ಕಳೆದುಕೊಂಡು ಇಹದಲ್ಲೇ ಉಳಿಯಬೇಕಾದ ಸಂದರ್ಭಗಳು ಒದಗಿಬರುತ್ತವೆ. ಸಾಯುವಾಗ ಬಾಯಿಗೆ ನೀರು ಬಿಡದಿದ್ದರೆ, ನೀರಿಗೆ ಬಿದ್ದು, ನೇಣುಹಾಕಿಕೊಂಡು, ವಿಷಕುಡಿದು, ಕೊಲೆಯಾಗಿ, ಬೆಂಕಿಯಲ್ಲಿ ಸುಟ್ಟು, ಅಪಘಾತಗಳಿಗೆ ಸಿಕ್ಕಿ ಅಥವಾ ಯಾವುದೇ ವಿಧವಾದ ಆಕಾಲ ಮರಣಕ್ಕೆ ತುತ್ತಾದರೂ ಅಂಥವರು ದೆವ್ವಗಳಾಗುತ್ತಾರೆ. ಅಲ್ಲದೆ ದುರಾಶೆಯುಳ್ಳವರು, ಕಳ್ಳರು, ಕೊಲೆಗಡುಕರು, ಕ್ರೂರಿಗಳು, ಕಾಮಿಗಳು, ಜಿಪುಣರು, ಅಸೂಯಾಪರರು. ಆಸಾತ್ತ್ವಿಕರು, ಸ್ತ್ರೀಹತ್ಯೆ, ಭ್ರೂಣಹತ್ಯೆ ಮಾಡಿದವರು. ದ್ರೋಹಿಗಳು ಮುಂತಾದವರೆಲ್ಲರೂ ದೆವ್ವವಾಗುವುದಾಗಿ ನಂಬಿಕೆ.

ಸತ್ತವರು ದೆವ್ವವಾಗಿದ್ದಾರೆಯೋ ಇಲ್ಲವೆ ಎಂಬುದನ್ನು ಅವರ ಸಮಾಧಿ ಪರೀಕ್ಷೆಯಿಂದ ಕಂಡುಕೊಳ್ಳುತ್ತಾರೆ. ಬಹಳ ದಿನಗಳಾದರೂ ಗುದ್ದು ತಗ್ಗದೆ ಉಬ್ಬಿಕೊಂಡೇ ಇದ್ದರೆ ಅವರು ದೆವ್ವವಾಗಿದ್ದಾರೆಂದು ಭಾವಿಸುತ್ತಾರೆ. ಸತ್ತವರು ದೆವ್ವಗಳಾಗಿ ತಮ್ಮ ಬಂಧುಬಳಗವನ್ನು ತೊರೆದು ಇರಲಾರದೆ ಶ್ಮಶಾನದಿಂದ ಹಿಂದಕ್ಕೆ ಬಂದು ಬಿಡುತ್ತವೆ. ಆದ್ದರಿಂದ ಶವವನ್ನು ಶ್ಮಶಾನಕ್ಕೊಯ್ಯುವಾಗ ಅದರ ಹಿಂದೆ ಎಳ್ಳು, ಸಾಸಿವೆ ರಾಗಿ, ಹುಚ್ಚೆಳ್ಳು, ಮುಂತಾದ ಧಾನ್ಯಗಳನ್ನು ಎರಚಿಕೊಂಡು ಹೋಗಬೇಕು. ಹೀಗೆ ಮಾಡುವುದರಿಂದ ಸತ್ತವನ ದೆವ್ವ ಆ ರಾತ್ರಿಯೇ ತನ್ನ ಮನೆಯನ್ನು ಸೇರಲು ಹೊರಟು ದಾರಿಯಲ್ಲಿ ಅಡ್ಡಲಾಗಿ ಸುರಿದಿರುವ ಧಾನ್ಯಗಳನ್ನು ತುಳಿಯದೆ ಆರಿಸಿಕೊಂಡು ಬರಬೇಕಾಗುತ್ತದೆ. ಆ ಧಾನ್ಯಗಳನ್ನೆಲ್ಲ ಆರಿಸುವ ಹೊತ್ತಿಗೆ ಬೆಳಕಾಗಿ ಅದಕ್ಕೆ ದಾರಿತಪ್ಪಿ ಹೋಗುತ್ತದೆ. ಶವಸಂಸ್ಕಾರ ಮಾಡಿ ಹಿಂದಿರುಗಿದ ಮೇಲೆ ಮನೆಯ ಒಂದು ಮೂಲೆಯಲ್ಲಿ ಅಷ್ಟಗಲ ಸಾರಿಸಿ ಒಂದು ಕೈಯೆಣ್ಣೆ ದೀಪ ಹಚ್ಚಿ ಒಂದು ಪಡಿ ಅಕ್ಕಿಯನ್ನು ತಲೆಸವರಿ ಮಡಗಿ ಒಂದು ಚೊಂಬು ನೀರಿಟ್ಟು ಗಂಧದಕಡ್ಡಿ ಬೆಳಗಿ ಅವುಗಳ ಮೇಲೆ ಒಂದು ಹೆಡಿಗೆ ಬೋರಲಿಡಬೇಕು. ಮಾರನೆಯ ದಿನ ಬೆಳಗ್ಗೆ ಹೆಡಿಗೆ ತೆಗೆದುನೋಡಿದಾಗ ಅಕ್ಕಿ ಹಾಗೂ ನೀರು ಕಡಿಮೆಯಾಗಿದ್ದರೆ ಸತ್ತವನಿಗೆ ಇನ್ನೂ ಆಯುಷ್ಯವಿತ್ತೆಂದು ಅವನು ದೆವ್ವವಾಗುವ ಸಂಭವ ಉಂಟೆಂದು ಅರ್ಥ.

**ದೆವ್ವದ ಬಗೆಗಳು :** ಹೆರಿಗೆ ಸಮಯದಲ್ಲೊ ಮೂರು ವರ್ಷ ತುಂಬುವುದಕ್ಕೆ ಮೊದಲೊ ಮಕ್ಕಳು ಸತ್ತರೆ ಪೀಡೆ ಎಂಬ ದೆವ್ವಗಳಾಗುತ್ತವೆ. ಕೊಲೆಯಿಂದ ಸತ್ತವರು ಕಾತ ಎಂಬ ದೆವ್ವವಾಗುತ್ತಾರೆ. ಬೆಂಕಿಯಲ್ಲಿ ಸುಟ್ಟು ಹೋದವರು ಭೂತ ಎಂಬ ದೆವ್ವವಾಗುತ್ತಾರೆ. ನೀರಿನಲ್ಲಿ ಸತ್ತವರು ಪ್ರೇತ ಎಂಬ ದೆವ್ವವಾಗುತ್ತಾರೆ. ಹಣದ ವಿಚಾರದಲ್ಲಿ ದುರಾಶೆಯಿಟ್ಟುಕೊಂಡು ಸತ್ತವರು ರಣ ಎಂಬ ದೆವ್ವವಾಗುತ್ತಆರೆ.

ಹೋರಾಟದಲ್ಲಿ ಸತ್ತ ವೀರರು ಜಟಿಯಾಗಾ ಎಂಬ ದೆವ್ವವಾಗಾತ್ತಾರೆ. ಸತ್ತ ಗರ್ಭಿಣಿಯರು ಗಾಳಿ ಎಂಬ ದೆವ್ವವಾಗುತ್ತಾರೆ. ನೇಣು ಹಾಕಿಕಂಡು ಸತ್ತವರು ಗರಾವು ಎಂಬ ದೆವ್ವವಾಗುತ್ತಾರೆ. ಅಕಾಲ ಮರಣಕ್ಕೆ ತುತ್ತಾದ ಬಾಣಂತಿ ಬನ್ನಿ ಎಂಬ ದ್ವ್ವವಾಗುತ್ತಾಳೆ. ಪ್ರಾಯದ ಹುಡುಗಿ ಅಕಾಲ ಮರಣಕ್ಕೆ ತುತ್ತಾದರೆ ಮೋಹಿನಿ ಎಂಬ ದೆವ್ವವಾಗುತ್ತಾಳೆ. ಬ್ರಾಹ್ಮಣರ ದೆವ್ವಗಳನ್ನು ಪಿಶಾಚಿ ಅಥವಾ ಬ್ರಹ್ಮ ಪಿಶಾಚಿ ಎಂದು ಕರೆಯುತ್ತಾರೆ. ಶಾಪಗ್ರಸ್ತ ದೇವತೆಗಳು ಭೂಲೋಕದಲ್ಲಿ ಬೇತಾಳಗಳಾಗಿ ಜನ್ಮವೆತ್ತುತ್ತಾರೆ. ಹೀಗಿರುವ ನಾನಾ ಬಗೆಯ ದೆವ್ವಗಳಿಗೆ ಅಧಿಪತಿ ಮುನೀಶ್ವರ. ಮುನೀಶ್ವರನನ್ನು ಕೆಲವು ಕಡೆ ಬೇತಾಳ ಭೂತನಾಥ ಎಂದೂ ಕರೆಯುತ್ತಾರೆ.

**ದೆವ್ವಗಳ ಅಧಿಪತಿ :** ದೆವ್ವಗಳ ಅಧಿಪತಿಯಾದ ಮುನೀಶ್ವರರನ್ನು ಈಶ್ವರನ ಅಂಶವೆಂದು ಹೇಳುತ್ತಾರೆ. ಅವನ ಆಕಾರ ರುದ್ರ ಭೀಕರವಾಗಿರುತ್ತದೆ. ಅವನಿಗೆ ಮೂರು ಕಣ್ಣುಗಳಿವೆ. ನೀಲವಾದ ಜಟೆಯಿದೆ. ಎಡದ ಕಾಲಿಗೆ ಏಳವಾದಿ ಜಂಗು, ಬಲದ ಕಾಲಿಗೆ ಭಾಪುರಿ ಜಂಗುಗಳನ್ನು ಆತ ಧರಿಸಿರುತ್ತಾನೆ. ಕೈಯಲ್ಲಿ ತ್ರಿಶೂಲವಿರುತ್ತದೆ. ಅಮವಾಸ್ಯೆಯ ರಾತ್ರಿಯಲ್ಲಿ ಅವನು ತಾನು ವಾಸವಿದ್ದ ಮರದಿಂದ ಮತ್ತೊಂದು ಮರಕ್ಕೆ ಪ್ರಯಾಣ ಮಾಡುತ್ತಾನೆ. ಅವನನ್ನು ಎಲ್ಲ ದೆವ್ವಗಳು ಪಲ್ಲಕ್ಕಿಯಲ್ಲಿ ಹೊತ್ತು ಕೊಳ್ಳಿಗಳನ್ನು ಹಿಡಿದು ಕುಣಿಯುತ್ತಾ ಸಾಗಿಸುತ್ತವೆ. ಮುನಿದೆವ್ವ ಹಗಲಿನಲ್ಲಿ ಸುಂಟರಗಾಳಿ ರೂಪದಲ್ಲಿ ಪ್ರಯಾಣ ಮಾಡುತ್ತಾನೆ. ಈ ಮುನಿ ರಾತ್ರಿಯಲ್ಲಿ ಉರಿಯುವ ಪತ್ತು ಮದ್ದಳೆ ತಾಳ ಮೇಳಗಳಿಂದ ವೈಭವದ ಮೆರವಣಿಗೆ ಹೊರಡುವುದನ್ನು ಕೆಲವರು ಕಂಡಿರುವೆವೆಂದು ಹೇಳುತ್ತಾರೆ. ಮುನಿಯ ಹೆಂಡತಿ ಚೌಡಿ, ಪ್ರತಿವರ್ಷವೂ ಹೊಲ ಗದ್ದೆಗಳ ಬಳಿಯಲ್ಲಿ ಇವರಿಬ್ಬರಿಗೂ ಶಾಂತಿ ಮಾಡುವ ಸಂಪ್ರದಾಯ ಉಳಿದು ಬಂದಿದೆ.

**ದೆವ್ವಗಳ ಆಕಾರ :** ದೆವ್ವಗಳು ಅಶರೀರಗಳಾದ್ದರಿಂದ ಅವನ್ನು ಸಾಮಾನ್ಯವಾಗಿ ಗಾಳಿಗಳೆಂದು ಕರೆಯುತ್ತಾರೆ. ಅಲ್ಲದೆ ಅವು ನೆರಳುಗಳ ರೂಪದಲ್ಲಿ ಸಂಚರಿಸುತ್ತವೆಯೆಂದೂ ಹೇಳುತ್ತಾರೆ. ಆದರೆ ಅವು ಇಷ್ಟಬಂದ ರೂಪಗಳಲ್ಲಿ ಕಾಣಿಸಿಕೊಳ್ಳಬಲ್ಲವು. ಹೀಗಾಗಿ ದೆವ್ವಗಳ ಆಕಾರ ಇದೇ ಸರಿ ಎಂದು ಹೇಳಲಾಗದಿದ್ದರೂ ಸಾಮಾನ್ಯವಾಗಿ ದೆವ್ವ ಎಂದರೆ ಹೇಗಿರುತ್ತದೆ ಎಂಬ ಒಂದು ಕಲ್ಪನೆಯಿದೆ. ದೆವ್ವಗಳು ಕಪ್ಪಗಿರುತ್ತವೆ. ತಲೆಯನ್ನು ಕೆದರಿಕೊಂಡಿರುತ್ತವೆ. ನೆರಳುಗಳಂತೆ ಓಡಾಡುತ್ತವೆ. ನೆಲದ ಮೇಲೆ ಕಾಲೂರಿರುವುದಿಲ್ಲ. ಕಾಲಿನ ಹಿಮ್ಮಡಿ ಮುಂದಾಗಿಯೂ ಬೆರಳುಗಳು ಬೆನ್ನಕಡೆಗೂ ಇರುತ್ತವೆ. ಯಾವಾಗಲೂ ಕಣ್ಣುಗಳನ್ನು ಮೆಡ್ಡರಿಸಿಕೊಂಡಿರುತ್ತವೆ. ಅವಕ್ಕೆ ಕೋರೆಹಲ್ಲುಗಳುಂಟು. ವಿವಿಧ ಪ್ರಾಣಿಗಳ ರೂಪದಲ್ಲೂ ಅವು ಕಾಣಿಸಿಕೊಳ್ಳುತ್ತವೆ. ನಡೆಯುವಾಗ ಕಟ್ ಕಟ್ ಎಂಬ ಶಬ್ದವಾಗುತ್ತದೆ. ಈ ಮುಂತಾಗಿ ದೆವ್ವಗಳ ಆಕಾರವನ್ನು ಕಲ್ಪಿಸಲಾಗಿದೆ.

**ಆಹಾರ ವಿಹಾರಗಳು :** ದೆವ್ವಗಳ ಆಹಾರಗಳೆಲ್ಲ ಸಾಮಾನ್ಯವಾಗಿ ಹೊಲಸು, ಅವು ಮಲಮೂತ್ರವನ್ನು ಸೇವಿಸುವುದಾಗಿ ಹೇಳುತ್ತಾರೆ. ಕೋಳಿ, ಕುರಿ, ದನ, ಕರು, ಕೋಣ, ಮನುಷ್ಯ ಮುಂತಾದವುಗಳ ರಕ್ತಮಾಂಸಗಳಿಂದ ಅವು ತೃಪ್ತಿಗೊಳ್ಳುತ್ತವೆ. ಹಂದಿಯ ಮಾಂಸವೆಂದರೆ ಅವಕ್ಕೆ ಅಪ್ಯಾಯಮಾನವಂತೆ, ಇವಲ್ಲದೆ ಉಳಿದ ತಿಂಡಿತಿನಿಸುಗಳೂ ಅವಕ್ಕೆ ಒಗ್ಗುತ್ತವೆ. ಆದರೆ ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದ ಯಾವುದೇ ಪವಿತ್ರ ವಸ್ತುವೂ ಅವಕ್ಕೆ ಸೇರುವುದಿಲ್ಲ. ಅದನ್ನು ಕಂಡರೆ ಅವಕ್ಕೆ ಭಯ, ಕೊಳಚೆನೀರು, ರಕ್ತ, ಹೆಂಡ ಹಾಗೂ ಮೂತ್ರಗಳೇ ಅವುಗಳ ಪಾನೀಯಗಳು, ಸಿಹಿಪದಾರ್ಥಗಳಲ್ಲಿ ಬೆಲ್ಲವೆಂದರೆ ಅವಕ್ಕೆ ಅಚ್ಚುಮೆಚ್ಚು. ಆದ್ದರಿಂದ ಅವು ಅಲೆಮನೆಯನ್ನು ಸೇರಿ ಬಿಡುತ್ತವೆ. ಅವುಗಳು ಬೆಲ್ಲ ಹದವಾಗದಂತೆ ಕೆಡಿಸುತ್ತವೆ. ಆದ್ದರಿಂದ ಅವು ಅಲೆಮನೆಯನ್ನು ಪ್ರವೇಶಿಸದಂತೆ ಮೊದಲೇ ಪ್ರಾಣಿ ಬಲಿಕೊಡುವ ರೂಢಿಯುಂಟು.

ಹಗಲು ದೆವ್ವಗಳ ಪಾಲಿಗೆ ಶತ್ರು. ಬೆಳಕೆಂದರೆ ಅವು ತತ್ತರಿಸಿಹೋಗುತ್ತವೆ. ಆದರೂ ಮಧ್ಯಾಹ್ನ ಹಾಗೂ ನಡುರಾತ್ರಿಗಳಲ್ಲಿ ಅವುಗಳಿಗೆ ವಿಶೇಷವಾದ ಶಕ್ತಿ ಬರುತ್ತದೆ. ಸಾಮಾನ್ಯವಾಗಿ ಅವು ನಿರ್ಭಯವಾಗಿ ಸಂಚರಿಸುವುದು ರಾತ್ರಿಯ ವೇಳೆಯಲ್ಲಿಯೇ. ಅವು ಯಾವಾಗಲೂ ಕತ್ತಲನ್ನೇ ಬಯಸುವುದರಿಂದ ದಟ್ಟವಾಗಿ ಬೆಳೆದ ಮರಗಳಲ್ಲಿ ಹಳೆಯ ಬಾವಿಗಳಲ್ಲಿ ಹಳೆಯ ಮನೆಗಳಲ್ಲಿ ಆಯುವಿಲ್ಲದ ಮನೆಗಳಲ್ಲಿ ಎಕ್ಕದ ಗಿಡದ ಬುಡದಲ್ಲಿ ಬಿಳಲುಬಿಟ್ಟ ಆಲದಮರ ಹಾಗೂ ಹುಣಸೇ ಮರಗಲಲ್ಲಿ ಕೆರೆ ಕೊಳ ಬಂಡೆ ಗವಿ ಮುಂತಾದ ಕಗ್ಗತ್ತಲ ಸ್ಥಳಗಳಲ್ಲಿ ವಾಸಿಸುತ್ತವೆ. ಸ್ಮಶಾನಗಳಲ್ಲಿ ದೆವ್ವಗಳಿರುವುದಿಲ್ಲ ಎಂಬ ನಂಬಿಕೆ ಕೆಲವರಲ್ಲಿದ್ದರೆ ಮತ್ತೆ ಕೆಲವರು ಇರುತ್ತವೆ ಎಂದು ನಂಬುತ್ತಾರೆ.

ಮೋಹಿನಿ ಎಂಬ ದೆವ್ವಕ್ಕೆ ಹುಣ್ಣಿಮೆಯ ದಿನ ಅತ್ಯಂತ ಪ್ರಿಯವಾದರೆ ಉಳಿದ ದೆವ್ವಗಳಿಗೆ ಅಮಾವಾಸ್ಯೆ ಎಂದರೆ ಸಡಗರವೋ ಸಡಗರ. ಕತ್ತಲ ವೇಳೆಯಲ್ಲಿ ಅವುಗಳ ಚಟುವಟಿಕೆ ನಿರಂತರವಾಗಿ ಸಾಗುತ್ತದೆ. ಹಗಲಲ್ಲಿ ಅವು ನಿದ್ರಿಸುತ್ತವೆ.

**ಗುಣ ಸ್ವಭಾವಗಳು :** ದೆವ್ವಗಳು ಎಲ್ಲರ ಕಣ್ಣಿಗೂ ಕಾಣಿಸುವುದಿಲ್ಲ. ಅವು ದೆವ್ವಗಣ್ಣಿನವರಿಗೆ ಮಾತ್ರ ಕಾಣಿಸಿಕೊಳ್ಳುತ್ತವೆ. ಅಲ್ಲದೆ ನಾಯಿಗಳಿಗೆ ದೆವ್ವಗಳು ಕಾಣಿಸಿಕೊಳ್ಳುತ್ತವೆ. ದೇವಗಣದವರ ಕಣ್ಣಿಗೆ ದೆವ್ವಗಳು ಗೋಚರಿಸುವುದಿಲ್ಲ. ದೆವ್ವಗಳು ಮನುಷ್ಯರನ್ನು ಶತ್ರುಗಳೆಂದೇ ಭಾವಿಸುತ್ತವೆ. ಮನುಷ್ಯರಿಗೆ ಕಿರುಕುಳ ಕೊಡುವುದೆಂದರೆ ಅವಕ್ಕೆ ಎಲ್ಲಿಲ್ಲದ ಉತ್ಸಾಹ ಹಾಗೂ ಆನಂದ. ಹೆಣ್ಣುದೆವ್ವಗಳು ಗಂಡಸರನ್ನು ಗಂಡುದೆವ್ವಗಳು ಹೆಂಗಸರನ್ನು ಹಿಡಿದುಕೊಳ್ಳುವುದು ಸಾಮಾನ್ಯವಾದರೂ ಇದಕ್ಕೆ ಅಪವಾದ ಇಲ್ಲದೆ ಇಲ್ಲ.

ಸ್ವೇಚ್ಛೆಯಾಗಿ ವಿಹರಿಸುವ ದೆವ್ವಗಳು ಮಾನವರನ್ನು ಕಂಡರೆ ಬಗೆಬಗೆಯಾಗಿ ಚೇಷ್ಟೆ ಮಾಡುತ್ತವೆ. ಅವು ಮನುಷ್ಯರನ್ನು ಹಿಡಿದುಕೊಳ್ಳಬೇಕೆಂದು ಬಯಸಿದಾಗ ಮೊದಲು ಅವನ ಹಿಮ್ಮಡಿಯನ್ನು ಮುಟ್ಟುತ್ತವೆ. ಇದರಿಂದಲೇ ಅವನು ಶಕ್ತನೋ ದುರ್ಬಲನೋ ಎಂಬುದು ಅವಕ್ಕೆ ತಿಳಿಯುತ್ತದೆ. ಆಗ ಅವು ಗಾಳಿಯ ರೂಪದಲ್ಲಿ ಗುದದ್ವಾರದ ಮೂಲಕ ಪ್ರವೇಶ ಮಾಡುತ್ತವೆ. ಮಲಗಿದ್ದ ವ್ಯಕ್ತಿಯನ್ನು ಬಾಯಿಯ ಮೂಲಕ ಪ್ರವೇಶಿಸುತ್ತವೆ. ಎಷ್ಟೋ ದೆವ್ವಗಳು ಮಾನವನ ದೇಹವನ್ನು ತಮ್ಮ ಮನೆಯನ್ನಾಗಿ ಮಾಡಕೊಂಡಿದ್ದರೂ ಅದು ಯಾರಿಗೂ ತಿಳಿದಿರುವುದೇ ಇಲ್ಲ. ಬಾಣಂತಿ, ಋತುವಾಗಿರುವ ಹೆಣ್ಣುಮಕ್ಕಳು, ಮದುಮಕ್ಕಳು ಮುಂತಾದ ಹಸಿ ಮೈಯವರನ್ನು ದೆವ್ವಗಳು ಸುಲಭವಾಗಿ ಮೆಟ್ಟುತ್ತವೆ. ದಾರಿಯಲ್ಲಿ ಹೋಗುತ್ತಿರುವವರನ್ನು ಅವು ಅವರ ಪರಿಚಿತ ವ್ಯಕ್ತಿಗಳ ಧ್ವನಿಯನ್ನು ಅನುಕರಿಸಿ ಕೂಗುತ್ತವೆ. ಉತ್ತರಿಸಿದರೆ ಮೆಟ್ಟಿಕೊಳ್ಳುತ್ತವೆ. ದೆವ್ವಗಳ ಅದ್ಭುತ ಶಕ್ತಿಯೆಂದರೆ ಪ್ರಪಂಚದ ಯಾವ ಮೂಲೆಯಲ್ಲಿ ಯಾವ ವಸ್ತುವಿದೆ ಎಲ್ಲಿ ಏನಾಗುತ್ತಿದೆ ಎಂಬುದನ್ನು ಇದ್ದಲ್ಲಿ ತಿಳಿದುಕೊಳ್ಳುವುದು. ದೆವ್ವಗಳು ಮನುಷ್ಯರ ಮೇಲೆ ತುಂಬಿ ಬಂದಾಗ ಅವರು ಮೂರ್ಛೆ ಹೋಗುತ್ತಾರೆ. ಕಟಕಟನೆ ಹಲ್ಲು ಕಡಿಯುತ್ತಾರೆ. ಕಣ್ಣುಗುಡ್ಡೆಗಳನ್ನು ಭಯಂಕರವಾಗಿ ತೇಲಿಸುತ್ತಾರೆ. ತಲೆಯನ್ನು ಕೆದರಿಕೊಂಡು ಓಲಾಡುತ್ತಾರೆ. ಕೆಟ್ಟದಾಗಿ ಕಿರುಚುತ್ತಾರೆ. ಹೊಟ್ಟೆ ಸುಲಿದಂತಾಗಿ ಹೊರಳುತ್ತಾರೆ. ವಿಕಾರವಾಗಿ ನಗುತ್ತಾರೆ. ಭಯಂಕರವಾಗಿ ಅಳುತ್ತಾರೆ. ಕೆಲವು ದೆವ್ವಗಳು ಮೈದುಂಬಿ ಬಂದಾಗ ಹರ್ಷಚಿತ್ತದಿಂದ ತಮ್ಮ ವೃತ್ತಾಂತವನ್ನೆಲ್ಲ ಹೇಳಿಕೊಳ್ಳುವುದೂ ಉಂಟು. ಹೇಳಿಕೊಳ್ಳುವಾಗ ತಾವು ದೆವ್ವವಾಗುವ ಮುನ್ನ ಮನುಷ್ಯರಾಗಿದ್ದಾಗ ಯಾವ ಭಾಷೆಯಲ್ಲಿ ಮಾತನಾಡುತ್ತಿದ್ದವೋ ಅದೇ ಭಾಷೆಯಲ್ಲಿ ದೆವ್ವವಾದಾಗಲೂ ಮಾತನಾಡುತ್ತವೆ. ಕೆಲವು ದೆವ್ವಗಳು ಜ್ಯೋತಿಷ್ಯ ಹೇಳುವುದು ಕಳುವಾಗಿದ್ದ ವಸ್ತುಗಳನ್ನು ಪತ್ತೆ ಮಾಡುವುದು ಮುಂತಾದ ಕಾರ್ಯಗಳನ್ನು ಮಾಡಿಕೊಟ್ಟಿವೆ. ಕೆಲವು ದೆವ್ವಗಳು ಮೈದುಂಬಿ ಬಂದಾಗ ತಾವು ದೇವರುಗಳೆಂದು ಸುಳ್ಳುಹೇಳಿಕೊಂಡು ಜನರ ಕಷ್ಟಸುಖಾದಿಗಳನ್ನು ವಿಚಾರಿಸಿ ಶಾಸ್ತ್ರ ಮುಂತಾದವುಗಳಿಂದ ಪರಿಹಾರ ಸೂಚಿಸಿರುವ ಘಟನೆಗಳೂ ಇವೆ. ದೆವ್ವಗಳಲ್ಲಿ ಹೆಚ್ಚಿನವು ತುಂಟ ದೆವ್ವಗಳೆ. ಅವು ದೂರದಲ್ಲಿ ನಿಂತು ಮನೆ ಮೇಲೆ ಕಲ್ಲೆಸೆಯುತ್ತವೆ. ಸಿಳ್ಳುಹಾಕಿ ಕರೆಯುತ್ತವೆ. ಮಲಗಿದ್ದವರನ್ನು ಅದುಕಿಕೊಂಡು ಉಸಿರಾಡಲು ತೊಂದರೆ ಕೊಡತ್ತವೆ. ಮೈಮೇಲೆ ಬಂಡೆ ಬಿದ್ದಂತೆ ಭಾರಹಾಕಿ ಕಾಡುತ್ತವೆ. ಗಾಡಿ ಬರುತ್ತಿದ್ದರೆ ಎತ್ತುಗಳನ್ನು ಅಡ್ಡಹಾಕಿ ಚಕ್ರ ಕದಲದಂತೆ ಹಿಡಿದು

ನಿಲ್ಲಿಸುತ್ತವೆ. ಹಾಸಿಗೆಯಲ್ಲಿ ಮಲಗಿರುವವರನ್ನು ಹಾಸಿಗೆ ಸಮೇತ ಬೇರೆಡೆಗೆ ಕೊಂಡೊಯ್ದು ಮಲಗಿಸುತ್ತವೆ. ಕಾಡಿನಲ್ಲಿ ವಾಸವಿರುವವರ ಗುಡಿಸಲುಗಳಿಗೆ ಬೆಂಕಿಹಾಕಿ ಕುಣಿಯುವುದೂ ಅವುಗಳ ಒಂದು ಚೇಷ್ಟೆ. ರಾತ್ರಿಯು ವೇಳೆಯಲ್ಲಿ ಅವು ಎಳೆಯ ಮಕ್ಕಳಂತೆ ಅತ್ತು ಮನುಷ್ಯರ ಅನುಕಂಪೆಯನ್ನು ಗಳಿಸಿಕೊಂಡು ಅವರು ಮಗುವನ್ನು ಎತ್ತಿಕೊಳ್ಳಹೋದಾಗ ವಿಚಿತ್ರಾಕಾರವಾಗಿ ಬೆಳೆದು ಬೆದರಿಸುತ್ತವೆ. ಅವರು ಹೆದರುವ ಸ್ವಭಾವದವರಾಗಿದ್ದರೆ ಅವರ ಜೀವವನ್ನೂ ಮಟ್ಟಿಕೊಲ್ಲುತ್ತವೆ. ಹೀಗೆ ದೆವ್ವ ಮಟ್ಟಿದವರು ರಕ್ತ ಕಾರಿ ಸತ್ತು ತಾವೂ ದೆವ್ವಗಳಾಗುತ್ತಾರೆ.

**ದೆವ್ವ ಕಾಡಿದ ಪ್ರಸಂಗಗಳು :** ದೆವ್ವಗಳು ಕಾಡಿದ ಅಸಂಖ್ಯಾತ ಘಟನೆಗಳನ್ನು ಹಳ್ಳಿಗರು ರಸವತ್ತಾಗಿ ವರ್ಣಿಸುತ್ತಾರೆ. ಕೆಲವರು ತಾವು ದೆವ್ವಗಳೊಡನೆ ಹೋರಾಡಿ ಜಯಶೀಲರಾಗಿ ಬಂದೆವೆಂಬ ಕಥೆಗಳನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಅವರ ಈ ಸಾಹಸದ ಕಥೆಗಳು ಅವರ ಧೈರ್ಯಶೌರ್ಯಗಳ ಸಂಕೇತವಾಗಿವೆ. ಆದರೆ ಅವುಗಳ ಸತ್ಯಾಂಶ ಅವರಿಗೆ ಮಾತ್ರ ಗೊತ್ತು. ಏಕೆಂದರೆ ದೆವ್ವಗಳಿವೆ ಎಂದು ನಂಬುವ ಬಹಳಷ್ಟು ಮಂದಿ ಅವನ್ನು ನೋಡಿಲ್ಲ. ನೋಡಿಲ್ಲವೆಂದ ಮಾತ್ರಕ್ಕೆ ಅವರು ನಿರ್ಭಯರಾಗಿದ್ದಾರೆ ಎಂದರ್ಥವಲ್ಲ. ದೆವ್ವ ಅಗೋಚರಶಕ್ತಿಯಾದ್ದರಿಂದ ಎಂಥ ಗಂಡುಗಲಿಗಳಿಗೂ ಅವುಗಳ ಬಗೆಗೆ ಕೊಂಚ ಅಳುಕು ಇದ್ದೇ ಇರುತ್ತದೆ. ಹಳ್ಳಿಗರು ಗಾಳಿ ಕಾಟವನ್ನು ಅನುಭವಿಸಿದ ಎದುರಿಸಿದ ಅಥವಾ ಅವಕ್ಕೆ ತುತ್ತಾದ ಪ್ರಸಂಗಗಳು ಬೇಕಾದಷ್ಟಿವೆ. ಒಂದೆರಡು ಪ್ರಸಂಗಗಳನ್ನು ಇಲ್ಲಿ ಉದಾಹರಿಸಲಾಗಿದೆ.

ಕೆಲವು ದೆವ್ವಗಳು ಮನೆಯ ಒಳಭಾಗದಲ್ಲೇ ವಾಸವಿದ್ದರೂ ಯಾರಿಗೂ ಗೊತ್ತಿರುವುದಿಲ್ಲ. ಅವು ಅಮಾವಾಸ್ಯೆಯ ರಾತ್ರಿಗಳಲ್ಲಿ ಧಡಧಡನೆ ಮನೆ ಬಾಗಿಲು ತಟ್ಟುವುದು. ದನಕರುಗಳನ್ನು ಬಲಿ ತೆಗೆದುಕೊಳ್ಳುವುದು. ಮನೆಯಲ್ಲಿ ಕಷ್ಟನಷ್ಟಗಳನ್ನುಂಟು ಮಾಡುವುದು ಮುಂತಾದ ಕಾರ್ಯದಲ್ಲಿ ತೊಡಗುತ್ತವೆ ಎಂದು ನಂಬಲಾಗುತ್ತದೆ. ಇಂಥ ವಿಷಯಕ್ಕೆ ಮೈಸೂರು ಜಿಲ್ಲೆಯ ಪಿರಿಯಾಪಟ್ಟಣದ ಪಟೇಲ್ ಕಾಳೇಗೌಡರ ಮನೆಯಲ್ಲಿ ನಡೆದ ಒಂದು ಘಟನೆ ಒಳ್ಳೆಯ ನಿದರ್ಶನ. ಸಣ್ಣಯ್ಯನವರ ಬೀದಿಯಲ್ಲಿ ವಾಸವಿದ್ದ ಗೌಡರು ಬೆಂಗಳೂರು ಮಂಗಳೂರು ರಸ್ತೆ ಬದಿಯಲ್ಲಿದ್ದ ತಮ್ಮ ಹೊಲದಲ್ಲಿ ಒಂದು ಮನೆಯನ್ನು ಕಟ್ಟಿ ವಾಸಕ್ಕೆ ಹೊರಟರು. ಅವರು ಆ ಮನೆಗೆ ಹೋದ ಕೆಲವೇ ದಿನಗಳಲ್ಲಿ ಅವನ ಬೆಲೆ ಬಾಳುವ ಎತ್ತುಗಳಲ್ಲಿ ಒಂದು ಇದ್ದಕ್ಕಿದ್ದಂತೆ ಅಸುನೀಗಿತು. ಇದಕ್ಕೆ ಕಾರಣವೇ ತಿಳಿಯಲಿಲ್ಲ. ಮತ್ತೆರಡು ವರ್ಷಗಳ ತರುವಾಯ ಮತ್ತೊಂದು ಹೋರಿ ಪ್ರಾಣಬಿಟ್ಟಿತು. ಅಲ್ಲದೆ ಅಮಾವಾಸ್ಯೆ ಮುಂದಾರದಲ್ಲಿ ಮನೆಯಸುತ್ತ ಯಾರೋ ಗುಡುಗುಡನೆ ಓಡಾಡಿದಂತಾಗುತ್ತಿತ್ತು. ಕಳ್ಳರಿರಬಹುದೆಂದು ಆಳುಕಾಳುಗಳನ್ನೆಲ್ಲ ಎಚ್ಚರಿಸಿ ಹುಡುಕಿದರೆ ಯಾರ ಸುಳಿವೂ ಇರುತ್ತಿರಲಿಲ್ಲ. ಕಳ್ಳತನವೂ ಆಗುತ್ತಿರಲಿಲ್ಲ. ಕೆಲವೊಮ್ಮೆ ನಡುರಾತ್ರಿಯಲ್ಲಿ ಬಾಗಿಲನ್ನು ಧಡಧಡನೆ ತಟ್ಟಿದಂತಾಗುತ್ತಿತ್ತು. ಬಾಗಿಲು ತೆರೆದರೆ ಯಾರೂ ಇರುತ್ತಿರಲಿಲ್ಲ. ಇದು ಭೂತಚೇಷ್ಟೆಯೆಂದು ನಿರ್ಧರಿಸಿದ ಪಟೇಲರು ಮಲೆಯಾಳಂನಿಂದ ಮಂತ್ರವಾದಿಯೊಬ್ಬನನ್ನು ಕರೆಸಿ ಮನೆಗೆ ದಿಗ್ಬಂದನ ಮಾಡಿಸಿದರು. ಇದರಿಂದ ಏನೂ ಪ್ರಯೋಜನವಾದಂತೆ ಕಾಣಲಿಲ್ಲ. ಅವರ ಮಗ ಪಿ.ಕೆ. ಶಿವಪ್ಪನವರು ಕೆ.ಆರ್. ನಗರ ತಾಲ್ಲೂಕಿನ ಹೆಬ್ಬಾಳು ಗ್ರಾಮದ ತಮ್ಮ ಹೆಂಡತಿಯ ಮನೆಗೆ ಹೋಗಿದ್ದಾಗ ಅಲ್ಲಿ ಒಬ್ಬ ಮುದುಕಿಯ ಮೈಮೇಲೆ ವೆಂಕಟೇಶ್ವರ ದೇವರು ಮೈತುಂಬಿ ಬಂದು ಯಂತ್ರಮಂತ್ರ ಶಾಸ್ತ್ರಾದಿಗಳನ್ನು ಮಾಡುತ್ತಿರುವುದನ್ನು ಕಂಡು ಕುತೂಹಲಕ್ಕಾಗಿ ತಾವು ಶಾಸ್ತ್ರ ಕೇಳಿದರು. ಆಗ ಆ ದೇವರು ನಿಮ್ಮ ಮನೆಯಲ್ಲೊಂದು ಗಾಳಿ ಸೇರಿಕೊಂಡಿದೆ. ನೀವು ಮನೆ ಕಟ್ಟಿಸುವಾಗ ನೆಲ ಸೋಸಿಲ್ಲ. ಹಿಂದೆ ಯಾರೋ ಒಬ್ಬ ಹೆಂಗಸು ಕದ್ದುಬಸುರಿಯಾಗಿ ಹೆತ್ತಮಗುವನ್ನು ತಂದು ಆ ಸ್ಥಳದಲ್ಲಿ ಹೂತಿದ್ದಳು. ಅದು ದೆವ್ವವಾಗಿ ಈಗಲೂ ಬೆಳೆಯುತ್ತಿದೆ. ನಿಮಗೆ ಕಷ್ಟ ನಷ್ಟಗಳನ್ನು ಉಂಟುಮಾಡುತ್ತಿದೆ ಎಂದಿತು. ವಿಷಯವನ್ನು ಕೇಳಿದ ಶಿವಪ್ಪನವರು ಕುತೂಹಲ ಭರಿತರೂ ಭಯಚಕಿತರೂ ಆಗಿ ಆ ದೆವ್ವವನ್ನು ಮನೆಯಿಂದ ಹೊರಗಟ್ಟಲು ನೆರವು ಕೇಳಿದರು. ದೇವರು ಅದಕ್ಕೊಪ್ಪಿತು. ಹೆಂಗಸನ್ನು ಹೆಬ್ಬಾಳಿನಿಂದ ಪಿರಿಯಾಪಟ್ಟಣಕ್ಕೆ ಕರೆದುತಂದರು. ಅವಳು ಕೋಳಿಕೂಗುವ ಹೊತ್ತಿಗೆ ಎಷ್ಟು ಸ್ನಾನ ಮಾಡಿ ಮುಗಿಸಿ ಪೂಜೆಗೆ ಕುಳಿತಳು. ಮೈಮೇಲೆ ವೆಂಕಟೇಶ್ವರಸ್ವಾಮಿ ಆವೇಶ ಬಂದಾಗ ಧಿಗ್ಗನೆ ಮೇಲೆದ್ದಳು. ಮನೆಯ ನೆಲದಲ್ಲಿ ಮೂರು ಸ್ಥಳಗಳನ್ನು ತಟ್ಟಿ ಶಬ್ದಮಾಡಿ, ಕಣಜದ ಮನೆಯ ಮೂಲೆಯೊಂದನ್ನು ಅಗೆಯಲು ಸೂಚಿಸಿದಳು. ಆಳುಗಳು ಒಂದಾಳುದ್ದದ ವರೆಗೂ ಗುಂಡಿ ತೋಡಿದರು. ಆಗ ಮುದುಕಿ ಅಗೆಯುವುದನ್ನು ನಿಲ್ಲಿಸುವಂತೆ ಹೇಳಿ ತಾನೇ ಹಳ್ಳಕ್ಕಿಳಿದು ಅಗೆಯ ತೊಡಗಿದಳು. ಮನೆಯ ತುಂಬ ಕೆಟ್ಟವಾಸನೆ ಹರಡಿಕೊಂಡಿತು. ಆ ಮುದುಕಿ ಹಳ್ಳದೊಳಗಿಂದ ಅಸ್ಥಿಪಂಜರವೊಂದನ್ನು ಮೇಲೆತ್ತಿ ತಂದಳು. ಅದನ್ನು ಯಾರೂ ಮುಟ್ಟಬೇಡಿರೆಂದು ಹೇಳಿ ಮಂಕರಿಗೆ ತುಂಬಿ ತಾನೇ ಶ್ಮಶಾನಕಟ್ಟೆಗೊಯ್ದು ವಿಧಿಪೂರ್ವಕವಾಗಿ ಸಂಸ್ಕಾರ ಮಾಡಿಸಿದಳು. ಒಂಬತ್ತನೆಯ ದಿನದಲ್ಲಿ ಆರಾಧನೆ ಮಾಡಿ ಅನ್ನ ಹಾಕಲು ಹೇಳಿದಳು. ಆ ಒಂಬತ್ತು ದಿನಗಳ ರಾತ್ರಿಯೂ ದೆವ್ವ ಬಂದು ಬಾಗಿಲನ್ನು ಧಡಧಡನೆ ಬಡಿಯುತ್ತಿತ್ತು. ಸತ್ತವರಿಗೆ ಗಣಾರಾಧನೆ ಮಾಡುವಂತೆ, ಆ ದೆವ್ವದ ಹೆಸರಿನಲ್ಲಿ ಅನ್ನ ಹಾಕಿದರು. ಈಗ ಆ ಮನೆಯಲ್ಲಿ ದೆವ್ವದ ಕಾಟ ಯಾವುದೂ ಇಲ್ಲ.

**ಭೂತ ವಶೀಕರಣ :** ಬಸುರಿ ಅಥವಾ ಬಾಣಂತಿ ಸತ್ತರೆ ಅವಳನ್ನು ಹೂಳಬಾರದು. ಹೂತರೆ ಮಳೆ ಬರುವುದಿಲ್ಲ ಎಂಬ ನಂಬಿಕೆ ಕೆಲವು ಕಡೆ ಇದೆ. ಆದರೆ ಇದಕ್ಕೂ ಹೆಚ್ಚಿನ ಕಾರಣ ಮಂತ್ರವಾದಿಗಳ ಕಾಟ ಎಂದು ಹೇಳುತ್ತಾರೆ. ಅದಕ್ಕಾಗಿ ಅವಳನ್ನು ಸುಟ್ಟು ಬರುವ ಪದ್ಧತಿಯಿದೆ. ಸುಡದೆ ಹೂತು ಬಂದ ಪಕ್ಷದಲ್ಲಿ ಇದನ್ನು ನೋಡಿಕೊಂಡಿದ್ದ ಮಂತ್ರವಾದಿ ಹುಣ್ಣಿಮೆಯ ಮಧ್ಯರಾತ್ರಿಯಲ್ಲಿ ಕಾಳಿಕಾದೇವಿಯ ಮಂತ್ರವನ್ನು ಜಪಿಸುತ್ತ ಕರೀಕುರಿಯೊಡನೆ ಶ್ಮಶಾನಕ್ಕೆ ಬಂದು ಗುದ್ದಕ್ಕೆ ನೇರವಾಗಿ ಇಪ್ಪತ್ತುಗಜ ದೂರದಲ್ಲಿ ಏಳು ಬಣ್ಣಗಳ ರಂಗೋಲಿಯಲ್ಲಿ ಮಂಡಲ ಬರೆದು ಅದರ ಮಧ್ಯೆ ಒಂದು ಕಬ್ಬಿಣದ ಗೂಟ ನೆಟ್ಟು ಅದಕ್ಕೆ ಬಲಿ ಕಟ್ಟಿ ಮಂತ್ರ ಹೇಳುತ್ತ ಪೂಜೆಮಾಡುತ್ತಾನೆ. ಆ ಗೂಟದಿಂದ ಒಂದು ಹಸಿ ನೂಲಿನ ಹುರಿಯನ್ನು ಎಳೆದು ತಂದು ಗುದ್ದದ ತುದಿಗೊಂದು ಗೂಟನೆಟ್ಟು ಅದಕ್ಕೆ ಕಟ್ಟುತ್ತಾನೆ. ಗುದ್ದದ ಹಿಂಭಾಗದಲ್ಲಿ ಮತ್ತೊಂದು ಕಬ್ಬಿಣದ ಗೂಟ ಹೊಡೆದು ಅದನ್ನು ಹಿಡಿದುಕೊಂಡು ಕುಳಿತುಕೊಳ್ಳುತ್ತಾನೆ. ಈಗ ಮಣ್ಣಿನ ಗೊಂಬೆಗಳೆರಡಕ್ಕೆ ಪೂಜೆಮಾಡಿ ಜೀವತುಂಬಿ ಅವುಗಳ ಕೈಗೆ ಕತ್ತಿ ಕೊಡುತ್ತಾನೆ. ಅವು ನೂಲಿನ ಮೇಲ ಹೆಜ್ಜೆಯಿಡುತ್ತ ಮಂಡಲ ಬಳಿಗೆ ಬರುತ್ತವೆ. ಮಂತ್ರವಾದಿ ಒಂದೇ ಸಮನೆ ಮಂತ್ರ ಹೇಳತೊಡಗುತ್ತಾನೆ. ಈಗ ಗುದ್ದ ಇಬ್ಭಾಗವಾಗಿ ಅದರಿಂದ ಹೆಣ ಮೇಲೆದ್ದು ತಕತಕನೆ ಕುಣಿಯಲಾರಂಭಿಸುತ್ತದೆ. ಕುಣಿಕುಣಿದಾಡುತ್ತ ಹರಿಯು ನೇರಕ್ಕೆ ನಡೆದು ಮಂಡಲವನ್ನು ತಲಪಿ ಅಲ್ಲಿ ಕಟ್ಟಿದ್ದ ಕರಿಕುರಿಯ ಗೋಮಾಳೆಯನ್ನು ಕಚ್ಚಿ ರಕ್ತ ಹಿರುತ್ತದೆ. ಆಗ ಮಂತ್ರದ ಗೊಂಬೆಗಳು ಕೈ ಕೊಡ್ತಿಯಾ. ಕಾಲ್ ಕೊಡ್ತೀಯಾ ಎಂದು ಹೇಳುತ್ತ ಕುಣಿಯುತ್ತಿರುತ್ತವೆ. ಆಗ ಹೆಣ ಎಡದ ಕೈಯನ್ನು ನೀಡುತ್ತದೆ. ಗೊಂಬೆಗಳು ಹಸ್ತವನ್ನು ಕತ್ತರಿಸಿಕೊಳ್ಳುತ್ತವೆ. ತಕ್ಷಣವೆ ಹೆಣ ದೊಪ್ಪನೆ ಕೆಳಗುರುಳುತ್ತದೆ. ಬಿದ್ದ ಹೆಣಕ್ಕೆ ಮೋಡಿಹಾಕಿ ಅದು ಮತ್ತೆ ಗುದ್ದಿದೆ ಬೀಳುವಂತೆ ಮಾಡುತ್ತಾನೆ. ಗೊಂಬೆಗಳು ಕುಣಿದಾಡುತ್ತ ಬಂದು ಕತ್ತರಿಸಿ ತಂದ ಕೈಯನ್ನು ಮಂತ್ರವಾದಿಗೆ ಒಪ್ಪಿಸುತ್ತವೆ. ಆ ಕೈಯನ್ನು ಅಮಾವಾಸ್ಯೆಯ ಮಧ್ಯರಾತ್ರಿಯಲ್ಲಿ ಹೊಳೆ ದಡಕ್ಕೆ ತೆಗೆದುಕೊಂಡು ಹೋಗಿ ಕಾಳಿಕಾದೇವಿ ಪೂಜೆಮಾಡಿ ಅವಳಿಗೂ ಒಂದು ಕರೀತಲೆ ಬಲಿಕೊಟ್ಟು ಅವಳ ಹೆಸರಿನಲ್ಲಿ ತಾನು ಮಾಯಮಂತ್ರ ಮುಂತಾದವನ್ನು ಮಾಡುವುದಾಗಿ ಹೇಳುತ್ತಾನೆ. ಆಗ ಕಾಳಿ ಶ್ಮಶಾನದಲ್ಲಿ ಸುಟ್ಟಿರುವ ಹೆಣಗಳ ಬೂದಿಯನ್ನು ಅವನಿಗೆ ಕೊಡುತ್ತಾಳೆ. ಇದರಿಂದ ಭೂತ ಅವನಿಗೆ ವಶವಾಗುತ್ತದೆ. ಈ ಭೂತದ ಸಹಾಯದಿಂದ ಮಂತ್ರವಾದಿ ತನ್ನ ಶಕ್ತಿಯನ್ನು ಹೆಚ್ಚಿಸಿ ಕೊಳ್ಳುತ್ತಾನೆ. ಕೆಲವು ಮಂತ್ರವಾದಿಗಳು ಕಾಳಿಕಾದೇವಿಗೆ ಬದಲಾಗಿ ಬೇತಾಳಗಳನ್ನು ಆಶ್ರಯಿಸುತ್ತಾರೆ.

**ದೆವ್ವ ಬಿಡಿಸುವುದು :** ಅವು ಮೈ ತುಂಬಿ ಬಂದಾಗ ದೆವ್ವಗಳು ಹಿಡಿದು ಕೊಂಡಿವೆ ಎಂದು ಸುಲಭವಾಗಿ ಗೊತ್ತಾಗುತ್ತದೆ. ಇಲ್ಲದೆಹೋದರೆ ಅವು

ಮಾನವ ಶರೀರವನ್ನು ಮನೆಮಾಡಿಕೊಂಡಿದ್ದರೂ ತಿಳಿಯುವುದು ಕಷ್ಟ. ಮಕ್ಕಳಿಗೆ ದೆವ್ವದ ಕಾಟವಿದೆಯೆಂಬುದನ್ನು ಅವು ಮಲಗಿರುವಾಗ ಬೆಚ್ಚುವುದರಿಂದ ಚಟ್ಟನೆ ಚೀರುವುದರಿಂದ ರಚ್ಚೆ ಹಿಡಿಯುವುದರಿಂದ ಗುರುತಿಸಿ ತತ್‌ಕ್ಷಣವೆ ಯಂತ್ರ ಮಂತ್ರಗಳನ್ನು ಹಾಕಿಸುತ್ತಾರೆ. ಇಲ್ಲವೆ ರಜ್ಜೆತಾಳಿಯನ್ನು ಮಾಡಿಸಿ ಕಟ್ಟಿಸುತ್ತಾರೆ.

ಮೈಮೇಲೆ ಆವೇಶ ಬರುವ ದೆವ್ವಗಳನ್ನು ಬಿಡಿಸಲು ಹಲವಾರು ಕ್ರಮಗಳನ್ನು ಪ್ರಪಂಚಾದ್ಯಂತ ಕಾಣಬಹುದಾಗಿದೆ. ಕೆಲವು ಕ್ರಮಗಳನ್ನು ಇಲ್ಲಿ ಪ್ರಸ್ತಾಪಿಸಿದೆ.

ದೆವ್ವ ಹಿಡಿದವರನ್ನು ದೇವಾಲಯಗಳಿಗೆ ಕರೆತಂದರೆ ಅರ್ಚಕ ದೆವ್ವವನ್ನು ಬಿಡಿಸುತ್ತಾನೆ. ಬೊಪ್ಪಗೌಡನಪುರದ ಮಂಟೇಸ್ವಾಮಿ ಮಠದ ತಮ್ಮಡಿಗಳು ದೆವ್ವ ಬಿಡಿಸುತ್ತಾರೆ. ಮಂಟೇಸ್ವಾಮಿಗೆ ಪೂಜೆ ಮಾಡಿದಮೇಲೆ, ದೆವ್ವ ಹಿಡಿದವರನ್ನು ತಲೆಮೇಲೆ ಕೈಜೋಡಿಸಿಕೊಂಡು ಕುಳಿತುಕೊಳ್ಳಲು ಹೇಳುತ್ತಾರೆ. ಜಾಗಟೆ, ನಗಾರಿ, ಗಂಟೆಗಳನ್ನು ಕಿವಿಹರಿಯುವಂತೆ ಬಾರಿಸುತ್ತಾರೆ. ಈ ಸದ್ದುಗಳಿಗೆ ದೆವ್ವ ಮೈತುಂಬಿ ಬರುತ್ತದೆ. ತಮ್ಮಡಿ ತತ್‌ಕ್ಷಣವೆ ಒಂದು ಬತ್ತಿ ತಲೆಗೂದಲನ್ನು ಹಿಡಿದು ಗಂಟು ಹಾಕುತ್ತಾನೆ. ಅನಂತರ ದೆವ್ವ ಎಲ್ಲಿಂದ, ಏಕೆ, ಹೇಗೆ ಬಂದಿತೆಂಬುದರ ವಿಚಾರಣೆ ನಡೆಯುತ್ತದೆ. ದೆವ್ವ ಮಾತಾಡದಿದ್ದರೆ ಬೆತ್ತದಿಂದ ರಪರಪನೆ ಬಾರಿಸುತ್ತಾನೆ. ಬೆದರಿದ ದೆವ್ವ ಬಾಯಿ ಬಿಡುತ್ತದೆ. ಅದರ ಬಯಕೆ ಏನೆಂದು ಕೇಳುತ್ತಾನೆ. ಅದು ಬಯಸಿದ ಊಟ ತಿಂಡಿಯನ್ನು ಮುಂದಿನ ವಾರ ಕೊಡಿಸುವುದಾಗಿ ಹೇಳುತ್ತಾನೆ. ಮಂಟೇಸ್ವಾಮಿ ಸಿದ್ದಪ್ಪಾಜಿ, ರಾಚಪ್ಪಾಜಿ, ದೊಡ್ಡಮ್ಮತಾಯಿಯರ ಪಾದದಾಣೆಗೂ ಹೋಗುವುದಾಗಿ ಅದು ಹೇಳುತ್ತದೆ. ಹೋಗುವುದು ನಿಶ್ಚಯವಾದರೆ ನಿನ್ನ ತಲೆಯಿಂದ ಮೂರು ಬತ್ತಿ ಕೂದಲನ್ನು ಕಿತ್ತುಕೊಂಡು ಎಂದು ಕೇಳುತ್ತಾನೆ. ದೆವ್ವ ತಲೆಗೂದಲನ್ನು ಕಿತ್ತು ಕೊಡುತ್ತದೆ. ಮುಂದಿನ ವಾರ ಆ ಜನ ಉಪವಾಸದಿಂದದ್ದು ಸ್ನಾನ ಮಡಿಯಿಂದ ದೇವಾಲಯಕ್ಕೆ ಬರುತ್ತಾರೆ. ಹಿಂದಿನ ವಾರದ ರೀತಿಯಲ್ಲಿಯೇ ದೆವ್ವ ಮೈ ಮೇಲೆ ಬರುವಂತೆ ಮಾಡಲಾಗುತ್ತದೆ. ಅದು ಪ್ರೀತಿ ಪಟ್ಟು ಕೇಳಿ ದೊಡ್ಡನಿಸಿನ್ನು ಅದಕ್ಕೆ ಕೊಡುತ್ತಾರೆ. ಇದಾದ ಮೇಲೆ ದೇವರಿಗೆ ನಮಸ್ಕಾರ ಮಾಡುವಂತೆ ಹೇಳುತ್ತಾರೆ. ಅದು ನಮಸ್ಕರಿಸಿ ತಾನು ಸತ್ಯವಾಗಿಯೂ ಬಿಟ್ಟು ಹೋಗುವುದಾಗಿ ಆಣೆಮಾಡಿ ಹೇಳುತ್ತದೆ. ಅಲ್ಲಿಂದ ಹೊರಕ್ಕೆ ಕರೆತಂದು, ಹೊರಲಾರದ್ದು ಒಂದು ಕಲ್ಲು ಗುಂಡಿಗೆ ತೀರ್ಥ ಸಿಂಪಡಿಸಿ ಪೂಜೆ ಮಾಡಿ ಅದನ್ನು ಹೊತ್ತು ಕೊಳ್ಳಲು ದೆವ್ವಕ್ಕೆ ಹೇಳುತ್ತಾರೆ. ಹತ್ತು ಜನ ಹೊರಲಾರದ ಆ ಗುಂಡನ್ನು ದೆವ್ವ ಹಿಡಿದಿರುವವರು ಸರಾಗವಾಗಿ ಹೊತ್ತು ಕೊಂಡು ಮುಂದೆ ಮುಂದೆ ಸಾಗುತ್ತಾರೆ. ಅಲ್ಲಿಂದ ಎಲ್ಲರೂ ಅವರನ್ನು ದೊಡ್ಡಮ್ಮ ತಾಯಿಯ ಕೆರೆಗೆ ಕರೆದುತಂದು ನಡುಮಟ್ಟ ನೀರಿನಲ್ಲಿ ಐದುವಾರಗಳಲ್ಲಿ ಮೂರು ಸಾರಿ ಮುಳುಗಿಸಿ ಮೇಲ್ಲೆತ್ತುತ್ತಾರೆ. ದೆವ್ವ ಹಿಡಿದಿದ್ದವರು ಈಗ ಅದರಿಂದ ಮುಕ್ತರಾಗುತ್ತಾರೆ. ಇದಾದಮೇಲೆ ದೇವಾಲಯಕ್ಕೆ ಬಂದು ಪೂಜೆ ಮಾಡಿಸಿ ಐದು ಹೆಣಗಾಳಿಗಾಣ್ಕೆ ಒಪ್ಪಿಸುತ್ತಾರೆ.

ಕಾಡುಕುರುಬರು ದೆವ್ವ ಬಿಡಿಸುವುದರಲ್ಲಿ ಸಿದ್ಧಹಸ್ತರು. ಅವರು ದೆವ್ವ ಹಿಡಿದಿದ್ದವರ ಮುಂದೆ ಮಂತ್ರವನ್ನೂದುತ್ತ ಗುಲಗಂಜಿ ತುಂಬಿದ ಸೋರೆ ಬುರುಡೆಯನ್ನು ಅಲ್ಲಾಡಿಸುತ್ತಿರುತ್ತಾನೆ. ದೆವ್ವ ಬಂದವರು ಅದರ ಶಬ್ದಕ್ಕೆ ತಕ್ಕಂತೆ ಕೆದರಿದ ತಲೆಯನ್ನು ಓಲಾಡಿಸುತ್ತಿರುತ್ತಾರೆ. ಅವನು ಮಂತ್ರವನ್ನೂದುತ್ತಿದ್ದಂತೆ ಬುರುಡೆಯೊಳಗಿನ ಬುಲಗಂಜಿಗಳ ಶಬ್ದ ಥಟ್ಟನೆ ನಿಲ್ಲುತ್ತದೆ. ಆಗ ದೆವ್ವ ಬುರುಡೆಯೊಳಕ್ಕೆ ಬಂತೆಂದು ಹೇಳಿ ಅದನ್ನು ಶ್ಮಶಾನಕ್ಕೆ ತೆಗೆದುಕೊಂಡು ಹೋಗಿ ಬಲಿಕೊಟ್ಟು ಸುಟ್ಟುಹಾಕುತ್ತಾರೆ.

ಕಲ್ಲು ಹುಯ್ಯಿಸುತ್ತೇವೆಂದು ಹೇಳಿದರೆ ದೆವ್ವಗಳು ನಡುಗುತ್ತವೆ. ಕಲ್ಲು ಹುಯ್ಯಿಸುವುದೆಂದರೆ ದೆವ್ವಗಳನ್ನು ಸೆರೆಮಾಡುವುದು ಎಂದರ್ಥ. ಮೈಮೇಲೆ ಬಂದು ಕಿರುಕುಳ ಕೊಡುವ ದೆವ್ವಗಳನ್ನು ಗ್ರಾಮದೇವತೆಗಳ ಹೆಸರಿನಲ್ಲಿ ಒಂದು ಚಪ್ಪಡಿಯಲ್ಲಿ ಮುಖಕ್ಕೆ ಕಾಲುಗಳು ಹಿಂದಕ್ಕಿರವಂತೆ ಕೆತ್ತಿಸಿ, ದೇವಸ್ಥಾನದ ಮುಂದೆ ನೆಟ್ಟು, ಅದಕ್ಕೆ ಅನ್ನ ಹಾಕಿ ಗುಡಿಗೆ ಹೋಗುವ ಜನರೆಲ್ಲ ತುಳಿಯುವಂತೆ ಮಾಡುತ್ತಾರೆ. ಹೀಗೆ ದೇವರ ಸನ್ನಿಧಿಯಲ್ಲಿ ಬಂದಿಯಾದ ದೆವ್ವ ಯಾರನ್ನೂ ಹಿಡಿದುಕೊಳ್ಳಲಾರದು.

ಮನೆಗಳಿಗೆ ದೆವ್ವ ಸೇರಿಕೊಂಡಿದ್ದರೆ ಬೇವಿನ ಎಲೆ ಬಜ್ಜೆ ನವಿಲುಗರಿ ಹಾವಿನ ಪೊರೆ ನವಣೆನೆಲ್ಲು ಮತ್ತು ಇಂಗು ಇವುಗಳನ್ನೆಲ್ಲ ಸೇರಿಸಿ ಧೂಪ ಹಾಕಿದರೆ ಅದರ ವಾಸನೆ ಎಷ್ಟು ದೂರ ತಟ್ಟುತ್ತದೋ ಅಲ್ಲಿಯವರೆಗೂ ದೆವ್ವಗಳು ಸುಳಿಯುವುದಿಲ್ಲವೆಂದು ನಂಬಿಕೆ.

ಪ್ರೇತಬಾಧಾ ನಿವಾರಕ ಯಂತ್ರವನ್ನು ಕಟ್ಟುವುದರಿಂದ ದೆವ್ವಗಳು ಆ ಚೀಟಿ ಇದ್ದವರನ್ನು ಸ್ಪರ್ಶಿಸಲು ಹೆದರುತ್ತವೆಯಂತೆ. ಇದು ಚೀಟಿಯ ಒಂದರ ಮಾದರಿ.

| | | | |
|---|---|---|---|
| ಓಂ | ಹ್ರೀಂ | ಸ್ವ | ಮ |
| ಕ್ರೀಂ | ಕ್ರೀಂ | ಲಂ | ಜಂ |
| ತಂ | ಪಂ | ಸಂ | ತಂ |
| ಠಂ | ಠಂ | ಠಂ | ಠಂ |

ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆದು ವಿಧ್ಯುಕ್ತವಾಗಿ ಪೂಜಿಸಿ ಕೊರಳಿಗೆ ಕಟ್ಟಿದರೆ ಪ್ರೇತಬಾಧೆ ನಿವಾರಮೇಯಾಗುತ್ತದೆ. ಇಷ್ಟೇ ಅಲ್ಲದೆ ದೆವ್ವ ಬಿಡಿಸುವ ಇನ್ನೂ ಹಲವಾರು ಕ್ರಮಗಳನ್ನು ನಾಡಿನಾದ್ಯಂತ ಕಾಣಬಹುದಾಗಿದೆ.

ಭೂತಗಳಿಗೆ ಹೆದರಿ ಅವನ್ನು ಆರಾಧಿಸುವ ಪದ್ಧತಿ ಪ್ರಪಂಚದ ಬಹಳಷಟಲು ಕಡೆಗಳಲ್ಲಿ ಕಂಡುಬುರತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ ಭೂತಾರಾಧನೆ ಇಂಥ ಒಂದು ವಿಶಿಷ್ಟ ಸಂಪ್ರದಾಯ. ತುಮಕೂರು ಹಾಸನ ಚಿತ್ರದುರ್ಗ ಜಿಲ್ಲೆಗಳಲ್ಲಿ ಭೂತಗಳನ್ನು ಚೋಮಗಳು ಎಂದು ಕರೆಯುತ್ತಾರೆ. ಅವು ಗ್ರಾಮದೇವತೆಗಳ ಸಿಬ್ಬಂದಿ ವರ್ಗದಂತಿವೆ. ಅವನ್ನು ತೃಪ್ತಿಪಡಿಸಲು ಬಲಿ ಮುಂತಾದವನ್ನು ಕೊಡುತ್ತಾರೆ. ಬೇತಾಳೇಶ್ವರನ ಗುಡಿಗಳು ಬಹಳ ಕಡೆ ಇದೆ. ದೊಡ್ಡಗದ್ದವಳ್ಳಿಯ ಬೇತಾಳದ ವಿಗ್ರಹವನ್ನು ಇಲ್ಲಿ ನೆನೆಯಬಹುದು. ತಮಿಳುನಾಡು ಹಾಗೂ ಕೇರಳಗಳಲ್ಲೂ ಭೂತರಾಧನೆಯ ಪದ್ಧತಿ ಉಳಿದುಬಂದಿದೆ. ಪ್ರತಿಯೊಂದು ನೈಸರ್ಗಿಕ ಘಟನೆಗಳೂ ಭೂತಶಕ್ತಿಯ ಅಭಿವ್ಯಕ್ತಿಯೆಂದು ಭಾವಿಸುವ ಆದಿವಾಸಿಗಳು ಬಹಳಷ್ಟು ಬಗೆಯ ಮನೋರೋಗಗಳನ್ನು ದೆವ್ವಗಳ ಕುತ್ತಿಗೆಗೆ ಕಟ್ಟಿಬಿಡುತ್ತಾರೆ. ಅಲ್ಲದೆ ವೈಚಾರಿಕ ಚಿಂತನೆಯೂ ಸಂಪೂರ್ಣವಾಗಿ ದೆವ್ವಗಳ ರಹಸ್ಯವನ್ನು ಬಯಲು ಮಾಡಲು ಸಾಧ್ಯವಾಗಿಲ್ಲ.

**ದೆಹಲಿಯ ಸುಲ್ತಾನರು :** ಹದಿಮೂರನೆಯ ಶತಮಾನದ ಕೊನೆಯ ಹೊತ್ತಿಗೆ ದೆಹಲಿಯ ಸುಲ್ತಾನರ ಆಳ್ವಿಕೆ ಉತ್ತರ ಭಾರತದಲ್ಲಿ ಸಂಘಟನೆಗೊಂಡು, ಖಿಲ್ಜಿ ಸಂತತಿಯವರು ಆಡಳಿತವನ್ನು ಆರಂಭಿಸಿದಮೇಲೆ ಅದರ ಪ್ರಾಬಲ್ಯ ವಿಂಧ್ಯಪರ್ವತಗಳನ್ನು ಹಾದು ದಕ್ಷಿಣದತ್ತ ಹಬ್ಬಲು ಪ್ರಾರಂಭವಾಯಿತು. ದಕ್ಷಿಣದ ಕೊಳೆತ ರಾಜಕೀಯ ಪರಿಸ್ಥಿತಿಗಳು ಇದಕ್ಕೆ ಅನುಕೂಲವಾಗಿದ್ದವು. ದೇವಗಿರಿಯ ಯಾದವರಿಗೂ ಮತ್ತು ಹೊಯ್ಸಳರಿಗೂ ತಿಕ್ಕಾಟ ನಡೆಯುತ್ತಿದ್ದು. ಅವರ ಮಧ್ಯೆ ದ್ವೇಷ, ಅಸೂಯೆಗಳು ತುಂಬಿತುಳುಕಾಡುತ್ತಿದ್ದವು. ಸಹಜವಾಗಿ ಈ ಆಕ್ರಮಣಶಾಲಿಗಳು ಇದನ್ನೇ ತಮ್ಮ ಬಂಡವಾಳವಾಗಿ ಉಪಯೋಗಿಸಿಕೊಂಡರು.

ದೆಹಲಿಯ ಸುಲ್ತಾನರಲ್ಲಿ ಕರ್ನಾಟಕದತ್ತ ಗಮನ ಹರಿಸಿದವರಲ್ಲಿ ಮೊದಲಿಗ ಅಲ್ಲಾಉದ್ದೀನ್ ಖಿಲ್ಜಿ. ಅವನು ಭಿಲ್ಸಾವನನ್ನು ಆಕ್ರಮಿಸಿದ್ದ ಸಂದರ್ಭದಲ್ಲಿ ಕರ್ನಾಟಕದ ರಾಜರ ಬಳಿ ಹೇರಳವಾದ ಐಶ್ವರ್ಯವಿದೆ ಎಂಬ ವಿಷಯವನ್ನು ಕೇಳಿದ್ದ. ಆಗ ದೆಹಲಿಯ ಸುಲ್ತಾನನಾಗಿದ್ದ

ಜಲಾಲುದ್ದೀನ್ ಖಿಲ್ಜಿ ತನ್ನ ಅಳಿಯ ಅಲಾಉದ್ದೀನನಿಗೆ ಮಾಳ್ವದ ವರೆಗೆ ಮಾತ್ರ ದಂಡೆತ್ತಿಹೋಗಲು ಅಪ್ಪಣೆ ಕೊಟ್ಟಿದ್ದರೂ ಅದಕ್ಕೆ ವಿರುದ್ಧವಾಗಿ ಅಲಾಉದ್ದೀನ್ ಇನ್ನೂ ಮುಂದೆ ಹೋಗಿ ಯಾದವರ ರಾಜಧಾನಿ ದೇವಗಿರಿಗೆ ಮುತ್ತಿಗೆ ಹಾಕಿದ (ಫೆಬ್ರವರಿ, 1296). ಅಲ್ಲಿನ ರಾಜ ರಾಮಚಂದ್ರನಿಗೆ ಅಲಾಉದ್ದೀನನ ಈ ದಂಡಯಾತ್ರೆ ಆಕಸ್ಮಿಕ ಘಟನೆಯಾಗಿತ್ತು. ಆಗ ದೇವಗಿರಿಯ ಸೈನ್ಯ ದೂರದ ಮತ್ತೊಂದು ಪ್ರದೇಶದಲ್ಲಿ ಕಾರ್ಯಾಚರಣೆ ಮಾಡುತ್ತಿತ್ತು. ಒಂದು ವಾರದ ವರೆಗೆ ಅಲಾಉದ್ದೀನ್ ದೇವಗಿರಿಯ ಕೋಟೆಗೆ ಮುತ್ತಿಗೆ ಹಾಕಿದ ಮೇಲೆ ರಾಮಚಂದ್ರ ಶಾಂತಿ ಒಪ್ಪಂದಕ್ಕೆ ಒಪ್ಪಿಕೊಳ್ಳಬೇಕಾಯಿತು. ಅಪಾರ ಐಶ್ವರ್ಯ, ಕುದುರೆಗಳು, ಆನೆಗಳು ಅಲಾಉದ್ದೀನನ ವಶವಾದವು. ರಾಮಚಂದ್ರ ತನ್ನ ಮಗಳನ್ನು ಅಲಾಉದ್ದೀನನಿಗೆ ಮದುವೆ ಮಾಡಿಕೊಟ್ಟ. ರಾಮಚಂದ್ರನ ಮಗ 3ನೆಯ ಸಿಂಘಣನಿಗೆ ಅಲಾಉದ್ದೀನ್ ದೇವಗಿರಿಯನ್ನು ಮುತ್ತಿದ ವಿಷಯ ತಿಳಿದು ಅವನು ತನ್ನ ಸೈನ್ಯದೊಡನೆ ಬಂದಾಗ, ಅವನ ತಂದೆ ಶತ್ರುವಿನ ಕೈಯಲ್ಲಿದ್ದುದನ್ನು ಕಂಡ. ಸಿಂಘಣ ಸಹ ಅಲಾಉದ್ದೀನನಿಗೆ ಮಣಿಯಬೇಕಾಯಿತು. ಅನಂತರ ಅಲಾಉದ್ದೀನ್ ರಾಮಚಂದ್ರನಿಗೆ ರಾಜ್ಯವನ್ನು ಹಿಂತಿರುಗಿಸಿದ. ಇಬ್ಬರೂ ಆಜೀವಪರ್ಯಂತ ಸ್ನೇಹಿತರಾಗಿ ಉಳಿಯುವ ಒಪ್ಪಂದಕ್ಕೆ ಬಂದರು.

ದೇವಗಿರಿಯಿಂದ ಲೂಟಿ ಹೊಡೆದುಕೊಂಡು ಹೋದ ಐಶ್ವರ್ಯವನ್ನು ಉಪಯೋಗಿಸಿಕೊಂಡು ಜಲಾಲುದ್ದೀನನನ್ನು ಕೊಲೆ ಮಾಡಿ ಅಲಾಉದ್ದೀನನೇ ಮುಂದೆ ದೆಹಲಿಯ ಸುಲ್ತಾನನಾದ. ಆದರೂ ಅವನ ಹಣದ ದಾಹ ಹಿಂಗಲಿಲ್ಲ. ಮತ್ತೆ ದಾಳಿ ಮಾಡಲು ಸನ್ನಾಹ ನಡೆಸಿದ.

1303-04ರಲ್ಲಿ ಬಂಗಾಳದ ಮಾರ್ಗವಾಗಿ ವಾರಂಗಲ್ಲಿನ ವಿರುದ್ಧ, ಮಲಿಕ್ ಫಕ್ರುದ್ದೀನ್ ಎಂಬ ದಂಡನಾಯಕನ ನೇತೃತ್ವದಲ್ಲಿ ಕಳುಹಿಸಿಕೊಟ್ಟ ಅಲಾಉದ್ದೀನನ ಸೈನ್ಯಕ್ಕೆ ತೆಲುಗರಿಂದ ಅಪಾರವಾದ ನಷ್ಟವಾದ ಸಂದರ್ಭದಲ್ಲಿ, ಕರ್ನಾಟಕದ ದೊರೆಗಳಿಗೆ ಸುಲ್ತಾನನ ಬಗ್ಗೆ ಇದ್ದ ಭೀತಿ ಸ್ವಲ್ಪ ಕಡಿಮೆಯಾಗುವಂತಾಯಿತು. ಈ ಘಟನೆಯಿಂದ ಸ್ಫೂರ್ತಿಪಡೆದ ದೇವಗಿರಿಯ ರಾಮಚಂದ್ರದೇವನ ಮಗ ಸಿಂಘಣ ತನ್ನ ತಂದೆ ಅಲಾಉದ್ದೀನನಿಗೆ ಕೊಡುವುದಾಗಿ ಒಪ್ಪಿದ್ದ ಕಪ್ಪಕಾಣಿಕೆಯನ್ನು ಕೊಡಲು ನಿರಾಕರಿಸಿದುದೇ ಅಲ್ಲದೆ, ಗುಜರಾತಿನ ರಾಜ ಮತ್ತು ಆತನ ಮಗಳಿಗೆ ಆಶ್ರಯ ಕೊಡುವ ದಿಟ್ಟತನವನ್ನು ತೋರಿಸಿದ. ಆದರೆ ರಾಮಚಂದ್ರದೇವ ಈ ಕ್ರಮಕ್ಕೆ ಬೆಂಬಲಕೊಡಲಿಲ್ಲ. 1307ರಲ್ಲಿ ಅಲಾಉದ್ದೀನ್ ತನ್ನ ಅಪ್ತಸೇವಕ ಹಾಗೂ ಗುಲಾಮನಾದ ಮಲಿಕ್ ಕಾಫೂರ್‌ನನ್ನು ದೇವಗಿರಿಗೆ ಕಳುಹಿಸಿಕೊಟ್ಟ. ದೇವಗಿರಿಯ ಹತ್ತಿರ ನಡೆದ ಯುದ್ಧದಲ್ಲಿ ಸಿಂಘಣ ಸೋತು ಓಡಿಹೋದ. ಮಲಿಕ್ ಕಾಫೂರ್ ದೇವಗಿರಿಯನ್ನು ಲೂಟಿಮಾಡಿದ. ತನ್ನ ಸ್ವಾಮಿಯ ಹೆಸರಿನಲ್ಲಿ ರಾಜ್ಯವನ್ನು ತನ್ನ ವಶಕ್ಕೆ ತೆಗೆದುಕೊಂಡು ರಾಮಚಂದ್ರನನ್ನು ಅವನ ಕುಟುಂಬ ಸಮೇತ ದೆಹಲಿಗೆ ಖೈದಿಯಾಗಿ ಕರೆದುಕೊಂಡು ಹೋದ. ಅಲಾಉದ್ದೀನ್ ಖಿಲ್ಜಿ ರಾಮಚಂದ್ರನನ್ನು ಮರ್ಯಾದೆಯಿಂದ ನೋಡಿಕೊಂಡ. ಸುಮಾರು ಆರು ತಿಂಗಳುಗಳ ಕಾಲ ದೆಹಲಿಯಲ್ಲಿ ಅವನನ್ನು ಅತಿಥಿಯಾಗಿ ಇಟ್ಟುಕೊಂಡು ಅನಂತರ ಪುರಸ್ಕರಿಸಿ ವಾಪಸ್ಸು ದೇವಗಿರಿಗೆ ಕಳುಹಿಸಿಕೊಟ್ಟ. ರಾಮಚಂದ್ರ ಧನಕನಕ ವಸ್ತು ವಾಹನಾದಿಗಳನ್ನು ಅಲಾಉದ್ದೀನನಿಂದ ಸ್ವೀಕರಿಸಿದುದೇ ಅಲ್ಲದೆ, ತನ್ನ ರಾಜ್ಯವನ್ನೂ ಮರಳಿ ಪಡೆದ. ಅಲಾಉದ್ದೀನ್ ಗುಜರಾತಿನ ಕೆಲವು ಪ್ರದೇಶಗಳನ್ನೂ ಇವನಿಗೆ ಬಿಟ್ಟುಕೊಟ್ಟ. ಅಲಾಉದ್ದೀನನ ಈ ಔದಾರ್ಯದ ನೀತಿ ಅವನಿಗೆ ಫಲ ತಂದು ಕೊಟ್ಟಿತು. ತನ್ನ ಅವಸಾನದವರೆಗೂ ರಾಮಚಂದ್ರ ಅಲಾಉದ್ದೀನನಿಗೆ ಬೆಂಬಲಿಗನಾಗಿ ನಿಂತ. ದಕ್ಷಿಣದ ದಂಡಯಾತ್ರೆಗಳಲ್ಲಿ ರಾಮಚಂದ್ರನ ಸಹಾಯ ಅಲಾಉದ್ದೀನನಿಗೆ ಬಹಳ ಅವಶ್ಯವಾಗಿದ್ದಿತು. ಅದರಲ್ಲೂ ಕರ್ನಾಟಕದ ಹೊಯ್ಸಳರ ವಿರುದ್ಧ ದಂಡೆತ್ತಿಬಂದ ಸಂದರ್ಭದಲ್ಲಿ ಈ ಸ್ನೇಹ ಅಲಾಉದ್ದೀನನಿಗೆ ವರವಾಗಿ ಬಂತು.

1309ರಲ್ಲಿ ವಾರಂಗಲ್ಲಿನ ವಿರುದ್ಧ ಮತ್ತೊಂದು ದಂಡಯಾತ್ರೆ ನಡೆಸಿ ಜಯಶೀಲನಾದ ಮೇಲೆ ಅಲಾಉದ್ದೀನನ ಕಣ್ಣು ಹೊಯ್ಸಳರ ಮತ್ತು ಪಾಂಡ್ಯರ ಮೇಲೆ ಬಿತ್ತು. 1310ರಲ್ಲಿ ಮಲಿಕ್ ಕಾಫೂರ್ ಮತ್ತು ಖ್ವಾಜಾ ಹಾಜಿ ಇವರ ನಾಯಕತ್ವದಲ್ಲಿ ಒಂದು ದೊಡ್ಡ ಸೇನೆಯನ್ನು ಕಳುಹಿಸಿಕೊಡಲಾಯಿತು. ಹೊಯ್ಸಳರ ವಿರುದ್ಧ ನಡೆದ ಈ ದಂಡಯಾತ್ರೆಗೆ ದೇವಗಿರಿಯೇ ಕೇಂದ್ರವಾಯಿತು. ಅಲಾಉದ್ದೀನನಿಗೆ ನಿಷ್ಠೆಯಿಂದಿದ್ದ ರಾಮಚಂದ್ರ ಸಂತೋಷದಿಂದಲೇ ಈ ದಂಡಯಾತ್ರೆಗೆ ಸಹಾಯ ಮಾಡಿದ. ಮೂರನೆಯ ಬಲ್ಲಾಳ ಪಾಂಡ್ಯರಾಜ್ಯಕ್ಕೆ ಹೋದ ಸಂದರ್ಭವನ್ನು ಉಪಯೋಗಿಸಿಕೊಂಡು ಮಲಿಕ್ ಕಾಫೂರ್ ದೋರಸಮುದ್ರದ ಕಡೆ ಹೊರಟ. ದೇವಗಿರಿಯಿಂದ ದೋರಸಮುದ್ರದ ವರೆಗೂ ಸಿಕ್ಕಿದ ಸ್ಥಳಗಳನ್ನೆಲ್ಲಾ ಲೂಟಿ ಮಾಡುತ್ತ, ನಾಶ ಮಾಡುತ್ತ ನಡೆದ. ಫೆಬ್ರವರಿ 26, 1311ರಂದು ದೋರಸಮುದ್ರವನ್ನು ಮುತ್ತಿದ. ಅಲ್ಲಿನ ಐಶ್ವರ್ಯವನ್ನು ಸೂರೆ ಮಾಡಿದ. ತನ್ನ ರಾಜಧಾನಿ ಮುಸ್ಲಿಮರ ದಾಳಿಗೆ ತುತ್ತಾದ ವಿಷಯ ತಿಳಿದು ತಕ್ಷಣ ಪಾಂಡ್ಯದೇಶದಿಂದ ಬಲ್ಲಾಳ ಓಡಿಬಂದ. ಮುಸಲ್ಮಾನರ ಸೈನ್ಯದ ಮುಂದೆ ತನ್ನವರ ಪಾಡು ನೆಟ್ಟಗಾಗದೆಂದು ಯೋಚಿಸಿ ಮೂರನೆಯ ಬಲ್ಲಾಳ ಒಪ್ಪಂದ ಮಾಡಿಕೊಳ್ಳಲು ಯೋಚಿಸಿದ. ಆದರೆ ಅವನ ಮಂತ್ರಿಗಳು, ದಂಡನಾಯಕರು ಅಲಾಉದ್ದೀನನ ಸೈನ್ಯದ ವಿರುದ್ಧ ಹೋರಾಟ ನೆಡಸಬೇಕೆಂದು ಅಭಿಪ್ರಾಯಪ್ಪಟರು. ಸಾಕಷ್ಟು ಸಿದ್ಧತೆ ನಡೆಸದೆ ಇದ್ದುದರಿಂದಲೂ ಹಾಗೂ ಮುಸ್ಲಿಮರ ಸೈನ್ಯಬಲ ಹೆಚ್ಚಿದ್ದರಿಂದಲೂ ಯುದ್ಧಮಾಡುವುದು ಮೂರ್ಖತನವೆಂದು ಗ್ರಹಿಸಿ ಬಲ್ಲಾಳ ಶಾಂತಿ ಒಪ್ಪಂದ ಮಾಡಿಕೊಳ್ಳಲು ನಿಶ್ಚಯಿಸಿದ. ಇದರಿಂದ ಬಂದಿದ್ದ ಗಂಡಾಂತರ ಪರಿಹಾರವಾದಂತಾಯಿತು ಹಾಗೂ ಹೆಚ್ಚಿನ ನಷ್ಟ ಸಾವುನೋವುಗಳನ್ನು ತಪ್ಪಿಸಿದಂತಾಯಿತು. ಮೂರನೆಯ ಬಲ್ಲಾಳ ಅಲಾಉದ್ದೀನನಿಗೆ ಕಪ್ಪಕಾಣಿಕೆಗಳನ್ನು ಅರ್ಪಿಸಿ ಸಾಮಂತನಾಗಿ ಇರಲು ಒಪ್ಪಿದ. ತನ್ನ ಐಶ್ವರ್ಯ ಆನೆ ಕುದುರೆಗಳನ್ನು ಸುಲ್ತಾನನಿಗೆ ಕೊಟ್ಟ. ಸುಮಾರು ಹದಿನೈದು ದಿವಸಗಳ ಕಾಲ ಮಲಿಕ್ ಕಾಫೂರ್ ದೋರಸಮುದ್ರದಲ್ಲಿ ತಂಗಿದ್ದ. ಅನಂತರ ಅವನು ಪಾಂಡ್ಯ ರಾಜ್ಯದ ಮೇಲೆ ದಂಡೆತ್ತಿಹೋದ. ಮೂರನೆಯ ಬಲ್ಲಾಳನೂ ಅವನಿಗೆ ಸಹಾಯಕನಾಗಿ ನಡೆದ. ಅಕ್ಟೋಬರ್ 1311ರಲ್ಲಿ ದೆಹಲಿಗೆ ವಾಪಸ್ಸು ಹೋಗುವಾಗ ಮಲಿಕ್ ಕಾಫೂರ್ ತನ್ನೊಡನೆ ಮೂರನೆಯ ಬಲ್ಲಾಳನ ಮಗನನ್ನು ಕರೆದುಕೊಂಡು ಹೋಗಿದ್ದ. ಮೂರನೆಯ ಬಲ್ಲಾಳನ ಮಗನನ್ನು ಅಲಾಉದ್ದೀನನಿಗೆ ಪರಿಚಯ ಮಾಡಿಕೊಡುತ್ತ, ಅವನ ತಂದೆಯಿಂದ ತನ್ನ ದಂಡಯಾತ್ರೆಯ ಕಾಲದಲ್ಲಾದ ಸಹಾಯವನ್ನು ವಿವರಿಸಿದ. ಬಲ್ಲಾಳನ ಮಗನನ್ನು ಗೌರವದಿಂದ ನೋಡಿಕೊಂಡ ಅಲಾಉದ್ದೀನ್ ಅವನನ್ನು ದೋರಸಮುದ್ರಕ್ಕೆ ವಾಪಸ್ಸು ಕಳುಹಿಸಿಕೊಟ್ಟ. ಬಲ್ಲಾಳನಿಗೆ ಅವನ ರಾಜ್ಯವನ್ನು ಹಿಂತಿರುಗಿಸಿದ.

1312ರಲ್ಲಿ ರಾಮಚಂದ್ರ ಮರಣಹೊಂದಿದ ಮೇಲೆ ಅವನ ಮಗ ಸಿಂಘಣ ಸಿಂಹಾಸನವನ್ನೇರಿದ. ದೆಹಲಿಗೆ ತಲೆಬಾಗಿ ನಡೆಯಲು ಅಸಮ್ಮತಿಸಿದಾಗ, ಅವನನ್ನು ಶಿಕ್ಷಿಸಿ ಹದಕ್ಕೆ ತರಲು ಮಲಿಕ್ ಕಾಫೂರನನ್ನು ಮತ್ತೆ ಕಳುಹಿಸಿಕೊಡಲಾಯಿತು. ಅವನು ಬರುತ್ತಿದ್ದ ಹಾಗೆ ಸಿಂಘಣ ಓಡಿಹೋದ. ಮಲಿಕ್ ಕಾಫೂರ್ ಅಲ್ಲಿಯೇ ನಿಂತು ರಾಜ್ಯಾಡಳಿತವನ್ನು ಪುನಃ ಸಂಘಟಿಸಿದ. ದೇವಗಿರಿಯ ಸರದಾರರ ಸಲಹೆ ತೆಗೆದುಕೊಂಡ. ಆದರೆ ಯಾದವರ ಸಾಮಂತನಾಗಿದ್ದ ಸಿಂಗೆಯನಾಯಕ ಈ ಹೊಸ ಆಡಳಿತವನ್ನು ಒಪ್ಪಿಕೊಳ್ಳಲಿಲ್ಲ. ಕರ್ನಾಟಕದ ಇಂದಿನ ಬಳ್ಳಾರಿ, ರಾಯಚೂರು ಮತ್ತು ಧಾರವಾಡ ಜಿಲ್ಲೆಗಳನ್ನೊಳಗೊಂಡಂತೆ ಇರುವ ಭಾಗದಲ್ಲಿ ತನ್ನದೇ ಸ್ವತಂತ್ರ ರಾಜ್ಯವನ್ನು ಅವನು ಸ್ಥಾಪಿಸಿದ. ಕಂಪಿಲಿ, ಕುಮ್ಮಟ ಮತ್ತು ಹೊಸದುರ್ಗ (ಆನೆಗೊಂದಿ) ಎಂಬಲ್ಲಿ ಕೊಟೆಗಳನ್ನು ಕಟ್ಟಿದ. ಮಲಿಕ್ ಕಾಫೂರ್ ಕಂಪಿಲಿಯ ವಿರುದ್ಧ ದಾಳಿ ನಡೆಸಲು ಯತ್ನಿಸಿದ. ಅದು ಕೈಗೂಡುವ ಮೊದಲೇ ದೆಹಲಿಯಿಂದ ಕರೆ ಬಂದಿದ್ದರಿಂದ ವಾಪಸು ಹೋಗಬೇಕಾಯಿತು.

ಐಶ್ವರ್ಯವನ್ನು ಕೊಳ್ಳೆಹೊಡೆಯುವುದೇ ಅಲಾಉದ್ದೀನನ ದಕ್ಷಿಣ ದಂಡಯಾತ್ರೆಗಳ ಉದ್ದೇಶವಾಗಿತ್ತು. ಅವನ ಈ ಯತ್ನ ಕರ್ನಾಟಕದಲ್ಲಿ ಸಫಲವಾಯಿತು. ಮುಸ್ಲಿಂ ಇತಿಹಾಸಕಾರರಾದ ಬರಾನಿ, ಇಸಾಮಿ ಮತ್ತು

ಫೆರಿಸ್ತ ಈ ದಂಡಯಾತ್ರೆಗಳ ವಿಷಯವನ್ನು ಬಹು ವಿಸ್ತಾರವಾಗಿ ವಿವರಿಸಿದ್ದಾರೆ. ಕರ್ನಾಟಕವೂ ಸೇರಿದಂತೆ, ದಕ್ಷಿಣದಲ್ಲಿ ಅಲಾಉದ್ದೀನನು ತನ್ನ ದಂಡಯಾತ್ರೆಗಳಿಂದ 600 ಮಣ ಚಿನ್ನ, 7 ಮಣ ಮುತ್ತು, 2 ಮಣ ವಜ್ರವೈಡೂರ್ಯಗಳು, 1,000 ಮಣ ಬೆಳ್ಳಿ, 4,000 ರೇಷ್ಮೆ ಮೊದಲಾದ ವಸ್ತ್ರಗಳನ್ನು ಕೊಳ್ಳೆಹೊಡೆದನೆಂದು ಫೆರಿಸ್ತ ಹೇಳುತ್ತಾನೆ (ಬಿ.ಎಸ್.ಎ., ಕೆ.ಎಸ್.ಎಸ್.)

ಅಲಾಉದ್ದೀನ್ ಖಿಲ್ಜಿಯ ಮರಣಾನಂತರ ಸಂಭವಿಸಿದ ರಾಜಕೀಯ ಅಲ್ಲೋಲ್ಲ ಕಲ್ಲೋಲದಲ್ಲಿ. ದೇವಗಿರಿ ದೆಹಲಿಯಿಂದ ಬೇರ್ಪಟ್ಟು ಸ್ವತಂತ್ರವಾಯಿತು. ಆದರೆ ತಕ್ಷಣವೇ ಮುಬಾರಕ್ ಷಾ ಖಿಲ್ಜಿ ಶಾಂತಿಯನ್ನು ಏರ್ಪಡಿಸಿ, ದಕ್ಷಿಣದತ್ತ ನುಗ್ಗಿ, ತನ್ನ ಪ್ರಭುತ್ವವನ್ನು ಸ್ಥಾಪಿಸಲು ಯತ್ನಿಸಿದ. ಆ ಹೊತ್ತಿಗೆ ದೇವಗಿರಿಯಲ್ಲಿ ಪ್ರಬಲನಾಗಿದ್ದ ಹರಪಾಲದೇವನನ್ನು ಅವನು ಸೋಲಿಸಿ ಕೊಂದು, ಯಾದವ ಮನೆತನದ ಆಳ್ವಿಕೆಯನ್ನು ಕೊನೆಗಾಣಿಸಿ, ದೆಹಲಿ ಸಾಮ್ರಾಜ್ಯಕ್ಕೆ ದೇವಗಿರಿಯನ್ನು ಸೇರಿಸಿದ. ಆಡಳಿತವನ್ನು ಪುನರ್ ರಚಿಸಿದ. ಮಲಿಕ್ ಯಾಸ್‌ಲಖಿ ಎಂಬುವನನ್ನು ಪ್ರತಿನಿಧಿಯಾಗಿ ನೇಮಿಸಿದ. ಕೋಟೆಗಳನ್ನು ಕಟ್ಟಿ ಭದ್ರತೆ ಶಿಸ್ತುಗಳನ್ನು ಏರ್ಪಡಿಸಿದ. ಹೊಯ್ಸಳರ ರಾಜಧಾನಿಯಲ್ಲೂ ಒಂದು ಸೈನ್ಯವನ್ನು ಇಡುವ ಅವನ ಪ್ರಯತ್ನ ಸಫಲವಾಗಲಿಲ್ಲ. ಒಟ್ಟಿನಲ್ಲಿ ಇದು ಅಲಾಉದ್ದೀನ್ ಅನುಸರಿಸಿದ ನೀತಿಗಿಂತಲೂ ಭಿನ್ನವಾಗಿತ್ತು.

1320ರಲ್ಲಿ ಅಧಿಕಾರಕ್ಕೆ ಬಂದ ತುಗಲಕರು ಈ ನೀತಿಯನ್ನು ಮತ್ತಷ್ಟು ದೂರ ಕೊಂಡೊಯ್ದರು. ದೆಹಲಿಯ ಪ್ರಾಬಲ್ಯವನ್ನು ಬಲಪಡಿಸುವ ಸಲುವಾಗಿ, ರಾಜಕುಮಾರ ಉಲುಗ್‌ಖಾನ್‌ನನ್ನು 1323ರಲ್ಲಿ ದಖನ್ನಿಗೆ ಕಳುಹಿಸಿಕೊಂಡಲಾಯಿತು. ಅವನು ಕಾಕತೀಯರನ್ನು ಸದೆಬಡಿದು, ಅವರ ರಾಜ್ಯವನ್ನು ವಶಪಡಿಸಿಕೊಂಡ. ಈ ಮಧ್ಯದಲ್ಲೇ ಬಿದರೆಯನ್ನೂ ಅವನು ವಶಪಡಡಿಸಿಕೊಂಡ. ಮಾಬರ್ ಪ್ರಾಂತ್ಯದ ಮೇಲೆ ದೆಹಲಿಯ ಪ್ರಾಬಲ್ಯವನ್ನು ಸ್ಥಾಪಿಸಲು ಒಬ್ಬ ರಾಜ್ಯಪಾಲನನ್ನು ನೇಮಿಸಲಾಯಿತು. ಆ ಕಾಲಕ್ಕಾಗಲೇ ದಕ್ಷಿಣ ಭಾರತದ ಹೆಚ್ಚಿನ ಪ್ರದೇಶ ದೆಹಲಿ ಸಾಮ್ರಾಜ್ಯಕ್ಕೆ ಸೇರಿಹೋಗಿತ್ತು. ಆದರೆ ಕರ್ನಾಟಕದಲ್ಲಿ ಕಂಪಿಲಿ ಮತ್ತು ದೋರಸಮುದ್ರಗಳು ಸ್ವತಂತ್ರವಾಗಿದ್ದವು. ಕಂಪಿಲದೇವ ಕರ್ನಾಟಕದಲ್ಲಿ ಮುಸಲ್ಮಾನರ ವಿರೋಧಿಯಾಗಿದ್ದ. ಹೊಯ್ಸಳರೊಡನೆ ಅವನು ನಡೆಸುತ್ತಿದ್ದ ಕದನಗಳಿಂದ ಅವನಿಗೆ ತೊಂದರೆಯಾಗುತ್ತಿತ್ತಾದರೂ ಬಳ್ಳಾರಿಯ ಸುತ್ತಮುತ್ತಣ ಪ್ರದೇಶದಲ್ಲಿ ತನ್ನ ಚಿಕ್ಕದಾದ ಹಾಗೂ ಪ್ರಬಲವಾದ ರಾಜ್ಯವನ್ನು ಅವನು ಕಟ್ಟಿದ. ದೆಹಲಿಯ ಸುಲ್ತಾನನಿಗೆ ಕಪ್ಪ ಕೊಡಲು ನಿರಾಕರಿಸಿ, ಬಹಾಉದ್ದೀನ್ ಗುರ್ಷಾಸ್ಪ್‌ನೊಡನೆ ಸ್ನೇಹಸಂಬಂಧಗಳನ್ನು ಏರ್ಪಡಿಸಲು ಪ್ರಯತ್ನಿಸಿದ. ಭಾರತದಲ್ಲಿ ಆಡಳಿತ ಏಕತೆಯನ್ನುಂಟುಮಾಡುವ ಆಲೋಚನೆಯಲ್ಲಿದ್ದ ಮಹಮ್ಮದ್-ಬಿನ್- ತುಗಲಕ್ ಕರ್ನಾಟಕದ ವ್ಯವಹಾರಗಳಲ್ಲಿ ಹೆಚ್ಚು ಹೆಚ್ಚಾಗಿ ಪ್ರವೇಶಿಸುವಂತಾಯಿತು. ತನ್ನ ಸಂಬಂಧಿಯೂ ಸಾಗರದ ಗೌರ್ನರ್‌ನೂ ಆಗಿದ್ದ ಬಹಾಉದ್ದೀನ್ ಗುರ್ಷಾಸ್ಪ್‌ನನನ್ನು ಗುಲ್ಬರ್ಗದ ಸುತ್ತಮುತ್ತಲಿನ ಪ್ರದೇಶಕ್ಕೆ ರಾಜ್ಯಪಾಲನನ್ನಾಗಿ ನೇಮಕ ಮಾಡಿದ್ದರ ಅವನ ಉದ್ದೇಶವೆಂದರೆ, ದೆಹಲಿ ಸಾಮ್ರಾಜ್ಯದ ನೇರವಾದ ಹತೋಟಿಗೆ ಕರ್ನಾಟಕವನ್ನು ಒಳಪಡಿಸಬೇಕೆಂಬುದೇ ಆಗಿತ್ತು. ಆದರೆ ಅವನು ಕಂಪಿಲದೇವನೊಡಗೂಡಿ ದಂಗೆ ಎದ್ದ. ಇದರಿಂದ ಸುಲ್ತಾನ ದಕ್ಷಿಣದ ಕಡೆ ಸೈನ್ಯಸಮೇತನಾಗಿ ನುಗ್ಗಿ ದೇವಗಿರಿಯ ಬಳಿ ಬೀಡುಬಿಟ್ಟ. ಗುರ್ಷಾಸ್ಪ್ ವೀರಾವೇಶದಿಂದ ದೆಹಲಿ ಸೈನ್ಯದ ವಿರುದ್ಧ ಹೋರಾಡಿದರೂ ತನ್ನ ಕಡೆಯವನೊಬ್ಬ ದೆಹಲಿ ಕಡೆ ಸೇರಿಕೊಂಡಿದ್ದರಿಂದ, ಅವನ ಹೋರಾಟ ವಿಫಲವಾಯಿತು. ಅವನು ತನ್ನ ಕುಟುಂಬದೊಡನೆ ಕಂಪಿಲದೇವನ ಆಶ್ರಯವನ್ನು ಪಡೆದ. ಧೀಮಂತನಾಯಕನಾಗಿದ್ದ ಕಂಪಿಲ ಅವನಿಗೆ ಬೇಕಾದ ಆಶ್ರಯವನ್ನು ನೀಡಿದ. ಇದರಿಂದ ಅವನೇ ಅವನ ನಾಶಕ್ಕೆ ಅಡಿಪಾಯ ಹಾಕಿಕೊಂಡಂತಾಯಿತು. ಇವರ ವಿರುದ್ಧವಾಗಿ ಮಹಮ್ಮದ್-ಬಿನ್-ತುಗಲಕ್ ಮೂರು ಬಾರಿ ಸೈನ್ಯವನ್ನು ಕಳುಹಿಸಿಕೊಟ್ಟ. ಈ ದಾಳಿಗಳನ್ನು ತಡೆಯಲಾರದೆ ಅವರು ಕುಮ್ಮಟಕ್ಕೆ ಓಡಿಹೋದರು. ಸುಲ್ತಾನನ ಸೇನೆ ಅದನ್ನೂ ಮುತ್ತಿತು. ಗುರ್ಷಾಸ್ಪ್ ಅಲ್ಲಿಂದ ಹೊಸದುರ್ಗಕ್ಕೆ (ಆನೆಗೊಂದಿ) ಓಡಿಹೋದಾಗಲೂ ಸುಲ್ತಾನನ ಸೇನೆ ಅವನನ್ನು ಬೆನ್ನಟ್ಟಿ ಬಂತು. ಒಂದು ತಿಂಗಳು ಕಾಲ ಹೊಸದುರ್ಗ ಕೋಟೆಯನ್ನು ರಕ್ಷಿಸಲು ಹೋರಾಟ ನಡೆಸಿದರೂ ಸಫಲವಾಗದೆ ಕೈಬಿಟ್ಟ. ಕಂಪಿಲದೇವ ಗುರ್ಷಾಸ್ಪ್‌ನನ್ನು ಮೂರನೆಯ ಬಲ್ಲಾಳನ ಆಶ್ರಯಕ್ಕೆ ಕಳುಹಿಸಿಕೊಟ್ಟು, ತನ್ನ ಎಲ್ಲಾ ಐಶ್ವರ್ಯವನ್ನೂ ಹೆಂಡತಿಯರನ್ನೂ ಮತ್ತು ಹೆಣ್ಣುಮಕ್ಕಳನ್ನೂ ಬೆಂಕಿಗೆ ತಳ್ಳಿ, ತಾನು ಮಾತ್ರ ಕೊನೆಯವರೆಗೂ ರಣರಂಗದಲ್ಲಿ ಹೋರಾಡುತ್ತ ಮಡಿದ. ಅವನ ಹನ್ನೊಂದು ಮಂದಿ ಗಂಡು ಮಕ್ಕಳನ್ನು ಸೆರೆಹಿಡಿದು ಸುಲ್ತಾನನ ಬಳಿ ಕರೆದುಕೊಂಡು ಹೋದಾಗ, ಅವನು ಅವರ ವಂಶವನ್ನು ಗಣನೆಗೆ ತಂದುಕೊಂಡು, ಅವರನ್ನು ಒಳ್ಳೆಯ ಮರ್ಯಾದೆಯಲ್ಲಿ ನಡೆಸಿಕೊಂಡ. ಅವರ ರಾಜ್ಯವನ್ನು ವಶಪಡಿಸಿಕೊಂಡು, ಮಲಿಕ್ ನಾಯಿಬ್ ಎಂಬುವನನ್ನು ಅದರ ಆಡಳಿತಾಧಿಕಾರಿಯಾಗಿ ನೇಮಿಸಿದ.

ದೆಹಲಿ ಸೇನೆ ಹೊಯ್ಸಳರ ರಾಜಧಾನಿ ದೋರಸಮುದ್ರವನ್ನು ಮುತ್ತಿದಾಗ, ಈ ಹಿಂದೆಯೇ ಕಠಿಣ ಅನುಭವದ ರುಚಿಯನ್ನು ಅನುಭವಿಸಿದ ಮೂರನೆಯ ಬಲ್ಲಾಳ, ತನ್ನ ಆಶ್ರಯದಲ್ಲಿದ್ದ ಗುರ್ಷಾಸ್ಪ್‌ನನ್ನು ಸುಲ್ತಾನನಿಗೆ ಒಪ್ಪಿಸಿದ. ಗುರ್ಷಾಸ್ಪ್‌ನನ್ನು ಬಿಟ್ಟುಕೊಟ್ಟರೂ ಬಲ್ಲಾಳ ತನ್ನ ರಾಜ್ಯದ ಅನೇಕ ಭಾಗಗಳನ್ನು ಕಳೆದುಕೊಳ್ಳಬೇಕಾಯಿತು.

ಗುರ್ಷಾಸ್ಪ್‌ನ ಪ್ರಕರಣದಿಂದ ಸುಲ್ತಾನ ಸಾಮ್ರಾಜ್ಯದ ರಾಜಧಾನಿ ಕೇಂದ್ರ ಭಾಗದಲ್ಲಿರಬೇಕಾದ ಆವಶ್ಯಕತೆಯನ್ನು ಮನಗಂಡು ದೇವಗಿರಿಗೆ ಅದನ್ನು ಬದಲಾಯಿಸಿದ. ದೇವಗಿರಿ, ತೆಲಂಗಾಣ, ಕಂಪಿಲಿ, ದೋರಸಮುದ್ರ ಮತ್ತು ಮಾಬರ್‌ಗಳೆಂಬ ಐದು ಪ್ರಾಂತ್ಯಗಳನ್ನು ದಕ್ಷಿಣದಲ್ಲಿ ರಚಿಸಿ, ಅವುಗಳ ಆಡಳಿತವನ್ನು ಸಾದಾ ಅಮೀರ್‌ರೆಂಬ ಅಧಿಕಾರಿಗಳ ವಶಕ್ಕೆ ಒಪ್ಪಿಸಿದ. ನಾಯಿಬ್ ಎಂಬ ಗೌರ್ನರ್‌ಗಳನ್ನು ಪ್ರತಿ ಪ್ರಾಂತ್ಯದ ಮೇಲೂ ನೇಮಿಸಿದ. ಕೊತ್ವಾಲನೆಂಬ ಅಧಿಕಾರಿಯೂ ಇದ್ದ.

ದೆಹಲಿ ಸುಲ್ತಾನರ ಕರ್ನಾಟಕದ ಮೇಲಿನ ದಾಳಿ ಅಷ್ಟೇನೂ ಮಹತ್ವಪೂರ್ಣವಾಗಿರಲಿಲ್ಲ. 30 ವರ್ಷಗಳ ಕಾಲದ ಅವಧಿಯಲ್ಲಿ ಅವರು ಬಿಟ್ಟು ಬಿಟ್ಟು ದಾಳಿ ನಡೆಸಿದರು. ಮಹಮ್ಮದ್-ಬಿನ್-ತುಗಲಕ್ ಮಾತ್ರ ಒಂದು ದಶಕದಷ್ಟು ಕಾಲ (1324-35) ಕರ್ನಾಟಕದ ಕೆಲವು ಭಾಗಗಳನ್ನು ತನ್ನ ಬಿಗಿಯಾದ ಹತೋಟಿಯಲ್ಲಿಟ್ಟುಕೊಂಡ. ಆದರೆ ಅವನು ಉತ್ತರದ ಕಡೆ ಹೊರಟ ತಕ್ಷಣ ದಕ್ಷಿಣದಲ್ಲಿ ದಂಗೆಗಳು ನಡೆದವು. ಹರಿಹರ ಮತ್ತು ಬುಕ್ಕ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಒಂದು ದಶಕದ ಅನಂತರ ಬಹಮನೀ ರಾಜ್ಯ ತಲೆ ಎತ್ತಿತು. ಕರ್ನಾಟಕವನ್ನು ಉತ್ತರದೊಡನೆ ಸಂಪರ್ಕಿಸಿದ್ದು ಈ ದಾಳಿಗಳ ಒಂದು ಒಳ್ಳೆಯ ಪರಿಣಾಮವೆನ್ನಬಹುದು. ರಾಜಕೀಯವಾಗಿ ಕರ್ನಾಟಕವನ್ನು ನಿಯಂತ್ರಿಸುವ ಯತ್ನ ಒಂದು ತಾತ್ಕಾಲಿಕ ಘಟ್ಟವಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಚಾರಗಳಲ್ಲಿ ಈ ದಾಳಿಗಳು ಪರಸ್ಪರ ವಿನಿಮಯಕ್ಕೆ ಅವಕಾಶವನ್ನುಂಟುಮಾಡಿದವು. ಭಾಷೆ ಸಂಪ್ರದಾಯ ಆಚಾರ-ವಿಚಾರ ಕಲೆ ಸಾಹಿತ್ಯ ಕ್ಷೇತ್ರಗಳಲ್ಲಿ ಪರಸ್ಪರ ಗೌರವದ ಭಾವನೆಗಳು, ಬೆಳೆದು ಬಂದವು. ಅಮೀರ್ ಖುಸ್ರು ಇದಕ್ಕೆ ಒಳ್ಳೆಯ ಉದಾಹರಣೆ. ಅವನೊಬ್ಬ ಕವಿಯೂ ಸಂಗೀತಗಾರನೂ ಆಗಿದ್ದು, ದೇವಗಿರಿಯಲ್ಲಿ ಕರ್ನಾಟಕ ಸಂಗೀತವನ್ನು ಕೇಳಿ ಆನಂದಿಸಿ, ಅದರ ಕೆಲವು ರಾಗಗಳನ್ನು ಹಿಂದುಸ್ಥಾನೀ ಸಂಗೀತಕ್ಕೆ ಅಳವಡಿಸಿದ. ವಾಸ್ತುಶಿಲ್ಪದಲ್ಲಿ ಬಹಮನೀ ಸುಲ್ತಾನರು ತುಗಲಕ್ ಸಂಪ್ರದಾಯವನ್ನು ಅನುಸರಿಸಿದರು. ಇದನ್ನು ಅವರ ಗೋರಿ ಮೊದಲಾದ ಕಟ್ಟಡಗಳಲ್ಲಿ ನೋಡಬಹುದು. ಪಂಡಿತರು, ಕಲಾಭಿಮಾನಿಗಳು, ಆಡಳಿತಪಟುಗಳು, ಸಂತರು ದೆಹಲಿಯಿಂದ ಕರ್ನಾಟಕಕ್ಕೆ ಬಂದರು. ಇವರೆಲ್ಲ ಕರ್ನಾಟಕದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಜೀವನದ ಮೇಲೆ ಪರಿಣಾಮ ಬೀರಿದರು. ಚಿಸ್ತಿ ಮತ್ತು ಸುಹರ್‌ವಾದಿ ಪಂಥ'ದ ಸೂಫಿ ಸಂತರು ತಮ್ಮ ಶಿಸ್ತಿನ ಜೀವನದಿಂದ ಕರ್ನಾಟಕದ ಜನತೆಯನ್ನು ಆಕರ್ಷಿಸಿದರು. ಹಜರತ್ ಖ್ವಾಜಾ ಬಂದೇ ನವಾಜ್ ಗೆಸು ದರಾಜ್ ಎಂಬ ಜನಪ್ರಿಯ ಕರ್ನಾಟಕದ ಸಂತ

ಆಳರಸರ ಮತ್ತು ಪ್ರಜೆಗಳ ಸಾಂಸ್ಕೃತಿಕ ಸಮ್ಮೇಳನದ ಸಂಕೇತವಾಗಿದ್ದ. ಅವನ ಬಳಿ ಹಿಂದು ಶಿಷ್ಯರಿದ್ದರು. ಸಿದ್ದಪ್ಪ ಮತ್ತು ಚನ್ನಬಸವೇಶ್ವರ ಎಂಬುವರು ಅವರಲ್ಲಿ ಮುಖ್ಯರಾದವರು. ಇವನಂಥ ಇನ್ನೂ ಅನೇಕ ಸಾಧುಸಂತರು ಹಿಂದು-ಮುಸ್ಲಿಂ ಐಕ್ಯತೆಗೆ, ಸಾಮರಸ್ಯಕ್ಕೆ ಅಮೋಘವಾದ ಸೇವೆಯನ್ನು ಸಲ್ಲಿಸಿ, ಸಾಮಾಜಿಕ, ಧಾರ್ಮಿಕ ಹಾಗೂ ಭಾವನಾತ್ಮಕ ಕ್ಷೇತ್ರಗಳಲ್ಲಿ ಕರ್ನಾಟಕದ ವೈವಿಧ್ಯಮಯ ಜನರ ಮಧ್ಯೆ ಸಾಮರಸ್ಯವನ್ನುಂಟುಮಾಡಲು ಪ್ರಯತ್ನಿಸಿದರು. (ಬಿ.ಎಸ್.ಎ.)

**ದೇಗಾಂವಿ :** ಬೆಳಗಾಂವಿ ಜಿಲ್ಲೆ ಬೈಲಹೊಂಗಲ ತಾಲ್ಲೂಕಿನ ಒಂದು ಗ್ರಾಮ. ಬೈಲಹೊಂಗಲದ ದಕ್ಷಿಣಕ್ಕೆ 34 ಕಿಮೀ ಅಂತರದಲ್ಲೂ ಕಿತ್ತೂರಿನ ನೈಋತ್ಯಕ್ಕೆ 5 ಕಿಮೀ ದೂರದಲ್ಲೂ ಇದೆ.

ಗ್ರಾಮದ ಮಧ್ಯದಲ್ಲಿರುವ ಕಲ್ಲುಗುಡಿ (ಬಸ್ತಿ) ಸುಂದರ ವಾಸ್ತುಕೃತಿ. ಈ ದೇವಾಲಯವನ್ನು ಗೋವೆಯ ಕದಂಬರ ದೊರೆ ಶಿವಚಿತ್ತಪೆರ್ಮಾಡಿಯ (1147-92) ಹೆಂಡತಿಯಾದ ಕಮಲಾದೇವಿ ಕಟ್ಟಿಸಿದಂತೆ ತೋರುತ್ತವೆ. ಗುಡಿಯಲ್ಲಿ ಕನ್ನಡ ಹಾಗೂ ದೇವನಾಗರಿಯಲ್ಲಿ ಬರೆದ ಶಿಲಾಶಾಸನಗಳಿವೆ. ದೇಗಾಂವಿ ಅಗ್ರಹಾರಗದಲ್ಲಿ ಕಮಲಾನಾರಾಯಣ ಮತ್ತು ಮಹಾಲಕ್ಷ್ಮೀ ಗುಡಿಗಳನ್ನು ಹೂವಿನ ಬಾಗೆಯ ಹೋನೋಜನ ಮಗ ತಿಪ್ಪೋಜ ಎಂಬ ಸೂತ್ರಧಾರಿ ರಚಿಸಿದನೆಂದು ಒಂದು ಶಾಸನ ತಿಳಿಸುತ್ತದೆ. ಇನ್ನೊಂದು ಶಾಸನದಲ್ಲಿ (1175) ಕಮಲಾದೇವಿ ಬ್ರಾಹ್ಮಣರಿಗೆ ದಾನಕೊಟ್ಟ ವಿಷಯವಿದೆ. (ಎಸ್.ಎ.ಎಸ್.)

ಕಲ್ಲುಗುಡಿಯ ವಿನ್ಯಾಸ ವಿಚಿತ್ರ ರೀತಿಯಲ್ಲಿದೆ. ಇದರಲ್ಲಿ ಎಂಟೆಂಟು ಕಂಬಗಳ ಎರಡು ಸಾಲುಗಳುಳ್ಳ ಉತ್ತರ ದಕ್ಷಿಣವಾಗಿ ಹಬ್ಬಿದ ದೊಡ್ಡ ಹಜಾರವಿದ್ದು, ಇದಕ್ಕೆ ಸೇರಿದಂತೆ ಪಶ್ಚಿಮಕ್ಕೆ ಮೂರು ಗರ್ಭಗುಡಿಗಳಿವೆ. ಮಧ್ಯದ ಗರ್ಭಗುಡಿ ಪಕ್ಕದವುಗಳಿಗಿಂತ ಸ್ವಲ್ಪ ಮುಂದೆ ಹಜಾರದೊಳಕ್ಕೆ ಬಂದಿದೆ. ಹಿಂದೆ ಸರಿದಂತಿರುವ ಪಕ್ಕದ ಗರ್ಭಗೃಹಗಳು ಸುಕನಾಸಿಯುತವಾಗಿವೆ. ಹಜಾರಕ್ಕೆ ತೆರೆಯುವಂತೆ ಪಕ್ಕಗಳ ಗರ್ಭಗುಡಿಗಳ ನೇರ ಎದುರಿನಲ್ಲಿ ದ್ವಾರಗಳಿವೆ. ಇನ್ನೊಂದು ದ್ವಾರ ಉತ್ತರದ ಕಡೆ ಇದೆ. ಈ ದ್ವಾರ ಸುರುಳಿಗಳ ಶಾಖೆಗಳಿಂದ ಅಲಂಕೃತವಾದ ನಾಜೂಕಿನ ವಿನ್ಯಾಸದ ಕೃತಿ. ಇದರ ಎದುರಿಗೆ ದಕ್ಷಿಣದ ಗೋಡೆಯಲ್ಲಿ ನಾಗರ ಕಲ್ಲಿರುವ ಒಂದು ಕೋಷ್ಠವಿದೆ. ಹಜಾರದ ಪೂರ್ವಭಾಗದಲ್ಲಿ ಕಕ್ಷಾಸನವಿದ್ದು ಮೇಲೆ ತೆರೆದಂತಿದೆ. ಈ ಭಾಗದ ಮೇಲಿನ ಚಾವಣಿ ಇಳಿಜಾರಾಗಿದೆ. ಹಜಾರದ ಕಂಬಗಳು ಸಮಕಾಲೀನ ಚಾಳುಕ್ಯ ವಾಸ್ತುರೀತಿಯವುಗಳಿಗಿಂತ ವ್ಯತ್ಯಸ್ತವಾಗಿವೆ. ಇವುಗಳಲ್ಲಿ ತಿರುಗಣೆಯ ಕೆಲಸ ಕಡಿಮೆ ಇರುವುದು ಇಲ್ಲಿಯ ವೈಶಿಷ್ಟ್ಯ. ಆದರೂ ಇವುಗಳ ವಿನ್ಯಾಸ ಸುಂದರವಾಗಿದೆ. ಹಜಾರದ ಚಾವಣಿಯಲ್ಲಿ ಪಕ್ಕದ ಗರ್ಭಗುಡಿಗಳ ಮುಂದೆ ಇರುವ ಭುವನೇಶ್ವರಿಗಳು ಆಳವಾಗಿದ್ದು ಹಲವು ಅಲಂಕೃತ ಏಕಕೇಂದ್ರ ವೃತ್ತಗಳಿಂದ ಕೂಡಿದೆ. ಅವುಗಳ ಮಧ್ಯೆ ತೂಗಾಡುವ ಕಮಲಗಳ ಅಲಂಕರಣವಿದೆ. ಇವುಗಳ ಸುತ್ತಲೂ ಸುಮಾರು ಇದೇ ರೀತಿಯ ಚಿಕ್ಕ ಭುವನೇಶ್ವರಿಗಳಿವೆ. ಇವೆಲ್ಲಾ ಅಬು ಬೆಟ್ಟದ ವಿಮಲ ಷಾ ದೇವಾಲಯದ ಭುವನೇಶ್ವರಿಗಳನ್ನು ನೆನಪಿಗೆ ತರುತ್ತವೆ. ಹೊರಗೋಡೆಗಳ ಮೇಲೆ ಅರೆಗಂಬಗಳು ಇತ್ಯಾದಿ ಅಲಂಕರಣಗಳಿವೆ. ಈಗ ಉತ್ತರದ ಗರ್ಭಗುಡಿಯಲ್ಲಿ ಮಹಾಕಾಳಿ, ಮಧ್ಯದರಲ್ಲಿ ಲಕ್ಷ್ಮೀನಾರಾಯಣ ಮತ್ತು ದಕ್ಷಿಣದರಲ್ಲಿ ಸರಸ್ವತಿ - ಈ ವಿಗ್ರಹಗಳಿವೆ. ಆದರೆ ಈ ಗರ್ಭಗುಡ್ಡಿಗಳ ದಾಲವಂದಗಳ ಮೇಲೆ ಕ್ರಮವಾಗಿ ಮಹಾಕಾಳಿ, ಸರಸ್ವತಿ ಮತ್ತು ವಿಷ್ಣುವಿಗ್ರಹಗಳಿರುವುದರಿಂದ ದಕ್ಷಿಣ ಮತ್ತು ಮಧ್ಯದ ಗರ್ಭಗುಡಿಯ ವಿಗ್ರಹಗಳು ಅದಲುಬದಲಾಗಿರುವಂತೆ ತೋರುತ್ತದೆ. ಈ ವಿಗ್ರಹಗಳೆಲ್ಲ ಕಲ್ಯಾಣ ಚಾಳುಕ್ಯ ಶೈಲಿಯಲ್ಲಿವೆ. ಕಲ್ಲುಗುಡಿ ಗೋವೆಯ ಕದಂಬರ ಕಾಲದ ಉತ್ತಮ ವಾಸ್ತುರಚನೆಗಳಲ್ಲೊಂದು. *

**ದೇಪರಾಜ :** ಸು. 1410. ಕನ್ನಡದ ಮೊಟ್ಟಮೊದಲ ಸಾಂಗತ್ಯಕವಿ. ಸೊಬಗಿನ ಸೋನೆ ಎಂಬ ಕಾವ್ಯದ ಕರ್ತೃ.

ಸಂಗಮೇಂದ್ರನ ಕುಲದಿಂಗಡಲಿಗೆ ನೆಱುದಿಂಗಳೆನಿಪ ಕಂಪಸುತ ಕೇಳ ಕಂಗೊಳಿಸುವ ದೇಪನೃಪ ಮುನ್ನಱಿಯದ ಮಂಗಳವಪ್ಪೊಂದು ಕಥೆವೇಳ ಎಂಬ ಪದ್ಯದಿಂದ ಈತ ಸಂಗಮವಂಶದ ಕಂಪರಾಜನ ಮಗನೆಂದು ತಿಳಿದುಬರುತ್ತದೆ. ಈ ಸಂಗಮ ವಂಶ ವಿಜಯನಗರ ಸಾಮ್ರಾಜ್ಯವನ್ನು ಆಳಿದ ಮನೆತನಗಳಲ್ಲಿ ಒಂದಾಗಿರುವುದರಿಂದ ಇಲ್ಲಿ ಬರುವ ಒಂದನೆಯ ದೇವರಾಯ ಅಥವಾ ಪ್ರತಾಪದೇವರಾಯನೇ (1406-22) ಈ ದೇಪರಾಜನಿರಬಹುದೆಂದು ಊಹಿಸಲಾಗಿದೆ. ಕವಿ ವೀರ ಶೈವನಹುದೋ ಅಲ್ಲವೋ ತಿಳಿಯದು. ಶೈವನೆಂಬುದಕ್ಕೆ ಸಾಕಷ್ಟು ಆಕಾರ ಇವನ ಕಾವ್ಯಗಳಲ್ಲಿ ದೊರೆಯುತ್ತದೆ. ಅಮರುಕ ಈತನ ಇನ್ನೊಂದು ಕೃತಿ. ತನ್ನ ಎರಡೂ ಕೃತಿಗಳಲ್ಲಿ ಕವಿ ಪಂಪಾಪತಿ ವಿರೂಪಾಕ್ಷನನ್ನು ಸ್ತುತಿಸಿರುವುದರಿಂದ ವಿರೂಪಾಕ್ಷ ಈತನ ಇಷ್ಟದೈವವೆಂದು ತೋರುತ್ತದೆ. ಪೂರ್ವಕವಿಗಳಲ್ಲಿ ವಾಲ್ಮೀಕಿ, ಬಾಣ, ಕಾಳಿದಾಸ - ಇವರನ್ನು ಸ್ಮರಿಸಿದ್ದಾನೆ. ತನ್ನ ಕಾವ್ಯವನ್ನು ಜಾಣರ ಮೆಚ್ಚು ರಸಿಕರ ರಸಾಯನ ವಾಣಿಯ ಸಿರಿ ಭಾವುಕರಿಗೆ ಮಾಣಿಕಗನ್ನಡಿ ಕೇಳ್ವಕೋವಿದರಿಗೆ ಪ್ರಾಣ ಎಂದು ಪ್ರಶಂಸಿಸಿಕೊಂಡಿದ್ದಾನೆ.

ಸೊಬಗಿನ ಸೋನೆ ಕನ್ನಡದಲ್ಲಿ ದೊರೆತ ಮೊದಲ ಸಾಂಗತ್ಯಕೃತಿ. ಶೃಂಗಾರ ಪೂರ್ಣ ಕತೆಗಳನ್ನೊಳಗೊಂಡಿದೆ. ಇದರಲ್ಲಿ 7 ಕಥೆಗಳೂ 26 ಸಂಧಿಗಳೂ 1216 ಪದ್ಯಗಳೂ ಇವೆ. ಕಾವ್ಯದಲ್ಲಿ ಬಳಸಿರುವ ಛಂದಸ್ಸು ಸಾಂಗತ್ಯವಾದರೂ ಸಾಂಗತ್ಯದ ಲಕ್ಷಣದಂತೆ ಪದ್ಯದ ಎರಡು ಮತ್ತು ನಾಲ್ಕನೆಯ ಪಾದಗಳ ಕೊನೆಯಲ್ಲಿ ಬರಬೇಕಾದ ಬ್ರಹ್ಮಕ್ಕೆ ಬದಲಾಗಿ ವಿಷ್ಣುವಿನಿಂದ ಕೂಡಿವೆ. ಆದ್ದರಿಂದ ಇದನ್ನು ಸಾಂಗತ್ಯಕ್ಕೆ ಬದಲಾಗಿ ಸೊಬಗಿನ ಸೋನೆವರ್ಣ ಎಂದು ಕರೆಯುವುದೂ ಉಂಟು. ವರ್ಣನೆಗಳೇ ಕೃತಿಯ ಜೀವಾಳ. ಅತಿಯಾದ ವರ್ಣನೆಗಳಿದ್ದರೂ ಅಲ್ಲಲ್ಲಿ ಬರುವ ಉತ್ತಮ ಭಾಗಗಳು ಕವಿಯ ಪ್ರತಿಭಾಶಕ್ತಿಯ ದ್ಯೋತಕವಾಗಿವೆ. ಕಥೆಯ ಓಟ, ಒಂದು ಕಥೆಗೂ ಇನ್ನೊಂದು ಕಥೆಗೂ ನಡುವೆ ಇರುವ ಸಂಬಂಧ ಬೆಸುಗೆ - ಇವು ಸಂಸ್ಕೃತದ ಕಥಾಸರಿತ್ಸಾಗರ, ದಶಕುಮಾರಚರಿತೆ ಮೊದಲಾದ ಕೃತಿಗಳನ್ನು ನೆನಪಿಗೆ ತರುತ್ತದೆ. ಶೈಲಿ ಸರಳವಾಗಿದೆ. ಸಾಂಗತ್ಯ ಗ್ರಂಥಗಳ ಸಾಲಿನಲ್ಲಿ ಇದಕ್ಕೆ ಐತಿಹಾಸಿಕ ಮಹತ್ವವಿದೆ.

ಅಮರುಕ ವಾರ್ಧಕ ಷಟ್ಪದಿಯಲ್ಲಿದೆ. ಇದು ಸಂಸ್ಕೃತ ಅಮರುಶತಕದ ಅನುವಾದ. (ಬಿ.ಎಸ್.ಎಸ್.)

**ದೇವಕವಿ :** ಸು. 1200. ಬ್ರಾಹ್ಮಣ ಕವಿ. ಕುಸುಮಾವಳಿ ಎಂಬ ಚಂಪೂ ಕಾವ್ಯದ ಕರ್ತೃ. ಕವಿ ತನ್ನ ಹೆಸರನ್ನು ವಾಚ್ಯವಾಗಿ ಕಾವ್ಯದಲ್ಲಿ ಎಲ್ಲಿಯೂ ಹೇಳಿಕೊಂಡಿಲ್ಲ. ಆದರೆ ಕವಿಕಮಳಜಸೂಕ್ತಿ ಸುಧಾರ್ಣವಸೋಮಂ ದೇವಕವಿದಲೆಂದಿ ನಿತಂ ಸಾಱುವವೋಲ್ ಭೇರೀಭಾಂಕೃತಿ ರವವೊಗೆದತ್ತುತ್ತರಾಶೆಯೊಳ್ ಮತ್ತಾಗಳ್ ಎಂದು ಹೇಳುವಲ್ಲಿ ದೇವಕವಿ ಎಂದು ಸೂಚ್ಯವಾಗಿ ಹೇಳಿರುವಂತೆ ತೋರುತ್ತದೆ. ಕವಿಕಮಳಜಸೂಕ್ತಿಸುಧಾರ್ಣವಸೋಮಂ ಎಂಬುದರಿಂದ ಈತ ಶಾಂತೀಶ್ವರಪುರಾಣವನ್ನು ಬರೆದ ಕಮಲಭವನಿಗೆ ಗ್ರಂಥರಚನೆಯನ್ನು ಪ್ರೋತ್ಸಾಹ ಮಾಡಿದಂತೆ ಊಹಿಸಬಹುದಾಗಿದೆ. ಈ ಊಹೆಗೆ ಸಹಕಾರಿಯಾಗಿ ಋತು, ಸೂರ್ಯಾಸ್ತ ಮೊದಲಾದ ವರ್ಣನಾ ಭಾಗಗಳ ಪದ್ಯಗಳಲ್ಲಿ ಹಲವನ್ನು ಇದೇ ಸಂದರ್ಭಗಳಲ್ಲಿ ಶಾಂತೀಶ್ವರಪುರಾಣದಲ್ಲಿಯೂ ಕಾಣಬಹುದಾಗಿದೆ. ಈತನಿಗೆ ಕವೀಂದ್ರೋತ್ತಂಸ, ಕೃತಿರತಿರಮಣ, ಭಾರತೀಭೂಷಣ ಎಂಬ ಬಿರುದುಗಳಿದ್ದಂತೆ ತಿಳಿದುಬರುತ್ತದೆ. ಪೂರ್ವಕವಿಗಳಲ್ಲಿ ರನ್ನ, ರುದ್ರಭಟ್ಟ, ಅಗ್ಗಳ - ಇವರನ್ನು ಸ್ತುತಿಸಿದ್ದಾನೆ.

ಕುಸುಮಾವಳಿ ಕಾವ್ಯ ಒಂದು ಕಲ್ಪಿತ ರಮ್ಯ ಪ್ರಣಯ ಕಥೆ. ದೊರೆತಿರುವ ಅಸಮಗ್ರ ಪ್ರತಿಯಲ್ಲಿ 15 ಆಶ್ವಾಸಗಳಿವೆ. ಒಟ್ಟು 18 ಆಶ್ವಾಸಗಳಿರಬಹುದೆಂದು ತೋರುತ್ತದೆ ಎಂದು ಕವಿಚರಿತೆಕಾರರು ಹೇಳುತ್ತಾರೆ. ಕಾವ್ಯದಲ್ಲಿ ಕವಿ ತಾನು ಚಿಕ್ಕರಾಜ ಚಮೂಪನನ್ನು ಕಥಾನಾಯಕನನ್ನಾಗಿ ಮಾಡಿಕೊಂಡಿದ್ದೇನೆಂದು ಹೇಳಿದ್ದಾನೆ. ಆದರೆ ಈತ ಯಾರೆಂಬುದು ತಿಳಿಯುವುದಿಲ್ಲ. ಈ ಕಾವ್ಯವನ್ನು ಬರೆಯುವಲ್ಲಿ ದೇವಕವಿಯು ನೇಮಿಚಂದ್ರನಿಂದ ಪ್ರಭಾವಿತನಾಗಿರುವಂತೆ ತೋರುತ್ತದೆ. ಈತನ ಕವಿತಾಬಂಧ

ಪ್ರೌಢವಾಗಿಯೂ ಗಂಭೀರವಾಗಿಯೂ ನಿರರ್ಗಳವಾಗಿಯೂ ಇದೆ. ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ ಈ ಕಾವ್ಯದ ಕೆಲವು ಪದ್ಯಗಳು ಉದ್ಧರಿತವಾಗಿವೆ. (ಬಿ.ಎಸ್.ಎಸ್.)

**ದೇವಚಂದ್ರ:** 1770-1841. ಜೈನಕವಿ. ರಾಜಾವಳೀಕಥೆ, ರಾಮಕಥಾವತಾರ ಎಂಬ ಗ್ರಂಥಗಳ ಕರ್ತೃ. ಚಾಮರಾಜನಗರ ಜಿಲ್ಲೆಯ ಈಗಿನ ಮಲೆಯೂರು ಕನಕಗಿರಿ ಈತನ ಜನ್ಮಸ್ಥಳ. ಇವನ ತಂದೆ ದೇವಯ್ಯ, ತಾಯಿ ಕುಸುಮಾಜಮ್ಮ, ಚಂದಪಾರ್ಯ ಮತ್ತು ಪದ್ಮರಾಜ ಅಣ್ಣಂದಿರು. ಮಲೆಯೂರ ಪಾರ್ಶ್ವನಾಥ ಈ ಕವಿಯ ಇಷ್ಟದೈವ. ಈತ ತನ್ನ 14ನೆಯ ವಯಸ್ಸಿನಿಂದಲೇ ಕಾವ್ಯರಚನೆಗೆ ತೊಡಗಿದ. ಪೂಜ್ಯಪಾದಚರಿತೆ, ಸುಮೇರುಶತಕ, ಪದ್ಮಾವತಿ ಯಕ್ಷಗಾನ, ಭಕ್ತಿಸಾರಶತಕತ್ರಯ, ಶಾಸ್ತ್ರ ಸಾರ ಲಘು ವೃತ್ತಿ, ಪ್ರವಚನ ಸಿದ್ಧಾಂತ ದ್ರವ್ಯ ಸಂಗ್ರಹ, ದ್ವಾದಶಾನುಪ್ರೇಕ್ಷೆಕಥೆ, ಧ್ಯಾನಸಾಮ್ರಾಜ್ಯ, ಅಧ್ಯಾತ್ಮವಿಚಾರ - ಮೊದಲಾದ ಗ್ರಂಥಗಳನ್ನೂ ಈತ ಬರೆದಂತೆ ರಾಜಾವಳೀ ಕಥೆಯಿಂದ ತಿಳಿದುಬರುತ್ತದೆ. ಆದರೆ ಇವಾವೂ ಉಪಲಬ್ಧವಿಲ್ಲ. ತನ್ನ ಮೊದಲ ಕೃತಿ ಪೂಜ್ಯಪಾದಚರಿತೆ ಎಂಬ ಸಾಂಗತ್ಯ ಕಾವ್ಯವನ್ನು ಅಣ್ಣ ಪದ್ಮರಾಜನೊಡನೆ 1792ರಲ್ಲಿ ಬರೆದಂತೆ ತಿಳಿಯುತ್ತದೆ.

ರಾಜಾವಳೀ ಕಥೆ ಪ್ರಾಯಿಕವಾಗಿ ಗದ್ಯರೂಪವಾಗಿದೆ. ಅಲ್ಲಲ್ಲಿ ಕೆಲವು ಶ್ಲೋಕಗಳೂ ಪದ್ಯಗಳೂ ಇವೆ. ಇದನ್ನು 1804ರಲ್ಲಿ ತನಗೆ ಪರಿಚಯವಾದ ಮೆಕೆಂಜಿ ಎಂಬ ವಿದೇಶೀಯ ಸರದಾರನ ಸೂಚನೆಯ ಮೇರೆಗೆ ಮುಮ್ಮಡಿ ಕೃಷ್ಣರಾಜ ಒಡೆಯರ ಆಶ್ರಿತನಾಗಿದ್ದ ವೈದ್ಯಸೂರಿ ಪಂಡಿತನ ಪ್ರೋತ್ಸಾಹದಿಂದ 1838ರಲ್ಲಿ ಬರೆದಂತೆ ತಿಳಿಯುತ್ತದೆ. ಇದರಲ್ಲಿ 11 ಅಧಿಕಾರಗಳಿವೆ. ಜೈನಧರ್ಮ ಪರವಾದ ಚರಿತ್ರೆ, ಪುರಾಣ ಇವಲ್ಲದೆ ಅನೇಕ ರಾಜರು ಮತ್ತು ಮೈಸೂರು ಅರಸರ ಇತಿಹಾಸ, ಕೆಲವು ಕವಿಗಳ ವಿಷಯಗಳೂ ನಿರೂಪಿತಗೊಂಡಿದ್ದು ಚಾರಿತ್ರಿಕ ದೃಷ್ಟಿಯಿಂದ ಈ ಗ್ರಂಥಕ್ಕೆ ಮಹತ್ವಲಭಿಸಿದೆ. ಹೊಸಗನ್ನಡ ಗದ್ಯದ ಕುರುಹುಗಳು ಈ ಕೃತಿಯಲ್ಲಿ ಕಾಣದೊರೆಯುತ್ತವೆ.

ರಾಮಕಥಾವತಾರ 16 ಆಶ್ವಾಸಗಳುಳ್ಳ ಚಂಪೂ ಗ್ರಂಥ'. ನಾಗಚಂದ್ರನ ರಾಮಚಂದ್ರಚರಿತಪುರಾಣದ ಕಥೆಯೇ ಇಲ್ಲಿ ಸ್ವಲ್ಪ ವಿಸ್ತಾರವಾಗಿ ವರ್ಣಿತವಾಗಿದೆ. ಆ ಕಾವ್ಯದ ಅನೇಕ ಪದ್ಯಗಳೂ ಇದರಲ್ಲಿ ಅನುವಾದಗೊಂಡಿವೆ. (ಕೆ.ಎಚ್.)

**ದೇವದುರ್ಗ:** ರಾಯಚೂರು ಜಿಲ್ಲೆಯ ಒಂದು ತಾಲ್ಲೂಕು ಮತ್ತು ಪಟ್ಟಣ.ಈ ತಾಲ್ಲೂಕನ್ನು ಪೂರ್ವದಲ್ಲಿ ರಾಯಚೂರು, ದಕ್ಷಿಣದಲ್ಲಿ ಮಾನ್ವಿ ಮತ್ತು ಪಶ್ಚಿಮದಲ್ಲಿ ಲಿಂಗಸುಗೂರು ತಾಲ್ಲೂಕುಗಳು ಸುತ್ತುವರಿದಿವೆ. ಉತ್ತರದಲ್ಲಿ ಕೃಷ್ಣಾನದಿ ಗಡಿಯಾಗಿ ಹರಿದು ಗುಲ್ಬರ್ಗ ಜಿಲ್ಲೆಯಿಂದ ಬೇರ್ಪಡಿಸಿದೆ. ತಾಲ್ಲೂಕಿನ ಒಟ್ಟು ವಿಸ್ತೀರ್ಣ 1,541ಚ.ಕಿಮೀ ಜನಸಂಖ್ಯೆ 20, 40, 74 ಈ ತಾಲ್ಲೂಕಿನಲ್ಲಿ ದೇವದುರ್ಗ, ಗಬ್ಬೂರು, ಜಾಲಹಳ್ಳಿ ಮತ್ತು ಅರಕೆರೆ ನಾಲ್ಕು ಹೋಬಳಿಗಳಿದ್ದು 188 ಗ್ರಾಮಗಳಿವೆ.

ಈ ತಾಲ್ಲೂಕಿನಲ್ಲಿರುವ ಕೆಲವು ಸಣ್ಣ ಬೆಟ್ಟಗಳನ್ನು ಕರಡೀಗುಡ್ಡ ಹಾಗೂ ಮಸರಕಲ್ಲು ಬೆಟ್ಟ ಶ್ರೇಣಿಗಳೆಂದು ಕರೆಯುತ್ತಾರೆ. ಅವು ಸು. 1500' ಗಳಿಂದ 1774'ಗಳ ವರೆಗೆ ಇದ್ದು ಕರ್ಗಲ್ ಜಿನ್ನಣ್ಣನಪುರ, ಹುನಗುಂದಾಬಾದ, ರಾಮದುರ್ಗ, ದೇವದುರ್ಗ, ಕರಡಿಗುಡ್ಡ, ಗಬ್ಬೂರು ಹಾಗೂ ಗಣೇಕಲ್ಲು ಮೊದಲಾದೆಡೆಗಳಲ್ಲಿ ಹರಡಿಕೊಂಡಿವೆ. ಕೃಷ್ಣಾನದಿಯ ಸ್ವಲ್ಪ ಭಾಗವೂ ಗುಡ್ಡಗಳ ನಡುವೆ ಹರಿದಿದೆ. ಈ ಬೆಟ್ಟಗಳು ಗಣೇಕಲ್ಲು ವಿಭಾಗದಲ್ಲಿ ಧಾರವಾಡ ಗಚ್ಚಿಯ ಶಿಲಾ ಜಾತಿಯನ್ನೂ ಕಾಚಾಪುರ ವಿಭಾಗದಲ್ಲಿ ಕಲಾದಗಿ ಜಾತಿ ಶ್ರೇಣಿಯನ್ನೂ ಹೊಂದಿವೆ. ಇಲ್ಲಿನ ಭೂಮಿಯ ಸ್ವಲ್ಪ ಭಾಗ ಕೆಂಪು ಮರಳು ಮಿಶ್ರಿತ ಬೆಣಚುಕಲ್ಲು ಬೆರೆತ ಕೆಂಪು ಬಣ್ಣದ್ದಾಗಿದ್ದರೆ ಜಾಲಹಳ್ಳಿ ಹಾಗೂ ದೇವದುರ್ಗ, ಇತರ ಭಾಗಗಳಲ್ಲಿ ಕಪ್ಪು ಅಥವಾ ಎರೆಭೂಮಿ ಇದೆ. ಧಾರವಾಡ ಶಿಲಾಶ್ರೇಣಿ ವಿಶೇಷ ಖನಿಜ ಸಂಪತ್ತಿನಿಂದ ಕೂಡಿದೆ. ಡೆಕ್ಕನ್ ಮೈನಿಂಗ್ ಕಂಪನಿಯವರು ಕೆಲಕಾಲ ವಂಡಳ್ಳಿ, ದೇವದುರ್ಗ ಮುಂತಾದ ಸ್ಥಳಗಳ ಗಣಿಗಳಲ್ಲಿ ಬಂಗಾರವನ್ನು ತೆಗೆದರು; ಆದರೆ ಅದರ ಉತ್ಪತ್ತಿಗಿಂತ ವೆಚ್ಚ ಹೆಚ್ಚಾದುದರಿಂದ ಗಣಿಕೆಲಸ ನಿಂತಿತು.

ತಾಲ್ಲೂಕಿನಲ್ಲಿ ಕೃಷ್ಣಾನದಿಯ ದಂಡೆಯುದ್ದಕ್ಕೂ ತೆಳು ಅರಣ್ಯವಿದೆ. ಈ ಕಾಡಿನಲ್ಲಿ ತರೆ, ತುಮರಿ (ಬೀಡಿ ಎಲೆಯ ಮರ), ಕಕ್ಕೆ, ಜಾಲಿ, ಬೆಟ್ಟಲ, ಹೊಂಗೆ, ಹುಣಿಸೆ, ಇಪ್ಪೆ, ಮುತ್ತುಗ, ತಿರುಮನ್, ದಿಂಡಿಗ, ಚುಜ್ಜಲು, ಬಿಜಸಾರ, ಹೊನ್ನೆ, ಮತ್ತಿ, ಬಾರಿ ಮುಂತಾದವೂ ಇಲ್ಲಿನ ಬೆಟ್ಟಗಳಲ್ಲಿ ಸೀತಾಫಲ ಹಣ್ಣಿನ ಗಿಡಗಳೂ ಸಾಕಷ್ಟಿವೆ. ಇಲ್ಲಿನ ಅಡವಿಗಳಲ್ಲಿ ಗಣಜಲು ಹುಲ್ಲೂ ಅಲ್ಲಲ್ಲಿ ವಿಶೇಷವಾಗಿ ಬೆಳೆಯುತ್ತದೆ.

ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ 645 ಮಿಮೀ. ಕೃಷ್ಣಾನದಿ ಗುಡ್ಡಪ್ರದೇಶದಲ್ಲೇ ಹರಿಯುವುದರಿಂದ ನೀರಾವರಿಯ ಸೌಲಭ್ಯ ಅದರಿಂದ ಅಷ್ಟು ಅಗಿಲ್ಲ. ಕೃಷ್ಣಾ ಮೇಲ್ದಂಡೆ ಯೋಜನೆಗಳ ಅನ್ವಯ ನಿರ್ಮಿಸಲಾಗಿರುವ ಆಲಮಟ್ಟಿ ಮತ್ತು ನಾರಾಯಣಪುರ ಜಲಾಶಯಗಳಿಂದ ಈ ತಾಲ್ಲೂಕಿನ ಕೆಲವು ಭಾಗಗಳಿಗೆ ನೀರಾವರಿ ಸೌಲಭ್ಯ ಒದಗಿದೆ. ಇಲ್ಲಿನ ಹೆಚ್ಚು ನೀರಾವರಿಯೆಲ್ಲ ಕೆರೆಗಳ ಮೂಲಕವೆ ನಡೆಯುತ್ತದೆ. ಜೋಳ, ಹತ್ತಿ, ಗೋದಿ, ಬತ್ತ ಈ ತಾಲ್ಲೂಕಿನ ಮುಖ್ಯ ಬೆಳೆಗಳು. ಈ ತಾಲ್ಲೂಕಿನಲ್ಲಿ ಮುಕ್ಯ ಕೈಗಾರಿಕೆ ಕೈಮಗ್ಗವಾಗಿದ್ದು ದೇವದುರ್ಗದ ಬಟ್ಟೆಗಳು ಪ್ರಸಿದ್ಧ.

ಗಬ್ಬೂರು, ಜಾಲಹಳ್ಳಿ, ಅರಕೆರೆ, ರಾಮದುರ್ಗ, ಮಸರಕಲ್ಲು, ಗಣೇಕಲ್ಲು, ವಂಡಳ್ಳಿ ಮತ್ತು ಕೊಪ್ಪರ - ಇವು ಈ ತಾಲ್ಲೂಕಿನ ಇತರ ಮುಖ್ಯಸ್ಥಳಗಳು. ಗಬ್ಬೂರು (ನೋಡಿ) ಒಂದು ಸಣ್ಣ ಊರಾದರೂ ಹಿಂದೊಮ್ಮೆ ವಿದ್ಯಾಕೇಂದ್ರವಾಗಿ ಮೆರೆದು ಪ್ರಸಿದ್ಧ ಸ್ಥಳವಾಗಿತ್ತು.

ಮೊಸರಕಲ್ಲು ಮೊಸಳಿಕಲ್ (ಮುಸಳಿಕಲ್) ಎಂಬ ಪ್ರಾಂತ್ಯ ವಿಭಾಗದ ಮುಖ್ಯ ಸ್ಥಳವಾಗಿತ್ತು. ಇದು ಶಿವಶರಣೆ ಮುಕ್ತಾಯಕ್ಕನ ಗಂಡನ ಊರು ಎಂದು ಹೇಳಲಾಗುತ್ತದೆ. ಪ್ರಸಿದ್ಧ ಹರಿದಾಸರಾದ ಗೋಪಾಲದಾಸರು ಜನಿಸಿದ್ದು ಇಲ್ಲಿ ಎಂಬ ಅಭಿಪ್ರಾಯವೂ ಇದೆ. ಕುಮಾರವಿಜಯ, ಬಸವಶತಕ, ಪಂಪಾಶತಕ, ಭುವನೈಕನಾಯಕೀಶತಕ ಮುಂತಾದ ಗ್ರಂಥಗಳನ್ನು ರಚಿಸಿದ ಸಂಗವಿಭು ಗಣೇಕಲ್ಲಿನವನು. ರಾಮದುರ್ಗದಲ್ಲಿ ಒಂದು ಪುರಾತನ ಕೋಟೆಯಿದೆ. ಜಾಲಹಳ್ಳಿ ಒಂದು ವ್ಯಾಪಾರ ಕೇಂದ್ರ. ಇಲ್ಲಿನ ನಿಂಬೆಹಣ್ಣು ಪ್ರಸಿದ್ಧ. ವಂಡಳ್ಳಿ ಭಾಗದಲ್ಲಿ ಪುರಾತನ ಕಾಲದಲ್ಲಿ ಅದಿರು ಕರಗಿಸುವ ಕಾರ್ಖಾನೆಗಳಿದ್ದವೆಂದು ತಿಳಿದುಬಂದಿದೆ. ಇಲ್ಲಿ ಚಿನ್ನದ ಗಣಿ ಇದ್ದು ಕೆಲಕಾಲ ಚಿನ್ನವನ್ನು ತೆಗೆದಿದ್ದರು. ಕೊಪ್ಪರ ಕೃಷ್ಣಾ ನದಿಯ ದಂಡೆಯಲ್ಲಿರುವ ಒಂದು ಯಾತ್ರಾಕ್ಷೇತ್ರ. ನೃಸಿಂಹಸ್ವಾಮಿ ಇಲ್ಲಿನ ಅಧಿದೈವ. ಇದು ಬಹಮನೀ ಹಾಗೂ ವಿಜಯನಗರದ ರಾಜರ ರಾಯಚೂರು ದೋಆಬ್ ಯುದ್ಧಗಳಲ್ಲಿ ರಹದಾರಿಯಲ್ಲಿನ ಒಂದು ಮುಖ್ಯ ಗ್ರಾಮವಾಗಿತ್ತು.

ದೇವದುರ್ಗ ಈ ತಾಲ್ಲೂಕಿನ ಆಡಳಿತ ಕೇಂದ್ರ. ಜನಸಂಖ್ಯೆ 21,992 ರಾಯಚೂರಿನಿಂದ 60 ಕಿಮೀ ದೂರದಲ್ಲಿದೆ. ಈ ಊರಿನಲ್ಲಿ ಅನೇಕ ಕೈಮಗ್ಗಗಳಿದ್ದು ಕೈಮಗ್ಗದ ಬಟ್ಟೆಗಳ ತಯಾರಿ ಮತ್ತು ವ್ಯಾಪಾರಕ್ಕೆ ಪ್ರಸಿದ್ಧವಾಗಿದೆ. ಸರ್ಕಾರಿ ಆಡಳಿತ ಕಚೇರಿಗಳೂ ಪ್ರಾಥಮಿಕ ಮಾಧ್ಯಮಿಕ ಪ್ರೌಢಶಾಲೆಗಳೂ ಅಂಚೆ ತಂತಿ ಮತ್ತು ವೈದ್ಯಕೀಯ ಸೌಲಭ್ಯಗಳೂ ಇಲ್ಲಿವೆ. ಇಲ್ಲಿ ಬೇಡರ ದೊರೆಗಳಿಂದ ಕಟ್ಟಲ್ಪಟ್ಟು ಅವರ ಬಲವಾದ ಸ್ಥಾನವಾಗಿದ್ದ ಒಂದು ಪುರಾತನ ಗಿರಿದುರ್ಗವಿದೆ. ಒಂದನೆಯ ಆಸಫ್ ಜಾನ ಕಾಲಕ್ಕೆ ದೇವದುರ್ಗ ಕಿಲ್ಲೆ ಬೇಡರ ದೊರೆಯೊಬ್ಬನ ಆಡಳಿತಕ್ಕೊಳಪಟ್ಟಿತ್ತು. ಆಸಫ್ ಜಾ ಆ ದೊರೆಯ ಸಹಾಯ ಕೋರಿದ್ದನೆಂದು ತಿಳಿದುಬರುತ್ತದೆ. ಕೊಹರನ್ ಎಂಬ ಅರಬ್ ದಳವಾಯಿ ಕೆಲಕಾಲ ಈ ನಾಡನ್ನು ಆಳಿದ. ಆತ ನಿಜಾಮನ ಸೈನ್ಯದೊಂದಿಗೆ ಹೋರಾಡದೆ ಫ್ರೇಜರಂ ಎಂಬವನಿಗೆ ಶರಣಾದ. ಆ ಮುಂದೆ ಅದು ನಿಜಾಮ ದೊರೆಗಳ ಅಧೀನದಲ್ಲಿಯೇ ಆ ರಾಜ್ಯ ವಿಲೀನವಾಗುವವರೆಗೆ

ಇದ್ದಿತು. ಸ್ವಾತಂತ್ರ್ಯ ಸಮರದಲ್ಲಿ ದೇವದುರ್ಗವೂ ಒಂದು ಸಣ್ಣ ಪಾತ್ರವನ್ನು ವಹಿಸಿತು. ಅದು ಬಾದಾಮಿಯನ್ನು 150 ಅರಬರ ಜೊತೆಗೆ ಮುತ್ತಿದ ನರಸಿಂಗರಾವ್ ಎಂಬ ನಾಯಕನಿಗೆ ಯೋಜನೆ ಹಾಕಿಕೊಳ್ಳಲು, ಕೆಲಕಾಲ ಚಟುವಟಿಕೆಗಳನ್ನು ನಡೆಸಲು ಕಾರ್ಯರಂಗವಾಗಿದ್ದಿತು. ಕರುಣೇಶ್ವರಪುರಾಣದ ಕರ್ತೃ ಚೆನ್ನಮಲ್ಲಕವಿ ಈ ಊರಿನವನು. (ಎಸ್.ಜಿ.ಎ.)

**ದೇವನಹಳ್ಳಿ:** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಈ ತಾಲ್ಲೂಕಿನ ಆಡಳಿತ ಕೇಂದ್ರ. ಬೆಂಗಳೂರು ಜಿಲ್ಲೆಯ ಈಶಾನ್ಯಕ್ಕಿರುವ ಈ ತಾಲ್ಲೂಕನ್ನು ಉತ್ತರದಲ್ಲಿ ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ ತಾಲ್ಲೂಕು. ಈಶಾನ್ಯಕ್ಕೆ ಶಿಡ್ಲಘಟ್ಟ, ತಾಲ್ಲೂಕು, ಪೂರ್ವ ಮತ್ತು ಆಗ್ನೇಯಕ್ಕೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಾಲ್ಲೂಕು, ದಕ್ಷಿಣಕ್ಕೆ ಬೆಂಗಳೂರು ನಗರ ಜಿಲ್ಲೆಯ ಉತ್ತರ ತಾಲ್ಲೂಕು ಮತ್ತು ಹೊಸಕೋಟೆ ತಾಲ್ಲೂಕುಗಳು, ಪಶ್ಚಿಮ ಮತ್ತು ವಾಯುವ್ಯಕ್ಕೆ ದೊಡ್ಡಬಳ್ಳಾಪುರ ತಾಲ್ಲೂಕುಗಳು ಸುತ್ತುವರೆದಿವೆ. ಆವತಿ, ದೇವನಹಳ್ಳಿ, ವಿಜಯಪುರ, ಬಾಗಲೂರು, ಕುಂದಾಣ ಮತ್ತು ಬೂದಿಗೆರೆ ಹೋಬಳಿಗಳಿದ್ದು, 277 ಗ್ರಾಮಗಳಿವೆ. ತಾಲ್ಲೂಕಿನ ವಿಸ್ತೀರ್ಣ 597.2 ಚ.ಕಿಮೀ. ಜನಸಂಖ್ಯೆ 1,84,872.

ದೇವನಹಳ್ಳಿ ತಾಲ್ಲೂಕು ಹೆಚ್ಚು ಮೈದಾನ ಪ್ರದೇಶದಿಂದ ಕೂಡಿದೆ. ಅಲೆಅಲೆಯಾಗಿ ಏರಿಳಿಯುವ ಇದರ ಸಾಮಾನ್ಯ ಮೇಲ್ಮೈ ಪಶ್ಚಿಮದಿಂದ ಪೂರ್ವಕ್ಕೆ ಇಳಿಜಾರಾಗಿದ್ದು ಫಲವತ್ತಾದ ಕಣಿವೆ ಪ್ರದೇಶಗಳನ್ನೊಳಗೊಂಡಿದೆ. ಉತ್ತರ ಮತ್ತು ಪಶ್ಚಿಮದಲ್ಲಿ ಕೆಲವು ಸಣ್ಣ ಬೆಟ್ಟಗಳುಂಟು. ವಾಯವ್ಯ ಮೂಲೆಯಲ್ಲಿರುವ ದಿಬ್ಬಗೆರೆಬೆಟ್ಟ ತಾಲ್ಲೂಕಿನ ಅತ್ಯಂತ ಎತ್ತರದ ಬೆಟ್ಟ (1173 ಮೀ.). ಬೆಟ್ಟಹಲಸೂರಿನ ದಕ್ಷಿಣದಲ್ಲಿರುವ ಬೆಟ್ಟ ಮತ್ತೊಂದು ಮುಖ್ಯವಾದದ್ದು.

ವಿನ್ಯಾಸ ಮತ್ತು ರೂಪಗಳಲ್ಲಿ ಸ್ಥಳದಿಂದ ಸ್ಥಳಕ್ಕೆ ಭಿನ್ನವಾಗಿರುವ ಗ್ರ್ಯಾನೈಟಿಕ್ ನೈಸ್‌ಶಿಲೆ ಈ ತಾಲ್ಲೂಕಿನ ಎಲ್ಲ ಭಾಗಗಳಲ್ಲೂ ಕಂಡುಬರುತ್ತದೆ. ಬೆಟ್ಟ ಹಲಸೂರಿನ ಚಪ್ಪಡಿ ಕಲ್ಲುಗಳನ್ನು ಬೆಂಗಳೂರಿನ ವಿಧಾನಸೌಧದ ನಿರ್ಮಾಣದಲ್ಲಿ ಬಳಸಲಾಗಿದೆ. ಕೊಯಿರಬೆಟ್ಟ ಚಪ್ಪಡಿಕಲ್ಲುಗಳಿಗೆ ಪ್ರಸಿದ್ಧ. ಹೊರದೇಶಗಳಿಗೂ ಇಲ್ಲಿಂದ ಚಪ್ಪಡಿಕಲ್ಲುಗಳನ್ನು ರಫ್ತು ಮಾಡುತ್ತಾರೆ. ತಾಲ್ಲೂಕಿನಲ್ಲಿ ಕೆಂಪು ಲ್ಯಾಟರೈಟ್ ಮತ್ತು ಫಲವತ್ತಾದ ಜೇಡಿ ಮಿಶ್ರಿತ ಮರಳು ಮಣ್ಣು ಇದೆ. ಈ ತಾಲ್ಲೂಕು ಹಿಂದೆ ದಂಡಕಾರಣ್ಯದ ಕುಂದಾರಣ್ಯದ ಭಾಗವಾಗಿತ್ತೆಂದು ಹೇಳುತ್ತಾರೆ. ತಾಲ್ಲೂಕಿನ ಎತ್ತರ ಪ್ರದೇಶಗಳಲ್ಲಿ ಕುರುಚಲು ಗಿಡಗಳ ಕಾಡುಗಳು ಇವೆ. ಕೆಲವು ರಾಜ್ಯ ಕಾಡುಗಳು ಮತ್ತು ರಕ್ಷಿತ ಕಾಡುಗಳು, ಈ ತಾಲ್ಲೂಕಿನ ಪೂರ್ವಭಾಗದಲ್ಲಿ ಹರಿಯುವ ದಕ್ಷಿಣ ಪಿನಾಕಿನಿ ಸ್ವಲ್ಪ ದೂರ ಹೊಸ ಕೋಟೆ ತಾಲ್ಲೂಕನ್ನು ಬೇರ್ಪಡಿಸಿ ದಕ್ಷಿಣಾಭಿಮುಖವಾಗಿ ಹರಿಯುವುದು. ವಿಜಯಪುರದ ದಕ್ಷಿಣದಲ್ಲಿ ಈ ನದಿ ತಾಲ್ಲೂಕನ್ನು ಪ್ರವೇಶಿಸುತ್ತದೆ. ಈ ತಾಲ್ಲೂಕಿನಲ್ಲಿರುವ ನದಿಯ ಬಲ ದಂಡೆಯ ಭೂಭೂಗಕ್ಕೆ ಇದರ ಜಲಾಶ್ರಯವಿದ್ದು ವ್ಯವಸಾಯಕ್ಕೆ ಅನುಕೂಲವಾಗಿದೆ. ಈ ನದಿಯ ಪ್ರದೇಶದಲ್ಲಿ ಅನೇಕ ಕೆರೆ ಮತ್ತು ಬಾವಿಗಳಿವೆ. ಈ ತಾಲ್ಲೂಕಿನ ಅತಿ ದೊಡ್ಡಕೆರೆ ಅಣ್ಣೇಶ್ವರದ ಹತ್ತಿರವಿದ್ದು ಮತ್ತೊಂದು ದೊಡ್ಡ ಕೆರೆ ವಿಜಯಪುರದ ಪಶ್ಚಿಮಕ್ಕೆ ಇದೆ.

ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ 701 ಮಿಮೀ. ರಾಗಿ ಈ ತಾಲ್ಲೂಕಿನ ಪ್ರಮುಖ ಆಹಾರ ಬೆಳೆ, ಜೋಳ, ಅವರೆ, ಕಡಲೆ, ಎಣ್ಣೆ ಕಾಳು ಉಳಿದ ಬೆಳೆಗಳು. ಬಾವಿಗಳಿಂದ ಕೆರೆಗಳಿಂದ ಭೂಮಿ ನೀರಾವರಿಗೆ ಒಳಪಟ್ಟಿದೆ. ಆಲೂಗೆಡ್ಡೆ, ಮೆಣಸಿನಕಾಯಿ, ಹೂಕೋಸು, ಎಲೆಕೋಸು, ಬಟಾಣಿ, ಈರುಳ್ಳಿ, ಗಜ್ಜರಿ, ಕೆಂಪು ಮೂಲಂಗಿ ಇಲ್ಲಿಯ ಪ್ರಮುಖ ತರಕಾರಿ ವ್ಯಾಪಾರಿ ಬೆಳೆಗಳು. ಕಬ್ಬು, ಬಾಳೆ ಮತ್ತು ಗೋವಿನ ಜೋಳ ಸಹ ಬೆಳೆಯುತ್ತಾರೆ. ಬತ್ತ, ಉಪ್ಪುನೇರಳೆ, ದ್ರಾಕ್ಷಿ ಇತರ ಬೆಳೆಗಳು. ಆವತಿ ಗ್ರಾಮದ ಸುತ್ತಲಿನ ಪ್ರದೇಶದಲ್ಲಿ ದ್ರಾಕ್ಷಿಯನ್ನು ಹೆಚ್ಚು ಬೆಳೆಯುತ್ತಾರೆ. ದೇವನಹಳ್ಳಿಯ ಚಕ್ಕೋತ ಪ್ರಸಿದ್ಧವಾದುದು.

ಈ ತಾಲ್ಲೂಕಿನಲ್ಲಿ ದೇವನಹಳ್ಳಿ ಮತ್ತು ವಿಜಯಪುರ - ಈ ಎರಡು ಪಟ್ಟಣಗಳಿವೆ. ಬಾಗಲೂರು, ಮಾರೇನಹಳ್ಳಿ, ಬೂದಿಗೆರೆ, ಹುಣಸಮಾರನಹಳ್ಳಿ, ಕೊಡಿಗೇನಹಳ್ಳಿ, ಚಿಕ್ಕಜಾಲ, ಉತ್ತನಹಳ್ಳಿ, ಗಂಗಾವರ, ಚೌಡಪ್ಪನಹಳ್ಳಿ, ಮೈಲನಹಳ್ಳಿ, ಎಲಿಯೂರು, ಕೋರಮಂಗಲ, ಆವತಿ, ಹಾರೋಹಳ್ಳಿ, ಬಿಜ್ಜವಾರ, ಕಾರಹಳ್ಳಿ, ಕೊಯಿರ, ವಿಶ್ವನಾಥಪುರ, ನವಂತ್ಯ, ಅರದೇಶನಹಳ್ಳಿ ಮತ್ತು ಬೆಟ್ಟಹಲಸೂರು ಇಲ್ಲಿನ ಮುಖ್ಯ ಗ್ರಾಮಗಳು. ಕಲ್ಲುಚಪ್ಪಡಿಗೆ ಕೊಯಿರ ಗ್ರಾಮವೂ ರೇಷ್ಮೆ ಕೈಗಾರಿಕೆಗೆ ವಿಜಯಪುರ ಮತ್ತು ಬಾಗಲೂರುಗಳೂ ಪ್ರಸಿದ್ಧ. ತಾಲ್ಲೂಕಿನ ಪೂರ್ವಭಾಗದಲ್ಲಿರುವ ನಲ್ಲೂರು ಇತಿಹಾಸಪ್ರಸಿದ್ಧ ಸ್ಥಳ. ಕುಂದಾಣ (ನೋಡಿ) ಎಂಬಲ್ಲಿ ಹೊಯ್ಸಳ ದೊರೆ ರಾಮನಾಥ 14ನೆಯ ಶತಮಾನದಲ್ಲಿ ಆಳುತ್ತಿದ್ದ.

ತಾಲ್ಲೂಕಿನ ಮಧ್ಯದಲ್ಲೇ ಬೆಂಗಳೂರು-ಚಿಕ್ಕಬಳ್ಳಾಪುರ ರೈಲುಮಾರ್ಗ ಹಾದು ಹೋಗಿದ್ದು ಬೆಟ್ಟಹಲಸೂರು, ದೊಡ್ಡಜಾಲ, ದೇವನಹಳ್ಳಿ ಮತ್ತು ಆವತಿಯಲ್ಲಿ ರೈಲ್ವೆ ನಿಲ್ದಾಣಗಳಿವೆ. ದೊಡ್ಡಬಳ್ಳಾಪುರ -ದೇವನಹಳ್ಳಿ- ಶಿಡ್ಲಘಟ್ಟ, ಬೆಂಗಳೂರು-ದೇವನಹಳ್ಳಿ-ನಂದೀದುರ್ಗ, ಬೆಂಗಳೂರು - ದೇವನಹಳ್ಳಿ-ಚಿಕ್ಕಬಳ್ಳಾಪುರ, ನಂದೀದುರ್ಗ-ವಿಜಯಪುರ-ಶಿಡ್ಲಘಟ್ಟ. ಕೊಡಿಗೇನಹಳ್ಳಿ-ಬೂದಿಗೆರೆ-ಬೆಂಗಳೂರು ಮತ್ತು ದೇವನಹಳ್ಳಿ- ಚನ್ನರಾಯಪಟ್ಟಣ ರಸ್ತೆಗಳು ಈ ತಾಲ್ಲೂಕಿನ ಮುಖ್ಯ ರಸ್ತೆಗಳಾದ್ದು ಇವು ತಾಲ್ಲೂಕಿನ ವ್ಯಾಪಾರವಾಣಿಜ್ಯಾಭಿವೃದ್ಧಿಗೆ ಸಹಕಾರಿಯಾಗಿವೆ. ಈ ತಾಲ್ಲೂಕಿನ ವಿಜಯಪುರದಲ್ಲಿ ಪುರಸಭೆ ಮತ್ತು ದೇವನಹಳ್ಳಿಯಲ್ಲಿ. ನಗರಸಭೆ ಇದೆ.

ದೇವನಹಳ್ಳಿ ಈ ತಾಲ್ಲೂಕು ಮತ್ತು ಹೋಬಳಿಯ ಆಡಳಿತಕೇಂದ್ರ. ಬೆಂಗಳೂರು ಹೈದರಾಬಾದ್ ರಾಷ್ಟ್ರೀಯ ಹೆದ್ದಾರಿಯಲ್ಲಿ, ಬೆಂಗಳೂರು ನಗರಕ್ಕೆ 39 ಕಿಮೀ ದೂರದಲ್ಲಿದೆ. ಬೆಂಗಳೂರು ಚಿಕ್ಕಬಳ್ಳಾಪುರದ ರೈಲು ಮಾರ್ಗ ಈ ಪಟ್ಟಣದ ಮೂಲಕ ಹಾದುಹೋಗುತ್ತದೆ. ಜನಸಂಖ್ಯೆ 23,190.

ದೇವನಹಳ್ಳಿಯಲ್ಲಿ ನಗರಸಭಾಡಳಿತವಿದೆ. ಉತ್ತಮ ಮಾರ್ಗಸಂಪರ್ಕ ಮತ್ತು ರೈಲ್ವೆ ನಿಲ್ದಾಣವಿದ್ದು ವ್ಯಾಪಾರಕೇಂದ್ರವಾಗಿದೆ. ದೇವನಹಳ್ಳಿ ಬಳಿ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ ನಿರ್ಮಿಸುವ ಯೋಜನೆ ಕಾರ್ಯಗತವಾಗುವ ಹಂತದಲ್ಲಿದೆ. ರೇಷ್ಮೆ ಕಾರ್ಖಾನೆ ಇದೆ. ಪ್ರತಿ ಬುಧವಾರ ಇಲ್ಲಿ ಸಂತೆ ಸೇರುತ್ತದೆ.

ದೇವನಹಳ್ಳಿ ಮೂಲ ಹೆಸರು ದೇವನದೊಡ್ಡಿ. ಕಂಚಿಯಿಂದ ವಲಸೆ ಬಂದ ಆವತಿ ರಾಜವಂಶದ ಮಲ್ಲಬೈರೇಗೌಡ ಈ ಸ್ಥಳದಲ್ಲಿ ಕೋಟೆಯೊಂದನ್ನು ಕಟ್ಟಿದ (1501). ಇಲ್ಲಿಈತನ ವಂಶದವರು ಆಳಿದರು. 1749ರಲ್ಲಿ ದಳವಾಯಿ ನಂಜರಾಜಯ್ಯ ಇದನ್ನು ವಶಪಡಿಸಿಕೊಂಡು ಮೈಸೂರು ಸಂಸ್ಥಾನಕ್ಕೆ ಸೇರಿಸಿದ. ಹೈದರನ ಶೌರ್ಯ ಮೊದಲು ಬೆಳಕಿಗೆ ಬಂದಿದ್ದು ಈ ಸಂದರ್ಭದಲ್ಲಿ ನಡೆದ ಯುದ್ಧದಲ್ಲಿಯೇ, 1753ರಲ್ಲಿ ಟಿಪ್ಪು ಈ ಊರಿನಲ್ಲಿ ಜನಿಸಿದ. ಕೋಟೆಯ ಪಶ್ಚಿಮಕ್ಕೆ ಹೈದರನ ಮನೆಯಿದ್ದ ಸ್ಥಳವನ್ನೂ ಟಿಪ್ಪು ಹುಟ್ಟಿದ ಎಡೆಯನ್ನೂ ಇಲ್ಲಿನ ಜನರು ತೋರಿಸುತ್ತಾರೆ. ಹಾಳಾಗಿದ್ದ ಇಲ್ಲಿನ ಕೋಟೆಯನ್ನು ಹೈದರ್ ಅಧಿಕಾರಕ್ಕೆ ಬಂದಾಗ ಮತ್ತೆ ಕಟ್ಟಿಸಿದ್ದ. ದೇವನಹಳ್ಳಿಗೆ ಟಿಪ್ಪು ಯೂಸಫಾಬಾದ್ (ಸುಂದರ ನೆಲೆ) ಎಂದು ಹೆಸರಿಟ್ಟ. ಆದರೆ ಅದು ರೂಢಿಗೆ ಬರಲಿಲ್ಲ. ಹೈದರ್ ಮತ್ತು ಟಿಪ್ಪು ಇವರ ಕಾಲದಲ್ಲಿ ದೇವನಹಳ್ಳಿ ಪ್ರಮುಖ ಪಟ್ಟಣವಾಗಿತ್ತು. 1791ರಲ್ಲಿ ಕಾರ್ನ್‌ವಾಲಿಸ್ ಇದನ್ನು ವಶಪಡಿಸಿಕೊಂಡ.

ದೇವನಹಳ್ಳಿಯಲ್ಲಿ ಆಗಿನ ಕೋಟೆಕೊತ್ತಲಗಳು, ಸುಲ್ತಾನ್‌ಪೇಟೆ, ಬತೇರಿ, ಪೂರ್ಣಯ್ಯನ ಸರೋವರ ಮೊದಲಾದವುಗಳ ಅವಶೇಷಗಳಿವೆ. ಟಿಪ್ಪು ಹುಟ್ಟಿದ ಸ್ಥಳವನ್ನು ರಾಷ್ಟ್ರೀಯ ಸ್ಮಾರಕವಾಗಿ ರಕ್ಷಿಸಲಾಗಿದೆ. ಹಳೆಯದಾದ ನಂಜುಂಡೇಶ್ವರ ದೇವಾಲಯ, ವೇಣುಗೋಪಾಲಸ್ವಾಮಿ ಗುಡಿ, ಸಿದ್ಧೇಶ್ವರ ಗುಡ್ಡಿ, ಆಂಜನೇಯ ಮತ್ತು ಗಂಗಮ್ಮ ಗುಡಿಗಳಿವೆ. ವೇಣುಗೋಪಾಲ ಮತ್ತು ನಂಜುಂಡೇಶ್ವರ ಗುಡಿಗಳು ಪಾಳೆಯಗಾರರ ಕಾಲದ ಕೃತಿಗಳು. ಆ ಕಾಲದ ಅನೇಕ ಪೌರಾಣಿಕ ಶಿಲ್ಪಗಳು ಈ

ದೇವಾಲಯಗಳಲ್ಲಿವೆ. ಪ್ರತಿ ಚೈತ್ರ ಹುಣ್ಣಿಮೆಯಂದು ವೇಣುಗೋಪಾಲಸ್ವಾಮಿ ಜಾತ್ರೆ ನಡೆಯುತ್ತದೆ (ಆರ್.ಎಸ್.ಆರ್.)

**ದೇವನಹಳ್ಳಿ ಪಾಳೆಯಗಾರರು :** 16ನೆಯ ಶತಮಾನದಾರಭ್ಯ 18ನೆಯ ಶತಮಾನದ ಮಧ್ಯಭಾಗದವರೆಗೆ ಬೆಂಗಳೂರು ಜಿಲ್ಲೆಯ ದೇವನಹಳ್ಳಿಯಿಂದ ಆ ಸುತ್ತಣ ಪ್ರಾಂತ್ಯವನ್ನು ಆಳುತ್ತಿದ್ದ ಪಾಳೆಯಗಾರರು. ದೇವನಹಳ್ಳಿಗೆ ಮೊದಲು ದೇವ ಎಂಬುವನು ಮುಖ್ಯಸ್ಥನಾಗಿದ್ದುದರಿಂದ ಅದಕ್ಕೆ ದೇವನದೊಡ್ಡಿ ಎಂಬ ಹೆಸರಿದ್ದು ಒಂದು ಚಿಕ್ಕ ಹಳ್ಳಿಯಾಗಿತ್ತಂತೆ. ಕಂಚಿಯಿಂದ ನಿರಾಶ್ರಿತನಾಗಿ ಬಂದು ಆವತಿಯಲ್ಲಿ ನೆಲೆಸಿದ್ದವನೊಬ್ಬನ ಮಗ ಮಲ್ಲಬೈರೇಗೌಡ 1501ರಲ್ಲಿ ದೇವನದೊಡ್ಡಿಯಲ್ಲಿ ಕೋಟೆಯನ್ನು ಕಟ್ಟಿ ಅದಕ್ಕೆ ದೇವನಹಳ್ಳಿ ಅಥವಾ ದೇವಂಡಹಳ್ಳಿ ಎಂದು ಹೆಸರಿಟ್ಟು, ಅದರ ಆಡಳಿತವನ್ನು ಆತನ ಸಹೋದರ ಸಣ್ಣ ಬೈರೇಗೌಡನಿಗೆ ವಹಿಸಿದ. ಸಣ್ಣ ಬೈರೇಗೌಡ ನಲವತ್ತು ವರ್ಷಗಳ ಕಾಲ ಆಳಿ ಆ ಪ್ರದೇಶವನ್ನು ಅಭಿವೃದ್ಧಿಗೆ ತಂದ. ಅವನ ಮಗ ಬೈರೇಗೌಡ ಇಪ್ಪತ್ತೈದು ವರ್ಷಗಳ ಕಾಲ ಆಳಿದ. ಅನಂತರ ಪುತ್ರಾನುಕ್ರಮವಾಗಿ ದಯಾಳು ಬೈಚೇಗೌಡ ಮೂವತ್ತೇಳು ವರ್ಷ, ಮುದ್ದಬೈರೇಗೌಡ ಇಪ್ಪತ್ತು ವರ್ಷ, ಇಮ್ಮಡಿ ಬೈರೇಗೌಡ ಮೂವತ್ತೇಳು ವರ್ಷ, ಗೋಪಾಲಗೌಡ ಮೂವತ್ತೈದು ವರ್ಷ, ದೊಡ್ಡಬೈರೇಗೌಡ ಐವತ್ತನಾಲ್ಕು ವರ್ಷ ಪಾಳೆಯಗಾರರಾಗಿದ್ದರು. ದೊಡ್ಡಬೈರೇಗೌಡನ ಮಗ ತಂಗಪ್ಪಗೌಡ ಹತ್ತು ತಿಂಗಳು ಆಳಿ ಮಕ್ಕಳಿಲ್ಲದೆ ಮಡಿದ. ಅನಂತರ ಅವನ ಬಂಧು ಚಿಕ್ಕ ಬಲ್ಳಾಪುರದ ಚಿಕ್ಕಪ್ಪ ಗೌಡ ಪಾಳೆಯಗಾರನಾದ. ಇವನ ಕಾಲದಲ್ಲಿ ಮೈಸೂರಿನ ದಳವಾಯಿ ನಂಜರಾಜಯ್ಯ ದೇವನಹಳ್ಳಿಗೆ ಮುತ್ತಿಗೆ ಹಾಕಿದ (1749). ಈ ಮುತ್ತಿಗೆ ಎಂಟು ತಿಂಗಳುಗಳ ಕಾಲ ಮುಂದುವರಿದು ಕೊನೆಗೆ ಪಾಳೆಯಗಾರ ಸೋತ. ದೇವನಹಳ್ಳಿ ಮೈಸೂರಿನ ಪ್ರಭುತ್ವವನ್ನು ಒಪ್ಪಿಕೊಂಡಿತು. ಹೈದರ್ ಅಲಿಯ ಯುದ್ಧ ಪರಾಕ್ರಮ ಮೊದಲ ಬಾರಿಗೆ ಬೆಳಕಿಗೆ ಬಂದುದು ಈ ಯುದ್ಧದಲ್ಲಿ. ಹೈದರ್ ದೇವನಹಳ್ಳಿಗೆ ತೆರಳಿದಾಗ, ಚಿಕ್ಕಪ್ಪಗೌಡ, ಗುತ್ತಿಯ ನಾಯಕ ಮುರಾರಿನಾಯಕನ ಸ್ನೇಹವನ್ನು ಸಂಪಾದಿಸಿ, ಆತನ ಸೈನ್ಯವನ್ನು ಚಿಕ್ಕಬಳ್ಳಾಪುರದ ಕೋಟೆಯ ರಕ್ಷಣೆಗೆ ನೇಮಿಸಿ, ತಾನು ನಂದಿದುರ್ಗಕ್ಕೆ ಪಲಾಯನ ಮಾಡಿದ. ಆದರೆ ಹೈದರ್ ಚಿಕ್ಕಪ್ಪಗೌಡನನ್ನು ಸೆರೆಹಿಡಿದು ಅವನನ್ನು ಮತ್ತು ಅವನ ಕುಟುಂಬದವರನ್ನು ಬೆಂಗಳೂರಿನಲ್ಲಿ ಸೆರೆಯಲ್ಲಿಟ್ಟ. ಅಲ್ಲಿ ಚಿಕ್ಕಪ್ಪಗೌಡ ಮೃತನಾದ. ದೇವನಹಳ್ಳಿ ಮೈಸೂರು ರಾಜ್ಯಕ್ಕೆ ಸೇರಿಹೋಯಿತು. (ಎ.ವಿ.ವಿ.,; ಎಂ.ಕೆ.ಬಿ.)

**ದೇವನೂರು :** ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕಿನಲ್ಲಿ ಕಡೂರಿನಿಂದ ಆಗ್ನೇಯಕ್ಕೆ 21 ಕಿಮೀ ದೂರದಲ್ಲಿರುವ ಗ್ರಾಮ. ಇದು ಜನಪ್ರಿಯ ಜೈಮಿನಿ ಭಾರತವನ್ನು ಬರೆದ ಕವಿ ಲಕ್ಷ್ಮೀಶನ ಜನ್ಮಸ್ಥಳ ಹಾಗೂ ಪುರಾಣ ಪ್ರಸಿದ್ಧವಾದ ಸ್ಥಳ. ನವಸಿದ್ಧರು ನಿಂತು ತಪಸ್ಸು ಮಾಡಿದ ಕ್ಷೇತ್ರವೆಂದೂ ಅಮರಪುರ, ಗೀರ್ವಾಣಪುರ, ಸುರಪುರ, ದೇವಪುರವೆಂಬ ಹೆಸರುಗಳಿಂದ ಸಂಸ್ಕೃತಿಯ ಕೇಂದ್ರವಾಗಿತ್ತೆಂದೂ ಉಲ್ಲೇಖಗಳಿವೆ.

ದೇವನೂರು 13ನೆಯ ಶತಮಾನದಿಂದಲೂ ಪ್ರಸಿದ್ಧವಾಗಿತ್ತು. 1234ರ ಇಲ್ಲಿನ ಒಂದು ಶಾಸನ ಈ ಊರಿಗೆ ಲಕ್ಷ್ಮೀನಾರಾಯಣಪುರವೆಂದು ಪ್ರತಿನಾಮವಿತ್ತೆಂದು ತಿಳಿಸುತ್ತದೆ. ಕೆರೆಯ ಬಳಿ ಹಲವು ಹೊಯ್ಸಳ ಕೃತಿಗಳ ಅವಶೇಷಗಳು ದೊರಕಿವೆ. ಇಲ್ಲಿ ಒಂದು ರಾಮೇಶ್ವರ ದೇವಾಲಯ, ಒಂದು ಜೈನಬಸದಿ ಇತ್ತೆಂದು ಹೇಳಲಾಗುತ್ತದೆ.

ಈಗಿರುವ ಲಕ್ಷ್ಮೀಕಾಂತ ಅಥವಾ ಲಕ್ಷ್ಮೀನಾರಾಯಣ ದೇವಾಲಯ ಸು. 17ನೆಯ ಶತಮಾನದಲ್ಲಿ ಕಣಶಿಲೆಯಲ್ಲಿ ಕಟ್ಟಿದ ಸಾಮಾನ್ಯ ಕಟ್ಟಡ. ಅದರ ಒಳಗಿರುವ ವಿಗ್ರಹ ಹೊಯ್ಸಳ ಶೈಲಿಯದು. ಇದರಲ್ಲಿ ಗರ್ಭಗೃಹ, ಅಂತರಾಳ, ಒಳನವರಂಗ ಮತ್ತು ಹೊರನವರಂಗ ಇವೆ. ಒಳನವರಂಗದಲ್ಲಿ ಆಳ್ವಾರುಗಳು ಮೊದಲಾದ ವಿಗ್ರಹಗಳಿವೆ. ಅವುಗಳಲ್ಲಿ ಒಂದು ಲಕ್ಷ್ಮೀಶನದು (ಸ್ಥಳೀಯ ಹೆಸರು ಲಕ್ಷ್ಮೀಕಾಂತ ಹೆಬ್ಬಾರ). ಹೊರನವರಂಗದಲ್ಲಿ ವಿಶ್ವಕ್ಸೇನ, ಭೂದೇವಿ ಮೊದಲಾದ ದೇವವಿಗ್ರಹಗಳಿವೆ. ದೇವಾಲಯ ಪ್ರಾಕಾರದ ಹಿಂಗೋಡೆಯ ಬಳಿಯ ಮಂಟಪವೊಂದನ್ನು ಲಕ್ಷ್ಮೀಶನ ಜನ್ಮಸ್ಥಳವೆಂದು ತೋರಿಸಲಾಗುತ್ತದೆ. ಲಕ್ಷ್ಮೀಶನ ಮನೆಯ ನಿವೇಶನದ ಬಳಿ ಇರುವ ಒಂದು ಮಂಟಪ ಕವಿಯೇ ಕಟ್ಟಿಸಿದ್ದೆಂದು ಪ್ರತೀತಿ.

ಈ ಊರಿನಲ್ಲಿ ಒಂದು ಸಿದ್ಧೇಶ್ವರ ದೇವಾಲಯವೂ ಇದೆ. ಇದು ಹೊಯ್ಸಳ ಕಾಲದ ಸರಳ ಶೈಲಿಯಲ್ಲಿರುವ ಕಟ್ಟಡ. ದೇವಾಲಯದ ಬಳಿ ಸೂರ್ಯ, ಸಪ್ತಮಾತೃಕೆಯರು, ಗಣೇಶ ಮೊದಲಾದ ಶಿಲ್ಪಗಳಿವೆ. ಈ ದೇವಾಲಯದಲ್ಲಿರುವ ಲಿಂಗವನ್ನು ಜಗನ್ನಾಥ ವಿಜಯವನ್ನು ಬರೆದ ಕವಿ ರುದ್ರಭಟ್ಟ ನರ್ಮದೆಯಿಂದ ತಂದು ಸ್ಥಾಪಿಸಿದನೆಂದು ಪ್ರತೀತಿ. (ಕೆ.ಟಿ.ಆರ್.)

**ದೇವನೂರು ಮಹಾದೇವ :** 1948- ಕನ್ನಡದ ದಲಿತ ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ದಲಿತ ಸಂವೇದನೆಗಳನ್ನು ಅತ್ಯಂತ ಸೃಜನಶೀಲವಾಗಿ ಪ್ರಕಟಿಸಿದ ಪ್ರಸಿದ್ಧ ಕಥೆಗಾರ, ಕಾದಂಬರಿಕಾರ ಹಾಗೂ ಸಾಮಾಜಿಕ ಹೋರಾಟಗಾರ. ಇವರ ನಿಜವಾದ ಹೆಸರು ಎನ್. ಮಹಾದೇವಯ್ಯ. ಮೈಸೂರು ಜಿಲ್ಲೆ ನಂಜನಗೂಡು ತಾಲ್ಲೂಕಿನ ದೇವನೂರಲ್ಲಿ 10 ಜೂನ್ 1948ರಂದು ಜನಿಸಿದರು. ತಂದೆ ನಂಜಯ್ಯ ಪೊಲೀಸ್ ಕಾನ್ಸ್‌ಟೇಬಲ್ ಆಗಿದ್ದರು. ತಾಯಿ ನಂಜಮ್ಮ. ದೇವನೂರು, ನಂಜನಗೂಡು, ಮೈಸೂರುಗಳಲ್ಲಿ ಮಹಾದೇವ ಅವರ ವಿದ್ಯಾಭ್ಯಾಸ ಜರುಗಿತು. ಮೈಸೂರು ವಿಶ್ವವಿದ್ಯಾನಿಲಯದಿಂದ ಕನ್ನಡ ಎಂ.ಎ. ಪದವಿ ಪಡೆದರು. ಅನಂತರ ಕೆಲಕಾಲ ಮೈಸೂರಿನ ಭಾರತೀಯ ಭಾಷಾ ಸಂಸ್ಥಾನದಲ್ಲಿ ಅಧ್ಯಾಪಕ - ಸಂಶೋಧಕರಾಗಿ ಕಾರ್ಯನಿರ್ವಹಿಸಿದರು (1989). ಅನಂತರದ ವರ್ಷದಲ್ಲಿ ಪೂರ್ಣಾವಧಿ ವ್ಯವಸಾಯಗಾರರಾದರು.

ವಿದ್ಯಾಭ್ಯಾಸ ಮಾಡುತ್ತಿದ್ದ ದಿನಗಳಲ್ಲಿಯೇ ಮಹಾದೇವ ಸಾಹಿತ್ಯ ರಚನೆಯಲ್ಲಿ ತೊಡಗಿದ್ದರು. ಆರಂಭದಲ್ಲಿ ಇವರು ಬರೆದದ್ದು ಕವನಗಳನ್ನು ನವ್ಯಸಾಹಿತ್ಯ ಉತ್ತುಂಗ ಸ್ಥಿತಿಯಲ್ಲಿದ್ದ ಕಾಲದಲ್ಲಿ ಇವರು ಕಥಾ ರಚನೆಯಲ್ಲಿ ತೊಡಗಿದ್ದರು. ಅಮಾಸ, ಡಾಂಬರು ಬಂದುದು, ಮಾರಿಕೊಂಡವರು - ಮೊದಲಾದ ದಲಿತ ಸಂವೇಧನೆಯನ್ನೊಳಗೊಂಡ ಮೌಲಿಕ ಕಥೆಗಳನ್ನು ಪ್ರಕಟಿಸಿದರು. ಕನ್ನಡ ಸಾಹಿತ್ಯ ವಲಯದಲ್ಲಿ ಈ ಕಥೆಗಳು ಬಹುಬೇಗ ಚರ್ಚೆಯ ವಸ್ತುಗಳಾದುವು. ಜೊತೆಗೆ ನವ್ಯೋತ್ತರದ ಅಗ್ರಗಣ್ಯ ಲೇಖಕನೆನಿಸುವ ಸೂಚನೆಗಳನ್ನು ನೀಡಿದವು. ಕಾಲಕ್ರಮದಲ್ಲಿ ಇವರು ದ್ಯಾವನೂರು (ಕಥಾಸಂಕಲನ), ಒಡಲಾಳ, ಕುಸುಮಬಾಲೆ (ಕಾದಂಬರಿ) ಈ ಕೃತಿಗಳನ್ನು ಹೊರತಂದರು. ಸಂಖ್ಯಾದೃಷ್ಟಿಯಿಂದ ಕೃತಿಗಳು ಕಡಿಮೆ ಎನಿಸಿದರೂ ಸತ್ತ್ವದ ದೃಷ್ಟಿಯಿಂದ, ಹಿರಿಮೆಯ ದೃಷ್ಟಿಯಿಂದ ಮಹತ್ತ್ವದ ಕೃತಿಗಳು.

ಸ್ವಾತಂತ್ರ್ಯಾನಂತರದ ದಿನಗಳಲ್ಲಿ ರೂಢಿಗೆ ಬಂದ ಶಿಕ್ಷಣ ಕ್ರಮ ಅಂಬೇಡ್ಕರ್ ಚಳವಳಿಯ ಪ್ರಭಾವ ಮತ್ತು ಆಧುನಿಕ ವಿದ್ಯಮಾನಗಳಿಂದಾದ ದೃಷ್ಟಿಕೋನಗಳಿಂದ ದಲಿತರಲ್ಲಿ ಜಾಗೃತಿ ಮೂಡಿ ದಲಿತ ಲೇಖಕರು, ದಲಿತ ಪ್ರಪಂಚದ ಒಳ ಹೊರಗನ್ನು ಅದುವರೆಗೆ ಕಂಡರಿಯದ ರೀತಿಯಲ್ಲಿ ಅನಾವರಣ ಮಾಡತೊಡಗಿದರು. ಶತಶತಮಾನಗಳಿಂದ ದಲಿತರನ್ನು ಕಾಡುತ್ತ ಬಂದಿರುವ ಅಸ್ಪೃಶ್ಯತೆ, ಧಾರ್ಮಿಕ, ಸಾಮಾಜಿಕ ಅಮಾನುಷ ಪದ್ಧತಿಗಳು, ಅಪಮಾನದ ಸಂಗತಿಗಳು ಸಾಹಿತ್ಯದಲ್ಲಿ ಅನಾವರಣಗೊಳ್ಳತೊಡಗಿದವು. ದಲಿತನೊಬ್ಬನ ಸಂಕಷ್ಟಗಳು ಸಾಮಾಜಿಕ ಸಂಘರ್ಷವೊಂದಕ್ಕೆ ಪ್ರೇರಣೆಯಾಗಬೇಕು ಎಂಬುದು ದಲಿತ ಸಾಹಿತ್ಯದ ಮುಖ್ಯ ಲಕ್ಷಣವೆನಿಸಿತು. ಪೂರ್ಣವಾಗಿ ದಲಿತ ಲೋಕವನ್ನು, ದಲಿತ ಸಂಸ್ಕೃತಿಯ ಸೂಕ್ಷ್ಮಗಳನ್ನು ತೆರೆದಿಡುವುದೇ ಇಲ್ಲಿ ಪ್ರಮುಖ ವಿಷಯವಾಯಿತು. ಮಹಾದೇವ ಅವರ ಕಥಾ ಸಾಹಿತ್ಯ ಈ ಮಾತಿಗೆ ಉದಾಹರಣೆಯಾಗಿದೆ. ಸಾಮಾನ್ಯವಾಗಿ ಇವರ ಕಥೆಗಳಲ್ಲಿ ಬರುವ ದಲಿತರ ವಾಸಸ್ಥಾನ, ಹಟ್ಟಿ, ಹರಿದಿರುವ ಬಟ್ಟೆ, ಊರಿನ ದಾರಿಯ ವಿವರಗಳು ಕುವೆಂಪು ಅವರ ಕಾದಂಬರಿಗಳಲ್ಲಿನ ಕಾಡಿನ ವಿವರಗಳಂತೆ ದಟ್ಟವಾಗಿರುವುದನ್ನು ಕಾಣಬಹುದು. ಒಂದು ದಹನದ ಕತೆಯಲ್ಲಿ ನಾಯಕ ಕಾಣುವ ತನ್ನ ಹಟ್ಟಿಯ ವರ್ಣನೆ ಈ ಮೇಲಿನ ಮಾತಿಗೆ ಉದಾಹರಣೆ ಎಂಬಂತಿದೆ. ಇಂಥ ಬರೆವಣಿಗೆಯ

ಮೂಲಕ ಪ್ರಪ್ರಥಮಬಾರಿಗೆ ದಲಿತರ ಊರು ಕೇರಿಗಳ ವಿಷಯ ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಯಿತು.

ದ್ಯಾವನೂರು ಕಥಾಸಂಕಲನದ ಅನಂತರ ಬಂದ ಒಡಲಾಳ ಕಾದಂಬರಿ ದಲಿತ ಕುಟುಂಬಗಳ ಬದುಕನ್ನು ಸಮರ್ಥವಾಗಿ ಅಭಿವ್ಯಕ್ತಿಸಿದ ಕೃತಿ. ದಲಿತ ಬದುಕಿನ ವಿವಿಧ ಮುಖಗಳನ್ನು ಚಿತ್ರಿಸುವಲ್ಲಿ ಮಹಾದೇವ ಯಶಸ್ವಿ ಬರೆಹಗಾರರಾಗಿದ್ದಾರೆ. ಸಾಕವ್ವ ಈ ಕಾದಂಬರಿಯ ಕೇಂದ್ರ ಪಾತ್ರ. ಇವಳ ಸುತ್ತ ಹಬ್ಬಿರುವ ವರ್ತಮಾನದ ಶೋಷಣೆಮೂಲ ಬದುಕಿನ ನಿರೂಪಣೆಯ ಈ ಬರವಣಿಗೆಗೆ ಲಾಲಿತ್ಯವಿದೆ. ಹಾಸ್ಯವಿದೆ, ಮೇಲುದನಿ ಇದೆ, ಅಭಿವ್ಯಕ್ತಿ ಕ್ರಮದಲ್ಲಿ ಕುವೆಂಪು ಮತ್ತು ಮಾಸ್ತಿಯವರನ್ನು ನೆನಪಿಸುವಂತಿದೆ. ಅಕ್ಷರಮಟ್ಟಿಗೆ ದಲಿತ ಸಂವೇದನೆ ಪ್ರಕಟವಾಗಿದೆ.

ಕುಸುಮಬಾಲೆ ಮಹಾದೇವ ಅವರ ಮೂರನೆಯ ಕೃತಿ. ಈ ಕಾದಂಬರಿಯ ರಚನಾಸ್ವರೂಪ ವಿಶಿಷ್ಟವಾದದ್ದು. ನಿರ್ದಿಷ್ಟ ಕಾಲದಲ್ಲಿ ಕತೆಯನ್ನು ಹೇಳದೆ ಭೂತ, ವರ್ತಮಾನ ಮತ್ತು ಭವಿಷ್ಯತ್ಕಾಲಗಳಲ್ಲಿ ಹೇಳತೊಡಗಿರುವುದು ಕಂಡುಬರುತ್ತದೆ. ಹೊಲೆಯರ ಕೇರಿಯಲ್ಲಿ ಜರುಗುವ ಕಾರ್ಯಾಚರಣೆಗಳೆಲ್ಲ ವರ್ತಮಾನಕ್ಕೂ ಅಕ್ಕಮಹಾದೇವಮ್ಮ ಮತ್ತು ಯಾಡರ ವಿವರಗಳು ಭೂತಕಾಲಕ್ಕೂ ಪರ್‍ಯಾದ (ಕುಸುಮಳ ತಮ್ಮ), ಈರಿಯ ಮಗು ಕೆಂಪಿಯ ಗರ್ಭದಲ್ಲಿರುವ ಶಿಶು ಇವು ಭವಿಷ್ಯತ್ಕಾಲಕ್ಕೂ ಸಂಬಂಧಿಸಿದವಾಗಿವೆ. ಜೀವಾತ್ಮಕ್ಕೂ ಮಂಚಕ್ಕೂ ನಡೆಯುತ್ತಿದ್ದ ಸಂಭಾಷಣೆ, ಜೋತಮ್ಮಗಳ ನಡುವೆ ನಡೆಯುತ್ತಿದ್ದ ಚರ್ಚೆ, ಜನನ ಮರಣಗಳಿಗೆ ಸಂಬಂಧಿಸಿದ ಜಾನಪದಗಳು ಇತ್ಯಾದಿಗಳಲ್ಲೆ ಮತ್ತೊಂದು ಹಂತವನ್ನು ತಲುಪುವಂಥವು. ಅಲ್ಲಲ್ಲಿ ಕಲಸು ಮೇಲೋಗರವಾಗಿರುವ, ಎಲ್ಲೆಲ್ಲೋ ಹರಡಿಕೊಂಡಿರುವ ವಿವರಗಳನ್ನು ತುಂಬ ಎಚ್ಚರಿಕೆಯಿಂದ ಗಂಭೀರವಾಗಿ ಗಮನಿಸುತ್ತ ಕ್ರೋಡೀಕರಿಸುತ್ತ ಹೋದರೆ ಕಾದಂಬರಿಯ ಆರಂಭದಲ್ಲಿ ಲೇಖಕರು ಸಂಗ್ರಹಿಸಿಕೊಂಡಿರುವ ಕತೆಯನ್ನು ಅದರ ವಸ್ತುವನ್ನು ಅರ್ಥಮಾಡಿಕೊಳ್ಳುವ ಸಾಧ್ಯತೆ ಇದೆ. ಹೀಗಾಗಿ ಮಹಾದೇವ ಅವರ ಉಳಿದೆರಡು ಕೃತಿಗಳಿಗಿಂತ ಇದು ಭಿನ್ನ ಸ್ವರೂಪದ್ದಾಗಿದೆ. ಇಲ್ಲಿಯ ಭಾಷೆ ಅದುವರೆಗೆ ಕನ್ನಡ ಸಾಹಿತ್ಯದಲ್ಲಿ ದಾಖಲಾಗಿರದ ಗ್ರಾಮ್ಯ ಸೊಗಡಿನಿಂದ ಕೂಡಿದ್ದು ವಿಶಿಷ್ಟವಾಗಿದೆ. ಏನೂ ಅರಿಯದ ಪರ್‍ಯಾದನಂಥವರು ಪಡುವ ಸಂತೋಷ, ಕುಸುಮ ಈರಿಯಂಥವರು ಅನುಭವಿಸುವ ಯಾತನೆ, ತಮ್ಮ ಮಿತಿಯಲ್ಲಿಯೇ ಗಾರಸಿದ್ಧಮಾವ, ಯಾಡ, ಅಮಾಸ ಮೊದಲಾದವರು ಪಡುವ ಶ್ರಮ, ಸಂದಿಗ್ಧತೆಯ ಸಂದರ್ಭಗಳು ಬಂದೊದಗಿದ್ದರೂ ತಮ್ಮ ಜೀವನದಲ್ಲಿ ಸುಖ ಸಂತೋಷಗಳಿಗೆ ಧಕ್ಕೆಯನ್ನುಂಟುಮಾಡಿಕೊಳ್ಳಲಾರದ ಚೆನ್ನನ ಅಪ್ಪನಂಥ'ವರ ಲವಲವಿಕೆಯ ಬದುಕು ಇತ್ಯಾದಿಗಳೆಲ್ಲ ಸಂವೇದನಾಶೀಲ ಚೌಕಟ್ಟಿನೊಳಗೇ ನಡೆಯುತ್ತವೆ. ಹೀಗಾಗಿ ಇಲ್ಲಿಯ ಬದುಕಿನಲ್ಲಿ ವೈವಿಧ್ಯತೆ ಇದೆ. ಇದಕ್ಕೆ ಪ್ರೇರಕವಾಗಿರುವ ಪರಿಸರದ ಸಾಂಸ್ಕೃತಿಕ ವಿವರಗಳನ್ನು ಕೇವಲ ಚರ್ಚೆಗೆ, ಪರಿಶೀಲನೆಯ ಹಂತಕ್ಕೆ ಸೀಮಿತಗೊಳಿಸದೆ ಮೌಖಿಕ ಅಂಶಗಳನ್ನೆಲ್ಲಾ ಒಟ್ಟಾರೆಯಾಗಿ ಸಂಗ್ರಹಿಸಿ ಸುಂದರ ಕಥಾ ಚೌಕಟ್ಟಿನಲ್ಲಿ ಅಳವಡಿಸುವ ಕುಶಲಗಾರಿಕೆಯನ್ನು ಕಾದಂಬರಿಗಾರರು ಪ್ರದರ್ಶಿಸಿರುವುದು ಕಂಡುಬರುತ್ತದೆ.

60-70ರ ದಶಕದಲ್ಲಿನ ಲೋಹಿಯಾವಾದಿ ಸಮಾಜವಾದಿ ಪಕ್ಷ, ಸಮಾಜವಾದಿ ಯುವಜನಸಭಾದ ಚಟುವಟಿಕೆಗಳ ಪ್ರಭಾವಕ್ಕೆ ಒಳಗಾಗಿದ್ದ ಮಹಾದೇವ ಅವರ ವ್ಯಕ್ತಿತ್ವದ ಮೇಲೆ ಅನಂತಮೂರ್ತಿ, ಅಲನಹಳ್ಳಿಕೃಷ್ಣ ಮೊದಲಾದ ಲೇಖಕರ ಪ್ರಭಾವವೂ ಆಗಿತ್ತೆಂದು ಹೇಳಬಹುದು. ವಿದ್ಯಾರ್ಥಿ ದೆಸೆಯಲ್ಲಿಯೇ ನರ ಎಂಬ ಪ್ರತಿಭಟನಾ ಪತ್ರಿಕೆಯ ಸಂಪಾದಕ-ಪ್ರಕಾಶಕರಾಗಿದ್ದ ಮಹಾದೇವ ಅವರು 1975ರಲ್ಲಿ ಜನಪ್ರಕಾಶ ನಾರಾಯಣರು ಮೈಸೂರಿಗೆ ಬಂದಿದ್ದಾಗ ಸಾರ್ವಜನಿಕ ಸಭೆಯೊಂದರ ಅಧ್ಯಕ್ಷತೆ ವಹಿಸಿ ಗೌರವಕ್ಕೆ ಪಾತ್ರರಾಗಿದ್ದರು. ಇವರು 1979ರಲ್ಲಿ ದಲಿತ ಬಂಡಾಯ ಸಾಹಿತ್ಯ ಚಳವಳಿಯ ನಿಕಟ ಸಂಬಂಧ ಹೊಂದಿದ್ದ ದಲಿತಸಂಘರ್ಷ ಸಮಿತಿಯ ಪ್ರಧಾನ ಸಂಘಟಕರಾಗಿಯೂ ಕಾರ್ಯನಿರ್ವಹಿಸಿದರು. 1989ರಲ್ಲಿ ಅಮೆರಿಕದ ಅಯೋವಾ ವಿಶ್ವವಿದ್ಯಾಲಯದಲ್ಲಿ ನಡೆದ ಇಂಟರ್ ನ್ಯಾಷನಲ್ ರೈಟಿಂಗ್ ಪ್ರೋಗ್ರಾಮ್‌ನಲ್ಲಿ ಕರ್ನಾಟಕವನ್ನು ಪ್ರತಿನಿಧಿಸಿದ್ದರು. ಇವರು ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಸಂದರ್ಶಕ ಪ್ರಾಧ್ಯಾಪಕರಾಗಿಯೂ ಕಾರ್ಯನಿರ್ವಹಿಸಿದ್ದಾರೆ.

ಮಹಾದೇವ ಅವರ ಕಥಾ ಸಾಹಿತ್ಯದಲ್ಲಿ ಗಮನ ಸೆಳೆದ ಒಡಲಾಳ, ಕುಸುಮಬಾಲೆ ಮತ್ತು ಅಮಾಸ - ಇವೆಲ್ಲ ನಾಟಕಗಳಾಗಿ ರೂಪಾಂತರಗೊಂಡು ರಂಗಭೂಮಿಯಲ್ಲಿ ಯಶಸ್ವಿಯಾಗಿವೆ. 1984ರಲ್ಲಿ ಕಲ್ಕತ್ತೆಯ ಭಾರತೀಯ ಭಾಷಾಪರಿಷತ್ತು ಒಡಲಾಳಕ್ಕೆ ಪ್ರಶಸ್ತಿ ನೀಡಿ ಗೌರವಿಸಿದೆ. 1991ರಲ್ಲಿ ಕುಸುಮಬಾಲೆಗೆ ಕೇಂದ್ರಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿತು. 1995ರಲ್ಲಿ ಇವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ ಲಭಿಸಿವೆ. ಇವರ ಕೃತಿಗಳು ಇಂಗ್ಲಿಷ್ ಹಾಗೂ ಮತ್ತಿತರ ಭಾರತೀಯ ಭಾಷೆಗಳಿಗೆ ಅನುವಾದಗೊಂಡಿವೆ. "ಯಾರ ಜಪ್ತಿಗೂ ಸಿಗದ ನವಿಲುಗಳು" ಇವರ ಸಾಹಿತ್ಯ ಕುರಿತ ಚರ್ಚೆ ಹಾಗೂ ವಿಮರ್ಶೆಯ ವಿಶೇಷ ಬಗೆಯ ಕೃತಿಯಾಗಿದೆ. (ಜಿ.ಆರ್.ಟಿ)

**ದೇವಪುರ :** ಗುಲ್ಬರ್ಗ ಜಿಲ್ಲೆ ಸುರಪುರ ತಾಲ್ಲೂಕಿನ ಒಂದು ಐತಿಹಾಸಿಕ ಗ್ರಾಮ. ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಈ ಸ್ಥಳ ಪ್ರಾಮುಖ್ಯ ಪಡೆದಿತ್ತು. ಪ್ರಾಚೀನ ನಗರ ಮಂಡಲಕ್ಕೆ ಈ ಸ್ಥಳ ಸೇರಿದ್ದಾಗಿ ತಿಳಿದುಬರುತ್ತದೆ. ಕೃಷ್ಣಾ (ಪೆರ್ದೊರೆ) ನದಿಯ ಎರಡೂ ಪಕ್ಕದಲ್ಲಿ ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕಿನಿಂದ ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನವರೆಗೆ ಸಗರ 500, ಸಗರ 300 ಮುಂತಾಗಿ ಕರೆಯಲಾಗುತ್ತಿದ್ದ ಸಗರನಾಡು ವ್ಯಾಪಿಸಿತ್ತು. ಕೃಷ್ಣಾನದಿ ಇಲ್ಲಿಗೆ 8 ಕಿಮೀ ದೂರದಲ್ಲಿ ಹರಿಯುತ್ತದೆ. ಚಾಳುಕ್ಯ ಜಗದೇಕಮಲ್ಲ ಜಯಸಿಂಹನಿಂದ ಪೋಷಿತವಾದ ತಿಂಥಣಿ ಎಂಬ ಘಟಿಕಾ ಸ್ಥಾನವಿದ್ದ ಸ್ಥಳ ಇಲ್ಲಿಗೆ ಸಮೀಪದಲ್ಲಿದೆ. ವಿಜಯನಗರ ಸಾಮ್ರಾಜ್ಯ ವಿಘಟನೆಯಾದಾಗ ಪಾಳೆಯಗಾರರ ಮನೆತನವೊಂದಕ್ಕೆ ದೇವಪುರ ರಾಜಧಾನಿಯಾಯಿತು. ಸುರಪುರ ಸಂಸ್ಥಾನದ ರಾಜಮನೆತನದ ಮೂಲಪುರುಷರಲ್ಲಿ ಒಬ್ಬನಾದ ಹಣಮನಾಯಕ ಕಕ್ಕೇರಿಯಿಂದ ದೇವಪುರಕ್ಕೆ ತನ್ನ ರಾಜಧಾನಿಯನ್ನು ಸ್ಥಳಾಂತರಿಸಿದ. ಚಕ್ರವರ್ತಿ ಔರಂಗಜೇಬನು ದಕ್ಷಿಣ ಭಾರತಕ್ಕೆ ದಂಡೆತ್ತಿ ಬಂದಾಗ ದೇವಪುರದಲ್ಲಿ ಬೀಡುಬಿಟ್ಟಿದ್ದ ಬಿಜಾಪುರದ ಸುಲ್ತಾನರ ಆಳ್ವಿಕೆಯಲ್ಲಿ ಇದನ್ನು ಪರಗಣೆ ದೇವಪುರವೆಂದು ಪರಿಗಣಿಸಲಾಗಿತ್ತು.

ಈಗ ದೇವಪುರ ಒಂದು ಚಿಕ್ಕ ಗ್ರಾಮ. ಊರಿನ ನೈಋತ್ಯದಲ್ಲಿ ಒಂದು ಪ್ರಾಚೀನ ಬಾವಿಯಿದೆ. ಇದರ ಪ್ರವೇಶದ್ವಾರ, ಮೆಟ್ಟಿಲುಗಳು, ಸುತ್ತಲು ಗೋಡೆಗಳನ್ನು ಸುಂದರವಾಗಿ ನಿರ್ಮಿಸಲಾಗಿದೆ. ಬಾವಿಯಿಂದ ಊರಿನ ಕಡೆ ಬರುವ ಹಾದಿಯಲ್ಲಿ ರಾಮಲಿಂಗೇಶ್ವರ ದೇವಾಲಯವಿದೆ. ಕಲ್ಯಾಣ ಚಾಳುಕ್ಯರ ಶೈಲಿಯಲ್ಲಿರುವ ಈ ದೇವಾಲಯವನ್ನು ಕಪ್ಪುಕಲ್ಲಿನಿಂದ ಕಟ್ಟಲಾಗಿದೆ. ಒಳಗೆ ಲಿಂಗವಿಲ್ಲ. ಇಲ್ಲಿರುವ ವೀರಭದ್ರ ದೇವಾಲಯ ಒಂದು ಚಿಕ್ಕಗುಡಿ. ಇದರ ದ್ವಾರಪಾಲಕ ವೈಷ್ಣವಮೂರ್ತಿ ಆಗಿರುವುದರಿಂದ ಇದೊಂದು ವಿಷ್ಣು ದೇವಾಲಯವಾಗಿದ್ದಿರಬೇಕೆಂಬ ಅನುಮಾನ ಹುಟ್ಟಿಸುತ್ತದೆ.

ಊರಿನಲ್ಲಿ ಒಂದು ಹೂಡೇವು ಮತ್ತು ಅದರ ಬಳಿಯಲ್ಲಿ ಲಕ್ಷ್ಮೀ ದೇವಾಲಯದ ಗೂಡು ಇವೆ. ಈ ಪ್ರದೇಶದಲ್ಲಿ ಲಕ್ಷ್ಮೀಕಾಂತ ದೇವಾಲಯವಿದ್ದಿರಬೇಕೆಂದೂ ಜೈಮಿನಿ ಭಾರತದ ಕರ್ತೃ ಲಕ್ಷ್ಮೀಶ ಈ ಊರಿನವನೆಂದೂ ಆತನ ಕಾವ್ಯದಲ್ಲಿ ಬರುವ ಪೆರ್ದೊರೆ (ಕೃಷ್ಣಾನದಿ) ಛಾಯಾಭಗವತಿ ಮೊದಲಾದ ಆಧಾರಗಳ ಮೇಲೆ ಪ್ರತಿಪಾದನೆ ಮಾಡಲಾಗಿದೆ. ಈ ಬಗ್ಗೆ ಖಚಿತವಾಗಿ ಹೇಳಲು ಇನ್ನೂ ಹೆಚ್ಚಿನ ಆಧಾರಗಳು ದೊರೆಯಬೇಕಾಗಿದೆ.

ಊರಿನ ಮಸೀದಿಯೊಂದರ ಗೋಡೆಯಲ್ಲಿ 1114 ರ ಶಾಸನವೊಂದರ ಚಪ್ಪಡಿ ಸೇರಿಕೊಂಡಿದೆ. ಅದರಲ್ಲಿ ಅಲ್ಲಿನ ನಗರೇಶ್ವರ ದೇವಾಲಯಕ್ಕೆ ದಾನವಿತ್ತುದರ ಬಗ್ಗೆ ಉಲ್ಲೇಖವಿದೆ. ಆದರೆ ಶಾಸನದ

ಮುಖ್ಯ ಭಾಗ ಗೋಡೆಯ ಒಳಗಿರುವುದರಿಂದ ಅದರ ಪೂರ್ಣ ಪಾಠವನ್ನು ತಿಳಿಯಲು ಸಾಧ್ಯವಾಗಿಲ್ಲ. (ಎಸ್.ಜಿ.ಎ.)

**ದೇವಪ್ಪ ಕವಿ :** ಸು. 1540 ಜೈನಕವಿ. ರಾಮವಿಜಯಚರಿತೆ ಎಂಬ ಕಾವ್ಯದ ಕರ್ತೃ. ಹೊಯ್ಸಳ ದೇಶದ ಚೆಂಗನಾಡಿನ ಹುಣಸೂರು ತಾಲ್ಲೂಕಿನ ರಾವಂದೂರು ಇವನ ಜನ್ಮಸ್ಥಳ. ಅಜ್ಜ ಚೆಂಗನಾಡಪೊಳಲ ಸಚಿವ ದೇವಪ್ಪ, ತಂದೆ ಬುಕ್ಕರಸ, ತಾಯಿ ಪಾಯಮ್ಮ, ಕವಿ ರಾವಂದೂರನ್ನು ತ್ಯಜಿಸಿ, ಈಗಿನ ಕೊಡಗಿನ ನಂಜರಾಯಪಟ್ಟಣಕ್ಕೆ ಬಂದು, ಅಲ್ಲಿ ವೀರಶೈವನೂ ಕರದೀಪ ದಾನಿಯೂ ಆಗಿದ್ದ ನಂಜುಂಡರಾಯನಿಗೆ ಹಿತವನ್ನಾಗಿ ಮಂತ್ರಿಪದವಿಯಲ್ಲಿದ್ದನೆಂದು ತಿಳಿಯುತ್ತದೆ. ಪೂರ್ವ ಕವಿಗಳಲ್ಲಿ ಗಜಗ, ಗುಣವರ್ಮ, ವಿಜಯ, ಪೊನ್ನ, ಅಗ್ಗಳ, ರನ್ನ, ಪಂಪ, ನೇಮಿಚಂದ್ರ, ನಾಗಚಂದ್ರ - ಇವರನ್ನು ಸ್ತುತಿಸಿದ್ದಾನೆ. ತನ್ನ ಕಾವ್ಯ ಇಂಗಡಲಿನ ರಸದಂತೆ, ಅಂಬುಜಾಕ್ಷಿಯರ ಕಂಬುಕಂಧರದಾಲಿಂಗನದಂತೆ, ಪೊಸಜವ್ವನೆಯ ಬೇಟದ ಸುಗ್ಗಿಯಂತೆ ಸಂತಸವನ್ನುಂಟುಮಾಡುವ ಗುಣದಿಂದ ಕೂಡಿದೆ ಎಂದು ಕವಿ ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ತನ್ನನ್ನು ಕೋವಿದರುಗಳ ಹೃತ್ಕಮಲಭಾಸ್ಕರ, ವಾಗ್ದೇವಿಯ ಮುಖಮಣಿಮುಕುರ, ಭಾವಕರುಗಳ ಸಂತಸಸಾಗರಮಿತ್ರ ಎಂದೂ ಕರೆದುಕೊಂಡಿದ್ದಾನೆ.

ರಾಮವಿಜಯಚರಿತೆ ಸಾಂಗತ್ಯದಲ್ಲಿದೆ. ಇದರಲ್ಲಿ 20 ಸಂಧಿಗಳೂ ಸುಮಾರು 3000 ಪದ್ಯಗಳೂ ಇವೆ. ಗುಣಭದ್ರಾಚಾರ್ಯರ ಉತ್ತರಪುರಾಣದ ಮುನಿಸುವ್ರತಚರಿತ್ರೆಯಲ್ಲಿ ಬರುವ ರಾಮಾಯಣ ಈ ಕಾವ್ಯದ ವಸ್ತು. ಇದು ಪಂಪರಾಮಾಯಣದ ಕಥೆಗಿಂತಲೂ ಬೇರೆಯಾಗಿದೆ. ಶೈಲಿ ಸರಳವಾಗಿದೆ. ಬಂಧ ಲಲಿತವಾಗಿದೆ. ತಾನು ಕಾವ್ಯವನ್ನು ಬರೆದಿರುವುದು ಭವ್ಯರ ಮೆಚ್ಚುಗೆಗಾಗಿ ಎಂಬುದು ಕವಿಯ ಹೇಳಿಕೆ. (ಟಿ.ಕೆ.ಬಿ.)

**ದೇವರಗುಡ್ಡ:** ಹಾವೇರಿ ಜಿಲ್ಲೆ ರಾಣಿಬೆನ್ನೂರು ತಾಲ್ಲೂಕಿಗೆ ಸೇರಿದ ಒಂದು ಪುಣ್ಯ ಕ್ಷೇತ್ರ. ರಾಣಿಬೆನ್ನೂರಿಗೆ ಉತ್ತರದಲ್ಲಿ ಸು. 13 ಕಿಮೀ ದೂರದಲ್ಲಿ, ದೇವರ ಗುಡ್ಡ ರೈಲು ನಿಲ್ದಾಣದಿಂದ ಸು. 5 ಕಿಮೀ. ದೂರದಲ್ಲಿದೆ. ಈ ಊರಿನ ಮೂಲ ಹೆಸರು ಗುಡ್ಡ ಗುಡ್ಡಾಪುರ. ಊರಿಗೆ ಹೊಂದಿಕೊಂಡಂತಿರುವ ಗುಡ್ಡದ ಮೇಲೆ ಮಾರ್ತಾಂಡ, ಭೈರವ, ಮಲ್ಲಾರಿ ಮೊದಲಾದ ಹೆಸರುಗಳುಳ್ಳ ಪ್ರಸಿದ್ಧ ಮೈಲಾರಲಿಂಗ ದೇವಾಲಯವಿದೆ. ಶಿವನು ಇಲ್ಲಿ ಮಲ್ಲಾರಿಯ ಅವತಾರದಿಂದ ನಾಯಿಯ ರೂಪದಲ್ಲಿ ಏಳು ಕೋಟದೇವತೆಗಳನ್ನು ಕಟ್ಟಿಕೊಂಡು ಮಲ್ಲಾಸುರನನ್ನು ಕೊಂದನೆಂದೂ ಪ್ರತೀತಿ. ಈ ಆರಾಧ್ಯಮೂರ್ತಿಯನ್ನು ವಿವಿಧ ಪಂಗಡದವರು ಪೂಜಿಸುತ್ತಾರೆ. ಇವನ ಅನುಯಾಯಿಗಳಿಗೆ ಗೊರವ, ಗ್ವಾರೆಪ್ಪ, ಗೊಗ್ಗಯ್ಯನೆಂದು ಕರೆಯುವರು. ಕಂಬಳಿಯ ನಿಲುವಂಗಿ, ಕೊರಳಲ್ಲಿ ಭಂಡಾರವನ್ನಿಡಲು ಹುಲಿಯ ಚರ್ಮದ ಚೀಲ, ಕವಡೆಯ ಸರ, ಹೆಗಲಿಗೆ ನೇತುಬಿದ್ದ ಡೋಣಿ (ಭಿಕ್ಷಾಪಾತ್ರೆ) ಇವರ ವಿಶಿಷ್ಟ ವೇಷಭೂಷಣಗಳು. ಕೈಯಲ್ಲಿ ಡಮರು, ತ್ರಿಶೂಲಗಳು ಹಾಗೂ ಒಮ್ಮೊಮ್ಮೆ ದೀವಟಿಗೆ ಇರುತ್ತವೆ. ಭಿಕ್ಷಾಟನೆ ಇವರ ವೃತ್ತಿ.

ಇಲ್ಲಿ ಪ್ರತಿವರ್ಷ ದಸರ ಸಮಯದಲ್ಲಿ ಬಹುದೊಡ್ಡ ಜಾತ್ರೆ ನೆರೆಯುವುದು. ಆಗ ಇಲ್ಲಿಗೆ ನಾಡಿನ ಎಲ್ಲಾ ಕಡೆಗಳಿಂದ ಭಕ್ತಾದಿಗಳು ಬರುವರು. ಆಗ ಮೈಗೆ ಗೂಟಗಳನ್ನು ಬಡಿದುಕೊಳ್ಳುವುದು, ಆ ಗಾಯದಲ್ಲಿ ಮುಳ್ಳಿನ ಡೊಣ್ಣೆಗಳನ್ನು ಹಾಯಿಸಿಕೊಳ್ಳುವುದು, ಅಂಗೈಯಲ್ಲಿ ಆರತಿಯನ್ನು ಹಚ್ಚಿಕೊಂಡು ದೇವರಿಗೆ ಬೆಳಗುವುದು, ದೇವರೆದುರು ಕಬ್ಬಿಣ ಸರಪಳಿಯನ್ನು ಹರಿಯುವುದು ಮೊದಲಾದ ಪವಾಡಗಳನ್ನೂ ಮಳೆಬೆಳೆಗೆ ಸಂಬಂಧಿಸಿದ ಭವಿಷ್ಯವನ್ನು ನುಡಿಯುವ ಕಾರಣಿಕವನ್ನೂ ನಡೆಸುತ್ತಾರೆ.

ಇಲ್ಲಿ ಮೈಲಾರನ ಉದ್ಭವಮೂರ್ತಿಯಲ್ಲದೆ ತುಪ್ಪದ ಮಾಳವ್ವ ಮಾಳಸಾ ಮತ್ತು ಹೆಗ್ಗಪ್ಪ ಇವರ ಗುಡಿಗಳೂ ಇವೆ. ಪ್ರತಿ ಹುಣ್ಣಿಮೆಗೂ ಭಕ್ತಾದಿಗಳು ಈ ದೇವರ ದರ್ಶನಕ್ಕೆ ಬರುವುದುಂಟು. ದಸರ ಜಾತ್ರೆಯ ಸಮಯದಲ್ಲಿ ದನಗಳ ಜಾತ್ರೆಯೂ ಸೇರುವುದು. ದೇವಸ್ಥಾನದ ಆಡಳಿತ ವ್ಯವಸ್ಥೆಯನ್ನು ನೋಡಿಕೊಳ್ಳಲು ಮಾಲತೇಶ ಟ್ರಸ್ಟ್ ಕಮಿಟಿ ಇದೆ. ಗುಡ್ಡದ ಮೇಲಿಂದ ದೂರದ ತುಂಗಭದ್ರಾನದಿಯು ಮತ್ತು ಇತರ ಪ್ರಕೃತಿದೃಶ್ಯ ನಯನಮನೋಹರವಾಗಿರುತ್ತದೆ. ಈ ಊರಿಗೆ ಉತ್ತಮ ಮಾರ್ಗ ಸಂಪರ್ಕವಿದೆ. (ಎಸ್.ಎಸ್.ಬಿ.)

**ದೇವರಗುಡ್ಡರು :** ಜನಪದ ಧಾರ್ಮಿಕ ವೃತ್ತಿಗಾಯಕರು. ಮೈಸೂರು ಜಿಲ್ಲೆಯ ದಕ್ಷಿಣ ಭಾಗದಲ್ಲಿ ವಿಶೇಷವಾಗಿ ಕಾಣಿಸಿಕೊಳ್ಳುವ ಇವರು ಮಂಡ್ಯ ಹಾಗೂ ಬೆಂಗಳೂರು ಜಿಲ್ಲೆಯ ಭಾಗಗಳಲ್ಲೂ ಕಾಣಬರುತ್ತಾರೆ. ಕರ್ನಾಟಕದಲ್ಲೇ ಅಲ್ಲದೆ ವಿರಳವಾಗಿ ತಮಿಳುನಾಡಿನ ಸೇಲಂ ಮತ್ತು ಕೊಯಮತ್ತೂರು ಜಿಲ್ಲೆಗಳಲ್ಲೂ ಕಂಡುಬರುತ್ತಾರೆ. ಕೊಳ್ಳೆಗಾಲ ತಾಲ್ಲೂಕಿನಲ್ಲಿರುವ ಏಳುಮಲೆ ಮಾದೇಶ್ವರನ ಪರಮಭಕ್ತರಾದ ಇವರನ್ನು ದೇವರಗುಡ್ಡರು, ಸಿರಿಯದೇವರ ಗುಡ್ಡರು ಮುಂತಾಗಿ ಕರೆಯುವುದು ರೂಢಿಯಲ್ಲಿದೆ. ಇವರು ಬಳಸುವ ಕಂಚಿನ ತಾಳಗಳಿಗೆ ಕಂಸಾಳೆ ನೋಡಿ ಎಂದು ಹೆಸರಿಸುವುದರಿಂದ ಇವರನ್ನು ಕಂಸಾಳೆಯವರು, ಕೈಸಾಳೆಯವರು, ಕೈತಾಳದವರು ಎಂದೂ ಗುರುತಿಸುವುದುಂಟು.

ಕಂಸಾಳೆಯನ್ನು ಹಿಡಿಯುವುದಕ್ಕೆ ಬೇಕಿರುವ ಅರ್ಹತೆ ಎಂದರೆ ದೇವರ ಗುಡ್ಡನಾಗುವುದು. ಮಲೆಯ ಮಾದೇಶ್ವರ ಕಂಚಿನ ತಾಳಗಳನ್ನು ನುಡಿಸುತ್ತ ಭಿಕ್ಷೆಮಾಡುತ್ತಿದ್ದರಿಂದ ದೇವರಗುಡ್ಡರಿಗೆ ಕಂಸಾಳೆಗಳು ಮಾದೇಶ್ವರನ ಬಿರುದುಗಳು. ಆದ್ದರಿಂದ ಇವರಿಗೆ ಕಂಸಾಳೆ ಪವಿತ್ರ ಹಾಗೂ ಪೂಜನೀಯ. ಈ ಕಾರಣದಿಂದಲೇ ಇವರು ಕಂಚಿನ ತಣಿಗೆಯಲ್ಲಿ ಊಟಮಾಡುವುದಿಲ್ಲ. ಅಲ್ಲದೆ ಕಥೆ ಮಾಡುವಾಗ ಅಥವಾ ಭಿಕ್ಷಕ್ಕೆ ಹೋಗುವಾಗ ಎಕ್ಕಡಗಳನ್ನು ಮೆಟ್ಟುವುದಿಲ್ಲ.

ದೇವರಗುಡ್ಡರ ವಿಶಿಷ್ಟವಾದ ಉಡುಗೆ ತೊಡುಗೆಗಳೆಂದರೆ ಕಂಕುಳಲ್ಲಿ ಬೆಳ್ಳಿ ಕಟ್ಟಿನ ನಾಗಬೆತ್ತ, ಭುಜದಲ್ಲಿ ನಾಕುಪಾದದ ಜೋಳಿಗೆ, ಬೆನ್ನಿಗೆ ಹಸುಬೆ ಚೀಲ, ಕೈಯಲ್ಲಿ ಕಂಸಾಳೆ, ಹಣೆಗೆ ಮೂರು ಕಟ್ಟಿನ ವಿಭೂತಿ, ಕಣ್ಣಿನ ರಪ್ಪೆ, ಕಿವಿ, ಕುತ್ತಿಗೆಗಳಿಗೂ ವಿಭೂತಿಯ ಅಲಂಕಾರ, ಕುತ್ತಿಗೆಯಲ್ಲಿ ರುದ್ರಾಕ್ಷಿಸರ, ತಪ್ಪಿದರೆ ಒಂದೇ ಒಂದು ಅಡ್ಡಡ್ಡವಾಗಿ ಪೋಣಿಸಿರುವ ರುದ್ರಾಕ್ಷಿ ಗುರುಮಣಿ.

ದೇವರಗುಡ್ಡ ಮಾದೇಶ್ವರನ ಸಿಸುಮಗ. ಮಾದೇಶ್ವರನಿಗೆ ಗುಡ್ಡನನ್ನು ಬಿಡುವ ಸಂಪ್ರದಾಯ ದೇವರಗುಡ್ಡದ ಧಾರ್ಮಿಕ ಆಚರಣೆಗಳಲ್ಲಿ ವಿಶಿಷ್ಟವಾದುದು. ಈ ಸಂಪ್ರದಾಯ ಸುಮಾರು 16ನೆಯ ಶತಮಾನದಿಂದೀಚೆಗೆ ಹುಟ್ಟಿಕೊಂಡದ್ದೆಂದು ಕಾಣುತ್ತದೆ. ವಂಶಪಾರಂಪರ್ಯವಾಗಿ ಮಾದೇಶ್ವರನ ಒಕ್ಕಲಲ್ಲಿ ಮನೆಗೊಬ್ಬ ಗುಡ್ಡನನ್ನು ಬಿಡುವ ಪದ್ಧತಿ ಇದೆ. ಕೆಲವು ವಿಶೇಷ ಕಾರಣಗಳಿಂದ ಅಂದರೆ ಕಷ್ಟಕಾರ್ಪಣ್ಯಗಳು ಒದಗಿ ಬಂದಾಗ ಅಥವಾ ಮಕ್ಕಳಾಗದೆ ಹೋದಾಗ ಹುಟ್ಟಿದ ಮೊದಲನೆಯ ಮಗನನ್ನು ಗುಡ್ಡನನ್ನು ಬಿಡುತ್ತೇವೆಂದು ಮಲೆಯ ಮಾದೇಶ್ವರನಿಗೆ ಹರಕೆ ಹೊತ್ತು ಹಾಗೆ ಹುಟ್ಟಿದ ಮಗುವಿಗೆ ಹನ್ನೆರಡು ವರ್ಷ ತುಂಬಿದ ಅನಂತರ ಗುಡ್ಡನನ್ನು ಮಾಡಿ ಬಿಡುವುದುಂಟು. ಮಗುವನ್ನು ಗುಡ್ಡನನ್ನಾಗಿ ಮಾಡುವುದಕ್ಕೆ ಅವರು ಒಂದು ವಿಶೇಷ ಸಮಾರಂಭವನ್ನೇ ಏರ್ಪಡಿಸಿಕೊಳ್ಳುತ್ತಾರೆ. ಗುಡ್ಡರ ಮುಖ್ಯಸ್ಥ ಪುರುಸಕಾರಿಯ ನೇತೃತ್ವದಲ್ಲಿ ಗುಡ್ಡನನ್ನು ಬಿಡುವ ಆಚರಣೆ ನಡೆಯುತ್ತದೆ. ಈ ದೀಕ್ಷಾಕಾರ್ಯ ಸಾಮಾನ್ಯವಾಗಿ ಸೋಮವಾರಗಳಲ್ಲಿ ಜರಗುತ್ತದೆ. ಶುಕ್ರವಾರವೂ ಇಟ್ಟುಕೊಳ್ಳಬಹುದು. ಮಾದೇಶ್ವರನ ಬೆಟ್ಟದಲ್ಲೇ ಆದರೆ ಯಾವ ದಿನವಾದರೂ ಸರಿ. ಈ ಮಂಗಳ ಕಾರ್ಯಕ್ಕೆ ಮನೆ ಮಠ ಸಾರಿಸಿ ಗುಡಿಸಿ ಮಡಿ ಮಾಡಿಕೊಳ್ಳುತ್ತಾರೆ. ಗುಡ್ಡನಾಗುವ ಹುಡುಗನ ಉಡುದಾರವನ್ನು ಕಿತ್ತು ಮಂಡೆ ಚವುರ ಮಾಡಿಸುತ್ತಾರೆ. ಮೂಡ್ಲುಮುಖವಾಗಿ ಹುಡುಗನ್ನು ಕುಳ್ಳಿರಿಸಿ, ಒಂದಚ್ಚು ಬೆಲ್ಲ, ಐದು ಬಾಳೆಹಣ್ಣು, ಎಲೆ ಅಡಕೆ, ಐದು ಪಾವು ಅಕ್ಕಿ, ಐದು ಪಾವಲಿ, ಒಂದು ವಲ್ಲಿ (ವಸ್ತ್ರ) ಮಡಗಿ ಪೂಜೆ ಮಾಡಿ ಈ ಪರಿಕರಗಳನ್ನು ಕಲಸಿ ಅವನ ಮಡಿಲ ತುಂಬುತ್ತಾರೆ. ಅನಂತರ ಸ್ನಾನಕ್ಕೆ ನೀರು ಕಾಯಿಸುವ ಒಲೆ ಮತ್ತು ಹಂಡೆಯನ್ನು ಪೂಜೆಮಾಡಿ ಆರಿಸಿನದ ನೀರನ್ನು ಕಾಯಿಸಿ ಸಮಾರಂಭಕ್ಕೆ ಬಂದ ಬಂಧುಬಾಂಧವರೆಲ್ಲ ಒಂದೊಂದು ಚೊಂಬು ನೀರನ್ನು

ಆ ಹುಡುಗನ ತಲೆ ಮೇಲೆ ಸುರಿದು ಮಾದೇವ ನಿನ್ನೊಕ್ಕಾಲಿಯ್ತಿರೋ ಕಂದನ ಉದ್ಧಾರ ಮಾಡಪ್ಪ ಎಂದು ಹೇಳುತ್ತಾರೆ. ನೀರೆರೆಯುವ ಸಂದರ್ಭದಲ್ಲಿ ಗುಡ್ಡರು ಕಂಸಾಳೆ ಕುಟ್ಟುತ್ತ -

ಸ್ನಾನ ಜಲಕ ಮಾಡವ್ರೆ - ಮಾದೇವ

ಮೀದು ಮಡಿಯ ಉಟ್ಟವರೆ

ಶಿವಪೂಜೆಗೆ ಬಂದು ನಿಂತವರೆ

ಇತ್ಯಾದಿಯಾಗಿ ಹಾಡುತ್ತಿರುತ್ತಾರೆ.

ಮೀಯಿಸಿ ಆದಮೇಲೆ ಹೊಸ ಬಟ್ಟೆಗಳನ್ನು ಉಡಿಸಿ ದೇವರನ್ನು ತರಲು ಹೊರಡುತ್ತಾರೆ. ಐದು ಅರುಣೆ ಗಡಿಗೆಗಳನ್ನು (ಅರಿಶಿಣದ ನೀರು ತುಂಬಿದ ಮಡಕೆ) ಹೊತ್ತುಕೊಂಡು ದೇವರಗುಡ್ಡರೊಡನೆ ಐದು ಜನ ಮುತ್ತೈದೆಯರು ಕೆರೆಗೋ ಕೊಳಕ್ಕೋ ಬಾವಿಗೋ ಹೋಗಿ ಗಡಿಗೆಗಳಿಗೆ ನೀರು ತುಂಬಿ ಅಡಕೆ ಹೊಂಬಾಳೆ ಶೃಂಗಾರಮಾಡಿ ಅವುಗಳ ಜೊತೆಯಲ್ಲಿ ನಾಗಬೆತ್ತ, ಉರುಗದಾರ, ಕಂಸಾಳೆ, ರುದ್ರಾಕ್ಷಿಮಣಿ, ದಮ್ಮಡಿ, ಬಟ್ಟುತಾಳ, ವಿಭೂತಿಗಟ್ಟಿ ಇಟ್ಟು ಗುಡ್ಡ ನಾಗುವವನ ಬೋಳುತಲೆಯ ತುಂಬ ವಿಭೂತಿ ಧರಿಸಿ ಕಂಸಾಳೆಯ ಝಣತ್ಕಾರಗಳೊಡನೆ ಪೂಜೆಮಾಡಿ ವಾದ್ಯಸಮೇತ ದೇವರನ್ನು ತಂದು ಗದ್ದುಗೆಯ ಮೇಲಿರಿಸುತ್ತಾರೆ. ಅನಂತರ ಹುಡುಗನ ತಂದೆ ತಾಯಿಗಳು, 'ಬುದ್ಧಿ ಇವನು ನಮ್ಮ ಮಗನಲ್ಲ ನಿಮ್ಮ ಮಗ ಒಪ್ಪಿಸಿಕೊಳ್ಳಿ' ಎಂದು ಹೇಳಿ ಅವನ ಕೈಗಳನ್ನು ಹಿಡಿದುಕೊಂಡು ಪುರುಸಕಾರಿಗೆ ಒಪ್ಪಿಸಿಕೊಡುತ್ತಾರೆ. ಆಗ ಪುರುಸಕಾರಿ ಅವನನ್ನು ಕರಿಮರದ ಗದ್ದುಗೆ ಮೇಲೆ ಕೂರಿಸುತ್ತಾನೆ. ಅನಂತರ ಅವನ ಮುಂದೆ ತಲೆ ಹೊಡೆದಂತೆ (ಚೆಲ್ಲಿದಂತೆ) ತುಂಬಿರುವ ಅಕ್ಕಿಯ ಸೇರನ್ನು ಇಟ್ಟು ಅದರ ಮೇಲೆ ಗುಡ್ಡನ ಬಲದ ಹಸ್ತವನ್ನು ಊರಿಸಿ ಅದರ ಮೇಲೆ ಹಾಲು ಬೆಣ್ಣೆ ತುಪ್ಪಗಳನ್ನು ಸವರಿ ಹೂ ಹಾಕಿ ಕರ್ಪೂರ ಸಾಂಬ್ರಾಣಿ ಗಂಧದ ಕಡ್ಡಿ ಬೆಳಗಿ ಅದುಮಿದ್ದ ಕೈಯನ್ನು ಎತ್ತಿ ಅಂಗೈಗೆ ಅಂಟಿಕೊಂಡಿರುವ ಅಕ್ಕಿ ಕಾಳನ್ನು ಅವನ ಹಣೆಗೆ ಐದು ಬಾರಿ ಹಚ್ಚುತ್ತಾನೆ. ಈ ಅಕ್ಕಿ ಹೆಚ್ಚಾಗಿ ಹಣೆಗೆ ಅಂಟಿಕೊಂಡರೆ ಅವನು ಮಾದಪ್ಪನ ಮೆಚ್ಚಿನ ಸಿಸುಮಗ ಎಂಬ ನಂಬಿಕೆ ಇದೆ. ಅನಂತರ ಐದು ಕೊಂಬಿನ ಅರಿಶಿನದ ಕೊನೆಯನ್ನು ಚಿನ್ನ, ಬೆಳ್ಳಿ ಚೂರುಗಳೊಡನೆ ಒಂದು ಅರಿಶಿನದ ಅರಿವೆಗೆ ಸುತ್ತಿ ಅದನ್ನು ಕರಿ ದಾರದಲ್ಲಿ ಕಟ್ಟಿ ಪೂಜೆಮಾಡಿ ಎಲ್ಲರಿಂದಲೂ ಅದನ್ನು ಶರಣು ಮಾಡಿಸಿ ಆ ಕಂಕಣವನ್ನು ಪುರುಸಕಾರಿ 'ಅಪ್ಪಾ ಮಗುವೆ ಇಲ್ಲೀನಾಗ್ಲೂ (ಇಲ್ಲಿಯವರೆಗೂ) ತಾಯಿತಂದೆಗಳ ಮಗನಾಗಿದ್ದೆ. ಇಲ್ಲಿಂದೀಚ್ಕೆ ಮಾದಪ್ಪನ ಮಗನಾದಿ ಎಂದು ಹೇಳಿ ಅವನ ಬಲ ಮುಂಗೈಗೆ ಕಟ್ಟುತ್ತಾನೆ. ಅನಂತರ 'ಮಲೆಮಾಯ್ಕಾರ' ನನ್ನಪ್ಪಾಜಿ ಮಾದೇವ ಉದ್ಧಾರ ಮಾಡಪ್ಪ ಎಂದು ಹೇಳಿ ರುದ್ರಾಕ್ಷಿಮಣಿಯನ್ನು ಕುತ್ತಿಗೆಗೆ ಧಾರಣೆ ಮಾಡುತ್ತಾನೆ. ಬಂದಿದ್ದ ಬಂಧುಳಗವೆಲ್ಲ 'ಅಕ್ಷಯವಾಗ್ಲಪ್ಪ' ಎಂದು ಹೇಳಿ ಅಕ್ಷತೆಯನ್ನು ಹುಡುಗನ ತಲೆ ಮೇಲೆ ಎರಚುತ್ತಾರೆ. ಅನಂತರ ಪುರುಸಕಾರಿ ಹೊಸ ಗುಡ್ಡನಿಗೆ ಸಾಂಪ್ರದಾಯಿಕವಾಗಿ ಕೆಲವು ಸಿದ್ಧ ಪ್ರಶ್ನೆಗಳನ್ನು ಹಾಕಿ ಸಿದ್ಧ ಉತ್ತರವನ್ನು ಪಡೆಯುತ್ತಾನೆ.

ನೀನು ಯಾರ ಮಗನಪ್ಪ

ನಾನು ಮಾದೇವನ ಮಗ ಸ್ವಾಮಿ

ಹಂಗಾದ್ಮೇಕೆ ತಕ್ಕೊಳಪ್ಪ ಮಾದೇವನ ಜೋಳ್ಗೆಯ

ಎಂದು ಹೇಳಿ ಹೊಸಗುಡ್ಡನ ಕಂಕುಳಗೆ ಜೋಳಿಗೆ, ಕೈಗೆ ನಾಗಬೆತ್ತ ಕೊಡುತ್ತಾನೆ.

ಇದೇನ್ ಮಾಡ್ತೀಯಪ್ಪ

ಸ್ವಾಮಿ ನಾಕಾರ್ ಮನೆ ಭಿಕ್ಷಾ ಮಾಡ್ಕೊಂಡು ಸ್ವಾಮಾರ

ಸುಕ್ರಾರ ಇದನ್ನ ಮಡಗಿ ಪೂಜೆ ಮಾಡ್ತೀನಿ,

ಏನಪ್ಪ ನಿಚ್ಚಯಾವಾಗ್ಲೂ ಮಾಡ್ತಿಯಾ?

ಸ್ವಾಮಿ ನಿಚ್ಚಯಾವಾಗ್ಲೂ ಮಾಡ್ತಿನಿ

ಹಂಗಾದ್ಮ್ಯಾಕೆ ಈ ದುರುಸ್ಥಿಣರು ಬಂದವ್ರವಲ್ಲ ಅವುರ್ಗೆಲ್ಲ ಹೇಳ್ದಂಗೆ ನಡೀತೀನಿ ಅಂತ್ಹೇಳಿ ಅವುರ ಪಾದಕ್ಕೆ ಬೀಳಪ್ಪ - ಎಂದಾಗ ಹೊಸಗುಡ್ಡ ಮೊದಲು ಪುರುಸಕಾರಿಗೆ ಶರಣುಮಾಡಿ ಉಳಿದ ಹಿರಿಯರ ಪಾದಗಳಿಗೆರಗುತ್ತ ನಿಮ್ಮ ಪಾದಸಾಕ್ಷಿಯಾಗಿ ಹೇಳ್ದಂಗೆ ನಡ್ಕೋತೀನಿ ಎಂದು ಹೇಳುತ್ತಾನೆ.

ಸ್ವಾಮಾರ ಸುಂಕ್ರಾರ ತಪ್ದೆ ಕೋರಣ್ಯ ಮಾಡ್ತಿಯೇನಪ್ಪ

ಮಾಡ್ತೀನಿ ಸ್ವಾಮಿ ಇತ್ಯಾದಿ. ಹಿನ್ನೆಲೆಯಲ್ಲಿ ದೇವರಗುಡ್ಡರು ಸಂದರ್ಭಕ್ಕೆ ತಕ್ಕಂತೆ ಹಾಡುತ್ತಿರುತ್ತಾರೆ.

ಅನಂತರ ಗುಡ್ಡನನ್ನು ಕರೆದುಕೊಂಡು ಉಳಿದ ದೇವರಗುಡ್ಡರು ಕಂಸಾಳೆ ನಾದಮಾಡುತ್ತ ಕೋರಣ್ಯಕ್ಕೆ ಹೊರಡುತ್ತಾರೆ. ಅಂಕದ ಬಾಗಿಲಲ್ಲಿ ತಂದೆತಾಯಿಗಳು ಅಗನಿ ತಂದು ಗುಡ್ಡನಪಾದ ತೊಳೆದು ಪೂಜೆಮಾಡಿ ನಮಸ್ಕರಿಸಿ ಐದು ಸೇರು ಅಕ್ಕಿ, ಒಂದಚ್ಚು ಬೆಲ್ಲ, ಒಂದು ತೆಂಗಿನಕಾಯಿ, ಎಲೆ ಅಡ್ಕೆ ಹಣ್ಣುಗಳನ್ನು ಗುಡ್ಡನ ಜೋಳಿಗೆಗೆ ತುಂಬುತ್ತಾರೆ. ಹೀಗೆ ನಾಕಾರು ಮನೆಗಳಲ್ಲಿ ಉಪಾದಾನ ಮಾಡಿಸುತ್ತಾರೆ. ಉಪಾದಾನ ಮಾಡಲು ಹೋದಾಗ ಜೋಳಿಗೆ ತುಂಬಾ ಭಿಕ್ಷೆ ಸಿಕ್ಕದೆ ಇದ್ದರೆ ಅಥವಾ ಹಿಂದಕ್ಕೆ ಬಂದ ಹುಡುಗ ಜೋಳಿಗೆಯನ್ನು ತೆಗೆದು ಗೂಟಕ್ಕೆ ನೇತುಹಾಕಿದರೆ ಜೋಳಿಗೆ ಸೂಲುತ್ತದೆ; ಮಾತ್ರವಲ್ಲ, ಅದೇ ರೀತಿ ಅವರ ಮನೆಯೂ ಸೂಲುತ್ತದೆ ಎಂಬ ನಂಬಿಕೆಯಿದೆ.

ಕೋರಣ್ಯದಿಂದ ಹಿಂದಿರುಗಿದ ಮೇಲೆ ಗುಡ್ಡನನ್ನು ಬಾಗಿಲಲ್ಲೇ ನಿಲ್ಲಿಸಿ ಪಾದ ತೊಳೆದು ಪೂಜೆಮಾಡಿ ರತ್ನೀರನ್ನು ಹಾಕಿ ಶಾಂತಿ ಮಾಡುವುದಕ್ಕೆಂದು ಒಂದು ಕೋಳಿಯನ್ನು ಕುಯ್ದು ಅದರ ರಕ್ತವನ್ನು ಹುಡುಗನ ಹಣೆಗೆ ಹಚ್ಚುತ್ತಾರೆ. ತಂದ ಭಿಕ್ಷೆಯನ್ನು ಬಿರುದುಗಳೊಡನೆ (ಕಂಸಾಳೆಗಳೊಡನೆ) ಗದ್ದುಗೆ ಮೇಲಿರಿಸುತ್ತಾರೆ. ಆಗ ಪುರುಸಕಾರಿ ಮೊದಲಿನಂತೆ ತುಂಬಿದ ಸೇರಿನ ಮೇಲೆ ಗುಡ್ಡನ ಅಂಗೈ ಒತ್ತಿಸಿ ಕಂಕಣ ಬಿಚ್ಚುತ್ತಾನೆ. ಕಂಕಣವನ್ನು ಅರುಣೆ ಗಡಿಗೆಯಲ್ಲಿದ್ದ ಹೊಂಬಾಳೆಯೊಡನೆ ಮನೆಯ ಸೂರಿಗೆ ಕಟ್ಟಿ ಧೂಪ ಹಾಕುತ್ತಾರೆ.

ಇದಾದಮೇಲೆ ಗದ್ದಿಗೆ ಪೂಜೆ ನಡೆದು ಕಡುಬು, ಕಜ್ಜಾಯ, ತುಪ್ಪವನ್ನು ಎಲ್ಲರಿಗೂ ಬಡಿಸುತ್ತಾರೆ. ಊಟಕ್ಕೆ ಕುಳಿತಿದ್ದ ಗುಡ್ಡರುಗಳೆಲ್ಲ ತಮ್ಮ ತಮ್ಮ ಅಗಲಿನಿಂದ (ತಟ್ಟೆ) ಸ್ವಲ್ಪ ಸ್ವಲ್ಪ ಕಜ್ಜಾಯ ತುಪ್ಪವನ್ನು ತೆಗೆದು ಗುಡ್ಡನ ಅಗಲಿಗೆ ಬಡಿಸುತ್ತಾರೆ. ಇದನ್ನು ಪಂತಿಸೇವೆ ಎಂದು ಕರೆಯುತ್ತಾರೆ. ಊಟವಾದಮೇಲೆ ತಂದಿದ್ದ ಭಿಕ್ಷವನ್ನೆಲ್ಲ ಸುರಿದು ಗುಡ್ಡನ ಜೋಳಿಗೆಗೆ ಐದು ಬೊಗಸೆ ಅಕ್ಕಿ ಐದು ಪಾವಲಿ ಹಾಕಿ ಅಕ್ಷಯವಾಗ್ಲಪ್ಪ ಎಂದು ಹರಸಿ ಎಲ್ಲರೂ ತೆರಳುತ್ತಾರೆ.

ಹೀಗೆ ಗುಡ್ಡನಾದವನು ಮಾದೇನ ಕಥೆಯನ್ನು ಕಲಿತು ಕಥೆ ಮಾಡುವುದು ಮುಂದಿನ ಹೆಜ್ಜೆ. ಮನೆತುಂಬಿದ ಸೋಮವಾರ ಹುಡುಗನಿಗೆ ಕಥೆ ಕಲಿಸಲು ಪ್ರಾರಂಭಿಸುತ್ತಾರೆ. ರಾಗ ಚನ್ನಾಗಿದೆ ಎಂದು ತಿಳಿದರೆ ಕಥೆಗಳನ್ನು ಕಲಿಸುತ್ತಾರೆ. ಇಲ್ಲದಿದ್ದರೆ ಸೊಲ್ಲು ಕೊಡುವುದಕ್ಕೋ ಅಥವಾ ದಮ್ಮಡಿ ನುಡಿಸಲೋ ನೇಮಿಸಿಕೊಳ್ಳುವರು. ಇದೆಲ್ಲವನ್ನೂ ಗುಡ್ಡ ಗುರುಮುಖೇನ ಮಾಡಬೇಕು. ಅನಂತರ ಗುಡ್ಡ ಪ್ರತಿ ಸೋಮವಾರ ಮತ್ತು ಶುಕ್ರವಾರಗಳಲ್ಲಿ ಮಡಿಯಿಂದ ಮಲೆಯ ಮಾದೇಶ್ವರನನ್ನು ಪೂಜೆ ಮಾಡಿ ಕೋರಣ್ಯಕ್ಕೆ ತಪ್ಪದೆ ಹೋಗುತ್ತಾನೆ. ಈ ಸಂದರ್ಭಗಳಲ್ಲಿ ಅವನಿಗೆ ಕಥೆ ಮಾಡಲು ಬರದಿದ್ದರೆ ಬಿಡೋಲಗ ಅಥವಾ ಕಟ್ಸೋಲ ಮುಂತಾದ ಕೆಲವು ಬಿಡಿಗೀತೆಗಳನ್ನಾದರೂ ಹಾಡುತ್ತಾನೆ.

ಮಕ್ಕಳಿಲ್ಲದೆ ಮಾದೇವನ ವರದಿಂದ ಹುಟ್ಟಿದ ಈ ದೇವರಗುಡ್ಡರಿಗೆ ಮಾದಪ್ಪ, ಮಾದಯ್ಯ, ಮುದ್ದುಮಾದ, ಮಾದೇವಸ್ವಾಮಿ ಮುಂತಾಗಿ ಮಾದೇಶ್ವರನ ಹೆಸರುಗಳನ್ನೇ ಇಡುತ್ತಾರೆ. ಗುಡ್ಡನಾದವನು

ಬ್ರಹ್ಮಚಾರಿಯಾಗಿರಬೇಕೆಂಬ ನಿಯಮವೇನೂ ಇಲ್ಲ. ಅವನು ಸಂಸಾರಿಯೂ ಸ್ಥಿತಿವಂತನೂ ಆಗಿರಬಹುದು. ಜೀವನ ನಿರ್ವಹಣೆಗಾಗಿ ಯಾವ ವೃತ್ತಿಯನ್ನಾದರೂ ಅವಲಂಬಿಸಬಹುದು. ಆದರೆ ಸೋಮವಾರ ಶುಕ್ರವಾರಗಳಲ್ಲಿ ತಪ್ಪದೆ ಒಂದೆರಡು ಮನೆಗಳಲ್ಲಾದರೂ ಕೋರಣ್ಯ ಮಾಡಬೇಕು. ದೇವರ ಗುಡ್ಡರು ಹರಿಜನರು, ಉಪ್ಪಲಿಗಶೆಟ್ಟರು, ಕುರುಬರು, ಕುಂಬಾರರು, ಅಗಸರು, ಪರಿವಾರದವರು, ಒಕ್ಕಲಿಗರು ಮುಂತಾದ ವರ್ಗದವರಲ್ಲಿ ಕಾಣಸಿಗುತ್ತಾರೆ.

ದೇವರಗುಡ್ಡನ ಅಂತ್ಯಸಂಸ್ಕಾರವೂ ಗುಡ್ಡರಿಂದಲೇ ನಡೆಯುತ್ತದೆ. ಗುಡ್ಡರ ಮರಣವೆಂದರೆ ಅದು ಮಹಾತ್ಮನ ಮರಣ. ಗುಡ್ಡರಲ್ಲದೆ ಬೇರೆ ಯಾರೂ ಶವವನ್ನು ಮುಟ್ಟುವಂತಿಲ್ಲ. ಶವಕ್ಕೆ ಸ್ನಾನಮಾಡಿಸಿ ವಿಭೂತಿಧರಿಸಿ ಬಿಲ್ವಪತ್ರೆ ತುಂಬೇ ಹೂವುಗಳಿಂದ ಅಲಂಕಾರಮಾಡಿ ಶವವನ್ನು ಕುಳ್ಳಿರಿಸಿ ಲಿಂಗವನ್ನು ಅಂಗೈಮೇಲೆ ಮಡಗಿ ಪೂಜೆ ಮಾಡಿ ಮಣ್ಣು ಮಾಡುತ್ತಾರೆ.

ಗುಡ್ಡರು ಮಾಡುವ ಹಬ್ಬಗಳಲ್ಲಿ ದೀಪಾವಳಿ ಹಾಗೂ ಶಿವರಾತ್ರಿಗಳು ಅತ್ಯಂತ ಪ್ರಮುಖವಾದವುಗಳು.ಈ ಹಬ್ಬಗಳಲ್ಲಿ ಮತ್ತು ಶುಕ್ರವಾರ, ಸೋಮವಾರಗಳಲ್ಲಿ ಸೀಸಪ್ಪೆ (ಸಸ್ಯಾಹಾರ) ಮಾತ್ರ ಮಾಡುತ್ತಾರೆ. ಮಾಂಸಾಹಾರ ಬಳಸುವುದಿಲ್ಲ. ಬೆಟ್ಟದಲ್ಲಿ ಮಾದೇಶ್ವರನನ್ನು ತಾವೇ ಪೂಜಿಸುವುದಿಲ್ಲ. ಮಾದೇಶ್ವರನ ಪೂಜೆಗೆಂದೇ ಮೀಸಲಾಗಿರುವ ಬೇಡರ ಕಣ್ಣಪ್ಪನ ವಂಶಜರಾದ ತಮ್ಮಡಿಗಳ ಕೈಯಲ್ಲಿ ಪೂಜೆ ಮಾಡಿಸುತ್ತಾರೆ. ಗುಡ್ಡರು ಸೋಮವಾರ, ಶುಕ್ರವಾರಗಳಲ್ಲಿ ಉಪಾದಾನ ಮಾಡುವುದಲ್ಲದೆ ಇತರ ದಿನಗಳಲ್ಲೂ ಜೀವನ ನಿರ್ವಹಣೆಗಾಗಿ ಕರೆದಲ್ಲಿಗೆ ಹೋಗಿ ಕತೆ ಮಾಡುವುದುಂಟು.

ಹೆಣ್ಣುಮಕ್ಕಳನ್ನು ಗುಡ್ಡಮ್ಮ ಅಥವಾ ಗುಡ್ಡಿ ಬಿಡುವ ಪದ್ಧತಿ ಹರಿಜನರಲ್ಲಿ ಮಾತ್ರ ತೀರ ವಿರಳವಾಗಿ ನಡೆದುಕೊಂಡು ಬರುತ್ತಿದೆ. ಗುಡ್ಡಿ ಮಲೆಯಮಾದೇಶ್ವರನಿಗೆ ಸಿಸುಮಗಳಾದ ಮೇಲೆ ಅವಳಿಗೆ ವಿವಾಹವಿಲ್ಲ. ಯಾವನಾದರೂ ಗುಡ್ಡ ಇಷ್ಟಪಟ್ಟರೆ ಅವನ ಸೇವೆಯನ್ನು ಈಕೆ ಮಾಡಬೇಕಾಗುತ್ತದೆ. ಸಾಮಾನ್ಯವಾಗಿ ಗುಡ್ಡಿ ಬಿಟ್ಟ ಹೆಣ್ಣುಮಕ್ಕಳಿಗೆ ಮಾದಮ್ಮ, ಮಾದೇವಿ, ರಾಮವ್ವ, ಮಲ್ಲಮ್ಮ ಇತ್ಯಾದಿ ಹೆಸರುಗಳನ್ನು ಕಟ್ಟುತ್ತಾರೆ. ಇತ್ತೀಚೆಗೆ ಗುಡ್ಡಿ ಬಿಡುವ ಪದ್ಧತಿ ಮಾಯಾಗುತ್ತಿದೆ. (ಪಿ.ಕೆ.ಆರ್.)

**ದೇವರ ದಾಸಿಮಯ್ಯ :** 11ನೆಯ ಶತಮಾನದ ಉತ್ತರಾರ್ಧ ಹಾಗೂ 12ನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಹಿರಿಯ ಶಿವಶರಣ ಹಾಗೂ ಆದ್ಯ ವಚನಕಾರ, ಶಂಕರದಾಸಿಮಯ್ಯನ ಸಮಕಾಲೀನ, ಗುಲ್ಬರ್ಗ ಜಿಲ್ಲೆ ಸುರಪುರ ತಾಲ್ಲೂಕಿನ ಮುದನೂರು ಇವನ ಜನ್ಮಸ್ಥಳ. ಇವನಿಗೆ ಮುದನೂರು ದಾಸಿಮಯ್ಯ, ಜೇಡರ ದಾಸಿಮಯ್ಯ ಎಂಬ ಹೆಸರುಗಳೂ ಇವೆ. ದೇವರ ದಾಸಿಮಯ್ಯ ಹಾಗೂ ಜೇಡರ ದಾಸಿಮಯ್ಯ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳೆಂದೂ ಇಬ್ಬರೂ ಒಬ್ಬನೇ ಎಂದೂ ವಾದವಿವಾದಗಳೂ ಇವೆ. ರಾಮನಾಥ ಇವನ ಆರಾಧ್ಯದೈವ. ಈತನ ಪತ್ನಿ ದುಗ್ಗಳೆ (ನೋಡಿ) ಶ್ರೇಷ್ಠ ಶಿವಭಕ್ತೆಯಾಗಿದ್ದು ಇವರಿಬ್ಬರ ದಾಂಪತ್ಯ ಸಾಮರಸ್ಯದಿಂದ ಕೂಡಿತ್ತು. ನೇಯ್ಗೆ ಈತನ ಕಾಯಕ. ಒಮ್ಮೆ ದಾಸಿಮಯ್ಯನ ಶ್ರೇಷ್ಠ ಭಕ್ತಿಗೆ ಮೆಚ್ಚಿ ಶಿವನು ಜಂಗಮ ರೂಪದಲ್ಲಿ ಬಂದು ನೇಯ್ದ ವಸ್ತ್ರವನ್ನು ಕಾಣಿಕೆಯಾಗಿ ಪಡೆದು ತವನಿಧಿಯನ್ನು ಇವನಿಗೆ ಕರುಣಿಸಿದನೆಂದು ಪ್ರತೀತಿ. ಬಸವಣ್ಣ ಇವನ ಭಕ್ತಿಯನ್ನು ಕುರಿತು ಹೇಳುವಾಗ ಭಕ್ತಿ ಎಂತಹುದಯ್ಯ ದಾಸಯ್ಯ ಮಾಡಿದಂತಹುದಯ್ಯ ಎಂದು ಹೇಳಿದ್ದಾರೆ. ಅಲ್ಲದೆ ದಾಸಿಮಯ್ಯನ ಆದರ್ಶ ದಾಂಪತ್ಯವನ್ನು ಹೊಗಳಿದ್ದಾರೆ. ದಾಸಿಮಯ್ಯ ತನ್ನ ವಚನಗಳಲ್ಲಿ ತನಗಿಂತ ಹಿಂದೆ ಇದ್ದಿರಬಹುದಾದ ಅಥವಾ ಸಮಕಾಲೀನರಾಗಿದ್ದ ಡೋಹರ ಕಕ್ಕಯ್ಯ, ಮಾದರ ಚೆನ್ನಯ್ಯ, ಕುಂಬಾರ ಗುಂಡಯ್ಯ, ಕೆಂಬಾವಿಯ ಭೋಗಣ್ಣ ಮೊದಲಾದ ವಚನಕಾರರನ್ನು ಸ್ಮರಿಸಿದ್ದಾನೆ. ಇವನ ವಿಷಯ ಬಸವಣ್ಣನವರ ವಚನಗಳು. ಬಸವಪುರಾಣ, ಶಿವತತ್ತ್ವಚಿಂತಾಮಣಿ, ಭೈರವೇಶ್ವರಕಾವ್ಯದ ಕಥಾಮಣಿಸೂತ್ರರತ್ನಾಕರ ಮೊದಲಾದ ಗ್ರಂಥಗಳಲ್ಲಿ ಸ್ವಲ್ಪ ಮಟ್ಟಿಗೆ ನಿರೂಪಿತವಾಗಿವೆ. ಇವನ ಜೀವನಚರಿತ್ರೆಯನ್ನೇ ಪೂರ್ಣವಾಗಿ ಒಳಗೊಂಡು ರಚಿತವಾದ ಗ್ರಂಥಗಳಲ್ಲಿ ದೇವಕವಿಯ ದೇವಾಂಗಪುರಾಣ (ಸಂಸ್ಕೃತ), ಇದನ್ನೇ ಕನ್ನಡಕ್ಕೆ ಅನುವಾದಿಸಿದ ಅಯ್ಯಪ್ಪನ ದೇವಾಂಗಪುರಾಣ, ವಿರೂಪಾಕ್ಷದೇಶಿಕನ ದೇವರ ದಾಸಿಮಯ್ಯನ ಪುರಾಣ ಮುಖ್ಯವಾದುವು. ಈತ ಅನೇಕ ಪವಾಡಗಳನ್ನು ಮೆರೆದನೆಂದೂ ಪ್ರತೀತಿ. ಪೊಟ್ಟಲಕೆರೆಯಲ್ಲಿ ಜೈನರನ್ನು ವಾದದಲ್ಲಿ ಸೋಲಿಸಿದ್ದು, ರಾಣಿ ಸುಗ್ಗಲೆಗೆ ಶಿವದೀಕ್ಷೆ ಕೊಟ್ಟದ್ದು, ಘಟಸರ್ಪವನ್ನು ಶಿವಲಿಂಗಮಾಡಿ ಪೊಟ್ಟಲ ಕೆರೆಯಲ್ಲಿ ಪ್ರತಿಷ್ಠಾಪಿಸಿದ್ದು ಈತ ಮೆರೆದನ್ನೆನಲಾದ ಮುಖ್ಯ ಪವಾಡಗಳು.

ಇದುವರೆಗೆ ದಾಸಿಮಯ್ಯನ 142 ವಚನಗಳು ದೊರಕಿವೆ. ರಾಮನಾಥ ಎಂಬುದು ಇವನ ವನಚಗಳ ಅಂಕಿತ. ಇವುಗಳಲ್ಲಿ ಭಕ್ತಿಯ ಮೇಲ್ಮೆಯನ್ನೂ ತತ್ತ್ವದ ಆಳವನ್ನೂ ಅರಿಯಬಹುದಾಗಿದೆ. ಈ ವಚನಗಳಲ್ಲಿ ಕಂಡುಬರುವ ಆಳವಾದ ಅರ್ಥ, ಭಾವ, ಧ್ವನಿ, ಈತ ಒಬ್ಬ ಉತ್ತಮ ವಚನಕಾರನೆಂಬುದಕ್ಕೆ ಸಾಕ್ಷಿಯಾಗಿವೆ. ಪರಮಾತ್ಮನ ಸ್ವರೂಪ, ಪರಮಾತ್ಮ ಜೀವಾತ್ಮರಿಗಿರುವ ಸಮ್ಯಕ್ ಸಂಬಂಧ, ಮೋಕ್ಷಸ್ವರೂಪ, ಸಯೋಗ್ಯಗುರುವಿನ ಲಕ್ಷಣ, ಭಕ್ತಾಭಿಮಾನ, ದಾಸ್ಯಭಾವ, ಸಮರ್ಪಣಾಭಾವ, ಧರ್ಮ, ನೀತಿ ಮೊದಲಾದ ವಿಷಯಗಳು ಇವನ ವಚನಗಳಲ್ಲಿ ಚೆನ್ನಾಗಿ ಪ್ರತಿಪಾದಿತವಾಗಿವೆ. ತನ್ನ ಅನುಭವಕ್ಕೆ ನಿಲುಕದ ಯಾವದೇ ಸಂಗತಿಯನ್ನು ಈತ ಹೇಳಹೋಗಿಲ್ಲ. ಯಾವುದೇ ಅನುಭವವು ಸಹೃದಯರಿಗೆ ತಲುಪುವಂತೆ ಉಪಮೆ-ರೂಪಕಾದಿಗಳ ಸಹಾಯಗಳಿಂದ ಹೇಳುವ ರೀತಿ ಸೋಪಜ್ಞತೆಯಿಂದ ಕೂಡಿದೆ. ಭಾಷೆಯಲ್ಲಿ ಸರಳತೆ ಕಂಡುಬಂದರೂ ಭಾವದಲ್ಲಿ ಅರ್ಥಶ್ರೀಮಂತಿಕೆ ಎದ್ದು ಕಾಣುತ್ತದೆ.

ಮಾರಿಯ ಪೂಜಿಸಿ ಮಸಣಕ್ಕೆ ಹೋಗಿ ಗೋರಿಗೊಳಿಸಿ, ಕುರಿಯ ಕೊರಳನೆ ಕೊಯ್ದುಂಬ ಕ್ರೂರಕರ್ಮಿಗಳನವರ ಶಿವಭಕ್ತರೆನ್ನಬಹುದೇ; ಈಶನ ಶರಣರು ವೇಶಿಯ ಹೋದೆಡೆ ಮೀಸಲೋಗರವ ಹೊಱಗಿರಿಸಿದೆಡೆ ಹಂದಿ ಮೂಸಿನೋಡಿದಂತೆ ಸತಿಯರ ಸಂಗವನು ಅತಿಶಯದ ದಾಸ್ಯವನು ಪೃಥ್ವೀಗೀಶ್ವರನ ಪೂಜೆಯನು ಅರಿವುಳ್ಳರೆ ಹೆರರ ಕೈಯಿಂದ ಮಾಡಿಸುವರೆ - ಇಂಥ' ಕೆಲವು ವಚನಗಳಲ್ಲಿ ಸಮಾಜ ವಿಮರ್ಶೆ ಕಟುವಾಗಿ ವಿಡಂಬನಾತ್ಮಕವಾಗಿ ನಿರೂಪಿತವಾಗಿದೆ. ಹಸಿವಿಲ್ಲದ ಬೊಂಬೆಗೆ ತೃಷೆಯಿಲ್ಲದ ನೀರೆಱುದು ಮಸಕವಿಲ್ಲದ ಮಾತ ಮನದಲ್ಲಿ ಹೇಳಿ ಹೆಸರಿಲ್ಲದೆ ಕರೆದರೆ ಓ ಎಂಬವ ನೀನೋ; ಎಣ್ಣೆ ಇದ್ದು ಎಳ್ಳು ನೆನೆಯದ ಭೇದವ, ಕಿಚ್ಚಿದ್ದು ಕಲ್ಲು ಸಿಡಿಯದ ಭೇದವ, ಕಾಮವಿದ್ದು ಕನ್ನೆಯನನುಭವಿಸದ ಭೇದವ, ಪರವಿದ್ದೂ ಪ್ರಾಣನ ಪ್ರಕೃತಿಯರಿಯದ ಭೇದವ - ಈ ಮೊದಲಾದ ಕೆಲವು ವಚನಗಳಲ್ಲಿ ಬೆಡಗಿನ ವಚನಗಳ ಶೈಲಿ ಕಂಡುಬರುತ್ತವೆ. ಎಳ್ಳು ಇಲ್ಲದ ಗಾಣದಲ್ಲಿ ಎಣ್ಣೆಯುಂಟೇ; ಜಳ್ಳ ತೂರಿದಲ್ಲಿ ಬತ್ತವುಂಟೇ; ಹಂದಿ ಶ್ರೀಗಂಧದ ಪೂಸಿದರೇನು ಗಂಧರಾಜನಾಗ ಬಲ್ಲುದೇ; ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟ ನೆಗೆದಂತೆ; ಕತ್ತೆ ಬಲ್ಲುದೆ ಕತ್ತುರಿಯ ವಾಸನೆಯ; ಜ್ವರವಿಡಿದ ಬಾಯಿಗೆ ನೊರೆವಾಲು ಒಲಿವುದೇ; ಕಡೆಗೀಲಿಲ್ಲದ ಬಂಡಿ ಹೊಡೆಗೆಡುವುದು ಮಾಂಬುದೇ - ಈ ಮೊದಲಾದ ಮಾತುಗಳಲ್ಲಿ ಆಡು ನುಡಿಯ ಸೊಬಗನ್ನೂ ಕಾಣಬಹುದು.

ದಾಸಿಮಯ್ಯನ ವಚನಗಳಲ್ಲಿ ಪ್ರಭಾವ ಮುಂದಿನ ಇಡೀ ವಚನ ಸಾಹಿತ್ಯದ ಮೇಲೆ ಆಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಬಸವಣ್ಣನವರು ಇವನ ಭಾವವನ್ನೂ ಅನುಭಾವವನ್ನೂ ಅನುಸರಿಸಿದ್ದಾರೆ. ಅಲ್ಲಮಪ್ರಭು, ಅಕ್ಕಮಹಾದೇವಿ, ಸರ್ವಜ್ಞ ಮೊದಲಾದ ವಚನಕಾರರು ಈತನ ಪ್ರಭಾವಕ್ಕೊಳಗಾಗಿದ್ದಾರೆ. ಹೀಗೆ ಒಂದು ಸಾಹಿತ್ಯ ಪ್ರಕಾರದ ಆದ್ಯ ಪ್ರವರ್ತಕನಾಗಿ ಉತ್ತಮ ವಚನಗಳನ್ನು ನೀಡಿ ಶ್ರೇಷ್ಠ ವಚನಾಕಾರನೆಂಬ ಬಿರುದಿಗೆ ದಾಸಿಮಯ್ಯ ಪಾತ್ರನಾಗಿದ್ದಾನೆ. (ಬಿ.ಎಸ್.ಎಸ್.)

**ದೇವರ ಸೇವೆಗಳು :** ಜನಪದರು ತಮಗೆ ಸಂಭವಿಸುವ ಶುಭ ಅಶುಭಗಳಿಗೆಲ್ಲ ದೇವರೇ ಕಾರಣನೆಂದೂ ಅವನು ಕೃಪೆ ಕಡಿಮೆಯಾದಾಗ ಕಷ್ಟ ನಷ್ಟ ಒದಗುವುದೆಂದೂ ಕೃಪೆ ಹೆಚ್ಚಾದಾಗ ಸುಖ ಒದಗುವುದೆಂದೂ ನಂಬಿ ಕೈಗೊಳ್ಳುವ, ಕಷ್ಟಪರಿಹಾರಾರ್ಥವಾಗಿ ನಿರ್ದಿಷ್ಟ ದೈವಕ್ಕೆ ಕಟ್ಟಿಕೊಂಡ

ಹರಕೆ ತೀರಿಕೆಯ ವಿಶಿಷ್ಟ ಆಚರಣೆಗಳು. ಇಂಥ ಆಚರಣೆಗಳಲ್ಲಿ ಅನೇಕ ಪ್ರಕಾರಗಳುಂಟು. ಸೇವಾ ನಿಯಮ, ರೀತಿರಿವಾಜುಗಳನ್ನು ಕುರಿತಂತೆ ಹಲವಾರು ಕಟ್ಟುಕಟ್ಟಳೆಗಳುಂಟು. ಇವು ಪ್ರದೇಶದಿಂದ ಪ್ರದೇಶಕ್ಕೆ ಕಾಲಾಕಾಲಕ್ಕೆ ರೂಪ ಸಮಯ ಸಾಧನಗಳಲ್ಲಿ ಸಾಕಷ್ಟು ವ್ಯತ್ಯಾಸಗಳನ್ನು ಪಡೆದುಕೊಂಡು ಬಳಕೆಯಲ್ಲಿರುತ್ತವೆ.

ಇವುಗಳಲ್ಲಿ ಒಚ್ಚಮಗ್ಗಲು ಸೇವೆ, ದುಂಡುರುಳು ಸೇವೆ, ಮಡೆ ಹೊರಳುವುದು, ಹೆಜ್ಜೆ ನಮಸ್ಕಾರ, ಮಣೇವು ಹಾಕುವುದು, ಹರಿಸೇವೆ, ಮೆಟ್ಟಲು ತೆಂಗಿನ ಕಾಯಿ ಸೇವೆ, ಪಂಜಿನ ಸೇವೆ, ಹಾಸಿಗೆ ಸೇವೆ, ಹೊಳೆಕರೆ ಸೇವೆ, ಧೂಪದ ಸೇವೆ, ಫಲಾರ ಸೇವೆ, ತಾಳೆಮೆಳೆ ಸೇವೆ, ಶಿಕ್ರಕ್ಕಾಯ್ ಕಟ್ಟೋ ಸೇವೆ, ದೇವಸ್ಥಾನದ ಬಾಗಿಲಿನಲ್ಲಿ ಎಲ್ಲರೂ ತಿರುಗುವಲ್ಲಿ ತಮ್ಮ ಚಿತ್ರ ಕೆತ್ತಿಸುವುದು, ಬಾಯಿಬೀಗ ಸೇವೆ, ಕೊಂಡ ಹಾಯುವುದು, ಸಿಡಿ ಆಡುವುದು ಮುಂತಾದುವು ಮುಖ್ಯವಾದುವು.

**ಒಚ್ಚಮಗ್ಗಲು ಸೇವೆ :** ಇದನ್ನು ಸಲ್ಲಿಸುವವರು ನದಿಯಲ್ಲಿ ಅಥವಾ ಕೆರೆಯಲ್ಲಿ ಸ್ನಾನಮಾಡಿ ಒದ್ದೆ ಬಟ್ಟೆಯುಟ್ಟು ಹರಕೆ ಹೊತ್ತ ದೈವದ ದೇವಾಲಯದ ಸುತ್ತ ಒಂದೇ ಮಗ್ಗಲಲ್ಲಿ ಮಲಗುತ್ತ ನಮಸ್ಕಾರ ಮಾಡಿಕೊಂಡು ಬರುವರು. ಒಂದು ಸುತ್ತಿನಿಂದ ಮೂರು ಸುತ್ತಿನವರೆಗೆ ಈ ಸೇವೆ ನಡೆಯುತ್ತದೆ. ಇದರಲ್ಲಿ ಹೆಚ್ಚಾಗಿ ಹರಕೆ ಸಲ್ಲಿಸುವವರು ಪುರುಷರು. ಕೆಲಮೊಮ್ಮೆ ಸ್ತ್ರೀಯರೂ ಸಲ್ಲಿಸುವುದುಂಟು.

**ದುಂಡುರುಳು ಸೇವೆ, ಮಡೆ ಹೊರಳುವುದು :** ಸ್ವಲ್ಪ ಹೆಚ್ಚುಕಡಮೆ ಇವು ಎರಡೂ ಒಂದೇ ಬಗೆಯವು. ಇವುಗಳಲ್ಲಿಯೂ ಒದ್ದೆಬಟ್ಟೆ ಉಟ್ಟು, ದೇವಸ್ಥಾನವನ್ನು ಉರುಳುತ್ತಲೇ ಬಳಸಿ ಬರುತ್ತಾರೆ. ಕೆಲವು ವೇಳೆ ರಥೋತ್ಸವ, ಪರ್ವಗಳಂಥ ದೊಡ್ಡ ಸಮಾರಾಧನೆಗಳಲ್ಲಿ ನೂರಾರು ಜನ ಊಟ ಮಾಡಿದ ಎಂಜಲು ಎಲೆಗಳನ್ನು ಎತ್ತುವುದಕ್ಕೆ ಮುಂಚೆ ಅದರ ಮೇಲೆ ಉರುಳುವುದೂ ಉಂಟು. ಘಟ್ಟದ ಕೆಳಗಿನ ಸುಬ್ರಹ್ಮಣ್ಯ ದೇವಾಲಯದಲ್ಲಿ ಈ ಸೇವೆ ಹೆಚ್ಚು. ಹಿಂದೆ ಬಿಳಿಗಿರಿ ರಂಗನ ಬೆಟ್ಟದಲ್ಲಿಯೂ ಈ ಸೇವೆ ನಡೆಸುತ್ತಿದ್ದರಂತೆ. ಇದರಿಂದ ಕಾಹಿಲೆಗಳು ಗುಣವಾಗುವುದರ ಜೊತೆಗೆ, ಈ ಸೇವೆ ನಡೆಸುವ ಮಕ್ಕಳಾಗದ ಮಹಿಳೆಯರಿಗೆ ಮಕ್ಕಳಾಗುವುದೆಂಬ ನಂಬಿಕೆ ಇದೆ. ಹೆಂಗಸರಲ್ಲದೆ ಪುರುಷರೂ ಈ ಸೇವೆ ನಡೆಸುತ್ತಾರೆ.

**ಹೆಜ್ಜೆ ನಮಸ್ಕಾರ :** ದೇವಸ್ಥಾನದ ಪ್ರಾಕಾರದಲ್ಲಿ ಹೆಜ್ಜೆ ಹೆಜ್ಜೆಗೂ ನಮಸ್ಕರಿಸುತ್ತ ಹೋಗುವುದು. ಬೆಟ್ಟದ ಮೇಲೆ ದೇವರಿದ್ದರೆ ಮೆಟ್ಟಲು ಮೆಟ್ಟಲಿಗೂ ನಮಸ್ಕರಿಸುತ್ತ ಹೋಗುವುದು.

**ಮೆಟ್ಟಲು ತೆಂಗಿನ ಕಾಯಿಸೇವೆ :** ಮಕ್ಕಳಾಗದಿರುವ ಮಹಿಳೆಯರು ಒಂದೊಂದು ಮೆಟ್ಟಲಿಗೆ, ಕೆಲವು ವೇಳೆ ಹನ್ನೆರಡು ಮೆಟ್ಟಲಿಗೆ ಒಮ್ಮೆ ತೆಂಗಿನಕಾಯಿ ಒಡೆಯುತ್ತ ನಮಸ್ಕರಿಸುತ್ತ ಹೋಗುವರು. ಹೀಗೆ ಮಾಡಿದರೆ ಮಕ್ಕಳಾಗುವುದೆಂಬ ನಂಬಿಕೆಯಿದೆ.

**ಹರಿಸೇವೆ :** ದೇವರಿಗೆ ಪೂಜೆ ಮಾಡಿಸಿ ನೈವೇದ್ಯ ಮಾಡಿಸಿ ಮಂಗಳಾರತಿ ಮಾಡಿಸುವುದು. ಹರಿಸೇವೆಯ ಅಂಗವಾಗಿ ನಡೆಯುವ ಇನ್ನೊಂದು ಸೇವೆ ಮಣೇವು ಹಾಕುವುದು. ಇದರಲ್ಲಿ ಮುಖ್ಯಪಾತ್ರ ವಹಿಸುವವರು ದಾಸಯ್ಯಗಳು.

**ಧೂಪದ ಸೇವೆ :** ಮಾದೇಶ್ವರನ ಭಕ್ತರು ಬೆಟ್ಟ ಹತ್ತಿ ದೇವಸ್ಥಾನದ ಮುಂದೆ ಉರಿಯುತ್ತಿರುವ ಕೊಂಡಕ್ಕೆ ಧೂಪ (ಸಾಂಬ್ರಾಣಿ, ಗಂಧದ ಚಕ್ಕೆ) ಹಾಕುವುದು. ದೇವರಿಗೆ ನೈವೇದ್ಯ ಮಾಡಿದ ಪ್ರಸಾದವನ್ನು ಇವರು ಕೈಯಲ್ಲಿ ಮುಟ್ಟದೆ ತಿನ್ನುತ್ತಾರೆ.

**ಪಂಜಿನ ಸೇವೆ :** ಮಲೆಯ ಮಾದೇಶ್ವರನ ಬೆಟ್ಟದಲ್ಲಿ ಮಾದೇಶ್ವರನ ಭಕ್ತರು ಪಂಜಿನ ಸೇವೆ ನಡೆಸುವರು. ಎರಡೂ ಕೈಯಲ್ಲಿ ಎರಡು ಪಂಜು ಹಿಡಿದು ಒಂದು ವಿಧವಾಗಿ ನಮಸ್ಕರಿಸುವುದು ಇದರ ವೈಶಿಷ್ಟ್ಯ.

**ಫಲಾರ ಸೇವೆ :** ಮಾದೇಶ್ವರನ ಭಕ್ತರು ಮಾದೇಶ್ವರನ ಬೆಟ್ಟಕ್ಕೆ ಹತ್ತುವಾಗ ಊಟತಿಂಡಿ ಮಾಡದೆ ಯಾಲಕ್ಕಿಕಾಯಿಯನ್ನು ಮಾತ್ರ ತಿಂದು ಬೆಟ್ಟ ಹತ್ತುವುದು. ಇದನ್ನು ಸಾಮಾನ್ಯವಾಗಿ ಎಲ್ಲರೂ ಮಾಡುತ್ತಾರೆ.

**ಕೊಂಡ ಹಾಯುವುದು :** ಗ್ರಾಮದೇವತೆಯ ಜಾತ್ರೆಯಂದು ನಿಗಿನಿಗಿ ಉರಿಯುತ್ತಿರುವ ಕೆಂಡವನ್ನು ಬರಿಗಾಲಿನಲ್ಲಿ ನಡೆದುಕೊಂಡು ಹೋಗುವುದೇ ಕೊಂಡ ಹಾಯುವುದು.

**ಬಲಿ :** ದೇವತೆಯ ಸಂತೃಪ್ತಿಗಾಗಿ ಪ್ರಾಣಿ ಕೊಲ್ಲುವಿಕೆ.

**ಸಿಡಿ :** ಆಡುವುದು (ನೋಡಿ: ಸಿಡಿ)

**ಬಾಯಿಬೀಗ :** ಬಾಯನ್ನು ಲೋಹದ ಕಂಬಿಯಿಂದ ಹೊಲಿದುಕೊಳ್ಳುವುದು.

**ಮುಡಿ ಒಪ್ಪಿಸುವುದು :** ಮಂಡೆಯನ್ನು ಬೋಳಿಸಿಕೊಳ್ಳುವುದು

**ಶಿಕ್ರಕ್ಕಾಯ್ ಕಟ್ಟೋ ಸೇವೆ :** ಎಲ್ಲಮ್ಮನ ಭಕ್ತರು ದೇವಾಲಯದ ಶಿಖರಕ್ಕೆ ತೆಂಗಿನಕಾಯಿಯನ್ನು ಕಟ್ಟಿ ಬರುತ್ತಾರೆ. ಇದು ಈ ದೇವತೆಗೆ ಮಾತ್ರ ಮೀಸಲಿರುವ ಸೇವೆ. ದೇವಸ್ಥಾನದ ಮೆಟ್ಟಲಿನ ಮೇಲೆ ತಮ್ಮ ಚಿತ್ರವನ್ನು ಬರೆಸಿ ಅಥವಾ ಕೆತ್ತಿಸಿ ಅದನ್ನು ಎಲ್ಲರೂ ತುಳಿದುಕೊಂಡು ಹೋಗುವಂತೆ ಮಾಡುತ್ತಾರೆ. ಇದರಿಂದ ತಮ್ಮ ಪಾಪ ಪರಿಹಾರವಾಗುವುದೆಂದು ನಂಬಿಕೆ.

**ಬಾಳೆಪಟ್ಟೆ ಪೂಜೆ :** ಪವಿತ್ರ ದಿನಗಳಲ್ಲಿ ಅಂದರೆ ಶಿವರಾತ್ರಿ. ಸಂಕ್ರಾಂತಿ, ಯುಗಾದಿ, ಕಾರ್ತಿಕ ಮುಂತಾದ ದಿನಗಳಲ್ಲಿ ದೇವರಿಗೆ ಚಪ್ಪರ ಅಲಂಕಾರ ನೈವೇದ್ಯ ಮಾಡಿಸುವುದುಂಟು. ಇದಕ್ಕೆ ಪೂಜೆ ಕಟ್ಟಿಸುವುದು ಎಂದು ಹೆಸರು. ಇದರಲ್ಲಿ ಬಾಳೆಪಟ್ಟೆ ಪೂಜೆ ಹೆಚ್ಚು ಪ್ರಸಿದ್ಧ. ಬಾಳೆಯ ಮರವನ್ನು ಕಡಿದು ಅದರ ಪಟ್ಟೆಗಳನ್ನು ವಿವಿಧ ಆಕರಗಳಲ್ಲಿ ಕೊರೆದು, ಕತ್ತರಿಸಿ ದೇವರ ವಿಗ್ರಹದ ಸುತ್ತ ಮಂಟಪ ಕಟ್ಟುತ್ತಾರೆ. ವಿವಿಧ ರೀತಿಯಲ್ಲಿ ಬಾಳೆಯ ಪಟ್ಟೆಯಿಂದಲೇ ವಿಗ್ರಹವನ್ನೂ ಶೃಂಗರಿಸಿ ಪೂಜಿಸುತ್ತಾರೆ.

ಇವುಗಳ ಜೊತೆಗೆ ಮನೆಯಲ್ಲಿ ಏನಾದರೂ ತೊಂದರೆ, ಕಷ್ಟ ಸಂಭವಸಿದರೆ ಆಗಲೂ ದೇವರಿಗೆ ಸೇವೆ ನಡೆಸುತ್ತಾರೆ. ಉದಾಹರಣೆಗೆ ಹಾಲು ಕೊಡುತ್ತಿರುವ ಎಮ್ಮೆ ಇದ್ದಕ್ಕಿದ್ದಂತೆ ನಿಲ್ಲಿಸಿಬಿಟ್ಟರೆ ಅಥವಾ ಒದ್ದರೆ, ಉಚ್ಚೆದರೆ, ಹಳ್ಳಿಗರು ಜೋಯಿಸರಲ್ಲಿ ಶಾಸ್ತ್ರ ಕೇಳುತ್ತಾರೆ. ಜೋಯಿಸರು ಈರನ ಕಾಟ ಎನ್ನುತ್ತಾರೆ. ಈರನ ಕಾಟವೆಂದರೆ, ಮನೆಯಲ್ಲಿ ವಯಸ್ಸಿಗೆ ಬಂದ ಗಂಡೋ ಹೆಣ್ಣೋ ಮದುವೆ ಆಗದೆ ತೀರಿಕೊಂಡಿದ್ದರೆ ಅದರ ಕಾರಣದಿಂದ ಬರುವ ತೊಂದರೆ, ಆಗ ಯಜಮಾನ ತನ್ನ ಮನೆಯಲ್ಲಿ ಮದುವೆಯಾಗದೆ ಸತ್ತಿದ್ದ ಹೆಣ್ಣನ್ನೋ ಗಂಡನ್ನೋ ಜ್ಞಾಪಿಸಿಕೊಂಡು ಈರನ ಮದುವೆ ಮಾಡಿಸುತ್ತೇನೆಂದು ಹರಕೆ ಹೊರುತ್ತಾನೆ. ತನ್ನ ಮನೆಯಲ್ಲಿರುವ ಹೆಣ್ಣು (ಕಡಸು) ಅಥವಾ ಹೋರಿ ಕರುವಿಗೆ, ಬೇರೊಂದು ಮನೆಯಿಂದ ಹೋರಿ ಅಥವಾ ಹೆಣ್ಣು ಕರುವನ್ನು ತಂದು ಎರಡಕ್ಕೂ ಮದುವೆ ಮಾಡಿಸುವುದು ಈರನ ಮದುವೆ. ಈ ಮದುವೆ ಸಾಧಾರಣವಾಗಿ ಮನೆಯಲ್ಲಿ ಆಗುವ ಮದುವೆಯ ಹಿಂದಿನ ದಿನ ನಡೆಯುತ್ತದೆ. ಹೋರಿಗರು ಅಥವಾ ಕಡಸನ್ನು ಕೊಟ್ಟವರಿಗೆ ಅಂದು ಮರ್ಯಾದೆ ಮಾಡುವರು. ಹೀಗೆ ಮದುವೆಯಾದ ಕಡಸು ಅಥವಾ ಹೋರಿಗರುಗಳನ್ನು ಮಾರುವುದಿಲ್ಲ. ಅವು ಮನೆಯಲ್ಲಿಯೇ ಮುಪ್ಪಾಗುತ್ತವೆ.

ದೇವರ ಸೇವಾಕ್ರಮಗಳಲ್ಲಿ ಮುಖ್ಯವಾಗಿ ಅನ್ನದಾನದ ಸೇವೆ ವಿಶೇಷವಾಗಿದೆ. ಜನತೆಯನ್ನು ಅನ್ನದಿಂದ ಸಂತೃಪ್ತಿಪಡಿಸಿದರೆ ದೇವರೂ ಸಂಪ್ರೀತನಾಗುತ್ತಾನೆಂಬ ನಂಬಿಕೆ ಇಂದಿಗೂ ಪ್ರಬಲವಾಗಿದೆ. ಒಂದೂರಿಗೆ ಅಷ್ಟೇ ಅಲ್ಲದೆ ಒಂದು ಪ್ರಾಂತದ ಸಮಸ್ತ ಜನಕ್ಕೂ ಅನ್ನದ ಪರ (ಹಬ್ಬ) ಮಾಡುವ ಸತ್ಸಂಪ್ರದಾಯ ವಿರಳವಾಗಿಯಾದರೂ ಗ್ರಾಮೀಣ ಪ್ರದೇಶಗಳಲ್ಲಿ ಕಾಣಬರುತ್ತದೆ. ಕೆಲವು ಸೇವೆಗಳಿಗೆ ಕೆಲವು ದೇವರ ದೇವಾಲಯಗಳು ಪ್ರಸಿದ್ಧವಾಗಿರುತ್ತವೆ. ಸಾಧ್ಯವಿರುವವರು ಅಂಥ ದೇವಾಲಯಗಳಿಗೇ ಹೋಗುತ್ತಾರೆ. ಉಳಿದವರು ಹತ್ತಿರದಲ್ಲಿರುವ

ದೇವಾಲಯುಗಳಲ್ಲಿ ಸೇವೆ ಸಲ್ಲಿಸುತ್ತಾರೆ. ಪುಣ್ಯಕ್ಷೇತ್ರದರ್ಶನ, ತೀರ್ಥಸ್ನಾನಪಾನ, ಹಲವು ದೇವರ ದರ್ಶನ, ಸ್ಪರ್ಶನ, ದೇವರ ಉತ್ಸವ, ಗುಡಿಗೋಪುರ ರಥ ನಿರ್ಮಾಣ, ಪೂಜೆ ನಡೆಯಲು ಪೋಷಕವಾಗಿ ದಾನ ದತ್ತಿಗಳ ಕೊಡುಗೆ, ಒಡವೆ ವಸ್ತ್ರ ಫಲಪತ್ರ ಪುಷ್ಪ ಸಮರ್ಪಣೆ ಇತ್ಯಾದಿ ಕ್ರಮಗಳೆಲ್ಲ ದೇವರ ಸೇವಾಕಾರ್ಯಗಳೇ ಎನ್ನಬಹುದು.(ಜಿ.ಆರ್.ಐ.;ಎನ್.ಟಿ)

**ದೇವರಹಳ್ಳಿ:** ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕಿನ ಸಂತೇಬೆನ್ನೂರು ಹೋಬಳಿಗೆ ಸೇರಿದ ಒಂದು ಗ್ರಾಮ. ಚನ್ನಗಿರಿಯ ಈಶಾನ್ಯಕ್ಕೆ 13ಕಿಮೀ ದೂರದಲ್ಲಿದೆ. ಸಂತೇಬೆನ್ನೂರು ಅರಸರಿಗೆ ಸೇರಿದ್ದ ಈ ಹಳ್ಳಿ ಸು. 17ನೆಯ ಶತಮಾನದ ಅಂತ್ಯದಲ್ಲಿ ಚಿತ್ರದುರ್ಗದ ಪಾಳೆಯಪಟ್ಟಿಗೂ 18ನೆಯ ಶತಮಾನದ ಆದಿಯಲ್ಲಿ ಕೆಳದಿ ಅರಸರ ಪಾಳೆಯಪಟ್ಟಿಗೂ ಸೇರಿತ್ತು.

ಇಲ್ಲಿರುವ ಉಡುಮರಡಿ ಬೆಟ್ಟದ ಮೇಲೆ ರಂಗನಾಥಸ್ವಾಮಿ ದೇವಾಲಯವಿದೆ. ಈ ಬೆಟ್ಟ ಚಿಕ್ಕದಾಗಿದ್ದರೂ ಇದರ ಮೇಲಿರುವ ದೇವಾಲಯದಿಂದಾಗಿ ಆಕರ್ಷಣೀಯವಾಗಿ ಕಾಣುತ್ತದೆ. ಹರಿದ್ರಾಮಹಾತ್ಮ್ಯವೆನ್ನುವ ಇಲ್ಲಿಯ ಸ್ಥಳಪುರಾಣ ರಂಗನಾಥನೇ ಉಡದ ರೂಪ ತಾಳಿ ಬಂದು ಈ ಬೆಟ್ಟದಲ್ಲಿ ತಂಗಿದುದರಿಂದ ಈ ಸ್ಥಳಕ್ಕೆ ಉಡುಮರಡಿ ಎಂದು ಹೆಸರಾಯಿತೆಂದು ತಿಳಿಸುತ್ತದೆ. ವಿಜಯನಗರ ಅರಸರ ಕಾಲದಲ್ಲಿ ಬೇಟೆಗಾರರ ತಂಡವೊಂದು ಧೂಪದಮರಡಿ ಎಂಬಲ್ಲಿ ಉಡವೊಂದನ್ನು ಕಂಡು ಅದನ್ನು ಹಿಂಬಾಲಿಸಿದಾಗ ಆ ಉಡವು ಬೆಳ್ಳಿಗನೂಡು ಎಂಬಲ್ಲಿ ಬೆಳ್ಳಿಯ ಬಣ್ಣದಿಂದಲೂ ಚಿನ್ನಾಪುರ ಎಂಬಲ್ಲಿ ಚಿನ್ನದ ಬಣ್ಣದಿಂದಲೂ ಚಿಕ್ಕುಡ ಎಂಬಲ್ಲಿ ಗಾತ್ರದಲ್ಲಿ ಚಿಕ್ಕದಾಗಿಯೂ, ಹಿರೇಉಡು ಎಂಬಲ್ಲಿ ಗಾತ್ರದಲ್ಲಿ ದೊಡ್ಡದಾಗಿಯೂ ಕಾಣಿಸಿಕೊಂಡು ಕಗ್ಗದೂರು ಎಂಬಲ್ಲಿ ತನ್ನ ಶಕ್ತಿಯನ್ನು ಪ್ರದರ್ಶಿಸಿ, ರಾಮಗೊಂಡನಹಳ್ಳಿ ಎಂಬಲ್ಲಿ ರಾಮ ಎಂದು ಕೂಗಿ, ನಿಂತಾಪುರ ಎಂಬಲ್ಲಿ ಸ್ವಲ್ಪ ಕಾಲ ನಿಂತು ಅನಂತರ ನೀತಿಗೆರೆ ಎಂಬಲ್ಲಿಗೆ ಹೋಗಿ ಮುಂದೆ ದೇವರಹಳ್ಳಿಗೆ ತಲುಪಿದ ತಕ್ಷಣವೇ ಮಾಯವಾಯಿತೆಂದು ಈ ಸ್ಥಪುರಾಣದಲ್ಲಿ ಹೇಳಿದೆ. ಈ ಕಥೆಗೆ ಸಂಬಂಧಿಸಿದ ಹಾಗೆಯೇ ಈ ಮೇಲಿನ ಸ್ಥಳಗಳ ಹೆಸರುಗಳಲ್ಲಿ ಅವುಗಳ ಶಬ್ದರಚನೆ ಇದೆ. ಈ ಉಡವೇ ರಂಗನಾಥಸ್ವಾಮಿ ಎಂಬ ನಂಬಿಕೆ ಇಂದಿಗೂ ಇದೆ. ಈಗಲೂ ಈ ಬೆಟ್ಟದ ಮೇಲೆ ಉಡಗಳು ತುಂಬಿವೆಯಾದರೂ ಅವುಗಳನ್ನು ಯಾರೂ ಬೇಟೆಯಾಡುವುದಿಲ್ಲ.

1654ರ ಶಾಸನವೊಂದರಲ್ಲಿ ಈ ದೇವರನ್ನು ಉಡುಮರಡಿ ರಂಗನಾಥಸ್ವಾಮಿ ಎಂದು ಕರೆದಿದೆ. ದೇವಸ್ಥಾನದ ನವರಂಗವನ್ನು ಗಿರಿಯಂಮ ಎಂಬುವಳು ಕಟ್ಟಿಸಿದಳೆಂದು ತಿಳಿದುಬರುತ್ತದೆ. ದೇವಾಲಯದಲ್ಲಿರುವ ರಂಗನಾಥ ವಿಗ್ರಹ ಶಂಖ ಮತ್ತು ಚಕ್ರಾಯುಧದ ಕೆತ್ತನೆಯಿಂದ ಕೂಡಿದ ಹಾಗೂ ಗುಂಡನೆಯ ಆಕಾರವಿರುವ ಲಿಂಗ, ಮಾವಿನಕೆರೆ ಮತ್ತು ಹರದೂರುಪುರದ ಬೆಟ್ಟಗಳ ಮೇಲಿರುವ ಲಿಂಗಗಳನ್ನು ಹೋಲುತ್ತದೆ. ಈ ಲಿಂಗ ಹಿಂದೆ, ವಿಜನಯುಗರದ ಅರಸು ಕೃಷ್ಣದೇವರಾಯನಿಂದ ಪ್ರತಿಷ್ಠೆಯಾಯಿತೆನ್ನಲಾದ ಬಾಣಾಕಾರದ ಲಿಂಗವೊಂದಿದೆ. ಈ ಲಿಂಗದ ಮೇಲೆ ಸುಮಾರು 1 1/2 ಅಡಿ ಎತ್ತರದ ಕೇಶವನ ಪ್ರತಿಮೆ ಇದೆ. ಈ ದೇವಸ್ಥಾನದಲ್ಲಿ ಸುಮಾರು 1 ಅಡಿ ಎತ್ತರದ ಲೋಹದ ಉತ್ಸವ ವಿಗ್ರಹವೂ ಇದೆ. ಇಲ್ಲಿ ವರ್ಷಕ್ಕೊಮ್ಮೆ ರಥೋತ್ಸವ ನಡೆಯುತ್ತದೆ. ಈ ದೇವಸ್ಥಾನದ ಪ್ರಾಕಾರದಲ್ಲಿ ಲಕ್ಷ್ಮೀಗುಡಿ ಇದೆ. ಇಲ್ಲಿಯ ವಿಗ್ರಹ ಸುಂದರವಾಗಿದೆ. (ಕೆ.ಎಂ.ಎಸ್.)

**ದೇವರಾಜ ಅರಸು, ಡಿ. :** 1915-1982 ಕರ್ನಾಟಕ ರಾಜ್ಯದ ಮಾಜಿ ಮುಖ್ಯಮಂತ್ರಿ.

ಮೈಸೂರು ಜಿಲ್ಲೆ ಹುಣಸೂರು ತಾಲ್ಲೂಕಿನ ಕಲ್ಲಹಳ್ಳಿಯಲ್ಲಿ ಇವರು 1915 ಆಗಸ್ಟ್ 20ರಂದು ಜನಿಸಿದರು. ತಂದೆ ದೇವರಾಜ ಅರಸು, ತಾಯಿ ದೇವೀರಮ್ಮಣ್ಣಿ. ಇವರದು ಅರಸು ಮನೆತನವಾದರೂ ಮಧ್ಯಮ ವರ್ಗಕ್ಕೆ ಸೇರಿದ್ದ ಹಳ್ಳಿಯ ಕುಟುಂಬವಾಗಿತ್ತು. ಅರಸು ಅವರು ಹಳ್ಳಿಯ ಇತರ ಮಕ್ಕಳಂತೆ ಸಾಮಾನ್ಯ ವಾತಾವರಣದಲ್ಲಿ ಬೆಳೆದರು. ತಮ್ಮ ಎಂಟನೆಯ ವಯಸ್ಸಿಗೇ ತಂದೆಯನ್ನು ಕಳೆದುಕೊಂಡ ಇವರು ತಾಯಿ ಮತ್ತು ಅಜ್ಜಿಯವರ ಆರೈಕೆಯಲ್ಲಿ ಬೆಳೆದರು. ನೆರೆಯ ಮನೆಯ ಗೌಡಯ್ಯನ ಜಗಲಿಯಲ್ಲಿ ಪ್ರಾರಂಭಿಸಿದ ವ್ಯಾಸಂಗವನ್ನು ಅನಂತರ ಮೈಸೂರು ಮತ್ತು ಬೆಂಗಳೂರುಗಳಲ್ಲಿ ಮುಂದುವರಿಸಿ ಬಿ.ಎಸ್.ಸಿ. ಪದವೀಧರರಾದರು.

ಪದವಿ ಪಡೆದಮೇಲೆ ಇವರು ಮರಳಿ ಕಲ್ಲಹಳ್ಳಿಯಲ್ಲಿ ನೆಲಸಿ ವ್ಯವಸಾಯದಲ್ಲಿ ನಿರತರಾದರು. ಜೊತೆಗೆ ರಾಜಕಾರಣದಲ್ಲೂ ಆಸಕ್ತಿ ವಹಿಸಿದರು. ಹಳೆಯ ಮೈಸೂರು ಸಂಸ್ಥಾನದ ಪ್ರಜಾಪ್ರತಿನಿದಿ ಸಭೆಯಲ್ಲಿ ಇವರು 1941-48ರ ವರೆಗೆ ಸದಸ್ಯರಾಗಿದ್ದರು. 1942ರ ಭಾರತ ಬಿಟ್ಟು ತೊಲಗಿ ಚಳವಳಿಯಲ್ಲೂ ಭಾರತಕ್ಕೆ ಸ್ವಾತಂತ್ರ್ಯ ದೊರೆತಮೇಲೆ 1947ರಲ್ಲಿ ಮೈಸೂರಸಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ನಡೆದ ಮೈಸೂರು ಚಲೋ ಹೋರಾಟದಲ್ಲೂ (ಮೈಸೂರು ರಾಜಮನೆತನದೊಂದಿಗೆ ಬಾಂಧವ್ಯವಿದ್ದರೂ) ಭಾಗವಹಿಸಿದರು. ಸ್ವತಂತ್ರ ಭಾರತದಲ್ಲಿ ನಡೆದ ಪ್ರಥಮ ಮಹಾಚುನಾವಣೆಗಳಲ್ಲಿ (1952) ಹುಣಸೂರು ಕ್ಷೇತ್ರದಿಂದ ರಾಜ್ಯ ವಿಧಾನ ಸಭೆಗೆ ಆಯ್ಕೆಯಾದರು. ಆಗಿನಿಂದಲೂ ಆ ಕ್ಷೇತ್ರವನ್ನು ಅವಿರತವಾಗಿ ಪ್ರತಿನಿಧಿಸಿದರು. 1962ರಲ್ಲಿ ಎಸ್. ನಿಜಲಿಂಗಪ್ಪನವರ ಮಂತ್ರಿ ಮಂಡಲದಲ್ಲಿ ಸಚಿವರಾದರು. 1967ರ ಸಾರ್ವತ್ರಿಕ ಚುನಾವಣೆಯ ಅನಂತರ ರಚಿತವಾದ ಮಂತ್ರಿಮಂಡಲದಲ್ಲೂ ಸಚಿವರಾಗಿದ್ದರು. ಈ ಅವಧಿಗಳಲ್ಲಿ ಇವರು ಕಾರ್ಮಿಕ, ಸಾರಿಗೆ, ಪ್ರವಾಸೋದ್ಯಮ, ಪಶುಸಂಗೋಪನೆ, ವಾರ್ತಾ ಮತ್ತು ಪ್ರಚಾರ, ಮೀನುಗಾರಿಕೆ, ರೇಷ್ಮೆ ಮೊದಲಾದ ಖಾತೆಗಳನ್ನು ನಿರ್ವಹಿಸಿದರು. 1969ರಲ್ಲಿ ಕಾಂಗ್ರೆಸ್ ಇಬ್ಭಾಗವಾದಾಗ ಅಂದಿನ ಪ್ರಧಾನಮಂತ್ರಿಯಾಗಿದ್ದ ಶ್ರೀಮತಿ ಇಂದಿರಾ ಗಾಂಧಿಯವರ ನೇತೃತ್ವದ ಆಡಳಿತ ಕಾಂಗ್ರೆಸ್ಸಿನ ರಾಜ್ಯ ಸಂಘಟಕರಾಗಿ ಮುಂದುವರಿದ ಇವರು 1970ರಲ್ಲಿ ಆಡಳಿತ ಕಾಂಗ್ರೆಸ್ಸಿನ ರಾಜ್ಯ ಘಟಕದ ಸಂಚಾಲಕರಾಗಿ ಪಕ್ಷದ ಸಂಘಟನೆಯ ಜವಾಬ್ದಾರಿಯನ್ನು ವಹಿಸಿದರು. ಆ ವರ್ಷವೇ ಇವರು ಕೇಂದ್ರರೇಷ್ಮೆ ಮಂಡಲಿಯ ಅಧ್ಯಕ್ಷರಾಗಿ ನೇಮಕಗೊಂಡರು.

1971ರಲ್ಲಿ ನಡೆದ ಲೋಕಸಭಾ ಚುನಾವಣೆಗಳು ಮತ್ತು 1972ರಲ್ಲಿ ನಡೆದ ವಿಧಾನಸಭಾ ಚುನಾವಣೆಗಳಲ್ಲಿ ಆಡಳಿತ ಕಾಂಗ್ರೆಸ್ ಬಹುಮತದಿಂದ ಗೆಲ್ಲಲು ಬಹಳವಾಗಿ ಶ್ರಮಿಸಿದ ಇವರು ತಮ್ಮ ರಾಜಕೀಯ ನಿಪುಣತೆ, ಸಂಘಟನಾಶಕ್ತಿ ಮತ್ತು ದೂರದೃಷ್ಟಿಗಳನ್ನು ಪ್ರಕಟಿಸಿ ಜನಪ್ರಿಯರಾದರು. ವಿಧಾನಸಭೆಯ ಕಾಂಗ್ರೆಸ್ ಪಕ್ಷದ ನಾಯಕರಾಗಿ ಆಯ್ಕೆಯಾಗಿ 1972 ಮಾರ್ಚ್ 20ರಂದು ಕರ್ನಾಟಕದ ಮುಖ್ಯಮಂತ್ರಿಯಾದರು. ಆ ವರ್ಷ ಜೂನ್‌ನಲ್ಲಿ ನಡೆದ ಉಪಚುನಾವಣೆಯಲ್ಲಿ ಇವರು ಹುಣಸೂರು ಕ್ಷೇತ್ರದಿಂದ ವಿಧಾನಸಭೆಗೆ ಚುನಾಯಿತರಾದರು.

ಪ್ರಗತಿಶೀಲ ಮನೋಭಾವದ ದೇವರಾಜ ಅರಸರು ದಕ್ಷ ಆಡಳಿತ ಒದಗಿಸುವುದು, ದಾರಿದ್ರ್ಯನಿರ್ಮೂಲನ, ಸಾಮಾಜಿಕ ನ್ಯಾಯ ದೊರಕಿಸುವುದು, ಆರ್ಥಿಕ ಪ್ರಗತಿ ಸಾಧಿಸುವುದು ಮೊದಲಾದ ಆಶೋತ್ತರಗಳಲ್ಲಿ ಕಾರ್ಯಮಗ್ನರಾಗಿದ್ದರು. ಅತ್ಯಂತ ಪ್ರಗತಿಶೀಲ ಭೂ ಸುಧಾರಣ ಶಾಸನ ಇವರ ಸರ್ಕಾರದ ಬಹು ದೊಡ್ಡ ಸಾಧನೆ. ಶತಮಾನಗಳಿಂದ ಬೆಳಕಿಗಾಗಿ ಹಾತೊರೆಯುತ್ತಿದ್ದ ಹಿಂದುಳಿದವರ ಆರ್ಥಿಕ, ಸಾಮಾಜಿಕ, ಸುಧಾರಣೇಗಳಿಗಾಗಿ ಹಲವು ಹನ್ನೊಂದು ಕಾರ್ಯಕ್ರಮಗಳನ್ನೂ ಇವರು ರೂಪಿಸಿದ್ದಾರೆ. ಈ ಉದ್ದೇಶಕ್ಕೆಂದೇ ನೇಮಕವಾದ ಹಾವನೂರು ಆಯೋಗ ಮುಖ್ಯವಾದ್ದು. ಈ ಆಯೋಗ ಹಿಂದುಳಿದ ವರ್ಗಗಳಿಗೆ ಸರ್ಕಾರಿ ಉದ್ಯೋಗಗಳಲ್ಲಿ ಮತ್ತು ಶೈಕ್ಷಣಿಕ ಪ್ರವೇಶಾತಿಗಳಲ್ಲಿ ಮೀಸಲಾತಿ ಕುರಿತಂತೆ ಸಲ್ಲಿಸಿದ ವರದಿಯನ್ನು ಇವರು ಕೂಡಲೇ ಜಾರಿಗೆ ತಂದರು.

ಇವಕು ಅಧಿಕಾರ ವಹಿಸಿಕೊಂಡ ಸ್ವಲ್ಪ ಸಮಯದಲ್ಲೇ ಜಿಲ್ಲಾ ವ್ಯಾಪ್ತಿಗೆ ಮೀರಿದ ಎಲ್ಲ ಕಚೇರಿ ಮತ್ತು ಇಲಾಖೆಗಳಲ್ಲಿ ಅಧಿಕೃತ ವ್ಯವಹಾರಗಳಿಗೆ ಕನ್ನಡ ಬಳಸಬೇಕಂಬ ಆದೇಶ ಹೊರಬಿತ್ತು.

1956ರಿಂದಲೂ ನೆನೆಗುದಿಗೆ ಬಿದ್ದಿದ್ದ ರಾಜ್ಯದ ಹೆಸರು ಬದಲಾವಣೆಯ ಸಮಸ್ಯೆಯನ್ನು ಜನತೆಯ ಇಂಗಿತವರಿತು ಸುಲಭವಾಗಿ ಪರಿಹರಿಸಿದರು. ಮೈಸೂರು ರಾಜ್ಯಕ್ಕೆ 1973 ನವೆಂಬರ್ 1ರಂದು ಕರ್ನಾಟಕ ಎಂದು ನಾಮಕರಣ ಮಾಡಲಾಯಿತು. ಭಾಷಾ ಆಯೋಗವನ್ನು ರಚಿಸಿ ಕನ್ನಡವನ್ನು ಆಡಳಿತ ಭಾಷೆಯಾಗಿ ಮಾಡಲು ಭದ್ರ ಬುನಾದಿ ಹಾಕಿದರು.

1975 ಜುಲೈ 1ರಂದು ಪ್ರಧಾನಿ ಇಂದಿರಾ ಗಾಂಧೀಯವರು ಸಾರಿದ ಇಪ್ಪತ್ತು ಅಂಶಗಳ ಕಾರ್ಯಕ್ರಮದ ಅಡಿಯಲ್ಲಿ ಭೂ ಹಂಚಿಕೆ, ಬಡವರಿಗೆ ಉಚಿತ ವಸತಿ ಯೋಜನೆ, ನಿವೇಶನ ಹಂಚಿಕೆ, ಹರಿಜನ, ಗಿರಿಜನ ಮತ್ತಿತರ ಹಿಂದುಳಿದ ವರ್ಗಗಳಿಗೆ ತೀವ್ರ ಪ್ರೋತ್ಸಾಹ, ಜೀತಪದ್ಧತಿ ರದ್ದು, ಅಲ್ಪಾದಾಯ ವರ್ಗದ ಸಾಲ ರದ್ದು, ಅಕ್ರಮ ಲೇವಾದೇವಿಗಳ ನಿಷೇಧ, ಕೃಷಿ ಕಾರ್ಮಿಕರ ವೇತನ ಹೆಚ್ಚಳ, ಬಾಡಿಗೆ ಮನೆಗಳ ಮೇಲೆ ನಿಯಂತ್ರಣ - ಈ ಮುಂತಾದ ಕ್ಷೇತ್ರಗಳಲ್ಲೂ ರಾಜ್ಯ ಗಮನಾರ್ಹ ಸಾಧನೆ ಮಾಡಿತು. ಆಹಾರ ಸಮಸ್ಯೆಯನ್ನು ನೀಗಲು, ಬರಗಾಲ ಪರಿಸ್ಥಿತಿಯನ್ನು ಎದುರಿಸಲು ಹಲವಾರು ನೀರಾವರಿ ಯೋಜನೆಗಳು ಭರದಿಂದ ಪ್ರಾರಂಭವಾದವು. ಕಬಿನಿ, ಹಾರಂಗಿ, ಹೇಮಾವತಿ, ಘಟಪ್ರಭಾ, ಕೃಷ್ಣಾ ಮೇಲ್ದಂಡೆ ಯೋಜನೆಗಳು ಹಾಗೂ ಇತರ ನೂರಾರು ಸಣ್ಣ ನೀರಾವರಿ ಯೋಜನೆಗಳ ಕೆಲಸ ಚುರುಕಾಯಿತು. ಜಗತ್ತಿನ ಬೃಹತ್ ಯೋಜನೆಗಳ ಸಾಲಿಗೆ ಸೇರುವ ಕಾಳಿ ವಿದ್ಯುತ್ ಯೋಜನೆ ಮತ್ತು ಕುದುರೆಮುಖ ಕಬ್ಬಿಣದ ಅದುರು ಯೋಜನೆಗಳು ಇವರ ಅಧಿಕಾರಾವಧಿಯಲ್ಲಿ ಪ್ರಾರಂಭವಾದುವು.

ಇವರು ಅಖಿಲ ಭಾರತ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಖಾಯಂ ಆಹ್ವಾನಿತ ಸದಸ್ಯರಾಗಿದ್ದಲ್ಲದೆ ರಾಜ್ಯ ಯುವ ಕಾಂಗ್ರೆಸ್ ಸಲಹಾ ಸಮಿತಿಯ ಅಧ್ಯಕ್ಷರೂ ಮೈಸೂರು ವಿಶ್ವವಿದ್ಯಾನಿಲಯದ ವಜ್ರಮಹೋತ್ಸವ ಸಮಿತಿ ಅಧ್ಯಕ್ಷರೂ ಆಗಿದ್ದರು.

ಇವರು ಮುಖ್ಯಮಂತ್ರಿಗಳಾದ ಮೇಲೆ ಮಾಡಿದ ಭಾಷಣಗಳ ಎರಡು ಸಂಕಲನಗಳು ಕರ್ನಾಟಕಕ್ಕೆ ಶುಭವಾಗಲಿ ಮತ್ತು ಪ್ರಗತಿಪಥ ಎಂಬ ಹೆಸರಿನಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಿಂದ ಪ್ರಕಟವಾಗಿವೆ.

ಶ್ರೀಮತಿ ಇಂದಿರಾಗಾಂಧಿಯವರು 1975ರಲ್ಲಿ ರಾಷ್ಟ್ರವ್ಯಾಪಿ ತುರ್ತು ಪರಿಸ್ಥಿತಿಯನ್ನು ಹೇರಿದಾಗ ಅದು ಜನರ ಸ್ವಾತಂತ್ರ್ಯದ ಮೇಲೆ ಬೀರುವ ಕೆಟ್ಟ ಪರಿಣಾಮವನ್ನು ತಗ್ಗಿಸಿದ್ದು ದೇವರಾಜ ಅರಸು ಅವರ ದೂರದೃಷ್ಟಿಯ ಫಲ. ಇವರು ಈ ಸಂದರ್ಭವನ್ನು ತಮ್ಮ ಸುಧಾರಣೆಗಳನ್ನು ಜಾರಿಗೆ ತರುವುದಕ್ಕೆ ಬಳಸಿಕೊಂಡರು. 1977ರಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ರಾಷ್ಟ್ರಮಟ್ಟದಲ್ಲಿ ಭಾರಿ ಸೋಲು ಅನುಭವಿಸಿದರೂ ಕರ್ನಾಟಕದಲ್ಲಿ ಜಯ ಸಾಧಿಸಿತು. ಅರಸು ಅವರು ತಮ್ಮ ಪಕ್ಷದ ಹಲವು ಶಾಸಕರ ಪಕ್ಷಾಂತರದಿಂದಾಗಿ ಅಧಿಕಾರ ಕಳೆದುಕೊಂಡು ರಾಷ್ಟ್ರಪತಿ ಆಡಳಿತ ಜಾರಿಗೆ ತರಲಾಯಿತು. ಆದರೆ 1978ರ ವಿಧಾನಸಭಾ ಚುನಾವಣೆಯಲ್ಲಿ ಮತ್ತೆ ಇಂದಿರಾ ಕಾಂಗ್ರೆಸ್ ಅಧಿಕಾರಕ್ಕೆ ಬಂದು ಅರಸು ಅವರೇ ಮುಖ್ಯಮಂತ್ರಿಗಳಾದರು. ಅದೇ ವರ್ಷ ಸೋಲು ಕಂಡಿದ್ದ ಮಾಜಿ ಪ್ರಧಾನಿ ಶ್ರೀಮತಿ ಇಂದಿರಾಗಾಂಧೀಯವರನ್ನು ಚಿಕ್ಕಮಗಳೂರು ಲೋಕಸಭಾ ಕ್ಷೇತ್ರದ ಮಧ್ಯಂತರ ಚುನಾವಣೆಯಲ್ಲಿ ಸ್ಪರ್ಧಿಸುವಂತೆ ಮಾಡಿ ಅವರ ಗೆಲುವಿಗೆ ಸಹಕಾರಿಯಾದರು.

ದೇವರಾಜ ಅರಸು ಮತ್ತು ಇಂದಿರಾಗಾಂಧಿಯವರ ರಾಜಕೀಯ ಭಿನ್ನಾಭಿಪ್ರಾಯಗಳು ಉಲ್ಬಣಿಸಿ 1979ರಲ್ಲಿ ಅರಸರನ್ನು ಕಾಂಗ್ರೆಸ್ ಪಕ್ಷದಿಂದ ಉಚ್ಚಾಟಿಸಲಾಯಿತು. ಆದರೂ ಇವರು ಅಧಿಕಾರ ಉಳಿಸಿಕೊಳ್ಳುವಲ್ಲಿ ಸಫಲರಾದರು. ಕರ್ನಾಟಕ ಕಾಂಗ್ರೆಸ್ ಎಂಬ ಪ್ರಾದೇಶಿಕ ಪಕ್ಷವನ್ನು ತೇಲಿಬಿಟ್ಟರು. ತರುವಾಯ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಪಕ್ಷವನ್ನು ಸಂಘಟಿಸಿ ಅದರ ರಾಷ್ಟ್ರೀಯ ಅಧ್ಯಕ್ಷರಾದರು. 1980ರ ಲೋಕಸಭಾ ಚುನಾವಣೆಯಲ್ಲಿ ಕರ್ನಾಟಕದ ಮತದಾರರು ಮತ್ತೆ ಇಂದಿರಾ ಕಾಂಗ್ರೆಸ್ ಪಕ್ಷಕ್ಕೆ ಅಖಂಡ ಬೆಂಬಲವನ್ನು ವ್ಯಕ್ತಪಡಿಸಿದರು. ಆಗ ಆದ ಪಕ್ಷಾಂತರದಿಂದಾಗಿ ಅರಸು ಅವರು ಮುಖ್ಯಮಂತ್ರಿ ಹುದ್ದೆಗೆ ರಾಜೀನಾಮೆ ಕೊಟ್ಟರು. ಶಾಸನ ಸಭೆಯಲ್ಲಿ ವಿರೋಧ ಪಕ್ಷದ ನಾಯಕರಾದರು. ಅದಕ್ಕೂ ಮುಳುವಾದಾಗ ಪ್ರಗತಿಪರ ದೃಷ್ಟಿಯ ಇವರು ಕರ್ನಾಟಕ ಕ್ರಾಂತಿರಂಗ ಎಂಬ ಹೊಸ ಪ್ರಾದೇಶಿಕ ಪಕ್ಷ ಕಟ್ಟಿದರು. ಈ ರಾಜಕೀಯ ತುಮುಲದಲ್ಲಿದ್ದಾಗಲೇ ಇವರು 1982 ಜೂನ್ 6ರಂದು ಹಠಾತ್ತನೆ ನಿಧನರಾದರು. ಇವರು ಹುಟ್ಟಿದ ದಿನವನ್ನು ಹಿಂದುಳಿದ ವರ್ಗಗಳ ಏಳಿಗೆಯ ದಿನವಾಗಿ ಸ್ಮರಿಸಿಕೊಳ್ಳಲಾಗುತ್ತಿದೆ. ಇವರ ಪತ್ನಿ ಚಿಕ್ಕಮ್ಮಣ್ಣಿ. ಇವರಿಗೆ ಮೂವರು ಪುತ್ರಿಯರು. ಮಗಳು ಚಂದ್ರಪ್ರಭಾ ಅರಸು ಲೋಕಸಭಾ ಸದಸ್ಯರಾಗಿದ್ದರು ಮತ್ತು ಸ್ವಲ್ಪ ಕಾಲ ರಾಜ್ಯ ಸಂಪುಟದಲ್ಲಿ ಸಚಿವೆಯಾಗಿದ್ದರು. (ಡಿ.ಎಸ್.ಜೆ.)

**ದೇವರಾಜ ಒಡೆಯರ್ :** ಮೈಸೂರು ರಾಜವಂಶದ ಖ್ಯಾತ ದೊರೆ (1659-1673) 4ನೆಯ (ಬೋಳ) ಚಾಮರಾಜನ ಮೊಮ್ಮಗ. ಗುಂಡ್ಲು ಮುಪ್ಪಿನ ದೇವರಾಜನ ಮಗ ಜನನ 1627.

ಈತ ಕಂಠೀರವ ನರಸರಾಜನ ಅನಂತರ ಪಟ್ಟಕ್ಕೆ ಬಂದ (1659). ದೊರೆತನ ವಹಿಸಿಕೊಳ್ಳುತ್ತಿದ್ದಂತೆಯೇ ಇವನು ಅನೇಕ ಯುದ್ಧಗಳಲ್ಲಿ ಪಾಲ್ಗೊಳ್ಳಬೇಕಾಯಿತು. ವಿಜಯನಗರದ ಆಳ್ವಿಕೆಯನ್ನು ಸ್ಥಾಪಿಸುವ ನೆಪದಿಂದ ನರಸೀಪುರದ ಲಕ್ಷ್ಮಪ್ಪನಾಯಕನ ಸಹಾಯ ಪಡೆದು ಶ್ರೀರಂಗಪಟ್ಟಣದ ಮೇಲೆ ದಂಡೆತ್ತಿ ಬಂದಿದ್ದ ಕೆಳದಿ ಶಿವಪ್ಪನಾಯಕನನ್ನು ಸೋಲಿಸಿ ಹಿಮ್ಮೆಟ್ಟಿಗಿದ (1659-60). ಕೆಲಕಾಲಾನಂತರ ಬಿದನೂರಿನಲ್ಲಿ ಶಿವಪ್ಪನಾಯಕ ಮೃತನಾದಮೇಲೆ ಮುಂದಿನ ಅರಸರಾದ ಒಂದನೆಯ ವೆಂಕಟಪ್ಪ ಮತ್ತು ಭದ್ರಪ್ಪ ಮೈಸೂರಿನೊಡನೆ ವೈರವನ್ನು ಮುಂದುವರಿಸಿದ್ದರು. ಬಿಜಾಪುರ ಮತ್ತು ಗೋಲ್ಕಂಡದ ಸುಲ್ತಾನರೂ ಸತ್ವಹೀನರಾಗುತ್ತಿದ್ದರು. ಈ ಸುಸಂದರ್ಭವನ್ನು ಉಪಯೋಗಿಸಿಕೊಂಡ ದೇವರಾಜ ಇಕ್ಕೇರಿಯ ಮೇಲಿನ ಯುದ್ಧದ ನೆಪದಲ್ಲಿ ತನ್ನ ರಾಜ್ಯದ ಉತ್ತರಕ್ಕಿದ್ದ ಇತರ ಪ್ರದೇಶಗಳ ಮೇಲೂ ದಾಳಿ ಮಾಡಿದ. ದಳವಾಯಿ ನಂಜನಾಥಯ್ಯನ ನೇತೃತ್ವದಲ್ಲಿ ನಡೆದ ಈ ದಾಳಿಗಳಿಂದಾಗಿ ಶಾಹೀ ರಾಜ್ಯಗಳ ಅಧೀನದಲ್ಲಿದ್ದ ಚೇಳೂರು, ಬಿದರೆ, ಸಂಪಿಗೆ ಮತ್ತು ಚಿಕ್ಕನಾಯಕನಹಳ್ಳಿ ಮೈಸೂರು ಸೈನ್ಯದ ವಶವಾದುವು (1663). 1664ರ ಹೊತ್ತಿಗೆ ಬಿದನೂರಿನಲ್ಲಿ ರಾಜನಾಗಿದ್ದ ಹಿರಿಯ ಸೋಮಶೇಖರ ನಾಯಕ ಮೈಸೂರಿನವರು ಈ ಹಿಂದೆ ವಶಪಡಿಸಿಕೊಂಡಿದ್ದ ಬಿಕ್ಕೋಡು, ಬೇಲೂರು ಮುಂತಾದ ಕೆಲವು ಪ್ರದೇಶಗಳನ್ನು ಗೆದ್ದುಕೊಂಡರೂ ನಂಜನಾಥೈಯ ತನ್ನ ಸೈನ್ಯವನ್ನು ಮಲೆನಾಡಿನ ಮೂಲಕ ಇಕ್ಕೇರಿಯತ್ತ ನುಗ್ಗಿಸಿದ. ಅಲ್ಲಿಯ ರಾಜ ಸೋಮಶೇಖರ ನಾಯಕ ಸಂಧಿ ಮಾಡಿಕೊಂಡ. 1664ರ ಹೊತ್ತಿಗೆ ಒಡೆಯರ ರಾಜ್ಯ ಉತ್ತರದಲ್ಲಿ ಚಿಕ್ಕನಾಯಕನಹಳ್ಳಿ, ಸಕ್ಕರೆಪಟ್ಟಣ, ವಸ್ತಾರೆಯವರೆಗೂ ಹಬ್ಬಿತು. 1663ರ ಹೊತ್ತಿಗೆ ಬೇಲೂರಿನಲ್ಲಿದ್ದ ವಿಜಯನಗರದ ವಂಶದ ಶ್ರೀರಂಗರಾಯ ಬೆಂಬಲ ಸಿಗದೆ ತಳ ಕಿತ್ತಿದ್ದ. ದೇವರಾಜ ಅಂದಿನಿಂದ ಸಾರ್ವಭೌಮ ಬಿರುದುಗಳನ್ನು ಆಳವಡಿಸಿಕೊಳ್ಳಲಾರಂಭಿಸಿದ. ಮೈಸೂರು ಒಡೆಯರು ಒಪ್ಪಿಕೊಂಡಿದ್ದ ನಾಮಮಾತ್ರ ಸಾಮಂತತ್ವವೂ ಕೊನೆಗೊಂಡಿತು.

1666ರಲ್ಲಿ ಅಣ್ಣಾಜಯ್ಯನಿಂದ ಸಾರತವಳ್ಳಿಯನ್ನು ವಶಪಡಿಸಿಕೊಂಡ, ಅನಂತರ ದೇವರಾಜನ ವಿಜಯದೃಷ್ಟಿ ದಕ್ಷಿಣಕ್ಕೆ ಹರಿಯಿತು. ಮಧುರೆಯ ನಾಯಕನ ಸಾಮಂತನಾಗಿದ್ದ ಸಾಂಬಳ್ಳಿಯ ಘಟ್ಟಮುದಲಿಯಾರನನ್ನು ಹತ್ತಿಕ್ಕಿದ. ಇದನ್ನು ಕೇಳಿ ಕೆರಳಿದ ಮಧುರೆಯ ಚೊಕ್ಕನಾಥನಾಯಕ ದಂಡೆತ್ತಿಬಂದು ಈರೋಡಿನಲ್ಲಿ ಕಾದ. ದೇವರಾಜನ ದಳವಾಯಿ ಕುಮಾರೈಯನ ನೇತೃತ್ವದಲ್ಲಿ ಮೈಸೂರು ಸೈನ್ಯ ಧಾವಿಸಿ, ಆ ಹೊತ್ತಿಗೆ ಚೊಕ್ಕನಾಥ ಕಾಲ್ಕಿತ್ತಿದ್ದರೂ ಈರೋಡನ್ನು ವಶಪಡಿಸಿಕೊಂಡಿತು (1667-68). ಉತ್ತರದಲ್ಲಿ ದೇವರಾಜ ಹುಲಿಯೂರುದುರ್ಗ ಮತ್ತು ಕುಣಿಗಳನ್ನು ಮಾಗಡಿಯ ಕೆಂಪೇಗೌಡನಿಂದ ಕಿತ್ತುಕೊಂಡ.

1673ರ ಹೊತ್ತಿಗೆ ದೇವರಾಜ ಪಶ್ಚಿಮದಲ್ಲಿ ಸಕ್ಕರೆಪಟ್ಟಣದಿಂದ ಪೂರ್ವದಲ್ಲಿ ಸೇಲಂ ವರೆಗೂ ಉತ್ತರದಲ್ಲಿ ಚಿಕ್ಕನಾಯಕನಹಳ್ಳಿಯಿಂದ ದಕ್ಷಿಣದಲ್ಲಿ ಕೊಯಮತ್ತೂರು ಜಿಲ್ಲೆಯ ಧಾರಾಪುರದವರೆಗೂ ಹರಡಿದ್ದ ವಿಶಾಲ ರಾಜ್ಯವನ್ನು ಸಾಧಿಸಿಕೊಂಡು ರಾಜಧಾನಿ ಶ್ರೀರಂಗಪಟ್ಟಣದಿಂದ ವೈಭವದಿಂದ ಆಳಲಾರಂಭಿಸಿದ. ಈ ರಾಜನ ಆಶ್ರಯದಲ್ಲಿದ್ದ ಚಾಮಯ್ಯನೆಂಬ ಕವಿ ದೇವರಾಜೇಂದ್ರಸಾಂಗತ್ಯವೆಂಬ ಗ್ರಂಥದಲ್ಲಿ ಈ ರಾಜನ ಆಳ್ವಿಕೆಯ ವಿವರಗಳನ್ನು ಕೊಟ್ಟಿದ್ದಾನೆ.

ಭಕ್ತಾದಿಗಳು ಚಾಮುಂಡಿಬೆಟ್ಟಕ್ಕೆ ಸುಲಭವಾಗಿ ಹತ್ತಿಹೋಗುವಂತೆ ಈ ರಾಜ 1664ರಲ್ಲಿ ಆ ಬೆಟ್ಟಕ್ಕೆ ಸಾವಿರ ಸೋಪಾನಗಳನ್ನು ಕಟ್ಟಿಸಿದ್ದೇ ಅಲ್ಲದೆ ಮಧ್ಯದಲ್ಲಿ ಒಂದು ದೊಡ್ಡ ಬಸವನನ್ನು ನಿರ್ಮಿಸಿ ಪ್ರತಿಷ್ಠಾಪಿಸಿದ. ದೇವರಾಜಪುರವೆಂಬ ಅಗ್ರಹಾರವನ್ನೂ ಮೈಸೂರು ಮತ್ತು ಈ ಅಗ್ರಹಾರಗಳ ನಡುವೆ ದೇವಾಂಬುಧಿ ಕೆರೆಯನ್ನೂ ನಿರ್ಮಿಸಿದ. ದೊಡ್ಡದೇವರಾಜ ಎಂದೂ ಹೆಸರಾಗಿದ್ದ. ಈತ 1673ರಲ್ಲಿ ಚಿಕ್ಕನಾಯಕನಹಳ್ಳಿಯಲ್ಲಿ ನಿಧನಹೊಂದಿದ. (ಎಂ.ಪಿ.)

**ದೇವರಾಜಯ್ಯ :** ಕಳಲೆಯ ಸಾಮಂತ ಮನೆತನದ ಅರಸನಾಗಿದ್ದು ಮೈಸೂರು ಅರಸರ ಸೇವೆಯಲ್ಲಿದ್ದ ದಳವಾಯಿ (1735-58). ಇತಿಹಾಸದಲ್ಲಿ ಚಿಕ್ಕದೇವರಾಜ ಒಡೆಯರ ಆಳ್ವಿಕೆಯ ಅನಂತರ ಅಂದರೆ 1704-61ರ ವರೆಗಿನ ಕಾಲವನ್ನು ದಳವಾಯಿಗಳ ಕಾಲವೆಂದು ಪರಿಗಣಿಸಬಹುದು. ದಳವಾಯಿ ದೇವರಾಜಯ್ಯ ಈ ಯುಗದ ಅತ್ಯಂತ ಪ್ರಭಾವೀ ವ್ಯಕ್ತಿ. ದೊಡ್ಡ ಕೃಷ್ಣರಾಜ (1713-32) ಕಳಲೆಯ ದಳವಾಯಿ ವೀರರಾಜಯ್ಯನ ಅನಂತರ ಅವನ ಮಗ ದೇವರಾಜಯ್ಯನನ್ನು ದಳವಾಯಿಯಾಗಿ ನೇಮಕ ಮಾಡಿದ. ಜೊತೆಗೆ ಇವನ ಸೋದರಸಂಬಂಧಿ ಸರ್ವಾಧಿಕಾರಿ ನಂಜರಾಜ್ಯಯ್ಯನೂ ಅವರ ಸೇವೆಯಲ್ಲಿದ್ದ. ರಾಜ್ಯಾಡಳಿತದ ಸೂತ್ರಾಧಿಕಾರಿಗಳು ಈ ಸೋದರರ ಕೈಸೇರಿದುದರಿಂದ ಮಹತ್ವಾಕಾಂಕ್ಷಿ ದೇವರಾಜಯ್ಯ ರಾಜನ ಆಡಳಿತದಲ್ಲಿದ್ದ ಅದಕ್ಷತೆಯ ದುರುಪಯೋಗಪಡಿಸಿಕೊಂಡು ಬಲಿಷ್ಠನಾದ.

1725ರಲ್ಲಿ ಮೈಸೂರಿನ ಮೇಲೆ ದಾಳಿಯಿತ್ತ ಮರಾಠ ಬಾಜೀರಾಯ 'ಇದು ಶ್ರೀರಂಗಪಟ್ಟಣವಲ್ಲ ಫಿರಂಗಿಪಟ್ಟಣ' ಎನ್ನುವಂತೆ ದಳವಾಯಿ ದೆವರಾಜಯ್ಯ ಸೈನ್ಯವನ್ನು ರೂಪಿಸಿ, ತರಪೇತುಗೊಳಿಸಿದ. ಅನಂತರ ಸಾವನದುರ್ಗವನ್ನು ಲೂಟಿ ಮಾಡಿದುದಲ್ಲದೆ, ಮಾಗಡಿಯಲ್ಲಿ ಗೌಡರ ಆಳ್ವಿಕೆಯನ್ನು ಕೊನೆಗೊಳಿಸಿ, ಆ ಪ್ರದೇಶವನ್ನು ಮೈಸೂರು ರಾಜ್ಯಕ್ಕೆ ಸೇರಿಸಿದ.

ಅಧಿಕಾರ ಪ್ರಭಾವ ಹೆಚ್ಚಿದಂತೆ ದೇವರಾಜಯ್ಯ ಮುಖ್ಯ ಅಧಿಕಾರಗಳಿಗೆಲ್ಲಾ ತನ್ನ ಬೆಂಬಲಿಗರನ್ನು ನೇಮಿಸಿಕೊಂಡು ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡ. ದೇವರಾಜಯ್ಯನಿಗೂ ಮತ್ತು ದೊಡ್ಡಕೃಷ್ಣರಾಜನ ಅನಂತರ ಪಟ್ಟಕ್ಕೆ ಬಂದ ಸ್ವಾಭಿಮಾನಿ ಏಳನೆಯ ಚಾಮರಾಜನಿಗೂ ಕಲಹ ಉಂಟಾಯಿತು. ಕೊನೆಗೆ ಚಾಣಾಕ್ಷತೆಯಿಂದ ಕೃಷ್ಣರಾಜನ ಪತ್ನಿ ದೇವಾಜಮ್ಮಣ್ಣಿಯ ಬೆಂಬಲ ಪಡೆದ ದೇವರಾಜಯ್ಯ 1734ರ ಜೂನ್‌ನಲ್ಲಿ ರಾಜ ಮತ್ತು ಅವನ ಮೂವರು ರಾಣಿಯರನ್ನು ಸೆರೆಹಿಡಿದು ಕಬ್ಬಾಳದುರ್ಗದಲ್ಲಿಟ್ಟ.

ಅನಂತರ ಪಟ್ಟಕ್ಕೆ ಬಂದ ಇಮ್ಮಡಿ ಕೃಷ್ಣರಾಜ ಚಿಕ್ಕವನಾಗಿದ್ದುದರಿಂದ ಎಲ್ಲಾ ಅಧಿಕಾರ ದೇವರಾಜಯ್ಯನಲ್ಲಿ ಕೇಂದ್ರೀಕೃತವಾಯಿತು. ಸರ್ವಾಧಿಕಾರಿ ನಂಜರಾಜಯ್ಯನ ಮರಣಾನಂತರ ತನ್ನ ತಮ್ಮ ಕರಾಚುರಿ ನಂಜರಾಜಯ್ಯನನ್ನು ಸರ್ವಾಧಿಕಾರಿಯನ್ನಾಗಿ ನೇಮಿಸಿಕೊಂಡುದಲ್ಲದೆ (1739) ಅವನ ಮಗಳನ್ನು ಮಹಾರಾಜನಿಗೆ ಮದುವೆ ಮಾಡಿಸಿ ರಾಜಮನೆತನದ ಬಾಂಧವ್ಯವನ್ನು ಬಿಗಿಗೊಳಿಸಿದ. 1935 -36ರಲ್ಲಿ ಮಲಬಾರಿನ ಮೇಲೆ ದಾಳಿ ಮಾಡಿದ. ಈ ಸಮಯದಲ್ಲಿ ಮೈಸೂರಿನ ಮೇಲೆ ದಾಳಿಯಿಟ್ಟ ಆರ್ಕಾಟಿನ ನವಾಬ ದೋಸ್ತ್ ಆಲಿಖಾನನ್ನು ಚನ್ನಪಟ್ಟಣದ ಬಳಿ ಸಂಪೂರ್ಣವಾಗಿ ಸೋಲಿಸಿ ಮೈಸೂರಿನ ಕೀರ್ತಿಯನ್ನು ಬೆಳಗಿಸಿದ (1737). ಆದರೆ ಇಳಿವಯಸ್ಸಿನ ಪರಿಣಾಮವಾಗಿ ಉತ್ಸಾಹರಹಿತನಾಗಿದ್ದ ದೇವರಾಜಯ್ಯ 1747ರಲ್ಲಿ ದಖನ್ನಿನ ಸುಬೇದಾರ ನಾಸಿರ್‌ಜಂಗ್‌ನಿಗೆ ಸೋಲಬೇಕಾಯಿತು. ಕೊನೆಗೆ ಜನತೆಯ ಕ್ಷೇಮ ಮತ್ತು ರಾಜ್ಯದ ಹಿತದೃಷ್ಟಿಯನ್ನು ಪರಿಗಣಿಸಿ ಕರಾಚುರಿ ನಂಜರಾಜಯ್ಯನಿಗೆ ದಳವಾಯಿತನವನ್ನು ವಹಿಸಿಕೊಟ್ಟ.

ಉಳಿದ ಕಾಲದಲ್ಲಿ ದೇವರಾಜಯ್ಯ ರಾಜಧಾನಿಯಲ್ಲಿದ್ದು ಕೊಂಡು ಆಡಳಿತ ಮೇಲ್ವಿಚಾರಕನಾಗಿ ಕಾರ್ಯನಿರ್ವಹಿಸುತ್ತಿದ್ದ. 1755ರಲ್ಲಿ ಕರಾಚುರಿ ನಂಜರಾಜ್ಯಯ್ಯ ತಿರುಚಿನಾಪಳ್ಳಿ ವಿವಾದದಲ್ಲಿ ತೊಡಗಿದ್ದಾಗ ದಖನ್ನಿನ ನವಾಬ ಸಲಾಬತ ಜಂಗ್‌ನ ದಾಳಿ ನಡೆಯಿತು. ಆರ್ಥಿಕ ಮುಗ್ಗಟ್ಟಿನಲ್ಲಿ ತೊಳಲಾಡುತ್ತಿದ್ದ ದೇವರಾಜಯ್ಯನಿಗೆ ಇದು ನುಂಗಲಾರದ ತುತ್ತಾಯಿತು. ಅಲ್ಲದೆ ಈ ಸಮಯದಲ್ಲಿ ನಂಜರಾಜಯ್ಯನಿಗೂ ಇಮ್ಮಡಿ ಕೃಷ್ಣರಾಜನಿಗೂ ಮನಸ್ತಾಪ ಬಂದು ಪರಿಸ್ಥಿತಿ ಕೆಟ್ಟಿತ್ತು. ನಂಜರಾಜ ತೋರಿದ ಸ್ವಾಮಿದ್ರೋಹ ಮತ್ತು ವಿಶ್ವಾಸಘಾತುಕತನಕ್ಕಾಗಿ ಮನನೊಂದು ದೇವರಾಜಯ್ಯ 1757ರಲ್ಲಿ ಸತ್ಯಮಂಗಲಕ್ಕೆ ಹೋಗಿ ನೆಲಸಿದ. ದಳವಾಯಿ ಸೋದರರ ವಿರಸದಿಂದಾಗಿ ಸೈನ್ಯದಲ್ಲಿ ಅಶಿಸ್ತು ಹೆಚ್ಚಾಗಿ ಆಡಳಿತ ಚರ್ಯೆ ಕುಂದತೊಡಗಿತು. ಕೊನೆಗೆ ಹೈದರ್ ಆಲಿ ಮತ್ತು ಖಂಡೇರಾಯನ ಪ್ರಯತ್ನದಿಂದಾಗಿ ದಳವಾಯಿ ಸೋದರರ ಮಧ್ಯೆ ವಾಸ್ತವಿಕ ಬಾಂಧವ್ಯ ಏರ್ಪಟ್ಟಿತು. ದೇವರಾಜಯ್ಯ 1758ರಲ್ಲಿ ಮೃತನಾದ.

ಇವನು ನ್ಯಾಯನಿಷ್ಠ, ಧರ್ಮಿಷ್ಠ, ಲೋಕವ್ಯವಹಾರವನ್ನು ತ್ಯಜಿಸುವ ಮುನ್ನ ಕರಾಚುರಿ ನಂಜರಾಜಯ್ಯ ಮಹಾರಾಜರಲ್ಲಿ ಕ್ಷಮೆ ಕೇಳುವಂತೆ ಮಾಡಿದ. ಇದು ದೇವರಾಜಯ್ಯನ ವ್ಯಕ್ತಿತ್ವ ಮತ್ತು ಸ್ವಾಮಿನಿಷ್ಠೆಗೆ ಸಾಕ್ಷಿಯಾಗಿದೆ. ನಂಜನಗೂಡಿನ ಬಳಿ ಕಪಿಲಾ ನದಿಗೆ ಕಟ್ಟಿರುವ ದೊಡ್ಡ ಸೇತುವೆ ಇವನು ಕಟ್ಟಿಸಿದ್ದು. ಶ್ರೀರಾಮನ ಆರಾಧಕನಾಗಿದ್ದ ಈತ ಅನೇಕ ಅಗ್ರಹಾರಗಳನ್ನೂ ಕೆರೆಗಳನ್ನೂ ನಿರ್ಮಿಸಿರುವನಲ್ಲದೆ, ಶ್ರೀರಂಗಪಟ್ಟಣ, ಕೊಯಿಮತ್ತೂರು ಜಿಲ್ಲೆಯ ಅವನಾಶಿ, ಭವಾನಿ ಕೂಡಲ್ ಮುಂತಾದ ದೇವಾಲಯಗಳ ಜೀರ್ಣೋದ್ಧಾರ ಮಾಡಿಸಿದ.

(ಕೆ.ಜಿ.)

**ದೇವರಾಯ I :** ವಿಜಯನಗರದ ಸಂಗಮವಂಶದ ಅರಸ (1406-22). ಇಮ್ಮಡಿ ಹರಿಹರನ ಮೂರನೆಯ ಮಗ. ಇಮ್ಮಡಿ ಹರಿಹರ 1404ರಲ್ಲಿ ಮೃತನಾದಾಗ ರಾಜ್ಯಕ್ಕಾಗಿ ಕಹಲ ನಡೆಯಿತು. ಈ ಕಲಹದಲ್ಲಿ ಹರಿಹರನ ಜ್ಯೇಷ್ಠಪುತ್ರನಾದ ವಿರೂಪಾಕ್ಷ ತಮ್ಮಂದಿರನ್ನು ತಳ್ಳಿ ಪಟ್ಟಕ್ಕೆ ಬಂದ. 1405ರಲ್ಲಿ ಅವನ ತಮ್ಮ ಇಮ್ಮಡಿ ಬುಕ್ಕ ಅಣ್ಣನನ್ನು ಪಟ್ಟದಿಂದ ತಳ್ಳಿ ಅಧಿಕಾರಕ್ಕೆ ಬಂದ. 1406ನೆಯ ಇಸವಿ ನವೆಂಬರ್ 5ರಂದು ಅವನ ತಮ್ಮನಾದ ಈ ದೇವರಾಯ ಅಣ್ಣನನ್ನು ಪದಚ್ಯುತಿಗೊಳಿಸಿ ಪಟ್ಟಕ್ಕೆ ಬಂದ. ಪಟ್ಟಾರೂಢನಾದೊಡನೆ ದೇವರಾಯ ಬಹಮನೀ ಸುಲ್ತಾನ ಫಿರೋಜ್ ಷಾನೊಡನೆ ಯುದ್ಧ ಮಾಡಬೇಕಾಯಿತು. ಸ್ತ್ರೀಸಂಬಂಧವಾಗಿ ಈ ಯುದ್ಧ ನಡೆಯಿತೆಂದು ಫೆರಿಸ್ತನ ಹೇಳಿಕೆ. ಸುಲ್ತಾನನ ಧರ್ಮಯುದ್ಧಾಸಕ್ತಿಯೇ ಈ ಯುದ್ಧಕ್ಕೆ ಕಾರಣ ಎಂದು ಇತರರ ಹೇಳಿಕೆ. ಕಾರಣ ಏನೇ ಇದ್ದರೂ ಘೋರ ಯುದ್ಧ ನಡೆದುದೇನೋ ನಿಜ. ಯುದ್ಧದಲ್ಲಿ ಮೊದಮೊದಲು ದೇವರಾಯ ಗೆಲ್ಲುವಂತೆ ತೋರಿದರೂ ಕೊನೆಗೂ ಮಹಮ್ಮದೀಯರೇ ಗೆದ್ದರು. ಗೆದ್ದ ಫಿರೋಜ್ ಷಾ ಸಂಧಿಪತ್ರವನ್ನು ತನ್ನ ಇಷ್ಟಾನುಸಾರ ಬರೆಯಿಸಿದ. ಆ ಸಂಧಿಯ ಪ್ರಕಾರ ದೇವರಾಯ ಬಂಕಾಪುರವನ್ನು ಕಳೆದುಕೊಂಡ. ಈ ಯುದ್ಧದಲ್ಲಿ ಕೊಂಡವೀಡು ರೆಡ್ಡಿಗಳು ಸುಲ್ತಾನನೊಡನೆ ಸೇರಿಕೊಂಡಿದ್ದರು. ಅವರು ಇದೇ ಕಾಲಕ್ಕೆ ಉದಯಗಿರಿ ರಾಜ್ಯವನ್ನು ಆಕ್ರಮಿಸಿಕೊಂಡ ಭಾಗವನ್ನು ವಶಪಡಿಸಿಕೊಂಡು, 1413ರ ವರೆಗೆ ಅಲ್ಲಿ ನೆಲಸಿದ್ದರು. ಈ ರೆಡ್ಡಿಗಳು ಮಾತ್ರವಲ್ಲದೆ, ತೆಲುಗು ಚೋಡ ವಂಶದ ಅಣ್ಣದೇವನೂ ಬಹಮನೀ ಸುಲ್ತಾನನ ಮಿತ್ರವರ್ಗಕ್ಕೆ ಸೇರಿದ್ದ. ಅಣ್ಣದೇವನ ಪ್ರಭಾವವನ್ನು ತಗ್ಗಿಸುವ ಉದ್ದೇಶದಿಂದ ದೇವರಾಯ 1415ರಲ್ಲಿ ಅವನೊಡನೆ ಯುದ್ಧಕ್ಕಿಳಿದ. ಆದರೆ ಅಣ್ಣದೇವನಿಗೆ ಬಹಮನೀ ಸುಲ್ತಾನನ ನೆರವು

ಸಿಕ್ಕಿತು. ದೇವರಾಯನಿಗೆ ರಾಜಕೊಂಡದ ವೇಲಮರ ಸಹಾಯ ಲಭಿಸಿತು. ಯುದ್ಧದಲ್ಲಿ ದೇವರಾಯನಿಗೆ ವಿಜಯ ಲಭಿಸಿತು (1419). ಆಂಧ್ರದ ಪೂರ್ವಭಾಗ ದೇವರಾಯನಿಗೆ ಸೇರಿತು.

ಬಹಮನೀ ರಾಜ್ಯದ ವಿಸ್ತರಣೆಗೆ ಅವಕಾಶ ಕೊಡದಂತೆ ರಾಜಮಹೇಂದ್ರಿಯನ್ನು ಬಲಪಡಿಸಲು ದೇವರಾಯ ಪ್ರಯತ್ನಿಸಿದ. ಇದರಿಂದಾಗಿ ಗಜಪತಿ ಅರಸ 4ನೆಯ ಭಾನುದೇವ ಕೆರಳಿದ. ಈ ವಿರಸ ಮುಂದೆ ಗಜಪತಿಗಳಿಗೂ ವಿಜಯನಗರಕ್ಕೂ ಆದ ಅನೇಕ ಯುದ್ಧಗಳಿಗೆ ದಾರಿಮಾಡಿಕೊಟ್ಟಿತು.

ಒಂದನೆಯ ದೇವರಾಯನೂ ಇಮ್ಮಡಿ ಬುಕ್ಕನಂತೆ ವಿಜಯನಗರ ರಾಜ್ಯವನ್ನು ಬಹಳವಾಗಿ ವಿಸ್ತರಿಸಿದ. ಹಲವಾರು ನೂತನ ಪ್ರಾಸಾದಗಳನ್ನು ನಿರ್ಮಿಸಿದ. ಅನೇಕ ಕೋಟೆಕೊತ್ತಳಗಳನ್ನು ಕಟ್ಟಿಸಿದ - ಎಂದು ನ್ಯೂನಿಜ್ ಹೇಳುತ್ತಾನೆ. ತುಂಗಭದ್ರೆಗೆ ಹಂಪೆಯ ಬಳಿ ಒಂದು ಭಾರಿ ಅಣೆಕಟ್ಟನ್ನು ಕಟ್ಟಿಸಿ, ನದಿಯಿಂದ ನಗರದವರೆಗೆ 15 ಮೈಲಿ ಉದ್ದದ ಮೋಲ್ಕಾಲುವೆಯೊಂದನ್ನು ರಚಿಸಿ ವಿಜಯನಗರ ಪಟ್ಟಣಕ್ಕೆ ನೀರು ಸರಬರಾಜಿನ ವ್ಯವಸ್ಥೆ ಮಾಡಿದ. ಹಳೆಯ ನಗರದ ಬಹು ಭಾಗದಲ್ಲಿ ಈಗಿರುವ ಅನೇಕಾನೇಕ ಹೊಲಗಳಿಗೆ ಈ ಕಾಲುವೆಯಿಂದಲೇ ನೀರು ಪೂರೈಕೆಯಾಗಿತ್ತಿದೆ. ಮೈಲಿ ಮೈಲಿ ದೂರಕ್ಕೆ ಬೆಟ್ಟಗಳ ಬುಡದ ಬಂಡೆಕಲ್ಲಿನಲ್ಲೇ ಇದನ್ನು ಕೊರೆದಿದೆ. ಭಾರತದಲ್ಲಿ ನಿರ್ಮಿತವಾಗಿರುವ ನೀರಾವರಿ ಕಾಮಗಾರಿಗಳಲ್ಲಿ ಇದು ಅತ್ಯದ್ಭುತವಾಗಿದೆ ಎಂದು ಸಿವೆಲ್ ಹೇಳುತ್ತಾರೆ.

ದೇವರಾಯನಿಗೆ ಮೂವರು ಪತ್ನಿಯರೂ - ವೀರವಿಜಯ, ವೀರಮಲ್ಲಪ್ಪ, ಹರಿಹರ III ಮತ್ತು ರಾಮಚಂದ್ರ ಎಂಬ ನಾಲ್ವರು ಮಕ್ಕಳೂ ಇದ್ದರು. ರಾಮಚಂದ್ರ ಕೆಲಕಾಲ ಉದಯಗಿರಿ ರಾಜ್ಯದಲ್ಲಿ ಪ್ರಾಂತ್ಯಾಧಿಕಾರಿಯಾಗಿ ನೇಮಕವಾಗಿದ್ದ. ಲಕ್ಷ್ಮೀಧರ ದೇವರಾಯನ ಮಂತ್ರಿ.

ಒಂದನೆಯ ದೇವರಾಯ 1422ರಲ್ಲಿ ಮೃತನಾದ. (ಎಂ.ಕೆ.ಬಿ.)

**ದೇವರಾಯ II :** ವಿಜಯನಗರದ ಸಂಗಮ ವಂಶದ ಅರಸ (1424-46); ವಿಜಯರಾಯನ ಹಿರಿಯ ಮಗ ಹಾಗೂ ಉತ್ತರಾಧಿಕಾರಿ. ಇವನಿಗೆ ಇಮ್ಮಡಿ ದೇವರಾಯ, ಅಭಿನವ ವೀರದೇವರಾಯ, ಪ್ರತಾಪದೇವರಾಯ, ಪ್ರೌಢದೇವರಾಯ ಎಂಬ ಹೆಸರುಗಳೂ ಇವೆ. ದೇವರಾಯ ತನ್ನ ತಂದೆಯ ಆಳ್ವಿಕೆಯಲ್ಲಿ ಆಡಳಿತಸೂತ್ರ ವಹಿಸಿಕೊಂಡಿದ್ದುದರಿಂದ, ಹಲವು ವಿದ್ವಾಂಸರು ಇವನ ಆಳ್ವಿಕೆ 1422ರಲ್ಲೇ ಪ್ರಾರಂಭವಾಯಿತೆಂದು ಹೇಳುತ್ತಾರೆ.

ಪ್ರೌಢದೇವರಾಯ ತನ್ನ ಆಳ್ವಿಕೆಯ ಪ್ರಾರಂಭದಲ್ಲಿ ವಿಜಯನಗರದ ಪಶ್ಚಿಮದ ಆರಗ ಪ್ರಾಂತ್ಯದಲ್ಲಿ ಒಬ್ಬ ಬೇಡನಾಯಕನ ನೇತೃತ್ವದಲ್ಲಿ ನಡೆದ ದಂಗೆಯನ್ನು ಅಡಗಿಸಿದ. ಇವನು ಮೂರು ಸಾರಿ ಬಹಮನೀ ರಾಜ್ಯದ ವಿರುದ್ಧ ಯುದ್ಧ ಮಾಡಿದ. ಮೊದಲನೆಯ ಬಹಮನೀ ಯುದ್ಧ 1422-23ರಲ್ಲಿ ನಡೆಯಿತು. ಬಹಮನೀ ಸುಲ್ತಾನನಾದ ಒಂದನೆಯ ಅಹ್ಮದ್ ಷಾ ತನ್ನ ಹಿಂದಿನ ಸುಲ್ತಾನನ ಕಾಲದಲ್ಲಿ ಉಂಟಾದ ಪರಾಭವದ ಸೇಡು ತೀರಿಸಿಕೊಳ್ಳಲು ವಿಜಯನಗರದ ವಿರುದ್ಧ ಯುದ್ಧ ಹೂಡಿದ. ಪ್ರಾರಂಭದಲ್ಲಿ ಎರಡು ಪಕ್ಷದವರೂ ನಷ್ಟ ಅನುಭವಿಸಿದರೂ ಅಂತ್ಯದಲ್ಲಿ ವಿಜಯನಗರಕ್ಕೆ ಯಶಸ್ಸು ಲಭಿಸಿತು. ಯುದ್ಧ ನಡೆಯುತ್ತಿದ್ದಾಗಲೇ ಬಹಮನೀ ಸುಲ್ತಾನ ರಾಜಧಾನಿಯನ್ನು ಗುಲ್‌ಬರ್ಗದಿಂದ ಇನ್ನೂ ಉತ್ತರಕ್ಕೆ ಬಿದರೆಗೆ ಬದಲಾಯಿಸಬೇಕಾಯಿತು. ಈ ಯದ್ಧದ ಅನಂತರ ದೇವರಾಯ ಆಂಧ್ರ ಪ್ರದೇಶದತ್ತ ತನ್ನ ಗಮನ ಹರಿಸಬೇಕಾಯಿತು. ಈ ಸಂದರ್ಭದಲ್ಲಿ ಒರಿಸ್ಸಾದ ಗಜಪತಿ ವಂಶದ ರಾಜ ಭಾನುದೇವ ತನ್ನ ರಾಜ್ಯವನ್ನು ವಿಸ್ತರಿಸಲು ರಾಜಮಹೇಂದ್ರಿ ರಾಜ್ಯದ ಮೇಲೆ ನಡೆದಿದ್ದ. ಅವನಿಗೆ ವೇಲಮರು ಬೆಂಬಲ ಕೊಟ್ಟರು. ರಾಜಮಹೇಂದ್ರಿ ರಾಜ ಶರಣಾಗತನಾಗಿ ಭಾನುದೇವನ ಸಾಮಂತನಾದ. ಅನಂತರ ಭಾನುದೇವ ಕೊಂಡವೀಡು ರಾಜ್ಯವನ್ನು ಆಕ್ರಮಿಸಿಕೊಂಡ. ದೇವರಾಯ ತನ್ನ ಸಾಮಂತರ ಪರಾಭವವನ್ನು ಸಹಿಸಲಾರದೆ ಆಂಧ್ರಪ್ರದೇಶಕ್ಕೆ ನುಗ್ಗಿ ಭಾನುದೇವ ಮತ್ತು ವೇಲುಮರನ್ನು ಪರಾಭವಗೊಳಿಸಿ, ಕೊಂಡವೀಡು, ಪ್ರದೇಶವನ್ನು ವಿಜಯನಗರ ಸಾಮ್ರಾಜ್ಯಕ್ಕೆ ಸೇರಿಸಿ ರಾಜಮಹೇಂದ್ರಿಯ ರೆಡ್ಡಿ ರಾಜನಿಗೆ ಪುನಃ ಅಧಿಕಾರ ವಹಿಸಿಕೊಟ್ಟ (1428). ಭಾನುದೇವನ ಉತ್ತರಾಧಿಕಾರಿ ಕಪಿಲೇಂದ್ರ ಮತ್ತೆ ರಾಜಮಹೇಂದ್ರಿಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದರೂ ವಿಜಯನಗರ ಮತ್ತು ರೆಡ್ಡಿ ಸೈನ್ಯ ಅವನನ್ನು ಹಿಮ್ಮೆಟ್ಟಿಸಿತು (1436).

ಎರಡನೆಯ ಬಹಮನೀ ಯುದ್ಧ 1435-36ರಲ್ಲಿ ನಡೆಯಿತು. ಮುದ್ಗಲ್ ಮತ್ತು ರಾಯಚೂರು ಕೋಟೆಗಳ ಸ್ವಾಧೀನಕ್ಕೋಸ್ಕರ ಬಹಮನೀ ಸುಲ್ತಾನ ಅಲಾಉದ್ದೀನನೊಡನೆ ನಡೆದ ಈ ಯುದ್ಧದಲ್ಲಿ ದೇವರಾಯ ಜಯ ಹೊಂದಿದ. 1443-44ರಲ್ಲಿ ಬಹಮನೀಯರೊಡನೆ ಮೂರನೆಯ ಸಲ ಯುದ್ಧವಾಯಿತು. 1443ರಲ್ಲಿ ರಾಜಮನೆತನದಲ್ಲಿ ದೇವರಾಯನನನ್ನು ಕೊಲ್ಲುವ ಪಿತೂರಿಯೊಂದು ನಡೆಯಿತು. ಅದು ವಿಫಲವಾದರೂ ಅಂದಿದ್ದಿರಬಹುದಾದ ಅಸ್ತವ್ಯಸ್ಥ ಸ್ಥಿತಿಯ ಲಾಭ ಪಡೆಯುವ ಉದ್ದೇಶದಿಂದ ಬಹಮನೀ ಸುಲ್ತಾನ ದೇವರಾಯನನ್ನು ಪೊಗದಿ ಕೊಡಲು ತಗಾದೆ ಮಾಡಿದ. ದೇವರಾಯ ಒಪ್ಪದಿರಲು ಯುದ್ಧವಾಗಿ ಬಹಮನೀ ಸುಲ್ತಾನ ಪರಾಭವಗೊಂಡ.

ವಿಜಯನಗರ ರಾಜ್ಯಕ್ಕೂ ಸಿಂಹಳದ ತುಂಡರಸರಿಗೂ ಸಂಬಂಧವೇನೂ ಇರಲಿಲ್ಲ. ಆದ್ದರಿಂದ ರಾಜ್ಯದ ದಕ್ಷಿಣ ಭಾಗಗಳ ಭದ್ರತೆಗಾಗಿ ಸಿಂಹಳದ ಅರಸನನು ಹಿಡಿತದಲ್ಲಿಟ್ಟುಕೊಳ್ಳಬೇಕಾಗಿತ್ತು. ಇದಕ್ಕಾಗಿ ದೇವರಾಯ ತನ್ನ ದಳಪತಿ ಲಕ್ಕಣ್ಣ ದಂಡನಾಯಕನನ್ನು ಸಿಂಹಳದ ಮೇಲೆ ನುಗ್ಗಿಸಿದ. ನೌಕಾದಂಡಯಾತ್ರೆಯನ್ನು ಕೈಗೊಂಡ ಈತ ಸಿಂಹಳದ ರಾಜ ಪೊಗದಿ ಕೊಡುವ ಹಾಗೆ ಮಾಡಿದ. ಈ ವಿಜಯಕ್ಕಾಗಿ ರಾಜ ಅವನಿಗೆ ದಕ್ಷಿಣಸಮುದ್ರಾಧಿಪತಿ ಎಂಬ ಬಿರುದಿತ್ತ. ಇದೇ ಸಮಯದಲ್ಲಿ ಗಜಪತಿ ದೊರೆ ಕಪಿಲೇಂದ್ರ ರಾಜಮಹೇಂದ್ರಿಯ ರೆಡ್ಡಿ ನಾಯಕನ ಮೇಲೆ ಯುದ್ಧ ಹೂಡಿದ. ದೇವರಾಯ ಕಪಿಲೇಂದ್ರನನ್ನು ಸೋಲಿಸಿದ (ಸು. 1423).

ದೇವರಾಯ ಕರ್ನಾಟಕದ ಮತ್ತು ದಕ್ಷಿಣ ಭಾರತದ ಉನ್ನತ ರಾಜರುಗಳಲ್ಲಿ ಒಬ್ಬನಾಗಿದ್ದ. ಇವನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ಗೋವೆ, ರಾಜ ಮಹೇಂದ್ರಿಗಳಿಂದ ಹಿಡಿದು ರಾಮೇಶ್ವರದವರೆಗೂ ಹಬ್ಬಿತ್ತು. ಕೇರಳದ ಕ್ವಿಲಾನ್, ಮದರಾಸಿನ ಬಳಿಯ ಪುಲಿಕಾಡು, ಸಿಂಹಳ, ಬರ್ಮಾದ ಪೆಗು ಮತ್ತು ತನಸ್ಸೆರಿಮ್‌ನ ರಾಜರು ಇವನಿಗೆ ಕಪ್ಪ ಒಪ್ಪಿಸುತ್ತಿದ್ದರೆಂದು ನೂನಿಜ್ ತಿಳಿಸುತ್ತಾನೆ. ಇವನು ರಾಜನಿಪುಣನಾಗಿದ್ದುದೇ ಅಲ್ಲದೆ ಯುದ್ಧ ನಿಪುಣನೂ ಆಗಿದ್ದ. ತನ್ನ ಸೈನ್ಯದ ಕಾರ್ಯಾಚರಣೆಗಳನ್ನು ಏಕಕಾಲದಲ್ಲಿ ಹಲವು ರಣರಂಗಗಳಲ್ಲಿ ನಿರ್ವಹಿಸುತ್ತಿದ್ದ.

ದೇವರಾಯನ ಆಳ್ವಿಕೆಯಲ್ಲಿ ವಿಜಯನಗರ ಸಾಮ್ರಾಜ್ಯ ಅತ್ಯುನ್ನತ ಸ್ಥಿತಿಯಲ್ಲಿ ಇದ್ದಿತು. ಇದಕ್ಕೆ ರಾಜ್ಯದಲ್ಲಿನ ಶಾಂತಿ, ತೃಪ್ತರಾದ ಪ್ರಜೆಗಳು, ಸಾಮಾಜಿಕ ಸ್ಥಿತಿ ಕಾರಣವಾಗಿದ್ದವು. ಅಬ್ದುಲ್ ರಜಾಕ್ ವಿಜಯನಗರ ಸಾಮ್ರಾಜ್ಯದಲ್ಲಿ 300 ರೇವುಪಟ್ಟಣಗಳಿದ್ದುವೆಂದು ತಿಳಿಸಿದ್ದಾನೆ. ಸಾಮಾಜಿಕ ಸೌಹಾರ್ದ ಮತ್ತು ಒಗಟ್ಟಿಗೆ ಧಾರ್ಮಿಕ ಕ್ಷೇತ್ರದಲ್ಲಿ ರಾಜನ ವಿಶಾಲ ಹೃದಯ ಕಾರಣವಾಗಿತ್ತು. ಮುಸ್ಲಿಮರನ್ನು ಸೈನ್ಯಕ್ಕೆ ಸೇರಿಸಿಕೊಳ್ಳಲಾಗಿತ್ತು. ರಾಜಧಾನಿಯಲ್ಲಿ ದೇವರಾಯ ಒಂದು ಮಸೀದಿಯನ್ನು ಕಟ್ಟಿಸಿದ್ದಲ್ಲದೆ, ಕೊರಾನಿನ ಒಂದು ಪ್ರತಿಯನ್ನು ಸಿಂಹಾಸನದ ಮೇಲೆ ಇಟ್ಟಿದ್ದ.

ವಿಜಯನಗರಕ್ಕೆ ಭೇಟಿಕೊಟ್ಟ ಇಟಲಿಯ ಪ್ರವಾಸಿಗ ನಿಕಾಲೊ ಕೊಂಟಿ ಮತ್ತು ವಿಜಯನಗರದಲ್ಲಿದ್ದ ಪರ್ಷಿಯಾ ದೇಶದ ರಾಯಭಾರಿ ಅಬ್ದುಲ್ ರಜಾಕ್ ವಿಜಯನಗರದ ವಿವರವನ್ನೂ ಮತ್ತು ವೈಭವವನ್ನೂ ತಮ್ಮ ಬರೆವಣಿಗೆಗಳಲ್ಲಿ ವರ್ಣಿಸಿದ್ದಾರೆ. ರಾಜಸ್ಥಾನ ಶ್ರೀಮಂತರು, ಆಸ್ಥಾನಿಕರು, ಸರ್ಕಾರಿ ಅಧಿಕಾರಿಗಳು, ವಿದ್ವಾಂಸರು, ಕಲೆಗಾರರು, ಕವಿಗಳು, ರಾಯಭಾರಿಗಳು ಮತ್ತು ನಾನಾ ದೇಶಗಳಿಂದ ಬಂದಿದ್ದ ಪ್ರಖ್ಯಾತ ವ್ಯಕ್ತಿಗಳು ನೆರೆಯುವ ಸ್ಥಳವಾಗಿತ್ತು. ದೇವರಾಯ ಸ್ವತಃ ವಿದ್ವಾಂಸನಾಗಿದ್ದುದಲ್ಲದೆ ವಿದ್ವಾಂಸರು ಮತ್ತು ಕವಿಗಳಿಗೆ ಪ್ರೋತ್ಸಾಹ ಕೊಟ್ಟ. ವೀರಶೈವ ಮತ

ಮತ್ತು ತತ್ತ್ವ ಈ ಕಾಲದಲ್ಲಿ ಪ್ರೋತ್ಸಾಹಿತವಾಯಿತು. ವೀರಶೈವ, ಜೈನ ಮತ್ತು ಬ್ರಾಹ್ಮಣ ಸಾಹಿತ್ಯ ಅಭಿವೃದ್ಧಿ ಹೊಂದಿತು. ಈ ಕಾಲದ ಕನ್ನಡ ಕವಿಗಳಲ್ಲಿ ಚಾಮರಸ ಮತ್ತು ಕುಮಾರವ್ಯಾಸ ಶ್ರೇಷ್ಠರಾಗಿದ್ದರು. ದೇವರಾಯ ವಿಜಯನಗರವನ್ನೂ ಹಜಾರರಾಮಸ್ವಾಮಿ ದೇವಸ್ಥಾನ ಮುಂತಾದ ಕಟ್ಟಡಗಳನ್ನೂ ಅಂದಗೊಳಿಸಿದ.

ದೇವರಾಯನಿಗೆ ಪೊನ್ನಲದೇವಿ ಮತ್ತು ಭೀಮಾದೇವಿ ಎಂಬ ಪತ್ನಿಯರಿದ್ದರು. ಮಲ್ಲಿಕಾರ್ಜುನ ಇವನ ಮಗ. ಲಕ್ಕಣ್ಣ ಮತ್ತು ಮಾದಣ್ಣ ಇವನ ದಂಡನಾಯಕರಲ್ಲಿ ಮುಖ್ಯರು. ವೀರಶೈವ ಕವಿ ಜಕ್ಕಣ್ಣ ಇನ್ನೊಬ್ಬ ದಂಡನಾಯಕ. ಇಮ್ಮಡಿ ದೇವರಾಯ 1446ರ ಮೇ 26ರಂದು ಮೃತನಾದ (ಎವಿವಿ, ಎ.ಕೆ.ಬಿ.)

**ದೇವರಾಯನ ದುರ್ಗ:** ತುಮಕೂರು ತಾಲ್ಲೂಕಿನಲ್ಲಿ ತುಮಕೂರಿನಿಂದ ಸು. 15 ಕಿಮೀ ಈಶಾನ್ಯಕ್ಕಿರುವ ಬೆಟ್ಟ. ಗಿರಿದುರ್ಗ ಪವಿತ್ರ ಕ್ಷೇತ್ರ ಹಾಗೂ ಸುಂದರತಾಣ. ಬೆಟ್ಟದ ಶಿಖರ ಸಮುದ್ರಮಟ್ಟದಿಂದ 1,242 ಮೀ ಎತ್ತರವಿದೆ. ಬೆಟ್ಟ ಮೂರು ಘಟ್ಟಗಳಲ್ಲಿ ಮೇಲೆದ್ದಿದೆ. ಈ ಎಲ್ಲಾ ಘಟ್ಟಗಳನ್ನೂ ಒಳಗೊಂಡಂತೆ ಎರಡು ಕೋಟೆಗೋಡೆಗಳಿವೆ. ಮೈಲುಗಟ್ಟಲೆ ಹಬ್ಬಿರುವ ಈ ಕೋಟೆ ಗೋಡೆಗಳಲ್ಲಿ ಒಳಹೋಗಲು ಅನುಕೂಲವಾಗುವಂತೆ ಏಳು ಹೆಬ್ಬಾಗಿಲುಗಳಿವೆ. ಆಯಕಟ್ಟಿನ ಜಾಗದಲ್ಲಿರುವುದರಿಂದಲೂ ಬೆಟ್ಟದಲ್ಲಿರುವ ಅನೇಕ ಚಿಲುಮೆಗಳಿಂದ ಸತತವಾಗಿ ಉತ್ತಮ ನೀರಿನ ಸೌಕರ್ಯ ಇರುವುದರಿಂದಲೂ ಈ ಕೋಟೆ ಒಂದು ಕಾಲದಲ್ಲಿ ಬಹು ಅಭೇದ್ಯವೆನಿಸಿರಬೇಕು. (ಕೆ.ವಿ.ಟಿ.)

ದೇವರಾಯನದುರ್ಗ ಬೆಟ್ಟದ ಏರುಗಳಲ್ಲಿ ಮೊದಲ ಅಂದರೆ ಕೆಳಗಣ ಘಟ್ಟದ ಮಟ್ಟಸ ಪ್ರದೇಶದಲ್ಲಿ ಮಲಪಟ್ಟಣ ಗ್ರಾಮ ಮತ್ತು ಲಕ್ಷ್ಮೀನರಸಿಂಹ ದೇವಾಲಯ ಇವೆ. ದ್ರಾವಿಡಶೈಲಿಯಲ್ಲಿರುವ ಈ ದೇವಾಲಯ ಒಂದನೆಯ ಕಂಠೀರವ ನರಸರಾಜ ಒಡೆಯ (1639-59) ಕಟ್ಟಿಸಿದ್ದು. ಮುಮ್ಮಡಿ ಕೃಷ್ಣರಾಜ ಒಡೆಯರು 1858ರಲ್ಲಿ ದೇವಾಲಯದ ಪ್ರಾಕಾರ ಮತ್ತು ಗೋಪುರಗಳನ್ನು ದುರಸ್ತಿ ಮಾಡಿದರೆಂದು ಇಲ್ಲಿನ ಒಂದು ಶಾಸನ ತಿಳಿಸುತ್ತದೆ. ಈ ಸುತ್ತಿನ ಹೆಚ್ಚಿನ ಜನರಿಗೆ ಇದು ಮನೆದೇವರು. ಪ್ರತಿ ಚೈತ್ರಮಾಸದಲ್ಲಿ ಇಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ಆ ಕಾಲದಲ್ಲಿ ಸೇರುವ ಜನಗಳ ಅನುಕೂಲಕ್ಕಾಗಿ ಇಲ್ಲಿ ಅನೇಕ ಮಂಟಪಗಳಿವೆ. ಸಮೀಪದಲ್ಲಿ ಸಂಜೀವರಾಯನ (ಹನುಮಂತ) ಗುಡಿ ಇದೆ. ಇಲ್ಲಿ ಕೈಜೋಡಿಸಿ ನಿಂತಿರುವ ಹನುಮಂತನ ವಿಗ್ರಹವಿದೆ. ಈ ಗುಡಿ ನರಸಿಂಹನ ಗುಡಿಗಿಂತಲೂ ಹಳೆಯದೆಂದು ಪ್ರತೀತಿ.

ಇದೇ ಸುತ್ತಿನಲ್ಲಿ ಕೋಟೆಯ ಬಾಗಿಲುಗಳಲ್ಲಿ ಒಂದಾದ ಪೆನುಗೊಂಡೆ ಬಾಗಿಲು ಮತ್ತು ಆನೆದೊಣೆ (ಚಿಲುಮೆ) ಇವೆ. ಪೆನುಗೊಂಡೆ ಬಾಗಿಲ ಗೋಡೆಯ ಮೇಲೆ ವೀಣೆಯನ್ನು ಹಿಡಿದಿರುವ ವ್ಯಕ್ತಿಯೊಬ್ಬನ ಶಿಲ್ಪವಿದ್ದು ಅದರ ಬಳಿ ಇರುವ ಸು. 15ನೆಯ ಶತಮಾನದ ಶಾಸನ ಇದು ಸುಕುಮಾರದೇವನ ಮಗ ವಿರೂಪಣ್ಣನದು ಎಂದು ತಿಳಿಸುತ್ತದೆ. ಆನೆದೋಣೆಯ ಬಳಿ ಹಿಂದೆ ಸ್ಥಳೀಯ ಪಾಳೆಯಗಾರನೊಬ್ಬನಿಂದ ಕಟ್ಟಲಾದುದೆಂದು ಹೇಳುವ ಒಂದು ಆನೆಯ ಗೋರಿಯ ಅವಶೇಷಗಳಿವೆ. ಬೆಟ್ಟದ ಇಳಿಜಾರಿನಲ್ಲಿರುವ ಒಂದು ಕೊಳ ಮಂಗಲಿ ನದಿಯ ಉಗಮಸ್ಥಾನ. ಸ್ವಲ್ಪ ಮೇಲು ಮಟ್ಟದಲ್ಲಿ ಜಯತೀರ್ಥವಿದೆ. ಇಲ್ಲಿ ಜಯನದಿ ಹುಟ್ಟುತ್ತದೆ (ಈ ಎರಡು ನದಿಗಳೂ ಬೆಟ್ಟದ ಕೆಳಗೆ ಇರುಕಸಂದ್ರ ಗ್ರಾಮದ ಬಳಿ ಕೂಡಿ ಮುಂದೆ ಜಯಮಂಗಲಿ ಎಂದು ಒಂದೇ ನದಿಯಾಗಿ ಪ್ರವಹಿಸುತ್ತದೆ).

ಬೆಟ್ಟದಲ್ಲಿ ಮತ್ತಷ್ಟು ಮೇಲೆ ಎರಡನೆಯ ಘಟ್ಟದ ಮಟ್ಟಸಪ್ರದೇಶವಿದೆ. ಇಲ್ಲಿ ಸರ್ಕಾರಿ ಪ್ರವಾಸೀಮಂದಿರ ಮತ್ತು ಇತರ ಕೆಲವು ಕಟ್ಟಡಗಳಿವೆ. ಇದೇ ಭಾಗದಲ್ಲಿ ರಾಮತೀರ್ಥ ಮತ್ತು ಧನುಸ್‌ತೀರ್ಥ ಎಂಬ ಎರಡು ದೊಣೆಗಳೂ ಸಮೀಪದಲ್ಲಿ ರಾಮಲಕ್ಷ್ಮಣಸೀತೆಯರ ವಿಗ್ರಹಗಳಿರುವ ಒಂದು ಗುಹೆಯೂ ಇವೆ. ಹಿಂದೆ ಇಲ್ಲೊಂದು ಊರಿತ್ತು. ಅದರ ಅವಶೇಷಗಳನ್ನು ಈಗಲೂ ಗುರುತಿಸಬಹುದು. ಬೆಟ್ಟದ ಮೇಲುಗಡೆಯ ಮಟ್ಟದಲ್ಲಿ ಲಕ್ಷ್ಮೀನರಸಿಂಹ (ಕುಂಭಿನರಸಿಂಹ) ದೇವಾಲಯವಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯದಲ್ಲಿ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪವಿದ್ದು ಸಾಮಾನ್ಯ ವಿನ್ಯಾಸದಲ್ಲಿ ಕೆಳಗಿನ ನರಸಿಂಹ ದೇವಾಲಯದಂತೆಯೆ ಇದೆ. ದೇವಾಲಯದ ಬಳಿಯಲ್ಲಿ ಒಂದು ದೊಣೆ ಮತ್ತು ಅದರ ಸಮೀಪ ಒಂದು ಗುಹೆ ಇದೆ. ಗುಹೆಯ ಮೆಟ್ಟಿಲುಗಳು ಪಾದತೀರ್ಥವೆಂಬ ನೀರಿನ ಹೊಂಡಕ್ಕೆ ಬಿಡುತ್ತವೆ. ಇಲ್ಲಿನ ನೀರು ದೇವರ ಪಾದದಿಂದ ಹುಟ್ಟುವುದೆನ್ನುವುದರಿಂದ ಈ ತೀರ್ಥಕ್ಕೆ ಈ ಹೆಸರಿದೆ. ನರಸಿಂಹ ದೇವಾಲಯದಿಂದ ಮತ್ತಷ್ಟು ಮೇಲೆ ಒಂದು ಚಿಕ್ಕ ಗರುಡನ ಗುಡಿ ಇದೆ. ಇದರ ಬಳಿ 'ದೀವಿಗೆ ಗುಂಡು' ಎಂಬ ಬಂಡೆ ಇದೆ. ಈ ಬಂಡೆಯ ಮೇಲೆ ದೀಪ ಸ್ತಂಭವೊಂದನ್ನು ನೆಟ್ಟಿದ್ದು ಇಲ್ಲಿ ದೀಪ ಹಚ್ಚಿದಾಗ ಬಹುದೂರದವರೆಗೆ ಕಾಣಿಸುತ್ತದೆ. ಈ ಸುತ್ತಿನಲ್ಲಿರುವ ಕೋಟೆಯ ಗೋಡೆಯಲ್ಲಿರುವ ಒಂದು ದೊಡ್ಡ ರಂಧ್ರವನ್ನು ಪಕ್ಕದ ಪರಂಗಿ ಬೆಟ್ಟದಿಂದ ಹೊಡೆದ ಗುಂಡಿನಿಂದ ಆದುದೆಂದು ಜನ ತೋರಿಸುವುದುಂಟು.

ದೇವರಾಯನದುರ್ಗದಿಂದ ಸ್ವಲ್ಪದೂರದಲ್ಲಿ ತುಮಕೂರು ರಸ್ತೆಯ ಬದಿಯಲ್ಲಿ ನಾಮದ ಚಿಲುಮೆ ಇದೆ. ಇಲ್ಲಿ ಬಂಡೆಯಿಂದ ಹೊಮ್ಮುವ ನೀರು ಬಂಡೆಯಲ್ಲಿ ಕಡಿದ ಒರಳೊಂದನ್ನು ತುಂಬಿ ಮುಂದೆ ಹರಿಯುತ್ತದೆ. ಶಿಂಷಾನದಿ ಬೆಟ್ಟದ ದಕ್ಷಿಣ ಪಾರ್ಶ್ವದಲ್ಲಿ ಉಗಮಿಸುತ್ತದೆ.

ದೇವರಾಯನದುರ್ಗ ಅಂಧಕ ಅಥವಾ ಲಿಂಗಕ ಎಂಬ ಕಳ್ಳರ ನಾಯಕನೊಬ್ಬನ ಠಾಣ್ಯವಾಗಿತ್ತೆಂದೂ ಯದುಪಟ್ಟಣದಲ್ಲಿ ಆಳುತ್ತಿದ್ದ. ಕರ್ನಾಟಕದ ಅರಸ ಹೇಮಚಂದ್ರನ ಮಗ ಸುಮತಿ ಎಂಬ ರಾಜಕುಮಾರ ಇವನನ್ನು ಹತ್ತಿಕ್ಕಿ ಈ ಪ್ರದೇಶವನ್ನು ಆಕ್ರಮಿಸಿಕೊಂಡ ಎಂದೂ ಸ್ಥಳಪ್ರತೀತಿ. ಅನಂತರ ಅಂಧಕ ನೆಲಮಂಗಲದ ಸಮೀಪದಲ್ಲಿ ಭೂಮಂಡನವೆಂಬ ಪಟ್ಟಣವನ್ನು ಸ್ಥಾಪಿಸಿ ಅಲ್ಲಿ ನೆಲಸಿದನಂತೆ. ಹೊಯ್ಸಳರ ಕಾಲದಲ್ಲಿ ಈ ಬೆಟ್ಟದ ಮೇಲೆ ಆನೆ ಬಿದ್ದ ಸರಿ (ಆನೆ ಬಿದ್ದ ಜರಿ) ಎಂಬ ಊರಿದ್ದಂತೆ ತೋರುತ್ತದೆ. ಬಹುಕಾಲದವರೆಗೆ ಈ ಸುತ್ತಣ ಪ್ರದೇಶ ಇದೇ ಹೆಸರಿನಿಂದ ಪ್ರಸಿದ್ಧವಾಗಿತ್ತು. ಆನೆಯೊಂದು ಜಾರಿಬಿದ್ದಿದ್ದರಿಂದ ಈ ಹೆಸರಾಯಿತೆಂದು ಐತಿಹ್ಯ. ಈ ಬೆಟ್ಟದ ಮೇಲಿನ ಕರಿಗಿರಿ ಶಿಖರದ ಬುಡದಲ್ಲಿರುವ ಆನೆಗೊಂದಿ ಎನ್ನುವ ಒಂದು ತಾಣ ಆನೆಬಿದ್ದ ಸ್ಥಳವೆಂದು ತೋರಿಸುವುದುಂಟು. ತುಡುಗು ಆನೆಯೊಂದು (ಶಾಪಗ್ರಸ್ತ ಗಂಧರ್ವ) ಇಲ್ಲಿಗೆ ಬಂದು ಸಾಕಷ್ಟು ಹಾವಳಿಮಾಡಿ ಇಲ್ಲಿಯಕೆರೆಗೆ ನಷ್ಟಮಾಡಿ ಅನಂತರ ಬೆಟ್ಟದ ಇಳಿಜಾರು ಪ್ರದೇಶದಲ್ಲಿ ಏರಲು ಹೋಗಿ ಜಾರಿ ಪ್ರಾಣ ಕಳೆದುಕೊಂಡಿತೆಂದು ಸ್ಥಳಪುರಾಣ. ಅದರ ಪ್ರಕಾರ ಈ ಬೆಟ್ಟದ ಹೆಸರೂ ಕರಿಗಿರಿ. ವಿಜಯನಗರದ ರಾಜರ ಕಾಲದಲ್ಲಿಈ ಬೆಟ್ಟಕ್ಕೆ ಹೆಸರೂ ಇತ್ತು. ಆ ಕಾಲದಲ್ಲಿ ಜಯಮಂಗಲಿಗೆ ಅಡ್ಡವಾಗಿ ಕಟ್ಟಿದ್ದ ಬುಕ್ಕಸಮುದ್ರ ಕಟ್ಟೆ ಮತ್ತು ಸಮೀಪದಲ್ಲಿದ್ದ ಊರಿನ ಅವಶೇಷಗಳನ್ನು ಈಗಲೂ ಕಾಣಬಹುದು. ಕೆಲವು ಕಾಲ ಜಡಕ ಎಂಬ ಪಾಳೆಯಗಾರ ಇಲ್ಲಿದ್ದು ಇದಕ್ಕೆ ಡಕನದುರ್ಗ ಎಂಬ ಹೆಸರೂ ಇದ್ದಂತೆ ತೋರುತ್ತದೆ. ಮೈಸೂರಿನ ಚಿಕ್ಕದೇವರಾಜ ಒಡೆಯರು 1696ರಲ್ಲಿ ಇದನ್ನು ಅಕ್ರಮಿಸಿಕೊಂಡಮೇಲೆ ದೇವರಾಯದುರ್ಗ ಎಂಬ ಹೆಸರು ರೂಢಿತವಾಯಿತು. ದುರ್ಗದಲ್ಲಿರುವ ಕೋಟೆಕೊತ್ತಲೆಗಳೂ ಚಿಕ್ಕದೇವರಾಜ ಒಡೆಯರ ಕಾಲದ್ದು. ದೇವರಾಯನದುರ್ಗ ಈಗ ಪ್ರವಾಸಿ ಕೇಂದ್ರವಾಗಿ ಬೆಳೆಯುತ್ತಿದೆ.

**ದೇವಲಾಪುರ:** ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನಲ್ಲಿ ನಾಗಮಂಗಲದಿಂದ ಪೂರ್ವಕ್ಕೆ 11ಕಿಮೀ ದೂರದಲ್ಲಿರುವ ಗ್ರಾಮ.

ಈ ಊರು ಹಿಂದೆ ಪ್ರಮುಖ ಸ್ಥಳವಾಗಿತ್ತು. 3ನೆಯ ಬಲ್ಲಾಳನ ಕಾಲದ 1300ರ ಒಂದು ಶಾಸನ ಇಲ್ಲಿ ದೊರಕಿದೆ. ಈ ಊರಿನ ಮುಖ್ಯ ಗುಡಿಯಾದ ಲಕ್ಷ್ಮೀನಾರಾಯಣ ದೇವಾಲಯದ ಮೂಲಭಾಗ ಮುಮ್ಮಡಿ

ವೀರಬಲ್ಲಾಳನ ಕಾಲದ್ದು. ಇದರಲ್ಲಿ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪ ಇವೆ. ಮುಂದುಗಡೆ ಪ್ರಾಕಾರದ ಮಹಾದ್ವಾರ ಮತ್ತು ದೊಡ್ಡ ದೀಪದ ಕಂಬ ಇವೆ. ಇವನ್ನು 1472ರಲ್ಲಿ ಲಕ್ಕಣ್ಣನಾಯಕನ ಮಗ ಚಿಕ್ಕ ಅಲ್ಲಪ್ಪನಾಯಕ ಎಂಬುವನು ವಿಜಯನಗರದ ಸಾಳ್ವ ನರಸಿಂಹನಿಂದ ದೇವಲಾಪುರವನ್ನು ದತ್ತಿಯಾಗಿ ಪಡೆದಾಗ ಕಟ್ಟಿಸಿದನೆಂದು ತಿಳಿದುಬರುತ್ತದೆ. ಈ ದೇವಾಲಯದ ಇಟ್ಟಿಗೆ ಮತ್ತು ಗಾರೆಯಿಂದ ಕಟ್ಟಿರುವ ಗೋಪುರ 17ನೆಯ ಶತಮಾನದ ರಚನೆ. ದೇವಾಲಯದ ಹೊರಮೈಯಲ್ಲಿ ಅಡ್ಡ ತಳಪಟ್ಟಿಕೆಗಳು, ಅರೆಗಂಬಗಳು ಮತ್ತು ಕೋಷ್ಠಗಳಿಂದ ಅಲಂಕೃತವಾದ ಭಿತ್ತಿ, ನೇರಕಪೋತ ಇವೆ. ಮುಖಮಂಟಪ ಮೂರಂಕಣದ್ದು. ಇಲ್ಲಿನ ಕಂಬಗಳಲ್ಲಿ ಕೆಳಗೆ ಚತುರಸ್ರ ಮೇಲೆ 8 ಮತ್ತು 24 ಮುಖಗಳಿದ್ದು ಮೇಲೆ ದುಂಡು ಮತ್ತು ಚಪ್ಪಟೆ ಬೋದಿಗೆಗಳಿವೆ. ಗರ್ಭಗೃಹದ ಒಳಗಿನ ಲಕ್ಷ್ಮೀನಾರಾಯಣ (ಶಾಸನಗಳಲ್ಲಿ ಲಕ್ಷ್ಮೀಕಾಂತ) ಹೊಯ್ಸಳ ಶೈಲಿಯದು. 8' ಎತ್ತರವಿದೆ.

ಊರಿನ ಕೆರೆಯ ಉತ್ತರದಲ್ಲಿರುವ ಒಂದು ಸಣ್ಣ ಗುಡ್ಡದ ಮೇಲೆ ಕೋಡಿ ತಿರುಮಲ ದೇವಾಲಯವಿದೆ. ದಕ್ಷಿಣಾಭಿಮುಖವಾಗಿರುವ ಈ ದೇವಾಲಯದಲ್ಲಿ ಗರ್ಭಗೃಹ, ನವರಂಗ ಹಾಗೂ ಮುಖಮಂಟಪ ಇವೆ. ಜೀರ್ಣಾವಸ್ಥೆಯಲ್ಲಿರುವ ಈ ದೇವಾಲಯ 17ನೆಯ ಶತಮಾನದ್ದು.
(ಡಿ.ಎಸ್.ಜೆ.)

**ದೇವಲಾಪುರದ ನಂಜುಂಡ :** ಸು. 1841. ವೀರಶೈವ ಕವಿ. ದೇವಲಾಪುರ ಈತನ ಜನ್ಮಸ್ಥಳ. ತಂದೆ ದೇವರಸ. ತಾಯಿ ನಂಜಮಾಂಬೆ, ಇಷ್ಟದೇವತೆ ನಂಜನಗೂಡು ನಂಜುಂಡೇಶ್ವರ, ಕವಿ ಮೈಸೂರು ಮುಮ್ಮಡಿ ಕೃಷ್ಣರಾಜ ಒಡೆಯರ (1794-1868) ಆಶ್ರಿತನಾಗಿದ್ದ. ಕೃಷ್ಣರಾಜಭಕ್ತಿಸಾರ, ಕೃಷ್ಣರಾಜ ಪಟ್ಟಾಭಿಷೇಕವರ್ಣನೆ, ಕೃಷ್ಣರಾಜಭೋಗಾವಳಿ, ಕೃಷ್ಣರಾಜಶೃಂಗಾರಶತಕ, ಕೃಷ್ಣರಾಜೇಂದ್ರವೃತ್ತರತ್ನಾವಳಿ, ಟೀಕೆ, ಕೃಷ್ಣೇಂದ್ರಗೀತೆ, ತಿಬ್ಬಾಂಬಿಕಾಶತಕ, ಅಪರಾಧಸ್ತೋತ್ರ, ಲಿಂಗಸ್ತುತಿ, ಶಂಕರಾಷ್ಟಕ, ಶೈಲಜಾಧವಸ್ತೋತ್ರ, ಸಮುದ್ರ ಮಥನ ಕಥೆ, ಸೌಗಂಧಿಕಾಪರಿಣಯ - ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಹೆಚ್ಚಿನವು ಮುಮ್ಮಡಿ ಕೃಷ್ಣರಾಜ ಒಡೆಯರ ಸ್ತುತಿಪೂರವಾಗಿವೆ. ಕವಿ ತಾನು ಸಂಸ್ಕೃತ ಹಾಗೂ ಕನ್ನಡದಲ್ಲಿ ಚತುರತೆಯುಳ್ಳವನೆಂದು ಹೇಳಿಕೊಂಡಿದ್ದಾನೆ.

ಕೃಷ್ಣರಾಜಭಕ್ತಿಸಾರ ಭಾಮಿನೀಷಟ್ಪದಿಯ 108 ಪದ್ಯಗಳುಳ್ಳ ಗ್ರಂಥ. ಇದಕ್ಕೆ ಕೃಷ್ಣೇಂದ್ರಭಕ್ತಿಸಾರಾಷ್ಟೋತ್ತರಶತಕ ಎಂಬ ಹೆಸರೂ ಇದೆ. ಪ್ರತಿ ಪದ್ಯವೂ ಕೃಷ್ಣೇಂದ್ರ ರಕ್ಷಿಸು ನಮ್ಮನನವರತೆಂದು ಮುಗಿಯುತ್ತದೆ. ಇದನ್ನು 1862ರಲ್ಲಿ ಬರೆದಂತೆ ತಿಳಿಯುತ್ತದೆ. ಕೃಷ್ಣರಾಜಪಟ್ಟಾಭಿಷೇಕವರ್ಣನೆ ಹಾಗೂ ಸೌಗಂಧಿಕಾಪರಿಣಯ ಸಾಂಗತ್ಯದಲ್ಲಿವೆ. ಸೌಗಂಧಿಕಾಪರಿಣಯದಲ್ಲಿ 14 ಸಂಧಿಗಳೂ 726 ಪದ್ಯಗಳೂ ಇವೆ. ಇದು ಮುಮ್ಮಡಿ ಕೃಷ್ಣರಾಜ ಒಡೆಯರ ಸೌಗಂಧಿಕಾ ಪರಿಣಯದ ಸಂಗ್ರಹವೆಂದೂ ತಾನು ದೊರೆಯ ಆಜ್ಞಾನುಸಾರವಾಗಿ ರಚಿಸಿರುವೆನೆಂದೂ ಹೇಳಿಕೊಂಡಿದ್ದಾನೆ. ದೂರ್ವಾಸ ಋಷಿಯ ಶಾಪದಿಂದ ಇಂದ್ರ ರತ್ನ ಪುರಿಯ ರಾಜರಾಣಿಯರಿಗೆ ಸುಗಂಧರಾಯನೆಂಬ ಮಗನಾಗಿ ಹುಟ್ಟಿ ಸೌಗಂಧಿಕೆಯಾಗಿ ಹುಟ್ಟಿದ ಶಚಿಯನ್ನು ಮದುವೆಯಾಗಿ ಕೊನೆಗೆ ತನ್ನ ಪದವಿ ಹೊಂದಿದ. ಇದು ಕಥಾವಸ್ತು. ಕೃಷ್ಣರಾಜಪಟ್ಟಾಭಿಷೇಕವರ್ಣನೆಯಲ್ಲಿ ರಾಜರ ಪಟ್ಟಾಭಿಷೇಕಮಹೋತ್ಸವವನ್ನು ವರ್ಣಿಸಿದೆ. ಅಪರಾಧಸ್ತೋತ್ರ ವಾರ್ಧಕ ಷಟ್ಪದಿಯಲ್ಲಿ ರಚಿತವಾದ ಭಕ್ತಿ ಕಾವ್ಯ. ಇದರಲ್ಲಿ 127 ಪದ್ಯಗಳಿದ್ದು ಶಿವಸ್ತುತಿರೂಪವಾಗಿದೆ. ಇದನ್ನು ಮುಮ್ಮಡಿ ಕೃಷ್ಣರಾಜ ಒಡೆಯರ ಅನುಗ್ರಹ ತಪ್ಪಿದ ಮೇಲೆ ಬರೆದುದಾಗಿ ಪ್ರತೀತಿ ಇದೆ. ಕೃಷ್ಣರಾಜಶೃಂಗಾರಶತಕ 101 ಕಂದಪದ್ಯಗಳುಳ್ಳ ಪುಟ್ಟ ಶೃಂಗಾರಕಾವ್ಯ. ಅಲ್ಲಲ್ಲಿ ಗದ್ಯಭಾಗಗಳೂ ಇವೆ. ಇದನ್ನು 1841ರಲ್ಲಿ ಬರೆದಂತೆ ಕಾಣುತ್ತದೆ. ಕೃಷ್ಣರಾಜಭೋಗಾವಳಿ ಹಾಡಿನ ರೂಪದಲ್ಲಿದೆ. ಇದರಲ್ಲಿ 27 ಪದ್ಯಗಳಿವೆ. ಶೈಲಜಾಧವಸ್ತೋತ್ರ ಶಿವಸ್ತುತಿರೂಪವಾಗಿದ್ದು 33 ವೃತ್ತಗಳನ್ನೊಳಗೊಂಡಿದೆ. ಕೃಷ್ಣೇಂದ್ರಗೀತೆ ಹಾಡಿನ ರೂಪದಲ್ಲಿದೆ. 32 ಪದ್ಯಗಳಿವೆ. ಲಿಂಗಸ್ತುತಿಯಲ್ಲಿ 27 ಪದ್ಯಗಳೂ, ಶಂಕರಾಷ್ಟಕದಲ್ಲಿ 8 ತೂಣಕ ವೃತ್ತಗಳೂ ಇವೆ. (ಕೆ.ಆರ್.ಯು.)

**ದೇವವೃಂದ :** ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕಿನ ಒಂದು ಗ್ರಾಮ. ಪ್ರಾಚೀನ ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರ. ಮೂಡಿಗೆರೆಯಿಂದ ನೈಋತ್ಯಕ್ಕೆ 24 ಕಿಮೀ ದೂರದಲ್ಲಿದೆ. ಈ ಊರಿಗೆ ಸಕಲೇಶಪುರ-ಮೂಡಿಗೆರೆ ರಸ್ತೆಯಲ್ಲಿ ಹಾನುಬಾಳು ಕಡೆಯಿಂದ ಮತ್ತು ಬೆಟ್ಟದಮನೆ ಕಡೆಯಿಂದ ಹೋಗಲು ಎರಡು ಉತ್ತಮ ರಸ್ತೆ ಮಾರ್ಗಗಳಿವೆ. ಬೆಟ್ಟದ ಮನೆ ಮೂಲಕ ಹೋಗುವ ರಸ್ತೆ ಹೊಯ್ಸಳರ ಅಂಗಡಿ ಗ್ರಾಮದ ಮೂಲಕ ಹಾದುಹೋಗುತ್ತದೆ.

ಮಲೆನಾಡಿನ ದಟ್ಟಡವಿಯಲ್ಲಿ ಪಶ್ಚಿಮ ಘಟ್ಟಗಳ ತಪ್ಪಲಲ್ಲಿರುವ ಈ ಊರು ಹಿಂದೆ ಮಲವಿನ್ನಾಡು ಎಂಬ ನಾಡಿನ ಮುಖ್ಯ ಕೇಂದ್ರವಾಗಿದ್ದಿತು. ಸ್ಥಳ ಪುರಾಣದ ಮೇರೆಗೆ ಇಲ್ಲಿ ಕಪಿಲ ಮಹರ್ಷಿಯ ಆಶ್ರಮವಿತ್ತು. ಇಲ್ಲಿನ ಪ್ರಸಿದ್ಧ ರಾಮೇಶ್ವ ದೇವರನ್ನು ಪರಶುರಾಮ ಸ್ಥಾಪಿಸಿದನೆಂದು ಪ್ರತೀತಿ. ತಲಕಾಡಿನ ಗಂಗರ ಕಾಲದಿಂದಲೂ ಇಲ್ಲಿ ದೇವಾಲಯವಿದ್ದುದಕ್ಕೆ ಸಾಕ್ಷ್ಯಾಧಾರಗಳಿವೆ.

ದೇವವೃಂದವೆಂದರೆ ದೇವತೆಗಳ ಬೀಡು ಎಂಬ ಅರ್ಥವಿದೆ. ಇಲ್ಲಿನ ರಾಮೇಶ್ವರ ದೇವಾಲಯ ಹೊಯ್ಸಳರ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂತು. ಹೊಯ್ಸಳರ ಮೂಲ ಸ್ಥಳವಾದ ಅಂಗಡಿ ಅಥವಾ ಸೊಸವೂರು ಇಲ್ಲಿಗೆ ಸು. 5 ಕಿಮೀ ದೂರದಲ್ಲಿದೆ. ರಾಮೇಶ್ವರ ದೇವಾಲಯದ ಗರ್ಭಗೃಹ, ಸುಕನಾಸಿ, ಒಳಗಿನ ನವರಂಗ ಹಾಗೂ ಗೋಪುರಗಳು ಹೊಯ್ಸಳರ ಕಾಲದ ರಚನೆಗಳಾಗಿವೆ. ದೇವಾಲಯದ ಮಹಾದ್ವಾರ ಮತ್ತು ಪ್ರಾಕಾರಗಳು ವಿಜಯನಗರ ಕಾಲದ ನಿರ್ಮಾಣಗಳು. ಕಂಬಗಳ ಮತ್ತು ದ್ವಾರಪಾಲಕರ ಶಿಲ್ಪಗಳು ಮನೋಜ್ಞವಾಗಿವೆ. ಈ ದೇವಾಲಯದ ಆವರಣದಲ್ಲಿ ವೀರಭದ್ರ, ಕೇಶವ, ಆಂಜನೇಯ ಮತ್ತು ದೇವಿಯ ಗುಡಿಗಳಿವೆ. ಈ ರಾಮೇಶ್ವರ ದೇವರಿಗೆ ಯುಗಾದಿಯಲ್ಲಿ ನಡೆಯುವ ರಥೋತ್ಸವ ಮತ್ತು ಜಾತ್ರೆಗಳು ಈ ಸುತ್ತಿನಲ್ಲಿ ಪ್ರಸಿದ್ಧ. ದೀಪಾವಳಿ ಮತ್ತು ಸಂಕ್ರಾಂತಿ ಹಬ್ಬಗಳಲ್ಲಿಯೂ ಚಿಕ್ಕ ರಥೋತ್ಸವಗಳು ನಡೆಯುತ್ತವೆ. ಈಗ ಇಲ್ಲಿನ ದೇವಾಲಯದ ಜೀರ್ಣೋದ್ಧಾರ ಕಾರ್ಯ ಮತ್ತು ಭಕ್ತಾದಿಗಳಿಗೆ ಅನೇಕ ಸೌಕರ್ಯಗಳನ್ನು ಮಾಡಿಕೊಡುವ ಪ್ರಯತ್ನ ನಡೆದಿದೆ. ದೇವಾಲಯದ ಆಡಳಿತ ಹಿಂದಿನ ನಾಡಪದ್ಧತಿಗೆ ಪ್ರತೀಕವಾಗಿದೆ. ನೆರೆಯ ಉಗ್ಗೇಹಳ್ಳಿ, ನಾಡಗೌಡರು ಈ ದೇವಾಲಯದ ಪಾರುಪತ್ಯಗಾರರು. ಅವರು ವಿವಿಧ ಮಂದೆ ಅಥವಾ ಸಾವಿರಗಳ ಪ್ರತಿನಿಧಿಗಳೊಂದಿಗೆ ಇಲ್ಲಿನ ಸೇವೆಗಳನ್ನು ನಡೆಸುತ್ತಾರೆ. ಈಗಲೂ ಐದು ಸಾವಿರ ಸೀಮೆಯವರು ಯುಗಾದಿ ರಥೋತ್ಸವದಲ್ಲಿ ವಾದ್ಯಸಮೇತ ಬಂದು ಜಾತ್ರೆಯಲ್ಲಿ ಒಂದಾಗಿ ಸೇರುತ್ತಾರೆ. *

**ದೇವುಡು ನರಸಿಂಹ ಶಾಸ್ತ್ರಿ :** 1897-1962. ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಘನವಿದ್ವಾಂಸರಾಗಿದ್ದವರು. ಹುಟ್ಟಿದ್ದು ಮೈಸೂರಿನಲ್ಲಿ, ಇವರದು ಪಂಡಿತ ಮನೆತನ. ಇವರ ವಂಶದವರು ಮೈಸೂರು ಅರಮನೆಯಲ್ಲಿ ರಾಜಪುರೋಹಿತರಾಗಿದ್ದರು. ಚಿಕ್ಕಂದಿನಲ್ಲಿಯೇ ಪ್ರತಿಭಾವಂತರೆಂದು ಹೆಸರುಗಳಿಸಿದ್ದ ದೇವುಡು ಅವರು ಮೈಸೂರು ವಿಶ್ವವಿದ್ಯಾಯನಿಲಯದಿಂದ ಎಂ.ಎ. ಪದವಿ ಪಡೆದು ಬೆಂಗಳೂರಿನಲ್ಲಿ ನೆಲೆಸಿದರು. ಸಾಂಪ್ರದಾಯಿಕ ರೀತಿಯಲ್ಲಿ ವೇದಾಂತ, ಪೂರ್ವಮೀಮಾಂಸಾ ಶಾಸ್ತ್ರಗಳನ್ನು ಅಭ್ಯಸಿಸಿದರು. ಶಿಕ್ಷಣ ಕ್ಷೇತ್ರದಲ್ಲಿ ಆಸಕ್ತಿ ಇದ್ದುದರಿಂದ ಸ್ವಲ್ಪ ಕಾಲ ಆರ್ಯ ವಿದ್ಯಾಶಾಲೆಯಲ್ಲಿ ಶಿಕ್ಷಕರಾಗಿ ಕೆಲಸ ಮಾಡಿದರು. ಮಕ್ಕಳಿಗಾಗಿ ಹಲವು ಪುಸ್ತಕಗಳನ್ನು ಬರೆದು ಪ್ರಕಟಿಸಿದರಲ್ಲದೆ ನಮ್ಮ ಪುಸ್ತಕ ಎಂಬ ಪತ್ರಿಕೆಯನ್ನು ಆರಂಭಿಸಿ ಕೆಲಕಾಲ ನಡೆಸಿದರು. ಇವರು ರಂಗಭೂಮಿ ಮತ್ತು ಚಲನಚಿತ್ರ ಕ್ಷೇತ್ರಗಳಲ್ಲೂ ಆಸಕ್ತಿ ವಹಿಸಿದರು. ವರದಾಚಾರ್ಯರ ಶಿಷ್ಯರಾಗಿ, ನಾಟಕಗಳಲ್ಲಿ ಪಾತ್ರವಹಿಸಿದರು. ಮಾರ್ಕಂಡೇಯ ಎಂಬ ಕನ್ನಡ ಚಿತ್ರದಲ್ಲೂ ಅಭಿನಯಿಸಿದರು. ಬೆಂಗಳೂರು ಅಮೆಚೂರ್ ಡ್ರಮಾಟಿಕ್ ಅಸೋಸಿಯೇಷನ್ ಸಂಸ್ಥೆಯ ಸದಸ್ಯರಾಗಿ ಆ

ಸಂಸ್ಥೆಯ ರಂಗಭೂಮಿ ಎಂಬ ಪತ್ರಿಕೆಯ ಸಂಪಾದಕರಾಗಿಯೂ ಕೆಲಸ ಮಾಡಿದರು.

ಇವರದು ಪ್ರಚಂಡ ಧೀಶಕ್ತಿ. ವೇದ ಉಪನಿಷತ್ತುಗಳ ವಿಷಯದಲ್ಲಿ ಇವರು ಒಳ್ಳೆಯ ಪಾಂಡಿತ್ಯ ಗಳಿಕೊಂಡಿದ್ದರಲ್ಲದೆ ಆಧುನಿಕ ಜೀವನ ದೃಷ್ಟಿಯನ್ನು ಬೆಳೆಸಿಕೊಂಡಿದ್ದರು. ವೈದಿಕ ಕಾಲದ ಜನಜೀವನ, ಸಂಸ್ಕೃತಿ ಮತ್ತು ರೀತಿ ನೀತಿಗಳನ್ನು ಮಹಾಬ್ರಾಹ್ಮಣ, ಮಹಾಕ್ಷತ್ರಿಯ ಮತ್ತು ಮಹಾದರ್ಶನ ಎಂಬ ಮೂರು ಕಾದಂಬರಿಗಳಲ್ಲಿ ಇವರು ಚಿತ್ರಿಸಿದ್ದಾರೆ. 'ಮಹಾಬ್ರಾಹ್ಮಣ'ದಲ್ಲಿ ವಿಶ್ವಾಮಿತ್ರನ ತಪಸ್ಸಾಧನೆಗಳ ಕಥೆಯನ್ನೂ 'ಮಹಾಕ್ಷತ್ರಿಯ'ದಲ್ಲಿ ನಹುಷನ ಕಥೆಯನ್ನೂ 'ಮಹಾದರ್ಶನ'ದಲ್ಲಿ ಯಾಜ್ಞವಲ್ಕ್ಯರ ಕಥೆಯನ್ನೂ ಬಹು ಚೆನ್ನಾಗಿ ಹೇಳಿದ್ದಾರೆ. ಮನುಷ್ಯನ ಮನಸ್ಸಿನ ಸೂಕ್ಷ್ಮ ವ್ಯಾಪಾರಗಳನ್ನು 'ಅಂತರಂಗ', ಎಂಬ ಗ್ರಂಥದಲ್ಲಿ ವಿವರಿಸಿದ್ದಾರೆ. ಲೈಂಗಿಕ ಸಮಸ್ಯೆಗಳನ್ನು ಕುರಿತು ಎರಡನೆಯ ಜನ್ಮ ಎಂಬ ಕಾದಂಬರಿಯನ್ನು ಬರೆದಿದ್ದಾರೆ. ಗೆದ್ದವರು ಯಾರು, ಮಯೂರ, ಕಳ್ಳರ ಕೂಟ - ಇವು ಇವರ ಇತರ ಕೃತಿಗಳು. ವಿವೇಕಾನಂದರ ಕೆಲವು ಭಾಷಣಗಳನ್ನು ಕನ್ನಡಕ್ಕೆ ತಂದಿದ್ದಾರೆ. ಕರ್ನಾಟಕ ಸಂಸ್ಕೃತಿಯ ದರ್ಶನ ಎಂಬುದು ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಇವರು ಮಾಡಿದ ಭಾಷಣಗಳ ಸಂಗ್ರಹ. ಇವರ ವಿಮರ್ಶಾಶಕ್ತಿ ಮತ್ತು ವೈಜ್ಞಾನಿಕ ದೃಷ್ಟಿಗಳನ್ನು ಈ ಕೃತಿಯಲ್ಲಿ ಗುರುತಿಸಬಹುದು. ಇವರ ಮಹಾಕ್ಷತ್ರಿಯ ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ (1962). ಇವರು 1962 ಅಕ್ಟೋಬರ್ 24ರಂದು ನಿಧನಹೊಂದಿದರು.

(ಡಿಇ.ಕೆ.ಆರ್)

**ದೇವೇಂದ್ರಪ್ಪ, ಬಿ. :** 1899- ಪ್ರಸಿದ್ಧ ಸಂಗೀತ ವಿದ್ವಾಂಸರು. ಶಿವಮೊಗ್ಗ ಜಿಲ್ಲೆಯ ಆಯನೂರು ಗ್ರಾಮದಲ್ಲಿ 1899 ಜೂನ್ 3ರಂದು ಜನಿಸಿದರು. ತಂದೆ ಬಿ.ಎಸ್.ರಾಮಯ್ಯ, ತಾಯಿ ತುಳಸಮ್ಮ.

ರಾಮಯ್ಯನವರಿಗೆ ಹಾಡುಗಾರಿಕೆ, ನಾನಾ ವಾದ್ಯವಾದನ ಮತ್ತು ಭರತನಾಟ್ಯದಲ್ಲಿ ಪಾಂಡಿತ್ಯವಿತ್ತು. ನಾಟಕ ಕಲೆಯಲ್ಲಿಯೂ ಅಭಿರುಚಿ ಇದ್ದ ಅವರು ನಾಟಕಗಳಲ್ಲಿ ರಾಜಾ ಪಾರ್ಟು ಮಾಡುತ್ತಿದ್ದರು. ಅವರಿಗೆ ಸಂಸ್ಕೃತ ಮತ್ತು ತೆಲುಗು ಭಾಷೆಗಳ ಪರಿಚಯವೂ ಇತ್ತು. ತಮ್ಮ ಮಗನಿಗೆ 5ನೆಯ ವಯಸ್ಸಿನಿಂದಲೇ ಶಿಕ್ಷಣ ಕೊಟ್ಟು ಹಾಡುಗಾರಿಕೆಯ ಜೊತೆಗೆ ತಮಗೆ ಬರುತ್ತಿದ್ದ ಎಲ್ಲ ವಾದ್ಯಗಳ ನುಡಿಸುವಿಕೆಯನ್ನು ಕಲಿಸಿದರು. ಇದರ ಫಲವಾಗಿ ದೇವೆಂದ್ರಪ್ಪನವರು ತಮ್ಮ 8ನೆಯ ವಯಸ್ಸಿನಲ್ಲೇ ಹಾಡುಗಾರಿಕೆ ಮತ್ತು ವಾದ್ಯಗಳ ವಾದನಗಳಲ್ಲಿ ಕಚೇರಿ ಮಾಡುವಷ್ಟು ಯೋಗ್ಯತೆಯನ್ನು ಸಂಪಾದಿಸಿದರು. ಮೈಸೂರಿನಲ್ಲಿ ಆಸ್ಥಾನ ಸಂಗೀತ ವಿದ್ವಾಂಸರುಗಳಾಗಿದ್ದ ತಿಟ್ಟೆ ನಾರಾಯಣ ಅಯ್ಯಂಗಾರ್, ಬಿಡಾರಂ ಕೃಷ್ಣಪ್ಪ, ವೀಣೆ ಶೇಷಣ್ಣ ಮತ್ತು ಭಕ್ಷಿ ಸುಬ್ಬಣ್ಣನವರಲ್ಲಿ ಹೆಚ್ಚಿನ ವಿದ್ಯಾಭ್ಯಾಸ ನಡೆಯಿತು. ಇವರು ಗಾಯನದಲ್ಲಿ ಸಿದ್ಧಿ ಪಡೆದುದಲ್ಲದೆ ತಮ್ಮ ತಂದೆಯವರು ಹೇಳಿಕೊಟ್ಟಿದ್ದ ವೀಣೆ, ಹಾರ್ಮೋನಿಯಮ್, ಪಿಟೀಲು, ಗೋಟುವಾದ್ಯ, ಜಲತರಂಗ, ದಿಲ್‌ರುಬಾ ಮತ್ತು ಸಿತಾರ್ - ಈ ವಾದ್ಯಗಳನ್ನು ನುಡಿಸುವುದರಲ್ಲಿಯೂ ಪಾಂಡಿತ್ಯವನ್ನು ಗಳಿಸಿದರು.

ದೇವೆಂದ್ರಪ್ಪನವರು ಹಿಂದುಸ್ಥಾನೀ ಸಂಗೀತವನ್ನೂ ಅಭ್ಯಾಸ ಮಾಡಿರುವುದರಿಂದ ಇವರ ಗಾಯನದಲ್ಲಿ ಕರ್ನಾಟಕ ಮತ್ತು ಹಿಂದುಸ್ಥಾನೀ ಸಂಗೀತ ಪದ್ಧತಿಗಳ ಉತ್ತಮಾಂಶವನ್ನು ಕಾಣಬಹುದು. ತ್ರಿಸ್ಥಾಯಿಯಲ್ಲಿ ಲೀಲಾ ಜಾಲವಾಗಿ ಹಾಡಬಲ್ಲವರಾಗಿದ್ದರು. ಇವರ ಕಂಠದಿಂದ ಹೊಮ್ಮುತ್ತಿರುವ ತುಂಬುನಾದ, ಶ್ರುತಿ ಶುದ್ಧತೆ ಮತ್ತು ಲಯಜ್ಞಾನ ಅಸದೃಶ್ಯವಾದುವು. ಅಪರೂಪ ತಾಳಗಳ ಪರಿಚಯವಿದ್ದ ಇವರು ಅಪರೂಪ ರಾಗಗಳನ್ನೂ ವಿಸ್ತಾರವಾಗಿ ಹಾಡಬಲ್ಲವರಾಗಿದ್ದರು. ಷಟ್ಕಾಲ ಪಲ್ಲವಿಗಳನ್ನು ಹಾಡುವುದರಲ್ಲಿ ಇವರು ಪ್ರಸಿದ್ಧರು. ಮಾರ್ದವತೆ, ಓಜಸ್ಸು - ಈ ಎರಡು ಗುಣಗಳೂ ಇವರ ಗಾಯನ ಶೈಲಿಯಲ್ಲಿತ್ತು. ಇವರ ಗಾಯನದಲ್ಲಿ ಸಾಹಿತ್ಯದ ಸ್ಪಷ್ಟವಾದ ಉಚ್ಚಾರಣೆ, ಅರ್ಥಶುದ್ಧತೆಗಳನ್ನು ಮನಗಾಣಬಹುದಾಗಿತ್ತು. ಸಾಹಿತ್ಯದ ಅರ್ಥಭಾಗಗಳನ್ನು ಗ್ರಹಿಸಿ, ಅದನ್ನು ರಾಗದ ರಸಭಾವಗಳೊಡನೆ ಮಿಳನಮಾಡಿ ಹಾಡುತ್ತಿದ್ದುದರಿಂದ ಇವರ ಸಂಗೀತ ಶ್ರೋತೃಗಳ ಮೇಲೆ ಮಹತ್ತರವಾದ ಪರಿಣಾಮವನ್ನು ಉಂಟುಮಾಡುತ್ತಿತ್ತು. ಇವರ ಸಂಗೀತವನ್ನು ಕುರಿತು ಅ.ನ.ಕೃಷ್ಣರಾಯರು 'ಸಿಂಹವೈಖರಿ', ಎಂದು ಕರೆದರೆ ಸಾಂಬಮೂರ್ತಿಯವರು 'ಗಂಡು ಹಾಡುಗಾರಿಕೆ' ಎಂದು ಕರೆದಿದ್ದಾರೆ.

ಇವರು ಕನ್ನಡ ಮತ್ತು ತೆಲುಗಿನಲ್ಲಿ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ವಚನಸಾಹಿತ್ಯವನ್ನು ತ್ಯಾಗರಾಜರ ತೆಲುಗು ಕೀರ್ತನೆಗಳ ಮಾದರಿಯಲ್ಲಿ ಸಂಗೀತದ ಚೌಕಟ್ಟಿಗೆ ಅಳವಡಿಸಿ ಪ್ರಚಾರಕ್ಕೆ ತಂದರು. ಇವರ ಶ್ರೀಬಸವೇಶ್ವರ ಅಷ್ಟೋತ್ತರ ಶತವಚನಕೀರ್ತನಸುಧಾ ಎಂಬ ಕೃತಿ 1969ರಲ್ಲಿ ಬಿಡುಗಡೆಯಾಯಿತು.

ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ದೇವೇಂದ್ರಪ್ಪನವರ ವಿದ್ಯಾಪ್ರೌಢಿಮೆಯನ್ನು ಮೆಚ್ಚಿ 1919ರಲ್ಲಿ ಆಸ್ಥಾನ ಸಂಗೀತ ವಿದ್ವಾಂಸರನ್ನಾಗಿ ನೇಮಿಸಿಕೊಂಡರು. ಜಯಚಾಮರಾಜ ಒಡೆಯರ್ ಅವರು ತಮ್ಮ ಮೆಚ್ಚುಗೆಯ ಪ್ರತೀಕವಾಗಿ ಇವರಿಗೆ ಗಾನವಿಶಾರದ ಎಂಬ ಬಿರುದನ್ನು ಸಕಲರಾಜಮರ್ಯಾದೆಗಳೊಡನೆ ನೀಡಿದರು 1946. ಅಲ್ಲದೆ ಇವರು ಅನೇಕ ರಾಜರು, ಮಠಾಧಿಪತಿಗಳು ಮತ್ತು ಸಂಗೀತ ಸಂಸ್ಥೆಗಳಿಂದ ರಾಗಾಲಾಪನಚತುರ, ಗಾನಕೇಸರಿ, ಗಾಯಕರತ್ನ, ಗಾನಾಲಂಕಾರ, ಗಾಯಕಸಾರ್ವಭೌಮ, ಗಾಯಕಶಿಖಾಮಣಿ, ಗಾಯನವಾದನಕಲಾನಿಧಿ, ಗಾನಸಿಂಧುಸುಧಾಂಶು, ಸಂಗೀತಕಲಾರತ್ನ, ಸಂಗೀತಕಲಾರತ್ನಸಾನು ಮುಂತಾದ ಬಿರುದುಗಳನ್ನು ಗಳಿಸಿ ಸನ್ಮಾನಿತರಾಗಿದ್ದಾರೆ. 1953ರಲ್ಲಿ ಇವರು ಭಾರತೀಯ ಸಾಂಸ್ಕೃತಿಕ ನಿಯೋಗದ ಸದಸ್ಯರಾಗಿ ಚೀನಕ್ಕೆ ಹೋಗಿದ್ದರು. ಭಾರತ ಸರ್ಕಾರ ಇವರ ಬಹುಮುಖವಾದ ಪ್ರತಿಭೆಯನ್ನು ಗಮನಿಸಿ 1963ರಲ್ಲಿ ರಾಷ್ಟ್ರಪ್ರಶಸ್ತಿಯನ್ನು ನೀಡಿ ಗೌರವಿಸಿತು. ಕರ್ನಾಟಕ ರಾಜ್ಯ ಸರ್ಕಾರ 1964ರಲ್ಲಿ ರಾಜ್ಯಪ್ರಶಸ್ತಿಯನ್ನೂ ಸಂಗೀತ ನಾಟಕ ಅಕಾಡೆಮಿ 1962ರಲ್ಲಿ ತನ್ನ ಪ್ರಶಸ್ತಿಯನ್ನೂ ನೀಡಿ ಗೌರವಿಸಿವೆ. ಬೆಂಗಳೂರು ಗಾಯನ ಸಮಾಜದ ಆಶ್ರಯದಲ್ಲಿ ನಡೆದ 1972ರ ಸಂಗೀತ ಸಮ್ಮೇಳನದಲ್ಲಿ ಇವರು ಅಧ್ಯಕ್ಷರಾಗಿದ್ದರಲ್ಲದೆ ಈ ಸಂದರ್ಭದಲ್ಲಿ ಸಂಗೀತರತ್ನ ಎಂಬ ಬಿರುದನ್ನೂ ಪಡೆದರು. ಸಂಗೀತ ಸಾಹಿತ್ಯ ಕ್ಷೇತ್ರಗಳಲ್ಲಿ ಇವರ ಸೇವೆಯನ್ನು ಗಮನಿಸಿ ಮೈಸೂರು ವಿಶ್ವವಿದ್ಯಾನಿಲಯ 1972ರಲ್ಲಿ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಿದೆ.

ಇವರು ರಾಜ್ಯ ಸಂಗೀತ ನಾಟಕ ಅಕಾಡೆಮಿಯ ಸಂಗೀತ ವಿಭಾಗದ ಸ್ಥಾಯಿ ಸಮಿತಿ ಅಧ್ಯಕ್ಷರಾಗಿ ಸೇವೆಸಲ್ಲಿಸಿದ್ದಾರೆ. ಅಕಾಡೆಮಿಯ ಸದಸ್ಯರೂ ಆಗಿದ್ದರು. ವಿಶ್ವವಿದ್ಯಾನಿಲಯದ ಸಂಗೀತ ವಿಭಾಗದ ವಿಷಯ ನಿಯಾಮಕ ಮಂಡಳಿಯ ಅಧ್ಯಕ್ಷರಾಗಿಯೂ ವಿದ್ವತ್ ಪರೀಕ್ಷಾ ಮಂಡಲಿಯ ಅಧ್ಯಕ್ಷರಾಗಿಯೂ ಇದ್ದರು. ಅಖಿಲಭಾರತ ಶಾಂತಿ ಸಂಘದ ಸದಸ್ಯರಾಗಿಯೂ ಕರ್ನಾಟಕ ರಾಜ್ಯದ ಚಲನಚಿತ್ರದ ಸಂಗೀತ ವಿಭಾಗದ ಸದಸ್ಯರಾಗಿಯೂ ಸೇವೆಸಲ್ಲಿಸಿದರು. (ಬಿ.ಎಸ್.ವಿ.)

**ದೇವೇಂದ್ರಮುನಿ :** ಕನ್ನಡದ ಆದಿಕವಿಯೆಂದು ಪ್ರಸಿದ್ಧನಾದ ಪಂಪನ ಗುರು. ಪಂಪ ತನ್ನ ಆದಿಪುರಾಣದ ಆರಂಭದಲ್ಲಿ ಶ್ರೀ ದೇವೇಂದ್ರಮುನೀಂದ್ರ ಪಂಡಿತಗುಣವ್ರಾತಂ ಜಗತ್‌ಸ್ವಾಮಿ ಎಂದು ಮುಂತಾಗಿ ತೀರ್ಥಂಕರನನ್ನು ಸ್ತೋತ್ರಮಾಡುವ ನೆಪದಲ್ಲಿ ತನ್ನ ಗುರುವನ್ನೂ ಸ್ಮರಿಸಿದ್ದಾನೆ. ಅದೇ ಕೃತಿಯ ಮೊದಲ ಆಶ್ವಾಸನದಲ್ಲಿ 'ದೇವೇಂದ್ರಮುನಿಪದಾಬ್ಜಂ .............. ಹೀಗೆ ಬೋಧೋದಯಮಂ' ಎಂದು ಕೊಂಡಾಡಿದ್ದಾನೆ. ಅದೇ ಆಶ್ವಾಸನದಲ್ಲಿ ಮತ್ತೆ 'ಗುರುದೇವೇಂದ್ರ ಮುನೀಂದ್ರನ್' ಎಂದು ತನ್ನ ಗುರುವಿನ ಹೆಸರನ್ನು ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ. ಪ್ರತಿ ಆಶ್ವಾಸದ ಕೊನೆಯಲ್ಲಿ 'ಇದು ದೇವೇಂದ್ರಮುನೀಂದ್ರವಂದ್ಯ ಪರಮಜಿನೇಂದ್ರ' ಎಂದು ಆರಂಭವಾಗುವ ವಾಕ್ಯದಲ್ಲಿ ತನ್ನ ಗುರುವನ್ನು ಸ್ಮರಿಸಿಕೊಂಡು ಅಪಾರಭಕ್ತಿಯನ್ನು ಮೆರೆದಿದ್ದಾನೆ. ದೇವೇಂದ್ರ ಮುನಿಗಳು ಪಂಪನಿಗೆ ವಿದ್ಯಾಗುರುಗಳಾಗಿದ್ದು ಜೈನಧರ್ಮಶಾಸ್ತ್ರವನ್ನು ಬೋಧಿಸಿರಬಹುದು. ಪಂಪನ ಕೃತಿಗಳಿಂದ ಅವರ

ಬಗ್ಗೆ ಇನ್ನಾವ ವಿವರಗಳೂ ದೊರಕುವುದಿಲ್ಲ.

ಶ್ರವಣಬೆಳಗೊಳದ 66ನೆಯ ಶಾಸನದಲ್ಲಿ ಒಬ್ಬ ದೇವೇಂದ್ರಮುನಿಯ ಹೆಸರು ಬಂದಿದೆ. ಇದರಲ್ಲಿ ನಯಕೀರ್ತಿ ಎಂಬ ಮುನಿ 1177ರಲ್ಲಿ ಸಮಾಧಿಮರಣವನ್ನು ಪಡೆದಂತೆ ಹೇಳಿದೆ. ಅವನಿಗಿಂತ ಹಿಂದಿನ ಗುರುಪರಂಪರೆಯಲ್ಲಿ ದೇವೇಂದ್ರಸೈದ್ಧಾಂತಿಕರು ಎಂಟನೆಯವರಾಗುವುದರಿಂದ ಅವರ ಕಾಲ ಸುಮಾರು ಹತ್ತನೆಯ ಶತಮಾನದ ಮಧ್ಯಭಾಗವಾಗುತ್ತದೆ. ಆದ್ದರಿಂದ ಶಾಸನೋಕ್ತ ದೇವೇಂದ್ರಸೈದ್ಧಾಂತಿಕರೂ ಪಂಪನ ಗುರುಗಳೂ ಬಹುಶಃ ಅಭಿನ್ನರೆಂದು ಹೇಳಬಹುದು.

ಆ ಶಾಸನದ ಪ್ರಕಾರ ದೇವೇಂದ್ರಮುನಿಗಳು ಗುಣನಂದಿ ಪಂಡಿತರ ಶಿಷ್ಯರು. ಗುಣನಂದಿಪಂಡಿತರಿಗೆ ಶಾಸ್ತ್ರಾಬ್ಧಿಪಾರಂಗತರಾದ ಮುನ್ನೂರು ಜನ ಶಿಷ್ಯರಿದ್ದರು. ಅವರಲ್ಲಿ ಶಾಸ್ತ್ರಾರ್ಥವ್ಯಾಖ್ಯಾನದಲ್ಲಿ ಪಟುಗಳಾಗಿದ್ದ ಉತ್ಕೃಷ್ಟತಮ ವಿದ್ವಾಂಸರು ಎಪ್ಪತ್ತೆರಡು ಜನ. ಆ ಎಪ್ಪತ್ತೆರಡು ಜನರಲ್ಲಿ ದೇವೆಂದ್ರಮುನಿ ಅತ್ಯಂತ ಪ್ರಸಿದ್ಧರಾದರು. ಆ ದೇವೇಂದ್ರಮುನಿಯನ್ನು ಶಾಸನ ಹೀಗೆ ಹೊಗಳಿದೆ:

ಅಜನಿಮಹಿಪಚೂಡಾರತ್ನರಾರಾಜಿತಾಂಘ್ರಿಃ

ವಿಜಿತಮಕರಕೇತೂದಂಡದೋರ್ದಂಡಗರ್ವಃ

ಕುನಯನಿಕರ ಭೂಧ್ರಾನೀಕದಂಭೋಳಿದಂಡಃ

ಸಜಯತು ವಿಬುಧೇಂದ್ರೋ ಭಾರತೀಭಾಳಪಟ್ಟಃ

ದೇವೇಂದ್ರಮುನಿಗಳು ರಾಜಗುರುಗಳೂ ಮಹಾವಿದ್ವಾಂಸರೂ ಆಗಿದ್ದರು. ಅವರ ಬಿರುದುಗಳಲ್ಲಿ ಭಾರತೀಭಾಳಪಟ್ಟ ಎಂಬುದನ್ನು ಗಮನಿಸಬೇಕು. ಅವರು ಭಾರತೀಭಾಳಪಟ್ಟರಾದರೆ ಅವರ ಶಿಷ್ಯ ಪಂಪ ಸರಸ್ವತೀಮಣಿಹಾರ, ಗುರುಗಳಿಗೆ ತಕ್ಕ ಶಿಷ್ಯ. ಕರ್ನಾಟಕಕ್ಕೆ ಮಹಾಕವಿಯೊಬ್ಬನನ್ನು ದಯಪಾಲಿಸಿದ ಅಪೂರ್ವ ಶ್ರೇಯಸ್ಸು ದೇವೇಂದ್ರಮುನಿಗಳದು. (ಎಂ.ಸಿ.)

**ದೇವೇಗೌಡ, ಹೆಚ್.ಡಿ.:** 1933- . ಭಾರತ ಗಣರಾಜ್ಯದ ಮಾಜಿ ಪ್ರಧಾನ ಮಂತ್ರಿ (ಜೂನ್ 1ರಿಂದ 1997 ಏಪ್ರಿಲ್ 11). ಕರ್ನಾಟಕ ರಾಜ್ಯದ ಮಾಜಿ ಮುಖ್ಯಮಂತ್ರಿ (1994-96). ಜಾತ್ಯಾತೀತ ಜನತಾ ದಳದ ರಾಷ್ಟ್ರೀಯ ಅಧ್ಯಕ್ಷರು.

ಹರದನಹಳ್ಳಿ ದೊಡ್ಡೇಗೌಡ ದೇವೇಗೌಡ ಇವರ ಪೂರ್ಣ ಹೆಸರು. ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕಿನ ಹರದನಹಳ್ಳಿಯಲ್ಲಿ 1933 ಮೇ 18ರಂದು ಜನಿಸಿದರು. ತಂದೆ ದೊಡ್ಡೇಗೌಡ, ತಾಯಿ ಲಕ್ಷ್ಮೀದೇವಮ್ಮ. ಇವರ ಪ್ರಾಥಮಿಕ ವಿದ್ಯಾಭ್ಯಾಸ ಹರದನಹಳ್ಳಿಯಲ್ಲೂ ಮಾಧ್ಯಮಿಕ ಶಿಕ್ಷಣ ಸಮೀಪದ ಹಳೇಕೋಟೆಯಲ್ಲೂ ನಡೆಯಿತು. ಸಾಮಾನ್ಯ ಕೃಷಿ ಕುಟುಂಬದಲ್ಲಿ ಹುಟ್ಟಿದ ಇವರು ಬಾಲ್ಯದಿಂದಲೂ ದನ ಮೇಯಿಸುವ ಕೆಲಸದಿಂದ ಹಿಡಿದು ಬೇಸಾಯದ ಕೆಲಸದವರೆಗೆ ತಮ್ಮ ಕುಲಕಸಬಿನ ಅನುಭವ ಪಡೆದರು. ಪ್ರೌಢಶಾಲಾ ಅಭ್ಯಾಸಕ್ಕಾಗಿ ಹೊಳೆನರಸೀಪುರಕ್ಕೆ ಬಂದರು. ಆಗ ಸ್ವಾತಂತ್ರ್ಯ ಚಳವಳಿ ಬಿರುಸಾಗಿ ಸಾಗಿದ್ದ ಕಾಲ. ಮೆರವಣಿಗೆಗಳಲ್ಲಿ ಬಾವುಟವಿಡಿದು ಚಳವಳಿಯಲ್ಲಿ ಪಾಲ್ಗೊಂಡರು. ವೃತ್ತಿ ಶಿಕ್ಷಣ ಪಡೆದು ಸ್ವತಂತ್ರ ಜೀವನ ನಡೆಸಬೇಕೆಂಬ ಹಂಬಲದಿಂದ ಹಾಸನದ ಪಾಲಿಟೆಕ್ನಿಕ್‌ನಲ್ಲಿ ಸಿವಿಲ್‌ಎಂಜಿನಿಯರಿಂಗ್ ಡಿಪ್ಲೊಮಾ ಶಿಕ್ಷಣ ಮುಗಿಸಿದರು (1953). ಆ ಹೊತ್ತಿಗೆ ಇವರಿಗೆ ಸರ್ಕಾರಿ ನೌಕರಿ ದೊರಕಿಸಿಕೊಳ್ಳುವುದು ಕಷ್ಟವಾಗಿರಲಿಲ್ಲ. ಆದರೆ ಅದಕ್ಕೆ ಮನಸ್ಸು ಕೊಡದೆ ಗುತ್ತಿಗೆ ಕಾಮಗಾರಿಗಳನ್ನು ಮಾಡಿಸುತ್ತ ಸಾರ್ವಜನಿಕ ಜೀವನದ ಪರಿಚಯ ಮಾಡಿಕೊಂಡರು. ಇದೇ ಅವಧಿಯಲ್ಲಿ ಹಾಸನ ತಾಲ್ಲೂಕು ಮುತ್ತಿಗೆಹಳ್ಳಿ ಪಟೇಲ್ ದೇವೇಗೌಡರ ಮಗಳು ಚೆನ್ನಮ್ಮನವರನ್ನು ಮದುವೆಯಾದರು (1954).

ಸ್ವಾತಂತ್ರ್ಯ ಚಳವಳಿಯ ಕಾಲದಿಂದಲೂ ತಮಗೆ ಆದರ್ಶವಾಗಿದ್ದ ಎ.ಜಿ.ರಾಮಚಂದ್ರರಾಯರ ಅನುಯಾಯಿಗಳಾದರು. ಆಗ ರಾಮಚಂದ್ರರಾಯರು ರಾಜ್ಯ ಸಚಿವ ಸಂಪುಟದ ಸದಸ್ಯರಾಗಿದ್ದು ಇವರನ್ನು ಪ್ರೋತ್ಸಾಹಿಸಿದರು. 1960ರಲ್ಲಿ ಗೌಡರು ತಾಲ್ಲೂಕು ಅಭಿವೃದ್ಧಿ ಮಂಡಳಿ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಿ ಜಯ ಪಡೆದರು (1960). 1962ರ ಸಾರ್ವತ್ರಿಕ ಚುನಾವಣೆಯ ಸಂದರ್ಭದಲ್ಲಿ ರಾಮಚಂದ್ರರಾಯರ ಬೆಂಬಲದಿಂದ ವಿಧಾನಸಭೆಗೆ ಕಾಂಗ್ರೆಸ್ ಟಿಕೆಟ್ ಪಡೆಯಲು ಪ್ರಯತ್ನಿಸಿದರೂ ಸಫಲರಾಗಲಿಲ್ಲ. ಸ್ವತಂತ್ರ್ಯ ಅಭ್ಯರ್ಥಿಯಾಗಿ ಸ್ಪರ್ಧಿಸಿ ಚುನಾಯಿತರಾದರು. 1967ರ ಚುನಾವಣೆಯಲ್ಲಿ ಸ್ವತಂತ್ರರಾಗಿ ಸ್ಪರ್ಧಿಸಿ ವಿಧಾನ ಸಭೆಗೆ ಮರು ಆಯ್ಕೆಯಾದರು. ನೀರಾವರಿ ಸೌಲಭ್ಯ ಒದಗಿಸಿದಾಗಲೇ ರೈತರ ಮತ್ತು ಗ್ರಾಮೀಣ ಜೀವನದ ಪ್ರಗತಿ ಸಾಧ್ಯವೆಂದು ನಂಬಿದ್ದ ಇವರು ತಮ್ಮ ಕ್ಷೇತ್ರದ ಅಭಿವೃದ್ಧಿಗೆ ಹೆಚ್ಚಿನ ಗಮನ ಹರಿಸಿದರು. ಹೇಮಾವತಿ ಜಲಾಶಯ ನಿರ್ಮಾಣಕ್ಕೆ ಸರ್ಕಾರವನ್ನು ಒಡಂಬಡಿಸಿದರು. ಆಗ ಮುಖ್ಯಮಂತ್ರಿಗಳಾಗಿದ್ದ ಡಿ.ವೀರೇಂದ್ರಪಾಟೀಲರು ಇವರನ್ನು ಕಾಂಗ್ರೆಸ್ ಪಕ್ಷದ ತೆಕ್ಕೆಗೆ ತೆಗೆದುಕೊಂಡು ಇವರಿಗೆ ಹೊಸ ರಾಜಕೀಯ ಆಯಾಮ ನೀಡಿದರು. ವಿಧಾನ ಸಭೆಯ ಒಳಹೊರಗೆ ಗೌಡರು ರೈತಪರ ಮತ್ತು ಗ್ರಾಮೀಣರಜನರ ಹೋರಾಟ ನಡೆಸಿದರು. ಕಾಂಗ್ರೆಸ್ ಪಕ್ಷ ಇಬ್ಭಾಗವಾದಾಗ ಇವರು ಎಸ್.ನಿಜಲಿಂಗಪ್ಪನರ ನೇತೃತ್ವದ ಸಂಸ್ಥಾ ಕಾಂಗ್ರೆಸ್‌ನ್ನು ಬೆಂಬಲಿಸಿದರು.

ಇಂದಿರಾ ಗಾಂಧಿಯವರ ನೇತೃತ್ವದ ಆಡಳಿತ ಕಾಂಗ್ರೆಸ್ 1971ರ ಲೋಕಸಭಾ ಚುನಾವಣೆಯಲ್ಲಿ ಪ್ರಚಂಡ ಬಹುಮತ ಗಳಿಸಿ ಕೇಂದ್ರದಲ್ಲಿ ಅಧಿಕಾರಕ್ಕೆ ಬಂತು. 1972ರಲ್ಲಿ ನಡೆದ ವಿಧಾನಸಭಾ ಚುನಾವಣೆಗೆ ಆಡಳಿತ ಕಾಂಗ್ರೆಸ್ ವಿರುದ್ಧ ಸ್ಪರ್ಧಿಸಲು ವಿರೋಧ ಪಕ್ಷಗಳ ರಾಜಕೀಯ ಮುಖಂಡರು ಹಿಂಜರಿಯುವ ಸ್ಥಿತಿ ನಿರ್ಮಾಣವಾಯಿತು. ಇಂಥ ರಾಜಕೀಯ ಬಿರುಗಾಳಿಯ ವಿರುದ್ಧ ಸ್ಪರ್ಧಿಸಿದ ದೇವೇಗೌಡರು ಹೊಳೆನರಸೀಪುರ ಕ್ಷೇತ್ರದಿಂದ ಚುನಾಯಿತರಾದರು. 1975ರಲ್ಲಿ ಭಾರತದಲ್ಲಿ ತುರ್ತು ಪರಿಸ್ಥಿತಿ ಹೇರಿದಾಗ ಅದರ ವಿರುದ್ಧ ಪ್ರತಿಭಟಿಸಿ ಗೌಡರು ಸೆರೆವಾಸ ಅನುಭವಿಸಿದರು. ಅನಂತರ 1977ರಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಕೇಂದ್ರದಲ್ಲಿ ಕಾಂಗ್ರೆಸ್ ಸೋತರೂ ರಾಜ್ಯದಲ್ಲಿ ಸಾಕಷ್ಟು ಅಧಿಕ ಸ್ಥಾನಗಳಲ್ಲಿ ಗೆಲವು ಸಾಧಿಸಿತು. ಆಗ ಮುಖ್ಯಮಂತ್ರಿಗಳಾಗಿದ್ದ ಡಿ. ದೇವರಾಜ ಅರಸರ ಪ್ರಗತಿಪರ ಕಾರ್ಯಗಳು ರಾಜ್ಯದಲ್ಲಿ ಕಾಂಗ್ರೆಸ್ ಜನಪ್ರಿಯವಾಗಲು ಕಾರಣವಾಗಿದ್ದವು. 1978ರ ವಿಧಾನಸಭಾ ಚುನಾವಣೆಯ ಕಾಲಕ್ಕೆ ಅಸ್ತಿತ್ವಕ್ಕೆ ಬಂದಿದ್ದ ಜನತಾ ಪಕ್ಷದ ರಾಜ್ಯ ಮಟ್ಟದ ಅಧ್ಯಕ್ಷ ಸ್ಥಾನಕ್ಕೆ ದೇವೇಗೌಡರೇ ಆಯ್ಕೆಯಾದರು. ಇವರು ಚುನಾವಣೆಯನ್ನು ಎದುರಿಸಿ, ತಾವೂ ಚುನಾಯಿತರಾಗಿ ಪಕ್ಷಕ್ಕೆ 65 ಸ್ಥಾನಗಳನ್ನು ಗಳಿಸಿಕೊಟ್ಟರು. ಆಗ ಆಡಳಿತ ಪಕ್ಷದೊಂದಿಗೆ ತೀವ್ರ ನಿಷ್ಠುರ ಕಟ್ಟಿಕೊಳ್ಳದೆ ತಮ್ಮ ಕ್ಷೇತ್ರದ, ಜಿಲ್ಲೆಯ ಮತ್ತು ರಾಜ್ಯದ ಅಭಿವೃದ್ಧಿ ಕಾರ್ಯಗಳನ್ನು ಆಗ ಮಾಡುವ ಕಾರ್ಯನೀತಿ ಅನುಸರಿಸಿದರು.

1983ರ ವಿಧಾನಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಸೋತು ಜನತಾ ಪಕ್ಷ ಮತ್ತು ಕ್ರಾಂತಿರಂಗಗಳ ಒಕ್ಕೂಟದ ಇನ್ನಿತರರ ಬೆಂಬಲದೊಂದಿಗೆ ಸರ್ಕಾರ ರಾಜ್ಯದಲ್ಲಿ ಅಧಿಕಾರಕ್ಕೆ ಬಂತು. ಆಗ ಮುಖ್ಯಮಂತ್ರಿ ಸ್ಥಾನದಿಂದ ಸ್ವಲ್ಪದರಲ್ಲಿ ವಂಚಿತರಾದ ಗೌಡರು ರಾಮಕೃಷ್ಣ ಹೆಗಡೆಯವರ ಸರ್ಕಾರದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಸಚಿವರಾದರು. ಆಗ ನೀರಾವರಿ ಕಾಮಗಾರಿಗಳು ಮತ್ತು ಗ್ರಾಮೀಣ ರಸ್ತೆಗಳ ಅಭಿವೃದ್ಧಿಗೆ ವಿಶೇಷ ಗಮನ ನೀಡಿದರು. 1985ರಲ್ಲಿ ಉಪಚುನಾವಣೆ ನಡೆದು ಜನತಾ ಪಕ್ಷ ಪೂರ್ಣ ಬಹುಮತದಿಂದ ಅಧಿಕಾರಕ್ಕೆ ಬಂದಾಗಲೂ ಗೌಡರು ಇದೇ ಖಾತೆಗಳಲ್ಲಿ ಮುಂದುವರಿದರು. ಹೇಮಾವತಿ ಜಲಾಶಯದ ನಾಲೆಗಳ ನಿರ್ಮಾಣದ ಕಾರ್ಯ ಇವರ ಕಾಲದಲ್ಲಿ ತ್ವರಿಗೊಂಡಿತು. ಜನತಾದಳ ಪಕ್ಷದಲ್ಲಿ ಆಂತರಿಕ ಒಡಕುಂಟಾಗಿ ಎರಡು ಬಣಗಳಾಗಿ 1989ರ ವಿಧಾನಸಭಾ ಚುನಾವಣೆಯನ್ನು ಎದುರಿಸಬೇಕಾಯಿತು. ಆಗ ಎಲ್ಲರಿಗೂ ಅಘಾತಕರವಾಗುವ ಫಲಿತಾಂಶಗಳು ಬಂದವು. ಗೌಡರೂ ಅದಕ್ಕೆ ಹೊರತಾಗಿಲಿಲ್ಲ. ಇವರು ಸಮಾಜವಾದಿ

ಜನತಾದಳದ ನೇತಾರರಾಗಿ ಮುಂದುವರಿದರು. ತರುವಾಯ 1991ರಲ್ಲಿ ನಡೆದ ಹಾಸನ ಲೋಕಸಭಾ ಕ್ಷೇತ್ರದ ಉಪಚುನಾವಣೆಯಲ್ಲಿ ಎರಡೂ ಬಣಗಳ ಬೆಂಬಲದಿಂದ ಸ್ಪರ್ಧಿಸಿದ ಗೌಡರು ಲೋಕಸಭೆ ಪ್ರವೇಶಿಸಿದರು. ಲೋಕಸಭೆಯಲ್ಲಿ ಇವರು ನೀರಾವರಿ ಮತ್ತು ಗ್ರಾಮೀಣ ಸಮಸ್ಯೆಗಳ ಬಗ್ಗೆ ಸರ್ಕಾರ ಮತ್ತು ಇತರ ಸದಸ್ಯರ ಗಮನ ಸೆಳೆದರು.

1993ರಲ್ಲಿ ಮತ್ತೆ ಎರಡೂ ಬಣಗಳೂ ಒಂದಾದವು. ಆಗ ಇವರು ರಾಜ್ಯ ಜನತಾದಳದ ಅಧ್ಯಕ್ಷರಾದರು. ಇವರ ನೇತೃತ್ವದಲ್ಲಿ 1994ರ ವಿಧಾನಸಭಾ ಚುನಾವಣೆಯಲ್ಲಿ ಇವರ ಪಕ್ಷ 116 ಸ್ಥಾನಗಳನ್ನು ಪಡೆಯಿತು. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮನಗರ ಕ್ಷೇತ್ರದಿಂದ ಸ್ಪರ್ಧಿಸಿ ಚುನಾಯಿತರಾದ ಗೌಡರು ಮುಖ್ಯಮಂತ್ರಿಯಾಗಿ ಆಯ್ಕೆಯಾದರು. ಮುಖ್ಯಮಂತ್ರಿಯಾಗಿ ಸಮಸ್ಯೆಗಳ ಪರಿಹಾರಕ್ಕೆ ತಾವೇ ಜನತೆಯ ಬಳಿಗೆ ಹೋದರು. ಈ ಕಾರ್ಯಕ್ರಮ ಜನತಾ ದರ್ಶನವೆಂದು ಜನಪ್ರಿಯವಾಯಿತು. ಗೌಡರು ತಮ್ಮ ಅಧಿಕಾರಾವಧಿಯಲ್ಲಿ ಅನೇಕ ಪ್ರಗತಿಪರ ಕಾರ್ಯಗಳನ್ನು ಆಗ ಮಾಡಿದರು. ಕಗ್ಗಂಟಾಗಿದ್ದ ಹುಬ್ಬಳ್ಳಿಯ ಈದ್ಗಾ ಮೈದಾನದ ವಿದಾನವನ್ನು ಬಗೆಹರಿಸಿ ಕೋಮು ಸೌಹಾರ್ದ ಸಾಧಿಸಿದ ಕೀರ್ತಿಗೆ ಪಾತ್ರರಾದರು (1995). ಗ್ರಾಮೀಣ ಪ್ರತಿಭಾವಂತ ವಿದ್ಯಾರ್ಥಿಗಳಿಗಾಗಿ ಮೊರಾರ್ಜಿ ವಸತಿ ಶಾಲೆಗಳ ಸ್ಥಾಪನೆಗೆ ಪ್ರಾಶಸ್ತ್ಯ ನೀಡಲಾಯಿತು. ರೈತರ ಸುಸ್ತಿ ಬಡ್ಡಿ ಮನ್ನಾಕ್ಕೆ ಕ್ರಮಕೈಗೊಳ್ಳಲಾಯಿತು. ಅನೇಕ ವಿದ್ಯುತ್ ಉತ್ಪಾದನಾ ಘಟಕಗಳು ಅನುಷ್ಠಾನಗೊಳ್ಳತೊಡಗಿದವು. ಹಾಸನ ನಗರದ ಕೈಗಾರಿಕಾಭಿವೃದ್ಧಿ ಪ್ರದೇಶ ಹೆಚ್ಚಿನ ಉತ್ತೇಜನ ಪಡೆಯಿತು. ವೈಟ್‌ಫೀಲ್ಡ್‌ನಲ್ಲಿ ಕಂಪ್ಯೂಟರ್ ಉದ್ಯಮ ಜಾಲ ನಿರ್ಮಿಸಲು ಯೋಜನೆ ಸಿದ್ಧವಾಯಿತು. ಅಂದಿನ ಪ್ರಧಾನಿ ಪಿ.ವಿ.ನರಸಿಂಹರಾವ್ ಅವರು ಆರ್ಥಿಕ ಉದಾರೀಕರಣದ ಬಗ್ಗೆ ಹೆಚ್ಚಿನ ಒಲವು ತೋರಿದ್ದರು. ಅದಕ್ಕೆ ಪೂರಕಾಗಿ ಗೌಡರು ದಾವೋಸ್‌ಗೆ ತೆರಳಿ ಅಂತಾರಾಷ್ಟ್ರೀಯ ಮುಕ್ತ ವಾಣಿಜ್ಯ ಸಮ್ಮೇಳನದಲ್ಲಿ ಭಾಗವಹಿಸಿ ಜಾಗತೀಕರಣ ಪ್ರಕ್ರಿಯೆಗೆ ಬೆಂಬಲ ಸೂಚಿಸಿದರು. ಕೃಷಿ ಕ್ಷೇತ್ರವೂ ಉದ್ಯಮದಂತೆ ಬೆಳೆಯಬೇಕೆಂದು ಅನೇಕ ಭೂಮಿತಿ ನಿರ್ಬಂಧಗಳನ್ನು ಸಡಿಲಗೊಳಿಸಿದರು.

ಹೀಗಿರುವಲ್ಲಿ 1996ರ ಲೋಕಸಭಾ ಚುನಾವಣೆಯಲ್ಲಿ ಯಾವ ಪಕ್ಷಕ್ಕೂ ಸ್ಪಷ್ಟ ಬಹುಮತ ಬರಲಿಲ್ಲ. ಬಿಜೆಪಿ ಪಕ್ಷ ಸರ್ಕಾರ ರಚಿಸಿದರೂ ಬಹುಮತ ದೊರೆಯಲಿಲ್ಲ. ಆಗ ಕಾಂಗ್ರೆಸ್ ಮತ್ತು ಬಿಜೆಪಿ ಪಕ್ಷಗಳಿಂದ ಹೊರತಾದ ತೃತೀಯ ರಂಗದ ಪಕ್ಷಗಳ ಸದಸ್ಯರು ಗಣನೀಯ ಸಂಖ್ಯೆಯಲ್ಲಿ ಲೋಕಸಭೆಗೆ ಆರಿಸಿ ಬಂದಿದ್ದರು. ಈ ಹದಿಮೂರು ತುಂಡು ಪಕ್ಷಗಳಿಗೆ ಒಕ್ಕೂಟದ ಒಬ್ಬ ನಾಯಕನನ್ನು ಆರಿಸುವುದು ಪ್ರಯಾಸದ ಕೆಲಸವಾಗಿತ್ತು. ಅಂತಿಮವಾಗಿ ದೇವೇಗೌಡರು ಆಯ್ಕೆಯಾದರು. 1996 ಜೂನ್ 1ರಂದು ರಾಷ್ಟ್ರದ 12ನೆಯ ಪ್ರಧಾನಿಯಾಗಿ ಅಧಿಕಾರ ವಹಿಸಿಕೊಂಡರು. ಇವರಿಗೆ ರಾಷ್ಟ್ರೀಯ ಕಾಂಗ್ರೆಸ್ ಪಕ್ಷ ಬೆಂಬಲ ನೀಡಿತು. ಇವರು ತಮ್ಮ ಸು. ಹನ್ನೊಂದು ತಿಂಗಳ ಅಧಿಕಾರಾವಧಿಯಲ್ಲಿ ಜನತೆಯ ಹತ್ತಿರಕ್ಕೆ ಅಧಿಕಾರವನ್ನು ಕೊಂಡೊಯ್ಯಲು ಸಾಧ್ಯವಿದ್ದಷ್ಟು ಪ್ರಯತ್ನಿಸಿದರು. ವಿದೇಶಗಳಿಗೆ ಭೇಟಿ ನೀಡಿ ಅನೇಕ ವಿಚಾರಗಳಲ್ಲಿ ಭಾರತದ ಬಗ್ಗೆ ಒಲು ಮೂಡಿಸುವ ಕೆಲಸ ಮಾಡಿದರು. ತಮ್ಮ ಪಾರಂಪರಿಕ ಉಡುಪಿನಲ್ಲೇ ವಿಶ್ವಪರ್ಯಟನೆ ಮಾಡಿ ದೇಸೀಯತೆಯನ್ನು ಮೆರೆದರು. ಸಮಸ್ಯೆಗಳ ಆಗರವಾದ ಜಮ್ಮು ಕಾಶ್ಮೀರ ಮತ್ತು ವಾಯವ್ಯ ಸರಹದ್ದಿಗೆ ಭೇಟಿ ನೀಡಲೂ ಹಿಂಜರಿಯುತ್ತಿದ್ದ ಪ್ರದೇಶಗಳಿಗೆ ಭೇಟಿ ನೀಡಿ ದಾಖಲೆ ಸ್ಥಾಪಿಸಿದರು. ನೈಋತ್ಯ ರೈಲ್ವೆ ವಿಭಾಗ ರಚಿಸಿ ಕರ್ನಾಟಕದ ರೈಲು ವ್ಯವಸ್ಥೆಗೆ ಹೆಚ್ಚಿನ ಸೌಲಭ್ಯಗಳನ್ನು ಕಲ್ಪಿಸಿದರು. ಕೃಷ್ಣಾ ಮೇಲ್ದಂಡೆ ಯೋಜನೆಗೆ ದೊಡ್ಡ ಮೊತ್ತದ ಹಣ ಬಿಡುಗಡೆ ಮಾಡಿದರು. ಭದ್ರಾವತಿ ಉಕ್ಕಿನ ಕಾರ್ಖಾನೆಯನ್ನು ಭಾರತದ ಉಕ್ಕು ಪ್ರಾಧಿಕಾರಕ್ಕೆ ವಹಿಸಿ ಅದಕ್ಕೆ ಪುನಶ್ಚೇತನ ನೀಡಿದರು. ಆದರೆ ಕಾಂಗ್ರೆಸ್ ಪಕ್ಷ ಇವರ ನಾಯಕತ್ವಕ್ಕೆ ತನ್ನ ಬೆಂಬಲ ಹಿಂದಕ್ಕೆ ಪಡೆದದ್ದರಿಂದ ಇವರು ಪ್ರಧಾನಿ ಹುದ್ದೆಯನ್ನು ತೊರೆಯಬೇಕಾಯಿತು. ಲೋಕಸಭೆಯಲ್ಲಿ ಇವರ ನೇತೃತ್ವದ ಸರ್ಕಾರದ ವಿರುದ್ಧ ಅವಿಶ್ವಾಸ ನಿರ್ಣಯ ಮಂಡನೆಯಾಯಿತು. ಇದರ ಚರ್ಚೆಯ ಕಾಲದಲ್ಲಿ 1997 ಏಪ್ರಿಲ್ 11ರಂದು ದೇವೇಗೌಡರು ಮಾಡಿದ ಭಾಷಣ ಅತ್ಯಂತ ನಿರ್ಭೀತವೂ ಆತ್ಮವಿಶ್ವಾಸದಿಂದ ಕೂಡಿದುದೂ ಆಗಿತ್ತು. ಈ ಭಾಷಣ ಶ್ಲಾಘನೆಗೆ ಪಾತ್ರವಾಯಿತು.

ಅನಂತರ ಇವರು 1997ರಲ್ಲಿ ನಡೆಯ ಲೋಕಸಭೆ ಮಧ್ಯಂತರ ಚುನಾವಣೆಯಲ್ಲಿ ಹಾಸನ ಕ್ಷೇತ್ರದಿಂದ ಸ್ಪರ್ಧಿಸಿ ಮರು ಆಯ್ಕೆಗೊಂಡರು. ಈ ಸಂದರ್ಭದಲ್ಲಿ ಬಿಜೆಪಿ ಪಕ್ಷ ತನ್ನ ಮಿತ್ರಪಕ್ಷಗಳ ಬೆಂಬಲದಿಂದ ಕೇಂದ್ರದಲ್ಲಿ ಸರ್ಕಾರ ರಚಿಸಿತು. ಅನಂತರ ನಡೆದ ಲೋಕಸಭಾ ಚುನಾವಣೆಯಲ್ಲಿ (1999) ಗೌಡರೂ ಸೇರಿದಂತೆ ಇವರ ಜಾತ್ಯಾತೀತ ಜನತಾದಳ ಪಕ್ಷ ಹಿಂದೆ ಬಿತ್ತು. ಆದರೆ ದೇವೇಗೌಡರು ಎದೆಗುಂದದೆ ಆ ಪಕ್ಷದ ರಾಷ್ಟ್ರೀಯ ಅಧ್ಯಕ್ಷರಾಗಿ ಮುಂದುವರಿದರು. 2002ರಲ್ಲಿ ಕನಕಪುರ ಲೋಕಸಭಾ ಕ್ಷೇತ್ರಕ್ಕೆ ನಡೆದ ಉಪಚುನಾವಣೆಯಲ್ಲಿ (2002) ಇವರು ಲೋಕಸಭೆಗೆ ಚುನಾಯಿತರಾದರು. 2004ರಲ್ಲಿ ಲೋಕಸಭೆ ಮತ್ತು ವಿಧಾನಸಭೆಗಳಿಗೆ ಒಟ್ಟಿಗೆ ಚುನಾವಣೆ ನಡೆದಾಗ ಇವರ ಪಕ್ಷ ಕರ್ನಾಟಕದೆರಡು ಸ್ಥಾನಗಳೂ ಸೇರಿದಂತೆ ಒಟ್ಟು ನಾಲ್ಕು ಸ್ಥಾನಗಳನ್ನು ಲೋಕಸಭೆಯಲ್ಲಿ ಪಡೆಯಿತು; ವಿಧಾನ ಸಭೆಯಲ್ಲಿ 58 ಸ್ಥಾನಗಳನ್ನು ಪಡೆಯಿತು. ಹಾಸನ ಕ್ಷೇತ್ರದಿಂದ ಗೌಡರು ಲೋಕಸಭೆಗೆ ಚುನಾಯಿತರಾದರು. ದೇವೇಗೌಡರು ನೇತೃತ್ವದ ಜಾತ್ಯಾತೀತ ಪಕ್ಷ ಕಾಂಗ್ರೆಸ್‌ನೊಂದಿಗೆ ಸೇರಿ ಕರ್ನಾಟಕದಲ್ಲಿ ಸಮ್ಮಿಶ್ರ ಸರ್ಕಾರವನ್ನು ರಚಿಸಿತು.

ದೇವೇಗೌಡರು ವೃತ್ತಿ ರಾಜಕಾರಣಿ. ಇವರ ಬದುಕು ರಾಜಕೀಯದೊಂದಿಗೆ ಬೆಸೆದುಕೊಂಡಿದೆ. ಇವರ ಪತ್ನಿ ಚೆನ್ನಮ್ಮ. ಇವರ ಇಬ್ಬರು ಪುತ್ರರಾದ ಎಚ್.ಡಿ.ರೇವಣ್ಣ ಮತ್ತು ಎಚ್.ಡಿ.ಕುಮಾರ್‌ಸ್ವಾಮಿ ಶಾಸನಕರಾಗಿ ವಿಧಾನಸಭೆ ಪ್ರವೇಶಿಸಿದ್ದಾರೆ. ಕುಮಾರಸ್ವಾಮಿಯವರು ಲೋಕಸಭಾ ಸದಸ್ಯರೂ ಆಗಿದ್ದರು. ರೇವಣ್ಣನವರು ಎರಡನೆಯ ಬಾರಿಗೆ ರಾಜ್ಯದಲ್ಲಿ ಸಚಿವರಾಗಿದ್ದಾರೆ. ದೇವೇಗೌಡರು ಈಗಲೂ ರಾಷ್ಟ್ರ ರಾಜಕಾರಣದಲ್ಲಿ ಗುರುತಿಸಬಹುದಾದ ಶಕ್ತಿಯಾಗಿದ್ದಾರೆ. ರಾಮಕೃಷ್ಣ ಹೆಗಡೆಯವನ್ನು ಬಿಟ್ಟರೆ ಇದುವರೆಗೂ ಇತರರಿಗೆ ಸಾಧ್ಯವಾಗಿರದ ವ್ಯಕ್ತಿಪ್ರಧಾನ ನೆಲೆಯಲ್ಲಿ ಪಕ್ಷದ ಸಂಘಟನೆ ಮಾಡಿದ ಹೆಗ್ಗಳಿಕೆ ಗೌಡರಿಗೆ ಸಲ್ಲುತ್ತದೆ. ಕರ್ನಾಟಕ ಕಂಡ ಅಪರೂಪದ ರಾಜಕಾರಣಿಗಳ ಸಾಲಿನಲ್ಲಿ ದೇವೆಗೌಡರ ಹೆಸರು ಅಗ್ರ ಪಂಕ್ತಿಯದು.

**ದೇಶಪಾಂಡೆ, ರಾಮಚಂದ್ರ ಹಣಮಂತರಾವ್ :** 1861-1931. ಶಿಕ್ಷಣವೇತ್ತ, ಗ್ರಂಥಕರ್ತ ಮತ್ತು ಕನ್ನಡ ಚಳವಳಿಯ ಸಂಘಟಕ.

ಇವರು ಧಾರವಾಡ ಜಿಲ್ಲೆ ನರೇಂದ್ರದಲ್ಲಿ 1861 ಮಾರ್ಚ್ 21ರಂದು ಜನಿಸಿದರು. ತಂದೆ ವತನದಾರ ಮನೆತನದ ಹಣಮಂತರಾವ್ ದೇಶಪಾಂಡೆ, ಪ್ರತಿಭಾಶಾಲಿ ವಿದ್ಯಾರ್ಥಿಯೆನಿಸಿ ಧಾರವಾಡ, ಪುಣೆಗಳಲ್ಲಿ ಓದಿ ಶ್ರೇಷ್ಠ ದರ್ಜೆಯಲ್ಲಿ ಎಂ. ಎ. ಪಾಸಾದರು. ಅಲ್ಲಿ ರಾಬರ್ಟ್‌ಸನ್ ಸುವರ್ಣಪದಕ ಮತ್ತು 1000 ರೂಪಾಯಿ ಬಹುಮಾನ ಪಡೆದರು. ಮುಂಬಯಿ ಕರ್ನಾಟಕ ಭಾಗದಿಂದ ಎಂ. ಎ. ಮಾಡಿದವರಲ್ಲಿ ಮೊದಲಿಗರಾದ್ದರಿಂದ ಇವರಿಗೆ ಎಂ. ಎ. ದೇಶಪಾಂಡೆ ಎಂಬ ಅಡ್ಡಹೆಸರೂ ಬಿದ್ದಿತ್ತು. ಕಾನೂನು ಪದವಿಗಾಗಿ ಮುಂದೆ ಓದಬೇಕೆಂದಿದ್ದ ಇವರು ರಸೆಲ್ ಎಂಬ ಶಿಕ್ಷಣಾಧಿಕಾರಿಯ ಪ್ರೇರಣೆಯಿಂದ ಅದನ್ನು ಬಿಟ್ಟು, ಶಿಕ್ಷಣವಿಚಾರದಲ್ಲಿ ಹಿಂದೆ ಬಿದ್ದಿದ್ದ ಕನ್ನಡ ಪ್ರದೇಶದಲ್ಲಿ ಸೇವೆ ಸಲ್ಲಿಸುವ ಧ್ಯೇಯಕ್ಕಾಗಿ ಮುಂಬಯಿ ಸರ್ಕಾರದ ವಿದ್ಯಾ ಇಲಾಖೆ ಸೇರಿದರಲ್ಲದೆ ಬೆಳಗಾಂವಿ, ಕಾರವಾರ, ಧಾರವಾಡಗಳಲ್ಲಿ ಪ್ರೌಢಶಾಲಾ ಉಪಾಧ್ಯಾಯರಾಗಿ ಅನಂತರ ಡೆಪ್ಯುಟಿ ಎಜ್ಯುಕೇಷನಲ್ ಇನ್‌ಸ್ಪೆಕ್ಟರ್, ಮುಖ್ಯೋಪಾಧ್ಯಾಯ, ಶಿಕ್ಷಣ ಕಾಲೇಜು ಅಧ್ಯಾಪಕ ಮೊದಲಾದ ಹುದ್ದೆಗಳನ್ನು ನಿರ್ವಹಿಸಿ 1914ರಲ್ಲಿ ವಿಶ್ರಾಂತರಾದರು.

ದೇಶಪಾಂಡೆಯವರು ಕನ್ನಡಾಭಿಮಾನಗಳಾಗಿದ್ದು ಉತ್ತರ ಕರ್ನಾಟಕ ಭಾಗದಲ್ಲಿ ಕನ್ನಡ ಮತ್ತು ಕನ್ನಡಿಗರ ಹಕ್ಕು ಮತ್ತು ಅಭ್ಯುದಯಕ್ಕಾಗಿ ದುಡಿದ ಮೊದಲಿಗರಲ್ಲಿ ಒಬ್ಬರು. ಮರಾಠಿ ಪ್ರಭಾವ ಪ್ರಬಲವಾಗಿದ್ದು,

ಕನ್ನಡ ಅಸಡ್ಡೆಗೊಳಗಾಗಿದ್ದ ಆ ಕಾಲದಲ್ಲಿ ಕನ್ನಡಿಗರಲ್ಲಿ ಸ್ವಾಭಿಮಾನವನ್ನೂ ಜಾಗೃತಿಯನ್ನೂ ಉಂಟುಮಾಡಲು ಇವರು ಜೀವಮಾನವೆಲ್ಲ ಶ್ರಮಿಸಿದರು. ವಿದ್ಯಾರ್ಥಿಗಳಲ್ಲಿ ಕನ್ನಡದ ಬಗ್ಗೆ ಆಸ್ಥೆಯುಂಟು ಮಾಡಲು ಯತ್ನಿಸಿದರು. ಧಾರವಾಡದ ಸರ್ಕಾರಿ ಪ್ರೌಢಶಾಲೆಯಲ್ಲಿ ವಿದ್ಯಾರ್ಥಿಗಳ ಕನ್ನಡ ವಕ್ತೃತ್ವ ಸ್ಪರ್ಧೆಯನ್ನು ಪ್ರಥಮವಾಗಿ ಯೋಜಿಯಲು ಇವರು ಸ್ವತಃ ಬಹುಮಾನಗಳನ್ನು ನೀಡಿದರು. ಮುದವೀಡು ಕೃಷ್ಣರಾಯರಂಥ ವಾಗ್ಮಿಗಳು ಇವರ ನೇತೃತ್ವದಲ್ಲಿ ತರಬೇತಿ ಪಡೆದರು. ಕನ್ನಡ ಕಾದಬಂರಿಕಾರ ಗಳಗನಾಥರಿಗೆ ತಮ್ಮ ಮನೆಯಲ್ಲಿ ಇವರು ಅನುಕೂಲ ಮಾಡಿಕೊಟ್ಟು ಪುಸ್ತಕ ಬರೆಯಲು ನೆರವಾದರಲ್ಲದೆ, ಅವರ ಪ್ರಬುದ್ಧ ಪದ್ಮನಯನೆ ಕಾದಂಬರಿಯನ್ನು ವಾಗ್ಭೂಷಮ ಪತ್ರಿಕೆಯಲ್ಲಿ ಪ್ರಕಟಿಸಲು ಕಾರಣರಾದರು.

ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ನೋಡಿ ಸ್ಥಾಪಿಸುವಲ್ಲಿ 1890 ಇವರ ಪಾತ್ರ ಪ್ರಮುಖವಾಗಿತ್ತು. ಕನ್ನಡ ಭಾಷೆಯ ದೀನಸ್ಥಿತಿಯನ್ನು ದೂರಮಾಡುವುದಕ್ಕಾಗಿ ಸ್ಥಾಪಿಸಲಾದ ಈ ಸಂಘದ ಗೌರವಕಾರ್ಯದರ್ಶಿಯಾಗಿ ಏಳು ವರ್ಷ (1890-95 ಮತ್ತು 1897) ಮತ್ತು ಉಪಾಧ್ಯಕ್ಷ ಹಾಗು ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಮೂರು ಮೂರು ವರ್ಷ ಕೆಲಸ ಮಾಡಿ ಇವರು ಅದರ ಮುಖ್ಯಚಾಲಕಶಕ್ತಿಯಾಗಿದ್ದರು. ಮುಂಬಯಿ ಕರ್ನಾಟಕ ಶಾಲೆಗಳಲ್ಲಿ ಮರಾಠಿಯ ಬದಲು ಕನ್ನಡಕ್ಕೆ ಸ್ಥಾನ ದೊರಕಿಸುವುದು, ಬ್ರಿಟಿಷ್ ಮತ್ತು ಸಂಸ್ಥಾನಿಕ ಕರ್ನಾಟಕ ಭಾಗಗಳ ಸಾಂಸ್ಕೃತಿಕ ಒಕ್ಕಟ್ಟು, ಲಿಖಿತ ಭಾಷೆಯ ಏಕರೂಪತೆ ಮೊದಲಾದ ಧ್ಯೇಯಗಳಿಗಾಗಿ ಸಂಘದ ಮೂಲಕ ದುಡಿದರು. ಸಂಘಕ್ಕೆ ನಾಡಿನ ಪ್ರಭಾವಶಾಲಿ ವ್ಯಕ್ತಿಗಳನ್ನು, ಆಕರ್ಷಿಸಿದರು. ಕನ್ನಡಕ್ಕಾಗಿ ದುಡಿದ ಕಿಟ್ಟೆಲ್, ಬಿ.ಎಲ್.ರೈಸ್, ಜೀಗ್ಲರ್, ಜಾರ್ಡಿನ್, ಮ್ಯೂರ್ ಮೊದಲಾದ ವಿದೇಶೀಯರ ಸಹಕಾರವನ್ನು ಸಂಘಕ್ಕೆ ದೊರಕಿಸುವಲ್ಲಿ ಯಶಸ್ವಿಯಾದರು.

ಸರ್ಕಾರಿ ಸೇವೆಯಲ್ಲಿರುವಾಗಲೇ ಇವರು ಕನ್ನಡದಲ್ಲಿ ಗ್ರಂಥರಚನೆ ಮಾಡತೊಡಗಿದ್ದರು. ನಿವೃತ್ತರಾದ ಮೇಲೆ, ಆಗ ಮೈಸೂರು ದಿವಾನರಾಗಿದ್ದ ವಿಶ್ವೇಶ್ವರಯ್ಯನವರಿಂದ ಅಲ್ಲಿನ ಶಿಕ್ಷಣಶಾಖೆ ಸೇರಲು ಕರೆ ಬಂದಿದ್ದರೂ ಅದಕ್ಕೆ ಒಪ್ಪದೆ ಕನ್ನಡ ಗ್ರಂಥ ರಚನೆಗೇ ತಮ್ಮ ಸಮಯವನ್ನು ಮೀಸಲಿರಿಸಿದರು. ಇವರು ಕನ್ನಡದಲ್ಲಿ ಬರೆದ 30 ಗ್ರಂಥಗಳಲ್ಲಿ ಇತಿಹಾಸ, ಜೀನವಚರಿತ್ರೆಗಳಿಗೆ ಸಂಬಂಧಿಸಿದವೇ ಹೆಚ್ಚು. ಅವುಗಳಲ್ಲಿ ಕರ್ನಾಟಕ ಸಾಮ್ರಾಜ್ಯ ಎಂಬ ಮೂರು ಭಾಗಗಳ ಇತಿಹಾಸ ಪ್ರಮುಖವಾದದ್ದು. ಅದರ ಮೊದಲಿನ ಎರಡು ಭಾಗಗಳು ಬಾದಾಮಿ ಚಾಳುಕ್ಯರ ವರೆಗಿನ ಇತಿಹಾಸವನ್ನೊಳಗೊಂಡವು 1926ರಲ್ಲಿ ಪ್ರಕಟವಾದವು. ವಿಜಯನಗರ ಕಾಲದ ವರೆಗಿನ ಮೂರನೆಯ ಭಾಗ ಅಪ್ರಕಟಿತವಾಗಿ ಉಳಿಯಿತು. ಛತ್ರಪತಿ ಶಿವಾಜಿ ಮಹಾರಾಜ 1923, ಅಕಬರ ಚರಿತ್ರೆ, ಚೈತನ್ಯ ಚರಿತ್ರ, ಟೀಪುಸುಲ್ತಾನನ ಚರಿತ್ರ, ರಣಜಿತಸಿಂಗನ ಚರಿತ್ರ ಮೊದಲಾದ ಅನೇಕ ಜೀವನಚರಿತ್ರೆಗಳನ್ನೂ ಒಂದೆರಡು ಪಠ್ಯಗಳನ್ನೂ ಇವರು ಬರೆದಿದ್ದರು. ಇವರ ಗ್ರಂಥಗಳ ಶೈಲಿಯಲ್ಲಿ ಕನ್ನಡಿಗರನ್ನು ಹುರಿದುಂಬಿಸುವ ಭಾವನಾಪರತೆ ಎದ್ದು ಕಾಣಿಸುತ್ತದೆ.

ನಿರ್ಭಯ ದೇಶಾಭಿಮಾನಿಗಳೂ ಆಗಿದ್ದರು. ಸ್ವಾತಂತ್ರ್ಯ ಚಳವಳಿ ಬಗ್ಗೆ ಇವರಿಗಿದ್ದ ಒಲವಿನ ವರದಿಗಳು ಸರ್ಕಾರಕ್ಕೆ ಹೋಯಿತಾಗಿ ಇವರಿಗೆ ಸಿಗಬೇಕಾದ ಸ್ಥಾನಮಾನಗಳು ತಪ್ಪಿದವೆಂದು ಹೇಳಲಾಗಿದೆ. ಇವರು 1931 ಜೂನ್ 25ರಂದು ನಿಧನಹೊಂದಿದರು. *

**ದೇಶಬಂಧು** [1]**:** ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ ದಿನ ಹಾಗೂ ವಾರ ಪತ್ರಿಕೆಗಳು. ದಿನಪತ್ರಿಕೆ ಕಿರೀಟ ಆಕಾರದ 4 ಪುಟಗಳನ್ನೂ ವಾರಪತ್ರಿಕೆ ಕಿರೀಟ 1/2 ಆಕಾರದ 10 ಪುಟಗಳನ್ನೂ ಒಳಗೊಂಡಿತ್ತು. ಸಿ.ಹಯವದನರಾಯರ ಪ್ರಧಾನ ಸಂಪಾದಕತ್ವದಲ್ಲಿ ಬೆಂಗಳೂರಿನಿಂದ ಮೇ 1939ರಲ್ಲಿ ಪ್ರಕಟಣೆ ಆರಂಭವಾಯಿತು. ದಿನಪತ್ರಿಕೆಯ ಬಿಡಿ ಪ್ರತಿಯ ಬೆಲೆ ಒಂದು ಅಣೆ. ವಾರ ಪತ್ರಿಕೆಯ ಸಂಚಿಕೆಯ ಬೆಲೆ 1.5 ಅಣೆ. ಪತ್ರಿಕೆಯ ಒಡೆತನ ಮೈಸೂರು ನ್ಯೂಸ್‌ಪೇಪರ್ ಕಂಪೆನಿಯದಾಗಿತ್ತು. ಆಗಿನ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಗಾಗಿ ಜರುಗುತ್ತಿದ್ದ ಚಳವಳಿಯ ಬಗ್ಗೆ ಮೈಸೂರು ಸರ್ಕಾರದ ನಿಲುವು ಧೋರಣೆಗಳಿಗೆ ಪ್ರಚಾರ ನೀಡುವುದೇ ಪತ್ರಿಕೆಗಳ ಮೂಲೋದ್ದೇಶವಾಗಿತ್ತು. ರಾಯಿಟರ್ ಮತ್ತು ಅಸೋಸಿಯೇಟೆಡ್ ಪ್ರೆಸ್ ಸಂಸ್ಥೆಗಳ ಸುದ್ದಿಗಳೂ ಜಿಲ್ಲಾ ಮತ್ತು ಸ್ಥಳೀಯ ವಾರ್ತೆಗಳೂ ದಿನಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದುವು. ಮಿರ್ಜಾ ಎಂ. ಇಸ್ಮಾಯಿಲ್‌ರ ಸಂಸ್ಥಾನದ ದಿವಾನ್ ಹುದ್ದೆಗೆ ರಾಜೀನಾಮೆ ನೀಡಿದ ಮೇಲೆ ಪತ್ರಿಕೆಗೆ ಸರ್ಕಾರದ ಪ್ರೋತ್ಸಾಹ ಕಡಿಮೆಯಾಯಿತು. ಮಾಲೀಕ ವರ್ಗಕ್ಕೂ ಸಂಪಾದಕ ವರ್ಗಕ್ಕೂ ನಡುವೆ ಭಿನ್ನಾಭಿಪ್ರಾಯಗಳು ಉಂಟಾದುವು. 1942ರಲ್ಲಿ ಎನ್.ಎಸ್. ವೆಂಕೋಬರಾಯರು ಸಂಪಾದಕರಾದರು. ಆರ್ಥಿಕ ಮುಗ್ಗಟ್ಟಿನಿಂದಾಗಿ ಪತ್ರಿಕೆಯನ್ನು ನಡಸುವುದು ಕಷ್ಟವಾಯಿತು. 1943ರ ಸೆಪ್ಟೆಂಬರ್‌ನಿಂದ ಪತ್ರಿಕೆಯ ಪ್ರಕಟಣೆಯನ್ನು ನಿಲ್ಲಿಸಲಾಗಿದೆಯೆಂದು ನ್ಯೂಸ್‌ಪೇಪರ್ ಕಂಪನಿ ತನ್ನ ಸಿಬ್ಬಂದಿಗೆ ತಿಳಿವಳಿಕೆ ನೀಡಿತು. ಪತ್ರಿಕೆಯ ಸಂಪಾದಕವರ್ಗದವರಲ್ಲೊಬ್ಬರಾಗಿದ್ದ ಬಿ.ಎಸ್. ವೆಂಕಟರಾಮ್ ಅವರು 1943ರ ಅಕ್ಟೋಬರ್ 1ರಿಂದ ದೇಶಬಂಧು ದಿನ ಮತ್ತು ವಾರಪತ್ರಿಕೆಗಳ ಸಂಪೂರ್ಣ ಒಡತನವನ್ನು ಪಡೆದುಕೊಂಡು ಅದನ್ನು ರಾಷ್ಟ್ರಸೇವೆಗೆ ಮುಡಿಪಾಗಿಟ್ಟರು. ದೇಶದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮತ್ತು ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಗೆ ಮೈಸೂರು ಕಾಂಗ್ರೆಸ್ ಹೂಡಿದ್ದ ಸತ್ಯಾಗ್ರಹ ಚಳವಳಿಗೆ ಈ ಪತ್ರಿಕೆಗಳು ಪೂರ್ಣ ಬೆಂಬಲ ನೀಡಿದವು.

1947ರಲ್ಲಿ ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ಚಳವಳಿ ಬಿರುಸಾದಾಗ ಈ ಚಳವಳಿಗೆ ಸಂಬಂಧಪಟ್ಟ ಯಾವುದೇ ಸುದ್ದಿಗಳನ್ನಾಗಲಿ ಭಾಷಣಗಳನ್ನಾಗಲಿ ಟೀಕೆಗಳನ್ನಾಗಲಿ ಸಂಸ್ಥಾನ ಸರ್ಕಾರದ ನ್ಯಾಯಾಂಗಶಾಖಾ ಕಾರ್ಯದರ್ಶಿಗಳ ಪರಿಶೀಲನೆಗೆ ಒಳಪಡಿಸದೆ ಪತ್ರಿಕೆಗಳು ಪ್ರಕಟಿಸಲಾಗದೆಂಬ ಆಜ್ಞೆ ಜಾರಿಯಾಯಿತು. ಇದರ ಬಗ್ಗೆ ಅಸಮಾಧಾನಗೊಂಡು ದೇಶಬಂಧು ಒಂದನ್ನುಳಿದು ಎಲ್ಲ ಕನ್ನಡ ಪತ್ರಿಕೆಗಳೂ ಪ್ರಕಟಣೆ ನಿಲ್ಲಿಸಿದುವು. ದೇಶಬಂಧು ಪತ್ರಿಕೆ ಪ್ರಕಟಣೆ ನಿಲ್ಲಿಸದೆ ಸತ್ಯಾಗ್ರಹದ ಸುದ್ದಿ ಟೀಕೆಗಳನ್ನು ಪ್ರಧಾನವಾಗಿ ಪ್ರಕಟಿಸುತ್ತಿತ್ತು. ಸರಸಣ್ಣ ನಿಂತೆಂದ ಎಂಬ ಶಿರೋನಾಮೆಯ ಸರಸ ಸರಣಿಯ ರಾಜಕೀಯ ಮಾರ್ಮಿಕ ಟೀಕೆಗಳು ಜನಪ್ರಿಯವಾದುವು. ಆಗ ಪತ್ರಿಕೆ ಕಾಗದದ ಕೋಟಾ ಕಳೆದುಕೊಳ್ಳಬೇಕಾಯಿತು. ಹೆಚ್ಚು ಬೆಲೆ ಕೊಟ್ಟು ಕಾಗದ ಕೊಂಡು ಪ್ರಕಟಣೆ ಮುಂದುವರಿಸಬೇಕಾಯಿತು. ಕಾಗದದ ಕ್ಷಾಮ, ಆರ್ಥಿಕ ಕಷ್ಟನಷ್ಟಗಳನ್ನು ಎದುರಿಸಬೇಕಾಗಿ ಬಂದ ಈ ಪತ್ರಿಕೆಗಳು 1950ರ ಡಿಸೆಂಬರ್ ಅಂತ್ಯದ ವರೆಗೂ ಮುಂದುವರಿದು ಕೊನೆಗೆ ನಿಂತುಹೋದುವು. ಅನೇಕ ತರುಣರಿಗೆ ಈ ಪತ್ರಿಕೆಗಳು ಪತ್ರಿಕೋದ್ಯಮದ ಅನುಭವ ದೊರಕಿಸಿಕೊಟ್ಟುವು. (ಬಿ.ಎಸ್.;ವಿ.ಇ.)

**ದೇಶಬಂಧು** [2]**:** ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಿಂದ ಪ್ರಕಟವಾಗುತ್ತಿದ್ದ ಮಾಸಪತ್ರಿಕೆ 1928ರಲ್ಲಿ ಆರಂಭವಾಯಿತು. ಇದು ಇಂಗ್ಲಿಷ ಭಾಷೆಯಲ್ಲಿ ಹೊರಟ ಮಂಗಳೂರಿನ ಪ್ರಥಮ ಪತ್ರಿಕೆ. ಎಸ್. ಶಾಂತರಾಮ ಪೈ ಇದರ ಸಂಪಾದಕರು. ನಿವೃತ್ತ ಖಜಾನೆ ಡೆಪ್ಯುಟಿ ಕಲೆಕ್ಟರ್ ಎಚ್. ಸುಬ್ಬರಾವ್ ಖಜಾಂಜಿ, ಎಸ್. ವೆಂಕಟರಮಣ ಪೈ ಉಪಸಂಪಾದಕರು. ಎಡ್ವರ್ಡ್ ಡೇವಿಡ್ ಮತ್ತು ಎಸ್. ಗೋಪಾಲರಾವ್ ಕಾರ್ಯದರ್ಶಿಗಳು. ಡಿಮ್ಮೆ 1/8 ಆಕಾರದ ಪತ್ರಿಕೆಯ ಬಿಡಿ ಸಂಚಿಕೆಯ ಬೆಲೆ ಮೂರು ಆಣೆಗಳು. ವಾರ್ಷಿಕ ಚಂದಾ ಎರಡು ರೂಪಾಯಿಗಳು. ಜಾತಿ ಮತ ಭೇದವಿಲ್ಲದೆ ಧಾರ್ಮಿಕ ಮತ್ತು ಸಾಮಾಜಿಕ ಪ್ರಗತಿಗೆ ಮಾಸಲಾಗಿರಿಸಿದ ಪತ್ರಿಕೆಯೆಂದು ಪ್ರಥಮ ಸಂಚಿಕೆಯ ಕೊನೆಯ ಪುಟದಲ್ಲಿ ವಿವರಿಸಲಾಗಿತ್ತು. ದೇಶಭಕ್ತಿಯನ್ನೂ ರಾಷ್ಟ್ರ ಚೈತನ್ಯವನ್ನೂ ಪ್ರತಿಪಾದಿಸುತ್ತಿದ್ದ ಈ ಪತ್ರಿಕೆ ಎಷ್ಟು ಕಾಲ ಬಾಳಿತ್ತು ಎಂಬುದು ತಿಳಿಯುವುದಿಲ್ಲ.(ಪಿಪಿ.ಕೆ.)

**ದೇಶಿಕಚಾರ್ಯ ಹೆಮ್ಮಿಗೆ :** 1902-66. ಕನ್ನಡ ಹಾಗೂ ಸಂಸ್ಕೃತ ವಿದ್ವಾಂಸರು. ತಿರುಮಕೂಡಲು ನರಸೀಪುರದ ಜೋಡಿ ಹೆಮ್ಮಿಗೆ ಆಗ್ರಹಾರದಲ್ಲಿ ಜನಿಸಿದರು. ತಂದೆ ಪಂಡಿತ ವೇದಾಂತ ಕೃಷ್ಣಮಾಚಾರ್. ತಾಯಿ ಕಲ್ಯಾಣಮ್ಮ. ವಿದ್ಯಾಭ್ಯಾಸ ತಲಕಾಡು ಮೈಸೂರುಗಳಲ್ಲಿ ನಡೆಯಿತು. ಇಂಗ್ಲಿಷ್ ಮಾಧ್ಯಮದಲ್ಲಿ ಎನ್‌ಟ್ರೆನ್ಸ್ ಪರೀಕ್ಷೆ ಮತ್ತು ಪಂಡಿತ

ಪರೀಕ್ಷೆಯಲ್ಲಿ ಮೊದಲನೆಯ ವರ್ಗದಲ್ಲಿ (1932) ತೇರ್ಗಡೆಯಾದರು. ಕುದೇರು, ತಲಕಾಡು, ಅಕ್ಕಿಹೆಬ್ಬಾಳು, ಮಿಡ್ಲ್‌ಸ್ಕೂಲ್‌ನಲ್ಲಿ ಇಂಗ್ಲೀಷ್ ಉಪಾಧ್ಯಾಯರಾಗಿ, ಕೋಲಾರದ ಹೈಸ್ಕೂಲ್‌ನಲ್ಲಿ ಕನ್ನಡ ಪಂಡಿತರಾಗಿ ಕೆಲವು ವರ್ಷಗಳಿದ್ದು, ಕೊನೆಗೆ ಅಲ್ಲಿಂದ ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಕೈಗೊಂಡಿದ್ದ ಕನ್ನಡ-ಕನ್ನಡ ಶಬ್ದಕೋಶಕ್ಕೆ ಪಂಡಿತರಾಗಿ ಆಯ್ಕೆಯಾಗಿ ಬಂದು ತಾವು ನಿಧನಹೊಂದುವವರೆಗೂ ಸೀನಿಯರ್ ಪಂಡಿತ್ ಆಗಿ ಡೆಪ್ಯುಟಿ ಎಡಿಟರ್ ಆಗಿ ಕೆಲಸಮಾಡಿದರು.

ಕನ್ನಡ - ಕನ್ನಡ ಶಬ್ದಕೋಶಕ್ಕೆ ಇವರ ಪಾಂಡಿತ್ಯದ ನೆರವು ದೊರೆಯಿತು. ಸಂಸ್ಕೃತದಲ್ಲೂ ಇವರದು ಆಳವಾದ ತಿಳಿವಳಿಕೆ. ಇಂಗ್ಲಿಷ್ ಸಾಹಿತ್ಯದ ಪರಿಚಯವೂ ಇವರಿಗೆ ಸಾಕಷ್ಟಿತ್ತು. ತಮ್ಮ ಮನೆತನದ ವಿದ್ಯೆಯಾದ ಆಯುರ್ವೇದದಲ್ಲೂ ಇವರು ಪ್ರವೀಣರಾಗಿದ್ದರು. ಇವರು ಸಾತ್ತ್ವಿಕರೂ ತತ್ತ್ವನಿಷ್ಠರೂ ಆಗಿದ್ದರು. ಕಂದ ವೃತ್ತಗಳನ್ನು ರಚಿಸುವುದರಲ್ಲಿ ಇವರ ಲೇಖನಿ ಉದಾರವಾದದ್ದು. ಯಾಮುನಾಚಾರ್ಯರ ಸ್ತೋತ್ರ ರತ್ನ, ಕುಲಶೇಖರ ಆಳ್ವಾರರ ಮುಕುಂದಮಾಲೆ, ವೇದಾಂತ ದೇಶಿಕರ ಅಚ್ಯುತ ಶತಕ ಇವನ್ನು ಪದ್ಯದಲ್ಲಿ ಭಾಷಾಂತರಿಸಿದ್ದಾರೆ. ಪ್ರಣಯತರಂಗಿಣಿ ಎಂಬ ಕಂದವೃತ್ತಗಳ ಪ್ರಬಂಧ ಇವರ ಸ್ವಂತಕೃತಿ. ಇವರು ವಿದ್ವತ್ ಪೂರ್ಣವಾದ ಹಲವಾರು ಪ್ರೌಢಪ್ರಬಂಧಗಳನ್ನೂ ಬರೆದಿದ್ದಾರೆ. ಸಂಸ್ಕೃತ ಭಾಗವತ ಪುರಾಣವನ್ನು ಬಹು ಹೃದಯಂಗಮವಾಗಿ ವ್ಯಾಖ್ಯಾನಿಸಿ ಪಂಡಿತಪಾಮರರನ್ನು ರಂಜಿಸುತ್ತಿದ್ದರು. ಕುಮಾರವ್ಯಾಸಭಾರತ ಮತ್ತು ಜೈಮಿನಿ ಭಾರತಗಳನ್ನು ಗಮಕಿಗಳಿಂದ ಓದಿಸಿ ತಾವು ಅರ್ಥೈಸುತ್ತ ಲೋಕಪ್ರಿಯರಾಗಿದ್ದರು. ಇವರು ತುಂಬ ಸ್ನೇಹಪರರು ಜ್ಞಾನ ಭಕ್ತಿ ವೈರಾಗ್ಯಗಳ ಜೊತೆಗೆ ರಸಿಕತೆಯನ್ನೂ ತಮ್ಮ ಸಾತ್ತ್ವಿಕ ವ್ಯಕ್ತಿತ್ವದಲ್ಲಿ ಪಡೆದುಕೊಂಡಿದ್ದ ಅಪರೂಪದ ವ್ಯಕ್ತಿಯಾಗಿದ್ದರು. ಇವರು 1966 ಡಿಸೆಂಬರ್ 10ರಂದು ನಿಧನರಾದರು. *

**ದೇಸಾಯಿ, ಎನ್. ಸಿ. :** 1924 - 2003. ಕುಂಚ ಬ್ರಹ್ಮ ಎಂದೇ ಖ್ಯಾತರಾದ ಹೆಸರಾಂತ ಕಲಾವಿದ. ನಾನಾ ಸಾಹೇಬ್ ಚಿದಂಬರ ದೇಸಾಯಿ ಇವರ ಪೂರ್ತಿ ಹೆಸರು. 1924 ಏಪ್ರಿಲ್ 4 ರಂದು ಹಾವೇರಿ ತಾಲ್ಲೂಕಿನ ಅಗಡಿ ಗ್ರಾಮದಲ್ಲಿ ಜನಿಸಿದರು. ಇವರದು ಪ್ರಖ್ಯಾತ ಬಹದ್ದೂರ್ ದೇಸಾಯಿ ಕುಟುಂಬ. ಪ್ರಾಥಮಿಕ ಶಾಲೆಯಲ್ಲಿ ಅಭ್ಯಾಸ ಮಾಡುತ್ತಿದ್ದಾಗಲೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದರು. ಇವರು ವೃತ್ತಿಯಲ್ಲಿ ಪ್ರೀಮಿಯರ್ ಆಟೋಮೊಬೈಲ್ ಸಂಸ್ಥೆಯ ಉದ್ಯೋಗಿಯಾಗಿ ಮೂವತ್ತೈದು ವರ್ಷ ಸುದೀರ್ಘ ಸೇವೆಸಲ್ಲಿಸಿದ ಬಳಿಕ ಅದೇ ಸಂಸ್ಥೆಯ ಜಾಹೀರಾತು ವಿಭಾಗದ ಮುಖ್ಯ ಕಲಾವಿದರಾಗಿ ನಿವೃತ್ತರಾದರು. ಮುಂಬಯಿಯಲ್ಲಿ ಉದ್ಯೋಗಿಯಾಗಿದ್ದಾಗಲೇ ಅಲ್ಲಿನ ಪ್ರಸಿದ್ಧ ಕಲಾಗುರುಗಳಾದ ದಂಡಾವತಿಮಠ ಅವರಲ್ಲಿ ಕಲಾಭ್ಯಾಸವನ್ನು ಪ್ರಾರಂಭಿಸಿ ಮುಂಬಯಿಯ ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್‌ನಲ್ಲಿ ಚಿತ್ರಕಲೆ ಮತ್ತು ಲಲಿತಕಲೆಯಲ್ಲಿ ಡಿಪ್ಲೊಮಾ ಪದವಿ ಪಡೆದು ಕಲಾ ಪ್ರಪಂಚಕ್ಕೆ ತಮ್ಮನ್ನು ಅರ್ಪಿಸಿಕೊಂಡರು.

ಇವರು ಪ್ರಸಿದ್ಧ ಚಿತ್ರಕಲಾವಿದರು ಮಾತ್ರವಲ್ಲದೆ ಒಬ್ಬ ಉತ್ತಮ ಛಾಯಾಚಿತ್ರಗಾರರಾಗಿಯೂ ಪತ್ರಿಕೋದ್ಯಮಿಯಾಗಿಯೂ ಹೆಸರು ಗಳಿಸಿದ್ದರು. ಇವರು ಮುಂಬಯಿಯ ಅನೇಕ ಪತ್ರಿಕೆಗಳಿಗೆ ಸಾಂಸ್ಕೃತಿಕ ಕಾರ್ಯಕ್ರಮಗಳ ವಿಮರ್ಶಾ ಲೇಖನಗಳನ್ನು ಬರೆಯುತ್ತಿದ್ದರು. ನಾಡಿನ ಸುಪ್ರಸಿದ್ಧ ಪತ್ರಿಕೆಗಳಿಗೆ ಮುಖಪುಟ ಕಲಾಕೃತಿಗಳನ್ನು ರೇಖಿಸುವುದರ ಮೂಲಕ ಪ್ರಸಿದ್ಧಿ ಪಡೆದಿದ್ದರು. ಅವುಗಳಲ್ಲಿ ಬೆಂದ್ರೇಯವರ ಮೇಘದೂತಕ್ಕೆ ಇವರು ಬರೆದ ಚಿತ್ರಲೇಖನ ಅತ್ಯಂತ ಜನಪ್ರಿಯತೆ ಪಡೆದಿತ್ತು. ಅತ್ಯಂತ ವಿರಳವಾಗಿರುವ ವಿಶಿಷ್ಟವಾದ ಕಲಾ ಸಂಶೋಧಕರಲ್ಲಿ ದೇಸಾಯಿಯವರೂ ಒಬ್ಬರು. ಮಹಾರಾಷ್ಟ್ರದ ವರ್ಲಿ ಬುಡಕಟ್ಟು ಜನಾಂಗದ ಜನಪದ ಕಲೆಯನ್ನು ಕುರಿತು ಇವರು ಸಂಶೋಧನೆ ಮಾಡಿದ್ದಾರೆ. ಸಂತ ಕಲಾವಿದರಾದ ಶುಭರಯರ ಜೀವನ ಚರಿತ್ರೆ ಹಾಗೂ ಇನ್ನಿತರ ಕೃತಿಗಳನ್ನೂ ರಚಿಸಿದ್ದಾರೆ. ಕರ್ನಾಟಕ ಜನಪದ ಕಲೆಯನ್ನು ಕುರಿತು ಸಂಶೋಧನಾತ್ಮಕ ಚಿತ್ರಲೇಖನ ಬರೆದಿದ್ದಾರೆ. ಇವರ ಪೂರ್ವೇತಿಹಾಸಕ್ಕೆ ಸಂಬಂಧಿಸಿದ ಹಾವನೂರು ಸಂಸ್ಥಾನ ಎಂಬ ಚಿತ್ರಲೇಖನವೂ ಇದೇ ಮಾಲಿಕೆಯಲ್ಲಿ ಸೇರಿದ್ದಾಗಿದೆ.

ಏಕವ್ಯಕ್ತಿ ಕಲಾಪ್ರದರ್ಶನಕ್ಕೆ ಇವರು ಹೆಸರಾಗಿದ್ದರು. ಇವರ ಬಹುರೂಪಿ ಗಣಪತಿ, ಬೇಂದ್ರೆಯವರ ಕವನಕ್ಕೆ ರಚಿಸಿದ ಯಾರಿಗೂ ಹೇಳೋಣು ಬ್ಯಾಡ, ಮೇಘದೂತ ಮುಂತಾದವು ರಾಷ್ಟ್ರದ ಅನೇಕ ಕಡೆಗಳಲ್ಲಿ ಪ್ರದರ್ಶನವಾಗಿ ಪ್ರಖ್ಯಾತವಾಗಿವೆ. ಇವರು ರೇಖಿಸಿದ ಸ್ವಾಮಿ ವಿವೇಕಾನಂದರ ಚಿತ್ರ ಕಲಾಕೃತಿಗಳು ಪ್ರದರ್ಶನವನ್ನು ಮುಂಬಯಿಯ ಕರ್ನಾಟಕ ಸಂಘ ಹಾಗೂ ಸಾಲಿಗ್ರಾಮದ ಡಿವೈನ್ ಪಾರ್ಕ್ ಟ್ರಸ್ಟ್ ಸಂಯುಕ್ತವಾಗಿ ಏರ್ಪಡಿಸಿದ್ದುವು. ಹುಬ್ಬಳ್ಳಿಯಲ್ಲಿರುವ ಬೇಂದ್ರೆ ಕುಟೀರ ಇವರಿಗೆ ಅಚ್ಚುಮೆಚ್ಚಿನ ತಾಣವಾಗಿತ್ತು. ಇಲ್ಲಿ ಇವರ 'ಕನ್ನಡ ಮೇಘದೂತ' ಕಾವ್ಯದ ಚಿತ್ರಗಳ ಸಂಗ್ರಹವಿದೆ. ಬೇಂದ್ರೆಯವರ 108 ನೆಯ ಜನ್ಮದಿನದ ಸವಿನೆನಪಿಗಾಗಿ ಅವರ ಭಾವಚಿತ್ರವನ್ನು ರಚಿಸಿ ನೆನಪಿನ ಕಾಣಿಕೆಯಾಗಿ ಬೇಂದ್ರ ಕುಟೀರಕ್ಕೆ ನೀಡಿದ್ದಾರೆ.

ಇವರ ವೈಯಕ್ತಿಕ ಜೀವನದಲ್ಲಿ ಬಹುಪಾಲು ನೋವೇ ತುಂಬಿತ್ತು. ತಮ್ಮ ಇಬ್ಬರು ಪುತ್ರರನ್ನೂ ಇವರು ಎಳೆವಯಸ್ಸಿನಲ್ಲೇ ಕಳೆದುಕೊಂಡಿದ್ದರು.

ಇವರಿಗೆ ಅನೇಕ ಪ್ರಶಸ್ತಿ ಸನ್ಮಾನಗಳು ಲಭಿಸಿವೆ. ಅವುಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ, ಕೇಂದ್ರ ಸರ್ಕಾರ ಮಹಾನ್ ಕಲಾವಿದರಿಗೆ ನೀಡುವ ಫೆಲೋಷಿಪ್ ಮುಂತಾದವು ಉಲ್ಲೇಖನೀಯ. ಇವರು 2003 ರ ಜೂನ್‌ನಲ್ಲಿ ನಿಧನರಾದರು. (ಎಸ್.ಯು.ಎಂ.)

**ದೇಸಾಯಿ, ಪಿ.ಬಿ. :** 1910-76 ಕರ್ನಾಟಕ ಇತಿಹಾಸ ಸಾಹಿತ್ಯ ಸಂಸ್ಕೃತಿಗಳ ಖ್ಯಾತ ಸಂಶೋಧಕರು, ಶಾಸನತಜ್ಞರು. ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಪ್ರಾಚೀನ ಭಾರತೀಯ ಇತಿಹಾಸ ಸಂಸ್ಕೃತಿಗಳ ಪ್ರಾಧ್ಯಾಪಕರಾಗಿದ್ದರು. ಪಾಂಡುರಂಗ ಭೀಮರಾವ್ ದೇಸಾಯಿಯರು ರಾಯಚೂರು ಜಿಲ್ಲೆಯ ಕೊಪ್ಪಳದ ಬಳಿಯ ಕಿನ್ನಾಳದವರಾದ ಭೀಮರಾವ್ ಮತ್ತು ಭಾಗೀರಥೀಬಾಯಿ ದಂಪತಿಗಳ ಐದನೆಯ ಪುತ್ರರಾಗಿ 24-12-1910ರಲ್ಲಿ ಜನಿಸಿದರು. ಇವರ ಪ್ರಾಥಮಿಕ ಶಿಕ್ಷಣ ಸೇಡಂನಲ್ಲಿಯೂ ಸೆಕೆಂಡರಿ ಶಿಕ್ಷಣ ಗುಲ್ಬರ್ಗದಲ್ಲಿಯೂ ನಡೆಯಿತು. ಮುಂಬಯಿ ವಿಶ್ವವಿದ್ಯಾನಿಲಯದ ಎಂಟ್ರೆನ್ಸ್ ಪರೀಕ್ಷೆಯ ಅನಂತರ ಅನಾರೋಗ್ಯದ ಕಾರಣ ಸ್ವಲ್ಪಕಾಲ ವಿದ್ಯಾಭ್ಯಾಸವನ್ನು ನಿಲ್ಲಿಸಿದರಾದರೂ ಮುಂದೆ 1935ರಲ್ಲಿ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಸಂಸ್ಕೃತದಲ್ಲಿ ಆನರ್ಸ್ ಪದವಿಯನ್ನು, 1937ರಲ್ಲಿ ಸಂಸ್ಕೃತ ಹಾಗೂ ಕನ್ನಡ ಭಾಷೆಗಳಲ್ಲಿ ಎಂ.ಎ. ಪದವಿಯನ್ನೂ ಪಡೆದರು. ಎಂ.ಎ.ಪರೀಕ್ಷೆಯಲ್ಲಿ ಲಿಪಿಶಾಸ್ತ್ರವೂ ಇವರ ಅಧ್ಯಯನ ವಿಷಯಗಳಲ್ಲಿ ಒಂದಾಗಿತ್ತು. ಅನಾರೋಗ್ಯದಿಂದಾಗಿ ಸ್ವಗ್ರಾಮದಲ್ಲಿ ವಿಶ್ರಾಂತಿಪಡೆಯುತ್ತಿದ್ದಾಗ, ಆ ಗ್ರಾಮದ ಮತ್ತು ಸುತ್ತಲಿನ ಗ್ರಾಮಗಳಲ್ಲಿದ್ದ ಶಿಲಾಶಾಸನಗಳನ್ನು ಪ್ರತಿಮಾಡಿಕೊಂಡು ಅಧ್ಯಯನ ಮಾಡುವ ಹವ್ಯಾಸವನ್ನು ಬೆಳೆಸಿಕೊಂಡರು. ಇದಕ್ಕಾಗಿ ಇವರು ಸುಮಾರು 60 ಗ್ರಾಮಗಳಲ್ಲಿ ತಿರುಗಾಡಿ 200ಕ್ಕೂ ಹೆಚ್ಚಿನ ಶಾಸನಗಳನ್ನು ಪ್ರತಿಮಾಡಿಕೊಂಡರು. 1936ರಲ್ಲಿ ವಿಜಯನಗರದ ಆರನೆಯ ಶತಮಾನೋತ್ಸವ ಸಂದರ್ಭದಲ್ಲಿ ಇವರು ವಿಜಯನಗರದ ಸಾಮ್ರಾಜ್ಯ ಎಂಬ ಗ್ರಂಥವನ್ನು ಕನ್ನಡದಲ್ಲಿ ಬರೆದರು. 1939ರಲ್ಲಿ ಕೇಂದ್ರ ಸರ್ಕಾರದ ಪುರಾತತ್ತ್ವ ಇಲಾಖೆಯ ಶಾಸನ ಶಾಖೆಯಲ್ಲಿ ಸಹಾಯಕ ಸಂಶೋಧಕರಾಗಿ ಕೆಲಸಕ್ಕೆ ಸೇರಿದ ಇವರು 17 ವರ್ಷಗಳ ಕಾಲ ಉದಕಮಂಡಲದಲ್ಲಿದ್ದು ಶಾಸನಶಾಸ್ತ್ರವನ್ನು ಆಳವಾಗಿ ಅಭ್ಯಸಿಸಿದರು. ದಕ್ಷಿಣ ಭಾರತದ ಶಾಸನ ಸಂಪುಟಗಳ ಪೈಕಿ ಹನ್ನೊಂದನೆಯ ಸಂಪುಟದ ಮೊದಲ ಭಾಗವನ್ನು ಎನ್.ಲಕ್ಷ್ಮೀನಾರಾಯಣರಾಯರೊಂದಿಗೆ ಹಾಗೂ ಹದಿನೈದನೆಯ ಸಂಪುಟವನ್ನು ತಾವೇ ಸ್ವಂತವಾಗಿ ಸಂಪಾದಿಸಿದರು. ಶಾಸನಗಳಿಗೆ ಸಂಬಂಧಿಸಿದಂತೆ 1956ರಲ್ಲಿ ಶಾಸನ ಪರಿಚಯ ಎಂಬ ಗ್ರಂಥವನ್ನು ಪ್ರಕಟಿಸಿದರು.

ಅಂದಿನ ಹೈದರಾಬಾದ್ ಸರ್ಕಾರಕ್ಕಾಗಿ ಎ ಕಾರ್ಪಸ್ ಆಫ್

ಕನ್ನಡ ಇನ್‌ಸ್ಕ್ರಿಪ್ಷನ್ಸ್ ಇನ್ ಹೈದರಾಬಾದ್ ಎಂಬ ಗ್ರಂಥ'ವನ್ನು ಸಂಪಾದಿಸಿಕೊಟ್ಟರು. ಆಂಧ್ರ ಪ್ರದೇಶ ಸರ್ಕಾರಕ್ಕಾಗಿ ಇವರು ಕನ್ನಡ ಇನ್‌ಸ್ಕ್ರಿಪ್ಷನ್ಸ್ ಆಫ್ ಆಂಧ್ರ ಪ್ರದೇಶ್ ಮತ್ತು ಸೆಲೆಕ್ಟ್ ಇನ್‌ಸ್ಕ್ರಿಪ್ಷನ್ಸ್ ಆಫ್ ಆಂಧ್ರ ಪ್ರದೇಶ್ ಎಂಬ ಗ್ರಂಥಗಳನ್ನು ಸಂಪಾದಿಸಿದರು.

ದೇಸಾಯಿಯವರು ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚೀನ ಭಾರತ ಇತಿಹಾಸ ಹಾಗೂ ಸಂಸ್ಕೃತಿ ಇಲಾಖೆಯಲ್ಲಿ ರೀಡರ್ ಆಗಿ (1957), ಆ ಇಲಾಖೆಯ ಮುಖ್ಯಸ್ಥರಾಗಿ (1962), ಪ್ರಾಧ್ಯಾಪಕರಾಗಿ (1967) ನಿವೃತ್ತರಾದರು (1971). ಮೊದಲ ಬಾರಿಗೆ ಶಾಸನಶಾಸ್ತ್ರವನ್ನು ವೈಜ್ಞಾನಿಕವಾಗಿ ವಿದ್ಯಾರ್ಥಿಗಳಿಗೆ ಕಲಿಸಿಕೊಡಲು ಶಾಸನಶಾಸ್ತ್ರದ ಡಿಪ್ಲೋಮಾ ಶಿಕ್ಷಣವನ್ನು ಇವರು ರೂಪಿಸಿದರು.

ಕನ್ನಡ ಸಂಶೋಧನ ಸಂಸ್ಥೆಯ ನಿರ್ದೇಶಕರಾಗಿಯೂ ಸೇವೆಸಲ್ಲಿಸಿದ ಇವರು ಆ ಸಂಸ್ಥೆಯ ವಸ್ತುಸಂಗ್ರಹಾಲಯವನ್ನು ಬೆಳೆಸಿದರು. ಅನೇಕ ವಿದ್ವಾಂಸರಿಂದ ಉಪನ್ಯಾಸಗಳನ್ನು ಮಾಡಿಸಿ ಅವುಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸಿದ್ದು ಇವರು ಮಾಡಿದ ಇನ್ನೊಂದು ಮುಖ್ಯ ಕೆಲಸ. ಸಂಸ್ಥೆಯ ಹಸ್ತಪ್ರತಿ ವಿಭಾಗದ ಹಸ್ತಪ್ರತಿಗಳ ವಿವರಣಾತ್ಮಕ ಪಟ್ಟಿಯನ್ನು (ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ ಆಫ್ ಮ್ಯಾನುಸ್ಕ್ರಿಪ್ಟ್ಸ್ ಇನ್ ದಿ ಕನ್ನಡ ರಿಸರ್ಚ್ ಇನ್‌ಸ್ಟಿಟ್ಯೂಟ್, ಸಂಪುಟ 5-9) ಪ್ರಕಟಿಸಿದರು.

ದೇಸಾಯಿಯವರು ಸಂಶೋಧನ ಗ್ರಂಥಗಳಲ್ಲಿ ಮುಖ್ಯವಾದದ್ದು ಬಸವೇಶ್ವರ ಅಂಡ್ ಹಿಸ್ ಟೈಮ್ಸ್ ಎಂಬುದು. ಕರ್ನಾಟಕ ಇತಿಹಾಸವನ್ನು ಹತ್ತು ಸಂಪುಟಗಳಲ್ಲಿ ಪ್ರಕಟಿಸಬೇಕೆಂಬ ಯೋಜನೆಗನುಗುಣವಾಗಿ ಇವರು ತಮ್ಮ ಇಬ್ಬರು ಸಹೋದ್ಯೋಗಿಗಳೊಡನೆ ಎ ಹಿಸ್ಟರಿ ಆಫ್ ಕರ್ನಾಟಕ ಎಂಬ ಗ್ರಂಥ'ವನ್ನು ಪ್ರಕಟಿಸಿದರು. ಮಿಂಚಿದ ಮಹಿಳೆಯರು, ಕುಂತಲೇಶ್ವರ, ಮದಗಜಮಲ್ಲ, ಕರ್ನಾಟಕದ ಕಲಚುರಿಗಳು, ಕನ್ನಡನಾಡಿನ ಶಾಸನಗಳು - ಇವು ಇವರ ಕನ್ನಡ ಗ್ರಂಥಗಳಲ್ಲಿ ಕೆಲವು. ಶಿವಾಜಿಯ ಜೀವನಕ್ಕೆ ಸಂಬಂಧಿಸಿದ ಮೂಲಸಾಮಗ್ರಿಗಳನ್ನೊಳಗೊಂಡ ಶಿವಚರಿತ್ರ ವೃತ್ತಸಂಗ್ರಹ ಎಂಬ ಗ್ರಂಥವನ್ನು ಮರಾಠಿಯಲ್ಲಿ ಬರೆದಿದ್ದಾರೆ. ಇವರು ಬರೆದು ಪ್ರಕಟಿಸಿದ ಇಂಗ್ಲಿಷ್ ಲೇಖನಗಳ ಸಂಖ್ಯೆ 105, ಕನ್ನಡದವು 230 ಮತ್ತು ಮರಾಠಿಯಲ್ಲಿ 40.

ದೇಸಾಯಿಯವರ ಶಾಸನ ಪರಿಚಯ ಗ್ರಂಥ'ಕ್ಕೆ 1959ರಲ್ಲಿ ಮೈಸೂರು ಸರ್ಕಾರದ ಪುರಸ್ಕಾರ ದೊರೆಯಿತು. ಇವರ ಜೈನಿಸಂ ಇನ್ ಸೌತ್ ಇಂಡಿಯ ಅಂಡ್ ಸಮ್ ಜೈನ್ ಎಪಿಗ್ರಾಫ್ಸ್ ಎಂಬ ಗ್ರಂಥಕ್ಕೆ 1961ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಡಿ.ಲಿಟ್. ಪದವಿ ನೀಡಿತು. ಚಂಡೀಗಢ'ದಲ್ಲಿ 1973ರಲ್ಲಿ ನಡೆದ ಅಖಿಲ ಭಾರತ ಇತಿಹಾಸ ಸಮ್ಮೇಳನದಲ್ಲಿ ಇವರು ಶಾಸನಶಾಸ್ತ್ರ ವಿಭಾಗದ ಅಧ್ಯಕ್ಷರಾಗಿದ್ದರು.

(ಬಿ.ಆರ್.ಜಿ.)

**ದೈವರಾತರು :** 1891-1975.ಚತುರ್ವೇದ ಪಂಡಿತರು. ಛಂದೋದರ್ಶನ ಎಂಬ ಮಹಾಗ್ರಂಥದ ಕರ್ತೃ.

ಉತ್ತರ ಕನ್ನಡ ಜಿಲ್ಲೆ ಗೋಕರ್ಣದಲ್ಲಿ ವೈದಿಕ ಬ್ರಾಹ್ಮಣ ಕುಟುಂಬದಲ್ಲಿ ನಾಗವೇಣಿ ಮತ್ತು ವಿಘ್ನೇಶ್ವರ ಭಟ್ಟರ ಮಗನಾಗಿ ಹುಟ್ಟಿದ ಇವರಿಗೆ ಗಣೇಶಶರ್ಮನೆಂದು ನಾಮಕರಣ ಮಾಡಲಾಯಿತು. ಮುಂದೆ ಇವರು ವಾಸಿಷ್ಠ ಗಣಪತಿ ಮುನಿಗಳ ಶಿಷ್ಯರಾಗಿ ಮಂತ್ರದ್ರಷ್ಟಾರರೆನಿಸಿಕೊಂಡು ದೈವರಾತರಾದರು. ಇವರಿಗೆ ಬಾಲ್ಯ ಶಿಕ್ಷಣವೆಲ್ಲ ವೇದವಿದ್ಯಾಸಂಪನ್ನರಾದ ತಾಯಿ ತಂದೆಗಳಿಂದಲೇ ದೊರಕಿತು.

ಮುಂದೆ ಇವರು ಗೋಕರ್ಣಕ್ಕೆ ಆಗಮಿಸಿದ ಉಜ್ಜಯಿನಿ ರಾಮದಾಸರಿಂದ ಭಕ್ತಿ ಯೋಗವನ್ನೂ ವಾಸುದೇವಾನಂದ ಸರಸ್ವತೀ ಟೇಂಬೆ ಮಹಾರಾಜ ಅವರಿಂದ ಹಠಯೋಗ ದೀಕ್ಷೆಯನ್ನೂ ಪಡೆದರು. ಅನಂತರ ವಾಸಿಷ್ಠ ಗಣಪತಿ ಮುನಿಗಳ ಸೇವೆಯಲ್ಲಿ ನಿರತರಾಗಿ ಅವರೊಡನೆ ಭಾರತಾದ್ಯಂತ ಪ್ರವಾಸ ಕೈಗೊಂಡು ಅನೇಕ ಪುಣ್ಯಕ್ಷೇತ್ರ ಹಾಗೂ ಪ್ರಮುಖನಗರಗಳನ್ನು ಸಂದರ್ಶಿಸಿದರು. ಅಲ್ಲಿಂದ ಮುಂದೆ ಅಮಿಣಾಚಲಕ್ಕೆ ಬಂದು ರಮಣ ಮಹರ್ಷಿಗಳ ಸೇವೆಯಲ್ಲಿ ತೊಡಗಿ ಬ್ರಹ್ಮಜ್ಞಾನದ ಉಪದೇಶ ಪಡೆದರು. ಮಹರ್ಷಿಗಳ ಆದೇಶಾನುಸಾರ ತಮ್ಮ ಗುರುವಾಸಿಷ್ಠರೊಂದಿಗೆ ಮದರಾಸಿಗೆ ಸಮೀಪದಲ್ಲಿರುವ ಪದವೇಟು ಗ್ರಾಮದ ರೇಣುಕಾಂಬ ಸನ್ನಿಧಿಯಲ್ಲಿ ಶಾರದೀ ನವರಾತ್ರಿಯ ಅನುಷ್ಠಾನದ ತಪಸ್ಸಿನಲ್ಲಿದ್ದಾಗ ಅರ್ವಣನಾಯವಾದ ಮಂತ್ರದರ್ಶನ ಪಡೆದರು. ಇವರ ಮುಖದಿಂದ ನೂತನ ವೇದಮಂತ್ರಗಳು ಅವಿರ್ಭವಿಸಿದುವು. ಅವುಗಳನ್ನು ಕೇಳಿದ ವಾಸಿಷ್ಠರು ಅವನ್ನು ಆಗಲೇ ಬರೆದುಕೊಂಡು ಅದಕ್ಕೆ ಭಾಷ್ಯವನ್ನು ರಚಿಸಿದರು. ಅದೇ ಪ್ರಸಿದ್ಧ ಛಂದೋದರ್ಶನ.

ದೈವರಾತರು ವಿದ್ವತ್‌ಸಭೆಗಳಲ್ಲಿ ನೀಡಿದ ಭಾಷಣಗಳು ಅಸಂಖ್ಯ. ದೆಹಲಿ, ಗೌಹತಿ, ನೇಪಾಳ, ಕಾಶಿ, ಮದ್ರಾಸು, ತಿರುಪತಿ ಮೊದಲಾದೆಡೆ ಜರುಗಿದ ಅಖಿಲಭಾರತ ಮಟ್ಟದ ಸಂಸ್ಕೃತಿ ಸಮ್ಮೇಳನ, ವೇದ ಸಮ್ಮೇಳನದಲ್ಲಿ ಕೆಲವಕ್ಕೆ ಅಧ್ಯಕ್ಷರಾಗಿ ಕೆಲವಕ್ಕೆ ಅತಿಥಿಗಳಾಗಿ ಆಯ್ಕೆಗೊಂಡಿದ್ದರು. 1975ರ ಮೇ ತಿಂಗಳಿನಲ್ಲಿ ಹೃಷಿಕೇಶ ಹಾಗೂ ಬೆಂಗಳೂರಿನಲ್ಲಿ ನಡೆದ ಅಂತಾರಾಷ್ಟ್ರೀಯ ವಿದ್ವತ್ಪರಿಷತ್ತುಗಳಲ್ಲಿ ಭಾಗವಹಿಸಿದ್ದರು. ಇವರ ಪಾಂಡಿತ್ಯಕ್ಕೆ ಮಾರುಹೋದ ಮಹೇಶಯೋಗಿಗಳು ಫ್ರಾನ್ಸ್, ಇಲಿ, ಸ್ಪೇನ್ ಅಮೆರಿಕಗಳಿಗೆ ಇವರನ್ನು ಕರೆದೊಯ್ದು ಇವರಿಂದ ಉಪನ್ಯಾಸಗಳನ್ನು ಮಾಡಿಸಿದರು.

ಸಂಸ್ಕೃತ, ಕನ್ನಡ, ಹಿಂದಿ, ನೇಪಾಳಿ, ತೆಲುಗು, ತಮಿಳು ಮಲೆಯಾಳಂ ಹೀಗೆ ಬಹುಭಾಷಾವಿಶಾರದರಾದ ಇವರಿಗೆ ಕಾಶಿ ಹಿಂದು ವಿಶ್ವವಿದ್ಯಾಲಯದಲ್ಲಿ ಪಂಡಿತ ಮದನ ಮೋಹನ ಮಾಲವೀಯರಿಂದ ವೇದವಾಚಸ್ಪತಿ, ಮುಂಬಯಿಯ ಭಾರತೀಯ ವಿದ್ಯಾಭವನದಿಂದ ವಿದ್ಯಾವಾಚಸ್ಪತಿ, ನೇಪಾಳ ಮಹಾರಾಜರಿಂದ ರಾಜರ್ಷಿ ಎಂಬ ಬಿರುದುಗಳು ಬಂದವು.

ಇವರ ಛಂದೋದರ್ಶನವೆಂಬ ಬೃಹದ್ಗ್ರಂಥವನ್ನು ಭಾರತೀಯ ವಿದ್ಯಾಭವನ ಪ್ರಕಟಿಸಿದೆ. ವೇದಾರ್ಥ ಕಲ್ಪಲತಾ ಮತ್ತು ವಾಕ್‌ಸುಧಾ ಗ್ರಂಥಗಳನ್ನು ಕಲ್ಕತ್ತದ ವಂಸಗೋಪಾಲ ಪೋದ್ದಾರ್ ಟ್ರಸ್ಟ್ ಪ್ರಕಟಿಸಿದೆ. ಪಶುಪತಿ ಹೃದಯ ನೇಪಾಳಿ, ಹಿಂದಿಭಾಷೆಗಳಲ್ಲಿ ಪ್ರಕಟವಾಗಿದೆ. ಮೂಲ ಯಜುರ್ವೇದ ಸಂಹಿತಾ, ಇಂದ್ರಯಜ್ಞ, ಸಾಕ್ಷಾತ್ಕಾರ ಯೋಗಸುಧಾ ಇವು ಇವರ ಇತರ ಗ್ರಂಥ'ಗಳು. ಅಪ್ರಕಟಿತ ಆದರೆ ಪೂರ್ಣ ಬರೆದು ಸಿದ್ಧವಾಗಿರುವ ಹಸ್ತಪ್ರತಿಗಳಲ್ಲಿ ಗಾಯತ್ರಿಸುಧಾ, ಪುರುಷಸೂಕ್ತಸುಧಾ, ವೇದವೈದಿಕ, ವೇದಹೃದಯು, ರಾಮರಸಾಯನ, ಅಹಂಪ್ರತ್ಯಯವಿಮರ್ಶೆ, ಸಪ್ತಮರ್ಯಾದಾ ಸದ್ವಿದ್ಯಾ ಇವು ಮುಖ್ಯವಾದವು.

ವೇದ ಉಪನಿಷತ್ತುಗಳನ್ನು ಕುರಿತು ಅಧಿಕಾರವಾಣಿಯಿಂದ ಮಾತನಾಡಬಲ್ಲ ಈ ಪ್ರಕಾಂಡ ಪಂಡಿತರನ್ನು ಚತುರ್ವೇದಗಳ ಜೀವಂತ ಶಬ್ದಕೋಶ ಎಂದು ಬಣ್ಣಿಸಲಾಗಿದೆ.

ತಂತ್ರದಲ್ಲೂ ಅಷ್ಟೇ ನಿಪುಣರಾದ ಇವರು ಸ್ವತಃ ಹಲವು ನಕ್ಷೆಗಳನ್ನೂ ರಚಿಸಿದ್ದರು. ಋಗ್ವೇದದ ಆರಂಭ ಸುಪ್ರಸಿದ್ಧ ಗಾಯತ್ರಿ ಮಂತ್ರದಿಂದಲೇ ಹೊರತು ಸಾಂಪ್ರದಾಯಿಕವಾಗಿ ಒಪ್ಪಿಕೊಂಡಿರುವಂತೆ ಅಗ್ನಿಮೀಳೆಯಿಂದಲ್ಲ ಎಂಬುದಾಗಿ ಇವರು ಸಾಧಿಸಿದ್ದಾರೆ. ಓಂಕಾರ ಪ್ರಣವ ವೈದಿಕವಲ್ಲ. ವೇದದಲ್ಲಿ ಕಂಡುಬರುವುದು ಮೂಲತಃ ಈ ಕಾರವೆಂಬುದು ಇವರ ನಿಶ್ಚಿತಾಭಿಪ್ರಾಯ.

ಇಂದು ಇವರ ಗುರುಕುಲ ಬ್ರಹ್ಮಚಾರ್ಯಶ್ರಮ ಗೋಕರ್ಣದಿಂದ ಸು. 3ಕಿಮೀ ದೂರದಲ್ಲಿ ಅಸೋಗವನ ಎಂದು ಪ್ರಸಿದ್ಧಿ ಪಡೆದಿದೆ. ಅಲ್ಲಿ ಮಲ್ಲಿಕಾರ್ಜುನೇಶ್ವರ ದೇವಮಂದಿರವಿದೆ. ಇವರ ವಾಙ್ಮಯ ಪ್ರಕಾಶನಕ್ಕಾಗಿ, ಗುರುಕುಲ ಯೋಗಾಶ್ರಮದ ಸಂಘಟನೆಗಾಗಿ ಟ್ರಸ್ಟ್ ಒಂದನ್ನು ರಚಿಸಲಾಗಿದೆ.

(ಎಚ್.ಎಸ್.ಎಚ್.ಇ.)

**ದೈಹಿಕ ಶಿಕ್ಷಣ :** ಕರ್ನಾಟಕದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ದೈಹಿಕ ಶಿಕ್ಷಣ ಕಾರ್ಯಕ್ರಮ ಪಾಠಶಾಲೆಯ ಶಿಕ್ಷಣಕ್ಕೆ ಉಪಭಾಗವಾಗಿದ್ದು ದಿನಂಪ್ರತಿ ಶಾಲಾ ವೇಳಾ ಅವಧಿ ಕಳೆದ ಅನಂತರ ನಡೆಯುವ

ಚಟುವಟಿಕೆಯಾಗಿತ್ತು. ತರಗತಿ ಕಾರ್ಯದಲ್ಲಿ ದಣಿದು ಕಂಗಾಲಾದ ವಿದ್ಯಾರ್ಥಿಗಳನ್ನು ದೈಹಿಕ ವ್ಯಾಯಾಮಕ್ಕಾಗಿ ಒತ್ತಾಯಪಡಿಸಲಾಗುತ್ತಿತ್ತು. ಅಲ್ಲದೆ ಶಾಲೆಗಳಲ್ಲಿ ಸಾಕಷ್ಟು ಉಪಕರಣಗಳಾಗಲೀ ವಿದ್ಯಾರ್ಥಿ ಸಂಖ್ಯೆಗೆ ಅನುಗುಣವಾಗಿ ತರಪೇತಿಪಡೆದ ಶಿಕ್ಷಕರಾಗಲೀ ಇರಲಿಲ್ಲ. ಹಾಗಾಗಿ ಶಾಲೆಗಳಲ್ಲಿ ದೈಹಿಕ ಶಿಕ್ಷಣ ವ್ಯವಸ್ಥೆ ಗೌಣವೂ ತೀರ ಅಸಮರ್ಪಕವೂ ಆಗಿತ್ತು.

1957ರಲ್ಲಿ ಒಂದೂಕಾಲು ಲಕ್ಷ ಸಂಖ್ಯೆಯ ವಿದ್ಯಾರ್ಥಿಗಳುಳ್ಳ ಪ್ರೌಢಶಾಲೆಗಳಲ್ಲಿ ಏಳನೂರು ದೈಹಿಕ ಶಿಕ್ಷಣ ಉಪಾಧ್ಯಾಯರಿದ್ದರು. ಹನ್ನೆರಡು ವರ್ಷಗಳ ಅನಂತರ ಒಂದು ಲಕ್ಷ ಸಂಖ್ಯೆಯ ವಿದ್ಯಾರ್ಥಿಗಳಿಗಾಗಿ 1700 ದೈಹಿಕ ಶಿಕ್ಷಣ ಪಡೆದ ಉಪಾಧ್ಯಾಯರಿದ್ದರು. ಒಬ್ಬ ಶಿಕ್ಷಕನ ಹೊರೆ ಸುಮಾರು 350 ವಿದ್ಯಾರ್ಥಿಗಳು. ಇವರಲ್ಲಿ ಸೇಕಡ ಹತ್ತು ಭಾಗ ಡಿಪ್ಲೋಮ ದರ್ಜೆಯ ಶಿಕ್ಷಣ ಪಡೆದವರೂ ಸೇಕಡ 75 ಭಾಗ ಸರ್ಟಿಫಿಕೇಟ್ ಪಡೆದವರೂ ಉಳಿದವರು 3 ತಿಂಗಳಿಗಿಂತ ಕಡಿಮೆ ಶಿಕ್ಷಣ ಪಡೆದವರೂ ಆರು ವಾರ ಶಿಕ್ಷಣ ಪಡೆದವರೂ ಸೇವಾದಳ ಶಿಕ್ಷಣ ಪಡೆದವರೂ ಮಾಜಿ ಸೈನಿಕರೂ ಇದ್ದರು. ಕೆಲವು ಶಾಲೆಗಳಿಗೆ ಆಟದ ಅಥವಾ ಕವಾಯಿತು ಮಾಡಲು ಮೈದಾನವೇ ಇರಲಿಲ್ಲವಾದರೆ ಸೇಕಡ 17 ಶಾಲೆಗಳಲ್ಲಿ ದೈಹಿಕ ಶಿಕ್ಷಣ ಉಪಾಧ್ಯಾಯರೇ ಇರಲಿಲ್ಲ. ದೊಡ್ಡ ಊರುಗಳಲ್ಲಿ ಮೈದಾನಗಳ ಅಭಾವವಾದರೆ ಗ್ರಾಮಾಂತರ ಶಾಲೆಗಳಲ್ಲಿ ಉಪಾಧ್ಯಾಯರ ಅಭಾವ. ಸಾವಿರಾರು ಪ್ರೈಮರಿ ಶಾಲೆಗಳಿಗೆಲ್ಲ ಈ ರೀತಿಯ ಅಚ್ಚುಕಟ್ಟು ವ್ಯವಸ್ಥೆ ಆಗಬೇಕಾದರೆ ಅನೇಕ ಸಹಸ್ರ ಕಾರ್ಯಕರ್ತರು ಬೇಕಾಗುತ್ತಾರೆ.

ಕರ್ನಾಟಕದ ಸುಮಾರು 250 ಕಾಲೇಜುಗಳಲ್ಲಿ 1 1/2 ಲಕ್ಷ ಶಿಕ್ಷಣಾರ್ಥಿಗಳಿದ್ದಾರೆ. ದೈಹಿಕ ಶಿಕ್ಷಣ ಕಾಲೇಜು ವೇಳಾಪಟ್ಟಿಯಲ್ಲಿ ಕಡ್ಡಾಯವಾಗಿಲ್ಲ. ದೈಹಿಕ ಶಿಕ್ಷಣ ಕಾಲೇಜು ವೇಳೆಯ ಅನಂತರ ನಡೆಯುತ್ತಿರುವುದರಿಂದ ಕೇವಲ ಅಲ್ಪಸಂಖ್ಯೆಯ ವಿದ್ಯಾರ್ಥಿ ವಿದ್ಯಾರ್ಥಿನಿಯರು ಮಾತ್ರ ಪಾತ್ರವಹಿಸುತ್ತಾರೆ.

ಇಪ್ಪತ್ತನೆ ಶತಮಾನದಲ್ಲಿ ದೈಹಿಕ ಶಿಕ್ಷಣವು ಶಾಲಾ ಕಾಲೇಜುಗಳಲ್ಲಿ ಪ್ರಾಶಸ್ತ್ಯ ಪಡೆಯುತ್ತಾ ಬಂದಿತು. ದೈವಿಕ ಕವಾಯಿತನ ಮೂಲಕ ಮತ್ತು ಕ್ರಿಡಾ ವೇಳೆಗಳಲ್ಲಿ ತರಬೇತಿ ಕೊಡುವ ಮೂಲಕ ಈ ಶಿಕ್ಷಣಕ್ಕೆ ಅವಕಾಶ ಕಲ್ಪಿಸಲಾಯಿತು. ಕೆಲವು ದೊಡ್ಡ ವ್ಯಕ್ತಿಗಳ ಅಥವಾ ಟ್ರೋಫಿಗಳ ಹೆಸರಿನಲ್ಲಿ ಅಂತರ ಕಾಲೇಜು ಮತ್ತು ಅಂತರ ಶಾಲಾ ಕ್ರೀಡೆಗಳ ಸ್ಪರ್ಧೆ ನಡೆಯುತ್ತಿದ್ದು ಅಂಕಗಳಿಗಾಗಿ ಆ ಸಂಸ್ಥೆಗಳಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಸಿದ್ಧ ಪಡಿಸುತ್ತಿದ್ದರು.

1957ರಿಂದ ವಿಶಾಲ ಕರ್ನಾಟಕದಲ್ಲಿ ರಾಜ್ಯಮಟ್ಟದ ದಸರ ಕ್ರೀಡೆಗಳು ಆರಂಭವಾದುವು. 1961ರಿಂದ ಕರ್ನಾಟಕ ಕ್ರೀಡಾಮಂಡಳಿ ಇದನ್ನು ನಡೆಸುವ ಜವಾಬ್ದಾರಿ ಹೊತ್ತಿದೆ. ಪಂದ್ಯಗಳು ಹಂತಹಂತವಾಗಿ ತಾಲ್ಲೂಕು, ಜಿಲ್ಲೆ, ವಿಭಾಗ, ರಾಜ್ಯಮಟ್ಟಗಳಲ್ಲಿ ನಡೆಯುತ್ತಿವೆ. ಈ ಸ್ಪರ್ಧೆಗಳಿಂದ ರಾಜ್ಯದ ಕ್ರೀಡಾ ಮಟ್ಟ ವರ್ಷಂಪ್ರತಿ ಉತ್ತಮಗೊಳ್ಳುತ್ತಿದೆ. ಇವುಗಳಲ್ಲಿ ಶಾಲಾಕಾಲೇಜು ವಿದ್ಯಾರ್ಥಿಗಳಲ್ಲದೆ ಇತರ ತರುಣರೂ ಭಾಗವಹಿಸಲು ಅವಕಾಶವಾಗಿದೆ.

ಕರ್ನಾಟಕದ ಶಿಕ್ಷಣ ಶಾಖೆ 1959ರಲ್ಲಿ, ಅನಂತರ, 1969ರಲ್ಲಿ ದೈಹಿಕ ಶಿಕ್ಷಣಕ್ಕೆ ಹೊಸ ರೂಪ ಕೊಟ್ಟು ಶಿಕ್ಷಣವನ್ನು ಶಾಲಾವೇಳಾಪಟ್ಟಿಯಲ್ಲಿ ಸೇರಿಸಿದೆ; ಹೆಚ್ಚು ಕಾಲವನ್ನೂ ತರಪೇತಿಗೆ ಒದಗಿಸಿದೆ. ದೈಹಿಕ ಕವಾಯಿತು, (ಡ್ರಿಲ್) ಮತ್ತು ಕ್ರೀಡಾಂಗಣ ಆಟ, ಹೊರಾಂಗಣ ಆಟಗಳಿಗೆ ಪ್ರತ್ಯೇಕ ಅವಧಿ (ಪೀರಿಯಡ್)ಗಳನ್ನು ವಿಧಾಯಕ ಮಾಡಿದೆ. ಸಾಮೂಹಿಕ ಕವಾಯಿತು. ಹೊರಪ್ರದೇಶದಲ್ಲಿ ಶಿಬಿರ (ಕ್ಯಾಂಪು) ಹೊರಸಂಚಾರ (ಹೈಕಿಂಗ್), ಸೈಕ್ಲಿಂಗ್, ಯೋಗಾಸನಗಳಿಗೂ ಏರ್ಪಾಟು ಮಾಡಿದೆ. ದೈಹಿಕ ಶಿಕ್ಷಣ ದೈಹಿಕ ಶ್ರಮವಾಗದಂತೆ ಮನರಂಜಕವಾಗುವಂತೆ ಮಾಡಲು ಸೂಚಿಸಲಾಗಿದೆ. ಶಾಲಾ ದೈಹಿಕ ಶಿಕ್ಷಣವನ್ನು ಹೊಸದಾಗಿ ಪ್ರಾರಂಭಿಸುವ ಕಾರ್ಯಾನುಭವ ಚಟುವಟಿಕೆಯ ಗುಂಪಿನಲ್ಲಿ ಸೇರಿಸಿ ಶಾಲಾ ವೇಳಾಪಟ್ಟಿಯಲ್ಲಿ ವಾರಕ್ಕೆ 4 ಅವಧಿಗಳನ್ನು ಕೊಡಲಾಗಿದೆ. ಇದರಲ್ಲಿ 2 ಅವಧಿ ಕವಾಯಿತು ಶಿಕ್ಷಣಕ್ಕೂ 2 ಅವಧಿ ಆಟಗಳಿಗೂ ಮೀಸಲಾಗಿದೆ. ಬಾಲಕ ಬಾಲಕಿಯರಿಗಾಗಿ ಪ್ರತ್ಯೇಕ ಚಟುವಟಿಕೆಗಳನ್ನು ಅವರ ವಯಸ್ಸಿನಗನುಗುಣವಾಗಿ ವಿಂಗಡಿಸಲಾಗಿದೆ.

ಏಕರೂಪ ಪಠ್ಯಕ್ರಮದ ವ್ಯವಸ್ಥೆಗಾಗಿ ಭಾರತ ಸರ್ಕಾರ ನಿರ್ಧರಿಸಿದ ನ್ಯಾಷನಲ್ ಫಿಟ್‍ನೆಸ್ ಕೋರ್ (ಎನ್‍ಎಫ್‍ಸಿ) ಚಟುವಟಿಕೆಗಳನ್ನು ಅನುಸರಿಸಬೇಕೆಂದು ಸೂಚಿಸಿದೆ. ಇದು ಬಹಳ ವ್ಯಾಪಕವಾಗಿದ್ದರೂ ಸ್ಥಳೀಯ ಸನ್ನಿವೇಶಗಳಿಗೆ ಹೊಂದಿಕೊಳ್ಳುವಂಥ ವ್ಯವದಾನ ಪಡೆದಿದೆ.ಈ ಪದ್ಧತಿಯಲ್ಲಿ ಲೇಜಿಂ, ಜನಪದ ಗಾನ, ಸಾಮೂಹಿಕ ನೃತ್ಯ ಮುಂತಾದವು ಸೇರಿವೆ. ಇದರಿಂದ ದೈಹಿಕ ಚಟುವಟಿಕೆಗಳು ಸರ್ವತೋಮುಖವಾಗಿ ಬೆಳೆಯಲು ಅವಕಾಶವಿದೆ. ಪ್ರತಿ ಶಾಲೆಯಲ್ಲೂ ಇರಬೇಕಾದ ಕನಿಷ್ಠ ವ್ಯಾಯಾಮ ಸಾಮಗ್ರಿ ಪಟ್ಟಿಯನ್ನೂ ಗೊತ್ತುಮಾಡಿದೆ.

ರಾಷ್ಟ್ರೀಯ ದೈಹಿಕ ಯೋಗ್ಯತಾದಳದ (ನ್ಯಾಷನಲ್ ಎಫಿಷಿಯೆನ್ಸಿ ಟೆಸ್ಟ್) ಮಾನಕದಂತೆ ಪ್ರತಿಯೊಬ್ಬ ಅಭ್ಯರ್ಥಿಗೂ ಅವರವರ ದೈಹಿಕ ಸ್ಪರ್ಧೆಗಳ ಯೋಗ್ಯತೆಯನ್ನು ಪರೀಕ್ಷೆಗಳ ಮೂಲಕ ನಿರ್ಧರಿಸಿ ಹಂತಹಂತವಾಗಿ ಬಾಂದು ಎರಡು ಮೂರು ನಕ್ಷತ್ರಗಳ ಬ್ಯಾಡ್ಜ್ ಅನ್ನೂ ಯೋಗ್ಯತಾಪ್ರಶಸ್ತಿಪತ್ರಗಳನ್ನೂ ಕೊಟ್ಟು ವಿದ್ಯಾರ್ಥಿವಿದ್ಯಾರ್ಥಿನಿಯರು ತಮ್ಮ ದೈಹಿಕ ಚಟುವಟಿಕೆಗಳನ್ನು ಉಳಿಸಿಕೊಳ್ಳಲು ಅವಕಾಶ ಮಾಡಿಕೊಡಲಾಗಿದೆ. ಈ ಪದ್ಧತಿ 1961ರಿಂದ ಆಚರಣೆಗೆ ಬಂದಿದೆ.

ಶಾಲೆಗಳಲ್ಲಿ ಮೇಲ್ಕಂಡ ದೈಹಿಕ ಶಿಕ್ಷಣ ಮಾರ್ಪಾಟುಗಳನ್ನು ಸುಲಭವಾಗಿ ಜಾರಿಗೆ ತರಲು ಶಾಲಾ ಶಿಕ್ಷಕರ ಸಂಸ್ಥೆಗಳಲ್ಲೂ ಬಿ.ಎಡ್. ಮತ್ತು ಬಿ.ಪಿ.ಎಡ್. ಕಾಲೇಜುಗಳ ಅಭ್ಯಾಸಪತ್ರಿಕೆಗಳ ವೇಳಾಪಟ್ಟಿಯಲ್ಲೂ ಮೇಲ್ಕಂಡ ದೈಹಿಕ ಶಿಕ್ಷಣವನ್ನು ಕಡ್ಡಾಯವಾಗಿ ಕಲಿಸಲಾಗುತ್ತಿದೆ.

ದೈಹಿಕ ಶಿಕ್ಷಣದ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಲು 1970ರಿಂದ ಪ್ರತಿ ಜಿಲ್ಲೆಯ ಜಿಲ್ಲಾ ವಿಭಾಗಾಧಿಕಾರಿಯ ಕಚೇರಿಯಲ್ಲಿ ಉನ್ನತ ದರ್ಜೆಯ ದೈಹಿಕ ಶಿಕ್ಷಣದಲ್ಲಿ ಹೆಚ್ಚಿನ ತರಪೇತು ಪಡೆದ ದೈಹಿಕ ಶಿಕ್ಷಣ ಅಧಿಕಾರಿಯನ್ನು ನೇಮಕ ಮಾಡಲಾಗಿತ್ತು. ಇದಲ್ಲದೆ ಪ್ರತಿ ಶಾಲೆಗೂ ಅಲ್ಲಿಯ ವಿದ್ಯಾರ್ಥಿ ಸಂಖ್ಯೆಗೆ ಅನುಗುಣವಾಗಿ ದೈಹಿಕ ಶಿಕ್ಷಣದ ಉಪಾಧ್ಯಾಯರನ್ನು ಒದಗಿಸಲಾಗುತ್ತಿದೆ.

ದೈಹಿಕ ಶಿಕ್ಷಣಕ್ಕೆ ಪರ್ಯಾಯ ಕಾರ್ಯಕ್ರಮಗಳು: ಎ ಸಿ ಸಿ, ಎನ್ ಸಿ ಸಿ, ಕ್ರೀಡಾಕೂಟಗಳು - ಇವು ದೈಹಿಕ ಶಿಕ್ಷಣಕ್ಕೆ ಪರ್ಯಾಯ ಕಾರ್ಯಕ್ರಮಗಳು. ಎನ್ ಸಿ ಸಿ ದಳವನ್ನು ಏರ್ಪಡಿಸಲಾಗದ ಪ್ರೌಢಶಾಲೆಗಳಲ್ಲಿ ಅದೇ ಉದ್ದೇಶಕ್ಕಾಗಿ ಸಹಾಯಕ ವಿದ್ಯಾರ್ಥಿ ದಳವನ್ನು 1952ರಲ್ಲಿ ಸ್ಥಾಪಿಸಲಾಯಿತು. ಈ ತರಬೇತು ಸ್ವಯಂಪ್ರೇರಿತವಾಗಿಯೂ ಐಚ್ಛಿಕವಾಗಿಯೂ ಇತ್ತು. ಇದನ್ನು 1964ರಲ್ಲಿ ರದ್ದುಪಡಿಸಿ ಎನ್‍ಎಫ್‍ಸಿ ದಳದ ಚಟುವಟಿಕೆಯಲ್ಲಿ ಐಕ್ಯಗೊಳಿಸಲಾಯಿತು.

1954ರಲ್ಲಿ ನ್ಯಾಷನಲ್ ಡಿಫೇನ್ಸ್ ಸ್ಕೀಂ (ಎನ್‍ಡಿಎಫ್) ಎಂಬ ಚಟುವಟಿಕೆಯನ್ನು ಪ್ರೌಢಶಾಲೆಗಳಲ್ಲಿ ಆಚರಣೆಗೆ ತರಲಾಯಿತು. ದೈಹಿಕ ಶಿಕ್ಷಣ, ಸಮಾಜ ಸೇವೆ, ವ್ಯಾಯಾಮ, ಶಿಸ್ತು, ಗುಂಪುಗಳಲ್ಲಿ ಕೆಲಸಮಾಡುವ ಅಭ್ಯಾಸ ಈ ಮುಖವಾದ ಶಿಕ್ಷಣ ನೀಡುವ ವ್ಯವಸ್ಥೆ ಆಗಿತ್ತು. 1966ರಲ್ಲಿ ಇದನ್ನು ಎನ್‍ಎಫ್‍ಸಿ ಚಟುವಟಿಕೆಯಲ್ಲಿ ಐಕ್ಯಗೊಳಿಸಲಾಯಿತು.

ರಾಷ್ಟ್ರೀಯ ರಕ್ಷಣಾ ವಿದ್ಯಾರ್ಥಿದಳ (ಎನ್‍ಸಿಸಿ) 1948ರಲ್ಲಿ ಭಾರತ ಸರ್ಕಾರದ ಆಜ್ಞೆಯಂತೆ ಶಾಲಾಕಾಲೇಜುಗಳಲ್ಲಿ ಪ್ರಾರಂಭಿಸಲ್ಪಟ್ಟಿತು. ನಾಯಕ ಗುಣ, ಶಿಸ್ತು, ಸೇವಾಬುದ್ಧಿಗಳನ್ನು ಬೆಳೆಸಿ ರಾಷ್ಟ್ರೀಯ ತುರ್ತು ಪರಿಸ್ಥಿತಿಗಳಲ್ಲಿ ರಕ್ಷಣಾದಳಗಳಿಗೆ ಸಹಾಯಕವಾಗುವಂಥ ಸೈನಿಕ ಶಿಕ್ಷಣ ಕೊಡುವುದೇ ಈ ದಳದ ಮುಖ್ಯ ಉದ್ದೇಶ. ಇದರಲ್ಲಿ ಕಾಲೇಜು ವಿದ್ಯಾರ್ಥಿಗಳಿಗೆ ಸೀನಿಯರ್ ಡಿವಿಜನ್, ಕಾಲೇಜು ಮತ್ತು ಹೈಸ್ಕೂಲು

ವಿದ್ಯಾರ್ಥಿನಿಯರಿಗಾಗಿ ಜೂನಿಯರ್ ಡಿವಿಜನ್ ಹೀಗೆ ವಿಭಾಗಗಳಿವೆ. ಇವುಗಳಲ್ಲಿ ನೆಲ, ಜಲ, ವಾಯುದಳಗಳೆಂಬ ಪ್ರತ್ಯೇಕ ವಿಭಾಗಗಳೂ ಇವೆ. ಸೀನಿಯರ್ ಡಿವಿಜನ್ ವಿಭಾಗದಲ್ಲಿ ಇಂಜಿನಿಯರಿಂಗ್, ಫಿರಂಗಿ, ಸಿಗ್ನಲ್, ಮೆಡಿಕಲ್ ಮುಂತಾದ ಪ್ರತ್ಯೇಕ ಉಪವಿಭಾಗಗಳಿವೆ. ಇದರ ಚಟುವಟಿಕೆಗಳು ನಾನಾಮುಖವಾಗಿ ವ್ಯಾಪಕವಾಗಿವೆ. ಪ್ರತಿ ವಿಭಾಗಕ್ಕೂ ರಕ್ಷಣಾದಳದ ಅಧಿಕಾರಿಗಳಿದ್ದು ರಕ್ಷಣಾದಳದ ಶಿಕ್ಷಣತಜ್ಞರು ಶಿಕ್ಷಣ ನೀಡುತ್ತಾರೆ.

ಈಗ ಭಾರತ ಸರ್ಕಾರದ ಆದೇಶದಂತೆ ವಿದ್ಯಾರ್ಥಿಗಳು ಸಮಾಜಕ್ಕೆ ಹೊಂದಿಕೊಂಡು ಗ್ರಾಮಾಂತರ ಪ್ರದೇಶಗಳ ಜನರ ಜೀವನ ಪರಿಚಯ ಮಾಡಿಕೊಡು ಸಮಾಜಸೇವೆ ಮಾಡಲು ನ್ಯಾಷನಲ್ ಸೋಷಿಯಲ್ ಸರ್ವೀಸ್ (ಎನ್‌ಎಸ್‌ಎಸ್) ಎಂಬ ದಳಗಳು ಕಾಲೇಜುಗಳಲ್ಲಿ ಸ್ಥಾಪಿತವಾಗಿರುತ್ತವೆ. ಪ್ರಾಯೋಗಿಕವಾಗಿ ಆರಂಭವಾಗಿರುವ ಈ ಸೇವಾ ಸಂಸ್ಥೆಯ ಶಿಕ್ಷಣವನ್ನು ಎಲ್ಲ ಕಾಲೇಜುಗಳಲ್ಲೂ ಕಡ್ಡಾಯವಾಗಿ ಆರಂಭ ಮಾಡಬೇಕೆಂಬ ವಿಷಯ ತೀವ್ರ ಪರಿಶೀಲನೆಯಲ್ಲಿದೆ.

ಎನ್‌ಸಿಸಿ, ಎಸಿಸಿ, ಎನ್‌ಡಿಎಫ್, ಎನ್‌ಎಸ್‌ಎಸ್ ದಳಗಳಲ್ಲಿ ತರಬೇತಿ ಹಿಂದಿಯಲ್ಲಿ ಜರಗುವುದಲ್ಲದೆ, ಕಾರ್ಯಭಾರ ಚಟುವಟಿಕೆಗಳ ಅಪ್ಪಣೆಗಳು ಕಮಾಂಡ್ಸ್ ಹಿಂದಿಯಲ್ಲೇ ಇರುವುದು ಒಂದು ವಿಶೇಷ. ಇದರಿಂದ ರಾಷ್ಟ್ರೀಯ ಭಾವೈಕ್ಯವಾಗಲೂ ಸಹಾಯಕವಾಗಿದೆ.

ದೈಹಿಕ ಶಿಕ್ಷಕರ ತರಬೇತಿ ಸಂಸ್ಥೆಗಳು: ಬೆಂಗಳೂರಿನ ವೈಎಂಸಿಎ ಸಂಸ್ಥೆ ಬಹಳ ಕಾಲದಿಂದ ಪದವೀಧರರಿಗೆ ಅಲ್ಪಾವಧಿಯ ಶಿಕ್ಷಣವನ್ನೂ ಎಸ್‌ಎಸ್‌ಎಲ್‌ಸಿ ಮುಗಿಸಿದವರಿಗೆ ಸರ್ಟಿಫಿಕೇಟ್ ಕೋರ್ಸನ್ನೂ ಒದಗಿಸುತ್ತಿದೆ. ಇದಲ್ಲದೆ ಬೆಳಗಾಂವಿ, ಧಾರವಾಡ ಮತ್ತು ಇತ್ತೀಚೆಗೆ ಚಿತ್ರದುರ್ಗ ಜಿಲ್ಲೆಯ ಮಲ್ಲಾಡಿ ಹಳ್ಳಿಯಲ್ಲೂ ಸರ್ಟಿಫಿಕೇಟ್ ಮಟ್ಟದ (ಸಿಪಿಎಡ್) ದೈಹಿಕ ಶಿಕ್ಷಣ ಸಂಸ್ಥೆಗಳಿವೆ.

ಪದವೀಧರ ಉಪಾಧ್ಯಾಯರಿಗೆ ಒಂಬತ್ತು ತಿಂಗಳ ಅವಧಿಯ ದೈಹಿಕ ಶಿಕ್ಷಣದ ಡಿಪ್ಲೋಮ ಮತ್ತು ಪದವೀಧರರದಲ್ಲದವರಿಗೆ ಸರ್ಟಿಫಿಕೇಟ್ ದರ್ಜೆಯ ಶಿಕ್ಷಣ ಒದಗಿಸಲು 1959ರಲ್ಲಿ ಬೆಂಗಳೂರಿನಲ್ಲಿ ಕರ್ನಾಟಕ ಸರ್ಕಾರ ಸುಸಜ್ಜಿತ ಕ್ರೀಡಾಂಗಣವನ್ನೂ ತರಬೇತಿ ಸಂಸ್ಥೆ, ವಿದ್ಯಾರ್ಥಿ ವಸತಿಗೃಹಗಳನ್ನೊಳಗೊಂಡ ಕಾಲೇಜನ್ನೂ ಕಂಠೀರವ ಕ್ರೀಡಾಂಗಣದಲ್ಲಿ ಸ್ಥಾಪಿಸಿತು. ಅಲ್ಲಿ ಪೂರ್ಣ ಅವಧಿಯ ಶಿಕ್ಷಣದ ಜೊತೆಗೆ ಆಟ ಓಟ ಹಾಗೂ ದೈಹಿಕ ಚಟುವಟಿಕೆಗಳ ಬಗ್ಗೆಯೂ ಅಲ್ಪಾವಧಿಯ ಶಿಕ್ಷಣಕ್ಕೂ ವ್ಯವಸ್ಥೆಯುಂಟು.

1971ರಲ್ಲಿ ಈ ಕಾಲೇಜು ಬೆಂಗಳೂರು ವಿಶ್ವವಿದ್ಯಾಲಯದ ಆಡಳಿತಕ್ಕೆ ಒಳಪಟ್ಟು 100 ಪದವೀಧರರಿಗೆ ಬಿಪಿಎಡ್ ಶಿಕ್ಷಣ ಕೊಡುತ್ತಿದೆ. ಇತ್ತೀಚೆಗೆ ಮೈಸೂರು ವಿಶ್ವವಿದ್ಯಾನಿಲಯವೂ ಬಿ ಪಿ ಎಡ್ ಮತ್ತು ಎಂ.ಪಿ.ಎಡ್. ಶಿಕ್ಷಣಗಳನ್ನು ಆರಂಭಿಸಿದೆ. ಈಗ ಎರಡು ವಿಶ್ವವಿದ್ಯಾನಿಲಯಗಳು ಸ್ನಾತಕೋತ್ತರ ಶಿಕ್ಷಣ (ಎಂ ಪಿ ಎಡ್) ಪ್ರಾರಂಭಿಸಿವೆ. ಇವಲ್ಲದೆ ಸರ್ಕಾರ ಅನೇಕ ದೈಹಿಕ ಶಿಕ್ಷಕರನ್ನೂ ಪಾಟಿಯಾಲಾದ ರಾಷ್ಟ್ರೀಯ ಕ್ರೀಡಾಸಂಸ್ಥೆಯಲ್ಲಿ ವಿಶೇಷ ತರಪೇತಿ ಪಡೆಯಲೂ ಕಳುಹಿಸುತ್ತದೆ.

ದೈಹಿಕ ಶಿಕ್ಷಣ ಮತ್ತು ಆರೋಗ್ಯ ಶಿಕ್ಷಣ: ಸಾಧಾರಣವಾಗಿ ಇವೆರಡೂ ಪರಸ್ಪರ ಸಂಬಂಧಿಸಿದ್ದರೂ ಇತ್ತೀಚಿನವರೆಗೂ ಆರೋಗ್ಯ ಶಿಕ್ಷಣ ದೈಹಿಕ ಶಿಕ್ಷಣ ಕಾರ್ಯಕ್ರಮದಲ್ಲಿ ಬರುತ್ತಿರಲಿಲ್ಲ. ಇತ್ತೀಚಿನ ಪ್ರಗತಿಪರ ಯೋಜನೆಗಳಿಗೆ ಅನುಗುಣವಾಗಿ ಹಾಗೂ ವಿದ್ಯಾ ಇಲಾಖೆಯ ಆದೇಶ ಮತ್ತು ಉಪಾಧ್ಯಾಯ ಶಿಕ್ಷಣದ ಅಭ್ಯಾಸಪತ್ರಿಕೆಗಳಲ್ಲಿ ಇವೆರಡನ್ನೂ ಒಂದೇ ಕಾರ್ಯಕ್ರಮವೆಂದು ಪರಿಗಣಿಸಲಾಗಿದೆ. ಉಪಾಧ್ಯಾಯರಿಗೆ ಮಕ್ಕಳ ಶರೀರ ರಚನೆ, ಮಾನಸಿಕ ಬೆಳೆವಣಿಗೆ, ವಯಸ್ಸಿನ ಚಟುವಟಿಕೆಗಳಿಗೆ ಬೇಕಾದ ವಿಟಮಿನ್ನುಗಳ ಆವಶ್ಯಕತೆ, ಅದನ್ನು ಒದಗಿಸುವ ಪದಾರ್ಥಗಳು, ರೋಗಗಳ ಸೂಚನೆ, ರೋಗಗಳನ್ನು ಗುರುತಿಸುವ ವಿಧಾನಗಳು, ಮಕ್ಕಳ ದೈಹಿಕ ನ್ಯೂನತೆಗಳು, ಕೆಲವು ಆಹಾರಾಂಶಗಳ ಕೊರತೆ ಮತ್ತು ವಿಟಮಿನ್ನುಗಳ ಅಭಾವದಿಂದ ಆಗುವ ದೈಹಿಕ ತೊಂದರೆಗಳು ಮುಂತಾದವನ್ನು ಅಭ್ಯಾಸಪತ್ರಿಕೆಯಲ್ಲಿ ಸೇರಿಸಬೇಕಾಗಿದೆ. ಪ್ರತಿಯೊಬ್ಬ ಶಾಲಾವಿದ್ಯಾರ್ಥಿಯ ಬಗ್ಗೆ ದೈಹಿಕ ಬೆಳೆವಣಿಗೆ ಮತ್ತು ಕೊರತೆಗಳ ಬಗ್ಗೆ ವಿವರವಾದ ಹೆಲ್ತ್ ರಿಕಾರ್ಡುಗಳ ಮಾದರಿ ಪಟ್ಟಿಯನ್ನು ಕೊಡಲಾಗಿದೆ. ಪ್ರತಿ ವರ್ಷವೂ ವೈದ್ಯ ಇಲಾಖೆ ನಡೆಸುವ ವಿದ್ಯಾರ್ಥಿಯ ಆರೋಗ್ಯ ಪರೀಕ್ಷೆಯ ಸಮಯದಲ್ಲಿ ಶಾಲಾ ದೈಹಿಕ ಶಿಕ್ಷಣ ಉಪಾಧ್ಯಾಯರು ಸಹಾಯಮಾಡಲು ಶಿಕ್ಷಣ ಪಡೆದಿದ್ದಾರೆ. ಶಾಲಾ ಹೆಲ್ತ್ ಕ್ಲಿನಿಕ್‌ಗಳು ಈ ಉಪಾಧ್ಯಾಯರ ಮೇಲ್ವಿಚಾರಣೆಯಲ್ಲಿ ನಡೆಯುತ್ತವೆ.

ಕರ್ನಾಟಕ ರಾಜ್ಯದಲ್ಲಿ ದೈಹಿಕ ಶಿಕ್ಷಣಕ್ಕೆ ಸಂಬಂಧಿಸಿದ ಸಮಸ್ಯೆಗಳೂ ಅನೇಕವಿವೆ. ಇದಕ್ಕೆ ಹಣಕಾಸು ಒದಗುವುದು ಶಾಲಾ ಕಾಲೇಜು ವಿದ್ಯಾರ್ಥಿಗಳು ಕೊಡುವ ಶುಲ್ಕದಿಂದಲೇ. ಇದು ಪ್ರೌಢಶಾಲೆಗಳಲ್ಲಿ ಮೂರು ರೂಪಾಯಿಗಳು, ಕಾಲೇಜುಗಳಲ್ಲಿ ವರ್ಷಕ್ಕೆ ಆರು ರೂಪಾಯಿಗಳು, ತೀರ ಸಣ್ಣ ವಿದ್ಯಾರ್ಥಿ ಸಂಖ್ಯೆ ಇರುವ ಕಾಲೇಜುಗಳಲ್ಲಿ ವ್ಯಾಯಾಮ ಶಿಕ್ಷಣಕ್ಕೆ ಬೇಕಾದ ಉಪಕರಣಗಳನ್ನು ಒದಗಿಸುವುದು, ಕ್ರೀಡಾಂಗಣಗಳನ್ನು ದುರಸ್ತಿಮಾಡುವುದು, ಪಂದ್ಯಗಳಿಗೆ ಸಿದ್ಧಪಡಿಸುವುದು, ಆ ಕ್ರೀಡೆಗಳಿಗೆ ಬೇಕಾದ ಆಟದ ವಸ್ತುಗಳನ್ನೂ ಬೆಲೆಬಾಳುವ ಉಪಕರಣಗಳನ್ನೂ ಕೊಳ್ಳುವುದು ಅಸಾಧ್ಯದ ವಿಷಯವಾಗಿದೆ. ಅಂಥ ಸಂಸ್ಥೆಗಳ ಚಟುವಟಿಕೆಗಳು ಸ್ವಾಭಾವಿಕವಾಗಿ ಸ್ಥಗಿತವಾಗುತ್ತವೆ. ಎಷ್ಟೋ ಸಂಸ್ಥೆಗಳಲ್ಲಿ ನುರಿತ ದೈಹಿಕ ಶಕ್ಷಣ ಉಪಾಧ್ಯಾಯರಾಗಲೀ ಬೇಕಾದಷ್ಟು ವಿಸ್ತಾರವಾದ ಆಟದ ಬಯಲುಗಳಾಗಲಿ ಇಲ್ಲ. ಸದ್ಯದ ಪರಿಸ್ಥಿತಿಯಲ್ಲಿ ಇರುವ ಇಂಥ ಕೊರತೆಗಳನ್ನು ನಿವಾರಿಸಬೇಕಾಗಿದೆ.

(ಎಂ.ಆರ್.ಆರ್.,ಎನ್.ಸಿ.ಪಿ.)

**ದೊಂಬರು :** ಸಾಮಾನ್ಯವಾಗಿ ಕರ್ನಾಟಕದ ಎಲ್ಲ ಕಡೆಗಳಲ್ಲಿಯೂ ಕಾಣಬರುವ ಅಲೆಮಾರಿ ಜನಾಂಗ. ಇವರು ಊರಿಂದ ಊರಿಗೆ ತಲೆಯಮೇಲೆ ಸಾಮಾನುಗಳನ್ನು ಹೊತ್ತೋ ಇಲ್ಲವೆ ಕತ್ತೆಯ ಮೇಲೆ ಹೇರಿಕೊಂಡೋ ಇಲ್ಲವೆ ಅಡ್ಡೆಗಳಲ್ಲಿ ಇಟ್ಟುಕೊಂಡೋ ವರ್ಷವೆಲ್ಲ ತಿರುಗಿ ಆಟ ಆಡಿ ಅನಂತರ ತಮ್ಮ ಮೂಲ ಊರುಗಳಿಗೆ ಬಂದು ಅಲ್ಲಿ ಮನೆದೇವರ ಹಬ್ಬ ಆಚರಿಸುತ್ತಾರೆ. ಶಕ್ತಿ ದೇವತೆಗಳು ಹನುಮಂತ ಇವರ ಮನೆದೇವರುಗಳು.

ಶಕ್ತಿಯುತ ವ್ಯಾಯಾಮ ಪ್ರದರ್ಶನಗಳನ್ನು ಮಾಡುವುದು ಇವರ ಒಂದು ವೈಶಿಷ್ಟ್ಯ. ಇದಕ್ಕೆ ದೊಂಬರಾಟ ಎನ್ನುತ್ತಾರೆ. ಇವರು ತಮ್ಮ ಚಾತುರ್ಯ ಹಾಗೂ ಕೈಚಳಕವನ್ನು ಪ್ರದರ್ಶಿಸಿ ತಮ್ಮ ವೃತ್ತಿಗೆ ಮಹತ್ತ್ವವನ್ನು ತಂದು ಕೊಂಡಿದ್ದಾರೆ. ಇವರು ತಮ್ಮ ಆಟಗಳನ್ನು ಮಧ್ಯಾಹ್ನದ ವೇಳೆಯಲ್ಲಿ ನಗರದ ಪ್ರಮುಖ ಬೀದಿಗಳ ಮಧ್ಯದಲ್ಲಿ ಪ್ರಮುಖರ ಅಪ್ಪಣೆ ಪಡೆದು ನಡೆಸುತ್ತಾರೆ. ಆಟವನ್ನು ಪ್ರದರ್ಶಿಸುವಾಗ ಹೆಚ್ಚಿನ ಸಂಖ್ಯೆಯಲ್ಲಿ ಪ್ರೇಕ್ಷಕರನ್ನು ಆಕರ್ಷಣೆ ಮಾಡುವ ಉದ್ದೇಶದಿಂದ ಇವರ ತಂಡದಲ್ಲಿನ ಹೆಂಗಸೊಬ್ಬಳು ಡೋಲು ಬಡಿಯುತ್ತಿರುತ್ತಾಳೆ. ಗಂಡಸು ಶಿಳ್ಳೆ, ಕೇಕೆಗಳನ್ನು ಹಾಕುತ್ತ ಊರಿನ ಪ್ರಮುಖರನ್ನು ಹೊಗಳುತ್ತಿರುತ್ತಾನೆ. ಕೆಲವೊಮ್ಮೆ ಚಾಟಿಯನ್ನು ನೆಲಕ್ಕೆ ಬಡಿದು ಶಬ್ದಮಾಡುವುದೂ ಉಂಟು. ಆಟಗಾರ ಆಟದ ಸಮಯದಲ್ಲಿ ಬೇರೆ ಯಾವ ಬಟ್ಟೆಯನ್ನೂ ಧರಿಸದೆ ಹನುಮಂತನ ಚಡ್ಡಿಯೊಂದನ್ನು ಹಾಕಿಕೊಂಡಿರುತ್ತಾನೆ. ಈತ ಕೂದಲಿನಿಂದ ಅಥವಾ ಕಪ್ಪು ಉಣ್ಣೆಯಿಂದ ಮಾಡಿದ ಮಧ್ಯಮ ಗಾತ್ರದ ದಾರವನ್ನು ಬಲತೋಳಿಗೆ ಇಲ್ಲವೆ ಕತ್ತಿಗೆ ಕಟ್ಟಿಕೊಂಡಿರುತ್ತಾನೆ.

ಆಟದ ಪ್ರಾರಂಭದಲ್ಲಿ ದೊಂಬ ಸಗಣಿಯಿಂದ ಮಾಡಿದ ಬೆನಕನನ್ನು ಪೂಜಿಸಿ ಅನಂತರ ಗಣೆಯನ್ನು ನೆಡುತ್ತಾನೆ. ಅನಂತರ ಲಾಗ ಹಾಕುವುದು ಹಿಂಗಣ್ಣು ಮುಂಗಣ್ಣು ಎಸೆಯುವುದು. ಅತರ್‌ಲಾಗ ಹಾಕುವುದು, ನಿಂತ ನಿಲವಿನಲ್ಲಿಯೇ ಪಲ್ಟಿಗಳನ್ನು ಹಾಕುವುದು, ಭಾರವಾದ ಕಬ್ಬಿಣದ ಗುಂಡುಗಳನ್ನು ಎಸೆಯುವುದು. ಮರಗಾಲು ಕಟ್ಟಿಕೊಂಡು

ನಡೆಯುವುದು, ಚಕ್ರ ಬಾಣ ನಿರ್ಮಿಸುವುದು, ಮರದ ತೊಲೆಗೆ ಮಧ್ಯದಲ್ಲಿ ಹಗ್ಗ ಕಟ್ಟಿ ಅದನ್ನು ಹಲ್ಲಿನಲ್ಲಿ ಕಚ್ಚಿಕೊಂಡು ತೊಲೆಯನ್ನು ಮೇಲೆ ಎತ್ತುವುದು. ಇಲ್ಲವೆ ಅದನ್ನು ತನ್ನ ಜುಟ್ಟಿಗೆ ಕಟ್ಟಿ ಮೇಲಕ್ಕೆತ್ತುವುದು ಮುಂತಾದ ಶಕ್ತಿಪ್ರದರ್ಶನಕ ಕೆಲಸಗಳನ್ನು ಮಾಡುತ್ತಾನೆ. ಈ ಮಧ್ಯೆ ಸಣ್ಣಪುಟ್ಟ ಹುಡುಗರು ತಂತಿಯ ಮೇಲೆ ನಡೆಯುವುದು, ಕಬ್ಬಿಣದ ಬಳೆಯೊಳಗಡೆ ನುಗ್ಗುವುದು ಮುಂತಾದ ಚಮತ್ಕಾರಗಳನ್ನು ನಡೆಸುತ್ತಾರೆ. ಅನಂತರ ಆಟಗಾರ ನುರ್ಜು ಕಲ್ಲಿನ ಮೇಲೆ ಮಲಗಿ ಹೊಟ್ಟೆಯಮೇಲೆ ಚಪ್ಪಡಿ ಕಲ್ಲೊಂದನ್ನು ಮಡಗಿಸಿಕೊಂಡು ಮೊಡ್ಡುಸುತ್ತಿಗೆಯಿಂದ ಬಡಿಸಿಕೊಳ್ಳುತ್ತಾನೆ. ಜನಗಳಿಂದ ತುಂಬಿದ ಗಾಡಿಯನ್ನು ಒಬ್ಬನೇ ಸಾಕಷ್ಟು ದೂರ ಎಳಿಯುತ್ತಾನೆ. ಗಣೆಯ ಮೇಲೆ ಹತ್ತಿ ಸಮಾನಾಂತರವಾಗಿ ಮಲಗಿ ಅಲ್ಲಿಯೇ ಅನೇಕ ಸೂಕ್ಷ್ಮತರವಾದ ಚಮತ್ಕಾರದ ಪ್ರದರ್ಶನಗಳನ್ನು ಮಾಡುತ್ತಾನೆ. ಈತ ನಡೆಸುವ ಎಲ್ಲ ಆಟಗಳೂ ಕಷ್ಟಸಾಧ್ಯವಾಗಿದ್ದು ಪ್ರೇಕ್ಷಕರನ್ನು ಆಕರ್ಷಿಸುವಂಥವಾಗಿರುತ್ತವೆ.

ಸಾಮಾನ್ಯವಾಗಿ ದೊಂಬರು ಅವಿಭಕ್ತ ಕುಟುಂಬದವರಾಗಿದ್ದು ಎಲ್ಲರೂ ಆಟದಲ್ಲಿ ನಿಷ್ಣಾತರಾಗಿರುತ್ತಾರೆ. ಪ್ರಾಯದವರು ಹಾಗೂ ಮಕ್ಕಳು ಆಟದಲ್ಲಿ ಹೆಚ್ಚಾಗಿ ಭಾಗವಹಿಸುತ್ತಾರೆ. ಕೆಲವರು ಸಣ್ಣ ಪುಟ್ಟ ಮಾಟಮಂತ್ರದ ಕೆಲಸ, ಕೈಚಳಕದ ಕೆಲಸ ಮಾಡುವುದೂ ಉಂಟು. ಆಟ ಮುಗಿದ ಅನಂತರದ ಆ ತಂಡದಲ್ಲಿನ ಸುಂದರವಾದ ಹೆಣ್ಣೊಬ್ಬಳು ತಟ್ಟೆ ಹಿಡಿದು ಪ್ರೇಕ್ಷಕರಿಂದ ಹಣ ಸಂಗ್ರಹಿಸುತ್ತಾಳೆ. ಆದಾಯ ಆಟಕ್ಕೆ ತಕ್ಕಂತಿರುತ್ತದೆ. ಕೆಲವೊಮ್ಮೆ ಆಟದ ಸಮಯದಲ್ಲಿ ಸರ್ಕಸ್ಸಿನಲ್ಲಿ ಮಾಡುವಂತೆ ನಕಲಿ ಮತ್ತು ಕೋಡಂಗಿ ಚೇಷ್ಟೆಗಳನ್ನು ಮಾಡಿ ಪ್ರೇಕ್ಷಕರನ್ನು ಸಂತೋಷಪಡಿಸಿ ಅವರಿಂದ ಹೆಚ್ಚು ಹಣವನ್ನು ಪಡೆಯುವುದೂ ಉಂಟು. ಆಟದ ಸಮಯದಲ್ಲಿ ಇವರು ಒಂದು ಕಡೆ ಬಟ್ಟೆ ಹಾಸಿ ಅದರ ಮೇಲೆ ತಮ್ಮ ಪೂರ್ವಿಕರ ಕಠಾರಿ, ಖಡ್ಗ ಮುಂತಾದ ಕೆಲವು ಹಳೆಯಕಾಲದ ಆಯುಧಗಳನ್ನು ಪ್ರದರ್ಶಿಸುತ್ತಾರೆ.

ದೊಂಬರ ಹೆಂಗಸರು ಬಿಡುವಿನ ವೇಳೆಯಲ್ಲಿ ಮರದ ಬಾಚಣಿಗೆಗಳನ್ನು ಮಾಡಿ ಮಾರುತ್ತಾರೆ. ಮನೆ ಮನೆಗೂ ಹೋಗಿ ಕೈಯಲ್ಲಿ (ಸೂತ್ರದ ಗೊಂಬೆಯಂಥದು) ಗೊಂಬೆ ಹಿಡಿದು ಹಾಡು ಹೇಳಿಕೊಂಡು ಅದನ್ನು ಅವರ ಮುಂದೆ ಕುಣಿಸಿ ದವಸಧಾನ್ಯಗಳನ್ನು ಸಂಗ್ರಹಿಸುವುದೂ ಉಂಟು.

**ದೊಂಬಿದಾಸರು :** ಜನಪದ ವೃತ್ತಿಗಾಯಕರು, ಈ ಜನಾಂಗದವರು ಕರ್ನಾಟಕದಾದ್ಯಂತವೂ ಕರ್ನಾಟಕದ ಹೊರಗೂ ಕಂಡುಬರುತ್ತಾರೆ. ಉತ್ತರ ಕರ್ನಾಟಕದಲ್ಲಿ ಇವರನ್ನು ದುಂಬೇದಾಸರು ಎಂದು ಕರೆಯುತ್ತಾರೆ. ಇವರ ಪೂರ್ವನೆಲೆ ಸರಿಯಾಗಿ ತಿಳಿಯದು. ಇವರಲ್ಲಿ ಹಲವು ಪಂಗಡಗಳಿದ್ದು ಒಂದೊಂದನ್ನೂ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಇವರದು ಅಲೆಮಾರಿ ಸ್ವಭಾವ. ಒಂದು ನಿರ್ದಿಷ್ಟ ಕಸಬಿಗೆ ಅಂಟಿಕೊಂಡವರಲ್ಲ. ನರಸಿಂಹ ಸ್ವಾಮಿ, ವೆಂಕಟರಮಣಸ್ವಾಮಿ ಇವರ ಆರಾಧ್ಯದೈವ.

ದಕ್ಷಿಣ ಕರ್ನಾಟಕದಲ್ಲಿ ವಿಶೇಷವಾಗಿ ಬೆಂಗಳೂರು, ತುಮಕೂರು, ಮಂಡ್ಯ, ಕೋಲಾರ, ಮೈಸೂರು ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಇವರ ಮನೆಮಾತು ತೆಲುಗು. ನಾಟಕ ಮಾಡುವುದು, ಕಥೆ ಹಾಡುವುದು ಕನ್ನಡದಲ್ಲಿ, ನಾಟಕ ಮಾಡುವುದನ್ನು ದಾಸಕೂಟ ಎಂದು ಕರೆಯುತ್ತಾರೆ. ನಾಟಕಗಳಲ್ಲಿ ಹೆಂಗಸರೂ ಪಾತ್ರ ವಹಿಸುತ್ತಾರೆ. ಭಕ್ತಪ್ರಹ್ಲಾದ, ಹರಿಶ್ಚಂದ್ರ, ಕೃಷ್ಣಪಾರಿಜಾತ, ಮಾರ್ಕಂಡೇಯ, ನಳಚರಿತ್ರೆ, ಪ್ರೇಮಸತ್ಯಭೋಜ, ಗಂಗೆಗೌರಿ ಜಗಳ - ಇವು ಇವರು ಹೆಚ್ಚಾಗಿ ಆಡುವ ನಾಟಕಗಳು. ಇವರು ಹಾಕುವ ಸ್ತ್ರೀಪಾತ್ರಗಳು ಅತ್ಯಂತ ಆಕರ್ಷಕವಾಗಿರುತ್ತಿದ್ದುದರಿಂದ ಇವರಿಗೆ ಹೆಣ್ಣುವೇಷದವರು ಎಂಬ ಹೆಸರು ಬಂದಿರುವಂತೆ ತೋರುತ್ತದೆ. ದೊಂಬಿದಾಸರು ನಾಟಕಗಳನ್ನು ಆಡಿದರೂ ಹೆಚ್ಚು ಪ್ರಸಿದ್ಧರಾಗಿರುವುದು ಹಾಡುವುದರಿಂದ, ಕಥೆ ಹಾಡಲು ಮೂವರು ಸೇರುತ್ತಾರೆ. ಮುಖ್ಯ ಕಥೆಗಾರ ಏಕತಾರಿಯನ್ನು, ಜೊತೆಯವರು ದಮ್ಮಡಿ, ಚಿಟಗಿಯನ್ನು ಹಿಡಿಯುತ್ತಾರೆ. ಲಾವಣಿಗಳು ನಾದಮಯವಾಗಿ ರಾಗಬದ್ಧವಾಗಿ ಮುಂದುರಿಯುತ್ತವೆ. ಬಹುಮಟ್ಟಿಗೆ ಇವರ ಎಲ್ಲ ಲಾವಣಿಗಳೂ ರಗಳೆ ರೂಪದಲ್ಲಿರುತ್ತವೆ. ಏಕತಾರಿಯ ಸಹಾಯದಿಂದ ಹಾಡುವ ಇವರ ಹಾಡುಗಳು ಕರ್ನಾಟಕದಲ್ಲೆಡೆಯೂ ಪ್ರಸಿದ್ಧಿಗೊಂಡಿವೆ. ಇವನ್ನು 'ತಂದನಾನಾ' ಪದಗಳು ಎನ್ನುವುದೂ ಉಂಟು. ಶಿವಕಥೆಗಳನ್ನೂ ವೈಷ್ಣವ ಕಥೆಗಳನ್ನೂ ಒಟ್ಟೊಟ್ಟಿಗೆ ಹಾಡುತ್ತಾರೆ. ಕೆಲವು ಲೌಕಿಕ ಕಥೆಗಳನ್ನೂ ಕಲಿತಿದ್ದು, ಜನ ಬಯಸಿದಾಗ ಅವನ್ನು ಸೊಗಸಾಗಿ ಹಾಡುವುದುಂಟು. ಇದರಲ್ಲಿ ಹೆಂಗಸರೂ ಪಾಲ್ಗೊಳ್ಳುತ್ತಾರೆ. ಇವರು ಹಾಡುವ ಕೆಲವು ಪ್ರಮುಖ ಕತೆಗಳೆಂದರೆ ಗಂಗೆಗೌರಿ ಕಥೆ, ಹುಟ್ಟಿದಳೆ ಗೌರಮ್ಮ ಭೂಲೋಕದೊಳಗೆ, ಕೃಷ್ಣಕೊರವಂಜಿ, ಬಾಲನಾಗಮ್ಮ, ಮಾಗಡಿ ಕೆಂಪೇಗೌಡ, ಕಲಿಯುಗದ ಬಾಲೆ, ಅಣ್ಣತಂಗಿ, ಬಂಜೆ ಹೊನ್ನಮ್ಮ ಮೊದಲಾದವು. ಈ ಎಲ್ಲಾ ಕಥೆಗಳೂ ಒಂದಲ್ಲ ಒಂದು ರೀತಿಯಲ್ಲಿ ಅತ್ಯಂತ ಜನಪ್ರಿಯಗೊಂಡಿವೆ.
(ಡಿಕೆಆರ್)

**ದೊಡವಾಡ :** ಬೆಳಗಾಂವಿ ಜಿಲ್ಲೆ ಸಂಪಾಗಾಂವ ತಾಲ್ಲೂಕಿನ ಒಂದು ಗ್ರಾಮ. ಐತಿಹಾಸಿಕ ಸ್ಥಳ. ಬೈಲಹೊಂಗಲ ಪಟ್ಟಣದಿಂದ 19 ಕಿಮೀ ದೂರದಲ್ಲಿದೆ. ಜನಸಂಖ್ಯೆ: 12,000.

ಹಿಂದೆ ಈ ಊರಿನಲ್ಲಿ ದೊಡ್ಡ ಬಾವಿಗಳಿದ್ದವು. ಅವುಗಳಿಂದಾಗಿಯೇ ಊರಿಗೆ ದೊಡವಾಡ ಎಂಬ ಹೆಸರು ಬಂತೆಂದು ಪ್ರತೀತಿ. ಪ್ರಾಚೀನ ಕಾಲದಲ್ಲಿ ದೊಡವಾಡ ಒಂದು ಅಗ್ರಹಾರವಾಗಿತ್ತು. ಕದಂಬ ಪೆರ್ಮಾಡಿ ಇದನ್ನು ಸ್ಥಾಪಿಸಿದ. ಕೆಲಕಾಲ ಇದು ನವಲಗುಂದ ಆಡಳಿತ ಪ್ರದೇಶಕ್ಕೆ ಒಳಪಟ್ಟಿತ್ತು. ಈ ಊರಿನ ಕೋಟೆ ಸುಂದರವಾಗಿತ್ತೆಂದು ಊರು ವಿಶಾಲವೂ ಅಚ್ಚುಕಟ್ಟಾಗಿಯೂ ಇತ್ತೆಂದು ಕ್ಯಾಪ್ಟನ್ ಮೂರ್ ಎಂಬ ಅಧಿಕಾರಿಯ ದಾಖಲೆಯಿಂದ (1790) ತಿಳಿದುಬರುತ್ತದೆ. ಕೋಟೆ ಇಂದು ಹಾಳಾಗಿದೆ. ಸ್ವಾತಂತ್ರ್ಯಪೂರ್ವದಲ್ಲಿ ಈ ಊರು ಸಾಂಗಲಿ ಸಂಸ್ಥಾನಕ್ಕೆ ಸೇರಿತ್ತು. ಇಲ್ಲಿ ವೀರಭದ್ರ ದೇವಾಲಯವಿದೆ. ವೀರಭದ್ರ ದೇವರ ಪಕ್ಕದಲ್ಲಿ ಗಣಪತಿ ಮತ್ತು ನಿಂತ ಭಂಗಿಯ ಶಕ್ತಿದೇವತೆಯ ಮೂರ್ತಿಗಳಿವೆ. ಈ ದೇವಾಲಯದ ಮುಂಭಾಗದಲ್ಲಿರುವ 1081 ರ ಶಾಸನದ ತುದಿಭಾಗದಲ್ಲಿ ತೀರ್ಥಂಕರನ ಮೂರ್ತಿಯನ್ನು ಕಂಡರಿಸಲಾಗಿದೆ. ಇದೊಂದು ದಾನ ಶಾಸನ. 1962 ರಲ್ಲಿ ಈ ದೇವಾಲಯವನ್ನು ನವೀಕರಿಸಲಾಗಿದೆ. ಇದಲ್ಲದೆ ದ್ಯಾಮವ್ವ, ಹನುಮಂತ, ರಾಮಲಿಂಗೇಶ್ವರ, ಬಸವಣ್ಣ, ಕರೆವ್ವ, ಸಂಗಮೇಶ್ವರ, ಗಣಪತಿ ಮಹಾಬಳೇಶ್ವರ ಗುಡಿಗಳು ಈ ಊರಿನಲ್ಲಿವೆ.

ರಾಮಲಿಂಗೇಶ್ವರ ಗುಡಿ ಅತ್ಯಂತ ಪ್ರಾಚೀನವಾಗಿದ್ದು ಚಾಳುಕ್ಯಪೂರ್ವ ವಾಸ್ತುವಿನ್ಯಾಸ ಒಳಗೊಂಡಿದೆ. ವಿಜಯನಗರದ ಕಾಲದಲ್ಲಿ ಇದು ನವೀಕರಣಗೊಂಡಿತೆಂದು ತಿಳಿಯುತ್ತದೆ. ನೆಲಮಾಳಿಗೆಯುಳ್ಳ ಮಹಾಬಳೇಶ್ವರ ಗುಡಿಯೂ ಇತ್ತೀಚೆಗೆ ನವೀಕರಣಗೊಂಡಿದೆ. ಸಂಗಮೇಶ್ವರ ಗುಡಿ ಮತ್ತು ಸಂಗಪ್ಪಜ್ಜನ ಮಠ ಪ್ರತ್ಯೇಕವಾಗಿವೆ. ಸಂಗಮೇಶ್ವರ ಗುಡಿಯ ಹತ್ತಿರ ಒಂದು ವೀರಗಲ್ಲಿದೆ. ಕದಂಬ ವಜ್ರದೇವನ ಸೇವಕ ರಾಯಸಹಾನಿ ಸೋದಪ್ಪನ ಮಗ ವಿಜಯಸಹಾನಿ ಯುದ್ಧದಲ್ಲಿ ಹೋರಾಡಿ ಮಡಿದ ವಿಷಯ ಅದರಲ್ಲಿದೆ. ಬಸವಣ್ಣನ ಗುಡಿಯಲ್ಲಿಯೂ ಒಂದು ವೀರಗಲ್ಲಿದ್ದು ಅದು ಜಯಕೇಶಿ ಅರಸನ ಸೇವಕ (ಡಿಂಗರಿಗ) ಲಹಾದನ ವೀರಮರಣವನ್ನು ಚಿತ್ರಿಸುತ್ತದೆ. ಸಂಗಮೇಶ್ವರ ಗುಡಿಯ ಹಿಂಭಾಗದಲ್ಲಿ ಬಸವಣ್ಣನ ಗುಡಿ ಇದೆ. ಊರ ಹೊರವಲಯದಲ್ಲಿ ಕೆರೆ ಮತ್ತು ದೊಡ್ಡ ಬಾವಿಗಳಿವೆ. ಅಲ್ಲಿಯೇ ಮಡಿವಾಳೇಶ್ವರನ ಗುಡಿ ಇದೆ. ಕಲ್ಮಠದ ಎದುರಿನಲ್ಲಿ ಭಗ್ನಾವಸ್ಥೆಯಲ್ಲಿರುವ ವೀರಸ್ಮಾರಕವಿದೆ.

ಈ ಊರಿನಲ್ಲಿ ಯಮನೂರ ರಾಜಾಭಕ್ಷನ ದರ್ಗಾ ಇದೆ. ಮರಾಠ ಸಮುದಾಯದ ಜನ ಈ ದರ್ಗಾಕ್ಕೆ ನಡೆದುಕೊಳ್ಳುತ್ತಾರೆ. (ಆರ್.ಕೆ.ಎಂ.)

**ದೊಡ್ಡಕಾನ್ಯ :** ಮೈಸೂರು ಜಿಲ್ಲೆಯಲ್ಲಿ ಮ್ಯಾಗ್ನಟೈಟ್ ಗಣಿಗಳ ಸ್ಥಳ. ಮೈಸೂರು ನಗರದ ದಕ್ಷಿಣಕ್ಕೆ 9ಕಿಮೀ ಕಡಕೊಳ ರೈಲ್ವೆ

ನಿಲ್ದಾಣದಿಂದ ಪಶ್ಚಿಮಕ್ಕೆ ಸು. 5 ಕಿಮೀ ದೂರದಲ್ಲಿದೆ. ಮೈಸೂರು ಜಿಲ್ಲೆಯ ಉತ್ತಮವಾದ ಮತ್ತು ದೊಡ್ಡದಾದ ಖನಿಜ ನಿಕ್ಷೇಪಗಳಲ್ಲಿ ದೊಡ್ಡಕಾನ್ಯದ ಮ್ಯಾಗ್ನಟೈಟ್ ನಿಕ್ಷೇಪವೂ ಒಂದು. ದೊಡ್ಡಕಾನ್ಯದ ಭೂವೈಜ್ಞಾನಿಕ ವಲಯದಲ್ಲೇ ಇನ್ನೂ ಕೆಲವು ಮುಖ್ಯ ಗಣಿಗಳಿವೆ. ಅವು ದೊಡ್ಡ ಕಾಟೂರು, ಸಿಂಧುವಳ್ಳಿ, ಗುರೂರು, ತಳೂರು, ಮಾವಿನ ಹಳ್ಳಿ, ಹುಲ್ಲಹಳ್ಳಿ ಮತ್ತು ಚಟ್ಟನಹಳ್ಳಿ, ಇವುಗಳೆಲ್ಲಲ್ಲ ದೊಡ್ಡಕಾನ್ಯದ ಗಣಿಯೇ ಅತಿ ಮುಖ್ಯವಾದುದು ಮತ್ತು ದೊಡ್ಡದು. ಪ್ರಾರಂಭದಲ್ಲಿ ಇಲ್ಲಿಯ ಗಣಿಗಳು ಮುಖ್ಯವಾಗಿ ಕ್ರೋಮೈಟ್ ಅದುರಿಗಾಗಿ ತೆಗೆದವು. ಈ ಖನಿಜನಿಕ್ಷೇಪದಲ್ಲಿ ಆರು ಫರ್ಲಾಂಗು ಉದ್ದ,ಎರಡು ಫರ್ಲಾಂಗು ಅಗಲವುಳ್ಳ ಮಸೂರಾಕಾರದ ಪೆರಿಡೊಟೈಟ್ ಶಿಲೆಯ ಹರವು ಇದೆ. ಇದರಲ್ಲಿ ಒಂದಕ್ಕೊಂದು ಹೆಣೆದುಕೊಂಡಿರುವ ಅನೇಕ ಮ್ಯಾಗ್ನಟೈಟ್ ಎಳೆಗಳಿವೆ. ಈ ಎಳೆಗಳು ಒಂದು ಅಥವಾ ಎರಡು ಅಂಗುಲದಿಂದ ಎರಡು ಅಥವಾ ಮೂರು ಅಡಿಗಳಿಗಿಂತ ಹೆಚ್ಚು ಅಗಲವಾಗಿ ಇರುತ್ತವೆ. ಸರಾಸರಿ ಇಪ್ಪತ್ತು ಅಡಿ ಆಳದವರೆಗೆ ಸುಮಾರು ಐದು ಲಕ್ಷಟನ್ ಮ್ಯಾಗ್ನಟೈಟ್ ಇರುವುದಾಗಿ ಅಂದಾಜು ಮಾಡಲಾಗಿದೆ.

1917ರಿಂದ ಕಬ್ಬಿಣ ಮತ್ತು ಉಕ್ಕಿನ ಕಂಪನಿ, ಮುಂಬಯಿ - ಇದು ಇಲ್ಲಿ ಸರ್ಕಾರದಿಂದ ಗುತ್ತಿಗೆ ಪಡೆದು ಗಣಿಗಳನ್ನು ನಡೆಸುತ್ತಿದೆ. ಈ ಗಣಿಗಳಲ್ಲಿ 1920 ರಿಂದ 1972ರ ವರೆಗೆ, 1,70,974.14 ಮೆಟ್ರಿಕ್ ಟನ್ ಮ್ಯಾಗ್ನಟೈಟ್ ಹೊರ ತೆಗೆಯಲಾಗಿದೆ. 1940ರ ವರೆಗೆ ಈ ಗಣಿಗಳ ವಾರ್ಷಿಕ ಉತ್ಪಾದನೆ ಸರಾಸರಿ 2500 ಟನ್ನುಗಳಷ್ಟಿದ್ದು, ಅನಂತರ 4,000 ದಿಂದ 5,000 ಮೆಟ್ರಿಕ್ ಟನ್ನುಗಳಿಗೆ ಏರಿದೆ. ಈ ಉತ್ಪಾದನೆಯೆಲ್ಲವೂ ಜೆಂಷಡ್‌ಪುರದಲ್ಲಿರುವ ತಾತಾ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯಲ್ಲಿಯೇ ಉಪಯೋಗವಾಗುತ್ತಿದೆ. ಈಗಿರುವ ಗಣಿಗಳಲ್ಲಿ ಇನ್ನೂ ಸುಮಾರು 140000 ಮೆಟ್ರಿಕ್ ಟನ್ ಮ್ಯಾಗ್ನಟೈಟ್ ಇದೆ ಎಂದು ಕಂಪನಿಯವರು ನಿರ್ಧರಿಸಿದ್ದಾರೆ. (ಎಂ.ಎಸ್.ಎಂ.)

**ದೊಡ್ಡಗಂಗವಾಡಿ :** ಬೆಂಗಳೂರು ಗ್ರಾಮಾಂತರ ಜಿಲ್ಲೆ ರಾಮನಗರ ತಾಲ್ಲೂಕಿನಲ್ಲಿರುವ ಒಂದು ಗ್ರಾಮ. ರಾಮನಗರದಿಂದ 15 ಕಿಮೀ ದೂರದಲ್ಲಿರುವ ಐತಿಹಾಸಿಕ ಸ್ಥಳ. 1294 ರ ಹೊಯ್ಸಳರ ಶಾಸನದಲ್ಲಿ ಇದನ್ನು ಹಿರಿಯಗಂಗವಾಡಿ ಎಂದು ಕರೆಯಲಾಗಿದೆ. ಹತ್ತಿರದಲ್ಲಿಯೇ ಚಿಕ್ಕಗಂಗವಾಡಿ ಎಂಬ ಊರಿದೆ. ಈ ಗ್ರಾಮದಲ್ಲಿ ಈಶ್ವರ, ಆಂಜನೇಯ, ಗೋಪಾಲಸ್ವಾಮಿ ಹಾಗೂ ಮಾರಮ್ಮ ದೇವಾಲಯಗಳಿವೆ. ಆಂಜನೇಯ ದೇವಾಲಯ ವಿಜಯನಗರ ಅರಸರಕಾಲದ್ದು; ಈಗ ಪೂರ್ಣ ಜೀರ್ಣೋದ್ಧಾರಗೊಂಡಿದೆ. ಈ ದೇವಾಲಯದಲ್ಲಿ ಹೊಯ್ಸಳ ಮುಮ್ಮಡಿ ಬಲ್ಲಾಳನ ಕಾಲದಲ್ಲಿ ಬಲಹರಿಯ ಪುತ್ರ ಕೇತಣ್ಣ ಎಂಬವನು ಬಲ್ಲಾಳನ ದಾಯಾದಿ ರಾಮನಾಥನೊಂದಿಗೆ ಮಾಡಿದ ತುರುಗಾಳಗವೊಂದರಲ್ಲಿ ಮಡಿದ ಸಂಗತಿಯನ್ನು ತಿಳಿಸುವ ಶಾಸನವಿದೆ.

ಗೋಪಾಲಸ್ವಾಮಿ ದೇವಾಲಯವೂ ವಿಜಯನಗರದ ಕಾಲದ ರಚನೆ ಇದೂ ಜೀರ್ಣೋದ್ಧಾರಗೊಂಡಿದೆ. ದೇವಾಲಯದಲ್ಲಿ ಗರ್ಭಗೃಹ, ಅರ್ಧಮಂಟಪ ಹಾಗೂ ಮಂಟಪಗಳಿವೆ. ಮಂಟಪದಲ್ಲಿ ಅಷ್ಟಕೋನಾಕೃತಿಯ ಎರಡು ಕಂಬಗಳಿವೆ. ಗರ್ಭಗೃಹದಲ್ಲಿ ವೇಣುಗೋಪಾಲಸ್ವಾಮಿಯ ಪ್ರಾಚೀನ ಮೂರ್ತಿ ಇದೆ. ಇಲ್ಲಿನ ಶಿಖರವನ್ನು ಇಟ್ಟಿಗೆ ಹಾಗೂ ಗಾರೆಯಿಂದ ಜೀರ್ಣೋದ್ಧಾರ ಮಾಡಲಾಗಿದೆ.

ಇಲ್ಲಿಗೆ ಸಮೀಪದ ಕೂಟಗಲ್ಲು ಒಂದು ನಿಸರ್ಗ ರಮಣೀಯ ಸ್ಥಳ. ಕಗ್ಗಲ್ಲು ಮೊರಡಿಯ ಕಿರುಗುಡ್ಡದ ಮೇಲೆ ನಿಂತಿರುವ ಶಿಖರಜೋಡಿಯ ಶಿಲಾನ್ಯಾಸ ಅತ್ಯಂತ ಆಕರ್ಷಣೀಯವಾದುದು. ಸ್ಥಳೀಯರು ಇವನ್ನು ಅಗಸ ಹಾಗೂ ಅಗಸಗಿತ್ತಿ ಎಂದೂ ಹೇಳುತ್ತಾರೆ. ಋಷಿಯ ಶಾಪದಿಂದ ಪ್ರಣಯಿಗಳಿಬ್ಬರು ಕಲ್ಲಾದರೆಂಬುದು ಇಲ್ಲಿಯ ಸ್ಥಳಪುರಾಣ. ಬೆಟ್ಟದ ಮೇಲೆ ತಿಮ್ಮಪ್ಪನ (ವೆಂಕಟರಮಣಸ್ವಾಮಿ) ದೇವಾಲಯವಿದೆ. ಇದನ್ನು ಮೈಸೂರು ಶೈಲಿಯಲ್ಲಿ ಕಟ್ಟಲಾಗಿದೆ. ಇದರಲ್ಲಿ ಗರ್ಭಗೃಹ ಅರ್ಧಮಂಟಪ ಹಾಗೂ ನವರಂಗಗಳಿವೆ, ಶ್ರಾವಣಮಾಸದ ಕೊನೆ ಶನಿವಾರದಂದು ಇಲ್ಲಿ ಜಾತ್ರೆ ನಡೆಯುತ್ತದೆ. ದೇವಾಲಯದ ಹತ್ತಿರದಲ್ಲಿ ಪುಷ್ಕರಣಿ ಇದೆ. ಇಲ್ಲೊಂದು ಕೋಟೆ ಇತ್ತೆಂದು ತಿಳಿಸುವ ಕೋಟೆಯ ಪಳೆಯುಳಿಕೆಗಳೂ ಇವೆ. ದೇವಾಲಯಕ್ಕೆ ಎದುರಿನಲ್ಲಿ ಇನ್ನೊಂದು ಶಿಖರದಲ್ಲಿ ಚಕ್ರತೀರ್ಥ ಎಂಬ ಕೊಳವಿದೆ. ಬೆಟ್ಟದ ಕೆಳಗೆ ಹೊಲವೊಂದರಲ್ಲಿ 1530 ರ ಒಂದು ಶಾಸನವಿದೆ. ಸೋಮೇಶ್ವರ ದೇವಾಲಯಕ್ಕೆ ನೀಡಿದ ದತ್ತಿಯನ್ನು ಇದು ದಾಖಲಿಸಿದೆ. ಶಾನುಭೋಗನಹಳ್ಳಿಗೆ 3 ಕಿಮೀ ದೂರವಿರುವ ಕೃಷ್ಣಗಿರಿಯಲ್ಲಿ ಉಬ್ಬುಶಿಲ್ಪದ ಕೃಷ್ಣಸ್ವಾಮಿ ದೇವರ ಮೂರ್ತಿಯಿದೆ. ಕಬ್ಬಿಣದ ಸಲಾಕೆಗಳನ್ನು ಬಳಸಿ ದೇವಾಲಯದ ಆಕಾರವನ್ನು ನಿರ್ಮಿಸಲಾಗಿದೆ. ಶ್ರಾವಣಮಾಸದ ಕೊನೆಯ ಶನಿವಾರದಂದು ಜಾತ್ರೆ ನಡೆಯುತ್ತದೆ. (ಎಸ್.ಎ.ಜೆ.)

**ದೊಡ್ಡಗದ್ದವಳ್ಳಿ :** ಹಾಸನ ಜಿಲ್ಲೆಯ ಹಾಸನ ತಾಲ್ಲೂಕಿನಲ್ಲಿ ಹಾಸನ -ಬೇಲೂರು ಹೆದ್ದಾರಿಯ ಪಕ್ಕದಲ್ಲಿ ಹಾಸನದಿಂದ 18ಕಿಮೀ ದೂರದಲ್ಲಿರುವ ಗ್ರಾಮ.

ಇಲ್ಲಿರುವ ಲಕ್ಷ್ಮೀ ದೇವಾಲಯ ಹೊಯ್ಸಳ ವಾಸ್ತುಶಿಲ್ಪದ ಅಧ್ಯಯನದಲ್ಲಿ ಒಂದು ವಿಶಿಷ್ಟ ಸ್ಥಾನ ಪಡೆದಿದೆ. ಇಲ್ಲಿರುವ ಶಾಸನದ ಪ್ರಕಾರ 1113ರಲ್ಲಿ ಹೊಯ್ಸಳ ದೊರೆ ವಿಷ್ಣುವರ್ಧನನ ಕಾಲದಲ್ಲಿ ವಣಿಜಶ್ರೇಷ್ಠನಾದ ಕುಲ್ಲಹಣ ರಾಹುತ ಮತ್ತು ಅವನ ಪತ್ನಿ ಸಹಜಾದೇವಿ ಮಹಾಲಕ್ಷ್ಮಿಯ ಈ ದೇವಾಲಯವನ್ನು ಸ್ಥಾಪಿಸಿದರು. ಈ ದೇವಾಲಯದಿಂದ ಈ ಸ್ಥಳಕ್ಕೆ ಅಭಿನವ ಕೊಲ್ಲಾಪುರ ಎಂಬ ಹೆಸರೂ ಇತ್ತು.

ಈ ದೇವಾಲಯ ಹೊಯ್ಸಳ ಶೈಲಿಯ ಮೊದಲ ಹೆಜ್ಜೆ ಎಂದು ಅನೇಕ ವಿದ್ವಾಂಸರ ಅಭಿಪ್ರಾಯ. ಬೇಲೂರಿನ ದೇವಾಲಯಕ್ಕಿಂತಲೂ ಪ್ರಾಚೀನವಾದ ಈ ದೇವಾಲಯದಲ್ಲಿ ಅನೇಕ ವೈಶಿಷ್ಟ್ಯಗಳಿವೆ. ಸಾಮಾನ್ಯವಾಗಿ ಎಲ್ಲ ಹೊಯ್ಸಳ ದೇವಾಲಯಗಳಲ್ಲಿಯೂ ಕಾಣಬರುವ ಜಗತಿ ಇಲ್ಲಿಲ್ಲ. 118' 6" ಉದ್ದ, 116' 9" ಅಗಲದ ಅಂಗಳದ ಮಧ್ಯದಲ್ಲಿರುವ ಈ ದೇವಾಲಯದ ಸುತ್ತಲೂ 7' ಎತ್ತರದ ಗೋಡೆಯಿದೆ. ಪೂರ್ವ ಮತ್ತು ಪಶ್ಚಿಮಗಳಲ್ಲಿ ಎರಡು ಮಹಾದ್ವಾರಗಳಿವೆ. ಪಶ್ಚಿಮದ ಮಹಾದ್ವಾರಕ್ಕೆ ಸೇರಿರುವಂತೆ ಇರುವ ಮಂಟಪದಲ್ಲಿ ಹದಿನಾರು ಕಂಬಗಳೂ ಏಳು ಭುವನೇಶ್ವರಿಗಳೂ ಇವೆ. ಈ ಭುವನೇಶ್ವರಿಗಳು ಉತ್ತಮ ಕೆತ್ತನೆ ಕೆಲಸದಿಂದ ಕೂಡಿದ್ದು ಅಷ್ಟದಿಕ್ಪಾಲಕರು, ತಾಂಡವೇಶ್ವರ ಮುಂತಾದ ಮೂರ್ತಿಗಳಿಂದ ಅಲಂಕೃತವಾಗಿವೆ. ಪೂರ್ವದ ಮಹಾದ್ವಾರ ಸುಂದರ ಶಿಲ್ಪಗಳಿಂದ ಅಲಂಕೃತವಾಗಿದೆ. ಮಧ್ಯದಲ್ಲಿರುವ ಲಕ್ಷ್ಮೀ ದೇವಾಲಯ ಚತುಷ್ಕೂಟಾಚಲ, ನಾಲ್ಕು ದಿಕ್ಕುಗಳಲ್ಲಿಯೂ ಒಂದೊಂದು ಗರ್ಭಗುಡಿಯಿರುವ ದೇವಾಲಯಕ್ಕೆ ಇದೊಂದು ಉತ್ತಮ ಉದಾಹರಣೆ. ಇವುಗಳ ಜೊತೆಗೆ ಅಂಗಳದ ನಾಲ್ಕು ಮೂಲೆಗಳಲ್ಲಿ ನಾಲ್ಕು ಸಣ್ಣ ಗುಡಿಗಳಿವೆ. ಇವುಗಳೂ ಹೊಯ್ಸಳ ರೀತಿಯ ಶಿಖರಗಳನ್ನು ಹೊಂದಿವೆ. ಅಂಗಳದ ಈಶಾನ್ಯದಲ್ಲಿ ಗರ್ಭಗೃಹ ಮತ್ತು ಸುಕನಾಸಿಯನ್ನುಳ್ಳ ಇನ್ನೊಂದು ಸಣ್ಣ ಗುಡಿಯಿದೆ. ಇಲ್ಲಿಯೂ ಹೊಯ್ಸಳ ಶಿಖರವನ್ನು ಕಾಣಬಹುದು. ಪ್ರಧಾನ ದೇವಾಲಯವೂ ಸೇರಿದಂತೆ ಒಟ್ಟು ಇಲ್ಲಿ ಒಂಬತ್ತು ಶಿಖರಗಳಿವೆ. ಈ ಎಲ್ಲ ಶಿಖರಗಳ ಮೇಲೂ ಹೊಯ್ಸಳ ಲಾಂಛನವಿದೆ. ಈ ರೀತಿಯ ಶಿಖರಗಳ ಸಮೂಹವಿರುವುದು ಇಲ್ಲಿಯ ವೈಶಿಷ್ಟ್ಯ. ಈ ಶಿಖರಗಳು ಹೆಚ್ಚಿನ ಅಲಂಕರಣವಿಲ್ಲದೆ ಮೆಟ್ಟಲು ಪಿರಮಿಡ್ಡಿನಾಕಾರದಲ್ಲಿ ಮೇಲೆಳುವ ಕದಂಬ ನಾಗರ ಶೈಲಿಯವು. ಮುಖ್ಯ ದೇವಾಲಯದಲ್ಲಿ ಪೂರ್ವದ ಗರ್ಭಗುಡಿಯಲ್ಲಿ ಲಕ್ಷ್ಮಿ, ಪಶ್ಚಿಮದಲ್ಲಿ ಭೂತನಾಥ ಲಿಂಗ, ದಕ್ಷಿಣದಲ್ಲಿ ವಿಷ್ಣು ಮತ್ತು ಉತ್ತರದಲ್ಲಿ ಕಾಳಿ ಪ್ರತಿಷ್ಠಿಸಲ್ಪಟ್ಟಿದ್ದುವು. ಲಕ್ಷ್ಮೀದೇವಿಯ ಗರ್ಭಗುಡಿಯ ದ್ವಾರದಲ್ಲಿ ತಾಂಡವೇಶ್ವರ, ವಿಷ್ಣುವಿನ ಗರ್ಭಗುಡಿಯ ದ್ವಾರದಲ್ಲಿ ಯೋಗಾನರಸಿಂಹ, ಭೂತನಾಥ ಗುಡಿಯ ದ್ವಾರದಲ್ಲಿ ಗಜಲಕ್ಷ್ಮಿಯ ಶಿಲ್ಪಗಳಿವೆ. ಪ್ರಧಾನ ದೇವತೆ ಲಕ್ಷ್ಮೀದೇವಿಯ ಮೂರ್ತಿ ಸುಂದರ ಶಿಲ್ಪ. ಮೂರೂವರೆ ಅಡಿ ಎತ್ತರದ ಈ ವಿಗ್ರಹದ ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಜಪಸರ ಮತ್ತು ಗದೆಗಳಿವೆ. ಈ

ದೇವಾಲಯವನ್ನು ಮಲ್ಲೋಜ ಮಣಿಯೋಜನೆಂಬ ಶಿಲ್ಪಿ ನಿರ್ಮಿಸಿದನೆಂದು ಶಾಸನವೊಂದರಿಂದ ತಿಳಿದುಬರುತ್ತದೆ. ಈ ದೇವಾಲಯದಲ್ಲಿ ವಿಷ್ಣುವರ್ಧನ, ಮೊದಲನೆಯ ನರಸಿಂಹ, ಎರಡನೆಯ ಬಲ್ಲಾಳ ಮುಂತಾದವರ ಕಾಲದ ದಾನಶಾಸನಗಳಿವೆ. (ಎ.ವಿ.ಎನ್.)

**ದೊಡ್ಡಬಳ್ಳಾಪುರ**: ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಒಂದು ತಾಲ್ಲೂಕು ಹಾಗೂ ಅದರ ಕೇಂದ್ರ. ಈ ತಾಲ್ಲೂಕನ್ನು ಪೂರ್ವದಲ್ಲಿ ದೇವನಹಳ್ಳಿ, ಪಶ್ಚಿಮದಲ್ಲಿ ತುಮಕೂರು, ದಕ್ಷಿಣದಲ್ಲಿ ಬೆಂಗಳೂರು ನಗರ, ನೆಲಮಂಗಲ, ಉತ್ತರದಲ್ಲಿ ಚಿಕ್ಕಬಳ್ಳಾಪುರ ತಾಲ್ಲೂಕಗಳು ಸುತ್ತುವರಿದಿವೆ. ತಾಲ್ಲೂಕಿನ ವಿಸ್ತೀರ್ಣ 790 ಚಕಿಮೀ. ಜನಸಂಖ್ಯೆ 2,68,145. ತಾಲ್ಲೂಕಿನಲ್ಲಿ 295 ಗ್ರಾಮಗಳಿವೆ. ದೊಡ್ಡಬಳ್ಳಾಪುರ, ದೊಡ್ಡಬೆಳಮಂಗಲ, ಮಧುರೆ, ಸಾಸಲು, ತೂಬುಗೆರೆ - ಇವು ತಾಲ್ಲೂಕಿನಲ್ಲಿರುವ ಹೋಬಳಿಗಳು.

ತಾಲ್ಲೂಕಿನ ಉತ್ತರ ಹಾಗೂ ವಾಯುವ್ಯ ಪ್ರದೇಶ ಬೆಟ್ಟಗಳ ಸಾಲಿನಿಂದ ಕೂಡಿದೆ. ಇತರ ಎಲ್ಲಾ ಭಾಗ ಹಳ್ಳದಿಣ್ಣೆಗಳಿಂದ ಕೂಡಿದ ಬಯಲು ಪ್ರದೇಶ. ಅರ್ಕಾವತಿ ನದಿ ನಂದಿದುರ್ಗ ಬೆಟ್ಟಗಳ ಈಶಾನ್ಯ ಭಾಗದಲ್ಲಿ ಹುಟ್ಟಿ ಆಗ್ನೇಯ ದಿಕ್ಕಿನಲ್ಲಿ ಹರಿಯುತ್ತದೆ. ಈ ನದಿ ತನ್ನ ಪಾತ್ರದಲ್ಲಿರುವ ಅನೇಕ ಕೆರೆಗಳಿಗೆ ಹಾಗೂ ತಾಲ್ಲೂಕಿನ ಉತ್ತರ ಭಾಗವನ್ನುಳಿದು ಉಳಿದೆಲ್ಲಾ ಪ್ರದೇಶಗಳಿಗೆ ನೀರನ್ನೊದಗಿಸುತ್ತದೆ. ತಾಲ್ಲೂಕಿನ ಉತ್ತರ ಭಾಗ ಉತ್ತರ-ಪೆನ್ನಾರ್ ಮತ್ತಿತರ ಉಪನದಿಗಳಿಂದ ನೀರನ್ನು ಪಡೆಯುತ್ತದೆ. ತಾಲ್ಲೂಕಿನ ಇತರ ಭಾಗಗಳು ಕೆರೆ, ಬಾವಿಯ ನೀರನ್ನು ಅವಲಂಬಿಸಿವೆ.

ತಾಲ್ಲೂಕಿನ ಹೆಚ್ಚು ಪ್ರದೇಶ ಕೆಂಪು ಮಣ್ಣಿನಿಂದ ಕೂಡಿದೆ. ಕೆಲವು ಕಡೆಗಳಲ್ಲಿ ಇದು ಮರಳುಮಿಶ್ರಿತವಾಗಿದ್ದು ರಾಗಿ ಜೋಳ ಮೊದಲಾದ ಒಣಬೆಳೆಗಳಿಗೆ ಉಪಯುಕ್ತವಾಗಿದೆ. ತಾಲ್ಲೂಕಿನ ದಕ್ಷಿಣ ಹಾಗೂ ಮಧ್ಯ ಭಾಗಗಳಲ್ಲಿ ಕಂಡು ಬರುವ ಭೂಮಿ ಅಧಿಕ ಫಲವತ್ತಾಗಿದೆ. ಇಲ್ಲಿಯ ಮಣ್ಣು ಬೂದು ಹಾಗೂ ಕೆಂಪು ಬಣ್ಣ ಮಿಶ್ರಿತವಾದುದು. ಕಪ್ಪು ಮಣ್ಣು ತಾಲ್ಲೂಕಿನ ಕೆಲವೆಡೆಗಳಲ್ಲಿ ಮಾತ್ರ ಕಂಡುಬರುತ್ತದೆ. ತಾಲ್ಲೂಕಿನ ಉತ್ತರ ಹಾಗೂ ವಾಯುವ್ಯ ಭಾಗಗಳಲ್ಲಿ ಭೂಮಿ ವ್ಯವಸಾಯಕ್ಕೆ ಅಷ್ಟೇನೂ ಉಪಯುಕ್ತವಾಗಿಲ್ಲ. ತಾಲ್ಲೂಕನ್ನು ವಾಯುವ್ಯ ಭಾಗದಲ್ಲಿ ಹಬ್ಬಿರುವ ಕುರುಚಲು ಕಾಡೊಂದನ್ನುಳಿದರೆ ಇಲ್ಲಿ ಇನ್ನಾವುದೇ ಸ್ವಾಭಾವಿಕ ಸಸ್ಯವರ್ಗ ಕಂಡುಬರುವುದಿಲ್ಲ.ಉತ್ತರದಲ್ಲಿನ ಮಾಕಳಿದುರ್ಗದ ಬಳಿ ಒಂದು ರಾಜ್ಯಾರಣ್ಯಪ್ರದೇಶವಿದೆ. ಈ ತಾಲ್ಲೂಕಿನ ವಾಯುಗುಣ ಬೆಂಗಳೂರು ನಗರದ ವಾಯುಗುಣವನ್ನು ಹೋಲುತ್ತದೆ. ಹವೆ ಸಾಮಾನ್ಯವಾಗಿ ತಂಪಾಗಿದ್ದು, ಆರೋಗ್ಯಕ್ಕೆ ತುಂಬಾ ಸಹಕಾರಿಯಾಗಿದೆ.

ರಾಗಿ ಮತ್ತು ಜೋಳ ತಾಲ್ಲೂಕಿನ ಮುಖ್ಯ ಬೆಳೆಗಳು. ಹೊಗೆಸೊಪ್ಪನ್ನು ವಿಶೇಷವಾಗಿ ಬೆಳೆಯುತ್ತಾರೆ. ಸಣ್ಣ ಪ್ರಮಾಣದಲ್ಲಿ ಆಲೂಗೆಡ್ಡೆ ಬೆಳೆಯುವುದುಂಟು. ಸ್ವಲ್ಪಮಟ್ಟಿಗೆ ರೇಷ್ಮೆ ಸಾಕಣೆಯೂ ಇದೆ.

ತಾಲ್ಲೂಕಿನ ಸಾರಿಗೆ ಸೌಲಭ್ಯ ಉತ್ತಮವಾಗಿದೆ. ಬೆಂಗಳೂರು-ಗುಂತಕಲ್ಲು ರೈಲುಮಾರ್ಗ ಈ ತಾಲ್ಲೂಕಿನ ಮಧ್ಯಭಾಗದಲ್ಲಿ ಬೆಂಗಳೂರು -ಗೌರಿಬಿದನೂರು ರಸ್ತೆಯ ಪಕ್ಕದಲ್ಲಿ ಹಾದುಹೋಗುತ್ತದೆ. ರಾಜಾನಕುಂಟೆ, ದೊಡ್ಡಬಳ್ಳಾಪುರ ಹಾಗೂ ಮಾಕಳಿದುರ್ಗ ಈ ರೈಲುಮಾರ್ಗದಲ್ಲಿರುವ ಮುಖ್ಯ ನಿಲ್ದಾಣಗಳು. ಬೆಂಗಳೂರು-ದೊಡ್ಡಬಳ್ಳಾಪುರ-ಗೌರಿಬಿದನೂರು ರಾಜ್ಯ ಹೆದ್ದಾರಿ ದಕ್ಷಿಣದಿಂದ ಉತ್ತರಕ್ಕೆ ತಾಲ್ಲೂಕಿನ ಮಧ್ಯಭಾಗದಲ್ಲಿ ಹಾದುಹೋಗುತ್ತದೆ. ಪೂರ್ವ ಪಶ್ಚಿಮವಾಗಿ ಕೋಲಾರ-ಸೋಮಾಪುರ ಜಿಲ್ಲಾ ಹೆದಾರಿ ದೊಡ್ಡಬಳ್ಳಾಪುರದ ಸಮೀಪದಲ್ಲಿ ಹಾದುಹೋಗುತ್ತದೆ. ದೊಡ್ಡಬಳ್ಳಾಪುರದಿಂದ ಗೌರಿಬಿದನೂರು, ಚಿಕ್ಕಬಳ್ಳಾಪುರ, ದೇವನಹಳ್ಳಿ, ನೆಲಮಂಗಲ, ಮಧುಗಿರಿ ಮುಂತಾದ ಸ್ಥಳಗಳಿಗೆ ಸುಗಮ ಸಾರಿಗೆ ಸಂಪರ್ಕವಿದೆ.

ಘಾಟಿ ಸುಬ್ರಹ್ಮಣ್ಯ (ನೋಡಿ) ಈ ತಾಲ್ಲೂಕಿನಲ್ಲಿರುವ ಪ್ರಸಿದ್ಧ ಯಾತ್ರಾಸ್ಥಳ.

ದೊಡ್ಡಬಳ್ಳಾಪುರ ಈ ತಾಲ್ಲೂಕಿನ ಆಡಳಿತಕೇಂದ್ರ. ಇದು ಅರ್ಕಾವತಿ ನದಿಯ ಬಲದಂಡೆಯ ಮೇಲೆ ಬೆಂಗಳೂರಿನಿಂದ ಈಶಾನ್ಯಕ್ಕೆ 39 ಕಿಮೀ ದೂರದಲ್ಲಿದೆ. ಜನಸಂಖ್ಯೆ 71,509. ಈ ಊರನ್ನು ತೆಲುಗಿನಲ್ಲಿ ಪೆದ್ದಬಳ್ಳಾಪುರ ಎಂದೂ ಹಿಂದುಸ್ಥಾನಿಯಲ್ಲಿ ಬಡಾ ಬಳ್ಳಾಪುರ ಎಂದೂ ಕರೆಯುವುದುಂಟು.

ದೊಡ್ಡಬಳ್ಳಾಪುರ ಪಟ್ಟಣ ಬೆಂಗಳೂರು ನಗರಕ್ಕೆ ಹತ್ತಿರವಾಗಿರುವುದರಿಂದ ನಗರೀಕರಣ ತೀವ್ರಗತಿಯಲ್ಲುಂಟಾಗುತ್ತಿದೆ. ಇದು ಕೈಗಾರಿಕಾ ನಗರವಾಗಿ ಬೆಳೆಯುತ್ತಿದೆ.

ಇದು ನೇಯ್ಗೆಯ ಪ್ರಮುಖ ಕೇಂದ್ರ. 1932ರ ಅನಂತರ ಕೈಮಗ್ಗಗಳಿಗೆ ಬದಲಾಗಿ ಪವರ್‌ಲೂಂ ಅಸ್ತಿತ್ವಕ್ಕೆ ಬಂತು. ಇಲ್ಲಿ ತಯಾರಾದ ಅರಳೆ ಮತ್ತು ಧರ್ಮಾವರಂ ಮಾದರಿ ಬಟ್ಟೆಗಳಿಗೆ ದೇಶವಿದೇಶಗಳಲ್ಲಿ ಉತ್ತಮ ಬೇಡಿಕೆಯಿದೆ. ಇಲ್ಲಿ ಕಾಟನ್ ರೇಯಾನ್ ಟೆಕ್ಸ್‌ಟೈಲ್ ಕೋ -ಆಪರೇಟಿವ್ ಸೊಸೈಟಿ. ಆದಿನಾರಾಯಣ ಕಾರ್ಖಾನೆ ಸಂಘ ಮೊದಲಾದ ಅನೇಕ ಕಾರ್ಮಿಕ ಸಂಘಸಂಸ್ಥೆಗಳಿವೆ. ಪ್ರತಿ ಗುರುವಾರ ಇಲ್ಲಿ ದೊಡ್ಡ ಸಂತೆ ನಡೆಯುತ್ತದೆ.

ಲೋಕಸೇವನಿರತ ಕೊಂಗಾಡಿಯಪ್ಪ ಸ್ಮಾರಕ ವಿದ್ಯಾಸಂಸ್ಥೆ ಇಲ್ಲಿ ಒಂದು ಪ್ರೌಢಶಾಲೆ ಹಾಗೂ ಕಾಲೇಜನ್ನು ನಡೆಸುತ್ತಿದೆ. ಈ ಊರಿನಲ್ಲಿ ಪುರಸಭಾ ಆಡಳಿತ ಇದೆ.

ದೊಡ್ಡಬಳ್ಳಾಪುರ ಹೊಯ್ಸಳರ ಕಾಲದಲ್ಲಿ ಒಂದು ಮುಖ್ಯ ವ್ಯಾಪಾರ ಸ್ಥಳವಾಗಿತ್ತು. ಆದರೆ ಆವತಿ ಕುಲದ ಮಲ್ಲಬೈರೇಗೌಡ ಇದನ್ನು ಸ್ಥಾಪಿಸಿದನೆಂಬ ಹೇಳಿಕೆ ಸಹ ಇದೆ. 16-17ನೆಯ ಶತಮಾನಗಳಲ್ಲಿ ಆವತಿ ಕುಲದ ಒಂದು ಶಾಖೆ ಇಲ್ಲಿ ಆಳ್ವಿಕೆ ನಡೆಸುತ್ತಿತ್ತು. 1637-38ರ ಹೊತ್ತಿಗೆ ಬಿಜಾಪುರದ ರಣದುಲ್ಲಾಖಾನ್ ಇದನ್ನು ಆಕ್ರಮಿಸಿದ್ದ. ಸುಮಾರು ನಲವತ್ತು ವರ್ಷಗಳ ಕಾಲ ಬಿಜಾಪುರದ ಸುಲ್ತಾನರ ಅಧೀನದಲ್ಲಿದ್ದು ಅನಂತರ ಮರಾಠರ ಕೈಸೇರಿ 1689ರಲ್ಲಿ ಮೊಗಲರ ದಾಳಿಗೆ ತುತ್ತಾಯಿತು. ಅನಂತರ ಇದನ್ನು 54,059 ಪಗೋಡ ಆದಾಯವೀಯುವ ದೊಡ್ಡ ಜಾಗೀರಾಗಿ ಮಾಡಿ ಅಲಿ ಖುಲಿ ಖಾನ್ ಎಂಬ ಸರದಾರನಿಗೆ ಕೊಡಲಾಯಿತು. ಇವನು ಸ್ವಲ್ಪ ಕಾಲ ಅನುಭವಿಸಿ ಮೃತನಾದಮೇಲೆ ಶಿರಾದ ನವಾಬನಾಗಿದ್ದ ಅವನ ಮಗ ದರ್ಗಾ ಖುಲಿ ಖಾನ್ ಮುಂದೆ ಇದರ ಜಾಗೀರದಾರನಾಗಿ ಒಂದು ವರ್ಷ ಅನುಭವಿಸಿದ. ಅನಂತರ ಸುಮಾರು 49 ವರ್ಷಗಳ ಕಾಲ ಶಿರಾ ನವಾಬರ ವಶದಲ್ಲಿದ್ದು ನಿಜಾಮನ ಕೈಸೇರಿತ್ತು. ನಿಜಾಮ ಇದನ್ನು ಅಬ್ಬಾಸ್ ಖಾನ್ ಎಂಬುವವನಿಗೆ ಜಾಗೀರಾಗಿತ್ತಿದ್ದ. 1761ರಲ್ಲಿ ದೊಡ್ಡಬಳ್ಳಾಪುರ ಹೈದರ್ ಆಲಿಯ ವಶವಾಗಿ ಮೈಸೂರು ಸಂಸ್ಥಾನಕ್ಕೆ ಸೇರಿತು. (ಎಚ್.ವಿ.ಎಸ್.)

ಪ್ರಾಚೀನ ಕಾಲಕ್ಕೆ ಸಂಬಂಧಿಸಿದ ಹಲವಾರು ಅವಶೇಷಗಳು ದೊಡ್ಡಬಳ್ಳಾಪುರದಲ್ಲಿ ಉಳಿದಿವೆ. ಹಿಂದಿದ್ದ ಕೋಟೆ ಈಗ ನಾಮಮಾತ್ರವಾಗಿದೆ. ಈ ಭಾಗದಲ್ಲಿ ಹಲವು ಕಟ್ಟೆಗಳು ಮತ್ತು ಕಟ್ಟಡಗಳ ಅವಶೇಷಗಳಿವೆ. ಇವುಗಳಲ್ಲಿ ಅಕುರ್ ಖಾನಾ ಮತ್ತು ಅದರ ಬಳಿಯ ಬಾವಿ ಮುಖ್ಯವಾದವು. ಅಬ್ಬಾಸ್ ಖುಲಿ ಖಾನ್ ಕಟ್ಟಿಸಿದ ಅಕುರ್ ಖಾನಾ ಈಗ ಬಹುಮಟ್ಟಿಗೆ ಹಾಳಾಗಿದೆ. ಬಾವಿ ಸುಸ್ಥಿತಿಯಲ್ಲಿದ್ದು ಮೂರು ಕಡೆ ಮೆಟ್ಟಿಲುಗಳೂ ನೀರಿನ ಮೇಲೆ ಒಂದು ಜಾಲಂಧ್ರವೂ ಇವೆ. ಊರ ಪಶ್ಚಿಮದಲ್ಲಿ 17ನೆಯ ಶತಮಾನದಲ್ಲಿದ್ದ ಮೊಹಿದ್ದೀನ್ ಚಿಷ್ಟಿ ಎಂಬ ಸಂತನ ದರ್ಗಾ ಇದೆ. ಹಲವು ಹಳೆಯ ದೇವಾಲಯಗಳ ಕಲ್ಲನ್ನು ಉಪಯೋಗಿಸಿ ಇದನ್ನು ಕಟ್ಟಲಾಗಿದೆ. ಈ ಊರಿನ ಸಾಗರ ಕೆರೆಯ ಏರಿಯಲ್ಲೂ ಹಲವು ದೇವಾಲಯಗಳ ಕಲ್ಲುಗಳು ಸೇರಿಹೋಗಿವೆ.

ಈಗ ಇಲ್ಲಿರುವ ದೇವಾಲಯಗಳೆಲ್ಲವೂ ಈಚಿನವು. ಈಗ ಪಾಳುಬಿದ್ದಿರುವ ಆದಿನಾರಾಯಣ ದೇವಾಲಯ ಹಿಂದೆ ಸುಂದರ ಕಟ್ಟಡವಾಗಿತ್ತು. ಸದ್ಯ ಉಳಿದಿರುವ ಭಾಗದ ಕೆಲವು ಕಂಬಗಳು ಮತ್ತು ಗೋಡೆಗಳ ಮೇಲೆ ಗಜೇಂದ್ರ ಮೋಕ್ಷ, ರಾಮಾಯಣ, ಭಾಗವತ

ಮೊದಲಾದ ಹಲವು ಕಥೆಗಳು ಶಿಲ್ಪಿತವಾಗಿವೆ. ಇಲ್ಲಿರುವ ಚಂದ್ರಮೌಳೀಶ್ವರ ದೇವಾಲಯದ ಮುಮ್ಮಂಟಪದ ಕಂಬಗಳ ಮೇಲೂ ಭೈರವ, ವೀರಭದ್ರ, ವ್ಯಾಘ್ರಪಾದ, ಕಣ್ಣಪ್ಪ ಮೊದಲಾದ ಶಿಲ್ಪಗಳಿವೆ. ಈ ದೇವಾಲಯದಲ್ಲಿ ಅರುಣಾಚಲ ಪಂತ್ ಮತ್ತು ಅವನ ಪತ್ನಿ ಶೇಷಮ್ಮ ಇವರ ಭಕ್ತವಿಗ್ರಹಗಳಿವೆ. ಅರುಣಾಚಲ ಪಂತ್ 18ನೆಯ ಶತಮಾನದ ಅಂತ್ಯಭಾಗದಲ್ಲಿ ಈ ದೇವಾಲಯವನ್ನೂ ಇಲ್ಲಿನ ವೆಂಕಟರಣಸ್ವಾಮಿ ಗುಡಿಯನ್ನೂ ಕಟ್ಟಿಸಿದನೆಂದು ಪ್ರತೀತಿ. ವೆಂಕಟರಮಣಸ್ವಾಮಿ ದೇವಾಲಯ ದೊಡ್ಡದು. ಇದರ ಸುತ್ತ ಪ್ರಾಕಾರವಿದ್ದು ಅದರ ಮೇಲೆ ಹಿಂದು-ಇಸ್ಲಾಮೀ ಶೈಲಿಯ ಗಚ್ಚಿನ ಕೈಪಿಡಿ ಭಾಗ ಇದೆ. ಈ ದೇವಾಲಯದಲ್ಲೂ ಗಣಪತಿ, ದಶಾವತಾರಗಳು ಮೊದಲಾದ ದೇವಶಿಲ್ಪಗಳೂ ಅರುಣಾಚಲ ಪಂತ್ ದಂಪತಿಗಳ ಭಕ್ತವಿಗ್ರಹಗಳೂ ಇವೆ. ಪ್ರಾಕಾರದಲ್ಲಿ ಆದಿನಾರಾಯಣ ದೇವಾಲಯದಿಂದ ತಂದ ಮೂಲವಿಗ್ರಹವನ್ನಿಡಲಾಗಿದೆ. ಈ ಊರಿನಲ್ಲಿ ವಿಟ್ಠಲ ಮತ್ತು ಗೋಪಾಲಕೃಷ್ಣ ದೇವಾಲಯಗಳು ಸಹ ಇವೆ.

*

**ದೊಡ್ಡಬಳ್ಳಾಪುರದ ಪಾಳೆಯಗಾರರು :** ಸು. 1539-1638. ಆವತಿ ಕುಲದ ಪಾಳೆಯಗಾರರ ಒಂದು ಶಾಖೆ. ಈ ಶಾಖೆಯವರ ಇತಿಹಾಸ ಹಲವಾರು ಅಸ್ಪಷ್ಟ ವಿವರಗಳನ್ನೊಳಗೊಂಡಿದೆ. ದೇವನಹಳ್ಳಿಯನ್ನು ಸ್ಥಾಪಿಸಿದ ಆವತಿಯ ಮಲ್ಲಭೈರೇಗೌಡ ದೊಡ್ಡಬಳ್ಳಾಪುರದ ಬಳಿ ಬೇಟೆಯಾಡುವಾಗ ಕೆಲವು ಶಕುನಗಳಾಗಿ ಆ ಬಗ್ಗೆ ಚಿಂತಿಸುತ್ತಿರುವಾಗ ಆದಿನಾರಾಯಣ ದೇವರು ಇರುವೆಯ ಗೂಡಿನಲ್ಲಿ ವಾಸಿಸುವಂತೆ ಅವನಿಗೆ ಕನಸಾಯಿತು. ಸ್ವಲ್ಪ ಕಾಲದಲ್ಲಿಯೇ ಅಲ್ಲಿ ಅವನು ಒಂದು ದೇವಾಲಯ ಮತ್ತು ದುರ್ಗವನ್ನು ಕಟ್ಟಿಸಿ ಸುತ್ತಲಿದ್ದ ಕಾಡುಗಳನ್ನು ಕಡಿಸಿ ಹೆಚ್ಚು ಭೂಮಿಯನ್ನು ವ್ಯವಸಾಯಕ್ಕೆ ಅನುಗೊಳಿಸಿದ ಎಂದು ದೊಡ್ಡಬಳ್ಳಾಪುರ ಸ್ಥಾಪನೆಯನ್ನು ಕುರಿತು ಸ್ಥಳಪ್ರತೀತಿ ಇದೆ. ಸ್ಥಳೀಯ ದಾಖಲೆಗಳು ಈ ವಂಶದ ಇತಿಹಾಸವನ್ನು ಹೀಗೆ ತಿಳಿಸುತ್ತವೆ. ಸ್ಥಿತಿವಂತನಾದ ಮಲ್ಲಬೈರೇಗೌಡ ಪೆನುಗೊಂಡದ ರಾಜನಿಂದ ನೆರೆಯ ಪಾಳೆಯಗಾರರನ್ನು ದಂಡಿಸುವ ಅಧಿಕಾರ ಪಡೆದು ಒಂದು ಲಕ್ಷ ಪಗೋಡಗಳನ್ನು ಕೊಡುವ ರಾಜ್ಯವನ್ನು ವಶಪಡಿಸಿಕೊಂಡ. ಇದರ ಆಡಳಿತ ನಿರ್ವಹಣೆಗಾಗಿ ತನ್ನ ಸೋದರ ಹಾವಳಿ ಬೈರೇಗೌಡನನ್ನು (I) ನೇಮಿಸಿದ. ಈತ 20 ವರ್ಷಗಳು ರಾಜ್ಯವಾಳಿ ತೀರಿಕೊಂಡ. ಇವನ ಅನಂತರ ದೊಡ್ಡ ಹಾವಳಿ ಬೈರೇಗೌಡ (II) 25 ವರ್ಷಗಳೂ ಅವನ ಪುತ್ರ ಹಾವಳಿ ಬೈರೇಗೌಡ (III) 40 ವರ್ಷಗಳೂ ರಾಜ್ಯವಾಳಿದರು. ಹಾವಳಿ ಬೈರೇಗೌಡ ಸತ್ತಾಗ ಅವನ ಮಗ ಚಿಕ್ಕಪ್ಪಗೌಡ ಅಪ್ರಾಪ್ತವಯಸ್ಕನಾದುದರಿಂದ, ಹಾವಳಿ ಬೈರೇಗೌಡನ ಸೋದರನ ಮಗ ಹಾಗೂ ದಳವಾಯಿಯಾಗಿದ್ದ ತಮ್ಮಣ್ಣ ಗೌಡ ಶ್ರದ್ಧೆ, ನಿಷ್ಠೆಯಿಂದ 10 ವರ್ಷ ರಾಜ್ಯವಾಳಿ ಆಗ್ಗೆ ಪ್ರಾಪ್ತ ವಯಸ್ಕನಾಗಿದ್ದ ಚಿಕ್ಕಪ್ಪಗೌಡನಿಗೆ ಅಧಿಕಾರ ವಹಿಸಿ ನಿವೃತ್ತನಾದ. ಚಿಕ್ಕಪ್ಪಗೌಡ ಅಧಿಕಾರ ಸ್ವೀಕರಿಸಿದ ಮೂರು ವರ್ಷಗಳಲ್ಲಿ ಬಿಜಾಪುರದ ಸೇನಾನಿ ರಣದುಲ್ಲಾಖಾನ್ ದೊಡ್ಡಬಳ್ಳಾಪುರವನ್ನು ವಶಪಡಿಸಿಕೊಂಡಾಗ ಪಾಳೆಯಗಾರರ ಆಳ್ವಿಕೆ ಕೊನೆಗೊಂಡಿತು (ಸು. 1637-38). (ಎಚ್.ವಿ.ಎಸ್.)

**ದೊಡ್ಡಬೆಲೆ ನಾರಾಯಣಶಾಸ್ತ್ರಿ:** 19ನೆಯ ಶತಮಾನದ ಉತ್ತರಾರ್ಧ ಮತ್ತು 20ನೆಯ ಶತಮಾನದ ಪೂರ್ವಾರ್ಧಗಳಲ್ಲಿ ಜೀವಿಸಿದ್ದ ಕನ್ನಡ ವಿದ್ವಾಂಸರು. ಬೆಂಗಳೂರಿನ ಶೀಗೇಬೇಲಿ ಇವರ ಸ್ಥಳ. ವೇದಶಾಸ್ತ್ರಪಾರಂಗತರಾಗಿದ್ದ ಇವರು ಅನೇಕ ಸಂಸ್ಕೃತ ಕಾವ್ಯಗಳನ್ನು ಕನ್ನಡಿಸಿದ್ದಾರೆ. ಜೊತೆಗೆ ವೇದಾಂತ ವಿಷಯದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಇವರು ಆಸ್ಥಾನ ವಿದ್ವಾಂಸರೂ ಆಗಿದ್ದರು. ವೆಸ್ಲಿಯನ್ ಮಿಷನ್ ಕೊಲಿಜಿಯೆಟ್ ಹೈಸ್ಕೂಲಿನಲ್ಲಿ ಕೆಲಕಾಲ ಪ್ರಧಾನ ಪಂಡಿತರಾಗಿ ಕೆಲಸ ಮಾಡಿದರೆಂದು ತೋರುತ್ತದೆ.

ಇವರ ಅನುವಾದಗಳಲ್ಲಿ ಕಾಳಿದಾಸನ ರಘುವಂಶ, ಕುಮಾರಸಂಭವ ಕಾವ್ಯಗಳು ಮುಖ್ಯವಾದುವು. ಪ್ರತಿಯೊಂದು ಸರ್ಗದಲ್ಲಿಯೂ ಕ್ರಮವಾಗಿ ಪದ, ಅನ್ವಯ, ಅರ್ಥ, ತಾತ್ಪರ್ಯ, ಆಕಾಂಕ್ಷೆ, ವಿಗ್ರಹ, ಧಾತುರೂಪಗಳನ್ನು ವಿವರಿಸಿರುವುದು ಇವರ ಅನುವಾದದ ವೈಶಿಷ್ಟ್ಯ. ಟೀಕಾತಾತ್ಪರ್ಯಸಹಿತವಾಗಿ ರಾಮಾಯಣ ಸುಂದರಕಾಂಡ, ವಿಷ್ಣುಸಹಸ್ರನಾಮರತ್ನ, ರಾಘವೇಂದ್ರಸ್ತೋತ್ರ, ಹರಿಸ್ತುತಿ, ಮುಕುಂದಮಾಲಾ, ಭರ್ತೃಹರಿ, ಸುಭಾಷಿತ ಶತಕಗಳು, ವಾಯುಸ್ತುತಿ, ಋಗ್ವೇದಸನ್ಧ್ಯಾರ್ಥವಿಚಾರ ಮುಂತಾದುವುಗಳನ್ನು ಇವರು ಪ್ರಕಟಿಸಿದ್ದಾರೆ. ಧರ್ಮಸಿಂಧುಸಾರದ 1-2ನೆಯ ಪರಿಚ್ಛೇದಗಳು, ವಾಸುದೇವ ಮನನ ಇವು ಗಳನ್ನು ಮೂಲಾನುಸಾರವಾಗಿ ಕನ್ನಡಕ್ಕೆ ತಂದಿದ್ದಾರೆ. ಇವರು ರಚಿಸಿದ ಶಿವಾಪರಾಧ ಕ್ಷಮಾಪಣಸ್ತೋತ್ರ ಹೃದಯಂಗಮವಾಗಿದೆ. ಚಮತ್ಕಾರ ಚಿಂತಾಮಣಿ ಒಂದು ಉತ್ತಮ ಕಥೆ. ಶಾಸ್ತ್ರಿಗಳು ಉತ್ತಮ ಸಂಪಾದಕರೂ ಆಗಿದ್ದರು. ಕಠೋಪನಿಷತ್, ಶ್ರೀಮದ್ಧಶೋಪನಿಷದಃ, ಶುಕ್ರನೀತಿ ಮತ್ತು ಜೈಮಿನಿ ಭಾರತಗಳನ್ನು ಪರಿಷ್ಕರಿಸಿ ಸಂಪಾದಿಸಿದ್ದಾರೆ. ಶಾಸ್ತ್ರಿಗಳಿಂದ ಸಂಪಾದಿತವಾದ ಜೈಮಿನಿಭಾರತ ಒಂದು ಉತ್ತಮ ಸಂಪಾದನೆಯೆಂದು ಹೆಸರಾಗಿದೆ.

(ಎಸ್.ಆರ್.ಎನ್.)

**ದೊಡ್ಡಮಳೂರು :** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣ ತಾಲ್ಲೂಕಿನಲ್ಲಿ ಕಸಬೆಯಿಂದ ಸು. 5ಕಿಮೀ ಪಶ್ಚಿಮಕ್ಕೆ ಕಣ್ವ ನದಿಯ ಎಡದಂಡೆಯ ಮೇಲಿದೆ. ಮಳೂರು ಎಂದೂ ಕರೆಯಲಾಗುತ್ತಿದೆ. ಇದೊಂದು ಐತಿಹಾಸಿಕ ಸ್ಥಳ. ಸು. 1000 ದಲ್ಲಿ ಚೋಳ ಅಧಿಕಾರಿಯೊಬ್ಬ ಇದನ್ನು ಅಗ್ರಹಾರವಾಗಿ ಸ್ಥಾಪಿಸಿದ. ಪೆರಿಯ ಮಳೂರು ಅಗ್ರಹಾರ ಅಂದಿನ ಹೆಸರು. ಇಲ್ಲಿನ ಅಗ್ರಹಾರಿಕ ಶ್ರೀವೈಷ್ಣವರ ಪ್ರಕಾರ ರಾಜೇಂದ್ರಸಿಂಹನಗರ ಎಂದೂ ಹೆಸರು ಇದ್ದಂತೆ ತಿಳಿಯುತ್ತದೆ. ಇಂದು ಭಾರತದ ಬಹುಭಾಗದಲ್ಲಿ ಹಿಂದು ಕಾನೂನಿಗೆ ಮೂಲಾಧಾರವೆಂದು ಪರಿಗಣಿತವಾಗಿರುವ ಮಿತಾಕ್ಷರಾ ಎಂಬ ಯಾಜ್ಞವಲ್ಕ್ಯ ಸ್ಮೃತಿಯ ಟೀಕೆಯನ್ನು, ಅದರ ಕರ್ತೃ ವಿಜ್ಞಾನೇಶ್ವರ ಬರೆದಿದ್ದು ಇಲ್ಲಿಯೇ.

ಇಲ್ಲಿ ಕೈಲಾಸೇಶ್ವರ ಮತ್ತು ಅಪ್ರಮೇಯ ದೇವರುಗಳ ಎರಡು ಆಲಯಗಳಿವೆ. ಇವೆರಡೂ ಮೂಲತಃ ಅಗ್ರಹಾರದ ಭಾಗವಾಗಿ ಸು. 1000 ದಲ್ಲೇ ಕಟ್ಟಲಾದುವು. ಕೈಲಾಸೇಶ್ವರ ದೇವಾಲಯದಲ್ಲಿ ಗರ್ಭಗೃಹ ಸುಕನಾಸಿ ನವರಂಗ ಮುಖಮಂಟಪ ಇವೆ. ಗರ್ಭಗೃಹ ಮತ್ತು ಸುಕನಾಸಿ ಚೋಳಶೈಲಿಯವು. ನವರಂಗವೂ ಸೇರಿದಂತೆ ಈ ಭಾಗಗಳಲ್ಲಿ ಹೊರಗೋಡೆಯ ಮೇಲೆ ಅನೇಕ ತಮಿಳು ಶಾಸನಗಳಿವೆ. ನವರಂಗದಲ್ಲಿರುವ ನಾಲ್ಕು ಕಂಬಗಳು ಮತ್ತು ಮುಂದಿರುವ ಆರಂಕಣದ ಮುಖಮಂಟಪ ಹೊಯ್ಸಳ 3ನೆಯ ಬಲ್ಲಾಳನ ಕಾಲದ್ದೆಂದು ತೋರುತ್ತದೆ. ನವರಂಗದ ಉತ್ತರದ್ವಾರದ ಪಕ್ಕದಲ್ಲಿ ಪಾರ್ವತಿ ಗುಡಿ ಇದೆ. ಇದರಲ್ಲಿ ಗರ್ಭಗೃಹ ಮತ್ತು ನವರಂಗಗಳಿವೆ. ಈ ಗುಡಿಗಳ ಮೇಲಿನ ಶಿಖರಗಳೂ ಸು. 17ನೆಯ ಶಮಾನದ ರಚನೆಗಳು. ಇವನ್ನು ಸುತ್ತುವರಿದಂತೆ ಪ್ರಾಕಾರ ಮತ್ತು ಮಹಾದ್ವಾರ ಇವೆ. ಇವು 3ನೆಯ ಬಲ್ಲಾಳನ ಕಾಲದ್ದಿರಬಹುದು.

ಅಪ್ರಮೇಯ ದೇವಾಲಯ ಊರಿನ ಮುಖ್ಯ ಗುಡಿ. ದೇವಾಲಯದ ಸುತ್ತ ಬೃಹತ್ ಪ್ರಾಕಾರ ಭಿತ್ತಿ, ಮುಂಭಾಗದಲ್ಲಿ ದೊಡ್ಡ ಮಹಾದ್ವಾರ, ಅದರ ಮೇಲೆ ಎತ್ತರದ ವಿಜಯನಗರ ಶೈಲಿಯ ಗೋಪುರ ಇವೆ. ಪ್ರಾಕಾರದ ಗೋಡೆಗೆ ಹೊಂದಿಕೊಂಡಂತೆ ಒಳಭಾಗದಲ್ಲಿ ಸುತ್ತಲೂ ಮೂರಂಕಣ ಆಳದ ಕೈಸಾಲೆ ಇದೆ. ಕೈಸಾಲೆಯ ಹಿಂಭಾಗವನ್ನು ಕೆಲವೆಡೆ ಕೋಣೆಗಳಾಗಿ ವಿಂಗಡಿಸಿದ್ದು ಅವುಗಳಲ್ಲಿ ಜೀಯರ್, ನಮ್ಮಾಳ್ವರ್, ಮಡಪಳ್ಳಿ ನಾಚ್ಚಾರ್, ತಿರುಮಂಗೈ ಆಳ್ವಾರ್, ದೇಶಿಕ, ಕೂರತ್ತಾಳ್ವಾರ್, ಪಿಳ್ಳೈಲೋಕಾಚಾರ್ಯ, ಭಾಷ್ಯಾಕಾರ ಮತ್ತು ಬಾಲಕೃಷ್ಣ ವಿಗ್ರಹಗಳನ್ನು ಸ್ಥಾಪಿಸಲಾಗಿದೆ. ಅಂಬೆಗಾಲಿಟ್ಟುಕೊಂಡು ಒಂದು ಕೈಯಲ್ಲಿ ಬೆಣ್ಣೆ ಹಿಡಿದಿರುವ ಇಲ್ಲಿನ ಬಾಲಕೃಷ್ಣ ಉಲ್ಲೇಖಾರ್ಹ ಕೃತಿ. ಮಹಾದ್ವಾರದಿಂದ ಒಳಹೋಗುತ್ತಿದ್ದಂತೆಯೇ ಪಾತಾಳಾಂಕಣವಿದೆ. ಎತ್ತರದ ಅಷ್ಟಮುಖ ಕಂಬಗಳಿಂದ ಎತ್ತಿದ ಈ ಭಾಗದಲ್ಲಿ ರಾಮದಾಸ ಮತ್ತು ಅವನ ಪತ್ನಿ ಮಂಚಿಲಕ್ಷ್ಮಿ ಕೈಮುಗಿದು ನಿಂತಿರುವ ವಿಗ್ರಹಗಳಿವೆ. ಈ ಭಾಗ ಚನ್ನಪಟ್ಟಣದ ಜಗದೇವರಾಯನ ಕಾಲದ ರಚನೆ. ಮಧ್ಯದಲ್ಲಿರುವ ಅಪ್ರಮೇಯ ಗುಡಿ ಮೂಲತಃ ಚೋಳ ಕಾಲದ್ದಾದರೂ ವಿಜಯನಗರದ

ಕಾಲದಲ್ಲಿ ಮತ್ತು ಅನಂತರ ಬಹುವಾಗಿ ನವೀಕೃತವಾಗಿದೆ. ಗರ್ಭಗೃಹದಲ್ಲಿ ಚೋಳ ಕಾಲದ ಕೆಲವು ಉಳಿಕೆಗಳಿವೆ. ಮುಂದಿರುವ ಸುಕನಾಸಿ ಮತ್ತು ನವರಂಗಗಳಲ್ಲಿನ ಕಂಬಗಳು ಮತ್ತು ಶಿಲ್ಪಗಳು ಸ್ಪಷ್ಟವಾಗಿ ವಿಜಯನಗರ ಶೈಲಿಯವು. ಇವೆಲ್ಲಾ 16ನೆಯ ಶತಮಾನದಲ್ಲಿ ರಚಿತವಾದವು. ಗರ್ಭಗೃಹದಲ್ಲಿರುವ ಅಪ್ರಮೇಯ ವಿಗ್ರಹ (ಜನಾರ್ಧನ ಮೂರ್ತಿ) 41/2 ಅಡಿ ಎತ್ತರವಿದೆ. ವಿಗ್ರಹ ಶಿಲ್ಪ ರೂಪಣೆಯಲ್ಲಿ ಕೆಲವು ಹೊಯ್ಸಳ ಅಂಶಗಳಿರುವಂತೆ ಕಂಡರೂ ಇದು ಮೂಲ ಚೋಳರ ಕಾಲದ್ದೇ ಇರಬಹುದೆಂದು ಊಹೆ ಇದೆ. ಅಪ್ರಮೇಯ ದೇವಾಲಯ ಈ ಸುತ್ತಿನ ಪ್ರದೇಶದಲ್ಲೇ ದೊಡ್ಡ ಗುಡಿ. (ಕೆ.ಟಿ.ಆರ್.)

**ದೊಡ್ಡಯ್ಯ :** ಸು. 1550. ಜೈನಕವಿ. ಚಂದ್ರಪ್ರಭಚರಿತೆ ಎಂಬ ಕಾವ್ಯದ ಕರ್ತೃ. ಪಿರಿಯಾಪಟ್ಟಣದ ದೊರೆ ವಿರೂಪರಾಜೇಂದ್ರನ ಆಸ್ಥಾನದಲ್ಲಿ ಕರಣಿಕ ತಿಲಕನೂ ಜಿನಪುರಾಣ ಕಥಾಗಮ ನಿಪುಣನೂ ಆಗಿದ್ದ ದೇವಪ್ಪ ಈತನ ತಂದೆ. ಗುರು ಪಂಡಿತಮುನಿ. ಪೂರ್ವಕವಿಗಳಲ್ಲಿ ಪಂಪ, ರನ್ನ, ವಿಜಯ, ಗುಣವರ್ಮ, ಜನ್ನ, ಮಧುರ, ನಾಗಚಂದ್ರ, ಪೊನ್ನ, ನೇಮಿಚಂದ್ರ, ಬಂಧುವರ್ಮ ಮೊದಲಾದವರನ್ನು ಸ್ತುತಿಸಿದ್ದಾನೆ. ತನ್ನ ಕವಿತಾಚಾತುರ್ಯ ಲಲನೆಯರ ಮೊಗದ ಮೂಗುತಿಯಾಣಿಮಣಿಯಂತೆ, ಸುಲಲಿತಾಂಗಿಯರ ನುಣ್ಗೊರಲ ಕಂಠಿಕೆಯಂತೆ, ರಸದಾಳಿಯ ರಸದಂತೆ, ಮಿಸುಪ ರಸಮೊಸರ್ವ ಮಾವಿನ ಹಣ್ಣಿನಂತೆ, ಅಸಿಯಳ ನಳಿತೋಳತಕ್ಕೆಯಂತೆ ಸಹೃದಯರನ್ನು ಮೋಹಿಸುವುದಾಗಿ ಹೇಳಿಕೊಂಡಿದ್ದಾನೆ.

ಚಂದ್ರಪ್ರಭುಚರಿತೆ ಸಾಂಗತ್ಯದಲ್ಲಿದೆ. ಇದರಲ್ಲಿ 28 ಸಂಧಿಗಳೂ 4475 ಪದ್ಯಗಳೂ ಇವೆ. ನಡುನಡುವೆ ವೃತ್ತ ಷಟ್ಪದಿಗಳೂ ಬಳಕೆಯಾಗಿವೆ. 8ನೆಯ ತೀರ್ಥಂಕರ ಚಂದ್ರಪ್ರಭನ ಕಥೆ ಈ ಕಾವ್ಯದ ವಸ್ತು. ಪೂರ್ವದಲ್ಲಿ ಕವಿ ಪರಮೇಷ್ಠಿ, ಗುಣಭದ್ರ ಮೊದಲಾದವರು ಹೇಳಿರುವ ಕಥೆಯನ್ನೇ ತಾನು ಕನ್ನಡಿಸುವುದಾಗಿ ಹೇಳಿಕೊಂಡಿದ್ದಾನೆ. ಹೆಚ್ಚಾಗಿ ವಿಜಯಕವಿಯ ಚಂದ್ರಪ್ರಭ ಪುರಾಣವನ್ನು ಆದರ್ಶವಾಗಿಟ್ಟುಕೊಂಡಿರುವಂತೆ ತೋರುತ್ತದೆ. ಕಾವ್ಯರಚನೆ ಸಾಂಪ್ರದಾಯಿಕವಾಗಿದೆ. ಸಾಂಗತ್ಯದ ನಡಿಗೆಯಲ್ಲಿ ಲಾಲಿತ್ಯವಿದ್ದು ಹಿತವಾಗಿದೆ. ಕವಿಗೆ ಅಲಂಕಾರಪ್ರಿಯತೆ ಹೆಚ್ಚು. ಆದರೂ ಕೆಲವು ಸನ್ನಿವೇಶಗಳನ್ನು ಕಲ್ಪಿಸುವಾಗ ರಸಘಟ್ಟಗಳನ್ನು ರಚಿಸುವಾಗ ಗಣನೀಯ ಸಾಮರ್ಥ್ಯವನ್ನು ತೋರಿಸಿದ್ದಾನೆ. ಮಹಾಕಾವ್ಯೋಚಿತ ವರ್ಣನೆಗಳೂ ಇವೆ. ಸಾಂಗತ್ಯದ ಮಿತಿಯಲ್ಲಿಯೆ ಭಾಷೆಯನ್ನು ಮನೋಜ್ಞವಾಗಿ ಬಳಸಿಕೊಂಡಿರುವುದು ಮೆಚ್ಚತಕ್ಕ ಸಂಗತಿ. ಮೇಘವನ್ನು ವರ್ಣಿಸುವ ಸುಂದರ ಪದ್ಯವೊಂದು ಹೀಗಿದೆ.

> ಸಿಡಿಲ್ಗಿಚ್ಚಿನ ಧೂಮವೋ ಸುರಗಂಗೆಯ
>
> ತಡಿಯ ತಮಾಲಕಾನನವೋ
>
> ಜಡದಲಕ್ಷ್ಮಿಯ ಪೀಲಿದಳೆಯೋ ಎಂದೆನೆ
>
> ಕಡುರಯಮಬ್ದ ಸಂದೋಹ (ಎನ್.ಬಿ.ಎಲ್.)

**ದೊಡ್ಡವೀರಪ್ಪ :** ಕೊಡಗು ಸಂಸ್ಥಾನದ ಪ್ರಖ್ಯಾತ ರಾಜ (1687-1736). ಮುದ್ದುರಾಜನ ಹಿರಿಯ ಮಗ. ಕೊಡಗು ಈತನ ಕಾಲದಲ್ಲಿ ಹೆಚ್ಚು ಅಭಿವೃದ್ಧಿ ಹೊಂದಿತ್ತು. ಇವನ ಕಾಲದಲ್ಲಿ ಮೈಸೂರಿನ ಚಿಕ್ಕದೇವರಾಜ ಕೊಡಗನ್ನು ಗೆದ್ದುಕೊಳ್ಳಬೇಕೆಂಬ ಉದ್ದೇಶದಿಂದ ಒಂದು ಸೈನ್ಯವನ್ನು ಕಳುಹಿಸಿದ. ಆ ಸೈನ್ಯ ಬಾಳೆಲೆ ಎಂಬ ಊರಿನ ಮುಖಾಂತರ ಕೊಡಗನ್ನು ಪ್ರವೇಶಿಸಿ ಪಾಲುಪರೆಯಲ್ಲಿ ಬೀಡುಬಿಟ್ಟಿತು. ಈ ಸುದ್ದಿಯು ತಿಳಿದ ತಕ್ಷಣ ದೊಡ್ಡವೀರಪ್ಪ ರಾತ್ರಿಯೇ ಪಾಲುಪರೆಗೆ ಸೈನ್ಯದೊಂದಿಗೆ ಧಾವಿಸಿ ಬೆಳಗಾಗುವುದರೊಳಗೆ ಚಿಕ್ಕದೇವರಾಜ ಒಡೆಯನ ಸೈನ್ಯವನ್ನು ಸೋಲಿಸಿ ಹಿಮ್ಮೆಟ್ಟಿಸಿದ. ಈ ಯುದ್ಧದಿಂದಾಗಿ ಮೈಸೂರಿನ ಅರಸ ನಷ್ಟವನ್ನನುಭವಿಸಿದ. ಉನ್ನತ ಅಧಿಕಾರಿಗಳು ಮತ್ತು ಹೆಚ್ಚು ಸಂಖ್ಯೆಯಲ್ಲಿ ಸೈನಿಕರು ಸಾವನ್ನಪ್ಪಿದ್ದರು. ದೊಡ್ಡ ವೀರಪ್ಪ ಅಳಿದುಳಿದ ಮೈಸೂರಿನ ಸೈನ್ಯವನ್ನು ಹೆಗ್ಗಡದೇವನಕೋಟೆಯ ಹಂಪಾಪುರದವರೆಗೂ ಅಟ್ಟಿಸಿಕೊಂಡು ಹೋಗಿ ಅಲ್ಲಿ ತನ್ನ ವಿಜಯಸ್ತಂಭವನ್ನು ನೆಟ್ಟ. ದೊಡ್ಡ ವೀರಪ್ಪ ಮೈಸೂರಿನ ಚಿಕ್ಕದೇವರಾಜ ಒಡೆಯನ ಸೈನ್ಯದೊಂದಿಗೆ ಹೋರಾಡುತ್ತಿದ್ದಾಗ, ಉತ್ತರ ಮಲಬಾರಿನ ವೀರವರ್ಮರಾಜ ಎಂಬುವನು 500 ನಾಯರ್ ಸೈನಿಕರೊಡನೆ ತೋಮರ ಎಂಬ ಗ್ರಾಮದ ಹತ್ತಿರ ಠಾಣ್ಯ ಹೂಡಿದ. ದೊಡ್ಡ ವೀರಪ್ಪ ಧೈರ್ಯಗುಂದದೆ ಅಲ್ಲಿಗೆ 1500 ಸೈನಿಕರನ್ನು ಕಳುಹಿಸಿ ವೀರವರ್ಮನ ಸೈನ್ಯ ಮುಂದೆ ನುಗ್ಗದಂತೆ ತಡೆಗಟ್ಟಿದ. ಅನಂತರ ದೊಡ್ಡ ವೀರಪ್ಪ ಮೈಸೂರಿನ ಸೈನ್ಯವನ್ನು ಸೋಲಿಸಿದಮೇಲೆ ತಾನೇ ಅಲ್ಲಿಗೆ ಹೋಗಿ ಮಲಬಾರಿನ ಸೈನಿಕರನ್ನು ನಾಶಮಾಡಿದ.

ದೊಡ್ಡವೀರಪ್ಪನ ಔದಾರ್ಯ, ಪ್ರಾಮಾಣಿಕತೆ ಮತ್ತು ನಿಷ್ಠೆಗಳು ಅವನ ಕಾಲದಲ್ಲಿ ನಡೆದ ಒಂದು ಘಟನೆಯಿಂದ ವಿದಿತವಾಗುತ್ತವೆ. ಇಕ್ಕೇರಿಯ ಸೋಮಶೇಖರನಾಯಕ 1730ರಲ್ಲಿ ಚಿರಕ್ಕಲ್ಲಿನ ರಾಜನ ಪ್ರದೇಶಗಳನ್ನು ದಾಳಿ ಮಾಡಿದಾಗ ಆ ರಾಜ ಅಶಕ್ತನಾಗಿದ್ದುದರಿಂದ ದೊಡ್ಡ ವೀರಪ್ಪನ ಸಹಾಯವನ್ನು ಯಾಚಿಸಿದ. ದೊಡ್ಡ ವೀರಪ್ಪ ಮತ್ತು ಇಕ್ಕೇರಿಯ ಸೋಮಶೇಖರನಾಯಕ ಇಬ್ಬರೂ ಪರಸ್ಪರ ಸಂಬಂಧಿಕರಾಗಿದ್ದುದರಿಂದ ಚಿರಕ್ಕಲ್ ರಾಜ ತನ್ನ ರಾಜ್ಯವನ್ನು ಉಳಿಸಬೇಕೆಂದು ದೊಡ್ಡ ವೀರಪ್ಪನ ಮೊರೆಹೊಕ್ಕ. ದೊಡ್ಡವೀರಪ್ಪ, ಸೋಮಶೇಖರನಾಯಕನಿಗೆ ಯುದ್ಧವನ್ನು ನಿಲ್ಲಿಸುವಂತೆಯೂ ಗೆದ್ದುಕೊಂಡಿದ್ದ ಪ್ರದೇಶಗಳನ್ನು ಹಿಂತಿರುಗಿಸುವಂತೆಯೂ ಕೇಳಿಕೊಂಡ. ಮೊದಲು ನಾಯಕ ಒಪ್ಪಲಿಲ್ಲವಾದರೂ 18 ಲಕ್ಷ ರೂಪಾಯಿಗಳನ್ನು ಚಿರಕ್ಕಲ್ಲಿನ ರಾಜ ಕೊಡಲೊಪ್ಪುವುದಾದರೆ, ತಾನು ಆಕ್ರಮಿಸಿದ್ದ ಪ್ರದೇಶಗಳನ್ನು ಬಿಟ್ಟುಕೊಡುವುದಾಗಿ ಹೇಳಿದ. ಚಿರಕ್ಕಲ್ಲಿನ ರಾಜ ಹಣವನ್ನು ಕೊಡಲು ಒಪ್ಪಿಕೊಂಡ. ಈ ಹಣಕ್ಕೆ ದೊಡ್ಡ ವೀರಪ್ಪನೇ ಜಾಮೀನಾಗಿ ನಿಂತ. ಆದರೆ ಚಿರಕ್ಕಲ್ ರಾಜ 9 ಲಕ್ಷ ರೂಪಾಯಿಗಳನ್ನು ಮಾತ್ರ ಸಲ್ಲಿಸಿದ. ಉಳಿದ ಬಾಕಿ 9 ಲಕ್ಷ ರೂಪಾಯಿಗಳನ್ನು ಕೇಳಲು ಬಂದ ರಾಜನ ದೂತರನ್ನು ತುಚ್ಛವಾಗಿ ಕಂಡು ಬರಿಗೈಲಿ ಹಿಂದಿರುಗುವಂತೆ ಮಾಡಿದ. ಆಗ ಕೋಪಗೊಂಡ ದೊಡ್ಡವೀರಪ್ಪ ಒಂದು ಸೈನ್ಯವನ್ನು ಬೋನಿರ ಮುತ್ತಣ್ಣ ಎಂಬ ಸೇನಾಪತಿಯ ನಾಯಕತ್ವದಲ್ಲಿ ಹಣ ವಸೂಲಿಮಾಡಲು ಕಳಹಿಸಿಕೊಟ್ಟ. ಮುತ್ತಣ್ಣ ಸೈನ್ಯಸಮೇತನಾಗಿ ಹಣ ಕೇಳುವುದಕ್ಕೆ ಆಗಮಿಸಿದುದನ್ನು ನೋಡಿ ಅವನನ್ನು ಮತ್ತು ಅವನ ಸೈನ್ಯವನ್ನು ನಿರ್ನಾಮ ಮಾಡಬೇಕೆಂದು ಯೋಜನೆ ಹಾಕಿಕೊಂಡ ಚಿರಕ್ಕಲ್ ರಾಜಸಿದ್ಧತೆಗಳನ್ನು ಮಾಡಿಕೊಳ್ಳಲು ಪ್ರಾರಂಭಿಸಿದ. ಈ ಒಳಸಂಚನ್ನು ತಿಳಿದ ಮುತ್ತಣ್ಣ ತಲೆತಪ್ಪಿಸಿಕೊಂಡು ಕಣ್ಣಾನೂರಿಗೆ ಹೋಗಿ ಅಲ್ಲಿಂದ ಕುಂಬಳೆಯ ಮಾರ್ಗವಾಗಿ ಕೊಡಗನ್ನು ತಲುಪಿದ. ದೊಡ್ಡವೀರಪ್ಪ ನಿಷ್ಠಾವಂತ ಹಾಗೂ ಸತ್ಯಪ್ರಿಯ. ಅವನು ಚಿರಕ್ಕಲ್ ರಾಜನು ಸೋಮಶೇಖರನಾಯಕನಿಗೆ ಸಲ್ಲಿಸಬೇಕಾಗಿದ್ದ 9 ಲಕ್ಷ ರೂಪಾಯಿಗಳನ್ನು ತನ್ನ ಖಜಾನೆಯಿಂದ ಪಾವತಿ ಮಾಡಿದ. ದೊಡ್ಡವೀರಪ್ಪ ನಿಷ್ಠೆಯಿಂದ ಸಂತಸಗೊಂಡ ನಾಯಕ ಅವನಿಗೆ ತುಳುನಾಡಿನ ಕೆಲವು ಹಳ್ಳಿಗಳನ್ನು ಉಚಿತವಾಗಿ ಕೊಟ್ಟ. ಈ ಗ್ರಾಮಗಳಿಗೆ ಅಮರ ಮಾಗಣೆ ಎಂದು ಹೆಸರಿಸಲಾಯಿತು. ಅನಂತರ ದೊಡ್ಡವೀರಪ್ಪ ಕೊಡಗಿನ ಕಾವೇರಿ ದೇವಿಯ ಅಭಿಷೇಕಕ್ಕಾಗಿ ಕೊಡಗಿನಲ್ಲಿ ತೆಂಗಿನಕಾಯಿ ಫಲ ಇಲ್ಲದೆ ಇದ್ದುದರಿಂದ ತೆಂಗಿನಕಾಯಿ ಒದಗಿಸುವುದಕ್ಕೋಸ್ಕರ ಭಾಗಮಂಡಲಕ್ಕೆ ಸಮೀಪವಾಗಿರುವ ಸುಳ್ಯ ಮಾಗಣೆಯನ್ನು ಕ್ರಯಕ್ಕೆ ಕೊಡಬೇಕೆಂದು ಸೋಮಶೇಖರನಾಯಕನನ್ನು ಕೇಳಿದ. ಅದಕ್ಕೆ ಒಪ್ಪಿ ಸೋಮಶೇಖರನಾಯಕ ಸುಳ್ಯ ಮಾಗಣೆಯನ್ನು ದೊಡ್ಡವೀರಪ್ಪನಿಗೆ ಮಾರಿದ. ಹೀಗೆ ಇವನ ಕಾಲದಲ್ಲಿ ಕೊಡಗು ರಾಜ್ಯಕ್ಕೆ ಅಮರ ಮತ್ತು ಸುಳ್ಯ ಮಾಗಣೆಗಳು ಸೇರಿದವು.

ದೊಡ್ಡವೀರಪ್ಪ ಸುಭದ್ರವಾದ ಆಡಳಿತ ಯಂತ್ರವನ್ನು ಸ್ಥಾಪಿಸಿದ. ಇವನ ಕಾಲದಲ್ಲೇ ಅರಮನೆ ಕಡಂಗು ಎಂಬ ಅಗಳುಗಳನ್ನು ನಾಡುಗಳ ಎಲ್ಲೆಯನ್ನು ವಿಭಾಗಿಸಲು ತೋಡಿಸಿದ. ಇವನು ಕೊಡವರಲ್ಲಿ ದೇಶತಕ್ಕರೆಂಬ ಹೆಸರಿನಿಂದ ಎಂಟು ಜನರನ್ನು ನ್ಯಾಯತೀರ್ಪಿಗಾಗಿ ನೇಮಿಸಿದ. ಈ ತಕ್ಕಾಮೆ ವಂಶಪಾರಂಪರ್ಯವಾಗಿ ಮುಂದುವರಿಯುವ ಹಾಗೆ ಆಯಿತು.

ದೊಡ್ಡವೀರಪ್ಪ 49 ವರ್ಷ ಕಾಲ ಬಹು ಸಾಮರ್ಥ್ಯದಿಂದ

ರಾಜ್ಯಭಾರ ಮಾಡಿ ತನ್ನ 78ನೆಯ ವಯಸ್ಸಿನಲ್ಲಿ 1736ರಲ್ಲಿ ನಿಧನಹೊಂದಿದ. ಇವನ ಜೊತೆಯಲ್ಲೇ ಇವನ ಇಬ್ಬರು ರಾಣಿಯರೂ ಸಹಗಮನ ಮಾಡಿದರು. ಪ್ರಾಮಾಣಿಕ ಶೂರ ಹಾಗೂ ಅತ್ಯಂತ ನೇರ ನಡವಳಿಕೆಯುಳ್ಳವನಾಗಿದ್ದ ದೊಡ್ಡವೀರಪ್ಪ ತನ್ನ ಮಗ ಅಪ್ಪಾಜಿರಾಜ ತನ್ನ ಕ್ರೂರ ನಡತೆಯಿಂದ ತನ್ನ ಹೆಂಡತಿಯ ಆತ್ಮಹತ್ಯೆಗೆ ಕಾರಣನಾಗಿದ್ದನೆಂದು ಅವನನ್ನು ಶಿಕ್ಷಿಸಿದ. ದೊಡ್ಡವೀರಪ್ಪ ಮರಣಹೊಂದಿದ ಮೇಲೆ ಅಪ್ಪಾಜಿರಾಜನ ಮಗ ಚಿಕ್ಕವೀರಪ್ಪ ಕೊಡಗಿನ ರಾಜನಾದ.

(ಎಸ್.)

**ದೊಡ್ಡಸಂಕಣ್ಣನಾಯಕ :** ಕೆಳದಿಯ ರಾಜ (ಸು. 1566- 70). ಕೆಳದಿ ರಾಜರ ವಂಶಾವಳಿಯಲ್ಲಿ ಇವನ ಸ್ಥಾನ ಖಚಿತವಾಗಿಲ್ಲ. ದೊಡ್ಡಸಂಕಣ್ಣ ನಾಯಕ ಕೆಳದಿಯ ಎರಡನೆಯ ದೊರೆ ಸದಾಶಿವನಾಯಕನೇ ಎಂದೂ ಇವನು ಸದಾಶಿವನಾಯಕನ ಹಿರಿಯ ಮಗ ಮತ್ತು ರಾಮಾರಾಜಯ್ಯನ ಅಣ್ಣ ಎಂದೂ ರಾಮರಾಜಯ್ಯನಿಗೇ ಈ ಹೆಸರಿತ್ತೆಂದೂ ಅನೇಕ ರೀತಿಯ ಅಭಿಪ್ರಾಯಗಳಿವೆ.

ದೊಡ್ಡಸಂಕಣ್ಣನಾಯಕ ಶೂರನೂ ಧಾರ್ಮಿಕನೂ ಆಗಿದ್ದ. ಇವನ ರಾಜ್ಯಭಾರದ ಕಾಲಾವಧಿಯು ನಿಶ್ಚಿತವಾಗಿ ಹೇಳಬರುವಂತಿಲ್ಲವಾದರೂ ವಿಜಯನಗರದ ರಾಮರಾಜನ ಕಾಲದಲ್ಲಿ ಇದ್ದ. ಆ ರಾಜ್ಯದ ಮಾಂಡಲಿಕನಾಗಿದ್ದ ಜಂಬೂರಿನ ವಿರೂಪಣ್ಣ ಒಡೆಯ ಮಲೆತು ನಿಂತಾಗ ಅವನನ್ನು ಸೋಲಿಸಿ ಜಂಬೂರು ಮತ್ತು ಉಡುಗಣಿಗಳನ್ನು ವಶಪಡಿಸಿಕೊಂಡ. ಆಗ ರಾಮರಾಜ ಮಧ್ಯಸ್ಥಿಕೆ ಮಾಡಿ ವಿರೂಪಣ್ಣನ ಪ್ರದೇಶವನ್ನು ಅವನಿಗೆ ಮರಳಿ ಕೊಡಿಸಿದ ಮತ್ತು ದೊಡ್ಡ ಸಂಕಣ್ಣ ನಾಯಕನನ್ನು ರಾಜಧಾನಿಯಲ್ಲಿ ಕೆಲಕಾಲ ನಿಲ್ಲಿಸಿಕೊಂಡು ರಾಜಮರ್ಯಾದೆ ಮಾಡಿದ. ಇವನು ಮುಸಲ್ಮಾನರೊಡನೆಯ ಯುದ್ಧಗಳಲ್ಲಿ ರಾಮರಾಜನಿಗೆ ಸಹಾಯ ಮಾಡಿದ. ಅದರಂತೆ ಕಾರ್ಕಳದ ಭೈರರಸ ಒಡೆಯ ಮತ್ತು ಗೇರುಸೊಪ್ಪೆಯ ಭೈರಾದೇವಿಯೊಡನೆ ನಡೆದ ಯುದ್ಧಗಳಲ್ಲಿಯೂ ತನ್ನ ವಿಕ್ರಮವನ್ನು ಮೆರೆದ. ಗೋವೆಯ ಕೋಟೆಯನ್ನು ವಶಪಡಿಸಿಕೊಳ್ಳಲು ವಿಜಯನಗರದ ಸೇನಾನಿಯಾದ ವಿಠಲರಾಯನಿಗೆ ಸಹಾಯ ಮಾಡಿದನೆಂದೂ ಹೇಳಲಾಗುತ್ತದೆ. ಕೆಳದಿನೃಪವಿಜಯದ ಪ್ರಕಾರ, ದೊಡ್ಡ ಸಂಕಣ್ಣನಾಯಕ ಮಕ್ಕಳೀರ್ವರ ಮದುವೆ ಮಾಡಿ ತಮ್ಮನಿಗೆ ರಾಜ್ಯಭಾರ ವಹಿಸಿ ಜಂಗಮ ವೇಷದಿಂದ ಉತ್ತರ ದೇಶದ ಯಾತ್ರೆಯನ್ನು ಕೈಗೊಂಡ. ದಿಲ್ಲಿಯಲ್ಲಿ ಅಂಕುಶಖಾನನೆಂಬ ವಜೀರನನ್ನು ಖಡ್ಗ ಯುದ್ಧದಲ್ಲಿ ಸೋಲಿಸಿದ. ಮುಂದೆ ಕಾಶಿಗೆ ಬಂದು ಅಲ್ಲಿ ಜಂಗಮ ಘಾಟನ್ನು ಕಟ್ಟಿಸಿದ. ಗಯಾ, ಕಾಶ್ಮೀರಗಳಿಗೂ ಹೋಗಿ ಬಂದ. ತನ್ನ ಊರಿಗೆ ಹಿಂತಿರುಗುವಾಗ ಮೈಸೂರು ಸೀಮೆಯ ವಾಲವಳ್ಳಿ ಎಂಬ ಗ್ರಾಮದಲ್ಲಿದ್ದಾಗ ಸ್ವಪ್ನದಲ್ಲಿ ಕಾಣಿಸಿಕೊಂಡ ವೀರಭದ್ರನಿಗಾಗಿ ಕೆಳದಿಯಲ್ಲಿ ಗುಡಿಯನ್ನು ಕಟ್ಟಿಸಿದ್ದ. ಇವನ ಈ ಉತ್ತರ ಭಾರತ ಯಾತ್ರೆಗೆ ಬೇರೆ ಪುರಾವೆಗಳು ದೊರೆತಿಲ್ಲ. (ಎಸ್.ಎಚ್.)

**ದೊಡ್ಡಹುಲ್ಲೂರು :** ಬೆಂಗಳೂರು ಜಿಲ್ಲೆ ಹೊಸಕೋಟೆ ತಾಲ್ಲೂಕಿನ ಒಂದು ಗ್ರಾಮ. ಹೊಸಕೋಟೆಯಿಂದ 4 ಕಿಮೀ ದೂರದಲ್ಲಿದೆ. ಇಲ್ಲಿ ದೊರೆತ 1339 ರ ಒಂದು ಶಾಸನದ ಪ್ರಕಾರ ಈ ಗ್ರಾಮಕ್ಕೆ ಪುಲ್ಲಿಯೂರು ಎಂಬ ಹೆಸರು ಪ್ರಚಲಿತದಲ್ಲಿತ್ತೆಂದು ತಿಳಿದುಬರುತ್ತದೆ. ಸಿಂಗನವರ ಎಂಬ ಅಧಿಕಾರಿ ಪುಲ್ಲಿಯೂರಿನ ದೇಶಿಗಳಿಗೆ ದಾನ ನೀಡಿದ ವಿವರವನ್ನು ನೀಡುತ್ತದೆ. ಗ್ರಾಮದಲ್ಲಿ ಬೀರೇದೇವರ ಗುಡಿಯಿದೆ. ಬೀರೇದೇವರನ್ನು ಹುಲ್ಲೂರಪ್ಪ ಎಂದೂ ಕರೆಯಲಾಗುತ್ತದೆ. ಈ ದೇವಸ್ಥಾನದ ಸುತ್ತ ಸು. 20 ವೀರಗಲ್ಲುಗಳಿವೆ. ಕೆರೆಯ ಹತ್ತಿರ ಪ್ರಾಚೀನ ಕಾಲದ ಈಶ್ವರ ದೇವಾಲಯವೊಂದಿದೆ. ಈ ದೇವಾಲಯ ಚೋಳ ಶೈಲಿಯ ದೇವಾಲಯದಂತೆ ಕಂಡರೂ ಇದರ ನಿರ್ಮಾಣದ ಮೇಲೆ ಸ್ಪಷ್ಟ ಬೆಳಕು ಚೆಲ್ಲುವ ದಾಖಲೆಗಳು ದೊರೆಯುವುದಿಲ್ಲ. ಶಿಥಿಲಾವಸ್ಥೆಯಲ್ಲಿರುವ ಈ ದೇವಾಲಯದ ಗೋಡೆಯಲ್ಲಿ ಕೆಲವು ಸುಂದರ ಉಬ್ಬುಶಿಲ್ಪಗಳಿವೆ. ಈ ದೇವಾಲಯದ ಅಧಿಷ್ಠಾನ ಹೊಯ್ಸಳರ ಕಾಲದ ದ್ರಾವಿಡ ದೇವಾಲಯಗಳ ಅಧಿಷ್ಠಾನವನ್ನು ಜ್ಞಾಪಕಕ್ಕೆ ತರುತ್ತದೆ. ಇಲ್ಲೊಂದು ತಮಿಳು ಶಾಸನವಿದೆ. ಗರ್ಭಗೃಹದಲ್ಲಿ ಚಪ್ಪಟೆ ಶಿರಭಾಗಹೊಂದಿರುವ ಶಿವಲಿಂಗವಿದೆ. ಈ ಗ್ರಾಮಕ್ಕೆ ಸು. 5 ಕಿಮೀ ದೂರದಲ್ಲಿ ಮುಗಬಾಳ ಗ್ರಾಮವಿದ್ದು ಇಲ್ಲಿ ಅನೇಕ ದೇವಾಲಯಗಳಿವೆ. (ಆರ್.ಎಚ್.ಕೆ.)

**ದೊಡ್ಡೇರಿ :** ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ ಒಂದು ಗ್ರಾಮ, ಪ್ರಾಚೀನ ಐತಿಹಾಸಿಕ ಸ್ಥಳ. ಚಳ್ಳಕೆರೆ ಪಟ್ಟಣದಿಂದ ಪೂರ್ವಕ್ಕೆ ಸು. 7ಕಿಮೀ ದೂರದಲ್ಲಿದೆ. ಇದು ನಿಡಗಲ್ಲು ಅಥವಾ ಹರತಿ-ನಿಡಗಲ್ಲು ಮನೆತನದ ಮೂಲಪುರುಷನಿಂದ ಸ್ಥಾಪಿತವಾಯಿತೆಂದು ತಿಳಿದುಬರುತ್ತದೆ. ಈಚೆಗೆ ನಡೆದ ಸಂಶೋಧನೆಗಳಿಂದ ಈ ಪ್ರದೇಶ ಬಹುಪೂರ್ವದಲ್ಲೇ ನವಶಿಲಾಯುಗದ ಮಾನವ ವಸತಿಯಾಗಿತ್ತೆಂದೂ ನೊಳಂಬ ಪಲ್ಲವ ದೊರೆಗಳ ಕಾಲದಲ್ಲಿ ಒಂದು ಮುಖ್ಯಸ್ಥಳವಾಗಿತ್ತೆಂದೂ ಕಂಡುಬಂದಿದೆ. ಈ ಊರಿನಲ್ಲಿ ಹಳೆಯ ಕೋಟೆಯ ಅವಶೇಷ, ಕೆಲವು ಪ್ರಾಚೀನ ದೇವಾಲಯಗಳು ನೊಳಂಬ ಪಲ್ಲವ ಕಾಲದ ಕೆಲವು ವೀರಗಲ್ಲುಗಳು ಈ ಊರಿಗೆ ಸಮೀಪದಲ್ಲೇ ನವಶಿಲಾಯುಗ ಕಾಲದ ಕಲ್ಲಿನ ಆಯುಧ ಇತ್ಯಾದಿಗಳು ದೊರೆತಿವೆ. ಈ ಊರಿಗೆ ಸಮೀಪದ ಹಳೆಯ ದೊಡ್ಡೇರಿ ಎಂದು ಕರೆಯುವ ಜನವಸತಿಯಿಂದ ಗ್ರಾಮದ ಬಳಿ ಕನ್ನೇಶ್ವರ ಎಂಬ ಹೆಸರಿನ ಬೃಹತ್ ಲಿಂಗದ ಪ್ರಾಚೀನ ದೇವಾಲಯವೊಂದಿದ್ದು, ಈಚೆಗೆ ಅದು ಜೀರ್ಣೋದ್ಧಾರಗೊಂಡಿದೆ. 16 ನೆಯ ಶತಮಾನದಲ್ಲಿ ಈ ಊರು ಹರತಿ-ನಿಡಗಲ್ಲು ಮನೆತನದ ತಿಪ್ಪರಾಜ ಎಂಬುವನಿಗೆ ಸೇರಿತ್ತು. ಅವನು ತನ್ನ ರಾಜ್ಯವನ್ನು ಮಕ್ಕಳಿಗೆ ಹಂಚಿಕೊಟ್ಟಾಗ ಇದು ಅವನ ಮಗ ತಿಮ್ಮಣ್ಣನಾಯಕ ಎಂಬುವನ ಪಾಲಿಗೆ ಬಂತು. ಸ್ವಲ್ಪ ಕಾಲಾನಂತರ ಬಿಜಾಪುರದ ಸುಲ್ತಾನರು ಇತ್ತಕಡೆ ಬಂದು ದೊಡ್ಡೇರಿಯನ್ನು ಮುತ್ತಿದಾಗ ಆತ ತುಮಕೂರು ಜಿಲ್ಲೆಯಲ್ಲಿರುವ ನಿಡುಗಲ್ಲಿಗೆ ಓಡಿಹೋಗಿ ನೆಲೆನಿಂತ. 1698 ರಲ್ಲಿ ಮರಾಠರ ಸಂತಾಜಿ ಘೋರ್ಪಡೆ ಭಾರಿ ಸೈನ್ಯದೊಂದಿಗೆ ಬಂದು ಶಿರಾದ ಮೇಲೆ ದಾಳಿ ಮಾಡಿದಾಗ, ಮೊಗಲರಿಂದ ನೇಮಕವಾಗಿದ್ದ ಅಲ್ಲಿಯ ಸುಬೇದಾರ ಕಾಸೀಂಖಾನ್ (1687 - 98) ಆ ಸೈನ್ಯದೊಂದಿಗೆ ಹೋರಾಡುತ್ತ ದೊಡ್ಡೇರಿಯ ಕಡೆಗೆ ಓಡಿ ಬಂದು, ಕೋಟೆಯೊಳಗೆ ಸೇರಿಕೊಂಡ. ಈ ಸುದ್ದಿ ತಿಳಿದು ಚಿತ್ರದುರ್ಗದ ದೊರೆ ಬರಮಣ್ಣನಾಯಕ (1689 - 1721) ಒಂದು ದಂಡನ್ನು ಕಳಿಸಲು, ಆ ದಂಡಿನ ಮುಖಂಡರು ಸಂತಾಜಿ ಘೋರ್ಪಡೆಯನ್ನು ಭೇಟಿಮಾಡಿ ಮಾತುಕತೆ ನಡೆಸಿ ದೊಡ್ಡೇರಿ ಕೋಟೆಯನ್ನು ಮುತ್ತಿದರು. ಆಗ ಕಾಸೀಂಖಾನ್ ಹೋರಾಟದಲ್ಲಿ ಮಡಿದ. ಸಂತಾಜಿ ಘೋರ್ಪಡೆ ದೊಡ್ಡೇರಿಯನ್ನು ಬರಮಣ್ಣನಾಯಕನಿಗೇ ಬಿಟ್ಟುಕೊಟ್ಟ. ಮುಂದೆ 1779 ರಲ್ಲಿ ಹೈದರ್ ಅಲಿಯ ವಶವಾಗುವವರೆಗೂ ದೊಡ್ಡೇರಿ ಒಂದು ಮುಖ್ಯ ಗಡಿಠಾಣ್ಯವಾಗಿ ದುರ್ಗದ ನಾಯಕರ ವಶದಲ್ಲೇ ಇತ್ತು.

ಈಗಿನ ಚಳ್ಳಕೆರೆ ತಾಲ್ಲೂಕನ್ನು ಹಿಂದೆ ದೊಡ್ಡೇರಿ ತಾಲ್ಲೂಕು ಎಂದು ಕರೆಯಲಾಗುತ್ತಿದ್ದು 1882ರಲ್ಲಿ ದೊಡ್ಡೇರಿ ತಾಲ್ಲೂಕು ಕೇಂದ್ರವಾಗಿತ್ತು. ಒಂದು ಕಾಲಕ್ಕೆ ಈ ಊರು ಕಾಗದ ತಯಾರಿಕೆಗೆ ಪ್ರಸಿದ್ಧವಾಗಿತ್ತು. ಆ ಕಾಗದ ದೊಡ್ಡೇರಿ ಕಾಗದ ಎಂದೂ ಕಾಗದದ ಹಾಳೆಯ ಗಾತ್ರ ಸರ್ವತ್ರ ಅಂಗೀಕೃತವಾದ ಅಳತೆಯ ಮಾಪನವಾಗಿ ದೊಡ್ಡೇರಿಗಜ ಎಂದೂ ಪ್ರಸಿದ್ಧವಾಗಿದ್ದುವು. (ಬಿ.ಆರ್.ಎ.ಜಿ.)

**ದೊಡ್ಡೇರಿ ವೆಂಕಟಗಿರಿರಾವ್ :** 1913-2004. ಹೆಸರಾಂತ ವೈದ್ಯ, ಸಾಹಿತಿ ಹಾಗೂ ಛಾಯಾಚಿತ್ರಕಾರ.

ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನಲ್ಲಿ ದೊಡ್ಡೇರಿ ಗ್ರಾಮದಲ್ಲಿ ಬಡ ಕೃಷಿಕ ಮನೆತನದಲ್ಲಿ 1913 ಡಿಸೆಂಬರ್ 28ರಂದು ಜನಿಸಿದರು. ಆರಂಭಿಕ ಶಿಕ್ಷಣವನ್ನು ಸಾಗರದಲ್ಲಿ ತಮ್ಮ ಬಂಧುಗಳ ನೆರವಿನಿಂದ ಪೂರೈಸಿದರು. ಅನಂತರದ ಶಿಕ್ಷಣಕ್ಕಾಗಿ ಬಳ್ಳಾರಿಯ ಪಂಡಿತ ತಾರಾನಾಥರ ಆಯುರ್ವೇದ ವಿದ್ಯಾಲಯದಲ್ಲಿ ಎಲ್.ಐ.ಎಂ. ಡಿಪ್ಲೊಮಾ ಪಡೆದರು. ಅನಂತರ ಸಾಗರದಲ್ಲಿ ತಮ್ಮ ವೈದ್ಯಕೀಯ ವೃತ್ತಿ ಆರಂಭಿಸಿದರು. ಅನಂತರ ಬೆಂಗಳೂರು ಜಿಲ್ಲೆ ದೊಡ್ಡಬಳ್ಳಾಪುರಕ್ಕೆ ಸ್ಥಳಾಂತರಿಸಿದರು. ಅಲ್ಲಿ 30-35 ವರ್ಷಗಳ ಸುದೀರ್ಘ ಕಾಲ ವೈದ್ಯರಾಗಿ

ಜನಪ್ರಿಯತೆ ಗಳಿಸಿದರು. ತಮ್ಮನ್ನು ಹುಡುಕಿಕೊಂಡು ಬಂದ ರೋಗಿಗಳಿಗೆ ಉಚಿತವಾಗಿ ವೈದ್ಯಕೀಯ ಸಲಹೆ ಕೊಡುತ್ತಿದ್ದರು.

1932 ರಷ್ಟು ಹಿಂದೆಯೇ ಕವಿತೆಗಳನ್ನು ಬರೆಯುವುದರ ಮೂಲಕ ಸಾಹಿತ್ಯ ಕೃಷಿಗೆ ತೊಡಗಿದರು. ಅನಂತರ ಶಿಶುಸಾಹಿತ್ಯ, ಕಾದಂಬರಿ, ಸಣ್ಣಕತೆ, ವೈದ್ಯಕೀಯ ಸಾಹಿತ್ಯ, ಲೈಂಗಿಕ ಸಾಹಿತ್ಯ, ಪ್ರವಾಸಕಥನ ಮತ್ತು ಫೋಟೋಗ್ರಫಿ ಇತ್ಯಾದಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ಇವರು ಕನ್ನಡದಲ್ಲಿ 600ಕ್ಕೂ ಹೆಚ್ಚು ಇಂಗ್ಲಿಷ್‌ನಲ್ಲಿ 150ಕ್ಕೂ ಹೆಚ್ಚು ಲೇಖನಗಳನ್ನು ಬರೆದಿದ್ದಾರೆ. 30ಕ್ಕೂ ಹೆಚ್ಚು ಕನ್ನಡ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಆರೋಗ್ಯ, ಲೈಂಗಿಕ ವಿಜ್ಞಾನ ವಿಷಯಗಳ ಬಗ್ಗೆ ಕನ್ನಡದಲ್ಲಿ ಯಾರೂ ಬರೆಯದ ಕಾಲದಲ್ಲಿ ಇವರು ದಾಂಪತ್ಯ ಜೀವನ ಎಂಬ ಮಾಸಪತ್ರಿಕೆಯ ಸಂಪಾದಕರಾಗಿ ಐದು ವರ್ಷಗಳ ಕಾಲ ಅದನ್ನು ಪ್ರಕಟಿಸಿದರು. ಪ್ರಸವ ವಿಜ್ಞಾನ, ಸಂತಾನ ಸಂಯಮ, ವಿಕೃತಕಾಮ, ಕಾಮ ಶಿಕ್ಷಣ ಎಂಬ ಹಲವು ಮೌಲ್ಯಯುತ ಕೃತಿಗಳನ್ನೂ ಪ್ರಕಟಿಸಿದರು. ಇವರ ಕವನ ಸಂಕಲನ ರೋಹಿಣಿ, ದಾಳಿಂಬೆ ಚೆಲುವೆ, ಕರಿಗಡುಬು - ಇವು ಕಥಾಸಂಕಲನಗಳು.

ಇವರು ಬರೆದ ಸಂಪ್ರಾದಾನ, ಅವಧಾನ, ಸೃಷ್ಟಿದಾನ, ಅತ್ತಿಯ ಹೂವು ಮೊದಲಾದ ಕಾದಂಬರಿಗಳು ಇವರಿಗೆ ಜನಪ್ರಿಯತೆ ತಂದುಕೊಟ್ಟವು. ಕೆಲವು ಕಾದಂಬರಿಗಳು 80ರ ದಶಕದಲ್ಲಿ ಸುಧಾ ವಾರ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿ ಜನಪ್ರಿಯತೆ ಗಳಿಸಿದುವು. ಪ್ರಸಿದ್ಧ ಚಲನಚಿತ್ರ ನಿರ್ದೇಶಕ ಪುಟ್ಟಣ್ಣ ಕಣಗಾಲರು ಇವರ ಅವಧಾನ ಕಾದಂಬರಿ ಆಧರಿಸಿ ಅಮೃತಘಳಿಗೆ ಎಂಬ ಚಲನಚಿತ್ರ ನಿರ್ಮಿಸಿದರು.

ಹವ್ಯಾಸಿ ಛಾಯಾಚಿತ್ರಗಾರರಾಗಿಯೂ ಇವರು ಪ್ರಸಿದ್ಧರಾಗಿದ್ದಾರೆ. ಅದರಲ್ಲಿಯೂ ಕಪ್ಪು-ಬಿಳುಪು ಚಿತ್ರಗಳಲ್ಲಿ, ಪಿಕ್ಟೋರಿಯಲ್ ಫೋಟೋಗ್ರಫಿ ವಿಭಾಗದಲ್ಲಿ ತುಂಬ ಪರಿಣಿತರಾಗಿದ್ದ ಇವರು ತಮ್ಮ ಚಿತ್ರಗಳನ್ನು ತಾವೇ ಸ್ವತಃ ಕಪ್ಪು ಕೋಣೆಯಲ್ಲಿ ಕುಳಿತು ಮುದ್ರಿಸಿ ಚಿತ್ರಗಳಿಗೆ ಜೀವಕಳೆ ತುಂಬುತ್ತಿದ್ದರು. ಇವರು ವಿವಿಧ ಸ್ಪರ್ಧೆಗಳಿಗಾಗಿ ಮುದ್ರಿಸಿದ 1940-50ರ ದಶಕದ ಫೋಟೋಗಳು ಇನ್ನೂ ಹೊಚ್ಚ ಹೊಸದಾಗಿ ನಮಗೆ ಕಾಣುತ್ತವೆ. ಕೇವಲ ಒಂದು ಪುಟ್ಟ ಬಾಕ್ಸ್ ಕ್ಯಾಮರದಿಂದ ಫೋಟೋಗ್ರಫಿ ಆರಂಭಿಸಿದ ಇವರು ಉಪಕರಣಕ್ಕಿಂತ ಅದರ ಹಿಂದಿರುವ ಮನಸ್ಸು, ಭಾವ ಮುಖ್ಯ ಎಂಬುದನ್ನು ಸ್ಪಷ್ಟವಾಗಿ ಸಾಬೀತುಪಡಿಸಿದರು. 1958ರಲ್ಲಿ ಅಂತಾರಾಷ್ಟ್ರೀಯ ಮಟ್ಟದ ಎಫ್‌ಐಎಪಿ ಪ್ರಶಸ್ತಿಗೆ ಭಾಜನರಾದ ಇವರು ಕರ್ನಾಟಕಕ್ಕೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ಹೆಸರು ತಂದು ಕೊಟ್ಟ ಕೆಲವೇ ಛಾಯಾಚಿತ್ರಕಾರರಲ್ಲಿ ಒಬ್ಬರು. ಅಮೆರಿಕ ಫೋಟೋಗ್ರಾಫರ್ ಸೊಸೈಟಿಯು ತ್ರೀಸ್ಟಾರ್ ಸರ್ಟಿಫಿಕೇಟ್ ನೀಡಿ ಇವರನ್ನು ಗೌರವಿಸಿದೆ (1966). ಫೆಡರೇಷನ್ ಆಫ್ ಇಂಡಿಯನ್ ಫೋಟೋಗ್ರಾಫಿಕ್ ಸೊಸೈಟಿಯ ಉಪಾಧ್ಯಕ್ಷರಾಗಿ, ಅಧ್ಯಕ್ಷರಾಗಿ ಇವರು ಕಾರ್ಯನಿರ್ವಹಿಸಿದರು. ಫೋಟೋಗ್ರಾಫಿಯನ್ನು ಹಲವಾರು ಶಿಷ್ಯರಿಗೆ ಕಲಿಸುವಲ್ಲಿ ಯಶಸ್ವಿಯಾದರು. ಫೋಟೋಗ್ರಫಿ ಬಗ್ಗೆಯೇ ನೂರಾರು ಚಿತ್ರ-ಲೇಖನಗಳನ್ನು ಪ್ರಕಟಿಸಿರುವ ಇವರು ಭಾವಭಿವ್ಯಂಜಕ ಛಾಯಾಚಿತ್ರಕಲೆ ಎಂಬ ಅಪರೂಪದ ಪುಸ್ತಕಗಳನ್ನು ಕನ್ನಡದಲ್ಲಿ ಬರೆದರು. ಈ ಕೃತಿಗೆ ಸಾಹಿತ್ಯ ಅಕಾಡೆಮಿ ಹಾಗೂ ಲಲಿತಕಲಾ ಅಕಾಡೆಮಿಯ ಪ್ರಶಸ್ತಿಗಳು ದೊರಕಿವೆ (1996). 1982ರಲ್ಲಿ ಇವರಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಲಭ್ಯವಾಗಿದೆ.

ಇವರು 2004 ಮೇ 26ರಂದು ನಿಧನರಾದರು. (ಎಚ್.ಎಸ್.ಎಂ.)

**ದೊಡ್ಮನೆ :** ಉತ್ತರ ಕನ್ನಡ ಜಿಲ್ಲೆ ಸಿದ್ದಾಪುರ ತಾಲ್ಲೂಕಿನ ಒಂದು ಗ್ರಾಮ. ಸಿದ್ದಾಪುರದಿಂದ ಕುಮಟಕ್ಕೆ ಹೋಗುವ ರಸ್ತೆಯಲ್ಲಿ 27 ಕಿಮೀ ದೂರದಲ್ಲಿದೆ. ತುಂಬ ಹಳೆಯದಾದ ವಿಶಾಲವಾದ ಭವಂತಿ ಮನೆಯೊಂದರ ಕಾರಣದಿಂದ ದೊಡ್ಮನೆ ಎಂಬ ಹೆಸರು ಈ ಹಳ್ಳಿಗೆ ಬಂದಿತೆಂದು ಪ್ರತೀತಿ. ಸುತ್ತಲಿನ ಹಳ್ಳಿಗಳ ಜಮೀನಿನ ಒಡೆತನವನ್ನು ಹೊಂದಿದ ದೊಡ್ಡ ಜಮೀನ್ದಾರ ಮನೆತನವೊಂದು ಈ ಮನೆಯಲ್ಲಿ ವಾಸವಾಗಿತ್ತು. ಈ ಮನೆತನ ಸ್ವಾತಂತ್ರ್ಯ ಚಳವಳಿಗೆ ಮಹತ್ವದ ಕೊಡುಗೆ ನೀಡಿದೆ. ಇದೇ ಕುಟುಂಬದ ಮಹಾದೇವಿತಾಯಿ ಎಂಬುವವರು ಗಾಂಧೀಜಿಯ ಆಶ್ರಮ ಸೇರಿ, ಅನಂತರ ವಿನೋಬಾ ಜೊತೆ ಪವನಾರ ಆಶ್ರಮದಲ್ಲಿ ವಾಸಮಾಡಿದರು. ಈಗ ಬೆಂಗಳೂರಿನಲ್ಲಿ ವಿಶ್ರನೀಡಂ ಟ್ರಸ್ಟ್ ಸ್ಥಾಪಿಸಿ ನಡೆಸುತ್ತಿದ್ದಾರೆ. ಕರ್ನಾಟಕದ ಮಾಜಿ ಮುಖ್ಯಮಂತ್ರಿಗಳಾಗಿದ್ದ ರಾಮಕೃಷ್ಣಹೆಗಡೆಯವರು (ನೋಡಿ) ಈ ಮನೆತನಕ್ಕೆ ಸೇರಿದವರು.

ಈ ಗ್ರಾಮ ಸಹ್ಯಾದ್ರಿ ಶ್ರೇಣಿಯ ಮನೋಹರವಾದ ದೃಶ್ಯಾವಳಿಗಳ ಕಣಿವೆಯ ನಡುವಿದೆ. ಇಲ್ಲಿ ಇತ್ತೀಚೆಗೆ ಕಟ್ಟಲಾದ ಗಣಪತಿ ಮತ್ತು ಲಕ್ಷ್ಮೀನಾರಾಯಣ ದೇವಾಲಯಗಳಿವೆ. ಇಲ್ಲಿ ಬುರುಡೆ ಜೋಗ ಎಂದು ಕರೆಯುವ ಒಂದು ಜಲಪಾತವಿದೆ. ಇದನ್ನು ದೊಡ್ಮನೆ ಜಲಪಾತವೆಂದೂ ಕರೆಯುತ್ತಾರೆ. ಉಂಚಳ್ಳಿ ಜಲಪಾತದಲ್ಲಿ ದುಮುಕಿ ಹರಿಯುವ ಅಘನಾಶಿನಿ ನದಿ ಇಲ್ಲಿ ಎರಡು ಕಡೆಗಳಲ್ಲಿ ಧುಮ್ಮಿಕ್ಕುತ್ತದೆ. ಮೊದಲನೆಯ ಪಾತದಲ್ಲಿ 60 ಮೀ ಆಳಕ್ಕೆ ಇಳಿದರೆ ಎರಡನೆಯ ಪಾತದಲ್ಲಿ 48 ಮೀ ಆಳಕ್ಕೆ ಇಳಿಯುತ್ತದೆ. ಈ ಸ್ಥಳವನ್ನು ತಲುಪಲು ಹೇಮನಬೈಲ್‌ವರೆಗೂ ರಸ್ತೆ ಮಾರ್ಗವಿದೆ. ಅಲ್ಲಿಂದ ಚಪ್ಪರಮನೆವರೆಗೂ ಸು. 2 ಕಿಮೀ ದೂರ ಕ್ರಮಿಸಿದರೆ ಜಲಪಾತದ ಸ್ಥಳವನ್ನು ಮುಟ್ಟಬಹುದು.

(ಆರ್.ಪಿ.ಎಚ್.)

**ದೊರೆಸ್ವಾಮಿ ಅಯ್ಯಂಗಾರ್, ವಿ. :** 1920-1997. ಅಖಿಲ ಭಾರತ ಖ್ಯಾತಿಯ ಪ್ರಸಿದ್ಧ ವೈಣಿಕರು. 1920ರಲ್ಲಿ ಜನಿಸಿದರು. ತಂದೆ ವೆಂಕಟೇಶ ಅಯ್ಯಂಗಾರ್ ಅವರು ಸ್ವತಃ ವೀಣೆ ನುಡಿಸುವುದರಲ್ಲಿ ಸಿದ್ಧಹಸ್ತರಾಗಿದ್ದರು. ದೊರೆಸ್ವಾಮಿ ಅಯ್ಯಂಗಾರ್ಯರು ತಮ್ಮ ತಂದೆಯವರಲ್ಲಿಯೇ ಮೊದಲಿಗೆ ವೀಣಾಭ್ಯಾಸ ಮಾಡಿ, ಮುಂದಿನ ಪ್ರೌಢ ವ್ಯಾಸಂಗವನ್ನು ವೈಣಿಕಪ್ರವೀಣರೂ ಆಸ್ಥಾನ ವಿದ್ವಾಂಸರೂ ಆಗಿದ್ದ ವೆಂಕಟಗಿರಿಯಪ್ಪನವರಲ್ಲಿ ಮುಂದುವರಿಸಿ ಅವರ ಅತ್ಯಂತ ಪ್ರಿಯ ಶಿಷ್ಯರಾಗಿ, ಅನೇಕ ವರ್ಷಗಳ ಕಾಲ ವಿದ್ಯಾರ್ಜನೆಮಾಡಿ ಗುರುಕೃಪೆಗೆ ಪಾತ್ರರಾದರು. ಚಿಕ್ಕವಯಸ್ಸಿನಲ್ಲಿಯೇ ನಾಲ್ವಡಿ ಕೃಷ್ಣರಾಜೇಂದ್ರರ ಆಸ್ಥಾನದಲ್ಲಿ ವಿದ್ವಾಂಸರಾಗಿ ಗೌರವಕ್ಕೆ ಭಾಜನರಾದರು. ಟಿ.ಚೌಡಯ್ಯನವರ ಜೊತೆಯಲ್ಲಿ ಭಾರತದಾದ್ಯಂತ ಸುಮಾರು ಹತ್ತು ವರುಷಗಳಿಗೂ ಮೀರಿ ಯಶಸ್ವಿಯಾಗಿ ಸಂಗೀತ ಕಛೇರಿಗಳನ್ನು ಮಾಡಿದರು. ಇವರು ಮೈಸೂರು ವಿಶ್ವವಿದ್ಯಾನಿಲಯದ ಪದವೀಧರರೂ ಹೌದು. ಹಿಮಾಲಯದ ಯೋಗವೇಂದಾತ ಆಶ್ರಮದ ಸ್ವಾಮಿ ಶಿವಾನಂದರ ಅನುಗ್ರಹಕ್ಕೆ ಪಾತ್ರರಾಗಿ ವೈಣಿಕ ವಿದ್ಯಪಾರಂಗತ ಎಂಬ ಪ್ರಶಸ್ತಿಯನ್ನು ಗಳಿಸಿದರು (1960). ಮದ್ರಾಸ್ ಮ್ಯೂಸಿಕ್ ಅಕಾಡೆಮಿ ಮೊದಲಾದ ಭಾರತದ ಅನೇಕ ಸಂಗೀತ ಸಭೆಗಳಲ್ಲಿ ವೀಣೇ ಕಛೇರಿ ಮಾಡಿ ಕರ್ನಾಟಕಕ್ಕೆ ಕೀರ್ತಿ ತಂದುಕೊಟ್ಟರು. 1970ರಲ್ಲಿ ಶಿರಾಜ್‌ನಲ್ಲಿ ನಡೆದ ಅಂತಾರಾಷ್ಟ್ರೀಯ ಸಂಗೀತ ಸಮ್ಮೇಳನದಲ್ಲಿ ಭಾಗವಹಿಸಿ ಕೀರ್ತಿಪ್ರಶಂಸೆಗಳಿಗೆ ಪಾತ್ರರಾದರು. ಮೃದುಸ್ವಭಾವದವರೂ ನಿರಾಡಂಬರ ವ್ಯಕ್ತಿತ್ವವುಳ್ಳವರೂ ಆದ ಇವರು ವೀಣಾವಾದನ ಕಲೆಯನ್ನು ತಪಸ್ಸಿನಂತೆ ಸಾಧಿಸಿ ಸಿದ್ಧಿಪಡೆದವರು. ಇವರು ನಾಡಿನಾದ್ಯಂತ ರಸಿಕ ಜನರ ಹಾಗೂ ಖ್ಯಾತ ವಿದ್ವಾಂಸರ ಮೆಚ್ಚಿಗೆಗೆ ಪಾತ್ರರಾಗಿದ್ದಾರೆ. 1971ರಲ್ಲಿ ಇವರಿಗೆ ರಾಷ್ಟ್ರಪ್ರಶಸ್ತಿ ದೊರಕಿತು. 1976ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಇವರಿಗೆ ಗೌರವ ಡಾಕ್ಟರೇಟ್ ಪ್ರಶಸ್ತಿ ನೀಡಿ ಗೌರವಿಸಿದೆ. 1997 ಅಕ್ಟೋಬರ್ 26ರಂದು ಇವರು ನಿಧನರಾದರು. ಇವರು ಬೆಂಗಳೂರು ಆಕಾಶವಾಣಿ ನಿಲಯದಲ್ಲಿ ಸೇವೆ ಸಲ್ಲಿಸುತ್ತಿದ್ದರು. (ವಿ.ಡಿ.)

**ದೊರೆಸ್ವಾಮಿ, ಆರ್.ಎನ್. :** 1916-2002. ಕರ್ನಾಟಕ ಸಂಗೀತ ಕಲಾವಿದ. ವೀಣ ವಿದ್ವಾಂಸ, ವಾಗ್ಗೇಯಕಾರ. ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕಿನ ರುದ್ರಪಟ್ಟಣದಲ್ಲಿ 1916 ಡಿಸೆಂಬರ್ 12ರಂದು ಜನಿಸಿದರು. ತಂದೆ ವೆಂಕಟರಾಮಯ್ಯ, ತಾಯಿ ಸಾವಿತ್ರಮ್ಮ. ಇವರ ಪೂರ್ವಜರಾರೂ ಸಂಗೀತ ವಿದ್ವಾಂಸರಾಗಿರಲಿಲ್ಲ. ತಾಯಿ ಸಾವಿತ್ರಮ್ಮ ಮಧುರವಾಗಿ ಸಂಪ್ರದಾಯದ ಹಾಡುಗಳನ್ನು ಹಾಡುತ್ತಿದ್ದರು. ಬಾಲ್ಯದಲ್ಲಿ ಸಂಗೀತದಲ್ಲಿ ಆಸಕ್ತಿ ಬೆಳಸಿಕೊಂಡ ದೊರೆಸ್ವಾಮಿಯವರು ತಮ್ಮ ಊರಿನಲ್ಲಿ

ನಡೆಯುತ್ತಿದ್ದ ಭಜನೆ, ಹರಿಕಥೆ, ಗಮಕ, ಸಂಗೀತ ಮುಂತಾದ ಕಾರ್ಯಕ್ರಮಗಳಿಗೆ ತಪ್ಪದೆ ಹೋಗುತ್ತಿದ್ದರು. ಆಸ್ಥಾನ ವಿದ್ವಾನ್ ಚಿಕ್ಕರಾಮರಾಯರಿಂದ ಸಂಗೀತಾಭ್ಯಾಸ ಮಾಡಿ ವೀಣೆಯನ್ನೇ ತಮ್ಮ ಕಲಾಮಾಧ್ಯಮವಾಗಿ ಆಯ್ಕೆ ಮಾಡಿಕೊಂಡ ಇವರು ಚಿದಂಬರಂನಲ್ಲಿ ಗುರುಕುಲವಾಸ ಮಾಡಿ ಸಂಗೀತಾಭ್ಯಾಸ ಮಾಡಿದರು. ವೀಣೆ ವೆಂಕಟಗಿರಿಯಪ್ಪನವರ ಅಚ್ಚುಮೆಚ್ಚಿನ ಶಿಷ್ಯರಾದರು. ಸೇಲಂ ದೊರೆಸ್ವಾಮಿ ಅಯ್ಯಂಗಾರ್ ಅವರ ಶಿಷ್ಯತ್ವ ಪಡೆದು ಹಾಡುಗಾರಿಕೆಯಲ್ಲೂ ಪರಿಣತಿ ಪಡೆದರು. ವೀಣಾವಾದನ ಕಲೆಗೆ ಹೊಸ ಆಯಾಮ ನೀಡಿರುವ ಇವರು ವೀಣೆ ಶೇಷಣ್ಣನವರ ಭವ್ಯ ಮೈಸೂರು ವೀಣಾ ಪರಂಪರೆಗೆ ಸೇರಿದವರು.

ಸುಮಾರು ಎರಡು ದಶಕಗಳ ಕಾಲ ಮೈಸೂರು ಅರಮನೆಯ ಆಸ್ಥಾನ ವಿದ್ವಾಂಸರಾಗಿ, ಒಂದು ದಶಕ ಕಾಲ ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ, ಸುಮಾರು ಹನ್ನೆರಡು ವರ್ಷ ಲಲಿತ ಕಲೆಗಳ ಕಾಲೇಜಿನಲ್ಲಿ ವೀಣಾ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ ಇವರು ನಾಲ್ಕು ದಶಕಗಳ ಕಾಲ ವೀಣಾವಾದನ ಕಛೇರಿಗಳನ್ನು ನಡೆಸಿ ಅಪಾರ ಅಭಿಮಾನಗಳನ್ನು ಸಂಪಾದಿಸಿಕೊಂಡರು. ಆಕಾಶವಾಣಿಯ ಉನ್ನತ ದರ್ಜೆಯ ಕಲಾವಿದರೂ ಆಗಿದ್ದ ಇವರು ಉತ್ತಮ ವಾಗ್ಮಿಗಳೂ ಹೌದು. ಸಂಗೀತ, ಸಾಹಿತ್ಯಗಳೆರಡರಲ್ಲೂ ಉನ್ನತ ಮಟ್ಟದ ಪ್ರೌಢಿಮೆಯಿದ್ದ ದೊರೆಸ್ವಾಮಿಯವರು ಸಂಗೀತದಲ್ಲಿ ಯಾವುದೇ ಸಂದೇಹವನ್ನಾದರೂ ಬಲ್ಲವರಾಗಿದ್ದರು.

ದೇಶದ ಹಲವಾರು ಸಂಗೀತ ಸಭೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದ ಇವರು ಎಲ್ಲರೊಂದಿಗೆ ಸಹೃದಯತೆ ಮತ್ತು ಸರಳತೆಯಿಂದಿರುತ್ತಿದ್ದರು. ಯಾವುದೇ ಸಂಗೀತ ಸಂಸ್ಥೆಯ ಯಾವ ಸಂಗೀತ ಸಮ್ಮೇಳನ, ಸಂಕಿರಣ, ಗೋಷ್ಠಿಗಳು ನಡೆದಾಗಲೂ ಅದಕ್ಕೆ ಇವರ ಮಾರ್ಗದರ್ಶನ ದೊರೆಯುತ್ತಿತ್ತು. ಇವರು ವೀಣಾವಾದಕರಾಗಿ ಮಾತ್ರವಲ್ಲದೇ ಸಂಪ್ರದಾಯಬದ್ಧ ಸುರಸ ವಾಗ್ಗೇಯಕಾರರಾಗಿಯೂ ಹೆಸರುವಾಸಿಯಾಗಿದ್ದರು. ಇವರು ಕರ್ನಾಟಕ ಸಂಗೀತದ ಹಲವಾರು ಗೇಯ ರಚನೆಗಳನ್ನು ರಚಿಸಿದ್ದಾರೆ. ಇವರು ರಚಿಸಿರುವ ಜತಿಸ್ವರಗಳು, ವರ್ಣಗಳು, ತಿಲ್ಲಾನ ಮತ್ತು ಕೀರ್ತನೆಗಳನ್ನು ಇಂದಿನ ಅನೇಕ ಖ್ಯಾತ ಕಲಾವಿದರು ತಮ್ಮ ಕಛೇರಿಗಳಲ್ಲಿ ಹಾಡುತ್ತಾರೆ. ಇವರಿಂದ ತರಬೇತಿ ಪಡೆದ ಅನೇಕ ಶಿಷ್ಯರು ಖ್ಯಾತ ಕಲಾವಿದರಾಗಿ ಹೆಸರು ಪಡೆದಿದ್ದಾರೆ.

ಇವರ ಕಲಾಸಾಧನೆಯನ್ನು ಗುರುತಿಸಿ ಇವರಿಗೆ ಹಲವಾರು ಪ್ರಶಸ್ತಿ ಸನ್ಮಾನಗಳು ದೊರಕಿವೆ. ವೈಣಿಕ ಪ್ರವೀಣ, ವೀಣಾ ವಿದ್ಯಾವಾರಿಧಿ ಹಾಗೂ ಶ್ರೀದತ್ತಪೀಠದ ಗಣಪತಿ ಸಚ್ಚಿದಾನಂದ ಸ್ವಾಮಿಯವರು ನೀಡಿದ 'ವೈಣಿಕ ಕಲ್ಪತರು' - ಇವು ಕೆಲವು. ಇವರಿಗೆ 1983ರಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯಿಂದ ಕರ್ನಾಟಕ ಕಲಾತಿಲಕ ಪ್ರಶಸ್ತಿಯೂ 1989ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯೂ 2001ರಲ್ಲಿ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿಯೂ ಲಭಿಸಿವೆ. ಇವರು ಮೈಸೂರಿನ ಸಂಗೀತ ಕಲಾಭಿವರ್ಧಿನೀ ಸಭಾ ಹಾಗೂ ಬೆಂಗಳೂರಿನ ಗಾಯನ ಸಮಾಜದ ಸಮ್ಮೇಳನಾಧ್ಯಕ್ಷರಾಗಿದ್ದರು. ಮೈಸೂರಿನ ಸಮುದಾಯ ಅಧ್ಯಯನ ಕೇಂದ್ರ ಇವರಿಗೆ ವೀಣಾ ವಾಗ್ಗೇಯಭೂಷಣ ಎಂಬ ಪ್ರಶಸ್ತಿಯನ್ನೂ ಮಹತೀ ಎಂಬ ಅಭಿನಂದನಾ ಗ್ರಂಥವನ್ನೂ ಸಮರ್ಪಿಸಿದೆ (2000). ಇವರು 2002 ಆಗಸ್ಟ್ 17ರಂದು ನಿಧನಹೊಂದಿದರು. (ಎಸ್‌ಯು.ಎಂ)

**ಧನಂಜಯ ಶಿಲ್ಪಿ :** 1934- . ಹೆಸರಾಂತ ಶಿಲ್ಪಿ. 1934ರಲ್ಲಿ ಜನಿಸಿದರು. ಮೆಟ್ರಿಕ್ ಪರೀಕ್ಷೆಗೆ ಬೆಳಗಾಂವಿ ಸರ್ದಾರ್ ಹೈಸ್ಕೂಲಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗಲೇ ಅಲ್ಲಿನ ಡ್ರಾಯಿಂಗ್ ಮಾಸ್ಟರ್ ಸಿ.ವಿ. ಕರದಗಿಯವರಿಂದ ಪ್ರೇರಿತರಾಗಿ, ಚಿತ್ರಕಲೆಯಲ್ಲಿ ಓನಾಮ ಕಲಿತು ಮೆಟ್ರಿಕ್‌ಗೆ ಮೊದಲೇ ಇಂಟರ್‌ಗ್ರೇಡ್ ಪರೀಕ್ಷೆಯಲ್ಲಿ ಮೊದಲನೆಯ ದರ್ಜೆಯಲ್ಲಿ ಉತ್ತೀರ್ಣರಾದರು (1951). ಅನಂತರ ಮೆಟ್ರಿಕ್‌ನಲ್ಲಿಯೂ ಉತ್ತೀರ್ಣರಾಗಿ (1953) ಸರಕಾರಿ ವೆಲ್‌ಫೇರ್ ಇನ್ಸ್‌ಪೆಕ್ಟರಾಗಿ ಐದು ವರ್ಷ ಸೇವೆ ಸಲ್ಲಿಸಿದರು. ಚಿತ್ರ ಕಲೆಯನ್ನು ಮುಂದುವರಿಸಬೇಕೆಂಬ ಉತ್ಕಟಾಕಾಂಕ್ಷೆಯಿಂದ ಆ ಕೆಲಸಕ್ಕೆ ರಾಜೀನಾಮೆ ನೀಡಿದರು. ಶಿಲ್ಪ ಮತ್ತು ಮಾಡೆಲಿಂಗ್‌ನಲ್ಲಿ ಹೆಚ್ಚಿನ ತರಬೇತಿಗಾಗಿ ಮುಂಬೈನ ಜೆ.ಜೆ. ಕಲಾಶಾಲೆ ಸೇರಿದರು. ಅಲ್ಲಿ ತಮ್ಮ ಜೀವನೋಪಾಯಕ್ಕಾಗಿ ಕಲಾವಿದ ಬಲವಂತರಾವ್ ತಾಲೀಮರಲ್ಲಿ ಸಹಾಯಕರಾಗಿ ದುಡಿಯುತ್ತಿದ್ದರು. ಮೊದಲನೆಯ ವರ್ಷದಲ್ಲಿ ಪ್ರಥಮ ರ್‍ಯಾಂಕ್ ಗಳಿಸಿದುದರಿಂದ ಇವರನ್ನು ನೇರವಾಗಿ ಮೂರನೆಯ ತರಗತಿಗೆ ಸೇರಿಸಿಕೊಳ್ಳಲಾಯಿತು. ತಮ್ಮ ಐದು ವರ್ಷಗಳ ವ್ಯಾಸಂಗದಲ್ಲಿ ಪ್ರತಿವರ್ಷವೂ ಉನ್ನತ ದರ್ಜೆ ಗಳಿಸಿದವರು. ವ್ಯಾಸಂಗವನ್ನು ಮುಗಿಸಿದ (1964) ಬಳಿಕ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ನುರಿತ ಶಿಲ್ಪಿಗಳಾದ ನಾನಾ, ಕರ್ಮರ್‌ಕರ್, ಬಲವಂತರಾವ್ ತಾಲೀಮರಲ್ಲಿ ಕೆಲಸ ಮಾಡಿದರು. ಆ ಸಂದರ್ಭದಲ್ಲಿ ಇವರು ಭಾಗವಹಿಸಿದ ಅಂತಾರಾಷ್ಟ್ರೀಯ ಶಿಲ್ಪಿಗಳ ಶಿಬಿರದಲ್ಲಿ ನಗದು ಬಹುಮಾನ ಗಳಿಸಿದರು.

ಕೆಲವು ಕಾಲ ಶಿಲ್ಪಭಾರತಿಯಲ್ಲಿ ಕೆಲಸ ಮಾಡಿ ಬೆಂಗಾಲ್ ಪಾಟರೀಸ್‌ನ ಮಾಡೆಲರ್ ಆಗಿ ಸೇರಿದರು (1967). ಅನಂತರ ಜೆ.ಜೆ. ಕಲಾಶಾಲೆಯಲ್ಲಿ ಉಪನ್ಯಾಸಕರಾಗಿ ಸೇರಿ, ಆ ಶಾಲೆಯಲ್ಲಿ ಕೆತ್ತನೆ ವಿಭಾಗವನ್ನು ಸ್ಥಾಪಿಸುವುದರಲ್ಲಿ ನೆರವಾದರು. 1979 ರ ವರೆಗೂ ಇವರು ಜೆ.ಜೆ. ಕಲಾಶಾಲೆಯಲ್ಲಿ ಸೇವೆ ಸಲ್ಲಿಸಿದರು.

ಇವರು ರಚಿಸಿರುವ ಕೃತಿಗಳು ಭಾರತದ ನಾನಾ ಭಾಗಗಳಲ್ಲಿ ಹರಡಿವೆ. ದೇವತಾಮೂರ್ತಿಗಳಲ್ಲಿ ಹೆಸರಾಂತ ವ್ಯಕ್ತಿಗಳ ಶಿಲ್ಪಕೃತಿಗಳ ನಿರ್ಮಾಣದಲ್ಲಿಯೂ ಇವರು ಸೈ ಎನಿಸಿಕೊಂಡಿದ್ದಾರೆ. ಚಿತ್ರದುರ್ಗದ ಮದಕರಿನಾಯಕನ ಪ್ಲಾಸ್ಟರ್ ರೂಪ ಹಾಗೂ ಅಂಬೇಡ್ಕರ್ ಕೃತಿ ಇದಕ್ಕೆ ಸಾಕ್ಷಿ. ಇವರು ಕರ್ನಾಟಕ ಲಲಿತಕಲಾ ಅಕಾಡೆಮಿಯ ಸದಸ್ಯರಾಗಿದ್ದರು (1980-83). ಇವರಿಗೆ ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ ಹಾಗೂ (1984) ಕರ್ನಾಟಕ ಸರ್ಕಾರದ ಜಕಣಾಚಾರಿ ಪ್ರಶಸ್ತಿ (2002) ಲಭಿಸಿವೆ.

(ಎನ್.ಎಮ್.)

**ಧರಣಿಪಂಡಿತ :** ಸು. 1650. ಜೈನಕವಿ. ವರಾಂಗನೃಪಚರಿತೆ, ಬಿಜ್ಜಳರಾಯ ಚರಿತೆ ಎಂಬ ಕಾವ್ಯಗಳ ಕರ್ತೃ. ವಿಷ್ಣುವರ್ಧನಪುರದಲ್ಲಿ ವೈದ್ಯನಾಗಿದ್ದ ಧರಣಿಪಂಡಿತನ ಮೊಮ್ಮಗ. ಪದ್ಮಪಂಡಿತನ ಮಗ. ಪೂರ್ವಕವಿಗಳಲ್ಲಿ ರನ್ನ, ಪಂಪ, ಪೊನ್ನ, ನೇಮಿಚಂದ್ರ, ನಾಗವರ್ಮ ಇವರನ್ನು ಸ್ತುತಿಸಿದ್ದಾನೆ.

ವರಾಂಗನೃಪಚರಿತೆ ಭಾಮಿನೀಷಟ್ಪದಿಯಲ್ಲಿವೆ. ದೊರೆತ ಅಸಮಗ್ರ ಪ್ರತಿಯಲ್ಲಿ 8 ಆಶ್ವಾಸಗಳಿವೆ. ಪೂರ್ವದಲ್ಲಿ ಮುನೀಶ್ವರರು ಹೇಳಿದ ಈ ಕಥೆಯನ್ನು ಕನ್ನಡದಲ್ಲಿ ತಾನು ರಚಿಸಿದಂತೆ ಕವಿ ಹೇಳಿಕೊಂಡಿದ್ದಾನೆ.

ಬಿಜ್ಜಳರಾಯಚರಿತೆ ಮತೀಯ ವಸ್ತುವನ್ನೂ ಚಾರಿತ್ರಿಕ ವಸ್ತುವನ್ನೂ ಅವಲಂಬಿಸಿ ಕಟ್ಟಿರುವ ಕಾಲ್ಪನಿಕ ಕಾವ್ಯ. ಸಾಂಗತ್ಯದಲ್ಲಿ ರಚಿತವಾಗಿದೆ. ಇದರಲ್ಲಿ 12 ಸಂಧಿಗಳೂ 1239 ಪದ್ಯಗಳೂ ಇವೆ. ಇನ್ನೊಂದು ಪ್ರತಿಯಲ್ಲಿ ಪದ್ಯ ಸಂಖ್ಯೆ 1371 ಎಂದಿದೆ. ಕಲ್ಯಾಣಪುರದ ಬಿಜ್ಜಳರಾಯನ ಕಥೆ ಕಾವ್ಯವಸ್ತು. ಹಿಂದೆ ವಿಜಯಮ್ಮಿ ಎಂಬುವಳು ತನ್ನ ತಾಯಿಗೆ ಹೇಳಿದ ಕಥೆಯನ್ನು ತಾನು ವಿಸ್ತರಿಸಿ ಬರೆದಿರುವುದಾಗಿ ಹೇಳಿದ್ದಾನೆ. ಬಿಜ್ಜಳ ಬಸವಣ್ಣನ ತಂಗಿ ಪದ್ಮಿನಿಯನ್ನು ಮದುವೆಯಾಗಿ ಬಸವಣ್ಣನನ್ನು ಸೇನಾಧಿಪತಿಯಾಗಿ ಮಾಡಿದ. ಜೈನಧರ್ಮಿಯಾದ ಬಿಜ್ಜಳ ವೀರಶೈವ ಧರ್ಮಿಯಾದ ಬಸವಣ್ಣನಿಗಿಂತ ತಾನು ಮಿಗಿಲೆಂದು ವಾದಿಸಿ ಬಸವಣ್ಣನನ್ನು ಹಲವು ಸಲ ಸೋಲಿಸಿದ. ಕೊನೆಗೆ ಬಸವಣ್ಣ ವಿಷದ ಮಾವಿನ ಹಣ್ಣನ್ನು ಬಿಜ್ಜಳ ಮೂಸಿ ಸಾಯುವಂತೆ ಮಾಡಿ ತಾನೂ ಉಳಿವೆ ಎಂಬಲ್ಲಿ ಬಾವಿಗೆ ಬಿದ್ದು ಸತ್ತ. ಇದು ಇಲ್ಲಿನ ಕಥಾಸರಣಿ, ವಚನಗಳಲ್ಲಿ ಕಾಣುವ ಬಸವಣ್ಣನ ವ್ಯಕ್ತಿತ್ವಕ್ಕೂ ಇಲ್ಲಿ ಕಾಣುವ ಬಸವಣ್ಣನ ವ್ಯಕ್ತಿತ್ವಕ್ಕೂ ಏನೇನೂ ಹೋಲಿಕೆ ಕಂಡುಬರುವುದಿಲ್ಲ.

ಕೃತಿಗೆ ಐತಿಹಾಸಿಕ ದೃಷ್ಟಿಯಿಂದ ಯಾವುದೇ ಮಹತ್ತ್ವವಿಲ್ಲದಿದ್ದರೂ ಅಂದಿನ ಧಾರ್ಮಿಕ ಹಿನ್ನೆಲೆಯನ್ನು ತಿಳಿಯಲು ಸಹಾಯಕವಾಗಿದೆ.

ಪರಮತವಿಡಂಬನೆ ಎದ್ದು ಕಾಣುತ್ತದೆ. ವೀರಶೈವ ಧರ್ಮವನ್ನು ಕವಿ ಕಟುವಾಗಿ ಟೀಕಿಸಿದ್ದಾನೆ. ಭಾಷೆ ಸರಳವಾಗಿದೆ. ಅಲ್ಲಲ್ಲಿ ಉರ್ದು ಶಬ್ದಗಳ ಬಳಕೆ ಕಂಡುಬರುತ್ತದೆ. (ಎಂ.ಎಲ್.ಎಲ್.)

**ಧರ್ಮಗಳು :** ಕರ್ನಾಟಕದಲ್ಲಿ ಇಂದು ಪ್ರಚಲಿತವಾಗಿರುವ ಪ್ರಧಾನ ಧರ್ಮಗಳೆಂದರೆ ಹಿಂದು, ಇಸ್ಲಾಂ, ಕ್ರೈಸ್ತ, ಜೈನ, ಬೌದ್ಧ ಮತ್ತು ಸಿಖ್.

ಐತಿಹಾಸಿಕವಾಗಿ, ಕರ್ನಾಟಕದಲ್ಲಿ ಪ್ರಾಗೈತಿಹಾಸಿಕ ಕಾಲದಿಂದಲೂ ಪ್ರಚಲಿತವಾಗಿದ್ದುದು ಸ್ಥಳೀಯವಾದ ಜನಪದ ಧರ್ಮ. ಯಾವ ಶಾಸ್ತ್ರ ಅಥವಾ ಸೈದ್ಧಾಂತಿಕ ಹಿನ್ನೆಲೆಯ ಬೆಂಬಲವಿಲ್ಲದಿದ್ದರೂ ಪರಂಪರಾನುಗತ ನಂಬಿಕೆಗಳ ಬಲದ ಮೇಲೆ ಇಂದಿಗೂ ಸಾಕಷ್ಟು ಪ್ರಮಾಣದಲ್ಲಿ ಜನಪದ ಧರ್ಮೀಯ ಆಚರಣೆಗಳು ಉಳಿದುಕೊಂಡಿರುವುದನ್ನು ಗಮನಿಸಿದರೆ ಹಿಂದೆ ಇದೇ ಬಹುಸಂಖ್ಯಾತರಲ್ಲಿ ಹರಡಿದ್ದ ಧರ್ಮವಾಗಿರಬೇಕೆಂಬುದು ಸ್ಪಷ್ಟವಾಗುತ್ತದೆ. ಕ್ರಿ.ಪೂ. ಸು. 4-3ನೆಯ ಶತಮಾನಗಳ ಹೊತ್ತಿಗೆ ಬಹುಶಃ ಕರ್ನಾಟಕ ಮಗಧ ಸಾಮ್ರಾಜ್ಯಕ್ಕೆ ಸೇರಿದಂದಿನಿಂದ ಔತ್ತರೇಯ ಧರ್ಮಗಳಾದ ಹಿಂದು, ಬೌದ್ಧ ಮತ್ತು ಜೈನ ಧರ್ಮಗಳೂ ಇಲ್ಲಿ ಹರಡಲಾರಂಭಿಸಿದುವು. ಪ್ರಾರಂಭದಲ್ಲಿ ಈ ಧರ್ಮಗಳು ನಗರ ಪರಿಸರಗಳಲ್ಲಿ ಹೆಚ್ಚು ವ್ಯಾಪಕವಾಗಿದ್ದು ಕ್ರಮೇಣ ಜನಸಾಮಾನ್ಯರಲ್ಲೂ ಹರಡಲಾರಂಭಿಸಿದಂತೆ ತೋರುತ್ತದೆ. ಬೌದ್ಧಧರ್ಮ ಮುಂದೆ ಸು. 10-12ನೆಯ ಶತಮಾನಗಳ ವರೆಗೆ ಮಾತ್ರ ಇಲ್ಲಿ ಪ್ರಚಲಿತವಾಗಿತ್ತು. ಇತ್ತೀಚೆಗೆ ನಡೆದ ಬೌದ್ಧ ಧರ್ಮದ ಪ್ರಸಾರ ಮತ್ತು ಅನೇಕ ಟಿಬೆಟ್ ಮೂಲದ ಜನ ಈಗ ಇಲ್ಲಿ ಬಂದು ನೆಲೆಸಿರುವುದರಿಂದ ಇಂದು ಪುನಃ ಬೌದ್ಧಧರ್ಮೀಯರು ಸುಮಾರು ಸಂಖ್ಯೆಯಲ್ಲಿದ್ದಾರೆ. ಹಿಂದು ಮತ್ತು ಜೈನಧರ್ಮಗಳು ಕ್ರಿಸ್ತಪೂರ್ವಕಾಲದಿಂದ ಇಂದಿನವರೆಗೂ ಅವಿಚ್ಛಿನ್ನವಾಗಿ ಬೆಳೆದು ಬಂದಿವೆ. ಅದರಲ್ಲೂ ಹಿಂದು ಧರ್ಮ ಮತ್ತು ಜನಪದ ಧರ್ಮಗಳು ಪರಸ್ಪರಾನುವರ್ತಿಗಳಾಗಿ ಸಾಕಷ್ಟು ಕೊಳುಕೊಡೆಗಳೊಡನೆ ಬೆಳೆದದ್ದರಿಂದ ಈ ಸಂಯೋಗಿತ ಹಿಂದು ಧರ್ಮವೇ ಇಂದು ಬಹು ಸುಖ್ಯಾತ ಧರ್ಮವಾಗಿದೆ. ಸು. 8-9ನೆಯ ಶತಮಾನದ ಹೊತ್ತಿಗೆ ಅರಬ್ಬೀ ವ್ಯಾಪಾರಸ್ಥರಿಂದ ಕರ್ನಾಟಕಕ್ಕೆ ಇಸ್ಲಾಂ ಧರ್ಮದ ಸಂಪರ್ಕ ಒದಗಿಬಂದರೂ ಅದು ಇಲ್ಲಿ ನೆಲೆಯೂರಿ ಬೆಳೆಯಲಾರಂಭಿಸಿದ್ದು 14ನೆಯ ಶತಮಾನದಾರಭ್ಯ. ಅಂದರೆ ಕರ್ನಾಟಕದಲ್ಲಿ ಇಸ್ಲಾಮೀ ರಾಜ್ಯಗಳು ಸ್ಥಾಪನೆಯಾದ ಕಾಲದಿಂದ, ಕರ್ನಾಟಕದಲ್ಲಿ ಕ್ರೈಸ್ತಧರ್ಮದ ಬಗ್ಗೆ 14-15ನೆಯ ಶತಮಾನಗಳಲ್ಲಿ ಕೆಲವು ಅಪರೂಪ ಉಲ್ಲೇಖಗಳು ದೊರಕುವುದಾದರೂ ಅದು ಇಲ್ಲಿ ಹೆಚ್ಚುಮಟ್ಟಿಗೆ ಹರಡಲಾರಂಭವಾದದ್ದು ಸು. 16ನೆಯ ಶತಮಾನದಾರಭ್ಯ. ಪೋರ್ಚುಗೀಸ್, ಫ್ರೆಂಚ್, ಜರ್ಮನ್ ಮತ್ತು ಬ್ರಿಟಿಷ್ ಪಾದರಿಗಳು ಇದಕ್ಕಾಗಿ ಶ್ರಮಿಸಿದ್ದಾರೆ. ಸಿಖ್ ಧರ್ಮದ ಪ್ರವರ್ತಕನಾದ ಗುರುನಾನಕ್ ಕರ್ನಾಟಕದ ಬಿದರೆ ಬಳಿಯ ನಾನಕ್‌ಝರಾದ ಬಳಿ ಕೆಲಕಾಲ ತಂಗಿದ್ದನೆಂದು ಹೇಳಿಕೆಗಳಿವೆ. ಆದರೆ ಇಂದು ಕರ್ನಾಟಕದಲ್ಲಿ ಕಂಡುಬರುವ ಹೆಚ್ಚಿನ ಸಿಖ್ ಮತೀಯರು ವ್ಯಾಪಾರ, ಉದ್ಯೋಗಗಳಿಗಾಗಿ ಇತ್ತೀಚಿನ ವರ್ಷಗಳಲ್ಲಿ ವಲಸೆ ಬಂದವರು. ಹಾಗೆಯೇ ಜರತುಷ್ಟ್ರರ ಪ್ರಸ್ತಾಪ ಕ್ರಿ.ಶ. 9ನೆಯ ಶತಮಾನದಲ್ಲಿ ಅಮೋಘವರ್ಷನ ಕಾಲದ ಶಾಸನಗಳಲ್ಲಿ ಕಂಡುಬರುವುದಾದರೂ ಇಂದು ನೆಲೆಸಿರುವ ಜರತುಷ್ಟ್ರರು ಸಹ ಈಚಿನ ವರ್ಷಗಳಲ್ಲಿ ಮುಂಬಯಿ ಸೂರತ್ ಮೊದಲಾದೆಡೆಗಳಿಂದ ಇಲ್ಲಿಗೆ ವಲಸೆ ಬಂದವರು. ಕರ್ನಾಟಕದಲ್ಲಿ ಕಂಡುಬರುವ ಎಲ್ಲ ಪ್ರಮುಖ ಧರ್ಮಗಳಲ್ಲೂ ಅನೇಕ ಪಂಥೋಪಪಂಥಗಳೂ ಜಾತಿಗಳೂ ಇವೆ. ಯಾಪನೀಯ ಜೈನ, ವೀರಶೈವ, ಮತ್ತು ಮಾಧ್ವ ಪಂಥ'ಗಳಿಗೆ ಕರ್ನಾಟಕವೇ ಉಗಮಸ್ಥಾನ. ಕಾಲಾನುಕಾಲದಲ್ಲೂ ಹಲವು ಧರ್ಮಪಂಥ'ಗಳ ಆಗರವಾಗಿದ್ದು ಮತಸಹಿಷ್ಣುತೆಯನ್ನು ವಿಶೇಷವಾಗಿ ಬೆಳೆಸಿಕೊಂಡಿರುವುದು ಈ ನಾಡಿನ ವೈಶಿಷ್ಟ್ಯವಾಗಿದೆ.

(ಕರ್ನಾಟಕದಲ್ಲಿ ಪ್ರಚಲಿತವಾಗಿ ಇದ್ದ ಮತ್ತು ಇರುವ ಪ್ರಮುಖ ಧರ್ಮ ಪಂಥಗಳ ಬಗ್ಗೆ ಹೆಚ್ಚಿನ ವಿವರಗಳನ್ನು ಇದೇ ಸಂಪುಟದಲ್ಲಿ ಪ್ರತ್ಯೇಕ ಲೇಖನಗಳಲ್ಲಿ ಕೊಡಲಾಗಿದೆ).

**ಧರ್ಮಸಿಂಗ್ ಎನ್.:** 1936- . ಕರ್ನಾಟಕ ರಾಜ್ಯದ ಮುಖ್ಯಮಂತ್ರಿ (2004 ಮೇನಿಂದ) ಹಿರಿಯ ರಾಜಕಾರಣಿ. ಗುಲ್ಬರ್ಗ ಜಿಲ್ಲೆ ಜೇವರ್ಗಿ ತಾಲ್ಲೂಕಿನ ಭೀಮಾ ತೀರದ ಪುಟ್ಟ ಗ್ರಾಮ ನೆಲೋಗಿಯಲ್ಲಿ ನಾರಾಯಣಸಿಂಗ್ ದಂಪತಿಗಳ ಮಗನಾಗಿ 1936 ಡಿಸೆಂಬರ್ 25ರಂದು ಜನಿಸಿದರು. ಇವರದು ಒಂದು ಸಾಮಾನ್ಯ ಕೃಷಿ ಕುಟುಂಬ. ಪ್ರಾಥಮಿಕ ಶಿಕ್ಷಣವನ್ನು ಹುಟ್ಟೂರಿನಲ್ಲೇ ಪೂರೈಸಿದರು. ಬಾಲ್ಯದಿಂದಲೂ ಜನಾನುರಾಗ ಮತ್ತು ಸಾತ್ವಿಕ ಗುಣಗಳನ್ನು ರೂಢಿಸಿಕೊಂಡಿದ್ದ ಇವರು ಹೆಚ್ಚಿನ ವಿದ್ಯಾಭ್ಯಾಸ ಮಾಡುವುದರ ಬಗ್ಗೆ ದೃಢ ನಿಶ್ಚಯವುಳ್ಳವರಾಗಿದ್ದರು. ವಿದ್ಯಾರ್ಥಿ ಜೀವನದಲ್ಲಿ ಗಳಿಕೆಗಾಗಿ ಮನೆಪಾಠ ಹೇಳಿಕೊಡುವುದರಿಂದ ಹಿಡಿದು ಶಾಲಾಮಾಸ್ತರಾಗುವ ತನಕ ಸ್ವಾವಲಂಬಿಯಾಗಲು ಪ್ರಯತ್ನಿಸಿದರು. ಅನೇಕ ಹಿತೈಷಿಗಳ ನೆರವೂ ಇವರ ಶಿಕ್ಷಣಕ್ಕೆ ಉತ್ತೇಜನ ನೀಡಿತು. ಇವರು ತಮ್ಮ ಆಸಕ್ತಿಯ ವಿಷಯವಾಗಿದ್ದ ಕಾನೂನು ವಿಷಯದಲ್ಲಿ ಹೈದರಾಬಾದ್‌ನಲ್ಲಿ ಓದಿ ಬಿ.ಎಲ್.ಪದವಿ ಗಳಿಸಿದರು.

ಕಾನೂನು ಪದವೀಧರರಾದ ಅನಂತರ ಗುಲ್ಬರ್ಗದಲ್ಲಿ ವಕೀಲಿ ವೃತ್ತಿ ಕೈಗೊಂಡರು. ಗುಲ್ಬರ್ಗ ನಗರ ಸಭೆಯ ಚುನಾವಣೆಯಲ್ಲಿ ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಜಯಶೀಲರಾದರು. ಎಡಪಂಥದತ್ತ ಒಲವಿದ್ದ ಇವರು 1969ರಲ್ಲಿ ಕಾಂಗ್ರೆಸ್ ಇಬ್ಭಾಗವಾದಾಗ ಇಂದಿರಾಗಾಂಧಿಯವರ ಆಡಳಿತ ಕಾಂಗ್ರೆಸ್ ಪಕ್ಷ ಸೇರಿದರು. ತರುವಾಯ ಜಿಲ್ಲಾ ಕಾಂಗ್ರೆಸ್ ಸಮಿತಿಯ ಪ್ರಧಾನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಿದರು. ಬಾಲ್ಯದ ಬಡತನವನ್ನೂ ಮರೆಯದೆ ಎಲ್ಲರೊಂದಿಗೆ ಒಂದಾಗಿ ಸಾಗುವ ಹೊಂದಾಣಿಕೆಯ ಗುಣವನ್ನು ರೂಢಿಸಿಕೊಂಡ ಇವರು ಬಹು ಬೇಗನೆ ಸಾರ್ವಜನಿಕ ವಲಯದಲ್ಲಿ ಜನಪ್ರಿಯರಾದರು.

1972ರಲ್ಲಿ ಡಿ.ದೇವರಾಜ ಅರಸು ಕಾಂಗ್ರೆಸ್ ಸಂಚಾಲಕರಾಗಿದ್ದಾಗ ಪಕ್ಷದಿಂದ ರಾಜ್ಯ ವಿಧಾನ ಸಭೆಗೆ ಜೇವರ್ಗಿ ಕ್ಷೇತ್ರದಿಂದ ಸ್ಪರ್ಧಿಸಿದರು. ಆಗ ಇದ್ದ ಇಂದಿರಾ ಅಲೆಯಿಂದಾಗಿ ಸುಲಭವಾಗಿ ಗೆದ್ದರು. ಅನಂತರ ಲೋಕಸಭೆಗೆ ಸ್ಪರ್ಧಿಸಿ ಆಯ್ಕೆಯಾದರು (1980). ಆದರೆ ಇಂದಿರಾಗಾಂಧಿಯವರ ಅಪೇಕ್ಷೆಯ ಮೇರೆಗೆ ಕೇರಳದ ಸ್ಟೀಫನ್‌ರವರಿಗೆ ಸ್ಥಾನ ತೆರವು ಮಾಡಿಕೊಟ್ಟರು. ತರುವಾಯ ರಾಜ್ಯ ಸಚಿವ ಸಂಪುಟ ಸೇರಿದರು. ಜನರ ಕುಂದುಕೊರತೆಗಳಿಗೆ ಸದಾ ಸ್ಪಂದಿಸುತ್ತಿದ್ದ ಇವರು ಸತತವಾಗಿ ಜೇವರ್ಗಿ ಕ್ಷೇತ್ರದಿಂದ ವಿಧಾನಸಭೆಗೆ ಚುನಾಯಿತರಾಗುತ್ತ ಬಂದರು. ಇವರು ವಿವಿಧ ಸಂದರ್ಭಗಳಲ್ಲಿ ನಗರಾಭಿವೃದ್ಧಿ, ಕಂದಾಯ, ಗೃಹ, ಅಬ್ಕಾರಿ, ಸಮಾಜಕಲ್ಯಾಣ, ಲೋಕೋಪಯೋಗಿ ಮೊದಲಾದ ಖಾತೆಗಳನ್ನು ನಿರ್ವಹಿಸಿದರು. 1997-98ರಲ್ಲಿ ಇವರು ಕರ್ನಾಟಕ ಪ್ರದೇಶಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ಸೇವೆಸಲ್ಲಿಸಿದರು.

ಇವರು ಆರ್ಥಿಕವಾಗಿ ಹಿಂದುಳಿದ ರಜಪೂತ ಸಮುದಾಯಕ್ಕೆ ಸೇರಿದವರು. ಬಹು ಪೂರ್ವದಲ್ಲಿ ಇವರ ಹಿರಿಯರು ಉತ್ತರ ಭಾರತದ ಕಡೆಯಿಂದ ಬಂದು ನೆಲೆಸಿದರೆಂದು ತಿಳಿದುಬರುತ್ತದೆ. 2004ರಲ್ಲಿ ನಡೆದ ರಾಜ್ಯವಿಧಾನಸಭಾ ಚುನಾವಣೆಯಲ್ಲಿ ಯಾವ ಪಕ್ಷಕ್ಕೂ ಸ್ಪಷ್ಟಬಹುಮತ ಬಾರದ ಸ್ಥಿತಿಯಲ್ಲಿ ಕಾಂಗ್ರೆಸ್ ಮತ್ತು ಜಾತ್ಯಾತೀತ ಜನತಾದಳ ಪಕ್ಷಗಳ ಸಮ್ಮಿಶ್ರ ಸರ್ಕಾರದ ರಚನೆಯಾಯಿತು. ಕಾಂಗ್ರೆಸ್ ಶಾಸಕಾಂಗ ಪಕ್ಷದ ನಾಯಕರಾಗಿ ಆಯ್ಕೆಯಾದ ಧರ್ಮಸಿಂಗ್ ಅವರು 2004 ಮೇ 28ರಂದು ಮುಖ್ಯಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದರು. ಪ್ರಭಾವತಿ ಇವರ ಪತ್ನಿ, ಇವರಿಗೆ ಇಬ್ಬರು ಪುತ್ರರು, ಒಬ್ಬ ಪುತ್ರಿ ಇದ್ದಾರೆ. *

**ಧರ್ಮವೀರ :** ಕರ್ನಾಟಕದ ಮಾಜಿ ರಾಜ್ಯಪಾಲರು (1969-1972). ಇವರು ಲಖನೌ ಅಲಹಾಬಾದ್ ವಿಶ್ವವಿದ್ಯಾನಿಲಯಗಳ ವಿದ್ಯಾರ್ಥಿ. ಲಂಡನ್ನಿನ ಅರ್ಥಶಾಸ್ತ್ರ ಮತ್ತು ರಾಜ್ಯಶಾಸ್ತ್ರ ಶಾಲೆಗಳಲ್ಲಿ ಅಧ್ಯಯನ ನಡೆಸಿದ ಬಳಿಕ ಸಿವಿಲ್ ಸರ್ವೀಸ್ ಅಧಿಕಾರಿಯಾಗಿ ಜೀವನವನ್ನಾರಂಭಿಸಿದರು. (1929) . ಭಾರತಕ್ಕೆ ಸ್ವಾತಂತ್ರ ಬಂದಾಗ

ಕೇಂದ್ರ ಸಂಪುಟದ ಜಂಟಿ ಕಾರ್ಯದರ್ಶಿಯಾಗಿ ನೇಮಕಗೊಂಡರು. ಮಾಜಿ ಪ್ರಧಾನಿ ಜವಹರಲಾಲ್ ನೆಹರೂ ಅವರ ಆಪ್ತ ಕಾರ್ಯದರ್ಶಿಯಾಗಿದ್ದರು. ತಮ್ಮ ದಕ್ಷ ಆಡಳಿತದಿಂದ ನೆಹರೂ ಅವರ ಮೆಚ್ಚುಗೆಗೆ ಪಾತ್ರರಾದ ಇವರು ಮುಂದೆ ಲಂಡನ್‌ಲ್ಲಿ ಹೈಕಮೀಷನರ್ ಆಗಿದ್ದ ವಿ.ಕೆ.ಕೃಷ್ಣಮೆನನ್‌ರವರ ಜೊತೆ ಉಪ ಹೈಕಮೀಷನರ್ ಆಗಿ ಕೆಲಸ ಮಾಡಿದರು. ಅನಂತರ ಇವರು ಜೆಕೊಸ್ಲೊವಾಕಿಯದ ರಾಯಭಾರಿಯಾಗಿ ನೇಮಕಗೊಂಡರು. ಅಲ್ಲಿಂದ ಆಸ್ಟ್ರೇಲಿಯಾಕ್ಕೆ ಭಾರತದ ಹೈಕಮೀಷನರ್ ಆಗಿ ನೇಮಕಗೊಂಡರಾದರೂ ಅಧಿಕಾರ ವಹಿಸಿಕೊಳ್ಳುವ ಮುನ್ನವೇ ಭಾರತ ಸರ್ಕಾರ ಇವರನ್ನು ವಾಪಸ್ಸು ಕರೆಯಿಸಿಕೊಂಡು ನಿರಾಶ್ರಿತರ ಪುನರ್ವಸತಿ ಸಚಿವಾಲಯದ ಕಾರ್ಯದರ್ಶಿಯನ್ನಾಗಿ ನೇಮಿಸಿತು. ಪಾಕಿಸ್ತಾನದಿಂದ ಬಾರತಕ್ಕೆ ಬಂದ ತೊಂಬತ್ತೈದು ಲಕ್ಷ ನಿರಾಶ್ರಿತರಿಗೆ ನೆಲೆ ಕಲ್ಪಿಸುವ ಹೊಣೆಯನ್ನು ಅತ್ಯಂತ ಯಶಸ್ವಿಯಾಗಿ ಇವರು ನಿರ್ವಹಿಸಿದರು. ಬಳಿಕ ನವದೆಹಲಿಯ ನಗರ ಆಡಳಿತ ನಿರ್ವಹಣೆ ವಹಿಸಿಕೊಂಡರು. ಅನಂತರ ಇವರನ್ನು ಪಂಜಾಬಿನ ರಾಜ್ಯಪಾಲರನ್ನಾಗಿ ನೇಮಿಸಲಾಯಿತು. ರಾಜಕೀಯ ಅಶಾಂತಿಯ ನೆಲೆಯಾಗಿದ್ದ ಪಂಜಾಬಿನಲ್ಲಿ ಶಾಂತಿ ನೆಲೆಗೊಳ್ಳಲು ನಿರಂತರ ಪ್ರಯತ್ನ ನಡೆಸಿದರು. ಅನಂತರ ಇವರನ್ನು ಬಂಗಾಲದ ರಾಜ್ಯಪಾಲರನ್ನಾಗಿ ನೇಮಿಸಲಾಯಿತು. ತಮ್ಮ ಆಡಳಿತ ಬಿಗಿಮುಷ್ಟಿಯ ಜೊತೆಗೆ ನೈತಿಕಶಕ್ತಿಯ ಸಂಧಾನ ಚಾತುರ್ಯದಿಂದ ಪಶ್ಚಿಮ ಬಂಗಾಲದಲ್ಲಿಯೂ ಸಮರ್ಥವಾಗಿ ಕರ್ತವ್ಯ ನಿರ್ವಹಿಸಿದರು. ಅನಂತರ ಕರ್ನಾಟಕದ ರಾಜ್ಯಪಾಲರಾಗಿ ನೇಮಕಗೊಂಡು ನಾಲ್ಕುವರ್ಷಗಳ ಕಾಲ ಸೇವೆ ಸಲ್ಲಿಸಿದರು. (ಎಚ್.ಎಸ್.ಕೆ.)

**ಧರ್ಮಸ್ಥಳ :** ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನಲ್ಲಿರುವ ಪ್ರಸಿದ್ಧ ಪುಣ್ಯಕ್ಷೇತ್ರ. ಕೊಕ್ಕಡ ಫಿರ್ಕಾದಲ್ಲಿರುವ ಈ ಕ್ಷೇತ್ರದ ವಿಸ್ತೀರ್ಣ 20.73 ಚಕಿಮೀ. ಪಶ್ಚಿಮ ಘಟ್ಟಗಳ ಪಶ್ಚಿಮದ ಇಳಿಜಾರಿನ ಅಂಚಿನಲ್ಲಿರುವ ಧರ್ಮಸ್ಥಳ ಮಂಗಳೂರಿನ ಪೂರ್ವಕ್ಕೆ 75 ಕಿಮೀ, ಬೆಳ್ತಂಗಡಿಯ ಆಗ್ನೇಯಕ್ಕೆ ಸು. 15 ಕಿಮೀ ಮತ್ತು ಪುತ್ತೂರಿಗೆ 50 ಕಿಮೀ ದೂರದಲ್ಲಿ, ಮಂಗಳೂರು-ಚಾರ್ಮಾಡಿ ಮಾರ್ಗದಲ್ಲಿ ಉಜಿರೆಯಿಂದ 10 ಕಿಮೀ ಆಗ್ನೇಯದಲ್ಲಿ ಇದೆ. ಧರ್ಮಸ್ಥಳದ ಪಶ್ಚಿಮದಲ್ಲಿ ನೇತ್ರಾವತಿ ನದಿ ದಕ್ಷಿಣಾಭಿಮುಖವಾಗಿ ಹರಿಯುವುದು. ಪೂರ್ವದಿಂದ ಪಶ್ಚಿಮಕ್ಕೆ ಹರಿಯುವ ನೆರಿಯ ಹೊಳೆ ಧರ್ಮಸ್ಥಳದ ನೈಋತ್ಯದಲ್ಲಿ ನೇತ್ರಾವತಿಯನ್ನು ಕೂಡಿಕೊಳ್ಳುವುದು. ಇವಲ್ಲದೆ ಇದರ ಸುತ್ತಲೂ ಕೆಲ ಪುಟ್ಟ ತೊರೆಗಳೂ ಇವೆ. ಈ ಪ್ರದೇಶ ಜಯಕೀರ್ತಿ ಬೆಟ್ಟ, ಅಣ್ಣಪ್ಪನ ಬೆಟ್ಟ ಮತ್ತು ಶಾಲೆಯ ಬೆಟ್ಟಗಳಿಂದ ಸುತ್ತುವರಿದಿದೆ.

ಧರ್ಮಸ್ಥಳ ಕ್ಷೇತ್ರಕ್ಕೆ ಬದಿನೆಡೆ, ನೆಲ್ಯಾಡಿಬೀಡು, ಬಳ್ಳಾಳ್ತಿಗುಡಿ, ಚಂದ್ರನಾಥ ಬಸದಿ, ಮಂಜುನಾಥ ದೇವಾಲಯ ಮತ್ತು ಹೆಗ್ಗಡೆಯವರ ಅರಮನೆ ಸೇರಿವೆ. ಧರ್ಮಸ್ಥಳದಲ್ಲಿ ಕುಡುಮದ ದೈವಗಳ ಗುಡಿಗಳು ಚಂದ್ರನಾಥ ಬಸದಿ ಮತ್ತು ಮಂಜುನಾಥ ದೇವಾಲಯ ಇವುಗಳಿದ್ದು, ಇದು ಗ್ರಾಮ್ಯ, ಜೈನ ಮತ್ತು ವೈದಿಕ ಮತೀಯ ಶ್ರದ್ಧಾಭಕ್ತಿಗಳ ಸಂಗಮ ಕ್ಷೇತ್ರವಾಗಿದೆ. ಧರ್ಮಸ್ಥಳದಲ್ಲಿ 39' ಎತ್ತರದ ಸು 175 ಟನ್ನುಗಳ ಗೊಮ್ಮಟ ಶಿಲಾಮೂರ್ತಿಯನ್ನು 1970ರ ದಶಕದಲ್ಲಿ ಸ್ಥಾಪಿಸಲಾಗಿದೆ. ಪ್ರತಿವರ್ಷ ಇಲ್ಲಿ ಸರ್ವಧರ್ಮ ಸಮ್ಮೇಳನ ನಡೆಯುವುದೊಂದು ವಿಶೇಷ. ಧರ್ಮಸ್ಥಳಕ್ಕೆ ನಾಡಿನ ಎಲ್ಲ ಕಡೆಯಿಂದಲೂ ಉತ್ತಮ ಮಾರ್ಗಸಂಪರ್ಕಗಳಿವೆ. ವಿದ್ಯುತ್, ಅಂಚೆ, ತಂತಿ ಮತ್ತು ದೂರವಾಣಿ ಸೌಲಭ್ಯಗಳಿವೆ. ಪ್ರಾಥಮಿಕ ಮಾಧ್ಯಮಿಕ ಮತ್ತು ಪ್ರೌಢಶಾಲೆಗಳಿವೆ. ಉಜಿರೆಯಲ್ಲಿ ಶ್ರೀ ಮಂಜುನಾಥೇಶ್ವರ ಕಲಾ ಮತ್ತು ವಿಜ್ಞಾನ ಕಾಲೇಜನ್ನು ದೇವಾಲಯದ ವತಿಯಿಂದ ನಡೆಸಲಾಗುತ್ತಿದೆ.

ಅರಣ್ಯಾವೃತವಾಗಿ ಪ್ರಕೃತಿಸೌಂದರ್ಯವೂ ಕೂಡಿರುವ ಧರ್ಮಸ್ಥಳವನ್ನು ಪ್ರವೇಶಿಸುವಲ್ಲಿ 150' ಎತ್ತರದ ಸುಂದರ ಪ್ರವೇಶದ್ವಾರವಿದೆ. ಎರಡೂ ಕಡೆಗಳಲ್ಲಿ ನಾಲ್ಕಾರು ಅಂತಸ್ತುಗಳುಳ್ಳ ಛತ್ರಗಳಿವೆ. ಸುಮಾರು ಇಪ್ಪತ್ತು ಅಡಿ ಎತ್ತರದ ಕಟ್ಟೆಯ ಮೇಲೆ ಮಣ್ಣು, ಇಟ್ಟಿಗೆ ಮತ್ತು ಮರಗಳಿಂದ ಮಂಜುನಾಥ ದೇವಾಲಯವನ್ನು ಕಟ್ಟಲಾಗಿದೆ. ಇಲ್ಲಿನ ಎರಡು ಪ್ರಾಕಾರಗಳ ಒಳಭಾಗದಲ್ಲಿ ಮಂಜುನಾಥಸ್ವಾಮಿಯ ಮೂಲ ಆಲಯವಿದೆ. ಇದರ ಎದುರಿಗೆ ಅಣ್ಣಪ್ಪ ಹಿಂದೆ ಗಣಪತಿ ಮತ್ತು ಪಕ್ಕದಲ್ಲಿ ಅಮ್ಮನವರ ಆಲಯಗಳಿವೆ. ಆಲಯದ ಬಾಗಿಲುಗಳಿಗೆ ಮತ್ತು ಚೌಕಟ್ಟುಗಳಿಗೆ ಬೆಳ್ಳಿ ತಗಡನ್ನು ಹೊದಿಸಿದ್ದಾರೆ. ಒಳಪ್ರಾಕಾರದ ಮರದ ಕಂಬಗಳ ಮೇಲೆ ಮತ್ತು ಮೇಲ್ಛಾವಣಿಗಳಲ್ಲಿ ಸುಂದರ ಕೆತ್ತನೆ ಕೆಲಸವಿದೆ. ಮುಖಮಂಟಪದ ಬಲಗಡೆಯ ಪ್ರವೇಶದ್ವಾರದ ಎರಡೂ ಕಡೆಗಳಲ್ಲಿ ಮಾನವಾಕೃತಿಗಿಂತಲೂ ಎತ್ತರವಾಗಿರುವ ದ್ವಾರಪಾಲಕ ವಿಗ್ರಹಗಳಿವೆ. ಇಲ್ಲಿನ ಮೊದಲ ಅಂತಸ್ತಿನಲ್ಲಿ ಭಿತ್ತಿಚಿತ್ರಗಳಿವೆ. ದೇವಾಲಯದ ನಾಲ್ಕು ಮೂಲೆಗಳಲ್ಲೂ ಕಳಸವುಳ್ಳ ನಾಲ್ಕು ಗೋಪುರಗಳಿವೆ.

ದೇವಾಲಯದ ಎದುರಿರುವ ಹೆಗ್ಗಡೆಯವರ ನಿವಾಸದ ಮೂರನೆಯ ಮಹಡಿಯ ದರ್ಪಣಮಂದಿರ ಪ್ರವಾಸಿ ಆಕರ್ಷಣೆಗಳಲ್ಲಿ ಒಂದು. ಈ ನಿವಾಸದ ಹಿಂದೆ ಇರುವ ಪುಷ್ಪೋದ್ಯಾನ ಮತ್ತು ಕೊಳ ಆಕರ್ಷಕವಾಗಿವೆ. ಇಲ್ಲಿನ ಲಲಿತೋದ್ಯಾನದಲ್ಲಿ ವಿವಿಧ ಹೂಗಳ ಜೊತೆಗೆ ಆಕರ್ಷಕ ಮಾನವಾಕೃತಿ ಬೊಂಬೆಗಳಿವೆ. ವಸಂತಮಹಲ್ ಒಂದು ಪುಟ್ಟ ಕಲಾವಸ್ತು ಪ್ರದರ್ಶನ ಮಂದಿರ. ಧರ್ಮಸ್ಥಳದ ಲಕ್ಷದೀಪೋತ್ಸವ ಪ್ರಸಿದ್ಧ; ನವರಾತ್ರಿ, ಶಿವರಾತ್ರಿಗಳಲ್ಲೂ ಉತ್ಸವಗಳು ನಡೆಯುತ್ತವೆ. ಹನ್ನೆರಡು ವರ್ಷಕ್ಕೊಮ್ಮೆ ನಡಾವಳಿ ಎಂಬ ಉತ್ಸವ ನಡೆಯುತ್ತದೆ.

ಧರ್ಮಸ್ಥಳದಲ್ಲಿ ಯಾತ್ರಾರ್ಥಿಗಳ ಉಪಯೋಗಕ್ಕಾಗಿ ನೇತ್ರಾವತಿ ಮತ್ತು ವೈಶಾಲಿ ಎಂಬ ಎರಡು ದೊಡ್ಡ ನಿವಾಸ ಕೇಂದ್ರಗಳನ್ನು ಕಟ್ಟಲಾಗಿದೆ. ದೇವಾಲಯದ ಬಲಗಡೆಯಲ್ಲಿರುವ ಅನ್ನಪೂರ್ಣ ಕಟ್ಟಡದಲ್ಲಿ ಸರ್ವರಿಗೂ ಸರ್ವಕಾಲದಲ್ಲೂ ಉಚಿತ ಭೋಜನ ವ್ಯವಸ್ಥೆ ಇದೆ. ಧರ್ಮಸ್ಥಳವನ್ನು ಮೊದಲು ಮಲರ್ಮಾಡಿ ಎಂದೂ ಅನಂತರ ಕುಡುಮ ಎಂದೂ ಕರೆಯುತ್ತಿದ್ದರು. ದೇವರಾಜ ಹೆಗ್ಗಡೆಯ ಕಾಲದಲ್ಲಿ ಉಡುಪಿಯ ಸೋದೆ ಮಠದ ಶ್ರೀ ವಾದಿರಾಜ ಸ್ವಾಮಿಗಳು ಧರ್ಮಸ್ಥಳಕ್ಕೆ ಭೇಟಿ ಕೊಟ್ಟು ಧರ್ಮಸ್ಥಳವೆಂದು ಕರೆದರು. ಇಲ್ಲಿನ ಐತಿಹ್ಯದ ಪ್ರಕಾರ ಸುಮಾರು 500 ವರ್ಷಗಳ ಹಿಂದೆ ಬಿರ್ಮಣ್ಣ ಪೆರ್ಗ್ಗಡೆ ಮತ್ತು ಆತನ ಪತ್ನಿ ಹೆಗ್ಗಡತಿ ಅಮ್ಮುದೇವಿ ಬಲ್ಲಾಳತಿಯರ ನೆಲ್ಯಾಡಿ ಬೀಡಿನ ಮನೆಗೆ ಕುಮಾರಸ್ವಾಮಿ ಮತ್ತು ಕಾಳರಾಹು ಧರ್ಮದೇವತೆಗಳು ವೇಷ ಮರೆಸಿಕೊಂಡು ದಾರಿಕಾರರಾಗಿ ಬಂದು, ಅವರ ಮನೆಯಲ್ಲಿ ತಂಗಿ ಅವರ ಪ್ರೀತ್ಯಾದರವನ್ನು ಮೆಚ್ಚಿಕೊಂಡು, ಹೆಗ್ಗಡೆಯ ಕನಸಿನಲ್ಲಿ ನಿಜರೂಪದಲ್ಲಿ ಕಾಣಿಸಿಕೊಂಡು, ಈ ಬೀಡನ್ನು ನಮಗೆ ಉಳಿಯಲು ಕೊಟ್ಟು ನೀವು ಬೇರೆ ಮನೆ ಮಾಡಿಕೊಳ್ಳಿ ನಮಗೆ ಪರ್ವನಡಾವಳಿ, ಬೇರೆ ಬೇರೆ ಗುಡಿ, ಒಬ್ಬ ಪಾತ್ರಿ, ಉಯ್ಯಾಲೆ, ಎಲ್ಲಾ ವ್ಯವಸ್ಥೆ ಮಾಡಿ, ಈ ಎಲ್ಲಾ ಕಾರ್ಯಗಳನ್ನೂ ನಮ್ಮ ಭೂತ ಅಣ್ಣಪ್ಪ ಮಾಡುವನು. ಈ ದೇವಸ್ಥಾನದ ಮಹಿಮೆ ಎಲ್ಲ ಕಡೆ ಹರಡುವುದು. ಇಲ್ಲಿ ಸರ್ವರಿಗೂ ಸದಾ ಕಾಲವೂ ದಾನಧರ್ಮ ನಡೆಯುತ್ತಿರಲಿ ಎಂದು ಹೇಳಿ ಅಂತರ್ಧಾನರಾದರಂತೆ. ಹೆಗ್ಗಡೆ ದಂಪತಿಗಳು ದೈವಗಳ ಅಪ್ಪಣೆಯಂತೆ ನಡೆದುಕೊಂಡರು. ಹೊಸ ಬೀಡಿಗೆ ಹೋದರು. ದೈವಗಳು ತಂಗಿದ ಬದಿನೆಡೆ, ನೆಲ್ಯಾಡಿ ಬೀಡು, ಅವರ ನೆಲೆಯಾಗಿ ತಮ್ಮ ಹೆಣ್ಣು ದೈವಗಳಾದ ಕನ್ಯಾಕುಮಾರಿ ಕಾಳರ್ಕಾಯಿಗಳೊಂದಿಗೆ ಬಂದು ಉಳಿದರು. ಕುಡುಮದ ದೈವಗಳು ಮತ್ತು ಅಣ್ಣಪ್ಪ ಭೂತನಿಂದ ಮಂಗಳೂರು ಸಮೀಪದ ಕದ್ರಿಯ ಮಂಜುನಾಥ ದೇವಾಲಯದ ಸ್ಥಾಪನೆಯಾಯಿತು.

ಚಂದಯ್ಯ ಹೆಗ್ಗಡೆಯ ಕಾಲದಲ್ಲಿ (1830-49) ದೇವಾಲಯದ ಒಳಭಾಗ ಸುಧಾರಣೆಯಾದವು. ಆಮೇಲೆ ಮಂಜಯ್ಯ ಹೆಗ್ಗಡೆ (1849-95) ಛತ್ರ, ಹೊರಸುತ್ತಿನ ಪ್ರಾಕಾರ, ಉನ್ನತ ಗೋಪುರ, ಉಗ್ರಾಣ, ರಥ, ಆಭರಣ, ಪಲ್ಲಕ್ಕಿ, ಬಸದಿಯ ಜೀರ್ಣೋದ್ಧಾರ ಮತ್ತು ಕ್ಷೇತ್ರಶುದ್ಧಿ ಮಾಡಿಸಿದರು. ದೈವಗಳಿಗೆ ಮೂರು ಮಹಾಧರ್ಮ ನಡಾವಳಿ, ಪೂಜೆ ಉತ್ಸವ ಹೆಚ್ಚಿಸಿ 45 ವರ್ಷ ಆಳಿದರು. ಮುಂದೆ ಬಂದ ಚಂದಯ್ಯ ಹೆಗ್ಗಡೆಯ ಕಾಲದಲ್ಲಿ ದೈವದ ಗುಡಿಗಳನ್ನು ಹೊಸತಾಗಿ ಕಟ್ಟಲಾಯಿತು. ಯಾತ್ರಿಕರಿಗೆ ಧರ್ಮಛತ್ರ, ಬಸದಿಗೆ ಪಂಚಕಲ್ಯಾಣ, ನಲ್ಲಿ ನೀರಿನ

ವ್ಯವಸ್ಥೆಗಳಾದವು.

ಆ ಮೇಲೆ ಮಂಜಯ್ಯ ಹೆಗ್ಗಡೆಯವರ (1918-1955) ಕಾಲದಲ್ಲಿ ಧರ್ಮಸ್ಥಳದ ಪ್ರಭಾವ ಮತ್ತು ದೇವಸ್ಥಾನದ ಶಿಸ್ತು ಬೆಳೆಯಿತು. ಧರ್ಮಾರ್ಥ ಆಸ್ಪತ್ರೆ, ಸಿದ್ಧವನದಲ್ಲಿ ಗುರುಕುಲ (1940), ಕಾರ್ತಿಕ ಲಕ್ಷ ದೀಪೋತ್ಸವದ ಕಾಲಕ್ಕೆ ಸರ್ವಧರ್ಮಸಮ್ಮೇಳನ ಇತ್ಯಾದಿ ಆರಂಭವಾದವು. ನೇತ್ರಾವತಿಗೆ ಸೇತುವೆ ಆಯಿತು. ಸುತ್ತಲಿನ ಜವಳು ನೆಲವೆಲ್ಲ ಆಬಾದಾಗಿ ಸುಂದರ ಉದ್ಯಾನವನಗಳೂ ಕಾರಂಜಿಗಳೂ ನಿರ್ಮಾಣಗೊಂಡವು. ಆರೋಗ್ಯಮಯ ವಾತಾವರಣ ಉಂಟಾಯಿತು. ನೀರು, ವಿದ್ಯುದ್ದೀಪಗಳ ಸರಬರಾಜು ವ್ಯವಸ್ಥೆಗೊಂಡಿತು. ಇವರ ಅನಂತರ ಬಂದ ರತ್ನವರ್ಮ ಹೆಗ್ಗಡೆಯವರೂ ಮತ್ತು ಅನಂತರ ಇವರ ಹಿರಿಯ ಮಗ ವೀರೇಂದ್ರ ಹೆಗ್ಗಡೆಯವರೂ ಸಾಮಾಜಿಕ ಕಾರ್ಯದ ಪರಂಪರೆಯನ್ನು ಮುಂದುವರಿಸಿದರು. ವೀರೇಂದ್ರ ಹೆಗ್ಗಡೆಯವರು ಕಾರ್ಕಳದ ಮಹಾಶಿಲ್ಪಿ ರಂಜಾಳ ಗೋಪಾಲ ಶೆಣೈ ಅವರಿಂದ ಗೊಮ್ಮಟನ ಪ್ರತಿಮೆಯನ್ನು ಕೆತ್ತಿಸಿದ್ದಾರೆ. ಧರ್ಮಸ್ಥಳ ಇಂದು ವೀರೇಂದ್ರ ಹೆಗ್ಗಡೆಯವರ (ನೋಡಿ) ಧರ್ಮಾಧಿಕಾರತ್ವದಲ್ಲಿ ವಿಸ್ತಾರವಾದ ಚಟುವಟಿಕೆಗಳನ್ನು ಹಮ್ಮಿಕೊಂಡ ದೊಡ್ಡ ಧಾರ್ಮಿಕ ಕೇಂದ್ರವಾಗಿದೆ. ಇಲ್ಲಿ 1979ರಲ್ಲಿ 51ನೆಯ ಅಖಿಲ ಭಾರತ ಸಾಹಿತ್ಯ ಸಮ್ಮೇಳನ ಎಂ. ಗೋಪಾಲಕೃಷ್ಣ ಅಡಿಗರ ಅಧ್ಯಕ್ಷತೆಯಲ್ಲಿ ಜರುಗಿತು. ಧರ್ಮಸ್ಥಳದ ವತಿಯಿಂದ ಧರ್ಮಸ್ಥಳದ ಹೊರಗೆ ಕಾಲೇಜುಗಳನ್ನು ಸ್ಥಾಪಿಸಿ ನಡೆಸಲಾಗುತ್ತಿದೆ. ಮೈಸೂರಿನಲ್ಲಿಯೂ ಒಂದು ಕಾಲೇಜನ್ನು ಸ್ಥಾಪಿಸಲಾಯಿತು. ಧಾರವಾಡದಲ್ಲಿ ದಂತವಿಜ್ಞಾನ ಕಾಲೇಜು, ಹಾಸನದಲ್ಲಿ ಆಯುರ್ವೇದ ಕಾಲೇಜುಗಳನ್ನು ಶ್ರೀಕ್ಷೇತ್ರದ ವತಿಯಿಂದ ಸ್ಥಾಪಿಸಲಾಗಿದೆ. ಹಲವಾರು ಕಡೆಗಳಲ್ಲಿ ಕಲ್ಯಾಣ ಮಂಟಪಗಳನ್ನು ಕಟ್ಟಿಸಿ ರಿಯಾಯಿತಿ ದರದಲ್ಲಿ ವಿವಾಹಗಳಿಗೆ ನೀಡಲಾಗುತ್ತಿದೆ. ಧರ್ಮಸ್ಥಳದಲ್ಲಿ ವಸ್ತುಸಂಗ್ರಹಾಲಯವನ್ನು ಸ್ಥಾಪಿಸಿದೆ. ಗ್ರಾಮೀಣ ಕಸಬುಗಳನ್ನು ಪುನರುಜ್ಜೀವಿಸಿ ಜನರಿಗೆ ಉದ್ಯೋಗ ಒದಗಿಸುವ ಯೋಜನೆಯನ್ನು ಹಮ್ಮಿಕೊಂಡಿದೆ. ಶಿಥಿಲಗೊಂಡ ಅನೇಕ ಪ್ರಾಚೀನ ದೇವಾಲಯಗಳ ಜೀರ್ಣೋದ್ಧಾರ ಕಾರ್ಯವೂ ಶ್ರೀ ಕ್ಷೇತ್ರದಿಂದ ನಡೆಯುತ್ತಿದೆ. ಮೈಸೂರು ತಾಲ್ಲೂಕಿನ ಭೋಗನಂದೀಶ್ವರ ದೇವಾಲಯ, ಮೂಡಿಗೆರೆ ತಾಲ್ಲೂಕಿನ ಭೈರಾಪುರದ ನಾಣ್ಯದ ಭೈರವೇಶ್ವರ ದೇವಾಲಯಗಳು ಇದಕ್ಕೆ ನಿದರ್ಶನಗಳು. ಉಚಿತ ಸಾಮೂಹಿಕ ವಿವಾಹಗಳ ಏರ್ಪಾಡು ಈ ಕ್ಷೇತ್ರದಲ್ಲಿ ಆಗಾಗ ನಡೆಯುತ್ತಿರುತ್ತವೆ.

(ಜಿ..ಕೆ.)

**ಧವಲದ ಹಾಡುಗಳು :** ಮಂಗಳ ಕಾರ್ಯಗಳಲ್ಲಿ ಆರತಿ ಎತ್ತುವಾಗ ಹೆಣ್ಣುಮಕ್ಕಳು ಹೇಳುವ ಹಾಡುಗಳಲ್ಲಿ ಈ ಹಾಡುಗಳನ್ನು ಸೇರಿಸುವುದು ರೂಢಿ. ವಿಶಿಷ್ಟ ಲಯದಿಂದ ಕೂಡಿ ಧವಲಾ ಎಂಬ ಪದವನ್ನೊಳಗೊಂಡ ಈ ಹಾಡುಗಳು ಆಶೀರ್ವಚನಯುಕ್ತ ಪಾದಗಳನ್ನು ಹೊಂದಿದ್ದು ಯಾವ ಛಂದಸ್ಸಿನಲ್ಲಿಯಾದರೂ ಕಳೆಗಟ್ಟುತ್ತವೆ.

ಜನಪದ ಸಾಹಿತ್ಯದಲ್ಲಿ ಹೆಂಗೆಳೆಯರ ಹಾಡಿನಲ್ಲಿ ಬಹುವಾಗಿ ಪ್ರಚಾರದಲ್ಲಿದ್ದ ಧವಲದ ಹಾಡುಗಳ ಲಕ್ಷಣ ಮತ್ತು ಪ್ರಭೇದಗಳನ್ನು ಸೋಮೇಶ್ವರನ ಮಾನ ಸೋಲ್ಲಾಸ, ಹೇಮಚಂದ್ರನ ಛಂದೋನುಶಾಸನ ಮತ್ತು ಶಾರ್ಙ್ಗದೇವನ ಸಂಗೀತರತ್ನಾಕರಗಳಲ್ಲಿ ಕಾಣಬಹುದು. 8 ಪಾದಗಳ ಶ್ರೀಧವಲ ಯಶೋಧವಲ, 6 ಪಾದಗಳ ಕೀರ್ತಿಧವಲ, 4 ಪಾದಗಳ ಗುಣಧವಲ ಅಮರಧವಲ ಭ್ರಮರಧವಲ ಮಂಗಲ ಧವಲ - ಇವು ಧವಲದ ಪ್ರಭೇದಗಳು.

ಧವಲದ ಹಾಡುಗಳ ಬಗ್ಗೆ ರನ್ನ, ರಾಘವಾಂಕ, ರತ್ನಾಕರವರ್ಣಿ ಮುಂತಾದ ಕವಿಗಳೂ ಪ್ರಸ್ತಾಪಿಸಿದ್ದಾರೆ. ಹತ್ತನೆಯ ಶತಮಾನದಲ್ಲಿ ಪ್ರಚಾರದಲ್ಲಿದ್ದ ಧವಲ ಮಂಗಲ ಗೇಯವನ್ನು ರನ್ನ ಸೂಚಿಸಿದ್ದಾನೆ. 13ನೆಯ ಶತಮಾನದಲ್ಲಿಯೂ ಇವು ಸಾಕಷ್ಟು ಬಳಕೆಯಲ್ಲಿದ್ದವೆಂಬುದನ್ನು ಸಿದ್ಧರಾಮ ಮಾಡಿಸಿದ ಸಾವಿರಾರು ಮಂಗಲ ವಿವಾಹಗಳ ಸಂದರ್ಭದಲ್ಲಿ 'ಅಂಗನೆಯರು ಆರತಿಗಳು ಬೆಳಗಿ ಅಲ್ಲಲ್ಲಿ ಧವಲಗಳನ್ನು ಹಾಡುತ್ತಿದ್ದರು' ಎಂದು ರಾಘವಾಂಕ ಹೇಳಿದ್ದಾನೆ. ಭರತೇಶನ ವಿವಾಹಕಾಲದಲ್ಲಿ ಧವಲಗಳನ್ನು ಹಾಡಿದರೆಂದು ರತ್ನಾಕರವರ್ಣಿ ತನ್ನ ಭರತೇಶ ವೈಭವದಲ್ಲಿ ಉಲ್ಲೇಖಿಸಿದ್ದಾನೆ.

ಈಗ ಉಪಲಬ್ಧವಿರುವ ಸೀಮಂತ, ಜಾತಕರ್ಮ, ಉಪನಯನ, ಭರತೇಶ್ವರ ಧವಲಗಳು ವಿಶಿಷ್ಟವಾದ ಲಯಗಳಿಂದ ಕೂಡಿವೆ.

ಭರತೇಶ್ವರ ಧವಲದಿಂದ ಆಯ್ದ ಎರಡು ಪದ್ಯಗಳು ಹೀಗಿವೆ:

ಶ್ರೀ ಗುರು ಪಂಚಪದಗಳ| ಶ್ರೀಗೆ ನಿಲಯ ನಿಯಮಗಳ

ರಾಗರಸದಿ ಧವಳಾಗಮದಿಂದ

ಪೂಗಿ ಕದಳಿ ನಾರಂಗಗಳಿಂದ

ಬಾಗಿ ಶ್ರೀಚರಣಾಂಬುಜಗಳನರ್ಚಿಪೆ| ಶ್ರೀ ಗಣನಾಥಕೃಪೆದೋರು|

ಪರಮೇಶನುದರಾಬ್ಧಿ ಚಂದ್ರ| ನರೆಚಕ್ರಿ ಭರತರಾಜೇಂದ್ರ

ನರಸುರನಾಗಲೋಕವ ಸಾಧಿಸಿದ

ಧರೆಗಾದಿಕುವರನ ಧವಳ ಶೋಭಾನವ

ನೊರೆದು ಲಾಲಿಪುದು ರಸಿಕರು|

ಧವಲದ ಷಟ್ಕಲ ಲಯ ಬಹು ಅಪರೂಪವಾದದ್ದು. ಇದರ ರಹಸ್ಯವನ್ನೂ ಚೆಲುವನ್ನೂ ಬಿ.ಎಂ.ಶ್ರೀ., ಕುವೆಂಪು, ಪು.ತಿ.ನ - ಇವರ ಕಾವ್ಯಗಳಲ್ಲಿನ ಕೆಲವು ಪದ್ಯಗಳಲ್ಲಿ ಕಾಣಬಹುದು. ಹೊಸಗನ್ನಡದ ಈ ಮಟ್ಟುಗಳನ್ನು ಧವಲದ ಪ್ರಭೇದವೆಂದಾಗಲೀ, ಅಂತ್ಯಪ್ರಾಸ ಸಹಿತ ಧವಲವೆಂದಾಗಲೀ ಕರೆಯಬಹುದು. ತೆಲುಗು ಧವಲದ ಹೆಣ್ಣು ಮಕ್ಕಳ ಹಾಡುಗಳ ಲಯಕ್ಕೂ ಮತ್ತು ಕನ್ನಡ ಧವಲಗಳ ಲಯಕ್ಕೂ ಅತಿ ಸಾಮೀಪ್ಯ ಕಂಡುಬರುತ್ತದೆ.

(ಕೆ.ಡಿಎಚ್.)

**ಧಾರವಾಡ :** ಕರ್ನಾಟಕ ರಾಜ್ಯದ ಒಂದು ಜಿಲ್ಲೆ, ತಾಲ್ಲೂಕು ಮತ್ತು ನಗರ.

ರಾಜ್ಯದ ವಾಯುವ್ಯ ಭಾಗದಲ್ಲಿರುವ ಈ ಜಿಲ್ಲೆ ಒಟ್ಟು 17 ತಾಲ್ಲೂಕುಗಳನ್ನು ಹೊಂದಿದ್ದು ರಾಜ್ಯದ ನಾಲ್ಕನೆಯ ದೊಡ್ಡ ಜಿಲ್ಲೆಯಾಗಿದ್ದಿತು. 1997ರಲ್ಲಿ ಜಿಲ್ಲಾ ಮರುವಿಂಗಡಣೆ ಯೋಜನೆಯನ್ನು ಜಾರಿ ಮಾಡಿದಾಗ ಇದು ಐದು ತಾಲ್ಲೂಕುಗಳಿಗೆ ಸೀಮಿತವಾಯಿತು. ಈ ಜಿಲ್ಲೆಯ ಉಳಿದ ತಾಲ್ಲೂಕುಗಳನ್ನು ಹೊಸದಾಗಿ ರಚಿತವಾದ ಗದಗ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಸೇರಿಸಲಾಯಿತು. ಈ ಜಿಲ್ಲೆ ಪೂರ್ವದಲ್ಲಿ ಗದಗ, ಪಶ್ಚಿಮದಲ್ಲಿ ಉತ್ತರ ಕನ್ನಡ; ಉತ್ತರದಲ್ಲಿ ಬೆಳಗಾಂವಿ ಮತ್ತು ಗದಗ; ದಕ್ಷಿಣದಲ್ಲಿ ಹಾವೇರಿ ಜಿಲ್ಲೆಗಳಿಂದ ಆವೃತವಾಗಿದೆ. ಧಾರವಾಡ, ಹುಬ್ಬಳ್ಳಿ, ನವಲಗುಂದ, ಕಲಘಟಗಿ ಮತ್ತು ಕುಂದಗೋಳ ಇವು ಜಿಲ್ಲೆಯ ಐದು ತಾಲ್ಲೂಕುಗಳು. ಹೋಬಳಿಗಳು 114; ಗ್ರಾಮಗಳು 362; ಜಿಲ್ಲೆಯ ವಿಸ್ತೀರ್ಣ 4,076 ಚಕಿಮೀ. ಜನಸಂಖ್ಯೆ 1,603,794.

ಜಿಲ್ಲೆಯು ಭೌಗೋಳಿಕವಾಗಿ ಪೂರ್ವ ಮತ್ತು ಈಶಾನ್ಯದತ್ತ ಇಳಿಜಾರಾಗಿದೆ. ಜಿಲ್ಲೆಯನ್ನು ಪಶ್ಚಿಮದ ಗುಡ್ಡಗಾಡು ಪ್ರದೇಶ ಮತ್ತು ಪೂರ್ವದ ಬಯಲು ಪ್ರದೇಶವೆಂದು ವಿಂಗಡಿಸಬಹುದು. ಪಶ್ಚಿಮದ ಗುಡ್ಡಗಾಡು ಪ್ರದೇಶವನ್ನು ಮಲೆನಾಡೆಂದು ಮತ್ತು ನವಲಗುಂದ ತಾಲ್ಲೂಕಿನಿಂದ ಮುಂದುವರಿಯುವ ಭಾಗವನ್ನು ಬೆಳವಲ ನಾಡೆಂದು ಕರೆಯಲಾಗಿದೆ. ಮಧ್ಯದಲ್ಲಿ ಗಡಿನಾಡೆಂಬ ಭಾಗ ಬರುತ್ತದೆ. ಧಾರವಾಡ ಜಿಲ್ಲೆ ತಗ್ಗಾದ ಗುಡ್ಡಬೆಟ್ಟಗಳಿಂದಲೂ ಮಟ್ಟಸವಾದ ಕಣಿವೆಗಳಿಂದಲೂ ಕೂಡಿರುವ ಪ್ರದೇಶ. ಮಲೆನಾಡು ಪ್ರದೇಶದಲ್ಲಿರುವ ಗುಡ್ಡಗಳಲ್ಲಿ ಅಳ್ಣಾವರದ ಪೂರ್ವಕ್ಕಿರುವ ತೇಗೂರು ಗುಡ್ಡ ಮತ್ತು ದಕ್ಷಿಣದಲ್ಲಿ ಕಂಡೂರ ಗುಡ್ಡಗಳು ಮುಖ್ಯವಾದವು. ಧಾರವಾಡ ಮತ್ತು ಕಲಘಟಗಿಗಳ ನಡುವಿನ ಬೂದನ ಗುಡ್ಡ ಸುತ್ತಲ ಪ್ರದೇಶದಿಂದ 152 ಮೀ ಎತ್ತರವಾಗಿ

13 ಕಿಮೀ ಉದ್ದ ಮತ್ತು 11/2 ಕಿಮೀ ಅಗಲವಾಗಿ ದಕ್ಷಿಣೋತ್ತರವಾಗಿ ಹಬ್ಬಿದೆ. ಇದರ ಪಶ್ಚಿಮಕ್ಕೆ ಗಣೇಗುಡ್ಡವಿದೆ. ಧಾರವಾಡ-ಹುಬ್ಬಳ್ಳಿ ನಡುವೆ ರಾಯಾಪುರ ಬೆಟ್ಟಗಳು ಬರುತ್ತವೆ. ಹುಬ್ಬಳ್ಳಿ ತಾಲ್ಲೂಕಿನ ಉಣಕಲ್ಲುಗುಡ್ಡ ಮುಖ್ಯವಾದದ್ದು.

ಧಾರವಾಡದ ಶಿಲಾಸ್ತರ ಧಾರವಾಡ ಶಿಲಾ ಪ್ರಕಾರವೆಂದೇ ಪ್ರಸಿದ್ಧವಾಗಿದೆ. ಹಲವು ಉತ್ಕರ್ಷಿತ ಅಗ್ನಿಶಿಲೆಗಳು ಈ ಭಾಗದ ಮೂಲ ಅರೆಗಳಾಗಿವೆ. ಇವು ಧಾರವಾಡ ಬಂಡೆಗಳಿಂದ ಕೂಡಿದ ಪಳೆಯುಳಿಕೆಯ ಬೆಟ್ಟಗಳಾಗಿವೆ. ಇಲ್ಲಿ ಕಣಿವೆಗಳೂ ಕಂದರಗಳೂ ಹೆಚ್ಚು. ಎತ್ತರದ ಪ್ರದೇಶಗಳು ಬೋಳಾಗಿದ್ದು ದಟ್ಟವಾಗಿ ಹುಲ್ಲು ಬೆಳೆಯುತ್ತದೆ. ಧಾರವಾಡ ಶಿಲಾಭಾಗವನ್ನು ಭೇದಿಸಿಕೊಂಡು ಕಣಶಿಲೆ ಮತ್ತು ನೀಣಕಲ್ಲುಗಳು ಹರಡಿವೆ. ಧಾರವಾಡ ಪದರ ಶಿಲೆ, ಗ್ರ್ಯಾನೈಟ್, ಬೆಣಚುಕಲ್ಲು ಮತ್ತು ಸಣ್ಣಕಲ್ಲುಗಳನ್ನೊಳಗೊಂಡು ಎಲ್ಲ ದಿಕ್ಕುಗಳಲ್ಲಿಯೂ ಡಾಲರೈಟ್ ದಿಂಡುಗಳು ಹರಡಿವೆ. ಮ್ಯಾಂಗನೀಸ್ ಅದಿರು ಇಲ್ಲಿಯ ಮುಖ್ಯ ಖನಿಜ. ತಾಮ್ರ, ಚಿನ್ನದ ಅದಿರು ಪದರಗಳಿದ್ದರೂ ಅಷ್ಟು ಲಾಭಕರವಾಗಿಲ್ಲ. ಕೆಲವೆಡೆ ಜಂಬಿಟ್ಟಿಗೆ ಶಿಲೆಗಳಿವೆ. ಈ ಜಿಲ್ಲೆಯ ಮಣ್ಣು ಫಲವತ್ತಾಗಿದೆ. ಪೂರ್ವ ಭಾಗದಲ್ಲಿ ಎರೆಮಣ್ಣು ಮತ್ತು ಹುಳಕೆರಿ ಮಣ್ಣಿದ್ದರೆ ಪಶ್ಚಿಮದಲ್ಲಿ ಕೆಂಪು ಮತ್ತು ಮರಳು ಮಿಶ್ರಿತ ಮಣ್ಣಿದೆ. ಧಾರವಾಡ ಮತ್ತು ಕಲಘಟಗಿ ತಾಲ್ಲೂಕುಗಳಲ್ಲಿ ಕೆಂಪು ಮತ್ತು ಕಪ್ಪು ಮಿಶ್ರಿತ ಮಣ್ಣು ಕಂಡುಬರುತ್ತದೆ. ಹುಬ್ಬಳ್ಳಿಯ ಪೂರ್ವಭಾಗ ಎರೆಮಣ್ಣಿನಿಂದ ಕೂಡಿದೆ.

ಅವಿಭಜಿತ ಧಾರವಾಡ ಜಿಲ್ಲೆಯನ್ನು ಉತ್ತರದಲ್ಲಿ ಮಲಪ್ರಭಾ ಮತ್ತು ದಕ್ಷಿಣದಲ್ಲಿ ತುಂಗಭದ್ರಾ ನದಿಗಳು ಸೋಕಿ ಹೋಗುತ್ತಿದ್ದವು. ಅನೇಕ ಉಪನದಿಗಳು ಜಿಲ್ಲೆಯಾದ್ಯಂತ ಹರಿಯುತ್ತಿದ್ದವು. ಆದರೆ ಈಗಿನ ಕಿರಿದಾದ ಜಿಲ್ಲೆಯುಲ್ಲಿ ಯಾವುದೇ ಪ್ರಮುಖ ನದಿಗಳಿಲ್ಲ. ಚಿಕ್ಕಪುಟ್ಟ ಹೊಳೆಗಳು ಮತ್ತು ಹಳ್ಳಗಳು ಇವೆ. ಅವುಗಳಲ್ಲಿ ಬೇಡ್ತಿ ಹೊಳೆ, ಬೆಣ್ಣೆಹಳ್ಳ, ತುಪ್ಪರಿಹಳ್ಳ, ತಟ್ಟಿಹಳ್ಳ, ಹಂದಿಗನಹಳ್ಳ ಇವು ಮುಖ್ಯವಾದವು. ಬೇಡ್ತಿ ಹೊಳೆ ನೈರುತ್ಯಾಭಿಮುಖವಾಗಿ ಹರಿದು ಅರಬ್ಬಿ ಸಮುದ್ರ ಸೇರಿದರೆ ಉಳಿದವು ಕೃಷ್ಣಾ ಜಲಾನಯನದತ್ತ ಉತ್ತರ ಮತ್ತು ಪೂರ್ವಾಭಿಮುಖವಾಗಿ ಸಾಗುತ್ತವೆ. ಈ ನದಿಗಳು ನೀರಾವರಿ ಸೌಲಭ್ಯ ಒದಗಿಸುವಲ್ಲಿ ಅತ್ಯಂತ ಉಪಯುಕ್ತವಾಗಿವೆ. ಬೇಡ್ತಿ ಹೊಳೆಗೆ ದುಮ್ಮವಾಡದ ಹತ್ತಿರ ಒಡ್ಡು ಹಾಕಿ ನೀರಸಾಗರವೆಂಬ ದೊಡ್ಡ ಕೆರೆ ಕಟ್ಟಲಾಗಿದೆ. ಈ ಕೆರೆಯಿಂದ ಕುಂದಗೋಳ, ಹುಬ್ಬಳ್ಳಿ ಧಾರವಾಡ ನಗರಗಳಿಗೆ ನೀರೊದಗುತ್ತದೆ. ಬೆಣ್ಣೆಹಳ್ಳ ಹುಬ್ಬಳ್ಳಿ ನವಲಗುಂದ ತಾಲ್ಲೂಕುಗಳ ಮೂಲಕ ಹರಿದು ಮಲಪ್ರಭಾ ನದಿಯನ್ನು ಸೇರುತ್ತದೆ. ಗೂಗಿ ಹಳ್ಳ, ತುಪ್ಪರಿಹಳ್ಳ, ಹಂದಿಗನಹಳ್ಳ ಇವೆಲ್ಲ ಬೆಣ್ಣೆ ಹಳ್ಳವನ್ನು ಕೂಡಿಕೊಳ್ಳುತ್ತವೆ.

ಈ ಜಿಲ್ಲೆಯ ವಾಯುಗುಣ ಸಾಮಾನ್ಯವಾಗಿ ಹಿತಕರ. ಏಪ್ರಿಲ್ ಮತ್ತು ಮೇ ತಿಂಗಳುಗಳಲ್ಲಿ ಅಧಿಕ ಉಷ್ಣಾಂಶವಿರುತ್ತದೆ. ಕೆಲವು ವೇಳೆ ಉಷ್ಣಾಂಶ $105^0$ಫ್ಯಾ.ಯಿಂದ $107^0$ಫ್ಯಾ. ವರೆಗೂ ಇರುತ್ತದೆ. ಜೂನ್ ತಿಂಗಳಲ್ಲಿ ಮಳೆ ಪ್ರಾರಂಭವಾದೊಡನೆ ಉಷ್ಣತೆ ಕಡಿಮೆಯಾಗುವುದು. ನವೆಂಬರ್, ಡಿಸೆಂಬರ್ ಮತ್ತು ಜನವರಿ ಚಳಿಗಾಲವಾಗಿದ್ದು ಇದರ ಮತ್ತು ಬೇಸಿಗೆ ಕಾಲದ ಉಷ್ಣತಾ ಮಾನದ ದೈನಿಕ ವ್ಯತ್ಯಾಸ ಅಧಿಕವಾಗಿರುತ್ತದೆ. ಈ ತಿಂಗಳುಗಳಲ್ಲಿ $35^0$ಫ್ಯಾ.ನಿಂದ $40^0$ಫ್ಯಾ.ವರೆಗೆ ಉಷ್ಣತಾ ವ್ಯತ್ಯಾಸವಿರುತ್ತದೆ. ಫೆಬ್ರುವರಿ ಶುಷ್ಕ ತಿಂಗಳು. ಜಿಲ್ಲೆಯಲ್ಲಿ ಮೇ ತಿಂಗಳಿಂದ ಅಕ್ಟೋಬರ್ ವರೆಗೆ ಮಳೆ ಬೀಳುವುದು. ಏಪ್ರಿಲ್ ಮತ್ತು ಮೇ ತಿಂಗಳಲ್ಲಿ ಗುಡುಗುಮಿಂಚು ಸಹಿತ ಮಳೆಯುಗುವುದುಂಟು. ಜಿಲ್ಲೆಯಲ್ಲಿ 2000 ದಲ್ಲಿ ಬಿದ್ದ ಸರಾಸರಿ ಮಳೆ 726 ಮಿಮೀ. ಜಿಲ್ಲೆಗೆ ಮುಂಗಾರು ಮಳೆ ಹೆಚ್ಚಾಗಿ ಬೀಳುತ್ತದೆ. ಪಶ್ಚಿಮ ಮೇರೆಯ ಹತ್ತಿರ ಕೆಲವು ಪ್ರದೇಶಗಳಲ್ಲಿ 965 ಮಿಮೀ ಗಿಂತಲೂ ಹೆಚ್ಚು ಮಳೆ ಬೀಳುವುದು.

ಜಿಲ್ಲೆಯಲ್ಲಿ ಒಟ್ಟು 35,235 ಹೆಕ್ಟೇರ್‌ಗಳ ವಿಸ್ತೀರ್ಣದ ಅರಣ್ಯವಿದೆ. ಪರ್ಣಪಾತಿ ವೃಕ್ಷಗಳ ಕಾಡು, ಮುಳ್ಳುಕಾಡು ಮತ್ತು ಕುರುಚಲು ಕಾಡುಗಳನ್ನು ಕಾಣಬಹುದು. ಪರ್ಣಪಾತಿ ವೃಕ್ಷಗಳ ಕಾಡು ಮಲೆನಾಡಿಗೆ ಮಾತ್ರ ಸೀಮಿತವಾಗಿದೆ. ತೇಗ ಇಲ್ಲಿನ ಮುಖ್ಯ ಮರ. ಇಲ್ಲಿನ ಮರಗಳು ಸಾಮಾನ್ಯವಾಗಿ 9 ರಿಂದ 12 ಮೀ ಎತ್ತರ ಬೆಳೆಯುತ್ತವೆ. ಕಲಘಟಗಿ, ಕುಂದಗೋಳ ಮತ್ತು ಇವುಗಳ ಸುತ್ತ ಕಾಡು ಸಾಂದ್ರವಾಗಿದ್ದು ಪೂರ್ವಕ್ಕೆ ವಿರಳವಾಗುತ್ತ ಹೋಗುವುದು. ನದೀದಂಡೆಗಳುದ್ದಕ್ಕೂ ಬಿದಿರುಮೆಳೆಗಳುಂಟು. ಜಿಲ್ಲೆಯ ಪಶ್ಚಿಮ ಭಾಗದ ಅರಣ್ಯದಲ್ಲಿ ನಾಟಾ ಮತ್ತು ಮರಮುಟ್ಟು ಬಳಕೆಗೆ ಉಪಯುಕ್ತವಾದ ಮರಗಳಿವೆ. ಧಾರವಾಡ ಮತ್ತು ನವಲಗುಂದ ತಾಲ್ಲೂಕುಗಳಲ್ಲಿ ನೂರಾರು ಎಕರೆಗಳ ಗೋಮಾಳ ಮೀಸಲು ಪ್ರದೇಶವಿದ್ದು ಇತರೆಡೆಗಳಲ್ಲೂ ಗೋಮಾಳ ಮೀಸಲು ಪ್ರದೇಶ ಗಣನೀಯವಾಗಿದೆ. ಇಲ್ಲಿನ ಕಾಡಿನಲ್ಲಿ ಗಂಧ, ತೇಗ, ಮತ್ತಿ, ಅತ್ತಿ, ಹಾರ್ದ, ಹಲಸು, ಬಿಳಿನಂದಿ, ಬೀಟೆ, ದಿಂಡಲು, ಶಿವನಿ, ಹೊನ್ನೆ, ಮಾವು, ಬೇವು, ಹುಣಿಸೆ, ಈಚಲು, ಮುತ್ತಗ, ನೇರಳೆ, ಬಿದಿರು, ಗೇರು ಮೊದಲಾದವುಗಳು ಬೆಳೆಯುತ್ತವೆ. ದಕ್ಷಿಣ ಭಾರತದ ಕಾಡುಗಳಲ್ಲಿರುವ ವಿವಿಧ ಜಾತಿಯ ಪ್ರಾಣಿಗಳು ಇಲ್ಲಿನ ಪಶ್ಚಿಮ ಭಾಗದ ಅರಣ್ಯದಲ್ಲಿವೆ. ಅವುಗಳಲ್ಲಿ ಹುಲಿ, ಕಾಡುಕೋಣ, ಚಿರತೆ, ಕರಡಿ, ಜಿಂಕೆ, ಕಾಡುಹಂದಿ, ಕಾಡುನಾಯಿ, ಹುಲಿಬೆಕ್ಕು ಮೊದಲಾದ ಪ್ರಾಣಿಗಳು ಮುಖ್ಯವಾದವು.

ಈ ಜಿಲ್ಲೆಯ ಮುಖ್ಯ ಕಸಬು ವ್ಯವಸಾಯ. ಪಶ್ಚಿಮ ಕರಾವಳಿಯಿಂದ ಬೀಸುವ ಮುಂಗಾರು ಮಾರುತಗಳು ಇಲ್ಲಿನ ವ್ಯವಸಾಯಕ್ಕೆ ಹೆಚ್ಚು ಅನುಕೂಲಕರವಾಗಿವೆ. ಈಶಾನ್ಯ ಮಾರುತಗಳಿಂದ ಜಿಲ್ಲೆಯ ಪೂರ್ವಭಾಗಕ್ಕೆ ಹಿಂಗಾರು ಮಳೆ ಸಾಧಾರಣವಾಗಿ ಬೀಳುತ್ತದೆ. ಇಲ್ಲಿನ ವ್ಯವಸಾಯ ಜಮೀನನ್ನು ಮಳೆಮಾರುತಗಳನ್ನವಲಂಬಿಸಿದ ಒಣಬೆಳೆಗಳು ಬೆಳೆಯುವ ಜಿರಾಯತ್ ಜಮೀನು, ಬಾಗಾಯ್ತು ಜಮೀನು, ನೀರಾವರಿ ಬೆಳೆ ಬೆಳೆಯುವ ಬತ್ತದ ಜಮೀನು ಎಂದು ವಿಂಗಡಿಸಬಹುದು.

ಈ ಜಿಲ್ಲೆಯಲ್ಲಿ ಪ್ರಾಚೀನ ಕಾಲದಲ್ಲಿ ಕಟ್ಟಿದ ಅನೇಕ ಕೆರೆಗಳು ಮತ್ತು ಜಲಾಶಯಗಳು ಇಂದೂ ಉಪಯುಕ್ತವಾಗಿವೆ. ಜಿಲ್ಲೆಯ ಪಶ್ಚಿಮಭಾಗದ ಮಲೆನಾಡು ಪ್ರದೇಶದಲ್ಲಿ ಮಳೆನೀರು ವ್ಯವಸಾಯಕ್ಕೆ ಒದಗುತ್ತದೆ. ಜಿಲ್ಲೆಯ ಮಧ್ಯಭಾಗದಲ್ಲಿ ಭೂಮಿಯಲ್ಲಿ ನೀರಿನ ಒರತೆಯಿರುವುದರಿಂದ ಬಾವಿ ನಿರ್ಮಾಣ ಸುಲಭ. ಅನೇಕ ಪುರಾತನ ಕೆರೆಗಳು ಮತ್ತು ಹೊಸ ಕೆರೆಗಳು ನೀರಾವರಿ ಸೌಲಭ್ಯವನ್ನು ಹೆಚ್ಚಿಸಿವೆ. ಮಲಪ್ರಭಾಬಲದಂಡೆ ಯೋಜನೆಯಿಂದ ನವಲಗುಂದ ಮತ್ತು ಹುಬ್ಬಳ್ಳಿ ತಾಲ್ಲೂಕುಗಳಿಗೆ ನೀರಾವರಿ ಒದಗಿದೆ. ಬತ್ತ, ಅಡಕೆ, ಕಬ್ಬು, ಬಾಳೆ, ವೀಳೆಯದೆಲೆ ಮುಂತಾದ ನೀರಾವರಿ ಬೆಳೆಗಳಿವೆ. ಜಿಲ್ಲೆಯಲ್ಲಿ ಒಟ್ಟು ನೀರಾವರಿಗೊಳಗಾದ ಪ್ರದೇಶ 39,652 ಹೆಕ್ಟೇರ್‌ಗಳು. ಅದರಲ್ಲಿ ಕಾಲುವೆಗಳಿಂದ 22,901 ಹೆಕ್ಟೇರುಗಳಿಗೆ ನೀರಾವರಿ ಒದಗುತ್ತದೆ(1998-19).

ಬತ್ತ ಮತ್ತು ಕಬ್ಬು ಈ ಜಿಲ್ಲೆಯ ಮಲೆನಾಡ ಭಾಗದ ಮುಖ್ಯ ಬೆಳೆಗಳು. ಧಾರವಾಡ ಮತ್ತು ಕಲಘಟಗಿ ತಾಲ್ಲೂಕುಗಳಲ್ಲಿ ಹೆಚ್ಚಾಗಿ ಬತ್ತ ಮತ್ತು ಕಬ್ಬನ್ನು ಬೆಳೆಯುವರು. ಜೋಳ ವಿಶೇಷವಾಗಿ ನವಲಗುಂದ, ಹುಬ್ಬಳ್ಳಿ, ಕುಂದಗೋಳ, ಧಾರವಾಡ ತಾಲ್ಲೂಕುಗಳ ಬೆಳೆ. ಗೋಧಿ, ಹೆಸರು, ಹುರುಳಿ, ಕಡಲೆ, ತೊಗರಿ ಮೊದಲಾದ ಬೆಳೆಗಳನ್ನು ಸಾಮಾನ್ಯವಾಗಿ ಜಿಲ್ಲೆಯ ಎಲ್ಲಾ ಭಾಗಗಳಲ್ಲೂ ಬೆಳೆಯುತ್ತಾರೆ. ಕುಸುಬೆ, ಎಳ್ಳು, ಜೌಡಲ - ಇವು ಜಿಲ್ಲೆಯ ಪೂರ್ವ ಭಾಗದಲ್ಲಿ ಬೆಳೆಯುತ್ತವೆ. ಕುಂದಗೋಳ ತಾಲ್ಲೂಕು ತಂಬಾಕು ಬೆಳೆಗೆ ಪ್ರಸಿದ್ಧ. ಜಿಲ್ಲೆಯ ಕಪ್ಪುಮಣ್ಣಿನ ಪ್ರದೇಶದಲ್ಲಿ ಹೆಚ್ಚಾಗಿ ಹತ್ತಿ ಬೆಳೆಯುವರು. ದ್ರಾಕ್ಷಿ, ಪೇರಲ, ಬೋರೆ, ಗೋಡಂಬಿ, ಮಾವು, ಬಾಳೆ, ನಿಂಬೆ ಮೊದಲಾದ ಹಣ್ಣುಗಳನ್ನೂ ಬದನೆ, ಬೆಂಡೆ, ಹೀರೆ, ಪಡುವಲ, ಬಟಾಟೆ, ಗೆಣಸು, ಈರುಳ್ಳಿ ಮುಂತಾದವನ್ನೂ ಈ ಜಿಲ್ಲೆಯಲ್ಲಿ ಬೆಳೆಯುತ್ತಾರೆ. ಪುಂಡಿ, ಸೆಣಬು, ಮೊದಲಾದ ನಾರಿನ ಬೆಳೆಗಳು ಈ ಜಿಲ್ಲೆಯಲ್ಲಿವೆ.

ಜಾನುವಾರುಗಳ ಅಭಿವೃದ್ಧಿಗೆ ಮತ್ತು ಹೈನುಗಾರಿಕೆಗೆ ವಿಶೇಷ

ಗಮನ ನೀಡಲಾಗಿದೆ. ಉತ್ತಮ ಎಮ್ಮೆ ರಾಸುಗಳಿಗೆ ಧಾರವಾಡ ಪ್ರಸಿದ್ಧ. ಜಿಲ್ಲೆಯಲ್ಲಿ 5 ಪಶುವೈದ್ಯ ಆಸ್ಪತ್ರೆಗಳೂ 16 ಚಿಕಿತ್ಸಾಲಯಗಳೂ 38 ಪ್ರಾಥಮಿಕ ಪಶುವೈದ್ಯ ಕೇಂದ್ರಗಳೂ ಇವೆ (2000). ಮೀನುಗಾರಿಕೆಗೂ ಪ್ರೋತ್ಸಾಹವಿದ್ದು 2000-01ರಲ್ಲಿ 2,010 ಮೆಟ್ರಿಕ್ ಟನ್ ಮೀನು ಹಿಡಿಯಲಾಗಿದೆ.

ಕೈಗಾರಿಕೆ: 2001ರ ಜನಗಣತಿಯ ಮೇರೆಗೆ ಜಿಲ್ಲೆಯಲ್ಲಿ ಗ್ರಾಮೀಣ ಜನಸಂಖ್ಯೆಗಿಂತ ನಗರವಾಸಿ ಜನಸಂಖ್ಯೆ ಅಧಿಕವಾಗಿದೆ. ಇದರಿಂದ ಜಿಲ್ಲೆ ಕೈಗಾರಿಕೆ ಮತ್ತು ಕೈಕಸುಬುಗಳಲ್ಲಿ ಪ್ರಗತಿ ಸಾಧಿಸಿರುವುದು ತಿಳಿದುಬರುತ್ತದೆ. ಹತ್ತಿ ಸಂಸ್ಕರಿಸುವ ಮತ್ತು ಬಟ್ಟೆ ತಯಾರಿಸುವ ಕೈಗಾರಿಕೆಗಳು ಪ್ರಮುಖವಾಗಿವೆ. ಎಣ್ಣೆತೆಗೆಯುವುದು, ಮುದ್ರಣ, ಬತ್ತದ ಗಿರಣಿಗಳು, ಮರ ಕೊಯ್ಯುವುದು ಮೊದಲಾದ ಉದ್ದೇಶಗಳಿಗಾಗಿ ಯಂತ್ರಗಳನ್ನು ಸ್ಥಾಪಿಸಲಾಗಿದೆ. ರೇಷ್ಮೆ, ಕೈಮಗ್ಗ, ಕಂಬಳಿ ನೇಯುವುದು, ಬೀಡಿ ಕಟ್ಟುವುದು, ಬಿದಿರುವಸ್ತುಗಳು, ತಾಮ್ರ ಮತ್ತು ಹಿತ್ತಾಳೆ ಪಾತ್ರೆಗಳು, ಅವಲಕ್ಕಿ ತಯಾರಿಕೆ, ಚರ್ಮಹದ ಮಾಡುವುದು ಮೊದಲಾದ ವಿವಿಧ ಉದ್ಯಮಗಳಲ್ಲಿ ಸಾವಿರಾರು ಜನರು ನಿರತರಾಗಿದ್ದಾರೆ.

ಧಾರವಾಡ-ಹುಬ್ಬಳ್ಳಿ ನಗರಸಭೆ ರಚನೆ ಈ ಜಿಲ್ಲೆಯ ಕೈಗಾರಿಕಾ ಬೆಳೆವಣಿಗೆಗೆ ಉತ್ತೇಜನಕಾರಿಯಾಗಿದೆ. ರಾಜ್ಯ ಸಣ್ಣ ಕೈಗಾರಿಕೆಗಳ ಕಾರ್ಪೋರೇಷನ್ ಮೂಲಕ ರಾಜ್ಯ ಸರ್ಕಾರ ಇವುಗಳಿಗೆ ಹಣಕಾಸಿನ ನೆರವು ನೀಡುತ್ತಿದೆ. ಹುಬ್ಬಳ್ಳಿಯಲ್ಲಿ ಪ್ರಮುಖ ರೈಲ್ವೆ ವರ್ಕ್‍ಷಾಪ್ ಮತ್ತು ವಿದ್ಯುತ್ ವಿತರಣಾ ಕೇಂದ್ರಗಳಿವೆ. ಇವೆಲ್ಲ ಈ ಜಿಲ್ಲೆಯ ಕೈಗಾರಿಕಾ ಬೆಳೆವಣಿಗೆಗೆ ಅನುಕೂಲಕರವಾಗಿವೆ.

ಹುಬ್ಬಳ್ಳಿ ಹತ್ತಿ ಉದ್ಯಮಕ್ಕೆ ಪ್ರಸಿದ್ಧ. ಇಲ್ಲಿ ಬಟ್ಟೆಯ ಕಾರ್ಖಾನೆಗಳೂ ನೂಲಿನ ಗಿರಣಿಗಳೂ ಇವೆ. ಹತ್ತಿ ಜಿನ್ನಿಂಗ್ ಕಾರ್ಖಾನೆಗಳಿವೆ. ಧಾರವಾಡ ಜಿಲ್ಲೆ ಕೈಮಗ್ಗದ ಬಟ್ಟೆಗೂ ಪ್ರಸಿದ್ಧ. ಖಾದಿ ಬಟ್ಟೆಗಳು ತಯಾರಾಗುತ್ತವೆ. ಧಾರವಾಡ, ನವಲಗುಂದಗಳು ಗುಡಾರಗಳ ತಯಾರಿಕೆಗೂ ಪ್ರಸಿದ್ಧವಾಗಿವೆ. ಕಂಬಳಿ ತಯಾರಿಕೆ ಉದ್ಯಮವಿದೆ. ನವಲಗುಂದದ ಜಮಖಾನೆಗಳು ಉತ್ತಮವೆಂದು ಹೆಸರು ಪಡೆದಿದೆ. ಹುಬ್ಬಳ್ಳಿ ಹಿತ್ತಾಳೆ ಪಾತ್ರೆಗಳ ತಯಾರಿಕೆಗೆ ಪ್ರಸಿದ್ಧ. ಗ್ರಾಮೋದ್ಯೋಗಗಳಾದ ಗಾಣದ ಎಣ್ಣೆ, ಸೋಪು, ಚರ್ಮ ಹದಮಾಡುವುದು, ಖಾದಿ ಬಟ್ಟೆ ತಯಾರಿಕೆ ಮುಂತಾದವು ಧಾರವಾಡ, ಹುಬ್ಬಳ್ಳಿಗಳಲ್ಲಿವೆ. ಕುಟ್ಟಿದ ಅಕ್ಕಿ ಮತ್ತು ಅವಲಕ್ಕಿ ತಯಾರಿಕೆ ಮಿಶ್ರಿಕೋಟೆಯಲ್ಲಿ ಹೆಚ್ಚು. ಮರಗೆಲಸ, ಮರದ ಆಟದ ಸಾಮಾನುಗಳ ತಯಾರಿಕೆ ಕೆಲವೆಡೆ ಇದೆ. ಧಾರವಾಡದಲ್ಲಿ ಪ್ಲೈವುಡ್ ಕಾರ್ಖಾನೆ ಇದೆ. ಅಳಣಾವರದಲ್ಲಿ ಬಿದಿರಿನ ವಸ್ತುಗಳ ತಯಾರಿಕೆಯುಂಟು. ಮರ ಕೊಯ್ಯುವ ಕಾರ್ಖಾನೆಗಳು ಧಾರವಾಡ, ಹುಬ್ಬಳ್ಳಿ, ಅಳಣಾವರ, ಕಲಘಟಗಿಗಳಲ್ಲಿವೆ.

ಆಧುನಿಕವಾದ ಸಾಮಾನ್ಯ ಯಂತ್ರೋಪಕರಣ ತಯಾರಿಸುವ ಮತ್ತು ದುರಸ್ತಿ ಮಾಡುವ ಕೈಗಾರಿಕಾ ಘಟಕಗಳು ಹುಬ್ಬಳ್ಳಿ, ಧಾರವಾಡಗಳಲ್ಲಿ ಹೆಚ್ಚಿವೆ. ಕಾಲುಚೀಲ ಮುಂತಾದವನ್ನು ತಯಾರಿಸುವ ಕಾರ್ಖಾನೆ ಹುಬ್ಬಳ್ಳಿಯಲ್ಲಿವೆ. ಧಾರವಾಡ, ಹುಬ್ಬಳ್ಳಿಗಳಲ್ಲಿ ಮುದ್ರಣಾಲಯಗಳಿದ್ದು ಅದಕ್ಕೆ ಸಂಬಂಧಿಸಿದ ಉದ್ದಿಮೆಗಳಿವೆ. ಸುಣ್ಣ, ಗಂಧದ ಕಡ್ಡಿ, ಹೊಗೆಸೊಪ್ಪಿನಿಂದ ನಸ್ಯ ಮತ್ತು ಬೀಡಿ ಇವುಗಳ ತಯಾರಿಕೆಯುಂಟು. ಜಿಲ್ಲೆಯಲ್ಲಿ ಪ್ರಸಿದ್ಧ ಕಿರ್ಲೋಸ್ಕರ್ ವಿದ್ಯುತ್ ಕಾರ್ಖಾನೆ, ಎ.ಕೆ. ಇಂಡಿಸ್ಟ್ರೀಸ್ ಸಿಮೆಂಟ್ ವಸ್ತು ತಯಾರಿಕಾ ಕಾರ್ಖಾನೆ, ಸುಂದತ್ತಾ ಆಹಾರ ಮತ್ತು ನೂಲಿನ ವಸ್ತುಗಳ ತಯಾರಿಕಾ ಕಾರ್ಖಾನೆ ಹುಬ್ಬಳ್ಳಿಯಲ್ಲೂ ಟೈವಾಕ್ ಗಡಿಯಾರದ ಕಾರ್ಖಾನೆ, ರಟ್ಟು ಮತ್ತು ಕ್ಯಾಲಿಕಾರ್ಟ್ ತಯಾರಿಕಾ ಕಾರ್ಖಾನೆ ಧಾರವಾಡದಲ್ಲೂ ಇವೆ. ತಿಜೋರಿ, ಕಪಾಟು, ಕುರ್ಚಿ, ಟೇಬಲ್ ಮುಂತಾದವುಗಳ ತಯಾರಿಕೆ ಹುಬ್ಬಳ್ಳಿ, ಧಾರವಾಡಗಳಲ್ಲಿ ಹೆಚ್ಚು. ಜಿಲ್ಲೆಯಲ್ಲಿ ಒಟ್ಟು 427 ಕಾರ್ಖಾನೆಗಳಿವೆ. ಒಟ್ಟು ಉದ್ಯೋಗಿಗಳ ಸಂಖ್ಯೆ 44,190; ಕೈಗಾರಿಕಾ ಪ್ರದೇಶಗಳು 5; ಕೈಗಾರಿಕಾ ಶೆಡ್ಡುಗಳು 524.

ಧಾರವಾಡ ಜಿಲ್ಲೆ, ವ್ಯಾಪಾರ-ವಾಣಿಜ್ಯಕ್ಕೆ ಪ್ರಸಿದ್ಧ. ಉತ್ತರ ಕರ್ನಾಟಕದ ಪ್ರಮುಖ ರೈಲ್ವೆ ಜಂಕ್ಷನ್ ಹುಬ್ಬಳ್ಳಿಯಲ್ಲಿದ್ದು ಮುಂಬಯಿ, ಪುಣೆ, ಬೆಂಗಳೂರು, ಗುಂತಕಲ್ಲು ಮೊದಲಾದ ಸ್ಥಳಗಳಿಗೆ ನೇರ ರೈಲ್ವೆ ಸಂಪರ್ಕ ಇದೆ. ಹತ್ತಿ ಕೈಮಗ್ಗದ ಬಟ್ಟೆಗಳು, ಅಡಕೆ, ನೆಲಗಡಲೆ, ಮೆಣಸಿನಕಾಯಿ, ಗೋಧಿ, ನವಣೆ, ಜೋಳ, ಚರ್ಮ, ಕಚ್ಚಾ ಎಣ್ಣೆ, ನಾಟಾ, ಲೋಹದ ಪಾತ್ರೆಗಳು ಮತ್ತು ಕೆಲವು ಉಪಕರಣಗಳು ಈ ಜಿಲ್ಲೆಯ ಪ್ರಮುಖ ರಫ್ತು ವಸ್ತುಗಳಾಗಿವೆ. ಮನೆ ಕಟ್ಟುವ ಸಾಮಗ್ರಿಗಳು, ಲೋಹದ ಉಪಕರಣಗಳು, ಯಂತ್ರಗಳು, ಔಷಧಿ, ಇಂಧನ, ದಿನಬಳಕೆ ಸಾಮಗ್ರಿಗಳು, ಅಲಂಕಾರ ವಸ್ತುಗಳು, ಏಲಕ್ಕಿ, ಕಾಫಿಬೀಜ, ಹೊಗೆಸೊಪ್ಪು ಮೊದಲಾದವು ಹೆಚ್ಚಾಗಿ ಹೊರಗಡೆಯಿಂದ ಬರುತ್ತವೆ. ಧಾರವಾಡ ಹುಬ್ಬಳ್ಳಿ ನಗರಗಳು ಬೆಳೆಯುತ್ತಿರುವಂತೆಯೇ ಜಿಲ್ಲೆಯ ವಾಣಿಜ್ಯ ಚಟುವಟಿಕೆಯೂ ಹೆಚ್ಚುತ್ತಿದೆ.

ಜಿಲ್ಲೆಯಲ್ಲಿ ನಿಯಂತ್ರಿತ ಮಾರುಕಟ್ಟೆಗಳಿದ್ದು ವಾಣಿಜ್ಯ ವ್ಯಾಪಾರಗಳಿಗೆ ಸಂಬಂಧಿಸಿದಂತೆ ವಿವಿಧ ಸಂಸ್ಥೆಗಳು ಸ್ಥಾಪಿತವಾಗಿವೆ. ಹುಬ್ಬಳ್ಳಿಯಲ್ಲಿರುವ ಚೇಂಬರ್ ಆಫ್ ಕಾಮರ್ಸ್ ಸಂಸ್ಥೆ ವಿವಿಧ ಚಟುವಟಿಕೆಗಳಲ್ಲಿ ಬಹುಮುಖ್ಯ ಪಾತ್ರ ವಹಿಸುತ್ತಿದೆ. ಜಿಲ್ಲೆಯಲ್ಲಿ ಹಣಕಾಸು ಮತ್ತು ಬ್ಯಾಂಕಿಂಗ್‍ಗೆ ಸಂಬಂಧಿಸಿದ ವಿವಿಧ ಸಂಸ್ಥೆಗಳಿವೆ. ಕರ್ನಾಟಕ ರಾಜ್ಯ ಹಣಕಾಸು ಕಾರ್ಪೋರೇಷನ್ನು ವಿವಿಧ ಸಂಘ ಸಂಸ್ಥೆಗಳಿಗೆ ಮತ್ತು ಕೈಗಾರಿಕೆಗಳಿಗೆ ಹಣಕಾಸಿನ ನೆರವೀಯುತ್ತದೆ. ಜಿಲ್ಲೆಯಲ್ಲಿ 144 ವಾಣಿಜ್ಯ ಬ್ಯಾಂಕುಗಳೂ 45 ಗ್ರಾಮೀಣ ಬ್ಯಾಂಕುಗಳೂ ಇವೆ. ಇವಲ್ಲದೆ ಕೃಷಿ ಸಾಲ ನೀಡಿಕೆ ಸಹಕಾರ ಸಂಘಗಳು. ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳಿವೆ. ಕೇಂದ್ರ ಸಹಕಾರಿ ಬ್ಯಾಂಕುಗಳ ಶಾಖಾ ಕಚೇರಿಗಳಿವೆ.

ಪುಣೆ-ಬೆಂಗಳೂರು ರಾಷ್ಟ್ರೀಯ ಹೆದ್ದಾರಿ ಈ ಜಿಲ್ಲೆಯ ಮೂಲಕ ಹಾದುಹೋಗಿದೆ. ಕಾರವಾರ-ಬಳ್ಳಾರಿ ರಾಜ್ಯ ಹೆದ್ದಾರಿ; ಕುಮಟ-ಹುಬ್ಬಳ್ಳಿ, ಸೊಲ್ಲಾಪುರ-ಹುಬ್ಬಳ್ಳಿ, ಧಾರವಾಡ-ಗೋವ ಮೊದಲಾದ ರಸ್ತೆಗಳು ಈ ಜಿಲ್ಲೆಯೊಂದಗೆ ಹೊರಗಿನ ಸಂಪರ್ಕ ಕಲ್ಪಿಸುವ ಕೆಲವು ಮುಖ್ಯ ಮಾರ್ಗಗಳಾಗಿವೆ. 143 ಕಿಮೀ ರಾಷ್ಟ್ರೀಯ ಹೆದ್ದಾರಿ ಹಾಗೂ 163 ಕಿಮೀ ರಾಜ್ಯ ಹೆದ್ದಾರಿ 599 ಕಿಮೀ ಜಿಲ್ಲಾ ಮುಖ್ಯ ರಸ್ತೆಗಳಿವೆ. ತಾಲ್ಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿಗಳು ಗ್ರಾಮಾಂತರ ಪ್ರದೇಶದಲ್ಲಿ ರಸ್ತೆ ಮಾರ್ಗಗಳ ಅಭಿವೃದ್ಧಿಗೆ ಹೆಚ್ಚಿನ ಒತ್ತು ನೀಡಿವೆ. ಬೆಂಗಳೂರು-ಪುಣೆ ರೈಲುಮಾರ್ಗ ಈ ಜಿಲ್ಲೆಯಲ್ಲಿ ಹಾದುಹೋಗುತ್ತವೆ. ಹುಬ್ಬಳ್ಳಿಯಿಂದ ಗುಂತಕಲ್ಲು ಸೊಲ್ಲಾಪುರ ಗೋವಾ ಕಡೆಗಳಿಗೆ ರೈಲು ಮಾರ್ಗಗಳಿವೆ. ಹುಬ್ಬಳ್ಳಿ ಕರ್ನಾಟಕದ ದೊಡ್ಡ ಜಂಕ್ಷನ್‍ಗಳಲ್ಲೊಂದಾಗಿದೆ. ಜಿಲ್ಲೆಯಲ್ಲಿ ಒಟ್ಟು 82 ಕಿಮೀ ಬ್ರಾಡ್‍ಗೇಜ್ ರೈಲು ಮಾರ್ಗವಿದೆ.

ಧಾರವಾಡ ಜಿಲ್ಲೆ ಶಿಕ್ಷಣದಲ್ಲಿ ಮಹತ್ತರ ಪ್ರಗತಿ ಸಾಧಿಸಿದೆ. ಉತ್ತರ ಕರ್ನಾಟಕದಲ್ಲಿ ಪ್ರಪ್ರಥಮವಾಗಿ ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ 1950ರಲ್ಲಿ ಸ್ಥಾಪನೆಯಾಯಿತು. ಧಾರವಾಡದಲ್ಲಿ ಕರ್ನಾಟಕ ಕಾಲೇಜು, ಕೃಷಿ ಶಿಕ್ಷಣ ಕಾಲೇಜು, ವಿವಿಧ ತಾಂತ್ರಿಕ ಶಿಕ್ಷಣ ಕಾಲೇಜುಗಳಿವೆ. 1986ರಲ್ಲಿ ಸ್ಥಾಪಿತವಾದ ರಾಜ್ಯದ ಎರಡನೆಯ ಕೃಷಿ ವಿಶ್ವವಿದ್ಯಾನಿಲಯದ ಕೇಂದ್ರ ಧಾರವಾಡದಲ್ಲಿದೆ. ಹುಬ್ಬಳ್ಳಿಯಲ್ಲಿ ವೈದ್ಯಕೀಯ ಕಾಲೇಜಿದೆ. ಧರ್ಮಸ್ಥಳದ ಶಿಕ್ಷಣ ಟ್ರಸ್ಟ್ ನಡೆಸುವ ದಂತ ವೈದ್ಯ ಕಾಲೇಜಿದೆ. ಶಿಕ್ಷಣ ತರಬೇತಿಯೂ ಸೇರಿದಂತೆ ವೃತ್ತಿ ಮತ್ತು ವಿಶೇಷ ಶಿಕ್ಷಣ ಶಾಲೆಗಳಿವೆ. 2 ಪಾಲಿಟೆಕ್ನಿಕ್‍ಗಳಿವೆ. ವಿಶ್ವವಿದ್ಯಾಲಯ ಕಾಲೇಜುಗಳೂ ಸೇರಿದಂತೆ ಕಲಾ ಮತ್ತು ವಿಜ್ಞಾನ ಕಾಲೇಜುಗಳು ಒಂದು ಆಯುರ್ವೇದ ಕಾಲೇಜು ಮತ್ತು ಒಂದು ನ್ಯಾಯ ಶಿಕ್ಷಣ ಕಾಲೇಜು, ವಾಣಿಜ್ಯ ಕಾಲೇಜುಗಳು ಮತ್ತು ಕೈಗಾರಿಕಾ ತರಬೇತಿ ಸಂಸ್ಥೆಗಳೂ ಇವೆ. ಈ ಜಿಲ್ಲೆಯಲ್ಲಿ ಒಟ್ಟು ಸಾಕ್ಷರತೆ ಸೇಕಡ 71.87. ಪುರುಷರಲ್ಲಿ ಸೇಕಡ 81.04 ರಷ್ಟಿದ್ದರೆ ಮಹಿಳೆಯರಲ್ಲಿ ಸೇಕಡ 62.20 ಸಾಕ್ಷರಸ್ಥರಿದ್ದಾರೆ. ಉತ್ತರ ಕರ್ನಾಟಕ ಭಾಗದಲ್ಲಿ ಧಾರವಾಡ ಜಿಲ್ಲೆ ಉನ್ನತ ಶಿಕ್ಷಣಕ್ಕೆ ಕೇಂದ್ರ ಸ್ಥಾನವಾಗಿದ್ದು ಇಲ್ಲಿನ ವಿವಿಧ ಶಿಕ್ಷಣ ಸಂಸ್ಥೆಗಳ ಸ್ಥಾಪನೆಯಲ್ಲಿ

ಅನೇಕ ಸಾರ್ವಜನಿಕ ಸಂಘಗಳು ಮತ್ತು ಧಾರ್ಮಿಕ ಸಂಸ್ಥೆಗಳು ಮಹತ್ತರ ಪಾತ್ರವಹಿಸಿವೆ.

ಧಾರವಾಡ ಜಿಲ್ಲೆಯಲ್ಲಿ ಅನೇಕ ಐತಿಹಾಸಿಕ ಹಾಗೂ ಧಾರ್ಮಿಕ ಮಹತ್ತ್ವದ ಸ್ಥಳಗಳಿವೆ. ಅವುಗಳಲ್ಲಿ ಅಣ್ಣಿಗೇರಿ, ಅಬ್ಬಲೂರು, ಅಮ್ಮಿನಬಾವಿ, ನವಲಗುಂದ, ಕುಂದಗೋಳ, ಉಣಕಲ್, ಯಮನೂರು, ಹೆಬ್ಬಿ, ಹುಬ್ಬಳ್ಳಿ, ಕುಸುಗಲ್ಲು, ಮೂಗಡ, ಛೆಬ್ಬಿ, ಕುಂದೂರು, ಅಮರಗೋಳ ಮುಖ್ಯವಾದವು. ಈ ಕೆಲವು ಊರುಗಳಲ್ಲಿ ಪುರಾತನ ದೇವಾಲಯಗಳೂ ಇವೆ. ಧಾರವಾಡ, ಹುಬ್ಬಳ್ಳಿ, ಕುಂದಗೋಳ, ಕಲಘಟಗಿ, ನವಲಗುಂದ - ಇವು ಪ್ರಮುಖ ವ್ಯಾಪಾರ ಕೇಂದ್ರಗಳು. (ಡಿ.ಎಸ್.ಜೆ., ಎಸ್.ಎಸ್.ಬಿ.)

ಧಾರವಾಡ ಜಿಲ್ಲೆ ಬಹು ಪ್ರಾಚೀನ ಕಾಲದಿಂದ ಜನವಸತಿಯನ್ನು ಹೊಂದಿದ್ದ ಪ್ರದೇಶ. ತುಂಗಭದ್ರಾ, ವರದಾ ಮತ್ತು ಮಲಪ್ರಭಾ ನದಿಗಳು ಪ್ರಾಗೈತಿಹಾಸಿಕ ಕಾಲದಿಂದಲೂ ಜನವಸತಿಗೆ ಪ್ರೋತ್ಸಾಹಕಾರಿಯಾಗಿವೆ. ಈ ಜಿಲ್ಲೆಯಲ್ಲಿನ ಧಾರವಾಡ ತಾಲ್ಲೂಕಿನ ಬೆಣಚಮಟ್ಟಿ ಮೊದಲಾದ ಸ್ಥಳಗಳಲ್ಲಿ ಪುರಾತನ ಶಿಲಾಯುಗದ ಆದಿಭಾಗದಲ್ಲಿ ಪ್ರಚಲಿತವಾಗಿದ್ದ ಅಬೆವಿಲ್ಲಿಯನ್, ಅಶೂಲಿಯನ್ ಶಿಲಾಯುಧಗಳು ದೊರಕಿವೆ.

ನವಶಿಲಾಯುಗದ ಸಂಸ್ಕೃತಿಗಳಿಗೆ ಸಂಬಂಧಿಸಿದ ಅನೇಕ ನೆಲೆಗಳು ನವಲಗುಂದ ತಾಲ್ಲೂಕಿನ ಗುಡಿಸಾಗರ ಮೊದಲಾದ ಸ್ಥಳಗಳಲ್ಲಿ ಬೆಳಕಿಗೆ ಬಂದಿವೆ. ಇವುಗಳಲ್ಲಿ ದಕ್ಷಿಣ ಭಾರತದ ನವಶಿಲಾ ಸಂಸ್ಕೃತಿಯ ಸಾಮಾನ್ಯ ಕುರುಹುಗಳಾದ ಉಜ್ಜಿ ನಯಮಾಡಿದ ಕಲ್ಲಿನ ಕೊಡಲಿ ಮತ್ತು ಇತರ ಆಯುಧಗಳು, ಕಂದುಬಣ್ಣದ ಮಡಕೆಗಳು ಹಾಗೂ ಕೆಲವೆಡೆ ಚಿಕ್ಕ ಚಿಕ್ಕ ಕಲ್ಲಿನ ಚಾಕು ಮತ್ತು ಒರೆಗಳು ದೊರಕಿವೆ. ಇದೇ ಸಂಸ್ಕೃತಿಯ ಮುಂದಿನ ಘಟ್ಟದ ಶಿಲಾ ತಾಮ್ರಯುಗದ ಸಂಸ್ಕೃತಿಯ ಕೆಲವು ನೆಲೆಗಳೂ ಈ ಜಿಲ್ಲೆಯಲ್ಲಿವೆ. ಅವಿಭಜಿತ ಧಾರವಾಡ ಜಿಲ್ಲೆಯ ಉಣಚಗೇರಿ, ಹಿರೇತಾಳ, ಬುಡಪನಹಳ್ಳಿ ಮೊದಲಾದೆಡೆ ಬೃಹತ್ ಶಿಲಾಯುಗದ ಸಂಸ್ಕೃತಿ ಮತ್ತು ತಾಮ್ರ ಯುಗದ ಸಂಸ್ಕೃತಿಯ ನೆಲೆಗಳು ಕಂಡುಬಂದಿದ್ದು ಈ ಪ್ರದೇಶದ ಪುರಾತನ ನೆಲೆಸಿಕೆಗಳಿಗೆ ಸಾಕ್ಷಿಯಾಗಿವೆ.

ಆದಿಚಾರಿತ್ರಿಕ ಕಾಲದ ಹೊತ್ತಿಗೆ ಧಾರವಾಡ ಜಿಲ್ಲೆಯ ಅನೇಕ ಭಾಗಗಳಲ್ಲಿ ಗ್ರಾಮಗಳು ಬಹುಸಂಖ್ಯೆಯಲ್ಲಿ ಹುಟ್ಟಿಕೊಂಡಿದ್ದುವು. ಇವೆಲ್ಲ ಸಾತವಾಹನ ಆಳ್ವಿಕೆಯ ಕಾಲದಲ್ಲಿದ್ದು ತತ್ಕಾಲದಲ್ಲಿ ಪ್ರಚಲಿತವಾಗಿದ್ದ ಸುದ್ದೆ ಅಲಂಕರಣವಿರುವ ಕೆಂಪು ಮಡಕೆಗಳು, ಗಾಜಿನ ಮಣಿಗಳು, ರೋಮನ್ ಮೂಲದ ರೂಲೆಟೆಡ್ ಇತ್ಯಾದಿ ಮಡಕೆಗಳು ಮುಂತಾದ ವಸ್ತು ದೊರಕಿರುವ ಅನೇಕ ನೆಲೆಗಳನ್ನು ಈ ಜಿಲ್ಲೆಯಲ್ಲಿ ಕಂಡುಹಿಡಿಯಲಾಗಿದೆ.

ಮೌರ್ಯರು ಮತ್ತು ಸಾತವಾಹನರ ಕಾಲದಿಂದ ಈ ಜಿಲ್ಲೆಯ ಇತಿಹಾಸ ಪ್ರಾರಂಭವಾಗುತ್ತದೆ. ಅನಂತರ ಬನವಾಸಿಯ ಕದಂಬರು, ಬಾದಾಮಿಯ ಚಳುಕ್ಯರು, ರಾಷ್ಟ್ರಕೂಟ, ಕಲ್ಯಾಣದ ಚಾಳುಕ್ಯ, ಕಳಚುರಿ ಮತ್ತು ಯಾದವ ವಂಶಗಳವರ ಆಳ್ವಿಕೆಗೆ ಅನುಕ್ರಮವಾಗಿ ಒಳಪಟ್ಟಿದ್ದು ಅನಂತರ ವಿಜಯನಗರದ ಅರಸರ ಆಶ್ರಯಕ್ಕೆ ಬಂತು. ವಿಜಯನಗರ ಕಾಲದಲ್ಲಿ ಧಾರವಾಡ ಜಿಲ್ಲೆಯ ನವಲಗುಂದ ಮುಂತಾದ ಪ್ರದೇಶಗಳು ಆಗಾಗ್ಗೆ ವಿಜಯನಗರಕ್ಕೂ ಬಹಮನಿ ರಾಜ್ಯಕ್ಕೂ ಕೈ ಬದಲಾಯಿಸುತ್ತಿದ್ದುವು. ಸು. 1575 ರಿಂದ ಈ ಪ್ರದೇಶ ಆದಿಲ್‌ಶಾಹೀ ಅರಸರ ಕೈಸೇರಿತು. 1686-1820ರ ಅವಧಿಯಲ್ಲಿ ಮುಗಲರ ವಶದಲ್ಲಿತ್ತು. ಆಗ ಅಬ್ದುಲ್ ರಹೂಫ್ ಎಂಬುವನು ಈ ಪ್ರದೇಶದಲ್ಲಿ ಆಳುತ್ತಿದ್ದು ಅನಂತರ ತನ್ನ ರಾಜಧಾನಿಯನ್ನು ಸವಣೂರಿಗೆ ವರ್ಗಾಯಿಸಿದ. ಈ ಕಾಲದಲ್ಲಿ ನವಲಗುಂದ, ಮೊದಲಾದೆಡೆಗಳಲ್ಲಿ ದೇಸಾಯರ ಮನೆತನಗಳು ಅಧಿಕಾರದಲ್ಲಿದ್ದುವು. 1707ರಲ್ಲಿ ಔರಂಗಜೇಬ ಮರಣಹೊಂದುತ್ತಿದ್ದಂತೆ ಕೊಲ್ಲಾಪುರ ಮತ್ತು ಸಾತಾರಾದ ಮರಾಠ ಪ್ರಭುಗಳು ತಮ್ಮ ಪ್ರಭಾವವನ್ನು ಹಬ್ಬಿಸಲು ಆರಂಭಿಸಿದರು. 1720 ರಿಂದ 1818ರ ಅವಧಿಯಲ್ಲಿ ಅನೇಕ ಮರಾಠ ಸರದಾರರು ಮರಾಠ ಪೇಶ್ವೆಗಳ ಅಧೀನದಲ್ಲಿ ಆಡಳಿತ ನಿರ್ವಹಿಸುತ್ತಿದ್ದರು. ಈ ಮಧ್ಯದಲ್ಲಿ ಜಿಲ್ಲೆಯ ಹಲವು ಭಾಗಗಳು ನಾಮತಃ ಹೈದರಾಬಾದಿನ ನಿಜಾಮರ ಅಧೀನದಲ್ಲಿದ್ದುವು. ಈ ಕಾಲದಲ್ಲಿ ಸವಣೂರು ನವಾಬರು ಒಂದು ಮುಖ್ಯ ಪ್ರಭುತ್ವಶಕ್ತಿಯಾಗಿ ತಲೆಯೆತ್ತಿದ್ದರು. ಅಲ್ಲದೆ ಇದೇ ಕಾಲದಲ್ಲಿ ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನ್ ಸಹ ಧಾರವಾಡ ಪ್ರಾಂತ್ಯದ ಮೇಲೆ ಆಗಾಗ್ಗೆ ದಾಳಿ ನಡೆಸಿ ಸವಣೂರು ಮೊದಲಾದ ಕೆಲವು ಭಾಗಗಳನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡಿದ್ದರು. 1799ರಲ್ಲಿ ಟಿಪ್ಪುವಿನ ಪತನವಾದ ಅನಂತರ ಧಾರವಾಡ ಜಿಲ್ಲೆಯ ಪ್ರದೇಶ ಮರಾಠರ ಅಧೀನಕ್ಕೆ ಬಂತು. ಅನಂತರ 1817-18ರಲ್ಲಿ ಜನರಲ್ ಮನ್ರೋನ ಕಾರ್ಯಾಚರಣೆಗಳಿಂದ ಈ ಭಾಗದಲ್ಲಿ ಮರಾಠರ ಆಳ್ವಿಕೆ ಪೂರ್ಣವಾಗಿ ಕೊನೆಗೊಂಡು ಜಿಲ್ಲೆಯ ಭಾಗವೆಲ್ಲಾ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತು. 1818 ರಿಂದ 1830ರ ವರೆಗೆ ಬ್ರಿಟಿಷ್ ಮಿಲಿಟರಿ ನಾಯಕರು ಇಲ್ಲಿ ಪ್ರಭುತ್ವ ನಡೆಸುತ್ತಿದ್ದು ಈ ಭಾಗದ ಆಡಳಿತ ಮದರಾಸು ಪ್ರಾಂತ್ಯಕ್ಕೆ ಅಥವಾ ಮುಂಬಯಿ ಪ್ರಾಂತಕ್ಕೆ ಸೇರಬೇಕೆ ಎಂಬ ಬಗ್ಗೆ ಚರ್ಚೆಗಳಾಗುತ್ತಿದ್ದುವು. ಧಾರವಾಡ ಪೊಲಿಟಿಕಲ್ ಏಜೆಂಟ್ ಮತ್ತು ಕಲೆಕ್ಟರ್ ಆಗಿದ್ದ ಥ್ಯಾಕರೆ 1824ರಲ್ಲಿ ಕಿತ್ತೂರು ರಾಜ್ಯವನ್ನು ವಶಪಡಿಸಿಕೊಳ್ಳಲು ಕಿತ್ತೂರಿಗೆ ದಾಳಿ ಇಟ್ಟಾಗ ಗುಂಡಿಗೆ ಬಲಿಯಾದನು.

1830ರಲ್ಲಿ ಧಾರವಾಡ ಜಿಲ್ಲೆ ರಚನೆಯಾಗಿ, ಈಸ್ಟ್ ಇಂಡಿಯ ಕಂಪನಿಯ ಡೈರೆಕ್ಟರುಗಳ ತೀರ್ಮಾನದಂತೆ ಇದನ್ನು ಮುಂಬಯಿ ಪ್ರಾಂತ್ಯಕ್ಕೆ ಸೇರಿಸಲಾಯಿತು. ಅಂದಿನ ಧಾರವಾಡ ಜಿಲ್ಲೆ ಈಗಿನ ಜಿಲ್ಲಾ ಪ್ರದೇಶವಲ್ಲದೆ ಇಂದಿನ ಬೆಳಗಾಂವಿ, ಬಿಜಾಪುರ, ಸೊಲ್ಲಾಪುರ ಜಿಲ್ಲೆಗಳ ಹಲವು ಪ್ರದೇಶಗಳನ್ನೂ ಒಳಗೊಂಡಿತ್ತು. 1836ರಲ್ಲಿ ಬೆಳಗಾಂವಿ ಪ್ರತ್ಯೇಕ ಜಿಲ್ಲೆಯಾಯಿತು. 1857-58ರಲ್ಲಿ ನರಗುಂದದ ಬಾಬಾಸಾಹೇಬ, ಮುಂಡರಗಿ ಭೀಮರಾವ್ ಇವರುಗಳ ನೇತೃತ್ವದಲ್ಲಿ ನಡೆದ ಕ್ರಾಂತಿ ಈ ಕಾಲದ ಬಹು ಮುಖ್ಯ ಘಟನೆ. ಅನಂತರ ಜಿಲ್ಲೆಯಲ್ಲಿ ಬ್ರಿಟಿಷರ ಆಳ್ವಿಕೆ ಸ್ಥಿರವಾಗಿ ನೆಲೆಸಿ, ಬ್ರಿಟಿಷ್ ರೀತಿಯ ಆಡಳಿತಕ್ರಮ, ಇಂಗ್ಲಿಷ್ ವಿದ್ಯಾಭ್ಯಾಸ ಮೊದಲಾದ ಹಲವು ಚಟುವಟಿಕೆಗಳು ಬೆಳೆದುವು. ಜಿಲ್ಲೆ ಪೂರ್ಣವಾಗಿ ಮುಂಬಯಿ ಪ್ರಾಂತ್ಯದ ಭಾಗವಾಗಿದ್ದ ಆಡಳಿತ ಘಟಕವಾಗಿದ್ದರೂ ರಾಮದುರ್ಗ ಮೊದಲಾದ ಚಿಕ್ಕ ಸಂಸ್ಥಾನಗಳೂ ಇಲ್ಲಿ ಅಸ್ತಿತ್ವದಲ್ಲಿದ್ದು, 1949 ಆಗಸ್ಟ್ 1ರಂದು ಹಿಂದಿನ ಹಿರಿಯ ಮಿರಜ ಸಂಸ್ಥಾನದ 15 ಗ್ರಾಮ ಮತ್ತು 2 ಪಟ್ಟಣಗಳೂ ಜಮಖಂಡಿ ರಾಜ್ಯದ 17 ಗ್ರಾಮ ಮತ್ತು 3 ಪಟ್ಟಣಗಳೂ ಕಿರಿಯ ಮಿರಜ ಸಂಸ್ಥಾನದ 72 ಗ್ರಾಮಗಳು ಮತ್ತು ಒಂದು ಪಟ್ಟಣವೂ ರಾಮದುರ್ಗ ರಾಜ್ಯದ 7 ಗ್ರಾಮಗಳೂ ಧಾರವಾಡ ಜಿಲ್ಲೆಗೆ ಸೇರಿದವು. ಅದೇ ಕಾಲದಲ್ಲಿ ರಾಮದುರ್ಗ ತಾಲ್ಲೂಕಿಗೆ ಧಾರವಾಡ ಜಿಲ್ಲೆಯ 3 ಗ್ರಾಮಗಳನ್ನೂ ಹೈದರಾಬಾದು ರಾಜ್ಯಕ್ಕೆ 4 ಗ್ರಾಮಗಳನ್ನೂ ವರ್ಗಾಯಿಸಲಾಯಿತು. ಹೈದರಾಬಾದು ರಾಜ್ಯದಿಂದ 10 ಗ್ರಾಮಗಳನ್ನು ಧಾರವಾಡ ಜಿಲ್ಲೆಗೆ ಸೇರಿಸಲಾಯಿತು. 1962ರಲ್ಲಿ ಧಾರವಾಡ ಹುಬ್ಬಳ್ಳಿ ಪಟ್ಟಣಗಳನ್ನು ಸೇರಿಸಿ ಮಹಾನಗರವೆಂದು ಪರಿಗಣಿಸಲಾಯಿತು. 1969ರಲ್ಲಿ ಹಾವೇರಿ ತಾಲ್ಲೂಕಿನ 21 ಗ್ರಾಮಗಳನ್ನೂ ಮತ್ತು ಶಿಗ್ಗಾಂವಿ ತಾಲ್ಲೂಕಿನ 37 ಗ್ರಾಮಗಳನ್ನೂ ಸೇರಿಸಿ ಸವಣೂರು ತಾಲ್ಲೂಕನ್ನು ರಚಿಸಲಾಯಿತು. 1971ರಲ್ಲಿ ಅಳಣಾವರ ಮತ್ತು ಶಿಗ್ಗಾಂವಿಗಳನ್ನು ಪಟ್ಟಣಗಳೆಂದು ಪರಿಗಣಿಸಾಲಗಿ ಧಾರವಾಡ ಜಿಲ್ಲೆ ಮೊದಲಿನ ಸ್ವರೂಪ ಪಡೆಯಿತು. 1997ರಲ್ಲಿ ಜಿಲ್ಲಾ ಪುನರ್ವಿಂಗಡನೆಯಾದಾಗ ವಿಸ್ತೀರ್ಣದಲ್ಲಿ ಚಿಕ್ಕದಾಯಿತು.

ತಾಲ್ಲೂಕು : ಜಿಲ್ಲೆಯ ವಾಯುವ್ಯ ಭಾಗದಲ್ಲಿರುವ ಈ ತಾಲ್ಲೂಕಿನ ಪೂರ್ವದಲ್ಲಿ ನವಲಗುಂದ ಮತ್ತು ಹುಬ್ಬಳ್ಳಿ, ದಕ್ಷಿಣದಲ್ಲಿ ಕಲಘಟಗಿ, ಈ ತಾಲ್ಲೂಕುಗಳೂ ಉತ್ತರದಲ್ಲಿ ಬೆಳಗಾಂವಿ ಜಿಲ್ಲೆಯೂ ಪಶ್ಚಿಮದಲ್ಲಿ ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ ತಾಲ್ಲೂಕು ಮತ್ತು ಬೆಳಗಾಂವಿ ಜಿಲ್ಲೆಯ ಖಾನಾಪುರ ತಾಲ್ಲೂಕುಗಳೂ ಇವೆ. ಅಳಣಾವರ, ಗರಗ, ಅಮ್ಮಿನಭಾವಿ ಮತ್ತು ಧಾರವಾಡ ಹೋಬಳಿಗಳು. 110 ಗ್ರಾಮಗಳೂ 2 ಪಟ್ಟಣಗಳೂ ಇವೆ. ವಿಸ್ತೀರ್ಣ 1008 ಚಕಿಮೀ. ಜನಸಂಖ್ಯೆ 2,18,803.

ಈ ತಾಲ್ಲೂಕು ಜಿಲ್ಲೆಯ ಪಶ್ಚಿಮಭಾಗದಲ್ಲಿದ್ದು ಮಲೆನಾಡ ಅಂಚಿನಲ್ಲಿದೆ. ಸಣ್ಣ ಪುಟ್ಟ ಗುಡ್ಡಗಳು ಅಲ್ಲಲ್ಲಿ ಹರಡಿವೆ. ಧಾರವಾಡ ಶಿಲಾಶ್ರೇಣಿಗೆ ಸೇರಿದ ಶಿಲಾರಚನೆ ಇದೆ. ತಾಲ್ಲೂಕಿನ ಪೂರ್ವಭಾಗ ಹುಳಕೆರಿ ಭೂಮಿಯಿಂದ ಮತ್ತು ಉಳಿದೆಡೆ ಕಪ್ಪು ಕೆಂಪು ಮಣ್ಣಿನ ಪ್ರದೇಶಗಳಿಂದ ಕೂಡಿದೆ. ಈ ತಾಲ್ಲೂಕಿನ ಹವಾಗುಣ ಹಿತಕರವಾಗಿದ್ದು ಸರಾಸರಿ ಉಷ್ಣತಾಮಾನ 23.6ಸೇ. ಇರುತ್ತದೆ. ವಾರ್ಷಿಕ ಸರಾಸರಿ ಮಳೆ 833 ಮಿಮೀ. ಈ ತಾಲ್ಲೂಕಿನಲ್ಲಿ ಸು. 141 ಚಕಿಮೀ. ರಕ್ಷಿತ ಅರಣ್ಯಪ್ರದೇಶ ಇದೆ. ಇದರಲ್ಲಿ ಸು.115 ಚಕಿಮೀ. ಅರಣ್ಯಪ್ರದೇಶದಲ್ಲಿ ಪಶ್ಚಿಮಭಾಗ ಹೆಚ್ಚು ದಟ್ಟವಾಗಿದ್ದು ತೇಗ ಇತ್ಯಾದಿ ಮರಗಳಿಂದ ಕೂಡಿದೆ. ಪೂರ್ವಭಾಗ ವಿರಳಕಾಡಾಗಿದ್ದು ಶ್ರೀಗಂಧ ಇತ್ಯಾದಿ ಮರಗಳನ್ನು ಒಳಗೊಂಡಿದೆ. ತಾಲ್ಲೂಕು ವ್ಯವಸಾಯಪ್ರಧಾನವಾಗಿದ್ದು ಜೋಳ, ಗೋದಿ, ಬತ್ತ, ನವಣೆ, ಸೇಂಗ, ರಾಗಿ, ಎಣ್ಣೆಬೀಜಗಳು, ದ್ವಿದಳಧಾನ್ಯಗಳು, ಕಬ್ಬು, ಹತ್ತಿ ಮುಂತಾದುವುಗಳ ಜೊತೆಗೆ ವಿವಿಧ ತರಕಾರಿಗಳನ್ನು ಕೆಲವು ಫಲಗಳನ್ನು ಬೆಳೆಯುತ್ತಾರೆ.

ಈ ತಾಲ್ಲೂಕು ಇಂದು ವಾಣಿಜ್ಯ ಉದ್ಯಮಗಳ ಮತ್ತು ವಿದ್ಯಾಲಯಗಳ ಕೇಂದ್ರವಾಗಿದೆ. ಗುಡಾರಗಳಿಗೆ, ಖಾದಿಗ್ರಾಮೋದ್ಯೋಗಗಳಿಗೆ, ಕೈಮಗ್ಗದ ಬಟ್ಟೆಗಳಿಗೆ ಈ ತಾಲ್ಲೂಕು ಪ್ರಸಿದ್ಧ. ಪ್ಲೈವುಡ್ ಮತ್ತು ಮರಕೊಯ್ಯುವ ಕಾರ್ಖಾನೆಗಳಿವೆ. ಬೀಡಿ ತಯಾರಿಕೆ, ಚರ್ಮ ಹದ ಮಾಡುವುದು, ಕಬ್ಬಿಣದ ತಿಜೋರಿ, ಕಪಾಟು, ಕುರ್ಚಿ ಮೊದಲಾದ ತಯಾರಿಕೆಯುಂಟು. ಗಡಿಯಾರ ತಯಾರಿಕಾ ಕಾರ್ಖಾನೆ, ರಟ್ಟು ತಯಾರಿಸುವ ಕಾರ್ಖಾನೆ ಮುಂತಾದವುಗಳಿವೆ.

ಈ ತಾಲ್ಲೂಕಿನ ಮುಖಾಂತರ ಬೆಂಗಳೂರು-ಬೆಳಗಾಂವಿ-ಪುಣೆ ರೈಲುಮಾರ್ಗ ಹಾದುಹೋಗಿದ್ದು ಧಾರವಾಡ ಪ್ರಮುಖ ರೈಲ್ವೆ ನಿಲ್ದಾಣವಾಗಿದೆ. ಜಿಲ್ಲೆಯ ಎಲ್ಲ ಕಡೆಗೂ ಇಲ್ಲಿಂದ ಉತ್ತಮ ಮಾರ್ಗಗಳಿವೆ. ಅಂಚೆ, ತಂತಿ, ದೂರವಾಣಿ, ವಿದ್ಯುಚ್ಛಕ್ತಿ ಮತ್ತು ಕೆಲವು ಕಡೆ ರಕ್ಷಿತ ಕುಡಿಯುವ ನೀರಿನ ಸೌಕರ್ಯಗಳಿವೆ. ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲೆಗಳೂ ಖಾಸಗಿ ಕಾಲೇಜುಗಳೂ ಕರ್ನಾಟಕ ವಿಶ್ವವಿದ್ಯಾಲಯ ಕಾಲೇಜುಗಳೂ ಇವೆ. ಸರ್ಕಾರಿ ಆಸ್ಪತ್ರೆ, ಸಾರ್ವಜನಿಕ ಗ್ರಂಥಾಲಯ, ವಾಣಿಜ್ಯ ಮತ್ತು ಸಹಕಾರಿ ಬ್ಯಾಂಕುಗಳೂ ನಿಯಂತ್ರಿತ ಮಾರುಕಟ್ಟೆ ಮುಂತಾದವುಗಳೂ ಇವೆ.

ಈ ತಾಲ್ಲೂಕಿನಲ್ಲಿ ಧಾರವಾಡಕ್ಕೆ ಈಶಾನ್ಯದಲ್ಲಿರುವ ಅಮ್ಮಿನಭಾವಿ ಒಂದು ದೊಡ್ಡ ಗ್ರಾಮ. ಪೇಶ್ವೆಗಳ ಕಾಲದಲ್ಲಿ ಇದೊಂದು ಅಷ್ಟಗ್ರಾಮಗಳ ಕೇಂದ್ರವಾಗಿತ್ತೆಂದು ತಿಳಿದುಬರುವುದು. ಊರಿನ ಉತ್ತರದಲ್ಲಿ ನೇಮಿನಾಥ ಜೈನದೇವಾಲಯವಿದೆ. ಕಲಮೇಶ್ವರ ಮತ್ತು ಮಲ್ಲಿಕಾರ್ಜುನ ದೇವಾಲಯಗಳೂ ಆರನೆಯ ಚಾಳುಕ್ಯ ವಿಕ್ರಮಾದಿತ್ಯ, ಕದಂಬ, ಶಿವಚಿತ್ತ ಪೆರ್ಮಾಡಿ ಮತ್ತು ವಿಜಯನಗರ ಸದಾಶಿವರಾಯನ ಕಾಲಕ್ಕೆ ಸಂಬಂಧಿಸಿದ ಆರು ಶಾಸನಗಳಿವೆ. ಇದೊಂದು ಅಗ್ರಹಾರವಾಗಿದ್ದು ನೂರು ಮಹಾಜನರ ಆಳ್ವಿಕೆಗೆ ಸೇರಿದ್ದ ಒಂದು ವಿದ್ಯಾಕೇಂದ್ರವಾಗಿತ್ತು. ಅಳಣಾವರ ಹೋಬಳಿ ಕೇಂದ್ರ ಮತ್ತು ವ್ಯಾಪಾರಸ್ಥಳವಾಗಿದೆ. ಗರಗ ಹೋಬಳಿ ಕೇಂದ್ರ ಧಾರವಾಡ ನಗರಕ್ಕೆ ವಾಯವ್ಯದಲ್ಲಿದ್ದು ಸುತ್ತಲ ಗ್ರಾಮಗಳಿಗೆ ಒಂದು ವ್ಯಾಪಾರ ಕೇಂದ್ರವಾಗಿದೆ. ಹೆಬ್ಬಳ್ಳಿ ಗ್ರಾಮದಲ್ಲಿ ಯಾದವರ ಕಾಲದ ಎರಡು ಶಾಸನಗಳಿವೆ ಮತ್ತು ಶಂಭುಲಿಂಗ ದೇವಾಲಯವಿದೆ. ಧಾರವಾಡದ ಈಶಾನ್ಯಕ್ಕೆ ನರೇಂದ್ರ ಗ್ರಾಮವಿದೆ. ಇಲ್ಲಿ ಶಂಕರಲಿಂಗ ದೇವಾಲಯವಿದೆ. ಆರನೆಯ ವಿಕ್ರಮಾದಿತ್ಯನ 1125-26ರ ಎರಡು ಶಾಸನಗಳಿವೆ. ಗೋವ ಕದಂಬ ಮನೆತನದ ಎರಡನೆ ಜಯಕೇಶಿಯನ್ನು ಮದುವೆಯಾಗಿದ್ದ ವಿಕ್ರಮಾದಿತ್ಯನ ಮಗಳಾದ ಮೈಳಲದೇವಿ ಈ ಪ್ರಾಂತ್ಯವನ್ನಾಳುತ್ತಿದ್ದಳೆಂದು ತಿಳಿದುಬರುವುದು.

**ನಗರ :** ಧಾರವಾಡ ಈ ಜಿಲ್ಲೆಯ ಆಡಳಿತಕೇಂದ್ರ. ಧಾರವಾಡ ಮತ್ತು ಹುಬ್ಬಳ್ಳಿ ನಗರಗಳನ್ನು ಒಂದುಗೂಡಿಸಿ ಹುಬ್ಬಳ್ಳಿ ಧಾರವಾಡ ಕಾರ್ಪೊರೇಷನ್ ರಚಿಸಲಾಗಿದೆ (ನೋಡಿ: ಹುಬ್ಬಳ್ಳಿ-ಧಾರವಾಡ) (ಡಿಎಸ್.ಜಿ., ಎಸ್.ಎಸ್.ಬಿ.)

**ಧಾರವಾಡಕರ, ರಾ.ಯ. :** 1919-91. ಪ್ರಸಿದ್ಧ ಪ್ರಬಂಧಕಾರರು. ರಾಜೇಂದ್ರ ಯಲದುರ್ಗರಾವ್ ಧಾರವಾಡಕರ ಇವರ ಪೂರ್ಣ ಹೆಸರು. 1919 ಜುಲೈ 15 ರಂದು ಜನಿಸಿದರು. ಬಾಗಲಕೋಟೆ, ಸಾಂಗ್ಲಿ, ಮುಂಬಯಿ ವಿಶ್ವವಿದ್ಯಾಲಯದಲ್ಲಿ ವಿದ್ಯಾಭ್ಯಾಸ ಮುಗಿಸಿ ಮುಂಬಯಿ ಸೆಕ್ರೆಟೇರಿಯಟ್‌ನಲ್ಲಿ ಸರಕಾರಿ ಸೇವೆಗೆ ಸೇರಿದರು (1942). ಅನಂತರ ಧಾರವಾಡದಲ್ಲಿ ಬಿ.ಎಂ.ಶ್ರೀ. ಅವರ ಕೆ.ಇ.ಬೋರ್ಡ್ (ಇಂದಿನ ಜೆ.ಎಸ್.ಎಸ್. ಕಾಲೇಜು) ಕಾಲೇಜಿನಲ್ಲಿ ಕನ್ನಡ-ಇಂಗ್ಲಿಷ್ ಪ್ರಾಧ್ಯಾಪಕರಾದರು. ಅನಂತರ ಕಾಲೇಜಿನ ಪ್ರಾಂಶುಪಾಲರಾಗಿ (1946) ಸುದೀರ್ಘವಾದ ಸೇವೆ ಸಲ್ಲಿಸಿ ನಿವೃತ್ತರಾದರು (1975). ಭಾನುಮತಿ ಇವರ ಪತ್ನಿ. ಇವರಿಗೆ ಐವರು ಗಂಡು ಮಕ್ಕಳು.

ಧಾರವಾಡಕರರು ಅದ್ಭುತ ವಾಗ್ಮಿಗಳು. ಕನ್ನಡ ಹಾಗೂ ಇಂಗ್ಲಿಷ್ ಸಾಹಿತ್ಯ ಬೋಧನೆ ಮಾಡುತ್ತಿದ್ದ ಇವರಿಗೆ ಶಬ್ದಮಣಿದರ್ಪಣ ಪ್ರಿಯವಾಗಿತ್ತು. ಪ್ರಬಂಧ ರಚನೆ ಇವರ ಪ್ರಿಯವಾದ ಬರೆವಣಿಗೆಯಾಗಿತ್ತು. ಧೂಮ್ರವಲಯಗಳು, ತೂರಿದ ಚಿಂತನಗಳು, ನವಿಲಗರಿ, ಸೂರ್ಯಪಾನ ಎಂಬ ನಾಲ್ಕು ಸಂಕಲನಗಳನ್ನು ಪ್ರಕಟಿಸಿದ್ದಾರೆ. ಲಲಿತ ಪ್ರಬಂಧಗಳಲ್ಲಿ ಜೀವನ ರಸಿಕತೆಯಿದೆ, ತಿಳಿಯಾದ ಹಾಸ್ಯ ಹರಟೆಯ ಗುಣಗಳಿಂದ ಕೂಡಿದ ಈ ಪ್ರಬಂಧಗಳು ಆಕರ್ಷಣೀಯವಾಗಿವೆ. ಹೊಸಗನ್ನಡ ಸಾಹಿತ್ಯದ ಉದಯಕಾಲ ಎಂಬ ಕೃತಿ ಇವರ ಮಹಾಪ್ರಬಂಧವಾಗಿದ್ದು ಅದರಲ್ಲಿ ಹೊಸಗನ್ನಡ ಅರುಣೋದಯದ ಕಾಲದ ಸಾಹಿತ್ಯ ಚಟುವಟಿಕೆಗಳನ್ನು ವಿಪುಲ ಆಕರ ಸಾಮಗ್ರಿಯ ಮೂಲಕ ವಿವೇಚಿಸಿದ್ದಾರೆ. ಕನ್ನಡ ಭಾಷಾ ಶಾಸ್ತ್ರ ಎಂಬ ಕೃತಿ ಕನ್ನಡ ಭಾಷಾವಿಜ್ಞಾನವನ್ನು ಕುರಿತದ್ದು. ನಾನು ಕಂಡ ಅಮೇರಿಕೆ ಎಂಬುದು ಸುಂದರ ಪ್ರವಾಸ ಕಥನ. ಇವರು ಅನೇಕ ಕತೆಗಳನ್ನು ಬರೆದಿದ್ದಾರೆ. ಅನುವಾದಗಳನ್ನು ಮಾಡಿದ್ದಾರೆ. ತೆರೆಯ ಹಿಂದೆ ಎಂಬುದು ಇವರ ಒಂದು ಕಥಾಸಂಕಲನ. ಅಮೆರಿಕನ್ ನಿಗ್ರೋ ಕಥೆಗಳು ಇವರ ಅನುವಾದಿತ ಕತೆಗಳ ಸಂಕಲನ. ಬಿ.ಎಂ. ಶ್ರೀಕಂಠಯ್ಯ ವೆಂಕಟರಂಗೋಕಟ್ಟಿ, ಎಸ್.ಸಿ. ನಂದೀಮಠ ಮೊದಲಾದವರ ಜೀವನ ಸಾಧನೆ ಕುರಿತು ಗ್ರಂಥಗಳನ್ನು ಬರೆದಿದ್ದಾರೆ. 'ಕನ್ನಡದಲ್ಲಿ ಕಾನೂನು ಸಾಹಿತ್ಯ' ಕಾನೂನು ಸಾಹಿತ್ಯ ಕುರಿತಂತೆ ಕನ್ನಡದಲ್ಲಿ ಬರೆದ ಒಂದು ಅಕರ ಗ್ರಂಥವಾಗಿದೆ. ಪತ್ರಿಕಾ ವ್ಯವಸಾಯ, ಕನ್ನಡದಲ್ಲಿ ವೃತ್ತ ಪತ್ರಿಕೆಗಳು. ಇವು ಪತ್ರಿಕೋದ್ಯಮಕ್ಕೆ ಸಂಬಂಧಿಸಿದ ಗ್ರಂಥಗಳು 'ನಮ್ಮ ದೇಶದ ಯೋಜನೆಗಳು' ಆರ್ಥಿಕಾಭಿವೃದ್ಧಿ ಕುರಿತು ಬರೆದ ಕೃತಿ. ಸಾಹಿತ್ಯ ಸಮೀಕ್ಷೆ, ಆರು ಪ್ರಬಂಧಗಳಗಿವು. ಸಾಹಿತ್ಯ ವಿಮರ್ಶೆ ಸಂಸ್ಕೃತಿಗೆ ಸಂಬಂಧಿಸಿದ ಗ್ರಂಥಗಳು. ನಂದೀಮಠ ನೆನಪು, ರೊದ್ದ ಶ್ರೀನಿವಾಸರಾಯರು, ಕಾವ್ಯಾನಂದ ಪುಣೇಕರ, ಸಾಗರೋತ್ತರ ಕಥೆಗಳು ಇವರ ಇತರ ಕೃತಿಗಳು. ಕನ್ನಡದಲ್ಲಿ ಗಾಂಧಿಸಾಹಿತ್ಯ, ಭೀಷ್ಮ ಪರ್ವಸಂಗ್ರಹ ಮೊದಲಾದ ಕೃತಿಗಳನ್ನೂ ಇವರು ಸಂಪಾದಿಸಿದ್ದಾರೆ.

ಶಿಕ್ಷಣತಜ್ಞರಾಗಿ, ದಕ್ಷ ಆಡಳಿತಗಾರರಾಗಿ ಕರ್ನಾಟಕ ವಿಶ್ವವಿದ್ಯಾಲಯದ ವಿವಿಧ ಮಂಡಳಿಗಳ ಸಿಂಡಿಕೇಟ್, ಸೆನೆಟ್ ಸದಸ್ಯರಾಗಿ ಇವರು ಕಾರ್ಯನಿರ್ವಹಿಸಿದ್ದಾರೆ. ಇವರಿಗೆ 71 ತುಂಬಿದಾಗ ಪ್ರಬಂಧ ಪ್ರಪಂಚ ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಲಾಯಿತು. ತೂರಿದ ಚಿಂತನಗಳು, ನಾನು ಕಂಡ ಅಮೇರಿಕೆ ಗ್ರಂಥಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿದೆ. ಇವರು 1991 ಏಪ್ರಿಲ್ 12ರಂದು ಧಾರವಾಡದಲ್ಲಿ ನಿಧನರಾದರು. (ಜಿ.ಎಂ.ಎಚ್.)

**ಧಾರವಾಡ ಶಿಲಾವರ್ಗ:** ಧಾರವಾಡದ ಬಳಿ ಇರುವ ಸ್ಫಟಿಕಾತ್ಮಕ ಪದರುಶಿಲೆಗಳ (ಕ್ರಿಸ್ಟಲೈನ್ ಶಿಲ್ಟ್ಸ್) ಭೂವೈಜ್ಞಾನಿಕ ನಾಮಧೇಯ (ಧಾರ್ವಾರ್ ಸಿಸ್ಟಮ್) ಆರ್.ಬಿ.ಪುಟೆ ಎಂಬಾತ ನೀಡಿದ (1886) ಹೆಸರಿದು. ಧಾರವಾಡ ಪದರುಶಿಲೆಗಳು ಅಥವಾ ಧಾರವಾಡಗಳು ಎಂಬುದಾಗಿ ಕೂಡ ಈ ವರ್ಗವನ್ನು ಉಲ್ಲೇಖಿಸುವುದುಂಟು. ಇದು ಶಿಲಾರಸ, ಶಿಲಾಧೂಳು ಮುಂತಾದ ಜ್ವಾಲಾಮುಖಿಜ ವಸ್ತುವಿಶೇಷಗಳಿಂದ ಮಿಶ್ರಿತವಾದ ಪ್ರಸ್ತರೀ (ಪದರು) ಶಿಲಾ ಸಮುದಾಯ ಎಂದೂ ಈ ಪದರು ಶಿಲಾವರ್ಗ

ಗ್ರಾನಿಟಾಯ್ಡ್ ನೈಸ್‌ಗಳು ಭೂಸಂಮರ್ದದಿಂದ ಮಡಚಿ ಛಿದ್ರಗೊಂಡು ನಗ್ನೀಕೃತವಾದ ಬಳಿಕ ಅವುಗಳ ಮೇಲೆ ಸ್ತರಭಂಗವಾಗಿ ಉತ್ಪನ್ನವಾದ ಜಲಜಶಿಲೆಗಳ ರೂಪಾಂತರಗಳೆಂದೂ ಭಾವಿಸಲಾಗಿತ್ತು. ಮುಂದೆ ಈ ವಿಚಾರದಲ್ಲಿ ಸಾಕಷ್ಟು ಸಂಶೋಧನೆಗಳು ನಡೆದು ಧಾರವಾಡ ಶಿಲಾವರ್ಗದ ಕೆಲವು ಶಿಲೆಗಳಲ್ಲಿ ಜಲಜಶಿಲೆಗಳ ಸ್ವಾಭಾವಿಕವಾದ ರಚನಾಕೃತಿಗಳ ಸಂದೇಹಾತೀತ ಕುರುಹುಗಳು ಸಾಕಷ್ಟು ಇರುವುದು ದೃಢಪಟ್ಟಿತು.ಆದ್ದರಿಂದ ಇಲ್ಲಿನ ಪೆಂಟೆಕಲ್ಲು (ಕಾಂಗ್ಲೊಮರೇಟ್), ಸಿಕತಶಿಲೆ (ಮರಳ್ಗಲ್ಲು, ಸ್ಯಾಂಡ್ ಸ್ಟೋನ್), ಗೋಡುಕಲ್ಲು, ಸುಣ್ಣಕಲ್ಲು ಮತ್ತು ಕೆಲವು ವಿಧವಾದ ಪದರು ಶಿಲೆಗಳು ನಿರ್ದಿಷ್ಟವಾಗಿ ಜಲಜಶಿಲೆಗಳ ರೂಪಾಂತರಗಳೆಂದು ನಿರ್ಧರಿತವಾಯಿತು (1905).

ಘಟಕ ಶಿಲಾವಿಭಾಗಗಳು ಧಾರವಾಡ ಶಿಲಾವರ್ಗದಲ್ಲಿ ಮುಖ್ಯವಾಗಿ ಈ ಕೆಳಗಿನ ನಾಲ್ಕು ಬಗೆಯ ಶಿಲಾಪಂಗಡಗಳಿವೆ ಜ್ವಾಲಾಮುಖಿಜಶಿಲೆಗಳು, ಸ್ಫಟಿಕಾಕೃತಿಯ ಪದರುಶಿಲೆಗಳು, ರೂಪಗೆಟ್ಟ ಪ್ರಸ್ತರೀ ಶಿಲೆಗಳು, ಅಂತಸ್ತರಿತ ಅಥವಾ ಒಳನುಗ್ಗಿದ ಅಗ್ನಿಶಿಲೆಗಳು.

ಜ್ವಾಲಾಮುಖಿಜ ಶಿಲೆಗಳ ಗುಂಪು ಮುಖ್ಯವಾಗಿ ರಾಸಾಯನಿಕ ವ್ಯತ್ಯಾಸದಿಂದ ಒಡಗೂಡಿದ ಘನೀಭೂತ ವಿವಿಧ ಶಿಲಾರಸಗಳು. ಡೈಕ್‌ಗಳು, ಶಿಲಾಧೂಳು ಮುಂತಾದ ಶಿಲಾವಸ್ತುಗಳಿಂದ ಕೂಡಿರುತ್ತದೆ.

ಸ್ಫಟಿಕಾಕೃತಿಯ ಪದರುಶಿಲೆಗಳ ಸಮುದಾಯದಲ್ಲಿ ಕಪ್ಪು ಹಾರ್ನ್‌ಬ್ಲೆಂಡ್ ಪದರುಶಿಲೆ, ಕ್ಲೋರೈಟ್ ಪದರುಶಿಲೆ, ಅಭ್ರಕ ಪದರುಶಿಲೆ, ಕರಿ ಅಭ್ರಕ, ಕಯನೈಟ್, ಸಿಲ್ಲಿಮನೈಟಂ, ಕಾರ್ಡಿಯರೈಟ್ ಮುಂತಾದ ರೂಪಾಂತರ ಶಿಲೆಗಳಲ್ಲಿ ಸ್ವಾಭಾವಿಕವಾಗಿ ಕಂಡುಬರುವ ಸ್ಫಟಿಕೀಕೃತವಾದ ಖನಿಜಗಳನ್ನು ವಿವಿಧ ಪ್ರಮಾಣಗಳಲ್ಲಿ ಒಳಗೊಂಡ ಪದರುಶಿಲೆಗಳು ಇವೆ. ಈ ಪದರುಶಿಲೆಗಳಲ್ಲಿ ಮೊದಲಿನ ಮೂರು ವಿಧಗಳ ವಿನಾ ಉಳಿದವುಗಳೆಲ್ಲವೂ ಅಧಿಕ ರೂಪಾಂತರಿಸಿದ ಅಶುಭ್ರ ಜಲಜಶಿಲೆಗಳೆಂದು ಕಂಡುಬಂದಿದೆ.

ರೂಪಗೆಟ್ಟ ಅಥವಾ ವಿರೂಪಿಸಿದ ಜಲಜಶಿಲಾಶ್ರೇಣಿಯಲ್ಲಿ ಪೆಂಟಿಕಲ್ಲು, ಮರಳ್ಗಲ್ಲು ಸಿಕತಶಿಲೆ, ಗೋಡುಕಲ್ಲು,ಕಬ್ಬಿಣಸಿಕತ ಮಿಶ್ರಿತ ಪಟ್ಟಿಗಲ್ಲು ಸ್ಫಟಿಕೀಕರಿಸಿದ ಸುಣ್ಣಕಲ್ಲು ಅಥವಾ ಅಮೃತಶಿಲೆಗಳು ಮುಖ್ಯವಾದವು. ಇವೆಲ್ಲವೂ ನಿಸ್ಸಂದೇಹವಾಗಿ ಜಲಜಶಿಲೆಗಳ ರೂಪಾಂತರಗಳೆಂದು ಈಗ ಖಚಿತವಾಗಿ ನಿರ್ಣಯಿಸಲಾಗಿದೆ.

ಅಗ್ನಿಶಿಲಾ ಅಂತಸ್ಸರಣಗಳಲ್ಲಿ ಕ್ಷಾರ ಮತ್ತು ಅತಿಕ್ಷಾರ ಶಿಲೆಗಳೂ ಮತ್ತೆ ಕೆಲವು ಗ್ರಾನೈಟಂ ಪಾರ್ಫಿರಿಗೆ ಕ್ರಮವಾಗಿ ಹೊಂದಿಕೊಳ್ಳುವ ಸೂಕ್ಷ್ಮಕಣ ಶಿಲೆಗಳೂ ಇರುವುದಾಗಿ ಕಂಡುಬಂದಿದೆ.

**ವರ್ಗೀಕರಣ ಮತ್ತು ಕಾಲ :** ಮೈಸೂರಿನಲ್ಲಿ ಧಾರವಾಡ ಶಿಲಾವರ್ಗ ತಳಭಾಗ, ಮಧ್ಯಭಾಗ ಮತ್ತು ಮೇಲುಭಾಗವೆಂದು ಮೂರು ಬಾಗಗಳಾಗಿ ವಿಭಾಗಗೊಂಡಿದೆ. ತಳಭಾಗ ಮುಖ್ಯವಾಗಿ ಸಣ್ಣ ಸಣ್ಣ ಫ್ಲಿಟಗಳಂತಿರುವ ಆದಿಜನಿತ ಅದಿಮ ಗೋಡುಶಿಲೆಗಳಿಂದ ಬೆರೆತಿರುವ ವಿವಿಧ ಜ್ವಾಲಾಮುಖಿಜ ಶಿಲೆಗಳಿಂದಲೂ ಮಧ್ಯಭಾಗ ಜ್ವಾಲಾಮುಖಿಜ ಶಿಲಾಮಿಶ್ರಿತ ಮತ್ತು ಅಂತಸ್ಸರಿತ ಅಗ್ನಿಶಿಲೆಗಳಿಂದ ಕೂಡಿದ ಪ್ರಸ್ತರೀ ಶಿಲೆಗಳಿಂದಲೂ ಮೇಲುಭಾಗ ಮಧ್ಯಭಾಗದ ಪ್ರಸ್ತರೀ ಶಿಲೆಗಳಿಗೆ ರೂಪು ರಚನೆಗಳಲ್ಲಿ ಕೊಂಚ ವ್ಯತ್ಯಾಸವಿರುವ ಪ್ರಸ್ತರೀ ಶಿಲೆಗಳಿಂದಲೂ ಕೂಡಿವೆ. ಈ ಮೂರು ವಿಭಾಗಗಳು ಅಥವಾ ವಿಂಗಡಣೆಗಳನ್ನು ಮೊದಲಿನ ಮೈಸೂರು ಸಂಸ್ಥಾನದ ಉತ್ತರ ಭಾಗದಲ್ಲಿ ಖಚಿತವಾಗಿ ಕಾಣಬಹುದೇ ವಿನಾ ಮಧ್ಯ ಮತ್ತು ದಕ್ಷಿಣ ಭಾಗಗಳಲ್ಲಿ, ಒತ್ತಡ ಸ್ತರಪಲ್ಲಟ ಮತ್ತು ಅಧಿಕ ರೂಪಾಂತರ ಮುಂತಾದ ಕಾರಣಗಳಿಂದ ಗುರ್ತಿಸಲಾಗುವುದಿಲ್ಲ.

ಧಾರವಾಡದ ಶಿಲಾವರ್ಗ ಉತ್ಪತ್ತಿಯಾದ ಕಾಲ ಜ್ವಾಲಾಮುಖಿಯ ಶಿಲಾರಸಗಳು ಧಾರಾಳವಾಗಿ ಹೊರಹೊಮ್ಮಿ ಹರಿದ್ದು ಘನೀಭೂತವಾದ ಪ್ರಕರಣದಿಂದ ಆರಂಭವಾಯಿತೆಂದು ತಿಳಿದುಬರುತ್ತದೆ. ಈ ಶಿಲಾರಸಗಳು ಅನೇಕ ಸ್ಥಳಗಳಲ್ಲಿ ಮತ್ತು ಜಲಪ್ರದೇಶಗಳಲ್ಲಿ ಹರಿದು ಘನೀಭವಿಸಿರುವುದೂ ಕಂಡುಬಂದಿದೆ. ಅನಂತರ ಬಹುಕಾಲದ ಮೇಲೆ ಕ್ರಮೇಣ ಆಳದಲ್ಲಿ ಹೆಚ್ಚುತ್ತಲಿದ್ದ ಕಡಲು ಪ್ರದೇಶಗಳಲ್ಲಿ ಪ್ರಸ್ತರೀ ಶಿಲೆಗಳ ಉತ್ಪತ್ತಿ ರೂಪುರಚನೆಗಳು ಆರಂಭವಾದವೆಂದು ಕಂಡುಬರುತ್ತದೆ.

ಧಾರವಾಡ ಶಿಲಾವರ್ಗದ ಕೆಲವು ಶಿಲೆಗಳ ಶುದ್ಧವಯಸ್ಸನ್ನು ವಿಕಿರಣ ಮಾಪಕ ಸಲಕರಣೆಗಳಿಂದ ಅಳೆಯಲಾಗಿದೆ. ಆ ಪ್ರಕಾರ ಶಿಲಾವರ್ಗದ ಮೇಲು ಭಾಗ ಪ್ರಾಯಶಃ 100 ಕೋಟಿಯಿಂದ 200 ಕೋಟಿ ವರ್ಷಗಳ ಹಿಂದೆ ಉತ್ಪನ್ನವಾಯಿತೆಂದೂ ಮಧ್ಯಭಾಗದ ಶಿಲೆಗಳು ಸು.220 ಕೋಟಿಯಿಂದ 240 ಕೋಟಿ ವರ್ಷಗಳ ಹಿಂದೆ ಉತ್ಪನ್ನವಾದುವೆಂದೂ ತಳಭಾಗ 250 ಕೋಟಿ ವರ್ಷಗಳಿಗಿಂತಲೂ ಹಿಂದೆ ರೂಪುಗೊಂಡಿತೆಂದೂ ಕಂಡುಬಂದಿದೆ. ಅಂದರೆ ಧಾರವಾಡ ಶಿಲಾವರ್ಗ ಸೂಚಿಸುವ ಅತ್ಯಂತ ಕಾಲ ಒಟ್ಟು ಸು.100 ಕೋಟಿ ವರ್ಷ ಮೀರಿರುವುದಾಗಿ ತೋರುತ್ತದೆ.

**ವಿಸ್ತಾರ ಮತ್ತು ಹಂಚಿಕೆ :** ಧಾರವಾಡ ಶಿಲಾವರ್ಗ ಈಗಿನ ಕರ್ನಾಟಕ ರಾಜ್ಯದಲ್ಲಿ ಸು.12,800 ಚದರ ಕಿ.ಮೀ. ಪ್ರದೇಶವನ್ನು ಆಕ್ರಮಿಸಿದೆ. ಇದು ಅನೇಕ ನೀಳವಾದ ಇಕ್ಕಟ್ಟು ಪದರುಶಿಲಾಪಟ್ಟಿಗಳಂತೆ ಗ್ರ್ಯಾನಿಟಿಕ್ ನೈಸ್ ಪ್ರದೇಶಗಳಲ್ಲಿ ಬೇರೆ ಬೇರೆ ಪಟ್ಟಿಗಳಾಗಿ ಹಂಚಿಕೊಂಡಿದೆ. ಇವು ಉದ್ದದಲ್ಲಿ ಸು.52 ಕಿಮೀ. ಸು. 400ಕಿಮೀ ಮೇಲ್ಪಟ್ಟು ಅಗಲದಲ್ಲಿ ಕೇವಲ 800 ಕಿಮೀನಿಂದ ಬಲು ಅಗಲವಾದ ಭಾಗಗಳಲ್ಲಿ 32 ಕಿಮೀ. ವರೆಗೂ ಇರುತ್ತವೆ. ಇವನ್ನು ಪದರು ಶಿಲಾ ಪಟ್ಟಿಗಳೆಂದು ಕರೆಯುವುದು ರೂಢಿ. ವರ್ಣನೆಯ ಸಲುವಾಗಿ ಇವನ್ನು ಪಶ್ಚಿಮ, ಮಧ್ಯಪಶ್ಚಿಮ, ಮಧ್ಯ, ಪೂರ್ವ ಮತ್ತು ಪೂರ್ವವಲಯಗಳೆಂದು ಐದು ವಲಯಗಳಾಗಿ ವಿಂಗಡಿಸಿದೆ. ಸಾಧಾರಣವಾಗಿ ಕಪ್ಪು ಹಾರ್ನ್‌ಬ್ಲೆಂಡ್ ಪದರುಶಿಲೆಗಳು ರಾಜ್ಯದ ಪೂರ್ವ ಪಶ್ಚಿಮ ಮತ್ತು ದಕ್ಷಿಣ ಭಾಗಗಳಲ್ಲಿಯೂ ಕ್ಲೋರೈಟ್ ಮತ್ತು ಅಭ್ರಕ ಪದರು ಶಿಲೆಗಳು ಉತ್ತರ ಮತ್ತು ಮಧ್ಯ ಉತ್ತರ ಪ್ರದೇಶಗಳಲ್ಲಿಯೂ ಇತರ ಸಿಲ್ಲಿಮನೈಟ್ ಕಾರ್ಡಿಯರೈಟ್ ಮುಂತಾದ ಖನಿಜಗಳನ್ನು ಒಳಗೊಂಡ ಪದರುಶಿಲೆಗಳು ದಕ್ಷಿಣ ಮತ್ತು ಮಧ್ಯದಕ್ಷಿಣ ಭಾಗಗಳಲ್ಲಿಯೂ ಹರಡಿರುತ್ತವೆ. ಧಾರವಾಡ ಶಿಲಾವರ್ಗದ ವಿವಿಧ ಶಿಲಾಭೇದಗಳೆಲ್ಲವೂ ಪ್ರತಿಯೊಂದು ವಲಯದ ಪ್ರತಿಯೊಂದು ಪದರುಶಿಲಾ ಪಟ್ಟಿಯಲ್ಲಿಯೂ ಇರುವುದಿಲ್ಲ.

**ಶಿಲಾವರ್ಗ ಪರಸ್ಪರ ಸಂಬಂಧ :** ಧಾರವಾಡ ಶಿಲಾವರ್ಗವನ್ನು ಹೋಲುವ ಅಧಿಕ ರೂಪಾಂತರಗೊಂಡ ಸ್ಫಟಿಕಾಕೃತಿಯ ಪದರುಶಿಲೆಗಳು ಮತ್ತು ಇತರ ಶಿಲಾ ವಿಭೇದಗಳು ಭಾರತದ ಇತರ ಭಾಗಗಳಲ್ಲಿವೆ. ಅವುಗಳಲ್ಲಿ ಮುಖ್ಯವಾದವು ರಾಜಸ್ಥಾನದ ಇರಾವತಿ ಶಿಲಾವರ್ಗ, ಗುಜರಾತಿನ ಚಂಪಾನೇರ್ ವರ್ಗ, ಮಧ್ಯಪ್ರದೇಶದ ಸಾಸರನ್ ಸಕೋಲಿ ವರ್ಗಗಳು, ಬಿಹಾರ್, ಒರಿಸ್ಸಗಳ ಕೊಲ್ಹಾನ ಮುಂತಾದ ಶಿಲಾವರ್ಗಗಳು, ಪೂರ್ವಘಟ್ಟಗಳ ಖಾಂಡಲೈಟ್ ಶಿಲಾವರ್ಗ, ಇವುಗಳ ಪೈಕಿ ಅನೇಕವನ್ನು ಸಾಮಾನ್ಯವಾಗಿ ಧಾರವಾಡ ಶಿಲಾವರ್ಗಕ್ಕೆ ಹೋಲಿಸಲಾಗಿದೆ. ಆದರೆ ಅವುಗಳಲ್ಲಿ ಯಾವುವು ಧಾರವಾಡ ಶಿಲಾವರ್ಗದ ಯಾವ ವಿಭಾಗಕ್ಕೆ ಪರಸ್ಪರ ಸಂಬಂಧಪಟ್ಟವು ಎಂಬುದನ್ನು ಖಚಿತವಾಗಿ ತಿಳಿಯಲು ಹೆಚ್ಚಿನ ಪರಿಶೋಧನೆಗಳು ನಡೆಯಬೇಕಾಗಿವೆ.

**ಆರ್ಥಿಕ ಖನಿಜಗಳು :** ಧಾರವಾಡ ಶಿಲಾವರ್ಗ ಕರ್ನಾಟಕದಲ್ಲಿ ದೊರೆಯುವ ಚಿನ್ನ, ಕಬ್ಬಿಣ, ಕ್ರೋಮಿಯಮ್, ಮ್ಯಾಂಗನೀಸ್, ಸೀಸ ಮತ್ತು ಸುರಮ ಲೋಹ ಖನಿಜಗಳ ಅದುರುಗಳನ್ನೂ ಕಲ್ನಾರು, ಕುರುಡ, ಗಾರ್ನೆಟ್, ಗ್ರಾಫೈಟ್, ವಿವಿಧ ಸುಣ್ಣಕಲ್ಲುಗಳು, ಮ್ಯಾಗ್ನಸೈಟ್, ಕಯನೈಟ್, ಸಿಲ್ಲಿಮನೈಟ್ ಮುಂತಾದ ಅನೇಕ ಲೋಹೇತರ ಉಪಯುಕ್ತ ಖನಿಜಗಳನ್ನೂ ಒಳಗೊಂಡಿದೆ.

*

**ಧಾರೇಶ್ವರ:** ಉತ್ತರ ಕನ್ನಡ ಜಿಲ್ಲೆ ಕುಮಟ ತಾಲ್ಲೂಕಿನ ಒಂದು ಗ್ರಾಮ. ಪ್ರಾಚೀನ ಧಾರ್ಮಿಕ ಕ್ಷೇತ್ರ. ಗೋಕರ್ಣ ಸಂಬಂಧವಾದ ಪಂಚಕ್ಷೇತ್ರಗಳಲ್ಲೊಂದು. ಕುಮಟದಿಂದ 5ಕಿಮೀ ದೂರದಲ್ಲಿದೆ.

ಈ ಸ್ಥಳ ಪೌರಾಣಿಕ ಹಿನ್ನೆಲೆಯನ್ನು ಹೊಂದಿದೆ. ರಾವಣ ಗೋಕರ್ಣದಲ್ಲಿ ನೆಲಕಂಡ ಶಿವನ ಆತ್ಮಲಿಂಗವನ್ನು ಕೀಳಲು ಪ್ರಯತ್ನಿಸಿದಾಗ ಆ ಲಿಂಗಕ್ಕೆ ಕಟ್ಟಿದ್ದ ಗಟ್ಟಿಯಾದ ದಾರ ಕಿತ್ತುಬಂತೆಂದೂ ಅದನ್ನು ದೂರಕ್ಕೆ ಎಸೆದಾಗ ಅದು ಬಿದ್ದ ಸ್ಥಳವೇ ಧಾರೇಶ್ವರವೆಂದು ಹೆಸರಾಯಿತೆಂದೂ ಪ್ರತೀತಿ. ಇಲ್ಲಿನ ಧಾರೇಶ್ವರ ದೇವಾಲಯ ತರುವಾಯದ ಕಲ್ಯಾಣ ಚಾಳುಕ್ಯರ ಕಾಲದ ಬೃಹತ್ ರಚನೆಯಾಗಿದೆ. ಇದರಲ್ಲಿ ಗರ್ಭಗೃಹ, ಅರ್ಧ ಮಂಟಪ, ಎರಡು ನವರಂಗಗಳು ಮತ್ತು ಒಂದು ಮುಖಮಂಟಪವಿದೆ. ಗರ್ಭಗೃಹ ನಕ್ಷತ್ರಾಕಾರದಲ್ಲಿದ್ದು ವೇಸರ ಶೈಲಿಯ ಶಿಖರವನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ನವರಂಗದ ಎಡ ಭಾಗದಲ್ಲಿ ಗೋಪಾಲಕೃಷ್ಣನ ವಿಗ್ರಹವಿದ್ದರೆ, ಗರ್ಭಗೃಹದ ಪ್ರವೇಶ ದ್ವಾರದಲ್ಲಿ ದುರ್ಗಾ ಮತ್ತು ಗಣಪತಿ ವಿಗ್ರಹಗಳಿವೆ. ಗರ್ಭಗೃಹದ ಮೇಲೆ ನಾಲ್ಕು ಹಂತಗಳಾಗಿ ನಿರ್ಮಿಸಿರುವ ಶಿಖರದಲ್ಲಿ ಭೈರವ, ಶಿವ ಮತ್ತು ನೃತ್ಯಕಾಳಿಯ ಭವ್ಯ ವಿಗ್ರಹಗಳಿವೆ. ದೇವಾಲಯದ ಬಲಮೂಲೆಯಲ್ಲಿ ಕಾಲಭೈರವನ ಸಣ್ಣ ಗುಡಿಯಿದೆ.

1083 ರ ಶಾಸನವೊಂದು ದೇವಾಲಯದ ಬಳಿ ದೊರೆತಿದ್ದು ಹೈವನರಸನ ರಾಣಿ ಪಟ್ಟಮಹಾದೇವಿ ಭದ್ಬಬ್ಬರಸಿಯು ದೇವಾಲಯಕ್ಕೆ ನೀಡಿದ ದಾನವನ್ನು ದಾಖಲಿಸಲಾಗಿದೆ. ಇನ್ನೊಂದು ಶಾಸನ ವಿಜಯನಗರದ ಎರಡನೆಯ ದೇವರಾಯನ ಕಾಲಕ್ಕೆ ಸೇರಿದ್ದು ಹಾಳಾಗಿದೆ. ಸಮೀಪದ ಕೆರೆಯ ಬಳಿ ಕೆಲವು ವೀರಗಲ್ಲುಗಳು ಕಂಡುಬರುತ್ತವೆ. ಪ್ರವಾಸಿ ಬುಕ್‌ನಾನ್ 1801 ರಲ್ಲಿ ಈ ಸ್ಥಳಕ್ಕೆ ಭೇಟಿ ನೀಡಿದ್ದ. ಎರಡನೆಯ ದೇವರಾಯ ಮತ್ತು ಸಾಳ್ವ ಕೃಷ್ಣದೇವರಾಯ ಈ ದೇವಾಲಯಕ್ಕೆ ದಾನ ನೀಡಿ ಹೊರಡಿಸಿದ ಎರಡು ತಾಮ್ರ ಶಾಸನಗಳ ಬಗ್ಗೆ ಈತ ಪ್ರಸ್ತಾಪಿಸಿದ್ದಾನೆ. ಸಂಕ್ರಾಂತಿಯಲ್ಲಿ ಇಲ್ಲಿ ದೊಡ್ಡ ರಥೋತ್ಸವ ಜರುಗುತ್ತದೆ. ಶಿವರಾತ್ರಿಯಂದು ವಿಶೇಷ ಪೂಜೆ ನಡೆಯುತ್ತದೆ.

ದೇವಾಲಯದ ಮುಂದೆ ವಿಶಾಲವಾದ ರಥಬೀದಿ ಇದ್ದು ಇಲ್ಲಿ ಒಂದು ಭಿನ್ನ ಯೋಗಾನಂರಸಿಂಹಮೂರ್ತಿ ಇದೆ. ರಥ ಮರದಿಂದ ರಚಿತವಾಗಿದ್ದು ಸುಂದರ ಕೆತ್ತನೆ ಕೆಲಸದಿಂದ ಕೂಡಿದೆ. ಧಾರೇಶ್ವರದ ಬಳಿಯ ಗುಡ್ಡದಲ್ಲಿ ರಾವಣಖಂಡವೆಂಬ ಸ್ಥಳವಿದ್ದು ಅಲ್ಲಿ ಬೂದಿಗುಡ್ಡೆಗಳಿವೆ. ರಾವಣ ಇಲ್ಲಿ ಯಜ್ಞಗಳನ್ನು ಮಾಡಿದನೆಂದು ಪ್ರತೀತಿ. ಈ ಸ್ಥಳದ ಸಮೀಪದಲ್ಲಿ ಕುಮಟ ರಸ್ತೆಯಲ್ಲಿ ನಾಗಶೃಂಗ ಪರ್ವತವಿದೆ. ಸ್ಥಳೀಯವಾಗಿ ಇದನ್ನು ಸುಬ್ರಹ್ಮಣ್ಯ ಗುಹೆ ಎಂದು ಕರೆಯುತ್ತಾರೆ. ಇಲ್ಲಿನ ಚಿಕ್ಕ ಕೊಳ ನಾಗತೀರ್ಥ ಎಂದು ಹೆಸರಾಗಿದ್ದು ಇಲ್ಲಿ ಅಸಂಖ್ಯ ನಾಗರಕಲ್ಲುಗಳಿವೆ. ಅಗಸ್ತ್ಯ ಗುಹೆ, ಗೋಪಾಲಕೃಷ್ಣ ಮತ್ತು ಯೋಗಾನರಸಿಂಹ ಗುಡಿಗಳಿವೆ. ಯಕ್ಷಗಾನ ಕೋಗಿಲೆ ಎಂದು ಪ್ರಸಿದ್ಧರಾದ ಸುಬ್ರಹ್ಮಣ್ಯ ಧಾರೇಶ್ವರ ಈ ಊರಿನವರು. (ಎಸ್.ಎಚ್.ಇ.)

**ಧುತ್ತರಗಿ, ಪಿ.ಬಿ. :** 1929- . ವೃತ್ತಿ ರಂಗಭೂಮಿಯ ನಟ, ನಾಟಕಕಾರ. ಪುಂಡಲೀಕಗೌಡ ಬಸವನಗೌಡ ಧುತ್ತರಗಿ ಇವರ ಪೂರ್ಣ ಹೆಸರು. ಇಂದಿನ ಬಾಗಲಕೋಟೆ ಜಿಲ್ಲೆಯ ಸೂಳೇ ಭಾವಿಯಲ್ಲಿ 1929 ಜೂನ್ 15 ರಂದು ಜನಿಸಿದರು. ಇವರ ತಂದೆ ಬಸವನಗೌಡ, ತಾಯಿ ಸಂಕಮ್ಮ. ಇವರ ಪೂರ್ವಜರು ಗುಲ್ಬರ್ಗ ಜಿಲ್ಲೆಯ ಧುತ್ತರಗಿಯಿಂದ ವಲಸೆ ಬಂದುದರಿಂದ ಅದೇ ಹೆಸರು ಮನೆತನಕ್ಕೆ ಉಳಿಯಿತು. ನೇಕಾರಿಕೆ ಮತ್ತು ಬಟ್ಟೆ ವ್ಯಾಪಾರ ಇವರ ಮನೆತನದ ಮೂಲವೃತ್ತಿ.

ಬಡತನದ ದೆಸೆಯಿಂದಾಗಿ ಬಸವನ ಗೌಡರಿಗೆ ಮಗನನ್ನು ಓದಿಸುವುದು ಸಾಧ್ಯವಾಗಲಿಲ್ಲ. ನಟನೆಯ ಬಗ್ಗೆ ಒಲವಿದ್ದ ಬಸವನಗೌಡರು ಹಂದಿಗನೂರು ಸಿದ್ರಾಮಪ್ಪನವರ ಕಂಪನಿಗೆ ಸೇರಿ ನಟರಾದರು. ಇದರಿಂದ ಮಗ ಖ್ಯಾತ ನಾಟಕಕಾರನಾಗಲು ಸಾಧ್ಯವಾಯಿತು.

ಹಂದಿಗನೂರು ಸಿದ್ರಾಮಪ್ಪನವರ ನಾಟಕ ಮಂಡಳಿಯಲ್ಲಿ ತಮ್ಮ ಅಂತರಂಗದ ಪ್ರತಿಭೆಯನ್ನು ಗುರುತಿಸಿಕೊಳ್ಳುವ ಸದವಕಾಶ ಧುತ್ತರಗಿಯವರಿಗೆ ದೊರೆಯಿತು. ಹೀಗಾಗಿಯೇ ಎಲ್ಲರ ಅಚ್ಚುಮೆಚ್ಚಿನವರಾದರು. ಕಂಪನಿ ಸಹವಾಸ ಬಹುದಿನ ಅಲ್ಲವೆಂಬ ವ್ಯವಹಾರಜ್ಞಾನ ಬಾಲಕ ಮಂಡಲೀಕನಿಗೆ ಗೊತ್ತಾಗಲು ಹೆಚ್ಚು ಸಮಯ ಹಿಡಿಯಲಿಲ್ಲ. ಹೀಗಾಗಿ ಉದರಪೋಷಣೆಗಾಗಿ ನೇಕಾರಿಕೆಯನ್ನು ಮುಂದುವರಿಸಿ ನಾಟಕದ ಗೀಳಿಗೆ ಓದುವ ಗೀಳನ್ನು ಬೆಳೆಸಿಕೊಡು ಬಡತನದಲ್ಲೂ ಆತ್ಮತೃಪ್ತಿಯನ್ನು ಕಂಡುಕೊಂಡರು. ಓದುವ ಗೀಳನ್ನು ಹಿಂಗಿಸುವ ಸಲುವಾಗಿ ಮಿತ್ರರ ಜೊತೆ ಸೇರಿ ರವೀಂದ್ರ ಗ್ರಂಥಾಲಯವನ್ನು ಹುಟ್ಟುಹಾಕಿದರು.

ನಾಟಕದ ಮೂಲಕ ಕಲಾಮೌಲ್ಯ ಮತ್ತು ಜೀವನಮೌಲ್ಯಗಳನ್ನು ಬೆಳೆಯಿಸುವ ಕಾಯಕಕ್ಕೆ ಪಾವಿತ್ರ್ಯವನ್ನು ತಂದುಕೊಡುವಲ್ಲಿ ಇವರು ನಿಷ್ಠೆಯಿಂದ ಸೇವೆಸಲ್ಲಿಸಿದ್ದಾರೆ. ಚಿತ್ತರಗಿಯ ಶ್ರೀ ಕುಮಾರವಿಜಯ ನಾಟ್ಯಸಂಘಕ್ಕೆ ನ್ಯಾಯಾಧೀಶ ಎಂಬ ನಾಟಕ ರಚಿಸಿಕೊಟ್ಟರು. ಈ ನಾಟಕ ಪ್ರದರ್ಶಿಸಿದ ಕಂಪನಿಗೂ ನಾಟಕಕಾರರಿಗೂ ಒಳ್ಳೆಯ ಹೆಸರು ಬಂತು. ಸಂಸಾರದ ನಿರ್ವಹಣೆ ಬಹುದೊಡ್ಡ ಸಮಸ್ಯೆಯಾಗಿ ತಮ್ಮ ನಾಟಕದ ಹಸ್ತಪ್ರತಿಗಳನ್ನು ಇಲಕಲ್ ಮತ್ತು ಗೋಕಾಕದ ಕಂಪನಿಗೆ ಮಾರಿದರು. ಹಣ ತರುವಷ್ಟರಲ್ಲಿಯೇ ಇವರ ಪತ್ನಿ ನಿಧನರಾದದ್ದು ಇವರ ಬದುಕಿನ ದೊಡ್ಡ ದುರಂತ.

ಇವರು ರಚಿಸಿದ ಮಲಮಗಳು ನಾಟಕ ಗುಬ್ಬಿಕಂಪನಿಯೂ ಸೇರಿದಂತೆ ಕರ್ನಾಟಕದ ಎಲ್ಲ ಕಂಪನಿಗಳಲ್ಲೂ ಜಯಭೇರಿ ಬಾರಿಸಿ ಲಕ್ಷಕ್ಕೂ ಮೀರಿದ ಪ್ರಯೋಗ ಕಂಡು ವೃತ್ತಿರಂಗಭೂಮಿಯ ಇತಿಹಾಸದಲ್ಲಿ ದಾಖಲೆ ಸ್ಥಾಪಿಸಿತು. ಇದರೊಂದಿಗೆ ಇವರಿಗೆ ಹೆಸರು ತಂದಿದ್ದು ಸಂಪತ್ತಿಗೆ ಸವಾಲ್ ಎಂಬ ನಾಟಕ. ನಾಡಿನಾದ್ಯಂತ ಅಪಾರ ಜನಮನ್ನಣೆ ಪಡೆದು ಚಲನಚಿತ್ರವಾಗಿ ನಟ ರಾಜಕುಮಾರರನ್ನು ಮೇರು ನಟನನ್ನಾಗಿಸಿತು. ಈ ಚಲನಚಿತ್ರ ತೆಲಗು, ತಮಿಳು ಹಾಗೂ ಮಲೆಯಾಳಂ ಭಾಷೆಗಳಲ್ಲಿ ಮಿಂಚಿದ್ದು ಒಂದು ಇತಿಹಾಸವೆನಿಸಿದೆ.

ಮನೆ ಎರಡು ಮನ ಒಂದು ಎಂಬ ನಾಟಕ ಬರೆದು ಬನಶಂಕರಿಯಲ್ಲಿ ತಾಲೀಮು ನಡೆಸುತ್ತಿದ್ದಾಗ (1968) ಖ್ಯಾತನಟಿ ಸರೋಜಮ್ಮ ಅವರೊಂದಿಗೆ ಪ್ರಣಯಾಂಕುರವಾಗಿ ಅವರನ್ನು ವಿವಾಹವಾದರು. ಅನಂತರ ತ್ರಿಪುರಸುಂದರಿ ನಾಟ್ಯ ಸಂಘವನ್ನು ಕಟ್ಟಿಕೊಂಡು ತಾವೇ ಬರೆದ ನಾಟಕಗಳನ್ನು ರಂಗದ ಮೇಲೆ ತರುವ ಹೊಸ ಅಭಿಯಾನ ಆರಂಭಿಸಿದರು. ಇದರಿಂದಾಗಿ ಆರ್ಥಿಕ ಭದ್ರತೆ ದೊರೆಯಿತು. ಮತ್ತೆ ಅದೇ ವರ್ಷ ಕಂಪನಿಯ ಹೆಸರನ್ನು ಶ್ರೀ ವಿಜಯ ಕಲಾ ನಾಟ್ಯ ಸಂಘ, ಇಲಕಲ್ಲ ಎಂದು ಬದಲಾಯಿಸಿ ಹೆಸರಾಂತ ಗೋಕಾಕದ ಕಂಪನಿಗೂ ಸವಾಲೊಡ್ಡಿದರು.

ಜೀವನಾನುಭವವನ್ನು ನಾಟಕವನ್ನಾಗಿಸುವ ಚತುರತೆ ಇವರಿಗೆ ಕರಗತವಾಗಿತ್ತು. ಇವರು 31 ಸಾಮಾಜಿಕ, 9 ಐತಿಹಾಸಿಕ, 5 ಪೌರಾಣಿಕ ಹಾಗೂ 7 ಭಕ್ತಿ ಪ್ರಧಾನ ನಾಟಕಗಳನ್ನು ರಚಿಸಿ ರಂಗಸಾಹಿತ್ಯಕ್ಕೆ ಹೊಸ ಮೆರುಗು ನೀಡಿದರು. ಇದರೊಂದಿಗೆ ರಂಗಭೂಮಿಯಲ್ಲಿ ಯಶಸ್ವಿಯಾದ ಸಂಪತ್ತಿಗೆ ಸವಾಲ್, ಸೊಸೆ ತಂದ ಸೌಭಾಗ್ಯ (ಮೂಲ: ಚಿಕ್ಕ ಸೊಸೆ) ಎಂಬ ನಾಟಕಗಳು ಬೆಳ್ಳಿಪರದೆಯ ಮೇಲೆ ಮೂಡಿಬಂದದ್ದೂ ಇನ್ನೊಂದು ವಿಶೇಷ.

ನಾಡಿನ ಹೆಸರಾಂತ 35 ಕಂಪನಿಗಳು ಇವರ ನಾಟಕಗಳನ್ನು ಆಡಿ ಪ್ರೇಕ್ಷಕರ ಮನ ತಣಿಸಿವೆ. ಇವರ ನಾಟಕದ ಸವಿಯನ್ನುಂಡ ಅಭಿಮಾನಗಳು ಇವರಿಗೆ ನಾಟಕಸಾಹಿತ್ಯ ರತ್ನ, ನಾಟ್ಯ ಕವಿ ಪ್ರಕಾಶ, ನಾಟ್ಯಕವಿಪುಂಗವ, ಕವಿಶ್ರೇಷ್ಠರವಿಕೀರ್ತಿ ಇತ್ಯಾದಿ ಬಿರುದುಗಳನ್ನಿತ್ತು ಸನ್ಮಾನಿಸಿದ್ದಾರೆ. ರಾಜ್ಯ ಸರ್ಕಾರ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ. ವೃತ್ತಿ ರಂಗಭೂಮಿಯಲ್ಲಿ ಗಣನೀಯ ಸೇವೆ ಸಲ್ಲಿಸಿದವರಿಗೆ ನೀಡಲಾಗುವ ಪ್ರತಿಷ್ಠಿತ ಡಾ. ಗುಬ್ಬಿವೀರಣ್ಣ ಪ್ರಶಸ್ತಿಯನ್ನೂ ಇವರಿಗೆ ನೀಡಲಾಗಿದೆ (1999). (ಕೆ.ಪಿ.ಜಿ.)

**ಧ್ರುವ :** ರಾಷ್ಟ್ರಕೂಟವಂಶದ ಶೂರ ದೊರೆ (ಸು.780-93) 1ನೆಯ ಕೃಷ್ಣನ ಕಿರಿಯ ಮಗ. ಇವನಿಗೆ ನಿರುಪಮ, ಶ್ರೀ ವಲ್ಲಭ ಮತ್ತು

ಕಲಿವಲ್ಲಭ ಎಂಬ ಬಿರುದುಗಳಿದ್ದುವು. ಇವನ ಅಣ್ಣನಾದ 2ನೆಯ ಗೋವಿಂದ ಅಸಮರ್ಥನೂ ವಿಷಯಲೋಲುಪನೂ ಆಗಿದ್ದರಿಂದ ನಾಸಿಕ ಪ್ರಾಂತ್ಯದಲ್ಲಿ ಅಧಿಕಾರ ವಹಿಸಿದ್ದ ಈತ ಮೊದಲು ಆತನನ್ನು ಧಿಕ್ಕರಿಸಿ, ಅನಂತರ ದಂಗೆಯೆದ್ದು ಅವನಿಂದ ರಾಜ್ಯವನ್ನು ಕಸಿದು ತನ್ನ ಪ್ರಭುತ್ವವನ್ನು 780ರಲ್ಲಿ ಆರಂಭಿಸಿದ. ದೊರೆಯಾದ ಅನಂತರ ಹಿಂದಿನ ಅಂತರ್ಯುದ್ಧಕಾಲದಲ್ಲಿ ತನ್ನ ಸೋದರ ಇಮ್ಮಡಿ ಗೋವಿಂದನ ಪಕ್ಷ ವಹಿಸಿದ್ದ ರಾಜರಿಗೆ ಬುದ್ಧಿ ಕಲಿಸಬೇಕೆಂಬ ಉದ್ದೇಶದಿಂದ ಮೊದಲು ಗಂಗ ಶ್ರೀಪುರುಷನನ್ನು ಸೋಲಿಸಿ ಆತನ ಮಗ ಯುವರಾಜನಾಗಿದ್ದ ಶಿವಮಾರನನ್ನು ಸೆರೆಯಲ್ಲಿಟ್ಟ. ಗಂಗವಾಡಿಯನ್ನು ರಾಷ್ಟ್ರಕೂಟ ಸಾಮ್ರಾಜ್ಯಕ್ಕೆ ಸೇರಿಸಿಕೊಂಡ. ಅಲ್ಲಿ ತನ್ನ ಮಗ ರಣಾವಲೋಕ ಸ್ತಂಭನನ್ನು ಪ್ರಾಂತ್ಯಾಧಿಕಾರಿಯಾಗಿ ನೇಮಿಸಿದ. ಇವನ ರಾಜ್ಯಕ್ಕೆ ದಕ್ಷಿಣದಲ್ಲಿ ಕಾವೇರಿ ನದಿ ಎಲ್ಲೆಯಾಯಿತು. ಅಲ್ಲಿಂದ ಮುನ್ನಡೆದು ಪಲ್ಲವ ದಂತಿವರ್ಮನನ್ನು ಸೋಲಿಸಿ ಕಪ್ಪವನ್ನು ಪಡೆದ (ಈ ಯುದ್ಧಗಳಲ್ಲಿ ವೆಂಗಿಯ 4ನೆಯ ವಿಷ್ಣುವರ್ಧನ ಈತನಿಗೆ ಸಹಾಯಕನಾಗಿದ್ದಂತೆ ತೋರುತ್ತದೆ).

ಗಂಗರು ಮತ್ತು ಪಲ್ಲವರನ್ನು ಸೋಲಿಸಿ, ವೆಂಗಿಯ ಚಾಳುಕ್ಯರನ್ನು ಸಾಮಂತರ ಮಟ್ಟದಲ್ಲಿಟ್ಟುಕೊಂಡಿದ್ದರಿಂದಾಗಿ ಧ್ರುವ ದಕ್ಷಿಣಾಪಥದ ಅದ್ವಿತೀಯ ನಾಯಕನಾದ. ಈ ಕಾಲದಲ್ಲಿ ಉತ್ತರ ಭಾರತದಲ್ಲಿ ಗೂರ್ಜರ ಪ್ರತೀಹಾರ ವತ್ಸರಾಜ ಕನೂಜಿನ ಇಂದ್ರಾಯುಧನನ್ನು ಸೋಲಿಸಿದ್ದ (ಸು.784). ಇದರಿಂದ ವತ್ಸರಾಜನ ವಿರೋಧಿಯಾದ ಬಂಗಾಲದ ಧರ್ಮಪಾಲ ಅಸೂಯೆಗೊಂಡು ವತ್ಸರಾಜನ ಮೇಲೆ ದಂಡೆತ್ತಿ ಬಂದ. ಈ ಯುದ್ಧದಲ್ಲಿ ಧರ್ಮಪಾಲ ಸೋತರೂ ತನ್ನ ಛಲವನ್ನು ಬಿಡದೆ ಪುನಃ ಧಾಳಿಮಾಡುವ ಸನ್ನಾಹದಲ್ಲಿದ್ದ. ಹಿಂದೆ ವತ್ಸರಾಜ ಅಂತರ್ಯುದ್ಧದಲ್ಲಿ ಅಣ್ಣ ಗೋವಿಂದನಿಗೆ ಸಹಾಯ ಮಾಡಿದ್ದರಿಂದ ಅವನ ಮೇಲೆ ಛಲ ಸಾಧಿಸಲು ಇದೇ ಸುಸಂದರ್ಭವೆಂದರಿತ ಧ್ರುವ ತನ್ನ ಮಗ ಗೋವಿಂದನನ್ನು ಜೊತೆಗಿಟ್ಟು ಕೊಂಡು ಉತ್ತರಭಾರತಕ್ಕೆ ನುಗ್ಗಿದ. ವತ್ಸರಾಜ ಗಂಗಾ ಯಮುನಾ ಬಯಲಿನಲ್ಲಿ ಕಾರ್ಯನಿರತನಾಗಿದ್ದುದರಿಂದ ಮಾಳವದೇಶ ಸುಲಭವಾಗಿ ಧ್ರುವನ ಕೈವಶವಾಯಿತು. ಅನಂತರ ಮುಂದೆ ನಡೆದು ಪ್ರಾಯಶಃ ಝಾನ್ಸಿ ಬಳಿ ನಡೆದ ಕದನದಲ್ಲಿ ವತ್ಸರಾಜನ ಸೈನ್ಯವನ್ನು ಧೂಳೀಪಟ ಮಾಡಿದ. ವತ್ಸರಾಜ ರಾಜಾಸ್ಥಾನದ ಮರಳುಗಾಡಿನಲ್ಲಿ ತಲೆಮರೆಸಿಕೊಂಡ. ಅತ್ತ ಧರ್ಮಪಾಲ ಗಂಗಾ ಬಯಲಿನೆಡೆಗೆ ಮುಂಬರಿಯುತ್ತಿದ್ದ. ಧ್ರುವ ಆತನನ್ನೂ ಸಂಧಿಸಿ ಅವನ ಬಲವನ್ನು ಪುಡಿಮಾಡಿ ಓಡಿಸಿ ಅಪಾರ ಐಶ್ವರ್ಯವನ್ನು ದೋಚಿದ. ಧ್ರುವ ತನ್ನ ಸೈನ್ಯ ಕಾರ್ಯಚರಣೆಗಳನ್ನು ನಿಲ್ಲಿಸಿ ಹಿಂದಿರುಗಿದ. ಇವುಗಳಿಂದ ಹೆಚ್ಚಿನ ಪ್ರದೇಶಗಳೇನೂ ದಕ್ಷಿಣಾಪಥದ ರಾಷ್ಟ್ರಕೂಟ ರಾಜ್ಯಕ್ಕೆ ಸೇರಲಿಲ್ಲವಾದರೂ ಅದ್ವೀತಿಯ ಸಾಮ್ರಾಟನಾಗಿದ್ದ ಧ್ರುವ ಉತ್ತರಭಾರತದ ಪ್ರಬಲ ಶಕ್ತಿಗಳಾಗಿದ್ದ ಗೂರ್ಜರ ಪ್ರತೀಹಾರ ಮತ್ತು ದೊರೆಗಳನ್ನು ಬಗ್ಗಿಸಿ ಇಡೀ ಭರತಖಂಡದ ಅಜೇಯಪ್ರಭುವಾಗಿ ಸ್ಥಿರಗೊಂಡ.

ವೆಂಗಿಯ ಚಾಳುಕ್ಯ ಮನೆತನದ ಶೀಲಭಟ್ಟಾರಿಕಾ ಧ್ರುವನ ಪಟ್ಟದರಿಸಿ, ಇವನಿಗೆ ಕರ್ಕ, ಸ್ತಂಭ, ಗೋವಿಂದ ಮತ್ತು ಇಂದ್ರ ಎಂಬ ಮಕ್ಕಳಿದ್ದರು. ರಾಷ್ಟ್ರಕೂಟ ರಾಜ್ಯದ ಉತ್ತರಾಧಿಕಾರಿಯನ್ನು ನೇಮಿಸುವುದು ಧ್ರುವನ ಜೀವಿತದ ಕೊನೆಗಾಲದ ಮುಖ್ಯ ಕೆಲಸವಾಯಿತು. ಹಿರಿಯ ಮಗ ಕರ್ಕ ತಂದೆಗಿಂತಲೂ ಮುಂಚೆಯೇ ಸತ್ತಿದ್ದನಾದ್ದರಿಂದ ರಾಜ್ಯ ಸ್ತಂಭನಿಗೆ ಸೇರಬೇಕಾಗಿತ್ತು. ಆದರೆ ಉತ್ತರಭಾರತದ ದಿಗ್ವಿಜಯಗಳಲ್ಲಿ ಪಾಲ್ಗೊಂಡು ಅಸೀಮಶೌರ್ಯ ಮತ್ತು ಮುತ್ಸದ್ದಿತನವನ್ನು ಪ್ರದರ್ಶಿಸಿದ್ದ ಮೂರನೆಯ ಮಗ 3ನೆಯ ಗೋವಿಂದ ರಾಷ್ಟ್ರಕೂಟ ಸಾಮ್ರಾಜ್ಯಕ್ಕೆ ಸಮರ್ಥ ಉತ್ತರಾಧಿಕಾರಿಯಾಗಬಲ್ಲನೆಂದು ಧ್ರುವ ತೀರ್ಮಾನಿಸಿದ. ಸ್ಥಂಭನಿಗೆ ಗಂಗವಾಡಿಯ ಅಧಿಕಾರವನ್ನು ಇತ್ತು ಗೋವಿಂದನಿಗೆ ಯುವರಾಜ ಪಟ್ಟಕಟ್ಟಿದ (ಸು.791-92). ಗೋವಿಂದನಿಗೆ ಸಹಕಾರಿಯಾಗಿದ್ದ 4ನೆಯ ಮಗ ಇಂದ್ರನಿಗೆ ಮಾಳವ ಮತ್ತು ಗುಜರಾತ್ ಪ್ರಾಂತ್ಯಗಳ ಅಧಿಕಾರವನ್ನು ವಹಿಸಿದ. ಸು. 793ರಲ್ಲಿ ಧ್ರುವ ಮೃತನಾದ. (ಎಚ್.ಆರ್.ಆರ್.)

**ಧೋಂಡೊ ನರಸಿಂಹ ಮುಳಬಾಗಿಲ :** (1848-1896). ಹೊಸ ಗನ್ನಡದ ಅರುಣೋದಯ ಕಾಲದಲ್ಲಿ ಲೇಖಕರು. ನೂರಾರು ವಿದ್ಯಾರ್ಥಿಗಳಿಗೆ ಕನ್ನಡ ದೀಕ್ಷೆಯನ್ನು ಕೊಟ್ಟವರು. ಧಾರವಾಡದ ಟ್ರೇನಿಂಗ್ ಕಾಲೇಜಿನಲ್ಲಿ ಶಿಕ್ಷಣ ಪಡೆದ ಇವರು ಮೂರು ದಶಕಗಳ ಕಾಲ ಅಧ್ಯಾಪನವೃತ್ತಿಯಲ್ಲಿದ್ದರು. ಇವರ ಕನ್ನಡ ಭಾಷಾಪರಿಣತಿಯನ್ನು ಕಂಡು ಆಗಿನ ಮುಂಬಯಿ ಸರ್ಕಾರದ ಶಿಕ್ಷಣಖಾತೆ 1882ರಲ್ಲಿ ಇವರನ್ನು ಟ್ರೇನಿಂಗ್ ಕಾಲೇಜಿನ ಕನ್ನಡ ಅಧ್ಯಾಪಕರಾಗಿ ನೇಮಕ ಮಾಡಿತು. ಆಗ ಉತ್ತರ ಕರ್ನಾಟಕದ ಸಾಂಸ್ಕೃತಿಕ ವಾತಾವರಣದಲ್ಲಿ ಮರಾಠಿಯ ಗಾಳಿ ಭರದಿಂದ ಬೀಸುತ್ತಿತ್ತು. ಇವರು ನೂರಾರು ಶಿಕ್ಷಕ ವಿದ್ಯಾರ್ಥಿಗಳಿಗೆ ಕನ್ನಡ ದೀಕ್ಷೆಯನ್ನಿತ್ತು ಗ್ರಾಮಾಂತರದಲ್ಲಿಯೂ ಕನ್ನಡಾಭಿಮಾನ ನೆಲೆಗೊಳ್ಳುವುದಕ್ಕೆ ಕಾರಣರಾದರು. ತಮ್ಮ ವೈದುಷ್ಯ ಹಾಗೂ ಸಾತ್ತ್ವಿಕ ಸ್ವಭಾವದಿಂದಾಗಿ ಇವರು ವಿದ್ಯಾರ್ಥಿಗಳಿಗೆ ಅಚ್ಚು ಮೆಚ್ಚಿನ ಗುರುಗಳಾಗಿದ್ದರು.

ಇವರ ಒಲವು ಪದ್ಯರಚನೆಯ ಕಡೆಗೆ ಹೆಚ್ಚಾಗಿತ್ತು. ತೇಜೋನೃಸಿಂಹ, ಎಂಬುದು ಇವರ ಕಾವ್ಯನಾಮ. ಹಿತೋಪದೇಶವನ್ನು ಕಾವ್ಯರೂಪದಲ್ಲಿ ರಚಿಸಿದ್ದಾರೆ. ಬಹುಶಃ ಇದು ಇವರ ಮೊದಲ ಕೃತಿ. ಸಾಮಾನ್ಯ ಜನರ ಮನರಂಜನಾರ್ಥವಾಗಿ ಕನ್ನಡದಲ್ಲಿ ಗ್ರಂಥಗಳಿಲ್ಲ ಎಂಬುದನ್ನು ಮನಗಂಡು, ಸಂಸ್ಕೃತ ನಾಟಕಗಳನ್ನು ಅನುವಾದಿಸ ಬಯಸಿದರು. ಭವಭೂತಿಯ ಉತ್ತರರಾಮಚರಿತ್ರೆಯನ್ನು ಅನುವಾದಿಸಿದರು. ಹದಿನಾಲ್ಕು ವರ್ಷಗಳ ಕಾಲ ಹಸ್ತಪ್ರತಿಯಾಗಿಯೇ ಉಳಿದರು. ಇದಕ್ಕೆ ಸರ್ಕಾರದಿಂದ 200ರೂ. ಬಹುಮಾನ ದೊರೆತಂದರಿಂದ ಅನಂತರ ಇದು ಪ್ರಕಟವಾಯಿತು. ಆಗ ಸ್ಥಾಪನೆ ಗೊಂಡಿದ್ದ ಕರ್ನಾಟಕ ವಿದ್ಯಾವರ್ಧಕ ಸಂಘ ಈ ಕೃತಿಯನ್ನೂ ಬೇರೆ ಕೆಲವನ್ನೂ ಪ್ರಕಟಿಸಿ ಇವರ ಗ್ರಂಥರಚನೆಗೆ ಪ್ರೋತ್ಸಾಹವನ್ನಿತ್ತಿತ್ತು.

ಅನಂತರದಲ್ಲಿ ಇವರು ವೇಣೀಸಂಹಾರ 1883. ಮೃಚ್ಛಕಟಿಕ ಹಾಗೂ ಮಾಳವಿಕಾಗ್ನಿಮಿತ್ರ ಕೃತಿಗಳನ್ನು ಅನುವಾದಿಸಿದ್ದರು.

ವ್ಯಾಕರಣ, ಛಂದಸ್ಸುಗಳ ಮೇಲೆ ಅಚ್ಚುಕಟ್ಟಾದ ಹಾಗೂ ವ್ಯವಸ್ಥಿತವಾದ ನಿರೂಪಣೆಯುಳ್ಳ ಗ್ರಂಥಗಳನ್ನೂ ಇವರು ಬರೆದಿದ್ದಾರೆ. ಇವರ ಕನ್ನಡ ಕೈಪಿಡಿ ಕನ್ನಡ 1890 ವ್ಯಾಕರಣವನ್ನು ವಿಸ್ತಾರವಾಗಿ ಪ್ರತಿಪಾದಿಸುತ್ತದೆ. ಹಳೆಯ ವ್ಯಾಕರಣ ಪ್ರಕ್ರಿಯೆಗಳನ್ನು ಹೊಸಕಾಲದ ಭಾಷೆಗೆ ಸಮನ್ವಯಗೊಳಿಸಿದುದು ಈ ಕೃತಿಯ ವೈಶಿಷ್ಟ್ಯ. ಇದರಲ್ಲಿ ಅನೇಕ ಕಡೆ ಇವರ ಸ್ವತಂತ್ರ ವಿಚಾರಸರಣಿ ಎದ್ದು ಕಾಣುತ್ತದೆ. ವ್ಯಾಕರಣ ಕ್ಷೇತ್ರದಲ್ಲಿ ಇದೊಂದು ಹಿರಿಯ ಕೃತಿ. ವಿದ್ಯಾರ್ಥಿಗಳಿಗಾಗಿ ಸುಲಭ ಮತ್ತು ಸಂಕ್ಷಿಪ್ತರೂಪದಲ್ಲಿ ಬರೆಯಲಾದ ನುಡಿಗಟ್ಟು 1892 ಇವರ ಇನ್ನೊಂದು ಕೃತಿ. ಮೈಸೂರು ಕಡೆಯಲ್ಲಿ ಬಿ. ಮಲ್ಲಪ್ಪನವರ ಶಬ್ದಾದರ್ಶಕ್ಕೆ ಇದ್ದ ಮಹತ್ವ ಉತ್ತರ ಕರ್ನಾಟಕದಲ್ಲಿ ಇದಕ್ಕೆ ಇತ್ತು.

ಇನ್ನೂ ನೌಕರಿಯಲ್ಲಿರುವಾಗಲೇ ತಮ್ಮ 40ನೆಯ ವಯಸ್ಸಿನಲ್ಲಿ ಇವರು ನಿಧನರಾದರು. (ಎಸ್.ಎಚ್.)

**ನಂಗಪುರಂ ವೆಂಕಟೇಶ ಅಯ್ಯಂಗಾರ್ :** ಇಪ್ಪತ್ತನೆಯ ಶತಮಾನದ ಆರಂಭ ಕಾಲದ ಹಿರಿಯ ಭಾಷಾಸೇವಕರು. ಕನ್ನಡದಲ್ಲಿ ಜನಪ್ರಿಯ ವಿಜ್ಞಾನ ಸಾಹಿತ್ಯ ರಚನೆಗೆ ತೊಡಗಿದ ಮೊದಲಿಗರಲ್ಲೊಬ್ಬರು.ಆಗಿನ ಮೈಸೂರು ಸರ್ಕಾರದ ಪವನಶಾಸ್ತ್ರ ವೀಕ್ಷಣಾಲಯದ ಮುಖ್ಯಸ್ಥರಾಗಿದ್ದರು. ಸಮಾಜಸೇವೆ ಮತ್ತು ಸಾರ್ವಜನಿಕ ಕಾರ್ಯಗಳಲ್ಲೂ ಆಸಕ್ತಿಯುಳ್ಳವರಾಗಿದ್ದ ಇವರು ಬೆಂಗಳೂರಿನ ದೇಶೀಯ ವಿದ್ಯಾಶಾಲೆ, ಅಮೆಚೂರ್ ನಾಟಕ ಸಂಘ, ಶ್ರೀ ರಾಮ ಕೃಷ್ಣಾಶ್ರಮ ಮುಂತಾದ ಹತ್ತಾರು ಸಂಘಸಂಸ್ಥೆಗಳ ಅಭಿವೃದ್ಧಿಗಾಗಿ ಶ್ರಮಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಅಭಿವೃದ್ಧಿಯಲ್ಲಿ ತುಂಬ ಆಸಕ್ತಿ ವಹಿಸಿ ಪರಿಷತ್ತಿನ ಗೌರವ ಕಾರ್ಯದರ್ಶಿಯಾಗಿ (1919-21) ಮತ್ತು ಕೋಶಾಧಿಕಾರಿಯಾಗಿ (1921-26) ಸೇವೆಸಲ್ಲಿಸಿದರು.

ಹೊಸಗನ್ನಡ ಭಾಷಾಭಿವೃದ್ಧಿಯ ಕಾರ್ಯಗಳು ಆರಂಭವಾದಾಗ

ಇವರು ಕನ್ನಡದಲ್ಲಿ ಜನಪ್ರಿಯ ವಿಜ್ಞಾನ ಸಾಹಿತ್ಯದ ಬೆಳೆವಣಿಗೆಗಾಗಿ ಬೆಳ್ಳಾವೆ ವೆಂಕಟನಾರಣಪ್ಪನವರೊಂದಿಗೆ ಕರ್ಣಾಟಕ ವಿಜ್ಞಾನ ಪ್ರಚಾರಿಣೀ ಸಮಿತಿ ಎಂಬ ಸಂಸ್ಥೆಯನ್ನು ಕಟ್ಟಿದರಲ್ಲದೆ ಅವರು ಆರಂಭಿಸಿದ ವಿಜ್ಞಾನ ಎಂಬ ಮಾಸಪತ್ರಿಕೆಗೆ ಕೆಲಕಾಲ ಸಂಪಾದಕರಾಗಿಯೂ ಕೆಲಸ ಮಾಡಿದರು. ವಿಜ್ಞಾನಕ್ಕೆ ಸಂಬಂಧಿಸಿದ ಹಲವು ಲೇಖನಗಳನ್ನು ಇವರು ಬರೆದಿದ್ದಾರೆ. ಇವರು ಬರೆದ ಜ್ಯೋತಿರ್ವಿನೋದಿನಿ ಎಂಬ ಪುಸ್ತಕ 1931ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಯಿತು. ಇವರು ಬಂಗಾಳಿ ಭಾಷೆಯಿಂದ ಕನ್ನಡಕ್ಕೆ ಕೆಲವು ಗ್ರಂಥಗಳನ್ನು ಅನುವಾದಿಸಿದ್ದಾರೆ. ಅವುಗಳಲ್ಲಿ ಕೆಲವು ನಟರಾಜಭಕ್ತ, ನಾಳೆ ಹೋಗುವ ನಂದ ಮತ್ತು ಮೀರಾಬಾಯಿ, ರಾಮಕೃಷ್ಣ ಪರಮಹಂಸರ ಉಪದೇಶ ವಾಕ್ಯಾವಳಿ, ರಾಮಕೃಷ್ಣ ಪರಮಹಂಸರ ವಚನಾಮೃತ (ಮೂರು ಭಾಗಗಳಲ್ಲಿ) ಮತ್ತು ಸ್ವಾಮಿ ವಿವೇಕಾನಂದರ ಪತ್ರಗಳು. (ವಿ.ಎಸ್.)

**ನಂಜ :** ಸು.1725 ಕಪೋತವಾಕ್ಯ ಎಂಬ ಸಾಂಗತ್ಯ ಗ್ರಂಥದ ಕರ್ತೃ. ಈ ಕೃತಿಗೆ ಕಪೋತಚರಿತೆ ಎಂಬ ಹೆಸರೂ ಉಂಟು. ಕರ್ತೃವಿನ ಹೆಸರು ಕೃತಿಯ ಅದ್ಯಂತ್ಯಗಳಲ್ಲೆಲ್ಲೂ ಉಲ್ಲೇಖವಾಗಿಲ್ಲ. ಆದರೆ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಸಂಗ್ರಹದಲ್ಲಿ ದೊರೆಯುವ ಕೈಬರೆಹದ ಪ್ರತಿಯ ಕೆ.ಬಿ. ರಕ್ಷಾಪತ್ರದಲ್ಲಿ ನಂಜಕವಿ ಎಂದಿದೆ. ಇದರ ಆಧಾರದಿಂದ ಆರ್. ನರಸಿಂಹಾಚಾರ್ಯರು ಕರ್ನಾಟಕ ಕವಿಚರಿತೆಯಲ್ಲಿ ಕಪೋತವಾಕ್ಯದ ಕರ್ತೃ ನಂಜಕವಿ ಎಂದು ಹೆಸರಿಸಿದಂತೆ ಕಾಣುತ್ತದೆ. ಇತ್ತೀಚೆಗೆ ಭೋಜರಾಜ ಪಾಟೀಲರು ಕೃತಿಕಾರನ ಬಗೆಗೆ ವಿವೇಚಿಸಿ ಕೆಂಪುನಂಜಯ್ಯ ಇದರ ಕರ್ತೃವಾಗಿರಬಹುದೆಂಬ ನಿಲವಿಗೆ ಬಂದರೂ ಈ ವಿಷಯ ಇನ್ನೂ ಖಚಿತವಲ್ಲ ಎಂದಿದ್ದಾರೆ.

ಕನ್ನಡದಲ್ಲಿ ಹನ್ನೆರಡನೆಯ ಶತಮಾನದ ಶಿವಶರಣ ಅಂಬಿಗರ ಚೌಡಯ್ಯನ ವಚನವೊಂದರಲ್ಲಿ ಕಪೋತವಾಕ್ಯದ ಕಥೆಗೆ ಸಂಬಂಧಿಸಿದ ವಾಕ್ಯವೊಂದು ಹೀಗಿದೆ. ................. ಪರಪುರುಷಾರ್ಥಿಯಾದರೆ ಬಸವಕುಮಾರನಂತಾಗಬೇಕು. ಪರಪುರುಷಾರ್ಥಿಯಾದರೆ ಕಪೋತಪಕ್ಷಿಯಂತಾಗಬೇಕು. ಇಂತೀ ಪರಪುರುಷಾರ್ಥಕ್ಕೆ ಪ್ರಾಣದ ಕೊಟ್ಟವರುಂಟು. ನಿತ್ಯಾತ್ಮಾಂಕಿತ ಭಾಮಿನಿ ಷಟ್ಪದಿಯಲ್ಲಿ ವಿರಚಿತವಾದ ಶಾಂತಿ ವರ್ಷದ 22ನೆಯ ಸಂಧಿಯಲ್ಲಿ ಕಪೋತಾಖ್ಯಾನ 73 ಷಟ್ಪದಿಗಳಲ್ಲಿದೆ.

ಕಾವ್ಯದ ಆದಿಯಲ್ಲಿ ಕವಿ ಶಿವ, ಗುರುಸಿದ್ಧವೀರ, ಕೋರಣ್ಯದೈಯ್ಯ (ಕೋರಾನ್ನದೈಯ್ಯ) ಬಸವರಾಜ, ಮಡಿವಾಳ, ಸಪ್ಪಣ್ಣ, ಪ್ರಭುರಾಯ, ಕೊಟ್ಟೂರ ವಿರೂಪಾಕ್ಷ, ಕಲ್ಯಾಣದೈಯ್ಯ, ಎರೆಮಲೆ ಸಿದ್ಧಮುನಿಗಳನ್ನು ಸ್ತುತಿಸಿ, ಅಂತ್ಯದಲ್ಲಿ ಚಿರ್ರೂಲಗಿರಿವಾಸ, ಕಾಶಿ ವಿಶ್ವೇಶ್ವರ, ಚಂಪಕ ಸಿದ್ಧಲಿಂಗೇಶರಿಗೆ ಎರಗಿದ್ದಾನೆ. ಕಾವ್ಯದಲ್ಲಿ ಕೃತಿರಚನೆಯ ಕಾಲನಿರ್ದೇಶವಿಲ್ಲ. ಭೋಜರಾಜ ಪಾಟೀಲರು ಕಪೋತಚಾರಿತ್ರದ ಕರ್ತೃವಾಗಿರಬಹುದಾದ ಕೆಂಪುನಂಜಯ್ಯ ಮುರಿಗೆಯ ಶಾಂತವೀರಸ್ವಾಮಿಗಳ ಸಮಕಾಲೀನ ಹಾಗೂ ಶಿಷ್ಯನಾದುದರಿಂದ ಆತನ ಕಾಲವನ್ನು 1530 ಎಂದು ನಿಶ್ಚಯಿಸಬೇಕಾಗುತ್ತದೆ ಎಂದಿದ್ದಾರೆ.

ಭೋಜರಾಜ ಪಾಟೀಲರ ವಾದವೆಲ್ಲ ಮುರಿಗೆಯ ಶಾಂತವೀರನ ಕಾಲದ ಮೇಲೆ ನಿಂತಿದೆ. ಇತ್ತೀಚಿನ ಸಂಶೋಧನೆಗಳಿಂದ ಮುರಿಗೆಯ ಶಾಂತವೀರನ ಕಾಲ ಸು.1700 ಎಂಬುದು ಖಚಿತವಾಗಿದೆ. ಹೀಗಾಗಿ ಅವನ ಶಿಷ್ಯನ ಕಾಲ ಸು.1700 ಅಗಬೇಕಾಗುತ್ತದೆ. ಈ ಅಂಶಗಳನ್ನು ಗಮನಿಸಿದಾಗ ಹುಲ್ಲೂರು ಶ್ರೀನಿವಾಸ ಜೋಯಿಸರು ಹೇಳುವ ಹದಿನೆಂಟನೆಯ ಶಥಮಾನದ ಪ್ರಥಮಪಾದವನ್ನೆ ಕಪೋತವಾಕ್ಯದ ರಚನಾಕಾರನ ಕಾಲವನ್ನಾಗಿ ಸ್ವೀಕರಿಸಬಹುದು.

ಕಪೋತವಾಕ್ಯದ ಉಪಲಬ್ಧಪ್ರತಿಗಳಲ್ಲಿ ಸಂಧಿಸಂಖ್ಯೆ ಹಾಗೂ ಪದ್ಯಸಂಖ್ಯೆಗಳಲ್ಲಿ ಏಕರೂಪತೆ ಇಲ್ಲ. ಇದುವರೆಗೆ ಪರಿಶೀಲಿಸಲಾದ ಪ್ರತಿಗಳಲ್ಲಿ ಸಂಧಿಸಂಖ್ಯೆ 105 ಪದ್ಯಗಳಿಂದ 398 ಪದ್ಯಗಳ ವರೆಗೂ ಹಿಗ್ಗಿದೆ. ಹೀಗಾಗಿ ಕಪೋತವಾಕ್ಯದ ಪ್ರತಿಗಳು ಹಲವಾರು ಪ್ರಕ್ಷಿಪ್ತಗಳಿಗೆ ಆಡುಂಬೊಲವಾಗಿ ಪರಿಣಮಿಸಿದೆ.

ಈ ಗ್ರಂಥದ ಮೂಲವಸ್ತು ವಾಲ್ಮೀಕಿರಾಮಾಯಣ ಮತ್ತು ವ್ಯಾಸಮಹಾಭಾರತಗಳಲ್ಲಿ ಕಂಡುಬರುತ್ತದೆ. ಕಪೋತದಂಪತಿಗಳು ತಮ್ಮನ್ನು ಮಕ್ಕಳುಮರಿಗಳಿಂದ ಬೇರ್ಪಡಿಸಿ ಸೆರೆಹಿಡಿದ ಬೇಡನಿಗೆ ಆತ ಚಳಿಯಿಂದಾಗ ಬೆಂಕಿಯನ್ನೂ ಹಸಿವೆ ಎಂದಾಗ ಆಹಾರವನ್ನು ಒದಗಿಸಲೋಸುಗ ಅದೇ ಬೆಂಕಿಗೆ ಬಿದ್ದ ಪಕ್ಷಿಗಳ ಕಥೆ ಇದರ ವಸ್ತು. ಇಲ್ಲಿ ಪತಿಪತ್ನಿಯರ ಅನುರಾಗ ಕರ್ತವ್ಯಗಲು ಸುಂದರವಾಗಿ ನಿರೂಪಿತವಾಗಿವೆ. ಹೀಗೆ ಪರಹಿತದಿಂದಲಿ ನಡೆದ ಸತ್ಪುರುಷರ ಕರೆದುಯ್ವನು ಕೈಲಾಸಕ್ಕೆ ಎಂಬ ಸಂದೇಶವನ್ನೂ ಕವಿ ಇಲ್ಲಿ ಸಾರಿದ್ದಾನೆ. ಜನಪ್ರಿಯ ವಸ್ತುವಿನ ಕಾರಣವಾಗಿ ಕನ್ನಡದಲ್ಲಿ ಷಟ್ಪದಿ, ಯಕ್ಷಗಾನ ಮೊದಲಾದ ಇತರ ಪ್ರಕಾರಗಳಲ್ಲೂ ಈ ಕಥೆ ರೂಪುದಾಳಿದೆ. (ಎಸ್.ಎಸ್.ಎಚ್.ಪಿ.)

**ನಂಜಣಾರ್ಯ :** ಸು.1650 ವೀರಶೈವ ಕವಿ. ಏಕೋರಾಮೇಶ್ವರ ಪುರಾಣ ಮತ್ತು ನೀತಿರತಆಭರಣಗಳ ಕರ್ತೃ. ಸ್ಥಳ ಹರದಿಹಳ್ಳಿ , ಏಕೋರಾಮೇಶ್ವರ ಪುರಾಣದಲ್ಲಿ ತನ್ನ ವಂಶಪರಂಪರೆಯ ಬಗೆಗೆ ವಿಸ್ತಾರವಾಗಿ ತಿಳಿಸಿದ್ದಾನೆ. ಅದರಂತೆ ಈತನ ತಂದೆ ಏಕೋತ್ತರಶತಸ್ಥಲ ವಿಶಾರದ ವೀರಣಾಚಾರ್ಯ.

ಈತ ತನ್ನನ್ನು ಕುರಿತು ಪರಮಾಪಬೋಧಪ್ರಸಂಗಿ, ತ್ರಿಲಿಂಗಸಂಯೋಗಿ, ಸರಸಲಕ್ಷಣಕಾವ್ಯ ರಚಿತನವಭಾವಕಂ, ಹರ ಕವೀಶ್ವರಣುಗ, ಭೋಗಮಲ್ಲೇಶನ ಲೆಂಕಂ ಇತ್ಯಾದಿಯಾಗಿ ವಿಶೇಷಿಸಿಕೊಂಡಿದ್ದಾನೆ. ಏಕೋರಾಮೇಶ್ವರ ಪುರಾಣದ ಕಥೆಯನ್ನು ಸಿದ್ಧರಾಮ ಗುರುವರನು ತನಗೆ ಮೊದಲು ಉಪದೇಶಿಸಿದನೆಂದೂ ಅನಂತರ ಅದನ್ನು ತಾನು ಪುರಾಣವಾಗಿ ಬರೆದಿರುವೆನೆಂದೂ ತಿಳಿಸಿದ್ದಾನೆ.

ಕೃತಿಯ ಮೊದಲಲ್ಲಿ ಏಕೋರಾಮ, ಸಿದ್ಧರಾಮೇಶ, ಮುದ್ರಾಪುರಾಧೀಶ, ರಾಮಲಿಂಗ, ಶಿವ, ಭೃಂಗಿ, ಪಾರ್ವತಿ, ವೃಷಭೇಂದ್ರ, ವೀರಭದ್ರ, ವಿಘ್ನರಾಜ, ಷಣ್ಮುಖ, ರುದ್ರ ಮೊದಲಾದವರ ಪ್ರಾರ್ಥನೆಯಿದೆ. ಅನಂತರ ಉದ್ಭಟ, ಮಯೂರ, ಬಿಲ್ಹಣ, ಕಾಳಿದಾಸ, ರಾಘವಾಂತಪಂಡಿತ, ಬಾಣ, ಪುಷ್ಪದಂತ, ಮಲಯರಾಜ, ಹಲಾಯುಧ, ಭೋಜ, ಸೌಂದರಗಣೇಶ್ವರ, ಕೇಶಿರಾಜನಿಗೆ ಕವಿ ನಮಸ್ಕರಿಸಿದ್ದಾನೆ.

ಏಕೋರಾಮೇಶ್ವರಪುರಾಣ ವಾರ್ಧಕಷಟ್ಪದಿಯಲ್ಲಿದ್ದು 16 ಕಾಂಡಗಳು, 16 ಸಂಧಿಗಳು ಮತ್ತು 1463 ಪದ್ಯಗಳು ಹೊಂದಿದೆ. ಇದರ ಕಥೆ ಇಷ್ಟು ಈಶ್ವರನ ಆಜ್ಞೆಯಂತೆ ಘಂಟಾಕರ್ಣ ಗಣೇಶ್ವರ ಏಕೋರಾಮನೆಂಬ ಹೆಸರಿನಿಂದ ಮುದ್ರಪುರದ ರಾಮರುದ್ರ ಶಿವಾಚಾರ್ಯನಿಗೆ ಸುತನಾಗಿ ಹುಟ್ಟಿ ರಾಮನಾಥನಿಂದ ದೀಕ್ಷಿತನಾದ. ಮುಂದೆ ಆ ಪುರದ ಅರಸ ವೀರಭಾಸ್ಕರರಾಯನ ಸಮಕ್ಷಮದಲ್ಲಿ ವೈಷ್ಣವರೊಡನೆ ವಾದಿಸಿ ಶಿವಾಧಿಕ್ಯ ಮತ್ತು ಶಿವಭಕ್ತರ ಶ್ರೇಷ್ಠತೆಯನ್ನು ಸ್ಥಿರೀಕರಿಸಿದ. ಅನಂತರ ರಾಮಲಿಂಗನಿಂದ ಗುರುಪದ್ಯವನ್ನು ಹೊಂದಿ, ವೈಷ್ಣವರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟ. ಮುಂದೆ ಅಯೋಧ್ಯಾನಗರಿಯ ವ್ಯಾಸದೀಕ್ಷಿತನೊಡನೆ ವಾದಿಸಿ ಕೊನೆಯಲ್ಲಿ ಆತನನ್ನು ಮತಾಂತರಗೊಳಿಸಿದ. ಕಡೆಗೆ ಶಂಕುಕರ್ಣನೆಂಬ ತನ್ನ ಶಿಷ್ಯನಿಗೆ ಗುರುಪಟ್ಟವನ್ನು ಕಟ್ಟಿ ರಾಮನಾಥನ ದೇವಾಲಯವನ್ನು ಹೋಗಲು ಅಲ್ಲಿ ಶಿವ ಪ್ರತ್ಯಕ್ಷನಾಗಿ ದರ್ಶನಕೊಟ್ಟು ಕೈಲಾಸಕ್ಕೆ ಒಯ್ದ.

ಪುರಾಣೋಕ್ತ ಮುದ್ರಾಪುರ ಇಂದಿನ ಕಲ್ಬುರ್ಗಿ ಜಿಲ್ಲೆಯ ಮುದನೂರು ಆಗಿದ್ದು ಇಂದೂ ಅಲ್ಲಿನ ರಾಮನಾಥ ದೇವಾಲಯ ಪ್ರಸಿದ್ಧಿ ಹೊಂದಿದೆ. ಈ ಪುರಾಣದ ಕಥಾನಾಯಕನಾದ ಏಕೋರಾಮರಾಧ್ಯ ವೀರಶೈವ ಪಂಚಾಚಾರ್ಯರಲ್ಲಿ ಒಬ್ಬನಾಗಿದ್ದು ಸಂಸ್ಕೃತದಲ್ಲಿ ಸಮನ್ವಯಸೂತ್ರವೆಂಬ ಕೃತಿಯನ್ನು ಬರೆದಂತೆ ಶ್ರೀಕರಭಾಷ್ಯದಿಂದ ತಿಳಿದುಬರುತ್ತದೆ. ಅಲ್ಲದೆ ಈತ ಕನ್ನಡದಲ್ಲಿ ವಚನಗಳನ್ನು ರಚಿಸಿರುವುದರ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.

ಈ ಪುರಾಣದ ಕೆಲವು ಪದ್ಯಗಳು ಸಂಪಾದನೆ

ಸಿದ್ಧವೀರಣಾಚಾರ್ಯನ ಸಂಕಲಿತ ಕೃತಿ ಲಿಂಗಸೂತ್ರಷಟ್ಪದಿಯಲ್ಲಿ ಉಲ್ಲೇಖಗೊಂಡಿದೆ. ನೀತಿರತ್ನಾಭರಣವನ್ನು ಈತ ಪರಮ ಗುರುಸಿದ್ಧಶಾಂತೇಶ್ವರನ ಪ್ರೇರಣೆಯಿಂದ ರಚಿಸಿದ್ದುದಾಗಿ ಹೇಳಿಕೊಂಡಿದ್ದಾನೆ. ಇದರಲ್ಲಿ 169 ಕಂದಗಳಿವೆ.

**ನಂಜನಗೂಡು :** ಮೈಸೂರು ಜಿಲ್ಲೆಯ ಒಂದು ತಾಲ್ಲೂಕು ಮತ್ತು ಅದರ ಮುಖ್ಯ ಸ್ಥಳ. ತಾಲ್ಲೂಕು ಉತ್ತರದಲ್ಲಿ ಮೈಸೂರು, ಪೂರ್ವದಲ್ಲಿ ತಿರುಮಕೂಡಲ ನರಸೀಪುರ ತಾಲ್ಲೂಕುಗಳು ಆಗ್ನೇಯದಲ್ಲಿ ಚಾಮರಾಜನಗರ ಜಿಲ್ಲೆ ಪಶ್ಚಿಮ ಮತ್ತು ವಾಯುವ್ಯದಲ್ಲಿ ಹೆಗ್ಗಡದೇವನಕೋಟೆ - ಈ ತಾಲ್ಲೂಕಿನಿಂದ ಸುತ್ತುವರಿದಿದೆ. ತಾಲ್ಲೂಕಿನ ವಿಸ್ತೀರ್ಣ 982 ಚಕಿಮೀ. ಜನಸಂಖ್ಯೆ 3,58,415. ಕಸಬ, ಚಿಕ್ಕಯ್ಯನ ಛತ್ರ, ಬಿಳಿಗೆರೆ, ದೊಡ್ಡ ಕವಲಂದೆ ಮತ್ತು ಹುಲ್ಲಹಳ್ಳಿ - ಈ ಐದು ಹೋಬಳಿಗಳು. ಒಟ್ಟು ಗ್ರಾಮಗಳು 188.

ಅಲ್ಲಲ್ಲಿ ಇರುವ ಸಣ್ಣ ಗುಡ್ಡಗಳನ್ನು ಬಿಟ್ಟರೆ ತಾಲ್ಲೂಕಿನ ಬಹುಭಾಗ ಮಟ್ಟಸ ಪ್ರದೇಶ. ಭೂಮಿ ಸುಮಾರು ಈಶಾನ್ಯದೆಡೆಗೆ ಇಳಿಜಾರಾಗಿದೆ. ಕಪಿಲಾ ಈ ತಾಲ್ಲೂಕಿನಲ್ಲಿ ಹರಿಯುವ ಮುಖ್ಯ ನದಿ. ಇದು ವಾಯವ್ಯ ಭಾಗದಲ್ಲಿ ಸ್ವಲ್ಪ ದೂರ ಹೆಗ್ಗಡದೇವನಕೋಟೆ ಮತ್ತು ತಾಲ್ಲೂಕಿನ ಗಡಿಯಾಗಿ ಹರಿದು ಮುಂದೆ ತಾಲ್ಲೂಕಿನ ಒಳಗೆ ಉತ್ತರ ಭಾಗದಲ್ಲಿ ನಂಜನಗೂಡು ಪಟ್ಟಣದ ವರೆಗೆ ಪೂರ್ವಾಭಿಮುಖವಾಗಿ ಹರಿದು ಅನಂತರ ಈಶಾನ್ಯಾಭಿಮುಖವಾಗಿ ಮುಂದುವರಿದು ಟಿ.ನರಸೀಪುರ ತಾಲ್ಲೂಕನ್ನು ಪ್ರವೇಶಿಸುತ್ತದೆ. ಗುಂಡ್ಲುಹೊಳೆ ಇನ್ನೊಂದು ಹೆಸರಿಸಬಹುದಾದ ನದಿ. ಇದು ಗುಂಡ್ಲುಪೇಟೆ ತಾಲ್ಲೂಕಿನಿಂದ ಬಂದು ತಾಲ್ಲೂಕಿನ ಮಧ್ಯಭಾಗದಲ್ಲಿ ಸುಮಾರು ಉತ್ತರಾಭಿಮುಖವಾಗಿ ಹರಿದು ನಂಜನಗೂಡಿನಲ್ಲಿ ಕಪಿಲಾ ನದಿಗೆ ಸೇರುತ್ತದೆ. ಕಣಶಿಲೆ ಮತ್ತು ಫೆಲ್ಸ್ ಪಾರ್ ತಾಲ್ಲೂಕಿನ ಬಹುಭಾಗದಲ್ಲಿ ಕಂಡುಬರುವ ತಳ ಶಿಲೆಗಳು. ಹೆಚ್ಚು ಮಟ್ಟಿಗೆ ಎಲ್ಲೆಡೆಯೂ ಕೆಂಪು ನುರುಜು ಭೂಮಿ ಇದೆ. ಕೆಲವೆಡೆ ಕರಿ ಎರೆ ಇದೆ. ನದಿಯ ದಡಗಳಲ್ಲಿ ವಿಶಾಲವಾದ ಮೆಕ್ಕಲು ಹರಹು ಉಂಟು. ಈ ತಾಲ್ಲೂಕಿನ ಕೋಣನೂರಿನ ಬಳಿ ಕಲ್ನಾರಿನ ನಿಕ್ಷೇಪವಿದೆ. ಅಂಬಳೆ, ಒಳಗೆರೆ ಎಂಬ ಸ್ಥಳಗಳಲ್ಲಿ ಹಿಂದೆ ಚಿನ್ನವನ್ನು ತೆಗೆಯಲಾಗುತ್ತಿತ್ತು. ಗುಂಡ್ಲುಹೊಳೆಯ ದಡಗಳಲ್ಲಿ ಸುಣ್ಣ ಕಲ್ಲಿನ ನಿಕ್ಷೇಪವಿದೆ. ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ಕೆಲವೆಡೆ ಮ್ಯಾಗ್ನಸೈಟ್ ಮತ್ತು ಕ್ರೋಮೈಟ್ ದೊರೆಯುವ ಸಾಧ್ಯತೆ ಇದೆ. ತಗಡೂರು ಮತ್ತು ಚಿನ್ನಂಬಳ್ಳಿ ಗ್ರಾಮಗಳ ಬಳಿಯಲ್ಲಿ 1918 ರವರೆಗೆ ಕಾಗೆ ಬಂಗಾರವನ್ನು ತೆಗೆಯಲಾಗುತ್ತಿತ್ತು. ತಾಲ್ಲೂಕಿನ ವಾಯವ್ಯ ಭಾಗದಲ್ಲಿ ಬಳಪದ ಕಲ್ಲು ದೊರೆಯುತ್ತದೆ. (ಎಸ್.ಎಸ್.,ಎಚ್.)

ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ ಸು. 591 ಮಿಮೀ. ಮಳೆ ಕಡಿಮೆಯಾದರೂ ವ್ಯವಸಾಯ ವ್ಯಾಪಕವಾಗಿದೆ. ಕಪಿಲಾ ನದಿಯ ಎಡದಂಡೆಯಲ್ಲಿ ರಾಮಪುರ ನಾಲೆ ಮತ್ತು ಬಲದಂಡೆಯ ಹುಲ್ಲಹಳ್ಳಿ ನಾಲೆ ತಾಲ್ಲೂಕಿನ ಉತ್ತರ ಭಾಗದಲ್ಲಿ ಉದ್ದಕ್ಕೂ ಸಾಗಿ ವಿಶಾಲವಾದ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಒದಗಿಸಿವೆ. ಈಚೆಗೆ ನಿರ್ಮಿಸಲಾದ ನುಗು ಅಣೆಕಟ್ಟಿನಿಂದ ಬರುವ ನಾಲೆ ತಾಲ್ಲೂಕಿನ ಪಶ್ಚಿಮ ಮತ್ತು ದಕ್ಷಿಣ ಭಾಗಕ್ಕೆ ನೀರೊದಗಿಸುತ್ತದೆ. ಕೆರೆಗಳ ಸಂಖ್ಯೆ ಕಡಿಮೆ, ಉತ್ತಮ ನೀರಾವರಿ ಸೌಲಭ್ಯವಿರುವುದರಿಂದ ಬತ್ತ ತಾಲ್ಲೂಕಿನ ಮುಖ್ಯ ಬೆಳೆ. ಸ್ವಲ್ಪ ಮಟ್ಟಿಗೆ ಕಬ್ಬು, ಕಡಲೆ ಕಾಯಿ ಮತ್ತು ದ್ವಿದಳ ಧಾನ್ಯಗಳ ಬೆಳೆಯೂ ಉಂಟು. ಮಳೆಯನ್ನು ಅವಲಂಬಿಸಿರುವ ಪ್ರದೇಶಗಳಲ್ಲಿ ಜೋಳ ಮತ್ತು ರಾಗಿ ಮುಖ್ಯ ಬೆಳೆಗಳು. ಕಡಲೆಕಾಯಿ, ದ್ವಿದಳಧಾನ್ಯಗಳು, ಹತ್ತಿ ಇವೂ ಬೆಳೆಯುತ್ತವೆ. ತಾಲ್ಲೂಕಿನ ದಕ್ಷಿಣದೆಡೆಯಲ್ಲಿ ತೆಂಗಿನ ವ್ಯವಸಾಯವೂ ಸಾಕಷ್ಟಿದೆ. ನಂಜನಗೂಡಿನ ಸುತ್ತಿನಲ್ಲಿ ಬೆಳೆಯುವ ರಸಬಾಳೆ ಉತ್ತಮ ದರ್ಜೆಯದೆಂದು ಪ್ರಸಿದ್ಧವಾಗಿದೆ.

ವ್ಯವಸಾಯ ಪ್ರಧಾನವಾದ ಈ ತಾಲ್ಲೂಕಿನಲ್ಲಿ ಕೈಗಾರಿಕೆಗಳು ಕಡಿಮೆ. ಆದರೆ ನೇಯ್ಗೆ ಮತ್ತು ರೇಷ್ಮೆ ಉದ್ಯಮಗಳು ಸಣ್ಣ ಪ್ರಮಾಣದಲ್ಲಿ ಪ್ರಚಲಿತವಾಗಿವೆ. ಮೈಸೂರು ನಗರದಲ್ಲಿ ಕೈಗಾರಿಕೆಗಳು ವಿಸ್ತರಿಸಿದಂತೆ ಈ ತಾಲ್ಲೂಕಿನ ಭಾಗದಲ್ಲಿ ಕೆಲವು ಕೈಗಾರಿಕೆಗಳು ತಲೆ ಎತ್ತಿವೆ. ನಂಜನಗೂಡು ಪಟ್ಟಣದಲ್ಲಿ ಕೆಲವು ಉದ್ಯಮಗಳಿವೆ. ಮೈಸೂರು-ಚಾಮರಾಜನಗರ ರೈಲುಮಾರ್ಗ ಮತ್ತು ಮೈಸೂರು-ಗುಂಡ್ಲುಪೇಟೆ - ಉದಕಮಂಡಲ ಹೆದ್ದಾರಿ ಈ ತಾಲ್ಲೂಕಿನ ಮೂಲಕ ಹಾದುಹೋಗುತ್ತವೆ. ಮೈಸೂರು-ಚಾಮರಾಜನಗರ-ತಿರುಚಿನಾಪಲ್ಲಿ ರಸ್ತೆ ನಂಜನಗೂಡಿನ ಬಳಿ ಕವಲೊಡೆದು ಸ್ವಲ್ಪ ದೂರ ತಾಲ್ಲೂಕಿನಲ್ಲಿ ಸಾಗುತ್ತದೆ. ನಂಜನಗೂಡು - ಟಿ.ನರಸೀಪುರ, ನಂಜನಗೂಡು-ಹುಲ್ಲಹಳ್ಳಿ, ಕವಲಂದೆ-ಕೊಳ್ಳೇಗಾಲ ರಸ್ತೆಗಳು ಇತರ ಮುಖ್ಯ ಹಾದಿಗಳು. ತಾಲ್ಲೂಕಿನಲ್ಲಿ ವಿದ್ಯುತ್ ಸೌಕರ್ಯ ಸಾಕಷ್ಟಿದೆ. ಗ್ರಾಮೀಣ ವಿದ್ಯುತ್ ಸೌಲಭ್ಯ ವ್ಯಾಪಕವಾಗಿರುವುದಲ್ಲದೆ ಅನೇಕ ಕಡೆಗಳಲ್ಲಿ ವಿದ್ಯುಚ್ಚಾಲಿತ ಪಂಪುಗಳು ಉಪಯೋಗದಲ್ಲಿವೆ. ಹಲವು ಗ್ರಾಮಗಳಲ್ಲಿ ಅಂಚೆ ದೂರವಾಣಿ ಮತ್ತು ಆರೋಗ್ಯ ಕೇಂದ್ರಗಳು, ಪ್ರಾಥಮಿಕ ಮತ್ತು ಪ್ರೌಢಶಾಲೆಗಳು ಇವೆ.

ಈ ತಾಲ್ಲೂಕಿನ ಹದಿನಾರು, ಕಳಲೆ (ನೋಡಿ) ಹಿಂದೆ ಪಾಳೆಯ ಪಟ್ಟಿನ ಕೇಂದ್ರಗಳಾಗಿದ್ದುವು. ಕಳಲೆ, ಹೆಡತಲೆ (ನೋಡಿ), ಸುತ್ತೂರು (ನೋಡಿ) - ಈ ಸ್ಥಳಗಳಲ್ಲಿ ಪ್ರಾಚೀನ ದೇವಾಲಯಗಳಿವೆ. ದೇವನೂರು ಮತ್ತು ಸುತ್ತೂರಿನ ವೀರಶೈವ ಮಠಗಳು ಪ್ರಸಿದ್ಧವಾದವು. ಗಂಗರ ಕಾಲದ ಪ್ರಾಚೀನತೆಯುಳ್ಳ ಇಮ್ಮಾವು ಗ್ರಾಮದಲ್ಲಿ ರಾಮದೇವಾಲಯವಿದೆ. ಇಲ್ಲಿರುವ ಚತುರ್ಭುಜ ಲಕ್ಷ್ಮಣ ಕುತೂಹಲಕಾರೀ ವಿಗ್ರಹ. ನಂಜನಗೂಡಿನಿಂದ ಸು. 15 ಕಿಮೀ ಆಗ್ನೇಯದಲ್ಲಿರುವ ನಗರ್ಲೆ ಚೋಳರ ಕಾಲದಿಂದಲೂ ಪ್ರಸಿದ್ಧವಾಗಿದ್ದ ಊರು. ಇಲ್ಲಿ ಪ್ರಾಚೀನ ದುರ್ಗಾಪರಮೇಶ್ವರಿ ದೇವಾಲಯ ಮತ್ತು ಒಂದು ಜೀರ್ಣವಾದ ಪಾರ್ಶ್ವನಾಥ ಬಸ್ತಿ ಇವೆ. ನೇರಳೆಯಲ್ಲಿ ವೀರಭದ್ರ ದೇವಾಲಯವಿದೆ. ಹೆಮ್ಮರಗಾಲದಲ್ಲಿ ಹೊಯ್ಸಳ ಕಾಲದ ಗೋಪಾಲಕೃಷ್ಣ ಗುಡಿ ಇದೆ. ಕಳಲೆ, ಹೆಮ್ಮರಗಾಲ ಈ ಸ್ಥಳಗಳಲ್ಲಿ ವಾರ್ಷಿಕ ಜಾತ್ರೆ ಜರುಗುತ್ತದೆ. ನಂಜನಗೂಡಿನ ಸಮೀಪದ ಗೋಳೂರಿನ ಬಳಿಯಲ್ಲಿ ಒಂದು ಮೂಲ ಶಿಕ್ಷಣ ಕೇಂದ್ರ (ವಿದ್ಯಾಪೀಠ) ಇದೆ.

ನಂಜನಗೂಡು ಈ ತಾಲ್ಲೂಕಿನ ಆಡಳಿತ ಕೇಂದ್ರ. ಮೈಸೂರಿನಿಂದ ದಕ್ಷಿಣ ಆಗ್ನೇಯಕ್ಕೆ 24 ಕಿಮೀ ದೂರದಲ್ಲಿ ಕಪಿಲಾನದಿಯ ಬಲದಂಡೆಯ ಮೇಲಿದೆ. ಇದು ಕರ್ನಾಟಕದ ಮುಖ್ಯಯಾತ್ರಾಸ್ಥಳಗಳಲ್ಲೊಂದು. ಜನಸಂಖ್ಯೆ 48,220. ಮೈಸೂರು-ಚಾಮರಾಜನಗರ ರೈಲುಮಾರ್ಗದ ನಿಲ್ದಾಣವಾಗಿಯೂ ಮೈಸೂರು ಉದಕಮಂಡಲ ಹೆದ್ದಾರಿಯ ಪಕ್ಕದಲ್ಲೂ ಇದ್ದು, ಸುತ್ತಲ ಅನೇಕ ಊರುಗಳೊಡನೆ ಉತ್ತಮ ರಸ್ತೆ ಸಂಪರ್ಕವನ್ನು ಹೊಂದಿರುವ ಈ ಊರು ಈ ಸುತ್ತಲ ಪ್ರದೇಶಕ್ಕೆ ಮುಖ್ಯ ವ್ಯಾಪಾರ ಕೇಂದ್ರವಾಗಿದೆ. ಇಲ್ಲಿ ಬಟ್ಟೆ ಗಿರಣಿ, ಕಾಗದದ ಕಾರ್ಖಾನೆ ಮತ್ತು ಔಷಧ ಮತ್ತು ಸುಗಂಧ ದ್ರವ್ಯಗಳ ಕಾರ್ಖಾನೆ. ಕೆಲವು ಬತ್ತದ ಗಿರಣಿಗಳು, ಮರ ಕೊಯ್ಯುವ ಕಾರ್ಖಾನೆಗಳೂ ಇವೆ. ಸ್ವಲ್ಪ ಮಟ್ಟಿಗೆ ರೇಷ್ಮೆ ವ್ಯಾಪಾರ ಮತ್ತು ರೇಷ್ಮೆ ನೂಲುವ ಉದ್ಯಮವಿದೆ. ಅಂಚೆ ತಂತಿ, ದೂರವಾಣಿ, ವಿದ್ಯುತ್, ಶೋಧಿತ ನೀರು ಸರಬರಾಜು ಸೌಕರ್ಯಗಳಿವೆ. ತಾಲ್ಲೂಕು ಮಟ್ಟದ ಆಸ್ಪತ್ರೆ ಮತ್ತು ಪಶುವೈದ್ಯಶಾಲೆ ಇವೆ. ಹಲವು ಶಾಲೆಗಳು ಮತ್ತು ಒಂದು ಪ್ರಥಮ ದರ್ಜೆ ಕಾಲೇಜು ಇವೆ. ಊರು ಪುರಸಭಾ ಆಡಳಿತಕ್ಕೆ ಒಳಪಟ್ಟಿದೆ. ಪ್ರತಿ ಶುಕ್ರವಾರ ಸಂತೆ ಜರುಗುತ್ತದೆ.

ಪ್ರಾಚೀನ ಕಾಲದಿಂದಲೂ ತೀರ್ಥಕ್ಷೇತ್ರವಾಗಿದ್ದ ಈ ಊರು ಉಮ್ಮತ್ತೂರು ಪಾಳೆಯಗಾರರು ಮತ್ತು ಕಳಲೆಯ ಅರಸರ ಕಾಲದಲ್ಲಿ ಉಚ್ಛ್ರಾಯ ಸ್ಥಿತಿಗೇರಿತು. ಸುಮಾರು ಈ ಕಾಲಕ್ಕೆ ಸೇರಿದ ಕೋಟೆಯ ಅವಶೇಷಗಳನ್ನು ಊರಿನ ದಕ್ಷಿಣ ಭಾಗದಲ್ಲಿ ಕೆಲವೆಡೆ ಗುಂಡ್ಲುಹೊಳೆಯ ದಡದಲ್ಲಿ ಗುರುತಿಸಬಹುದು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ವಿಶೇಷ ಪ್ರೋತ್ಸಾಹದಿಂದ ನಂಜನಗೂಡು ವೈಭವಯುತವಾಗಿ ಬೆಳೆಯಿತು.

ನಂಜನಗೂಡು ಪ್ರಸಿದ್ಧವಾಗಿರುವುದು ಇಲ್ಲಿನ ಶ್ರೀಕಂಠೇಶ್ವರ (ನಂಜುಂಡೇಶ್ವರ) ದೇವಾಲಯದಿಂದ ಪವಿತ್ರತೆಯಲ್ಲೂ ಪರಿಮಾಣದಲ್ಲೂ ಬೃಹತ್ ಸ್ಥಾನವನ್ನು ಗಳಿಸಿರುವ ಈ ದೇವಾಲಯ ಕರ್ನಾಟಕದ ಸಿರಿವಂತ

ದೇವಾಲಯಗಳಲ್ಲಿ ಒಂದು. ದೇವಾಲಯ ಊರಿನ ಪೂರ್ವದಂಚಿನಲ್ಲಿ ಕಪಿಲಾ ಮತ್ತು ಗುಂಡ್ಲುಹೊಳೆ (ಕೌಂಡಿನ್ಯ ನದಿ) ಇವುಗಳ ಸಂಗಮ ಸ್ಥಾನದಿಂದ ಅನತಿದೂರದಲ್ಲಿದೆ. ನದಿಗಳಲ್ಲಿ ಪ್ರವಾಹ ಬಂದಾಗ ಸಂಗಮಸ್ಥಾನ ದೇವಾಲಯದಿಂದ ಕೇವಲ ನೂರು ಗಜ ದೂರದಲ್ಲಿರುತ್ತದೆ. ಶ್ರೀಕಂಠೇಶ್ವರ ದೇವಾಲಯ ದ್ರಾವಿಡ ಶೈಲಿಯ ಕಟ್ಟಡ. 385' ಉದ್ದ 160' ಅಗಲವಾಗಿದ್ದು ಕರ್ನಾಟಕದ ಬೃಹತ್ ದೇವಾಲಯಗಳಲ್ಲೊಂದಾಗಿದೆ. ಇದರಲ್ಲಿ 147 ಕಂಬಗಳಿದ್ದು ಒಟ್ಟು ಆಚ್ಛಾದಿತ ಪ್ರದೇಶ 52,000 ಚದರ ಅಡಿಗಳಷ್ಟಿದೆ. ಈ ದೃಷ್ಟಿಯಿಂದ ಇದು ಕರ್ನಾಟಕದಲ್ಲೇ ಅತಿ ದೊಡ್ಡ ದೇವಾಲಯ. ದೇವಾಲಯ ಪೂರ್ವಾಭಿಮುಖವಾಗಿದೆ. ಹೊರಗೋಡೆಗಳು ಸು. 12' ಎತ್ತರವಾಗಿದ್ದು ಸುತ್ತಲೂ ದಕ್ಷಿಣ, ಉತ್ತರ ಮತ್ತು ಪಶ್ಚಿಮ ಭಾಗಗಳಲ್ಲಿ ಅಧಿಷ್ಠಾನದ ಮೇಲೆ ಹಿಂಭಾಗಕ್ಕೆ ಗೋಡೆ ಮತ್ತು ಮುಂದೆ ಕಂಬಸಾಲು ಇರುವ ಕೈಸಾಲೆ ಇದೆ (ಈಗ ದಕ್ಷಿಣದ ಕೈಸಾಲೆಯನ್ನು ಪೂರ್ಣವಾಗಿಯೂ ಉತ್ತರದ್ದನ್ನು ಸ್ವಲ್ಪ ಭಾಗಗಳಲ್ಲಿಯೂ ಮುಚ್ಚಲಾಗಿದೆ). ಮೇಲೆ ಸುತ್ತಲೂ ದೇವ ಮತ್ತು ಇತರ ಶಿಲ್ಪಗಳಿರುವ ಗಚ್ಚಿನಲ್ಲಿ ಮಾಡಿದ ಕೋಷ್ಠಗಳ ಹಾರ ಇದೆ. ಪೂರ್ವಭಾಗದಲ್ಲಿನ ಮಹಾದ್ವಾರದ ಮುಂದೆ ಇಕ್ಕಡೆ ಕೈಸಾಲೆಯಿರುವ ಒಂದು ಮುಖಮಂಟಪವಿದೆ. ಮಹಾದ್ವಾರ ಬೃಹತ್ ರಚನೆ. ಒಳಚಾವಣಿ ಎತ್ತರ ಸು. 18' ವಿಶಾಲ ಮಂಟಪದಂತಿರುವ ಈ ಭಾಗದಲ್ಲಿನ ದಪ್ಪ ಎತ್ತರದ ಬಾಗಿಲ ತೋಳುಗಳ ಮೇಲೆ ಮೋಹಿನಿ, ದ್ವಾರಪಾಲಕ ಮೊದಲಾದ ಶಿಲ್ಪಾಲಂಕರಣವಿದೆ. ಮಹಾದ್ವಾರದ ಮೇಲೆ ಏಳು ಅಂತಸ್ತಿನಲ್ಲಿ ಎದ್ದಿರುವ ಸು. 120' ಎತ್ತರವಿರುವ ಬೃಹತ್ ಗೋಪುರವಿದೆ. ಗೋಪುರದ ಮೇಲ್ತುದಿಯಲ್ಲಿ ಚಿನ್ನ ಗಿಲೀಟಿನ 10'ಗೂ ಎತ್ತರವಾಗಿರುವ ಏಳು ಕಳಶಗಳನ್ನು ಅಷ್ಟೇ ಎತ್ತರದ ಎರಡು ಕೊಂಬುಗಳ ಮಧ್ಯೆ ಸಾಲಾಗಿ ಜೋಡಿಸಲಾಗಿದೆ.

ಮಹಾದ್ವಾರದಿಂದ ಒಳಗೆ ಪ್ರವೇಶಿಸುತ್ತಿದ್ದಂತೆಯೇ ದೊಡ್ಡ ತೆರೆದ ಅಂಗಳವಿದೆ. ಇದರ ಮಧ್ಯಭಾಗದಲ್ಲಿ ಸುಂದರವಾದ ಒಂದು ವಸಂತ ಮಂಟಪವಿದೆ. ಈ ಅಂಗಳದ ಆಗ್ನೇಯದಲ್ಲಿ ಪಾಕಶಾಲೆ ಮತ್ತು ಈಶಾನ್ಯದಲ್ಲಿ ಉಗ್ರಾಣ ಇವೆ. ದಕ್ಷಿಣ ಭಾಗದಲ್ಲಿ ಒಂದು ಪ್ರವೇಶದ್ವಾರವಿದೆ. ಅಂಗಳದ ಇಕ್ಕೆಲದಲ್ಲೂ ಎತ್ತರದ ಎರಡು ಕಂಬಸಾಲುಗಳು ಉದ್ದುದ್ದವಾಗಿ ಹಬ್ಬಿದ್ದು ಒಳಸಾಲಿನ ಹಿಂದಿನ ಅಂಕಣಗಳಲ್ಲಿ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದೆ. ಅಂಗಳದ ಹಿಂದೆ ದೇವಾಲಯದ ಹಿಂಗೋಡೆಯ ವರೆಗೂ ಇರುವ ಈ ಭಾಗ ಪೂರ್ಣವಾಗಿ ಆಚ್ಛಾದಿತವಾಗಿರುವುದಲ್ಲದೆ ಅಂಗಳಕ್ಕಿಂತ ಸ್ವಲ್ಪ ಎತ್ತರದಲ್ಲಿದೆ. ಇಲ್ಲಿ ಮಧ್ಯದಲ್ಲಿರುವ ಗುಡಿಗಳನ್ನು ಬಿಟ್ಟು ಉಳಿದ ಭಾಗವನ್ನೆಲ್ಲ ಉದ್ದುದ್ದವಾಗಿ ಹಬ್ಬಿರುವ ಕಂಬಸಾಲುಗಳಿಂದ ವಿಂಗಡಿಸಲಾಗಿದೆ. ಅಂಗಳದಿಂದ ಮುಂದಕ್ಕೆ ಹೋಗುತ್ತಿದ್ದಂತೆಯೇ ಮೊದಲು ಸಿಗುವುದು ಬಸವನಕಟ್ಟೆ. ಇದು ವಸಂತಮಂಟಪದ ಎದುರಿಗೆ ಇರುವ ವಿಶಾಲವಾದ ಜಗತಿ. ಇದರ ಮೇಲೆ ಮಧ್ಯಸ್ಥಳದಲ್ಲಿ ಚಾವಣಿಯನ್ನೂ ಮೀರಿ ಮೇಲೆ ಎದ್ದಿರುವ ಅಷ್ಟಮುಖದ ಶಿಲಾದೀಪಸ್ತಂಭವಿದೆ. ಇದರ ಈಶಾನ್ಯಭಾಗದಲ್ಲಿ ಬೃಹನ್ನಂದಿಯ ಗುಡಿ ಇದೆ. ಕಟ್ಟೆಯ ವಾಯುವ್ಯದಲ್ಲಿ ಎತ್ತರವಾದ ಅದಿಷ್ಠಾನದ ಮೇಲೆ ನಿಂತಿರುವ ತಾಂಡವೇಶ್ವರ ಗುಡಿ ಇದೆ. ಕಟ್ಟೆಯ ಪಶ್ಚಿಮಕ್ಕೆ ಮತ್ತೊಂದು ಮಹಾದ್ವಾರವಿದೆ. ಈಗ ಇದು ಕಟ್ಟಡದ ಒಳಗೆ ಸೇರಿಹೋಗಿದ್ದರೂ ಹಿಂದೆ ಇದೇ ದೇವಾಲಯದ ಮುಖ್ಯ ಪ್ರವೇಶದ್ವಾರವಾಗಿತ್ತು. ಇದರ ಕೆಳಭಾಗ ಕಲ್ಲಿನ ಕಟ್ಟಡವಾಗಿದ್ದು, ಇದರ ಚಾವಣಿಯ ಮೇಲೆ ಐದು ಅಂತಸ್ತು ಮತ್ತು ಐದು ಚಿನ್ನ ಗಿಲೀಟಿನ ಕಲಶಗಳಿರುವ ಸು. 60' ಎತ್ತರದ ಇಟ್ಟಿಗೆ ಮತ್ತು ಗಾರೆಯ ಶಿಖರವಿದೆ. ಈ ಮಹಾದ್ವಾರಕ್ಕೆ ಸೇರಿದಂತೆಯೇ ಬಲಪಾರ್ಶ್ವ ಮತ್ತು ಮುಂಭಾಗದಲ್ಲಿ ಕೆಲವು ಚಿಕ್ಕ ಗುಡಿಗಳಿವೆ. ಎಡಪಾರ್ಶ್ವದಲ್ಲಿ ನವಗ್ರಹಗಳಿರುವ ಒಂದು ಆವರಣವೂ ಅದರ ಹಿಂದೆ ಯಜ್ಞಶಾಲೆಯೂ ಇವೆ. ಈ ಮಹಾದ್ವಾರದ ಪಶ್ಚಿಮಕ್ಕಿರುವುದೇ ಶ್ರೀಕಂಠೇಶ್ವರ ಲಿಂಗವಿರುವ ಮೂಲಗುಡಿ. ಮೂಲಗುಡಿ ಮತ್ತು ಮಹಾದ್ವಾರದ ಮಧ್ಯೆ ಒಂದು ಕಲ್ಲಿನ ಬಲಿಪೀಠ ಮತ್ತು ಕಲ್ಲಿನ ಪೀಠದ ಮೇಲೆ ಹಿತ್ತಾಳೆಯ ಹೊದಿಕೆಯಿರುವ ಸು. 25' ಎತ್ತರದ ಮರದಯಷ್ಟಿ ಇರುವ ಧ್ವಜಸ್ತಂಭ ಇವೆ.

ಮೂಲ ದೇವಾಲಯದಲ್ಲಿ ಗರ್ಭಗುಡಿ, ಸುತ್ತಲೂ ಪ್ರದಕ್ಷಿಣಾಪಥ ಮತ್ತು ಮುಂದೆ ಎರಡು ಕಂಬಗಳಿರುವ ಒಂದು ಒಳಮಂಟಪ ಇದೆ. ಇದರ ಮುಂದೆ 9 ಕಂಬಗಳ ಸಭಾಮಂಟಪವಿದೆ. ಇದು ಹಿಂದೆ 16 ಕಂಬಗಳಿದ್ದ ಮಂಟಪ. ಕೆಲವು ಕಂಬಗಳ ಮಧ್ಯೆ ಗೋಡೆಗಳನ್ನೆತ್ತಿ ದಕ್ಷಿಣಾಭಿಮುಖವಾಗಿರುವ ಉತ್ಸವ ವಿಗ್ರಹವಿರುವ ಒಂದು ಗುಡಿಯನ್ನೂ ಮುಂದೆ ಎರಡು ಪಕ್ಕಗಳಲ್ಲಿ ಮೂರು ಮೂರು ಲಿಂಗಸ್ಥಾಪಿತ ಕೋಣೆಗಳನ್ನೂ ಅಳವಡಿಸಲಾಗಿದೆ. ಮಂಟಪದ ಪೂರ್ವ ಮತ್ತು ದಕ್ಷಿಣದೆಡೆಗೆ ದ್ವಾರಗಳಿವೆ. ದಕ್ಷಿಣದ್ವಾರದ ಬಲಗಡೆ ಸುಬ್ರಹ್ಮಣ್ಯ, ಎಡಪಕ್ಕಗಳಲ್ಲಿ ಲಿಂಗಗಳನ್ನು ಸ್ಥಾಪಿಸಲಾಗಿದೆ. ಗರ್ಭಗುಡಿಯ ಬಲಭಾಗದಲ್ಲೂ ಹೊರಗಡೆ ಕೆಲವು ಲಿಂಗಗಳನ್ನು ಸ್ಥಾಪಿಸಲಾಗಿದೆ. ಮೂಲ ದೇವಾಲಯಕ್ಕೆ ಸೇರಿದಂತೆ ಎಡಗಡೆ ಒಂದು ವಿಷ್ಣು ಗುಡಿ ಅದರ ಹಿಂದೆ ಚಂಡಿಕೇಶ್ವರ ಗುಡಿ ಇವೆ. ಈ ಘಟಕದ ವಾಯುವ್ಯದಲ್ಲಿ, ಗರ್ಭಗುಡಿ ಮತ್ತು ಸಭಾಮಂಟಪವಿರುವ ಪಾರ್ವತಿ ಗುಡಿ ಇದೆ. ದೇವಾಲಯದ ಬಲಭಾಗದಲ್ಲಿ ಸುತ್ತಲೂ ಪ್ರಾಕಾರದ ಗೋಡೆಗೂ ಅದರ ಸದ್ಯ ಮುಂದಿನ ಕಂಬಸಾಲಿಗೂ ಮಧ್ಯೆ ಇರುವ ಅಂಕಣಗಳಲ್ಲಿ ಅನೇಕ ದೇವರುಗಳನ್ನು ಪ್ರತಿಷ್ಠಾಪಿಸಲಾಗಿದೆ. ಇವುಗಳಲ್ಲಿ ದಕ್ಷಿಣದ ಗೋಡೆಗೆ ಸೇರಿದಂತೆ ಅಂಗಳದ ನೇರದಿಂದ ಪ್ರಾರಂಭವಾಗುವ ಸಾಲಿನಲ್ಲಿ ಶೈವಪುರಾತನ ವಿಗ್ರಹಗಳು ಮುಂದೆ ಲಿಂಗಗಳೂ ಮುಮ್ಮಡಿ ಕೃಷ್ಣರಾಜ ಒಡೆಯರು ಮತ್ತು ಅವರ ಪತ್ನಿ ಪುತ್ರರ ವಿಗ್ರಹಗಳಿರುವ ಒಂದು ಕೋಣೆಯೂ ಪಶ್ಚಿಮದ ಸಾಲಿನಲ್ಲಿ ಲಿಂಗಗಳೂ ಮತ್ತು ಇತರ ಕೆಲವು ವಿಗ್ರಹಗಳೂ ಇವೆ. ಉತ್ತರದ ಗೋಡೆಗೆ ಸೇರಿದಂತೆ ಉಗ್ರಾಣದ ಬಳಿಯಿಂದ ಸಾಲಾಗಿ ಲೀಲಾಮೂರ್ತಿಗಳಿವೆ. ಪಾರ್ವತಿ, ಚಂಡಿಕೇಶ್ವರ ಮತ್ತು ತಾಂಡವೇಶ್ವರ ದೇವರುಗಳ ಗರ್ಭಗುಡಿಗಳ ಮೇಲೆ ಚಿಕ್ಕದಾದ ಗಾರೆಯ ಶಿಖರಗಳಿವೆ.

ಇಡೀ ದೇವಾಲಯ ಒಂದು ಕಾಲದ ರಚನೆಯಲ್ಲ. ದೇವಾಲಯದ ಬೆಳೆವಣಿಗೆಯಲ್ಲಿ ನಾಲ್ಕು ಘಟ್ಟಗಳನ್ನಾದರೂ ಸ್ಪಷ್ಟವಾಗಿ ಗುರುತಿಸಬಹುದು. ಶ್ರೀಕಂಠೇಶ್ವರ ಲಿಂಗ, ಗರ್ಭಗುಡಿ, ಪ್ರದಕ್ಷಿಣಾಪಥ ಮತ್ತು ಬಹುಶಃ ಒಳಮಂಟಪ ಬಹು ಪ್ರಾಚೀನವಾದುವು. ಈ ಭಾಗ ಕುಳ್ಳಾದಚಿಕ್ಕ ಕಟ್ಟಡ. ಗೋಡೆ ಸರಳವಾಗಿ ಚಪ್ಪಡಿಗಳಿಂದ ಕಟ್ಟಲಾಗಿದೆ. ಹೊರಮೈಯಲ್ಲಿ ಅಧಿಷ್ಠಾನ, ಭಿತ್ತಿ ಭಾಗದಲ್ಲಿ ಅರೆಗಂಬಗಳು, ಮೇಲೆ ಬಳುಕಿದ ಕಪೋತ ಇವೆ. ಇದರ ಮೇಲೆ ಚಿಕ್ಕ ಯಾಳಿ ಸಾಲಿದ್ದಂತೆ ತೋರುತ್ತದೆ. ಉತ್ತರ, ಪಶ್ಚಿಮ ಮತ್ತು ದಕ್ಷಿಣದ ಗೋಡೆಗಳಲ್ಲಿ ಕಿರಿದಾದ ಜಾಲಂಧ್ರಗಳಿವೆ. ಒಳ ಮಂಟಪದ ಕಂಬಗಳು ದುಂಡು ರೀತಿಯವು. ಬಹು ಕುಳ್ಳು. ಈ ವಾಸ್ತು ಅಂಶಗಳಿಂದ ಈ ಭಾಗ ಗಂಗರ ಅಥವಾ ಚೋಳರ ಕಾಲದಲ್ಲಿ 10-11ನೆಯ ಶತಮಾನಗಳಲ್ಲಿ ಕಟ್ಟಲಾಗಿರಬಹುದೆಂದು ಹೇಳಬಹುದು. ಇದರ ಮುಂಭಾಗದಲ್ಲಿರುವ ಮಂಟಪದಲ್ಲಿ ವಿವಿಧ ಮಾದರಿಯ ಕಂಬಗಳಿವೆ. ಕಂಬರೀತಿಗಳಿಂದ ಮಂಟಪ ಹೊಯ್ಸಳರ ಕಾಲದಲ್ಲಿ ಸು. 13ನೆಯ ಶತಮಾನದಲ್ಲಿ ರಚಿತವಾದ್ದೆಂದು ಊಹಿಸಬಹುದು (ಮೂಲಗುಡಿಯ ಮುಂಭಾಗದ ಕೋಣೆಗಳಲ್ಲಿ ಇರುವ ಲಿಂಗಗಳು 19ನೆಯ ಶತಮಾನದಲ್ಲಿ ಪ್ರತಿಷ್ಠಿತವಾದವು). ಈ ಭಾಗದ ಮುಂದಿರುವ ಬಲಿಪೀಠ ಸಹ ಬಹುಶಃ ಈ ಕಾಲದ್ದು. ಒಳಗಿನ ಮಹಾದ್ವಾರದ ಕಲ್ಲಿನ ಭಾಗದಲ್ಲಿ ಇಕ್ಕೆಲದಲ್ಲೂ ಹಂಪೆಯ ರಚನೆಗಳನ್ನು ಹೋಲುವ ಕಂಬಗಳಿವೆ. ಮೇಲಿನ ಗಾರೆಯ ಗೋಪುರ ವಿನ್ಯಾಸದಲ್ಲೂ ವಿಜಯನಗರ ಶೈಲಿಯನ್ನು ಗುರುತಿಸಬಹುದು. ದೇವಾಲಯದಲ್ಲಿ ಕೃಷ್ಣದೇವರಾಯನ 1509-29 ಒಂದು ದತ್ತಿ ಶಾಸನವೂ ಇರುವುದರಿಂದ ಈ ಮಹಾದ್ವಾರ ಮತ್ತು ಗೋಪುರ ಅವನ ಕಾಲದ ರಚನೆಯಿರಬಹುದು. ಪಾರ್ವತಿ ಮತ್ತು ನಾರಾಯಣ ಗುಡಿಗಳು ಮತ್ತು ಬಸವನ ಕಟ್ಟೆಯ ಮೇಲಿರುವ ದೀಪಸ್ತಂಭ ಸಹ ಇದೇ ಕಾಲದಲ್ಲಿ ರಚಿತವಾಗಿರುವಂತೆ ತೋರುತ್ತದೆ. ಮುಂದೆ ಮೈಸೂರು ಅರಸರು, ಕಳಲೆಯ ದಳವಾಯಿಗಳು ಮತ್ತು ದಿವಾನ್ ಪೂರ್ಣಯ್ಯ ಇವರು ದೇವಾಲಯದಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿದರೆಂಬುದಕ್ಕೆ ಸಾಂದರ್ಭಿಕ ಸಾಕ್ಷ್ಯಗಳಿವೆ. ಆದರೆ ಯಾವ ಯಾವ ಭಾಗಗಳು ರಚಿತವಾದುವೆಂದು ತೀರ್ಮಾನಿಸುವುದು ಕಷ್ಟ. ದೇವಾಲಯ ಇಂದಿನ ರೂಪವನ್ನು ತಳೆದುದು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ. ದೇವಾಲಯದ ಒಳಗೆ ಮತ್ತು ಸುತ್ತಲೂ

ಹಬ್ಬಿರುವ ಸಾಲುಕಂಬಗಳು ಚತುರ್ಮುಖವಾಗಿದ್ದು ಮಧ್ಯೆ ಮಧ್ಯೆ ಅಷ್ಟಕೋನವಾಗಿ ಒಡೆದಿರುವ ರೀತಿಯವು. ಈ ಕಂಬಗಳು ಮತ್ತು ಅವುಗಳ ಮೇಲಿನ ಶಿಲ್ಪಗಳ ರೀತಿಯಿಂದ ಇವು ಹೆಚ್ಚಿನ ಮಟ್ಟಿಗೆ 18 - 19ನೆಯ ಶತಮಾನದವೆಂದು ಹೇಳಬಹುದು. 1820ರ ಅನಂತರದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ದೇವಾಲಯದ ಬದಲಾವಣೆಗಳನ್ನು ಆರಂಭಿಸಿ ಹಿಂದಿದ್ದ ಹಲವು ಭಾಗಗಳನ್ನು ಉಪಯೋಗಿಸಿಕೊಂಡು ಇಂದಿನ ಕಟ್ಟಡವನ್ನು ರೂಪಿಸಿದಂತೆ ತೋರುತ್ತದೆ. ದೇವಾಲಯದ ಮುಂದಿರುವ ಮಹಾಗೋಪುರವನ್ನು ಅವರು 1845ರಲ್ಲಿ ರಚಿಸಿದರು. ಈ ವಿಷಯವನ್ನು ಸೂಚಿಸುವ ಶಾಸನ ಮಹಾದ್ವಾರದ ದೂಲದ ಮೇಲೆ ಇದೆ. ಬಹುಶಃ ಇದೇ ಕಾಲದಲ್ಲಿ ದೇವಾಲಯದ ಇಂದಿನ ರೂಪ ಸಿದ್ಧವಾದಂತೆ ತೋರುತ್ತದೆ. ಮಹಾ ದ್ವಾರದ ಮುಂದಿರುವ ಅನೇಕ ಶಿಲ್ಪಗಳಿಂದ ಕೂಡಿದ ಸುಂದರ ಮಂಟಪ ಸು. 1900ರಲ್ಲಿ ನೀಲಗಿರಿ ಮುದ್ದಣ್ಣ ಎಂಬುವರು ಕಟ್ಟಿಸಿದ್ದು.

ಈ ಬೃಹತ್ ದೇವಾಲಯದಲ್ಲಿ ಸು.200ಕ್ಕೂ ಹೆಚ್ಚು ವಿಗ್ರಹಗಳು ಪ್ರತಿಷ್ಠಾಪಿತವಾಗಿವೆ. ಇವುಗಳಲ್ಲಿ ಅರ್ಧದಷ್ಟು ಲಿಂಗಗಳು, ನಂಜುಂಡೇಶ್ವರ ಲಿಂಗ ಹಳೆಯದು. ಪೀಠಯುತವಾಗಿ ಸು. 3' ಎತ್ತರವಿದೆ. ಇತರ ಹೆಚ್ಚಿನ ಲಿಂಗಗಳು ಬೇರೆಬೇರೆ ಕಾಲದಲ್ಲಿ ಸ್ಥಾಪಿತವಾದವು. ಹೆಚ್ಚಿನವು ಪ್ರಾಕಾರದ ಗೋಡೆಗೆ ಸೇರಿದಂತಿರುವ ಒಳಸಾಲಿನಲ್ಲಿವೆ. ಕೆಲವು ಗರ್ಭಗುಡಿಯ ಸಭಾಮಂಟಪದಲ್ಲಿಯೂ ದೇವಾಲಯದ ಈಶಾನ್ಯ ಮತ್ತು ವಾಯುವ್ಯ ಭಾಗದ ಕೋಣೆಗಳಲ್ಲಿಯೂ ಮತ್ತು ಅಲ್ಲಲ್ಲಿ ಬಿಡಿಬಿಡಿಯಾಗಿಯೂ ಸ್ಥಾಪಿತವಾಗಿವೆ. ನಾರಾಯಣ ಮತ್ತು ಪಾರ್ವತಿ ಗುಡಿಗಳಲ್ಲಿರುವ ಮೂಲ ವಿಗ್ರಹಗಳು ಸು 13-14ನೆಯ ಶತಮಾನದವು. ಪಾರ್ವತಿ ಸುಂದರ ಶಿಲ್ಪ. ಇದರಲ್ಲಿ ಹೊಯ್ಸಳ ಶೈಲಿಯ ಛಾಯೆಯನ್ನು ಕಾಣಬಹುದು. ಒಳಗಿನ ಮಹಾದ್ವಾರದ ಮುಂಕೋಣೆಯಲ್ಲಿ ಹೊಯ್ಸಳ ಶೈಲಿಯ ಒಂದು ನೃತ್ಯಗಣಪತಿ ಇದೆ. ಸುಬ್ರಹ್ಮಣ್ಯ ಗುಡಿಯಲ್ಲಿರುವ ಸುಬ್ರಹ್ಮಣ್ಯ, ಹಿಂದಿನ ಪ್ರಾಕಾರ ಸಾಲಿನಲ್ಲಿರುವ ಷಣ್ಮುಖ ಮತ್ತು ಉಚ್ಛಿಷ್ಟ ಗಣಪತಿ ಮೂರ್ತಿಸ್ವರೂಪದಲ್ಲಿ ವೈಶಿಷ್ಟ್ಯವುಳ್ಳ ಕೃತಿಗಳು. ದೇವಾಲಯದ ಬಹುಮುಖ್ಯ ಶಿಲ್ಪಗಳೆಂದರೆ ದೇವಾಲಯದ ಬಲಪ್ರಾಕಾರ ಸಾಲಿನಲ್ಲಿರುವ ಶೈವಪುರಾತನರ ವಿಗ್ರಹಗಳು ಮತ್ತು ಎಡಸಾಲಿನಲ್ಲಿರುವ ಲೀಲಾಮೂರ್ತಿಗಳು, ಪುರಾತನರು ಸಾಮಾನ್ಯವಾಗಿ 63 ಎಂದು ಪರಿಗಣಿತವಾಗಿದ್ದರೂ ಇಲ್ಲಿ 66 ವಿಗ್ರಹಗಳು ಮೂರು ಮೂರರಂತೆ 22 ಗಂಪುಗಳಲ್ಲಿವೆ. ಸುಮಾರು ಆಳೆತ್ತರದ ಈ ವಿಗ್ರಹಗಳಲ್ಲಿ ಒಂದೊಂದೂ ವೈಶಿಷ್ಟ್ಯಪೂರ್ಣವಾಗಿ ನಿರೂಪಿತವಾಗಿವೆ. ಸು. 4ರಿಂದ 5' ಎತ್ತರವಿರುವ ಚಂದ್ರಶೇಖರ, ಕಾಲಸಂಹಾರ, ಅಂಧಕಾಸುರಮರ್ದನ, ಲಿಂಗೋದ್ಭವ ಮೊದಲಾದ 25 ಆಗಮೋಕ್ತ ಶಿವಲೀಲಾಮೂರ್ತಿಗಳೂ ಆಗಮ ದೃಷ್ಟಿಯಿಂದಲೂ ಶಿಲ್ಪಸೌಂದರ್ಯದಿಂದಲೂ ಗಮನಾರ್ಹವಾಗಿವೆ. ಈ ಗುಂಪಿನ ದಕ್ಷಿಣಾಮೂರ್ತಿ ಆಕರ್ಷಕ ಕೃತಿ. ಪುರಾತನರು ಮತ್ತು ಲೀಲಾಮೂರ್ತಿಗಳ ವಿಗ್ರಹಗಳ ಗುಂಪುಗಳು ಕರ್ನಾಟಕದಲ್ಲಿ ಎಲ್ಲೋ ಕೆಲವು ಸ್ಥಳಗಳಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ನಂಜನಗೂಡಿನವು ದೊಡ್ಡವೂ ಸುಂದರವೂ ಆಗಿವೆ. ಲೀಲಾ ಮೂರ್ತಿಗಳನ್ನು ಮುಮ್ಮಡಿ ಕೃಷ್ಣರಾಜ ಒಡೆಯರು ಮಾಡಿಸಿದರೆಂಬುದಕ್ಕೆ ಐತಿಹಾಸಿಕ ದಾಖಲೆಗಳಿವೆ. ಪುರಾತನರ ವಿಗ್ರಹಗಳು ಸಹ ಇದೇ ಕಾಲದ ರಚನೆಗಳಿರಬಹುದು. ಉತ್ಸವ ವಿಗ್ರಹದ ಗುಡಿಯ ನೇರ ಎದುರಿನಲ್ಲಿ ಪ್ರಾಕಾರ ಸಾಲಿನಲ್ಲಿ ಪ್ರತ್ಯೇಕಗೊಳಿಸಿರುವ ಒಂದು ಕೋಣೆಯಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಮತ್ತು ಅವರ ನಾಲ್ವರು ಪತ್ನಿಯರ ಆಳೆತ್ತರದ ವಿಗ್ರಹಗಳನ್ನಿಡಲಾಗಿದೆ. ಒಡೆಯರ ಕಾಲದ ವ್ಯಕ್ತಿಶಿಲ್ಪಗಳಲ್ಲಿ ಇವು ಅತ್ಯುತ್ತಮವಾದುವು. ಬಸವನಕಟ್ಟೆಯ ಪಕ್ಕದಲ್ಲಿರುವ ಸು. 8 ಅಡಿ ಎತ್ತರದ ನಂದಿ ಈ ದೇವಾಲಯದ ಬಹು ಭವ್ಯಶಿಲ್ಪ. 1644ರಲ್ಲಿ ದಳವಾಯಿ ವಿಕ್ರಮರಾಯ ಇದನ್ನು ಸ್ಥಾಪಿಸಿದನೆಂದು ಅದರ ಪೀಠದ ಮೇಲೆ ಇರುವ ಶಾಸನ ತಿಳಿಸುತ್ತದೆ.

ಈ ದೇವಾಲಯದಲ್ಲಿ ಲೋಹವಿಗ್ರಹಗಳೂ ಸಾಕಷ್ಟು ಸಂಖ್ಯೆಯಲ್ಲಿವೆ. ಪಾರ್ವತೀಸಮೇತ ಚಂದ್ರಶೇಖರ, ಸುಬ್ರಹ್ಮಣ್ಯ, ಪಾರ್ವತಿ, ಗಣಪತಿ, ಚಂಡಿಕೇಶ್ವರ, ಶ್ರೀಭೂಸಮೇತ ನಾರಾಯಣ, ತಾಂಡವೇಶ್ವರ ಮೊದಲಾದ ಲೋಹದ ಉತ್ಸವಮೂರ್ತಿಗಳಿವೆ. ಅಲ್ಲದೆ ಈ ದೇವಾಲಯದಲ್ಲಿ 63 ಪುರಾತನರ ಲೋಹವಿಗ್ರಹಳಿವೆ. ಇವು 1739-59ರಲ್ಲಿ ಮೈಸೂರಿನ ದಳವಾಯಿಯಾಗಿದ್ದ ಕಳಲೆ ನಂಜರಾಜಯ್ಯ ಮಾಡಿಸಿಕೊಟ್ಟವು.

ದೇವಾಲಯದ ಪ್ರಾಕಾರದ ಹಾರದ ಕೋಷ್ಠಗಳಲ್ಲಿ ಗಾರೆಯಲ್ಲಿ ಮಾಡಿದ 122 ದೇವಮೂರ್ತಿಗಳಿವೆ. ಇವುಗಳಲ್ಲಿ ಅಷ್ಟದಿಕ್ಪಾಲಕರು, ವೀರಭದ್ರ, ನಾರಾಯಣ, 10 ವಿಧದ ದಕ್ಷಿಣಾಮೂರ್ತಿಗಳು, 7 ವಿಧದ ತಾಂಡವೇಶ್ವರ ಮೂರ್ತಿಗಳು, 16 ವಿಧದ ಸುಬ್ರಹ್ಮಣ್ಯ ವಿಗ್ರಹಗಳು, 25 ಲೀಲಾಮೂರ್ತಿಗಳು, 32 ವಿಧದ ಗಣಪತಿಗಳು, ಸಪ್ತಮಾತೃಕೆಯರು ಮೊದಲಾದವು ಇದ್ದು ಇವು ಶಿಲ್ಪಶಾಸ್ತ್ರ ಅಧ್ಯಯನ ದೃಷ್ಟಿಯಿಂದ ಬಹುಮುಖ್ಯವಾಗಿವೆ. ಅಲ್ಲದೆ ಮಹಾದ್ವಾರದ ಒಳಗೆ ಅಂಗಳದ ಸುತ್ತಲ ಹಾರದಲ್ಲೂ ಇದೇ ರೀತಿಯ ಮೂರ್ತಿಗಳಿವೆ. ಇವೂ 19ನೆಯ ಶತಮಾನದಲ್ಲಿ ರಚನೆಯಾದವು.

ದೇವಸ್ಥಾನದಲ್ಲಿ ಹಿಂದಿನಿಂದಲೂ ಸಂಗ್ರಹವಾಗಿರುವ ಅನೇಕ ವಸ್ತುವಾಹನಗಳಿವೆ. ದೊಡ್ಡ ತೇರು ಮತ್ತು ಪಾರ್ವತಿಯ ತೇರುಗಳು 1819ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಮಾಡಿಸಿಕೊಟ್ಟದ್ದು. ಇವರೂ ಇವರ ಪತ್ನಿಯರೂ ಸಲ್ಲಿಸಿದ ಬೆಳ್ಳಿಕುದುರೆ ವಾಹನ (1830), ಬೆಳ್ಳಿ ಮಂಟಪ ಮತ್ತು ಬೆಳ್ಳಿ ಆನೆ (1834), ಬೆಳ್ಳಿ ಬಸವ (1848), ರುದ್ರಾಕ್ಷಿ ಮಂಟಪ, ಗಜರಥ (1847), ಕುದುರೆ ವಾಹನ (1847), ಕೈಲಾಸವಾಹನ (1852) ಶೇಷವಾಹನ ಮೊದಲಾದವು ದೇವಲಯದಲ್ಲಿವೆ. ಟಿಪ್ಪುಸುಲ್ತಾನ್ ಕೊಟ್ಟಿರುವ ಪಂಚರತ್ನ ಖಚಿತ ಬೆಳ್ಳಿ ಬಟ್ಟಲು ಮತ್ತು ಪಚ್ಚೆಹಾರ, ಶೃಂಗೇರಿಯ ನರಸಿಂಹಭಾರತಿ ಸ್ವಾಮಿಗಳು ಕೊಟ್ಟಿರುವ ಎರಡು ಚಿನ್ನದ ಆಭರಣಗಳು ಮೊದಲಾದ ನೂರಾರು ಆಭರಣಗಳು ಇಲ್ಲಿನ ಆಭರಣ ಸಂಗ್ರಹದಲ್ಲಿ ಮುಖ್ಯವಾದವು.

ಈ ದೇವಾಲಯ ವರ್ಷವಿಡೀ ದೇಶದ ವಿವಿಧ ಭಾಗಗಳಿಂದ ಭಕ್ತರನ್ನು ಆಕರ್ಷಿಸುತ್ತಿದೆ. ಸೋಮವಾರ ಮತ್ತು ಪೂರ್ಣಿಮಾ ದಿನಗಳಲ್ಲಿ ವಿಶೇಷ. ಪ್ರತಿ ಪೂರ್ಣಿಮಾ ರಾತ್ರಿ ರಥೋತ್ಸವವುಂಟು. ಅಲ್ಲದೆ ವಾರ್ಷಿಕವಾಗಿ ಎರಡು ಜಾತ್ರೆಗಳು ನಡೆಯುತ್ತದೆ. ಅಕ್ಟೋಬರ್-ನವೆಂಬರ್‌ನಲ್ಲಿ ತ್ರಿರಥ (ಚಿಕ್ಕಜಾತ್ರೆ) ಮತ್ತು ಮಾರ್ಚ್-ಏಪ್ರಿಲ್‌ನಲ್ಲಿ ಪಂಚರಥ (ದೊಡ್ಡಜಾತ್ರೆ), ಯಾತ್ರಾರ್ಥಿಗಳ ಉಪಯೋಗಕ್ಕಾಗಿ ಇಲ್ಲಿ ಅನೇಕ ಛತ್ರಗಳಿವೆ. ನಂಜನಗೂಡಿನ ನಂಜುಂಡೇಶ್ವರನನ್ನು ಅನೇಕ ಜನ ಕುಲದೈವವೆಂದು ಪರಿಗಣಿಸುತ್ತಾರೆ. ಈ ಸುತ್ತಿನ ಜನಪದದಲ್ಲಿ ನಂಜುಂಡನಿಗೆ ವಿಶೇಷ ಸ್ಥಾನವುಂಟು (ನೋಡಿ: ನಂಜಯ್ಯ).

ಈ ಊರಿನಲ್ಲಿ ಶ್ರೀಕಂಠೇಶ್ವರ ದೇವಾಲಯವಲ್ಲದೆ ಪರಶುರಾಮ, ಚಾಮುಂಡೇಶ್ವರಿ, ಸತ್ಯನಾರಾಯಣ, ದತ್ತಾತ್ರೇಯ, ಗಣಪತಿ ಮೊದಲಾದ ಇತರ ದೇವಾಲಯಗಳೂ ಇವೆ. ಇಲ್ಲಿನ ಪರಶುರಾಮ ದೇವಾಲಯದಲ್ಲಿ ಒಂದು ಶಾಸನಕಲ್ಲು ಪೂಜಾವಸ್ತುವಾಗಿದೆ. ಈ ದೇವಾಲಯವನ್ನು ಸಂದರ್ಶಿಸದಿದ್ದಲ್ಲಿ ನಂಜನಗೂಡಿನ ಯಾತ್ರೆ ಅಪೂರ್ಣವಾಗುವುದೆಂಬ ನಂಬಿಕೆ ಇದೆ.

ನಂಜನಗೂಡಿನಲ್ಲಿ ಶಾಂಕರ, ವೀರಶೈವ ಮತ್ತು ಮಾಧ್ವ ಸಂಪ್ರದಾಯದ ಮಠಗಳಿವೆ. ಇವುಗಳಲ್ಲಿ ರಾಘವೇಂದ್ರಸ್ವಾಮಿ ಮಠ ಪ್ರಾಚೀನವಾದುದು. ಸು. 15ನೆಯ ಶತಮಾನದಲ್ಲಿ ವಿಬುಧೇಂದ್ರ ತೀರ್ಥರಿಂದ ಸ್ಥಾಪಿತವಾದದ್ದು. ಸುಧೀಂದ್ರ, ರಾಘವೇಂದ್ರ ಮೊದಲಾದ ಪ್ರಸಿದ್ಧ ಆಚಾರ್ಯರು ಮಠದ ಪರಂಪರೆಗೆ ಸೇರಿದವರು. ಮಠದಲ್ಲಿ 15-18ನೆಯ ಶತಮಾನಗಳಿಗೆ ಸೇರಿದ. ಅನೇಕ ತಾಮ್ರಪಟಗಳೂ ಸನ್ನದುಗಳೂ ಇವೆ. ಇಲ್ಲಿ ಓಲೆಯ ಹಸ್ತಪ್ರತಿಗಳ ಸಂಗ್ರಹ ಸಹ ಇದೆ.

ಸ್ಥಳಪುರಾಣಗಳ ಪ್ರಕಾರ ನಂಜನಗೂಡಿಗೆ ಗರಳಪುರಿ ಕ್ಷೇತ್ರ. ದಕ್ಷಿಣಕಾಶಿ ಎಂಬ ಹೆಸರುಗಳೂ ಇವೆ. ಇದು ತ್ರಿವೇಣೀಸಂಗಮಸ್ಥಾನ ಎಂಬ ನಂಬಿಕೆ ಇದೆ. ಪರಶುರಾಮ ತನ್ನ ಮಾತೃಹತ್ಯಾಪಾಪವನ್ನು ಇಲ್ಲಿ

ಶಿವಾನುಗ್ರಹದಿಂದ ಕಳೆದುಕೊಂಡ, ಗೌತಮ ಋಷಿಗಳ ಆಶ್ರಮ ಇಲ್ಲಿತ್ತು ಎಂದು ಐತಿಹ್ಯ. (ಎಸ್.ಎಸ್.)

**ನಂಜನಗೂಡು ಶ್ರೀಕಂಠಶಾಸ್ತ್ರಿ :** 1884-1958. ಹೊಸಗನ್ನಡದ ಅರುಣೋದಯ ಸಾಹಿತ್ಯಕ್ಕೆ ಮಹತ್ವದ ಕೊಡುಗೆಯನ್ನಿತ್ತ ಗಣ್ಯರು. ಇವರದು ಪಂಡಿತ ಮನೆತನ. ಪ್ರಸಿದ್ಧ ಪಂಡಿತರಾಗಿದ್ದ ನಂಜನಗೂಡು ಸುಬ್ಬಾಶಾಸ್ತ್ರಿ ಇವರ ತಂದೆ. ಶ್ರೀಕಂಠಶಾಸ್ತ್ರಿಗಳು ಸ್ವತಂತ್ರವಾಗಿ ಸಂಸ್ಕೃತ ಮತ್ತು ಕನ್ನಡದಲ್ಲಿ ಪಾಂಡಿತ್ಯ ಗಳಿಸಿ, ತಮ್ಮ ಹದಿನೆಂಟನೆಯ ವಯಸ್ಸಿಗೆ ಗ್ರಂಥರಚನಾ ಚಾತುರ್ಯವನ್ನು ಪ್ರದರ್ಶಿಸಿದರು. ಆಗಿನ ಮೈಸೂರು ಮಹಾರಾಜರ ಕೃಪೆಗೆ ಪಾತ್ರರಾಗಿ ಆಸ್ಥಾನ ವಿದ್ವಾಂಸರಾಗಿದ್ದರಲ್ಲದೆ, ಅರಮನೆಯಲ್ಲಿ ಕನ್ನಡ ಅಧ್ಯಾಪಕರಾಗಿ ಸು. 40 ವರ್ಷಗಳ ಕಾಲ ಕೆಲಸ ಮಾಡಿದರು. ಅನೇಕ ಐರೋಪ್ಯ ಅಧಿಕಾರಿಗಳಿಗೆ ಇವರು ಕನ್ನಡ ಕಲಿಸಿದರು. ಇವರು ಸು. 78 ಗ್ರಂಥಗಳನ್ನು ಬರೆದಿದ್ದಾರೆ ಎನ್ನಲಾಗಿದೆ. ಇವರ ಕೆಲವು ಗ್ರಂಥಗಳು ತೆಲುಗು, ಮಲೆಯಾಳಂ ಭಾಷೆಗಳಿಗೂ ಅನುವಾದವಾಗಿವೆ.

ಕನ್ನಡ ನಾಟಕ ಸಾಹಿತ್ಯಕ್ಕೆ ಜೀವ ತುಂಬಿದ ಶ್ರೇಯಸ್ಸು ಶಾಸ್ತ್ರಿಗಳದು. ವರದಾಚಾರ್ಯರ ನಾಟಕ ಕಂಪನಿಗೂ ಚಾಮುಂಡೇಶ್ವರಿ ನಾಟಕ ಮಂಡಲಿಗೂ ಶಾಸ್ತ್ರಿಗಳು ಅನೇಕ ನಾಟಕಗಳನ್ನು ಬರೆದುಕೊಟ್ಟರು. ರಂಗಭೂಮಿಯ ಮೇಲೆ ಪ್ರದರ್ಶನಗೊಂಡು ಜನಪ್ರಿಯವಾದ ಇವರ ನಾಟಕಗಳಲ್ಲಿ ಕೆಲವಿವು: ನಿರುಪಮ, ಧ್ರುವವಿಜಯ, ವಿಷ್ಣುಲೀಲಾ, ಸೀತಾಪರಿಣಯ, ಸರ್ವಸುಂದರಿ, ಶ್ರೀರಾಮ ಪಾದುಕಾಪಟ್ಟಾಭಿಷೇಕ, ರಾಜಸೂಯಯಾಗ.

ಕಾದಂಬರಿ ಮತ್ತು ಪ್ರಬಂಧಗಳ ಮೂಲಕ ಗದ್ಯವನ್ನು ಹೊಸ ಹದಕ್ಕೆ ತರಲೂ ಶಾಸ್ತ್ರಿಗಳೂ ಶ್ರಮಿಸಿದರು. ಇವರು ಬರೆದಿರುವ 12 ಸ್ವತಂತ್ರ ಕಾದಂಬರಿಗಳಲ್ಲಿ ಅನುಗಸುಂದರಿ, ಸರಳಬಾಲೆ, ರಾಧಾಮಾಧವಿ ಮುಖ್ಯವಾದುವು. ಸುಭಾಷಿತ ಲಹರಿ, ವಿಶ್ವಾಮಿತ್ರ, ಮೈಸೂರು ಯಾತ್ರೆ ಮುಂತಾದ ಕೃತಿಗಳು ಇವರ ಉತ್ತಮ ಗದ್ಯಶೈಲಿಗೆ ಉದಾಹರಣೆಯಾಗಿವೆ. ಕೃಷ್ಣರಾಜೇಂದ್ರ ವಂಶಚರಿತ್ರೆ ಎಂಬ ಇವರ ಚಂಪೂಗ್ರಂಥ ಆಸ್ಥಾನ ವಿದ್ವತ್ಸಭೆಯ ಕವಿತಾಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆಯಿತು. ತೆಲುಗು ಸಾಹಿತ್ಯದ ವೀರೇಶಲಿಂಗಂ ಪಂತುಲು ಅವರ ಅನೇಕ ಕಾದಂಬರಿಗಳನ್ನೂ ನಾಟಕಗಳನ್ನೂ ಇವರು ಕನ್ನಡಕ್ಕೆ ಭಾಷಾಂತರಿಸಿದ್ದಾರೆ.

ಇವರು ಸಲ್ಲಿಸಿದ ಸಾರ್ವಜನಿಕ ಸೇವೆಯೂ ಗಣ್ಯವಾದುದು. ಕರ್ನಾಟಕ ಚಂದ್ರಿಕೆ ಎಂಬ ಪತ್ರಿಕೆಯನ್ನು 1911ರಲ್ಲಿ ಸ್ಥಾಪಿಸಿ ಸು.14 ವರ್ಷಗಳ ಕಾಲ ನಡೆಸಿದರು. ಮೈಸೂರು ದಳವಾಯಿ ಪ್ರೌಢಶಾಲೆ, ಸಿಟಿ ಕೋ-ಆಪರೇಟಿವ್ ಬ್ಯಾಂಕ್ ಮುಂತಾದ ಹಲವು ಸಂಸ್ಥೆಗಳ ಅಭಿವೃದ್ಧಿಗಾಗಿ ಶ್ರಮಿಸಿದರು. ಮೈಸೂರಿನಲ್ಲಿ ಅನಾಥ ಸಹಾಯಕ ಸಂಘವೊಂದನ್ನು ಆರಂಭಿಸಿ, 35 ವರ್ಷಗಳ ಕಾಲ ಅದರ ಕಾರ್ಯದರ್ಶಿಯಾಗಿ ಕೆಲಸ ಮಾಡಿದರು. ಇವರ ಸಾಹಿತ್ಯ ಸೇವೆ ಮತ್ತು ಸಾರ್ವಜನಿಕ ಸೇವೆಗಳನ್ನು ಗಮನಿಸಿ, ಮೈಸೂರು ನಾಗರಿಕರು 1927ರಲ್ಲಿ ಇವರಿಗೆ ಸುವರ್ಣಕಂಕಣವನ್ನು ತೊಡಿಸಿ ಗೌರವಿಸಿದರು. ಕನ್ನಡ ಸಾಹಿತ್ಯ ಪರಿಷತ್ತು 1952ರಲ್ಲಿ ಇವರನ್ನು ಸನ್ಮಾನಿಸಿತು. (ಡಿ.ವಿ.)

**ನಂಜನಗೂಡು ಸುಬ್ಬಾಶಾಸ್ತ್ರಿ :** 1834-1906. ಸಂಸ್ಕೃತ ಮತ್ತು ಕನ್ನಡ ಪಂಡಿತರಾಗಿದ್ದ ಇವರು ಮೈಸೂರು ಮಹಾರಾಜರ ಆಸ್ಥಾನ ವಿದ್ವಾಂಸರೂ ಅಧ್ಯಾಪಕರು ಆಗಿದ್ದರು. ಚಾಮರಾಜೇಂದ್ರ ಕೃಪಾಪೋಷಿತ ಅರಮನೆ ನಾಟಕ ಸಂಘದಲ್ಲಿ ಬಸವಪ್ಪಶಾಸ್ತ್ರಿ, ಅಯ್ಯಾಶಾಸ್ತ್ರಿ, ಜಯರಾಯಾಚಾರ್ಯ ಮುಂತಾದ ಭಾಷಾಸೇವಕರೊಂದಿಗೆ ಕೂಡಿ ಕೆಲಸ ಮಾಡಿದರು. ರಂಗಪ್ರಯೋಗವಾಗಬೇಕಿದ್ದ ನಾಟಕಗಳ ಪೂರ್ವಪರೀಕ್ಷಣ ಮಂಡಲಿಯಲ್ಲಿದ್ದ ಇವರು ರಂಗಪ್ರಯೋಗದ ಸಾಧ್ಯಾಸಾಧ್ಯತೆಗಳನ್ನು ಚೆನ್ನಾಗಿ ತಿಳಿದಿದ್ದರು.

ಸಂಸ್ಕೃತದ ಮೃಚ್ಛಕಟಿಕ ಮತ್ತು ಮಾಳವಿಕಾಗ್ನಿಮಿತ್ರ ನಾಟಕಗಳನ್ನು ಇವರು ಕನ್ನಡಕ್ಕೆ ತಂದಿದ್ದಾರೆ. ಸೀತಾಚರಿತ್ರೆ ಮತ್ತು ಉತ್ತರ ಸೀತಾಚರಿತೆ ಇವರ ಸ್ವತಂತ್ರ ಕಾವ್ಯಗಳು. ಸಂಸ್ಕೃತದಲ್ಲಿ ವಿದ್ವಚ್ಚಕೋರಚಂದ್ರಿಕೆ ಮತ್ತು ಶಾರದಾಷ್ಟಕಾದಿ ಸ್ತೋತ್ರ ಎಂಬ ಗ್ರಂಥಗಳನ್ನು ಬರೆದಿದ್ದಾರೆ.

ಇವರು ಮೈಸೂರು ಅರಮನೆ ಮತ್ತು ಶೃಂಗೇರಿ ಪೀಠದಿಂದ ಸನ್ಮಾನಿತರಾಗಿದ್ದರು. ಪ್ರಸಿದ್ಧ ವಿದ್ವಾಂಸರುಗಳಾಗಿದ್ದ ನಂಜನಗೂಡು ಅನಂತ ನಾರಾಯಣಶಾಸ್ತ್ರಿ ಮತ್ತು ನಂಜನಗೂಡು ಶ್ರೀಕಂಠಶಾಸ್ತ್ರಿ ಇವರ ಪುತ್ರರು. (ಡಿ.ವಿ.)

**ನಂಜನಾಧ್ವಾಚಾರ್ಯ :** ಸು.1500 ವೀರಶೈವಕವಿ. ವೈಷ್ಣವವಾದಖಂಡನವೆಂಬ ಗ್ರಂಥದ ಕರ್ತೃ. ತಂದೆ ತ್ರಿಲೋಚನಾಚಾರ್ಯ. ಗದ್ಯರೂಪದಲ್ಲಿದೆ. ಕೃತಿಯಲ್ಲಿ ಪದ್ಮಣಾಂಕನ (ಸು.1385) ಪದ್ಮರಾಜಪುರಾಣವನ್ನು ನಿರ್ದೇಶಿಸುವುದರಿಂದ ಅವನ ಕಾಲಕ್ಕೆ ಈತ ಈಚೆಯವನು. ವೈಷ್ಣವವಾದ ಖಂಡನ ಶಿವಾಧಿಕ್ಯ ಪ್ರತಿಪಾದನೆ ಈ ಕೃತಿಯ ಮೂಲಭೂತ ವೈಶಿಷ್ಟ್ಯ. ತ್ರಿಭುವನತಾತನೆ. ಚಾತ ಸ್ಥಾಪಿಸಹೊರಟ ವಿಷ್ಣು ಮಹತ್ತ್ವವನ್ನು ತಾನು ವಚನರೂಪಿನಿಂದ ಖಂಡಿಸಿ ಆ ವಚನದೆಡೆಗೆ ವೇದಪುರಾಣಾಗಮಾದಿಗಳಿಂದ ಆಧಾರಗಳನ್ನೊದಗಿಸಿರುವುದಾಗಿ ಕವಿ ಹೇಳಿಕೊಂಡಿದ್ದಾನೆ.

**ನಂಜಪ್ಪ ಕೆ.ಎಲ್. :** 1914 - 90. ಭಾರತದ ಆಧುನಿಕ ಸಣ್ಣ ಕೈಗಾರಿಕೆಗಳ ಪಿತಾಮಹ. ಕಾರಚೂರು ಲಿಂಗಪ್ಪ ನಂಜಪ್ಪ ಇವರ ಪೂರ್ತಿ ಹೆಸರು. 1914 ಆಗಸ್ಟ್ 14 ರಂದು ಬೆಂಗಳೂರಿನಲ್ಲಿ ಜನಿಸಿದರು. ತಂದೆ ಕಾರಚೂರು ಲಿಂಗಪ್ಪ, ತಾಯಿ ತಿಪ್ಪಮ್ಮ. ಆರಂಭಿಕ ಶಿಕ್ಷಣವನ್ನು ಬೆಂಗಳೂರಿನಲ್ಲಿ ಪಡೆದರು. ಪಠ್ಯೇತರ ಚಟುವಟಿಕೆಗಳಲ್ಲಿ ಹೆಚ್ಚಿನ ಆಸಕ್ತಿ. ವಿದ್ಯಾರ್ಥಿಯಾಗಿದ್ದಾಗಲೆ ಬ್ರಿಟಿಷರ ವಿರುದ್ಧ ಅಸಹಕಾರ ಚಳವಳಿ ಮತ್ತು ಸತ್ಯಾಗ್ರಹಗಳಲ್ಲಿ ಪಾಲ್ಗೊಂಡು ಸೆರೆವಾಸ ಅನುಭವಿಸಿದರು (1928).

ಉನ್ನತ ವ್ಯಾಸಂಗಕ್ಕಾಗಿ ವಿದ್ಯಾರ್ಥಿವೇತನ ಪಡೆದು ಜಪಾನಿಗೆ ತೆರಳಿದರು (1937). ಅಲ್ಲಿ 5 ವರ್ಷಗಳ ಕಾಲ ಸಣ್ಣ ಕೈಗಾರಿಕೆಗಳ ಬಗ್ಗೆ ವಿಶೇಷ ಅಧ್ಯಯನ ನಡೆಸಿದರು. ಜಪಾನಿನ ಯಾವುದೇ ಕೈಗಾರಿಕೋದ್ಯಮವನ್ನಾದರೂ ಅಧ್ಯಯನ ಮಾಡುವ ವಿಶೇಷ ರಹದಾರಿಯನ್ನು ಆ ಸರ್ಕಾರ ಇವರಿಗೆ ನೀಡಿತ್ತು. ಇಂತಹ ಅನುಮತಿ ಪಡೆದವರಲ್ಲಿ ಇವರೇ ಮೊದಲಿಗರು. ಮಿತ್ಸುಬುಷಿ ಎಕನಾಮಿಕ್ ರಿಸರ್ಚ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್‌ನಲ್ಲಿ ಪ್ರಾತ್ಯಕ್ಷಿಕೆಯ ತರಬೇತಿ ಪಡೆದರು. ಈ ಅನುಭವದ ಹಿನ್ನೆಲೆಯಲ್ಲಿ ಸಣ್ಣ ಕೈಗಾರಿಕೋದ್ಯಮಕ್ಕೆ ನಿಶ್ಚಿತ ರೂಪರೇಷೆಗಳನ್ನು ಕೊಡುವಂತೆ ಪ್ರೇರಣೆ ಮತ್ತು ಪರಿಣತಿಯನ್ನು ರೂಢಿಸಿಕೊಂಡರು.

ಇವರು ಭಾರತಕ್ಕೆ ಮರಳಿದ ಬಳಿಕ ಭದ್ರಾವತಿ ಮೈಸೂರು ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯಲ್ಲಿ ಮಾರಾಟಾಧಿಕಾರಿಯಾಗಿ ವೃತ್ತಿ ಜೀವನ ಆರಂಭಿಸಿದರು. (1942) ಇವರು ಕೈಗಾರಿಕಾ ಸಹ ನಿರ್ದೇಶಕರಾಗಿದ್ದ ಅವಧಿಯಲ್ಲಿ (1944) ಇವರಿಗೆ ಎಂ.ವಿಶ್ವೇಶ್ವರಯ್ಯನವರ ಸಹಯೋಗ ದೊರೆಯಿತು. ಅವರಿಂದ ಪ್ರಭಾವಿತರಾಗಿ ಭಾರತದಲ್ಲೇ ಪ್ರಪ್ರಥಮವಾಗಿ ಗ್ರಾಮೀಣ ಕೈಗಾರಿಕೆಗಳ ಬಗ್ಗೆ ಕಾರ್ಯಕ್ರಮ ನಿರೂಪಿಸಿದರು. ಈ ಸಂಬಂಧವಾಗಿ ವಿಶ್ವೇಶ್ವರಯ್ಯನವರೊಂದಿಗೆ ಸಹ ಲೇಖಕರಾಗಿ ಎರಡು ಸಂಪುಟಗಳನ್ನು ಪ್ರಕಟಿಸಿದರು. ಮೈಸೂರು ಸಂಸ್ಥಾನದಲ್ಲಿ ಮೊತ್ತ ಮೊದಲಿಗೆ ಆರಂಭವಾದ ಮೈಸೂರು ರಾಜ್ಯ ಕೈಗಾರಿಕೆ ಮತ್ತು ವಾಣಿಜ್ಯ ಯೋಜನೆಗೆ ಪ್ರಥಮ ಕಾರ್ಯದರ್ಶಿಯಾಗಿ ನೇಮಕಗೊಂಡರು (1945). ಈ ಅವಧಿಯಲ್ಲಿ ಇವರ ಮಾರ್ಗದರ್ಶನದಲ್ಲಿ ಬೃಹತ್ ಮತ್ತು ಸಣ್ಣ ಕೈಗಾರಿಕೆಗಳು ಆಧುನೀಕರಣಗೊಂಡವು. ಇವರ ಮುಂದಾಳತ್ವ ಹಾಗೂ ದೂರದೃಷ್ಟಿಯ ಫಲವಾಗಿ ಬೆಂಗಳೂರಿನಲ್ಲಿ ಹಲವು ಸಣ್ಣ ಕೈಗಾರಿಕೆಗಳು ಸ್ಥಾಪನೆಗೊಂಡು ಬೃಹತ್ ಕೈಗಾರಿಕೆಗಳಾಗಿ ಮಾರ್ಪಾಡು ಹೊಂದಿದವು.

ಇವರಿಗೆ ಸಣ್ಣ ಕೈಗಾರಿಕೆಗಳಲ್ಲಿದ್ದ ಅನುಭವ ಪರಿಣತಿಗಳನ್ನು ಗುರುತಿಸಿದ ಭಾರತಸರ್ಕಾರ ಇವರನ್ನು ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯದಲ್ಲಿ ಸಹ ನಿರ್ದೇಶಕರಾಗಿ ನೇಮಿಸಿತು (1949). ಅನಂತರ ಸ್ಥಾಪನೆಯಾದ ಗುಡಿಕೈಗಾರಿಕೆ ಮತ್ತು ಸಣ್ಣ ಕೈಗಾರಿಕೆಗಳ ಅಭಿವೃದ್ಧಿ

ಪ್ರಾಧಿಕಾರದ ಸ್ಥಾಪಕ ನಿರ್ದೇಶಕರಾದರು (1954). ಈ ಅವಧಿಯಲ್ಲಿ ಗೃಹ ಕೈಗಾರಿಕೆ ಮತ್ತು ಸಣ್ಣ ಕೈಗಾರಿಕೆಗಳ ಸರ್ವತೋಮುಖ ಅಭಿವೃದ್ಧಿಗೆ ಶ್ರಮವಹಿಸಿದರು. ಅನಂತರ 1962 ರಲ್ಲಿ ಆರಂಭಗೊಂಡ ಭಾರತದ ರಾಷ್ಟ್ರೀಯ ಸಣ್ಣ ಕೈಗಾರಿಕಾ ಕಾರ್ಪೋರೇಷನ್‌ನ ಅಭಿವೃದ್ಧಿ ಕಮಿಷನರ್ ಆಗಿ ಅಧಿಕಾರ ವಹಿಸಿಕೊಂಡರು (1967). ಈ ಹುದ್ದೆಯಲ್ಲಿ ದೀರ್ಘಕಾಲ ಸೇವೆ ಸಲ್ಲಿಸಿದರಲ್ಲದೆ, ಕೈಗಾರಿಕಾ ವ್ಯವಸ್ಥಾಪಕರಿಗೆ ಎಲ್ಲ ಬಗೆಯ ಸೌಲಭ್ಯಗಳನ್ನು ಒದಗಿಸಿ ತಮ್ಮ ಕರ್ತೃತ್ವ ಶಕ್ತಿಯನ್ನು ಮೆರೆದರು. ಇವರ ನಿಸ್ವಾರ್ಥ ಸೇವೆಗಾಗಿ ಭಾರತ ಸರ್ಕಾರ ಪದ್ಮಶ್ರೀ ಪ್ರಶಸ್ತಿ ನೀಡಿ ಗೌರವಿಸಿದೆ (1972).

ನಂಜಪ್ಪನವರು ಅಂತಾರಾಷ್ಟ್ರೀಯಮಟ್ಟದಲ್ಲೂ ಖ್ಯಾತಿ ಪಡೆದಿದ್ದರು. ಸುಮಾರು 20 ರಾಷ್ಟ್ರಗಳು ಇವರನ್ನು ಆಹ್ವಾನಿಸಿ ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಇವರ ಸಲಹೆಗಳನ್ನೂ ಸೇವೆಯನ್ನು ಪಡೆದವು. ನಿವೃತ್ತರಾದ ಬಳಿಕವೂ ಭಾರತದ ಸಣ್ಣ ಕೈಗಾರಿಕೆಗಳನ್ನು ಅಭಿವೃದ್ಧಿಗೊಳಿಸಲೂ ಬಲಪಡಿಸಲೂ ಅವಿಶ್ರಾಂತವಾಗಿ ದುಡಿದ ಇವರು 1990 ಅಕ್ಟೋಬರ್ 8 ರಂದು ಬೆಂಗಳೂರಿನಲ್ಲಿ ನಿಧನರಾದರು.

(ಟಿ.ವಿ.ಎಸ್.)

**ನಂಜಯ್ಯ**[1]**:** ಕರ್ನಾಟಕದ ಜನಪದ ಆರಾಧ್ಯದೈವಗಳಲ್ಲಿ ಪ್ರಸಿದ್ಧನಾದವ. ದಕ್ಷಿಣಕಾಶಿಯೆಂದು ಪ್ರಸಿದ್ಧವಾದ ನಂಜನಗೂಡು (ನೋಡಿ) ಈ ನಂಜಯ್ಯ (ನಂಜುಂಡೇಶ್ವರ) ನೆಲೆಸಿರುವ ಕ್ಷೇತ್ರ. ಸಮುದ್ರಮಥನ ಕಾಲದಲ್ಲಿ ಹುಟ್ಟಿದ ವಿಷವನ್ನು ಸೇವಿಸಿ ಕಂಠದಲ್ಲಿ ಧರಿಸಿದ್ದರಿಂದ ಶಿವ ವಿಷಕಂಠನಾದ, ನಂಜುಂಡೇಶ್ವರನಾದ ಎಂದು ಪುರಾಣಗಳು ಹೇಳುತ್ತವೆ. ಆದರೆ ಜನಪದ ಗೀತೆಗಳನ್ನು ಕಟ್ಟಿದ ಕವಿಗಳ ದೃಷ್ಟಿಯೇ ಬೇರೆ. ಈ ನಂಜಯ್ಯನನ್ನು ಕುರಿತು ತ್ರಿಪದಿಯಲ್ಲಿ ಹೇಳಿರುವ ಕಥೆ ಹೀಗಿದೆ: ಕಪಿನಿ ಮತ್ತು ಗುಂಡ್ಲುಹೊಳೆಯ ಮಧ್ಯೆ ಇರುವ ನಂಜನಗೂಡು ಜಂಗಮರ ಪಟ್ಟಣವೆಂದು ಪ್ರಸಿದ್ಧವಾದದ್ದು. ಶಿವಜಂಗಮನಾದ ನಂಜಯ್ಯ ವಾಸಿಸುವ ಗುಡಿ (ಮಠ) ಹಿಪ್ಪೆ ತೋಪಿನಲ್ಲಿದೆ. ಅದರ ಬಳಿ ಸೂಳೆಯರ ಬೀದಿಯೂ ಇರುವುದನ್ನು ಮೆಚ್ಚಿಯೇ ನಂಜಯ್ಯ ಅಲ್ಲಿ ನೆಲೆಗೊಂಡ. ಆತನ ಹೆಂಡತಿ ದೇವೀರಿ (ದೇವಾರಿ). ಗುಡಿಯ ಕಳಸ ಚಿನ್ನದ್ದು. ಗುಡಿಯಲ್ಲಿ ಗಂಧದ ಪರಿಮಳ ತುಂಬಿದೆ. ಎಂಟೆಂಟು ದಿವಸಕ್ಕೋ ತಿಂಗಳಿಗೊಮ್ಮೆಯೋ ಇಲ್ಲಿ ಪೂಜೆ ನಡೆಯುತ್ತದೆ. ನಂಜನಗೂಡಿಗೆ ಹೋಗುವ ದಾರಿಯಲ್ಲಿ ಕಲ್ಲುಮುಳ್ಳುಗಳಿಲ್ಲದಂತೆ ದಾರಿಯುದ್ದಕ್ಕೂ ದವನದ ತೋಟವೇ. ನಂಜಯ್ಯನಿಗೆ ತುಂಬೆ ಹೂವಿನ ಪೂಜೆ ನಡೆಯುತ್ತದೆ. ಕಂಬಿ ಸೀರೆಯನ್ನು ಕಾಸೆಹಾಕಿ ಉಟ್ಟ ಸಂಬಳದ ಸೂಳೆಯರು ಆರತಿ ಬೆಳಗುವರು. ಅವನು ಗೊಂಬೆ ತೇರು ಹತ್ತಿ ಉತ್ಸವ ಹೊರಟಾಗ ಅವನ ಜೊತೆಗೆ ಇನ್ನೂ ಐದು ತೇರುಗಳೂ ನಂದಿಕೋಲುಗಳೂ ಹಿಂಬಾಲಿಸುತ್ತವೆ. ಜನ ಎಸೆವ ಹಣ್ಣು ದವನ ಹಾರಾಡುತ್ತವೆ. ಆಗ ಆರು ತೇರಿನ ಅರಸ, ಮೂರು ತೇರಿನ ಮುನಿ, ಗೊಂಬೆ ತೇರಿನ (ದಳಪತಿ) ಗುರಿಕಾರನಾದ ಭೋಗಿ ನಂಜಯ್ಯ ನಿನ್ನನ್ನು ಹಡೆದವ್ವ ಧನ್ಯಳು ಎಂದು ಜನ ಹೊಗಳುತ್ತಾರೆ.

ನಂಜಯ್ಯ ಒಳ್ಳೆಯ ರಸಿಕ. ಪ್ರತಿದಿನವೂ ಆತ ಸೂಳೆಯರಿಂದ ಸೇವಿಸಿಕೊಳ್ಳುತ್ತಾನೆ. ಅವರೊಡನೆ ಪಗಡೆಯಾಡುತ್ತಾನೆ. ಆತ ಎಂಥ ರಸಿಕ ಜೀವಿಯೆಂದರೆ ಬೆಟ್ಟದ ಚಾಮಾಯಿ (ಚಾಮುಂಡಿ) ನಂಜನಗೂಡು ಹೊಳೆಗೆಬಂದು ಜಳಕ ಮಾಡುತ್ತಿರುವಾಗ ವೇಷಮರೆಸಿಕೊಂಡು ಹೋಗಿ ಅವಳ ಸೀರೆಯನ್ನು ಬಚ್ಚಿಟ್ಟು ಬಹಳ ಹೊತ್ತು ಕಾಡಿಸಿ ಕೊನೆಗೆ ಕೊಟ್ಟವ. ಬೆಟ್ಟದ ಚಾಮುಂಡಿ ಅವನ ಪ್ರೀತಿಯ ಸೂಳೆ. ಆಗಾಗ ಬೆಟ್ಟಕ್ಕೆ ಹೋಗಿ ಬರುತ್ತಾನೆ. ಒಂದು ದಿನ ರಾತ್ರಿ ಅವನಿಗೆ ಬೆಟ್ಟಕ್ಕೆ ಹೋಗುವ ಮನಸ್ಸಾಗಿ ಪಕ್ಕದಲ್ಲಿ ಮಲಗಿದ್ದ ದೇವೀರಿಗೆ ತಿಳಿಯದಂತೆ ಕಾವಿಕಂತೆ ಧರಿಸಿ, ಕೈಯಲ್ಲಿ ನಾಗಬೆತ್ತ ಹಿಡಿದು, ಸೇರು ಪಾವು ಬಟ್ಲಡಿಕೆ, ಬಿಳಿ ಎಲೆ ತೆಗೆದುಕೊಂಡು, ಮಂದಿಯಿಂದ ಪಂಜನ್ನು ಹಿಡಿಸಿಕೊಂಡು, ಚಾಮುಂಡಿಯ ಅರಮನೆಗೆ ಹೋದ. ತಾವರೆಮೈಯಿನ ಚಾಮುಂಡಿ ಪನ್ನೀರಿಂದ ಪಾದ ತೊಳೆದು, ಮುತ್ತಿನ ಸೆರಗಿನಿಂದ ಒರೆಸಿ ಒಳಗೆ ಕರೆದೊಯ್ದು ಹಾಲು ಸಕ್ಕರೆ ಎಡೆಮಾಡಿ ಗಿಲಿಗಲಿ ಮಂಚದ ಮೇಲೆ ಕುಳ್ಳಿರಿಸಿ ವೀಳೆಯವಿತ್ತಳು. ಪಗಡೆ ಆಟದೊಂದಿಗೆ ನಂಜಯ್ಯ ಆ ರಾತ್ರಿಯನ್ನು ಅವಳೊಂದಿಗೆ ಕಳೆದ. ಅರ್ಧ ರಾತ್ರಿಯಲ್ಲಿ ಎಚ್ಚರಗೊಂಡ ದೇವೀರಿ ತನ್ನ ಗಂಡ ಪಕ್ಕದಲ್ಲಿ ಇಲ್ಲದ್ದನ್ನು ನೋಡಿಳು. ಅವಳ ಸಂಶಯ ಬಲವಾಯಿತು. ಅವನು ಬೆಟ್ಟದ ಹೆಣ್ಣಿನ ಸ್ನೇಹ ಮಾಡಿರುವ ವಿಚಾರ ಅವಳಿಗೂ ಸ್ವಲ್ಪ ಗೊತ್ತಿತ್ತು. ಬೆಳಗ್ಗೆ ಬಂದ ಗಂಡನೊಂದಿಗೆ ವಾಗ್ವಾದ ಹೂಡಿದಳು. ಅವರಿಬ್ಬರಿಗೂ ಬಿರುಸಿನ ಸಂಭಾಷಣೆ ನಡೆಯಿತು. ತನಗೆ ವಯಸ್ಸಾಯಿತೆಂದೂ ಈ ವಯಸ್ಸಿನಲ್ಲಿ ಸೂಳೆಯ ಸಹವಾಸವೇ ಎಂದೂ ತನ್ನ ತಪ್ಪನ್ನು ಮುಚ್ಚಿಕೊಳ್ಳಲು ನಂಜಯ್ಯ ಪ್ರಯತ್ನಿಸಿ ಕೊನೆಗೆ ಸೋತ. ದೇವೀರಿ ಗಂಡನ ಚಾತುರ್ಯವನ್ನು ನೋಡಿ ಹುಣಿಸೆಮರ ಮುಪ್ಪಾದರೆ ಹುಳಿ ಮುಪ್ಪಾದಾತಾ? ಜವನ (ದವನ) ಒಣಗಿದರೆ ಅದರ ಘಮಲು ಹೋದಾತಾ? ಕಾಲಕ್ಕೂ ಬಿಡಲಿಲ್ಲ ನಿಮ್ಮ ಕಳ್ಳಬುದ್ದೀನ: ನಿವ್ಮಾಸೆ ತೊಡೆಯಾ, ಹೋಗಿ ಸೀಗೇ ಹಾಕ್ಕೊಂಡು ತಲೇ ತೊಳೆದು ಹೊಳೇಲಿ ಮುಳುಗಿ ಬನ್ನಿ ಎಂದ ಮಾತಿಗೆ ನಂಜಯ್ಯ ಕಪಿನಿ ಹೊಳೆಯಲ್ಲಿ ಸ್ನಾನ ಮಾಡಿ ಬಂದ. ಅನಂತರ ಮನ ಕರಗಿದ ದೇವೀರಿ ಗಿಂಡಿಯಲ್ಲಿ ನೀರು ತಂದು ಅವನ ಪಾದ ತೊಳೆದು ಗುಡಿಯೊಳಗೆ ಕರೆದುಕೊಂಡಳು. (ಎಚ್.ಎಂ.ಆರ್.)

ಕರ್ನಾಟಕದ ನಾನಾ ಭಾಗಗಳಲ್ಲಿ ಈ ನಂಜಯ್ಯನಿಗೆ ಸಂಬಂಧಿಸಿದ ಜನಪದ ಕಥೆ. ಗೀತೆ, ಲಾವಣಿ, ಐತಿಹ್ಯಗಳು ಅಪಾರವಾಗಿ ಲಭ್ಯವಾಗುತ್ತವೆ. ಜನಪದ ವೃತ್ತಿಗಾಯಕರಲ್ಲಿ ಅನೇಕ ಸಂಪ್ರದಾಯದವರು ನಂಜಯ್ಯ-ಚಾಮುಂಡಿಯರನ್ನು ಕುರಿತ ಕಾವ್ಯಗಳನ್ನು ಹಾಡುತ್ತಾರೆ. ಹೆಳವರು ಚಾಮುಂಡಿಪುರಾಣ ಎಂಬ ಹೆಸರಿನಲ್ಲಿ ಈ ಕಥೆಯನ್ನು ಸುವಿಸ್ತಾರವಾಗಿ ಹಾಡುತ್ತಾರೆ. ಹೆಣ್ಣುಮಕ್ಕಳು ಹಾಡುವ ತ್ರಿಪದಿರೂಪದ ಹಾಡುಗತೆಗಳು ಹೇರಳವಾಗಿ ಸಿಕ್ಕುತ್ತವೆ. ಈ ಕಥೆಗಳಲ್ಲೆಲ್ಲಾ ಶಿವಕಥೆಯ ಸ್ಥೂಲರೇಖೆಯನ್ನು ಗುರುತಿಸಬಹುದು. ಶಿವಗಿರಿಜೆಯರ ಕಲ್ಯಾಣ, ಗಿರಿಜೆಯ ಮೇಲೆ ಶಿವ ಗಂಗೆಯನ್ನು ತಂದ ಪ್ರಸಂಗ ಅತ್ಯಂತ ಜನಪ್ರಿಯವಾದ ಕಥೆ. ಈ ಗಂಗೆಯ ಪ್ರಸಂಗವೇ ಸ್ಥಳೀಯ ಹಿನ್ನೆಲೆಯಲ್ಲಿ ನಂಜಯ್ಯ-ಚಾಮುಂಡಿ ಇವರ ಪ್ರಣಯಕಥೆಯಾಗಿ ರೂಪುಗೊಂಡಿದೆ. ತನ್ನ ಮಡದಿಯ ಮೇಲೆ ಉಪಪತ್ನಿಯನ್ನು ತರುವ ಆಶಯ ಅನೇಕ ಕ್ಷೇತ್ರಗಳಿಗೆ ಸಂಬಂಧಪಟ್ಟಂತೆ ಹಬ್ಬಿ ನಿಂತಿದೆ. ಬಿಳಿಗಿರಿರಂಗ-ಕುಸುಮಾಲೆ, ಚುಂಚನಗಿರಿ ಭೈರವ-ಮಾಳವಿ, ಮೇಲು ಕೋಟೆ ಚಲುವರಾಯ-ವರನಂದಿ ಇವರ ಸಂಬಂಧ ಈ ತೆರನಾದುದು. ಇನ್ನೂ ಅನೇಕ ಕ್ಷೇತ್ರಗಳಲ್ಲಿ ಈ ಬಗೆಯ ಕಥೆಗಳು ಕಾಣಬರುತ್ತವೆ. ಆದರೆ ಒಂದು ಸುಸಂಬದ್ಧ ಕಾವ್ಯವಾಗಿ ರೂಪುಗೊಂಡಿರುವುದು ನಂಜಯ್ಯನ ಕಥೆ ಮಾತ್ರ.

ಜನಪದ ಕಾವ್ಯಗಳಲ್ಲಿ ನಂಜಯ್ಯ ದೊಡ್ಡ ರಸಿಕನಾಗಿ ಚಿತ್ರಿತನಾಗಿದ್ದಾನೆ. ಅವನು ದೇವೀರಿ ಮತ್ತು ಪಾರ್ವತಿ ಎಂಬ ಪತ್ನಿಯರನ್ನು ಪಡೆದುದಾದರೂ ಚಾಮುಂಡಿಯ ಪ್ರಣಯಸಂಬಂಧವನ್ನು ಪಡೆದ ಅನಂತರ ಚಾಮುಂಡಿ ಇವನನ್ನು ಯಾವುದೋ ಸಂದರ್ಭದಲ್ಲಿ ಉಪೇಕ್ಷಿಸಿದಾಗ ಅವಳಿಗಿಂತ ಮೇಲಾದ ಪತ್ನಿಯರನ್ನು ತರುವುದಾಗಿ ಹೇಳಿ ಹೊರಟು ದೊಡ್ಡ ಸಾಹಸಯಾತ್ರೆಯನ್ನೇ ಮಾಡುತ್ತಾನೆ. ದೇವಲೋಕ ನಾಗಲೋಕಗಳಿಗೆ ಹೋಗಿ ಅವರಿಬ್ಬರನ್ನು ತರುತ್ತಾನೆ. ತಂದ ಮೇಲೆ ನಂಜಯ್ಯ ಚಾಮುಂಡಿಯೊಡನೆ ಇಟ್ಟುಕೊಂಡ ಪ್ರಣಯಸಂಬಂಧ ಅವರಿಗರಿವಾಗುತ್ತದೆ. ಉಪಾಯಾಂತರದಿಂದ ನಂಜಯ್ಯ ಚಾಮುಂಡಿಯನ್ನು ಜೊತೆಗೂಡಿ ಪಾರ್ವತಿ, ದೇವೀರಿಯರ ಮನಸ್ಸನ್ನು ಒಲಿಸಿಕೊಳ್ಳುವ ವಿಶಿಷ್ಟ ತಂತ್ರ ಈ ಕಾವ್ಯದ ಉತ್ತರಾರ್ಧದಲ್ಲಿ ಕಂಡುಬರುತ್ತದೆ. ಅವರ ಪ್ರಣಯ ಚಿರಂತನವಾಗಿ ನಿಲ್ಲುತ್ತದೆ.

ಈ ಕಥಾವಸ್ತುವಿನ ಹಿನ್ನೆಲೆಯಲ್ಲಿ ಬೇರೆ ಬೇರೆಯ ರೂಪಗಳಲ್ಲಿ ನಂಜಯ್ಯನ ಕಥೆ ಜನಪದ ಜೀವನದಲ್ಲಿ ಪ್ರಚಲಿತವಾಗಿದೆ. ಈ ಕಾವ್ಯವಲ್ಲದೆ ಬೇರೆ ಬೇರೆ ಕಾವ್ಯಗಳಲ್ಲೂ ಕೆಲವು ವಿಶಿಷ್ಟ ಸಂದರ್ಭಗಳಲ್ಲಿ ನಂಜಯ್ಯನ ಪ್ರಸ್ತಾಪ ಪ್ರಾಸಂಗಿಕವಾಗಿ ಬರುತ್ತದೆ. ದಕ್ಷಿಣ ಕರ್ನಾಟಕದ ಎಲ್ಲ ಭಾಗಗಳಲ್ಲೂ ನಂಜಯ್ಯ ಜನಪ್ರಿಯ ದೈವವಾಗಿ ಜನಪದ ಕಾವ್ಯದ ಒಬ್ಬ ವಿಶಿಷ್ಟ ನಾಯಕನಾಗಿ ನಿಲ್ಲುತ್ತಾನೆ.

ಐತಿಹ್ಯಗಳ ಪ್ರಕಾರ ನಂಜಯ್ಯ ಬಹು ದೊಡ್ಡ ವೈದ್ಯ. 'ಒಳರೋಗದ ಗಂಡ', 'ಹಕೀಮ್ ನಂಜುಂಡ' ಮುಂತಾದ ಹೆಸರಿನಲ್ಲಿ ಅವನು ಜನಪ್ರಿಯನಾಗಿದ್ದಾನೆ. ನಂಜಯ್ಯನಿಗೆ ಹರಸಿಕೊಂಡರೆ ಕೆಲರೋಗಗಳು ಗುಣವಾಗುತ್ತವೆ ಎಂದು ಜನ ನಂಬುತ್ತಾರೆ. ನಂಜಯ್ಯ ಟಿಪ್ಪು ಸುಲ್ತಾನನ ಆನೆಯ ರೋಗವನ್ನು ನಿವಾರಿಸಿ ಅವನಿಂದಲೂ ಪೂಜೆಯನ್ನು ಸ್ವೀಕರಿಸಿದ ಎಂಬ ಪ್ರತೀತಿ ಇದೆ.

**ನಂಜಯ್ಯ[2] :** ಸು.1750 ಯಕ್ಷಗಾನಕವಿ.ಕಾಶ್ಯಪ ಗೋತ್ರದವನಾದ ಈತ ಮೂಗೂರು ಅರಸುಗಳ ವಂಶಕ್ಕೆ ಸೇರಿದವ. ಈತನ ವಂಶಪರಂಪರೆ ಹೀಗಿದೆ. ಬಾಗಿಲಿ ಕೆಂಪ ಭೂಪಾಲನ ಮಗ ವೇಶಭೂಪತಿ. ಆತನ ಮಗ ಅಹವವಿಜಯ, ಅವನ ಮಗ ಮಹಲಿಂಗರಾಜೇಂದ್ರ. ಆತನ ಮಗನೇ ಕವಿ ನಂಜಯ್ಯ.

ಈತ ಕಪೋತವಾಕ್ಯ ಮತ್ತು ಶಬರಥನಂಜಯವಿಲಾಸಮಂಜರಿ ಎಂಬೆರಡು ಯಕ್ಷಗಾನ ಕೃತಿಗಳನ್ನು ರಚಿಸಿದ್ದಾನೆ. ಇವುಗಳಲ್ಲಿ ಎರಡನೆಯದು ಅನುಪಲಬ್ಧ. ವಾಲ್ಮೀಕಿ ರಾಮಾಯಣದ ಸುಂದರಕಾಂಡದ ಮೂರನೆಯ ಸಂಧಿಯಲ್ಲಿ ಬರುವ ಸೂರ್ಯಕುಮಾರನಾದ ಸುಗ್ರೀವ ಶ್ರೀರಾಮನ ಬಳಿಗೆ ಬಂದು ತನ್ನ ಆಶ್ರಯು ಪಡೆದಾಗ ಶ್ರೀರಾಮ ಸುಗ್ರೀವನಿಗೆ ಹೇಳುವ ಕಪೋತಕಥೆಯೇ ಕಪೋತವಾಕ್ಯದ ವಸ್ತು. *

**ನಂಜಯ್ಯ[3]:** ಸು. 1860. ಯಕ್ಷಗಾನ ಕವಿ. ತ್ರಿಪುರದಹನ, ರಾಧಾವಿಲಾಸ, ಸೋಮಶೇಖರ ಚಿತ್ರಶೇಖರ ಕಥೆ ಎಂಬ ಯಕ್ಷಗಾನಗಳನ್ನು ಬರೆದಿರುವುದಾಗಿ ತಿಳಿದುಬರುತ್ತದೆ. ಈತ ದಕ್ಷಿಣ ಕನ್ನಡ ಜಿಲ್ಲೆಯವನು. ಅಳಿಯ ಲಿಂಗರಾಜನ (1823-74) ಆಶ್ರಿತನಾಗಿ ಮೈಸೂರಿನಲ್ಲಿ ನೆಲೆಸಿದ. ಇವನು ತನ್ನ ಗ್ರಂಥಗಳಲ್ಲಿ ಸ್ವಹೆಸರನ್ನು ಹೇಳಿಕೊಂಡಿಲ್ಲ. ಎಲ್ಲವೂ ಮಂಜುನಾಥ ಎಂಬ ಅಂಕಿತದಲ್ಲಿವೆ.

ಈಶ್ವರ ಪಾಶುಪತಾಸ್ತ್ರದಿಂದ ತ್ರಿಪುರಗಳನ್ನು ದಹಿಸಿದ ಕಥೆ ತ್ರಿಪುರದಹನ ಯಕ್ಷಗಾನದ ವಸ್ತು. ಇದರಲ್ಲಿ ಒಟ್ಟು 320 ಪದ್ಯಗಳಿವೆ. ರಾಧಾಕೃಷ್ಣರ ಲೀಲಾವಿನೋದಗಳು ರಾಧಾವಿಲಾಸದ ವಸ್ತು. ಇದರಲ್ಲಿ ಒಟ್ಟು 241 ಪದ್ಯಗಳಿವೆ. ವಜ್ರಮಕುಟರಾಯನ ಪುತ್ರರಾದ ಸೋಮಶೇಖರ ಕತೆ ಸೋಮಶೇಖರ ಚಿತ್ರಶೇಖರ ಯಕ್ಷಗಾನದ ವಸ್ತು. ಈ ಯಕ್ಷಗಾನ ಕೃತಿಗಳಲ್ಲಿ ಕವಿ ವಿವಿಧ ಛಂದಸ್ಸುಗಳನ್ನು ಬಳಸಿದ್ದಾನೆ.

ಇವನು ಮೋಹವಿವೇಕ ಕಾಳಗ, ಹರಿಶ್ಚಂದ್ರೋಪಾಖ್ಯಾನ, ಬಲಿಚಕ್ರವರ್ತಿಯ ಚರಿತೆ, ಸಾರಂಗಧರನ ಕಥೆ, ಚಂದ್ರಹಾಸನ ಕಥೆ ಎಂಬ ಗ್ರಂಥಗಳನ್ನೂ ರಚಿಸಿದಂತೆ ತೋರುತ್ತದೆ. *

**ನಂಜರಾಜ ಒಡೆಯರ್ :** ಮೈಸೂರು ರಾಜವಂಶದ ನಾಮಮಾತ್ರ ರಾಜ (1766-70). ಇಮ್ಮಡಿ ಕೃಷ್ಣರಾಜ 1766ರಲ್ಲಿ ನಿಧನ ಹೊಂದಿದಾಗ ಅವನ ಮಗನಾದ ಈತನನ್ನು, ಹೈದರನ ಅಭಿಪ್ರಾಯಕ್ಕೆ ಅನುಸಾರವಾಗಿ ಪಟ್ಟಕ್ಕೇರಿಸಲಾಯಿತು. 18 ವರ್ಷದ ಯುವಕನಾದ ನಂಜರಾಜ ಹೈದರನ ಹತೋಟಿಯಲ್ಲಿರಲು ಇಷ್ಟಪಡಲಿಲ್ಲ. ಈತನ ಸ್ವತಂತ್ರ ಪ್ರವೃತ್ತಿಯನ್ನು ಅರಿತ ಹೈದರ್ ರಾಜನಿಗೆ ಸಂದಾಯವಾಗುತ್ತಿದ್ದ ಮೂರು ಲಕ್ಷ ವರಹಗಳನ್ನು ನಿಲ್ಲಿಸಿ, ಅರಮನೆಯ ನಗನಾಣ್ಯಗಳನ್ನು ಕಸಿದುಕೊಂಡು ಇವನ ಸ್ವಾತಂತ್ರ್ಯವನ್ನೂ ಮೊಟಕುಮಾಡಿದ. ಸೇಡನ್ನು ತೀರಿಸಿಕೊಳ್ಳುವ ಉದ್ದೇಶದಿಂದ ನಂಜರಾಜ, ಹೈದರ್ ಮಲಬಾರಿನಲ್ಲಿ ತೇಜೋವಧೆ ಹೊಂದಿದ ಸನ್ನಿವೇಶವನ್ನು ಉಪಯೋಗಿಸಿಕೊಂಡು ಅವನ ಅಧಿಕಾರವನ್ನು ಕಿತ್ತೊಗೆಯಲು ಪ್ರಯತ್ನಪಟ್ಟ. ಈ ಗುರಿಯನ್ನು ಸಾಧಿಸುವುದಕ್ಕಾಗಿ ಮೈಸೂರು ರಾಜರೊಡನೆ ಮೈತ್ರಿಯಿಂದಿದ್ದ ಮರಾಠರೊಡನೆ ಸಂಧಾನ ನಡೆಸಿ, ಹೈದರನ ನಿಗ್ರಹಕ್ಕೆ ಸನ್ನದ್ಧನಾದ. ಆದರೆ ಸಹಕಾರಿಯಾಗಲು ಬಂದವರ ಸ್ವಾರ್ಥಸಾಧನೆ ನಂಜರಾಜನ ಉದ್ದೇಶಕ್ಕೆ ಧಕ್ಕೆತಂದಿತು. ಮೈಸೂರಿನ ಮೇಲೆ ದಾಳಿ ನಡೆಸುವ ಯತ್ನದಲ್ಲಿ ಮರಾಠರು ಹೈದರಾಬಾದಿನ ನಿಜಾಮನೊಡನೆ ಸೇರಿ ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿದರು. ಮಾಧವ ರಾಯನ ನೇತೃತ್ವದಲ್ಲಿ ಮರಾಠರು ಮೈಸೂರು ರಾಜ್ಯದಲ್ಲಿ ಕಾಣಿಸಿಕೊಂಡಾಗ, ಹೈದರ್ ಅವರನ್ನು ತಡೆಯಲು ಯತ್ನಿಸಿ ವಿಫಲನಾದ. ಆದರೆ ಅವರೊಡನೆ ಒಪ್ಪಂದವನ್ನು ಮಾಡಿಕೊಂಡ. ಒಪ್ಪಂದಕ್ಕೆ ಅನುಸಾರವಾಗಿ ಹೈದರ್ ಅವರಿಗೆ 35 ಲಕ್ಷ ರೂಪಾಯಿಗಳನ್ನು ಕೊಡಬೇಕಾಯಿತು. ಮರಾಠರ ಸಹಾಯಕ್ಕೆ ಬಂದ ನಿಜಾಮನೊಡನೆ ಹೈದರ್ ಸ್ನೇಹಸಂಬಂಧವನ್ನು ಬೆಳೆಸಿಕೊಂಡ. ನಂಜರಾಜನಿಗೆ ಲಾಭವೇನೂ ಆಗಲಿಲ್ಲ. ಹೈದರನ ಕೃಪೆಯಲ್ಲೇ ತನ್ನ ಜೀವಮಾನವನ್ನು ಕಳೆದು 1770ರಲ್ಲಿ ನಿಗೂಢ ಮರಣಕ್ಕೀಡಾದ. (ಕೆ.ಟಿ.ಆರ್.)

**ನಂಜುಂಡ ಕವಿ :** ಸು. 1525. ರಾಮನಾಥಚರಿತ ಎಂಬ ಕಾವ್ಯದ ಕರ್ತೃ. ಈತನ ತಂದೆ ಎರಡನೆಯ ಮಾಧವ. ಜಯನೃಪಾಕಾವ್ಯದ ಕರ್ತೃ ಮೂರನೆಯ ಮಂಗರಸ (ಸು.1508) ಇವನ ದೊಡ್ಡಪ್ಪ, ಚಂಗಾಳ್ವ ದೊರೆ ನಂಜರಾಜನಿಗಾಗಿ (1502-1533) ಯುದ್ಧಮಾಡಿ ಮಡಿದ ಎರಡನೆಯ ವಿಜಯ ಇವನ ಚಿಕ್ಕಪ್ಪ. ವಿಜಯನೃಪಾಲ ಕವಿಯ ತಾತನೆಂದು ತಿಳಿದುಬರುತ್ತದೆ. ಕವಿ ಮೊದಲಿಗೆ ಜೈನನಾಗಿದ್ದು ಅನಂತರ ಶೈವಧರ್ಮೀಯನಾದಂತೆ ತಿಳಿದುಬರುತ್ತದೆ.

ರಾಮನಾಥಚರಿತ ಸಾಂಗತ್ಯದಲ್ಲಿ ರಚಿತವಾಗಿದೆ. ಇದರಲ್ಲಿ 12 ಆಶ್ವಾಸಗಳೂ 47 ಸಂಧಿಗಳೂ 5807 ಪದ್ಯಗಳೂ ಇವೆ. ಇದಕ್ಕೆ ಕುಮಾರರಾಮನ ಸಾಂಗತ್ಯ ಎಂಬ ಹೆಸರೂ ಇದೆ. ಈ ಕಥೆಯನ್ನು ಕವಿ ತಾನು ರಸದಿಂ ಪುಟ್ಟಿಸಿ ಭಾವದಿಂ ಬಲಿಯಿಸಿ ಪೊಸಬಗೆವೆತ್ತಲಂಕೃತಿಯ ಎಸಕದಿಂ ಬಳೆಯಿಸಿ ಕೃತಿಯೆನಿಸಿದ್ದೇನೆ ಎಂಬುದಾಗಿ ಹೇಳಿಕೊಂಡಿದ್ದಾನೆ.

ಕಥಾವಸ್ತು ಹೀಗಿದೆ: ಶಿವಾಣಿಯ ಪ್ರತಿಜ್ಞೆಕಾರಣವಾಗಿ ಗಂಧರ್ವನಾಗಿದ್ದ ಅರ್ಜುನ ಹೊಸಮಲೆದುರ್ಗದ ದೊರೆಯಾದ ಕಂಪಿಲನ ಪಟ್ಟದರಸಿ ಹರಿಹರದೇವಿಯುವರಿಗೆ ಮಗನಾಗಿ ಕುಮಾರರಾಮ ಹುಟ್ಟಿದ. ಊರ್ವಶಿಯು ಕಂಪಿಲನ ಕಿರಿಯ ಮಡದಿ ರತ್ನಾಜಿಯಾಗಿ ಜನಿಸಿದಳು. ಬೆಳೆದು ದೊಡ್ಡವನಾದ ಕುಮಾರರಾಮ ಪರಾಕ್ರಮ ಮೆರೆದು ಹುಳಿಹೇರುಗೌಡ ಮೊದಲಾದವರ ಸೊಕ್ಕಡಗಿಸಿದ. ಡಿಲ್ಲಿಯ ಸುರತಾಳನಿಂದ ತಪ್ಪಿಸಿಕೊಂಡು ಓಡಿಬಂದ ಬಾದುರಖಾನನಿಗೆ ಆಶ್ರಯ ನೀಡಿ ನೇಮಿಖಾನನ ಸೈನ್ಯವನ್ನು ಹಿಮ್ಮೆಟ್ಟಿಸಿದ. ಶೂಲದ ಹಬ್ಬದಲ್ಲಿ ರತ್ನಾಜಿಗೆ ರಾಮನನ್ನು ಕಂಡು ಮೋಹವಂಕುರಿಸಿತು. ಕುಮಾರರಾಮ ಮತ್ತು ಆತನ ಗೆಳೆಯರು ಮುತ್ತಿನ ಚೆಂಡಾಟವಾಡಬೇಕೆಂದು ಬಯಸಿದ ದಿನ ಕಂಪಿಲರಾಯ ಬೇಟೆಗೆ ಹೋಗಿದ್ದ. ಆಟದಲ್ಲಿ ರತ್ನಾಜಿಯ ಅಂತಃಪುರಕ್ಕೆ ಸಿಡಿದು ಬಿದ್ದ ಮುತ್ತಿನ ಚೆಂಡನ್ನು ತರಹೋದ ರಾಮನು ಕಾಮಾತುರಳಾಗಿ ಮೇಲೆಬಿದ್ದ ರತ್ನಾಜಿಯನ್ನು ಜರಿದು ನಿವಾರಿಸಿ ಅಲ್ಲಿಂದ ಹೇಗೋ ಪಾರಾಗಿ ಬಂದ. ರತ್ನಾಜಿ ಸೇಡಿನಿಂದ ರಾಮನ ಮೇಲೆ ಸಲ್ಲದ ಅಪವಾದ ಹೊರಸಿದಳು. ರತ್ನಾಜಿಯ ಸುಳ್ಳನ್ನು ನಂಬಿದ ಕಂಪಿಲ ರಾಮನನ್ನು ಕೊಲ್ಲಿಸಲು ಆಜ್ಞೆಮಾಡಿದ. ರಾಜನ ದುಡುಕನ್ನು ತಿಳಿದ ಮಂತ್ರಿ ಬೈಚಪ್ಪ ಉಪಾಯದಿಂದ ರಾಮನಿಗೆ ನೆಲಮಾಳಿಗೆಯಲ್ಲಿ ರಕ್ಷೆ ನೀಡಿದ. ರಾಮನ ಮರಣವಾರ್ತೆ ತಿಳಿದ ಡಿಲ್ಲಿಯ ಸುರತಾಳ ಹೊಸಮಲೆದುರ್ಗವನ್ನು ಮುತ್ತಲು ಸೈನ್ಯ ಕಳುಹಿಸಿದ. ಆ ಸಂದರ್ಭದಲ್ಲಿ ದಾಳಿಯಿಟ್ಟ ನೇಮಿಯನ್ನು ರಾಮನೇ ಹಿಂದೋಡಿಸಬೇಕಾಯಿತು. ಪೂರ್ವಜನ್ಮದ ಸೇಡಿಗಾಗಿ ಸುರತಾಳನಲ್ಲಿ ಮಾತಂಗಿಯಾಗಿದ್ದ ಗಾಂಧಾರಿಯ ಎದುರು ಹೋರಾಡುತ್ತ ರಾಮ ಯುದ್ಧರಂಗದಲ್ಲಿ ಮಡಿದ. ರಾಮನ ಪರಾಕ್ರಮವನ್ನು ಕಂಡು ಮೋಹಿಸಿ ಆತನನ್ನು ಮದುವೆಯಾಗಲು ಬಯಸಿದ್ದ ಸುರತಾಳನ ಮಗಳು ರಾಮನ ಮರಣವನ್ನು ತಿಳಿದು ಪ್ರಾಣಬಿಟ್ಟಳು. ರಾಮನ ಮರಣವಾರ್ತೆಯನ್ನು ನಿಜವಾಗಿ ತಿಳಿದ ಕಂಪಿಲರಾಯ ತನ್ನ ಮಗನ ಅಳಿವಿಗಾಗಿ, ತನ್ನ ದುಡುಕಿಗಾಗಿ ಪಶ್ಚಾತ್ತಾಪಪಟ್ಟ. ಹೊಸಮಲೆದುರ್ಗ ಕೊನೆಗೂ ಸುರತಾಳರ ಕೈವಶವಯಿತು.

ರಾಮನಾಥಚರಿತ ಕನ್ನಡದ ಮೊದಲ ಚಾರಿತ್ರಿಕ ಕಾವ್ಯ. ವೀರಕಾವ್ಯ ಎಂಬ ಅಭಿಧಾನಕ್ಕೆ ಪಾತ್ರವಾಗಿದೆ. ರಾಮನಾಥನ ಶುಚಿತ್ವ ವೀರತ್ವಗಳ ಪ್ರಕಾಶನವೇ ಕಾವ್ಯದ ಮುಖ್ಯ ಉದ್ದೇಶ. ಪುರಾಣದ ಅಲೌಕಿಕತೆಯೊಡನೆ ಮಹಾಭಾರತದ ಪ್ರಮುಖ ಘಟನೆಗಳ ವ್ಯಾಜಾಂತರ ಸಂಯೋಜನೆ.

ಸಮಕಾಲೀನ ಜೀವನದ ಸೊಗಸಾದ ಚಿತ್ರಣ. ವಿಷಮದಾಂಪತ್ಯ ದುಷ್ಪರಿಣಾಮ, ಉನ್ಮತ್ತಶೃಂಗಾರದ ಲೋಕಕಂಟಕತ್ವ, ಶುಚಿತ್ವ, ವೀರತೆ ಇಲ್ಲಿ ಚಿತ್ರಿತವಾಗಿವೆ. ಶೈಲಿಯಲ್ಲಿ ದೇಸೀಯ ನಯಗಾರಿಕೆ, ಅರ್ಥಸ್ಪುಟತ್ವ, ಸುಕುಮಾರತೆ ಕಂಡುಬರುತ್ತದೆ. ಶೂಲದ ಹಬ್ಬದ ಪ್ರಸಂಗ, ಮುತ್ತಿನ ಚೆಂಡಾಟದ ಪ್ರಸಂಗ, ರತ್ನಾಜಿಯ ಸೌಂದರ್ಯ, ಆಕೆಯ ವಿರಹಪರಿತಾಪ, ಯುದ್ಧವಿವರಗಳು ಕಾವ್ಯದಲ್ಲಿ ಸುಂದರವಾಗಿ ವರ್ಣಿತವಾಗಿವೆ. ರತ್ನಾಜಿ ಕುಮಾರರಾಮನನ್ನು ಮೋಹಿಸಿ ಆತನಿಂದ ತಿರಸ್ಕೃತಳಾದ ಸಂದರ್ಭ ಈ ಕಾವ್ಯದ ರಸಘಟ್ಟ. ಕವಿಯು ಇಲ್ಲಿ ಹೆಣ್ಣಿನ ಕಾಮತುರದ ಹುಚ್ಚು ಹಂಬಲವನ್ನೂ ಇನ್ನೊಂದೆಡೆ ಗಂಡಿನ ವಜ್ರಕಠೋರ ಮನೋದೃಢತೆಯನ್ನೂ ಸೂಕ್ಷ್ಮವಾಗಿ ಚಿತ್ರಿಸಿದ್ದಾನೆ. ಶೃಂಗಾರದ ವರ್ಣನೆಯಲ್ಲೂ ಕವಿಯು ಕಲಾವಂತಿಕೆ ಅಭಿವ್ಯಕ್ತಗೊಂಡಿದೆ. ಯುದ್ಧವರ್ಣನೆಗಳು ವೀರರಸೋಪೇತವಾಗಿವೆ. ಪಾತ್ರ ಚಿತ್ರಣಗಳಲ್ಲಿಯೂ ಕವಿಯು ಸಿದ್ಧಹಸ್ತನೆನಿಸಿದ್ದು ಕುಮಾರರಾಮ, ರತ್ನಾಜಿ, ಕಂಪಿಲರಾಯ, ಕಾಟಣ್ಣ, ಬೈಚಪ್ಪ, ಸಂಗಿ ಮೊದಲಾದ ಪಾತ್ರಗಳು ಜೀವಂತವಾಗಿ ಮೂಡಿಬಂದಿವೆ. ಸಾಂಗತ್ಯ ಗ್ರಂಥಗಳಲ್ಲಿ ರತ್ನಾಕರವರ್ಣಿಯ ಭರತೇಶವೈಭವನ್ನು ಬಿಟ್ಟರೆ ರಾಮನಾಥಚರಿತ ಕಾವ್ಯದೃಷ್ಟಿಯಿಂದ ಅದಕ್ಕೆ ಹೆಗಲೆಣೆಯಾಗಿ ನಿಲ್ಲುವ ಸತ್ವವನ್ನು ಒಳಗೊಂಡಿದೆ. (ಕೆ.ಎಸ್‌ಐ.ಐ.)

**ನಂಜುಂಡಯ್ಯ, ಎಚ್.ವಿ. :** 1860-1920. ಕರ್ನಾಟಕದ ಏಕೀಕರಣಕ್ಕಾಗಿ, ಕನ್ನಡನಾಡುನುಡಿಗಳ ಏಳಿಗೆಗಾಗಿ ದುಡಿದ ಹಿರಿಯ ವಿದ್ವಾಂಸರು. ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಥಮ ಅಧ್ಯಕ್ಷರೂ ಮೈಸೂರು ವಿಶ್ವವಿದ್ಯಾನಿಲಯದ ಪ್ರಥಮ ಉಪಕುಲಪತಿಗಳೂ ಆಗಿದ್ದವರು. ಹೆಬ್ಬಳಲು ವೇಳ್ಪನೂರು ನಂಜುಂಡಯ್ಯ ಎಂಬುದು ಇವರ ಪೂರ್ಣ ಹೆಸರು. ಇವರ ಪೂರ್ವಜರು ಹಿಂದೆ ಆಂಧ್ರದಿಂದ ಮೈಸೂರಿಗೆ ಬಂದವರು. ನಂಜುಂಡಯ್ಯನವರು 1860 ಅಕ್ಟೋಬರ್ 13ರಂದು ಬಡ ಕುಟುಂಬದಲ್ಲಿ ಜನಿಸಿದರು. ಮೊದಲಿಗೆ ಮೈಸೂರಿನ ವೆಸ್ಲಿಯನ್ ಮಿಷನ್ ಸ್ಕೂಲಿನಲ್ಲಿ, ಅನಂತರ ಮದರಾಸಿನ ಕ್ರಿಶ್ಚನ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಬಿ.ಎ. ಪದವಿ ಪಡೆದರು (1880). ಕೆಲಕಾಲ ಕೊಳ್ಳೇಗಾಲದಲ್ಲಿ ಸಬ್‌ರಿಜಿಸ್ಟ್ರಾರ್ ಆಗಿದ್ದು, ಅನಂತರ ಮದರಾಸಿನಲ್ಲಿ ಅಕೌಂಟೆಂಟ್ ಜನರಲ್ ಕಚೇರಿಯಲ್ಲಿ ಗುಮಾಸ್ತರಾದರು. ನೌಕರಿಯಲ್ಲಿದ್ದುಕೊಂಡೇ ಖಾಸಗಿಯಾಗಿ ಬಿ.ಎಲ್. ಪದವಿಯನ್ನೂ (1883) ಎಂ.ಎ. ಪದವಿಯನ್ನೂ (1885) ಪಡೆದರು. ಅನಂತರ ಮೈಸೂರು ಸರ್ಕಾರದಲ್ಲಿ ಉದ್ಯೋಗಕ್ಕೆ ಸೇರಿ (1885) ನಂಜನಗೂಡಿನಲ್ಲಿ ಮುನ್ಸಿಫರಾದರು. ರೆವಿನ್ಯೂ ಇಲಾಖೆಯಲ್ಲಿ ಅಸಿಸ್ಟೆಂಟ್ ಕಮಿಶನರಾಗಿ (1886) ಹಾಸನ, ಮೈಸೂರು, ಶಿವಮೊಗ್ಗಗಳಲ್ಲಿ ಸೇವೆಸಲ್ಲಿಸಿದಮೇಲೆ ನ್ಯಾಯಾಂಗ ವಿಭಾಗಕ್ಕೆ ಹಿಂದಿರುಗಿ ಬಂದು ಸಬ್ ಜಡ್ಜಿಯಾದರು (1892). ಅನಂತರ ನ್ಯಾಯಶಾಸ್ತ್ರದಲ್ಲಿ ವ್ಯಾಸಂಗ ಮುಂದುವರಿಸಿ ಎಂ.ಎಲ್. ಡಿಗ್ರಿ ಪಡೆದರು (1893). 1895ರಲ್ಲಿ ಮದರಾಸು ವಿಶ್ವವಿದ್ಯಾನಿಲಯದ 'ಫೆಲೋ' ಆಗಿಯೂ ಇದೇ ಸುಮಾರಿನಲ್ಲಿ ಮೈಸೂರು ಸರ್ಕಾರದ ಅಂಡರ್ -ಸೆಕ್ರೆಟರಿಯಾಗಿಯೂ ನೇಮಕಗೊಂಡರು. 1897ರಲ್ಲಿ ಶಿವಮೊಗ್ಗದಲ್ಲಿ ಡೆಪ್ಯುಟಿ ಕಮಿಷನರಾಗಿದ್ದರು. ದಿವಾನ್ ಪಿ.ಎನ್. ಕೃಷ್ಣಮೂರ್ತಿಯವರ ಕಾಲದಲ್ಲಿ ಸರ್ಕಾರದ ಮುಖ್ಯ ಕಾರ್ಯದರ್ಶಿಯಾಗಿದ್ದು (1901), ಮೈಸೂರು ಸರ್ಕಾರದ ನ್ಯಾಯಶಾಖೆಯ ಚೀಫ್ ಕೋರ್ಟಿನ ನ್ಯಾಯಾಧೀಶರಾದರು (1904). ಅನಂತರ ಮುಖ್ಯ ನ್ಯಾಯಾಧೀಶರಾಗಿ ಸೇವೆಸಲ್ಲಿಸಿ 1916ರಲ್ಲಿ ನಿವೃತ್ತರಾದರು. ಮೈಸೂರು ವಿಶ್ವವಿದ್ಯಾನಿಲಯ ಜನ್ಮತಾಳಲು ಕಾರಣಕರ್ತರಲ್ಲೊಬ್ಬರಾಗಿದ್ದ ಇವರು ಅದರ ಮೊದಲನೆಯ ಉಪ ಕುಲಪತಿಯಾಗಿ 1916-20ರ ವರೆಗೆ ಸೇವೆ ಸಲ್ಲಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆ ಸಂವರ್ಧನೆಗೆ ಹೋರಾಡಿದ ಮಹನೀಯರಲ್ಲಿ ಪ್ರಮುಖರಾಗಿದ್ದು 1915-19ರ ವರೆಗೆ ಅದರ ಅಧ್ಯಕ್ಷರಾಗಿ ಸೇವೆಸಲ್ಲಿಸಿದರು.

ಕಾರುಣ್ಯ, ಸೌಮ್ಯತ್ವ ಹಾಗೂ ಹಾಸ್ಯವಿಲಾಸ ಇವರ ವ್ಯಕ್ತಿತ್ವದ ಮುಖ್ಯ ಪದರುಗಳು. ಎಂ.ವಿಶ್ವೇಶ್ವರಯ್ಯನರು ಇವರ ಆಪ್ತಸ್ನೇಹಿತರಾಗಿದ್ದರು. ನ್ಯಾಯಶಾಸ್ತ್ರ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಸಮಾಜಶಾಸ್ತ್ರಗಳನ್ನೂ ಕಾವ್ಯನಾಟಕಾದಿ ಸಾಹಿತ್ಯ ಪ್ರಕಾರಗಳನ್ನೂ ಆಳವಾಗಿ ಅಭ್ಯಾಸ ಮಾಡಿದ್ದ ಇವರಿಗೆ ಕನ್ನಡ, ಇಂಗ್ಲಿಷ್, ಸಂಸ್ಕೃತ ಭಾಷೆಗಳಲ್ಲದೆ ಫ್ರೆಂಚ್ ಭಾಷೆಯಲ್ಲೂ ಹೆಚ್ಚಿನ ಪರಿಶ್ರಮವಿತ್ತು. ಇವರು ತಮ್ಮ ಪುತ್ರನನ್ನು ಕಳೆದುಕೊಂಡ ಸಮಯದಲ್ಲಿ ಫ್ರೆಂಚ್ ಮಹಾಕವಿ ವಿಕ್ಟರ್ ಹ್ಯೂಗೋನ ಕೆಲವು ಕವನಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿ, ಆ ಸಂಕಲನಕ್ಕೆ 'ರಾತ್ರಿಯಲ್ಲಿ ಕಂಬನಿ' ಎಂದು ಹೆಸರಿಟ್ಟರು. ಕನ್ನಡದಲ್ಲಿ ಗ್ರಂಥರಚನೆಯನ್ನು ಕೈಗೊಂಡು, ಮಾದರಿಯ ಪತ್ರವ್ಯವಹಾರಕುರಿತು ಲೇಖ್ಯಬೋಧಿನಿ, ನ್ಯಾಯಶಾಸ್ತ್ರ ಪರಿಪಾಲನೆ ಕುರಿತು ವ್ಯವಹಾರದೀಪಿಕೆ, ಆರ್ಥಿಕ ವಿಚಾರ ಪರಿಚಯವನ್ನೊಳಗೊಂಡಂತೆ ಅರ್ಥಶಾಸ್ತ್ರ ಎಂಬ ಮೂರು ಅಮೂಲ್ಯ ಗ್ರಂಥಗಳನ್ನು ರಚಿಸಿದ್ದಾರೆ. ಕನ್ನಡ ಭಾಷೆಯಲ್ಲಿ ಆ ವಿಷಯಗಳ ಬಗ್ಗೆ ನಡೆದ ಗ್ರಂಥ ರಚನೆಯ ಪ್ರಯತ್ನಗಳಲ್ಲಿ ಸಂಸ್ಥಾನದ ಮೈಸೂರು ರಾಜ್ಯ ವಿವಿಧ ಜಾತಿಕುಲಗಳ ವಿವರ ಪರಿಚಯವುಳ್ಳ ಮೈಸೂರ್ ಟ್ರೈಬ್ಸ್ ಆಂಡ್ ಕ್ಯಾಸ್ಟ್ಸ್ ಎಂಬ ಸಂಪುಟಗಳಿಗೆ ಇವರು ಸಂಪಾದಕರಾಗಿದ್ದರು.

ನಂಜುಂಡಯ್ಯನವರು ಪ್ರತಿಭಾ ಪಕ್ಷಪಾತಿಗಳಾಗಿದ್ದರು. ಇವರ ಕಾರ್ಯನಿಷ್ಠೆ, ಸ್ನೇಹಪರ ಮನಸ್ಸು, ರಸಿಕತೆ ಹಾಗೂ ಮಾತಿನ ನಿರಾಡಂಬರತೆಗಳು ಎಲ್ಲರಿಗೂ ಮೆಚ್ಚುಗೆಯಾಗಿದ್ದುವು. ಇವರು ಬೆಂಗಳೂರು (1915, 1916) ಮತ್ತು ಮೈಸೂರು (1917) ಗಳಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಮೂರು ಅಧಿವೇಶನಗಳ ಅಧ್ಯಕ್ಷರಾಗಿದ್ದರು. ಕನ್ನಡದ ಅಂದಿನ ಇತಿಮಿತಿ, ಕನ್ನಡದಲ್ಲಿ ಆಗ ಬೇಕಾದ ಕೆಲಸದ ಆಧಿಕ್ಯ. ಗ್ರಾಂಥಿಕ ಭಾಷೆಯ ಏಕರೂಪತೆ ಮೊದಲಾದ ಗಮನೀಯ ವಿಚಾರಗಳು ಇವರ ಮೊದಲನೆಯ ಅಧ್ಯಕ್ಷಭಾಷಣದಲ್ಲೇ ವ್ಯಕ್ತವಾಗಿವೆ. ಇವರಿಗೆ ಮೈಸೂರು ಮಹಾರಾಜರು 1913ರಲ್ಲಿ ರಾಜಮಂತ್ರಪ್ರವೀಣ ಎಂಬ ಬಿರುದನ್ನು ನೀಡಿ ಗೌರವಿಸಿದರು. 1914ರಲ್ಲಿ ಬ್ರಿಟಿಷ್ ಸರ್ಕಾರ ಸಿ.ಐ.ಇ. ಎಂಬ ಪದವಿಯನ್ನಿತ್ತು ಗೌರವಿಸಿತು. ಕನ್ನಡ ಸಾಹಿತ್ಯ ಪರಿಷತ್ತು ಇವರನ್ನು ಕುರಿತು ಜೀವನ ಚರಿತ್ರೆಯೊಂದನ್ನು ಪ್ರಕಟಿಸಿದೆ. ಇವರು 1920 ಮೇ 2 ರಂದು ನಿಧನಹೊಂದಿದರು.

(ಚಿಜ.)

**ನಂಜುಂಡರಾವ್, ಎಂ.ಎಸ್. :** 1932 - 2003. ಹೆಸರಾಂತ ಕಲಾವಿದ, ಲೇಖಕ, ಸಂಘಟಕ, ಕರ್ನಾಟಕ ಚಿತ್ರಕಲಾ ಪರಿಷತ್ತಿನ (ನೋಡಿ) ರೂವಾರಿ, ತುಮಕೂರು ಜಿಲ್ಲೆ ಮಧುಗಿರಿ ತಾಲ್ಲೂಕಿನ ಸುದ್ದೇಕುಂಟೆಯಲ್ಲಿ 1932 ಜುಲೈ 5 ರಂದು ಜನಿಸಿದರು. ತಂದೆ ಎಂ. ಎಸ್. ದಾಸಪ್ಪ, ತಾಯಿ ಗೌರಮ್ಮ. ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದ ಇವರ ತಂದೆ ರಂಗಕರ್ಮಿಗಳೂ ಸಾಹಿತ್ಯ ಕಲಾ ಪೋಷಕರೂ ಆಗಿದ್ದರು. ನಂಜುಂಡರಾವ್ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಸಿದ್ದಾಪುರದಲ್ಲೂ ಮಾಧ್ಯಮಿಕ ಶಿಕ್ಷಣವನ್ನು ಕೊಡಗೇನ ಹಳ್ಳಿಯಲ್ಲೂ ಪ್ರೌಢಶಾಲಾ ಶಿಕ್ಷಣವನ್ನು ಬೆಂಗಳೂರು ಮತ್ತು ಮಧುಗಿರಿಯಲ್ಲೂ ಮುಗಿಸಿದರು. ಎಸ್.ಎಸ್.ಎಲ್.ಸಿ. ಪಾಸಾದದ್ದು 1948ರಲ್ಲಿ ತಂದೆಯಿಂದ ಪ್ರಭಾವಿತರಾಗಿ ಬಾಲ್ಯದಲ್ಲಿಯೇ ಖಾದಿ ತೊಟ್ಟು ದೇಶಭಕ್ತಿಯನ್ನು ಬೆಳೆಯಿಸಿಕೊಂಡರು. ತಂದೆಯೊಂದಿಗೆ ಹಳ್ಳಿಗಳಿಗೆ ತೆರಳುತ್ತಿದ್ದ ಸಂದರ್ಭದಲ್ಲಿ ಇವರು ಗ್ರಾಮೀಣ ಜನರ ಕಲೆ, ಜನಜೀವನ ಸಂಸ್ಕೃತಿಗಳನ್ನು ಅರಿತರು.

ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಮೈಸೂರು ಮಹಾರಾಜರು ಭಾರತ ಒಕ್ಕೂಟಕ್ಕೆ ಸೇರಿಕೊಳ್ಳಲು ಒಪ್ಪದಿದ್ದಾಗ ಮೈಸೂರು ಚಲೋ ಚಳವಳಿ ಆರಂಭವಾಯಿತು. ಆಗ ಇವರು ಮಧುಗಿರಿ ತಾಲ್ಲೂಕಿನ ಹಳ್ಳಿಹಳ್ಳಿಗೂ ಹೋಗಿ ಜನರನ್ನು ಸಂಘಟಿಸಿದರು. ಮಧುಗಿರಿ ತಾಲ್ಲೂಕು ಕಚೇರಿ ವಶಪಡಿಸಿಕೊಳ್ಳುವ ಸಂದರ್ಭದಲ್ಲಿ ಪೋಲಿಸರಿಗೂ ಚಳವಳಿಗಾರರಿಗೂ ಘರ್ಷಣೆ ಉಂಟಾಗಿ ಇವರ ಮೇಲೆ ವಾರಂಟ್ ಹೊರಡಿಸಿದಾಗ ಇವರು ಆಂಧ್ರದ ಗಡಿಯಲ್ಲಿದ್ದ ಸೇವಾಮಂದಿರ ಸೇರಿಕೊಂಡರು.

ಇವರಿಗೆ ಬಾಲ್ಯದಿಂದಲೂ ಚಿತ್ರಕಲೆಯಲ್ಲಿದ್ದ ಆಸಕ್ತಿಯನ್ನು ಗಮನಿಸಿದ ಇವರ ಅಧ್ಯಾಪಕರಾಗಿದ್ದ ಎಸ್. ರಾಮಯ್ಯನವರ ಸಲಹೆ

ಮತ್ತು ತಂದೆಯ ಅನುಮತಿಯಿಂದ ಕಲಾಶಿಕ್ಷಣಕ್ಕಾಗಿ ಮೈಸೂರಿನ ಶ್ರೀ ಚಾಮರಾಜೇಂದ್ರ ತಾಂತ್ರಿಕ ಶಿಕ್ಷಣ ಶಾಲೆ ಸೇರಿ ತರಬೇತಿ ಪಡೆದರು (1948 - 52). ತಮ್ಮಲ್ಲಿದ್ದ ಪ್ರತಿಭೆಯಿಂದ ಜನಸಂಪರ್ಕ ಬೆಳೆಯಿಸಿಕೊಂಡ ಇವರು ಚಿತ್ರರಚನೆಯನ್ನು ಜೀವನಾಧಾರ ಮಾಡಿಕೊಂಡರು. ಪ್ರಕೃತಿ ಚಿತ್ರ, ರೇಖಾಚಿತ್ರ, ವ್ಯಕ್ತಿ ಚಿತ್ರಗಳನ್ನು ರಚಿಸಿದರು. ಇವರು ರಚಿಸಿದ ವ್ಯಕ್ತಿಚಿತ್ರಗಳಲ್ಲಿ ಮಹಾತ್ಮಾಗಾಂಧಿ, ಎಸ್.ಎಸ್. ಹರ್ಡೇಕರ್, ವಲ್ಲಭಭಾಯಿ ಪಟೇಲ್ ಮುಖ್ಯವಾದವು. ಮಡಿಕೇರಿಯ ನಿಸರ್ಗ ದೃಶ್ಯಗಳು, ತಲಕಾವೇರಿ, ತಲಕಾಡು, ಶೃಂಗೇರಿ, ನಂದಿಬೆಟ್ಟ, ಐಹೊಳೆ, ಬೇಲೂರು, ಹಳೇಬಿಡು ಮೊದಲಾದ ರಮ್ಯ ಐತಿಹಾಸಿಕ ತಾಣಗಳನ್ನು ತಮ್ಮ ಕುಂಚದಿಂದ ಸೆರೆ ಹಿಡಿದರು. ಇವರು ರಚಿಸಿದ ಚಿತ್ರಗಳು ಬೆಂಗಳೂರಿನ ವೆಂಕಟಪ್ಪ ಕಲಾ ಗ್ಯಾಲರಿ, ವಿಧಾನಸೌಧ, ದೆಹಲಿ ಹಾಗೂ ಹಲವು ದೇಶಗಳ ಕಲಾ ಗ್ಯಾಲರಿಗಳಲ್ಲಿ ಸ್ಥಾನಪಡೆದಿದೆ.

ಇವರು 1954 ರಲ್ಲಿ ಬೆಂಗಳೂರಿಗೆ ಬಂದು ಶಿವಾನಂದಶರ್ಮರು ಸ್ಥಾಪಿಸಿದ ರಾಷ್ಟ್ರೀಯವಿದ್ಯಾಲಯದಲ್ಲಿ ಕೆಲವು ಕಾಲ ಉಳಿದುಕೊಂಡಿದ್ದರು. ಅನಂತರ ಖಾದಿ ಮಂಡಳಿಯಲ್ಲಿ ಕಲಾವಿದರಾಗಿ ಕೆಲಸ ಮಾಡಿದರು. ಆಗಿನ ಮುಖ್ಯಮಂತ್ರಿ ಕೆ. ಹನುಮಂತಯ್ಯನವರು ವಿಧಾನಸೌದ ಅಲಂಕರಣ ಸಮಿತಿಯಲ್ಲಿ ನಂಜುಂಡರಾಯರನ್ನು ಒಬ್ಬ ಸದಸ್ಯರನ್ನಾಗಿ ನೇಮಿಸಿದರು. ಆಗ ಇವರು ತಮ್ಮ ಕೆಲಸದಲ್ಲಿ ಆಸಕ್ತಿ, ಪ್ರತಿಭೆ, ಪರಿಶ್ರಮಗಳನ್ನು ತೋರಿ ಮುಖ್ಯ ಮಂತ್ರಿಗಳ ಪ್ರಶಂಸೆಗೆ ಪಾತ್ರರಾದರು. ಭಾರತ ಸರ್ಕಾರದ ಪಂಚವಾರ್ಷಿಕ ಯೋಜನೆಗಳ ಪ್ರಚಾರ ಮಳಿಗೆಗಳ ಅಲಂಕರಣ, ಸುಭಾಷನಗರದಲ್ಲಿ ಜರುಗಿದ ಕಾಂಗ್ರೆಸ್ ವಸ್ತುಪ್ರದರ್ಶನದ ದ್ವಾರಗಳ ರಚನೆ, ಬೆಂಗಳೂರಿನ ಸದಾಶಿವನಗರದಲ್ಲಿ ನಡೆದ ಅಖಿಲಭಾರತ ಕಾಂಗ್ರೆಸ್ ಅಧಿವೇಶನದ (1960) ಮುಖ್ಯ ಪ್ರವೇಶದ್ವಾರ ಮತ್ತು ವೇದಿಕೆಯ ಅಲಂಕರಣ ಮಾಡಿ ಜನ ಮೆಚ್ಚುಗೆ ಪಡೆದರು. ಕೆಂಗಲ್ ಹನುಮಂತಯ್ಯನವರ ಪ್ರೇರಣೆಯಿಂದ ಎಂ. ಆರ್ಯಮೂರ್ತಿ, ಎಸ್.ಎಸ್. ಕುಕ್ಕೆ ಮೊದಲಾದವರೊಂದಿಗೆ ಸೇರಿಕೊಂಡು ಮೈಸೂರು ಪ್ರದೇಶ ಚಿತ್ರಕಲಾ ಪರಿಷತ್ತು ಎಂಬ ಸಂಸ್ಥೆಯನ್ನು ಹುಟ್ಟು ಹಾಕಿ (1960), ಅದರ ಸ್ಥಾಪಕ ಕಾರ್ಯದರ್ಶಿಯಾಗಿದ್ದರು. ಈ ವೇಳೆಗೆ ಬಾಲಾಂಬ ಎಂಬ ಕಲಾಪ್ರೇಮಿಯೊಂದಿಗೆ ಇವರ ವಿವಾಹವಾಗಿತ್ತು (1956). 1964 ರಿಂದ ಚಿತ್ರಕಲಾ ವಿದ್ಯಾಲಯದ ಅಧ್ಯಾಪಕರಾಗಿ ಅನೇಕ ತರುಣರನ್ನು ಚಿತ್ರಕಲೆಯತ್ತ ಸೆಳೆದುಕೊಂಡರು. ಅದೇ ಕಾಲೇಜಿನ ಪ್ರಿನ್ಸಿಪಾಲರಾಗಿಯೂ ಸೇವೆ ಸಲ್ಲಿಸಿದರು (1966 - 72).

ಈ ಸಂದರ್ಭದಲ್ಲಿ ಕರ್ನಾಟಕದ ತರುಣ ಕಲಾವಿದರನ್ನು ಪ್ರೋತ್ಸಾಹಿಸಿದರಲ್ಲದೆ ಕಲಾಶಿಕ್ಷಣದ ಜೊತೆಗೆ ಜನಸಾಮಾನ್ಯರಲ್ಲಿ ಕಲಾಭಿರುಚಿಯನ್ನು ಬೆಳೆಸುವುದು, ಸಾಂಪ್ರದಾಯಿಕ ಚಿತ್ರಕಲೆಯನ್ನು ಪುನರುಜ್ಜೀವಿಸುವುದು, ಕಲಾವಿದರನ್ನು ಸಂಘಟಿಸುವುದು, ಭಾರತೀಯ ಚಿತ್ರಕಲೆಯನ್ನು ವಿಶೇಷವಾಗಿ ಕರ್ನಾಟಕದ ಚಿತ್ರಕಲೆ ಮತ್ತು ಕಲಾವಿದರನ್ನು ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟದಲ್ಲಿ ಪರಿಚಯಿಸುವುದು, ಕಲಾ ಸಂಸ್ಥೆಗಾಗಿ ಕಲಾಭವನ ನಿರ್ಮಾಣ, ಕಲಾ ಗ್ಯಾಲರಿಗಳ ಸ್ಥಾಪನೆ, ಚಿತ್ರಕಲೆಯಲ್ಲಿ ಆಧುನಿಕ ತಂತ್ರಜ್ಞಾನವನ್ನು ಉಪಯೋಗಿಸಿಕೊಳ್ಳುವುದು ಇವರ ಧ್ಯೇಯವಾಗಿತ್ತು. ವಿಧಾನಸೌಧದ ಬಾಂಕ್ವೆಟ್ ಹಾಲ್‌ನಲ್ಲಿ ಇವರು ಅಖಿಲ ಭಾರತ ಕಲಾ ಪ್ರದರ್ಶನವನ್ನು ಮೊದಲ ಬಾರಿಗೆ ಏರ್ಪಡಿಸಿದ್ದರು (1963). ಅನಂತರ ಪ್ರತಿವರ್ಷಕ್ಕೊಂದರಂತೆ ಒಂಬತ್ತು 'ಇಂಥ' ಪ್ರದರ್ಶನಗಳು ನಡೆದುವು. ಇದರಿಂದ ಅಖಿಲ ಭಾರತ ಮಟ್ಟದ ಕಲಾವಿದರು ಒಂದೆಡೆ ಸೇರಿ ವಿಚಾರ ವಿನಿಮಯ ಮಾಡಲು, ಕಲಾಪ್ರದರ್ಶನ ನಡೆಸಲು ಅವಕಾಶವಾಯಿತು. ಚಿತ್ರಕಲಾ ಪರಿಷತ್ ಟ್ರಸ್ಟ್ ರೂಪುಗೊಂಡಿದ್ದು 1974 ರಲ್ಲಿ.

ಕಲಾವಿಮರ್ಶಕ ಜಿ. ವೆಂಕಟಾಚಲಂ ಅವರ ಪ್ರೇರಣೆಯಿಂದ ಮೈಸೂರು ಸಾಂಪ್ರದಾಯಿಕ ಚಿತ್ರಗಳನ್ನು ಸಂಗ್ರಹಿಸುವ ಕಾರ್ಯವನ್ನು ಕೈಕೊಂಡರು. ಪರಿಣಿತರನ್ನು ಕರೆಯಿಸಿ ಅವರಿಂದ ಸಾಂಪ್ರದಾಯಿಕ ಕಲೆ ಕಲಿಸುವ ಏರ್ಪಾಡು ಮಾಡಿದರು. ಮುಂಬಯಿ, ದೆಹಲಿಗಳಲ್ಲಿ ಮೈಸೂರು ಸಾಂಪ್ರದಾಯಿಕ ಕಲಾಕೃತಿಗಳ ಪ್ರದರ್ಶನ ಏರ್ಪಡಿಸಿದರು. ಭಾರತದ ಬೇರೆ ಬೇರೆ ಕೇಂದ್ರಗಳಲ್ಲಿ ತೊಗಲುಬೊಂಬೆ ಪ್ರದರ್ಶನ ಏರ್ಪಡಿಸಿದ್ದಲ್ಲದೆ, ಕಲಾವಿದರನ್ನು ಜನಪದ ಉತ್ಸವಗಳಿಗೆ ಕರೆದೊಯ್ದು ಪರಿಚಯಿಸಿದರು.

ಚಿತ್ರಕಲೆಯ ಜೊತೆಗೆ ಸಾಹಿತ್ಯ ಕ್ಷೇತ್ರದಲ್ಲೂ ಇವರು ಕೆಲಸ ಮಾಡಿದ್ದಾರೆ. ತೊಗಲುಬೊಂಬೆ ಹಾಗೂ ಮೈಸೂರು ಸಾಂಪ್ರದಾಯಿಕ ಚಿತ್ರ ಕಲೆಯ ಬಗ್ಗೆ ಅನೇಕ ಲೇಖನಗಳನ್ನು ಪ್ರಕಟಿಸಿದ್ದಾರೆ. ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಹಲವು ಗ್ರಂಥಗಳನ್ನು ರಚಿಸಿದ್ದಾರೆ. ಇವರು ಬರೆದ ಕೃತಿಗಳಲ್ಲಿ ನಿಕೋಲಸ್ ರೋರಿಚ್, ಪಿ. ಸುಬ್ಬರಾವ್, ಕರ್ನಾಟಕ ತೊಗಲುಗೊಂಬೆ ಎಂಬ ಬೃಹತ್ ಗ್ರಂಥ - ಇವು ಪ್ರಮುಖವಾಗಿವೆ. ಕಲೆಯ ಅಧ್ಯಯನಕ್ಕಾಗಿ ಇವರು ಜರ್ಮನಿ, ಅಮೆರಿಕ, ರಷ್ಯ ದೇಶಗಳ ಅನೇಕ ಪ್ರಮುಖ ನಗರಗಳನ್ನು ಸಂದರ್ಶಿಸಿದರು. ಮಾಸ್ಕೋದಲ್ಲಿ ಅಂತಾರಾಷ್ಟ್ರೀಯ ರೋರಿಕ್ ಪುರಸ್ಕಾರ ಪಡೆದರು (1999).

ಕರ್ನಾಟಕ ಲಲಿತ ಕಲಾ ಅಕಾಡೆಮಿ ಮತ್ತು ಕರ್ನಾಟಕ ರಾಜ್ಯ ಕಲೆ ಮತ್ತು ಕರಕುಶಲ ಶಿಕ್ಷಣ ಸಲಹಾ ಸಮಿತಿಯ ಸದಸ್ಯರಾಗಿ, ಬೆಂಗಳೂರು ವಿಶ್ವವಿದ್ಯಾಲದ ಲಲಿತ ಕಲಾ ಅಧ್ಯಯನ ಮಂಡಳಿಯ ಅಧ್ಯಕ್ಷರಾಗಿ, ಗುಲ್ಬರ್ಗ ವಿಶ್ವವಿದ್ಯಾಲಯದ ಲಲಿತ ಕಲಾ ಅಧ್ಯಯನ ಮಂಡಳಿಯ ಸದಸ್ಯರಾಗಿ ಸೇವೆಸಲ್ಲಿಸಿದರು. ಕೇಂದ್ರ ಲಲಿತಕಲಾ ಅಕಾಡೆಮಿಯ ಕರ್ನಾಟಕದ ಪ್ರತಿನಿಧಿಯಾಗಿದ್ದರು (1975). ಇವರಿಗೆ ಹಲವು ಪ್ರಶಸ್ತಿಗಳು ಲಭಿಸಿವೆ. ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ (1980) ರಾಜ್ಯೋತ್ಸವ ಪ್ರಶಸ್ತಿ (1984) ಇವು ಉಲ್ಲೇಖನೀಯ.

ಕರ್ನಾಟಕ ಚಿತ್ರಕಲಾ ಪರಿಷತ್ತಿಗೆ ವಿಶ್ವವಿದ್ಯಾಲಯದ ಮಾನ್ಯತೆ, ಜನಪ್ರಿಯತೆ, ಅಂತಾರಾಷ್ಟ್ರೀಯ ಕೀರ್ತಿ ತಂದುಕೊಟ್ಟ ಇವರು 2003 ಮೇ 2 ರಂದು ಬೆಂಗಳೂರಿನಲ್ಲಿ ನಿಧನರಾದರು. (ಎಸ್.ಎಂ.ಕೆ.)

**ನಂಜುಂಡ ಶಿವಯೋಗಿ :** ಒಬ್ಬ ಶಿವಯೋಗಿ. ತುಮಕೂರು ಸಮೀಪದ ಈತ ಹುಟ್ಟಿದ ಸ್ಥಳ. ಈತನ ಬಾಲ್ಯಜೀವನದ ವಿವರಗಳು ತಿಳಿದಿಲ್ಲ. ಮಡದಿ, ಮೂವರು ನಾಲ್ವರು ಮಕ್ಕಳಿಂದ ತುಂಬಿದ ಈತನ ಗೃಹಸ್ಥ ಜೀವನ ಆ ಊರಿನ ಕೂಲಿ ಮಠವೊಂದನ್ನು ಆಶ್ರಯಿಸಿತ್ತು. ಹಳ್ಳಿಯ ಮಕ್ಕಳಿಗೆ ತಕ್ಕಷ್ಟು ಓದುಬರೆಹ ಕಲಿಸಿದ ತರುವಾಯ ಅವರಿಗೆ ಶರಣಲಿ, ಲಾವ್ಯುತ, ಸೋಮೇಶ್ವರ ಶತಕ, ಸರ್ವಜ್ಞನ ವಚನಗಳು. ಚನ್ನಬಸವಪುರಾಣ, ಜೈಮಿನಿ ಭಾರತ ಮತ್ತು ರಾಜಶೇಖರವಿಳಾಸದಂಥ ಕನ್ನಡ ಪ್ರೌಢ ಗ್ರಂಥ'ಗಳನ್ನು ಗಮಕ ಗತಿಯಿಂದ ಓದಿ ಅರ್ಥೈಸುವ ಸಾಮರ್ಥ್ಯವನ್ನು ಉಂಟುಮಾಡಿಕೊಡುವುದು ಈತನ ಕೂಲಿಮಠದ ಹೆಗ್ಗುರಿಯಾಗಿತ್ತು.

ಶಿವಪೂಜಾನಿಷ್ಠನಾದ ಈತ ಮೊದಲಿನಿಂದಲೂ ವೈರಾಗ್ಯದ ಕಡೆಗೆ ಗಮನ ಹರಿಸಿದ್ದ. ಮಧ್ಯವಯಸ್ಸಿನಲ್ಲಿ ಒದಗಿದ ಪತ್ನೀವಿಯೋಗ ಈತನ ವಿರಕ್ತಿಗೆ ಪುಟ ಕೊಟ್ಟಿತು. ತರುವಾಯ ಈತ ಸತ್ಸಂಗವನ್ನು ಬಯಸಿ ಸಿದ್ಧಗಂಗಾ ಕ್ಷೇತ್ರಕ್ಕೆ ಆಗಮಿಸಿದ. ಅಲ್ಲಿ ಶ್ರೀ ಅಟವಿಂದ ಶಿವಯೋಗಿಗಳ ಸನ್ನಿಧಿ ಸೇರಿ ಅವರ ಅನುಗ್ರಹಕ್ಕೆ ಪಾತ್ರನಾದ. ಅಟವೀಂದ್ರ ಶಿವಯೋಗಿ ಲಿಂಗೈಕ್ಯದ ಅನಂತರ ಈತ ಮತ್ತೆ ತುಮಕೂರಿಗೆ ಹಿಂದಿರುಗಿ ಶಿವಾಲಯವೊಂದರಲ್ಲಿ ಸೇರಿದ. ಈತನ ಸಮಾಧಿ ತುಮಕೂರು ಹತ್ತಿರದ ಉಪ್ಪಾರಿನಲ್ಲಿದೆ.

ಈತನ ಪಾಂಡಿತ್ಯ, ಮಧುರಕಂಠಶ್ರೀ, ಚಿತ್ರಕಲಾಪ್ರಿಯತೆಗಳು ಈತ ರಚಿಸಿರುವ ಕೃತಿಗಳಿಂದ ವೇದ್ಯವಾಗುತ್ತವೆ. ಈತನ ಗ್ರಂಥ'ಗಳಲ್ಲಿ ಮಾರ್ಕಂಡೇಯ ವಿಳಾಸ. ಶ್ರೀಮದಟವೀಶ್ವರ ಗುರುಭಕ್ತಿಸಾರ, ಜಟವೀಶ್ವರ ಗೀತಾಮಂಜರಿ, ಸುರಾಭಾಂಡೇಶ್ವರಾಖ್ಯಾನ, ಹಾಲಾಹಲಭಕ್ಷಣೆಯ ಕಥೆಗಳು ದೊರೆಯುತ್ತವೆ. ಇವರ ಚಿತ್ರಗಳಲ್ಲಿ ಸರ್ವಸಿದ್ಧಿಗಣಪತಿ, ಚಂದ್ರಶೇಖರಮೂರ್ತಿ, ಗಿರಿಜಾಕಲ್ಯಾಣ ಮಹೋತ್ಸವ, ಉಮಾಮಹೇಶ್ವರಮೂರ್ತಿ ನಂದಿವಾಹನಮೂರ್ತಿ, ಅಂಧಕಾಸುರ ಸಂಹಾರ ಮತ್ತು ಜೀವನ್ಮುಕ್ತಿವಿವೇಕಗಳು ಮುಖ್ಯವಾದವು. (ಎಂ.ಜಿ.ಎಸ್.)

**ನಂಜುಂಡ ಸ್ವಾಮಿ, ಎಸ್. :** 1906-1969.ಕರ್ನಾಟದ ವಿಖ್ಯಾತ ವರ್ಣಚಿತ್ರಕಾರರು ಹಾಗೂ ಶಿಲ್ಪಿಗಳಲ್ಲಿ ಅಗ್ರಗಣ್ಯರು. ಇವರು ಶಿಲ್ಪಸಿದ್ಧಾಂತಿ ಸಿದ್ಧಲಿಂಗಸ್ವಾಮಿಗಳ ಅಣ್ಣಂದಿರಾದ ಶಿಲ್ಪಸಿದ್ಧಾಂತಿ ವಿರತ್ತಸ್ವಾಮಿಗಳ ಮಕ್ಕಳು. ಇವರ ಮೂಲ ಸ್ಥಳ ಕೊಳ್ಳೇಗಾಲ, ತಾಯಿಯ ತೌರೂರಾದ ಯಳಂದೂರು ತಾಲ್ಲೂಕು ಯರಗಂಬಳ್ಳಿಯಲ್ಲಿ 1906 ಮಾರ್ಚ್ 3ರಂದು ಜನಿಸಿದರು. ಸ್ಥಳ ಕೊಳ್ಳೇಗಾಲ. ತಾಯಿಯ ತೌರೂರಾದ ಯಳಂದೂರು ತಾಲ್ಲೂಕು ಯರಗಂಬಳ್ಳಿಯಲ್ಲಿ ವಂಶಪಾರಂಪರ್ಯವಾಗಿ ಬಂದ ಶಿಲ್ಪಕಲೆಯ ಸಂಪ್ರದಾಯ ಇವರಲ್ಲೂ ನೆಲಸಿ, ಚಿತ್ರಕಲೆಗೆ ಶಾಸ್ತ್ರೀಯ ಅಡಿಪಾಯವನ್ನು ಹಾಕಿಕೊಟ್ಟಿತ್ತು. ಇವರು ಚಿಕ್ಕಂದಿನಿಂದ ಬಡತನದಲ್ಲಿ ಬದುಕಿ ಅಪಾರ ಕಷ್ಟಗಳನ್ನೆದುರಿಸಿ, ಮೈಸೂರಿನ ಶ್ರೀ ಚಾಮರಾಜೇಂದ್ರ ವೃತ್ತಿಶಿಕ್ಷಣ ಶಾಲೆಯಲ್ಲಿ ಚಿತ್ರಕಲೆಯ ಅಧ್ಯಾಪಕರಾಗಿ ಜೀವನ ನಡೆಸಿದರು. ಕುಶಲಕಲೆಯ ಎಲ್ಲ ಪ್ರಕಾರಗಳಲ್ಲೂ ಅದ್ವಿತೀಯ ಪ್ರೌಢಿಮೆಗಳಿಸಿ ಕೊಂಡಿದ್ದ. ಇವರು ರೇಖಾಚಿತ್ರ, ತೈಲಚಿತ್ರ, ಜಲವರ್ಣಚಿತ್ರಗಳಲ್ಲಿ ತೋರುತ್ತಿದ್ದ ಚಾಕಚಕ್ಯ ಅಸಾಧಾರಣವಾದದ್ದು. ಪ್ರಕೃತಿಯ ಯಾವುದೇ ವರ್ಣಗಳನ್ನು ಕಣ್ಣಿಗೆ ಕಟ್ಟುವಂತೆ ಸಹಜ ಸುಂದರವಾಗಿ ಕೃತಿಗಳಲ್ಲಿ ಮೂಡಿಸುವ ಶಕ್ತಿಯನ್ನು ಇವರು ಪಡೆದಿದ್ದರು. ಮೈಸೂರಿನ ವಾಣಿವಿಳಾಸ ಮೊಹಲ್ಲಾದಲ್ಲಿರುವ ಮಹಾಜನ ಹೈಸ್ಕೂಲಿನ ಭಿತ್ತಿಯೊಂದರ ಮೇಲೆ ಇವರಿಂದ ರಚಿತವಾದ ಶಾರದಾದೇವಿಯ ಚಿತ್ರವಿದೆ. ಇವರ ಕಬೀರ್ ತೈಲಚಿತ್ರದಲ್ಲಿ ಮುಂಜಾವಿನ ನಸುಗತ್ತಲ ಪ್ರಶಾಂತ ವಾತಾವರಣದ ಕಲ್ಪನೆ ವಿಶಿಷ್ಟವಾದ್ದು. ಮೈಸೂರಿನ ವೃತ್ತಿಶಿಕ್ಷಣ ಶಾಲೆಯ ಪ್ರದರ್ಶನಾಲಯದಲ್ಲಿ ಇದ್ದ ರಾಜನ ಒಡ್ಡೋಲಗದ ಚಿತ್ರ ಕೂಡ ಇವರ ಕಲಾವಂತಿಕೆಗೆ ಉತ್ತಮ ನಿದರ್ಶನವಾಗಿದೆ. ಈಗ ಅದು ಅಲ್ಲಿಲ್ಲಿ, ಮೈಸೂರಿನ ಕಲಾಭಿಮಾನಗಳೊಬ್ಬರ ಬಳಿ ಇದೆ.

ಮೈಸೂರಿನ ವಸ್ತುಪ್ರದರ್ಶನಶಾಲೆಯ ಕಟ್ಟಡವೊಂದರ ಮೇಲೆ ಇವರಿಂದ ರೂಪಿಸಲ್ಪಟ್ಟ ಜಯಚಾಮರಾಜ ಒಡೆಯರ ಭಾವಚಿತ್ರವಿತ್ತು. ಈಗ ಅದು ಅಲ್ಲಿಲ್ಲ. ಆದರೆ ಭಾವಚಿತ್ರ ರಚನೆಯಲ್ಲಿ ಇವರದ್ದು ಪಳಗಿದ ಕೈ ಎನ್ನುವುದಕ್ಕೆ ಇದೊಂದು ಉತ್ತಮ ಮಾದರಿ.

ನಂಜುಂಡಸ್ವಾಮಿಯವರು ಅಡಂಬರವಿಲ್ಲದ ಸಾಮಾನ್ಯ ಜೀವನ ನಡೆಸಿದವರು. ನಿವೃತ್ತರಾದ ಕೆಲವು ವರ್ಷಗಳ ಮೇಲೆ ಒಂಟಿಕೊಪ್ಪಲಿನಲ್ಲಿದ್ದ ತಮ್ಮ ಮನೆಯನ್ನು ಮಾರಿ ತಮ್ಮ ತಾಯಿಯ ಊರಾದ ಯರಗಂಬಳ್ಳಿಗೆ ಹೋದರು. ಅನಂತರ ಅಲ್ಲೂ ಬಹಳ ಕಾಲ ಇರಲಿಲ್ಲ. ಮಾರಿ ಬಂದ ಹಣ ದಕ್ಕಲಿಲ್ಲ. ಮತ್ತೆ ಪತ್ನೀಪುತ್ರರೊಂದಿಗೆ ಮೈಸೂರಿಗೆ ಬಂದು ಒಂಟಿಕೊಪ್ಪಲಿನಲ್ಲಿ ಚಿಕ್ಕ ಮನೆಯೊಂದನ್ನು ಮಾಡಿಕೊಂಡು ಇದ್ದರು.

ರಾಮಾಯಣ, ಮಹಾಭಾರತ, ಭಾಗವತ, ಶಿವಪುರಾಣಗಳ ಪುಣ್ಯಕಥೆಗಳನ್ನು ಓದುವುದು, ಕೇಳುವುದು ಎಂದರೆ ಸ್ವಾಮಿಗಳಿಗೆ ಬಹಳ ಇಷ್ಟ. ಅಲ್ಲಿಯ ರಸಸನ್ನಿವೇಶಗಳ ಚಿತ್ರಗಳನ್ನು ಮನಸ್ಸಿನಲ್ಲಿ ಮೂಡಿಸಿಕೊಂಡು ಅದನ್ನು ಕಲೆಯಲ್ಲೇ ರೂಪಿಸುತ್ತಿದ್ದರು. ಇವರ ಗೆಳೆಯರಲ್ಲಿ ಸಾಹಿತಿಗಳು ಕಲಾವಿದರೂ ಹೆಚ್ಚಾಗಿದ್ದರು. ಇವರ ಮಮತೆಯ ಒಬ್ಬ ಗೆಳೆಯರೆಂದರೆ ಕೈಲಾಸಂ.

ಅರಮನೆಯ ಕಲಾವಿದರಾಗಿದ್ದ ಕೇಶವಯ್ಯನವರ ನೆರವು ಸಿಕ್ಕಿದ್ದರಿಂದ ಸ್ವಾಮಿಯವರ ಕಲಾಸಾಧನೆ ಪಕ್ವವಾಯಿತು. ಮೈಸೂರಿನ ಶ್ರೀ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಕಲಾಶಾಲೆಯಲ್ಲಿ ಕಲಾಭ್ಯಾಸಮಾಡಿದ ಅನಂತರ ಮುಂಬಯಿಯ ಜೆಯಜೆ. ಕಲಾಶಾಲೆಯಲ್ಲಿ ಅಭ್ಯಾಸಮಾಡಿ ಹೆಚ್ಚಿನ ಅನುಭವ ಪಡೆದುಕೊಂಡಿದ್ದರಾಗಿ ಇವರ ಕಲೆಗೆ ಶಾಸ್ತ್ರದ ಭದ್ರವಾದ ತಳಹದಿ ಸಿಕ್ಕಿದಂತಾಗಿತ್ತು. ನಾಲ್ವಡಿ ಕೃಷ್ಣರಾಜ ಒಡೆಯರ ಪ್ರೋತ್ಸಾಹ ಸಿಕ್ಕಿತಾಗಿ ಇವರ ಕಲಾಪ್ರೌಢಿಮೆ ಪ್ರಕಾಶಕ್ಕೆ ಬರಲು ಅವಕಾಶವಾಯಿತು. ಆಗ ಇವರು ಚಿತ್ರಿಸಿದ ಕೆಲವು ತೈಲವರ್ಣ ಚಿತ್ರಗಳು ಮಹಾರಾಜರ ಮೆಚ್ಚುಗೆಗೆ ಪಾತ್ರವಾಗಿ ಅರಮನೆಯ ಕಲ್ಯಾಣಮಂಟಪವನ್ನು ಅಲಂಕರಿಸಿದುವು. ಅವು ಈಗಲೂ ಅಲ್ಲಿವೆ. ಪಾಶ್ಚಾತ್ಯ ಶೈಲಿಯಲ್ಲಿ ರಚಿಸಿಲಾದ ಈ ಕೃತಿಗಳಲ್ಲಿ ಜನರ ಭಾವಭಂಗಿ, ಚಲನವಲನ ಬಹಳ ಸ್ವಾಭಾವಿಕವಾಗಿ ಮೂಡಿಬಂದಿದೆ.

ಚಿತ್ರಕಲೆಯ ಜೊತೆಗೆ ಇವರು ದಂತ ಮತ್ತು ಗಂಧದಲ್ಲಿ ಸುಂದರ ಮೂರ್ತಿಗಳನ್ನು ನಿರ್ಮಿಸುತ್ತಿದ್ದುದೂ ಉಂಟು. ಬೇಲೂರಿನ ಶಿಲಾಬಾಲಕಿಯರಿಂದ ಸ್ಫೂರ್ತಿಗೊಂಡು ಇವರು ರಚಿಸಿದ ಒಂದು ಆಕೃತಿ ಮತ್ತು ಗಣಪತಿ- ಇವು ತುಂಬ ಮೋಹಕವಾಗಿವೆ.

ಇವರಿಗೆ ವನಸ್ಪತಿ ಔಷಧಿಯ ತಯಾರಿಕೆಯಲ್ಲಿ ಆಸಕ್ತಿ ಇತ್ತು. ತಾವೇ ಮನೆಯಲ್ಲಿ ಅದನ್ನು ತಯಾರಿಸಿಕೊಳ್ಳುತ್ತಿದ್ದರು. ಒಮ್ಮೆ ಯಾವುದೋ ವ್ಯತ್ಯಾಸದಿಂದಾಗಿ ಇವರು ಸಿದ್ಧಪಡಿಸಿ ಸೇವಿಸಿದ ಔಷಧಿ ಇವರ ಮೈಚರ್ಮವನ್ನು ಕಿತ್ತು ತಿಂದಿತು. ಇದರಿಂದಾಗಿ ಇವರು ಮತ್ತೆ ಅಂಥ ಔಷಧಿಗಳ ಗೋಜಿಗೇ ಹೋಗಲಿಲ್ಲ.

ರಸವಾದದಲ್ಲಿಯೂ ಇವರಿಗೆ ಆಸಕ್ತಿಯಿತು. ಚಿನ್ನ ತಯಾರಿಸಪಬೇಕೆಂಬುದು ಇದರ ಇನ್ನೊಂದು ಹುಚ್ಚು. ಅನೇಕ ವೇಳೆ ಈ ಗುಂಗು ಇವರನ್ನು ವಿಕ್ಷಿಪ್ತಗೊಳಿಸಿದ್ದೂ ಉಂಟು. ಚಿನ್ನ ತಯಾರಿಸಬೇಕೆಂಬುದು ಇವರ ಇನ್ನೊಂದು ಹುಚ್ಚು. ತಮ್ಮ ಮನೆಯ ಕೋಣೆಯೊಂದರಲ್ಲಿ ಗಿಡ ಮೂಲಿಕೆಗಳಿಂದ ರಸ ತೆಗೆದು ಪುಟ ಕೊಡುತ್ತಿದ್ದರು. ಆದರೆ ಇದರಿಂದ ಯಾವ ಲಾಭವವೂ ಆಗಲಿಲ್ಲ.

ಇವರಿಗೆ ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿ ಪ್ರಶಸ್ತಿನೀಡಿ ಗೌರವಿದೆ. ತಮ್ಮ ಕೊನೆಯ ದಿನಗಳಲ್ಲಿ ದೊಡ್ಡ ಶಿಲೆಯಲ್ಲಿ ಶ್ರೀ ಚಾಮುಂಡೇಶ್ವರಿ ವಿಗ್ರಹವನ್ನು ಕಡೆಯುತ್ತಿದ್ದರು. ಅದು ಪೂರ್ಣಗೊಳ್ಳುವಷ್ಟರಲ್ಲಿಯೇ ಇವರು 1969 ಡಿಸೆಂಬರ್ 27ರಂದು ನಿಧನರಾದರು. (ಪಿ.ಆರ್.ಟಿ.)

**ನಂದಗಡ :** ಬೆಳಗಾಂವಿ ಜಿಲ್ಲೆ ಖಾನಾಪುರ ತಾಲ್ಲೂಕಿನ ಒಂದು ಗ್ರಾಮ. ಖಾನಾಪುರದ ಆಗ್ನೇಯಕ್ಕೆ 10 ಕಿಮೀ ದೂರದಲ್ಲಿದೆ. ಇದನ್ನು ಕಸಬಾ ನಂದಗಡ ಎಂದೂ ಕರೆಯುವರು. ಹಿಂದೆ ಇದೊಂದು ಪ್ರಸಿದ್ಧ ವ್ಯಾಪಾರಿ ಪಟ್ಟಣವಾಗಿತ್ತು. ಮಲ್ಲಸರ್ಜ ದೇಸಾಯಿ ಪೇಶವೆ ಬಾಜಿರಾವ್‌ನಿಂದ ದೊರೆತ ಪ್ರತಾಪರಾವ್ ಎಂಬ ಬಿರುದಿನ ಸಂತೋಷದ ಸ್ಮಾರಕವಾಗಿ ಈ ಗ್ರಾಮದಲ್ಲಿ ಒಂದು ಕೋಟೆ ಕಟ್ಟಿಸಿ ಅದನ್ನು ಪ್ರತಾಪಗಡ ಎಂದು ಕರೆದ. ಈಗ ಅದರ ಅವಶೇಷವಿದೆ. ಕಿತ್ತೂರಿನ ದೊರೆ ಖಾನಾಪುರದ ವ್ಯಾಪಾರಿಗಳನ್ನು ನಂದಗಡದಲ್ಲಿ ನೆಲಸಲು ಪ್ರೋತ್ಸಾಹಿಸುತ್ತಿದ್ದ. ವೀರ ಸಂಗೊಳ್ಳಿ ರಾಯಣ್ಣನನ್ನು ಬ್ರಿಟಿಷರು 1829ರಲ್ಲಿ ಈ ಗ್ರಾಮದಲ್ಲೇ ಗಲ್ಲಿಗೇರಿಸಿದರು. ಸಂಗೊಳ್ಳಿರಾಯಣ್ಣ ತೋರಿಸಿದ ಸ್ಥಳದಲ್ಲೆ ಆತನನ್ನು ಸಮಾಧಿ ಮಾಡಲಾಯಿತು. ಆ ಸ್ಥಳದಲ್ಲಿ ಈಗ ಬೃಹತ್ ಆಕಾರದ ಆಲದಮರ ಬೆಳೆದಿದೆ. ಜನರು ಸಂತಾನಪಡೆಯಲು, ಸುಖಶಾಂತಿಯನ್ನು ಬೇಡಿಕೊಳ್ಳಲು ಆ ಗಿಡಕ್ಕೆ ಭಕ್ತಿಯಿಂದ ಪೂಜಿಸುತ್ತಾರೆ. ನಂದಗಡದ ಸಮೀಪದಲ್ಲಿ ಷಂಷೇರ್‌ಗಡಿ ಎಂಬ ಇನ್ನೊಂದು ಕೋಟೆ ಇದೆ.

ನಂದಗಡದಲ್ಲಿ ಶಾಲೆ ಮತ್ತು ಅಂಚೆ ದೂರವಾಣಿ ಮುಂತಾದ ಸೌಲಭ್ಯವಿದ್ದು ಉತ್ತಮ ಮಾರ್ಗವಿದ್ದು ಇತರ ಗ್ರಾಮದೊಡನೆ ಮತ್ತು ಬೆಳಗಾಂವಿಗೆ ನೇರ ವಾಹನ ಸಂಪರ್ಕ ಹೊಂದಿದೆ. (ಎಸ್‌ಎ.ಎಸ್.)

**ನಂದಗುಡಿ :** ಬೆಂಗಳೂರು ಜಿಲ್ಲೆ ಹೊಸಕೋಟೆ ತಾಲ್ಲೂಕಿನ ಒಂದು ಗ್ರಾಮ. ಕಸಬೆಗೆ 19 ಕಿಮೀ ದೂರದಲ್ಲಿದೆ. ಕನ್ನಡ ಶಾಸನಗಳಲ್ಲಿ ಈ ಊರನ್ನು ನಂದಗುಲಿ ಅಥವಾ ನಂಜುಗುಲಿ ಎಂದೂ ತಮಿಳು ಶಾಸನಗಳಲ್ಲಿ ನೊಂದಗುಲಿ ಎಂದೂ ಕರೆಯಲಾಗಿದೆ. ಸಮೀಪದ ಧರ್ಮೇಶ್ವರ ದೇವಾಲಯದಲ್ಲಿ ಒಂದು ವಿಷಯದ ಬಾವಿ ಇದೆಯೆಂದೂ ನಂಜುಂಗುಲಿಹೆಸರು ಇದಕ್ಕೆ ಸಂಬಂಧಿಸಿದ್ದೆಂದೂ ಊಹೆ ಇದೆ. ನಂದಗುಡಿ ಪ್ರಾಚೀನ ಪಾಟಲೀಪುರದ ನಿವೇಶನವೆಂದೂ ಇಲ್ಲಿಯೇ ಉತ್ತುಂಗಭುಜರಾಯನಿಂದ ಬಂಧಿತರಾದ ನವನಂದರನ್ನು ಚಾಣಕ್ಯ ಬಿಡುಗಡೆ ಮಾಡಿದನೆಂದು ಐತಿಹ್ಯವಿದೆಯಾದರೂ ಇದಕ್ಕೆ ಚಾರಿತ್ರಿಕ ಬೆಂಬಲವಿಲ್ಲ. ಈ ಗ್ರಾಮದ ಪೂರ್ವಪಶ್ಚಿಮ ದಿಕ್ಕುಗಳಲ್ಲಿ ಅನುಕ್ರಮವಾಗಿ ರಾಗುಲರಾಸಿ

(ರಾಗುಲ ಗುಡ್ಡ) ಮತ್ತು ಅಡ್ಡಬೆಟ್ಟ ಎಂಬ ಹೆಸರಿನ ಎರಡು ಸಣ್ಣ ಬೆಟ್ಟಗಳಿವೆ. ದಂತಕಥೆಯ ಪ್ರಕಾರ ರೈತನೊಬ್ಬ ತನ್ನ ಜಮೀನಿನಲ್ಲಿ ಬೆಳೆದ ರಾಗಿಯನ್ನು ಒಂದು ಕಡೆ ಮತ್ತು ಹುಲ್ಲನ್ನು ಮತ್ತೊಂದು ಕಡೆ ರಾಶಿ ಮಾಡಿದ್ದನಂತೆ. ಇದನ್ನು ನೋಡಿದ ಅವನ ಹೆಂಡತಿ ಈ ರಾಗಿ ರಾಶಿಯನ್ನು ತಾನು ಬೀಸಬೇಕಾಗಿ ಬರುತ್ತದಲ್ಲಾ ಎಂದು ವ್ಯಥೆಪಟ್ಟಳಂತೆ. ತಕ್ಷಣ ಈ ರಾಶಿಗಳು ಗುಡ್ಡಗಳಾಗಿ ಮಾರ್ಪಾಡಾದುವಂತೆ. ಅಡ್ಡಬೆಟ್ಟದ ಮೇಲೆ ಒಂದು ಕಾಲದಲ್ಲಿ ಪ್ರಾಚೀನ ಕಾಲದ ಅರಮನೆಯೊಂದಿದ್ದಿತಂತೆ. ರಾಗುಲಗುಡ್ಡ ಒಂದು ರೀತಿಯ ಜಂಬುಕಲ್ಲಿನ ಗುಡ್ಡ, ಇಲ್ಲಿ ಕಲ್ಲಿನಲ್ಲಿ ಕೊರೆದ ಒಂದು ದೇವಾಲಯವಿತ್ತು. ಈಗ ಹಾಳಾಗಿದೆ. (ಎಚ್.ಪಿ.ಎಸ್.)

**ನಂದಳಿಕೆ :** ಉಡುಪಿ ಜಿಲ್ಲೆ ಕಾರ್ಕಳ ತಾಲ್ಲೂಕಿನ ಒಂದು ಗ್ರಾಮ. ಕಾರ್ಕಳದ ಪಶ್ಚಿಮಕ್ಕೆ 16ಕಿಮೀ ದೂರದಲ್ಲಿದೆ. ಇಲ್ಲಿ ಮಹಾಲಿಂಗೇಶ್ವರ ದೇವಾಲಯವಿದೆ. ಹಿಂದೆ ಈ ಗ್ರಾಮ ನಂದಳಿಕೆ ಹೆಗ್ಗಡೆಗಳು ಎನಿಸಿಕೊಂಡ ಒಂದು ಸಣ್ಣ ಪಾಳೆಯಗಾರಿಕೆಯ ಪೀಠವಾಗಿತ್ತು. ಈಗಿರುವ ಆ ಕಾಲದ ಹಿಂದಿನ ಮನೆಯಲ್ಲಿ ಮರದ ಸುಂದರ ಕೆತ್ತನೆಯ ಕೆಲಸವನ್ನು ಕಾಣಬಹುದು. ಮುಖ್ಯವಾಗಿ ನಂದಳಿಕೆ ಗ್ರಾಮ ಪ್ರಸಿದ್ಧಿಗೆ ಬಂದುದು. ಕನ್ನಡದ ಶ್ರೇಷ್ಠಕವಿ ನಂದಳಿಕೆ ಲಕ್ಷ್ಮೀನಾರಾಯಣಯ್ಯನಿಂದ, ಮುದ್ದಣ (ನೋಡಿ0 ಎಂಬ ಅಂಕಿತನಾಮದಿಂದ ಈತ ರಚಿಸಿದ ಶ್ರೀರಾಮಾಶ್ವಮೇಧ ಮತ್ತು ಇತರ ಕನ್ನಡ ಕೃತಿಗಳು ಇಂದಿಗೂ ಜನಪ್ರಿಯವಾಗಿವೆ. ನಂದಳಿಕೆಯಲ್ಲಿ ಕರ್ನಾಟಕದ ಪ್ರಸಿದ್ಧ ಸಂಗೀತಗಾರರಾಗಿದ್ದ ಬಿಡಾರಂ ಕೃಷ್ಣಪ್ಪನವರ ಪೂರ್ವಿಕರು ವಾಸವಾಗಿದ್ದರೆಂದು ಹೇಳುವರು. (ಕೆ.ಟಿ.ಆರ್.)

**ನಂದಿ :** ಕೋಲಾರ ಜಿಲ್ಲೆ ಚಿಕ್ಕಬಳ್ಳಾಪುರ ತಾಲ್ಲೂಕಿನಲ್ಲಿ ಚಿಕ್ಕಬಳ್ಳಾಪುರದ ನೈಋತ್ಯಕ್ಕೆ 6ಕಿಮೀ ದೂರದಲ್ಲಿರುವ ಗ್ರಾಮ. ಹೋಬಳಿ ಕೇಂದ್ರ. ಇಲ್ಲಿನ ಪ್ರಾಚೀನ ದೇವಾಲಯದಿಂದ ಪ್ರಸಿದ್ಧವಾಗಿದೆ.

ಇಲ್ಲಿನ ಭೋಗನಂದೀಶ್ವರ ದೇವಾಲಯದ ಕರ್ನಾಟಕದ ಪ್ರಾಚೀನ ದೇವಾಲಯಗಳಲ್ಲೊಂದು. ಚಿಕ್ಕಬಳ್ಳಾಪುರದಲ್ಲಿ ದೊರೆತ ತಾಮ್ರ ಶಾಸನವೊಂದರಲ್ಲಿ ಬಾಣವಂಶದ ದೊರೆಯಾದ ಬಾಣ ವಿದ್ಯಾಧರನ ಪತ್ನಿಯೂ ದಡ್ಡನರಾಧಿಪನ ತಾಯಿಯೂ ಆದ ರತ್ನಾವಳಿ ಎಂಬಾಕೆ ಈ ಆಲಯವನ್ನು ಕಟ್ಟಿಸಿದಳೆಂದು ಹೇಳಿದೆ. ನಂದಿ ಗ್ರಾಮದಲ್ಲಿಯೇ ಬಾವಿಯೊಂದರಲ್ಲಿ ದೊರೆತ 806ನೆಯ ವರ್ಷದ ರಾಷ್ಟ್ರಕೂಟ ಮುಮ್ಮಡಿ ಗೋವಿಂದನ ತಾಮ್ರಶಾಸನದಲ್ಲಿಯೂ ಈ ಪ್ರಸ್ತಾಪವಿದೆ. ಅದರಲ್ಲಿ ರತ್ನಾವಳಿ ಇಂದಪ್ಪರಸನ ಮಗಳೆಂದೂ ಆಕೆಗೆ ಮಾಣಿಕಬ್ಬೆ ಎಂಬ ಇನ್ನೊಂದು ಹೆಸರಿತ್ತೆಂದೂ ಹೇಳಿದೆ. ನಾಲ್ಕು ವರ್ಷಗಳ ಅನಂತರ ಮುಮ್ಮಡಿ ಗೋವಿಂದನ ಆಳಿಕೆಯ 17ನೆಯ ವರ್ಷದ ಶಾಸನದಲ್ಲಿ ಈ ಶಿವಾಲಯಕ್ಕೆ ನೀಡಿದ ಭೂದಾನದ ಉಲ್ಲೇಖವಿದೆ. ಬಾಣವಿದ್ಯಾಧರ 8ನೆಯ ಶತಮಾನದ ಅಂತ್ಯದಲ್ಲಿ ಆಳುತ್ತಿದ್ದನೆಂದು ಊಹಿಸಲಾಗಿದ್ದು ಬಹುಶಃ ಆ ಸಮಯದಲ್ಲಿಯೇ ಈ ದೇವಾಲಯವೂ ಕಟ್ಟಿಸಲ್ಪಟ್ಟಿರಬೇಕು. ಇದೇ ದೇವಾಲಯದಲ್ಲಿ ದೊರೆತ 9ನೆಯ ಶತಮಾನದ ಅಂತ್ಯಭಾಗಕ್ಕೆ ಸೇರಿದ ನೊಳಂಬಾಧಿರಾಜನ ಶಾಸನದಿಂದ ಈ ದೇವಾಲಯದ ಗೋಪುರವನ್ನು ಆ ಸುಮಾರಿನಲ್ಲಿ ಕಟ್ಟಿಸಲಾಯಿತೆಂದು ತಿಳಿದುಬರುತ್ತದೆ.

370x250 ಅಡಿಗಳ ವಿಸ್ತಾರದ ದ್ರಾವಿಡ ಶೈಲಿಯಲ್ಲಿ ಕಟ್ಟಲಾದ ಅಲಂಕಾರಿಕವಾದ ಈ ದೇವಾಲಯದಲ್ಲಿ ಎರಡು ಗರ್ಭಗೃಹಗಳು ಮತ್ತು ಪ್ರತ್ಯೇಕವಾದ ಎರಡು ನಂದಿಮಂಟಪಗಳಿವೆ. ಈ ಆಲಯದ ಉತ್ತರದ ಗುಡಿ ಭೋಗನಂದೀಶ್ವರನಿಗೂ ದಕ್ಷಿಣದ ಗುಡಿ ಅರುಣಾಚಲೇಶ್ವರನಿಗೂ ಮೀಸಲಾಗಿವೆ. ಒಂದೊಂದೂ ಗುಡಿಗೂ ಸೇರಿದಂತೆ ಪ್ರತ್ಯೇಕವಾದ ಸುಕನಾಸಿ, ನವರಂಗಗಳೂ ಇವೆ. ಇವುಗಳಲ್ಲಿ ಒಂದೊಂದರಲ್ಲೂ ಒಂದಕ್ಕೆ ಅಭಿಮುಖವಾಗಿ ಇನ್ನೊಂದರಂತೆ ಜಾಲಂಧ್ರಗಳಿವೆ.

ಭೋಗನಂದೀಶ್ವರನ ಗುಡಿಯ ಮುಂದಿನ ನಂದಿಮಂಟಪದಲ್ಲಿ 11ನೆಯ ಶತಮಾನಕ್ಕೆ ಸೇರಿದ ಚೋಳರ ಶಾಸನಗಳಿದ್ದು, ತನ್ಮೂಲಕ ದೇವಾಲಯದ ಆ ಭಾಗಗಳೆಲ್ಲ ಚೋಳರ ಕಾಲದಲ್ಲಿ ಕಟ್ಟಿಸಲ್ಪಟ್ಟವುಗಳೆಂದು ತಿಳಿದುಬರುತ್ತದೆ. ದಕ್ಷಿಣಕ್ಕಿರುವ ಅರುಣಾಚಲೇಶ್ವರ ಗುಡಿಯ ನವರಂಗದಲ್ಲಿನ ಜಾಲಂಧ್ರದಲ್ಲಿ ತಾಂಡವೇಶ್ವರ ವಿಗ್ರಹವಿದ್ದು ಅಲ್ಲಿನ ಶಾಸನ ಅದರ ಕರ್ತೃ ಕೇಶವನೆಂಬುದನ್ನು ತಿಳಿಸುತ್ತದೆ. ಭೋಗನಂದೀಶ್ವರನ ಗುಡಿಯ ನವರಂಗದ ಎಡಭಾಗದಲ್ಲಿ ಧ್ಯಾನ ಮುದ್ರೆಯಲ್ಲಿ ಪದ್ಮಾಸನಸ್ಥವಾಗಿರುವ ಒಂದು ವಿಗ್ರಹವಿದೆ. ಇದು ಬಹುಶಃ ಚೋಳ ಅರಸನೊಬ್ಬನ ಪ್ರತಿಕೃತಿಯಾಗಿರಬಹುದೆಂದು ಊಹಿಸಲಾಗಿದೆ. ಈ ನವರಂಗದ ನಾಲ್ಕು ಕಂಬಗಳಲ್ಲಿಯೂ ಉತ್ತಮವಾದ ಕೆತ್ತನೆಯ ಕೆಲಸವನ್ನು ಕಾಣಬಹುದು. ನವರಂಗದ ಭುವನೇಶ್ವರಿ 7' ಚದರವಿದ್ದು ಅದರಲ್ಲಿ ಮಧ್ಯದಲ್ಲಿ ಶಿವ ಮತ್ತು ಪಾರ್ವತಿ ಮತ್ತು ಸುತ್ತಲೂ ಅಷ್ಟದಿಕ್ಪಾಲಕರನ್ನು ಕೆತ್ತಲಾಗಿದೆ. ಶಿವನಿಗೆ ಸಿಂಹವನ್ನೂ ಪಾರ್ವತಿಗೆ ನಂದಿಯನ್ನೂ ವಾಹನವಾಗಿ ತೋರಿಸಲಾಗಿದೆ. ಎರಡು ಗುಡಿಗಳ ನಡುವೆ ಸಣ್ಣದೊಂದು ಗುಡಿ ಇದೆ. ಎರಡು ಗುಡಿಗಳ ನವರಂಗದ ಹಿಂಭಾಗಕ್ಕೆ ಸಮಾನಾಂತರವಾಗಿರುವ ಈ ಗುಡಿಯ ಸುತ್ತಲೂ ಎರಡು ಅಡಿಗಳಷ್ಟು ಸ್ಥಳವಿದ್ದು ಪ್ರದಕ್ಷಿಣೆಗೆ ಅನುಕೂಲವಾಗಿದೆ. ಇದನ್ನು ಉಮಾಮಹೇಶ್ವರನ ಗುಡಿ ಎಂದು ಕರೆಯುತ್ತಾರೆ.

ಭೋಗನಂದೀಶ್ವರ - ಅರುಣಾಚಲೇಶ್ವರ ಈ ಜೋಡುಗುಡಿಗಳ ಮುಂದಿನ ರಂಗಮಂಟಪ ಕಪ್ಪುಶಿಲೆಯಲ್ಲಿ ಕಟ್ಟಲ್ಪಟ್ಟಿದೆ. ಇದರಲ್ಲಿನ ನಾಲ್ಕು ಕಂಬಗಳಲ್ಲಿ ಸ್ವಲ್ಪವೂ ಸ್ಥಳ ಬಿಡದೆ ಕೆತ್ತನೆ ಕೆಲಸ ಮಾಡಲಾಗಿದೆ. ಮೃಗಗಳು, ಬಳ್ಳಿಗಳು, ಮೂರ್ತಿಗಳು ಹಾಗೂ ಪ್ರಮುಖವಾಗಿ ಪಕ್ಷಿಗಳು ಈ ಕೆತ್ತನೆಯ ಮುಖ್ಯವಸ್ತುಗಳು. ಒಂದೊಂದು ಕಂಬದಲ್ಲಿಯೂ ಎರಡು -ಮೂರು ಕಡೆ ಸುಮಾರು 2.1/2 ಅಡಿಗಳಷ್ಟು ಎತ್ತರದ ಸ್ತ್ರೀವಿಗ್ರಹಗಳು, ಇವುಗಳ ಮಧ್ಯೆ ಅರೆಗಂಬಗಳು, ಸುತ್ತಲೂ ಪಕ್ಷಿಗಳು ಮತ್ತು ಬಳ್ಳಿಗಳು - ಇವನ್ನು ಕೆತ್ತಲಾಗಿದೆ. ಪಕ್ಷಿಗಳನ್ನಂತೂ ಇಲ್ಲಿನ ಬೋದಿಗೆ ಭುವನೇಶ್ವರಿಗಳಲ್ಲಿಯೂ ಕಾಣಬಹುದು. ನಾಲ್ಕು ಅಡಿ ಆಳದ ಭುವನೇಶ್ವರಿಯ ತೊಲೆಗಳ ಒಳಮುಖದಲ್ಲಿ ಗೌರೀಶಂಕರ, ಲಕ್ಷ್ಮೀನಾರಾಯಣ, ಸರಸ್ವತಿ ಮತ್ತು ಬ್ರಹ್ಮ, ಸ್ವಾಹಾದೇವಿ ಮತ್ತು ಅಗ್ನಿ - ಇವರುಗಳ ವಿಗ್ರಹಗಳನ್ನು ಕೆತ್ತಲಾಗಿದೆ. ಇನ್ನೊಂದು ಕಡೆ ಅಷ್ಟದಿಕ್ಪಾಲಕರು, ಮತ್ತೊಂದು ಕಡೆ ಮೇಲಿನಿಂದ ತೂಗುಬಿದ್ದಿರುವ ಕಮಲವನ್ನು ಹಿಡಿದುಕೊಂಡಿರುವ ನಾಲ್ಕು ಗಿಣಿಗಳ ಕೆತ್ತನೆ ಇವೆ.

ನಂದಿಮಂಟಪಗಳ ನಡುವೆ ಕಲ್ಯಾಣಮಂಟಪ ಇದೆ. ಇದರಲ್ಲಿನ 12 ಕಂಬಗಳು ಕರಿಕಲ್ಲಿನವು. ಎಂಟು ಕಂಬಗಳ ಮುಂದಿನ ಮುಖದಲ್ಲಿ 3 ಅಡಿ ಎತ್ತರದ ನಿಲು ಭಂಗಿಯ ಸ್ತ್ರೀ ವಿಗ್ರಹಗಳು, ಬುಡದ ಫಲಕಗಳಲ್ಲಿ ಸಿಂಹಗಳು ಇವೆ. ಇತರತ್ರಮತ್ಸ್ಯವರಾಹಾವತಾರಗಳು, ತಾಂಡವಗಣಪತಿ, ಆಂಜನೇಯ, ಕಾಲಭೈರವ, ಉಮಾಮಹೇಶ್ವರ ಮುಂತಾದ ವಿಗ್ರಹಗಳು ಇವೆ.

ದೇವಾಲಯಗಳ ಹಿಂಭಾಗದಲ್ಲಿ ದೇವಿಯ ಗುಡಿಗಳು ಇವೆ. ಪ್ರಸನ್ನ ಪಾರ್ವತಿ ಭೋಗನಂದೀಶ್ವರನ ದೇವಿಯಾದರೆ, ಇನ್ನೊಂದು ಗುಡಿಯ ಅಪೀತಕುಚಾಂಬ ಅರುಣಾಚಲೇಶ್ವರನ ದೇವಿ. ಎರಡನೆಯ ಪ್ರಾಕಾರದಲ್ಲಿ ವಸಂತಮಂಟಪ ಮತ್ತು ತುಲಾಭಾರ ಮಂಟಪಗಳಿವೆ. ಮೂರನೆಯ ಪ್ರಾಕಾರದ ಮಧ್ಯೆ ಶೃಂಗಿತೀರ್ಥವೆಂಬ ದೊಡ್ಡ ಕೊಳ ಇದೆ. ಇದು ದಕ್ಷಿಣ ಪಿನಾಕಿನಿ ನದಿಯ ಉಗಮಸ್ಥಳ ಎಂದು ಹೇಳಿಕೆ. ದೇವಾಲಯದ ಮಹಾದ್ವಾರ 8 ಅಡಿ ಅಗಲ 16 ಅಡಿ ಎತ್ತರ ಇದೆ. ಬಾಗಿಲುತೋಳುಗಳ ಮೇಲೆ ದ್ವಾರಪಾಲಕರ ವಿಗ್ರಹಗಳು, ಲತೆಯನ್ನು ಹಿಡಿದಿರುವ ಸ್ತ್ರೀವಿಗ್ರಹಗಳು ಇವೆ. ನಂದಿಯ ದೇವಾಲಯದಲ್ಲಿ ಬೇರೆ ಬೇರೆ ಭಾಗಗಳನ್ನು ಬೇರೆ ಬೇರೆ ಕಾಲದಲ್ಲಿ ಕಟ್ಟಿದ್ದರೂ ಒಂದೊಂದೂ ಇನ್ನೊಂದರೊಡನೆ ಚೆನ್ನಾಗಿ ಹೊಂದಿಕೊಂಡಿದೆ ಎಂಬುದೊಂದು ಇದರ ವೈಶಿಷ್ಟ್ಯ.

11ನೆಯ ಶತಮಾನದಲ್ಲಿ ತಮಿಳುನಾಡಿನ ಚೋಳರ ಅಧೀನದಲ್ಲಿದ್ದ ಈ ನಂದಿ ಗ್ರಾಮ ನಿಗರಿಲಿಶೋಳ ಮಂಡಲದಲ್ಲಿ ಕಳವರನಾಡಿನ ಒಂದು ಭಾಗವಾಗಿತ್ತು. ಕಳವರ ಎಂಬ ಅದೇ ಹೆಸರಿನ ಗ್ರಾಮ ಈಗ ನಂದಿ ಮತ್ತು ಚಿಕ್ಕಬಳ್ಳಾಪುರಗಳ ನಡುವೆ ಇದೆ. ಶಾಸನಗಳಲ್ಲಿ ನಂದಿಯನ್ನು

ಪೆರಿಯನಂದಿ ಎಂತಲೂ ಅಲ್ಲಿನ ದೇವರನ್ನು ಇದು ದಕ್ಷಿಣ ಕೈಲಾಸವೆಂದು ಪ್ರಸಿದ್ಧವಾಗಿತ್ತು. 12ನೆಯ ಶತಮಾನದ (ತಿರು) ಮಹಾನಂದೀಶ್ವರಮುಡೈಯಾರ್ ಎಂದೂ ಕರೆದಿದೆ. ಆಗ ಪೂರ್ವಾರ್ಧದಲ್ಲಿ ಈ ಪ್ರದೇಶ ಹೊಯ್ಸಳ ರಾಮನಾಥ'ನ ವಶವಾಯಿತು. ಅನಂತರ ವಿಜಯನಗರದ ಅರಸರ ಅಧೀನಕ್ಕೆ ಬಂದಿತ್ತು. 15-17ನೆಯ ಶತಮಾನಗಳಲ್ಲಿ ವಿಜಯನಗರದ ಸಾಮಂತರಾದ ಆವತಿಯ ಪ್ರಭುಗಳು ಇಲ್ಲಿ ಆಳಿದರು. 17ನೆಯ ಶತಮಾನದ ಮಧ್ಯಭಾಗದಲ್ಲಿಈ ಪ್ರದೇಶ ಆದಿಲ್‌ಶಾಹೀಗಳ ಆಳ್ವಿಕೆಗೆ ಒಳಪಟ್ಟಾಗ ನಂದಿಗ್ರಾಮವನ್ನು ಶಹಾಜಿ ಜಹಗೀರಾಗಿ ಕೊಟ್ಟ. ಮುಂದಿನ ಶತಮಾನದಲ್ಲಿ ಹೈದರ್ ಇದನ್ನು ಆಕ್ರಮಿಸಿದ. ಟಿಪ್ಪು ಇದನ್ನು ವಿಸ್ತರಿಸಿ ಹೊಸ ಪೇಟೆಯನ್ನು (ಈಗಿನ ಸುಲ್ತಾನಪೇಟೆ) ಕಟ್ಟಿಸಿದ.

1799-1808ರಲ್ಲಿ ಮತ್ತು ಸುಲ್ತಾನಪೇಟೆಗಳ ನಡುವೆ ಬ್ರಿಟಿಷ್ ದಂಡಿನ ನಡುವೆ ಒಂದು ಠಾಣ್ಯ ಇತ್ತು. ನಂದಿಯಲ್ಲಿ ಶಿವರಾತ್ರಿ ಕಾಲದಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ಬೆಂಗಳೂರು, ಚಿಕ್ಕಬಳ್ಳಾಪುರ, ದೇವನಹಳ್ಳಿ ಮತ್ತು ಕೋಲಾರಗಳಿಂದ ನಂದಿಗೆ ನೇರ ರಸ್ತೆ ಸಂಪರ್ಕ ಇದೆ. ಗ್ರಾಮದಿಂದ ಸು. 2ಕಿಮೀ ದೂರದಲ್ಲಿ, ಬೆಂಗಳೂರು-ಬಂಗಾರಪೇಟೆ ನ್ಯಾರೋಗೇಜ್ ರೈಲು ಹಾದಿಯಲ್ಲಿ ನಂದಿ ನಿಲ್ದಾಣವಿದೆ.

(ಬಿಆರ್‌.ಜಿ)

**ನಂದಿಕೇಶ್ವರ :** ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕಿನ ಒಂದು ಗ್ರಾಮ. ಬಾದಾಮಿಯ ಈಶಾನ್ಯಕ್ಕೆ ಸು. 18ಕಿಮೀ ಅಂತರದಲ್ಲಿ ಮಲಪ್ರಭಾ ನದಿಯ ಎಡದಂಡೆಯ ಮೇಲಿದೆ. ಸಮುದ್ರಮಟ್ಟದಿಂದ 533 -5 ಮೀಟರು ಎತ್ತರದಲ್ಲಿದೆ. ಪ್ರಾಥಮಿಕ, ಮಾಧ್ಯಮಿಕ ಶಾಲೆಗಳೂ ಕೊಳವೆಬಾವಿಗಳು, ಅಂಚೆಕಚೇರಿ, ಗ್ರಾಮಸೇವಾ ಸಹಕಾರಿ ಸಂಘ ಮುಂತಾದವು ಇದ್ದು ವಿದ್ಯುಚ್ಛಕ್ತಿಯ ಸೌಕರ್ಯ ಪಡೆದಿದೆ. ಪ್ರತಿ ಗುರುವಾರ ಸಂತೆ ನಡೆಯುತ್ತದೆ. ಪ್ರತಿವರ್ಷ ಯುಗಾದಿ ಪಾಡ್ಯದ ದಿನ ನಂದೀಬಸವೇಶ್ವರ ಜಾತ್ರೆ ಜರುಗುತ್ತದೆ.

ಶಿವ-ಪಾರ್ವತಿಯರು ಮಹಾಕೂಟದಲ್ಲಿ ತಪಸ್ಸು ಮಾಡುತ್ತಿದ್ದಾಗ ಶಿವ ವಾಹನ ನಂದಿ ಈ ಸ್ಥಳದಲ್ಲಿ ವಾಸಮಾಡುತ್ತಿದ್ದುದರಿಂದ ಈ ಗ್ರಾಮಕ್ಕೆ ನಂದಿಕೇಶ್ವರವೆಂದು ಹೆಸರು ಬಂತೆಂದು ಪ್ರತೀತಿ. ಬಾದಾಮಿ ಗುಹೆಗಳಲ್ಲಿ ದೊರೆತ ಒಂದು ಶಿಲಾಶಾಸನದಲ್ಲಿ ಕೀರ್ತಿವರ್ಮನ ತಮ್ಮನಾದ ಮಂಗಲೀಶ ವೈಷ್ಣವಗುಹೆಯಲ್ಲಿ ಒಂದು ವಿಷ್ಣುಗೃಹವನ್ನು ನಿರ್ಮಿಸಿ ಅದರಲ್ಲಿ ವಿಷ್ಣು ಪ್ರತಿಮೆಯನ್ನು ಪ್ರತಿಷ್ಠಾಪಿಸಿ ಆ ದೇವರ ಬಲಿಪೂಜಾ ನಿಮಿತ್ತವಾಗಿ ಲಂಜೀಶ್ವರ ಎಂಬ ಗ್ರಾಮವನ್ನು ದತ್ತಿಯಾಗಿ ಕೊಟ್ಟನೆಂಬ ಉಲ್ಲೇಖವಿದೆ. ಈ ಲಂಜೀಶ್ವರವೇ ಇಂದಿನ ನಂದಿಕೇಶ್ವರ ಇರಬಹುದು.

ನಂದಿಕೇಶ್ವರಕ್ಕೆ ಸಮೀಪದಲ್ಲಿ ದಕ್ಷಿಣದ ಕಾಶಿ ಎಂದು ಕರೆಯುವ ಮಹಾಕೂಟ ಪುಣ್ಯಕ್ಷೇತ್ರವಿದೆ. (ಎಸ್‌.ಎಸ್‌.ಎಸ್‌.)

**ನಂದಿಕೋಲು :** ಶೈವ ದೇವಾಲಯಗಳಲ್ಲಿ, ವಿಶೇಷವಾಗಿ ಪೂಜಾಸಂದರ್ಭಗಳಲ್ಲಿ ಉತ್ಸವಗಳಲ್ಲಿ ಹೊತ್ತು ಕುಣಿವ ಶೃಂಗಾರಗೊಂಡ ದೊಡ್ಡ ಕೋಲಿನಂಥ ಒಂದು ಸಾಧನ. ಇದನ್ನು ನಂದಿಧ್ವಜ, ನಂದಿಕಂಬ ಎಂದೂ ಕರೆಯುತ್ತಾರೆ.

ನಂದಿಕೋಲು ಸಾಮಾನ್ಯವಾಗಿ ಹದಿನೈದರಿಂದ ಮೂವತ್ತೈದು ಅಡಿ ಉದ್ದವಿರುತ್ತದೆ. ಬೊಂಬಿನ ಕೆಳಭಾಗದಿಂದ ಮೇಲೆ ನಾಲ್ಕು ಅಡಿ ಎತ್ತರದಲ್ಲಿ ಮಂಟಪದಂಥ ನಾಲ್ಕು ಕಂಬದ ಒಂದು ಪೀಠ ಇರುತ್ತದೆ. ಇದರಲ್ಲಿ ಕುಳಿತ ಭಂಗಿಯ ನಂದಿಯ ವಿಗ್ರಹ ಇದ್ದು ಪೀಠದ ಮೇಲ್ಛಾವಣಿಯ ಮೇಲೆ ಪುಟ್ಟ ಸಿಹಿಕುಂಬಳಕಾಯಿ ಆಕಾರದ ಹರಡೆ ಇರುವುದು. ಇದನ್ನು ಗಗ್ರ ಗಗ್ಗರ ಎಂದೂ ಕರೆಯುತ್ತಾರೆ. ಇದು ಒಳಗೆ ಟೊಳ್ಳಾಗಿದ್ದು, ಹೊತ್ತು ಕುಣಿಯುವಾಗ ಶಬ್ದ ಬರಲೆಂದು ಕೆಲವು ಕಡೆ ಸಣ್ಣ ಜಲ್ಲಿಕಲ್ಲುಗಳನ್ನೋ ಹುಣಿಸೆ ಅಥವಾ ಪಾರಿವಾಣದ ಬೀಜಗಳನ್ನೋ ಹಾಕಿರುತ್ತಾರೆ. ಈ ಹರಡೆಯ ಮೇಲುತುದಿ ಕೆಳತುದಿಗಳಲ್ಲಿ ಅದಕ್ಕೆ ಅಂಟಿಕೊಂಡಂತೆ ಇರುವ ಬಳೆಯ ಆಕಾರದ ಎರಡು ವಸ್ತುಗಳನ್ನು ಪ್ಯಾರಿಯ ಎಂದು ಕರೆಯುತ್ತಾರೆ. ಇವು ಕುಣಿದಾಗ ಝುಳಪಿಸುವ, ತಿರುಗುವ ಅನುಕೂಲ ಹೊಂದಿದ್ದು ಹರಡೆಯೊಂದಿಗೆ ಬೇರ್ಪಡಿಸಲಾಗದ ರೀತಿಯಲ್ಲಿ ಹೊಂದಿಕೊಂಡಿರುತ್ತವೆ. ನಂದಿಕೋಲಿನಲ್ಲಿ ಅದರ ಎತ್ತರಕ್ಕೆ ತಕ್ಕಂತೆ ಹತ್ತರಿಂದ ಇಪ್ಪತ್ತು ಹರಡೆಗಳಿರುತ್ತವೆ. ಇವು ಮೇಲಕ್ಕೆ ಹೋದಂತೆಲ್ಲ ಒಂದಕ್ಕೊಂದು ಚಿಕ್ಕವಾಗುತ್ತ ಹೋಗುತ್ತವೆ. ಈ ಹರಡೆಗಳ ನಡುವೆ ಇರುವ ಛತ್ರಿಯಾಕಾರದ ತಗಡುಗಳನ್ನು ಜಾಲ್ರ, ಜಾಲರಿ ಎಂದು ಕರೆಯುತ್ತಾರೆ. ಇವುಗಳ ತುದಿಯಲ್ಲಿ ಸುತ್ತಲೂ ಚಿತ್ತಾರ ಮಾಡಿದ ಲೋಲಾಕಿನಂಥ ಸಣ್ಣ ಸಣ್ಣ ತಗಡುಗಳಿದ್ದು ಇವು ಕೂಡ ಮೇಲಕ್ಕೆ ಹೋದಂತೆಲ್ಲ ಚಿಕ್ಕವಾಗುತ್ತ ಹೋಗಿರುತ್ತವೆ. ಸಾಮಾನ್ಯವಾಗಿ ಇವನ್ನು ಅಲಂಕಾರಕ್ಕಾಗಿಯೂ ಶಬ್ದಕ್ಕಾಗಿಯೂ ಹಾಕಲಾಗಿರುತ್ತದೆ. ಬೊಂಬಿನ ಮೇಲುತುದಿಯಿಂದ ಕೆಳಕ್ಕೆ ನಾಲ್ಕು ಅಡಿಗಳ ವರೆಗೆ ಬಿಳಿ ಮತ್ತು ಕೆಂಪು ಬಟ್ಟೆಗಳಿಂದ ಸುತ್ತಿ ಮುಚ್ಚಲಾಗುತ್ತದೆ. ಇದರ ತುದಿಯಲ್ಲಿ ಕೆಂಪು ಅಥವಾ ಕಾವಿಬಣ್ಣದ ಒಂದು ಧ್ವಜವಿರುತ್ತದೆ. ಇದು ಕೆಲವು ಕಡೆ ತ್ರಿಕೋಣಾಕೃತಿಯಲ್ಲಿರುತ್ತದೆ. ಕೆಲವು ಕಡೆ ತುದಿ ಮಾತ್ರ ಎರಡು ತ್ರಿಕೋನವಾಗಿರುವುದುಂಟು. ಧ್ವಜದ ನಡುವೆ ಈಶ್ವರಲಿಂಗದ ಚಿತ್ರವೂ ಅಕ್ಕಪಕ್ಕದಲ್ಲಿ ಲಿಂಗದ ಕಡೆಗೆ ಮುಖಮಾಡಿರುವ ಎರಡು ನಂದಿಗಳ ಚಿತ್ರವೂ ಇರುತ್ತವೆ. ಈ ಚಿತ್ರಗಳನ್ನು ಬಿಳಿ ಬಟ್ಟೆಯಲ್ಲಿ ಹೊಲಿಯಲಾಗಿರುತ್ತದೆ. ಎರಡರಿಂದ ಎಂಟು ಅಡಿಗಳಷ್ಟು ಉದ್ದವಾಗಿರುವ ಈ ಧ್ವಜವನ್ನು ಕೆಲವು ಕಡೆ ಬೊಂಬಿಗೆ ಸುತ್ತುವುದೂ ಇನ್ನು ಕೆಲವು ಕಡೆ ಹಾರಾಡಲು ಬಿಡುವುದೂ ಉಂಟು. ಬೊಂಬಿನ ಮೇಲುತುದಿಯಲ್ಲಿ ಚತ್ತು ಅಥವಾ ಛತ್ರಿ ಇರುತ್ತದೆ. ಇದನ್ನು ಕಳಸ ಎಂದು ಕರೆಯುವರು. ಇದರ ಸುತ್ತ ಕೂಡ ಚಿತ್ತಾರ ಮಾಡಿದ ಲೋಲಾಕಿನಂಥ ಸಣ್ಣ ಸಣ್ಣ ತಗಡುಗಳ ಅಲಂಕಾರವಿರುತ್ತದೆ. ಬೊಂಬು ಮತ್ತು ಬಟ್ಟೆ ಇವನ್ನು ಬಿಟ್ಟರೆ ನಂದಿಕೋಲಿನ ಉಳಿದ ಭಾಗಗಳೆಲ್ಲ ಹಿತ್ತಾಳೆಯಿಂದ ನಿರ್ಮಾಣವಾಗಿರುತ್ತವೆ. ಕೆಲವು ಕಡೆ ನಂದಿಯ ವಿಗ್ರಹವನ್ನು ಪಂಚಲೋಹದಿಂದ ಮಾಡಿರುತ್ತಾರೆ. ಶಿವನಿಗೆ ವಿಶೇಷವಾಗಿ ಪೂಜೆ ಸಂದಾಗ ಅವನ ವಾಹನವಾದ ನಂದಿಯನ್ನು ಮೆರೆಸುವುದು ಸಂಪ್ರದಾಯ. ಆಗ ನಂದಿಕೋಲನ್ನು ಹೊತ್ತು ಕುಣಿಯುವುದುಂಟು.

ಹೀಗೆ ಹೊತ್ತು ಕುಣಿಯುವಾಗ ಭಾರವನ್ನು ತಡೆದುಕೊಳ್ಳಲು ಹೆಗಲಿಗೆ ನೇತುಹಾಕಿಕೊಳ್ಳಬಹುದಾದಂಥ ಒಂದು ಚೀಲವಿದ್ದು ಇದನ್ನು ಪಟ್ಟಿಕಲ್ಲಿ ಅಥವಾ ನಂದಿಕಲ್ಲಿ ಎಂದು ಕರೆಯುತ್ತಾರೆ. ನಂದಿಕೋಲು ಒಬ್ಬ ಆಳು ಹೊರುವುದಕ್ಕಿಂತ ಭಾರವಾಗಿದ್ದರೆ ಹರಡೆಗಳ ಸಾಲು ಮುಗಿಯುವ ಜಾಗದಿಂದ ಮೂರು ಅಥವಾ ಹೆಚ್ಚು ಹಗ್ಗಗಳನ್ನು ಇಳಿಯಬಿಟ್ಟು, ಸುತ್ತಲೂ ಒಂದೊಂದು ಹಗ್ಗವನ್ನು ಒಬ್ಬೊಬ್ಬರು ಹಿಡಿಯುತ್ತಾರೆ. ನಂದಿಕೋಲು ಹೊತ್ತವನು ತಾಳಕ್ಕೆ ತಕ್ಕಂತೆ ಕುಣಿಯುವಾಗ ಹಗ್ಗದವರು ಅವನಿಗೆ ಅನುಕೂಲಕರ ರೀತಿಯಲ್ಲಿ ಚಲಿಸುತ್ತಾರೆ. ನಂಜನಗೂಡು ತಾಲ್ಲೂಕಿನಲ್ಲಿ ನಂದೀಕೋಲು ಹೊತ್ತವನ ಹೆಗಲ ಮೇಲೆ ಇನ್ನೊಬ್ಬ ನಂದಿಕೋಲು ಹಿಡಿದು ನಿಲ್ಲುವ ಪರಿಪಾಠವಿದೆ. ಹಾಗಾದಾಗ, ನೆಲದ ಮೇಲೆ ನಿಂತವನು ಎರಡು ಭಾರಗಳನ್ನೂ ಸಹಿಸಿಕೊಂಡು ಕುಣಿಯಬೇಕಾಗುತ್ತದೆ. ಇದು ಶ್ರಮದ ಕೆಲಸ. ಆದರೆ ಕುಣಿಯುವ ವ್ಯಕ್ತಿ ಆವೇಶದಲ್ಲಿ ಸರಾಗವಾಗಿ ಕುಣಿಯುತ್ತಾನೆ. ಜೋಡಿ ನಂದಿಕೋಲುಗಳನ್ನು ಬಳಸುವುದು ಎಲ್ಲ ಕಡೆಯೂ ಕಂಡು ಬರುವ ಪದ್ಧತಿ.

ನಂದಿಕೋಲಿನ ಕುಣಿತದ ಜೊತೆ ಕರಡೆ, ಡೊಳ್ಳು, ಸೊನಾಮಿ, ಶ್ರುತಿ, ತಾಳ, ಚಮ್ಮಾಳ ಮುಂತಾದ ವಾದ್ಯವಿಶೇಷಗಳನ್ನು ಬಳಸುವರು. ಈ ವಾದ್ಯಗಳೊಂದಿಗೆ ತಮಟೆ ಬಳಸಬಾರದೆಂಬ ನಂಬಿಕೆ ಇದೆ. ಆದರೆ ಇಂಥ ವಾದ್ಯಗಳ ಪರಿಚಯ ಇಲ್ಲದ ಕಡೆ ತಮಟೆಗಳನ್ನೇ ಬಳಸುತ್ತಾರೆ.

ನಂದಿಕೋಲನ್ನು ಹೊತ್ತು ಕುಣಿಯುವ ವ್ಯಕ್ತಿ ಕುಣಿಯುವಾಗ ಅಥವಾ ಮೆರೆಸುವಾಗ ಅದು ಬೀಳದಂತೆ ಎಚ್ಚರ ವಹಿಸಬೇಕಾಗುತ್ತದೆ. ಒಂದು ಪಕ್ಷ ಕಳಸವೋ ನಂದಿ ವಿಗ್ರಹವೋ ಅಥವಾ ಯಾವೊಂದು ಭಾಗವೋ ಕೆಳಕ್ಕೆ ಬಿದ್ದರೆ ಊರಿಗೆ ಕೆಟ್ಟದ್ದಾಗುತ್ತದೆ ಎಂಬ ನಂಬಿಕೆಯಿದೆ.

ಅಲ್ಲದೆ ಬೀಳಿಸಿದವನಿಗೆ ದಂಡ ಹಾಕುವ ಪದ್ಧತಿಯೂ ಕೆಲವೆಡೆ ಕಂಡುಬರುತ್ತದೆ. ನಂದಿಕೋಲನ್ನು ವರ್ಷದ ಇಂತಿಂಥ ವಿಶೇಷ ದಿನಗಳಲ್ಲಿ ಮೆರೆಸಬೇಕೆಂಬ ಸಂಪ್ರದಾಯವುಂಟು. ಕೆಲವು ಸಲ ಹರಕೆ ಹೊತ್ತವರೂ ಆಗಾಗ ಮೆರೆಸುತ್ತಾರೆ.

ಸಾಮಾನ್ಯವಾಗಿ ನಂದಿಕೋಲಿಗಾಗಿ ಬಳಸುವ ನೇರವಾದ ಬೊಂಬನ್ನು ಮಲೆನಾಡು ಪ್ರದೇಶದಿಂದ ತರಿಸುವರು. ಬೊಂಬನ್ನು ಪೂಜೆ ಮಾಡಿ ಕಡಿದು ಅದನ್ನು ನೆಲಕ್ಕೆ ಸೋಂಕಿಸದೆ ತಂದು ದೇವಾಲಯದ ಮುಂದೆ ಮತ್ತೆ ಅದಕ್ಕೆ ಪೂಜೆ ಮಾಡಿ ಮಳೆ ಬಿಸಿಲುಗಳಿಗೆ ಬೀಳದಂತೆ ದೇವಾಲಯದಲ್ಲಿಡುತ್ತಾರೆ. ಹೆಚ್ಚು ಎತ್ತರವಿರುವ ನಂದಿಕೋಲುಗಳು ಚಿತ್ರದುರ್ಗ ಜಿಲ್ಲೆಯ ನಾಯಕನಹಟ್ಟಿಯ ತಿಪ್ಪೇಸ್ವಾಮಿ ದೇವಾಲಯ, ಮೈಸೂರು ಅರಮನೆ, ಬಳ್ಳಾರಿ ಜಿಲ್ಲೆಯ ಕೊಟ್ಟೂರಿನ ಕೊಟ್ಟೂರೇಶ್ವರ ದೇವಾಲಯ ಮೊದಲಾದ ಕಡೆಗಳಲ್ಲಿ ಕಂಡುಬರುತ್ತವೆ. (ಕೆ.ಆರ್.)

**ನಂದಿತಾವರೆ :** ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕಿನ ಒಂದು ಗ್ರಾಮ. ಹರಿಹರ ಮಲೆಬೆನ್ನೂರು ರಸ್ತೆಯಲ್ಲಿ 13 ಕಿಮೀ ದೂರದಲ್ಲಿದೆ.

ಇಲ್ಲಿರುವ ಅಮೃತಲಿಂಗಮಾಣಿಕೇಶ್ವರ ದೇವಾಲಯ ಚಿಕ್ಕದಾದರೂ ಸುಂದರವಾದ ಹೊಯ್ಸಳ ಶೈಲಿಯ ಕೃತಿ. ಹೊಯ್ಸಳ ಅಧಿಕಾರಿಯಾಗಿದ್ದ ಮಾಣಿಕಣ್ಣ ಎಂಬುವನು ಸು. 1220ರಲ್ಲಿ ಈ ದೇವಾಲಯವನ್ನು ಕಟ್ಟಿಸಿದಂತೆ ತೋರುತ್ತದೆ. ಬಳಪದ ಕಲ್ಲಿನ ಈ ಕಟ್ಟಡದಲ್ಲಿ ಪ್ರಧಾನ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಉತ್ತರದ ಕಡೆ ಇನ್ನೊಂದು ಚಿಕ್ಕ ಗುಡಿ ಇದೆ. ನವರಂಗದ ಮುಂಭಾಗ ಮತ್ತು ಇದರ ಮುಂದಿದ್ದ ಅರ್ಧಮಂಟಪ ಈಚೆಗೆ ನವೀಕೃತವಾಗಿವೆ. ಗರ್ಭಗೃಹ ಚೌಕಾಕಾರವಾಗಿದ್ದು ಅದರ ಹೊರಗೋಡೆಗಳ ಮೇಲೆ ಅರೆಗಂಬಗಳ ಅಲಂಕಾರವಿದೆ. ಅಧಿಷ್ಠಾನ ಭಾಗದಲ್ಲಿ ಐದೂ ಶಿಲ್ಪಪಟ್ಟಿಕೆಗಳಿವೆ. ಭಿತ್ತಿಯ ಮೇಲೆ ಇಂದ್ರ, ಭೈರವ, ರತಿ, ಮನ್ಮಥ, ನೃತ್ಯಗಣಪತಿ, ದಕ್ಷಿಣಾಮೂರ್ತಿ ಮೊದಲಾದ ಶಿಲ್ಪಗಳಿವೆ. ನವರಂಗ ಮತ್ತು ಗರ್ಭಗೃಹದ ದ್ವಾರಬಂಧಗಳನ್ನು ನಾಜೂಕಾಗಿ ಕೆತ್ತಲಾಗಿದೆ. ದ್ವಾರದ ಸುಕನಾಸಿಯ ಮೇಲೆ ತಾಂಡವೇಶ್ವರ ವಿಗ್ರಹ, ಅದರ ಅಕ್ಕಪಕ್ಕಗಳಲ್ಲಿ ಬ್ರಹ್ಮ ಮತ್ತು ವಿಷ್ಣು ವಿಗ್ರಹಗಳು, ಬಾಗಿಲಿನ ಎಡಗಡೆ ಮಹಿಷಾಸುರಮರ್ದಿನಿಯ ವಿಗ್ರಹ ಇವೆ. ನವರಂಗದಲ್ಲಿ ಬಲಗಡೆ ಸರಸ್ವತಿ ಮತ್ತು ಸಪ್ತಮಾತೃಕೆಯರು, ಎಡಗಡೆ ಸುಬ್ರಹ್ಮಣ್ಯ, ಉಮಾಮಹೇಶ್ವರ ಮತ್ತು ನಾಗದಂಪತಿ ವಿಗ್ರಹಗಳೂ ಎಡಗಡೆಯ ಅಂಕಣವೊಂದರಲ್ಲಿ 41/2 ಎತ್ತರದ ಸುಂದರವಾದ ವಿಷ್ಣು ವಿಗ್ರಹಗಳೂ ಇವೆ. ದೇವಾಲಯದ ಮಧ್ಯಚಾವಣಿಯ ಮೇಲೆ ಅಷ್ಟದಿಕ್ಪಾಲಕರ ವಿಗ್ರಹಗಳೂ ದೇವಾಲಯದ ಎದುರಿಗೆ ನಂದಿಯೂ ಇವೆ. ಗರ್ಭಗುಡಿ ಮತ್ತು ಸುಕನಾಸಿಯ ಹೊರಗೋಡೆಗಳ ಮೇಲೆ ಶಿವ, ಗಣಪತಿ, ವೀರಭದ್ರ, ಹನುಮಂತ, ದಕ್ಷಿಣಾಮೂರ್ತಿ ಮತ್ತು ಮೋಹಿನಿ ವಿಗ್ರಹಗಳು ಹಾಗೂ ಆನೆ ಮತ್ತು ಶಾರ್ದೂಲಗಳ ಸಾಲುಗಳಿವೆ. ನವರಂಗದಲ್ಲಿ ತಿರುಗಣೆಯಿಂದ ಮಾಡಿದ ನಾಲ್ಕು ಕಂಬಗಳಿವೆ. ನವರಂಗಕ್ಕೆ ಸೇರಿದಂತೆ ಉತ್ತರಕ್ಕಿರುವ ಚಿಕ್ಕ ಗುಡಿಯಲ್ಲಿ ಒಂದು ಕೇಶವ ವಿಗ್ರಹವಿದೆ. ದೇವಾಲಯದ ಮುಂಭಾಗದಲ್ಲಿ ಒಂದು ಚಿಕ್ಕ ಗುಡಿಯಿದ್ದು ಇದರಲ್ಲಿ ಹೊಯ್ಸಳ ಕಾಲದ ನಂದಿ ಶಿಲ್ಪವಿದೆ.

ಈ ದೇವಾಲಯದಲ್ಲಿ ಎಲೆಚಟ್ಟು ಎಂಬ 1.1 ಮೀ ಉದ್ದ 0.6 ಮೀ ಅಗಲದ ಚಿತ್ತಾರದ ಮರದ ಚೌಕಟ್ಟು ಇದೆ. ಸಣ್ಣ ಕಿಂಡಿಗಳು ಮೇಲುಗಡೆ ಐದೂ ಹಿಡಿಗಳು ಇರುವ ಈ ಚೌಕಟ್ಟು ತಳಗಿನ ಸಣ್ಣ ಚಕ್ರದ ಮೇಲೆ ಚಲಿಸುತ್ತದೆ. ಹರಕೆ ಹೊತ್ತ ವೀಳ್ಯದೆಲೆಯ ತೋಟಗಾರರು ಈ ಕಿಂಡಿಗಳಲ್ಲಿ ವೀಳ್ಯದೆಲೆಗಳನ್ನಿಟ್ಟು, ಹಿಡಿಗಳಿಗೆ ಸಹ ಎಲೆಗಳನ್ನು ಸುತ್ತಿ ಹಿಡಿಗಳ ಸಹಾಯದಿಂದ ಚೌಕಟ್ಟನ್ನು ಚಲಿಸಿ ಪೂಜೆಯನ್ನು ಸಲ್ಲಿಸುತ್ತಾರೆ. ಈ ಪೂಜೆಗೆ ಅಗತ್ಯವಾದ ಎಲೆಗಳು 2,000 ಪೂಜೆಯಾದ ಮೇಲೆ ಗ್ರಾಮಸ್ಥರಿಗೆ ಆ ವೀಳ್ಯಗಳನ್ನು ಹಂಚುತ್ತಾರೆ. ಎಲೆಯ ತೋಟಗಳಿಗೆ ಕ್ರಿಮಿ ಕೀಟಗಳು ತಾಕದಿರಲಿ ಎಂಬುದು ಎಲೆಚಟ್ಟು ಪೂಜೆಯ ಉದ್ದೇಶ.

(ವಿ.ಜಿ.ಕೆ.)

**ನಂದಿದುರ್ಗ :** ಕೋಲಾರ ಜಿಲ್ಲೆಯ ಪ್ರಸಿದ್ಧ ಗಿರಿಧಾಮ ಮತ್ತು ಐತಿಹಾಸಿಕ ಸ್ಥಳ. ಬೆಂಗಳೂರಿನಿಂದ 60ಕಿಮೀ ದೂರದಲ್ಲಿ ಚಿಕ್ಕಬಳ್ಳಾಪುರ ತಾಲ್ಲೂಕಿನಲ್ಲಿ ಕಸಬೆಯಿಂದ ನೈಋತ್ಯಕ್ಕೆ 8ಕಿಮೀ ದೂರದಲ್ಲಿ ಇದೆ.

ನಂದಿದುರ್ಗ ಕೋಲಾರ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಉತ್ತರ ದಕ್ಷಿಣವಾಗಿ ಹಬ್ಬಿರುವ ಗಿರಿಪಂಕ್ತಿಯ ದಕ್ಷಿಣಾಗ್ರದಲ್ಲಿರುವ ಬೆಟ್ಟ. ಸಮುದ್ರಮಟ್ಟದಿಂದ 1,478 ಮೀ ಎತ್ತರವಿರುವ ಬೆಟ್ಟ ಆ ಶ್ರೇಣಿಯ ಅತಿ ದೊಡ್ಡ ಬೆಟ್ಟವೂ ಹೌದು. ಪಾಲಾರ್, ಚಿತ್ರಾವತಿ, ಅರ್ಕಾವತಿ, ಪಾಪಾಘ್ನಿ, ಉತ್ತರ ಮತ್ತು ದಕ್ಷಿಣ ಪಿನಾಕಿನಿ ನದಿಗಳು ಈ ಬೆಟ್ಟದಿಂದ ಉಗಮಿಸುತ್ತವೆ. ಪಕ್ಕದ ಬೆಟ್ಟಗಳೊಡನೆ ಹೊಂದಿಕೊಂಡಂತೆ ಇರುವ ಪಶ್ಚಿಮ ಭಾಗವನ್ನು ಬಿಟ್ಟು ಇತರೆಡೆ ಬಹು ಕಡಿದಾದ ಪಾರ್ಶ್ವಗಳಿರುವ ಈ ಬೆಟ್ಟ ನೆಲದಿಂದ ಮೇಲೆದ್ದ ಬೃಹತ್ ಬಂಡೆಯಂತೆ ಕಾಣುತ್ತದೆ. ಬೆಟ್ಟದ ನೆತ್ತಿಯಿಂದ ನೇರವಾಗಿ ಆಳಕ್ಕೆ ಇಳಿಯುವ ನೈಋತ್ಯ ಪಾರ್ಶ್ವವನ್ನು 'ಟಿಪ್ಪು ಡ್ರಾಪ್' ಎಂದು ಕರೆಯುತ್ತಾರೆ (ಟಿಪ್ಪು ಸೆರೆಹಿಡಿದ ಶತ್ರುಗಳನ್ನು ಇಲ್ಲಿಂದ ಕೆಳಕ್ಕೆ ತಳ್ಳುತ್ತಿದ್ದನಂತೆ). ಉತ್ತರದ ಬೆಟ್ಟದಲ್ಲಿರುವ ಇದೇ ರೀತಿಯ, ಆದರೆ ಇದಕ್ಕಿಂತ ಚಿಕ್ಕದಾದ, ಒಂದು ಕಮರಿಗೆ 'ಹೈದರ್ ಡ್ರಾಪ್' ಎಂಬ ಹೆಸರಿದೆ. ಬೆಟ್ಟದ ಮೇಲೆ ಹತ್ತಲು ಹಿಂದೆ ಯಾತ್ರಾರ್ಥಿಗಳು ಉಪಯೋಗಿಸುತ್ತಿದ್ದ ಒಂದು ಮೆಟ್ಟಲು ಹಾದಿ ಇದೆ. ಇದು ಕೆಳಗಿನ ನಂದಿ ಗ್ರಾಮದಿಂದ ಹೊರಟು ಉತ್ತರ ಪಾರ್ಶ್ವದಲ್ಲಿ ಹಾದು ಪಶ್ಚಿಮದೆಡೆಯಿಂದ ಮೇಲೆಕ್ಕೆ ಬರುತ್ತದೆ. ಈಗ ಉತ್ತರದೆಡೆಯಿಂದಲೇ ನೇರವಾಗಿ ಬರುವ ಒಂದು ಮೆಟ್ಟಲು ಹಾದಿ ಸಹ ಇದೆ. ಉತ್ತರದ ಕಡೆಯಿಂದ ಪಶ್ಚಿಮದತ್ತ ಹತ್ತಿ ಮೇಲೆ ಬರುವ 6 ಕಿಮೀ ಉದ್ದದ ಒಂದು ಸವಾರಿ ಹಾದಿ ಸಹ ಇದೆ. ದುರ್ಗದ ವಾಯುವ್ಯದಲ್ಲಿ ಬಸವನ ಕಣಿವೆ ಎಂಬ ಸ್ಥಳದಲ್ಲಿ ಇದಕ್ಕೆ ಇನ್ನೊಂದು ಸವಾರಿ ಹಾದಿ ಬಂದು ಕೂಡುತ್ತದೆ (ಇದರ ಬಳಿಯಲ್ಲಿ ಒಂದು ದೊಡ್ಡ ಬಸವನ ವಿಗ್ರಹ ಇದೆ). ಇವಲ್ಲದೆ ಮೇಲೆ ಹತ್ತಲು ಬಹು ಸಮೀಪವಾಗಿರುವ ದಕ್ಷಿಣದೆಡೆಯಿಂದ ಬರುವ ಇನ್ನೂ ಒಂದು ಮೆಟ್ಟಲು ಹಾದಿ ಇದೆ. ಈಗ ಬೆಟ್ಟದ ಮೇಲಕ್ಕೆ ಹೋಗಲು ಉತ್ತಮವಾದ ಮೋಟಾರ್ ಹಾದಿಯನ್ನೂ ಮಾಡಲಾಗಿದೆ.

ಬೆಟ್ಟದ ಮೇಲೆ ಹೋದಾಗ ಮೊದಲು ಕಾಣಸಿಗುವುದು ದೊಡ್ಡ ಬಯಲಿನ ಮಧ್ಯದಲ್ಲಿರುವ ಅಮೃತಸರೋವರವೆಂಬ ಕೊಳ. ಚೌಕಾಕಾರದ ಈ ಕೊಳದ ಮೆಟ್ಟಲುಗಳು ತಳಭಾಗಕ್ಕೆ ಇಳಿದಂತೆಲ್ಲ ಕಿರಿದಾಗುತ್ತ ಹೋಗುತ್ತದೆ. ಊಟೆಯೊಂದು ಇರುವ ಕಾರಣ ಇಲ್ಲಿ ಸದಾ ನೀರು ಇರುವುದು. ಇಲ್ಲಿ ಇನ್ನೂ ಎರಡು ಕೊಳಗಳು-ಪಾತಾಳಗಂಗೆ, ಅಂತರಗಂಗೆ ಇವೆ. ಅಮೃತಸರೋವರದ ಬಳಿ ಇರುವ ಚಬೂತರ ಎಂಬ ಒಂದು ಕಟ್ಟೆಯನ್ನು ಟಿಪ್ಪು ಪ್ರಾರ್ಥನೆ ಮಾಡಲು ಉಪಯೋಗಿಸುತ್ತಿದ್ದನಂತೆ. ಅನತಿದೂರದಲ್ಲಿ ಟಿಪ್ಪು ಇಲ್ಲಿ ಬಂದಾಗ ತಂಗುತ್ತಿದ್ದನೆನ್ನಲಾಗಿದ ಟಿಪ್ಪು ಲಾಡ್ಜ್ ಇದೆ. ಅಲ್ಲದೆ ಸುತ್ತಮುತ್ತಲಿನ ಪ್ರಾಚೀನ ಕಾಲದ ಕೋಟೆಕೊತ್ತಲಗಳ ಅವಶೇಷಗಳಿವೆ.

ಬೆಟ್ಟದ ಮೇಲೆ ಯೋಗನಂದೀಶ್ವರ ದೇವಾಲಯವಿದೆ. ಇಲ್ಲಿ ಶಿವನು ಯೋಗ ದೀಕ್ಷೆಯಲ್ಲಿರುವುದರಿಂದ ಉತ್ಸವಗಳು ನಡೆಯುವುದಿಲ್ಲ; ಉತ್ಸವಮೂರ್ತಿಯೂ ಇಲ್ಲ. ಗರ್ಭಗುಡಿ, ಸುಕನಾಸಿ, ನವರಂಗ ಮತ್ತು ಕಲ್ಯಾಣಮಂಟಪಗಳನ್ನೊಳಗೊಂಡ ಈ ದೇವಾಲಯವನ್ನು ಚೋಳರ ಕಾಲದಲ್ಲಿ ಕಟ್ಟಲಾಯಿತೆಂದು ಹೇಳುತ್ತಾರಾದರೂ ಇದಕ್ಕೆ ಸಾಕಷ್ಟು ಆಧಾರಗಳಿಲ್ಲ. ಸುಕನಾಸಿಯ ಬಾಗಿಲುವಾಡದ ಹಿತ್ತಾಳೆ ಚೌಕಟ್ಟಿನಲ್ಲಿ ಅನೇಕ ಚಿತ್ರಗಳನ್ನು ಕೆತ್ತಿದೆ. ಎರಡು ಪಕ್ಕಗಳಲ್ಲಿಯೂ 5 ಅಡಿ ಎತ್ತರದ ಲೋಹದ ದ್ವಾರಪಾಲಕ ವಿಗ್ರಹಗಳು ಇವೆ. ಇವು ವಿಜಯನಗರದ ಕೃಷ್ಣದೇವರಾಯನ ಕಾಣಿಕೆ. ನವರಂಗದ ಉತ್ತರದ ಬಾಗಿಲಿನ ಮುಂದೆ ಕಲ್ಯಾಣಮಂಟಪ, ಸುಕನಾಸಿಯ ದಕ್ಷಿಣಕ್ಕೆ ಇನ್ನೊಂದು ಮಂಟಪ ಇವೆ. ಇದರಲ್ಲಿ ಲಿಂಗೋದ್ಭವ ಮೂರ್ತಿ, ಗಜಸಂಹಾರ ಮೂರ್ತಿ, ದುರ್ಗ, ಮಹಿಷಾಸುರ ಮರ್ದಿನಿ, ನಾಟ್ಯಗಣಪತಿ ಮುಂತಾದ ವಿಗ್ರಹಗಳಿವೆ. ಸಮಪ್ರಮಾಣದ ಆಕರ್ಷಕ ಮೂರ್ತಿಗಳಿವು. ಇಲ್ಲಿನ ದೇವಿಯ ಗುಡಿಯಲ್ಲಿ

ಕಾಣುವುದು ಮುಕ್ತಾಂಬೆಯ ವಿಗ್ರಹ. ಈ ಬೆಟ್ಟದ ಮೇಲೆ ತಪಸ್ಸು ಮಾಡಿ ಮುಕ್ತಿ ಪಡೆದಳಾದ ಕಾರಣ ಈ ಹೆಸರು ಎಂಬುದು ಸಾಂಪ್ರದಾಯಿಕ ಕಥೆ.

ನಂದಿದುರ್ಗ ಗಂಗರ ಕಾಲದಿಂದಲೂ ಪ್ರಸಿದ್ಧವಾಗಿದೆ. ಗಂಗರನ್ನು ಶಾಸನಗಳಲ್ಲಿ ನಂದಗಿರಿನಾಥರೆಂದೇ ಕರೆಯಲಾಗಿದೆ. ಆದರೆ ಆ ಕಾಲದ ಅವರ ಶಾಸನಗಳಾವವೂ ಇಲ್ಲಿ ಲಭಿಸದಿರುವುದು ಆಶ್ಚರ್ಯಕರ. ನಂದಿ ಗ್ರಾಮದಲ್ಲಿ ದೊರೆತ ತಾಮ್ರ ಶಾಸನೊಂದರಲ್ಲಿ ನಂದಿಗಿರಿಯಲ್ಲಿಯ ಮಠದ ಸ್ಥಾನಾಧಿಪತಿಯಾದ ಕಾಳಾ ಮುಖರ ಗುರು ಈಶ್ವರದಾಸ ದಾನವನ್ನು ಸ್ವೀಕರಿಸಿದನೆಂದಿದೆ. ಆದ್ದರಿಂದ ಕಾಳಾಮುಖರಿಗೆ ಇದು ಪವಿತ್ರವಾದ ಸ್ಥಳವಾಗಿತ್ತೆನ್ನಬಹುದು. ಜೈನಮತಾವಲಂಬಿಗಳಾದ ಗಂಗರ ಕಾಲದಲ್ಲೂ ಇದು ಆನಂದಗಿರಿ ಎನಿಸಿಕೊಂಡಿತ್ತೆಂದೂ ವೃಷಭ ತೀರ್ಥಂಕರರ ಹೆಸರಿನಿಂದ ವೃಷಭ ಪರ್ವತವೆಂಬ ಹೆಸರನ್ನು ಪಡೆದಿತ್ತೆಂದೂ ಪ್ರತೀತಿಗಳಿವೆ. ಸ್ಥಳಪುರಾಣಗಳಲ್ಲಿ ಈ ದುರ್ಗವನ್ನು ಶೃಂಗಿಪರ್ವತ, ಕೂಷ್ಮಾಂಡ ಪರ್ವತವೆಂದು ಕರೆಯಲಾಗಿದೆ. ಕೂಷ್ಮಾಂಡಋಷಿ ಇಲ್ಲಿ ನೆಲೆಸಿದ್ದು ಶಿವನನ್ನು ಪೂಜಿಸುತ್ತಿದ್ದನೆಂಬುದೊಂದು ನಂಬಿಕೆ ಇಲ್ಲಿ ಪ್ರಚಲಿತವಾಗಿದೆ. ಯೋಗ ನಂದೀಶ್ವರಾಲಯದ್ದಲಿರುವ ಹಲವಾರು ವಿಗ್ರಹಗಳಲ್ಲಿ ಒಂದನ್ನು ಕೂಷ್ಮಾಂಡ ಋಶಷಿಯದೆಂದು ತೋರಿಸುತ್ತಾರೆ.

17ನೆಯ ಶತಮಾನದ ಶಾಸನವೊಂದರಿಂದ ಇಲ್ಲಿನ ಅತ್ಯುನ್ನತವೂ ಅಭೇದ್ಯವೂ ಆದ ನಂದಿ ಎಂಬ ಗಿರಿಯನ್ನು ಬಳ್ಳಾಪುರದ ರಾಜರು ದುರ್ಗವನ್ನಾಗಿ ಮಾಡಿದರು ಎಂದು ಹೇಳಿದೆ. ಚಿಕ್ಕಬಳ್ಳಾಪುರದ ಪಾಳೆಯಗಾರನಾಗಿದ್ದ ಚಿಕ್ಕಬೈರೇಗೌಡನ ಮಗ ಮರಿಗೌಡ ಇಲ್ಲಿಯ ಕೋಟೆಯನ್ನು ಕಟ್ಟಿಸಿದ. ಶಿವಾಜಿಯ ಮಗ ಸಾಂಬಾಜಿಯ ಆಳ್ವಿಕೆಯಲ್ಲಿ ರಘುನಾಥ ಪಾಂಡೆಯ ಅಣತಿಯಂತೆ ಬಾಲಾಜಿ ಕೃಷ್ಣ ಈ ದುರ್ಗದ ಮೇಲ್ವಿಚಾರಣೆ ವಹಿಸಿಕೊಂಡ. ಟಿಪ್ಪುಸುಲ್ತಾನ್ ಇಲ್ಲಿನ ಕೋಟೆಕೊತ್ತಳಗಳನ್ನು ಮತ್ತಷ್ಟು ಬಲಪಡಿಸಿದ. ಈಗ ಇಲ್ಲಿ ಕಾಣು ಕೋಟೆಯ ಅವಶೇಷಗಳು ಬಹು ಮಟ್ಟಿಗೆ ಟಿಪ್ಪುಸುಲ್ತಾನರ ಕಾಲದವು. 1791ರಲ್ಲಿ ಈ ದುರ್ಗವನ್ನು ಬ್ರಿಟಿಷರು ಆಕ್ರಮಿಸಿದರು. ಇದರ ನೆನಪಿಗಾಗಿ ಎಂಬಂತೆ, ಕೋಟೆಯನ್ನು ಆಕ್ರಮಿಸಲು ಅವರು ಸಾಧಿಸಿದ ಒಂದು ಬಿರುಕಿನ ಬಳಿ 10th Oct. 1791, BREACH ಎಂದು ಬರೆಯಲಾಗಿದೆ. ಕೋಟೆಯ ಒಳಗಡೆ ಕುದುರೆಯ ಲಾಯಗಳು, ಮದ್ದು ಗುಂಡುಗಳ ಉಗ್ರಾಣ ಇವೆ.

ತಂಪು ಹವೆ, ಸುತ್ತಲ ಅರಣ್ಯಭರಿತ ಸುಂದರ ಪ್ರಕೃತಿ, ಚಾರಿತ್ರಿಕ ಸ್ಮಾರಕಗಳಿಂದ ಶೋಭಿಸುವ ನಂದಿದುರ್ಗಗಳ ಬೇಸಗೆಯ ತಂಗುದಾಣವಾಗಿ ಜನಪ್ರಿಯವಾಗಿದೆ. ವರ್ಷಪೂರ್ತಿ ಇಲ್ಲಿನ ಹವೆ ಹಿತವಾಗಿರುತ್ತದೆ. ಈ ಬೆಟ್ಟದ ಮೇಲಿನ ಉಷ್ಣಾಂಶ ಸು. 550 ಮೀಟರು ಕೆಳಗಿರುವ ಸುತ್ತಲ ಬಯಲುಪ್ರದೇಶಕ್ಕಿಂತ ಯಾವಾಗಲೂ ಸು. $10^0$ ಸೆ. ನಷ್ಟು ಕಡಿಮೆ ಇರುತ್ತದೆ. ಇಲ್ಲಿನ ಅತಿ ಗರಿಷ್ಠ ಮತ್ತು ಕನಿಷ್ಠ ಉಷ್ಣಾಂಶ ಕ್ರಮವಾಗಿ ಬೇಸಗೆಯಲ್ಲಿ $29^0$ ಸೆ. $23^0$ ಸೆ. ಮತ್ತು ಚಳಿಗಾಲದಲ್ಲಿ $21^0$ ಸೆ. $11^0$ ಸೆ. 1799-1808ರಲ್ಲಿ ಬೆಟ್ಟದ ಬುಡದಲ್ಲಿ ಬ್ರಿಟಿಷ್ ದಂಡು ನೆಲಸಿದ್ದಾಗಿನಿಂದ ಬೇಸಗೆ ದಿನಗಳಲ್ಲಿ ಬ್ರಿಟಿಷ್ ಅಧಿಕಾರಿಗಳು ಇಲ್ಲಿ ಬಂದು ತಂಗುತ್ತಿದ್ದರು. ಬೆಟ್ಟದ ಮೇಲೆ ಅಮೃತಸರೋವರದ ಬಳಿ ಇರುವ ಹಣ್ಣಿನ ತೋಟ ಆ ಕಾಲದಲ್ಲಿ ಕರ್ನಲ್ ಕ್ಯುಪ್ರೇಜ್ ಎಂಬುವನು ಬೆಳೆಸಿದ್ದು. 19ನೆಯ ಶತಮಾನದಲ್ಲಿ ಬ್ರಿಟಿಷರು ತಮ್ಮ ವಾಸಕ್ಕಾಗಿ ಕಟ್ಟಿಸಿಕೊಂಡಿದ್ದ ಮನೆಗಳು ಇಲ್ಲಿವೆ. ಕರ್ನಲ್ ಹಿಲ್‌ನ 'ಗ್ಲೆನ್‌ಟಿಲ್ಟ್' 'ಮಾರ್ಕ್ ಕಬ್ಬನ್ನನ' 'ಕಬ್ಬನ್ ಹೌಸ್', ಕ್ಯಾಪ್ಟನ್ ಕನಿಂಗ್‌ಹ್ಯಾಮ್‌ನ ಓಕ್ ಲ್ಯಾಂಡ್ಸ್ ಮುಖ್ಯವಾದವು. (ಕನಿಂಗ್ ಹ್ಯಾಮ್ ಕಟ್ಟಿಸಿದ ಮನೆಯಲ್ಲಿ ಮಹಾತ್ಮಾ ಗಾಂಧಿಯವರು ತಂಗಿದ್ದುದರಿಂದ ಈಗ ಅದನ್ನು ಗಾಂಧೀನಿಲಯ ಎಂದು ಕರೆಯಲಾಗುತ್ತಿದೆ). ಇವಲ್ಲದೆ ಪ್ರವಾಸಿಗರ ತೋಟಗಾರಿಕೆಗಾಗಿ ಉತ್ತಮವಾಗಿ ಸಜ್ಜುಗೊಳಿಸಿದ ಅನೇಕ ಬಂಗಲೆಗಳು ಇಲ್ಲಿವೆ. ಇವು ರಾಜ್ಯದ ಇಲಾಖೆಯ ಅಧೀನದಲ್ಲಿವೆ. ರಾಜ್ಯದ ಪ್ರವಾಸೋದ್ಯಮ ಇಲಾಖೆ ಸಹ ಇಲ್ಲಿ ಕುಟೀರಗಳನ್ನು ಕಟ್ಟಿರುವುದಲ್ಲದೆ ಒಂದು ಉಪಾಹಾರಗೃಹವನ್ನೂ ನಡೆಸುತ್ತಿದೆ

(ಬಿಆರ್‌ಜಿ)

**ನಂದಿನಾಥ :** ಸು.1745 ವೀರಶೈವ ಕವಿ. ವಲ್ಲೀಕಂಠಾಭರಣ ಎಂಬ ಕೃತಿಯ ಕರ್ತೃ. ಕಾವ್ಯದಲ್ಲಿ ತನ್ನ ಪರಂಪರೆಯನ್ನು ಹೇಳಿಕೊಂಡಿರುವುದರಿಂದ ಈತನ ತಂದೆ ವೀರಭದ್ರೇಶನೆಂದೂ ತಾಯಿ ಕಾಳಿಕಾಂಬೆ ಎಂದೂ ತಿಳಿಯುತ್ತದೆ. ಈತನ ವಿದ್ಯಾಗುರು ಪುಟ್ಟವರ್ಯ. ವಲ್ಲೀಕಂಠಾಭರಣ ಯಕ್ಷಗಾನ ಕೃತಿಯಂತಿದ್ದು 9 ಸ್ಥಲಗಳನ್ನೂ 1610 ಕಂದವೃತ್ತಪದ್ಯಗಳನ್ನೂ ಒಳಗೊಂಡಿದೆ. ಇದನ್ನು ಕ್ರೋಧನ ಸಂವತ್ಸರದಲ್ಲಿ ಬರೆದು ಮುಗಿಸಿದಂತೆ ತಿಳಿಯುತ್ತದೆ. ಈ ಕಾವ್ಯದಲ್ಲಿ ಮುಖ್ಯವಾಗಿ ಷಣ್ಮುಖನ ದಿಗ್ವಿಜಯ, ವಲ್ಲೀಪರಿಣಯ ವರ್ಣಿತವಾಗಿವೆ. ಕಥೆ ಸೂತಮಹಾಪುರಾಣಿಕ ಶೌನಕಾದಿಗಳಿಗೆ ಹೇಳಿದಂತಿದೆ. ಪೂರ್ವಕವಿಗಳಲ್ಲಿ ಸೋಮಾರಾಧ್ಯ, ನಿಜಗುಣ, ಷಡಕ್ಷರದೇವ ಇವರನ್ನು ಸ್ಮರಿಸಿದ್ದಾನೆ.

**ನಂದಿನಿ [1]:** ಅಭಿನಯಶ್ರೇಷ್ಠತೆಗೆ ಊರ್ವಶಿ ಪ್ರಶಸ್ತಿ ಪಡೆದ ಕನ್ನಡ ಚಿತ್ರನಟಿ. ಇವರು ಬೆಂಗಳೂರು ವಿಶ್ವವಿದ್ಯಾಲಯದ ನಿವೃತ್ತ ಇಂಗ್ಲಿಷ್ ಪ್ರಾಧ್ಯಾಪಕ ನಂಬಿಯಾರರ ಮಗಳು.ಇವರ ಹುಟ್ಟು ಹೆಸರು ಹೇಮಾ, ತಾರಾ ನಾಮ ನಂದಿನಿ, ಬಾಲ್ಯದಿಂದಲೂ ಸಂಗೀತ, ಸಾಹಿತ್ಯ, ನೃತ್ಯಗಳಲ್ಲಿ ಇವರಿಗೆ ತೀವ್ರ ಆಸಕ್ತಿ. ಕೇರಳದಲ್ಲಿ ಜನಿಸಿದದ್ದರೂ ಬೆಂಗಳೂರಿನಲ್ಲಿ ವಾಸಮಾಡುತ್ತಿದ್ದು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ವ್ಯಾಸಂಗ ನಡೆಸಿದರು. ವಿದ್ಯಾರ್ಥಿದೆಸೆಯಲ್ಲಿದ್ದಾಗಲೇ ಮದುವೆಯಾದರು. ಬೆಂಗಳೂರಿನ ಚಿತ್ರ ಹಂಚಿಕೆದಾರರೂ ಕರ್ನಾಟಕ ಫಿಲ್ಮ್ ಚೆಂಬರಿನ ಅಧ್ಯಕ್ಷರಾಗಿದ್ದ ಮತ್ತು ಫಿಲ್ಮ್ ಫೆಡರೇಷನ್ ಆಫ್ ಇಂಡಿಯದ ಅಧ್ಯಕ್ಷರೂ ಆಗಿದ್ದ, ಭಕ್ತವತ್ಸಲಂ ಇವರ ಪತಿ. ಗಿರೀಶ್ ಕಾರ್ನಾಡ್ ನಿರ್ದೇಶಿಸಿರುವ ಕಾಡು (1974) ಒಂದೇ ನಂದಿನಿ ಅಭಿನಯಿಸಿರುವ ಚಿತ್ರ. ಅದಕ್ಕೆ ಮುನ್ನ ಇವರಿಗೆ ಅಭಿನಯದ ಅನುಭವವಿರಲಿಲ್ಲ. ರಂಗವೇದಿಕೆಯನ್ನು ಹತ್ತಿರದವರೂ ಅಲ್ಲ. ಕಾಡು ಚಿತ್ರದಲ್ಲಿನ ಗೌಡಿತಿಯ ಹೆಚ್ಚು ಮಾತಿಲ್ಲದ ಪಾತ್ರದಲ್ಲಿ ಮುಖಭಾವಗಳಿಂದಲೇ ಅಭಿವ್ಯಕ್ತಿ ನೀಡಿ ಒಳ್ಳೆಯ ಅಭಿನಯದಿಂದಾಗಿ ರಾಜ್ಯಮಟ್ಟದ ಪ್ರಶಸ್ತಿ ಗಳಿಸಿದರು. ರಾಷ್ಟ್ರಮಟ್ಟದಲ್ಲಿಯೂ ಸರ್ವೋತ್ತಮ ಅಭಿನಯಪ್ರಶಸ್ತಿಯಾದ ಊರ್ವಶಿಯನ್ನೂ ಪಡೆದ ಏಕೈಕ ಕನ್ನಡ ಕಲಾವಿದೆ.

*

**ನಂದಿನಿ [2]:** ಉತ್ತರ ಕನ್ನಡ ಜಿಲ್ಲೆಯ ಗೋಕರ್ಣದಿಂದ ಈ ಹೆಸರಿನ ಒಂದು ಮಾಸಪತ್ರಿಕೆಯೂ ಶಿರಸಿಯಿಂದ ಇದೇ ಹೆಸರಿನ ಒಂದು ವಾರಪತ್ರಿಕೆಯೂ ಪ್ರಕಟವಾಗುತ್ತಿದ್ದುವು. ನಂದಿನೀ ಮಾಸಪತ್ರಿಕೆಯ ಸಂಪಾದಕರು ನಾರಾಯಣ ಸುಬ್ರಹ್ಮಣ್ಯ ಶಾಸ್ತ್ರಿ ಭಡತಿ. ಅವರೇ ಇದರ ಪ್ರಕಾಶಕರು ಹಾಗೂ ಮುದ್ರಕರು. ಈ ಪತ್ರಿಕೆಗಾಗಿಯೇ ಅವರು ನಂದಿನೀ ಮುದ್ರಣಾಲಯವನ್ನು ಸ್ಥಾಪಿಸಿದರು. ಪತ್ರಿಕೆಯ ಪ್ರಥಮ ಸಂಚಿಕೆ ಶಾಲಿವಾಹನ ಶಕ 1847ನೆಯ ಕಾರ್ತೀಕ ಮಾಸ ಶುಕ್ಲಪಕ್ಷದಲ್ಲಿ 1925ರ ಅಕ್ಟೋಬರ್‌ನಲ್ಲಿ ಪ್ರಕಟವಾಯಿತು.

ಡಿಮ್ಮೆ 1/8 ಆಕಾರದ 30-40 ಪುಟಗಳಿಂದ ಕೂಡಿದ್ದ ಈ ಪತ್ರಿಕೆಯ ವಾರ್ಷಿಕ ಚಂದಾ ಅಂಚೆ ಸಹಿತ ರೂ. 2 ಪತ್ರಿಕೆಯ ಪ್ರಸಾರ ಸುಮಾರು ಒಂದೂವರೆ ಸಾವಿರ. ಈ ಪತ್ರಿಕೆ ಧಾರ್ಮಿಕ ಸಾಂಸ್ಕೃತಿಕ ಸಾಮಾಜಿಕ ವಿಚಾರಗಳಿಗೆ ಮೀಸಲಾಗಿತ್ತು. ಪತ್ರಿಕೆ ಹತ್ತು ವರ್ಷಗಳ ಕಾಲ ನಡೆದು ಸಂಪಾದಕರು ತೀವ್ರ ಕಾಯಿಲೆಗೆ ಒಳಗಾದ್ದರಿಂದ ಪ್ರಕಟಣೆ ನಿಂತುಹೋಯಿತು. ಮಾಸಪತ್ರಿಕೆ ನಿಂತ ಮೇಲೆ ಅದರ ಮುದ್ರಣಾಲಯ ಶಿರಸಿಗೆ ಸ್ಥಳಾಂತರಗೊಂಡಿತು. ನಂದಿನೀ ವಾರಪತ್ರಿಕೆ ಶಿರಸಿಯಿಂದ ಅದೇ ಮುದ್ರಣಾಲಯದಲ್ಲಿಅಚ್ಚಾಗಿ 1937ರ ಫೆಬ್ರವರಿ 9ರಿಂದ ಪ್ರಕಟವಾಗತೊಡಗಿತು. ಕ್ರೌನ್ 1/4 ಆಕಾರದ 8 ಪುಟಗಳೊಡನೆ ಪ್ರತಿ ಮಂಗಳವಾರ ಪ್ರಕಟವಾಗುತ್ತಿದ್ದ ಈ ಪತ್ರಿಕೆಗೆ ಡಿ.ಎಸ್.ವಿಶ್ವಾಮಿತ್ರರು ಸಂಪಾದಕರೂ, ಮಹಾಬಲೇಶ್ವರ ಕೃಷ್ಣಪ್ಪ ಹೆಗಡೆಯವರು ಪ್ರಕಾಶಕರೂ, ಸೀತಾರಾಮ ವಿಘ್ನೇಶ್ವರ ಭಡತಿಯವರು ಮುದ್ರಕರೂ ಆಗಿದ್ದರು. ಪತ್ರಿಕೆಯ ವಾರ್ಷಿಕ ಚಂದಾ ರೂ.3. ಬಿಡಿ ಪತ್ರಿಕೆಯ ಬೆಲೆ ಒಂದು ಆಣೆ (ಸು. ಆರು ಪೈಸೆ.) ಒಂದುವರೆ ಸಾವಿರಕ್ಕೂ ಹೆಚ್ಚು ಚಂದಾದಾರರಿದ್ದ ಈ

ಪತ್ರಿಕೆಯ ಸಂಪಾದಕೀಯ ಉಚ್ಚಮಟ್ಟದ್ದಾಗಿರುತ್ತಿತ್ತು. ಅರವಿಂದ, ರಮಣಮಹರ್ಷಿ, ರಾಮಕೃಷ್ಣಪರಮಹಂಸ ಮುಂತಾದವರ ತತ್ತ್ವಗಳ ಪ್ರತಿಪಾದನೆಗೆ ಪತ್ರಿಕೆಯಲ್ಲಿ ವಿಶೇಷ ಅವಕಾಶವಿತ್ತು.

ಪತ್ರಿಕೆಯಲ್ಲಿ ರಾಜಕೀಯ ಸಾಮಾಜಿಕ ವರದಿಗಳೂ ಕೃಷಿ ವಿಚಾರಗಳೂ ದೇಶ ವಿದೇಶಗಳ ವರ್ತಮಾನಗಳೂ, ಸ್ಥಾನಿಕ ಸುದ್ದಿಗಳೂ ಪ್ರಕಟವಾಗುತ್ತಿದ್ದವು. ಅಡಕೆ ತೋಟಗಾರರ ಸಮಸ್ಯೆಗಳೂ ಜಿಲ್ಲೆಯ ಅರಣ್ಯ ಸಂಕಷ್ಟಗಳೂ ಚರ್ಚಿಸಲ್ಪಡುತ್ತಿದ್ದವು.

ಅರಣ್ಯ ಪ್ರಧಾನವಾದ ಈ ಭಾಗದಲ್ಲಿ ಆಗ ಸಾರಿಗೆ ಸಂಪರ್ಕಗಳು ಬಹಳ ದುಸ್ತರವಾಗಿದ್ದವು. ಅಂಚೆ ವ್ಯವಸ್ಥೆ ಸಮರ್ಪಕವಾಗಿರಲಿಲ್ಲ. ನಂದಿನೀ ಪತ್ರಿಕೆಯನ್ನು ಸಕಾಲದಲ್ಲಿ ತಲುಪಿಸಲು, ವಿತರಣೆ ಮಾಡಲು ಪತ್ರಿಕೆ ತನ್ನದೇ ಆದ ವ್ಯವಸ್ಥೆ ಮಾಡಿಕೊಂಡಿತ್ತು.

ನಂದಿನೀ ವಾರಪತ್ರಿಕೆ ಜನಜಾಗೃತಿಯನ್ನೂ ವಿಚಾರಕ್ರಾಂತಿಯನ್ನೂ ಉಂಟು ಮಾಡಿ ಜನಸಮುದಾಯದಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಮೂಡಿಸಿ ಪ್ರಸಿದ್ಧಿ ಹಾಗೂ ಗೌರವ ಪಡೆಯಿತಾದರೂ ಆರ್ಥಿಕ ಸಂಕಷ್ಟದಿಂದ ಚೇತರಿಸಿಕೊಳ್ಳಲಾರದೆ 1940ರಲ್ಲಿ ನಿಂತುಹೋಯಿತು. *

**ನಂದೀಮಠ, ಎಸ್.ಸಿ. :** 1900-75. ಪ್ರಸಿದ್ಧ ವಿದ್ವಾಂಸರು, ಶಿಕ್ಷಣತಜ್ಞರು. ಪೂರ್ಣ ಹೆಸರು ಶಿವಲಿಂಗಯ್ಯ ಚೆನ್ನಬಸವಯ್ಯ ನಂದೀಮಠ. ಹುಟ್ಟಿದ್ದು ಬೆಳಗಾಂವಿ ಜಿಲ್ಲೆ ಗೋಕಾಕ ತಾಲ್ಲೂಕಿನ ನಂದಿ ಗ್ರಾಮದಲ್ಲಿ, ಗೋಕಾಕ ಬೆಳಗಾಂವಿಗಳಲ್ಲಿ ಆರಂಭದ ಶಿಕ್ಷಣವನ್ನು ಮುಗಿಸಿ, ಧಾರವಾಡದ ಕರ್ನಾಟಕ ಕಾಲೇಜಿನಿಂದ ಬಿ.ಎ. ಪದವಿಯನ್ನೂ (1924) ಮುಂಬಯಿ ವಿಶ್ವವಿದ್ಯಾಲಯದಿಂದ (1926) ಎಂ.ಎ. ಪದವಿಯನ್ನೂ ಪಡೆದರು. ಕೊಲ್ಹಾಪುರದ ರಾಜಾರಾಮ ಕಾಲೇಜಿನಲ್ಲಿ ಅಧ್ಯಾಪಕರಾಗಿ ಸ್ವಲ್ಪ ಕಾಲಕೆಲಸ ಮಾಡಿದ ಮೇಲೆ, ಉನ್ನತ ಶಿಕ್ಷಣಕ್ಕಾಗಿ ಲಂಡನ್‌ಗೆ ತೆರಳಿದ ಇವರು, ಅಲ್ಲಿ ಪ್ರಸಿದ್ಧ ವಿದ್ವಾಂಸರಾದ ಬಾರ್ನೆಟ್‌ರ ಮಾರ್ಗದರ್ಶನದಲ್ಲಿ ವೀರಶೈವ ಧರ್ಮ ಹಾಗೂ ತತ್ತ್ವಜ್ಞಾನಗಳ ಕೈಪಿಡಿ ಎಂಬ ವಿಷಯವನ್ನು ಕುರಿತು ಪ್ರೌಢ ಪ್ರಬಂಧವನ್ನು ರಚಿಸಿ 1930ರಲ್ಲಿ ಪಿಎಚ್.ಡಿ. ಪದವಿ ಪಡೆದರು. ಸ್ವದೇಶಕ್ಕೆ ಮರಳಿ, ಮುಂಬಯಿ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ಅಧ್ಯಾಪಕರಾಗಿ ಸ್ವಲ್ಪ ಕಾಲ ಕೆಲಸ ಮಾಡಿದರು. ಅನಂತರ ಬೆಳಗಾಂವಿಯ ಕರ್ನಾಟಕ ಲಿಂಗಾಯತ ಎಜುಕೇಷನ್ ಸೊಸೈಟಿಯವರು ಆರಂಭಿಸಬೇಕೆಂದಿದ್ದ ಲಿಂಗರಾಜ ಕಾಲೇಜಿನ ಸ್ಥಾಪನೆಗಾಗಿ ಶ್ರಮಿಸಿದ ಇವರು ಅನಂತರ ಅದೇ ಕಾಲೇಜಿನ ಮೊದಲ ಪ್ರಿನ್ಸಿಪಾಲರಾಗಿ (1933-44) ಕೆಲಸ ಮಾಡಿ, ಅದನ್ನೊಂದು ದೊಡ್ಡ ಸಂಸ್ಥೆಯನ್ನಾಗಿ ಅಭಿವೃದ್ಧಿಪಡಿಸಿದರು. ಬಾಗಲಕೋಟೆಯಲ್ಲಿ ಬಸವೇಶ್ವರ ಕಾಲೇಜನ್ನು ಸ್ಥಾಪಿಸಿ ಬೆಳೆಸಿದರು. ಮುಂಬಯಿ ವಿಶ್ವವಿದ್ಯಾಲಯದ ಸೆನೆಟ್ ಹಾಗೂ ಸಿಂಡಿಕೇಟ್ ಸದಸ್ಯರಾಗಿದ್ದುಕೊಂಡು ಉತ್ತರ ಕರ್ನಾಟಕಕ್ಕೆ ಪ್ರತ್ಯೇಕವಾದ ವಿಶ್ವವಿದ್ಯಾಲಯವೊಂದನ್ನು ಪಡೆಯಲು ಶ್ರಮಿಸಿದರು. ಕರ್ನಾಟಕ ವಿಶ್ವವಿದ್ಯಾಲಯ ಆರಂಭವಾಗುವಾಗ ಅದರ ರೂಪುರೇಷೆಗಳನ್ನು ಮತ್ತು ಕಾಯಿದೆ ಕಾನೂನುಗಳನ್ನು ರೂಪಿಸುವಲ್ಲಿ ಮಹತ್ವದ ಕೆಲಸಮಾಡಿದ ನಾಲ್ಕಾರು ಶಿಕ್ಷಣತಜ್ಞರಲ್ಲಿ ಇವರೂ ಒಬ್ಬರಾಗಿದ್ದರು. ಕರ್ನಾಟಕ ವಿಶ್ವವಿದ್ಯಾಲಯದ ಸಂಸ್ಕೃತ ಪ್ರಾಧ್ಯಾಪರಕಾಗಿದ್ದ ಇವರು ಸಿಂಡಿಕೇಟ್, ಸೆನೆಟ್, ಅಕೆಡೆಮಿಕ್ ಕೌನ್ಸಿಲುಗಳ ಸದಸ್ಯರಾಗಿಯೂ ಸ್ಮರಣೀಯ ಸೇವೆ ಸಲ್ಲಿಸಿದರು. ವಿಶ್ವವಿದ್ಯಾಲಯದ ಕುಲಸಚಿವರಾಗಿಯೂ ಕುಲಪತಿಗಳಾಗಿಯೂ ಇವರು ಸ್ವಲ್ಪ ಕಾಲ ಕಾರ್ಯನಿರ್ವಹಿಸಿದರು.

ಕನ್ನಡ, ಸಂಸ್ಕೃತ, ಪಾಲಿ, ಪ್ರಾಕೃತ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪಾಂಡಿತ್ಯ ಪರಿಶ್ರಮಗಳನ್ನು ಪಡೆದಿದ್ದ ಇವರು ಹಲವು ಅಮೂಲ್ಯ ಲೇಖನಗಳನ್ನೂ ಗ್ರಂಥಗಳನ್ನೂ ಪ್ರಕಟಿಸಿದ್ದಾರೆ. ಅರ್ಜುನವಾಡದ ಶಾಸನ, ಗುಮ್ಮಳಾಪುರದ ಶಾಸನ ಮತ್ತು ಚೌಡದಾನಪುರ ಶಾಸನಗಳ ಬಗ್ಗೆ ಇವರು ವಿಶ್ಲೇಷಣಾತ್ಮಕ ಲೇಖನಗಳನ್ನು ಬರೆದಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಗಿರುವ ಕರ್ನಾಟಕ ಧರ್ಮಗಳು ಇವರ ಒಂದು ಗಣ್ಯಕೃತಿ. ಹರಿಹರನ ಗಿರಿಜಾಕಲ್ಯಾಣ, ಕುವಲಯಾನಂದ - ಇವು ಇವರ ಸಂಪಾದಿತ ಗ್ರಂಥಗಳು. ಇವರ ಪ್ರೌಢ ಪ್ರಬಂಧ ಹ್ಯಾಂಡ್ ಬುಕ್ ಆಫ್ ವೀರಶೈವಿಸಂ ಇಂಗ್ಲಿಷಿನಲ್ಲಿ ಪ್ರಕಟವಾಗಿದೆ.

ಬೇಲೂರಿನಲ್ಲಿ 1952ರಲ್ಲಿ ಸೇರಿದ್ದ 35ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ನಂದೀಮಠರನ್ನು ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಲಾಯಿತು. 1975ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಇವರಿಗೆ ಗೌರವ ಡಿ.ಲಿಟ್. ಪದವಿ ನೀಡಿ ಸನ್ಮಾನಿಸಿತು. (ಎಸ್.ಎಸ್.ಬಿ.)

**ನಗರ** (ಬಿದನೂರು) **:** ಶಿವಮೊಗ್ಗ ಜಿಲ್ಲೆ ಹೊಸನಗರ ತಾಲ್ಲೂಕಿನಲ್ಲಿ ಹೊಸನಗರದಿಂದ 5ಕಿಮೀ ದಕ್ಷಿಣಕ್ಕಿರುವ ಒಂದು ಗ್ರಾಮ.ಇದರ ಹಿಂದಿನ ಹೆಸರು ಬಿದನೂರು, ಬಿದಿರೂರು, ಹಲವು ಶಾಸನಗಳಲ್ಲಿ ಈ ಊರನ್ನು ವೇಣುಪುರ ಎಂದೂ ಕರೆದಿದೆ. ಕೆಳದಿ ಇಕ್ಕೇರಿಗಳಲ್ಲಿ ಆಳಿದ ಅರಸರು 1640ರ ಹೊತ್ತಿಗೆ ಇದನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಬಿದನೂರ ಅರಸರಾದರು. ಘಟ್ಟದ ಕೆಳಗೆ ಇಳಿಯುವ ಹೊಸಂಗಡಿ ಘಾಟಿಯ ದಾರಿಯಲ್ಲಿದ್ದು ವ್ಯಾಪಾರ ಕೇಂದ್ರವೂ ಆದುದರಿಂದ ಬಹುಬೇಗನೆ ಬೆಳೆದು ದೊಡ್ಡ ನಗರವಾಯಿತು. ಕೋಟೆಕೊತ್ತಲಗಳು ಅರಮನೆಗಳು ರಚಿತವಾದುವು. ಇಲ್ಲಿಯ ಕೋಟೆಯ ಸುತ್ತಳತೆ ಹನ್ನೆರಡು ಕಿಮೀಗಳಷ್ಟು ಇದ್ದು ಡಿಲ್ಲಿ ಬಾಗಿಲು, ಕೊಡಿಯಾಲದ ಬಾಗಿಲು, ಕವಿಲೆದುರ್ಗದ ಬಾಗಿಲು ಮುಂತಾದ ಹತ್ತು ಬಾಗಿಲುಗಳಿದ್ದುವು. ಊರಿನಲ್ಲಿ ಎತ್ತರವಾದ ಒಂದು ಗುಡ್ಡದ ಮೇಲೆ ಅರಮನೆಯಿದ್ದು ಅದನ್ನು ಸುತ್ತುವರಿದು ಒಂದು ಒಳಕೋಟೆಯೂ ಇತ್ತು. ಶಿವಪ್ಪನಾಯಕ ಈ ಪಟ್ಟಣವನ್ನು ತುಂಬ ಅಭಿವೃದ್ಧಿಪಡಿಸಿದ. 1763ರಲ್ಲಿ ಹೈದರ್ ದಾಳಿಮಾಡಿದಾಗ ಇದು ಅತ್ಯಂತ ಸಂಪದ್ಭರಿತವಾದ ನಗರವಾಗಿತ್ತು. ಸೋಲು ಖಚಿತವಾದಾಗ ಅರಮನೆಗೆ ಬೆಂಕಿಹಚ್ಚಿ ರಾಣಿ ವೀರಮ್ಮಾಜಿ ತಪ್ಪಿಸಿಕೊಂಡು ಓಡಿಹೋದರೂ ಹೈದರನಿಗೆ ಅನೇಕ ಕೋಟಿ ರೂಪಾಯಿಗಳ ಬೆಲೆ ಬಾಳುವ ಕೊಳ್ಳೆ ದೊರೆಯಿತು.

ಹೈದರ್ ತನ್ನ ಸೈನ್ಯವನ್ನು ಅಲ್ಲಿ ಸ್ಥಾಪಿಸಿ ಒಳಕೋಟೆಯ ಮುಂಭಾಗದಲ್ಲಿ ಒಂದು ಅರಮನೆಯನ್ನು ಕಟ್ಟಿಸಿದ. ಈ ಊರನ್ನು ಅಭಿವೃದ್ಧಿಪಡಿಸಿ ಅದಕ್ಕೆ ಹೈದರ್‌ನಗರ ಎಂಬ ಹೆಸರಿಟ್ಟ. ಇವನ ಕಾಲದಲ್ಲಿ ಈ ಊರಿನಲ್ಲಿ ಹೇರಳವಾಗಿ ಮದ್ದುಗುಂಡು ತಯಾರಿಸಲಾಗುತ್ತಿತ್ತು. ಇಲ್ಲಿ ಟಂಕಸಾಲೆ ಸ್ಥಾಪಿತವಾಗಿ ಹೈದರಿ ಪಗೋಡಗಳು ಮುದ್ರಿತವಾಗುತ್ತಿದ್ದವು. ಮುಂದೆ ಟಿಪ್ಪುವಿನ ಕಾಲದಲ್ಲಿ ಬ್ರಿಟಿಷರು ಈ ಊರನ್ನು ಮುತ್ತಿದಾಗ ಅರಮನೆಯೂ ಸೇರಿ ಈ ಊರಿನ ಬಹುಭಾಗ ಸುಟ್ಟುಹೋಯಿತು. 1789 ರಿಂದೀಚೆಗೆ ಅದಕ್ಕೆ ನಗರ ಎಂಬ ಹೆಸರು ಬಂತು. ಆ ಕಾಲದಲ್ಲಿ ಶಿವಮೊಗ್ಗ ಕಡೂರು ಜಿಲ್ಲೆಗಳು ಸೇರಿದ್ದ ಫೌಜುದಾರಿಗೆ ನಗರ ಕೇಂದ್ರಸ್ಥಳವಾಗಿತ್ತು (1831ರ ಅನಂತರ ಇದಕ್ಕೆ ನಗರ್ ಡಿವಿಜನ್ ಎಂಬ ಹೆಸರು ಬಂತು. 1831-1881ರ ಮಧ್ಯೆ ಡಿವಿಜನ್ನುಗಳನ್ನು ತೆಗೆದುಹಾಕಲಾಯಿತು). 1830ರಲ್ಲಿ ಬಿದನೂರಿನಲ್ಲಿ ಮುಮ್ಮುಡಿ ಕೃಷ್ಣರಾಜ ಒಡೆಯರ ವಿರುದ್ಧ ದಂಗೆ ನಡೆಯಿತು. ದಂಗೆಯನ್ನೇನೋ ಅಡಗಿಸಲಾದರೂ ಇದರ ಪರಿಣಾಮದಿಂದ ಬಿದನೂರು ಮತ್ತೆ ಹೀನಸ್ಥಿತಿಗೆ ಬಂದಿತು. ಊರಿನಲ್ಲಿ ನಡೆಯುತ್ತಿದ್ದ ವ್ಯಾಪಾರ ಕುಂದಿತು. ಸ್ಟೋಕ್ಸ್ ಎಂಬುವನು 1838ರಲ್ಲಿ ಬಿದನೂರಿನ ಸ್ಥಿತಿಯನ್ನು ಈ ರೀತಿ ವರ್ಣಿಸಿದ್ದಾನೆ: ನಗರ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳು ಜನಸಂಖ್ಯೆಯಲ್ಲೂ ಮತ್ತು ಐಶ್ವರ್ಯದಲ್ಲೂ ಅವನತಿಯ ಸ್ಥಿತಿಗೆ ಬರುತ್ತಿವೆ. ಹೆಚ್ಚು ಕಡಿಮೆ ಈಗ ನಗರದ ವ್ಯಾಪಾರ ಸಂಪೂರ್ಣ ಕುಸಿದಿದೆ. ಆರ್ಥಿಕಾಭಿವೃದ್ಧಿಯ ದೃಷ್ಟಿಯಿಂದ ನಗರ ಅಷ್ಟು ಅನುಕೂಲ ಪರಿಸ್ಥಿತಿಯನ್ನು ಹೊಂದಿಲ್ಲ.

ಪಶ್ಚಿಮ ಘಟ್ಟಗಳ ಹೆದ್ದಾರಿಯನ್ನು ಉತ್ತಮಪಡಿಸಿದಾಗ ನಗರದ ಸ್ಥಿತಿ ಉತ್ತಮಗೊಳ್ಳುವಂತೆ ಕಂಡಿತು. ಆದರೆ 1893ರಲ್ಲಿ ತಾಲ್ಲೂಕಿನ ಕೇಂದ್ರವನ್ನು ಕಲ್ಲೂರು ಕಟ್ಟೆಗೆ (ಹೊಸನಗರ) ವರ್ಗಾಯಿಸಿದಾಗ ಬಿದನೂರು ಮತ್ತಷ್ಟು ಹೀನಸ್ಥಿತಿಗೆ ಬಂದಿತು.

ಬಿದನೂರರಸರ ಕಾಲದಲ್ಲಿ ಇಲ್ಲಿ ನಿರ್ಮಿತವಾದ ಕಟ್ಟಡಗಳಲ್ಲಿ ದೇವಗಂಗೆ ಎಂಬ ಹೆಸರಿನ ಕೊಳ ಆ ಅರಸರ ನಿಪುಣತೆಗೆ ಒಂದು

ಕುರುಹು. ಸುತ್ತ ಆವರಿಸಿರುವ ಬೆಟ್ಟಗಳಿಂದ ಹರಿದು ಬರುವ ಝರಿಯ ನೀರನ್ನು ತಡೆದು ನಿರ್ಮಿಸಿರುವ ಏಳು ಕೊಳಗಳು ಒಂದೊಂದೂ ಒಂದೊಂದು ಆಕೃತಿಯಲ್ಲಿದ್ದು ಆಕರ್ಷಣೀಯವಾಗಿವೆ. ಅದರಲ್ಲಿಯೂ ಕಮಲದಾಕೃತಿಯಲ್ಲಿ ಮತ್ತು ನಕ್ಷತ್ರದಾಕೃತಿಯಲ್ಲಿ ಕಲ್ಲಿನಲ್ಲಿ ಕೊರೆದಿರುವ ಎರಡು ಪುಟ್ಟ ಕೊಳಗಳು ವಿಶಿಷ್ಟವಾಗಿವೆ.

ಊರಿನಲ್ಲಿರುವ ನೀಲಕಂಠೇಶ್ವರ ದೇವಾಲಯ ಮಲೆನಾಡಿನ ವಾಸ್ತು ರೀತಿಗೆ ಮಾದರಿಯಾಗಿದೆ. ಗರ್ಭಗುಡಿ, ದೊಡ್ಡ ಸುಕನಾಸಿ ಮತ್ತು ವಿಶಾಲವಾದ ನವರಂಗಗಳಿರುವ ಇದರ ಗರ್ಭಗುಡಿಯ ಮೇಲಿನ ಗೋಪುರ ಮಾತ್ರ ಇಸ್ಲಾಮೀ ಶೈಲಿಯಲ್ಲಿ ಗೋಳಾಕಾರದಲ್ಲಿದೆ. ಗುಡ್ಡೆ ವೆಂಕಟರಮಣಸ್ವಾಮಿ ದೇವಾಲಯ ಇಕ್ಕೇರಿ ಶಿಲ್ಪ ಶೈಲಿಯಲ್ಲಿರುವ ಒಂದು ಸಣ್ಣ ಗುಡಿ. ಎತ್ತರವಾದ ಜಗತಿಯ ಮೇಲೆ ಗರ್ಭಗುಡಿ ಮುಖಮಂಟಪಗಳು ಮಾತ್ರವಿರುವ ಈ ಗುಡಿಯ ಹೊರ ಗೋಡೆಗಳು ಅಲ್ಲಲ್ಲಿ ಮೂರ್ತಿಶಿಲ್ಪದಿಂದ ಅಲಂಕೃತವಾಗಿವೆ. ಇದರ ಗರ್ಭಗೃಹದ ಬಾಗಿಲುವಾಡ ಮಾತ್ರ ಹೊಯ್ಸಳ ರೀತಿಯಲ್ಲಿದ್ದು ಬೇರೆ ಹಳೆಯ ದೇವಾಲಯವೊಂದರಿಂದ ತಂದು ಸೇರಿಸಿದ್ದಾಗಿದೆ. ಇದರ ಮುಂದೆ ತೂಗುಹಾಕಿರುವ ಬೃಹದಾಕಾರದ ಗಂಟೆಗಳು ಈ ಊರಿನ ಚರ್ಚೊಂದಕ್ಕೆ ಸೇರಿದುದ್ದಾಗಿದ್ದು ಅವುಗಳಲ್ಲಿ ಒಂದನ್ನು 1713ರಲ್ಲಿ ಆ್ಯಂಸ್ಟರ್‌ಡ್ಯಾಮ್‌ನಲ್ಲಿ ತಯಾರಿಸಿದಂತೆ ತಿಳಿದುಬರುತ್ತದೆ. ಇತ್ತೀಚೆಗೆ ಈ ಗಂಟೆಯನ್ನು ಶಿವಮೊಗ್ಗದ ವಸ್ತುಸಂಗ್ರಹಾಲಯದಲ್ಲಿ ಇಡಲಾಗಿದೆ. (ನೋಡಿ) ಕೆಳದಿರಾಜವಂಶ ವಾಸ್ತು ಶಿಲ್ಪ (ಎಂ.ಎಚ್., ಕೆ.ಎಸ್.ಎಸ್.)

**ನಗುವನಂದ :** ಕನ್ನಡದಲ್ಲಿ ಪ್ರಕಟವಾಗುತ್ತಿದ್ದ ಒಂದು ಪತ್ರಿಕೆ. ಹಾಸ್ಯರಸಪ್ರಧಾನ ನಿಯತಕಾಲಿಕೆಯೊಂದನ್ನು ತರಬೇಕೆಂದು ಸುಬೋಧ ರಾಮರಾಯರು ಈ ಹೆಸರಿನ ಮಾಸಪತ್ರಿಕೆಯನ್ನು ಜಿ.ಎಸ್. ಕೃಷ್ಣರಾಯರ ಸಂಪಾದಕತ್ವದಲ್ಲಿ ಬೆಂಗಳೂರಿನ ಸುಬೋಧ ಮುದ್ರಣಾಲಯದಿಂದ ಹೊರಡಿಸಿದರು. ಇದರ ಪ್ರಥಮ ಸಂಚಿಕೆ ಜನವರಿ 1933ರಲ್ಲಿ ಪ್ರಕಟವಾಯಿತು. ಜಿ.ಎಸ್. ಕೃಷ್ಣರಾಯರು ಕೆಲವು ವರ್ಷಗಳ ತರುವಾಯ ಪ್ರತ್ಯೇಕಗೊಂಡು ಇದನ್ನು ಸ್ವತಂತ್ರವಾಗಿ 1949ರ ವರೆಗೆ ಪ್ರಕಟಿಸಿದರು. ಅನಂತರ ರಂಗನಾಥರಾಯರ ಸಂಪಾದಕತ್ವದಲ್ಲಿ 1949 ರಿಂದ 1950ರ ವರೆಗೆ ಪ್ರಕಟಗೊಂಡಿತು. ಆರ್ಥಿಕ ಮುಗ್ಗಟ್ಟಿನಿಂದ ರಂಗಾನಾಥರಾಯರು ಪತ್ರಿಕೆಯನ್ನು ಇದು ಸುಬೋಧ ರಾಮರಾಯರಿಗೆ ಹಿಂದಿರುಗಿಸಿದರು. ಮತ್ತೆ 1950 ರಿಂದ 1963ರ ವರೆಗೆ ಪ್ರಹ್ಲಾದರಾಯರ ನೇತೃತ್ವದಲ್ಲಿ ಸುಬೋಧ ಪ್ರಕಟಣಾಲಯದಲ್ಲಿ ಪ್ರಕಟವಾಯಿತು.

1963ರಲ್ಲಿ ರಾಮರಾಯರು ಮತ್ತೆ ಜಿ. ಎಸ್. ಕೃಷ್ಣರಾಯರ ಜೀವನೋಪಾಯಕ್ಕೆಂದು ವಹಿಸಿಕೊಟ್ಟರು. ಕೃಷ್ಣರಾಯರು ಕೆಲವು ತಿಂಗಳುಗಳ ಕಾಲ ಪತ್ರಿಕೆಯನ್ನು ನಡೆಸಿ ತೀರಿಕೊಂಡರು. ಪತ್ರಿಕೆಯನ್ನು ರಂಗನಾಥರಾಯರಿಗೆ ಪುನಃ ವರ್ಗಾಯಿಸಲಾಯಿತು. ಅವರಿಂದ ಇದು ಒಂದೂವರೆ ವರ್ಷ ಪ್ರಕಟವಾಯಿತು. ಕೊನೆಗೆ ರಂಗನಾಥರಾಯರು ಪತ್ರಿಕೆಯನ್ನು ರಂಜನಾ ಪಬ್ಲಿಕೇಷನ್ಸ್ ಸಂಸ್ಥೆಗೆ ಮಾರಿದರು. ಇದು ದೀಪಾವಳಿಯ ಕಾಲದಲ್ಲಿ ಮಾತ್ರ ವಾರ್ಷಿಕವಾಗಿ ಪ್ರಕಟವಾಗುತ್ತಿದ್ದು 4 ವರ್ಷಗಳ ತರುವಾಯ ನಿಂತುಹೋಯಿತು.

ನಗುವ ನಂದಕ್ಕೆ 20 ವರ್ಷಗಳಿಗೂ ಹೆಚ್ಚು ಕಾಲ ಅಂಕಣಲೇಖಕರಾಗಿದ್ದವರು ವಿ.ಜಿ. ಕೃಷ್ಣಮೂರ್ತಿ. ಚಿತ್ರಕಾರರಾಗಿದ್ದವರು ರಾಘವೇಂದ್ರ. ಗೊರೂರು ರಾಮಸ್ವಾಮಿ ಅಯ್ಯಂಗಾರ್, ನಾ.ಕಸ್ತೂರಿ, ಜಿ. ಪುರುಷೋತ್ತಮರಾವ್, ಎಂ. ವಿ. ಪ್ರಭು, ಸುಪುತ್ರ ಸುಬೋಧ ಪ್ರಹ್ಲಾದರಾವ್, ಡಿ. ಕೆ. ಭಾರದ್ವಾಜ್, ವೈ.ಕೆ. ತಿಮ್ಮರಸಯ್ಯ, ನಾಡಿಗೇರ ಕೃಷ್ಣರಾವ್, ಹೊಯ್ಸಳ, ಬಿ.ಎಚ್. ಶ್ರೀಧರ, ಬಿಸ್ರಾ (ಬಿ.ಎಸ್. ರಾಮಚಾರ್), ಸೇವಿ ನಮಿರಾಜ ಮಲ್ಲ, ನವಗಿರಿನಂದ ಮೊದಲಾದವರು ಪತ್ರಿಕೆಯ ಲೇಖಕರ ಬರಹದಲ್ಲಿದ್ದರು. ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯ ಗೋಪಿ ಹಾಗೂ ಆನಂದವಿಗಡನ್ ಪತ್ರಿಕೆಯ ಸಿಂಹ ಇವರು ವ್ಯಂಗ್ಯ ಚಿತ್ರಗಳನ್ನು ನೀಡಿದ್ದಾರೆ.

ನಗುವ ನಂದ ಮಾಸಪತ್ರಿಕೆಯಾಗಿದ್ದಾಗ ಡಿಮ್ಮೆ 1/4 ಆಕಾರದಲ್ಲಿ ಬರುತ್ತಿತ್ತು. 1951ರಲ್ಲಿ ಇದು ವಾರಪತ್ರಿಕೆಯಾಗಿದ್ದಾಗ ಡಿಮ್ಮೆ 1/8 ಆಕಾರದಲ್ಲಿತ್ತು. ನಗೆಮಲ್ಲಿಗೆ, ಸಮಾಧಿಯ ಅಗ್ನಿಕುಂಡ, ಉಪ ಕಥಾವಳಿ ವಿಭಾಗಗಳು ಜನಪ್ರಿಯವಾಗಿದ್ದುವು. ಜಿ.ಎಸ್. ಕೃಷ್ಣರಾಯರು ಮಂಗಳೂರು ಬಾಸಲ್ ಮಿಷನ್ ಪ್ರೆಸ್‌ನಿಂದ ಪತ್ರಿಕೆಯನ್ನು ಹೊರಡಿಸುತ್ತಿದ್ದಾಗ (1938) ಇದರ ಪ್ರಸಾರ ಸಂಸ್ಥೆ 3,000, 1963ರಲ್ಲಿ ಇದು 6,800ಕ್ಕೆ ಏರಿತ್ತು. 'ಸಂತೋಷಂ ಜನಯೇತ್ ಪ್ರಾಜ್ಞಃ ತದೇವೇಶ್ವರ ಪೂಜನಂ' ಎಂಬುದು ಪತ್ರಿಕೆಯ ಧ್ಯೇಯವಾಕ್ಯವಾಗಿತ್ತು. *

**ನಗೆಯ ಮಾರಿತಂದೆ :** ಹನ್ನೆರಡನೆಯ ಶತಮಾನದಲ್ಲಿದ್ದ ಶಿವಶರಣ ಹಾಗೂ ವಚನಕಾರ. ಶಿವಭಕ್ತರನ್ನು ತನ್ನ ಮಾತಿನ ಬಗೆಯಿಂದ ನಗಿಸುವುದು ಈತನ ಕಾಯಕವಾಗಿತ್ತು. ಆತುರವೈರಿ ಮಾರೇಶ್ವರೆಂಬ ಅಂಕಿತದಿಂದ ವಚನಗಳನ್ನು ರಚಿಸಿದ್ದಾನೆ. ಇವನ 100 ವಚನಗಳು ದೊರಕಿವೆ. ಈ ವಚನಗಳು ಸಂಗ್ರಹವೂ ಹಿತಕರವೂ ಸವಿಯೂ ಆಗಿವೆ. ಮಾತಿನಲ್ಲಿ ಆತ್ಮಚಿಂತನೆ, ಜ್ಞಾನಪ್ರಭೆ ಕಂಡುಬರುತ್ತದೆ. ಶೈಲಿ ಸರಳವಾಗಿದ್ದು ವಚನಗಳಲ್ಲಿ ಬಳಸಿರುವ ಭಾವ, ಭಾಷೆ, ಉಪಮೆಗಳು ಸೊಗಸಾಗಿವೆ. ಸಾರವತ್ತಾಗಿವೆ. ನಡೆವ ಕಾಲು ಆನುವ ಕೈ ಬೇಡುವ ಬಾಯಿ ಸರ್ವವ ಕೂಡುವ ಮನವುಡುಗಿ ಘನಲಿಂಗದಲ್ಲಿ ತಲ್ಲೀನವಾದವನಂಗ ಮರುಳ ಕಂಡ ಕನಸಿನಂತೆ ಮೂಗನ ಕಾವ್ಯದಂತೆ ಜಲ ಲಿಪಿಯಂತೆ ಉರಿಯ ಧೂಮದಂತೆ ಇದಾರಿಗೂ ಅಸಾಧ್ಯ ಆತುರವೈರಿ ಮಾರೇಶ್ವರ - ಎಂಬ ವಚನ ಭಕ್ತನ ಮೈಮನ ಭಗವಂತನಲ್ಲಿ ಲೀನವಾದಾಗ ಆ ಅನುಭವ ಎಂಥದ್ದು ಎಂಬುದನ್ನು ಮಾತಿನಲ್ಲಿ ವರ್ಣಿಸಿ ಹೇಳಲು ಸಾಧ್ಯವಿಲ್ಲ ಎಂಬುದನ್ನೂ ಆ ಅನುಭವದ ಅತ್ಯುಚ್ಚ ಸ್ಥಿತಿಯನ್ನೂ ಸುಂದರವಾಗಿ ನಿರೂಪಿಸುತ್ತದೆ. (ಓ.ಎನ್.ಎಲ್.)

**ನದೀ ವ್ಯವಸ್ಥೆ ಮತ್ತು ಜಲಸಂಪತ್ತು :** ನೈಋತ್ಯ ಮತ್ತು ಈಶಾನ್ಯ ಮಾರುತಗಳಿಂದ ಒದಗುವ ಮಳೆ ಕರ್ನಾಟಕದ ಜಲಸಂಪತ್ತಿನ ಮೂಲಾಧಾರ. ಆ ನೀರು ದೊಡ್ಡ ನದಿಗಳಾದ ಕೃಷ್ಣಾ, ತುಂಗಭದ್ರಾ ಮತ್ತು ಕಾವೇರಿ ಕಣಿವೆಗಳ ವಿಶಾಲ ಪ್ರದೇಶದಲ್ಲಿ ಹರಿಯುವುದರಿಂದ ಕರ್ನಾಟಕದ ಜಲಸಂಪತ್ತು ಶ್ರೀಮಂತವಾಗಿದೆ. ಈ ನದಿಗಳು ರಾಜ್ಯವನ್ನು ಕ್ರಮವಾಗಿ ಉತ್ತರ ಮಧ್ಯ ಹಾಗೂ ದಕ್ಷಿಣದ ಪ್ರಮುಖ ಜಲಾನಯನದ ಪ್ರದೇಶಗಳಾಗಿ ವಿಭಾಗಿಸುತ್ತವೆಯಾದರೂ ಕರ್ನಾಟಕ ರಾಜ್ಯದ ಒಟ್ಟು ಪ್ರದೇಶವನ್ನು ನೀರೋಟದ ದೃಷ್ಟಿಯಿಂದ ಐದು ಭಾಗಗಳಾಗಿ ವಿಂಗಡಿಸಬಹುದು. ಪಶ್ಚಿಮ ಘಟ್ಟ ಶ್ರೇಣಿಯಿಂದ ಪಶ್ಚಿಮಾಭಿಮುಖವಾಗಿ ಅರಬ್ಬೀ ಸಮುದ್ರಕ್ಕೆ ಹರಿಯುವ ನದಿಗಳ ಜಲಾನಯನ, ಪಶ್ಚಿಮ ಘಟ್ಟ ಶ್ರೇಣಿಯ ಪೂರ್ವದ ಬಯಲುನಾಡಿನಲ್ಲಿ ಉತ್ತರಕ್ಕೆ ಕೃಷ್ಣಾನದಿ ಮತ್ತು ಅದರ ಉಪನದಿಗಳ ಜಲಾನಯನ, ಮತ್ತು ದಕ್ಷಿಣಕ್ಕೆ ಕಾವೇರಿ ಹಾಗೂ ಅದರ ಉಪನದಿಗಳ ಜಲಾನಯನ ಉತ್ತರದ ತುದಿಯಲ್ಲಿ ಗೋದಾವರಿಯ ಉಪನದಿ ಮಾಂಜರಾ ಜಲಾನಯನ ಮತ್ತು ನೈಋತ್ಯಕ್ಕೆ ನಂದಿದುರ್ಗದಿಂದ ಉಗಮಿಸುವ ಸ್ವತಂತ್ರ ನದಿಗಳಾದ ಪಾಲಾರ್ ಮತ್ತು ಪೆನ್ನಾರ್‌ಗಳ ಜಲಾನಯನ ಪ್ರದೇಶಗಳು.

**1. ಪಶ್ಚಿಮಕ್ಕೆ ಹರಿಯುವ ನದಿಗಳ ಜಲಾನಯನ :** ಪಶ್ಚಿಮ ಘಟ್ಟಗಳಲ್ಲಿ ಹುಟ್ಟಿ, ಅಲ್ಲಿಂದ ಪಶ್ಚಿಮ ದಿಕ್ಕಿಗೇ ಹರಿದು ಅರಬ್ಬೀ ಸಮುದ್ರವನ್ನು ಸೇರುವ ಉಪನದಿ, ಹೊಳೆ, ಹಳ್ಳಗಳು ಹಲವಾರು. ಮಳೆಗಾಲದಲ್ಲಿ ಇವೆಲ್ಲ ಪ್ರವಾಹ ಪೂರಿತವಾಗಿರುತ್ತವೆ. ಇವುಗಳಲ್ಲಿ ಅತ್ಯಂತ ಉದ್ದವಾದುದು 161 ಕಿಮೀ ಇರುವ ಕಾಳಿ ನದಿ. ಎರಡನೆಯದು 132 ಕಿಮೀ ಉದ್ದದ ಶರಾವತಿ. ಉಳಿದ ಕೆಲವು ಮುಖ್ಯವಾದವೆಂದರೆ: ಅಘನಾಶಿನಿ (121 ಕಿಮೀ), ನೇತ್ರಾವತಿ (96 ಕಿಮೀ), ತಟ್ಟೆಹಳ್ಳ (90 ಕಿಮೀ), ಸೀತಾನದಿ (80 ಕಿಮೀ), ಕುಮಾರಾಧಾರಾ (74 ಕಿಮೀ), ಗಂಗೊಳ್ಳಿ ನದಿ (72 ಕಿಮೀ) ಮತ್ತು ಚಕ್ರನದಿ (72 ಕಿಮೀ) ಇನ್ನೂ ಹೆಸರಿಸಬಹುದಾದ ಹಲವು: ಗೌರಿ ಹೊಳೆ, ಗುರುಪುರ, ಸ್ವರ್ಣ, ವಾರಾಹಿ, ಕುಬ್ಜ, ಹರಿದ್ರಾವತಿ, ಸೋಮ, ಗೋವಿಂದ, ಬೆಣ್ಣೆಹೊಳೆ, ಅತ್ತಿವೇರಿ, ಬೇಡ್ತಿ, ಬರಪೊಳೆ, ಮಹಾದಾಯಿ, ಡೊಂಕನಾಲಾ, ಪಂಡ್ರಿ ನದಿ, ಇಂಥವು

ಒಟ್ಟು 57 ನದಿಗಳೆಂದು ಗುರುತಿಸಲಾಗಿದೆ. ಶಿವಮೊಗ್ಗ ಜಿಲ್ಲೆಯಲ್ಲಿ ಹುಟ್ಟಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಹರಿದು ಸಮುದ್ರ ಸೇರುವ ಶರಾವತಿ ನದಿ ಜಲವಿದ್ಯುತ್ ಯೋಜನೆಗೆ ಪ್ರಸಿದ್ಧವಾಗಿದೆ. ಇದಕ್ಕೆ ಅಡ್ಡಲಾಗಿ ಲಿಂಗನಮಕ್ಕಿ ಜಲಾಶಯವನ್ನು ನಿರ್ಮಿಸಲಾಗಿದೆ. ಕಾಳಿನದಿಯು ಉತ್ತರ ಕನ್ನಡ ಜಿಲ್ಲೆಯಲ್ಲಿ ಹುಟ್ಟಿ ಪಶ್ಚಿಮದತ್ತ ಹರಿದು ಸಮುದ್ರ ಸೇರುತ್ತದೆ. ಇದಕ್ಕೆ ಸುಪ ಬಳಿ ಬೃಹತ್ ಜಲಾಶಯ ನಿರ್ಮಿತವಾಗಿದೆ. ಇದನ್ನು ಜಲವಿದ್ಯುತ್ ಉತ್ಪಾದನೆಗಾಗಿ ಹೆಚ್ಚಾಗಿ ಬಳಸಲಾಗುತ್ತದೆ.

ಈ ಎಲ್ಲ ನದಿಗಳ ಜಲಾನಯನ ಪ್ರದೇಶ ನಾಲೆಗಳಿಂದ ನೀರಾವರಿ ಮಾಡಲು ತಕ್ಕದಾಗಿಲ್ಲ. ಈ ಪ್ರದೇಶದ ವ್ಯವಸಾಯಯೋಗ್ಯ ಭೂಮಿ 12.34 ಲಕ್ಷ ಹೆಕ್ಟೇರುಗಳು. ಇದರಲ್ಲಿ 1.76 ಲಕ್ಷ ಹೆಕ್ಟೇರ್ ಮಾತ್ರ ನೀರಾವರಿಗೊಳಪಟ್ಟಿದೆ. ಈ ಎಲ್ಲ ನದಿಗಳ ಉಪಯುಕ್ತತೆ ಇರುವುದು ಅವುಗಳಿಂದ ಉತ್ಪಾದಿಸಬಹುದಾದ ವಿದ್ಯುಚ್ಛಕ್ತಿಯ ಪ್ರಮಾಣದಲ್ಲಿ, ಇವುಗಳಲ್ಲಿ ಕೆಲವನ್ನಾದರೂ ಪೂರ್ವಕ್ಕೆ ತಿರುಗಿಸಿ ನೀರಾವರಿಗೆ ಉಪಯೋಗಿಸುವ ಸಾಧ್ಯತೆಯ ಬಗ್ಗೆ ಪರಿಶೀಲನೆಗಳಾಗುತ್ತಿವೆ. ಈ ಎಲ್ಲ ನದಿಗಳ ಒಟ್ಟು ಜಲಸಂಪತ್ತಿನ ಅಂದಾಜು ಸರಾಸರಿ 38 ಶತಕೋಟಿ ಘನಮೀಟರ್.

ಇಡೀ ದಕ್ಷಿಣ ಕನ್ನಡ ಜಿಲ್ಲೆ, ಉಡುಪಿ ಜಿಲ್ಲೆ ಉತ್ತರ ಕನ್ನಡ ಜಿಲ್ಲೆಯ ಸೇ. 93.8, ಕೊಡಗು ಸೇ. 36.6, ಶಿವಮೊಗ್ಗದ ಸೇ. 25.6, ಬೆಳಗಾಂವಿ, ಹಾಸನ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಸೇ. 10ಕ್ಕಿಂತ ಕಡಿಮೆ ಪ್ರದೇಶ - ಒಟ್ಟಿನಲ್ಲಿ ರಾಜ್ಯದ ಸೇ. 13.68 ಪ್ರದೇಶ ಎಂದರೆ 26.214 ಚ.ಕಿಮೀ. ಈ ಜಲಾನಯನ ಪ್ರದೇಶಕ್ಕೆ ಸೇರಿರುತ್ತದೆ.

**2.ಕೃಷ್ಣಾ ಜಲಾನಯನ :** ಇದರ ವಿಸ್ತಾರ 1,13.271 ಚಕಿಮೀಗಳಾಗಿದ್ದು ರಾಜ್ಯದ ವಿಸ್ತೀರ್ಣದ ಸೇ. 59 ಭಾಗ ಇದರಲ್ಲಿದೆ. ಬಳ್ಳಾರಿ, ಬಿಜಾಪುರ, ಚಿತ್ರದುರ್ಗ, ಗುಲ್ಬರ್ಗ ಹಾಗೂ ರಾಯಚೂರು ಜಿಲ್ಲೆಗಳು ಪೂರ್ತಿಯಾಗಿಯೂ ಬೆಳಗಾಂವಿ, ಧಾರವಾಡ, ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಗಳ ಸುಮಾರು ಸೇ. 75ರಿಂದ 90ರ ವರೆಗೂ ತುಮಕೂರು, ಹಾಸನ, ಬಿದರೆ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಸೇ. 6ರಿಂದ 38ರ ವರೆಗೂ ಈ ಜಲಾನಯನದಲ್ಲಿ ಬರುತ್ತವೆ.

ಮುಖ್ಯವಾದ ನದಿ ಮತ್ತು ಉಪನದಿಗಳ ಹೆಸರಿನಲ್ಲಿ 6 ಉಪಜಲಾನಯನಗಳನ್ನು ಈ ಕಣಿವೆಯಲ್ಲಿ ಗುರುತಿಸಲಾಗಿದೆ. ಅವೆಂದರೆ: ಕೃಷ್ಣಾ, ಭೀಮಾ, ಮಲಪ್ರಭಾ, ಘಟಪ್ರಭಾ, ತುಂಗಭದ್ರಾ ಮತ್ತು ವೇದಾವತಿ. ಕೃಷ್ಣಾ ಉಪಜಲಾನಯನದಲ್ಲಿ ವೇದಗಂಗಾ, ದೂದಗಂಗಾ, ಅಗರಣಿ, ಡೋಣಿ ಮುಂತಾದ 23 ಉಪಕಣಿವೆಗಳೂ ಭೀಮಾ ಜಲಾನಯನದಲ್ಲಿ ಅಮರಜ ಮುಂತಾದ 22 ಉಪಕಣಿವೆಗಳೂ ಘಟಪ್ರಭಾದಲ್ಲಿ ಮಾರ್ಕಂಡೇಯ, ಹಿರಣ್ಯಕೇಶಿ, ತಾಮ್ರಪರ್ಣಿ ಮುಂತಾದ 8 ಉಪಕಣಿವೆಗಳೂ ಮಲಪ್ರಭಾದಲ್ಲಿ ಬೆಣ್ಣೆ ಹಳ್ಳವೂ ಸೇರಿ 22 ಮುಖ್ಯ ಹಳ್ಳಗಳೂ ಅತಿ ದೊಡ್ಡ ಉಪಜಲಾನಯನವಾದ ತುಂಗಭದ್ರಾದಲ್ಲಿ ತುಂಗಾ, ಭದ್ರಾ, ಮಾಲತಿ ಹೊಳೆ,ಹೈಹೋಳೆ, ಸೋಮವಾಹಿನಿ, ಹರಿದ್ರ, ಜಂಬದಹಳ್ಳ, ಕನಕನಾಲಾ, ಸಿಂಧೂರ ನದಿ, ದಂಡಾವತಿ, ವರದಾ, ಧರ್ಮಾ, ಕುಮುದ್ವತಿ, ಮಾವಿನಹೊಳೆ, ಹಾವೇರಿಹಳ್ಳ ಮುಂತಾದ 56 ಉಪಕಣಿವೆಗಳೂ ವೇದಾವತಿ ಉಪಜಲಾನಯನದಲ್ಲಿ ಹಗರಿ, ಚಿಕ್ಕಹಗರಿ, ಚಿನ್ನಹಗರಿ, ಕೆರೆತೊರೆ, ಸುವರ್ಣಮುಖಿ ಮುಂತಾದ 14 ಉಪಕಣಿವೆಗಳೂ ಇವೆ. ಘಟಪ್ರಭಾ ಭೀಮಾನದಿಗಳು ಮಹಾರಾಷ್ಟ್ರದಲ್ಲಿ ಹುಟ್ಟಿ ಕರ್ನಾಟಕದಲ್ಲಿ ಕೃಷ್ಣೆಯನ್ನು ಸೇರಿದರೆ, ತುಂಗಭದ್ರಾ ಕರ್ನಾಟಕದಲ್ಲಿ ಹುಟ್ಟಿ ಕರ್ನಾಟಕದಲ್ಲಿ ಹುಟ್ಟಿ, ಆಂಧ್ರ ಪ್ರದೇಶದಲ್ಲಿ ಸ್ವಲ್ಪ ದೂರ ಹರಿದು ಮತ್ತೆ ಆಂಧ್ರ ಪ್ರದೇಶದಲ್ಲಿ ಮುಖ್ಯನದಿಯನ್ನು ಸೇರುತ್ತದೆ. ವೇದಾವತಿಯೂ ಕರ್ನಾಟಕದಲ್ಲಿ ತುಂಗಭದ್ರೆಯನ್ನು ಕೂಡುತ್ತದೆ.

ಈ ಜಲಾನಯನದ ಪಶ್ಚಿಮ ಘಟ್ಟಗಳಲ್ಲಿ ನೈಋತ್ಯ ಮಾರುತಗಳಿಂದಲೇ ವರ್ಷದ ಸೇ. 73ರಷ್ಟು ಎಂದರೆ 1200 ಮಿಮೀಗಳೂ ಹೆಚ್ಚು ಮಳೆಯಾಗುತ್ತಿದ್ದು ಘಟ್ಟಗಳ ಪೂರ್ವಕ್ಕಿರುವ ವಿಶಾಲ ಪ್ರದೇಶದಲ್ಲಿ 400ರಿಂದ 500 ಮಿಮೀ ನಷ್ಟು ಕಡಿಮೆ ಮಳೆಯಾಗುತ್ತ, ಅದರಲ್ಲೂ ವ್ಯತ್ಯಾಸ ಅನಿಶ್ಚಯತೆಗಳಿದ್ದು ಆಗಾಗ್ಗೆ ಅಭಾವ ಪರಿಸ್ಥಿತಿಯನ್ನೆದುರಿಸಬೇಕಾಗಿರುತ್ತದೆ. ಈ ಜಲಾನಯನದಲ್ಲಿನ ವ್ಯವಸಾಯ ಯೋಗ್ಯ ಭೂಮಿ 92.7 ಲಕ್ಷ ಹೆಕ್ಟೇರುಗಳು. ಇದರಲ್ಲಿ 73.1 ಲಕ್ಷ ಹೆಕ್ಟೇರು (71-72) ಸಾಗುವಳಿಯಾಗುತ್ತಿದ್ದು, 7.4 ಲಕ್ಷ ಹೆಕ್ಟೇರುಗಳು ಮಾತ್ರ ನೀರಾವರಿಗೆ ಒಳಪಟ್ಟಿದೆ.

ಕೃಷ್ಣಾನದಿ 1.93 ಶತಕೋಟಿ ಘನ ಮೀಟರ್ ನೀರನ್ನೂ ಘಟಪ್ರಭಾ, ಮಲಪ್ರಭಾ, ತುಂಗಭದ್ರಾ (ವೇದಾವತಿಯೂ ಸೇರಿ) ಮತ್ತು ಭೀಮಾ ನದಿಗಳು ಕ್ರಮವಾಗಿ 1.79, 2.78, 18.58 ಮತ್ತು 2.41 ಶತಕೋಟಿ ಘನ ಮೀಟರ್ ನೀರನ್ನೂ ತಂದು ಒಟ್ಟು ಸರಾಸರಿ 27.49 ಶತಕೋಟಿ ಘನ ಮೀಟರ್ ನೀರನ್ನು ಒದಗಿಸುತ್ತವೆಂಬುದು ಅಂದಾಜು. ಇವಲ್ಲದೆ ಹಲವಾರು ಸಣ್ಣ ನೀರಾವರಿ ಕಾಮಗಾರಿಗಳಿಂದಾಗಿ ಸು. 2.80 ಶತಕೋಟಿ ಘನ ಮೀಟರ್ ನೀರು ಬಳಸಲ್ಪಡುತ್ತಿದೆಯೆಂದೂ ತಿಳಿಯಲಾಗಿದೆ. ರಾಜ್ಯ ಸರ್ಕಾರ ಕೃಷ್ಣಾ ಜಲಾನಯನ ಪ್ರದೇಶದಿಂದ ಒಟ್ಟು 1,156 ಟಿ.ಎಂ.ಸಿ. ನೀರನ್ನು ನೀರಾವರಿಗೆ ಬಳಸುವ ಸಮಗ್ರ ಯೋಜನೆಯನ್ನು ರೂಪಿಸಿದೆ. ಕೃಷ್ಣಾ ಮತ್ತು ಅದರ ಉಪನದಿಗಳಿಗೆ ಅಡ್ಡಲಾಗಿ ಕೃಷ್ಣಾ ಮೇಲ್ದಂಡೆ ಜಲಾಶಯ. ಆಲಮಟ್ಟಿ ಜಲಾಶಯ, ಭದ್ರಾ ಜಲಾಶಯ, ತುಂಗಭದ್ರಾ ಜಲಾಶಯ ಮೊದಲಾದ ಪ್ರಮುಖ ನೀರಾವರಿಯೊಜನೆ ಜಲಾಶಯಗಳನ್ನು ನಿರ್ಮಿಸಲಾಗಿದೆ.

**3. ಕಾವೇರಿ ಜಲಾನಯನ :** ಇದರ ವಿಸ್ತಾರ 34,273 ಚಕಿಮೀಗಳಿದ್ದು ರಾಜ್ಯದ ಒಟ್ಟು ಸೇ. 17.87 ಪ್ರದೇಶವನ್ನು ಒಳಗೊಂಡಿದೆ. ಮೈಸೂರು ಮತ್ತು ಮಂಡ್ಯ ಜಿಲ್ಲೆಗಳು ಪೂರ್ತಿಯಾಗಿ, ಹಾಸನ ಜಿಲ್ಲೆಯ ಸೇ. 73.5 ಕೊಡಗು ಮತ್ತು ಬೆಂಗಳೂರು ಜಿಲ್ಲೆಗಳ ಸರಾಸರಿ ಸೇ. 65, ತುಮಕೂರು ಜಿಲ್ಲೆಯ ಸೇ. 35.4 ಮತ್ತು ಚಿಕ್ಕಮಗಳೂರು ಜಿಲ್ಲೆಯ ಸೇ. 8.4 ಭಾಗ ಈ ಜಲಾನಯನದಲ್ಲಿವೆ.

ಕಾವೇರಿ ಕಣಿವೆಯ ಮುಖ್ಯ ಉಪಜಲಾನಯನಗಳು ಐದು. ಅವು ಕಾವೇರಿ, ಹೇಮಾವತಿ, ಕಪಿಲಾ, ಶಿಂಷಾ ಮತ್ತು ಅರ್ಕಾವತಿ, ಕಾವೇರಿ, ಹಾರಂಗಿ, ರಾಮತೀರ್ಥ, ಲಕ್ಷ್ಮಣತೀರ್ಥ, ಮಜ್ಜಿಗೆಹೊಳೆ, ಮೊಸರುಹಳ್ಳ, ಲೋಕಪಾವನಿ, ಸುವರ್ಣಾವತಿ, ಎಣ್ಣೆಹೊಳೆ, ಹಂದಿಹಳ್ಳ, ಉಡುತೊರೆಹಳ್ಳ, ಪಾಲಾರ್ ಮುಂತಾದ 52 ಉಪ ಕಣಿವೆಗಳೂ ಸೇರಿ ಕಾವೇರಿ ಉಪಜಲಾನಯನ; ಹೇಮಾವತಿ ಉಪಜಲಾನಯನದಲ್ಲಿ ಹೇಮಾವತಿ, ಬಕ್ಕಿ ಹಳ್ಳ, ಕಡದಾಳು ಹಳ್ಳ, ಜಯಪಾರ್ವತಿ, ಐಗೂರು ಹಳ್ಳ, ಉಚ್ಚಂಗಿಹೊಳೆ, ಯಗಚಿ, ಸಗರಿಹಳ್ಳ ಮುಂತಾದ 11 ಉಪಕಣಿವೆಗಳು; ಕಪಿಲಾ ಉಪಜಲಾನಯನದಲ್ಲಿ ಕಪಿಲಾ, ನಾಗರಹೊಳೆ, ಸಾರತ್ ಹೊಳೆ, ತಾರಕ, ನುಗು ಮುಂತಾದ 17 ಉಪಕಣಿವೆಗಳು; ಶಿಂಷಾ ಉಪಜಲಾನಯನದಲ್ಲಿ ಶಿಂಷಾ, ಕಣ್ವ, ವೀರವೈಷ್ಣವಿ, ನಾಗಿನಿ, ಭಾರ್ಗವತಿ, ಹುಲುಹಳ್ಳ, ಹೆಬ್ಬಳ್ಳ, ಕಾನಿಹಳ್ಳ, ಚಿಕ್ಕತೊರೆ ಮುಂತಾದ 13 ಉಪಕಣಿವೆಗಳೂ ಅರ್ಕಾವತಿ ಉಪಜಲಾನಯನದಲ್ಲಿ ಅರ್ಕಾವತಿ, ವೃಷಭಾವತಿ, ಕುಮುದ್ವತಿ, ಸುವರ್ಣಮುಖಿ, ಕುನಂದವತಿ, ಮಡಿವಾಳಹೊಳೆ, ಮಾರಿಹಳ್ಳ ಮುಂತಾದ 9 ಉಪಕಣಿವೆಗಳು - ಹೀಗೆ ಇವನ್ನು ವಿಂಗಡಿಸಬಹುದು.

ಕಾವೇರಿ ಜಲಾನಯದ ಸರಾಸರಿ ಮಳೆ ವರ್ಷಕ್ಕೆ 1,400 ಮಿಮೀ, ಇದರ ಒಟ್ಟು ವಿಸ್ತೀರ್ಣದ ಸೇ. 15.8 ರಷ್ಟು ಕೊಡಗು, ಹಾಸನ, ಚಿಕ್ಕಮಗಳೂರು ಮತ್ತು ಮೈಸೂರು ಜಿಲ್ಲೆಗಳಲ್ಲಿನ ಕಾಡುಪ್ರದೇಶವೇ ಆಗಿದೆ. ವ್ಯವಸಾಯ ಯೋಗ್ಯವಾದ 24.5 ಲಕ್ಷ ಹೆಕ್ಟೇರುಗಳಲ್ಲಿ ಬಹುತೇಕ ಸಾಗುವಳಿಯಾಗಿದ್ದು, 2000ದ ಮಾರ್ಚ್‌ವರೆಗೂ 3 ಲಕ್ಷ ಹೆಕ್ಟೇರುಗಳಲ್ಲಿ ನೀರಾವರಿಯಾಗುತ್ತದೆ. 2,500 ಮಿಮೀ ಮಳೆಯಾಗುವ ಘಟ್ಟಪ್ರದೇಶಗಳಲ್ಲಿ ದಟ್ಟವಾದ ಕಾಡುಗಳ ನಡುವೆ ಕಾಫಿ, ಏಲಕ್ಕಿ, ಮೆಣಸು, ಅಡಕೆ, ಕಿತ್ತಳೆ ಬೆಳೆಯುವ ಎಸ್ಟೇಟುಗಳಿದ್ದು, ತಗ್ಗು ಪ್ರದೇಶಗಳಲ್ಲಿ ಮಳೆಯ ಆಶ್ರಯದಿಂದಲೇ ಒಂದು ಬತ್ತದ ಬೆಳೆಯನ್ನು ತೆಗೆಯುತ್ತಾರೆ. ಉಳಿದ ಹಾಸನ, ತುಮಕೂರು, ಬೆಂಗಳೂರು ಜಿಲ್ಲೆಗಳ ಭಾಗಗಳೂ ಹಾಗೂ

ಮಂಡ್ಯ ಜಿಲ್ಲೆ 600 ರಿಂದ 750 ಮಿಮೀ ಮಳೆ ಬೀಳುವ ಪ್ರದೇಶವಾಗಿದ್ದು ಆಗಾಗ್ಗೆ ಅಭಾವಕ್ಕೊಳಪಡುತ್ತವೆ.

ಕೇಂದ್ರ ಸರ್ಕಾರ ನೇಮಿಸಿದ್ದ ಕಾವೇರಿ ಅಂಕಿ ಅಂಶಗಳ ಸಂಗ್ರಹಣ ಸಮಿತಿ ರಾಜ್ಯದಲ್ಲಿ ಈ ನದಿಯ ಜಲಸಂಪತ್ತು ಸು. 11 ಶತಕೋಟಿ ಘನ ಮೀಟರ್ ಎಂದು ಗೊತ್ತು ಮಾಡಿದೆ. ಆದರೆ ರಾಜ್ಯದ ಎಂಜಿನಿಯರುಗಳ ಅಂದಾಜು ಇನ್ನೂ ಹೆಚ್ಚಿನದಿದೆ. ಹೇಮಾವತಿ (ಅಕ್ಕಿಹೆಬ್ಬಾಳಿನ ಬಳಿ) 2.92, ಲಕ್ಷ್ಮಣತೀರ್ಥ (ಮುಂಡುವಾಡಿಯಬಳಿ) 0.54 ಕಾವೇರಿ (ಕೃಷ್ಣಾರಾಜಸಾಗರದ ಬಳಿ) 6.71, ಕಪಿಲಾ (ಹುಲ್ಲಹಳ್ಳಿಯ ಬಳಿ) 3.48, ಸುವರ್ಣಾವತಿ 0.31, ಶಿಂಷಾ 1.19, ಅರ್ಕಾವತಿ 0.48, ಉಡುತೊರೆ ಹಳ್ಳ 0.119, ಪಾಲಾರ್ 0.25 ಮತ್ತು ಕಾವೇರಿ ಕಪಿಲಾಗಳ ಉಳಿದ ಭಾಗಗಳಿಂದ 0.99 ಹೀಗೆ ಒಟ್ಟು 17 ಶತಕೋಟಿ ಘನ ಮೀಟರ್ ಈ ನದಿಯಿಂದ ಒದಗುವುದೆಂದು ಅಂದಾಜು ಮಾಡಲಾಗಿದೆ. 2000ದ ಮಾರ್ಚ್‌ವರೆಗೆ 392.87 ಟಿ.ಎಂ.ಸಿ. ನೀರನ್ನು ನೀರಾವರಿಗಾಗಿ ಬಳಸಲಾಗಿದೆ. ಹೇಮಾವತಿ ಜಲಾಶಯ, ಕೃಷ್ಣರಾಜ ಸಾಗರ ಹಾರಂಗಿ ಜಲಾಶಯ, ಕಬಿನಿ ಜಲಾಶಯ - ಇವು ಈ ಪ್ರದೇಶದ ಪ್ರಮುಖ ನೀರಾವರಿ ಯೋಜನೆಗಳಾಗಿವೆ.

**4. ಗೋದಾವರಿ ಜಲಾನಯನ್ನು:** ಉತ್ತರದ ಬೀದರ್ ಜಿಲ್ಲೆಯ ಸೇ. 82 ಭೂ ವಿಸ್ತಾರ ಎಂದರೆ 4,405 ಚಕಿಮೀ (ರಾಜ್ಯದ ಸೇ. 2.3) ಗೋದಾವರಿಯ ಉಪನದಿಯಾದ ಮಾಂಜರಾ ನದಿಯ ಜಲಾನಯನ ಪ್ರದೇಶವಾಗಿದೆ. ಈ ಭಾಗದಲ್ಲಿ ಮಾಂಜರಾ ಮತ್ತು ಕಾರಂಜಿ ನದಿಗಳಲ್ಲದೆ ಮಧುರನಾಲಾ, ದೇವನಾಲಾ, ಚುಳಕಿ ನಾಲಾ, ಹೆಬ್ಬಾಳ್ ನದಿ, ಚಟಗುಪ್ಪ ನಾಲಾ ಮುಂತಾದವುಗಳ ಒಟ್ಟು 14 ಉಪಕಣಿವೆಗಳು ಇದರಲ್ಲಿ ಸೇರಿವೆ. ಈ ಪ್ರದೇಶದ ಸರಾಸರಿ ಮಳೆ 750ರಿಂದ 1,000 ಮಿಮೀ ವರೆಗೆ ಇದ್ದು, ಕೆಲವು ಕೆರೆಗಳು ಮತ್ತು ಬಾವಿಗಳಿಂದ ಮಾತ್ರ ನೀರಾವರಿ ಸಾಧ್ಯವಾಗಿರುತ್ತದೆ. ವ್ಯವಸಾಯ ಯೋಗ್ಯವಾದ 4 ಲಕ್ಷ ಹೆಕ್ಟೇರುಗಳಲ್ಲಿ 2.72 ಲಕ್ಷ ಹೆಕ್ಟೇರುಗಳು ಮಾತ್ರ ಸಾಗುವಳಿಯಾಗಿ ಕೇವಲ 0.20 ಲಕ್ಷ ಹೆಕ್ಟೇರ್ ನೀರಾವರಿಯಾಗಿರುತ್ತದೆ. ಹಿಂದುಳಿದ ಪ್ರದೇಶವಾದ ಇದರ ಅಭಿವೃದ್ಧಿಯಾಗಬೇಕಾದರೆ ಮಾಂಜರಾ ನದಿಯ ನೀರಿನ ಬಳಕೆಯಿಂದ ಮಾತ್ರ. ಇದರಲ್ಲಿ 1.45 ಶತಕೋಟಿ ಮೀಟರ್ ನೀರು ಒದಗುವುದು ಎಂದು ಅಂದಾಜು ಮಾಡಲ್ಪಟ್ಟಿದೆ. ಅಂತಾರರಾಜ್ಯ ನದಿಯಾದ ಗೋದಾವರಿಯ ನೀರಿನ ಹಂಚಿಕೆ ವಿವಾದದಲ್ಲಿದ್ದು, ಆಂಧ್ರ ಮತ್ತು ಕರ್ನಾಟಕಗಳ ನಡುವೆ ಆಗಿರುವ ಒಂದು ತಾತ್ಕಾಲಿಕ ಒಪ್ಪಂದದಂತೆ 0.348 ಶತಕೋಟಿ ಘನ ಮೀಟರ್ ಬಳಸಿ 0.42 ಲಕ್ಷ ಹೆಕ್ಟೇರ್ ಜಮೀನಿಗೆ ನೀರೊದಗಿಸಬಲ್ಲ ಕಾರಂಜ ಯೋಜನೆಯನ್ನು ಪ್ರಾರಂಭಿಸಲಾಗಿದೆ. ಈ ಜಲಾನಯನ ಪ್ರದೇಶದಲ್ಲಿ 2000ದ ಮಾರ್ಚ್‌ರರೆಗೆ 22.37 ಟಿ.ಎಂ.ಸಿ. ನೀರನ್ನು ನೀರಾವರಿಗಾಗಿ ಬಳಸಲಾಗಿದೆ. ಮಂಜ್ರಾ ಮತ್ತು ಕಾರಂಜ ಯೋಜನೆಗಳು ಪ್ರಮುಖವಾದವು.

5. ಪಾಲಾರ್ ಮತ್ತು ಪೆನ್ನಾರ್‌ಗಳ ಜಲಾನಯನ ರಾಜ್ಯ ವಿಸ್ತೀರ್ಣದ ಸೇ. 7.09 ರಷ್ಟು ಎಂದರೆ 13,610 ಚಕಿಮೀ ಪ್ರದೇಶ ಈ ಮೂರು ನದಿಗಳ ಜಲಾನಯನದಲ್ಲಿದೆ. ಇಡೀ ಕೋಲಾರ ಜಿಲ್ಲೆ, ಬೆಂಗಳೂರು ಜಿಲ್ಲೆಯ ಸೇ. 32.7 ಭಾಗ, ತುಮಕೂರಿನ ಸೇ. 27.5 ಭಾಗ ಇದರಲ್ಲಿ ಸೇರಿದೆ. ವ್ಯವಸಾಯ ಯೋಗ್ಯವಾದ 10 ಲಕ್ಷ ಹೆಕ್ಟೇರುಗಳಲ್ಲಿ 5 ಲಕ್ಷ ಸಾಗುವಳಿಯಾಗುತ್ತಿದ್ದು ಕೆರೆ ಮತ್ತು ಬಾವಿಗಳ ಆಶ್ರಯದಿಂದಲೇ 1.50 ಲಕ್ಷ ಹೆಕ್ಟೇರ್ ಭೂಮಿ ನೀರಾವರಿಗೊಳಪಟ್ಟಿದೆ. ಕಡಿಮೆ ಮಳೆ ಬೀಳುವ ಈ ಜಲಾನಯನದಲ್ಲಿ ಒದಗುವ ನೀರಿನ ಅಂದಾಜು 0.98 ಶತಕೋಟಿ ಘನ ಮೀಟರ್. ಯಾವ ಮಧ್ಯಮ ಅಥವಾ ಭಾರಿ ನೀರಾವರಿ ಯೋಜನೆಗೂ ಇಲ್ಲಿ ಅವಕಾಶವಿಲ್ಲವಾಗಿರುತ್ತದೆ.

**ಅಂತರ್ಜಲ ಸಂಪತ್ತು :** ಜಲಾನಯನ ಪ್ರದೇಶಗಳಲ್ಲಿ ಮಳೆಯಿಂದ ಬರುವ ನೀರೇ ಈ ಜಲಸಂಪತ್ತಿಗೆ ಆಧಾರ. ಆ ಮಳೆಯ ನೀರೆಲ್ಲ ಬಾಹ್ಯ ಜಲಸಂಪತ್ತಿಗೇ ಪೂರ್ಣವಾಗಿ ವಿನಿಯೋಗವಾಗದೆ, ಅದರ ಕೊಂಚ ಭಾಗವಾದರೂ ಭೂಮಿಯ ಅಂತರ್ಜಲ ಸಂಪತ್ತನ್ನು ಹೆಚ್ಚಿಸುತ್ತದೆ. ಶಿಲಾ ವರ್ಗ, ಭೂ-ಮೇಲ್ಮೈ ರಚನೆ, ವಾಯುಗುಣವನ್ನಲಂಬಿಸಿ ಕರ್ನಾಟಕದ ಭೂ ರಚನೆಯಲ್ಲಿ ಮಣ್ಣಿನ ಮೇಲು ಹೊದಿಕೆಯ ದಪ್ಪ ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸವಾಗುವುದಿದ್ದು ಕೆಲವು ಕಡೆ 30 ಮೀಟರ್‌ಗಳಷ್ಟು ಇರುವುದೂ ಉಂಟು. ಇದು ಅಗಲವಾದ ಕಣಿವೆಗಳಲ್ಲಿ ಹೆಚ್ಚು, ಇಳಿಜಾರುಗಳಲ್ಲಿ ತೆಳುವು, ಎತ್ತರ ಪ್ರದೇಶಗಳಲ್ಲಿ ತೀರ ಕಡಿಮೆ ಇರುತ್ತದೆ. ಈ ಮೇಲು ಹೊದಿಕೆ ಮರಳು, ಗ್ರಾವೆಲ್ ಅಥ'ವಾ ಗರಸು, ಎರೆ ಹಾಗೂ ಹ್ಯೂಮಸ್‌ಗಳಿಂದ ಕೂಡಿರುತ್ತದೆ. ಈ ಮಣ್ಣಿಗೂ ಕೆಳಗಿರುವ ಗಟ್ಟಿಯಾದ ಶಿಲೆಗೂ ಮಧ್ಯವರ್ತಿ ವಲಯದಲ್ಲಿರುವ ಕೆಳಮಣ್ಣು ಅಂತರ್ಜಲ ಸಂಪತ್ತಿನ ಆಧಾರವಾಗಿರುತ್ತದೆ.

ಕರ್ನಾಟಕದ ಹೆಚ್ಚಿನ ಭೂ-ಭಾಗವು ಗಟ್ಟಿಯಾದ ಶಿಲೆಗಳಿಂದಾದುದರಿಂದ ಅಗಾಧ ಪ್ರಮಾಣದ ಅಂತರ್ಜಲ ಸಂಗ್ರಹಣೆಗೆ ಇದು ವಿಶೇಷ ಯೋಗ್ಯವಾಗೇನೂ ಇಲ್ಲ. ಆದರೂ ಬಹುಕಾಲದಿಂದ ಸತತವಾದ ಭೂ-ವ್ಯಾಪಾರಕ್ರಿಯೆಯಿಂದಾಗಿ ಶಿಲಾಪದರದ ಮೇಲೆ ಹೊದಿಕೆಯಾಗಿರುವ ಛಿದ್ರಿತ ಬಂಡೆಗಳು ಮತ್ತು ಅಳಕವಾದ ಮಣ್ಣು ಸಾಕಷ್ಟು ಸರಂಧ್ರವಾಗಿರವುದರಿಂದ ಸುಮಾರು ಪ್ರಮಾಣದ ಅಂತರ್ಜಲವನ್ನು ಇವು ಹಿಡಿದಿಟ್ಟುಕೊಳ್ಳಬಲ್ಲವು. ಪುರಾತನ ಕಾಲದಿಂದಲೂ ಈ ಕಡಿಮೆ ಆಳದಲ್ಲಿ ಕೊರೆಯುವ ಅಂತರ್ಜಲವನ್ನು ಅಷ್ಟೇ ಆಳಕ್ಕೆ ತೋಡಿದ ಬಾವಿಗಳಿಂದ ಉಪಯೋಗಿಸಿಕೊಳ್ಳಲಾಗುತ್ತಿದೆ. 1974ರ ಅಂತ್ಯದಲ್ಲಿನ ಗಣತಿಯ ಪ್ರಕಾರ ರಾಜ್ಯದಲ್ಲಿ ಇಂಥ ಸುಮಾರು 3.5 ಲಕ್ಷ ನೀರಾವರಿ ಬಾವಿಗಳಿದ್ದುವು.

ಶಿಲೆಯ ಶಿಥಿಲತೆಯಿಂದಾಗಿರುವ ಹೊದಿಕೆ ಸರಾಸರಿ 15 ಮೀ ಆಳವಿದೆಯೆಂದು ತಿಳಿಯಲಾಗಿದೆ. ಈ ವಲಯದ ಕೆಳಪದರವೂ ಮಳೆಯ ನೀರು ಕೆಳಕ್ಕೆ ಇಳಿಯುವುದರಿಂದ ಆಯಾ ಕಾಲದಲ್ಲಿ ಅಂತರ್ಜಲಭರಿತವಾಗುವುದು. ಹಾಗೇಯೇ ನೀರನ್ನು ಪಕ್ಕಕ್ಕೆ ಹರಿಯಗೊಟ್ಟು ಖಾಲಿಯಾಗುವುದು. ಇದನ್ನು ವಿಚ್ಛಿನ್ನ ಸಂಪೂರಣವಲಯ ಎನ್ನಬಹುದು. ಈ ಪದರದ ದಪ್ಪ ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸವಾಗಬಹುದಾದರೂ ಸರಾಸರಿ 3 ಮೀ ಇರುತ್ತದೆಂದು ತಿಳಿಯಬಹುದು. ಇದರ ಸರಂಧ್ರತೆ ಸೇ. 15 ಕ್ಕೆ ಕಡಿಮೆಯಿಲ್ಲದಿರುವುದಿರಂದ ಇದರ ಸಂಪೂರ್ಣ ಸಾಮರ್ಥ್ಯ ಸುಮಾರು 0.5 ಮೀ. ದಪ್ಪ ಪದರದ ನೀರನ್ನು ಹಿಡಿದಿಡುವುದಾಗಿರುತ್ತದೆ. ಈ ಪ್ರಮಾಣದ ನೀರು ಪಂಪು, ಏತ ಮುಂತಾದುವುಗಳಿಂದ ಮೇಲೆತ್ತುವುದರಿಂದಾಗಲೀ ಅಥ'ವಾ ಪಕ್ಕದ ಹರಿವಿನಿಂದ ಕೆಳಮಟ್ಟದ ಕಣಿವೆಗಳಿಗೆ ಬಸಿಯುವುದರಿಂದಾಗಲೀ ಖಾಲಿಯಾಗುತ್ತದೆ. ಅಲ್ಲದೆ ವರ್ಷವರ್ಷವೂ ಭರ್ತಿಯಾಗುತ್ತಿದ್ದು ಉಪಯೋಗಿಸಲು ಬರುತ್ತದೆ.

ಈ ವಿಚ್ಛಿನ್ನ ಸಂಪೂರಣ ವಲಯದ ಕೆಳಗಡೆಗೆ, ಗಟ್ಟಿಬಂಡೆಗಳ ಸಂದು ಮತ್ತು ಸೀಳುಗಳಲ್ಲಿ ನೀರು ಸಂಗ್ರಹಿತವಾಗಿರುವ, ಸುಮಾರು 90 ಮೀ ವರೆಗೂ ಆಳವಿರಬಹುದಾದ ಸ್ಥಾಯೀ ಸಂಪೂರಣ ವಲಯವಿರುತ್ತದೆ. ಇದಕ್ಕೂ ಕೆಳಗಡೆಗೆ, ಗಣಿಗಳಲ್ಲಿ ಕಾಣಬಹುದಾದಂತೆ ಬಂಡೆಗಳು ಶುಷ್ಕವಾಗಿರುತ್ತವೆ. ಈ ವಲಯದಲ್ಲಿ ಮೇಲಿನಿಂದ 45 ಮೀ ಆಳದವರೆಗೆ ಹೆಚ್ಚಿನ ಸಂದುಗಳು ಹಾಗೂ ಸೀಳುಗಳು ಇರಬಹುದಾದ್ದರಿಂದ ಇದು ಹೆಚ್ಚಿನ ನೀರು ಶೇಖರಣೆ ಮತ್ತು ಹರಿವಿಗೆ ತಕ್ಕುದಾಗಿರುತ್ತದೆ. ಇದರ ಸರಂಧ್ರತೆ ಮತ್ತು ಆಳಗಳನ್ನು ಪರಿಗಣಿಸಿ, ಸುಮಾರು 1.5 ಮೀ ದಪ್ಪ ಪದರದ ನೀರು ಸಂಗ್ರಹವಾಗಿರುತ್ತದೆಂದು ಅಂದಾಜು ಮಾಡಲಾಗಿದೆ. ಈ ಆಳದಲ್ಲಿನ ನೀರು ಪಡೆಯಬೇಕಾದರೆ ಕೊಳವೆಬಾವಿಗಳಿಂದ ಮಾತ್ರ ಸಾಧ್ಯವಾಗುತ್ತದೆ.

ಕರ್ನಾಟಕದಲ್ಲಿ ಅಂತರ್ಜಲ ಕಾಣಿಸಿಕೊಳ್ಳುವುದು ಸರಂಧ್ರಿತ ಮೇಲಿನ ಮಣ್ಣು, ಭೂಸವೆತದ ಕೆಳಹೊದಿಕೆ, ಸಂದು ಮತ್ತು ಸೀಳುಗಳುಳ್ಳ ತಳದ ಶಿಲೆ - ಇವುಗಳಲ್ಲಿನ ಭೂ ಒಳಗಿನ ಜಲಮಟ್ಟದ ರೂಪದಲ್ಲಿ, ವರ್ಷವರ್ಷಕ್ಕೂ ಇದಕ್ಕೆ ಪುನಃ ಪೂರಣ ಎಷ್ಟು ದೊರೆಯುತ್ತದೆ ಎಂಬ ಅಂದಾಜು ಬೇಕಾಗುತ್ತದೆ. ಮುಖ್ಯವಾಗಿ ಮಳೆಯ ನೀರು ಕೆಳಕ್ಕೆ

ಇಳಿಯುವುದರಿಂದ ಮತ್ತು ಇನ್ನು ಸ್ವಲ್ಪ ಭಾಗ ಹೊಳೆಗಳು, ಕೆರೆಗಳು, ಜಲಾಶಯಗಳು ಮತ್ತು ನೀರಾವರಿಗೆ ಉಪಯೋಗಿಸಿದ ನೀರು - ಇವುಗಳ ಇಂಗುವಿಕೆಯಿಂದ ಇದು ದೊರೆಯುತ್ತದೆ. ಬೇಸಿಗೆ ಮತ್ತು ಮಳೆಗಾಲಗಳಲ್ಲಿನ ಜಲಮಟ್ಟದ ವ್ಯತ್ಯಾಸದಿಂದ ಮತ್ತು ಭೂಸವೆತದಿಂದ ಮೇಲುಹೊದಿಕೆ ಮತ್ತು ಸಂದುಗಳುಳ್ಳ ತಳದ ಬಂಡೆಗಳು ಒಳ್ಳೆಯ ಪುನಃ ಪೂರಣ ಸಾಮರ್ಥ್ಯ ಹೊಂದಿವೆಯೇ ಎಂಬುದು ಗೊತ್ತಾಗುತ್ತದೆ. ರಾಜ್ಯದಾದ್ಯಂತ ಇರುವ ಅನೇಕ ಬಾವಿಗಳನ್ನು ಈ ದೃಷ್ಟಿಯಿಂದ ಪರಿಶೀಲಿಸಿದಾಗ ಮಲೆನಾಡು ಪ್ರದೇಶಗಳಲ್ಲಿ ಈ ವ್ಯತ್ಯಾಸ 4 ರಿಂದ 9 ಮೀಗಳೂ ಮೈದಾನ ಪ್ರದೇಶದಲ್ಲಿ 1.5ರಿಂದ 4 ಮೀ ವರೆಗೂ ಇರುವುದೆಂದು ಗೊತ್ತಾಗಿದೆ. ತುಂಬ ತಗ್ಗಿನ ಪ್ರದೇಶಗಳಲ್ಲಿ ಇದು 1ರಿಂದ 1.5 ಮೀ ಮಾತ್ರ ಇರುತ್ತದೆ. ಈ ಬಾವಿಗಳಿಂದ ಪ್ರತಿದಿನ 45 ರಿಂದ 70 ಘನ ಮೀಟರ್ ನೀರು ದೊರೆಯುತ್ತದೆ. ಸರಾಸರಿಯಾಗಿ ಒಂದೊಂದು ಬಾವಿಯೂ 1ರಿಂದ 1.5 ಹೆಕ್ಟೇರ್ ಜಮೀನಿಗೆ ನೀರಾವರಿಯೊದಗಿಸುತ್ತದೆ. ನೀರು ಧರಿಸುವ ವಿವಿಧ ರೀತಿಯ ರಚನೆಗಳಲ್ಲಿ ನೀರು ಒದಗಿಸುವ ಲಕ್ಷಣಗಳನ್ನು ಅಂದಾಜುಮಾಡಲು ಬೇರೆ ಬೇರೆ ರೀತಿಯ ಭೂಗರ್ಭ ರಚನಾ ಲಕ್ಷಣಗಳುಳ್ಳ 1,500ಕ್ಕೂ ಹೆಚ್ಚಿನ ಪಂಪ್-ಪರೀಕ್ಷಣಗಳನ್ನು ನಡೆಸಲಾಗಿದೆ. ಸರಾಸರಿಯಾಗಿ ಬಾವಿಗಳಲ್ಲಿನ ಪುನಃ ಕೂಡಿಕೊಳ್ಳುವಿಕೆಯ ವೇಗ ಪ್ರತಿ ನಿಮಿಷಕ್ಕೆ 25ರಿಂದ 75 ಲೀಟರ್ ವರೆಗೆ ಇರುತ್ತದೆ.

ಮಳೆ ಸ್ವಲ್ಪವೇ ಪ್ರಮಾಣದಲ್ಲಿ ಅಲ್ಪಕಾಲ ಮಾತ್ರ. ಎಲ್ಲೋ ಒಂದೊಂದು ಸಾರಿ ಆಗುತ್ತಿದ್ದರೆ ಮೇಲು ನೆಲವನ್ನು ಮಾತ್ರ ಅದು ಒದ್ದೆಯಾಗಿಸಿ ಬಾಷ್ಪೀಕರಣ ಮತ್ತು (ಸಸ್ಯಗಳ) ಬಾಷ್ಪೋತ್ಸರ್ಜನಗಳಿಂದಾಗಿ ವಾಯುಮಂಡಲಕ್ಕೇ ಮತ್ತೆ ಅದು ಹಿಂತಿರುಗುತ್ತದೆ. ಮಲೆನಾಡಿನ ಇಳಿಜಾರು ಪ್ರದೇಶಗಳಲ್ಲಿ ಮಳೆಯನೀರಿನ ಹೆಚ್ಚು ಭಾಗ ಹರಿದುಹೋಗುವುದರಿಂದ ಇಂಗುವಿಕೆಯ ಪ್ರಮಾಣ ಕಡಿಮೆಯಾಗಿರುತ್ತದೆ. ಕರಿಯ ಮಣ್ಣಿನ ಹೊದಿಕೆಯಿರುವ ಉತ್ತರದ ಮೈದಾನ ಪ್ರದೇಶಗಳಲ್ಲಿ, ಮಳೆಯ ನೀರಿನಿಂದ ಒದ್ದೆಯಾದ ಎರೆಮಣ್ಣು ಹಿಗ್ಗಿ ನೀರು ಕೆಳಕ್ಕೆ ಇಂಗುವುದನ್ನು ಸಾಕಷ್ಟು ತಡೆದುಬಿಡುತ್ತದೆ. ಈ ಎಲ್ಲ ಅಂಶಗಳ ಬಗ್ಗೆ ಖಚಿತವಾದ ವೈಜ್ಞಾನಿಕ ಅಂಕಿ-ಅಂಶಗಳು ಲಭ್ಯವಿಲ್ಲದ ಕಾರಣ ಅಂತರ್ಜಲ ಸಂಗ್ರಹಕ್ಕೆ ಆಗುವ ಪುನಃ ಪೂರಣ ಪ್ರಮಾಣ ಕಂಡುಹಿಡಿಯುವುದು ಕಷ್ಟವಾದರೂ ಈ ದಿಶೆಯಲ್ಲಿ ವಿಶೇಷ ಪ್ರಯತ್ನವೂ ನಡೆದಿದೆ.

ಮಳೆಯಿಂದ ದೊರೆಯುವ ನೀರಿನಲ್ಲಿ ಬಹು ಅಂಶ ಬಾಷ್ಪೀಕರಣ-ಉತ್ಸರ್ಜನಗಳಿಂದಾಗಿ ನಷ್ಟವಾಗುತ್ತದೆ. ನೇರವಾಗಿ ಇದನ್ನು ಕಂಡುಹಿಡಿಯಲಾಗದಿದ್ದರೂ ಹವಾಮಾನ ಸ್ಥಿತಿಯು ಎಂದರೆ, ಬಿಸಿಲಿನ ಅವಧಿ, ತೀಕ್ಷ್ಣತೆ, ವಾಯುವಿನಲ್ಲಿನ ತೇವ, ಬೀಸುವ ವೇಗ ಮುಂತಾದ ವಿವರಗಳ ಆಧಾರದ ಮೇಲೆ ಗರಿಷ್ಠ ಸಾಧ್ಯ ಬಾಷ್ಪೀಕರಣ ಉತ್ಸರ್ಜನದ ಪ್ರಮಾಣವನ್ನು ರಾಜ್ಯದ ಬೇರೆ ಬೇರೆ ಜಿಲ್ಲೆಗಳಿಗೂ ಲೆಕ್ಕಾಚಾರ ಮಾಡಿ ಒದಗಿಸಲಾಗಿದೆ. ಸಾಕಷ್ಟು ನೀರು ಸದಾ ದೊರೆಯುವಂತಿದ್ದರೆ, ಸಸ್ಯಾವೃತವಾದ ಒಂದು ಭೂಕ್ಷೇತ್ರದಿಂದ ಬಾಷ್ಪೀಕರಣದಿಂದಾಗಿ ನಷ್ಟವಾಗುವ ನೀರಿನ ಗರಿಷ್ಠ ಪ್ರಮಾಣವನ್ನು ಸೂಚಿಸುತ್ತದೆ. ಈ ಬೆಲೆಗಳ ಆಧಾರದ ಮೇಲೆ ಮಳೆಯಿಂದ ದೊರೆಯುವ ನೀರಿನಲ್ಲಿ ನಷ್ಟವನ್ನು ಮೊದಲು ಕಳೆಯಲಾಗುತ್ತದೆ. ಎಷ್ಟೋ ತಿಂಗಳುಗಳಲ್ಲಿ ಬರುವ ಅಲ್ಪ ಪ್ರಮಾಣದ ಮಳೆಯೆಲ್ಲ ಈ ನಷ್ಟವನ್ನು ತುಂಬುವುದಕ್ಕೆ ತೀರಿಹೋಗುತ್ತದೆ. ಸತತವಾಗಿ ಹಾಗೂ ಭಾರಿಯ ಮಳೆ ಬೀಳುವ ತಿಂಗಳುಗಳಲ್ಲಿ ಮಾತ್ರ ನಿಜವಾದ ಹೆಚ್ಚುವರಿಯಿದ್ದು, ಅಂತರ್ಜಲ ಸಂಗ್ರಹಕ್ಕೆ ಪುನಃಪೂರಣ ದೊರೆಯುತ್ತದೆ. ವಾರ್ಷಿಕ ಸರಾಸರಿ ಮಳೆ 700 ಮಿಮೀಗೂ ಕಡಿಮೆ ಇರುವ ಜಿಲ್ಲೆಗಳಲ್ಲಿ ಅಂತರ್ಜಲ ಸಂಪತ್ತನ್ನು ಪುನಃ ಪೂರೈಸಲು ಇರುವ ಹೆಚ್ಚುವರಿ ನೀರು ಬಹಳ ಕಡಿಮೆಯೆಂಬುದನ್ನು ಗಮನಿಸಬಹುದು. ಹೆಚ್ಚು ಅಭಾವವನ್ನೆದುರಿಸುವ ಜಿಲ್ಲೆಗಳು ಇವೇ ಆಗಿದ್ದು, ನೀರಾವರಿಗೆ ಅಂತರ್ಜಲದ ಅವಲಂಬನೆ ಹೆಚ್ಚು ಹೆಚ್ಚಿದ್ದು ನೀರು ದೊರೆಯಬೇಕಾದ್ದೂ ಈ ಪ್ರದೇಶಗಳಲ್ಲೇ, ಹವಾಮಾನ ಆಧಾರಿತ ಗಣತಿಯಲ್ಲಿ ಹೀಗೆನ್ನಿಸಿದರೂ ಬೇರೆ ಕೆಲವು ಅಂಶಗಳು ಇಲ್ಲಿ ಸಹಾಯಕ್ಕೆ ಒದಗುತ್ತವೆ. ಮೇಲಿನ ಈ ಕಡಿಮೆ ಮಳೆ ಪ್ರದೇಶಗಳು ಹೆಚ್ಚಾಗಿ ಸಮತಟ್ಟಾದ ಮೈದಾನಗಳಾಗಿದ್ದು ನೆಲದ ನೀರಿನ ಹರಿಯುವಿಕೆ ಕನಿಷ್ಠ ಪ್ರಮಾಣದ್ದಾಗಿರುತ್ತದೆ. ಮಣ್ಣಿನ ಪದರವೂ ತೆಳುವಾಗಿದ್ದು ಬಂಡೆಗಳೂ ಭೂ-ವ್ಯಾಪಾರ ಕ್ರಿಯೆಯಿಂದ ಛಿದ್ರಿತವಾಗಿ, ಸಂದುಗಳು ಎರೆಯಿಂದ ಮುಚ್ಚಲ್ಪಡದೆ ತೆರವಾಗಿಯೇ ಇದ್ದು ಮೇಲ್ಮಟ್ಟದಲ್ಲೇ ಇರುವುದರಿಂದ ಆದ ಅಲ್ಪಸ್ವಲ್ಪ ಮಳೆಯೆಲ್ಲ ಆದಷ್ಟು ಕೂಡಲೇ ಭೂ ಅಂತರ್ಗತವಾಗುತ್ತದೆ. ಸಸ್ಯಾವರಣವೂ ಕಡಿಮೆಯಾದ್ದರಿಂದ ಬಾಷ್ಪೀಕರಣ ನಷ್ಟವೂ ಅಷ್ಟಾಗಿಲ್ಲದೆ, ಅಂತರ್ಜಲ ಸಂಗ್ರಹಣಕ್ಕೆ ದೊರೆಯುವ ಕೊಡುಗೆ ಹೆಚ್ಚಿನ ಪ್ರಮಾಣದಲ್ಲೇ ಇರುವುದೆಂದು ನಿರೀಕ್ಷಿಸಲಾಗುತ್ತದೆ.

ಪರಿವೀಕ್ಷಣವಾಗಿ ಆರಿಸಿರುವ ಬಾವಿಗಳಲ್ಲಿ, ಮಳೆಗಳ ಅನಂತರ ಆಗುವ ಜಲಮಟ್ಟದ ವಾಸ್ತವ ವ್ಯತ್ಯಾಸವನ್ನು ಪರಿಗಣಿಸಿಯೂ ವಾರ್ಷಿಕ ಪುನಃಪೂರೈಕೆಯನ್ನು ಅಂದಾಜು ಮಾಡಬಹುದು. ಇಲ್ಲಿಯೂ ಶಿಲೆಯ ವರ್ಗೀಕರಣ, ರಚನೆ ಮತ್ತು ಭೂ-ವ್ಯಾಪಾರ ಕ್ರಿಯೆಗೆ ಒಳಗಾಗಿರುವ ಪರಿಮಾಣಗಳಿಂದ ವ್ಯತ್ಯಾಸಗಳುಂಟಾಗಬಹುದು.

ಈ ಮುಂದಿನ ಪಟ್ಟಿಯಲ್ಲಿ ಜಿಲ್ಲಾವಾರು ವಾಡಿಕೆ ಮಳೆ (1901-70) ಮತ್ತು ವಾಸ್ತವಿಕ ಮಳೆಯ (2000) ಪ್ರಮಾಣವನ್ನು ತೋರಿಸಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ವಾಡಿಕೆ 1901-70 | ವಾಸ್ತವಿಕ 2000 |
|---|---|---|---|
| **I** | **ಬೆಂಗಳೂರು ವಿಭಾಗ** | 67 | 68 |
| 1 | ಬೆಂಗಳೂರು | 867 | 1,060 |
| 2 | ಬೆಂಗಳೂರು (ಗ್ರಾ) | 817 | 1,143 |
| 3 | ಚಿತ್ರದುರ್ಗ | 573 | 753 |
| 4 | ದಾವಣಗೆರೆ | 649 | 738 |
| 5 | ಕೋಲಾರ | 744 | 852 |
| 6 | ಶಿವಮೊಗ್ಗ | 1,664 | 1,957 |
| 7 | ತುಮಕೂರು | 688 | 923 |
| **II** | **ಬೆಳಗಾಂವಿ ವಿಭಾಗ** | | |
| 8 | ಬೆಳಗಾಂವಿ | 808 | 762 |
| 9 | ಬಿಜಾಪುರ | 578 | 607 |
| 10 | ಬಾಗಲಕೋಟೆ | 562 | 593 |
| 11 | ಧಾರವಾಡ | 772 | 726 |
| 12 | ಗದಗ | 612 | 698 |
| 13 | ಹಾವೇರಿ | 753 | 848 |
| 14 | ಉತ್ತರ ಕನ್ನಡ | 2,835 | 3,085 |
| **III** | **ಗುಲ್ಬರ್ಗ ವಿಭಾಗ** | | |
| 15 | ಬಳ್ಳಾರಿ | 636 | 622 |
| 16 | ಬೀದರ್ | 847 | 959 |
| 17 | ಗುಲ್ಬರ್ಗ | 777 | 805 |
| 18 | ರಾಯಚೂರು | 631 | 640 |
| 19 | ಕೊಪ್ಪಳ | 572 | 701 |

| VI | ಮೈಸೂರು ವಿಭಾಗ | | |
|---|---|---|---|
| 20 | ಚಿಕ್ಕಮಗಳೂರು | 1,925 | 1,831 |
| 21 | ದಕ್ಷಿಣ ಕನ್ನಡ | 3,975 | 3,303 |
| 22 | ಉಡುಪಿ | 4,119 | 3,805 |
| 23 | ಹಾಸನ | 1,031 | 1,100 |
| 24 | ಕೊಡಗು | 2,718 | 2,641 |
| 25 | ಮಂಡ್ಯ | 700 | 967 |
| 26 | ಮೈಸೂರು | 782 | 960 |
| 27 | ಚಾಮರಾಜನಗರ | 751 | 1,016 |
| | ರಾಜ್ಯ | 1,139 | 1,216 |

ಇಡೀ ರಾಜ್ಯವನ್ನು ಪರಿಗಣಿಸಿದಾಗ ಮಳೆಯ ನೀರಿನಿಂದ ಅಂತರ್ಜಲ ಸಂಗ್ರಹಕ್ಕೆ ದೊರೆಯುವ ಕೊಡುಗೆ ಸುಮಾರು ಸೇ. 3 ರಿಂದ 10ರ ವರೆಗೆ ಇದೆ. ಅಂದರೆ ವಾರ್ಷಿಕವಾಗಿ ಒಟ್ಟು 11,173 ದಶಲಕ್ಷ ಘನ ಮೀಗಳು. (ಕೆ.ವಿ.ಎಸ್‌ಯು)

**ನಯಸೇನ:** ಸು. 1112. ಜೈನಕವಿ. ಧರ್ಮಾಮೃತ ಎಂಬ ಕಾವ್ಯದ ಕರ್ತೃ. ಧಾರವಾಡ ಜಿಲ್ಲೆಯ ಮುಳಗುಂದ ಇವನ ಜನ್ಮಸ್ಥಳ. ಈತ ಅಲ್ಲಿ ಜೈನ ಸಂನ್ಯಾಸಿಯಾಗಿದ್ದು ರಾಜಪೂಜಿತನೂ ಜನಾನುರಾಗಿಯೂ ಆಗಿದ್ದಂತೆ ಕಂಡುಬರುತ್ತದೆ. ನರೇಂದ್ರ ಸೇನಮುನಿಪ ಇವನ ಗುರು. ಕವಿಗೆ ಸುಕವಿನಿಕರ ಪಿಕಮಾಕಂದ, ಸುಕವಿಜನಮನಃ ಪದ್ಮಿನೀರಾಜಹಂಸ, ನೂತನಕವಿತಾವಿಲಾಸ ಎಂಬ ಬಿರುದುಗಳಿದ್ದಂತೆ ತಿಳಿಯುತ್ತದೆ. ಈತ ತನ್ನನ್ನು ನಯಸೇನ, ನಯಸೇನದೇವ, ನಯಸೇನ ಮುನೀಂದ್ರ ಮೊದಲಾಗಿ ಕರೆದುಕೊಂಡಿದ್ದಾನೆ. ಪೂರ್ವಕವಿಗಳಲ್ಲಿ ಅಸಗ, ಪೊನ್ನ, ಪಂಪ, ಗಜಾಂಕುಶ, ಗುಣವರ್ಮ, ರನ್ನ ಮೊದಲಾದವರನ್ನು ಸ್ತುತಿಸಿದ್ದಾನೆ. ತನ್ನನ್ನು ಮಾನಿತಶೀಲನಿಧಾನನನೂನಗುಣಂ ಸಕಳಭವ್ಯಜನಬುಧ ಜನಚಿತ್ತಾನಂದಕರಂ ಎಂದು ಹೊಗಳಿಕೊಂಡಿದ್ದಾನೆ. ಈತ ಕನ್ನಡ ಕವಿಗಳ ಭಾಷಾ ಬಳಕೆಯ ಬಗ್ಗೆ ಆಡಿರುವ ಮಾತುಗಳು ಗಮನಾರ್ಹವಾದವು. ಅದುವರೆವಿಗೂ ರಾಜಾಶ್ರಯದಲ್ಲಿಯೇ ಬೆಳೆದು ಯಾರೋ ನಾಲ್ಕು ಜನರಿಗಾಗಿ ಸಂಸ್ಕೃತ ಭೂಯಿಷ್ಠವಾದ ಭಾಷೆಯಲ್ಲಿ ಕಾವ್ಯರಚನೆ ಮಾಡುತ್ತಿದ್ದ ಕವಿಗಳನ್ನು ಕುರಿತು ಈತ ಮೊದಲ ಬಾರಿಗೆ ಪ್ರತಿಭಟಿಸಿದ. ಹೊಸಗನ್ನಡದಲ್ಲಿ ಕಾವ್ಯ ಬರೆಯುತ್ತೇವೆಂದು ಹೇಳಿಕೊಂಡು ಹೊರಟು ಕನ್ನಡದೊಂದಿಗೆ ಸರಿಬೆಸುಗೆ ಹೊಂದದ ಸಂಸ್ಕೃತ ಬಳಸುವವರೂ ಕವಿಗಳೇ ಎಂದು ಅಂಥವರನ್ನು ಕೆಚ್ಚೆದೆಯಿಂದ ಖಂಡಿಸಿದ. ಸಕ್ಕದಮಂ ಪೇೞ್ವೊಡೆ ನೆಱ ಸಕ್ಕದಮಂ ಪೇೞ್ಗೆ ಶುದ್ಧ ಕನ್ನಡದೊಳ್ ತಂದಿಕ್ಕುವುದೆ ಸಕ್ಕದಂಗಳ ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ ಎಂದು ಕನ್ನಡ ಸಂಸ್ಕೃತಗಳ ಸರಿದೂಗದ ಬೆರಕೆಯನ್ನು ವಿರೋಧಿಸಿದ. ಆಡುಭಾಷೆಯೇ ಜೀವಂತ ಭಾಷೆ, ಆ ಭಾಷೆಯಲ್ಲಿ ಜನರಿಗೆ ಮುಟ್ಟುವಂತೆ ಕಾವ್ಯವನ್ನು ರಚಿಸಬೇಕೆಂದು ಕವಿಗಳಿಗೆ ಮಾರ್ಗದರ್ಶನ ನೀಡಿದ; ಆ ದಾರಿಯಲ್ಲಿ ನಡೆದ.

ಧರ್ಮಾಮೃತ 14 ಆಶ್ವಾಸಗಳ ಚಂಪೂ ಗ್ರಂಥ. ಧರ್ಮವನ್ನು ತಿಳಿಸುವುದೇ ಈ ಗ್ರಂಥದ ಉದ್ದೇಶವಾಗಿದ್ದು ಕವಿ ಇದನ್ನು ಸುಂದರವಾದ ಕಥೆಗಳ ಮೂಲಕ ಸಾಧಿಸಿದ್ದಾನೆ. ಜಿನದರ್ಶನ ಮಾಹಾತ್ಮ್ಯ, ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢದೃಷ್ಟಿತ್ವ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ, ಧರ್ಮಪ್ರಭಾವನೆ, ಅಹಿಂಸೆ, ಅಸ್ತೇಯ, ಸತ್ಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ ಈ ವಿಷಯಗಳನ್ನು ಹದಿನಾಲ್ಕು ಆಶ್ವಾಸಗಳಲ್ಲಿ ಪ್ರತಿಪಾದಿಸಲಾಗಿದೆ. ಶ್ರೇಣಿಕ ಮಹಾರಾಜನಿಗೆ - ಈ ವಿಷಯಗಳನ್ನು ಗೌತಮ ಗಣಧರರು ಬೋಧಿಸಿದ ರೀತಿಯಲ್ಲಿ ಕಥೆಗಳ ನಿರೂಪಣೆ ಇದೆ. ಕವಿ ತನ್ನ ಗ್ರಂಥವನ್ನು ಕಾವ್ಯರತ್ನವೆಂದು ಕರೆದುಕೊಂಡಿದ್ದಾನೆ.

ನಯಸೇನನ ಲೋಕಾನುಭವ ವ್ಯಾಪಕವಾದುದು. ಕಥೆ ಹೇಳುವಾಗ ರಾಮಾಯಣ, ಮಹಾಭಾರತ ಮತ್ತು ಭಾಗವತಗಳಲ್ಲಿ ಬರುವ ಅನೇಕ ಕಥೆಗಳನ್ನೂ ರೂಢಿಯಲ್ಲಿರುವ ಚಂದ್ರಹಾಸನ ಕಥೆಯಂಥ ಕಥೆಗಳನ್ನೂ ವಿಪುಲವಾಗಿ ಬಳಸಿಕೊಂಡಿದ್ದಾನೆ. ಇದೊಂದು ಕಥೆಗಳ ಉಗ್ರಾಣ. ಮಾಲೆಮಾಲೆಯಾಗಿ ಹೋಲಿಕೆಗಳನ್ನು ಕೊಡುವುದು ಇವನ ವೈಶಿಷ್ಟ್ಯ. ಇದರಿಂದ ಅಲ್ಲಲ್ಲಿ ಕಥೆಯ ಓಟಕ್ಕೆ ಸ್ವಲ್ಪ ಭಂಗ ಬಂದಂತಾಗಿದೆ. ಗಾದೆಮಾತುಗಳನ್ನು ಕವಿ ಧಾರಾಳವಾಗಿ ಬಳಸಿಕೊಂಡಿದ್ದಾನೆ. ಕಥನವಿಧಾನ, ತಂತ್ರ, ಭಾಷೆ, ಗಾದೆಮಾತುಗಳ ಬಳಕೆ ಇವುಗಳ ದೃಷ್ಟಿಯಿಂದ ಈ ಕೃತಿ ಜಾನಪದ ಸತ್ವದಿಂದ ಕೂಡಿದೆ. ಈ ಕೃತಿಯಿಂದ ಆ ಕಾಲದ ಸಾಮಾಜಿಕ ಜೀವನದ ಅನೇಕ ಆಚಾರವಿಚಾರಗಳ ಕ್ವಚಿದ್ದರ್ಶನ ನಮಗೆ ಖಂಡಿತ ದೊರೆಯುತ್ತದೆ. ಈ ದೃಷ್ಟಿಯಿಂದ ಧರ್ಮಾಮೃತ ಸಾಹಿತ್ಯದ ವಿದ್ಯಾರ್ಥಿಗಳಿಗಲ್ಲದೆ ಸಮಾಜಶಾಸ್ತ್ರದ ಅಭ್ಯಾಸಿಗಳಿಗೂ ಗಮನಾರ್ಹವಾದ ಕೃತಿಯಾಗಿದೆ. (ಎನ್.ಬಿ.ಎಲ್., ಜಿ.ಎಸ್.ಎನ್.ಐ.)

**ನರಗುಂದ :** ಗದಗ ಜಿಲ್ಲೆಯ ಒಂದು ತಾಲ್ಲೂಕು ಮತ್ತು ತಾಲ್ಲೂಕಿನ ಆಡಳಿತ ಕೇಂದ್ರ. ಈ ತಾಲ್ಲೂಕನ್ನು ಪಶ್ಚಿಮ ಮತ್ತು ಉತ್ತರದಲ್ಲಿ ಬೆಳಗಾಂವಿ ಜಿಲ್ಲೆಯೂ ಈಶಾನ್ಯದಲ್ಲಿ ಬಾಗಲಕೋಟೆ ಜಿಲ್ಲೆಯೂ ದಕ್ಷಿಣದಲ್ಲಿ ಧಾರವಾಡ ಜಿಲ್ಲೆಯೂ ಮತ್ತು ಪೂರ್ವದಲ್ಲಿ ರೋಣ ತಾಲ್ಲೂಕೂ ಸುತ್ತುವರಿದಿವೆ. ತಾಲ್ಲೂಕಿನ ವಿಸ್ತೀರ್ಣ 436 ಚಕಿಮೀ ಜನಸಂಖ್ಯೆ 92644. ತಾಲ್ಲೂಕಿನಲ್ಲಿ 35 ಗ್ರಾಮಗಳು ಮತ್ತು ಒಂದು ಪಟ್ಟಣ ಇವೆ. ಕೊಣ್ಣೂರು ಮತ್ತು ನರಗುಂದ ಹೋಬಳಿಗಳು.

ಈ ತಾಲ್ಲೂಕಿನ ನರಗುಂದಬೆಟ್ಟ ಪ್ರದೇಶ ಮತ್ತು ಚಿಕ್ಕನರಗುಂದದ ಬೆಟ್ಟ ಪ್ರದೇಶ ಬಿಟ್ಟು ಉಳಿದ ಭಾಗವೆಲ್ಲ ಕಪ್ಪು ಮಣ್ಣಿನ, ಬೆಣಚುಗಲ್ಲು, ಸಣ್ಣ ನರುಜುಗಲ್ಲು ಮತ್ತು ಮರಳು ಕಲ್ಲಿರುವ ಭೂಮಿ, ತಾಲ್ಲೂಕಿನ ಈಶಾನ್ಯ ಭಾಗದಲ್ಲಿ ಬಿಜಾಪುರ ಧಾರವಾಡ ಜಿಲ್ಲೆಗಳ ಗಡಿಯಾಗಿ ಮಲಪ್ರಭಾ ನದಿ ಹರಿಯುತ್ತದೆ. ಇದನ್ನು ಬಿಟ್ಟರೆ ತಾಲ್ಲೂಕಿನಲ್ಲಿ ಕೆಲವು ಸಣ್ಣ ಹಳ್ಳಗಳು ಮಾತ್ರ ಇವೆ. ತಾಲ್ಲೂಕಿನಲ್ಲಿ ಸರಾಸರಿ ವಾರ್ಷಿಕ ಮಳೆ ಸು. 560 ಮಿಮೀ. ಈ ತಾಲ್ಲೂಕಿನಲ್ಲಿ ಜೋಳ, ಹತ್ತಿ, ಗೋಧಿ, ಎಣ್ಣೆಬೀಜಗಳು ಮತ್ತು ದ್ವಿದಳ ಧಾನ್ಯಗಳನ್ನು ಬೆಳೆಯುತ್ತಾರೆ. ಮಲಪ್ರಭಾ ನದಿಯ ದಕ್ಷಿಣ ದಂಡೆಯ ಮೇಲಿನ ಮೆಕ್ಕಲು ಮಣ್ಣಿನ ಪ್ರದೇಶದಲ್ಲಿ ತರಕಾರಿಗಳನ್ನೂ ಇತರ ತೋಟದ ಬೆಳೆಗಳನ್ನೂ ಬೆಳೆಯುತ್ತಾರೆ. ನರಗುಂದ ತಾಲ್ಲೂಕು ಸೇಂಗಾ ಮತ್ತು ಹತ್ತಿಯ ಮಾರುಕಟ್ಟೆಗೆ ಪ್ರಸಿದ್ಧವಾಗಿದೆ.

ನರಗುಂದ ಪಟ್ಟಣ ಈ ತಾಲ್ಲೂಕಿನ ಆಡಳಿತ ಕೇಂದ್ರ. ಧಾರವಾಡ ನಗರಕ್ಕೆ ಈಶಾನ್ಯದಲ್ಲಿ ನವಲಗುಂದದ ಉತ್ತರಕ್ಕೆ 19 ಕಿಮೀ ದೂರದಲ್ಲಿದೆ. ಜನಸಂಖ್ಯೆ 32548. ಇದೊಂದು ವ್ಯಾಪಾರ ಕೇಂದ್ರ. ಪುರಸಭಾಡಳಿತವಿದೆ. ಪಟ್ಟಣದಲ್ಲಿ ಹತ್ತಿ ಎಕ್ಕುವ ಮತ್ತು ಎಣ್ಣೆ ತಯಾರಿಕೆಯ ಕಾರ್ಖಾನೆಗಳಿವೆ.

ನರಗುಂದದಲ್ಲಿ ಶಂಕರಲಿಂಗ, ಮಹಾಬಲೇಶ್ವರ, ಹನುಮಂತ ದೇವರ ದೇವಾಲಯಗಳಿವೆ. ಇಲ್ಲಿಯ ಮುಖ್ಯ ಆಕರ್ಷಣೆ ನರಗುಂದದ ಬೆಟ್ಟ ಮತ್ತು ಕೋಟೆ, ಇಲ್ಲಿಯ ಕೋಟೆಯನ್ನು ಕರ್ನಾಟಕದ ಬಲವಾದ ಕೋಟೆಗಳಲ್ಲಿ ಒಂದೆಂದು ಪರಿಗಣಿಸಲಾಗಿತ್ತು. ಈಗ ಕೋಟೆಯ ಅವಶೇಷಗಳು ಮಾತ್ರ ಇವೆ. ನರಗುಂದದಲ್ಲಿ 1720ರಲ್ಲಿ ಕಟ್ಟಿದ ವೆಂಕಟೇಶ ದೇವಾಲಯವಿದೆ. ಸೆಪ್ಟೆಂಬರ್-ಅಕ್ಟೋಬರ್ ತಿಂಗಳಲ್ಲಿ ರಥೋತ್ಸವ ಜರುಗುತ್ತದೆ.

ನರಗುಂದದಲ್ಲಿ ಚಾಳುಕ್ಯ ಮನೆತನದ ಮೂರನೆಯ ಸೋಮೇಶ್ವರ, ಎರಡನೆಯ ಜಗದೇಕಮಲ್ಲ ಮತ್ತು ಮೂರನೆಯ ತೈಲ ಇವರಿಗೆ ಸೇರಿದ ಮೂರು ಶಾಸನಗಳಿವೆ. ಆ ಕಾಲದಲ್ಲಿ ನರಗುಂದ ಒಂದು ಅಗ್ರಹಾರವಾಗಿದ್ದು 220 ಮಹಾ ಜನರು ಇದರ ಆಡಳಿತ ನೋಡಿಕೊಳ್ಳುತ್ತಿದ್ದರೆಂದು ತಿಳಿದುಬರುವುದು.

1674ರಲ್ಲಿ ಶಿವಾಜಿ ಇಲ್ಲಿಯ ಕೋಟೆಯನ್ನು ಕಟ್ಟಿಸಿದ. 1778ರಲ್ಲಿ ನರಗುಂದ ಹೈದರನಿಗೆ ಕಪ್ಪ ಕೊಡುತ್ತಿತ್ತು. 1785ರಲ್ಲಿ ಟಿಪ್ಪು

ನರಗುಂದ ಕೋಟೆಯನ್ನು ವಶಪಾಡಿಕೊಂಡ. 1818ರಲ್ಲಿ ಮರಾಠ ಪೇಶವೆಗಳು ದಾದಾಜಿರಾವ್ ಅಪ್ಪ ಎಂಬಾತನಿಗೆ ನರಗುಂದವನ್ನು ವಹಿಸಿಕೊಟ್ಟರು. ಈ ವಂಶದ ನರಗುಂದದ ಭಾಸ್ಕರರಾವ್ ಅಪ್ಪಾಸಾಹೇಬ್ ಅಥವಾ ಬಾಬಾಸಾಹೇಬ (ನೋಡಿ) ಹೆಚ್ಚು ಜನಪ್ರಿಯನಾಗಿದ್ದ. 1857ರಲ್ಲಿ ಬ್ರಿಟಿಷರು ಈತನಿಗೆ ದತ್ತುಪುತ್ರ ಸ್ವೀಕಾರಕ್ಕೆ ಅಂಗೀಕಾರವನ್ನೀಯದೆ, ನರಗುಂದ ರಾಜ್ಯವನ್ನು ನಿಶ್ಯಸ್ತ್ರೀಕರಣಗೊಳಿಸಿ ಅಪಮಾನಿಸಿದರು. ಬಾಬಾಸಾಹೇಬ ಈ ಕ್ರಮವನ್ನು ಎದುರಿಸಿ ಯುದ್ಧ ಸಾರಿದ. ಆದರೆ ಇವನನ್ನು ಹತ್ತಿಕ್ಕಿದ ಇಂಗ್ಲಿಷರು 1858ರ ಜೂನ್ ತಿಂಗಳಲ್ಲಿ ಕೋಟೆಯನ್ನೂ ಹಾಳುಗೆಡವಿದರು. (ಜಿ.ಎಸ್.ಎಚ್.)

**ನರಸನಾಯಕ :** ವಿಜನಗರದ ಸಾಳುವ ನರಸಿಂಹನ (149101505) ದಂಡನಾಯಕ ಮತ್ತು ಮಂತ್ರಿ. ಕೆಲವು ಕಾಲ ಸಾಮ್ರಾಜ್ಯದ ವಸ್ತುತಃ ಪ್ರಭು (1492-1503). ತುಳುವ ವಂಶದ ಈಶ್ವರನಾಯಕನ ಮಗ. ಈ ತಂದೆ ಮಕ್ಕಳಿಬ್ಬರು ಎರಡನೆಯ ದೇವರಾಯನ (1424-46) ತರುವಾಯ ವಿಜಯನಗರ ಸಾಮ್ರಾಜ್ಯ ದುರ್ಬಲ ಸ್ಥಿತಿಗೆ ಬಂದಾಗ ಸಾಳುವ ಒಂದನೆಯ ನರಸಿಂಹನೊಂದಿಗೆ ಕೂಡಿಕೊಂಡು ಅದರ ಪುನಶ್ಚೇತನಕ್ಕಾಗಿ ಸಾಹಸಪಟ್ಟರು. ಉತ್ತರದಲ್ಲಿ ಬಹಮನೀಸುಲ್ತಾನರನ್ನು ಹಿಮ್ಮೆಟ್ಟಿಸಿದ್ದಲ್ಲದೆ ದಕ್ಷಿಣದಲ್ಲಿ ಬಂಡಾಯವೆದ್ದಂಥ ಸಾಮಂತರನ್ನೂ ಅಡಗಿಸಿದರು. ಇದರಿಂದ ಇವರ ಪ್ರತಿಷ್ಠೆ ಮತ್ತು ಪರಾಕ್ರಮಗಳು ಸಾಮ್ರಾಜ್ಯದ ರಾಜಕೀಯ ರಂಗದಲ್ಲಿ ದೃಢವಾಗಿ ಮೇಲೇರಿದವು.

ಸಂಗಮವಂಶದ ದುರ್ಬಲ ರಾಜ ಪ್ರೌಢದೇವರಾಯನನ್ನು ಸಿಂಹಾಸನದಿಂದ ಕೆಳಗಿಳಿಸಲು ಸಾಳುವ ವಂಶದ ಒಂದನೆಯ ನರಸಂಹ ನರಸನಾಯಕನ ನೇತೃತ್ವದಲ್ಲಿ ಸೈನ್ಯವನ್ನು ಕಳುಹಿಸಿದ (1485). ನೂನಿಜ್ ವಿವರಿಸುವಂತೆ ನರಸನಾಯಕನ ಮುತ್ತಿಗೆಯನ್ನು ತಡೆಯಲು ರಾಜಧಾನಿಯಲ್ಲಿ ಒಂದು ಪಿಳ್ಳೆಯೂ ಮುಂದಾಗಲಿಲ್ಲ. ಇದರ ಫಲವಾಗಿ ಸಂಗಮ ವಂಶದ ಆಳ್ವಿಕೆ ಕೊನೆಗೊಂಡು ಸಾಳು ವಂಶ ಅಧಿಕಾರಕ್ಕೆ ಬಂದಿತು.

ಒಂದನೆಯ ನರಸಿಂಹ 1491ರಲ್ಲಿ ತೀರಿಕೊಂಡಾಗ ಅವನ ಮಕ್ಕಳು ಇನ್ನೂ ಎಳೆಯವರಾಗಿದ್ದರು. ಆಗ ಅವನು ಸಾಯುವ ಕಾಲದಲ್ಲಿ ರಾಜ್ಯಭಾರದ ಹೊಣೆಯನ್ನು ಸ್ವಾಮಿನಿಷ್ಠೆಯುಳ್ಳವನೂ ಹಾಗೂ ದಕ್ಷನೂ ಆಗಿದ್ದ ದಂಡನಾಯಕ ಮತ್ತು ಮಂತ್ರಿ ತುಳುವ ನರಸನಾಯಕನಿಗೆ ಒಪ್ಪಿಸಿದ. ರಾಜಕುಮಾರರು ಪ್ರಾಪ್ತವಯಸ್ಸಿಗೆ ಬರುವವರೆಗೂ ರಾಜ್ಯಭಾರವನ್ನು ನಿರ್ವಹಿಸುವುದು ಇವನ ಜವಾಬ್ದಾರಿಯಾಗಿತ್ತು.

ನರಸನಾಯಕ ನರಸಿಂಹನ ಹಿರಿಯ ಮಗ ತಿಮ್ಮಭೂಪನಿಗೆ ಪಟ್ಟಕಟ್ಟಿದ. ಆದರೆ ಆಡಳಿತದ ಸಂಪೂರ್ಣ ಅಧಿಕಾರವೆಲ್ಲ ಇವನ ಕೈಯಲ್ಲಿತ್ತು. ಇದನ್ನು ಸಹಿಸದೆ ತಿಮ್ಮರಸನೆಂಬ ಮಂತ್ರಿಯಿಂದ ರಾಜ ಕೊಲೆಗೀಡಾದ. ಆಗ ನರಸನಾಯಕ ಪುನಃ 1491ರಲ್ಲಿ ನರಸಿಂಹನ ಎರಡನೆಯ ಮಗ ಇಮ್ಮಡಿ ನರಸಿಂಹನನ್ನು ಸಿಂಹಾಸನದ ಮೇಲೆ ಕೂರಿಸಿದನಾದರೂ ನರಸನಾಯಕನೇ ರಾಜಬಿರುದುಗಳನ್ನು ಧರಿಸಿಕೊಂಡು ಆಡಳಿತ ಸೂತ್ರವನ್ನು ಹಿಡಿದಿದ್ದ. ಇದರಿಂದ ಕ್ರಮೇಣ ಇವನ ಮತ್ತು ರಾಜನ ನಡುವೆ ಒಡಕು ಪ್ರಾರಂಭವಾಯಿತು. 1492ರಲ್ಲಿ ನರಸನಾಯಕ ಪೆನುಗೊಂಡೆಯಿಂದ ಸೈನ್ಯದೊಡನೆ ಸಾಗಿ ವಿಜಯನರವನ್ನು ಮುತ್ತಿ, ಇಮ್ಮಡಿ ನರಸಿಂಹನನ್ನು ಪೆನುಗೊಂಡೆಯಲ್ಲಿ ನಿರ್ಬಂಧದಲ್ಲಿಟ್ಟ.

ನರಸನಾಯಕ ಸಿಂಹಾನವನ್ನೇರದಿದ್ದರೂ ಇನ್ನೆಲ್ಲ ದೃಷ್ಟಿಯಿಂದಲೂ ತಾನೇ ಸರ್ವಾಧಿಕಾರಿಯಾಗಿ 1492ರಿಂದ 1503ರ ವರೆಗೆ ವಿಜಯನಗರವನ್ನು ಆಳಿದ. ಇವನು ದೀರ್ಘಕಾಲ ಅಧಿಕಾರದಲ್ಲಿರದಿದ್ದರೂ ಇವನ ಸೇವೆ ಸಾಮ್ರಾಜ್ಯಕ್ಕೆ ತುಂಬಾ ಉಪಯುಕ್ತವಾಯಿತು. ಸಾಮ್ರಾಜ್ಯದ ವಿರುದ್ಧ ಬಂಡೆದ್ದ ಅನೇಕ ಸಾಮಂತರನ್ನು ಅಡಗಿಸಿದ. 1496ರಲ್ಲಿ ದಕ್ಷಿಣದ ಕಡೆ ದಂಡೆತ್ತಿಹೋಗಿ ತಂಜಾವೂರು ಮತ್ತು ತಿರುಚನಾಪಳ್ಳಿಯಲ್ಲಿದ್ದ ಸಾಮ್ರಾಜ್ಯ ಪ್ರತಿನಿಧಿಗಳ ದಬ್ಬಾಳಿಕೆಯನ್ನು ನಿಯಂತ್ರಿಸಿದ. ಕನ್ಯಾಕುಮಾರಿಯ ವರೆಗಿನ ಸಾಮ್ರಾಜ್ಯದ ಭಾಗವನ್ನು ತಹಬಂದಿಗೆ ತಂದಿದ್ದಲ್ಲದೆ ಸ್ಥಳೀಯ ಚೋಳ ಮತ್ತು ಚೇರ ರಾಜರುಗಳನ್ನು ಹಾಗೂ ಮಧುರೆಯ ಮಾನಭೂಷ ಮೊದಲಾದವರನ್ನು ಸಾಮ್ರಾಜ್ಯದ ಪರಮಾಧಿಕಾರವನ್ನು ಅಂಗೀಕರಿಸುವಂತೆ ಮಾಡಿದ. ಶ್ರೀರಂಗಪಟ್ಟಣವನ್ನು ಗೆದ್ದು ಉಮ್ಮತ್ತೂರು ಪಾಳೆಯಗಾರರನ್ನು ಸದೆಬಡಿದ.

ಉತ್ತರದ ಕಡೆ ಬಹಮನೀ ಸುಲ್ತಾನರನ್ನು ಯಶಸ್ವಿಯಾಗಿ ಎದುರಿಸಿದುದಲ್ಲದೆ ರಾಯಚೂರು ಮತ್ತು ಮುದ್ಗಲ್‌ಗಳನ್ನು 1493ರಲ್ಲಿ ಸಾಮ್ರಾಜ್ಯಕ್ಕೆ ದಕ್ಕುವಂತೆ ಮಾಡಿದ. 1499ರಲ್ಲಿ ಒರಿಸ್ಸದ ಗಜಪತಿ ಪ್ರತಾಪರುದ್ರ ಎಸಗಿದ ಆಕ್ರಮಣವನ್ನು ಹಿಮ್ಮೆಟ್ಟಿಸಿದ. ಈ ಹಲವು ಕಾರ್ಯಗಳಿಂದ ವಿಜಯನಗರದ ಸಾಮ್ರಾಜ್ಯದ ದೃಢತೆಯನ್ನು ಕಾಪಾಡುವಲ್ಲಿ ಗಣನೀಯ ಸೇವೆ ಸಲ್ಲಿಸಿದ. ನರಸನಾಯಕ 1503ರಲ್ಲಿ ತೀರಿಕೊಂಡ.

ಆಗ ಅಧಿಕಾರಕ್ಕೆ ಬಂದ ಇವನ ಮಗ ವೀರನರಸಿಂಹ ನಿರ್ಬಂಧದಲ್ಲಿದ್ದ ಸಾಳುವ ವಂಶದ ರಾಜನನ್ನು 1505ರಲ್ಲಿ ಕೊಲ್ಲಿಸಿ ತಾನೇ ರಾಜನಾಗಿ ವಿಜಯನಗರದಲ್ಲಿ ತುಳುವ ವಂಶದ ಪ್ರಭುತ್ವವನ್ನು ಸ್ಥಾಪಿಸಿದ. (ಡಿ.ಎಸ್.ಜೆ.)

**ನರಸಪ್ಪ ಪೇಟಕರ :** ಬಾದಾಮಿಯಲ್ಲಿ ನಡೆದ (1841) ಬ್ರಿಟಿಷ್ ವಿರೋಧಿ ಬಂಡಾಯದ ಮುಂದಾಳು. ಶಿವಾಜಿಯ ವಂಶಜರಾದ ಸಾತಾರಾದ ಛತ್ರಪತಿಗಳಲ್ಲಿ ಅಧಿಕಾರಿಯಾಗಿದ್ದ ಬ್ರಾಹ್ಮಣ ಕುಟುಂಬದ ದತ್ತಾತ್ರೇಯ ಪೇಟಕರ ಎಂಬವನ ಮಗ. ಈತನನ್ನು ನರಸಿಂಗರಾವ್ ಮತ್ತು ನಿಂಬಾಜಿ ಪೇಟಕರ ಎಂದೂ ಕರೆಯುತ್ತಿದ್ದರು. ನರಸಪ್ಪ ನಡೆಸಿದ ಬಂಡಾಯದ ವಿಚಾರ ಬ್ರಿಟಿಷ್ ಸರ್ಕಾರದ ಕಾಗದಪತ್ರಗಳಿಂದ ತಿಳಿದುಬರುತ್ತದೆ. ಬಾಲ್ಯದಲ್ಲಿ ಸಿಡುಬಿನಿಂದ ಒಂದು ಕಣ್ಣನ್ನು ಕಳೆದುಕೊಂಡಿದ್ದ ಈತ 1839ರಲ್ಲಿ ಸಾತಾರಾದ ಛತ್ರಪತಿ ಪ್ರತಾಪಸಿಂಹನನ್ನು ಪದಚ್ಯುತಗೊಳಿಸಿದ. ಬಗ್ಗೆ ತೀವ್ರ ಅಸಮಾಧಾನ ತಳೆದು, ಬ್ರಿಟಿಷರ ವಿರುದ್ಧ ಹೋರಾಟ ನಡೆಸುವ ಸಂಕಲ್ಪ ಮಾಡಿ, ಪುಣೆ, ನಾಸಿಕ, ಅಹಮದ್‌ನಗರ ಜಿಲ್ಲೆಗಳಲ್ಲಿ ಸಂಚರಿಸಿದ. ಸುರಪುರದಲ್ಲಿ ಜಮಾದಾರನಾಗಿದ್ದ ಸಲೀಮ್ ಅಥವಾ ಕೊಹೆರನ್ ಎಂಬಾತನ ನೆರವಿನಿಂದ ದೇವದುರ್ಗದಲ್ಲಿ ಸುಮಾರು 1000 ಅರಬ್ಬರ ಸೈನ್ಯವನ್ನು ಕೂಡಿಸಿದ. ಸುರಪುರ ರಾಜವಂಶದ ಪೆದನಾಯಕನೂ ಈತನಿಗೆ ನೆರವಾದ. ಹೈದರಾಬಾದಿನ ಬ್ರಿಟಿಷ್ ರೆಸಿಡೆಂಟ್ ಈ ಬಂಡಾಯವನ್ನು ಹತ್ತಿಕ್ಕುವಂತೆ ಸೂಚನೆ ನೀಡಿದಾಗ, ಹೈದರಾಬಾದಿನ ಸೇನೆಯಲ್ಲಿದ್ದ ಅನೇಕ ಅರಬ್ಬರು, ಬಂಡಾಯಗಾರರನ್ನು ಹತ್ತಿಕ್ಕುವ ಬದಲು, ಅವರ ಜೊತೆ ಸೇರಿಕೊಂಡರು. ಆಗ ನರಸಪ್ಪನ ಅನುಯಾಯಿಗಳ ಸಂಖ್ಯೆ 500ರಿಂದ 5000ದ ವರೆಗೆ ಇರಬಹುದು ಎಂದು ಬ್ರಿಟಿಷ್ ಅಧಿಕಾರಿಗಳ ಅಂದಾಜು. ಮೇ 27, 1841ರಂದು ಈ ಸೇನೆ ಬಾದಾಮಿಯನ್ನು ಪ್ರವೇಶಿಸಿ ಅಲ್ಲಿಯ ಕೋಟೆ ಕಚೇರಿಗಳನ್ನು ವಶಪಡಿಸಿಕೊಂಡಿತಲ್ಲದೆ, ಸಮೀಪದ ಬನಶಂಕರಿ ದೇವಾಲಯದಲ್ಲಿನ ನಗನಾಣ್ಯಗಳನ್ನು ಕೊಳ್ಳೆಹೊಡೆಯಿತು. ಆದರೆ 2-6-1841ರಂದು ಧಾರವಾಡ, ಬೆಳಗಾಂವಿಗಳಿಂದ ಬಂದ ಬ್ರಿಟಿಷ್ ಸೇನೆ ಬಂಡಾಯವನ್ನು ಹತ್ತಿಕ್ಕಿ ಬಾದಾಮಿ ಕೋಟೆಯನ್ನು ವಶಪಡಿಸಿಕೊಂಡಿತು. ನರಸಪ್ಪ ಮತ್ತು ಇತರ ನಾಯಕರು ಸೆರೆಸಿಕ್ಕಿದರು. ಅನೇಕರು ಸಾವಿಗೀಡಾದರು. ನರಸಪ್ಪನಿಗೆ ವಿಚಾರಣೆಯಲ್ಲಿ ಗಲ್ಲು ಶಿಕ್ಷೆವಿಧಿಸಿದರೂ ಮುಂದೆ ಆತ ಒಕ್ಕಣ್ಣ ಎಂಬ ಕಾರಣಕ್ಕಾಗಿ ಜೀವಾವಧಿ ಶಿಕ್ಷೆ ವಿಧಿಸಲಾಯಿತು. 1862ರಲ್ಲಿ ಈತ ಅಹಮದಾಬಾದ್ ಸೆರೆಮನೆಯಲ್ಲಿ ಅಸುನೀಗಿದ. ಬಾದಾಮಿಯ ದಂಗೆಯ ವಿಷಯದಲ್ಲಿ, "ವಿದೇಶೀಯರ ವಿರುದ್ಧ ತಾವೆಲ್ಲ ಒಂದುಗೂಡಬೇಕೆಂಬ ಭಾವನೆಯಿಂದ ಉತ್ತೇಜಿತರಾಗಿ, ಆಗ ಕಂಪನಿಯ ಸೇವೆಯಲ್ಲಿದ್ದವರೂ ತಮ್ಮ ಹುದ್ದೆಗಳನ್ನು ತ್ಯಜಿಸಿ ಸ್ವಾತಂತ್ರ್ಯ ಯೋಧರನ್ನು ಸೇರಿಕೊಂಡರು. ಬಾದಾಮಿಯ ಕೆಚ್ಚಿನ ಹೋರಾಟ ಬ್ರಿಟಿಷರ ನೀತಿಯಿಂದ ಭಾರತೀಯರಲ್ಲಿ ಕಾಣಿಸಿದ ಪ್ರತಿಕ್ರಿಯೆಗೆ ಒಂದು ಉದಾಹರಣೆ. ಭದ್ರತೆಗಿಂತ ಸ್ವಾತಂತ್ರ್ಯವು ಹೆಚ್ಚು ಅಮೂಲ್ಯವಾದುದೆಂದು ಭಾರತೀಯರಿಗೆ ತೋರುತ್ತಿತ್ತು" ಎಂದು ಆಗ ಮುಂಬಯಿಯ ಗವರ್ನರನೂ ಖ್ಯಾತ ಇತಿಹಾಸಕಾರನೂ ಆದ ಎಲ್‌ಫಿನ್‌ಸ್ಟನ್ ಹೇಳಿದ್ದಾನೆ. (ಎಸ್.ಕೆ.)

**ನರಸಮಂಗಲ :** ಚಾಮರಾಜನಗರ ಜಿಲ್ಲೆಯ ಅದೇ ತಾಲ್ಲೂಕಿನ

ಒಂದು ಗ್ರಾಮ. ಚಾಮರಾಜನಗರದ ಆಗ್ನೇಯಕ್ಕೆ ಸು. 24 ಕಿಮೀ ದೂರದಲ್ಲಿದೆ. ಇಲ್ಲಿನ ಪ್ರಾಚೀನ ರಾಮಲಿಂಗೇಶ್ವರ ದೇವಾಲಯದಿಂದ ಪ್ರಸಿದ್ಧವಾಗಿದೆ. ಇದು ಗಂಗರ ಶೈಲಿಯ ದೇವಾಲಯ. ಸು. 8ನೆಯ ಶತಮಾನದ್ದು. ಈ ದೇವಾಲಯ ಶೈಲಿಯ ದೃಷ್ಟಿಯಿಂದ ತಲಕಾಡು ಗಂಗರ ಕಾಲದ್ದೆಂದು ಹೇಳಬಹುದು. ದೇವಾಲಯದಲ್ಲಿ ವಿಶಾಲವಾದ ಗರ್ಭಗೃಹ. ಕಿರಿದಾದ ಸುಕನಾಸಿ, ಒಂಬತ್ತು ಅಂಕಣಗಳ ನವರಂಗಗಳು ಇವೆ. ಗರ್ಭಗೃಹದ ಮೇಲಿರುವ ಇಟ್ಟಿಗೆ ಮತ್ತು ಗಾರೆಯಿಂದ ಮಾಡಿದ ವಿಮಾನ ಮಹಾಬಲಿಪುರದ ವಿಮಾನವನ್ನು ವಿಶೇಷವಾಗಿ ಹೋಲುತ್ತದೆ. ಅಡಿಪಾಯದ ಪಟ್ಟಿಕೆಗಳು ಗುಂಡಗಿದ್ದು ಮೇಲಿನದರಲ್ಲಿ ಮಕರಶಿರದ ಮೀನು, ನೀರು ಕುದುರೆ, ಸಿಂಹ ಮುಂತಾದ ಪ್ರಾಣಿಗಳ ಚಿತ್ರಗಳಿವೆ. ಅಡಿಪಾಯದ ಮೇಲಿನ ಭಿತ್ತಿಯ ಭಾಗದ ಗೂಡುಗಳಲ್ಲಿ ಅಲಂಕೃತ ಯಕ್ಷ ಮತ್ತು ಅಪ್ಸರೆಯರ ವಿಗ್ರಹಗಳಿವೆ. ಈ ದೇವಾಲಯದ ಶಿಲ್ಪಗಳು ಬಹುಸುಂದರ ಕೃತಿಗಳು. ದೇವಾಲಯದಲ್ಲಿರುವ ಅಂಧಕಾಸುರಮರ್ದನ ತಾಂಡವೇಶ್ವರ, ದಕ್ಷಿಣಾಮೂರ್ತಿ, ವಿಷ್ಣು, ಉಗ್ರನರಸಿಂಹ, ಬ್ರಹ್ಮ, ಎದೆ, ಕೃಶವಾದ ಕಟಿಭಾಗ, ನೀಳವಾದ ಕೈಕಾಲುಗಳು ಮುಂತಾದ ಲಕ್ಷಣಗಳಿಂದ ಬಹು ಶ್ರೇಷ್ಠ ಶಿಲ್ಪಗಳಾಗಿವೆ. ರಾಮಾಯಣದ ಕಥೆಗೆ ಸಂಬಂಧಪಟ್ಟ ಹಲವಾರು ಸನ್ನಿವೇಶಗಳನ್ನು ಗೋಡೆಗಳ ಮೇಲೆ ಕೆತ್ತಲಾಗಿದೆ. ನವರಂಗದಲ್ಲಿರುವ ಭುವನೇಶ್ವರಿ ಬಹು ಸುಂದರವಾಗಿದೆ. ಅಂಧಕಾಸುರನ ಮೇಲೆ ನರ್ತಿಸುತ್ತಿರುವ ಅಷ್ಟಭುಜ ಶಿವನ ಸುತ್ತಲೂ ಅಷ್ಟದಿಕ್ಪಾಲಕರನ್ನು ಕೆತ್ತಿರುವ ಈ ಭುವನೇಶ್ವರಿ ಬಹಳ ಗಮನಾರ್ಹವಾದುದು. ನದರಂಗದ ಉತ್ತರದಲ್ಲಿರುವ ಪರಶುರಾಮ ಮತ್ತು ಗಣೇಶ ವಿಗ್ರಹಗಳು ಸುಂದರವಾದುವು.

ಈ ದೇವಾಲಯದ ಆಗ್ನೇಯಕ್ಕೆ ಇರುವ ಸಣ್ಣ ದೇವಾಲಯದಲ್ಲಿ ಸುಂದರವಾದ ಸಪ್ತಮಾತೃಕೆಯರ ವಿಗ್ರಹಗಳಿವೆ. ಇವುಗಳ ಜೊತೆಯಲ್ಲಿಯೇ ವೀರಭದ್ರ, ಗಣೇಶ, ದಕ್ಷಬ್ರಹ್ಮ, ಭೈರವ, ಕುಮಾರ, ಮಹಿಷಾಸುರಮರ್ದಿನಿ, ಜನಾರ್ದನ, ವಾರಾಹಿ ವಿಗ್ರಹಗಳಿವೆ. ಇವುಗಳೂ ಗಂಗರ ಕಾಲದವೆಂದು ಶಿಲ್ಪಶೈಲಿಯಿಂದ ಹೇಳಬಹುದು. ದೇವಾಲಯದ ದಕ್ಷಿಣಕ್ಕೆ ಇರುವ ಶಾಸನಗಳಲ್ಲಿ ಹೊಯ್ಸಳ ವೀರಬಲ್ಲಾಳ ದೇವಾಸ್ಥಾನಕ್ಕೆ ದತ್ತಿಬಿಟ್ಟ ವಿಷಯ ನಿರೂಪಿತವಾಗಿದೆ. ಈ ದೇವಾಲಯದಲ್ಲಿ ತಮಿಳು ಶಾಸನಗಳೂ ದೊರಕಿವೆ.

ನರಸಮಂಗಲ-ಅರಕಲವಾಡಿ ಮಾರ್ಗದಲ್ಲಿ ಅನೇಕ ಬೃಹತ್ ಶಿಲಾಸಮಾಧಿಗಳು ಇವೆ. (ಎ.ವಿ.ಎಸ್.)

**ನರಸಿಂಗರಾವ್, ಮಾನ್ವಿ :** 1911-69. ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯದಲ್ಲಿ ಕನ್ನಡ ಇಲಾಖೆಯ ಮುಖ್ಯಸ್ಥರಾಗಿದ್ದ ಭಾಷಾಸೇವಕರು. ರಾಯಚೂರು ಜಿಲ್ಲೆಯ ಮಾನ್ವಿಯವರು 1911 ಏಪ್ರಿಲ್ 2ರಂದು ಜನಿಸಿದರು. ತಂದೆ ಪೇಷಕಾರ್ ರಾಘವೇಂದ್ರರಾವ್ ಮಾನ್ವಿ. ತಾಯಿ ಚಂದ್ರಮ್ಮ. ಆರಂಭದ ವ್ಯಾಸಂಗವನ್ನು ರಾಯಚೂರಿನಲ್ಲಿ ಮುಗಿಸಿದ ಇವರು ಕನ್ನಡವನ್ನು ಐಚ್ಛಿಕ ವಿಷಯವನ್ನಾಗಿ ಓದಿ ಉಸ್ಮಾನಿಯ ವಿಶ್ವವಿದ್ಯಾಲಯದಿಂದ ಬಿ.ಎ. (1932) ಪದವಿಯನ್ನು ಪ್ರಥಮ ಶ್ರೇಣಿಯಲ್ಲಿ ಪಡೆದರು. ಅನಂತರ ನಿಜಾಮ ಸರ್ಕಾರದ ವಿದ್ಯಾರ್ಥಿವೇತನವನ್ನು ಪಡೆದು, ಮೈಸೂರು ವಿಶ್ವವಿದ್ಯಾನಿಲಯದಿಂದ ಎಂ.ಎ. (1936) ಪದವಿಯನ್ನು ಉಪಕುಲಪತಿಗಳ ಸುವರ್ಣ ಪದಕದೊಂದಿಗೆ ಪಡೆದರು. ಇವರು ಉಸ್ಮಾನಿಯ ವಿಶ್ವವಿದ್ಯಾಲಯದ ಕನ್ನಡ ಇಲಾಖೆಯ ಸಂಶೋಧನ ವಿಭಾಗದಲ್ಲಿ ಕೆಲಸ ಮಾಡಿ, ನಡುಗನ್ನಡ ಎಂಬ ಪ್ರೌಢ ಪ್ರಬಂಧವನ್ನು ಬರೆದರು. ಅನಂತರ ಹೈದರಾಬಾದಿನಲ್ಲಿ ನಿಜಾಮ ಸರ್ಕಾರದ ಸುದ್ದಿ ಖಾತೆಯಲ್ಲಿ ಕನ್ನಡ ಭಾಷಾಂತರಕಾರರಾಗಿಯೂ ಹೈದರಾಬಾದ್ ಸಮಾಚಾರ್ ಎಂಬ ಮಾಸಪತ್ರಿಕೆಯ ಸಂಪಾದಕರಾಗಿಯೂ ಹೈದರಾಬಾದಿನ ವಿಧಾನ ಸಭೆಯಲ್ಲಿ ಚರ್ಚಾಸಂಪಾದಕರಾಗಿಯೂ ಸೇವೆ ಸಲ್ಲಿಸಿದ ಇವರು ಸುದ್ದಿ ಖಾತೆಯ ಉಪನಿರ್ದೇಶಕರಾಗಿ ಅನಂತರ ಆ ಇಲಾಖೆಯ ನಿರ್ದೇಶಕರಾಗಿ ಕೆಲಸ ಮಾಡಿ ನಿವೃತ್ತರಾದರು (1966). ಅನಂತರ ಇವರಿಗೆ ಉಸ್ಮಾನಿಯ ವಿಶ್ವವಿದ್ಯಾಲಯದಿಂದ ಕನ್ನಡ ಶಾಖೆಗೆ ಮುಖ್ಯಸ್ಥರಾಗಿ ಬರಬೇಕೆಂದು ಆಹ್ವಾನ ಬಂದುದರಿಂದ ಅನಂತರ ಆ ಹುದ್ದೆಯನ್ನು ವಹಿಸಿಕೊಂಡರು. ಕನ್ನಡ ಇಲಾಖೆಯನ್ನು ಅಭಿವೃದ್ಧಿಪಡಿಸುವ ಕಾರ್ಯದಲ್ಲಿ ಇವರು ತೊಡಗಿದ್ದಾಲೇ 1969 ಸೆಪ್ಟಂಬರ್ 9ರಂದು ಹೃದಯಾಘಾತದಿಂದ ನಿಧನರಾದರು.

ನರಸಿಂಗರಾಯರು ಪ್ರತಿಭಾವಂತ ಪಂಡಿತರೂ ಒಳ್ಳೆಯ ವಾಗ್ಮಿಗಳೂ ಆಗಿದ್ದರು. ಇವರು ಬರೆದಿರುವ ಕನ್ನಡ ಯಾತ್ರೆ ಒಂದು ಉತ್ತಮ ಪ್ರವಾಸ ಗ್ರಂಥ. ಸರಸ್ವತೀ ತತ್ತ್ವ ಎಂಬುದು ಕಾವ್ಯಮೀಮಾಂಸೆಗೆ ಸಂಬಂಧಿಸಿದ ಕೃತಿ. ಕನ್ನಡ ಸಾಹಿತ್ಯ ಪರಿಚಯ ಎಂಬುದು ಹಿಂದಿಯಲ್ಲಿ ಇರುವ ಪ್ರಕಟಿಸಿರುವ ಗ್ರಂಥ. ಇವರು ಪ್ರಕಟಿಸಿರುವ ಲೇಖನಗಳ ಸಂಖ್ಯೆ ಅಪಾರವಾಗಿದೆ. (ಷಿ.ವಿ.)

**ನರಸಿಂಹ I** (ವಿಜಯನಗರ) **:** ಸಾಳುವ ವಂಶದ ರಾಜ. ಸಾಳುವ (1485-91) ರಾಜಮನೆತನದ ಸಂಸ್ಥಾಪಕ. ಗುಂಡ ಎಂಬುವನ ಮಗ. ನರಸಿಂಹನ ಪೂರ್ವಿಕರು ಸಂಗಮ ಸಂತತಿಯ ಅರಸರ ಕೈಕೆಳಗೆ ಸೇವೆಸಲ್ಲಿಸುತ್ತ ಬಂದಿದ್ದರು. ನರಸಿಂಹ ಮೊದಲು ಇಮ್ಮಡಿ ವಿರೂಪಾಕ್ಷನ ಕಾಲದಲ್ಲಿ ಚಂದ್ರಗಿರಿ ಪ್ರಾಂತ್ಯದ ಮಹಾಮಂಡಲೇಶ್ವರನಾಗಿ ಕೆಲಸ ನಿರ್ವಹಿಸುತ್ತಿದ್ದ. ಆದರೆ ಆಗ ಕೇಂದ್ರ ಸರ್ಕಾರ ದುರ್ಬಲವಾಗಿದ್ದುದರಿಂದ ಸುತ್ತಮುತ್ತಣ ಪ್ರದೇಶಗಳ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದ. ಅಲ್ಲದೆ ಆ ಕಾಲದಲ್ಲಿ ನಡೆದ ಅನೇಕ ಘಟನೆಗಳಿಂದ ನರಸಿಂಹನ ಶೌರ್ಯ ಪ್ರಕಟನೆಗೆ ಅವಕಾಶವಾಗಿ, ತತ್ಕಾಲದ ರಾಜಕೀಯದಲ್ಲಿ ಈತ ಪ್ರಭಾವಿಯಾಗಿ ಬೆಳೆದ. 1463ರಲ್ಲಿ ಒರಿಸ್ಸಾದ ಗಜಪತಿ ವಿಜಯನಗರದ ಮೇಲೆ ದಾಳಿ ಮಾಡಿದುದರಿಂದ ನರಸಿಂಹ ಆಳುತ್ತಿದ್ದ ಪ್ರಾಂತ್ಯಗಳಿಗೆ ಅಪಾರ ನಷ್ಟ ಉಂಟಾಯಿತು. ನರಸಿಂಹ ಒರಿಸ್ಸಾದ ರಾಜನ ಮೇಲೆ ಸೇಡನ್ನು ತೀರಿಸಿಕೊಳ್ಳಲು ಹವಣಿಸುತ್ತಿದ್ದ. ಈ ಅವಕಾಶ 1470ರಲ್ಲಿ ಒದಗಿ ಬಂದಿತು. ಕಪಿಲೇಂದ್ರನ ಮರಣಾ ನಂತರ ಆಂತರಿಕ ಕಲಹಗಳುಂಟಾದುದರಿಂದ ನರಸಿಂಹ ಒರಿಸ್ಸಾದ ರಾಜ್ಯವನ್ನು ಆಕ್ರಮಿಸಿ ಉದಯಗಿರಿ ಕೋಟೆಯನ್ನು ಗೆದ್ದುಕೊಂಡ. ಆದರೆ ಇದೇ ಸಮಯದಲ್ಲಿ ತಮಿಳು ಜಿಲ್ಲೆಗಳಲ್ಲಿ ದಂಗೆ ಕಾಣಿಸಿಕೊಂಡಿದ್ದುದರಿಂದ ನರಸಿಂಹ ಅಲ್ಲಿಗೆ ಧಾವಿಸಬೇಕಾಯಿತು. ಆದರೆ ಈ ದಂಗೆಯನ್ನಡಗಿಸಿ ಹಿಂದಿರುಗುವಷ್ಟರಲ್ಲಿ ಬಹಮನೀ ಸುಲ್ತಾನ ಮುಮ್ಮಡಿ ಮಹಮ್ಮದ್ ಷಾ ತೆಲಂಗಾಣ ಮತ್ತು ಆಂಧ್ರದ ತೀರಪ್ರದೇಶಗಳನ್ನು ಗೆದ್ದುಕೊಂಡಿದ್ದ. ಆದರೂ ನರಸಿಂಹ ಧೈರ್ಯಗುಂದದೆ ಯುಕ್ತಿಯಿಂದ ಮಸುಲಿಪಟ್ಟಣ ಬಂದರು ಮತ್ತು ಕೊಂಡವೀಡು ಪ್ರದೇಶಗಳನ್ನು 1480ರಲ್ಲಿ ಗೆದ್ದುಕೊಂಡ. 1481ರಲ್ಲಿ ಮುಮ್ಮಡಿ ಮಹಮ್ಮದ್ ಷಾನ ದಂಡನಾಯಕರು ಕಂಚಿಯ ಮೇಲೆ ದಾಳಿ ಮಾಡಿ ಅಪಾರ ಐಶ್ವರ್ಯದಿಂದ ಹಿಂದಿರುಗುತ್ತಿದ್ದಾಗ ನರಸಿಂಹನ ದಂಡನಾಯಕರು ಅವರ ಮೇಲೆರಗಿ ಅವರನ್ನು ಸೋಲಿಸಿ ಅಪಾರ ಸಂಪತ್ತನ್ನು ವಶಪಡಿಸಿಕೊಂಡರು. ಈ ಎಲ್ಲ ಕಾರ್ಯಾಚರಣೆಗಳಿಂದಾಗಿ 1482ರ ವೇಳೆಗೆ ನರಸಿಂಹ ವಿಜಯನಗರದ ರಾಜ್ಯದಲ್ಲಿ ಪ್ರಬಲ ವ್ಯಕ್ತಿಯಾದ. ಇವನು ಒರಿಸ್ಸಾ ಮತ್ತು ಬಹಮನೀ ರಾಜ್ಯಗಳ ದಾಳಿಗಳನ್ನು ಹಿಮ್ಮೆಟ್ಟಿಸಿ ವಿಜಯನಗರ ರಾಜ್ಯವನ್ನು ರಕ್ಷಿಸಿದನಲ್ಲದೆ ವಿಜಯನಗರ ರಾಜ್ಯದ ಪೂರ್ವಭಾಗದ ಪ್ರಾಂತ್ಯಗಳಿಗೆಲ್ಲ, ಅಂದರೆ ರಾಜಮಹೇಂದ್ರಿಯಿಂದ ರಾಮೇಶ್ವರದವರೆಗೂ ಅಧಿಪತಿಯಾಗಿ ಪ್ರಸಿದ್ಧಿಗೆ ಬಂದ.

ಈ ಮಧ್ಯೆ ಸಮ್ರಾಟ ಇಮ್ಮಡಿ ವಿರೂಪಾಕ್ಷ ಕೊಲೆಯಾಗಿ ಅವನ ಮಗ ಪ್ರೌಢದೇವರಾಯ ರಾಜನಾದ. ಆದರೆ ಅವನ ಕಾಲದಲ್ಲೂ ರಾಜ್ಯದಲ್ಲಿ ಅರಾಜಕತೆ ಮುಂದುವರೆಯಿತು. ಅವನು ರಾಜ್ಯದ ಹಿತಚಿಂತನೆಗೆ ಎಳ್ಳಷ್ಟೂ ಗಮನ ಕೊಡಲಿಲ್ಲ. ಆದ್ದರಿಂದ ವಿಜಯನಗರ ರಾಜ್ಯವನ್ನು ರಕ್ಷಿಸಬೇಕಾದರೆ ಹಳೆಯ ರಾಜವಂಶವನ್ನು ಬದಿಗೊತ್ತಬೇಕೆಂದು ನರಸಿಂಹ ನಿರ್ಧರಿಸಿದ. ಈ ಅಭಿಪ್ರಾಯವನ್ನು ಕೆಲವು ಪ್ರಾಂತ್ಯಾಧಿಕಾರಿಗಳು, ದಂಡನಾಯಕರುಗಳು ಎತ್ತಿಹಿಡಿದರು. ಅವರಲ್ಲಿ ಸಾಳುವ ನರಸಿಂಹನ ಜೊತೆಯಲ್ಲಿ ಅನೇಕ ಯುದ್ಧಗಳಲ್ಲಿ ಪಾಲ್ಗೊಂಡು ಸೇವೆ ಸಲ್ಲಿಸಿದ್ದ ಈಶ್ವರನಾಯಕ ಮತ್ತು ಅವನ ಮಗ ನರಸನಾಯಕ ಪ್ರಮುಖರು. ಸಾಳುವ ನರಸಿಂಹನ ಆಜ್ಞೆಯಂತೆ ನರಸನಾಯಕ ವಿಜಯನಗರ ರಾಜಧಾನಿಯನ್ನು ವಶಪಡಿಸಿಕೊಂಡ. ಪ್ರೌಢದೇವರಾಯ ಪಲಾಯನ ಮಾಡಿದ. ನರಸನಾಯಕ

ಸಾಳುವ ನರಸಿಂಹನೇ ವಿಜಯನಗರದ ರಾಜನೆಂದು ಘೋಷಿಸಿದ. ಹೀಗೆ 1485ರಲ್ಲಿ ಸಂಗಮ ಮನೆತನದ ಆಳ್ವಿಕೆ ಅಂತ್ಯಗೊಂಡು ಸಾಳುವ ಮನೆತನದ ಅಧಿಕಾರ ಸ್ಥಾಪಿತವಾಯಿತು. ನರಸಿಂಹ ಅಧಿಕಾರದಾಸೆಯಿಂದ ಸಿಂಹಾಸನವನ್ನು ಅಪಹರಿಸಿದನೆಂದು ಹೇಳಿದರೆ ತಪ್ಪಾಗುತ್ತದೆ. ಸಂಗಮ ಸಂತತಿಯ ಕೊನೆಯ ಅರಸುಗಳು ತಮ್ಮ ಕರ್ತವ್ಯವನ್ನು ಮರೆತುದರಿಂದ ನರಸಿಂಹ ಈ ಕಾರ್ಯವನ್ನು ಮಾಡಬೇಕಾಯಿತು. ಇದರಿಂದ ವಿಜಯನಗರ ರಾಜ್ಯವು ಸಂಪೂರ್ಣವಾಗಿ ನಾಶವಾಗುವುದನ್ನು ತಡೆದಂತಾಯಿತು.

ನರಸಿಂಹ ಅನಂತರ ಕೇವಲ ಆರು ವರ್ಷಗಳ ಕಾಲ ಮಾತ್ರ ರಾಜ್ಯಭಾರ ಮಾಡಿದ. ಇವನು ಅಧಿಕಾರಕ್ಕೆ ಬಂದ ತರುಣದಲ್ಲಿ ಮುಖ್ಯವಾಗಿ ರಾಜ್ಯದಲ್ಲಿ ಶಾಂತಿಯನ್ನು ಸ್ಥಾಪಿಸುವುದಕ್ಕೆ ಗಮನ ಕೊಡಬೇಕಾಯಿತು. ಆದರೆ ಈ ದಿಶೆಯಲ್ಲಿ ಇವನು ಸಂಪೂರ್ಣವಾಗಿ ಯಶಸ್ವಿಯಾಗಲಿಲ್ಲ. ಕೆಲವು ಪ್ರಾಂತ್ಯಾಧಿಕಾರಿಗಳು ಇವನ ಅಧಿಕಾರವನ್ನು ವಿರೋಧಿಸಿದರು. ಅವರಲ್ಲಿ ಮುಖ್ಯರಾದವರು ಉಮ್ಮತ್ತೂರಿನ ಪಾಳೆಯಗಾರರು ಮತ್ತು ಶ್ರೀರಂಗಪಟ್ಟಣದ ಅರಸರು. ಆದ್ದರಿಂದ ಅವರ ವಿರುದ್ಧವಾಗಿ ಸತತವಾಗಿ ಹೋರಾಡಬೇಕಾಯಿತು. ಆಂತರಿಕ ವ್ಯವಹಾರಗಳನ್ನು ಸರಿಪಡಿಸುತ್ತಿರುವಾಗಲೇ ನರಸಿಂಹ ವಿದೇಶೀ ದಾಳಿಗಳನ್ನೂ ಎದುರಿಸಬೇಕಾಯಿತು. ಗಜಪತಿ ಪುರುಷೋತ್ತಮ ಸು. 1489ರಲ್ಲಿ ಉದಯಗಿರಿಗೆ ಮುತ್ತಿಗೆ ಹಾಕಿದ. ಈ ಯುದ್ಧದಲ್ಲಿ ನರಸಿಂಹ ಸೋತು ಬಂಧಿಸಲ್ಪಟ್ಟು, ಅನಂತರ ಬಿಡುಗಡೆಹೊಂದಿದ ಎಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಈ ವಿಷಯ ಸ್ಪಷ್ಟವಿಲ್ಲ. ಆದರೆ ಒಟ್ಟಿನಲ್ಲಿ ಈ ಯುದ್ಧದಿಂದಾಗಿ ಉದಯಗಿರಿ ಮತ್ತು ಸುತ್ತಮುತ್ತಣ ಪ್ರದೇಶಗಳನ್ನು ಪುರುಷೋತ್ತಮನಿಗೆ ಬಿಟ್ಟುಕೊಡಬೇಕಾಯಿತು. ಅನಂತರ 1491ರಲ್ಲಿ ನರಸಿಂಹ ಮೃತನಾದ. ಆಗ ಇನ್ನೂ ಚಿಕ್ಕವರಾಗಿದ್ದ ತನ್ನ ಇಬ್ಬರು ಪುತ್ರರ ಪೋಷಕನಾಗಿ ಮಂತ್ರಿ ತುಳುವ ನರಸಾನಯಕನನ್ನು ನೇಮಿಸಿದ.ಆದರೆ ಈ ವ್ಯವಸ್ಥೆ ಸಾಳುವ ಸಂತತಿಯ ನಿರ್ಮೂಲನಕ್ಕೆ ಕಾರಣವಾಯಿತು. (ನೋಡಿ: ನರಸನಾಯಕ). (ಎಸ್.)

**ನರಸಿಂಹ 1I** (ವಿಜಯನಗರ) **:** ಸಾಳುವ ವಂಶದ ರಾಜ (1491-1505). ಸಾಳುವ ವಂಶದ ಆಳ್ವಿಕೆಯ ಸ್ಥಾಪಕನಾದ ಒಂದನೆಯ ನರಸಿಂಹನ ಕಿರಿಯ ಮಗ. ಒಂದನೆಯ ನರಸಿಂಹ ಮೃತನಾಗಿದಾಗ ಅವನ ಮಕ್ಕಳು ಅಪ್ರಾಪ್ತ ವಯಸ್ಕರಾಗಿದ್ದುದರಿಂದ ಮಂತ್ರಿಯಾಗಿದ್ದ ತುಳುವ ವಂಶದ ನರಸನಾಯಕ ರಾಜಕುಮಾರರ ಪೋಷಕನಾಗಿಯೂ ರಾಜಪ್ರತಿನಿಧಿಯಾಗಿಯೂ ನೇಮಕ ಗೊಂಡ. ಹಿರಿಯ ಮಗನಾದ ತಿಮ್ಮಭೂಪನಿಗೆ ನರಸನಾಯಕ ಪಟ್ಟಕಟ್ಟಿದ. ಆದರೆ ನರಸನಾಯಕನ ವಿರೋಧಿಯಾಗಿದ್ದ ತಿಮ್ಮರಸ ಎಂಬುವನು ತಿಮ್ಮಭೂಪನನ್ನು ಕೊಲೆ ಮಾಡಿಸಿದ. ಅನಂತರ ಕಿರಿಯನಾದ ಈ ಎರಡನೆಯ ನರಸಿಂಹನಿಗೆ ಪಟ್ಟಾಭಿಷೇಕವಾಯಿತು. ಆದರೆ ರಾಜಪ್ರತಿನಿಧಿಯಾದ ನರಸನಾಯಕ ಅಧಿಕಾರವನ್ನು ತನ್ನಲ್ಲೇ ಕೇಂದ್ರೀಕರಿಸಿಕೊಂಡು ಅನೇಕ ಬಿರುದುಗಳನ್ನು ಧರಿಸಿ ಸಾರ್ವಭೌಮನಂತೆ ಆಳತೊಡಗಿದ. ಇದರಿಂದ ರಾಜ ಇಮ್ಮಡಿ ನರಸಿಂಹನಿಗೂ ರಾಜಪ್ರತಿನಿಧಿ ನರಸನಾಯಕನಿಗೂ ಮನಸ್ತಾಪವೇರ್ಪಟ್ಟಿತು. ತಿಮ್ಮಭೂಪನನ್ನು ಕೊಲ್ಲಿಸಿದ ತಿಮ್ಮರಸನನ್ನು ಶಿಕ್ಷಿಸಬೇಕೆಂದು ನರಸನಾಯಕ ರಾಜನಿಗೆ ಸೂಚಿಸಿದ. ಆದರೆ ರಾಜ ಆ ಸೂಚನೆಯನ್ನು ತಿರಸ್ಕರಿಸಿದ. ಅಲ್ಲದೆ ತಿಮ್ಮರಸನಿಗೆ ಆಶ್ರಯವನ್ನಿತ್ತ. ಇದರಿಂದ ಬೇಸತ್ತ ನರಸನಾಯಕ ರಾಜಧಾನಿಯನ್ನು ಬಿಟ್ಟು ಪೆನುಕೊಂಡಕ್ಕೆ ಹೋಗಿ ನೆಲಸಿದ. ಆದರೂ ಕೂಡ ಇಮ್ಮಡಿ ನರಸಿಂಹ ಮತ್ತು ನರಸನಾಯಕರ ನಡುವೆ ಸೌಹಾರ್ದತೆ ಏರ್ಪಡಲೇ ಇಲ್ಲ. ವೈರತ್ವ ಬೆಳೆಯತೊಡಗಿತು. ಕೋಪಗೊಂಡ ನರಸನಾಯಕ ಪೆನುಕೊಂಡದಿಂದ ಒಂದು ದೊಡ್ಡ ಸೈನ್ಯದೊಡನೆ ವಿಜಯನಗರವನ್ನು ಮುತ್ತಿ ತಿಮ್ಮರಸನನ್ನು ಕೊಲ್ಲಿಸಿದ. ಇಮ್ಮಡಿ ನರಸಿಂಹನನ್ನು ಸೋಲಿಸಿದ. ಅವನನ್ನು ಪೆನುಕೊಂಡಕ್ಕೆ ಕಳುಹಿಸಿ ಸೆರೆಯಲ್ಲಿಟ್ಟ. ನರಸನಾಯಕ ತಾನೇ ರಾಜನಂತೆ ಆಳ್ವಿಕೆ ನಡೆಸಿದ. ನರಸನಾಯಕನ ಮರಣಾನಂತರ (1503) ಅಧಿಕಾರ ವಹಿಸಿದ ಅವನ ಮಗ ವೀರನರಸಿಂಹ ಅಭಿಷಿಕ್ತ ದೊರೆ ಇಮ್ಮಡಿ ನರಸಿಂಹನನ್ನು 1505ರಲ್ಲಿ ಕೊಲೆ ಮಾಡಿಸಿ ತಾನೇ ರಾಜ್ಯವನ್ನು ವಹಿಸಿಕೊಂಡ. ಇಮ್ಮಡಿ ನರಸಿಂಹನೊಂದಿಗೆ ಸಾಳುವ ಮನೆತನದ ಆಳ್ವಿಕೆಯೂ ಅಂತ್ಯಗೊಂಡಿತು. (ಎಸ್;.ಕೆ.ಎಸ್.ಎಸ್.)

**ನರಸಿಂಹ I (ಹೊಯ್ಸಳ) :** ವಿಷ್ಣುವರ್ಧನನ ಮಗ ಮತ್ತು ಅವನ ಉತ್ತರಾಧಿಕಾರಿ (1142-73). ಇವನಿಗೆ ವಿಜಯನರಸಿಂಹ ಮತ್ತು ಪ್ರತಾಪ ನರಸಿಂಹ ಎಂಬ ಹೆಸರುಗಳೂ ಇದ್ದವು. ತಾಯಿ ಲಕ್ಷ್ಮೀದೇವಿ. ಹುಟ್ಟಿದ್ದು 1133ರಲ್ಲಿ. ಜನಿಸಿದ ಸ್ವಲ್ಪ ಕಾಲದಲ್ಲೇ ವಿಷ್ಣುವರ್ಧನ ಇವನಿಗೆ ಯುವರಾಜ ಪಟ್ಟವನ್ನು ಕಟ್ಟಿದ. 1142ರಲ್ಲಿ ತಂದೆ ಮರಣ ಹೊಂದಿದಾಗ ಯುವರಾಜ ನರಸಿಂಹ ಇನ್ನೂ ಎಂಟು ವರ್ಷದ ಬಾಲಕನಾಗಿದ್ದರಿಂದ ಸಚಿವರು ನರಸಿಂಹನ ಪಟ್ಟಾಭಿಷೇಕವನ್ನು ನೆರವೇರಿಸಿ, ಇವನು ಪ್ರಾಪ್ತವಯಸ್ಕನಾಗುವವರೆಗೂ ಆಡಳಿತ ನಡೆಸಿದರು. ನರಸಿಂಹ ಅಶಕ್ತ ದೊರೆ. ಈತ ಪಟ್ಟವೇರಿದೊಡನೆಯೇ ವಿಷ್ಣುವರ್ಧನನ ಕಾಲದಲ್ಲಿ ಸೋಲನ್ನನುಭವಿಸಿದ್ದ ಚಾಳುಕ್ಯ ಮಾಂಡಲಿಕರಾದ ಹಾನಗಲ್ಲಿನ ಕದಂಬರು ಪೊಂಬುಚ್ಚದ ಸಾಂತರರು ಮತ್ತು ಉಚ್ಚಂಗಿಯ ಪಾಂಡ್ಯರು ಹೊಯ್ಸಳ ರಾಜ್ಯದ ಗಡಿಗಳನ್ನು ಆಕ್ರಮಿಸಿದರು. ನರಸಿಂಹನ ಸೇನಾಧಿಕಾರಿಗಳು ನಿಷ್ಠೆಯಿಂದ ಹೋರಾಡಿದರೂ ಬಂಕಾಪುರವನ್ನು ಒಳಗೊಂಡು ಹರಿಹರದಿಂದ ಉತ್ತರಕ್ಕಿಂದ್ದ ಗಳಿಕೆಯೆಲ್ಲಾ ಹೊಯ್ಸಳರ ಕೈಬಿಟ್ಟಿತಲ್ಲದೆ, ನರಸಿಂಹ ಚಾಳುಕ್ಯ ಸಾರ್ವಭೌಮತ್ವವನ್ನು ಪುನಃ ಒಪ್ಪಬೇಕಾಯಿತು. ಅಲ್ಲದೆ ಚೋಳರೂ ಕೋಲಾರ ಜಿಲ್ಲೆಯ ಸ್ವಲ್ಪ ಭಾಗಗಳನ್ನು ಕೆಲಕಾಲ ಆಕ್ರಮಿಸಿಕೊಂಡರು. ಅತ್ತ ಚಂಗಾಳ್ವರೂ ಸ್ವತಂತ್ರರಾಗಲು ಪ್ರಯತ್ನಿಸಿದರು. ಆದರೆ ಇದು ಸಾಗಲಿಲ್ಲ. ಗಡಿಗಳನ್ನು ಆಕ್ರಮಿಸಲು ಪ್ರಯತ್ನಿಸಿದ ಚಂಗಾಳ್ವರನ್ನು ನರಸಿಂಹನ ದಂಡನಾಯಕರು ಸೋಲಿಸಿದರು. ನರಸಿಂಹ ಪ್ರಾಪ್ತವಯಸ್ಕನಾದ ಮೇಲೂ ಆಡಳಿತಕ್ಕೆ ಗಮನ ನೀಡಲಿಲ್ಲ. ದುರ್ಬಲನೂ ಸ್ತ್ರೀಲೋಲುಪನೂ ಆಗಿದ್ದ. 1156ರಲ್ಲಿ ಬಿಜ್ಜಳ ಚಾಳುಕ್ಯರನ್ನು ತುಳಿದು ಕಲ್ಯಾಣದ ಸಿಂಹಾಸನವನ್ನು ಆಕ್ರಮಿಸಿದ ಸಂದರ್ಭದಲ್ಲಿ ಹೊಯ್ಸಳರ ಪ್ರಭಾವವನ್ನು ವಿಸ್ತರಿಸುವ ಅವಕಾಶಗಳಿದ್ದರೂ ನರಸಿಂಹ ಪ್ರಯತ್ನ ಪಡಲಿಲ್ಲ. ತನ್ನ ಆಳ್ವಿಕೆಯ ಕೊನೆಗಾಲದಲ್ಲಿ ನರಸಿಂಹ ತನ್ನ ಪಟ್ಟದ ರಾಣಿಯಾದ ಏಚಲ ಮಹಾದೇವಿಯನ್ನೂ ಯುವರಾಜನಾದ ಕುಮಾರ ವೀರಬಲ್ಲಾಳನನ್ನೂ ಆಡಳಿತಕ್ಕೆ ಸಹಭಾಗಿಯಾಗಿ ನೇಮಿಸಿಕೊಂಡ. ರಾಜ್ಯದಲ್ಲುಂಟಾದ ದುಃಸ್ಥಿತಿಯಿಂದ ಮನನೊಂದ ಯುವರಾಜ ವೀರಬಲ್ಲಾಳ 1173ರ ಪ್ರಾರಂಭದಲ್ಲಿ ತಂದೆಯ ಮೇಲೆ ದಂಗೆಯೆದ್ದು ಸಿಂಹಾಸನವನ್ನು ಹಿಡಿದ. ಈ ಘಟನೆ ನಡೆದ ಸ್ವಲ್ಪ ಕಾಲದಲ್ಲೇ ನರಸಿಂಹ ಮರಣಹೊಂದಿದ.

ವಿಷ್ಣುವರ್ಧನ ಸ್ಥಾಪಿಸಿದ ಭದ್ರವಾದ ಆಡಳಿತ ಮತ್ತು ನರಸಿಂಹನ ಮಂತ್ರಿಗಳೂ ದಂಡನಾಯಕರೂ ಆದ ಹುಳ್ಳ, ಜೋಕಿಮಯ್ಯ, ಬಿಟ್ಟಿಮಯ್ಯ, ಮಾಚಿಮಯ್ಯ ಮೊದಲಾದವರ ನಿಃಸ್ಪೃಹಸೇವೆಯಿಂದ ರಾಜ ಬಲಹೀನನಾಗಿದ್ದರೂ ಹೊಯ್ಸಳ ರಾಜ್ಯ ಛಿದ್ರವಾಗದೆ ಉಳಿದುಬಂದಿತು. ನರಸಿಂಹ ಉದಾರಮತೀಯ ನೀತಿಯನ್ನನುಸರಿಸಿದ. ಇವನ ಕಾಲದಲ್ಲಿ ವೈಷ್ಣವ ಪಂಥ'ದ ಚಟುವಟಿಕೆ ವ್ಯಾಪಕವಾಗಿ ಬೆಳೆಯಿತು. ರಾಮಾನುಜಾಚಾರ್ಯರ ಅನುಯಾಯಿಗಳಲ್ಲೊಬ್ಬರಾದ ತಿರುವ ರಂಗದಾಸ ಎಂಬುವರು ವೈಷ್ಣವ ಪಂಥವನ್ನು ಪ್ರಚಾರ ಮಾಡುತ್ತಾ ತೊಣ್ಣೂರಿನಲ್ಲಿ ವಾಸಿಸುತ್ತಿದ್ದರು. ತೊಣ್ಣೂರು, ಮೇಲುಕೋಟೆಗಳು ಆ ಪಂಥದ ಮುಖ್ಯ ಕೇಂದ್ರಗಳಾಗಿದ್ದವು. ನರಸಿಂಹ ವೈಷ್ಣವ ಪಂಥ'ದ ಆಚಾರ್ಯರಿಗೂ ದೇವಾಲಯಗಳಿಗೂ ವಿಶೇಷ ದಾನದತ್ತಿಗಳನ್ನು ನೀಡಿದ. ಜೈನಮತಾವಲಂಬಿಗಳಿಗೂ ಪ್ರೋತ್ಸಾಹ ನೀಡಿದ. 1159ರಲ್ಲಿ ಶ್ರವಣಬೆಳಗೊಳಕ್ಕೆ ಭೇಟಿನೀಡಿ ದಾನಧರ್ಮಗಳನ್ನು ಮಾಡಿದ. ಜೈನಧರ್ಮಾವಲಂಬಿಗಳನ್ನು ಸಚಿವ ಮತ್ತು ದಂಡನಾಯಕ ಹುದ್ದೆಗಳಿಗೆ ಅವನು ನೇಮಿಸಿಕೊಂಡಿದ್ದ.

ಇವನ ಕಾಲದಲ್ಲಿ ಅನೇಕ ದೇವಾಲಯಗಳು ನಿರ್ಮಾಣವಾದವು. ಅವುಗಳಲ್ಲಿ ಹೊನ್ನಾವರದ ಕೇಶವ, ಧರ್ಮಪುರದ ಕೇಶವ, ಹುಲ್ಲೇಕೆರೆಯ ಕೇಶವ, ನಾಗಮಂಗಲದ ಕೇಶವ, ಕಿಕ್ಕೇರಿಯ ಬ್ರಹ್ಮೇಶ್ವರ, ಕೋರಮಂಗಲದ ಬೂಚ್ಚೇಶ್ವರ, ತೆಂಗಿನ ಘಟ್ಟದ ಹೊಯ್ಸಳೇಶ್ವರ

ದೇವಾಲಯಗಳು ಮುಖ್ಯವಾದವು.

ಒಂದನೆಯ ನರಸಿಂಹನಿಗೆ ಪಟ್ಟದ ರಾಣಿಯಾದ ಏಚಲ ಮಹಾದೇವಿಯಲ್ಲದೆ ಚಂಗಲದೇವಿ, ಗುಜ್ಜಲದೇವಿ, ಮೈಳಲದೇವಿ ಎಂಬ ಇತರ ರಾಣಿಯರೂ ಇದ್ದರು. ಇವನ ಅಂತಃಪುರದಲ್ಲಿ ಮುನ್ನೂರಕ್ಕೂ ಮಿಗಿಲಾದ ಆಂಧ್ರ, ಚೋಳ, ಗೌಳ, ಬಂಗಾಲ, ಮಾಳವ, ಸಿಂಹಳ ಮತ್ತು ಇತರ ಪ್ರದೇಶಗಳ ಸುಂದರ ಸ್ತ್ರೀಯರಿದ್ದರೆಂದು ಶಾಸನವೊಂದರಲ್ಲಿ ವರ್ಣಿಸಲಾಗಿದೆ. (ಜಿ.ಆರ್.ಆರ್.)

**ನರಸಿಂಹ II (ಹೊಯ್ಸಳ):** ಪ್ರಸಿದ್ಧ ಅರಸ (1220-35). ಇಮ್ಮಡಿ ವೀರಬಲ್ಲಾಳ ಮತ್ತು ಅವನ ಪಟ್ಟದ ರಾಣಿ ಪದ್ಮಲದೇವಿಯ ಮಗ. ಜನನ 1184. ಯುವರಾಜ ನರಸಿಂಹನಿಗೆ ಬಲ್ಲಾಳ ಒಳ್ಳೆಯ ಶಿಕ್ಷಣದ ವ್ಯವಸ್ಥೆ ಮಾಡಿದ. ತನ್ನ ತಂದೆಯಿಂದ ಪ್ರಾಂತ್ಯಾಧಿಕಾರಿ ಹಾಗೂ ದಳಪತಿಯಾಗಿ ನೇಮಿತನಾಗಿದ್ದನಾಗಿ ಆಡಳಿತ ನಿರ್ವಹಣೆ ಯುದ್ಧತಂತ್ರಗಳಲ್ಲಿ ನುರಿತ. ಆ ಸಂದರ್ಭದಲ್ಲೇ ಪಾಂಡ್ಯರಾಜನನ್ನು ಸೋಲಿಸಿ ಚೋಳಕುಲೋತ್ತುಂಗನಿಗೆ ಪುನಃ ಸಿಂಹಾಸನ ದೊರಕಿಸಿಕೊಡುವುದರಲ್ಲಿ ಯಶಸ್ವಿಯಾದ. ವೀರಬಲ್ಲಾಳನ ಮರಣಾನಂತರ 1220ರಲ್ಲಿ ಅಭಿಷಿಕ್ತನಾದ. ಎರಡನೆಯ ನರಿಸಂಹನಿಗೆ ವೀರನರಸಿಂಹ, ಪ್ರತಾಪ ನರಸಿಂಹ ಎಂಬ ಹೆಸರುಗಳ ಜೊತೆಗೆ ಸಮಸ್ತಭುವನಾಶ್ರಯ, ಶ್ರೀ ಪೃಥ್ವೀವಲ್ಲಭ ಚೋಳರಾಜ ಪ್ರತಿಷ್ಠಾಪನಾಚಾರ್ಯ, ಪಾಂಡ್ಯರಾಜಗಜಕೇಸರಿ, ನಿಶ್ಯಂಕಪ್ರತಾಪಚಕ್ರವರ್ತಿ ಮೊದಲಾದ ಬಿರುದುಗಳಿದ್ದವು.

ದೇವಗಿರಿಯ ಸೇವುಣರ ಪರಾಜಯ ಮತ್ತು ತಮಿಳುನಾಡಿನಲ್ಲಿ ಹೊಯ್ಸಳರ ರಾಜಕೀಯ ಪ್ರಭಾವದ ಸ್ಥಾಪನೆ - ಇವುಗಳು ನರಸಿಂಹನ ಆಳ್ವಿಕೆಯ ಮುಖ್ಯ ರಾಜಕೀಯ ಘಟನೆಗಳು. ಎರಡನೆಯ ನರಸಿಂಹ ಪಟ್ಟಕ್ಕೆ ಬಂದ ಸ್ವಲ್ಪ ಕಾಲದಲ್ಲೇ ಮಗಧ ರಾಜ್ಯವನ್ನು ನಿರ್ಮೂಲ ಮಾಡಿದ. ಅದೇ ತರುಣದಲ್ಲಿ ತಮಿಳುನಾಡಿನ ರಾಜಕೀಯದಲ್ಲಿ ಗೊಂದಲವುಂಟಾಗಿ ಮೂರನೆಯ ರಾಜರಾಜಚೋಳ ಹೊಯ್ಸಳ ಚಕ್ರವರ್ತಿಯ ಸಹಾಯವನ್ನು ಬೇಡಿದ. ಚೋಳರಾಜ ನರಸಿಂಹನ ಸಹೋದರಿಯಾದ ಸೋಮಲದೇವಿಯನ್ನು ವರಿಸಿದ್ದುದರಿಂದಲೂ ಹಾಗೂ ಹೊಯ್ಸಳರ ಪ್ರಾಬಲ್ಯವನ್ನು ವಿಸ್ತರಿಸಲೋಸುಗವಾಗಿಯೂ ನರಸಿಂಹ ತಮಿಳುನಾಡಿನತ್ತ ಹೆಚ್ಚು ಗಮನ ಹರಿಸಿದ. ಕೊಡಲೇ ತಮಿಳುನಾಡಿಗೆ ಸೈನ್ಯ ಸಮೇತನಾಗಿ ಧಾವಿಸಿ ರಾಜರಾಜನಿಗೆ ಉಪದ್ರವ ಕೊಡುತ್ತಿದ್ದ ಪಾಂಡ್ಯರನ್ನೂ ಮತ್ತು ಇತರ ಸಾಮಂತರನ್ನೂ ಸೋಲಿಸಿ ಚೋಳರಾಜನನ್ನು ಸಂತೈಸಿದ (1222-23). ಇತ್ತ ಸೇವುಣರು 1223ರಲ್ಲಿ ಹೊಯ್ಸಳ ಸಾಮ್ರಾಜ್ಯದ ಉತ್ತರದ ಗಡಿಗಳ ಮೇಲೆ ಆಕ್ರಮಣ ನಡೆಸಿದರು. ನರಸಿಂಹ ಕೂಡಲೇ ತನ್ನ ರಾಜ್ಯದ ಉತ್ತರ ಗಡಿಯನ್ನು ತಲುಪಿ ಶತ್ರುಗಳನ್ನು ಸದೆಬಡಿದ. ಸೇವುಣ ಸಿಂಘಣನ ದಂಡನಾಯಕರಾದ ವಿಕ್ರಮಪಾಲ ಮತ್ತು ಪಾವುಸ ಎಂಬುವರು ರಣರಂಗದಲ್ಲಿ ಮಡಿದರು. ಸೇವುಣ ಸೈನ್ಯ ಸಂಪೂರ್ಣವಾಗಿ ಸೋತು ಚೆಲ್ಲಾಪಿಲ್ಲಿಯಾಗಿ ಹಿಂದಿರುಗಿತು. ಪುನಃ 1228 ಮತ್ತು 1230ರಲ್ಲೂ ಸೇವುಣರಿಗೂ ಹೊಯ್ಸಳರಿಗೂ ಕದನಗಳಾದವು. ಸೋತ ಸೇವುಣರು ಪ್ರತಾಪ ನರಸಿಂಹನ ಜೀವಿತ ಕಾಲದಲ್ಲಿ ಪುನಃ ಹೊಯ್ಸಳರ ಗಡಿಗಳನ್ನು ಆಕ್ರಮಿಸುವ ಸಾಹಸ ಮಾಡಲಿಲ್ಲ. ತುಂಗಭದ್ರಾನದಿ ಹೊಯ್ಸಳ ಸೇವುಣ ರಾಜ್ಯಗಳ ಗಡಿಯಾಯಿತು.

ಚೋಳ ಮೂರನೆಯ ರಾಜರಾಜನಿಗೆ ನರಸಿಂಹ ಬೆಂಬಲ ಕೊಟ್ಟಿದ್ದರೂ ಆತನೇ ದುರ್ಬಲನಾಗಿದ್ದರಿಂದ ಆಗಾಗ್ಗೆ ಸಾಮಂತರಾದ ಪಾಂಡ್ಯರಿಂದ ಕಿರುಕುಳ ಸಂಭವಿಸುತ್ತಿತ್ತು. ಇದರಿಂದಾಗಿ ನರಸಿಂಹ ಅನೇಕ ವೇಳೆ ರಾಜರಾಜನ ಸಹಾಯಕ್ಕಾಗಿ ಸೈನ್ಯ ಸಮೇತನಾಗಿ ತಮಿಳುನಾಡಿಗೆ ತೆರಳಬೇಕಾಯಿತು. ಸು. 1230ರಲ್ಲಿ ಚೋಳರಾಜ ತನ್ನ ಶತ್ರುಗಳಿಗೆ ಸೆರೆಯಾಗಿದ್ದನಾಗಿ ಚೋಳ ವೈರಿಗಳ ಮೇಲೆ ದೊಡ್ಡ ಪ್ರಮಾಣದ ಯುದ್ಧವನ್ನೇ ಮಾಡಬೇಕಾಯಿತು. ನರಸಿಂಹನು ಪಾಂಡ್ಯರು ಮತ್ತು ಅವರ ಮಿತ್ರರಾದ ಕಾಡವ ಮತ್ತು ತೆಲುಗು ಚೋಡರನ್ನು ಸೋಲಿಸಿ ರಾಜರಾಜನಿಗೆ ಪುನಃ ಸಿಂಹಾಸವನ್ನು ದೊರಕಿಸಿ ಕೊಟ್ಟ. ಅನಂತರ ಕಂಚಿಯಲ್ಲಿ ಸ್ವಲ್ಪಕಾಲ ತಂಗಿದ್ದು ರಾಮೇಶ್ವರದವರೆಗೂ ವಿಜಯಯಾತ್ರೆ ಕೈಗೊಂಡು ಅಲ್ಲಿ ವಿಜಯಸ್ತಂಭವೊಂದನ್ನು ನೆಟ್ಟ. ರಾಜರಾಜನ ಸಹಾಯಕ್ಕಾಗಿ ಹೊಯ್ಸಳ ಸೈನ್ಯದ ತುಕಡಿಯೊಂದನ್ನು ತಮಿಳುನಾಡಿನಲ್ಲಿ ನೆಲೆಗೊಳಿಸಿದ. ಇದರ ವೆಚ್ಚವನ್ನು ಭರಿಸಲು ರಾಜರಾಜ ತನ್ನ ರಾಜ್ಯದ ಶ್ರೀರಂಗಂ ಕಣ್ಣಾನೂರು ಭಾಗಗಳನ್ನು ನರಸಿಂಹನಿಗೊಪ್ಪಿಸಿದ್ದ. ನರಸಿಂಹನ ಪುತ್ರನಾದ ವೀರಸೋಮೇಶ್ವರ ಮಾತೃವಿಹೀನನಾಗಿದ್ದು ಬಾಲ್ಯದಿಂದಲೂ ತನ್ನ ಸೋದರತ್ತೆಯ ಪೋಷಣೆಯಲ್ಲಿ ತಮಿಳುನಾಡಿನಲ್ಲೇ ಬೆಳೆದ. ನರಸಿಂಹ ಅವನಿಗೆ ಯುವರಾಜಪಟ್ಟ ಕಟ್ಟಿದ್ದಮೇಲೆ ಅವನು ಶ್ರೀರಂಗದ ಬಳಿಯಲ್ಲಿ ವಿಕ್ರಮಪುರ ಎಂಬ ಹೊಸ ಪಟ್ಟಣವನ್ನು ಕಟ್ಟಿಸಿ ರಾಜಧಾನಿಯಾಗಿ ಮಾಡಿಕೊಂಡು ಹೊಯ್ಸಳ ಸಾಮ್ರಾಜ್ಯದ ತಮಿಳು ಪ್ರದೇಶಗಳ ಮೇಲೆ ಆಳ್ವಿಕೆ ನಡೆಸುತ್ತಿದ್ದ. ಈ ಹಲವು ಘಟನೆಗಳಿಂದಾಗಿ ಇಮ್ಮಡಿ ನರಸಿಂಹನ ಕಾಲದಲ್ಲಿ ತಮಿಳುನಾಡಿನಲ್ಲಿ ಹೊಯ್ಸಳರ ಪ್ರಭಾವ ಬಹುವಾಗಿ ವಿಸ್ತರಿಸಿತು. ನರಸಿಂಹ 1235ರಲ್ಲಿ ಮೃತನಾದ.

ನರಸಿಂಹನಿಗೆ ಕಾಳಲದೇವಿ, ಲೋಕಾಂಬಿಕಾ, ಗೌರಲದೇವಿ ಎಂಬ ಪತ್ನಿಯರಿದ್ದರು. ಮುಂದೆ ರಾಜನಾದ ಸೋಮೇಶ್ವರ ಕಾಳಲ ದೇವಿಯ ಮಗ. ನರಸಿಂಹನಿಗೆ ಗೌರಲದೇವಿಯಲ್ಲಿ ಹುಟ್ಟಿದ ಎರೆಯಂಗನೆಂಬ ಮಗನೂ ಇದ್ದ.

ಪೋಳಾಲ್ವ, ಅಮಿತಯ್ಯ, ಅಪ್ಪಣ್ಣ, ಸಮುದ್ರಗೋಪಯ್ಯ, ಅಡ್ಡಾಯುದ ಹರಿಹರ, ನೀರ್ಗುಂದದ ಚಲ್ಲೆಯನಾಯಕ, ಹುಳಿಯೇರ ಕಪ್ಪಯನಾಯಕ ಅವನ ತಮ್ಮ ನರಸಿಂಹ ಮುಂತಾದವರು ನರಸಿಂಹನ ಮಂತ್ರಿ-ದಂಡನಾಯಕರಲ್ಲಿ ಮುಖ್ಯರು.

ಎರಡನೆಯ ನರಸಿಂಹನ ಕಾಲದಲ್ಲಿ ಹಾರ್ನಹಳ್ಳಿಯ ಸೋಮೇಶ್ವರ ಮತ್ತು ಕೇಶವ, ಬೆಳ್ಳೂರಿನ ಮೂಲ ಸಿಂಗೇಶ್ವರ, ಬಸರಾಳಿನ ಮಲ್ಲಿಕಾರ್ಜುನ, ಹೆಗ್ಗೆರೆಯ ಕಲ್ಲೇಶ್ವರ ಮತ್ತು ಗಳಗೇಶ್ವರ, ಹರಿಹರದ ಹರಿಹರೇಶ್ವರ ಮೊದಲಾದ ಪ್ರಸಿದ್ಧ ದೇವಾಲಯಗಳು ನಿರ್ಮಾಣವಾದವು. (ಜಿ.ಆರ್.ಆರ್.)

**ನರಸಿಂಹ III (ಹೊಯ್ಸಳ):** ಹೊಯ್ಸಳ ಸಾಮ್ರಾಜ್ಯದ ಕನ್ನಡ ಪ್ರದೇಶವನ್ನು ದೋರಸಮುದ್ರದಿಂದ ಆಳಿದ ಅರಸ (1253-92). ವೀರ ಸೋಮೇಶ್ವರ ಮತ್ತು ಅವನ ರಾಣಿ ಬಿಜ್ಜಳದೇವಿಯ ಮಗ. ಜನನ 1240. ಸೇವುಣರು ಮತ್ತು ಮಲತಮ್ಮನಾದ ರಾಮನಾಥನೊಡನೆ ನಡೆದ ಯುದ್ಧಗಳು ನರಸಿಂಹನ ಕಾಲದ ಮುಖ್ಯ ರಾಜಕೀಯ ಘಟನೆಗಳು.

ನರಸಿಂಹನ ಮಲಸಹೋದರನಾದ ರಾಮನಾಥ ಮಧುರೆಯ ಪಾಂಡ್ಯರ ಪ್ರಾಬಲ್ಯದಿಂದ ತನ್ನ ರಾಜ್ಯದ ಬಹುಭಾಗವನ್ನು ಹಾಗೂ ರಾಜಧಾನಿಯನ್ನೂ ಕಳೆದುಕೊಂಡು ನರಸಿಂಹನ ರಾಜ್ಯದ ಮೇಲೆ ನಿರಂತರವಾದ ಆಕ್ರಮಣದಲ್ಲಿ ತೊಡಗಿದ. ರಾಮನಾಥ ಸುಮಾರು ಆರು ಬಾರಿ ನರಸಿಂಹನ ರಾಜ್ಯವನ್ನು ಆಕ್ರಮಿಸಲು ಯತ್ನಿಸಿ ವಿಫಲನಾದ. ಒಂದು ಬಾರಿ ಬೆಂಗಳೂರು ಮತ್ತು ಕುಣಿಗಲು ವರೆಗೆ ರಾಮನಾಥನ ದಾಳಿ ಮುಂದುವರಿಯಿತು. ಆದರೆ ಮೂರನೆಯ ನರಸಿಂಹ ಮತ್ತು ಅವನ ದಕ್ಷ ದಳಪತಿಗಳು ರಾಮನಾಥನ ದಾಳಿಯನ್ನು ಪ್ರತಿಬಾರಿಯೂ ಯಶಸ್ವಿಯಾಗಿ ಹಿಮ್ಮೆಟ್ಟಿಸಿದರು. ಮೂರನೆಯ ನರಸಿಂಹನೂ ರಾಮನಾಥನೂ ದಾಯಾದ ಕಲಹದಲ್ಲಿ ತೊಡಗಿದ್ದ ಪರಿಸ್ಥಿತಿಯನ್ನು ಗಮನಿಸಿದ ದೇವಗಿರಿಯ ಸೇವುಣರು ಹೊಯ್ಸಳ ರಾಜ್ಯವನ್ನು ಆಕ್ರಮಿಸಲು ಸಂಚು ನಡೆಸಿದರು. 1271ರಲ್ಲಿ ಸೇವುಣ ಮಹಾದೇವನ ದಳಪತಿಯಾದ ರತ್ನಪಾಲ ಚಿತ್ರದುರ್ಗ ಜಿಲ್ಲೆಯ ಹಲವು ಪ್ರದೇಶಗಳನ್ನು ವಶಪಡಿಸಿಕೊಂಡ. ನರಸಿಂಹನ ದಂಡನಾಯಕನಾದ ಪೆರುಮಾಳೆ ದಂಡನಾಯಕ ಶತ್ರುಸೈನ್ಯದ ಮೇಲೆ ಬಿದ್ದು ರತ್ನಪಾಲನನ್ನು ಕೊಂದು ಕೈಬಿಟ್ಟಿದ್ದ ಪ್ರಾಂತ್ಯಗಳನ್ನು ವಶಪಡಿಸಿಕೊಂಡ. ಅನಂತರ ಮೂರನೆಯ ನರಸಿಂಹನು ರಾಮನಾಥನ ಆಕ್ರಮಣವನ್ನು ಹಿಮ್ಮೆಟ್ಟಿಸುವ ಕಾರ್ಯದಲ್ಲಿ ಮಗ್ನನಾಗಿದ್ದಾಗ ಸೇವುಣ ಮಹಾದೇವನ ಉತ್ತರಾಧಿಕಾರಿಯಾದ ರಾಮಚಂದ್ರ 1276ರಲ್ಲಿ ಹೊಯ್ಸಳ ರಾಜಧಾನಿಯನ್ನು ಮುತ್ತಲು ಹವಣಿಸಿ ಬೆಳವಾಡಿಯವರೆಗೂ ದಾಳಿ ಮಾಡಿದ. ಈ ಕದನದಲ್ಲಿ ನಿಡುಗಲ್ಲಿನ ಇರುಂಗೋಳಚೋಳ ರಾಮಚಂದ್ರನಿಗೆ ಸಹಾಯ ಮಾಡಿದ. ಹೊಯ್ಸಳ

ಸೈನ್ಯ ಶತ್ರು ಸೈನ್ಯವನ್ನು ಚಿತ್ರದುರ್ಗದ ವರೆಗೂ ಬೆನ್ನಟ್ಟಿ ಓಡಿಸಿತು. 1285ರಲ್ಲಿ ಮೂರನೆಯ ನರಸಿಂಹ ತನ್ನ ಶತ್ರುವಿಗೆ ಸಹಾಯ ನೀಡಿದ ನಿಡುಗಲ್ಲು ಚೋಳನನ್ನು ಸೋಲಿಸಿದ. ನರಸಿಂಹನ ಕಾಲದಲ್ಲಿ ಹೊಯ್ಸಳ ರಾಜ್ಯವು ಅನೇಕ ದಾಳಿಗಳಿಗೊಳಗಾದರೂ ಇವನು ಪರಾಕ್ರಮದಿಂದ ಹೋರಾಡಿ ರಾಜ್ಯವನ್ನು ಸಂರಕ್ಷಿಸಿದ.

ನರಸಿಂಹ ಶೈವ ವೈಷ್ಣವ ಮತ್ತು ಜೈನಪಂಥಗಳಿಗೆ ಪ್ರೋತ್ಸಾಹ ನೀಡಿದ. ಇವನ ಕಾಲದಲ್ಲಿ ಅನೇಕ ದೇವಾಲಯಗಳು ನಿರ್ಮಾಣವಾದವು. ಸೋಮದಂಡನಾಯಕನಿಂದ 1268ರಲ್ಲಿ ಕಟ್ಟಿಸಲ್ಪಟ್ಟ ಸೋಮನಾಥಪುರದ ಕೇಶವ ದೇವಾಲಯ ಹೊಯ್ಸಳ ಶೈಲಿಯ ಅತ್ಯಂತ ಶ್ರೇಷ್ಠ ದೇವಾಲಯಗಳಲ್ಲೊಂದಾಗಿದೆ. ತುರುವೇಕೆರೆಯ ಕೇಶವ, ಸೆಟ್ಟಿಕೆರೆಯ ಯೋಗಮಾಧವ, ಹೊಳೆನರಸೀಪುರದ ಲಕ್ಷ್ಮೀನರಸಿಂಹ ಮೊದಲಾದವು ಮೂರನೆಯ ನರಸಿಂಹನ ಕಾಲದಲ್ಲಿ ನಿರ್ಮಾಣವಾದ ಇತರ ಮುಖ್ಯ ದೇವಾಲಯಗಳು. ನರಸಿಂಹನ ಮರಣಾನಂತರ (1292ರಲ್ಲಿ) ಇವನ ಮಗನಾದ ಮೂರನೆಯ ವೀರಬಲ್ಲಾಳ ರಾಜನಾದ.

ಪೆರುಮಾಳೆ, ಸೋಮೆಯ, ಕುಮಾರ ಚಿಕ್ಕ ಕೇತಯನರಸಿಂಹನ ಕಾಲದಲ್ಲಿದ್ದ ಮುಖ್ಯ ದಂಡನಾಯಕರು. (ಜಿ.ಆರ್.ಆರ್.)

**ನರಸಿಂಹಮೂರ್ತಿ, ಕೆ. :** 1919 99 ಕನ್ನಡದ ಅಗ್ರಮಾನ್ಯ ವಿಮರ್ಶಕರು. ನವ್ಯ ಸಾಹಿತ್ಯದ ಪ್ರವರ್ತಕರೆಂದು ಹೆಸರಾಗಿದ್ದವರು ಇವರು ಕೋಲಾರ ಜಿಲ್ಲೆಯ ಮಂಚನಹಳ್ಳಿಯಲ್ಲಿ 1919 ಮೇ 12 ರಂದು ಜನಿಸಿದರು. ತಂದೆ ಕೃಷ್ಣಮೂರ್ತಿ, ತಾಯಿ ಸಾವಿತ್ರಮ್ಮ. ವಿದ್ಯಾರ್ಥಿದೆಸೆಯಲ್ಲಿಯೇ ಪ್ರತಿಭಾವಂತರೆಂದು ಗುರುತಿಸಲ್ಪಟ್ಟಿದ ನರಸಿಂಹಮೂರ್ತಿಯವರು ಬೆಂಗಳೂರಿನ ಕೋಟೆ ಹೈಸ್ಕೂಲಿನ ವಿದ್ಯಾರ್ಥಿಯಾಗಿದ್ದರು. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ 2 ನೆಯ ರ್‍ಯಾಂಕ್ ಪಡೆದ ಕೀರ್ತಿ ಇವರದ್ದು. ವಿದ್ಯಾರ್ಥಿ ದಿಸೆಯಲ್ಲಿಯೇ ಇವರು ಆರ್. ಕಲ್ಯಾಣಮ್ಮನವರ 'ಸರಸ್ವತಿ' ಪತ್ರಿಕೆಯಲ್ಲಿ ಬರೆಯತೊಡಗಿದ್ದರು.

ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಇಂಗ್ಲಿಷ್ ಆನರ್ಸ್ ವಿದ್ಯಾರ್ಥಿಯಾಗಿ ಸೇರಿ, 1940 ರಲ್ಲಿ ಮೊದಲ ದರ್ಜೆಯಲ್ಲಿ ಉತ್ತೀರ್ಣರಾದರು. ಆಗ ಪ್ರಿನ್ಸಿಪಾಲರಾಗಿದ್ದವರು ಜೆ.ಸಿ. ರಾಲೋ, ನರಸಿಂಹಮೂರ್ತಿಯವರು ಅವರ ಮೆಚ್ಚುಗೆಗೆ ಪಾತ್ರರಾಗಿದ್ದರು. ನಿರೀಕ್ಷೆಯಂತೆಯೇ ಪರೀಕ್ಷೆ ಮುಗಿದೊಡನೆಯೇ ಇವರು ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿ ನೇಮಕಗೊಂಡರು. ಅರ್ಹರಾದ ವಿದ್ಯಾರ್ಥಿಗಳಿಲ್ಲವೆಂಬ ಕಾರಣದಿಂದ ಹಿಂದಿನ ವರ್ಷಗಳಲ್ಲಿ ಇಂಗ್ಲಿಷ್ ಎಂ.ಎ. ತರಗತಿಗಳನ್ನು ತೆರೆದಿರಲಿಲ್ಲ. ಆ ವರ್ಷ ನರಸಿಂಹಮೂರ್ತಿಯವರಿಗಾಗಿಯೇ ಎಂಬಂತೆ ಎಂ.ಎ. ತರಗತಿಗಳು ಆರಂಭಗೊಂಡವು. ಎಂ.ಎ. ಪರೀಕ್ಷೆಯಲ್ಲಿಯೂ ಇವರು ಮೊದಲ ದರ್ಜೆಯಲ್ಲಿ ತೇರ್ಗಡೆ ಹೊಂದಿದರು.

ಅನಂತರ ಇವರು ಐ.ಎ.ಎಸ್. ಪರೀಕ್ಷೆಯನ್ನು ಪಾಸುಮಾಡಿ (1956) ದಕ್ಷಿಣಕನ್ನಡ ಜಿಲ್ಲೆಯ ಕುಂದಾಪುರದಲ್ಲಿ ಅಸಿಸ್ಟೆಂಟ್ ಕಮಿಷನರ್ ಆಗಿ ನೇಮಕಗೊಂಡರು. ಮುಂದೆ ಬಳ್ಳಾರಿ ಮತ್ತು ಕೊಡಗು ಜಿಲ್ಲಾಧಿಕಾರಿಯಾಗಿ ಕೆಲಸ ಮಾಡಿ ಗುಲ್ಬರ್ಗದಲ್ಲಿ ವಿಭಾಗಾಧಿಕಾರಿಯಾಗಿ ಸೇವೆ ಸಲ್ಲಿಸಿದರು. 1977 ರಲ್ಲಿ ನಿವೃತ್ತಿ ಹೊಂದಿದರು. ನಿವೃತ್ತಿಯ ಅನಂತರ ಕೆಲವು ಕಾಲ ಅಂದಿನ ಗೌರ್ನರ್ ಆಗಿದ್ದ ಗೋವಿಂದ ನಾರಾಯಣ ಅವರಿಗೆ ವಿಶೇಷಾಧಿಕಾರಿಯಾಗಿದ್ದರು. ಮೈಸೂರಿನ ಆಡಳಿತ ತರಬೇತಿ ಕೇಂದ್ರದಲ್ಲಿಯೂ (ಎ.ಟಿ.ಐ) ಇವರು ಸ್ವಲ್ಪಕಾಲ ಕೆಲಸ ಮಾಡಿದರು. ಆ ದಿನಗಳಲ್ಲಿ ಸಂಸ್ಥೆಯ ಪುಸ್ತಕ ಭಂಡಾರವನ್ನು ಬಹುವಾಗಿ ಬೆಳೆಸಿದರು.

ನಿವೃತ್ತಿಯ ಅನಂತರ ಇವರು 'ಕನ್ನಡಪ್ರಭ' ಪತ್ರಿಕೆಗೆ ಪಾಶ್ಚಾತ್ಯ ಲೇಖಕರನ್ನೂ ಅವರ ಕೃತಿಗಳನ್ನೂ ಕುರಿತು ಒಂದು ಲೇಖನ ಮಾಲೆಯನ್ನೇ ಬರೆದರು. ಹೀಗೆ ಅಲ್ಲಲ್ಲಿ ಇವರು ಬರೆದ ಬಿಡಿ ಲೇಖನಗಳ ಸಂಖ್ಯೆ ತುಂಬ ದೊಡ್ಡದು. ಸಾಹಿತ್ಯದ ಬಗೆಗೆ ಇವರಿಗಿದ್ದ ಸೂಕ್ಷ್ಮ ಸಂವೇದನಾಶಕ್ತಿ ಅದ್ವಿತೀಯವಾದದ್ದು, ಅನನ್ಯವಾದದ್ದು. ಇವರ ಹಾಗೆ ಬಹುಶ್ರುತರಾದ ವಿಮರ್ಶಕರ ಸಂಖ್ಯೆ ಬಹಳ ಕಡಿಮೆ.

ಆನರ್ಸ್ ತರಗತಿಗಳಲ್ಲಿದ್ದಾಗಲೆ ಇವರು ಬರೆದ ಅಶೋಕನ ವಿಜಯ ಎಂಬ ನೀಳ್ಗತೆಗಾಗಿ ಬಿ.ಎಂ.ಶ್ರೀ. ರಜತೋತ್ಸವ ಸುವರ್ಣ ಪದಕವನ್ನು ಗಳಿಸಿದ್ದರು. ಕಳಿಂಗ ಯುದ್ಧಕ್ಕೆ ತಾನೇ ಕಾರಣನಾದ ಅಶೋಕ ಚಕ್ರವರ್ತಿ ಅನಂತರ ಪಶ್ಚಾತ್ತಾಪ ಪಟ್ಟು ಬದುಕಿನಲ್ಲಿ ಸಾರ್ಥಕ್ಯ ಪಡೆದ ಕಥೆಯನ್ನು ಈ ಕವನದಲ್ಲಿ ಹೇಳಲಾಗಿದೆ. ಇದೇ ಸುಮಾರಿನಲ್ಲಿ ಇವರು ಪ್ರಬಂಧ ಸ್ಪರ್ಧೆಯೊಂದರಲ್ಲಿ ಭಾಗವಹಿಸಿ ಬಹುಮಾನ ಪಡೆದರು. ಅಶೋಕನ ವಿಜಯ ಎಂಬ ಕವನ, ಕನ್ನಡ ಸಣ್ಣಕತೆಗಳು ಎಂಬ ಪ್ರಬಂಧ ಇವು ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟಗೊಂಡು ಓದುಗರ ಗಮನ ಸೆಳೆದಿದ್ದವು. ಆಗ ಉದಯೋನ್ಮುಖ ಲೇಖಕರೊಬ್ಬರ ಬರಹವನ್ನು ಕನ್ನಡ ಸಾಹಿತ್ಯ ಪ್ರಪಂಚ ಸಂತೋಷದಿಂದ ಸ್ವಾಗತಿಸಿತು.

21 ನೆಯ ಶತಮಾನದ ಐದನೆಯ ದಶಕ ಕನ್ನಡಕ್ಕೆ ನವ್ಯಕಾವ್ಯ ಪ್ರವೇಶಿಸಿದ ಕಾಲ. ಗೋಕಾಕರು ಈ ಹೊಸ ಕಾವ್ಯದ ಪ್ರವರ್ತಕರಾದರೂ ಅದಕ್ಕೆ ಬಲ ತಂದ ಅಡಿಗರ 'ಚಂಡೆ ಮದ್ದಳೆ' ಪ್ರಕಟವಾದದ್ದು. 1954 ರಲ್ಲಿ ಅದಕ್ಕೆ ಸುದೀರ್ಘವಾದ ಹಿನ್ನುಡಿ ಬರೆದು ಹೊಸ ಕಾವ್ಯದ ಲಕ್ಷಣವನ್ನು ಕುರಿತು ಚಿಂತಿಸಿದವರು ನರಸಿಂಹಮೂರ್ತಿ ಇವರ ನವ್ಯಕಾವ್ಯ ಪ್ರತಿಪಾದನೆ ಅಡಿಗರಿಗೆ ಹೆಚ್ಚಿನ ಬಲ ತಂದುಕೊಟ್ಟಿತು. ನವ್ಯಕಾವ್ಯವನ್ನು ನೋಡುವವರ ದೃಷ್ಟಿಯನ್ನು ಬದಲಾಯಿಸಿತು. ಈ ಹಿನ್ನುಡಿ ಸುಮಾರು 15 ಪುಟಗಳಷ್ಟು ದೀರ್ಘವಾಗಿದ್ದು ಆಧುನಿಕ ಕನ್ನಡ ಸಾಹಿತ್ಯದಲ್ಲಿ ದೀರ್ಘ ಹಿನ್ನುಡಿ-ಮುನ್ನುಡಿಗಳ ಒಂದು ಪರಂಪರೆಯನ್ನೇ ಆರಂಭಿಸಿತು. ಬಿ.ಸಿ. ರಾಮಚಂದ್ರಶರ್ಮರ ಏಳು ಸುತ್ತಿನ ಕೋಟೆ, ನರಹಳ್ಳಿ ಬಾಲಸುಬ್ರಾಹ್ಮಣ್ಯರ ಸಿಂಗರ್ ಕತೆಗಳು, ಬಿ.ಎ.ಸನದಿ ಅವರ ಲಿಂಕನ್ ಕವಿತೆಗಳು ಮುಂತಾದ ನಾನಾ ಬಗೆಯ ಪುಸ್ತಕಗಳಿಗೆ ಬರೆದ ಮುನ್ನುಡಿಗಳಲ್ಲಿ ಈ ಪರಂಪರೆಯನ್ನು ಇವರು ಮುಂದುವರಿಸಿಕೊಂಡು ಬಂದರು. ಈ ಮುನ್ನುಡಿಗಳಲ್ಲಿ ಪುಸ್ತಕದ, ಪ್ರಕಾರದ ಸಮಗ್ರ ಪರಿಚಯವಿರುತ್ತದೆ. ಪ್ರತಿಬರಹವೂ ಇವರ ವ್ಯಾಪಕ ವಿದ್ವತ್ತನ್ನು ಸೂಚಿಸುತ್ತದೆ.

1968ರಷ್ಟು ಹಿಂದೆಯೇ ಕನ್ನಡ ಸಾಹಿತ್ಯ ಪರಿಷತ್ತಿಗಾಗಿ ಇವರು "ಅತ್ಯುತ್ತಮ ಸಣ್ಣಕತೆಗಳು' ಎಂಬ ಒಂದು ಸಂಗ್ರಹವನ್ನು ಸಿದ್ಧಪಡಿಸಿಕೊಟ್ಟಿದ್ದರು. ಈ ಸಂಗ್ರಹವನ್ನು ಮೂರು ಸಂಪುಟಗಳಲ್ಲಿ ಪ್ರಕಟಿಸಬೇಕೆಂದು ತೀರ್ಮಾನಿಸಿ, ಪರಿಷತ್ತು ಮೂರನೆಯ ಸಂಪುಟವನ್ನು ಮಾತ್ರ ಪ್ರಕಟಿಸಿದೆ. ಅ.ನ.ಕೃಷ್ಣರಾಯರು ಸಂಪಾದಿಸಿದ 'ಕಾಮನಬಿಲ್ಲು' ಸಂಕಲನದ ಅನಂತರ ಬಂದ ಅಧಿಕೃತ ಕಥಾ ಸಂಕಲನ ಇದೆಂದು ಹೇಳಬಹುದು. ಇದರ ಪ್ರಸ್ತಾವನೆಯಲ್ಲಿ ನರಸಿಂಹಮೂರ್ತಿ ಹೀಗೆ ಹೇಳಿದ್ದಾರೆ. "ಈಚಿನ ಹತ್ತು ವರ್ಷಗಳಲ್ಲಿ ಬಂದಿರುವ ಕಥೆಗಳಲ್ಲಿ ಆದಷ್ಟು ಮಟ್ಟಿಗೆ ಎಲ್ಲವನ್ನೂ ಓದಿ ಈ ದೃಷ್ಟಿಯಿಂದ ನನಗೆ ಉತ್ತಮ ಸಾಹಿತ್ಯವೆಂದೂ ಸಂಕಲನ ಯೋಗ್ಯವೆಂದೂ ಕಂಡುಬಂದ ನಲವತ್ತನ್ನು ಈ ಸಂಪುಟಕ್ಕೆ ಆರಿಸಿದ್ದೇನೆ. ಈ ನಲವತ್ತು ಕಥೆಗಳಲ್ಲಿ ಕಥಾಂಶಕ್ಕಿಂತ ರಚನಾ ವಿಧಾನಕ್ಕಿಂತ, ಭಾಷಾ ಶೈಲಿಗಿಂತ, ಇವುಗಳೆಲ್ಲ ಯಾವುದಕ್ಕೆ ಸಾಧಕಗಳು ಮಾತ್ರವೋ ಆ ಧ್ವನಿಗೇ ರಸಕ್ಕೇ ಪ್ರಾಶಸ್ತ್ಯ: ಇವುಗಳ ಕರ್ತೃಗಳು ಕಟ್ಟುಕಥೆಗಾರರಲ್ಲ, ಜೀವನ ದ್ರಷ್ಟಾರರು, ಜೀವನದ ಮೂಲ ಸಮಸ್ಯೆಗಳನ್ನು ಕುರಿತು, ಸಮಾಜದ ವ್ಯವಸ್ಥೆ ವ್ಯವಹಾರಗಳ ಕುರಿತು ಈ ಕತೆಗಳಲ್ಲಿ ಗಂಭೀರವಾದ ನಿಲುವನ್ನು ಕಾಣುತ್ತೇವೆ. ಇಂದಿನ ಬದುಕಿನ ವಿಮರ್ಶೆ, ವಿವರಣೆ ಒಮ್ಮೆಗೇ ಇಲ್ಲಿ ಸಿಗುತ್ತವೆ. ಅಲ್ಲದೆ ಎಲ್ಲ ಬಗೆಯ ವಿಷಯ, ಭಾವ, ಚಿಂತನೆಗಳನ್ನೂ ಚಿತ್ರಿಸಬಲ್ಲ ಶಕ್ತಿ ಕನ್ನಡ ಗದ್ಯಕ್ಕೆ ಎಷ್ಟಿದೆ, ಎಂಥ ಉತ್ತಮ ಕನ್ನಡಗದ್ಯ ಸೃಷ್ಟಿಯಾಗುತ್ತಿದೆ ಎಂದೂ ಈ ಸಂಪುಟದಲ್ಲಿ ಕಾಣಬಹುದು".

ಇವರು ಅನೇಕ ಸಂಪುಟಗಳಿಗಾಗುವಷ್ಟು ಸಾಹಿತ್ಯ ವಿಮರ್ಶೆಯ ಲೇಖನಗಳನ್ನು ಬರೆದಿದ್ದಾರೆ. ಆದರೆ ಒಂದೂ ಸಂಪುಟ ಪ್ರಕಟವಾಗಿಲ್ಲ.

ಪ್ರಿಯದರ್ಶಿ ಮತ್ತು ಇತರ ಕವನಗಳು (1995) ಒಂದು ಇವರ ಕೃತಿ. ಇದರಲ್ಲಿ ರೋಮ್ಯಾಂಟಿಕ್ ಸಂಪ್ರದಾಯಕ್ಕೇ ಹತ್ತಿರವಾದವೆಂದು ಹೇಳಬಹುದಾದ 35 ಕವಿತೆಗಳು ಸೇರಿವೆ. 'ಮಾಡರ್ನ್ ಕನ್ನಡ ಲಿಟರೇಚರ್' (1992) ಇವರ ಇನ್ನೊಂದು ಪುಸ್ತಕ, ಇದು ಕೇಂದ್ರ ಸಾಹಿತ್ಯ ಅಕಾಡೆಮಿಗೆ ಸಿದ್ಧಪಡಿಸಿದ ಬರೆಹದ ಸಂಕ್ಷಿಪ್ತ ರೂಪ. ಇವರು ಇಂಗ್ಲಿಷ್‌ನಿಂದ ಕನ್ನಡಕ್ಕೆ ಕನ್ನಡದಿಂದ ಇಂಗ್ಲಿಷ್‌ಗೆ ಅನೇಕ ಅನುವಾದಗಳನ್ನೂ ಮಾಡಿದ್ದಾರೆ. ಕನ್ನಡ,ಇಂಗ್ಲಿಷ್ ಎರಡೂ ಭಾಷೆಗಳನ್ನು ಚೆನ್ನಾಗಿ ಬಲ್ಲವರಾಗಿದ್ದ ಇವರ ಅನುವಾದಗಳಲ್ಲಿ ಈ ನೆಲದ ಮಣ್ಣಿನ ವಾಸನೆ ನಿಚ್ಚಳವಾಗಿದೆ. ಇವರು 1999 ಜೂನ್ 12 ರಂದು ತಮ್ಮ ಮನೆಯ ಬಳಿಯೇ ಅಪಘಾತಕ್ಕೀಡಾಗಿ ನಿಧನಹೊಂದಿದರು. (ಎಚ್.ಎಂ.ಎನ್.ಎ.)

**ನರಸಿಂಹಯ್ಯ, ಆರ್.ಎಲ್. :** 1902-1969. ಕನ್ನಡ ವಿಜ್ಞಾನ ವಾಙ್ಮಯ ನಿರ್ಮಾಣಕ್ಕೆ ಮಹತ್ತರ ಕೊಡುಗೆಗಳನ್ನು ನೀಡಿದ್ದ ಇವರ ಪೂರ್ಣ ಹೆಸರು ರೊದ್ದಂ ಲಕ್ಷ್ಮೀನರಸಿಂಹಯ್ಯ. ಭೌತವಿಜ್ಞಾನ ಪ್ರಾಧ್ಯಾಪಕ ಮತ್ತು ಸಂಶೋಧಕ. ಜನಪ್ರಿಯ ವಿಜ್ಞಾನ ವಾಙ್ಮಯ ಪ್ರಸಾರಕರು. ಕನ್ನಡದಲ್ಲಿ ಪ್ರೌಢವಿಜ್ಞಾನ ವಿಷಯಗಳ ವಿವರಣೆಗೆ ಅಗತ್ಯವಾದ ಪಾರಿಭಾಷಿಕ ಪದಗಳನ್ನು ಆಯುವಲ್ಲಿ ಹಾಗೂ ಟಂಕಿಸುವಲ್ಲಿ, ಯುಕ್ತವಾದ ಶೈಲಿಯನ್ನು ರೂಪಿಸುವಲ್ಲಿ ಹಾಗೂ ನಿರೂಪಿಸುವಲ್ಲಿ ವಿಶೇಷವಾಗಿ ಶ್ರಮಿಸಿದರು. ಸ್ವತಂತ್ರ ರಚನೆ ಹಾಗೂ ಭಾಷಾಂತರ ಕೃತಿ ಎರಡರಲ್ಲೂ ಉದ್ದಾಮ ವಿಜ್ಞಾನ ಗ್ರಂಥಗಳನ್ನು ರಚಿಸಿ ಕನ್ನಡದಲ್ಲಿ ಉತ್ತಮ ವಿಜ್ಞಾನವಾಙ್ಮಯ ಹೇಗಿರಬೇಕು ಎನ್ನುವುದಕ್ಕೆ ಶಿಷ್ಟ ನಿದರ್ಶನಗಳನ್ನು ಒದಗಿಸಿದರು. ಜನಪ್ರಿಯ ವಿಜ್ಞಾನ ವಿಷಯಗಳ ಮೇಲೆ ಕನ್ನಡದಲ್ಲಿ ಭಾಷಣ ಮಾಡಿ ಜನತೆಯಲ್ಲಿ ವಿಜ್ಞಾನ ಪ್ರಸಾರಕ್ಕೆ ವಿಶೇಷವಾಗಿ ನೆರದರು. ಕನ್ನಡವನ್ನು ವಿಜ್ಞಾನ ಮಾಧ್ಯಮವಾಗಿ ಪಳಗಿಸುವಲ್ಲಿ ಇವರು ನೀಡಿದ ದಿಗ್ದರ್ಶನ ನಿಜಕ್ಕೂ ಅದ್ವಿತೀಯವಾದುದು.

ಇವರು ಬರೆದು ಪ್ರಕಟಿಸಿದ ಶ್ರೇಷ್ಠ ಜನಪ್ರಿಯ ವಿಜ್ಞಾನ ಗ್ರಂಥಗಳ ಪೈಕಿ ಜಗತ್ತುಗಳ ಹುಟ್ಟು, ಸಾವು (1952), ಶಕ್ತಿ (1950) ನಕ್ಷತ್ರ ದರ್ಶನ (1954) ಇವನ್ನು ಹೆಸರಿಸಬೇಕು. ಇವರು ಅನುವಾದ ಮಾಡಿರುವ ಗ್ರಂಥಗಳ ಪೈಕಿ ರಿಖ್ಟ್ ಮೆಯರ್ ಮತ್ತು ಕೆನಾರ್ಡ್ ರಚಿತ ಇಂಟ್ರಡಕ್ಷನ್ ಟು ಮೋಡರ್ನ್ ಫಿಸಿಕ್ಸ್ (ಆಧುನಿಕ ಭೌತವಿಜ್ಞಾನ ಪರಿಚಯ). ರಿಚೀ ಕಾಲ್ಡರ್ ರಚಿತ ಸೈನ್ಸ್ ಮೇಕ್ಸ್ ಸೆನ್ಸ್ (ವಿಜ್ಞಾನ ಬುದ್ಧಿಗಮ್ಯ) ಸೇರಿವೆ. ಇವರ ಒಟ್ಟು ಪ್ರಕಟಿತ ಗ್ರಂಥಗಳು ಹತ್ತು. ಪ್ರಕಟಿತ ಲೇಖನಗಳು ಮೂವತ್ತೈದು. ಇವರು ಸ್ವಂತವಾಗಿ ಹಾಗೂ ಇತರರೊಡನೆ ಸೇರಿ ಬರೆದ ಸಂಶೋಧನ ಪ್ರಬಂಧಗಳು ಹನ್ನೊಂದು. ಇವು ಭೌತವಿಜ್ಞಾನದ ವಿವಿಧ ಪ್ರಕಾರಗಳ ಮೇಲೆ ಇಂಗ್ಲಿಷಿನಲ್ಲಿ ಬರೆದಂಥವು.

ಸಂಶೋಧನ ಕ್ಷೇತ್ರದಲ್ಲಿ ಇವರಿಗೆ ಅಪಾರಾಸಕ್ತಿ ಇತ್ತು. ರೇಡಿಯೊ ಎಂಜಿನಿಯರಿಂಗ್, ನಿಸ್ತಂತುಶಾಸ್ತ್ರ, ಜೀವಭೌತವಿಜ್ಞಾನದ ಕೆಲವು ಶಾಖೆಗಳು ಈ ಕ್ಷೇತ್ರಗಳಲ್ಲಿ ಇವರು ಉತ್ತಮ ಸಂಶೋಧಕರ ಒಂದು ಸಂಕುಲವನ್ನೇ ಕಟ್ಟಿ ಬೆಳೆಸಿದ್ದಾರೆ. ವಿದ್ಯಾರ್ಥಿಗಳಿಗೆ ಇವರು ಪ್ರೀತಿಯ ಆರ್‌ಎಲ್.ಎನ್. ಎಂದೇ ಪರಿಚಿತರು.

ಚಿತ್ರದುರ್ಗ ಜಿಲ್ಲೆಯ ಹಿರಿಯೂರಿನಲ್ಲಿ ಜನಿಸಿದ ಇವರು ಪ್ರೌಢ ಶಾಲಾ ಶಿಕ್ಷಣವನ್ನು ತುಮಕೂರಿನಲ್ಲಿ ಪಡೆದು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಿಂದ ಬಿ.ಎಸ್.ಸಿ. ಪದವಿ ಗಳಿಸಿದರು 1923. ಮೂರು ವರ್ಷಕಾಲ ಶಾಲಾಧ್ಯಾಪಕರಾಗಿ ಅಂದಿನ ಮೈಸೂರು ಸಂಸ್ಥಾನದ ಬೇರೆ ಬೇರೆ ಕಡೆಗಳಲ್ಲಿ ದುಡಿದರು. ಭೌತವಿಜ್ಞಾನದಲ್ಲಿ ಉನ್ನತಾಧ್ಯಯನ ಮಾಡುವ ಉದ್ದೇಶದಿಂದ ಅಲಹಾಬಾದಿಗೆ ತೆರಳಿ ವಿಖ್ಯಾತ ವಿಜ್ಞಾನಿ ಮೇಘನಾದ ಸಹಾ ಅವರ ಶಿಷ್ಯತ್ವದಲ್ಲಿ ಎಂ.ಎಸ್‌ಸಿ. ಪದವೀಧರರಾದರು (1927). ಮುಂದಿನ ಸುಮಾರು ಎರಡು ವರ್ಷಗಳ ಕಾಲ ಪ್ರೌಢಶಾಲಾಧ್ಯಾಪಕರಾಗಿ ದುಡಿದು 1929ರಲ್ಲಿ ಸೆಂಟ್ರಲ್ ಕಾಲೇಜಿನ ಭೌತವಿಜ್ಞಾನ ವಿಭಾಗದಲ್ಲಿ ಅಧ್ಯಾಪಕರಾಗಿ ನೇಮಕಗೊಂಡು 1958ರಲ್ಲಿ ಆ ಹುದ್ದೆಯಿಂದ ನಿವೃತ್ತರಾಗುವ ತನಕವೂ ಅಲ್ಲಿಯೇ ಇದ್ದು ಸೆಂಟ್ರಲ್ ಕಾಲೇಜ್ ಭೌತವಿಜ್ಞಾನ ವಿಭಾಗವೆಂದರೆ ಆರ್‌ಎಲ್‌ಎನ್ ಎನ್ನುವಷ್ಟರ ಮಟ್ಟಿಗೆ ಕೀರ್ತಿಭಾಜನರಾದರು. ಅದರೆ ಇವರ ವಿದ್ವತ್ತು, ಸೇವೆ, ಬೋಧನ ಹಾಗೂ ಸಂಶೋಧನ ಸಾಮರ್ಥ್ಯ ಮುಂತಾದ ಗುಣಗಳಿಗೆ ಅನುಗುಣವಾದ ಬಡ್ತಿ ಉತ್ಕರ್ಷೆಗಳು ವೃತ್ತಿಜೀವನದಲ್ಲಿ ಇವರಿಗೆ ದೊರೆಯಲಿಲ್ಲ.

ಇವರು ನಿವೃತ್ತಿಯ ಅನಂತರ ಅನೇಕ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದರು. ಆಗತಾನೇ ರೂಪುಗೊಳ್ಳುತ್ತಿದ್ದ ಕನ್ನಡ ವಿಶ್ವಕೋಶದ ವಿಜ್ಞಾನ ಸಂಪಾದಕ, ವಿಶ್ವೇಶ್ವರಯ್ಯ ಔದ್ಯಮಿಕ ಮತ್ತು ತಾಂತ್ರಿಕ ಸಂಗ್ರಹಾಲಯದ್ದಿ ವಿಶೇಷ ಸಲಹೆಗಾರ, ಬೆಂಗಳೂರಿನ ನ್ಯಾಶನಲ್ ಹಾಗೂ ಆಚಾರ್ಯ ಪಾಠಶಾಲಾ ಕಾಲೇಜುಗಳಲ್ಲಿ ಭೌತವಿಜ್ಞಾನ ಪ್ರಾಧ್ಯಾಪಕ, ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್ ಕನ್ನಡ ನಿಘಂಟಿನ ಪರಿಷ್ಕರಣ ಸಮಿತಿಯ ಸದಸ್ಯರಾಗಿ ದುಡಿದರು.

ಎಂ.ಎಸ್‌ಸಿ. ಅಧ್ಯಯನದ ವೇಳೆ ಇವರು ನಿಸ್ತಂತುಶಾಸ್ತ್ರದಲ್ಲಿ ವಿಶೇಷ ಶಿಕ್ಷಣ ಪಡೆದಿದ್ದರು. ಈ ಶಾಸ್ತ್ರವನ್ನು ಇವರು ವಿದ್ಯಾರ್ಥಿಗಳಿಗೆ ಪಾಂಡಿತ್ಯಪೂರ್ಣವಾಗಿ ವಿವರಿಸಿ ಕುತೂಹಲ ಮೊಳೆಸುತ್ತಿದ್ದರು. ಬೆಂಗಳೂರಿನ ಜಯಚಾಮರಾಜೇಂದ್ರ ವೃತ್ತಿಶಿಕ್ಷಣಶಾಲೆಯಲ್ಲಿ ಹದಿನೈದು ವರ್ಷಗಳ ಕಾಲ (1945-60) ಇವರು ರೇಡಿಯೊ ಎಂಜಿನಿಯರಿಂಗ್ ಶಾಸ್ತ್ರವನ್ನು ಪಾಠಮಾಡಿದರು. 1954ರಲ್ಲಿ ಅಖಿಲ ಭಾರತ ಮಾನಸಿಕ ಆರೋಗ್ಯ ಸಂಸ್ಥೆ ಬೆಂಗಳೂರಿನಲ್ಲಿ ಸ್ಥಾಪಿತವಾಯಿತು. ಆಗ ಇವರು ಈ ಸಂಸ್ಥೆಯ ಜೀವಭೌತವಿಜ್ಞಾನ ವಿಭಾಗದಲ್ಲಿ ಬೋಧಕರಾಗಿಯೂ ಎಲೆಕ್ಟ್ರೊಎನ್ಸೆಫಲೊಗ್ರಾಫ್ ಯಂತ್ರದ ಮೇಲ್ವಿಚಾರಕರಾಗಿಯೂ ಸೇವೆಸಲ್ಲಿಸಿದರು.

ಇವರದು ಅನನುಕರಣೀಯ ಜೀವನ. ತೀಕ್ಷ್ಣಬುದ್ಧಿಶಕ್ತಿ. ಆಳವಾದ ಪಾಂಡಿತ್ಯ. ಸಿದ್ಧಲೇಖನ, ಕಲೆ, ಉತ್ತಮ ಕಲಾಭಿಜ್ಞತೆ, ವೈಯಕ್ತಿಕ ಜೀವನದಲ್ಲಿ ಚಾರಿತ್ರ್ಯ, ಪ್ರಾಮಾಣಿಕತೆ, ವ್ಯವಹಾರದಲ್ಲಿ ಸ್ನೇಹಪರತೆ ಇವೆಲ್ಲವನ್ನೂ ಒಬ್ಬ ವ್ಯಕ್ತಿಯಲ್ಲಿ ಕಾಣುವುದು ದುರ್ಲಭ. ನರಸಿಂಹಯ್ಯನವರು ಅಂಥ ವ್ಯಕ್ತಿ ಆಗಿದ್ದರು.

**ನರಸಿಂಹಯ್ಯ, ಎಚ್. :** 1920- . ಸುಪ್ರಸಿದ್ಧ ಶಿಕ್ಷಣ ತಜ್ಞ, ವಿಚಾರವಾದಿ, ಸ್ವಾತಂತ್ರ್ಯಹೋರಾಟಗಾರ ಮತ್ತು ಅಪ್ಪಟ ಗಾಂಧೀವಾದಿ. ಡಾ.ಎಚ್.ಎನ್. ಎಂದೇ ಚಿರಪರಿಚಿತರು. ಕೋಲಾರ ಜಿಲ್ಲೆ ಗೌರೀಬಿದನೂರು ತಾಲ್ಲೂಕಿನ ಹೊಸೂರು ಗ್ರಾಮದಲ್ಲಿ 1920 ಜೂನ್ 6 ರಂದು ಜನಿಸಿದರು. ತಂದೆ ಹನುಮಂತಪ್ಪ, ತಾಯಿ ವೆಂಕಟಮ್ಮ.

ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸವನ್ನು ಹೊಸೂರಿನಲ್ಲಿ ಮುಗಿಸಿ ಪ್ರೌಢಶಾಲಾ ಶಿಕ್ಷಣಕ್ಕೆಂದು ಬೆಂಗಳೂರಿನ ನ್ಯಾಷನಲ್ ಹೈಸ್ಕೂಲ್ ಸೇರಿದರು (1935). 1942 ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿದ್ದರ ಪರಿಣಾಮವಾಗಿ ಬೆಂಗಳೂರು, ಮೈಸೂರು ಮತ್ತು ಪುಣೆಯ ಯರವಾಡ ಜೈಲಿನಲ್ಲಿ ಒಟ್ಟು ಸುಮಾರು 9 ತಿಂಗಳ ಕಾರಾಗೃಹವಾಸ ಅನುಭವಿಸಿದರು. ಇದರಿಂದಾಗಿ ಎರಡು ವರ್ಷಗಳ ವಿದ್ಯಾಭ್ಯಾಸ ಮುಂದುವರಿಸಲಾಗಲಿಲ್ಲ. ಅನಂತರ ವಿದ್ಯಾಭ್ಯಾಸ ಮುಂದುವರಿಸಿ ಭೌತಶಾಸ್ತ್ರದ ಬಿ.ಎಸ್ಸಿ ಆನರ್ಸ್ ಮತ್ತು ಎಂ.ಎಸ್ಸಿ. ಪದವಿಗಳನ್ನು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಿಂದ ಪಡೆದರು. 1946 ರಲ್ಲಿ ಬೆಂಗಳೂರು ಬಸವನಗುಡಿ ನ್ಯಾಷನಲ್ ಕಾಲೇಜಿನಲ್ಲಿ ಭೌತಶಾಸ್ತ್ರ ಅಧ್ಯಾಪಕರಾಗಿ ಸೇರಿ, ಪ್ರಾಧ್ಯಾಪಕರಾಗಿ ಹನ್ನೆರಡು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಅನಂತರ ಅದೇ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಅಮೆರಿಕದ ಓಹಿಯೊ ಸ್ಟೇಟ್ ವಿಶ್ವವಿದ್ಯಾಲಯದಲ್ಲಿ ನ್ಯೂಕ್ಲಿಯರ್ ಫಿಸಿಕ್ಸ್‌ನಲ್ಲಿ ಡಾಕ್ಟರೇಟ್ ಪದವಿ ಗಳಿಸಿದ (1957 - 60) ಇವರು ಸದರನ್ ಇಲಿನಾಯ್ಸ್ ವಿಶ್ವವಿದ್ಯಾಲಯದಲ್ಲಿ ಒಂದು ವರ್ಷಕಾಲ (1967 - 68) ಸಂದರ್ಶಕ ಪ್ರಾಧ್ಯಾಪಕರಾಗಿದ್ದರು. ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿ ನೇಮಕಗೊಂಡು ವಿಶ್ವವಿದ್ಯಾಲಯದ ಪುರೋಭಿವೃದ್ಧಿಗೆ

ಶ್ರಮಿಸಿದ್ದಾರೆ (1972 - 77). 1975 ರಿಂದ ನ್ಯಾಷನಲ್ ಎಜುಕೇಷನ್ ಸೊಸೈಟಿ ಆಫ್ ಕರ್ನಾಟಕದ ಅಧ್ಯಕ್ಷರಾಗಿದ್ದಾರೆ. ತಮ್ಮ ಜೀವನದ ಬಹುಭಾಗವನ್ನು ಶಿಕ್ಷಣ ಕ್ಷೇತ್ರಕ್ಕೆ ಮೀಸಲಿಟ್ಟ ಇವರು ಗ್ರಾಮಾಂತರ ಪ್ರದೇಶಗಳಲ್ಲಿ ಶಿಕ್ಷಣ ಸಂಸ್ಥೆಗಳ ಸ್ಥಾಪನೆಗೆ ಕಾರಣರಾಗಿದ್ದಾರೆ. ಗೌರೀಬಿದನೂರು ಮತ್ತು ಬಾಗೇಪಲ್ಲಿಯಲ್ಲಿ ನ್ಯಾಷನಲ್ ಕಾಲೇಜುಗಳು, ಹೊಸೂರು, ಯಲ್ದೂರು, ಮುಡಿಯನೂರು, ಸುಬ್ರಹ್ಮಣ್ಯಪುರಗಳಲ್ಲಿ ನ್ಯಾಷನಲ್ ಹೈಸ್ಕೂಲುಗಳ ಸ್ಥಾಪನೆಯಿಂದಾಗಿ ಗ್ರಾಮಾಂತರ ಪ್ರದೇಶಗಳ ವಿದ್ಯಾರ್ಥಿಗಳಿಗೆ ಗುಣಾತ್ಮಕ ಶಿಕ್ಷಣ ದೊರಕುವಂತೆ ಮಾಡಿದ್ದಾರೆ.

ಇವರಿಗೆ ವಿಜ್ಞಾನದಲ್ಲಿ ಅಚಲವಾದ ನಂಬಿಕೆ. ಶೂನ್ಯದಿಂದ ಏನನ್ನೂ ಸೃಷ್ಟಿಸಲು ಸಾಧ್ಯವಿಲ್ಲ: ಮೌಢ್ಯದ ವಿರುದ್ಧ ಸತತ ಹೋರಾಟ ಅಗತ್ಯ. ಜನರ ಅಜ್ಞಾನವನ್ನು ಬಂಡವಾಳವನ್ನಾಗಿಸಿಕೊಂಡು ಶೋಷಣೆ ಮಾಡುವವರ ವಿರುದ್ಧ ಹೋರಾಟ ಮಾತ್ರವಲ್ಲ ಅಂಥವರ ಪೊಳ್ಳುತನವನ್ನು ಬಯಲಿಗೆಳೆಯಬೇಕು ಹಾಗೂ ಅವರ ಹಿಡಿತದಿಂದ ಮುಗ್ಧ ಜನತೆಯನ್ನು ರಕ್ಷಿಸಬೇಕೆಂದು ಇವರ ನಿಲವು. ಬೆಂಗಳೂರು ಸೈನ್ಸ್ ಫೋರಂ ಎಂಬುದು ವಿಜ್ಞಾನದ ಮಹತ್ವವನ್ನು ಪರಿಚಯಿಸಲೆಂದು ಹುಟ್ಟಿಕೊಂಡ ಇವರ ಮತ್ತೊಂದು ಸಂಸ್ಥೆ. ಎಚ್.ಎನ್. ಇದರ ಸಂಸ್ಥಾಪಕ ಅಧ್ಯಕ್ಷರು (1962 ರಿಂದ). ಬುದ್ಧ, ಐನ್‌ಸ್ಟೈನ್, ಸ್ವಾಮಿ ವಿವೇಕಾನಂದ, ಮಹಾತ್ಮಾಗಾಂಧೀ, ನೆಹರು ಇವರ ತತ್ತ್ವಗಳಿಂದ ಪ್ರಭಾವಿತರಾಗಿರುವ ಇವರು ಕೆಲಕಾಲ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿದ್ದರು (1995). ಸಂಗೀತ, ನಾಟಕ, ನೃತ್ಯ ಮುಂತಾದ ಲಲಿತಕಲೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಬೆಂಗಳೂರಿನ ಲಲಿತಕಲಾಪರಿಷತ್ತನ್ನು ಸ್ಥಾಪಿಸಿದರಲ್ಲದೆ (1962) ಅದರ ಅಧ್ಯಕ್ಷರಾಗಿಯೂ ಮುಂದುವರಿದಿದ್ದಾರೆ.

ತೆರೆದಮನ ಮತ್ತು ಹೋರಾಟದ ಹಾದಿಯಲ್ಲಿ - ಇವು ಇವರ ಪ್ರಮುಖ ಬರೆಹಗಳು. ಇವಲ್ಲದೆ ಅನೇಕ ವಿಚಾರಪೂರಿತ ಹಾಗೂ ಹಾಸ್ಯಭರಿತ ಬಿಡಿಲೇಖನಗಳು ಕನ್ನಡ ಹಾಗೂ ಇಂಗ್ಲಿಷಿನಲ್ಲಿ ಪ್ರಕಟಗೊಂಡಿವೆ. 'ತೆರೆದಮನ' ವಿಚಾರ, ನೆನಪುಗಳ ಹಾಗೂ ಲಲಿತ ಪ್ರಬಂಧಗಳ ಸಂಕಲನವಾಗಿದ್ದು ಕನ್ನಡ ವಿಚಾರ ಸಾಹಿತ್ಯಕ್ಕೆ ಗಮನಾರ್ಹ ಕೊಡುಗೆಯಾಗಿದೆ. ಇದನ್ನು ವಿಚಾರವಾದಿಗಳ ಬೈಬಲ್ ಎಂದೂ ಕರೆಯಲಾಗಿದೆ. 'ಹೋರಾಟದ ಹಾದಿಯಲ್ಲಿ' ಇವರ ಆತ್ಮಕಥೆ.

ಇವರು ಕರ್ನಾಟಕ ವಿಧಾನ ಪರಿಷತ್ತಿನ ನಾಮಕರಣ ಸದಸ್ಯರಾಗಿದ್ದರು (1980 - 86). ಇವರಿಗೆ ಹಲವು ಪ್ರಶಸ್ತಿ ಗೌರವಗಳು ಸಂದಿವೆ. ಪದ್ಮಭೂಷಣ (1984), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1968), ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದಕ್ಕೆ ನೀಡಿದ ತಾಮ್ರಪತ್ರ (1973), ಗುಲ್ಬರ್ಗಾ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ (1988), ದೇವರಾಜ್ ಅರಸು ಪ್ರಶಸ್ತಿ (1994), ಅಮೆರಿಕದಲ್ಲಿ ಇರುವ ಪ್ರಕೃತ್ಯತೀತ ಘಟನೆಗಳ ಸಮಿತಿಯ ಫೆಲೋ (ಕಮಿಟಿ ಫಾರ್ ದಿ ಸೈಂಟಿಫಿಕ್ ಇನ್ವೆಸ್ಟಿಗೇಶನ್ ಕ್ಲೈಮ್ಸ್ ಆಫ್ ದಿ ಪಾರಾನಾರ್ಮಲ್) ಇವು ಮುಖ್ಯವಾದವು. 2004ರ ದಸರಾ ಮಹೋತ್ಸವದ ಉದ್ಘಾಟನೆ ಮಾಡುವ ಗೌರವಕ್ಕೆ ಶ್ರೀಯುತರು ಪಾತ್ರರಾಗಿದ್ದಾರೆ. (ಎಸ್.ಎನ್.ಜಿ.)

**ನರಸಿಂಹಯ್ಯ, ಎನ್. :** 1925 . ಕನ್ನಡದ ಪತ್ತೇದಾರಿ ಕಾದಂಬರಿಗಳ ಜನಪ್ರಿಯ ಲೇಖಕ. 1925 ಸೆಪ್ಟಂಬರ್ 18 ರಂದು ಬೆಂಗಳೂರಿನಲ್ಲಿ ಜನಿಸಿದರು. ತಂದೆ ಜಿ.ನಂಜಪ್ಪ, ತಾಯಿ ಎಲ್ಲಮ್ಮ. ಇವರ ಮನೆತನ ಮೂಲತಃ ಚಿತ್ರದುರ್ಗ, ಇವರ ತಂದೆ ಲೇಖನಸಾಮಗ್ರಿ ಅಂಗಡಿ ನಡೆಸುತ್ತಿದ್ದರು. ನರಸಿಂಹಯ್ಯನವರು ನಾಲ್ಕನೆಯ ಇಯತ್ತೆಯಲ್ಲಿದ್ದಾಗ ತಂದೆ ತೀರಿಕೊಂಡರು. ಇವರು ಚಿಕ್ಕಪ್ಪನ ಆಶ್ರಯದಲ್ಲಿ ಬೆಳೆದರು. ಇವರು ಸುಲ್ತಾನಪೇಟೆಯ ಮಿಡ್ಲ್‌ಸ್ಕೂಲಿನಲ್ಲಿ ಓದುತ್ತಿದ್ದಾಗ ಚಿಕ್ಕಪ್ಪನೂ ತೀರಿಕೊಂಡರು. ಬೇರೆ ದಾರಿಯಿಲ್ಲದೆ ತಾಯಿಯ ತೌರುಮನೆಯಾದ ಚಿಕ್ಕಮಗಳೂರಿಗೆ ಹೋಗಬೇಕಾಯಿತು. ಬಡತನದಿಂದಾಗಿ ಇವರು ದರ್ಜಿಯ ಕೆಲಸಕ್ಕೆ ಸೇರಿಕೊಂಡರು. ಅದೇ ಸಮಯದಲ್ಲಿ ಇಂಡಸ್ಟ್ರಿಯಲ್ ಶಾಲೆಯಲ್ಲಿ ಓದಿದರು. ತಾಯಿಯ ಜೊತೆಗೆ ಇವರೂ ಕೂಲಿಕೆಲಸಕ್ಕೆ ಹೋಗುತ್ತಿದ್ದರು. ಮುಂದೆ ಇವರು ಹಲವಾರು ಖಾಸಗಿ ಸಾರಿಗೆ ಸಂಸ್ಥೆಗಳಲ್ಲಿ ಮೋಟರ್ ಒರಸುವುದು ಮುಂತಾದ ಕೆಲಸ ಮಾಡಿ, ಪ್ರಥಮ ಚಿಕಿತ್ಸೆಯ ತರಬೇತಿ ಪಡೆದು ಬಸ್ ನಿರ್ವಾಹಕರಾದರು.

ಚಿಕ್ಕಮಗಳೂರಿನಲ್ಲಿ ಹಾವೇರಿಯ ನಾಗರತ್ನಮ್ಮ ಅವರೊಂದಿಗೆ ಇವರ ಮದುವೆಯಾದ ಅನಂತರ (1947). 1948 ರ ಡಿಸೆಂಬರ್‌ನಲ್ಲಿ ಸಂಸಾರ ಸಮೇತ ಬೆಂಗಳೂರಿನಲ್ಲಿ ನೆಲಸಿದರು. ಮೊದಲಿನಿಂದಲೂ ಓದುವ ಹವ್ಯಾಸ ಬೆಳೆಸಿಕೊಂಡಿದ್ದ ಇವರು ಟಿ.ನಾರಾಯಣ ಅಯ್ಯಂಗಾರ್ ಎಂಬ ಹಿತೈಷಿಗಳನ್ನು ಕಂಡು ಪುಸ್ತಕ ಬರೆಯುವ ಆಸೆ ವ್ಯಕ್ತಪಡಿಸಿದರು. ನರಸಿಂಹಯ್ಯನವರ ತಂದೆಯೂ ಗ್ರಂಥ ರಚಿಸುತ್ತಿದ್ದರು. ಅವರ ಕೆಲವು ಗ್ರಂಥಗಳು ಪ್ರಕಟವಾಗಿವೆ. ನರಸಿಂಹಯ್ಯನವರ ಅಜ್ಜ ಆಶುಕವಿಗಳಾಗಿದ್ದರು. ನರಸಿಂಹಯ್ಯನವರು ಮೊದಲಿಗೆ ಯಾವ ಪ್ರತಿಫಲವೂ ಇಲ್ಲದೆ ಒಂಬತ್ತು ಪುಸ್ತಕಗಳನ್ನು ಬರೆದುಕೊಟ್ಟರು. ಇವು ನರಸಿಂಹಯ್ಯನವರಿಗೆ ಜನಪ್ರಿಯತೆ ದೊರಕಿಸಿಕೊಟ್ಟವು.

1952 ರಲ್ಲಿ ಬರೆಯಲು ಪ್ರಾರಂಭಿಸಿದ ನರಸಿಂಹಯ್ಯನವರು 1981 ರ ವರೆಗೆ 520 ಕೃತಿಗಳನ್ನು ರಚಿಸಿದರು. ಅದರಲ್ಲಿ ಪತ್ತೇದಾರಿ ಕಾದಂಬರಿಗಳು 450. ಇವಲ್ಲದೆ ಸಾಮಾಜಿಕ ಕಾದಂಬರಿಗಳು, ಹರಟೆಗಳು, ಐತಿಹಾಸಿಕ ಕಾದಂಬರಿಗಳೂ ಇವೆ. ಇವರು ಬರೆದ ಭಯಂಕರ ಭೈರಾಗಿ ಎಂಬ ಕೃತಿ ಎಂಟು ಮುದ್ರಣಗಳನ್ನು ಕಂಡಿದೆ. ಅದರ 35,000 ಪ್ರತಿಗಳು ಮಾರಾಟವಾಗಿವೆ. ಇವರ ಪತ್ತೇದಾರರು ಮೂವರು: ಪುರುಷೋತ್ತಮ, ಮಧುಸೂದನ ಮತ್ತು ಅರಿಂಜಯ. ನರಸಿಂಹಯ್ಯನವರ ಎಲ್ಲ ಪತ್ತೇದಾರಿ ಕಾದಂಬರಿಗಳಲ್ಲಿ ಇವರೇ ಕಾಣಿಸಿಕೊಳ್ಳುತ್ತಾರೆ. ಅಪರಾಧ ಪತ್ತೆ ಕಾರ್ಯದಲ್ಲಿ ತೊಡಗುತ್ತಾರೆ.

ಚೋರ ಚಕ್ರವರ್ತಿ, ಪಂಚರಂಗಿ ಪದ್ಮಿನಿ, ಪತ್ತೇದಾರನ ಪರಾಜಯ, ಮಾಯಾವಿ ಮಧುಸೂದನ, ಮಾಯವಾದ ಮಹಾರಾಣಿ, ಕಾಳರಾತ್ರಿಯ ಖದೀಮ, ಮೋಜಿನ ಮೋಹನಾಂಗಿ, ಭಯಂಕರ ಭೂತ, ಮಳೆಯಾಳಿ ಮಾಂತ್ರಿಕ, ಮುಂಬಯಿ ದಗಾಕೋರ, ಪಂಜರದ ಪಿಶಾಚಿ, ಮಾಟಗಾತಿಯ ಮಗಳು, ಭಯಂಕರ ಭವಾನಿ, ಮಾಂತ್ರಿಕನ ಕೈಗೊಂಬೆ, ಪಂಜುಳ್ಳಿ ಪಿಶಾಚಿ, ಭಯಂಕರ ಪಿಶಾಚಿ ಮೊದಲಾದ ಇವರ ಅನೇಕ ಪತ್ತೇದಾರಿ ಕಾದಂಬರಿಗಳು ಅತ್ಯಂತ ಜನಪ್ರಿಯವಾಗಿವೆ.

ಇವಲ್ಲದೆ ಗಿಳಿ ಕಚ್ಚಿದ ಹಣ್ಣು, ಅತ್ತೆ ಮನೆಯ ಅಳಿಯ, ಪುರೋಹಿತನ ಮಗಳು, ತುಪ್ಪದ ಬಿಂದಿಗೆ, ಗರತಿಯಾದ ಸೂಳೆ, ಬಂಜೆಯ ಮಗಳು, ಹುಳು ಕೊರೆದ ಹೂ, ವೇದ ಓದಿದ ಕೋಣ, ರಾಜ ಮೆಚ್ಚಿದ ರಂಬೆ ಮುಂತಾದ ಐವತ್ತು ಸಾಮಾಜಿಕ ಕಾದಂಬರಿಗಳನ್ನೂ ವೀರದಳವಾಯಿ ಎಂಬ ಐತಿಹಾಸಿಕ ಕಾದಂಬರಿಯನ್ನೂ ಬರೆದಿದ್ದಾರೆ. ಡಿ.ವಿ.ಜಿ. ಯವರ ಮಂಕುತಿಮ್ಮನ ಕಗ್ಗದ ಮಾದರಿಯಲ್ಲಿ ಇವರು ಬರೆದಿರುವ ಚತುಷ್ಪದಿಗಳ ಸಂಗ್ರಹ 'ಬೊಮ್ಮನ ಬುರುಡೆ'. ನರಸಿಂಹಯ್ಯನವರು ಸಾಮಾನ್ಯ ಜ್ಞಾನಾರ್ಜನೆಗೆ ಬೇಕಾದ ಪುಸ್ತಕಗಳನ್ನೂ ಹಾಸ್ಯ ಚಟಾಕಿಗಳ ಸಂಗ್ರಹವನ್ನೂ ಬರೆದಿದ್ದಾರೆ. ಇವರ ಆತ್ಮಕಥೆಯ ಹೆಸರು 'ನೋವು ನಲಿವು'.

ಇವರ ಅಂತರಿಕ್ಷದಲ್ಲಿ ಅರಿಂಜಯ ಎಂಬ ಕಾದಂಬರಿಗೆ ವೀರೇಂದ್ರಹೆಗಡೆ ಚಿನ್ನದ ಪದಕ ದೊರೆತಿದೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1997), ಕರ್ನಾಟಕ ಪತ್ರಿಕಾ ಅಕಾಡೆಮಿ ಮತ್ತು ಸಾಹಿತ್ಯ ಮಿತ್ರವೃಂದದ ಸಾಹಿತ್ಯರತ್ನ ಪ್ರಶಸ್ತಿಗಳು ಇವರಿಗೆ ಸಂದಿವೆ. ದಾವಣಗೆರೆಯಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಇವರಿಗೆ ಪತ್ತೇದಾರಿ ಕಾದಂಬರಿಕಾರ ಪ್ರಶಸ್ತಿ ನೀಡಿ ಗೌರವಿಸಲಾಯಿತು (1992). ಅನೇಕ ಸಂಘ ಸಂಸ್ಥೆಗಳು ಇವರ ಕನ್ನಡ ಸೇವೆಯನ್ನು ಗುರುತಿಸಿ ಗೌರವಿಸಿವೆ. (ಎಸ್.ಎಂ.ಕೆ.)

**ನರಸಿಂಹಯ್ಯ ಸಿ.ಡಿ. :** 1921- . ಭಾರತೀಯ ಇಂಗ್ಲಿಷ್‌ನ ಪ್ರಸಿದ್ಧ ಲೇಖಕರು. ಇಂಗ್ಲಿಷ್ ಸಾಹಿತ್ಯ ಬೋಧನೆ ಹಾಗೂ ಖಚಿತ ವಿಮರ್ಶಾ ನಿಲವುಗಳಿಂದ ಭಾರತೀಯ ಸಾಹಿತ್ಯ ವಲಯದಲ್ಲಿ ಸಿಡಿಎನ್

ಎಂದೇ ಖ್ಯಾತರಾದ ಇವರು ಬೆಂಗಳೂರಿನ ಸಮೀಪದ ರಾಮನಗರದಲ್ಲಿ (ಹಿಂದಿನ ಕ್ಲೋಸ್‌ಪೇಟೆ) 1921 ಮೇ ತಿಂಗಳಿನಲ್ಲಿ ಜನಿಸಿದರು. ಮೈಸೂರು ಹಾಗೂ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯಗಳಲ್ಲಿ ಇಂಗ್ಲಿಷ್ ಸಾಹಿತ್ಯದಲ್ಲಿ ವ್ಯಾಸಂಗ ಮುಗಿಸಿ ಅನಂತರದಲ್ಲಿ ಪ್ರಿನ್ಸ್‌ಟನ್ ವಿಶ್ವವಿದ್ಯಾನಿಯಲದಲ್ಲಿ ರಾಕ್‌ಫಿಲ್ಲರ್ ಶಿಷ್ಯವೇತನ ಪಡೆದುಕೊಂಡರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸ್ನಾತಕ ಹಾಗೂ ಸ್ನಾತಕೋತ್ತರ ವಿಭಾಗದಲ್ಲಿ ಪ್ರಾಧ್ಯಾಪಕರೂ ಮುಖ್ಯಸ್ಥರೂ ಆಗಿ 1950 - 79 ರವರೆಗೆ ಸೇವೆ ಸಲ್ಲಿಸಿದರು. 1957 - 62 ರ ವರೆಗೂ ಮೈಸೂರು ವಿಶ್ವವಿದ್ಯಾನಿಲಯದ ಮಹಾರಾಜ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿ ಸೇವೆ ಸಲ್ಲಿಸಿದರು. ನಿವೃತ್ತಿಯಾದ ಬಳಿಕ ಇಂಗ್ಲಿಷ್ ಸಾಹಿತ್ಯ ಹಾಗೂ ಸಂಸ್ಕೃತಿ, ಕಲೆಯ ಅಧ್ಯಯನ ಕೇಂದ್ರ ಸಂಸ್ಥೆಯಾದ ತಾವೇ ಸ್ಥಾಪಿಸಿದ ಧ್ವನ್ಯಾಲೋಕದ ನಿರ್ದೇಶಕರಾಗಿದ್ದಾರೆ.

ಇಂಗ್ಲಿಷ್ ಸಾಹಿತ್ಯದ ಅಧ್ಯಯನಕ್ಕೆ ಸಿಡಿಎನ್ ಅವರ ಕೊಡುಗೆ ಅಪಾರ. ಜೊತೆಗೇ ಇವರ ಪ್ರಭಾವಯುತ ಸಾಹಿತ್ಯ ಗರಡಿಯಲ್ಲಿ ಪಳಗಿದ ಅನೇಕ ಸಾಹಿತಿಗಳು ಕನ್ನಡ ಸಾಹಿತ್ಯದಲ್ಲಿ 'ನವ್ಯ' ಕ್ರಾಂತಿಯನ್ನು ತಂದವರೆಂದರೆ ಅತಿಶಯೋಕ್ತಿಯಾಗಲಾರದು. ಎ.ಕೆ.ರಾಮಾನುಜನ್, ಯು.ಆರ್. ಅನಂತಮೂರ್ತಿ, ಪಿ.ಲಂಕೇಶ್ ಮೊದಲಾದವರು ಸಿಡಿಎನ್ ಅವರ ಪ್ರಭಾವಕ್ಕೆ ಒಳಗಾದವರೇ. ಸಿಡಿಎನ್ ಅವರು ತಮ್ಮ ವ್ಯಕ್ತಿತ್ವ ವಿಕಾಸ ಹೊಂದಲು ಪುಟವಿಟ್ಟಿದ್ದು ಕೇಂಬ್ರಿಡ್ಜ್‌ನಲ್ಲಿ ಹೆಸರಾಂತ ವಿಮರ್ಶಕ ಎಫ್.ಆರ್. ಲಿವಿಸ್‌ನ ಕೈಕೆಳಗಿನ ಶಿಷ್ಯವೃತ್ತಿ, "ಸಾಹಿತ್ಯವೆಂದರೆ ಜೀವನದ ಬಿಂಬಮಾತ್ರವಷ್ಟೇ ಅಲ್ಲ, ಅದು ಜೀವನವೇ - ಸಾಹಿತ್ಯದ ಏಕೈಕ ಮಾನದಂಡವೆಂದರೆ ಜೀವನವೇ - ಹಾಗಾಗಿ ಕಠೋರವೆನಿಸಿದರೂ ವಸ್ತುನಿಷ್ಠ ಹಾಗೂ ಸತ್ಯನಿಷ್ಠ ಮಾನದಂಡಗಳನ್ನು ವೃತ್ತಿ ಜೀನದಲ್ಲಿ ಅಳವಡಿಸುತ್ತ ಸಾಗಬೇಕು. ಮಾನವ, ಶಾಶ್ವತ ಮೌಲ್ಯಗಳು ಸರ್ವಕಾಲಿಕವಾಗಿರುತ್ತವೆ. ಅವನ್ನು ಅರ್ಥೈಸಿಕೊಳ್ಳುವುದು, ಅಳವಡಿಸುವುದು ನಮ್ಮ ಜವಾಬ್ದಾರಿ" - ಇವು ಲಿವಿಸ್‌ನ ನಿಲುವು. ಅವೆಲ್ಲವನ್ನೂ ಜೀರ್ಣಿಸಿಕೊಂಡು ಸಿಡಿಎನ್ ಅದೇ ರೀತಿ ಜೀವನ ನಡೆಸಿದವರು. ಸಂದೇಹ, ಪೂರ್ವಾಗ್ರಹ ಪೀಡಿತ ಓದುಗನನ್ನೂ ಕೂಡ ಕೃತಿಯನ್ನು ಕೂಲಂಕುಶವಾಗಿ ನೋಡುವಂತೆ ಮಾಡುವ ಕರ್ತವ್ಯ ವಿಮರ್ಶಕನದ್ದು - ಇದು ಸಿಡಿಎನ್ ಅವರ ನಿಲುವು.

ಅಮೆರಿಕದ ಹಾಗೂ ಕಾಮನ್‌ವೆಲ್ತ್ ಸಾಹಿತ್ಯದಂತಹ, ಹೆಚ್ಚು ಮರೆಯಲ್ಲಿಯೇ ಉಳಿದುಬಿಟ್ಟಂತಹ ಸಾಹಿತ್ಯಗಳತ್ತ ಸಿಡಿಎನ್ ಗಮನ ಹರಿಸಿ ಭಾರತದ ವಿದ್ವಾಂಸರ ಗಮನ ಸೆಳೆಯುವಲ್ಲಿ ಸಫಲರಾದರೂ ಅವರ ಬಹುಪಾಲು ಕಾರ್ಯಕ್ಷೇತ್ರ ಭಾರತದ ಇಂಗ್ಲಿಷ್ ಸಾಹಿತ್ಯದ ಮೇಲೆಯೇ. ಈ ನಿಟ್ಟಿನಲ್ಲಿ ಇವರ ಮೇರು ಕೃತಿ 'ದಿ ಸ್ವಾನ್ ಅಂಡ್ ದಿ ಈಗಲ್' (1969). ಗರುಡದಂತಹ ದೂರದೃಷ್ಟಿ ಹಾಗೂ ಹಂಸದಂತಹ ಕ್ಷೀರ ನ್ಯಾಯದಂತಿರಬೇಕು. ವಿಮರ್ಶೆಯೆಂಬುದು ಸಿಡಿಎನ್ ಅವರ ಕೃತಿಯ ಶೀರ್ಷಿಕೆಯಲ್ಲೇ ಎದ್ದು ಕಾಣುತ್ತದೆ. ಇದರಲ್ಲೂ ಹಾಗೂ ಇನ್ನಿತರ ಕೃತಿಯಲ್ಲೂ ಸಿಡಿಎನ್ ಅವರಿಗೆ ಪಂಡಿತ್ ನೆಹರೂರವರ ಬರೆವಣಿಗೆಯ ಮೇಲಿನ ಅಭಿಮಾನ ಅಪಾರ. ಇದೇ ಕೃತಿಯಲ್ಲಿ ಭಾರತೀಯ ಇಂಗ್ಲಿಷ್ ಕಾದಂಬರಿಲೋಕದ ದಿಗ್ಗಜರಾದ ರಾಜಾರಾವ್, ಮುಲ್ಕ್‌ರಾಜ್ ಆನಂದ್ ಹಾಗೂ ಆರ್.ಕೆ.ನಾರಾಯಣ್‌ರವರ ವೈಯಕ್ತಿಕ ಸಾಧನೆಗಳತ್ತ ಲೇಖನಿ ಹರಿಸಿ, ಅವರ ಮೌಲ್ಯಮಾಪನ ಮಾಡುವುದರಲ್ಲಿ ಯಶಸ್ವಿಯಾದರು.

ರಾಜಾರಾವ್ ಅವರ ಸಾಹಿತ್ಯದ ಮೇಲೆ ಬೆಳಕು ಚೆಲ್ಲುವಲ್ಲಿ ಸಿಡಿಎನ್ ಅವರ ಕೃಷಿ ಅಪರೂಪವಾದದ್ದು. ರಾಜಾರಾವ್‌ರ ಮೊದಲ ಕಾದಂಬರಿ ಕಾಂತಪುರದಿಂದ ಹಿಡಿದು ದಿ ಸರ್‌ಪೆಂಟ್ ಅಂಡ್ ದಿ ರೋಪ್, ದಿ ಕ್ಯಾಟ್ ಅಂಡ್ ಶೇಕ್ಸ್‌ಪಿಯರ್ ಅಂತಹ ಅತ್ಯಂತ ಕ್ಲಿಷ್ಟವಾದ ತಾತ್ವಿಕ ದೃಷ್ಟಿಯುಳ್ಳ ಕಾದಂಬರಿಯನ್ನೂ ಸಿಡಿಎನ್ ಎಳೆಎಳೆಯಾಗಿ ಬಿಡಿಸಿ ಬೆಳಕು ಚೆಲ್ಲುತ್ತಾರೆ. ಸುಲಭದಲ್ಲಿ ಓದುಗನ ಕೈಗೆ ಸಿಗದ ಈ ಕಾದಂಬರಿಗಳ ವೈಶಿಷ್ಟ್ಯವನ್ನು ಓದುಗನಿಗೆ ತೋರುತ್ತಲೇ ಮೂಲ ಕೃತಿಯನ್ನು ಮತ್ತೆ ಮತ್ತೆ ಓದಲು ಪ್ರಚೋದಿಸುತ್ತಾರೆ.

ರಾಷ್ಟ್ರ ಸಾಹಿತ್ಯದ ಕಲ್ಪನೆ ಸಿಡಿಎನ್ ರವರಿಗೆ ಪ್ರಿಯವಾದದ್ದು. ಈ ಪರಿಕಲ್ಪನೆ ಹೇಗೆ ಭಾರತದ ವಿವಿಧ ಭಾಷಾ ಸಾಹಿತ್ಯದಲ್ಲಿ ಬೇರ್ಪಡಿಸಲಾಗದಂತೆ ಅಂತರ್ಗತವಾಗಿ ಹೋಗಿರುವುದನ್ನು ಪ್ರಸ್ತಾಪಿಸುತ್ತ ಈ ವೈಶಿಷ್ಟ್ಯ ಇಂಗ್ಲಿಷ್ ಸಾಹಿತ್ಯದ ಮೂಲ ನೆಲೆ ಎಂದು ಇವರು ಗುರ್ತಿಸುತ್ತಾರೆ. ಈ ಭಾರತೀಯ ಸಂವೇದನೆಯೇ ಭಾರತೀಯ ಸಾಹಿತ್ಯದ ವಿಶಿಷ್ಟತೆ ಎಂದವರು ಗುರುತಿಸುತ್ತಾ ಅಖಂಡ ಭಾರತೀಯ ಸಂಪ್ರದಾಯವನ್ನು ಜೀವಂತವಾಗಿ ಉಳಿಸಿರುವುದು ಇದೇ ಎಂದು ನುಡಿಯುತ್ತಾರೆ. ಆದರೆ ಪ್ರಸ್ತುತ ಕಾಲದಲ್ಲಿ ಈ ಎದೆ ತೆಗೆದುಕೊಳ್ಳುವಿಕೆ ಒಣ ಪ್ರತಿಷ್ಠೆಯ ಪ್ರತಿಬಿಂಬವಷ್ಟೇ ಆಗಿ ಅನುಕರಣೆ ಅಷ್ಟೇ ಆಗಿದೆ ಎಂದು ವಿಷಾದಿಸುತ್ತಾರೆ.

ಸಿಡಿಎನ್ ಅವರ ಜೀವನ, ಸಾಹಿತ್ಯ ದೃಷ್ಟಿಯ ಮೇಲೆ ಇವರ ಗುರುಗಳಾದ ಲಿವಿಸ್‌ರ ಛಾಪು ಗಾಢವಾಗಿ ಮೂಡಿದೆ. ಅಂದಪಕ್ಷಕ್ಕೆ ಸಿಡಿಎನ್ ಲೀವಿಸ್‌ರ ಸಾಹಿತ್ಯ ದೃಷ್ಟಿಯನ್ನು ಸಾರಾಸಗಟಾಗಿ ಸ್ವೀಕರಿಸಿ ಅದನ್ನು ಭಾರತೀಯ ಸಾಹಿತ್ಯ, ಸಂಸ್ಕೃತಿಯ ಮೇಲೆ ಹೇರಿದವರಲ್ಲ. ನಿರ್ದಾಕ್ಷಿಣ್ಯ ಸಾಹಿತ್ಯ ನಿಲುವುಗಳನ್ನು ಅದು ಬೇರೂರಿರುವ ಸಾಂಸ್ಕೃತಿಕ ಹಾಗೂ ತಾತ್ತ್ವಿಕ ನೆಲೆಯಲ್ಲಿ ಕೂಲಂಕಷವಾಗಿ ಪರಿಶೀಲಿಸುತ್ತ ಸಾಗಿ ಹೇಗೆ ಅದು ಓದುಗನ ಸೂಕ್ಷ್ಮತೆಗೆ, ಸಂವೇದನೆಗೆ ಕಾರಣೀಭೂತವಾಗುತ್ತದೆಂಬುದನ್ನು ತಿಳಿ ಹೇಳುವ ಪ್ರಕ್ರಿಯೆ. ಅದು ಈ ಆದರ್ಶಗಳನ್ನು ಬರೆದರೆ ಸಾಲದು, ಜೀವನದಲ್ಲೂ ಆಳವಡಿಸಬೇಕು ಎಂಬುದನ್ನು ಸಿಡಿಎನ್ ತೋರಿಸುತ್ತಾರೆ ಎಂದು ಸಿಡಿಎನ್ ನೆಚ್ಚಿನ ಶಿಷ್ಯರೂ ಸಹೋದ್ಯೋಗಿಯೂ ಆಗಿದ್ದ ಬೆಳ್ಳಿಯಪ್ಪ ತಮ್ಮ ಲೇಖನದಲ್ಲಿ ಹೀಗೆ ಬರೆಯುತ್ತಾರೆ. "ಅವರ ವಿಮರ್ಶೆಯ ಬೇರುಗಳು ಇರುವುದು ಅವರ ಭಾರತೀಯತೆಯಲ್ಲಿ ಹಾಗೂ ಅದನ್ನು ಪೋಷಿಸುವದು ಅದೇ".

ಸಿಡಿಎನ್ ಧ್ವನ್ಯಾಲೋಕವನ್ನು 1979 ರಲ್ಲಿ ಸ್ಥಾಪಿಸಿದರು. ಅದರ ಉದ್ದೇಶಗಳಿವು: ನಮ್ಮ ಸಂಪ್ರದಾಯದೊಡನೆ ನೇರ ಸಂಪರ್ಕವನ್ನು ಇಟ್ಟುಕೊಂಡೇ ಪಾಶ್ಚಾತ್ಯ ವಿಮರ್ಶೆಯಲ್ಲಿನ ಒಳಿತಾದ ಅಂಶಗಳನ್ನು ಸಮಿಶ್ರಗೊಳಿಸುವುದು ಹಾಗೂ ಸಾಹಿತ್ಯ ಕೃತಿಗೆ ಸಂಪೂರ್ಣವಾದ ಪ್ರತಿಕ್ರಿಯೆಯ ಚೇತನವನ್ನು ಪರಿಷ್ಕರಿಸುವದು.

ಹಲವು ಬಾರಿ ಸಿಡಿಎನ್‌ರವರ ಬರೆವಣಿಗೆ, ಮಾತುಗಳು ಲಘುಗ್ರಂಥ ಲೇಖಕನೋಪಾದಿಯಲ್ಲಿರುತ್ತವೆ ಎಂದೆನಿಸಬಹುದೇನೋ (ಪಾಂಪ್ಲೆಟೀರ್), ಈ ರೀತಿಯ ಚಿಂತಕನಲ್ಲಿ ಆದಿಪರಿಶೋಧಕನ (ಪಯನೀರ್) ಉತ್ಸಾಹ, ಚೈತನ್ಯಗಳು ಕಾಣಸಿಗುವುದಾದರೆ ಆ ಹಣೆಪಟ್ಟಿಯನ್ನು ಸಿಡಿಎನ್ ಎದೆಗುಂದದೆ ಧರಿಸಬಲ್ಲರು. ಇತರ ವಿಮರ್ಶಕರು ಹೆಜ್ಜೆ ಇಡಲೂ ಹಿಂಜ್ಜೆಗೆಯುತ್ತಿದ್ದಂತಹ ಕಾಲದಲ್ಲಿ ತಮ್ಮ ದಿಟ್ಟ ಹೆಜ್ಜೆಯನ್ನಿಟ್ಟು ಅರಬಿಂದೋ ರಂತಹ ಚಿಂತಕರನ್ನೂ ಭಾರತೀಯ ಇಂಗ್ಲಿಷ್ ಸಾಹಿತ್ಯವನ್ನೂ ಮನೆಮಾತಾಗಿ ಮಾಡಿದ ಸಿಡಿಎನ್‌ರವರ ಸಾಧನೆ ಅವಿಸ್ಮರಣೀಯ.

ಸಿಡಿಎನ್ ಪ್ರಪಂಚದ ಎಂಟಕ್ಕೂ ಹೆಚ್ಚು ವಿಶ್ವವಿದ್ಯಾನಿಯಗಳಲ್ಲಿ ಪ್ರಾಧ್ಯಾಪಕರಾಗಿ ಉಪನ್ಯಾಸ ನೀಡಿದ್ದಾರೆ. ದತ್ತಿ ಉಪನ್ಯಾಸಗಳನ್ನು ಹದಿನಾಲ್ಕಕ್ಕೂ ಹೆಚ್ಚು ಸಂಸ್ಥೆಗಳಲ್ಲಿ ನೀಡಿದ್ದಾರೆ. ರಾಕ್‌ಫೆಲ್ಲರ್ ವಿದ್ಯಾರ್ಥಿವೇತನವನ್ನೂ ಫುಲಬ್ರೈಟ್ ನೆನಪಿನ ಉಪನ್ಯಾಸವನ್ನೂ ನೀಡಿದ ಹಿರಿಮೆ ಇವರದ್ದು. ಹತ್ತಕ್ಕೂ ಮಿಗಿಲಾಗಿ ಗ್ರಂಥ ರಚಿಸಿ, ಹನ್ನೆರಡಕ್ಕೂ ಹೆಚ್ಚು ಕೃತಿಗಳನ್ನು ಸಂಪಾದಿಸಿದ್ದಾರೆ.

1974-77 ರವರೆಗೂ ಇವರು ಅಂತಾರಾಷ್ಟ್ರೀಯ ಕಾಮನ್‌ವೆಲ್ತ್ ಸಾಹಿತ್ಯ ಹಾಗೂ ಭಾಷಾ ಅಧ್ಯಯನ ಸಂಸ್ಥೆಯ ಮುಖ್ಯಸ್ಥರಾಗಿದ್ದರು. ಕರ್ನಾಟಕ ಸರ್ಕಾರ ಇವರಿಗೆ ರಾಜ್ಯೋತ್ಸವ ಪ್ರಶಸ್ತಿ ಕೊಟ್ಟು ಗೌರವಿಸಿದೆ (1987); ಪ್ರಕಾಶಕರ ಸಂಸ್ಥೆ 1989 ರಲ್ಲಿ ಗೌರವ ಸಲ್ಲಿಸಿದೆ. ಇವರು ಅಖಿಲ ಭಾರತ ಇಂಗ್ಲಿಷ್ ಅಧ್ಯಾಪಕರ ಸಂಘದ ಅಧ್ಯಕ್ಷರಾಗಿದ್ದರು (1989). ಇವರಿಗೆ ಭಾರತ ಸರ್ಕಾರ ಪದ್ಮ ಭೂಷಣ ಪ್ರಶಸ್ತಿಯನ್ನೂ ನೀಡಿ ಗೌರವಿಸಿದೆ (1990). ಮೈಸೂರು ವಿಶ್ವವಿದ್ಯಾನಿಲಯ ಗೌರವ

ಡಿ.ಲಿಟ್ ಪದವಿಯನ್ನೂ ನೀಡಿ ಗೌರವಿಸಿದೆ. (ಕೆ.ಪಿ.)

**ನರಸಿಂಹರಾಜಪುರ :** ಚಿಕ್ಕಮಗಳೂರು ಜಿಲ್ಲೆಯ ಒಂದು ತಾಲ್ಲೂಕು ಮತ್ತು ಅದರ ಆಡಳಿತ ಕೇಂದ್ರ. ಪಶ್ಚಿಮದಲ್ಲಿ ಕೊಪ್ಪ, ಪೂರ್ವಕ್ಕೆ ಚಿಕ್ಕ ಮಗಳೂರು ಮತ್ತು ತರೀಕೆರೆ ತಾಲ್ಲೂಕುಗಳು, ಉತ್ತರಕ್ಕೆ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕು ಇವೆ. ಈ ತಾಲ್ಲೂಕಿನ ದಕ್ಷಿಣ ಭಾಗ ಕಿರಿದಾಗುತ್ತ ಹೋಗಿ ಕೊಪ್ಪ ಮತ್ತು ಚಿಕ್ಕಮಗಳೂರು ತಾಲ್ಲೂಕುಗಳ ಮಧ್ಯೆ ಚಾಚಿಕೊಂಡಿದೆ. ತಾಲ್ಲೂಕಿನ ವಿಸ್ತೀರ್ಣ 805 ಚಕಿಮೀ. ಬಾಳೆಹೊನ್ನೂರು ಮತ್ತು ನರಸಿಂಹರಾಜಪುರ ಹೋಬಳಿಗಳು. ಈ ತಾಲ್ಲೂಕಿನಲ್ಲಿ 59 ಗ್ರಾಮಗಳು ಇವೆ. ಜನಸಂಖ್ಯೆ 65,624.

ಈ ತಾಲ್ಲೂಕು ಮಲೆನಾಡು ಪ್ರದೇಶ. ಪಶ್ಚಿಮಘಟ್ಟಶ್ರೇಣಿಗೆ ಸೇರಿದ ಅರಣ್ಯ ಭರಿತ ಬೆಟ್ಟಗಳು ಮಧ್ಯೆ ಮಧ್ಯೆ ಕಣಿವೆಗಳು, ಅನೇಕ ನದಿಝರಿಗಳು, ಇಲ್ಲಿನ ಸಾಮಾನ್ಯ ದೃಶ್ಯ. ತುಂಗಾನದಿ ತಾಲ್ಲೂಕಿನ ವಾಯವ್ಯದಲ್ಲಿ ಸ್ವಲ್ಪ ದೂರ ಗಡಿಯಾಗಿ ಹರಿಯುತ್ತದೆ. ಭದ್ರಾನದಿ ಬಾಳೆಹೊನ್ನೂರಿನ ಹತ್ತಿರ ತಾಲ್ಲೂಕನ್ನು ಪ್ರವೇಶಿಸಿ ಮೊದಲು ಉತ್ತರಾಭಿಮುಖವಾಗಿ ನರಸಿಂಹರಾಜಪುರದವರೆಗೆ ಪ್ರವಹಿಸಿ ಈಶಾನ್ಯಕ್ಕೆ ತಿರುಗಿ ಶಿವಮೊಗ್ಗ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಭದ್ರಾ ಜಲಾಶಯದ ಹಿನ್ನೀರು ಈ ತಾಲ್ಲೂಕಿನ ಪೂರ್ವಭಾಗದಲ್ಲಿ ಹರಡುತ್ತದೆ. ತಾಲ್ಲೂಕಿನಲ್ಲಿ ಮಳೆ ಹೆಚ್ಚು. ವಾರ್ಷಿಕ ಸರಾಸರಿ ಸು. 1703ಮಿಮೀ.

ತಾಲ್ಲೂಕಿನಲ್ಲಿ ರಕ್ಷಿತ ಅರಣ್ಯಪ್ರದೇಶಗಳನ್ನೂ ಸೇರಿಸಿದಂತೆ ಸಾಕಷ್ಟು ಅರಣ್ಯ ಪ್ರದೇಶವಿದ್ದು ಅವುಗಳಲ್ಲಿ ಬಿದಿರು ಅಳಲೆ ಸೀಗೆ ಗೇರು ಮೆಣಸು ತಂಗಡಿ ಇತ್ಯಾದಿ ಗಿಡಮರಗಳು, ಕಾಡುಕೋಣ ಚಿರತೆ ಪುನುಗುಬೆಕ್ಕು ಕಾಡುಹಂದಿ ಮುಳ್ಳುಹಂದಿ ಜಿಂಕೆ ಕಾಡುಕೋಳಿ, ನವಿಲು, ಜೀವಂಜೀವ ಕೋಗಿಲೆ ಮೊದಲಾದ ಪಕ್ಷಿಮೃಗಗಳು; ತೊರೆನದಿಗಳಲ್ಲಿ ಕುಚ್ಚಿನಮರಳು, ಬಿಳಿಕೊರವ, ಹಾವುಮೀನು, ಅವಲಮೀನು, ಹೆಮ್ಮೀನು ಇತ್ಯಾದಿ ಮೀನುಗಳೂ ಹಾಗೂ ಮೊಸಳೆಗಳೂ ಕಾಣಬಹುದು.

ಈ ತಾಲ್ಲೂಕು ಮಲೆನಾಡ ಕಪ್ಪುಮಣ್ಣಿನ ಮತ್ತು ಸ್ವಲ್ಪಭಾಗ ಎರೆಮಣ್ಣಿನ ಭೂಮಿಯಿಂದ ಕೂಡಿದ ಫಲವತ್ತಾದ ಪ್ರದೇಶ. ನದಿ ತೊರೆಗಳ ದಂಡೆಗಳಲ್ಲಿ ಮೆದು ಜೇಡಿಮಣ್ಣಿನ ಪ್ರದೇಶವನ್ನು ಕಾಣಬಹುದು. ಈ ತಾಲ್ಲೂಕಿನ ಮುಖ್ಯ ಬೆಳೆಗಳು ಬತ್ತ ರಾಗಿ ಜೋಳ ಏಲಕ್ಕಿ ತೆಂಗು ಅಡಕೆ ಮತ್ತು ಮೆಣಸು.

ಈ ತಾಲ್ಲೂಕಿನಲ್ಲಿ ಶಾಲೆಗಳೂ ಅಂಚೆ ವಿದ್ಯುತ್ ದೂರವಾಣಿ ಸೌಲಭ್ಯಗಳೂ ವೈದ್ಯಕೀಯ ಕೇಂದ್ರಗಳೂ ಇವೆ. ಈ ತಾಲ್ಲೂಕಿನ ಮುಖಾಂತರ ಸುತ್ತಲ ಜಿಲ್ಲೆ ಮತ್ತು ಪಟ್ಟಣಗಳಿಗೆ ಮಾರ್ಗಗಳಿವೆ. ಚಿಕ್ಕಮಗಳೂರು, ತರೀಕೆರೆ, ಭದ್ರಾವತಿ, ಶಿವಮೊಗ್ಗ, ತೀರ್ಥಹಳ್ಳಿ ಮೊದಲಾದ ಕಡೆಗೆ ಇಲ್ಲಿಂದ ಮಾರ್ಗಸಂಪರ್ಕವಿದೆ.

ಈ ತಾಲ್ಲೂಕಿಗೆ ಸೇರಿದ ಬಾಳೆಹೊನ್ನೂರು (ನೋಡಿ) ಭದ್ರಾನದಿಯ ಪಶ್ಚಿಮ ದಂಡೆಯ ಮೇಲಿದೆ. ಬಾಳೆಹೊನ್ನೂರಿನಿಂದ ಉತ್ತರಕ್ಕೆ ಒಂದು ಮೈಲಿ ದೂರದಲ್ಲಿ ಬಾಳೆಹಳ್ಳಿಯಲ್ಲಿರುವ ಲಿಂಗಾಯಿತ ಮಠವು ಪಂಚವೀರಶೈವಾಚಾರ್ಯರಲ್ಲಿ ಪ್ರಥಮರಾದ ರೇಣುಕಾಚಾರ್ಯರಿಂದ ಸ್ಥಾಪಿತವಾಯಿತೆಂದು ಹೇಳಲಾಗಿದೆ. ಮಠಕ್ಕೆ ಸೇರಿದ ವೀರಭದ್ರಸ್ವಾಮಿಯ ಗುಡಿ ದ್ರಾವಿಡಶಿಲ್ಪ ಶೈಲಿಯದು. ಬಾಳೆಹೊನ್ನೂರಿಗೆ 8 ಕಿಮೀ ದೂರದಲ್ಲಿ ಭದ್ರಾನದಿಯ ಬಲದಂಡೆಯ ಮೇಲೆ ಇರುವ ಖಾಂಡ್ಯ (ನೋಡಿ) ಗ್ರಾಮದಲ್ಲಿ ಮಾರ್ಕಂಡೇಯ ದೇವಾಲಯವಿದೆ.

ನರಸಿಂಹರಾಜಪುರ ಈ ತಾಲ್ಲೂಕಿನ ಆಡಳಿತ ಕೇಂದ್ರ. ಚಿಕ್ಕಮಗಳೂರಿನ ವಾಯವ್ಯಕ್ಕೆ 84 ಕಿಮೀ ದೂರದಲ್ಲಿದೆ. ಜನಸಂಖ್ಯೆ 7441. ಕೋಟೆ ಮತ್ತು ಪೇಟೆ ಎಂಬ ಎರಡು ಭಾಗಗಳು ಈ ಊರಿನಲ್ಲಿ ಇದೆ. ಮಲೆನಾಡಿನ ಪಟ್ಟಣಗಳಂತೆ ಊರಿನ ಮುಖ್ಯ ರಸ್ತೆಯ ಅಕ್ಕಪಕ್ಕಗಳಲ್ಲಿ ಸುಮಾರು ಒಂದು ಮೈಲಿ ದೂರ ಮನೆಗಳು ಹಾಗೂ ಅಂಗಡಿಗಳು ರಸ್ತೆಯ ಎರಡು ಪಕ್ಕಗಳಲ್ಲೂ ಹರಡಿಕೊಂಡಿವೆ. ಊರು ಇತ್ತೀಚಿನ ವ್ಯಾಪಾರಾಭಿವೃದ್ಧಿಯಿಂದ ವಿಸ್ತರಿಸಿ ಹೊಸ ರೂಪ ತಳೆಯುತ್ತಿದೆ. ಸುತ್ತಲ ಊರುಗಳಿಗೆ ಇದೊಂದು ವ್ಯಾಪಾರಕೇಂದ್ರ. ಇಲ್ಲಿ ನಗರಸಭಾಡಳಿತವಿದೆ.

ಹಿಂದೆ ಇಲ್ಲಿನ ಶಿವಾಚಾರ ಮಠದಲ್ಲಿ ಯಾತ್ರಿಕರಿಗೆ ದಿನವಹಿ ಎಡೆಹಾಕಿ ಭೋಜನ ಮಾಡಿಸುತ್ತಿದ್ದುದರಿಂದ ಈ ಊರಿಗೆ ಎಡೆಹಳ್ಳಿ ಎಂಬ ಹೆಸರಿತ್ತು. ಇದು 16ನೆಯ ಶತಮಾನದ ಕೊನೆಯಲ್ಲಿ ತರೀಕೆರೆಯ ಪಾಳೆಯಗಾರರಿಗೆ ಸೇರಿದ್ದು ತರುವಾಯ ಇಕ್ಕೇರಿ ನಾಯಕರಿಗೆ ಸೇರಿತು. ಮೈಸೂರು ಅರಸರ ಆಳ್ವಿಕೆಯಲ್ಲಿ 1882ರ ವರೆಗೆ ಇದು ಲಕ್ಕವಳ್ಳಿ ತಾಲ್ಲೂಕಿನ ಕೇಂದ್ರವಾಗಿತ್ತು. ಆ ತರುವಾಯ 1897ರ ವರೆಗೆ ಕೊಪ್ಪ ತಾಲ್ಲೂಕಿಗೆ ಸೇರಿದ ಎಡೆಹಳ್ಳಿ ಸಬ್ ತಾಲ್ಲೂಕಿನ ಕಸಬೆಯಾಗಿತ್ತು. ಮೈಸೂರು ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ ಸಹೋದರ ಯುವರಾಜ ನರಸಿಂಹರಾಜ ಒಡೆಯರು ಇಲ್ಲಿಗೆ ಭೇಟಿ ಕೊಟ್ಟ ನೆನಪಿಗಾಗಿ ಇದಕ್ಕೆ ನರಸಿಂಹರಾಜಪುರ ಎಂದು ಹೆಸರಿಡಲಾಯಿತು. ಇಲ್ಲಿನ ಶ್ರೀವೈಷ್ಣವ ಮಠವೂ ಪ್ರಾಚೀನ ಪರಂಪರೆ ಹೊಂದಿದೆ.

ಊರಿನ ರಸ್ತೆಯ ತುದಿಯಲ್ಲಿ ಸಿಂಗನಗದ್ದೆಯ ಬಳಿ ಮೂರು ಜೈನ ಬಸದಿಗಳು ಹಾಗೂ ಒಂದು ಜೈನಮಠ ಇವೆ. ಚಂದ್ರನಾಥ ಬಸದಿಯಲ್ಲಿ 21/2' ಎತ್ತರದ ಆಸೀನ ಚಂದ್ರನಾಥನ ಶಿಲಾವಿಗ್ರಹವಿದೆ. ಇದೇ ಬಸದಿಯಲ್ಲಿ ಸರಸ್ವತಿ, ಗಂಧರಪಾದ ಮತ್ತು ಶ್ರುತ-ಈ ಲೋಹ ವಿಗ್ರಹಗಳಿವೆ. ಶಾಂತೇಶ್ವರ ಬಸದಿಯಲ್ಲಿ ಎತ್ತರದ ಶಾಂತೇಶ್ವರ ನಿಂತ ಭಂಗಿಯ ವಿಗ್ರಹವಿದೆ. ಉದ್ದರೆಯ ಚಿಯರಿಯಬ್ಬೆಯ ಶಿಷ್ಯೆ ಚಂಡಿ ಎಂಬಾಕೆಯಿಂದ ಈ ವಿಗ್ರಹ ಪ್ರತಿಷ್ಠಾಪಿತವಾಯಿತೆಂಬ ಬರೆಹ ವಿಗ್ರಹದ ಪ್ರಭಾವಳಿಯ ಮೇಲಿದೆ. ವಿಗ್ರಹ ಸು.1300ರಲ್ಲಿ ಪ್ರತಿಷ್ಠಾಪಿತವಾಗಿರಬಹುದು. ಮೂರನೆಯ ಬಸದಿ ಜ್ವಾಲಾಮಾಲಿನಿಯ ಬಸದಿ.

ಇಕ್ಕೇರಿಯ ಚೆನ್ನಮ್ಮಾಜಿ ಮತ್ತು ವೀರಮ್ಮಾಜಿ ಈ ಊರನ್ನು ಅಭಿವೃದ್ಧಿಗೊಳಿಸಿದರು. ಊರಿನ ಪಶ್ಚಿಮಭಾಗಕ್ಕೆ ಬಹುಕಾಲ ಚೆನ್ನಮ್ಮಾಜಿ ಪೇಟೆ ಎಂಬ ಹೆಸರಿತ್ತು. ಅಲ್ಲಿಗೆ ಸಮೀಪದ ಕೆರೆಗೆ ವೀರಮ್ಮಾಜಿ ಕೆರೆ ಎಂಬ ಹೆಸರು ಇದೆ. ಇಕ್ಕೇರಿ ನಾಯಕರ ಸೇವೆಯಲ್ಲಿ ಅಧಿಕಾರಿ ಸುಗ್ಗಪ್ಪ ಈ ಊರಿನಲ್ಲಿ 7 ಬಾವಿಗಳನ್ನು ತೋಡಿಸಿದ. ಈಗಲೂ ಆ ಬಾವಿಗಳಿಗೆ ಅವನ ಹೆಸರಿದೆ. ತನ್ನ ಗುರು ಶಾಂತಸ್ವಾಮಿಗಾಗಿ ಅವನು ಕಟ್ಟಿಸಿದಮಠ ಈಗಿನ ಪ್ರವಾಸಿ ಮಂದಿರದ ಹಿಂಭಾಗದಲ್ಲಿದೆ.
(ವಿ.ಜಿ.ಕೆ.)

**ನರಸಿಂಹರಾಜು, ಟಿ.ಆರ್. :** 1926-1979. ಕನ್ನಡ ರಂಗಭೂಮಿ ಹಾಗೂ ಚಲನಚಿತ್ರರಂಗದ ಪ್ರಸಿದ್ಧ ಹಾಸ್ಯನಟ. ತಿಪಟೂರು ರಾಮರಾಜು ನರಸಿಂಹರಾಜು ಇವರ ಪೂರ್ಣ ಹೆಸರು. 1926ರಲ್ಲಿ ತುಮಕೂರು ಜಿಲ್ಲೆ ತಿಪಟೂರಿನಲ್ಲಿ ಜನಿಸಿದರು. ಇವರ ತಾಯಿ ವೆಂಕಟಲಕ್ಷ್ಮಮ್ಮ. ತಂದೆ ರಾಮರಾಜು. ಚಿಕ್ಕಪ್ಪ ಲಕ್ಷ್ಮೀಪತಿರಾಜು.

ನರಸಿಂಹರಾಜು ಅವರು ತಮ್ಮ ಚಿಕ್ಕಪ್ಪನವರ ಪ್ರೋತ್ಸಾಹದಿಂದ ಕನ್ನಡ ರಂಗಭೂಮಿಯ ಪ್ರತಿಷ್ಠಿತ ನಾಟಕ ಮಂಡಳಿಗಳಲ್ಲೊಂದಾಗಿದ್ದ ಸಿ.ಬಿ. ಮಲ್ಲಪ್ಪನವರ ಶ್ರೀ ಚಂದ್ರಮೌಳೇಶ್ವರ ನಾಟಕ ಮಂಡಲಿಯಲ್ಲಿ ಬಾಲಪಾತ್ರಗಳನ್ನು ವಹಿಸುವುದರ ಮೂಲಕ ರಂಗಭೂಮಿಯನ್ನು ಪ್ರವೇಶಿಸಿದರು. ಕಂಪನಿಯ ಪ್ರಮುಖ ನಟರಲ್ಲೊಬ್ಬರಾಗಿದ್ದ ಎಚ್.ಕೃಷ್ಣಶಾಸ್ತ್ರಿ ಅವರು ನರಸಿಂಹರಾಜು ಅವರನ್ನು ಬಾಲಪಾತ್ರಗಳಿಗೆ ತಯಾರು ಮಾಡುವಲ್ಲಿ ಹೆಚ್ಚಿನ ಆಸ್ಥೆವಹಿಸಿದರು. ಕಂಪನಿಯಲ್ಲಿದ್ದ ಮುದ್ದಪ್ಪ ಎಂಬುವರು ಇವರಿಗೆ ಅಕ್ಷರಾಭ್ಯಾಸ ಮಾಡಿಸಿ ಬಹು ಶಿಸ್ತಿನಿಂದ ಬೆಳೆಸಿದರು. ನರಸಿಂಹರಾಜು ಅವರು 1942ರಲ್ಲಿ ಕೆಲವು ಸಹೋದ್ಯೋಗಿಗಳೊಡನೆ ಸ್ವಂತ ಕಂಪನಿ ಕಟ್ಟಿದರು. ಗೋರಕುಂಬಾರ, ಹರಿಶ್ಚಂದ್ರ ಮುಂತಾದ ಅನೇಕ ಪೌರಾಣಿಕ ನಾಟಕಗಳನ್ನು ಅರಸೀಕೆರೆ ತಾಲ್ಲೂಕಿನಾದ್ಯಂತ ಪ್ರದರ್ಶಿಸಿದರು. ಮೂರು ವರ್ಷಗಳ ಅನಂತರ ಹಲವಾರು ಕಂಪನಿಗಳಲ್ಲಿ ಕಲಾಸೇವೆಗೈದು 1946ರಲ್ಲಿ ಕೃಷ್ಣರಾಜನಗರದ

ಎಡತೊರೆ ಕಂಪನಿಗೆ ಸೇರಿದರು. ಈ ಕಂಪನಿ ಅಂದು ಅತ್ಯಂತ ಉಚ್ಛ್ರಾಯಸ್ಥಿತಿಯಲ್ಲಿತ್ತು. ವಿಶ್ವಾಮಿತ್ರ, ರಾಮ ರಾವಣ, ಬೇಡರ ಕಣ್ಣಪ್ಪ ಮತ್ತು ಭಾರತಲಕ್ಷ್ಮಿ ಮೊದಲಾದ ನಾಟಕಗಳು ಕಂಪನಿಯ ಮುಖ್ಯ ನಾಟಕಗಳೆನಿಸಿದ್ದವು. ಈ ನಾಟಕಗಳಲ್ಲಿ ಇವರು ನಿರ್ವಹಿಸುತ್ತಿದ್ದ ವಿಶ್ವಾನಂದ, ಕಾಶಿ, ಕಾಂಪೌಂಡರ್ ಮೊದಲಾದ ಪಾತ್ರಗಳು ಇವರಿಗೆ ಅಪಾರ ಜನಪ್ರಿಯತೆ ಗಳಿಸಿಕೊಟ್ಟವು. ಬೇಡರಕಣ್ಣಪ್ಪನ ಕಾಶಿ ಪಾತ್ರವಂತೂ ಇವರಿಗೆ ರಂಗಭೂಮಿಯಲ್ಲಿ ಸುಭದ್ರಸ್ಥಾನ ಗಳಿಸಿಕೊಟ್ಟಿತು. ಕೆಲದಿನಗಳ ಅನಂತರ ಹಿರಣ್ಣಯ್ಯ ಮಿತ್ರ ಮಂಡಳಿಗೆ ಪ್ರವೇಶಿಸಿದರು. ಈ ಮಂಡಳಿಯಲ್ಲಿ ಅಲ್ಪಕಾಲವಿದ್ದು ಭಾರತ ಲಲಿತ ಕಲಾಸಂಘಕ್ಕೆ ಬಂದರು. 1949ರ ಅಂತ್ಯದಲ್ಲಿ ಈ ಮಂಡಳಿಯನ್ನೂ ಬಿಟ್ಟು 1950ರಲ್ಲಿ ಬೇಲೂರು ಗುಂಡಾಜೋಯಿಸರ ಕಂಪನಿಯನ್ನು ಸೇರಿದರು. ನಟ ಸಾಹಿತಿ ಹುಣಸೂರು ಕೃಷ್ಣಮೂರ್ತಿ ಅವರಿಂದ ರಚಿತವಾದ ಅಂದಿನ ಪ್ರಚಲಿತ ಸಮಸ್ಯೆಯ ಕಥಾವಸ್ತುವನ್ನೊಳಗೊಂಡ ಧರ್ಮರತ್ನಾಕರ ಈ ಕಂಪನಿಯ ಹೆಸರಾಂತ ನಾಟಕವಾಗಿದ್ದು ಇದರಲ್ಲಿ ನಾಣಿ ಪಾತ್ರ ಇವರ ಪಾಲಿನದಾಯಿತು.

ಈ ಪಾತ್ರದ ಕೀರ್ತಿ ನಾಟಕರತ್ನ ಗುಬ್ಬಿ ವೀರಣ್ಣನವರ ಕಿವಿಗೂ ಬಿತ್ತು. ಆಗ ವೀರಣ್ಣನವರು ಗೌತಮಬುದ್ಧ ನಾಟಕದ ಪ್ರದರ್ಶನದ ಸಿದ್ಧತೆಗೆ ತೊಡಗಿದ್ದರು. ಈ ನಾಟಕದ ಪ್ರದರ್ಶನಕ್ಕೆ ಮುಂಚೆ ಶಿವರಾತ್ರಿ ಪ್ರಯುಕ್ತ ಬೇಡರಕಣ್ಣಪ್ಪ ನಾಟಕದ ಒಂದೇ ಒಂದು ಪ್ರದರ್ಶನಕ್ಕೆ ವ್ಯವಸ್ಥೆಯಾಗಿತ್ತು. ಕಾಶಿ ಪಾತ್ರಕ್ಕೆ ಇವರಿಗೆ ಆಹ್ವಾನ ಹೋಯಿತು. ಕಾಶಿಪಾತ್ರ ಕಲಾರಸಿಕರ ಪೂರ್ಣ ಮೆಚ್ಚುಗೆಗೆ ಪಾತ್ರವಾಯಿತು. ಗುಬ್ಬಿ ಕಂಪನಿಯ ಖಾಯಂ ನಟರಾಗಿರಲು ಇವರಿಗೆ ವೀರಣ್ಣನವರಿಂದ ಆಹ್ವಾನ ಬಂತು. ಕೆಲವೇ ದಿನಗಳಲ್ಲಿ ಗುಂಡಾ ಜೋಯಿಸರ ಕಂಪನಿ ಬಿಟ್ಟು ಗುಬ್ಬಿ ಕಂಪನಿ ಸೇರಿದರು. ಗುಬ್ಬಿ ಕಂಪನಿ ಆಗ ಪ್ರದರ್ಶಿಸುತ್ತಿದ್ದ (ಸಾಹುಕಾರ) ಆಚಾರಿ, ಕೃಷ್ಣರಾಯ, ಅಡ್ಡದಾರಿ ನಾಟಕಗಳಲ್ಲಿ ಹಾಸ್ಯಪಾತ್ರಗಳನ್ನು ನಿರ್ವಹಿಸಿ ಪ್ರಶಂಸೆಗೆ ಪಾತ್ರರಾದರು.

1953ರಲ್ಲಿ ವೀರಣ್ಣನವರು ಗುಬ್ಬಿ ಕರ್ನಾಟಕ ಪ್ರೊಡಕ್ಷನ್ಸ್ ಲಾಂಛನದ ಅಡಿ ಬೇಡರಕಣ್ಣಪ್ಪ ನಾಟಕವನ್ನು ಚಲನಚಿತ್ರವನ್ನಾಗಿ ತಯಾರಿಸಲು ಮದರಾಸಿನ ಎ.ವಿ.ಎಂ. ಅವರೊಡಗೂಡಿದರು. ಚಿತ್ರದ ಸೂತ್ರಧಾರರಾದ ಎಚ್.ಎಲ್.ಎನ್.ಸಿಂಹ ಅವರು ಕಾಶಿ ಪಾತ್ರಕ್ಕೆ ನರಸಿಂಹರಾಜು ಅವರನ್ನೇ ಆಯ್ಕೆಮಾಡಿದರು. ಬೇಡರಕಣ್ಣಪ್ಪ ಇವರ ಅಭಿನಯದ ಮೊದಲ ಕನ್ನಡ ಚಿತ್ರ. ತೆರೆಕಂಡಾಗ ಅಪಾರ ಯಶಸ್ಸುಗಳಿಸಿತಲ್ಲದೆ ನರಸಿಂಹರಾಜು ಅವರಿಗೂ ಒಳ್ಳೆಯ ಹೆಸರು ತಂದಿತು.

ನರಸಿಂಹರಾಜು ಅವರು ನೂರಕ್ಕೂ ಹೆಚ್ಚು ಕನ್ನಡ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ನಕ್ಕರದೇ ಸ್ವರ್ಗ ಇವರ ಅಭಿನಯದ ನೂರನೆಯ ಚಿತ್ರ. ತಮ್ಮ ದಿವಂಗತ ಪುತ್ರ ಶ್ರೀಕಾಂತನ ನೆನಪಿಗಾಗಿ ಪ್ರೊಫೆಸರ್ ಹುಚ್ಚೂರಾಯ ಎಂಬ ಕನ್ನಡ ಚಿತ್ರವನ್ನು ತಯಾರಿಸಿ ಇವರು ನಿರ್ಮಾಪಕರ ಸಾಲಿಗೂ ಸೇರಿದರು. ಇವರು 1979 ಜುಲೈ 21ರಂದು ನಿಧನರಾದರು. (ಎಸ್.ಎಚ್.ಎ.)

**ನರಸಿಂಹಸ್ವಾಮಿ, ಎಸ್. :** ಭಾವಚಿತ್ರ ರಚನೆಯಿಂದಲೇ ಪ್ರಖ್ಯಾತರಾದ ಮೈಸೂರಿನ ಕಲಾವಿದರು.

ಸ್ವರ್ಣಕಲಾ ನಿಪುಣರೆಂಬ ಬಿರುದು ಪಡೆದಿದ್ದ ಶಿಲ್ಪಕಲಾ ಪಿತಾಮಹ ಸಿಂಗಣ್ಣಾಚಾರ್ಯ ಇವರ ತಂದೆ. ಮೈಸೂರಿನಲ್ಲಿ ನರಸಿಂಹಸ್ವಾಮಿಯವರು ಜನಿಸಿದರು. ಬಾಲ್ಯದಿಂದಲೂ ಕಲೆಯ ಒಂದು ಮಧುರ ಸನ್ನಿವೇಶದಲ್ಲಿ ಬೆಳೆದು ಬಂದ ಇವರಿಗೆ ಕಲೆಯಲ್ಲಿ ಒಳ್ಳೆಯ ಆಸಕ್ತಿ ಮೂಡಿತು. ತಂದೆ ಕಡೆಯುತ್ತಿದ್ದ ಮೂರ್ತಿಗಳನ್ನು ನೋಡಿ ನೋಡಿ ಒಬ್ಬ ಕಲೆಗಾರರಾಗಬೇಕೆಂಬ ಮಹದಾಸೆ ಅಂಕುರಿಸಿತು. ರೇಖಾಚಿತ್ರಗಳನ್ನು ತಾವೂ ಅಭ್ಯಸಿಸುತ್ತ ಬಂದರು. ಮೈಸೂರಿನ ಪೌರಸಭೆ ಏರ್ಪಡಿಸಿದ ವಸ್ತುಪ್ರದರ್ಶನದಲ್ಲಿ ಇವರು ತಮ್ಮ ಹದಿನೈದನೆಯ ವಯಸ್ಸಿನಲ್ಲೇ ರಜತ ಪಾರಿತೋಷಕ ಪಡೆದು ಒಪ್ಪೊತ್ತಿನ ವಿದ್ಯಾರ್ಥಿಯಾಗಿ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಕೇಶವಯ್ಯನವರಂಥ ಪ್ರಸಿದ್ಧ ಕಲಾವಿದರ ಕೈಕೆಳಗೆ ವ್ಯಾಸಂಗ ಮಾಡತೊಡಗಿದರು.

ತಮ್ಮ ಮಗ ಒಬ್ಬ ಪದವೀಧರನಾಗಬೇಕೆಂಬುದಾಗಿ ಸಿಂಗಣ್ಣಾಚಾರ್ಯರ ಬಯಕೆ. ಆದರೆ ಸ್ವಾಮಿಯವರ ಅತೀವವಾದ ಕಲಾಭಿರುಚಿ ವಿದ್ಯಾಭ್ಯಾಸಕ್ಕೆ ಅಡ್ಡಿಯನ್ನು ತಂದೊಡ್ಡಿತು. ಮೈಸೂರಿನ ಮಿಷನ್ ಹೈಸ್ಕೂಲಿನಲ್ಲಿ ಮೆಟ್ರಿಕ್ ಪರೀಕ್ಷೆಯ ವರೆಗೂ ಓದಿ, ವ್ಯಾಸಂಗವನ್ನು ಕೈಬಿಟ್ಟರು. ಅನಂತರ ಮದರಾಸಿನ ಕಲಾಪರೀಕ್ಷೆಗಳಿಗೆ ಖಾಸಗಿಯಾಗಿ ಕೂಡುತ್ತ ಬಂದರು. ಈ ಮಧ್ಯೆ ತಂದೆಯವರ ಜೊತೆಯಲ್ಲಿ ಅರಮನೆಗೆ ಹೋಗಿಬರುವ ಒಂದು ಸುಯೋಗವೂ ಆ ಮೂಲಕ ಆಗಿನ ಪ್ರಭುಗಳಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ ದೃಷ್ಟಿಗೆ ಬೀಳುವ ಸೌಭಾಗ್ಯವೂ ಇವರ ಪಾಲಿಗೆ ದೊರಕಿತು. ಮಹಾರಾಜರ ಪ್ರೋತ್ಸಾಹದಿಂದಾಗಿ ಸ್ವಾಮಿಯವರು ಮುಂಬಯಿಯ ಜೆ.ಜೆ.ಸ್ಕೂಲ್ ಆಫ್ ಆರ್ಟ್ಸ್ ಶಾಲೆಯಲ್ಲಿ ತಮ್ಮ ಕಲಾ ವ್ಯಾಸಂಗವನ್ನು ಪ್ರಾರಂಭಿಸಿದರು (1930). ಅಲ್ಲಿ ಅನೇಕ ಹಿರಿಯ ಕಲಾವಿದರ ಸಹವಾಸ, ಸಂಪರ್ಕ ದೊರೆತು ಭಾವಚಿತ್ರ ರಚನೆಯಲ್ಲಿ ಇವರ ಕೈ ಚೆನ್ನಾಗಿ ಪಳಗಿತು. ಇವರ ಇಜ್ಜಲಿನಿಂದ ಬಿಡಿಸಿದ ಮಹಾರಾಷ್ಟ್ರ ವನಿತೆಯೊಬ್ಬಳ ಮೈ ಮಾಡೆಲ್ ಎಂಬ ಭಾವಚಿತ್ರಕ್ಕೆ ಸಿಮ್ಲ ಕಲಾಪ್ರದರ್ಶನದಲ್ಲಿ ಸುವರ್ಣಪದಕ ಬಂತು. ಮೈಸೂರಿನ ದಸರಾ ಕಲಾಪ್ರದರ್ಶನದಲ್ಲೂ ಅದಕ್ಕೆ ಎಸ್.ಜಿ.ಶಾಸ್ತ್ರಿಗಳ ಬಹುಮಾನವೂ ದೊರೆಯಿತು.

ಮುಂಬಯಿಯ ಚೋರ್‌ಬಜಾರಿಗೆ ನಿತ್ಯವೂ ಹೋಗಿಬರುತ್ತ ಸ್ವಾಮಿಗಳು ಅನೇಕ ಶೀಘ್ರರೇಖಾಚಿತ್ರಗಳನ್ನು ಬರೆದರು. ಮದರಾಸಿನ ಕಲಾಪ್ರದರ್ಶನದಲ್ಲಿ ಇಂಥ ಇವರ ಕೃತಿಗೆ ಬಹುಮಾನ ಬಂತು. ಕಲಾವಿದ ಸರ್‌ದೇಸಾಯಿಯವರು ಇವರನ್ನು ಮನೆಯಲ್ಲೇ ಇಟ್ಟುಕೊಂಡು ಪ್ರೀತಿವಿಶ್ವಾಸವನ್ನು ತೋರಿಸಿ ಪ್ರೋತ್ಸಾಹಿಸಿದರು. ಮುಂಬಯಿ ಭಾವಚಿತ್ರ ರಚನಾ ಸಾಮರ್ಥ್ಯದಲ್ಲಿ ಕೀರ್ತಿಶಿಖರವನ್ನೇರಿದ್ದ ಅಗಸ್ಕರ್ ಎಂಬ ಕಲಾವಿದರಿಂದ ಸ್ವಾಮಿಯವರು ರೇಖಾವಿನ್ಯಾಸಕ್ಕೆ ಅದೆಷ್ಟು ಮಹತ್ತ್ವವಿದೆಯೆಂಬುದನ್ನು ಅರಿತರು.

ಮುಂಬಯಿಯಲ್ಲಿ ವ್ಯಾಸಂಗವನ್ನು ಮುಗಿಸಿ ಮರಳಿದ ಅನಂತರ ಇವರು 1934ರಲ್ಲಿ ವಿಶ್ವಕವಿ ರವೀಂದ್ರರ ಭಾವಚಿತ್ರವನ್ನು ಛಾಯಾಚಿತ್ರ ಒಂದರ ಆಧಾರದಿಂದ ರಚಿಸಿ, ರವೀಂದ್ರರಿಂದಲೇ ಪ್ರಶಂಸೆ ಪಡೆದರು. ಅಲ್ಲಿಂದೀಚೆಗೆ ಸಾಮ್ರಾಟ ಸಾಮ್ರಾಜ್ಞಿಯರನ್ನು, ರಾಜಕೀಯ ಧುರೀಣರನ್ನು, ತತ್ತ್ವಜ್ಞಾನಿಗಳನ್ನು, ಕವಿಕುಲತಿಲಕರನ್ನು, ನಾಟಕಲೇಖಕರನ್ನು, ಮಹಾವಿಜ್ಞಾನಿಗಳನ್ನು, ಸುಪ್ರಸಿದ್ಧ ನಟನಟಿಯರನ್ನು ಭಾವಚಿತ್ರಗಳ ವಸ್ತುವಾಗಿ ಬಳಸಿಕೊಂಡು ಚಿತ್ರರಚನೆಯಲ್ಲಿ ಯಶಸ್ಸನ್ನು ಪಡೆದರು. ಇವರು ರಚಿಸಿದ ಪ್ರಸಿದ್ಧ ಭಾವಚಿತ್ರಗಳಲ್ಲಿ ಹಿಟ್ಲರ್, ಚೇಂಬರ್‌ಲಿನ್, ಮುಸಲೋನಿ, ಅಂತೋನಿ ಈಡನ್, ಚರ್ಚಿಲ್, ಲೆನಿನ್, ಷಾ, ಸರ್ ಆಲಿವರ್ ಲಾಡ್ಜ್, ಬರ್ಟ್ರಂಡ್ ರಸೆಲ್, ಹ್ಯಾವ್‌ಲಾಕ್ ಎಲ್ಲಿಸ್, ರೋಮಾ ರೋಲಾ ಮುಂತಾದವರ ಚಿತ್ರಗಳು ಮುಖ್ಯವಾದುವುಗಳು.

1941ರಲ್ಲಿ ಸ್ವಾಮಿಯವರು ವಾರ್ಧಾಕ್ಕೆ ಹೋಗಿ, ಬಾಪೂಜಿಯವರ ದರ್ಶನ ಪಡೆದು ಅವರ ಭಾವಚಿತ್ರವನ್ನು ವರ್ಣಗಳಲ್ಲಿ ಬಿಡಿಸಿ ಅವರ ಮೆಚ್ಚುಗೆ ಪಡೆದರು. ಒಮ್ಮೆ ಮೈಸೂರಿಗೆ ಭೇಟಿ ನೀಡಿದ ಮೌಂಟ್ ಬ್ಯಾಟನ್ ಇವರನ್ನು ದೆಹಲಿಗೆ ಕರೆಸಿಕೊಂಡು ತಮ್ಮ ಭಾವಚಿತ್ರವನ್ನು ಬಿಡಿಸಲು ಅವಕಾಶ ಇತ್ತರು. ಗಾಂಧೀಜಿಯವರ ಚಿತ್ರವನ್ನಂತೂ ಪ್ರಧಾನಿ ನೆಹರೂ ಕೊಂಡು ತಮ್ಮ ಅತಿಥಿಗೃಹದಲ್ಲಿ ಇರಿಸಿಕೊಂಡಿದ್ದರು. ಅದು ಈಗ ತೀನ್ ಮೂರ್ತಿ ಭವನದ ನೆಹರು ವಸ್ತುಸಂಗ್ರಹಾಲಯದಲ್ಲಿದೆ.

ಕಸ್ತೂರಬಾ, ನೆಹರು, ರಾಜೇಂದ್ರ ಪ್ರಸಾದ್, ರಾಜಗೋಪಾಲಾಚಾರಿ, ವಿಶ್ವೇಶ್ವರಯ್ಯ, ರಾಧಾಕೃಷ್ಣನ್, ಮಿರ್ಜಾ ಇಸ್ಮಾಯಿಲ್ ಮೊದಲಾದ ಭಾವಚಿತ್ರಗಳನ್ನೂ ಇವರು ಬಿಡಿಸಿದ್ದಾರೆ.

ನೃತ್ಯಕಲೆಯಲ್ಲಿ ಅಭಿರುಚಿಯಿದ್ದ ಸ್ವಾಮಿಯವರು ನಾಟ್ಯಸರಸ್ವತಿ ಜಟ್ಟಿ ತಾಯಮ್ಮನವರ ಶಿಷ್ಯರಾಗಿ ನೃತ್ಯಾಭ್ಯಾಸಕ್ಕೆ ತೊಡಗಿ (1940), ಆ ಕಲೆಯಲ್ಲೂ ಖ್ಯಾತಿಪಡೆದರು.

ಇವರು ತಮ್ಮ ಚಿತ್ರಗಳಲ್ಲಿ ಚಿತ್ರಿಸಿರುವುದು ಸಾಮಾನ್ಯವಾಗಿ ಅಂತಾರಾಷ್ಟ್ರೀಯ ಪ್ರಭಾವಿ ವ್ಯಕ್ತಿಗಳನ್ನೇ; ವಿಶ್ವದ ಅನೇಕ ಕಡೆಗಳಲ್ಲಿ ಇವರ ಕೃತಿಗಳು ಶೋಭಿಸುತ್ತಿವೆ. ಸುಪ್ರಸಿದ್ಧ ಆಂಗ್ಲ ಸಾಹಿತ್ಯ ಬರ್ನಾಡ್ ಷಾ ಅವರ ಭಾವಚಿತ್ರ ಈಗ ಲಂಡನ್ನಿನ ಇಂಡಿಯನ್ ಎಂಬಸಿಯಲ್ಲಿ ರಂಜಿಸುತ್ತಿದೆ. ಗಾಂಧೀಜಿ ರಾಟೆ ನೂಲುತ್ತಿರುವಂತಿರುವ ಇವರ ಮತ್ತೊಂದು ಚಿತ್ರ ಪ್ಯಾರಿಸ್‌ನ ಯುನೆಸ್ಕೋ ಭವನದಲ್ಲಿದೆ. ಪ್ರಸಿದ್ಧ ವಿಜ್ಞಾನಿ ಐನ್‌ಸ್ಟೀನರ ಭಾವಚಿತ್ರ ಅಮೆರಿಕದಲ್ಲಿದೆ. ರೂಸ್‌ವೆಲ್ಟ್‌ರ ಚಿತ್ರ ಶ್ವೇತಭವನದಲ್ಲಿದೆ. ಭಾರತದ ಪ್ರಥಮ ದಂಡನಾಯಕ ಜನರಲ್ ಕಾರ್ಯಪ್ಪನವರ ತೈಲ ಭಾವಚಿತ್ರ ಮಡಿಕೇರಿಯ ಕಾಲೇಜಿನಲ್ಲಿದೆ. ಮೈಸೂರು ನಗರದ ನಾನಾ ಸಂಘ ಸಂಸ್ಥೆಗಳ ಭವನಗಳಲ್ಲಿ ಇವರು ಅನೇಕ ತೈಲಚಿತ್ರಗಳು ನೋಡಸಿಗುತ್ತವೆ. ಕನ್ನಡ ಕುಲಪಿತಾಮಹಾ ಅಲ್ಲೂರ ವೆಂಕಟರಾಯರ ಹಾಗೂ ಇಂದಿರಾ ಗಾಂಧಿಯವರ ರೇಖಾಚಿತ್ರಗಳನ್ನೂ ಇವರು ರಚಿಸಿದರು.

ಭಾರತ ಸರ್ಕಾರ ಇವರಿಗೆ ಪದ್ಮಶ್ರೀ ಪ್ರಶಸ್ತಿ ಕೊಟ್ಟು ಗೌರವಿಸಿದೆ.

**ನರಸಿಂಹಸ್ವಾಮಿ, ಕೆ.ಎಸ್. :** 1915-2003. ಆಧುನಿಕ ಕನ್ನಡದ ಶ್ರೇಷ್ಠ ಕವಿಗಳಲ್ಲೊಬ್ಬರು. ಕನ್ನಡ ಸಾಹಿತ್ಯದ ನವೋದಯ ಕಾಲದಿಂದ ನವ್ಯಕಾವ್ಯ ಸೃಷ್ಟಿಯ ಕಾಲದವರೆಗೂ ತಮ್ಮ ಕಾವ್ಯ ಸೃಷ್ಟಿಯನ್ನು ನಡೆಸುತ್ತ ಬಂದವರು. ಈ ಅವಧಿಯಲ್ಲಿ ಆಗುತ್ತಿರುವ ಬದಲಾವಣೆಗಳನ್ನೆಲ್ಲ ತಮ್ಮ ಕಾವ್ಯ ಶೈಲಿಯಲ್ಲೂ ಬಳಸಿಕೊಂಡಿದ್ದರು. ಆದರೆ ತಮ್ಮ ಮೊದಲ ಕವನ ಸಂಗ್ರಹವಾದ ಮೈಸೂರು ಮಲ್ಲಿಗೆಯಿಂದ ಗಳಿಸಿದ ಕೀರ್ತಿ ಮತ್ತು ಜನಪ್ರಿಯತೆ ಇವರಿಗೆ ಅವರ ಇತರ ಕವನ ಸಂಗ್ರಹಗಳಿಂದ ಹೆಚ್ಚಾಗಲಿಲ್ಲ ಎನಿಸುತ್ತದೆ. ಮೊದಲು ಸಂಪಾದಿಸಿದ ಕೀರ್ತಿ ಅಳಿಸಲಿಲ್ಲ ಎಂಬ ಮಾತೂ ನಿಜ. ಅದು ಗಟ್ಟಿಯಾಗಿ ನಿಂತಿತು. ಪ್ರತಿಭೆಯಲ್ಲಾಗಲಿ, ಕಾವ್ಯ ರಚನಾಶಕ್ತಿಯಲ್ಲಾಗಲಿ, ವಸ್ತುವಿನ ಆಯ್ಕೆಯಲ್ಲಾಗಲಿ, ನಿರೂಪಣೆಯಲ್ಲಾಗಲಿ ಮೊದಲ ಕಾವ್ಯದಲ್ಲಿ ಕಾಣಿಸಿಕೊಂಡ ಇವರ ಪ್ರತಿಭೆ, ಶಕ್ತಿ, ವಿವೇಚನೆ ಕಡಿಮೆ ಆಗಲಿಲ್ಲ. ಇವರ ಅನುಭವ ಬೆಳೆದಂತೆ ಅವೂ ಬೆಳೆದವು. ಆದರೆ ಮೈಸೂರು ಮಲ್ಲಿಗೆ ತಂದುಕೊಟ್ಟ ಕೀರ್ತಿ ಮಸುಕಿಲ್ಲದೆ ಹಾಗೆಯೇ ನಿಂತಿತು. ಅದಕ್ಕೆ ಚ್ಯುತಿ ಇಲ್ಲ.

ಇವರು 1915 ಜನವರಿ 25ರಂದು ಮಂಡ್ಯ ಜಿಲ್ಲೆ ಕಿಕ್ಕೇರಿಯಲ್ಲಿ ಹುಟ್ಟಿದರು. ತಂದೆ ಕಿಕ್ಕೇರಿ ಸುಬ್ಬರಾಯರು. ತಾಯಿ ಹೊಸಹೊಳಲು ನಾಗಮ್ಮ. ತಂದೆ ಮೈಸೂರಿನಲ್ಲಿ ಒಂದು ಅಂಗಡಿಯ ಗುಮಾಸ್ತನಾಗಿ ಕೆಲಸ ಮಾಡುತ್ತಿದ್ದರು. ಅದೇ ಅವರ ಉದ್ಯೋಗವಾದರೂ ಅವರ ಒಲುಮೆ ಪಿಟೀಲು ವಾದನದಲ್ಲಿತ್ತು. ಈ ಕಲೆಯ ಅಂಶ ಸ್ವಾಮಿಯವರಲ್ಲಿ ಮತ್ತೊಂದು ರೂಪದಲ್ಲಿ ಹೊರಹೊಮ್ಮಿತ್ತು. ಸ್ವಾಮಿಯವರ ವಿದ್ಯಾಭ್ಯಾಸ, ಮೈಸೂರಿನ ಮಹಾರಾಜ ಹೈಸ್ಕೂಲು, ಇಂಟರ್ಮೀಡಿಯೆಟ್ ಕಾಲೇಜ್ ಮತ್ತು ಬೆಂಗಳೂರಿನ ಸೆಂಟ್ರಲ್ ಕಾಲೇಜುಗಳಲ್ಲಾಯಿತು. ಪಠ್ಯವಿಷಯ - ಬಿ.ಎಸ್.ಸಿ. ಇಂಜಿನಿಯರಿಂಗ್, ಇಂಗ್ಲಿಷ್, ಗಣಿತ, ಭೌತವಿಜ್ಞಾನ, ಕಾಲೇಜು ವಿದ್ಯಾಭ್ಯಾಸ ಆರ್ಥಿಕ ತೊಂದರೆಗಳಿಂದಾಗಿ ಮೊಟಕಾಯಿತು. ಪದವಿ ವ್ಯಾಸಂಗ ಪೂರ್ಣವಾಗಲಿಲ್ಲ. ಕನ್ನಡದ ಮೇಲೆ ಹೆಚ್ಚು ಒಲವು ಇದ್ದುದರಿಂದ ತಮ್ಮ ಓದಿನ ವಿಷಯ ಅಲ್ಲದಿದ್ದರೂ ಕನ್ನಡದ ತರಗತಿಗಳಿಗೆ ಹೋಗಿ ಆ ಪಾಠಗಳನ್ನು ಕೇಳುತ್ತಿದ್ದರು. 19ನೆಯ ವಯಸ್ಸಿಗೆ ಓದು ನಿಂತುಹೋಯಿತು. 22ನೆಯ ವಯಸ್ಸಿನಲ್ಲಿ ಕೆಲಸಕ್ಕೆ ಸೇರಿಕೊಂಡರು (1937). ಅದರ ಹಿಂದಿನ ವರ್ಷವೇ ವಿವಾಹವಾಗಿತ್ತು. ಕೈಹಿಡಿದ ಹೆಂಡತಿ ಶಿವಮೊಗ್ಗದ ವೆಂಕಮ್ಮ, ಆ ವಯಸ್ಸಿನ ಇವರ ಪ್ರೇಮಮಯ ಜೀವನ ಪ್ರೇಮಗೀತೆಗಳ ರಚನೆಗೆ ಸ್ಫೂರ್ತಿ ನೀಡಿತು. ಇವರ ಮೊದಲ ಕವನ ಕಬ್ಬಿನ ಕೂಗು (1931), ಕವಿಯ ಹೃದಯದ ಧ್ವನಿಯಾದರೂ ಮುಂದೆ ಅದು ಪ್ರಣಯದ ವಿವಿಧ ಅನುಭವಗಳ ಅಮೃತವಾಣಿಗಳಾಗಿ ಹೊಮ್ಮಿತು.

ಇವರ ಮೊದಲ ಕವನ ಸಂಕಲನ ಮೈಸೂರು ಮಲ್ಲಿಗೆ 1942ರಲ್ಲಿ ಪ್ರಕಟವಾಯಿತು. ಸಂಕೋಚ ಪ್ರಕೃತಿಯ ಇವರು ತಮ್ಮ ಕವನಗಳನ್ನು ಪ್ರಕಟಿಸುವುದಕ್ಕೆ ನಾಚಿಕೆಪಡುತ್ತಿದ್ದ ಆ ಕಾಲದಲ್ಲಿ ಅವನ್ನು ಬೆಳಕಿಗೆ ತಂದವರು ಎ.ಆರ್.ಕೃಷ್ಣಶಾಸ್ತ್ರಿ, ಟಿ.ಎಸ್.ವೆಂಕಣ್ಣಯ್ಯ ಮತ್ತು ತೀ.ನಂ.ಶ್ರೀ. ಅವರು. ಮೈಸೂರು ಮಲ್ಲಿಗೆಯ ಕವಿತಾ ಸೌರಭ ಕ್ಷಿಪ್ರದಲ್ಲಿಯೇ ನಾಡಿನಾದ್ಯಂತ ಪಸರಿಸಿತು.

ನವೋದಯ ಕಾವ್ಯ ಮಾರ್ಗವನ್ನು ಹಿಡಿದು ಮುಂದುವರಿದ ಇವರಿಗೆ ಬಿ.ಎಂ.ಶ್ರೀ. ಅವರ ಇಂಗ್ಲಿಷ್ ಗೀತೆಗಳು ಪ್ರಭಾವ ಪುಷ್ಟಿ ಕೊಟ್ಟಿತು. ಹಳ್ಳಿಯಿಂದ ಪಟ್ಟಣಕ್ಕೆ, ಪಟ್ಟಣದಿಂದ ನಗರಕ್ಕೆ ವೃತ್ತಿಯ ದೆಸೆಯಿಂದ ಬಂದು ಸಂಸಾರ ನಿರ್ವಹಿಸಬೇಕಾದಾಗ ಬದುಕಿನ ವಾತಾರವಣ ಬದಲಾಗುತ್ತ, ವಿಶಾಲವಾಗುತ್ತ ನಡೆದಂತೆ ಅದನ್ನು ಅನುಸರಿಸಿ ಇವರ ಕಾವ್ಯ ರಚನೆಯೂ ಸಂಕೀರ್ಣವೂ ಸಂಮೃದ್ಧವೂ ಆಗುತ್ತಾ ಬಂತು. ಐರಾವತ, ದೀಪದಮಲ್ಲಿ (1947), ಉಂಗುರ (1949), ಇರುವಂತಿಗೆ (1952), ಶಿಲಾಲತೆ (1958), ಮನೆಯಿಂದ ಮನೆಗೆ (1960), ತೆರೆದ ಬಾಗಿಲು (1977), ನವಪಲ್ಲವ (1983), ಮಲ್ಲಿಗೆಯ ಮಾಲೆ, (ಸಮಗ್ರ ಕವಿತೆಗಳು 1986), ದುಂಡುಮಲ್ಲಿಗೆ (1993), ರಾಬರ್ಟ್ಸ್ ಕವಿಯ ಕೆಲವು ಪ್ರೇಮ ಗೀತೆಗಳು (1997), ಕೆಲವು ಚೀನೀ ಕವನಗಳು (1997), ನೆಲದನಿ (1999), ಸಂಜೆಹಾಡು (2000) - ಇವು ಇವರ ಇತರ ಕವನ ಸಂಗ್ರಹಗಳು. ಈ ಕಾವ್ಯ ಕೃತಿಗಳನ್ನಲ್ಲದೆ ಮಾದರಿಯ ಕಲ್ಲು (1942), ಉಪವನ (1958), ದಮಯಂತಿ (1970) ಎಂಬ ಗದ್ಯ ಕೃತಿಗಳನ್ನೂ ಇವರು ಬರೆದಿದ್ದಾರೆ. ಅಲ್ಲದೆ ಇಂಗ್ಲಿಷ್‌ನಿಂದ ಗಾಂಧೀಜಿಯವರ ಹಲವು ಉಕ್ತಿಗಳನ್ನೂ ಯೂರಿಪಿಡೀಸನ ಮೀಡಿಯಾ (1966) ನಾಟಕವನ್ನೂ ಮಾರ್ಕ್‌ಟ್ವೇನನ ಹಕಲ್‌ಬರಿಫಿನ್ನನ ಸಾಹಸಗಳು (1969) ಎಂಬ ಕಾದಂಬರಿಯನ್ನೂ ಹರೀಂದ್ರನಾಥ ಚಟ್ಟೋಪಾಧ್ಯಾಯರ ಕೆಲವು ಮಕ್ಕಳ ಗೀತೆಗಳನ್ನೂ ಕನ್ನಡಕ್ಕೆ ಅನುವಾದಿಸಿದ್ದಾರೆ. ಸುಬ್ರಹ್ಮಣ್ಯ ಭಾರತಿ (1971), ಮಾಯಾಶಂಖ ಮತ್ತು ಇತರ ಕತೆಗಳು (1972), ರಾಣಿಯ ಗಿಳಿ ಮತ್ತು ರಾಜನ ಮಂಗ (1972) - ಇವು ಇವರ ಇತರ ಅನುವಾದ ಕೃತಿಗಳು.

ಮೈಸೂರು ಮಲ್ಲಿಗೆ ಕೃತಿ ದೇವರಾಜ ಬಹದ್ದೂರ್ ಬಹುಮಾನವನ್ನೂ (1943) ಶಿಲಾಲತೆ ಮೈಸೂರು ರಾಜ್ಯದ ಸಂಸ್ಕೃತಿ ಪ್ರಸಾರ ಶಾಖೆಯ ಬಹುಮಾನವನ್ನೂ (1957), ತೆರೆದ ಬಾಗಿಲು ಕವನ ಸಂಗ್ರಹ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನೂ (1977) ಪಡೆದಿವೆ. ಬೆಂಗಳೂರು ವಿಶ್ವವಿದ್ಯಾಲಯ ಇವರಿಗೆ ಗೌರವ ಡಿ.ಲಿಟ್., ನೀಡಿದೆ (1992). ದುಂಡುಮಲ್ಲಿಗೆ ಕವನ ಸಂಗ್ರಹಕ್ಕೆ ಪ್ರತಿಷ್ಠಿತ ಪಂಪ ಪ್ರಶಸ್ತಿ ಲಭಿಸಿದೆ (1995). ಇದಲ್ಲದೆ ಇವರಿಗೆ ಮಾಸ್ತಿ ಸಾಹಿತ್ಯ ಪ್ರಶಸ್ತಿ (1996), ಕೇರಳದ ಕವಿ ಕುಮಾರನ್ ಆಶಾನ್ ಪ್ರಶಸ್ತಿ (1987) ಲಭಿಸಿವೆ.

ಇವರು ದೆಹಲಿ ರೇಡಿಯೋ ಕವಿ ಸಮ್ಮೇಳನದಲ್ಲಿ, ಸರ್ವಭಾಷಾ ಕವಿ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಕನ್ನಡ ಸಾಹಿತ್ಯ ಪರಿಷತ್ತು ತನ್ನ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಇವರನ್ನು ಸನ್ಮಾನಿಸಿದೆ. ಇವರು ಶಿವಮೊಗ್ಗದಲ್ಲಿ ನಡೆದ ಅಖಿಲ ಭಾರತ 49ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಕವಿ ಗೋಷ್ಠಿಯ ಅಧ್ಯಕ್ಷರಾಗಿದ್ದರು (1976). ಇವರ ಅಭಿಮಾನಿಗಳು ಚಂದನ ಎಂಬ ಅಭಿನಂದನ ಗ್ರಂಥವೊಂದನ್ನು ಅರ್ಪಿಸಿದ್ದಾರೆ (1972).

ಇವರ ಆರಂಭದ ಸಂಕಲನಗಳಲ್ಲಿ ಕಂಡುಬರುವ ಕವಿತೆಗಳು ಬಹುತೇಕ ಪ್ರಣಯದ ಮಧುರ ಸುಕುಮಾರ ಅನುಭವದ ಚಿತ್ರಗಳನ್ನು ಕೊಡುತ್ತವೆ. ಒಲುಮೆಯ ಗೀತೆಗಳಲ್ಲಿ ಪ್ರೇಮದ ಗಂಗೆ ತುಂಬಿ ಹರಿದಿದೆ. ಜೊತೆಗೆ ವಾತ್ಸಲ್ಯಭಾವದ ಚಿತ್ರಗಳೂ ಒಡಮೂಡಿವೆ. ಅವು ಹಾಡುಗಬ್ಬಗಳಾಗಿ, ತರುಣ ವಯಸ್ಸಿನವರ ಅಮರ ಗೀತೆಗಳಾಗಿ, ರಸಕೃತಿಗಳಾಗಿ ಜನಪ್ರಿಯವೂ ಆಗಿವೆ. ಮೈಸೂರು ಮಲ್ಲಿಗೆ ಕಸ್ತೂರಿಯ ನೆಲದಲ್ಲಿ ಕಾಮನಬಿಲ್ಲನ್ನು ಬಿತ್ತಿ ಬೆಳೆಸಿದ ಹೂದೋಟ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲೆಲ್ಲ ಅದು ತನ್ನ ಸುವಾಸನೆಯನ್ನು ಬೀರಿ ಮರುಳುಗೊಳಿಸಿತು. ಅದು ಅರೆಬಿರಿದ ಮೊಗ್ಗಲ್ಲ ಪ್ರಫುಲ ಪುಷ್ಪ, ಎಂದು ಮೊದಲಾಗಿ ವಿಮರ್ಶಕರು ಮೆಚ್ಚು ನುಡಿಗಳನ್ನಾಡಿದ್ದಾರೆ.

ರಚನೆಯಲ್ಲಿ ಎರಡನೆಯ ಘಟ್ಟ ಶಿಲಾಲತೆ ಮತ್ತು ಮನೆಯಿಂದ ಮನೆಗೆ ಎಂಬ ಸಂಗ್ರಹಗಳಲ್ಲಿ ಕಂಡುಬರುತ್ತದೆ. ಇಲ್ಲಿ ನವೋದಯದಿಂದ ಕವಿ ನವ್ಯ ಕಾವ್ಯದ ಕಡೆಗೆ ಹೊರಟ ಸಂಕ್ರಮಣ ಘಟ್ಟದ ರಚನೆಗಳಿವೆ. ಇಂಗ್ಲಿಷ್ ನವ್ಯಕಾವ್ಯಗಳು ಕನ್ನಡದಲ್ಲಿ ಅಂಕುರಿಸುತ್ತಿದ್ದ ನವ್ಯ ಕಾವ್ಯೋದಯದ ಅರುಣಕಾಂತಿ ಇವರ ಕಾವ್ಯಶಕ್ತಿಯನ್ನು ತಟ್ಟಿ ಎಚ್ಚರಿಸಿತು. ಶಿಲ್ಪ, ಪ್ರತಿಮೆ, ಭಾಷೆ, ವಸ್ತು, ತಂತ್ರ ಜೀವನದರ್ಶನ ಇವರ ರಚನೆಗಳನ್ನು ರೂಪಿಸಿದುವು. ಮಧುರ ಸನ್ನಿವೇಶಗಳು ಜೀವನದ ಜಂಜಡದಿಂದ ಸಾಮಾಜಿಕ ಪ್ರಭಾವಗಳಿಂದ ಪರಿವರ್ತನೆಯಾದವು. ಜೀವನ ಮೌಲ್ಯಗಳು ವ್ಯತ್ಯಾಸವಾದುವು. ಹೊಸ ಭಾವನೆಗಳು ಹೊಸ ಕಾವ್ಯ ಮಾರ್ಗದಲ್ಲಿ ಮೂಡಿಬಂದುವು. ಭಾಷೆಯಲ್ಲಿ ಸ್ಪಷ್ಟತೆ, ವಿಡಂಬನೆಯ ಮೊನಚು, ಹಾಸ್ಯದ ಹೊಳಪು ಹೆಣೆದುಕೊಂಡುವು. ಬರಿಗೊಡಗಳಿಗೆ ಸಮಾಧಾನ ಎನ್ನುವ ಕವಿತೆಯಲ್ಲಿ ಬರುವ 'ಬಾಂದಳದ ವಿಮಾನ ಅದೆಷ್ಟು ನಿಧಾನ', ದಾರವಿಲ್ಲದ ಸೂಜಿ ನಾಟಿದ ನೀಲಿ ಬಟ್ಟೆಯಲಿ ಎಂಬ ಚಿತ್ರ ನಯವಂಚನೆಯ ಭರವಸೆಗಳನ್ನು ಮನದಟ್ಟು ಮಾಡಿಸುತ್ತದೆ.

ತೆರೆದ ಬಾಗಿಲು ಸಂಕಲನ ಇವರ ಕಾವ್ಯ ರಚನೆಯ ಮೂರನೆಯ ಘಟ್ಟ. ರೂಪಕಗಳಾಗಲಿ, ಪ್ರತಿಮೆಗಳಾಗಲಿ ಉದಾಹರಣೆಗಾಗಿ ಕವಿತೆಗಳಲ್ಲಿ ಬರುತ್ತಿದ್ದು ಈಗ ಇಡೀ ಕವನ ಒಂದು ಪ್ರತಿಮೆಯಾಗಿ ಒಂದು ರೂಪಕವಾಗಿ ಮಹಾಪ್ರತಿಮೆಯಾಗುತ್ತದೆ. ಇವರ ಕೆಲವು ಕವಿತೆಗಳು ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳಿಗೆ ಭಾಷಾಂತರವಾಗಿವೆ.

ನರಸಿಂಹಸ್ವಾಮಿಯವರು ಮೈಸೂರು, ನಂಜನಗೂಡು, ಬೆಂಗಳೂರುಗಳಲ್ಲಿ ಬೇರೆ ಬೇರೆ ಇಲಾಖೆಗಳಲ್ಲಿ ಸೇವೆ ಸಲ್ಲಿಸಿ ತಮ್ಮ ಸರ್ಕಾರಿ ಉದ್ಯೋಗದಿಂದ 1970 ಜನವರಿ 26ರಂದು ನಿವೃತ್ತರಾದರು. ಇವರಿಗೆ 4 ಗಂಡು ಮಕ್ಕಳು 4 ಹೆಣ್ಣುಮಕ್ಕಳು.

ಇವರು ಡಿಸೆಂಬರ್ 28, 2003ರಂದು ಬೆಂಗಳೂರಿನಲ್ಲಿ ನಿಧನರಾದರು.

**ನರಸಿಂಹಾಚಾರ್, ಎಂ.ಎ. :** 1924-2004. ಕರ್ನಾಟಕ ಸಂಗೀತದ ಹೆಸರಾಂತ ಗಾಯಕ. 1924 ಆಗಸ್ಟ್ 12ರಂದು ಮೈಸೂರಿನಲ್ಲಿ ಜನಿಸಿದರು. ತಂದೆ ಎಂ.ಎ.ಕೃಷ್ಣಸ್ವಾಮಿ ಐಯ್ಯಂಗಾರ್, ತಾಯಿ ರಾಜಮ್ಮ. ಇವರದು ಸಂಗೀತದ ಬಗ್ಗೆ ಆಸಕ್ತಿ ಇದ್ದ ಸಂಪ್ರದಾಯಸ್ಥ ಕುಟುಂಬ. ಇವರ ತಾಯಿ ಕೀರ್ತನೆಗಳು, ಸಂಪ್ರದಾಯದ ಹಾಡುಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದರು.ಇವರ ತಂದೆ ಬಿಡಾರಂ ಕೃಷ್ಣಪ್ಪನವರ ರಾಮಮಂದಿರಕ್ಕೆ ಸತತವಾಗಿ ಸಂಗೀತ ಕಛೇರಿಗಳನ್ನು ಕೇಳಲು ಹೋಗುತ್ತಿದ್ದರು. ಇದರಿಂದ ಇವರಿಗೆ ತಮಿಳುನಾಡಿನ ಅನೇಕ ಸಂಗೀತಗಾರರ ಪರಿಚಯವಾಯಿತು. ಸಂಗೀತದೊಂದಿಗೆ ಕ್ರಿಕೆಟ್‌ನಲ್ಲೂ ಇವರಿಗೆ ವಿಶೇಷ ಆಸಕ್ತಿ ಇತ್ತು. ಮೈಸೂರಿನಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾದರು. ಅನಂತರ ತಂದೆಯ ಆಶಯದಂತೆ ತಮಿಳುನಾಡಿನ ಅಣ್ಣಾಮಲೈ ವಿಶ್ವವಿದ್ಯಾಲಯದ ಸಂಗೀತ ಕಾಲೇಜು ಸೇರಿದರು. ಅಲ್ಲಿ ಇವರನ್ನು ಮೊದಲು ಕೆಲವು ಪರೀಕ್ಷೆಗಳಿಗೆ ಒಳಪಡಿಸಿದರು. ಬಹಳ ಸಣ್ಣವಾಗಿದ್ದ ಇವರಿಗೆ ಕಪೋತವೃಕ್ಷ (ಪಿಜನ್ ಚೆಸ್ಟ್) ಇದೆಯೆಂದು ವೈದ್ಯರು ಅಭಿಪ್ರಾಯ ಪಟ್ಟರು. ಆದರೂ ಛಲದಿಂದ ಇವರು ಸಂಗೀತ ಪ್ರವೇಶ ಪರೀಕ್ಷೆಯಲ್ಲಿ ಕಾಮವರ್ಧಿ ರಾಗದಲ್ಲಿ ಹಾಡಿ ಎಲ್ಲರ ಮೆಚ್ಚುಗೆ ಪಡೆದು ಪ್ರವೇಶ ಪಡೆಯುವಲ್ಲಿ ಸಫಲರಾದರು.

ಗುರುಗಳಾದ ಸುಭೇಷಯ್ಯರ್‌ರವರ ಪ್ರೋತ್ಸಾಹದಿಂದ ತಮಿಳು ಭಾಷೆಯನ್ನು ಓದಲು ಬರೆಯಲು ಕಲಿತು ತಮಿಳಿನಲ್ಲಿಯೇ ಸಂಗೀತಶಾಸ್ತ್ರದ ಪ್ರಶ್ನೆಪತ್ರಿಕೆಗೆ ಉತ್ತರಿಸಿ ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾದರು. ಇವರ ವ್ಯಾಸಂಗದ ದಿನಗಳಲ್ಲಿ ಸುಪ್ರಸಿದ್ಧ ಸಂಗೀತಗಾರರಾದ ಟೈಗರ್ ವರದಾಚಾರ್ಯರು ಪ್ರಾತಃಕಾಲ 5 ಗಂಟೆಗೆ ಶಿಷ್ಯರನ್ನೆಲ್ಲ ಎಬ್ಬಿಸಿ ಅಕಾರ ಸಾಧನೆ ಮಾಡಿಸುತ್ತಿದ್ದಾಗ ಅದರಲ್ಲಿ ಆಸಕ್ತಿಯಿಂದ ಭಾಗವಹಿಸುತ್ತಿದ್ದರು. ಇದಲ್ಲದೇ ಪ್ರತಿ ರಾತ್ರಿ ಊಟವಾದ ಬಳಿಕ ಕೆ.ಎಸ್.ನಾರಾಯಣ ಸ್ವಾಮಿಯವರ ಮನೆಗೆ ತೆರಳಿ ವೀಣಾವಾದನವನ್ನು ಕೇಳುತ್ತಿದ್ದರು. ಇದರಿಂದ ಅನೇಕ ಗಮಕಿಗಳ ಪರಿಚಯವಾಗಿ ಅದನ್ನು ತಮ್ಮ ಹಾಡುಗಾರಿಕೆಯಲ್ಲಿ ಅಳವಡಿಸಿಕೊಳ್ಳುವುದು ಇವರಿಗೆ ಸಾಧ್ಯವಾಯಿತು.

ಅಣ್ಣಾಮಲೈ ವಿಶ್ವವಿದ್ಯಾಲಯದಲ್ಲಿ ಮೂರು ವರ್ಷಗಳು ವ್ಯಾಸಂಗಮಾಡಿ ಉನ್ನತ ದರ್ಜೆಯಲ್ಲಿ ತೇರ್ಗಡೆಯಾದರು. ತಂದೆಯವರ ಆಶಯದಂತೆ ಮೈಸೂರಿನಲ್ಲಿ ಗಾನಕಲಾಮಂದಿರ ಎಂಬ ಸಂಗೀತ ಶಾಲೆಯನ್ನು ಪ್ರಾರಂಭಿಸಿ (1943) ಅನೇಕ ಶಿಷ್ಯರಿಗೆ ತರಬೇತಿ ನೀಡಿದರು. ಇಲ್ಲಿಗೆ ಚೆನ್ನೈನಿಂದ ಪ್ರಖ್ಯಾತ ಸಂಗೀತಗಾರರನ್ನು ಕರೆಯಿಸಿ ಕಛೇರಿಗಳನ್ನು ನಡೆಸಿದರು. ಅನಂತರ ಇವರು ಬೆಂಗಳೂರಿನ ಆಚಾರ್ಯ ಪಾಠಶಾಲೆ ಕಾಲೇಜಿನಲ್ಲಿ ಸಂಗೀತ ಶಿಕ್ಷಕರಾಗಿ ಸೇವೆ ಸಲ್ಲಿಸಿ ನಿವೃತ್ತರಾದರು (1980). ಇವರು ಇರುವಯ್ಯಾರಿನಲ್ಲಿ ಗುರುಕುಲ ಪದ್ಧತಿಯಲ್ಲೂ ಕೆಲವು ಸಮಯ ಶಿಕ್ಷಕರಾಗಿದ್ದರು.

ಇವರು ಆಕಾಶವಾಣಿಯಲ್ಲಿ ನಿಲಯ ಕಲಾವಿದರಾಗಿಯೂ ಸೇವೆ ಸಲ್ಲಿಸಿದರು (1941). ಇದಲ್ಲದೇ ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿಯೂ ಸಂಗೀತ ಕಲಿಸಿದರು. ಇಲ್ಲಿ ಸೇವೆಯಲ್ಲಿರುವಾಗ ಇಂಡಿಯನ್ ಫಿಲಾಸಫಿಕಲ್ ಕಾಂಗ್ರೆಸ್ ಪ್ರತಿ ವರ್ಷ ನಡೆಸುತ್ತಿದ್ದ ಕಾರ್ಯಾಗಾರದಲ್ಲಿ ಶ್ರೀಲಂಕದಲ್ಲಿ ಪ್ರತಿನಿಧಿಯಾಗಿ ಭಾಗವಹಿಸುವ ಅವಕಾಶ ಪಡೆದರು. ಶ್ರೀಲಂಕದಲ್ಲಿ ಅನೇಕ ಕಛೇರಿಗಳನ್ನು ನೀಡಿದ್ದಲ್ಲದೇ ರೇಡಿಯೋ ಸಿಲೋನ್‌ನಲ್ಲಿ ಕರ್ನಾಟಕ ಸಂಗೀತ ಕಾರ್ಯಕ್ರಮವನ್ನು ನೀಡಿದರು. ಇದಾದನಂತರ ಇದೇ ಸಂಸ್ಥೆಯವರು ಶ್ರೀನಗರದಲ್ಲಿ ನಡೆಸಿದ ಕಾರ್ಯಕ್ರಮದಲ್ಲಿ ಭಾಗವಹಿಸಿ ಮೆಚ್ಚುಗೆ ಪಡೆದುದಲ್ಲದೇ ಸ್ವಾಮಿ ಶಿವಾನಂದ ಸರಸ್ವತಿಯವರಿಂದ ಸಂಗೀತ ಜ್ಯೋತಿ ಎಂಬ ಬಿರುದನ್ನೂ ಪಡೆದರು. ತ್ಯಾಗರಾಜರ ಉತ್ಸವ ಪ್ರಬಂಧ ಕೀರ್ತನೆಗಳು, ಪಂಚರತ್ನ ಕೃತಿಗಳು, ನೌಕಾ ಚರಿತ್ರಮು, ಮುತ್ತುಸ್ವಾಮಿ ದೀಕ್ಷಿತರ ನವಾವರಣ ಕೀರ್ತನೆಗಳು ಇವರ ಸಂಗೀತ ರೂಪಕಗಳಾಗಿವೆ.

ಸಂಗೀತಕ್ಕೆ ಸಂಬಂಧಿಸಿದಂತೆ ಇವರು ಅಪಾರ ಪುಸ್ತಕಗಳನ್ನು ಸಂಗ್ರಹಿಸಿದ್ದರು. ಸಂಗೀತ ವಿಚಾರದಲ್ಲಿ ಅಧಿಕೃತ ಜ್ಞಾನವುಳ್ಳವರಾಗಿದ್ದ ಇವರು ಯಾವುದೇ ಸಂಗೀತ ಸಂಬಂಧಿ ಸಮಸ್ಯೆಗಳಿಗೆ ಪರಿಹಾರ ನೀಡಬಲ್ಲವರಾಗಿದ್ದರು. ಸಂಗೀತಕ್ಕೆ ಸಂಬಂಧಿಸಿದಂತೆ ಕನ್ನಡಇಂಗ್ಲಿಷ್ ಭಾಷೆಗಳೆರಡರಲ್ಲೂ ಅನೇಕ ವಿದ್ವತ್‌ಪೂರ್ಣ ಲೇಖನಗಳನ್ನೂ ಬರೆದರು.

ಇವರ ಸಿದ್ಧಿಸಾಧನೆಗಳಿಗಾಗಿ ಹಲವಾರು ಗೌರವದ ಪ್ರಶಸ್ತಿಗಳು ದೊರಕಿವೆ. ಇವುಗಳಲ್ಲಿ, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಬಿರುದು ಕರ್ನಾಟಕ ಕಲಾತಿಲಕ, ರಾಜ್ಯ ಸಂಗೀತ ವಿದ್ವಾನ್, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಟಿ. ಚೌಡಯ್ಯ ಸ್ಮಾರಕ ಪ್ರಶಸ್ತಿ, ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ (2004) ಪ್ರಮುಖವಾದವು. ಕರ್ನಾಟಕ ಗಾನಕಲಾ ಪರಿಷತ್ತಿನವರು ಗಾನಕಲಾ ಭೂಷಣ ಎಂಬ ಬಿರುದನ್ನು ನೀಡಿ ಗೌರವಿಸಿದ್ದಾರೆ. ಇವರು 2004 ಜುಲೈನಲ್ಲಿ ನಿಧನರಾದರು. (ಎಸ್‌ಯು.ಎಂ.)

**ನರಸಿಂಹಾಚಾರ್, ಡಿ.ಎಲ್. :** 1906-71. ಪ್ರಸಿದ್ಧ ವಿದ್ವಾಂಸರು. ಕನ್ನಡ ಸಾಹಿತ್ಯ, ಭಾಷೆ, ಗ್ರಂಥ ಸಂಪಾದನೆ - ಹೀಗೆ ಹಲವು ಕ್ಷೇತ್ರಗಳಲ್ಲಿ ಮೌಲಿಕ ಕೆಲಸ ಮಾಡಿದ್ದಾರೆ. ದೊಡ್ಡಬೆಲೆ ಲಕ್ಷ್ಮೀನರಸಿಂಹಾಚಾರ್ ಇವರ ಪೂರ್ಣ ಹೆಸರು. ಇವರು 1906 ಅಕ್ಟೋಬರ್ 27ರಂದು ಚಿಕ್ಕನಾಯಕನಹಳ್ಳಿಯಲ್ಲಿ ತಮ್ಮ ಮಾತಾಮಹ ಅಣ್ಣಾಸ್ವಾಮಿ ಅಯ್ಯಂಗಾರ್ಯರ ಮನೆಯಲ್ಲಿ ಹುಟ್ಟಿದರು. ಮನೆಯ ಸುಸಂಸ್ಕೃತ ವಿದ್ಯಾವಂತ ವಾತಾವರಣ ಇವರ ವ್ಯಕ್ತಿತ್ವದ ವಿಕಾಸಕ್ಕೆ ತುಂಬ ಪೋಷಣೆ ನೀಡಿತು. ಎಂಟ್ರೆನ್ಸ್ ಪರೀಕ್ಷೆಯನ್ನು ತುಮಕೂರಿನಲ್ಲಿ ಮುಗಿಸಿ, ಮುಂದಿನ ವಿದ್ಯಾಭ್ಯಾಸಕ್ಕಾಗಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿಗೆ ಸೇರಿದರು (1924). ಭೌತಶಾಸ್ತ್ರ ರಸಾಯನಶಾಸ್ತ್ರಗಳನ್ನು ಐಚ್ಛಿಕ ವಿಷಯವನ್ನಾಗಿ ಆಯ್ದುಕೊಂಡು ಆರ್ಟ್ಸ್ ವಿಭಾಗದಲ್ಲಿ ವ್ಯಾಸಂಗ ಮಾಡಿ, ಬಿ.ಎ. ಪರೀಕ್ಷೆಯನ್ನು ಮುಗಿಸಿದರು (1927). ಆ ಪರೀಕ್ಷೆಯಲ್ಲಿ, ಕನ್ನಡದಲ್ಲಿ ಹೆಚ್ಚು ಅಂಕಗಳನ್ನು ಪಡೆದದ್ದರಿಂದ ಚಿನ್ನದ ಪದಕ ಮತ್ತು

ಬಹುಮಾನಗಳನ್ನು ಗಳಿಸಿದರು. ಅದೇ ವರ್ಷ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಆರಂಭವಾಗಿದ್ದ ಕನ್ನಡ ಎಂ.ಎ. ತರಗತಿಗೆ ಸೇರಿ ಎರಡು ವರ್ಷಗಳ ವ್ಯಾಸಂಗದ ಬಳಿಕ ಪ್ರಥಮದರ್ಜೆ ಪ್ರಥಮ ಸ್ಥಾನಗಳೊಡನೆ ಎಂ.ಎ. ಪದವೀಧರರಾದರು (1929). ಆ ಸಂದರ್ಭದಲ್ಲಿ ಕುವೆಂಪು ಅವರು ಇವರ ಸಹಪಾಠಿಯಾಗಿದ್ದರು. ಅದೇ ವರ್ಷ ಮೈಸೂರು ವಿಶ್ವವಿದ್ಯಾನಿಲಯದಿಂದ ಅದೇ ತಾನೇ ಏರ್ಪಾಡಾಗಿದ್ದ ಸಂಶೋಧನ ವಿದ್ಯಾರ್ಥಿವೇತನ ಪಡೆದುಕೊಂಡು ವೀರಶೈವ ಸಾಹಿತ್ಯದ ಆರಂಭಕಾಲವನ್ನು ಕುರಿತು ಸಂಶೋಧನೆ ನಡೆಸಿದರು.

ಮೈಸೂರಿನ ಪ್ರಾಚ್ಯವಿದ್ಯಾಸಂಶೋಧನ ಸಂಸ್ಥೆಯಲ್ಲಿ ರೆಸಿಡೆಂಟ್ ಕನ್ನಡ ಪಂಡಿತರಾಗಿ 1930ರಲ್ಲಿ ಕೆಲಸಕ್ಕೆ ಸೇರಿದ ಇವರು ಅಲ್ಲಿದ್ದ ಎರಡು ವರ್ಷಗಳಲ್ಲಿ ಎರಡು ಪ್ರಾಚೀನ ಗ್ರಂಥಗಳ ಸಕಲ ವೈದ್ಯಸಂಹಿತಾಸಾರಾರ್ಣವ ಮತ್ತು ಕುಮಾರವ್ಯಾಸಭಾರತದ ಭೀಷ್ಮಪರ್ವ ಸಂಪಾದನಾಕಾರ್ಯವನ್ನು ಸಮರ್ಪಕಾಗಿ ನಿರ್ವಹಿಸಿದರು. ಆ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿರುವಾಗಲೇ ಮಹಾರಾಜ ಕಾಲೇಜಿನಲ್ಲಿಯೂ ಒಪ್ಪೊತ್ತಿನ ಕನ್ನಡ ಪಂಡಿತರಾಗಿ ಪಾಠ ಹೇಳುತ್ತಿದ್ದರು. 1932ರಲ್ಲಿ ಪೂರ್ಣಕಾಲದ ಪಂಡಿತರಾಗಿ ಮಹಾರಾಜ ಕಾಲೇಜಿಗೆ ಬಂದರು. ಅನಂತರ 1939ರಲ್ಲಿ ಮೈಸೂರಿನ ಇಂಟರ್‌ಮೀಡಿಯೆಟ್ ಕಾಲೇಜಿಗೆ ಅಂದರೆ ಈಗಿನ ಯುವರಾಜ ಕಾಲೇಜಿಗೆ ಬಂದು, ಬಳಿಕ 1945ರಲ್ಲಿ ಉಪಪ್ರಾಧ್ಯಾಪಕ ಸ್ಥಾನಕ್ಕೆ ಬಡ್ತಿ ಪಡೆದು ಬೆಂಗಳೂರಿನ ಸೆಂಟ್ರಲ್ ಕಾಲೇಜಿಗೆ ಹೋದರು. ಮೂರು ವರ್ಷಗಳ ಅನಂತರ ಮತ್ತೆ ಮಹಾರಾಜ ಕಾಲೇಜಿಗೆ ಹಿಂದಿರುಗಿ, 1954ರ ವರೆಗೆ ಅಲ್ಲಿದ್ದು, ಆ ವರ್ಷ ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟಿಗೆ ಪ್ರಧಾನ ಸಂಪಾದಕರಾಗಿ ಅಧಿಕಾರವಹಿಸಿಕೊಂಡು ಬೆಂಗಳೂರಿಗೆ ತೆರಳಿದರು. 1956ರಲ್ಲಿ ಪ್ರಾಧ್ಯಾಪಕ ಪದವಿಗೆ ಬಡ್ತಿ ಪಡೆದು, ಅಲ್ಲಿಂದ ಮಹಾರಾಜ ಕಾಲೇಜಿಗೆ ಮರಳಿದರು. ಅಧ್ಯಾಪನ ವೃತ್ತಿಯಿಂದ ನಿವೃತ್ತರಾದ ಮೇಲೆ (1962 ಮಾರ್ಚ್ 31) ಅಧ್ಯಯನ, ಸಂಶೋಧನ ಕಾರ್ಯಗಳು ಇನ್ನೂ ವ್ಯಾಪಕಗೊಂಡವು. 1963ರಿಂದ ಸುಮಾರು ಆರು ವರ್ಷಗಳ ಕಾಲ ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ಸಂಶೋಧನ ವಿದ್ವಾಂಸರಾಗಿದ್ದರು. ಆಗಲೇ ತೀ.ನಂ. ಶ್ರೀಕಂಠಯ್ಯನವರ ನಿಧನದಿಂದ ತೆರವಾದ ಕನ್ನಡ-ಕನ್ನಡ ನಿಘಂಟಿನ ಅಧ್ಯಕ್ಷಪದವಿಯನ್ನೂ ಪ್ರಧಾನ ಸಂಪಾದಕತ್ವವನ್ನೂ ವಹಿಸಿಕೊಂಡರು.

ಇವರು ಮೈಸೂರು ವಿಶ್ವವಿದ್ಯಾನಿಲಯ, ವಿದ್ಯಾ ಇಲಾಖೆಯಗಳಲ್ಲಿಯೂ ಉಸ್ಮಾನಿಯ ಮತ್ತಿತರ ವಿಶ್ವವಿದ್ಯಾನಿಲಯಗಳಲ್ಲಿಯೂ ಬೇರೆ ಬೇರೆ ವಿದ್ಯಾಸಮಿತಿಗಳಲ್ಲಿಯೂ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ. ಕನ್ನಡ-ಕನ್ನಡ ನಿಘಂಟು ಯೋಜನೆಗೆ ಎ.ಆರ್.ಕೃಷ್ಣಶಾಸ್ತ್ರಿಗಳೂ ತೀ.ನಂ. ಶ್ರೀಕಂಠಯ್ಯನವರೂ ಅಧ್ಯಕ್ಷರಾಗಿದ್ದಾಗಲೂ ಅವರ ಅನಂತರದಲ್ಲಿಯೂ ಪ್ರಬಲವಾದ ಒತ್ತಾಸೆಯಾಗಿದ್ದು, ಶಕ್ತಿಯಾಗಿದ್ದು ಆ ಯೋಜನೆ ಸುವ್ಯವಸ್ಥಿತವಾಗಿಯೂ ಸುಭದ್ರವಾಗಿಯೂ ಮುನ್ನಡೆಯಲು ಬಹುವಾಗಿ ಶ್ರಮಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ಸಮಯದಲ್ಲಿ (1970) ಇವರ ಸಮಕ್ಷಮದಲ್ಲಿಯೇ ನಿಘಂಟಿನ ಮೊದಲನೆಯ ಸಂಪುಟ ಬಿಡುಗಡೆಯಾಯಿತು. ಇವರು 1959-62ರ ಅವಧಿಯಲ್ಲಿ ಪ್ರಬುದ್ಧ ಕರ್ನಾಟಕದ ಪ್ರಧಾನ ಸಂಪಾದಕರಾಗಿದ್ದು, ಆ ಪತ್ರಿಕೆಯ ಬೆಳವಣಿಗೆಗೆ ಕೂಡ ಶ್ರಮವಹಿಸಿದರು.

ಇವರು ಸಮರ್ಥ ಹಾಗೂ ಶ್ರದ್ಧಾವಂತ ಅಧ್ಯಾಪಕರು: ಶ್ರೇಷ್ಠದರ್ಜೆಯ ಹಾಗೂ ಬಹುಮುಖ ವ್ಯಾಸಂಗದ ವಿದ್ವಾಂಸರು, ಸು. 40 ವರ್ಷಗಳಿಗೆ ಮೇಲ್ಪಟ್ಟಷ್ಟು ಕಾಲ ಕನ್ನಡ ಭಾಷೆ ಸಾಹಿತ್ಯಗಳ ಏಳಿಗೆಗೆ ಇವರು ತಮ್ಮ ಶಕ್ತಿಸರ್ವಸ್ವವನ್ನೂ ವಿನಿಯೋಗಿಸಿದರು. ಕನ್ನಡ ಭಾಷೆ ಸಾಹಿತ್ಯಗಳ ಏಳಿಗೆಯನ್ನು ತಮ್ಮ ಬದುಕಿನ ದೀಕ್ಷೆಯನ್ನಾಗಿ ಗ್ರಹಿಸಿ, ಅವುಗಳಲ್ಲಿ ತಕ್ಕ ಪ್ರೌಢಿಮೆಯನ್ನು ಮೊದಲು ತಾವು ಗಳಿಸಿಕೊಂಡು ಅನಂತರ ಚಿಂತನ ವಿಚಾರವಿಮರ್ಶೆ ಸಿದ್ಧಾಂತಗಳ ಫಲವನ್ನು ಹಲವು ವರ್ಷಗಳವರೆಗೆ ತಮ್ಮ ಹಲವಾರು ವಿದ್ಯಾರ್ಥಿಗಳಿಗೆ ಅಧ್ಯಾಪನದ ಮೂಲಕವಾಗಿ ಕೈಗೂಡಿಸಿದರು. ಇದರಜೊತೆಗೆ ಆಗಿಂದಾಗ್ಗೆ ಲೇಖನಗಳ ಮೂಲಕವೂ ಕೃತಿಗಳ ಮೂಲಕವೂ ಅವುಗಳಿಗೆ ನಿಷ್ಕೃಷ್ಟ ರೂಪವನ್ನು ಕೊಟ್ಟು ಕನ್ನಡ ಸಾಹಿತ್ಯದ ಶಕ್ತಿಯನ್ನೂ ಸಂಪತ್ತನ್ನೂ ಬೆಳೆಸಿದರು. ಭಾಷೆ, ವ್ಯಾಕರಣ, ನಿಘಂಟು, ಗ್ರಂಥಸಂಪಾದನೆ, ಛಂದಸ್ಸು, ಶಾಸನ, ಪ್ರಾಚೀನ ಸಾಹಿತ್ಯ - ಇವನ್ನು ತಮ್ಮ ಕಾರ್ಯಕ್ಷೇತ್ರದ ವಿಷಯಗಳನ್ನಾಗಿ ಹಿಡಿದು ಆ ಒಂದೊಂದು ವಿಷಯದಲ್ಲೂ ವಿರಾಮಶೀಲವಾದ ಗಾಢವಾದ ಸಂಶೋಧನೆಗಳ ಮೂಲಕ ಕನ್ನಡ ವಿದ್ವತ್ತನ್ನು ಬಲಪಡಿಸಿದರು. ಕನ್ನಡ ಸಾಹಿತ್ಯದ ಮೂಲಾಧಾರಗಳನ್ನು ಕಟ್ಟಿದರು. ಇವರ ಬೆಲೆಯುಳ್ಳ ಮೌಲಿಕ ರಚನೆಗಳು ನಿರಂತರ ಅಧ್ಯಯನ ಅಧ್ಯಾಪನಗಳ ವೈಜ್ಞಾನಿಕ ದೃಷ್ಟಿಯ ಅನುಸಂಧಾನ ಸಂಯೋಜನೆಗಳ ಫಲವಾಗಿ ಮೂಡಿಬಂದವು. ಜ್ಞಾನೋಪಾಸನೆಯೇ ಜೀವಿತಸಾರ್ಥಕ್ಯವೆಂದೂ ಸಾಹಿತ್ಯೋಜ್ಜೀವನವೇ ಜೀವನಧ್ಯೇಯವೆಂದೂ ನಂಬಿ ಇವರು ಕೃತಿರಚನೆ ಮಾಡುತ್ತಿದ್ದುದರಿಂದ ಇವರ ರಚನೆಗಳಲ್ಲಿ ಇವರ ಶುದ್ಧವಾದ ಅಭಿರುಚಿ, ಗಾಢವಾದ ಸಾಮರ್ಥ್ಯ, ನಿಷ್ಪಕ್ಷವಾದ ವಿಚಾರಧಾರೆ, ಪ್ರಖರವಾದ ವಿಶ್ಲೇಷಕಪಟುತ್ವ, ವಸ್ತು ನಿಷ್ಠೆಯ ಛಲಗಾರಿಕೆ, ಚಿರಕಾಲಿಕ ಸತ್ತ್ವ, ಅನಂತಕಾಂತಿ - ಈ ಗುಣಗಳೆಲ್ಲ ಮೇಲಾಗಿ ಪ್ರತಿಫಲಿಸಿ ತೋರುತ್ತಿದ್ದವು.

ಇವರು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಸು. 70-80 ಸಂಶೋಧನ ಲೇಖನಗಳನ್ನು ಬರೆದು ನಾಡಿನ ಬೇರೆ ಬೇರೆ ವಿದ್ವತ್ ಪತ್ರಿಕೆಗಳಲ್ಲಿ ಪ್ರಕಟಿಸಿದ್ದರು. ಇವುಗಳಲ್ಲಿ ಬಹುಪಾಲು ಕನ್ನಡ ಭಾಷೆ ಸಾಹಿತ್ಯಗಳ ಮುಖ್ಯವೂ ಜಟಿಲವೂ ಆದ ಸಮಸ್ಯೆಗಳನ್ನೂ ವಿಷಯಗಳನ್ನೂ ಕುರಿತವಾಗಿವೆ. ಪ್ರಾಚೀನ ಸಾಹಿತ್ಯ, ಆ ಸಾಹಿತ್ಯದ ವಿಮರ್ಶೆ ಮತ್ತು ಚರಿತ್ರೆ, ಗ್ರಂಥಸಂಪಾದನೆ, ಶಬ್ದಾರ್ಥ ವಿಚಾರ ಇವು ಇವರಿಗೆ ಬಹು ಮೆಚ್ಚಿಗೆಯ ವಿಷಯಗಳು. ಸಕಲವೈದ್ಯಸಂಹಿತಾ ಸಾರಾರ್ಣವ, ಭೀಷ್ಮಪರ್ವ, ಪಂಪರಾಮಾಯಣ ಸಂಗ್ರಹ, ವಡ್ಡಾರಾಧನೆ, ಸಿದ್ಧರಾಮಚರಿತೆಯ ಸಂಗ್ರಹ, ಶಬ್ದಮಣಿದರ್ಪಣ, ಗೋವಿನ ಹಾಡು ಇವು ಇವರಿಂದ ಸಂಪಾದಿತವಾದ ಗ್ರಂಥಗಳು. ಇವುಗಳಲ್ಲದೆ ಇತರರೊಡನೆ ಸೇರಿ ಸಿದ್ಧರಾಮಚಾರಿತ್ರ, ಸುಕುಮಾರಚರಿತ್ರೆ ಎಂಬ ಕೃತಿಗಳನ್ನು ಸಂಪಾದಿಸಿದ್ದಾರೆ. ಇವೆಲ್ಲ ಬಹುಮಟ್ಟಿಗೆ ಶಾಸ್ತ್ರೀಯವಾದ ಗ್ರಂಥಸಂಪಾದನೆಯ ನಿಯಮಗಳಿಗೆ ಅನುಸಾರವಾಗಿ ಸಂಪಾದಿತವಾಗಿವೆಯಲ್ಲದೆ, ವಿದ್ವತ್ ಪೂರ್ಣವಾದ ಉಪೋದ್ಘಾತ, ಟಿಪ್ಪಣಿಗಳು, ಶಬ್ದಕೋಶ ಮೊದಲಾದ ಸಹಾಯಕ ಸಾಮಗ್ರಿಗಳನ್ನೂ ಒಳಗೊಂಡಿವೆ. 'ಶಬ್ದವಿಹಾರ' ಪ್ರಾಚೀನ ಸಾಹಿತ್ಯದ ಶಬ್ದಾರ್ಥವಿಚಾರವನ್ನು ಕುರಿತ ಇವರ ಗ್ರಂಥ ಕನ್ನಡ ಗ್ರಂಥಸಂಪಾದನೆ ಗ್ರಂಥಸಂಪಾದನಶಾಸ್ತ್ರವನ್ನೂ ಕನ್ನಡ ಗ್ರಂಥಸಂಪಾದನೆಯ ನಾನಾ ಮುಖಗಳನ್ನೂ ಒಳಗೊಂಡಿರುವ ಅತ್ಯುಪಯುಕ್ತವಾದ ಶಾಸ್ತ್ರಗ್ರಂಥ. ಪಂಪಭಾರತದೀಪಿಕೆ ಆ ಗ್ರಂಥಕ್ಕೆ ಸವಿವರವಾದ ಹಾಗೂ ಬೆಲೆಯುಳ್ಳ ಟಿಪ್ಪಣಿಗಳನ್ನು ಕೊಟ್ಟಿರುವ ಸಹಾಯಕ ಗ್ರಂಥ. ಪೀಠಿಕೆಗಳು, ಲೇಖನಗಳು ಎಂಬ ಬೃಹದ್‌ಗ್ರಂಥ ಆಚಾರ್ಯರ ಸಂಶೋಧನ ಮತ್ತು ಇತರ ಲೇಖನಗಳ ಸಮುಚ್ಚಯ.

ಕನ್ನಡ ಭಾಷಾಸಾಹಿತ್ಯಗಳಿಗೆ, ಮುಖ್ಯವಾಗಿ ಸಂಶೋಧನೆ ಸಂಪಾದನೆ ಶಾಖೆಗಳಿಗೆ ಸಲ್ಲಿಸಿದ ವಿಶೇಷ ಸೇವೆಯಿಂದಾಗಿ ಇವರು 1960ರಲ್ಲಿ ಬಿದರೆಯಲ್ಲಿ ನಡೆದ 41ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾದರು. ಆ ಸಂದರ್ಭದ ಸವಿನೆನಪಿಗಾಗಿ ಇವರ ವ್ಯಕ್ತಿತ್ವ ವಿದ್ವತ್ತುಗಳನ್ನು ಕುರಿತ ಜ್ಞಾನೋಪಾಸಕ ಎಂಬ ಅಭಿನಂದನ ಗ್ರಂಥವನ್ನು ಇವರಿಗೆ ಅರ್ಪಿಸಲಾಯಿತು. ಹೀಗೆಯೇ 1967ರಲ್ಲಿ ಉಪಾಯನ ಎಂಬ ಇನ್ನೊಂದು ಬೃಹತ್ ಅಭಿನಂದನಾ ಗ್ರಂಥವನ್ನು ಅರ್ಪಿಸಲಾಯಿತು. 1967ರಲ್ಲಿ ಮೈಸೂರು ಸರ್ಕಾರ ಇವರಿಗೆ ರಾಜ್ಯ ಪ್ರಶಸ್ತಿಯನ್ನಿತ್ತು ಗೌರವಿಸಿತು. 1969ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಇವರ ಅಪಾರವಾದ ವಿದ್ವತ್ತನ್ನು ಮನ್ನಿಸಿ ಗೌರವ ಡಿ ಲಿಟ್ ಪದವಿಯನ್ನು ನೀಡಿತು. 1971 ಮೇ 8ರಂದು ನಿಧನರಾದರು. *

**ನರಸಿಂಹಾಚಾರ್, ಪು. ತಿ . :** 1905-1998. ಕನ್ನಡದ ನವೋದಯ ಕಾಲದ ಪ್ರಮುಖ ಕವಿಗಳಲ್ಲೊಬ್ಬರು. ಪ್ರಬಂಧಕಾರರು, ನಾಟಕಕಾರರು. ಪುರೋಹಿತ ತಿರುನಾರಾಯಣಯ್ಯಂಗಾರ್ಯ ನರಸಿಂಹಾಚಾರ್ಯ ಎಂಬುದು

ಇವರ ಪೂರ್ಣ ಹೆಸರು. ಪು.ತಿ.ನ. ಇವರ ಕಾವ್ಯನಾಮ. ಇವರು ಮೇಲುಕೋಟೆಯಲ್ಲಿ 1905 ಮಾರ್ಚ್ 17ರಂದು ಜನಿಸಿದರು. ಚಲುವ ನಾರಾಯಣಸ್ವಾಮಿಯ ವೈರಮುಡಿ ಉತ್ಸವದಂದು. ಯದುಗಿರಿಯ ಪ್ರಕೃತಿರಮಣೀಯತೆ, ಚಲುವನಾರಾಯಣ ಸ್ವಾಮಿಯ ದೇಗುಲದ ಸುತ್ತಲೂ ಇರುವ ಉತ್ಸವಸಂಭ್ರಮಗಳು ಹಾಗೂ ಆಸ್ತಿಕ ವಾತಾವರಣ, ಅಲ್ಲದೆ ಪ್ರಸಿದ್ಧ ಪುಣ್ಯಕ್ಷೇತ್ರದಲ್ಲಿ ಜರುಗುತ್ತಿದ್ದ ಸಂಗೀತ ನಾಟಕಾದಿಗಳ ವೈಭವ ಇವೆಲ್ಲ ಇವರ ಬೆಳೆಯುತ್ತಿದ್ದ ಮನಸ್ಸನ್ನು ಸಂಸ್ಕರಿಸಿದ ಶಕ್ತಿಗಳು. ತಮ್ಮ ಹದಿಮೂರನೆಯ ವರ್ಷದವರೆಗೂ ಮೇಲುಕೋಟೆಯಲ್ಲಿ ಮಾಧ್ಯಮಿಕ ಶಾಲೆ ವ್ಯಾಸಂಗದೊಂದಿಗೆ ವೇದ ಹಾಗೂ ಸಂಸ್ಕೃತಗಳನ್ನು ಕಲಿತರು. ಮುಂದೆ ಮೈಸೂರಿನ ಮಹಾರಾಜ ಕೊಲಿಜಿಯೇಟ್ ಹೈಸ್ಕೂಲಿನಲ್ಲಿ ಮತ್ತು ಮಹಾರಾಜ ಕಾಲೇಜುಗಳಲ್ಲಿ ತಮ್ಮ ವ್ಯಾಸಂಗವನ್ನು ಮುಂದುವರಿಸಿ, ಸಂಸ್ಕೃತ ದರ್ಶನದೊಂದಿಗೆ ಇಂಗ್ಲಿಷ್ ಹಾಗೂ ಫ್ರೆಂಚ್ ಭಾಷೆ ಸಾಹಿತ್ಯಗಳನ್ನು ಅಧ್ಯಯನ ಮಾಡಿ ಬಿ.ಎ. ಪದವಿ ಪಡೆದರು (1926).

ಇನ್ಸ್‌ಪೆಕ್ಟರ್ ಆಫ್ ಆಫೀಸ್ ಸಿಸ್ಟಮ್ ಅಂಡ್ ಕೌ ಪ್ರೊಟಕ್ಷನ್ ಎಂಬ ಹುದ್ದೆಗೆ ಆಯ್ಕೆಯಾಗಿ (1926) ಚೀಫ್ ಕಮಾಂಡೆಂಟರ ಕಚೇರಿಯಲ್ಲಿ ತಮ್ಮ ವೃತ್ತಿಜೀವನವನ್ನು ಆರಂಭಿಸಿದ ಇವರು ಅನಂತರ ಮೈಸೂರ್ ಸ್ಟೇಟ್ ಟ್ರೂಪ್ಸ್‌ನಲ್ಲಿ ಸೂಪರಿಂಟೆಂಡೆಂಟ್ ಆಫ್ ಮಿಲಿಟರಿ ಸ್ಟೋರ್ಸ್ ಆಗಿ 1952ರ ವರೆಗೆ ಕೆಲಸ ಮಾಡಿದರು. 1952-61ರ ವರೆಗೂ ಮೈಸೂರು ಶಾಸನಸಭೆಯಲ್ಲಿ ಸಂಪಾದಕರಾಗಿದ್ದರು. 1963-1966ರ ವರೆಗೆ ಆಗ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿದ್ದ ಕನ್ನಡ ವಿಶ್ವಕೋಶದ ಕಚೇರಿಯಲ್ಲಿ ಭಾಷಾಂತರಕಾರರಾಗಿಯೂ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್ ಕನ್ನಡ-ನಿಘಂಟು ಕಚೇರಿಯಲ್ಲಿ ಸಂಪಾದಕರಾಗಿಯೂ (1966-71) ಸೇವೆ ಸಲ್ಲಿಸಿದರು .

ಭಾವಗೀತೆ, ಗೀತನಾಟಕ, ಸಂಗೀತರೂಪಕ, ಭಾವನಾಚಿತ್ರ, ರಸಚಿತ್ರ, ಪ್ರಬಂಧ, ವಿಚಾರಸಾಹಿತ್ಯ, ಸಣ್ಣಕಥೆ, ಗದ್ಯನಾಟಕ - ಹೀಗೆ ಅನೇಕ ಪ್ರಕಾರಗಳಲ್ಲಿ ನರಸಿಂಹಾಚಾರ್ಯರು ಕೃತಿಗಳನ್ನು ರಚಿಸಿದ್ದಾರೆ. ಗೀತನಾಟಕಗಳು ಇವರ ಪ್ರಾತಿನಿಧಿಕ ಪ್ರಕಾರ, ಇವರ ಗೀತನಾಟಕಗಳನ್ನು ಸ್ಥೂಲವಾಗಿ ಸಾಹಿತ್ಯ ಪ್ರಮುಖವಾದುವು, ಸಂಗೀತ ಪ್ರಮುಖವಾದುವು ಎಂದು ವಿಂಗಡಿಸಬಹುದು. ಅಹಲ್ಯೆ, ಶಬರಿ, ವಿಕಟಕವಿ ವಿಜಯ, ಸತ್ಯಾಯನ ಹರಿಶ್ಚಂದ್ರ - ಇವು ಮೊದಲನೆಯ ವರ್ಗಕ್ಕೆ,, ಹಂಸದಮಯಂತಿ ಮತ್ತು ಇತರ ರೂಪಕಗಳು. ರಾಮಪಟ್ಟಾಭಿಷೇಕ - ಇವು ಎರಡನೆಯ ವರ್ಗಕ್ಕೆ ಸೇರುತ್ತವೆ. ಗೋಕುಲ ನಿರ್ಗಮನ, ದೋಣಿಯ ಬಿನದ ಮತ್ತು ಕವಿ - ಈ ನಾಟಕಗಳಲ್ಲಿ ಸಾಹಿತ್ಯ ಮತ್ತು ಸಂಗೀತದ ಸಮ್ಮೇಳನವನ್ನು ಗುರುತಿಸಿಬಹುದು.

ಅಹಲ್ಯೆ (1941) ಶಬರಿ (1946) ಮತ್ತು ಸತ್ಯಾಯನ ಹರಿಶ್ಚಂದ್ರ - ಈ ನಾಟಕಗಳು ವಸ್ತುವಿನ ದೃಷ್ಟಿಯಿಂದ ಪುರಾಣ ವ್ಯಕ್ತಿಗಳನ್ನು ಕುರಿತ, ಬಹುಶಃ ಅವರು ತಮ್ಮ ಜೀವನದಲ್ಲಿ ಕಂಡುಕೊಂಡ ತತ್ತ್ವದ ಅಭಿವ್ಯಕ್ತಿ. ಬಾಳಿನ ಹಂಬಲ ತೀರಿದ ಕೂಡಲೇ ಬಾಳು ಅರ್ಥಹೀನವಾಗುತ್ತದೆ. ಕೃತಕೃತ್ಯ ಚೇತನ ಮುಕ್ತಿಗೆ ಪ್ರಯತ್ನಿಸುತ್ತದೆ. ಎಂಬುದು ಶಬರಿ ನಾಟಕದ ಸಂದೇಶ. ಅಹಲ್ಯೆ ಕನ್ನಡ ಗೀತನಾಟಕ ಪ್ರಪಂಚದಲ್ಲೇ ಅನುಪಮವಾದುದು. ದೋಣಿಯ ಬಿನದ ಮತ್ತು ಕವಿ ಕನ್ನಡಕ್ಕೆ ಹೊಸ ಬಗೆಯ ಕೊಡುಗೆಗಳು. ಪ್ರಕೃತಿ ವಸ್ತುಗಳಿಗೆ ವ್ಯಕ್ತಿರೂಪ ನೀಡಿರುವುದು ಈ ಎರಡು ನಾಟಕಗಳಲ್ಲಿನ ವಿಶೇಷ. ವಸ್ತುವಿನ ದೃಷ್ಟಿಯಿಂದ ವಿಕಟಕವಿ ವಿಜಯ ಮಹತ್ವಪೂರ್ಣವಾದ ಕೃತಿ. ಭಾರತದ ಸ್ವಾತಂತ್ರ್ಯ ಸಂಗ್ರಾಮದ ಸಮಯದಲ್ಲಿ ಬ್ರಿಟಿಷ್ ಕೃಪಾಪೋಷಿತರಾಗಿದ್ದ ದೇಶೀ ಸಂಸ್ಥಾನಾಧೀಶರು ತಮ್ಮ ಎಲ್ಲ ಅಧಿಕಾರಗಳನ್ನೂ ಕಾಂಗ್ರೆಸ್ಸಿಗೆ ವಹಿಸಬೇಕಾದ ಪರಿಸ್ಥಿತಿ ಭಾರತದ ಇತಿಹಾಸದಲ್ಲಿ ಬಹಳ ನಾಜೂಕಾದ ಸಂದರ್ಭ. ಇಂಥ ಸಮಕಾಲೀನ ರಾಜಕೀಯ ಘಟನೆಯನ್ನು ತುಂಬ ನಾಜೂಕಾಗಿ ಈ ನಾಟಕದಲ್ಲಿ ಪು.ತಿ.ನ. ಚಿತ್ರಿಸಿದ್ದಾರೆ.

ಹಣತೆ (1939), ಮಾಂದಳಿರು (1936), ಶಾರದಯಾಮಿನಿ (1944); ಗಣೇಶದರ್ಶನ, ರಸಸರಸ್ವತಿ (1954), ಮಲೆದೇಗುಲ, ಹೃದಯ ವಿಹಾರಿ (1960), ಇರುಳ ಮೆರಗು (1974), ಹಳೆಬೇರು ಹೊಸ ಚಿಗುರು (1981), ಹಣತೆಯ ಹಾಡು (1998), ಪು.ತಿ.ನ. ಸಮಗ್ರ ಕವನಗಳು (1988), ಇದವು ಕವನ ಸಂಕಲನಗಳು. ಇವೇ ಮುಂತಾದ ಭಾವಗೀತ ಸಂಕಲಗಳನ್ನು ನರಸಿಂಹಾಚಾರ್ಯರು ಪ್ರಕಟಿಸಿದ್ದಾರೆ. ನವೋದಯ ಯುಗದಲ್ಲಿ ಸಾಮಾನ್ಯಾವಾಗಿ ಕಾಣುವ ಪ್ರಕೃತಿ, ಪ್ರೇಮ, ಭಕ್ತಿ, ಆಧ್ಯಾತ್ಮಗಳೇ ಇವರ ಕವನಗಳ ವಸ್ತುಗಳು. ಜೊತೆಗೆ ಅಂದಿನ ರಾಷ್ಟ್ರೀಯ ಎಚ್ಚರ ಇವರ ಕವನಗಳಲ್ಲಿ ಸ್ಥಾನ ಪಡೆದಿವೆ. ಸಂಗೀತ ಪ್ರಿಯವಾದ ಇವರ ಮನಸ್ಸು ಹಾಡುಗಳನ್ನು ರಚಿಸಿದೆ. ಹಾಗೆಯೇ ಗೀತನಾಟಕಗಳಲ್ಲಿನ ಶೈಲಿ ಭಾವಗೀತೆಗಳಲ್ಲೂ ಛಾಯೆದೋರಿ ಎಷ್ಟೋ ಕವನಗಳಲ್ಲಿ ಸಂಭಾಷಣೆಗಳನ್ನು ತಂದಿದೆ. ಶರದೃತುವಿನ ನೀಲ ನಿರಾಳ ಆಕಾಶ, ಇರುಳು, ಪರ್ವದಿನಗಳಲ್ಲಿನ ವಿಶೇಷ ವಾತಾವರಣ ಹಾಗೂ ಮೌನ - ಇವು ಇವರು ವಿಶೇಷ ಒಲವು ತೋರಿರುವ ವಸ್ತುಗಳು. ಮೌನದ ಬಗೆಗಿನ ಇವರ ಅನುಭವ ಯದುಗಿರಿಯ ಮೌನವಿಕಾಸ ಎಂಬ ಕವನದಲ್ಲಿ ಸುಂದರವಾಗಿ ಚಿತ್ರಿತವಾಗಿದೆ. ಮಲೆದೇಗುಲ ಇವರ ಭಾವಗೀತ ಪ್ರಪಂಚದಲ್ಲಿ ಪಡೆದ ಸಿದ್ಧಿಯನ್ನು ಪ್ರತಿನಿಧಿಸುವ ಕೃತಿ. ಅತಿಥಿ ಎಂಬುದು ಇವರ ಪ್ರಾತಿನಿಧಿಕ ಕವನಗಳ ಸಂಕಲನ.

ಗದ್ಯಪ್ರಾಚುರ್ಯದ ಕಾಲದಲ್ಲಿ ಗೀತಕ್ಕೆ ಒಲಿದು ತಮ್ಮ ಪ್ರತಿಭೆಯನ್ನು ಮೆರೆಸಿರುವ ನರಸಿಂಹಾಚಾರ್ಯರು, ಗದ್ಯದಲ್ಲಿ ಭಾವನಾಚಿತ್ರ, ಸಣ್ಣಕಥೆ, ಪ್ರಬಂಧ ಹಾಗೂ ಕಾವ್ಯಮೀಮಾಂಸೆಗಳನ್ನು ಕೊಟ್ಟಿದ್ದಾರೆ. ಗದ್ಯನಾಟಕವನ್ನೂ ರಚಿಸಿದ್ದಾರೆ.

ರಾಮಾಚಾರಿಯ ನೆನಪು ಹೆಸರಿಗೆ ತಕ್ಕಂತೆ ನೆನಪುಗಳ ಸಂಕಲನ, ಆದರೆ ಇಲ್ಲಿನ ಚಿತ್ರಣಗಳು ಅಥವಾ ವಿಚಾರಲಹರಿಯನ್ನು ಓದುಗರಿಗೆ ತಲುಪಿಸುವ ಮುನ್ನ ಒಂದು ಸನ್ನಿವೇಶದ ಪರಿವೇಷವನ್ನು ನೀಡುತ್ತಾರೆ; ಪಾತ್ರಗಳನ್ನು ತಂದು ಸಂಭಾಷಣೆಗೆ ತೊಡಗಿಸುತ್ತಾರೆ. ಅಂತೆಯೇ ಅದರ ಸ್ವರೂಪಕ್ಕೆ ಭಾವನಾಚಿತ್ರ ಎಂದು ಹೆಸರಿಟ್ಟಿದ್ದಾರೆ. ಆದರೆ ರಥಸಪ್ತಮಿಯಲ್ಲಿ (1949) ಈ ಪರಿವೇಷ ಹೋಗಿ ಶುದ್ಧ ಚಿತ್ರಗಳನ್ನು ರಚಿಸಿರುವುದನ್ನು ಕಾಣುತ್ತೇವೆ. ಧ್ವಜರಕ್ಷಣೆ ಎಂಟು ಕಥೆಗಳ ಸಂಕಲನ (1949), ವಿಧೇಯನಾಗಿ ಬಾಳುತ್ತಿದ್ದ ಸರ್ಕಾರಿ ನೌಕರ ಒಮ್ಮೆಲೇ ಸನ್ನಿವೇಶ ವಶದಿಂದ ಕಿಡಿಯಂತೆ ಸಿಡಿದು ಹುತಾತ್ಮನಾಗುವುದು ಧ್ವಜರಕ್ಷಣೆಯ ಕಥೆ. ಕೊಳಂದೆಯಂಥ' ವಿಚಿತ್ರ ಪಾತ್ರಗಳು, ರಾಗಿಣಿ ಎಂಬ ಕಥೆಯಲ್ಲಿ ಸಂದಿರುವ ಸಾಮಾಜಿಕ ನ್ಯಾಯ, ಪ್ರಧಾನವೆಂಬ ಕಥೆಯಲ್ಲಿ ಬರುವ ದಾನದ ಮನೋಭಾವದ ಹಿನ್ನೆಲೆ - ಎಲ್ಲವೂ ಮನಸೆಳೆಯುವಂಥವು.

ರಾಮಾಚಾರಿಯ ನೆನಪು; ರಥಸಪ್ತಮಿಗಳಲ್ಲಿನ ಶೈಲಿ, ವಿಚಾರಶಕ್ತಿ ಹಾಗೂ ಸಂಸ್ಕೃತ ಸಾಹಿತ್ಯ ಮತ್ತು ಶಾಸ್ತ್ರಗಳ ಸಂಸ್ಕಾರದಿಂದ ಬಂದಿರುವ ತಾರ್ಕಿಕ ಶಕ್ತಿ, ತಿಳಿಹಾಸ್ಯ, ಲಘುವಿಡಂಬನೆ - ಎಲ್ಲವೂ ಇವರ ಎರಡು ಪ್ರಬಂಧ ಸಂಕಲನಗಳಾದ ಈಚಲುಮರದ ಕೆಳಗೆ (1949) ಹಾಗೂ ಧೇನುಕ ಪುರಾಣಗಳಲ್ಲಿ (1967) ಎದ್ದು ಕಾಣುವ ಅಂಶಗಳು. ಈ ಎರಡೂ ಪ್ರಬಂಧ ಸಂಕಲನಗಳಲ್ಲಿ ದಿನನಿತ್ಯದ ವಸ್ತುಗಳೂ ಸಾಮಾನ್ಯ ಸಂಗತಿಗಳೂ ಇವರ ಕಣ್ಣುಗಳಲ್ಲಿ, ವಿಚಾರದ ಓಟದಲ್ಲಿ ಪಡೆಯುವ ವಿಶೇಷತೆಗಳನ್ನೇ ಅಲ್ಲದೆ ವಿವಿಧ ಪ್ರಕ್ರಿಯೆಗಳ ಬಗ್ಗೆ ತರ್ಕಸ್ಫುರಿತವಾದ ವಿಶೇಷ ಸತ್ಯಗಳನ್ನು ಇವರು ಹೊರಗೆಡಹಿದ್ದಾರೆ.

ಕಾವ್ಯಕುತೂಹಲದಲ್ಲಿ ಕಾವ್ಯಮೀಮಾಂಸೆಗೆ ಕೆಲವು ಸ್ವೋಪಜ್ಞ ವಿಚಾರಗಳನ್ನು ಇವರು ನೀಡಿದ್ದಾರೆ. ಇತ್ತೀಚೆಗೆ ಹರಿಚರಿತಮನನ ಎಂಬ ಮಹಾಕಾವ್ಯವನ್ನೂ ಕಾರಿಕೆ ಎಂಬ ರೂಪಗಳಲ್ಲಿ ರಸಸಮೀಕ್ಷೆ ಎಂಬ ಕಾವ್ಯಮೀಮಾಂಸೆಯನ್ನೂ ಇವರು ರಚಿಸಿದ್ದಾರೆ. ಇವುಗಳಲ್ಲದೆ ಕನ್ನಡ ಭಗವದ್ಗೀತೆ (1957), ಗಯಟೆಯ ಫೌಸ್ಟ್ ಹಾಗೂ ತಿರುವಾಯ್‌ಮೊಳಿಯ ನೂರು ಪದ್ಯಗಳ ಅನುವಾದವನ್ನು ಪದ್ಯಗಳಲ್ಲಿ ಮಾಡಿದ್ದಾರೆ. ಇದಲ್ಲದೆ ಯದುಗಿರಿಯಲ್ಲಿ ಗೆಳೆಯರು (1981) ಎಂಬ ಪುಸ್ತಕವನ್ನು ಪ್ರಕಟಿಸಿರುವರು.

ಕನನಡದ ಹಿರಿಯ ಕವಿಗಳಾದ ನರಸಿಂಹಾಚಾರ್ಯರಿಗೆ ಹಲವು

ಬಗೆಯ ಬಹುಮಾನಗಳು ಬಂದಿವೆ. ಇವರ ಹಂಸದಮಯಂತಿ ಮತ್ತು ಇತರ ರೂಪಕಗಳು ಎಂಬ ಕೃತಿಗೆ ಸಾಹಿತ್ಯ ಅಕಾಡೆಮಿ 1966ರಲ್ಲಿ ಇವರನ್ನು ಸನ್ಮಾನಿಸಿತು. ಮೈಸೂರು ವಿಶ್ವವಿದ್ಯಾನಿಲಯ ಇವರಿಗೆ ಗೌರವ ಡಿ.ಲಿಟ್. ಪ್ರಶಸ್ತಿ ನೀಡಿ ಗೌರವಿಸಿತು. ಕರ್ನಾಟಕ ಸರ್ಕಾರ ಇವರ ಶ್ರೀಹರಿಚರಿತೆ ಕಾವ್ಯಕ್ಕೆ ಪಂಪ ಪ್ರಶಸ್ತಿ ನೀಡಿ ಗೌರವಿಸಿದೆ (1991). ಚಿಕ್ಕಮಗಳೂರಿನಲ್ಲಿ ಜರುಗಿದ 53ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು (1981). 1998 ರಂದು ಅಕ್ಟೋಬರ್ ಬೆಂಗಳೂರಿನಲ್ಲಿ ನಿಧನರಾದರು. ಕನ್ನಡ ಕವಿಗಳು ಇವರನ್ನು ಕುರಿತು ಬರೆದಿರುವ ಪದ್ಯಗಳ ಸಂಕಲನ ಯದುಗಿರಿಯ ವೀಣೆ ಇವರಿಗೆ ಸಮರ್ಪಿತವಾಗಿದೆ. 'ಯದುಗಿರಿ' ಇವರ ಅಭಿನಂದಾನ ಗ್ರಂಥ (1981). ಸು.ರಂ. ಎಕ್ಕುಂಡಿಯವರು ಪು.ತಿ.ನ. ಕುರಿತ ...................... ರಚಿಸಿದ್ದಾರೆ. ಶೇಷಮ್ಮ ಇವರ ಪತ್ನಿ. ಇವರಿಗೆ ಏಳು ಜನ ಹೆಣ್ಣು ಮಕ್ಕಳು ಒಬ್ಬ ಮಗ. (ಎಂ.ಕೆ).

**ನರಸಿಂಹಾಚಾರ್ಯ, ಆರ್. :** 1860-1936, ಕನ್ನಡಕ್ಕೆ ಪುರಸ್ಕಾರವೇ ಇಲ್ಲದಿದ್ದ ಕಾಲದಲ್ಲಿ ಕನ್ನಡ ಭಾಷೆ ಸಾಹಿತ್ಯಗಳ ಅಭಿವೃದ್ಧಿಗಾಗಿ ದುಡಿದ ಮಹನೀಯರಲ್ಲೊಬ್ಬರು. ಕರ್ನಾಟಕ ಕವಿಚರಿತ್ರೆಕಾರರು, ಸಂಶೋಧನೆ, ಗ್ರಂಥಸಂಪಾದನೆ ಮುಂತಾದ ಹಲವು ಕ್ಷೇತ್ರಗಳಲ್ಲಿ ಮೌಲಿಕ ಕೆಲಸ ಮಾಡಿದವರು. ಇವರದು ಪಾಂಡಿತ್ಯ ಮನೆತನ. ಶ್ರೀರಂಗಪಟ್ಟಣದ ಮಂಡ್ಯದ ಕೊಪ್ಪಲಿನಲ್ಲಿ 9-4-1860ರಲ್ಲಿ ಹುಟ್ಟಿದರು. ತಂದೆ ತಿರುನಾರಾಯಣ ಪೆರುಮಾಳ್, ತಾಯಿ ಶಿಂಗಮ್ಮಾಳ್, ತಂದೆಯಿಂದಲೇ ಇವರಿಗೆ ಸಂಸ್ಕೃತದ ಅಭ್ಯಾಸವಾಯಿತು. ತಮಿಳು, ಸಂಸ್ಕೃತ, ಕನ್ನಡ ಭಾಷೆಗಳ ಜೊತೆಗೆ ಶಾಲೆಯಲ್ಲಿ ಇಂಗ್ಲಿಷ್ ಭಾಷೆಯ ಪರಿಚಯವೂ ಆಯಿತು. ಅನಂತರ ಇವರು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಬಿ.ಎ. ಪರೀಕ್ಷೆಯಲ್ಲಿ (1882) ಮೊದಲನೆಯ ದರ್ಜೆಯಲ್ಲಿ ಉತ್ತೀರ್ಣರಾಗಿ ಅನೇಕ ಪಾರಿತೋಷಕಗಳನ್ನು ಪಡೆದರು. ಪದವಿ ಪಡೆದ ತರುಣದಲ್ಲಿ ಚಿಕ್ಕಮಗಳೂರು, ಹಾಸನ, ಶಿವಮೊಗ್ಗಗಳಲ್ಲಿ ಪ್ರೌಢಶಾಲೆಯ ಅಧ್ಯಾಪಕರಾಗಿ ಕೆಲಸ ಮಾಡಿದ ಇವರು ಅನಂತರ ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕರಾದರು. ಇಲ್ಲಿ ಇವರ ಬಹುಮುಖ ಪ್ರತಿಭೆಯ ವಿಕಾಸಕ್ಕೆ ಹೆಚ್ಚು ಅವಕಾಶ ದೊರೆಯಿತು. ಇವರು ಕನ್ನಡ ಮತ್ತು ತಮಿಳು ಭಾಷೆಗಳನ್ನು ಓದಿ 1893ರಲ್ಲಿ ಮದರಾಸು ವಿಶ್ವವಿದ್ಯಾಲಯದ ಕನ್ನಡ ಎಂ.ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಮೊಟ್ಟಮೊದಲನೆಯ ಕನ್ನಡ ಎಂ.ಎ. ಪದವೀಧರರಾದರು. ಕನ್ನಡ ಸಾಹಿತ್ಯ ಸಂಶೋಧನೆಗಳ ಕಡೆಗೆ ಮನಸ್ಸು ಒಲಿದುದರಿಂದ ಇವರ ಕಾರ್ಯಕ್ಷೇತ್ರ ವಿಸ್ತಾರವಾಯಿತು. ವಿದ್ಯಾ ಇಲಾಖೆಯಲ್ಲಿ ಐದು ವರ್ಷಗಳ ಕಾಲ ಕನ್ನಡ ಭಾಷಾಂತರಕಾರರಾಗಿದ್ದು, 1899ರಲ್ಲಿ ಮೈಸೂರಿನ ಪ್ರಾಚ್ಯವಸ್ತು ಸಂಶೋಧನಾ ಇಲಾಖೆಯಲ್ಲಿ ಲೂಯಿರೈಸ್‌ರವರಿಗೆ ಸಹಾಯಕರಾಗಿ ನೇಮಕಗೊಂಡರು. ಲೂಯಿರೈಸರ ಅನಂತರ 1906ರಲ್ಲಿ ಇವರೇ ನಿರ್ದೇಶಕರಾಗಿ ನೇಮಕವಾಗಿ 1922ರ ವರೆಗೆ ದುಡಿದು ಈ ಹುದ್ದೆಯಿಂದ ನಿವೃತ್ತರಾದರು.

ಇವರು ಸು. 16 ವರ್ಷಗಳ ಕಾಲ ಪುರಾತತ್ತ್ವ ಇಲಾಖೆಯ ನಿರ್ದೇಶಕರಾಗಿ ಮಾಡಿದ ಕೆಲಸ ದೊಡ್ಡ ಮಟ್ಟದ್ದು. ಆಗಿನ ಮೈಸೂರು ಸಂಸ್ಥಾನದ ನಾನಾ ಭಾಗಗಳಲ್ಲಿ ಸಂಚರಿಸಿ ಸು. 5,000 ಹೊಸ ಶಾಸನಗಳನ್ನು ಸಂಗ್ರಹಿಸಿದರು. ಹಿಂದು, ಜೈನ ಮತ್ತು ಮಹಮ್ಮದೀಯರಿಗೆ ಸಂಬಂಧಪಟ್ಟ 1,000 ಕಟ್ಟಡಗಳನ್ನು ಪರೀಕ್ಷಿಸಿದರು. 4,100 ನಾಣ್ಯಗಳ ಸಂಶೋಧನೆ, 1,250 ಛಾಯಾಚಿತ್ರಗಳು ಮತ್ತು 120 ನಕ್ಷೆಗಳ ರಚನೆಗಳೂ ಆದುವು. ಅಪರೂಪವಾದ ಸು. 125 ಪ್ರಾಚೀನ ಕನ್ನಡ ಸಂಸ್ಕೃತ ಗ್ರಂಥಗಳನ್ನು ಅವಲೋಕಿಸಿ ಅವುಗಳನ್ನು 100 ಸಂಪುಟಗಳಲ್ಲಿ ಪ್ರತಿ ಮಾಡಿಸಿ ಪ್ರಾಚ್ಯ ಕೋಶಾಗಾರದಲ್ಲಿರಿಸಿದರು. ಎಪಿಗ್ರಾಫಿಯ ಕರ್ನಾಟಿಕದ ವಿಸ್ತಾರವಾದ ಅಕಾರಾದಿ, ಇಲಾಖಾ ವರದಿಗಳ ಅಕಾರಾದಿಗಳನ್ನು ಐತಿಹಾಸಿಕ ಮತ್ತು ಸಾಮಾಜಿಕ ಪ್ರಾಮುಖ್ಯವುಳ್ಳ ಶಾಸನ ಸಂಗ್ರಹಗಳನ್ನೂ ಸಿದ್ಧಪಡಿಸಿದರು. ರೈಸರು ಪ್ರಕಟಿಸಿದ್ದ ಶ್ರವಣಬೆಳಗೊಳದ ಶಾಸನಗಳನ್ನೊಳಗೊಂಡ ಎಪಿಗ್ರಾಫಿಯ ಕರ್ನಾಟಿಕದ ಎರಡನೆಯ ಸಂಪುಟವನ್ನು ಇವರು ಸಂಪೂರ್ಣವಾಗಿ ಪರಿಷ್ಕರಿಸಿದರು. ಮೊದಲು 144 ಇದ್ದ ಶಾಸನಗಳ ಸಂಖ್ಯೆ ಪರಿಷ್ಕೃತ ಆವೃತ್ತಿಯಲ್ಲಿ 500 ಆಯಿತು. ಶ್ರವಣಬೆಳಗೊಳದ ಬಸದಿಗಳ ವಿವರಗಳನ್ನು ಒಳಗೊಂಡ ವಿಸ್ತಾರವಾದ ಮುನ್ನುಡಿಯನ್ನು ಈ ಸಂಪುಟಕ್ಕೆ ಬರೆದರು. ಸೋಮನಾಥಪುರದ ಕೇಶವ, ಬೇಲೂರಿನ ಚೆನ್ನಕೇಶವ, ದೊಡ್ಡಗದ್ದವಳ್ಳಿಯ ಮಹಾಲಕ್ಷ್ಮೀ ದೇವಾಲಯಗಳ ಶಿಲ್ಪಗಳನ್ನು ಪರಿಚಯಿಸುವ ಕೈಪಿಡಿಗಳನ್ನು ಪ್ರಕಟಿಸಿದರು. ಚಂದ್ರವಳ್ಳಿ, ತಲಕಾಡು ಮತ್ತು ಹಳೆಬೀಡುಗಳಲ್ಲಿ ಭೂಶೋಧನೆಗಳನ್ನು ನಡೆಸಿ ರೋಮನ್ನರ ಮತ್ತು ಚೀನಿಯರ ಅನೇಕ ಬಗೆಯ ನಾಣ್ಯಗಳನ್ನು ಸಂಗ್ರಹಿಸಿದರು. ಇವುಗಳ ಜೊತೆಗೆ ಮೈಸೂರು ಸಂಸ್ಥಾನದ ಅನೇಕ ದೇವಾಲಯಗಳು ಮತ್ತು ಪ್ರಾಚೀನ ಶಿಲ್ಪಗಳ ಬಗ್ಗೆ ಸಂಶೋಧನಾತ್ಮಕ ಟಿಪ್ಪಣಿಗಳನ್ನು ಬರೆದಿರುವುದೂ ಇವರ ಬಹುಮುಖ್ಯ ಸಾಧನೆ. ಚಾಳುಕ್ಯ ಶಿಲ್ಪದ ಭಾಗವೆಂದೇ ಅದುವರೆಗೂ ಪರಿಗಣಿಸಲ್ಪಟ್ಟಿದ್ದ ಹೊಯ್ಸಳ ಕಟ್ಟಡಗಳಲ್ಲಿ ಕಂಡುಬರುವ ಶೈಲಿಯ ವಿಶಿಷ್ಟತೆಯನ್ನು ಗುರುತಿಸಿ, ಅದಕ್ಕೆ ಹೊಯ್ಸಳ ಶೈಲಿ ಎಂಬ ಪ್ರತ್ಯೇಕವಾದ ಹೆಸರು ಕೊಟ್ಟ ಕೀರ್ತಿ ಇವರದು. ವಾಸ್ತು, ಶಿಲ್ಪ, ಶಾಸನ ಮತ್ತು ನಾಣ್ಯಗಳನ್ನು ಕುರಿತ ಅನೇಕ ಸಂಶೋಧನ ಲೇಖನಗಳನ್ನು ಮಿಥಿಕ್ ಸೊಸೈಟಿಯ ತ್ರೈಮಾಸಿಕ ಮತ್ತು ಇಂಡಿಯನ್ ಆ್ಯಂಟಿಕ್ವರಿ ಪತ್ರಿಕೆಗಳಲ್ಲಿ ಪ್ರಕಟಿಸಿದರು.

ಇವರು ಪ್ರಕಟಿಸಿರುವ ಕರ್ನಾಟಕ ಕವಿಚರಿತ್ರೆಯ ಮೂರು ಸಂಪುಟಗಳು ಇವರ ಪಾಂಡಿತ್ಯಪರಿಶ್ರಮಗಳಿಗೆ ಸಾಕ್ಷಿಯಾಗಿವೆ. ಸುಮಾರು ಎಂಟನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದ ಅವಧಿಯಲ್ಲಿ ಬಾಳಿದ 1,100ಕ್ಕೂ ಮಿಕ್ಕ ಕನ್ನಡ ಕವಿಗಳು ಮತ್ತು ಅವರ ಕೃತಿಗಳನ್ನು ಕುರಿತ ವಿವರಗಳು ಈ ಸಂಪುಟಗಳಲ್ಲಿವೆ. ಕಾವ್ಯಾವಲೋಕನ, ಭಾಷಾಭೂಷಣ ಮತ್ತು ಶಬ್ದಾನುಶಾಸನಗಳನ್ನು ಸಂಪಾದಿಸಿದ್ದಾರೆ. ನೀತಿಮಂಜರಿ (1911), ನಗೆಗಡಲು (1898), ಶಾಸನಪದ್ಯಮಂಜರಿ (1923) - ಇವು ಇವರ ಇತರ ಕೃತಿಗಳು. ಹಿಸ್ಟರಿ ಆಫ್ ಕನ್ನಡ ಲಿಟರೇಚರ್, ಹಿಸ್ಟರಿ ಆಫ್ ಕನ್ನಡ ಲಾಂಗ್ವೇಜ್ - ಇವು ಇವರು ಇಂಗ್ಲಿಷಿನಲ್ಲಿ ಪ್ರಕಟಿಸಿರುವ ಎರಡು ಗ್ರಂಥಗಳು.

ಭಾರತ ಸರ್ಕಾರದ ಪ್ರಾಚ್ಯ ವಿದ್ಯಾ ಇಲಾಖೆ, ಏಷ್ಯಾಟಿಕ್ ಸೊಸೈಟಿ, ಹೈದರಾಬಾದಿನ ಪ್ರಾಚ್ಯ ವಿದ್ಯಾ ಸಮಿತಿ, ಪ್ಯಾರಿಸ್ಸಿನ ಪ್ರಾಚ್ಯ ವಿದ್ಯಾಸಂಸ್ಥೆ, ಬೆಂಗಳೂರಿನ ಮಿಥಿಕ್ ಸೊಸೈಟಿ ಮುಂತಾದ ಹತ್ತಾರು ದೇಶವಿದೇಶಗಳ ಸಂಘಸಂಸ್ಥೆಗಳೊಂದಿಗೆ ಇವರು ನಿಕಟಸಂಪರ್ಕ ಹೊಂದಿದ್ದರು.

ಇವರು ಸಲ್ಲಿಸಿದ ನಾಡುನುಡಿಗಳ ಸೇವೆಗೆ ಮನ್ನಣೆ ಎಂಬಂತೆ ಹಲವು ಬಗೆಯ ಪ್ರಶಸ್ತಿಗಳೂ ಬಹುಮಾನಗಳೂ ಬಂದುವು. 1907ರಲ್ಲಿ ಇವರಿಗೆ ರಾಯಲ್ ಏಷ್ಯಾಟಿಕ್ ಸೊಸೈಟಿಯ ಗೌರವ ಸದಸ್ಯತ್ವ ದೊರೆಯಿತು. 1913ರಲ್ಲಿ ಆಗಿನ ಮೈಸೂರು ಮಹಾರಾಜರು ಪ್ರಾಕ್ತನ ವಿಮರ್ಶವಿಚಕ್ಷಣ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿದರು. 1916ರಲ್ಲಿ ಬ್ರಿಟಿಷ್ ಸರ್ಕಾರದಿಂದ ರಾವ್‌ಬಹದ್ದೂರ್ ಪ್ರಶಸ್ತಿ ಬಂತು. ಕಲ್ಕತ್ತದ ಅಖಿಲಭಾರತ ಸಾಹಿತ್ಯ ಸಂಘ 1924ರಲ್ಲಿ ಇವರಿಗೆ ಪ್ರಾಚ್ಯ ವಿದ್ಯಾವೈಭವ ಎಂಬ ಬಿರುದನ್ನಿತ್ತು ಸನ್ಮಾನಿಸಿತು. 1934ರಲ್ಲಿ ಕೇಂದ್ರ ಸರ್ಕಾರ ಮಹಾಮಹೋಪಾಧ್ಯಾಯ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿತು. ಧಾರವಾಡದಲ್ಲಿ 1918ರಲ್ಲಿ ನಡೆದ 4ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಇವರು ಅಧ್ಯಕ್ಷರಾಗಿದ್ದರು. ಕನ್ನಡ ಸಾಹಿತ್ಯ ಪರಿಷತ್ತು ಇವರನ್ನು ಕುರಿತು ಒಂದು ಜೀವನ ಚರಿತ್ರೆಯನ್ನು ಪ್ರಕಟಿಸಿದೆ. 1936 ಡಿಸೆಂಬರ್ 6ರಂದು ನಿಧನಹೊಂದಿದರು. (ಎನ್.ಎ.ಆರ್.)

**ನರಸಿಂಹಾಚಾರ್ಯ, ಎಸ್.ಜಿ. :** 1862-1907. ಹೊಸಗನ್ನಡ ಅರುಣೋದಯ ಕಾಲದ ಪ್ರಸಿದ್ಧ ವಿದ್ವಾಂಸರು. ಸಂಸ್ಕೃತ, ತಮಿಳು ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪಾಂಡಿತ್ಯ ಗಳಿಸಿದ್ದ ಇವರು ಅನೇಕ ಪ್ರಾಚೀನ ಹಸ್ತಪ್ರತಿಗಳನ್ನು ಸಂಪಾದಿಸಿ ಪರಿಷ್ಕರಿಸಿ ಪ್ರಕಟಿಸಿದರು. ಜನ್ಮಸ್ಥಳವಾದ ಶ್ರೀರಂಗಪಟ್ಟಣದಲ್ಲಿ ಅನಂತರ ಮೈಸೂರಿನಲ್ಲಿ ವ್ಯಾಸಂಗ

ಮಾಡಿ, ಶ್ರೀರಂಗಪಟ್ಟಣದಲ್ಲಿ ಕೆಲವು ವರ್ಷಗಳ ಕಾಲ ಉಪಾಧ್ಯಾಯರಾಗಿದ್ದರು. ಅನಂತರ ವಿದ್ಯಾಭ್ಯಾಸದ ಇಲಾಖೆಯಲ್ಲಿ ಭಾಷಾಂತರ ಕಾರರಾಗಿಯೂ ಮೈಸೂರು ಪ್ರಾಚ್ಯ ಸಂಶೋಧನಾ ಸಂಸ್ಥೆಯಲ್ಲಿ ಪಂಡಿತರಾಗಿಯೂ ಕೆಲಸ ಮಾಡಿದರು.

1892ರಲ್ಲಿ ಎಂ.ಎ. ರಾಮಾನುಜಯ್ಯಂಗಾರ್ಯರ ಜೊತೆಯಲ್ಲಿ ಇವರು ಕರ್ನಾಟಕ ಕಾವ್ಯಮಂಜರಿ ಎಂಬ ಮಾಸಪತ್ರಿಕೆಯನ್ನು ಪ್ರಾರಂಭಿಸಿ ಅದರಲ್ಲಿ ಅನೇಕ ಹಳಗನ್ನಡ ಮತ್ತು ನಡುಗನ್ನಡ ಗ್ರಂಥಗಳನ್ನು ಭಾಗಶಃ ಪ್ರಕಟಿಸಿದರು. ನಶಿಸಿಹೋಗುತ್ತಿದ್ದ ಅನೇಕ ಪ್ರಾಚೀನ ಹಸ್ತಪ್ರತಿಗಳನ್ನು ಸಂಗ್ರಹಿಸಲು ಇವರು ಪಟ್ಟ ಶ್ರಮ ಸ್ಮರಣೀಯ. ಕಾವ್ಯಮಂಜರಿ ಕಾರಣಾಂತರಗಳಿಂದ ನಿಂತುಹೋದ ಮೇಲೆ ಇವರು ಮತ್ತೆ ರಾಮಾನುಜಯ್ಯಂಗಾರ್ಯರೊಡನೆ ಕರ್ನಾಟಕ ಕಾವ್ಯ ಕಲಾನಿಧಿ ಎಂಬ ಹೊಸ ಮಾಸಪತ್ರಿಕೆಯನ್ನು 1899ರಲ್ಲಿ ಪ್ರಾರಂಭಿಸಿದರು. ಈ ಕಾವ್ಯಮಾಲೆಯಲ್ಲಿ ಆದಿಕಾಲದಿಂದ 20ನೆಯ ಶತಮಾನದ ವರೆಗಿನ ಅನೇಕ ಕನ್ನಡ ಕವಿಗಳ ಚೊಂಪೂ, ಗದ್ಯ, ಪದ್ಯ, ನಾಟಕ, ಕೀರ್ತನೆ, ಶತಕ, ನಿಘಂಟು, ಛಂದಸ್ಸು, ವ್ಯಾಕರಣ ಮತ್ತು ಅಲಂಕಾರಶಾಸ್ತ್ರಗಳನ್ನೊಳಗೊಂಡ ಸುಮಾರು 75 ಉದ್ಗ್ರಂಥಗಳು ಪ್ರಕಟವಾದವು. ಈ ಪ್ರೌಢ ಗ್ರಂಥಗಳನ್ನು ಪರಿಷ್ಕರಿಸುವುದರಲ್ಲಿಯೂ ವಿಮರ್ಶಿಸುವುದರಲ್ಲಿಯೂ ಇವರ ಪ್ರತಿಭಾ ಪಾಂಡಿತ್ಯಗಳು ಪ್ರದರ್ಶಿತವಾಗಿವೆ. ಕರ್ನಾಟಕ ಕವಿಚರಿತೆಯ ಪ್ರಥಮ ಸಂಪುಟದ ರಚನೆಯಲ್ಲಿ ಆರ್. ನರಸಿಂಹಾಚಾರ್ಯರಿಗೆ ಇವರು ಸಹಾಯಕರಾಗಿದ್ದರು.

ನರಸಿಂಹಾಚಾರ್ಯರು ಸಂಸ್ಕೃತ ಮತ್ತು ಇಂಗ್ಲಿಷಿನಿಂದ ಅನೇಕ ಕಾವ್ಯಗಳನ್ನೂ ಗ್ರಂಥಗಳನ್ನೂ ಕನ್ನಡಕ್ಕೆ ಸರಳವಾಗಿಯೂ ಸುಂದರವಾಗಿಯೂ ಭಾಷಾಂತರಿಸಿದ್ದಾರೆ. ಕಾಳಿದಾಸನ ರಘುವಂಶದ ಕೆಲವು ಸರ್ಗಗಳ ಪದ್ಯಾನುವಾದವಾಗಿರುವ ಅಜನೃಪಚರಿತೆ ಮತ್ತು ದಿಲೀಪಚರಿತೆಗಳು ಇವರ ಉತ್ತಮ ಅನುವಾದಕಲೆಗೆ ಸಾಕ್ಷಿಯಾಗಿವೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳ ವಿದ್ಯಾರ್ಥಿಗಳಿಗಾಗಿ ಮನರಂಜಕವೂ ಬೋಧಪ್ರದವೂ ಆದ ಅನೇಕ ಪಠ್ಯಪುಸ್ತಕಗಳನ್ನು ಇವರು ಸಿದ್ಧಪಡಿಸಿದರು. ಆ ಪಠ್ಯಪುಸ್ತಕಗಳಿಗಾಗಿ ಇಂಗ್ಲಿಷಿನ ಸರಳ ರಗಳೆಯ ಅನೇಕ ಪದ್ಯಗಳನ್ನು ಕನ್ನಡಕ್ಕೆ ಭಾಷಾಂತರಿಸಿದರಲ್ಲದೆ ಸ್ವತಃ ಹೊಸ ಮಾದರಿಯ ಅನೇಕ ಕವನಗಳನ್ನೂ ರಚಿಸಿದರು. ಅಂಥವುಗಳಲ್ಲಿ ನಕ್ಷತ್ರ (ಮಿರುಮಿರುಗುತಿ ಹಾಕಿರುತಾರಣಿಯೆ), ಬಿಡುವು (ಬಾರೋ ನಾವಾಡುವ ಬಾರೊ), ಗೋವಿನ ಬಾಳು (ಇಟ್ಟರೆ ಸಗಣಿಯಾದೆ), ಕಾವೇರಿಯ ಮಹಿಮೆ (ನೋಡು ಕಾವೇರಿಯು), ನೇಗಿಲು ಮಕ್ಕಳು ಮಲಗುವ ಹೊತ್ತು, ಹೊಗೆಯ ಗಾಡಿ ಮುಂತಾದವು ಜನಪ್ರಿಯವಾಗಿವೆ. ಇವರ ಪಾಂಡಿತ್ಯಕ್ಕೆ ಮೆಚ್ಚಿ ಆಗಿನ ಮದರಾಸು ಸರ್ಕಾರದ ಶಿಕ್ಷಣ ಇಲಾಖೆಯ ಇನ್‌ಸ್ಪೆಕ್ಟರಾಗಿದ್ದ ಮಾರ್ಸಡನ್ ಎಂಬುವರು ಇಂಗ್ಲಿಷಿನಲ್ಲಿ ತಾವು ರಚಿಸಿದ ಬುಕ್ಸ್‌ಫಾರ್ ದಿ ಬ್ರೇನ್ಸ್ ಎಂಬ ಕೃತಿಗಳನ್ನು ಇವರಿಂದ ಕನ್ನಡಕ್ಕೆ ಭಾಷಾಂತರ ಮಾಡಿಸಿದರಂತೆ. ಇವರ ಇತರ ಕೃತಿಗಳಲ್ಲಿ ಹಿಂದೂ ದೇಶದ ಚರಿತ್ರೆ, ಅಲ್ಲಾವುದ್ದೀನನ ಅದ್ಭುತ ದೀಪ, ಈಸೋಪನ ಕಥೆಗಳು, ಗಲಿವರನ ದೇಶಸಂಚಾರ, ಭಾರತವೀರ ಚರಿತೆ ಮೊದಲಾದವು ಮುಖ್ಯವಾದುವು. ಪದ್ಯಸಾರದ ಎರಡು ಭಾಗಗಳನ್ನು ಇವರು ಸಂಗ್ರಹಿಸಿದ್ದಾರೆ. ಉತ್ತರರಾಮಚರಿತೆಯ ಮೂರು ಅಂಕಗಳನ್ನೂ ಭಾಷಾಂತರಿಸಿದ್ದರೆಂದು ಪ್ರತೀತಿ. ಇವರು ರಚಿಸಿದ್ದರೆನ್ನಲಾಗಿರುವ ಅನೇಕ ಕೃತಿಗಳು ಇನ್ನೂ ಸಿಕ್ಕಿಲ್ಲ.

ಧಾರವಾಡದಲ್ಲಿ 1907ರಲ್ಲಿ ನಡೆದ ಅಖಿಲ ಕರ್ನಾಟಕ ಗ್ರಂಥಕರ್ತರ ಪ್ರಥಮ ಸಮ್ಮೇಳನಕ್ಕೆ ಇವರು ಅಧ್ಯಕ್ಷರಾಗಿದ್ದರು.

ಇದು ಕರ್ನಾಟಕದಲ್ಲಿ ಜರುಗಿದ ಮೊದಲ ಸಾಹಿತ್ಯ ಸಮ್ಮೇಳನವೆನ್ನಬಹುದು. (ಎಸ್.ಎ.ಆರ್.)

**ನರಹರಿತೀರ್ಥ :** ಸು. 1280. ಪ್ರಸಿದ್ಧ ಹರಿದಾಸರು. ಮಧ್ವಾಚಾರ್ಯರ ಶಿಷ್ಯರಲ್ಲಿ ಪ್ರಮುಖರು. ಇವರ ಪೂರ್ವಾಶ್ರಮದ ಹೆಸರು ಶ್ಯಾಮಶಾಸ್ತ್ರೀ. ಮೊದಲಿಗೆ ಈ ಹೆಸರಿನಿಂದ ಇವರು ಒರಿಸ್ಸಾದ ಗಜಪತಿ ರಾಜನಲ್ಲಿ ಅಧಿಕಾರಿಯಾಗಿದ್ದರೆಂದು ತಿಳಿದುಬರುತ್ತದೆ. ಮಧ್ವಾಚಾರ್ಯರು ಬದರಿಯ ಯಾತ್ರೆ ಮುಗಿಸಿ ಒರಿಸ್ಸಾಕ್ಕೆ ಬಂದಾಗ ಇವರು ಅವರ ಪಾಂಡಿತ್ಯ ಉಪದೇಶಗಳಿಗೆ ಮನಸೋತು ಶಿಷ್ಯರಾಗಿ ಸಂನ್ಯಾಸ ಸ್ವೀಕರಿಸಿ ನರಹರಿತೀರ್ಥರಾದರು. ಅನಂತರ ತಮ್ಮ ಗುರುವಿನ ಅಪ್ಪಣೆಯಂತೆ ಒರಿಸ್ಸಾದ ರಾಜಧಾನಿಯಲ್ಲೇ ನಿಂತರು. ಕೆಲಕಾಲಾನಂತರ ಗಜಪತಿರಾಜ ಗರ್ಭಿಣಿಯಾಗಿದ್ದ ಹೆಂಡತಿಯನ್ನು ಬಿಟ್ಟು ನಿಧನನಾಗಲು ಇವರು ಅರಸುಕುಮಾರ ಹುಟ್ಟಿ ಪ್ರಾಪ್ತವಯಸ್ಕನಾಗುವವರೆಗೆ ಅಲ್ಲಿಯೇ ರಾಜ್ಯವಾಳುತ್ತಿದ್ದರು. ಅನಂತರ ರಾಜ್ಯವನ್ನು ಹಕ್ಕುದಾರನಿಗೆ ವಹಿಸಿಕೊಟ್ಟು ಮಧ್ವಾಚಾರ್ಯರ ಅಪೇಕ್ಷೆಯಂತೆ ರಾಜನ ಬೊಕ್ಕಸದಲ್ಲಿದ್ದ ರಾಮಸೀತೆಯರ ಮೂಲ ವಿಗ್ರಹಗಳನ್ನು ರಾಜನಿಂದ ಪಡೆದು, ಅವನ್ನು ಗುರುಗಳಿಗೆ ಒಪ್ಪಿಸಿದರಂತೆ. ಮಧ್ವಾಚಾರ್ಯರ ತರುವಾಯ ಮಠಾಧಿಪತಿಗಳಾಗಿ ಬಂದ ಪದ್ಮನಾಭತೀರ್ಥರು ವೃಂದಾವನಸ್ಥರಾದ ಮೇಲೆ ಇವರು ಸು. 1324ರಿಂದ 1333ರ ವರೆಗೆ ಪೀಠಾಧಿಪತ್ಯವನ್ನು ವಹಿಸಿಕೊಂಡುದಾಗಿ ತಿಳಿದುಬರುತ್ತದೆ. ಆಂಧ್ರಪ್ರದೇಶದ ಶ್ರೀಕೂರ್ಮಂನಲ್ಲಿ ಇವರಿಗೆ ಸಂಬಂಧಿಸಿದ ಕೆಲವು ಶಾಸನಗಳು ದೊರಕಿವೆ. ಇವರು ಸಂಸ್ಕೃತದಲ್ಲಿ ಉದ್ದಾಮಪಂಡಿತರೆನಿಸಿದ್ದು, ಹದಿನೈದು ಗ್ರಂಥಗಳನ್ನು ರಚಿಸಿದುದಾಗಿ ತಿಳಿದುಬರುತ್ತದೆ.

ಸಂಸ್ಕೃತದಲ್ಲೇ ಅಲ್ಲದೆ ಕನ್ನಡದಲ್ಲೂ ಹರಿಕೀರ್ತನೆಗಳನ್ನು ರಚಿಸಿ, ಆ ಮೂಲಕ ಜನರಲ್ಲಿ ದ್ವೈತಮತವನ್ನು ಪ್ರಚಾರಮಾಡುತ್ತ ಅನೇಕ ಕ್ಷೇತ್ರಯಾತ್ರೆಗಳನ್ನು ಮಾಡಿದಂತೆ ಕಂಡುಬರುತ್ತದೆ. ಹರಿದಾಸ ಸಾಹಿತ್ಯಕ್ಕೆ ಮಧ್ವಾಚಾರ್ಯರ ದ್ವಾದಶಸ್ತೋತ್ರ ಒಂದು ಪ್ರೇರಣಾಸ್ತೋತ್ರವಾದರೆ ನರಹರಿತೀರ್ಥರ ಕನ್ನಡ ಕೀರ್ತನೆಗಳು ಹರಿಕೀರ್ತನೆಗಳಿಗೆ ಮೂಲಪ್ರೇರಕ ಶಕ್ತಿಗಳಾದವು. ಇವರ ಕಾಲದಿಂದ ಮುಂದೆ ಒಂದು ಶತಮಾನಕ್ಕಿಂತಲೂ ಹೆಚ್ಚು ಕಾಲ ಹರಿದಾಸರ ಕೀರ್ತನೆಗಳು ಕಂಡುಬರದಿರುವುದರಿಂದಲೂ ನರಹರಿತೀರ್ಥರ ಎರಡು ಕೀರ್ತನೆಗಳು ಮಾತ್ರ ಈಗ ಉಪಲಬ್ಧವಾಗಿರುವುದರಿಂದಲೂ ಹರಿದಾಸರಲ್ಲಿ ಇವರು ಆದ್ಯರೆಂಬುದನ್ನು ಒಪ್ಪದೆ ಹದಿನೈದನೆಯ ಶತಮಾನದಲ್ಲಿ ಕಂಡಬರುವ ಶ್ರೀಪಾದರಾಯರು ಹರಿದಾಸಪಂಥದ ಮೂಲಪುರುಷರೆಂದು ಕೆಲವರು ಭಾವಿಸುತ್ತಾರೆ. ಕೀರ್ತನೆಗಳ ರಚನೆ ಕನ್ನಡದಲ್ಲಿ ಆ ಕಾಲಕ್ಕೆ ಇನ್ನೂ ಹೊಸದಾದ್ದರಿಂದ, ಈ ಹೊಸ ಪ್ರಕಾರಕ್ಕೆ ಇನ್ನೂ ನಿಶ್ಚಿತವಾದ ನೆಲೆಬೆಲೆಗಳಾವುವೂ ಕಂಡುಬರದೆ ಇದ್ದುದರಿಂದ, ಮುಂದಿನವರು ವಾದಿನಿಗ್ರಹ ಕಾರ್ಯಗಳಲ್ಲಿ ತೊಡಗಬೇಕಾದುದರಿಂದ, ಮಠಾಧಿಪತಿಗಳ ಕಾರ್ಯ ಸಾಂಪ್ರದಾಯಿಕವಾಗಿ ಸಂಸ್ಕೃತದಲ್ಲಿ ನಡೆಯುತ್ತಿದ್ದುದರಿಂದ ಹರಿದಾಸ ಕೀರ್ತನೆಗಳ ಗಾನವಾಹಿನಿ ಅನೇಕ ದಿನ ಗುಪ್ತಗಾಮಿನಿಯಾಗಿಯೇ ಉಳಿಯಬೇಕಾಯಿತು. ಆದರೆ ಜನರ ಆಡುಮಾತಿನಲ್ಲಿಯೇ, ಕನ್ನಡದಲ್ಲಿಯೇ ತಮ್ಮ ಹೃದಯಾನುಭವಗಳನ್ನು ಪರಮಾತ್ಮನಲ್ಲಿ ನಿವೇದಿಸಿಕೊಂಡು ಕೃತಾರ್ಥರಾಗಬಹುದು ಎಂದು ಸೂಕ್ತ ಪ್ರಜ್ಞೆ ಮೊದಲಿಗೆ ಉದಿಸಿದ್ದು ನರಹರಿತೀರ್ಥರಲ್ಲಿ.

ಸದ್ಯದಲ್ಲಿ ದೊರಕಿರುವ ಇವರ ಎರಡು (ಕೆಲವರು ಹೇಳುವಂತೆ ಮೂರು) ಕೀರ್ತನೆಗಳ ತಿರುಳನ್ನು ಗಮನಿಸಿದರೆ ದಾಸಸಾಹಿತ್ಯದ ಮುಖ್ಯಲಕ್ಷಣಗಳು ವಿದಿತವಾಗುತ್ತವೆ. ಭಗವಂತನ ಸಾನ್ನಿಧ್ಯದಲ್ಲಿ ಚಿಂತನಪರರಾದ ದಾಸರು ತಮ್ಮನ್ನು ತಾವೇ ಶೋಧಿಸಿಕೊಂಡು, ತಮ್ಮ ಮನಃಸ್ಥಿತಿಯನ್ನು ಎಂತು ಮರುಳಾದೆ ನಾನು ಎಂತು ಮರುಳಾದೆ ಎಂಬ ಕೀರ್ತನೆಯಲ್ಲಿ ಪರಮಾತ್ಮನಲ್ಲಿ ಬಿನ್ನವಿಸಿಕೊಳ್ಳುತ್ತಾರೆ. ಹರಿಯೇ ಇದು ಸರಿಯೆ ಎಂಬ ಕೀರ್ತನೆಯಲ್ಲಿ ಭಕ್ತನೊಬ್ಬನ ಮನಸ್ಸಿನಹೊಯ್ದಾಟ ಎದ್ದುಕಾಣುತ್ತದೆ. ಆತ್ಮಪರಿಪಾಕಕ್ಕಾಗಿ ಸಂತತವೂ ಪರಿತಪಿಸುವ ಈ ಚಿತ್ತವೃತ್ತಿ ದೈವಭಕ್ತನ ವಾಣಿಗೆ ಪ್ರೇರಣೆ ನೀಡುತ್ತದೆ. ಇಷ್ಟದೇವತೆಯ ಅನುಗ್ರಹ ವಿಳಂಬವಾಗಲು ಅದರ ಮೊರೆ ಮಿಗಿಲಾಗುತ್ತದೆ. ಈ ಹಂಬಲ ವ್ಯಾಕುಲಗಳು ಹಾಡಾಗಿ ಮೂರ್ತಗೊಂಡಿವೆ. ಈ ಕೀರ್ತನೆಗಳು ಹರಿದಾಸ ಸಾಹಿತ್ಯದ ಅರುಣೋದಯದ ಕಿರಣಗಳಂತಿವೆ. (ಪಿ.ವಿ.ಪಿ.)

**ನರೇಗಲ್ಲ :** ಗದಗ ಜಿಲ್ಲೆ ರೋಣ ತಾಲ್ಲೂಕಿನ ಒಂದು ಪಟ್ಟಣ. ಗದಗ-ಗಜೇಂದ್ರ ಗಡ ಹೆದ್ದಾರಿ ಮಧ್ಯದಲ್ಲಿರುವ ಈ ಪಟ್ಟಣ ರೋಣಕ್ಕೆ ಆಗ್ನೇಯ ದಿಕ್ಕಿನಲ್ಲಿ 18 ಕಿಮೀ ಮತ್ತು ಗದಗ ಪಟ್ಟಣಕ್ಕೆ ಈಶಾನ್ಯದಲ್ಲಿ

27 ಕಿಮೀ ದೂರದಲ್ಲಿದೆ. ಜನಸಂಖ್ಯೆ 16,652.

ನರೇಗಲ್ಲ ಪಟ್ಟಣ ಪುರಸಭಾಡಳಿತಕ್ಕೆ ಒಳಪಟ್ಟಿದೆ. ಪಟ್ಟಣದಲ್ಲಿ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲೆಗಳಿದ್ದು ಕಲಾ ಮತ್ತು ವಿಜ್ಞಾನ ಕಾಲೇಜು ಸಹ ಇದೆ. ಪ್ರವಾಸಿಮಂದಿರ, ಬ್ಯಾಂಕುಗಳು, ವಾಚನಾಲಯಗಳು, ಕೃಷಿಪತ್ತಿನ ಸಂಘಗಳು, ಮರ ಕೊಯ್ಯುವ ಕಾರ್ಖಾನೆ, ಎಣ್ಣೆ ಮತ್ತು ಹತ್ತಿ ಗಿರಣಿಗಳು ಇವೆ. ಪಶುವೈದ್ಯಾಲಯ, ಆರೋಗ್ಯ ಕೇಂದ್ರ, ಅಂಚೆ ಮತ್ತು ದೂರವಾಣಿ, ವಿದ್ಯುತ್ ಮುಂತಾದ ಸೌಕರ್ಯಗಳಿವೆ.

ನರೇಗಲ್ಲದಲ್ಲಿ 10-14ನೆಯ ಅವಧಿಗೆ ಸೇರುವ ಹತ್ತು ಶಿಲಾಶಾಸನಗಳಿವೆ. ಆ ಕಾಲದಲ್ಲಿ ನರೇಗಲ್ಲ - 12 ಎಂಬ ವಿಭಾಗದ ಮುಖ್ಯ ಪಟ್ಟಣವಾಗಿತ್ತು. ಈ ಪ್ರದೇಶ ಹನ್ನೆರಡನೆಯ ಶತಮಾನದಲ್ಲಿ ಯಲಬುರ್ಗಿಯ ಸಿಂಧರ ಅಧೀನದಲ್ಲಿತ್ತೆಂದು ತಿಳಿದುಬರುತ್ತದೆ.

ನರೇಗಲ್ಲದಲ್ಲಿ ಕಲ್ಯಾಣ ಚಾಳುಕ್ಯ ಶೈಲಿಯ ತ್ರಿಪುರಾಂತಕೇಶ್ವರ, ಸೋಮೇಶ್ವರ, ಕಲ್ಮೇಶ್ವರ, ಚಂದ್ರಮೌಳೀಶ್ವರ ಮತ್ತು ಹತ್ತಿರದ ಕೋಡಿಕೊಪ್ಪದಲ್ಲಿ ಮಲ್ಲಬ್ರಹ್ಮದೇವ ಎಂಬ ದೇವಾಲಯಗಳಿವೆ. ಅವುಗಳಲ್ಲಿ ಸೋಮೇಶ್ವರ ದೇವಾಲಯ ಅತ್ಯಂತ ಸುಂದರವೂ ಮತ್ತು ದೊಡ್ಡದೂ ಆಗಿದೆ. ಅದರಲ್ಲಿ ಎರಡು ಭಾಗಗಳಿವೆ. ಅಲ್ಲಿ ಬುಡದಿಂದ ತುದಿಯ ವರೆಗೆ ನಕ್ಷತ್ರಾಕಾರವಾಗಿ ಕೆತ್ತಿ ಮಾಡಿದ ಅನೇಕ ಸುಂದರವಾದ ಕಲ್ಲಿನ ಕಂಬಗಳಿವೆ. ಹಿಂದೆ ಈಶ್ವರಲಿಂಗದ ಗದ್ದುಗೆ ಇದೆ. ಮೊದಲನೆಯ ಭಾಗದ ಎರಡೂ ಬದಿಗಳಲ್ಲಿ ಗೋಡೆಯಷ್ಟು ಉದ್ದವಾದ ಎರಡು ಕಟ್ಟೆಗಳಿವೆ. ಆ ಕಟ್ಟೆಗಳ ಮೇಲ್ಬದಿಯಲ್ಲಿರುವ ಚೌಕು ಕುಳಿಗಳಲ್ಲಿ ಕೂಡಿರುವ ಅನೇಕ ಪ್ರತಿಮೆಗಳ ಸಾಲುಗಳಿವೆ. ಪಶ್ಚಿಮ ಬದಿಯ ಕಟ್ಟೆಯ ಮಧ್ಯದಲ್ಲಿ ವಿವಿಧ ಭಂಗಿಯಲ್ಲಿಯ ನಾರಾಯಣನ ಎರಡು ಮೂರ್ತಿಗಳಿವೆ. ಅದರಂತೆ ಪೂರ್ವ ಬದಿಯ ಕಟ್ಟೆಯ ಮಧ್ಯದಲ್ಲಿ ಈಶ್ವರ ಲಿಂಗವಿದೆ. ಉಳಿದ ನಾಲ್ಕು ದೇವಾಲಯಗಳ ಪೈಕಿ ಚಂದ್ರಮೌಳೀಶ್ವರ ದೇವಾಲಯ ಹಾಳು ಸ್ಥಿತಿಯಲ್ಲಿದೆ. ಈ ದೇವಾಲಯಗಳ ಹೊರತಾಗಿ ದೊಡ್ಡ ಪ್ರಮಾಣದಲ್ಲಿ ಅಂದವಾಗಿ ಕಟ್ಟಿಸಿದ ವೀರಭದ್ರ, ದುರ್ಗಾದೇವಿ, ದತ್ತಾತ್ರೇಯ, ಆಂಜನೇಯ ಮತ್ತು ಮಲ್ಲಿಕಾರ್ಜುನ ದೇವಾಲಯಗಳಿವೆ. ಬಿಜಾಪುರದ ಗೋಳಗುಮ್ಮಟವನ್ನು ನೆನಪಿಗೆ ತರುವ ಭವ್ಯವೂ ಸುಂದರವೂ ಆದ ಒಂದು ದರ್ಗಾ ಇದೆ. ಇದನ್ನು ಒಬ್ಬ ಸುಣ್ಣಗಾರ ಮುದುಕಿ ಕಟ್ಟಿಸಿದ್ದಳೆಂದು ಹೇಳಲಾಗುತ್ತದೆ. ಇವುಗಳಲ್ಲದೆ ವಿರಕ್ತ ಮಠ, ವೀರಪ್ಪಜ್ಜನ ಮಠ, ಅನ್ನದಾನೇಶ್ವರ ಮಠ, ಹಿರೇಮಠ ಎಂಬ ಹಲವಾರು ಮಠಗಳಿವೆ. ಪ್ರತಿವರ್ಷ ಮಾಘಮಾಸದಲ್ಲಿ ಶಿವರಾತ್ರಿ ದಿನ ಕೋಡಿಕೊಪ್ಪದ ವೀರಪ್ಪಜ್ಜನ ಜಾತ್ರೆಯಾಗುತ್ತದೆ. ಆ ದಿನ ದನಗಳ ಪ್ರದರ್ಶನವೂ ನಡೆಯುತ್ತದೆ. (ಎಸ್.ಎಸ್.ಎನ್.)

**ನರ್ಮದಾ :** 1943- . ಪ್ರಸಿದ್ಧ ನೃತ್ಯ ಕಲಾವಿದೆ. 1943 ರಲ್ಲಿ ಜನಿಸಿದರು.ತಂದೆ ಕೆ.ರಾಮರಾವ್, ತಾಯಿ ಶಕುಂತಲಾಬಾಯಿ. ಬಾಲ್ಯದಿಂದಲೆ ನೃತ್ಯದಲ್ಲಿ ವಿಶೇಷ ಒಲವು ಬೆಳೆಸಿಕೊಂಡ ಇವರಿಗೆ ಹೆಚ್ಚಿನ ಪ್ರೋತ್ಸಾಹ ನೀಡಿದವರು ಸ್ವತಃ ಸಂಗೀತ ವಿದುಷಿ, ವೀಣಾವಾದಕಿಯಾಗಿದ್ದ ತಾಯಿ ಶಕುಂತಲಾಬಾಯಿ. ಸನಾತನ ನೃತ್ಯಾಲಯದ ಕೌಶಿಕ್‌ರಲ್ಲಿ ಭರತನಾಟ್ಯ ಕಲಿಕೆ ಪ್ರಾರಂಭಿಸಿದರು. ಅನಂತರ ತಂಜಾವೂರಿನ ವಿದ್ವಾನ್ ಕಿಟ್ಟಪ್ಪಪಿಳ್ಳೆಯವರಲ್ಲಿ ಹೆಚ್ಚಿನ ಪರಿಣತಿ ಗಳಿಸಿದರು. 10 ವರ್ಷದ ಬಾಲಕಿಯಾಗಿದ್ದಾಗಲೆ ಬೆಂಗಳೂರಿನ ಟೌನ್‌ಹಾಲ್‌ನಲ್ಲಿ ರಂಗಪ್ರವೇಶ ಮಾಡಿದರು (1953). ದೇಶದಾದ್ಯಂತ ನೂರಾರು ನೃತ್ಯ ಪ್ರದರ್ಶನಗಳನ್ನು ನೀಡಿರುವ ಇವರ ನೃತ್ಯವನ್ನು ಮೆಚ್ಚಿ ಮೈಸೂರು ಮಹಾರಾಜ ಜಯಚಾಮರಾಜ ಒಡೆಯರು ಚಿನ್ನದ ಪದಕ ನೀಡಿ ಗೌರವಿಸಿದ್ದರು.

ಇವರು ಬೆಂಗಳೂರಿನ ಮೌಂಟ್ ಕಾರ್ಮೆಲ್ ಕಾಲೇಜಿನಲ್ಲಿ ವ್ಯಾಸಂಗಮಾಡಿ ಬಿ.ಎಸ್ಸಿ. ಪದವೀಧರರಾದರು. ಅನಂತರ ಎಂಜಿನಿಯರ್ ಆಗಿದ್ದ ರಾಮರಾವ್ ಎಂಬುವರನ್ನು ವಿವಾಹವಾದರು. ಇವರು ಹೈದರಾಬಾದಿನಲ್ಲಿರುವಾಗ ದುರಾದೃಷ್ಟವಶಾತ್ ಇವರ ಪತಿ ಅಪಘಾತದಲ್ಲಿ ನಿಧನರಾದರು. ಚಿಕ್ಕವಯಸ್ಸಿನಲ್ಲೇ ವೈಧವ್ಯಕ್ಕೆ ತುತ್ತಾದ ಇವರು ಬೆಂಗಳೂರಿಗೆ ಮರಳಿದರು. ಮನೆಯವರ ಹಾಗೂ ಗುರು ಕಿಟ್ಟಪ್ಪನವರ ಸಲಹೆಯಂತೆ ಬೆಂಗಳೂರಿನ ಶಂಕರಪುರಂನಲ್ಲಿ ಶಕುಂತಲಾ ನೃತ್ಯಾಲಯ ಪ್ರಾರಂಭಿಸಿದರು. ಅಂದಿನಿಂದ ಭರತನಾಟ್ಯ ಕಲೆಯಲ್ಲಿ ತಮ್ಮದೇ ಆದ ವಿಶೇಷ ಛಾಪನ್ನು ಒತ್ತಿರುವ ಇವರು ಅನೇಕ ಕಲಾವಿದರು ಕೀರ್ತಿಗಳಿಸಲು ಮಾರ್ಗದರ್ಶಿಯಾಗಿದ್ದಾರೆ. ಮಂಜು ಭಾರ್ಗವಿ, ಸಾವಿತ್ರಿ ರಾಮಯ್ಯ, ಶ್ರೀಧರ್, ಪೂರ್ಣಿಮಾ ಗುರುರಾಜ್, ಇಂದಿರಾ ಕಾಡಂಬಿ ಮೊದಲಾದವರು ಇವರ ನೃತ್ಯ ಶಾಲೆಯಲ್ಲಿ ಅರಳಿದ ಕಲಾ ಕುಸುಮಗಳು.

ನೃತ್ಯ ಕ್ಷೇತ್ರದಲ್ಲಿ ಇವರ ಅಪಾರ ಸೇವೆಯನ್ನು ಗುರುತಿಸಿ ಕರ್ನಾಟಕ ಸರ್ಕಾರ ಸೇರಿದಂತೆ ಅನೇಕ ಸಂಘ ಸಂಸ್ಥೆಗಳು ಪ್ರಶಸ್ತಿ ನೀಡಿ ಗೌರವಿಸಿವೆ. ರಾಜ್ಯ ಸಂಗೀತ ನೃತ್ಯ ಅಕಾಡೆಮಿಯ ಕರ್ನಾಟಕ ಕಲಾ ತಿಲಕ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಚೆನ್ನೈನ ಮ್ಯೂಸಿಕ್ ಅಕಾಡೆಮಿಯ ಬೆಸ್ಟ್ ಡ್ಯಾನ್ಸ್ ಟೀಚರ್, ಕ್ಯಾಲಿಫೋರ್ನಿಯ ಕನ್ನಡ ಕೂಟ ನೀಡಿದ ಬೆಸ್ಟ್ ಡ್ಯಾನ್ಸ್ ಟೀಚರ್ ಪ್ರಶಸ್ತಿ, ಉದಯ ಕಲಾನಿಕೇತನದ ಪ್ರಶಸ್ತಿ, ಆರ್ಯಭಟ ಪ್ರಶಸ್ತಿ - ಇವು ಮುಖ್ಯವಾದವು. ಕರ್ನಾಟಕ ಸರ್ಕಾರ ನೃತ್ಯ ಕ್ಷೇತ್ರದ ಅತ್ಯುನ್ನತ ಶಾಂತಲಾ ಪ್ರಶಸ್ತಿಯನ್ನು ಇವರಿಗೆ ನೀಡಿ ಗೌರವಿಸಿದೆ (2002).

ಶಿಸ್ತು, ಸಂಯಮ, ನೇರ ನುಡಿಗಳನ್ನು ರೂಢಿಸಿಕೊಂಡಿರುವ ನರ್ಮದಾ ಸರಳಜೀವಿ. ಶಿಷ್ಯರ ಏಳಿಗೆಗೆ ಸಂತೋಷಿಸುವ, ಪ್ರೋತ್ಸಾಹಿಸುವ ವಿಶಾಲಹೃದಯಿ. ತಮ್ಮ ಶಿಷ್ಯರ ನೃತ್ಯ ಪ್ರದರ್ಶನಕ್ಕಾಗಿ ಇಂಗ್ಲೆಂಡ್, ಅಮೆರಿಕ, ದುಬೈ, ಅಬುದಾಬಿ ದೇಶಗಳಿಗೆ ಹಲವಾರು ಬಾರಿ ಪ್ರವಾಸ ಮಾಡಿದ್ದಾರೆ. ಇವರ ಅನೇಕ ಶಿಷ್ಯರು ಅಮೇರಿಕದಲ್ಲಿ ಭರತನಾಟ್ಯ ಶಾಲೆಯನ್ನು ನಡೆಸುತ್ತಿದ್ದಾರೆ. ಶಾಸ್ತ್ರೀಯ ನೃತ್ಯದ ಬಗ್ಗೆ ಅಪಾರ ಶ್ರದ್ಧೆ, ನಂಬಿಕೆ, ಗೌರವವನ್ನಿರಿಸಿಕೊಂಡಿರುವ ಇವರು ಸಮಕಾಲೀನ ನೃತ್ಯದ ಬಗ್ಗೆಯೂ ಆಸಕ್ತರು. ಕಾಲಿನ ಶಸ್ತ್ರಚಿಕಿತ್ಸೆಗೆ ಒಳಗಾದರೂ ತಮ್ಮ ನಾಟ್ಯಶಾಲೆಯಲ್ಲಿ ನಿರಂತರ ನೃತ್ಯ ತಾಲೀಮು ನೀಡುತ್ತಾ ಕಲಾ ಸೇವೆಯನ್ನು ಮುಂದುವರಿಸಿದ್ದಾರೆ. (ಎಸ್‌ಯು.ಎ.)

**ನಲ್ಲೂರು :** ಬೆಂಗಳೂರು ಗ್ರಾಮಾಂತರ ಜಿಲ್ಲೆ ದೇವನಹಳ್ಳಿ ತಾಲ್ಲೂಕಿನ ಒಂದು ಗ್ರಾಮ. ಐತಿಹಾಸಿಕ ಸ್ಥಳ. ವಿಜಯಪುರ ಎಂಬ ಗ್ರಾಮದಿಂದ 12 ಕಿಮೀ ದೂರದಲ್ಲಿದೆ. ಈಗ ಇದು ಸಂಪೂರ್ಣವಾಗಿ ಹಾಳುಬಿದ್ದಿದೆ. ಚೌಡರಾಯನೆಂಬ ಕೊನೆಯ ಪಾಳೆಯಗಾರನ ಕಾಲದಲ್ಲಿ ಶತ್ರುಗಳು ಎರಡು ಬಾರಿ ಈ ಊರನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿ ವಿಫಲರಾಗಿದ್ದರು. ಅಂತಿಮವಾಗಿ ಇದು ಶತ್ರುಗಳ ವಶವಾಯಿತು. ಹೀಗೆ ಶತ್ರುಗಳ ವಶವಾಗಲು ಆ ಪಾಳೆಯಗಾರನ ಮಗಳ ಕುತಂತ್ರವೆ ಮುಖ್ಯ ಕಾರಣವಾಗಿತ್ತಂತೆ. ಆಕೆ ಹೊಸಕೋಟೆ ತಾಲ್ಲೂಕಿನ ಗುಬ್ಬಿಯ ಅರಸನನ್ನು ಮದುವೆಯಾಗಿದ್ದು ಆತನೊಂದಿಗೆ ಯುದ್ಧಕ್ಕೆ ಬಂದು ನಲ್ಲೂರಿಗಿದ್ದ ಸುರಂಗಮಾರ್ಗವನ್ನು ತೋರಿಸಿದ್ದಳಂತೆ. ಶತ್ರುಗಳು ಕೋಟೆಯನ್ನು ಆಕ್ರಮಿಸಲು ಪ್ರಾರಂಭಿಸಿದಾಗ ಚೌಡರಾಯ ತನ್ನ ಕುಟುಂಬದ ಸದಸ್ಯರನ್ನೂ ಬೊಕ್ಕಸವನ್ನೂ ಅರಮನೆಯಲ್ಲಿಯೇ ಬಿಟ್ಟು ಅರಮನೆಗೆ ಬೆಂಕಿ ಹಾಕಿ ಅದನ್ನು ಧ್ವಂಸಮಾಡಲು ಮುಂದಾದನೆಂದು ಹೇಳಲಾಗಿದೆ. ಆತ ಅವಿತಿಟ್ಟಿದ್ದ ಎನ್ನಲಾದ ಗುಪ್ತ ನಿಧಿಯ ಶೋಧನೆಗೆ ಇಂದಿಗೂ ಪ್ರಯತ್ನಗಳು ನಡೆಯುತ್ತಿವೆ.

ಊರಿನ ಹೊರವಲಯದಲ್ಲಿನ ಹುಣಿಸೇಮರದ ತೋಪಿನ ಮಧ್ಯಭಾಗದಲ್ಲಿ ಇತ್ತೀಚಿನ ವಿಜಯನಗರ ಶೈಲಿಯ, ಈಗ ಹಾಳಾಗಿರುವ ಸುಂದರವಾದ ಚನ್ನರಾಯಸ್ವಾಮಿ ದೇವಾಲಯವಿದೆ. ಇದರ ಹೊರಗೋಡೆಗಳಲ್ಲಿ ಹಾಗೂ ಗೂಡುಗಳಲ್ಲಿ ಕಾಳಿಂಗಮರ್ದನ, ಗೋಪಿಕಾ ವಸ್ತ್ರಾಪಹರಣ, ಗೋಪಾಲಕೃಷ್ಣ ಮುಂತಾದ ಸುಂದರ ಶಿಲ್ಪಗಳಿವೆ. ಇದರ ಒಳಮಾಳಿಗೆ ಬಿದ್ದುಹೋಗಿದ್ದು ಗರ್ಭಗೃಹದಲ್ಲಿ ಮೂರ್ತಿ ಇಲ್ಲ. ಈ ದೇವಾಲಯದ ಸಮೀಪವಿರುವ ಎರಡು ಶಾಸನಗಳಿಂದ ಇಲ್ಲಿಯ ದೇವರನ್ನು ತಿರುಮಲನಾಥ (ವೆಂಕಟೇಶ) ಎಂದು ಗುರುತಿಸಬಹುದು. ಇದರಲ್ಲಿ 1386

ರ ಶಾಸನದಲ್ಲಿ ಮಹಾ ಸಾಮಂತಾಧಿಪತಿ ಸೊಣ್ಣಯನಾಯಕನ ಮಗ ಚಿಕ್ಕ ಅಂಕಯನಾಯಕನು ತಿರುಮಲನಾಥ ದೇವರ ಮುಂದೆ ದೀಪಮಾಲೆಯ ಕಂಬವನ್ನು ನಿಲ್ಲಿಸಿದನೆಂದೂ ಸೊನ್ನಪಿಳ್ಳೆಯಮಗ ಒಡೆಯಪ್ಪನೆಂಬ ಆಚಾರಿ ಇದನ್ನು ಮಾಡಿದನೆಂದೂ ಹೇಳಿದೆ. 1401 ರ ಶಾಸನದಲ್ಲಿ ಪೆರಮಾಳ ಸೆಟ್ಟಿಯ ಮಗ ಮಾರಪ್ಪನು ತಿರುಮಲನಾಥ ದೇವಾಲಯದ ಮುಂದಿರುವ ಗರುಡಗಂಬವನ್ನು ಮಾಡಿಸಿದನೆಂದೂ ಆಚಾರಿ ಅಂಕನಾಯಕನ ಮಗ ಪತಿಓಜ ಇದನ್ನು ಮಾಡಿದನೆಂದೂ ಹೇಳಿದೆ. ಇದರ ಸಮೀಪದಲ್ಲಿ ಗಂಗಮ್ಮ ದೇವಾಲಯವಿದೆ. ಗಣಪತಿ ಹಾಗೂ ಹಾಳಾದ ಭೈರವಮೂರ್ತಿಗಳು ಇದರ ಹೊರಗಡೆ ಇವೆ. ಚನ್ನರಾಯಸ್ವಾಮಿ ದೇವಾಲಯದ ಸಮೀಪದಲ್ಲಿ ಬಹಳಷ್ಟು ಪ್ರಾಚೀನ ಅವಶೇಷಗಳಿವೆ. ಮುಖ್ಯ ರಸ್ತೆಯ ಪಕ್ಕದ ಮಾವಿನ ತೋಪಿನಲ್ಲಿ ಪಾಳುಬಿದ್ದ ಸುಂದರವಾದ ಬಸವಣ್ಣ ದೇವಾಲಯವಿದೆ. ಇದರ ಗರ್ಭಗೃಹ ಮತ್ತು ಮುಖಮಂಟಪಗಳ ಗೋಡೆಗಳು ಚೆನ್ನಾಗಿದ್ದು ಇವು ಸುಂದರವಾದ ಚಚ್ಚೌಕವಾದ ಸ್ತಂಭಗಳಿಂದ ಕೂಡಿವೆ. (ಕೆ.ಎಂ. ಎಸ್.)

**ನವಭಾರತ :** ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರಿನಿಂದ ಪ್ರಕಟವಾದ ಮೊತ್ತಮೊದಲ ದಿನ ಪತ್ರಿಕೆ, ವಿ.ಎಸ್.ಕುಡ್ವರವರು 1941 ಜೂನ್ ತಿಂಗಳಲ್ಲಿ ಪತ್ರಿಕೆಯನ್ನು ಪ್ರಾರಂಭಿಸಿದರು. ಮೊದಲ ಒಂದು ವರ್ಷ ಕುಡ್ಪಿ ವಾಸುದೇವ ಶೆಣೈ ಸಂಪಾದಕರಾಗಿದ್ದು ಅನಂತರ ವಿ.ಎಸ್. ಕುಡ್ವ ಅವರೇ 1969ರ ವರೆಗೆ ಸಂಪಾದಕರಾಗಿದ್ದರು. ಇವರ ನಿಧನಾನಂತರ 1969ರಿಂದ ಇವರ ಪುತ್ರ ಸಂಜೀವ ಎಸ್. ಕುಡ್ವ ಸಂಪಾದಕರಾಗಿದ್ದಾರೆ. ಪ್ರಥಮದಲ್ಲಿ ಎರಡು ಪುಟಗಳ ದೈನಿಕವಾಗಿದ್ದು 1959ರಲ್ಲಿ ರೋಟರಿ ಮುದ್ರಣ ಯಂತ್ರವನ್ನು ಬಳಸಿಕೊಂಡು ಆರು ಪುಟಗಳ ಪತ್ರಿಕೆಯಾಯಿತು. 1952ರಿಂದಲೇ ಪಿ.ಟಿ.ಐ. ಸಂಸ್ಥೆಯಿಂದಲೂ ದೇಶದ ತನ್ನ ಪತ್ರಿನಿಧಿಗಳ ಮೂಲಕವೂ ಸುದ್ದಿ ಸಂಗ್ರಹಿಸಿ ಪ್ರಕಟಿಸುತ್ತಿತ್ತು. ದಿನನಿತ್ಯದಲ್ಲಿ ವಾರ್ತೆಗಳು, ಸಂಪಾದಕೀಯ, ವ್ಯಂಗ್ಯಬರೆಹ, ವಿಚಾರವೇದಿಕೆ ಮತ್ತು ದೈನಿಕ ಧಾರಾವಾಹಿ ಕಾದಂಬರಿ ಇದ್ದು 6 ಪುಟಗಳಿರುತ್ತಿದ್ದವು. ಭಾನುವಾರದ ಸಂಚಿಕೆ 8 ಪುಟಗಳಿಂದ ಕೂಡಿದ್ದು ವಾರದ ಕಥೆ, ವನಿತಾ ವಾಣಿ, ಚಿತ್ರರಂಗ, ಕವನ, ವಾರ ಭವಿಷ್ಯ, ಪುಟಾಣಿ ಪ್ರಪಂಚ ಮತ್ತು ರವಿವಾರದ ಧಾರಾವಾಹಿ ಕಾದಂಬರಿ ಮೊದಲಾದ ಶೀರ್ಷಿಕೆಗಳನ್ನೊಳಗೊಂಡಿರುತ್ತಿತ್ತು.
(ಪಿ.ಕೆ.ಎನ್.)

**ನವರತ್ನ ರಾಮರಾವ್ :** 1879-1960. ಬ್ರಿಟಿಷ್ ಸಾರ್ವಭೌಮತ್ವದ ಕಾಲದಲ್ಲೂ ಭಾರತೀಯನ ಸ್ವಾಭಿಮಾನವನ್ನುಳಿಸಿಕೊಂಡು, ನಿರ್ಭಯವಾಗಿ ಅಧಿಕಾರವನ್ನು ನಡೆಸಿದ ಮೈಸೂರಿನ ದಕ್ಷ ಅಧಿಕಾರಿಗಳಲ್ಲೊಬ್ಬರು. ಇವರು ಜನಿಸಿದ್ದು ಬೆಂಗಳೂರು ಜಿಲ್ಲೆಯ ದೇವನಹಳ್ಳಿಯಲ್ಲಿ. ನವರತ್ನ ಇವರ ವಂಶಕ್ಕೆ ಬಂದ ಬಿರುದು. ರಾಮರಾಯರು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಬಿ.ಎ. ಪದವಿಯನ್ನು, ಮದರಾಸಿನಲ್ಲಿ ಬಿ.ಎಲ್.ಪದವಿಯನ್ನು ಪಡೆದ ಅನಂತರ, ಎಂ.ಸಿ.ಎಸ್. ಪರೀಕ್ಷೆಯಲ್ಲಿ ಮೊದಲ ದರ್ಜೆಯಲ್ಲಿ ತೇರ್ಗಡೆಯಾಗಿ ಮೈಸೂರು ಸರ್ಕಾರದಲ್ಲಿ ಪ್ರೋಬೇಶನರಿ ಅಮಲ್ದಾರರಾಗಿ ಕೆಲಸಕ್ಕೆ ಸೇರಿ, ಕರ್ನಾಟಕದಲ್ಲಿ ರೇಷ್ಮೆ ಇಲಾಖೆಯ ಜನನಕ್ಕೆ ಕಾರಣರಾಗಿ ಆ ಇಲಾಖೆಯ ಪ್ರಥಮ ಮುಖ್ಯಾಧಿಕಾರಿಗಳಾದರು. ರಾಜ್ಯ ಸರ್ಕಾರದ ಅಭಿವೃದ್ಧಿ ಕಾರ್ಯದರ್ಶಿಗಳಾಗಿ ಸ್ವಲ್ಪ ಕಾಲವಿದ್ದು ಅನಂತರ ರಾಜ್ಯದ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಮುಖ್ಯಾಧಿಕಾರಿಗಳಾಗಿ 1934ರಲ್ಲಿ ನಿವೃತ್ತರಾದರು. ಆಗಿನ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್ ಅವರೊಡನೆ ಇವರು ಲಂಡನ್‌ನಲ್ಲಿ ಜರುಗಿದ (1931) ರೌಂಡ್ ಟೇಬಲ್ ಕಾನ್‌ಫರೆನ್ಸ್‌ನಲ್ಲಿ ಭಾಗವಹಿಸಿದ್ದರು. ಇವರ ಕರ್ತವ್ಯನಿಷ್ಠೆ, ದಕ್ಷತೆಗಳನ್ನು ಮೆಚ್ಚಿ ಜಯಚಾಮರಾಜ ಒಡೆಯರ್ ಅವರು ರಾಜಸೇವಾಪ್ರಸಕ್ತ ಎನ್ನುವ ಬಿರುದನ್ನು ಕೊಟ್ಟು ಗೌರವಿಸಿದರು (1943).

ಇವರು ಸಾಹಿತ್ಯ, ಸಂಗೀತಪ್ರಿಯರೂ ಸೌಂದರ್ಯೋಪಾಸಕರೂ ಅಪೂರ್ವ ಹಾಸ್ಯಾಭಿರುಚಿಯನ್ನುಳ್ಳವರೂ ಆಗಿದ್ದರು. ಇವರು ಸ್ವತಃ ಪಿಟೀಲನ್ನು ಸೊಗಸಾಗಿ ನುಡಿಸುತ್ತಿದ್ದರಲ್ಲದೆ ಅನೇಕ ಕಥೆ, ಲೇಖನಗಳನ್ನು ಬರೆದಿದ್ದಾರೆ. ನಿವೃತ್ತಿಯ ಅನಂತರ ಇವರು ಬರೆದ "ಕೆಲವು ನೆನಪುಗಳು ಕನ್ನಡ ಸಾಹಿತ್ಯ ಭಂಡಾರಕ್ಕೊಂದು ಅಮೂಲ್ಯ ಕೊಡುಗೆಯಾಗಿದೆ. ಮಾಸ್ತಿಯವರ ಚನ್ನಬಸವನಾಯಕ ಕಾದಂಬರಿ ಇವರಿಂದ ಇಂಗ್ಲಿಷ್‌ಗೆ ಅನುವಾದವಾಗಿದೆ. (ಎಸ್.ಆರ್.)

**ನವಲಗುಂದ :** ಧಾರವಾಡ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಈ ತಾಲ್ಲೂಕಿನ ಆಡಳಿತ ಕೇಂದ್ರ. ಈ ತಾಲ್ಲೂಕಿನ ಪೂರ್ವಕ್ಕೆ ಗದಗ, ಪಶ್ಚಿಮಕ್ಕೆ ಧಾರವಾಡ, ದಕ್ಷಿಣಕ್ಕೆ ಹುಬ್ಬಳ್ಳಿ ಮತ್ತು ಕುಂದಗೋಳ, ಉತ್ತರಕ್ಕೆ ನರಗುಂದ, ಈಶಾನ್ಯಕ್ಕೆ ರೋಣ ತಾಲ್ಲೂಕುಗಳೂ ವಾಯವ್ಯಕ್ಕೆ ಬೆಳಗಾಂವಿ ಜಿಲ್ಲೆಯ ಸವದತ್ತಿ ತಾಲ್ಲೂಕೂ ಇವೆ. ಧಾರವಾಡದ ಪೂರ್ವಕ್ಕಿರುವ ಈ ತಾಲ್ಲೂಕಿನಲ್ಲಿ ಅಣ್ಣಿಗೇರಿ ಮತ್ತು ಮೊರಬ ಹೋಬಳಿಗಳೂ 58 ಗ್ರಾಮಗಳೂ ಇವೆ. ವಿಸ್ತೀರ್ಣ 1082 ಚಕಿಮೀ ಜನಸಂಖ್ಯೆ 1,76,641.

ಈ ತಾಲ್ಲೂಕು ಈಶಾನ್ಯದೆಡೆಗೆ ಇಳಿಜಾರಾಗಿರುವ ಸುಮಾರು ಮಟ್ಟಸಪ್ರದೇಶ. ದೊಡ್ಡ ನದಿಗಳು ಇಲ್ಲ. ಈ ತಾಲ್ಲೂಕಿನಲ್ಲಿ ಹರಿಯುವ ಮುಖ್ಯ ಹಳ್ಳಗಳಲ್ಲಿ ಬೆಣ್ಣೆಹಳ್ಳ ಒಂದು. ಇದು ತಾಲ್ಲೂಕಿನ ದಕ್ಷಿಣಭಾಗದಿಂದ ಬಲ್ಲರವಾಡದ ಹತ್ತಿರ ಪ್ರವೇಶಿಸಿ ಉತ್ತರಾಭಿಮುಖವಾಗಿ ಹರಿದು ಯಮನೂರಿನ ಉತ್ತರದಲ್ಲಿ ಈಶಾನ್ಯಾಭಿಮುಖವಾಗಿ ಹರಿದು ಮೂಗನೂರಿನ ಬಳಿ ನರಗುಂದ ತಾಲ್ಲೂಕನ್ನು ಪ್ರವೇಶಿಸಿ ಸ್ವಲ್ಪ ದೂರ ನವಲಗುಂದ ಮತ್ತು ನರಗುಂದ ತಾಲ್ಲೂಕುಗಳ ಗಡಿಯಾಗಿ ಹರಿದು ಮುಂದೆ ಮಲಪ್ರಭಾ ನದಿಯನ್ನು ಸೇರಿಕೊಳ್ಳುವುದು. ತುಪರಿಹಳ್ಳ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ಮೊರಬದ ಹತ್ತಿರ ಪಶ್ಚಿಮದೆಡೆಯಿಂದ ಪ್ರವೇಶಿಸಿ ಸುಮಾರು ಪೂರ್ವಾಭಿಮುಖವಾಗಿ ಹರಿದು ಅಳಗವಾಡಿಯ ಬಳಿ ದಕ್ಷಿಣಕ್ಕೆ ತಿರುಗಿ ಆಗ್ನೇಯಾಭಿಮುಖವಾಗಿ ಹರಿದು ನವಲಗುಂದದ ವಾಯವ್ಯದಲ್ಲಿ ಬೆಣ್ಣೆಹಳ್ಳವನ್ನು ಕೂಡುವುದು. ಹಂದಿಗನಹಳ್ಳ ತಾಲ್ಲೂಕಿನ ಆಗ್ನೇಯದಲ್ಲಿ ಕಿತ್ತೂರಿನ ಹತ್ತಿರ ಪ್ರವೇಶಿಸಿ ತಾಲ್ಲೂಕಿನ ಪೂರ್ವಭಾಗದಲ್ಲಿ ಉತ್ತರಾಭಿಮುಖವಾಗಿ ಹರಿದು ತಡಹಾಳ ಗ್ರಾಮದ ಹತ್ತಿರ ಬೆಣ್ಣೆಹಳ್ಳವನ್ನು ಸೇರಿಕೊಳ್ಳುತ್ತದೆ. ಹಂದಿಗನ ಹಳ್ಳಕ್ಕೆ ಪಿಂಜರಹಳ್ಳವು ತುಪ್ಪದ ಕುರಹಟ್ಟಿ ಬಳಿ ಸೇರಿಕೊಳ್ಳುವುದು.ಈ ಹಳ್ಳಗಳಿಗೆ ಮಳೆಗಾಲದಲ್ಲಿ ಸುತ್ತಲಿನಿಂದ ಅನೇಕ ತೊರೆಗಳು ಬಂದು ಸೇರುತ್ತವೆ. ಇವನ್ನು ಹಳ್ಳಗಳೆಂದು ಕರೆದರೂ ನದಿಗಳಷ್ಟೇ ಇವು ಉಪಯುಕ್ತವಾಗಿವೆಯೆನ್ನಬಹುದು. ಇವಲ್ಲದೆ ಕಲವು ಬಾವಿಗಳೂ ಕೆರೆಗಳೂ ತಾಲ್ಲೂಕಿನಲ್ಲಿವೆ. ಈ ತಾಲ್ಲೂಕಿನ ಸರಾಸರಿ ವಾರ್ಷಿಕ ಮಳೆ ಸು. 660 ಮಿಮೀ.

ತಾಲ್ಲೂಕಿನಲ್ಲಿ ಕಪ್ಪು ಎರೆಭೂಮಿ ಪದೇಶ ಹೆಚ್ಚು. ಜೊತೆಗೆ ಹಳ್ಳಗಳು ಮತ್ತು ಅವುಗಳಿಗೆ ಸೇರುವ ಕೆಲವು ತೊರೆಗಳ ಸುತ್ತಲ ಪ್ರದೇಶ ವ್ಯವಸಾಯ ಯೋಗ್ಯವಾದದ್ದು. ಈ ತಾಲ್ಲೂಕಿನಲ್ಲಿ ಅರಣ್ಯ ಪ್ರದೇಶವಿಲ್ಲವೆನ್ನಬಹುದು. ಬತ್ತ, ಗೋದಿ, ಜೋಳ, ಸೇಂಗಾ, ಎಣ್ಣೆಬೀಜಗಳು, ಹತ್ತಿ ಕೆಲವೊಂದು ದ್ವಿದಳಧಾನ್ಯಗಳನ್ನು ಬೆಳೆಯುತ್ತಾರೆ. ಈ ತಾಲ್ಲೂಕಿನ ಆಕಳುಗಳು ಒಳ್ಳೆಯ ಜಾತಿಯವೆಂಬ ಹೆಸರು ಪಡೆದಿದೆ. ವ್ಯವಸಾಯದ ಜೊತೆಗೆ ಪಶುಪಾಲನೆಯೂ ಈ ತಾಲ್ಲೂಕಿನಲ್ಲಿ ಇದೆ.

ತಾಲ್ಲೂಕಿನಲ್ಲಿ ದೊಡ್ಡ ಪ್ರಮಾಣದ ಕೈಗಾರಿಕೆಗಳಿಲ್ಲ. ಗೃಹ ಮತ್ತು ಗ್ರಾಮೋದ್ಯೋಗಗಳಲ್ಲಿ ಕೈಮಗ್ಗದ ಬಟ್ಟೆ ತಯಾರಿಕೆ, ಚರ್ಮ ಹದಮಾಡುವುದು ಮತ್ತು ಚರ್ಮವಸ್ತುಗಳ ತಯಾರಿಕೆ, ಗುಡಾರಗಳು, ಮರದ ತೊಟ್ಟಿಲುಗಳು ಮತ್ತು ಆಟದ ಸಾಮಾನುಗಳ ತಯಾರಿಕೆಯುಂಟು.

ತಾಲ್ಲೂಕಿನಲ್ಲಿ ದಕ್ಷಿಣ ಭಾಗದಲ್ಲಿ ಗದಗ-ಹುಬ್ಬಳ್ಳಿ ರೈಲ್ವೆ ಹಾದಿ ಇದ್ದು ಅಣ್ಣಿಗೇರಿ, ಹೆಬಸೂರು ರೈಲ್ವೆ ನಿಲ್ದಾಣಗಳಿವೆ. ಹುಬ್ಬಳ್ಳಿ-ಬಿಜಾಪುರ ರಸ್ತೆ ಈ ತಾಲ್ಲೂಕಿನ ಮೂಲಕ ಹಾದುಹೋಗುತ್ತದೆ. ನವಲಗುಂದ ರೋಣ, ನವಲಗುಂದ-ಸವದತ್ತಿ ರಸ್ತೆಗಳೂ ಮುಖ್ಯ ಮಾರ್ಗಗಳು.

ಈ ತಾಲ್ಲೂಕು ಬಹಮನೀ ಸುಲ್ತಾನರ ಆಳ್ವಿಕೆಗೆ ಸೇರಿತ್ತು. ಕೆಲವು ಕಾಲ ಅಲಾವುದ್ದೀನನ (1436-1458) ಸೋದರಳಿಯ ಜಲಾಲ್‌ಖಾನ್ ಈ

ಪ್ರದೇಶದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ. 1690ರ ಹೊತ್ತಿಗೆ ಔರಂಗಜೇಬನ ಆಡಳಿತಕ್ಕೆ ಈ ಭಾಗವೆಲ್ಲ ಸೇರಿದ್ದು ಕಂದಾಯದ ಹೊಣೆ ನವಲಗುಂದಾದ ದೇವಾಲಯ ಮನೆತನಕ್ಕೆ ಸೇರಿತ್ತು. 1747ರಲ್ಲಿ ಮರಾಠ ಪೇಶ್ವೆಗಳು ಅನಂತರ 1778ರಲ್ಲಿ ಹೈದರ್ ಅಲಿ ಒಡೆತನಕ್ಕೆ ಬಂತು. 1795 ಮತ್ತು 1800ರಲ್ಲಿ ಧೋಂಡೋಪಂತ ಗೋಖಲೆ ನವಲಗುಂದ ಮತ್ತು ಗದಗನ್ನು ವಶಪಡಿಸಿಕೊಂಡ. 1817ರಲ್ಲಿ ಜನರಲ್ ಮನ್ರೋ, ರಾಮರಾವ್ ಎಂಬುವನನ್ನು ಈ ಭಾಗದ ಆಡಳಿತ ಮತ್ತು ಸೈನ್ಯಾಧಿಕಾರಿಯಾಗಿ ನೇಮಿಸಿದ್ದ. ಗೋಖಲೆಯನ್ನು ರಾಮರಾವ್ ಸೋಲಿಸಿ ಈ ಭಾಗವನ್ನು ವಶಪಡಿಸಿಕೊಂಡನೆಂದೂ ತಿಳಿದುಬರುತ್ತದೆ.

ಈ ತಾಲ್ಲೂಕಿನ ಅಣ್ಣಿಗೇರಿ (ನೋಡಿ) ಒಂದು ರೈಲ್ವೆನಿಲ್ದಾಣ. ಇಲ್ಲಿ ಅಮೃತೇಶ್ವರ ದೇವಾಲಯವಿದೆ. ನವಲಗುಂದದ ನೈಋತ್ಯಕ್ಕೆ ಸುಮಾರು 5 ಕಿಮೀ ದೂರದಲ್ಲಿರುವ ಯಮನೂರು ಹೆಬಸೂರು ರೈಲ್ವೆ ನಿಲ್ದಾಣದಿಂದ 15 ಕಿಮೀ ದೂರದಲ್ಲಿದೆ. ಹಿಂದುಗಳು ಮತ್ತು ಮುಸಲ್ಮಾನರು ಭಾಗವಹಿಸುವ ಇಲ್ಲಿನ ರಾಜಾಬಾಗ್ ಸವಾರ್ ಉರುಸ್ ಪ್ರಸಿದ್ಧ.

ನವಲಗುಂದ ಪಟ್ಟಣ ಈ ತಾಲ್ಲೂಕಿನ ಆಡಳಿತ ಕೇಂದ್ರ. ಧಾರವಾಡದ ಪೂರ್ವಕ್ಕೆ 47 ಕಿಮೀ ಅಂತರದಲ್ಲಿ ಬೆಣ್ಣಿಹಳ್ಳದ ಬಲದಂಡೆಯ ಮೇಲೆ ಇದೆ. ಜನಸಂಖ್ಯೆ 22,200. ಈ ಊರು ಸುತ್ತಲ ಪ್ರದೇಶಗಳಿಗೆ ಮುಖ್ಯ ವ್ಯಾಪಾರ ಕೇಂದ್ರ. ಇಲ್ಲಿಂದ ನರಗುಂದ, ಹುಬ್ಬಳ್ಳಿ, ಧಾರವಾಡ, ರೋಣ, ಗದಗ ಮುಂತಾದ ಪಟ್ಟಣಗಳಿಗೆ ಮಾರ್ಗಗಳಿವೆ. ಮಂಗಳವಾರ ಸಂತೆ ಸೇರುವುದು. ಕಾಳುಕಡ್ಡಿ, ಎಣ್ಣೆ, ಹತ್ತಿಗಳ ವ್ಯಾಪಾರ ನಡೆಯುತ್ತದೆ. ದನಗಳ ಮಾರಾಟವೂ ಆಗುವುದು. ಉತ್ತಮ ಗುಣಮಟ್ಟದ ಗುಡಾರಗಳು ಇಲ್ಲಿ ತಯಾರಾಗಿ ನೆರೆಯ ಜಿಲ್ಲೆಗಳಿಗೆ ರವಾನೆಯಾಗುತ್ತವೆ. ತೊಟ್ಟಿಲುಗಳ ಹಾಗೂ ಆಟಿಕೆ ಸಾಮಾನುಗಳ ತಯಾರಿಕೆಗೂ ಈ ಊರು ಪ್ರಸಿದ್ಧ.

ಇಲ್ಲಿ ಪುರಸಭಾಡಳಿತವಿದೆ. ಊರಿಗೆ ನೀಲಮ್ಮನ ಕೆರೆ ಎಂಬ ಜಲಾಶಯದಿಂದ ನೀರನ್ನು ಒದಗಿಸುವರು. ಈ ಊರನ್ನಾಳಿದ ದೇಸಾಯರ ಮನೆತನಕ್ಕೆ ಸೇರಿದ್ದ ಪ್ರಸಿದ್ಧ ತ್ಯಾಗವೀರ ಲಿಂಗಪ್ಪ ಜಾಯಪ್ಪ ಸರದೇಸಾಯಿಯವರು ತಮ್ಮ ಅಪಾರ ಆಸ್ತಿಯನ್ನು ನಾಡಿನ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ದಾನಮಾಡಿದ್ದಾರೆ. ಇವರ ಸಮಾಧಿ ಊರಲ್ಲಿದೆ. ಈ ಊರಿನ ಗವಿಮಠದಲ್ಲಿ ಪ್ರತಿವರ್ಷ ಎಡೆಯೂರು ಸಿದ್ಧಲಿಂಗೇಶ್ವರರ ಜಾತ್ರೆ ನಡೆಯುತ್ತದೆ. (ಡಿ.ಕೆ.,ಎಸ್.ಜಿ.ಕೆ.)

**ನವಿಲ್ಗುಂದದ ಮಾದಿರಾಜ :** ಸು. 1300. ಶ್ರೇಷ್ಠ ಪಂಡಿತ ಹಾಗೂ ಲಿಪಿಕಾರ. ಇವನ ತಂದೆ ಚಾಮ, ಹೆಂಡತಿ ಮಹಾದೇವಿ. ಮಕ್ಕಳು ಬಂಕರಸ ಮತ್ತು ಮಾಚಿ. ಧಾರವಾಡ ಜಿಲ್ಲೆಯ ನವಲಗುಂದ ಈತನ ಜನ್ಮಸ್ಥಳ. ಇವನಿಗೆ ಬುಧಮಾಧವ ಎಂಬ ಬಿರುದಿದ್ದಂತೆ ತೋರುತ್ತದೆ.

ಈತ ಕಾವ್ಯ ಪ್ರೇಮಿಯೂ ಸ್ವತಃ ಕಾವ್ಯರಚನೆ ಮಾಡಬಲ್ಲ ಸಾಮರ್ಥ್ಯವುಳ್ಳವನೂ ಆಗಿದ್ದ. ಎರಡನೆಯ ಗುಣವರ್ಮನ (ಸು. 1215) ಪುಷ್ಪದಂತಪುರಾಣದ ಒಂದು ಪ್ರತಿಯ ಕೊನೆಯಲ್ಲಿ ಆ ಗ್ರಂಥವನ್ನು ಈತ ಪ್ರತಿಮಾಡಿದಂತೆ ಹೇಳುವ ಎರಡು ವೃತ್ತಗಳಿದ್ದು ಅವುಗಳ ಶೈಲಿ ಸುಂದರವೂ ಬಂಧುಬಂಧುರವೂ ಆಗಿರುವುದನ್ನು ನೋಡಿದರೆ ಈತ ಉತ್ತಮ ಮಟ್ಟದ ಕವಿಯಾಗಿದ್ದಂತೆ ತಿಳಿಯುತ್ತದೆ. ಸುಂದರಪ್ರತಿ ಬರೆದರೆ, ಅದು ಚದುರರ ವಿಶೇಷ ವರ್ಣನೆಗೆ ಪಾತ್ರವಾಗಿರಬೇಕು. ಬರೆಯುವವನು ಬಿಂದುವಿನ ಶೋಭೆ, ತಲೆಕಟ್ಟಿನ ಹೊಕ್ಕುಳ ಚೆಲುವು, ಮಾತ್ರೆಯಲ್ಲಿ ನಿಲ್ಲುವ ಬೆಡಗು, ಬಳ್ಳಿಯಲ್ಲಿ ಹೊಂದಿರುವ ನಯ, ವಿಸರ್ಗದಲ್ಲಿ ಹೊಂದಿಕೆ, ಅಕ್ಷರಕ್ಷರದ ಜೋಡಣೆ - ಈ ಮೊದಲಾದ ಲಿಪಿಕಲಾತ್ಮಕ ಅಂಶಗಳನ್ನು ಗಮನದಲ್ಲಿಡಬೇಕು ಎಂದು ಹೇಳುವ ಈತನ ಮಾತುಗಳು 'ಲಿಪಿಕಾರರಿಗೆ ಮಾರ್ಗದರ್ಶಕವೂ ಈತನ ಲಿಪಿಕಾರತನದ ವೈಶಿಷ್ಟ್ಯಕ್ಕೆ ನಿದರ್ಶನವೂ ಆಗಿವೆ. (ಡಿ.ಎಸ್.ಎಚ್.)

**ನಾಗಚಂದ್ರ :** ಸುಪ್ರಸಿದ್ಧ ಜೈನಕವಿ. ಮಲ್ಲಿನಾಥ ಪುರಾಣ, ರಾಮಚಂದ್ರಚರಿತಪುರಾಣ, (ಪಂಪರಾಮಾಯಣ) ಎಂಬ ಗ್ರಂಥಗಳ ಕರ್ತೃ. ಜಿನಾಕ್ಷರಮಾಲೆ, ಯೋಗಾಮೃತ, ಕಾಮನಕಾಳಗ - ಇವೂ ಇವನ ಹೆಸರಿನಲ್ಲಿವೆ. ಅಭಿನವಪಂಪ ಎಂಬುದು ಇವನ ಬಿರುದುಗಳಲ್ಲಿ ಮುಖ್ಯವಾದುದು. ತನ್ನ ಗುರುಪರಂಪರೆಯ ವಿನಾ ಮತ್ತಾವುದೇ ವೈಯಕ್ತಿಕ ಸಂಗತಿಯನ್ನು ತನ್ನ ಕೃತಿಗಳಲ್ಲಿ ಹೇಳಿಕೊಂಡಿಲ್ಲವಾದ್ದರಿಂದ, ಇವನ ಕಾಲದೇಶಗಳನ್ನು ನಿರ್ಧರಿಸುವುದು ಕಷ್ಟವಾಗಿದೆ. ಇವನ ಕಾಲ 1040, 1100, 1140 ಎಂದು ಮೂರು ಅಭಿಪ್ರಾಯಗಳಿವೆ. ಇವನು 12ನೆಯ ಶತಮಾನದ ಕವಿಯೆಂದೂ ವಚನಕಾರರ ಸಮಕಾಲೀನ ಅಥವಾ ಅವರಾದಮೇಲೆ ಬಂದವನು ಎಂದೂ ತೋರುತ್ತದೆ. ವಿಜಯಪುರದಲ್ಲಿ ತಾನು ಮಲ್ಲಿಜಿನನ ಭವನವನ್ನು ಕಟ್ಟಿಸಿದುದಾಗಿ ಕವಿ ಹೇಳಿಕೊಂಡಿದ್ದಾನೆ; ಈ ವಿಜಯಪುರ ಬಹುಶಃ ಈಗಿನ ಬಿಜಾಪುರ, ಆದ್ದರಿಂದ ಇವನು ಆ ಪ್ರಾಂತದವನು ಎಂದು ಹೇಳಬಹುದು. ಇವನು ರಾಜಾಶ್ರಯದಲ್ಲಿದ್ದಂತೆ ತೋರುವುದಿಲ್ಲ. ಜಿನಭಕ್ತಿಪ್ರಧಾನವಾದ ಧಾರ್ಮಿಕ ವ್ಯಕ್ತಿತ್ವವೊಂದು ಇವನ ಕೃತಿಗಳಲ್ಲಿ ಎದ್ದು ಕಾಣುತ್ತದೆ. ಶಾಂತ ರಸದಲ್ಲಿ ಇವನಿಗೆ ವಿಶೇಷವಾದ ಆಸಕ್ತಿ ಮತ್ತು ಅಭಿರುಚಿ.

ಮಲ್ಲಿನಾಥಪುರಾಣ 19ನೆಯ ತೀರ್ಥಂಕರನಾದ ಮಲ್ಲಿನಾಥನ ಕಥೆಯನ್ನು ನಿರೂಪಿಸುವ 14 ಆಶ್ವಾಸಗಳ ಕೃತಿ. ಇದರಲ್ಲಿ ಜೀವಕ್ಕೆ ಶರಣ್ಯವೊಂದೇ ನಿರ್ಮಳ ಧರ್ಮಂ ಎಂಬ ಸಂದೇಶವನ್ನು ಮೊಳಗಿಸುವುದು ಕವಿಯ ವಿವಕ್ಷೆ. ಈ ಕಾವ್ಯಕ್ಕೆ ಆಕರ ಗುಣಭದ್ರಾಚಾರ್ಯರ ಉತ್ತರಪುರಾಣ, ಮಲ್ಲಿನಾಥನ ಕಥೆ ವಾಸ್ತವವಾಗಿ ಕಿರಿದು; ಮೂಲದಲ್ಲಿ ಅದು ಕೇವಲ 66 ಶ್ಲೋಕಗಳಲ್ಲಿ ಉಕ್ತವಾಗಿದೆ. ನಾಗಚಂದ್ರ ಅದನ್ನು ಬಹಳ ಹಿಗ್ಗಲಿಸಿದ್ದಾನೆ; ವರ್ಣನೆಗಳಿಂದ ತುಂಬಿದ್ದಾನೆ. ಮೂಲದಲ್ಲಿ ಮಲ್ಲಿನಾಥನ ಕಥೆಯೊಡನೆ ಸೇರಿಕೊಂಡಿರುವ ಬಲದೇವ ವಾಸುದೇವ ಪ್ರತಿವಾಸುದೇವರ ವೃತ್ತಾಂತವನ್ನು ಇವನು ಬಿಟ್ಟಿದ್ದಾನೆ. ಹೀಗಾಗಿ ಮಲ್ಲಿನಾಥ ಪುರಾಣ ಬಹುಮಟ್ಟಿಗೆ ವರ್ಣನಾತ್ಮಕವಾದ ಕೃತಿಯಾಗಿದೆ. ಪ್ರಾಯಶಃ ಇದು ಕವಿಯ ಪ್ರಥಮ ರಚನೆಯಾದುದರಿಂದ, ಪುರಾಣತ್ವಪ್ರಧಾನವಾದ ಸಾಂಪ್ರದಾಯಿಕ ಬರೆವಣಿಗೆಯಾಗಿ ಪರಿಣಮಿಸಿವೆ. ಆದರೆ ಕವಿಯ ಪ್ರತಿಭೆಯನ್ನು ಬಿಂಬಿಸುವ ಸುಂದರವಾದ ಭಾವಗೀತಾತ್ಮಕ ಭಾಗಗಳಿಗೆ ಮಲ್ಲಿನಾಥಪುರಾಣದಲ್ಲಿ ಕೊರತೆಯಿಲ್ಲ. ಈ ಕೃತಿಯ ಪೂರ್ವಾರ್ಧಕ್ಕಿಂತ ಉತ್ತರಾರ್ಧ ಹೆಚ್ಚು ಪರಿಣತವಾಗಿದೆ. ಇದರಲ್ಲಿ ಬರುವ ಜಿನಸ್ತುತಿ ನಾಗಚಂದ್ರನ ಆತ್ಮಸಾರಾವೆನಿಸಿಕೊಂಡಿದೆ. ಲಕ್ಷ್ಮೀದೇವಿಯ ಪುತ್ರದೋಹದ ವರ್ಣನೆ, ಶರತ್ಕಾಲ ವರ್ಣನೆ, ಪ್ರಭಾತವರ್ಣನೆ ಕಾಮದಹನಪ್ರಸಂಗ - ಇವು ಮಲ್ಲಿನಾಥಪುರಾಣದ ಕೆಲವು ಹೃದಯಂಗಮವಾದ ಸ್ಥಾನಗಳು. ಇದೊಂದು ಸತ್ಕಾವ್ಯವೆಂದು ಧಾರಾಳವಾಗಿ ಹೇಳಬಹುದು.

ನಾಗಚಂದ್ರನ ಕೀರ್ತಿ ನಿಂತಿರುವುದು ಮುಖ್ಯವಾಗಿ ರಾಮಚಂದ್ರಚರಿತಪುರಾಣದ ಮೇಲೆ. ಇದು 16 ಆಶ್ವಾಸಗಳನ್ನುಳ್ಳ ಉದಾತ್ತರಾಘವನ ಆಖ್ಯಾನ. ಇದು ಜೈನಪರಂಪರೆಯ ರಾಮಾಯಣ. ಇದರಲ್ಲಿ ಬರುವ ಪಾತ್ರಗಳೆಲ್ಲ ಜೈನರು; ಇಡೀ ಕೃತಿಯಲ್ಲಿ ಜೈನ ವಾತಾವರಣ ಹರಡಿದೆ. ಇಲ್ಲಿ ರಾಮ ಲಕ್ಷ್ಮಣ ರಾವಣರು ಜೈನ ಶಲಾಕಾಪುರುಷರು, ಆದ್ದರಿಂದ ಇದು ಅಪೂರ್ವವಾದ ರಾಮಕಥೆ. ಆದರೆ ಇದು ನಾಗಚಂದ್ರನ ಸ್ವಂತ ಸೃಷ್ಟಿಯಲ್ಲ. ವಿಮಲಸೂರಿ ಎಂಬ ಕವಿ ಪ್ರಾಕೃತದಲ್ಲಿ ಬರೆದ ಪಉಮಚರಿಯ (ಪದ್ಮಚರಿತ) ಇವನ ರಾಮಯಣಕ್ಕೆ ಮೂಲ; ಸಂಸ್ಕೃತದಲ್ಲಿ ರವಿಷೇಣ ಬರೆದ ಮಹಾ ರಾಮಾಯಣಕ್ಕೂ (ಪದ್ಮಪುರಾಣ) ಇವನು ಋಣಿ.

ವಾಲ್ಮೀಕಿ ರಾಮಾಯಣಕ್ಕೂ ಈ ಜೈನ ರಾಮಾಯಣಕ್ಕೂ ಹಲವಾರು ವ್ಯತ್ಯಾಸಗಳಿವೆ. ಉದಾಹರಣೆಗೆ ಇಲ್ಲಿ ಲಕ್ಷ್ಮಣನಿಗೆ ಪ್ರಾಧಾನ್ಯ. ಕಡೆಗೆ ರಾವಣನನ್ನು ಕೊಲ್ಲುವವನೂ ಅವನೇ. ದಶರಥನಿಗೆ ನಾಲ್ವರು ರಾಣಿಯರು, ರಾಮಲಕ್ಷ್ಮಣರು ಏಕಪತ್ನೀವ್ರತಸ್ಥರಲ್ಲ. ಆಂಜನೇಯ ಕೂಡ ವಿವಾಹಿತ, ಮಾರೀಚ ಮಂಥರೆಯರ ಮತ್ತು ಸೇತುಬಂಧನದ ಪ್ರಕರಣಗಳು

ಇಲ್ಲಿಲ್ಲ. ಇಂಥ ಅಸಂಖ್ಯಾತ ಮಾರ್ಪಾಟುಗಳಲ್ಲಿ ಬಹುಮುಖ್ಯವಾದ ಮಾರ್ಪಾಟಿರುವುದು ರಾವಣನ ಪಾತ್ರನಿರ್ಮಾಣದಲ್ಲಿ, ಜೈನ ರಾಮಾಯಣದ ರಾವಣ ಸಾಹಿತ್ಯ ಪ್ರಪಂಚದ ಒಂದು ಅವಿಸ್ಮರಣೀಯವಾದ ಪಾತ್ರ. ಅವನು ವೈದಿಕ ರಾಮಾಯಣದ ರಾವಣನಂತೆ ದುಷ್ಟನಲ್ಲ. ಕಾವಲುಕನಲ್ಲ, ಅವನು ಸದ್ಗುಣಸಂಪನ್ನನಾದ ಮಹಾಪುರುಷ. ಆದರೆ ವಿಧಿಯ ಕೈವಾಡದಿಂದ ಆಕಸ್ಮಿಕವಾದ ಅಲ್ಪ ದೌರ್ಬಲ್ಯಕ್ಕೆ ವಶನಾಗಿ ಪತನಗೊಳ್ಳುತ್ತಾನೆ. ಅವನು ಸೀತೆಯನ್ನು ಅಪಹರಿಸಿದರೂ ಕಡೆಗೆ ಪಶ್ಚಾತ್ತಾಪದಿಂದ ಪರಿವರ್ತಿತನಾಗಿ ಪುನೀತನಾಗುತ್ತಾನೆ. ಸೀತೆಯನ್ನೂ ರಾಮನಿಗೊಪ್ಪಿಸಬೇಕೆಂದು ಬಗೆದು, ಯುದ್ಧದಲ್ಲಿ ರಾಮಲಕ್ಷ್ಮಣರನ್ನು ಸೆರೆಹಿಡಿದು ತರಲು ಹೋಗಿ ಹತನಾಗುವ ಈ ರಾವಣನ ದುರದೃಷ್ಟ ಅನುಕಂಪ ಹುಟ್ಟಿಸುತ್ತದೆ. ನಾಗಚಂದ್ರನ ರಾವಣನನ್ನು ದುರಂತ ರಾವಣನೆಂದು ಕರೆಯಲಾಗಿದೆ.; ಆದರೆ ಅವನದು ನಿಜವಾಗಿಯೂ ದುರಂತವೇ ಎಂಬುದು ಚರ್ಚಾಸ್ಪದ.

ಮಲ್ಲಿನಾಥ'ಪುರಾಣದಲ್ಲಿ ಮೂಲವನ್ನು ವಿಸ್ತರಿಸುವ ಅಗತ್ಯ ನಾಗಚಂದ್ರನಿಗೆ ಉಂಟಾದರೆ, ಪಂಪರಾಮಾಯಣದಲ್ಲಿ ಮೂಲವನ್ನು ಸಂಗ್ರಹಿಸುವ ಸಮಸ್ಯೆ ಎದುರಾಗಿದೆ. ಅದನ್ನು ಕವಿ ಯಶಸ್ವಿಯಾಗಿ ದಾಟಿದ್ದಾನೆ. ಇವನ ಸಂಗ್ರಹದ ಜಾಣ್ಮೆ ಪ್ರಶಂಸನೀಯವಾದುದು. ಆದರೂ ಪಂಪರಾಮಾಯಣದಲ್ಲಿ ಪುರಾಣದ ಅಂಶಗಳು ಅನಿವಾರ್ಯವಾಗಿ ಉಳಿದಿವೆ. ಉಪರಂಭೆಯ ಪ್ರಸಂಗ, ಸೀತಾಪರಹಣದ ಮತ್ತು ರಾಮನ ವಿಲಾಪದ ಸನ್ನಿವೇಶ, ರಾವಣನ ಪರಿವರ್ತನೆಯ ಪ್ರಕರಣ ಇವು ರಾಮಚಂದ್ರಚರಿತಪುರಾಣದ ರಮ್ಯ ರಸೋತ್ಕಟ ಭಾಗಗಳಲ್ಲಿ ಕೆಲವು. - ಇದು ಮಹಾಕಾವ್ಯವಲ್ಲದಿದ್ದರೂ ಒಂದು ಶ್ರೇಷ್ಠವಾದ ಕಾವ್ಯವೆಂಬುದರಲ್ಲಿ ಸಂಶಯವಿಲ್ಲ.

ನಾಗಚಂದ್ರನ ಶೈಲಿ ವೈಶಿಷ್ಟ್ಯಪೂರ್ಣವಾದುದು; ಸರಳತೆ, ಮಾಧುರ್ಯ, ಗೇಯತೆ ಅದರ ಪ್ರಮುಖ ಲಕ್ಷಣಗಳು. ಕವಿಯ ಚಿತ್ತವೃತ್ತಿಯಲ್ಲಿ ಪ್ರಧಾನವಾಗಿರುವ ನಯ, ಸೌಕುಮಾರ್ಯ, ಲಾಲಿತ್ಯಗಳು ಇವನ ಶೈಲಿಯಲ್ಲೂ ಕಂಡು ಬರುತ್ತವೆ. ಅವು ಇವನ ಶೈಲಿಯ ಪರಿಮಿತಿಯೂ ಹೌದು. ಶೃಂಗಾರ ಶಾಂತ ಕರುಣ ರಸಗಳ ಚಿತ್ರಣಕ್ಕೆ ಅನುಕೂಲಿಸುವಂತೆ ನಾಗಚಂದ್ರನ ಶೈಲಿ ವೀರ, ರೌದ್ರ, ಭಯಾನಕ ರಸಗಳ ಆವಿಷ್ಕಾರಕ್ಕೆ ಅನುಕೂಲಿಸುವುದಿಲ್ಲ. ಪಂಪ, ರನ್ನರ ಶೈಲಿಯ ಆವೇಶ ಮೊರೆತಗಳು ಇವನ ಶೈಲಿಯಲ್ಲಿಲ್ಲ. ಅರ್ಥಾಂತರ ನ್ಯಾಸಾಲಂಕಾರ ನಾಗಚಂದ್ರನಿಗೆ ಬಹುಪ್ರಿಯವಾದುದು; ಅದನ್ನು ಇವನು ಉದ್ದಕ್ಕೂ ಎರಚುತ್ತಾ ಹೋಗುತ್ತಾನೆ. ಇವನ ಅರ್ಥಾಂತರನ್ಯಾಸಗಳಲ್ಲಿ ಕೆಲವು ಅತ್ಯಂತ ಸಾರ್ಥಕವಾಗಿವೆ.

ಪಾಂಡಿತ್ಯಪ್ರದರ್ಶನದ ಸಾಫಲ್ಯ ನಾಗಚಂದ್ರನಿಗಿಲ್ಲ. ಕಾವ್ಯ ಎಲ್ಲರಿಗೂ ಗ್ರಾಹ್ಯವಾಗಬೇಕು. ಆದರಿಂದ ಬದುಕಿಗೆ ಒಳಿತಾಗಬೇಕು ಎಂಬ ನಿಲುವು. ಜನತಾಂತರ್ದೃಷ್ಟಿ ಇವನದು. ಇವನ ಪ್ರಕಾರ, ಕಾವ್ಯ ಕೇವಲ ಮನರಂಜನೆಯ ಮಾಧ್ಯಮವಾಗಬಾರದು. ಆತ್ಮೋನ್ನತಿಕಾರಕವಾಗಬೇಕು. ಕಾವ್ಯದಲ್ಲಿ ರೀತಿಗಿಂತ ವಸ್ತು ಮುಖ್ಯವೆಂದು ಇವನ ಅಭಿಪ್ರಾಯ; ಕಲೆಗಾಗಿ ಕಲೆ ಎಂಬ ಪಂಥ'ಕ್ಕೆ ಇದು ವಿರುದ್ಧ, ಕವಿ ರಾಗದ್ವೇಷರಹಿತನಾಗಿರಬೇಕು ಹಾಗಿಲ್ಲದಿದ್ದರೆ ಅವನ ಕೃತಿ ವಿಷೋದ್ಯಾನವನ್ನು ಬಿತ್ತಿ ಬೆಳೆದಂತಾಗುತ್ತದೆ ಎಂಬ ನಾಗಚಂದ್ರನ ಹೇಳಿಕೆ ಗಮನಾರ್ಹವಾದುದು. ಇವನು ತನ್ನ ಈ ಸಮಷ್ಟಿಕಲ್ಯಾಣನಿಷ್ಠಾವಾದ ನಿಲುವಿನಿಂದಾಗಿ ಕನ್ನಡ ಚಂಪೂ ಕವಿಗಳಲ್ಲಿ ಒಂದು ಅನನ್ಯವಾದ ಸ್ಥಾನವನ್ನು ಪಡೆದುಕೊಳ್ಳುತ್ತಾನೆ.

ತನ್ನ ಕಾಲಕ್ಕೆ ಜನಪ್ರಿಯತೆಯನ್ನು ಕಳೆದುಕೊಂಡು ಅಧೋಮುಖವಾಗಿದ್ದ ಜೈನ ಧರ್ಮವನ್ನು ಮತ್ತೆ ಜನಪ್ರಿಯವಾಗಿಸಬೇಕು. ಮೇಲೆತ್ತಬೇಕು ಎಂಬ ಘನೋದ್ದೇಶದಿಂದ ತನ್ನ ಎರಡೂ ಕೃತಿಗಳಿಗೂ ಧಾರ್ಮಿಕ ವಸ್ತುವನ್ನು ಆರಿಸಿಕೊಂಡು ಕಾವ್ಯ ರಚಿಸಿದ ನಾಗಚಂದ್ರ ಮಹಾಕವಿಯಲ್ಲದಿದ್ದರೂ ದ್ವಿತೀಯ ಶ್ರೇಣಿಯ ಕವಿಗಳಲ್ಲಿ ಅಗ್ರಗಣ್ಯನಾಗಿ ನಿಲ್ಲುವ ಯೋಗ್ಯತೆಯುಳ್ಳವನಾಗಿದ್ದಾನೆ. (ಪಿ.ಪಿ.ಕೆ.)

**ನಾಗತಿಹಳ್ಳಿ ಚಂದ್ರಶೇಖರ :** 1958- . ಚಲನಚಿತ್ರ ನಿರ್ದೇಶಕ, ಲೇಖಕ, ಹಾಗೂ ಪರಿಸರವಾದಿ. ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನ ನಾಗತಿಹಳ್ಳಿ ಗ್ರಾಮದಲ್ಲಿ 1958 ಆಗಸ್ಟ್ 15ರಂದು ಜನಿಸಿದರು. ತಂದೆ ತಿಮ್ಮಶೆಟ್ಟಿಗೌಡ, ತಾಯಿ ಪಾರ್ವತಮ್ಮ. ಬಾಲ್ಯದಿಂದಲೇ ಸಾಹಿತ್ಯಾಸಕ್ತಿ ಹೊಂದಿದ್ದ ಇವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡದಲ್ಲಿ ಸ್ನಾತಕೋತ್ತರ ಪದವಿಯನ್ನು ಹತ್ತು ಚಿನ್ನದ ಪದಕಗಳನ್ನು ಪಡೆಯುವುದರೊಂದಿಗೆ ಪೂರೈಸಿದರು (1985). ಗ್ರಾಮೀಣ ಪ್ರದೇಶದಿಂದ ಬಂದ ಇವರು ವಿದ್ಯಾರ್ಥಿ ಜೀವನದಲ್ಲಿ ಮೈಲಿಗಲ್ಲುಗಳಿಗೆ ಬಣ್ಣ ಬಳಿಯುವುದು, ರಾಜ್ಯ ಹಾಲು ಒಕ್ಕೂಟದಲ್ಲಿ ದಿನಗೂಲಿಯ ನೌಕರಿ ಮಾಡುವುದು ಮೊದಲಾದ ಕೆಲಸಗಳ ಮೂಲಕ ತಮ್ಮ ಅಗತ್ಯಗಳನ್ನು ಪೂರೈಸಿಕೊಳ್ಳುತ್ತಿದ್ದರು.

ಇವರು ಹದ್ದುಗಳು, ನನ್ನ ಪ್ರೀತಿಯ ಹುಡುಗನಿಗೆ, ಮಲೆನಾಡಿನ ಹುಡುಗಿ - ಬಯಲು ಸೀಮೆಯ ಹುಡುಗ, ಸನ್ನಿಧಿ, ಅಕಾಲ ಮೊದಲಾದ ಆರು ಕಥಾಸಂಕಲನಗಳನ್ನೂ ಎರಡು ಪ್ರವಾಸ ಕಥನಗಳನ್ನೂ ಮೂರು ಕಾದಂಬರಿಗಳನ್ನೂ ರಚಿಸಿದ್ದಾರೆ.

ಕಾಡಿನಬೆಂಕಿ ಚಲನಚಿತ್ರಕ್ಕೆ ಚಿತ್ರಕಥೆ, ಸಂಭಾಷಣೆ ಮತ್ತು ಗೀತರಚನೆ ಮಾಡುವುದರ ಮೂಲಕ ಚಿತ್ರರಂಗ ಪ್ರವೇಶಿಸಿದರು (1987). ಸಂಕ್ರಾಂತಿ ಚಲನಚಿತ್ರದ ಮೂಲಕ ಕಥೆಗಾರರಾದರು (1988). ಉಂಡೂ ಹೋದ ಕೊಂಡೂಹೋದ ಎಂಬ ಚಿತ್ರ ನಿರ್ದೇಶಿಸಿ (1992) ಯಶಸ್ವಿ ಚಿತ್ರ ನಿರ್ದೇಶಕರೆನಿಸಿದರು. ಕೊಟ್ರೇಶಿ ಕನಸು, ಬಾ ನಲ್ಲೆ ಮಧುಚಂದ್ರಕ್ಕೆ, ಅಮೆರಿಕಾ ಅಮೆರಿಕಾ, ಹೂಮಳೆ, ನನ್ನ ಪ್ರೀತಿಯ ಹುಡುಗಿ, ಪ್ಯಾರಿಸ್ ಪ್ರಣಯ ಮುಂತಾದ ಚಲನಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಪ್ರತಿಬಿಂಬ, ವಠಾರ - ಈ ಧಾರವಾಹಿಗಳ ಮೂಲಕ ಕಿರುತೆರೆಯಲ್ಲಿಯೂ ಇವರು ಅಪಾರ ಯಶಸ್ಸು ಗಳಿಸಿದರು.

ಅಮೆರಿಕಾ ಮತ್ತು ಯೂರೋಪ್ ರಾಷ್ಟ್ರಗಳಲ್ಲಿ ವ್ಯಾಪಕ ಪ್ರವಾಸ ಮಾಡಿರುವ ಇವರು ಅಲ್ಲಿನ ವಿಶ್ವವಿದ್ಯಾಲಯಗಳಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿಯೂ ಕೆಲಸ ಮಾಡಿದ್ದಾರೆ. ಕನ್ನಡ ಚಿತ್ರವನ್ನು ಅಮೆರಿಕದ ಮಾರುಕಟ್ಟೆಯಲ್ಲಿ ಯಶಸ್ವಿಯಾಗಿ ಪ್ರದರ್ಶಿಸಿದ ಕೀರ್ತಿ ಇವರದು.

ಇವರು ನಿರ್ದೇಶಿಸಿರುವ ಸಂಕ್ರಾಂತಿ ಚಿತ್ರಕ್ಕೆ ಅತ್ಯುತ್ತಮ ಕಥಾಲೇಖನ ರಾಜ್ಯ ಪ್ರಶಸ್ತಿ (1988-89) ಉಂಡೂಹೋದ ಕೊಂಡೂಹೋದ ಚಿತ್ರಕ್ಕೆ ಅತ್ಯುತ್ತಮ ಕಥಾಲೇಖಕ ಪ್ರಶಸ್ತಿ (1992), ಕೊಟ್ರೇಶಿ ಕನಸು ಚಿತ್ರಕ್ಕೆ ಅತ್ಯುತ್ತಮ ಸಾಮಾಜಿಕ ಪರಿಣಾಮ ಬೀರುವ ಚಿತ್ರವೆಂದು ರಾಜ್ಯ ಪ್ರಶಸ್ತಿ (1993-94), ನಿರ್ದೇಶಕರ ಸಂಘದ ಪ್ರಶಸ್ತಿ, ಸನ್ಮಾನ ಹಾಗೂ ಇದೇ ಚಿತ್ರಕ್ಕೆ 1994ರ ಅತ್ಯುತ್ತಮ ಪ್ರಾದೇಶಿಕ ಚಿತ್ರವೆಂದು ರಾಷ್ಟ್ರ ಪ್ರಶಸ್ತಿ ಲಭಿಸಿದೆ. ಅಮೆರಿಕಾ ಅಮೆರಿಕಾ ಚಿತ್ರ ಅತ್ಯುತ್ತಮ ಚಿತ್ರವೆಂದು ರಾಜ್ಯ ಪ್ರಶಸ್ತಿ ಹಾಗೂ ಅತ್ಯುತ್ತಮ ಕಥಾ ಪ್ರಶಸ್ತಿ ಪಡೆದುಕೊಂಡಿದೆ (1996-97). ವಿಭಿನ್ನ ಕಥಾಹಂದರದ ಹೂಮಳೆ ದ್ವಿತೀಯ ಅತ್ಯುತ್ತಮ ಚಿತ್ರಪ್ರಶಸ್ತಿ ಗಳಿಸಿದರೆ (1998-99) ನನ್ನ ಪ್ರೀತಿಯ ಹುಡುಗಿ 2001ರ ಅತ್ಯಂತ ಯಶಸ್ವೀ ಚಿತ್ರವೆಂದು ಪ್ರಶಸ್ತಿ ಪಡೆದಿದೆ.

(ಎಸ್‌ಯು.ಎಂ.)

**ನಾಗದೇವ :** ಸು.11 ನೆಯ ಶತಮಾನದಲ್ಲಿ ಆರಂಭದಲ್ಲಿದ್ದ ಜೈನ ಕವಿ. ಈತನನ್ನು ಎರಡನೆಯ ನಾಗವರ್ಮ ತನ್ನ ವರ್ಧಮಾನಪುರಾಣದಲ್ಲಿ ಸುಲೋಚನಾಚರಿತಮನಿಂ ಪೊದವಿರೆ ಪೇೞ್ದಂ ಕವಿತಾವಿದಗ್ಧಮತಿಯೆನಿಪ ನಾಗದೇವಕವೀಂದ್ರಂ ಎಂದು ಹೇಳುವುದರಿಂದ ಈತ ಸುಲೋಚನಾಚರಿತ ಎಂಬ ಕಾವ್ಯವನ್ನು ರಚಿಸಿದಂತೆ ತಿಳಿದುಬರುತ್ತದೆ. ನಾಗವರ್ಮ ಸ್ತುತಿಸಿರುವ ಎಲ್ಲ ಕವಿಗಳ ಕೃತಿಗಳೂ ಚಂಪೂಕೃತಿಗಳಾಗಿರುವುದರಿಂದ ಇದೂ ಚಂಪೂಕೃತಿಯಾಗಿರಬಹುದೆಂದು ಊಹಿಸಬಹುದಾಗಿದೆ. ಎರಡನೆಯ ನಾಗವರ್ಮ 1042ರಲ್ಲಿದ್ದವನಾದುದರಿಂದ ಈತ ಇದಕ್ಕೂ ಹಿಂದೆ ಇದ್ದಿರಬೇಕು.

ಕನ್ನಡ ಸಾಹಿತ್ಯದಲ್ಲಿ ಇನ್ನಿಬ್ಬರು ನಾಗವರ್ಮನ ಹೆಸರಿನ ಉಲ್ಲೇಖ

ಕಂಡುಬರುತ್ತದೆ. ಕವಿಚರಿತೆಕಾರರು ಶಕ 1129ರಲ್ಲಿ ಕಡೂರು 129ನೆಯ ಶಾಸನವನ್ನು ಬರೆದ ಒಬ್ಬ ನಾಗದೇವನನ್ನು ಹೆಸರಿಸುತ್ತಾರೆ.ಆದರೆ ಆದರೆ ಈತನ ಕಾಲ ಸು.1217 ಆಗುತ್ತದೆ. ಈತನನ್ನು ಕವಿತಿಳಕ ಎಂದು ವಿಶ್ಲೇಷಿಸಿ ಹೇಳಿದೆ. ಈತ ಗೌತಮ ಗೋತ್ರದವ. ಈತನ ತಂದೆ ನಾಗದೇವ, ತಾಯಿ ಚಾಮವ್ವೆ ಎಂದು ತಿಳಿದುಬರುತ್ತದೆ.

ಧಾರವಾಡ ಜಿಲ್ಲೆ ಗದಗು ತಾಲ್ಲೂಕಿನ ಕುರ್ತುಕೋಟಿಯಲ್ಲಿರುವ ಶಾಸನಗಳಲ್ಲಿ ಎರಡನ್ನು ಬರೆದ, 1082ರಲ್ಲಿದ್ದ ಇನ್ನೊಬ್ಬ ನಾಗದೇವ ಕಾಣಬರುತ್ತಾನೆ. ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ (1076-1126) ಈ ಶಾಸನ ರಚಿತವಾಗಿದೆ. ಈ ಶಾಸನದಲ್ಲಿ ಬರುವ

ಅಂಬುಧಿವೇಷ್ಟಿತವಸು

ಧಾಂಬಿಕೆಗೆ ಲಲಾಮಮೆನಿಪ ವಿಪ್ರಗ್ರಾಮಂ

ಪೊಂಬಳಲ ನಾಗದೇವ ಬು

ಧಂ ಬುಧತತಿ ಮೆಚ್ಚೆ ಕಾವ್ಯಮಂ ವಿರಚಿಸಿದಂ

ಎಂಬ ಪದ್ಯದಿಂದ ಈತ ಪ್ರಸಿದ್ಧವಾದ ವಿಪ್ರಗ್ರಾಮ ಪೊಂಬಳಲ ನಾಗದೇವನೆಂದು ತಿಳಿದುಬರುತ್ತದೆ. (ಎಸ್.ಬಿ.ಎಸ್.)

**ನಾಗಮಂಗಲ :** ಮಂಡ್ಯ ಜಿಲ್ಲೆಯ ಉತ್ತರ ಭಾಗದಲ್ಲಿರುವ ತಾಲ್ಲೂಕು ಮತ್ತು ಆ ತಾಲ್ಲೂಕಿನ ಮುಖ್ಯಸ್ಥಳ. ತಾಲ್ಲೂಕನ್ನು ಉತ್ತರ ಮತ್ತು ಪೂರ್ವದಲ್ಲಿ ತುಮಕೂರು ಜಿಲ್ಲೆ. ಪಶ್ಚಿಮದಲ್ಲಿ ಹಾಸನ ಜಿಲ್ಲೆ ಮತ್ತು ಕೃಷ್ಣರಾಜಪೇಟೆ ತಾಲ್ಲೂಕು, ದಕ್ಷಿಣದಲ್ಲಿ ಮಂಡ್ಯ ಮತ್ತು ಪಾಂಡವಪುರ ತಾಲ್ಲೂಕುಗಳು ಸುತ್ತುವರಿದಿದೆ. ಜಿಲ್ಲೆಯಲ್ಲೇ ಅತಿದೊಡ್ಡದಾದ ಈ ತಾಲ್ಲೂಕಿನ ವಿಸ್ತೀರ್ಣ 1,040 ಚಕಿಮೀ. ಜನಸಂಖ್ಯೆ 1,90,814. ಇದು ಪಾಂಡವಪುರ ಉಪಬಾಗದಲ್ಲಿದೆ. 1882ರ ವರೆಗೆ ಈ ತಾಲ್ಲೂಕು ಹಾಸನ ಜಿಲ್ಲೆಯಲ್ಲೂ ಅನಂತರ 1939ರಲ್ಲಿ ಮಂಡ್ಯ ಜಿಲ್ಲೆ ಆಗುವವರೆಗೆ ಮೈಸೂರು ಜಿಲ್ಲೆಯಲ್ಲೂ ಇತ್ತು. ಕಸಬೆ, ಬಿಂಡಿಗನವಿಲೆ, ಬೆಳ್ಳೂರು, ದೇವಲಾಪುರ ಮತ್ತು ಹೊಣಕೆರೆ ಹೋಬಳಿಗಳು ಒಟ್ಟು ಗ್ರಾಮಗಳ ಸಂಖ್ಯೆ 365.

ತಾಲ್ಲೂಕಿನ ಬಹುಭಾಗ ಹೆಚ್ಚುಕಡಿಮೆ ಮಟ್ಟಸ ಪ್ರದೇಶ. ಪಶ್ಚಿಮ ಮತ್ತು ಉತ್ತರ ಭಾಗಗಳಲ್ಲಿ ಸಾಧಾರಣ ಎತ್ತರದ ಗುಡ್ಡಬೆಟ್ಟಗಳಿವೆ. ಆದಿಚುಂಚನ ಗಿರಿ ಬೆಟ್ಟ ಪ್ರಸಿದ್ಧವಾದುದು. ಪಶ್ಚಿಮ ಭಾಗದ ಶಿಲೆಗಳಲ್ಲಿ ಸ್ವಲ್ಪಮಟ್ಟಿನ ಚಿನ್ನದ ನಿಕ್ಷೇಪವಿದೆ. ಆದರೆ ಇದು ಬಹು ಅಲ್ಪವಾಗಿದ್ದು ಇದರ ಉತ್ಪಾದನೆ ಆರ್ಥಿಕವಾಗಿ ಲಾಭಕರವಲ್ಲವೆನ್ನಲಾಗಿದೆ. ನಾಗಮಂಗಲದ ಪಶ್ಚಿಮಕ್ಕಿರುವ ಒಂದು ಬೆಟ್ಟದಲ್ಲಿ ಮೃದುವಾದ ಬಳಪದಕಲ್ಲು ದೊರಕುತ್ತದೆ. ತಾಲ್ಲೂಕು ಪೂರ್ವ ಮತ್ತು ದಕ್ಷಿಣಕ್ಕೆ ಇಳಿಜಾರಾಗಿದೆ. ತುಮಕೂರು ಜಿಲ್ಲೆಯಿಂದ ಹರಿದುಬರುವ ಶಿಂಷಾನದಿ ಸ್ವಲ್ಪದೂರ ತಾಲ್ಲೂಕುನ ಈಶಾನ್ಯ ಗಡಿಯಾಗಿ ಹರಿದು ಮುಂದೆ ಮದ್ದೂರಿನತ್ತ ಸಾಗುತ್ತದೆ. ತಾಲ್ಲೂಕಿನ ನೈಋತ್ಯ ಭಾಗದಲ್ಲಿ ಲೋಕಪಾವನಿ ನದಿ ಹುಟ್ಟಿ ದಕ್ಷಿಣಾಭಿಮುಖವಾಗಿ ಹರಿಯುತ್ತದೆ. ಹೆಚ್ಚು ಮಟ್ಟಿಗೆ ಬಂಜರಾಗಿರುವ ಈ ತಾಲ್ಲೂಕಿನಲ್ಲಿ ಅಲ್ಲಲ್ಲಿ ಕುರುಚಲು ಕಾಡುಗಳಿವೆ.
*

ಭೂಮಿ ಮುಖ್ಯವಾಗಿ ಮರಳುಮಿಶ್ರಿತ, ಸ್ವಲ್ಪ ಕೆಂಪು ಮಣ್ಣಿನ ಹರಹುಗಳು ಅಲ್ಲಲ್ಲಿವೆ. ಮಳೆ ಕಡಿಮೆ, ವಾರ್ಷಿಕ ಸರಾಸರಿ 598 ಮಿಮೀ. ರಾಗಿ, ಜೋಳ, ಹುರುಳಿ, ತೊಗರಿ, ಮೊದಲಾದ ಧಾನ್ಯಗಳು ಇಲ್ಲಿನ ಬೆಳೆಗಳು. ಹಿಂದಿನ ಕಾಲದಿಂದಲೂ ಅನೇಕ ಕೆರೆಗಳನ್ನು ಕಟ್ಟಲಾಗಿದ್ದು ಇಂದೂ ಕೆಲವು ಉಪಯೋಗದಲ್ಲಿವೆ. ನೀರಾವರಿ ಬಾವಿಗಳಿಂದ ಬತ್ತ ಕಬ್ಬುಗಳನ್ನು ಬೆಳೆಯುತ್ತಾರೆ. ಅಲ್ಪಪ್ರಮಾಣದಲ್ಲಿ ತೆಂಗು, ಬಾಳೆ, ಮೆಣಸಿನಕಾಯಿ, ತರಕಾರಿ ಮೊದಲಾದುವನ್ನು ಬೆಳೆಯಲಾಗುತ್ತದೆ. ತಿರುಗನಹಳ್ಳಿಯ ಸಣ್ಣ ಎಂಬ ಒಂದು ಜಾತಿಯ ಬತ್ತ ಈ ತಾಲ್ಲೂಕಿನ ವಿಶೇಷ ಬೆಳೆ. ಭೂಮಿ ಕೆಲವೆಡೆ ಫಲವತ್ತಾಗಿದ್ದರೂ ನೀರಿನ ಅಭಾವದಿಂದ ಇಲ್ಲಿನ ವ್ಯವಸಾಯ ಆರ್ಥಿಕವಾಗಿ ಲಾಭಕರವಾಗಿಲ್ಲ.

ಕುರಿಗಳನ್ನು ಅಧಿಕ ಪ್ರಮಾಣದಲ್ಲಿ ಸಾಕುವುದು ಇಲ್ಲಿನ ಒಂದು ಮುಖ್ಯ ಕಸಬು. ಇದೇ ಕಾರಣದಿಂದ ಈ ತಾಲೂಕಿನ ಹರಗಿನಹಳ್ಳಿಯಲ್ಲಿ ಹಿಂದೆ ಒಂದು ಕುರಿ ಸಾಕಣೆ ಕೇಂದ್ರವನ್ನು ಸ್ಥಾಪಿಸಲಾಗಿತ್ತು. 1863ರ ವರೆಗೂ ಅದು ಅಸ್ತಿತ್ವದಲ್ಲಿತ್ತು. ನಾಗಮಂಗಲ ಭಾಗ ಉತ್ತಮ ಹಳ್ಳಿಕಾರು ಜಾತಿಯ ರಾಸುಗಳಿಗೂ ಹೆಸರಾಗಿದೆ. ಕರಡಿಹಳ್ಳಿ ಮತ್ತು ಸುತ್ತಲ ಪ್ರದೇಶಗಳಲ್ಲಿ ಇದರ ಸಾಕಣೆ ಹೆಚ್ಚು. ತಾಲ್ಲೂಕಿನಲ್ಲಿ ಸ್ವಲ್ಪ ಮಟ್ಟಿಗೆ ರೇಷ್ಮೆ ವ್ಯವಸಾಯ ಇದೆ.

ಗಂಗರ ಕಾಲದ ವಾಸ್ತುಕೃತಿಗಳಿರುವ ಕಂಬದಹಳ್ಳಿ (ನೋಡಿ), ಹೊಯ್ಸಳರ ಕಾಲದ ದೇವಾಲಯಗಳಿರುವ ಬೆಳ್ಳೂರು, ಪ್ರಾಚೀನ ಅವಶೇಷಗಳಿರುವ ದೇವಲಾಪುರ, ಪುಣ್ಯಕ್ಷೇತ್ರಗಳಾದ ಬಿಂಡಿಗನವಿಲೆ (ನೋಡಿ), ಆದಿಚುಂಚನಗಿರಿ (ನೋಡಿ) ಸುಂದರ ಹಾಗೂ ಪವಿತ್ರ ತಾಣ ಆಲತಿಗಿರಿ (ನೋಡಿ) ತಾಲ್ಲೂಕಿನ ಪ್ರಮುಖ ಸ್ಥಳಗಳು. ನಾಗಮಂಗಲದಿಂದ ಸು. 5ಕಿಮೀ ದೂರದಲ್ಲಿ ಕೋಟೆಬೆಟ್ಟದ ಬುಡದಲ್ಲಿರುವ ಪಾಲಗ್ರಹಾರದಲ್ಲಿ ಶ್ರೀನಿವಾಸ ಮತ್ತು ನಾಚಾರಮ್ಮ (ಲಕ್ಷ್ಮಿ) ದೇವಾಲಯಗಳಿವೆ. ಇಲ್ಲಿ ಫೆಬ್ರವರಿ ತಿಂಗಳಿನಲ್ಲಿ ತೇರು ಹಾಗೂ ದನಗಳ ಜಾತ್ರೆ ಜರುಗುತ್ತವೆ. ನಾಗಮಂಗಲದ ಪಶ್ಚಿಮಕ್ಕೆ 6ಕಿಮೀ ದೂರದಲ್ಲಿರುವ ಪಡುವಲ ಪಟ್ಟಣ ಒಂದು ಕಾಲಕ್ಕೆ ಧಾರ್ಮಿಕ ಹಾಗೂ ವಿದ್ಯಾಕೇಂದ್ರವಾಗಿತ್ತು. ಇಲ್ಲಿ ರಾಮಾನುಜಾಚಾರ್ಯರು ತಪಸ್ಸು ಮಾಡಿದರೆಂದು ಒಂದು ಶಾಸನ ತಿಳಿಸುತ್ತದೆ. ಮಾಚಲಗಟ್ಟ, ಹೊಣಕೆರೆ ಹೋಬಳಿಯಲ್ಲಿರುವ ಒಂದು ಗ್ರಾಮ. ಹಿಂದೆ ಇದು ಬಿಜ್ಜಳೇಶ್ವರ ಎಂಬ ಹೆಸರಿನ ದೊಡ್ಡ ಊರಾಗಿತ್ತು. ಇಲ್ಲಿ 13ನೆಯ ಶತಮಾನದ ಮಲ್ಲೇಶ್ವರ ದೇವಾಲಯವಿದೆ. ಇಲ್ಲಿಯ ನಂದಿಯ ವಿಗ್ರಹ ಸುಂದರವಾಗಿದೆ. ಚೋಳಸಂದ್ರದಲ್ಲಿ 1145ರಲ್ಲಿ ಕಟ್ಟಿದ ಜೈನಬಸದಿ ಇದೆ. ಇದು ಹೊಯ್ಸಳ ಶೈಲಿಯ ಉತ್ತಮ ಕೃತಿಯಾದರೂ ಇಂದು ಶಿಥಿಲವಾಗಿವೆ. ಹಟ್ನದಲ್ಲಿರುವ ವೀರಭದ್ರ ದೇವಾಲಯ ಹಿಂದೆ ಜೈನಬಸ್ತಿಯಾಗಿತ್ತು. ಹೊಯ್ಸಳ ಶೈಲಿಯಲ್ಲಿರುವ ಈ ಗುಡಿಯನ್ನು 1179ರಲ್ಲಿ ಸೋಮಿಶೆಟ್ಟಿ ಎಂಬ ವರ್ತಕ ಕಟ್ಟಿಸಿದನೆಂದು ಒಂದು ಶಾಸನ ತಿಳಿಸುತ್ತದೆ. ಚಿನಕುರಳಿಯಲ್ಲಿ ಒಂದು ಆಂಜನೇಯ ದೇವಾಲಯವೂ ಅದರ ಸಮೀಪದಲ್ಲಿ ಹಲವು ಮಾಸ್ತಿ ಗುಡಿಗಳೂ ಇವೆ. ಇಲ್ಲಿರುವ ಮಾಸ್ತಿಕಲ್ಲು ವ್ಯಾಸನ ತೋಳುಕಲ್ಲು ರೀತಿಯವು. ಹೈದರ್ ಮತ್ತು ಮರಾಠರ ನಡುವೆ 1771ರಲ್ಲಿ ನಡೆದ ಯುದ್ಧದಲ್ಲಿ ಹೈದರ್ ಪರಾಜಿತನಾದದ್ದು ಇಲ್ಲಿಯೇ, ನಲ್ಕುಂದಿ ಗ್ರಾಮದಲ್ಲಿ ಗೋಪಾಲಕೃಷ್ಣ ದೇವಾಲಯವಿದೆ. ಇದು ಭಾಗವಂತಿಕೆಮೇಳಕ್ಕೆ ಹೆಸರಾದ ಸ್ಥಳ. ಈ ತಾಲ್ಲೂಕಿನಲ್ಲಿರುವ ಹದ್ದಿನಕಲ್ಲು ಹನುಮಂತರಾಯನ ಬೆಟ್ಟ ಪವಾಡಕ್ಕೆ ಪ್ರಸಿದ್ದ. ಈ ಬೆಟ್ಟದ ಮೇಲೆ ಸು. 10' ಎತ್ತರದ ಒಂದು ಕಂಬವಿದೆ. ಇದರಲ್ಲಿ ಇಂದ್ರಜಿತುವಿನ ಚಿತ್ರ ಕೆತ್ತಿದೆ. ಗಾಳಿ ಹಿಡಿದವರಿಗೆ ಈ ಸ್ಥಳದಲ್ಲಿ ಉಪಶಮನವಾಗುತ್ತದೆಂಬ ನಂಬಿಕೆಯಿಂದ ಅನೇಕ ಜನರು ಇಲ್ಲಿಗೆ ಬರುತ್ತಾರೆ. ಈ ಬೆಟ್ಟದ ಬುಡದಲ್ಲಲಿರುವ ಚೋರಸಂದ್ರ ಜನಪದ ಕಲೆಗೆ ಹೆಸರಾದ ಊರು.

ನಾಗಮಂಗಲ ಈ ತಾಲ್ಲೂಕಿನ ಆಡಳಿತ ಕೇಂದ್ರ. ಮೈಸೂರಿನಿಂದ ಸು. 65 ಕಿಮೀ ಉತ್ತರಕ್ಕೆ ಪಾಂಡವಪುರ-ಬೆಳ್ಳೂರು- ಚಿತ್ರದುರ್ಗ ರಸ್ತೆಯಲ್ಲಿದೆ. ಜನಸಂಖ್ಯೆ 16050. ಇಲ್ಲಿಂದ ಚನ್ನರಾಯಪಟ್ಟಣ, ಕೃಷ್ಣರಾಜಪೇಟೆ, ಮಂಡ್ಯ, ಮದ್ದೂರುಗಳಿಗೆ ರಸ್ತೆಗಳಿವೆ. ಉತ್ತರದಲ್ಲಿ ಬೆಳ್ಳೂರಿನ ರಸ್ತೆ ಬೆಂಗಳೂರು ಹಾಸನ ಮಾರ್ಗವನ್ನು ಕೂಡುತ್ತದೆ. ಅಲ್ಲದೆ ತುಮಕೂರು, ಸಿರಾಗಳಿಗೂ ಸಂಪರ್ಕ ರಸ್ತೆಗಳಿವೆ. ಇಲ್ಲಿ ಪುರಸಭೆ ಇದೆ. ಒಂದು ಸರ್ಕಾರಿ ಆಸ್ಪತ್ರೆ, ಪಶು ವೈದ್ಯಶಾಲೆ, ಎರಡು ಸರ್ಕಾರಿ ಪ್ರೌಢಶಾಲೆಗಳು ಹಾಗೂ ಒಂದು ಜೂನಿಯರ್ ಕಾಲೇಜು ಒಂದು ಕಸಬು ತರಬೇತಿ ಶಾಲೆ ಇವೆ. ಇಲ್ಲಿನ ಸುತ್ತಮುತ್ತ ಗ್ರಾಮಾಂತರ

ಪ್ರದೇಶಗಳಲ್ಲಿಯ ವ್ಯವಸಾಯ ಬೆಳೆಗಳಿಗೆ ಇದು ಮಾರಾಟ ಕೇಂದ್ರ. ಪ್ರತಿ ಶುಕ್ರವಾರ ಸಂತೆ ನಡೆಯುತ್ತದೆ. ಕಂಬಳಿ ನೇಯುವುದು, ಚಾಪೆ ಹೆಣೆಯುವುದು, ಎಣ್ಣೆ ತೆಗೆಯುವುದು - ಮೊದಲಾದ ಉಪಕಸಬುಗಳಿವೆ. ಒಂದು ವೃತ್ತಿಶಿಕ್ಷಣ ತರಬೇತಿ ಕೇಂದ್ರವಿದೆ. ಕೈಗಾರಿಕಾ ಘಟಕವೊಂದು ನಿರ್ಮಾಣವಾಗುತ್ತಿದೆ. ನಾಗಮಂಗಲದಲ್ಲಿ ಹಳೆಯ ಸಂಪ್ರದಾಯದ ಹಿತ್ತಾಳೆ, ಕಂಚಿನ ವಿಗ್ರಹಗಳು ಮಾಡುವ ಅನೇಕ ಕುಟುಂಬಗಳಿವೆ. ಇವರು ತಯಾರಿಸುವ ಪೂಜೋಪಕರಣಗಳು ವಿಗ್ರಹಗಳು ಮತ್ತು ಇತರ ಕಲಾವಸ್ತುಗಳಿಗೆ ದೇಶಾದ್ಯಂತ ಬೇಡಿಕೆ ಇದೆ.

ನಾಗಮಂಗಲ ಹಿಂದೆ ಒಂದು ಅಗ್ರಹಾರವಾಗಿತ್ತು. ಈ ಊರಿನ ಸುತ್ತ ರಕ್ಷಣೆಗಾಗಿ ಕೋಟೆ ಇತ್ತು.

ನಾಗಮಂಗಲ ಪ್ರದೇಶ ಹಿಂದೆ ದಂಡಕಾರಣ್ಯದ ಭಾಗವಾಗಿತ್ತು. ಲೋಹಿತವಂಶದವರು ಇಲ್ಲಿಗೆ ಮೊದಲು ವಲಸೆ ಬಂದರು. ಆ ವಂಶದ ಒಬ್ಬ ಪಾಳೆಯಗಾರ ಕನಸಿನಲ್ಲಿ ಕಂಡ ದೇವರಿರುವ ಹುತ್ತವನ್ನು ಅರಸುತ್ತ, ನಾಗಮಂಗಲವಿರುವ ಸ್ಥಳಕ್ಕೆ ಬಂದು, ಅಲ್ಲಿ ಸರ್ಪವೊಂದು ಸುತ್ತುತ್ತಿದ್ದುದನ್ನೂ ನರಸಿಂಹದೇವರು ಆವಿರ್ಭಾವವಾಗಿದ್ದುದನ್ನೂ ಕಂಡು ಅಲ್ಲಿಯ ದೇವಾಲಯ ನಿರ್ಮಿಸಿದ. ಆದ್ದರಿಂದ ಈ ಸ್ಥಳಕ್ಕೆ ನಾಗಮಂಡಲ ಎಂದು ಹೆಸರಾಯಿತು ಎಂದು ಪ್ರತೀತಿ. ಈಗ ಇದೇ ನಾಗಮಂಗಲವಾಗಿದೆ. ಇದು ಮಹಾಭಾರತ ಕಾಲದಲ್ಲಿದ್ದ ಮಣಿಪುರ, ಈ ನಗರಕ್ಕೆ ಚತುರ್ವೇದ ಭಟ್ಟಾರಕರತ್ನ ಅಗ್ರಹಾರವೆಂಬ ಹೆಸರಿದ್ದು ಹಿಂದೆ ದೊಡ್ಡ ವಿದ್ಯಾ ಮತ್ತು ವ್ಯಾಪಾರ ಕೇಂದ್ರವಾಗಿತ್ತು ಎಂಬ ಕಥೆಗಳೂ ಇವೆ. ಗಂಗರ ಕಾಲದ ಶಾಸನವೊಂದು ಇಲ್ಲಿ ದೊರಕಿದೆ. 1135ರಲ್ಲಿ ವಿಷ್ಣುವರ್ಧನನ ರಾಣಿ ಬಮ್ಮಲದೇವಿ ಇಲ್ಲಿನ ಅಗ್ರಹಾರವನ್ನು ಜೀರ್ಣೋದ್ಧಾರ ಮಾಡಿದಳು. ಆ ಕಾಲದಲ್ಲಿ ಊರು ಪ್ರವರ್ಧಮಾನ ಸ್ಥಿತಿಯಲ್ಲಿದ್ದಂತೆ ತೋರುತ್ತದೆ. 17ನೆಯ ಶತಮಾನದವರೆಗೂ ಲೋಹಿತ ವಂಶದ ಪಾಳೆಯಗಾರರು ಇಲ್ಲಿ ಆಳುತ್ತಿದ್ದರೆನ್ನಲಾಗಿದೆ. ಇಲ್ಲಿಯ ಒಳಕೋಟೆಯನ್ನು ಆ ವಂಶದ ಜೈವಿಡನಾಯಕ 1270ರಲ್ಲಿ ಕಟ್ಟಿಸಿದನೆಂದೂ ಹೊರಕೋಟೆಯನ್ನು ಚನ್ನಪಟ್ಟಣದ ಜಗದೇವರಾಯ ಕಟ್ಟಿಸಿದನೆಂದೂ ಹೇಳಲಾಗುತ್ತದೆ. ಈಗಲೂ ಕೋಟೆಯ ಅವಶೇಷಗಳಿವೆ. ಜಗದೇವರಾಯನ ಕಾಲದಲ್ಲಿ ಇದು ಅವನ ಮುಖ್ಯ ಪಟ್ಟಣಗಳಲ್ಲೊಂದಾಗಿತ್ತು. 1630ರಲ್ಲಿ ಇದು ಮೈಸೂರಿನ ಚಾಮರಾಜ ಒಡೆಯರ ಅಧೀನವಾಯಿತು. ಮೈಸೂರು ಮರಾಠ ಯುದ್ಧಗಳಲ್ಲಿ ಇದಕ್ಕೆ ಅನೇಕ ಬಾರಿ ಹಾನಿ ತಟ್ಟಿತು. 1792ರಲ್ಲಿ ಪರಶುರಾಮ ಭಾವು ಇದನ್ನು ಕೊಳ್ಳೆಹೊಡೆದಿದ್ದ.

ಸೌಮ್ಯಕೇಶವ ಗುಡಿ ಇಲ್ಲಿನ ದೇವಾಲಯಗಳಲ್ಲಿ ದೊಡ್ಡದು. ಹೊಯ್ಸಳರ, ಬಹುಶಃ ವಿಷ್ಣುವರ್ಧನನ ಕಾಲದ್ದು, 41/2 ಅಡಿ ಎತ್ತರದ ನಕ್ಷತ್ರಾಕಾರದ ಜಗತಿಯ ಮೇಲಿರುವ ತ್ರಿಕೂಟಾಚಲ, ಮಧ್ಯ ಗರ್ಭಗುಡಿಯಲ್ಲಿ ಸೌಮ್ಯಕೇಶವ, ಪಕ್ಕದವುಗಳಲ್ಲಿ ನರಸಿಂಹ ಮತ್ತು ವೇಣುಗೋಪಾಲ ದೇವರುಗಳಿವೆ. ಹೊರಭಿತ್ತಿಯ ಮೇಲೆ ಕೇವಲ ಅರೆಗಂಬಗಳ ಅಲಂಕರಣವಿದೆ. ಮುಂದುಗಡೆ ಪಾತಾಳಾಂಕಣ, ಸುತ್ತಲೂ ಪ್ರಾಕಾರ ಮತ್ತು ಮಹಾದ್ವಾರದ ಮೇಲೆ ಏಳು ಅಂತಸ್ತಿನ ದ್ರಾವಿಡ ಗೋಪುರ ಇವೆ. ಪಾತಾಳಾಂಕಣದಲ್ಲಿ ಶ್ರೀವೈಷ್ಣವ ಸಂಪ್ರದಾಯದ ದೇವರುಗಳು ಮತ್ತು ಆಳ್ವಾರರುಗಳ ಗುಡಿಗಳಿವೆ. ದೇವಾಲಯದ ಮುಂಭಾಗದಲ್ಲಿರುವ 55 ಅಡಿ ಎತ್ತರದ ಗರುಡಗಂಬ ಉತ್ತಮ ಕಲಾಕೃತಿ. ಗೋಪುರ ಮತ್ತು ಕಂಬವನ್ನು ಕಿತ್ತಿಸಿದವನು ಜಗದೇವರಾಯ ಎಂದು ಹೇಳಿಕೆ. ಈ ದೇವಾಲಯದ ಸಮೀಪದಲ್ಲಿರುವ ನರಸಿಂಹ ದೇವಾಲಯ ಸಹ ಹೊಯ್ಸಳ ಕಾಲದ್ದು. ಕಂಬಗಳನ್ನು ಬಿಟ್ಟರೆ ಹೆಚ್ಚಿನ ಕಲಾವಂತಿಕೆ ಇಲ್ಲಿಲ್ಲ. ಸ್ಥಳೀಯ ಐತಿಹ್ಯಗಳ ಪ್ರಕಾರ ಇದೇ ಈ ಊರಿನ ಅತಿ ಪ್ರಾಚೀನ ದೇವಾಲಯ. ನರಸಿಂಹ ವಿಗ್ರಹ ಸಿಕ್ಕಿದ ಭಾಗದಲ್ಲಿ ಬೆಳೆದಿದ್ದ ಹಂಗರು ಮರದ ನಲವತ್ತು ಅಡಿ ಉದ್ದದ ಒಂದು ಕೊಂಬೆ ಈ ದೇವಾಲಯದಲ್ಲಿದೆ. ಸು. 1135ರ ಭುವನೇಶ್ವರ ದೇವಾಲಯವೂ ಹೊಯ್ಸಳ ಕಾಲದ್ದಾದರೂ ಹೆಚ್ಚು ಮಟ್ಟಿಗೆ ದ್ರಾವಿಡ ಸಂಪ್ರದಾಯದಲ್ಲೇ ಇರುವ ಕಟ್ಟಡ. ವೀರಭದ್ರ ಮತ್ತು ಭದ್ರಕಾಳಿಯ ದೇವಾಲಯಗಳೂ ಇಲ್ಲಿವೆ. ಈ ಊರಿನ ಗ್ರಾಮದೇವತೆಯಾದ ಬಡಗೋಡಮ್ಮನ ದೇವಾಲಯ ಹಿರೀಕೆರೆಯ ಉತ್ತರ ಕೋಡಿಯಲ್ಲಿದೆ. ಅಕ್ಕಸಾಲಿಗರ ಕಾಳಮ್ಮನ ಗುಡಿ ನಾಗಮಂಗಲದ ಒಳ ಕೋಟೆಯ ದಿಡ್ಡಿ ಬಾಗಿಲಿನಲ್ಲಿದೆ. ಊರಿನ ನಾಲ್ಕು ದಿಕ್ಕುಗಳಲ್ಲೂ ಕೆರೆಗಳಿವೆ. ಅವು ಸೂಳೆಕೆರೆ, ಹಿರೀಕೆರೆ, ಸಿಂಗೇ ಅರಸಿನ ಕೆರೆ ಮತ್ತು ಅಮ್ಮನಕೆರೆ, ಕೋಟೆಯ ಅವಶೇಷಗಳಲ್ಲದೆ ಹಳೆಯ ವೈಭವದ ಕುರುಹಾಗಿ ಇನ್ನೂ ಕೆಲವು ಅವಶೇಷಗಳಿವೆ. ಸೌಮ್ಯಕೇಶವ ಮತ್ತು ನರಸಿಂಹ ಗುಡಿಗಳ ಮಧ್ಯದಲ್ಲಿರುವ ಜಾಗವನ್ನು ಜಗದೇವರಾಯನ ಅರಮನೆ ಇದ್ದ ತಾಣ ಎಂದು ಗುರುತಿಸುತ್ತಾರೆ. ಸಮೀಪದಲ್ಲಿ ಹಲವು ಕಂಬಗಳಿರುವ ದೊಡ್ಡ ಮಂಟಪವಿದ್ದು ಇದು ಹಿಂದಿನ ಸಭಾಮಂಟಪವಿದ್ದರೂ ಇರಬಹುದು. ಊರಿನ ಸಮೀಪದಲ್ಲಿ 60 ಅಡಿ ವ್ಯಾಸ ಮತ್ತು 3 ಅಡಿ ಮಾತ್ರ ಆಳವಿರುವ ಒಂದು ಕೊಳ ಇದೆ. ಅದರ ಮಧ್ಯೆ ಒಂದು ಮಂಟಪವೂ ಇದೆ. ಜಗದೇವರಾಯ ಜಲಕ್ರೀಡೆಗಾಗಿ ಈ ಕೊಳವನ್ನು ಕಟ್ಟಿಸಿದ್ದೆಂದು ಸ್ಥಳಪ್ರತೀತಿ. (ಎಚ್..ಎಂ.ಎನ್.)

**ನಾಗಮಂಗಲದ ಪ್ರಭುಗಳು :** 15ನೆಯ ಶತಮಾನದ ಮಧ್ಯಭಾಗದಲ್ಲಿ ವಿಜಯನಗರದ ಅರಸರ ಆಶ್ರಯದಲ್ಲಿ ನಾಗಮಂಗಲವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆ ಸುತ್ತಿನ ಪ್ರದೇಶವನ್ನು ಆಳುತ್ತಿದ್ದ ಒಂದು ಸಾಮಂತ ಮನೆತನದವರು. ಶಾಸನಗಳಿಂದ ತಿಳಿದುಬರುವ ಮಾಹಿತಿಗಳ ಪ್ರಕಾರ ಇವರು ಲೋಹಿತ ವಂಶಕ್ಕೆ ಸೇರಿದವರು. ಈ ವಂಶದ ಅರಸರಲ್ಲಿ ಶಿಂಗಣ್ಣವೊಡೆಯ ಹಾಗೂ ಆತನ ಪುತ್ರ ತಿಮ್ಮಣ್ಣದಂಡನಾಯಕ ಪ್ರಸಿದ್ಧರು. ತಿಮ್ಮಣ್ಣ ವಿಜಯನಗರದ ಮಲ್ಲಿಕಾರ್ಜುನನ (1446-65) ಕಾಲದಲ್ಲಿ ಮಹಾ ಪ್ರಧಾನ ಎಂಬ ಹುದ್ದೆಯನ್ನು ಪಡೆದಿದ್ದ. ಇವನಿಗೆ ದೇವರಾಜನೆಂಬ ಒಬ್ಬ ತಮ್ಮನಿದ್ದ. ಇವರು ಪರಮಭಾಗವತರೂ ವೈಷ್ಣವರೂ ಆಗಿದ್ದರು. ಇವರು ಶಿಂಗಣ್ಣವೊಡೆಯನ ಸತಿ ಸೀತಾಂಬಿಕಾ ಹೆಸರಿನಲ್ಲಿ ಪಾಂಡವಪುರ ತಾಲ್ಲೂಕಿನ ಹರವು ಗ್ರಾಮದ ಹತ್ತಿರ ಹೊಸವೂರ ಎಂಬುದನ್ನು ಸೀತಾಪುರವೆಂದು ಮಾರ್ಪಡಿಸಿ ಅಲ್ಲಿ ರಾಮಚಂದ್ರದೇವರ ದೇವಸ್ಥಾನ ಕಟ್ಟಿಸಿ ಅನೇಕ ದಾನದತ್ತಿಗಳನ್ನು ಬಿಟ್ಟರು. ತಿಮ್ಮಣ್ಣದಂಡನಾಥ ಹಾಗೂ ಆತನ ಸತಿ ರಂಗಾಂಬಿಕಾ ಇವರು ಮೇಲುಕೋಟೆಯ ದೇವಸ್ಥಾನಕ್ಕೆ ವಿಶೇಷ ದತ್ತಿಗಳನ್ನು ಕೊಟ್ಟರು. ತಿಮ್ಮಣ್ಣನಿಗೆ ಯಾದವಗಿರಿ (ಮೇಲುಕೋಟೆ) ಜೀರ್ಣೋದ್ಧಾರ ಎಂಬ ಬಿರುದೂ ಇದ್ದಿತು. ಮೇಲುಕೋಟೆಯಲ್ಲಿನ ದೇವಸ್ಥಾನದ ಮತ್ತು ರಾಮಾನುಜಸಭೆಯ ಚಟುವಟಿಕೆಗಳು ಸಾಂಗವಾಗಿ ನಡೆಯಲೆಂದು ರಂಗಾಂಬಿಕೆಯ ಬಲ್ಲೇನಹಳ್ಳಿ ಹಾಗೂ ಯಲವದಪಲ್ಲಿ ಗ್ರಾಮಗಳನ್ನು ದತ್ತಿ ಹಾಕಿಕೊಟ್ಟಳು. ದೇವರಾಜ ಕಾವೇರಿ ನದಿಗೆ ಹೊಸದಾಗಿ ಕಟ್ಟೆಯೊಂದನ್ನು ಕಟ್ಟಿಸಿ ಸೀತಾಪುರ ಹರವು ಗ್ರಾಮಗಳ ಮುಖಾಂತರ ಕಾಲುವೆಯೊಂದನ್ನು ಒಯ್ಯುವ ಕೆಲಸವನ್ನು ಮಾಡಿದ (ತನ್ನಿಮಿತ್ತ ಪಾಂಡವಪುರ ಹಾಗೂ ಶ್ರೀರಂಗಪಟ್ಟಣ ತಾಲ್ಲೂಕುಗಳ ಕೆಲ ಗ್ರಾಮಗಳಿಗೆ ನೀರಾವರಿ ಸೌಲಭ್ಯ ದೊರೆಯಿತು). ನಾಮಂಗಲದ ಕೋಟೆಯನ್ನು ಸು. 1270ರಲ್ಲಿ ಈ ವಂಶದ ಜೈವಿಡನಾಯಕ ಕಟ್ಟಿಸಿದನೆಂಬ ಹೇಳಿಕೆ ಇದೆ. 16ನೆಯ ಶತಮಾನದ ಅಂತ್ಯದ ಹೊತ್ತಿಗೆ ಲೋಹಿತ ವಂಶದ ಪ್ರಭುಗಳು ತಮ್ಮ ಅಧಿಕಾರವನ್ನು ಕಳೆದುಕೊಂಡರು. ಆಗ ಚನ್ನಪಟ್ಟಣದಿಂದ ಆಳುತ್ತಿದ್ದ ಸಾಳುವ ವಂಶದ ಜಗದೇವರಾಯನ ಆಳ್ವಿಕೆಗೆ ನಾಮಂಗಲವೂ ಒಳಪಟ್ಟಿತ್ತು. (ಎಸ್.ಜಿ.)

**ನಾಗರತ್ನಮ್ಮ ಆರ್:** 1926- . ಕನ್ನಡ ರಂಗಭೂಮಿ ಕಲಾವಿದೆ. ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಕನ್ನಡ ರಂಗಭೂಮಿಯಲ್ಲಿ ಸ್ತ್ರೀಪಾತ್ರಗಳನ್ನೂ ಪುರುಷರೇ ನಿರ್ವಹಿಸಬೇಕಾಗಿತ್ತು. ಸ್ತ್ರೀಯರು ರಂಗವೇದಿಕೆಯನ್ನೇರುವುದಿರಲ್ಲಿ, ನಾಟಕಗಳನ್ನು ನೋಡುವುದೂ ಅಪರಾಧ ಎಂಬ ಭಾವನೆ ಇತ್ತು. ಆದರೆ ಈ ತಪ್ಪು ತಿಳಿವಳಿಕೆಯನ್ನು ಹೋಗಲಾಡಿಸಿದ ಕಲಾವಿದೆಯರಲ್ಲಿ ಮೊದಲಿಗರು ಎಲ್ಲಮ್ಮ, ರಾಜಮ್ಮ, ಎಂ.ವಿ.ರಾಜಮ್ಮ, ಪಂಡರಿಬಾಯಿ ಮೊದಲಾದವರು. ನಾಗರತ್ನಮ್ಮನವರೂ ಈ ಗುಂಪಿಗೆ ಸೇರಿದವರು. ಇವರು 1926 ಜೂನ್ 21ರಂದು ಮೈಸೂರಿನಲ್ಲಿ ಜನಿಸಿದರು. ತಂದೆ ಕೃಷ್ಣಭಟ್ಟ, ತಾಯಿ ರುಕ್ಮಿಣಮ್ಮ. ಎಳೆಯ ವಯಸ್ಸಿನಲ್ಲೇ ಇವರಿಗೆ ರಂಗದ ನಂಟು ಉಂಟಾಯಿತು.

ಮೈಸೂರಿನ ಆಗ್ರಹಾರದ ತೊಗರಿಬೀದಿಯಲ್ಲಿ ಬೀಡುಬಿಟ್ಟಿದ್ದ ಗುಬ್ಬಿ ಕಂಪನಿ, ಚಾಮುಂಡೇಶ್ವರಿ ಕಂಪನಿಗಳ ರಂಗತಾಲೀಮು ಇವರಲ್ಲಿ ಕುತೂಹಲವನ್ನುಂಟು ಮಾಡಿತು. ಚಾಮುಂಡೇಶ್ವರಿ ಕಂಪನಿಯ ತುಕಾರಾಂ ನಾಟಕದಲ್ಲಿ ಚಿಕ್ಕಹುಡುಗಿಯ ಪಾತ್ರದ ಮೂಲಕ ಇವರ ರಂಗಪ್ರವೇಶವಾಯಿತು. 12ನೆಯ ವಯಸ್ಸಿನಲ್ಲಿ ಎಚ್.ಎಲ್.ಎನ್.ಸಿಂಹ ಅವರ ಸಂಸಾರನೌಕೆ ನಾಟಕದಲ್ಲಿ ಸರಳೆಯ ಪಾತ್ರ ವಹಿಸಿ ಯಶಸ್ಸನ್ನು ಪಡೆದರು. ಪ್ರಾರಂಭದ ದಿನಗಳಲ್ಲಿ ಇವರು ಸಣ್ಣಪುಟ್ಟ ಪಾತ್ರಗಳನ್ನು ಮಾಡುತ್ತ ಮುಂದೆ ನಾಯಕಿ ಪಾತ್ರವಹಿಸುವ ಹಂತಕ್ಕೇರಿದರು. ಇದೇ ಸುಮಾರಿನಲ್ಲಿ ಬಿ.ಎನ್.ಚಿನ್ನಪ್ಪನವರ ಕಲಾಸೇವಾ ಮಂಡಲಿಯ ಕಬೀರದಾಸ್ ನಾಟಕದಲ್ಲಿ ಬೀಬಿಯ ಪಾತ್ರಕ್ಕೆ ಆಯ್ಕೆಯಾದರು. ಅಲ್ಲಿಂದ ಮುಂದೆ ಸಾಹುಕಾರ, ಸದಾರಮೆ, ಪ್ರೇಮಲೀಲಾ ನಾಟಕಗಳಲ್ಲಿ ಮುಖ್ಯಪಾತ್ರಗಳನ್ನು ನಿರ್ವಹಿಸಿದರು. ಎಚ್.ಎಲ್.ಎನ್.ಸಿಂಹಾಸ್ ಸೆಲೆಕ್ಟ್ ಆರ್ಟಿಸ್ಟ್‌ನಲ್ಲಿ ಹೆಚ್ಚಿನ ಅನುಭವಗಳಿಸಿದರು. ಸಿ.ಬಿ.ಮಲ್ಲಪ್ಪನವರ ಕಂಪನಿ, ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿ, ಶೇಷ ಕಮಲ ಕಲಾ ಮಂಡಲಿ, ಮಾಸ್ಟರ್ ಹಿರಣ್ಣಯ್ಯ ಮಿತ್ರ ಮಂಡಲಿ, ಚಲನಚಿತ್ರ ಕಲಾವಿದರ ಸಂಘ ಹಾಗೂ ಕೆಲವು ಹವ್ಯಾಸಿ ತಂಡಗಳಲ್ಲಿ ಪಾತ್ರವಹಿಸಿ ಖ್ಯಾತರಾದರು. ಕೆಲವು ಕಂಪನಿಗಳಲ್ಲಿ ಸಂಬಳವಿಲ್ಲದೆ ದುಡಿಯುವ ಪರಿಸ್ಥಿತಿಯೂ ಎದುರಾಗುತ್ತಿತ್ತು. ಕೆಲವೊಮ್ಮೆ ಊಟ ದೊರೆಯುವುದೂ ಕಷ್ಟವಾಗುತ್ತಿತ್ತು; ಆದರೆ ಇವರ ಪಾತ್ರ ಮಾತ್ರ ರಾಣಿಯದು. ಇಂಥ ಹೊತ್ತಿನಲ್ಲಿ ಕಲಾಭಿಮಾನಿಗಳ ಪ್ರೋತ್ಸಾಹವೇ ರಸದೂಟ ಎನಿಸುತ್ತಿತ್ತು.

ಹಿರಣ್ಣಯ್ಯ ಮಿತ್ರ ಮಂಡಲಿಯ ದೇವದಾಸಿ ನಾಟಕದಲ್ಲಿ ಸುನಂದೆ, ಕೆಲವೊಮ್ಮೆ ಮಣಿಮಂಜರಿ, ಎಚ್ಚಮ ನಾಯಕ ನಾಟಕದಲ್ಲಿ ಮೋಹಿನಿ ಹಾಗೂ ಲಲಿತಾ - ಈ ಪಾತ್ರಗಳನ್ನು ವಹಿಸಿ ಅಭಿನಯದ ಅನುಭವಗಳನ್ನು ತುಂಬಿಕೊಂಡರು. ಇದೇ ಸಮಯದಲ್ಲಿ ತಮ್ಮ ಸಹ ನಟರಾಗಿದ್ದ ಎ.ಆರ್. ಪಾರ್ಥಸಾರಥಿಯವರನ್ನು ವಿವಾಹವಾದರು (1945). ಮುಂದೆ ಪಾರ್ಥಸಾರಥಿಯವರು ಚಲನಚಿತ್ರ ಕ್ಷೇತ್ರದಲ್ಲಿ ಕೆಲಸ ಮಾಡಲು ಮದರಾಸಿಗೆ ತೆರಳಿದರು. ಆದರೆ ನಾಗರತ್ನಮ್ಮನವರು ಕಂಪನಿಯಲ್ಲೇ ಉಳಿದರು.

1958ರಲ್ಲಿ ಇವರ ಜೀವನದಲ್ಲಿ ಹೊಸ ಅಧ್ಯಾಯ ಆರಂಭವಾಯಿತು. ಸ್ತ್ರೀಯರು ಸ್ತ್ರೀಪಾತ್ರಗಳಿಗಷ್ಟೇ ಸೀಮಿತವಾಗದೆ ಪುರುಷ ಪಾತ್ರಗಳಲ್ಲಿಯೂ ಮೆರೆಯುವ ಸುಯೋಗ ಒದಗಿಬಂತು. ಶ್ರೀಕೃಷ್ಣಗಾರುಡಿ ನಾಟಕದಲ್ಲಿ ಎಲ್ಲ ಪುರುಷ ಪಾತ್ರಗಳನ್ನೂ ಸ್ತ್ರೀಯರೇ ವಹಿಸಿದರು. ಈ ನಾಟಕದಲ್ಲಿ ನಾಗರತ್ನಮ್ಮನವರದು ಭೀಮನ ಪಾತ್ರ. ಮಂಡ್ಯದಲ್ಲಿ ನಡೆದ ಮಾದರಿ ಪ್ರಯೋಗವಿದು. ಯಾವ ನಟರಿಗೂ ಕಮ್ಮಿಯಿಲ್ಲದಂತೆ ಅತ್ಯುತ್ತಮವಾಗಿ ನಟಿಸಿ, ಪ್ರೇಕ್ಷಕರನ್ನು ರಂಜಿಸಿದ ಇವರು 'ಭೀಮನ ಪಾತ್ರದ ನಾಗರತ್ನಮ್ಮ' ಎಂದೇ ಪ್ರಸಿದ್ಧರಾದರು. ಈ ಪಾತ್ರ ಎಷ್ಟರಮಟ್ಟಿಗೆ ಪ್ರಭಾವ ಬೀರಿತೆಂದರೆ ಗಜಾನನ ನಾಟಕ ಮಂಡಲಿಯ ಮಾಲೀಕರಾದ ಶ್ರೀ ಪಾದರಾಯರು ಸ್ತ್ರೀ ನಾಟಕ ಮಂಡಲಿಯನ್ನು ಸ್ಥಾಪಿಸಿ (1958) ಅದರ ನಾಯಕತ್ವವನ್ನು ನಾಗರತ್ನಮ್ಮನವರಿಗೆ ವಹಿಸಿದರು. ಈ ಜವಾಬ್ದಾರಿಯನ್ನು ನಾಗರತ್ನಮ್ಮನವರು ಯಶಸ್ವಿಯಾಗಿ ನಿರ್ವಹಿಸಿದರು. ಇದು ನಾಗರತ್ನಮ್ಮನವರ ರಂಗಭೂಮಿಯ ಬದುಕಿನ ಎರಡನೆಯ ಹಂತ ಎನ್ನಬಹುದು. ನಾಗರತ್ನಮ್ಮನವರಿಗೆ ಎಚ್.ಪಿ. ಸರೋಜ, ಬಿ.ಪಿ.ರಾಜಮ್ಮ, ಬಿ.ಎಸ್.ಮಂಜುಳಮ್ಮ, ಬಿ.ಎಸ್.ಪುಟ್ಟಮ್ಮ ಮೊದಲಾದ ಕಲಾವಿದೆಯರ ನಿಕಟಸಂಪರ್ಕ ಇದ್ದುದರಿಂದ ನಾಟಕಗಳನ್ನು ಆಡಲು ಕಷ್ಟವೆನಿಸಲಿಲ್ಲ. ಜೊತೆಗೆ ತಂಗಿ ಆರ್. ಮಂಜುಳಾ ಹಾಸ್ಯ ಪಾತ್ರದಲ್ಲಿದ್ದರು. ತಮ್ಮ ಆರ್.ಪರಮಶಿವನ್ ಸಂಗೀತ ನಿರ್ದೇಶಕರಾದರು. ನಾರಗತ್ನಮ್ಮನವರ ಬಳಗದ ಎಲ್ಲ ಕಲಾವಿದರೂ ವೃತ್ತಿಪರರು, ಹಾಗಾಗಿ ನಿರಂತರವಾಗಿ ಕ್ಯಾಂಪ್ ನಡೆಯಬೇಕಿತ್ತು. ಕೆಲವು ಸಲ ಉಪವಾಸ ಅನಿವಾರ್ಯವಾಗುತ್ತಿತ್ತು. ಅಷ್ಟೇ ಅಲ್ಲದೆ ಸ್ತ್ರೀಯರೆಂಬ ಕಾರಣಕ್ಕಾಗಿ ಕಿರುಕುಳವೂ ಆಗುತ್ತಿತ್ತು. ಇದರಿಂದ ಕೆಲವೊಮ್ಮೆ ಸಂಪಾದನೆ ಕಡಿಮೆಯಾಗುತ್ತಿತ್ತು. ಆದರೂ ಬಂದ ಹಣವನ್ನೆಲ್ಲ ಮಂಡಳಿಯ ಕಲಾವಿದರಿಗೇ ಹಂಚುತ್ತಿದ್ದರು. ತಮ್ಮ ಸಂಸ್ಥೆಯ ಕಲಾವಿದರ ಮಕ್ಕಳಿಗೆ ಬಿಡುವಿನ ವೇಳೆಯಲ್ಲಿ ವಿದ್ಯಾಭ್ಯಾಸ ಮುಂದುವರಿಸಲು ಅನುಕೂಲ ಕಲ್ಪಿಸಿ ನೆರವನ್ನು ನೀಡುತ್ತಿದ್ದರು. 'ಕಲಾ ಸೇವೆಯೇ ಪರಮೋಚ್ಚ ಗುರಿ' ಎಂದು ನಾಗರತ್ನಮ್ಮನವರು ಹಾಗೂ ಇವರ ಬಳಗದವರು ಭಾವಿಸಿದ್ದರು. ಸ್ತ್ರೀಯರೇ ಅಭಿನಯಿಸುತ್ತ, ಸ್ತ್ರೀಯರೇ ನಡೆಸುತ್ತಿದ್ದ ಸಂಸ್ಥೆ ಇದೊಂದೇ. ಗಂಡಸರಿಗೂ ಕಷ್ಟವೆನಿಸುತ್ತಿದ್ದ ನಾಟಕ ಕಂಪನಿಯನ್ನು ಸ್ತ್ರೀಯರನ್ನೇ ಕಟ್ಟಿಕೊಂಡು ನಡೆಸುತ್ತಿರುವುದಕ್ಕಾಗಿ ನಾಟಕರತ್ನ ಗುಬ್ಬಿವೀರಣ್ಣನವರು ಇವರನ್ನು ಪ್ರಶಂಸಿಸಿದ್ದರು.

ಸ್ತ್ರೀನಾಟಕ ಮಂಡಳಿ ರಜತೋತ್ಸವ ಸುವರ್ಣ ಮಹೋತ್ಸವಗಳನ್ನು ಆಚರಿಸಿತು. ಆದರೆ ಇವರ ಸಂಸ್ಥೆ ಪ್ರಕೃತಿಯ ವಿಕೋಪಕ್ಕೆ ಗುರಿಯಾದದ್ದೂ ಉಂಟು. ಒಮ್ಮೆ ಭಾರಿ ಮಳೆಯಿಂದಾಗಿ ರಂಗಮಂದಿರದ ಚಪ್ಪರವೇ ಉರುಳಿಬಿದ್ದು, ಬಹಳ ನಷ್ಟವಾಯಿತು. ಆದರೂ ಇವರು ಕೈಬಿಡದ ಛಲದಿಂದ ಕಂಪನಿಯನ್ನು ನಡೆಸಿಕೊಂಡು ಬಂದರು. ಮೈಸೂರು ಹಾಗೂ ಕರ್ನಾಟಕದ ಎಲ್ಲೆಡೆ ಸುಮಾರು 210ಕ್ಕೂ ಮಿಕ್ಕು ಊರುಗಳಲ್ಲಿ 28 ವರ್ಷಗಳ ಕಾಲ ಕಂಪೆನಿ ಬೇರೆ ಬೇರೆ ಸ್ಥಳಗಳಲ್ಲಿ ನೆಲೆಯೂರಿ ಪ್ರದರ್ಶನಗಳನ್ನು ನೀಡಿತು. ಕೃಷ್ಣಲೀಲಾ, ಸಂಪೂರ್ಣ ರಾಮಾಯಣ, ಬೇಡರಕಣ್ಣಪ್ಪ, ಸುಭದ್ರಾ ಪರಿಣಯ, ಸದಾರಮೆ, ದೇವದಾಸಿ, ಸಂಸಾರನೌಕೆ, ಮಕಮಲ್‌ಟೋಪಿ-ಇಂಥ ಪ್ರಸಿದ್ಧ ನಾಟಕಗಳನ್ನು ಆಡಿ ಪ್ರೇಕ್ಷಕರ ಮನಸ್ಸನ್ನು ಸೂರೆಗೊಂಡಿತು. ತಮ್ಮ ಪತಿ ಪಾರ್ಥಸಾರಥಿಯವರ ಅಕಾಲ ಮರಣದಿಂದಾಗಿ (1967) ಇವರ ಹೆಗಲಿಗೆ ಎಲ್ಲ ಹೊಣೆಗಾರಿಕೆ ಬಿದ್ದರೂ ರಂಗಭೂಮಿಯ ಬಗ್ಗೆ ಇವರ ಆಸಕ್ತಿ ಕುಂದಲಿಲ್ಲ. ನಾಟಕಗಳ ಪ್ರದರ್ಶನವನ್ನು ಮುಂದುವರಿಸಿದರು. ಆದರೆ ಕೊನೆಗೂ ಇವರು ಕಂಪನಿಯನ್ನು ನಿಲ್ಲಿಸಲೇ ಬೇಕಾಯಿತಾದರೂ ರಂಗಭೂಮಿ ಸೇವೆಯನ್ನು ಮಾತ್ರ ಬಿಡಲಿಲ್ಲ. ಇಂದಿಗೂ ಒಮ್ಮೊಮ್ಮೆ ಕರ್ನಾಟಕದ ವಿವಿಧೆಡೆಗಳಲ್ಲಿ ಇವರ ನಾಟಕಗಳು ನಡೆಯುತ್ತಿರುತ್ತವೆ.

ಸ್ತ್ರೀ ನಾಟಕ ಮಂಡಲಿಯ ಪ್ರಮುಖ ನಾಟಕಗಳಾದ ಶ್ರೀಕೃಷ್ಣಗಾರುಡಿಯಲ್ಲಿ ಭೀಮ, ಬೇಡರ ಕಣ್ಣಪ್ಪದಲ್ಲಿ ಕಣ್ಣಪ್ಪ, ರಾಮಾಯಣದಲ್ಲಿ ದಶರಥ ಹಾಗೂ ರಾವಣ, ಸಂಸಾರನೌಕೆಯಲ್ಲಿ ಸುಂದರೇಶ, ದೇವದಾಸಿಯಲ್ಲಿ ಸಖಾರಾಮ, ಸದಾರಮೆಯಲ್ಲಿ ಕಳ್ಳ ಹಾಗೂ ಮಕಮಲ್ ಟೋಪಿಯಲ್ಲಿ ಭೂಪಾಲ್ ಈ ಪಾತ್ರಗಳಲ್ಲಿ ನಾಗರತ್ನಮ್ಮ ನವರ ಅಭಿನಯ ಚಿರಸ್ಮರಣೀಯವಾಗಿದೆ. ಇವರ ಕಲಾಸೇವೆಗೆ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ರಾಜ್ಯ ನಾಟಕ ಅಕಾಡೆಮಿ ಪ್ರಶಸ್ತಿ, ಗುಬ್ಬಿವೀರಣ್ಣ ಪ್ರಶಸ್ತಿ ದೊರಕಿವೆ. (ಎಚ್.ಕೆ.ಆರ್.)

**ನಾಗರತ್ನಮ್ಮ,ಕೆ.ಎಸ್.:** 1923-93. ಪ್ರಮುಖ ಸಂಸದೀಯ ಪಟು. ಶಾಸಕಿಯಾಗಿ, ವಿಧಾನಸಭೆಯ ಅಧ್ಯಕ್ಷರಾಗಿ ಮತ್ತು ಸಚಿವೆಯಾಗಿ ಮೂರು ದಶಕಗಳಿಗೂ ಹೆಚ್ಚುಕಾಲ ವಿವಿಧ ಜವಾಬ್ದಾರಿ ಹುದ್ದೆಗಳನ್ನು ನಿರ್ವಹಿಸಿದ ಕರ್ನಾಟಕದ ಮೊದಲ ತಲೆಮಾರಿನ ಮಹಿಳಾ ರಾಜಕಾರಿಣಿ. ಕಬ್ಬಳ್ಳಿ ಸುಬ್ಬಣ್ಣ ನಾಗರತ್ನಮ್ಮ ಇವರ ಪೂರ್ತಿ ಹೆಸರು.

ಇವರು ಜನಿಸಿದ್ದು 1923 ನವೆಂಬರ್ 23 ರಂದು. ತಂದೆ ಸಿ.ಆರ್. ಗೌಡರು. ಮೈಸೂರು ಸಂಸ್ಥಾನದಲ್ಲಿ ಎಂಜಿನಿಯರ್ ಆಗಿದ್ದರು. ತಾಯಿ ಚನ್ನಮ್ಮ. ಬೆಂಗಳೂರಿನಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ನಡೆಯಿತು. ವಿದ್ಯಾವಂತ ಕುಟುಂಬದ ಹಿನ್ನೆಲೆಯಲ್ಲಿ ಬೆಳೆದರೂ ಸಂಪ್ರದಾಯಸ್ಥ ಸಮಾಜದ ಪರಿಣಾಮವಾಗಿ ಹನ್ನೊಂದನೆಯ ವರ್ಷದಲ್ಲೇ ಕಬ್ಬಳ್ಳಿ ಸಾಹುಕಾರ್ ಚನ್ನಬಸಪ್ಪನವರ ಮಗ ಕೆ.ಸಿ.ಸುಬ್ಬಣ್ಣನವರೊಡನೆ ಇವರ ವಿವಾಹವಾಯಿತು (1934). ಸುಬ್ಬಣ್ಣನವರು ಅಂದಿನ ಮೈಸೂರು ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿದ್ದವರು. ಪತಿಯ ಅಕಾಲಿಕ ನಿಧನದ ಅನಂತರ (1947) ಬಹುದೊಡ್ಡ ಮನೆತನದ ಸಮಸ್ತ ಜವಾಬ್ದಾರಿಗಳು ಇವರ ಹೆಗಲಿಗೆ ಬಿದ್ದುವು. ಹೊಣೆಗಾರಿಕೆಗಳಿಂದ ವಿಚಲಿತರಾಗದೆ ಸಮಸ್ತ ಜವಾಬ್ದಾರಿಗಳನ್ನು ಸಮರ್ಪಕವಾಗಿ ನಿರ್ವಹಿಸಿದರು. ಕಬ್ಬಳ್ಳಿ ಮನೆತನ ನಡೆಸಿಕೊಂಡು ಬರುತ್ತಿದ್ದ ಶಿಕ್ಷಣ ಸಂಸ್ಥೆಗಳು ಮತ್ತು ವಿದ್ಯಾರ್ಥಿನಿಲಯಗಳನ್ನು ಮುನ್ನಡೆಸಿದರು. ಕುಟುಂಬ ಹೊಂದಿದ್ದ

ವಿಸ್ತಾರವಾದ ಜಮೀನು ಮತ್ತು ಅಪಾರ ಆಸ್ತಿಯನ್ನು ಸಂರಕ್ಷಿಸಿದರು.

1957 ರ ಸಾರ್ವತ್ರಿಕ ಚುನಾವಣೆಯಲ್ಲಿ ಗುಂಡ್ಲುಪೇಟೆ ಕ್ಷೇತ್ರದಿಂದ ಸ್ವತಂತ್ರ ಅಭ್ಯರ್ಥಿಯಾಗಿ ವಿಧಾನ ಸಭೆಗೆ ಆಯ್ಕೆಯಾಗುವುದರ ಮೂಲಕ ಸಕ್ರಿಯ ರಾಜಕೀಯಕ್ಕೆ ಪ್ರವೇಶ ಮಾಡಿದರು. ಕಾಂಗ್ರೆಸ್ ಅಲೆಯ ವಿರುದ್ಧ ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಹನ್ನೆರಡು ಸಾವಿರ ಮತಗಳ ಅಂತರದಿಂದ ತಮ್ಮ ಮೊದಲ ಪ್ರಯತ್ನದಲ್ಲೇ ಗೆಲವು ಸಾಧಿಸಿದ್ದು ಇವರ ಅಪೂರ್ವಸಾಧನೆ.

1960ರ ದಶಕದಲ್ಲಿ ಎಸ್.ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾಗಿದ್ದಾಗ ಇವರು ಕಾಂಗ್ರೆಸ್ ಪಕ್ಷ ಸೇರಿದರು. 1972ರ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಅತ್ಯಧಿಕ ಬಹುಮತದಿಂದ ಅಧಿಕಾರದ ಗದ್ದುಗೆ ಏರಿತು. ಡಿ.ದೇವರಾಜ ಅರಸು ಮುಖ್ಯಮಂತ್ರಿಗಳಾದರು. ನಾಗರತ್ನಮ್ಮನವರು ವಿಧಾನ ಸಭಾಧ್ಯಕ್ಷರಾಗಿ ಆಯ್ಕೆಗೊಂಡರು. ಐದು ವರ್ಷಗಳ ಕಾಲ (1972 - 78) ಸಭಾಧ್ಯಕ್ಷರಾಗಿ ಮಹಿಳೆಯೊಬ್ಬರು ಕಾರ್ಯನಿರ್ವಹಿಸಿದ್ದು ವಿಧಾನಸಭೆ ಇತಿಹಾಸದಲ್ಲಿ ಗಮನಾರ್ಹ ಸಂಗತಿ.

ದೇವರಾಜ ಅರಸು ಕಾಂಗ್ರೆಸ್‌ನಿಂದ ದೂರವಾದರೂ ನಾಗರತ್ನಮ್ಮ ಕಾಂಗ್ರೆಸ್ ಪಕ್ಷದಲ್ಲೇ ಉಳಿದರು. ಜನತಾ ಸರ್ಕಾರದ ಆಡಳಿತದಲ್ಲಿ ವಿರೋಧಪಕ್ಷದ ನಾಯಕರಾಗಿ (1987 - 89) ಕಾರ್ಯನಿರ್ವಹಿಸಿದರು. ತುರ್ತು ಪರಿಸ್ಥಿತಿಯ ಅನಂತರ ನಡೆದ ವಿಧಾನಸಭಾ ಚುನಾವಣೆಯೊಂದನ್ನು ಬಿಟ್ಟರೆ 1957 ರಿಂದ ಅವಿರತವಾಗಿ ಮೂರುದಶಕಗಳ ಅವಧಿಯಲ್ಲಿ ವಿಧಾನಸಭೆಗೆ ಚುನಾಯಿತರಾಗಿದ್ದರು. ಗುಂಡ್ಲುಪೇಟೆ ತಾಲ್ಲೂಕಿನ ಬಹುತೇಕ ಅಭಿವೃದ್ಧಿ ಯೋಜನೆಗಳಲ್ಲಿ ಇವರ ಪಾತ್ರ ಬಹು ಪ್ರಮುಖವಾದುದು. ಕಬ್ಬಳ್ಳಿಯಲ್ಲಿ ಸಾರ್ವಜನಿಕ ಆರೋಗ್ಯ ಕೇಂದ್ರ ಪ್ರಾರಂಭ (1975) , ತೆರಕಣಾಂಬಿಯಲ್ಲಿ ಪ್ರೌಢಶಾಲೆಯ ಪ್ರಾರಂಭ, ಗುಂಡ್ಲುಪೇಟೆಯಲ್ಲಿ ಪಶುವೈದ್ಯಶಾಲೆ, ಇತರರೊಂದಿಗೆ ಸೇರಿ ಮೈಸೂರಿನಲ್ಲಿ ವಾಣಿವಿಲಾಸ ಮೊಹಲ್ಲಾದ ಮಾತೃಮಂಡಳಿ ವಿದ್ಯಾಸಂಸ್ಥೆಯ ಸ್ಥಾಪನೆ, ನಲ್ಲೂರು ಅಮಾನಿಕೆರೆ ಮತ್ತು ಕಲ್ಲುಕಟ್ಟೆಹಳ್ಳ ನೀರಾವರಿ ಯೋಜನೆಗಳು - ಇವು ನಾಗರತ್ನಮ್ಮ ಅವರ ಶ್ರಮದಿಂದ ಸಾಕಾರಗೊಂಡ ಕೆಲವು ಯೋಜನೆಗಳು. ಮೈಸೂರಿನ ಮರಿಮಲ್ಲಪ್ಪ ಕಾಲೇಜಿನಿಂದ ಆಡಳಿತ ಮಂಡಳಿಯ ಸದಸ್ಯರಾಗಿ, ಕಬ್ಬಳ್ಳಿ ವಿದ್ಯಾರ್ಥಿನಿಲಯದ ಪೋಷಕರಾಗಿಯೂ ಸೇವೆ ಸಲ್ಲಿಸಿದರು. 1970ರ ದಶಕದಲ್ಲಿ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಅಧ್ಯಕ್ಷಿಣಿಯಾಗಿದ್ದರು. ಬೆಂಗಳೂರಿನಲ್ಲಿ ಲಲಿತಕಲಾ ವಿದ್ಯಾಲಯ ಸ್ಥಾಪನೆಗೂ ಇವರು ಕಾರಣರಾದರು. ಅಖಿಲ ಭಾರತ ಮಹಿಳಾ ಪರಿಷತ್ತಿನ ಮೈಸೂರು ವಿಭಾಗದ ಅಧ್ಯಕ್ಷೆ ಮತ್ತು ಭಾರತದ ಸ್ಕೌಟ್ ಮತ್ತು ಗೈಡ್ ವಿಭಾಗದ ಉಪಾಧ್ಯಕ್ಷೆಯೂ ಆಗಿದ್ದರು.

ಸೋವಿಯತ್ ರಷ್ಯಾ ಮತ್ತು ಪೂರ್ವ ಜರ್ಮನಿ ಸರ್ಕಾರಗಳ ಆಮಂತ್ರಣದ ಮೇರೆಗೆ ಆ ದೇಶಗಳಿಗೆ ಭೇಟಿ ನೀಡಿ ಅಭಿವೃದ್ಧಿ ಯೋಜನೆಗಳ ಬಗ್ಗೆ ನೇರಮಾಹಿತಿ ಹೊಂದಿದರಲ್ಲದೆ, ಸ್ವೀಡನ್, ಸ್ವಿಟ್ಜರ್‌ಲೆಂಡ್, ನಾರ್ವೆ, ಡೆನ್ಮಾರ್ಕ್, ಹಾಲೆಂಡ್, ಇಂಗ್ಲೆಂಡ್, ಬೆಲ್ಜಿಯಂ, ಫ್ರಾನ್ಸ್, ಇಟಲಿ ಮತ್ತು ಈಜಿಪ್ಟ್ ದೇಶಗಳಲ್ಲೂ ವ್ಯಾಪಕ ಪ್ರವಾಸ ಮಾಡಿದರು. ಸಂಸದೀಯ ಪ್ರತಿನಿಧಿಯಾಗಿ ಮಾರಿಷಸ್‌ನಲ್ಲಿ ನಡೆದ ಕಾಮನ್‌ವೆಲ್ತ್ ಸಂಸದೀಯ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಮೆಕ್ಸಿಕೋದಲ್ಲಿ ನಡೆದ ಅಂತಾರಾಷ್ಟ್ರೀಯ ಮಹಿಳಾ ಸಂಸದೀಯ ಸಮ್ಮೇಳನದಲ್ಲಿ ಭಾರತದ ಪ್ರತಿನಿಧಿಯಾಗಿ ಪಾಲ್ಗೊಂಡಿದ್ದರು.

ರಾಜಕೀಯ ಕ್ಷೇತ್ರದಲ್ಲಿ ಅತ್ಯುನ್ನತ ಸಾಧನೆ ಮಾಡಿದ ಇವರು ಭಾರತದಲ್ಲಿ ವಿಧಾನ ಸಭೆಯ ಅಧ್ಯಕ್ಷಿಣಿಯಾಗಿ ಕಾರ್ಯನಿರ್ವಹಿಸಿದ ಮೊದಲಿಗರು. ಅಂತೆಯೇ ವಿರೋಧ ಪಕ್ಷದ ಸ್ಥಾನವನ್ನು ಮಹಿಳೆಯೊಬ್ಬರು ನಿರ್ವಹಿಸಿರುವುದೂ ಅಪರೂಪದ ಸಂಗತಿ. ಎಸ್. ಬಂಗಾರಪ್ಪನವರ ಮಂತ್ರಿ ಮಂಡಲದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಖಾತೆಯ ಸಚಿವರಾಗಿ ಕಾರ್ಯನಿರ್ವಹಿಸಿದರು. ನಾಗರತ್ನಮ್ಮನವರು ಸದನದ ಹೊರಗೆ ಮತ್ತು ಒಳಗೆ ಮಾಡಿದ ಅನೇಕ ಭಾಷಣಗಳು ಅಧ್ಯಯನ ಯೋಗ್ಯವಾಗಿವೆ. ಕೈಗಾರಿಕೆಗಳ ಸ್ಥಾಪನೆ, ಆರೋಗ್ಯ, ಶಿಕ್ಷಣ ಮತ್ತು ಆರೋಗ್ಯ, ಗ್ರಾಮೀಣ ಸಮಸ್ಯೆಗಳು, ವ್ಯವಸಾಯ, ಕೈಗಾರಿಕೆ ಮತ್ತು ಸಾಮಾನ್ಯ ಆಡಳಿತ ಇತ್ಯಾದಿ ವಿಷಯಗಳ ಬಗ್ಗೆ ಮಂಡಿಸಿದ ಇವರ ವಿಚಾರಗಳು ಮನನೀಯ. ಇವರು 1993 ರಲ್ಲಿ ನಿಧನಹೊಂದಿದರು. (ಎಸ್.ಎನ್.ಜಿ.)

**ನಾಗರತ್ನಮ್ಮ, ಬೆಂಗಳೂರು :** 1873-1952. ಪ್ರಸಿದ್ಧ ಸಂಗೀತ ವಿದುಷಿ. ಮೈಸೂರು ಜಿಲ್ಲೆಯ ನಂಜನಗೂಡಿನವರು. ತಾಯಿ ಪುಟ್ಟಲಕ್ಷ್ಮಮ್ಮ, ವಿದ್ಯಾಭ್ಯಾಸಕ್ಕಾಗಿ ಬಾಲ್ಯದಲ್ಲಿಯೇ ಮೈಸೂರಿಗೆ ಬಂದ ಇವರು, ಸಂಗೀತ ಮತ್ತು ಸಾಹಿತ್ಯಗಳಲ್ಲಿ ಗಣ್ಯ ವಿದ್ವಾಂಸರೂ ಮೈಸೂರು ಅರಮನೆ ಶಾಕುಂತಲ ನಾಟಕ ಸಭೆಯ ಶಿಕ್ಷಕರೂ ಆಗಿದ್ದ ಗಿರಿಭಟ್ಟರ ತಮ್ಮಯ್ಯನವರಲ್ಲೂ ಬಿಡಾರಂ ಕೃಷ್ಣಪ್ಪ ಮತ್ತು ವೀಣೆಶೇಷಣ್ಣನವರಲ್ಲೂ ಕೆಲವು ವರ್ಷಗಳ ಕಾಲ ವಿದ್ಯಾಭ್ಯಾಸ ಮಾಡಿ, ಸಾಹಿತ್ಯ ಸಂಗೀತ ಮತ್ತು ನೃತ್ಯಗಳಲ್ಲಿ ಶಿಕ್ಷಣ ಪಡೆದರು. ಅನಂತರ ಬೆಂಗಳೂರಿಗೆ ಹೋಗಿ ತಮ್ಮ ಸಹೋದರ ವೆಂಕಟಸ್ವಾಮಪ್ಪನವರಲ್ಲಿ ಮತ್ತು ಬೆಂಗಳೂರು ಕಿಟ್ಟಣ್ಣನವರಲ್ಲಿ ನೃತ್ಯ-ಸಂಗೀತಗಳಲ್ಲಿನ ತಮ್ಮ ವ್ಯಾಸಂಗವನ್ನು ಮುಂದುವರಿಸಿದರು. ಅನಂತರ ಮದರಾಸಿಗೆ ಹೋಗಿ ತಿರುವೆಂಕಟಾಚಾರ್ಯರು ಮತ್ತು ರಾಮನಾಡ್ ಶ್ರೀನಿವಾಸ ಅಯ್ಯಂಗಾರರಲ್ಲಿ ವ್ಯಾಸಂಗಮಾಡಿ ಸಂಗೀತ ಮತ್ತು ನೃತ್ಯದಲ್ಲಿ ಪ್ರೌಢಿಮೆಯನ್ನು ಗಳಿಸಿದರು. ಅನಂತರ ಹಲವಾರು ಕಡೆ ಕಛೇರಿಗಳನ್ನು ನಡೆಸಿ ಹೆಸರು ಪಡೆದರು.

ನಾಗರತ್ನಮ್ಮನವರಿಗೆ ಸಂಗೀತ, ನಾಟ್ಯ, ಅಭಿನಯಶಾಸ್ತ್ರಗಳಲ್ಲಿ ಒಳ್ಳೆಯ ಪರಿಶ್ರಮವಿದ್ದುದರಿಂದ ಇವರ ಸಂಗೀತ ಭಾವಪೂರ್ಣವಾಗಿತ್ತು. ಇವರ ಸಂಗೀತದಲ್ಲಿ ಸ್ವರಕಲ್ಪನೆಗಿಂತ ರಾಗಾಲಾಪನೆ ಮುಖ್ಯ ಲಕ್ಷಣವಾಗಿತ್ತು. ಯದುಕುಲ ಕಾಂಭೋಜಿ ರಾಗವೆಂದರೆ ಇವರಿಗೆ ಬಹಳ ಪ್ರೀತಿ, ದೇವರ ನಾಮುಗಳು, ಶ್ಲೋಕಗಳು ಮತ್ತು ರಾಗಮಾಲಿಕೆಗಳನ್ನು ಹಾಡುವುದರಲ್ಲಿಯೂ ಹೆಸರಾಗಿದ್ದರು.

ನಾಗರತ್ನಮ್ಮನವರು ತ್ಯಾಗರಾಜರ ಆರಾಧಕರು. ಅವರ ಕೃತಿಗಳನ್ನು ಹಾಡುವುದರಲ್ಲಿಯೂ ಹೆಸರಾಗಿದ್ದರು. ತಮ್ಮ ಜೀವನದ ಕೊನೆಯ ದಿನಗಳನ್ನು ತಿರುವಯ್ಯಾರಿನಲ್ಲಿ ಕಳೆಯಬೇಕೆಂದು ಸಂಕಲ್ಪಿಸಿದ ಇವರು ಮದರಾಸಿನಲ್ಲಿ ತಾವು ವಾಸಿಸುತ್ತಿದ್ದ ಮನೆಯನ್ನು ಮಾರಿ, ತಿರುವಯ್ಯಾರಿಗೆ ಹೋಗಿ ಅಲ್ಲಿನ ತ್ಯಾಗರಾಜರ ಸಮಾಧಿ ಬಳಿ ಸೀತಾರಾಮ ದೇವಾಲಯವೊಂದನ್ನು ಕಟ್ಟಿಸಿದರು. ಅಲ್ಲಿ ಕರ್ನಾಟಕ ಸಂಗೀತದ ಒಂದು ಪಾಠಶಾಲೆ ಮತ್ತು ಒಂದು ಮೈಸೂರು ಛತ್ರವನ್ನೂ ಕಟ್ಟಿಸಬೇಕೆಂದು ಸಂಕಲ್ಪಿಸಿದ ಇವರು ಇದಕ್ಕಾಗಿ ಕನ್ನಡ ನಾಡಿನಲ್ಲಿ ಸಂಚರಿಸಿ ಹಣ ಸಂಗ್ರಹ ಮಾಡಿದರು. ಈ ಕಟ್ಟಡಗಳ ಕೆಲಸವು ಮುಗಿಯುವ ಮುನ್ನವೇ ತಿರುವಯ್ಯಾರಿನಲ್ಲಿ ನಿಧನರಾದರು.

ನಾಗರತ್ನಮ್ಮನವರಿಗೆ ಆಗಿನ ಮೈಸೂರು ಮಹಾರಾಜರಿಂದ ಪ್ರೋತ್ಸಾಹ ಮತ್ತು ಆಶ್ರಯಗಳು ಲಭಿಸಿದ್ದವು. ತ್ಯಾಗಸೇವಾಸಕ್ತಾ, ವಿದ್ಯಾಸುಂದರಿ, ಗಾನಕಲಾವಿಶಾರದಾ ಎಂಬ ಬಿರುದುಗಳೂ ಇವರಿಗೆ ಬಂದಿದ್ದವು. (ವಿ.ಎಸ್.ಎಸ್.)

**ನಾಗರಸ:** ಸು. 1650. ಬ್ರಾಹ್ಮಣ ಕವಿ. ಕರ್ನಾಟಕ ಭಗವದ್ಗೀತೆ ಎಂಬ ಗ್ರಂಥದ ಕರ್ತೃ. ಇವನ ತಂದೆ ವಿಶ್ವೇಶ್ವರ, ಗುರು ಶಂಕರಗುರು, ಇಷ್ಟ ದೈವ ಪಂಡರಾಪುರದ ವಿಟ್ಠಲ. ಕವಿ ಬಹುಶಃ ಈ ಪಂಡಾರಾಪುರದ ಸಮೀಪದ ಪ್ರಾಂತ್ಯದಲ್ಲಿದ್ದವನಾಗಿರಬಹುದು.

ಭಗವದ್ಗೀತೆ ಭಾಮಿನೀ ಷಟ್ಪದಿಯಲ್ಲಿಇದೆ. ಇದರಲ್ಲಿ 19 ಅಧ್ಯಾಯಗಳೂ 737 ಪದ್ಯಗಳೂ ಇವೆ. ಒಂದೊಂದು ಸಂಸ್ಕೃತ ಶ್ಲೋಕವನ್ನು ಒಂದೊಂದು ಭಾಮಿನೀ ಷಟ್ಪದಿಯಾಗಿ ಕನ್ನಡಿಸಿದ್ದಾನೆ. ವಾಸುದೇವ ಕಥಾಮೃತ ಎಂದು ಕವಿಯೇ ಕರೆದಿರುವ ಈ ಕೃತಿ ಕನ್ನಡದ ತಾತ್ವಿಕ ಗ್ರಂಥಗಳ ಸರಳವೂ ಸುಂದರವೂ ಆದ ಅನುವಾದಕ್ಕೆ ಒಂದು ಉದಾಹರಣೆಯಂತಿದೆ. ಮೂಲದ ಆಶಯವನ್ನೆಲ್ಲ ಕನ್ನಡ ಜನತೆಯ ಹೃದಯಕ್ಕೆ ಮುಟ್ಟಿಸಿ ಅವರನ್ನು ಉದ್ಧಾರದ ಕಡೆಗೆ ಕೊಂಡೊಯ್ಯುವ

ಸಾಹಸದಲ್ಲಿತೊಡಗಿರುವುದು ಕಂಡುಬರುತ್ತದೆ. ಕೃತಿಯ ಭಾಷೆ, ಪದ್ಯ ರಚನಾ ರೀತಿ, ಅಲಂಕಾರಗಳ ಪ್ರಯೋಗ - ಈ ಎಲ್ಲ ಕಡೆಯೂ ಕವಿ ಸಾಮಾನ್ಯ ಜನರನ್ನು ಮನಸ್ಸಿನಲ್ಲಿಟ್ಟುಕೊಂಡು ಸರಳವಾಗಿ ರಚಿಸಿರುವುದು ಗಮನಾರ್ಹವಾಗಿದೆ. ಭಕ್ತಿ ಸಹಜವಾಗಿಯೇ ಈ ಕೃತಿಯ ಮೂಲ ಸ್ರೋತವಾಗಿದೆ. ಕುಮಾರವ್ಯಾಸನ ಅನಂತರ ಹರಿಭಕ್ತಿ ಪರಂಪರೆಯನ್ನು ಮುಂದುವರಿಸಿದ ಕವಿಗಳಲ್ಲಿ ಇವನಿಗೆ ಪ್ರಮುಖ ಸ್ಥಾನ ಸಲ್ಲುತ್ತದೆ. (ಎನ್.ಬಿ.ಎಲ್.)

**ನಾಗರಹೊಳೆ :** ಕೊಡಗು ಜಿಲ್ಲೆಯ ವಿರಾಜಪೇಟೆ ತಾಲ್ಲೂಕಿನಲ್ಲಿ ವಿರಾಜಪೇಟೆಯ ಆಗ್ನೇಯಕ್ಕೆ 61 ಕಿಮೀ ದೂರದಲ್ಲಿರುವ ಒಂದು ಪ್ರಸಿದ್ಧ ಅಭಯಾರಣ್ಯ. ವಿರಾಜಪೇಟೆ ತಾಲ್ಲೂಕಿನ ಆಗ್ನೇಯದಲ್ಲಿ ಹುಟ್ಟಿ ಪೂರ್ವಕ್ಕೆ ಹರಿದು ಮೈಸೂರು ಜಿಲ್ಲೆಯಲ್ಲಿ ಕಪಿಲಾ ನದಿಯನ್ನು ಸೇರುವ ನಾಗರಹೊಳೆಯ ಅಸುಪಾಸಿನ ಪ್ರದೇಶವೇ ನಾಗರಹೊಳೆ ಅಭಯಾರಣ್ಯಪ್ರದೇಶ. ದಕ್ಷಿಣ ಕೊಡಗಿನ ಮೇರೆಯಲ್ಲಿ ಹೆಗ್ಗಡದೇವನ ಕೋಟೆ ತಾಲ್ಲೂಕಿಗೆ ಸಮೀಪದಲ್ಲಿರುವ ಈ ಪ್ರದೇಶ 288 ಚ.ಕಿಮೀ ವಿಸ್ತೀರ್ಣವಿದ್ದು ಸಮುದ್ರಮಟ್ಟದಿಂದ 2,500' ಎತ್ತರದಲ್ಲಿದೆ. ಇದು ಕಲ್ಲಹಳ್ಳ, ನಾಗರಹೊಳೆ ಮತ್ತು ತಿತಿಮತಿ ಅರಣ್ಯಪ್ರದೇಶಗಳನ್ನು ಒಳಗೊಂಡಿದೆ. ಸದಾ ಹಸಿರುಹಚ್ಚಗಳಿರುವುದರಿಂದ ಪ್ರಾಣಿಗಳಿಗೆ ಎಲ್ಲಾ ಕಾಲದಲ್ಲೂ ಇಲ್ಲಿ ಆಹಾರ ದೊರಕುತ್ತದೆ. ಸುಲಭವಾಗಿ ನೀರು ಸಿಗುವ ಸ್ಥಳಗಳು ಇಲ್ಲಿ ಅನೇಕವಿದ್ದು, ಪ್ರಾಣಿಗಳಿಗೆ ಅತಿ ಪ್ರಿಯವಾದ ಉಪ್ಪುನೆಕ್ಕುವ (ಚೌಳುಮಣ್ಣು) ಸ್ಥಳಗಳು ಸುಮಾರು ಮೂವತ್ತು ಇವೆ. ಹಿಂಡು ಹಿಂಡಾಗಿ ನಿರಾತಂಕವಾಗಿ ತಿರುಗುವ ಜಿಂಕೆಗಳು, ಕಡವೆ, ಸಾರಂಗ ಮತ್ತು ಕಾಡುಕೋಣಗಳು, ನಿಂತಲ್ಲಿ ನಿಲ್ಲದೆ ಅಲೆದಾಡುವ ನರಿ, ಕೆನ್ನಾಯಿ, ಕಾಡುಹಂದಿಗಳು, ಯಾವುದೇ ಆತಂಕವಿಲ್ಲದೆ ಮಂದಗತಿಯಲ್ಲಿ ತಿರುಗುವ ಆನೆಯ ಹಿಂಡು, ಹುಲಿ, ಕರಡಿ, ಜಿಂಕೆಗಳನ್ನು ಇಲ್ಲಿ ಕಾಣಬಹುದು.

ಇವುಗಳನ್ನೆಲ್ಲ ಹತ್ತಿರದಿಂದ ನೋಡಲು ಕಾಡಿನೊಳಗೆ ಎತ್ತರವಾದ ವೀಕ್ಷಣಾಲಯಗಳನ್ನು ಕಟ್ಟಿದ್ದಾರೆ. ಅಭಯಾರಣ್ಯದ ಸುತ್ತಲು ವಾಹನ ಸೌಕರ್ಯ ಇದೆ. ಇದೇ ಅಲ್ಲದೆ ಆನೆಗಳ ಮೇಲೂ ಪ್ರವಾಸಿಗರನ್ನು ಅಭಯಾರಣ್ಯದೊಳಕ್ಕೆ ಒಯ್ದು, ಪ್ರಾಣಿಗಳ ಹಿಂಡುಗಳನ್ನು ವೀಕ್ಷಿಸಲು ಅನುಕೂಲ ಒದಗಿಸಿದ್ದಾರೆ. ಒಂದಲ್ಲ ಒಂದು ಸ್ಥಳದಲ್ಲಿ ಅತಿ ಹತ್ತಿರದಿಂದ ಪ್ರಾಣಿಗಳನ್ನು ವೀಕ್ಷಿಸಲು ಈ ಸೌಕರ್ಯ ಸಹಾಯಕವಿದ್ದು ಪ್ರವಾಸಿಗರನ್ನು ಈ ಕೇಂದ್ರ ಆಕರ್ಷಿಸುತ್ತದೆ. ಸರ್ಕಾರ ಪ್ರವಾಸಿಗರಿಗೆ ಅನೇಕ ಸೌಲಭ್ಯಗಳನ್ನು ಒದಗಿಸಿದೆ. ಇಲ್ಲಿ ವಿದ್ಯುಚ್ಛಕ್ತಿ, ಕೊಳವೆನೀರು, ಸುಸಜ್ಜಿತ ಪ್ರವಾಸಿಮಂದಿರ ಹಾಗೂ ಪ್ರಾಣಿಗಳಿಗೆ ಸಂಬಂಧಪಟ್ಟ ಪುಸ್ತಕಗಳನ್ನುಳ್ಳ ಗ್ರಂಥಾಲಯ ಇವೆ. ಅರಣ್ಯ ಪ್ರದೇಶವನ್ನು ವೀಕ್ಷಿಸಲು ಇಲ್ಲಿ ಪ್ರವಾಸಿಗಳಿಗೆ ಸಹಾಯ ಮಾಡಲು ನಿಯೋಜಿತರಾದ ಅರಣ್ಯ ಇಲಾಖೆಯ ಅಧಿಕಾರಿಗಳಿದ್ದಾರೆ.

ಈ ಪ್ರದೇಶದಲ್ಲಿ ಬೇಟೆಯಾಡುವಂತಿಲ್ಲ. ನಾಗರಹೊಳೆ ಇಂದು ಭಾರತದಲ್ಲೇ ಅತ್ಯಂತ ರಮಣೀಯ ಹಾಗೂ ಆಕರ್ಷಕ ಪ್ರಾಣಿಸಂರಕ್ಷಣಾ ಕೇಂದ್ರವೆಂದು ಹೆಸರು ಪಡೆದಿದೆ. (ಬಿ.ಡಿ.ಎಸ್.)

**ನಾಗರಾಜ :** 14ನೆಯ ಶತಮಾನದ ಮಧ್ಯಭಾಗದಲ್ಲಿದ್ದ ಜೈನಕವಿ. ಪುಣ್ಯಾಸ್ರವ ಎಂಬ ಚಂಪೂಕಾವ್ಯದ ಕರ್ತೃ. ಸೇಚೆಂಬಪುರದ ಜಿನಶಾಸನ ದೀಪಕನಾದ ವಿವೇಕ ವಿಟ್ಠಲದೇವ ಇವನ ತಂದೆ, ತಾಯಿ ಭಾಗೀರಥಿ, ಸಹೋದರ ತಿಪ್ಪರಸ ಗುರು ಅನಂತವೀರ್ಯ, ಕವಿಮುಖಮುಕುರ, ಸರಸ್ವತೀಮುಖತಿಲಕ, ಭಾರತೀಭಾಳನೇತ್ರ ಎಂಬುವು ಇವನ ಬಿರುದುಗಳು. ಪೂರ್ವಕವಿಗಳಲ್ಲಿ ಗಜಾಂಕುಶ, ಪಂಪ, ಪೊನ್ನ, ಜನ್ನ, ಬಂಧುವರ್ಮ, ಗುಣವರ್ಮ, ನಾಗಚಂದ್ರ ಇವರನ್ನು ಸ್ತುತಿಸಿದ್ದಾನೆ.

ಪುಣ್ಯಾಸ್ರವವನ್ನು 12 ಅಧಿಕಾರಗಳಾಗಿ ವಿಭಾಗಿಸಲಾಗಿದೆ. ಈ ಕೃತಿಯನ್ನು ತನ್ನ ಗುರುವಿನ ಅಪ್ಪಣೆಯಂತೆ ಸಗರದ ನಗರದವರಿಗಾಗಿ 1331ರಲ್ಲಿ ಬರೆದಂತೆ ಕವಿ ಹೇಳಿಕೊಂಡಿದ್ದಾನೆ. ಇದು ಸಂಸ್ಕೃತದಿಂದ ಕನ್ನಡಿಸಲಾದ ಗ್ರಂಥ, ಇದರಲ್ಲಿ ಒಟ್ಟು 52 ಕಥೆಗಳಿವೆ. ಈ ಕಥೆಗಳಲ್ಲಿ ಜೈನ ಗೃಹಸ್ಥಧರ್ಮವನ್ನು ವಿವರಿಸಿ, ಒಂದೊಂದು ಗುಣದಲ್ಲಿ ಪ್ರಸಿದ್ಧಿಪಡೆದ ಪುರಾಣಪುರುಷರ ಕಥೆಗಳನ್ನು ಹೇಳಿದೆ. ಈ ಕಥೆಗಳು ಜೈನಧರ್ಮದ ಶ್ರೇಷ್ಠತೆಯನ್ನು ಸಂಸ್ಥಾಪಿಸುತ್ತವೆ. ಈತನದು ಸರಳವಾದ ಲಲಿತವಾದ ದೇಶೀಶೈಲಿ; ಕಥಾನಿರೂಪಣೆಯಲ್ಲಿ ಕೌಶಲವಿದೆ. ವರ್ಣನೆಗಳಲ್ಲಿ ನೈಜತೆ ಕಂಡುಬರುತ್ತದೆ. ನಾಗೇಂದ್ರನ ನಿಜಕವಿತೆಯ ಕನ್ನಡದ ನುಡಿಯ ಬೆಡಗಿನ ಗಡಣಂ ಸಕ್ಕರೆಯ ಸಿರಿಯಂತೆ ಎಂದು ಕವಿ ತನ್ನ ಕವಿತಾಚಾತುರ್ಯವನ್ನು ವಿಶ್ಲೇಷಿಸಿಕೊಂಡಿದ್ದಾನೆ. ಈ ಕಾವ್ಯವನ್ನು ಆರ್ಯಸೇನ ಎಂಬುವನು ತಿದ್ದಿ ಅಂದಗೊಳಿಸಿದಂತೆ ತಿಳಿಯುತ್ತದೆ. ಪಂಪಮಹಾಕವಿಯನ್ನು ಕುರಿತು 'ಪಸರಿಪಕನ್ನಡಕ್ಕೊಡೆಯನೊರ್ವನೆ ಸತ್ಕವಿಪಂಪನಾವಗಂ' ಎಂದು ನಾಗರಾಜ ಹೇಳಿದ ಮಾತು ಕನ್ನಡ ಸಾಹಿತ್ಯದಲ್ಲಿ ಸಾರ್ವಕಾಲಿಕ ಸತ್ಯವಾಗಿ ಇಂದಿಗೂ ಉಳಿದುಬಂದಿದೆ. (ಪಿ.ವಿ.ಪಿ.)

**ನಾಗರಾಜ, ಡಿ.ಆರ್. :** 1954-98. ವಿಮರ್ಶಕರು ಹಾಗೂ ಚಿಂತಕರು. ಕನ್ನಡದ ವಿಮರ್ಶೆಗೆ ಸಾಂಸ್ಕೃತಿಕ ಆಯಾಮವನ್ನು ಒದಗಿಸಿದವರು.

ಕನ್ನಡದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದ ಅನಂತರ ಇವರು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಉಪನ್ಯಾಸಕರಾಗಿ, ಅಮೆರಿಕದ ಶಿಕಾಗೊ ವಿಶ್ವವಿದ್ಯಾಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಹಾಗೂ ಅಕ್ಷರ ಪ್ರಕಾಶನದ ಅಕ್ಷರ ಚಿಂತನ ಮಾಲೆಯ ಸಂಪಾದಕರಾಗಿ ದುಡಿದವರು.

ಅಮೃತ ಮತ್ತು ಗರುಡ ಇವರ ಮೊದಲ ವಿಮರ್ಶಾಕೃತಿ (1983). ಇದರಲ್ಲಿ ಕುವೆಂಪು, ಶಿವರಾಮ ಕಾರಂತ, ಮಾಸ್ತಿ ಮೊದಲಾದ ಲೇಖಕರ ಕುರಿತಾದ ಮತ್ತು ರಂಗಭೂಮಿ, ಕಾವ್ಯ, ಪ್ರಾಯೋಗಿಕ ವಿಮರ್ಶೆಗೆ ಸಂಬಂಧಿಸಿದ 16 ಪ್ರೌಢ ಲೇಖನಗಳಿವೆ. ಆಧುನಿಕ ಕನ್ನಡ ಕಾವ್ಯದ ನಾಲ್ಕು ಪ್ರಮುಖ ವಸ್ತುಗಳಾದ ಭೂಮಿ, ಕಾಲ, ಕಾಮ ಮತ್ತು ಸಮಾಜಗಳನ್ನು ಮುಂದಿಟ್ಟುಕೊಂಡು ಕನ್ನಡದ ಮುಖ್ಯ ಕವಿಗಳ ಕಾವ್ಯದ ಅಧ್ಯಯನವನ್ನೊಳಗೊಂಡಿರುವ ಕೃತಿ 'ಶಕ್ತಿ ಶಾರದೆಯ ಮೇಳ ' (1987). ಇದು ಇವರ ಪಿಎಚ್.ಡಿ. ಮಹಾಪ್ರಬಂಧದ ಪರಿಷ್ಕೃತ ರೂಪ. ಜ್ಞಾನದ ಪೂರ್ವನಿಶ್ಚಿತ ಕಲ್ಪನೆಗಳನ್ನು ಮೀರಿನಿಲ್ಲುವ ರಾಜಕೀಯ, ಸಾಹಿತ್ಯಕ, ಸಾಮಾಜಿಕ ವಾಚಿಕೆಗಳನ್ನು ಹೆಣೆದುಕೊಂಡು ಸಾಮಾಜಿಕ ಕಥನವಾಗಿರುವ ಕೃತಿ 'ಸಾಹಿತ್ಯ ಕಥನ' (1996). ಅಲ್ಲಮ್ಮನನ್ನು ನಮ್ಮ ಕಾಲದ ದೃಷ್ಟಿಯಿಂದಲೂ ಸಾಹಿತ್ಯದ ದೃಷ್ಟಿಯಿಂದಲೂ ನೋಡುವ ಆಚಾರ್ಯ ಕೃತಿ 'ಅಲ್ಲಮ್ಮ ಮತ್ತು ಶೈವ ಪ್ರತಿಭೆ' (1999). ವಿಮರ್ಶೆಯ ಹೊಸ ನೆಲೆಗಳನ್ನು ತೆರೆದಿಟ್ಟ ಕೃತಿ 'ಸಂಸ್ಕೃತಿ ಕಥನ ' (2001).

ಪಾಶ್ಚಾತ್ಯ ಸಾಹಿತ್ಯ ಮಾರ್ಗದರ್ಶಿ ಸಂಪುಟ 1 - ಗ್ರೀಕ್ ಸಾಹಿತ್ಯ (1981), ವಸಂತ ಸ್ಮೃತಿ (ಪರ್ಶಿಯನ್ ಸೂಫಿ ಕವಿ ರೂಮಿಯ ಕಾವ್ಯಾನುವಾದ 1992), ಉರ್ದು ಸಾಹಿತ್ಯ ಸಂಕಲನ 1990, ದಿ ಫ್ಲೇಮಿಂಗ್ ಫ್ಲೀಟ್ (1993, ದಲಿತ ಚಳವಳಿ ಕುರಿತ ಪುಸ್ತಕ) - ಇವು ಇತರ ಪ್ರಕಟಿತ ಕೃತಿಗಳು. ನಾಡಿನ ಪ್ರಸಿದ್ಧ ಪತ್ರಿಕೆಗಳಲ್ಲಿ ಹಲವು ವಿಚಾರ ಸಂಕಿರಣಗಳಲ್ಲಿ ಇವರು ತಮ್ಮ ಪ್ರೌಢ ಚಿಂತನೆಗಳನ್ನು ಪ್ರಕಟಿಸಿದ್ದಾರೆ. ನಿರ್ಲಕ್ಷಿತ ಸಾಂಸ್ಕೃತಿಕ ವಾಚಿಕೆಗಳ ಪುನರ್ ವ್ಯಾಖ್ಯಾನದ ಕಾಳಜಿ ಹೊಂದಿದ್ದ ಇವರು ಸಮಸ್ತ ಜ್ಞಾನವೂ ಒಂದು ಬಗೆಯ ಕಥನವೇ ಮತ್ತು ಎಲ್ಲಾ ಜ್ಞಾನಗಳನ್ನು ಸಾಹಿತ್ಯ ಮೀಮಾಂಸೆಯ ಮೂಲಕ ಪ್ರವೇಶಿಸಲು ಸಾಧ್ಯ ಎಂಬ ನಿಲುವುಳ್ಳವರಾಗಿದ್ದರು. ವಿಮರ್ಶೆಯ ಸಂದರ್ಭದಲ್ಲಿ ವಸ್ತುನಿಷ್ಠ ದೃಷ್ಟಿಕೋನ ಮತ್ತು ತಟಸ್ಥ ಮನೋಭಾವ ಹೊಂದಿದ್ದ ಇವರು ವ್ಯಕ್ತಿ ವಿಶಿಷ್ಟ ಲೋಕಜ್ಞಾನ, ಮಾರ್ಕ್ಸ್ ವಾದೀ ಚಿಂತನೆ, ಫ್ರಾಯ್ಡ್ ಚಿಂತನೆ ಮತ್ತು ಭಾರತೀಯ ಚಿಂತನೆಗಳಿಂದ ಪಡೆದ ಜ್ಞಾನವನ್ನು ತಮ್ಮ ಬರೆವಣಿಗೆಯಲ್ಲಿ ಧಾರೆ ಎರೆದಿದ್ದಾರೆ.

ಕನ್ನಡದ ಮೂಲಕವೇ ಸಮಸ್ತ ವಿಶ್ವವನ್ನು ಕಂಡುಕೊಳ್ಳುವ ಮಹತ್ವಾಕಾಂಕ್ಷೆಯ ಅಕ್ಷರ ಚಿಂತನ ಮಾಲೆಯ ಸಂಪಾದಕರಾಗಿ ಸತ್ಯದ ನವದರ್ಶನ, ಆಶೀಶ್‌ನಂದಿ ವಿಚಾರಗಳು, ವಾಕ್ಯಪದೀಯ, ದಾರಾಶಿಖೊ,

ದಾವ್‌ದಜಂಗ್, ಅಭಿನವಗುಪ್ತ, ಭಾರತೀಯ ಸ್ತ್ರೀವಾದ, ಆನಂದಕುಮಾರಸ್ವಾಮಿ, ಪ್ರತಿಭೆಯ ಒಂದು ಪ್ರವಾಹ ಮೊದಲಾದ ಅನೇಕ ಅಮೂಲ್ಯ ಪುಸ್ತಿಕೆಗಳನ್ನು ಹೊರತಂದಿದ್ದಾರೆ.

ಇವರಿಗೆ ಅನೇಕ ಗೌರವ, ಪ್ರಶಸ್ತಿಗಳು ದೊರಕಿದ್ದು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಶಿವರಾಮ ಕಾರಂತ ಪ್ರಶಸ್ತಿ ಇವು ಮುಖ್ಯವಾದವು. (ಡಿ.ಕೆ.ಯು.)

**ನಾಗಲಾಪುರ :** ತುಮಕೂರು ಜಿಲ್ಲೆಯ ತುರುವೇಕೆರೆ ತಾಲ್ಲೂಕಿನ ದಕ್ಷಿಣದಲ್ಲಿ ಮಾಯಸಂದ್ರದಿಂದ ಸು. 8 ಕಿಮೀ ದೂರದಲ್ಲಿರುವ ಒಂದು ಚಿಕ್ಕ ಹಳ್ಳಿ. ಹೊಯ್ಸಳರ ಕಾಲದ ಅಗ್ರಹಾರ. ಇತರ ಹೊಯ್ಸಳ ಅಗ್ರಹಾರಗಳಲ್ಲಿರುವಂತೆ ಇಲ್ಲಿಯೂ ಊರ ನಡುವೆ ಒಂದು ವಿಷ್ಣುದೇವಾಲಯ, ಈಶಾನ್ಯಕ್ಕೆ ಒಂದು ಶಿವದೇವಾಲಯ, ಅದರ ಮುಂದೆ ಒಂದು ಕೆರೆ ಇವೆ. ಅಗ್ರಹಾರದ ನಿರ್ಮಾಣದ ಕಾಲ ದೇವಾಲಯಗಳನ್ನು ಕಟ್ಟಿಸಿದವರ ಹೆಸರು ತಿಳಿದಿಲ್ಲ. ದೇವಾಲಯಗಳ ನಿರ್ಮಾಣದ ರೀತಿ ಮತ್ತು ಅಲ್ಲಿನ ಕೆಲವು ಮೂರ್ತಿಗಳನ್ನು ಕಂಡರಿಸಿರುವ ಶಿಲ್ಪಿಯ ಹೆಸರಿನಿಂದ ಅಗ್ರಹಾರ ಮತ್ತು ದೇವಾಲಯಗಳ ನಿರ್ಮಾಣದ ಕಾಲವನ್ನು ಹದಿಮೂರನೆಯ ಶತಮಾನವೆಂದು ಗುರುತಿಸಬಹುದು.

ಇಲ್ಲಿನ ಚನ್ನಕೇಶವ ಮತ್ತು ಕೇದಾರೇಶ್ವರ ದೇವಾಲಯಗಳು ಸಂಪೂರ್ಣವಾಗಿ ವಿಕಾಸಗೊಂಡ ಹೊಯ್ಸಳ ಶೈಲಿಯಲ್ಲಿ ನಿರ್ಮಿತವಾದ ಅಲಂಕರಣಪೂರ್ಣವಾದ ಕಿರುದೇವಾಲಯಗಳು, ಈಗ ಇವು ಬಹುಮಟ್ಟಿಗೆ ಶಿಥಿಲವಾಗಿವೆ. ಒಂದೇ ವಿನ್ಯಾಸವನ್ನುಳ್ಳ ಈ ದೇವಾಲಯಗಳಲ್ಲಿ ಗರ್ಭಗೃಹ, ಸುಕನಾಸಿ ನವರಂಗಗಳಿದ್ದು ಬಹುಶಃ ಮೊದಲು ಇದ್ದಿರಬಹುದಾದ ಮುಖಭದ್ರ ಈಗ ಇಲ್ಲವಾಗಿದೆ. ಪೂರ್ವ ಮುಖವಾಗಿರುವ ಈ ದೇವಾಲಯಗಳಲ್ಲಿ ಶಿವ ದೇವಾಲಯದ ಪ್ರವೇಶದ್ವಾರ ಮಾತ್ರ ದಕ್ಷಿಣಕ್ಕಿದೆ.

ನಕ್ಷತ್ರಾಕಾರದ ತಳವಿನ್ಯಾಸವನ್ನು ಹೊಂದಿರುವ ಈ ದೇವಾಲಯಗಳು ಜಗತಿಯ ಮೇಲೆ ನಿರ್ಮಿತವಾಗಿದ್ದು ಹೊರಗೋಡೆಗಳ ಬುಡದಲ್ಲಿ ಆನೆ, ಕುದುರೆ, ಬಳ್ಳಿ ಸುರುಳಿ, ಮಕರ, ಹಂಸಗಳ ಸಾಲುಗಳನ್ನು ಕಡೆದಿರುವ ಪಟ್ಟಿಕೆಗಳಿವೆ. ಪೌರಾಣಿಕ ಕಥೆಗಳನ್ನು ಕಂಡರಿಸಿರಬೇಕಾಗಿದ್ದ ನಡುವಣ ಪಟ್ಟಿಕೆಯ ಮೇಲೆ ಯಾವ ಕಂಡರಣೆಯೂ ಇಲ್ಲ. ಗೋಡೆಗಳ ಮೇಲೆ ನುಗ್ಗೇಹಳ್ಳಿ, ಅರಳಗುಪ್ಪೆ, ಹೊಸಹೊಳಲು, ಬಸರಾಳು ಮೊದಲಾದ ಕಡೆ ಇರುವ ದೇವಾಲಯಗಳ ಗೋಡೆಗಳ ಮೇಲಿನ ಮೂರ್ತಿಗಳನ್ನು ನೆನಪಿಗೆ ತರುವ ಲತಾವಿತಾನಗಳ ಕೆಳಗೆ ಸುಂದರವಾಗಿ ಬಿಡಿಸಿರುವ ಮೂರ್ತಿಗಳ ಸಾಲುಗಳನ್ನು ನೋಡಬಹುದು. ಆದರೆ ಇಲ್ಲಿನ ಚನ್ನಕೇಶವ ದೇವಾಲಯದ ಹೊರಗೋಡೆಗಳ ಮೂರ್ತಿಗಳನೇಕವನ್ನು ಪೂರ್ಣವಾಗಿ ಕಂಡರಿಸಿಲ್ಲ. ಕೆಲವಂತೂ ಇನ್ನೂ ಕಂಡರಣೆಯ ಆರಂಭ ಹಂತದಲ್ಲಿಯೇ ಇವೆ. ಕೇಶವ ದೇವಾಲಯದ ಗೋಡೆಗಳ ಮೂರ್ತಿಗಳಲ್ಲಿ ಪರವಾಸುದೇವ, ನರಸಿಂಹ, ವರಾಹ, ಲಕ್ಷ್ಮೀನಾರಾಯಣ, ಹಯಗ್ರೀವ, ಯೋಗನಾರಾಯಣ ಮೊದಲಾದ ವಿಷ್ಣುವಿನ ಹಲವು ರೂಪಗಳೂ ಬ್ರಹ್ಮ, ದಕ್ಷಿಣಾಮೂರ್ತಿ, ಇಂದ್ರ ಮತ್ತು ಶಚಿ, ಲಕ್ಷ್ಮಿ, ದುರ್ಗಾ, ಸರಸ್ವತಿ, ಮೋಹಿನಿ, ಮಹಿಷಾಸುರಮರ್ದಿನಿ ಮೊದಲಾದವೂ ಇವೆ. ಕೇದಾರೇಶ್ವರ ದೇವಾಲಯದ ಗೋಡೆಯ ಮೇಲೆ ಗಜಾಸುರಮರ್ದನ, ತಾಂಡವೇಶ್ವರ, ದಕ್ಷಿಣಾಮೂರ್ತಿ, ಉಮಾಮಹೇಶ್ವರ, ವೃಷಭಾರೂಢ ಮೊದಲಾದ ಶಿವನ ರೂಪಗಳೂ ಬ್ರಹ್ಮ, ವಿಷ್ಣು, ಭೈರವ, ಅರ್ಜುನ, ಮನ್ಮಥ, ದುರ್ಗಾ, ಸರಸ್ವತಿ, ಮೋಹಿನಿ ಮೊದಲಾದ ಇತರ ಮೂರ್ತಿಗಳೂ ಇವೆ. ಈಶ್ವರ ದೇವಾಲಯದ ಕೆಲವು ಮೂರ್ತಿಗಳನ್ನು ಕಡೆದವನು ಸಿಗೋಜನ ಮಗ ಬೈಚೋಜ, ಬಹುಶಃ 1246ರಲ್ಲಿ ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯದ ಹಲವು ಮೂರ್ತಿಗಳನ್ನು ಕಂಡರಿಸಿದ ನಂದಿಯ ಬೈಚೋಜನೇ ಈತನಾಗಿರಬೇಕು.

ಮೂರ್ತಿಗಳ ಸಾಲಿನ ಮೇಲುಭಾಗದಲ್ಲಿರುವ ಲೋವೆಯ ಮುಂಭಾಗದಲ್ಲಿ ತೋರಣದಂತೆ ಒಂದು ಸಾಲು ಕಮಲದ ಮೊಗ್ಗುಗಳನ್ನು ಇಳಿಬಿಟ್ಟಿದೆ. ಲೋವೆಯಿಂದ ಮೇಲೆ ಗೋಡೆಯ ಮೇಲ್ಭಾಗದಲ್ಲಿ ಜೋಡಿ ಅಥವಾ ಒಂಟಿ ಅರೆಗಂಬಗಳ ಮೇಲೆ ವಿವಿಧಾಗೃತಿಗಳ ಅರೆಗೋಪುರಗಳಿವೆ. ಗೋಪುರಗಳ ಬಹುಭಾಗ ಈಗ ಬಿದ್ದು ಹೋಗಿದೆ.

ಎರಡು ದೇವಾಲಯಗಳ ಒಳಗಣ ಅಲಂಕರಣಗಳೂ ಒಂದೇ ರೀತಿಯಲ್ಲಿದ್ದರೂ ಕೇದಾರೇಶ್ವರ ದೇವಾಲಯದ ಅಲಂಕರಣ ಹೆಚ್ಚು ಆಕರ್ಷಕವಾದುದು. ತಿರುಗಣೆಯಲ್ಲಿ ಕಡೆದ ನವರಂಗದ ಕಂಬಗಳು, ಮಣಿಹಾರಗಳು, ಕೀರ್ತಿಮುಖಗಳು, ಬೋದಿಗೆಯ ಸುತ್ತಲಿನ ಮಣಿತೋರಣಗಳಿಂದ ತುಂಬಿ ಲಾವಣ್ಯಮಯವಾಗಿವೆ. ಆಳವಾದ ಭುವನೇಶ್ವರಿಗಳಿರುವ ನವರಂಗಗಳ ಒಳಚಾವಣಿಯ ಅಂಕಣಗಳು ಬಗೆ ಬಗೆಯ ಕುಸುರಿಕೆಲಸಗಳಿಂದ ತುಂಬಿವೆ. ಅದರಲ್ಲಿಯೂ ಕೇದಾರೇಶ್ವರ ದೇವಾಲಯದ ನವರಂಗದ ನಡುವಣ ದೊಡ್ಡ ಅಂಕಣದ ಆಳವಾದ ಭುವನೇಶ್ವರಿಯು ನಡುವಣ ನೀಳವಾದ ಬಾಳೆಯ ಮೋತೆ, ಸುತ್ತಣ ಬಗೆಬಗೆಯ ಶಿಲ್ಪಗಳಿಂದ ಕೂಡಿ ಅತ್ಯಂತ ಮನೋಜ್ಞವಾಗಿದೆ.

ಈ ದೇವಾಲಯಗಳು ಹೊಯ್ಸಳ ಶೈಲಿಯ ಕೊನೆಯ ಹಂತದ ಅಲಂಕಾರಮಯವಾದ ದೇವಾಲಯಗಳಲ್ಲಿ ಮೊದಲ ದರ್ಜೆಗೆ ಸೇರಿದುವೆನ್ನಬಹುದು. (ಎಂ.ಎಚ್.)

**ನಾಗವರ್ಮ I :** ಸು.990. ಶಾಸನಕವಿಗಳನ್ನು ಬಿಟ್ಟರೆ ಸದ್ಯಕ್ಕೆ ಕನ್ನಡ ಸಾಹಿತ್ಯದ ಮೊಟ್ಟಮೊದಲನೆಯ ಬ್ರಾಹ್ಮಣ ಕವಿ. ಛಂದೋಂಬುಧಿ ಕರ್ನಾಟಕ ಕಾದಂಬರಿ ಎಂಬ ಗ್ರಂಥಗಳ ಕರ್ತೃ. ಈ ಎರಡು ಕೃತಿಗಳನ್ನೂ ಒಬ್ಬನೇ ನಾಗವರ್ಮ ರಚಿಸಿದನೇ ಅಥವಾ ಬೇರೆ ಬೇರೆ ನಾಗವರ್ಮರು ರಚಿಸಿದರೇ ಎಂಬುದು ಸಾಕಷ್ಟು ಚರ್ಚೆಗೀಡಾಗಿದೆ. ಇವೆರಡೂ ಏಕಕರ್ತೃಕವೆಂದು ಸದ್ಯಕ್ಕೆ ಭಾವಿಸಬೇಕಾಗಿದೆ. ಕವಿಯ ಬಗ್ಗೆ ಛಂದೋಂಬುಧಿಯಿಂದ ತಿಳಿದುಬರುವ ಸಂಗತಿಗಳಿಗೂ ಕರ್ನಾಟಕ ಕಾದಂಬರಿಯಿಂದ ತಿಳಿದುಬರುವ ಸಂಗಿತಿಗಳಿಗೂ ಸಂಪೂರ್ಣ ಹೊಂದಾಣಿಕೆಯಿಲ್ಲ. ಚಂದ್ರನೆಂಬ ರಾಜ ಕವಿಗೆ ಆಶ್ರಯದಾತನಾಗಿದ್ದನೆಂಬುದೂ ಭೋಜರಾಜನು ಕವಿಗೆ ಕೆಲವು ಜಾತ್ಯಶ್ವಗಳನ್ನು ಕೊಟ್ಟನೆಂಬುದೂ ಕಾದಂಬರಿಯಿಂದ ತಿಳಿದುಬರುವ ಅಂಶಗಳು. ಕವಿ ಸೈಯ್ಯಾಡಿಯವನೆಂಬುದು ಇವನ ಪೂರ್ವಿಕರು ವ್ಯಂಗಿಯ ವೈದಿಕ ಬ್ರಾಹ್ಮಣರೆಂಬುದು ಇವನು ಯುದ್ಧ ವೀರನಾಗಿದ್ದನೆಂಬುದು ಛಂದೋಬುಧಿಯಿಂದ ತಿಳಿದು ಬರುವ ಅಂಶಗಳು. (ಟಿ.ವಿ.ಕೆ.)

ಛಂದೋಂಬುಧಿ ದೊರೆತಿರುವ ಕನ್ನಡ ಛಂದೋ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವೂ ಪ್ರಸಿದ್ಧವೂ ಪ್ರಾಮಾಣಿಕವೂ ಆದ ಗ್ರಂಥ. ಇದರಲ್ಲಿ ಒಟ್ಟು 6 ಅಧಿಕಾರಗಳಿವೆ. ಸಂಜ್ಞಾಪ್ರಕರಣವನ್ನು ಕುರಿತ ಪ್ರಥಮಾಧಿಕಾರದಲ್ಲಿ ಗಣಗಳು, ಗುರುಲಘುಗಳು, ಯತಿ, ಉಕ್ತಿ ಮೊದಲಾದ 26 ಛಂದಸ್ಸುಗಳು, ಅಚ್ಚ ಕನ್ನಡ ಪದ್ಯ ಜಾತಿಗಳ ಹೆಸರುಗಳು - ಇವನ್ನು ಪ್ರಸ್ತಾಪಿಸಿದೆ. ಸಮವೃತ್ತ ವಿವರಣವೆಂಬ ದ್ವಿತೀಯಾಧಿಕಾರದಲ್ಲಿ ಉಕ್ತೆಯಿಂದ ಉತ್ಕೃತಿಯ ವರೆಗಿನ 26 ಛಂದಸ್ಸುಗಳಲ್ಲಿ ಒಂದೊಂದರಲ್ಲಿಯೂ ಹುಟ್ಟುವ ಅನೇಕ ವರ್ಣವೃತ್ತಭೇದಗಳಲ್ಲಿ ಕೆಲವನ್ನು ಮಾತ್ರ ಲಕ್ಷಣ-ಲಕ್ಷ್ಯ ಸಮೀಕರಣ ವಿಧಾನದಿಂದ ವಿವರಿಸಿದೆ. ಮಾಲಾವೃತ್ತಾರ್ಧಸಮವಿಷಮಾದಿವೃತ್ತ ಪ್ರಕರಣವೆಂಬ ತೃತೀಯಾಧಿಕಾರದಲ್ಲಿ ಮಾಲಾ ಅರ್ಧಸಮವೃತ್ತ, ವಿಷಮವೃತ್ತ, ಶ್ಲೋಕ, ವೈತಾಳೀಯಾದಿಗಳು, ಜಾತಿಗಾಥೆ, ರಗಳೆ, ದಂಡಕ - ಇವನ್ನು ಭೇದಪ್ರಭೇದಗಳ ಸಹಿತವಾಗಿ ಲಕ್ಷಣ ಲಕ್ಷ್ಯವಿಧಾನದಿಂದ ಕಂದಪದ್ಯಗಳಲ್ಲಿ ವಿವರಿಸಿದೆ. ಕಂದಾದಿಮಾತ್ರಾವೃತ್ತ (ಜಾತಿ) ಪ್ರಕರಣವೆಂಬ ಚತುರ್ಥಾಧಿಕಾರದಲ್ಲಿ ಕಂದ, ಆರ್ಯೆ, ಗೀತಿಕೆ, ಸಂಕೀರ್ಣಕ ಮತ್ತು ದುವಯಿ - ಇವುಗಳ ಲಕ್ಷಣವನ್ನು ಕಂದಪದ್ಯಗಳಲ್ಲಿ ನಿರೂಪಿಸಿದೆ. ಕರ್ನಾಟಕ ವಿಷಯ ಜಾತಿ ವೃತ್ತಪ್ರಕರಣವೆಂಬ ಪಂಚಮಾಧಿಕಾರದಲ್ಲಿ ಬಹ್ಮ, ವಿಷ್ಣು, ರುದ್ರಗಣಗಳ ಸ್ವರೂಪವನ್ನೂ ಐದು ಅಕ್ಕರಗಳನ್ನೂ ತ್ರಿಪದೀ ಭೇದಗಳನ್ನೂ ಏಳೆ, ಚೌಪದಿ, ಛಂದೋವತಂಸ, ಅಕ್ಕರಿಕೆ, ಮದನವತಿ, ಗೀತಿಕೆ, ಉತ್ಸಾಹ, ಷಟ್ಪದಿ - ಎಂಬಿವನ್ನೂ ಲಕ್ಷಣ-ಲಕ್ಷ್ಯಪೂರ್ವಕವಾಗಿ ವಿವರಿಸಿದೆ. ದೇಶೀಯ ಕನ್ನಡ ಛಂದಸ್ಸಿನ ಚರಿತ್ರೆಗೆ

ಈ ಪ್ರಕರಣ ತುಂಬು ಉಪಯುಕ್ತವಾದುದಾಗಿದೆ. ಷಟ್ಪ್ರತ್ಯಯವಿವರಣ ಪ್ರಕರಣವೆಂಬ ಷಷ್ಠಾಧಿಕಾರದಲ್ಲಿ ಪ್ರಸ್ತಾರ ಮುಂತಾದ 6 ಪ್ರತ್ಯಯಗಳನ್ನು (ಎಂದರೆ ಛಂದಸ್ಸಂಬಂಧಿಯಾದ ಗಣಿತಾಂಶಗಳನ್ನು) ನಿರೂಪಿಸಿದೆ. ನಾಗವರ್ಮ ಸಂಸ್ಕೃತ ಛಂದೋವಿಷಯಗಳನ್ನು ನಿರೂಪಿಸುವಲ್ಲಿ ಪಿಂಗಲ, ಜಯದೇವ ಮುಂತಾದವರ ಛಂದೋಗ್ರಂಥಗಳನ್ನು ಬಳಸಿಕೊಂಡಿದ್ದಾನೆ ಎನ್ನುವುದಕ್ಕೆ ಆಧಾರವಿದೆ. ಹೀಗೆಯೇ ಕನ್ನಡ ಛಂದಸ್ಸಿನ ವಿಷಯದಲ್ಲಿಯೂ ಮಾಡಿರಬಹುದೇ ಎನ್ನುವುದನ್ನು ತಿಳಿಯಲು ಸರಿಯಾದ ಆಧಾರಗಳಿಲ್ಲ. ಒಟ್ಟಿನಲ್ಲಿ ನಾಗವರ್ಮನು ಸಂಸ್ಕೃತ, ಪ್ರಾಕೃತ ಮತ್ತು ಕನ್ನಡ ಛಂದಸ್ಸುಗಳಲ್ಲಿ ಅಭ್ಯಾಸಿಗಳು ತಿಳಿಯಬೇಕಾಗಿರುವ ಅತ್ಯಗತ್ಯವಾದ ಎಲ್ಲ ಅಂಶಗಳನ್ನೂ ಬಹುಮಟ್ಟಿಗೆ ಸಂಗ್ರಹಿಸಿದ್ದಾನೆಂದು ಹೇಳಬಹುದು. ಈಗಂತೂ ಕನ್ನಡ ಛಂದಸ್ಸಿನ ಚರಿತ್ರೆಗೆ ಛಂದೋಂಬುಧಿಯೇ ಅಡಿಗಲ್ಲು ಮತ್ತು ಆಧಾರ ಭೂತವಾದ ಏಕೈಕ ಗ್ರಂಥ. ಸಂಸ್ಕೃತ, ಲಾಕ್ಷಣಿಕ ಜಯಕೀರ್ತಿ (ಸು. 11ನೆಯ ಶತಮಾನ), ತೆಲುಗು ಲಾಕ್ಷಣಿಕ ಭೀಮಕವಿ (ಸು. 13-14ನೆಯ ಶತಮಾನ), ಕನ್ನಡ ಲಾಕ್ಷಣಿಕ ಈಶ್ವರ ಕವಿ (ಸು. 15ನೆಯ ಶತಮಾನ) ಮೊದಲಾದವರು ಈ ಗ್ರಂಥವನ್ನು ಅಲ್ಲಲ್ಲಿ ಅನುಸರಿಸಿರುವುದಕ್ಕೆ ಸಾಕ್ಷ್ಯಗಳು ದೊರೆಯುವುದು ಈ ಗ್ರಂಥದ ವ್ಯಾಪಕತೆ ಹಾಗೂ ಜನಪ್ರಿಯತೆಗಳಿಗೆ ಸಾಕ್ಷಿಯಾಗಿದೆ. (ಟಿ.ವಿ.ವಿ.)

ಕರ್ಣಾಟಕ ಕಾದಂಬರಿ ಚಂಪೂಕಾವ್ಯ. ಸಂಸ್ಕೃತದಲ್ಲಿ ಬಾಣ ಮತ್ತು ಅವನ ಮಗ ಭೂಷಣನಿಂದ ರಚಿತವಾದ ಕಾದಂಬರಿ ಎಂಬ ಗದ್ಯಕಾವ್ಯದ ಅನುವಾದ. ಸಂಸ್ಕೃತ ಕಾದಂಬರಿಯದು ಲಯಾನ್ವಿತವಾದ ಗದ್ಯವಾದುದರಿಂದ ನಾಗವರ್ಮನಿಗೆ ಅದನ್ನು ಪದ್ಯರೂಪಕ್ಕೆ ತಿರುಗಿಸುವುದು ಸುಲಭವೂ ಉಚಿತವೂ ಆಯಿತು. ಶೃಂಗಾರಾದ್ಭುತ ಪ್ರಧಾನವಾದ ಕಾದಂಬರಿಯ ಕಥೆಯ ಸ್ವರೂಪಕ್ಕೆ ಶುದ್ಧಪದ್ಯವೇ ತಕ್ಕ ಮಾಧ್ಯಮವೆಂಬುದನ್ನು ಕವಿ ಮನಗಂಡದ್ದು ಸ್ತುತ್ಯ. ಇವನು ಚಂಪೂ ರೂಪವನ್ನು ಆರಿಸಿಕೊಂಡುದಕ್ಕೆ, 10ನೆಯ ಶತಮಾನ ಚಂಪೂಯುಗವಾಗಿದ್ದುದೂ ಒಂದು ಕಾರಣವೆಂದು ತೋರುತ್ತದೆ. ನಾಗವರ್ಮನ ಪದ್ಯ ಮಾಧ್ಯಮ ಮೂಲಕಾವ್ಯದ ಕೆಲವು ದೋಷಗಳನ್ನೂ ಅತಿರೇಕಗಳನ್ನೂ ನಿವಾರಿಸಿಕೊಳ್ಳಲು ಸಹಾಯಕವಾಗಿದೆ. ಬಾಣನ ವಾಗ್ವೈಪರೀತ್ಯ, ವರ್ಣನಾಬಾಹುಳ್ಯ, ಸಮಾಜ ಜಟಿಲತೆಗಳಿಗೆ ಅದರಿಂದ ಕಡಿವಾಣ ಹಾಕಿದಂತಾಗಿದೆ. ಮೂಲದ ಸೌಂದರ್ಯ ಸ್ವಾರಸ್ಯ ಜೀವಾಳಗಳಿಗೆ ಭಂಗ ಬರದಂತೆ ನಾಗವರ್ಮ ಭಾಷಾಂತರ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾನೆ. ಮೂಲಭೂತವಾಗಿ ಇವನದು ಭಾಷಾಂತರವಾದರೂ ಮೂಲವನ್ನು ಮೀರದ ಸ್ವೋಪಜ್ಞತೆಯನ್ನು ಇವನು ಉದ್ದಕ್ಕೂ ಪ್ರಕಟಿಸಿದ್ದಾನೆ. ಮೂಲಭಾಗಗಳ ವಿಸ್ತರಣ, ಸ್ವತಂತ್ರ ವರ್ಣನಾತ್ಮಕ ಪದ್ಯಗಳ ಸೇರ್ಪಡೆ, ಕೆಲವು ಗೌಣವಾದ ಮಾರ್ಪಾಟುಗಳು ಕನ್ನಡ ಕಾದಂಬರಿಯಲ್ಲಿ ಕಂಡುಬರುತ್ತವೆ.

ಕರ್ಣಾಟಕ ಕಾದಂಬರಿ ಮುಖ್ಯವಾಗಿ ಒಂದು ಸಂಗ್ರಹಾನುವಾದ. ಮೂಲ ಕೃತಿಯ ಹೂರಣಕ್ಕೆ ಲೋಪವೊದಗದಂತೆ ಅದನ್ನು ಕವಿ ಕುಗ್ಗಿಸಿದ್ದಾನೆ. ಇವನು ಸೇರಿಸಿರುವುದಕ್ಕಿಂತ ಬಿಟ್ಟಿರುವುದು ಹೆಚ್ಚು. ಮೂಲದ ಅನೌಚಿತ್ಯಗಳನ್ನು ಇವನು ಹೋಗಲಾಡಿಸಿದ್ದಾನೆ; ಒಮ್ಮೊಮ್ಮೆ ಮೂಲದ ಒಳ್ಳೆಯ ಭಾಗಗಳನ್ನು ಕಳೆದಿರುವುದೂ ಉಂಟು. ಅಂತೂ ಇವನ ಸಂಗ್ರಹಕಾರ್ಯದಲ್ಲಿ ವೈವಿಧ್ಯವಿದೆ. ಯಥಾವತ್ತಾದ ಅನುವಾದ, ಸಂಗ್ರಹಾನುವಾದ, ವಿಸ್ತಾರಾನುವಾದ, ಭಾವಾನುವಾದ ಮುಂತಾದ ಭಾಷಾಂತರ ಪ್ರಕಾರಗಳನ್ನೆಲ್ಲ ಒಳಗೊಂಡಿರುವ ಕರ್ಣಾಟಕ ಕಾದಂಬರಿ ಭಾಷಾಂತರ ಕಲೆಯ ವಿದ್ಯಾರ್ಥಿಗಳಿಗೆ ಅಧ್ಯಯನಯೋಗ್ಯವಾದ ಕೃತಿಯಾಗಿದೆ. ಅದರಲ್ಲಿ ಸೋಲಿನ ಅಂಶಗಳೂ ಇವೆ; ಆದರೆ ಅದು ಗೆಲುವನ್ನು ವಿಶೇಷವಾಗಿ ಸಾಧಿಸಿ ಅತ್ಯುತ್ತಮವಾದ ಅನುವಾದವೆನಿಸಿದೆ.

ಕಾದಂಬರಿ ತುಂಬ ತೊಡಕಾದ ಒಂದು ಪ್ರಣಯಕಥೆಯನ್ನು ಹೇಳುತ್ತದೆ. ಅದು ಮಾನುಷ ಅತಿಮಾನುಷಗಳ ಸಮ್ಮಿಲನವನ್ನೊಳಗೊಂಡ ಒಂದು ಇಂದ್ರಜಾಲಸದೃಶವಾದ ಸ್ವಪ್ನಸಮಾನವಾದ ಜಗತ್ತು. ಅದರಲ್ಲಿ ಪುನರ್ಜನ್ಮ, ಶಾಪ ಮುಂತಾದ ಅಸಂಭಾವ್ಯವೆನಿಸುವ ಸಂಗತಿಗಳ ಸರಮಾಲೆಯನ್ನೇ ನೋಡುತ್ತೇವೆ. ಶೃಂಗಾರ ಅದರ ಪ್ರಮುಖ ರಸವಾದರೂ ಅದು ಉದಾತ್ತವಾದ ಶೃಂಗಾರ; ತಪಸ್ಸಿನಿಂದ ಪವಿತ್ರವೂ ಪಕ್ವವೂ ಆಗಿ ಪರಿಣಮಿಸುವಂಥದು. ಈ ಕಾರಣದಿಂದ ಕಾದಂಬರಿ ವಿಶಿಷ್ಟದರ್ಶನಸಂಪನ್ನವಾಗಿ ಇತರ ಶೃಂಗಾರ ಕಾವ್ಯಗಳಿಂದ ವಿಭಿನ್ನವಾಗಿ ನಿಲ್ಲುತ್ತದೆ. ಮಹಾಶ್ವೇತೆ, ಕಾದಂಬರಿ, ಪುಂಡರೀಕ, ಚಂದ್ರಪೀಡ ಈ - ಕಾವ್ಯದ ಪ್ರಧಾನ ಪಾತ್ರಗಳು. ಕಾದಂಬರಿಯ ಹೆಸರನ್ನು ಕವಿ ಕಾವ್ಯಕ್ಕೆ ಕೊಟ್ಟಿದ್ದರೂ ಮಹಾಶ್ವೇತೆಯೇ ಕಾವ್ಯದ ನಾಯಿಕೆ. ಅವಳು ಪ್ರೇಮವನ್ನು ತಪಸ್ಸಿನ ಸ್ತರಕ್ಕೇರಿಸಿದ ಮಹಾಮಹಿಳೆ.

ಕರ್ಣಾಟಕ ಕಾದಂಬರಿ ಉಪಲಬ್ಧ ಕನ್ನಡಕಾವ್ಯಗಳಲ್ಲಿ ಮೊದಲನೆಯ ಭಾಷಾಂತರವಾಗಿದೆ. ಅಂತೆಯೇ ಪ್ರಪ್ರಥಮ ಶೃಂಗಾರಕಾವ್ಯವಾಗಿದೆ. ಮುಂದೆ ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಿಸುವ ಕವಿಗಳಿಗೆ, ಪ್ರಣಯ ಕಾವ್ಯಗಳನ್ನು ರಚಿಸುವವರಿಗೆ ನಾಗವರ್ಮ ಮಾರ್ಗದರ್ಶಕನಾದುದರಲ್ಲಿ ಸಂದೇಹವಿಲ್ಲ. ಇವನ ಪ್ರಭಾವ ಮುಂದಿನ ಅನೇಕ ಕನ್ನಡ ಕವಿಗಳ ಮೇಲಾಗಿದೆ. ಬಿ.ಎಂ.ಶ್ರೀ. ಅವರು ಹೇಳುವಂತೆ ಪಂಪಾದಿಗಳು ಭಾರತ ರಾಮಾಯಣಗಳನ್ನು, ತೀರ್ಥಂಕರ ಪುರಾಣಗಳನ್ನು ಕೊಟ್ಟರೆ, ನಾಗವರ್ಮ ಬಾಣನನ್ನು ಕನ್ನಡಿಗರಿಗೆ ಪರಿಚಯಮಾಡಿಸಿ ಪ್ರೇಮ ಶೃಂಗಾರದ ರಸದೂಟವನ್ನು ಒದಗಿಸಿದ್ದಾನೆ.

ಕಾದಂಬರಿ ಮಹಾಕಾವ್ಯವಲ್ಲ; ಆದರೆ ಮಹಾಕಾವ್ಯಕ್ಕೆ ಸಮೀಪವಾಗುವ ಒಂದು ಶ್ರೇಷ್ಠ ರೊಮಾನ್ಸ್. (ಪಿ.ಪಿ.ಕೆ.)

**ನಾಗವರ್ಮ II :** ಸು.1042. ವರ್ಧಮಾನ ಪುರಾಣ, ಕಾವ್ಯಾವಲೋಕನ, ಕರ್ಣಾಟಕ ಭಾಷಾಭೂಷಣ, ಛಂದೋವಿಚಿತಿ, ಅಭಿಧಾನವಸ್ತು ಕೋಶ ಎಂಬ ಗ್ರಂಥಗಳ ಕರ್ತೃ. ಛಂದೋವಿಚಿತಿಯ ಹೊರತು ಉಳಿದ ಎಲ್ಲ ಗ್ರಂಥಗಳೂ ದೊರೆತು ಪ್ರಕಟವಾಗಿವೆ. ಈ ರಚನೆಗಳಿಂದ ಈತ ಕವಿಯೂ ಆಲಂಕಾರಿಕನೂ ವ್ಯಾಕರಣ ಮತ್ತು ಛಂದಸ್ಸುಗಳಲ್ಲಿ ಉತ್ತಮ ಪಂಡಿತನೂ ನಿಘಂಟುಕಾರನೂ ಆಗಿರುವುದು ಕಂಡುಬರುತ್ತದೆ.

ಇತ್ತೀಚಿನವರೆಗೂ ನಾಗವರ್ಮನ ಕಾಲವನ್ನು ಸು. 1145 ಎಂದು ಕೆಲವರೂ ಇದಕ್ಕಿಂತ ಸ್ವಲ್ಪ ಹಿಂಚುಮುಂಚಿನ ಕಾಲವೆಂದು ಹಲವರೂ ಭಾವಿಸಿದ್ದರು. ಎ. ವೆಂಕಟಸುಬ್ಬಯ್ಯನವರು ಈತ 1015-42ರ ವರೆಗೆ ಆಳುತ್ತಿದ್ದ ಜಗದೇಕಮಲ್ಲನೆಂಬ (ಜಯಸಿಂಹ) ಚಾಳುಕ್ಯ ಚಕ್ರವರ್ತಿಯಲ್ಲಿ ಕಟಕೋಪಾಧ್ಯಾಯನಾಗಿದ್ದಿರಬೇಕು ಎಂದು ನಿರ್ಣಯಿಸಿದ್ದರು. ಬಹುಕಾಲದಿಂದ ಅಲಭ್ಯವಾಗಿದ್ದ ಈತನ ವರ್ಧಮಾನಪುರಾಣ ಈಗ ದೊರೆತಿದ್ದು ಇದರಲ್ಲಿ ಬರುವ ಕಾಲಸೂಚಿತ ಪದ್ಯದ ಆಧಾರದಿಂದ ಇವನ ಕಾಲ 1042 ಎಂದು ಖಚಿತವಾಗಿ ತಿಳಿಯುತ್ತದೆ.

ನಾಗವರ್ಮನ ತಂದೆ ವಿಪ್ರಕುಲಪ್ರದೀಪನಾದ ದಾಮೋದರ, ತಾಯಿ ವಿನಯಾಳಂಕೃತೆಯಾದ ವೀರಕಬ್ಬೆ, ವೀರಭಟ್ಟಾರಕರು ಇವನ ಗುರು. ಕವಿಗೆ ಸದ್ಗುಣಮಂಡನ, ಜಿನಮತವನಹಂಸ, ವಿಪ್ರವಂಶಾವತಂಸ, ಸಚ್ಚರಿತ್ರಾಭಿರಾಮ, ವಿನಯನಯನಿಧಾನ, ಸ್ವನುಗತಶುಭಶರ್ಮ, ಕವಿತಾಗುಣೋದಯ, ವಾಕ್ಯವಿನೋದ, ಸಹಜವತ್ಸಳ ಎಂಬ ಬಿರುದುಗಳಿದ್ದಂತೆ ತಿಳಿಯುತ್ತದೆ. ಕವಿ ಕರ್ಣಪೂರನಾದ ತನ್ನನ್ನು ವಸುಮತೀವಳಯವು ಪ್ರೀತಿಯಿಂದ ಸಕಳ ಕಳಾವಿದಂ ಮದವಿದೂರನುದಾರನಮತ್ಸರಂ ಗುಣಾಧಿಕನಭಿಮಾನತುಂಗನವದಾತಯಶಂ ವಿಭುಧೈಕವತ್ಸಳಂ ಸುಕವಿ ಸರಸ್ವತೀವದನಮಂಗಳದರ್ಪಣನೆಂದು ಕರೆಯುತ್ತಿತ್ತೆಂದು ಹೇಳಿಕೊಂಡಿದ್ದಾನೆ.

ಕವಿ ತಾನು ಕನ್ನಡದಲ್ಲಿ ಅಸಗ, ಗಜಗ, ಗುಣನಂದಿ, ಪೊನ್ನರಿಗೆ ಹಾಗೂ ಸಂಸ್ಕೃತದಲ್ಲಿ ಮಯೂರ, ಬಾಣ, ಕಾಳಿದಾಸಾದ್ಯರಿಗೆ ಸಮಾನನೆಂದು ಪ್ರಶಂಸಿಸಿಕೊಂಡಿದ್ದಾನೆ. ಪೂರ್ವಕವಿಗಳಲ್ಲಿ ಶ್ರೀವಿಜಯ, ನಾಗವರ್ಮ, ಪೊನ್ನ, ಪಂಪ, ರನ್ನ ಮತ್ತು ನಾಗದೇವರನ್ನು ಸ್ತುತಿಸಿದ್ದಾನೆ. ಈ ಪೂರ್ವಕವಿಸ್ತುತಿಯಲ್ಲಿ ಕಂಡುಬರುವ ನಾಗವರ್ಮನೆಂಬ ಕವಿ ವತ್ಸರಾಜಚರಿತೆಯನ್ನೂ ನಾಗದೇವನು ಸುಲೋಚನಾಚರಿತೆಯನ್ನೂ ಬರೆದಿದ್ದಾರೆಂಬುದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿನೂತನ

ವಿಷಯವಾಗಿದೆ.

ವರ್ಧಮಾನ ಪುರಾಣ ಚಂಪೂಕಾವ್ಯ, ಇದರಲ್ಲಿ 16 ಆಶ್ವಾಸಗಳೂ 1134 ಪದ್ಯಗಳೂ ಇವೆ. ಕನ್ನಡ ಸಾಹಿತ್ಯದಲ್ಲಿ ದೊರೆತಿರುವ ವರ್ಧಮಾನಪುರಾಣಗಳಲ್ಲಿ ಇದೇ ಮೊದಲನೆಯದಾಗಿದೆ. ಇದಕ್ಕೆ ಮಹಾವೀರಚರಿತೆ, ಸನ್ಮತಿಚರಿತೆ, ವೀರವರ್ಧಮಾನಚರಿತೆ ಮೊದಲಾದ ಹೆಸರುಗಳೂ ಇವೆ. ಈ ಕೃತಿರಚನೆಗೆ ಜಿನಸೇನರ ಉತ್ತರಪುರಾಣ ಮತ್ತು ಅಸಗನ ವರ್ಧಮಾನಪುರಾಣ ಎಂಬ ಸಂಸ್ಕೃತ ಕೃತಿಗಳು ಆಧಾರವಾಗಿರಬಹುದು. ಅಲ್ಲದೆ ನಾಗವರ್ಮ ಕೆಲವು ಪ್ರಾಕೃತ ಕೃತಿಗಳಿಂದಲೂ ಉಪಕೃತನಾಗಿರಬಹುದು. ವಸ್ತುವಿನ್ಯಾಸದಲ್ಲಿ, ವರ್ಣನಾವೈಖರಿಯಲ್ಲಿ ಪಂಪ, ರನ್ನ ಮೊದಲಾದ ಪೂರ್ವ ಕನ್ನಡ ಕವಿಗಳಿಂದ ಬಹುಮಟ್ಟಿಗೆ ಪ್ರಭಾವಿತನಾಗಿದ್ದಾನೆ; ಹಾಗೂ ಸ್ವಪ್ರತಿಭೆಯಿಂದ ಹಲವು ರಸದಾಣಗಳನ್ನೂ ನಿರ್ಮಿಸಿ, ಸಹೃದಯರ ಮೆಚ್ಚುಗೆ ಪಡೆದಿದ್ದಾನೆ. ಕಾವ್ಯದಲ್ಲಿ ಉಪಜಾತಿ ಅನುಷ್ಟುಭ್, ಕ್ರೌಂಚಪದ, ಮಣಿಭೂಷಣ, ಮಾಲಭಾರಿಣಿ ಮೊದಲಾದ ಅತಿ ವಿರಳವಾದ ಛಂದೋಪ್ರಕಾರಗಳನ್ನು ಬಳಸಿದ್ದಾನೆ.

ಕನ್ನಡ ಸಾಹಿತ್ಯದಲ್ಲಿ ಅಲಂಕಾರಶಾಸ್ತ್ರಗ್ರಂಥಗಳಲ್ಲಿಯೇ ಮೊದಲನೆಯದಾದ ಕಾವ್ಯಾವಲೋಕನ ನಾಗವರ್ಮನ ಬಹುಮುಖ ಪ್ರತಿಭೆಯ ರನ್ನಗನ್ನಡಿಯಾಗಿದೆ. ಸೂತ್ರಗಳು ಕಂದಪದ್ಯಗಳಲ್ಲಿ ರಚಿತವಾಗಿವೆ. ಇದರಲ್ಲಿ ಶಬ್ದಸ್ಮೃತಿ, ಕಾವ್ಯಮಲವ್ಯಾವೃತ್ತಿ, ಗುಣವಿವೇಕ, ರೀತಿ ಕ್ರಮ ರಸನಿರೂಪಣ, ಕವಿಸಮಯ ಎಂಬ ಐದು ಅಧಿಕರಣಗಳಿದ್ದು, ಇವುಗಳಲ್ಲಿ ಪ್ರಕರಣಗಳೆಂಬ ಒಳ ವಿಭಾಗಗಳೂ ಇವೆ. ಉದಾಹರಣೆಗಳನ್ನು ವಿವಿಧ ಕಾವ್ಯಗಳಿಂದ, ಶಾಸ್ತ್ರಗ್ರಂಥಗಳಿಂದ ಒದಗಿಸಲಾಗಿದೆ.

ಕರ್ನಾಟಕ ಭಾಷಾಭೂಷಣ ಕನ್ನಡ ವ್ಯಾಕರಣಗ್ರಂಥಗಳಲ್ಲಿ ಮೊದಲನೆಯದು. ಇದರಲ್ಲಿ ಸಂಜ್ಞಾ, ಸಂಧಿ, ವಿಭಕ್ತಿ, ಕಾರಕ, ಶಬ್ದರೀತಿ, ಸಮಾಸ, ತದ್ಧಿತ, ಆಖ್ಯಾತ, ಅವ್ಯಯ, ನಿಪಾತ ಎಂಬ 10 ಪರಿಚ್ಛೇದಗಳಿವೆ. ಸೂತ್ರಗಳು ಸಂಸ್ಕೃತ ಭಾಷೆಯಲ್ಲಿವೆ. ಒಟ್ಟು ಸೂತ್ರ ಸಂಖ್ಯೆ 269, ಸೂತ್ರಾರ್ಥ ವಿಶದತೆಗೆ ವೃತ್ತಿಯನ್ನು ಬರೆದು ಕನ್ನಡ ಭಾಷೆಯ ಉದಾಹರಣೆಗಳನ್ನು ಒದಗಿಸಲಾಗಿದೆ. ಗ್ರಂಥರಚನೆಯಲ್ಲಿ ಶರ್ವವರ್ಮನ ಕಾತಂತ್ರ ವ್ಯಾಕರಣದ ಪ್ರಭಾವವಿದೆಯೆಂದು ಕೆಲವರು ಅಭಿಪ್ರಾಯಪಡುತ್ತಾರೆ.

ಛಂದೋವಿಚಿತಿ ಇದುವರೆಗೆ ದೊರೆತಿಲ್ಲ. ಕಾವ್ಯಾವಲೋಕನದ 965ನೆಯ ಪದ್ಯದ ಉಲ್ಲೇಖದಿಂದ ಇದು ನಾಗವರ್ಮನ ಗ್ರಂಥವೆಂಬುದು ಸ್ಪಷ್ಟ. ಮೊದಲನೆಯ ನಾಗವರ್ಮ ಬರೆದಿರುವ ಛಂದೋಂಬುಧಿಯೇ ಈ ಗ್ರಂಥವೆಂದೂ ರತ್ನಮಂಜೂಷ ಎಂಬ ಪ್ರಾಚೀನ ಛಂದೋಗ್ರಂಥಕ್ಕೆ ಅದೇ ಭಾಷೆಯಲ್ಲಿ ಬರೆದಿರುವ ಭಾಷ್ಯವೇ ಛಂದೋವಿಚಿತಿ ಎಂದೂ ಕೆಲವರು ಅಭಿಪ್ರಾಯಪಟ್ಟಿದ್ದಾರೆ.

ಅಭಿಧಾನವಸ್ತುಕೋಶ ಕಂದವೃತ್ತಗಳ ರೂಪದಲ್ಲಿ ಕನ್ನಡದಲ್ಲಿ ರಚಿತವಾಗಿರುವ ನಿಘಂಟು. ಇದರಲ್ಲಿ ಸಂಸ್ಕೃತ ಪದಗಳಿಗೆ ಕನ್ನಡ ಅರ್ಥಗಳನ್ನು ವಿವರಿಸಲಾಗಿದೆ. ಅವಿಭಿನ್ನಾರ್ಥ (ಏಕಾರ್ಥ), ಸಾಮಾನ್ಯಾರ್ಥ, ನಾನಾರ್ಥ ಎಂಬ 3 ಕಾಂಡಗಳಿರುವ ಈ ನಿಘಂಟು ಕೆಲವು ಉಪವಿಭಾಗಗಳನ್ನು ಹೊಂದಿದೆ. ಒಂದನೆಯ ಕಾಂಡದಲ್ಲಿ ಸ್ವರ್ಗ, ಕಾಲ, ಸಂಸರಣ, ಸಲಿಲ, ಭೂ, ಕಾಲಾಯಸಾದಿ ಧಾತು, ವನ, ವೃಕ್ಷಾದಿ, ಮೃಗಪಕ್ಷಿ, ಪುರಗೃಹೋಪಕರಣಾದಿ, ಮನುಷ್ಯ, ದೇಹಾವಯವಾದಿ. ಭೂಷಣಾದಿ, ಸಮರಾದಿ, ಸಂಪ್ರಕೀರ್ಣ, ಪಶು, ಧಾನ್ಯ ಎಂಬ 16 ವರ್ಗಗಳಿವೆ. 2ನೆಯದರಲ್ಲಿ ವಿಶೇಷಣ, ವಿಶೇಷ್ಯ ಎಂಬ ಎರಡು ವರ್ಗಗಳಿವೆ. 3ನೆಯದರಲ್ಲಿ ನಾನಾರ್ಥ ಒಂದೇ ವರ್ಗವಿದೆ. ತನ್ನ ಈ ಕೋಶವನ್ನು ವರರುಚಿ, ಹಲಾಯುಧ, ಭಾಗುರಿ, ಶಾಶ್ವತ, ಅಮರಸಿಂಹ ಮೊದಲಾದ ಕೋಶಕರ್ತರು ತಂತಮ್ಮ ಕೋಶಗಳಲ್ಲಿ ಹೇಳಿರುವ ಸಂಗತಿಗಳನ್ನು ಸಂಗ್ರಹಿಸಿ ರಚಿಸಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. ಇದು ಸಂಸ್ಕೃತ ಮತ್ತು ಹಳಗನ್ನಡ ಕಾವ್ಯಗಳಲ್ಲಿ ಬಳಕೆಯಾಗುವ ಸಂಸ್ಕೃತ ಶಬ್ದಗಳ ಅರ್ಥಗಳನ್ನು ತಿಳಿಯಲೂ ಸಹಾಯ ಮಾಡುವ ಕೋಶವಾದರೂ ಕ್ವಚಿತ್ತಾಗಿ ದೇಶ್ಯಶಬ್ದಗಳ ಅರ್ಥಗಳನ್ನು ತಿಳಿಯಲೂ ಸಹಾಯಕವಾಗಿದೆ.

(ಬಿ.ಎಸ್.ಎಸ್.)

**ನಾಗವರ್ಮಾಚಾರ್ಯ :** ಸು. 1071. ಚಂದ್ರಚೂಡಾಮಣಿ ಶತಕ ಎಂಬ ಗ್ರಂಥದ ಕರ್ತೃ. ಈತ ಚಾಳುಕ್ಯರಾಜ ಭುವನೈಕಮಲ್ಲನ ಮಹಾಪ್ರಧಾನಿಯಾಗಿದ್ದ. ತಾನು ಉದಯಾದಿತ್ಯನಲ್ಲಿ ಸಂಧಿವಿಗ್ರಹಿಯಾಗಿದ್ದಂತೆಯೂ ತನಗೆ ಭಾಸ್ಕರನೆಂಬ (ಉದಯಾದಿತ್ಯನ ರಾಯಭಾರಿ) ಅಣ್ಣನಿದ್ದಂತೆಯೂ ಗ್ರಂಥದ ಕೊನೆಯಲ್ಲಿ ಹೇಳಿಕೊಂಡಿದ್ದಾನೆ. ಇವನು ಅದ್ವೈತಿಯೂ ದೊಡ್ಡ ಪಂಡಿತನೂ ಆಗಿದ್ದನೆಂದೂ ಬಲಿಪುರ ಮತ್ತು ಮುತ್ತೂರುಗಳಲ್ಲಿ ದೇವಾಲಯ, ಸಿದ್ಧತೀರ್ಥಗಳನ್ನು ಮಾಡಿಸಿದನೆಂದೂ ಈತನಿಗೆ ಗುಣಗಳ್ಳನೆಂಬ ಬಿರುದಿದ್ದಿತೆಂದೂ ಒಂದು ಶಾಸನ ತಿಳಿಸುತ್ತದೆ.

ಚಂದ್ರಚೂಡಾಮಣಿ ಶತಕ ಮತ್ತೇಭವಿಕ್ರೀಡಿತದಲ್ಲಿ ರಚಿತವಾಗಿದೆ. ಇದಕ್ಕೆ ಜ್ಞಾನಸಾರವೆಂಬ ಹೆಸರೂ ಇದ್ದಂತೆ ತಿಳಿಯುತ್ತದೆ. ಇದರಲ್ಲಿ 104 ವೃತ್ತಗಳಿದ್ದು ಪ್ರತಿಯೊಂದೂ ಚಂದ್ರಚೂಡಾಮಣಿ ಎಂಬ ಅಂಕಿತದಿಂದ ಮುಗಿಯುತ್ತದೆ. ಭಕ್ತನ ಶರಣ್ಯತೆ, ಶಿವೈಕ್ಯನಿಷ್ಠೆ ಹಾಗೂ ವೈರಾಗ್ಯ ಪ್ರತಿಪಾದನೆ ಈ ಶತಕದ ವಸ್ತು. ಶೈಲಿ ಸರಳವಾಗಿದೆ. ಈ ಶತಕದ ಪದ್ಯಗಳು ಮುಂದೆ ಸಂಕಲಿತವಾದ ಶತಕ ಸಂಕಲನಗಳಲ್ಲಿ ಉದಾಹೃತಗೊಂಡಿವೆ. ಬರೆಹದ ಗುರು ನಂಜೇದೇವರ ಶಿವಕಾರುಣ್ಯಾಹ್ವಾನಶತಕ ಮತ್ತು ಶಿವಕೀರ್ತನೆಶತಕಗಳಲ್ಲಿ ಈ ಶತಕದ ಒಂದೊಂದೂ ಪದ್ಯಗಳಿವೆ. ಅಜ್ಞಾತ ಸಂಕಲನಕಾರನ ನಿಜಾಚರಣೆಶತಕ ಎಂಬ ಸಂಕಲನದಲ್ಲಿ ಈ ಶತಕದ ವೃತ್ತವೊಂದು ಉದ್ಧೃತವಾಗಿದೆ.

ಚಂದ್ರಚೂಡಾಮಣಿಶತಕ 11ನೆಯ ಶತಮಾನದಲ್ಲಿ ರಚಿತವಾಗಿರದೆ ಹರಿಹರನ ಅನಂತರದ ಕಾಲದಲ್ಲಿ ರಚಿತವಾಗಿರುವುದೆಂದೂ ಕೆಲ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. (ಎಸ್.ಎಸ್.ವಿ.)

**ನಾಗಾಭರಣ, ಟಿ.ಎಸ್. :** ಕನ್ನಡ ರಂಗಭೂಮಿ. ಹಾಗೂ ಚಲನಚಿತ್ರ ನಿರ್ದೇಶಕ. ನಟ ಪುಟ್ಟಣ್ಣ ಕಣಗಾಲ ಪ್ರಶಸ್ತಿ ವಿಜೇತ (1998 - 99) ಸಾಮಾಜಿಕ ಹೊಣೆಗಾರಿಕೆಯೇ ಒಂದು ನಿಷ್ಠೆ ಎಂಬ ಸಂದೇಶವನ್ನು ತಮ್ಮ ವಿಶಿಷ್ಟ ಜಾಡಿನ ಚಲನಚಿತ್ರಗಳ ಮೂಲಕ ಜನತೆಗೆ ಪ್ರಸ್ತುತಪಡಿಸಿದ್ದಾರೆ. ಗ್ರಾಮೀಣ ಸಂಸ್ಕೃತಿಯ ಸೊಗಡನ್ನು ಮೈದುಂಬಿಕೊಂಡು ಅದನ್ನು ತಮ್ಮ ಚಿತ್ರಗಳ ಮೂಲಕ ಸಮಯೋಚಿತವಾಗಿ ಇವರು ಪರಿಚಯಿಸಿದ್ದಾರೆ. ತಮ್ಮ ಶಾಲಾ-ಕಾಲೇಜು ದಿನಗಳಲ್ಲೇ ರಂಗನಾಟಕಗಳತ್ತ ಆಕರ್ಷಿತರಾಗಿ ನಟರಾಗಿ, ನಿರ್ದೇಶಕರಾಗಿ ಹಲವಾರು ಪದಕ -ಪ್ರಶಸ್ತಿಗಳನ್ನು ಬಾಚಿಕೊಂಡರು. ಇವರು ವಿಜ್ಞಾನ ಹಾಗೂ ಕಾನೂನಿನಲ್ಲಿ ಪದವೀಧರರು.

ಹೊಸ ಅಲೆಯ ಚಿತ್ರಗಳ ಮೂಲಕ ಗಮನ ಸೆಳೆಯುತ್ತಿದ್ದ ಬಿ.ವಿ. ಕಾರಂತ ಮತ್ತು ಗಿರೀಶ್ ಕಾರ್ನಾಡರೊಂದಿಗೆ ರಂಗಭೂಮಿ ಹಾಗೂ ಚಲನಚಿತ್ರ ಮಾಧ್ಯಮಗಳ ಚಟುವಟಿಕೆಗಳಲ್ಲಿ ಇವರು ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡರು. ಶೇಷಾದ್ರಿ ಗವಾಯಿಯವರಲ್ಲಿ ಹಿಂದೂಸ್ತಾನಿ ಸಂಗೀತವನ್ನು ಕೂಡ ಇವರು ಅಭ್ಯಾಸ ಮಾಡಿದರು. ತಮ್ಮ ನಾಟಕ ಚಲನಚಿತ್ರಗಳಲ್ಲಿ ಜನಪದ ಸಂಗೀತವನ್ನು ಔಚಿತ್ಯಪೂರ್ಣವಾಗಿ ಬಳಸಿಕೊಂಡಿದ್ದಾರೆ. ಚಿತ್ರರಂಗದಲ್ಲಿ ಬೇರೂರಿ ನಿಲ್ಲಬೇಕೆನ್ನುವ ಹವಣಿಕೆಯಿಂದ ಪಿ. ಭಕ್ತವತ್ಸಲಂರೊಡನೆ ಸಂಕಲನ ಕಾರ್ಯದಲ್ಲಿ ತೊಡಗಿಕೊಂಡು ಸಂಕಲನದಲ್ಲೂ ಪರಿಣತಿ ಪಡೆದರು. ದೃಶ್ಯಮಾಧ್ಯಮದ ಎಲ್ಲ ಪ್ರಕಾರಗಳನ್ನೂ ಸೂಕ್ಷ್ಮವಾಗಿ ಅಧ್ಯಯನ ಮಾಡಿ, ಅವುಗಳ ಮೇಲೆ ಹಿಡಿತ ಸಾಧಿಸುವ ಸಾಮರ್ಥ್ಯ ಪಡೆದುಕೊಂಡಿರುವ ಇವರು ಇಲ್ಲಿಯವರೆಗೆ 26 ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಇವುಗಳಲ್ಲಿ 12 ಚಿತ್ರಗಳಿಗೆ ರಾಷ್ಟ್ರ ಮತ್ತು ರಾಜ್ಯಮಟ್ಟದ ಪ್ರಶಸ್ತಿಗಳನ್ನು ಪಡೆದುಕೊಂಡಿದ್ದಾರೆ.

ಕನ್ನಡದ ಖ್ಯಾತ ನಾಟಕಕಾರ ಶ್ರೀರಂಗರ ಗರಡಿಯಲ್ಲಿ ಪಳಗಿದ ಇವರು ಹಲವು ನಾಟಕಗಳನ್ನು ಪ್ರಯೋಗಿಸಿ ರಂಗಭೂಮಿಯಲ್ಲಿ ಯಶಸ್ವೀ

ನಿರ್ದೇಶಕರೆನಿಸಿದ್ದಾರೆ. ಬೆಂಗಳೂರಿನಲ್ಲಿರುವ ಆದರ್ಶ್ ಫಿಲ್ಮ್ ಇನ್‌ಸ್ಟಿಟ್ಯೂಟ್‌ನಲ್ಲಿ ಇವರು ಮೂರು ವರ್ಷಗಳ ಕಾಲ ಉಪನ್ಯಾಸಕರಾಗಿ ಆರು ವರ್ಷ ಪ್ರಾಂಶುಪಾಲರಾಗಿ ಅನೇಕ ಸೃಜನಶೀಲ ಪ್ರತಿಭೆಗಳನ್ನು ಬೆಳಕಿಗೆ ತಂದಿದ್ದಾರೆ. ಬೆನಕ ಎಂಬ ಮಕ್ಕಳ ನಾಟಕ ಕೇಂದ್ರದ ಸ್ಥಾಪಕ ಅಧ್ಯಕ್ಷರೂ ಇಂಟರ್ ನ್ಯಾಷನಲ್ ಸೆಂಟರ್ ಆಫ್ ಫಿಲ್ಡ್ ಫಾರ್ ಚಿಲ್ಡ್ರನ್ ಅಂಡ್ ಯಂಗ್ ಪೀಪಲ್‌ನ ಸದಸ್ಯರೂ ಆಗಿದ್ದಾರೆ. ಸಂಗ್ಯಾಬಾಳ್ಯಾ, ಕತ್ತಲೆ ಬೆಳಕು, ಶಕಾರನ ಸಾರೋಟು, ಜೋಕುಮಾರಸ್ವಾಮಿ, ಸತ್ತವರ ನೆರಳು, ಈಡಿಪಸ್, ಕೃಷ್ಣಪಾರಿಜಾತ, ಟಿಂಗರ ಬುಡ್ಡಣ್ಣ, ಮುಂದೇನ ಸಖಿ ಮುಂದೇನ, ಹಯವದನ, ನೀಗಿಕೊಂಡ ಸಂಸ, ಬಕ, ಬ್ಲಡ್‌ವೆಡಿಂಗ್ ಮೊದಲಾದವು ಇವರು ನಿರ್ದೇಶಿಸಿರುವ ನಾಟಕಗಳು. ಗ್ರಹಣ, ಅನ್ವೇಷಣೆ, ಬ್ಯಾಂಕರ್ ಮಾರ್ಗಯ್ಯ, ಆಸ್ಫೋಟ, ಸಂತ ಶಿಶುನಾಳ ಷರೀಫ, ಮೈಸೂರ ಮಲ್ಲಿಗೆ, ಚಿನ್ನಾರಿ ಮುತ್ತ, ಆಕಸ್ಮಿಕ, ನಾವಿದ್ದೇವೆ ಎಚ್ಚರಿಕೆ, ಜನುಮದ ಜೋಡಿ, ನಾಗಮಂಡಲ, ನೀಲಾ - ಇವು ಇವರು ನಿರ್ದೇಶಿಸಿದ ಚಿತ್ರಗಳು.

ಗ್ರಹಣ (1978 - 79) ನಾಗಾಭರಣ ನಿರ್ದೇಶಿಸಿದ ಚೊಚ್ಚಲ ಚಿತ್ರ. ಇದಕ್ಕೆ ರಾಷ್ಟ್ರೀಯ ಭಾವೈಕ್ಯತಾ ಪ್ರಶಸ್ತಿ, ಅತ್ಯುತ್ತಮ ಚಿತ್ರಕಥೆಗಾಗಿ ರಾಷ್ಟ್ರಪ್ರಶಸ್ತಿ, ಅತ್ಯುತ್ತಮ ಚಿತ್ರಕ್ಕಾಗಿ ರಾಜ್ಯ ಪ್ರಶಸ್ತಿ ಬಂದಿದೆ. ಹಿಂದೀ ಚಿತ್ರರಂಗದ ಪ್ರಬುದ್ಧ ಕಲಾವಿದೆ ಸ್ಮಿತಾ ಪಾಟೀಲ್ ಅಭಿನಯಿಸಿದ ಏಕೈಕ ಕನ್ನಡ ಚಿತ್ರ ಅನ್ವೇಷಣೆ (1982), ಇದು ತೃತೀಯ ಅತ್ಯುತ್ತಮ ಚಿತ್ರವೆಂದು ರಾಜ್ಯ ಪ್ರಶಸ್ತಿ ಪಡೆದುಕೊಂಡಿದೆ. ಖ್ಯಾತ ಆಂಗ್ಲ ಸಾಹಿತಿ ಆರ್. ಕೆ. ನಾರಾಯಣ್ ಅವರ ದಿ ಫೈನಾನ್ಸಿಯಲ್ ಎಕ್ಸ್‌ಪರ್ಟ್ ಕಾದಂಬರಿ ಆಧರಿಸಿದ ಬ್ಯಾಂಕರ್ ಮಾರ್ಗಯ್ಯ (1983 - 84), ಅತ್ಯುತ್ತಮ ಪ್ರಾದೇಶಿಕ ಭಾಷಾ ಚಿತ್ರಕ್ಕೆ ನೀಡಲಾಗುವ ರಾಷ್ಟ್ರಪ್ರಶಸ್ತಿಗೆ ಪಾತ್ರವಾಗಿದೆ. ಆಸ್ಫೋಟಕ್ಕೆ (1987 - 88) ರಾಜ್ಯಪ್ರಶಸ್ತಿ ಹಾಗೂ ಫಿಲ್ಮ್ ಫೇರ್ ಪ್ರಶಸ್ತಿಗಳು ದೊರೆತಿವೆ. ಸಂತ ಶಿಶುನಾಳ ಷರೀಫ ಚಿತ್ರಕ್ಕೆ ಪ್ರತಿಷ್ಠಿತ ನರ್ಗಿಸ್‌ದತ್ ರಾಷ್ಟ್ರೀಯ ಭಾವೈಕ್ಯತಾ ರಾಷ್ಟ್ರಪ್ರಶಸ್ತಿ, ರಾಜ್ಯ ಪ್ರಶಸ್ತಿಗಳು ಪ್ರಾಪ್ತವಾಗಿವೆ (1989 - 90). ಮೈಸೂರು ಮಲ್ಲಿಗೆ ಅತ್ಯುತ್ತಮ ಪ್ರಾದೇಶಿಕ ಚಿತ್ರದ ರಾಷ್ಟ್ರಪ್ರಶಸ್ತಿ, ದ್ವಿತೀಯ ಅತ್ಯುತ್ತಮ ಚಿತ್ರವೆಂಬ ರಾಜ್ಯ ಪ್ರಶಸ್ತಿ ಪಡೆದು ಅಂತಾರಾಷ್ಟ್ರೀಯ ಚಲನಚಿತ್ರೋತ್ಸವಕ್ಕೆ ಆಯ್ಕೆಯಾಗಿತ್ತು. ಸ್ವಾತಂತ್ರ್ಯದ ಹಿನ್ನೆಲೆಯಲ್ಲಿ ದಾಂಪತ್ಯ ಜೀವನದ ನೋವು ನಲಿವು ಚಿತ್ರಿಸಿದ ವಿನೂತನ ಪ್ರಯೋಗ ಈ ಚಿತ್ರಕ್ಕೆ ಅತ್ಯುತ್ತಮ ಪ್ರಾದೇಶಿಕ ಚಿತ್ರ ಎಂದು ರಾಷ್ಟ್ರಪ್ರಶಸ್ತಿ ಹಾಗೂ ರಾಜ್ಯ ಪ್ರಶಸ್ತಿ ಬಂದಿವೆ (1991 - 92). ಚಿನ್ನಾರಿಮುತ್ತ ಅತ್ಯುತ್ತಮ ಪ್ರಾದೇಶಿಕ ಚಿತ್ರಕ್ಕೆ ನೀಡಲಾಗುವ ರಾಷ್ಟ್ರಪ್ರಶಸ್ತಿಯನ್ನು ಅತ್ಯುತ್ತಮ ಮಕ್ಕಳ ಚಿತ್ರ ರಾಜ್ಯ ಪ್ರಶಸ್ತಿಯನ್ನೂ ಗಳಿಸಿದೆ (1993 - 94). ಕೋಲ್ಕತ್ತದಲ್ಲಿ ನಡೆದ ಭಾರತೀಯ ಅಂತಾರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಪನೋರಮಾ ವಿಭಾಗದಲ್ಲಿ ಕೂಡ ಈ ಚಿತ್ರ ಪ್ರದರ್ಶನ ಕಂಡಿತು. ಆಕಸ್ಮಿಕ ದ್ವಿತೀಯ ಅತ್ಯುತ್ತಮ ಚಿತ್ರವೆಂಬ ರಾಜ್ಯಪ್ರಶಸ್ತಿಯನ್ನೂ (1993 - 94), ನಾವಿದ್ದೇವೆ ಎಚ್ಚರಿಕೆ ಅತ್ಯುತ್ತಮ ಮಕ್ಕಳ ಚಿತ್ರಕ್ಕೆ ರಾಜ್ಯ ಪ್ರಶಸ್ತಿಯನ್ನು ಗಳಿಸಿದೆ (1995 - 96). ಜನುಮದಜೋಡಿ ಫಿಲ್ಮ್‌ಫೇರ್ ಪ್ರಶಸ್ತಿಯನ್ನೂ (1996 - 97), ನಾಗಮಂಡಲ ದ್ವಿತೀಯ ಅತ್ಯುತ್ತಮ ಚಿತ್ರವೆಂಬ ರಾಜ್ಯಪ್ರಶಸ್ತಿಯನ್ನೂ ಗಳಿಸಿದೆ (1996-97). ವೈಜ್ಞಾನಿಕ ವಿಷಯವನ್ನು ಸರಳವಾಗಿ ನಿರೂಪಿಸಿರುವ ಈ ಚಿತ್ರ ಅಂತಾರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಪಾಲ್ಗೊಂಡಿತ್ತು. ನೀಲಾ ತೃತೀಯ ಅತ್ಯುತ್ತಮ ಚಿತ್ರದ ರಾಜ್ಯ ಪ್ರಶಸ್ತಿಯನ್ನೂ ಪಡೆದುಕೊಂಡಿದೆ. ಇವರ ನಿರ್ದೇಶನದಲ್ಲಿ ಮೂಡಿಬಂದ ಬಂಗಾರದ ಜಿಂಕೆ, ಪ್ರಾಯ ಪ್ರಾಯ ಪ್ರಾಯ, ಸೇಡಿನ ಸಂಚು, ಮಕ್ಕಳಿರಲವ್ವ ಮನೆತುಂಬ, ನೆನಪಿನದೋಣಿ, ಸುರಸುಂದರಾಂಗ, ಪ್ರೇಮಾಗ್ನಿ, ರಾವಣರಾಜ್ಯ, ವಿಮೋಚನೆ, ಜನುಮದಾತ - ಈ ಚಿತ್ರಗಳು ಅಪಾರ ಜನಮನ್ನಣೆಗೆ ಪಾತ್ರವಾಗಿವೆ. ಚಂದ್ರಶೇಖರ ಕಂಬಾರರ ಕಾದಂಬರಿ ಆಧರಿಸಿದ ಸಿಂಗಾರೆವ್ವ ಚಿತ್ರವನ್ನೂ ನಿರ್ದೇಶಿಸಿದ್ದಾರೆ (2003). ಕಿರುತೆರೆಯಲ್ಲೂ ಅತ್ಯಂತ ಜನಪ್ರಿಯ ನಿರ್ದೇಶಕರೆಂಬ ಹೆಗ್ಗಳಿಕೆಗೆ ನಾಗಾರಭರಣ ಪಾತ್ರರಾಗಿದ್ದಾರೆ. (ಬಿ.ಆರ್‌ಎ.)

**ನಾಗಾಯಿ :** ಗುಲ್ಬರ್ಗ ಜಿಲ್ಲೆ ಚಿತ್ತಾಪುರ ತಾಲ್ಲೂಕಿನಲ್ಲಿ ಚಿತ್ತಾಪುರದಿಂದ ನೈಋತ್ಯಕ್ಕೆ ವಾಡಿಗೆ ಹೋಗುವ ಮಾರ್ಗದಲ್ಲಿ 2ಕಿಮೀ ಅಂತರದಲ್ಲಿರುವ ಸ್ಥಳ. ಇಲ್ಲಿನ ಹಿಂದು ಜೈನ ಹಾಗೂ ಮುಸಲ್ಮಾನ ಸಂಸ್ಕೃತಿಗಳಿಗೆ ಸಂಬಂಧಿಸಿದ ವಾಸ್ತು ಅವಶೇಷಗಳಿಂದ ಪ್ರಸಿದ್ಧವಾಗಿದೆ. ಇದರ ಹೆಸರು ನಾಗವಾಪಿಯಿಂದ ಬಂದಿರಬಹುದು. ಶಾಸನಗಳಲ್ಲಿ ಇದು ನಾಗವಾವಿ ಎಂದೇ ಪ್ರಸಿದ್ಧ. ಶ್ರೀರಾಮ ವನವಾಸದಲ್ಲಿದ್ದ ಕಾಲದಲ್ಲಿ ಇಲ್ಲಿ ತಂಗಿದ್ದನೆಂದು ಪ್ರತೀತಿ. ನಿಜಾಮರ ಆಡಳಿತದ ಕಾಲದಲ್ಲಿ ಇದು ಪಾಯಿಗಾ ಇಲಾಖೆಗೆ ಸೇರಿದ್ದು ನವಾಬ್ ಆಸ್ಮರಿಯಾರ್ ಜಂಗ ಬಹದ್ದೂರ್ ಹಾಗೂ ನವಾಬ್ ಬಷೀರದ್ದೌಲಾ ಬಹದ್ದೂರ್ ಅವರಿಗೆ ಸಂಬಂಧಪಟ್ಟಿತ್ತು. 1947ರ ಅನಂತರ ಚಿತ್ತಾಪುರದ ಜೊತೆಗೆ ಗುಲ್ಬರ್ಗ ಜಿಲ್ಲೆಯಲ್ಲಿ ವಿಲೀನವಾಯಿತು.

ಈ ಗ್ರಾಮದಲ್ಲಿ ಪುರಾತನ ಅವಶೇಷಗಳು ಸುಮಾರು ಒಂಬ್ಬತ್ತು ಚದರ ಕಿ.ಮೀಗಳ ವರೆಗೆ ಹಬ್ಬಿವೆ. ದೇವಾಲಯಗಳು, ಮಸೀದಿಗಳು, ಮನೆಗಳು, ಕೆರೆಗಳು, ಬಾವಿಗಳು ಮುಂತಾಗಿ ಈ ಅವಶೇಷಗಳನ್ನು ಗುರುತಿಸಬಹುದಾಗಿದೆ. ಅವುಗಳಲ್ಲಿ ಮುಖ್ಯವಾದವು ಜೋಡಿಮಂಟಪಗುಡಿ, ಜೈನಬಸದಿ, ಮಸೀದಿ, ದೊಡ್ಡ ಕಮಾನಿನ ಅಗಸಿ, ಮಡಿವಾಳಪ್ಪನ ಗುಡಿ, ಮಹಾದೇವ ದೇವಸ್ಥಾನ, ಶಾಸನ ದೇವಸ್ಥಾನ, ಅರವತ್ತು ಕಂಬದ ಗುಡಿ, ಕಾಲಿ ಮಸ್‌ಜಿದ್ ದರ್ಗಾ, ಕಡಲಿ ಬಸವಣ್ಣನ ಗುಡಿ, ಹಣಮಂತ ದೇವರ ಗುಡಿ, ಮಾಲಗಂಬ, ಮಲ್ಲಯ್ಯನ ಗುಡಿ, ಎಲ್ಲಮ್ಮನ ಗುಡಿ, ಇವುಗಳಲ್ಲದೆ ಅನೇಕ ಗುಣಪತಿಯ ವಿಗ್ರಹಗಳೂ ನಾಗರಕಲ್ಲುಗಳೂ ಇವೆ. ನಾಗಾಯಿಯು ಇನ್ನೊಂದು ವಿಶೇಷವೆಂದರೆ ಇಲ್ಲಿ ಅನೇಕ ನೀರಿನ ಝುರಿಗಳೂ ಬಾವಿಗಳೂ ಇವೆ. ಇವುಗಳಲ್ಲಿ ಮುಖ್ಯವಾದುದೆಂದರೆ ನಂದಿಬಾವಿ, ಕಾಲಿಮಸ್‌ಜಿದ್ ಬಾವಲಿ, ಸಿದ್ದಬಾವಿ ಮತ್ತು ಎಲ್ಲಮ್ಮನ ಬಾವಿ, ಇವು ಸರ್ವಕಾಲದಲ್ಲೂ ತುಂಬಿ ಹರಿಯುತ್ತವೆ.

ನಾಗಾಯಿಯ ಅವಶೇಷಗಳ ಪೈಕಿಯ ದೇವಸ್ಥಾನಗಳು ಮತ್ತು ಬಸದಿಗಳು ಕಲ್ಯಾಣದ ಚಾಳುಕ್ಯರ ಕಾಲಕ್ಕೆ ಸೇರಿದವು. ಮಸೀದಿಗಳಲ್ಲಿ ಕೂಡ ಕೆಲವು ಹಳೆಯ ದೇವಸ್ಥಾನಗಳೇ ಆಗಿದ್ದರೆ ಕೆಲವು ಆ ಹಳೆಯ ದೇವಸ್ಥಾನಗಳ ಅವಶೇಷಗಳಿಂದ ಪುನಃ ನಿರ್ಮಾಣ ಮಾಡಿದುವಾಗಿವೆ. ಈ ದೇವಸ್ಥಾನಗಳಲ್ಲಿ ಅರವತ್ತು ಕಂಬದ ಗುಡಿ ಬಹು ಸುಂದರವಾಗಿದೆ. ಇಲ್ಲಿನ ಕಂಬಗಳಲ್ಲಿನ ಚಿತ್ರದ ಕೆಲಸ ಹಾಗೂ ಸುಂದರ ಶಿಲ್ಪಗಳು ಮನಸೂರೆಗೊಳ್ಳುವಂತಿವೆ. ಮಸೀದಿಗಳಲ್ಲಿನ ಕಂಬಗಳೂ ಹೊಳಪು ಮಾಡಿದ, ಚಿತ್ರದಿಂದ ಕೂಡಿದ ಕಂಬಗಳೇ ಆಗಿವೆ. ಸಹಸ್ರ ದೀಪದ ಮಾಲಗಂಬ ತನ್ನಷ್ಟಕ್ಕೆ ವಿಶಿಷ್ಟವೂ ಸುಂದರವೂ ಆಗಿದೆ. ಹಣಮಂತ ದೇವರ ದೇವಾಲಯದಲ್ಲಿನ ಗೋಡೆಗಳಲ್ಲಿ ರಾಮಾಯಣದ ಚಿತ್ರಗಳನ್ನು ಕೆತ್ತಿದೆ; ಇವು ಸುಂದರವಾಗಿವೆ.

ಹನ್ನೆರಡನೆಯ ಶತಮಾನದಲ್ಲಿ ನಾಗವಾವಿಯ ಭೂಭಾಗವನ್ನು ಕಲ್ಯಾಣದ ಚಾಳುಕ್ಯರ ಸಾಮಂತರೂ ಮಾಂಡಲಿಕರೂ ಆದ ಹೈಹಯ ವಂಶದ ರಾಜರು ಆಳುತ್ತಿದ್ದರು. ಅದು ಅವರ ಪ್ರಾಂತ ಅರಲು 300ರಲ್ಲಿ ಇದ್ದಿತು. ಇಲ್ಲಿನ ಶಾಸನವೊಂದರಲ್ಲಿ ನಾಗವಾವಿಯನ್ನು ಕುನ್ತಳ ಮಹೀತಳಕ್ಕೆ ಮುಖಮಿದೆಂಬನ್ನಿತ್ರ್ದು ಅಱಲು ಮುನ್ನೂರ್ಗೆ ತಿಲಕಮಪ್ಪನ್ನಿರ್ದ್ದು ಮಹಾಗ್ರಹಾರ ಎಂದು ವರ್ಣಿಸಿದೆ. ನಾಗಾಯಿಯಲ್ಲಿ ಒಂದು ದೊಡ್ಡ ಘುಟಿಕಾಸ್ಥಾನವಿದ್ದು ಅದು ವಿದ್ಯಾಕೇಂದ್ರವಾಗಿದ್ದಿತು. ಮಧುಸೂದನ ದೇವಾಲಯ ಹಾಗೂ ತ್ರೈಪುರುಷದೇವರ ಶಾಲೆ ಈ ಘುಟಿಕಾಸ್ಥಾನದ ಕೇಂದ್ರವಾಗಿದ್ದುವು. ಈ ಮಧುಸೂದನ ದೇವಾಲಯ, ತ್ರೈಪುರಷ ಶಾಲೆ, ರಾಮೇಶ್ವರ ದೇವಸ್ಥಾನ ಮತ್ತು ರಾಮತೀರ್ಥ ಮುಂತಾದವುಗಳನ್ನು ಚಾಳುಕ್ಯ ದೊರೆ ಅಹವಮಲ್ಲ ಸೋಮೇಶ್ವರನ ಮಂತ್ರಿ ಕಾಳಿದಾಸ ದಂಡನಾಯಕ ಮಾಡಿಸಿದ. ಈ ಮಹಾಮಾಣಿಕ ಮಧುಸೂದನ ದೇವಾಲಯದ ಕಳಸ ಸುವರ್ಣದ್ದಾಗಿದ್ದು ಅದು ಆಕಾಶವನ್ನು ತಟ್ಟುತ್ತಿದೆಯೊ ಏನೋ ಎನ್ನುವಷ್ಟು ಎತ್ತರವಾಗಿತ್ತು. ಅದರ ಒಳಗೆ ಅನೇಕ ಸುಂದರ ಸಾಲಭಂಜಿಕೆಗಳು ರಾರಾಜಿಸುತ್ತಿದ್ದವು. ಅಲ್ಲಿ ಒಂದು ನಾಟ್ಯಶಾಲೆಯೂ ಇತ್ತು. ದೇವಸ್ಥಾನದ ಎದುರಿನಲ್ಲಿ ಒಂದು

ಗರುಡಗಂಬವಿದ್ದಿತು. ದೇವಸ್ಥಾನದಲ್ಲಿ ಏಕದಂಡಿ, ತ್ರಿದಂಡಿ, ಸ್ನಾತಕ, ಬ್ರಹ್ಮಚಾರಿ, ಹಂಸ, ಪರಮಹಂಸ ಮುಂತಾದವರಿಗೆ ಅನುಷ್ಠಾನಭವನಗಳಿದ್ದವು. ಚತುರ್ವೇದಗಳ ಮತ್ತು ಅದರ ಶಾಖೆಗಳ, ಭಟ್ಟ, ನ್ಯಾಸ, ಪ್ರಭಾಕರ ಮೊದಲಾದ ದರ್ಶನಗಳು, ಸಾಹಿತ್ಯ, ಶುಕ್ರನೀತಿ, ಮನುಸ್ಮೃತಿ ಮುಂತಾದುವುಗಳ ಅಧ್ಯಯನಕ್ಕೆ ಅಲ್ಲಿ ಆಶ್ರಯವಿದ್ದಿತು. ಈ ವಿಷಯುಗಳನ್ನು ಅಭ್ಯಾಸಮಾಡುವ ವಿದ್ಯಾರ್ಥಿಗಳ ಊಟ ಬಟ್ಟೆಗೆ, ಘಟಿಕಾಪ್ರಹಾರಿಗೆ, ಪುರಾಣದ ಭಟ್ಟರಿಗೆ, ನೈವೇದ್ಯಮನುಡುವ ಬಾಣಸಗೆ, ಕಾಪಿನ ಘಟೆಯರರಿಗೆ, ಮದ್ದಳಿಕಾರರಿಗೆ ಹಾಡುವವರಿಗೆ ಪಾತ್ರದವರಿಗೆ, ಕಂಬದ ಸೂಳೆಯರಿರ್ಗೆ, ದೇವಾಲಯಕ್ಕೆ ಸುಣ್ಣ ಹಾಕುವ ಸುಣ್ಣವೆಸದವನಿಗೆ, ಕಲ್ಕುಟಿಗ, ಕಳಾಸೂತ್ರಧಾರಿ ವೋಜರುಗಳಿಗೆ ಜೀವನೋಪಾಯಕ್ಕೆ ಭೂಮಿಯನ್ನು ದಾನಕೊಟ್ಟುದಾಗಿ ಕೆಲವರಿಗೆ ಇರಲು ನಿವೇಶಗಳನ್ನು ದತ್ತಿವಿಟ್ಟುದಾಗಿ ಶಾಸನಗಳಿಂದ ತಿಳಿದುಬರುತ್ತದೆ. ಈ ಎಲ್ಲರಿಂದ ಆ ಘಟಿಕಾಸ್ಥಾನ ತುಂಬಿ ನಾಲ್ನೂರ್ವರ್ ವಿಪ್ರರಿಂದ ಕೂಡಿ ಅಗ್ರಹಾರ ನಾಗವಾವಿ ಅಭಿನವ ಬ್ರಹ್ಮಲೋಕದಂತಿದ್ದಿತಂತೆ. (ಎಸ್‍ಜೆ.ಎ.)

**ನಾಗಾರಾಧನೆ :** ಮಾನವ ಜನಾಂಗದಲ್ಲಿ ಆದಿಕಾಲದಿಂದಲೇ ನಾಗಪೂಜೆ ನಡೆದುಬರುತ್ತಿದೆ. ಋಗ್ವೇದದ ಪ್ರಧಾನ ದೈವತ ಸರ್ಪ ಎನ್ನಲಾಗಿದೆ. ಸಿಂಧೂ ಸಂಸ್ಕೃತಿಯ ಅವಶೇಷಗಳಲ್ಲಿ ನಾಗಮಿಥುನವಿದೆ. ಅಶ್ವತ್ಥವೃಕ್ಷದ ಕೆಳಗೆ ಎಡಬಲಗಳಲ್ಲಿ ಹೆಡೆಯೆತ್ತಿರುವ ನಾಗಗಳ ಬಳಿ ಪೂಜೆ ಮಾಡುವ ವ್ಯಕ್ತಿಗಳ ಚಿತ್ರವಿದೆ. ಅಶ್ವತ್ಥೋ ದೇವಸದನಃ ಎಂಬುದು ಅಥರ್ವವೇದದ ಮಾತು. ನಾಗನ ಕಲ್ಲುಗಳನ್ನು ನೆಟ್ಟಿರುವುದು ಹೆಚ್ಚಾಗಿ ಅಶ್ವತ್ಥವೃಕ್ಷದ ಕೆಳಗೆ. ಭಾರತೀಯರಿಗೆ ಮಾತ್ರವಲ್ಲ ಈಜಿಪ್ಟ್, ಗ್ರೀಸ್, ಅಸೀರಿಯ - ಮುಂತಾದ ಪುರಾತನ ಸಂಸ್ಕೃತಿಗಳ ಜನತೆಗೂ ನಾಗನೇ ಆದಿದೈವತ. ಈಜಿಪ್ಟಿನ ಆದಿದೇವ ಮಿಡಿನಾಗ. ಭರತ ಖಂಡದಲ್ಲಿ ಶೈವ, ಶಾಕ್ತ, ವೈಷ್ಣವ, ಬೌದ್ಧ, ಜೈನ ಮುಂತಾದ ಎಲ್ಲ ಮತಸಂಪ್ರದಾಯದವರಲ್ಲಿಯೂ ನಾಗಪ್ರತಿಮೆಯ ಪೂಜೆ ಪ್ರಚಲಿತವಿದೆ.

ನಾಗಾರಾಧನೆಯಿಂದ ಗೋವು ಧನ, ಧಾನ್ಯ, ಆಯುಷ್ಯ, ಸಂತಾನ ಸಮೃದ್ಧಿ ಯಾಗುವುದೆಂದು ನಂಬಿಕೆಯಿದೆ. ಹುಟ್ಟಿದ ಮಗು ಬಾಳಲೆಂದು ಮಗುವಿಗೆ ನಾಗರತ್ನ, ನಾಗಮಣಿ, ನಾಗರಾಜ, ಶೇಷ, ಭುಜಂಗ ಇತ್ಯಾದಿ ಹೆಸರನ್ನಿಡುವುದಿದೆ. ಸಂತಾನಾಪೇಕ್ಷೆಯಿಂದ ನಾಗಪೂಜೆ, ನಾಗಬಲಿಗಳನ್ನು ಆಚರಿಸುತ್ತಾರೆ. ವಡ್ಡಾರಾಧನೆ ಎಂಬ ಕನ್ನಡ ಗದ್ಯ ಗ್ರಂಥದ ಸುಕುಮಾರಸ್ವಾಮಿಯ ಕಥೆಯಲ್ಲಿ ಚಂಪಾನಗರದ ರಾಜಪುರೋಹಿತ ಸೋಮಶರ್ಮ ಮತ್ತು ಅವನ ಮಡದಿ ತ್ರಿವೇದಿ ಎಂಬ ದಂಪತಿಗಳು ಆನಗರದ ಉದ್ಯಾನದ ನಾಗರನ್ನು ಪೂಜಿಸಿ, ಹರಕೆ ಸಲ್ಲಿಸಿ, ಮಗಳನ್ನು ಪಡೆದುದಾಗಿಯೂ ಆ ಮಗಳಿಗೆ ನಾಗಶ್ರೀ ಎಂದು ಹೆಸರಿಟ್ಟುದಾಗಿಯೂ ಆ ಉದ್ಯಾನದಲ್ಲಿ ಕಂಬಳನಾಗ, ಶಂಬರನಾಗ, ಪಾಂಡುಕನಾಗ ಎಂಬ ನಾಗಪ್ರತಿಮೆಗಳಿದ್ದುದಾಗಿಯೂ ಹೇಳಿದೆ.

ನಾಗರಾಧನೆ ಸುಬ್ರಹ್ಮಣ್ಯದೇವರ ಆರಾಧನೆಯಾಗಿರುವುದಕ್ಕೆ ಪೂರಾಣಕಥೆಯೊಂದಿದೆ. ಹಿಂದೆ ಗರುಡನ ಭೀತಿಯಿಂದ ಗುಹೆಯಲ್ಲಿ ಅಡಗಿದ್ದ ವಾಸುಕಿ ಶಿವನನ್ನು ಕುರಿತು ತಪಸ್ಸುಮಾಡಿದ. ಶಿವ ಮೆಚ್ಚಿ ಬಂದು ಮುಂದೆ ನನ್ನ ಮಗ ಸುಬ್ರಹ್ಮಣ್ಯ ರಾಕ್ಷಸರನ್ನು ಕೊಂದು ನಿನ್ನ ಬಳಿಗೆ ಬರುತ್ತಾನೆ. ನಿನ್ನನ್ನು ತನ್ನ ಅಂಶದಿಂದ ಸ್ಥಾಪಿಸಿ ಪೂಜಾರ್ಹನನ್ನಾಗಿ ಮಾಡುತ್ತಾನೆ. ನಿನ್ನನ್ನು ಭಜಿಸುವವರಿಗೆ ನಾನು ಇಷ್ಟಪ್ರದನಾಗುವೆ ಎಂದು ವರವಿತ್ತುದಾಗಿ ಸ್ಕಂದಪುರಾಣದ ಸಹ್ಯಾದ್ರಿ ಖಂಡದಲ್ಲಿ ಹೇಲಿದೆ. ಯಕ್ಷಗಾನ ಬಯಲಾಟದ ಸಭಾಲಕ್ಷಣದ ಪ್ರಕಾರ ಮಂಡಲನಾಯಕನಾದ ಸುಬ್ರರಾಯನಿಗೆ ಸರ್ಪನಿಗೆ ರಂಗಸ್ಥಳದಲ್ಲಿ ಪೂಜೆ ಸಲ್ಲುತ್ತದೆ.

ಈಗಿನ ಕರ್ನಾಟಕದ ಗೋಕರ್ಣದಿಂದ ಕೇರಳದ ಕನ್ಯಾಕುಮಾರಿ ವರೆಗಿನ ಪರಶುರಾಮ ಕ್ಷೇತ್ರಕ್ಕೆ ಪ್ರಾಚೀನ ಕಾಲದಲ್ಲಿ ನಾಗಖಂಡ ಎಂದು ಹೆಸರಿತ್ತು. (ಶಿಕಾರಿಪುರ ಶಾಸನಾಧಾರ). ಈ ಭಾಗದಲ್ಲಿ ಅಲ್ಲಲ್ಲಿ ನಾಗವನಗಳಿವೆ. ನಾಗವನದಲ್ಲಿ ನಾಗಪ್ರತಿಮೆಗಳ ಕಲ್ಲುಗಳೂ ಇರುತ್ತವೆ. ಸ್ಥಳಿಕರು ವರ್ಷಕ್ಕೊಮ್ಮೆ ಅಥವಾ ಹರಕೆ ಹೇಳಿದ್ದ ಸಂದರ್ಭದಲ್ಲಿ. ನಾಗವನಕ್ಕೆ ತಂಬುಲ ಎಂಬ ಹೆಸರಿನಲ್ಲಿ ಅರ್ಚನೆ ಸಲ್ಲಿಸುತ್ತಾರೆ. ಪೂಜೆಯ ದಿನ ಕುಲಕುಟುಂಬದವರು ಸೇರಿ ನಾಗವನವನ್ನು ಶುದ್ಧಮಾಡಿ, ಓಕುಳಿ ನೀರನ್ನು ಕುರುದಿಯನ್ನು ಚೆಲ್ಲಿ, ಅರಳು ಎಳನೀರು ತೆಂಗಿನಕಾಯಿ ಬೆಲ್ಲ ಹೂಹಣ್ಣು ತಾಂಬೂಲಗಳನ್ನು ನಿವೇದಿಸುತ್ತಾರೆ. ಪ್ರದಕ್ಷಿಣೆ ನಮಸ್ಕಾರಗಳನ್ನು ಸಲ್ಲಿಸಿ ಮನುಷ್ಯರಿಗೂ ದನಕರುಗಳಿಗೂ ಬೆಳೆಗೂ ಕ್ಷೇಮವಾಗುವಂತೆ ಪ್ರಾರ್ಥನೆ ಸಲ್ಲಿಸುತ್ತಾರೆ. ಬ್ರಾಹ್ಮಣೇತರರು ಅರ್ಚಿಸುವ ನಾಗವನದಲ್ಲಿ ಕೋಳಿಯನ್ನು ಬಲಿಕೊಡುವುದೂ ಇದೆ.

ಉಡುಪಿ ಜಿಲ್ಲೆಯ ಕುಂದಾಪುರ ಉಡುಪಿ ತಾಲ್ಲೂಕುಗಳಲ್ಲಿ ವೈದ್ಯರು ಎಂಬ ಬ್ರಾಹ್ಮಣ ಕುಲದವರು ನಾಗಮಂಡಲ ಎಂಬ ನೃತ್ಯಾತ್ಮಕ ಪೂಜಾ ಸಮಾರಂಭವನ್ನು ಆಚರಿಸುತ್ತಾರೆ. ಢಕ್ಕೆಯನ್ನು ಬಾರಿಸುತ್ತ ಅದರ ತಾಳದ ಗತಿಗೆ ಸರಿಯಾಗಿ ಕುಣಿದುಕೊಂಡು ನಾಗಮಂಡಲದ ನಾಗನಿಗೂ (ಸುಬ್ರಹ್ಮಣ್ಯ) ಇತರ ದೆವ್ವದೆವತೆಗಳಿಗೂ ಪೂಜೆ ಸಲ್ಲಿಸುತ್ತಾರೆ. ಅರ್ಚಕನಾದ ವೈದ್ಯ ಅರ್ಧನಾರಿ, ಅರ್ಧಪುರುಷ ವೇಷದಲ್ಲಿರುತ್ತಾನೆ. ನಾಗರಾಧನೆಯ ಪ್ರತೀಕವಾಗಿ ನಾಗರ ಪಂಚಮಿ ಹಬ್ಬವನ್ನು ಶ್ರಾವಣ ಮಾಸದ ಶುದ್ಧ ಪಂಚಮಿಯಂದು ಆಚರಿಸಲಾಗುತ್ತದೆ. ನಾಗರಪಂಚಮಿ ಕುರಿತು ಜನಪದ ಕಥೆಗಳೂ ಗೀತಗಳೂ ಕನ್ನಡದಲ್ಲಿ ಪ್ರಚಲಿತವಾಗಿವೆ. ಇವು ಈ ನಾಗಾರಾಧನೆಯ ಹಿನ್ನೆಲೆ ಮತ್ತು ಮಹತ್ತ್ವದ ಬಗೆಗೆ ಬೆಳಕನ್ನು ಚೆಲ್ಲುತ್ತವೆ. (ನೋಡಿ) ಹಬ್ಬಗಳು. ಆದರೆ ಹಿಂದಿನ ದಿನ ನಾಗರಚೌತಿ ಎಂದು ಆಚರಿಸುವ ಕ್ರಮವೂ ಇದೆ.ಇದಲ್ಲದೆ ಶುದ್ಧ ಷಷ್ಠಿದಿನವೂ ನಾಗರಾಧನೆ ಮಾಡುವುದುಂಟು. ಈ ಶ್ರಾವಣ ಮಾಸದಲ್ಲಿ ಎಲ್ಲೆಲ್ಲೂ ಹಸುರು ಬೆಳೆದು ನಿಂತಿರುತ್ತದೆ. ಈ ಕಾಲದಲ್ಲೇ ಹಾವುಗೋಳ ಕಾಟವೂ ಹೆಚ್ಚು. ಆಪತ್ಕಾರಿ ವಿಪತ್ತುಗಳ ಸಾಕ್ಷಾದ್ರೂಪಗಳೇ ಹಾವುಗಳು. ಆದುದರಿಂದ ದೇವರೇ ಸುಬ್ರಹ್ಮಣ್ಯನೇ, ಸರ್ಪಭೀತಿಯಿಂದ ಪಾರುಮಾಡು, ನಾಗನೇ, ತೊಂದರೆ ಕೊಡಬೇಡ, ನಿನ್ನನ್ನು ಇಗೋ ತೃಪ್ತಿಪಡಿಸುತ್ತೇವೆ. ಎಂಬ ಭಾವನೆಯಿಂದ ನಾಗರಾಧನೆ ರೂಢಿಗೆ ಬಂದಿರಬೇಕು. ನಾಗನನ್ನು ಕ್ಷೇತ್ರಪಾಲಕನೆಂದೂ ಕರೆಯುತ್ತಾರೆ. ನಾಗಗಳಿದ್ದ ಹೊಲದಲ್ಲಿ ಇತರ ಕೀಟಗಳಿಂದ,ಕಳ್ಳರಿಂದ ತೊಂದರೆ ಬರುವುದಿಲ್ಲ. ಈ ಕಾರಣದಿಂದಲೂ ನಾಗಪೂಜೆಗೆ ಔಚಿತ್ಯವಿದೆ.

ನಾಗರಪಂಚಮಿ ಹೆಣ್ಣುಮಕ್ಕಳ ಹಬ್ಬ. ಅವರಿಗೆ ಅದು ಮಾಂಗಲ್ಯ ಪುತ್ರ ಸಂಪತ್ಪ್ರದವೆಂದು ಭಾವಿಸಲಾಗಿದೆ. ಈ ಹಬ್ಬದಂದು ಬೆಳಗ್ಗೆ ಎದ್ದು ಸ್ನಾನಮಾಡಿ ಮಡಿಯುಟ್ಟು ಕಲ್ಲನಾಗನಿಗೆ ಅಥವಾ ಮಣ್ಣಿನ ನಾಗನಿಗೆ ಅಥವಾ ಹುತ್ತಕ್ಕೆ ಪೂಜೆ ನೈವೇದ್ಯ ಪ್ರಾರ್ಥನೆಗಳನ್ನು ಸಲ್ಲಿಸುತ್ತಾರೆ. ಅರಳಹಿಟ್ಟು, ತಂಬಿಟ್ಟು, ಉಂಡೆ, ಉಸಳಿಗಳನ್ನು ನೈವೇದ್ಯಮಾಡಿ ಒಬ್ಬೊಬ್ಬರಾಗಿ ಹಾಲೆರೆದು ವಂದಿಸುತ್ತಾರೆ. ರಂಗೋಲಿಯಲ್ಲಿ ನಾಗನನ್ನು ಬಿಡಿಸಿ ಹುತ್ತದ ಮಣ್ಣು, ಗೋದಿಹಿಟ್ಟು, ಇವನ್ನು ಕಲಸಿ ಹಾವಿನ ಆಕೃತಿಗಳನ್ನು ರಚಿಸಿ ತಟ್ಟೆಯಲ್ಲಿಟ್ಟು ಅದನ್ನು ರಂಗೋಲಿಯ ನಾಗನ ಮೇಲಿಟ್ಟು ಹಾಲು, ತುಪ್ಪ, ಅರಳು ಮುಂತಾದುವನ್ನು ನೈವೇದ್ಯ ಮಾಡಿ ಪೂಜಿಸುವುದೂ ಪದ್ಧತಿ. ನಾಗಪೂಜೆಯ ಅನಂತರ ಉಪಾಹಾರ ಅಥವಾ ಊಡ ಮಾಡಿ ಉಯ್ಯಾಲೆಮಾಡಲು ಹೊರಡುತ್ತಾರೆ. ಈ ಹಬ್ಬಕ್ಕೆ ಹೆಣ್ಣು ಮಕ್ಕಳು ತವರುಮನೆಗೆ ಬಂದು ಇರುವುದು ವಾಡಿಕೆ.

**ನಾಗಾರ್ಜುನ :** ಸು. 6ನೆಯ ಶತಮಾನ. ಕರ್ನಾಟಕದಲ್ಲಿ ಹುಟ್ಟಿ ವಿಖ್ಯಾತನಾದ ಆಯುರ್ವೇದಾಚಾರ್ಯ. ಸಿದ್ಧರ ಪರಂಪರೆಗೆ ಸೇರಿದವ. ಜೈನಸಾಹಿತ್ಯದಲ್ಲಿ ಖ್ಯಾತನಾದ ವೇದಾಂತಿ. ವೈದ್ಯಶಾಸ್ತ್ರಜ್ಞನಾದ ಪೂಜ್ಯಪಾದನ ಸೋದರಳಿಯ, ಪಾದಲಿಪ್ತಸೂರಿಯ ಮಗ. ಪೂಜ್ಯಪಾಜನಿಂದ ವಿದ್ಯೆ ಕಲಿತ, ಜನ್ಮತಃ ಜೈನನಾದರೂ ಬೌದ್ಧಮತದ ತತ್ತ್ವಗಳಲ್ಲಿ ಅಭಿರುಚಿ ಹೊಂದಿ ಬೌದ್ಧ ಮತಾವಲಂಬಿಯಾದ. ಭಾರತದ ನಾನಾ ಭಾಗಗಳಲ್ಲಿ ಹಾಗೂ ನೇಪಾಳ, ಟಿಬೆಟ್‍ಗಳಲ್ಲಿ ಸಂಚರಿಸಿ ಬೌದ್ಧಮತ ಪ್ರಚಾರ ಮಾಡಿದ. ಟಿಬೆಟಿನಲ್ಲಿ ಒಂದು ಮಠದ ಅಧಿಪತಿಯಾಗಿ ಬಹುಕಾಲ ಇದ್ದು ಅನೇಕ ಗ್ರಂಥಗಳನ್ನು ರಚಿಸಿದ. ಅನಂತರ ಶ್ರೀಶೈಲದಲ್ಲಿ ನೆಲಸಿ ರಸಸಿದ್ಧಿಯನ್ನು ಪಡೆದದರಿಂದ ಈತನನ್ನು ಸಿದ್ಧನಾಗಾರ್ಜುನನೆಂದು ಕರೆಯುವುದು ವಾಡಿಕೆಯಾಗಿದೆ. ಭಾರತೀಯ ರಸಶಾಸ್ತ್ರವನ್ನು ಕುರಿತ

ರಸಕಚ್ಛಪುಟ, ಕಕ್ಷಪುಟತಂತ್ರ ಅಥವಾ ಸಿದ್ಧಚಾಮುಂಡ ಮುಂತಾದ ಗ್ರಂಥಗಳು ಈತನಿಂದ ರಚಿತವಾಗಿವೆ. (ಕೆ.ಪಿ.ಎಸ್.ಎ.)

**ನಾಗೇಂದ್ರರಾವ್, ಆರ್. :** 1896-1977. ಕನ್ನಡ ರಂಗಭೂಮಿ ಹಾಗೂ ಚಲನಚಿತ್ರರಂಗದ ಉತ್ಕರ್ಷಕ್ಕಾಗಿ ಶ್ರಮಿಸಿದ ಪ್ರಸಿದ್ಧ ನಟ, ನಿರ್ದೇಶಕ, ನಿರ್ಮಾಪಕ, ರಟ್ಟೀಹಳ್ಳಿ ನಾಗೇಂದ್ರರಾವ್ ಎಂಬುದು ಇವರ ಪೂರ್ಣ ಹೆಸರು. 1896 ಜೂನ್ 23ರಂದು ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆಯಲ್ಲಿ ಜನಿಸಿದರು. ಇವರ ತಂದೆ ರಟ್ಟೀಹಳ್ಳಿ ಕೃಷ್ಣರಾವ್, ತಾಯಿ ರುಕ್ಮಿಣಿದೇವಿ. ನಾಗೇಂದ್ರರಾಯರು ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದಾಗಲೇ ತಂದೆಯನ್ನು ಕಳೆದುಕೊಂಡರು. ಅನಂತರ ಅತಿ ಪ್ರಯಾಸದಿಂದ ಪ್ರೌಢಶಾಲೆಯ ವ್ಯಾಸಂಗ ಮುಗಿಸಿದರು. ಆಗ ಶಾಲೆಯ ನಾಟಕಗಳಲ್ಲಿ ಸ್ತ್ರೀ ಪಾತ್ರಗಳನ್ನು ನಿರ್ವಹಿಸುತ್ತಿದ್ದು ಉತ್ತಮ ನಟನೆಂಬ ಹೆಸರುಗಳಿಸಿದ್ದರು. ತಂದೆಯ ಮರಣಾನಂತರ ಶಿರಹಟ್ಟಿ ವೆಂಕೋಬರಾಯರ ನಾಟಕಮಂಡಲಿಯಲ್ಲಿ ಪಾತ್ರಗಳನ್ನು ನಿರ್ವಹಿಸುತ್ತಿದ್ದರು. ಒಮ್ಮೆ ಚಂದ್ರಹಾಸ ನಾಟಕದಲ್ಲಿ ವಿಷಯೆಯ ಪಾತ್ರವನ್ನು ನಿರ್ವಹಿಸುತ್ತಿದ್ದಾಗ ವರದಾಚಾರ್ಯರ ರತ್ನಾವಳಿ ಥಿಯೆಟ್ರಿಕಲ್ ಕಂಪನಿಯ ಪ್ರಮುಖ ನಟರಲ್ಲೊಬ್ಬರಾಗಿದ್ದ ಡಿ.ಜಯರಾಯರ ದೃಷ್ಟಿಗೆ ಬಿದ್ದು ಮೆಚ್ಚುಗೆಗಳಿಸಿ ಅವರ ಪ್ರೋತ್ಸಾಹದಿಂದ ವರದಾಚಾರ್ಯರ ಕಂಪನಿಯನ್ನು, ಆ ಮೂಲಕ ರಂಗಭೂಮಿಯನ್ನು ಖಾಯಂ ಆಗಿ ಪ್ರವೇಶಿಸಿದರು.

ವರದಾಚಾರ್ಯರ ಕಂಪನಿ ಸೇರಿದ ಮೇಲೆ ಸ್ತ್ರೀಪಾತ್ರಗಳ ನಿರ್ವಹಣೆ ಇವರ ಪಾಲಿನದಾಯಿತು. ರಾಯರಿಗಿದ್ದ ರೂಪ, ಕಂಠಮಾಧುರ್ಯದಿಂದಾಗಿ, ಸ್ತ್ರೀ ಪಾತ್ರಗಳು ಇವರಿಗೆ ಚೆನ್ನಾಗಿ ಒಪ್ಪುತ್ತಿದ್ದವು. ಪರಿಣಾಮವಾಗಿ ಪ್ರಹ್ಲಾದಚರಿತ್ರೆಯಲ್ಲಿ ಭೂದೇವಿ, ಸುಗ್ರೀವಸಖ್ಯ, ಲಂಕಾದಹನ, ಸಂಪೂರ್ಣ ರಾಮಾಯಣ ನಾಟಕಗಳಲ್ಲಿ ಸೀತೆ, ಶಾಕುಂತಲದಲ್ಲಿ ಶಾಕುಂತಲ, ರಾಮವರ್ಮ-ಲೀಲಾವತಿಯಲ್ಲಿ ಲೀಲಾವತಿ, ಹರಿಶ್ಚಂದ್ರದಲ್ಲಿ ಚಂದ್ರಮತಿ ಮೊದಲಾದ ಪಾತ್ರಗಳು, ಲಭ್ಯವಾದವು. ಸ್ತ್ರೀಪಾತ್ರಗಳಲ್ಲಿನ ಇವರ ಅಭಿನಯ ರಂಗಭೂಮಿಯ ಅಭಿಮಾನಗಳ ಮೆಚ್ಚುಗೆಗೆ ಪಾತ್ರವಾಯಿತು.

ವರದಾಚಾರ್ಯರ ನಿಧನಾನಂತರ ಕಂಪನಿ ನಿಂತಿತು. ಆಗ ರಾಯರು ಚಾಮುಂಡೇಶ್ವರಿ ಕರ್ನಾಟಕ ನಾಟಕ ಸಭಾಕ್ಕೆ ಸೇರಿ ಪ್ರಮುಖ ನಟರಾಗಿ, ವ್ಯವಸ್ಥಾಪಕರಾಗಿ ಕಂಪನಿಯ ಏಳ್ಗೆಗಾಗಿ ಶ್ರಮಿಸಿದರು. ಇಲ್ಲಿರುವಾಗ ಕಂಪನಿಗಾಗಿ ತುಕಾರಾವ್, ದಾನಶೂರ ಕರ್ಣ, ವೀರ ಅಭಿಮನ್ಯು ನಾಟಕಗಳನ್ನು ಬರೆದು ಪ್ರದರ್ಶಿಸಿದರು. ಕಂಪನಿಯ ಪ್ರಮುಖ ನಾಟಕವಾದ ತುಕಾರಾವ್‌ನಲ್ಲಿ ಇವರು ನಿರ್ವಹಿಸುತ್ತಿದ್ದ ಜೀಜಾಬಾಯಿ ಪಾತ್ರ ರಂಗಭೂಮಿಯಲ್ಲಿ ಸಾಕಷ್ಟು ಹೆಸರುಗಳಿಸಿತು. ನಿರಂತರವಾಗಿ ಸ್ತ್ರೀಪಾತ್ರಗಳನ್ನೇ ನಿರ್ವಹಿಸುತ್ತ ಬಂದ ರಾಯರು ಪುರುಷ ಪಾತ್ರಗಳನ್ನೂ ವಹಿಸತೊಡಗಿದರು. ರಾಜಸೂಯಯಾಗದಲ್ಲಿ ಅರ್ಜುನ, ವೀರ ಅಭಿಮನ್ಯುವಿನಲ್ಲಿ ಅಭಿಮನ್ಯು ಪಾತ್ರಗಳನ್ನು ನಿರ್ವಹಿಸಿ ಪುರುಷಪಾತ್ರಗಳಲ್ಲಿಯೂ ತಮ್ಮ ಕಲಾವಂತಿಕೆಯನ್ನು ಪ್ರದರ್ಶಿಸಿದರು. ಈ ವೇಳೆಗಾಗಲೇ ಮೂಕ ಚಿತ್ರಗಳ ಕಾಲ ಮಾಯವಾಗಿ ಟಾಕಿ ಚಿತ್ರಗಳ ಪ್ರಾದುರ್ಭಾವವಾಗಿತ್ತು. ಚಲನಚಿತ್ರರಂಗದ ಆಕರ್ಷಣೆಗೆ ಸಿಕ್ಕ ರಾಯರು ನಾಟಕ ಕಂಪನಿಯನ್ನು ಬಿಟ್ಟು ಮುಂಬಯಿಗೆ ಹೋದರು. ಅಲ್ಲಿ ತಮಿಳು ನಟ ನಿರ್ದೇಶಕ ರಾಜಾ ಸ್ಯಾಂಡೋ ಅವರ ಪರಿಚಯವಾಗಿ ಅವರ ಪ್ರೋತ್ಸಾಹದಿಂದ ಇಂಪೀರಿಯಲ್ ಫಿಲಮ್ಸ್ ಅವರ ತಮಿಳು ಚಿತ್ರಗಳಲ್ಲಿ ನಟಿಸುವ ಅವಕಾಶ ಲಭಿಸಿತು. ಪಾರಿಜಾತಪುಷ್ಪಹರಣಂ ಇವರ ಅಭಿನಯದ ಮೊದಲ ತಮಿಳು ಚಿತ್ರ. ಈ ಚಿತ್ರದ ಮೂಲಕ ರಾಯರು ಚಲನಚಿತ್ರರಂಗಕ್ಕೆ ಪದಾರ್ಪಣ ಮಾಡಿದರು. ಅನಂತರ ಕೋವಲಂ, ಭಕ್ತ ರಾಮದಾಸ್ ಮುಂತಾದ ತಮಿಳು ಚಿತ್ರಗಳಲ್ಲಿ ಅಭಿನಯಿಸಿದರು. ಈ ನಡುವೆ ಪ್ರಸಿದ್ಧ ರಂಗಭೂಮಿ ನಟ ಸುಬ್ಬಯ್ಯನಾಯ್ಡು ಅವರ ಸ್ನೇಹ ಪರಿಚಯವಾಗಿ ಇಬ್ಬರೂ ಸೇರಿ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಳಿಯನ್ನು ಸ್ಥಾಪಿಸಿ ಕನ್ನಡ ರಂಗಭೂಮಿಯಲ್ಲಿ ಕ್ರಾಂತಿಯನ್ನುಂಟುಮಾಡಿದರು. ಆ ಕಾಲದಲ್ಲಿ ಕನ್ನಡ ರಂಗಭೂಮಿಯಲ್ಲಿ ಗಣನೀಯ ಪ್ರಗತಿಯುಂಟಾಯಿತು. ಬೆಳಕಿನ ಸಂಯೋಜನೆ, ರಂಗಸಜ್ಜಿಕೆಗಳನ್ನು ಅದ್ಭುತ ರೀತಿಯಲ್ಲಿ ರಂಗಕ್ಕೆ ಅಳವಡಿಸಿದರು. ರಾಯರ ದಕ್ಷ ನಿರ್ದೇಶನದಲ್ಲಿ ಭೂಕೈಲಾಸ ನಾಟಕ ಕರ್ನಾಟಕದಲ್ಲಿ ಪ್ರಚಂಡ, ಯಶಸ್ಸು ಗಳಿಸಿತು. ಇದೇ ನಾಟಕದ ತಮಿಳು ಅವತರಣಿಕೆ ತಮಿಳುನಾಡು, ಹೈದರಾಬಾದ್ ಪ್ರಾಂತ್ಯಗಳಲ್ಲೂ ಜಯಭೇರಿ ಹೊಡೆಯಿತು.

1934ರಲ್ಲಿ ನಿರ್ಮಾಣವಾದ ಪ್ರಥಮ ಕನ್ನಡ ವಾಕ್ಚಿತ್ರ ಸತೀ ಸುಲೋಚನರಾಯರು ಅಭಿನಯಿಸಿದ ಮೊದಲ ಕನ್ನಡ ಚಿತ್ರ. ಇದರಲ್ಲಿ ಇವರು ರಾವಣನಾಗಿ ಅಭಿನಯಿಸಿದರು. 1939ರಲ್ಲಿ ವೇಲ್ ಪಿಕ್ಚರ್ಸ್ ಪಾಲುಗಾರಿಕೆಯೊಂದಿಗೆ ಭೂಕೈಲಾಸ ಚಿತ್ರವನ್ನು ತೆಲುಗಿನಲ್ಲಿ ತಯಾರಿಸಿದರು. ಈ ಚಿತ್ರ ಪ್ರಚಂಡ ಯಶಸ್ಸು ಗಳಿಸಿತು. ಅನಂತರ ಪ್ರಗತಿ ಪಿಕ್ಚರ್ಸ್ ಪಾಲುಗಾರಿಕೆಯೊಂದಿಗೆ ವಸಂತ ಸೇನಾ (1941), ಹರಿಶ್ಚಂದ್ರ, ಮಹಾತ್ಮ ಕಬೀರ್ ಚಿತ್ರಗಳನ್ನು ನಿರ್ಮಿಸಿದರು. ಇವೂ ಶ್ರೇಷ್ಠ ಚಿತ್ರಗಳೆಂದು ಪ್ರಶಂಸೆ ಪಡೆದವು. ವಸಂತಸೇನಾ ಚಿತ್ರಕ್ಕೆ ಚಿತ್ರ ಕಥೆ, ಸಂಭಾಷಣೆ ಹಾಗೂ ಹಾಡುಗಳನ್ನು ಬರೆದವರು ರಾಯರೇ. ಈ ಚಿತ್ರದಲ್ಲಿ ಇವರು ಶಕಾರನ ಪಾತ್ರವಹಿಸಿದ್ದರು. ಈ ಪಾತ್ರ ರಾಯರ ಹೆಸರನ್ನು ಕನ್ನಡ ಚಿತ್ರರಂಗದ ಇತಿಹಾಸದಲ್ಲಿ ಚಿರಸ್ಥಾಯಿಯನ್ನಾಗಿ ಮಾಡಿತು.

ಸುಬ್ಬಯ್ಯ ನಾಯ್ಡು ಅವರೊಂದಿಗಿದ್ದ ದೀರ್ಘ ಸ್ನೇಹಬಾಂಧವ್ಯ ಕಡಿದುಬಿದ್ದ ಅನಂತರ ರಾಯರು 1947ರಲ್ಲಿ ಜೆಮಿನಿ ಚಿತ್ರಸಂಸ್ಥೆಗೆ ಸೇರಿದರು. ಅಲ್ಲಿ ಜೆಮಿನಿ ಚಿತ್ರ ಸಂಸ್ಥೆಗಾಗಿ ಮೂವರು ತನಯರು ಎಂಬ ಚಿತ್ರವನ್ನು ತಾವೇ ನಿರ್ದೇಶಿಸಿದರು. ಅನಂತರ ತಮಿಳು, ತೆಲುಗು ಹಾಗೂ ಹಿಂದಿಯಲ್ಲಿ ತಯಾರಾದ ಸ್ಟ್ರೇಂಜ್ ಬ್ರದರ್ಸ್ ಚಿತ್ರದಲ್ಲಿ ಖಳನಾಯಕನಾಗಿ ಪಾತ್ರವಹಿಸಿದರು. ಆ ಚಿತ್ರದಲ್ಲಿ ರಾಯರ ಪಾತ್ರ ಶ್ರೇಷ್ಠಮಟ್ಟದ್ದಾಗಿತ್ತು. ಇವರ ಕೀರ್ತಿ ಭಾರತದಾದ್ಯಂತ ಪ್ರಸರಿಸಿತು. 1952ರಲ್ಲಿ ರಾಯರು ಆರೆನ್ನಾರ್ ಪಿಕ್ಚರ್ಸ್ ಎಂಬ ಸ್ವಂತ ಚಿತ್ರ ಸಂಸ್ಥೆಯನ್ನು ಪ್ರಾರಂಭಿಸಿದರು. ಜಾತಕಫಲ ಈ ಸಂಸ್ಥೆಯ ಪ್ರಥಮ ಕನ್ನಡ ಚಿತ್ರ. ಚಿತ್ರದ ಪ್ರಮುಖ ಪಾತ್ರದ ಜತೆಗೆ ರಾಯರು ನಿರ್ದೇಶನದ ಭಾರವನ್ನೂ ತಾವೇ ಹೊತ್ತರು. ಈ ಚಿತ್ರ ತಮಿಳಿನಲ್ಲಿಯೂ ತಯಾರಾಯಿತು. ಹಿನ್ನೆಲೆ ಗಾಯಕ ಪಿ.ಬಿ. ಶ್ರೀನಿವಾಸ್ ಚಿತ್ರರಂಗಕ್ಕೆ ಪದಾರ್ಪಣಗೈದದ್ದು ಈ ಚಿತ್ರದ ಮೂಲಕವೇ. ಅನಂತರ ತಯಾರಾದ ಪ್ರೇಮದ ಪುತ್ರಿ (1957) ರಾಷ್ಟ್ರಪತಿ ರಜತ ಪದಕ ಪಡೆದ ಮೊದಲ ಕನ್ನಡ ಚಿತ್ರವಾಯಿತು. ವಿಜಯನಗರದ ವೀರಪುತ್ರ, ಆನಂದಬಾಷ್ಪ, ಪತಿಯೇ ದೈವ ಇವು ರಾಯರು ತಯಾರಿಸಿದ ಇತರ ಚಿತ್ರಗಳು.

ರಾಯರಿಗೆ ಅನೇಕ ಪ್ರಶಸ್ತಿಗಳು ಲಭಿಸಿವೆ. ಗಾಳಿಗೋಪುರ ಚಿತ್ರದಲ್ಲಿನ ಅಭಿನಯಕ್ಕಾಗಿ 1963ರಲ್ಲಿ ರಾಜ್ಯ ಸಂಗೀತ ನಾಟಕ ಅಕಾಡೆಮಿಯ ಶ್ರೇಷ್ಠ ಪೋಷಕನಟ ಎಂಬ ಪ್ರಶಸ್ತಿ ನೀಡಿ ಗೌರವಿಸಿತು. 1969ರಲ್ಲಿ ತೆರೆ ಕಂಡ ಹಣ್ಣೆಲೆ ಚಿಗುರಿದಾಗ ಚಿತ್ರದಲ್ಲಿ ಇವರಿಗೆ ಆ ವರ್ಷದ ಶ್ರೇಷ್ಠನಟರೆಂಬ ಪ್ರಶಸ್ತಿ ಲಭಿಸಿತು. ಅದೇ ವರ್ಷ ತೆರೆ ಕಂಡ ನಮ್ಮ ಮಕ್ಕಳು ಚಿತ್ರದ ಉತ್ತಮ ನಿರ್ದೇಶನಕ್ಕಾಗಿ ಇವರಿಗೆ ರಜತಪದಕ ದೊರೆಯಿತು. 1961ರಲ್ಲಿ ಇವರು ದಕ್ಷಿಣ ಭಾರತ ಕಲಾವಿದರ ಸಂಘದ ಅಧ್ಯಕ್ಷರಾಗಿ ಆಯ್ಕೆಯಾಗಿದ್ದರು. ದಕ್ಷಿಣ ಭಾರತ ಫಿಲಂ ಚೇಂಬರ್ ಕಾರ್ಯಕಾರಿ ಸಮಿತಿ ಸದಸ್ಯರೂ ಆಗಿದ್ದರು.

ಕರ್ನಾಟಕ ಸಂಗೀತದಲ್ಲೂ ರಾಯರು ಸಾಕಷ್ಟು ಪರಿಣತರಾಗಿದ್ದರು. ಕೆ. ವಾಸುದೇವಾಚಾರ್ಯರಲ್ಲೂ ಚಿಕ್ಕರಾಮರಾಯರಲ್ಲೂ ಕರಿಗಿರಿರಾಯರಲ್ಲೂ ಕೆಲವು ದಿನಗಳ ಕಾಲ ಸಂಗೀತವನ್ನು ಅಭ್ಯಾಸ ಮಾಡಿದ್ದರು.

ಚಲನಚಿತ್ರಗಳಲ್ಲಿ ಅಭಿನಯಿಸುವುದನ್ನು ಕಡಿಮೆ ಮಾಡಿದ ಅನಂತರ ರಾಯರು ಬೆಂಗಳೂರಿನಲ್ಲಿ ಆದರ್ಶ ಫಿಲಂ ಇನ್ಸ್‌ಟಿಟ್ಯೂಟ್ ಎಂಬ ಸಂಸ್ಥೆಯನ್ನು ಪ್ರಾರಂಭಿಸಿ ಅದರ ಪ್ರಿನ್ಸಿಪಾಲರಾದರು. ಅದರ ಅಭ್ಯುದಯಕ್ಕಾಗಿ ಶ್ರಮಿಸಿದರು. ಈ ಸಂಸ್ಥೆಯಿಂದ ಅನೇಕ ಪ್ರತಿಭಾವಂತ ನಟರು ಚಿತ್ರರಂಗ ಪ್ರವೇಶಿಸಿದ್ದಾರೆ.

ರಾಯರದು ತುಂಬು ಬಾಳು. ತಮ್ಮ ಮೂವರು ಮಕ್ಕಳನ್ನೂ ಕಲಾ ಪ್ರಪಂಚಕ್ಕೆ ತಂದಿದ್ದಾರೆ. ಆರ್.ಎನ್.ಕೃಷ್ಣಪ್ರಸಾದ್ ಛಾಯಾಗ್ರಾಹಕರು

ಆರ್.ಎನ್.ಜಯಗೋಪಾಲ್ ಚಿತ್ರಸಾಹಿತಿ, ಆರ್.ಎನ್.ಸುದರ್ಶನ್ ನಟರು.

ಸುಮಾರು ಮೂರು ದಶಕಗಳ ಕಾಲ ಕನ್ನಡ ಚಿತ್ರರಂಗದ ಹಾಗೂ ರಂಗಭೂಮಿಯ ಏಳಿಗೆಗಾಗಿ ಶ್ರಮಿಸಿ ಕನ್ನಡಿಗರಿಂದ ಕನ್ನಡ ಚಿತ್ರರಂಗದ ಭೀಷ್ಮಾಚಾರ್ಯ ಎಂಬ ಅಭಿದಾನಕ್ಕೆ ಪಾತ್ರರಾದ ರಾಯರು 1977ರ ಫೆಬ್ರವರಿಯಲ್ಲಿ ಬೆಂಗಳೂರಿನಲ್ಲಿ ನಿಧನರಾದರು. 'ಇದು ನನ್ನ ಕಥೆ ಎಂಬ ಹೆಸರಿನಲ್ಲಿ ಇವರ ಆತ್ಮಕಥ'ನ ಪ್ರಕಟವಾಗಿದೆ (1974).

(ಎಸ್.ಎಚ್.ವಿ)

**ನಾಗೇಂದ್ರ ಸ್ಥಪತಿ :** 1913- ಕರ್ನಾಟಕ ಹೆಸರಾಂತ ಶಿಲ್ಪಿ. ಹುಟ್ಟಿದ್ದು ಮೈಸೂರಿನಲ್ಲಿ. ತಂದೆ ಹೆಸರಾಂತ ಶಿಲ್ಪಿ. ಸಿದ್ಧಲಿಂಗಸ್ವಾಮಿ. ಇವರ ನಾಮಕರಣಕ್ಕೆ ಮುಂಚೆ ತೊಟ್ಟಿಲಿನಲ್ಲಿ ಸರ್ಪವೊಂದು ಕಾಣಿಸಿಕೊಂಡದ್ದರಿಂದ ಇವರಿಗೆ ನಾಗೇಂದ್ರ ಸ್ಥಪತಿ ಎಂಬ ಹೆಸರು ಇಡಲಾಯಿತಂತೆ. ತಂದೆಯಿಂದ ಈ ಕಲೆಯಲ್ಲಿ ಆಸಕ್ತರಾಗಿ ಚಾಮರಾಜೇಂದ್ರ ಕಲಾಶಾಲೆಯ ವಿದ್ಯಾರ್ಥಿಯಾಗಿ ಸೇರಿದರು. ಕೆ. ಕೇಶವಯ್ಯ ಇವರ ಕಲಾಗುರು. ಶಿಲ್ಪ ಜ್ಯೋತಿಷ್ಯ, ಚಿತ್ರ ಮುಂತಾದುವುಗಳ ಕಡೆ ಇವರ ಒಲವು ಹೆಚ್ಚಾಗಿ ಪಾಠ ಶಾಲೆಯ ಓದು ಅಷ್ಟಾಗಿ ಮುಂದುವರಿಯಲಿಲ್ಲ. ಸಂಗೀತದಲ್ಲೂ ಅಭಿರುಚಿ ಇತ್ತಾಗಿ ಮೃದಂಗ ವಾದನದಲ್ಲಿ ವಿಶೇಷ ಪರಿಶ್ರಮ ಸಾಧಿಸಿದರು. ಆಸ್ಥಾನ ವಿದ್ವಾನ್ ಚಿಕ್ಕರಾಮರಾಯರ ಹಾಗೂ ಸಂಗೀತಶಾಸ್ತ್ರರತ್ನವೆಂದು ಖ್ಯಾತರಾಗಿದ್ದ ವಾಸುದೇವಾಚಾರ್ಯರ ಕಚೇರಿಗಳಲ್ಲಿ ಮೃದಂಗ ಬಾರಿಸಿ ಖ್ಯಾತಿಪಡೆದರು. ಹೀಗೆ ಕಲೆಯ ನಾನಾ ಪ್ರಕಾರಗಳಲ್ಲಿ ಪಳಗಿ ಕೊನೆಗೆ ಪರಂಪರೆಯಿಂದ ಬಂದ ಶಿಲ್ಪವೃತ್ತಿಯೊಂದನ್ನೇ ಕೈಗೂಡಿಸಿಕೊಂಡು ಒಳ್ಳೆಯ ಕೆಲಸ ಮಾಡಿದರು.

ಚಾಮರಾಜೇಂದ್ರ ಕಲಾಶಾಲೆಯಲ್ಲಿ ಪಾಶ್ಚಾತ್ಯ ಸಂಪ್ರದಾಯದಲ್ಲಿ ಚಿತ್ರಕಲಾ ಶಿಕ್ಷಣ ಪಡೆದು ಅನೇಕ ಶಾಸ್ತ್ರೀಯ ವರ್ಣಚಿತ್ರಗಳನ್ನು ಆ ಸಂಪ್ರದಾಯದಲ್ಲಿ ಇವರು ರಚಿಸಿದ್ದಾರೆ. ಇವರ ಅನೇಕ ದೇವದೇವತಾ ಚಿತ್ರಪಟಗಳನ್ನು ನಾನಾ ಕಡೆಗಳಲ್ಲಿ ಕಾಣಬಹುದು. ಮೈಸೂರಿನ ಅರಮನೆಯ ಸಭಾಮಂಟಪದ ಒಳ ಚಾವಣಿ ವಿನ್ಯಾಸದಲ್ಲಿ ಬರುವ ಶಾಸ್ತ್ರೀಯ ಚಿತ್ರಗಳಲ್ಲಿ ತಂದೆಯ ಮಾರ್ಗದರ್ಶನದಲ್ಲಿಯೇ ಕೆಲಸ ಮಾಡುತ್ತ ಇವರು ಉತ್ತಮ ವರ್ಣ ಮೋಡಿಯನ್ನು ಮೆರೆದಿದ್ದಾರೆ. ಇವರು ಉತ್ತಮ ಶಿಲ್ಪಿಗಳು ಎಂಬುದಕ್ಕೆ ಇವರು ಕಡೆದ ನೈಜ ಶಿಲಾಮೂರ್ತಿಗಳೇ ನಿದರ್ಶನ. ಬಸವಕಲ್ಯಾಣದ ಗುಹೆಗೆ ರಚಿಸಿಕೊಟ್ಟ ಅಕ್ಕಮಹಾದೇವಿ, 5 ಅಡಿ ಎತ್ತರವಿರುವ ಮೈಸೂರು ಅರಮನೆಯ ಭುವನೇಶ್ವರಿ, ಮೈಸೂರಿನ ಕಾಮಕಾಮೇಶ್ವರಿ ದೇವಾಲದ ಶಿಲಾಮೂರ್ತಿಗಳು, ಬೆಂಗಳೂರಿನ ಸುಬ್ರಹ್ಮಣ್ಯಪುರದ ದೇವಾಲಯದ ವಲ್ಲಿದೇವಸೇನ ಸುಬ್ರಹ್ಮಣ್ಯಸ್ವಾಮಿ, ಚಿಕ್ಕಮಗಳೂರಿನ ಸತಿ ಸೋದರ ಸಮೇತನಾದ ಶ್ರೀರಾಮ ವಿಗ್ರಹ, ಗುಲ್ಬರ್ಗಕ್ಕೆ ಮಾಡಿಕೊಟ್ಟ 4 ಅಡಿ ಎತ್ತರದ ಮಹಾಕಾಳಿಕಾ, ದಾವಣಗೆರೆಯ ಪಾರ್ಶ್ವನಾಥ ದೇವಾಲಯಕ್ಕೆ ಮಾಡಿಕೊಟ್ಟ ಪಾರ್ಶ್ವನಾಥ. ಇವುಗಳನ್ನು ಉಲ್ಲೇಖಿಸಬಹುದು.

ಮೈಸೂರಿನ ಕಾಮಕಾಮೇಶ್ವರಿ ದೇವಾಲಚದ ಮುಂದೆ ಬೃಹತ್ ನಂದಿ ವಿಗ್ರಹವೊಂದನ್ನು ಕಡೆಯಬೇಕೆಂಬ ತಂದೆಯ ಆಸೆಯನ್ನು ಇವರು ಈಡೇರಿಸಿದರು (1954).

**ನಾಗೇಗೌಡ, ಎಚ್.ಎಲ್. :** 1915- . ಪ್ರಸಿದ್ಧ ಲೇಖಕ, ಜಾನಪದ ಸಂಗ್ರಹಕಾರ, ವಿದ್ವಾಂಸ, ಅನುವಾದಕ, ಜಾನಪದ ಲೋಕ ಎಂಬ ವಸ್ತುಸಂಗ್ರಹಾಲಯ ಹಾಗೂ ಸಂಶೋಧನ ಕೇಂದ್ರದ ನಿರ್ಮಾತೃ. ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಹೆರಗನಹಳ್ಳಿ ಇವರ ಹುಟ್ಟೂರು. ತಂದೆ ಲಿಂಗೇಗೌಡ, ತಾಯಿ ಹುಚ್ಚಮ್ಮದೇವಿ. ಹೆರಗನಹಳ್ಳಿ, ಅಳೀಸಂದ್ರ, ನಾಗತಿಹಳ್ಳಿ, ಚನ್ನರಾಯಪಟ್ಟಣ, ಚನ್ನಪಟ್ಟಣ, ಬೆಂಗಳೂರು, ಮೈಸೂರು, ಪುಣೆ ಮುಂತಾದ ಕಡೆಗಳಲ್ಲಿ ಶಿಕ್ಷಣ ಪಡೆದರು. ಇವರು ಕಲಿತದ್ದು ವಿಜ್ಞಾನ ಮತ್ತು ನ್ಯಾಯಶಾಸ್ತ್ರಗಳನ್ನು.

ಇವರು ಬಿ.ಎಸ್‌ಸಿ. ಮತ್ತು ಎಲ್.ಎಲ್.ಬಿ. ಪದವಿಗಳನ್ನು ಪಡೆದ ಅನಂತರ 1939 ರಲ್ಲಿ ನರಸಿಂಹರಾಜಪುರ ಕೋರ್ಟ್ ಹೆಡ್ ಮುನ್ಷಿಯಾಗಿ ಸರ್ಕಾರಿ ಸೇವೆಗೆ ಸೇರಿದರು. ಅನಂತರ ಮೈಸೂರು ಸಿವಿಲ್ ಸರ್ವಿಸ್ (ಎಂ. ಸಿ.ಎಸ್.) ಸ್ಪರ್ಧಾ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ರೆವಿನ್ಯೂ ಇಲಾಖೆಯಲ್ಲಿ ನೇಮಕಗೊಂಡರು. ಅಮಲ್ದಾರ್ (ತಹಸೀಲ್‌ದಾರ್) ಆಗಿ, ಅಸಿಸ್ಟೆಂಟ್ ಕಮಿಷನರ್ ಆಗಿ ಭಾರತ ಸರ್ಕಾರದಲ್ಲಿ ಅನೇಕ ಆಡಳಿತಾತ್ಮಕ ಹುದ್ದೆಗಳನ್ನು ನಿರ್ವಹಿಸಿ 1961 ರಲ್ಲಿ ಐ.ಎ.ಎಸ್. ಶ್ರೇಣಿಗೆ ಸೇರ್ಪಡೆಯಾದರು. ಅನಂತರ ಶಿವಮೊಗ್ಗ, ಚಿಕ್ಕಮಗಳೂರು, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಜಿಲ್ಲಾಧಿಕಾರಿಯಾಗಿದ್ದರು (1961 - 69). ಅಲ್ಲಿಂದ ಮುಂದೆ ರಾಜ್ಯದ ಲೇಬರ್ ಕಮಿಷನರ್ ಆಗಿ,ಸರ್ವೆ ಇಲಾಖೆಯ ಮುಖ್ಯಾಧಿಕಾರಿಯಾಗಿ, ಮುಂಬಯಿ ಇಲಾಖೆಯ ಕಮಿಷನರ್ ಆಗಿ ಸೇವೆ ಸಲ್ಲಿಸಿದರು. ಆರು ವರ್ಷಗಳ ಕಾಲ ಕರ್ನಾಟಕ ಲೋಕಸೇವಾ ಆಯೋಗದ ಸದಸ್ಯರಾಗಿದ್ದರು (1973 - 79). ಇವರು ಕರ್ನಾಟಕ ಸರ್ಕಾರದ ವಿಧಾನ ಪರಿಷತ್ತಿನ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ. ಒಮ್ಮೆ ಲೋಕಸಭಾ ಸದಸ್ಯ ಸ್ಥಾನಕ್ಕೆ ಮಂಡ್ಯ ಜಿಲ್ಲೆಯಿಂದ ಸ್ಪರ್ಧಿಸಿದ್ದರು.

ಉದ್ಯೋಗ ಆಡಳಿತ ಕ್ಷೇತ್ರದಲ್ಲಾದರೂ ಇವರ ಆಸಕ್ತಿ ಮೂಡಿದ್ದು ಕನ್ನಡ ಸಾಹಿತ್ಯ ಮತ್ತು ಜಾನಪದದಲ್ಲಿ. ಕಥೆ, ಕವನ, ಕಾದಂಬರಿ, ಪ್ರವಾಸಸಾಹಿತ್ಯ, ಜೀವನ ಚರಿತ್ರೆ, ಜನಪದ ಸಾಹಿತ್ಯ, ಆತ್ಮಚರಿತ್ರೆ, ಸಂಕೀರ್ಣ - ಹೀಗೆ ವಿವಿಧ ಬಗೆಯ ಸು. 50 ಕೃತಿಗಳನ್ನು ಇವರು ರಚಿಸಿದ್ದಾರೆ. ಕಂಡು ಕೇಳಿದ ಕಥೆಗಳು, ಖೈದಿಗಳ ಕಥೆಗಳು - ಇವು ಕಥಾಸಂಕಲನಗಳು. ಕಂಡು ಕೇಳಿದ ಆಗಿಹೋದ ಘಟನೆಗಳನ್ನು ಆಧರಿಸಿ ರಚಿಸಿದ ಎಂಟು ಕಥೆಗಳ ಗುಚ್ಛವೇ ಮೊದಲನೆಯ ಸಂಕಲನ. ಇಲ್ಲಿ ಗ್ರಾಮ್ಯ ಭಾಷೆಯನ್ನು ಪರಿಣಾಮಕಾರಿಯಾಗಿ ಬಳಸಲಾಗಿದೆ. ಸಮಾಜದಲ್ಲಿ ಕಂಡುಬರುವ ಅನ್ಯಾಯಗಳ ಚಿತ್ರಣ ಹಾಗೂ ಸುಧಾರಣಾ ಕ್ರಮಗಳನ್ನು ಈ ಕಥೆಗಳಲ್ಲಿ ಕಾಣಬಹುದು. ಖೈದಿಗಳನ್ನು ಸಂದರ್ಶಿಸಿ, ಅವರ ಬದುಕನ್ನು ಅವರ ಮಾತುಗಳಲ್ಲೇ ಧ್ವನಿಮುದ್ರಿಸಿಕೊಂಡು, ಅವಕ್ಕೆ ಕಥಾರೂಪ ನೀಡಿರುವ ಈ ಪ್ರಯತ್ನ ಕನ್ನಡ ಸಾಹಿತ್ಯದಲ್ಲಿ ಒಂದು ವಿನೂತನ ಪ್ರಥಮ ಪ್ರಯೋಗ. ಸಂದರ್ಭದ ಸೆಳೆತ, ಸನ್ನಿವೇಶದ ಒತ್ತಡ, ವಿಚಿತ್ರ ಪ್ರವೃತ್ತಿ, ಚಿತ್ತವಿಕಾರ, ಕ್ಷೋಭೆ, ವಕ್ರತೆ, ವಿಕೃತಿ ಮುಂತಾದುವುಗಳಿಂದ ಖೈದಿಗಳಾಗಿ ಮಾರ್ಪಟ್ಟ ಕ್ಷುದ್ರವೂ ಭೀಭತ್ಸವೂ ಆದ ಚಿತ್ರಣಗಳನ್ನು ಈ ಸಂಕಲನದಲ್ಲಿ ಕಾಣಬಹುದು.

'ನಾನಾಗುವೆ ಗೀಜಗನ ಹಕ್ಕಿ', ಇವರ ಕವನ ಸಂಕಲನಗಳಲ್ಲಿ ಮೊದಲನೆಯದು. ನೇಗಿಲಯೋಗಿ ಎಂಬುದು ಇವರ ಕಾವ್ಯನಾಮ. ಸ್ವತಂತ್ರ ಹಾಗೂ ಅನುವಾದಿತ ಕವನಗಳು ಇದರಲ್ಲಿವೆ. ಗ್ರಾಂಥಿಕ ಭಾಷೆಯೊಡನೆ ಜನಪದ ಭಾಷೆಯನ್ನು ಬಳಸಿ ಹಳ್ಳಿಗರ ಹಾಗೂ ಬೇಸಾಯಗಾರರ ಬವಣೆ ಬೇಸರ ಕಷ್ಟಕಾರ್ಪಣ್ಯ ಚೆಲುವು ಗೆಲುವು ಸಂತೋಷ ಸಂಭ್ರಮಗಳನ್ನು ಈ ಕವಿತೆಗಳಲ್ಲಿ ಚಿತ್ರಿಸಲಾಗಿದೆ. ಕಥೆ-ವ್ಯಥೆ ಎಂಟು ನೀಳ್ಗವನಗಳ ಎರಡನೆಯ ಕವನ ಸಂಕಲನ. ಒಂದೆರಡು ಕಥ'ನ ಕವನಗಳೂ ಕೆಲವು ಭಾವಗೀತಾತ್ಮಕವಾದವೂ ಇವೆ. ಎಲ್ಲವೂ ಕವಿಯ ಆಂತರಿಕ ಮನೋಭಾವನೆಯ ಪ್ರತೀಕಗಳೆನಿಸುವಂತಿವೆ. ಈ ಸಂಕಲನದಲ್ಲಿಯೂ ಸ್ವತಂತ್ರ ರಚನೆಗಳೊಂದಿಗೆ ಅನುವಾದಗಳೂ ಇವೆ. ಅನುವಾದಗಳಲ್ಲಿ ಕಾವ್ಯ ಸ್ಫುಂತಿಕೆಯಿದೆ.

ಇವರು ದೊಡ್ಡಮನೆ, ಸೊನ್ನೆಯಿಂದ ಸೊನ್ನೆಗೆ, ಭೂಮಿಗೆ ಬಂದ ಗಂಧರ್ವ ಎಂಬ ಮೂರು ಕಾದಂಬರಿಗಳನ್ನು ಬರೆದಿದ್ದಾರೆ. 'ಕೆನಿಲ್‌ವರ್ತ್' ಸರ್‌ವಾಲ್ಟರ್ ಸ್ಕಾಟ್ ಬರೆದ ಐತಿಹಾಸಿಕ ಕಾದಂಬರಿಯ ಸಂಗ್ರಹಾನುವಾದ.

ದೊಡ್ಡಮನೆ ಬಯಲು ಸೀಮೆಯ ಹಳ್ಳಿಗಳ ಬದುಕನ್ನು ಕುರಿತ ಕಾದಂಬರಿ. ಅವಿಭಕ್ತ ಕುಟುಂಬವೊಂದು ಒಡೆದು ಛಿದ್ರವಾಗುವುದು ಇಲ್ಲಿನ ವಸ್ತು. ಮೂರು ತಲೆಮಾರುಗಳ ಬದುಕನ್ನು ಇದು ಚಿತ್ರಿಸುತ್ತದೆ. ಭಾಷೆಯ ದೃಷ್ಟಿಯಿಂದ ಈ ಕಾದಂಬರಿ ಒಂದು ವಿಶಿಷ್ಟ ಸ್ಥಾನ ಪಡೆದುಕೊಂಡಿದೆ. ಬಯಲು ಸೀಮೆಯ ಒಕ್ಕಲು ಮಕ್ಕಳ ಭಾಷೆ ಇಲ್ಲಿ ಸಹಜ ರೀತಿಯಲ್ಲಿ

ಬಳಕೆಯಾಗಿದೆ. ಹಾಸ್ಯೋಕ್ತಿಗಳು, ನುಡಿಗಟ್ಟುಗಳು, ಗಾದೆಗಳು ಮುಂತಾದುವೆಲ್ಲ ಹಾಸುಹೊಕ್ಕಾಗಿ ಬಳಕೆಯಾಗಿವೆ. ಸೊನ್ನೆಯಿಂದ ಸೊನ್ನೆಗೆ ಪ್ರಾದೇಶಿಕ ಸತ್ತ್ವವುಳ್ಳ ಕಾದಂಬರಿ, ನೂರು ವರ್ಷಗಳಷ್ಟು ಹಿಂದಿನ ಕಥಾವಸ್ತುವನ್ನು ಉಳ್ಳ ಈ ಕಾದಂಬರಿಯಲ್ಲಿ ಅಂದಿನ ಪರಿಸರವನ್ನು ಸಹಜ ರೂಪದಲ್ಲಿ ಕಾಣಬಹುದು. ಸಂಗೀತ ಲೋಕದ ಮಹಾನ್ ಸಾಧಕ ಭೈರವಿ ಕೆಂಪೇಗೌಡರ ಜೀವನವನ್ನು ಕುರಿತ ಕಾದಂಬರಿ ಭೂಮಿಗೆ ಬಂದ ಗಂಧರ್ವ. ಇಲ್ಲಿನ ಕಥಾನಾಯಕನಾದ ಕೆಂಪೇಗೌಡ ಬೇಗಡೆ, ಸಾರಂಗ, ಖರಹರಪ್ರಿಯ, ಶಂಕರಾಭರಣ, ಕಲ್ಯಾಣಿ, ಕೇದಾರಗೌಳ, ಆನಂದಭೈರವಿ ಮುಂತಾದ ರಾಗಗಳಲ್ಲಿ ನಿಷ್ಣಾತರಾಗಿದ್ದರೂ ಅವರ ಅಚ್ಚುಮೆಚ್ಚಿನ ರಾಗ ಭೈರವಿಯಾಗಿತ್ತು. ಈ ರಾಗದ ಹಾಡುಗಾರಿಕೆಯ ಸಿದ್ಧಿಯಿಂದಾಗಿ ಅವರಿಗೆ ಭೈರವಿ ಕೆಂಪೇಗೌಡರೆಂಬ ಕೀರ್ತಿ ಲಭಿಸಿತ್ತು. ಈ ಕಾದಂಬರಿಯಲ್ಲಿ ಗೌಡರ ಕೌಟುಂಬಿಕ ಚಿತ್ರಣವೂ ಪರಿಣಾಮಕಾರಿಯಾಗಿ ಮೂಡಿ ಬಂದಿದೆ. 19 ಮತ್ತು 20 ನೆಯ ಶತಮಾನದ ಹಲವಾರು ಸಂಗೀತಸಾಧಕರ ವ್ಯಕ್ತಿ ಚಿತ್ರಣಗಳು ಇಲ್ಲಿ ಸಾಂದರ್ಭಿಕವಾಗಿ ಪ್ರವೇಶ ಪಡೆದಿದೆ. ವಸ್ತುವಿಗೆ ತಕ್ಕ ಭಾಷೆ ಪ್ರಯೋಗವಾಗಿದೆ. ಆಸ್ಪತ್ರೆಯ ರೋಗಿಗಳು ಕ್ಷಣಕಾಲ ನೋವನ್ನೆಲ್ಲ ಮರೆಯಲಿ ಎಂಬ ಉದ್ದೇಶದಿಂದ ಭೈರವಿಯನ್ನು ಹಾಡುತ್ತ ಹಾಡುತ್ತಲೇ ಕೆಂಪೇಗೌಡರು ಕೊನೆಯುಸಿರೆಳೆದರೆಂಬ ಸಂಗತಿ ಮನಮಿಡಿಯುವಂಥದ್ದು.

ಎಚ್.ಎಲ್.ನಾಗೇಗೌಡರ ಸಾಧನೆಗಳಲ್ಲಿ 'ಪ್ರವಾಸಿ ಕಂಡ ಇಂಡಿಯಾ' ಸಂಪುಟಗಳ ಸಿದ್ಧತೆ ಹಾಗೂ ಪ್ರಕಟಣೆ ಮತ್ತು ಜಾನಪದ ಕ್ಷೇತ್ರದ ವ್ಯವಸಾಯ - ಇವು ಅತ್ಯಂತ ಮಹತ್ತ್ವದವು. ಗ್ರೀಸ್ ರೋಮ್ ಚೀನಾ ಅರಬ್ ಫ್ರಾನ್ಸ್ ಪೋರ್ಚುಗೀಸ್ ಇಟಲಿ ಪರ್ಷಿಯ, ಇಂಗ್ಲೆಂಡ್, ಯುರೋಪ್, ಡಚ್ ಮುಂತಾದ ದೇಶಗಳಿಂದ ವಿವಿಧ ಉದ್ದೇಶಗಳೊಡನೆ ಭಾರತಕ್ಕೆ ಬಂದುಹೋದ ಇನ್ನೂರಕ್ಕೂ ಹೆಚ್ಚು ವಿದೇಶೀ ಪ್ರವಾಸಿಗರು ಎರಡೂವರೆ ಸಾವಿರ ವರ್ಷಗಳ ಅವಧಿಯಲ್ಲಿ ಬರೆದಿಟ್ಟ ದಾಖಲೆಗಳ ಅಮೂಲ್ಯ ಸಂಗ್ರಹವೇ ಪ್ರವಾಸಿ ಕಂಡ ಇಂಡಿಯಾ ಸಂಪುಟಗಳು. ಒಟ್ಟು ಹತ್ತು ಸಂಪುಟಗಳಲ್ಲಿ ಪ್ರಕಟವಾಗಿರುವ ಬೃಹತ್ ಪ್ರವಾಸ ಕಥನವಿದು. ಕನ್ನಡ ಸಾಹಿತ್ಯಕ್ಕೊಂದು ಅಪೂರ್ವ ಅದ್ವಿತೀಯ ಕೊಡುಗೆಯಾಗಿದೆ ಎಂಬುದಾಗಿ ಕುವೆಂಪು ಅವರು ಈ ಸಂಪುಟಗಳನ್ನು ಪ್ರಶಂಸಿಸಿದ್ದಾರೆ. ಇತಿಹಾಸ, ಸಂಸ್ಕೃತಿ, ಜಾನಪದ, ಸಮಾಜಗಳು, ಜನಾಂಗಗಳು, ಪುರಾತತ್ತ್ವ ಅಂಶಗಳು, ಆಚರಣೆಗಳು ಇತ್ಯಾದಿ ಬಹುಮುಖ ವಿವರಗಳನ್ನು ಈ ಸಂಪುಟಗಳು ಒಳಗೊಂಡಿವೆ. ಭಾರತದ ಇತಿಹಾಸವನ್ನು ರೂಪಿಸುವಲ್ಲಿ ಈ ಸಂಪುಟಗಳಿಂದ ದೊರೆಯುವ ನೆರವು ಅಪಾರ. ಪ್ರತಿಯೊಂದು ದಾಖಲೆಯ ಪ್ರಾರಂಭದಲ್ಲಿ, ಅದರ ಮಹತ್ತ್ವ, ಅದರ ಸತ್ಯಾಸತ್ಯತೆ ಮುಂತಾದುವುಗಳನ್ನು ತಿಳಿಸುವ ಪ್ರಾಸ್ತಾವಿಕ ಟಿಪ್ಪಣಿಗಳಿವೆ. ಭಾಷೆ ಸರಳವೂ ಸುಲಲಿತವೂ ಆಗಿದ್ದು ನಿರೂಪಣೆ ಸರಾಗವಾಗಿದೆ. ಕನ್ನಡದಲ್ಲಿ ಇಂಥ ಅಪರೂಪದ ಅನುವಾದ ಇದೊಂದೆ.

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಸ್ಥಾಪನೆಗಾಗಿಯೂ ಹೋರಾಡಿದ (1980) ಗೌಡರು ಯಶಸ್ವಿಯಾಗಿ ಅದರ ಪ್ರಥಮ ಅಧ್ಯಕ್ಷರಾಗಿಯೂ ನೇಮಕಗೊಂಡರು. ಒಟ್ಟು ಆರು ವರ್ಷಗಳ ಕಾಲ ಅಧ್ಯಕ್ಷರಾಗಿದ್ದ ಗೌಡರು ಅಕಾಡೆಮಿ ಹಮ್ಮಿಕೊಳ್ಳಬೇಕಿದ್ದ ಕಾರ್ಯಕ್ರಮಗಳ ಬಗ್ಗೆ ಭದ್ರ ಬುನಾದಿ ಹಾಕಿದರು.

ಜಾನಪದ ಕ್ಷೇತ್ರದಲ್ಲಿ ನಾಗೇಗೌಡರದು ಅದ್ವಿತೀಯ ಸಾಧನೆ. ಈ ಕ್ಷೇತ್ರದಲ್ಲಿ ಅಪಾರವಾಗಿ ದುಡಿದಿರುವ ಇವರು ಅನೇಕ ಸಂಗ್ರಹಗಳನ್ನೂ ಬರೆಹಗಳನ್ನೂ ಪ್ರಕಟಿಸಿದ್ದಾರೆ. ಸೋಬಾನೆ ಚಿಕ್ಕಮ್ಮನ ಪದಗಳು ಒಂದು ವಿಶಿಷ್ಟ ಸಂಕಲನ. ಇದರಲ್ಲಿರುವ ಹಾಡುಗಳನ್ನು ಸೋಬಾನೆ ಪದಗಳು, ಒಸಗೆಯ ಪದಗಳು, ರಾಗಿ ಬೀಸುವ ಪದಗಳು, ತಿಂಗಳು ಮಾವನ ಪದಗಳು, ದೇವರ ಪದಗಳು, ನಂಜುಂಡ ಲಿಂಗ, ಮೇಲುಕೋಟೆ ಚೆಲುವಯ್ಯ, ಈರೋಬಿ, ಗಂಗೆಗೌರಿ, ನಾಗರಗನ್ನೆ, ಜವರಾಯ, ರವಿಕಣ್ಣ ಮತ್ತು ಮಾದೇವಿ - ಎಂದು ವಿಭಾಗಿಸಲಾಗಿದೆ. ಹಾಡುಗಳಿಗೆ ಸ್ವರಪ್ರಸ್ತಾರ ಹಾಕಲಾಗಿದೆ.

ಕನ್ನಡ ಜನಪದ ಕಥೆಗಳ ವೈವಿಧ್ಯ ವ್ಯಾಪ್ತಿಗಳನ್ನು ಪರಿಚಯಿಸುವ ಸಂಕಲನ 'ಕರ್ನಾಟಕ ಜನಪದ ಕಥೆಗಳು', ಕರ್ನಾಟಕದ ಎಲ್ಲ ಜಿಲ್ಲೆಗಳನ್ನು ಪ್ರತಿನಿಧಿಸುವ ನೂರು ಕಥೆಗಳ ಗುಚ್ಛವಿದು. ವಿಶ್ವ ಜನಪದ ಕಥಾ ಶ್ರೇಣಿಯಲ್ಲಿ ಶ್ರೇಷ್ಠ ಕಾಣಿಕೆಗಳನ್ನೊಳಗೊಂಡ ಮಹತ್ವದ ಕೃತಿ.

'ಪದವವೆ ನಮ್ಮ ಎದೆಯಲ್ಲಿ' ಗಾತ್ರದಲ್ಲಿ ಹಾಗೂ ಗುಣದಲ್ಲಿ ಬೃಹತ್ತಾದ ಕೃತಿ. ಸಂಸ್ಕೃತಿಯ ಅಧ್ಯಯನದ ಹಾದಿಯಲ್ಲಿ ವಿಪುಲ ಸಾಮಗ್ರಿ ಒದಗಿಸಿದೆ. ವೃತ್ತಿಗಾಯಕರ ಹಾಡುಗಳನ್ನೂ ಇದು ಒಳಗೊಂಡಿದೆ. ಸೋಬಾನೆ ಪದಗಳು, ಒಸಗೆ ಪದಗಳು, ಲಾಲಿ ಪದಗಳು, ಬಾಂಧವ್ಯದ ಹಾಡುಗಳು, ದೇವಿ ಮತ್ತು ದೇವರು, ಹಾಡ್ಗತೆಗಳು, ಹೊಲೆಯರು ಹೊಗಳುವ ಪದಗಳು, ಕೋಲಾಟದ ಪದಗಳು, ಹಚ್ಚೆ ಹೊಯ್ಯುವ ಪದಗಳು, ಮಕ್ಕಳ ಪದಗಳು, ಪದವವೆ ನಮ್ಮ ಎದೆಯಲ್ಲಿ - ಎಂಬ ಹನ್ನೊಂದು ಭಾಗಗಳಲ್ಲಿ ಈ ಸಂಕಲನ ರೂಪುಗೊಂಡಿದೆ. ಪದವವೆ ನಮ್ಮ ಎದೆಯಲ್ಲಿ ಎಂಬ ಕೊನೆಯ ಭಾಗದಲ್ಲಿ ಬುಡುಬುಡಿಕೆಯವರು, ಹಕ್ಕಿಪಿಕ್ಕರು, ಗೊಲ್ಲರು, ಹೆಳವರು, ಚೌಡಿಕೆಯವರು, ಮಲೆಕುಡಿಯರು, ಲಂಬಾಣಿಗಳು ಮುಂತಾದ ಜನಾಂಗಗಳವರು ಹಾಡಿದ ಹಾಡುಗಳಿವೆ. ಆಯಾ ಹಾಡುಗಳ ಪ್ರಾರಂಭದಲ್ಲಿ ಆಯಾ ಜನಾಂಗದ ಪರಿಚಯವಿದೆ. ಜನಾಂಗಗಳ ಹಾಗೂ ಅವರ ಸಂಸ್ಕೃತಿಯ ಅಧ್ಯಯನಕ್ಕೆ ಇಲ್ಲಿ ಸಾಕಷ್ಟು ಸಾಮಗ್ರಿ ಇದೆ.

ಮೈಲಾರಲಿಂಗನ ಕಾವ್ಯ, ಹಾಡಾನ ಬನ್ನಿ ದನಿಯೆತ್ತಿ, ಹಾವು ತುಳಿದೇನೆ, ಗ್ರಾಮ ದೇವತೆ ಮಾರಮ್ಮ, ಆರಂಬದೆತ್ತು, ಐನೂರು, ಆನೆ ಬಂತೊಂದಾನೆ, ಗಾದೆಗಳು, ದುಂಡುಮಲ್ಲಿಗಿ ಹೂವು ಬುಟ್ಟೀಲಿ ಬಂದಾವ, ಪ್ರಶಸ್ತಿ ಪಡೆದ ಮಹನೀಯರು - ಇವು ಜಾನಪದಕ್ಕೆ ಸಂಬಂಧಿಸಿದ ಸಂಗ್ರಹಗಳು. ಸರೋಜಿನಿದೇವಿ ಎಂಬ ಜೀವನ ಚರಿತ್ರೆ, ವೆರಿಯರ್ ಎಲ್ವಿನರ ಗಿರಿಜನ ಪ್ರಪಂಚ ಎಂಬ ಅನುವಾದ ಗ್ರಂಥವಲ್ಲದೆ, ನನ್ನೂರು, ಬೆಟ್ಟದಿಂದ ಬಟ್ಟಲಿಗೆ ಎಂಬ ಗ್ರಂಥಗಳನ್ನೂ ಇವರು ಪ್ರಕಟಿಸಿದ್ದಾರೆ. 'ನಾಗಸಿರಿ' ಇವರ ಆತ್ಮಕತೆ - ಜೀವನಯಾತ್ರೆ, ವಿದೇಶಯಾತ್ರೆ, ಚುನಾವಣಾ ಯಾತ್ರೆ, ಜಾನಪದ ಯಾತ್ರೆ ಎಂಬ ನಾಲ್ಕು ಸಂಪುಟಗಳಲ್ಲಿ ಪ್ರಕಟವಾಗಿದೆ. ಎಚ್.ಎ. ರಾಮಕೃಷ್ಣ ಎಂಬ ವಿದ್ವಾಂಸರೊಂದಿಗೆ ಇವರು ಎಸೆನ್ಷಿಯಲ್ಸ್ ಆಫ್ ಕರ್ನಾಟಕ ಫೋಕ್‌ಲೋರ್ ಎಂಬ ಇಂಗ್ಲಿಷ್ ಗ್ರಂಥವನ್ನು ಪ್ರಕಟಿಸಿದ್ದಾರೆ. ಇಂಗ್ಲಿಷ್ ಮತ್ತು ಕನ್ನಡ ಎರಡೂ ಭಾಷೆಗಳಲ್ಲಿ ಎ ಕ್ಯಾಟಲಾಗ್; ಜಾನಪದ ಲೋಕ ಎಂಬ ಗ್ರಂಥವನ್ನು ಪ್ರಕಟಿಸಿದ್ದಾರೆ. 'ಕರ್ನಾಟಕ ಜಾನಪದ - ಚಿತ್ರಗಳಲ್ಲಿ' ಎಂಬ ಗ್ರಂಥವೂ ಪ್ರಕಟವಾಗಿದೆ.

ಎಲ್ಲಕ್ಕೂ ಕಲಶಪ್ರಾಯವಾದ ಇವರ ಸಾಧನೆ ಎಂದರೆ ರಾಮನಗರದ ಬಳಿ ಮೈಸೂರು-ಬೆಂಗಳೂರು ಹೆದ್ದಾರಿಯಲ್ಲಿ ಸ್ಥಾಪನೆಯಾಗಿರುವ ಜಾನಪದ ಲೋಕ (ನೋಡಿ). ಜಾನಪದ ಜಗತ್ತು ಎಂಬ ತ್ರೈಮಾಸಿಕ 1979 ರಿಂದ ಇವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದೆ. 'ಕನ್ನಡ ಜಾನಪದ ಕೋಶ'ಕ್ಕೂ ಇವರೇ ಸಂಪಾದಕರು. ಪ್ರತಿ ಶನಿವಾರ ಮತ್ತು ಭಾನುವಾರಗಳಂದು ಇಲ್ಲಿ ಜನಪದ ಕಲಾಪ್ರದರ್ಶನಗಳು ನಡೆಯುತ್ತವೆ.

ಇವರಿಗೆ ಅನೇಕ ಬಹುಮಾನ, ಪ್ರಶಸ್ತಿ, ಗೌರವಗಳು ದೊರಕಿವೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1974), ಕನ್ನಡ ರಾಜ್ಯೋತ್ಸವ ಪ್ರಶಸ್ತಿ (1988), ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ (1990), ಕರ್ನಾಟಕ ನಾಟಕ ಅಕಾಡೆಮಿ ಫೆಲೋಷಿಪ್ (1992) - ಇವು ಇವರಿಗೆ ಸಂದಿರುವ ಗೌರವಗಳು. ಇವರ ಗೌರವಾರ್ಥ ನಾಗವಲ್ಲಿ ಎಂಬ ಸಂಭಾವನಾ ಗ್ರಂಥವೂ (1979), ಇವರ ಜೀವನ ಸಾಧನೆಗಳ ಒಟ್ಟು ನೋಟವನ್ನು ಒಳಗೊಂಡ 'ನಾಗಸಂಪದ' ಎಂಬ ಕೃತಿಯೂ (2001) ಪ್ರಕಟವಾಗಿವೆ. (ಕೆ.ಆರ್.)

**ನಾಗೇಶ ಭಟ್ಟ :** 1741-82. ಹಿರಿಯ ಉತ್ತರ ಕನ್ನಡ ಜಿಲ್ಲೆಯಲ್ಲಿನ ಹಳದೀ ಪುರದಲ್ಲಿ ಹುಟ್ಟಿದರು. ಸಂಸ್ಕೃತ ವಿದ್ವಾಂಸ. ಇವನನ್ನು ಮಹಾಬಲ ಭಟ್ಟ ಎಂದೂ ಕರೆಯುತ್ತಿದ್ದರು. ತಂದೆ ವೇಂಕಟೇಶ ಭಟ್ಟ. ತಂದೆಯ ಬಳಿಯಲ್ಲೇ ಓದಿ ಧರ್ಮಶಾಸ್ತ್ರ,

ಜ್ಯೋತಿಷ್ಯ, ಯಾಜ್ಞಿಕ ಇತ್ಯಾದಿಗಳಲ್ಲಿ ನಿಷ್ಣಾತನಾದ. ಇವನದು ವೈಷ್ಣವ ಪಂಥ. ಕರ್ನಾಟಕದಲ್ಲಿ ಶ್ರೌತ, ಸ್ಮಾರ್ತಕರ್ಮಗಳ ವಿಷಯಗಳನ್ನು ತಿಳಿದುಕೊಂಡವರಲ್ಲಿ ಈತನಿಗೆ ಅಗ್ರಸ್ಥಾನ. ಇಂದಿಗೂ ಆ ಮರ್ಯಾದೆ ಈತನ ವಂಶಜರಿಗೆ ಸಲ್ಲುತ್ತಿದೆ.

ಸ್ಮೃತ್ಯರ್ಥಮುಕ್ತಾವಲೀ, ತಾಂತ್ರಿಕಮುಕ್ತಾವಲೀ ಮತ್ತು ಆಗಮಗ್ರಂಥ - ಇವು ಮೂರು ಧರ್ಮಶಾಸ್ತ್ರಕ್ಕೆ ಸಂಬಂಧಪಟ್ಟ ಈತನ ಗ್ರಂಥಗಳು. ಆರ್ಯಾತಂತ್ರ, ಆರ್ಯಾಕೌತುಕ ಮತ್ತು ಮಹಾಬಲಸಿದ್ಧಾಂತ - ಇವು ಮೂರು ಜ್ಯೋತಿಷಶಾಸ್ತ್ರದಲ್ಲಿನ ಗಣಿತ ವಿಷಯಗಳಿಗೆ ಸಂಬಂಧಪಟ್ಟವು. ಇವನ ಸಂಸ್ಕೃತ ಶೈಲಿ ಸರಳವೂ ಸುಬೋಧವೂ ಆಗಿದೆ.

**ನಾಗೇಶರಾವ್, ಜಿ. :** 1886-1960. ಕನ್ನಡ ರಂಗಭೂಮಿಯ ಪ್ರಸಿದ್ಧ ನಟ ಹಾಗೂ ಗಾಯಕರು. ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನಲ್ಲಿ ಬಾಣಾವರಕ್ಕೆ ಸು. 11 ಕಿಮೀ ದೂರದಲ್ಲಿರುವ ಗರುಡನಗಿರಿ ಇವರ ಪೂರ್ವಜರು ವಾಸಿಸುತ್ತಿದ್ದ ಸ್ಥಳ. ನಾಗೇಶರಾಯರು ಶ್ರೀರಂಗಪಟ್ಟಣದಲ್ಲಿ 1986 ಡಿಸೆಂಬರ್ 2ರಂದು ಜನಿಸಿದರು. ಇವರ ತಂದೆ ಶ್ರೀಕಂಠಯ್ಯನವರು ಶ್ರೀರಂಗಪಟ್ಟಣದಲ್ಲಿ ಖ್ಯಾತ ವಕೀಲರಾಗಿದ್ದರು. ನಾಗೇಶರಾಯರಿಗೆ ಮೂವರು ಸೋದರಿಯರೂ ಒಬ್ಬ ಸೋದರನೂ ಇದ್ದರು. ತೆರಕಣಾಂಬಿಯ ಲಕ್ಷ್ಮೀನಾರಾಯಣ ಜೋಯಿಸರ ಮಗಳು ಗೌರಮ್ಮ ಇವರ ಧರ್ಮಪತ್ನಿ. ರಾಯರಿಗೆ ಮಕ್ಕಳಿರಲಿಲ್ಲ.

ನಾಗೇಶರಾಯರು ತಮ್ಮ ಪ್ರಾಥಮಿಕ ಹಾಗೂ ಸ್ವಲ್ಪಕಾಲ ಮಾಧ್ಯಮಿಕ ವಿದ್ಯಾಭ್ಯಾಸವನ್ನು ಶ್ರೀರಂಗಪಟ್ಟಣದಲ್ಲಿ ನಡೆಸಿದರು. ಮುಂದಿನ ಶಿಕ್ಷಣಕ್ಕಾಗಿ ಮಂಡ್ಯಕ್ಕೆ ಬಂದಾಗ ಇವರಿಗೆ 12 ವರ್ಷ ವಯಸ್ಸು. ಈ ವಯಸ್ಸಿಗೇ ಇವರಿಗೆ ಸಂಗೀತದ ಗೀಳು ಹಿಡಿಯಿತು. ಮಂಡ್ಯದಲ್ಲಿ ಓದುತ್ತಿದ್ದಾಗ ನಾಟಕಶಿರೋಮಣಿ ಎ.ವಿ.ವರದಾಚಾರ್ಯರ ರತ್ನಾವಳಿ ಥಿಯೆಟ್ರಿಕಲ್ ಕಂಪನಿ ಅಲ್ಲಿ ಮೊಕ್ಕಾಂ ಪ್ರಾರಂಭಿಸಿ ನಾಟಕವಾಡತೊಡಗಿದಾಗ ಸಂಗೀತದ ಗೀಳಿನ ಇವರಿಗೆ ನಾಟಕದಲ್ಲಿ ಗೀಳೂ ಹತ್ತಿತ್ತು. ಅದನ್ನು ಬಿಡಿಸಲು ಮಗನ ಗೀಳನ್ನು ಸೂಕ್ಷ್ಮವಾಗಿ ತಿಳಿದಿದ್ದ ಇವರ ತಂದೆಯವರು ಹೆಚ್ಚಿನ ಓದಿಗಾಗಿ ಬೆಂಗಳೂರಿಗೆ ಕಳುಹಿಸಿದರು. ಅಲ್ಲಿರುವಾಗ ಓದಿನ ಕಡೆ ಗಮನ ಹರಿಸದೆ ಅಂದು ಉಚ್ಛ್ರಾಯಸ್ಥಿತಿಯಲ್ಲಿದ್ದ ಬೆಂಗಳೂರು ಯೂನಿಯನ್ ಎಂಬ ಕಲಾವಿಲಾಸಿ ಸಂಸ್ಥೆಯೊಡನೆ ನಿಕಟ ಸಂಪರ್ಕವಿರಿಸಿಕೊಂಡರು. ಅಲ್ಲಿಗೆ ವಿದ್ಯಾಭ್ಯಾಸವೂ ನಿಂತುಹೋಯಿತು. ಈ ಮಧ್ಯೆ ಇವರ ಹಿರಿಯ ಭಾವಂದಿರೊಬ್ಬರು ಮೈಸೂರಿನಲ್ಲಿ ದೈವಾಧೀನರಾದುದರಿಂದ ಮೈಸೂರಿಗೆ ಧಾವಿಸಿದರು. ಅನಂತರ ಮೈಸೂರಿನಲ್ಲಿ ಮರಿಮಲ್ಲಪ್ಪ ಶಾಲೆಗೆ ಸೇರಿದರಾದರೂ ವಿದ್ಯಾಭ್ಯಾಸ ಹೆಚ್ಚು ಮುಂದುವರಿಯಲಿಲ್ಲ. ಇಲ್ಲಿರುವಾಗ ಅರಮನೆ ಕಂಪನಿ ಹಾಗೂ ವರದಾಚಾರ್ಯರ ಕಂಪನಿ ನಾಟಕಗಳು ಇವರನ್ನು ಆಕರ್ಷಿಸಿದವು.

ಮೊದಲಿನಿಂದಲೂ ರಂಗಭೂಮಿಯ ಬಗ್ಗೆ ಕುತೂಹಲ. ಆಸಕ್ತಿ ಹೊಂದಿದ್ದ ನಾಗೇಶರಾಯರು ಸ್ವಯಂದತ್ತವಾದ ಪ್ರತಿಭೆಯಿಂದಲೂ ವರದಾಚಾರ್ಯರ ಆಶೀರ್ವಾದಬಲದಿಂದಲೂ ಕನ್ನಡ ನಾಟಕರಂಗದ ನಿಸ್ಸೀಮ ಕಲಾವಿದರೆನಿಸಿದರು. ಮುಂದೆ ವರದಾಚಾರ್ಯರ ಕಂಪನಿ, ಶ್ರೀ ಸಾಮ್ರಾಜ್ಯಲಕ್ಷ್ಮೀ ನಾಟಕ ಸಭಾ, ಶ್ರೀ ಚಾಮುಂಡೇಶ್ವರಿ ನಾಟಕ ಸಭಾ ಮತ್ತು ಗುಬ್ಬಿ ಕಂಪನಿ ಮೊದಲಾದ ವೃತ್ತಿನಾಟಕ ಕಂಪನಿಗಳಲ್ಲಿ ಇವರ ಕಲಾಸೇವೆ ಅವ್ಯಾಹತವಾಗಿ ಸಾಗಿ ನಾಯಕ ನಟರಾಗಿ ಪ್ರಖ್ಯಾತರಾದರು.

ಶಾಕುಂತಲ ನಾಟಕದಲ್ಲಿ ದುಷ್ಯಂತನಾಗಿ, ಹರಿಶ್ಚಂದ್ರ ನಾಟಕದಲ್ಲಿ ಹರಿಶ್ಚಂದ್ರನಾಗಿ ಇವರ ಅಭಿನಯ ಮತ್ತು ಹಾಡುಗಾರಿಕೆ ಅದ್ವಿತೀಯವಾಗಿರುತ್ತಿದ್ದಿತು. ನಾಗೇಶರಾಯರೊಂದಿಗೆ ಹಲವಾರು ವರ್ಷಕಾಲ ಶ್ರೀ ಸಾಮ್ರಾಜ್ಯಲಕ್ಷ್ಮೀ ನಾಟಕ ಸಭಾ, ಚಾಮುಂಡೇಶ್ವರಿ ನಾಟಕ ಸಭಾಗಳಲ್ಲಿ ನಾಯಕಿಯಾಗಿ ನಟಿಸಿದ ರಂಗ ಭೂಮಿಯ ಪ್ರಸಿದ್ಧ ಅಭಿನೇತ್ರಿ ಹಾಗೂ ಸಂಗೀತ ವಿದುಷಿ ಮಳವಳ್ಳಿ ಸುಂದರಮ್ಮನವರು ಇವರ ಅಭಿನಯಸಾಮರ್ಥ್ಯವನ್ನು ಪ್ರಶಂಸಿಸಿದ್ದಾರೆ.

ನಾಗೇಶರಾಯರು ಅಭಿನಯಿಸುತ್ತಿದ್ದ ಅರ್ಜುನ, ಕೀಚಕ, ಉತ್ತಾನಪಾದ, ಮನ್ಮಥ, ಕಾಳಿದಾಸ, ವತ್ಸರಾಜ - ಈ ಮೊದಲಾದ ಪಾತ್ರಗಳು ಜೀವಂತವಾಗಿರುತ್ತಿದ್ದುವು.

ನಾಗೇಶರಾಯರು ಜೀವಾನಂದರತ್ನಾವಳೀ ನಾಟಕ ಮಂಡಳಿ, ಆರ್ಯ ರತ್ನಾವಳೀ ನಾಟಕ ಸಭಾ ಎಂಬ ಎರಡು ಸ್ವಂತ ಸಂಸ್ಥೆಗಳನ್ನು ನಡೆಸಿದರಾದರೂ ಆರ್ಥಿಕ ಪ್ರೋತ್ಸಾಹವಿಲ್ಲದೆ ಅವು ಹೆಚ್ಚು ಕಾಲ ಮುಂದುವರಿಯಲಿಲ್ಲ. ಇವರ ಅಭಿನಯ ಹಾಗೂ ಸಂಗೀತಜ್ಞಾನವನ್ನು ಚಂಬೈ ವೈದ್ಯನಾಥ ಭಾಗವತರು, ಸ್ವಾನಂ ನರಸಿಂಹರಾವ್, ಉಸ್ತಾದ್ ಕರೀಂಖಾನ್ ಮೊದಲಾದ ಗಣ್ಯ ವಿದ್ವಾಂಸರು ಪ್ರಶಂಸಿಸಿದ್ದಾರೆ.

ಓಡಿಯನ್ ಕಂಪನಿ ಎಂಬ ಹೆಸರಾಂತ ಧ್ವನಿಮುದ್ರಿಕೆ ಸಂಸ್ಥೆ ನಾಗೇಶರಾಯರು ಹಾಡಿದ ಭೀಷಣತಪೋಮಹಾಗ್ನಿ (ಮನ್ಮಥವಿಜಯ), ಅಡಿಗಡಿಗಂಗುಳಿ (ಶಾಕುಂತಲಾ), ಚೇತೋಜನ ಬಾಣ (ಕಬೀರ್), ಏಕೆ ಕೋಪಿಪೆ (ವಿರಾಟಪರ್ವ), ಪೋಗುವೆ ಎಲ್ಲಿಗೆ (ವಿರಾಟಪರ್ವ) ಮೊದಲಾದ ಹಾಡುಗಳನ್ನು ಧ್ವನಿ ಮುದ್ರಿಸಿಕೊಂಡಿದೆ (1924). ಈ ಧ್ವನಿಮುದ್ರಿಕೆಗಳು ಅಂದು ಕನ್ನಡನಾಡಿನಲ್ಲೂ ನಾಡಿನ ಹೊರಗೂ ಪ್ರಸಿದ್ಧವಾಗಿದ್ದುವು.

ಇವರು 1960 ಜನವರಿ 21ರಂದು ನಿಧನರಾದರು. (ಎಸ್.ಎಚ್.ವಿ.)

**ನಾಗೇಶ ಶಾಸ್ತ್ರಿ, ವೈ. :** 1893-1974. ಕನ್ನಡ ಭಾಷಾಸೇವಕರು ಬಳ್ಳಾರಿ ಜಿಲ್ಲೆಯ ಏಳುಬೆಂಚಿ ಎಂಬ ಗ್ರಾಮದಲ್ಲಿ ಜನಿಸಿದರು. ತಂದೆ ನಯನಸ್ವಾಮಿ, ತಾಯಿ ನೀಲಮ್ಮ. ಬಡತನದಿಂದಾಗಿ ಶಾಲೆಯಲ್ಲಿ ಹೆಚ್ಚಿನ ವ್ಯಾಸಂಗ ಮಾಡಲಾಗಲಿಲ್ಲವಾದರೂ ಸ್ವತಂತ್ರವಾಗಿ ಕನ್ನಡ, ಸಂಸ್ಕೃತ, ತೆಲುಗು, ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳಲ್ಲಿ ಪರಿಶ್ರಮವನ್ನು ಸಂಪಾದಿಸಿಕೊಂಡರು. ಕೊಪ್ಪಳ ಗವಿಮಠದ ಕೊಂಗೋಡು ವೀರಭದ್ರ ಶಾಸ್ತ್ರಿಗಳಲ್ಲಿ ಮೂರು ವರ್ಷಕಾಲ ಸಂಸ್ಕೃತ ಸಾಹಿತ್ಯವನ್ನು ವ್ಯಾಸಂಗ ಮಾಡಿದರು. ಬಳ್ಳಾರಿಯ ವಾರ್ಡ್ಲಾ ಹೈಸ್ಕೂಲು, ವೀರಶೈವ ಕಾಲೇಜು, ಬೆಳಗಾಂವಿಯ ಲಿಂಗರಾಜ ಕಾಲೇಜು ಮತ್ತು ಮದನಪಲ್ಲಿಯ ಥಿಯೋಸಾಫಿಕಲ್ ಕಾಲೇಜುಗಳಲ್ಲಿ ಕನ್ನಡ ಪಂಡಿತರಾಗಿ ಕೆಲಸಮಾಡಿದರು. ಕರ್ನಾಟಕ ಬಂಧು ಎಂಬ ವಾರಪತ್ರಿಕೆಯನ್ನು 1925ರಲ್ಲಿ ಪ್ರಾರಂಭಿಸಿ ಬಳ್ಳಾರಿಯಿಂದ ಕೆಲವು ವರ್ಷಗಳ ಕಾಲ ನಡೆಸಿದರು.

ಇವರ ಸಾಹಿತ್ಯಸೇವೆ ಗಣ್ಯವಾದುದು. ಮರಿಯೋಗೀಶ್ವರ ಪುರಾಣ (1932) ಗವಿಸಿದ್ಧೇಶ್ವರ ಪುರಾಣ (1950) ಮೊದಲಾದ ಪುರಾಣ ಕಥೆಗಳನ್ನು ಪದ್ಯದಲ್ಲಿ ಬರೆದಿದ್ದಾರೆ. ಹಳಗನ್ನಡ ಮತ್ತು ಪ್ರಾಚೀನ ಸಂಸ್ಕೃತ ಕಾವ್ಯಗಳಲ್ಲಿ ಆಸಕ್ತಿ ವಹಿಸಿದ್ದ ಇವರು, ಕಾಳಿದಾಸನ ರಘುವಂಶ ಮತ್ತು ಕುಮಾರ ಸಂಭವಗಳನ್ನು ಷಟ್ಪದಿ ಚಂಪೂ ಶೈಲಿಯಲ್ಲೂ ಭಗವದ್ಗೀತೆ ಮತ್ತು ಚಂದ್ರಾಲೋಕ ಗ್ರಂಥಗಳನ್ನು ಚಂಪೂಶೈಲಿಯಲ್ಲೂ ಕನ್ನಡಕ್ಕೆ ತಂದಿದ್ದಾರೆ. ಮಲುಹಣ ಚರಿತ್ರೆ, ಪಂಪಾಂಬಿಕಾಪರಿಣಯ, ವಜ್ರಾಂಗುಲೀಯ, ಮೈರಾವಣಚರಿತ್ರೆ, ವಿಜಯನಗರಾಭ್ಯುದಯ - ಇವು ಇವರು ರಚಿಸಿರುವ ನಾಟಕಗಳು. ನೀತಿ ಚಿಂತಾಮಣಿ, ಜಯಚಾಮರಾಜ ಪಟ್ಟಾಭಿಷೇಕ - ಇವು ಇವರ ಕಾವ್ಯಗಳು. ಅಭಿನವ ಸೀತೆ ಮತ್ತು ವಿದ್ಯಾವಿನೋದಿನಿ ಎಂಬ ಎರಡು ಕಾದಂಬರಿಗಳನ್ನು ಇವರು ಬರೆದಿದ್ದಾರೆ. ವೀರಶೈವಧರ್ಮಬೋಧಿನಿ, ಅಷ್ಟಾವರಣವಿವೇಕ, ಇಷ್ಟಲಿಂಗೋಪಾಸನಕ್ರಮ, ಸರ್ವಧರ್ಮಸಮನ್ವಯಸಿದ್ಧಾಂತ, ಶಕ್ತಿವಿಶಿಷ್ಟಾದ್ವೈತ, ಬಸವಣ್ಣನವರ ವೀರಶೈವ ಸಮಾಜ - ಇವು ಇವರು ರಚಿಸಿರುವ ತಾತ್ತ್ವಿಕ ಗ್ರಂಥಗಳು. ಮಗ್ಗೆಯ ಮಾಯಿದೇವನ ಶಿವಾನುಭವಸೂತ್ರಸಾರ, ವಿಶೇಷಾರ್ಥ ಪ್ರಕಾಶಿಕೆ, ಶತಕತ್ರಯಗಳು, ಸರ್ಪಭೂಷಣ ಶಿವಯೋಗಿಗಳ ಶ್ರೀಕೈವಲ್ಯ ಕಲ್ಪವಲ್ಲರಿ ಮತ್ತು ರಾಘವಾಂಕನ ಹರಿಶ್ಚಂದ್ರಕಾವ್ಯ - ಇವನ್ನು ಇವರು ಸಂಪಾದಿಸಿದ್ದಾರೆ.

ಇವರ ಪಾಂಡಿತ್ಯ ಪ್ರತಿಭೆಗಳನ್ನು ಗುರುತಿಸಿ ಕಲ್ಕತ್ತ ವಿಶ್ವವಿದ್ಯಾಲಯ 1925ರಲ್ಲಿ ಇವರಿಗೆ ಸರ್ವದರ್ಶನತೀರ್ಥ ಎಂಬ ಪ್ರಶಸ್ತಿ

ನೀಡಿ ಗೌರವಿಸಿದೆ. ಮದರಾಸು ವಿಶ್ವವಿದ್ಯಾಲಯ 1927ರಲ್ಲಿ ಕನ್ನಡ-ಸಂಸ್ಕೃತ ವಿದ್ವಾನ್ ಎಂಬ ಪ್ರಶಸ್ತಿ ನೀಡಿತು. ಮೈಸೂರು ಮಹಾರಾಜರು 1932ರಲ್ಲಿ ಇವರನ್ನು ಆಸ್ಥಾನವಿದ್ವಾಂಸರೆಂದು ಪರಿಗಣಿಸಿ ಸನ್ಮಾನಿಸಿದರು. ಹುಬ್ಬಳ್ಳಿಯಲ್ಲಿ 1933ರಲ್ಲಿ ನಡೆದ 19ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಇವರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿ ಗೌರವಿಸಲಾಯಿತು. (ಪಿ.ಪಿ.ಕೆ.)

**ನಾಚಿರಾಜ :** ಸು.1300 ಜೈನಕವಿ. ನಾಚಿರಾಜೀಯ ನೆಂಬ ಗ್ರಂಥದ ಕರ್ತೃ. ಅಮರಸಿಂಹನ ಅಮರಕೋಶಕ್ಕೆ ಕನ್ನಡದಲ್ಲಿ ಬರೆದ ವ್ಯಾಖ್ಯಾನವಿದು. ಈಗ ದೊರೆತಿರುವ ಕನ್ನಡ ವ್ಯಾಖ್ಯಾನಗಳಲ್ಲಿ ಈ ಗ್ರಂಥವೇ ಅತ್ಯಂತ ಪ್ರಾಚೀನವಾದುದು. ಅಷ್ಟೇ ಅಲ್ಲ, ಅಮರಕೋಶಕ್ಕೆ ಸಂಬಂಧಿಸಿದಂತೆ ಭಾರತೀಯ ಭಾಷೆಗಳಲ್ಲಿ ಬರೆದ ಪ್ರಥಮ ವ್ಯಾಖ್ಯಾನವಿದು. ಈತನ ವ್ಯಾಖ್ಯಾನ ಸರಳವಾಗಿದೆ. ಸಂಸ್ಕೃತಕ್ಕೆ ಪ್ರತಿಯಾಗಿ ಕನ್ನಡ ಶಬ್ದಗಳನ್ನು ಬಳಸುವಲ್ಲಿ ಈತ ಸಾಕಷ್ಟು ಶ್ರಮಿಸಿದ್ದಾನೆ. ಗಿಡ ಮರಗಳ ಹೆಸರಿನ ಪಟ್ಟಿಯಲ್ಲಿ ಇದನ್ನು ಗುರುತಿಸಬಹುದು. ಕೆಲವು ಅನುಕ್ತ ಶಬ್ದಗಳು ಈತನ ವ್ಯಾಖ್ಯಾನದಲ್ಲುಂಟು. ಪ್ರಾಯಶಃ ಮೂಲಶಬ್ದಗಳೊಂದಿಗೆ ಕೆಲವನ್ನು ಹೊಸದಾಗಿ ಈತಸೇರಿಸಿರಬೇಕು. ಧನಂಜಯ, ರಭಸ ಇವರುಗಳ ಗ್ರಂಥಗಳನ್ನೂ ನಾಚಿರಾಜ ಉಪಯೋಗಿಸಿದಂತೆ ತಿಳಿದುಬರುತ್ತದೆ. ಮೂಡಬಿದರೆಯಲ್ಲಿ ಈ ಗ್ರಂಥದ ಕೃತಿಗಳಿವೆ. (ಎಸ್.ಆರ್.ಬಿ.)

**ನಾಣಿ :** 1929 - 2003. ಮೇಕಪ್ ನಾಣಿ ಎಂದೇ ಪ್ರಸಿದ್ಧರಾಗಿದ್ದ ಪ್ರಸಾಧನ ಕಲಾವಿದ, ಚಲನಚಿತ್ರ ನಟ. ಇವರ ಪೂರ್ತಿ ಹೆಸರು ಬಿ.ಎಸ್. ಸೂರ್ಯನಾರಾಯಣ. 1929 ನವೆಂಬರ್ 3 ರಂದು ತುಮಕೂರಿನಲ್ಲಿ ಜನಿಸಿದರು. ತಂದೆ ನಂಜುಂಡಯ್ಯ, ತಾಯಿ ಶಾರದಮ್ಮ. ಮಲೆನಾಡು ಮೂಲದ ನಂಜುಂಡಯ್ಯನವರು ತುಮಕೂರಿನಲ್ಲಿ ವೈದ್ಯರಾಗಿದ್ದರು. ಮಲೆನಾಡು ಹಾಗೂ ಬಯಲುಸೀಮೆಯ ಪ್ರಕೃತಿಯ ದೃಶ್ಯಗಳು ಬಾಲ್ಯದಲ್ಲೇ ನಾಣಿಯವರ ಮೇಲೆ ಪ್ರಭಾವ ಬೀರಿದವು. ತಂದೆಯವರೊಂದಿಗೆ ಕಂಪನಿ ನಾಟಕಗಳ ಪ್ರದರ್ಶನಕ್ಕೆ ತೆರಳುತ್ತಿದ್ದರು. ಸಾಂಪ್ರದಾಯಿಕ ರಂಗ ಭೂಮಿಯ ಈ ನಾಟಕಗಳು ಬಾಲ್ಯದಲ್ಲಿ ಇವರ ಮೇಲೆ ಆಗಾಧ ಪ್ರಭಾವ ಬೀರಿದವು.

ವಿದ್ಯಾಭ್ಯಾಸಕೆಂದು ಬೆಂಗಳೂರಿನಲ್ಲಿದ್ದ ತಮ್ಮ ತಾತನ ಮನೆಗೆ ಬಂದರು. ಆಗ ನ್ಯಾಷನಲ್ ಹೈಸ್ಕೂಲ್ ಮತ್ತು ಕಾಲೇಜುಗಳಲ್ಲಿ ನಾಟಕದ ಗೀಳನ್ನು ಬೆಳೆಸಿಕೊಂಡರು. ಕಾಲೇಜು ಶಿಕ್ಷಣ ಮುಗಿದ ಬಳಿಕ ಸ್ನೇಹಿತರೊಂದಿಗೆ ನಾಟ್ಯ ಸಂಘ ಆರಂಭಿಸಿ ಅಭಿನಯ, ರಂಗಸಜ್ಜಿಕೆ, ಪ್ರಸಾಧನ ಮೊದಲಾದ ರಂಗಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಪ್ರಸಾಧನ ಕಲೆಯ ಬಗ್ಗೆ ಇವರಿಗೆ ವಿಶೇಷ ಆಸಕ್ತಿ ಬೆಳೆಯಿತು. ವರದಾಚಾರ್ ನಾಟಕ ಕಂಪನಿಯಲ್ಲಿ ಮೇಕಪ್‌ಮನ್ ಆಗಿದ್ದ ಡಿ.ಎಸ್. ಮೂರ್ತಿರಾವ್ ಅವರಿಂದ ತರಬೇತು ಪಡೆದರು. ಅನಂತರ ಬೆಂಗಳೂರಿನಲ್ಲಿ ಎಲ್ಲೇ ನಾಟಕ ನಡೆದರೂ ಅಲ್ಲಿಗೆ ಹೋಗಿ ಬಣ್ಣ ಹಚ್ಚುತ್ತಿದ್ದರು.

ಇಂಗ್ಲಿಷ್ ನಾಟಕಗಳ ರಂಗಸಜ್ಜಿಕೆ, ಪ್ರಸಾಧನ, ಬೆಳಕಿನ ವಿನ್ಯಾಸಗಳನ್ನು ಕಲಿತ ಇವರು ಹಿಂದಿ ಚಲನಚಿತ್ರನಟ ಶಶಿಕಪೂರರ ಮಾವ ಜೆಫ್ರಿ ಕೆಂಡಾಲ್‌ರ ಷೇಕ್ಸ್‌ಪೀರಿಯಾನಾ ಇಂಟರ್ ನ್ಯಾಷನಲ್ ಕಂಪನಿಯ ರಂಗಸಜ್ಜಿಕೆಗೆ ಸಹಾಯಕರಾದರು. ಜೀವನ ನಿರ್ವಹಣೆಗಾಗಿ ಕಿರ್ಲೋಸ್ಕರ್ ಎಲೆಕ್ಟ್ರಿಕ್ ಕಂಪನಿಯಲ್ಲಿ ಕೆಲಸಕ್ಕೆ ಸೇರಿದರು. ಇಂಗ್ಲೆಂಡ್‌ನಿಂದ ಬಂದ ಇಂಗ್ಲಿಷ್ ಕಮಿಡಿಯನ್ಸ್ ಕಂಪನಿಯ ನಟ, ನಿರ್ದೇಶಕ, ಮೋರಿಯಸ್ ಗೋರಿಂಗ್ ಅವರ ಶಿಫಾರಸ್ಸಿನಿಂದ ಲಂಡನ್ನಿಗೆ ತೆರಳಿದರು. ಅಲ್ಲಿ ವಿಶೇಷವಾಗಿ ಪ್ರಸಾಧನ ಕಲೆಯಲ್ಲಿ ತರಬೇತಿ ಪಡೆದರು. ಟಿ.ಪಿ. ಕೈಲಾಸಂ ಅವರ ಗಂಡಸ್ಕತ್ರಿ ನಾಟಕವನ್ನು ಇಂಗ್ಲಿಷ್‌ನಲ್ಲಿ ನಿರ್ದೇಶಿಸಿದರು. ಇಂಗ್ಲೆಂಡಿನ ಡ್ರಾಮಾ ಬೋರ್ಡಿನವರು ನಡೆಸಿದ ಪರೀಕ್ಷೆಯಲ್ಲಿ ಪಾಸಾಗಿ ಪದವೀಧರರಾದರು. ಭಾರತಕ್ಕೆ ಹಿಂದಿರುಗಿದ ಬಳಿಕ ಟಿ.ಟಿ.ಕೆ. ಕಂಪನಿಯಲ್ಲಿ ಕೆಲಸಕ್ಕೆ ಸೇರಿದರು. ಈ ಕಂಪನಿ ತಯಾರಿಸುತ್ತಿದ್ದ ಪ್ರೆಸ್ಟೀಜ್ ಪ್ರೆಷರ್ ಕುಕ್ಕರ್‌ನ ರೂಪದರ್ಶಿಯಾದರು. ಕಲಾಜ್ಯೋತಿ, ಛಾಯಾ ಚಿತ್ರಕಲಾವಿದರು ಅಭಿನಯಿಸುತ್ತಿದ್ದ ನಾಟಕಗಳ ನೇಪಥ್ಯದಲ್ಲಿ ದುಡಿದರು. ಸುಚಿತ್ರ ಫಿಲಂ ಸೊಸೈಟಿ, ಸಿನಿಮಾ ಅಕಾಡೆಮಿ ಮತ್ತು ಪೀರ್ ರಂಗಮಂದಿರ ಮುಂತಾದ ಅನೇಕ ಸಂಘ ಸಂಸ್ಥೆಗಳನ್ನು ಬೆಂಗಳೂರಿನಲ್ಲಿ ಸ್ಥಾಪಿಸಿದರು. ಗೆಳೆಯರೊಂದಿಗೆ ಸೇರಿ ಉಲ್ಲಾಳ್ ಷೀಲ್ಡ್ ನಾಟಕ ಸ್ಪರ್ಧೆ ಪ್ರಾರಂಭಿಸಿದರು (1959). ಇದರಿಂದ ಹಲವು ಹತ್ತು ಯುವ ಪ್ರತಿಭೆಗಳು ಬೆಳಕಿಗೆ ಬಂದುವು.

ಇವರ ಪ್ರತಿಭೆಗೆ ಅನೇಕ ಪ್ರಶಸ್ತಿ ಗೌರವಗಳು ಸಂದಿವೆ. ಇವರು ಅನೇಕ ಚಲನಚಿತ್ರಗಳಲ್ಲಿ ನಟರಾಗಿ ಕಲಾನಿರ್ದೇಶಕರಾಗಿ ದುಡಿದಿದ್ದಾರೆ. ಅಬಚೂರಿನ ಪೋಸ್ಟಾಫೀಸು, ಪ್ರೊಫೆಸರ್ ಹುಚ್ಚುರಾಯ ಚಿತ್ರಗಳ ಅಭಿನಯಕ್ಕೆ ಇವರಿಗೆ ರಾಷ್ಟ್ರ ಪ್ರಶಸ್ತಿ ದೊರಕಿದೆ. ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಮತ್ತು ಸಂದೇಶ ಪ್ರತಿಷ್ಠಾನ ಪ್ರಶಸ್ತಿ - ಇವು ಇವರಿಗೆ ಸಂದ ಗೌರವಗಳು. ಇವರದು ರಂಗಭೂಮಿಗೆ ಮೀಸಲಾದ ಕುಟುಂಬ. ಪತ್ನಿ ಭಾರ್ಗವಿ ನಾರಾಯಣ್ ಹೆಸರಾಂತ ನಟಿ. ಮಕ್ಕಳಾದ ಪ್ರಕಾಶ್ ಬೆಳವಾಡಿ, ಸುಧಾ ಬೆಳವಾಡಿ ಇವರು ರಂಗಭೂಮಿ ಚಲನಚಿತ್ರ ಕಿರುತೆರೆಗಳಲ್ಲಿ ಹೆಸರಾಗಿದ್ದಾರೆ. ಸುಜಾತ ಬೆಳವಾಡಿ ಮತ್ತು ಪ್ರದೀಪ್ ಬೆಳವಾಡಿ ಇವರ ಇನ್ನಿಬ್ಬರು ಮಕ್ಕಳು.

ಕನ್ನಡ ರಂಗಭೂಮಿಗೆ ಅನುಪಮ ಸೇವೆ ಸಲ್ಲಿಸಿದ ನಾಣಿಯವರು 2003 ಡಿಸೆಂಬರ್ 4 ರಂದು ಬೆಂಗಳೂರಿನಲ್ಲಿ ನಿಧನರಾದರು.

*

**ನಾಣ್ಯಗಳು :** ಕನ್ನಡ ನಾಡಿನಲ್ಲಿ ಯಾವಾಗ ಹೇಗೆ ಬಳಕೆಗೆ ಬಂದವು ಎಂದು ಹೇಳುವುದು ಕಷ್ಟ. ಬಹು ಪ್ರಾಚೀನ ಕಾಲದಲ್ಲಿ, ನಾಣ್ಯಗಳ ಪದ್ಧತಿ ಪ್ರಾರಂಭವಾಗುವುದಕ್ಕೆ ಮುಂಚೆ ಕವಡೆ, ಹಸು ಮುಂತಾದವು ವಿನಿಮಯ ಮಾಧ್ಯಮವಾಗುತ್ತಿದ್ದವು. ಇವುಗಳಿಗಿದ್ದ ನ್ಯೂನತೆಯನ್ನು ಮತ್ತು ತೊಂದರೆಯನ್ನು ತಪ್ಪಿಸುವುದಕ್ಕಾಗಿ ಚಿನ್ನದ ಚೂರುಗಳನ್ನು ಒಂದು ನಿರ್ದಿಷ್ಟ ಆಕಾರದಲ್ಲಿ ಕತ್ತರಿಸಿ ಬಳಸುವ ಪದ್ಧತಿ ಪ್ರಾರಂಭವಾಯಿತು. ಇದೇ ವ್ಯವಸ್ಥಿತ ನಾಣ್ಯಪದ್ಧತಿಗೆ ನಾಂದಿಯಾಯಿತು. ಭಾರತದಲ್ಲಿ ಬಳಕೆಗೆ ಬಂದ ನಾಣ್ಯಗಳಲ್ಲಿ ಅತ್ಯಂತ ಪ್ರಾಚೀನವಾದವನ್ನು ಒತ್ತುಮುದ್ರೆಯ (ಪಂಚ್‌ಮಾರ್ಕ್) ನಾಣ್ಯಗಳೆಂದು ಕರೆಯುತ್ತಾರೆ. ಇವುಗಳ ಬಳಕೆ ಉತ್ತರ ಭಾರತದಲ್ಲಿ ವಿಶೇಷವಾಗಿ ಇದ್ದು ಅಲ್ಲಿಂದ ದಕ್ಷಿಣದ ಕಡೆಗೆ ಬಂದಿತು. ಮೌರ್ಯರ ಕಾಲದಲ್ಲಿ ವಿಶೇಷವಾಗಿ ಚಲಾವಣೆಯಲ್ಲಿದ್ದ ಈ ನಾಣ್ಯಗಳು ಕರ್ನಾಟಕದಲ್ಲಿ ಮೌರ್ಯ ಸಾಮ್ರಾಜ್ಯದ ಸ್ಥಾಪನೆಯೊಂದಿಗೆ ಇಲ್ಲಿಗೆ ಬಂದಿತೆಂದು ತಿಳಿಯಬಹುದು. ಬನವಾಸಿ ಮತ್ತು ವಡಗಾಂವ-ಮಾಧವಪುರಗಳಲ್ಲಿ ಒತ್ತುಮುದ್ರೆಯ ನಾಣ್ಯಗಳು ಸುಮಾರು ಕ್ರಿಸ್ತಶಕದ ಆಸುಪಾಸಿನ ಶತಮಾನಗಳಿಗೆ ಸೇರುವ ಪದರಗಳಲ್ಲಿ ದೊರಕಿವೆ. ಇದರಿಂದ ಕರ್ನಾಟಕದಲ್ಲಿ ಬಳಕೆಯಲ್ಲಿದ್ದ ಪ್ರಾಚೀನತಮ ನಾಣ್ಯಗಳು ಇವೆಂದು ಗೊತ್ತಾಗುತ್ತದೆ. ಅಂದಿನಿಂದ ನಾಣ್ಯಗಳ ಬಳಕೆ ಮುಂದುವರಿದುಕೊಂಡು ಬಂದಿದೆ.

ಕರ್ನಾಟಕದಲ್ಲಿ ದೊರಕಿರುವ ನಾಣ್ಯಗಳು ಚಿನ್ನ, ಬೆಳ್ಳಿ, ಚಿನ್ನ-ಬೆಳ್ಳಿ ಮಿಶ್ರ ಲೋಹ, ತಾಮ್ರ, ಸೀಸದಿಂದ ತಯಾರಾದವು. ಚಿನ್ನದ ನಾಣ್ಯಗಳು ವಿಶೇಷವಾಗಿ ಚಾಳುಕ್ಯ, ವಿಜಯನಗರ ಮತ್ತು ಟಿಪ್ಪುಸುಲ್ತಾನನ ಕಾಲಗಳಲ್ಲಿ ಬಳಕೆಯಲ್ಲಿದ್ದವು. ಕರ್ನಾಟಕದಲ್ಲಿ ಬೆಳ್ಳಿ ಮತ್ತು ತಾಮ್ರದ ಒತ್ತುಮುದ್ರೆಯ ನಾಣ್ಯಗಳು ಮಾತ್ರ ದೊರಕಿವೆ. ಸಾತವಾಹನರು ಚುಟುಗಳು ಮತ್ತು ಮಹಾರಠಿಗಳ ನಾಣ್ಯಗಳು ಸೀಸದಿಂದ ಮಾಡಿದವು. ಇಲ್ಲವೇ ಪೊಟಿನ್ ಎಂಬ ಮಿಶ್ರ ಲೋಹದಿಂದ ತಯಾರಾದವು. ಬನವಾಸಿಯ ಕದಂಬರ ನಾಣ್ಯಗಳು ಚಿನ್ನದವು. ಬಾದಾಮಿಯ ಚಳುಕ್ಯರ ನಾಣ್ಯಗಳು ಚಿನ್ನ ಮತ್ತು ಬೆಳ್ಳಿಯಲ್ಲಿ ದೊರಕಿವೆ. ಹೊಯ್ಸಳರ ನಾಣ್ಯಗಳು ಚಿನ್ನ ಮತ್ತು ತಾಮ್ರಗಳಲ್ಲಿವೆ. ಸೇವುಣರ ನಾಣ್ಯಗಳು ಚಿನ್ನದಲ್ಲಿ ಮಾತ್ರ ದೊರಕಿವೆ. ವಿಜಯನಗರದ ನಾಣ್ಯಗಳಲ್ಲಿ ಚಿನ್ನ ಮತ್ತು ತಾಮ್ರದವು ವಿಶೇಷವಾಗಿದ್ದು ಬೆಳ್ಳಿಯವು ವಿರಳ, ಬಹುಮನೀ ನಾಣ್ಯಗಳು ವಿಶೇಷವಾಗಿ ಬೆಳ್ಳಿ ಮತ್ತು ತಾಮ್ರಗಳಲ್ಲಿದ್ದರೂ ಚಿನ್ನದ ನಾಣ್ಯಗಳೂ ದೊರಕಿವೆ. ಆದಿಲ್‌ಶಾಹೀ ಸುಲ್ತಾನರ ನಾಣ್ಯಗಳು ತಾಮ್ರದಲ್ಲಿ ವಿಶೇಷವಾಗಿದ್ದರೂ ಬೆಳ್ಳಿ ಮತ್ತು ಚಿನ್ನದ ನಾಣ್ಯಗಳೂ ಸಿಕ್ಕಿವೆ. ಆದರೆ ಬರೀದ್ ಶಾಹೀ ಸುಲ್ತಾನರು

ತಾಮ್ರನಾಣ್ಯಗಳನ್ನು ಬಿಟ್ಟು ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳನ್ನು ಟಂಕಿಸಿದಂತೆ ಕಾಣುವುದಿಲ್ಲ. ಹೈದರ್, ಟಿಪ್ಪು ಮತ್ತು ಮೈಸೂರು ದೊರೆಗಳ ಕಾಲದಲ್ಲಿ ಚಿನ್ನ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳು ಬಳಕೆಯಲ್ಲಿದ್ದವು.

ಕರ್ನಾಟಕದ ನಾಣ್ಯಗಳ ರೂಪಗಳಲ್ಲೂ ವೈವಿಧ್ಯವಿದೆ. ಭಾರತದ ಎಲ್ಲೆಡೆಯಲ್ಲಿಯೂ ಪ್ರಚಾರದಲ್ಲಿದ್ದ ಒತ್ತು ಮುದ್ರೆ ನಾಣ್ಯಗಳು ವೃತ್ತಾಕಾರ, ಚೌಕಾಕಾರ, ಆಯತಾಕಾರ, ಪಂಚಕೋನ ಮತ್ತು ಇತರ ರೂಪಗಳಲ್ಲಿ ದೊರಕಿವೆ. ಅಂದರೆ ಈ ಕಾಲದಲ್ಲಿ ರೂಪಕ್ಕಿಂತ ತೂಕಕ್ಕೆ ಹೆಚ್ಚು ಮಹತ್ವವಿದ್ದಂತೆ ತೋರುತ್ತದೆ. ಒತ್ತುಮುದ್ರೆಯ ನಾಣ್ಯಗಳಲ್ಲಿ ಕೆಲವದರಲ್ಲಿ ಚಿಹ್ನೆಗಳು ಒಂದೇ ಮುಖದಲ್ಲೂ ಮತ್ತೆ ಕೆಲವದರಲ್ಲಿ ಎರಡು ಮುಖಗಳಲ್ಲೂ ಇರುವುದುಂಟು. ಸಾತವಾಹನರ ನಾಣ್ಯಗಳು ವೃತ್ತಾಕಾರದ ನಾಣ್ಯಗಳಾಗಿದ್ದು ಎರಡು ಮುಖಗಳಲ್ಲೂ ಚಿಹ್ನೆ ಮತ್ತು (ಅಥವಾ) ಬರೆಹಗಳಿರುತ್ತವೆ. ಬನವಾಸಿ ಕದಂಬರ ನಾಣ್ಯಗಳ ವಿಷಯದಲ್ಲಿ ಖಚಿತತೆ ಇಲ್ಲದಿದ್ದರೂ ಪದ್ಮಟಂಕವೆಂಬ ನಾಣ್ಯವನ್ನು ಬಳಕೆಗೆ ತಂದವರು ಅವರೆಂದು ಎಲ್ಲರೂ ಒಪ್ಪುತ್ತಾರೆ. ಈ ನಾಣ್ಯಗಳು ಸಣ್ಣ ಬಟ್ಟಲಿನ ಆಕಾರದಲ್ಲಿದೆ. ತೆಳ್ಳಗಿನ ಚಿನ್ನದ ತಗಡಿನ ಚೂರನ್ನು ತೆಗೆದುಕೊಂಡು ಅದರ ಮಧ್ಯದಲ್ಲಿ ಪದ್ಮದ ಚಿಹ್ನೆಯನ್ನು ಆಳವಾಗಿ ಒತ್ತುವುದರಿಂದ ತಗಡು ಬಗ್ಗಿ ಆ ಆಕಾರವನ್ನು ಪಡೆಯುತ್ತದೆ. ಆ ಪದ್ಮದ ಸುತ್ತಲೂ ಇತರ ಒತ್ತುಮುದ್ರೆಗಳಿರುತ್ತವೆ. ಅನಂತರ ಬಂದ ಬಾದಾಮಿಯ ಚಳುಕ್ಯರು ಈ ತಂತ್ರವನ್ನು ಅನುಸರಿಸಲಿಲ್ಲ. ಅವರು ಸಾತವಾಹನರಂತೆ ವೃತ್ತಾಕಾರದ ಎರಡು ಮುಖಗಳುಳ್ಳ ನಾಣ್ಯಗಳನ್ನು ಅಚ್ಚುಹಾಕಿಸಿದರು. ಇದೇ ತಂತ್ರವನ್ನು ಮುಂದಿನ ಎಲ್ಲ ರಾಜಮನೆತನಗಳೂ ಅನುಸರಿಸಿದವು. ಆದರೆ ಕಲ್ಯಾಣದ ಚಾಳುಕ್ಯರು ಮತ್ತು ದೇವಗಿರಿಯ ಸೇವುಣರು ಪದ್ಮಟಂಕದ ನಾಣ್ಯಗಳನ್ನೇ ಬಳಕೆಗೆ ತಂದರು. ವೃತ್ತಾಕಾರದ ನಾಣ್ಯಗಳೇ ವಿಶೇಷವಾದರೂ ಚೌಕನೆಯ ಮತ್ತು ತಂತಿಯ ರೀತಿಯ ನಾಣ್ಯಗಳನ್ನು ಆದಿಲ್‌ಶಾಹೀ ರಾಜರು ಉಪಯೋಗಿಸಿದರು. ಎರಡನೆಯ ಇಬ್ರಾಹೀಂ ಆದಿಲ್ ಷಾನ ನಾಣ್ಯಗಳು ಚೌಕಾಕಾರದಲ್ಲಿವೆ. ಎರಡನೆಯ ಆದಿಲ್‌ಷಾನ ಬೆಳ್ಳಿಯ ಲಾರಿನ್‌ಗಳು ಮಡಚಿದ ತಂತಿಯ ಆಕಾರದಲ್ಲಿರುವುದು ಗಮನಾರ್ಹ.

ತೂಕ ಮತ್ತು ಆಳತೆಯಲ್ಲಿಯೂ ಕರ್ನಾಟಕದ ನಾಣ್ಯಗಳು ವೈವಿಧ್ಯತೆಯನ್ನು ಪ್ರದರ್ಶಿಸುತ್ತವೆ. ಸಾಮಾನ್ಯವಾಗಿ 52 ಗ್ರೇನ್ ತೂಕದ ಚಿನ್ನದ ನಾಣ್ಯಗಳು ವಿಶೇಷವಾದವು. ಆದರೆ ಇದಕ್ಕೂ ಹೆಚ್ಚು ತೂಕದ ನಾಣ್ಯಗಳನ್ನು ಕೆಲವು ರಾಜರು ಅಚ್ಚು ಹಾಕಿಸಿದರು. ಬಾದಾಮಿಯ ಚಳುಕ್ಯ ದೊರೆವಿಕ್ರಮಾದಿತ್ಯ 117 ಗ್ರೇನ್ ತೂಕದ ಚಿನ್ನದ ನಾಣ್ಯಗಳನ್ನು ಟಂಕಿಸಿದ. ಇದೇ ತೂಕದ ಚಿನ್ನದ ನಾಣ್ಯವನ್ನು ವಿಜಯನಗರದ ಕೃಷ್ಣದೇವರಾಯ ಅಚ್ಚುಹಾಕಿಸಿದ. ಬಹಮನೀ ಸುಲ್ತಾನರನೇಕರು 195 ಗ್ರೇನ್ ತೂಕದ ಚಿನ್ನದ ನಾಣ್ಯಗಳನ್ನು ಅಚ್ಚುಹಾಕಿಸಿದರು. ಟಿಪ್ಪುಸುಲ್ತಾನನ ಚಿನ್ನದ ನಾಣ್ಯಗಳು 210 ರಿಂದ 215 ಗ್ರೇನ್ ತೂಗುತ್ತವೆ. ಇವೇ ಕರ್ನಾಟಕದಲ್ಲಿ ದೊರಕಿರುವ ಅತ್ಯಂತ ತೂಕದ ಚಿನ್ನದ ನಾಣ್ಯಗಳು. ಇತರ ಚಿನ್ನದ ನಾಣ್ಯಗಳು 26, 12, 6, 3, 1.5 ಗ್ರೇನ್ ತೂಕದಲ್ಲಿವೆ. 1.5 ಗ್ರೇನ್ ತೂಕದ ನಾಣ್ಯವೇ ಅತ್ಯಂತ ಸಣ್ಣ ಚಿನ್ನದ ನಾಣ್ಯ. ಇದನ್ನು ಪಣವೆಂದು ಕರೆಯಬಹುದು. ಹೈದರ್, ಟಿಪ್ಪು ಮತ್ತು ಮೈಸೂರಿನ ಅರಸರು ಈ ನಾಣ್ಯವನ್ನು ಅಚ್ಚು ಹಾಕಿಸಿದರು. ಟಿಪ್ಪುಸುಲ್ತಾನನ ಬೆಳ್ಳಿಯ ನಾಣ್ಯ ಹೈದರಿ ಎನ್ನುವುದರ ವ್ಯಾಸ 1.4". ಇದೇ ಕರ್ನಾಟಕದಲ್ಲಿ ದೊರಕಿರುವ ಅತ್ಯಂತ ಅಗಲವಾದ ನಾಣ್ಯ. ಇವನ ಚಿನ್ನದ ಪಣ ಕೇವಲ 0.28" ವ್ಯಾಸದ್ದು. ಇದೇ ಅತ್ಯಂತ ಚಿಕ್ಕದಿರಬಹುದು.

ನಾಣ್ಯಗಳ ಮೇಲಿನ ಬರೆವಣಿಗೆಯನ್ನು ಗಮನಿಸಿದರೆ ಒಂದು ವಿಧವಾದ ಬೆಳವಣಿಗೆ ಕಾಣಬರುತ್ತದೆ. ಒತ್ತುಮುದ್ರೆಯ ನಾಣ್ಯಗಳಲ್ಲಿ ಚಿಹ್ನೆಗಳು ಇವೆಯೇ ಹೊರತು ಯಾವ ಬರೆವಣಿಗೆಯೂ ಇಲ್ಲ. ಸಾತವಾಹನ, ಚುಟು, ಮಹಾರಠಿಗಳ ನಾಣ್ಯಗಳಲ್ಲಿ ಒಂದು ಕಡೆ ರಾಜನ ಹೆಸರು ಮತ್ತೊಂದು ಕಡೆ ಪ್ರಾಣಿಗಳು, ಬೆಟ್ಟ, ನದಿ ಮುಂತಾದ ಚಿಹ್ನೆಗಳು ಕಾಣಬರುತ್ತವೆ. ಈ ನಾಣ್ಯಗಳೇ ಕರ್ನಾಟಕದ ಮೊತ್ತಮೊದಲನೆಯ ಬರೆವಣಿಗೆಯನ್ನುಳ್ಳ ನಾಣ್ಯಗಳು. ಈ ಬರೆವಣಿಗೆಯಲ್ಲಿ ಸರಳತೆಯನ್ನು ಕಾಣುತ್ತೇವೆ. ರಾಜನ ಹೆಸರು ಮಾತ್ರವಿರುತ್ತದೆ. ಅವನ ಬಿರುದುಗಳು, ಅವನ ತಂದೆಯ ಹೆಸರು ಮುಂತಾದವು ವಿರಳ. ಇವು ಹೀಗೇ ಮುಂದುವರಿಯುತ್ತವೆ. ಹೊಯ್ಸಳ ಕಾಲಕ್ಕೆ ಬಂದಾಗ ರಾಜನ ಹೆಸರಿನ ಬದಲು ವಿಷ್ಣುವರ್ಧನ ತನ್ನ ಬಿರುದುಗಳನ್ನು ನಾಣ್ಯಗಳ ಮೇಲೆ ಹಾಕಿಸಿದ. ತಲಕಾಡುಗೊಂಡ, ನೊಳಂಬವಾಡಿಗೊಂಡ, ಮಲಪರೊಳುಗಂಡ ಎಂಬ ಅವನ ಬಿರುದುಗಳನ್ನು ಅವನ ನಾಣ್ಯಗಳಲ್ಲಿ ಕಾಣುತ್ತೇವೆ. ಗೋವೆಯ ಕದಂಬರ ನಾಣ್ಯಗಳು ಬರೆಹದ ದೃಷ್ಟಿಯಿಂದ ಗಮನಾರ್ಹವಾದವು. ಅವರು ತಮ್ಮ ಹೆಸರಿನ ಜೊತೆಗೆ ತಮ್ಮ ಪ್ರಶಸ್ತಿಯ ಭಾಗವನ್ನೂ ನಾಣ್ಯದ ಮೇಲೆ ಹಾಕಿಸಿದ್ದಾರೆ. ಶ್ರೀಸಪ್ತಕೋಟೀಶಲಬ್ಧವರ ಎನ್ನುವುದು ಎಲ್ಲ ನಾಣ್ಯಗಳ ಮೇಲೂ ಕಾಣಬರುತ್ತವೆ. ಅದೇ ರೀತಿ ಮಲವರಮಾರಿ ಎನ್ನುವ ಬಿರುದನ್ನೂ ನಾಣ್ಯಗಳ ಮೇಲೆ ಕಾಣುತ್ತೇವೆ. ವಿಜಯನಗರದ ರಾಜರು, ವೀರ, ಪ್ರತಾಪ ಎನ್ನುವ ಪದಗಳನ್ನು ಬಿಟ್ಟರೆ ಇನ್ನಾವ ಪ್ರಶಸ್ತಿಯನ್ನೂ ತಮ್ಮ ನಾಣ್ಯಗಳ ಮೇಲೆ ಹಾಕಿಸಲಿಲ್ಲ. ಬಹಮನೀ ನಾಣ್ಯಗಳಲ್ಲಿ ಬರೆಹ ವಿಶೇಷವಾಗಿರುತ್ತದೆ. ರಾಜನ ಹೆಸರು, ತಂದೆಯ ಹೆಸರು, ಕೊರಾನಿನ ವಾಕ್ಯಗಳು, ತೇದಿ ಮತ್ತು ಟಂಕಸಾಲೆಯ ಹೆಸರು ಇವರ ನಾಣ್ಯಗಳ ಮೇಲೆ ಕಾಣಬರುತ್ತವೆ. ಕೆಲವು ಸಾರಿ ಸಣ್ಣ ಪದ್ಯಗಳಿರುವುದೂ ಉಂಟು. ಆದಿಲ್‌ಶಾಹೀ, ಬರೀದ್ ಶಾಹೀ ಮತ್ತು ಟಿಪ್ಪುವಿನ ನಾಣ್ಯಗಳು ಈ ರೀತಿಯಲ್ಲೇ ಇರುತ್ತವೆ. ಆದಿಲ್‌ಶಾಹೀ ರಾಜ ಮಹಮ್ಮದ್‌ನ ಚಿನ್ನದ ನಾಣ್ಯವನ್ನು ಗಮನಿಸಬಹುದು. ಇದರ ಮೇಲೆ ಪಾರಸೀ ಪದ್ಯ ಒಂದಿದೆ. ಇದರಲ್ಲಿ ಎರಡರ್ಥ ಬರುವಂತೆ ಕವಿ ರಚಿಸಿದ್ದಾನೆ. ಈ ಪ್ರಪಂಚ ಸೌಂದರ್ಯ ಮತ್ತು ಘನತೆಯನ್ನು ಇಬ್ಬರು ಮಹಮ್ಮದರಿಂದ ಪಡೆಯಿತು. ಒಬ್ಬ ಪ್ರವಾದಿ ಮಹಮ್ಮದ್; ಮತ್ತೊಬ್ಬ ಸುಲ್ತಾನನಾದ ಮಹಮ್ಮದ್ ಇದು ಮೊದಲನೆಯ ಅರ್ಥ. ಎರಡನೆಯ ಅರ್ಥದಲ್ಲಿ ಇದು ಇವನ ಹೆಂಡತಿ ತಾಜ್ ಜಹಾನ್‌ಳನ್ನು ಕುರಿತದ್ದು. ಈ ಪ್ರಪಂಚ ಜಹಾನ್ ಸೌಂದರ್ಯ ಮತ್ತು ಘನತೆಯನ್ನು ಪ್ರವಾದಿ ಮಹಮ್ಮದ್‌ನಿಂದ ಪಡೆಯಿತು. ರಾಣಿ (ಜಹಾನ್) ಇದನ್ನು ಸುಲ್ತಾನನಾದ ಮಹಮ್ಮದ್‌ನಿಂದ ಪಡೆದಳು. ಈ ರೀತಿ ಚಮತ್ಕಾರವಾದ ಪದ್ಯಗಳನ್ನು ಕಾಣಬಹುದು.

ಕರ್ನಾಟಕದ ನಾಣ್ಯಗಳಲ್ಲಿ ಸಂಸ್ಕೃತ, ಪ್ರಾಕೃತ, ಕನ್ನಡ, ತೆಲುಗು ಮತ್ತು ಪಾರಸೀ ಭಾಷೆಗಳ ಬರೆಹವನ್ನು ಕಾಣುತ್ತೇವೆ. ಸಾತವಾಹನ ನಾಣ್ಯಗಳು ವಿಶೇಷವಾಗಿ ಪ್ರಾಕೃತ ಭಾಷೆಯ ಬರೆಹವನ್ನು ಹೊಂದಿರುತ್ತವೆ. ಉದಾಹರಣೆಗೆ ರಞೋಸಿವಸಿರಿಸ ಪುಳುಮಾವಿಸ, ವಿಜಯನಗರದ ನಾಣ್ಯಗಳು ಇಮ್ಮಡಿ ದೇವರಾಯರು, ಸದಾಶಿವರಾಯರು, ಮಲ್ಲಿಕಾರ್ಜುನರಾಯರು ಎಂಬ ಕನ್ನಡ ಬರೆಹವನ್ನು ಹೊಂದಿವೆ. ಅದೇ ರೀತಿ ಚಿಕರಾಯಲು, ತಿರುಮಲರಾಯಲು ಎಂಬ ತೆಲುಗು ಬರೆಹವನ್ನೂ ಹೊಂದಿವೆ. ಬಹಮನೀ, ಆದಿಲ್‌ಶಾಹೀ, ಬರೀದ್ ಶಾಹೀ ಮತ್ತು ಟಿಪ್ಪು ಸುಲ್ತಾನರ ನಾಣ್ಯಗಳು ಪಾರಸೀ ಭಾಷೆಯ ಬರೆಹವನ್ನು ಹೊಂದಿವೆ. ಮೈಸೂರು ಅರಸರ ಕೆಲವು ನಾಣ್ಯಗಳಲ್ಲಿ ಮಾತ್ರ ಪಾರಸೀ ಬರೆಹವಿದೆ.

ಇದೇ ರೀತಿಯಲ್ಲಿ ಲಿಪಿಯಲ್ಲಿಯೂ ವೈವಿಧ್ಯತೆ ಕಂಡುಬರುತ್ತದೆ. ಸಾತವಾಹನ, ಚುಟು ಮತ್ತು ಮಹಾರಠಿ ನಾಣ್ಯಗಳು ಬ್ರಾಹ್ಮೀ ಲಿಪಿಯಲ್ಲಿವೆ. ಬಾದಾಮಿಯ ಚಳುಕ್ಯರು, ಕಲ್ಯಾಣದ ಚಾಳುಕ್ಯರು ಮತ್ತು ಹೊಯ್ಸಳರ ಬರೆಹಗಳು ಕನ್ನಡ ಲಿಪಿಯಲ್ಲಿವೆ. ಸೇವುಣರ ನಾಣ್ಯಗಳ ಮೇಲೆ ನಾಗರೀ ಲಿಪಿಯ ಬರೆಹವಿದೆ. ಆಳುಪರ ನಾಣ್ಯಗಳಲ್ಲಿ ಕನ್ನಡ ಮತ್ತು ನಾಗರೀ ಲಿಪಿಯ ಬರೆಹಗಳಿವೆ. ಗೋವೆಯ ಕದಂಬರ ನಾಣ್ಯಗಳ ಮೇಲೆ ವಿಶೇಷವಾಗಿ ನಾಗರೀ ಲಿಪಿಯ ಬರೆಹವಿದೆ. ಆದರೆ ಶಿವಚಿತ್ತನ ನಾಣ್ಯವೊಂದರಲ್ಲಿ ಶಿವಚಿತ್ತ ಎನ್ನುವ ಬರೆಹ ಐದು ಸಾರಿ ಬರೆಯಲ್ಪಟ್ಟಿದೆ. ಒಂದು, ಮೂರು ಮತ್ತು ಐದನೆಯ ಸಾಲುಗಳು ನಾಗರೀಯಲ್ಲೂ ಎರಡು ಮತ್ತು ನಾಲ್ಕನೆಯ ಸಾಲುಗಳು ಕನ್ನಡ ಲಿಪಿಯಲ್ಲಿಯೂ ಇರುವುದು ಗಮನಾರ್ಹ. ವಿಜಯನಗರದ ಅರಸುಗಳ ನಾಣ್ಯಗಳಲ್ಲಿ ಹತ್ತು ರಾಜರು ಕನ್ನಡ ಲಿಪಿಯ ಬರೆಹವನ್ನು, ಹದಿಮೂರು ಜನ ರಾಜರು ನಾಗರೀ

ಲಿಪಿಯ ಬರೆಹವನ್ನು, ಕೇವಲ (ಕೊನೆಗಾಲದ) ಇಬ್ಬರು ರಾಜರು ತೆಲುಗು ಲಿಪಿಯ ಬರೆಹವನ್ನು ನಾಣ್ಯಗಳ ಮೇಲೆ ಹಾಕಿಸಿದರು. ನಾಣ್ಯಗಳನ್ನು ಮೊದಲು ಅಚ್ಚುಹಾಕಿಸಿದ ಒಂದನೆಯ ಹರಿಹರ ಮತ್ತು ಒಂದನೆಯ ಬುಕ್ಕ ಇವರ ನಾಣ್ಯಗಳ ಮೇಲೆ ಕನ್ನಡ ಮತ್ತು ನಾಗರೀ ಬರೆಹವಿದೆ. ಮುಸ್ಲಿಂ ರಾಜರ ನಾಣ್ಯಗಳಲ್ಲಿ ಪಾರಸೀ ಲಿಪಿಯ ಬರೆಹವಿರುತ್ತದೆ. ಮೈಸೂರು ಒಡೆಯರ ನಾಣ್ಯಗಳು ಈ ದೃಷ್ಟಿಯಿಂದ ಗಮನಾರ್ಹ. ಇವರ ನಾಣ್ಯಗಳಲ್ಲಿ ನಾಗರೀ ಕನ್ನಡ ಪಾರಸೀ ಮತ್ತು ರೋಮನ್ ಲಿಪಿಗಳನ್ನು ಕಾಣಬಹುದು. ಒಂದೇ ನಾಣ್ಯದಲ್ಲಿ ಎರಡು ಮತ್ತು ಮೂರು ವಿಭಿನ್ನ ಲಿಪಿಗಳಿರುವುದು ಗಮನಾರ್ಹ. ಮುಮ್ಮಡಿ ಕೃಷ್ಣರಾಜ ಒಡೆಯರ ಇಪ್ಪತ್ತು ಕಾಸಿನ ನಾಣ್ಯದಲ್ಲಿ ಮೊದಲ ಮೂರು ಸಾಲುಗಳಲ್ಲಿ ಕೃಷ್ಣ, ಮಯಿಲಿಕಾಸು ಯಿಪತು ಎಂಬ ಕನ್ನಡ ಲಿಪಿಯೂ ನಾಲ್ಕನೆಯ ಸಾಲಿನಲ್ಲಿ XX CASH ಎಂಬ ರೋಮನ್ ಬರೆಹವೂ ಇದೆ. ಇದೇ ರಾಜರ ಮತ್ತೊಂದು ನಾಣ್ಯದಲ್ಲಿ ಮೂರು ಲಿಪಿಗಳಿವೆ. ಮೈಲಿಕಾಸು ೨೫ (ಕನ್ನಡ), XXV CASH (ರೋಮನ್), ಜರ್ಬ್-ಇ-ಮಹಿಷೂರ್ (ಪಾರಸೀ) ಬರೆಹಗಳನ್ನು ಕಾಣುತ್ತೇವೆ.

ಪ್ರಾಚೀನ ನಾಣ್ಯಗಳ ಮೇಲೆ ಕಾಲದ ಉಲ್ಲೇಖವಿರುವುದು ಬಹು ವಿರಳ. ಮೊಟ್ಟಮೊದಲನೆಯ ಬಾರಿಗೆ ಕಾಲದ ಉಲ್ಲೇಖವನ್ನು ಕಾಣುವುದು ಗೋವೆಯ ಕದಂಬರ ನಾಣ್ಯಗಳ ಮೇಲೆ, ಇವರ ಕೆಲವು ನಾಣ್ಯಗಳ ಮೇಲೆ ಪ್ಲವ, ವಿಜಯ, ಹೇವಿಳಂಬಿ, ದುರ್ಮತಿ, ಜಯ ಮುಂತಾದ ಸಂವತ್ಸರಗಳ ಹೆಸರುಗಳನ್ನು ಕಾಣುತ್ತೇವೆ. ಇವು ಆ ನಾಣ್ಯಗಳು ಅಚ್ಚಾದ ವರ್ಷಗಳೆಂದು ಭಾವಿಸಲಾಗಿದೆ. ಮೊದಲನೆಯ, ಎರಡನೆಯ ಮತ್ತು ಮೂರನೆಯ ಜಯಕೇಶಿಯ ನಾಣ್ಯಗಳು ಒಂದೇ ರೀತಿ ಇರುವುದರಿಂದ, ಅವನ್ನು ಬೇರ್ಪಡಿಸಲು ಈ ಸಂವತ್ಸರದ ಹೆಸರುಗಳು ಸಹಕಾರಿಯಾಗಿವೆ. ವಿಜಯನಗರದ ಯಾವ ನಾಣ್ಯದ ಮೇಲೆಯೂ ಕಾಲದ ಉಲ್ಲೇಖವಿಲ್ಲ. ಮುಸ್ಲಿಂ ರಾಜರ ನಾಣ್ಯಗಳ ಮೇಲೆ ಹಿಜಿರ ವರ್ಷ ನಮೂದಾಗಿರುತ್ತದೆ. ಕೆಲವು ಸಾರಿ ರಾಜನ ಆಳ್ವಿಕೆಯ ವರ್ಷವೂ ಉಲ್ಲೇಖಿತವಾಗಿರುತ್ತದೆ. ಟಿಪ್ಪು ಸುಲ್ತಾನನ ಮೊದಲ ನಾಲ್ಕು ವರ್ಷದ ನಾಣ್ಯಗಳು ಹಿಜಿರ ಕಾಲಮಾನವನ್ನು ಉಲ್ಲೇಖಿಸುತ್ತವೆ. ಐದನೆಯ ವರ್ಷದಿಂದ ಅವನು ಮೌಲೂದಿ ಕಾಲಮಾನವನ್ನು ಬಳಕೆಗೆ ತಂದ. ಅವನ ಐದನೆಯ ಆಳ್ವಿಕೆಯ ವರ್ಷದಿಂದ 1215 ಮೌಲೂದಿ ಕಾಲಮಾನ ಬಳಕೆಗೆ ಬಂದು ಅವನ ಕೊನೆ ವರ್ಷ 1227 ಎಂದು ನಮೂದಿತವಾಗಿದೆ. ಮೌಲೂದಿ ಕಾಲಮಾನದಲ್ಲಿ ಟಿಪ್ಪು ಹಿಂದು ಪಂಚಾಂಗವನ್ನೇ ಅನುಸರಿಸಿ ಪ್ರಭವಾದಿ ಸಂವತ್ಸರಗಳನ್ನು ಉಪಯೋಗಿಸಿಕೊಂಡ. ಅವುಗಳಿಗೆ ಬದಲಾಗಿ ತಾನೇ ಹೊಸ ಹೆಸರುಗಳನ್ನು ಕೊಟ್ಟ. ಇದರಲ್ಲಿ ಅಬ್ಜದ್ ಮತ್ತು ಅಬ್ತತ್ ಎಂಬ ಎರಡು ವಿಧಗಳನ್ನು ಅನುಸರಿಸಿದ. ಅದೇ ರೀತಿ ತಿಂಗಳಿಗೂ ಹೊಸ ಹೆಸರನ್ನು ಕೊಟ್ಟು ಅವುಗಳನ್ನು ನಾಣ್ಯಗಳ ಮೇಲೆ ಹಾಕಿಸಿದ. ಮುಮ್ಮಡಿ ಕೃಷ್ಣರಾಜ ಒಡೆಯರ ಕೆಲವು ನಾಣ್ಯಗಳ ಮೇಲೆ ಅವರ ಆಳ್ವಿಕೆಯ ವರ್ಷವಿದೆ; ಮತ್ತೆ ಕೆಲವದರ ಮೇಲೆ ಕ್ರಿಸ್ತಶಕೆಯ ವರ್ಷಗಳಿವೆ.

ಟಂಕಸಾಲೆಗಳ ಹೆಸರುಗಳು ಪ್ರಾಚೀನ ನಾಣ್ಯಗಳ ಮೇಲೆ ಕಾಣಬರುವುದಿಲ್ಲ. ಆದರೆ ಶಾಸನಗಳಿಂದ ಚಾಳುಕ್ಯರ ಕಾಲದಲ್ಲಿ ಲೊಕ್ಕಿಗುಂಡಿ, ಸೂಡಿ ಮುಂತಾದ ಕಡೆಗಳಲ್ಲಿ ಟಂಕಸಾಲೆಗಳಿದ್ದವೆಂದು ತಿಳಿದುಬರುತ್ತದೆ. ಇದೇ ರೀತಿ ಬಾರಕೂರು ಮತ್ತು ಮಂಗಳೂರಿನಲ್ಲಿ ಅಚ್ಚಾದ ಗದ್ಯಾಣಗಳನ್ನು ಬಾರಕೂರು ಗದ್ಯಾಣ, ಮಂಗಳೂರು ಗದ್ಯಾಣವೆಂದು ಕರೆಯುತ್ತಿದ್ದುದು ತಿಳಿದುಬರುತ್ತದೆ. ಆದರೆ ದೊರಕಿರುವ ಗದ್ಯಾಣಗಳ ಮೇಲೆ ಈ ಹೆಸರುಗಳಿಲ್ಲ. ನಾಣ್ಯಗಳ ಮೇಲೆ ಟಂಕಸಾಲೆಯ ಹೆಸರನ್ನು ತೋರಿಸುವುದು ಮಹಮ್ಮದೀಯರ ಕಾಲದಿಂದ ಪ್ರಾರಂಭವಾಯಿತೆಂದು ತೋರುತ್ತದೆ. ಬಹುಮನೀ ನಾಣ್ಯಗಳ ಮೇಲೆ ಇರುವ ಹೆಸರುಗಳಿಂದ ಅಹಸನಾಬಾದ್ (ಗುಲ್ಬರ್ಗ), ಮಹಮ್ಮದಾಬಾದ್ (ಬಿದರೆ) ಮತ್ತು ಫತಾಬಾದ್ (ದೌಲತಾಬಾದ್) ಗಳಲ್ಲಿಬಹಮನೀ ನಾಣ್ಯಗಳು ಅಚ್ಚಾಗುತ್ತಿದ್ದವೆಂದು ತಿಳಿದುಬುರುತ್ತದೆ. ಕೆಳದಿ ನಾಯಕರ ಕಾಲದಲ್ಲಿ ನಗರದಲ್ಲಿ ಒಂದು ಟಂಕಸಾಲೆಯಿದ್ದಿತೆಂದು ಅಲ್ಲಿ ದೊರಕಿರುವ ಒಂದು ಯಂತ್ರದಿಂದ ತಿಳಿಯುತ್ತದೆ. ಅದರ ಮೇಲೆ ಟಂಕಸಾಲೆಕಲ್ಲು ಎನ್ನುವ ಬರೆಹವಿದೆ. ಇದು ಆರು ಪಾರ್ಶ್ವಗಳುಳ್ಳ ಒಂದು ಲೋಹದ ಯಂತ್ರ. ಇದರಲ್ಲಿ ಆರು ವಿವಿಧ ಆಳತೆಯ ತೂತುಗಳಿವೆ. ಇವುಗಳಲ್ಲಿ ಲೋಹವನ್ನು ಹಾಕಿ ಇಂತಹದೇ ಯಂತ್ರದಿಂದ ಬಲವಾಗಿ ಅದುಮಿ ನಾಣ್ಯಗಳನ್ನು ತಯಾರುಮಾಡುತ್ತಿದ್ದರೆಂದು ಹೇಳಬಹುದು. ಟಿಪ್ಪುಸುಲ್ತಾನನ ಕಾಲಕ್ಕೆ ಬಂದರೆ ನಮಗೆ ನಾಣ್ಯಗಳಲ್ಲಿ ಟಂಕಸಾಲೆಯ ಹೆಸರುಗಳು ಕಾಣಬರುತ್ತವೆ. ಇವನ ಕಾಲದಲ್ಲಿ ಹದಿಮೂರು ಟಂಕಸಾಲೆಗಳಿದ್ದವು. ಇವುಗಳಲ್ಲಿ ಕೆಲವಕ್ಕೆ ಟಿಪ್ಪು ಹೊಸ ಹೆಸರುಗಳನ್ನು ಕೊಟ್ಟಿದ್ದ. ಮೈಸೂರು ಒಡೆಯರಲ್ಲಿ ಟಂಕಸಾಲೆಯನ್ನು ಮೊದಲು ಸ್ಥಾಪಿಸಿದವರು ಕಂಠೀರವ ನರಸರಾಜ ಒಡೆಯರು. ಇವರ ಟಂಕಸಾಲೆ ಶ್ರೀರಂಗಪಟ್ಟಣದಲ್ಲಿದ್ದಿತು. ಮುಮ್ಮಡಿ ಕೃಷ್ಣರಾಜ ಒಡೆಯರು ಮೈಸೂರಿನಲ್ಲಿ ಟಂಕಸಾಲೆಯನ್ನು ಸ್ಥಾಪಿಸಿದರು. ಇದು 1833ರ ವರೆಗೂ ಕೆಲಸ ಮಾಡುತ್ತಿದ್ದಿತು. ಆ ವರ್ಷ ಟಂಕಸಾಲೆಯನ್ನು ಬೆಂಗಳೂರಿಗೆ ಬದಲಾಯಿಸಲಾಯಿತು. 1843ರಲ್ಲಿ ಬೆಂಗಳೂರಿನ ಟಂಕಸಾಲೆ ಕಾರ್ಯವನ್ನು ನಿಲ್ಲಿಸಿತು. ಅಲ್ಲಿಂದ ಮುಂದೆ ಮೈಸೂರು ಅರಸರ ನಾಣ್ಯಗಳು ಅಚ್ಚಾಗಲಿಲ್ಲ.

ಶಾಸನಗಳಿಂದ, ದೇಶೀಯ ಮತ್ತು ವಿದೇಶೀಯರ ಬರೆವಣಿಗೆಗಳಿಂದ ಕರ್ನಾಟಕದಲ್ಲಿ ಬಳಕೆಯಲ್ಲಿದ್ದ ಅನೇಕ ನಾಣ್ಯಗಳ ಹೆಸರುಗಳು ತಿಳಿದುಬರುತ್ತವೆ. ಗದ್ಯಾಣವೆಂಬ ನಾಣ್ಯ ಬಾದಾಮಿಯ ಚಳುಕ್ಯರ ಕಾಲದಿಂದ ಕಾಣಬರುತ್ತದೆ. ವರಹ ಮತ್ತು ಹಣಗಳು ಗಂಗರ ಶಾಸನಗಳಲ್ಲಿಯೂ ದ್ರಮ್ಮ, ಸುವರ್ಣ, ಗದ್ಯಾಣ, ಕಳಂಜು, ಕಾಸು, ಮಂಜಾಡಿ, ಅಕ್ಕಂ - ಇವು ರಾಷ್ಟ್ರಕೂಟರ ಶಾಸನಗಳಲ್ಲಿಯೂ ಕಾಣಬರುತ್ತವೆ. ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಇನ್ನೂ ಹೆಚ್ಚಿನ ಮಾಹಿತಿ ದೊರಕಿದ್ದು ಪಣ, ಹೊನ್ನು, ಹಾಗ, ಕಾಗಿನಿ, ವೀಸ, ಗುಳಿಕೆ ಮತ್ತು ಬೇಳೆ ಎಂಬ ಹೊಸ ನಾಣ್ಯಗಳು ಸಿಗುತ್ತವೆ. ಈ ಕಾಲದ ಶಾಸನಗಳಿಂದ 1 ಗದ್ಯಾಣ = 10 ಪಣ, 1 ಪಣ =4 ಹಾಗ =4 ಕಾಗಿನಿ,1 ಹಾಗ =4 ಅಥವಾ 5 ವೀಸ ಎಂದೂ ಗೊತ್ತಾಗುತ್ತದೆ. ಸುಮಾರು ಇದೇ ರೀತಿಯ ನಾಣ್ಯಪದ್ಧತಿ ಹೊಯ್ಸಳ-ಸೇವುಣ ಕಾಲದಲ್ಲಿಯೂ ಇದ್ದಿತೆಂದು ಊಹಿಸಬಹುದು. ವಿಜಯನಗರದ ಕಾಲದಲ್ಲಿ ಗದ್ಯಾಣ, ವರಹ, ಪೊನ್, ಪಗೋಡ, ಪ್ರತಾಪ, ಕಾಟಿ, ಪಣ, ಹಾಗ, ವೀಸ, ತಾರ, ಜಿಟಲ್, ಕಾಸು ಎಂಬ ನಾಣ್ಯಗಳೂ ಅವುಗಳ ಪ್ರಭೇದಗಳೂ ಕಾಣಬರುತ್ತವೆ. ಆ ಕಾಲದಲ್ಲಿದ್ದ ನಾಣ್ಯಗಳ ವಿವರ ಹೀಗಿವೆ: 1 ವರಹ= 2 ಪ್ರತಾಪ, 1 ಪ್ರತಾಪ=2 ಕಾಟಿ, 1 ವರಹ=10 ಪಣ=8 ಚಿನ್ನಂ, 1 ಪಣ=4 ಹಾಗ, 1 ಹಾಗ=2 ಬೇಳೆ, ಕೆಳದಿ ನಾಯಕರ ಶಾಸನಗಳ ಪ್ರಕಾರ 1 ವರಹ=2 ಹೊನ್ನು, 1 ಹೊನ್ನು =2 ಧರಣ, 1 ಧರಣ=5 ಹಣ, 1 ಹಣ=2 ಅಡ್ಡ, 1 ಅಡ್ಡ=2 ಹಾಗ, 1 ಹಾಗ=2 ಬೇಳೆ, 1 ಹಾಗ=4 ವೀಸ, 1 ವೀಸ=2 ಅರೆವೀಸ=16 ಕಾಸು. ಟಿಪ್ಪುಸುಲ್ತಾನ ಅನೇಕ ಹೊಸ ನಾಣ್ಯಗಳನ್ನು ರೂಢಿಗೆ ತಂದು ಅವುಗಳಿಗೆ ಹೊಸ ಹೆಸರುಗಳನ್ನು ಕೊಟ್ಟಿದ್ದ.

ನಾಣ್ಯಗಳ ಮೇಲಿರುವ ಚಿಹ್ನೆಗಳು ಅಥವಾ ಪ್ರಾಣಿಗಳು ಅಥವಾ ದೇವತೆಯ ಚಿತ್ರಗಳು ಗಮನಾರ್ಹವಾದವು. ಸಾತವಾಹನರ ನಾಣ್ಯಗಳ ಮೇಲೆ ಆನೆ, ಕುದುರೆ ಮುಂತಾದ ಪ್ರಾಣಿಗಳು ಇಲ್ಲವೆ ಬೆಟ್ಟ, ಬೇಲಿಯೊಳಗಿನ ವೃಕ್ಷ, ಬಿಲ್ಲು ಬಾಣ ಮುಂತಾದವುಗಳಿವೆ. ಕದಂಬರ ನಾಣ್ಯಗಳಲ್ಲಿ ಪದ್ಮದ ಚಿಹ್ನೆ ಶಂಖಚಕ್ರಗಳಿವೆ. ಆನೆ ಗಂಗರ ಲಾಂಛನವಾದುದರಿಂದ, ಅದನ್ನು ಅವರ ನಾಣ್ಯಗಳ ಮೇಲೆ ಕಾಣುತ್ತೇವೆ. ಕಲ್ಯಾಣದ ಚಾಳುಕ್ಯರ ನಾಣ್ಯಗಳ ಮೇಲೆ ಗೋಪುರ ವಿಶೇಷವಾಗಿ ಕಾಣುತ್ತದೆ. ಹೊಯ್ಸಳರ ನಾಣ್ಯಗಳಲ್ಲಿ ಅವರ ಲಾಂಛನವಾದ ಸಿಂಹವಿದೆ. ಆಳುಪರ ನಾಣ್ಯಗಳಲ್ಲಿ ಅವರ ಲಾಂಛನ ಮೀನನ್ನು ಕಾಣುತ್ತೇವೆ. ವಿಜಯನಗರದ ಅರಸರು ಹಿಂದು ದೇವತೆಗಳ ಚಿತ್ರಗಳನ್ನು ಹಾಕಿಸಿದರು. ಉಮಾಮಹೇಶ್ವರ, ಲಕ್ಷ್ಮೀನರಸಿಂಹ, ಬಾಲಕೃಷ್ಣ, ವೆಂಕಟೇಶ್ವರ, ಲಕ್ಷ್ಮೀನಾರಾಯಣ, ಶ್ರೀರಾಮ, ಗರುಡ, ಹನುಮಂತ, ವರಾಹ, ದುರ್ಗ ಮುಂತಾದ ದೇವತೆಗಳ ಚಿತ್ರಗಳನ್ನು ನಾಣ್ಯಗಳ ಒಂದು ಮುಖದಲ್ಲಿ ಹಾಕಿಸಿದರು. ಟಿಪ್ಪುಸುಲ್ತಾನನ ನಾಣ್ಯಗಳ ಮೇಲೆ ಆನೆಯ ಚಿತ್ರವಿದೆ. ಮೈಸೂರು ಒಡೆಯರು ಆನೆ ಅಥವಾ ಸಿಂಹದ ಚಿತ್ರ ಅದರ

ಮೇಲೆ ಚಾಮುಂಡಿ ಎಂಬ ಬರೆಹವನ್ನು ಹಾಕಿಸಿದರು.

ಹೊರನಾಡುಗಳಲ್ಲಿ ಅಚ್ಚಾದ ಕೆಲವು ನಾಣ್ಯಗಳು ಸಹ ಕರ್ನಾಟಕದಲ್ಲಿ ದೊರಕಿವೆ. 1891ರಲ್ಲಿ ಲೂಯಿ ರೈಸರು ಮೊಟ್ಟಮೊದಲಿಗೆ ಕರ್ನಾಟಕದಲ್ಲಿ ರೋಮನ್ ನಾಣ್ಯವನ್ನು ಪತ್ತೆಮಾಡಿದರು. ಬೆಂಗಳೂರಿಗೆ ಸಮೀಪದಲ್ಲಿರುವ ಯಶವಂತಪುರದಲ್ಲಿ ರೈಲ್ವೆ ಹಳಿಯನ್ನು ಹಾಕುವ ಸಲುವಾಗಿ ಅಗೆಯುತ್ತಿರುವಾಗ ಮಡಕೆಯೊಂದರಲ್ಲಿ 163 ರೋಮನ್ ಬೆಳ್ಳಿ ನಾಣ್ಯಗಳು ಕಂಡುಬಂದವು. ಈ ನಾಣ್ಯಗಳು ಕ್ರಿ.ಪೂ. 21ರಿಂದ ಕ್ರಿ.ಶ. 51ರ ವರೆಗಿನ ನಾಣ್ಯಗಳು. ಇವುಗಳು ರೋಮನ್ ಚಕ್ರವರ್ತಿ ಆಗಸ್ಟಸ್, ಟೈಬೀರಿಯಸ್, ಕ್ಯಾಲಿಗುಲ ಮತ್ತು ಕ್ಲಾಡಿಯಿಸ್ ಅವರಿಗೆ ಸೇರಿದ ನಾಣ್ಯಗಳು. ಒಂದೇ ಒಂದು ನಾಣ್ಯ ಮಾತ್ರ ನೀರೋವಿನ ಹೆಂಡತಿ ಆಂಟೋನಿಯೊ ಅಗಸ್ಟಳಿಗೆ ಸೇರಿದ್ದು. 1947ರಲ್ಲಿ ಚಂದ್ರವಳ್ಳಿಯಲ್ಲಿ ನಡೆಸಿದ ಉತ್ಖನನದಲ್ಲಿ ಒಂದು ರೋಮನ್ ದೀನಾರ ನಾಣ್ಯ ದೊರೆಯಿತು. ಇದು ಚಕ್ರವರ್ತಿ ಟೈಬೀರಿಯಸ್‌ನ ಕಾಲದ್ದು. ಇದರ ವ್ಯಾಸ 0.7" ಮತ್ತು ತೂಕ 2.89 ಗ್ರಾಂಗಳು. ಇದರ ಮುಮ್ಮುಖದಲ್ಲಿ ಟೈಬೀರಿಯಸ್‌ನ ಚಿತ್ರ ಮತ್ತು T1 CAESAR DIVI AVGF AVGVSTVS ಎಂಬ ಬರೆಹವಿದೆ. ಹಿಮ್ಮುಖದಲ್ಲಿ ಕುರ್ಚಿಯ ಮೇಲೆ ಕುಳಿತಿರುವ ಸ್ತ್ರೀಚಿತ್ರವಿದೆ. ಆಕೆಯ ಕಾಲುಗಳು ಚಿಕ್ಕ ಸ್ಟೂಲಿನ ಮೇಲಿದೆ. ಕೆಳಭಾಗದಲ್ಲಿ PONTIF MAXIM ಎಂಬ ಬರೆಹವಿದೆ. ಇದಕ್ಕೂ ಮುಂಚೆ ಮೈಸೂರು ಪುರಾತತ್ತ್ವ ಇಲಾಖೆಯವರು ಚಂದ್ರವಳ್ಳಿಯಲ್ಲಿ ನಡೆಸಿದ ಅಗೆತಗಳಲ್ಲಿಯೂ ಕೆಲವು ರೋಮನ್ ನಾಣ್ಯಗಳು ಬೆಳಕಿಗೆ ಬಂದವು. ಅವುಗಳಲ್ಲಿ ಒಂದು ಅಗಸ್ಟಸ್ ಸೀಸರನ ಕಾಲದ್ದು. 1965ರಲ್ಲಿ ಬೆಂಗಳೂರಿನ ಎಚ್.ಎ.ಎಲ್. ನಿಲ್ದಾಣದಲ್ಲಿ ಕೆಲಸವನ್ನು ಮಾಡುತ್ತಿದ್ದಾಗ 226 ರೋಮನ್ ಬೆಳ್ಳಿಯ ನಾಣ್ಯಗಳು ಸಿಕ್ಕಿದವು. ಇಲ್ಲಿ ದೊರಕಿರುವ ಬೆಳ್ಳಿನಾಣ್ಯಗಳು ಅಗಸ್ಟಸ್ ಮತ್ತು ಟೈಬೀರಿಯಸ್ ಚಕ್ರವರ್ತಿಗಳಿಗೆ ಸೇರಿದವುಗಳು.

ಚೋಳ ಅರಸರಾದ ರಾಜರಾಜ ಮೊದಲಾದವರ ನಾಣ್ಯಗಳು, ಮುಗಲರ ಅಕ್ಬರ್, ಔರಂಗಜೇಬ್, ಸಿಕಂದರ್, ಬಹಾದುರ್ ಷಾ ಮೊದಲಾದವರ ನಾಣ್ಯಗಳು ತಿರುವಾಂಕೂರಿನ ಚಕ್ರಂಗಳು ಸಹ ಕರ್ನಾಟಕದಲ್ಲಿ ಕಂಡುಬಂದಿವೆ. ಈಸ್ಟ್ ಇಂಡಿಯಾ ಕಂಪನಿಯವರು ಕರ್ನಾಟಕದಲ್ಲಿ ಆಡಳಿತವನ್ನು ನಡೆಸುವಾಗ್ಗೆ ಅವರೇ ಛಾಪಿಸುತ್ತಿದ್ದ ರೂಪಾಯಿ ಆಣೆ ಕಾಸು ಮೊದಲಾದ ಬೆಳ್ಳಿ ಮತ್ತು ತಾಮ್ರದ ನಾಣ್ಯಗಳು ಬಳಕೆಯಲ್ಲಿದ್ದವು. 1857ರ ಅನಂತರ ಬ್ರಿಟಿಷ್ ಅರಸರ ಹೆಸರಿನಲ್ಲಿ ಅಚ್ಚಾಗುತ್ತಿದ್ದ ಭಾರತೀಯ ನಾಣ್ಯಗಳೂ ಅನಂತರ ಸ್ವತಂತ್ರ ಭಾರತ ಸರ್ಕಾರದ ನಾಣ್ಯಗಳೂ ಚಲಾವಣೆಗೆ ಬಂದುವು.

ಈ ರೀತಿ ವೈವಿಧ್ಯಪೂರ್ಣವಾದ ಕರ್ನಾಟಕದ ನಾಣ್ಯಗಳ ಅಧ್ಯಯನಕಾರ್ಯ ವ್ಯವಸ್ಥಿತವಾಗಿ ನಡೆದಿಲ್ಲ. ಮೈಸೂರು, ಬೆಂಗಳೂರು, ಶಿವಮೊಗ್ಗ, ಮದರಾಸು, ಮುಂಬಯಿ ಮುಂತಾದ ಕಡೆಗಳಲ್ಲಿರುವ ವಸ್ತುಸಂಗ್ರಹಾಲಯಗಳಲ್ಲಿ ಕರ್ನಾಟಕ ನಾಣ್ಯಗಳ ಸಂಗ್ರಹಗಳು ಇವೆ.

ಕರ್ನಾಟಕದಲ್ಲಿ ನಾಣ್ಯಶಾಸ್ತ್ರ ವಿಷಯದಲ್ಲಿ ಪ್ರಕಟವಾದ ಗ್ರಂಥಗಳು ಮತ್ತು ಲೇಖನಗಳು ವಿರಳ. ಹಾಕ್ಸ್ ಅವರು 1856ರಲ್ಲಿ ಪ್ರಕಟಿಸಿದ ಎ ಬ್ರೀಫ್ ಸ್ಕೆಚ್ ಆಫ್ ಗೋಲ್ಡ್, ಸಿಲ್ವರ್ ಅಂಡ್ ಕಾಪರ್ ಕಾಇನೇಜ್ ಆಫ್ ಮೈಸೂರ್ ಎನ್ನುವುದು ಪ್ರಾಚೀನ ಗ್ರಂಥಗಳಲ್ಲೊಂದು. ಅನಂತರ ಎಲಿಯಟ್‌ರವರು ತಮ್ಮ ಕಾಇನ್ಸ್ ಆಫ್ ಸದರ್ನ್ ಇಂಡಿಯ ಎನ್ನುವ ಗ್ರಂಥದಲ್ಲಿ ಕರ್ನಾಟಕದಲ್ಲಿ ಆಳಿದ ಕೆಲವು ರಾಜಮನೆತನಗಳ ನಾಣ್ಯಗಳ ಬಗೆಗೆ ವಿಚಾರ ಮಾಡಿದರು. 1883ರಲ್ಲಿ ಜೆ.ಬಿಡೀ ಎನ್ನುವವರು ಚಾಳುಕ್ಯ, ವಿಜಯನಗರದ ಮತ್ತು ಮೈಸೂರರಸರ ನಾಣ್ಯಗಳನ್ನು ಕುರಿತು ಬರೆದರು. ಇದಾದ ಐದು ವರ್ಷಗಳ ಅನಂತರ ಥರ್ಸ್ಟನ್ ಅವರು ಮದರಾಸು ವಸ್ತುಸಂಗ್ರಹಾಲಯದಲ್ಲಿರುವ ಮೈಸೂರು ನಾಣ್ಯಗಳನ್ನು ಕುರಿತು ಬರೆದರು. 1889ರಲ್ಲಿ ಟಿಫ್ಫೆಲ್‌ರವರು ಬೆಂಗಳೂರು ವಸ್ತುಸಂಗ್ರಹಾಲದಲ್ಲಿರುವ ಮೈಸೂರು ನಾಣ್ಯಗಳನ್ನು ವಿಮರ್ಶಿಸಿ ಸೂಚಿಯನ್ನು ಪ್ರಕಟಿಸಿದರು. 1891ರಲ್ಲಿ ಬೆಂಗಳೂರಿನಲ್ಲಿ ಸಿಕ್ಕಿದ ರೋಮನ್ ನಾಣ್ಯಗಳನ್ನು ಕುರಿತು ರೈಸ್‌ರವರು ಒಂದು ಸಣ್ಣ ಲೇಖನವನ್ನು ಬರೆದರು. ಬ್ರಿಟಿಷ್ ನಾಣ್ಯಶಾಸ್ತ್ರಜ್ಞರು ಹೈದರ್ ಮತ್ತು ಟಿಪ್ಪುಸುಲ್ತಾನರ ನಾಣ್ಯಗಳ ಬಗೆಗೆ ವಿಶೇಷ ಆಸಕ್ತಿ ವಹಿಸಿದರು. 1909ರಲ್ಲಿ ಪ್ರಕಟವಾದ ಜಾರ್ಕ್‌ಸನ್‌ರ ಕಾಇನ್ ಕಲೆಕ್ಟಿಂಗ್ ಇನ್ ಮೈಸೂರ್, ಕಾಇನ್ ಕಲೆಕ್ಟಿಂಗ್ ಇನ್ ಡೆಕ್ಕನ್, ಟೇಲರ್‌ರವರ ಕಾಇನ್ಸ್ ಆಫ್ ಟಿಪ್ಪುಸುಲ್ತಾನ್ (1914), ಹೆಂಡರ್‌ಸನ್ ಅವರ ಕಾಇನ್ಸ್ ಆಫ್ ಹೈದರ್ ಅಲಿ ಅಂಡ್ ಟಿಪ್ಪುಸುಲ್ತಾನ್ (1921) - ಇವು ಮುಖ್ಯವಾದವು. ಆರ್. ನರಸಿಂಹಾಚಾರ್ ಅವರು ತಮಗೆ ದೊರಕಿರುವ ಚುಟು, ಸಾತವಾಹನ, ವಿಜಯನಗರ, ಹೈದರ್, ಟಿಪ್ಪು ಮತ್ತು ಮೈಸೂರರಸರ ನಾಣ್ಯಗಳನ್ನು ಪುರಾತತ್ತ್ವ ವಾರ್ಷಿಕ ವರದಿಗಳಲ್ಲಿ ಸೇರಿಸಿದ್ದಾರೆ. ಎಂ.ಎಚ್.ಕೃಷ್ಣ ಅವರು ಡೆಕ್ಕನ್ ನ್ಯೂಮಿಸ್ಮ್ಯಾಟಿಕ್ಸ್ ಎನ್ನುವ ತಮ್ಮ ಡಾಕ್ಟೊರಲ್ ನಿಬಂಧದ ಕೆಲವು ಭಾಗಗಳನ್ನು ಮೈಸೂರು ಪುರಾತತ್ವ ಇಲಾಖೆಯ ವಾರ್ಷಿಕ ವರದಿಗಳಲ್ಲಿ ಅಚ್ಚುಮಾಡಿದರು. ಇವು ಕರ್ನಾಟಕ ನಾಣ್ಯಶಾಸ್ತ್ರ ಅಧ್ಯಯನಕ್ಕೆ ಮಹತ್ತರ ಕೊಡುಗೆ. ಆಂಧ್ರಪ್ರದೇಶ ಸರ್ಕಾರದ ಪುರಾತತ್ವ ಇಲಾಖೆ ಇತ್ತೀಚೆಗೆ ನಾಣ್ಯಶಾಸ್ತ್ರದಲ್ಲಿ ಕೆಲವು ಗ್ರಂಥಗಳನ್ನು ಪ್ರಕಟಿಸಿದೆ. ಅವುಗಳಲ್ಲಿ ಕೆಲವು ಕರ್ನಾಟಕಕ್ಕೆ ಸಂಬಂಧಿಸಿವೆ. ರ್‍ಯಾಪ್ಸನ್ ಆಲನ್, ಸ್ಮಿತ್ ಮೊದಲಾದವರು ಪ್ರಕಟಿಸಿದ ನಾಣ್ಯಸೂಚಿಗಳಲ್ಲಿ ಕೆಲವು ಕರ್ನಾಟಕಕ್ಕೆ ಸಂಬಂಧಿಸಿವೆ. ಎ.ವಿ.ನರಸಿಂಹಮೂರ್ತಿಯವರು ಕಾಇನ್ಸ್ ಆಫ್ ಕರ್ನಾಟಕ ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಹೆಚ್. ಖಂಡೋಬರಾವ್ ಅವರ ನಾಣ್ಯ ಕರ್ನಾಟಕ ನಾಣ್ಯಶಾಸ್ತ್ರವನ್ನು ಕುರಿತ ಇತ್ತೀಚಿನ ಗ್ರಂಥ ಇವುಗಳಲ್ಲಿ ರಾಜವಂಶವಾರು ಮಾಹಿತಿಗಳು ದೊರೆಯುತ್ತವೆ. (ಎ.ವಿ.ಎನ್.)

**ನಾಮಕರಣ :** ಮಗುವಿಗೆ ಹೆಸರಿಡುವ ಸಮಾರಂಭ. ಅನೇಕ ನಂಬಿಕೆ ಹಾಗೂ ಧಾರ್ಮಿಕ ವಿಧಿಗಳಿಂದ ಕೂಡಿರುವ ಈ ಪದ್ಧತಿ ಕರ್ನಾಟಕದ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಮತದಿಂದ ಮತಕ್ಕೆ ಆಚರಣೆಯ ವಿಧಾನಗಳಲ್ಲಿ ಬಹಳಷ್ಟು ವ್ಯತ್ಯಾಸ ಕಂಡುಬರುತ್ತದೆ. ಕೆಲವರಲ್ಲಿ ಮಗು ಹುಟ್ಟಿದ 10, 11 ಅಥವಾ 12ನೆಯ ದಿನದಲ್ಲಿ ನಾಮಕರಣ ಸಮಾರಂಭವಿರುತ್ತದೆ. ಕ್ಷತ್ರಿಯರು 16ನೆಯ ದಿನ, ವೈಶ್ಯರು 19ನೆಯ ದಿನ, ಶೂದ್ರರು 9, 11, 20, 22 ಅಥವಾ 32ನೆಯ ದಿನ ನಾಮಕರಣ ಮಾಡಿದರೆ ಕೆಲವು ಕಡೆ ಮುಸಲ್ಮಾನರು ಮಗು ಹುಟ್ಟಿದ ದಿನವೇ ಆಚರಿಸುತ್ತಾರೆ. ಗಂಡು ಮಗುವಿಗೆ ಸರಿಸಂಖ್ಯೆ ಅಕ್ಷರವುಳ್ಳ ಹೆಸರಿಟ್ಟರೆ ಒಳ್ಳೆಯದು ಎಂಬ ನಂಬಿಕೆ ಇದೆ. ಬ್ರಾಹ್ಮಣರಲ್ಲಿ ನಾಮಕರಣದ ದಿನ ವಿನಾಯಕ ಪೂಜೆ, ಪುಣ್ಯಾಹ, ನಾಂದಿ ಕಾರ್ಯಗಳು ಮುಗಿದ ಅನಂತರ ತಂದೆ ತಾಯಿಗಳು ಮಗುವಿನೊಡನೆ ಪೂರ್ವಾಭಿಮುಖವಾಗಿ ಕುಳಿತು ಸಂಕಲ್ಪ ಪಠಿಸುತ್ತಾರೆ. ಮಗುವಿನ ನಾಮಕರಣಕ್ಕಿಂತ ಮುಂಚೆ ಒಂದು ರಹಸ್ಯ ಹೆಸರನ್ನಿಟ್ಟಿರುತ್ತಾರೆ. ತಂದೆ ತಾಯಿಗೆ ಮಾತ್ರ ಈ ಹೆಸರು ತಿಳಿದಿರುತ್ತದೆ. ನಾಮಕರಣದ ದಿನ ಇಡುವ ಹೆಸರಿಗೆ ಸಾರ್ವಜನಿಕ ಹೆಸರು ಎನ್ನುತ್ತಾರೆ. ಒಂದು ತಟ್ಟೆಯಲ್ಲಿ ಅಕ್ಕಿ ತುಂಬಿ ಅದರಲ್ಲಿ ಕುಲದೇವತೆಯ ಹೆಸರು, ಮಗು ಹುಟ್ಟಿದ ತಿಂಗಳು, ನಕ್ಷತ್ರ ಮತ್ತು ಇಡಬೇಕೆಂದಿರುವ ಹೆಸರು ಬರೆದು ಹೆಸರಿಗೆ ಸಂಬಂಧಿಸಿದ ದೇವತೆಗಳಿಗೆ ಹದಿನಾರು ಔಪಚಾರಿಕ ಪೂಜೆಗಳನ್ನು ಅರ್ಪಿಸಿ ಅನಂತರ ಮಗುವಿನ ತಂದೆ ಮಗುವಿನ ಹೆಸರನ್ನು ಬಲಕಿವಿಯಲ್ಲಿ ಹೇಳಿ ಮಂತ್ರವನ್ನು ಪಠಿಸುತ್ತಾನೆ. ಅನಂತರ ಸಮಾರಂಭದಲ್ಲಿ ಭಾಗವಹಿಸಿದ ಹಿರಿಯರು ಮಗುವಿಗೆ ಆಶೀರ್ವದಿಸುತ್ತಾರೆ. ಭೋಜನ ಹಾಗೂ ಫಲತಾಂಬೂಲ ವಿತರಣೆಯೊಂದಿಗೆ ಸಮಾರಂಭ ಮುಕ್ತಾಯವಾಗುತ್ತದೆ.

ಶೈವರಲ್ಲಿ 11 ಅಥವಾ 12ನೆಯ ದಿನ ನಾಮಕರಣವಿರುತ್ತದೆ. ಜಂಗಮನ ಪಾದೋದಕದಿಂದ ಸೂತಕ ಕಳೆದುಕೊಳ್ಳುತ್ತಾರೆ. ಮೊದಲು ಕಳಸಪೂಜೆ, ಪಂಚಾಮೃತದಿಂದ ಲಿಂಗಪೂಜೆ - ಇವು ನಡೆಯುತ್ತವೆ. ಪಂಚಾಕ್ಷರೀ ಮಂತ್ರವನ್ನು ಮಗುವಿನ ಕಿವಿಯಲ್ಲಿ ಪಠಿಸುವ ಕಾರ್ಯ ಕರ್ಣಬೋಧೆ ಮುಗಿದ ಅನಂತರ ಮನೆಯವರ ಒಪ್ಪಿಗೆ ಮೇರೆಗೆ ಪೂಜಾರಿ ನಾಮಕರಣ ಮಾಡುತ್ತಾನೆ. ಸಾಮಾನ್ಯವಾಗಿ ಶಿವಪಾರ್ವತಿಯರ ಹೆಸರುಗಳು, ವೀರಶೈವ ಸಂತರ ಹೆಸರುಗಳು ಇವರಲ್ಲಿ ಹೆಚ್ಚಾಗಿವೆ.

ಕೆಲವು ಕಡೆ ಒಕ್ಕಲಿಗರಲ್ಲಿ ನಾಮಕರಣ ಮಾಡುವವನು ದಾಸಪ್ಪ. ಮಗುವಿಗೆ ಆಯ್ಕೆ ಮಾಡಿದ ಹೆಸರನ್ನು ಇಡುವಾಗ ಜೋರಾಗಿ ಮೂರು ಸಾರಿ ಕೂಗಿ ಶಂಖ ಊದುತ್ತಾನೆ. ಆದರೆ ಮೈಸೂರಿನ ಸುತ್ತಮುತ್ತಲಿನ ಕೆಲವು ಒಕ್ಕಲಿಗರಲ್ಲಿ (ಪಿರಿಯಾಪಟ್ಟಣ, ಕೃಷ್ಣರಾಜನಗರ) ನಾಮಕರಣ ಪದ್ಧತಿ ವಿಶಿಷ್ಟವಾಗಿರುತ್ತದೆ. ಮಗು ಹುಟ್ಟಿದ 12ನೆಯ ದಿನ ಮುತ್ತೈದೆಯರು ಸೇರಿ ಮಗು ಬಾಣಂತಿಯರಿಗೆ ಸ್ನಾನಮಾಡಿಸುತ್ತಾರೆ. ಒಂದು ಜಿರಳೆಯನ್ನು ತಂದು ಮನೆಯ ಯಾವ ಸ್ಥಳದಲ್ಲಿ ಹೆರಿಗೆಯಾಯಿತೋ ಅಲ್ಲಿ ಒಂದು ಸಣ್ಣ ಕುಳಿ ತೋಡಿ, ಎಡೆಹಾಕಿ, ಆ ಜಿರಳೆಯನ್ನು ಕುಳಿಯಲ್ಲಿಟ್ಟು ಪ್ರಾಣಕ್ಕೆ ಪ್ರಾಣ ಎಂಬ ಉದ್ಗಾರದೊಂದಿಗೆ ಮಣ್ಣು ಮುಚ್ಚಿ ಆ ಸ್ಥಳಕ್ಕೆ ಮಗುವನ್ನು ತಂದು ಮೂರು ಸುತ್ತು ಪ್ರದಕ್ಷಿಣೆ ಹಾಕಿಸಿ ಮೂರು ಸಲ ಅಡ್ಡಬೀಳಿಸಿ ತೊಟ್ಟಿಲಿಗೆ ಹಾಕುತ್ತಾರೆ. ಇದಕ್ಕೆ ಗುಣಿಶಾಸ್ತ್ರ ಎನ್ನುವರು. ಮಧ್ಯಾಹ್ನ ನೆಂಟರಿಷ್ಟರಿಗೆಲ್ಲ ಊಟವಿರುತ್ತದೆ. ಊಟದ ಪಂಕ್ತಿಯಲ್ಲಿ ಮನೆಯ ಅಥ'ವಾ ಸಂಬಂಧಿಗಳ ಹಿರಿಯ ಹೆಂಗಸೊಬ್ಬಳು ಮಗುವಿಗೆ ಇಡಬೇಕೆಂದಿರುವ ಹೆಸರನ್ನು ಜೋರಾಗಿ ಕೂಗಿ ಹೇಳುತ್ತಾಳೆ. (ಉದಾ: ತಿಮ್ಮೇಗೌಡ ಕಣ್ರಪ್ಪೋ ಹೆಸರು). ಊಟ ಮುಗಿದ ಅನಂತರ ನೆಂಟರಿಷ್ಟರು ಮಗುವಿನ ತೊಟ್ಟಿಲ ಹತ್ತಿರ ಹೋಗಿ ಹೆಸರು ಕರೆದು ತೇಯ್ದಿಟ್ಟಿರುವ ಬಜೆ ಹಾಗೂ ಬೆಣ್ಣೆಯನ್ನು ಮಗುವಿನ ಬಾಯಿಗೆ ಸ್ವಲ್ಪ ಹಾಕಿ ಉಡುಗೊರೆಯನ್ನು ನೀಡುವರು.

ಮಗು ಹುಟ್ಟಿದ 12 ಅಥವಾ 14ನೆಯ ದಿನ ಜೈನರು ಮೈಲಿಗೆ ಕಳೆಯುವ ವಿಧಿಗಳನ್ನು ಮುಗಿಸಿ ಪುಣ್ಯಾಹ, ಹೋಮಗಳನ್ನು ಮಾಡುತ್ತಾರೆ. ಮಗುವಿನ ತಂದೆ ಸ್ನಾನ ಮುಗಿಸಿ ಹೊಸ ಉಡುಪು ತೊಟ್ಟು ತಟ್ಟೆಯಲ್ಲಿರುವ ಅಕ್ಕಿಯ ಮೇಲೆ ಅರಿಸಿನದ ಕೊನೆಯಿಂದ ಮಗುವಿಗೆ ಇಡಬೇಕಾಗಿರುವ ಹೆಸರು ಬರೆಯುತ್ತಾನೆ. ಹಾಲು ಬೆಣ್ಣೆಗಳಿಂದ ಒಂದು ಪಾತ್ರೆಯಲ್ಲಿ ಮಗುವಿನ ವಿವಿಧ ಆಭರಣಗಳನ್ನು ಮುಳುಗಿಸಿರುತ್ತಾರೆ. ದರ್ಭೆಯಿಂದ ತೀರ್ಥಪ್ರೋಕ್ಷಣೆಯಾದ ಅನಂತರ ಮಗುವಿಗೆ ಆಭರಣ ತೊಡಿಸಿ ಅರ್ಹಂತನ 108 ಹೆಸರುಗಳನ್ನು ಪಠಿಸಿ ಮಗುವಿಗೆ ಒಳ್ಳೆಯದು ಮಾಡುವಂತೆ ಕೇಳಿಕೊಳ್ಳುತ್ತಾರೆ. ಪುರೋಹಿತ ಮಗುವಿನ ಹೆಸರನ್ನು ಜೋರಾಗಿ ಕೂಗಿ ಹೇಳಿದ ಅನಂತರ ತಂದೆ ಮಗುವಿನ ಬಲಕಿವಿಯಲ್ಲಿ ಹೆಸರನ್ನು ಉಚ್ಚರಿಸುತ್ತಾನೆ. ಆ ದಿನ ಅಗ್ನಿಗೆ ಅರ್ಘ್ಯ ಕೊಡುವುದು, ಬ್ರಾಹ್ಮಣರಿಗೆ ದಾನಕೊಡುವುದು ಇವೇ ಮೊದಲಾದ ಕಾರ್ಯಕ್ರಮಗಳಿರುತ್ತವೆ.

ಕೊಡವರಲ್ಲಿ ನಾಮಕರಣದ ದಿನ ಮಗುವಿನ ತಾಯಿಯನ್ನು ವಧುವಿನ ರೀತಿಯಲ್ಲಿ ಶೃಂಗರಿಸುತ್ತಾರೆ. ಮಗುವಿಗೆ ಬಿಳಿ ಉಡುಪು ತೊಡಿಸಿ ಆ ಮಗುವಿನ ಅಜ್ಜಿ ಎತ್ತಿಕೊಂಡು ಬರುತ್ತಾಳೆ. ಮಜ್ಜಿಗೆಯನ್ನು ಸೋಸಿ ಅದರ ಗಸಿಯಲ್ಲಿ ಅನ್ನ ಕಲಸಿ ಮಗುವಿಗೆ ಸ್ವಲ್ಪ ಕೊಟ್ಟು ಉಳಿದುದನ್ನು ಅಲ್ಲಿದ್ದ ಮಕ್ಕಳಿಗೆ ಕೊಡುತ್ತಾರೆ. ಕಲ್ಲೊಂದಕ್ಕೆ ಬಿಳಿ ವಸ್ತ್ರವನ್ನು ಸುತ್ತಿ ಮಗುವಿಗೆ ಇಡಬೇಕೆಂದಿರುವ ಹೆಸರಿಟ್ಟು, ತಾಯಿ ಮತ್ತು ಅಜ್ಜಿ ಕಲ್ಲನ್ನು ಒಮ್ಮೆ ಮಗುವನ್ನು ಒಮ್ಮೆ ತೊಟ್ಟಿಲಿಗೆ, ಅನಂತರ ನೆಲಕ್ಕೆ ಸರತಿಯಂತೆ ಇಡುತ್ತಾರೆ. ಕಲ್ಲಿನಷ್ಟೇ ಆಯುಷ್ಯ ಮಗುವಿಗೂ ಬರಲಿ ಎಂಬುದೇ ಕಲ್ಲನ್ನು ಬಳಸುವುದರ ಸಂಕೇತ. ಪಾಲು ಕುಳುಂಬಾಕು ಬಾ ಹೇಳುತ್ತ ನಾಮಕರಣವಾಗುತ್ತದೆ (ತಾಯಿಯ ಹಿರಿಯ ಅಣ್ಣನಿಂದ), ಅನಂತರ ನೀರಿಗೆ ಹೋಗುವ ಶಾಸ್ತ್ರ ನಡೆಯುತ್ತದೆ. ಶುಭಸಂಕೇತವಾಗಿ ಕುಶಾಲುತೋಪು ಹಾರಿಸುವುದು, ವಾದ್ಯಗಾನ ಮುಂತಾದವುಗಳಿರುತ್ತವೆ.

ಕರ್ನಾಟಕದ ಗುಡ್ಡಗಾಡಿನ ಜನರಲ್ಲಿ ನಾಮಕರಣ ಸಮಾರಂಭ ತುಂಬ ಸರಳವಾಗಿರುತ್ತದೆ. ಗೊಲ್ಲರಲ್ಲಿ ಕಣಿಗಾರನನ್ನೋ ಅಥವಾ ಹಟ್ಟಿಯ ಮುಖ್ಯಸ್ಥನನ್ನೋ ಕಂಡು ಅವನಿಂದ ಹೆಸರು ತಿಳಿದು ನಾಮಕರಣ ಮಾಡುತ್ತಾರೆ. ಅಗಸರಲ್ಲಿ ಸೂಲಗಿತ್ತಿಯೋ ಮಗುವಿಗೆ ನಾಮಕರಣ ಮಾಡುತ್ತಾಳೆ. ದೊಂಬರಲ್ಲಿ ಕಣಿಗಾರನನ್ನು ಕರೆಸಿ ನಾಮಕರಣ ಮಾಡಿಸುತ್ತಾರೆ. ಕರ್ನಾಟಕದಲ್ಲಿ ಕ್ರೈಸ್ತರು ಮಗುವಿಗೆ ಜ್ಞಾನಸ್ನಾನ (ಬ್ಯಾಪ್ಟಿಸಮ್) ಮಾಡಿಸುವಾಗಲೇ ಪಾದ್ರಿ ನಾಮಕರಣವನ್ನೂ ನೆರವೇರಿಸುತ್ತಾನೆ.

ಕರ್ನಾಟಕದಲ್ಲಿ ಸಾಮಾನ್ಯವಾಗಿ ಮಗುವಿಗೆ ಮನೆದೇವರ ಅಥವಾ ಕುಲದೇವತೆಯ ಹೆಸರಲ್ಲದೆ, ಪೂರ್ವಿಕರ ಹೆಸರುಗಳನ್ನು ಇಡುವುದು ವಾಡಿಕೆ. ಈಚಿನ ದಿನಗಳಲ್ಲಿ ಈ ಕ್ರಮಗಳು ಬಹುಮಟ್ಟಿಗೆ ಬದಲಾಗುತ್ತಿವೆ. ಹಿಂದಿನ ಶುದ್ಧ ಕನ್ನಡ ಪದಗಳಿಂದ ಕೂಡಿದ ಹೆಸರುಗಳ ಸ್ಥಾನವನ್ನು ಸಂಸ್ಕೃತ ಪದಗಳು ಅಲಂಕರಿಸಿವೆ. ದೀರ್ಘ ಹೆಸರುಗಳಿಗೆ ಪ್ರತಿಯಾಗಿ ಸಂಕ್ಷಿಪ್ತ ಹೆಸರುಗಳನ್ನು ಇಡಲಾಗುತ್ತಿದೆ. ಅದರಲ್ಲಿ ಎರಡು ಅಥವಾ ಮೂರಕ್ಷರಗಳ ಹೆಸರುಗಳು ಜನಪ್ರಿಯವಾಗುತ್ತಿದೆ. ಅರ್ಥಕ್ಕಿಂತಲೂ ಉಚ್ಚಾರಕ್ಕೆ ಒತ್ತು ಸಿಗುತ್ತಿದೆ.

(ಎಸ್.ಎಸ್.ಜಿ.)

**ನಾಯಕನ ಹಟ್ಟಿ :** ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ ಒಂದು ಪಟ್ಟಣ ಮತ್ತು ಪುಣ್ಯಕ್ಷೇತ್ರ. ಚಳ್ಳಕೆರೆಗೆ ವಾಯವ್ಯದಲ್ಲಿ 22 ಕಿಮೀ ದೂರದಲ್ಲಿ ಚಳ್ಳಕೆರೆ-ಜಗಳೂರು ಮಾರ್ಗಮಧ್ಯದಲ್ಲಿದೆ. ನಾಯಕನಹಟ್ಟಿ 47 ಗ್ರಾಮಗಳನ್ನೊಳಗೊಂಡ ಹೋಬಳಿ ಕೇಂದ್ರ. ಇಲ್ಲಿ ನಗರಸಭಾಡಳಿತವಿದೆ. ಊರಿನ ಸುತ್ತ ಹಸಿರು ಚೆಲ್ಲಿ ನಿಂತಿರುವ ತೆಂಗು ಮತ್ತು ಇತರ ಗಿಡಮರಗಳು ಇದ್ದು ಮನಸ್ಸಿಗೆ ಆನಂದವನ್ನುಂಟುಮಾಡುತ್ತವೆ. ಇಲ್ಲಿ ಸುಮಾರು 250 ವರ್ಷಗಳ ಹಿಂದೆ ಜೀವಿಸಿದ್ದು ಅನೇಕ ಪವಾಡಗಳನ್ನು ಮೆರೆದು ಲೋಕೋಪಯುಕ್ತ ಕಾರ್ಯವೆಸಗಿದ ತಿಪ್ಪೇರುದ್ರಯ್ಯ ಎಂಬ ಪ್ರಸಿದ್ಧ ಶಿವಶರಣನ ದೇವಾಲಯವಿದೆ. ಈ ದೇವಾಲಯದ ಗೋಪುರ ಸುಮಾರು 24 ಮೀ ಎತ್ತರವಿದೆ. ಈ ಗೋಪುರವನ್ನು ಬಸೆಟ್ಟಪ್ಪನೆಂಬ ಭಕ್ತನೊಬ್ಬ ಕಟ್ಟಿಸಿದನೆಂದು ತಿಳಿದುಬರುತ್ತದೆ. ಇಟ್ಟಿಗೆ ಗಾರೆಗಳಿಂದ ನಿರ್ಮಿತವಾಗಿರುವ ಈ ಗೋಪುರ ಹಲವು ಪೌರಾಣಿಕ ಚಿತ್ರಗಳನ್ನೊಳಗೊಂಡಿದ್ದು, ಪ್ರೇಕ್ಷಕರ ಕುತೂಹಲವನ್ನು ಕೆರಳಿಸುತ್ತದೆ. ಗೋಪುರದ ಮಹಾದ್ವಾರವನ್ನು ದಾಟಿ ಮುಂದೆ ನಡೆದರೆ ಪ್ರಶಾಂತ ವಾತಾವರಣದಲ್ಲಿ ಮಹಂತೇಶ್ವರಲಿಂಗದ ದರ್ಶನವಾಗುತ್ತವೆ.

ಈ ಊರಿನ ಮತ್ತೊಂದು ಪ್ರೇಕ್ಷಣೀಯ ಸ್ಥಳವೆಂದರೆ ಗ್ರಾಮಕ್ಕೆ ಸುಮಾರು ಒಂದೂವರೆ ಕಿಮೀ ದೂರದಲ್ಲಿರುವ ಚಿಕ್ಕಕೆರೆಯೆಂಬ ರಮಣೀಯವಾದ ತಟಾಕ ಮತ್ತು ಈ ಕೆರೆಯ ಹಿಂದೆ ಇರುವ ತಿಪ್ಪೇರುದ್ರಯ್ಯನ ಸಮಾಧಿ. ಇದನ್ನು ಹೊರಮಠವೆಂದು ಕರೆಯುತ್ತಾರೆ. ದುಂಡುಗೋಪುರದ ಮಹಾದ್ವಾರವನ್ನು ಹಾಯ್ದು ಒಳಗೆ ಅಡಿಯಿಟ್ಟರೆ ಸಮಾಧಿಯ ಸುತ್ತ ವಿಶಾಲವಾದ ಅಂಗಳವಿದ್ದು ಎತ್ತರವಾದ ಪ್ರಾಕಾರವಿದೆ ಮತ್ತು ಇತ್ತೀಚೆಗೆ ಭಕ್ತಾದಿಗಳು ಕಟ್ಟಿಸಿರುವ ಕೆಲವು ಮಂಟಪಗಳು ಪೌಳಿಗಳು ಜಾತ್ರೆಯ ಸಮಯದಲ್ಲಿ ಭಕ್ತರು ತಂಗಲು ಅನುಕೂಲವಾಗಿವೆ.

ಕಲ್ಯಾಣದಲ್ಲಿ ಜನಿಸಿದ ಪಂಚಗಣಾಧೀಶ್ವರರಲ್ಲೊಬ್ಬರಾದ ತಿಪ್ಪೇರುದ್ರಸ್ವಾಮಿ ಕನ್ನಡ ನಾಡಿನ ಹಲವು ಭಾಗಗಳಲ್ಲಿ ಸಂಚರಿಸಿ ಕೊನೆಗೆ ನಾಯಕನಹಟ್ಟಿಗೆ ಬಂದು ನೆಲಸಿದನೆಂದೂ ಹನುಮಯ್ಯನ ಹಟ್ಟಿಯ ಬಳಿ ಇರುವ ಏಕಾಂತಮಠದಲ್ಲಿ ಹಲವು ವರ್ಷಗಳ ಕಾಲ ತಪೋನಿರತನಾಗಿದ್ದು ಅದ್ಭುತ ಪವಾಡಗಳಿಂದ ಮೆರೆದು, ಜನರನ್ನು ಸನ್ಮಾರ್ಗದತ್ತ ಕರೆದೊಯ್ಯುವ ಪುಣ್ಯ ಕಾರ್ಯದಲ್ಲಿ ತೊಡಗಿದ್ದನೆಂದೂ ಈ ಸಂತ ಹಿರೇಕೆರೆ, ಚಿಕ್ಕಕೆರೆ ಮೊದಲಾದ ಐದು ಕೆರೆಗಳನ್ನೂ ಹಲವು ಹಳ್ಳಿಗಳನ್ನೂ ಕಟ್ಟಿಸಿದನೆಂದೂ ಪ್ರತೀತಿ.

ಈ ಊರಿನ ಇತಿಹಾಸಕ್ಕೆ ಸಂಬಂಧಪಟ್ಟಂತೆ 1620-1625ರ ಎರಡು ಶಾಸನಗಳು ದೊರಕಿವೆ. ಇವುಗಳಲ್ಲಿ ಮಲ್ಲಪ್ಪನಾಯಕನೆಂಬುವನ ಉಲ್ಲೇಖವಿದೆ. ಆತ ಹಟ್ಟಿ ಎಂಬ ಹಳ್ಳಿಗೆ ಬಂದು ನೆಲಸಿದಂತೆಯೂ ವಿಜಯನಗರದ ಅರಸರು ಈತನನ್ನೇ ಆ ಪ್ರಾಂತ್ಯಕ್ಕೆ ಒಡೆಯನನ್ನಾಗಿ ನೇಮಿಸಿದ್ದರಿಂದ ಹಟ್ಟಿ ಎಂದಿದ್ದ ಆ ಗ್ರಾಮ ನಾಯಕನಹಟ್ಟಿ ಎಂಬ ಹೆಸರನ್ನು ಪಡೆಯಿತೆಂದೂ ಹೇಳುವರು. ಅನಂತರ ಬಂದ ಈ ನಾಯಕನ ವಂಶಸ್ಥನಾದ ಬೂದಿಮಲ್ಲನಾಯಕ ರಾಜ್ಯವನ್ನು ಮೊಳಕಾಲ್ಮೂರುವರೆಗೂ ವಿಸ್ತರಿಸಿದ. ಚಿತ್ರದುರ್ಗದ ಹಿರೇ ಮದಕರಿನಾಯಕ ತನ್ನ ಆಳ್ವಿಕೆಯಲ್ಲಿ ಈ ಪ್ರದೇಶವನ್ನು ವಶಪಡಿಸಿಕೊಂಡು ತನ್ನ ಸಂಸ್ಥಾನಕ್ಕೆ ಸೇರಿಕೊಂಡ.

ಈ ನಾಡಿನ ಭಾಗದ ಜನರ ಆರಾಧ್ಯದೈವವಾಗಿ ಬೆಳಗುತ್ತಿರುವ

ತಿಪ್ಪೇರುದ್ರಯ್ಯನ ಜಾತ್ರೆ ಪ್ರತಿವರ್ಷ ಫಾಲ್ಗುಣ ಮಾಸದಲ್ಲಿ ಬಹಳ ವೈಭವದಿಂದ ಜರುಗುತ್ತದೆ. (ಎಸ್.ಎಂ.ಪಿ.)

**ನಾಯಕ ಸ್ವಾಮಿ :** ಉತ್ತರ ಕನ್ನಡ ಜಿಲ್ಲೆಯಲ್ಲಿದ್ದ ಒಬ್ಬ ಸಂತಕವಿ. ಪೂರ್ಣ ಹೆಸರು ಶಕಂರ ಮಂಗೇಶ ನಾಯಕ ಕರಂಡೇದೇಸಾಯಿ. ಹುಟ್ಟಿದ್ದು ಕುಮಟ ತಾಲ್ಲೂಕಿನಲ್ಲಿಯ ಅಂತರವಳ್ಳಿ ಗ್ರಾಮದಲ್ಲಿ. ಒಮ್ಮೆ ತಮ್ಮ ಕುಲದೇವತೆಯಾದ ಗೋವೆಯ ಪ್ರದೇಶದಲ್ಲಿನ ಶ್ರೀಕ್ಷೇತ್ರ ಮಂಗೇಶಕ್ಕೆ ತಮ್ಮ ಕುಲದೇವತೆಯಾದ ಗೋವೆಯ ಪ್ರದೇಶದಲ್ಲಿನ ಶ್ರೀ ಕ್ಷೇತ್ರ ಮಂಗೇಶಕ್ಕೆ ಹೋದಾಗ ಆಕಸ್ಮಾತ್ ಕುಟುಂಬದವರೆಲ್ಲ ರಸ್ತೆಯ ಕಾಡಿನಲ್ಲಿ ಬೇರೆ ಬೇರೆಯಾಗಿ ದಾರಿ ತಪ್ಪಿಸಿಕೊಂಡರಾಗಿ ಹಿಂದಕ್ಕೆ ಹೋಗದೆ ಮಂಗೇಶದಲ್ಲಿಯೇ ಉಳಿದ. ಅಲ್ಲಿರುವಾಗ ಸಂನ್ಯಾಸಿಯೊಬ್ಬನಿಂದ ವೈರಾಗ್ಯವನ್ನು ಪಡೆದ. ಅನಂತರದಲ್ಲಿ ಕಳೆದುಹೋದ ತಂದೆ ತಾಯಿಗಳ ಭೇಟಿಯಾಗಲಾಗಿ ಅವರೊಂದಿಗೆ ಮಂಗೇಶದಲ್ಲಿಯೇ ನೆಲೆಯೊಂದಿದ.

ಮಂಗೇಶವೇ ಕಾಶಿ ಎಂದು ಅರಿತ ಈತ ಅಲ್ಲಿಯೇ ನಿಂತು ಧಾರ್ಮಿಕ ಜೀವನ ನಡೆಸಿದ. ಅಲ್ಲಿ ಈತನ ಸಮಾಧಿ ಇದೆ. ಪ್ರತಿವರ್ಷ ವೈಶಾಖ ಬಹುಳ ದ್ವಾದಶಿಯಂದು ಈ ಸಂತನ ಪುಣ್ಯ ತಿಥಿಯನ್ನು ಮಾಡಲಾಗುತ್ತಿದೆ. ಅಂದು ಅಲ್ಲಿ ಒಂದು ಜಾತ್ರೆಯೂ ಸೇರುತ್ತದೆ.

ಪ್ರಾಸಾದಿಕ ಕವಿಯಾಗಿದ್ದ ಈತ ಶಿವಗೀತೆಯ ಮೇಲೆ ಒಂದು ಟೀಕೆಯನ್ನು ಬರೆದಿದ್ದಾನೆ. ಅನೇಕ ಶಿವಸ್ತುತಿಗಳನ್ನು ಬರೆದಿದ್ದಾನೆ. ಶ್ರೀಮಂಗೇಶನ ಶಿಬಿಕೋತ್ಸವ (ಪಲ್ಲಕ್ಕಿ ಸೇವೆ) ಸಮಯದಲ್ಲಿ ಈತನಿಂದ ರಚಿತವಾದ ಝುಲಮೆಗಳನ್ನು ಗೀತೆಗಳನ್ನು ಹೇಳುತ್ತಾರೆ. *

**ನಾಯಕ, ಹಾ.ಮಾ. :** 1931 - 2000. ಕನ್ನಡ ಅಂಕಣ ಪ್ರಕಾರಕ್ಕೆ ಘನತೆ, ಗೌರವ, ಕೀರ್ತಿ, ಸಾಹಿತ್ಯಕ ಮೌಲ್ಯ ತಂದುಕೊಟ್ಟ ಪ್ರಸಿದ್ಧ ಸಾಹಿತಿ. 'ಕನ್ನಡ ನನ್ನ ಮೊದಲ ಪ್ರೀತಿ, ಎರಡನೆಯ ಪ್ರೀತಿಯೂ ಅದೇ' ಎಂದು ಹೇಳುತ್ತ ಕನ್ನಡವನ್ನು ಕಟ್ಟುವ ಕೆಲಸದಲ್ಲಿ ಬದುಕು ಸವೆಸಿದ ಹೋರಾಟಗಾರ. ಹಾರೋಗದ್ದೆ ಮಾನಪ್ಪ ನಾಯಕ ಎಂಬುದು ಇವರ ಪೂರ್ಣ ಹೆಸರು. ಕನ್ನಡ ನಾಡಿನ ಉದ್ದಗಲಕ್ಕೆ ಹಾಮಾನಾ ಎಂದೇ ಚಿರಪರಿಚಿತರಾಗಿದ್ದರು. ಇವರು ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕಿನ ಹಾರೋಗದ್ದೆಯಲ್ಲಿ 1931 ನವೆಂಬರ್ 12 ರಂದು ಜನಿಸಿದರು. ತಂದೆ ಶ್ರೀನಿವಾಸ ನಾಯಕ, ತಾಯಿ ರುಕ್ಮಿಣಿಯಮ್ಮ. ಎಂಟು ಮಕ್ಕಳ ದೊಡ್ಡ ಕುಟುಂಬದಲ್ಲಿ ಇವರೇ ಹಿರಿಯ ಮಗ. ಬಡತನದಲ್ಲಿ ಬಾಲ್ಯವನ್ನು ಕಳೆದ ಇವರು ಓದಿ ವಿದ್ಯಾವಂತರಾಗಲು ಪಟ್ಟ ಪಾಡು ಅಷ್ಟಿಷ್ಟಲ್ಲ. ಪ್ರೌಢಶಾಲೆಯವರೆಗಿನ ವಿದ್ಯಾಭ್ಯಾಸವನ್ನು ಶಿವಮೊಗ್ಗೆಯಲ್ಲೂ ಕಾಲೇಜು ವಿದ್ಯಾಭ್ಯಾಸವನ್ನು ಮೈಸೂರಿನಲ್ಲೂ ಸ್ನಾತಕೋತ್ತರ ಶಿಕ್ಷಣವನ್ನು ಕಲ್ಕತ್ತೆಯಲ್ಲೂ ನಡೆಸಿದರು. ಇವರು ಬಿ.ಎ.ಆನರ್ಸ್ ಮಾಡಿದ ಮೇಲೆ, (1955) ಭಾಷಾವಿಜ್ಞಾನದಲ್ಲಿ ಎಂ.ಎ. ಪಡೆದರು (1958). ಅನಂತರ ಅಮೆರಿಕದ ಇಂಡಿಯಾನಾ ವಿಶ್ವವಿದ್ಯಾನಿಲಯ ದಿಂದ ಪಿಎಚ್.ಡಿ. ಪಡೆದರು (1964).

ಆನರ್ಸ್ ಪದವಿ ಪಡೆದ ಮೇಲೆ ಇವರು ತುಮಕೂರಿನ ಪ್ರಥಮ ದರ್ಜೆ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾದರು (1955). ಅನಂತರ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಭಾಷಾವಿಜ್ಞಾನದ ರೀಡರ್ ಆದರು (1959). 1961ರಲ್ಲಿ ಸ್ನಾತಕೋತ್ತರ ಕನ್ನಡ ವಿಭಾಗಕ್ಕೆ ಬಂದ ಇವರು ಕಾಲಕ್ರಮೇಣ ಪ್ರವಾಚಕರಾಗಿ, 1968 ರಲ್ಲಿ ಕನ್ನಡ ಪ್ರಾಧ್ಯಾಪಕರಾದರು. ದೇ.ಜವರೇಗೌಡರ ಅನಂತರ 1969 ರಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದರು. 1984 ರಲ್ಲಿ ಗುಲಬರ್ಗಾ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ ನೇಮಕಗೊಂಡ ಇವರು ಎರಡು ವರ್ಷಗಳ ಅನಂತರ ತಾತ್ವಿಕ ಕಾರಣಗಳಿಗಾಗಿ ರಾಜೀನಾಮೆ ನೀಡಿ ಕನ್ನಡ ಅಧ್ಯಯನ ಸಂಸ್ಥೆಗೆ ಪ್ರಾಧ್ಯಾಪಕರಾಗಿ ಮರಳಿದರು. 1991 ಫೆಬ್ರವರಿ ರಂದು ನಿವೃತ್ತರಾದರು. ಅನಂತರ ಮೈಸೂರಿನಲ್ಲಿಯೇ ನೆಲೆಸಿದ್ದ ಇವರು 2000 ನವೆಂಬರ್ 10 ರಂದು ನಿಧನ ಹೊಂದಿದರು.

ಹಾ.ಮಾ. ನಾಯಕರು ಹದಿನೈದು ವರ್ಷಗಳ ಕಾಲ (1969 - 84) ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದರು. ದೇ.ಜವರೇಗೌಡರು ಆರಂಭಿಸಿದ ಕನ್ನಡ ವಿಶ್ವಕೋಶ, ಎಪಿಗ್ರಾಫಿಯಾ ಕರ್ನಾಟಿಕ, ಹರಿದಾಸ ಸಾಹಿತ್ಯ ಸಂಪಾದನೆ, ಜಾನಪದ ಗ್ರಂಥಗಳ ಪ್ರಕಟಣೆಯ ಯೋಜನೆಗಳನ್ನು ಮುನ್ನಡೆಸಿದರು. ಜತೆಗೆ ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಛಂದಸ್ಸಿನ ಚರಿತ್ರೆ, ಕನ್ನಡ ರೈಟರ್ಸ್ ಅಂಡ್ ದೇರ್ ವರ್ಕ್ಸ್, ಧರ್ಮಶಾಸ್ತ್ರದ ಇತಿಹಾಸ ಹಾಗೂ ಮಹಾಭಾರತ ಸಂಪುಟಗಳನ್ನು ಪ್ರಕಟಿಸಿದರು. ಎಂ.ಆರ್. ಶ್ರೀ. ಅವರ ಲೇಖನಗಳು, ಎಸ್.ಶ್ರೀಕಂಠಶಾಸ್ತ್ರಿಗಳ ಲೇಖನಗಳು, 'ಶ್ರೀ' ಅವರ ರಚನೆಗಳ ಸಮಗ್ರ ಸಂಪುಟಗಳನ್ನು ಹೊರತಂದರು. ತಮ್ಮ ನಿರ್ದೇಶಕತ್ವದ ಅವಧಿಯಲ್ಲಿ 350 ಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದರು. ಕನ್ನಡದ ಅತಿ ಮಹತ್ವದ ಯೋಜನೆಗಳಲ್ಲಿ ಅಧ್ಯಯನ ಸಂಸ್ಥೆ ಪಾಲ್ಗೊಳ್ಳುವಂತಾಗಿಸಿದರು. ರಚನಾತ್ಮಕ ಹಾಗೂ ಮಹತ್ತ್ವಪೂರ್ಣ ಕೆಲಸಗಳಿಂದ ಕನ್ನಡ ಕಟ್ಟುವ ಕೆಲಸವನ್ನು ನಿರಂತರವಾಗಿಸಿದರು.

ನಾಯಕರು 80ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ. ಹದಿನೆಂಟರ ಹರೆಯದಲ್ಲಿ ಪ್ರಕಟಿಸಿದ 'ಬಾಳ್ನೋಟಗಳು' ಇವರ ಮೊದಲ ಕೃತಿ. ಇದು ಸಾಹಿತಿಗಳ ಮೆಚ್ಚುಗೆಗೂ ಊರವರ ವಿವಾದಕ್ಕೂ ಪಾತ್ರವಾಗಿದ್ದುಂಟು. ಪ್ರಬಂಧ, ಜೀವನಚರಿತ್ರೆ, ವಿಮರ್ಶೆ, ಅನುವಾದ, ಸೂಚಿಸಾಹಿತ್ಯ, ಅಂಕಣ ಪ್ರಕಾರ - ಇವು ನಾಯಕರು ಕೃಷಿ ಮಾಡಿದ ಮುಖ್ಯ ಕ್ಷೇತ್ರಗಳು. 'ನಮ್ಮ ಮನೆಯ ದೀಪ' ವಿವಿಧ ಭಾಷೆಗಳಿಗೆ ಅನುವಾದಗೊಂಡು ಮನೆಮಾತಾಗಿರುವ ಲಲಿತ ಪ್ರಬಂಧ ಕೃತಿ. 'ಜಾನಪದ ಸ್ವರೂಪ' ಜಾನಪದದ ವೈಜ್ಞಾನಿಕ ಅಧ್ಯಯನವನ್ನು ಉದ್ಘಾಟಿಸಿದ ಕಿರುಕೃತಿ. ಹಲವಾರು ಮುದ್ರಣ ಕಂಡಿರುವ ಹೊತ್ತಗೆ, 'ರವೀಂದ್ರನಾಥಠಾಕೂರ್' ಒಪ್ಪವಾದ ಒಂದು ಜೀವನಚರಿತ್ರೆ, 'ಪ್ರಣಯ ಪದಾವಳಿ', ಮೈಥಿಲಿಯ ವಿದ್ಯಾಪತಿಯ ಹಾಡುಗಳ ಅನುವಾದವಾದರೆ 'ಸುನೇರಿ', ಅಮೃತಾಪ್ರೀತಮ್ ಅವರ ಪಂಜಾಬಿ ಕವನಗಳ ಕನ್ನಡ ರೂಪ. ಜಾನಪದ ಗ್ರಂಥಗಳು, ಗೋಕಾಕರ ಗ್ರಂಥಗಳು, ಮಾಸ್ತಿಯವರ ಕೃತಿಗಳನ್ನು ಕುರಿತಂತೆ ಇವರು ಸೂಚಿಗಳನ್ನು ತಯಾರಿಸಿದ್ದಾರೆ. ಈ ಎಲ್ಲವೂ ಹಾ ಮಾ ನಾಯಕರ ಆಸಕ್ತಿಯ ವೈವಿಧ್ಯ, ಬಹುಶ್ರುತತೆಗೆ ಸಾಕ್ಷಿ.

ಸಂಕೀರ್ಣ, ಸಮೀಕ್ಷೆ, ಸಂದರ್ಭ, ಸಂಗ್ರಹ, ಸಂಚಯ, ಸೃಜನ ಮುಂತಾದವು ನಾಯಕರ ಲೇಖನ ಸಂಗ್ರಹಗಳು. ಇವುಗಳಲ್ಲಿ ಆಧುನಿಕ ಕನ್ನಡ ಕೃತಿಗಳ ಬಗ್ಗೆ ಆಧುನಿಕ ಕನ್ನಡ ಸಾಹಿತಿಗಳ ಬಗ್ಗೆ ಬರೆದ ಬರೆಹಗಳಿವೆ. ಇವರಿಗೆ ಸಮಕಾಲೀನ ಭಾರತೀಯ ಸಾಹಿತ್ಯದ ವ್ಯಾಪಕವಾದ ಪರಿಚಯವಿತ್ತು. ಸ್ತವನ, ಸ್ಮರಣ, ಸೊಡರು ಮುಂತಾದ ಸಂಗ್ರಹಗಳಲ್ಲಿ ಇಂಥ ದೃಷ್ಟಿಯ ಹಾಗೂ ಭಾರತೀಯ ಲೇಖಕರನ್ನು ಕುರಿತ ಪರಿಚಯಾತ್ಮಕ ಬರೆಹಗಳಿವೆ. ಗೊರೂರು, ಪರಮೇಶ್ವರಭಟ್ಟ, ಕಾವ್ಯಾನಂದ ಮೊದಲಾದ ಹಿರಿಯರ ಹಾಗೂ ಹಲವಾರು ಕಿರಿಯರ ಪುಸ್ತಕಗಳಿಗೆ ಬರೆದ ಮುನ್ನುಡಿಗಳ ಸಂಕಲನಗಳು ಸಿಂಗಾರ, ಸಂಭ್ರಮ, ಸನಾದಿ, ಸನ್ನುಡಿ, ಸೋಗಿಲು. ಇವು ನಮ್ಮ ಸಾಹಿತಿಗಳನ್ನು ಉತ್ತೇಜಿಸುವ, ಅವರ ಕೃತಿಗಳನ್ನು ಏರು ಬೆಳಕಿನಲ್ಲಿಟ್ಟು ಮುಂದುಮಾಡುವಲ್ಲಿ ಅವರದು ನಿರಂತರ ಪ್ರಯತ್ನ.

ನಾಯಕರ ಸಾಹಿತ್ಯ ಸಾಧನೆಯ ಪ್ರಧಾನವಾದ ಕೃಷಿ ಇವರ ಅಂಕಣ ಸಾಹಿತ್ಯ. ಶಿವಮೊಗ್ಗೆಯ 'ನಂದಿನಿ' ಮಾಸಪತ್ರಿಕೆಗೆ ತಮ್ಮ ಹತ್ತೊಂಬತ್ತರ ಹರಯದಲ್ಲೇ ಇವರು ಪೂರ್ಣಿಮೆಗೆ ಪತ್ರಗಳು ಎಂಬ ಶೀರ್ಷಿಕೆಯಲ್ಲಿ ಅಂಕಣ ಬರೆಯುತ್ತಿದ್ದರು. ಅನಂತರ 'ಕನ್ನಡಪ್ರಭ', ದಿನಪತ್ರಿಕೆಯ ಸಾಹಿತ್ಯ ಸಲ್ಲಾಪ ಅಂಕಣ ಇವರಿಗೆ ಪ್ರಸಿದ್ಧಿ, ಗೌರವ ತಂದುಕೊಟ್ಟಿತು. ಪ್ರಜಾಮತದ ಹಾಮಾ ನಾಯಕ ಬರೆಯುತ್ತಾರೆ. ಪ್ರಜಾವಾಣಿಯ 'ಸಂಪ್ರತಿ', ಗ್ರಂಥಲೋಕದ 'ತಿಂಗಳ ಪುಸ್ತಕ' ಇವರಿಗೆ ವಿಪುಲ ಖ್ಯಾತಿ ತಂದುಕೊಟ್ಟಿತು. ತರಂಗ, ಇಂಚರ, ಸಂಕೇತ, ಕರ್ಮವೀರ, ಸುಧಾ ನಿಯತಕಾಲಿಕೆಗಳಲ್ಲೂ ಇವರು ಬರೆದರು. ಸಾಹಿತಿಯೊಬ್ಬರು ಇಷ್ಟೊಂದು ಪತ್ರಿಕೆಗಳಿಗೆ ಹಲವು ವರ್ಷ ಅಂಕಣ ಬರೆದ ನಿದರ್ಶನ ಮತ್ತೊಂದು ಭಾಷೆಯಲ್ಲಿಲ್ಲ. ನಾಯಕರ ಅಂಕಣಗಳು ಬಹುಶ್ರುತತೆಯ, ವ್ಯಾಪಕ ವ್ಯಾಸಂಗದ ತೀಕ್ಷ್ಣ ಚಿಂತನೆಯ, ತೀವ್ರ

ಭಾಷಾಭಿಮಾನದ ಬಲದಿಂದ ಸತ್ತ್ವಯುತವಾಗಿದ್ದವು. ಮೋಹಕವಾದ ಶೈಲಿ, ಆಕರ್ಷಕವಾದ ನಿರೂಪಣೆ, ವಿಚಾರ ಸಮೃದ್ಧಿಗಳಿಂದ ಅವು ತುಂಬಿಕೊಂಡಿರುತ್ತಿದ್ದವು. ಜಗತ್ತಿನ-ಭಾರತದ-ಕರ್ನಾಟಕದ ಲೇಖಕರು ಕಲಾವಿದರು ಕೃತಿಗಳು ಸಾಂಸ್ಕೃತಿಕ ಸಂಘಸಂಸ್ಥೆಗಳು ಮಾತ್ರವಲ್ಲದೆ ವಾರದ ಆಗುಹೋಗುಗಳು ಸಾಮಾನ್ಯ ಓದುಗನಿಗೆ ಇದರ ಮೂಲಕ ಪರಿಚಯವಾಗುತ್ತಿತ್ತು. ಲಲಿತ ಪ್ರಬಂಧದ ಚೌಕಟ್ಟು, ವ್ಯಕ್ತಿ ಚಿತ್ರದ ರೇಖೆಗಳು, ಆತ್ಮಕಥೆಯ ಭಿತ್ತಿ ಅಲ್ಲಿ ಮೇಳವಿಸಿದ್ದುವು. ಸಾಂಸ್ಕೃತಿಕ ವಾರಚರಿ, ಸಮೂಹ ಮಾಧ್ಯಮ ಶಿಕ್ಷಣ ಲೇಖನ ಎಂದೂ ಈ ಬರೆಹಗಳನ್ನು ವಿಮರ್ಶಕರು ಹೊಗಳಿದ್ದಾರೆ. ಸಾಹಿತ್ಯ ಸಲ್ಲಾಪ, ಸಲ್ಲಾಪ, ಸಮೂಹ, ಸಂಪರ್ಕ, ಸಾಂಪ್ರತ, ಸಂವಹನ, ಸಂಪ್ರತಿ - ಇವು ಇವರ ಕೆಲವು ಮುಖ್ಯ ಅಂಕಣ ಬರೆಹ ಸಂಪುಟಗಳು. ಇವರ 'ಸಂಪ್ರತಿ'ಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ (1989). ಅಖಿಲ ಭಾರತ ಮಟ್ಟದಲ್ಲಿ ಅಂಕಣ ಬರೆಹಗಳನ್ನೂ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಪರಿಗಣಿಸಿದ್ದು ಕನ್ನಡಕ್ಕೆ ಸಂದ ಗೌರವವಾಗಿದೆ.

ಆಕಾಶವಾಣಿಯ ಚಿಂತನ-ಚಿನ್ನುಡಿಗಳನ್ನು ಪ್ರಸಾರ ಮಾಡಿ ಆ ಚಿಂತನ ಪ್ರಬಂಧಗಳನ್ನು ಜನಪ್ರಿಯಗೊಳಿಸಿ ಒಂದು ಪ್ರಕಾರವಾಗಿ ಸ್ಥಾಪಿಸಿದ ಕೀರ್ತಿಯಲ್ಲಿ ಅಗ್ರಪಾಲು ನಾಯಕರಿಗೆ ಸಲ್ಲುತ್ತದೆ. ಸೌಜನ್ಯ, ಆತ್ಮವಿಶ್ವಾಸ, ಕರ್ತವ್ಯ, ಮಹತ್ವಾಕಾಂಕ್ಷೆ, ಪ್ರೀತಿ, ಅಧಿಕಾರ, ಸ್ನೇಹ, ಓದುಗಾರಿಕೆ, ಸ್ಥಿತಪ್ರಜ್ಞತೆ, ಭ್ರಷ್ಟಾಚಾರ, ಸಂಸ್ಕೃತಿ ಕುರಿತ ಇವರ ಬಾನುಲಿ ಭಾಷಣಗಳು ಅಡಕವೂ ಅನನ್ಯವೂ ಆಗಿವೆ. ಹಲವೆಡೆ ತಾವು ಓದಿದ, ಕೇಳಿದ, ಕಂಡು ಅನುಭವಿಸಿದ ಸಂಗತಿಗಳ ಚಿಂತನೆಗಳ ಎಳೆಗಳನ್ನೂ ಇವರು ಇಲ್ಲಿ ನೇಯ್ದಿದ್ದಾರೆ. ಸೂಲಂಗಿ, ಸಂಗತಿ, ಸಂಪಣ, ಸುರಗಿ - ಇವು ಮನನೀಯ ಸಂಕಲನಗಳು. ಕರ್ನಾಟಕದಲ್ಲಿ ಕನ್ನಡವೇ ಪ್ರಥಮ, ಪ್ರಧಾನ, ರಾಜ, ರಾಣಿ, ರಾಜಕುಮಾರ ಎಲ್ಲ; ಪ್ರತಿಯೊಬ್ಬ ಕನ್ನಡಿಗನೂ ಪ್ರತಿಯೊಂದು ಅಂಗುಲದಲ್ಲಿಯೂ ಕನ್ನಡಿಗನಾಗಬೇಕು ಎಂದು ಹೇಳಿದ ನಾಯಕರು ಕನ್ನಡದ ಸ್ಥಾನಮಾನ ಕುರಿತಂತೆ ರಾಜ್ಯ ಮತ್ತು ರಾಷ್ಟ್ರ ಮಟ್ಟಗಳಲ್ಲಿ ಹೋರಾಡಿದವರು. ಇಂಗ್ಲಿಷ್ ಮೋಹ, ಹಿಂದಿಯ ಹೇರಿಕೆ, ಸಂಸ್ಕೃತಕ್ಕಿದ್ದ ಸವಲತ್ತುಗಳಿಂದ ಕನ್ನಡಕ್ಕೆ ಆಗುತ್ತಿದ್ದ ಅನ್ಯಾಯವನ್ನು ಇವರು ಯೋಚಿಸಿ, ತರ್ಕಿಸಿ ವಾದಿಸುತ್ತಿದ್ದರು. ಶಿವಮೊಗ್ಗೆಯ ಸಾಹಿತ್ಯ ಸಮ್ಮೇಳನದಲ್ಲಿ ಇವರು ಮಂಡಿಸಿದ ಒಂದು ನಿರ್ಣಯ ಗೋಕಾಕ್ ಚಳವಳಿಗೆ ಕಾರಣವಾಯಿತು. ಕನ್ನಡದ ಕಾರ್ಯ-ಪ್ರಸಾರಗಳಿಗೆ, ಏಳಿಗೆ -ಬೆಳೆವಣಿಗೆಗಳಿಗೆ ಬಿ.ಎಂ. ಶ್ರೀ., ಅ.ನ.ಕೃ., ಅವರ ಅನಂತರ ಕರ್ನಾಟಕದಾದ್ಯಂತ ಸುತ್ತಾಡಿದವರು ಹಾ.ಮಾ.ನಾಯಕರು. ಕೆಲವು ಸಂದರ್ಭದಲ್ಲಿ ನಾಯಕರು ಕನ್ನಡಕ್ಕೆ ಏಕವ್ಯಕ್ತಿ ಕಾವಲು ಸಮಿತಿಯಂತೆಯೂ ಇದ್ದರು.

ನಾಯಕರು ಹಲವು ಬಗೆಯ ಪ್ರಶಸ್ತಿಗಳಿಗೆ ಪಾತ್ರರಾಗಿದ್ದರು. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಮಾಸ್ತಿ ಪ್ರಶಸ್ತಿ, ವರ್ಧಮಾನ ಪ್ರಶಸ್ತಿ, ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ - ಇವು ಕೆಲವು ಮುಖ್ಯ ಪ್ರಶಸ್ತಿಗಳು. ಇವರ 'ಸಲ್ಲಾಪ'ಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣ ಮಹೋತ್ಸವ ಪ್ರಶಸ್ತಿ, 'ಸಂಪ್ರತಿ'ಗೆ ಐಬಿಎಚ್. ಎಜುಕೇಷನ್ ಟ್ರಸ್ಟ್ ಪ್ರಶಸ್ತಿ ಲಭಿಸಿದ್ದವು. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಇವರು ನ್ಯಾಷನಲ್ ಬುಕ್ ಟ್ರಸ್ಟ್ , ಕೇಂದ್ರ ಸಾಹಿತ್ಯ ಅಕಾಡೆಮಿ, ಭಾರತೀಯ ಜ್ಞಾನಪೀಠ, ಬಿ.ಡಿ. ಗೋಯೆಂಕಾ ಬಹುಮಾನ ಮುಂತಾದ ಸಮಿತಿಗಳಲ್ಲಿದ್ದರು. ದೇಶ-ವಿದೇಶಗಳ ಸಂಕಿರಣಗಳಲ್ಲಿ ಭಾಗವಹಿಸಿದ್ದ ಇವರು ಬೀದರ್‌ನಲ್ಲಿ ನಡೆದ 57 ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಇವರ ಶಿಷ್ಯರು, ಮಿತ್ರರು, ಅಭಿಮಾನಿಗಳು ಇವರಿಗೆ 60 ವರ್ಷಗಳು ತುಂಬಿದಾಗ ಮಾನ ಎಂಬ ಅಭಿನಂದನ ಗ್ರಂಥ ಸಮರ್ಪಿಸಿದರು (1992). (ಎನ್.ಎಸ್.ಟಿ.)

**ನಾಯ್ಡು, ಆರ್.ಎಸ್. :** ಪ್ರಸಿದ್ಧ ಚಿತ್ರಕಾರ, ಶಿಲ್ಪಿ, ಹುಟ್ಟಿದ್ದು ಬೆಂಗಳೂರಿನಲ್ಲಿ. ತಂದೆ ರಂಗಸ್ವಾಮಿ, ತಾಯಿ ರಂಗನಾಯಕಮ್ಮ, ಸಹೋದರ ಭೂವಿಜ್ಞಾನಿ ಪ್ರಾಧ್ಯಾಪಕರಾಗಿದ್ದ ಜಗಪತಿ ನಾಯ್ಡು.

ಇವರ ಬಾಲ್ಯದ ವಿದ್ಯಾಭ್ಯಾಸ ಕೆಲಕಾಲ ತಿರುಚಿರಾಪಳ್ಳಿಯಲ್ಲಿಯೂ ಅನಂತರ ಧಾರವಾಡದಲ್ಲಿಯೂ ನಡೆಯಿತು. ಆಟಪಾಟಗಳೊಂದಿಗೆ ಚರ್ಚಾಕೂಟಗಳಲ್ಲೂ ಭಾಗವಹಿಸುತ್ತಿದ್ದರು. ಪುಣೆಯ ಫರ್ಗ್ಯೂಸನ್ ಕಾಲೇಜಿನಲ್ಲಿ ವ್ಯಾಸಂಗಮಾಡುತ್ತಿದ್ದಾಗ ಯುವಕ ಕಾಂಗ್ರೆಸ್ ಸಂಸ್ಥೆಯೊಂದನ್ನು ಕಟ್ಟಿದರು. ಕಾಂಗ್ರೆಸ್ ಚಟುವಟಿಕೆಯಲ್ಲಿ ಓಡಾಡತೊಡಗಿ ಮೊದಲ ಬಾರಿಗೆ ಆರು ತಿಂಗಳ ಸಾದಾ ಸಜೆಯನ್ನು ಜೈಲಿನಲ್ಲಿ ಅನುಭವಿಸಿದರು 1933. ಎರಡನೆಯ ಬಾರಿ ಕಠಿಣ ಶಿಕ್ಷೆಗೊಳಗಾದವರು 1934. ಇವರಿದ್ದ ಯರವಾಡಾ ಜೈಲಿನಲ್ಲಿ ಗಾಂಧೀಜಿ, ಮಹದೇವ ದೇಸಾಯಿ, ಜಮನಾಲಾಲ್ ಬಜಾಜ್ ಮುಂತಾದ ಗಣ್ಯ ರಾಷ್ಟ್ರಭಕ್ತರೂ ಇದ್ದರು. ಆ ಜೈಲಿನಲ್ಲಿ ಎದ್ದು ಕಾಣುತ್ತಿದ್ದ ಪ್ರಾಂತೀಯ ಪಕ್ಷಪಾತವನ್ನು ಇವರು ಪ್ರತಿಭಟಿಸಿದರು. ಇದನ್ನು ಸಹಿಸಲಾರದ ಸರ್ಕಾರ ಇದರ ಜೈಲು ಶಿಕ್ಷೆಯ ಅವಧಿಯನ್ನು ಹೆಚ್ಚಿಸಿತು. ಅದೇ ಕಾಲಕ್ಕೆ ಜರ್ಮನ್ ದಿನಪತ್ರಿಕೆಯ ಸಂಪಾದಕರೊಬ್ಬರ ಸ್ನೇಹದಿಂದ ಮಾರ್ಕ್ಸ್‌ವಾದವನ್ನು ಸ್ವೀಕರಿಸಿದರು. ಕಾಂಗ್ರೆಸ್ ದಿನಾಚರಣೆಯಂದು ಜೈಲಿನಲ್ಲಿದ್ದ ತಮ್ಮ ಮಿತ್ರರ ಸಹಾಯದಿಂದ ಜೇಡಿಮಣ್ಣನ್ನು ತರಿಸಿ ರಾತ್ರಿಯೆಲ್ಲ ನಿದ್ದೆಗೆಟ್ಟು ನಾಲ್ಕಡಿ ಗಾತ್ರದ ಕ್ರಾಂತಿವೀರ ಲೆನಿನ್ ಮೂರ್ತಿಯನ್ನು ಸೃಜಿಸಿದರು. ಸೆರೆಮನೆಯಿಂದ ಹೊರಬಂದಮೇಲೆ ಇವರ ಮನಃಸ್ವಾಸ್ಥ್ಯ ಕೆಟ್ಟಿತು. ಕಿರಿಕಿರಿ ವಾತಾವರಣದಲ್ಲಿ ಬಾಳತೊಡಗಿದರು. ಜೀವನದಲ್ಲಿ ಜುಗುಪ್ಸೆಗೊಂಡು, ಮುಂಬಯಿಯಲ್ಲಿ ತಾವು ವಾಸಿಸುತ್ತಿದ್ದ ಮಹಡಿಯಿಂದ ಕೆಳಕ್ಕೆ ದುಮುಕಿ ಸಾಯಲು ಪ್ರಯತ್ನಿಸಿ ವಿಫಲರಾದರು. ಚಿಂತೆ ಮರೆಯಲು ಪುಸ್ತಕಗಳ ಮೊರೆ ಹೊಕ್ಕರು. ಯುವಕರನ್ನು ಬ್ರಿಟಿಷ್ ಸರ್ಕಾರದ ವಿರುದ್ಧ ಹುರಿದುಂಬಿಸುವ ಸಲುವಾಗಿ ಒಂದು ಯುವಜನ ಸಂಸ್ಥೆ ಕಟ್ಟಿಕೊಂಡರು. ಅದರ ವತಿಯಿಂದ ಒಂದು ಕ್ರಾಂತಿಕಾರಿ ಪತ್ರಿಕೆಯೂ ಹೊರಬಂತು.ಪೊಲೀಸ್ ಚಿತ್ರಗುಪ್ತರ ವಕ್ರದೃಷ್ಟಿ ಇವರ ಮೇಲೆ ಬಿತ್ತು. ಆಗ ಇವರು ಭೂಗತರಾಗಬೇಕಾಯಿತು.ಇವರ ಉಪಟಳ ಹೆಚ್ಚಾದಾಗ ಗುಪ್ತಚಾರರು ಇವರನ್ನು ಬಂಧಿಸಿದರು. ಮತ್ತೆ ಕೆಲವು ತಿಂಗಳ ಶಿಕ್ಷೆ ಅನುಭವಿಸಬೇಕಾಯಿತು. ಅನಂತರ ರಾಜಕೀಯ ಬುದ್ಧಿಜೀವಿಗಳಾದ ಮೆಹರಾಲಿ, ಮೀನೂ ಮಸಾನಿ, ಅಶೋಕ ಮೆಹ್ತ ಮುಂತಾದವರ ಜೊತೆ ಸೇರಿ ಸಮಾಜವಾದಿ ಪಕ್ಷ ಕಟ್ಟಿದ್ದರು. ಅದರ ವತಿಯಿಂದ ಭಾರತದ ಆರ್ಥಿಕತೆ ಬಗ್ಗೆ ಪಿಕ್ಟೋರಿಯಲಂ ಎಕನಾಮಿಕ್ಸ್ ಎಂಬ ಸಚಿತ್ರ ವಾರಪತ್ರಿಕೆಯನ್ನು ಪ್ರತಿವಾರವೂ ಪ್ರಕಟಿಸುತ್ತಿದ್ದರು. ನ್ಯಾಷನಲ್ ಫ್ರಂಟ್ ಪತ್ರಿಕೆಯಲ್ಲಿ ಆಗಾಗ ಇವರ ಕ್ರಾಂತಿಕಾರಿ ವ್ಯಂಗ್ಯ ಚಿತ್ರಗಳು ಪ್ರಕಟವಾಗುತ್ತಿದ್ದವು.

ಲಂಡನ್ನಿಗೆ ಹೋಗಿ ಅಲ್ಲಿ ಇದ್ದಷ್ಟು ಕಾಲವನ್ನು ಕಾರ್ಮಿಕರೊಂದಿಗೆ ಕಳೆದರು. ಅಲ್ಲಿಂದ ಮಾಸ್ಕೋಗೆ ಹೋಗಬೇಕೆಂಬ ಆಸೆ ಎರಡನೆಯ ಮಹಾಯುದ್ಧದಿಂದಾಗಿ ನೆರವೇರಲಿಲ್ಲ. ತಪ್ಪಿಸಿಕೊಂಡಾದರೂ ಮಾಸ್ಕೋ ಮುಟ್ಟಬೇಕೆಂದಿದ್ದರೂ ಗುಪ್ತ ಚಾರರಿಂದಾಗಿ ಸಾಧ್ಯವಾಗಲಿಲ್ಲ. ಅದೇ ವೇಳೆಗೆ ಭಾರತದಿಂದ ಕರೆ ಬಂತು. ವಾಪಸು ಬರಲು ಹಡಗಿನಲ್ಲಿ ಅವಕಾಶ ದೊರೆಯಲಿಲ್ಲ. ಒಬ್ಬ ಭಾರತೀಯ ವಿದ್ಯಾರ್ಥಿಯ ನೆರವಿನಿಂದಾಗಿ ತಾಯಿನಾಡು ತಲಪಿದರು.

ಮುಂಬಯಿಗೆ ಮರಳಿ ಕೆಲವು ವರ್ಷ ಅಲ್ಲಿ ಕಳೆದರು. ಒಮ್ಮೆ ಗುಜರಾತಿನ ಸ್ವಾರ್ಥಲಂಪಟರ ವ್ಯಂಗ್ಯಚಿತ್ರವನ್ನು ಶೀಸೆಯ ಆಕೃತಿಯಲ್ಲಿ ರಚಿಸಿ ಪ್ರಕಟಿಸಿದರು. ಆ ಚಿತ್ರದ ಬಗ್ಗೆ ಎಲ್ಲ ಕಡೆಯೂ ಗುಲ್ಲೆದ್ದಿತು. ಎಲ್ಲರ ಗಮನವನ್ನೂ ಅದು ಶೀಘ್ರವಾಗಿ ಸೆಳೆಯಿತು. ಕೊನೆಗೆ ಬೆಂಕಿಪೊಟ್ಟಣದ ಮೇಲೆಯೂ ಅದು ಕಾಣಿಸಿಕೊಂಡಿತು. ಮುಂಬಯಿಂದ ಕಲ್ಕತ್ತದವರೆಗೂ ಅದರ ಕೀರ್ತಿ ಹರಡಿತು.

ಮುಂಬಯಿ ಬೇಸರ ಬಂದಾಗ ಬೆಂಗಳೂರಿಗೆ ಬಂದು ಸೇರಿದರು. ಅಲ್ಲಿಂದ 1957ರಲ್ಲಿ ಮೈಸೂರಿಗೆ ಬಂದು ನೆಲೆಸಿದ್ದರು. ಇವರ ಕುಂಚ ವಿಡಂಬನಾತ್ಮಕ ರೇಖಾಚಿತ್ರದಿಂದ ವರ್ಣ ಚಿತ್ರಗಳ ವರೆಗೆ ಕೆಲಸ ಮಾಡಿದೆ. ಇವರು ಮೊದಲಿಂದಲೂ ಸಾಂಪ್ರದಾಯಿಕ ಕಲೆಯನ್ನು ಒಪ್ಪಿದವರಾದರೂ ಅಂದಚಂದಗಳ ಅಂಧಾನುಕರಣೆಗೆ ಮಾರು ಹೋದವರಲ್ಲ. ಇವರ ಕಲೆ ಬರೀ ತಾಂತ್ರಿಕವಾಗಿ ಉಳಿಯಲಿಲ್ಲ. ಯಾರೊಬ್ಬರ

ಯಾವೊಂದರ ಪ್ರಭಾವಕ್ಕೂ ಇವರು ಬಲಿ ಬೀಳಲಿಲ್ಲ. ಜೀವನದ ಸಿಹಿಕಹಿಗಳ ತೂಗಾಟದಲ್ಲಿ ಬೆಳೆದು ಬಂದ ಈ ಹಿರಿಯ ಜೀವಿಗೆ ಸಾಮಾನ್ಯ ಮಾನವನ ಬಗ್ಗೆ ಆಳವಾದ ಅನುಕಂಪ, ಸಹಾನುಭೂತಿ ಮೈಗೂಡಿ ಬಂದಿದ್ದವು.

ಇವರು ರಚಿಸುವ ಚಿತ್ರಗಳಲ್ಲಿ ಜೀವಂತಿಕೆ, ಸಾದೃಶ್ಯ ತುಂಬಿ ತುಳುಕುತ್ತವೆ. ರೇಖೆಗಳಲ್ಲಿ ಅದ್ಭುತನಿರೂಪಣೆ, ಗತಿವಿನ್ಯಾಸಗಳನ್ನು ಸೂಚಿಸುವ ಮಿತ್ರವ್ಯಯದ ನೂತನ ಶೈಲಿಯಿಂದಾಗಿ ಸಾಮರಸ್ಯವನ್ನು ಕಾಣುತ್ತೇವೆ. ಇವರು ಎಳೆಯುವ ಪ್ರತಿಯೊಂದು ಗೆರೆಯೂ ಇವರ ಹೃದಯದ ಅಂತರಾಳದಿಂದ ನೇರ ಚಿಮ್ಮಿದಂತಿರುತ್ತದೆ. ಇವರ ರೇಖಾಚಿತ್ರಗಳ ವಸ್ತುವಿಶೇಷ. ಕಲ್ಪನಾಶಕ್ತಿ ಅಸಾಧಾರಣವಾದುದಾಗಿತ್ತು. ಇವರು ..................... ರಲ್ಲಿ ನಿಧನರಾದರು. ಮೈಸೂರಿನಲ್ಲಿ ಇವರ ಗೌರವಾರ್ಥ ಬಡಾವಣೆಯೊಂದರ ಇವರ ಹೆಸರನ್ನು ಇಡಲಾಗಿದೆ. *

**ನಾರಾಯಣ್, ಆರ್.ಕೆ. :** 1906-2001. ಇಂಗ್ಲಿಷ್ ಭಾಷೆಯಲ್ಲಿ ಬರೆಯುತ್ತಿದ್ದ ಅಗ್ರಗಣ್ಯ ಭಾರತೀಯ ಲೇಖಕರಲ್ಲೊಬ್ಬರು. ಮೈಸೂರಿನಲ್ಲಿ ನೆಲೆಸಿದ್ದರು. ಇವರ ಪೂರ್ವಿಕರ ಸ್ಥಳ ತಮಿಳುನಾಡಿನ ಸೇಲಂ ಜಿಲ್ಲೆಯ ರಾಶಿಪುರಂ, ತಂದೆ ಕೃಷ್ಣಸ್ವಾಮಿ ಅಯ್ಯರ್ ತಾಯಿ ಜ್ಞಾನಾಂಬಾಳ್ ಆರು ಗಂಡು ಎರಡು ಹೆಣ್ಣು ಮಕ್ಕಳಲ್ಲಿ ನಾರಾಯಣ್ ಎರಡನೆಯವರು. ಇವರ ಸಹೋದರ ಆರ್.ಕೆ.ಲಕ್ಷ್ಮಣ ವಿಶ್ವವಿಖ್ಯಾತ ವ್ಯಂಗ್ಯ ಚಿತ್ರಗಾರ. ಮದರಾಸಿನಲ್ಲಿ ನೆಲೆಸಿದ್ದ ತಂದೆ ಕೃಷ್ಣಸ್ವಾಮಿ ಅಯ್ಯರ್‌ರವರಿಗೆ ಮೈಸೂರು ಸಂಸ್ಥಾನದಲ್ಲಿ ಉದ್ಯೋಗ ದೊರೆಕಿದ್ದರಿಂದ ಇಲ್ಲಿಗೆ ವಲಸೆ ಬಂದರು. ಆದರೆ ನಾರಾಯಣ್ ಅವರು ಅಜ್ಜಿಯ ಪೋಷಣೆಯಲ್ಲಿ ಕೆಲಕಾಲ ಮದರಾಸಿನಲ್ಲೇ ಉಳಿದರು. ಇವರ ತಂದೆಯವರು ಮೊದಲು ಚನ್ನಪಟ್ಟಣದಲ್ಲಿ ಅನಂತರ ಹಾಸನದಲ್ಲಿ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರು. ಮೈಸೂರಿಗೆ ವರ್ಗವಾದಾಗ ಮಗನನ್ನು ತಮ್ಮ ಬಳಿಗೇ ಕರೆಸಿಕೊಂಡರು. ನಾರಾಯಣ್ ಅವರು ಮಹಾರಾಜ ಕಾಲೇಜಿನಲ್ಲಿ ವಿದ್ಯಾರ್ಥಿಯಾದರು. ಓದಿನಲ್ಲಿ ಅಷ್ಟಾಗಿ ಆಸಕ್ತಿ ತೋರದ ಇವರು ಬಿ.ಎ. ಮುಗಿಸಿದಾಗ 24 ವರ್ಷ. ಆದರೆ ಓದುತ್ತಿರುವಾಗಲೇ ಇವರಿಗೆ ಬರೆಯುವ ಆಸಕ್ತಿ. ಬಿ.ಎ. ಮುಗಿದಮೇಲೆ ಸ್ವಲ್ಪಕಾಲ ಸೆಕ್ರೆಟೇರಿಯೇಟ್‌ನಲ್ಲೂ ಐದು ದಿನ ಮಾತ್ರ ಚನ್ನಪಟ್ಟಣದಲ್ಲಿ ಅಧ್ಯಾಪಕ ವೃತ್ತಿಯಲ್ಲೂ ಇದ್ದು ಒಗ್ಗದೆ, ಬರಹವನ್ನೇ ವೃತ್ತಿಯಾಗಿ ಆಯ್ಕೆ ಮಾಡಿಕೊಂಡರು. ಪತ್ರಿಕೆಗಳಿಗೆ ಲೇಖನ ಮತ್ತು ಸುದ್ದಿ ಸಂಗ್ರಹಗಳನ್ನು ಬರೆಯತೊಡಗಿದರಲ್ಲದೆ ಸ್ವಲ್ಪ ಕಾಲ ದಿ ಇಂಡಿಯನ್ ಥಾಟ್ ಎಂಬ ನಿಯತಕಾಲಿಕವನ್ನೂ ನಡೆಸಿದರು.

ಇವರ ಪ್ರಥಮ ಕಾದಂಬರಿ ಸ್ವಾಮಿ ಅಂಡ್ ಫ್ರೆಂಡ್ಸ್ 1935ರಲ್ಲಿ ಇಂಗ್ಲೆಂಡಿನಲ್ಲಿ ಪ್ರಕಟವಾಯಿತು. ಅನಂತರ ದಿ ಗೈಡ್, ಮಿ. ಸಂಪತ್, ಫೆನಾನ್ಸಿಯಲ್ ಎಕ್ಸ್‌ಪರ್ಟ್ ಮುಂತಾದ 10 ಕಾದಂಬರಿಗಳೂ 7 ಕಥಾಸಂಕಲನಗಳೂ ಪ್ರಕಟವಾದವು. ಅಲ್ಲದೆ ಪ್ರವಾಸ ಕಥನ, ಹರಟೆ, ಜೀವನಸ್ಮೃತಿ, ಪೌರಾಣಿಕ ಕಥಾಸಂಗ್ರಹ ಮತ್ತು ರಾಮಾಯಣದ ಇಂಗ್ಲಿಷ್ ರೂಪಾಂತರವನ್ನೂ ಇವರು ಕೊಟ್ಟಿದ್ದಾರೆ.

ನಾರಾಯಣ್ ಅವರ ಕೃತಿಗಳ ಅನುಭವ, ಪ್ರೇರಣೆ ಮುಖ್ಯವಾಗಿ ಭಾರತೀಯ ಪರಂಪರೆಗೆ ಸೇರಿದ್ದು. ಇವರ ಒಟ್ಟು ದೃಷ್ಟಿಯಲ್ಲಿಯೇ ಪರಂಪರೆಯ ಮೌಲ್ಯಗಳಿಗೆ ಮನ್ನಣೆಯಿದೆ. ಆದ್ದರಿಂದಲೇ ಇವರು ತಾವು ಆರಿಸಿರುವ ವ್ಯಕ್ತಿಗಳನ್ನು ಸಾಂಪ್ರದಾಯಿಕ ಕಟ್ಟುಪಾಡಿನಲ್ಲಿ ಜೀವನ ಸಂಗ್ರಾಮವನ್ನು ನಡೆಸುತ್ತಿರುವಂತೆ ಚಿತ್ರಿಸುತ್ತಾರೆ. ಒಳ್ಳೆಯ ಬರಹಗಾರ ಧರ್ಮ ಮತ್ತು ಕುಟುಂಬ ಜೀವನದಲ್ಲಿ ಬೇರುಗಳನ್ನು ಬಿಟ್ಟಿರಬೇಕು ಎನ್ನುವ ಇವರು ಆರಿಸುವುದೂ ಮಧ್ಯಮ ವರ್ಗದ ಜನಜೀವನ ಮತ್ತು ಅವರ ಕೌಟುಂಬಿಕ ಸಮಸ್ಯೆಗಳನ್ನೇ. ಇವರ ಮತ್ತೊಂದು ವೈಶಿಷ್ಟ್ಯವೆಂದರೆ ವ್ಯಕ್ತಿ ಸಂಗತಿಗಳನ್ನು ನೋಡುವ ದೃಷ್ಟಿ, ಜೀವನದ ಸಂದರ್ಭಗಳನ್ನು ವಿನೋದದ ದೃಷ್ಟಿಯಿಂದ ನೋಡಿದರೂ ಆಳಗಳನ್ನಿವರು ಕೆದಕುತ್ತಾರೆ. ವೈಚಿತ್ರ್ಯಪೂರ್ಣ ವ್ಯಕ್ತಿಗಳಲ್ಲಿ ಇವರಿಗೆ ಬಲು ಆಸಕ್ತಿ. ಸಾಮಾನ್ಯವಾಗಿ ಇತರರಿಗೆ ಗೋಚರಿಸದೆ ಹೋಗುವ ಸಾಧಾರಣ ವ್ಯಕ್ತಿ-ಸಂಗತಿಗಳು ಇವರ ದೃಷ್ಟಿಗೆ ಬೀಳುತ್ತವೆ. ಸಾಮಾನ್ಯತೆಯಿಂದ ಅಸಾಮಾನ್ಯತೆಗೇರಲು ವ್ಯಕ್ತಿಗಳು ಯತ್ನಿಸುವುದನ್ನು ಲವಲವಿಕೆಯಿಂದ ಇವರು ವಿಶ್ಲೇಷಿಸುತ್ತಾರೆ.

ಇವರ ಕಾದಂಬರಿಗಳ ಕಾರ್ಯಕ್ಷೇತ್ರವೆಲ್ಲ ಮಾಲ್ಗುಡಿ ಎಂಬ ಕಾಲ್ಪನಿಕ ಪಟ್ಟಣದಲ್ಲಿ ನಡೆಯುತ್ತದೆ. ಒಂದು ಪರಿಮಿತ ವ್ಯಾಪ್ತಿಯಲ್ಲಿ ವ್ಯಕ್ತಿಗಳ ವಿಚಿತ್ರ ನಡೆಯನ್ನೂ ಸಾಮಾನ್ಯತೆಯಿಂದ ಅಸಾಮಾನ್ಯತೆಗೆ ಏರಿ ಅಲ್ಲಿಂದ ಮೊದಲಿನ ಸ್ಥಿತಿಗೇ ಬರುವ ಜೀವನ ವೈವಿಧ್ಯವನ್ನೂ ಗುರುತಿಸಲು ಮಾಲ್ಗುಡಿ ಸಮಾಜ ಇವರಿಗೆ ತುಂಬ ಸಹಕಾರಿಯೆನಿಸಿದೆ. ಅಲ್ಲಿನ ಭೌಗೋಳಿಕ ವಿನ್ಯಾಸ - ತೋಪು, ಬೆಟ್ಟ, ಗುಹೆ, ರಸ್ತೆ, ಓಣಿ, ವಿಸ್ತರಣೆ, ಶಾಲೆ, ಬ್ಯಾಂಕು, ಸ್ಟುಡಿಯೋ, ರೈಲು ನಿಲ್ದಾಣ, ಸರಯೂನದಿ ಮಾಲ್ಗುಡಿಯ - ವೈವಿಧ್ಯಪೂರ್ಣ ನಿಬಿಡಜನ ಪ್ರಪಂಚದಷ್ಟೇ ಬಲುಬೇಗ ಓದುಗರಿಗೆ ಪ್ರಿಯವಾಗುತ್ತದೆ.

ಇವರ ಮೊದಲ ಕಾದಂಬರಿ ಸ್ವಾಮಿ ಅಂಡ್ ಫ್ರೆಂಡ್ಸ್ ಬಾಲಕರ ಪ್ರಪಂಚದ ವಿವಿಧ ನಡೆನುಡಿಗಳನ್ನೂ ಬಿರುಸು ಬಿನ್ನಾಣಗಳನ್ನೂ ಮನೋಜ್ಞವಾಗಿ ಚಿತ್ರಿಸುತ್ತದೆ. ಯೌವನೋದಯದ ರೊಮ್ಯಾಂಟಿಕ್ ಪ್ರವೃತ್ತಿ ಮತ್ತು ಪರಿಚಿತ ಕುಟುಂಬ ಜೀವನದ ಸೌಖ್ಯದ ವಿರೋಧ ಚಿತ್ರಗಳನ್ನು ದಿ ಬ್ಯಾಚಲರ್ ಆಫ್ ಆರ್ಟ್ಸ್ (1937) ಕೊಡುತ್ತದೆ. ಸಂಸಾರದ ವಿರಸದಲ್ಲಿ ನೊಂದ ಹೆಣ್ಣು ಪ್ರತಿಭಟಿಸಿ ಮನೆಯಿಂದ ಹೊರಗೆ ಹೋದರೂ ಕೌಟುಂಬಿಕ ಸೆಳೆತಕ್ಕೆ ಸಿಕ್ಕಿ ಗಂಡನ ಬಳಿಗೆ ಹಿಂದಿರುಗುವುದು ದಿ ಡಾರ್ಕ್ ರೂಮ್‌ನ (1938) ವಸ್ತು. ದಿ ಇಂಗ್ಲಿಷ್ ಟೀಚರ್‌ನಲ್ಲಿ (1945) ನಾರಾಯಣರ ಸ್ವಂತ ಅನುಭವದ ಚಿತ್ರಣ ಅದಕ್ಕೆ ಒಂದು ತೀವ್ರತೆಯನ್ನು ತಂದುಕೊಟ್ಟಿದೆ.

ಇಲ್ಲಿಂದ ಮುಂದಿನ ಇವರ ಕೃತಿಗಳಲ್ಲಿ ಮಾಲ್ಗುಡಿಯ ಪ್ರಪಂಚ ಸ್ವಲ್ಪ ವಿಸ್ತಾರವಾಗಿ, ವಿಚಿತ್ರ ಪ್ರಕೃತಿಯ, ವ್ಯಕ್ತಿಗಳ ಪರಿಚಯವಾಗುತ್ತದೆ. ಮುಖ್ಯವಾಗಿ ಚುರುಕು ನಡೆಯ, ಸಾಹಸಪ್ರಿಯರೆನಿಸುವ, ಆದರೂ ವಿಚಿತ್ರಪ್ರವೃತ್ತಿಯಿಂದ ಆಗಹೋಗದ ವ್ಯವಹಾರಗಳಲ್ಲಿ ತೊಡಗಿ, ಕೊನೆಗೆ ಸಾಮಾನ್ಯಸ್ಥಿತಿಗೆ ಇಳಿಯುವ ಪಾತ್ರಸಮೂಹವನ್ನು ಈ ಕೃತಿಗಳಲ್ಲಿ ಕಾಣಬಹುದು. ಮಿ. ಸಂಪತ್‌ನಲ್ಲಿ (1949) ಮುದ್ರಣಕಾರ ಸಂಪತ್ ಚಲನಚಿತ್ರ ತಯಾರಿಸುವ ಹುಚ್ಚಿಗೆ ಬಿದ್ದು ಕೈಸುಟ್ಟುಕೊಂಡು ಒಂಟಿಯಾಗಿ ರೈಲುನಿಲ್ದಾಣದತ್ತ ಸಾಗುತ್ತಿರುವುದನ್ನು ನೋಡುತ್ತೇವೆ. ದಿ ಫೈನಾನ್ಸಿಯಲ್ ಎಕ್ಸ್‌ಪರ್ಟ್‌ನ (1952) ಮಾರ್ಗಯ್ಯ, ಹಣಸಂಚಯದ ವಿಪರೀತಮತಿಯಾಗಿ ದೊಡ್ಡ ದೊಡ್ಡ ಲೇವಾದೇವಿಯಲ್ಲಿ ತೊಡಗಿ ದಿವಾಳಿಯಾಗುತ್ತಾನೆ. ಮಾತು ಕೇಳದ ಮಗನ ಮೇಲಿನ ಪ್ರೇಮ ಅವನ ಜೀವನದಲ್ಲಿ ಸಂಕಟ ತಂದರೂ ಅವನ ಮಾನವೀಯತೆಯನ್ನೂ ತೋರಿಸುತ್ತದೆ. ವೇಯ್ಟಿಂಗ್ ಫಾರ್ ದಿ ಮಹಾತ್ಮಾ (1955) ಗಾಂಧೀ ಚಳವಳಿಯ ಹಿನ್ನೆಲೆಯಲ್ಲಿ ಇಬ್ಬರ ಪ್ರೇಮ ಬೆಳೆದ ರೀತಿಯನ್ನು ಸೊಗಸಾಗಿ ಅನಾವರಣಗೊಳಿಸಿದೆ. ದಿ ಗೈಡ್ (1958) ಅನೇಕ ಕಾರಣಗಳಿಂದ ನಾರಾಯಣರ ಅತ್ಯುತ್ತಮ ಕೃತಿ. ವಸ್ತು, ತಂತ್ರನಾವೀನ್ಯತೆ, ಜೀವನಸಂಧಿಗ್ದತೆ ಎಲ್ಲವೂ ಈ ಕಾದಂಬರಿಯ ಸಂಕೀರ್ಣತೆಗೆ ಸಹಕಾರಿ. ಇಲ್ಲಿ ಎರಡು ನಡೆಯ ಸಂಕೀರ್ಣತೆಯಿದೆ. ತೀರ ಸಾಮಾನ್ಯ ಸ್ಥಿತಿಯಿಂದ ಅಸಾಧಾರಣ ಸ್ಥಿತಿಗೆ ಏರುವ ನಡೆ ಒಂದು ಕಡೆ ಅಸಾಧಾರಣ ಸ್ಥಿತಿಯನ್ನು ನಿರಾಕರಿಸುವಲ್ಲಿ ಬರುವ ಮಿಶ್ರಫಲ ಮತ್ತೊಂದು ಕಡೆ. ಮಾಲ್ಗುಡಿಯ ಪ್ರವಾಸಿಗರ ಗೈಡ್ ಮಾರ್ಗದರ್ಶಿ ಆದ ರಾಜು, ನರ್ತಕಿ ರೋಸಿಯ ಜೀವನದಲ್ಲಿ ಗೈಡ್ ಆಗುವ ಸ್ಥಿತಿಗೇರುತ್ತಾನೆ. ಆದರೆ ಪ್ರಬಲ ಆಕಾಂಕ್ಷೆಗೆ ಈಡಾಗಿ, ಮಾಡಿದ ಅಪರಾಧಕ್ಕಾಗಿ ಸೆರೆಮನೆಯ ವಾಸ ಅನುಭವಿಸಬೇಕಾಗುತ್ತದೆ. ಅದು ಮುಗಿದಮೇಲೆ ಹೊರಗೆ ಬಂದಾಗ ಅಪರಿಚಿತ ಜನ ಅವನನ್ನು ಮಹಾತ್ಮ ಪಟ್ಟಕ್ಕೇರಿಸಿ ಜೀವನದ ಇನ್ನೊಂದು ನಡೆಯ ಗೈಡ್ ಆಗಿ ಮಾಡಿಕೊಳ್ಳುತ್ತದೆ. ಜೀವನದ ವಿರೋಧಾಭಾಸದಲ್ಲಿ ರಾಜುವಿನ ಅನುಭವ ದಿಙ್ಮೂಢಗೊಳಿಸುವಂಥದು.

ಪುರಾಣ ಕಥೆಗಳ ಮೌಲ್ಯಗಳನ್ನು ಗುರುತಿಸುವ ನಾರಾಯಣ್ ಅವರ ಕೊನೆಯ ನಾಲ್ಕು ಕೃತಿಗಳಲ್ಲಿ ಅವನ್ನು ಸಾಂಕೇತಿಕವಾಗಿಯೂ ನೇರವಾಗಿಯೂ

ಬಳಸಿದ್ದಾರೆ. ದಿ ಮ್ಯಾನ್ ಈಟರ್ ಆಫ್ ಮಾಲ್ಗುಡಿ ಎಂಬುದು ಮೋಹಿನಿ-ಭಸ್ಮಾಸುರರ ಕಥೆಯ ಆಧುನಿಕ ರೂಪ. ರಾಕ್ಷಸೀ ಸ್ವಭಾವದ ಒಬ್ಬ ವ್ಯಕ್ತಿ, ತನ್ನ ಪಶುಬಲದಿಂದ ಎಲ್ಲರಲ್ಲೂ ಭೀತಿ ಹುಟ್ಟಿಸಿ, ದುರ್ಮಾರ್ಗಪ್ರವರ್ತಕನಾದಾಗ ಅವನ ಬಲವೇ ಅವನಿಗೆ ಮುಳುವಾಗುತ್ತದೆ. ಕೊನೆಯ ಕಾದಂಬರಿ ದಿ ವೆಂಡರ್ ಆಫ್ ಸ್ವೀಟ್ಸ್‌ನಲ್ಲಿ ಪ್ರಾಪಂಚಿಕತೆಯನ್ನು ಬಿಟ್ಟು ಪಾರಮಾರ್ಥಿಕದತ್ತ ವ್ಯಕ್ತಿ ಸರಿಯುವ ಚಿತ್ರಣವಿದೆ. ಈ ಎರಡು ಕಾದಂಬರಿಗಳ ನಡುವೆ ಬಂದ ಗಾಡ್ಸ್, ಡೆಮನ್ಸ್ ಅಂಡ್ ಅದರ್ಸ್ (1965) ಎಂಬ ಸಣ್ಣ ಕಥಾಸಂಕಲನದಲ್ಲಿ ಪುರಾಣಕಾವ್ಯಗಳಿಂದ ಆಯ್ದ 14 ಕಥೆಗಳಿವೆ. ಇವರ ರಾಮಾಯಣ (1972) ಕಂಬ ರಾಮಾಯಣವನ್ನು ಅನುಸರಿಸಿ ರಚಿತವಾದುದು.

ಇವರ ಪ್ರಕಟಿತ ಸಣ್ಣ ಕಥೆಗಳು ಸುಮಾರು 80. ವಿಷಯವೈವಿಧ್ಯ, ತಿಳಿಹಾಸ್ಯ ಮತ್ತು ಆಕರ್ಷಕ ನಿರೂಪಣೆಗಳಿಂದಾಗಿ ಇವರ ಹರಟೆಗಳೂ ಪ್ರವಾಸ ಕಾಲದ ದಿನಚರಿ ಮೈ ಡೇಟ್‌ಲೆಸ್ ಡೈರಿ (1960) ಮತ್ತು ಜೀವನಸ್ಮೃತಿಗಳನ್ನೊಳಗೊಂಡ ಮೈ ಡೇಸ್ (1975) ಇವೂ ಓದುಗರಿಗೆ ಬಹಳ ಕಾಲ ನೆನಪಿನಲ್ಲಿ ಉಳಿಯುವ ಇತರ ಗದ್ಯಕೃತಿಗಳು.

ಪಾಶ್ಚಾತ್ಯ ದೇಶಗಳಲ್ಲಿ ಆರಂಭವಾದ ನಾರಾಯಣರ ಕೃತಿ ಪ್ರಕಟಣೆ ಮತ್ತು ಪ್ರಶಂಸೆ ದೇಶವಿದೇಶಗಳಲ್ಲಿ ಇವರಿಗೆ ಅನೇಕ ಪ್ರಶಸ್ತಿಗಳನ್ನು ದೊರಕಿಸಿದೆ. 1960ರಲ್ಲಿ ಇವರ ಕಾದಂಬರಿ ದಿ ಗೈಡ್ ಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂತು. 1964ರಲ್ಲಿ ಇವರಿಗೆ ಪದ್ಮಭೂಷಣ ಪ್ರಶಸ್ತಿ ದೊರೆಯಿತು. ಲೀಡ್ಸ್ ವಿಶ್ವವಿದ್ಯಾನಿಲಯದಿಂದ 1967ರಲ್ಲಿ ಡಿ.ಲಿಟ್.ಪದವಿ, 1975ರಲ್ಲಿ ಮೈ ಡೇಸ್ ಎನ್ನುವ ಜೀವನಸ್ಮೃತಿಗಾಗಿ ಅಮೆರಿಕ ಭಾಷಾಸಂಸ್ಥೆಯೊಂದರಿಂದ 2000 ಡಾಲರುಗಳ ನಗದು ಬಹುಮಾನಗಳು ಬಂದಿವೆ. ಇವರ ಅನೇಕ ಕೃತಿಗಳು ಪ್ರಮುಖ ಐರೋಪ್ಯ ಮತ್ತು ಭಾರತೀಯ ಭಾಷೆಗಳಲ್ಲಿ ಅನುವಾದವಾಗಿವೆ. ಡಿ ಗೈಡ್ ಇಂಗ್ಲಿಷಿನಲ್ಲೂ ಹಿಂದಿಯಲ್ಲೂ ಚಲನಚಿತ್ರವಾಗಿರುವುದೇ ಅಲ್ಲದೆ ಅದರ ನಾಟಕದ ರೂಪವೂ ಬ್ರಾಡ್‌ವೇ ರಂಗಭೂಮಿಯ ಮೇಲೆ ಪ್ರದರ್ಶಿತವಾಗಿವೆ. ಚಲನಚಿತ್ರವಾಗಿ ಬಂದಿರುವ ಇವರ ಇನ್ನೊಂದು ಕೃತಿ ಮಿ. ಸಂಪತ್. ದೂರದರ್ಶನದಲ್ಲಿ ಪ್ರಸಾರವಾದ ಇವರ ಸ್ವಾಮಿ ಮತ್ತು ಮಾಲ್ಗುಡಿ ಡೇಸ್ ಧಾರಾವಾಹಿ ಜನಪ್ರಿಯವಾಯಿತು. ಇವರ ಹೆಸರು ಮನೆಮಾತಾಯಿತು. 1989ರಲ್ಲಿ ನಾರಾಯಣ ರಾಜ್ಯಸಭೆಗೆ ನಾಮಕರಣಗೊಂಡರು. ಪದ್ಮಭೂಷಣ ಪದ್ಮವಿಭೂಷಣ ಸಾಹಿತ್ಯ ಅಕಾಡೆಮಿಯ ಫೆಲೋಷಿಪ್‌ಗಳಿಂದ ಇವರು ಸನ್ಮಾನಿತರಾದರು. ಇವರ ಪತ್ನಿ ರಾಜಮ್ಮ (1949)ರಲ್ಲಿ ನಿಧಿ ಹೊಂದಿದರು. ಹೇಮಾ ಒಬ್ಬಳೇ ಮಗಳು. ಹೊಂದಿದರು 2001ರಲ್ಲಿ ನಿಧನ ಹೊಂದಿದರು. (ಜಿ.ಎ.ಆರ್.)

**ನಾರಾಯಣ :** ಸು.1600 ಬ್ರಾಹ್ಮಣ ಕವಿ. ಉತ್ತರರಾಮಚರಿತೆಯ ಕರ್ತೃ. ತಂದೆ ತಾತಧೀಮಣಿ, ಗುರು ತಿಮ್ಮಣಾರ್ಯ.

ಉತ್ತರ ರಾಮಾಯಣವನ್ನು ಕುರಿತು ಇವನೂ ಸೇರಿದಂತೆ ತಿರುಮಲೆ ವೈದ್ಯ, ಯೋಗೀಂದ್ರ, ನರಸ ಮೊದಲಾದ ಕನ್ನಡ ಕವಿಗಳು ಗ್ರಂಥರಚನೆ ಮಾಡಿದ್ದಾರೆ. ಆದರೆ ಗಾತ್ರ ಹಾಗೂ ವಿಷಯ ನಿರೂಪಣೆಗಳಲ್ಲಿ ಈತನ ಕೃತಿಗೆ ಮಹತ್ತ್ವದ ಸ್ಥಾನವಿದೆ. ಈ ಕಾವ್ಯ ಭಾಮಿನೀಷಟ್ಪದಿಯಲ್ಲಿದ್ದು 46 ಸಂಧಿ 2138 ಪದ್ಯಗಳನ್ನೊಳಗೊಂಡಿದೆ. ಇದಕ್ಕೆ ಆಧಾರಗ್ರಂಥ ವಾಲ್ಮೀಕಿ ರಾಮಾಯಣದಲ್ಲಿ ಸೇರ್ಪಡೆಯಾಗಿರುವ ಉತ್ತರ ಕಾಂಡ. *

**ನಾರಾಯಣ, ಎಚ್.ಕೆ. :** 1934 . ಸುಗಮ ಸಂಗೀತ ಹಾಗೂ ಶಾಸ್ತ್ರೀಯ ಸಂಗೀತ ಕಲಾವಿದ. ಹಾಸನ ಜಿಲ್ಲೆ ಹೊಳೆನರಸೀಪುರದಲ್ಲಿ 1934 ಮಾರ್ಚ್ 14 ರಂದು ಜನಿಸಿದರು. ತಂದೆ ಕೇಶವಯ್ಯ, ತಾಯಿ ಸಣ್ಣಮ್ಮ. ಇವರದು ಸಂಗೀತಗಾರರ ಮನೆತನ. ತಂದೆ ಕೇಶವಯ್ಯ ಶಾರದಾ ಸಂಗೀತ ಪಾಠಶಾಲೆಯನ್ನು ತೆರೆದಿದ್ದರು. ಅದರ ಆಶ್ರಯದಲ್ಲಿ ಪಿಟೀಲು ಹಾಗೂ ಹಾಡುಗಾರಿಕೆಯನನು ಕಲಿಸುತ್ತಿದ್ದರು. ಈ ಸಂಗೀತದ ಪರಿಸರ ನಾರಾಯಣರ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರಿತು. ತಂದೆ ಮಗನಿಗೆ ಆರನೆಯ ವಯಸ್ಸಿನಿಂದಲೇ ಪಿಟೀಲು ಕಲಿಸಲು ಪ್ರಾರಂಭಿಸಿದರು. ಯಾವುದೋ ಒಂದು ಸಂದರ್ಭದಲ್ಲಿ ದುರಸ್ತಿಗೆ ಕೊಟ್ಟಿದ್ದ ಮುರಿದು ಹೋದ ಪಿಟೀಲು ವಾಪಸ್ಸು ಬರದಿದ್ದಾಗ ಇವರು ವಾದ್ಯಗಾರಿಕೆ ಬಿಟ್ಟು ಹಾಡುಗಾರಿಕೆಯನ್ನು ಕಲಿಯುವಂತಾಯಿತು. ಸಂಗೀತದಲ್ಲಿ ಸೀನಿಯರ್ ಪರೀಕ್ಷೆ ಮುಗಿಸಿದರು. ಅನಂತರ ಮೈಸೂರಿಗೆ ಬಂದು ಆರ್.ಕೆ. ಶ್ರೀಕಂಠನ್ ಅವರಲ್ಲಿ ಸಂಗೀತಾಭ್ಯಾಸ ಮುಂದುವರಿಸಿದರು. ವಿದ್ವತ್ ಪರೀಕ್ಷೆಯಲ್ಲಿ ಚಿನ್ನದ ಪದಕ ಗಳಿಸಿದರು. ಎಸ್.ಎಸ್.ಎಲ್.ಸಿ. ಯವರಿಗೆ ಓದಿದರು. ಮೈಸೂರಿನ ಆಕಾಶವಾಣಿಯಲ್ಲಿ ಸ್ಕ್ರಿಪ್ಟ್ ರೈಟರ್ ಆಗಿ ಸೇರಿದರು (1954). ಸಂಗೀತ ಕಾರ್ಯಕ್ರಮಗಳಿಗೆ ಸ್ವರ ಪ್ರಸ್ತಾರ ಬರೆದುಕೊಡುತ್ತಿದ್ದರು. ಹಿಂದೂಸ್ತಾನಿ ಸಂಗೀತದಲ್ಲೂ ಆಸಕ್ತಿಯನ್ನು ಬೆಳೆಸಿಕೊಂಡರು. ಆಕಾಶವಾಣಿ ನಿಲಯ ಮೈಸೂರಿನಿಂದ ಬೆಂಗಳೂರಿಗೆ ವರ್ಗಾವಣೆಯಾಯಿತು (1955). ಬೆಂಗಳೂರು ಆಕಾಶವಾಣಿಯ್ಲಲಿ ಜೂನಿಯರ್ ಮ್ಯೂಸಿಕ್ ಕಂಪೋಸಿರ್ ಹುದ್ದೆಗೆ ಆಯ್ಕೆಯಾದರು (1974). ಅನಂತರ 1982 ರಲ್ಲಿ ಮ್ಯೂಸಿಕ್ ಪ್ರೊಡ್ಯೂಸರಂ ಆಗಿ ಆಯ್ಕೆಯಾದರು. ಅನಂತರ ಮೊದಲ ದರ್ಜೆಯ ಆಕಾಶವಾಣಿಯ ಸಂಗೀತ ಸಂಯೋಜಕರಾಗಿ 36 ವರ್ಷಗಳ ಕಾಲ ಸೇವೆ ಸಲ್ಲಿಸಿ ನಿವೃತ್ತರಾದರು.

ಆಕಾಶವಾಣಿ ಇವರ ಬದುಕಿನಲ್ಲಿ ಮಹತ್ತರ ಪಾತ್ರ ವಹಿಸಿದೆ. ಕಲಾವಿದರಾಗಿ ಜನಮನವನ್ನು ಮುಟ್ಟಲು ಈ ಜಾಗ ಬಹಳ ಸಹಕಾರಿಯಾಯಿತು. ನಾರಾಯಣ ಅವರು ಶಾಸ್ತ್ರೀಯ ಹಾಗೂ ಸುಗಮ ಸಂಗೀತ ಎರಡರಲ್ಲೂ ಪರಿಣತಿ ಸಾಧಿಸಿದ್ದಾರೆ. ಇವರು ಹಲವು ಕವನಸಗಳಿಗೆ ರಾಗಸಂಯೋಜಿಸಿ ಹಾಡಿದ್ದಾರೆ ; ಅನೇಕ ಕಲಾವಿದರಿಂದ ಹಾಡಿಸಿದ್ದಾರೆ. ಹಲವು ಸಂಗೀತ ರೂಪಕಗಳಿಗೆ ಸಂಗೀತ ಸಂಯೋಜನೆ ಮಾಡಿ ಯಶಸ್ವಿಯಾಗಿದ್ದಾರೆ. ಇವರು ರಜನೀಕಾತಂರಾದ ಅವರೊಂದಿಗೆ ಸಂಗೀತ ನೀಡಿದ ಮೇಘಸಂದೇಶ ರೂಪಕಕ್ಕೆ ಆಕಾಶವಾಣಿಯ ರಾಷ್ಟ್ರೀಯ ಪ್ರಶಸ್ತಿ ದೊರೆತಿದೆ.

ಸುಗಮ ಸಂಗೀತ, ಶಾಸ್ತ್ರೀಯ ಸಂಗೀತದ ಜೊತೆಗೆ ಭರತನಾಟ್ಯಕ್ಕೆ ಹಿನ್ನೆಲೆಗಾಯನವನ್ನು ಒದಗಿಸಿ ಯಶಸ್ವಿಯಾದುದು ಇವರ ಹೆಗ್ಗಳಿಕೆ. ಇದಲ್ಲದೆ ರಮಣಾಂಜಲಿ ತಂಡದ ಸದಸ್ಯರಾಗಿ ಕಳೆದ ವರ್ಷಗಳಿಂದ ರಾಜಕುಮಾರಂ ಭಾರತಿಯವರೊಂಗಿದೆ ಹಲವು ಭಾಷೆಗಳ 150 ಧ್ವನಿಸುರುಳಿಗಳಲ್ಲಿ ಹಾಡಿದ್ದಾರೆ. ಭಾರತದ ಮೂಲೆ ಮೂಲೆಗಳಲ್ಲಿ ಹಾಡುವುದರ ಜೊತೆಗೆ ಅಮೆರಿಕ, ಇಂಗ್ಲೆಂಡ್, ಸಿಂಗಪುರ, ಹಾಂಕಾಂಗ್, ಶ್ರೀಲಂಕ, ಮಂಗೋಲಿಯ, ರಷ್ಯ, ಮನಿಲಾ ಮೊದಲಾದ ದೇಶಗಳಲ್ಲೂ ಕಾರ್ಯಕ್ರಮ ನೀಡಿದ್ದಾರೆ. ಇವರು ಹಾಡಿದ ಧ್ವನಿಸುರಳಿಗಳಲ್ಲಿ ಶಾಸ್ತ್ರೀಯ ಸಂಗೀತ, ವಚನಗಳು, ದಾಸರ ಪದಗಳು, ಭಕ್ತಿ ಗೀತೆಗಳು ಎಲ್ಲವೂ ಸೇರಿವೆ.

ಇವರು ಸಂಗೀತ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆಯನ್ನು ಗುರುತಿಸಿ ಇವರನ್ನು ಸರ್ಕಾರ ಹಾಗೂ ಅನೇಕ ಸಂಘ ಸಂಸ್ಥೆಗಳು ಗೌರವಿಸಿವೆ. ಕರ್ನಾಟಕ ಸಂಗೀತ ನೃತ್ಯ ಆಕಾಡೆಮಿಯ ಕರ್ನಾಟಕ ಕಲಾತಿಲಕ ಪ್ರಶಸ್ತಿ (1984 - 85), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (1988), ಆರ್ಯಭಟ ಪ್ರಶಸ್ತಿ (1997), ಕರ್ನಾಟಕ ಸರ್ಕಾರ ಸುಗಮ ಸಂಗೀತದಲ್ಲಿ ಗಣನೀಯ ಸೇವೆ ಸಲ್ಲಿಸಿದವರಿಗೆ ನೀಡುವ ಪ್ರತಿಷ್ಠಿತ ಸಂತ ಶಿಶುನಾಳ ಷರೀಫ ಪ್ರಶಸ್ತಿ ಇವರೆಗೆ ಲಭಿಸಿದೆ (2000).

ಅಪಾರ ಶಿಷ್ಯ ವರ್ಗವನ್ನು ಹೊಂದಿರುವ ಇವರು ನಿವೃತ್ತಿಯ ಬಳಿಕ ತರಳಬಾಳು ಕೇಂದ್ರ ಹಾಗೂ ಭಾರತೀಯ ವಿದ್ಯಾಭವನದಲ್ಲಿ ಸುಗಮ ಸಂಗೀತ ಹಾಗೂ ಶಾಸ್ತ್ರೀಯ ಸಂಗೀತವನ್ನು ಕಲಿಸುತ್ತಿದ್ದಾರೆ.

(ಎಚ್.ಆರ್.ಎಲ್.)

**ನಾರಾಯಣ ಕವಿ :** ಸು.1450 ಬ್ರಾಹ್ಮಣ ಕವಿ. ಭಾಗವತ ಸಂಹಿತಾರ್ಥ ಎಂಬ ಗದ್ಯ ಗ್ರಂಥದ ಕರ್ತೃ. ಗ್ರಂಥಾಂತ್ಯದಲ್ಲಿ

ಉಲ್ಲೇಖಿತವಾಗಿರುವ ವಿದ್ಯಾರಣ್ಯಯೋಗಿ 1368ರಲ್ಲಿ ಗತಿಸಿದ ಶೃಂಗೇರಿ ಮಠದ ಸ್ವಾಮಿಯಾಗಿದ್ದ ಪಕ್ಷದಲ್ಲಿ ಇವನ ಕಾಲ ಸು.1450 ಆಗಬಹುದು ಎಂಬು ಆರ್. ನರಸಿಂಹಾಚಾರ್ಯರು ತಿಳಿಸಿದ್ದಾರೆ. ಈಗ ಉಪಲಬ್ಧವಿರುವ ಹಸ್ತಪ್ರತಿಗಳು ಚತುರ್ಥಸ್ಕಾಂಧ ಒಂಬತ್ತನೆಯ ಅಧ್ಯಯಕ್ಕೇ ಮುಗಿದಿರುವುದರಿಂದ ಇನ್ನುಳಿದ ಸ್ಕಂದಗಳನ್ನು ಬರದನ್ನೋ ಇಲ್ಲವೋ ಎಂಬ ವಿಷಯ ಸಂದಿಗ್ಧವಾಗಿದೆ. ಈ ಗ್ರಂಥ'ಕ್ಕೆ ಸಂಸ್ಕೃತ ಶ್ರೀಮದ್ಭಾಗವತವೇ ಆಧಾರ. ಗದ್ಯದಲ್ಲಿ ಭಾಗವತದ ಭಾವಾನುವಾದಕ್ಕೆ ತೊಡಗಿದವರಲ್ಲಿ ಈತನೇ ಮೊದಲಿಗ.

ಈ ಭಾಗವತದಲ್ಲಿ ಶ್ರೀಹರಿಯ ಗುಣಚಾರಿತ್ರ ಮಹಿಮೆಗಳನ್ನು ವಿವರವಾಗಿ ಹೇಳಿದೆ.ಹಾಗೆಯೇ ತಮಸ್ಸು, ರಜಸ್ಸು, ಸಾತ್ವಿಕ ಗುಣತ್ರಯಗಳನ್ನೂ ಆಯಾ ಸಂದರ್ಭಕ್ಕನುಸಾರವಾಗಿ ಅನ್ವಯಿಸಿ ಹೇಳುವುದಲ್ಲದೆ ಅವುಗಳಿಂದೊದಗೂವ ಫಲಾಫಲಗಳನ್ನು ತಿಳಿಸಿದೆ. ಗ್ರಂಥ'ದಲ್ಲಿಸನಕಾದಿಯೋಗಿಗಳು, ವರಾಹ, ನಾರದ, ನಾರಾಯಣ, ಕಪಿಲಮುನೀಂದ್ರ, ಅತ್ರಿಮುನಿಯ ಮಗ ದತ್ತಾತ್ರೇಯ, ಯಜ್ಞ, ವೃಷಭ, ಪೃಥುರಾಯ, ಮತ್ಸ್ಯ, ಕೂರ್ಮ, ಧನ್ವಂತರಿ, ಜಗನ್ಮೋಹಿನಿ, ನರಸಿಂಹ, ವಾಮನ, ಪರಶುರಾಮ, ವ್ಯಾಸ, ರಾಮ, ಬಲರಾಮಕೃಷ್ಣ ಈ ಹತ್ತೊಂಬತ್ತು ಅವತಾರಗಳ ಸ್ಥೂಲ ಪರಿಚಯವಿದೆ. ಆದರೆ ಮುಖ್ಯವಾಗಿ ಪಾಂಡವರ ಕಥೆಯನ್ನು ರಚಿಸಬೇಕೆಂಬ ಆಶಯ ಕವಿಗಿರುವುದರಿಂದ ಕವಿ ಅದನ್ನೇ ವಿಸ್ತಾರವಾಗಿ ನಿರೂಪಿಸಿದ್ದಾನೆ. ಅಲ್ಲದೆ ಶ್ರೀ ಕೃಷ್ಣನ ಮಹಿಮೆ, ಲೀಲೆಗಳಿಗೂ ಪ್ರಾಶಸ್ತ್ಯ ನೀಡಿದ್ದಾನೆ. ತನ್ನ ಗ್ರಂಥವನ್ನು ಜನಸಾಮಾನ್ಯರು ಓದಲೆಂದೇ ತಿಳಿಯಾದ ನಡುಗನ್ನಡ ಭಾಷೆಯಲ್ಲಿ ಹೆಚ್ಚಾಗಿ ಚಿಕ್ಕ ಚಿಕ್ಕ, ವಾಕ್ಯಗ'ಳ'ಲ್ಲಿ ರ'ಚಿಸಿದ್ದಾನೆ. *

**ನಾರಾಯಣ, ಜಿ. :** 1923- . ಸ್ವಾತಂತ್ರ್ಯಯೋಧ'. ಸಾಹಿತ್ಯ ಪ್ರೇಮಿ. ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷ, ಆಡಳಿತ ತಜ್ಞ, ಪ್ರತಿಕೋದ್ಯಮಿ. ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ದೇಶಹಳ್ಳಿಯಲ್ಲಿ 1923 ಸೆಪ್ಟೆಂಬರ್ 2ರಂದು ಜನಿಸಿದರು. ತಂದೆ ಗಿರಿಗೌಡ, ತಾಯಿ ಸಣ್ಣಮ್ಮ. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣಗಳನ್ನು ಮಂಡ್ಯ ಜಿಲ್ಲೆಯಲ್ಲಿ ಪೂರೈಸಿ ವಾರ್ಧಾ ಶಿಕ್ಷಣ ಸಂಸ್ಥೆಯಲ್ಲಿ ತರಬೇತಿ ಪಡೆದು ಸ್ವಾತಂತ್ರ್ಯ ಸಮರ ಹಾಗೂ ಜವಾಬ್ದಾರಿ ಸರ್ಕಾರಕ್ಕಾಗಿ ನಡೆದ ಹೋರಾಟಗಳಲ್ಲಿ ಸ್ವಯಂ ಸೇವಕರಾಗಿ ದುಡಿದರು. ಜವಾಬ್ದಾರಿ ಸರ್ಕಾರದ ಹೋರಾಟದ ಮುಖಪತ್ರಿಕೆಯಾಗಿದ್ದ 'ವಾರ್ತಾ'ದ ವ್ಯವಸ್ಥಾಪಕರಾಗಿ ಪತ್ರಿಕಾ ವ್ಯವಸಾಯ ಆರಂಭಿಸಿದರು. ಅಕ್ಷರ ಪ್ರಚಾರ ಸಮಿತಿಗಾಗಿ ಗೋವಿನ ಹಾಡಿನ ಧಾಟಿಯಲ್ಲಿ ರಚಿಸಿಕೊಟ್ಟ 00 ಪದ್ಯಗಳನ್ನುಳ್ಳ 'ಅಕ್ಷರವ ನೀವ್ ಕಲಿಯಿರಿ' ಎಂಬ ಕಾವ್ಯಕ್ಕೆ ಸಿದ್ಧವನ ಹಳ್ಳಿ ಕೃಷ್ಣಶರ್ಮರು ಮುನ್ನುಡಿ ಬರೆದಿದ್ದು ಅದು 'ಬೆಳಕು' ಎಂಬ ವಿಶೇಷ ಸಂಚಿಕೆಯಲ್ಲಿ ಪ್ರಕಟವಾಯಿತು. ಮಂಡ್ಯ ಜಿಲ್ಲೆಯಲ್ಲಿ ಉಂಟಾದ ಮಲೇರಿಯಾ ಹಾವಳಿಯನ್ನು ಕುರಿತು 'ಮಲೇರಿಯಾ ಹಾವಳಿ' ಎಂಬ ಲಾವಣಿ, ಸಕ್ಕರೆ ಕಂಪನಿಯ ಆಡಳಿತದ ಅವ್ಯವಸ್ಥೆಯಿಂದ ರೈತರಿಗೆ ಉಂಟಾದ ತೊಂದರೆ ಕುರಿತು ಕಬ್ಬಿನ ಲಾವಣಿ ಹಾಗೂ ಕಬ್ಬಿನ ಕಥಾಂತರ ಎಂಬ ಕೃತಿ ಬರೆದು ಅಚ್ಚು ಹಾಕಿಸಿದ್ದಲ್ಲದೆ, ಜಾತ್ರೆಗಳಲ್ಲಿ ಖುದ್ದಾಗಿ ಹಾಡುವ ಮೂಲಕ ಜನಜಾಗೃತಿ ಮೂಡಿಸಿದರು. 1950ರಲ್ಲಿ ಸ್ವತಂತ್ರ ಮುದ್ರಣಾಲಯವನ್ನು ಸ್ಥಾಪಿಸಿ 1951 ಜನವರಿ 26ರಂದು 'ವಿನೋದ' ಎಂಬ ಹಾಸ್ಯ ಮಾಸಿಕವನ್ನು ಆರಂಭಿಸಿದರು. ಪ್ರತಿವರ್ಷ ಆಗಸ್ಟ್ 15ರಂದು ವಿನೋದದ ವಿಶೇಷ ಸಂಚಿಕೆ ಪ್ರಕಟವಾಗುತ್ತಿದೆ. 1975ರಲ್ಲಿ ರಜತ ಮಹೋತ್ಸವ ಆಚರಿಸಿದ ಈ ಪತ್ರಿಕೆ 2002 ಆಗಸ್ಟ್ 15ರಂದು ಸುವರ್ಣ ಮಹೋತ್ಸವ ಆಚರಿಸಿತು. ಇಷ್ಟು ದೀರ್ಘ ಕಾಲದಿಂದ ಸತತವಾಗಿ ಪ್ರಕಟವಾಗುತ್ತಿರುವ ಏಕೈಕ ಹಾಸ್ಯ ಮಾಸಿಕ ಎಂಬ ಹೆಗ್ಗಳಿಕೆ ವಿನೋದಕ್ಕೆ ಸಲ್ಲುತ್ತದೆ.

ಚಾಮರಾಜಪೇಟೆ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿ, ಕೇಂದ್ರ ವಯಸ್ಕರ ಶಿಕ್ಷಣ ಸಮಿತಿ ಕಾರ್ಯಸಮಿತಿ ಸದಸ್ಯರಾಗಿ, ಮೈಸೂರು ಹಿಂದಿ ಪರಿಷತ್ತಿನ ಕಾರ್ಯದರ್ಶಿಯಾಗಿ ಒಂದು ವರ್ಷ ಕಾರ್ಯ ನಿರ್ವಹಿಸಿದ ಇವರು 1957ರಲ್ಲಿ ಬೆಂಗಳೂರು ನಗರ ಪಾಲಿಕೆಗೆ ಚುನಾಯಿತರಾಗಿ 7 ವರ್ಷಗಳ ಕಾಲ ಸದಸ್ಯರಾಗಿ ಕಾರ್ಯ ನಿರ್ವಹಿಸಿದರು. 1964ರಲ್ಲಿ ಬೆಂಗಳೂರು ನಗರದ ಮೇಯರ್ ಆಗಿ ಆಯ್ಕೆಯಾದರು. ಬೆಂಗಳೂರು ನಗರಕ್ಕೆ ಕಾವೇರಿ ನೀರಿನ ಸರಬರಾಜಿಗಾಗಿ ಕಾವೇರಿ ಯೋಜನೆಯ ಶಂಕುಸ್ಥಾಪನೆ, ನಗರಪಾಲಿಕೆಯಲ್ಲಿ ಆಡಳಿತ ಭಾಷೆಯಾಗಿ ಕನ್ನಡದ ಅನುಷ್ಠಾನ, ಬೆಂಗಳೂರು ನಗರದ ಸಂಸ್ಥಾಪಕ ಕೆಂಪೇಗೌಡರ ಪ್ರತಿಮೆಯ ಸ್ಥಾಪನೆ ಇವು ಇವರ ಅವಧಿಯ ಮುಖ್ಯ ಸಾಧನೆಗಳು.

ಇವರು 1969ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆಯಾಗಿ ಒಟ್ಟು 9 ವರ್ಷಗಳ ಕಾಲ ಆ ಸ್ಥಾನದಲ್ಲಿದ್ದರು. ಕನ್ನಡದ ಸರ್ವತೋಮುಖ ಅಭಿವೃದ್ಧಿಗಾಗಿ ದುಡಿದು ಪರಿಷತ್ತಿನ ನೂತನ ಶಕಪುರುಷ ಎಂದು ಹೆಸರಾದರು. ಪರಿಷತ್ತಿನ ಕಾರ್ಯ ಚಟುವಟಿಕೆಗಳ ವಿಸ್ತರಣೆಗಾಗಿ ತ್ರೈವಾರ್ಷಿಕ ಯೋಜನೆ, ಕನ್ನಡ ರಾಜ್ಯೋತ್ಸವದಲ್ಲಿ ಮನೆಯಿಂದ ಮನೆಗೆ ಪುಸ್ತಕ ಮಾರಾಟದ ಯೋಜನೆ, ಜನಪದ ಕಲೆಗಳ ರಕ್ಷಣೆಗೆ ಮತ್ತು ಅಭಿವೃದ್ಧಿಗಾಗಿ ಬೃಹತ್ ಯೋಜನೆ, ಗಮಕ ಕಲೆಯನ್ನು ಉಳಿಸಲು ಗಮಕಕಲಾ ತರಗತಿಗಳ ಆರಂಭ, ಕನ್ನಡದಲ್ಲಿ ಆಡಳಿತಕ್ಕೆ ನೆರವಾಗಲು ಕನ್ನಡ ಬೆರಳಚ್ಚು ಮತ್ತು ಶೀಘ್ರಲಿಪಿ ತರಗತಿಗಳು, ಜಿಲ್ಲಾ ಸಾಹಿತ್ಯ ಸಮ್ಮೇಳನಗಳು, ಪುಸ್ತಕಗಳ ಪ್ರಕಟಣ ಮಾಲಿಕೆಗಳು, ಗಡಿನಾಡು ಕನ್ನಡಿಗರ ಸಮ್ಮೇಳನ, ಹೊರನಾಡ ಕನ್ನಡಿಗರೊಂದಿಗೆ ಸಂಪರ್ಕದ ದಿಸೆಯಲ್ಲಿ ದೆಹಲಿಯಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಸಂಘಟನೆ ಮೊದಲಾದವನ್ನು ಯಶಸ್ವಿಯಾಗಿ ಕಾರ್ಯರೂಪಗೊಳಿಸಿದರು. ಇವರ ಕಾಲಾವಧಿಯಲ್ಲಿ ರೂಪುಗೊಂಡ ಕನ್ನಡ-ಕನ್ನಡ ಸಂಕ್ಷಿಪ್ತ ನಿಘಂಟು ಹಾಗೂ ಕನ್ನಡ ರತ್ನಕೋಶದ ಪ್ರಕಟಣೆಗಳು ಕನ್ನಡ ಪುಸ್ತಕ ಮಾರಾಟದ ಇತಿಹಾಸದಲ್ಲಿ ದಾಖಲೆ ಸ್ಥಾಪಿಸಿದವು.

ಯಾವುದೇ ಕೆಲಸಕಾರ್ಯವಾಗಲಿ ಯೋಜನಾಬದ್ಧವಾಗಿ ಕಾರ್ಯರೂಪಕ್ಕೆ ತರುವವರೆಗೆ ನಿಷ್ಠೆಯಿಂದ ದುಡಿಯುವ ವ್ಯಕ್ತಿ ಎಂದು ಹೆಸರಾದ ಜಿ.ನಾರಾಯಣ ಅವರಿಗೆ ಪತ್ರಿಕಾ ಅಕಾಡಮಿಯ ಅಧ್ಯಕ್ಷ ಪದವಿ, ಕರ್ನಾಟಕ ಗಮಕಕಲಾ ಪರಿಷತ್ತಿನ ಅಧ್ಯಕ್ಷ ಪದವಿ ಹಾಗೂ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮೊದಲ ಅಧ್ಯಕ್ಷ ಪದವಿ ಮೊದಲಾದ ಸ್ಥಾನಗೌರವಗಳು ಲಭಿಸಿದ್ದವು. ಹಲವಾರು ಸನ್ಮಾನ ಹಾಗೂ ಪ್ರಶಸ್ತಿ ಗೌರವಗಳಿಗೆ ಪಾತ್ರರಾದ ಇವರಿಗೆ ರಾಜ್ಯ ಸರ್ಕಾರ ಕನ್ನಡ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ. (ಕೆ.ಆರ್.ಎಸ್.)

**ನಾರಾಯಣದಾಸ :** 1823-70. ಕೀರ್ತನಕಾರ, ವಾಗ್ಗೇಯಕಾರ ಹಾಗೂ ಕವಿ. ತಿಮ್ಮಪ್ಪದಾಸರ ಜೇಷ್ಠಪುತ್ರ. ಜನನ 1823, ಫೆಬ್ರವರಿ 11ರಂದು. ತಿಮ್ಮಪ್ಪದಾಸರ ಪೂಜಾವಿಧಾನ ಕೀರ್ತನೆಗಳು ಲಿಖಿತವಾಗಿರುವ ಕಾಗದದ ಹಸ್ತಪ್ರತಿಯಲ್ಲಿ ನಾರಾಯಣದಾಸ ಎಂದು ಸ್ವನಾಮಮುದ್ರಿಕೆಯಿರುವ 39 ಕೀರ್ತನೆಗಳು ಲಿಖಿತವಾಗಿವೆ. ಈ ಕೀರ್ತನೆಗಳೆಲ್ಲವೂ ಪ್ರಾಯಿಕವಾಗಿ ಕುಲದೈವ ವೆಂಕಟರಮಣ, ರಾಮಚಂದ್ರಮೂರ್ತಿ, ಶಿವ, ಚಾಮುಂಡೇಶ್ವರಿ ಮುಂತಾಗಿ ದೇವತಾ ಸ್ತೋತ್ರರೂಪದಲ್ಲಿವೆ. ಒಂದು ಕೀರ್ತನೆ ಶೃಂಗೇರಿ ಜಗದ್ಗುರು ಸಚ್ಚಿದಾನಂದ ಶಿವಾಭಿನವ ನರಸಿಂಹಭಾರತೀ ಸ್ವಾಮಿಗಳನ್ನು (1866-1913) ಕುರಿತಿದೆ. ಚಾಮರಾಜ ಒಡೆಯರ ಪಟ್ಟಾಭಿಷೇಕವನ್ನು ಹಾರೈಸುವ, ಅವರು ಪಟ್ಟಾಭಿಷಿಕ್ತರಾದದ್ದಕ್ಕೆ (1868) ಸಂತೋಷವನ್ನು ಸೂಚಿಸುವ ಕೀರ್ತನೆಗಳು ಎರಡಿವೆ. ಇವರ ಕೀರ್ತನೆಗಳಲ್ಲಿ ತಂದೆ ತಿಮ್ಮಪ್ಪದಾಸರ ಕೀರ್ತನೆಗಳಲ್ಲಿರುವಂತೆ ತತ್ತ್ವವಿಚಾರವಾಗಲಿ, ಭಕ್ತಿಭಾವದ ಹೃದಯಂಗಮ ಅಭಿವ್ಯಕ್ತಿಯಾಗಲಿ ಕಂಡುಬರುವುದಿಲ್ಲ. ಆದರೆ ಕೆಲವು ಕೀರ್ತನೆಗಳು ಬಿಕ್ಕಟ್ಟಾಗಿ ರಚಿತವಾಗಿದ್ದು, ಸಮಕಾಲೀನ ವಾಗ್ಗೇಯಕಾರರ ಕೃತಿಗಳ ಬಂಧಗೌರವದ ಪ್ರಭಾವವನ್ನು ಪ್ರತಿಬಿಂಬಿಸುತ್ತವೆ. (ಎಂ.ವಿ.ಎಸ್.)

**ನಾರಾಯಣಮೂರ್ತಿ, ಎನ್.ಆರ್. :** 1946- . ಬೆಂಗಳೂರಿನ ಇನ್‌ಫೋಸಿಸ್ ಸಂಸ್ಥೆಯ ಅಧ್ಯಕ್ಷ. ಕೋಲಾರ ಜಿಲ್ಲೆಯ ಶಿಡ್ಲಘಟ್ಟದಲ್ಲಿ 1946 ಆಗಸ್ಟ್ 20ರಂದು ಜನಿಸಿದರು. ತಂದೆ ಎನ್. ರಾಮರಾವ್ ಶಿಕ್ಷಕರಾಗಿದ್ದರು. ತಾಯಿ ಪದ್ಮಾವತಮ್ಮ ಇವರ ಮೊದಲ ಓದು

ಮೈಸೂರಿನ ಶಾರದಾವಿಲಾಸ ಶಾಲೆಯಲ್ಲಿ ಎಸ್.ಎಸ್.ಎಲ್.ಸಿ. ಮತ್ತು ಪಿ.ಯು.ಸಿ. ಪರೀಕ್ಷೆಗಳಲ್ಲಿ ರ‍್ಯಾಂಕ್ ವಿಜೇತರು. ಕಾನ್‌ಪುರದ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಲ್ಲಿ ಓದುವ ಅವಕಾಶ ಒದಗಿ ಬಂದರೂ ಮನೆಯ ಆರ್ಥಿಕ ಸ್ಥಿತಿಯಿಂದಾಗಿ ಅಲ್ಲಿಗೆ ಹೋಗಲಾಗಲಿಲ್ಲ. ಮೈಸೂರಿನ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರಿಂಗ್ (ಎನ್‌ಐಇ) ಕಾಲೇಜಿನಲ್ಲಿ ಓದಿ ವಿದ್ಯುತ್ ಎಂಜನಿಯರಿಂಗ್‌ನಲ್ಲಿ ರ‍್ಯಾಂಕ್‌ನೊಂದಿಗೆ ಬಿ.ಇ. ಪದವಿ ಪಡೆದರು (1967). ಮುಂದೆ ಓದಲು ಶಿಷ್ಯವೇತನ ಸಿಕ್ಕಿದ್ದರಿಂದ ಕಾನ್‌ಪುರದ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಲ್ಲಿ (ಐಐಟಿ) ಓದಿ ಸ್ನಾತಕೋತ್ತರ ಪದವಿ (ಎಂ.ಟೆಕ್) ಪಡೆದರು (1969).

ಇದೇ ಸಮಯದಲ್ಲಿ ಕಂಪ್ಯೂಟರ್ ಮಾಹಿತಿ ತಂತ್ರಜ್ಞಾನ ಕುರಿತ ಅಲೆ ಪ್ರಾರಂಭವಾಯಿತು. ಇವರು ಕಂಪ್ಯೂಟರ್ ಕ್ಷೇತ್ರದತ್ತ ಆಸಕ್ತರಾಗಿ ಅಧ್ಯಯನದಲ್ಲಿ ತೊಡಗಿದರು. ಅಹಮ್ಮದಾಬಾದಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್‌ನಲ್ಲಿ ಕೆಲಸಕ್ಕೆ ಸೇರಿಕೊಂಡರು. ಮುಂದೆ ಸೆಸ್ಮಾ ಪ್ಯಾರಿಸ್, ಸಿಸ್ಟಮ್ ರಿಸರ್ಚ್ ಇನ್‌ಸ್ಟಿಟ್ಯೂಟ್ (ಪುಣೆ), ಕಂಪ್ಯೂಟರ್ ಸಿಸ್ಟಮ್ಸ್ (ಮುಂಬಯಿ) ಗಳಲ್ಲಿ ಕೆಲಸ ಮಾಡುತ್ತ ಕಂಪ್ಯೂಟರ್‌ನ ಸಾಧ್ಯತೆಗಳನ್ನು ಕಂಡುಕೊಂಡರು. ಇವರು ಮಾದರಿ ತಯಾರಿಸಿ ಅಭಿವೃದ್ಧಿಪಡಿಸಿದ ಭಾರತದ ಮೊಟ್ಟಮೊದಲ ಬೇಸಿಕ್ ಇಂಟರ್‌ಪ್ರಿಟರ್ ಮತ್ತು ದೇಶದ ಪ್ರಥಮ ಷೇರಿಂಗ್ ಆಪರೇಟಿಂಗ್ ಸಿಸ್ಟಮ್ ಯಶಸ್ವಿಯಾದವು. ಪ್ಯಾರಿಸ್‌ನ ಡಿಗಾಲೆ ಎಲಿರ್‌ಪೋರ್ಟಿನಲ್ಲಿ ಸರಕು ಸಾಗಾಟಕ್ಕಾಗಿ ರಿಯಲ್ ಆಪರೇಟಿಂಗ್ ಸಿಸ್ಟಮ್ ತಯಾರಿಸಿ 400 ಟರ್ಮಿನಲ್ ಮಾದರಿ ರಚನೆಗಾಗಿ ದುಡಿದ ತಂಡದಲ್ಲಿ ನಾರಾಯಣಮೂರ್ತಿಯವರೂ ಇದ್ದರು.

ಇವರ ಪತ್ನಿ ಸುಧಾ ಕುಲಕರ್ಣಿ ಹುಬ್ಬಳ್ಳಿಯಲ್ಲಿ ಎಂಜಿನಿಯರಿಂಗ್ ಓದಿ, ಬೆಂಗಳೂರಿನ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಸಂಸ್ಥೆಯಲ್ಲಿ ಕಂಪ್ಯೂಟರ್ ವಿಜ್ಞಾನ ಶಿಕ್ಷಣ ಪಡೆದು ಎಂ.ಟೆಕ್, ಮುಗಿಸಿ ಪುಣೆಯ ಟೆಲ್ಕೋ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾಗ ನಾರಾಯಣಮೂರ್ತಿಯವರ ಪರಿಚಯ ಬೆಳೆದು ಇಬ್ಬರೂ ಮದುವೆಯಾದರು.

70ರ ದಶಕದಲ್ಲಿ ಭಾರತದಲ್ಲಿ ಕಂಪ್ಯೂಟರ್ ಕ್ರಾಂತಿ ಪ್ರಾರಂಭವಾದಾಗ ಎಲ್ಲ ರಾಜ್ಯ ಸರಕಾರಗಳು, ಖಾಸಗಿ ಸಂಸ್ಥೆಗಳು ಕಂಪ್ಯೂಟರ್ ಪ್ರಯೋಜನ ಪಡೆಯಲು ಸಂಕಲ್ಪಿಸಿದ ಸಂದರ್ಭದಲ್ಲಿ ನಾರಾಣಯಮೂರ್ತಿಯವರು ಈ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಬೇಕೆಂಬ ಹೆಬ್ಬಯಕೆಯಿಂದ ಸಾಪ್ಟವೇರ್ ಉದ್ಯಮಕ್ಕೆ ಕೈಹಾಕಿದರು (1981). ಪುಣೆಯಲ್ಲಿ ತಮ್ಮ ಆರುಜನ ಸಹೋದ್ಯೋಗಿ ಮಿತ್ರರೊಡಗೂಡಿ ಮನೆಯಲ್ಲಿಯೇ ಇನ್‌ಫರ್ಮೇಶನ್ ಸಿಸ್ಟಮ್ಸ್ ಎಂಬ ಸಂಸ್ಥೆ ಆರಂಭಿಸಿದರು (1981). ಮುಂದೆ ಇದೇ ಸಂಸ್ಥೆ ಇನ್‌ಫೋಸಿಸ್ ಟೆಕ್ನಾಲಜಿ ಲಿಮಿಟೆಡ್ ಎಂಬ ಹೆಸರಿನಿಂದ ಅಂತಾರಾಷ್ಟ್ರೀಯ ಪ್ರಸಿದ್ಧಿ ಪಡೆಯಿತು. ಮೊದಲ ಎರಡು ಮೂರು ವರ್ಷ ಪುಣೆಯಲ್ಲಿ ಕಾರ್ಯನಿರ್ವಹಿಸಿದ ಈ ಸಂಸ್ಥೆ 1984ರಲ್ಲಿ ಬೆಂಗಳೂರಿಗೆ ಸ್ಥಳಾಂತರಗೊಂಡು ಅಲ್ಲಿ ಮುಖ್ಯ ಕಾರ್ಯಾಲಯವನ್ನಾರಂಭಿಸಿತು. ಈ ಸಂಸ್ಥೆ ಸಾಫ್ಟ್‌ವೇರ್ ಅಭಿವೃದ್ಧಿ, ಮರುಜೋಡಣೆ ಮತ್ತು ನಿರ್ವಹಣೆಯ ಕಾರ್ಯದೊಂದಿಗೆ ಸಾಪ್ಟವೇರ್ ತಂತ್ರಜ್ಞಾನ ಕ್ಷೇತ್ರದಲ್ಲಿ ಸಮಗ್ರ ಸೇವೆ ನೀಡುತ್ತಿದೆ. ಕರ್ನಾಟಕ. ಮಹಾರಾಷ್ಟ್ರ, ಒರಿಸ್ಸ, ತಮಿಳುನಾಡು ರಾಜ್ಯಗಳಲ್ಲಿ ಹನ್ನೊಂದು ಮತ್ತು ವಿದೇಶಗಳಲ್ಲಿ ಹದಿಮೂರು ಶಾಖೆಗಳನ್ನು ಹೊಂದಿದೆ. ಜಗತ್ತಿನ ಪ್ರಸಿದ್ಧ ಕಂಪನಿಗಳಾದ ರಿಬೋಕ್, ಸಿಟಿಗ್ರೂಪ್, ಗ್ಯಾಪ್, ಬೋಯಿಂಗ್, ನೆಸ್ಲೆ, ನಾರ್ಡ್‌ಸ್ಟ್ರಾರ್ಮ ಜನರಲ್ ಇಲೆಕ್ಟ್ರಿಕ್, ವೀಸಾ, ಆಪಲ್, ನಾರ್ಟೆಲ ಮೊದಲಾದ 130 ಕಂಪನಿಗಳೊಂದಿಗೆ ಸಂಪರ್ಕವಿಟ್ಟುಕೊಂಡು ಸಾಫ್ಟ್‌ವೇರ್ ಸೇವೆ ಒದಗಿಸುತ್ತಿದೆ.

ನಾರಾಯಣಮೂರ್ತಿಯವರು ಭಾರತ ಸರಕಾರದ ರಿಸರ್ವ್ ಬ್ಯಾಂಕ್‌ನ ಕೇಂದ್ರ ಮಂಡಳಿಯಲ್ಲಿ ನಿರ್ದೇಶಕರಾಗಿ, ಇಂಡೋ ಬ್ರಿಟಿಷ್ ಪಾರ್ಟನರ್‌ಶಿಪ್ ಸಂಸ್ಥೆಯ ಸಹ ಅಧ್ಯಕ್ಷರಾಗಿ ಪ್ರಧಾನ ಮಂತ್ರಿಯ ವ್ಯಾಪಾರ ಮತ್ತು ಕೈಗಾರಿಕ ಮಂಡಳಿಯಲ್ಲಿ ಸದಸ್ಯರಾಗಿ ಕೆಲಸ ಮಾಡುತ್ತಿದ್ದಾರೆ. ಇವರು ಏಷ್ಯದ ಅನೇಕ ದೇಶಗಳಲ್ಲಿ ಮಾಹಿತಿ ತಂತ್ರಜ್ಞಾನ ಸಲಹೆಗಾರರಾಗಿದ್ದಾರೆ. ನವೆಂಬರ್ 2002ರಲ್ಲಿ ಸೆಕ್ಯುರಿಟೀಸ್ ಅಂಡ್ ಎಕ್ಸ್‌ಚೇಂಜ್ ಬೋರ್ಡ್ ಆಫ್ ಇಂಡಿಯಾ (SEBI) ಸಂಸ್ಥೆ (ಭಾರತದ ಸೆಕ್ಯೂರಿಟಿ ಮತ್ತು ವಿನಿಮಯ ಮಂಡಳಿ) ಇವರನ್ನು ಕಾರ್ಪೊರೇಟ್ ಗವರ್ನೆನ್ಸ್ ಕಮಿಟಿಯ ಮುಖ್ಯಸ್ಥರನ್ನಾಗಿ ನೇಮಿಸಿತು. ಇವರು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಬೆಂಗಳೂರು ಮತ್ತು ಇಂಡಿಯನ್ ಇಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್, ಅಹಮ್ಮದಾಬಾದ್ ಈ ಸಂಸ್ಥೆಗಳ ಆಡಳಿತ ಮಂಡಳಿಯ (ಗವರ್ನಿಂಗ್ ಬಾಡಿ) ಅಧ್ಯಕ್ಷರಾಗಿದ್ದಾರೆ. ಇದಲ್ಲದೆ ಅನೇಕ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಸಂಸ್ಥೆಗಳಲ್ಲಿ ವಿವಿಧ ಮಟ್ಟದ ಸದಸ್ಯರಾಗಿದ್ದಾರೆ.

ಇನ್‌ಫೋಸಿಸ್ ಯಶಸ್ಸಿಗ ನಾರಾಯಣಮೂರ್ತಿಯವರ ದೂರದೃಷ್ಟಿ, ನಿರಂತರ ದುಡಿಮೆ, ಶಿಸ್ತು, ಪ್ರಾಮಾಣಿಕತೆ ಕಾರಣವಾಗಿವೆ. ಇವರು ಈ ಸಂಸ್ಥೆಯ ಅಧ್ಯಕ್ಷರೂ ಸಲಹೆಗಾರರೂ ಆಗಿದ್ದಾರೆ. ಈಗ ತಮ್ಮ ಸಹೋದ್ಯೋಗಿ, ಸಂಸ್ಥಾಪಕರೊಬ್ಬರಿಗೆ ಈ ಜವಾಬ್ದಾರಿಯನ್ನು ವಹಿಸಿಕೊಟ್ಟಿದ್ದಾರೆ.

ಇವರಿಗೆ ಅನೇಕ ಪ್ರಶಸ್ತಿ ಪುರಸ್ಕಾರಗಳು ಲಭಿಸಿವೆ. ಫಾರ್ಚೂನ್ ಪತ್ರಿಕೆ 2003ರ ಏಷ್ಯದ ಇಬ್ಬರು ಉದ್ಯಮಿಗಳಲ್ಲಿ ನಾರಾಯಣಮೂರ್ತಿಯವರೂ ಒಬ್ಬರು ಎಂದು ಆಯ್ಕೆ ಮಾಡಿದೆ. 2002ರಲ್ಲಿ ಅರ್ನ್ಸ್ಟ್ ಅಂಡ್ ಯಂಗ್ 'ಭಾರತದ ವರ್ಷದ ಸಾಹಸಿ ಉದ್ಯಮಿ' ಎಂದು ಘೋಷಿಸಿದೆ. 2001ರಲ್ಲಿ ಟೈಮ್ಸ್, ಸಿ.ಎನ್.ಎನ್. ಮಾಧ್ಯಮಗಳು ಜಗತ್ತಿನಲ್ಲಿ ಹೊಸ ಉದ್ಯಮ ಸೃಷ್ಟಿ ಮತ್ತು ಮಾರುಕಟ್ಟೆಗಳ ಸಾಧ್ಯತೆಗಳಿಗೆ ಹೊಸರೂಪ ಕೊಟ್ಟ ಇಪ್ಪತ್ತೈದು ಪ್ರಭಾವಶಾಲಿ ಜಾಗತಿಕ ಕಾರ್ಯನಿರ್ವಹಕರಲ್ಲಿ ನಾರಾಯಣಮೂರ್ತಿಯವರೂ ಒಬ್ಬರು ಎಂದು ಇವರನ್ನು ಆಯ್ಕೆ ಮಾಡಿದೆ. ಸ್ವಿಟ್ಸರ್‌ಲೆಂಡಿನ ಮಾಕ್ಸ ಸ್ಕಿಮ್ದೇನಿ ಲಿಬರ್ಟಿ 2001 ಪ್ರಶಸ್ತಿ ದೊರಕಿದೆ. 1996-97ರಲ್ಲಿ ಜೆಆರ್‌ಡಿ ಟಾಟಾ ಅವರ ಕಾರ್ಪೋರೇಟ್ ಲೀಡರ್‌ಶೀಪ್ ಅವಾರ್ಡ್ ಇವರಿಗೆ ಬಂದಿದೆ. 1998ರಲ್ಲಿ ಕಾನ್‌ಪುರದ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ ಇವರಿಗೆ ಪ್ರಶಸ್ತಿ ನೀಡಿದೆ. ಇವಲ್ಲದೆ ಇನ್ನು ಅನೇಕ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಸಂಘ ಸಂಸ್ಥೆಗಳ ಪ್ರಶಸ್ತಿ, ಗೌರವಗಳು ಇವರಿಗೆ ಸಂದಿವೆ. ಇವರಿಗೆ ಕರ್ನಾಟಕ ಸರ್ಕಾರ ರಾಜ್ಯೋತ್ಸವ ಪ್ರಶಸ್ತಿಯನ್ನೂ (1998) ಭಾರತ ಸರ್ಕಾರ ಪದ್ಮಶ್ರೀ (2000) ಪ್ರಶಸ್ತಿಯನ್ನೂ ನೀಡಿ ಗೌರವಿಸಿದೆ. (ಎಸ್.ಎಂ.ಕೆ.)

**ನಾರಾಯಣಶಾಸ್ತ್ರಿ, ಎನ್.ಎಸ್. :** 1902-55. ಪ್ರಸಿದ್ಧ ಮನೋವಿಜ್ಞಾನ ಪರಿಣತರು, ನಾಟಕಕಾರರು, ಶ್ರೇಷ್ಠ ನಟರು, ಇವರು ನರಸಿಂಹರಾಜಪುರದಲ್ಲಿ 1902 ಜೂನ್ 12ರಂದು ಜನಿಸಿದರು. ವೈದಿಕ ವಿದ್ವಾಂಸರಾಗಿದ್ದ ಸುಬ್ರಹ್ಮಣ್ಯಶಾಸ್ತ್ರೀ ಇವರ ತಂದೆ. ಇವರ ಮನೆತನಗಳೇ ಪುರ ಮನೆತನ ಎಂದು ಸುತ್ತಮುತ್ತ ಹೆಸರುಗೊಂಡಿತು.

ನಾರಾಯಣಶಾಸ್ತ್ರಿಗಳ ಪದವಿಪೂರ್ವದ ವಿದ್ಯಾಭ್ಯಾಸ ಹುಟ್ಟೂರಿನಲ್ಲೂ ತುಮಕೂರಿನಲ್ಲೂ ನಡೆಯಿತು. ಅನಂತರ ಮೈಸೂರು ಮಹಾರಾಜ ಕಾಲೇಜಿನಲ್ಲಿ ವ್ಯಾಸಂಗಮಾಡಿ ನಾರಾಯಣ್ ಅವರು ಬಿ.ಎ.ಪದವಿಯನ್ನೂ (1925) ಎಂ.ಎ. ಪದವಿಯನ್ನೂ (1927) ಪಡೆದರು. ಪ್ರಾಯೋಗಿಕ ಮನೋವಿಜ್ಞಾನ ಇವರ ಎಂ.ಎ. ಪದವಿ ವ್ಯಾಸಂಗದ ಪ್ರಧಾನ ವಿಷಯ. ಆ ವಿಷಯದ ಪ್ರಾಧ್ಯಾಪಕರಾಗಿದ್ದ ಎಂ.ವಿ. ಗೋಪಾಲಸ್ವಾಮಿಯವರ ಪ್ರಿಯ ಶಿಷ್ಯರಾಗಿದ್ದ ಇವರು ವ್ಯಾಸಂಗ ಮಾಡಿದ ಕಾಲೇಜಿನಲ್ಲಿಯೇ ಅಧ್ಯಾಪಕರಾಗಿ ನೇಮಕಗೊಂಡು, ಹಲವು ವರ್ಷಕಾಲ ಸೇವೆ ಸಲ್ಲಿಸಿದರು. ಅಧ್ಯಾಪನದೊಂದಿಗೆ ಸಂಶೋಧನೆಯನ್ನೂ ಮಾಡುತ್ತಿದ್ದ ಶಾಸ್ತ್ರಿಗಳು 1940ರಲ್ಲಿ ಸೌಂದರ್ಯಾನುಭೂತಿಯ ಮನೋವೈಜ್ಞಾನಿಕ ವಿವರಣೆ ಎಂಬ ಪ್ರೌಢ ಪ್ರಬಂಧವನ್ನು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿ ಡಿ.ಲಿಟ್,

ಪದವಿಯನ್ನು ಪಡೆದರು. ಕೆಲವು ವರ್ಷಗಳ ತರುವಾಯ ಮಹಾರಾಜ ಕಾಲೇಜಿನ ಉದ್ಯೋಗವನ್ನು ಬಿಟ್ಟು ಬೆಂಗಳೂರಿನ ತಾತಾ ವಿಜ್ಞಾನ ಸಂಸ್ಥೆಯ ಮನೋವಿಜ್ಞಾನ ವಿಭಾಗದಲ್ಲಿ ಪ್ರಾಧ್ಯಾಪಕರಾದರು. 1945-1951ರ ವರೆಗೆ ಭಾರತೀಯ ವಿಜ್ಞಾನ ಮಹಾಸಭೆಯ ಮನೋವಿಜ್ಞಾನ ಶಾಖೆಯ ಅಧ್ಯಕ್ಷರಾಗಿದ್ದರು. 1953ರಲ್ಲಿ ಇವರು ಇಂಗ್ಲೆಂಡಿನಲ್ಲಿ ಅಧ್ಯಯನ ಪ್ರವಾಸ ಮಾಡಿ ಹಿಂತಿರುಗಿದರು. ಅದೇ ವರ್ಷ ಬ್ರಿಟನ್ನಿನ ಮನೋವಿಜ್ಞಾನ ಸಂಘದ ಗೌರವ ಸದಸ್ಯರಾಗಿ ಆಯ್ಕೆಯಾದರು. ಈ ಗೌರವವನ್ನು ಪಡೆದ ಭಾರತೀಯರಲ್ಲಿ ಇವರೇ ಮೊದಲಿಗರು.

ನಾಟಕದ ಬಗ್ಗೆ ವಿಶೇಷ ಒಲವನ್ನು ಬೆಳೆಸಿಕೊಂಡಿದ್ದ ಶಾಸ್ತ್ರಿಗಳು ಮಹಾರಾಜ ಕಾಲೇಜಿನಲ್ಲಿ ಇದ್ದಷ್ಟು ಕಾಲವೂ ಕಾಲೇಜು ಸಂಘ ಮತ್ತು ಕರ್ನಾಟಕ ಸಂಘಗಳ ಆಶ್ರಯದಲ್ಲಿ ಪ್ರತಿವರ್ಷವೂ ನಡೆಯುತ್ತಿದ್ದ ನಾಟಕ ಪ್ರದರ್ಶನಗಳಲ್ಲಿ ಪ್ರಮುಖ ಪಾತ್ರಗಳನ್ನು ವಹಿಸುತ್ತಿದ್ದರು. ಕೆ.ವಿ. ಪುಟ್ಟಪ್ಪನವರ ಯಮನಸೋಲು (ಯಮನ ಪಾತ್ರ) ಮತ್ತು ಬಿರುಗಾಳಿ (ಭೈರವ ನಾಯಕ), ಬಿ.ಎಂ. ಶ್ರೀಕಂಠಯ್ಯನವರ ರನ್ನನ ಗದಾಯುದ್ಧ ನಾಟಕ (ಭೀಮ) ಮತ್ತು ಅಶ್ವತ್ಥಾಮನ್ (ಅಶ್ವತ್ಥಾಮನ್) ಎ.ಎನ್. ಮೂರ್ತಿರಾಯರ ಆಷಾಢಭೂತಿ (ಶಂಕರಪ್ಪ), ವೆಂಬಾರ್ ವೆಂಕಟಾಚಾರ್ಯರ ಸಾವಿನ ಸಮಸ್ಯೆ (ತೆನಾಲಿ ರಾಮಕೃಷ್ಣ) ಮುಂತಾದ ನಾಟಕಗಳಲ್ಲಿ ಹಾಸ್ಯಮಯ ಪಾತ್ರವಾಗಲಿ, ಗಂಭೀರ ಪಾತ್ರವಾಗಲಿ, ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಪಾತ್ರಪೋಷಣೆ ಮಾಡಿ, ಪ್ರೇಕ್ಷಕವರ್ಗಕ್ಕೆ ಅಪೂರ್ವವಾದ ರಸದೌತಣವನ್ನು ಒದಗಿಸುತ್ತಿದ್ದರು. ಮೈಸೂರಿನ ಸಾಹಿತ್ಯ ನಾಟಕ ಕಲಾ ಸಂಸ್ಥೆಯವರು ಪ್ರದರ್ಶಿಸುತ್ತಿದ್ದ ಕನ್ನಡ ಮತ್ತು ಇಂಗ್ಲಿಷ್ ನಾಟಕಗಳಲ್ಲೂ ಇವರು ಅಭಿನಯಿಸುತ್ತಿದ್ದರು. ವಸಂತಸೇನಾ (ಮೃಚ್ಛಕಟಿಕದ ರೂಪಾಂತರ) ಎಂಬ ಮೂಕ ಚಲನಚಿತ್ರದಲ್ಲಿ ಪಾಲಕ ಮಹಾರಾಜನ ಪಾತ್ರವಹಿಸಿದ್ದರು. ಕಲಾ ವಿಲಾಸಿ ರಂಗಭೂಮಿಯ ವಿನೂತನ ವಾಸ್ತವ ಶೈಲಿಯ ಅಭಿನಯ ಸಂಪ್ರದಾಯದ ಬೆಳೆವಣಿಗೆಗೆ ಶಾಸ್ತ್ರಿಗಳ ಕೊಡುಗೆ ಬೆಲೆಯುಳ್ಳದ್ದು.

ಇವರಿಗೆ ರಂಗಭೂಮಿಯ ಪ್ರತ್ಯಕ್ಷ ಅನುಭವವಿದ್ದುದರಿಂದ, ಭಾಸನ ಪಂಚರಾತ್ರ ನಾಟಕವನ್ನು ಪ್ರಯೋಗದೃಷ್ಟಿಯಿಂದ ಕನ್ನಡಕ್ಕೆ ರೂಪಾಂತರ ಮಾಡಿದ್ದಾರೆ. ಈ ಮೂಲಕ, ಲಕ್ಷಣಬದ್ಧ ಪ್ರಾಚೀನ ನಾಟಕಗಳನ್ನು ಆಧುನಿಕ ರಂಗಪ್ರಯೋಗದ ಅಗತ್ಯಗಳಿಗೆ ತಕ್ಕಂತೆ ಅಳವಡಿಸುವ ಕ್ರಮಕ್ಕೆ ಒಂದು ಒಳ್ಳೆಯ ಮಾದರಿಯನ್ನು ಒದಗಿಸಿದ್ದಾರೆ. ಆಧುನಿಕ ವೈಜ್ಞಾನಿಕ ವಿಚಾರಗಳನ್ನು ಕುರಿತು ಕನ್ನಡದಲ್ಲಿ ಭಾಷಣ ಮಾಡುವುದು ಕಷ್ಟಸಾಧ್ಯ ಎಂಬ ಭಾವನೆಯ ಜೊತೆಗೆ, ವಿಶ್ವವಿದ್ಯಾನಿಲಯದ ವಲಯದಲ್ಲಿಯೇ ಕನ್ನಡದ ಬಗೆಗೆ ತಿರಸ್ಕಾರ ಪ್ರಬಲವಾಗಿದ್ದ ಆ ಕಾಲದಲ್ಲಿ, ನಮ್ಮ ದೇಶಕ್ಕೆ ಹೊಸತಾದ ಮನೋವೈಜ್ಞಾನಿಕ ವಿಚಾರಗಳನ್ನು ಕುರಿತು ಮನೆಮಾತಿನ ಕನ್ನಡದಲ್ಲಿ ಆಕರ್ಷಕವಾಗಿ ಭಾಷಣ ಮಾಡುತ್ತಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸಮಾಲೆಯಲ್ಲಿ ಕನಸುಗಳು ಎಂಬ ವಿಷಯವಾಗಿ ಮಾಡಿದ ಭಾಷಣ ಅದೇ ಹೆಸರಿನಲ್ಲಿ ಅಚ್ಚಾಗಿದೆ (1933). ಮಹಾಪುರುಷ ಎಂಬ ಇವರ ಕಾದಂಬರಿ ವಿಕ್ಟರ್ ಹ್ಯೂಗೋನ ಲೆ ಮಿಸರೆಬ್ಲ್ ಎಂಬ ಫ್ರೆಂಚ್ ಭಾಷೆಯ ಪ್ರಸಿದ್ಧ ಕಾದಂಬರಿಯ ರೂಪಾಂತರ, ಮನೋರೋಗಗಳು ಮತ್ತು ಪ್ರಾಯೋಗಿಕ ಮನಶ್ಶಾಸ್ತ್ರಪ್ರವೇಶಿಕೆ - ಇವು ಇವರ ಇಂಗ್ಲಿಷ್ ಕೃತಿಗಳು. ಮನೋವಿಜ್ಞಾನ ಕ್ಷೇತ್ರದಲ್ಲಿ ಇವರ ಪ್ರೌಢಿಮೆಯನ್ನು ಗುರುತಿಸಿ ಸಂಯುಕ್ತ ರಾಷ್ಟ್ರ ಸಂಘದ ಯುನೆಸ್ಕೊ ಶಾಖೆ ಕೈರೊ ನಗರದ ಸಮಾವೇಶದಲ್ಲಿ ಇವರನ್ನು ಒಬ್ಬ ಪ್ರಧಾನಾಧಿಕಾರಿಯಾಗಿ ನೇಮಿಸಿಕೊಂಡಿತ್ತು.

ಇವರು ದೆಹಲಿಯ ಮನೋವೈಜ್ಞಾನಿಕ ಕೇಂದ್ರ ಸಭೆಯಲ್ಲಿ ಭಾಗವಹಿಸಲು ಹೋಗಿದ್ದಾಗ 1955 ಸೆಪ್ಟೆಂಬರ್ 5ರಂದು ತಮ್ಮ 54ನೆಯ ವಯಸ್ಸಿನಲ್ಲಿ ನಿಧನರಾದರು. (ಎಂ.ವಿ.ಎಸ್.)

**ನಾರಾಯಣಶೆಟ್ಟಿ, ಎಸ್. :** 1930- . ಕನ್ನಡದಲ್ಲಿ ಸುಜನಾ ಎಂಬ ಕಾವ್ಯನಾಮದಿಂದ ಹೆಸರಾದ ಕವಿ, ವಿಮರ್ಶಕ. ಮಂಡ್ಯ ಜಿಲ್ಲೆ ಕೃಷ್ಣರಾಜಪೇಟೆ ತಾಲ್ಲೂಕಿನ ಹೊಸಹೊಳಲಿನಲ್ಲಿ 1930 ಏಪ್ರಿಲ್ 13ರಂದು ಜನಿಸಿದರು. ತಂದೆ ಸುಬ್ಬಶೆಟ್ಟಿ, ಹೊಸಹೊಳಲು, ಹೊಳೆನರಸೀಪುರಗಳಲ್ಲಿ ಶಾಲಾ ವ್ಯಾಸಂಗ ಮಾಡಿದರು. ಬೆಂಗಳೂರಿನ ವಿಜಯ ಕಾಲೇಜಿನಲ್ಲಿ ವಿಜ್ಞಾನದಲ್ಲಿ ಇಂಟರ್‌ಮಿಡಿಯಟ್ ಓದಿದರು. ಅನಂತರ ಮೈಸೂರಿನ ಮಹಾರಾಜ ಕಾಲೇಜಿಗೆ ಸೇರಿ ಕನ್ನಡದಲ್ಲಿ ಎಂ.ಎ. ಪಡೆಯಬೇಕೆಂದು ಬಯಸಿದರಾದರೂ ಇವರು ವಿಜ್ಞಾನದ ವಿದ್ಯಾರ್ಥಿಯಾದ್ದರಿಂದ ಪ್ರವೇಶ ಸಿಗುವುದಕ್ಕೆ ನಿಯಮ ಅಡ್ಡಿಬಂತು. ಪ್ರವೇಶ ದೊರಕದಿದ್ದರೆ ಆತ್ಮಹತ್ಯೆ ಮಾಡಿಕೊಳ್ಳುವದೆಂದು ಮನಸ್ಸು ಮಾಡಿದ್ದರು. ಕೊನೆಗೂ ಇವರು ಕನ್ನಡ ಬಿ.ಎ. (ಆನರ್ಸ್)ಗೆ ಪ್ರವೇಶ ಪಡೆದರು. ಅನಂತರ ಕನ್ನಡ ಎಂ.ಎ. ಪದವಿ ಪಡೆದು ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿ ನೇಮಕಗೊಂಡರು. ಮುಂದೆ ಪ್ರವಾಚಕರೂ ಪ್ರಾಧ್ಯಾಪಕರೂ ಸ್ವಲ್ಪಕಾಲ ಮೈಸೂರು ವಿಶ್ವವಿದ್ಯಾಲಯದ ಕುಲಸಚಿವರಾಗಿ ಕಾರ್ಯನಿರ್ವಹಿಸಿದರು (1985-87) ಮತ್ತು ಯುವರಾಜ ಕಾಲೇಜಿನ ಪ್ರಾಚಾರ್ಯರಾಗಿ (1988) ನಿವೃತ್ತಿಹೊಂದಿದರು. ಇವರು ಮೈಸೂರು ವಿಶ್ವವಿದ್ಯಾನಿಲಯದ ಪ್ರಬುದ್ಧ ಕರ್ನಾಟಕ ಪತ್ರಿಕೆಯ ಸಂಪಾದಕರಾಗಿದ್ದರು (1959-65).

ಸುಜನಾ ಅವರ ಮೊದಲನೆಯ ಕವನ ಸಂಕಲನ ಮಂಗಳಾರತಿ (1956) ನಾಣ್ಯಯಾತ್ರೆ 1965ರಲ್ಲಿ ಪ್ರಕಟವಾಯಿತು. 1982ರವರೆಗಿನ ಇವರ ಕವನಗಳು ಒಂದೇ ಸೂರಡಿಯಲ್ಲಿ ಎಂಬ ಶೀರ್ಷಿಕೆಯಡಿ ಪ್ರಕಟವಾಗಿವೆ. ಸೊನ್ನೆ ಎರಡರ ನಡುವೆ (1982), ಉಡಿದಾರ (1982) - ಇವು ಇವರ ಇತರ ಕವನ ಸಂಕಲನಗಳು. ಹೃದಯ ಸಂವಾದ (1965), ಪರಂಪರೆ (1982), ಕುವೆಂಪು ಮತ್ತು ಪರಂಪರೆ (1984) - ಇವು ವಿಮರ್ಶಾ ಸಂಕಲನಗಳು. ಕಣಗಳು (1983) ಎಂಬುದು ಕಿರುಕವಿತೆಗಳ ಸಂಕಲನ.

ಸುಜನಾ ಅವರ ಮಹಾಕಾವ್ಯ 'ಯುಗಸಂಧ್ಯಾ' (1999). ಹತ್ತು ವರ್ಷಗಳ ಕಾಲಾವಧಿಯಲ್ಲಿ ಇವರು ಇದನ್ನು ರಚಿಸಿದರು. ತಮ್ಮ ಕಾವ್ಯರಚನೆಯ ಪ್ರಾರಂಭದ ದಿನಗಳಿಂದಲೂ ಗುಪ್ತವಾಗಿ, ಬಿಡದೆ ನಡೆದುಬಂದಿರಬಹುದಾದ ಸರಳ ರಗಳೆಯ ಛಂದಸ್ಸನ್ನು ಕೊಂಚ ಸ್ವಾತಂತ್ರ್ಯ ವಹಿಸಿ ಬಳಸಿಕೊಂಡಿರುವುದಾಗಿ ಇವರು ಹೇಳಿಕೊಂಡಿದ್ದಾರೆ. ಇದು ಮಹಾಭಾರತದ ಪಾಂಡವ ವಿಜಯದ ಅನಂತರದ ಕಥೆ. "ವ್ಯಾಸರು ಮಹಾಭಾರತದಲ್ಲಿ ಆ ಭಾಗವನ್ನು ವಿಶೇಷವಾಗಿ ಬೆಳೆಸಿದ್ದಾರೆ. ಆದರೆ ಕನ್ನಡದಲ್ಲಿ ಭಾರತವನ್ನು ಬರೆದ ಪಂಪನಾಗಲಿ, ಕುಮಾರವ್ಯಾಸನಾಗಲಿ ಆ ಜಾಡಿನಲ್ಲಿ ಮುನ್ನಡೆಯಲಿಲ್ಲ. ಪಾಂಡವರು ಗೆದ್ದ ಮೇಲೆ, ಧರ್ಮಾಧರ್ಮ, ಯುದ್ಧದಲ್ಲಿ ಧರ್ಮಕ್ಕೆ ಜಯ ದೊರಕಿದ ಮೇಲೆ ಮುಂದೆ ಏನು ಸ್ವಾರಸ್ಯವಿದ್ದೀತು ಎಂದೋ ಏನೋ" ಎಂಬುದು ಸುಜನಾ ಅವರ ಅನಿಸಿಕೆ. ಇವರು ವ್ಯಾಸಹೃದಯವನ್ನು ಅರಿತು ಮುನ್ನಡೆದರು. ಮಹಾಭಾರತ ಯುದ್ಧವಾದ ಮೇಲೆ ಕೊನೆಯಲ್ಲಿ ಕೃಷ್ಣ ಬೇಡನೊಬ್ಬನ ಬಾಣಕ್ಕೆ ದೇಹತ್ಯಾಗ ಮಾಡಿದ. ಇದರ ಅರ್ಥವೇನು? ಎಲ್ಲವೂ ಸಪ್ಪೆಯಾಗಿ ಪರಿಣಮಿಸಬೇಕೆ? ಮಹಾಭಾರತ ಯುದ್ಧಾನಂತರವೂ ಉಳಿದಿದ್ದ ಲೋಕಕಂಟಕರೆಲ್ಲರ ನಿರ್ನಾಮ ದೈವಸಂಕಲ್ಪವಾಗಿತ್ತು. ಬೇಡನ ಬಾಣಕ್ಕೆ ಕೃಷ್ಣ ದೇಹತ್ಯಾಗ ಮಾಡಿದ್ದು ಅರ್ಥವತ್ತಾದದ್ದು. ಮುಳ್ಳನ್ನು ಮುಳ್ಳಿನಿಂದ ತೆಗೆದು ಎರಡನ್ನೂ ಎಸೆದುಬಿಡುವಂತೆ, ಲೋಕಕಾರ್ಯವನ್ನು ನಿರ್ಮೂಲ ಮಾಡಿದ ಶ್ರೀಕೃಷ್ಣ ತನ್ನ ದೇಹವನ್ನು ಕಳಚಿ ಒಗೆದ ದರ್ಶನ ಸುಜನಾ ಅವರಿಗೆ ಆಯಿತು. ಇವರ ದೃಷ್ಟಿಯಲ್ಲಿ ಇದೊಂದು ಅದ್ಭುತ. ಮುಂದಿನ ಕಥೆಯನ್ನು ಇವರು ಇಲ್ಲಿ ವರ್ಣಿಸಿದ್ದಾರೆ.

ಕುಮಾರವ್ಯಾಸ ಭಾರತವನ್ನು ಜನಪ್ರಿಯ ಆವೃತ್ತಿಗಾಗಿ ಸಿದ್ಧಪಡಿಸುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡದ್ದು ಇವರು ಆಗಿನಿಂದಲೇ ಈ ಕಥಾಭಾಗದ ಅಭಿವ್ಯಕ್ತಿಗೆ ಮಾನಸಿಕವಾಗಿ ತೊಡಗಿದ್ದರು. 'ಯುಗಸಂಧ್ಯಾ' ಮಹಾಕಾವ್ಯವನ್ನು ರಚಿಸತೊಡಗಿದಾಗ ಇವರ ದೇಹಸ್ಥಿತಿ ಕೆಟ್ಟಿತು. ಲೇಖನಿ ಹಿಡಿದು ಬರೆಯಲಾಗದವರಾದರು. ಮಕ್ಕಳ ಸಹಕಾರದಿಂದ ಇದು ಪೂರೈಸಿತು. ಭಾರತೋತ್ತರ ಕಥಾ ವಿಷಯ ಪ್ರಸಂಗದೊಳಗೇನುಂಟು? ರಸಪೂರ್ಣ ಕಥೆಯೆ? ಕ್ರಿಯೆಯೆ? ದರ್ಶನವೆ? ಮನುಜಮನದರ್ಥಗಳೆ ಎಂಬ ಪ್ರಶ್ನೆಗೆ ನಾನೂರಿಪ್ಪತ್ತೈದು ಪುಟಗಳ ಈ ಮಹಾಕಾವ್ಯ ಉತ್ತರವಾಗಿದೆ. ಈ

ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರಕಿದೆ (2002).

ಇವರಿಗೆ ದೊರಕಿರುವ ಇತರ ಪ್ರಶಸ್ತಿಗಳು ಇವು ವರ್ಧಮಾನ ಪ್ರಶಸ್ತಿ (1982), ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1989), ರಾಜ್ಯೋತ್ಸವ ಪ್ರಶಸ್ತಿ (1994), ದೇವರಾಜ ಬಹದ್ದೂರ್ ಪ್ರಶಸ್ತಿ (1997). (ಎಚ್.ಎಸ್.ಕೆ.)

**ನಾಲ್ಕುನಾಡು :** ಕೊಡಗು ಜಿಲ್ಲೆ ಮಡಿಕೇರಿ ತಾಲ್ಲೂಕಿನಲ್ಲಿ ನಾಪೊಕ್ಲುನಾಡಿನಲ್ಲಿರುವ ಒಂದು ಪ್ರಾಚೀನ ಸ್ಥಳ. ನಾಪೊಕ್ಲುವಿನಿಂದ 10ಕಿಮೀ ದೂರದಲ್ಲಿರುವ ಈ ಸ್ಥಳವನ್ನು ಕಕ್ಕಬೆಯ ಮೂಲಕ ತಲುಪಬಹುದು. ಕೊಡಗಿನ ಪಶ್ಚಿಮಭಾಗದಲ್ಲಿ ಉನ್ನತವಾಗಿ ಎದ್ದ ಬೆಟ್ಟಸಾಲು, ದಟ್ಟವಾಗಿ ಬೆಳೆದ ಕಾಡುಗಳಿಂದ ಸ್ವಾಭಾವಿಕವಾದ ರಕ್ಷಣೆಯನ್ನು ಪಡೆದಿದ್ದು ಕೊಡಗಿನ ಅರಸರಿಗೆ ಇದು ಭದ್ರ ನೆಲೆಯಾಗಿತ್ತು. ಸ್ವಾಭಾವಿಕವಾದ ರಕ್ಷಣೆಯ ಜೊತೆಗೆ ಈ ಗಿರಿದುರ್ಗಕ್ಕೆ ಕೊಡಗಿನ ಅರಸರು ಆಳವಾದ ಕಡಂಗುಗಳನ್ನು ತೋಡಿಸಿ ಮತ್ತಷ್ಟು ಭದ್ರಪಡಿಸಿದ್ದುದರಿಂದ ಶತ್ರುಗಳ ದಾಳಿಗೆ ಅಭೇದ್ಯವೆನಿಸಿತ್ತು. ಇದಕ್ಕೆ ಸೇರಿದಂತೆಯೇ ಕೊಡಗಿನಲ್ಲಿಯೇ ಅತ್ಯುನ್ನತವಾದ ತಡಿಯಂಡಮೋಳ್ ಎಂಬ ಶಿಖರವುಳ್ಳ ಬೆಟ್ಟವಿರುವುದು. ಹಾಲೇರಿ ಮಡಿಕೇರಿಗಳ ಜೊತೆಗೆ ಕೊಡಗಿನ ಅರಸರಿಗೆ ಇದು ಮೂರನೆಯ ರಾಜಧಾನಿ. ಈಗ ಯವಕಪಾಡಿ ಎಂದು ಕರೆಯುವ ಹಳ್ಳಿಯಲ್ಲಿ ದೊಡ್ಡ ವೀರರಾಜೇಂದ್ರ 1792ರಲ್ಲಿ ಒಂದು ಅರಮನೆಯನ್ನು ಕಟ್ಟಿಸಿದ. ಈ ಅರಮನೆಗಾಗಿಯೇ ಈ ಸ್ಥಳ ಈಗಲೂ ಪ್ರಸಿದ್ಧವಾಗಿದೆ. ಮಡಿಕೇರಿ ಅರಮನೆಯಷ್ಟು ದೊಡ್ಡದಲ್ಲದಿದ್ದರೂ ಇದು ಇನ್ನಷ್ಟು ಭದ್ರವಾದ ಮತ್ತು ಸ್ಥೂಲವಾದ ಕಟ್ಟಡ. ಎರಡು ಅಂತಸ್ತುಗಳಲ್ಲಿ ಕಟ್ಟಲಾಗಿರುವ ಈ ಅರಮನೆಗೆ ಇಟ್ಟಿಗೆ ಗಾರೆಗಳ ದಪ್ಪ ಗೋಡೆಗಳಿದ್ದು ಉಳಿದಂತೆ ಹೆಚ್ಚು ಮರದ ಸಾಮಾನುಗಳನ್ನೇ ಉಪಯೋಗಿಸಿದೆ. ಕೆಳಗಿನ ಅಂತಸ್ತಿನಲ್ಲಿ ದಪ್ಪಮರದ ಕಂಬಗಳಿದ್ದು, ಅವು ಬುಡ ದಪ್ಪನಾಗಿದ್ದು ಮೇಲೆ ಹೋಗುತ್ತ ಸಣ್ಣಗಾಗುವಂತೆ ಇವೆ. ಮೇಲಿನ ಅಂತಸ್ತಿನಲ್ಲಿ ಸುಂದರವಾದ ಕಂಡರಣೆಯನ್ನು ಕಾಣಬಹುದು. ಮೇಲಿನ ದೊಡ್ಡ ಹಜಾರ ಅರಸನ ಒಡ್ಡೋಲಗ ಶಾಲೆಯಾಗಿತ್ತು. ಅದರ ಕಂಬಗಳೂ ಬುಡದಪ್ಪನಾದ ಮೇಲೇರುತ್ತ ಸಣ್ಣಗಾಗುವಂತಿದ್ದು ಅಂದವಾಗಿ ಕಂಡರಿಸಲಾಗಿವೆ. ಮರದ ತೊಲೆಗಳು ಮತ್ತು ಹಲಗೆಗಳಿಂದ ನಿರ್ಮಿಸಿರುವ ಚಾವಣಿಯ ಒಳಭಾಗದಲ್ಲಿ ಕೆತ್ತನೆಯ ಕೆಲಸವಿದೆ. ಮತ್ತು ಚಾವಣಿಯಲ್ಲಿ ಹೂ, ಬಳ್ಳಿ, ಸುರುಳಿ ಮುಂತಾದ ಅಲಂಕರಣಗಳನ್ನು ಬಣ್ಣದಿಂದ ಚಿತ್ರಿಸಿದೆ. ಮಡಿಕೇರಿಯ ಅರಮನೆಯ ಕೆಲವು ಭಾಗಗಳಲ್ಲಿ ಉಳಿದುಬಂದಿರುವಂತೆ ಇಲ್ಲಿಯೂ ಗೋಡೆಯ ಮೇಲೆ ಒಂದು ಕಾಲದಲ್ಲಿ ವ್ಯಕ್ತಿಚಿತ್ರಗಳು, ದೇವರ ಮೂರ್ತಿಗಳ ಚಿತ್ರಗಳು ತುಂಬಿದ್ದಂತೆ ತೋರುತ್ತದೆ. ಆದರೆ ಈಗ ಅವು ಬಹುಮಟ್ಟಿಗೆ ಈಚೆಗೆ ಬಳಿದಿರುವ ಸುಣ್ಣದಿಂದ ಮುಚ್ಚಿಹೋಗಿದ್ದು ಚಿತ್ರಗಳ ಕುರುಹು ಮಾತ್ರ ಅಲ್ಲಲ್ಲಿ ಗೋಚರಿಸುತ್ತದೆ. ಒಂದು ಕಡೆ ಜಗತಿಯಂತೆ ಉನ್ನತ ಸ್ಥಾನವೊಂದಿದ್ದು ಅಲ್ಲಿ ರಾಜನ ಸಿಂಹಾಸನವಿರುತ್ತಿತ್ತು. ಒಟ್ಟಿನಲ್ಲಿ ಕಟ್ಟಡದ ಉಳಿದ ಭಾಗಗಳು ಸರಳವಾಗಿದ್ದರೂ ಈ ಓಲಗಶಾಲೆಯನ್ನು ಸುಂದರವಾಗಿ ಅಲಂಕರಿಸಿದೆ.

ಇಲ್ಲಿನ ಮತ್ತೊಂದು ಆಕರ್ಷಕವಾದ ಕಟ್ಟಡವೆಂದರೆ ಅರಮನೆಯ ಮುಂದೆ ಬಲಭಾಗದ ಮೂಲೆಯಲ್ಲಿ ನಿಂತಿರುವ ಪುಟ್ಟದಾದ ಒಂದು ಮಂಟಪ. ಇದನ್ನು ಧಾರೆಯಮಂಟಪ ಎನ್ನುತ್ತಾರೆ. ದೊಡ್ಡವೀರರಾಜೇಂದ್ರ 1796ರಲ್ಲಿ ಮಹದೇವಮ್ಮನನ್ನು ಮದುವೆಯಾದಾಗ ಆ ಮದುವೆಯ ಸಮಾರಂಭಕ್ಕಾಗಿ ಈ ಪುಟ್ಟ ಮಂಟಪವನ್ನು ನಿರ್ಮಿಸಲಾಯಿತು. ಚೌಕವಿನ್ಯಾಸದ ಒಂದಂಕಣದ ಈ ಮಂಟಪದ ನಾಲ್ಕು ಕಡೆಯೂ ಮುಸ್ಲಿಂ ರೀತಿಯ ವೃತ್ತಭಾಗಗಳನ್ನುಳ್ಳ ಕಮಾನುಗಳಿದ್ದು ನಾಲ್ಕು ಮೂಲೆಗಳಲ್ಲಿಯೂ ಅರೆಗಂಬಗಳು, ಮೂರ್ತಿಗಳಿಂದ ಅಲಂಕೃತವಾದ ಗೂಡುಗಳು, ಗೂಡುಗಳ ಪಕ್ಕಗಳಲ್ಲಿ ಬಗೆಬಗೆಯ ಅಲಂಕರಣಗಳಿಂದ ತುಂಬಿದ ಪಟ್ಟಿಕೆಗಳು ಇವೆ. ಇವೆಲ್ಲ ತುಂಬ ನವುರಾಗಿ ನಿರ್ಮಿತವಾಗಿವೆ. ಇಟ್ಟಿಗೆ ಗಾರೆಗಳಿಂದ ನಿರ್ಮಿತವಾಗಿದ್ದು ಗಚ್ಚಿನಲ್ಲಿ ಅಲಂಕರಣಗಳನ್ನು ಮೂರ್ತಿಗಳನ್ನೂ ಬಿಡಿಸಿರುವ ಈ ಮಂಟಪ ಬಹುಶಃ ಕೊಡಗಿನಲ್ಲಿಯೇ ಅತಿ ಸುಂದರವಾದ ಮಂಟಪವೆನ್ನಬಹುದು.

ಈ ಊರಿನಲ್ಲಿ ಪನ್ನಂಗಲತಮ್ಮೆಯ ದೇವಾಲಯವಿದೆ. ಇದಕ್ಕೆ ನಡೆದುಕೊಳ್ಳುವವರು ಹೆಚ್ಚಾಗಿ ಹರಿಜನರು. ಏಪ್ರಿಲ್ ತಿಂಗಳಿನಲ್ಲಿ ಇಲ್ಲಿ ನಡೆಯುವ ಜಾತ್ರೆಗೆ ಅಧಿಕಸಂಖ್ಯೆಯಲ್ಲಿ ಜನರು ಸೇರುತ್ತಾರೆ.

ಅರಮನೆಯ ಕೆಳಭಾಗದಲ್ಲಿ ಒಂದು ಕಾಲಕ್ಕೆ ನಾಡಿನ ಕಚೇರಿಯಿತ್ತು. ಮೇಲಿನ ಅಂತಸ್ತನ್ನು ಉನ್ನತ ಅಧಿಕಾರಿಗಳು ಬಂದಾಗ ಉಳಿದುಕೊಳ್ಳಲು ಉಪಯೋಗಿಸುತ್ತಿದ್ದರು. ಈಗ ಇಲ್ಲಿ ಜೇನುಸಾಕಣೆ ಕೇಂದ್ರವೊಂದಿದೆ. (ಎಂ.ಎಚ್.)

**ನಿಂಬಾಳ :** ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನ ಒಂದು ಗ್ರಾಮ. ಇಂಡಿಯ ನೈಋತ್ಯಕ್ಕೆ 22ಕಿಮೀ ಬಿಜಾಪುರದ ಈಶಾನ್ಯಕ್ಕೆ 36 ಕಿಮೀ ಮತ್ತು ಬಿಜಾಪುರ ಸೊಲ್ಲಾಪುರ ರಸ್ತೆಯ ಹೊರ್ತಿ ಗ್ರಾಮದ ಬಲಕ್ಕೆ 8 ಕಿಮೀ ಅಂತರದಲ್ಲಿದೆ. ಇದು ಗದಗ-ಸೊಲ್ಲಾಪುರ ರೈಲು ಮಾರ್ಗದಲ್ಲಿ ಬಿಜಾಪುರ-ಇಂಡಿರೋಡ್ ಮಧ್ಯದಲ್ಲಿರುವ ಒಂದು ನಿಲ್ದಾಣ. ಈ ಗ್ರಾಮದಿಂದ ಸುತ್ತಿನ ತಡವಲಗ, ಹೊರ್ತಿ ಮತ್ತು ಇಂಡಿಗೆ ಮಾರ್ಗ ಸಂಪರ್ಕವುಂಟು.

ಇದು ತತ್ತ್ವಜ್ಞಾನಿ ಮತ್ತು ಯೋಗಿ ಆರ್.ಡಿ.ರಾನಡೆ ಅವರ ಧಾರ್ಮಿಕ ಕೇಂದ್ರವಾಗಿತ್ತು. ಅವರು ಸಮಾಧಿಸ್ಥರಾದದ್ದೂ ಇಲ್ಲಿಯೇ. ಪ್ರತಿವರ್ಷ ಇಲ್ಲಿ ಇವರ ಶಿಷ್ಯರು ಸೇರಿ ಸಪ್ತಾಹವನ್ನಾಚರಿಸುತ್ತಾರೆ. ನಿಂಬಾಳದಲ್ಲಿ ಪ್ರಸಿದ್ಧ ಹೊಯ್ಸಳ ಶಿಲ್ಪಿ ಜಕ್ಕಣಾಚಾರ್ಯ ಇದ್ದನೆಂದು ಪ್ರತೀತಿ. (ಎಸ್.ಎಸ್.ಎನ್.)

**ನಿಕ್ಕಂ, ಎನ್.ಎ. :** 1903-1974. ನಿಕ್ಕಂ ನಾರಾಯಣರಾವ್ ಅಪ್ಪೂರಾವ್ ಇವರ ಪೂರ್ಣ್ಣಹೆಸರು. ಪ್ರಸಿದ್ಧ ತತ್ತ್ವಶಾಸ್ತ್ರ ಪ್ರಾಧ್ಯಾಪಕರು. 1903 ಮೇ 5ರಂದು ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕು ಕೆಸ್ತೂರು ಗ್ರಾಮದಲ್ಲಿ ಜನಿಸಿದರು. ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಓದಿ ತತ್ತ್ವಶಾಸ್ತ್ರದಲ್ಲಿ ಬಿ.ಎ. ಪದವೀಧರರಾದರು. ವಿವಾಹವಾದ್ದು 1929ರಲ್ಲಿ ತತ್ತ್ವಶಾಸ್ತ್ರದಲ್ಲಿ ಎಂ.ಎ. ಪದವಿ ಪಡೆದರು. ಬಾಬಾ ಸ್ಮಾರಕ ಸುವರ್ಣ ಪದಕ ಪಡೆದರು (1930). ಅದೇ ವರ್ಷ ಮೈಸೂರು ಸಂಸ್ಥಾನದ ದಾಮೋದರಂ ದಾಸ್ ವಿದೇಶಿ ವಿದ್ಯಾರ್ಥಿ ವೇತನ ಪಡೆದು ಉಚ್ಚಶಿಕ್ಷಣ ಪಡೆಯಲು (ಕೇಂಬ್ರಿಜ್ಜಿನ ಸೇಂಟ್ ಜಾನ್ ಕಾಲೇಜಿನಲ್ಲಿ) ಇಂಗ್ಲೆಂಡಿಗೆ ತೆರಳಿ ತತ್ತ್ವಶಾಸ್ತ್ರದ ಪ್ರೌಢ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಇವರ ಶಿಕ್ಷಣವೃತ್ತಿ ಚಾಮರಾಜನಗರದಲ್ಲಿ ಶಾಲಾ ಮಕ್ಕಳಿಗೆ ಬೋಧಿಸುವುದರೊಂದಿಗೆ ಆರಂಭವಾಯಿತು.ತರುವಾಯ ಬೆಂಗಳೂರಿನ ಕೋಟೆ ಹೈಸ್ಕೂಲಿನಲ್ಲಿ ಉಪಾಧ್ಯಾಯರಾಗಿದ್ದರು. ಅನಂತರ ಕೊಲ್ಲಾಪುರದ ರಾಜಾರಾಂ ಕಾಲೇಜಿನಲ್ಲಿ ಅಧ್ಯಾಪಕರಾದರು. ಆರುವರ್ಷಗಳ ಅನಂತರ ಬೆಂಗಳೂರು ಮಹಾರಾಣಿ ಕಾಲೇಜಿನ ತತ್ತ್ವಶಾಸ್ತ್ರ ವಿಭಾಗದ ಮುಖ್ಯಸ್ಥ ಹಾಗೂ ಸಹಾಯಕ ಪ್ರಾಧ್ಯಾಪಕರಾಗಿ ನೇಮಕಗೊಂಡರು 1944-55. ಆ ವೇಳೆಯಲ್ಲಿ ಫುಲ್‌ಬ್ರೈಟ್ ಮತ್ತು ಫೋರ್ಡ್ ಫೌಂಡೇಷನ್ ವ್ಯಾಸಂಗವೇತನ ಪಡೆದು 1952-53ರಲ್ಲಿ ಅಮೆರಿಕದ ಯೇಲ್ ವಿಶ್ವ ವಿದ್ಯಾನಿಲಯದ ಸೆಲಿಮನ್ ಕಾಲೇಜಿನ ಪಂಡಿತಸಭೆಯ ಸಹಸದಸ್ಯರಾಗಿದ್ದರು. 1955ರಲ್ಲಿ ಮಹಾರಾಜ ಕಾಲೇಜಿನಲ್ಲಿ ತತ್ತ್ವಶಾಸ್ತ್ರ ಹಾಗೂ ಸಮಾಜ ಶಾಸ್ತ್ರ ವಿಭಾಗದ ಮುಖ್ಯಸ್ಥರೂ ಪ್ರಾಧ್ಯಾಪರಕೂ ಆದರು. ಭಾರತೀಯ ಧರ್ಮಶಾಸ್ತ್ರ ಹಾಗೂ ದರ್ಶನಿಗಳ ಬಗ್ಗೆ ಇವರ ಪಾಂಡಿತ್ಯ ಪಾಶ್ಚಾತ್ಯ ದಾರ್ಶನಿಕರ ಗಮನವನ್ನು ಸೆಳೆಯಿತು. ಇವರು 12 ವರ್ಷಗಳ ಕಾಲ 1949-61 ಭಾರತೀಯ ದಾರ್ಶನಿಕ ಪರಿಷತ್ತಿನ ಕಾರ್ಯದರ್ಶಿಯಾಗಿದ್ದರು. ಯುನೆಸ್ಕೊ ಸಂಸ್ಥೆಯ ಯೋಜನೆಯ ಪ್ರಕಾರ ಎರಡು ಚಕ್ರಗೋಷ್ಠಿಗಳನ್ನು ಏರ್ಪಡಿಸಿದರು. ಈ ಪರಿಷತ್ತಿನ ದೆಹಲಿ ಅಧಿವೇಶನಕ್ಕೆ 1965 ಇವರು ಈ ಅವಧಿಯಲ್ಲಿ ಅಧ್ಯಕ್ಷರಾಗಿ ನೇಮಕವಾದರು.

ಅಂತಾರಾಷ್ಟ್ರೀಯ ದಾರ್ಶನಿಕ ಸಂಸ್ಥೆಯ ಚುನಾಯಿತ ಸದಸ್ಯರಾಗಿ

ಅಥೆನ್ಸ್ ವಾರ್ಸಾ, ಪ್ಯಾರಿಸ್, ಜೆರೂಸಲೆಂ, ಸಾಂತಾ ಬಾರ್ಬರಾ, ಮೈಸೂರು ಆ್ಯಮ್‌ಸ್ಟರ್‌ಡ್ಯಾಂ, ಹೈಡೆಲ್‌ಬರ್ಗ್, ಆಕ್ಸ್‌ಫರ್ಡ್ ಮತ್ತು ಕೇಂಬ್ರಿಜ್ ಈ ಸ್ಥಳಗಳಲ್ಲಿ ನಡೆದ ಸಮ್ಮೇಳನದಲ್ಲಿ ಭಾಗವಹಿಸಿದರು. 1958ರಲ್ಲಿ ವೆನಿಸ್‌ನಲ್ಲಿ ನಡೆದ ಎಂಟನೆಯ ಅಂತಾರಾಷ್ಟ್ರೀಯ ದಾರ್ಶನಿಕ ಪರಿಷತ್ತಿನ ಸಮ್ಮೇಳನದ ವಿಚಾರಗೋಷ್ಠಿಯಲ್ಲಿ ಅಧ್ಯಕ್ಷತೆವಹಿಸಿದರು. ಯುನೆಸ್ಕೊ ಸಂಸ್ಥೆ ವ್ಯವಸ್ಥೆಗೊಳಿಸಿದ ದಾರ್ಶನಿಕ ಸಂಘಗಳ ಅಂತಾರಾಷ್ಟ್ರೀಯ ಒಕ್ಕೂಟದ ಆಡಳಿತ ಸಮಿತಿಯ ಸದಸ್ಯರಾಗಿ ಎರಡು ಬಾರಿ ಚುನಾಯಿತರಾದರು. ಯುನೆಸ್ಕೊ ಸದಸ್ಯರಾಷ್ಟ್ರಗಳಲ್ಲಿ ತತ್ತ್ವಶಾಸ್ತ್ರ, ಶಿಕ್ಷಣದ ಪರಿಶೀಲನೆ ಮತ್ತು ಮಾನವ ಹಕ್ಕುಗಳ ಸಂಬಂಧವಾದ ಪತ್ರಗಳ ಆಧಾರ ಗ್ರಂಥ ತಯಾರಿಕೆ - ಇವುಗಳ ಬಗ್ಗೆ ಯುನೆಸ್ಕೊ ಸಂಸ್ಥೆ ಏರ್ಪಡಿಸಿದ ಉಪ ಆಯೋಗಗಳಲ್ಲಿ ಸದಸ್ಯರಾಗಿದ್ದರು. ಅಮೆರಿಕದ ದಾರ್ಶನಿಕ ಸಂಘ, ಇಂಗ್ಲೆಂಡಿನ ಅರಿಸ್ಟಾಟಲ್ ಪಂಥದಸಂಘ, ನ್ಯೂಯಾರ್ಕಿನ ನೀತಿಶಾಸ್ತ್ರ, ಸಂಸ್ಥೆ, ಭಾರತದ ಪಿ.ಇ.ಎನ್. ಸಂಘ,ಬೆಂಗಳೂರಿನ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್, ಅಮೆರಿಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆ - ಇವುಗಳ ಸದಸ್ಯರಾಗಿದ್ದರು. ಇವರು 1960ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಯಾಗಿ ನೇಮಕವಾದರು.

ನಿಕ್ಕಂ ಉತ್ತಮ ಚಿಂತಕರಾಗಿದ್ದರು. ಭಾರತ ಸಂಸ್ಕೃತಿಯ ಕೆಲವು ಕಲ್ಪನೆಗಳು, ಶುದ್ಧ ಪ್ರಜ್ಞೆಯ ಬಗ್ಗೆ ಕಾಂಟನ ವಿಮರ್ಶೆಗೆ ಒಂದು ಪ್ರಸ್ತಾವನೆ, ಬುದ್ಧಿ ಅರಿವು ಮತ್ತು ಸಹಜ ಪ್ರಜ್ಞೆ, ಉಪನಿಷತ್ತಿನ ಬೋಧಕರು, ರಮಣ ಮಹರ್ಷಿ ಆಧ್ಯಾತ್ಮ ಯೋಗದ ಒಂದು ಅಧ್ಯಯನ, ಹತ್ತು ಪ್ರಧಾನ ಉಪನಿಷತ್ತುಗಳು ಗಾಂಧಿಯವರ ಧರ್ಮ ಸಾಕ್ಷಾತ್ಕಾರ ಇವು ಇವರ ಕೆಲವು ಗ್ರಂಥಗಳು. ಇವರು ಪತಂಜಲಿಯ ಯೋಗಸೂತ್ರಗಳ ಬಗ್ಗೆ ಮೂರು ಅಧ್ಯಾಯನಗಳನ್ನು ರಚಿಸಿದರು ಹಲವಾರು ದಾರ್ಶನಿಕ ಸಂಸ್ಥೆಗಳ ಹಾಗೂ ದಾರ್ಶನಿಕ ಸಮ್ಮೇಳನಗಳ ಪ್ರಕಟಣೆಗಳಿಗೆ ಇವರು ಸಂಪಾದಕರಾಗಿದ್ದರು. ಶಾಂತಿಸಾಧನೆಗೆ ಮಾನವ ಕುಲದ ಮೇಲೆ ಪ್ರಭಾವ ಬೀರಿದ ಗ್ರಂಥಗಳು ಎಂಬ ಮಾಲಿಕೆಯಲ್ಲಿ ಅಂತರಾಷ್ಟ್ರೀಯ ದಾರ್ಶನಿಕ ಸಂಸ್ಥೆ ಪ್ರಕಟಿಸಿದ ಅಶೋಕನ ಧರ್ಮ ಶಾಸನಗಳು (ಶಿಕಾಗೋ ವಿಶ್ವವಿದ್ಯಾನಿಲಯ 1959), ಎಂಬ ಗ್ರಂಥಕ್ಕೆ ಇವರು ಸಂಪಾದಕರಾಗಿದ್ದರು.

*

**ನಿಜಗಲ್ಲು :** ತುಮಕೂರು ಜಿಲ್ಲೆಯ ತುಮಕೂರು ತಾಲ್ಲೂಕಿನ ಒಂದು ಬೆಟ್ಟ. ತುಮಕೂರಿಗೆ 16 ಕಿಮೀ ದೂರದಲ್ಲಿ ಬೆಂಗಳೂರು ತುಮಕೂರು ರಸ್ತೆಯಲ್ಲಿದೆ. ಈ ಬೆಟ್ಟವನ್ನು ಶೂರಗಿರಿ ಎಂದೂ ರಸಸಿದ್ಧರಬೆಟ್ಟ ಮತ್ತು ಉದ್ದಂಡಯ್ಯನಬೆಟ್ಟವೆಂತಲೂ ಕರೆಯುತ್ತಾರೆ. ಎತ್ತರ 1,085ಮೀ ಉತ್ತರ ಮತ್ತು ಪೂರ್ವಭಾಗಗಳಿಂದ ಮಾತ್ರ ಹತ್ತಬಹುದು.

ನಿಜಗಲ್ಲು ಬೆಟ್ಟದ ಮೇಲೆ ವೀರಭದ್ರಸ್ವಾಮಿಗುಡಿ (ನಿಜಗಲ್ಲು ಮಠ) ಇದೆ. ಗುಡಿಯಲ್ಲಿ 12' ಎತ್ತರದ ವೀರಭದ್ರನ ವಿಗ್ರಹದ ಎಡಕ್ಕೆ ದಕ್ಷನ ವಿಗ್ರಹ, ಬಲಕ್ಕೆ ಭದ್ರಕಾಳಿ ವಿಗ್ರಹಗಳಿವೆ. ವೀರಭದ್ರನ ಬಲಕ್ಕೆ ಇರುವ 1.5' ಎತ್ತರದ ಆಸೀನ ವಿಗ್ರಹ ಕೇಕೆ ಹೊಡೆದು ನಗುತ್ತಿದ್ದ ಕೇಕೆಸ್ವಾಮಿಯದು. ಆತ ಸಶರೀರವಾಗಿ ಕೈಲಾಸಕ್ಕೆ ಹೋದನೆಂಬ ಪ್ರತೀತಿ ಇದೆ. ಈ ಗುಡಿಯನ್ನು ಕಟ್ಟಿಸಿದ ಹಾಲಿನ ಹಂಪಣ್ಣನ ವಿಗ್ರಹ ಗುಡಿಯ ಹೊರಗಿನ ದೀಪಸ್ತಂಭದ ಬಳಿ ಇದೆ. ಅವನನ್ನು ಕೋಡಿಯಪ್ಪನೆಂದು ಪೂಜಿಸುತ್ತಾರೆ. ಬೆಟ್ಟದ ಮೇಲೆ ಹಿಂದಿನ ಪಾಳೆಯಗಾರರು ಕಟ್ಟಿಸಿದ ಕೋಟೆಯ ಅವಶೇಷಗಳು, ಫಿರಂಗಿ ಮದ್ದುಗುಂಡುಗಳನ್ನಿಟ್ಟಿದ್ದ ಸ್ಥಳ ಹಾಗೂ ರಾಗಿ ಕಣಜಗಳಿವೆ. ಕಂಚಿನ ದೋಣೆ, ಆನೆ ದೋಣೆ, ಸಿದ್ಧರ ದೋಣೆ, ಅಕ್ಕ ತಂಗಿಯರ ದೋಣೆ ಮೊದಲಾದ ನೀರಿನ ದೋಣೆಗಳಿವೆ. ಸಿದ್ಧರ ದೋಣೆಯ ಪೂಜೆಗೆ ಒಬ್ಬ ಫಕೀರ ಇದ್ದು ಹಿಂದುಗಳು ಸಹ ಅವನ ಪೂಜೆ ಸಲ್ಲಿಸುತ್ತಾರೆ. ರಸಸಿದ್ಧರ ಗುಡಿಯಲ್ಲಿನ ರಸಸಿದ್ಧ ಋಷಿಯ ವಿಗ್ರಹವನ್ನು ಹಿಂದುಗಳು ಪೂಜಿಸುತ್ತಾರೆ. ಹಿಂದೆ ಬೆಟ್ಟದ ಮೆಲೆ ಹಲವು ಮಂದಿ ಸಿದ್ಧರು ಸಾಮಾನ್ಯ ಲೋಹಗಳನ್ನು ಚಿನ್ನಕ್ಕೆ ಮಾರ್ಪಡಿಸುವ ರಸವನ್ನು ತಯಾರಿಸಿದ ಕಾರಣ ಬೆಟ್ಟಕ್ಕೆ ರಸಸಿದ್ಧರ ಬೆಟ್ಟ ಎಂಬ ಹೆಸರಾಯಿತೆಂದು ಪ್ರತೀತಿ. ಅಕ್ಕತಂಗಿಯರ ದೋಣೆಯ ಬಳಿ ಇರುವ ನರಸಿಂಹಸ್ವಾಮಿ ದೇವಾಲಯ ಶಿಥಿಲಾವಸ್ಥೆಯಲ್ಲಿದೆ. ಹಿಂದು ಮುಸಲ್ಮಾನರು ಈ ಬೆಟ್ಟವನ್ನು ಪವಿತ್ರವೆಂದು ಭಾವಿಸಿರುವುದು ಅದರ ವೈಶಿಷ್ಟ್ಯ. ಬೆಟ್ಟದ ಇಳುಕಲಿನಲ್ಲಿರುವ ಗವಿಯಲ್ಲಿ ಶಿವನ ಗುಡಿ ಇದೆ. ಅದರ ಹೊರಬಂಡೆಗಳ ಮೇಲೆ ಗಣಪತಿ, ವೀರಭದ್ರ ಮತ್ತು ಸುಬ್ರಹ್ಮಣ್ಯ ವಿಗ್ರಹಗಳನ್ನು ಕೆತ್ತಿದ್ದಾರೆ. (ವಿ.ಜಿ.ಕೆ.)

**ನಿಜಗುಣದೇವ :** ಸು.1150 ವಚನಕಾರ. ಬಸವಣ್ಣನಿಗಿಂತ ಸ್ವಲ್ಪ ಹಿಂದೆ ಇದ್ದವನು ಎಂದು ವಿದ್ವಾಂಸರ ಅಭಿಪ್ರಾಯ. ಬಿಜಾಪುರ ಜಿಲ್ಲೆಯ ಚಿಮ್ಮಲಿಗೆ ಎಂಬ ಊರಿನವ. ಚಿಮ್ಮಲಿಗೆಯಲ್ಲೇ ಐಕ್ಯನಾದನೆಂಬ ಪ್ರತೀತಿ. ಚಿಮ್ಮಲಿಗೆಯಲ್ಲಿ ನಿಜಗುಣೇಶ್ವರ ಲಿಂಗ ಎಂಬ ಹೆಸರಿನ ದೇವಸ್ಥಾನ ಇಂದಿಗೂ ಕಂಡುಬರುತ್ತದೆ. ಕೆಂಭಾವಿಯ ಚಂದಿಮರಸ ಇವನ ಶಿಷ್ಯನಾಗಿದ್ದಂತೆ ತಿಳಿದುಬರುತ್ತದೆ.

ಇವನಿಗೆ ನಿಜಗುಣಯೋಗಿ ಎಂಬ ಪರ್ಯಾಯ ನಾಮವೂ ಕಂಡು ಬರುತ್ತದೆ. ಈತನ ಹೆಸರು ಗಣಸಹಸ್ರನಾಮದಲ್ಲಿ ಉಕ್ತವಾಗಿದೆ. ಸದ್ಯದಲ್ಲಿ ಈತನ ಎಂಟು ವಚನಗಳು ಮಾತ್ರ ಸಿಕ್ಕಿವೆ. ನಿಜಗುಣಯೋಗಿಯ ಯೋಗ ಎಂಬುದು ಈತನ ವಯನಗಳ ಅಂಕಿತ. ಈತ ಬೇರಾವ ವಚನಕಾರರ ಹೆಸರನ್ನೂ ಉಲ್ಲೇಖಿಸಿಲ್ಲ. ಅಕ್ಕಮಹಾದೇವಿ ತನ್ನ ಒಂದು ವಚನದಲ್ಲಿ ಬಸವಣ್ಣನ ಭಕ್ತಿ, ಚನ್ನಬಸವಣ್ಣನ ಜ್ಞಾನ, ಮಡಿವಾಳಯ್ಯನ ನಿಷ್ಠೆ, ಪ್ರಭುದೇವರ ಜಂಗಮಸ್ಥಲ, ಅಜಗಣ್ಣನ ಐಕ್ಯಸ್ಥಲ, ನಿಜಗುಮನ ಆರೋಢಸ್ಥಲ, ಸಿದ್ಧರಾಮಯ್ಯನ ಸಮಾಧಿ ಸ್ಥಲ ಇಂತಿವರ ಕರುಣಪ್ರಸಾದವೆನಗಾಯಿತ್ತು ಚೆನ್ನಮಲ್ಲಿಕಾರ್ಜುನಯ್ಯ ಎಂಬಲ್ಲಿ ಈತನನ್ನು ಸ್ಮರಿಸಿದ್ದಾಳೆ. ಇದರಿಂದ ಈತ ಶಿವಯೋಗದ ಸ್ವರೂಪವನ್ನು ಚೆನ್ನಾಗಿ ಬಲ್ಲವನಾಗಿದ್ದನೆಂದು ವಿದಿತವಾಗುತ್ತದೆ. ಈತನ ವಚನಗಳಲ್ಲಿ ಪರಮಾತ್ಮನ ಅರಿವು ಯೋಗ್ಯ ಅಂತರ್ಜ್ಞಾನ ಮೊದಲಾದ ವಿಷಯಗಳು ಹೃದಯಂಗಮವಾಗಿ ವರ್ಣಿತವಾಗಿದೆ.

ಪಾತಂಜಲ ಯೋಗದಲ್ಲಿ ಹೇಳಿದಂತೆ ಯೋಗವೆಂದರೆ ಚಿತ್ತವೃತ್ತಿ ನಿರೋಧವೆಂದು ಈತ ಹೇಳಿಲ್ಲ.ಹಠಯೋಗಿಗಳಂತೆ ಇವನು ದೇಹವನ್ನುಕ್ಲೇಶಗೊಳಿಸುವ ಸಾಧನಗಳನ್ನು ಸಮರ್ಥಿಸಿಲ್ಲ. ಅಂಗಲಿಂಗಗಳಲ್ಲಿಯ ಭಿನ್ನತ್ವವಳಿಯುವುದೇ ಯೋಗ ಎಂದು ಹೇಳಿದ್ದಾನೆ.

ಇವನ ಒಂದು ವಚನ ಹೀಗಿದೆ ಸರ್ವಮಯವಾತ್ಮನೆಂದಲ್ಲಿ ರಕ್ಷಿಸಿ ಶಿಕ್ಷಿಸಿಹೆನೆಂಬದೆನೋ. ಅಣೋರಣೀಯಾನ್ ಮಹತೋ ಮಹೀಯಾನ್ ಎಂದಲ್ಲಿ ಬೇರೊಂದರಿದು ಕುರಿತು ಕಾಬುದೇನೋ ಇದಿರಿಗೆ ತಾನಿಲ್ಲ ತನಗಿರಿವಿಲ್ಲವೆಂದಲ್ಲಿ ಗಜಬಜೆಯಲ್ಲಿ ಕುಜನವೇತಕ್ಕೆ ಬೇರಿಗೆ ನೀರನೆರೆದಲ್ಲಿ ಶಾಖೆಗೆ ಸಂದುಂಟೆ ಅಂಗಪ್ರಾಣ ಲಿಂಗವೊಂದೆಂದಲ್ಲಿ ಅರ್ಪಿತಕ್ಕೆ ಹಿಂದುಮುಂದಿಲ್ಲ ನಿಜಗುಣಯೋಗಿಯ ಯೋಗಕ್ಕೆ ಮುನ್ನವೇ ಇಲ್ಲ.

**ನಿಜಗುಣ ಶಿವಯೋಗಿ :** ಸು. 1500. ವೀರಶೈವಕವಿ. ಷಟ್ ಶಾಸ್ತ್ರಗಳೆಂದು ಪ್ರಸಿದ್ಧವಾದ ಅನುಭವಸಾರ, ಕೈವಲ್ಯಪದ್ಧತಿ, ಪರಮಾರ್ಥಗೀತೆ, ಪರಮಾನುಭವಬೋಧೆ, ಪರಮಾರ್ಥ ಪ್ರಕಾಶಿಕೆ, ವಿವೇಕಚಿಂತಾಮಣಿ ಎಂಬ ಗ್ರಂಥಗಳ ಕರ್ತೃ. ಇವನಿಗೆ ನಿಜಗುಣಾರಾಧ್ಯ ಎಂಬ ಹೆಸರೂ ಇದೆ. ಈತ ಮೊದಲಿಗೆ ಕೊಳ್ಳೇಗಾಲ ತಾಲ್ಲೂಕಿನ ಶಂಭುಲಿಂಗಬೆಟ್ಟದ ಸುತ್ತಮುತ್ತಲ ನಾಡಿಗೆ ಅರಸನಾಗಿದ್ದು ಅನಂತರ ವಿರಕ್ತನಾಗಿ ಶಂಭುಲಿಂಗನ ಬೆಟ್ಟದಲ್ಲಿ (ಚಿಲಕವಾಡಿ) ಹಲವು ವರ್ಷ ತಪಸ್ಸುಮಾಡಿ ಶಿವಯೋಗಿಯಾಗಿ ಹೆಸರು ಪಡೆದನೆಂಬ ಪ್ರತೀತಿ ಇದೆ. ಶಂಭುಲಿಗಸ್ವಾಮಿಗಳೆಂಬ ಸನ್ಯಾಸಿ ಈತನ ಗುರು. ಅರವತ್ತು ಮೂವರ ತ್ರಿಪದಿ ಇವನ ಇನ್ನೊಂದು ಗ್ರಂಥ. ಇವನ ಎಲ್ಲ ಗ್ರಂಥಗಳಲ್ಲಿ ಶಂಭುಲಿಂಗನ ಅಂಕಿತ ದೊರೆಯುತ್ತದೆ.

ಅನುಭವಸಾರ ಗುರುಶಿಷ್ಯಸಂವಾದರೂಪವಾಗಿದ್ದು ತ್ರಿಪದಿಯಲ್ಲಿ ರಚಿತವಾಗಿದೆ. ಇದರಲ್ಲಿ 8 ಸಂಧಿ, 46 ಸೂತ್ರ, 535 ಪದ್ಯ ಇವೆ. ಸಕಲ ವೇದಾಂತಸಾರವನ್ನು ಸಾಧಕರಿಗೆ ತಿಳಿಯುವಂತೆ ಹೇಳುತ್ತೇನೆಂದು ಕವಿ ಹೇಳಿಕೊಂಡಿದ್ದಾನೆ.

ಕೈವಲ್ಯ ಪದ್ಧತಿ ಅನುಭಾವಗೀತೆಗಳ ಸಂಕಲನ. ಇದರಲ್ಲಿ 5 ಸ್ಥಲಗಳೂ 174 ವಚನಗಳ ಜೋಡೂ 648 ಪದ್ಯಗಳೂ ಇವೆ. ಕವಿ ಇದನ್ನು ಅಬಾಲಯುವ್ವನ ವೃದ್ಧರಿಗಾಯಾಸವಿನಿತಿಲ್ಲದಂತೆ ಸಮ್ಯಗ್‌ಜ್ಞಾನಿಗಳೊಡಂಬಡುವಂತೆ ಸಕಲ ವೇದಾಂತಗಮ ಸ್ಮೃತಿಪುರಾಣೇತಿಹಾಸ ಸೂತ್ರಾದಿಶಾಸ್ತ್ರಸಮ್ಮತದಿಂ ಪುರಾತನ ಗೀತಾನುಗುಣ್ಯವೆನಿಸಿ ಮೃದುಮಧುರ ಲಕ್ಷಣಯುಕ್ತವಾಗಿ ರಚಿಸಿರುವಂತೆ ಹೇಳಿಕೊಂಡಿದ್ದಾನೆ. ಭಾವನೆಗಳಿಗೆ ಅನುಗುಣವಾದ ಬಗೆಬಗೆಯ ರಾಗಗಳು ಇಲ್ಲಿ ಮೂಡಿಬಂದಿವೆ. ಈ ದೃಷ್ಟಿಯಿಂದ ಇದು ಕರ್ನಾಟಕ ಸಂಗೀತಶಾಸ್ತ್ರಜ್ಞರಿಗೆ ಮಹತ್ವಪೂರ್ಣವಾದ ಗ್ರಂಥವಾಗಿದೆ. ಇಲ್ಲಿ ಕಂಡುಬರುವ ನಾದಮಾಧುರ್ಯ, ಮಾತಿನ ಸೊಗಸು ಕೃತಿಯ ಮಹತ್ವದ ಅಂಶಗಳಾಗಿವೆ.

ಪರಮಾರ್ಥಗೀತೆ ಹೆಚ್ಚಾಗಿ ಲಲಿತ ರಗಳೆಯಲ್ಲಿದ್ದು ಅಲ್ಲಲ್ಲಿ ಕೆಲವು ಕಂದಗಳೂ ಕಂಡುಬರುತ್ತವೆ. ಗ್ರಂಥ ಗುರುಶಿಷ್ಯ ಸಂವಾದ ರೂಪವಾಗಿದೆ. ಇದರಲ್ಲಿ 11 ಗತಿ, 32 ಕಂದ, 121 ನಿರೂಪಣೆ, 1496 ಚರಣ ಇವೆ. ಶ್ರುತಿ ಪುರಾಣೇತಿಹಾಸಸ್ಮೃತಿಯರ್ಥವನ್ನು ಕನ್ನಡಿಸಿದಂತೆ ಕವಿ ಹೇಳಿಕೊಂಡಿದ್ದಾನೆ. ಪ್ರತಿಪಾದಿತವಾದ ತತ್ತ್ವಗಹನವಾಗಿದ್ದು ಸಾಮಾನ್ಯರಿಗೂ ಸುಲಭವಾಗಿ ಏಟಕುವಂತಿದೆ.

ಪರಮಾನುಭವಬೋಧೆ ಯಾಜ್ಞಾವಲ್ಕ್ಯ ಮೈತ್ರೇಯಿ ಸಂವಾದರೂಪವಾಗಿದ್ದು ಸಾಂಗತ್ಯದಲ್ಲಿ ರಚಿತವಾಗಿದೆ. ಇದರಲ್ಲಿ 6 ಸಂಧಿಗಳೂ 122 ಸೂತ್ರಗಳೂ 985 ಪದ್ಯಗಳೂ ಇವೆ. ಅದ್ವೈತ ತತ್ತ್ವವನ್ನು ಪ್ರಕಟಿಸುವೆನು ಬೋಧಗತಿಯಿಂದ ಎಂದು ಕವಿ ಹೇಳಿಕೊಂಡಿದ್ದಾನೆ.

ಪರಮಾರ್ಥಪ್ರಕಾಶಿಕೆ ಚೆನ್ನಸದಾಶಿವಯೋಗಿಕೃತ ಶಿವಯೋಗಪ್ರದೀಪಿಕೆಗೆ ಕನ್ನಡ ವ್ಯಾಖ್ಯಾನ. ಇದರಲ್ಲಿ ಪರಿಚ್ಛೇದಗಳಿವೆ. ಸಂಸ್ಕೃತ ಜ್ಞಾನವಿಲ್ಲದ ಮೋಕ್ಷಾಪೇಕ್ಷಿಗಳಿಗೆ ಸುಲಭವಾಗಿ ತಿಳಿಯುವಂತೆ ಈ ವ್ಯಾಖ್ಯಾನವನ್ನು ಬರೆದುದಾಗಿ ಕವಿ ಹೇಳಿಕೊಂಡಿದ್ದಾನೆ.

ವಿವೇಕಚಿಂತಾಮಣಿ ಗದ್ಯಗ್ರಂಥ'. ಇದರಲ್ಲಿ ಒಟ್ಟು ಹತ್ತು ಪ್ರಕರಣಗಳಿದ್ದು 765 ವಿಷಯಗಳು ಸಂಗ್ರಹಿತವಾಗಿವೆ. ಕನ್ನಡದ ಮೊದಲ ವಿಶ್ವಕೋಶ ಎಂಬ ದೃಷ್ಟಿಯಿಂದ ಸಂಗೀತಶಾಸ್ತ್ರದ ವಿಷಯ ವಿವೇಚನೆಯ ದೃಷ್ಟಿಯಿಂದ ಈ ಗ್ರಂಥಕ್ಕೆ ಮಹತ್ತ್ವದ ಸ್ಥಾನ ದೊರಕಿದೆ.

ಅರವತ್ತುಮೂವರ ತ್ರಿಪದಿಗೆ ಪುರಾತನರ ತ್ರಿವಿಧಿ ಎಂಬ ಹೆಸರಿದ್ದು ಇದರಲ್ಲಿ 77 ತ್ರಿಪದಿಗಳಿವೆ. ಕೃತಿ 63 ಜನ ಶಿವಭಕ್ತರ ಸ್ತುತಿರೂಪವಾಗಿದೆ.

ನಿಜಗುಣಶಿವಯೋಗಿ ಕನ್ನಡದಲ್ಲೇ ಅಲ್ಲದೆ ಸಂಸ್ಕೃತದಲ್ಲೂ ಗ್ರಂಥಗಳನ್ನು ರಚಿಸಿದ್ದಾನೆ. ಸಾರಭೂತವಾದ ಚಿಂತಾಮಣಿ, ದರ್ಶನಸಾರಂ, ಆತ್ಮಕರ್ತ ಎಂಬ ಪ್ರೌಢಗ್ರಂಥಗಳು ಸಂಸ್ಕೃತದಲ್ಲಿವೆ. ಈತನ ಸಾಧನೆ ಸಿದ್ಧಿ ಕರ್ನಾಟಕದ ಅಧ್ಯಾತ್ಮಿಕ ಚರಿತ್ರೆಯಲ್ಲಿ ಒಂದು ಉಜ್ವಲವಾದ ಘಟ್ಟವನ್ನು ನಿರ್ಮಿಸಿದೆ. (ಎಚ್.ಎ.ಕೆ., ವಿ.ಎಸ್.ಎಸ್.)

**ನಿಜಗುಣಾರ್ಯ :** ಸು.1650. ವೀರಶೈವ ಕವಿ. ಅದ್ವೈತರಾಮಾಯಣ ಎಂಬ ಕೃತಿಯ ಕರ್ತೃ. ಈತ ತನ್ನ ಕೃತಿಯಲ್ಲಿ ನಿಜಗುಣಾರ್ಯ ವಚನದಮೃತ ಎಂದು ಹೇಳಿಕೊಂಡಿದ್ದಾನೆ ನಿಜಗುಣ ಶಿವಯೋಗಿಯೇ ಈ ಹೆಸರಿನಿಂದ ಈ ಕೃತಿಯನ್ನು ರಚಿಸಿರಬಹುದೆ ಎಂಬ ಸಂಶಯಕ್ಕೆ ಎಡೆಯಿದೆ. ಆದರೆ ನಿಜಗುಣ ಶಿವಯೋಗಿಯ ಕೃತಿಗಳಲ್ಲಿ ಕಂಡುಬರುವ ಶಂಭು ಲಿಂಗನ ಅಂಕಿತ ಈತನ ಕೃತಿಯಲ್ಲಿಲ್ಲವಾದುದರಿಂದ ಇಬ್ಬರೂ ಭಿನ್ನರೆನ್ನಬಹುದು.

ಅದ್ವೈತರಾಮಾಯಣ ವಚನಗಳಲ್ಲಿದೆ ಈತನ ಕೃತಿಯಿದೆ. ದೊರೆತಿರುವ ಅಸಮಗ್ರ ಕೃತಿಯಲ್ಲಿ 24 ಸಂಧಿಗಳು 933 ವಚನಗಳಿರುವುದಾಗಿ ಕವಿಚರಿತೆಕಾರರು ಹೇಳಿದ್ದಾರೆ. ಅದ್ವೈತದಲ್ಲಿ ರಾಮರಾವಣರ ನಿಜಪಥವನು ಪಾದವೈಭವವನ್ನು ಮಂಡೋದರಿಯ ರಾವಣನ ಪಾದವನು ಉಸಿರುವೆನು ಎಂದು ಕವಿ ಹೇಳಿಕೊಂಡಿದ್ದಾನೆ. ಈಕೃತಿಗೆ ಆಧಾರ ಯಾವುದೆಂದು ತಿಳಿಯದು. ಕೆಲವೆಡೆ ಎಂದನಾಮುನಿಪ್ಪ ಕೇಳೈ ಶಾಂತಾರಾಮನ ಎಂದಿರುವುದರಿಂದ ಶಾಂತಾರಾಮ ಎಂಬಾತನಿಗೆ ಮುನೀಶ್ವರನೊಬ್ಬ ರಾಮಾಯಣವನ್ನು ಕಥಿಸಿರಬಹುದು. ಇವನ ಒಂದು ವಚನ ಹೀಗಿದೆ.

ದಶಶಿರೋತ್ತಮನು ದಶರಥೋತ್ತಮನು ಎರಡು ಕಲೆತಂದೆ ರಾಮಗುಣ. ಭಕ್ತಿ ಭಾವವು ಎರಡು ಕಲೆತುದೆ ಲಕ್ಷ್ಮಣಗುಣ. ಕಮಲ ಸೂರ್ಯನ ಕಲೆತುದೆ ಸೀತಾಗುಣ. ಮನಧನವ ಕಲೆತಂದೆ ಭರತಗುಣ. ಜೀವ ಭೂವಿಜಯ ಕಲೆತಂದು ಶತ್ರುಘ್ನ ಗುಣ. ಐದು ಗುಣ ಕಲೆತಂದೇ ದೇಹಗುಣವೆಂದಾ. ಇವನ ಬೆಡಗಿನ ವಚನಗಳಂತೆ ವಚನಗಳಲ್ಲೂ ಗೂಢಾರ್ಥ ತುಂಬಿರುವಂತೆ ತೋರುತ್ತದೆ.

**ನಿಜಲಿಂಗಪ್ಪ, ಎಸ್. :** 1902-2000. ವಿಶಾಲ ಕರ್ನಾಟಕದ ಪ್ರಥಮ ಮುಖ್ಯ ಮಂತ್ರಿ. ಭಾರತದ ಹಿರಿಯ ರಾಜಕಾರಣಿ, ಬಳ್ಳಾರಿ ಜಿಲ್ಲೆಯ ಹಲುಗಾವಲು ಗ್ರಾಮದ ಅಬ್ಬಲೂರು ಅಡಿವೆಪ್ಪ ಮತ್ತು ನೀಲಮ್ಮ ದಂಪತಿಗಳ ಪುತ್ರರಾಗಿ 1902 ಡಿಸೆಂಬರ್ 10ರಂದು ಜನಿಸಿದರು. ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡ ಇವರು ಚಿತ್ರದುರ್ಗ ಜಿಲ್ಲೆಯ ಸಿದ್ಧವನಹಳ್ಳಿಯಲ್ಲಿದ್ದ ತಮ್ಮ ಚಿಕ್ಕಪ್ಪ ರುದ್ರಪ್ಪನವರ ಆಶ್ರಯದಲ್ಲಿ ಬೆಳೆದರು. ಅಂದಿನಿಂದ ಇವರು ಸಿದ್ದವನಹಳ್ಳಿ ನಿಜಲಿಂಗಪ್ಪನವರೆನಿಸಿಕೊಂಡರು. ಚಿಕ್ಕಪ್ಪನ ಸಹಾಯ ಸಹಕಾರಗಳಿಂದ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಸಿದ್ಧವನಹಳ್ಳಿಯಲ್ಲಿ, ಮಾಧ್ಯಮಿಕ ಶಿಕ್ಷಣವನ್ನು ದಾವಣಗೆರೆಯಲ್ಲಿ ಮತ್ತು ಪದವಿ ಶಿಕ್ಷಣವನ್ನು ಬೆಂಗಳೂರಿನಲ್ಲಿ ಮುಗಿಸಿ ಬಿ.ಎ. ಪದವಿ ಪಡೆದರು. ಅನಂತರ ಪುಣೆ ವಿಶ್ವವಿದ್ಯಾಲಯದಿಂದ ಎಲ್‌ಎಲ್.ಬಿ. ಪದವಿ ಗಳಿಸಿದ (1926) ಇವರು ಬೆಂಗಳೂರು ಹೈಕೋರ್ಟಿನಲ್ಲಿ ವಕೀಲಿ ವೃತ್ತಿಯನ್ನು ಕೈಗೊಂಡು ಸಾರ್ವಜನಿಕ ಸೇವಾಕ್ಷೇತ್ರವನ್ನು ಪ್ರವೇಶಿಸಿದರು.

ಬೆಂಗಳೂರಿನಲ್ಲಿ ಅಧ್ಯಯನ ಮಾಡುತ್ತಿದ್ದಾಗಲೇ 1924ರಲ್ಲಿ ಮಹಾತ್ಮಾಗಾಂಧೀಯವರ ಅಧ್ಯಕ್ಷತೆಯಲ್ಲಿ ಬೆಳಗಾಂವಿಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಮಹಾಸಭೆಯ ಅಧಿವೇಶನಕ್ಕೆ ಸ್ವಯಂಸೇವಕರಾಗಿ ಹೋಗಿದ್ದರು. ಗಾಂಧೀಜಿಯವರ ದಂಡೀಯಾತ್ರೆಯಿಂದ ಪ್ರಭಾವಿತರಾಗಿ ಸಕ್ರಿಯ ರಾಜಕಾರಣಕ್ಕಿಳಿದು 1931 ರಿಂದಲೂ ಕಾಂಗ್ರೆಸ್ ಸಂಸ್ಥೆಯ ಸದಸ್ಯರಾಗಿ, ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯ ಸದಸ್ಯರಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದರು. ಇದೇ ಸಂದರ್ಭದಲ್ಲಿ ಮೈಸೂರು ಸಂಸ್ಥಾನದಲ್ಲಿಯ ವಿರೋಧಿ ಪಕ್ಷಗಳನ್ನು ಕಾಂಗ್ರೆಸ್‌ನಲ್ಲಿ ವಿಲೀನಗೊಳಿಸಿದ್ದಲ್ಲದೆ ಅಖಿಲ ಭಾರತ ಕಾಂಗ್ರೆಸ್ ಪಕ್ಷದಲ್ಲಿ ಸಂಸ್ಥಾನದ ಕಾಂಗ್ರೆಸ್ ಪಕ್ಷವನ್ನು ವಿಲೀನಗೊಳಿಸಿ, ಕಾಂಗ್ರೆಸ್ಸಿನ ಧ್ಯೇಯವಾದ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಕಂಕಣಬದ್ಧರಾದರು. ಅರಣ್ಯಸತ್ಯಾಗ್ರಹ ನಿಮಿತ್ತವಾಗಿ ಆಗಿನ ಸರ್ಕಾರ ಇವರನ್ನು ಬಂಧಿಸಿ ಒಂದೂವರೆ ವರ್ಷ ಸಶ್ರಮ ಕಾರಾಗೃಹ ವಾಸವನ್ನು ವಿಧಿಸಿತಲ್ಲದೆ, ಜೀವನಾಧಾರವಾಗಿದ್ದ ವಕೀಲಿ ವೃತ್ತಿಯ ಸನದನ್ನೂ ಹಿಂತೆಗೆದುಕೊಂಡಿತು. ಮತ್ತೆ 1942ರ ಚಲೇಜಾವ್ ಚಳವಳಿಯ ಸಂಬಂಧದಲ್ಲೂ ಸರ್ಕಾರ ಇವರನ್ನು ಬಂಧಿಸಿತ್ತು.

ನಿಜಲಿಂಗಪ್ಪನವರು (1945-46) ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿಯೂ (1948-54) ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿಯೂ ಘಟನಾ ಸಭೆಯ ಸದಸ್ಯರಾಗಿಯೂ (1946 - 47) ಲೋಕಸಭೆಯ ಸದಸ್ಯರಾಗಿಯೂ (1952-56) ಸೇವೆ ಸಲ್ಲಿಸಿದ್ದಾರೆ.

ಸ್ವಾತಂತ್ರ್ಯಾನಂತರ ಕರ್ನಾಟಕ ಏಕೀಕರಣಕ್ಕಾಗಿ ಅವಿಶ್ರಾಂತವಾಗಿ ಹೋರಾಡಿದ ಇವರು 1956ರಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯಾದಾಗ ವಿಶಾಲ ಕರ್ನಾಟಕದ ಪ್ರಪ್ರಥಮ ಮುಖ್ಯಮಂತ್ರಿಯಾದರು. 1958ರಲ್ಲಿ ಮುಖ್ಯಮಂತ್ರಿ ಪದವಿಯಿಂದ ನಿವೃತ್ತರಾದ ಮೇಲೆ ಸಹಕಾರಿ ಕೃಷಿ ಪದ್ಧತಿಯ ಅಧ್ಯಯನ ತಂಡದ ಮುಖ್ಯಸ್ಥರಾಗಿ ಮತ್ತು ದಿ ಇಂಡಿಯನ್ ಆಯಿಲ್ ಕಂಪೆನಿಯ ಗೌರವಾಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. 1961ರಲ್ಲಿ

ಕಾಂಗ್ರೆಸ್ ಪಾರ್ಲಿಮೆಂಟರಿ ಬೋರ್ಡಿನ ಸದಸ್ಯರಾಗಿ ಆಯ್ಕೆಯಾದರು.

1962-1968ರ ವರೆಗೆ ಮತ್ತೆ ಮೈಸೂರು ರಾಜ್ಯದ ಮುಖ್ಯಮಂತ್ರಿಯಾದರು. ಈ ಅವಧಿಯಲ್ಲಿ ನಿಜಲಿಂಗಪ್ಪನವರು ಭಾರತದ ಪ್ರಭಾವಶಾಲಿ ರಾಜಕಾರಣಿಗಳಲ್ಲಿ ಒಬ್ಬರೆನಿಸಿದರು. ಅವರ ಮುಖ್ಯ ಮಂತ್ರಿ ಅವಧಿಯಲ್ಲಿ ಕಡಿದಾಳ್ ಮಂಜಪ್ಪನವರು ಕಂದಾಯ ಸಚಿವರಾಗಿ ಭೂಗೇಣಿದಾರರಿಗೆ ಸಂಬಂಧಿಸಿದ ಮಹತ್ವದ ಭೂಸುಧಾರಣಾ ಕಾಯಿದೆ ಜಾರಿಗೆ ಬಂದಿತು. ಅವರು ಕಾಂಗ್ರೆಸ್ ಸಿಂಡಿಕೇಟ್ ಸದಸ್ಯರಲ್ಲಿ ಒಬ್ಬರೆನಿಸದ ರಾಷ್ಟ್ರರಾಜಕೀಯದಲ್ಲಿ ಪ್ರಭಾವಶಾಲಿಯಾಗಿದ್ದರು. 1967ರಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆಯ ಅಧ್ಯಕ್ಷರಾದರು. ಇವರ ಅಧಿಕಾರ ಅವಧಿಯಲ್ಲಿ ಕಾಂಗ್ರೆಸ್ಸಿನ ವಿಭಜನೆಯಾಯಿತು (1970). ಅನಂತರ ಇವರು ಸುಮಾರು ಒಂದು ವರ್ಷ ಕಾಲ ಸಂಸ್ಥಾ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದರು.

ನಿಜಲಿಂಗಪ್ಪನವರಿಗೆ 1968ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಎಲ್.ಎಲ್.ಡಿ. ಪದವಿಯನ್ನಿತ್ತು ಗೌರವಿಸಿತು. 1997ರಲ್ಲಿ ಕರ್ನಾಟಕ ಸರ್ಕಾರದ ಕರ್ನಾಟಕ ರತ್ನ ಪ್ರಶಸ್ತಿಗೂ ಭಾಜನರಾದರು. ನಿಜಲಿಂಗಪ್ಪನವರು ಮುಖ್ಯಮಂತ್ರಿಯಾಗಿದ್ದಾಗ ತಮ್ಮ ಅಧಿಕಾರಾವಧಿಯಲ್ಲಿ ಕೃಷಿ, ನೀರಾವರಿ, ವಿದ್ಯುತ್ ಉತ್ಪಾದನೆಗಳ ಕಡೆ ವಿಶಿಷ್ಟ ಗಮನ ಹರಿಸಿದರು. ತಮ್ಮ ಬದುಕಿನುದ್ದಕ್ಕೂ ಆದರ್ಶ ಮೌಲ್ಯಗಳ ಪ್ರತಿಪಾದಕರಾಗಿದ್ದರು. ಅವರು ತಮ್ಮ ಜೀನಿತದ ಕೊನೆಯವರಾಗಿ ಸಾರ್ವಜನಿಕ ಜೀವನದ ಆಗುಹೋಗುಗಳ ಬಗ್ಗೆ ಆಸಕ್ತಿ ಹೊಂದಿದ್ದ ಅಶಾಜೀವಿ. ನಿಜಲಿಂಗಪ್ಪನವರು ಒಬ್ಬ ನಿರ್ಭೀತ, ನಿಷ್ಕಳಂಕ ಚಾರಿತ್ರ್ಯದ ವ್ಯಕ್ತಿಯಾಗಿದ್ದರು. ಅವರನ್ನು ಕುರಿತು ಕೆಲವು ಜೀವನ ಚರಿತ್ರೆಗಳೂ ರಚಿತವಾಗಿವೆ. ಅವುಗಳಲ್ಲಿ ದೇ.ಜವರೇಗೌಡರು ಬರೆದಿರುವ ಕಾಯಕಯೋಗಿ ರಾಷ್ಟ್ರ ನಾಯಕ (1992) ಪ್ರಮುಖವಾದುದು. 2000 ಆಗಸ್ಟ್ 8ರಂದು ನಿಜಲಿಂಗಪ್ಪನವರು ನಿಧನರಾದರು.

**ನಿಜಲಿಂಗಾರಾಧ್ಯ :** ಸು.1800 ವೀರಶೈವಕವಿ. ನಿಂಜಲಿಂಗ ಶತಕ ಎಂಬ ಕೃತಿಯ ಕರ್ತೃ. ಈತನ್ನು ತುಂಗಭದ್ರಾತೀರದಲ್ಲಿರುವ ಖಾದ್ರಿಪುರದವನೆಂದು ಕವಿಚರಿತೆಕಾರರು ಹೇಳವುದು ಸರಿಯಲ್ಲವೆಂದೂ ತಮಗೆ ದೊರೆತ ಎಲ್ಲ ಹಸ್ತಪ್ರತಿಗಳಲ್ಲೂ ತುಂಗಭದ್ರಾ ತೀರದೊಳೆಸೆವ ಕುದ್ರುಪುರನಿವಾಸ ನಿಜಲಿಂಗಭವಭಂಗ ಶರಣಜನವರದ ಜಯತು ಎಂದಿರುವುದರಿಂದ, ಈತ ತುಂಗಭದ್ರಾತೀರಕ್ಕೆ ಸಮೀಪವಾಗಿರುವ ಹಾವನೂರು, ಗುತ್ತಲ ಗ್ರಾಮಗಳಿಗೆ ಸೇರಿದವನಿರಬೇಕೆಂದೂ ಸುಂಕಾಪುರ ಅವರು ಅಭಿಪ್ರಾಯಪಟ್ಟಿದ್ದಾರೆ.

ನಿಜಲಿಂಗ ಶತಕ ವಾಧಿಕ ಷಟ್ಪದಿಯಲ್ಲಿದೆ. ಇದರಲ್ಲಿ 100 ಪದ್ಯಗಳಿವೆ. ಶತಕದ ಪ್ರತಿಪದ್ಯದ ಅಂತ್ಯವೂ ನಿಜಲಿಂಗ ಭವಭಂಗ ಶರಣ ಜನವರದ ಜಯತು ಎಂದು ಕೊನೆಗೊಳ್ಳುತ್ತದೆ. ಹಲವು ಪ್ರತಿಗಳಲ್ಲಿ ನಿಜಲಿಂಗಭವ ಭಂಗ ಶರಣಜನವರದ ಭಕ್ತಿಸಂಗ, ನಿಜಲಿಂಗಭವಭಂಗ ಶರಣುಜನವರದ ದೇವ ಎಂದಿದೆ.

ಕನ್ನಡದ ಎಲ್ಲ ಶತಕಕಾರರಂತೆ ಈತನೂ ಭಕ್ತಿಜ್ಞಾನವೈರಾಗ್ಯಗಳನ್ನು ಬೋಧಿಸುತ್ತ ನೀತಿಯನ್ನು ಹೇಳಿದ್ದಾನೆ. ಶಿವಸ್ತುತಿ ಈ ಶತಕದ ಬಹುಭಾಗವನ್ನೇ ಆಕ್ರಮಿಸಿದೆ. ದೇವರ ದೇವನಾದ ನಿಜಲಿಂಗನ ಕೃಪೆಯಿದ್ದವನಿಗೆ ಏತರ ಕೊರತೆಯೂ ಆಗಲಾರದೆಂಬ ಭರವಸೆ ಬಹುತೇಕ ಎಲ್ಲ ಪದ್ಯಗಳಲ್ಲೂ ಬಂದಿದೆ.

ಜಾಣಪದ್ಧತಿ, ಮೂರ್ಖಪದ್ಧತಿಗಳೆರಡನ್ನೂ ಕವಿ ಬಹು ಸರಸವಾಗಿ ಹೇಳಿದ್ದಾನೆ. ಈ ಎರಡೂ ಪದ್ಧತಿಗಳ ವಿಷಯನಿರೂಪಣೆಯಲ್ಲಿ ನಿಷ್ಠುರವಾದ ಸಮಾಜ ವಿಡಂಬನೆಯನ್ನು ಮಾಡಿದ್ದಾನೆ. ಎಂಬತ್ತುನಾಲ್ಕು ಲಕ್ಷ ಯೋನಿಗಳಲ್ಲಿ ತೊಳತೊಳಲಿ ಬಂದ ಮಾನುಷ ಜನ್ಮವು ಸಕಲರಲ್ಲೂ ಅಧಿಕ. ಆದರೆ ಸಂಸಾರವೋ ಚಾಡಿಕೋರರು, ಚೋರುಗಳು, ಸಿರಿವಂತರಡಿ ನೋಡಿ ಬಳಲುವ ದುರಾಚಾರಿಗಳು, ಪಾಪಿಗಳು, ದುರ್ಜನರು, ದಯಾಹೀನರು, ಕೂಡಿ ನಡೆದಲ್ಲಿ ಭೇದವನ್ನಿಕ್ಕುವವರು, ಪೆರರ್ಗೆ ಕೇಡೆಣಿಸುವರು, ಕುಟಿಲರು, ಕುಹಕಿಗಳು ಮುಂತಾದವರಿಂದ ತುಂಬಿ ಹೋಗಿದೆ. ಇಂಥವರ ಮಧ್ಯದಲ್ಲಿ ಹೇಗೆ ಜೀವಿಸಬೇಕೆಂದು ಕವಿ ತನ್ನ ಇಷ್ಟದೈವದ ಮೊರೆಹೋಗಿದ್ದಾನೆ.

**ನಿಟ್ಟೂರು**[1]**:** ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕಿನ ಒಂದು ಹಳ್ಳಿ. ಗುಬ್ಬಿಗೆ 10 ಕಿಮೀ ದೂರದಲ್ಲಿದೆ. 1226 ಸೇರುವ ಶಾಸನವೊಂದರಲ್ಲಿ ಈ ಸ್ಥಳವನ್ನು ಹೆರುಡೆನಾಡಿನ ಶಿರೋಮಣಿ, ಗಂಗವಾಡಿ ತೊಂಬತ್ತಾರು ಸಾವಿರಕ್ಕೆ ನಾಭಿಯ ಮನೆ ಹಾಗೂ ತೆಂಕಣದ ಅಯ್ಯಾವಳೆ (ಐಹೊಳೆ) ಎಂದು ವರ್ಣಿಸಲಾಗಿದೆ.

ಇಲ್ಲಿರುವ ಶಾಂತೀಶ್ವರಬಸದಿಯು ಗರ್ಭಗೃಹ ಸುಕನಾಸಿ ನವರಂಗ ಮತ್ತು ಮುಖಮಂಟಪಗಳಿಂದ ಕೂಡಿದ್ದು 12ನೆಯ ಶತಮಾನದ ಹೊಯ್ಸಳರ ಕಾಲದ ರಚನೆಯಾಗಿದೆ. ನವರಂಗದ ದ್ವಾರ ಸುಂದರವಾಗಿ ಕೆತ್ತಿದ್ದು, ಅದರ ಮೇಲಿರುವ ಶಾಸನ ಅದನ್ನು ಕೆತ್ತಿದವನ ಹೆಸರನ್ನು ಉಲ್ಲೇಖಿಸುತ್ತದೆ. ಈ ಬಸದಿಯ ಈಶಾನ್ಯದಲ್ಲಿ ಪದ್ಮಾವತಿ, ದಕ್ಷಿಣದಲ್ಲಿ ಬ್ರಹ್ಮದೇವರ ಗುಡಿಗಳಿವೆ. ಬಸದಿಯ ಹೊರಗೋಡೆ ಅಲ್ಲಲ್ಲಿ ಒಂದು ಅಥ್‌ವಾ ಎರಡು ಅರೆಗಂಬಗಳು ಮತ್ತು ಸೊಗಸಾಗಿ ಕೆತ್ತಲಾದ ಕಿರುಗೋಪುರುಗಳಿಂದ ಅಲಂಕೃತವಾಗಿದೆ. ಮಧ್ಯೆ ಮಧ್ಯೆ ಕುಳಿತ ಹಾಗೂ ನಿಂತ ಜಿನಮೂರ್ತಿಗಳನ್ನು ಕೆತ್ತಲಾಗಿದೆ. ಇವುಗಳಲ್ಲಿ ಕೆಲವು ಭಿನ್ನವಾಗಿವೆ. ಕೆಲವು ಅಪೂರ್ಣಸ್ಥಿತಿಯಲ್ಲಿವೆ. ನವರಂಗದ ಉತ್ತರ ಮತ್ತು ದಕ್ಷಿಣ ಭಾಗದ ಹೊರಗೋಡೆಗಳಲ್ಲಿ ಸೊಗಸಾಗಿ ಕೆತ್ತಿದ ಎರಡು ಗೂಡುಗಳಿವೆ. ಇವುಗಳಲ್ಲಿ ವಿಗ್ರಹಗಳಿಲ್ಲ. ನವರಂಗದ ಕಂಬಗಳು ಎಂಟು, ಹದಿನಾರು ಮತ್ತು ಮೂವತ್ತೆರಡು ಕೋಣಗಳುಳ್ಳವಾಗಿ ನಕ್ಷತ್ರಕಮಲಗಳಂತೆ ವಿವಿಧ ರೀತಿಯಲ್ಲಿ ಕೆತ್ತಲಾಗಿವೆ. ಭುವನೇಶ್ವರಿಗಳು 2.5 ಅಡಿ ಆಳವಿದ್ದು, ಅವುಗಳಲ್ಲಿ ಸುಂದರ ಅಷ್ಟದಿಕ್ಪಾಲಕ ಮೂರ್ತಿಗಳಿವೆ. ಗರ್ಭಗೃಹದಲ್ಲಿ ಶಾಂತಿನಾಥ ಜಿನಬಿಂಬವಿದೆ. ಬಸದಿಯ ಸುತ್ತಲೂ ಅನೇಕ ನಿಸಿಧಿಗಳಿವೆ.

ಇಲ್ಲಿ ಗ್ರಾಮದೇವತೆ ಮಾರಿಯಮ್ಮನ ಒಂದು ದೇವಾಲಯವಿದೆ. ಪ್ರತಿ ವರ್ಷ ಜಾತ್ರೆ ನಡೆಯುತ್ತದೆ. (ಎಚ್.ಎಂ.ಎನ್.ಆರ್.)

**ನಿಟ್ಟೂರು**[2]**:** ಬಳ್ಳಾರಿ ಜಿಲ್ಲೆ ಸಿರಗುಪ್ಪ ತಾಲ್ಲೂಕಿನಲ್ಲಿ ತುಂಗಭದ್ರಾ ನದಿ ದಂಡೆಯ ಮೇಲಿರುವ ಒಂದು ಪ್ರಮುಖ ಶಿಲಾಯುಗ ನೆಲೆ. ಇಲ್ಲಿ ಪೂರ್ವಶಿಲಾಯುಗ ಮತ್ತು ಮಧ್ಯಶಿಲಾಯುಗ ಕಾಲಗಳ ಸಂಸ್ಕೃತಿಗಳ ಅವಶೇಷಗಳು ಮತ್ತು ಆ ಕಾಲದ ಪ್ರಾಣಿಗಳ ಪಳೆಯುಳಿಕೆಗಳು ನದಿದಂಡೆಯ ಪದರಗಳಲ್ಲಿ ಸಿಕ್ಕಿವೆ. ನದಿದಂಡೆಯ 15 ಅಡಿಗಳೆತ್ತರದ ಪದರಗಳಲ್ಲಿ ಕೆಲಭಾಗದಲ್ಲಿ ಉಂಡೆಕಲ್ಲುಗಳ ಗಟ್ಟಿಪದರ ಅದರ ಮೇಲೆ ಹಿಂದಿನ ಕಾಲದ ಕೆಂಚು ಮೆಕ್ಕಲು ಮಣ್ಣಿನ ಪದರ, ಮತ್ತು ಎಲ್ಲಕ್ಕೂ ಮೇಲೆ ಈಚಿನ ಕಪ್ಪು ಎರಮಣ್ಣಿನ ಪದರಗಳಿವೆ. ಕೆಳಗಿನ ಉಂಡೆಕಲ್ಲುಗಳ ಪದರದಲ್ಲಿ ಕಲ್ಲಿನ ಆಯುಧಗಳು ಮತ್ತು ಈಗ ನಷ್ಟವಾಗಿರುವ ತಳಿಗೆ ಸೇರಿದ ದನದ ಪಳೆಯುಳಿಕೆಗಳು ಕಂಡು ಬಂದಿವೆ. ಇಲ್ಲಿರುವ ಪಳೆಯುಳಿಕೆಗಳ ಆಧಾರದಿಂದ ಇಲ್ಲಿನ ಶಿಲಾಯುಧಗಳನ್ನು ಮಧ್ಯ ಪ್ಲೈಸ್ಟೋಸೀನ್ ಯುಗದವೆಂದು ನಿರ್ದೇಶಿಸಲು ಸಾಧ್ಯವಾಗುತ್ತದೆ.

ಬಸಾಲ್ಟ್ ಅಥವಾ ಅಗ್ನಿಶಿಲೆಯ ಉಂಡೆಕಲ್ಲುಗಳಲ್ಲಿ ಒಮ್ಮುಖವಾಗಿ ಮತ್ತು ದ್ವಿಮುಖವಾಗಿ ಚಕ್ಕೆಗಳನ್ನು ತೆಗೆದು ತಯಾರಿಸಿದ ಮಚ್ಚುಗಳು (ಚಾಪರ್) ಹೆಚ್ಚು ಸಂಖ್ಯೆಯಲ್ಲಿ ದೊರಕಿವೆ. ಮೊನೆಯಾದ, ಅಗಲವಾದ, ಉಟ್ಟಿಕೊಂಡಿರುವ ಅಥವಾ ಕಮಾನಿನಂತೆ ಒಳಸರಿದ ಅಲಗುಳ್ಳ ಒಮ್ಮುಖ ಮಚ್ಚುಗಳು ಮತ್ತು ಆಯುಧದ ಸುತ್ತಲೂ ಅಲಗುಳ್ಳ ಅಥ್‌ವಾ ಉಬ್ಬಿಕೊಂಡಿರುವ ಅಲಗುಳ್ಳ ದ್ವಿಮುಖ ಮಚ್ಚುಗಳು ಅಲ್ಲಿಯ ಪೂರ್ವಶಿಲಾಯುಗದ ಆಯುಧ ರೀತಿಗಳು.

ಮಧ್ಯಶಿಲಾಯುಗದ ಆಯುಧಗಳಲ್ಲಿ ಚಕ್ಕೆಕಲ್ಲುಗಳ ಮೇಲೆ ಮಾಡಿದ ಹೆರೆಯುವ ಆಯುಧಗಳು, ಮೊನೆಗಳು ಲೆವಲ್ವಾ ವಿಧಾನದ ತಿರುಳ್ಗಲ್ಲುಗಳ ಮತ್ತು ಚಕ್ಕೆ ಕಲ್ಲುಗಳು ಮುಖ್ಯವಾದವು. ಸುಧಾರಿತ ತಯಾರಿಕಾ

ತಂತ್ರವನ್ನು ಪ್ರತಿಬಿಂಬಿಸುವ ಮಧ್ಯಶಿಲಾಯುಗದ ಈ ಅವಶೇಷಗಳು ಇತರ ಪ್ರದೇಶಗಳ ಆ ಸಂಸ್ಕೃತಿಯನ್ನು ಹೋಲುತ್ತವೆ.

ನಿಟ್ಟೂರು ಬಳಿಯ ನೆಲೆಯ ಮಹತ್ತ್ವ ವಿಶಿಷ್ಟವಾದುದು. ದಕ್ಷಿಣ ಭಾರತದಲ್ಲಿ ಆ ಕಾಲದ ಸಂಸ್ಕೃತಿಯ ಅವಶೇಷಗಳು ಬಹುಮಟ್ಟಿಗೆ ಕೈಗೊಡಲಿ, ಸೀಳುಗ (ಕ್ಲೀವರ್) ಮತ್ತು ಚಕ್ಕೆ ಕಲ್ಲಿನಾಯುಧ ಪದ್ಧತಿಗೆ ಸೇರಿದವು. ಆಂಧ್ರ ಪ್ರದೇಶದ ಕರ್ನೂಲು ಜಿಲ್ಲೆಯ ಕೆಲವೆಡೆಗಳಲ್ಲಿ ಮಾತ್ರ ವಾಯುವ್ಯ ಭಾರತದ ಪೂರ್ವಶಿಲಾಯುಗ ಪದ್ಧತಿಗೆ ಸೇರಿದ ಉಂಡೆಕಲ್ಲುಗಳಿಂದ ತಯಾರಿಸಿದ ಮಚ್ಚುಗ (ಚಾಪರ್) ನೂರಕ್ಕೆ 40ರ ಪ್ರಮಾಣದಲ್ಲಿ ಕಂಡುಬಂದಿದೆ. ಈವರೆಗೂ ಭಾರತೀಯ ಪುರಾತತ್ತ್ವಜ್ಞರು ವಾಯುವ್ಯ ಭಾರತದಲ್ಲಿ ತುಂಡುಕೊಡಲಿ ಸಂಸ್ಕೃತಿ ಮತ್ತು ಭಾರತದ ಉಳಿದೆಡೆಗಳಲ್ಲಿ ಕೈಗೊಡಲಿ ಸಂಸ್ಕೃತಿ ಪ್ರಧಾನವಾಗಿದೆಯೆಂದು ಹೇಳುತ್ತಿದ್ದರು. ಆದರೆ ನಿಟ್ಟೂರಿನ ಉಂಡೆಕಲ್ಲಿನಾಯುಧಗಳು ಕೈಗೊಡಲಿ ಸಂಸ್ಕೃತಿಯ ಸೋಂಕಿಲ್ಲದೆ ಅಸ್ತಿತ್ವದಲ್ಲಿರುವುದು ಮತ್ತು ಕರ್ನೂಲಿನ ಸಾಕ್ಷ್ಯ ಈ ನಂಬಿಕೆಗೆ ಧಕ್ಕೆ ತರುವುದಲ್ಲದೆ ಶಿಲಾಯುಗ ಸಂಸ್ಕೃತಿಯ ಮೂಲ ಸ್ವರೂಪಕ್ಕೆ ಹೊಸ ತಿರುವನ್ನು ಕೊಡುವಂತಾಗಿದೆ. (ಬಿ.ಕೆ.ಜಿ.)

**ನಿಟ್ಟೂರು ನಂಜಯ್ಯ :** ಸು. 1725. ಪ್ರಸಿದ್ಧ ವ್ಯಾಖ್ಯಾನಕಾರ. ಕೇಶಿರಾಜನ ಶಬ್ದಮಣಿದರ್ಪಣ ಎಂಬ ವ್ಯಾಕರಣ ಗ್ರಂಥಕ್ಕೆ ಟೀಕೆಯನ್ನೂ ಸಂಸ್ಕೃತದಲ್ಲಿ ವೇದಾಂತಸಾರ ವೀರಶೈವಚಿಂತಾಮಣಿ ಎಂಬ ಗ್ರಂಥವನ್ನೂ ಬರೆದಿದ್ದಾನೆ. ನಿಟ್ಟೂರು ಈತನ ಸ್ಥಳ. ವೇದಾಂತಸಾರ ವೀರಶೈವಚಿಂತಾಮಣಿ ಗ್ರಂಥ'ದ ಉತ್ತರ ಖಂಡದ ಮೂರು ಹಸ್ತಪ್ರತಿಗಳು ಬಳ್ಳಾರಿಯ ಸುತ್ತಮುತ್ತ ದೊರೆತಿರುವುದರಿಂದಲೂ ಈತ ಉತ್ತರ ಕರ್ನಾಟಕ ಪ್ರದೇಶವನಾಗಿರಬೇಕೆಂದೂ ಇವನ ಹುಟ್ಟೂರಾದ ನಿಟ್ಟೂರು ಬಳ್ಳಾರಿಯ ಸಮೀಪದ್ದು ಇರಬೇಕೆಂದೂ ಊಹಿಸಬಹುದಾಗಿದೆ. ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ನಿಟ್ಟೂರು ಇವನ ಹುಟ್ಟೂರಾಗಿರಬೇಕೆಂದೂ ಕೆಲವರ ಅಭಿಪ್ರಾಯ.

ಶಬ್ದಮಣಿದರ್ಪಣದ ಟೀಕೆಯಲ್ಲಿ ಪ್ರತಿಸೂತ್ರಕ್ಕೂ ಪದಚ್ಛೇದ, ಅನ್ವಯ, ಟೀಕು - ಎಂದು ಮೂರು ಭಾಗಮಾಡಿಕೊಂಡು ಅರ್ಥ ವಿವರಿಸಿದ್ದಾನೆ. ಸಂದಿಗ್ಧವಾದೆಡೆಯಲ್ಲಿ ಭಟ್ಟಾಕಳಂಕನ ಶಬ್ದಾನುಶಾಸನದ (ಸು.1604) ಸೂತ್ರಗಳನ್ನು ಉದ್ದರಿಸಿ ವಿಚಾರ ಎಂಬ ಭಾಗದಲ್ಲಿ ವಿಸ್ತೃತ ವಿವರಣೆ ನೀಡಿದ್ದಾನೆ. ಉದಾಹರಣೆಗೆ ಒಂದು ಸೂತ್ರವನ್ನು ಉದ್ಧರಿಸಲಾಗಿದೆ.

ಅವತರಿಸಿರ್ಕುಮುವರ್ಣದ

ಋವರ್ಣದೋತೌತ್ವದಗ್ರದೊಳ್ ಸ್ವರಮಿರೆ ವ

ತ್ವ ವಿಧಾನಂ ಬಹುಳತೆಯ

ತ್ವವತ್ವದೊಳ್ ಸಂಸ್ಕೃತಕ್ಕೆ ತಾನಿಲ್ಲೆಂದುಂ

ಪದಚ್ಛೇದ - ಅವತರಿಸಿ ಇರ್ಕುಂ, ಉವರ್ಣದ ಋವರ್ಣದ ಓತ್ವೌತ್ವದ ಅಗ್ರದೊಳ್ ಸ್ವರಂ ಇರೆ, ವತ್ವ ವಿಧಾನಂ ; ಬಹುಳತೆ ಯತ್ವವತ್ವದೊಳ್ ಸಂಸ್ಕೃತಕ್ಕೆ ತಾಂ ಇಲ್ಲ ಎಂದುಂ.

ಅನ್ವಯ - ಉವರ್ಣದ ಋವರ್ಣದ ಓತ್ವೌತ್ವದ ಅಗ್ರದೊಳ್ ಸ್ವರಂ ಇರೆ, ವತ್ವ ವಿಧಾನಂ ಅವತರಿಸಿ ಇರ್ಕುಂ; ಸಂಸ್ಕೃತಕ್ಕೆ ಯುತ್ವವತ್ವದೊಳ್ ಬಹುಳತೆ ತಾಂ ಎಂದುಂ ಇಲ್ಲ.

ಟೀಕು - ಉವರ್ಣದ=ಉ ಊ ಎಂಬ ಸವರ್ಣದ: ಋವರ್ಣದ =ಋ ೠ ಎಂಬ ಸವರ್ಣದ; ಓತ್ವೌತ್ವದ=ಓಕಾರ ಔಕಾರದ; ಅಗ್ರದೊಳ್=ಮುಂದೆ; ಸ್ವರಂ=ಸ್ವರಾಕ್ಷರಂ; ಇರೆ=ಇರೆ; ವತ್ವವಿಧಾನಂ =ವಕಾರದವಿಧಾನಂ; ಅವತರಿಸಿರ್ಕುಂ=ಹುಟ್ಟಿರ್ಪುದು; ಸಂಸ್ಕೃತಕ್ಕೆ=ಸಂಸ್ಕೃತ ಶಬ್ದಕ್ಕೆ; ಯತ್ವವತ್ವದೊಳ್==ಯತ್ವಸಂಧಿ ವತ್ವಸಂಧಿಯಲ್ಲಿ; ಬಹುಳತೆ =ಬಹುಳತ್ತ್ವ; ತಾಂ=ತಾಂ; ಎಂದುಂ=ಆವಾಗಳುಂ; ಇಲ್ಲ=ಉಂಟಾಗದು

ವಿಚಾರಂ - ಕನ್ನಡದ ಶಬ್ದದಲ್ಲಿ ಯತ್ವವತ್ವ ಸಂಧಿಗಳಲ್ಲಿ ಬಹುಳ ಮುಂಟೆಬುದರ್ಥ. ಅತ್ವದಿನಿವರ್ಣದಿಂ ಮತ್ತೋತ್ವದಿನೈತ್ವ ದಿನವರ್ಣದಿಂ ಮುಂದಕ್ಕುಂ ಯತ್ವಂ, ಉವರ್ಣದ ಋವರ್ಣದೋ ತ್ವೌತ್ವದಗ್ರದೊಳ್ ಸ್ವರಮಿರೆ ವತ್ವವಿಧಾನವೆಂಬ ಈ ಯತ್ವ ಸಂಧಿವತ್ವ ಸಂಧಿಗಳಲ್ಲಿ ವಿಚಾರಮುಂಟು; ಅತ್ವಮದೆಂತಂದೊಡೆ ಶಬ್ದಾನುಶಾಸನದಲ್ಲಿ (ಸೂತ್ರಂ 1ನೆಯ ಪಾದದ 38ನೆಯ ಸೂತ್ರಂ) ಅತ ಓಷ್ಠ್ಯೇ ಸ್ವರೇ ಪರೇ ಅಕಾರ ಸ್ಯವಗ್ಭವತಿ ಎಂಬುದಾಗಿ ಅಕಾರಕ್ಕೆ ಓಷ್ಠ್ಯಸ್ವರಂ ಪರಮಾಗೆ ವತ್ವಸಂಧಿಯಾಗುವುದು. ಆ+ಉದಕಂ=ಆವುದಕಂ; ಆ+ಊರ್=ಆವೂರ್; ಆ+ಊಟಂ=ಆವೂಟಂ ಎಂಬಂತೆ ಓಷ್ಠ್ಯ ಗ್ರಹಣದಿಂ ಕಂಠೋಷ್ಠ್ಯ ಮಂ ಸಂಗ್ರಹಿಸಲ್ಪಟ್ಟುದು.

ಈ ಟೀಕು ಶಬ್ದಮಣಿದರ್ಪಣಾಭ್ಯಾಸಿಗಳಿಗೆ ಒಂದು ಕೈಗನ್ನಡಿಯಂತಿದೆ.

ವೇದಾಂತಸಾರ ವೀರಶೈವಚಿಂತಾಮಣಿ ಪೂರ್ವಖಂಡ ಮತ್ತು ಉತ್ತರ ಖಂಡ ಎಂಬ ಎರಡು ಭಾಗಗಳನ್ನೊಳಗೊಂಡಿದೆ. ಪೂರ್ವಖಂಡ ಅಲಭ್ಯವಾಗಿದ್ದು ಇದರಲ್ಲಿ ವೀರಶೈವ ಶುದ್ಧಶೈವ ಮಿಶ್ರಶೈವ ಮುಂತಾದ ಶೈವರು ಆಚರಿಸಬೇಕಾದ ಸಾಮಾನ್ಯ ಧರ್ಮ ನಿರೂಪಿತವಾಗಿರುವಂತೆ ತಿಳಿಯುತ್ತದೆ. ಉತ್ತರ ಖಂಡದಲ್ಲಿ 21 ಪ್ರಕರಣಗಳಿದ್ದು ಅವುಗಳಲ್ಲಿ ವೀರಶೈವರ ವಿಶೇಷ ಧರ್ಮಗಳು ನಿರೂಪಿತವಾಗಿವೆ. ಲಿಂಗಾಂಗಸಂಯೋಗ ಮತ್ತು ಶಿವಜೀವೈಕ್ಯರೂಪಗಳನ್ನು ತಿಳಿಸುವುದು ಈ ಗ್ರಂಥದ ಗುರಿ ಎಂದು ಹೇಳಿ, ಇವುಗಳ ಅರಿವಿನಿಂದಲೇ ಮುಕ್ತಿ ಎಂಬುದಾಗಿ ಹೇಳಿದ್ದಾನೆ. ಈತನಿಗೆ ಕಾಮಿಕಾಗಮ, ವೀರಾಗಮ ಮುಂತಾದ ಆಗಮಗಳೂ ಶಂಕರಸಂಹಿತೆ, ಸೂತಸಂಹಿತೆ ಮುಂತಾದ ಸಂಹಿತೆಗಳೂ ಶೈವಪುರಾಣ, ಆದಿತ್ಯಪುರಾಣ, ಮಾನವಪುರಾಣ ಮೊದಲಾದ ಪುರಾಣಗಳೂ ಸಿದ್ಧಾಂತ ಶಿಖಾಮಣಿ, ವಿಶೇಷಾರ್ಥಪ್ರಕಾಶಿಕೆ, ಆರಣ್ಯಕಗಳು, ಉಪನಿಷತ್ತುಗಳು - ಇವುಗಳ ಪೂರ್ಣಪರಿಚಯುವಿದ್ದು ಅವುಗಳಲ್ಲಿ ಹೇಳಲಾಗಿರುವ ವೀರಶೈವಧರ್ಮ ಮತ್ತು ಆಚಾರಗಳ ಲಕ್ಷಣಗಳನ್ನು ಸಂದರ್ಭೋಚಿತವಾಗಿ ಬಳಸಿಕೊಂಡು ಅವುಗಳಿಗೆ ವಿವರಣೆ ನೀಡಿದ್ದಾನೆ.

ಭಸ್ಮಧಾರಣೆ, ಲಿಂಗಧಾರಣೆ, ರುದ್ರಾಕ್ಷಿಧಾರಣೆ, ಲಿಂಗಪೂಜೆ - ಇವುಗಳ ವಿಧಾನಗಳನ್ನು ವಿಸ್ತಾರವಾಗಿ ಪ್ರಸ್ತಾಪಿಸಿದ್ದಾನೆ. ಶಿವಸಂಸ್ಕಾರವಿಲ್ಲದವನನ್ನು ಶ್ವಪಚನೆಂದು ಕರೆದಿದ್ದಾನೆ. ಶಿವಸಂಸ್ಕಾರವನ್ನು ಪಡೆದಮೇಲೆ ಅವನಲ್ಲಿ ಜಾತಿಭೇದವನ್ನೆಣಿಸಬಾರದು; ಹಾಗೆ ಭೇದವನ್ನೆಣಿಸಿದರೆ ಅವರಿಗೆ ರೌರವನರಕ ಪ್ರಾಪ್ತವಾಗುತ್ತದೆಂದು ಹೇಳಿದ್ದಾನೆ. ಶೈವರನ್ನು ಬ್ರಾಹ್ಮಣರೆಂದು ಗಣಿಸಿದ್ದಾನೆ. ಬ್ರಹ್ಮಜ್ಞಾನವುಳ್ಳವನು ಬ್ರಾಹ್ಮಣನೆಂದು ಮಹಾಭಾರತದಲ್ಲಿ ಹೇಳಿರುವುದರಿಂದ ಶೈವನು ಬ್ರಹ್ಮಜ್ಞಾನವುಳ್ಳವನಾದುದರಿಂದ ಅವನೂ ಬ್ರಾಹ್ಮಣನೆನಿಸುತ್ತಾನೆಂದು ವಾದಿಸಿದ್ದಾನೆ.

ಅವತಾನ ಮಂತ್ರದಲ್ಲಿ - ಕಲಿಯುಗದಲ್ಲಿ ನಂದೀಶ್ವರನೇ ಮುಂತಾದ ಗಣಧರರು ಬಸವಣ್ಣ, ಪ್ರಭುದೇವ, ರೇವಣಸಿದ್ಧರಾಗಿ ಜನಿಸುತ್ತಾರೆ. ಅವರ ಜೀವನ ಚರಿತ್ರೆಯೂ ಸೋಮನಾಥ'ಭಾಷ್ಯ, ಬಸವಪುರಾಣ, ಆರಾಧ್ಯಚಾರಿತ್ರ್ಯದಲ್ಲಿ ಪ್ರಸಿದ್ಧವಾಗುತ್ತದೆ ಎಂದು ಹೇಳುವುದರ ಮೂಲಕ ಬಸವಾದಿಗಳನ್ನು ಸ್ಮರಿಸಿಕೊಂಡಿದ್ದಾನೆ. ವೀರಶೈವಧ'ರ್ಮಾಭ್ಯಾಸಿಗಳಿಗೆ ಇದೊಂದು ಆಕರಗ್ರಂಥ'ವಾಗಿದೆ. ಈ ಗ್ರಂಥ'ವನ್ನು ಮಣೂರು ಮಠಾಧ್ಯಕ್ಷ ವೇದಮೂರ್ತಿ ಮಲ್ಲಿಕಾರ್ಜುನ ಶಾಸ್ತ್ರಿಯವರು ಸಂಪಾದಿಸಿ ಪ್ರಕಟಿಸಿದ್ದಾರೆ (1908). ರಂಗಾಚಾರ್ಯ

ಶಾಸ್ತ್ರೀಮುದೋಳಕರ್ ಎಂಬುವವರು ಇದನ್ನು ಮರಾಠಿ ಭಾಷೆಗೆ ಭಾಷಾಂತರಿಸಿದ್ದಾರೆ.

**ನಿಟೂರು ಶ್ರೀನಿವಾಸರಾವ್ :** 1903-2004. ಕರ್ನಾಟಕ (ಮೈಸೂರು) ರಾಜ್ಯದ ನಿವೃತ್ತ ಮುಖ್ಯ ನ್ಯಾಯಾಧೀಶರು. ತಾಯಿ ಸೀತಮ್ಮ, ತಂದೆ ಶಾಮಣ್ಣ ಎ.ವಿ. ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರು. ಸೋದರಮಾವ ಸರ್‌ಎಂ.ಎಸ್.ಕೃಷ್ಣರಾವ್. ಶ್ರೀನಿವಾಸರಾಯರು 1903 ಆಗಸ್ಟ್ 24ರಂದು ಬೆಂಗಳೂರಿನಲ್ಲಿ ಜನಿಸಿದರು. ಇವರು ಮೂರು ವರ್ಷದವರಾಗಿದ್ದಾಗ ತಾಯಿಯನ್ನು ಕಳೆದುಕೊಂಡರು.

ಇವರು ಪ್ರಾಥಮಿಕ ಶಿಕ್ಷಣ ಪಡೆದದ್ದು ಹೊಸದುರ್ಗದಲ್ಲಿ, ಅನಂತರ ಚಳ್ಳಕೆರೆ, ಶಿವಮೊಗ್ಗದಲ್ಲಿ ಇವರ ಓದು ಸಾಗಿತು. ಜೊತೆಗೆ ಇವರು ಹಿಂದಿ ಮತ್ತು ಸಂಸ್ಕೃತದಲ್ಲೂ ಪ್ರಾವೀಣ್ಯ ಪಡೆದರು. ಮೈಸೂರು ವಿಶ್ವವಿದ್ಯಾನಿಲಯದಿಂದ ಬಿ.ಎಸ್‌ಸಿ. ಪದವಿ ಗಳಿಸಿದರು. ಅನಂತರ ಮದರಾಸು ವಿಶ್ವವಿದ್ಯಾಲಯದಿಂದ ಕಾನೂನು ಪದವಿ ಗಳಿಸಿ ವಕೀಲರಾಗಿದ್ದರು (1927). 1953ರಲ್ಲಿ ಇವರು ಅಡ್ವೋಕೆಟ್ ಜನರಲ್‌ರಾಗಿ ನಿಯುಕ್ತರಾದರು. 1955ರಲ್ಲಿ ಮೈಸೂರು ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿ ನೇಮಕವಾದರು. 1956ರಲ್ಲಿ ಭಾಷಾವಾರು ಪ್ರಾಂತ್ಯ ರಚನೆಯಾದ ಬಳಿಕ ಮೈಸೂರು ಹೈಕೋರ್ಟಿನ ನ್ಯಾಯಾಧೀಶರಾಗಿ ಮುಂದುವರಿದರು. 1961ರಲ್ಲಿ ಮುಖ್ಯ ನ್ಯಾಯಾಧೀಶರಾಗಿ 1963ರಲ್ಲಿ ನಿವೃತ್ತರಾದರು. 1964ರಲ್ಲಿ ಕೇಂದ್ರ ಸರಕಾರದ ಜಾಗ್ರತ ಆಯೋಗದ ಪ್ರಥಮ ಆಯುಕ್ತರಾಗಿ ನೇಮಕಗೊಂಡರು. ಆಡಳಿತದಲ್ಲಿನ ಭ್ರಷ್ಟಾಚಾರವನ್ನು ತೊಡೆದು ಹಾಕಲು ಸಂತಾನಂ ಆಯೋಗದ ಶಿಫಾರಸನ್ನು ಕಾರ್ಯಗತಗೊಳಿಸಲು ಪ್ರಯತ್ನಿಸಿದರು. ಇವರು 1968ರ ವರೆಗೆ ಈ ಹುದ್ದೆಯಲ್ಲಿದ್ದರು. ಇವರಿಗೆ ಮೊದಲಿನಿಂದಲೂ ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ ಚಟುವಟಿಕೆಗಳಲ್ಲಿ ಅತೀವ ಆಸಕ್ತಿಯಿತ್ತು. ಇವರು ಕಾಂಗ್ರೆಸ್ ಸಂಸ್ಥೆಯ ಸದಸ್ಯರಾಗಿದ್ದರು. ಸ್ವಾತಂತ್ರ್ಯ ಚಳವಳಿಯಲ್ಲಿ ಇವರು ಸಕ್ರಿಯರಾಗಿ ದುಡಿದರು. ಜವಾಬ್ದಾರಿ ಸರಕಾರದ ರಚನೆಯ ಹೋರಾಟದಲ್ಲೂ ಇವರು ಭಾಗವಹಿಸಿದ್ದರು.

ಬೆಂಗಳೂರಿನಲ್ಲಿ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭೆಯ ಶಾಖೆ ತೆರೆದು ಹಿಂದಿ ಪ್ರಚಾರಕರಿಗೆಲ್ಲ ಮಾರ್ಗದರ್ಶನ ಮಾಡುತ್ತ ಹದಿನೈದು ವರ್ಷ ಅದರ ಗೌರವಕಾರ್ಯದರ್ಶಿಯಾಗಿ ದುಡಿದರು.

ಮಹಾತ್ಮಾಗಾಂಧೀಜಿಯವರು ಮೂರು ತಿಂಗಳು ಬೆಂಗಳೂರಿನಲ್ಲೂ ಒಂದೂವರೆ ತಿಂಗಳು ನಂದಿಬೆಟ್ಟದಲ್ಲೂ ಇದ್ದಾಗ, ಇವರು ಗಾಂಧೀಜಿಯವರ ಒಡನಾಟ ಬೆಳೆಸಿಕೊಂಡು, ಅವರು ಹಮ್ಮಿಕೊಂಡ ಚಟುವಟಿಕೆಗಳಲ್ಲಿ ಭಾಗವಹಿಸಿದರು. ಖಾದಿ ಪ್ರಚಾರದಲ್ಲಿ ತೊಡಗಿದರಲ್ಲದೆ ಸ್ವತಃ ಖಾದಿಧಾರಿಯಾದರು.

ಸ್ವಾತಂತ್ರ್ಯ ಚಳವಳಿಯ ಸಂದೇಶವನ್ನು ಜನತೆಗೆ ತಲುಪಿಸಬೇಕು, ಗಾಂಧೀಸಾಹಿತ್ಯವನ್ನು ಪ್ರಚಾರ ಮಾಡಬೇಕು. ಕನ್ನಡ ಲೇಖಕರನ್ನು ಪ್ರೋತ್ಸಾಹಿಸಬೇಕು ಎಂಬ ಉದ್ದೇಶದಿಂದ ಇವರು ಸತ್ಯಶೋಧನ ಪ್ರಕಟಣಾಮಂದಿರವನ್ನು ಆರಂಭಿಸಿ (1928) 1967ರ ವರೆಗೆ ಅದನ್ನು ತಮ್ಮ ಮಗ ಚಂದ್ರಶೇಖರರ ಸಹಾಯದಿಂದ ನಡೆಸಿದರು. ಇವರಿಬ್ಬರ ಪರಿಶ್ರಮದಿಂದ ಸತ್ಯಶೋಧನ ಪ್ರಕಟಣಾಮಂದಿರ ಒಂದು ಪ್ರತಿಷ್ಠಿತ ಸಂಸ್ಥೆಯಾಗಿ ಬೆಳೆಯಿತು. ಈ ಪ್ರಕಟಣಾಲಯದಿಂದ ಅನೇಕ ಸಾಹಿತಿಗಳ ಉತ್ತಮ ಸಾಹಿತ್ಯ ಕೃತಿಗಳನ್ನು ಪ್ರಕಟಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಬೆಳೆವಣಿಗೆಯಲ್ಲಿ ಇವರು ಸಕ್ರಿಯರಾಗಿ ಐವತ್ತಕ್ಕೂ ಹೆಚ್ಚು ವರ್ಷ ದುಡಿದರು.

ಇವರು ಸರ್.ಎಂ.ಎಸ್. ಕೃಷ್ಣರಾವ್ ಅವರ ಮಗಳು ಪದ್ಮಮ್ಮನವರನ್ನು 1921ರಲ್ಲಿ ಮದುವೆಯಾದರು. ಮೊದಲಿನಿಂದಲೂ ರಾಷ್ಟ್ರೀಯ ಭಾವನೆ ಬೆಳೆಸಿಕೊಂಡ ಈ ದಂಪತಿಗಳು ಮಹಾತ್ಮಾ ಗಾಂಧಿಯವರ ಜೀವನ ಚರಿತ್ರೆ ಮತ್ತು ಗಾಂಧೀಜಿಯವರ ಅನಾಸಕ್ತಿಯೋಗವನ್ನು ಕನ್ನಡಕ್ಕೆ ತರ್ಜುಮೆ ಮಾಡಿ ಅದರ ಪ್ರತಿಗಳು ಸುಲಭ ಬೆಲೆಯಲ್ಲಿ ಮನೆಮನೆಗೂ ತಲುಪುವಂತೆ ಯತ್ನಿಸಿದರು. ಇವರು ಇಂಗ್ಲಿಷಿನ ಕೆಲವು ಕಥೆಗಳನ್ನೂ ಕನ್ನಡಕ್ಕೆ ತಂದಿದ್ದಾರೆ. ಸ್ತ್ರೀಯರಿಗಾಗಿ ಒಂದು ಗ್ರಂಥ' ಬರೆದಿದ್ದಾರೆ. ಇವರು ಬರೋಡದಲ್ಲಿ ಸೇರಿದ್ದ ಹೊರನಾಡು ಕನ್ನಡ ಸಮ್ಮೇಳನದ ಅಧ್ಯಕ್ಷರಾಗಿದ್ದರು. ನ್ಯಾಷನಲ್ ಕಾಲೇಜಿನಲ್ಲಿದ್ದಾಗ ಸೇವಾದಲದ ಚಟುವಟಿಕೆಗಳಲ್ಲೂ ತೊಡಗಿಕೊಂಡಿದ್ದರು. ಡಿ.ವಿ.ಗುಂಡಪ್ಪನವರು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯನ್ನು ಆರಂಭಿಸಿದಂದಿನಿಂದಲೂ ನಿಟ್ಟೂರರು ಆ ಸಂಸ್ಥೆಯನ್ನು ಬೆಳೆಸಲು ಹಲವು ಕ್ರಮ ಕೈಗೊಂಡರು. ಈ ಸಂಸ್ಥೆಯ ಕಾರ್ಯದರ್ಶಿಯಾಗಿ (1945-64) ಮತ್ತು (1975-2003) ಸಂಸ್ಥೆಯ ಪೋಷಕರಾಗಿ ದುಡಿದರು. ನಿರಾಡಂಬರ ವ್ಯಕ್ತಿಯಾಗಿದ್ದ ನಿಟ್ಟೂರರು ಬೆಂಗಳೂರಿನ ಸಭೆ ಸಮಾರಂಭಗಳಲ್ಲಿ ಆಸಕ್ತಿಯಿಂದ ಭಾಗವಹಿಸುತ್ತಿದ್ದರು.

ಇವರು ಬೆಂಗಳೂರಿನ ಗಾಂಧಿ ಸ್ಮಾರಕನಿಧಿ, ಗಾಂಧಿ ಶಾಂತಿ ಪ್ರತಿಷ್ಠಾನ, ಕರ್ನಾಟಕ ಪ್ರಕೃತಿ ಚಿಕಿತ್ಸಾ ಪರಿಷತ್, ಇಂಡಿಯನ್ ನ್ಯಾಷನಲ್ ಸೆಂಟರ್ ಆಫ್ ದಿ ವರ್ಲ್ಡ್ ಯೂನಿಯನ್ ಇಂಟರ್ ನ್ಯಾಷನಲ್ ಸಂಸ್ಥೆಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ. 1954ರ ಡಿಸೆಂಬರ್‌ನಲ್ಲಿ ಬೆಳಗಾಂವಿಯಲ್ಲಿ ನಡೆದ ಬಾರ್ ಕೌನ್ಸಿಲ್‌ನ ಅಧಿವೇಶನದ ಅಧ್ಯಕ್ಷರಾಗಿ ಆಯ್ಕೆಯಾಗಿದ್ದರು. ಚಿತ್ತೂರು ಜಿಲ್ಲೆಯ ಲಾ ಕಾನ್‌ಫರೆನ್ಸ್ ಅಧ್ಯಕ್ಷರಾಗಿ 1965ರಲ್ಲಿ ನಿಯುಕ್ತರಾದರು. ಮೊದಲಿನಿಂದಲೂ ಅರವಿಂದಾಶ್ರಮದೊಂದಿಗೆ ನಿಕಟ ಸಂಬಂಧ ಹೊಂದಿದ್ದ ಇವರು ಸುಮಾರು 10 ವರ್ಷ ಅದರ ಅಧ್ಯಕ್ಷರಾಗಿದ್ದರು. ಇವರು ಸಂಯುಕ್ತ ಕರ್ನಾಟಕದ ಆರಂಭದ ದಿನಗಳಿಂದಲೂ ಲೋಕಶಿಕ್ಷಣ ಟ್ರಸ್ಟಿನ ಸಂಪರ್ಕವಿಟ್ಟುಕೊಂಡಿದ್ದರು. ಅನೇಕ ಬಾರಿ ಇವರು ಟ್ರಸ್ಟಿನ ಅಧ್ಯಕ್ಷರಾಗಿದ್ದರು.

ಇವರಿಗೆ ದಕ್ಷಿಣಭಾರತ ಹಿಂದಿ ಪ್ರಚಾರ ಸಭೆಯ ಗೌರವ ಡಾಕ್ಟರೇಟ್ ಬಂದಿದೆ (1996). ಬೆಂಗಳೂರು ವಿಶ್ವವಿದ್ಯಾಲಯ ಕಾನೂನು ಕ್ಷೇತ್ರದಲ್ಲಿ ಗಮನಾರ್ಹ ಸೇವೆ ಸಲ್ಲಿಸಿದವರಿಗೆ ಕೊಡುವ ಅತ್ಯುನ್ನತ ಗೌರವ ಡಾಕ್ಟೋರೇಟ್ ಪದವಿ (ಎಲ್‌ಎಲ್.ಡಿ) ನೀಡಿ ಗೌರವಿಸಿದೆ. ಕರ್ನಾಟಕ ಸರ್ಕಾರ ರಾಜ್ಯೋತ್ಸವ ಪ್ರಶಸ್ತಿ ನೀಡಿ ಪುರಸ್ಕರಿಸಿದೆ (1997).

ಇವರು ಅಮೆರಿಕ, ಯುರೋಪ್, ಇಂಗ್ಲೆಂಡ್ ಮೊದಲಾದ ದೇಶಗಳಲ್ಲಿ ಪ್ರವಾಸ ಮಾಡಿದ್ದಾರೆ. 2001ರಲ್ಲಿ ಮ್ಯಾಂಚೆಸ್ಟರ್‌ನಲ್ಲಿ ನಡೆದ ಕನ್ನಡ ಸಮ್ಮೇಳನದಲ್ಲಿ ಇವರು ಭಾಗವಹಿಸಿದ್ದರು. ಬೆಂಗಳೂರಿನ ಸಾರ್ವಜನಿಕ ಸೇವಾ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಇವರು 2004 ಆಗಸ್ಟ್ 12ರಂದು ನಿಧನರಾದರು. (ಎಸ್.ಎಂ.ಕೆ.)

**ನಿಡುಗಲ್ಲು :** ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನಲ್ಲಿ ಕಸಬಾದಿಂದ ಪಶ್ಚಿಮಕ್ಕೆ ಸು. 29 ಕಿಮೀ ದೂರದಲ್ಲಿರುವ ಒಂದು ಸಣ್ಣ ಹಳ್ಳಿ. ಇದೇ ಹೆಸರಿನ ಹೋಬಳಿಯ ಕೇಂದ್ರ. ಸಮುದ್ರಮಟ್ಟದಿಂದ 1221 ಮೀ ಎತ್ತರಕ್ಕೆ ಮೊನಚಾಗಿ ಚಾಚಿಕೊಂಡು ಸುತ್ತಲಿನ ಪ್ರದೇಶಕ್ಕೆ ಎದ್ದುಕಾಣುವಂತಿರುವ ಈ ಗ್ರಾಮದ ಸಮೀಪದ ಬೆಟ್ಟವೊಂದರಿಂದ ಈ ಸ್ಥಳಕ್ಕೆ ನಿಡುಗಲ್ಲು ಎಂದು ಹೆಸರು ಬಂದಿದೆ.

ಬೆಟ್ಟದ ಪಾದದಲ್ಲಿ ಪೂರ್ವ ಮತ್ತು ದಕ್ಷಿಣಕ್ಕೆ ಗ್ರಾಮವಿದೆ. ಹಿಂದೆ ವೈಭವದಿಂದ ಮೆರೆದ ಈ ಸ್ಥಳ 9-10ನೆಯ ಶತಮಾನದಲ್ಲಿ ಹೆಂಜೇರಿನಿಂದ (ಈಗಿನ ಹೇಮಾವತಿ) ಆಳುತ್ತಿದ್ದ ನೊಳಂಬ ರಾಜರ ವಶದಲ್ಲಿತ್ತು. ಅನಂತರ ಸ್ಥಳೀಯ ಚೋಳವಂಶವೊಂದರ ಒಡೆತನದಲ್ಲಿತ್ತು (ನೋಡಿ: ನಿಡುಗಲ್ಲು ಚೋಳರು), ವಿಜಯನಗರ ಅರಸುಗಳ ಕಾಲದಲ್ಲಿ ತಿಪ್ಪನಾಯಕನ ವಂಶಕ್ಕೆ ಸೇರಿದ ಪಾಳೆಯಗಾರರು ಇಲ್ಲಿ ಆಳುತ್ತಿದ್ದರು (ನೋಡಿ: ಹರತಿಯ ಪಾಳೆಯಗಾರರು). ಗ್ರಾಮದ ಸಮೀಪದಲ್ಲಿರುವ ಬೆಟ್ಟ (ನಿಡುಗಲ್ಲು ದುರ್ಗ) ಎರಡು ಮೂರು ಘಟ್ಟಗಳಲ್ಲಿ ಮೇಲೆ ಹಬ್ಬಿದೆ. ಏರು ಕಡಿದು, ಅದರ ಮೇಲೇರಿದರೆ ಅನೇಕ ಗಿರಿಪಂಕ್ತಿಗಳು ಮತ್ತು

ಸರೋವರಗಳ ಹರಿವಿನ ಭವ್ಯದೃಶ್ಯವನ್ನು ಕಾಣಬಹುದು. ಬೆಟ್ಟ ಅನೇಕ ಕೋಟೆಗಳಿಂದ ಆವೃತ್ತವಾಗಿದೆ. ಈ ಕೋಟೆಗಳಿಗೆ ಕಲ್ಲೇಶ್ವರಕೋಟೆ, ಭೈರವನ ಕೋಟೆ, ಅರೆಕೋಟೆ, ನಾಗೇಶ್ವರಕೋಟೆ ಮುಂತಾಗಿ ಕರೆಯುತ್ತಾರೆ. ಅಂತೆಯೇ ಅಲ್ಲಿನ ಅನೇಕ ಹೆಬ್ಬಾಗಿಲುಗಳಿಗೆ ಮತನೂರುಬಾಗಿಲು, ಸಿಂಗಾರದ ಬಾಗಿಲು, ಸಿವುಲಯ್ಯನ ದಿಡ್ಡಿ ಮೊದಲಾದ ಹೆಸರುಗಳಿವೆ. ಅನೇಕ ದೊಣೆಗಳೂ ಹಿಂದಿನ ಕಾಲದ ಉಗ್ರಾಣಗಳು, ಮದ್ದಿನ ಮನೆಗಳು, ಫಿರಂಗಿಯ ತುಂಡುಗಳು ಮತ್ತು ಅರಮನೆಯ ಅವಶೇಷಗಳೂ ಕೋಟೆಗಳೊಳಗಿವೆ. ಬೆಟ್ಟದ ತುದಿಯಲ್ಲಿ ಹರತಿಯ ಪೊಟ್ಟೆಣ್ಣನಾಯಕ ಕಟ್ಟಿದ (1653) ಬಸವನಗುಡಿ, ಸ್ವಲ್ಪ ಕಳಗೆ ತಿಮ್ಮಣ್ಣನಾಯಕ ಜೀರ್ಣೋದ್ಧಾರಮಾಡಿದ (1670) ಹಳೆಯ ಕಾಳಹಸ್ತೇಶ್ವರ ಗುಡಿ ಇವೆ. ಸಮೀಪದಲ್ಲೇ 1150ರಲ್ಲಿ ಕಟ್ಟಿದ ಅನೇಕ ಸುಂದರ ಶಿಲ್ಪಗಳಿರುವ ಈಗ ಶಿಥಿಲವಾಗಿರವ ನಾಗೇಶ್ವರ ದೇವಾಲಯವಿದೆ. ಇದರಿಂದ ಆನತಿ ದೂರದಲ್ಲಿ ಹಿಂದೆ ಪಟ್ಟಣದ ನೀರು ಸರಬರಾಜಿಗಾಗಿ ಇದ್ದ ಭೂಗತ ನಾಲೆ ಇದೆ. ಹರತಿಯ ಚಿಕ್ಕತಿಪ್ಪನಾಯಕ ತನ್ನ ಹೆಂಡತಿ ಲಕ್ಷ್ಮೀದೇವಿಯ ನೆನಪಿಗಾಗಿ ಕಟ್ಟಿದ (1487) ಲಕ್ಷ್ಮಣೇಶ್ವರ ದೇವಾಲಯ ಮತನೂರು ಬಾಗಿಲ ಬಳಿ ಇದೆ.

ಬೆಟ್ಟದ ಮೊದಲ ಏರಿನಲ್ಲಿ ತಳದ ಗ್ರಾಮಕ್ಕೆ ಸೇರಿದಂತೆ ರಂಗಧಾಮನ ಮಂಟಪವೆಂಬ ಶಿಖರವಿರುವ ಒಂದು ಚಿಕ್ಕ ದೇವಾಲಯವಿದೆ. ಗ್ರಾಮದ ಸುತ್ತಮುತ್ತ ಅನತಿದೂರದಲ್ಲಿ ವೀರಭದ್ರ, ಪಾರ್ಶ್ವನಾಥ, ಆದಿನಾರಾಯಣ, ಲಕ್ಷ್ಮೀನರಸಿಂಹ, ನಗರೇಶ್ವರ, ಮಲೆಮಲ್ಲಿಕಾರ್ಜುನ ಮತ್ತು ಸೋಮೇಶ್ವರ ದೇವಾಲಯಗಳಿವೆ. ಇವುಗಳಲ್ಲಿ ಸುಂದರವಾದ ಕೆಲವು ವಿಗ್ರಹಗಳಿರುವ ಪಾರ್ಶ್ವನಾಥ ಬಸದಿ ಶಾಸನವೊಂದರಲ್ಲಿ ಜೋಗುವಟ್ಟಿಗೆಯ ಬಸದಿ ಎಂದು ಕರೆಯಲಾಗಿರುವ 1232ರಲ್ಲಿ ರಚಿತವಾದ ದೇವಾಲಯ. ನಗರೇಶ್ವರ ಮತ್ತು ಸೋಮೇಶ್ವರ ದೇವಾಲಯಗಳು ಕ್ರಮವಾಗಿ 1248 ಮತ್ತು 1292ರಲ್ಲಿ ರಚಿತವಾದ ದ್ರಾವಿಡ ರೀತಿಯ ಕಟ್ಟಡಗಳು.

ಇವಲ್ಲದೆ ದುರ್ಗದ ಅಡಿಯಲ್ಲಿ ಹೊಟ್ಟೇಶ್ವರ (ರಚನೆ 1681), ರಾಮ, ಕಾಶಿವಿಶ್ವೇಶ್ವರ ದೇವಾಲಯಗಳು ಮತ್ತು ಮಿರ್ಜಾ ಹುಸೇನ್ ವಿಲಯ ಸಮಾಧಿ ಸಹ ಇವೆ. (ಎಚ್.ವಿ.ಎಸ್.)

**ನಿಡುಗಲ್ಲು ಚೋಳರು :** 12-13ನೆಯ ಶತಮಾನಗಳಲ್ಲಿ ತುಮಕೂರು, ಚಿತ್ರದುರ್ಗ, ಬಳ್ಳಾರಿ ಮತ್ತು ಆನಂತಪುರ ಜಿಲ್ಲೆಗಳ ಕೆಲವು ಭಾಗಗಳನ್ನು ಆಳುತ್ತಿದ್ದ ಮಹಾಮಂಡಲೇಶ್ವರ ಮನೆತನದ ಅರಸರು. ಇವರ ರಾಜಧಾನಿ ಮೊದಲು ಹೆಂಜೇರು (ಅನಂತಪುರ ಜಿಲ್ಲೆ, ಹಿಂದೂಪುರ ತಾಲ್ಲೂಕಿನಲ್ಲಿರುವ ಈಗಿನ ಹೇಮಾವತಿ), ಅನಂತರ ನಿಡಗಲ್ಲು (ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕು), ಇವರು ಸೂರ್ಯವಂಶದವರು. ಕರಿಕಾಲನ ವಂಶೋದ್ಭವರು,ಇವರಿಗೆ ಒಱೆ ಯೂರುಪುರವರಾಧೀಶ್ವರ, ರೊದ್ದರಗೋವ, ಅಱುವತ್ತರು ಮಂಡಳಿಕರ ಗಂಡ, ಗಂಡಭೇರುಂಡ, ಚೋಳಮಹಾರಾಜ ಇತ್ಯಾದಿ ಬಿರುದುಗಳಿದ್ದುವು.

ಇವರಿಗೂ ಮೂಲಚೋಳ ವಂಶದವರಿಗೂ ಇದ್ದ ಸಂಬಂಧ ತಿಳಿಯದು. ಇವರು ಚೋಳರೆಂದು ಪ್ರಸಿದ್ಧರಾಗಿದ್ದರೂ ಇವರ ಶಾಸನಗಳೆಲ್ಲಾ ಕನ್ನಡದಲ್ಲಿವೆ. ಅಲ್ಲದೆ ಚೋಳಧನಂಜಯ, ಚೋಳಿಕ, ಮುತ್ತರಸ ಮುಂತಾದ ಚೋಳನಾಮವುಳ್ಳ ವ್ಯಕ್ತಿಗಳು 8ನೆಯ ಶತಮಾನದಲ್ಲಿಯೇ ಈ ಪ್ರದೇಶದಲ್ಲಿ ಆಳುತ್ತಿದ್ದರೆಂಬುದೂ ಗಮನಾರ್ಹ ವಿಷಯ.

ಸದ್ಯದ ನಿಡುಗಲ್ಲು ಚೋಳರ ಶಾಸನಗಳಲ್ಲಿ ಬ್ರಹ್ಮಭೋಗೇಂದ್ರ, ಮಂಗಿ, ಬೀಚಿದೇವ (ಬಚ್ಚಿದೇವ), ಗೋವಿಂದ ಎಂಬ ಪೂರ್ವಿಕರ ಪುತ್ರಾನುಕ್ರಮ ದೊರಕುತ್ತದೆ. ಗೋವಿಂದನ ಮಗ ವೀರಪಾಂಡ್ಯ ಇರುಂಗೊಳದೇವ ಪ್ರಥಮ ಮಹಾಮಂಡಲೇಶ್ವರ, ಇವನ ಆಳ್ವಿಕೆ 1106ರ ಹೊತ್ತಿಗೇ ಪ್ರಾರಂಭವಾಗಿತ್ತು. 1128ರ ಒಂದು ಶಾಸನದಲ್ಲಿ ಇವನು ರೊದ್ದ-300, ಸಿರೆ-300, ಹೆಜುವೆ-300, ಸಿಂದವಾಡಿ-1000 ಪ್ರಾಂತ್ಯವನ್ನು ಚಾಳುಕ್ಯತ್ರೈಲೋಕ್ಯಮಲ್ಲನ ಆಶ್ರಯದಲ್ಲಿ ಆಳುತ್ತಿದ್ದನೆಂದು ಹೇಳಿದೆ. ವಿಷ್ಣುವರ್ಧನ ಇವನ ಮೇಲೆ ದಂಡೆತ್ತಿಬಂದಿದ್ದನೆಂದು ಹೊಯ್ಸಳ ಶಾಸನಗಳು ತಿಳಿಸುತ್ತವೆ. ಇರುಂಗೊಳನಿಗೆ ಆಳ್ವದೇವಿ ಎಂಬ ಪತ್ನಿಯೂ ಮಲ್ಲಿದೇವ ಎಂಬ ಮಗನೂ ಇದ್ದರು. ಮಲ್ಲಿದೇವ ತನ್ನ ತಂದೆಯ ಜೊತೆಯಲ್ಲಿಯೇ 1108ರಲ್ಲಿ ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿ ಕೆಲವು ಪ್ರದೇಶಗಳನ್ನು ಆಳುತ್ತಿದ್ದ. 1147ರ ಹೊತ್ತಿಗೆ ಇಮ್ಮಡಿ ಜಗದೇಕಮಲ್ಲನ ಆಶ್ರಯದಲ್ಲಿ ತನ್ನ ತಂದೆಯ ರಾಜ್ಯದ ಮೇಲೆ ಒಡೆತನವನ್ನು ಪಡೆದಿದ್ದ. ಇವನ ರಾಜಧಾನಿ ಹೆಂಜೇರು. ಹೊಯ್ಸಳ ಒಂದನೆಯ ನರಸಿಂಹ ಇವನ ಮೇಲೆ ಅಸಫಲ ದಾಳಿ ಮಾಡಿದ್ದ. ಇವನ ಮಂತ್ರಿ ತಂತ್ರಪಾಲ 1167ರಲ್ಲಿ ಹೆಂಜೇರಿನ ಘಟಿಕಾಸ್ಥಾನಕ್ಕೆ ದಾನವಿತ್ತನೆಂದು ಒಂದು ಶಾಸನದಿಂದ ತಿಳಿಯುತ್ತದೆ. ಇವನ ಆಳ್ವಿಕೆಯ ಬಗ್ಗೆ ತಿಳಿದಿರುವ ಕಡೆಯ ವರ್ಷ 1179. ಇವನಿಗೆ ಲಕ್ಷ್ಮಾದೇವಿ ಮತ್ತು ಸೀತಾದೇವಿ ಎಂಬ ಇಬ್ಬರು ಪತ್ನಿಯರೂ ಬಮ್ಮ ಎಂಬ ಮಗನೂ ಇದ್ದರು. ಬಮ್ಮನ ಹೆಂಡತಿ ಬೀಚಲದೇವಿ. ಇವನ ಇನ್ನೊಬ್ಬ ಮಗನಿರಬಹುದಾದ ಗೋವಿಂದ ಎಂಬುವನ ಉಲ್ಲೇಖ 1207ರ ಒಂದು ಶಾಸನದಲ್ಲಿ ದೊರಕುತ್ತದೆ. 1208ರ ಸುಮಾರಿನಲ್ಲಿ ಹೊಯ್ಸಳ ಇಮ್ಮಡಿ ಬಲ್ಲಾಳ ನಿಡುಗಲ್ಲನ್ನು ಆಕ್ರಮಿದ್ದ. ಪುನಃ 1232ರ ಹೊತ್ತಿಗೆ ಬಮ್ಮನ ಮಗ ಇರುಂಗೊಳ, 11 ಪ್ರಾಯಶಃ ಸ್ವತಂತ್ರನಾಗಿ ನಿಡುಗಲ್ಲು ರಾಜಧಾನಿಯಿಂದ ಆಳುತ್ತಿದ್ದ. 1267ರಲ್ಲಿ ಇರುಂಗೋಳನು ಹೊಯ್ಸಳ ರಾಜ್ಯಕ್ಕೆ ಸೇರಿದ್ದ ಆನೆಬಿದ್ದಸರಿಯ (ದೇವರಾಯನದುರ್ಗ) ಮೇಲೆ ಆಕ್ರಮಣ ಮಾಡಿದ್ದನಲ್ಲದೆ, 1276ರಲ್ಲಿ ಸೇವುಣರ ಜೊತೆ ಸೇರಿ, ದೋರಸಮುದ್ರದ ದಾಳಿಯಲ್ಲೂ ಭಾಗವಹಿಸಿದ್ದ. 1278ರ ಒಂದು ಶಾಸನದಿಂದ ಹೆದ್ದೊರೆ ಇವನ ರಾಜ್ಯದ ಗಡಿಯಾಗಿದ್ದಿತೆಂದು ತಿಳಿಯುತ್ತದೆ. ಇಮ್ಮಡಿ ಗೋವಿಂದ, ಮುಮ್ಮಡಿ ಇರುಂಗೊಳ, ಭೋಗ, ಬೊಮ್ಮ ಇತ್ಯಾದಿ ರಾಜರು ನಿಡಗಲ್ಲು ರಾಜ್ಯವನ್ನು ಆಳಿದರೆಂದು ಕೆಲವರ ಹೇಳಿಕೆ. ಆದರೆ ಇದು ಅಸ್ಪಷ್ಟ ವಿಷಯ.

ನಿಡುಗಲ್ಲು ಚೋಳರ ಕಿರುಕುಳವನ್ನು ಸಹಿಸದ ಹೊಯ್ಸಳ ಇಮ್ಮಡಿ ನರಸಿಂಹ 1285ರಲ್ಲಿ ನಿಡಗಲ್ಲನ್ನು ನೆಲಸಮ ಮಾಡಿದ. ಇದರೊಂದಿಗೆ ಈ ಚೋಳವಂಶದ ಆಳ್ವಿಕೆ ಕೊನೆಗೊಂಡಂತೆ ತೋರುತ್ತದೆ.

ಅನಂತರ 14-15ನೆಯ ಶತಮಾನಗಳ ಶಾಸನಗಳಲ್ಲಿ ಪ್ರಾಯಶಃ ಈ ಕುಲದ ಕೆಲವು ತುಂಡಧಿಕಾರಿಗಳ ಹೆಸರುಗಳು ಮಾತ್ರ ಕೇಳಿಬರುತ್ತವೆ. (ಎಚ್.ವಿ.ಎಸ್.)

**ನಿಪ್ಪಾಣಿ :** ಬೆಳಗಾಂವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಒಂದು ಪಟ್ಟಣ. ಹೋಬಳಿ ಕೇಂದ್ರ. ಬೆಳಗಾಂವಿ-ಕೊಲ್ಹಾಪುರ ಮಾರ್ಗದಲ್ಲಿ ಮಹಾರಾಷ್ಟ್ರ-ಬೆಳಗಾಂವಿಯ ಗಡಿಯಂಚಿನಲ್ಲಿ ಬೆಳಗಾಂವಿಯ ಉತ್ತರಕ್ಕೆ 72 ಕಿಮೀ ದೂರದಲ್ಲೂ ಚಿಕ್ಕೋಡಿಯ ಪಶ್ಚಿಮಕ್ಕೆ 24ಕಿಮೀ ದೂರದಲ್ಲೂ ಇದೆ. ಜನಸಂಖ್ಯೆ 58,061.

ನಿಪ್ಪಾಣಿ ಪ್ರಸಿದ್ಧಿಗೆ ಬರಲು ದೇಸಾಯಿ ಸಿದ್ದೋಜಿರಾವ್ ಅಪ್ಪಾಸಾಹೇಬ ನಿಂಬಾಳಕರ ಎಂಬಾತ ಕಾರಣನೆಂದು ಹೇಳುವರು. 1812ರಲ್ಲಿ ಎಲ್‍ಫಿನ್‍ಸ್ಟನ್‍ನ ಮಧ್ಯಸ್ಥಿಕೆಯಿಂದ ಕೊಲ್ಹಾಪುರದ ಅರಸ ಮನಗೋಳಿ ಮತ್ತು ಚಿಕ್ಕೋಡಿ ಪರಗಣೆಗಳನ್ನು ನಿಪ್ಪಾಣಿಕರನಿಗೆ ಕೊಟ್ಟನೆಂದು ತಿಳಿದುಬರುತ್ತದೆ. ಮುಂದೆ ನಿಪ್ಪಾಣಿಕರ ಪೇಶವೆಗಳ ಪಕ್ಷ ವಹಿಸಿದ್ದಕ್ಕಾಗಿ ಬ್ರಿಟಿಷರು ಮನಗೋಳಿ ಮತ್ತು ಚಿಕ್ಕೋಡಿ ಪರಗಣೆಗಳನ್ನು ವಾಪಸ್ಸು ಪಡೆದು ಕೊಲ್ಹಾಪುರದ ಅರಸನಿಗೇ ಕೊಟ್ಟರು. 1839ರಲ್ಲಿ ಅಪ್ಪಾಸಾಹೇಬ ಮೃತನಾದುದರಿಂದ ಇಂಗ್ಲಿಷ್ ಸರ್ಕಾರ ಅವನ ಮೊದಲಿನ 15000 ದ ದೇಸಗತಿಯನ್ನು ಬಿಟ್ಟು ಉಳಿದ ಸೀಮೆಯನ್ನೆಲ್ಲಾ ತನ್ನ ವಶಕ್ಕೆ ತೆಗೆದುಕೊಂಡಿತು.

ಇಂದು ನಿಪ್ಪಾಣಿ ಒಂದು ಪ್ರಮುಖ ವ್ಯಾಪಾರ ವಾಣಿಜ್ಯ ಕೇಂದ್ರವಾಗಿದೆ. ಅಕ್ಕಿ, ಅಡಕೆ, ಏಲಕ್ಕಿ, ಸಕ್ಕರೆ, ಕಾಳು, ವಸ್ತ್ರ ಮತ್ತು ಪಾತ್ರೆಗಳ ವ್ಯಾಪಾರ ದಿನೇ ದಿನೇ ಬೆಳೆಯುತ್ತಿದೆ. ನಿಪ್ಪಾಣಿ ತಂಬಾಕಿನ ವ್ಯಾಪಾರಕ್ಕೆ ಇಡೀ ಜಿಲ್ಲೆಯಲ್ಲೇ ಪ್ರಸಿದ್ಧ. ರೈಲುಮಾರ್ಗವಿಲ್ಲದಿದ್ದರೂ

ಉತ್ತಮವಾದ ರಸ್ತೆಗಳಿರುವುದರಿಂದ ಜಿಲ್ಲೆಯ ಎಲ್ಲಾ ಕಡೆಗೂ ಮಾರ್ಗಸಂಪರ್ಕವಿದೆ. ನಿಪ್ಪಾಣಿ ಪೌರಾಡಳಿತಕ್ಕೆ ಒಳಪಟ್ಟಿದೆ. 1956ರ ವರೆಗೂ ಇಡೀ ಬೆಳಗಾಂವಿ ಜಿಲ್ಲೆಯಲ್ಲೇ ಕುಡಿಯಲು ಕೊಳಾಯಿ ನೀರನ್ನು ಪಡೆಯುತ್ತಿದ್ದ ನಗರ ನಿಪ್ಪಾಣಿ ಒಂದೇ. ರಕ್ಷಿತ ಕುಡಿಯುವ ನೀರಿನ ವ್ಯವಸ್ಥೆ. ಪ್ರವಾಸಿಮಂದಿರ, ಧರ್ಮಶಾಲೆ, ಗ್ರಂಥಭಂಡಾರ ಪ್ರೌಢಶಾಲೆ ಮತ್ತು ಕಾಲೇಜುಗಳು ಇವೆ. (ಎನ್.ಪಿ.ಪಿ., ಪಿ.ಕೆ.)

**ನಿರಂಜನ:** 1924-92. ಪ್ರಸಿದ್ಧ ಸಾಹಿತಿ, ಪತ್ರಕರ್ತ, ಅಂಕಣಕಾರ. ಪ್ರಗತಿಶೀಲ ಮನೋಭಾವದ ವಿಚಾರವಂತರು. ಕುಳಕುಂದ ಶಿವರಾಯ ಎಂಬುದು ಇವರ ನಿಜನಾಮ. ಬಾಲ್ಯದಲ್ಲಿ ಗಾಂಧೀವಾದಕ್ಕೆ ಮನಸೋತು, ಅನಂತರ ಸಮಾಜವಾದದತ್ತ ಒಲವು ಬೆಳೆಸಿಕೊಂಡರು. ಹರೆಯದಲ್ಲಿ ಸಮತಾವಾದದ ಸಿದ್ಧಾಂತಗಳಿಂದ ಪ್ರಭಾವಿತರಾಗಿ ಮಾರ್ಕ್ಸ್‌ವಾದಿಯಾಗಿ ಕಮ್ಯೂನಿಸ್ಟ್ ಪಕ್ಷದ ಸಕ್ರಿಯ ಸದಸ್ಯರಾದರು (1943). ಹಲವಾರು ವರ್ಷಗಳ ಅನಂತರ ನಾನಾ ಕಾರಣಗಳಿಂದಾಗಿ ಪಕ್ಷದಿಂದ ಹೊರಬಂದು (1953) ತಮ್ಮ ದಾರಿ ತಾವೇ ಕಂಡು ಕೊಂಡರು.

ಇವರು 1924 ಜೂನ್ 15ರಂದು ಈಗಿನ ಮಂಗಳೂರು ಜಿಲ್ಲೆ ಪುತ್ತೂರು ತಾಲ್ಲೂಕಿನ ಕುಳಕುಂದ ಎಂಬ ಹಳ್ಳಿಯಲ್ಲಿ ಜನಿಸಿದರು. ತಾಯಿ ಚಿನ್ನಮ್ಮ. ತಾಯಿಯ ಹೋರಾಟದ ಮನೋಭಾವವೇ ಮಗನಿಗೂ ಮೈ-ಮನಗೂಡಿ ಬಂದಿತು. ತಾಯಿ ಅಕ್ಕರೆಯಿಂದ ಇವರನ್ನು ಶಿವರಾಯ ಎಂದು ಕರೆಯುತ್ತಿದ್ದರು. ಕಾಪುವಿನಲ್ಲಿ ಪ್ರಾಥಮಿಕ ಶಾಲಾ ವಿದ್ಯಾಭ್ಯಾಸವನ್ನು (1930-33) ಸುಳ್ಯದಲ್ಲಿ ಮಾಧ್ಯಮಿಕ ಶಾಲಾ ವಿದ್ಯಾಭ್ಯಾಸವನ್ನು (1934-38) ಪೂರೈಸಿದರು. ಆ ಅವಧಿಯಲ್ಲಿ ಮಡಕೇರಿಯಿಂದ ಸುಳ್ಯ ಮಾರ್ಗವಾಗಿ ಬಂದ ಗಾಂಧಿಜೀಯನ್ನು ಕಂಡರು. 1935ರಲ್ಲಿ ಶಿವರಾಮ ಕಾರಂತರ ನೇತೃತ್ವದಲ್ಲಿ ಸುಳ್ಯದಲ್ಲಿ ನಡೆದ ಮಕ್ಕಳ ಕೂಟದಲ್ಲಿ ಸ್ವಯಂ ಸೇವಕರಾಗಿ ಸೇವೆ ಸಲ್ಲಿಸಿದರು. 1937ರ ಮೊದಲ ಭಾಗದಲ್ಲಿ ಪುತ್ತೂರಿಗೆ ಹೋಗಿ ಜವಾಹರಲಾಲ್ ನೆಹರೂರವರ ಭಾಷಣವನ್ನು ಕೇಳಿದರು. ನೀಲೇಶ್ವರದ ರಾಜಾಸ್ ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ಮಾಡಿ (1938-41) ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತು ತೇರ್ಗಡೆಯಾದರು. ಆದರೆ ಆಳುವ ಪರಕೀಯರ ಹಂಗು ಬೇಡವೆಂದು ಉತ್ತೀರ್ಣತಾ ಪತ್ರವನ್ನು ನಿರಾಕರಿಸಿ, ಉದ್ಯೋಗವನ್ನರಸುತ್ತ ಮಂಗಳೂರಿಗೆ ಬಂದರು. ರಾಷ್ಟ್ರಬಂಧು ಪತ್ರಿಕಾಲಯದಲ್ಲಿ ಕಾರ್ಯನಿರ್ವಹಿಸುತ್ತಲೇ (1942) ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಪತ್ರಿಕೆಯ ಸುದ್ದಿಗಾರರಾಗಿ ಕೆಲಸ ಮಾಡಿದರು.

ಪತ್ರಿಕಾ ರಂಗದಲ್ಲಿ ಹೆಚ್ಚಿನ ಅವಕಾಶಕ್ಕಾಗಿ ಮಂಗಳೂರನ್ನು ತೊರೆದು ಬೆಂಗಳೂರಿಗೆ ಬಂದರು. ಪ್ರಜಾಮತ ಪತ್ರಿಕೆಯ ಸಹಸಂಪಾದಕರಾದರು (1945). ಅನಂತರ 1947 ಮೇ 1ರಂದು ಆರಂಭವಾದ ಜನಶಕ್ತಿ ಪತ್ರಿಕೆಯ ಸಂಪಾದಕರಾದರು. 1948ರಲ್ಲಿ ಕಮ್ಯೂನಿಸ್ಟ್ ಪಕ್ಷದ ವಿರುದ್ಧ ಸರ್ಕಾರ ಅಸ್ತ್ರಹಿರಿದಾಗ ಭೂಗತ ಜೀವನ ನಡೆಸಿದರು. ಜನಶಕ್ತಿ ಪತ್ರಿಕೆಯ ಮೇಲೆ ಸರ್ಕಾರ ನಿಷೇಧಾಜ್ಞೆ ಹೇರುವವರೆಗೂ ಹುಬ್ಬಳ್ಳಿ-ಧಾರವಾಡಗಳಲ್ಲಿ ತಲೆಮರೆಸಿಕೊಂಡು ಪತ್ರಿಕೆಗೆ ಸುದ್ದಿಯನ್ನು ಮುಟ್ಟಿಸುತ್ತಿದ್ದರು. ಆ ದಿನಗಳಲ್ಲಿಯೇ ಕುಳಕುಂದ ಶಿವರಾಯರು ನಿರಂಜನರಾದದ್ದು. ಜನಶಕ್ತಿ ಪತ್ರಿಕೆಯಲ್ಲಿ ಮೂರು ವರ್ಷದ ಹಿಂದೆ ಬರೆದ ಲೇಖನಗಳಿಗೆ ಸಂಬಂಧಿಸದಂತೆ ಇದೇ ಅವಧಿಯಲ್ಲಿ ಇವರನ್ನು ಬೆಂಗಳೂರಿನಲ್ಲಿ ಬಂಧಿಸಲಾಯಿತು (1951). ತರುವಾಯ ಕಾರವಾರಕ್ಕೆ ಕರೆದೊಯ್ದು ದೀರ್ಘ ವಿಚಾರಣೆಯ ಅನಂತರ ದಂಡ ವಿಧಿಸಿ ಖುಲಾಸೆ ಮಾಡಲಾಯ್ತು.

ಕನ್ನಡ ಅಂಕಣ ಬರೆಹಗಾರರಲ್ಲಿ ಇವರದು ದೊಡ್ಡ ಹೆಸರು. ಇವರು ಬರೆದ ಅಂಕಣ ಶೀರ್ಷಿಕೆಗಳು ಹೀಗಿವೆ. ಸರೂ, ಕೇಳಿದೆಯಾ? (ಪ್ರಜಾಮತ, 1945), ಸರೋಜ ಸಂಚಯ (ಉಷಾ, 1946), ಸಂಗಾತಿಯ ಸಂಚಯ (ಜನಶಕ್ತಿ, 1947), ಓದುಗರೊಡನೆ ಐದು ನಿಮಿಷ (ಚಿತ್ರಗುಪ್ತ). ಬಿಸಿಲು ಬೆಳದಿಂಗಳು (ನವಶಕ್ತಿ, 1952), ಮಧುಸಂಚಯ (ಸಾಧನಾ, 1956), ಬೇವು-ಬೆಲ್ಲ (ಪ್ರಜಾವಾಣಿ, 1962), ದಿನಚರಿಯಿಂದ (ಕರ್ಮವೀರ). ಇವರು 1964 ರಿಂದ 67ರ ವರೆಗೆ ಇನ್ಫಾ (ಇಂಡಿಯನ್ ನ್ಯೂಸ್ ಅಂಡ್ ಫೀಚರ್ ಅಲೆಯನ್ಸ್) ಸಂಸ್ಥೆಗೆ ಬೆಂಗಳೂರಿನ ಬಾತ್ಮಿದಾರರಾಗಿ ನೇಮಕಗೊಂಡು ಕಾರ್ಯನಿರ್ವಹಿಸಿದ್ದರು. 1943ರಲ್ಲಿ ಕರ್ನಾಟಕ ಪತ್ರಿಕೋದ್ಯೋಗಿ ಸಮ್ಮೇಳನದ ಸಂಘಟನಾ ಕಾರ್ಯದರ್ಶಿಯಾಗಿ (1943), ಕರ್ನಾಟಕ ಪತ್ರಿಕೋದ್ಯೋಗಿ ಸಂಘದ ಕಾರ್ಯದರ್ಶಿಯಾಗಿ (1944) ಸಮರ್ಥವಾಗಿ ದುಡಿದರು.

ಇವರು ವಿದ್ಯಾರ್ಥಿ ದೆಸೆಯಲ್ಲಿ ಕಿಶೋರ, ಕತೆಗಾರ, ಕು.ಶಿ.ರಾ. ಶೀರಾ, ಕುಳಕುಂದ ಮೊದಲಾದ ಹೆಸರಿನ ಹತ್ತಾರು ಕಥೆಗಳನ್ನು ಬರೆದಿದ್ದು, ಅವು ನಾಡಿನ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದವು. ಇವರು ಮೊದಲು ಕವಿತೆಗಳನ್ನು ಬರೆದರು. 'ಕರ್ನಾಟಕದ ಕೊಡಗೂಸು' ಕವಿತೆಯನ್ನು ಕು.ಶಿ.ರಾ. ಎಂಬ ಹೆಸರಿನಲ್ಲಿ ಬರೆದಿದ್ದಾರೆ. ಅಲ್ಲದೆ ರಷ್ಯನ್ ಕವಿ ಕಾನ್‌ಸ್ಟಾಂಟಿನ್ ಸಿಮೊನೊವ ಯುದ್ಧ ರಂಗದಿಂದ ಯೋಧನೊಬ್ಬ ನಲ್ಲೆಗೆ ಬರೆದಂತೆ ಬರೆದಿರುವ ಕವಿತೆಯೊಂದನ್ನು ಕನ್ನಡಕ್ಕೆ ಕಾದಿರೆನಗಾಗಿ ಎಂದು ಅನುವಾದಿಸಿದ್ದಾರೆ. ಆ ದಿನಗಳಲ್ಲಿಯೆ ಇವರು ಬರೆದ ಎಣ್ಣೆ; ಚಿಮಣಿ ಎಣ್ಣೆ; ಎಂಬ ಕಥೆ ರಾಷ್ಟ್ರಬಂಧುವಿನಲ್ಲಿ ಪ್ರಕಟವಾಯಿತು. ಈ ಕಥೆಯನ್ನು ಪ್ರಕಟಿಸಿ ಪತ್ರಿಕೆಯ ಸಂಪಾದಕರಾಗಿದ್ದ ಕಡೆಂಗೋಡ್ಲು ಶಂಕರಭಟ್ಟರು ಬ್ರಿಟಿಷ್ ಸರ್ಕಾರದ ವಿಚಾರಣೆಗೊಳಗಾಗಿದ್ದರು. ಈ ಕಥೆಯ ಮಹತ್ತ್ವ ಎಷ್ಟೆಂದರೆ, ಭಾರತದಲ್ಲಿ ತುರ್ತು ಪರಿಸ್ಥಿತಿಯಿದ್ದಾಗ (1975-76) ಅರುಣ ಪತ್ರಿಕೆಯ ಸಂಪಾದಕರು ಮರುಮುದ್ರಿಸಲು ಸರ್ಕಾರದ ಅನುಮತಿ ಕೋರಿದರೂ ಒಪ್ಪಿಗೆ ದೊರಕಲಿಲ್ಲ.

ಇವರು ರಕ್ತಸರೋವರ, ಅನ್ನಪೂರ್ಣ, ಕೊನೆಯ ಗಿರಾಕಿ, ವಾರದ ಹುಡುಗ, ಕಾತ್ಯಾಯಿನಿ, ಒಂಟಿ ನಕ್ಷತ್ರ ನಕ್ಕಿತು, ಮೊದಲಾದ ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಈ ಎಲ್ಲ ಕಥೆಗಳನ್ನು ಐ.ಬಿ.ಎಚ್.ಪ್ರಕಾಶನ ಧ್ವನಿ-1, ಧ್ವನಿ-2 ಎಂಬ ಎರಡು ಸಂಪುಟಗಳಲ್ಲಿ ಪ್ರಕಟಿಸಿದೆ. ಕಥೆಗಳ ಆರಂಭದಲ್ಲಿ ಆಯಾ ಕಥೆಯ ಹುಟ್ಟು, ಸಂದರ್ಭ, ಬೆಳೆವಣಿಗೆಯನ್ನು ಕೂಡ ಲೇಖಕರು ನೀಡಿದ್ದಾರೆ. ಬಾಲ್ಯದಲ್ಲಿ ತನ್ನ ಸುತ್ತಮುತ್ತ ನಡೆದ ಘಟನೆಗಳನ್ನು ಅಂದರೆ, ತಂದೆಯಿಲ್ಲದ ಕೊರತೆಯಿಂದಾಗಿ ಬಾಲಕನೊಬ್ಬ ಅನುಭವಿಸುವ ವೇದನೆ, ಬಡವಿಧವೆ ತಾಯಿಯ ದೈನಂದಿನ ಬದುಕಿನ ಯಾತನೆ, ತೊಳಲಾಟಗಳನ್ನು ವಸ್ತುವಾಗಿಸಿಕೊಂಡು ಹಲವಾರು ಕಥೆಗಳನ್ನು ಬರೆದಿದ್ದಾರೆ. ಒಂದು ಹಿಡಿಹುಲ್ಲು, ಬಹಿಷ್ಕೃತೆ, ಮೂರುದುಡ್ಡು ಮೊದಲಾದ ಕಥೆಗಳಲ್ಲಿ ಇಂಥ ಬದುಕಿನ ಚಿತ್ರಣವನ್ನು ಕಾಣಬಹುದು. ರಕ್ತ ಸರೋವರ ಕಥೆಯಲ್ಲಿ ಕ್ಷಿಪ್ರಬದಲಾವಣೆ ತರಬಯಸುವ ಕ್ರಾಂತಿ ಮತ್ತು ದುರಂತಗಳ ಚಿತ್ರಣವಿದೆ. ಕೊನೆಯ ಗಿರಾಕಿ ಕಥೆಯಲ್ಲಿ ಹೆಣ್ಣಿನ ಅಸಹಾಯಕತೆಯನ್ನು ದುರ್ಬಲ ಮನಸ್ಸಿನ ಪುರುಷರು ದುರುಪಯೋಗಪಡಿಸಿಕೊಳ್ಳುವ ಚಿತ್ರಣವಿದೆ. ಈ ಕಥೆಯಲ್ಲಿ ಬರುವ ಕಾಣೆಯಂತಹ ಹೆಣ್ಣುಗಳು ನಿರಂತರ ಶೋಷಣೆಗೊಳಗಾಗುತ್ತ ಸಾಮಾಜಿಕ ಸಮಸ್ಯೆಯ ಪ್ರತಿನಿಧಿಗಳಾಗಿದ್ದಾರೆ. ಒಂಟಿ ನಕ್ಷತ್ರ ನಕ್ಕಿತು ಕಥೆಯಲ್ಲಿ ಎರಡು ತಲೆಮಾರುಗಳ ನಡುವಿನ ಅಭಿಪ್ರಾಯ ಭೇದಗಳನ್ನು ಅಣೆಕಟ್ಟಿನ ವಿವಾದದಲ್ಲಿ ವ್ಯಕ್ತಗೊಳಿಸಿದ್ದಾರೆ. ಕಣ್ಣಾರೆ ಕಂಡವರು ಕಥೆಯಲ್ಲಿ ಬಲಪ್ರಯೋಗದಿಂದ ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುವ ನಿರ್ಲಜ್ಜ ರಾಜಕಾರಣಿಗಳ ಚಿತ್ರಣವಿದ್ದು, ಸಮಕಾಲೀನ ವ್ಯವಸ್ಥೆಯ ಮುಖಕ್ಕೆ ಕನ್ನಡಿ ಹಿಡಿದಂತಿದೆ. ಇವರ ಕಥೆಗಳು ಹಿಂದಿ, ತೆಲುಗು, ಮಲಯಾಳಂ ಇಂಗ್ಲಿಷ್, ರಷ್ಯನ್ ಮತ್ತಿತರ ಭಾಷೆಗಳಿಗೆ ಅನುವಾದಿತವಾಗಿವೆ.

ನಿರಂಜನರು ಇಪ್ಪತ್ತೈದು ಕಾದಂಬರಿಗಳನ್ನು ಬರೆದಿದ್ದಾರೆ. ಮೊದಲನೆಯ ಕಾದಂಬರಿ ವಿಮೋಚನೆ. ಕೊನೆಯ ಕಾದಂಬರಿ ಮೃತ್ಯುಂಜಯ. ಬನಶಂಕರಿ, ರಂಗಮ್ಮನ ವಠಾರ, ದೂರದ ನಕ್ಷತ್ರ, ನವೋದಯ, ಚಿರಸ್ಮರಣೆ, ಕಲ್ಯಾಣ ಸ್ವಾಮಿ, ಸ್ವಾಮಿ ಅಪರಂಪಾರ - ಕೆಲವು ಪ್ರಮುಖ ಕಾದಂಬರಿಗಳು. ಇವರ ಕಾದಂಬರಿಗಳನ್ನು ಐತಿಹಾಸಿಕ ವಸ್ತುವುಳ್ಳವು, ಹೋರಾಟ ಪ್ರಧಾನವಾದವು ಮತ್ತು ಸಾಮಾಜಿಕ ವಸ್ತುವುಳ್ಳವು ಎಂದು ಸ್ಥೂಲವಾಗಿ ಮೂರು ಗುಂಪಾಗಿ ವಿಂಗಡಿಸಬಹುದು. ಚಿರಸ್ಮರಣೆ, ಮೃತ್ಯುಂಜಯ, ಕಲ್ಯಾಣಸ್ವಾಮಿ, ಸ್ವಾಮಿ ಅಪರಂಪಾರ ಕಾದಂಬರಿಗಳಲ್ಲಿ

ಐತಿಹಾಸಿಕ ಘಟನೆಗಳ ಕಥಾವಸ್ತು ಇದೆ. ಆದರೆ ಇಲ್ಲಿಯೂ ಹೋರಾಟದ ಚಿತ್ರಣ ಬರುತ್ತದೆ. ಚಿರಸ್ಮರಣೆ ಕಾದಂಬರಿಯ ಮೊದಲರ್ಧದಲ್ಲಿ ಕಯ್ಯೂರು ಎಂಬ ಹಳ್ಳಿಯ ಶಿಕ್ಷಕರೊಬ್ಬರು ತನ್ನ ಶಿಷ್ಯರಾದ ಅಪ್ಪು ಮತ್ತು ಚಿರಕುಂಡರ ಮುಖಾಂತರ ಇಡೀ ಹಳ್ಳಿಯನ್ನು ಎಚ್ಚೆತ್ತುಕೊಳ್ಳುವಂತೆ ಮಾಡಿ, ರೈತ ಚಳುವಳಿ ನಡೆಸುವುದು ಕಂಡುಬಂದರೆ ಉತ್ತರಾರ್ಧದಲ್ಲಿ ಜಮೀನ್ದಾರರ ಒಳಸಂಚು, ಬ್ರಿಟಿಷರ ದಬ್ಬಾಳಿಕೆ, ರೈತರ ಮುಂದಾಳುಗಳಾದ ಅಪ್ಪು, ಚಿರಕುಂಡ, ಕುಞಂಬು, ಅಬೂಬಕರ್ ಅವರು ಗಲ್ಲು ಶಿಕ್ಷೆಗೊಳಗಾಗುವ ಚಿತ್ರಣವಿದೆ. ಮೃತ್ಯುಂಜಯ ಕಾದಂಬರಿಯಲ್ಲಿ ನಾಲ್ಕುವರೆ ಸಾವಿರ ವರ್ಷಗಳ ಹಿಂದೆ ಈಜಿಪ್ಟ್ ದೇಶದಲ್ಲಿ ನಡೆದ ಗುಲಾಮರ ಮತ್ತು ಅವರನ್ನು ತಮ್ಮ ಬಲವಾದ ಹಿಡಿತದಲ್ಲಿರಿಸಿಕೊಂಡು ದೌರ್ಜನ್ಯ, ದಬ್ಬಾಳಿಕೆಯಿಂದ ಆಳುವವರ ನಡುವೆ ನಡೆದ ಬಿಡುಗಡೆಯ ಹೋರಾಟದ ಚಿತ್ರಣವಿದೆ. ಕಲ್ಯಾಣಸ್ವಾಮಿ ಕಾದಂಬರಿಯಲ್ಲಿ ಕೊಡಗಿನ ಅರಸು ಚಿಕ್ಕವೀರ ರಾಜೇಂದ್ರ ಅಧಿಕಾರ ಕಳೆದುಕೊಂಡ ಅನಂತರ ಆತನ ದಳಪತಿಯಾಗಿದ್ದ ಪುಟ್ಟಬಸವನೇ ಕಲ್ಯಾಣ ಸ್ವಾಮಿಯಾಗಿ ಬ್ರಿಟಿಷರ ಎದುರಾಗಿ ಜನತೆಯನ್ನು ಒಗ್ಗೂಡಿಸಿ ನಡೆಸಿದ ಹೋರಾಟದ ಕಥೆಯಿದೆ. ಸ್ವಾಮಿ ಅಪರಂಪಾರ ಕಾದಂಬರಿಯಲ್ಲಿ ಚಿಕ್ಕವೀರ ರಾಜೇಂದ್ರನ ದೊಡ್ಡಪ್ಪನ ಮಗ ವೀರಪ್ಪಸ್ವಾಮಿ ಅಪರಂಪಾರನಾಗಿ ವೇಷ ಬದಲಿಸಿಕೊಂಡು ಕೊಡಗು ಸಂಸ್ಥಾನದ ಸ್ವಾತಂತ್ರ್ಯಕ್ಕಾಗಿ ನಡೆಸಿದ ಪ್ರಯತ್ನ ಕಂಡುಬರುತ್ತದೆ. ಹೋರಾಟ ಪ್ರಧಾನವಾದ ವಿಮೋಚನೆ ಕಾದಂಬರಿಯಲ್ಲಿ ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ದಿನಗಳಲ್ಲಿ ಕಂಡುಬರುವ ಜನಸಾಮಾನ್ಯರ ಜೀವನ ಚಿತ್ರಗಳಲ್ಲಿ ಶೋಷಣೆ ಎಡಬಿಡದೆ ಮುಂದುವರೆದಿರುವುದನ್ನು ಕಾಣಬಹುದು. ಸಾಮಾಜಿಕ ಕಾದಂಬರಿಯಾದ ಏಕಾಂಗಿನಿಯ ಕಥಾನಾಯಕಿ ಸುನಂದ ತನ್ನ ಗಂಡ ಪುಟ್ಟಣ್ಣನಿಂದ ದೈಹಿಕ ಮತ್ತು ಮಾನಸಿಕ ಹಿಂಸೆಗೊಳಗಾಗುತ್ತಾಳೆ. ಅನಂತರದಲ್ಲಿ ಗಂಡನಿಂದ ವಿವಾಹವಿಚ್ಛೇದನ ಪಡೆದು ಛಲದಿಂದ ಏಕಾಂಗಿಯಾಗಿ ಬದುಕುವ ನಿರ್ಧಾರ ತೆಗೆದುಕೊಳ್ಳುತ್ತಾಳೆ. ರಂಗಮ್ಮನ ವಠಾರ ಕಾದಂಬರಿ ನಗರ ಪ್ರದೇಶದಲ್ಲಿ ವಾಸಿಸುತ್ತಿರುವ ಮಧ್ಯಮ ವರ್ಗದವರ ಒಳಬದುಕಿನ ಹೊರಗನ್ನು ಬಯಲು ಮಾಡುತ್ತದೆ. ವಿಮೋಚನೆ (ರಷ್ಯನ್, ಪೋಲಿಷ್, ಇಂಗ್ಲಿಷ್, ಮಲಯಾಳಂ, ತೆಲುಗು), ಅಭಯ (ತೆಲುಗು), ಚಿರಸ್ಮರಣೆ (ಮಲಯಾಳಂ, ತೆಲುಗು, ತಮಿಳು, ಮರಾಠಿ, ಬಂಗಾಲಿ, ತುಳು, ಇಂಗ್ಲಿಷ್), ಸ್ವಾಮಿ ಅಪರಂಪಾರ (ಮಲಯಾಳಂ), ಮೃತ್ಯುಂಜಯ (ಮಲಯಾಳಂ, ತೆಲುಗು, ಹಿಂದಿ, ಅರಬ್ಬಿ) ಕಾದಂಬರಿಗಳು ಇತರ ಭಾಷೆಗೆ ಭಾಷಾಂತರಗೊಂಡಿವೆ.

ಇವರು ಗಾರ್ಕಿಯ ಮದರ್ ಕಾದಂಬರಿಯನ್ನು ತಾಯಿ ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಸಮತಾವಾದ, ಜನತೆಯ ನಡುವೆ, ಚೀಣಾ ದೇಶದ ನೀತಿ ಕಥೆಗಳು, ಮಾನವನ ಪಾಡು, ಸಂಗವ್ ರಾಜಕೀಯ ವ್ಯವಸ್ಥೆ ಮೊದಲಾದವು ಇವರ ಅನುವಾದಿತ ಕೃತಿಗಳು. ಇವರು ನಾಟಕಗಳನ್ನೂ ಬರೆದಿದ್ದಾರೆ. ಸಂಗಮ ಸ್ನಾನ, ಆಹ್ವಾನ, ನಾವೂ ಮನುಷ್ಯರು ಮೊದಲಾದವು ಇವರ ನಾಟಕಗಳು. 1969ರಲ್ಲಿ ಕರ್ನಾಟಕ ಸಹಕಾರಿ ಪ್ರಕಾಶನ ಎಂಬ ಸಂಸ್ಥೆಯವರು ಮಕ್ಕಳಿಗಾಗಿ ಕಿರಿಯರ ವಿಶ್ವಕೋಶ 'ಜ್ಞಾನ ಗಂಗೋತ್ರಿ'ಯನ್ನು ತರಲು ಯೋಜಿಸಿದಾಗ ಅದರ ಜವಾಬ್ದಾರಿಯನ್ನು ವಹಿಸಿಕೊಂಡ ನಿರಂಜನರು ಏಳು ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟರು. 1979-82ರ ಅವಧಿಯಲ್ಲಿ ನವಕರ್ನಾಟಕ ಪ್ರಕಾಶನ ಸಂಸ್ಥೆಗಾಗಿ ಪ್ರಪಂಚದ ಹಲವಾರು ದೇಶ, ಭಾಷೆಯ ಕಥೆಗಳನ್ನು ಕನ್ನಡಕ್ಕೆ ತಂದುಕೊಡುವ ಹೊಣೆಗಾರಿಕೆಯನ್ನು ಹೊತ್ತು ವಿಶ್ವಕಥಾಕೋಶ ಮಾಲಿಕೆಯಲ್ಲಿ 25 ಸಂಪುಟಗಳನ್ನು ಸಂಪಾದಿಸಿ ಕೊಟ್ಟರು. ಭಾರತದ ಇನ್ನಾವುದೇ ಭಾಷೆಯಲ್ಲೂ ಇಂಥ ಯೋಜನೆ ನಡೆದಿಲ್ಲ. ಈ ಎರಡೂ ಯೋಜನೆಯ ಕೆಲಸಗಳು ನಿರಂಜನರ ವಿದ್ವತ್ತಿಗೆ ಸಾಕ್ಷಿಯಾಗಿವೆ.

ಇವರು ಸಲ್ಲಿಸಿದ ಸಾಹಿತ್ಯಕ ಸೇವೆಗಾಗಿ ಅನೇಕ ಗೌರವ ಪ್ರಶಸ್ತಿಗಳು ಇವರಿಗೆ ಲಭ್ಯವಾಗಿವೆ. ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1962), ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ (1974), ರಾಜ್ಯೋತ್ಸವ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಸದಸ್ಯತ್ವ (1985), ಇವುಗಳನ್ನು ಹೆಸರಿಸಬಹುದು. ಇವರು ರಾಯಚೂರಿನಲ್ಲಿ ಜರುಗಿದ 38ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಲೇಖಕರ ಗೋಷ್ಠಿಯ ಅಧ್ಯಕ್ಷರಾಗಿದ್ದರು. 1976ರಲ್ಲಿ ದಾವಣಗೆರೆಯಲ್ಲಿ ಸಮಾವೇಶಗೊಂಡ ಪ್ರಗತಿಪಂಥ ಸಂಸ್ಥಾಪನಾ ಸಮ್ಮೇಳನದ ಅಧ್ಯಕ್ಷರಾಗಿದ್ದರು. 1986ರಲ್ಲಿ ಪುತ್ತೂರಿನಲ್ಲಿ ಇವರಿಗೆ ನಿರಂಜನ ಅಭಿನಂದನ ಗ್ರಂಥವನ್ನು ಸಮರ್ಪಣೆ ಮಾಡಲಾಯಿತು.

ಪ್ರಸಿದ್ಧ ಲೇಖಕಿ ಅನುಪಮಾ ನಿರಂಜನ (ನೋಡಿ) ಇವರ ಪತ್ನಿ. ಇವರದು ಅಂತರ್ಜಾತೀಯ ವಿವಾಹ (1956). ಇವರಿಗೆ ತೇಜಸ್ವಿನಿ, ಸೀಮಂತಿನಿ - ಇಬ್ಬರು ಹೆಣ್ಣು ಮಕ್ಕಳು. ತೇಜಸ್ವಿನಿ ಕೂಡ ಉತ್ತಮ ಲೇಖಕಿ. ನಿರಂಜನ ಅವರು ಪಾರ್ಶ್ವವಾಯು ಪೀಡಿತರಾಗಿ 1992 ಮಾರ್ಚ್ 13ರಂದು ಹೈದರಾಬಾದಿನಲ್ಲಿ ನಿಧನ ಹೊಂದಿದರು. (ಎಂ.ಎಲ್.ಎನ್.)

**ನಿರಂಜನಮೂರ್ತಿ:** ಲಿಂಗವಂತರಲ್ಲಿ ಸರ್ವಸಂಗ ಪರಿತ್ಯಾಗ ಮಾಡಿದ ಬ್ರಹ್ಮಚರ್ಯ ಮತ್ತು ವೈರಾಗ್ಯ ಜೀವನವುಳ್ಳ ವಿರಕ್ತರನ್ನು ಈ ಹೆಸರಿನಿಂದ ಕರೆಯುತ್ತಾರೆ. ವೀರಶೈವ ಸಿದ್ಧಾಂತ ಗ್ರಂಥಗಳಲ್ಲೂ ಶರಣರ ವಚನಗಳಲ್ಲೂ ಬರುವ ಹೆಸರುಗಳಲ್ಲಿದು ಪ್ರಮುಖವಾದ್ದು. ನಿರಂಜನಮೂರ್ತಿಗಳ ಮೂಲಪುರುಷ ಬಳ್ಳಿಗಾವಿಯ ಅಲ್ಲಮಪ್ರಭು. ಆತನ ಗುರು ಅನಿಮಿಷದೇವರು, ಆತನ ಪರಮಗುರು ನಂದಿಕೇಶ್ವರ, ಅನಂತರ ಬರುವವರು ಹರದನಹಳ್ಳಿಯ ಅನಾದಿಗಣೇಶ್ವರರು, ನಿರಂಜನಮೂರ್ತಿಗಳ ಪರಂಪರೆಯಲ್ಲಿ ಮೂರು ಸಾವಿರ ಭಕ್ತರು, ಏಳು ಸಾವಿರ ಚರಮೂರ್ತಿಗಳು, ನೂರೊಂದುಮಂದಿ ವಿರತಿಗಳು, ಏಳುನೂರ ಎಪ್ಪತ್ತು ಮಂದಿ ಅಮರಗಣಂಗಳು ಆಗಿಹೋಗಿದ್ದಾರೆ. ಕರ್ನಾಟಕದಲ್ಲಿ ಪ್ರಸಿದ್ಧವಾಗಿರುವ ಕಲ್ಯಾಣದ ಶೂನ್ಯಸಿಂಹಾಸನದ ಪರಂಪರೆಯಲ್ಲಿ ಚಿತ್ರದುರ್ಗದ ಮುರುಘಾಮಠ, ಹುಬ್ಬಳ್ಳಿಯ ಮೂರು ಸಾವಿರ ಮಠ, ಗದುಗಿನ ತೋಂಟದಾರ್ಯ ಮಠ, ಉರುವಕೊಂಡದ ಕರಿಬಸವಸ್ವಾಮಿ ಮಠ - ಈ ನಾಲ್ಕು ಗುರುಮಠಗಳನ್ನು ನಿರಂಜನಮೂರ್ತಿಗಳ ಮೂಲ ಸ್ಥಾನವೆಂದು ಹೇಳಲಾಗಿದೆ.

ಹೆಣ್ಣು, ಹೊನ್ನು, ಮಣ್ಣುಗಳನ್ನು ಗೆದ್ದವನು, ಜನನಮರಣಗಳಿಗೆ ಅತೀತನಾದವನು ಅನಾದಿ ನಿರಂಜನಮೂರ್ತಿ ಎನಿಸುತ್ತಾನೆ. *

**ನಿರಂಜನವಂಶ ರತ್ನಾಕರ :** ವೀರಶೈವ ಮತೀಯ ಗ್ರಂಥ. ಇದರ ಶೂನ್ಯ ಸಿಂಹಾಸನ ಗುರುಗಳಾದ ಅಲ್ಲಮಪ್ರಭು, ಚನ್ನಬಸವೇಶ್ವರ, ಅನಾದಿ ಗಣನಾಥ, ಆದಿಗಣನಾಥ, ನಿರ್ಮಾಯ ಗಣೇಶ್ವರ, ನಿರಂಜನಸ್ವಾಮಿ, ಜ್ಞಾನಾನಂದ ಸ್ವಾಮಿ, ಆತ್ಮಗಣವರ, ಆಧ್ಯಾತ್ಮ ಗಣನಾಥ, ರುದ್ರಮುನಿಸ್ವಾಮಿ, ಬಸವಪ್ರಭು, ಆದಿಲಿಂಗಸ್ವಾಮಿ ಇತ್ಯಾದಿ ಗುರುಪರಂಪರೆ ಚರಿತ್ರೆಯನ್ನು ಹೇಳಲಾಗಿದೆ. ಈ ಗ್ರಂಥ ಐತಿಹಾಸಿಕ ಮಹತ್ತ್ವವನ್ನು ಪಡೆದಿದೆ. ಗ್ರಂಥಕರ್ತೃ ಅದ್ಭುತ ಸಂಗತಿಗಳನ್ನು ವರ್ಣಿಸುವುದನ್ನು ಬಿಟ್ಟು ಐತಿಹಾಸಿಕ ಸಂಗತಿಗಳನ್ನು ಸಂಗ್ರಹಿಸಲು ವಿಶೇಷವಾಗಿ ಪ್ರಯತ್ನಿಸಿದಂತೆ ಕಾಣುತ್ತದೆ. ಈ ಗ್ರಂಥದ ಪ್ರಕಾರ ಮಠಾಧಿಪತಿಗಳು ವೀರಶೈವ ಮತಪ್ರಸಾರದ ಸಲುವಾಗಿ ಎಷ್ಟು ಮಹತ್ತ್ವದ ಪಾತ್ರ ವಹಿಸಿದರೆಂಬುದನ್ನು ತಿಳಿಯಬಹುದು. ವೀರಶೈವರಲ್ಲಿ ಶೂನ್ಯ ಸಿಂಹಾಸನದ ಮಠಾಧಿಪತಿಗಳ ಪರಂಪರೆಯನ್ನು ನಿರಂಜನ ವಂಶವೆಂದು ಕರೆಯುತ್ತಾರೆ.

1932ರಲ್ಲಿ ಫ.ಗು. ಹಳಕಟ್ಟಿಯವರು ತಮಗೆ ದೊರೆತ ಅಪೂರ್ಣ ಹಸ್ತಲಿಖಿತ ಪ್ರತಿಯ ಸಹಾಯದಿಂದ ತಮ್ಮ ಶಿವಾನುಭವ ಗ್ರಂಥಮಾಲೆಯಲ್ಲಿ ಇದನ್ನು ಪ್ರಕಟಿಸಿದ್ದಾರೆ. ಗ್ರಂಥದಲ್ಲಿ ಗ್ರಂಥಕರ್ತೃವಿನ ಹೆಸರು ಉಕ್ತವಾಗಿಲ್ಲ. ದೊರೆತಿರುವ ಗ್ರಂಥ ಅಪೂರ್ಣವಿದೆ. *

**ನಿರಂಜನಾರ್ಯ :** ಸು. 1750. ಕವಿ ನಂಜುಂಡ ಶತಕ, ನಿಷ್ಕಾಮ ವಚನ ಮತ್ತು ಗಗನಾರ್ಯರ ತತ್ತ್ವಗಳು ಎಂಬುವು ಈತನ ಹೆಸರಿನಲ್ಲಿ ಲಭ್ಯವಿರುವ ಕೃತಿಗಳು. ನಿರಂಜನಾರ್ಯ ಎಂಬುದು ಕವಿಯ ನಿಜನಾಮವೋ ಅಲ್ಲವೋ ಎಂಬುದು ಸ್ಪಷ್ಟವಿಲ್ಲ. ನಂಜುಂಡ ಶತಕದ ಮುಕ್ತಾಯದಲ್ಲಿ ತಾನು ಗಗನಾನಂದ ಗುರುವರ್ಯನ ಶಿಷ್ಯನೆಂದು ಕವಿ ಹೇಳಿಕೊಂಡಿದ್ದಾನೆ.

ಈತ ಬ್ರಾಹ್ಮಣನೆಂದು ತೋರುತ್ತದೆ.

ನಂಜುಂಡ ಶತಕ ಕಂದ ಪದ್ಯಗಳಲ್ಲಿದ್ದು ಪ್ರತಿ ಪದ್ಯವೂ ಗುರುನಂಜುಂಡಾ ಎಂದು ಮುಗಿಯುತ್ತದೆ. ಇದಕ್ಕೆ ನೀತಿಶಾಸ್ತ್ರ ಎಂಬ ಹೆಸರೂ ಉಂಟು. ಅನುಭಾವ, ನೀತಿ ಈ ಪದ್ಯಗಳ ವಸ್ತು.

ನಿಷ್ಕಾಮ ವಚನ ಹಾಡುಗಳ ಸಂಕಲನ. ಇದರಲ್ಲಿ 129 ಹಾಡುಗಳಿರುವುದಾಗಿ ಕವಿಚರಿತೆಕಾರರು ತಿಳಿಸಿದ್ದಾರೆ. ಗಗನಾರ‍್ಯರ ತತ್ತ್ವಗಳು ಎಂಬುದು ಇನ್ನೊಂದು ಹಾಡಿನ ಸಂಕಲನ. ಈ ಹಾಡುಗಳಲ್ಲಿ ವೇದಾಂತವನ್ನು ಬೋಧಿಸಿದೆ. ಕೆಲವು ಹಾಡುಗಳಲ್ಲಿ ಗುರು ಗಗನಾರ‍್ಯರನ್ನೇ ಸ್ತುತಿಸಿದೆ. ಗಗನಾರ‍್ಯ ಎಂಬುದು ಹಾಡುಗಳ ಅಂಕಿತ. ಜೀವನದಲ್ಲಿ ಕಷ್ಟವನ್ನು ಅನುಭವಿಸಿ ಸಾಕಾಗಿ, ಸೋತು ಬಹು ಕಷ್ಟಪಟ್ಟೆನಾಭವದಿ ಸಾಕಿನ್ನಹಹ ನಾನೈಕ್ಯವಾಗೂವೆ ನಿಮ್ಮ ಪದದಿ ಎಂದು ಕವಿ ಹಾಡಿದ್ದಾನೆ. *

**ನಿರಾಲಂಬದೇವ :** 1639-1711. ವಚನಕಾರ‍್ಯ ಶಿವಯೋಗಿ. ಈತನನ್ನು ನಿರಾಲಂಬಶರಣ ಷಣ್ಮುಖ ಶಿವಯೋಗಿ ಎಂದೂ ಕರೆಯುತ್ತಾರೆ.

ಅಖಂಡೇಶ್ವರ ಇವನ ವಚನಗಳ ಅಂಕಿತ. ಈತನನ್ನು ಕೊನೆಯ ಶ್ರೇಷ್ಠ ವಚನಕಾರನೆಂದು ಕರೆಯುವ ವಾಡಿಕೆಯಿದೆ. ಈತನ ತಂದೆ ತಾಯಿಗಳು ಮಲ್ಲಶೆಟ್ಟಪ್ಪ ಮತ್ತು ದೊಡ್ಡಮಾಂಬೆಯರು. ಗುರು ಅಖಂಡೇಶ್ವರ, ಗುಲ್ಬರ್ಗ ಜಿಲ್ಲೆಯಲ್ಲಿರುವ ಜೇವರಗಿ ಎಂಬ ಸ್ಥಳದಲ್ಲಿ ಈತ ಅಧಿಪತಿಯಾಗಿದ್ದ ಮಠವಿದೆ. ಈತನ ಹಾಗೂ ಈತನ ಗುರು ಅಖಂಡೇಶ್ವರರ ಗದ್ದುಗೆಗಳೆರಡೂ ಅಲ್ಲಿವೆ. ಆ ಊರಿನಲ್ಲಿ ಇಂದಿಗೂ ಈತನ ಹೆಸರಿನಲ್ಲಿ ರಥೋತ್ಸವ ನಡೆಯುತ್ತದೆ. ಜೇವರಿಗಿಗೆ ಸು. 10ಕಿಮೀ.ದೂರದ ಕೊಳಕೂರ ಎಂಬ ಗ್ರಾಮದ ನಿಸರ್ಗ ಸುಂದರ ತಾಣದಲ್ಲಿ ಈ ಶಿವಯೋಗಿ ತನ್ನ ಸಾರವತ್ತಾದ ಜೀವನದ ಸ್ವಲ್ಪಭಾಗವನ್ನು ಕಳೆದಿದ್ದನೆನ್ನಲು ಆಧಾರವಿದೆ. ಮುಂದೆ ಈತ ಅಖಂಡೇಶ್ವರರ ಉತ್ತರಾಧಿಕಾರಿಯಾಗಿ, ಜೇವರಿಗಿ ವಿರಕ್ತ ಮಠಕ್ಕೆ ಸ್ವಾಮಿಯಾದ. ಅಖಂಡೇಶ್ವರ ಮತ್ತು ಷಣ್ಮುಖ ಶಿವಯೋಗಿಗಳಿಂದ ಇಂದಿನವರೆಗೆ ಈ ಮಠದ ಪರಂಪರೆ ಅವಿಚ್ಛಿನ್ನವಾಗಿ ಬೆಳೆದು ಬಂದಿದೆ. ಈಗಿರುವ ಸ್ವಾಮಿಗಳು ಪರಂಪರೆಯಲ್ಲಿ ಹನ್ನೊಂದನೆಯವರು.

ಈತನನ್ನು ಆ ಕಾಲದ ಸಾಮಾಜಿಕ ಅಂತರದ ವಿರುದ್ಧ ಹೋರಾಡಿದ ಕ್ರಾಂತಿಕಾರಿ ಎನ್ನಲಾಗಿದೆ. ಅಸ್ಪೃಶ್ಯರ ಉದ್ಧಾರಕ್ಕಾಗಿ ಈತ ಶ್ರಮಿಸಿದ ಸಂಕೇತವಾಗಿ ಇಂದಿಗೂ ಜೇವರಗಿಯ ಹರಿಜನ ಕೇರಿಯಲ್ಲಿ ಶಿವಯೋಗಿಯ ಮಠವೊಂದಿದೆ. ಹರಿಜನರೊಡನೆ ಸಹಪಂಕ್ತಿಭೋಜನ ಮತ್ತು ಸಮಾನತೆಗಳನ್ನು ಕೇವಲ ಬೋಧಿಸದೆ ನಡೆದು ತೋರಿದ ಶಿವಯೋಗಿ ಈತ. ಅನೇಕರಿಗೆ ಸಿವದೀಕ್ಷೆಯನ್ನೂ ಕೊಟ್ಟನೆನ್ನಲಾಗಿದೆ. ಆದರೆ ಇದನ್ನು ಅಂದಿನ ಪ್ರತಿಷ್ಠಿತ ವೀರಶೈವರು ಒಪ್ಪಿದಂತೆ ಕಾಣುವುದಿಲ್ಲ. ಅಸ್ಪೃಶ್ಯರನ್ನು ಒಪ್ಪಿಕೊಳ್ಳದವರನ್ನು ಒಡಂಬಡಿಸುವಂತಿರುವ ಈತನ ಒಂದು ವಚನ ಹೀಗಿದೆ.

ಈತ ಒಟ್ಟು 717 ವಚನಗಳನ್ನೂ 41 ಜೋಗುಳ ಪದಗಳನ್ನೂ ರಚಿಸಿದ್ದಾನೆ.ವಚನ ಹಾಗೂ ಪದಗಳು ಅನುಭಾವಪೂರ್ಣವಾಗಿ, ಭಾವೋದ್ದೀಪಕವಾಗಿ ಅಂತರಾತ್ಮತೇಜೋಯುಕ್ತವಾಗಿದೆ. ಅಸ್ಪೃಶ್ಯರನ್ನು ಒಪ್ಪಿಕೊಳ್ಳದವರನ್ನು ಒಡಂಬಡಿಸುವಂತಿರುವ ಈತನ ಒಂದು ವಚನ ಹೀಗಿದೆ.

ನಾನಾವರ್ಣದ ಕಾಷ್ಟವ ಸುಟ್ಟಲ್ಲಿ ಏಕವರ್ಣದ ಬೂದಿಯಪ್ಪುದಲ್ಲದೆ

ಆ ಕಾಷ್ಟದ ಕುಲ ಉಂಟೇ ಅಯ್ಯ?

ತೊಟ್ಟು ಬಿಟ್ಟ ಹಣ್ಣು ಮರಳಿ ತೊಟ್ಟು ಹತ್ತಬಲ್ಲುದೇ ಅಯ್ಯ?

ಕಷ್ಟ ಜನ್ಮದಲ್ಲಿ ಹುಟ್ಟಿದಾತನಾದಡಾಗಲಿ

ನೆಟ್ಟನೆ ಶ್ರೀ ಗುರು ಕಾರುಣ್ಯದ ಪಡೆದು, ಇಷ್ಟಲಿಂಗ

ಸಂಬಂಧಿಯಾಗಿ,

ಆಚಾರ ಕ್ರಿಯಾ ಸಂಪನ್ನನಾದ ಶರಣನ

ಜಾತಿ ಪೂರ್ವವ ಎತ್ತಿ ದೂಷಿಸುವ ಪಾತಕರ ಬಾಯಲ್ಲಿ

ಬಾಲ ಹುಳುಗಳು ಸುರಿಯದೆ ಮಾಣ್ಬವೆ ಹೇಲಾ ಅಖಂಡೇಶ್ವರಾ *

**ನಿಸಾರ್ ಅಹಮದ್, ಕೆ.ಎಸ್. :** 1936- . ಪ್ರಸಿದ್ಧ ಕವಿ ಹಾಗೂ ವಿಮರ್ಶಕ. ಬೆಂಗಳೂರು ಜಿಲ್ಲೆಯ ದೇವನಹಳ್ಳಿಯಲ್ಲಿ 1936 ಫೆಬ್ರವರಿ 5ರಂದು ಹುಟ್ಟಿದರು. ಸೆಂಟ್ರಲ್ ಕಾಲೇಜಿನಲ್ಲಿ ಓದಿ ಭೂ ವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿ ಪಡೆದರು (1959). ಅನಂತರ ಅಧ್ಯಾಪಕರಾಗಿ ಕರ್ನಾಟಕದ ವಿವಿಧ ಸರ್ಕಾರಿ ಕಾಲೇಜುಗಳಲ್ಲಿ ಕೆಲಸಮಾಡಿ, ಪ್ರಾಧ್ಯಾಪಕರಾಗಿ ನಿವೃತ್ತರಾದರು (1994). ವಿದ್ಯಾರ್ಥಿ ದೆಸೆಯಲ್ಲಿ ಸೆಂಟ್ರಲ್ ಕಾಲೇಜಿನ ಪ್ರತಿಷ್ಠಿತ ಕರ್ನಾಟಕ ಸಂಘದ ಕಾರ್ಯದರ್ಶಿಯಾಗಿ ಕನ್ನಡ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಇವರು ಈತನಕ ಒಟ್ಟು 25 ಕೃತಿಗಳನ್ನು ರಚಿಸಿ ಜನಮನ್ನಣೆಗೆ ಪಾತ್ರರಾಗಿದ್ದಾರೆ.

ಮನಸು ಗಾಂಧಿಬಜಾರು (1960), ನೆನೆದವರ ಮನದಲ್ಲಿ (1964), ಸುಮುಹೂರ್ತ (1967), ಸಂಜೆ ಐದರ ಮಳೆ (1970), ನಾನೆಂಬ ಪರಕೀಯ (1972), ನಿತ್ಯೋತ್ಸವ (1976), ಸ್ವಯಂ ಸೇವೆಯ ಗಿಳಿಗಳು (1977), ಅನಾಮಿಕ ಆಂಗ್ಲರು (1982), ಬಹಿರಂತರ (1990), ನವೋಲ್ಲಾಸ (1994), ಆಕಾಶಕ್ಕೆ ಸರಹದ್ದುಗಳಿಲ್ಲ (1998), ಅರವತ್ತೈದರ ಐಸಿರಿ (2001) - ಇವು ಇವರ ಕವನ ಸಂಕಲನಗಳು. ತಮ್ಮ ಆಯ್ದ ಕವಿತೆಗಳನ್ನು ನಿಸಾರ್ ಅಹಮದ್ ಆಯ್ದಕವಿತೆಗಳು (1974). ಸಮಗ್ರ ಕವಿತೆಗಳು (1991), ನಿಸಾರರ ಪ್ರಾತಿನಿಧಿಕ ಕವನಗಳು (2001), ಸಮಗ್ರ ಭಾವಗೀತೆಗಳು (2001) ಎಂಬ ಸಂಕಲನಗಳಲ್ಲಿ ಪ್ರಕಟಿಸಿದ್ದಾರೆ.

ಇವರು ಕನ್ನಡದ ಅತ್ಯುತ್ತಮ ಹಾಗೂ ಸಮರ್ಥ ಕವಿಗಳಲ್ಲೊಬ್ಬರು. ಇವರ ಕಾವ್ಯದಲ್ಲಿ ನಿಸರ್ಗಪ್ರೀತಿ, ರಾಷ್ಟ್ರಾಭಿಮಾನ, ಸಂಸ್ಕೃತಿಯನ್ನು ಒಪ್ಪಿಕೊಳ್ಳುವ ಮನೋಭಾವ ಮೊದಲಾದ ನವೋದಯದ ಆಶಯಗಳನ್ನು ವಿಶೇಷವಾಗಿ ಕಾಣುತ್ತೇವೆ. ಜೊತೆಗೆ ವಿಡಂಬನೆ, ತಿಳಿಹಾಸ್ಯ, ವ್ಯಂಗ್ಯ, ಅಂತರ್ಮುಖತೆ - ಇವರ ಹಲವಾರು ಕವಿತೆಗಳಿಗೆ ಆಕಾರ ನೀಡಿವೆ. ಪರಕೀಯಪ್ರಜ್ಞೆ ನಿಸಾರರ ಕಾವ್ಯದಲ್ಲಿ ಕೆಲವೊಮ್ಮೆ ಮೂಲಸ್ಥಾಯಿಯಾಗಿರುವುದನ್ನು ಗಮನಿಸಬಹುದು. ಜೊತೆಗೆ ಸುತ್ತಣ ಬದುಕಿನ ರೀತಿನೀತಿಗಳ ಬಗ್ಗೆ ಅತ್ಯಂತ ಸೂಕ್ಷ್ಮವಾಗಿ ಚಿಂತಿಸುವ, ವಿಶಾಲ ಮನೋಭಾವ ವ್ಯಕ್ತಪಡಿಸುವ ಗುಣವನ್ನು ಇವರ ಕಾವ್ಯ ನಾಯಕನಲ್ಲಿ ಗುರುತಿಸಬಹುದಾಗಿದೆ. ಸಂಘರ್ಷಕ್ಕಿಂತ ಸಂಧಾನ-ಸಮನ್ವಯಗಳಲ್ಲಿ ನಂಬಿಕೆಯುಳ್ಳ ಕವಿ ಇವರು. ಬಹುಸಂಖ್ಯಾತರ ನಡುವೆ ಬದುಕುತ್ತಿರುವ ವಿದ್ಯಾವಂತ ಮುಸ್ಲಿಂ ಯುವಕನ ಆತಂಕಭರಿತ ಚಿತ್ರವನ್ನು ಇವರ ಕವಿತೆಗಳಲ್ಲಿ ಕಾಣುತ್ತೇವೆ. ನಿಮ್ಮೊಡನಿದ್ದೂ ನಿಮ್ಮಂತಾಗದೆ, ಉಭಯಕಷ್ಟ ಈ ಕವಿತೆಗಳ ನೆಲೆ ಈ ರೀತಿಯದು. ಅಮ್ಮ ಆಚಾರ ನಾನು, ರಂಗೋಲಿ ಮತ್ತು ಮಗ, ಕುರಿಗಳು ಸಾರ್ ಕುರಿಗಳು ಮುಂತಾದ ಹಲವಾರು ಶ್ರೇಷ್ಠ ಕವಿತೆಗಳನ್ನು ನೀಡಿದ ನಿಸಾರರು ಸೌಂದರ್ಯ ಮತ್ತು ಕಲೆಯ ವ್ಯಾಪ್ತಿಯನ್ನು ಹಿಗ್ಗಿಸುವ ಕಾವ್ಯವನ್ನು ನೀಡುವಲ್ಲಿ ಅತ್ಯಂತ ಯಶಸ್ವಿ ಕವಿ ಎನಿಸಿದರು. ಇವರ ಕವಿತೆಗಳಲ್ಲಿ ಮುಸ್ಲಿಂ ಸಂವೇದನೆ ವ್ಯಾಪಕವಾಗಿ ಶೋಧನಾತ್ಮಕವಾಗಿ ಬಾರದೇ ಇದ್ದರೂ ಭಾಷಾದೃಷ್ಟಿಯಿಂದ ತಮ್ಮ ಕಾವ್ಯದಲ್ಲಿ ಉರ್ದು ಪದಗಳನ್ನು ಸಹಜವೆಂಬಂತೆ ಬಳಸಿ ಯಶಸ್ವಿಯಾಗಿದ್ದಾರೆ. ನಿಸಾರರ ಕವಿತೆಗಳು ಇಂಗ್ಲಿಷ್, ಹಿಂದಿ, ಉರ್ದು, ಮಲೆಯಾಳಂ, ತೆಲುಗು, ಮರಾಠಿ ಹಾಗೂ ಚೀನಿ ಭಾಷೆಗಳಿಗೆ ತರ್ಜುಮೆಯಾಗಿವೆ.

ಕಾವ್ಯ ಕ್ಷೇತ್ರದಲ್ಲಿ ಸ್ವೋಪಜ್ಞತೆಯನ್ನೂ ಸ್ವತಂತ್ರತೆಯನ್ನೂ ಉಳಿಸಿಕೊಂಡೇ ಬಂದ ಇವರು ವೈಚಾರಿಕ ಕ್ಷೇತ್ರದಲ್ಲೂ ಚಿಂತನ ಮಂಥನ ನಡೆಸಿದ್ದಾರೆ. ಇದು ಬರಿ ಬೆಡಗಲ್ಲೋ ಅಣ್ಣ (1960) ಸಂಕಲನದ ಮೂಲಕ ಸಮರ್ಥ ವಿಮರ್ಶಕರು ಎನಿಸಿದ್ದಾರೆ. ಮನದೊಂದಿಗೆ ಮಾತುಕತೆ

(1991), ಹಿರಿಯರು ಹರಸಿದ ಹೆದ್ದಾರಿ (1992), ಅಚ್ಚುಮೆಚ್ಚು (1996), ವಿಚಾರ ವಿಹಾರ (1998), ಸಮಗ್ರ ಗದ್ಯ ಬರಹಗಳು (2002) - ಮುಂತಾದ ಕೃತಿಗಳಲ್ಲಿ ಇವರ ವೈಚಾರಿಕ ಚಿಂತನೆ ಪ್ರಕಟವಾಗಿದೆ.

ಅನುವಾದದ ಕ್ಷೇತ್ರದಲ್ಲಿಯೂ ನಿಸಾರರು ಗಮನ ಸೆಳೆದಿದ್ದಾರೆ. ಷೇಕ್ಸ್ಪಿಯರ್ ಮಹಾಕವಿಯ ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಂ, ಒಥೆಲೊ ನಾಟಕಗಳನ್ನು ಸಮಕಾಲೀನ ಭಾಷೆಯಲ್ಲಿ ಅನುವಾದಿಸಿ ಮೊಟ್ಟ ಮೊದಲನೆಯ ಸಲ ರಂಗಸ್ಥಳದ ಮೇಲೆ ಅವುಗಳನ್ನು ಅತ್ಯಂತ ಯಶಸ್ವಿಗೊಳಿಸಲು ಕಾರಣರಾಗಿದ್ದಾರೆ. ನಾಟಕಾನುವಾದದ ಕ್ಷೇತ್ರದ ಕ್ರಾಂತಿಕಾರಕ ಪರಿವರ್ತನೆಗೆ ನಾಂದಿ ಹಾಡಿದ್ದಾರೆ. ಇವರ ಈ ನಾಟಕ ತರ್ಜುಮೆಗಳಿಂದ ಪ್ರೇರಿತರಾಗಿ ಅನೇಕರು ಷೇಕ್ಸ್‌ಪಿಯರ್ ಹಾಗೂ ಆಧುನಿಕ ಪಾಶ್ಚಾತ್ಯ ನಾಟಕಕಾರರ ಕೃತಿಗಳನ್ನು ಕನ್ನಡಿಸಿದ್ದಾರೆ. ಕನ್ನಡದಲ್ಲಿ ನಿಸಾರರ ಅನುವಾದಗಳಿಗೆ ಐತಿಹಾಸಿಕ ಮಹತ್ವವಿದೆ.

1978ರಲ್ಲಿ ಭಾರತೀಯ ಭಾಷೆಗಳಲ್ಲೇ ಮೊಟ್ಟಮೊದಲನೆಯ ಭಾವಗೀತೆಗಳ 'ಕ್ಯಾಸೆಟ್ ನಿತ್ಯೋತ್ಸವ'ವನ್ನು ಹೊರತಂದು ಆ ನಿಟ್ಟಿನಲ್ಲಿ ಹೊಸಹಾದಿಯನ್ನು ನಿರ್ಮಿಸಿದ ಕೀರ್ತಿ ನಿಸಾರರಿಗೆ ಸಲ್ಲುತ್ತದೆ. ಇಲ್ಲಿನ ಕವಿತೆಗಳಿಗೆ ಸಂಗೀತ ನೀಡಿ, ಭಾವ ತುಂಬಿ ಹಾಡಿದವರು ಮೈಸೂರು ಅನಂತಸ್ವಾಮಿಯವರು. ದೇಶ ವಿದೇಶಗಳಲ್ಲಿಯೂ ನಿತ್ಯೋತ್ಸವ ಜನಪ್ರಿಯ ಕನ್ನಡ ಕ್ಯಾಸೆಟ್ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಸುಶ್ರಾವ್ಯ, ನವೋಲ್ಲಾಸ ಮತ್ತು ಅಪೂರ್ವ, ಅಭಿಷೇಕ ಎಂಬ ಕ್ಯಾಸೆಟ್‌ಗಳು ಈಚೆಗೆ ಬಿಡುಗಡೆಯಾಗಿವೆ. 1994ರಲ್ಲಿ ಇವರ ಸುಮಧುರ ಎಂಬ ಕ್ಯಾಸೆಟ್ ವಿದೇಶದ ದುಬೈ ಮತ್ತು ಅಬುಧಾಬಿ ಪಟ್ಟಣಗಳಲ್ಲಿ ಬಿಡುಗಡೆಯಾದ ಕನ್ನಡ ಸುಗಮ ಸಂಗೀತದ ಪ್ರಥಮ ಕ್ಯಾಸೆಟ್ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಇದಲ್ಲದೆ ನಿತ್ಯೋತ್ಸವ, ಸುಮಧುರ, ನವೋಲ್ಲಾಸ ಕ್ಯಾಸೆಟ್‌ಗಳು ಸಿ.ಡಿ. ರೂಪದಲ್ಲಿ ಕೂಡ ಹೊರಬಂದಿವೆ.

ಹಕ್ಕಿಗಳು (1978), ಶಿಲೆಗಳು ಖನಿಜಗಳು (1978), ಬರ್ಡ್ಸ್ (1978), ರಾಕ್ಸ್ ಅಂಡ್ ಮಿನರಲ್ಸ್ (1978), ಪುಟ್ಟ ಸಂತರು ಮತ್ತು ಕಲೆಗಳು (1978) - ಇವು ಇವರ ಇತರ ಕೃತಿಗಳು. ದಶವಾರ್ಷಿಕ ಕವಿತೆಗಳು (1974-83), ದಶವಾರ್ಷಿಕ ವಿಮರ್ಶೆ (1974-83), ದಶವಾರ್ಷಿಕ ಸಣ್ಣ ಕತೆಗಳು (1974-83), ಟೆನ್ ಇಯರ್ಸ್ ಆಫ್ ಕನ್ನಡ ಪೊಯೆಟ್ರಿ, ಮಾಸ್ತಿಯವರ ಚಿಕವೀರ ರಾಜೇಂದ್ರ; ಒಂದು ವಿವೇಚನೆ ಮೊದಲಾದ ಗ್ರಂಥಗಳಿಗೆ ಸಂಪಾದಕರಾಗಿಯೂ ಇವರು ಕಾರ್ಯ ನಿರ್ವಹಿಸಿದ್ದಾರೆ.

ಇವರಿಗೆ ಅನೇಕ ಪ್ರಶಸ್ತಿ, ಪುರಸ್ಕಾರ, ಗೌರವಗಳು ದೊರಕಿವೆ. ದೆಹಲಿಯಲ್ಲಿ ಗಣರಾಜ್ಯೋತ್ಸವದ ಸಂದರ್ಭದಲ್ಲಿ ಏರ್ಪಾಡಾಗುವ ರಾಷ್ಟ್ರೀಯ ಕವಿಸಮ್ಮೇಳನದಲ್ಲಿ ಇವರು ಎರಡು ಬಾರಿ ಭಾಗವಹಿಸಿದ್ದರು. (1967, 1985). 1978ರಲ್ಲಿ ಅಂತಾರಾಷ್ಟ್ರೀಯ ಮಕ್ಕಳ ವರ್ಷದಲ್ಲಿ ಇವರ ಹಕ್ಕಿಗಳು ಎಂಬ ಪುಸ್ತಕಕ್ಕೆ ಎನ್.ಸಿ.ಇ.ಆರ್.ಟಿ. ರಾಷ್ಟ್ರೀಯ ಬಹುಮಾನ ದೊರಕಿತು. 1981ರಲ್ಲಿ ಇವರ ಹೆಜ್ಜೆಗುರುತು ಎಂಬ ಕೃತಿಗೆ ಸೋವಿಯತ್ ಲ್ಯಾಂಡ್-ಹೆಸರು ಅಂತಾರಾಷ್ಟ್ರೀಯ ಪುರಸ್ಕಾರ ದೊರಕಿದೆ. ಕರ್ನಾಟಕ ರಾಜ್ಯೋತ್ಸವದ ಬೆಳ್ಳಿಹಬ್ಬದ ಪ್ರಯುಕ್ತ ರಾಜ್ಯ ಸರ್ಕಾರ ಇವರಿಗೆ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ (1981). ಕೊಲ್ಲಿ ರಾಷ್ಟ್ರದ ದುಬೈ ಮತ್ತು ಅಭುಧಾಬಿ ಪಟ್ಟಣಗಳಲ್ಲಿ ಇವರನ್ನು ಅಲ್ಲಿನ ಕರ್ನಾಟಕ ಸಂಘಗಳು ಸನ್ಮಾನಿಸಿವೆ (1994). ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, (1981, 1982, 1991) ಕೆಂಪೇಗೌಡ ಪ್ರಶಸ್ತಿ (1990), ವಿಶ್ವಮಾನವ ಪ್ರಶಸ್ತಿ (1995), ಸದ್ಭಾವನಾ ಪ್ರಶಸ್ತಿ (1998), ಅನಕೃ ನಿರ್ಮಾಣ ಪ್ರಶಸ್ತಿ (2001), ವೈ.ಬಿ.ತಾತಾಚಾರಿ ಹೆಸರಿನ ಕನ್ನಡ ಸಾಹಿತ್ಯ ಪುರಸ್ಕಾರ (2002) ಮೊದಲಾದ ಹಲವಾರು ಪ್ರಶಸ್ತಿಗಳು ಇವರಿಗೆ ಲಭಿಸಿವೆ. ಇವರು ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿಯೂ ಕಾರ್ಯನಿರ್ವಹಿಸಿದ್ದಾರೆ (1984-87). ಇವರ ಕಾಲದಲ್ಲಿ ಅಕಾಡೆಮಿಯ ಕಾರ್ಯಕ್ಷೇತ್ರ ತಾಲ್ಲೂಕು ಮತ್ತು ಗ್ರಾಮಾಂತರ ಪ್ರದೇಶಗಳಿಗೂ ವಿಸ್ತರಿಸಿತು. (ಜಿ.ಆರ್.ಟಿ.)

**ನೀತಿಮಾರ್ಗ :** ತಲಕಾಡು ಗಂಗರಸರ ಒಂದು ಬಿರುದು. ಇದನ್ನೂ ಸತ್ಯವಾಕ್ಯ ಎಂಬುದನ್ನೂ ಇಮ್ಮಡಿ ಶಿವಮಾರನ ಅನಂತರದ ಗಂಗ ಅರಸರು ಏಕಾಂತರ ವರಸೆಯಾಗಿ ಉಪಯೋಗಿಸುತ್ತಿದ್ದರೆಂದು ಹೇಳಲಾಗಿದೆ. ಅಂದರೆ ಒಬ್ಬ ರಾಜ ಸತ್ಯವಾಕ್ಯನಾದರೆ ಮುಂದಿನವನು ನೀತಿಮಾರ್ಗ, ಅವನ ಮುಂದಿನವನು ಪುನಃ ಸತ್ಯವಾಕ್ಯ ಈ ರೀತಿ. ಇದು ಸಾಮಾನ್ಯವಾಗಿ ಸರಿಯಾಗಿದ್ದರೂ ಪೂರ್ಣ ಖಚಿತವಾಗಿಲ್ಲ. ಗಂಗರಾಜರುಗಳಲ್ಲಿ ಎಱೆಗಂಗ I (843-70), ಎಱೆಗಂಗ II (886-920), ರಾಚಮಲ್ಲ III (933-36), ಮರುಳ (961-63) ಮತ್ತು ಗೋವಿಂದರಸ ಇವರು ನೀತಿಮಾರ್ಗ ಬಿರುದನ್ನು ಧರಿಸಿದ್ದರು. ಇವರಲ್ಲಿ ಕೆಲವರ ಬಗ್ಗೆ ಅವರ ಹೆಸರಿನ ಶೀರ್ಷಿಕೆಯಡಿಯಲ್ಲಿ ಲೇಖನಗಳನ್ನು ಕೊಡಲಾಗಿದೆ.

**ನೀನಾಸಮ್ ರಂಗ ಶಿಕ್ಷಣ ಕೇಂದ್ರ :** ಅಂತಾರಾಷ್ಟ್ರೀಯ ಮಟ್ಟದಲ್ಲಿ ಕರ್ನಾಟಕಕ್ಕೆ ಹೆಸರು ತಂದ ರಂಗತಂಡ. ನೀಲಕಂಠೇಶ್ವರ ನಾಟ್ಯಸೇವಾ ಸಂಘ ಇದರ ಪೂರ್ತಿ ಹೆಸರು. ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಹೆಗ್ಗೋಡು ಇದರ ಕೇಂದ್ರ ಸ್ಥಾನ. ಇದು ಸ್ಥಳೀಯ ಯುವಕರ ಹವ್ಯಾಸೀ ನಾಟಕ ತಂಡವಾಗಿ ಸ್ಥಾಪನೆಗೊಂಡಿತ್ತು (1949). ಇಲ್ಲಿಯವರೆಗೆ 40 ಕ್ಕೂ ಹೆಚ್ಚು ನಾಟಕಗಳನ್ನಾಡಿದೆ. ಅವುಗಳಲ್ಲಿ ಮುಖ್ಯವಾದವು: ಶಹಜಹಾನ್ (1953), ರಂಗಭಾರತ (1973), ಸಂಗ್ಯಾ ಬಾಳ್ಯಾ (1974), ಬಕ (1975), ಘಾಶಿರಾಂಕೊತ್ವಾಲ್ (1976), ಒಂದು ಲೋಕ ಕಥೆ (1977), ಸಾಹೇಬರು ಬರುತ್ತಾರೆ (1983), ಹ್ಯಾಮ್ಲೆಟ್ (1984), ಬೆಪ್ಪುತಕಡಿ ಭೋಳೇ ಶಂಕರ (1987), ಜೋಕುಮಾರ ಸ್ವಾಮಿ (1989), ಈ ನಾಟಕಗಳನ್ನು ಕೆ.ವಿ. ಸುಬ್ಬಣ್ಣ, ಬಿ.ವಿ.ಕಾರಂತ, ಪ್ರಸನ್ನ, ಕೆ.ವಿ.ಅಕ್ಷರ, ಚಿದಂಬರರಾವ್ ಜಂಬೆ, ಚಂದ್ರಶೇಖರ ಕಂಬಾರ ಮೊದಲಾದವರು ನಿರ್ದೇಶಿಸಿದ್ದಾರೆ.

1970 ರ ದಶಕದಲ್ಲಿ ನೀನಾಸಮ್ ತನ್ನ ಚಟುವಟಿಕೆಗಳನ್ನು ವಿಸ್ತರಿಸಿತು. ನೀನಾಸಮ್ ಚಿತ್ರ ಸಮಾಜದ ಸ್ಥಾಪನೆಯಾದದ್ದು 1973 ರಲ್ಲಿ. ಇದು ಚಿತ್ರೋತ್ಸವ, ಚಿತ್ರವಿಮರ್ಶಾ ಕಾರ್ಯಾಗಾರ ಮತ್ತು ಚಲನಚಿತ್ರಕ್ಕೆ ಸಂಬಂಧಿಸಿದ ಕನ್ನಡ ಪುಸ್ತಕ ಪ್ರಕಟಣೆಯನ್ನು ಆರಂಭಿಸಿತು. ಪ್ರಥಮ ಚಲನಚಿತ್ರೋತ್ಸವ ಸಂಘಟಿಸಿ ಗ್ರಾಮೀಣ ಜನರಿಗೆ ಜಾಗತಿಕ ಮಟ್ಟದ ನಿರ್ದೇಶಕರ ಚಿತ್ರಗಳನ್ನು ಪ್ರದರ್ಶಿಸಿತು (1977). ಇದಲ್ಲದೆ ರಾಜ್ಯದ ಶಾಲಾ ಕಾಲೇಜುಗಳಲ್ಲಿ ವಿದ್ಯಾರ್ಥಿಗಳು ಹಾಗೂ ಸಾರ್ವಜನಿಕರಿಗಾಗಿ ಜನಸ್ಪಂದನ ಕಾರ್ಯಕ್ರಮ ಏರ್ಪಡಿಸಿತ್ತು (1983 - 85). ಈ ಕಾರ್ಯಕ್ರಮದ ಅಡಿಯಲ್ಲಿ ಹೆಗ್ಗೋಡಿನಲ್ಲಿ 16 ಚಿತ್ರೋತ್ಸವಗಳು, 10 ಚಿತ್ರ ಸಂವೇದನಾ ಶಿಬಿರಗಳನ್ನು ಏರ್ಪಡಿಸಲಾಗಿತ್ತು. ಇದೇ ವೇಳೆ ಹೆಗ್ಗೋಡಿನಿಂದ ಹೊರಗಡೆ 55 ಚಿತ್ರಸಹೃದಯತಾ ಶಿಬಿರಗಳನ್ನೂ 93 ಚಿತ್ರೋತ್ಸವಗಳನ್ನೂ ಸಂಸ್ಥೆ ಸಂಘಟಿಸಿತು. ಪ್ರತಿವರ್ಷ 10 ದಿನಗಳ ಕಾಲ ಚಲನಚಿತ್ರ ಸಹೃದಯತಾ ಶಿಬಿರಗಳನ್ನು 1979 ರಿಂದ 88 ರ ವರೆಗೆ ನಡೆಸಿಕೊಂಡು ಬರಲಾಯಿತು. ಅದೀಗ ನೀನಾಸಮ್ ಸಂಸ್ಕೃತಿ ಶಿಬಿರವಾಗಿ ಮುಂದುವರಿದಿದೆ.

ದೆಹಲಿಯ ರಾಷ್ಟ್ರೀಯ ನಾಟಕ ಶಾಲೆಯ (ಎನ್‌ಎಸ್‌ಡಿ.) ಮಾದರಿಯಲ್ಲಿ ನೀನಾಸಮ್ ರಂಗ ಶಿಕ್ಷಣ ಕೇಂದ್ರ ಸ್ಥಾಪಗೊಂಡಿತು (1980). ಕನ್ನಡದ ಉತ್ಸಾಹೀ ಯುವಕರಿಗೆ ರಂಗಕಲೆಗಳಲ್ಲಿ ಶಾಸ್ತ್ರೀಯವಾದ ತರಬೇತಿ ಕೊಡುವ ಮುಖ್ಯ ಉದ್ದೇಶದಿಂದ ಆರಂಭವಾದ ಈ ಕೇಂದ್ರ ರಂಗಶಿಕ್ಷಣವನ್ನು ದೇಶೀಯ ಅಗತ್ಯಕ್ಕೆ ಅನುಗುಣವಾಗಿ ರೂಪಿಸಿಕೊಂಡಿದ್ದು ಮಹತ್ತ್ವದ ಸಾಧನೆ. ರಂಗಶಿಕ್ಷಣಕ್ಕೆ ಅಗತ್ಯವಾದ ಮಾಹಿತಿ ಹಾಗೂ ಪಠ್ಯಗಳನ್ನು ಕನ್ನಡದಲ್ಲಿ ತಯಾರಿಸಿರುವುದು ಹಾಗೂ ರಂಗಶಿಕ್ಷಣಕ್ಕೆ ಸಂಬಂಧಿಸಿದ ಸಮೃದ್ಧ ಗ್ರಂಥಭಂಡಾರ ಹೊಂದಿರುವುದು ಈ ಕೇಂದ್ರದ ವಿಶೇಷ. ರಂಗಶಿಕ್ಷಣ ಕೇಂದ್ರ 89 ನಾಟಕಗಳನ್ನೂ 155 ಅಭ್ಯಾಸಿ ಪ್ರಯೋಗಗಳನ್ನೂ ರಂಗದ ಮೇಲೆ ತಂದಿದೆ (2001).

ನೀನಾಸಮ್ ರಂಗಶಿಕ್ಷಣ ಕೇಂದ್ರ ರಂಗಕಲೆಯ ಒಂದು ವರ್ಷದ ಡಿಪ್ಲೊಮಾ ನಡೆಸುತ್ತಿದೆ. ಇದು ರಂಗಭೂಮಿಯ ತಾತ್ತ್ವಿಕ ಮತ್ತು ಪ್ರಾಯೋಗಿಕ ತರಬೇತಿಯನ್ನು ಒಳಗೊಂಡಿದೆ. ರಂಗಸಿದ್ಧಾಂತ, ನಾಟಕ

ಇತಿಹಾಸ, ರಂಗಭೂಮಿ ಇತಿಹಾಸ, ರಂಗಾಭಿನಯ, ರಂಗಸಿದ್ಧತೆ ಮತ್ತು ರಂಗಪ್ರಯೋಗಗಳು ಪಠ್ಯ ಕ್ರಮದ ಅವಿಭಾಜ್ಯ ಅಂಗಗಳು. ಪ್ರತಿವರ್ಷ ತರಬೇತಿಗಾಗಿ ಕರ್ನಾಟಕದ ಎಲ್ಲ ಜಿಲ್ಲೆಗಳಿಂದ 20 ಜನರನ್ನು ಆಯ್ಕೆಮಾಡಲಾಗುತ್ತದೆ.

ತಿರುಗಾಟ ನೀನಾಸಮ್‌ನ ಒಂದು ವಿಶಿಷ್ಟ ಕಾರ್ಯಕ್ರಮ. ಇಲ್ಲಿನ ರಂಗತಂಡ ನಾಟಕವನ್ನು ರಾಜ್ಯದ ಮೂಲೆಮೂಲೆಗಳಿಗೆ ತಲಪಿಸುತ್ತದೆ. ಇಂಥ ಒಂದು ಕಾರ್ಯಕ್ರಮ ಆರಂಭಗೊಂಡಿದ್ದು 1985 ರಲ್ಲಿ. ನೀನಾಸಮ್ ರಂಗಶಿಕ್ಷಣ ಕೇಂದ್ರದಲ್ಲಿ ತರಬೇತಿ ಪಡೆದ ಅಭ್ಯರ್ಥಿಗಳಿಗೆ ತಮ್ಮ ಸಾಮರ್ಥ್ಯವನ್ನು ಪ್ರದರ್ಶಿಸುವ ಅವಕಾಶವನ್ನು ಇದು ಕಲ್ಪಿಸುತ್ತದೆ. ಜೊತೆಗೆ ಕನ್ನಡದಲ್ಲಿ ಕ್ಷೀಣಿಸಿದ್ದ ವೃತ್ತಿ ರಂಗ ಭೂಮಿಗೆ ಕಾಯಕಲ್ಪ ನೀಡುವ ಉದ್ದೇಶವನ್ನು ಒಳಗೊಂಡಿದೆ. ತಿರುಗಾಟದ ಉದ್ದೇಶಕ್ಕಾಗಿ ಪ್ರತಿವರ್ಷ ಮೂರು ನಾಟಕಗಳ ಜೊತೆಗೆ ಒಂದು ಮಕ್ಕಳ ನಾಟಕವನ್ನು ಆಯ್ದುಕೊಳ್ಳಲಾಗುತ್ತದೆ. ಮೂರು ತಿಂಗಳ ರಂಗತಾಲೀಮಿನ ಅನಂತರ ನಾಲ್ಕು ತಿಂಗಳು, ರಾಜ್ಯದ ಬಹುಪಾಲು ಹಳ್ಳಿ ಪಟ್ಟಣಗಳಿಗೆ ಭೇಟಿ ನೀಡಿ ನಾಟಕ ಪ್ರದರ್ಶಿಸಲಾಗುವುದು.

ಭಾರತ ಸರ್ಕಾರದ ಮಾನವ ಸಂಪನ್ಮೂಲ ಸಚಿವಾಲಯದ ನೆರವಿನೊಂದಿಗೆ ನೀನಾಸಮ್ ಶಾಲಾರಂಗ ಎಂಬ ಶಿಕ್ಷಣದಲ್ಲಿ ರಂಗಭೂಮಿ ಯೋಜನೆಯನ್ನು ನಡೆಸಿತು (1991 - 93). ರಂಗಶಿಕ್ಷಣ ಕೇಂದ್ರದಲ್ಲಿ ಕಲಿತ ಕಲಾವಿದರ ಗುಂಪೊಂದಕ್ಕೆ ವಿಶೇಷ ತರಬೇತಿ ನೀಡಿ ಶಾಲೆಗಳಲ್ಲಿ ರಂಗಭೂಮಿ ಅಥವಾ ಸಾಂಸ್ಕೃತಿಕ ಕಾರ್ಯಾಗಾರಗಳನ್ನು ನಡೆಸಲಾಯಿತು. ಕಾರ್ಯಾಗಾರದ ಅಂತ್ಯದಲ್ಲಿ ರಂಗ ಪ್ರಯೋಗಗಳಿರುತ್ತಿದ್ದವು. ರಾಜ್ಯದಲ್ಲಿ ಇದುವರೆಗೆ ಇಂಥ 13 ಕಾರ್ಯಾಗಾರಗಳು ನಡೆದಿವೆ.

ಕೆ.ವಿ.ಸುಬ್ಬಣ್ಣನವರು (ನೋಡಿ) ನೀನಾಸಮ್ ಚಟುವಟಿಕೆಗಳ ರೂವಾರಿ. ಇವರು ತಮಗೆ ಸಂದ ಮ್ಯಾಗ್‌ಸೆಸೆ ಪುರಸ್ಕಾರದೊಂದಿಗೆ ಬಂದ ಹಣವನ್ನು ಮೂಲಧನವನ್ನಾಗಿ ಇರಿಸಿ ನೀನಾಸಮ್ ಪ್ರತಿಷ್ಠಾನವನ್ನು ಸ್ಥಾಪಿಸಿದ್ದಾರೆ (1992). ಠೇವಣಿಯಿಂದ ಬರುವ ಆದಾಯದಿಂದ ನೀನಾಸಮ್ ಚಟುವಟಿಕೆಗಳನ್ನು ಹೆಗ್ಗೋಡಿನ ಹೊರಕ್ಕೂ ವಿಸ್ತರಿಸಲಾಗಿದೆ. ಒಂದರಿಂದ ಮೂರು ದಿನಗಳ ಅವಧಿಯ ಸಾಹಿತ್ಯ ಅಧ್ಯಯನ ಶಿಬಿರಗಳನ್ನು ರಾಜ್ಯದ ವಿವಿಧೆಡೆ ಏರ್ಪಡಿಸಲಾಗಿದೆ. ಈವರೆಗೆ ಅಂಥ 40ಕ್ಕೂ ಹೆಚ್ಚು ಶಿಬಿರಗಳು ನಡೆದಿವೆ.

ಆಧುನಿಕ ರಂಗಭೂಮಿಯ ಎಲ್ಲ ಸೌಲಭ್ಯಗಳನ್ನು ಹೊಂದಿರುವ ಶಿವರಾಮ ಕಾರಂತ ರಂಗಮಂದಿರ, ನೀನಾಸಮ್ ನಿರ್ಮಾಣಗಳಲ್ಲೊಂದು. ನೀನಾಸಮ್ ಮಾತುಕತೆ ಎಂಬುದು ಸಂಸ್ಥೆ ತನ್ನ ಚಟುವಟಿಕೆಗಳನ್ನು ದಾಖಲಿಸಲು ಹೊರತರುತ್ತಿರುವ ಖಾಸಗೀ ಪ್ರಸಾರದ ತ್ರೈಮಾಸಿಕ ಪತ್ರಿಕೆ, ಈ ಪತ್ರಿಕೆಯ ಸಂಪಾದಕರು ಯಶವಂತ ಜಾಧವ್. (ಎನ್‌ಜಿ.ಪಿ.)

**ನೀರಾವರಿ :** ಕೃಷಿಗೆ ಅತ್ಯಾವಶ್ಯಕವಾದ ನೀರನ್ನು ಕೃತಕ ರೀತಿಯಲ್ಲಿ ಸರಬರಾಜು ಮಾಡುವ ವಿಧಾನವೇ ನೀರಾವರಿ. ಕರ್ನಾಟಕದಲ್ಲಿ ವರ್ಷದ ಕೆಲವೇ ತಿಂಗಳುಗಳಲ್ಲಿ ಮಾತ್ರ ಹೆಚ್ಚು ಮಳೆ ಬೀಳುತ್ತದೆಯಾದ್ದರಿಂದ ಇಲ್ಲಿ ದೊರೆಯುವ ನೀರು ಸಾಕಷ್ಟಿದ್ದರೂ ಅದು ವ್ಯರ್ಥವಾಗಿ ಹರಿದುಹೋಗುವುದು. ವಿವಿಧ ಭಾಗಗಳಲ್ಲಿ ಬೀಳುವ ಮಳೆಯ ಪರಿಮಾಣ ಆವಶ್ಯಕತೆಗಿಂತ ವ್ಯತ್ಯಾಸವಾಗಿರುವುದು. ಕೆಲವೆಡೆ ಅನಿಶ್ಚಿತವಾಗಿರುವುದು ಮುಂತಾದ ಕಾರಣಗಳಿಂದ ಉತ್ತಮ ನೀರಾವರಿ ವ್ಯವಸ್ಥೆಯನ್ನು ರೂಢಿಸುವುದು ಆವಶ್ಯಕವಾಗಿದೆ. ಈ ಅಂಶವನ್ನು ನಾಡಿನ ಜನ ಹಿಂದಿನಿಂದಲೇ ಮನಗಂಡಿದ್ದು ನೀರಾವರಿ ಕೆಲಸಗಳನ್ನು ಕೈಗೊಂಡಿದ್ದರು. ಇಂದು ಆಧುನಿಕ ವಿಜ್ಞಾನದ ಬೆಳೆವಣಿಗೆಯೊಡನೆ ಇನ್ನೂ ಹೆಚ್ಚು ವ್ಯಾಪಕವಾಗಿ ವ್ಯವಸ್ಥಿತವಾಗಿ ನೀರಾವರಿಯನ್ನು ರೂಢಿಸಲಾಗುತ್ತಿದೆ.

### ಪ್ರಾಚೀನ

ಪ್ರಾಚೀನ ಕರ್ನಾಟಕದಲ್ಲಿ ನೀರಾವರಿಯ ಬಗ್ಗೆ ಸ್ಪಷ್ಟ ಕಲ್ಪನೆ ಇತ್ತು. ಕೃಷಿ ಭೂಮಿಗಳನ್ನು ದೇವಮಾತೃಕ ಮತ್ತು ನದೀಮಾತೃಕಗಳೆಂಬ ಎರಡು ಬಗೆಗಳಲ್ಲಿ ವಿಂಗಡಿಸುತ್ತಿದ್ದರು. ಕೇವಲ ಮಳೆ ನೀರನ್ನವಲಂಬಿಸಿದ್ದ ಭೂಮಿಗಳೇ ದೇವಮಾತೃಕಗಳು. ನದಿಯ ನೀರನ್ನು ನೀರಾವರಿ ವಿಧಾನದಲ್ಲಿ ಕಾಲುವೆಗಳ ಮೂಲಕ ಹಾಯಿಸಿದ್ದನ್ನು ಆಶ್ರಯಿಸಿರುವ ಭೂಮಿಗಳು ನದೀಮಾತೃಕಗಳು.

ನೀರಾವರಿ ಪ್ರಧಾನವಾಗಿ ನದಿ, ಕೆರೆ ಮತ್ತು ಬಾವಿಗಳನ್ನು ಅವಲಂಬಿಸಿತ್ತು. ನೀರಾವರಿ ಸಾಧನಗಳೆನಿಸಿದ್ದ ಕಾಲುವೆ, ಕೆರೆಕಟ್ಟೆ ಹಾಗೂ ಬಾವಿಗಳನ್ನು ಕಟ್ಟಿಸುವುದು ಅತಿ ಪುಣ್ಯದ ಕೆಲಸ. ಇದರಿಂದ ಜನತೆಗೆ ಶ್ರೇಯಸ್ಕರವಾಗುವುದು ಮಾತ್ರವಲ್ಲದೆ, ದೇವತೆಗಳೂ ಸುಪ್ರೀತರಾಗುತ್ತಾರೆಂಬ ನಂಬಿಕೆ ಜನಮನದಲ್ಲಿ ಆಳವಾಗಿ ಬೇರೂರಿದ್ದಿತು. ಅಂತೆಯೇ ರಾಜರು, ರಾಜ್ಯಾಧಿಕಾರಿಗಳು, ಶ್ರೀಮಂತರು ಅಷ್ಟೇಕೆ ಸ್ತ್ರೀಯರು ಹಾಗೂ ಸಂನ್ಯಾಸಿಗಳೂ ಈ ಪುಣ್ಯಕಾರ್ಯದಲ್ಲಿ ಭಾಗಿಗಳಾಗಿದ್ದಾರೆ. ಹಾಗೆಯೇ, ಗ್ರಾಮಸಭೆ, ವರ್ತಕಶ್ರೇಣಿ, ದೇವಸ್ಥಾನಗಳಂಥ ಸಂಸ್ಥೆಗಳೂ ಈ ದಿಶೆಯಲ್ಲಿ ಹಿಂದೆ ಬಿದ್ದಿಲ್ಲ. ಅಂದಿನ ಸಮಾಜ ನೀರಾವರಿ ಕಾರ್ಯಕ್ಕೆ ಕೊಟ್ಟಿದ್ದ ಮಹತ್ವ ಹಾಗೂ ಆದ್ಯತೆ ಗಮನಾರ್ಹವಾದುದು. "ಹರಿಯುತ್ತಿರುವ ನೀರಿಗೆ ಅಡ್ಡಲಾಗಿ ಕಟ್ಟುವ ಕಟ್ಟೇಯೇ ಸೇತು (ಸೇತು ಜಲಪ್ರವಾಹ ಬಂಧ), ಇಂಥ ಸೇತುಕಾರ್ಯವನ್ನು ಯಾರೇ ಆಗಲಿ, ತಮ್ಮ ಭೂಮಿಗಳಿಗೆ ಇದರಿಂದ ನಷ್ಟವೇ ಆದರೂ ಅಡ್ಡಿ ಬಂದು ನಿಲ್ಲಿಸಕೂಡದು. ಏಕೆಂದರೆ ಇದರಿಂದ ಆಗುವ ನಷ್ಟ ಅಲ್ಪ. ಆದರೆ ಪ್ರಯೋಜನ ಮಾತ್ರ ಅತ್ಯಧಿಕ. ಅಸಂಖ್ಯಾತ ಜನರಿಗೆ ಉಪಕಾರಿ. ಬಾವಿ, ಕೊಳ ಮುಂತಾದವುಗಳ ನಿರ್ಮಾಣಕಾರ್ಯಗಳನ್ನು ಎಂದಿಗೂ ನಿಲ್ಲಿಸಬಾರದು; ಇವುಗಳಿಗೆ ಬೇಕಾಗುವ ಸ್ಥಳಾವಕಾಶವಾದರೊ ಅಲ್ಪ ಮಾತ್ರ, ಆದರೆ ತಮ್ಮಲ್ಲಿನ ವಿಪುಲವಾದ ನೀರಿನಿಂದ ಅತ್ಯುಪಯುಕ್ತ" - ಇದು ಪ್ರಸಿದ್ಧ ಧರ್ಮಶಾಸ್ತ್ರಕಾರನಾದ ವಿಜ್ಞಾನೇಶ್ವರನ ಹೇಳಿಕೆ. ಈ ಮಾತುಗಳಲ್ಲಿ ನೀರಾವರಿ ಕಾರ್ಯಗಳ ಬಗ್ಗೆ ಅಂದಿನ ಸಮಾಜದ ಸ್ಪಷ್ಟ ಧೋರಣೆಯನ್ನು ಕಾಣಬಹುದು.

ಸೇತುಬಂಧಗಳ ಪ್ರಸ್ತಾಪ ಹಲವಾರು ಶಾಸನಗಳಲ್ಲಿವೆ. ವರದಾನದಿಗೆ ಒಂದು ಮಹಾ ಸೇತುವಿತ್ತಂತೆ. ಕಾವೇರಿಗೆ ತೂಬುಗಳು ಹಾಗೂ ಕಾಲುವೆಗಳಿದ್ದ ಸಂಗತಿಯೂ ಶಾಸನೋಕ್ತವೇ. ತುಂಗಭದ್ರೆಯ ನೀರು ಕಾಲುವೆಯ ಮೂಲಕ ಹರಿದು ಹೊಲಗದ್ದೆ ತಲುಪಿದ್ದನ್ನು ಆರನೆಯ ವಿಕ್ರಮಾದಿತ್ಯನ ಆಳ್ವಿಕೆಯ 13ನೆಯ ವರ್ಷದಲ್ಲಿ ಬರೆಸಿರುವ ಮುನಿರಾಬಾದ್ ಶಾಸನ ವರ್ಣಿಸುತ್ತದೆ. ತ್ರೈಲೋಕ್ಯಮಲ್ಲ ಸೋಮೇಶ್ವರನ ಕಾಲದಲ್ಲಿದ್ದ ಆದಿತ್ಯಭಟ್ಟನೆಂಬಾತ ತುಂಗಭದ್ರಾ ನದಿಯ ದಂಡೆಗಳನ್ನು ಸಮೀಕ್ಷಿಸಿ ಒಂದು ದೊಡ್ಡ ಕಾಲುವೆಯನ್ನು ತೋಡಿಸಿದ. ಇದರಿಂದ ಹೊರಟ ಸಣ್ಣ ಸಣ್ಣ ನಾಲೆಗಳು ಹಲವಾರು. ಅಲ್ಲದೆ ಮೇಲ್ದಂಡೆಯ (ಉದ್ದಿಯ ಕಾಲು) ಮತ್ತು ಕೆಳದಂಡೆಯ (ಪಳ್ಳವಾಯ್ಕಾಲು) ಕಾಲುವೆಗಳನ್ನೂ ಮಾಡಿಸಿ ಇವೆಲ್ಲವನ್ನೂ ಅಲ್ಲಿನ ಪ್ರಜೆಗಳಿಗೆ ಅರ್ಪಿಸಿದ. ಈ ನೀರಾವರಿಯಿಂದ ಬಾಳೆಯೇ ಮುಂತಾದ ಬೆಳೆಗಳು ಸಮೃದ್ಧವಾಗಿ ಬೆಳೆಯಿತು ಎಂದು ಒಂದು ಶಾಸನ ತಿಳಿಸುತ್ತದೆ. ಮತ್ತೊಂದು ನಿದರ್ಶನವನ್ನು ಹಳೇ ಬೀಡಿನ ಸು. 1300ರ ಶಾಸನವೊಂದರಲ್ಲಿ ನೋಡಬಹುದು; ಯಗಚಿ ನದಿಯ ನೀರನ್ನು ರಾಜಧಾನಿಯಾದ ದ್ವಾರಸಮುದ್ರಕ್ಕೆ (ಇಂದಿನ ಹಳೇಬೀಡಿಗೆ) ತರಲು ಮಾಡಿದ ಪ್ರಯತ್ನದ ಪ್ರಸ್ತಾಪ ಇಲ್ಲಿದೆ. ಇದರ ಬಗ್ಗೆ ಕ್ಯಾಪ್ಟನ್ ಮೆಕೆಂಜಿಯವರ ಅಭಿಪ್ರಾಯವನ್ನು ಇಲ್ಲಿ ಗಮನಿಸಬಹುದು. 'ರಾಜಧಾನಿಗೆ ಅಗತ್ಯವಿರುವ ನೀರು, ಮತ್ತು ಸುತ್ತಮುತ್ತಲ ಕೃಷಿಭೂಮಿಗಳಿಗೆ ಬೇಕಾದ ನೀರನ್ನು ಸರಬರಾಜು ಮಾಡುವ ಸಲುವಾಗಿ, ಬೇಲೂರಿನ ಸಮೀಪದಲ್ಲಿ ಹರಿಯುತ್ತಿದ್ದ ಯಗಚಿಯ ನೀರನ್ನು ಕಾಲುವೆ ಮೂಲಕ ಹಳೆಬೀಡಿಗೆ ತರಲಾಯಿತು. ಹಾಸನ-ಬೇಲೂರು ಮಾರ್ಗದ 25ನೆಯ ಕಿ.ಮೀ. ಕಲ್ಲಿನ ಹತ್ತಿರ ಕಾಣುವ, ಆಳವಾಗಿ ತೋಡಿರುವ ಕಾಲುವೆಯ ಕೆಲಸ ಇದಕ್ಕೆ ಸಾಕ್ಷಿಯಾಗಿ ನಿಂತಿದೆ. ಅಂದು ತೋಡಿರುವ ಕಾಲುವೆಯ ಗಾತ್ರ ಆಳಗಳನ್ನು ವೀಕ್ಷಿಸಿದರೆ, ಇದೇನು ಸಾಧಾರಣ ಕಾರ್ಯವಲ್ಲವೆನಿಸುತ್ತದೆ. ಈ ಇಡೀ ಯೋಜನೆ ಅಂದಿನ ಶಿಲ್ಪಿಗಳ ಕೌಶಲ್ಯಕ್ಕೆ ಕೀರ್ತಿ ತರುವಂತಿದೆ' ಎಂದಿದ್ದಾನೆ. ಕೋಲಾರ ಜಿಲ್ಲೆಯ 1388ರ ಶಾಸನವೊಂದು ತಿಳಿಸುವಂತೆ ಎರಡನೆಯ

ಬುಕ್ಕರಾಯನ ಅಪ್ಪಣೆಯ ಮೇರೆಗೆ, ಸಿಂಗಾಯಭಟ್ಟ ಎಂಬ ಜಲಸೂತ್ರನು ಹೆನ್ನೆ ನದಿಯ ನೀರನ್ನು ಒಂದು ಕಾಲುವೆಯ ಮೂಲಕ ಸಿರುವೆರ ಕೆರೆಗೆ ಹರಿಸಿದ. ಇದರಿಂದ ಆಗ ನೀರಾವರಿ ತಜ್ಞರಿದ್ದ ಬಗ್ಗೆ ಸುಳಿವು ದೊರೆಯುತ್ತದೆ.

ಬೆಟ್ಟಗುಡ್ಡಗಳಿಂದ ಹರಿದು ಬರುವ ಸಣ್ಣ ಸಣ್ಣ ನದಿಗಳ ನೀರನ್ನೂ ಕಾಲುವೆಗಳ ಮೂಲಕ ಹಾಯಿಸಿ, ಬೆಳೆಗಳನ್ನು ಮಾಡುತ್ತಿದ್ದಂತೆ ಕಾಣುತ್ತದೆ. ಇಂಥ ನೀರಾವರಿಯಿಂದ ಕಬ್ಬು, ಬತ್ತ ಮುಂತಾದವುಗಳನ್ನೂ ಬೆಳೆಯುತ್ತಿದ್ದಂತೆ ಶಾಸನವೊಂದು ತಿಳಿಸುತ್ತದೆ. ದಕ್ಷಿಣಕನ್ನಡ ಜಿಲ್ಲೆಯ ಪ್ರದೇಶಗಳಲ್ಲಿ, ಕಣಿವೆಯ ಕೆಳಭಾಗಗಳಲ್ಲಿನ ಬತ್ತದ ಗದ್ದೆಗಳಿಗೆ ಸಣ್ಣ ಸಣ್ಣ ನದಿಗಳಿಂದ ನೀರು ಹಾಯಿಸಿ ವರ್ಷಕ್ಕೆ ಎರಡು ಬೆಳೆಗಳನ್ನೂ ತೆಗೆಯುತ್ತಿದ್ದರಂತೆ; ಇಂಥ ಗದ್ದೆಗಳನ್ನು ಪುಲ್ಲೆಯ ಬಯಲು ಎಂದು ಕರೆಯಲಾಗಿದೆ. ಪುಲ್ಲೆಯ ಬಯಲಿನ ಪ್ರಸ್ತಾಪ ಕೆಲವು ಶಾಸನಗಳಲ್ಲೂ ಇದೆ. (ಎಸ್.ಜಿ.)

ಕೆರೆಗಳು ಪ್ರಾಚೀನ ಕರ್ನಾಟಕದ ನೀರಾವರಿ ಸಾಧನಗಳಲ್ಲಿ ಅತಿ ಪ್ರಮುಖವೆನಿಸಿದ್ದುವು. ಈ ವಿಷಯಕ್ಕೆ ಸಂಬಂಧಪಟ್ಟ ಮಾಹಿತಿಯನ್ನೊದಗಿಸುವ ಬಹುಪಾಲು ಶಾಸನಗಳು ಕೆರೆಗಳ ಬಗ್ಗೆ ಪ್ರಸ್ತಾಪ ಮಾಡವಂತಹುವೇ ಆಗಿವೆ. ಆದರೆ ಕರ್ನಾಟಕದಲ್ಲಿ ಎಂದಿನಿಂದ ಕೆರೆಗಳ ನಿರ್ಮಾಣ ಪ್ರಾರಂಭವಾಯಿತೆಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಹಲವು ಪ್ರಾಗಿತಿಹಾಸಕಾರರ ಮೇರೆಗೆ ಕ್ರಿ.ಪೂ. ಒಂದು ಸಾವಿರದ ಸುಮಾರಿಗೆ ಕರ್ನಾಟಕಕ್ಕೆ ವಲಸೆ ಬಂದ ಬೃಹತ್ ಶಿಲಾಸಮಾಧಿಗಳನ್ನು ಕಟ್ಟುತ್ತಿದ್ದ ಹಾಗೂ ಕಬ್ಬಿಣದ ಉಪಯೋಗವನ್ನು ತಿಳಿದಿದ್ದ ಜನರಿಂದ ಕೆರೆಗಳ ನಿರ್ಮಾಣಕಾರ್ಯ ಆರಂಭವಾಗಿರಬಹುದೆಂದು ಊಹೆ. ಏಕೆಂದರೆ ಈ ಜನರ ನೆಲೆಗಳು ಮತ್ತು ಸ್ಮಶಾನ ಪ್ರದೇಶಗಳು ಪ್ರಾಚೀನ ಕೆರೆಗಳ ಸಮೀಪದಲ್ಲಿ ಕಂಡುಬಂದಿವೆ. ಅಲ್ಲದೆ ಕೆಲವು ಬೃಹತ್ ಶಿಲಾಸಮಾಧಿಗಳಲ್ಲಿ ಬತ್ತ ಅಥವಾ ಬತ್ತದ ಹೊಟ್ಟು ದೊರಕಿರುವುದು ಆ ಕಾಲದಲ್ಲಿ ನೀರಾವರಿ ವ್ಯವಸಾಯ ಇದ್ದುದಕ್ಕೆ ಸೂಚಕವಾಗಿದೆ.

ಕೆರೆಗಳ ನಿರ್ಮಾಣ ಮಾನವನ ಆರ್ಥಿಕ ಜೀವನದಲ್ಲಿ ಒಂದು ಮೈಲಿಗಲ್ಲು. ಕೆರೆಗಳ ನಿರ್ಮಾಣದಿಂದ ಮಾನವ ನದಿದಂಡೆಯನ್ನೇ ತನ್ನ ವಾಸಕ್ಕಾಗಿ ಅವಲಂಬಿಸಬೇಕಾದ ಆವಶ್ಯಕತೆ ಇಲ್ಲದಂತಾಗಿ ತನ್ನ ಜೀವನದ ಪ್ರಗತಿಗೆ ಅನುಕೂಲವಾಗುವಂಥ ಸ್ಥಳಗಳಿಗೆ ವಲಸೆ ಹೋಗಬಲ್ಲವನಾದ. ಕೆರೆಕಟ್ಟುವುದು ಸಾಮೂಹಿಕ ಕೆಲಸವಾದ್ದರಿಂದ ಮತ್ತು ಜನಬಲವನ್ನು ಸಂಘಟಿಸಲು ಮುಂದಾಳು ಅಥವಾ ಮುಖಂಡನ ಆವಶ್ಯಕತೆಯಿಂದಾಗಿ ಮಾನವನ ಸಂಘಜೀವನದಲ್ಲಿ ಪ್ರಗತಿಯ ಸಾಧನೆ ಕಂಡುಬರುವುದು ಸಹಜ. ಬಹುಶಃ ಕೆರೆಗಳನ್ನು ಕಟ್ಟುವ ರೂಢಿ ಬೆಳೆದಂತೆ ಕರ್ನಾಟಕದ ಎಲ್ಲೆಡೆಗಳಲ್ಲೂ ಹೊಸ ಹಳ್ಳಿಗಳು ಹುಟ್ಟಿಕೊಂಡುವು. ಅನಾವೃಷ್ಟಿಯ ಭಯವಿಲ್ಲದೆ ಎರಡು ಮೂರು ಬೆಳೆಗಳನ್ನು ಬೆಳೆಯುವುದರಿಂದಾದ ಆರ್ಥಿಕ ಸುಧಾರಣೆ ಮತ್ತು ಸಂತೃಪ್ತಿಯಿಂದಾಗಿ ಮತ್ತು ಕಾಲದ ಉಳಿತಾಯದಿಂದಾಗಿ ಆಧ್ಯಾತ್ಮಿಕ ಹಾಗೂ ಹೊಸ ಅನ್ವೇಷಣೆಗಳ ಕಡೆ ಮನಗೊಡುವಂತಾಗಿ ಮಾನವನ ಪ್ರಗತಿಯಲ್ಲಿ ತೀವ್ರಗತಿ ಕಂಡುಬರುವ ಸಾಧ್ಯತೆಯುಂಟಾಯಿತು. ಈ ಉಪಯೋಗಗಳೇ ನೀರಾವರಿಯನ್ನು ಮತ್ತಷ್ಟು ರೂಢಿಸಲು ಪ್ರೋತ್ಸಾಹ ದಾಯಕವಾದುವು. ಬಹುಶಃ ಪ್ರತಿ ಗ್ರಾಮದಲ್ಲಿ ಒಂದೊಂದು ಅಥವಾ ಇನ್ನೂ ಹೆಚ್ಚು ಕೆರೆಯಿರುತ್ತಿತ್ತೆನ್ನಬಹುದು. ಕೆರೆಗಳಿಗೆ ಅವುಗಳ ಮಹತ್ವವನ್ನು ತಿಳಿದು ಪೂಜ್ಯ ಸ್ಥಾನ ಕೊಡಲಾಯಿತು ಹಾಗೂ ಕೆರೆಗಳನ್ನು ನಿರ್ಮಿಸಿದವರಿಗೂ ಪೂಜ್ಯಸ್ಥಾನ ಲಭಿಸಿತು. ಆದ್ದರಿಂದ ರಾಜರು, ರಾಜಮನೆತನದವರು ಹಾಗೂ ಶ್ರೀಮಂತರು ಕೆರೆಗಳನ್ನು ನಿರ್ಮಿಸಿ ಜನಪ್ರಿಯರಾದುದಲ್ಲದೆ ತಮ್ಮ ಹೆಸರನ್ನು ಅಮರಗೊಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಸ್ತ್ರೀಯರು ಹಾಗೂ ಸಂನ್ಯಾಸಿಗಳೂ ಕೆರೆಗಳನ್ನು ಕಟ್ಟಿಸಿದ ನಿದರ್ಶನಗಳು ಹಲವಾರು. ವೇಶ್ಯೆಯರೂ ತಮ್ಮ ಸಂಪಾದನೆಯಿಂದ ಸಮಾಜ ಹಿತದ ದೃಷ್ಟಿಯಿಂದ ಕೆರೆಗಳನ್ನು ಕಟ್ಟಿಸಿದ ನಿದರ್ಶನಗಳು ಶಾಸನಗಳಿಂದ ತಿಳಿದು ಬರುತ್ತವೆ. ಮಾತ್ರವಲ್ಲದೆ, ಗ್ರಾಮಸಭೆ, ವರ್ತಕಶ್ರೇಣಿ ಮತ್ತು ದೇವಾಲಯಗಳಂಥ ಸಂಘಸಂಸ್ಥೆಗಳೂ ಈ ಸಾಧನೆಯಲ್ಲಿ ಹಿಂದೆ ಬಿದ್ದಿರಲಿಲ್ಲ.

ಕದಂಬ ಮಯೂರಶರ್ಮ (ಸು. 340) ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿಯಲ್ಲಿ ಕೆರೆಯನ್ನು ಕಟ್ಟಿಸಿದ ವಿಷಯವನ್ನು ತಿಳಿಸುವ ಅಲ್ಲಿನ ಶಾಸನ ಕೆರೆಗಳಿಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ದೊರೆಯುವ ಅತಿ ಪ್ರಾಚೀನ ಶಾಸನೋಲ್ಲೇಖ. ಹಾಗೆಯೇ ಕಾಕುಸ್ಥವರ್ಮ ಕಟ್ಟಿಸಿದ ತಟಾಕದ ಪ್ರಸ್ತಾಪ ತಾಳಗುಂದ ಶಾಸನದಲ್ಲಿದೆ. ಹೊಯ್ಸಳ 2ನೆಯ ವೀರಬಲ್ಲಾಳನ ಮಂತ್ರಿಯೆನಿಸಿದ್ದ ವೀರದಂಡನಾಯಕ ತಾನೇ ಹೊಸದಾಗಿ ಕಟ್ಟಿಸಿದ ವೀರಬಲ್ಲಾಳಪುರದಲ್ಲಿ ಒಂದು ಯೋಜನೆಯ ಮೇರೆಗೆ ನಾಲ್ಕು ದೊಡ್ಡ ಕೆರೆಗಳನ್ನು ಮಾಡಿಸಿ ಅವನ್ನು ರುದ್ರಸಮುದ್ರ, ಗಂಗಾಸಮುದ್ರ, ಅಚ್ಯುತಸಮುದ್ರ ಮತ್ತು ಭೀಮಸಮುದ್ರ ಎಂದು ಕರೆದ.

ಕೃಷ್ಣದೇವರಾಯ ತಾನೇ ಹೊಸದಾಗಿ ಕಟ್ಟಿಸಿದ ನಾಗಲಾಪುರ ಪಟ್ಟಣಕ್ಕೆ ನೀರನ್ನೊದಗಿಸುವುದಕ್ಕಾಗಿ ಮತ್ತು ಕೃಷಿಭೂಮಿಗಳಿಗೆ ನೀರನ್ನು ಸರಬರಾಜು ಮಾಡುವ ಸಲುವಾಗಿ, ರಾಜಧಾನಿಯ ಬಳಿ ಒಂದು ಬೃಹತ್ ಕೆರೆಯನ್ನು ಕಟ್ಟಿಸಿದ. ಪಯೆಸ್‍ನ ವರ್ಣನೆಯ ಪ್ರಕಾರ ಈ ವಿಶಾಲವಾದ ಕೆರೆ ಎರಡು ಬೆಟ್ಟಗಳ ನಡುವಣ ಪ್ರದೇಶದಲ್ಲಿದ್ದು, ಎಲ್ಲ ಕಡೆಯಿಂದಲೂ ಹರಿದು ಬರುವ ನೀರು ಅಲ್ಲಿ ಸಂಗ್ರಹವಾಗುವಂತಿತ್ತು. ಅಲ್ಲದೆ, ಒಂದು ಸರೋವರದ ನೀರನ್ನು ಹಲವು ಮೈಲಿಗಳ ದೂರದಿಂದ ಕೊಳವೆಗಳ ಮೂಲಕ ತಂದು ಈ ಕೆರೆಗೆ ಬಿಡಲಾಗುತ್ತಿತ್ತು. ಈ ಕೆರೆಯಲ್ಲಿ ಅಂದವಾಗಿ ಕೆತ್ತಿರುವ ಶಿಲ್ಪಗಳನ್ನು ಹೊಂದಿರುವ ಮೂರು ದೊಡ್ಡ ಕಂಬಗಳಿದ್ದು, ಇವುಗಳ ಮೇಲ್ಭಾಗದಲ್ಲಿ ಕೊಳವೆಗಳು ಹಾದುಹೋಗಿದ್ದುವು. ಅಗತ್ಯವಿದ್ದಾಗ, ಈ ಕೊಳವೆಗಳ ಮೂಲಕ ಗದ್ದೆ ತೋಟಗಳಿಗೆ ನೀರನ್ನು ಹಾಯಿಸುತ್ತಿದ್ದರು. ಈ ಕೆರೆಯ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದ ಕೆಲಸಗಾರರ ಸಂಖ್ಯೆ ಏನಿಲ್ಲದಿದ್ದರೂ 15-20 ಸಾವಿರಕ್ಕೇನೂ ಕಡಿಮೆಯಿರಲಾರದೆಂಬುದು ಪಯೆಸ್‍ನ ಅಂದಾಜು. ಇರುವೆಗಳ ಸಾಲಿನಂತೆ ಕಾಣಿಸುತ್ತಿದ್ದ ಈ ಅಸಂಖ್ಯಾತ ಕಾರ್ಮಿಕ-ಜನಸ್ತೋಮ ಓಡಾಡುತ್ತಿದ್ದ ನೆಲವೇ ಕಾಣಿಸುತ್ತಿರಲಿಲ್ಲ ಎನ್ನುತ್ತಾನೆ ಪಯೆಸ್. ಅಲ್ಲದೆ, ಈ ನಿರ್ಮಾಣ ಕಾರ್ಯದ ಮೇಲ್ವಿಚಾರಣೆಯನ್ನು ಚಕ್ರವರ್ತಿ ತನ್ನ ಹಲವಾರು ಅಧಿಕಾರಿಗಳಿಗೆ ವಹಿಸಿದ್ದ. ಕೆರೆಗಳ ಬಗ್ಗೆ ಇಂಥ ಅಸಂಖ್ಯಾತ ವಿವರಗಳು ಶಾಸನಗಳಲ್ಲಿ ದೊರಕುತ್ತವೆ.

ಕೆರೆಯನ್ನು ಯಾರೇ ಕಟ್ಟಿಸಿರಲಿ ಅದನ್ನು ಕಾಪಾಡಿಕೊಂಡು ಬರುವ ಹೊಣೆ ಆ ಊರಿನ ಜನರದ್ದಾಗಿತ್ತು. ಆ ಊರಿನ ವಿವಾಹ, ಉಪನಯನ ಕಾಲಗಳಲ್ಲಿ ಎತ್ತಿದ ತೆರಿಗೆಗಳು ಹಾಗೂ ಪ್ರಾಯಶ್ಚಿತ್ತ, ದಂಡ ಮುಂತಾದವುಗಳ ಮೂಲಕ ಬರುವ ಹಣವನ್ನು ಆ ಊರಿನ ಕೆರೆಗೆ ಸಂಬಂಧಿಸಿದ ದುರಸ್ತಿ ಕೆಲಸಕ್ಕೆ ಬಿಟ್ಟು ಕೊಡುತ್ತಿದ್ದರು. ರಾಜರು, ರಾಜವಂಶದವರು ಹಾಗೂ ಶ್ರೀಮಂತರು ಕೆರೆಯನ್ನು ಸುಸ್ಥಿತಿಯಲ್ಲಿಡಲು, ಭೂಮಿಯನ್ನು ಬಿಟ್ಟುಕೊಡುತ್ತಿದ್ದರು. ಅಂಥ ಭೂಮಿಗೆ ಬಿತ್ತುವಾಟ ಎನ್ನುತ್ತಿದ್ದರು. ಒಂದು ಊರಿನ ಕೆರೆಯ ನೀರನ್ನು ಇನ್ನೊಂದು ಊರಿನ ಗದ್ದೆಗಳಿಗೆ ಹರಿಸಬೇಕಾದರೆ ನಾಡಿನ ಎಲ್ಲಾ ಪ್ರಭುಗಾವುಂಡಗಳ ಒಪ್ಪಿಗೆ ಪಡೆಯಬೇಕಾಗಿದ್ದಿತು. ಕೆರೆಗಳಿಗೆ ಪುರಾತನತ್ವ ಮತ್ತು ಪಾವಿತ್ರ್ಯವನ್ನು ಕೊಡಲು ಪುರಾಣಪ್ರಸಿದ್ಧ ಪುರುಷನೊಡನೆ ಸಂಬಂಧ ಕಲ್ಪಿಸುತ್ತಿದ್ದರು. ಹಾವೇರಿಯ ಹೆಗ್ಗೆರೆಯನ್ನು ನಳಚಕ್ರವರ್ತಿ ಕಟ್ಟಿಸಿದ್ದೆಂದು ಶಾಸನಗಳಲ್ಲಿ ಉಲ್ಲೇಖವಿರುವುದನ್ನು ಇಲ್ಲಿ ಉದಾಹರಿಸಬಹುದು. ಕೆರೆಗಳ ಬಗ್ಗೆ ಜನಗಳಿಗಿದ್ದ ಪೂಜ್ಯಭಾವನೆ ಮತ್ತು ಕೆರೆಗಾಗಿ ಸರ್ವಸ್ವವನ್ನೂ ತ್ಯಾಗಮಾಡುವ ಮನೋಭಾವ ಆ ಕಾಲದಲ್ಲಿತ್ತು ಎಂಬುದನ್ನು ಕೆರೆ ನಿರ್ಮಿಸುತ್ತಿರುವಾಗ ಎಷ್ಟೆ ಆಳ ಅಗೆದರೂ ನೀರು ಬಾರದಿದ್ದಾಗ ಊರ ಪ್ರಮುಖನ ಪ್ರೀತಿಯ ವ್ಯಕ್ತಿಯನ್ನು ಬಲಿಕೊಡಬೇಕಾಗಿ ಬರುವುದನ್ನು ವಸ್ತುವಾಗುಳ್ಳ ಹಲವು ಕಥೆಗಳು ಸೂಚಿಸುತ್ತವೆ. (ಎಸ್.ಜಿ., ಬಿ.ಎಸ್.)

ನೀರಾವರಿ ಸಾಧನೆಗಳೆನಿಸಿದ ಕೆರೆ-ಕಾಲುವೆ ಮುಂತಾದವುಗಳನ್ನು ಖಾಸಗಿ ವ್ಯಕ್ತಿಗಳು ನಿರ್ಮಿಸಿದಲ್ಲಿ, ಅಂತಹವರಿಗೆ ಭೂಮಿ ಕೊಡುಗೆ, ತೆರಿಗೆ ರಿಯಾಯಿತಿ (ಅಥವಾ ಮನ್ನಣೆ) ಮುಂತಾದ ರೂಪಗಳಲ್ಲಿ ಅಂದಿನ

ಸರ್ಕಾರ ಪುರಸ್ಕರಿಸಿ, ಉತ್ತೇಜನ ಕೊಡುತ್ತಿತ್ತು. ಹಾಗೆಯೇ ಪ್ರಜೆಗಳೂ ಅಂಥ' ಸಂದರ್ಭಗಳಲ್ಲಿ ತಮ್ಮ ಭೂಮಿಗಳಿಗೆ ನಷ್ಟವಾದಲ್ಲಿ ಆ ಭೂಮಿಗಳನ್ನು ತ್ಯಾಗಮಾಡಿ, ಬದಲು ಬೇರೆ ಭೂಮಿಗಳನ್ನು ಪಡೆಯಲು ಹಿಂಜರಿಯುತ್ತಿರಲಿಲ್ಲ.

ಪ್ರಾಚೀನ ಶಾಸನಗಳು ಆಗಿನ ಕಾಲದಲ್ಲಿದ್ದ ನೀರಾವರಿ ವ್ಯವಸ್ಥೆಯ ಬಗ್ಗೆ ಇನ್ನೂ ಅನೇಕ ವಿವರಗಳನ್ನು ಒದಗಿಸುತ್ತವೆ. 1087ರ ಶಾಸನವೊಂದು ತಿಳಿಸುವಂತೆ ಬೆಳ್ಳೆಯರ ಎಚೆಗನೆಂಬುವನು ಸಿರಿಗುಪ್ಪೆಯಲ್ಲಿ ಮರುಕಟ್ಟಿನ ಪಿಡಿಯ ಬಾವಿಯನ್ನು ಕಟ್ಟಿಸಿದ. ಇಂಥ' ನಿದರ್ಶನಗಳು ಶಾಸನಗಳಲ್ಲಿ ಅನೇಕ. ಕೆರೆಗಳ ತೂಬಿನಿಂದ ಹೊರಟ ನೀರು ಕಾಲುವೆಗಳ (ಬಾಯ್ಕಲ್, ಕಾಲ್) ಮೂಲಕ ಹರಿದು, ಕೃಷಿ ಭೂಮಿಗಳನ್ನು ತಲುಪುತ್ತಿತ್ತು. ಬಾವಿಗಳಿಂದ ಏತಗಳ ಸಹಾಯದಿಂದ ನೀರೆತ್ತುವ ವ್ಯವಸ್ಥೆಯೂ ರೂಢಿಯಲ್ಲಿತ್ತು. ಇಂಥ'ದೇ ಮತ್ತೊಂದು ನೀರೆತ್ತುವ ಯಂತ್ರವೆಂದರೆ ಘಟೀಯಂತ್ರ ಅಥವಾ ಅರಘಟ್ಟ ಘಟೀಯಂತ್ರ. ಹಾಸನ ಜಿಲ್ಲೆಯ 1147ರ ಶಾಸನವೊಂದರಲ್ಲಿ ಬರುವ ವರ್ಣನೆಯಂತೆ 'ಈ ಯಂತ್ರಕ್ಕೆ ಎತ್ತುಗಳನ್ನು ಹೂಡಿರುತ್ತಾರೆ. ಯಂತ್ರದ ಚಕ್ರ ಮೇಲುಗಡೆ (ಎತ್ತುಗಳು ಚಲಿಸಿದಂತೆ) ತಿರುಗುತ್ತಿರುತ್ತದೆ. ಇದಕ್ಕೆ ಕಟ್ಟಿರುವ ಕುಂಭಗಳ ಒಂದು ಸಾಲು ನೀರನ್ನು ಹೊತ್ತು ಮೇಲಕ್ಕೆ ಬರುತ್ತಿದ್ದರೆ, ನೀರನ್ನು ಸುರಿದು ಬರಿದಾದ ಕುಂಭಗಳ ಒಂದು ಸಾಲು ಕೆಳಕ್ಕೆ ಇಳಿಯುತ್ತಿರುತ್ತದೆ'. ಈ ವರ್ಣನೆ ಪ್ರಾಚೀನ ಕಾಲದಲ್ಲಿ ಕರ್ನಾಟಕದಲ್ಲಿ 'ಪರ್ಷಿಯನ್ ವೀಲ್' ಸಹ ಬಳಕೆಯಲ್ಲಿತ್ತೆಂಬುದನ್ನು ಸೂಚಿಸುತ್ತದೆ. (ಎಸ್.ಜಿ.)

ಕೆರೆಕಟ್ಟೆಗಳನ್ನು ಧರ್ಮಕಾರ್ಯಗಳೆಂದೂ ಸಮಾಜದ ಆರ್ಥಿಕ ವ್ಯವಸ್ಥೆಯ ಉನ್ನತಿಗೆ ಸಾಧನವೆಂದೂ ಪರಿಗಣಿಸಿ ಶ್ರೀಮಂತರೂ ರಾಜರೂ ರಾಜ್ಯಾಧಿಕಾರಿಗಳೂ ಕಟ್ಟಿಸುತ್ತಿದ್ದ ಪ್ರವೃತ್ತಿ ಇತ್ತೀಚಿನವರೆಗೂ ನಡೆದುಬಂದಿತ್ತು. ವಿಜಯನಗರ ಕಾಲದಲ್ಲಿ ತುಂಗಭದ್ರಾ ನದಿಗೆ ಕಟ್ಟಿದ್ದ ಸುಮಾರು 8 ಅಣೆಕಟ್ಟೆಗಳೂ (ಈಗ 11,000 ಹೆಕ್ಟೇರಿಗೆ ನೀರುಣಿಸುತ್ತಿವೆ) ಮೈಸೂರು ಅರಸರ ಕಾಲದಲ್ಲಿ ಕಾವೇರಿ ನದಿಗೆ ಕಟ್ಟಿದ 6 ಅಣೆಕಟ್ಟುಗಳೂ ಇವೆ. ಟಿಪ್ಪುಸುಲ್ತಾನ ಸಹ ಕಾವೇರಿಗೆ ಇಂದಿನ ಕೃಷ್ಣರಾಜಸಾಗರ ಇರುವ ಬಳಿ ಒಂದು ಕಟ್ಟೆಯನ್ನು ಕಟ್ಟಲು ಉದ್ದೇಶಿಸಿದ್ದಕ್ಕೆ ಶಾಸನ ದಾಖಲೆ ಇದೆ. ಇದೇ ರೀತಿ ಆದಿಲ್‌ಶಾಹೀ ಅರಸರೂ ಅನೇಕ ಕೆರೆಗಳನ್ನು ನಿರ್ಮಾಣ ಮಾಡಿದ್ದಾರೆ. ಹೀಗೆ ಕಾಲಾನುಕಾಲದಿಂದ ಬೆಳೆದುಬಂದ ನೀರಾವರಿ ಕಾರ್ಯಗಳಿಂದ ಇಂದು ನಾಡಿನ ನೀರಾವರಿ ಸೌಕರ್ಯ ಸಾಕಷ್ಟುಮಟ್ಟಿಗೆ ಹರಡಿದೆ. ಇವೆಲ್ಲಾ ಇಂದಿನ ಬೃಹತ್ ಕಟ್ಟೆಗಳಿಗೆ ಹೋಲಿಸಿದರೆ ಬಹುತೇಕ ಚಿಕ್ಕ ನೀರಾವರಿ ಕಾರ್ಯಗಳು. ಆದರೂ ಈ ಪ್ರಾಚೀನಕಾಲದ ಕೆರೆಕಟ್ಟೆಗಳು ನಾಡಿನಲ್ಲಿ ಇಂದಿನ ನೀರಾವರಿಯಾಗುವ ಕೃಷಿಭೂಮಿಯಲ್ಲಿ ಸುಮಾರು ಕಾಲು ಭಾಗಕ್ಕಾದರೂ ನೀರೊದಗಿಸುತ್ತಿವೆ. ಶಿಥಿಲವಾಗಿರುವ ಅಥವಾ ಪೂರ್ಣವಾಗಿಯೋ ಅಥವಾ ಭಾಗಶಃವಾಗಿಯೋ ಹೂತುಬಿದ್ದಿರುವ ಅನೇಕ ಕೆರೆಗಳ ದುರಸ್ತಿಯಿಂದ ಇನ್ನೂ ಹೆಚ್ಚು ಉಪಯೋಗ ಪಡೆಯಬಹುದಾಗಿದೆ.

ಸು.19ನೆಯ ಶತಮಾನದಾರಭ್ಯ ಬ್ರಿಟಿಷರ ಆಡಳಿತ ವ್ಯವಸ್ಥೆ ರೂಢಿಗೆ ಬಂದ ಕಾಲದಿಂದಲೂ ನೀರಾವರಿ ಕಾರ್ಯಗಳ ಬಗ್ಗೆ ಹೊಸ ರೂಢಿಗಳು ಬೆಳೆಯುತ್ತಿವೆ. ನಾಡಿನ ಜಲಸಂಪತ್ತು ಸಾರ್ವಜನಿಕ ಸಂಪತ್ತೆಂಬ ಭಾವನೆ ಮತ್ತು ಬದಲಾದ ಆರ್ಥಿಕ ಸ್ಥಿತಿಗಳಿಂದಾಗಿ ಎಲ್ಲೋ ಕೆಲವು ಬಾವಿಕುಂಟೆಗಳನ್ನು ಬಿಟ್ಟು ನೀರಾವರಿಗೆ ಉಪಯುಕ್ತವಾದ ಕೆರೆಕಟ್ಟೆಗಳನ್ನು ಕಟ್ಟುವ ಕಾರ್ಯ ಸರ್ಕಾರದ ಹೊಣೆಯಾಗಿದೆ. ಇತ್ತೀಚಿನ ತಾಂತ್ರಿಕ ಮುನ್ನಡೆ ಹೊಸ ಹೊಸ ವಿಧಾನಗಳನ್ನು ರೂಢಿಸುತ್ತಿದೆ. ನಾಡಿನ ಜಲಸಂಪತ್ತು ಮತ್ತು ಆವಶ್ಯಕತೆಯನ್ನು ಸರಿಯಾಗಿ ಎಣಿಸಿ ಯೋಜಿತವಾದ ರೀತಿಯಲ್ಲಿ ನೀರಾವರಿಯನ್ನು ವ್ಯವಸ್ಥೆಗೊಳಿಸುವ ಕಾರ್ಯ ನಡೆಯುತ್ತಿದೆ. ಬೃಹತ್ ನೀರಾವರಿ ಯೋಜನೆಗಳು ಕಾರ್ಯಗತವಾಗುತ್ತಿವೆ.

ಸ್ವಾತಂತ್ರ್ಯಪೂರ್ವದಲ್ಲಿ ನೀರಾವರಿಯ ಪ್ರಗತಿ ಮಂದಗತಿಯಲ್ಲೇ ಇತ್ತೆನ್ನಬಹುದು. ಹಿರಿಯೂರಿನ ಬಳಿಯ ವಾಣಿವಿಲಾಸಸಾಗರ (1907ರಲ್ಲಿ ಪೂರ್ಣಗೊಂಡ ವೇದಾವತಿ ನದಿಗೆ ಅಡ್ಡಲಾಗಿ 408 ಮೀ ಉದ್ದ 43 ಮೀ ಎತ್ತರದ ಕಟ್ಟೆಯನ್ನು ಕಟ್ಟಿ ಚಿತ್ರದುರ್ಗ ಜಿಲ್ಲೆಯ 2,621 ಮೀ ಹೆಕ್ಟೇರುಗಳಿಗೆ ನೀರಾವರಿ ಒದಗಿಸಿದ್ದು-ವೆಚ್ಚ 45 ಲಕ್ಷ ರೂ.) ಮೈಸೂರಿನ ಬಳಿಯ ಕೃಷ್ಣರಾಜಸಾಗರ (1932ರಲ್ಲಿ ಪೂರ್ಣಗೊಂಡ ಕಾವೇರಿಗೆ ಅಡ್ಡಲಾಗಿ 2,621 ಮೀ ಉದ್ದ 41 ಮೀ ಎತ್ತರದ ಕನ್ನಂಬಾಡಿ ಕಟ್ಟೆಯಿಂದ ಮಂಡ್ಯ ಮತ್ತು ಮೈಸೂರು ಜಿಲ್ಲೆಗಳ 59,580 ಹೆಕ್ಟೇರುಗಳಿಗೆ ನೀರಾವರಿ ವೆಚ್ಚ 5.5 ಕೋಟಿ ರೂ.) ಈ ದಿಶೆಯಲ್ಲಿ ಪ್ರಮುಖವಾದ ಮೈಲಿಗಲ್ಲುಗಳು. ಇನ್ನೂ ಇಂತಹವೆಂದರೆ ಭದ್ರಾ ಅಣೆಕಟ್ಟು (1927ರಲ್ಲಿ ಭದ್ರಾ ನದಿಗೆ 250 ಮೀ ಉದ್ದ 3.7 ಮೀ ಎತ್ತರ, ಶಿವಮೊಗ್ಗ ಜಿಲ್ಲೆಯ 4,250 ಹೆಕ್ಟೇರುಗಳು), ಕುಮುದ್ವತಿ ನದಿಯ ಅಂಜನಾಪುರ ಜಲಾಶಯ (1936ರಲ್ಲಿ 1,585 ಮೀ ಉದ್ದ, 20.7 ಮೀ ಎತ್ತರದ ಮಣ್ಣಿನ ಏರಿ - ಶಿವಮೊಗ್ಗ ಜಿಲ್ಲೆಯ 6,263 ಹೆಕ್ಟೇರುಗಳು), ಮಾರ್ಕೋನಹಳ್ಳಿ ಜಲಾಶಯ (1939ರಲ್ಲಿ, ಶಿಂಷಾ ನದಿಗೆ 1,609 ಮೀ ಉದ್ದ 22.2 ಮೀ ಎತ್ತರ, ತುಮಕೂರು ಜಿಲ್ಲೆಯ 6,073 ಹೆಕ್ಟೇರುಗಳು), ಕಣ್ವ ಜಲಾಶಯ (1946 ರಲ್ಲಿ ಕಣ್ವ ನದಿಗೆ 1,431 ಮೀ ಉದ್ದ 18 ಮೀ ಎತ್ತರ, ಬೆಂಗಳೂರು ಜಿಲ್ಲೆಯ 2,025 ಹೆಕ್ಟೇರುಗಳು, ಬೈರಮಂಗಲ ಜಲಾಶಯ) 1945ರಲ್ಲಿ 1,619 ಹೆಕ್ಟೇರುಗಳು) ಹಾಗೆಯೇ ಗೋಕಾಕ (5,749 ಹೆಕ್ಟೇರುಗಳು) ಮತ್ತು ಧರ್ಮಾ (3,956 ಹೆಕ್ಟೇರು) ನಾಲಾಜಾಲಗಳು.

ಪಂಚವಾರ್ಷಿಕ ಯೋಜನೆಗಳ ಆರಂಭದಿಂದ ನೀರಾವರಿ ಕಾಮಗಾರಿಗಳನ್ನು ಹೆಚ್ಚು ಉತ್ಸಾಹದಿಂದ ಕಾರ್ಯಗತಗೊಳಿಸಲಾಯಿತು. ಹಲವಾರು ಸಣ್ಣ, ಮಧ್ಯಮ ಹಾಗೂ ಭಾರಿ ಪ್ರಮಾಣದ ಕಾರ್ಯಗಳು ಪ್ರಾರಂಭಿಸಲ್ಪಟ್ಟವು.

ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ಕಾರ್ಯಗತವಾದ ಮುಖ್ಯ ನೀರಾವರಿ ಕಾಮಗಾರಿಗಳನ್ನು ಕೆಳಗೆ ಪಟ್ಟಿ ಮಾಡಲಾಗಿದೆ.

**ಭದ್ರಾ ಜಲಾಶಯ:** 1947ರಲ್ಲೇ ಪ್ರಾರಂಭವಾಗಿ ಪೂರ್ಣಗೊಂಡಿರುವ ಈ ಜಲಾಶಯ ಲಕ್ಕವಳ್ಳಿಯ ಬಳಿ ಭದ್ರಾ ನದಿಗೆ ಅಡ್ಡಲಾಗಿ 440 ಮೀ ಉದ್ದ ಹಾಗೂ 59 ಮೀ ಎತ್ತರದ ಕಲ್ಲುಗಾರೆ ಕೆಲಸ ಮತ್ತು 1,115 ಮೀ ಉದ್ದದ ಮಣ್ಣಿನ ಏರಿಗಳಿಂದ ನಿರ್ಮಿತವಾಗಿದೆ. ಅದರ ಎಡ, ಬಲ ಎರಡೂ ಕಾಲುವೆಗಳಿಂದ ಚಿಕ್ಕಮಗಳೂರು, ಶಿವಮೊಗ್ಗ, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿನ ಸುಮಾರು 1 ಲಕ್ಷ ಹೆಕ್ಟೇರುಗಳನ್ನು ನೀರಾವರಿಗೆ ತಂದಿರುವುದರೊಡನೆ 25,000 ಕಿವಾ ವಿದ್ಯುತ್ತನ್ನೂ ಉತ್ಪತ್ತಿಮಾಡುತ್ತದೆ. ಇದಕ್ಕೆ ತಗುಲಿರುವ ವೆಚ್ಚ ಸುಮಾರು 40 ಕೋಟಿ ರೂ.

**ತುಂಗಾ ಅಣೆಕಟ್ಟು:** ಶಿವಮೊಗ್ಗಕ್ಕೆ ಸುಮಾರು 11 ಕಿಮೀ ದೂರದಲ್ಲಿ ತುಂಗಾನದಿಗೆ ಅಡ್ಡಲಾಗಿ ಕಟ್ಟಿರುವ 542.5 ಮೀ ಉದ್ದ 18 ಮೀ ಎತ್ತರವಿರುವ ಅಣೆಕಟ್ಟು ಶಿವಮೊಗ್ಗ ಜಿಲ್ಲೆಯ 8,700 ಹೆಕ್ಟೇರುಗಳು ನೀರಾವರಿಯಾಗುತ್ತಿದೆ. ಇದರ ಒಟ್ಟು ವೆಚ್ಚ 3.56 ಕೋಟಿ ರೂ.

**ನುಗು ಜಲಾಶಯ:** ಕಾವೇರಿಯ ಉಪನದಿ ಕಪಿಲಾಗೆ ಬಂದು ಸೇರುವ ನುಗು ಹೊಳೆಗೆ ಹೆಗ್ಗಡದೇವನಕೋಟೆ ತಾಲ್ಲೂಕು ಬೀರವಾಳದ ಬಳಿ 616 ಮೀ ಉದ್ದ 41 ಮೀ ಎತ್ತರದ ಕಲ್ಲುಗಾರೆಯ ಕಟ್ಟೆಯನ್ನು ಕಟ್ಟಿ ಮೈಸೂರು ಜಿಲ್ಲೆಯ 8,000 ಹೆಕ್ಟೇರ್ ಭೂಮಿಯನ್ನು ನೀರಾವರಿಗೆ ತರಲಾಗಿದೆ. ಇದಕ್ಕೆ ಆಗಿರುವ ವೆಚ್ಚ 3.11 ಕೋಟಿ ರೂ.

**ತುಂಗಾಭದ್ರಾ ಜಲಾಶಯ:** ಇದು ಹಿಂದಿನ ಹೈದರಾಬಾದ್ ಮತ್ತು ಮದರಾಸು ರಾಜ್ಯಗಳು ಒಟ್ಟಾಗಿ ಕೈಗೊಂಡ ಒಂದು ಬೃಹತ್ ಯೋಜನೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆಯ ಬಳಿ ತುಂಗಭದ್ರಾ ನದಿಗೆ ಅಡ್ಡಲಾಗಿ 2440 ಮೀ ಉದ್ದ 49.4 ಮೀ ಎತ್ತರ ಉಳ್ಳ ಅಡ್ಡಗಟ್ಟೆ. ಇದರ ಕೆಲಸವನ್ನು 1945ರಲ್ಲೇ ಪ್ರಾರಂಭಿಸಲಾಗಿದ್ದು 1962ರಲ್ಲಿ ಮುಗಿಯಿತು.

ಇದರ ಎಡದಂಡೆ ನಾಲೆ ರಾಯಚೂರು ಜಿಲ್ಲೆಯಲ್ಲಿನ 2,32,000 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಬಲ ಒದಗಿಸಿದರೆ, ದಂಡೆಯ ಕೆಳಮಟ್ಟದ ನಾಲೆ ಬಳ್ಳಾರಿ ಜಿಲ್ಲೆಯಲ್ಲಿ 37,000 ಹೆಕ್ಟೇರ್‌ಗಳನ್ನೂ ಮೇಲುಮಟ್ಟದ ನಾಲೆ ಸುಮಾರು 80,000 ಹೆಕ್ಟೇರ್‌ಗಳನ್ನೂ ನೀರಾವರಿಗೆ ತರುತ್ತದೆ. ಬಲದಂಡೆಯ ಈ ಎರಡೂ ನಾಲೆಗಳು ಕರ್ನಾಟಕದ ಗಡಿಯನ್ನು ದಾಟಿ ಆಂಧ್ರ ಪ್ರದೇಶದಲ್ಲೂ ಸೇವಾನಿರತವಾಗಿರುತ್ತವೆ ಎಂಬುದು ಇಲ್ಲಿನ ವಿಶೇಷ. ನೀರಾವರಿಯೊಡನೆ ವಿದ್ಯುದುತ್ಪಾದನೆಯೂ ಸೇರಿರುವ ಈ ಯೋಜನೆಯ ಒಟ್ಟು ವೆಚ್ಚ 158 ಕೋಟಿ ರೂ.

**ರಾಜುಲಬಂಡ ಅಣೆಕಟ್ಟು:** ತುಂಗಭದ್ರಾ ಜಲಾಶಯಕ್ಕೆ 128 ಕಿಮೀ ಕೆಳಗೆ ಅದೇ ನದಿಗೆ ಅಡ್ಡಲಾಗಿ ರಾಜುಲಬಂಡ ಎಂಬಲ್ಲಿ 820 ಮೀ ಉದ್ದ ಹಾಗೂ 9.5 ಮೀ ಎತ್ತರವಿರುವ ಒಂದು ಅಣೆಕಟ್ಟೆಯನ್ನು ಕಟ್ಟಿ ಎಡದಂಡೆಯಲ್ಲಿ 117 ಕಿಮೀ ಉದ್ದದ ನಾಲೆಯನ್ನು ತೆಗೆಯಲಾಗಿದೆ. ಇದರ ಮೊದಲಿನ 48 ಕಿಮೀ ಕರ್ನಾಟಕದ ರಾಯಚೂರು ಜಿಲ್ಲೆಯಲ್ಲಿದ್ದು ಮುಂದಿನದು ಆಂಧ್ರದಲ್ಲಿದೆ. 2.51 ಕೋಟಿ ರೂ. ವೆಚ್ಚದ ಈ ಯೋಜನೆಯಿಂದ ನಮ್ಮಲ್ಲಿ 2,970 ಹೆಕ್ಟೇರ್ ಪ್ರದೇಶ ನೀರಾವರಿಗೆ ಬಂದಿದೆ. ಇದು ಸಹ ಹಿಂದಿನ ಹೈದರಾಬಾದ್ ಸರ್ಕಾರದಿಂದ 1947ರಲ್ಲಿ ಪ್ರಾರಂಭಿಸಲ್ಪಟ್ಟಿದ್ದುದು (4.33 ಕೋಟಿ ರೂ. ಒಟ್ಟು ವೆಚ್ಚ).

**ಚಿಕ್ಕಹಗರಿ ಕಟ್ಟೆ:** ತುಂಗಭದ್ರಾಕ್ಕೆ ಒಂದು ಉಪನದಿಯಾದ ಚಿಕ್ಕಹಗರಿ ಹೊಳೆಗೆ ಮಾನ್ವಿ ಗ್ರಾಮದ ಬಳಿ 1,783 ಮೀ ಉದ್ದವೂ 15.2 ಮೀ ಎತ್ತರವೂ ಉಳ್ಳ ಮಣ್ಣಿನ ಏರಿಯನ್ನು ಕಟ್ಟಿ ಬಳ್ಳಾರಿ ಜಿಲ್ಲೆಯಲ್ಲಿ ಸುಮಾರು 2,950 ಹೆಕ್ಟೇರ್ ಪ್ರದೇಶವನ್ನು 2.96 ಕೋಟಿ ರೂ. ವೆಚ್ಚದಲ್ಲಿ ನೀರಾವರಿಗೆ ತರಲಾಗಿದೆ.

**ಕನಕನಾಲೆ ಕಟ್ಟೆ:** ರಾಯಚೂರು ಜಿಲ್ಲೆಯ ಕುಷ್ಟಗಿ ತಾಲ್ಲೂಕು ಕಳ್ಳರ ಹಟ್ಟಿಯ ಬಳಿ ಕನಕನಾಲೆ ಹೊಳೆಗೆ 781 ಮೀ ಉದ್ದ 17.7 ಮೀ ಎತ್ತರದ ಮಣ್ಣು ಏರಿಯನ್ನು ಹಾಕಿ ಸಿಂಧನೂರು ತಾಲ್ಲೂಕಿನ 2,040 ಹೆಕ್ಟೇರ್ ನೀರಾವರಿಗೆ ತರಲು 97 ಲಕ್ಷ ರೂ. ಖರ್ಚು ಮಾಡಿದೆ.

**ಜಂಬದಹಳ್ಳ ಕಟ್ಟೆ:** ಚಿಕ್ಕಮಗಳೂರು ಜಿಲ್ಲೆ ತರೀಕೆರೆ ತಾಲ್ಲೂಕು ದುಗ್ಗಲಾಪುರದ ಬಳಿ ಜಂಬದ ಹಳ್ಳಕ್ಕೆ ಅಡ್ಡಲಾಗಿ ಕಟ್ಟಿದೆ. ಇಲ್ಲಿನ ಮಣ್ಣಿನ ಏರಿ ಅತ್ಯಂತ ಆಳದ ತಳಪಾಯದಿಂದ 31.7 ಮೀ ಎತ್ತರವಿರುವುದು ಉಲ್ಲೇಖನೀಯ. 838 ಮೀ ಉದ್ದವಿದ್ದು 1.18 ಕೋಟಿ ರೂ ಖರ್ಚಿನಲ್ಲಿ ಮಾಡಿರುವ ಈ ಯೋಜನೆಯಿಂದ 1,520 ಹೆಕ್ಟೇರ್ ಭೂಮಿಗೆ ನೀರಾವರಿ ಸೌಲಭ್ಯ ಒದಗಿಸಲ್ಪಟ್ಟಿದೆ.

ಈ ಕೆಳಗಿನವು ಕೆಲವು ಮಧ್ಯಮ ಪ್ರಮಾಣದ ಪ್ರಮುಖ ಕಾಮಗಾರಿಗಳು.

**ಚಿಕ್ಕಹೊಳೆ ಕಟ್ಟೆ:** ಚಾಮರಾಜನಗರ ತಾಲ್ಲೂಕಿನಲ್ಲಿ ಸುವರ್ಣಾವತಿಯ ಉಪನದಿಯಾದ ಚಿಕ್ಕಹೊಳೆಗೆ 674.5 ಮೀ ಉದ್ದ 25 ಮೀ ಎತ್ತರದ ಕಟ್ಟೆಯಿಂದ ಸುಮಾರು 90 ಲಕ್ಷ ರೂ. ವೆಚ್ಚದಲ್ಲಿ 1,300 ಹೆಕ್ಟೇರ್‌ಗೆ ನೀರಾವರಿ ಒದಗಿಸಿದೆ.

**ಹೆಬ್ಬಳ್ಳ ಕಟ್ಟೆ:** ಹೆಗ್ಗಡದೇವನಕೋಟೆ ತಾಲ್ಲೂಕಿನಲ್ಲಿ ತಾರಕಾನದಿಯ ಉಪ ನದಿಯಾದ ಹೆಬ್ಬಳ್ಳಕ್ಕೆ ಕಟ್ಟಲಾಗಿದೆ. 863 ಮೀ ಉದ್ದ 19.5 ಮೀ ಎತ್ತರದ ಏರಿ ಇದೆ. 58 ಲಕ್ಷ ರೂ. ವೆಚ್ಚ, 1,200 ಹೆಕ್ಟೇರ್‌ಗೆ ನೀರಾವರಿ ಒದಗುತ್ತದೆ.

**ಮಂಗಳಾ ಜಲಾಶಯ:** ಕುಣಿಗಲು ತಾಲ್ಲೂಕಿನಲ್ಲೂ ಶಿಂಷಾಕ್ಕೆ ಉಪನದಿಯಾದ ನಾಗಿನಿಗೆ ಅಡ್ಡಲಾಗಿ 701 ಮೀ ಉದ್ದ 13.7 ಮೀ ಎತ್ತರದ ಏರಿಯಿಂದ ನಿರ್ಮಿಸಿದೆ. 39 ಲಕ್ಷ ರೂ. ವೆಚ್ಚ 800 ಹೆಕ್ಟೇರ್‌ಗೆ ನೀರಿನ ಸೌಲಭ್ಯ.

**ಸಾಲೂರುಹಳ್ಳ ಕಟ್ಟೆ:** ಶಿವಮೊಗ್ಗ ಜಿಲ್ಲೆಯಲ್ಲಿ ಕುಮುದ್ವತಿಗೆ ಸೇರುವ ಸಾಲೂರು ಹಳ್ಳಕ್ಕೆ ಅಂಬಿಗೋಳ ಬಳಿಯಲ್ಲಿ ಇದೆ. 683 ಮೀ ಉದ್ದ 20.7 ಮೀ ಎತ್ತರ 1.1 ಕೋಟಿ ರೂ. ವೆಚ್ಚ 2,920 ಹೆಕ್ಟೇರ್ ಜಮೀನಿಗೆ ನೀರಾವರಿ.

**ಹತ್ತಿಕೋಣಿ ಕಟ್ಟೆ:** ಯಾದಗಿರಿ ತಾಲ್ಲೂಕಿನಲ್ಲಿ ಭೀಮಾದ ಉಪನದಿಯಾದ ಹತ್ತಿಕೋಣೆ ಹೊಳೆಗೆ 923 ಮೀ ಉದ್ದ 22 ಮೀ ಎತ್ತರದ ಏರಿ. 58 ಲಕ್ಷ ರೂ. ವೆಚ್ಚ. 1920 ಹೆಕ್ಟೇರಿಗೆ ನೀರಾವರಿ.

**ಅರೆಶಂಕರ ಕಟ್ಟೆ:** ಬಿಜಾಪುರ ಜಿಲ್ಲೆಯ ಅರೆಶಂಕರ ಹೊಳೆಗೆ ಒಟ್ಟು 1,189 ಮೀ ಉದ್ದ 4.3 ಮೀ ಎತ್ತರವುಳ್ಳ ಕಟ್ಟೆಯನ್ನು ಕಟ್ಟಿ 22 ಲಕ್ಷ ರೂ. ವೆಚ್ಚದಲ್ಲಿ 1,230 ಹೆಕ್ಟೇರ್‌ಗೆ ನೀರಾವರಿ ಒದಗಿಸಿದೆ.

**ಚಿತವಾಡಿಗಿ ಯೋಜನೆ:** ಹುನಗುಂದ ತಾಲ್ಲೂಕಿನಲ್ಲಿ ಕಡ್ಲಪ್ಪನ ಹೊಳೆಗೆ ಅಡ್ಡಲಾಗಿ 1,533 ಮೀ ಉದ್ದ 11.9 ಮೀ ಎತ್ತರದ ಏರಿಯಿಂದ ನಿರ್ಮಿಸಿದ ಚಿತವಾಡಿಗಿ ನೀರಾವರಿ ಯೋಜನೆಯಿಂದ 36 ಲಕ್ಷ ರೂ. ವೆಚ್ಚದಲ್ಲಿ 900 ಹೆಕ್ಟೇರ್‌ಗೆ ನೀರು ಒದಗುತ್ತದೆ.

**ರಾಮನಹಳ್ಳಿ ಕೆರೆ:** ಸಿಂದಗಿ ತಾಲ್ಲೂಕಿನಲ್ಲಿ ನವಲಿ ಹೊಳೆಗೆ ಅಡ್ಡಲಾಗಿ 1637 ಮೀ ಉದ್ದ 11.9 ಮೀ ಎತ್ತರದ ಏರಿಯಿಂದ ರಾಮನಹಳ್ಳಿ ಕೆರೆಯನ್ನು ನಿರ್ಮಿಸಿ 41 ಲಕ್ಷ ರೂ. ಗಳ ವೆಚ್ಚದಲ್ಲಿ 1920 ಹೆಕ್ಟೇರ್‌ಗೆ ನೀರಾವರಿ ಒದಗಿಸುತ್ತದೆ.

**ಕಳಸಕೊಪ್ಪ ಕೆರೆ:** ಬಾಗಲಕೋಟೆ ತಾಲ್ಲೂಕಿನಲ್ಲಿ 279 ಮೀ ಉದ್ದ 15.9 ಮೀ ಎತ್ತರದ ಏರಿ 21.5 ಲಕ್ಷ ರೂ. ಖರ್ಚು. 1130 ಹೆಕ್ಟೇರ್‌ಗೆ ನೀರಾವರಿ ಸೌಲಭ್ಯ.

**ಕೊಳಚಿ (ಮಲಪ್ರಭಾ) ಕಟ್ಟೆ:** ರಾಮದುರ್ಗ ತಾಲ್ಲೂಕಿನ ಕೊಳಚಿ ಬಳಿ ಮಲಪ್ರಭಾ ನದಿಗೆ 211.8 ಮೀ ಉದ್ದ 5.8 ಮೀ ಎತ್ತರದ ಅಣೆ, ಬೆಳಗಾಂವಿ, ಧಾರವಾಡ, ಜಿಲ್ಲೆಗಳ 1260 ಹೆಕ್ಟೇರ್‌ಗೆ ನೀರಾವರಿ, 47 ಲಕ್ಷ ರೂ.ಖರ್ಚು.

**ಹರಿನಾಲಾ ಕಟ್ಟೆ:** ಬೈಲಹೊಂಗಲ ತಾಲ್ಲೂಕಿನಲ್ಲಿ ಮಲಪ್ರಭಾದ ಉಪನದಿಯಾದ ಹರಿನಾಲಾಕ್ಕೆ 2,.271 ಮೀ ಉದ್ದ 20.8 ಮೀ ಎತ್ತರದ ಕಟ್ಟೆ; 83 ಲಕ್ಷ ರೂ. ವೆಚ್ಚ 4,300 ಹೆಕ್ಟೇರ್‌ಗೆ ನೀರಾವರಿ.

**ಧರ್ಮಾ ಜಲಾಶಯ:** ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡು ತಾಲ್ಲೂಕಿನಲ್ಲಿ 4,300' ಉದ್ದ 66' ಎತ್ತರದ ಮಣ್ಣಿನ ಏರಿ, ಧಾರವಾಡ ಜಿಲ್ಲೆಯ 1600 ಹೆಕ್ಟೇರ್ ಹೊಸ ಅಚ್ಚುಕಟ್ಟಿಗೆ ನೀರು ಒದಗಿಸುವುದಲ್ಲದೆ, ಹಳೆಯ ಧರ್ಮಾ ನಾಲೆಗಳ 4,750 ಹೆಕ್ಟೇರ್‌ಗೆ ನೀರಾವರಿಯನ್ನು ಸುಭದ್ರವಾಗಿಸುತ್ತದೆ. 1.41 ಕೋಟಿ ರೂ. ವೆಚ್ಚ.

**ಕ್ಯಾದಗಿ ಕಟ್ಟೆ:** ಬಿಜಾಪುರ ಜಿಲ್ಲೆಯ ನಾಗಠಾಣ ಹಳ್ಳಿಯ ಬಳಿ ಕ್ಯಾದಗಿ, ಹೊಳೆಗೆ ಅಡ್ಡಲಾಗಿ 3700' ಉದ್ದ 35' ಎತ್ತರದ ಏರಿ. 17.8 ಲಕ್ಷ ರೂ. ವೆಚ್ಚ. 600 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ. ಹೇಮಾವತಿಗೆ ಉಪನದಿಯಾದ ಯುಗಚಿ ನದಿಗೆ ಬೇಲೂರು ಬಳಿ ಅಣೆಕಟ್ಟೆ ನಿರ್ಮಿತವಾಗಿದೆ.

ಗುಂಡಾಲು ಯೋಜನೆ: ಕೊಳ್ಳೇಗಾಲ ತಾಲ್ಲೂಕಿನಲ್ಲಿ ಗುಂಡಾಲು ಹೊಳೆಗ 3.985' ಉದ್ದ 101' ಎತ್ತರದ ಮಣ್ಣಿನ ಏರಿಯನ್ನು ಕಟ್ಟಿ 3 ಕೋಟಿ ರೂ ವೆಚ್ಚದಲ್ಲಿ 6,040 ಹೆಕ್ಟೇರಿಗೆ ನೀರಾವರಿ ಒದಗಿಸುವುದು.

ನಾರಿಹಳ್ಳ ಯೋಜನೆ: ಬಳ್ಳಾರಿ ಜಿಲ್ಲೆಯ ನಾರಿಹಳ್ಳಕ್ಕೆ 908' ಉದ್ದದ ಏರಿಯನ್ನು ಹಾಕಿ 2 ಕೋಟಿ ರೂ ವೆಚ್ಚದಲ್ಲಿ 1400 ಹೆಕ್ಟೇರಿಗೆ ನೀರೊದಗಿಸುವುದು.

ಚಂದ್ರಂಪಳ್ಳಿ ಯೋಜನೆ: ಚಂಚೋಳಿ ತಾಲ್ಲೂಕಿನ ಚಂದ್ರಂಪಳ್ಳಿಯಲ್ಲಿ ಭೀಮಾನಪನದಿಯಾದ ಸರನಾಲಾಕ್ಕೆ 2250' ಉದ್ದ 90' ಎತ್ತರದ ಮಣ್ಣಿನ ಏರು ಅಂದಾಜು 1.2 ಕೋಟಿ ರೂ ವೆಚ್ಚದಲ್ಲಿ 4,200 ಹೆಕ್ಟೇರಿಗೆ ನೀರಾವರಿ.

ತರುವಾಯ ಕೈಗೊಂಡ ಇನ್ನು ಕೆಲವು ಯೋಜನೆಗಳಿದ್ದು ಅವನ್ನು ಮುಂದೆ ಪರಿಶಿಷ್ಟದಲ್ಲಿ ಕೊಡಲಾಗಿದೆ. ಕೆಲವು ಭಾರಿ ಪ್ರಮಾಣದ ನೀರಾವರಿ ಯೋಜನೆಯನ್ನು ಸ್ವಾತಂತ್ರ್ಯಾನಂತರ ಕೈಗೊಂಡು ಪೂರ್ಣಗೊಳಿಸಲಾಗಿದೆ. ಅವುಗಳಲ್ಲಿ ಕಾವೇರಿ ಜಲಾನಯನ ಪ್ರದೇಶದ ಕಪಿಲಾ, ಹಾರಂಗಿ, ಹೇಮಾವತಿ ಜಲಾಶಯುಗಳು ಸೇರಿವೆ. ಕೃಷ್ಣಾ ಜಲಾನಯನ ಪ್ರದೇಶದಲ್ಲಿ ಘಟಪ್ರಭಾ, ಮಲಪ್ರಭಾ ಯೋಜನೆಗಳು ಸೇರಿವೆ. ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ ಕೃಷ್ಣಾ ನದಿಗೆ ಅಡ್ಡಲಾಗಿ ಒಂದರ ಕೆಳಗೆ ಒಂದರಂತೆ ಬಿಜಾಪುರ ಜಿಲ್ಲೆಯ ಆಲಮಟ್ಟಿ ಮತ್ತು ಗುಲ್ಬರ್ಗ ಜಿಲ್ಲೆಯ ನಾರಾಯಣಪುರ ಎಂಬಲ್ಲಿ ಎರಡು ಜಲಾಶಯಗಳನ್ನು ನಿರ್ಮಿಸಲಾಗಿದೆ. ಮೊದಲನೆಯದು 519 ಮೀ ಎತ್ತರವಿದ್ದು ಪೂರ್ಣಪ್ರಮಾಣದ ಜಲಾಶಯ ನಿರ್ಮಾಣವಾಗಿದೆ. ಬಿದರೆ ಜಿಲ್ಲೆಯಲ್ಲಿ ಮಾಂಜರಾ ನದಿಯ ಉಪನದಿಯಾದ ಕಾರಂಜಿ ಹೊಳೆಗೆ ಜಲಾಶಯ ನಿರ್ಮಿಸಿರುವುದಲ್ಲದೆ ಚುಲ್ಕಿ ನಾಲಾ ಯೋಜನೆ ಹಮ್ಮಿಕೊಳ್ಳಲಾಗಿದೆ.

ಪಶ್ಚಿಮದತ್ತ ಹರಿಯುವ ವರಾಹಿ ಮತ್ತು ಮಹದಾಯಿ ನದಿಗಳಿಗೆ ಜಲಾಶಯ ನಿರ್ಮಿಸಲಾಗುತ್ತಿದೆ. ಶರಾವತಿ ನದಿಗೆ ನಿರ್ಮಿಸಿರುವ ಲಿಂಗನಮಕ್ಕಿ ಜಲಾಶಯವು ವಿದ್ಯುತ್ ಉತ್ಪಾದನೆಗೆ ವರದಾನವಾಗಿದ್ದು ನೀರಾವರಿಗೂ ಸಹಕಾರಿಯಾಗಿದೆ.

**ಜಲಸಂಪತ್ತು:** ಕರ್ನಾಟಕ ರಾಜ್ಯವು ಭಾರತದ ಇತರ ಅನೇಕ ರಾಜ್ಯಗಳಂತೆ ಮಳೆಗಾಲದಲ್ಲಿ ನದಿ, ಹೊಳೆ, ಹಳ್ಳ, ತೊರೆಗಳಲ್ಲಿ ಹರಿಯುವ ನೀರನ್ನು ಸಂಗ್ರಹಿಸಿ ನೀರಾವರಿಗೆ ಅನುಕೂಲ ಕಲ್ಪಿಸಿಕೊಳ್ಳಬೇಕಾಗಿದೆ. ಬೇಸಿಗೆಯಲ್ಲಿ ಇವುಗಳಲ್ಲಿ ಹರಿಯುವ ನೀರಿನ ಪ್ರಮಾಣ ಅತ್ಯಲ್ಪವಾಗಿರುವುದರಿಂದ ಜಲಾಶಯ, ಅಣೆಕಟ್ಟು ಒಡ್ಡು ಮತ್ತು ಬ್ಯಾರೇಜ್‌ಗಳು ಹಾಗೂ ಕೆರೆಗಳು ಇವುಗಳಲ್ಲಿ ಸಂಗ್ರಹಿಸುವ ನೀರೇ ಇಲ್ಲಿನ ನೀರಾವರಿಗೆ ಆಧಾರ. ಆದ್ದರಿಂದ ರಾಜ್ಯ ಸರ್ಕಾರವು ನೀರಾವರಿಗೆ ವಿಶೇಷ ಆದ್ಯತೆ ನೀಡಿದ್ದು ನಾನಾ ಬಗೆಯ ನೀರಾವರಿ ಯೋಜನೆಗಳನ್ನು ಹಮ್ಮಿಕೊಂಡಿದೆ.

ಒಂದು ಅಂದಾಜಿನ ಪ್ರಕಾರ ರಾಜ್ಯದಲ್ಲಿ ನೀರಾವರಿಗೆ ಅಂತಿಮವಾಗಿ ಒಳಪಡಿಸಬಹುದಾದ ಪ್ರದೇಶ 55 ಲಕ್ಷ ಹೆಕ್ಟೇರ್‌ಗಳು. ಇದು ನಿವ್ವಳ ಬಿತ್ತನೆ ಪ್ರದೇಶದ ಶೇ. 51.4 ಭಾಗವಾಗುತ್ತದೆ. ಇದರಲ್ಲಿ ಭಾರಿ ಮತ್ತು ಮಧ್ಯಮ ನೀರಾವರಿ ಯೋಜನೆಗಳಿಂದ 35 ಲಕ್ಷ ಹೆಕ್ಟೇರ್‌ಗಳು, ಭೂಮೇಲ್ಮೈಯ ನೀರನ್ನು ಬಳಸುವುದರಿಂದ 10 ಲಕ್ಷ ಹೆಕ್ಟೇರ್‌ಗಳು ಮತ್ತು ಭೂಮಿಯ ಒಳಗಿನ ನೀರನ್ನು ಬಳಸುವುದರಿಂದ 10 ಲಕ್ಷ ಹೆಕ್ಟೇರ್‌ಗಳ ಪ್ರದೇಶವನ್ನು ನೀರಾವರಿಗೆ ಒಳಪಡಿಸುವ ಉದ್ದೇಶವಿದೆ. ಸರ್ಕಾರದ ಅಂಕಿ ಅಂಶಗಳ ಪ್ರಕಾರ ಕೃಷ್ಣಜಲಾನಯನ ಪ್ರದೇಶದಿಂದ 1,156 ಟಿ.ಎಂ.ಸಿ. ನೀರನ್ನು, ಕಾವೇರಿ ಜಲಾನಯನ ಪ್ರದೇಶದಿಂದ 408.62 ಟಿ.ಎಂ.ಸಿ. ನೀರನ್ನು ಮತ್ತು ಗೋದಾವರಿ ಜಲಾನಯನ ಪ್ರದೇಶದಿಂದ 22.37 ಟಿ.ಎಂ.ಸಿ. ನೀರನ್ನು ನೀರಾವರಿಗೆ ಬಳಸಿಕೊಳ್ಳುವ ಮಾಸ್ಟರ್ ಯೋಜನೆ ಸಿದ್ಧವಾಗಿದೆ. ಪಾಲಾರ್, ಪೆನ್ನಾರ್ ಮತ್ತು ಪಶ್ಚಿಮದತ್ತ ಹರಿಯುವ ನದಿಗಳಿಂದ 103.31 ಟಿ.ಎಂ.ಸಿ. ನೀರನ್ನು ಬಳಸಿಕೊಳ್ಳುವ ಯೋಜನೆಗಳು ರೂಪುಗೊಳ್ಳುತ್ತಿವೆ. ಹಾಲಿ 2000ದ ಮಾರ್ಚ್‌ವರೆಗೆ 1179.47 ಟಿ.ಎಂ.ಸಿ. ನೀರನ್ನು ಮಾತ್ರ ಬಳಸಿಕೊಳ್ಳಲು ಸಾಧ್ಯವಾಗಿದೆ. ಕಿರಿಯ, ಮಧ್ಯಮ ಮತ್ತು ಭಾರಿ ನೀರಾವರಿ ಯೋಜನೆಗಳಿಂದ 29.36 ಲಕ್ಷ ಹೆಕ್ಟೇರ್‌ಗಳನ್ನು ನೀರಾವರಿಗೆ ಒಳಪಡಿಸಲು ಸಾಧ್ಯವಾಗಿದೆ (2000-2001).

ಈ ಮೇಲೆ ಹೆಸರಿಸಿದ ಯೋಜನೆಗಳಲ್ಲದೆ ರಾಜ್ಯ ಸರ್ಕಾರವು ಇನ್ನೂ ಹತ್ತಾರು ನೀರಾವರಿ ಯೋಜನೆಗಳನ್ನು ಕಾರ್ಯಗತಗೊಳಿಸುತ್ತಿದೆ. ರಾಜ್ಯ ಸರ್ಕಾರವು ಕರ್ನಾಟಕ ನೀರಾವರಿ ನಿಗಮವನ್ನು ಸ್ಥಾಪಿಸಿದ್ದು ಅದು ಹತ್ತು ಹಲವು ಯೋಜನೆಗಳನ್ನು ಹಮ್ಮಿಕೊಂಡಿದೆ. ತುಂಗಾ ಮೇಲ್ದಂಡೆ ಯೋಜನೆ, ಹಿಪ್ಪರಗಿ ಯೋಜನೆ (ಬಾಗಲಕೋಟೆ ಜಿಲ್ಲೆ), ಹರಿನಾಲ ಯೋಜನೆ, ಗಂಡೋರಿನಾಲ ಯೋಜನೆ (ಗುಲ್ಬರ್ಗ ಜಿಲ್ಲೆ) ಘಟಪ್ರಭಾ ಯೋಜನೆಗಳು ಪ್ರಗತಿಯಲ್ಲಿವೆ. ಕೃಷ್ಣಾ ಮೇಲ್ದಂಡೆ ಯೋಜನೆ ಪೂರ್ಣಗೊಂಡಿದ್ದು ಆಲಮಟ್ಟಿ ಜಲಾಶಯದಲ್ಲಿ 519 ಮೀ.ಗೆ ನೀರು ಸಂಗ್ರಹವಾಗಿದೆ. 2002-03ರಲ್ಲಿ ರಾಜ್ಯವು ನೀರಾವರಿಗಾಗಿ 2790 ಕೋಟಿ ರೂ.ಗಳನ್ನು ನಿಗದಿಗೊಳಿಸಿದೆ. ಇದು ರಾಜ್ಯ ಬಜೆಟ್‌ನ ಯೋಜನಾ ವೆಚ್ಚದ ಶೇ. 32 ರಷ್ಟು ನೀರಾವರಿ ಸೌಲಭ್ಯಕ್ಕಾಗಿ ವಿಶ್ವಬ್ಯಾಂಕಿನಿಂದ 690 ಕೋಟಿ ರೂ.ಗಳ ನೆರವು ಪಡೆಯಲಾಗಿದೆ. 2000 ಕ್ಕೂ ಹೆಚ್ಚು ನೀರು ಬಳಕೆದಾರರ ಸಂಘಗಳು ಸ್ಥಾಪನೆಗೊಂಡಿವೆ. ಜಲಸಂಪನ್ಮೂಲ ಇಲಾಖೆಯು ಕಳೆದ ಮೂರು ವರ್ಷಗಳಲ್ಲಿ (1999-02) ನೀರಾವರಿಗಾಗಿ 6040 ಕೋಟಿ ರೂ.ಗಳನ್ನು ಖರ್ಚು ಮಾಡಿ ಒಟ್ಟು 6.64 ಲಕ್ಷ ಎಕರೆಗಳಿಗೆ ಹೊಸದಾಗಿ ನೀರಾವರಿ ಸೌಲಭ್ಯ ಕಲ್ಪಿಸಿದೆ. ಸಮಗ್ರ ನೀರಾವರಿ ವ್ಯವಸ್ಥೆಯನ್ನು ಪುನರ್‌ರೂಪಿಸುವ ಕಾರ್ಯ ನಡೆದಿದೆ. ಈ ಯೋಜನೆಯಂತೆ ಹಳೆಯ ಅಚ್ಚುಕಟ್ಟು ಪ್ರದೇಶದಲ್ಲಿ ನೀರಾವರಿ ಕಾಲುವೆಗಳ ವಿಸ್ತರಣೆ, ದುರಸ್ತಿ ಮತ್ತು ಆಧುನೀಕರಣ ಕಾರ್ಯಗಳು ಸೇರಿವೆ. ಕೆರೆಗಳ ಹೂಳೆತ್ತುವುದು, ಕೃಷಿ ಹೊಂಡಗಳನ್ನು ತೋಡುವುದು, ಹೊಸ ಕೆರೆಗಳನ್ನು ನಿರ್ಮಿಸುವುದು, ಎತ್ತು ನೀರಾವರಿ ಕಲ್ಪಿಸುವುದು ಸಣ್ಣ ನೀರಾವರಿಯ ಪ್ರಮುಖ ಕಾಮಗಾರಿಗಳಾಗಿವೆ.

**ಅಂತರ ಜಲಬಳಕೆ:** ದಿನೇ ದಿನೇ ನೀರಿನ ಅಗತ್ಯ ಹೆಚ್ಚುತ್ತಿದ್ದು ಅದಕ್ಕಾಗಿ ಅಂತರಜಲ ಮೂಲಗಳಿಂದ ನೀರನ್ನು ಸಂಗ್ರಹಿಸುವ ಅಗತ್ಯ ಬಿದ್ದಿದೆ. ಬಾವಿಗಳು ಕೊಳವೆ ಬಾವಿಗಳು ಈ ಅಂತರ ಜಲವನ್ನು ಹೊರತೆಗೆಯುವಲ್ಲಿ ಪ್ರಮುಖ ಸಾಧನಗಳಾಗಿವೆ. ನೀರಾವರಿಗಾಗಿ ಸಾಮಾನ್ಯವಾಗಿ ತೆಗೆದ ಬಾವಿಗಳು 10 ಮೀ ಅಗಲವಿದ್ದು (ಚೌಕ ಅಥವಾ ವೃತ್ತಾಕಾರ) 10 ಮೀ ಆಳಕ್ಕೆ ಹೋಗಿರುತ್ತವೆ. ಕೇವಲ ಅಗೆತದಿಂದ ಅಥವಾ ಕೆಲವು ವೇಳೆ ಮಾತ್ರ ಬಂಡೆಯನ್ನು ತೆಗೆಯಲು ಸಿಡಿಮದ್ದನ್ನು ಉಪಯೋಗಿಸಿ, ಇವನ್ನು ತೆಗೆಯಲಾಗುತ್ತದೆ. ಹೆಚ್ಚಿನ ಬಾವಿಗಳಿಗೆ ಅಸ್ತರಿ ಕಟ್ಟಡವೇನೂ ಇರುವುದಿಲ್ಲ. ತೆಗೆದ ಮಣ್ಣನ್ನು ಅಲ್ಲೇ ಸುತ್ತಲೂ ಹಾಕಿ ವ್ಯವಸಾಯದ ಭೂಮಿ ಅನುಪಯುಕ್ತವಾಗುತ್ತದೆ. ಇವನ್ನು ತೋಡಲು ಸುಮಾರು ದಿನ ಹಿಡಿಯುತ್ತದೆ. ಆದರೆ ವಿಶೇಷ ಸಲಕರಣೆಗಳ ಅಗತ್ಯವಿರುವುದಿಲ್ಲ. ಸಾಕಷ್ಟು ನೀರಿನ ಸಂಗ್ರಹವಿದ್ದು, ಎತ್ತಿಗೆ ಹೆಚ್ಚಾಗಿರುವ ಕಾರಣ ಸರಳವಾಗಿದ್ದ ಪಂಪುಗಳಿಂದ ನೀರನ್ನು ಎತ್ತಬಹುದು. ಆಳವಾದ ವಲಯದಲ್ಲಿನ ಸ್ಥಾಯಿ ಜಲಸಂಪತ್ತಿನ ಆಶ್ರಯವಿಲ್ಲದುದರಿಂದ ಅಭಾವ ಕಾಲದಲ್ಲಿ ಸಾಕಷ್ಟು ರಕ್ಷಣೆ ದೊರಕುವುದಿಲ್ಲ.

ನೀರಿನ ಸಂಗ್ರಹಣೆಗಾಗಿ ತೆಗೆದ ಬಾವಿಗಳನ್ನು ತೋಡಿ ಅದರೊಳಗೆ ಕೊಳವೆ ಬಾವಿಗಳನ್ನು ತೋಡುವ, ಹಾಗೂ ಹಾಲಿ ಇರುವ ತೆಗೆದ ಬಾವಿಗಳ ನೀರಿನ ಆಶ್ರಯವನ್ನು ಹೆಚ್ಚಿಸಲು ಅವುಗಳೊಳಗೇ ಕೊಳವೆ ಬಾವಿಗಳನ್ನು ಕೊರೆಯುವ ಕ್ರಮವೂ ಈಗೀಗ ಅಭ್ಯಾಸಕ್ಕೆ ಬರುತ್ತಿದೆ. ಕಾಲಕ್ರಮೇಣ ಅಗಲವಾದ ತೆರೆದ ಬಾವಿಗಳಿಗೆ ಬದಲಾಗಿ ಸಮೂಹದ ಕೊಳವೆ ಬಾವಿಗಳು ಹೆಚ್ಚು ಬಳಕೆಗೆ ಬರುವುವೆಂದು ನಿರೀಕ್ಷಿಸಬಹುದು.

ಕೊಳವೆ ಬಾವಿಗಳಿಗೆ ಹೆಚ್ಚಿನ ಜಾಗ ಬೇಕಿಲ್ಲ. ಕೆಲವೇ ದಿನಗಳಲ್ಲಿ ಅವನ್ನು ಮಾಡಿ ಮುಗಿಸಿಬಿಡಬಹುದು. ಆಳದಲ್ಲಿರುವ ಜನಲಸಂಗ್ರಹವನ್ನು ತೆಗೆಯುವುದಿರಂದ ನೀರಿನ ಮಟ್ಟ ಋತುಮಾನದ ವ್ಯತ್ಯಾಸಗಳಿಗೆ ಒಳಗಾಗುವುದಿಲ್ಲ. ಮಳೆ ಅಭಾವದ ವರ್ಷಗಳಲ್ಲೂ ತೊಂದರೆಯಿರುವುದಿಲ್ಲ. ಇವು ಸಾಮಾನ್ಯವಾಗಿ 150 ಮಿಮೀ (6 ಅಂಗುಲ) ವ್ಯಾಸವಿದ್ದು 30 ರಿಂದ 50 ಮೀ ಆಳಕ್ಕೆ ಕೊರೆಯಲ್ಪಟ್ಟಿರುತ್ತವೆ. ಅಂತರಜಲದ ಮಟ್ಟ ಕುಸಿದಿರುವೆಡೆ ಈ ಆಳ ಇನ್ನೂ ಹೆಚ್ಚಾಗಿರುತ್ತದೆ. ಸರಾಸರಿ ಪ್ರತಿ ನಿಮಿಷಕ್ಕೆ 60 ರಿಂದ 80 ಲೀಟರ್ ನೀರನ್ನು ಇವು ಒದಗಿಸುತ್ತವೆ. ವಿದ್ಯುತ್ ಪಂಪ್‌ಗಳನ್ನು ಅಥವಾ ಇಂಧನ ಪಂಪ್‌ಗಳನ್ನು ಬಳಸಿ ನೀರನ್ನು ಎತ್ತಲಾಗುತ್ತದೆ. ಅಂತರಜಲದ ಕೊರತೆಯಿಂದಾಗಿ ಈ ಕೊಳವೆ ಬಾವಿಗಳು ಇಂಗಿ ಹೋಗುವ ಪ್ರಕರಣಗಳು ಹೆಚ್ಚುತ್ತಿವೆ.

ಈಗ ಹನಿ ನೀರಾವರಿ ವಿಧಾನವೂ ನೀರಿನ ಮಿತವ್ಯಯಕ್ಕಾಗಿ ಜಾರಿಗೆ ಬಂದಿದೆ. ಜೊತೆಗೆ ಮಳೆಯ ನೀರನ್ನು ಹೇಗೆ ಭೂಮಿಯ ಒಳಗೆ ಸೇರಿಸಿ ಅಗತ್ಯ ಬಿದ್ದಾಗ ಬಳಸಿಕೊಳ್ಳಬೇಕೆಂಬ ಬಗ್ಗೆ ಒಂದು ವಿಜ್ಞಾನವೇ ಬೆಳೆಯುತ್ತಿದೆ. ಇದು 'ಜಲ ಸಾಕ್ಷರತೆ' ಎಂಬ ಹೊಸ ಘೋಷಣೆಗೂ

ಕಾರಣವಾಗಿದೆ.

**ಸಮಸ್ಯೆಗಳ ಮುನ್ನೋಟ:** ವ್ಯವಸಾಯದ ಕೆಲಸಕಾರ್ಯಗಳಿಗೆ ಪ್ರಥಮ ಅಗತ್ಯ ನೀರು. ಕ್ಲುಪ್ತವಾದ ಮಾರುತಗಳಲ್ಲಿ ಬರುವ ಮಳೆಯನ್ನೇ ಹೆಚ್ಚಾಗಿ ಅವಲಂಬಿಸಿರುವ ನಮ್ಮ ರಾಜ್ಯ ವರುಣ ದೇವನ ಕೃಪೆಯ ಅಸ್ಥಿರ ವರ್ತನೆಗೆ ಪಕ್ಕಾಗಿ ಅನಿಶ್ಚಯತೆಯ ತೊಳಲಾಟದಲ್ಲೇ ಇರುತ್ತದೆ. ಇದರಿಂದಾಗಿ ರಾಜ್ಯದ ಒಂದಲ್ಲ ಒಂದು ಭಾಗ ಆಗಾಗ್ಗೆ ಕ್ಷಾಮ ಇಲ್ಲವೆ ಅಭಾವ ಪರಿಸ್ಥಿತಿಗೆ ತುತ್ತಾಗಿರುತ್ತದೆ. ಕೇಂದ್ರ ಸರ್ಕಾರ ನೇಮಿಸಿದ್ದ 1972ರ ನೀರಾವರಿ ಆಯೋಗವು ರಾಜ್ಯದ ಸೇ. 75 ಭಾಗವು ವಾರ್ಷಿಕ ಮಳೆ ಬೀಳುವ ಪ್ರಮಾಣದಲ್ಲಿ ಸೇ. 30 ಕ್ಕಿಂತ ಹೆಚ್ಚು ವ್ಯತ್ಯಾಸವನ್ನು ಅನುಭವಿಸುತ್ತಿರುವುದನ್ನು ಗುರುತಿಸಿ, ಕರ್ನಾಟಕ ಅಧಿಕಾಂಶ ಅಭಾವ ಮತ್ತು ಕ್ಷಾಮಗಳಿಗೆ ಆಸ್ಪದ ಹೊಂದಿರುವ ರಾಜ್ಯವೆಂದು ಸ್ಪಷ್ಟವಾಗಿ ತೀರ್ಮಾನಿಸಿದೆ. ಈ ಸಂದರ್ಭಕ್ಕೆ ಅನುಗುಣವಾಗಿಯೇ ಭೂಮಿಯ ಮೇಲಿನ ಹಾಗೂ ಒಳಗಿರುವ ನೀರಿನ ಅತ್ಯಧಿಕ ಪ್ರಯೋಜನ ಪಡೆದು, ಆದಷ್ಟು ಹೆಚ್ಚು ಪ್ರದೇಶಕ್ಕೆ ನಿಶ್ಚಿತ ನೀರಾವರಿಯ ಸೌಕರ್ಯ ಒದಗಿಸಲು ಗರಿಷ್ಟ ಪ್ರಮಾಣದ ಪ್ರಯತ್ನ ಅಗತ್ಯವಾಗಿರುವುದು.

ಕರ್ನಾಟಕದ ಜಲಸಂಪತ್ತು ಯಥೇಚ್ಛವಾಗಿಯೇ ಇದೆ (ನೋಡಿ: ನದೀ ವ್ಯವಸ್ಥೆ ಮತ್ತು ಜಲಸಂಪತ್ತು). ಎಲ್ಲ ನದಿಗಳಲ್ಲಿ ವಾರ್ಷಿಕವಾಗಿ ದೊರಕುವ ಒಟ್ಟು ಅಂದಾಜು ಸು. 4000 ಶತಕೋಟಿ ಘನ ಅಡಿಗಳು. ಆದರೆ ಇದಿಷ್ಟೂ ಉಪಯುಕ್ತ ಬಳಕೆಗೆ ಸಿಗುವುದಿಲ್ಲ. ನೀರು ಆವಿಯಾಗಿ ಹೋಗುವುದು, ನೆಲದಲ್ಲಿ ಇಂಗುವುದು, ಪ್ರವಾಹದಲ್ಲಿ ಕೊಚ್ಚಿಹೋಗುವುದು, ಇವಲ್ಲದೆ ಸಮುದ್ರಕ್ಕೆ ಅಥವಾ ರಾಜ್ಯದ ಗಡಿಗೆ ಅತಿ ಸನಿಹದಲ್ಲಿ ಬೀಳುವ ಮಳೆಯಿಂದ ಒದಗುವ ನೀರನ್ನು ಸಂಗ್ರಹಿಸಿ ಇನ್ನೂ ಕೆಳಗಿನ ನಮ್ಮ ಭೂಮಿಯಲ್ಲೇ ಉಪಯೋಗಿಸಲಾಗದಿರುವುದು ಇವೆಲ್ಲವನ್ನೂ ಕಳೆದರೆ, ನಾವು ಪ್ರಯೋಜನ ಪಡೆಯಬಹುದು ಎನ್ನುವ ಜಲ ಸಂಪತ್ತು ಸು. 2000 ಶತಕೋಟಿ ಘನ ಅಡಿಗಳು ಎಂದು ಅಂದಾಜು. ಪಶ್ಚಿಮಕ್ಕೆ ಹರಿಯುವ ನದಿಗಳಿಗೆ ಸೂಕ್ತವಾದ ಕಡೆ ಒಡ್ಡು ಕಟ್ಟಿ ಪೂರ್ವದ ಬಯಲಿಗೆ ಕೊಂಚವಾದರೂ ತಿರುಗಿಸಿಕೊಳ್ಳಬಹುದಾದ್ದು ಹಾಗೂ ಎತ್ತು ನೀರಾವರಿ ಇವನ್ನೂ ಸೇರಿಸಿ ಅಂದಾಜು ಮಾಡಿದರೆ 2000 ಶತಕೋಟಿ ಘನ ಅಡಿಗಳೆಂದು ಪರಿಗಣಿಸಬಹುದು. ನಮ್ಮ ಜಲಸಂಪತ್ತಿನ ಪ್ರಧಾನ ಆಗರಗಳಾದ ಕೃಷ್ಣಾ ಮತ್ತು ಕಾವೇರಿಗಳೆರಡೂ ಅಂತರರಾಜ್ಯ ನದಿಗಳಾದ್ದರಿಂದ ಅವುಗಳಲ್ಲಿ ನಮ್ಮ ಭಾಗವೆಷ್ಟು ಎಂಬುದು ಇತರರ ಮರ್ಜಿಗೂ ಒಳಪಟ್ಟಿದ್ದು ಒಡಂಬಡಿಕೆ ಹಾಗೂ ಆಯೋಗಗಳ ತೀರ್ಪಿಗೆ ಬದ್ಧವಾಗಿದೆ.

ಸಂಪತ್ತಿನ ಅಂದಾಜು ಅಷ್ಟಿದ್ದರೂ ಪ್ರಾರಂಭದಿಂದ ಯೋಜನಾಪೂರ್ವ 1951ರ ವರೆಗೆ ನಾವು ರೂಢಿಸಿಕೊಂಡಿದ್ದುದು ಕೇವಲ 48 ಶತಕೋಟಿ ಘನ ಅಡಿಗಳು. ನಾಲ್ಕು ಪಂಚವಾರ್ಷಿಕ ಯೋಜನೆಗಳ ತರುವಾಯವೂ ಬಳಸಿಕೊಳ್ಳಲು ಆಗಿದ್ದುದು 600 ಟಿ.ಎಂ.ಸಿ. 2000 ದ ಮಾರ್ಚ್‌ವರೆಗೆ 1,179.47 ಟಿ.ಎಂ.ಸಿ. ನೀರನ್ನು ನೀರಾವರಿಗೆ ಬಳಸಿಕೊಳ್ಳುವ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ.

ಈ ಅಂಶಗಳನ್ನು ನೀರಾವರಿ ಮಾಡಬಹುದಾದ ವಿಸ್ತಾರದ ಪರಿಗಣನೆಯಿಂದಲೂ ತಿಳಿಯಬಹುದಾಗಿದೆ. ಕರ್ನಾಟಕದ ಭೌಗೋಳಿಕಾ ವಿಸ್ತಾರ ಸುಮಾರು 1.9 ಕೋಟಿ ಹೆಕ್ಟೇರುಗಳು. ಇದರಲ್ಲಿ ಬಂಡೆ, ಕಾಡು, ಮೇಡು, ಊರುಗಳನ್ನು ಬಿಟ್ಟು ವ್ಯವಸಾಯ ಯೋಗ್ಯವಾದ್ದು ಸು. 1.4 ಕೋಟಿ. ಸರಾಸರಿ ಉಳುಮೆಯಾಗುತ್ತಿರುವ ಭೂಮಿ ಸು. 1 ಕೋಟಿ ಹೆಕ್ಟೇರ್. 1997-98ನೇ ಸಾಲಿನಲ್ಲಿ ನೀರಾವರಿಯಾದ ಒಟ್ಟು ಜಮೀನಿನ ಪ್ರಮಾಣ 23.63 ಲಕ್ಷ ಹೆಕ್ಟೇರುಗಳು. ಅದರಲ್ಲಿ ನಾಲೆಗಳ ಪಾಲು ಶೇಕಡ 38.24; ಬಾವಿಗಳು (19.05), ಕೆರೆಗಳು (10.14), ಕೊಳವೆ ಬಾವಿಗಳು (17.39) ಇತರ ಮೂಲಗಳು (10.51) ಏತನೀರಾವರಿ (4.7). ಸುಮಾರು ಆರು ಲಕ್ಷ ಹೆಕ್ಟೇರ್‌ಗಳ ಭೂಮಿಯಲ್ಲಿ ವಾರ್ಷಿಕವಾಗಿ ಒಂದಕ್ಕಿಂತ ಹೆಚ್ಚು ನೀರಾವರಿ ಬೆಳೆ ತೆಗೆಯಲಾಗುತ್ತಿದೆ. ಇದರಿಂದಾಗಿ ನೀರಾವರಿಗೆ ಒಳಗಾದ ಪ್ರದೇಶ 28 ಲಕ್ಷ ಹೆಕ್ಟೇರ್‌ಗಳಾಗಿದೆ. ದೇಶದ ಒಟ್ಟು ಬಿತ್ತನೆ ಪ್ರದೇಶದಲ್ಲಿ ನೀರಾವರಿ ಪ್ರದೇಶ ಶೇಕಡ 32 ರಷ್ಟಿದ್ದರೆ. ಕರ್ನಾಟಕದಲ್ಲಿ ಅದು 23.5 ರಷ್ಟಿದೆ. ತಮಿಳುನಾಡು ಮತ್ತು ಆಂಧ್ರಪ್ರದೇಶದಲ್ಲಿ ಅದು ಅನುಕ್ರಮವಾಗಿ 48 ಮತ್ತು 38 ಆಗಿದೆ(1989-90). ಇದು ಕರ್ನಾಟಕ ಇನ್ನೂ ಸಾಧಿಸಬೇಕಾದ ಪ್ರಗತಿಯ ಬಗ್ಗೆ ಬೆಳಕು ಬೀರುತ್ತದೆ.

ರಾಜ್ಯದ ಮುಖ್ಯ ನದಿಗಳಾದ ಕಾವೇರಿ, ತುಂಗಭದ್ರಾ ಮತ್ತು ಕೃಷ್ಣಾ ಅಂತರರಾಜ್ಯ ನದಿಗಳಾಗಿರುವುದು, ಕರ್ನಾಟಕ ಒಂದಾಗುವ ಮುನ್ನ ಅದರ ಸುಮಾರು ಅರ್ಧದಷ್ಟು ಪ್ರದೇಶವಾದ ಮೈಸೂರು ಒಂದು ಆಶ್ರಿತ ಸಂಸ್ಥಾನವಾಗಿದ್ದು, ನೆರೆಯ ರಾಜ್ಯಗಳಾದ ಆಗಿನ ಬ್ರಿಟಿಷ್ ಪ್ರಾಂತ್ಯಗಳ ಯಾವುದೇ ಕೋರಿಕೆಯು ಸಂಸ್ಥಾನದ ಬೇಡಿಕೆಗಿಂತ ಹೆಚ್ಚಿನ ಆದ್ಯತೆ ಪಡೆಯುತ್ತಿದ್ದುದು ಈ ಹಿಂದುಳಿಯುವಿಕೆಗೆ ಒಂದು ಕಾರಣವೆನ್ನಬಹುದು. ಉದಾಹರಣೆಯಾಗಿ ತುಂಗಭದ್ರಾ ಬಗ್ಗೆ ಹೇಳುವುದಾದರೆ 1892ರಲ್ಲಿ ಮೈಸೂರು-ಮದರಾಸುಗಳ ನಡುವೆ ಆದ ಒಪ್ಪಂದದಂತೆ ಇದರ ಮುಖ್ಯ ಉಪನದಿಗಳಾದ ತುಂಗಾ, ಭದ್ರಾ ಮತ್ತು ಹಗರಿಗಳಿಂದ ಮದರಾಸಿನ ಅಪ್ಪಣೆಯಿಲ್ಲದೆ (ಕಾವೇರಿಗೂ ಇದು ಅನ್ವಯಿಸಿತ್ತು) ಯಾವ ನೀರಾವರಿ ಅಭಿವೃದ್ಧಿ ಕಾರ್ಯವನ್ನೂ ಮೈಸೂರು ಕೈಗೊಳ್ಳುವಂತಿರಲಿಲ್ಲ. ಮೈಸೂರಿನಂತೆಯೇ ಇದೇ ನದಿಯ ಮೇಲಿನ ಬ್ರಿಟಿಷ್ ಆಡಳಿತದಲ್ಲಿದ್ದ ಮುಂಬಯಿ ಪ್ರಾಂತ್ಯಕ್ಕೇ ಆಗಲಿ ಅಥವಾ ಇನೊಂದು ಆಶ್ರಿತ ಸಂಸ್ಥಾನವಾದ ಹೈದರಾಬಾದಿಗೇ ಆಗಲಿ ಇಂಥ ನಿಷೇಧವಿರಲಿಲ್ಲ. ಲಕ್ಕವಳ್ಳಿ ಜಲಾಶಯದ ಬಗ್ಗೆ 1936ರಲ್ಲಿ ಮತ್ತೆ 1944ರಲ್ಲಿ ಬೇರೆಯ ಒಪ್ಪಂದಗಳಾಗುವತನಕ ಇದೇ ಚಾಲತಿಯಲ್ಲಿತ್ತೆಂಬುದನ್ನು ಮನಗಾಣಬೇಕು. ಅದೇ ರೀತಿ ಕಾವೇರಿ ನದಿಗೆ ಅಡ್ಡಲಾಗಿ ಕನ್ನಂಬಾಡಿ ಕಟ್ಟೆ ಕಟ್ಟುವ ಬಗ್ಗೆ ಒಪ್ಪಂದಕ್ಕೆ ಬರಲು ಎದುರಿಸಿದ ತೊಡಕುಗಳು ಸಹ ರಾಜ್ಯದ ಅಸಹಾಯಕ ಅಥವಾ ದುರ್ಬಲ ಸ್ಥಿತಿಯನ್ನು ಸೂಚಿಸುತ್ತದೆ. ನದಿಯ ಮೇಲ್ಪ್ರದೇಶಗಳಲ್ಲಿ ಹೀಗೆ ಉಪಯೋಗಿಸಲಾಗದೆ ಬಿಟ್ಟ ನೀರೆಲ್ಲ ಅದರ ಮುಜಭೂಮಿಯಲ್ಲಿ ಹೆಚ್ಚಿನ ನೀರಾವರಿಗೆ ಅನುಕೂಲ ಮಾಡಿಕೊಟ್ಟದ್ದು ಕಾಲಕ್ರಮೇಣ ಇವುಗಳ ಹಕ್ಕು ಸ್ಥಾಪನೆಗೆ ಎಡೆಮಾಡಿಕೊಟ್ಟಿತೆನ್ನಬಹುದು. ಕರ್ನಾಟಕದ ಏಕೀಕರಣವಾಗುವ ಮುನ್ನ ಇದರ ಭಾಗಗಳು ಹಲವು ರಾಜ್ಯಗಳಲ್ಲಿ ಹಂಚಿಹೋಗಿದ್ದು ಯಾವುದೇ ದೊಡ್ಡ ಯೋಜನೆಗಳನ್ನು ಕೈಗೊಳ್ಳಲು ಒಂದು ಸಮಗ್ರ ದೃಷ್ಟಿಯ ಕೊರತೆ ಇದ್ದುದೂ ಇಂಥ ಮುನ್ನಡೆಗೆ ಆತಂಕವಾಗಿದ್ದಿತು. ಕಾವೇರಿ ನೀರಿನ ಹಂಚಿಕೆ ವಿವಾದ ಮುಂದುವರಿದೇ ಇದೆ. ಕೃಷ್ಣಾನದಿಗೆ ನೀರಿನ ಹಂಚಿಕೆಗೆ ಬಚಾವತ್ ಆಯೋಗ ಕೆಲವೊಂದು ಮಾರ್ಗದರ್ಶನಗಳನ್ನೂ ನಿಗದಿಪಡಿಸಿದೆ. ರಾಜ್ಯದ ಒಟ್ಟು ಜಲಸಂಪತ್ತಿನ ಮೂರನೆಯ ಒಂದು ಭಾಗ ಪಶ್ಚಿಮಕ್ಕೆ ಹರಿಯುವ ನದಿಗಳ ಕೊಡುಗೆಯಾಗಿದ್ದು ಅದನ್ನು ಉಪಯುಕ್ತವಾಗಿ ಬಳಸುವುದು ಒಂದು ಸಮಸ್ಯೆಯಾಗಿದೆ. ಇಷ್ಟೊಂದು ನೀರನ್ನು ನಾವು ವೃಥಾ ಸಮುದ್ರಕ್ಕೆ ಬಿಟ್ಟುಬಿಡುತ್ತಿದ್ದೇವೆಂಬ ಆಪಾದನೆಗೆ ಇದು ಗುರಿಮಾಡಿದೆ. ನೀರಾವರಿಗಿಂತ ವಿದ್ಯುತ್ ಉತ್ಪಾದನೆಗೆ ಇವು ಹೆಚ್ಚು ಅನುವಾಗಿದ್ದು ಶರಾವತಿ, ನದಿಯಿಂದ ಅಂಥ ಪ್ರಯೋಜನ ಈಗಾಗಲೇ ಪಡೆಯಲಾಗುತ್ತಿದೆ. ಇತರ ಕೆಲವು ಮಳೆಗಾಲದಲ್ಲಿ ತುಂಬಿ ಹರಿಯುವ ಈ ನದಿಗಳ ಪ್ರವಾಹವನ್ನು ತಡೆಹಿಡಿದು ಕೂಡಿಡಲು ಭಾರಿ ಜಲಾಶಯಗಳ ನಿರ್ಮಾಣಕ್ಕೆ ಸೂಕ್ತ ನಿವೇಶನಗಳಿರಬೇಕು. ತಡೆಹಿಡಿದ ನೀರನ್ನು ಕಾಲುವೆಗಳ ಮೂಲಕ ಹರಿಸಿ ಉಪಯೋಗಿಸಲು ಮುಂದೆ ವಿಶಾಲವಾದ ಬಯಲಿರಬೇಕು. ಕರಾವಳಿಯಲ್ಲಿ ಅಂಥ ಅವಕಾಶವಿಲ್ಲ. ಇರುವುದಕ್ಕೂ ಒಂದು ಬೆಳೆಗೆ ಸಾಕಷ್ಟು ಮಳೆಯ ನೀರೇ ಆಧಾರ ಆಗುವುದರಿಂದ ಅದರ ಅಗತ್ಯವೂ ಇಲ್ಲ. ಹೀಗಾಗಿ ಈ ನೀರಿನ ಪರಮ ಪ್ರಯೋಜನ ಪಡೆಯಬೇಕಾದರೆ ಅವುಗಳಲ್ಲಿ ಆದಷ್ಟನ್ನು ಪೂರ್ವಕ್ಕೆ ತಿರುಗಿಸುವುದೊಂದೇ ಮಾರ್ಗ. ಇದಕ್ಕೆ ಭೂ ರಚನೆಯ ಇತಿಮಿತಿಗಳಿವೆ. ಪಂಪುಗಳಿಂದ ನೀರನ್ನೆತ್ತಿ ಘಟ್ಟದ ಆಚೆಗೆ ಬಿಡುವುದನ್ನೂ ಸಹ ಮುಂದೆ ಯೋಚಿಸಬೇಕಾಗಬಹುದು. ಅಗತ್ಯತೆಯ ಒತ್ತಡದಲ್ಲಿ ಅದಕ್ಕಾಗುವ ವೆಚ್ಚ ಗೌಣವಾಗುತ್ತದೆ. (ಕೆ.ವಿ.ಎಸ್‌ಯು.)

**ನೀಲಕಂಠ ಬಸವರಾಜ :** ಸು. 14ನೆಯ ಶತಮಾನ. ಬಸವರಾಜೀಯ ಎಂಬ ಸಂಸ್ಕೃತ ಆಯುರ್ವೇದಶಾಸ್ತ್ರದ ಕರ್ತೃ. ತಂದೆ ನಮ್ಮಶ್ಶಿವಾಯ, ಹುಟ್ಟಿದ್ದು ಧಾರವಾಡ ಜಿಲ್ಲೆ ಕೊಟ್ಟೂರು ಗ್ರಾಮದಲ್ಲಿ. ನಿಡುಮಾಮುಡಿ ಬಗೆಯ ಸತ್ಸಂಪ್ರದಾಯಕ್ಕೆ ಸೇರಿದ ರಾಮದೇಶಿಕ ಈತನ ಶಿಷ್ಯ. ತನನ ಕೃತಿಯಲ್ಲಿ ಕಷ್ಟವಾದ ಭಾಗಗಳಿಗೆ ತೆಲುಗಿನಲ್ಲಿ ವ್ಯಾಖ್ಯಾನ ಮಾಡಿದ್ದಾನೆ. ಇದರ ಮೊದಲ ಮೂರು ಅಧ್ಯಾಯಗಳಲ್ಲಿ ವೈದ್ಯಕೀಯ ಪರೀಕ್ಷೆಯಲ್ಲಿ ಅನುಸರಿಸಬೇಕಾದ ಮಾರ್ಗ ವಿಧಾನಗಳನ್ನು ಸೂಚಿಸಿದ್ದಾನೆ. ಉಳಿದ ಇಪ್ಪತ್ತು ಅಧ್ಯಾಯಗಳಲ್ಲಿ ನಾನಾ ಕಾಯಿಲೆಗಳ ಪರೀಕ್ಷೆ ಹಾಗೂ ನಿವಾರಣಾ ಕ್ರಮಗಳನ್ನೂ ಕೊನೆಯ ಅಧ್ಯಾಯದಲ್ಲಿ ರಸೌಷಧಿಗಳ ತಯಾರಿಕಾವಿಧಾನವನ್ನೂ ಹೇಳಲಾಗಿದೆ. ಈಗಲೂ ಈ ಗ್ರಂಥ ಆಂಧ್ರ ಪ್ರದೇಶ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಜನಪ್ರಿಯವಾಗಿದೆ.

*

**ನೀಲಕಂಠ ಶಿವಾಚಾರ್ಯ[1] :** ವೀರಶೈವ ಆಚಾರ್ಯರು. ಇವರು ಶಂಕರಾಚಾರ್ಯರ ಸಮಕಾಲೀನರಿದ್ದಂತೆ ತೋರುತ್ತದೆ. ಇವರನ್ನು ಆನಂದಗಿರಿಯ ಶಂಕರವಿಜಯದಲ್ಲಿ ಶಿರೋಲಿಗಂಧಾರಿ ಜಂಗಮಾಚಾರ್ಯರೆಂದೂ ವಿದ್ಯಾರಣ್ಯಕೃತ ಸಂಕರದಿಗ್ವಿಜಯದಲ್ಲಿ ಗೋಕರ್ಣದಲ್ಲಿ ಶಂಕರರೊಡನೆ ಶಾಸ್ತ್ರ ವಾಕ್ಯಾರ್ಥ ನಡೆಯಿಸಿದ ಹರದತ್ತಾಚಾರ್ಯರ ಗುರುವೆಂದೂ ಹೇಳಿದೆ. ಇವರು ಶಿವಸೂತ್ರ ಮತ್ತು ಬ್ರಹ್ಮಸೂತ್ರಗಳ ಮೇಲೆ ಭಾಷ್ಯಾದಿಗಳನ್ನೂ ಅನೇಕ ನಿಬಂಧಗಳನ್ನೂ ರಚಿಸಿದ್ದರೆಂದು ಇವರ ಬ್ರಹ್ಮಸೂತ್ರ ಭಾಷ್ಯದ ಆಧಾರದ ಮೇಲೆ ಕ್ರಿಯಾಸಾರವೆಂಬ ಕಾರಿಕೆಯನ್ನು ಬರೆದಿರುವ ನೀಲಕಂಠ ಶಿವಾಚಾರ್ಯರ (ಸು. 1400) ಹೇಳಿಕೆಗಳಿಂದ ತಿಳಿಯುತ್ತದೆ. (ಎಂ.ಜಿ.ಎನ್.)

**ನೀಲಕಂಠ ಶಿವಾಚಾರ್ಯ[2] :** ಸು. 1400. ವೀರಶೈವ ಆಚಾರ್ಯ. ಕ್ರಿಯಾಸಾರ ಎಂಬ ಗ್ರಂಥದ ಕರ್ತೃ. ಇವರು ಕನ್ನಡದಲ್ಲಿ ಸಕಲಾಗಮಾರ್ಥವಿವರಣ ಎಂಬ ಮತ್ತೊಂದು ಗ್ರಂಥವನ್ನು ಬರೆದಿದ್ದಂತೆ ಕ್ರಿಯಾಸಾರದಲ್ಲಿ ಬರುವ ಕೆಲವು ಉಲ್ಲೇಖಗಳಿಂದ ತಿಳಿಯುತ್ತದೆ. ಆದರೆ ಇದು ಉಪಲಬ್ಧವಾಗಿಲ್ಲ. ಇವರ ತಂದೆ ಮಲ್ಲಯ್ಯ, ತಾಯಿ ಚನ್ನಮ್ಮ.

ಕ್ರಿಯಾಸಾರ ಮೊದಲನೆಯ ನೀಲಕಂಠ ಶಿವಾಚಾರ್ಯರ ಬ್ರಹ್ಮಸೂತ್ರ ಭಾಷ್ಯಕ್ಕೆ ಕಾರಿಕಾ ರೂಪವಾಗಿದೆ; ಸಂಸ್ಕೃತದಲ್ಲಿದೆ. ಇದರ ಮೊದಲ ನಾಲ್ಕು ಉಪದೇಶಗಳು ಬ್ರಹ್ಮಸೂತ್ರಭಾಷ್ಯದ ನಾಲ್ಕು ಅಧ್ಯಾಯಗಳ ಸಾರ. ಈ ಗ್ರಂಥವನ್ನು ಶಾರದಾತಿಲಕ ಮತ್ತು ಪುರಶ್ಚರ್ಯಾರ್ಣವ (ನೇಪಾಳ ಪ್ರತಾಪಸಿಂಹ ಮಹಾರಾಜ ಬಹದ್ದೂರ್ ವಿರಚಿತ) ಗ್ರಂಥಗಳಿಗೆ ಪ್ರಮಾಣವಾಗಿ ಸ್ವೀಕರಿಸಿರುವುದರಿಂದ ಇದು ಭಾರತದ ದಕ್ಷಿಣೋತ್ತರ ಭಾಗಗಳೆರಡರಲ್ಲಿಯೂ ಪ್ರಸಿದ್ಧಿ ಪಡೆದಿದ್ದಂತೆ ಕಂಡುಬರುತ್ತದೆ. ಗುಬ್ಬಿಯ ಮಲ್ಲಣ್ಣಾರ್ಯನ ವೀರಶೈವಾಮೃತ ಮಹಾಪುರಾಣದಲ್ಲಿ ಕ್ರಿಯಾಸಾರದ ಅನೇಕ ಭಾಗಗಳು ಅನುವಾದವಾಗಿವೆ. (ಎಂ.ಜಿ.ಎನ್.,ಎಚ್.ಸಿ.ಎಸ್.)

**ನೀಲಕಂಠಾಚಾರ್, ಎನ್.ಜಿ. :** 1924. ಹೆಸರಾಂತ ಲೋಹಶಿಲ್ಪಿ ಮಂಡ್ಯ ಜಿಲ್ಲೆ ನಾಗಮಂಗಲದಲ್ಲಿ ಜನಿಸಿದರು (1924). ಶಿಲ್ಪಕಲೆಯನ್ನೇ ವಂಶಪಾರಂಪರ್ಯವಾಗಿ ರೂಢಿಸಿಕೊಂಡು ಬಂದಿದ್ದ ಉತ್ತಮ ಶಿಲ್ಪಿಗಳ ಕುಟುಂಬ ಇವರದು. ಎಳೆಯ ವಯಸ್ಸಿನಿಂದಲೂ ಹಿತ್ತಾಳೆ, ಕಂಚು, ಪಂಚಲೋಹ ಕಲೆಗಳಿಗೆ ಮನಸೋತರು. ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಕಲಾಶಾಲೆಯನ್ನು ಸೇರಿದ (1942) ಇವರು ಅಲ್ಲಿ ಶಿಕ್ಷಕರಾಗಿದ್ದ ಪ್ರಸಿದ್ಧ ಶಿಲ್ಪಿ ಎನ್.ವಿ. ಸೂರ್ಯನಾರಾಯಣಾಚಾರ್ಯರಲ್ಲಿ ಐದು ವರ್ಷ ಕಾಲ ಶಿಷ್ಯವೃತ್ತಿ ಮಾಡಿದರು. ಲೋಹಶಿಲ್ಪಕಲೆಯಲ್ಲಿ ನಕಾಸೆ ಕೆಲಸ ಅತ್ಯಂತ ನಾಜೂಕಿನ ಹಾಗೂ ಸೂಕ್ಷ್ಮ ರೀತಿಯದು. ಈ ಕೆಲಸದಲ್ಲಿ ಪರಿಣಿತಿ ಸಾಧಿಸಿದರು. ಇವರು ನಿರ್ಮಿಸಿದ ಶಿವಶಂಕರ ಲೀಲಾ ನೃತ್ಯ, ಕಂಚಿನ ಮದನಿಕೆ, ಪಂಚಲೋಹದ , ಚೆನ್ನಕೇಶವಮೂರ್ತಿ, ನಾಟ್ಯ ಸರಸ್ವತಿ, ವೇಣುಗೋಪಾಲ - ಇವು ಇವರ ಕಲಾನೈಪುಣ್ಯತೆಗೆ ಸಾಕ್ಷಿ.

ಹೊಯ್ಸಳ ಶೈಲಿಯ ವೈಭವಪೂರ್ಣ ಪಂಚಲೋಹದ ವೇಣುಗೋಪಾಲ ಮೂರ್ತಿಯ ಕಲಾಕೌಶಲ್ಯವನ್ನು ಮೆಚ್ಚಿ ಅಖಿಲ ಭಾರತ ಹಸ್ತಶಿಲ್ಪ ಮಂಡಲಿ ಇವರಿಗೆ ರಾಷ್ಟ್ರಮಟ್ಟದ ಪುರಸ್ಕಾರವನ್ನು ನೀಡಿ ಗೌರವಿಸಿತು (1978). ಬೆರಗುಮೂಡಿಸುವ ಕುಸುರಿ ಕೆಲಸದಿಂದ ಸಾಕಾರಗೊಂಡಿರುವ ಮೂರು ಅಡಿ ಎತ್ತರದ ವೇಣುಗೋಪಾಲ ಮೂರ್ತಿ ಇವರ ಕಲಾಪ್ರೌಢಿಮೆಗೊಂದು ಭವ್ಯ ಸಾಕ್ಷಿ. ಇವರ ಲೋಹಕಲಾ ಮೂರ್ತಿಗಳು ದೇಶವಿದೇಶಗಳಲ್ಲಿಯೂ ವಸ್ತುಸಂಗ್ರಹಾಲಯಗಳಲ್ಲಿಯೂ ವಿಶೇಷ ಪ್ರದರ್ಶನಗಳಲ್ಲಿಯೂ ಪಾಲ್ಗೊಂಡು ಹಸ್ತಶಿಲ್ಪ ಕ್ಷೇತ್ರದಲ್ಲಿ ಇವರಿಗೆ ವಿಶಿಷ್ಟಸ್ಥಾನ ಗಳಿಸಿಕೊಟ್ಟಿವೆ.

ಇವರ ಸಾಧನೆಗಾಗಿ ಇವರಿಗೆ ಅನೇಕ ಗೌರವ-ಪ್ರಶಸ್ತಿಗಳು ಲಭಿಸಿವೆ. ಅವುಗಳಲ್ಲಿ ಮುಖ್ಯವಾದವು : ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿ ಪ್ರಶಸ್ತಿ (1995), ರಾಮುಸನ್ ಕಲಾ ಪ್ರತಿಷ್ಠಾನದ ಶಿಲ್ಪಶ್ರೀ ಸನ್ಮಾನ. ಕರ್ನಾಟಕ ಕರಕುಶಲ ಅಭಿವೃದ್ಧಿ ನಿಗಮದ ಪುರಸ್ಕಾರ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಸರ್ಕಾರದ ಜಕಣಾಚಾರಿಪ್ರಶಸ್ತಿ (1996), ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಸದಸ್ಯರಾಗಿದ್ದ ಇವರು ಈಗ ಅದರ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ (2002-04).
(ಎನ್.ಎಂ.)

**ನೀಲಕಂಠಾಚಾರ್ಯ :** ಸು.1485. ವೀರಶೈವಕವಿ. ಆರಾಧ್ಯಚಾರಿತ್ರ ಎಂಬ ಗ್ರಂಥದ ಕರ್ತೃ. ಇದು ಮಲ್ಲಿಕಾರ್ಜುನ ಪಂಡಿತಾರಾಧ್ಯನ ಚರಿತ್ರೆಯನ್ನೊಳಗೊಂಡಿದೆ. ಶಿವಲೆಂಕಮಂಚಣ್ಣ ಪಂಡಿತ, ಉರಿಲಿಂಗಪೆದ್ದಿಗಳ ವಂಶಸ್ಥನಾದ ಈತ ತನ್ನ ವಂಶ ಪರಂಪರೆಯನನು ಸುದೀರ್ಘವಾಗಿ ಹೇಳಿಕೊಂಡಿದ್ದಾನೆ. ವಿತತಕರ್ಣಾಟಲಕ್ಷಣ ಕಮಲಭವನೆನಿಪ ಚತುರವರ ತಾನೆಂದು ತನ್ನನ್ನು ವಿಶ್ಲೇಷಿಸಿ ಕೊಂಡಿದ್ದಾನೆ. ವಾರ್ಧಕ ಷಟ್ಪದಿಯಲ್ಲಿರುವ ಈ ಕೃತಿಯಲ್ಲಿ 5 ಪ್ರಕರಣ, 65 ಸಂಧಿ, 3,069 ಪದ್ಯಗಳಿವೆ. ಪಾಲ್ಕುರಿಕ ಸೋಮನಾಥ ಆಂಧ್ರ ಭಾಷೆಯಲ್ಲಿ ಹೇಳಿದುದನ್ನು ಈತ ಕನ್ನಡದಲ್ಲಿ ರಚಿಸಿದ್ದಾನೆ.

ಬಸವಾದಿ ಪ್ರಮಥರು ಭೂಲೋಕದಲ್ಲಿ ಕೈಗೊಂಡ ಕಾರ್ಯವನ್ನು ಮುಂದುವರಿಸಲು ಪರಮೇಶ್ವರ ಮಲ್ಲಿಕಾರ್ಜುನ ಪಂಡಿತಾರಾಧ್ಯನನ್ನು ಧರೆಗೆ ಕಳಿಸಿದ. ಭೃಂಗಿಯ ನಿಷ್ಠೆ. ದೂರ್ವಾಸನ ಶಾಪಶಕ್ತಿ. ಗೌತಮನ ವೈಖರಿ, ರುದ್ರಪ್ರಮಥರ ಪ್ರಸಾದೈಕರತಿ, ಉಪಮನ್ಯುಮುನಿಯ ಗುರುತ್ವ, ವೀರಭದ್ರನ ಶೌರ್ಯ ಇವನು ಒಟ್ಟುಗೂಡಿಸಿಕೊಂಡ ಬಿಂಬವೊಂದು ದ್ರಾಕ್ಷಾರಮ ಪಟ್ಟಣದ ಭೀಮಪಂಡಿತನ ಸತಿ ಗೌರಾಂಬಿಕೆಯ ಉದರದಲ್ಲಿ ಮೂರ್ತಗೊಂಡಿತು. ಹೀಗೆ ಜನಿಸಿದ ಮಲ್ಲಿಕಾರ್ಜುನ ಪಂಡಿತಾರಾಧ್ಯ ಸಕಲಾಗಮಪಂಡಿತನಾಗಿ ಧರ್ಮಬೋಧೆ ಮಾಡಿದ. ಇದೇ ಇಲ್ಲಿನ ಕಥಾವಸ್ತು.

ದೀಕ್ಷಾಪ್ರಕರಣದಲ್ಲಿ ಅಷ್ಟಾವರಣಗಳ ಮಹಿಮೆಯನನೂ ಪುರಾತನ ಪ್ರಕರಣದಲ್ಲಿ ಗುರುಭಕ್ತಾಂಡಾರ, ಮಲ್ಹಣ ಮೊದಲಾದ ಶಿವಭಕ್ತರ ಕಥಾನಕಗಳನ್ನೂ ವಾದ ಪ್ರಕರಣದಲ್ಲಿ ಬೌದ್ಧ, ಜೈನ, ಚಾರ್ವಾಕ, ವೈದಿಕ ಮತಗಳನ್ನು ಖಂಡಿಸಿರುವುದನ್ನೂ ಮಹಿಮಾ ಪ್ರಕರಣದಲ್ಲಿ ಚೋಳರಾಜ, ನಂಬಿಯಣ್ಣ, ದೋಣಮಾರ್ಯ ಮೊದಲಾದ ಶರಣರ ಮಹಿಮೆಯನ್ನೂ ಕಡೆಯದಾದ ಪರ್ವತ ಪ್ರಕರಣದಲ್ಲಿ ಶ್ರೀಶೈಲಗಿರಿಯ ಮಹಿಮೆಯನ್ನೂ ಕಾಣಬಹುದು.

ಸಂದರ್ಭಕ್ಕೆ ತಕ್ಕಂತೆ ಕಾವ್ಯದುದ್ದಕ್ಕೂ ಶಿವ, ಅಗ್ನಿ, ವಾಯು, ಸ್ಕಂದ ಪುರಾಣಗಳಿಂದ ಆಯ್ದ ಉದ್ಧೃತ ವಾಕ್ಯಗಳಿವೆ. ಕಾವ್ಯ ಬಂಧ ಲಲಿತವಾಗಿದೆ.

*

**ನೀಲಕಂಠಾರಾಧ್ಯ :** ಸು. 1500. ವೀರಶೈವ ಕವಿ. ಪರವಾದಿಗಜಾಂಕುಶ ತಾರಾವಳಿ ಎಂಬ ಗ್ರಂಥದ ಕರ್ತೃ. ಈತನಿಗೆ ಪರಮತವೇಶ್ಯಾಭುಜಂಗ ಎಂಬ ಬಿರುದಿದ್ದಂತೆ ತಿಳಿಯುತ್ತದೆ.

ಪರವಾದಿಗಜಾಂಕುಶತಾರಾವಳಿ ಗದ್ಯ ಮತ್ತು ರಗಳೆ (ಪದ್ಯ)ಯಲ್ಲಿ ರಚಿತವಾಗಿದೆ. ಇದರಲ್ಲಿ ಒಟ್ಟು ಇಪ್ಪತ್ತೇಳು ರಗಳೆಯ ಭಾಗಗಳೂ ಇಪ್ಪತ್ತೇಳು ಗದ್ಯಭಾಗಗಳೂ ಆದ್ಯಂತ್ಯದಲ್ಲಿ ಒಂದೊಂದು ಕಂದ ಪದ್ಯವೂ

ಸಮಾವೇಶಗೊಂಡಿವೆ. ತಾನು ಈ ಗ್ರಂಥವನ್ನು ಸಕಲವೇದಶಾಸ್ತ್ರೋಪನಿಷದರ್ಥಮಂ ಗರ್ಭೀಕರಿಸಿ ಜೈನ ಚಾರ್ವಾಕ ಮಾಯಾವಾದಿ ವೈಷ್ಣವರೆಂಬ ಮದಗಜಕ್ಕೆ ಅಂಕುಶವಾಗಿ ರಚಿಸಿರುವಂತೆ ಹೇಳಿಕೊಂಡಿದ್ದಾನೆ. ಇವನ ಕೃತಿಯಲ್ಲಿ ಸ್ವಮತಮಂಡನೆ, ಪರಮತಖಂಡನೆ ಕಂಡುಬರುತ್ತದೆ. ಈತನ ರಗಳೆ ಲಲಿತ ರಗಳೆಯಂತೆ ರಚಿತವಾಗಿದ್ದರೂ ಆದಿಪ್ರಾಸವನ್ನು ದ್ವಿಪದ ಘಟಕಕ್ಕೆ ಮಾತ್ರ ಬಳಸಿಕೊಳ್ಳದೆ ಅಖಂಡ ಕಾವ್ಯಭಾಗಕ್ಕೂ ಅನ್ವಯಿಸಿಕೊಂಡಿದ್ದಾನೆ. ಅಲ್ಲದೆ ಅಂತ್ಯಪ್ರಾಸವನ್ನು ಪೂರ್ಣವಾಗಿ ಉಲ್ಲಂಘಿಸಿರುವುದೂ ಒಂದು ಗಮನಾರ್ಹ ಅಂಶ. ಯಾಂತ್ರಿಕ ಗಣವಿಭಜನೆಯಾಗಲಿ ಮಾತ್ರೆಗಳ ಲೆಕ್ಕಾಚಾರವಾಗಲಿ ಇವನಲ್ಲಿ ಸಾಂಪ್ರದಾಯಿಕವಾಗಿ ಉಳಿದಂತಿಲ್ಲ. ರಗಳೆ ಛಂದಸ್ಸಿನ ನಿಯಮದಂತೆ ಎರಡನೆಯ ಪಾದದ ಕೊನೆಯಲ್ಲಿ ಯತಿ ನಿರ್ದೇಶನವಿಲ್ಲ. ಅದರ ಬದಲು ಪದ ಮತ್ತು ಭಾವಗಳೆರಡೂ ಮುರಿವನ್ನು ಪಡೆದು ಮುಂದಿನ ಸಾಲುಗಳಿಗೂ ಹರಿದು ಒಂದು ಬಗೆಯ ಸರಳ ರಗಳೆಯಂತೆ ಬಳಕೆಯಾಗಿರುವುದು ಈ ಕವಿಯ ಒಂದು ವೈಶಿಷ್ಟ್ಯವಾಗಿದೆ. ಈ ದೃಷ್ಟಿಯಿಂದ ನೀಲಕಂಠಾರಾಧ್ಯನು ಪಾಂಡಿತ್ಯ ಹಾಗೂ ಪ್ರಯೋಗಶೀಲತೆಗಳೆರಡನ್ನೂ ಮೈಗೂಡಿಸಿಕೊಂಡ ಗಮನಾರ್ಹ ವ್ಯಕ್ತಿಯಾಗಿದ್ದಾನೆ. (ಎನ್.ಬಿ.ಎಲ್.)

**ನೀಲಗಾರರು :** ದಕ್ಷಿಣ ಕರ್ನಾಟಕದ ದಕ್ಷಿಣ ಭಾಗದಲ್ಲಿ ಪ್ರಮುಖವಾಗಿ ಕಂಡುಬರುವ ಧಾರ್ಮಿಕ ವೃತ್ತಿಗಾಯಕರು, ಮಂಟೇಸ್ವಾಮಿಯನ್ನು ಶಿಷ್ಯರಾದ ಚಿಕ್ಕಲ್ಲೂರು ಸಿದ್ದಪ್ಪಾಜಿ, ಕಪ್ಪಡಿ ರಾಚಪ್ಪಾಜಿ ಮತ್ತು ಮಳವಳ್ಳಿ ಹಾಗೂ ಬೊಪ್ಪಗೌಡನಪುರದ ಅರಸುಮನೆತನದ ಸ್ವಾಮಿಗಳ ಮಹಿಮೆಯ ಪ್ರಸಾರಕ್ಕೆ ಮೀಸಲಾದ ವಿಶಿಷ್ಟ ಭಕ್ತರು. ಇವರನ್ನು ಲೀಲೆಗಾರರು ಎಂದೂ ಕರೆಯಲಾಗುತ್ತದೆ. ತಮ್ಮನ್ನು ಇವರು ಮಂಟೇದವರು, ಮಂಟೇ ಸ್ವಾಮಿಗಳು ಎಂದು ಕರೆದುಕೊಳ್ಳುತ್ತಾರೆ.

ಇವರ ವೇಷಭೂಷಣಗಳು ವಿಶಿಷ್ಟವಾದುವು. ತಲೆಯಲ್ಲಿ ಕೆಂಪು ರುಮಾಲು, ಮೈಮೇಲೆ ಕರಿಯ ಮೇಲಂಗಿ, ಮಂಡಿಯಿಂದ ತುಸು ಕೆಳಗೆ ಚಾಚಿರುವ ಕಚ್ಚೆಯ ಪಂಚೆ, ಕೈಯಲ್ಲಿ ಅಷ್ಟೇನೂ ಉದ್ದವಲ್ಲದ ನಾಗರ ಹೆಡೆಯ ಅಥವಾ ಸಿಂಹಮುಖದ ಕರಿಯ ತಂಬೂರಿ, ಜೊತೆಗೆ ಚಿಟಗಿ ಅಥವಾ ಹೆಬ್ಬೆರಳಿನಲ್ಲಿ ಎರಡು ಗಗ್ಗರಗಳು, ಹಣೆಯಲ್ಲಿ ಭಸ್ಮ ಜೊತೆಗೆ ಕುಂಕುಮದ ತಿಲಕ, ಕೊರಳಲ್ಲಿ ಮೂರು ರುದ್ರಾಕ್ಷಿ ಧರಿಸಿರುತ್ತಾರೆ.

ಧರೆಗೆ ದೊಡ್ಡವರು, ಮಂಟೇದ ಒಡೆಯ, ಹಲಗೂರು ಪವಾಡ - ಇವು ಇವರು ಹಾಡುವ ಮುಖ್ಯ ಧಾರ್ಮಿಕ ಕಥೆಗಳು. ಈ ಕಥೆಗಳ ಜೊತೆಗೆ ಅನೇಕ ಲೌಕಿಕ ಕಥೆಗಳನ್ನು ಹಾಡುತ್ತಾರೆ. ಅವುಗಳಲ್ಲಿ ಚೆಲುವ ಚೆನ್ನಿಗರಾಮ, ಮೈದಾಳು ರಾಮಣ್ಣ, ನಂಜಯ್ಯ-ಚಾಮುಂಡಿ, ಸಾರಂಗಧರ, ಪಿರಿಯಾಪಟ್ಟಣದ ಲಾವಣಿ, ಅರ್ಜುನ ಜೋಗಿ ಹಾಡು, ಗಜಪತಿರಾಜ, ಬಂಜೆ ಹೊನ್ನಮ್ಮ, ಚೆಲುವರಾಯ, ಬಾಲನಾಗಮ್ಮ ಮುಖ್ಯವಾದುವು.

ಧಾರ್ಮಿಕ ಕಥೆಗಳನ್ನು ಹಾಡುವಾಗ ಸಿದ್ಧಯ್ಯ ಶಿವನೇ ಬನ್ನಿ ಪರಂಜ್ಯೋತಿ ನೀವೆ ಬನ್ನಿ; ಮಂಟೇದ ಲಿಂಗಯ್ಯ ನೀವೆ ಬನ್ನಿ ಎಂದು ಸೊಲ್ಲುಸೊಲ್ಲಿಗೂ ಗುರು ಸಿದ್ಧಪ್ಪಾಜಿಯವರನ್ನು ನೆನೆಯುತ್ತ ತಂಬೂರಿಯನ್ನು ನುಡಿಸುತ್ತ ಕಥೆಯನ್ನು ಮುಖ್ಯ ಕಥೆಗಾರ ಹಾಡಿದರೆ ಹಿಮ್ಮೇಳದವರು ಚಿಟಗಿ, ಏಕತಾರಿಗಳನ್ನು ನುಡಿಸುತ್ತಾರೆ. (ಟಿ.ಎಸ್.ಆರ್.)

**ನೀಲಮ್ಮ :** (ನೀಲಾಂಬಿಕೆ) 12ನೆಯ ಶತಮಾನದಲ್ಲಿ ಬಾಳಿದ ಪ್ರಸಿದ್ಧ ಶಿವಶರಣೆ ಹಾಗೂ ವಚನಕಾರ್ತಿ, ಬಸವಣ್ಣನವರ ಧರ್ಮಪತ್ನಿ. ಈಕೆ ಬಿಜ್ಜಳನಲ್ಲಿ ಮಂತ್ರಿಯಾಗಿದ್ದ ಬಲದೇವನ ತಮ್ಮ ಸಿದ್ಧರಸ ಮಂತ್ರಿಯ ಮಗಳು ಎಂದು ಸಿಂಗಿರಾಜಪುರಾಣದಲ್ಲಿ ಹೇಳಿದೆ. ಬಸವಣ್ಣನವರ ಕಿರಿಯ ಧರ್ಮಪತ್ನಿಯಾಗಿ ಅವರ ಎಲ್ಲ ಧಾರ್ಮಿಕ ಸಾಮಾಜಿಕ ಕಾರ್ಯಗಳಲ್ಲಿ ಮಹತ್ತ್ವದ ಪಾತ್ರವಹಿಸಿ ಅವರ ಲೌಕಿಕ, ಆಧ್ಯಾತ್ಮಿಕ ಜಗತ್ತಿಗೆ ಬೆನ್ನೆಲುಬಾಗಿ ಅವರ ಜೀವನಕ್ಕೆ ಹೊಸ ಚೈತನ್ಯ ತಂದ ಇವಳನ್ನು ಬಸವಣ್ಣನವರು ನೀಲಾಂಬಿಕೆ, ನೀಲಲೋಚನೆ ಎಂದೂ ಕರೆದಿದ್ದಾರೆ. ಈಕೆ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಪಡೆದ ಸಿದ್ಧಿ ಅತ್ಯದ್ಭುತವೂ ಅಸ್ಸಾದೃಶವೂ ಆದುದು. ಈಕೆಗೆ ತನ್ನ ಸಿದ್ಧಿಯಲ್ಲಿ ಎಷ್ಟು ಪರಿಪೂರ್ಣವಾದ ವಿಶ್ವಾಸವಿತ್ತೆಂಬುದು ಇವಳ ಜೀವನದ ಕೊನೆಯ ಘಟನೆಯೊಂದರಿಂದ ವ್ಯಕ್ತವಾಗುತ್ತದೆ. ಕಲ್ಯಾಣದ ಅನ್ಯಾಯವನ್ನು ಕಂಡು ಬಸವಣ್ಣನವರು ಕೂಡಲ ಸಂಗಮದಲ್ಲಿ ಐಕ್ಯವಾಗಲು ಆ ಕ್ಷೇತ್ರದ ಕಡೆಗೆ ಹೊರಟಾಗ ತನ್ನ ಜೊತೆ ಹೊರಡುವಂತೆ ಹೆಂಡತಿಗೆ ಹೇಳಲು ಹಡಪದ ಅಪ್ಪಣ್ಣನನ್ನು ಕಳುಹಿಸಿದರು. ಆಗ ಆತನಿಗೆ ಹೇಳಿದ 'ಪರಿಣಾಮ ಮೂರ್ತಿ ಬಸವನ ಮೂರ್ತಿ ಕರಸ್ಥಲದಲ್ಲಿ ಬೆಳಗಿದ ಬಳಿಕ ಸಂಗಯ್ಯನ ಹಂಗು ನಮಗೇಕೆ ಅಪ್ಪಣ್ಣ? ಅಲ್ಲಿರ್ಪ ಸಂಗಯ್ಯ ಇಲ್ಲಿಲ್ಲವೆ? ಅಲ್ಲಿ ಇಲ್ಲಿ ಎಂಬ ಉಭಯಭಾವವೇಕೆ? ಅಂಗಯ್ಯಲ್ಲಿರುವ ಲಿಂಗ ತಂದೆ ಸರ್ವವ್ಯಾಪಿಯಾಗಿರಲು ಅಲ್ಲೆ ಇಲ್ಲೆ ಎಂಬ ಉಭಯಕ್ಕೆ ಎಡೆಯಿಲ್ಲ' ಎಂಬ ಮಾತುಗಳು ಈಕೆಯ ವ್ಯಕ್ತಿತ್ವಕ್ಕೆ, ಅನುಭಾವದೃಷ್ಟಿಗೆ ನಿದರ್ಶನಗಳಾಗಿವೆ. ಈಕೆಗೆ ಬಾಲಸಂಗಯ್ಯನೆಂಬ ಮಗ ಹುಟ್ಟಿ ಆತ ಬಹುಬೇಗನೆ ಮರಣಹೊಂದಿದನೆಂದು ತಿಳಿದುಬರುತ್ತದೆ.

ಈಕೆ ಸಂಗಯ್ಯ ಎಂಬ ಅಂಕಿತದಲ್ಲಿ ವಚನಗಳನ್ನು ಬರೆದಿದ್ದಾಳೆ. ಇದುವರೆಗೆ 125 ವಚನಗಳು ದೊರಕಿವೆ. ಇವಳ ವಚನಗಳಲ್ಲಿ ಶಿವಾನುಭವ, ತಾತ್ತ್ವಿಕ ದೃಷ್ಟಿ, ಭಕ್ತಿಭಾವ ಎದ್ದುಕಾಣುತ್ತವೆ. ಅಲ್ಲದೆ ಇವಳ ಮನಸ್ಸಿನ ಅನೇಕ ಭಾವನೆಗಳ ಹೋರಾಟ, ಶಾಂತಿ, ಸಾಮರಸ್ಯ ಮುಂತಾದುವುಗಳನ್ನು ಇವು ಸ್ಪಷ್ಟಪಡಿಸುತ್ತವೆ. ಈಕೆಯ ವಚನಗಳು ಆಧ್ಯಾತ್ಮಿಕ ಸಾಹಿತ್ಯದಲ್ಲಿ ಉನ್ನತ ಮಟ್ಟವನ್ನು ಪಡೆದಿವೆ.

ಈಕೆ ಒಂದು ಕಾಲಜ್ಞಾನವನ್ನೂ ಬರೆದಿರುವಂತೆ ತಿಳಿಯುತ್ತದೆ. ಇವಳ ಸ್ತುತಿರೂಪವಾಗಿ ನೀಲಮ್ಮನ ಸ್ತೋತ್ರ. ನೀಲಾಂಬಿಕಾ ಪಂಚವಿಂಶತಿ, ನೀಲಮ್ಮನ ತ್ರಿವಿಧಿ ಮೊದಲಾದ ಗ್ರಂಥಗಳು ರಚಿತವಾಗಿವೆ. (ಟಿ.ಜಿ.ಎಸ್.)

**ನುಗು :** ಕಪಿಲಾ ನದಿಯ ಒಂದು ಉಪನದಿ. ಭೃಗು ಎಂದೂ ಹೆಸರಿರುವ ಈ ನದಿ ಕೇರಳದ ವೈನಾಡಿನ ನೆಲ್ಲಂಬೂರು ಬೆಟ್ಟಗಳಲ್ಲಿ ಹುಟ್ಟಿ, ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ತಾಲ್ಲೂಕಿನ ಮೂಲಕ ಉತ್ತರಕ್ಕೆ ಹರಿದು ಹಂಪಾಪುರ ಎಂಬಲ್ಲಿ ಕಪಿಲಾ ನದಿಯನ್ನು ಸೇರುತ್ತದೆ. ಸಾಧಾರಣ ಕಾಡು ಪ್ರದೇಶದ ಮೂಲಕ ಹರಿಯುವ ಈ ನದಿಯ ಪಾತ್ರದಲ್ಲಿ ಅತ್ಯಲ್ಪ ಪ್ರಮಾಣದಲ್ಲಿ ಚಿನ್ನದ ಹುಡಿ ದೊರಕುತ್ತದೆ. ಲಕ್ಷ್ಮಣಾಪುರ ಎಂಬಲ್ಲಿ ಈ ನದಿಗೆ ಒಂದು ಚಿಕ್ಕ ಅಣೆಕಟ್ಟು ಇದೆ. ಬೀರವಾಳು ಗ್ರಾಮದ ಹತ್ತಿರ ಮಧ್ಯದ ಪ್ರಮಾಣದ ಅಣೆಕಟ್ಟನ್ನು ನಿರ್ಮಿಸಲಾಗಿದೆ. 1959ರಲ್ಲಿ ಈ ಜಲಾಶಯದ ನಿರ್ಮಾಣ ಕಾರ್ಯ ಮುಗಿಯಿತು. ಈ ಜಲಾಶಯದ ಕಟ್ಟೆಯ ಎತ್ತರ 44 ಮೀ. ಗಳು ಮತ್ತು ಉದ್ದ 637 ಮೀ. ಸುಮಾರು 10,500 ಹೆಕ್ಟೇರ್ ಭೂಮಿ ಇದರಿಂದ ನೀರಾವರಿ ಒಳಪಟ್ಟಿದೆ. ಈ ನೀರಾವರಿ ಪ್ರದೇಶದ ಬಹು ಭಾಗ ನಂಜನಗೂಡು ತಾಲ್ಲೂಕಿಗೆ ಸೇರಿದೆ.

(ಎ.ಕೆ.)

**ನುಗ್ಗೇಹಳ್ಳಿ :** ಹಾಸನ ಜಿಲ್ಲೆ ಚನ್ನರಾಯಪಟ್ಟಣ ತಾಲ್ಲೂಕಿನ ಒಂದು ಗ್ರಾಮ ಮತ್ತು ಹೋಬಳಿ ಕೇಂದ್ರ. ಚನ್ನರಾಯಪಟ್ಟಣದ ಈಶಾನ್ಯಕ್ಕೆ 19 ಕಿಮೀ ದೂರದಲ್ಲಿದೆ.

ಸುಂದರವಾದ ಹೊಯ್ಸಳ ದೇವಾಲಯಗಳಿಗಾಗಿ ಈ ಊರು ಪ್ರಸಿದ್ಧವಾಗಿದೆ. ಈಗ ಲಕ್ಷ್ಮೀನರಸಿಂಹ ದೇವಾಲಯ ಎಂದು ಕರೆಯುವ ವಿಷ್ಣು ದೇವಾಲಯ (ರಚನೆ 1246) ತ್ರಿಕೂಟಾಚಲ, ಮಧ್ಯದ ಗರ್ಭಗುಡಿಯಲ್ಲಿ ಪ್ರಸನ್ನಕೇಶವ ವಿಗ್ರಹ ಇದೆ. ಉಳಿದ ಗರ್ಭಗುಡಿಗಳಲ್ಲಿ ಒಂದು ಕಡೆ ಲಕ್ಷ್ಮೀನರಸಿಂಹ ಮತ್ತು ಇನ್ನೊಂದು ಕಡೆ ವೇಣುಗೋಪಾಲ ಮೂರ್ತಿಗಳು ಇವೆ. ಮಧ್ಯದ ಗರ್ಭಗುಡಿಗೆ ಮಾತ್ರ ಹೊಯ್ಸಳರ ಕಾಲದ ಸುಂದರ ಗೋಪುರವಿದೆ. ಸೋಮನಾಥಪುರ, ಹೊಸಹೊಳಲು, ಅರಳಗುಪ್ಪೆ ಮುಂತಾದ ಕಡೆ ಇರುವ ಹೊಯ್ಸಳ ದೇವಾಲಯಗಳ ಮಾದರಿಯಲ್ಲಿಯೇ ಇರುವ ಈ ದೇವಾಲಯ ಜಗತಿಯ ಮೇಲೆ ಬಳಪದ ಕಲ್ಲಿನಿಂದ ನಿರ್ಮಿತವಾಗಿದ್ದು ಹೊರಗೋಡೆಗಳ ಬುಡದಲ್ಲಿ ಆನೆ, ಕುದುರೆ ಪೌರಾಣಿಕ ಕಥೆ, ಮಕರ ಮತ್ತು ಹಂಸಗಳ ಸಾಲುಗಳನ್ನೊಳಗೊಂಡ ಪಟ್ಟಿಕೆಗಳಿವೆ. ಪೌರಾಣಿಕ ಕಥೆಗಳಲ್ಲಿ ಭಾಗವತದ ಕಥೆಯನ್ನು ಮಾತ್ರ ಶಿಲ್ಪಿಸಿರುವುದೊಂದು

ಈ ದೇವಾಲಯದ ವೈಶಿಷ್ಟ್ಯ. ಗೋಡೆಗಳ ಮೇಲಿನ ಮೂರ್ತಿಗಳು ಬಹುಮಟ್ಟಿಗೆ ಹೊಸಹೊಳಲು ಮತ್ತು ಸೋಮನಾಥಪುರದ ದೇವಾಲಯಗಳ ಮೇಲಿನ ಮೂರ್ತಿಗಳಂತೆಯೇ ಇದ್ದು ಬಳ್ಳಿವಿ ತಾನಗಳ ಕೆಳಗೆ ಹಲವು ಭಂಗಿಗಳಲ್ಲಿ ನಿಂತಿರುವ ಬಗೆಬಗೆಯ ದೇವತಾ ಮೂರ್ತಿಗಳು. ಅವುಗಳ ಎತ್ತರಕ್ಕೆ ಸ್ವಲ್ಪ ಸ್ಥೂಲವೆನಿಸಿದರೂ ರಮಣೀಯವಾಗಿದ್ದು ಹೊಯ್ಸಳ ಶಿಲ್ಪದ ಮಾದರಿಯೆನಿಸಿದೆ. ಸುಂದರವಾದ ನವರಂಗದ ದ್ವಾರದ ಮೇಲೆ ವೀಣೆ ನುಡಿಸುತ್ತಿರುವ ಸರಸ್ವತಿಯ ಮೂರ್ತಿಯಿದೆ. ನವರಂಗದ ಒಳ ಚಾವಣಿಗಳಲ್ಲಿ ಆಳವಾದ ಭುವನೇಶ್ವರಿಗಳಿದ್ದು ಒಂದೊಂದೂ ಬೇರೆ ಬೇರೆ ಬಗೆಯ ಆಕೃತಿಗಳನ್ನು ಹೊಂದಿವೆ. ಈ ದೇವಾಲಯದ ಅನೇಕ ಮೂರ್ತಿಗಳನ್ನು ಕಡೆದಿರುವವನು ಪ್ರಸಿದ್ಧ ಶಿಲ್ಪಿ ಮಲ್ಲಿತಮ್ಮ. ಇವನು ದೇವಾಲಯದ ಉತ್ತರಭಾಗದಲ್ಲಿ ತನ್ನ ನೈಪುಣ್ಯವನ್ನು ತೋರಿದ್ದರೆ ದಕ್ಷಿಣಭಾಗದಲ್ಲಿ ಅಷ್ಟೇ ಉತ್ತಮವಾಗಿ ಕಂಡರಿಸಿರುವವನು ಅರಿಬಿರಿದ ರೂವಾರಿ ಗಿರಿವಜ್ರದಂಡ, ಬಿರಿದ ಪ್ರಸಾದಿ ಮಸ್ತಕಶೂಲ ಎಂಬ ಬಿರುದುಗಳಿದ್ದ ನಂದಿಯ ಬೈಚೋಜ. ಈ ದೇವಾಲಯದ ಪಾತಾಳಾಂಕಣ, ಹಜಾರ, ಹೊರನವರಂಗ ಮತ್ತು ಉಳಿದೆರಡು ಗರ್ಭಗುಡಿಗಳ ಗೋಪುರಗಳು ಇಲ್ಲಿ ಆಳುತ್ತಿದ್ದ ಪಾಳೆಯಗಾರರ ಕಾಲದಲ್ಲಿ ನಿರ್ಮಿತವಾದುವು.

ಇಲ್ಲಿರುವ ಸದಾಶಿವದೇವಾಲಯ 1249ರ ರಚನೆ. ಆದರೆ ಈಗ ಸುತ್ತಲೂ ಅನೇಕ ಈಚಿನ ಕಟ್ಟಡಗಳು ತುಂಬಿವೆ. ಮೂಲ ಹೊಯ್ಸಳ ದೇವಾಲಯದ ಹೊರಗೋಡೆಗಳ ಮೇಲೆ ಮೂರ್ತಿಶಿಲ್ಪವಿಲ್ಲದಿದ್ದರೂ ಇದರ ಗೋಪುರ ವಿಶಿಷ್ಟವಾಗಿದೆ. ನವರಂಗದ ಭುವನೇಶ್ವರಿಗಳು ಸುಂದರವಾಗಿವೆ.

13ನೆಯ ಶತಮಾನದಲ್ಲಿ ನುಗ್ಗೇಹಳ್ಳಿ ಒಂದು ಅಗ್ರಹಾರವಾಗಿತ್ತು. ಹೊಯ್ಸಳ ಸೋಮೇಶ್ವರನ ಕಾಲದಲ್ಲಿ 1246ರಲ್ಲಿ ಬೊಮ್ಮಣ್ಣ ದಂಡನಾಯಕ ಇದನ್ನು ಅಗ್ರಹಾರವಾಗಿ ಮಾಡಿದನೆಂದೂ ಊರಿನ ಮಧ್ಯದಲ್ಲಿ ವಿಷ್ಣುದೇವಾಲಯ ಮತ್ತು ಈಶಾನ್ಯಕ್ಕೆ ಶಿವದೇವಾಲಯವನ್ನು ಕಟ್ಟಿಸಿದನೆಂದೂ ಶಾಸನಗಳು ತಿಳಿಸುತ್ತವೆ. ಈತನ ಅಕ್ಕ ಲಕ್ಕವ್ವೆ ಮತ್ತು ಬಲುಮನುಷ್ಯ ಕಮ್ಮಟದ ಬಸವಣ್ಣ ಇವರಿಬ್ಬರೂ ಇಲ್ಲಿಛತ್ರಗಳನ್ನು ಕಟ್ಟಿಸಿ ದತ್ತಿ ಬಿಟ್ಟರು. ವಿಜಯನಗರದ ಅರಸರ ಆಳ್ವಿಕೆಯ ಕಾಲದಲ್ಲಿ ಇದು ಒಂದು ನಾಡಿನ ರಾಜಧಾನಿಯಾಗಿದ್ದು ಕಟ್ಟಿಗೆ ಗುಂಡಪ್ಪನಾಯಕ ಆಳುತ್ತಿದ್ದಾಗ ಇಲ್ಲಿನ ದೇವಾಲಯಗಳ ಜೀರ್ಣೋದ್ಧಾರ ನಡೆಯಿತು. (ಎಂ.ಎಚ್.)

16ನೆಯ ಶತಮಾನದಲ್ಲಿ ನುಗ್ಗೇಹಳ್ಳಿ ಒಂದು ಪಾಳೆಯಪಟ್ಟಾಗಿತ್ತು. ಇದನ್ನು ಆಳಿದ ನುಗ್ಗೇಹಳ್ಳಿ ಪಾಳೆಯಗಾರರು ಪೂಡೂರ ವಂಶಕ್ಕೆ ಸೇರಿದವರು. ಒಂದು ಬಿರುದಿನ ಪ್ರಕಾರ ಇವರು ಹದಿಮೂರು ರಾಜರನ್ನು ಮೀರಿಸಿದವರು. ಸು. 1573ರ ಒಂದು ಶಾಸನದ ಪ್ರಕಾರ ಇವರ ವಂಶಾವಳಿ ವಿಜಯನಗರದ ಪ್ರೌಢದೇವರಾಯನ ಆಳಿಯ ತಿರುಮಲರಾಯನ ವರೆಗೂ ಹೋಗುತ್ತದೆ. ತಿರುಮಲರಾಯನಿಗೆ ರಾಯ ಒಡೆಯ ಎಂಬ ಮಗನಿದ್ದ. ಈತ ತಿರುವೇಂಗಳನಾಥ ದೇವರ ಪ್ರತಿಮೆಯನ್ನು ಪ್ರತಿಷ್ಠಿಸಿ ಕಟ್ಟಿಗೆಯಹಳ್ಳಿಯನ್ನು ದಾನವಾಗಿ ಕೊಟ್ಟ. ಕಬ್ಬಿಗರ ಕೈಪಿಡಿ ಎಂಬ ಗ್ರಂಥದ ಕರ್ತೃ ಲಿಂಗಮಂತ್ರಿ ಎಂಬುವನು ಈತನ ಮಂತ್ರಿಯಾಗಿದ್ದ. ರಾಯ ಒಡೆಯನ ಮಗ ಇಂದುಶೇಖರ, ಇವನ ಮಗ ಬಸವರಾಜಯ್ಯ ದೇವ ಮಹಾಅರಸು. 1531ರ ಒಂದು ಶಾಸನ ನುಗ್ಗೇಹಳ್ಳಿಯ ವಿರೂಪರಾಜ ಮಹಾ ಅರಸುವಿನ ಮಗನಾದ ಮಲರಾಜನು ಸೀಗೆಯ ಹನುಮಂತ ದೇವಾಲಯಕ್ಕೆ ಭೂಮಿಯನ್ನು ದಾನಮಾಡಿದನೆಂದು ತಿಳಿಸುತ್ತದೆ. ಮಲರಾಜನಿಗೆ ಭುವನೈಕ ವೀರ ಮತ್ತು ಗಜಬೇಟೆರಾಜ ಎಂಬ ಬಿರುದುಗಳಿದ್ದವು. ವಿರೂಪರಾಜ ಅರಸುವಿನ ಕಾಲದಲ್ಲಿ ರಾಮನಾಥಪುರದ ರಾಮೇಶ್ವರ ದೇವಾಲಯಕ್ಕೆ ಒಂದು ದಾನವನ್ನು ಕೊಡಲಾಯಿತು. ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯದ ಉತ್ಸವವಿಗ್ರಹ ಮತ್ತು ಹಲವು ಇತರ ಲೊಹದ ಪ್ರತಿಮೆಗಳ ಹೆಸರುಪಟ್ಟಿಯ ಪ್ರಕಾರ ಈ ವಿಗ್ರಹಗಳನ್ನು ನುಗ್ಗೇಹಳ್ಳಿಯ ಪಾಳೆಯಗಾರನಾಗಿದ್ದ ಗೋಪಾಲನೆಂಬಾತ ಮಾಡಿಸಿದನೆಂದು ತಿಳಿಯುತ್ತದೆ. (ಎ.ವಿ.ವಿ.)

**ನುಲಿಯ ಚಂದಯ್ಯ:** ಹನ್ನೆರಡನೆಯ ಶತಮಾನದಲ್ಲಿದ್ದ ಶಿವಶರಣ ಹಾಗೂ ವಚನಕಾರ. ಕಲ್ಯಾಣದಲ್ಲಿ ಹುಲ್ಲಿನ ಹಗ್ಗ ಮಾಡಿ ಮಾರುವ ಕಾಯಕ ಕೈಕೊಂಡು ಜೀವಿಸುತ್ತಿದ್ದ. ಈತ ಬಿಜಾಪುರ ಜಿಲ್ಲೆಯ ಶಿವಣಗಿ ಗ್ರಾಮದವನೆಂಬ ಹೇಳಿಕೆ ಇದೆ. ಇವನು ನಿಃಸ್ಪೃಹಿಯೂ ತತ್ತ್ವಾಚರಣೆಯಲ್ಲಿ ನಿಷ್ಠುರನೂ ಆಗಿದ್ದ. ಇಷ್ಟ ಲಿಂಗ ಹೆಚ್ಚೋ ಜಂಗಮ ಹೆಚ್ಚೋ ಎಂಬ ವೀರಶೈವ ಧರ್ಮದ ಸೂಕ್ಷ್ಮ ಚರ್ಚೆಯ ವಿಷಯದಲ್ಲಿ ಈತನ ಹೆಸರು ಪ್ರಸಿದ್ಧಿಪಡೆದಿದೆ. ಒಮ್ಮೆ ಸಜ್ಜೆಯಿಂದ ಈತನ ಇಷ್ಟಲಿಂಗ ಜಾರಿ ನೀರಿಗೆ ಬಿದ್ದಾಗ ಆ ಲಿಂಗ ತಾನಾಗಿಯೇ ಇವನನ್ನು ಅನುಸರಿಸಿ ಬರುವಂತೆ ಮಾಡಿದನೆಂಬ ಕಥೆಯಿದೆ.

ಈತ ಚಂಡೇಶ್ವರಲಿಂಗ ಎಂಬ ಅಂಕಿತವನ್ನಿಟ್ಟುಕೊಂಡು ವಚನಗಳನ್ನು ಬರೆದಿದ್ದಾನೆ. ಇದುವರೆಗೆ 49 ವಚನಗಳು ದೊರೆತಿವೆ. ಕೈದಹಿಡಿದಾಡುವರೆಲ್ಲರೂ ಇಟುಯ ಬಲ್ಲರೆ ಸಾಧನೆಯ ಮಾಡುವ ಬಾಲರೆಲ್ಲರು ಕಾದಬಲ್ಲರೆ? ಅರ್ಥಿಗೆ ಮಾಡುವ ಕೃತ್ಯವಂತರೆಲ್ಲರು ಸದ್ಭಕ್ತರಪ್ಪರೆ? ಅದು ಚಂಡೇಶ್ವರಲಿಂಗಕ್ಕೆ ಸಲ್ಲದ ಮಾಟ - ಎಂಬ ವಚನ ಇವನ ಶೈಲಿಗೆ, ಅನುಭಾವಶ್ರೀಮಂತಿಕೆಗೆ ನಿದರ್ಶನವಾಗಿದೆ. ಈತನ ವಿಷಯವನ್ನು ಕುರಿತು 'ನುಲಿಯ ಚಂದಯ್ಯನ ಶರದ' ಎಂಬ ಗ್ರಂಥ ರಚಿತವಾಗಿದೆ. (ಎಸ್.ಎಸ್.ಎಂ.ಎ.)

**ನೂರೊಂದ :** ಸು. 1740. ವೀರಶೈವ ಕವಿ. ಸೌಂದರ್ಯಕಾವ್ಯದ ಕರ್ತೃ. ಮೈಸೂರು ದೊರೆ ಇಮ್ಮಡಿ ಕೃಷ್ಣರಾಜನ (1734-1766) ಸಮಕಾಲೀನ. ಕಳಲೆ ನಂಜರಾಜನ ಆಶ್ರಿತನಾಗಿದ್ದಂತೆ ಕಾಣುತ್ತದೆ. ಈ ಕೃತಿ ಸಾಂಗತ್ಯದಲ್ಲಿದ್ದು 13 ಸಂಧಿ 1395 ಪದ್ಯಗಳನ್ನೊಳಗೊಂಡಿದೆ. ನಂಜುಂಡಲಿಂಗನ ಕೃಪೆಯಿಂದ ಕೃತಿಯನ್ನು ರಚಿಸಿರುವುದಾಗಿ ಕವಿ ತಿಳಿಸಿದ್ದಾನೆ. ಪ್ರತಿ ಸಂಧಿಯ ಕೊನೆಯಲ್ಲಿ ಪಶ್ಚಿಮರಂಗೇಶನ ಸ್ತುತಿ ಇದೆ.

ಸೌಂದರಕಾವ್ಯ ಐತಿಹಾಸಿಕ ಕಾವ್ಯಪರಂಪರೆಗೆ ಸಂಬಂಧಿಸಿದ ಕೃತಿ. ಇದರಲ್ಲಿ ಮೈಸೂರು ಅರಸು ಇಮ್ಮಡಿ ಕೃಷ್ಣರಾಜನ ದಳಪತಿಗಳಾದ ಕಳಲೆ ದೇವರಾಜ, ನಂಜರಾಜರು ಶ್ರೀರಂಗಪಟ್ಟಣವನ್ನು ಆಕ್ರಮಿಸಲು ತೊಡಗಿದ ಮೊಗಲರ ಬಾರಮಲ್ಲ ಮತ್ತು ಬಾದುರರೊಡನೆ ನಡೆಸಿದ ಹೋರಾಟ ಹಾಗೂ ಗಳಿಸಿದ ವಿಜಯದ ವಿವರಗಳಿವೆ. ಕಾವ್ಯದಲ್ಲಿ ಬರುವ ಅಂದಿನ ರಾಜರ ಬಗೆಗಿನ ಉಲ್ಲೇಖಗಳು, ಯುದ್ಧ ವರ್ಣನೆಗಳು, ಮಹಾನವಮಿ ಉತ್ಸವ, ಚಂಡಿಕಾಪೂಜೆ, ಮಲ್ಲರ ಕಾಳಗ, ವಿಜೇತರ ಸನ್ಮಾನಾದಿಗಳ ಪರಿಶೀಲನೆಯಿಂದ ಅಂದಿನ ಕಾಲದ ರಾಜಕೀಯ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಪರಿಸ್ಥಿತಿಯ ಚಿತ್ರವನ್ನು ಕಂಡುಕೊಳ್ಳಬಹುದಾಗಿದೆ. ಈ ದೃಷ್ಟಿಯಿಂದ ಈ ಕೃತಿ ಅಂದಿನ ಕಾಲದಲ್ಲಿನ ರಾಜಕೀಯದ ಪರಿಸ್ಥಿತಿಯನ್ನು ಅಭ್ಯಸಿಸುವವರಿಗೆ ಮೂಲ ಸಾಮಗ್ರಿಯನ್ನೊದಗಿಸುವ ತವನಿಧಿಯಾಗಿದೆ. *

**ನೃತ್ಯ:** ಮಾನವನ ಕಲಾಭಿವ್ಯಕ್ತಿ ಮಾಧ್ಯಮಗಳಲ್ಲಿ ನೃತ್ಯ ಬಹು ಪ್ರಾಚೀನದ್ದಾಗಿರಬೇಕೆಂಬುದು ಇತಿಹಾಸಕಾರರ ಅಭಿಪ್ರಾಯ. ಆದರೆ ಈ ಕಲೆಯ ಪ್ರಾಚೀನತೆ ಹಾಗೂ ಹಿಂದೆ ಪ್ರಚಲಿತವಿದ್ದ ರೀತಿಗಳ ಸ್ವರೂಪವನ್ನು ನಿರ್ಧರಿಸಲು ಸಾಕಷ್ಟು ಆಧಾರಗಳು ದೊರಕುವುದಿಲ್ಲ. ಕರ್ನಾಟಕದಲ್ಲಿ ರಾಯಚೂರು, ಬಳ್ಳಾರಿ ಮತ್ತು ಬಿಜಾಪುರ ಜಿಲ್ಲೆಗಳ ಕೆಲವು ಪ್ರಾಗೈತಿಹಾಸಿಕ ನೆಲೆಗಳ ಬಳಿಯ ಕೆಲವು ಬಂಡೆಗಳ ಮೇಲೆ, ಸಾಮೂಹಿಕ ನೃತ್ಯದಲ್ಲಿ ನಿರತರಾಗಿರುವ ವ್ಯಕ್ತಿಗಳ ಚಿತ್ರಗಳು ಇವೆ. ಆ ಕಾಲದ ಸ್ಥಳೀಯ ಜನಾಂಗಗಳಲ್ಲಿ ರೂಢಿತವಾಗಿದ್ದ ನೃತ್ಯ ಪದ್ಧತಿಗೆ ಇಂಥ ಚಿತ್ರಗಳೇ ಸಾಕ್ಷ್ಯ. ಆದರೆ ಈ ಚಿತ್ರಗಳ ಕಾಲವನ್ನು ತೀರ್ಮಾನಿಸುವುದು ಸುಲಭವಲ್ಲ. ಹೆಚ್ಚಿನವು ನವಶಿಲಾಯುಗ ಮತ್ತು ತಾಮ್ರಶಿಲಾಯುಗದ ಕಾಲದವಿರಬೇಕೆಂದು ಕೆಲವು ಸಾಂದರ್ಭಿಕ ಸಾಕ್ಷ್ಯಗಳಿಂದ ಊಹಿಸಲಾಗಿದೆ. ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆ (ನೋಡಿ) ಬಳಿ ಇರುವ ಇಂಥ ಒಂದು ಚಿತ್ರದಲ್ಲಿ ಹಲವು ವ್ಯಕ್ತಿಗಳು ಸಾಲಾಗಿ ಕೈಕೈ ಹಿಡಿದು ನರ್ತಿಸುತ್ತಿದ್ದಂತೆ ತೋರಿಸಲಾಗಿದೆ. ಆ ಚಿತ್ರದ ಸನ್ನಿವೇಶ, ರೂಪಣಾವಿಧಾನ - ಇವುಗಳನ್ನು ಅಭ್ಯಸಿಸಿದ ಪ್ರಾಗಿತಿಹಾಸಕಾರರೊಬ್ಬರು ಇದನನು ನವಶಿಲಾಯುಗದ

ಕಾಲದ್ದೆಂದು ನಿರ್ದೇಶಿಸಿರುವುದಲ್ಲದೆ, ಇದೇ ರೀತಿಯ ನೃತ್ಯ ಸಂಪ್ರದಾಯ ಈಗಲೂ ಆ ಪರಿಸರದ ಬೋಯ ಜನಾಂಗದಲ್ಲಿ ರೂಢಿತವಾಗಿರುವುದನ್ನು ಗುರುತಿಸಿದ್ದಾರೆ. ಬೋಯಗಳು ಸಂಕ್ರಾಂತಿ ಹಬ್ಬದ ಕಾಲದಲ್ಲಿ ಬೇಟೆಯಾಡುವ ಮೊದಲು ಬೇಟೆ ಫಲಯುತವಾಗಲು ಈ ರೀತಿಯ ನೃತ್ಯವನ್ನು ಮಾಡುತ್ತಾರೆ. ಈ ವಿಷಯ ಕರ್ನಾಟಕದಲ್ಲಿ ಪ್ರಾಗಿತಿಹಾಸ ಕಾಲದಲ್ಲಿ ರೂಢಿತವಾಗಿದ್ದ ಒಂದು ನೃತ್ಯ ಸಂಪ್ರದಾಯದ ಬಗ್ಗೆ ಕಿರುಕಿಂಡಿಯನ್ನು ಒದಗಿಸುವುದಲ್ಲದೆ, ಬಹುಶಃ ಅಂದಿನ ಬಹುತೇಕ ನೃತ್ಯಗಳು ಇತರ ಪ್ರಾಚೀನ ಜನಾಂಗಗಳಲ್ಲಿದ್ದಂತೆ ಇಲ್ಲಿಯೂ ಧಾರ್ಮಿಕ ಮಾಂತ್ರಿಕ ಸ್ವರೂಪದ್ದಾಗಿರಬಹುದಾದುದನ್ನು ಸೂಚಿಸುತ್ತದೆ.

ಇಂದು ಕರ್ನಾಟಕದಲ್ಲಿ ಪ್ರಚಲಿತವಾಗಿರುವ ನೃತ್ಯ ಸಂಪ್ರದಾಯಗಳಲ್ಲಿ ಜನಪದ, ಶಿಷ್ಟ ಎಂಬ ಎರಡು ಭಿನ್ನ ಸಂಪ್ರದಾಯಗಳನ್ನು ಗಮನಿಸಬಹುದು. ಇವುಗಳಲ್ಲಿ ಕಂಡುಬರುವ ತಂತ್ರ ಮತ್ತು ಅಭಿವ್ಯಕ್ತಿ ರೀತಿಗಳು ಈ ಸಂಪ್ರದಾಯಗಳ ವಿಶಿಷ್ಟತೆಯನ್ನು ಸೂಚಿಸುವುದಲ್ಲದೆ, ಜನಪದ ಸಂಪ್ರದಾಯ ಬಹುತೇಕ ಪರಂಪರಾತ್ಮಕವಾಗಿ ಉಳಿದು ಬಂದಿದ್ದು ಸರಳ ರೀತಿಯವಾಗಿದ್ದರೆ, ಶಿಷ್ಟ ಸಂಪ್ರದಾಯ ಶಾಸ್ತ್ರೀಯ ಚೌಕಟ್ಟಿನೊಳಗೆ ಬೆಳೆದು ಬಂದಿರುವುದನ್ನು ಗಮನಿಸಬಹುದು. ಅಲ್ಲದೆ ಜನಪದ ನೃತ್ಯ ಸಂಪ್ರದಾಯಗಳು ಬಹುಮಟ್ಟಿಗೆ ಸ್ಥಳೀಯವೇ ಆಗಿದ್ದರೆ, ಶಿಷ್ಟ ಸಂಪ್ರದಾಯ ಕರ್ನಾಟಕದ ಹೊರಗೂ ಪ್ರಚಲಿತವಾಗಿ ವ್ಯಾಪಕವಾಗಿದೆ. ಮೇಲೆ ಉದಾಹರಿಸಿದ ಪ್ರಾಗೈತಿಹಾಸಿಕ ಚಿತ್ರಗಳು ಮತ್ತು ಬೋಯಗಳ ನೃತ್ಯಗಳ ಮಾಹಿತಿ ಜನಪದ ಸಂಪ್ರದಾಯದ ಮೂಲವನ್ನೂ ಸೂಚಿಸುವಂತಿವೆ. ಈ ಜನಪದ ನೃತ್ಯಗಳು ಸಹ ಕಾಲಕಾಲಕ್ಕೆ ಪರಿಸರ ಪ್ರಭಾವದಿಂದ ಪ್ರಾಚೀನ ಕಾಲದಿಂದ ಇಲ್ಲಿನವರೆಗೆ ನಡೆದುಬಂದ ಗತಿಯಲ್ಲಿ ಬದಲಾವಣೆಗಳನ್ನು ಸ್ವಲ್ಪಮಟ್ಟಿಗೆ ಹೊಂದಿರಬಹುದಾದರೂ ತನ್ನ ಮೂಲ ಆಶಯಗಳನ್ನು ಹೆಚ್ಚುಕಡಿಮೆ ಉಳಿಸಿಕೊಂಡು ಬಂದಿರುವಂತೆ ತೋರುತ್ತದೆ. ಆದರೆ ಈ ಸಂಪ್ರದಾಯದ ಇತಿಹಾಸ ರಚನೆಗೆ ದೊರಕುವ ಸಾಮಗ್ರಿಗಳು ಬಹು ಅಲ್ಪ. ಕರ್ನಾಟಕದಲ್ಲಿ ಇಂದು ಸುಮಾರು 40ಕ್ಕೂ ಹೆಚ್ಚು ಜನಪದ ನೃತ್ಯರೂಪಗಳನ್ನು ಗುರುತಿಸಲಾಗಿದೆ (ನೋಡಿ: ಜನಪದ ನೃತ್ಯಗಳು).

ಕರ್ನಾಟಕದಲ್ಲಿ ಶಿಷ್ಟವೆನ್ನಬಹುದಾದ ನೃತ್ಯ ಪರಂಪರೆ ಎಂದು ಪ್ರಾರಂಭವಾಯಿತು; ಅದಕ್ಕೂ ಸ್ಥಳೀಯ ಜನಪದ ನೃತ್ಯಗಳಿಗೂ ಇರುವ ಅಥವಾ ಇದ್ದ ಸಂಬಂಧವೇನು ಎಂಬ ಅಂಶಗಳು ಅಸ್ಪಷ್ಟವಾಗಿವೆ. ಇಂದಿನ ಶಿಷ್ಟ ನೃತ್ಯ ಸಂಪ್ರದಾಯದ ಪ್ರಚಾರ ಮತ್ತು ಪರಿಸರವನ್ನು ಗಮನಿಸಿದರೆ ಇದು ನಾಗರಿಕ ವರ್ಗಗಳಲ್ಲಿ ವಿಶಿಷ್ಟವಾಗಿ ಕಂಡುಬರುವಂಥದಾಗಿರುವುದರಿಂದ ಬಹುಶಃ ನಾಗರಿಕ ವ್ಯವಸ್ಥೆ ಕರ್ನಾಟಕದಲ್ಲಿ ರೂಢಿಗೆ ಬಂದ ಕಾಲದಿಂದ ಇಂಥ ಸಂಪ್ರದಾಯವೂ ಬೆಳೆದಿರಬಹುದು ಎನ್ನಬಹುದಾದರೂ ಇದಕ್ಕೆ ಸ್ಪಷ್ಟ ಮಾಹಿತಿಗಳಿಲ್ಲ. ಕರ್ನಾಟಕದಲ್ಲಿ ಸನ್ನತಿ ಮೊದಲಾದೆಡೆ ದೊರಕುವ ಸಾತವಾಹನರ ಕಾಲದ ಶಿಲ್ಪ ಫಲಕಗಳಲ್ಲಿ ಕೆಲವೆಡೆ ನರ್ತಕರ ಶಿಲ್ಪಗಳು ಇವೆ. ಹಾಗೆಯೇ ಐಹೊಳೆ, ಬಾದಾಮಿ, ಪಟ್ಟದಕಲ್ಲು, ಮುಂದೆ ಎಲ್ಲೋರ, ಹಳೇಬೀಡು, ಬೇಲೂರು, ಹಂಪೆ ಮೊದಲಾದ ಹಲವಾರು ವಾಸ್ತುಶಿಲ್ಪ ಕಲಾಕೇಂದ್ರಗಳಲ್ಲಿ ನರ್ತಿಸುತ್ತಿರುವ ದೇವಶಿಲ್ಪಗಳೂ ಮಾನವಶಿಲ್ಪಗಳೂ ಇವೆ. ಇವುಗಳಲ್ಲಿ ನಿರೂಪಿತವಾಗಿರುವ ನೃತ್ಯಭಂಗಿಗಳು, ಪೋಷಕ ವಾದ್ಯಗಳು ಇವುಗಳನ್ನು ಪರಿಶೀಲಿಸಿ ಬೇರೆ ಬೇರೆ ಗ್ರಾಂಥಿಕ ಆಧಾರಗಳು ಮತ್ತು ಪ್ರಚಲಿತವಾಗಿರುವ ಶಿಷ್ಟ ನೃತ್ಯಸಂಪ್ರದಾಯದೊಡನೆ ಹೋಲಿಸಿ ಕರ್ನಾಟಕದ ಶಿಷ್ಟ ನೃತ್ಯಸಂಪ್ರದಾಯದ ಬೆಳವಣಿಗೆಯನ್ನು ಸ್ಥೂಲವಾಗಿ ನಿರ್ದೇಶಿಸಬಹುದಾದರೂ ಅಂಥ ಅಧ್ಯಯನ ಇನ್ನೂ ನಡೆದಿಲ್ಲ. ಆದರೆ ಈ ಶಿಲ್ಪಗಳ ನಿರೂಪಣೆಯ ಪರಿಸರ ಮತ್ತು ಅನೇಕ ಸಾಂದರ್ಭಿಕ ಅಂಶಗಳು ಇವುಗಳಲ್ಲಿ ಬಹುಮಟ್ಟಿಗೆ ಶಿಷ್ಟ ನೃತ್ಯ ಸಂಪ್ರದಾಯದ ನಿರೂಪಣೆ ಕಂಡುಬರುತ್ತದೆ ಎನ್ನಬಹುದು. ಬೇಲೂರಿನ ಕೇಶವ ದೇವಾಲಯದಲ್ಲಿರುವ ಮದನಿಕೆ ವಿಗ್ರಹಗಳಲ್ಲಿ ಕಂಡುಬರುವ ನೃತ್ಯ ಭಂಗಿಗಳು, ರಸಭಾವ ನಿರೂಪಣೆ, ಚೆಲುವು ಲೋಕಪ್ರಸಿದ್ಧವಾಗಿವೆ (ಪಟ್ಟದಕಲ್ಲು, ಹಂಪೆ ಮೊದಲಾದೆಡೆಗಳಲ್ಲಿ ಕೋಲಾಟ ಮೊದಲಾದ ಜನಪದ ನೃತ್ಯಗಳೂ ಅಪರೂಪವಾಗಿ ಶಿಲ್ಪಿತವಾಗಿವೆ).

ಶಿಷ್ಟ ನೃತ್ಯಸಂಪ್ರದಾಯದ ಬೆಳವಣಿಗೆಗೆ ರಾಜಾಸ್ಥಾನಗಳು, ಶ್ರೀಮಂತವರ್ಗ ಮತ್ತು ದೇವಾಲಯಗಳು ಆವಶ್ಯಕ ಪೋಷಣೆಯನ್ನು ಒದಗಿಸಿರುವುವು. ಕರ್ನಾಟಕದ ಅನೇಕ ಶಾಸನ ಮತ್ತು ಸಾಹಿತ್ಯ ಕೃತಿಗಳು ಈ ವಿಷಯದ ಬಗ್ಗೆಯೂ ಅಂದಿನ ನೃತ್ಯದ ಸ್ವರೂಪದ ಬಗ್ಗೆಯೂ ಹಲವು ಮಾಹಿತಿಗಳನ್ನು ಒದಗಿಸುತ್ತವೆ. ಕ್ರಿ.ಶ. 9ನೆಯ ಶತಮಾನದ ಪಟ್ಟದಕಲ್ಲಿನ ಒಂದು ಶಾಸನದಲ್ಲಿ ಭರತ ನಾಟ್ಯ ಶಾಸ್ತ್ರದಲ್ಲಿ ಸಂಪೂರ್ಣ ಪರಿಣತಿಯನ್ನು ಪಡೆದಿದ್ದ ಒಬ್ಬ ನಟನ ಪ್ರಶಂಸೆಯಿದೆ. ದೇವಾಲಯದಲ್ಲಿ ದೇವರಿಗೆ ಸಂಗೀತ ನೃತ್ಯಸೇವೆಗಳನ್ನು ಅರ್ಪಿಸುವುದು ರೂಢಿಯಲ್ಲಿದ್ದ ಮತ್ತು ಈ ಉದ್ದಿಶ್ಯಕ್ಕಾಗಿ ದೇವದಾಸಿಯರನ್ನು (ಪಾತ್ರ) ನಿಯಮಿಸುತ್ತಿದ್ದ ವಿಷಯವನ್ನು ಕರ್ನಾಟಕದ ನೂರಾರು ಶಾಸನಗಳು ತಿಳಿಸುತ್ತವೆ. ಪಟ್ಟದಕಲ್ಲಿನ 778-79ರ ಒಂದು ಶಾಸನ ಈ ಪದ್ಧತಿಯ ಬಗ್ಗೆ ಕರ್ನಾಟಕದಲ್ಲಿ ದೊರಕುವ ಪ್ರಾಚೀನ ಉಲ್ಲೇಖವೆಂದು ತೋರುತ್ತದೆ. ಜಿನ ಭವನದಲ್ಲಿ ನಡೆಯುವ ವಾರವಿಲಾಸಿನೀವಿರಚಿತ ನೃತ್ಯಗೀತವಾದ್ಯಗಳಿಗೆ ದಾನ ಕೊಟ್ಟ ಪ್ರಸ್ತಾಪ 802ರ ಶಾಸನವೊಂದರಲ್ಲಿದೆ. ದೇವಾಲಯಗಳಿಗೆ ಪೋಷಣೆ ಬೆಳೆದು ಅವುಗಳ ಸಂಪತ್ತು ವರ್ಧಿಸಿದಂತೆಲ್ಲಾ ಅವು ಶಿಷ್ಟ ನೃತ್ಯಕಲೆಯನ್ನು ಪೋಷಿಸುವ ಸ್ಥಾನಗಳಾಗಿಯೂ ಬೆಳೆದಂತೆ ತೋರುತ್ತದೆ. ಈ ವ್ಯವಸ್ಥೆ ಇತ್ತೀಚೆಗೆ 20ನೆಯ ಶತಮಾನದ ಹತ್ತಿರದವರೆಗೂ ರೂಢಿಯಲ್ಲಿತ್ತು.

ರಾಜರು, ಮಾಂಡಲಿಕರು ನೃತ್ಯ ಸಂಗೀತಾದಿ ಕಲಾಪೋಷಕರಾಗಿದ್ದುದು ಬಹುಶ್ರುತ ವಿಷಯ. ಅಲ್ಲದೆ ರಾಜಕುಲದ ಅನೇಕ ಸ್ತ್ರೀಯರೂ ನೃತ್ಯಕಲೆಯಲ್ಲಿ ಪರಿಣತಿಯನ್ನು ಪಡೆದವರಾಗಿರುತ್ತಿದ್ದರೆಂಬ ವಿಷಯ ಸಹ ಶಾಸನೋಲ್ಲೇಖಗಳಿಂದ ತಿಳಿಯುತ್ತದೆ. ಉದಾಹರಣೆಗೆ ವಿಷ್ಣುವರ್ಧನನ ರಾಣಿ ಶಾಂತಲದೇವಿ ನೃತ್ಯವಿದ್ಯಾಶಾರದೆಯಾಗಿದ್ದಳೆಂಬುದನ್ನು ಅನೇಕ ಶಾಸನಗಳು ಬಹುವಾಗಿ ಹೊಗಳಿವೆ. ಸುಮಾರು 1174ರಲ್ಲಿ ಕಳಚುರಿ ಸೋವಿದೇವನ ರಾಣಿಯಾದ ಸೋವಲದೇವಿ ತನ್ನ ದೇಶದ ಹಾಗೂ ಪರದೇಶದ ಲಲಿತಕಲಾ ನಿಪುಣರಾದ ರಸಿಕರ ಮುಂದೆ ತನ್ನ ನೃತ್ಯಪಾಂಡಿತ್ಯವನ್ನು ಪ್ರದರ್ಶಿಸುತ್ತಿದ್ದಳಂತೆ. ಹಾಗೆಯೇ ತ್ರಿಭುವನಮಲ್ಲ ಮಲ್ಲಿದೇವ ಚೋಳ ಮಹಾರಾಜನ ರಾಣಿಯಾದ ಲಕ್ಷ್ಮಾದೇವಿಯು ಸಾಹಿತ್ಯ, ಹಾಡುಗಾರಿಕೆ ಹಾಗೂ ವಾದ್ಯಸಂಗೀತ, ನೃತ್ಯಕಲೆಗಳಲ್ಲಿ ಪ್ರವೀಣಳಾಗಿದ್ದಳಂತೆ.

ರಾಜಸ್ಥಾನಗಳಲ್ಲಿ ನೃತ್ಯದ ಕಲಿಕೆ ಮತ್ತು ಪ್ರಸಾರಕ್ಕೆ ವಿಶೇಷ ವ್ಯವಸ್ಥೆ ಇದ್ದಿರಬೇಕು. ಸು. 1520ರಲ್ಲಿ ರಚಿತವಾದ ಸಂಗೀತ ಸರ್ವೋದಯ ಎಂಬ ಗ್ರಂಥದ ಕರ್ತೃ ಬಂಧಂ ಲಕ್ಷ್ಮೀನಾರಾಯಣನು ಕೃಷ್ಣದೇವರಾಯನಿಗೆ ಮತ್ತು ಅವನ ರಾಣಿವಾಸಕ್ಕೆ ಸಂಗೀತ ಮತ್ತು ನರ್ತನಾಚಾರ್ಯನಾಗಿದ್ದನೆಂದು ಹೇಳಲಾಗಿದೆ. ಕೃಷ್ಣದೇವರಾಯನ ಅರಮನೆಗೆ ಸಂಬಂಧಿಸಿದ ನೃತ್ಯ ಸಭಾಗೃಹವೊಂದನ್ನು ಪಯೆಸ್ ಎಂಬ ಪೋರ್ಚುಗೀಸನು ವರ್ಣಿಸಿ, ಅಲ್ಲಿನ ಗೋಡೆಗಳಲ್ಲೂ ಕಂಬಗಳಲ್ಲೂ ನೃತ್ಯಭಂಗಿಗಳನ್ನು ಬರೆದಿರುವುದನ್ನು ತಿಳಿಸಿದ್ದಾನೆ. ಈ ಸಭಾಗೃಹವೂ ವಿಸ್ತಾರವಾಗಿತ್ತು. ರಾಣಿಯರು ನರ್ತನವನ್ನು ಕಲಿಯುವುದಕ್ಕಾಗಿ ಅಲ್ಲಿಗೆ ಬರುತ್ತಿದ್ದರು. ನೃತ್ಯಕಲಾವಿದೆಯರು ತಮ್ಮ ಅಭ್ಯಾಸ ನಡೆಸಲು ಎಲ್ಲ ರೀತಿಯ ಅನುಕೂಲ ಅಲ್ಲಿ ಇತ್ತು. ಗೋಡೆ, ಕಂಬದ ಮೇಲೆ ಅನೇಕ ಭಂಗಿಗಳಿಂದ ಕೂಡಿದ ಮೂರ್ತಿಚಿತ್ರಗಳನ್ನು ಬಿಡಿಸಲಾಗಿತ್ತು. ನೃತ್ಯಕಲಾವಿದೆಯರು ತಮ್ಮ ನೃತ್ಯಕಲೆಯನ್ನು ತಿದ್ದಿಕೊಳ್ಳುವುದಕ್ಕೆ ಇವು ಸಹಾಯಕವಾಗಿದ್ದುವು. ಈ ಸಭಾಗೃಹದ ಒಂದು ಕೊನೆಯಲ್ಲಿ ಸ್ತ್ರೀಯರು ಮೈಚಾಚಿ ಕೈಕಾಲುಗಳನ್ನು ಸಡಿಲಿಸಿಕೊಳ್ಳುವ ವಿಧಾನಗಳು ಬರೆದಿರುವ ಚಿತ್ರಗಳ ಸಹಾಯದಿಂದ, ಕಲಾವಿದೆಯರು ತಮ್ಮ ನೃತ್ಯಗಳನ್ನು ಲಾಲಿತ್ಯಪೂರ್ಣವಾಗಿ ಮಾಡುವ ಬಗೆ ತಿಳಿದಿದ್ದರು ಎಂದೂ ಪೆಯೆಸ್ ವರ್ಣಿಸಿದ್ದಾನೆ. ಆದರೆ ದುರ್ದೈವವಶಾತ್ ಆ ಸಭಾಗೃಹ ಇಂದು ಮರೆಯಾಗಿದೆ. ಅಲ್ಲಿ ಭರತನಾಟ್ಯ ಶಾಸ್ತ್ರದ 108 ಕರಣಗಳು ಚಿತ್ರಸಲ್ಪಟ್ಟಿದ್ದ ವಿಷಯವನ್ನು ಖಂಡಿತವಾಗಿ ಊಹಿಸಬಹುದು.

(ಪಿ.ಡಿ.)

ಅನೇಕ ಕನ್ನಡ ಕಾವ್ಯಗಳಲ್ಲಿ ಕಂಡುಬರುವ ನೃತ್ಯಪ್ರಸಂಗಗಳ ವರ್ಣನೆಗಳು ಸಹ ಗಮನಾರ್ಹವಾದುವು. ಪಂಪ, ಹರಿಹರ, ರತ್ನಾಕರವರ್ಣಿ ಮುಂತಾದ ಕವಿಗಳು ನೃತ್ಯವನ್ನು ಸವಿಸ್ತಾರವಾಗಿ ರಸೋಪೇತವಾಗಿ ವರ್ಣಿಸಿರುವುದುಂಟು. ಪಂಪನ ಆದಿಪುರಾಣದಲ್ಲಿ ಬರುವ ನೀಲಾಂಜನೆಯ ನೃತ್ಯಪ್ರಸಂಗ ಒಳ್ಳೆಯ ಉದಾಹರಣೆ. ಮಧುರವಾದ ಗೀತವಾದ್ಯಗಳ ಹಿನ್ನೆಲೆಯಲ್ಲಿ ಗಣಿಕಾ ತಿಲಕ ಎಂಬ ಖ್ಯಾತಿಪಡೆದಿದ್ದ ನೀಲಾಂಜನೆಯು ಕರ್ವಿನಬಿಲ್ಲಿಂ ಮಸೆದ ಮದನನಲರ್ಗಣೆ ಬರ್ದುಂಕಿತ್ತೆನಿಸುವ ಹಾಗೆ ರಂಗಪ್ರವೇಶ ಮಾಡುತ್ತಾಳೆ. ರಂಗ ಪ್ರವೇಶದ ಜೊತೆ ಜೊತೆಗೆ ಆಕೆ ಜನಾಂತರಂಗವನ್ನೂ ಪ್ರವೇಶಿಸುತ್ತಾಳೆ. ಅನುಪಮ ಸುಂದರಿಯಾಗಿದ್ದ ನೀಲಾಂಜನೆ ಜವನಿಕೆಯ ಮರೆಯಲ್ಲಿ ಮುಗಿಲ ಮರೆಯ ವಿದ್ಯುಲ್ಲತೆಯಂತೆ ಗೋಚರಿಸುತ್ತಾಳೆ. ಜವನಿಕೆಯನ್ನು ಸರಿಸಿ ರಸಿಕ ವೃಂದದ ಮುಂದೆ ಬಂದು ಪುಷ್ಪಾಂಜಲಿಯನ್ನು ಸೂಸಿ ನರ್ತಿಸತೊಡಗಿದ ನೀಲಾಂಜನೆಯ ನೃತ್ಯವೈಖರಿ ವಿನೂತನವಾದದ್ದು. ಅದನ್ನು ಪಂಪ ಹೀಗೆ ವಿವರಿಸುತ್ತಾನೆ; ತಾಳದ ಲಯಮಂ ನಿಟಿಲು ನೀಳಾಳಕಮಾರದ ಪೊದಳ್ದಿ ಮುತ್ತೆಂಬಿವು ಮುಂಮೇಳಿಸಿ ಕಯ್ಕೊಂಡುವು ಲುಳಿತಾಳಕಿ ಕಯ್ಕೊಂಡಳೆಂಬುದೊಂದಚ್ಚರಿಯೇ, ನೀಲಾಂಜನೆಯು ಲಯಬದ್ಧವಾಗಿ ನರ್ತಿಸುವುದಿರಲಿ, ಆಕೆ ಉಟ್ಟ ಸೀರೆಯ ನಿರಿಗೆ, ತೊಟ್ಟ ಹೊಸ ಹಾರದ ಮುತ್ತುಗಳು ಹಾಗೂ ಆಕೆಯ ನೀಲವರ್ಣದಸುಂದರ ಮುಂಗುರುಳು ಅವಳಿಗಿಂತ ಮುನ್ನವೇ ನರ್ತಿಸಿದುವು. ಎನ್ನುವಲ್ಲಿ ಅಪೂರ್ವ ಸೊಗಸಿದೆ; ನರ್ತನದ ಪರಿಪೂರ್ಣತೆಯನ್ನು ಸೂಚಿಸುವ ಅಂಶವೂ ಇಲ್ಲಿ ವ್ಯಕ್ತವಾಗುತ್ತದೆ. ರಸಭಾವಾಭಿನಯಗಳ್ ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಿಯಿಸಿದಳಾಕೆ ನಾಟ್ಯಾಂಗಮಂ, ಎಂದು ಆಕೆ ನರ್ತಿಸುತ್ತಿದ್ದಂತೆಯೇ ನರ್ತನದ ಎಲ್ಲ ಅಂಶಗಳೂ ಹೊಸ ಜೀವ ಪಡೆದುಕೊಂಡವೆಂಬುದು ಪಂಪನ ಮಾತು. ಭಾರತಿಸಾತ್ವತಿ ಕೈಶಿಕಿ ಆರಭಟಿ ಎಂಬ ವೃತ್ತಿಯಲ್ಲಿ ರಸವನ್ನು ಸಂಚಾರಿಸುವಲ್ಲಿ, ಭಾವವನ್ನು ವಿಸ್ತಾರಿಸುವಲ್ಲಿ ನೀಲಾಂಜನೆಯದೇ ಹೊಸ ಬೆಡಗು ಎನ್ನುವಂತಿತ್ತು. ಹೀಗೆ ನರ್ತಿಸುತ್ತಿದ್ದಾಗ ನಡುವೆ ಕುಡುಪನ್ನು ಬಾರಿಸುತ್ತಿದ್ದ ವಾದ್ಯಗಾರ ತಡವರಿಸಿದ. ಆಗ ನೀಲಾಂಜನೆಯು ತನ್ನ ಹುಬ್ಬಿನ ಸನ್ನೆಯಿಂದ ಆತನಿಗೆ ಕುಡುಪನ್ನು ಸರಿಯಾಗಿ ಬಾರಿಸುವ ನಿರ್ದೇಶನ ನೀಡಿದಳಂತೆ. ಆ ವರ್ಣನೆ ಹೀಗಿದೆ: ಕುಡುಪುಂ ಕಯ್ಯುಂ ಜತಿಯೊಳ್ ತಡತಡವರೆ ವಾದಕಂಗೆ ಪುರ್ವಿಂ ಜತಿಯುಂ ತೊಡರದೆ ನಡೆಯಿಸಿ ಪುರ್ವಿದೆ ಕುಡುಪೆನೆ ನರ್ತಕಿಯೆ ಸಭೆಗೆ ವಾದಕಿಯಾದಳ್ - ಈ ಮಾತುಗಳು ನೀಲಾಂಜನೆಯ ಕುಡಿಹುಬ್ಬಿನ ಲಾಸ್ಯವನ್ನೂ ಆಕೆಗೆ ವಾದ್ಯಗಳ ಲಯದ ಬಗ್ಗೆ ಇದ್ದ ನಿಖರ ಹಾಗೂ ಸ್ಪಷ್ಟ ಜ್ಞಾನವನ್ನೂ ಮನಗಾಣಿಸುತ್ತವೆ. ಆಕೆಯ ತುಂಬುಯೌವನದ ಮೈಮಾಟ, ನಗುಮುಖ, ಬಟ್ಟಲುಗಣ್ಗಳ ಕುಡಿಮಿಂಚಿನ ನೋಟ, ನರ್ತಿಸುವಾಗ ಆಕೆ ಹಾರವನ್ನು ಅಳವಡಿಸುವ, ವಸ್ತ್ರಗಳನ್ನು ಸರಿಪಡಿಸಿ ಕೊಳ್ಳುವ ಬಗೆ, ಒನಪು ಒಯ್ಯಾರ ನೋಡುಗರನ್ನು ಹುಚ್ಚೆಬ್ಬಿಸುವಷ್ಟರ ಮಟ್ಟಿಗೆ ಶೃಂಗಾರಪೂರಿತವಾಗಿರುತ್ತದೆ. ಭರತಾಗಮದಲ್ಲಿ ಹೇಳುವ ಮೂವತ್ತೆರಡು ಅಂಗಹಾರವನ್ನೂ ನೂರೆಂಟು ಕರಣಗಳನ್ನೂ ಚಾಚೂ ತಪ್ಪದೆ ಅನುಸರಿಸಿ ನೀಲಾಂಜನೆ ನರ್ತಿಸಿದ್ದಳಂತೆ.

ರತ್ನಾಕರವರ್ಣಿಯ ಭರತೇಶವೈಭವದಲ್ಲಿ ಕೂಡ ನರ್ತನದ ಬಗ್ಗೆ ಹೆಚ್ಚಿನ ಮಾಹಿತಿ ದೊರಕುತ್ತದೆ. ಈ ಕಾವ್ಯದಲ್ಲಿ ಬರುವ ಪೂರ್ವನಾಟಕ ಸಂಧಿ ಉತ್ತರನಾಟಕ ಸಂಧಿ ಎಂಬ ಭಾಗಗಳಲ್ಲಿ ನಾಟ್ಯಶಾಲೆಯ ಅಲಂಕಾರಕ್ಕೆ ಸಂಬಂಧಿಸಿದಂತೆ, ನಾಟ್ಯಾಭಿನಯಕ್ಕೆ ಸಂಬಂಧಿಸಿದಂತೆ ಅನೇಕ ಸಂಗತಿಗಳು ಉಲ್ಲೇಖಗೊಂಡಿವೆ. ಭರತನ ನಾಟ್ಯಶಾಲೆಯನ್ನು ಪನ್ನೀರು, ಕುಂಕುಮ, ಸಾದು, ಕಸ್ತೂರಿಯಲ್ಲಿ ಸಾರಣೆಗೊಳಿಸಿ, ಪುಷ್ಪಮಾಲೆಗಳನ್ನೂ ಮುತ್ತಿನ ಕುಚ್ಚುಗಳನ್ನೂ ತೂಗುಬಿಟ್ಟು, ರನ್ನಗನ್ನಡಿಗಳನ್ನು ಅಳವಡಿಸಿ, ಕಂಬಗಳಲ್ಲಿ, ಲೋವೆಗಳಲ್ಲಿ ಗಿಳಿಯನೋದಿಸುವಂತೆ, ವೀಣೆಯ ನುಡಿಸುವಂತೆ, ಒಲೆದು ಪಾತ್ರವನಾಡುವಂತೆ ಕೆತ್ತಿದ ಸುಂದರ ಲಲನಾಮಣಿಯರ ಪ್ರತಿಮೆಗಳನ್ನೂ ಸುರರ ಖೇಚರರ ಪೆಣ್ಗಂಡು ರೂಪವನ್ನು ಅಲ್ಲಲ್ಲಿ ಬರೆದು ಅಲಂಕರಿಸಲಾಗಿತ್ತೆಂದು ವರ್ಣಿಸಿದೆ. ನೃತ್ಯದ ಪ್ರಾರಂಭಕ್ಕೆ ಮೊದಲು ಭರತೇಶನ ಮುಂದೆ ನಾಟ್ಯವಿದ್ಯಾಧರನೆಂಬ ನಟ್ಟುವನೊಬ್ಬ ಬಂದು ತಾನು ಎರಡು ಪಾತ್ರಗಳನ್ನು ತಿದ್ದಿರುವುದಾಗಿ ಅವರ ನರ್ತನವನ್ನು ಚಿತ್ತೈಸಬೇಕೆಂದು ಬಿನ್ನವಿಸಿಕೊಂಡು ರಂಗದ ಹಿಂದೆ ಹೋಗಿ ನರ್ತಕಿಯರಿಗೆ ನರ್ತನ ಪ್ರಾರಂಭಿಸಲು ಸೂಚನೆ ನೀಡುತ್ತಾನೆ. ಆಗ ನೇತ್ರ ಮೋಹಿನಿ, ಚಿತ್ತಮೋಹಿನಿ ಎಂಬ ಇಬ್ಬರು ನರ್ತಕಿಯರು ರಂಗಪ್ರವೇಶಿಸಿ ಪುಷ್ಪಾಂಜಲಿಯನ್ನು ಸೂಸಿ ಮದ್ದಳೆ ತಾಳಮೇಳ ಶ್ರುತಿಯ ಹಿನ್ನೆಲೆಯಲ್ಲಿ ನರ್ತಿಸುತ್ತಾರೆ. ಪಚ್ಚೆಯ ಚಲ್ಲಣ ಪಂಚವರ್ಣದ ಕಾಸೆ ಬೆಚ್ಚಮುತ್ತಿನ ಮೊಲೆಗಟ್ಟು ಅಚ್ಚಜವ್ವನೆಯರಿದ್ದರು ನೋಡುವರ ಮನ ಹುಚ್ಚೆದ್ದು ಧರೆಗೆ ಬೀಳ್ವಂತೆ - ಎಂಬ ಮಾತುಗಳಲ್ಲಿ ನರ್ತಕಿಯರ ಉಡುಪು, ಅವರ ಅನುಪಮಸೌಂದರ್ಯ ನಿರೂಪಿತವಾಗಿದೆ.

ನೇತ್ರಮೋಹಿನಿಯು ತಾಳಲಯಗಳನ್ನು ಅರಿತು ಹೀಗೆ ನರ್ತಿಸುತ್ತಾಳೆ: ನೂರೆಂಟು ಕರಣ ನೂರೆಂಟು ನಿಲವು ಹದಿಮೂರು ಶಿರೋಭೇದವರಿದು ಬೇರೆ ಬೇರೆರುವತ್ತನಾಲ್ಕು ಭೇದದ ಹಸ್ತದೋರಿ ನರ್ತಿಸಿದಳಾ ಗಣಿಕೆ ಚಾರಿ ಮೂವತ್ತೆರಡನುಚರಿಸಲಂಗಹಾರ ಮೂವತ್ತೆರಡನೆಯ ಸೇರಿ ಮೂವತ್ತಾರು ನೋಟ ರಂಜಿಸೆ ನಾಟ್ಯಸಾರಗಾಣಿಸಿ ನಟಿಸಿದಳು. ಅನಂತರ ಚಿತ್ತಮೋಹಿನಿ ಎಂಬುವಳು ರಂಗ ಪ್ರವೇಶಿಸಿ ನರ್ತಿಸುತ್ತಾಳೆ. ಆ ವರ್ಣನೆ ಹೀಗಿದೆ; ಮರ್ದಲತಾಳಾನುಗತಿಯೊಳು ನಡೆದಳಾ ಪೆರ್ದೆರೆಯಂತೆ ಮುಂದೊತ್ತಿ ಸಾರ್ದಳು ಹಿಂದಕೆ ಕಡಲಭರತ ಪೊಳಸಾರ್ದಿಳಿವಂತೆ ಜೋಕೆಯೊಳು ಸುಳಿದು ಸುತ್ತುವಳು ನಾಟ್ಯದೊಳು ಸಮ್ಮೋಹನ ಜಲಧಿಯ ಸುಳಿಯೊಯೆಂಬಂತೆ ಬಲಕೆಡಕೊಲೆದು ಹರಿವಳೆಳೆವಿಸಿಲಲ್ಲಿಯೆಳೆ ನಾಗ ಹರಿವಂತೆ ಮುರಿದು ನಟಿಸಿ ರಂಗದೊಳು ಮೇಲುಪ್ಪರಿಸುವಳಾಗಪುಟವೇರಿ ಪೊಯ್ಚುಂಡಿನಂತೆ ಬೊಗರಿಯಂತೊಲೆದಾಡುವಳು ನಿಲುವಳು ಹೊನ್ನಬೊಗರಿಮೊಲೆಯ ಮೋಹನಾಂಗಿ ಮೋರೆಯೊಲೆದು ನೋಡಿ ನೃಪಸುತರಿಗೆ ಹುಬ್ಬು ಹಾರಿಸುವಳು ನಸುನಗುತ.

*

ಈ ರೀತಿಯ ವರ್ಣನೆಗಳಿಂದ ಪ್ರಾಚೀನ ಕಾಲದಲ್ಲಿದ್ದ ಶಿಷ್ಟ ನೃತ್ಯ ಸಂಪ್ರದಾಯದ ಸ್ವರೂಪವನ್ನು ತಿಳಿಯಬಹುದಾಗಿದೆ. ಇದರಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ಕಾವ್ಯಗಳಲ್ಲಿ ಬರುವ ವರ್ಣನೆಗಳಲ್ಲಿ ಭರತನ ನಾಟ್ಯಶಾಸ್ತ್ರದ, ಪಾರಿಭಾಷಿಕ ಪದಗಳು ಬಹುವಾಗಿ ಬಳಕೆಗೊಂಡಿರುವುದು. ಅಂದಿನ ನೃತ್ಯಕಲೆ ನಾಟ್ಯಧರ್ಮ ಎಂದೆನಿಸಲ್ಪಟ್ಟು ಆಂಗಿಕಾಭಿನಯದೊಳಗೂಡಿ ಮೈ ಕೈ ಚಲನೆಗಳಿಗೆ ಅರ್ಥಭಾವಗಳಿದ್ದು ಸಂಗೀತಮಯವಾಗಿತ್ತು. ಅಂದಿನ ಅನೇಕ ಗ್ರಂಥಗಳಲ್ಲಿ ಸೂಚಿಸಿದ್ದ ನೃತ್ಯರೂಪಗಳು ಇಂದಿನ ಭರತನಾಟ್ಯ ಪ್ರದರ್ಶನದ ಕಾರ್ಯಕ್ರಮಕ್ಕೆ ತಳಹದಿಯನ್ನು ಹಾಕಿದಂತಿದೆ.

ವಿಜಯನಗರದ ಅವನತಿಯ ಅನಂತರ ಶಾಸ್ತ್ರೀಯ ನೃತ್ಯಕಲೆ ತಮಿಳುನಾಡು ಮತ್ತಿತರ ಭಾಗಗಳಲ್ಲಿ ವಿಶೇಷವಾಗಿ ಬೆಳೆಯಿತಾದರೂ ಕರ್ನಾಟಕದ ಕಾಣಿಕೆ ಸಹ ಅದಕ್ಕಿದೆ. 17ನೆಯ ಶತಮಾನದಲ್ಲಿ ಸಿಂಹಭೂಪಾಲ ಎಂಬ ಅರಸ ಲಾಸ್ಯರಂಜನ ಎಂಬ ಗ್ರಂಥವನ್ನು ಕನ್ನಡದಲ್ಲಿ ಬರೆದು ನೃತ್ಯಕಲೆಯ ಶಾಸ್ತ್ರ, ವಿನಿಯೋಗ, ಆಚರಣೆ, ಕಟ್ಟುನಿಟ್ಟುಗಳನ್ನೆಲ್ಲ ಕೂಲಂಕಷವಾಗಿ ತಿಳಿಸಿರುವನು. 1908ರಲ್ಲಿ ವೆಂಕಟಸುಂದರಸಾನಿ ಎಂಬುವರು ರಸಿಕಜನಮನೋಲ್ಲಾಸಿನಿ ಸಾರಸಂಗ್ರಹ ಭರತಶಾಸ್ತ್ರಂ ಎಂಬ ಸ್ವಾರಸ್ಯವಾದ ವಿಷಯವನ್ನು ಬರೆದುದನ್ನು ತಿಳಿಯುತ್ತೇವೆ. ಈ ರಚನೆಯ ಮೂರನೆಯ ಭಾಗವೆಲ್ಲ ಸಂಗೀತ-ನೃತ್ಯಕಲೆಗೆ ಮೀಸಲಾಗಿದೆ.

ಮೈಸೂರಿನ ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ನೃತ್ಯಕಲೆಗೆ ಒಳ್ಳೆಯ ಪ್ರೋತ್ಸಾಹ ದೊರಕಿತು. 19ನೆಯ ಶತಮಾನದ ಮಧ್ಯದಲ್ಲಿ ನೃತ್ಯಕಲೆಯಲ್ಲಿ ತಮಿಳುನಾಡಿನಲ್ಲಿ ಹೆಸರುವಾಸಿಯಾದ ಪಂದನಲ್ಲೂರು ಸಹೋದರರಲ್ಲಿ ಹಿರಿಯವರರಾದ ಚಿನ್ನಯ್ಯಪಿಳ್ಳೆಯವರನ್ನು ಕೃಷ್ಣರಾಜ ಒಡೆಯರವರು ತಮ್ಮ ಆಸ್ಥಾನಕ್ಕೆ ಬರಮಾಡಿಸಿ, ಅವರಿಂದ ಅನೇಕ ಗುರುಗಳಿಗೂ ಶಿಷ್ಯಂದಿರಿಗೂ ನೃತ್ಯಾಭ್ಯಾಸ ಮಾಡಿಸಿದರು. 1860 ರಿಂದ 1881ರ ವರೆಗೆ ಕಲೆಗೆ ಪ್ರೋತ್ಸಾಹ ಕಡಿಮೆಯಾದರೂ ಚಾಮರಾಜ ಒಡೆಯರು ಪಟ್ಟಕ್ಕೆ ಬಂದಮೇಲೆ ಪುನಃ ಸಂಗೀತ ನೃತ್ಯಕಲೆಗೆ

ರಾಜದರಬಾರುಗಳಲ್ಲಿ ಒಳ್ಳೆಯ ಸ್ಥಾನ ದೊರಕಿತು. ಕಳೆದ ಶತಮಾನದಲ್ಲಿ ಮೈಸೂರು ರಾಜ್ಯದಲ್ಲಿ ಭರತನಾಟ್ಯ ಸಂಪ್ರದಾಯ ಅಕಳಂಕವಾಗಿತ್ತು. ಮೈಸೂರು, ಬೆಂಗಳೂರು, ಮುಳಬಾಗಿಲು, ಕುಡೂರು ಟಿ.ನರಸೀಪುರ ಮುಂತಾದ ಸ್ಥಳಗಳಲ್ಲಿ ಭರತನಾಟ್ಯವಿದ್ಯೆಯಲ್ಲಿ ಹೆಸರುವಾಸಿಯಾದ ದೇವದಾಸಿ ಪಂಗಡದವರು ದೇವಸ್ಥಾನದ ಆಶ್ರಯ ಪಡೆದು ಜೀವಿಸುತ್ತಿದ್ದರು. ಈ ದೇವದಾಸಿ ಪಂಗಡದವರಿಗೆ ಸ್ಥಳೀಯ ಶ್ರೀಮಂತರಿಂದಲೊ ಅಥವಾ ಜಮೀನುದಾರರಿಂದಲೊ ಅಥವಾ ಕಲೋಪಾಸಕರಿಂದಲೋ ಪ್ರೋತ್ಸಾಹ ಸಿಗುತ್ತಿತ್ತು. ಅವರಿಗೆ ಭರತ ನಾಟ್ಯಕಲೆಯ ಸಾಂಪ್ರದಾಯಿಕ ಕಲಾರಾಧನೆಗೆ ತಕ್ಕ ಶಾಸ್ತ್ರೋಕ್ತ ವಿದ್ಯಾಭ್ಯಾಸವೇ ಅಲ್ಲದೆ ಸಂಗೀತ ಕಲೆಯ ಪಾಠವೂ ಆಗುತ್ತಿದ್ದ ಕಾರಣ, ಈ ಕಲಾವಿದರು ಪ್ರಜ್ಞಾಶಾಲಿ ಪಂಗಡಕ್ಕೆ ಸೇರಿದವರೆಂದೆನಿಸಿಕೊಳ್ಳುತ್ತಿದ್ದರು. ನಿತ್ಯಸುಮಂಗಲಿಯರಾದ ಈ ದೇವದಾಸಿಯರು ಬಾರದೆ ಯಾವ ಮದುವೆ ಸಮಾರಂಭವೂ ಜರಗುತ್ತಿರಲಿಲ್ಲ. ಮಂಗಳಸೂತ್ರ ಕಟ್ಟುವ ಶಾಸ್ತ್ರ ಈ ನಿತ್ಯಸುಮಂಗಲಿಯರಿಂದ ಆಗುತ್ತಿದ್ದುದರಿಂದ ಅವರ ಬರುವಿಕೆಗೆ ಸಂಭ್ರಮದ ಆಹ್ವಾನವಿತ್ತು. ಈ ದೇವದಾಸಿ ಪಂಗಡದ ಪ್ರಭಾವ ಸುಮಾರಾಗಿ ಎಲ್ಲರ ಮೇಲೆಯೂ ಇತ್ತು. ಈ ಕಾರಣದಿಂದ ಕ್ರಮೇಣ ಭರತನಾಟ್ಯಕಲೆ ದೈವಿಕ ಭಾವನೆ ಕಳೆದುಕೊಂಡು ಮಾನವೀಯ ಷಡ್ವೈರಗಳಿಗೆ ತುತ್ತಾಯಿತು. ಆದರೂ ದೇವಾಲಯಕ್ಕೆ ಸೇರಿದ್ದ ಅಥವಾ ಅರಮನೆಗಳಿಗೆ ಸೇರಿದ್ದ ಕೆಲವು ಕಲಾವಿದರು ಈ ಕಲೆಯನ್ನು ಕಾಪಾಡಿಕೊಂಡು ಬಂದಂತೆ ಕಲೋಪಾಸಕರು ಕಲೆಯಿಂದ ವೈಭವಯುಕ್ತ ಅನುಭವವನ್ನು ಪಡೆಯುವಂತಾಯಿತು. ಮದುವೆ ಸಮಾರಂಭಗಳಲ್ಲೂ ದೇವಸ್ಥಾನದ ಉತ್ಸವಗಳಲ್ಲಿಯೂ ಭರತನಾಟ್ಯಕಲೆ ಪ್ರದರ್ಶಿತವಾಗುತ್ತಿತ್ತು.

19ನೆಯ ಶತಮಾನದ ಅಂತ್ಯದ ವರೆಗೆ ಮೈಸೂರು ಸಂಸ್ಥಾನದ ಮುಖ್ಯ ಪಟ್ಟಣಗಳಲ್ಲಿ ದೇವಾಲಯಕ್ಕೆ ಸಂಬಂಧಿಸಿದ ಅನೇಕ ದೇವದಾಸಿಯರು ಈ ಕಲೆಯನ್ನು ಕಾಪಾಡಿಕೊಂಡು ಬಂದಿದ್ದರು. ದೇವಾಲಯಗಳೇ ಅಂದಿನ ಜನರ ಸಾಮಾಜಿಕ ಜೀವನದ ಕೇಂದ್ರವಾಗಿತ್ತು ಎನ್ನಬಹುದು. ತಿರುಮಕೂಡಲು ನರಸೀಪುರ, ಮುಳಬಾಗಲು, ಚಿಂತಾಮಣಿ ಹತ್ತಿರದ ಹೂವಡಿ ಮುಂತಾದ ಸ್ಥಳಗಳಲ್ಲಿ ಸುಮಾರು 200 ಕಸಬುದಾರ ದೇವದಾಸಿಗಳೂ ಅವರಿಗೆ ಸೇರಿದ ನಟವನಾರ್‌ಗಳೂ ಸಂಗೀತ ಪಂಗಡದವರೂ ವಾಸಿಸುತ್ತಿದ್ದರು. ಮುಳಬಾಗಿಲಿನ ದೇವಸ್ಥಾನದಲ್ಲಿ 14 ದೇವದಾಸಿಯರು ಇದ್ದು ವಾರಕ್ಕೊಮ್ಮೆ ದೇವಾಲಯದ ಪೂಜಾಕ್ರಮದಲ್ಲಿ ಭಾಗವಹಿಸುತ್ತಿದ್ದರು. ನಟುವನಾರ್‌ಗಳಲ್ಲದೆ ಸಂಸ್ಕೃತ ಪಂಡಿತರಾದ ಕೆಲವು ಬ್ರಾಹ್ಮಣರು ಈ ಕಲೆಯ ಅಭಿನಯವನ್ನು ಶಾಸ್ತ್ರೋಕ್ತವಾಗಿ ಈ ದೇವದಾಸಿಯರಿಗೆ ಹೇಳಿಕೊಡುವ ಪದ್ಧತಿಯಿತ್ತು. ಈ ಸಾಲಿಗೆ ಸೇರಿದ ಒಬ್ಬ ಮಹನೀಯರು ಮುಳಬಾಗಲಿನ ಪನಸೇಕರಿ ವೆಂಕಟಸುಬ್ಬ ಭಟ್ಟರು. ಅವರು 19ನೆಯ ಶತಮಾನದ ಅಂತ್ಯದಲ್ಲಿ ನೃತ್ಯಗುರುಗಳೆಂದೆನಿಸಿ ವಿಶೇಷ ಗೌರವ ಪಡೆದಿದ್ದರು. ಅವರ ಶಿಷ್ಯಂದಿರು ಅವರ ತರಬೇತಿನಿಂದ ಕಾಲು ಹೆಜ್ಜೆ ವಿನ್ಯಾಸಗಳಲ್ಲಿ ಒಳ್ಳೆಯ ಅಭ್ಯಾಸ ಪಡೆದು ತುಂಬಾ ಖ್ಯಾತಿ ಪಡೆದಿದ್ದರು. ಇವರಲ್ಲಿ ಬೈರತೂರ್ ವೆಂಕಟಲಕ್ಷ್ಮಿ ಅಭಿನಯ ಕಲೆಯಲ್ಲಿ ಪ್ರಸಿದ್ಧಿ ಪಡೆದಿದ್ದರು. ಈ ಶತಮಾನದ ಆದಿಯಲ್ಲೂ ಭರತನಾಟ್ಯಕ್ಕೆ ಇದ್ದ ಕಳಂಕ ಮಾಸಿಹೋಗಲಿಲ್ಲ. ಆದರೂ ಕಾಲ ಚಕ್ರ ಉರುಳಿದಂತೆ ಕಲೆಯ ಪುನರುತ್ಥಾನವಾಯಿತು. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಪ್ರೋತ್ಸಾಹ ವಿಶೇಷವಾಗಿತ್ತು. ಕಲೆಗಳು ಮೆರೆದುವು. ಅವರು ಸ್ವತಃ ಲಲಿತಕಲಾಜ್ಞಾನಿಯಾದ ಕಾರಣ ಕಲೆಗಳಿಗೆ ಅತ್ಯಂತ ಉತ್ತಮ ಸ್ಥಾನವನ್ನು ಕಲ್ಪಿಸಿ ಕಲೋಪಾಸಕರು ಕಲೆಗಳನ್ನು ಪಡೆಯಲು ಸಹಾಯವನ್ನು ಇತ್ತರು. ಟಿ.ನರಸೀಪುರದ ತಿರುಮಕೂಡಲು ಸುಂದರಮ್ಮನವರು ಅಷ್ಟಪದಿಗಳನ್ನು ಹೃದಯಂಗಮವಾಗಿ ಅಭಿನಯಿಸುತ್ತಿದ್ದರು. ಚಂದ್ರವದನಮ್ಮ, ಪುಟ್ಟದೇವಮ್ಮ, ನಾಗರತ್ನ ಮತ್ತು ಬೆಂಗಳೂರಿನ ವರಾಲು - ಇವರು ಮೈಸೂರು ರಾಜ್ಯದ ಹೆಸರಾಂತ ನರ್ತಕಿಯರು. ರಮಾಮಣಿ, ಕೊನಮಾರ ದೇವಿಯಮ್ಮ ಹಾಗೂ ದೇವಾಲಯವೊಂದನ್ನು ಅರ್ಪಿಸಿದ್ದ ಮೂಗೂರು ತ್ರಿಪುರಸುಂದರಮ್ಮನವರೂ ಹೆಸರುವಾಸಿ ದೇವದಾಸಿಯರು, ಕೃಷ್ಣರಾಜ ಒಡೆಯರ ಕಾಲದಲ್ಲಿ ಮೈಸೂರು ಅರಮನೆಯಲ್ಲಿದ್ದ ಅಂಬಲ್ ನರಸಿಂಹ ಅಯ್ಯಂಗಾರ್‌ರವರು ಲಲಿತ ಕಲೆಗಳಿಗೆ ಪ್ರೋತ್ಸಾಹವನ್ನೀಡುತ್ತಿರುವಾಗಲೇ ಕಲೆಯ ಒಳ್ಳೆಯ ಅಂತಸ್ತನ್ನು ಕಾಣಬಯಸುತ್ತಿದ್ದರು.

ಅರಮನೆಯ ಪ್ರೋತ್ಸಾಹ ಹಾಗೂ ದೇವಾಲಯಕ್ಕೆ ಸಂಬಂಧಪಟ್ಟ ದೇವದಾಸಿಯರು ಮತ್ತು ಅವರ ನಟುವನಾರ್ ಪಂಗಡಕ್ಕೆ ಸೇರಿದ ಕಲಾವಿದರಿಂದಾಗಿ ಮೈಸೂರು ಸಂಸ್ಥಾನದಲ್ಲಿ ಸುಮಾರು 200 ವರ್ಷಗಳಿಂದ ಭರತನಾಟ್ಯ ಒಂದು ವಿಶಿಷ್ಟ ರೂಪವನ್ನು ತಾಳಿ ಅಭಿವೃದ್ಧಿಪಡೆಯಿತು. ಕವೀಶ್ವರ ಗಿರಿಯಪ್ಪ ಮತ್ತು ಕಾಶಿಗುರು ಎಂಬುವರು ಅಭಿನಯ ಕಲೆಯಲ್ಲಿ ಧುರೀಣರಾಗಿದ್ದರು. ಅನಂತರ ಅಮೃತಪ್ಪ, ಅಪ್ಪಯ್ಯ, ದಾಸಪ್ಪ, ಕಿಟ್ಟಪ್ಪ ಮತ್ತು ಜಟ್ಟಿತಾಯಮ್ಮನವರು ನಾಟ್ಯರಂಗದಲ್ಲಿ ಮೆರೆದ ಪ್ರಖ್ಯಾತ ನೃತ್ಯಕಲಾವಿದರು. ಈ ನೃತ್ಯಗುರುಗಳ ಶಿಷ್ಯಂದಿರು ಪರಂಪರೆಯಾಗಿ ಇಂದಿಗೂ ನಾಟ್ಯಕಲೆಯನ್ನು ಅಭ್ಯಾಸ ಮಾಡುತ್ತಲಿದ್ದಾರೆ. 1947ರಲ್ಲಿ ನಿಧನರಾದ ಮೈಸೂರಿನ ಜಟ್ಟಿತಾಯಮ್ಮ ಹಾಗೂ ಕೋಲಾರ ಕಿಟ್ಟಪ್ಪ ಮತ್ತು ಅವರ ಶಿಷ್ಯಂದಿರಾದ ಕೋಲಾರ ಪುಟ್ಟಪ್ಪ ಇವರು ಇಂದಿಗೂ ಜನಮನದಲ್ಲಿದ್ದಾರೆ. ಕೋಲಾರ ಕಿಟ್ಟಪ್ಪನವರ ಶಿಷ್ಯಂದಿರಾದ ಗುಂಡಪ್ಪನವರು 12 ವರ್ಷಗಳ ಕಾಲ ತರಬೇತು ಪಡೆದು ಪ್ರಖ್ಯಾತ ನರ್ತಕರ ಮನೆತನಕ್ಕೆ ಸೇರಿದ ನಟುವನಾರ್ ಆಗಿದ್ದರು. ಅವರ ಮುತ್ತಜ್ಜಿ ರಂಗನಾಯಕಮ್ಮನವರೂ ಅಜ್ಜಿ ರಂಗಮ್ಮನವರೂ ನಾಟ್ಯ ನಿಪುಣತೆಯನ್ನೂ ಪಡೆದಿದ್ದರು. ಅವರ ವಂಶಕರ್ನಾಟಕ ನೃತ್ಯಕಲೆಗೆ ನಿರತ ಸೇವೆ ಸಲ್ಲಿಸಿದೆ. ಅವರ ಶಿಷ್ಯಂದಿರು ಇಂದಿಗೂ ಕಲಾಸೇವೆಯನ್ನು ಮಾಡುತ್ತಲಿದ್ದಾರೆ. ಇವರೆಲ್ಲರ ಕಾರ್ಯಸಾಧನದಿಂದ ಭರತ ನಾಟ್ಯದಲ್ಲಿ ಮೈಸೂರು ಶೈಲಿ ಎಂಬುದೂ ಬೆಳೆದಿದೆ.

ನಾಟ್ಯ ರಂಗದ ಪ್ರಮುಖರಲ್ಲಿ ಕೆಲವರ ವಿಷಯ ಸ್ವಲ್ಪಮಟ್ಟಿಗೆ ತಿಳಿದಿದೆ. ದಾಸಪ್ಪನವರು ಮುಮ್ಮಡಿ ಕೃಷ್ಣರಾಜ ಒಡೆಯರ ಆಶ್ರಯದಲ್ಲಿದ್ದರು. ಅವರಿಗೆ ನಾಟ್ಯಕಲೆಗೆ ಶಾಸ್ತ್ರೋಕ್ತ ತಿಳುವಳಿಕೆಯಿತ್ತು. ಅವರ ಮಗಳಾದ ಜಟ್ಟಿತಾಯಮ್ಮ (ನೋಡಿ) ಅತ್ಯಂತ ಹೆಸರುವಾಸಿಯಾದವರು. ಅವರಿಗೆ ನೃತ್ಯಕಲೆ ಒಂದು ಕಲೆ ಮಾತ್ರವಲ್ಲ. ದೈವಸಾಕ್ಷಾತ್ಕಾರವನ್ನು ಪಡೆಯುವ ಸಾಧನೆಯಾಗಿತ್ತು. ಜಟ್ಟಿ ತಾಯಮ್ಮನವರ ಶಿಷ್ಯರಾದ ವೆಂಕಟಲಕ್ಷ್ಮಮ್ಮ (ನೋಡಿ) ಸುಮಾರು ಎರಡು ದಶಕಗಳ ಕಾಲ ಶಿಕ್ಷಣ ಪಡೆದು ಇಂದಿಗೂ ಕಲಾಸೇವೆ ಮಾಡುತ್ತಲಿದ್ದಾರೆ. ರಾಜಾಶ್ರಯವನ್ನು ಪಡೆದ ಇನ್ನೊಬ್ಬ ಕಲಾವಿದೆ ಚಂದ್ರವದನಮ್ಮನವರು ಭಾವಾಭಿನಯಕ್ಕೆ ಹೆಸರು ವಾಸಿಯಾಗಿದ್ದರಲ್ಲದೆ ಸಂಗೀತ ಕಲೆಯಲ್ಲೂ ನಿಪುಣೆಯಾಗಿದ್ದರು. ವಿಖ್ಯಾತನಾಟ್ಯ ಗುರುಗಳಾದ ಅಮೃತಪ್ಪ ಮತ್ತು ಅಪ್ಪಯ್ಯನವರಿಂದ ಪಾಠವನ್ನು ಕಲಿತ ಪುಟ್ಟದೇವಮ್ಮ ಮತ್ತು ಆಕೆಯ ಮಗಳು ಚಿಕ್ಕದೇವಮ್ಮ ಇವರೂ ಅರಮನೆಯ ಪ್ರೋತ್ಸಾಹ ಪಡೆದ ಕಲಾವಿದೆಯರು.

ಬೆಂಗಳೂರು ನಗರದಲ್ಲಿ ವಿದ್ವಾನ್ ಕೋಲಾರ ಪುಟ್ಟಪ್ಪನವರು ಪ್ರಖ್ಯಾತ ನಾಟ್ಯಗುರುಗಳಾಗಿ ನಾಗರತ್ನ ಮತ್ತು ವರಾಲು ಇವರನ್ನು ತರಬೇತು ಮಾಡಿ ಶ್ರೇಷ್ಠ ಅಭಿನಯಕಲಾವಿದೆಯರನ್ನಾಗಿ ಮಾಡಿದರು. ಕೋಲಾರ ಪುಟ್ಟಪ್ಪನವರು ನಾಟ್ಯಕಲೆಯ ಪಾರಂಪರ್ಯ ಕುಟುಂಬದಲ್ಲಿ ಜನಿಸಿದವರು. ಪಂದನಲ್ಲೂರಿನಿಂದ ಬಂದ ಕಂಚಿ ಸದಾಶಿವಯ್ಯ ಇವರ ಗುರುಗಳು. ಇವರು ಬೆಂಗಳೂರಿನಲ್ಲಿ 1945ರ ವರೆಗೆ ಪಾಠ ಹೇಳಿಕೊಡುತ್ತಿದ್ದರು. ಜಗತ್ಪ್ರಖ್ಯಾತ ರಾಮಗೋಪಾಲ್ ಮತ್ತು ಯು.ಎಸ್.ಕೃಷ್ಣರಾಯರು ಇವರ ಶಿಷ್ಯರು.

1910 ರಿಂದ 1930ರ ವರೆಗೆ ಭರತನಾಟ್ಯಕಲೆಯು ಕಳಂಕಪೂರಿತವಾಗಿ ಕಸಬುದಾರ ಕಲಾವಿದರೂ ತಮಗೆ ಸಲ್ಲತಕ್ಕ ಮರ್ಯಾದೆ ಕಳೆದುಕೊಂಡರು. ದೇವಾಲಯಗಳಲ್ಲಿ ನೃತ್ಯಸೇವೆಯನ್ನು ನಿರ್ಬಂಧಿಸಲಾಯಿತು. ದೇವದಾಸಿಯರ ಜೀವನವೂ ತುಂಬಾ ಕಷ್ಟಕರವಾಯಿತು. ಆದರೂ ಕಲಾಸಕ್ತಿಯುಳ್ಳ ಶಿಷ್ಯಂದಿರೂ ನಾಟ್ಯಗುರುಗಳೂ ಕಲೋಪಾಸಕರೂ ಕಲೆಯನ್ನು ಅರಸಿ ಕಾಪಾಡಿದರು.

ಮದರಾಸಿನ ಕಲಾಕ್ಷೇತ್ರದ ರುಕ್ಮಿಣಿದೇವಿ ಮತ್ತು ಕೃಷ್ಣ ಅಯ್ಯರ್

ಅವರ ನಿರಂತರ ಪರಿಶ್ರಮದ ಫಲವಾಗಿ ನೃತ್ಯಕಲೆಯ ಪುನರುತ್ಥಾನವಾಯಿತು. ಕ್ರಮೇಣ ಸುಶಿಕ್ಷಿತರೂ ಕಲೆಗಾಗಿ ಮತ್ತು ಅದರ ಅಭಿವೃದ್ಧಿಗಾಗಿ ಕೆಲಸ ಮಾಡುವಂತಾಯಿತು. ಬೆಂಗಳೂರಿನಲ್ಲಿ ರಾಮಗೋಪಾಲರವರು ನಾಟ್ಯಸಂಸ್ಥೆಯನ್ನು ಸ್ಥಾಪಿಸಿ ಕಲೆಗಾಗಿ ತನುಮನ ಧನವನ್ನು ನೀಡಿದರು. ಅವರ ಶ್ರಮದಿಂದಾಗಿ ಶಿಕ್ಷಿತ ಜನತೆಯು ಕಲೆಯ ಶ್ರೇಷ್ಠತೆಯನ್ನು ಅರಿತು ಬೆರಗಾದರು. ಯು.ಎಸ್.ಕೃಷ್ಣರಾಯರೂ ಈ ಪಂಗಡಕ್ಕೆ ಸೇರಿ ಮೈಸೂರು ಸಂಸ್ಥಾನದಲ್ಲೆಲ್ಲ ಭರತನಾಟ್ಯ ಕಲೆಯ ಪ್ರಸಾರ ಮಾಡಿದರು. ಅವರೂ ಅವರ ಪತ್ನಿ ಚಂದ್ರಭಾಗಾದೇವಿಯವರೂ ಸುಶಿಕ್ಷಿತರೂ ಕುಲೀನ ಮನೆತನದವರೂ ಎಂದೆನಿಸಿ ನರ್ತಿಸಿ, ಉಪನ್ಯಾಸಗಳನ್ನು ಕೊಟ್ಟು ಸಂಸ್ಥಾನಾದ್ಯಂತ ಪ್ರಯಾಣ ಮಾಡಿ ವಿವಿಧ ಜನತೆಗೆ ಕಲೆಯ ತಿರುಳನ್ನೂ ಅಂದವನ್ನೂ ತಿಳಿಸಿ ಕಲೆಯ ಪ್ರಸಾರ ಮಾಡಿದರು. ಮೈಸೂರು ಭರತನಾಟ್ಯ ಸಂಪ್ರದಾಯಕ್ಕೆ ಒಂದು ವಿಶೇಷ ಗೌರವ, ಸ್ಥಾನಮಾನವನ್ನು ರಚಿಸಿ ಅಭಿವೃದ್ಧಿ ಮಾಡಿದರು. ಇವರು ಶಾಸ್ತ್ರೋಕ್ತ ಭರತನಾಟ್ಯವಿದ್ಯೆಯ ತಳಹದಿಯ ಮೇಲೆ ಹೊಸ ಪ್ರಯೋಗಗಳನ್ನೂ ಮಾಡಿದ್ದಾರೆ. ಇವರು ಕನ್ನಡ ಭಾಷೆಯಲ್ಲಿ ಪದಗಳನ್ನು ಭರತನಾಟ್ಯಕ್ಕೆ ಅಳವಡಿಸಿಕೊಂಡವರಲ್ಲಿ ಅಗ್ರಗಣ್ಯರು.

ಮೀನಾಕ್ಷಿ ಸುಂದರಂ ಪಿಳ್ಳೆಯವರ ಪುತ್ರರಾದ ವಿದ್ವಾನ್ ಮುತ್ತಯ್ಯ ಪಿಳ್ಳೆ ಮತ್ತು ಮೊಮ್ಮಕ್ಕಳಾದ ವಿದ್ವಾನ್ ಕಿಟ್ಟಪ್ಪನವರು ಪಂದನಲ್ಲೂರು ಸಂಪ್ರದಾಯವನ್ನು ಕನ್ನಡಿಗರಿಗೆ ಹೇಳಿಕೊಡುವ ಸಲುವಾಗಿ ಬೆಂಗಳೂರಿನಲ್ಲೇ ಬಂದು ವಾಸವಾಗಿದ್ದಾರೆ. ಅವರ ವಂಶವೆಲ್ಲ ಈಗ 1965ರಿಂದ ಕರ್ನಾಟಕದ ಕಲಾವಿದರಿಗೆ ಭರತನಾಟ್ಯ ಹೇಳಿಕೊಡುತ್ತಿದೆ. ಇತ್ತೀಚೆಗೆ ಸುಮಾರು 1972ರಲ್ಲಿ ಬೆಂಗಳೂರಿನಲ್ಲಿ ಮೀನಾಕ್ಷಿಸುಂದರಂ ಪಿಳ್ಳೆಯವರ ಹೆಸರಿನಲ್ಲಿ ಶ್ರೀಮತಿ ಲೀಲಾ ರಾಮನಾಥನ್‌ರವರ ನೇತೃತ್ವದಲ್ಲಿ ಒಂದು ಭರತನಾಟ್ಯಶಾಲೆ ಸ್ಥಾಪಿತವಾಗಿದೆ. ಈ ಪಂದನಲ್ಲೂರು ನೃತ್ಯಪೀಠ ಬೆಂಗಳೂರಿನಲ್ಲಿ ಹೆಸರುವಾಸಿಯಾಗಿದೆ. ಇಲ್ಲಿ ತಯಾರಾದ ಕುಮಾರಿಯರಾದ ಆಶಾ, ರೇವತಿ ವಿಶ್ವವಿಖ್ಯಾತಿ ಪಡೆದಿದ್ದಾರೆ.

ಬೆಂಗಳೂರಿನಲ್ಲಿಯೇ ಇನ್ನೂ ಇತರ ಹೆಸರುವಾಸಿ ನೃತ್ಯಪೀಠಗಳಿವೆ. ಅವುಗಳಲ್ಲಿ ಶ್ರೀ ಮತ್ತು ಶ್ರೀಮತಿ ಯು.ಎಸ್.ಕೃಷ್ಣರಾಯರು ನಡೆಸುತ್ತಿರುವ ನೃತ್ಯಪೀಠ (ಸ್ಥಾಪನೆ 1942). ಮಹಾಮಾಯಾ ನೃತ್ಯಪೀಠ (1973) ಪ್ರತಿಭಾನ್ವಿತ ಕಲಾವಿದರನ್ನು ತಯಾರಿಸಿವೆ. ಇಂದ್ರಾಣಿ ರಹಮಾನ್, ಸೋನಾಲ್ ಮಾನಸಿಂಗ್, ಸುಧಾರಾಣಿ, ಜಿಲ್ ರೋಸೆನ್ ಬ್ಲೂಂ ಮೊದಲಾದವರು ಕೃಷ್ಣರಾವ್ ದಂಪತಿಗಳಿಂದ ತರಬೇತಿ ಪಡೆದವರು. ಭಾರತೀಯ ವಿದ್ಯಾಭವನದ ನೃತ್ಯ ಕೇಂದ್ರ (1969), ನಟುವನಾರ್ ಗುಂಡಪ್ಪನವರ ಶಿಷ್ಯ ಎಚ್.ಆರ್.ಕೇಶವಮೂರ್ತಿಯವರ ಕೇಶವನೃತ್ಯಶಾಲಾ 1949, ವಿ.ಎಸ್.ಕೌಶಿಕ್ ನಡೆಸುತ್ತಿರವ ಸನಾತನ ಕಲಾಕ್ಷೇತ್ರ (1946), ಮಾಣಿಕ್ಯಂ ಅವರ ಭರತನಾಟ್ಯ ಕಲಾಶಾಲೆ, ಲಲಿತಾ ದೊರೆ ಅವರ ಗಣೇಶ ನೃತ್ಯಶಾಲೆ, ಟಿ.ಎಸ್.ಭಟ್ಟರ ಮೇನಕ ನೃತ್ಯ ಶಾಲೆ (1957), ಶೇಖರ್‌ರವರ ಸರಸ್ವತೀ ನಾಟ್ಯಶಾಲಾ, ಬೆಂಗಳೂರಿನ ಪ್ರಮುಖ ನೃತ್ಯಪೀಠಗಳು, ಬೆಂಗಳೂರಿನಲ್ಲಿ ಇನ್ನೂ ಅನೇಕ ನೃತ್ಯಗುರುಗಳಿದ್ದಾರೆ.

ಮಂಗಳೂರಿನಲ್ಲಿ ಯು.ಎಸ್.ಕೃಷ್ಣರಾಯರ ನೃತ್ಯ ವಿದ್ಯಾನಿಲಯದಲ್ಲಿ ಭರತ ನಾಟ್ಯ ಹಾಗೂ ಕಥಕಳಿ ಶಾಸ್ತ್ರೀಯ ನೃತ್ಯಕಲೆಯನ್ನು ಉಚಿತವಾಗಿ ಹೇಳಿಕೊಡುತ್ತಲಿದ್ದಾರೆ. ಉತ್ತರ ಕರ್ನಾಟಕದಲ್ಲಿ ಹಲವಾರು ನೃತ್ಯ ಸಂಸ್ಥೆಗಳಿದ್ದರೂ ಗಮನಕ್ಕೆ ಬರುವ ನೃತ್ಯಪೀಠ ಶ್ರೀನಿವಾಸ ಕುಲಕರ್ಣಿಯವರು ಹಂಸಭಾವಿಯಲ್ಲಿ ಸ್ಥಾಪಿಸಿರುವ ನೃತ್ಯಭಾರತಿ ಎಂಬ ನೃತ್ಯಶಾಲೆ. ಅವರು ಸುಮಾರು 30-35 ವರ್ಷಗಳಿಂದ ನೃತ್ಯರಂಗದಲ್ಲಿ ವಿರಾಮವಿಲ್ಲದೆ ಕೆಲಸ ಮಾಡಿ ಪಳಗಿದ ಕಲಾವಿದರು. ಅಲ್ಲದೆ ಕರ್ನಾಟಕದ ಸಣ್ಣಪುಟ್ಟ ಊರು ಹಳ್ಳಿಗಳಲ್ಲಿ ಸುಮಾರು 100ಕ್ಕೂ ಮೇಲ್ಪಟ್ಟು ನೃತ್ಯಗುರುಗಳಿದ್ದು ಭರತನಾಟ್ಯ, ಕಥಕ್, ಕಥಕಳಿ ಮತ್ತು ಇತರ ನೃತ್ಯಗಳನ್ನು ಹೇಳಿಕೊಡುತ್ತಲಿದ್ದಾರೆ. ಈಗ ಬೆಂಗಳೂರು ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳ ಲಲಿತಕಲೆಗಳ ಕಾಲೇಜುಗಳಲ್ಲಿ ಪದವಿ ಮಟ್ಟದಲ್ಲಿ ನೃತ್ಯ ಶಿಕ್ಷಣಕ್ಕೆ ಅವಕಾಶ ಮಾಡಿಕೊಡಲಾಗಿದೆ.

ಕರ್ನಾಟಕದಲ್ಲಿ ಇಂದು ಕಥಕ್, ಕಥಕಳಿ, ಮಣಿಪುರಿ ಮೊದಲಾದ ನೃತ್ಯ ಸಂಪ್ರದಾಯಗಳು ಅಲ್ಲಲ್ಲಿ ಕಂಡುಬರುತ್ತವೆ. ಆದರೆ ಶಿಷ್ಟ ನೃತ್ಯರೂಪಗಳಲ್ಲಿ ಭರತನಾಟ್ಯ ಅದರಲ್ಲೂ ಮೈಸೂರು ಸಂಪ್ರದಾಯದ ಭರತನಾಟ್ಯ ಈ ನಾಡಿನ ವೈಶಿಷ್ಟ್ಯವೆನ್ನಬಹುದು. (ಪಿ.ಡಿ)

**ನೃಪಕಾಮ:** ಹಾಸನ-ಚಿಕ್ಕಮಗಳೂರು ಜಿಲ್ಲೆಗಳ ಪ್ರದೇಶದಲ್ಲಿ ಆಳಿದ ಹೊಯ್ಸಳ ದೊರೆ (ಸು. 1000-45). ಮೊದಲಿಗೆ ಇವನೇ ಹೊಯ್ಸಳ ಮನೆತನದ ಮೊದಲ ರಾಜನಿರಬಹುದೆಂದು ತಿಳಿಯಲಾಗಿತ್ತು. ಆದರೆ ಇತ್ತೀಚೆಗೆ ಪತ್ತೆಯಾದ ಚಿಕ್ಕಮಗಳೂರು ತಾಲ್ಲೂಕಿನ ಉಪ್ಪಳ್ಳಿ ಶಾಸನದಿಂದ ಹೊಯ್ಸಳ ವಂಶದ ಮೊದಲ ರಾಜರ ವಿವರಗಳು ದೊರೆತಿವೆ (ನೋಡಿ) ಹೊಯ್ಸಳರು. ಇವನನ್ನು ಕಾಮನೃಪ, ರಾಚಮಲ್ಲ ಪೆರ್ಮಾನಡಿ ಎಂದೂ ಕೆಲವು ಶಾಸನಗಳಲ್ಲಿ ಹೆಸರಿಸಲಾಗಿದೆ. ಈ ಎರಡನೆಯ ಹೆಸರಿನಿಂದಾಗಿ ನೃಪಕಾಮ ತಲಕಾಡಿನ ಗಂಗಸಂತತಿಯೊಡನೆ ಸಂಬಂಧ ಹೊಂದಿದ್ದನೆಂದು ಹಲವು ವಿದ್ವಾಂಸರೂ ಇವನು ಮೊದಲಲ್ಲಿ ಗಂಗರ ಸಾಮಂತನಾಗಿರಬೇಕಂದು ಮತ್ತೆ ಕೆಲವು ವಿದ್ವಾಂಸರೂ ಅಭಿಪ್ರಾಯಪಟ್ಟಿದ್ದಾರೆ. ಅನೇಕ ಶಾಸನಗಳಲ್ಲಿ ಬರುವ ಹೊಯ್ಸಳ ವಂಶಾವಳಿಯಲ್ಲಿ ನೃಪಕಾಮನ ಹೆಸರು ಕಂಡುಬರದೆ ಸಾಮಾನ್ಯವಾಗಿ ಆದ್ಯ ಸಳನಾದ ಅನಂತರ ಅವನ ವಂಶದಲ್ಲಿ ವಿನಯಾದಿತ್ಯನೆಂಬುವನು ರಾಜನಾದನು ಎಂಬ ಹೇಳಿಕೆಯಿರುತ್ತದೆ. ಒಂದೆರಡು ಶಾಸನಗಳಲ್ಲಿ ಮಾತ್ರ ನೃಪಕಾಮ ವಿನಯಾದಿತ್ಯನ ತಂದೆ ಎಂಬ ಉಲ್ಲೇಖವಿದೆ. ಇವನ ಶಾಸನಗಳಾದರೋ ಇವನನ್ನು ಹೊಯ್ಸಳ ಎಂದು ಸ್ಪಷ್ಟವಾಗಿ ನಿರ್ದೇಶಿಸುತ್ತವೆ. ಕೊಂಗಾಳ್ವ ಶಾಸನವೊಂದರಲ್ಲಿ ನೃಪಕಾಮನನ್ನು ಮುಂಡಹೊಯ್ಸಳ ಎಂದು ಸಂಬೋಧಿಸಲಾಗಿರುವುದರಿಂದ ನೃಪಕಾಮ ಜೈನಮತಾವಲಂಬಿಯಾಗಿರಬೇಕೆಂದು ಒಂದು ಊಹೆ.

1022 ರಿಂದ 1027ರ ವರೆಗೆ ನೃಪಕಾಮನ ಅನೇಕ ಶಾಸನಗಳು ದೊರೆತಿವೆ. ಇವನು 1022ರಲ್ಲಿ ಕೊಂಗಾಳ್ವರ ಮೇಲೆ ದಂಡೆತ್ತಿಹೋಗಿದ್ದನಲ್ಲದೆ, 1026ರಲ್ಲಿ ಮಣ್ಣೆ ಎಂಬಲ್ಲಿ ಅವರನ್ನು ಮತ್ತೆ ಎದುರಿಸಿದ. 1027ರಲ್ಲಿ ಬನವಾಸಿಯಲ್ಲಿ ಪ್ರಾಯಶಃ ಕದಂಬರ ಮೇಲೆ ನಡೆದ ಯುದ್ಧವೊಂದರಲ್ಲಿ ಅವರ ಸಹಾಯಕನಾಗಿದ್ದ. ವಿಷ್ಣುವರ್ಧನ ಹೊಯ್ಸಳನ ಪ್ರಧಾನಾಮಾತ್ಯನಾದ ಗಂಗರಾಜನ ತಂದೆ ಏಚರಾಜ ಬಾಲ್ಯದಲ್ಲಿ ನೃಪಕಾಮನ ಆಸ್ಥಾನದಲ್ಲಿದ್ದನೆಂದು ಶ್ರವಣಬೆಳಗೊಳದ ಶಾಸನವೊಂದರಿಂದ ತಿಳಿದುಬರುತ್ತದೆ. (ಜಿ.ಆರ್.ಆರ್.)

**ನೆಲಮಂಗಲ:** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಒಂದು ತಾಲ್ಲೂಕು. ಜಿಲ್ಲೆಯ ವಾಯುವ್ಯಭಾಗದಲ್ಲಿ ಆಗ್ನೇಯ-ವಾಯುವ್ಯಾಭಿಮುಖವಾಗಿ ಹರಡಿರುವ ಈ ತಾಲ್ಲೂಕನ್ನು ಉತ್ತರದಲ್ಲಿ ತುಮಕೂರು, ಕೊರಟಗೆರೆ ತಾಲ್ಲೂಕುಗಳೂ ಪೂರ್ವದಲ್ಲಿ ದೊಡ್ಡಬಳ್ಳಾಪುರ ಮತ್ತು ಉತ್ತರ ಬೆಂಗಳೂರು ತಾಲ್ಲೂಕುಗಳೂ ಪಶ್ಚಿಮ ಮತ್ತು ನೈಋತ್ಯದಲ್ಲಿ ಮಾಗಡಿ ತಾಲ್ಲೂಕು ಸುತ್ತುವರಿದಿವೆ. ದಾಸನಪುರ, ನೆಲಮಂಗಲ, ಸೋಮಪುರ ಮತ್ತು ತ್ಯಾಮಗೊಂಡ್ಲು ಹೋಬಳಿಗಳಿದ್ದು 314 ಗ್ರಾಮಗಳಿವೆ. ತಾಲ್ಲೂಕಿನ ವಿಸ್ತೀರ್ಣ 653.1 ಚಕಿಮೀ. ಜನಸಂಖ್ಯೆ 1,74,445.

ಶಿವಗಂಗೆ (4559') ಮತ್ತು ನಿಜಗಲ್ಲು ಈ ತಾಲ್ಲೂಕಿನ ಮುಖ್ಯ ಬೆಟ್ಟಗಳು. ಈ ತಾಲ್ಲೂಕಿನಲ್ಲಿ ಅರಣ್ಯ ಪ್ರದೇಶ ಇಲ್ಲವೆಂದೇ ಹೇಳಬಹುದು. ದೊಡ್ಡ ಬೆಲೆ ಮತ್ತು ಬೊಮ್ಮನಹಳ್ಳಿಯ ಬಳಿ ಸರ್ಕಾರದಿಂದ ಪೋಷಕವಾದ ಸಾಮಾನ್ಯ ಅರಣ್ಯಗಳನ್ನು ಬೆಳೆಸಲಾಗುತ್ತಿದೆ. ಈ ತಾಲ್ಲೂಕಿನ ಮಣ್ಣು ನಸುಗೆಂಪು ಮಿಶ್ರಿತವಾಗಿದ್ದು ಹಲವು ಭಾಗಗಳಲ್ಲಿ ಫಲವತ್ತಾಗಿದೆ. ವಾರ್ಷಿಕ ಸರಾಸರಿ ಮಳೆ 1140 ಮಿಮೀ. ಬೇಸಾಯ ಜನರ ಮುಖ್ಯ ಕಸಬು. ಅರ್ಕಾವತಿ ಮತ್ತು ಅದರ ಉಪನದಿಯಾದ ಕುಮುದ್ವತಿ ಈ ತಾಲ್ಲೂಕಿನ ಮುಖ್ಯ ನದಿಗಳು. ಈ ತಾಲ್ಲೂಕಿನಲ್ಲಿ ದೊಡ್ಡ ನೀರಾವರಿ ಅಣೆಕಟ್ಟುಗಳಾಗಲಿ, ಜಲಾಶಯಗಳಾಗಲಿ ಇಲ್ಲ. ಸಣ್ಣ ಪುಟ್ಟ ಕೆರೆಗಳಿದ್ದು ಅವುಗಳ ನೀರನ್ನು ಬತ್ತ ಮತ್ತು ಬಾಗಾಯ್ತು ಬೆಳೆಗಳಿಗೆ ಬಳಸಿಕೊಳ್ಳಲಾಗುತ್ತಿದೆ. ಅಂತಹ ಕೆರೆಗಳಲ್ಲಿ ಚಿಕ್ಕಣ್ಣನ ಅಣೆ,

ತ್ಯಾಮಗೊಂಡ್ಲುವಿನ ಅಮಾನಿಕೆರೆ, ಕೆರೆಗತ್ತಿಗನೂರಿನ ಕೆರೆ, ಸೊಂಡೆಕೊಪ್ಪದ ಕೆರೆ, ಮಣ್ಣೆ ಕೆರೆ ಮೊದಲಾದವುಗಳನ್ನು ಹೆಸರಿಸಬಹುದಾಗಿದೆ. ರಾಗಿ ಈ ತಾಲ್ಲೂಕಿನ ಮುಖ್ಯವಾದ ಬೆಳೆ. ಅವರೆ, ತೊಗರಿ, ಹುರುಳಿ ಮತ್ತು ಎಣ್ಣೆಬೀಜಗಳನ್ನೂ ಮುಸುಕಿನ ಜೋಳ ಮತ್ತು ಕೆಲವು ಹಣ್ಣುಗಳನ್ನೂ ಬೆಳೆಯುತ್ತಾರೆ. ಸಣ್ಣ ಪುಟ್ಟ ಕೆರೆಗಳ ಅಚ್ಚುಕಟ್ಟಿನಲ್ಲಿ ಬತ್ತ ಮತ್ತು ಕಬ್ಬನ್ನೂ ಬೆಳೆಯುವರು. ಇತ್ತೀಚೆಗೆ ನೀರಾವರಿ ಬಾವಿಗಳನ್ನು ತೋಡಿ ವಿದ್ಯುತ್ ಪಂಪುಗಳ ಸಹಾಯದಿಂದ ನೀರೆತ್ತಿ ಬೆಳೆ ಬೆಳೆಯಲಾಗುತ್ತಿದೆ.

ಈ ತಾಲೂಕಿನ ನಿಡವಂದ ಒಂದು ರೈಲ್ವೆ ನಿಲ್ದಾಣ ಮತ್ತು ವ್ಯಾಪಾರಕೇಂದ್ರ. ಶಿವಗಂಗೆ (ನೋಡಿ) ಒಂದು ಪವಿತ್ರ ಕ್ಷೇತ್ರ. ಈ ತಾಲ್ಲೂಕಿನ ತೋಟಗೆರೆ ಗ್ರಾಮದಲ್ಲಿ ಅರ್ಜುನ ದೇವಾಲಯ ಇದ್ದು ಅದು ಈಗ ಹಾಳುಬಿದ್ದಿದೆ. ತ್ಯಾಮಗೊಂಡ್ಲು ಹೋಬಳಿ ಕೇಂದ್ರವಾಗಿರುವುದಲ್ಲದೆ ದೊಡ್ಡ ವ್ಯಾಪಾರ ಕೇಂದ್ರ. ಎಲೆಕ್ಯಾತನ ಹಳ್ಳಿ ಜೈನಧರ್ಮೀಯರ ಮುಖ್ಯಸ್ಥಳ. ನಿಜಗಲ್ಲು ಮತ್ತು ಇತರ ಕಡೆಗಳಲ್ಲಿ ಸಣ್ಣ ಪುಟ್ಟ ಪಾಳೆಗಾಯರರು ಆಳುತ್ತಿದ್ದರು. ಮಹಿಮಾಪುರ ಗ್ರಾಮದ ಬಳಿಯಿರುವ ಗುಡ್ಡಕ್ಕೆ ಮಹಿಮೆರಂಗನ ಬೆಟ್ಟ ಎಂಬ ಹೆಸರಿದ್ದು ಅದರ ಮೇಲೆ ರಂಗನಾಥ ಸ್ವಾಮಿಯ ದೇವಾಲಯವಿದೆ. ಇಲ್ಲಿ ವರ್ಷಕ್ಕೊಂದು ಭಾರಿ ಜಾತ್ರೆ ನಡೆಯುತ್ತದೆ. ಬರದಿ ಗ್ರಾಮದ ಬಳಿ ಇರುವ ರಾಮದೇವರ ಗುಡ್ಡದ ಮೇಲೆ ಶ್ರೀರಾಮ ದೇವಾಲಯವಿದೆ. ಸುತ್ತಮುತ್ತಿನ ಜನ ಇಲ್ಲಿ ವಿವಾಹಗಳನ್ನು ಜರುಗಿಸುವರು, ಬಿನ್ನಮಂಗಲದ ಮುಕ್ತಿನಾಥ ದೇವಾಲಯ ಒಂದನೆಯ ರಾಜೇಂದ್ರ ಚೋಳನ ಆಳ್ವಿಕೆಯಲ್ಲಿ ನಿರ್ಮಾಣವಾದ್ದು. ಹೆಗ್ಗುಂದ ಬೆಟ್ಟದ ಪಾದದಲ್ಲಿ ವೀರಭದ್ರ ಮತ್ತು ಮಲ್ಲಿಕಾರ್ಜುನ ಎಂಬ ಎರಡು ಗುಹಾಲಯಗಳಿವೆ. ಇಲ್ಲಿನ ಶ್ರೀರಾಮ ದೇವಾಲಯದ ಬಳಿ ಇರುವ ಸ್ತಂಭಕ್ಕೆ ಶ್ರೀರಾಮನ ಹಯವನ್ನು ಕಟ್ಟಲಾಗಿತ್ತೆಂದು ಪೌರಾಣಿಕ ಕಥೆ. ಮಣ್ಣೆ (ಮಾನ್ಯಪುರ) ಗಂಗರ ಶ್ರೀಪುರುಷನ (725-788) ಮತ್ತು ಅನಂತರ ರಾಷ್ಟ್ರಕೂಟರ ಕಾಲದಲ್ಲಿ ಮುಖ್ಯಸ್ಥಳವಾಗಿತ್ತು.

ನೆಲಮಂಗಲ ಈ ತಾಲ್ಲೂಕು ಮತ್ತು ಹೋಬಳಿಯ ಆಡಳಿತ ಕೇಂದ್ರ. ಬೆಂಗಳೂರು-ತುಮಕೂರು ಮಾರ್ಗದಲ್ಲಿ ಬೆಂಗಳೂರಿನ ವಾಯವ್ಯಕ್ಕೆ ಸು. 27 ಕಿಮೀ ದೂರದಲ್ಲಿದೆ. ಈ ಪಟ್ಟಣದ ಜನಸಂಖ್ಯೆ 25206.

ಈ ಪಟ್ಟಣ ವ್ಯಾಪಾರಕೇಂದ್ರಗಳಾದ ಮಾಗಡಿ, ಬೆಂಗಳೂರು, ದೊಡ್ಡಬಳ್ಳಾಪುರ ಮತ್ತು ತುಮಕೂರುಗಳ ಮಧ್ಯದಲ್ಲಿದ್ದು ಉತ್ತಮ ರಸ್ತೆ ಸಂಪರ್ಕವನ್ನು ಹೊಂದಿದೆ. ಈ ಪಟ್ಟಣದಲ್ಲಿ ಆಸ್ಪತ್ರೆ, ಅಂಚೆ, ತಂತಿ, ದೂರವಾಣಿ, ವಿದ್ಯುತ್, ಶಾಲೆಗಳು ಮುಂತಾದ ಸೌಲಭ್ಯಗಳು ಇವೆ.

ಇಂದಿನ ನೆಲಮಂಗಲದ ಬಳಿಯಲ್ಲೇ ಹಿಂದೆ ಭೂಮಂಗಲ ಎಂಬ ದೊಡ್ಡ ಊರಿದ್ದು ಅದು ಯುದ್ಧವೊಂದರಲ್ಲಿ ಹಾಳಾಯಿತೆಂದೂ ಅನಂತರ ಇಂದಿನ ಪಟ್ಟಣ ಅಸ್ತಿತ್ವಕ್ಕೆ ಬಂತೆಂದೂ ಐತಿಹ್ಯ. (ಜಿ.ಆರ್.ಆರ್.)

**ನೇತ್ರಾಣಿ ದ್ವೀಪಗಳು :** ಉತ್ತರ ಕನ್ನಡ ಜಿಲ್ಲೆ ಭಟ್ಕಳ ತಾಲ್ಲೂಕಿನ ಪ್ರವಾಸಿ ಸ್ಥಳ. ಇದಕ್ಕೆ ಪಿಜನ್ ಐಲೆಂಡ್ ಅಥವಾ ಪಾರಿವಾಳ ದ್ವೀಪವೆಂಬ ಹೆಸರೂ ಇದೆ. ಪ್ರಸಿದ್ಧ ಪುಣ್ಯಕ್ಷೇತ್ರಗಳಲ್ಲೊಂದಾದ ಮುರ್ಡೇಶ್ವರದಿಂದ ದಕ್ಷಿಣಕ್ಕೆ ಭಟ್ಕಳದಿಂದ 18 ಕಿಮೀ ದೂರದಲ್ಲಿದೆ. ನೇತ್ರಾಣಿ ನಡುಗಡ್ಡೆಯು ಕಣ್ಣಿನ ಗುಡ್ಡೆಯಾಕಾರವನ್ನು ಹೋಲುವುದರಿಂದ ಜನಪದರ ಬಾಯಲ್ಲಿ ನೇತ್ರಾಣಿಯಾಗಿದೆ. ರೋಮಿನ ಪ್ರವಾಸಿ ಬುಕಾನನ್ ಈ ದ್ವೀಪಕ್ಕೆ 1801 ರಲ್ಲಿ ಭೇಟಿ ಕೊಟ್ಟಾಗ ಅಲ್ಲಿ ಕಲ್ಲಿನ ಕಂಬಕ್ಕೆ ಪೂಜೆ ಸಲ್ಲಿಸುತ್ತಿದ್ದುದನ್ನು ಕಂಡು ಅದನ್ನು ತನ್ನ ಪ್ರವಾಸ ಕಥನದಲ್ಲಿ ಉಲ್ಲೇಖಿಸಿದ್ದಾನೆ. ಈ ಕಲ್ಲಿನ ಕಂಬವನ್ನು ಭಕ್ತರು ಜಟ್ಟಿಗದೇವರೆಂದು ಹೇಳುತ್ತಾರೆ ಎಂದು 1975ರಲ್ಲಿ ಈ ದ್ವೀಪಕ್ಕೆ ಭೇಟಿ ಕೊಟ್ಟ ಹೂಮ್ ತನ್ನ ಪ್ರವಾಸ ಸಾಹಿತ್ಯದಲ್ಲಿ ತಿಳಿಸಿದ್ದಾನೆ. ಹಿಂದೆ ಎಲ್ಲ ಧರ್ಮದವರೂ ಇಲ್ಲಿ ಹರಕೆ ಒಪ್ಪಿಸುತ್ತಿದ್ದರು. ಇಂದಿಗೂ ಇಲ್ಲಿ ಜಟ್ಟಿಗನ ಗುಡಿ, ಮಸೀದಿ, ಚರ್ಚು ಇವೆ. ಹರಕೆ ಹೊತ್ತು ಭಕ್ತಾದಿಗಳು ಕೆಲವೊಮ್ಮೆ ಕೋಳಿ ಮತ್ತು ಕುರಿಗಳನ್ನು ಇಲ್ಲಿಗೆ ತಂದು ದೇವರಿಗೆ ಬಿಡುತ್ತಾರೆ. ಅಂಥ ಪ್ರಾಣಿ ಪಕ್ಷಿಗಳು ಈ ದ್ವೀಪದಲ್ಲಿ ಸಾಕಷ್ಟಿವೆ.

ನೇತ್ರಾಣಿ ಗುಡ್ಡೆ ಕಡಿದಾಗಿರುವುದರಿಂದ ಅದರ ಸಮೀಪಕ್ಕೆ ಯಾಂತ್ರಿಕ ದೋಣಿ ಹೋಗುವುದಿಲ್ಲ. 100 ಮೀ ದೂರದಲ್ಲಿ ಲಂಗರು ಹಾಕಿದ ದೋಣಿಯಿಂದ ಅಲ್ಲಿಗೆ ಪಾತಿ ದೋಣಿಯಲ್ಲಿ ಹೋಗಬೇಕು. ಗುಡ್ಡೆಯ ಮರಕ್ಕೆ ಕಟ್ಟಿದ ಹಗ್ಗದ ನೆರವಿನಿಂದ ಗುಡ್ಡೆಯನ್ನು ಜನ ಹತ್ತುವುದುಂಟು. ಗೊಂಡರು, ಮೊಗವೀರರು, ಖಾರ್ವಿಗಳು, ನೇತ್ರಾಣಿ ಜಟ್ಟಿಗನ ಭಕ್ತವರ್ಗಕ್ಕೆ ಸೇರಿದವರಾಗಿದ್ದಾರೆ. ಇಲ್ಲಿನ ಎತ್ತರದ ಅಂಕುಡೊಂಕಾದ ಬಂಡೆಗಳ ರಚನೆ ಪಾರಿವಾಳಗಳ ವಾಸಕ್ಕೆ ಅನುಕೂಲಕರವಾಗಿದೆ. ಇಲ್ಲಿ ಪಾರಿವಾಳಸಂಖ್ಯೆ ಅಧಿಕವಿರುವುದರಿಂದ ಪಾಶ್ಚಾತ್ಯರು ಈ ದ್ವೀಪವನ್ನು ಪಿಜನ್ ಐಲೆಂಡ್ ಎಂದು ಕರೆದರು. ಹಿಂದೆ ಅಂಜದೀವ್‌ನಿಂದ ಜನರು ಇಲ್ಲಿಗೆ ಬಂದು ಗೂಡುಗಳನ್ನು ಸಂಗ್ರಹಿಸಿ ಮುಂಬಯಿಗೆ ಕಳುಹಿಸುತ್ತಿದ್ದರು. ಈ ದ್ವೀಪದಲ್ಲಿ ಪಾರಿವಾಳಗಳಲ್ಲದೆ ಇನ್ನಿತರ ಪಕ್ಷಿ ಸಂಕುಲವೂ ಇದೆ. ಪಕ್ಷಿವೀಕ್ಷಣೆಗೆ ಇದೊಂದು ಉತ್ತಮ ತಾಣ. ಇಲ್ಲಿಗೆ ವಿಹಾರಕ್ಕೆ ಹೋಗಿಬರಲು ನವೆಂಬರ್-ಮಾರ್ಚ್ ಅವಧಿ ಸೂಕ್ತಕಾಲ. (ಎಸ್.ಜಿ.ಬಿ.)

**ನೇತ್ರಾವತಿ :** ದಕ್ಷಿಣ ಕನ್ನಡ ಜಿಲ್ಲೆಯ ಒಂದು ನದಿ. ಪಶ್ಚಿಮ ಘಟ್ಟದ ಕುದುರೆಮುಖ ಪರ್ವತದಲ್ಲಿ ಹುಟ್ಟಿ, ಬಂಗಾಡಿ ಕಣಿವೆಯ ಮುಖಾಂತರ ಹರಿದು ಉಜಿರೆ, ಧರ್ಮಸ್ಥಳ ಬೆಳ್ತಂಗಡಿಗಳನ್ನು ದಾಟಿ ಬಂಟ್ವಾಳದ ಮುಖಾಂತರ ಮಂಗಳೂರೆಡೆಗೆ ಸಾಗಿ, ಕೋಡಿಯಾಲದ ಬಳಿ ಅರಬ್ಬೀಸಮುದ್ರವನ್ನು ಸೇರುತ್ತದೆ. ನದಿಯ ಹರಿವಿನ ಒಟ್ಟು ಉದ್ದ 96 ಕಿಮೀ. ಕುಮಾರಧಾರಾ ಮತ್ತು ಗುರುಪುರ ಹೊಳೆಗಳು ಇದರ ಮುಖ್ಯ ಉಪನದಿಗಳು. ಕುಮಾರಧಾರಾ ನೇತ್ರಾವತಿಯ ದಕ್ಷಿಣದಿಂದ ಬಂದು ಉಪ್ಪಿನಂಗಡಿ ಬಳಿ ಸೇರುತ್ತದೆ. ಗುರುಪುರ ಹೊಳೆ ಉತ್ತರದಿಂದ ಬಂದು ಮಂಗಳೂರಿನ ಬಳಿ ಸಂಗಮವಾಗುತ್ತದೆ. ಮುಂಗಾರು ಮಳೆಯ ದಿನಗಳಲ್ಲಿ ನೇತ್ರಾವತಿಯಲ್ಲಿ ಅಧಿಕ ಪ್ರವಾಹವಿರುತ್ತದೆ. ನದಿಯ ಮಧ್ಯೆ ಕಲ್ಲುಬಂಡೆಗಳೂ ಮಡುವುಗಳೂ ಇವೆ. ಬಂಟ್ವಾಳದಿಂದ ಮುಂದಕ್ಕೆ ದೋಣಿಗಳ ಸಂಚಾರಕ್ಕೆ ಅನುಕೂಲವಾಗಿವೆ. ಮಂಗಳೂರಿನ ಬಳಿ ನದಿಯ ಪಾತ್ರ ವಿಶಾಲವಾಗಿದ್ದು ಮಧ್ಯೆ ಸಣ್ಣ ದ್ವೀಪಗಳಿವೆ. ಫಲವತ್ತಾಗಿರುವ ಈ ಭಾಗಗಳು ಬತ್ತ ಕಬ್ಬು ಬೆಳೆಗೆ ಉಪಯುಕ್ತವಾಗಿವೆ. ಉಲ್ಲಾಳದ ಬಳಿ ನೇತ್ರಾವತಿ ನದಿಗೆ ಅಡ್ಡಲಾಗಿ ನಿರ್ಮಿಸಿರುವ ರೈಲು ಸೇತುವೆ ದಕ್ಷಿಣ ಭಾರತದ ಬಹು ಉದ್ದವಾದ ರೈಲು ಸೇತುವೆಗಳಲ್ಲಿ ಒಂದು.
(ಕೆ.ಬಿ.ಕೆ.)

**ನೇಮಿಚಂದ್ರ[1] :** ಹತ್ತನೆಯ ಶತಮಾನದಲ್ಲಿದ್ದ ಪ್ರಸಿದ್ಧ ಜೈನ ಆಚಾರ್ಯರು. ಗೊಮ್ಮಟಸಾರ, ತ್ರಿಲೋಕಸಾರ, ಲಬ್ಧಿಸಾರ ಎಂಬ ಗ್ರಂಥಗಳನ್ನು ಪ್ರಾಕೃತದಲ್ಲಿ ಬರೆದಿದ್ದಾರೆ. ಇವರಿಗೆ ಸಿದ್ಧಾಂತಚಕ್ರವರ್ತಿ ಎಂಬ ಬಿರುದಿದ್ದಂತೆ ತಿಳಿಯುತ್ತದೆ. ಅಭಯನಂದಿ ಇವರ ಗುರು.

ಗೊಮ್ಮಟಸಾರ ಷಟ್ಖಂಡಾಗಮದ ಸಾರವನ್ನೊಳಗೊಂಡಿದ್ದು ಕರ್ಮಸಿದ್ಧಾಂತವನ್ನು ಕುರಿತ ಮಹತ್ತ್ವಪೂರ್ಣ ಗ್ರಂಥವಾಗಿದೆ. ಇದನ್ನು ಚಾವುಂಡರಾಯನಿಗಾಗಿ ಬರೆದಂತೆ ತಿಳಿಯುತ್ತದೆ. ಈ ಗ್ರಂಥದ ರಚನೆಯಲ್ಲಿ ಕನಕನಂದಿಯ ಸಹಾಯ ಇವರಿಗೆ ದೊರೆತಂತೆ ತೋರುತ್ತದೆ. ಚಾವುಂಡರಾಯನನ್ನು ಕುರಿತು ಹಲವು ಸಂಗತಿಗಳು ಇದರಿಂದ ಲಭ್ಯವಾಗುತ್ತವೆ. ಅವುಗಳಲ್ಲಿ ಚಾವುಂಡರಾಯ ಗೊಮ್ಮಟೇಶ್ವರ ವಿಗ್ರಹ ಪ್ರತಿಷ್ಠಾಪಿಸಿದ ಸಂಗತಿ ಮುಖ್ಯವಾದುದು. ಈ ಕೃತಿಯನ್ನು ಕುರಿತು ಸಂಸ್ಕೃತದಲ್ಲಿ ಅಭಯಚಂದ್ರ ಮತ್ತು ನೇಮಿಚಂದ್ರ (ಕನ್ನಡ ಟೀಕೆಯ ಆಧಾರದಿಂದ ಬರೆದದ್ದು). ಕನ್ನಡದಲ್ಲಿ ಕೇಶವವರ್ಣಿ - ಇವರು ವಿಸ್ತೃತ ಟೀಕೆಗಳನ್ನು ಬರೆದಿದ್ದಾರೆ. (ಎ.ಎಸ್.ಯು.)

**ನೇಮಿಚಂದ್ರ[2] :** ಸು. 12ನೆಯ ಶತಮಾನದ ಜೈನಕವಿ. ಲೀಲಾವತೀ ಮಹಾಪ್ರಬಂಧಂ ಮತ್ತು ನೇಮಿನಾಥ ಪುರಾಣಂ ಎಂಬ ಚಂಪೂಕಾವ್ಯಗಳನ್ನು ರಚಿಸಿ ಪ್ರಸಿದ್ಧನಾಗಿದ್ದಾನೆ. ಈತ ಲೀಲಾವತೀಕಾವ್ಯದಲ್ಲಿ ಲಕ್ಷ್ಮಣರಾಜ (ಸೌಂದತ್ತಿಯ ರಟ್ಟವಂಶದ ರಾಜ ಸು. 1190) ಮತ್ತು ಚಂದಲದೇವಿಯರನ್ನು ಕೊಂಡಾಡಿದ್ದಾನೆ. ನೇಮಿನಾಥ ಪುರಾಣದಲ್ಲಿ

ವೀರಬಲ್ಲಾಳನ (1173-1220) ಮಂತ್ರಿ ಸೆಜ್ಜೆವಳ ಪದ್ಮನಾಭನನ್ನು ಹೊಗಳಿ ಅವನ ಹಾಗೆಯೇ ಹೊಯ್ಸಳ ಆಶ್ರಯದಲ್ಲಿದ್ದಂತೆ ಹೇಳಿಕೊಂಡಿದ್ದಾನೆ. ಲಕ್ಷ್ಮಣರಾಜನ ಆಶ್ರಿತನಾಗಿದ್ದುಕೊಂಡು ತನ್ನ ಪ್ರೌಢಕಾವ್ಯವಾದ ಲೀಲಾವತೀಮಹಾಪ್ರಬಂಧವನ್ನೂ ಹೊಯ್ಸಳ ರಾಜ್ಯ ಪದ್ಮನಾಭನ ಆಶ್ರಯದಲ್ಲಿದ್ದುಕೊಂಡು ನೇಮಿನಾಥಪುರಾಣವನ್ನೂ ರಚಿಸಿದನೆಂದು ತಿಳಿಯಬಹುದು. ನೇಮಿಚಂದ್ರ ತನಗಿಂತ ಮುಂಚೆ ಕೃತಿರಚನೆ ಮಾಡಿದ ಯಾವ ಕನ್ನಡ ಕವಿಯನ್ನೂ ಸ್ಮರಿಸಿಲ್ಲ. ಮಧುರಕವಿ ನೇಮಿಚಂದ್ರನನ್ನು ಹೊಗಳುತ್ತ ನೇಮಿಜನ್ನಮರೀರ್ವರೆ ಕರ್ಣಾಟಕೃತಿಗೆ ಸೀಮಾಪುರುಷರ್ ಎಂದು ನುಡಿದಿದ್ದಾರೆ.

ನೇಮಿಚಂದ್ರ ಬಹಳ ಆತ್ಮಾಭಿಮಾನವುಳ್ಳ ಕವಿ. ಇವನು ಧರಿಸಿದ ಬಿರುದುಗಳಿಗೆ ಲೆಕ್ಕವಿಲ್ಲ. ಭಾರತೀಚಿತ್ರಚೋರ, ಸಾಹಿತ್ಯ ವಿದ್ಯಾಧರ, ಚತುರ್ಭಾಷಾ ಚಕ್ರವರ್ತಿ, ಕವಿರಾಜಕುಂಜರ, ಸುಕರಕವಿಶೇಖರ ಎಂಬೀ ಹೆಸರುಗಳೇ ಕವಿಗೆ ಪಾಂಡಿತ್ಯದ ಪ್ರತಿಭೆಯ ಹೆಮ್ಮೆ ವಿಶೇಷವಾಗಿದ್ದಿತೆಂಬುದನ್ನು ಸೂಚಿಸುತ್ತವೆ. ಇವನು ತನ್ನ ಕವಿತೆಯ ಮೇಲ್ಮೆಯನ್ನೂ ಪಾಂಡಿತ್ಯಪ್ರತಾಪವನ್ನೂ ಯಾವ ಬಗೆಯ ಸಂಕೋಚವೂ ಇಲ್ಲದೆ ಹೊಗಳಿಕೊಂಡಿದ್ದಾನೆ.

ಲೀಲಾವತೀಪ್ರಬಂಧ ಹದಿನಾಲ್ಕು ಆಶ್ವಾಸಗಳುಳ್ಳ ಪ್ರೌಢಕಾವ್ಯ. ತಾನು ಈ ಕಾವ್ಯದಲ್ಲಿ ಶೃಂಗಾರವನ್ನು ಸೆರೆಹಿಡಿದಿಟ್ಟಿರುವಂತೆ ಹೇಳಿಕೊಂಡಿದ್ದಾನೆ. ಆದ್ದರಿಂದಲೇ ಇವನಿಗೆ ಶೃಂಗಾರಕಾರಾಗೃಹ ಎಂಬ ಬಿರುದು ಬಂತೆಂದು ತೋರುತ್ತದೆ. ಈ ದೊಡ್ಡ ಕಾವ್ಯವನ್ನು ಒಂದೇ ವರ್ಷದಲ್ಲಿ ಬರೆದು ಮುಗಿಸಿದನಂತೆ. ಕಾವ್ಯದಲ್ಲಿರುವ ಕಥೆ ಸ್ವಲ್ಪ; ವರ್ಣನೆಯೇ ಅಪಾರವಾಗಿ ಬೆಳೆದಿದೆ. ಕಂದರ್ಪದೇವನೆಂಬ ಒಬ್ಬ ರಾಜಕುಮಾರ ಒಂದು ರಾತ್ರಿ ಕನಸಿನಲ್ಲಿ ಮಹಾಸುಂದರಿಯಾದ ತರುಣಿಯೊಬ್ಬಳನ್ನು ಕಂಡು ಅವಳನ್ನು ಮೆಚ್ಚಿ ಮೋಹಿಸಿದ. ಮಾರನೆಯ ದಿನ ಬೆಳಗ್ಗೆ ತನ್ನ ಕನಸಿನ ಸುಂದರಿ ಎಲ್ಲಿರುವಳೋ ಎಂದು ಹುಡುಕಲು ನಿರ್ಧರಿಸಿ ತನ್ನ ಸ್ನೇಹಿತನಾದ ಮಂತ್ರಿಪುತ್ರ ಮಕರಂದವನ್ನೂ ಜತೆಯಲ್ಲಿ ಕರೆದುಕೊಂಡು ಪ್ರಯಾಣ ಹೊರಟ. ಕುಸುಮಪುರದ ಅರಸು ಶೃಂಗಾರಶೇಖರನ ಮಗಳು ಲೀಲಾವತಿ ಕನಸಿನಲ್ಲಿ ಸುಂದರ ಪುರುಷನೊಬ್ಬನನ್ನು ಕಂಡು ಮೋಹಿಸಿ ಅವನನ್ನು ಹುಡುಕಲು ಜನರನ್ನು ಅಟ್ಟಿದಳು. ಕೊನೆಗೆ ಇವರಿಬ್ಬರೂ ಸಂಧಿಸಿ ಪರಸ್ಪರ ಒಲಿದು ಮದುವೆಯಾದರು. ಕಂದರ್ಪದೇವ ಲೀಲಾವತೀ ಸಮೇತನಾಗಿ ಬನವಾಸಿಗೆ ಬಂದು ಸುಖವಾಗಿ ರಾಜ್ಯವಾಳಿದ್ದ. ಈ ಚಿಕ್ಕ ಕಥೆಯ ಹಂದರದ ಮೇಲೆ ನೇಮಿಚಂದ್ರ ಅನೇಕ ಸನ್ನಿವೇಶಗಳನ್ನು ಸೃಷ್ಟಿಸಿ ಶೃಂಗಾರರಸಪ್ರತಿಪಾದನೆಗೆ ಬೇಕಾದಷ್ಟು ಅವಕಾಶವನ್ನು ಕಲ್ಪಿಸಿಕೊಂಡಿದ್ದಾನೆ. ಸ್ವಪ್ನಸಂದರ್ಶನದಿಂದಲೇ ಮನಸ್ಸಿನಲ್ಲಿ ಮೊಳೆತ ಮೆಚ್ಚಿಗೆಯ ಮೋಹ ಬಲಿತು ಪ್ರೇಮಿಗಳು ಪರಸ್ಪರ ಸಂದರ್ಶನಕ್ಕೆ ಹಂಬಲಿಸಿ ಕಾತರರಾಗಿ ಅನ್ವೇಷಣೆ ನಡೆಸಿದ ವೃತ್ತಾಂತ, ನಾಯಕನಾಯಕಿಯರ ಪರಸ್ಪರ ಸಂದರ್ಶನ, ಸಮ್ಮೋಹಸಮಾಗಮಗಳ ಕಥೆ ಶೃಂಗಾರರಸಪ್ರತಿಪಾದನೆಗೆ ಹಲವು ಸಂದರ್ಭಗಳನ್ನು ಒದಗಿಸಿವೆ. ಆದರೆ ನೇಮಿಚಂದ್ರ ಪ್ರೇಮಿಗಳ ಮನೋವೃತ್ತಿಯ ನಾನಾ ಅವಸ್ಥೆಗಳನ್ನು ಬಣ್ಣಿಸುವ ಭರದಲ್ಲಿ ಅನೇಕ ಕಡೆ ಲಜ್ಜೆ, ಸಂಕೋಚ ಮತ್ತು ಗಾಂಭೀರ್ಯಗಳನ್ನು ಮರೆತಿದ್ದಾನೆ. ಇವನ ಒಲವು ಹೆಚ್ಚಾಗಿ ಆಂಗೀಕಶೃಂಗಾರ ನಿರೂಪಣೆಯ ಕಡೆಗೇ ಇದೆಯೆಂದು ಹೇಳಿದರೆ ತಪ್ಪಾಗಲಾರದು. ಹಲವು ಸಂದರ್ಭಗಳಲ್ಲಿ ಇವನ ಶೃಂಗಾರ ನಿರೂಪಣೆ ಸುಸಂಸ್ಕೃತರಾದ ವಾಚಕರಿಗೆ ಬೇಸರವನ್ನೇ ತರಿಸುವಂತಿದೆ.

ಈ ಕಾವ್ಯ ಬಾಣಭಟ್ಟನ ಕಾದಂಬರಿಯನ್ನೂ ಮೀರಿಸಿದೆಯೆಂದು ಕೆಲವರು ಹೇಳುವುದುಂಟು. ಕಾದಂಬರೀಕಾವ್ಯವನ್ನು ಸುಟ್ಟು ಲೀಲಾವತಿಗೆ ತಿಲಕವಿಟ್ಟು ಆನೆಯ ಮೇಲೆ ಮೆರವಣಿಗೆ ಮಾಡಲಾಯಿತೆಂಬ ಕಥೆ ಆಮೇಲಿನ ಕೆಲವು ಕನ್ನಡ ಕೃತಿಗಳಲ್ಲಿ ಪ್ರಸ್ತಾಪಿತವಾಗಿದೆಯಾದರೂ ಇದು ದಂತಕಥೆಯೆನ್ನಬಹುದು. ಆದರೆ ಕಾದಂಬರಿಯ ಔನ್ನತ್ಯಗಾಂಭೀರ್ಯಗಳು ಇಲ್ಲಿ ಕಾಣಿಸುವುದಿಲ್ಲ. ನೇಮಿಚಂದ್ರ ಮಹಾಪಂಡಿತ, ಇವನಿಗೆ ಸಂಸ್ಕೃತ, ಪ್ರಾಕೃತ ಮತ್ತು ಕನ್ನಡಗಳಲ್ಲಿ ಆಳವಾದ ಪಾಂಡಿತ್ಯವಿದೆ. ಕನ್ನಡ ಭಾಷೆ ಇವನಿಗೆ ವಶವಾಗಿದೆ. ಇವನ ಭಾಷಾಪ್ರಭುತ್ವ ಯಾರನ್ನಾದರೂ ಬೆರಗುಗೊಳಿಸುತ್ತದೆ. ಇವನ ಶಬ್ದಭಂಡಾರ ವಿಪುಲವಾದದ್ದು. ನಿಘಂಟುಗಳಲ್ಲಿ ದೊರೆಯದ ಅನೇಕ ಅಪರೂಪ ಶಬ್ದಗಳು ಕೃತಿಯಲ್ಲಿ ಹೇರಳವಾಗಿ ಸಿಕ್ಕುತ್ತವೆ. ಕವಿಯ ವರ್ಣನಾವೈಭವದಲ್ಲಿ ಹಲವು ಸಲ ವಾಚಕರು ಕತೆಯ ಸನ್ನಿವೇಶವನ್ನೇ ಮರೆತುಹೋಗುವ ಸಂದರ್ಭಗಳೂ ಉಂಟು. ಆದರೆ ಆ ವರ್ಣನೆಗಳಲ್ಲಿಯೂ ಸಹಜತೆ ಕಡಿಮೆ. ಕೃತಕವೂ ಚಮತ್ಕಾರಯುಕ್ತವೂ ಆದ ಉಪಮಾರೂಪಕಾದಿ ಅಲಂಕಾರಗಳು ಈತನ ಕೃತಿಯಲ್ಲಿ ಹೇರಳವಾಗಿ ಸಿಕ್ಕುತ್ತವೆ.

ಲೀಲಾವತೀಪ್ರಬಂಧ ಬಹಳ ಮಟ್ಟಿಗೆ ಸುಬಂಧು ಕವಿಯ ವಾಸವದತ್ತಾ ಕೃತಿಯ ಕಥೆಯನ್ನು ಹೋಲುತ್ತದೆ. ಅದರ ಆಧಾರದ ಮೇಲೆಯೇ ನೇಮಿಚಂದ್ರ ಈ ಕೃತಿಯನ್ನು ಕಟ್ಟಿರುವಂತೆ ತೋರುತ್ತದೆ. ಆದರೆ ಕಥೆಯಲ್ಲಿ ಒಂದೆರಡು ಮಾರ್ಪಾಟುಗಳನ್ನು ಮಾಡಿದ್ದಾನೆ. ಪಾತ್ರಗಳ ಹೆಸರುಗಳನ್ನೂ ಕೆಲವು ಕಡೆ ವ್ಯತ್ಯಾಸ ಮಾಡಿದ್ದಾನೆ. ಅಲ್ಲದೆ ಸುಬಂಧುವಿನ ಕೃತಿಯಲ್ಲಿ ಇಲ್ಲದ ಜೈನಮತದ ಆವರಣವನ್ನು ಇಲ್ಲಿ ಕವಿ ಕಲ್ಪಿಸಿದ್ದಾನೆ. ಆದರೆ ಈ ಕೃತಿಯಲ್ಲಿ ನೈಜವಾದ ಪಾತ್ರಚಿತ್ರಣವಾಗಲಿ ಹೃದಯಾಹ್ಲಾದಕಾರಿಯಾದ ಸನ್ನಿವೇಶ ವರ್ಣನೆಯಾಗಲಿ ವಿಶೇಷವಾಗಿ ಕಾಣಿಸುವುದಿಲ್ಲ. ನೇಮಿಚಂದ್ರ ಲೀಲಾವತಿಯಂಥ ಪ್ರಣಯ ವೃತ್ತಾಂತವನ್ನು ತನ್ನ ಕಾವ್ಯವಸ್ತುವಾಗಿ ಆರಿಸಿಕೊಳ್ಳದೆ ಯಾವುದಾದರೊಂದು ಇತಿಹಾಸ ಕಥೆಯನ್ನೋ ಒಂದು ಜಿನೇಂದ್ರಚರಿತ್ರೆಯನ್ನೋ ವಸ್ತುವಾಗಿ ತೆಗೆದುಕೊಂಡಿದ್ದರೆ ಇವನ ಪಾಂಡಿತ್ಯಪ್ರತಿಭೆಗಳಿಗೆ ಹೆಚ್ಚಿನ ಶೋಭೆ ಬರುತ್ತಿದ್ದಿತೆಂದು ಹೇಳಬಹುದು.

ನೇಮಿನಾಥಪುರಾಣ ಇಪ್ಪತ್ತೆರಡನೆಯ ತೀರ್ಥಂಕರನಾದ ನೇಮಿಜಿನೇಶ್ವರನ ಪುಣ್ಯಚರಿತ್ರೆ. ಇದರಲ್ಲಿ ಎಂಟು ಆಶ್ವಾಸಗಳಿವೆ. ಈ ಕಾವ್ಯದಲ್ಲಿ ಕೌರವ ಪಾಂಡವರ ಕಥೆ, ಶ್ರೀಕೃಷ್ಣಚರಿತ್ರೆ ಮತ್ತು ನೇಮಿಜಿನೇಶ್ವರನ ಕಥೆ - ಈ ಮೂರನ್ನೂ ಸೇರಿಸಿ ಹೇಳಲು ಹೊರಟು ಕೃಷ್ಣ ಕಂಸನನ್ನು ಕೊಂದ ವೃತ್ತಾಂತವನ್ನು ಹೇಳಿ ಮುಗಿಸುವ ವೇಳೆಗೆ ಕಾವ್ಯ ನಿಂತುಹೋಗಿದೆ. ಇದರಲ್ಲಿ ಇವನು ಹೇಳಬಯಸಿದ ಮೂರು ಕಥೆಗಳಲ್ಲಿ ಯಾವುದೂ ಪೂರ್ಣವಾಗದೆ ಅರ್ಧದಲ್ಲಿಯೇ ನಿಂತುಹೋಗಿದೆ. ಆ ಕಾರಣದಿಂದಲೇ ಈ ಕೃತಿಗೆ ಅರ್ಧನೇಮಿಪುರಾಣವೆಂಬ ಹೆಸರು ಪ್ರಚಾರದಲ್ಲಿದೆ. ಆದ್ದರಿಂದ ಬಹುಶಃ ನೇಮಿಚಂದ್ರ ಈ ಕೃತಿಯನ್ನು ಪೂರ್ಣ ಮಾಡದೆಯೇ ಮರಣಹೊಂದಿರಬಹುದೆಂದು ತೋರುತ್ತದೆ. ಸೂಕ್ತಿ ಸುಧಾರ್ಣವ, ಕಾವ್ಯಸಾರ ಎಂಬ ಸಂಕಲನ ಗ್ರಂಥಗಳಲ್ಲಿ ನೇಮಿನಾಥಪುರಾಣದ ಪದ್ಯಗಳು ಉದ್ಧೃತವಾಗಿವೆ.

ಸಾಧಾರಣವಾಗಿ ಜೈನಪುರಾಣಗಳಲ್ಲಿ ದೀರ್ಘವಾಗಿರುವ ಕಥಾನಾಯಕನ ಭವಾವಳಿಯ ಕಥನ ಅರ್ಧನೇಮಿಯ ಪುರಾಣದಲ್ಲಿ ಬಹಳ ಸಂಕ್ಷೇಪವೂ ರಮ್ಯವೂ ಆಗಿದೆ. ವಿಂಧ್ಯಕವಾಗುರೆಯರ ವೃತ್ತಾಂತ, ಇಭ್ಯಕೇತುವಿನ ಕಥೆ - ಇವು ನೇಮಿಚಂದ್ರನಿಗೆ ಆಧಾರವಾದ ಜಿನಸೇನ ಗುಣಭದ್ರರ ಕೃತಿಗಳಲ್ಲಿಯೂ ಕಾಣಿಸುವುದಿಲ್ಲ. ನೇಮಿಚಂದ್ರ ಮೂಲಕಥೆಯನ್ನು ಸಂಗ್ರಹಿಸಿ ಹೇಳುತ್ತಾ ಕೆಲವು ಹೊಸ ಕಥೆಗಳನ್ನು ಸೇರಿಸಿದ್ದಾನೆ. ಇವುಗಳನ್ನು ಕವಿ ಬೇರೆ ಯಾವ ಗ್ರಂಥದಿಂದ ಆರಿಸಿಕೊಂಡನೋ ತಿಳಿಯದು.

ನೇಮಿನಾಥಪುರಾಣದಲ್ಲಿ ಹಲವಾರು ಕಥೆಗಳನ್ನು ಜೋಡಿಸಿರುವುದರಿಂದ ಇಲ್ಲಿ ವಸ್ತ್ವೈಕ್ಯವಿಲ್ಲ ; ಕಥಾರಚನೆಯಲ್ಲಿ ಏಕಸೂತ್ರತೆ ಇಲ್ಲ. ಆದರೆ ಹೇಳಿರುವ ಬಿಡಿ ಕಥೆಗಳು, ವರ್ಣಿಸಿರುವ ಹಲವು ಸನ್ನಿವೇಶಗಳು ಬಹಳ ಸುಂದರವಾಗಿವೆ. ಈ ಕಥೆಗಳನ್ನು ಜೋಡಿಸಿರುವುದರಲ್ಲಿ ಕವಿ ತನ್ನ ಕಲಾವಂತಿಕೆಯನ್ನು ಚೆನ್ನಾಗಿ ತೋರಿಸಿಕೊಂಡಿದ್ದಾನೆ. ಇವನ ಕವಿತ್ವವೈಭವ ಲೀಲಾವತಿಗಿಂತ ಈ ಕೃತಿಯಲ್ಲಿ ಚೆನ್ನಾಗಿ ಪ್ರಕಾಶವಾಗಿದೆ. ವಾಮನಾವತಾರದ ಕಥೆಯನ್ನು ಕವಿ ಬಹಳ ರಸವತ್ತಾಗಿ, ಕಣ್ಣಿಗೆ ಕಟ್ಟಿದಂತೆ ಚಿತ್ರಿಸಿದ್ದಾನೆ. ಚಾಣೂರ ಕೃಷ್ಣರ ಮಲ್ಲಯುದ್ಧವನ್ನು ಮನದುಂಬುವಂತೆ ವರ್ಣಿಸಿದ್ದಾನೆ. ಈ ಸನ್ನಿವೇಶಗಳನ್ನು ಚಿತ್ರಿಸುವಾಗ ಪಂಪನಿಂದ ಪ್ರಭಾವಿತನಾಗಿರುವಂತೆ ತೋರುತ್ತದೆ. ಶ್ರೀಕೃಷ್ಣನ ವಿಶ್ವರೂಪದರ್ಶನ ವೃತ್ತಾಂತವನ್ನು ಪಂಪ ಬಹಳ

ಸೂಕ್ಷ್ಮವಾಗಿ ಹೇಳಿ ಮುಗಿಸಿದ್ದರೆ ನೇಮಿಚಂದ್ರ ಅದನ್ನು ವಾಮನಾವತಾರ ಕಥೆಯಲ್ಲಿ ವಿಸ್ತಾರವಾಗಿ ಹೇಳಿದ್ದಾನೆ. ಭೀಮ-ಜರಾಸಂಧರ ಯುದ್ಧ, ಭೀಮ-ಕೀಚಕರ ಮಲ್ಲಯುದ್ಧದ ವರ್ಣನೆ, ನೇಮಿಚಂದ್ರಕವಿಯ ಮನೋನೇತ್ರದೆದುರಿಗಿದ್ದಂತೆ ತೋರುತ್ತದೆ. ಚಾಣೂರ-ಕೃಷ್ಣರ ಮಲ್ಲಯುದ್ಧವನ್ನು ಬಣ್ಣಿಸುವಾಗ, ಈ ಸನ್ನಿವೇಶ ನಿರೂಪಣೆಗೆ ತೊಡಗಿದಾಗ ನೇಮಿಚಂದ್ರ ತನ್ನ ಪಾಂಡಿತ್ಯವನ್ನು ಮರೆತು ಕವಿತಾಪ್ರತಿಭೆಯನ್ನೇ ಮೆರೆಸಿದ್ದಾನೆ. ಈ ಸನ್ನಿವೇಶ ಮಾತಿನಲ್ಲಿ ಮೂಡಿಬಂದ ಉತ್ತಮ ವರ್ಣಚಿತ್ರದಂತೆ ಶೋಭಿಸುತ್ತದೆ. ಇಲ್ಲಿ ಕವಿಯ ಮಾತುಗಾರಿಕೆ ಮತ್ತು ಸಹಜವರ್ಣನೆಗಳು ಯಾರಾದರೂ ಮೆಚ್ಚಿ ಕೊಳ್ಳುವಂತಿವೆ. ಕನ್ನಡ ಕವಿಗಳು ನೇಮಿನಾಥಪುರಾಣವನ್ನು ಹಾರ್ದಿಕವಾಗಿ ಮೆಚ್ಚಿಕೊಂಡು ರಸೋರಸಾಯನವೋ ಕೃತಿವಸಂತವೋ ಕಿವಿಗಳಮೃತವೋ ಎಂದು ಬಹುವಾಗಿ ಹೊಗಳಿದ್ದಾರೆ. ಪಾಂಡಿತ್ಯ ಪ್ರತಿಭೆಶೈಲಿ ವರ್ಣನಾನೈಪುಣ್ಯ ಅಭಿರುಚಿ ಕಥನಕೌಶಲ - ಈ ಎಲ್ಲವನ್ನೂ ಗಮನಿಸಿದರೆ ನೇಮಿಚಂದ್ರನನ್ನು ಪಂಪ, ಕುಮಾರವ್ಯಾಸರ ಅಗ್ರಪಂಕ್ತಿಗೆ ಸೇರಿಸಲಾಗಿದಿದ್ದರೂ ದ್ವಿತೀಯ ಸ್ತರದ ಕವಿಗಳ ಸಾಲಿನಲ್ಲಿ ಮಾನ್ಯ ಸ್ಥಾನವನ್ನು ನೀಡಬಹುದಾಗಿದೆ. (ಕೆ.ವಿ.ಇ.)

**ನೊಣವಿನಕೆರೆ:** ತುಮಕೂರು ಜಿಲ್ಲೆ ತಿಪಟೂರು ತಾಲ್ಲೂಕಿನಲ್ಲಿ ತಿಪಟೂರಿನಿಂದ ಆಗ್ನೇಯಕ್ಕೆ ಸುಮಾರು 13 ಕಿಮೀ ದೂರದಲ್ಲಿರುವ ಗ್ರಾಮ. ಶಾಸನಗಳಲ್ಲಿ ನೊಣಬನಕೆರೆ ಎಂದು ಉಲ್ಲೇಖಗೊಂಡಿರುವ ಈ ಊರಿನ ಬಳಿ ವಿಶಾಲವಾದ ದೊಡ್ಡ ಕೆರೆಯೊಂದು ಇದೆ. ಕೆರೆ ಬಹಶಃ ನೊಳಂಬ ರಾಜನೊಬ್ಬನಿಂದ ನಿರ್ಮಿತವಾಗಿದ್ದು ಅದೇ ಊರಿನ ಹೆಸರಿಗೆ ಕಾರಣವಾಗಿರಬಹುದು.

ವಾಸ್ತುಶಿಲ್ಪ ಹಾಗೂ ಕಲೆಯ ದೃಷ್ಟಿಯಿಂದ ಪ್ರಮುಖವೆನಿಸಿದ ಕೆಲವು ಶೈವ ಹಾಗೂ ವೈಷ್ಣವ ದೇವಾಲಯಗಳು ಈ ಊರಿನಲ್ಲಿವೆ. ಸುಮಾರು ಹತ್ತನೆಯ ಶತಮಾನದ ನೊಳಂಬರ ಕಾಲದ ನೊಣಬೇಶ್ವರ, ಶಾಂತೇಶ್ವರ, ಗರಿಗೇಶ್ವರ, ಚೋಳೇಶ್ವರ ಹಾಗೂ ಕಲ್ಲೇಶ್ವರ ಎಂಬ ಐದು ಶಿವದೇವಾಲಯಗಳವೆ. ಆದರೆ ಹೆಚ್ಚು ಪ್ರಸಿದ್ಧವಾದ ದೇವಾಲಯಗಳೆಂದರೆ ಹೊಯ್ಸಳ ಕಾಲದ ವೇಣುಗೋಪಾಲ ಅಥವಾ ಗೋಪಾಲಸ್ವಾಮಿ ದೇವಾಲಯ ಹಾಗೂ ವಿಜಯನಗರ ಕಾಲಕ್ಕೆ ಸೇರುವ ಬ್ಯಾಟರಾಯ ದೇವಾಲಯ.

ನೊಣಬೇಶ್ವರ ಹಾಗೂ ಗರಿಗೇಶ್ವರ ದೇವಾಲಯಗಳು ತುರುವೇಕೆರೆಗೆ ಹೋಗುವಮಾರ್ಗದ ಪಕ್ಕದಲ್ಲಿ ದಿಬ್ಬದ ಮೇಲಿವೆ. ನೊಣಬೇಶ್ವರನ ಗುಡಿ ಒಂದು ಚಿಕ್ಕಕಟ್ಟಡ. ಮೂಲತಃ ಕಗ್ಗಲ್ಲಿನಿಂದ ನಿರ್ಮಿತವಾಗಿದ್ದು ಹತ್ತೊಂಬತ್ತನೆಯ ಶತಮಾನದಲ್ಲಿ ಜೀರ್ಣೋದ್ಧಾರ ಮಾಡಿದಾಗ ಇಟ್ಟಿಗೆಯ ಗೋಡೆಗಳನ್ನು ನಿರ್ಮಿಸಲಾಗಿದೆ. ಚಿಕ್ಕ ಗರ್ಭಗೃಹ, ತೆರೆದ ಸುಕನಾಸಿ ಹಾಗೂ ನವರಂಗಗಳಿವೆ. ಇಲ್ಲಿನ ಲಿಂಗ ಮಧ್ಯಮ ಗಾತ್ರದ್ದಾಗಿದ್ದು ಮೇಲ್ಭಾಗ ಚಪ್ಪಟೆಯಾಗಿದೆ. ಸುಕನಾಸಿ ಹಾಗೂ ನವರಂಗದ ಕಂಬಗಳು ಚತುರಸ್ರ ಮತ್ತು ಅಷ್ಟಕೋನಗಳಿಂದ ಕೂಡಿದ್ದು ಗಂಟೆಯಾಕಾರದ ಕಂಠದ ಮೇಲೆ ಚಿತ್ರಗಳನ್ನು ಹೊಂದಿವೆ. ನವರಂಗದ ಭುವನೇಶ್ವರಿಯಲ್ಲಿ ಒಂಬತ್ತು ಫಲಕಗಳಿದ್ದು ಮಧ್ಯದಲ್ಲಿ ಪದ್ಮವನ್ನು ಬಿಡಿಸಿದೆ. ನವರಂಗದ್ವಾರದ ಎರಡೂ ಪಾರ್ಶ್ವಗಳಲ್ಲಿ ಅಷ್ಟಕೋನದ ಅರೆಗಂಬ, ಲಾಳಾಕೃತಿಯ ಕೀರ್ತಿ ಮುಖ ಹಾಗೂ ಲತಾಪಟ್ಟಿಕೆಗಳಿವೆ. ಕಪೋತದ ಮೇಲೂ ಇದೇ ಬಗೆಯ ಕೀರ್ತಿ ಮುಖಗಳಿವೆ. ನೊಣಬೇಶ್ವರ ದೇವಾಲಯಕ್ಕೆ ಉತ್ತರದಲ್ಲಿರುವ ಗರಿಗೇಶ್ವರ ಅದೇ ಬಗೆಯ ದ್ವಾರ ಹಾಗೂ ಕಂಬಗಳಿಂದ ಕೂಡಿದೆ. ಮೂಲತಃ ಇವೆರಡೂ ಅವಳಿ ದೇವಾಲಯಗಳಾಗಿದ್ದವೆಂದು ಹೇಳಬಹುದು. ಇವೆರಡೂ ದೇವಾಲಯಗಳ ನಡುವೆ ಚಿಕ್ಕ ವೇದಿಕೆಯೊಂದರ ಬಳಿ ಸಪ್ತಮಾತೃಕೆ ವಿಗ್ರಹಗಳಿದ್ದವು (ಈಗ ಇವನ್ನು ಬೆಂಗಳೂರಿನ ಸರ್ಕಾರಿ ವಸ್ತುಸಂಗ್ರಹಾಲಯದಲ್ಲಿಡಲಾಗಿದೆ).

ಗರಿಗೇಶ್ವರ ದೇವಾಲಯದ ಹಿಂದೆ ಅನತಿದೂರದಲ್ಲೇ ಶಾಂತೇಶ್ವರ ದೇವಾಲಯವಿದೆ. ಇದು ಮೇಲಿನ ಎರಡು ದೇವಾಲಯಗಳಂತಿದ್ದರೂ ತೆರೆದ ಸುಕನಾಸಿ ಹಾಗೂ ಹೆಚ್ಚು ಅಲಂಕೃತ ಕಂಬಗಳಿಂದ ಕೂಡಿದೆ. ನವರಂಗದಲ್ಲಿ ವಿಶಿಷ್ಟ ರೀತಿಯಲ್ಲಿ ಅಲಂಕೃತವಾದ ಪ್ರಾಚೀನ ನಂದಿ ವಿಗ್ರಹವಿದೆ. ಕೆರೆಯ ಉತ್ತರ ತೂಬಿನ ಪೂರ್ವಕ್ಕಿರುವ ಕಲ್ಲೇಶ್ವರ ದೇವಾಲಯ ಚಿಕ್ಕ ಗರ್ಭಗೃಹ ತೆರೆದ ಸುಕನಾಸಿ ಹಾಗೂ ನವರಂಗಗಳನ್ನು ಹೊಂದಿದೆ. ಸು. 11ನೆಯ ಶತಮಾನಕ್ಕೆ ಸೇರುವ ಈ ದೇವಾಲಯದ ಮೂಲಗೋಡೆಗಳು ಚೋಳಕಾಲದಲ್ಲಿ ಇಟ್ಟಿಗೆಗಳಿಂದ ರಚಿತವಾಗಿದ್ದಿರಬೇಕು. ಹೆಚ್ಚು ಕಡಿಮೆ ಮೇಲೆ ಹೇಳಿದ ಇತರ ದೇವಾಲಯಗಳಂತೆಯೇ ನಿರ್ಮಿತವಾಗಿರುವ ಚೋಳೇಶ್ವರ ದೇವಾಲಯ ಊರ ಮಧ್ಯದಲ್ಲಿ ವೇಣುಗೋಪಾಲ ದೇವಾಲಯಕ್ಕೆ ದಕ್ಷಿಣದಲ್ಲಿ ನಿಂತಿದೆ.

ಹೊಯ್ಸಳರ ಕಾಲದ ವೇಣುಗೋಪಾಲ ಅಥವಾ ಗೋಪಾಲಸ್ವಾಮಿ ದೇವಾಲಯ ತ್ರಿಕೂಟಾಚಲ. ಒಳಗಿನ ನವರಂಗ, ಪಶ್ಚಿಮದ ಸುಕನಾಸಿ, ಮೂರು ಗರ್ಭಗೃಹಗಳು ಹಾಗೂ ಗೋಪುರವಿಲ್ಲದ ಮಹಾದ್ವಾರ - ಇವು ಹೊಯ್ಸಳ ಕಾಲದ ರಚನೆಗಳು. ಮುಖಮಂಟಪ, ಹದಿನಾರು ಕೋನದ ಅರೆಗೋಳವಿಯಾಕಾರದ ದಿಂಡಿನ ಆರು ಕಂಬಗಳಿಂದ ಕೂಡಿದ ಹೊರನವರಂಗಗಳು, ಅನಂತರ ಕಾಲಕ್ಕೆ ಅಂದರೆ ಬಹುಶಃ ವಿಜಯನಗರ ಕಾಲಕ್ಕೆ ಸೇರುತ್ತವೆ. ದಕ್ಷಿಣ ಗರ್ಭಗೃಹದಲ್ಲಿ ವೇಣುಗೋಪಾಲ, ಉತ್ತರದಲ್ಲಿ ಯೋಗಾನರಸಿಂಹ ಹಾಗೂ ಪಶ್ಚಿಮದಲ್ಲಿ ಜನಾರ್ದನ ವಿಗ್ರಹಗಳು ಇವೆ. ಇವು ಹೊಯ್ಸಳ ಶಿಲ್ಪಗಳು. ಜನಾರ್ದನ ವಿಗ್ರಹ ಸ್ವಲ್ಪ ಭಿನ್ನವಾಗಿವೆ. ವಿಜಯನಗರದ ಕಾಲಕ್ಕೆ ಸೇರುವ ವಿಶ್ವಕ್ಸೇನ ಹಾಗೂ ವೈಷ್ಣವ ವಿಗ್ರಹಗಳು ಈ ದೇವಾಲಯದಲ್ಲಿವೆ. ಲೋಹದ ಜನಾರ್ದನ ಮೂರ್ತಿಗಳು ತುಂಬ ಸುಂದರವಾಗಿದ್ದು ಇವು ವಿಜಯನಗರ ಕಾಲದ ರಚನೆಗಳಾಗಿವೆ.

ಬ್ಯಾಟರಾಯ ದೇವಾಲಯ ಸು. 16ನೆಯ ಶತಮಾನದಲ್ಲಿ ಕೋನೇರಿ ಅಯ್ಯಂಗಾರ್ ಎಂಬುವರಿಂದ ನಿರ್ಮಿತವಾಯಿತೆಂದು ತಿಳಿದುಬರುತ್ತದೆ. ಈ ದೇವಸ್ಥಾನದ ನವರಂಗದ ಕಂಬವೊಂದರ ಮೇಲೆ ಗಡ್ಡಬಿಟ್ಟು ಟೋಪಿಯನ್ನು ಹಾಕಿಕೊಂಡು ಕೈಮುಗಿದುಕೊಂಡಿರುವ ಪುರುಷವಿಗ್ರಹವೇ ಕೋನೇರಿ ಅಯ್ಯಂಗಾರ್ಯರ ಚಿತ್ರವೆಂದು ಹೇಳುತ್ತಾರೆ. ದೇವಾಲಯದಲ್ಲಿ ಗೋಪುರವಿಲ್ಲದ ಮಹಾದ್ವಾರ, ಗರ್ಭಗೃಹ, ಸುಕನಾಸಿ ಮತ್ತು ನವರಂಗಮಂಟಪ ಇವೆ. ಇಲ್ಲಿನ ಕಂಬಗಳ ಮೇಲೆ ವಿಜಯನಗರದ ಕೃಷ್ಣದೇವರಾಯ, ಅವನ ರಾಣಿಯರು ಹಾಗೂ ಇತರ ಪ್ರಮುಖರ ಮೂರ್ತಿಗಳನ್ನು ಕೆತ್ತಿದೆ. ಅಲಮೇಲುದೇವಿ, ಗಣೇಶ, ಸುದರ್ಶನ ಮತ್ತು ವೈಷ್ಣವ ಆಳ್ವಾರರುಗಳ ವಿಗ್ರಹಗಳೂ ಈ ದೇವಾಲಯದಲ್ಲಿವೆ. ಗರ್ಭಗೃಹದಲ್ಲಿ ಪ್ರಭಾವಳಿಸಹಿತವಾದ ಕಪ್ಪು ಶಿಲೆಯ ಸುಂದರ ವೆಂಕಟೇಶಮೂರ್ತಿ ಇದೆ. ಈ ವಿಗ್ರಹ ಹೊಯ್ಸಳ ಶೈಲಿಯ ಪ್ರಭಾವಕ್ಕೆ ಒಳಗಾದ ವಿಜಯನಗರ ಕಾಲದ ಶಿಲ್ಪಕ್ಕೆ ಒಂದು ಒಳ್ಳೆಯ ನಿದರ್ಶನ.

ಉಡಸಲಮ್ಮ ಎಂಬ ಗ್ರಾಮದೇವತೆಯ ದೇವಸ್ಥಾನ ಈ ಊರಿನಲ್ಲಿದೆ. ಕೆರೆಯ ಏರಿಯ ಮೇಲೆ ಗೊಲ್ಲಮ್ಮನ ವಿಗ್ರಹವಿದ್ದು, ಅದು ಸು. 3' ಎತ್ತರ ಹಾಗೂ ನಾಲ್ಕು ಕೈಗಳನ್ನು ಹೊಂದಿದೆ. ಕೆರೆಯ ಏರಿ ಭದ್ರವಾಗಿ ನಿಲ್ಲಲು ಹಾಲು ಮೊಸರು ಮಾರುವುದಕ್ಕೆ ನಿತ್ಯ ಆ ಮಾರ್ಗವಾಗಿ ಬರುತ್ತಿದ್ದ ಗೊಲ್ಲರ ಹೆಂಗಸೊಬ್ಬಳನ್ನು ಬಲಿಕೊಟ್ಟರಂತೆ. ಅವಳು ನೀರಗಂಟಿಯ ಕನಸಿನಲ್ಲಿ ಕಾಣಿಸಿಕೊಂಡು ತನ್ನ ವಿಗ್ರಹವನ್ನು ಕೆರೆಯ ಏರಿಯ ಮೇಲೆ ಸ್ಥಾಪಿಸಲು ಕೇಳಿಕೊಂಡಳಂತೆ. ಅದರಂತೆ ನೀರಗಂಟಿ ನಡೆದುಕೊಂಡನೆಂದು ಇಲ್ಲಿಯ ಐತಿಹ್ಯವೊಂದು ತಿಳಿಸುತ್ತದೆ. ಈ ಊರಿನ ಕೆರೆಯ ಏರಿಯ ಕೆಳಗಿರುವ ಕೋಡಿಬಸವಣ್ಣನ ದೇವಸ್ಥಾನದ ಹತ್ತಿರವಿರುವ ಹೊಂಡವನ್ನು (ನಾಯಿಗುಡಿಯ ಹಳ್ಳ) ಶಿಂಷಾನದಿಯ ಉಗಮಸ್ಥಾನ ಎಂದು ಗುರುತಿಸುತ್ತಾರೆ.

ಪ್ರತಿ ವರ್ಷ ಮೇ ತಿಂಗಳಲ್ಲಿ ಬ್ಯಾಟರಾಯಸ್ವಾಮಿ ರಥೋತ್ಸವ ಜರುಗುತ್ತದೆ. ಪ್ರತಿ ಬುಧವಾರ ಈ ಊರಿನಲ್ಲಿ ಸಂತೆ ಸೇರುತ್ತದೆ.

ನೊಣವಿನಕೆರೆ ಹಿಂದೆ ಹೆಬ್ಬಾರು ಶ್ರೀವೈಷ್ಣವರ ಪಂಚಗ್ರಾಮಗಳಲ್ಲೊಂದಾಗಿತ್ತು. ಉಳಿದ ನಾಲ್ಕು

ಗ್ರಾಮಗಳೆಂದರೆ ಕಡಬ, ಮಾಯಸಂದ್ರ, ಸುಗ್ಗೇಹಳ್ಳಿ ಮತ್ತು ಬಿಂಡಿಗನವಿಲೆ. (ಎಚ್.ಎಂ.ಎಸ್.ಆರ್., ಎಸ್.ಎನ್.ಜಿ.)

**ನೊಳಂಬವಂಶ:** 8-11ನೆಯ ಶತಮಾನಗಳ ಅವಧಿಯಲ್ಲಿ ಮೊದಲಿಗೆ ನೊಳಂಬಳಿಗೆ ಸಾಸಿರ (ಚಿತ್ರದುರ್ಗ ಜಿಲ್ಲೆ ಮತ್ತು ಅದರ ಸುತ್ತಲಿನ ಪ್ರದೇಶ) ಎಂಬ ಚಿಕ್ಕ ಪ್ರಾಂತ್ಯದ ಅಧಿಪತಿಗಳಾಗಿ ಆಳ್ವಿಕೆಯನ್ನು ಪ್ರಾರಂಭಿಸಿ, 9-10ನೆಯ ಶತಮಾನಗಳಲ್ಲಿ ಪ್ರಬಲರಾಗಿ ಈಗಿನ ಚಿತ್ರದುರ್ಗ, ತುಮಕೂರು, ಕೋಲಾರ, ಬೆಂಗಳೂರು, ಬಳ್ಳಾರಿ, ಅನಂತಪುರ, ಚಿತ್ತೂರು, ಧರ್ಮಪುರಿ ಜಿಲ್ಲೆಗಳ ಭಾಗಗಳನ್ನೊಳಗೊಂಡಿದ್ದ ನೊಳಂಬವಾಡಿ 32000 ಎಂಬ ವಿಸ್ತಾರವಾದ ಪ್ರಾಂತ್ಯವನ್ನು ಆಳಿದ ಸಾಮಂತರ ರಾಜಮನೆತನ. ಈ ಮನೆತನದ ಅರಸರು ಕಾಲಕಾಲದಲ್ಲಿ ತಲಕಾಡಿನ ಗಂಗರು, ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಳುಕ್ಯರು ಈ ರಾಜವಂಶಗಳವರ ಅಧೀನರಾಗಿದ್ದರು. ಇವರು ಕದಂಬ, ಗಂಗ, ಕಲ್ಯಾಣದ ಚಾಳುಕ್ಯ ವಂಶಗಳೊಡನೆ ವಿವಾಹಸಂಬಂಧವನ್ನೂ ಮತ್ತು ಬಾಣರು, ವೈಡುಂಬರು, ಚೋಳರು ಮುಂತಾದವರೊಡನೆ ರಾಜಕೀಯ ಸಂಪರ್ಕವನ್ನೂ ಹೊಂದಿದ್ದರು. ಇವರ ರಾಜಧಾನಿ ಪೆಂಜೆರು ಅಥವಾ ಹೆಂಜೇರು (ಅನಂತಪುರ ಜಿಲ್ಲೆ ಮಡಕಶಿರಾ ತಾಲ್ಲೂಕಿನಲ್ಲಿರುವ ಹೇಮಾವತಿ). ಇವರ ಲಾಂಛನ ನಂದಿ.

ನೊಳಂಬ ಪದದ ವ್ಯುತ್ಪತ್ತಿ ಅನಿರ್ದಿಷ್ಟ. ಇವರು ಈಶ್ವರ ವಂಶಜರೆಂದು ಒಂದು ಶಾಸನದಲ್ಲಿ ಹೇಳಿದೆ. ಮತ್ತೊಂದು ಶಾಸನದಲ್ಲಿ ರಾಜಕುಮಾರಿಯೊಬ್ಬಳು ನೊಳಂಬ ವಂಶ ಮತ್ತು ಪಲ್ಲವ ಕುಲದವಳೆಂದೂ ವರ್ಣಿತಳಾಗಿದ್ದಾಳೆ. ಆದರೆ ನೊಳಂಬರಿಗೂ ಕಂಚಿಯ ಪಲ್ಲವರಿಗೂ ಇದ್ದ ಸಂಬಂಧವೇನೆಂಬುದು ಸರಿಯಾಗಿ ತಿಳಿದಿಲ್ಲ.

ನೊಳಂಬರ ಮೂಲಪುರುಷ ತ್ರಿಣಯನ ಪಲ್ಲವ. ಇವನನ್ನು ಈಶ್ವರ ವಂಶಜ, ಕಂಚೀಪತಿ ಎಂದು ಒಂದು ಶಾಸನ ವರ್ಣಿಸುತ್ತದೆ. ಇವನ ವಂಶದಲ್ಲಿ ಹುಟ್ಟಿದವನು ಮಂಗಳ ನೊಂಬಾಧಿರಾಜ (ಸು. 730-75). ಈತ ಕಿರಾತ ನೃಪತಿಯನ್ನು ಜಯಿಸಿದನೆಂದೂ ಕರ್ನಾಟರಿಂದ ಸ್ತುತಿಸಲ್ಪಟ್ಟವನೆಂದೂ ಹೇಮಾವತಿ ಶಾಸನದಲ್ಲಿ ಹೇಳಿದೆ. ಅನಂತರ ಇವನ ಮಗನಾದ ಸಿಂಹಪೋತ (ಸು. 775-805) ಪಟ್ಟಕ್ಕೆ ಬಂದ. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆಯ ಒಂದು ಶಾಸನದಿಂದ ಸಿಂಹಪೋತನು (ಕಲಿ ನೊಳಂಬಾಧಿರಾಜ) ಪೆರ್ಮಾನಡಿಯ ಆಜ್ಞೆಯ ಮೇರೆಗೆ ದುಗ್ಗಮಾರನ ಮೇಲೆ ದಂಡೆತ್ತಿಹೋದನೆಂದು ತಿಳಿಯುತ್ತದೆ. ಇಲ್ಲಿಯ ದುಗ್ಗಮಾರ ಗಂಗರಾಜ ಶ್ರೀಪುರುಷನ ಮಗ ಹಾಗೂ ಶಿವಮಾರನ ಸಹೋದರ; ಪ್ರಾಯಶಃ ಶ್ರೀಪುರುಷನ ಮರಣಾನಂತರ ಸಿಂಹಾಸನಕ್ಕಾಗಿ ನಡೆದ ಸ್ಪರ್ಧೆಯಲ್ಲಿ ಸಿಂಹಪೋತನು ಶಿವಮಾರನ ಪಕ್ಷ ವಹಿಸಿ, ದುಗ್ಗ ಮಾರನ ಮೇಲೆ ದಂಡೆತ್ತಿ ಹೋಗಿರಬಹುದು. ರಾಷ್ಟ್ರಕೂಟ ಧ್ರುವನಿಂದ ಎರಡನೆಯ ಶಿವಕುಮಾರ ಪರಾಜಿತನಾದ ಮೇಲೆ ಗಂಗರ ಸಾಮಂತರಾಗಿದ್ದ ನೊಳಂಬರು ರಾಷ್ಟ್ರಕೂಟರ ಆಶ್ರಿತರಾದರು. ಸಿಂಹಾಪೋತನ ಮಗ ಚಾರುಪೊನ್ನೇರ ಪರಮೇಶ್ವರ ಪಲ್ಲವಾಧಿರಾಜ (ಸು. 805-830) ರಾಷ್ಟ್ರಕೂಟ 3 ನೆಯ ಗೋವಿಂದನ ಕೈಕೆಳಗೆ ನೊಳಂಬಳಿಗೆ ಸಾಸಿರ ಮುಂತಾದ ಪ್ರಾಂತ್ಯಗಳನ್ನಾಳುತ್ತಿದ್ದ.

ಪುನಃ ಸು. 820ರ ಹೊತ್ತಿಗೆ ನೊಳಂಬರು ತಮ್ಮ ನಿಷ್ಠೆಯನ್ನು ಪಶ್ಚಿಮದ ಗಂಗರಿಗೆ ಬದಲಾಯಿಸಿದಂತೆ ತೋರುತ್ತದೆ. ಗಂಗರಾಜನಾದ 1ನೆಯ ರಾಚಮಲ್ಲ ತನ್ನ ಮಗಳು (ನೀತಿಮಾರ್ಗನ ತಂಗಿ) ಜಾಯಬ್ಬೆಯನ್ನು ಚಾರುಪೊನ್ನೇರನ ಮಗನಾದ ಪೊಳಲ್ಚೋರನಿಗೆ ವಿವಾಹ ಮಾಡಿಕೊಟ್ಟಿದ್ದ. ಚಾರುಪೊನ್ನೇರನ ಅನಂತರ ಅವನ ಮಗ ಒಂದನೆಯ ಪೊಳಲ್ಚೋರ (ನೊಳಂಬಾಧಿರಾಜ, ಸು.830-875) ಗಂಗರುಸಾಸಿರ ಪ್ರಾಂತ್ಯವನ್ನು (ಕೋಲಾರ, ಬೆಂಗಳೂರು ಮತ್ತು ಚಿತ್ತೂರು ಜಿಲ್ಲೆಯ ಭಾಗಗಳು) ಗಂಗ ನೀತಿಮಾರ್ಗನ ಕೈಕೆಳಗೆ ಆಳುತ್ತಿದ್ದನೆಂದು ಕೋಲಾರದ ಶಾಸನದಲ್ಲಿ ಹೇಳಿದೆ. ಈ ಪ್ರಾಂತ್ಯ 810ರಲ್ಲಿ ಮಹಾಬಲಿ ಬಾಣರ ವಶದಲ್ಲಿದ್ದು ಒಂದನೆಯ ರಾಚಮಲ್ಲನ ಕಾಲದಲ್ಲಿ ನೊಳಂಬರ ವಶವಾಯಿತು. ಪೊಳಲ್ಚೋರ ಬಲಶಾಲಿ ದೊರೆ. ಈತನ ಕಾಲದಲ್ಲಿ ನೊಳಂಬರ ರಾಜ್ಯ ನೊಳಂಬಳಿಗೆಸಾಸಿರ, ಗಂಗರುಸಾಸಿರ ಅಷ್ಟೇ ಅಲ್ಲದೆ ಇನ್ನೂ ಇತರ ಪ್ರಾಂತ್ಯಗಳನ್ನೂ ಒಳಗೊಂಡಿತ್ತು. ಒಂದನೆಯ ನೀತಿಮಾರ್ಗನ ಹಿಂದೂಪುರ ಶಾಸನದಲ್ಲಿ (853) ಕಂಚಿಯ ವರೆಗೆ ರಾಜ್ಯವಾಳುತ್ತಿದ್ದನೆಂದು ಹೇಳಿರುವ ನೊಳಂಬರಾಜನು ಪೊಳಲ್ಚೋರನೇ ಇರಬಹುದೆಂಬುದಕ್ಕೆ ಸಾಂದರ್ಭಿಕ ಸಾಕ್ಷ್ಯಗಳಿವೆ. ಇವನ ಕಾಲದಲ್ಲಿ ನಂದಿಯ ಭೋಗನಂದೀಶ್ವರ ದೇವಾಲಯದ ಗೋಪುರದ ಜೀರ್ಣೋದ್ಧಾರ ಕಾರ್ಯಗಳು ನಡೆದವು. ಈತ ಅನಂತಪುರ ಜಿಲ್ಲೆಯ ಕಂಬದೂರಿನಲ್ಲಿ ಬೆಳ್ದುಗೊಂಡೆಯ ಕೆರೆಯನ್ನು ಸಹ ಕಟ್ಟಿಸಿದ.

ನೊಳಂಬಾಧಿರಾಜ ಪೊಳಲ್ಚೋರನಿಗೆ ಗಂಗವಂಶದ ಜಾಯಬ್ಬೆಯಿಂದ ಜನಿಸಿದ್ದ ಮಹೇಂದ್ರ (ನೊಳಂಬಾಧಿರಾಜ, ತ್ರಿಭುವನಧೀರ; ಸು. 875-897) ಮೊದಲು 2ನೆಯ ರಾಜಮಲ್ಲನ ಕೈಕೆಳಗೆ ಗಂಗರು ಸಾಸಿರ ಪ್ರಾಂತ್ಯದ ಅಧಿಪತಿಯಾಗಿ ರಾಜ್ಯಭಾರವನ್ನು ಪ್ರಾರಂಭಿಸಿದ. ಗಂಗವಂಶದ ಗಾಮಬ್ಬೆ ಈತನ ಪತ್ನಿ. ಈತ ವಿಸ್ತರಣಾವಾದಿ. ಗಂಗರುಸಾಸಿರ ಪ್ರಾಂತ್ಯಕ್ಕಾಗಿ ನೊಳಂಬರ ಜೊತೆ ಬಾಣರ ಕಲಹ ಇವನ ಕಾಲದಲ್ಲಿ ಮುಂದುವರಿಯಿತು. ಆದರೆ ಇವನು ಗಂಗ ರಾಚಮಲ್ಲ ಮತ್ತು ತೆಲುಗು ಚೋಳ ರಾಜನಾದ ಮಹೇಂದ್ರ ವಿಕ್ರಮರ ಸಹಾಯದಿಂದ ಬಾಣ ದೊರೆ ವಿದ್ಯಾಧರನನ್ನು ಸೋರೆಮತಿ ಮತ್ತಿತರ ಕಡೆಗಳಲ್ಲಿ ನಡೆದ ಕಾಳಗಗಳಲ್ಲಿ ಸೋಲಿಸಿ, ಮಹಾಬಲಿಕುಲವಿಧ್ವಂಸಕ ಎಂಬ ಬಿರುದನ್ನು ಧರಿಸಿ ತನ್ನ ಆಡಳಿತವನ್ನು ಪುಲಿನಾಡಿನ ಮೇಲೂ ವಿಸ್ತರಿಸಿದ. ಈ ಸಾಧನೆಯಿಂದ ಮತ್ತನಾದ ಮಹೇಂದ್ರ ಮೇಲ್ದೊರೆಗಳಾದ ಗಂಗರ ಮೇಲೆಯೆ ಯುದ್ಧಮಾಡಿ ಅವರ ರಾಜ್ಯದ ಅನೇಕ ಭಾಗಗಳನ್ನು ವಶಪಡಿಸಿಕೊಂಡಿರಬೇಕೆಂದು ತಲಕಾಡಿಗೆ ಕೇವಲ 40 ಕಿಮೀ ದೂರದ ತಾಯಲೂರಿನಲ್ಲಿ (ಮಂಡ್ಯ ಜಿಲ್ಲೆ) ಇರುವ ಇವನ ಶಾಸನದಿಂದ (895) ಊಹಿಸಬಹುದಾಗಿದೆ. ಅಲ್ಲದೆ ಮತ್ತೊಂದು ಶಾಸನ ಮಹೇಂದ್ರನನ್ನು ಗಂಗಮಂಡಲ 96,000ದ ಅಧಿಪತಿ ಎಂದು ವರ್ಣಿಸಿದೆ. ಮಹೇಂದ್ರ ಎಷ್ಟು ಶೀಘ್ರವಾಗಿ ಉಚ್ಛ್ರಾಯಸ್ಥಿತಿಗೇರಿದನೋ ಅಷ್ಟೇ ವೇಗ ಅವನಿಗೆ ಅಧಃ ಪತನವೂ ಕಾದಿತ್ತು. ಅನತಿಕಾಲದಲ್ಲಿ ಗಂಗರು ಹೂಡಿದ ಮರುಯುದ್ಧದಲ್ಲಿ ಹತನಾದ. ಕೂಡಲೂರಿನ ತಾಮ್ರಶಾಸನದಲ್ಲಿ ರಾಜಮಲ್ಲನ ತಮ್ಮನ ಮಗನಾದ ಎರೆಯಪ್ಪ ಅನೇಕ ಕಾಳಗಗಳಲ್ಲಿ ಮಹೇಂದ್ರನನ್ನು ಸೋಲಿಸಿ ಅವನ ರಾಜ್ಯವನ್ನು ಆಕ್ರಮಿಸಿಕೊಂಡನೆಂದು ಹೇಳಿದರೆ, ಶಿವಮೊಗ್ಗ ಜಿಲ್ಲೆಯ ಹುಮಚ ಶಾಸನದಲ್ಲಿ ಎರೆಯಪ್ಪನು ಮಹೇಂದ್ರನನ್ನು ಕೊಂದು ಮಹೇಂದ್ರಾಂತಕನೆಂಬ ಬಿರುದನ್ನು ಪಡೆದ ಎಂದು ತಿಳಿಸುತ್ತದೆ. ಏನೇ ಆದರೂ ಮಹತ್ವಾಕಾಂಕ್ಷಿಯೂ ಶೂರನೂ ಆದ ಮಹೇಂದ್ರನ ಕಾಲದಲ್ಲಿ ನೊಳಂಬರಾಜ್ಯ ಅದರ ವಿಸ್ತೀರ್ಣದ ಪರಮಾವಧಿಯನ್ನು ಮುಟ್ಟಿತ್ತು.

ಮಹೇಂದ್ರನ ತರುವಾಯ ಗಂಗರಾಜಕುಮಾರಿ ಗಾಮಬ್ಬೆಯಿಂದ ಜನಿಸಿದ ಅವನ ಮಗ ಅಯ್ಯಪ್ಪದೇವ (ಸು. 897-934) ಪಟ್ಟಕ್ಕೆ ಬಂದ. ಮಹೇಂದ್ರನ ಇನ್ನೊಬ್ಬ ಮಗನೆಂದು ಹಲವು ವಿದ್ವಾಂಸರು ಅಭಿಪ್ರಾಯಪಟ್ಟಿರುವ ಮಧುಗಿರಿ ಶಾಸನದ (897) ನೊಳಂಬಾಧಿರಾಜ ನೊಳಿಪಯ್ಯ ಈ ಅಯ್ಯಪದೇವನಿಗೆ ಇದ್ದ ಇನ್ನೊಂದು ಹೆಸರು. ಪಟ್ಟಕ್ಕೆ ಬಂದ ಸ್ವಲ್ಪ ಕಾಲದಲ್ಲಿಯೇ ಅಯ್ಯಪನು 2ನೆಯ ರಾಚಮಲ್ಲನೊಂದಿಗೆ ಯುದ್ಧಕ್ಕೆ ಹೋದ. ಅರಸೀಕೆರೆಯ ಒಂದು ಶಾಸನದ ಪ್ರಕಾರ ಇವನು ಆಸಂದಿನಾಡ ಮೇಲೆ ಯುದ್ಧ ಮಾಡಲು ತನ್ನ ಸಮಸ್ತ ಬಲದೊಂದಿಗೆ ಬಂದು ಕಲಿಕಟ್ಟೆಯಲ್ಲಿ (ಅರಸೀಕೆರೆ ತಾಲ್ಲೂಕು ಕಣಕಟ್ಟೆ) ತಂಗಿದ್ದ; ಮತ್ತು ಅಲ್ಲಿ ನಡೆದ ಯುದ್ಧದಲ್ಲಿ ಮಡಿದ ಒಬ್ಬನಿಗೆ ರಾಚಮಲ್ಲ ಹಾಗೂ ಎರೆಯಪ್ಪ ಕಲ್ನಾಡನ್ನು ಕೊಟ್ಟರು. ಈ ಯುದ್ಧದ ಫಲಿತಾಂಶ ತಿಳಿಯದು. ಆದರೆ ಅನಂತರ ಅಯ್ಯಪದೇವ ಪ್ರಾಯಶಃ ಗಂಗ ಸಾಮಂತನಾಗಿ ನೊಳಂಬವಾಡಿ 32,000 ಎಂಬ ವಿಸ್ತಾರವಾದ ಪ್ರಾಂತ್ಯವನ್ನು ಆಳಿದ. ಈತ ಪೂರ್ವ ಚಾಳುಕ್ಯ ಕುಲದ ಒಂದನೆಯ ಅಮ್ಮಣರಾಯನನ್ನು (ಸು. 918-25) ಯುದ್ಧದಲ್ಲಿ ಸೋಲಿಸಿದನೆಂದು ಧರ್ಮಪುರಿಯ ಒಂದು ಶಾಸನ ತಿಳಿಸುತ್ತದೆ. 931ರಲ್ಲಿ ಈತ ರಾಷ್ಟ್ರಕೂಟ 4ನೆಯ ಗೋವಿಂದನ

ಕೈಕೆಳಗೆ ಮಾಸವಾಡಿ ಮತ್ತು ಕೋಗಳಿ ಪ್ರಾಂತ್ಯಗಳನ್ನು ಆಳುತ್ತಿದ್ದನೆಂದು ಬಳ್ಳಾರಿ ಜಿಲ್ಲೆಯ ಶಿರಸ್ತಹಳ್ಳಿ ಶಾಸನದಿಂದ ತಿಳಿದುಬರುತ್ತದೆ. ಕೊನೆಗೆ ಅಯ್ಯಪದೇವ ಪೂರ್ವ ಚಾಳುಕ್ಯ ವಂಶದ ಬೀರ ಮಹೇಂದ್ರ (ಎರಡನೆಯ ಭೀಮ)ನೊಂದಿಗೆ ಗಂಗ ಎರೆಯಪ್ಪನ ಪರವಾಗಿ ತುಂಬೆಪಾಡಿಯಲ್ಲಿ ಕಾದಿ ಮಡಿದ. ಈತನಿಗೆ ಗಂಗ ವಂಶಜಳಾದ ಪೊಲ್ಲಬ್ಬರಸಿ ಮತ್ತು ನಾಗಿಯಬ್ಬೆ, ಹಳೆಯಬ್ಬೆ ಎಂಬ ಮೂವರು ಪತ್ನಿಯರೂ ಅಣ್ಣಿಗ, ದಿಲೀಪ, ಅಂಕಯ್ಯ ಮತ್ತು ನೊಳಿಪ ಎಂಬ ನಾಲ್ವರು ಗಂಡು ಮಕ್ಕಳೂ ಇದ್ದರು. ಇವನ ರಾಜ್ಯ ಕಾಲದಲ್ಲಿ ಮಕ್ಕಳಾದ ಅಣ್ಣಿಗ (920) ನೊಳಿಪ ಮತ್ತು ಅಣ್ಣಿಗನ ಮಗ ಇರುಳಚೋರ (928) ಆಡಳಿತದ ನಿರ್ವಹಣೆಯಲ್ಲಿ ಭಾಗಿಗಳಾಗಿದ್ದರು.

ಅಯ್ಯಪದೇವನ ಅನಂತರ ಗಂಗವಂಶದ ಪೊಲ್ಲಬ್ಬರಸಿಯಿಂದ ಹುಟ್ಟಿದ ಅವನ ಮಗ ಅಣ್ಣಿಗ (ಬೀರ ನೊಳಂಬ ಅಣ್ಣಯ್ಯ ಸು. 932-40) ಪಟ್ಟಕ್ಕೆ ಬಂದ. ಚಾಳುಕ್ಯ ವಂಶದ ಅತ್ತಿಯಬ್ಬರಸಿ ಈತನ ಪತ್ನಿ. ಇವನ ಕಾಲದಲ್ಲಿ ನೊಳಂಬರ ಮತ್ತು ಪಶ್ಚಿಮಗಂಗರ ಮೈತ್ರಿ ಒಡೆಯಿತು. ಗಂಗ 3ನೆಯ ರಾಚಮಲ್ಲನ ಮೇಲೆ ಈತ ಕೊತ್ತಮಂಗಲ ಎಂಬಲ್ಲಿ ಯುದ್ಧ ಹೂಡಿ ಸೋತ. ಸ್ವಲ್ಪ ಕಾಲದಲ್ಲಿಯೇ ರಾಷ್ಟ್ರಕೂಟ ಮೂರನೆಯ ಕೃಷ್ಣ ತನ್ನ ಭಾವಮೈದುನ ಬೂತುಗನಿಗೆ ರಾಜ್ಯವನ್ನು ಕೊಡಿಸಲು ಗಂಗವಾಡಿಯ ಮೇಲೆ ಆಕ್ರಮಣ ಮಾಡಿದಾಗ ಅಣ್ಣಿಗನನ್ನು ಸಹ ಸೋಲಿಸಿದ.

ಅಣ್ಣಿಗನ ತರುವಾಯ ಆತನ ತಮ್ಮ ಇರಿವನೊಳಂಬ ದಿಲೀಪ (ಸು. 940-968) ರಾಷ್ಟ್ರಕೂಟ ಸಾಮಂತನಾಗಿ ಪಟ್ಟಕ್ಕೆ ಬಂದ. ಇವನಿಗೆ ನೊಳಿಪಯ್ಯ ಎಂಬ ಇನ್ನೊಂದು ಹೆಸರೂ ಪಲ್ಲವರಾಮ. ಪಲ್ಲವರೊಡೆಗಂಡ, ತ್ರಿಭುವನ ಧೀರ, ಏಕವಾಕ್ಯ ಎಂಬ ಬಿರುದುಗಳೂ ಇದ್ದುವು. ರಾಷ್ಟ್ರಕೂಟ 3ನೆಯ ಕೃಷ್ಣ 949ರಲ್ಲಿ ಚೋಳರಾಜ್ಯದ ಮೇಲೆ ಕೈಕೊಂಡ ಈ ದಂಡಯಾತ್ರೆಯಲ್ಲಿ ಇರಿವನೊಳಂಬನೂ ಪಾಲ್ಗೊಂಡಿದ್ದ. ಇಪಿಲಿ ಎಂಬ ಸ್ಥಳದಲ್ಲಿ ನಡೆದ ಘೋರ ಕಾಳಗದಲ್ಲಿ ಗಜಾಂಕುಶ ಚೋಳನನ್ನು ಇರಿವನೊಳಂಬ ಎದುರಿಸಿದ ಎಂದು ಮಡಕ ಶಿರಾದ ಒಂದು ಶಾಸನದಲ್ಲಿ ಹೇಳಿದೆ. ದಿಲೀಪನ ಕೈಕೆಳಗೆ ಮಹಾಬಲಿ ಕುಲದ ಸಾಂಬಯ್ಯ ಕೋಲಾರ ಜಿಲ್ಲೆಯಲ್ಲಿಯೂ ವೈದುಂಬ ಶಿಖಾಮಣಿ ವಿಕ್ರಮಾದಿತ್ಯ ತಿರುವಯ್ಯ ಗಂಗರು ಸಾಸಿರ ಪ್ರಾಂತ್ಯವನ್ನೂ ಆಳುತ್ತಿದ್ದರು. 3ನೆಯ ಕೃಷ್ಣನ 26ನೆಯ ವರ್ಷದ ವೇಲೂರಿನ ಶಾಸನದಲ್ಲಿ ನೊಳಂಬ ತ್ರಿಭುವನಧೀರ (ದಿಲೀಪ) ವೇಲೂರ್‌ಪಾಟೆ ಗ್ರಾಮವನ್ನು ದತ್ತಿಯನ್ನಾಗಿ ಕೊಟ್ಟನೆಂದು ಹೇಳಿದೆ. ಆದರೆ ಇರಿವ ನೊಳಂಬನ ರಾಜ್ಯದ ಎಲ್ಲೆಯು ಅಲ್ಲಿಯ ವರೆಗೆ ವಿಸ್ತರಿಸಿತ್ತೆಂದು ಹೇಳುವುದು ಕಷ್ಟ. ದಿಲೀಪನಿಗೆ ಪಿರಿಯಬ್ಬರಸಿ ಎಂಬ ಪತ್ನಿಯೂ ನನ್ನಿನೊಳಂಬ, ಅಯ್ಯಪ ದೇವ ಎಂಬ ಮಕ್ಕಳೂ ಇದ್ದರು. 949ರಲ್ಲಿ ಅಯ್ಯಪದೇವ ಇರಿವನೊಳಂಬನ ಕೈಕೆಳಗೆ ರಾಜ್ಯವಾಳುತ್ತಿದ್ದ. ಈತನಿಗೆ ಕಂಚೀಪುರವರೇಶ್ವರ, ದಕ್ಷಿಣ ದಂಡಾಧಿಪತಿ ಮುಂತಾದ ಬಿರುದುಗಳಿದ್ದುವು.

ಇರಿವನೊಳಂಬ ದಿಲೀಪನ ಅನಂತರ ಆತನ ಜ್ಯೇಷ್ಠಪುತ್ರ ಛಲದಂಕಕಾರ ನನ್ನಿನೊಳಂಬ (ಸು. 968-70) ಪಟ್ಟಕ್ಕೆ ಬಂದ. ಇವನಿಗೆ ನನ್ನಿಪೊಳಲ್ಚೋರ (II) ಎಂಬ ಮಗನಿದ್ದ. ಈತ 965ರಲ್ಲಿ ಇರಿವನೊಳಂಬನ ಕೈಕೆಳಗೆ ರಾಜ್ಯವಾಳುತ್ತಿದ್ದ ಎಂದು ಕಂಬದೂರಿನ ಒಂದು ಶಾಸನ ಹೇಳುತ್ತದೆ. ಇದೇ ಶಾಸನದಿಂದ ಈತನಿಗೆ ರಾಜಮನೋಜ ಮುಂತಾದ ಬಿರುದುಗಳಿದ್ದವೆಂದೂ ಮತ್ತು ಈತನ ಮುಖ್ಯಮಂತ್ರಿ ಶ್ರೀವತ್ಸಗೋತ್ರದ ಚಾವುಂಡಯ್ಯನೆಂದೂ ತಿಳಿದುಬರುತ್ತದೆ. 2ನೆಯ ಪೊಳಲ್ಚೋರನಿಗೆ ಕದಂಬ ವಂಶದ ದೀವಾಂಬಿಕೆ ಅಥವಾ ದೀವಬ್ಬರಿಸಿ ಎಂಬ ಪತ್ನಿ ಹಾಗೂ ಇವಳಿಂದ ಜನಿಸಿದ ಮಹೇಂದ್ರ ಮತ್ತು ಇರಿವನೊಳಂಬ ಎಂಬ ಇಬ್ಬರು ಮಕ್ಕಳು ಇದ್ದರು. ಪೊಳಲ್ಚೋರ ಸ್ವತಂತ್ರವಾಗಿ ರಾಜ್ಯವಾಳಿರಲಾರ. ರಾಜಮನೋಜ ಪೊಳಲ್ಚೋರನ ಪತ್ನಿ ದೀವಬ್ಬರಸಿ ತನ್ನ ಪತಿಯ ಮರಣಾನಂತರ ಆತನ ಹೆಸರಿನಲ್ಲಿ ಪೊಳಲ್ಚೋರಮಂಗಲ ಎಂಬ ಒಂದು ಅಗ್ರಹಾರವನ್ನು ಕಟ್ಟಿಸಿದಳು. ಅನಂತರ ಮಹೇಂದ್ರನ ಪರೋಕ್ಷದಲ್ಲಿ ಪೊಳಲ್ಚೋರಮಂಗಲದಲ್ಲಿ ದೀವಬ್ಬಾಸಮುದ್ರವನ್ನು ಮಾಡಿಸಿ ಅಲ್ಲಿ ಒಂದು ವಿಷ್ಣುವಿಗ್ರಹವನ್ನು ಕಟ್ಟಿಸಿದಳೆಂದು ಆವನಿಯ ಶಾಸನವೊಂದು ತಿಳಿಸುತ್ತದೆ. ಪೊಳಲ್ಚೋರ ಅಕಾಲ ಮೃತ್ಯುವಿಗೆ ಈಡಾಗಿರಬಹುದು. ಶ್ರವಣಬೆಳಗೊಳದ ಶಾಸನದಲ್ಲಿ ನೊಳಂಬ ಕುಲಾಂತಕನೆಂದು ವರ್ಣಿತನಾಗಿರುವ 2ನೆಯ ಮಾರಸಿಂಹನಿಗೂ ನೊಳಂಬರಿಗೂ 970ರಲ್ಲಿ ನಡೆದ ಘೋರ ಯುದ್ಧದಲ್ಲಿ ಪೊಳಲ್ಚೋರನೇ ಮೊದಲಾಗಿ ಅನೇಕ ವೀರರು ಮಡಿದಿರಬೇಕು. ಮಾರಸಿಂಹ ನೊಳಂಬರನ್ನು ಸೋಲಿಸಿ ಅವರನ್ನು ಅವರ ರಾಜ್ಯದಿಂದ ಹೊರ ಅಟ್ಟಿದ್ದಂತೆ ತೋರುತ್ತದೆ. ಕಲಗೋಡು (ಬಳ್ಳಾರಿ ಜಿಲ್ಲೆ) ಶಾಸನದ ಪ್ರಕಾರ (977) ನೊಳಂಬ ಪಲ್ಲವರ ಬಿರುದುಗಳನ್ನು ಹೊಂದಿರುವ ಮಯ್ದುಮ್ಮರಸನೆಂಬ ರಾಜ ಆ ಪ್ರದೇಶದಲ್ಲಿ ಆಗ ರಾಜ್ಯವಾಳುತ್ತಿದ್ದ. ಈತ ಪೊಳಲ್ಚೋರನ ಮಗ (2ನೆಯ) ಮಹೇಂದ್ರ (ಸು. 977-81) ಇರಬೇಕು. ಚಿತ್ತೂರು ಜಿಲ್ಲೆಯ ಕರ್ಷನಪಲ್ಲಿ ಶಾಸನದಲ್ಲಿ ಮಹೇಂದ್ರ ಚೋಳನಾಡಿನಿಂದ ಬರುವಾಗ ನೊಳಂಬವಾಡಿಯನ್ನು ಹೊಕ್ಕು ಗಂಗರು ಸಾಸಿರದ ಕೋಲಾರದಲ್ಲಿದ್ದು ಕೀರ್ತಿಗಾಮುಂಡನ ಮಗನಿಗೆ ಪಟ್ಟವನ್ನು ಕಟ್ಟಿದನೆಂದು ಉಲ್ಲೇಖವಿದೆ. ಪ್ರಾಯಶಃ ಗಂಗರಿಂದ ಸೋಲನ್ನನುಭವಿಸಿದಮೇಲೆ ನೊಳಂಬರು ತಮ್ಮ ರಾಜ್ಯವನ್ನು ಪುನರ್ವಶಪಡಿಸಿಕೊಳ್ಳಲು ಕಲ್ಯಾಣದ ಚಾಳುಕ್ಯ ರಾಜ 2ನೆಯ ತೈಲಪನ ಸ್ನೇಹವನ್ನು ಬಯಸಿರಬೇಕು. ಮಹೇಂದ್ರನು ಚೋಳನಾಡಿನಿಂದ ಹಿಂತಿರುಗಿದ್ದು ಎರಡನೆಯ ತೈಲಪ ಚೋಳರಾಜ್ಯದ ಮೇಲೆ ಕೈಕೊಂಡ ದಂಡಯಾತ್ರೆಯ (ಸು. 980) ಸಂದರ್ಭದಲ್ಲಿರಬೇಕೆಂದು ಊಹಿಸಬಹುದು. 981ರ ಬೆಳಗಲ್ಲು (ಬಳ್ಳಾರಿ ಜಿಲ್ಲೆ) ಶಾಸನದಲ್ಲಿ ಅಹವಮಲ್ಲ (ತೈಲಪ) ರಾಜ್ಯವಾಳುತ್ತಿದ್ದಾಗ ವೀರ ನೊಳಂಬ ಪೆರ್ಮ್ಮಾನಡಿಯ ಮಹಾದೇವಿ ರೇವಲದೇವಿ ಕೆಲವು ದಾನಗಳನ್ನು ಮಾಡಿದಳೆಂದು ಹೇಳಿದೆ. ಪ್ರಾಯಶಃ ಈ ಶಾಸನದ ವೀರನೊಳಂಬ ವೀರ ಮಹೇಂದ್ರನಾಗಿರಲೂ ಸಾಧ್ಯ.

991ರಲ್ಲಿ ರಾಜರಾಜ ಚೋಳ ನೊಳಂಬವಾಡಿ ಮತ್ತು ಗಂಗವಾಡಿಯ ಕೆಲವು ಭಾಗಗಳನ್ನು ಆಕ್ರಮಿಸಿಕೊಂಡ. ದಿಲೀಪನ ಮೊಮ್ಮಗನೂ ಅಯ್ಯಪದೇವನ ಮಗನೂ ಆದ ಗನ್ನರಸ ಎಂಬುವನು ರಾಜರಾಜನ ಸಾಮಂತನಾಗಿ ಆಳುತ್ತಿದ್ದನೆಂದು ಹೊಸಕೋಟೆಯ (ಬೆಂಗಳೂರು ಜಿಲ್ಲೆ) 997ರ ಒಂದು ಶಾಸನದಿಂದ ತಿಳಿಯುತ್ತದೆ. 1010ರ ಆಲೂರು ಶಾಸನದಲ್ಲಿ ಚಾಳುಕ್ಯ 5ನೆಯ ವಿಕ್ರಮಾದಿತ್ಯನ ಕೈಕೆಳಗೆ ಇರಿವನೊಳಂಬಾಧಿರಾಜ ಘಟೆಯಂಕಕಾರ ಎಂಬುವನು ನೊಳಂಬವಾಡಿ 32,000 ಕೋಗಳಿ, ಬಲ್ಲಕುಂದೆ 300, ಕುಕ್ಕನೂರು 30 ಮತ್ತು ಮಾಸೆಯವಾಡಿಯ ಐದು ಗ್ರಾಮಗಳನ್ನು ಆಳುತ್ತಿದ್ದನೆಂದು ಹೇಳಿರುವುದರಿಂದ ಈ ಕಾಲದಲ್ಲಿ ನೊಳಂಬರು ಕಲ್ಯಾಣ ಚಾಳುಕ್ಯರ ಅನುಗ್ರಹದಿಂದ ನೊಳಂಬವಾಡಿಯನ್ನು ಪುನಃ ಸಾಧಿಸಿ ಕೊಂಡಿದ್ದಲ್ಲದೆ, ದೇಶದ ಇನ್ನೂ ಇತರ ಪ್ರದೇಶಗಳನ್ನೂ ಆಧಿಪತ್ಯವನ್ನೂ ಆಗುಮಾಡಿಕೊಂಡರೆಂದು ಊಹಿಸಬಹುದು. ಈ ಶಾಸನದ ಇರಿವನೊಳಂಬ ಘಟೆಯಂಕಕಾರ ಎರನಡೆಯ ಮಹೇಂದ್ರನ ತಮ್ಮನಾದ ಇರಿವನೊಳಂಬನೆಂದೇ ತೋರುತ್ತದೆ. ಇರಿವನೊಳಂಬ ಎರಡನೆಯ ತೈಲಪನ ಮೊಮ್ಮಗಳನ್ನು (ವಿಕ್ರಮಾದಿತ್ಯನ ತಂಗಿ) ಮದುವೆಯಾಗಿದ್ದ. ಹೀಗೆ ನೊಳಂಬರು ಚಾಳುಕ್ಯರೊಂದಿಗೆ ರಾಜಕೀಯ ಮತ್ತು ವಿವಾಹಸಂಬಂಧಗಳಿಂದ ಅವರ ಪ್ರೀತ್ಯಾದರಗಳನ್ನು ಗಳಿಸಿ ಕಡೆಯವರೆಗೂ ಮಾಂಡಲಿಕರಾಗಿ ಅವರ ಕೈಕೆಳಗೆ ಆಳತೊಡಗಿದರು. ಎರಡನೆಯ ಮಹೇಂದ್ರನ ತರುವಾಯ ಆಳಿದ ಎಲ್ಲ ನೊಳಂಬರಾಜರೂ ತಮ್ಮ ಹೆಸರಿನ ಜೊತೆಗೆ ತತ್ಕಾಲದ ಚಾಳುಕ್ಯಾಧಿಪತಿಗಳ ಬಿರುದುಗಳನ್ನು ಸಹ ಸೇರಿಸಿಕೊಳ್ಳುವುದು ವಾಡಿಕೆಯಾಯಿತು. ಇರಿವನೊಳಂಬ ಘಟೆಯಂಕಕಾರ 1024ರ ವರೆಗೆ ಆಳಿದ. ಅನಂತರ ಈತನ ಮಗ ಜಗದೇಕಮಲ್ಲ ನೊಳಂಬ ಪಲ್ಲವ ಪೆರ್ಮ್ಮಾನಡಿ ಉದಯಾದಿತ್ಯದೇವ (ಸು. 1024--37) ಪಟ್ಟಕ್ಕೆ ಬಂದ. ಇದಕ್ಕೂ ಮುಂಚೆ ಇವನು ಗಂಗವಾಡಿ 96,000 ಕದಂಬಳಿಗೆ 1,000, ಕೋಗಳಿ 500, ಮಾಸವಾಡಿ 140ರ ಸ್ವಲ್ಪಭಾಗ, ಬಲ್ಲಕುಂದೆ 300 ಮತ್ತು ಕುಪಿಹಾರ 70ನ್ನೊಳಗೊಂಡಿದ್ದ ಎಡತೊರೆ 2,000 ಮುಂತಾದ ಪ್ರಾಂತ್ಯಗಳನ್ನು ಜಗದೇಕಮಲ್ಲ 2ನೆಯ ಜಯಸಿಂಹನ ಕೈಕೆಳಗೆ 1018ರಲ್ಲೇ ತನ್ನ ತಂದೆಯ ಜೊತೆ ಆಳುತ್ತಿದ್ದ.

ಬಳ್ಳಾರಿ ಜಿಲ್ಲೆಯಲ್ಲಿ ತುಂಗಭದ್ರಾನದಿಯ ತೀರದಲ್ಲಿದ್ದ ಕಂಪಿಲಿ ಇವನ ರಾಜಧಾನಿ. 1032ರ ಒಂದು ಶಾಸನದಲ್ಲಿ ಇವನು ನೊಳಂಬವಾಡಿ 32000 ಮತ್ತು ಕದಂಬಳಿಗೆ 1,000 ಮುಂತಾದ ಪ್ರಾಂತ್ಯಗಳನ್ನಾಳುತ್ತಿದ್ದನೆಂದು ಹೇಳಿರುವುದರಿಂದ ತಂದೆಯ ಮರಣಾನಂತರ ನೊಳಂಬವಾಡಿಗೆ ಅಧಿಪತಿಯಾದನೆಂದು ಹೇಳಬಹುದು.

ಜಗದೇಕಮಲ್ಲ ನೊಳಂಬ ಉದಯಾದಿತ್ಯದೇವನಿಗೆ ಜಗದೇಕಮಲ್ಲ ಈರ್ಮಡಿ ನೊಳಂಬ ಮತ್ತು ತ್ರೈಲೋಕ್ಯಮಲ್ಲ ನನ್ನಿನೊಳಂಬ ಎಂಬಿಬ್ಬರು ಮಕ್ಕಳಿದ್ದರು. ಇವನ ಅನಂತರ ಜಗದೇಕಮಲ್ಲ ಈರ್ಮಡಿ ನೊಳಂಬ ಪಲ್ಲವ ಪೆರ್ಮಾನಡಿ (ಸು. 1037-1044) ಕದಂಬಳಿಗೆ 1,000, ಕೋಗಳಿ 500, ಬಲ್ಲಕುಂದೆ 300, ಕರಿವೀಡಿ 30 ಮುಂತಾದ ಪ್ರಾಂತ್ಯಗಳನ್ನು ಆಳಿದ. ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮಾನಡಿ 1039ರಲ್ಲಿ ತನ್ನ ಅಣ್ಣನ ಜೊತೆಗೆ ರಾಜ್ಯವಾಳುತ್ತಿದ್ದ. ಈ ವಿಷಯವನ್ನು ತಿಳಿಸುವ ಬಳ್ಳಾರಿ ಜಿಲ್ಲೆಯ ಕಂಚಿಕೆರೆ ಶಾಸನದಲ್ಲಿ ಈತ ಜಗದೇಕಮಲ್ಲ ನನ್ನಿನೊಳಂಬನೆಂದು ಉಕ್ತವಾಗಿದ್ದಾನೆ. ಈತನ ಪಟ್ಟಾಭಿಷೇಕ 1044ರ ಏಪ್ರಿಲ್ 5ರಂದು ನಡೆಯಿತು. ಭೋಗವತೀಪುರವರೇಶ್ವರನ ಸಿಂದರಸ ಉದಯಾದಿತ್ಯ ಈತನ ಕೈಕೆಳಗೆ ಆಳುತ್ತಿದ್ದ. 1046ರಲ್ಲಿ ನೊಳಂಬವಾಡಿ 32,000 ಕದಂಬಳಿಗೆ 1,000 ಕೋಗಳಿ 500, ಬಲ್ಲಕುಂದೆ 300 ಮುಂತಾದುವು ಈತನ ಆಧಿಪತ್ಯದಲ್ಲಿದ್ದುವು. 1054ರಲ್ಲಿ ಕೊಪ್ಪಂ ಎಂಬಲ್ಲಿ ನಡೆದ ಚಾಳುಕ್ಯ-ಚೋಳ ಯುದ್ಧದಲ್ಲಿ ತ್ರೈಲೋಕ್ಯಮಲ್ಲ ನನ್ನಿನೊಳಂಬ ಚಾಳುಕ್ಯರ ಪರವಾಗಿ ಹೋರಾಡಿ ಮಡಿದಂತೆ ತೋರುತ್ತದೆ. ಮೂಲ ನೊಳಂಬ ರಾಜವಂಶ ಇವನೊಂದಿಗೇ ಮುಕ್ತಾಯವಾಯಿತು. 1057ರ ಹೊತ್ತಿಗೆ ನೊಳಂಬವಾಡಿ ಪ್ರಾಂತ್ಯ ಚಾಳುಕ್ಯ ರಾಜಕುಮಾರ 6ನೆಯ ವಿಕ್ರಮಾದಿತ್ಯನ ನೇರ ಆಡಳಿತಕ್ಕೆ ಒಳಪಟ್ಟಿತ್ತು; ಅಷ್ಟೇ ಅಲ್ಲದೆ ನೊಳಂಬ ವಂಶದ ಬಿರುದುಗಳನ್ನು ಇವನ ತಮ್ಮ ತನಗೇ ಅಳವಡಿಸಿಕೊಂಡ.

**ವಾಸ್ತು-ಶಿಲ್ಪ:** 8-11ನೆಯ ಶತಮಾನಗಳ ನಡುವೆ ನೊಳಂಬ, ಪಲ್ಲವರ ಪ್ರೋತ್ಸಾಹದಿಂದ ಇವರ ರಾಜ್ಯದಲ್ಲಿ ಬೆಳೆದ ವಾಸ್ತುಶಿಲ್ಪ ಶೈಲಿ ದಕ್ಷಿಣ ಭಾರತೀಯ ವಾಸ್ತುಶಿಲ್ಪ ಪರಂಪರೆಯಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿದೆ. ನೊಳಂಬರು ಮೂಲತಃ ಪಲ್ಲವರಾಗಿದ್ದರೂ ಕರ್ನಾಟಕದಲ್ಲಿ ಆಳುತ್ತಿದ್ದುದರಿಂದ ಮತ್ತು ಇವರ ರಾಜ್ಯ ಕನ್ನಡ ಮತ್ತು ತಮಿಳುರಾಜ್ಯಗಳ ನಡುವೆ ಇದ್ದುದರಿಂದ ಇವರ ವಾಸ್ತು-ಶಿಲ್ಪ ಸಂಪ್ರದಾಯದಲ್ಲಿ ಕರ್ನಾಟಕ-ತಮಿಳು ಶೈಲಿಗಳ, ಅಂದರೆ ಬಾದಾಮಿ ಚಳುಕ್ಯ, ಗಂಗ, ಪಲ್ಲವ ಸಂಪ್ರದಾಯಗಳ ಸಮ್ಮಿಳನ ಕಾಣುತ್ತದೆ. ನೊಳಂಬ ಶಿಲ್ಪಿಗಳು ಇವುಗಳ ಗುಣಗಳನ್ನು ತಮ್ಮ ಕಲೆಯಲ್ಲಿ ಅಳವಡಿಸಿಕೊಂಡಿದ್ದಲ್ಲದೆ ಅವುಗಳನ್ನು ತಮ್ಮದೇ ಆದ ರೀತಿಯಲ್ಲಿ ಸಂಯೋಜಿಸಿ, ಉತ್ತಮಪಡಿಸಿ, ಸ್ವಶೈಲಿಯನ್ನು ರೂಪಿಸಿಕೊಂಡಿರುವುದು ಈ ವಾಸ್ತು ಶಿಲ್ಪ ಸಂಪ್ರದಾಯದ ವೈಶಿಷ್ಟ್ಯ.

ಈಗ ಗುರುತಿಸಿರುವ ಇವರ ಎಲ್ಲಾ ದೇವಸ್ಥಾನಗಳು 9-10ನೆಯ ಶತಮಾನಗಳವು. ಈ ದೇವಾಲಯಗಳ ತಳವಿನ್ಯಾಸದಲ್ಲಿ ಸಾಮಾನ್ಯವಾಗಿ ಒಂದು ಚೌಕಟ್ಟಾದ ಗರ್ಭಗೃಹ. ಅದರ ಮುಂದೆ 2 ಅಥ'ವಾ 4 ಕಂಬಗಳಿರುವ ಆಯಾಕಾರದ ಅರ್ಧಮಂಟಪ ಮತ್ತು ಅದರ ಮುಂದೆ ಒಂದು ಹಜಾರ ಇರುತ್ತವೆ. ಹಜಾರದ ಮುಂಭಾಗದಲ್ಲಿ ಮುಖಮಂಟಪವಿರುವುದಿಲ್ಲ. ಅದರ ಬದಲು ದೇವಾಲಯದ ಮುಂದೆ ಪ್ರತ್ಯೇಕವಾದ ಒಂದು ನಂದಿಮಂಟಪವಿರುತ್ತದೆ. ಹೊರಮೈಯಲ್ಲಿ, ಅಧಿಷ್ಠಾನ ಸಾಮಾನ್ಯವಾಗಿ ನಾಲ್ಕು ಸಮಾನಾಂತರ ಅಡ್ಡಪಟ್ಟಿಕೆಗಳಿಂದ ಕೂಡಿರುತ್ತದೆ. ಇವುಗಳಲ್ಲಿ ಮೂರನೆಯ ಪಟ್ಟಿ ಬಹಳ ಮಟ್ಟಿಗೆ ಭಿತ್ತಿಯ ಮೇಲಿನ ಕಪೋತದಂತಿದ್ದು, ಅದರ ಮೇಲೆ ಕೂಡು ಮತ್ತು ವಿವಿಧ ಪ್ರಾಣಿಗಳ ಶಿಲ್ಪಗಳಿರುತ್ತವೆ. ಭಿತ್ತಿ ಮಟ್ಟವಾಗಿದ್ದರೂ ನೀಳವಾದ ತೆಳು ಅರೆಕಂಬಗಳು, ಕೋಷ್ಠಗಳು ಮತ್ತು ಜಾಲಂಧ್ರಗಳಿಂದ ಕೂಡಿದ್ದು ಸರಳವಾಗಿ ಅಂಲಕೃತವಾಗಿರುತ್ತದೆ. ಭಿತ್ತಿಯ ಮೇಲೆ ಕೂಡುಗಳಿಂದ ಅಲಂಕೃತವಾದ ಕಪೋತವೂ ಅದರ ಮೇಲೆ ಶಾಲಾ, ಕೂಟ, ಪಂಜರಗಳಿಂದೊಡಗೂಡಿದ ಹಾರವೂ ಇರುತ್ತದೆ. ಶಿಖರ ಸಾಮಾನ್ಯವಾಗಿ ಘಟ್ಟಘಟ್ಟವಾಗಿ ಮೇಲೇಳುವ ದಾಕ್ಷಿಣಾತ್ಯ ಶೈಲಿಯದು (ಇದುವರೆಗೆ ಉಳಿದುಬಂದಿರುವ ನೊಳಂಬರ ಕಾಲದ ಶಿಖರಗಳೆಂದರೆ ನಂದಿಯಲ್ಲಿರುವ ಅರುಣಾಚಲೇಶ್ವರ ಮತ್ತು ಭೋಗನಂದೀಶ್ವರ ದೇವಾಲಯದಲ್ಲಿರುವವು). ದೇವಾಲಯದ ಒಳಭಾಗದ ಭಿತ್ತಿಗಳು, ಮಟ್ಟಸವಾಗಿ ಸರಳವಾಗಿರುತ್ತದೆಯಾದರೆ ಇದಕ್ಕೆ ವಿರುದ್ಧವಾಗಿ ಕಂಬಗಳು ಮತ್ತು ಬಾಗಿಲುವಾಡಗಳು ಬಹಳಮಟ್ಟಿನ ಸೂಕ್ಷ್ಮ ಅಲಂಕರಣವನ್ನು ಹೊಂದಿರುತ್ತವೆ. ಹಜಾರದ ಚಾವಣಿ ಸಾಮಾನ್ಯವಾಗಿ ನಾಲ್ಕು ಕಂಬಗಳಿಂದ ಎತ್ತಿದ ತೊಲೆಗಳಿಂದ ಒಂಬತ್ತು ಅಂಕಣಗಳಾಗಿ ವಿಂಗಡಿಸಲ್ಪಟ್ಟಿರುತ್ತದೆ. ಮಧ್ಯದ ಅಂಕಣದಳತ್ತು ಒಂಬತ್ತು ಅಂಕಣಗಳಾಗಿ ವಿಂಗಡಿಸಲ್ಪಟ್ಟು, ಅಷ್ಟದಿಕ್ಪಾಲಕರುಗಳಿಂದ ಸುತ್ತುವರಿಯಲ್ಪಟ್ಟ ಶಿವನ ಶಿಲ್ಪವನ್ನು ಹೊಂದಿರುತ್ತದೆ. ನೊಳಂಬರ ಬಹುಪಾಲು ದೇವಾಲಯಗಳಲ್ಲಿ ಕಂಡುಬರುವ ಈ ರೀತಿಯ ಶಿಲ್ಪ ಸುಂದರವೂ ಸೂಕ್ಷ್ಮವೂ ಆಗಿರುತ್ತದೆ.

ನೊಳಂಬರ ದೇವಾಲಯಗಳು ಹೇಮಾವತಿ (ಆಂಧ್ರ ಪ್ರದೇಶ). ನಂದಿ, ಆವನಿ (ಕೋಲಾರ ಜಿಲ್ಲೆ) ಮತ್ತು ಧರ್ಮಪುರಿ (ತಮಿಳುನಾಡು) ಈ ಸ್ಥಳಗಳಲ್ಲಿ ಕಂಡು ಬಂದಿವೆ. ನೊಳಂಬರ ರಾಜಧಾನಿಯಾಗಿದ್ದ ಹೇಮಾವತಿಯಲ್ಲೇ ಇವರ ಐದು ದೇವಾಲಯಗಳನ್ನು ಕಾಣಬಹುದು. ದೊಡ್ಡೇಶ್ವರ ದೇವಾಲಯ ಇವುಗಳೆಲ್ಲದರಲ್ಲಿ ಮುಖ್ಯವಾದುದು. ಇಲ್ಲಿಯ ವೈಶಿಷ್ಟ್ಯವೆಂದರೆ ಹದಿನಾರು ಕಂಬಗಳಿರುವ ಹಜಾರ ಮತ್ತು ಗಂಗೆ, ವಿಷ್ಣು, ಬ್ರಹ್ಮ, ಕಾರ್ತಿಕೇಯ, ಮಿಥುನ ಮುಂತಾದ ವಿಗ್ರಹಗಳನ್ನು ಹೊಂದಿರುವ ಜಾಲಂಧ್ರಗಳು, ಚಾಳುಕ್ಯರ, ಕಲಾಶೈಲಿಯ ಪ್ರಭಾವವನ್ನು ಹೊಂದಿರುವ ಈ ಜಾಲಂಧ್ರಗಳು ನೊಳಂಬರ ಕಲೆಯಲ್ಲೆ ಅದ್ವಿತೀಯವಾದುವು. ಹೇಮಾವತಿಯ ಅಕ್ಕ-ತಂಗಿ ಗುಡಿಗಳಲ್ಲಿ ಮುಂಚಿನ ಚೋಳರ ಕಲೆಯ ಪ್ರಭಾವವನ್ನು ಕಾಣಬಹುದು. ವಿರೂಪಾಕ್ಷ, ಮಲ್ಲೇಶ ಮತ್ತು ಸಿದ್ದೇಶ್ವರ ದೇವಾಲಯಗಳು, ಸುಂದರವಾದ ಬಾಗಿಲುವಾಡಗಳು ಮತ್ತು ಕಂಬಗಳನ್ನು ಹೊಂದಿವೆ.

ಆವನಿಯಲ್ಲಿರುವ ನೊಳಂಬರ ದೇವಾಲಯಗಳಲ್ಲಿ ಮುಖ್ಯವಾದುದೆಂದರೆ ಲಕ್ಷ್ಮಣೇಶ್ವರ. ಈ ದೇವಾಲಯದ ಆಕರ್ಷಕ ಅಧಿಷ್ಠಾನ ನೊಳಂಬರ ದೇವಾಲಯ ಅಧಿಷ್ಠಾನಗಳಲ್ಲೆಲ್ಲಾ ಅತ್ಯುತ್ತಮವಾದುದು. ಇಲ್ಲಿಯ ಜಾಲಂಧ್ರಗಳು ಮತ್ತು ಸಣ್ಣ ಭಿತ್ತಿಕೋಷ್ಠಗಳು, ಕಂಬಗಳು, ಹಜಾರ ಚಾವಣಿಯ ಅಷ್ಟದಿಕ್ಪಾಲಕ ಶಿಲ್ಪ ಮುಂತಾದವುಗಳು ದೇವಾಲಯದ ಸೌಂದರ್ಯವನ್ನು ಹೆಚ್ಚಿಸಿವೆ. ಲಕ್ಷ್ಮಣೇಶ್ವರ ದೇವಾಲಯದ ಆವರಣದಲ್ಲಿರುವ ಭರತೇಶ್ವರ, ಆಂಜನೇಶ್ವರ, ಶತ್ರುಘ್ನೇಶ್ವರ ದೇವಾಲಯಗಳು ಬಹಳಮಟ್ಟಿಗೆ ದುರಸ್ತಿಯಾಗಿದ್ದರೂ ಇವುಗಳ ಅಧಿಷ್ಠಾನ. ಕಂಬ, ಬಾಗಿಲುವಾಡ ಮುಂತಾದವುಗಳು ನೊಳಂಬರ ವಾಸ್ತುಶಿಲ್ಪದ ಪ್ರತೀಕವಾಗಿ ಉಳಿದಿವೆ.

ನಂದಿಯಲ್ಲಿರುವ ಒಂದೇ ಮಾದರಿಯ ಭೋಗನಂದೀಶ್ವರ ಮತ್ತು ಅರುಣಾಚಲೇಶ್ವರ ದೇವಾಲಯಗಳು ನೊಳಂಬರ ಕಾಲದ ಉತ್ತಮ ಕೃತಿಗಳು. ಅರುಣಾಚಲೇಶ್ವರ ದೇವಾಲಯದಲ್ಲಿರುವ ನಟರಾಜ ವಿಗ್ರಹ ಮತ್ತು ಬಳ್ಳಿಯ ಸುರುಳಿಗಳ ಅಲಂಕರಣವನ್ನು ಹೊಂದಿರುವ ಜಾಲಂಧ್ರಗಳ ಕಲಾವಂತಿಕೆ ಅಸಮ. ನೊಳಂಬ ಶೈಲಿಯ ಕಂಬಗಳು ಮತ್ತು ಹಜಾರ ಚಾವಣಿಯಲ್ಲಿರುವ ಅಷ್ಟದಿಕ್ಪಾಲಕರ ಶಿಲ್ಪಗಳು ಭೋಗನಂದೀಶ್ವರ ದೇವಾಲಯದ ಮುಖ್ಯ ಆಕರ್ಷಣೆ. ಈ ಎರಡು ದೇವಾಲಯಗಳ ಹಾರ ಮತ್ತು ಶಿಖರ ದ್ರಾವಿಡ ಶೈಲಿಯಲ್ಲಿದ್ದು ಉತ್ತಮ ಶಿಲ್ಪಗಳನ್ನು ಹೊಂದಿವೆ. ಈ ದೇವಾಲಯಗಳ ಮುಂದಿರುವ ನಂದಿಮಂಟಪಗಳು ಪ್ರಾಯಶಃ ಇದೇ ಕಾಲದವು.

ಧರ್ಮಪುರಿಯಲ್ಲಿರುವ ಎರಡು ದೇವಾಲಯಗಳು-ಕಾಮಾಕ್ಷಿಯಮ್ಮ ಮತ್ತು ಮಲ್ಲಿಕಾರ್ಜುನ - 9-10ನೆಯ ಶತಮಾನಕ್ಕೆ ಸೇರಿದವು. ಕಾಮಾಕ್ಷಿಯಮ್ಮ ದೇವಾಲಯದ ಉನ್ನತವಾದ ಅಧಿಷ್ಠಾನ ತಳಭಾಗದಲ್ಲಿ ಕಡೆಯಲ್ಪಟ್ಟಿರುವ ರಾಮಾಯಣ ಶಿಲ್ಪಕತೆ, ತಳಪಾದಿಯನ್ನು ಎತ್ತಿ ಹಿಡಿದಿರುವ ದಿಗ್ಗಜಗಳು ಮುಂತಾದ ಅಲಂಕರಣದಿಂದ ಕೂಡಿದ್ದು ಇಡೀ ನೊಳಂಬ ವಾಸ್ತು ಶಿಲ್ಪದಲ್ಲಿ ವಿಶಿಷ್ಟರೀತಿಯದಾಗಿದೆ. ಪೌರಾಣಿಕ ಮತ್ತು

ಧಾರ್ಮಿಕ ಶಿಲ್ಪಗಳನ್ನು ಒಳಗೊಂಡಿರುವ ಕಂಬಗಳು ಮತ್ತು ಅಷ್ಟದಿಕ್ಪಾಲಕರ ಶಿಲ್ಪವುಳ್ಳ ಚಾವಣಿ ಹಜಾರದ ಸೌಂದರ್ಯವನ್ನು ವರ್ಧಿಸಿವೆ. ನಾನಾ ರೀತಿಯ, ಸುಂದರವೂ ಸೂಕ್ಷ್ಮವೂ ಆದ ಉಬ್ಬುಶಿಲ್ಪಗಳುಳ್ಳ ಕಂಬಗಳು ಮತ್ತು ಅಷ್ಟದಿಕ್ಪಾಲಕರ ಶಿಲ್ಪವುಳ್ಳ ಹಜಾರದ ಚಾವಣಿ - ಮಲ್ಲಿಕಾರ್ಜುನ ದೇವಾಲಯದ ಮುಖ್ಯ ಆಕರ್ಷಣೆ. (ಎಂ.ಎಸ್.ಕೆ.)

ನೊಳಂಬರು ಮೂಲತಃ ಶೈವರಾಗಿದ್ದುದರಿಂದ ಇವರ ಹೆಚ್ಚಿನ ಶಿಲ್ಪಗಳು ಶೈವಧರ್ಮಕ್ಕೆ ಸಂಬಂಧಪಟ್ಟವು. ಆದರೆ ಇವರ ಸಮನ್ವಯ ದೃಷ್ಟಿಯನ್ನು ಸೂಚಿಸುವಂತೆ ಕಂಬಗಳ ಮೇಲಿನ ಅಲಂಕರಣದಲ್ಲಿ ವೈಷ್ಣವ ಶಿಲ್ಪಗಳೂ ಇರುವುದುಂಟು. ಈ ಕಾಲದವುಗಳಲ್ಲಿ ಹೆಚ್ಚಿನವು ದೇವಾಲಯಗಳಲ್ಲಿ ಸ್ಥಾಪಿಸಲು ಮಾಡಿದ್ದ ದೇವಮೂರ್ತಿಗಳು ಮತ್ತು ವಾಸ್ತುಭಾಗವಾಗಿ ಬರುವ ಉಬ್ಬುಶಿಲ್ಪಗಳು, ಶೈಲಿಯ ದೃಷ್ಟಿಯಿಂದ ನೋಡಿದರೆ, ನೊಳಂಬ ವಾಸ್ತು ಕೃತಿಗಳಂತೆ ಶಿಲ್ಪಗಳಲ್ಲೂ ಕರ್ನಾಟಕ ಮತ್ತು ತಮಿಳುನಾಡಿನ ಶಿಲ್ಪಸಂಪ್ರದಾಯಗಳ ಸಂಗಮ ಕಂಡುಬರುತ್ತದೆ. ಅಲ್ಲದೆ ನೊಳಂಬರ ಕಾಲ ಕರ್ನಾಟಕ ಶಿಲ್ಪ ಪರಂಪರೆಯಲ್ಲಿ ಪ್ರಾಚೀನ ನೈಸರ್ಗಿಕ ನಿರೂಪಣಾ ಪದ್ಧತಿಯಿಂದ ನಡುಗಾಲದ ಅತ್ಯಲಂಕರಣಾತ್ಮಕ ನಿರೂಪಣಾ ಪದ್ಧತಿಗೆ ಪರಿವರ್ತನೆಯನ್ನು ಹೊಂದುತ್ತಿದ್ದ ಕಾಲವಾದ್ದರಿಂದ, ಈ ಕಾಲದ ಶಿಲ್ಪಗಳಲ್ಲಿ ಈ ಪರಿವರ್ತನೆಯ ಛಾಟಿ ಎದ್ದುಕಾಣುತ್ತದೆ. ದೇವಮೂರ್ತಿಗಳಲ್ಲಿ ಕೆಲವು ಸಲ ಆಯುಧಗಳನ್ನು ಸ್ವಾಭಾವಿಕ ರೀತಿಯಲ್ಲೂ ಕೆಲವು ಸಲ ಕೃತಕೀಯವಾಗಿ ಆದರೆ ಕಲಾತ್ಮಕವಾಗಿ ಹಿಡಿದಿರುವಂತೆ ನಿರೂಪಿಸಿರುವುದು ಈ ಅಂಶಕ್ಕೆ ಒಳ್ಳೆಯ ಉದಾಹರಣೆ. ಹಾಗೆಯೇ ಈ ಕಾಲದ ಶಿಲ್ಪಗಳು ಅಲಂಕೃತವಾಗಿದ್ದರೂ ಅಲಂಕರಣದ ಪರಿಮಾಣ ಪ್ರಾಚೀನ ಪಲ್ಲವ-ಚಳುಕ್ಯಾದಿ ಶಿಲ್ಪಗಳಿಗಿಂತ ಹೆಚ್ಚಾಗಿಯೂ ಮುಂದಿನ ಹೊಯ್ಸಳ ಶಿಲ್ಪಗಳಿಗಿಂತ ಕಡಿಮೆಯಾಗಿಯೂ ಇರುತ್ತದೆ. ಈ ಹಲವು ಕಾರಣಗಳಿಂದ ನೊಳಂಬ ಶಿಲ್ಪಗಳ ನಿರೂಪಣೆ ಮತ್ತು ಅಲಂಕರಣದಲ್ಲಿ ಒಂದು ರೀತಿಯ ನಾವೀನ್ಯತೆ, ರಮ್ಯತೆ ಲಾಲಿತ್ಯ, ಚೆಲುನಿಲುವು ಮತ್ತು ಮುಖಭಂಗಿ ಪ್ರಮುಖವಾಗಿ ಕಾಣುತ್ತವೆ. *

ಈಗ ಮದರಾಸು ವಸ್ತುಸಂಗ್ರಹಾಲಯದಲ್ಲಿರುವ, ಪೆನುಗೊಂಡೆಯ ಶಿವ ಪಾರ್ವತಿಯರ ಕುಳಿತಿರುವ ವಿಗ್ರಹ ಇವರ ಶಿಲ್ಪಕಲೆಯ ಮೇರುಕೃತಿ. ಇದು 9ನೆಯ ಶತಮಾನದ್ದು.ಈ ವಿಗ್ರಹದ ಮುಖಭಂಗಿ ಮತ್ತು ಸುಂದರ ಅಲಂಕರಣ ತುಂಬಾ ಆಕರ್ಷಕವಾಗಿವೆ. ಇದೇ ಸಂಗ್ರಹಾಲಯದಲ್ಲಿರುವ ನೊಳಂಬ ಕಾಲದ ವೀಣಾಧರ ದಕ್ಷಿಣಮೂರ್ತಿ ಮತ್ತು ಸೂರ್ಯ ಭವ್ಯವಾದುವು. ದಕ್ಷಿಣಾ ಮೂರ್ತಿಯ ಜಟಾವಿನ್ಯಾಸ ಸ್ವಲ್ಪಮಟ್ಟಿಗೆ ಚೋಳರೀತಿಯಲ್ಲಿದೆ. ಭವ್ಯವಾದ ಸಮಭಂಗಿಯಲ್ಲಿ ನಿಂತಿರುವ ಸೂರ್ಯವಿಗ್ರಹ ದೃಢತೆಯನ್ನೂ ಅಚಲತೆಯನ್ನೂ ಸಾರುತ್ತದೆ. ಅಧಿಕವಾಗಿ ಅಲಂಕೃತವಾದ, ಕೈಯಲ್ಲಿ ಕಮಲಗಳನ್ನು ಹಿಡಿದಿರುವ ಈ ವಿಗ್ರಹದ ಮುಖಮುದ್ರೆ ಗಂಭೀರವಾಗಿದೆ. ಇದೇ ರೀತಿಯ ಅನೇಕ ಸೂರ್ಯ ವಿಗ್ರಹಗಳು.

ನೊಳಂಬರ ಶೈಲಿಯ ಕಾಳಿಯ ವಿಗ್ರಹಗಳು ವಿಭಿನ್ನವಾದುವು. ದೃಢವಾದ ಮೈಕಟ್ಟು, ಸೌಮ್ಯವೆಂದೇ ಹೇಳಬಹುದಾದ ಮುಖಮುದ್ರೆ, ಜಟಾಮುಕುಟ, ಕಪಾಲಮಾಲೆ, ನಾಗಕುಚಬಂಧ, ತೋಳ್ಬಂದಿ ಮುಂತಾದವುಗಳನ್ನು ಹೊಂದಿರುವ ಈ ವಿಗ್ರಹಗಳು ಅತ್ಯಂತ ಆಕರ್ಷಕವಾಗಿವೆ.

ಈ ಶೈಲಿಯ ಸಪ್ತಮಾತೃಕೆಯರ ಶಿಲ್ಪಗಳನ್ನು ಈ ಕಾಲದ ಪ್ರತಿಯೊಂದು ದೇವಾಲಯದಲ್ಲಿಯೂ ಕಾಣಬಹುದು. ಒಂದೇ ಕಲ್ಲಿನಲ್ಲಿ ಸಾಲಾಗಿ ಕೆತ್ತಿರುವ ಮತ್ತು ಬೇರೆ ಬೇರೆಯಾಗಿ ಇರುವ ಈ ವಿಗ್ರಹಗಳು ಅನೇಕ. ಇವುಗಳ ಪೈಕಿ ಹೇಮಾವತಿಯ ದೊಡ್ಡೇಶ್ವರ ದೇವಾಲಯದಲ್ಲಿರುವ ಸಹಜಾಕಾರದಲ್ಲಿರುವ ನಾಲ್ಕು ಮಾತೃಕೆಯರ ವಿಗ್ರಹಗಳು ಮುಖ್ಯವಾದುವು. ಎತ್ತರವಾದ ಪೀಠದ ಮೇಲೆ ಕುಳಿತಿರುವ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ ಮತ್ತು ವಾರಾಹೀ (?) ವಿಗ್ರಹಗಳು ಮೋಹಕವಾಗಿವೆ. ಇವುಗಳಲ್ಲಿ ನೈಜ ದೈಹಿಕ ಸೌಂದರ್ಯವನ್ನು ಮೂಡಿಸುವಲ್ಲಿ ಶಿಲ್ಪಿ ಸಫಲನಾಗಿದ್ದಾನೆ.

ನೊಳಂಬರ ಶಿಲ್ಪದ ಮತ್ತೊಂದು ಮೇರುಕೃತಿಯೆಂದರೆ ಹೇಮಾವತಿಯಲ್ಲಿರುವ, ಬಾದಾಮಿ ಚಳುಕ್ಯರ ಶೈಲಿಯನ್ನನುಸರಿಸಿ ಮಾಡಿರುವ ಮಹಿಷಾಸುರ ಮರ್ದಿನಿ, ಚಿಕ್ಕದಾದರೂ ಚೊಕ್ಕವಾಗಿರುವ ದೇವಿಯ ಈ ಸುಂದರ ವಿಗ್ರಹಕ್ಕೆ ಸರಿಸಾಟಿಯಾದುದು ಇಡೀ ದಕ್ಷಿಣ ಭಾರತದಲ್ಲೇ ದುರ್ಲಭ. ತ್ರಿಶೂಲ, ಚಕ್ರಧಾರಿಯಾಗಿ ಮಹಿಷಾಸುರನನ್ನು ಅನಾಯಾಸವಾಗಿ ಸಂಹರಿಸುತ್ತಿರುವ ದೇವಿಯ ಈ ವಿಗ್ರಹ ತ್ರಿಪರಿಮಾಣದ ಶಿಲ್ಪಕ್ಕೆ ಒಂದು ಉತ್ತಮ ನಿದರ್ಶನ. ನೊಳಂಬರ ಶಿಲ್ಪದಲ್ಲಿ ಮಹಿಷಾಸುರಮರ್ದಿನಿಗೆ ವಿಶಿಷ್ಟವಾದ ಸ್ಥಾನವಿದೆ. ಅನೇಕ ರೀತಿಯ ಮತ್ತು ವಿವಿಧ ಭಂಗಿಯ ದೇವಿಯ ಶಿಲ್ಪಗಳು ಬಾಗಿಲುವಾಡಗಳಲ್ಲಿ, ಜಾಲಂಧ್ರಗಳಲ್ಲಿ, ಕಂಬಗಳಲ್ಲಿ ಹಾಗೂ ಬಿಡಿಯಾಗಿ ಸಿಕ್ಕುತ್ತವೆ.

ನೊಳಂಬರ ಕಾಲದ ನಂದಿಯ ಶಿಲ್ಪಗಳು ಬಹಳ ರಮಣೀಯವಾದವುಗಳು. ಬಹಳಮಟ್ಟಿಗೆ ವೆಂಗಿ ಚಾಳುಕ್ಯರ ನಂದಿಗಳನ್ನು ಇವು ಹೋಲುತ್ತವೆ. ತರಂಗಾ ಕೃತಿಯ ಗಂಗೆದೊಗಲು ಉನ್ನತವಾದ ಹಿಣಿಲು ಮತ್ತು ಬಲಿಷ್ಠ ದೇಹವನ್ನು ಹೊಂದಿದ್ದು ಮೋಹಕವಾದ ಭಂಗಿಯಲ್ಲಿ ಕುಳಿತಿರುವ ಈ ನಂದಿ ವಿಗ್ರಹಗಳು ಕತ್ತಿನಿಂದ ಇಳಿಬಿದ್ದು ಮುಂಭಾಗದ ನೆಲದ ಮೇಲೆ ಹರಡಿಕೊಂಡಿರುವ ಘಂಟಾಹಾರ, ಗೆಜ್ಜೆಯ ಹಾರ ಮತ್ತು ಶಿರಪಟ್ಟಿಗಳನ್ನು ಹೊಂದಿರುತ್ತವೆ.

ಈ ಕಾಲದ ಜಾಲಂಧ್ರಗಳು ವಾಸ್ತುಶಿಲ್ಪದ ಅಂಗಗಳೆಂದು ಪರಿಗಣಿಸಲ್ಪಡಬೇಕಾದರೂ ಅವುಗಳ ತಯಾರಿಕೆಯಲ್ಲಿ ಕಂಡುಬರುವ ಕೌಶಲ್ಯ ಮತ್ತು ಅವುಗಳೊಳಗೆ ನಿರೂಪಿತವಾಗಿರುವ ಸುಂದರ ಮೂರ್ತಿಶಿಲ್ಪಗಳಿಂದ ಅವನ್ನು ಶಿಲ್ಪಗಳ ಸಾಲಿಗೇ ಸೇರಿಸಬಹುದು. ಬಾದಾಮಿ ಚಳುಕ್ಯರ ದೇವಾಲಯಗಳಲ್ಲಿ ವಾಸ್ತು ಆವಶ್ಯಕತೆಗೆ ಪೂರಕವಾಗಷ್ಟೇ ಇದ್ದ ಜ್ಯಾಮಿತಿಕ ವಿನ್ಯಾಸಗಳೊಡನಿದ್ದ ಈ ಜಾಲಂಧ್ರಗಳು ನೊಳಂಬ ಶಿಲ್ಪಿಗಳ ಕೈಯಲ್ಲಿ ಮೂರ್ತಿಶಿಲ್ಪದ ಮಾಧ್ಯಮವಾಗಿಯೂ ಬೆಳೆಯಿತು. ಈ ಜಾಲಂಧ್ರಗಳು ಒಂದೇ ಕಲ್ಲಿನಿಂದ ಮಾಡಲ್ಪಟ್ಟಿದ್ದು ದೇವಕೋಷ್ಠ ಅಥವಾ ದ್ವಾರದ ಎಲ್ಲಾ ಅಂಗಗಳನ್ನು, ಅಂದರೆ ಎರಡೂ ಪಕ್ಕಗಳಲ್ಲಿ ನಿಧಿಗಳು, ಗೋಡೆಗಂಬಗಳು, ಹಾಸುಗಲ್ಲು, ಕಪೋತ ಮುಂತಾದವುಗಳನ್ನು ಹೊಂದಿದ್ದು ಮಧ್ಯ ಭಾಗದಲ್ಲಿ ಸುಂದರವಾದ ಮೂರ್ತಿಶಿಲ್ಪವನ್ನೋ ಅಥವಾ ಬಳ್ಳಿಯ ಸುರುಳಿಯನ್ನೊ ಹೊಂದಿರುತ್ತವೆ. ವಿಗ್ರಹಗಳ ಅಕ್ಕಪಕ್ಕಗಳಲ್ಲಿ ಸಣ್ಣದಾದ ರಂಧ್ರಗಳಿದ್ದು ದೇವಾಲಯದ ಒಳಭಾಗಕ್ಕೆ ಆವಶ್ಯಕವಾದ ಗಾಳಿ ಬೆಳಕು ಬರುತ್ತದೆ. ಕೆಲವು ಸಲ ಈ ಜಾಲಂಧ್ರಗಳಿಗೆ ವಾಸ್ತುಶಿಲ್ಪದ ಅಲಂಕರಣಗಳ ಬದಲು ಕೇವಲ ಒಂದು ಚಪ್ಪಟೆಯಾದ ಅಂಚು ಮಾತ್ರ ಇರುವ ನಿದರ್ಶನಗಳೂ ಉಂಟು. ನೊಳಂಬರ ಜಾಲಂಧ್ರಗಳಿಗೆ ಉತ್ತಮ ನಿದರ್ಶನವೆಂದರೆ ಹೇಮಾವತಿಯ ದೊಡ್ಡೇಶ್ವರ ದೇವಾಲಯದಲ್ಲಿರುವವು. ಇವು ಗಂಗಾ, ಮಿಥುನ, ಬ್ರಹ್ಮ, ವಿಷ್ಣು, ಕಾರ್ತಿಕೇಯ ಮುಂತಾದ ವಿಗ್ರಹಗಳನ್ನು ಹೊಂದಿವೆ. ಇವಲ್ಲದೆ ಒಂದು ಸುಂದರವಾದ ಜಾಲಂಧ್ರದಲ್ಲಿ ಸರ್ಪಗತಿಯಲ್ಲಿ ಮೇಲೇರುವ ಲತೆ ಮತ್ತು ಇದರ ಅರ್ಧ ಸುರುಳಿಗಳ ನಡುವೆ ಸೂಕ್ಷ್ಮವಾಗಿ ಕೊರೆದಿರುವ, ನರ್ತಿಸುತ್ತಿರುವ ಹೆಂಗಸರು, ಗಂಡಸರು ಮತ್ತಿತರ ವಾದ್ಯವೃಂದದವರ ಶಿಲ್ಪಗಳಿವೆ. ಇದರಲ್ಲಿ ಕಂಡುಬರುವ ಪ್ರಕೃತಿಯ ಮತ್ತು ಮಾನವ ವಸ್ತುಗಳ ಸಮ್ಮಿಳನ ಊಹೆಗೂ ನಿಲುಕದಷ್ಟು ಸುಂದರವಾಗಿದೆ. ರಾಜೇಂದ್ರಚೋಳ ತನ್ನ ವಿಜಯದ ಸಂಕೇತವಾಗಿ ನೊಳಂಬವಾಡಿಯಿಂದ ತೆಗೆದುಕೊಂಡು ಹೋಗಿ ತಂಜಾವೂರಿನ ಬೃಹದೀಶ್ವರ ದೇವಾಲಯದಲ್ಲಿ ಸ್ಥಾಪಿಸಿರುವ ಹಸಿರು ಕಲ್ಲಿನ ಜಾಲಂಧ್ರ - ಇನ್ನೊಂದು ಉತ್ಕೃಷ್ಟ ಕೃತಿ. ನೊಳಂಬರ ಎಲ್ಲಾ ದೇವಾಲಯದಲ್ಲಿಯೂ ಈ ರೀತಿಯ ಜಾಲಂಧ್ರಗಳನ್ನು ಕಾಣಬಹುದು.

ನೊಳಂಬರ ಕಾಲದ ಕಂಬಗಳು ವಾಸ್ತು ಅಂಗಕ್ಕಿಂತ ಹೆಚ್ಚಾಗಿ ಶಿಲ್ಪಕೃತಿಗಳೇ ಆಗಿವೆ. ಸ್ಪಷ್ಟವಾಗಿ ಮತ್ತು ನಾಜೂಕಾಗಿ ಕಡೆಯಲ್ಪಟ್ಟ ಸಂಪೂರ್ಣವಾಗಿ ನೊಳಂಬರ ಶೈಲಿಯದೆಂದೇ ಹೇಳಬಹುದಾದ ಸ್ತಂಭಗಳು ಸಣ್ಣದಾದ ಒಂದು ಅಧಿಷ್ಠಾನ. ಚಚ್ಚೌಕವಾದ ಒಂದೇ ಕಲ್ಲಿನ ಕಂಬ.

ಶಿರ ಮತ್ತು ಬೋದಿಗೆಗಳನ್ನು ಹೊಂದಿರುತ್ತವೆ. ಕಂಬದ ಮಧ್ಯಭಾಗ ನಾಲ್ಕೂ ಮೂಲೆಗಳಲ್ಲಿ ಕಚ್ಚು ಮಾಡಲ್ಪಟ್ಟು ಮಧ್ಯಭಾಗದ ನಾಲ್ಕು ಮುಖಗಳಲ್ಲಿ ಒಂದೊಂದು ಲಂಬಪಟ್ಟಿಯಿರುತ್ತದೆ. ಕಂಬದ ಕೆಳಭಾಗ ಅಲಂಕಾರರಹಿತ. ಮೇಲ್ಭಾಗ ನಾಲ್ಕೂ ಕಡೆಗಳಲ್ಲಿ ಸುಂದರವಾದ ಮತ್ತು ನವಿರಾದ ಉಬ್ಬುಶಿಲ್ಪವನ್ನು ಹೊಂದಿರುತ್ತದೆ. ಪ್ರತಿಯೊಂದು ಮುಖದಲ್ಲಿಯೂ ಅರ್ಧವೃತ್ತಾಕಾರದ ತಿರುಚಿದ ಎರಡೆರಡು ಮುತ್ತಿನ ಮಾಲೆಗಳಿದ್ದು ಇವುಗಳ ಮಧ್ಯಭಾಗದಲ್ಲಿ ಧಾರ್ಮಿಕ, ಲೌಕಿಕ ಮತ್ತು ನೈಸರ್ಗಿಕ ವಿಷಯಗಳು ಶಿಲ್ಪಿತವಾಗಿರುತ್ತವೆ. ಇದರ ಮೇಲ್ಭಾಗದಲ್ಲಿ ಸುಂದರವಾದ ಎಳೆಯು ಬಳ್ಳಿಗಳೂ ಕೀರ್ತಿಮುಖದ ಸಾಲೂ ಇರುತ್ತವೆ. ಅವುಗಳ ಮೇಲ್ಭಾಗದಲ್ಲಿ ಕಂಬವು ದುಂಡಾಗಿದ್ದು ನಾಲ್ಕೂ ಮೂಲೆಗಳಲ್ಲಿ ಒಂದೊಂದು ಸಣ್ಣದಾದ ಕುಳಿತಿರುವ ಸಿಂಹಗಳನ್ನು ಹೊಂದಿರುತ್ತವೆ. ಕಂಬದ ಬೋದಿಗೆಯು ದುಂಡಾಗಿ ಮೆತ್ತೆಯಾಕಾರವಾಗಿದ್ದು, ಕೆಲವು ಸಲ ಬಹಳ ನುಣುಪಾಗಿರುತ್ತದೆ. ರಾಜರಾಜ ಚೋಳನು ನೊಳಂಬವಾಡಿಯಿಂದ ಸಾಗಿಸಿ ತಂಜಾವೂರಿನ ಬಳಿ ಇರುವ ತಿರುವಾಯೂರಿನ ದೇವಾಲಯದಲ್ಲಿ ಸ್ಥಾಪಿಸಿರುವ ನೊಳಂಬರ ಐವತ್ತು ಕಂಬಗಳು ಅವರ ಶೈಲಿಯ ಕಂಬಗಳ ಕಲಾಸೌಂದರ್ಯಕ್ಕೆ ಸಾಕ್ಷಿ.

ನೊಳಂಬರ ಸೂಕ್ಷ್ಮ ಶಿಲ್ಪಕ್ಕೆ ಮತ್ತೊಂದು ನಿದರ್ಶನ ಅವರ ದೇವಾಲಯದ ಬಾಗಿಲುವಾಡಗಳು. ಹೆಚ್ಚಿನಮಟ್ಟಿಗೆ ಬಾದಾಮಿ ಚಳುಕ್ಯರ ದೇವಾಲಯದ ಬಾಗಿಲುಗಳ ಮಾದರಿಯನ್ನು ಹೊಂದಿರುವ ಇವುಗಳು ಚಳುಕ್ಯರ ಮಾದರಿಯವುಗಳಿಗಿಂತ ಸುಂದರವಾಗಿವೆ. ನೊಳಂಬರ ಬಾಗಿಲುವಾಡಗಳ ವಿಶೇಷವೆಂದರೆ ಬಳ್ಳಿಸುರುಳಿಗಳು, ಮುತ್ತಿನ ಹಗ್ಗಗಳು, ನೀಳವಾಗಿರುವ ಅರೆಗಂಬಗಳು, ಯಾಳಿಗಳು, ಚಿತ್ರಪಟ್ಟಿಗಳು ಮತ್ತು ಇವುಗಳನ್ನು ಬೇರ್ಪಡಿಸುವ ಆಳವಾದ ಗಾಡಿಗಳು ಮುಂತಾದವುಗಳ ಅಲಂಕರಣ. ಬಾಗಿಲಿನ ಎರಡೂ ಕಡೆಗಳಲ್ಲಿ ಗಜಾರೂಢರಾದ ಶ್ರೀನಿಧಿ-ಪದ್ಮನಿಧಿಗಳು, ಗಂಗಾ-ಯಮುನಾ ಮತ್ತು ದ್ವಾರಪಾಲಕರು ಇದ್ದು ಬಾಗಿಲುವಾಡದ ಮೇಲ್ಭಾಗದಲ್ಲಿ ಕುಳಿತಿರುವ ಗಜಲಕ್ಷ್ಮಿ ಮತ್ತು ಮಂಗಳ ಚಿಹ್ನೆಗಳು ಇರುತ್ತವೆ. ಬಾಗಿಲಿನ ಮೇಲ್ಭಾಗದಲ್ಲಿ ಇಳಿಜಾರಾದ ಕೂಡುಗಳಿಂದ ಕೂಡಿದ ಕಪೋತ ಮತ್ತು ಅದರ ಮೇಲೆ ಸಣ್ಣ ಸಣ್ಣ ಮಂಟಪಗಳ ಸಾಲಿನಿಂದ ಮಾಡಿದ ಕೈಪಿಡಿಗೋಡೆಗಳಿದ್ದು ಇಡೀ ಬಾಗಿಲುವಾಡವು ಆಕರ್ಷಣೀಯ ಶಿಲ್ಪ ಸಂಯೋಜನೆಯಾಗಿರುತ್ತದೆ. ನುಣುಪಾದ ಮತ್ತು ಮೃದುವಾದ ಕಲ್ಲಿನಿಂದ ಮಾಡಲ್ಪಟ್ಟಿರುವ ಇವು ನೊಳಂಬರ ಸೂಕ್ಷ್ಮಶಿಲ್ಪಕ್ಕೆ ಒಂದು ಉತ್ತಮ ನಿದರ್ಶನವಾಗಿರುವುದೇ ಅಲ್ಲದೆ ದೇವಾಲಯದ ಸೌಂದರ್ಯವನ್ನು ವರ್ಧಿಸುವ ಮುಖ್ಯ ಸಾಧನವಾಗಿವೆ. (ಎಂ.ಎಸ್.ಕೆ.)

**ನೊಳಂಬವಾಡಿ:** ಕರ್ನಾಟಕದ ಪೂರ್ವಭಾಗದಲ್ಲಿದ್ದ ಒಂದು ಪ್ರಾಚೀನ ಪ್ರಾಂತ್ಯ. ಎಂಟನೆಯ ಶತಮಾನದಿಂದ ಸುಮಾರು ಹನ್ನೊಂದನೆಯ ಶತಮಾನದವರೆಗೆ ಈ ಪ್ರಾಂತ್ಯದಲ್ಲಿ ಆಳಿದ ನೊಳಂಬರಿಂದ ನೊಳಂಬವಾಡಿ ಎಂದು ಹೆಸರು ಬಂತು. ಚಿತ್ರದುರ್ಗ ಜಿಲ್ಲೆಯನ್ನು ಕೇಂದ್ರಸ್ಥಾನವಾಗಿ ಹೊಂದಿದ್ದ ನೊಳಂಬಳಿಗೆ ಸಾಸಿರವೆಂಬ ಪ್ರಾಂತ್ಯ ಕಾಲಕ್ರಮೇಣ ವಿಸ್ತರಿಸಲ್ಪಟ್ಟು ಒಂಬತ್ತನೆಯ ಶತಮಾನದ ಆದಿಭಾಗದಲ್ಲಿ ನೊಳಂಬವಾಡಿ 32,000 ಎಂಬ ವಿಸ್ತಾರಪ್ರಾಂತ್ಯವಾಯಿತು. ಇದು ಚಿತ್ರದುರ್ಗ, ತುಮಕೂರು, ಕೋಲಾರ ಮತ್ತು ಆಂಧ್ರ ಪ್ರದೇಶದ ಅನಂತಪುರ ಈ - ಜಿಲ್ಲೆಗಳನ್ನು ಮತ್ತು ಇದಕ್ಕೆ ಸೇರಿಕೊಂಡಂತಿರುವ ಚಿತ್ತೂರು, ಧರ್ಮಪುರಿ, ಬೆಂಗಳೂರು ಮತ್ತು ಬಳ್ಳಾರಿ ಜಿಲ್ಲೆಗಳ ಕೆಲವು ಭಾಗಗಳನ್ನು ಒಳಗೊಂಡಿದ್ದಿತು. ಈ ವಿಶಾಲ ಪ್ರಾಂತ್ಯದ ರಾಜಧಾನಿ, ಅನಂತಪುರ ಜಿಲ್ಲೆಯ ಮಡಕಶಿರಾ ತಾಲ್ಲೂಕಿನ ಹೆಂಜೇರು ಅಥವಾ ಹೇಮಾವತಿ. ಕರ್ನಾಟಕ ಮತ್ತು ತಮಿಳುನಾಡಿನ ಮಧ್ಯದಲ್ಲಿದ್ದ ಈ ಪ್ರಾಂತ್ಯದಲ್ಲಿ ಅನೇಕಾನೇಕ ಕದನಗಳು ನಡೆದವು. ನೊಳಂಬರು, ತಲಕಾಡಿನ, ಗಂಗರು, ರಾಷ್ಟ್ರಕೂಟರು, ಚೋಳರು, ಹೊಯ್ಸಳರು, ಸೇವುಣರು ಮುಂತಾದ ವಿವಿಧ ರಾಜಮನೆತನಗಳು ಈ ಪ್ರಾಂತ್ಯದ ಮೇಲೆ ಇಲ್ಲವೇ ಇದರ ವಿವಿಧ ಭಾಗಗಳ ಮೇಲೆ ಆಳ್ವಿಕೆ ನಡೆಸಿದವು. ಹತ್ತನೆಯ ಶತಮಾನದ ಅಂತ್ಯದಲ್ಲಿ ಮೊದಲನೆಯ ರಾಜರಾಜ ಚೋಳ ನೊಳಂಬವಾಡಿಯ ದಕ್ಷಿಣಭಾಗಗಳನ್ನು ಆಕ್ರಮಿಸಿಕೊಂಡ. ಅನಂತರ ಹೊಯ್ಸಳ ವಿಷ್ಣುವರ್ಧನ ನೊಳಂಬವಾಡಿಯನ್ನು ಆಕ್ರಮಿಸಿಕೊಂಡು ನೊಳಂಬವಾಡಿಗೊಂಡ ಎಂಬ ಬಿರುದನ್ನು ಧರಿಸಿದ.

ತಮಿಳುರಾಜ್ಯಗಳ ಮೇಲೆ ದಂಡಯಾತ್ರೆ ಮಾಡುವುದಕ್ಕೆ ಇದು ಮುಖ್ಯ ದಾರಿಯಾಗಿ ಉತ್ತಮ ಆಯಕಟ್ಟಿನ ಪ್ರದೇಶವಾಗಿದ್ದುದರಿಂದ ಇದರ ಪ್ರಾಮುಖ್ಯ ಹೆಚ್ಚಿತ್ತು. ಅನೇಕ ಅಭೇದ್ಯವಾದ ದುರ್ಗಗಳಿಂದ ಕೂಡಿದ್ದು ಈ ಪ್ರಾಂತ್ಯದ ಹೆಚ್ಚಳಕ್ಕೆ ಕಾರಣವಾಯಿತು. ನಂದಿ, ಮಿಡಿಗೇಶಿ,ಮಡಕಶಿರಾ, ಉಚ್ಚಂಗಿ ಮುಂತಾದ ದುರ್ಗಗಳು ಈ ಪ್ರಾಂತ್ಯದ ಮುಖ್ಯ ಸ್ಥಳಗಳು. ಹೊಯ್ಸಳರು ಮತ್ತು ಸೇವುಣರ ಪತನಾನಂತರ ಈ ಪ್ರಾಂತ್ಯ ತನ್ನ ಪ್ರಾಮುಖ್ಯವನ್ನು ಕಳೆದುಕೊಂಡಿತು. ಅನಂತರದ ಶಾಸನಗಳಲ್ಲಿ ನೊಳಂಬವಾಡಿಯ ಹೆಸರು ಕಾಣಬರುವುದಿಲ್ಲ. (ಎ.ವಿ.ಎನ್.)

**ನ್ಯಾಮತಿ :** ದಾವಣಗೆರೆ ಜಿಲ್ಲೆ ಹೊನ್ನಾಳಿ ತಾಲ್ಲೂಕಿನ ಒಂದು ಗ್ರಾಮ. ಹೊನ್ನಾಳಿ-ಆಯನೂರು ರಸ್ತೆಯಲ್ಲಿ ಹೊನ್ನಾಳಿ ಪಟ್ಟಣದ ನೈಋತ್ಯದಲ್ಲಿ ಸು. 13 ಕಿಮೀ ದೂರದಲ್ಲಿ ತುಂಗಭದ್ರಾನದಿಯ ಎಡದಂಡೆಯ ಮೇಲಿದೆ. ದಿವಾನ್ ಪೂರ್ಣಯ್ಯನವರ ಕಾಲದಲ್ಲಿ ಇದು ಪೇಟೆ ಸ್ಥಳವಾಗಿ ಅಭಿವೃದ್ಧಿಯಾಯಿತು. 1869-82ರ ವರೆಗೆ ಇದೇ ಹೊನ್ನಾಳಿ ತಾಲ್ಲೂಕಿನ ಮುಖ್ಯಸ್ಥಳವಾಗಿತ್ತು. ಈ ಊರು ಮಲೆನಾಡು ಮತ್ತು ಮೈದಾನ ಪ್ರದೇಶಗಳ ಮಧ್ಯಭಾಗದಲ್ಲಿರುವುದರಿಂದ ಒಳ್ಳೆಯ ವ್ಯಾಪಾರಸ್ಥಳವಾಗಿದೆ. ನಗರ ಮತ್ತು ಕೊಪ್ಪದಿಂದ ಬರುವ ಅಡಕೆ ಮತ್ತು ಮಲೆನಾಡು ಪ್ರದೇಶದಿಂದ ಬರುವ ಧಾನ್ಯ, ಬೆಲ್ಲ - ಇವನ್ನು ಶೇಖರಿಸಿ ಇಲ್ಲಿಂದ ಬಳ್ಳಾರಿ, ಧಾರವಾಡ ಮುಂತಾದ ಪಟ್ಟಣಗಳಿಗೆ ಕಳುಹಿಸಲಾಗುತ್ತದೆ. ಅವುಗಳಿಗೆ ಬದಲಾಗಿ ಬಟ್ಟೆ ಮತ್ತಿತರ ವಸ್ತುಗಳನ್ನು ಮಲೆನಾಡು ಪ್ರದೇಶಗಳಿಗೆ ಒದಗಿಸಲಾಗುತ್ತದೆ. ಹತ್ತಿಯ ವ್ಯಾಪಾರ ಉಂಟು. ಶಿವಮೊಗ್ಗ ಹೊನ್ನಾಳಿ ಮಧ್ಯದಲ್ಲಿ ಬರುವ ನ್ಯಾಮತಿಗೆ ಉತ್ತಮ ಮಾರ್ಗಗಳಿದ್ದು ವಾಹನಸೌಲಭ್ಯವಿದೆ. ನ್ಯಾಮತಿಯಲ್ಲಿ ಒಂದು ಜೂನಿಯರ್ ಕಾಲೇಜು ಮತ್ತು ಆರೋಗ್ಯ ಕೇಂದ್ರ ಇವೆ.

ನ್ಯಾಮತಿಯ ಬಳಿಯಲ್ಲಿ ಹಳೆಯ ಶಿಲಾಯುಗದ ಆದಿಭಾಗಕ್ಕೆ ಸೇರಿದ ನೆಲೆಯೊಂದನ್ನು ಗುರುತಿಸಲಾಗಿದೆ. (ಕೆ.ಪಿ.)

**ನ್ಯಾಮತಿ ಪ್ರಭಣ್ಣ:** 20ನೆಯ ಶತಮಾನದ ಆದಿಭಾಗದಲ್ಲಿದ್ದ ಕನ್ನಡ ವಿದ್ವಾಂಸರು. ದಾವಣಗೆರೆ ಜಿಲ್ಲೆಯ ನ್ಯಾಮತಿ ಇವರ ಜನ್ಮಸ್ಥಳ. ಇವರ ಜನನ, ಬಾಲ್ಯ, ವಿದ್ಯಾಭ್ಯಾಸಗಳ ಬಗ್ಗೆ ಹೆಚ್ಚಿನ ವಿಷಯ ತಿಳಿದುಬಂದಿಲ್ಲ. ಇವರು ಪಂಡಿತ ಪರೀಕ್ಷೆ ಪಾಸು ಮಾಡಿ ಮೊದಲಿಗೆ ನ್ಯಾಮತಿಯ ಪ್ರೌಢ ಶಾಲೆಯಲ್ಲಿ ಕನ್ನಡ ಉಪಾಧ್ಯಾಯರಾಗಿದ್ದರು. ಕೆಲವು ಕಾಲ ದಾವಣಗೆರೆಯ ಸರ್ಕಾರಿ ಪ್ರೌಢಶಾಲೆಯಲ್ಲಿ ಕೆಲಸ ಮಾಡಿದರು. ಇವರು ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಘನವಿದ್ವಾಂಸರಾಗಿದ್ದರು. ಇವರ ವಿದ್ವತ್ತನ್ನು ಗಮನಿಸಿದ ಅಂದಿನ ಸರ್ಕಾರ ಇವರನ್ನು ಮೈಸೂರು ಸರ್ಕಾರದ ಭಾಷಾಂತರ ಕಚೇರಿಗೆ ವರ್ಗಾಯಿಸಿತು. ಅನಂತರ ಇವರು ಬೆಂಗಳೂರಿಗೆ ಬಂದು ನೆಲಸಿದರು. ಈ ನಡುವೆ ಇವರು ಕನ್ನಡ-ಕನ್ನಡ ನಿಘಂಟೊಂದನ್ನು ರಚಿಸುವ ಯೋಜನೆ ಹಾಕಿಕೊಂಡಿದ್ದು ಅದರ ಮಹತ್ತ್ವವನ್ನು ಆಗಿನ ವಿದ್ಯಾಧಿಕಾರಿಗಳಾಗಿದ್ದ ಸಿ.ಆರ್.ರೆಡ್ಡಿಯವರಿಗೆ ತಿಳಿಸಿದಾಗ ಅವರು ಪ್ರಭಣ್ಣನವರಿಗೆ ನಿಘಂಟಿನ ರಚನೆಗಾಗಿ ಸರ್ಕಾರದ ವತಿಯಿಂದ ಎಲ್ಲ ನೆರವನ್ನೂ ಕೊಡಿಸಿದರಂತೆ. ಆದರೆ ಈ ನಿಘಂಟು ಪೂರ್ಣಗೊಳ್ಳುವ ಮೊದಲೇ ಪ್ರಭಣ್ಣನವರು ಶಿವೈಕ್ಯರಾದಂತೆಯೂ ನಿಘಂಟಿನ ಉಳಿದ ಭಾಗವನ್ನು ಇವರ ಅಣ್ಣ ಶಾಂತವೀರಪ್ಪನವರು ಮುಗಿಸಿದಂತೆಯೂ ತಿಳಿದುಬರುತ್ತದೆ. ಈ ನಿಘಂಟು ಅಚ್ಚಾಗಿಲ್ಲ. ಪ್ರಭಣ್ಣನವರು ರುಕ್ಮಿಣೀಕಲ್ಯಾಣ ಎಂಬ ನಾಟಕವನ್ನು ಬರೆದಿದ್ದರಂತೆ.

ಪ್ರಭಣ್ಣನವರ ಕನ್ನಡ-ಕನ್ನಡ ನಿಘಂಟು ಕನ್ನಡ ಭಾಷೆಗೊಂದು ಅಪೂರ್ವ ಕೊಡುಗೆ. ಕಿಟ್ಟೆಲ್ ಅವರ ನಿಘಂಟನ್ನುಳಿದರೆ ಮಹತ್ತು ಬೃಹತ್ತುಗಳಲ್ಲಿ ಇದು ಎರಡನೆಯದು. ನಿಘಂಟಿನ ರಚನೆಯನ್ನು ನೋಡಿದರೆ ಪ್ರಭಣ್ಣನವರಿಗಿದ್ದ ಪ್ರತಿಭೆ, ಶಾಸ್ತ್ರೀಯ ದೃಷ್ಟಿ, ಕನ್ನಡ-ಸಂಸ್ಕೃತ ಭಾಷೆಗಳ

ಮೇಲಿನ ಪಾಂಡಿತ್ಯ ವ್ಯಕ್ತವಾಗುತ್ತದೆ. ಈ ನಿಘಂಟಿನಲ್ಲಿ ಕನ್ನಡ ಶಬ್ದಗಳಿಗೆ ಮಾತ್ರ ಅರ್ಥವನ್ನು ಕೊಡಲಾಗಿದೆ. ಆಡುಮಾತುಗಳನ್ನು ಆಯ್ದು ಅವುಗಳ ರೂಪನಿಷ್ಪತ್ತಿಯನ್ನೂ ಕೊಟ್ಟಿದೆ. ಹಲವಾರು ಹಳಗನ್ನಡ ಕಾವ್ಯಗಳಿಂದ ಶಬ್ದಗಳನ್ನು ಸಂಗ್ರಹಿಸಿ, ಅವುಗಳನ್ನು ಅಕಾರಾದಿಯಾಗಿ ವಿಂಗಡಿಸಿ, ಪ್ರತಿಯೊಂದು ಶಬ್ದದ ಅರ್ಥ/ಅರ್ಥಚ್ಛಾಯೆಯನ್ನು ವಿವರಿಸಿ ಅವುಗಳ ಸಮರ್ಥನೆಗಾಗಿ ಪ್ರಯೋಗಗಳನ್ನು ಕೊಟ್ಟಿದೆ. ಒಂದು ಶಬ್ದದ ಅರ್ಥಚ್ಛಾಯೆಗಳನ್ನು ನಿಷ್ಕರ್ಷಿಸಿರುವಲ್ಲಿ ಮೊದಲು ಶಬ್ದವನ್ನು ಅನಂತರ ಆ ಶಬ್ದದ ವಾಚಕವನ್ನು ತರುವಾಯ ಅದರ ಅರ್ಥಚ್ಛಾಯೆಗಳನ್ನು ಕ್ರಮವಾಗಿ ಕೊಟ್ಟು ಅನಂತರ ಪ್ರತಿಯೊಂದು ಅರ್ಥಕ್ಕೂ ಪ್ರಾಚೀನ ಕಾವ್ಯಗಳಿಂದ ಪ್ರಯೋಗಗಳನ್ನು ಉದ್ಧರಿಸಿದೆ. ಉದಾಹರಣೆಗಾಗಿ ನಿಘಂಟಿನ ಒಂದು ಪ್ರಯೋಗವನ್ನು ನೋಡಬಹುದು:

ಅಚ್ಚಿಗ. (ನಾ), 1 ದಡ್ಡತನ: ಕಾವ್ಯಜ್ಞರಿಂ, ಕಲ್ಲದಚ್ಚಿಗದಿಂ ಕಟ್ಟಿದ ಕನ್ನಡದ ಪಾಟ್ಟಿಬ್ಬ (ಅರ್ಧನೇಮಿಪುರಾಣ, 1-35) 2 ಭ್ರಾಂತಿ; ಮಾಯೆ; ಮೋಹ. ಏನೊಂದುಮಿಲ್ಲದಚ್ಚಿಗವೊಂದುಂಟು ತೊಡರ್ವೆವೆ (ಆದಿಪುರಾಣ, 6-26). 3. ಚೌತ್ಸುಕ; ಕುತೂಹಲ; ಸಂತೋಷ, ಅಚ್ಚಿಗಂ ಪೊಗಲ್ಬುದೆ (ರಾಜಶೇಖರ ವಿಲಾಸ (14-94), 4. ಸಂತಾಪ; ಮನೋವ್ಯಾಕುಲ, ಸುಯ್ದು ಬೆಂಕಿಯೊಳೆ ಬೆಂದವುದೆಂಬಿನಂ ಆಗಳಾಕೆಗಾದಚ್ಚಿಗಮಂತೆನಲ್(ಲೀಲಾವತಿ, 10-67) 5. ನೆವ, ವ್ಯಾಜ. ಪೂದಿಱಿವಚ್ಚಿಗದಿಂ ಸ್ಮರಕೇಳಿಗೆಳಸಿದರ್ (ಲೀಲಾವತಿ, 13-107), 6. ಕಷ್ಟದೆಸೆ ದುರವಸ್ಥೆ. ಹೆಚ್ಚಿದಡವಿಯೊಳ್ಬರ್ಪನೇ ಶಿವನಚ್ಚಿಗದೊಳಿರ್ದಪನಕಟಕಟ (ಬಸವಪುರಾಣ, 16-2), 7. ಆಯಾಸ, ನಿಚ್ಚವಗಣದಿಂದಚ್ಚಿಗಂ ಸಮನಿಸಿದಂತೆ (ಶಾಂತಿಪುರಾಣ, 12-12) 8. ಕೇಡು; ಸಂಕಟ. ಬಂದದೆತ್ತಣಚ್ಚಿಗಮೆಮಗೆಂದು ಬಾಯಬಿಟ್ಟುಭೀರುಗಳ (ಚಂದ್ರಪ್ರಭಪುರಾಣ, 9-85) 9. ಕ್ರೋಧ; ಈರ್ಷೆ; ಮತ್ಸರ ಏನಗಾಱುಗಮುಂಮಱಿಪೊಡೊತ್ತಿಮುಱಿಜಾಣಾ (ಅರ್ಧನೇಮಿಪುರಾಣ, 8-57) 10. ಒತ್ತುವಣೆ; ಬಲಾತ್ಕಾರ, ತಾನೇ ತೊಲಗಿಸಿದಪುದೆಮ್ಮಚ್ಚಿಗಮದೇಕೆ (ಅರ್ಧನೇಮಿಪುರಾಣ, 8-821) 11. ದಿಗ್ಭ್ರಮೆ; ಸೋಜಿಗ; ವಿಸ್ಮಯ, ನಿಚ್ಚಗಾಳೆಗದೊಳಚ್ಚಿಗಂಗೊಳಿಸಿ (ಅಜಿತ ಪುರಾಣ,9-34) 12. ಭಯ; ಗಾಬರಿ, ಅಚ್ಚಿಗದೊಳೆ ಪುಯ್ಯಲಿಪಂತೆ (ಆದಿಪುರಾಣ, 12-76) 13. ಸೌಂದರ್ಯ; ಒಪ್ಪಿಡಿನಡುವಿನಚ್ಚಿಗದ, ಬಾಲೆಯರ್ ಸೊಬಗು (ಜೈಮಿನಿಭಾರತ,20-2) 14. ರೂಪ; ಆಕಾರ, ಅಚ್ಚಿಯೊಳಚ್ಚಿಗ ಪೊಂದಿರಲಚ್ಚೊತ್ತಿದಂತೆ ಅದೆ (ಚಿಕ್ಕದೇವರಾಜವಿಜಯ 6-182) 15. ಅರ್ಚಕ (ತದ್ಭವ) (ಆರ್.ಎಸ್.ವಿ.)

**ನ್ಯಾಮತಿಲಕ್ಷ್ಮೀನರಸಿಂಹ :** 19ನೆಯ ಶತಮಾನದ (ಸು. 1860) ಒಬ್ಬ ಕವಿ. ವೈಷ್ಣವ ಬ್ರಾಹ್ಮಣ, ಕೌಂಡಿಣ್ಯ ಗೋತ್ರದವ, ಸ್ಥಳ ನ್ಯಾಮತಿ. ತಲ್ಪಗಿರಿರಂಗ ವಿಠಲನ ಪರಮ ಭಕ್ತ. ತಂದೆ ತಾಯಿಯರು ಸುಬ್ಬಣ್ಣ, ಲಕ್ಷ್ಮೀವಾಂಬೆ, ರಾಮಕಥಾರಂಜನವೆಂಬುದು ಈತನ ಏಕೈಕ ಕೃತಿ. ವೃತ್ತ, ಗೀತಿಕೆ, ಸೀಸಪದ್ಯ., ಕಂದ - ಹೀಗೆ ವಿವಿಧ ಛಂದಸ್ಸಿನಲ್ಲಿರುವ ಈ ಗ್ರಂಥದಲ್ಲಿ 68 ಸರ್ಗಗಳಿವೆ. ಹನುಮಂತನ ಸೀತಾನ್ವೇಷಣ ಕಾರ್ಯ ಕೃತಿಯ ವಸ್ತು. ಹನುಮಂತನ ಶ್ರೀರಾಮ ಭಕ್ತಿಯನ್ನು ಹೆಚ್ಚು ರಸವತ್ತಾಗಿ ಚಿತ್ರಿಸಲಾಗಿದೆ. ಕನ್ನಡ ಕವಿತೆಯಾದರೂ ತೆಲುಗಿನ ವಾಸನೆ ಛಾಯೆ ಕಾಣುತ್ತದೆ ಎಂದು ಗ್ರಂಥ'ದ ಬಗ್ಗೆ ಕರ್ನಾಟಕ ಕವಿಚರಿತಕಾರರು ಅಭಿಪ್ರಾಯಪಟ್ಟಿದ್ದಾರೆ. *

**ನ್ಯಾಯಾಲಯಗಳು:** ಸಂಸದೀಯ ಪ್ರಜಾಸತ್ತೆಗೆ ಅನುಗುಣವಾಗಿ ರಾಜ್ಯಾಂಗದ 214ನೆಯ ಅನುಚ್ಛೇದದ ಪ್ರಕಾರ ಕರ್ನಾಟಕದಲ್ಲಿ ಇತರ ರಾಜ್ಯಗಳಂತೆಯೇ ನ್ಯಾಯವ್ಯವಸ್ಥೆ ಇದೆ. ಇಡೀ ರಾಜ್ಯವ್ಯಾಪ್ತಿಯುಳ್ಳ ಉಚ್ಚನ್ಯಾಯಾಲಯ ಕರ್ನಾಟಕದ ರಾಜಧಾನಿ ಬೆಂಗಳೂರಿನಲ್ಲಿದೆ. ಇದು ಭಾರತ ಒಕ್ಕೂಟದ ಏಕಾತ್ಮಕ ನ್ಯಾಯಾಂಗ ವ್ಯವಸ್ಥೆಗೆ ಒಳಪಟ್ಟಿರುವುದರಿಂದ ಭಾರತದ ಅಧ್ಯಕ್ಷರ ಮತ್ತು ಉಚ್ಚತಮ ನ್ಯಾಯಾಲಯದ ಹತೋಟಿಗೆ ಸೇರಿದೆ. ರಾಜ್ಯಪಾಲರೊಡನೆ ಸಮಾಲೋಚಿಸಿ ರಾಷ್ಟ್ರಾಧ್ಯಕ್ಷರು ಈ ನ್ಯಾಯಾಲಯದ ನ್ಯಾಯಾಧೀಶರ ಸಂಖ್ಯೆಯನ್ನು ನಿರ್ಧರಿಸಿ ಅದರಂತೆ ನೇಮಕ ಮಾಡುತ್ತಾರೆ. ಹೀಗೆ ಒಮ್ಮೆ ನೇಮಿಸಿದ ನ್ಯಾಯಾಧೀಶರು ತಮ್ಮ 62ನೆಯ ವಯಸ್ಸಿನ ವರೆಗೆ ಸೇವೆ ಸಲ್ಲಿಸುವರು. ಇವರನ್ನು ಸಂಸತ್ತಿನ ಎರಡೂ ಸದನಗಳ ಒಪ್ಪಿಗೆ ಇಲ್ಲದೆ ಕೆಲಸದಿಂದ ತೆಗೆಯುವಂತಿಲ್ಲ. ಈ ನ್ಯಾಯಾಲಯ ತನ್ನ ನಿಯಮಗಳಿಗೆ ಅನುಸಾರವಾಗಿ ಬರುವ ಮತ್ತು ಕೆಳನ್ಯಾಯಾಲಯಗಳ ಮೂಲಕ ಬಂದ ಮೊಕದ್ದಮೆಗಳೆರಡನ್ನೂ ವಿಚಾರಮಾಡಿ ತೀರ್ಪುನೀಡುತ್ತದೆ. ರಾಜ್ಯದ ಇತರ ಎಲ್ಲಾ ನ್ಯಾಯಾಲಯಗಳ ಮೇಲ್ವಿಚಾರಣೆ, ಕೋರ್ಟಿನ ಅಧಿಕಾರಗಳನ್ನೂ ಸೇವಕರನ್ನೂ ನೇಮಿಸುವುದು ಮತ್ತು ನಿಯಂತ್ರಿಸುವುದು ಮತ್ತು ಕೆಳನ್ಯಾಯಾಲಯಗಳಿಂದ ಮೊಕದ್ದಮೆಗಳನ್ನು ತನ್ನ ವಿಚಾರಣೆಗೆ ತೆಗೆದುಕೊಳ್ಳುವುದು ಈ ಹಕ್ಕುಗಳನ್ನು ಪಡೆದಿದೆ. ಜಿಲ್ಲಾ, ತಾಲ್ಲೂಕು ಮತ್ತು ಎಲ್ಲಾ ಕೆಳದರ್ಜೆ ನ್ಯಾಯಾಲಯಗಳಿಗೆ ರಾಜ್ಯಪಾಲರು ಮುಖ್ಯ ನ್ಯಾಯಾಧೀಶರೊಡನೆ ಸಮಾಲೋಚಿಸಿ ನೇಮಕ ಮಾಡುತ್ತಾರೆ. ಜಿಲ್ಲಾ, ತಾಲ್ಲೂಕು ಮಟ್ಟಗಳಲ್ಲಿ ಸಿವಿಲ್ ಮತ್ತು ಕ್ರಿಮಿನಲ್ ನ್ಯಾಯಾಲಯಗಳಿವೆ. ಎಲ್ಲಾ ನ್ಯಾಯಾಲಯಗಳು ಪ್ರಾದೇಶಿಕ ವ್ಯಾಪ್ತಿ ರೆವೆನ್ಯೂ ಆಡಳಿತ ಘಟಕಗಳಿಗೆ ಹೊಂದಿಕೊಂಡಂತೆ ಇರುತ್ತದೆ. ಜಿಲ್ಲಾ ನ್ಯಾಯಾಧೀಶರನ್ನೂ ಮತ್ತು ಸಿವಿಲ್ ಜಡ್ಜರನ್ನೂ ಬಿಟ್ಟು ಇತರ ಎಲ್ಲಾ ಕೆಳದರ್ಜೆ ನ್ಯಾಯಾಲಯಗಳ ನ್ಯಾಯಾಧೀಶರನ್ನು ಲೋಕಸೇವಾ ಆಯೋಗ ಉಚ್ಚ ನ್ಯಾಯಾಲಯದ ಆದೇಶದ ಮೇಲೆ ನೇಮಿಸುತ್ತದೆ. ಕೆಳನ್ಯಾಯಾಲಯಗಳ ಕಾರ್ಯವ್ಯಾಪ್ತಿಯನ್ನು ಉಚ್ಚ ನ್ಯಾಯಾಲಯ ನಿರ್ಧರಿಸುವುದು. ಇತರ ಮೊಕದ್ದಮೆಗಳ ಜೊತೆಗೆ ರಾಜ್ಯದ ಅನೇಕ ಕಾಯಿದೆಗಳು ಈ ನ್ಯಾಯಾಲಯ ವ್ಯಾಪ್ತಿಗೆ ನ್ಯಾಯ ವಿತರಣೆಗೆ ಒಳಪಟ್ಟಿರುತ್ತವೆ. ನ್ಯಾಯಪರಿಪಾಲನೆಯ ಹೊಣೆಯನ್ನು ನಿರ್ವಹಿಸುತ್ತಿರುವ ಅಧೀನ ನ್ಯಾಯಾಲಯಗಳು ಈ ರೀತಿ ಇವೆ:

1. ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ನ್ಯಾಯಾಲಯಗಳು (ಜಿಲ್ಲೆಗೆ ಒಂದು). 2. ಚೀಫ್ ಜುಡಿಷಿಯಲ್ ಮ್ಯಾಜಿಸ್ಟ್ರೇಟರ್ ನ್ಯಾಯಾಲಯಗಳು (ಜಿಲ್ಲೆಗೆ ಒಂದು). 3. ಬೆಂಗಳೂರು ನಗರದಲ್ಲಿ ಮೆಟ್ರೊಪಾಲಿಟನ್ ಮತ್ತು ಚೀಫ್ ಮೆಟ್ರೊಪಾಲಿಟನ್ ನ್ಯಾಯಾಲಯಗಳು, 4. ಸಿವಿಲ್ ನ್ಯಾಯಾಧೀಶರ ನ್ಯಾಯಾಲಯಗಳು (ಜಿಲ್ಲೆಗೆ ಒಂದು). 5. ಲಘುವಾದ ನ್ಯಾಯಾಲಯಗಳು, 6. ಮುನ್ಸೀಫರ ನ್ಯಾಯಾಲಯಗಳು 7. ಮುನ್ಸೀಫರ ಮತ್ತು ಜುಡಿಷಿಯಲ್ ಮ್ಯಾಜಿಸ್ಟ್ರೇಟರ ನ್ಯಾಯಾಲಯಗಳು (ತಾಲ್ಲೂಕು ಮಟ್ಟದಲ್ಲಿ) 8. ಜುಡಿಷಿಯಲ್ ಮ್ಯಾಜಿಸ್ಟ್ರೇಟರ ನ್ಯಾಯಾಲಯಗಳು. ಇದಲ್ಲದೆ, ವ್ಯಾಜ್ಯ ಸಂಖ್ಯೆಯನ್ನು ಗಮನಿಸಿ ಅಲ್ಲಲ್ಲಿ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯಗಳನ್ನು ಸ್ಥಾಪಿಸುವ ಏರ್ಪಾಡೂ ಇದೆ. ಈ ರೀತಿ ಬೆಂಗಳೂರು ನಗರದಲ್ಲಿ ಉದ್ಭವವಾಗುವ ಅಧಿಕ ಸಿವಿಲ್ ವ್ಯಾಜ್ಯಗಳನ್ನು ಗಮನಿಸಿ ಹೆಚ್ಚುವರಿ ಸಿವಿಲ್ ನ್ಯಾಯಾಲಯಗಳನ್ನು ಸ್ಥಾಪಿಸಲಾಗಿದೆ. ಇದೇ ರೀತಿ ಹೆಚ್ಚುವರಿ ಸೆಷನ್ಸ್ ನ್ಯಾಯಧೀಶರ ನ್ಯಾಯಾಲಯಗಳು ವಿವಿಧ ಜಿಲ್ಲೆಗಳಲ್ಲಿವೆ.

ಬೆಂಗಳೂರು ಮೆಟ್ರೊಪಾಲಿಟನ್ ಮ್ಯಾಜಿಸ್ಟ್ರೇಟರುಗಳ ನ್ಯಾಯಾಲಯಗಳು ಕ್ರಿಮಿನಲ್ ಅಧಿಕಾರವ್ಯಾಪ್ತಿಯುಳ್ಳ ನ್ಯಾಯಾಲಯಗಳಾಗಿವೆ.

ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯವು ಮುಖ್ಯತಃ ಅಪೀಲು ನ್ಯಾಯಾಲಯವಾಗಿದೆ. ಆದರೆ ಮರಣದಂಡನೆ ಮೊದಲಾದ ಘೋರಶಿಕ್ಷೆಗಳನ್ನು ವಿಧಿಸಬೇಕಾಗುವ ಪ್ರಕರಣದಲ್ಲಿ ಅದಕ್ಕೆ ಮೂಲ ಅಧಿಕಾರ ವ್ಯಾಪ್ತಿಯುಂಟು. ಇದಕ್ಕಿಂತ ಕೆಳಗಿನ ನ್ಯಾಯಾಲಯಗಳಿಗೆ ಅಪೀಲು ಅಧಿಕಾರವ್ಯಾಪ್ತಿಯಿಲ್ಲ. ಅಪರಾಧಸಂಜ್ಞಾನ ಮತ್ತು ದಾವೆಯ ಆರ್ಥಿಕ ಮೌಲ್ಯ ಇವುಗಳ ವೈವಿಧ್ಯಕ್ಕನುಗುಣವಾಗಿ ಅಧಿಕಾರವ್ಯಾಪ್ತಿಯಲ್ಲಿಯೂ ವ್ಯತ್ಯಾಸಗಳಿವೆ. ಸಾಮಾನ್ಯವಾಗಿ ಎಲ್ಲ ನ್ಯಾಯಾಲಯಗಳಲ್ಲಿ ನಾಜರ್, ಶಿರಸ್ತೇದಾರ, ಬೇಲಿಫ್ ಮೊದಲಾದ ಸಹಾಯಕ ಅಧಿಕಾರಿಗಳು ಇರುವರು. ಅಭಿಯೋಗ ನಡೆಸಲು ಮತ್ತು ಆರೋಪ ಪತ್ರಗಳನ್ನು ತಯಾರಿಸಲು ಆವಶ್ಯಕ ಸಹಾಯ ನೀಡುವುದಕ್ಕಾಗಿ ಅಭಿಯೋಗ ನಿರ್ದೇಶನಾಲಯವನ್ನೂ ರಚಿಸಲಾಗಿದೆ. ಉತ್ತರ ಕರ್ನಾಟಕ ಭಾಗಕ್ಕೆ ಒಂದು ಪ್ರತ್ಯೇಕ ಉಚ್ಚನ್ಯಾಯಾಲಯ ಪೀಠವನ್ನು ಸ್ಥಾಪಿಸುವ ಬಗ್ಗೆ ಪ್ರಗತಿ ಸಾಧಿಸಿದ್ದು ಶೀಘ್ರವೇ ಅದು ಈಡೇರುವ ಹಂತದಲ್ಲಿದೆ.

ಈ ಸಾಂಪ್ರದಾಯಿಕ ನ್ಯಾಯ ವಿತರಣ ವ್ಯವಸ್ಥೆಯ ಜೊತೆಗೆ

ಇತರ ನ್ಯಾಯಾಧಿಕಾರ ಪಡೆದ ಅಂಗಗಳೂ ನ್ಯಾಯವಿತರಣೆಯಲ್ಲಿ ನಿರತವಾಗಿವೆ. ಭೂಸುಧಾರಣೆ ಸಂಬಂಧವಾದ ವಿವಾದಗಳು ಮತ್ತು ತಕರಾರುಗಳನ್ನು ಪರಿಶೀಲಿಸಲು ಭೂನ್ಯಾಯಾಧಿಕರಣವಿದೆ. ಕಾರ್ಮಿಕರ ಕುಂದುಕೊರತೆಗಳು ಅಥವಾ ವಿವಾದಗಳನ್ನು ಬಗೆಹರಿಸಲು ಕಾರ್ಮಿಕ ನ್ಯಾಯಾಲಯಗಳಿವೆ. ಶ್ರೀಸಾಮಾನ್ಯರಿಗೆ ನ್ಯಾಯಾವಾದಿಗಳು ಸುಲಭವಾಗಿ ಲಭ್ಯವಾಗಲು ಉಚಿತ ಕಾನೂನು ಸೇವೆಯನ್ನು ಸರ್ಕಾರ ಒದಗಿಸಿದೆ. 1986ರಲ್ಲಿ ಲೋಕಾಯುಕ್ತ ಎಂಬ ಜಾಗೃತ ಆಯೋಗವನ್ನು ಸ್ಥಾಪಿಸಲಾಯಿತು. ಸರ್ಕಾರಿ ನೌಕರರ ಭ್ರಷ್ಟಾಚಾರಗಳನ್ನು ಪರಿಶೀಲಿಸಿ ಸರ್ಕಾರಕ್ಕೆ ಮುಂದಿನ ಕ್ರಮಕೈಗೊಳ್ಳಲು ಶಿಫಾರಸು ಮಾಡಿ ವರದಿ ನೀಡುವ ಅಧಿಕಾರವನ್ನು ಇದು ಹೊಂದಿದೆ.

1974ರ ನವೆಂಬರ್ 1ರಿಂದ ಜುಡಿಷಿಯಲ್ ಮ್ಯಾಜಿಸ್ಟ್ರೇಟರ ನ್ಯಾಯಾಲಯ ಮಟ್ಟದಲ್ಲಿ ಕನ್ನಡವೂ ನ್ಯಾಯಾಲಯದ ಅಧಿಕೃತ ಭಾಷೆಯೆಂಬುದಾಗಿ ಸರ್ಕಾರ ಘೋಷಿಸಿದೆ. ಇದಲ್ಲದೆ, ರಾಜ್ಯದಲ್ಲಿ ಕಾರ್ಮಿಕ ನ್ಯಾಯಾಲಯಗಳೂ ಮಾರಾಟಕರ ಮತ್ತು ರಾಜಸ್ವ ಅಪೀಲು ನ್ಯಾಯಾಧಿಕರಣಗಳೂ ತಮ್ಮ ತಮ್ಮ ಕ್ಷೇತ್ರದಲ್ಲಿ ನ್ಯಾಯಾಂಗದ ಕಾರ್ಯವನ್ನು ನಿರ್ವಹಿಸುತ್ತವೆ.

ಕರ್ನಾಟಕದ ನ್ಯಾಯ ಪರಿಪಾಲನೆಯ ಇತಿಹಾಸ ಪ್ರಾಚೀನವಾದುದು. ರಾಜರು, ಮಹಾಮಂಡಲೇಶ್ವರರು, ಪಾಳೆಯಗಾರರು, ಊರ ಗೌಡ ಮೊದಲಾದವರು ಅನೂಚಾನವಾದ ನ್ಯಾಯವ್ಯವಸ್ಥೆಯನ್ನು ಧರ್ಮದ ಚೌಕಟ್ಟಿನೊಳಗೇ ಅನುಸರಿಸಿಕೊಂಡು ಬಂದರು ಎನ್ನಬಹುದು. ಪಂಚಾಯತಿ ಮಾಡುವವರು ಭಟ್ಟರು, ನ್ಯಾಯನಿರ್ಣಯ ಮಾಡುವವರು ಪಂಡಿತರು, ರಕ್ಷೆ ಶಿಕ್ಷೆ ನೋಡಿಕೊಳ್ಳುವವರು ಪಕ್ಷನಾಥರು ಎಂಬ ಕದಂಬರ ಕಾಲದ ತೌಳವನಾಡಿನ ಪ್ರಾಚೀನ ಗ್ರಾಮಪದ್ಧತಿಯ ಮಾತು ಗಮನಾರ್ಹವಾಗಿದೆ. ಕದಂಬರ ಕಾಲದ ಧರ್ಮಕರಣಿಕರು, ಗಂಗರಕಾಲದ ರಾಜಾಧ್ಯಕ್ಷರು ಮತ್ತು ಧರ್ಮಾಧ್ಯಕ್ಷರು ನ್ಯಾಯಶುದ್ಧಿಯನ್ನು ಕಾಪಾಡುತ್ತಿದ್ದರು. ಮಹಾದಂಡನಾಯಕರೂ ನಾಡೊಡೆಯರೂ ದ್ರೋಹಘರಟ್ಟಗಳೆಂದು ಪ್ರಸಿದ್ಧರಾಗಿದ್ದಾರೆ. ಪಂಚನಿರ್ಣಯ ಪದ್ಧತಿಯೂ ಪ್ರಾಚುರ್ಯ ಪಡೆದಿತ್ತು. ಈ ಕಾಲದಲ್ಲಿ ಸಮತೋಲದಿವ್ಯ, ಅಗ್ನಿದಿವ್ಯ, ಜಲದಿವ್ಯ, ವಿಷದಿವ್ಯ ಮತ್ತು ತಂಡುಲದಿವ್ಯಗಳು ನ್ಯಾಯಾಸ್ಥಾನದ ಪ್ರಮಾಣಸಾಧನಗಳಾಗಿದ್ದುವು.

ಬೆಳೆದುಬಂದ ರೂಢಿಸಂಪ್ರದಾಯಗಳನ್ನು ಸಮರ್ಥಿಸುತ್ತ ಪ್ರಾಚೀನ ಧರ್ಮಶಾಸ್ತ್ರಗಳಿಗೆ ಅಪೂರ್ವ ವ್ಯಾಖ್ಯಾನ ರೂಪವಾಗಿ ವಿಜ್ಞಾನೇಶ್ವರನ 'ಮಿತಾಕ್ಷರ' ನ್ಯಾಯಾಸ್ಥಾನಗಳ ಕೈಪಿಡಿಯಂತಿತ್ತು.

ಚಾಳುಕ್ಯ ಮತ್ತು ಹೊಯ್ಸಳರಸರ ಕಾಲದಲ್ಲಿ ವ್ಯಾವಹಾರಿಕ ಮತ್ತು ಅಪರಾಧಿಕ ಎಂಬ ವಿಭಜನೆಯಾಗಿ ನ್ಯಾಯತೀರ್ಮಾನದ ವ್ಯವಸ್ಥೆ ಉತ್ತಮಗೊಂಡಿತ್ತು. ಸಮಸ್ತ ಸಾಮ್ರಾಜ್ಯದ ಸಮಗ್ರ ದಂಡಾಚರಣೆಗೆ ಮಂಡಲಾಧಿಪತಿಗಳೂ ಹೆಗ್ಗಡೆಗಳೂ ನಿಯುಕ್ತರಾಗಿದ್ದರು. ವಿಜಯನಗರದ ಕಾಲದಲ್ಲಿ ವಿವೇಕಿಗಳೂ ಸಭ್ಯರೂ ಇರುವ ವರಿಷ್ಠ ನ್ಯಾಯಾಲಯಗಳು ರೂಪತಾಳಿದವು. ರಾಜರುಗಳೂ ನ್ಯಾಯದಾನ ಮಾಡುತ್ತಿದ್ದ ನಿದರ್ಶನಗಳು ಶಾಸನೋಕ್ತವಾಗಿವೆ.

ಮೈಸೂರು ಒಡೆಯರ ರಾಜ್ಯಭಾರದ ಕಾಲದಲ್ಲಿಯೂ ಶಾಸ್ತ್ರಸಮ್ಮತವಾಗಿಯೇ ನ್ಯಾಯಪರಿಪಾಲನೆ ನಡೆಯಿತು. ದೂರುಗಳು ಬಂದಾಗ ಒಡೆಯರೇ ಸ್ವತಃ ಪ್ರವಾಸ ಮಾಡಿ ಆಯಾ ಸ್ಥಳದಲ್ಲಿಯೇ ನ್ಯಾಯ ತೀರ್ಮಾನ ಮಾಡಿದ್ದುಂಟು. ಗ್ರಾಮಗಳಲ್ಲಿ ಗ್ರಾಮಪಂಚಾಯತಿಗಳು ನ್ಯಾಯ ತೀರ್ಮಾನ ಮಾಡುತ್ತಿದ್ದು ಸ್ಥಳೀಯ ಸಮಸ್ಯೆಗಳಿಗೆ ಪರಿಹಾರ ಅಲ್ಲೇ ದೊರಕುತ್ತಿತ್ತು. ಸುಮಾರು ನಾನೂರು ವರ್ಷಗಳು ಇಸ್ಲಾಮೀಯ ಆಳ್ವಿಕೆಯ ಕಾಲದಲ್ಲಿ ಮುಗಲ ರೀತಿಯ ಅದಾಲತ್ತು ಪದ್ಧತಿಯೂ ಪ್ರಚಲಿತವಾಗಿತ್ತು. ಮುಂದೆ ನ್ಯಾಯಪಾರಮ್ಯದ ತತ್ತ್ವಕ್ಕೆ ದಿನೇ ದಿನೇ ಮಹತ್ತ್ವ ಹೆಚ್ಚಿ. ನ್ಯಾಯಾಂಗವು ಶಾಸಕಾಂಗ ಮತ್ತು ಕಾರ್ಯಾಂಗದಿಂದ ಬೇರ್ಪಡುವ ಏರ್ಪಾಡುಗಳೂ ಜಾರಿಗೆ ಬಂದುವು.

ಮೈಸೂರು ಸಂಸ್ಥಾನ ಕೆಲವು ಕಾಲ ಕಮಿಷನರ ಆಳ್ವಿಕೆಗೆ ಒಳಪಟ್ಟಾಗ ಇಲ್ಲಿಯೂ ನ್ಯಾಯವ್ಯವಸ್ಥೆಯಲ್ಲಿ ಅನೇಕ ಬದಲಾವಣೆಗಳಾದುವು. 85 ತಾಲ್ಲೂಕು ಕೋರ್ಟುಗಳು, 8 ಮುಖ್ಯ ಸದರ್ ಮುನ್ಸೀಫ್ ಕೋರ್ಟುಗಳು, 4 ಸೂಪರಿಂಟೆಂಡೆಂಟ್ ಕೋರ್ಟುಗಳು ಮತ್ತು ಮೂವರು ನ್ಯಾಯಾಧೀಶರಿಂದ ಕೂಡಿದ ಒಂದು ಹುಜೂರ್ ಅದಾಲತ್ತು ಸ್ಥಾಪಿತವಾದುವು. ಒಂದು ಕಮಿಷನರ ಕೋರ್ಟೂ ರಚಿತವಾಯಿತು.

1855-56ರಲ್ಲಿ ಲಾರ್ಡ್ ಡಾಲ್‌ಹೌಸಿಯ ಭೇಟಿಯ ಪರಿಣಾಮವಾಗಿ ಮೈಸೂರು ಪ್ರದೇಶದಲ್ಲಿ ಒಬ್ಬ ಚೀಫ್ ಜುಡಿಷಿಯಲ್ ಕಮಿಷನರ್ ನಿಯುಕ್ತನಾದ. ಕ್ರಿಮಿನಲ್ ಮತ್ತು ಸಿವಿಲ್ ಪ್ರಕರಣಗಳಲ್ಲಿ ಪಂಚಾಯತಿಯ ಸಹಾಯ ಪಡೆದುಕೊಳ್ಳಲಾಗುತ್ತಿತ್ತು. ಕ್ರಮೇಣ ಪ್ರತಿ ಜಿಲ್ಲೆಗೊಬ್ಬರಂತೆ ನ್ಯಾಯಾಂಗ ಸಹಾಯಕರೂ ನಿಯುಕ್ತರಾದರು. 1884ರಲ್ಲಿ ಮೈಸೂರು ರಾಜ್ಯದಲ್ಲಿ ಒಂದು ಚೀಫ್ ಕೋರ್ಟು ಸ್ಥಾಪಿತವಾಗಿತ್ತು. ಅದನ್ನೇ ಮಹಾರಾಜರ ಆಡಳಿತ ಕಾಲದಲ್ಲಿ 1930ರಲ್ಲಿ ಮೈಸೂರಿನ ಉಚ್ಚನ್ಯಾಯಾಲಯವೆಂದು ಹೆಸರಿಸಲಾಯಿತು. ಕೊಡಗಿನ ಮೇಲಿದ್ದ ಮದರಾಸು ನ್ಯಾಯಾಲಯದ ಅಧಿಕಾರ ವ್ಯಾಪ್ತಿ ಕೊನೆಗೊಂಡು, ಕೊಡಗು ಪ್ರದೇಶವು 1953ರಿಂದ ಮೈಸೂರು ಉಚ್ಚನ್ಯಾಯಾಲಯದ ಅಧಿಕಾರವ್ಯಾಪ್ತಿಗೆ ಒಳಪಟ್ಟಿತು. ಹೈದರಾಬಾದು, ಮುಂಬಯಿ, ಮದರಾಸು ಕನ್ನಡ ಪ್ರದೇಶಗಳಲ್ಲಿ ಮುನ್ಸೀಫ್, ಜುಡಿಷಿಯಲ್ ಮ್ಯಾಜಿಸ್ಟ್ರೇಟ್, ಸಿವಿಲ್ ಹಾಗೂ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ಅಧೀನ ನ್ಯಾಯಾಲಯಗಳಿದ್ದುವು. 1950ರಲ್ಲಿ ಸಂವಿಧಾನವು ಜಾರಿಗೆ ಬಂದು ಇಡೀ ಭಾರತಕ್ಕೊಂದು ಸರ್ವೋಚ್ಚ ನ್ಯಾಯಾಲಯವೂ ಪ್ರತಿ ರಾಜ್ಯದಲ್ಲೂ ಈಗ ಇರುವ ನ್ಯಾಯಾಂಗ ವ್ಯವಸ್ಥೆಯೂ ರೂಢಿಗೆ ಬಂದುವು. (ಕೆ.ಡಿ.)

**ಪಂಕಜನಹಳ್ಳಿ:** ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಒಂದು ಗ್ರಾಮ. ಕಸಬೆಗೆ 13 ಕಿಮೀ ದೂರದಲ್ಲಿ ತಿಪಟೂರು ತಾಲ್ಲೂಕಿನ ಕಿಬ್ಬನಹಳ್ಳಿಗೆ ಹತ್ತಿರದಲ್ಲಿದೆ.

ಇಲ್ಲಿಯ ಮಲ್ಲಿಕಾರ್ಜುನ ದೇವಾಲಯ ದ್ರಾವಿಡಶೈಲಿಯ ದೊಡ್ಡ ದೇವಾಲಯ. ಇದರಲ್ಲಿ ಒಂದು ಗರ್ಭಗೃಹ. ಸುಕನಾಸಿ, ಪ್ರದಕ್ಷಿಣಾಪಥ, ನವರಂಗ, ಅರ್ಧಮಂಟಪ, ಪಾತಾಳಾಂಕಣ, ನಂದಿಮಂಟಪ, ಗೋಪುರಯುತವಾದ ಮಹಾದ್ವಾರ ಮತ್ತು ಪ್ರಾಕಾರಗಳಿವೆ. ದೇವಾಲಯ ಪೂರ್ವಾಭಿಮುಖವಾಗಿದೆ. ನೂರೊಂದು ಲಿಂಗಗಳನ್ನು ಪ್ರತಿನಿಧಿಸುತ್ತವೆನ್ನುವ ಗುಂಡುಕಲ್ಲುಗಳಿಂದ ಇಲ್ಲಿನ ಲಿಂಗ ರಚಿತವಾಗಿದೆ. ನಾಲ್ಕು ಮೀಟರ್ ಎತ್ತರವಿರುವ ಮಹಾದ್ವಾರ ಸುಂದರ ರಚನೆ, ಅದರಂತೆ ಕಂಬಗಳೂ ಬಾಗಿಲುವಾಡವೂ ಉತ್ತಮ ಕೆತ್ತನೆಗಳಿಂದ ಕೂಡಿದೆ. ದೇವಾಲಯದ ಕಂಬಗಳ ಮೇಲೆ ಗಣಪತಿ, ಶಕ್ತಿ ಮೊದಲಾದ ಅನೇಕ ಶಿಲ್ಪಗಳಿವೆ. ಮುಂದುಗಡೆಯಿರುವ ದೀಪಸ್ತಂಭ ಶಿಲ್ಪಿಗಳ ನೈಪುಣ್ಯತೆಯನ್ನು ಸಾರುವ ಮತ್ತೊಂದು ಅಂಶ. ಇದು ಸು. 13 ಮೀ ಎತ್ತರವಿದ್ದು ಮೇಲೆ ಒಂದು ಸಣ್ಣ ಮಂಟಪವಿದೆ.

ದೇವಾಲಯದ ಎಡಭಾಗದಲ್ಲಿ ಪಾರ್ವತಿ ಗುಡಿ ಇದೆ. ದಕ್ಷಿಣದಲ್ಲಿ ವೀರಭದ್ರ ಗುಡಿ ಇದೆ. ದೇವಾಲಯದ ಉತ್ತರದಲ್ಲಿ ಒಂದು ದೊಡ್ಡ ಕೊಳ ಮತ್ತು ಅದರ ಮಧ್ಯೆ ಒಂದು ಮಂಟಪ ಇದೆ.

ಈ ಊರಿನಲ್ಲಿ ರಂಗನಾಥ ದೇವಾಲಯ ಇಲ್ಲಿನ ಇನ್ನೊಂದು ಗುಡಿ. (ಎಸ್.ಎಂ.ವಿ.)

**ಪಂಚ ಸಿಂಹಾಸನಗಳು :** ವೀರಶೈವರಿಗೆ ಬಹು ಪ್ರಮುಖ ಎನಿಸಿರುವ ಐದು ಪೀಠಗಳು, ಚಿಕ್ಕಮಗಳೂರು ಜಿಲ್ಲೆಯ ಭದ್ರಾನದಿಯ ತೀರದಲ್ಲಿರುವ ಬಾಳೇಹಳ್ಳಿವೀರ ಸಿಂಹಾಸನ ಮಠ, ಉಜ್ಜಯಿನಿಯ ಧರ್ಮಸಿಂಹಾಸನಮಠ, ಶ್ರೀ ಶೈಲದ ಸೂರ್ಯ ಸಿಂಹಾಸನ ಮಠ, ಕಾಶಿಯ ಜ್ಞಾನಸಿಂಹಾಸನ ಮಠ, ಕೇದಾರದ ವೈರಾಗ್ಯ ಸಿಂಹಾಸನ ಮಠ. ಇವಲ್ಲದೆ ಚಿತ್ರದುರ್ಗ, ಗದಗ, ಹುಬ್ಬಳ್ಳಿ, ಉರವಕೊಂಡ ಮತ್ತು ಕಲ್ಯಾಣಗಳಲ್ಲಿ ಶೂನ್ಯಸಿಂಹಾಸನ ಮಠಗಳೂ ಶಿವಗಂಗೆ, ಸುತ್ತೂರು, ರಾಜಪುರ, ಕುಂಭಕೋಣ, ನಾಗಲಾಪುರ,

ದೇವನೂರುಗಳಲ್ಲಿ ವೀರಸಿಂಹಾಸನ ಮಠಗಳೂ ಸಾಕಷ್ಟು ಪ್ರಸಿದ್ಧವೆನಿಸಿವೆ.

*

**ಪಂಚಾಕ್ಷರಿ ಗವಾಯ್ :** 1892-1944. ಪ್ರಸಿದ್ಧ ಸಂಗೀತಗಾರರು, ಹಾವೇರಿ ಜಿಲ್ಲೆ ಹಾನಗಲ್ಲು ತಾಲ್ಲೂಕಿನ ಕಾಡಶೆಟ್ಟಿಹಳ್ಳಿಯಲ್ಲಿ 1892 ಫೆಬ್ರವರಿ 2ರಂದು ಜನಿಸಿದರು. ಚರಂತಿಮಠದ ಗುರುಪಾದಯ್ಯ ಮತ್ತು ನೀಲಮ್ಮ ಇವರ ತಂದೆ ತಾಯಿಗಳು.

ಗದಿಗೆಯ್ಯ ಇವರ ಬಾಲ್ಯದ ಹೆಸರು. ಇವರ ಅಣ್ಣ ಗುರುಪಾದಯ್ಯ, ಇಬ್ಬರೂ ಹುಟ್ಟುಕುರುಡರಾಗಿದ್ದರು. ಇಬ್ಬರೂ ಬಾಲ್ಯದಿಂದಲೇ ಗಾಯನ ಕಲೆಯಲ್ಲಿ ಆಸಕ್ತಿ ತೋರಿ ತಾವು ಕೇಳಿದ ಪದಪದ್ಯಗಳನ್ನು ಇಂಪಾಗಿ ಹಾಡುತ್ತಿದ್ದರು. ಒಮ್ಮೆ ಇವರು ಹಾಡುವುದನ್ನು ಕೇಳಿದ ಹಾನಗಲ್ಲು ಮಠದ ಕುಮಾರಸ್ವಾಮಿಗಳು, ಶಿರಾಳಕೊಪ್ಪದ ಗದಿಗೆಪ್ಪ ಗವಾಯಿಗಳಿಂದ ಕರ್ನಾಟಕ ಸಂಗೀತವನ್ನು ಶಾಸ್ತ್ರೀಯವಾಗಿ ಪಾಠ ಹೇಳಿಸಿದರು. ಮುಂದೆ ಇಬ್ಬರನ್ನೂ ಮೈಸೂರಿಗೆ ಕಳಿಸಿ ಕೆಲವು ಪಂಡಿತರಲ್ಲಿ ವಿದ್ಯಾಧ್ಯಯನ ಮಾಡಿಸಿದರು. ಈ ಮಧ್ಯೆ ಅಣ್ಣ ಗುರುಪಾದಯ್ಯ ಅಕಾಲ ಮರಣಕ್ಕೆ ತುತ್ತಾದರು. ಗದಿಗೆಯ್ಯ ಮುಂಬಯಿಗೆ ಹಿಂದುಸ್ಥಾನೀ ಸಂಗೀತ ಕಲಿಯಲು ಹೋಗಿ ಪ್ರಯೋಜನವಾಗದೆ ಹಾನಗಲ್ಲಿಗೆ ಮರಳಿ ಬಂದು ಕುಮಾರಸ್ವಾಮಿಗಳ ಅನುಮತಿಯಂತೆ ಮಿರಜದ ನೀಲಕಂಠ ಬುವಾ ಅವರಲ್ಲಿ ಹಿಂದುಸ್ಥಾನೀ ಸಂಗೀತವನ್ನು (ಗ್ವಾಲಿಯರ್ ಶೈಲಿ) ಪರಿಪೂರ್ಣವಾಗಿ ಅಭ್ಯಾಸಮಾಡಿದರು. ಮುಂದೆ ಆಜನ್ಮ ಬ್ರಹ್ಮಚಾರಿಗಳಾಗಿ, ಕುಮಾರಸ್ವಾಮಿಗಳು ಆಶೀರ್ವದಿಸಿ ಕೊಟ್ಟ ಪಂಚಾಕ್ಷರ ಗವಾಯ್ ಎಂಬ ಹೆಸರಿನ ಮುಖಾಂತರ ಸಂಗೀತ ಪ್ರಪಂಚಕ್ಕೆ ಸೇವೆ ಸಲ್ಲಿಸಿದರು.

ಗವಾಯಿಗಳು ಸಾವಿರಾರು ಜನ ಬಡಬಗ್ಗರಿಗೆ, ಅಂಗಹೀನರಿಗೆ ಅನ್ನವಸ್ತ್ರ ವಸತಿಗಳನ್ನು ಕೊಟ್ಟು ಕರ್ನಾಟಕ ಮತ್ತು ಹಿಂದುಸ್ಥಾನೀ ಸಂಗೀತವನ್ನು ಹೇಳಿಕೊಟ್ಟರು. ಇವರು 1914ರಲ್ಲಿ ಸ್ಥಾಪಿಸಿದ ಶ್ರೀ ಕುಮಾರೇಶ್ವರ ಕೃಪಾಪೋಷಿತ ಸಂಗೀತ ಸಾಹಿತ್ಯ ಮಹಾವಿದ್ಯಾಲಯ ಇಂದಿಗೂ ಗದಗಿನಲ್ಲಿ ಪುಟ್ಟರಾಜ ಗವಾಯಿಗಳ ನೇತೃತ್ವದಲ್ಲಿ ನಡೆಯುತ್ತಿದೆ. ಪಂಚಾಕ್ಷರ ಗವಾಯಿಗಳ ಮುಖ್ಯ ಶಿಷ್ಯರಲ್ಲಿ ಪುಟ್ಟರಾಜ ಗವಾಯ್, ಗುರುಬಸವಯ್ಯ ಗವಾಯ್ ಬ್ಯಾಡಗಿ, ಮೃತ್ಯುಂಜಯ ಗವಾಯ್ ಪುರಾಣಿಕಮಠ, ಬಸವರಾಜ ರಾಜಗುರು, ಸಿದ್ಧರಾಮ ಜಂಬಲದಿನ್ನಿ, ಆರ್.ವಿ.ಶೇಷಾದ್ರಿ ಗವಾಯ್, ಅರ್ಜುನಸಾ ನಾಕೋಡ ಮೊದಲಾದವರನ್ನು ಹೆಸರಿಸಬಹುದು.

ಪಂಚಾಕ್ಷರ ಗವಾಯಿಗಳು 1944 ಜೂನ್ 10ರಂದು ಗದಗಿನಲ್ಲಿ ತೀರಿಕೊಂಡರು. ಪ್ರತಿವರ್ಷ ಇವರ ಪುಣ್ಯತಿಥಿ ಗದಗಿನಲ್ಲಿ ನಡೆಯುತ್ತದೆ. ಆಗ ಇವರ ಶಿಷ್ಯ ಪ್ರಶಿಷ್ಯರು ಮತ್ತು ಅಭಿಮಾನಿಗಳಿಂದ ಗಾಯನ, ಕೀರ್ತನ, ಭಾಷಣ ಇತ್ಯಾದಿಗಳು ನಡೆಯುತ್ತವೆ. (ಆರ್.ವಿ.ಎಸ್.)

**ಪಂಚಾಕ್ಷರಿ :** ನಮಃ ಶಿವಾಯ ಎಂಬ ಮಂತ್ರ. ಇವನ್ನು ಶೈವರೂ ವೀರಶೈವರೂ ಬಹಳ ಪವಿತ್ರವೆಂದು ಭಾವಿಸಿದ್ದಾರೆ. ಇದಕ್ಕೆ ಓಂಕಾರ ಸೇರಿಸಿದರೆ ಷಡಕ್ಷರಿ ಮಂತ್ರ ಅಥವಾ ಪ್ರಣವಪಂಚಾಕ್ಷರಿಯಾಗುತ್ತದೆ. ಅಷ್ಟಾವರಣದಲ್ಲಿ ಈ ಮಂತ್ರ ಒಂದು ಸ್ಥಳವನ್ನು ಆಕ್ರಮಿಸಿದೆ. ಕೊಂಡಗುಳಿ ಕೇಶಿರಾಜ (1160) ಈ ಮಂತ್ರದ ಮಹಿಮೆಯನ್ನು ತಿಳಿಸುವುದಕ್ಕಾಗಿಯೇ ಷಡಕ್ಷರಿ ಮಂತ್ರದ ಮಹಿಮೆ ಎಂಬ ಗ್ರಂಥವನ್ನು ಬರೆದಿದ್ದಾನೆ. ವೇದದ ಶ್ರೀರುದ್ರ ಮಂತ್ರದಲ್ಲಿ ನಮಃ ಶಿವಾಯಚ, ಶಿವತರಾಯಚ ಎಂಬ ಪಂಕ್ತಿಯಿದೆ. ಬಸವಣ್ಣ ತನ್ನ ವಚನದಲ್ಲಿ 'ಭವಬಂಧನ ದುರಿತಂಗಳಗೆಲ್ಲೊಡೆ ಓನಮಶ್ಶಿವಾಯ ಶರಣೆಂದೆಡೆ ಸಾಲದೆ' ಎಂದು ಹೇಳಿದ್ದಾನೆ. ದಿನಂಪ್ರತಿ ಬೆಳಗು ಸಂಜೆಸ್ನಾನ ಮಡಿಯಿಂದ ಪರಿಶುದ್ಧರಾಗಿ 108ಕ್ಕೆ ಕಡಿಮೆಯಿಲ್ಲದೆ ಈ ಮಂತ್ರವನ್ನು ಜಪಿಸಿದರೆ ಅಥವಾ ಲಿಖಿಸಿದರೆ ಮುಕ್ತಿ ಸುಲಭವಾಗಿ ದೊರಕುತ್ತದೆ ಎಂಬ ನಂಬಿಕೆ ವೀರಶೈವರಲ್ಲಿದೆ. ಸೂಕ್ಷ್ಮಾಗಮದಲ್ಲಿ ಓಂಕಾರ ಯುಕ್ತವಾದ ಪಂಚಾಕ್ಷರಿಯನ್ನು ಮಂತ್ರರಾಜ ಎಂದು ಕರೆಯಲಾಗಿದೆ. ಶಿವಗೀತೆಯಲ್ಲಿ ಪಂಚಾಕ್ಷರೀ ಜಪಪದಃ ಸಮಭಕ್ತಃ ಸಮೇಪ್ರಿಯಃ ಎಂದು ಹೇಳಿದೆ. ಸಿದ್ಧಾಂತ ಶಿಖಾಮಣಿಯಲ್ಲಿ ಪಂಚಾಕ್ಷರೀರ್ವದ್ವಿಮಾವ್ ವಿದ್ಯಾಮ್ ಪ್ರಣವೇನ ಷಡಕ್ಷರೀಮ್ ಜಪೇ ಸಮಾಹಿತ್ಶೋ ಭೂತ್ವ ಶಿವಪೂಜಾ ಪರಾಯಣಃ ಎಂಬ ಮಾತಿಗೆ ಪಂಚಾಕ್ಷರಿ ಮಂತ್ರದ ಮಹಿಮೆಯನ್ನು ತಿಳಿದರೆ ಸಾಕು ಉಳಿದ ಮಂತ್ರಗಳಿಂದ ಏನು ಪ್ರಯೋಜನ ಎಂದು ಅರ್ಥ. *

**ಪಂಚಾಚಾರ್ಯರು:** ವೀರಶೈವ ಮತಗ್ರಂಥಗಳಲ್ಲಿ ರೇವಣ್ಣಸಿದ್ಧ ಮರುಳ ಸಿದ್ಧ, ಏಕೋರಾಮ, ವಿಶ್ವಾರಾಧ್ಯ ಮತ್ತು ಪಂಡಿತಾರಾಧ್ಯ ಎಂಬ ಐದು ಮಂದಿ ಶಿವಾಚಾರ್ಯರ ಹೆಸರುಗಳನ್ನು ಬಹಳವಾಗಿ ಹೇಳಿದೆ.ಇವರು ವೀರಶೈವ ಮತಾಚಾರ್ಯರು ಎಂದು ಕೂಡ ಕೆಲವು ಗ್ರಂಥಕಾರರು ಹೇಳಿದ್ದಾರೆ. ಈ ವಿಚಾರ ಶಿವಾಗಮಗಳಲ್ಲಿ ಮೊಟ್ಟಮೊದಲು ಉಕ್ತವಾಗಿದೆ. ಇವರು ಪರಶಿವನ ಸದ್ಯೋಜಾತ, ಅಘೋರ, ವಾಮದೇವ, ಈಶಾನ್ಯ, ತತ್ಪುರುಷ ಎಂಬ ಪಂಚಮುಖಗಳಲ್ಲಿ ಜನಿಸಿದರೆಂದೂ ಅಂತರ ಕೊಲ್ಲಿಪಾಕಿ, ಶ್ರೀಶೈಲ, ಉಜ್ಜಯಿನಿ, ಕಾಶಿ ಮತ್ತು ಕೇದಾರ ಲಿಂಗಗಳಲ್ಲಿ ಅವತರಿಸಿದರೆಂದೂ ಇವರು ಅಯೋನಿಜರೆಂದೂ ವೀರ, ನಂದಿ, ಭೃಂಗಿ, ವೃಷಭ, ಸ್ಕಂದ ಎಂಬ ಪಂಚಗೋತ್ರಗಳ ಅಧಿಪತಿಗಳೆಂದೂ ವೀರಶೈವ ಮತಾಚಾರ್ಯರೆಂದೂ ಸ್ವಯಂಭು ಮೊದಲಾದ ಆಗಮಗಳಲ್ಲಿ ಹೇಳಿದೆ. ವೀರಶೈವ ಪುರಾಣಾದಿಗಳು ಈ ವಿಷಯಗಳನ್ನು ಎತ್ತಿ ಹೇಳಿವೆ. ಮೇಲಿನ ಈ ಐವರು ಆಚಾರ್ಯರ ಹೆಸರಿನಲ್ಲಿ ಕ್ರಮವಾಗಿ ಬಾಳೇಹಳ್ಳಿ (ಚಿಕ್ಕಮಗಳೂರು ಜಿಲ್ಲೆ), ಉಜ್ಜಯಿನಿ (ಬಳ್ಳಾರಿ), ಶ್ರೀ ಶೈಲ, (ಕರ್ನೂಲು ಜಿಲ್ಲೆ), ಕಾಶೀಕ್ಷೇತ್ರ ಮತ್ತು ಕೇದಾರ (ಉತ್ತರ ಪ್ರದೇಶ) - ಈ ಐದು ಕ್ಷೇತ್ರಗಳಲ್ಲಿ ಈ ಆಚಾರ್ಯ ಪಂಚಕದ ಮಠಪೀಠಗಳು ಪ್ರಸಿದ್ಧವಾಗಿವೆ.

ಷಡಕ್ಷರಿ ತನ್ನ ವೃಷಭೇಂದ್ರ ವಿಜಯದಲ್ಲಿ ಪೂರ್ವಾಚಾರ್ಯರನ್ನು ಸ್ಮರಿಸುವಾಗ ಶ್ರೀಗಳಾಚತುರಾಚಾರ್ಯ ಪದಾಂಬುಜಂಗಳೆಮಗೀಗಾವೋದ ಸಂದೋಹಮಂ ಎಂದೂ ರಾಜಶೇಖರ ವಿಳಾಸದಲ್ಲಿ ರೇಣುಕ ರಾಮ ಪಂಡಿತ ಮಹಾ ಮರುಳಾರ್ಯರ ಮಾಣದೆ ಬಣ್ಣಿಸುತ್ತೆಱಗಿಮೇಣ್ಬಡೆವಂ ಪರಮಾರ್ಥ ಸಿದ್ಧಿಯ ಎಂದೂ ಹೇಳಿದ್ದಾನೆ. ಗೂಲೂರಿನಲ್ಲಿ ವಾಸವಾಗಿದ್ದ ಸಂಪಾದನೆಯ ಪರ್ವತೇಶ (1698) ಚತುರಾಚಾರ್ಯ ಪುರಾಣವನ್ನು ಬರೆದಿದ್ದಾನೆ. ಇದರಲ್ಲಿ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ ಎಂಬ ಈ ನಾಲ್ವರು ಆಚಾರ್ಯರ ಚರಿತ್ರೆಯನ್ನು ಮುಖ್ಯವಾಗಿ ಹೇಳಿ, ಕಡೆಯಲ್ಲಿ ವಿಶ್ವೇಶ್ವರಾಚಾರ್ಯರನ್ನು ಸೇರಿಸಿ, ಪಂಚಕಲಶದ ಆಚಾರ್ಯಚರಿತ ಎಂದಿದ್ದಾನೆ. ಈ ವಿಷಯಗಳನ್ನು ನೋಡಿದರೆ ಮೊದಲಿಗೆ ನಾಲ್ಕೇಜನ ಆಚಾರ್ಯರಿದ್ದು ಆ ಪಟ್ಟಿಗೆ ಅನಂತರ ವಿಶ್ವಾರಾಧ್ಯ ಸೇರಿ ಆಚಾರ್ಯರ ಸಂಖ್ಯೆ ಐದು ಆಗಿರಬೇಕೆಂದು ತೋರುತ್ತದೆ.

ಕಾಶಿಯಲ್ಲಿರುವ ಜಂಗಮವಾಡಿ ಮಠ ವಿಶ್ವಾರಾಧ್ಯರ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಮಠಕ್ಕೆ ಕಾಶಿಯ ಹಾಗೂ ಮೈಸೂರು ಮಹಾರಾಜರು ಬರೆಸಿಕೊಟ್ಟ ಶಾಸನಗಳಿವೆ. ಜಹಾಂಗೀರ್, ಔರಂಗಜೇಬ್, ಷಹಜಹಾನ್ ಮೊದಲಾದವರು ಕೊಟ್ಟ ಶಾಸನಗಳಿವೆ. ಕೆಳದಿ ರಾಜ ದೊಡ್ಡಸಂಕಣನಾಯಕ ಈ ಮಠಕ್ಕೆ ಹೆಚ್ಚು ಸೇವೆ ಸಲ್ಲಿಸಿದ್ದಾನೆ. ಪ್ರಯಾಗದ ತ್ರಿವೇಣಿ ಸಂಗಮದ ಹತ್ತಿರ ಈ ಮಠದ ಶಾಖೆ ಇದೆ. ವೀರಶೈವರಲ್ಲಿ ನಡೆಯುವ ಶಿವದೀಕ್ಷಾ ಕರ್ಮಗಳು ಈ ಐವರು ಆಚಾರ್ಯರ ಹೆಸರಿನ ಪಂಚಕಳಸದ ಸನ್ನಿಧಿಯಲ್ಲಿ ನಡೆಯುತ್ತವೆ. *

**ಪಂಚಾಮೃತ :** ಇಂದಿನ ಗದಗ ಜಿಲ್ಲೆ ಗದಗ್‌ನಿಂದ ಪ್ರಕಟವಾಗುತ್ತಿದ್ದ ಮಾಸಪತ್ರಿಕೆ. 1961 ಏಪ್ರಿಲ್‌ನಲ್ಲಿ ಆರಂಭವಾಯಿತು. ಡೆಮಿ ಅಷ್ಟದಳ ಆಕಾರದ ಸು. 120 ಪುಟಗಳಿಂದ ಕೂಡಿದ್ದ ಈ ಪತ್ರಿಕೆಯ ಸಂಪಾದಕರು ಪಂಢರೀನಾಥಾಚಾರ್ಯ ಗಲಗಲಿ. ವಿವಿಧ ಅಭಿರುಚಿಗಳ ವಾಚಕರನ್ನು ದೃಷ್ಟಿಯಲ್ಲಿಟ್ಟುಕೊಂಡು ಲೇಖನಗಳನ್ನು ಪ್ರಕಟಿಸಲಾಗುತ್ತಿತ್ತು. ಮನರಂಜಕ ಹಾಗೂ ನೀತಿಬೋಧಕ ವಿಷಯಗಳಿಗೆ ಹೆಚ್ಚು ಗಮನ ಸಲ್ಲುತ್ತಿತ್ತು. ಹಾಸ್ಯ ಲೇಖನಗಳು, ವಿಚಾರಪೂರ್ಣ ಬರಹಗಳು, ಸಾಮಾಜಿಕ ಐತಿಹಾಸಿಕ ಹಾಗೂ ಪತ್ತೇದಾರಿ ಕಥೆಗಳು ಆಕರ್ಷಕವಾಗಿ ಬರುತ್ತಿದ್ದುವು. ಪತ್ರಿಕೆಯ ಕೆಲವು ಪ್ರಧಾನ ವಿಭಾಗಗಳಿವು;

ವೇದ ಬೋಧ, ಸಂಸ್ಕೃತ ಕವಿ ಕೃತಿ ಪರಿಚಯ, ಸುಭಾಷಿತಗಳು, ದೊಡ್ಡವರ ಸಣ್ಣ ಕಥೆಗಳು ಮತ್ತು ಪುಸ್ತಕ ವಿಭಾಗ, ಪುಸ್ತಕ ವಿಭಾಗದಲ್ಲಿ ಹೆಚ್ಚಾಗಿ ಬರುತ್ತಿದ್ದುದು ಮರಾಠಿ, ತೆಲುಗು, ಹಿಂದಿ ಇತ್ಯಾದಿ ಭಾಷೆಗಳಲ್ಲಿಯ ಕಾದಂಬರಿಗಳ ಭಾಷಾಂತರಗಳು.

ಪಂಚಾಮೃತ ಸುಂದರವಾಗಿ ಪ್ರಕಟವಾಗುತ್ತಿತ್ತು. ಹೊದಿಕೆಯ ಮೇಲೆ ವರ್ಣರಂಜಿತ ಚಿತ್ರವಿರುತ್ತಿತ್ತು. 1937ರ ನವೆಂಬರ್ ದೀಪಾವಳಿ ಸಂಚಿಕೆಯೊಂದಿಗೆ ಪತ್ರಿಕೆ ಡೆಮಿ ಅಷ್ಟದಳ ಆಕಾರ ತಾಳಿತು. ಆ ವೇಳೆಗೆ ಪತ್ರಿಕೆ ಆರ್ಥಿಕ ಮುಗ್ಗಟ್ಟಿಗೊಳಗಾಗಿದ್ದಿತೆಂಬುದು ವ್ಯಕ್ತವಾಗುವುದು. ಸಂಪಾದಕ ಗಲಗಲಿಯವರೆ ಪತ್ರಿಕೆಯ ಎಲ್ಲ ಹೊಣೆಯನ್ನೂ ಹೊತ್ತಿದ್ದುದರಿಂದ ಪ್ರಕಟಣೆಯನ್ನು ನಿರ್ವಹಿಸುವುದು ಕೊನೆಕೊನೆಗೆ ಬಹಳ ಕಷ್ಟಕರವಾಗಿ ಪರಿಣಮಿಸಿತು. 1972ರ ಹೊತ್ತಿಗೆ ಪತ್ರಿಕೆ ನಿಂತುಹೋಯಿತು.

ಪಂಚಾಮೃತ ಜೀವಂತವಾಗಿದ್ದ ಕಾಲದಲ್ಲಿ ಪಂಢರಿನಾಥಾಚಾರ್ಯ ಗಲಗಲಿಯವರು ಕನ್ನಡ ಪತ್ರಿಕೋದ್ಯಮದಲ್ಲಿ ತಮ್ಮ ಸಾಮರ್ಥ್ಯವನ್ನು ಅದರ ಮೂಲಕ ಪ್ರಕಟಿಸಿದರು. ಈ ಅಲ್ಪಾವಧಿಯಲ್ಲಿ ಪತ್ರಿಕೆ ಕನ್ನಡ ಓದುಗರ ಮನವನ್ನು ಸೆಳೆದು ಜನಾದರಣೀಯ ಸಾಹಿತ್ಯವನ್ನು ಹಂಚಿತು. ಪತ್ರಿಕೆ ಉಚ್ಛ್ರಾಯಸ್ಥಿತಿಯಲ್ಲಿದ್ದಾಗ ಪ್ರತಿ ತಿಂಗಳೂ ಹಂಚಿಕೆಯಾಗುತ್ತಿದ್ದ ಪ್ರತಿಗಳ ಸಂಖ್ಯೆ ಸು. 11,000. ಪತ್ರಿಕೆ ಗದಗ್‌ನ ನ್ಯೂ ಗದಗ ಪ್ರಿಂಟರಿಯಲ್ಲಿ ಮುದ್ರಣವಾಗುತ್ತಿತ್ತು.

**ಪಂಚಾಚಾರ:** ವೀರಶೈವರಲ್ಲಿ ಪಂಚಾಚಾರ್ಯರು ನೀತಿ ಪ್ರಧಾನವಾದ ಸದಾಚಾರ, ಶಿವಚಾರ, ಲಿಂಗಾಚಾರ, ಭೃತ್ಯಾಚಾರ, ಗಣಾಚಾರ ಎಂಬ ಐದು ಆಚಾರಗಳನ್ನು ಹೇಳಿರುತ್ತಾರೆ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು ಎಂಬ ಬಸವಣ್ಣನವರ ವಚನದಂತೆ ಸಮಾಜದಲ್ಲಿ ವ್ಯಕ್ತಿಯೋಗ್ಯವಾಗಿ ನಡೆಯಲು ಈ ಆಚಾರಗಳು ನೆರವಾಗುತ್ತವೆ.

**ಸದಾಚಾರ:** ಪರಸ್ತ್ರೀ, ಪರದ್ರವ್ಯ, ಪರವಸ್ತುಗಳನ್ನು ಮುಟ್ಟದಿರುವುದು, ಪರನಿಂದೆಯನ್ನು ಮಾಡದಿರುವುದು, ಪರಹಿಂಸೆಯನ್ನು ಆಚರಿಸದಿರುವುದು, ಸದಾಶಾಸ್ತ್ರೋಕ್ತ ಮಾರ್ಗದಲ್ಲಿ ನಡೆಯುವುದು, ಗುರುಹಿರಿಯಲ್ಲಿ ಶ್ರದ್ಧಾನಿಷ್ಠನಾಗಿರುವುದು ದೈವಭಕ್ತಿ ಸಂಪನ್ನನಾಗಿರುವುದು ಇತ್ಯಾದಿ.

**ಶಿವಾಚಾರ:** ಶಿವಭಕ್ತಿ ಸಂಪನ್ನವಾಗಿ ಅನ್ಯದೈವಗಳನ್ನು ಸ್ಮರಿಸದಿರುವವನು ಏಕೋದೇವೋ ಪಾಸಕನಾಗಿ, ಶಿವೈಕ್ಯ ವ್ರತವುಳ್ಳವನಾಗಿರುವುದು, ಶಿವಾಗಮಗಳಲ್ಲಿ ಲುಪ್ತವಾಗಿರುವುದು, ಶಿವಕ್ಷೇತ್ರಗಳನ್ನು ಸಂದರ್ಶಿಸುವುದು, ಶಿವಭಕ್ತರನ್ನು ಸಂರಕ್ಷಿಸುವುದು ಇತ್ಯಾದಿ.

**ಲಿಂಗಾಚಾರ:** ಇಷ್ಟ ಪ್ರಾಣ, ಭಾವಲಿಂಗಗಳ ಅನುಸಂಧಾನ ಮಾಡಿ ಸ್ಥೂಲ, ಸೂಕ್ಷ್ಮ ಕಾರಣವೆಂಬ ತ್ಯಾಗಾಂಗ, ಯೋಗಾಂಗ, ಭೋಗಾಂಗಗಳನ್ನು ತ್ರಿವಿಧ ಲಿಂಗಪೂಜೆಯಲ್ಲಿ ನಡೆಯುವುದು ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಲಿಂಗವೇ ಕಾರಣವೆಂದೂ ಜಗತ್ತೆಲ್ಲವೂ ಲಿಂಗಮಯವೆಂದೂ ತಿಳಿಯುವದು.

**ಭೃತ್ಯಾಚಾರ:** ಎನಗಿಂತ ಕಿರಿಯರಿಲ್ಲ. ಶಿವಶರಣರಿಗಿಂತ ಹಿರಿಯರಿಲ್ಲ ಎಂಬ ಬಸವಣ್ಣನವರ ವಚನದಂತೆ, ದಾಸೋಹಂ ಭಾವದಿಂದ ನಡೆಯುವುದು, ಶರಣರನ್ನು ಗುರುಜಂಗಮರನ್ನು ಕಂಡರೆ ಶರಣಾರ್ಥಿ ಎಂದು ಕೈಂಕರ್ಯಭಾವದಿಂದ ವರ್ತಿಸುವುದು.

**ಗಣಾಚಾರ:** ಶಿವಾಗಮೋಕ್ತ ರೀತಿಯಿಂದ ನಡೆನುಡಿಗಳನ್ನು ಶಿವಧರ್ಮಕ್ಕೆ ಅನುಗುಣವಾಗಿ ವರ್ತಿಸುವುದು. ಶಿವಕ್ಷೇತ್ರ, ಶಿವಶರಣರನ್ನು ರಕ್ಷಿಸುವುದು ಇತ್ಯಾದಿ.

(ಬಿ.ಎಸ್.)

**ಪಂಚಾಯಿತಿಕೆ :** ವ್ಯಾಜ್ಯಗಳು ಹುಟ್ಟಿಕೊಂಡಾಗ, ವಿಷಯವನ್ನು ತಿಳಿದ ಸ್ಥಳದವರಿಂದಲೇ ಚಾವಡಿಯಲ್ಲಿ ಅಥವಾ ದೇವಸ್ಥಾನದಲ್ಲಿ ಕುಳಿತು, ಎರಡು ಪಕ್ಷಗಳವರ ವಾದಗಳನ್ನೂ ಕೇಳಿ, ತೀರ್ಮಾನಕೊಡುವ ಜನಪದ ವಿಧಾನ.ಈ ತೀರ್ಮಾನದಂತೆ ವ್ಯಾಜ್ಯದ ಉಭಯತ್ರರೂ ನಡೆಯುವುದು ವಾಡಿಕೆ. ಇಂದಿನ ಕಾಲದಲ್ಲಿ ವಿದ್ಯಾವಂತರ ಸಂಖ್ಯೆ ಹೆಚ್ಚಾಗಿ, ಕೋರ್ಟು ಕಚೇರಿ ವ್ಯವಹಾರ ಎಲ್ಲರಿಗೂ ತಿಳಿದಿರುವುದರಿಂದ ಸ್ಥಳದ ಪಂಚಾಯಿತಿಕೆಗಳಿಗೆ ಹಿಂದಿನಷ್ಟು ಪ್ರಾಮುಖ್ಯತೆ ಇಲ್ಲವೆಂಬುದು ನಿಶ್ಚಯ. ಆದರೂ ಕೋರ್ಟುಗಳಲ್ಲಿ ಉಂಟಾಗುವ ವಿಳಂಬ, ಒದಗಿಸಬೇಕಾದ ಪುರಾವೆಯ ಅಸಂಖ್ಯಾತ ಕಾಗದಪತ್ರಗಳು, ಕ್ಷಣ ಕ್ಷಣವೂ ಪಕ್ಷಗಳನ್ನು ಬದಲಾಯಿಸುತ್ತಿರುವ ಸಾಕ್ಷಿಗಳ ಮನಸ್ಸನ್ನು ಓಲೈಸುವ ಕಷ್ಟ, ವಕೀಲರು ಪದೇಪದೇ ಕೇಳುವ ಶುಲ್ಕ ಈ ಎಲ್ಲ ಕಾರಣಗಳಿಂದ ಇಂದೂ ಹಳ್ಳಿಗರು ತಮ್ಮ ನಿತ್ಯವ್ಯವಹಾರಕ್ಕೆ ಸಂಬಂಧಿಸಿದ ಬಹುಪಾಲು ವ್ಯಾಜ್ಯಗಳನ್ನು ಸ್ಥಳದ ಪಂಚಾಯಿತಿಕೆಯಲ್ಲಿಯೇ ತೀರ್ಮಾನ ಮಾಡಿಕೊಳ್ಳುತ್ತಾರೆ. ಎಲ್ಲ ದೃಷ್ಟಿಯಿಂದಲೂ ಇದು ಕ್ಷೇಮವೆಂಬುದು ಅವರಿಗೂ ಮನದಟ್ಟಾಗಿದೆ.

ಹಿಂದೆ ಹಳ್ಳಿಗಳಲ್ಲಿ ಪಂಚಾಯಿತಿಕೆಗಳಿಗೆ ಪ್ರಾಮುಖ್ಯತೆ ಬಹಳವಾಗಿತ್ತು. ಆಗಿನ ಕಾಲದ ತಪ್ಪುಗಳು, ತಕ್ಸೀರುಗಳು, ವ್ಯಾಜ್ಯ ಕಾರಣಗಳು ತಕ್ಕಮಟ್ಟಿಗೆ ಸರಳವಾಗಿದ್ದವು. ಭೂಮಿ, ಹಣಕಾಸು, ಸಣ್ಣಪುಟ್ಟ ಕಳವು, ಸ್ತ್ರೀಪುರುಷರ ಲೈಂಗಿಕ ಪ್ರವೃತ್ತಿ ಪ್ರೇರಿತ ಅಪರಾಧಗಳು, ಹೊಡೆದಾಟ - ಇವು ಅಂದಿನ ಸಾಮಾನ್ಯ ವ್ಯಾಜ್ಯಕಾರಣವಾಗಿರುತ್ತಿದ್ದವು. ಅಂದಿನವರು ಇವುಗಳನ್ನೆಲ್ಲ ಸ್ಥಳದ ಪಂಚಾಯಿತಿಕೆಗಳಲ್ಲಿಯೇ ತೀರ್ಮಾನಿಸುತ್ತಿದ್ದರು. ಇಬ್ಬರು ವ್ಯಾಜ್ಯಕಾರರಲ್ಲಿ ಯಾರಾದರೂ ಒಬ್ಬ ಗ್ರಾಮದ ಮುಖಂಡನೆನಿಸಿಕೊಳ್ಳುವವನಲ್ಲಿ, ಮತ್ತೊಬ್ಬನ ಮೇಲೆ ಒಂದು ಫಿರ್ಯಾದನ್ನು ಕೊಟ್ಟರೆ ಗ್ರಾಮದ ಮುಖಂಡ, ಉಳಿದ ಗ್ರಾಮಸ್ಥರೊಂದಿಗೆ ಮಾತುಕತೆಯಾಡಿ ವಿಚಾರಣೆಗಾಗಿ ಒಂದು ದಿನವನ್ನು ಗೊತ್ತುಮಾಡುತ್ತಿದ್ದ. ವಿಚಾರಣೆ ಸಾಧಾರಣವಾಗಿ ನಡೆಯುತ್ತಿದ್ದುದು ಸಂಧ್ಯಾಕಾಲದ ಅನಂತರ ದೇವಸ್ಥಾನದಲ್ಲಿ. ಕೆಲವರು ಪಂಚಾಯಿತಿದಾರರಾಗಿ ಜಗಲಿಯ ಮೇಲೆ ಕುಳಿತುಕೊಳ್ಳುತ್ತಿದ್ದರು. ಪಂಚಾಯಿತಿದಾರರಲ್ಲಿ ಬಡವಬಲ್ಲಿದವೆಂಬ ಭೇದವಿರಲಿಲ್ಲ. ಆದರೆ ಅವರು ನಿಷ್ಪಕ್ಷಪಾತಿಗಳೂ ಒಳ್ಳೆಯ ನಡತೆಯುಳ್ಳವರೂ ಪ್ರಾಮಾಣಿಕರೆಂಬ ನಂಬಿಕೆಯನ್ನೂ ಜನರಲ್ಲಿ ಉಂಟುಮಾಡಿದವರೂ ಆಗಿರಬೇಕಾಗಿತ್ತು. ಪಂಚಾಯಿತಿಯಲ್ಲಿರುವಾಗ ಗಟ್ಟಿಯಾಗಿ ಮಾತನಾಡುವುದಾಗಲಿ, ಪೊಳ್ಳು ಅಥವಾ ಹಗುರವಾದ ಮಾತನಾಡುವುದಕ್ಕಾಗಲಿ, ಕೊನೆಗೆ ಬೀಡಿ ನಶ್ಯ ಉಪಯೋಗಿಸುವುದಕ್ಕಾಗಲಿ ಅವಕಾಶವಿರುತ್ತಿರಲಿಲ್ಲ. ಸನ್ನಿವೇಶದಲ್ಲಿ ತುಂಬ ಗಾಂಭೀರ್ಯವಿರುತ್ತಿತ್ತು. ಎರಡು ಪಕ್ಷಗಳವರೂ ಅಲ್ಲಿಗೆ ತಮ್ಮ ತಮ್ಮ ಸಾಕ್ಷಿಗಳನ್ನು ಕರೆತರುತ್ತಿದ್ದರು. ವಿಚಾರಣೆ ಗಂಭೀರವಾಗಿ ಆತುರ ಕಾತುರವಿಲ್ಲದೆ ಮುಚ್ಚುಮರೆಯಿಲ್ಲದ ಕೂಲಂಕಷವಾಗಿ ನಡೆಯುತ್ತಿತ್ತು. ಎಲ್ಲರೂ ಗ್ರಾಮಸ್ಥರೇ ಆದುದರಿಂದಲೂ ಜಮೀನು ಮುಂತಾದುವುಗಳಲ್ಲಿ ಅವರೆಲ್ಲರಿಗೂ ಅನುಭವವಿದ್ದುದರಿಂದಲೂ ಸತ್ಯವನ್ನು ನಿಖರವಾಗಿ ಕಂಡುಹಿಡಿಯುತ್ತಿದ್ದರು. ಕೆಲವು ವೇಳೆ ಪಂಚಾಯ್ತಿದಾರರೇ ತಪ್ಪು ಯಾರದೆಂದು ಕಂಡುಹಿಡಿಯಲು ಒಂದು ಉಪಸಮಿತಿಯನ್ನು ನಿಯಮಿಸುತ್ತಿದ್ದರು. ಅವರು ತಮ್ಮ ತೀರ್ಪನ್ನು ಹೇಳಿದ ಮೇಲೆ ಎಲ್ಲರೂ ಒಟ್ಟಾಗಿ ಸೇರಿ ನಿರ್ಣಯಿಸಿ ತೀರ್ಮಾನ ಮಾಡುತ್ತಿದ್ದರು. ಜಮೀನಿನ ವ್ಯಾಜ್ಯವಾಗಿದ್ದರೆ ಜಮೀನು ಯಾರಿಗೆ ಸೇರಬೇಕು, ಅದಕ್ಕೆ ಹಣ ಕೊಡಬೇಕಾದರೆ ಯಾರು ಎಷ್ಟು ಕೊಡಬೇಕು ಎಂಬುದನ್ನು ತೀರ್ಮಾನಿಸಿ ನಿರ್ಧರಿಸುತ್ತಿದ್ದರು. ಹಣಕಾಸು ಲೇವಾದೇವಿ ವ್ಯಾಜ್ಯವಾದರೆ ಅದಕ್ಕೆ ತಕ್ಕ ತೀರ್ಮಾನವನ್ನು ಕೊಡುತ್ತಿದ್ದರು. ಹೊಡೆದಾಟವಾಗಿದ್ದರೆ ತಪ್ಪು ಯಾರದೆಂದು ಕಂಡು ಹಿಡಿದು ದಂಡವನ್ನು ವಿಧಿಸಿ ಆ ಹಣವನ್ನು ಊರೊಟ್ಟಿನ ನಿಧಿಗೆ ಸೇರಿಸುತ್ತಿದ್ದರು. ದಂಡದಲ್ಲಿ ಸ್ವಲ್ಪ ಭಾಗವನ್ನು ಗಾಯಗೊಂಡವರ ಉಪಚಾರಕ್ಕಾಗಿ ಕೊಡಿಸುತ್ತಿದ್ದರು. ಲೈಂಗಿಕ ಅಪರಾಧಗಳ ಸಂದರ್ಭದಲ್ಲಿ, ಹುಡುಗ ಹುಡುಗಿ ಮದುವೆಯಾಗದವರಾಗಿದ್ದರೆ ಇಬ್ಬರಿಗೂ (ಅವರು ಜಾತಿ ಮತ್ತು ಇತರ ದೃಷ್ಟಿಗಳಿಂದ ಒಪ್ಪಿದರೆ) ವಿವಾಹವನ್ನು ವಿಧಿಸುತ್ತಿದ್ದರು. ಬೇರೆ ಬೇರೆ ಜಾತಿಯವರಾಗಿದ್ದರೆ ದಂಡವನ್ನು ವಿಧಿಸುತ್ತಿದ್ದರು.

ಇಂಥ ಸಣ್ಣ ಪುಟ್ಟ ವ್ಯವಹಾರಗಳಿಗೆ ಮಾತ್ರ ಪಂಚಾಯಿತಿಕೆ ಸೀಮಿತವಾಗಿರದೆ ಖೂನಿ ಹೊರತು (ಕೆಲವು ವೇಳೆ ಖೂನಿಗೆ ಸಹ) ದೊಡ್ಡ ದೊಡ್ಡ ಆಸ್ತಿ ವಿಭಾಗಕ್ಕೆ ಸಂಬಂಧಪಟ್ಟ ವ್ಯಾಜ್ಯಗಳನ್ನೂ ಒಳಗೊಂಡಿದ್ದು ನೂರಕ್ಕೆ ತೊಂಬತ್ತೈದಕ್ಕಿಂತ ಹೆಚ್ಚು ಭಾಗ, ಇಂಥ

ಸಮಸ್ಯೆಗಳು ಪಂಚಾಯಿತಿಗಳಲ್ಲಿ ತೀರ್ಮಾನವಾಗುತ್ತಿದ್ದವು. ಇಂಥ' ಪಂಚಾಯಿತಿಕೆಗಳಿಗೆ ನ್ಯಾಯ ಎಂದು ಕರೆಯುತ್ತಿದ್ದರು. ನ್ಯಾಯಕ್ಕೆ ಕುಂತವ್ರು, ನ್ಯಾಯ ಬಿದ್ದಯ್ತೆ, ನ್ಯಾಯ ಹೂಡುಸ್ತೀನಿ, ನ್ಯಾಯ ಇಟ್ಕೊಂಡವ್ರೆ ಎಂಬ ಮಾತುಗಳು ಹಳ್ಳಿಗಳಲ್ಲಿ ಕೆಲವೆಡೆ ಈಗಲೂ ಪ್ರಚಾರದಲ್ಲಿವೆ. ಪಂಚಾಯಿತಸ್ಥರ ತೀರ್ಮಾನವನ್ನು ಉಭಯ ಪಕ್ಷಗಳವರೂ ಒಪ್ಪುತ್ತಿದ್ದರು. ಒಪ್ಪದಿದ್ದವನನ್ನು ಊರಿಗೆ ಒಂಟಿಯಾಗಿ ಮಾಡಿ ಅವನಿಗೆ ಬೆಂಕಿ ನೀರು ಕೊಡಕೂಡದು, ಅವನೊಂದಿಗೆ ಯಾರೂ ಸೇರಕೂಡದು, ಸೇರಿದರೆ ಅವನು ಕೊಡಬೇಕಾದ ದಂಡವನ್ನು ಸೇರಿದವರೂ ಕೊಡಬೇಕಾಗುತ್ತದೆ ಎಂದು ನಿರ್ಬಂಧಿಸುತ್ತಿದ್ದರು. ರೈತ ಸಮಾಜ ಜೀವಿಯಾದುದರಿಂದ ಒಂಟಿಯಾಗಿರಲು ಹೆದರಿ ತನಗೆ ವಿಧಿಸಿದ ದಂಡವನ್ನು ಕೊಟ್ಟುಬಿಡುತ್ತಿದ್ದ. ಸಕಾಲಕ್ಕೆ ಕೊಡದ ತಪ್ಪಿಗಾಗಿ ವಿಧಿಸಿದ ಹೆಚ್ಚು ದಂಡವನ್ನೂ ಕೊಡುತ್ತಿದ್ದ. ಅವನ ಅವಿಧೇಯತೆಗೆ ಯಾರಾದರೂ ಕುಮ್ಮಕ್ಕು ಕೊಟ್ಟಿದ್ದರೆ ಗ್ರಾಮಸ್ಥರು ಅವನಿಗೂ ದಂಡ ವಿಧಿಸುತ್ತಿದ್ದರು.

ನ್ಯಾಯ ತೀರ್ಮಾನಕ್ಕೆ ಹಳ್ಳಿಯ ಪಂಚಾಯಿತಿಕೆಗಳೇ ಅಲ್ಲದೆ ಅದಕ್ಕೂ ಮೇಲುಪಟ್ಟ ನ್ಯಾಯಾಸ್ಥಾನಗಳೂ ಇದ್ದವು. ಎರಡು ಪಕ್ಷದವರಲ್ಲಿ ಯಾರಿಗೆ ಹಳ್ಳಿಯ ಪಂಚಾಯಿತಿಕೆಯ ತೀರ್ಪು ಪೂರ್ಣ ಸಮಾಧಾನವನ್ನು ನೀಡಲಿಲ್ಲವೋ ಅವರು ನಾಡಗೌಡರೆಂಬುವರಲ್ಲಿ ಹೋಗಿ ತಮ್ಮ ಮೊಕದ್ದಮೆಯನ್ನು ದಾಖಲು ಮಾಡುತ್ತಿದ್ದರು. ನಾಡಗೌಡರೆಂದರೆ ಆ ಪ್ರಾಂತದ ಇಂತಿಷ್ಟು ಹಳ್ಳಿಗಳಿಗೆ ಯಜಮಾನರೆಂದು ಜನ ಔಪಚಾರಿಕವಾಗಿ ಒಪ್ಪಿಕೊಂಡವರು. ಈತ ಹಣಕಾಸು ಲೇವಾದೇವಿ, ಜಮೀನ್ದಾರಿ, ದನಕರು ವಹಿವಾಟು ಎಲ್ಲ ದೃಷ್ಟಿಯಿಂದಲೂ ಅನುಕೂಲವಾಗಿದ್ದವನಾಗಿರುತ್ತಿದ್ದ. ಇವನ ಮಾತನ್ನು ಇವನ ಆಳ್ವಿಕೆಗೆ ಸೇರಿದ ಜನರೆಲ್ಲ ಅಂಗೀಕರಿಸುತ್ತಿದ್ದರು. ಈತ ಇಂಥ ವ್ಯಾಜ್ಯಗಳನ್ನು ತೀರ್ಮಾನ ಮಾಡಲು ಒಂದು ದಿನವನ್ನು ಗೊತ್ತುಮಾಡಿ, ಒಂದು ಸ್ಥಳವನ್ನು ನಿಗದಿ ಮಾಡಿ ಸ್ವಂತ ಖರ್ಚಿನಲ್ಲಿ ಅಲ್ಲಿ ಬಂದು ಬೀಡು ಬಿಡುತ್ತಿದ್ದ. ಒಂದೊಂದು ವೇಳೆ ಜಾತ್ರೆ ಕಾಲದಲ್ಲಿ ಜಾತ್ರೆ ಮೈದಾನದಲ್ಲಿಯೂ ಬೀಡು ಬಿಟ್ಟು ನಾಲ್ಕು ಐದು ದಿನ ವಿಚಾರಣೆ ಮಾಡಿ ನ್ಯಾಯವನ್ನು ಹಿಡಿದು ತೀರ್ಪು ಕೊಟ್ಟು ಹೋಗುತ್ತಿದ್ದ. ಫಿರ್ಯಾದಿಗಾಗಲಿ ಅಪರಾಧಿಗಾಗಲಿ ಆ ತೀರ್ಮಾನವೂ ಸಮಾಧಾನವಾಗದಿದ್ದಲ್ಲಿ, ಆಗ ಅವರು ಮೇಲುನಾಡಗೌಡ ಎಂಬುವನಲ್ಲಿ ಹೋಗಿ ಪುನರ್‌ವಿಚಾರಣೆಗೆ ಬೇಡುತ್ತಿದ್ದರು. ಮೇಲುನಾಡಗೌಡನೆಂಬುವನು ವರ್ಷಕ್ಕೆ ಒಂದು ಗೊತ್ತಾದ ದಿನ, ನದಿಯ ತೀರ, ಹೊಳೆಯ ದಡ, ತೋಪು, ಬೆಟ್ಟದ ತಪ್ಪಲು ಮುಂತಾದ ವಿಶಾಲ ಪ್ರದೇಶದಲ್ಲಿ ತನ್ನ ದರ್ಬಾರು ನಡೆಸುತ್ತಿದ್ದ. ಇವನ ಜೊತೆಯಲ್ಲಿ ಅನೇಕ ಜನರಿರುತ್ತಿದ್ದರು. ಇವರೆಲ್ಲರ ಊಟ ಎಲೆ ಅಡಿಕೆ ಹೊಗೆಸೊಪ್ಪು, ಖರ್ಚನ್ನೂ ಫಿರ್ಯಾದಿಯೇ ಕೊಡಬೇಕಾಗುತ್ತಿತ್ತು. ಮೇಲುನಾಡಗೌಡ, ನಾಲ್ಕು ಐದು ದಿನ ಸಾಂಗವಾಗಿ ವ್ಯಾಜ್ಯ ಸ್ವರೂಪವನ್ನು ವಿಚಾರಿಸಿ ಬುದ್ಧಿವಂತಿಕೆಯ ಪ್ರಶ್ನೆಗಳನ್ನು ಹಾಕಿ ಬಹುಮಟ್ಟಿಗೆ ನಿಜಾಂಶವನ್ನು ಕಂಡುಹಿಡಿದು ಸಮರ್ಪಕವಾಗಿ ತೀರ್ಪನ್ನು ಕೊಡುತ್ತಿದ್ದ. ಮೇಲುನಾಡಗೌಡನೂ ತುಂಬ ಧನಿಕನೇ ಆಗಿರುತ್ತಿದ್ದುದರಿಂದ ಬಂದಿದ್ದವರಿಗೆಲ್ಲ ಪಾನಕ ಫಲಾಹಾರ ಪಂಚಾಮೃತ ಮುಂತಾದುವನ್ನು ತನ್ನ ಖರ್ಚಿನಿಂದಲೇ ಹಂಚಿಸುತ್ತಿದ್ದ. ಮೇಲುನಾಡಗೌಡನ ಸಭೆ ರಾಜ ದರ್ಬಾರಿನಂತೆಯೇ ಇರುತ್ತಿತ್ತು. ಇಂಥ ನ್ಯಾಯ ತೀರ್ಮಾನದ ಕಾಲದಲ್ಲಿ ಹಳ್ಳಿಯ ಕುಸ್ತಿಗಳು, ಕತ್ತಿಪಟ್ಟಾವರಸೆಗಳು, ಯಕ್ಷಗಾನ, ಕೋಲಾಟ, ಬಸವನ ಆಟ ಮುಂತಾದ ಜನಪದ ವಿನೋದಗಳೂ ನಡೆಯುತ್ತಿದ್ದವು. ವಾದಿಯಾಗಲಿ ಪ್ರತಿಪಕ್ಷದವರಾಗಲಿ ಮೇಲುನಾಡಗೌಡನ ತೀರ್ಮಾನವನ್ನು ಒಪ್ಪದಿದ್ದಲ್ಲಿ, ಅವರಿಗೆ ಸರ್ಕಾರದ ಕೋರ್ಟಿಗೆ ಹೋಗುವುದೊಂದೇ ಉಳಿದ ದಾರಿಯಾಗಿತ್ತು.

ಈಚೆಗೆ ನಾಡಗೌಡ, ಮೇಲುನಾಡಗೌಡ ಇವರ ವಿಚಾರಣೆ ತುಂಬ ವಿರಳ. ಆದರೆ ಈಗಲೂ ಸ್ಥಳದಪಂಚಾಯಿತಿಕೆಗಳಿಂದಲೇ ವ್ಯಾಜ್ಯಗಳನ್ನು ಪರಿಹರಿಸಿಕೊಳ್ಳುವ ಮಂದಿ ಹಳ್ಳಿಗಳಲ್ಲಿದ್ದಾರೆ. (ಜಿ.ಆರ್.ಐ.)

**ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ :** 1927- . ಅಖಿಲ ಭಾರತ ಖ್ಯಾತಿಯ ಸಂಗೀತ ಕಲಾವಿದ. 1927 ಅಕ್ಟೋಬರ್ 12ರಂದು ಧಾರವಾಡ ಜಿಲ್ಲೆ ಶಿಶುನಾಳದಲ್ಲಿ ಜನಿಸಿದರು. ತಾಯಿ ಸಾಕಮ್ಮ, ತಂದೆ ಚನ್ನಬಸವಯ್ಯ. ಇವರದು ಸಂಗೀತದ ವಾತಾರವಣವಿದ್ದ ಮನೆತನ. ಚೆನ್ನಬಸವಯ್ಯನವರ ಅಣ್ಣ ಬಸವಲಿಂಗಯ್ಯ ಪುರಾಣ ಹಾಗೂ ಕೀರ್ತನ ಕಲೆಯಲ್ಲಿ ನಿಷ್ಣಾತರಾಗಿದ್ದರು. ದಾಸರ ಪದ ಮತ್ತು ಶಿಶುನಾಳ ಶರೀಫರ ಪದಗಳನ್ನು ಅವರು ಸದಾ ಹಾಡುತ್ತಿದ್ದರು. ಮನೆಯಲ್ಲಿ ಶಾಸ್ತ್ರೀಯವಾಗಿ ಸಂಗೀತ ಅಭ್ಯಾಸ ನಡೆಸದಿದ್ದರೂ ಆ ಕಡೆಗೆ ತುಂಬ ಒಲವಿತ್ತು. ಊರು ಹಾಗೂ ಕುಟುಂಬದ ಸಂಗೀತ ಪರಿಸರ ಬಾಲಕ ಪಂಚಾಕ್ಷರಿ ಸ್ವಾಮಿಯ ಮೇಲೆ ಪ್ರಭಾವ ಬೀರಿದುವು. ತಮ್ಮ ಎಳೆಯ ವಯಸ್ಸಿನಲ್ಲೇ ಸಂಗೀತ ಕಲಿಯಲು ಗುರುಕುಲವನ್ನು ಸೇರಿದರು. ಗದಗಿನ ವೀರೇಶ್ವರ ಪುಣ್ಯಾಶ್ರಮದ ಉಭಯಗಾನ ವಿಶಾರದ ಪಂಚಾಕ್ಷರಿ ಬುವಾ ಇವರ ಗುರುಗಳಾಗಿದ್ದರು. ಅವರಲ್ಲಿ ಹತ್ತು ವರ್ಷ ಗ್ವಾಲಿಯರ್ ಶೈಲಿಯ ಸಂಗೀತಾಭ್ಯಾಸ ನಡೆಸಿದರು. ಅನಂತರ ಮಲ್ಲಿಕಾರ್ಜುನ ಮನ್ಸೂರರ ಬಳಿ ಜಯಪುರ್-ಅತ್ರೌಲಿ ಘರಾನ ಶೈಲಿಯನ್ನು ಅಭ್ಯಾಸ ಮಾಡಿದರು. ಇದರಿಂದ ಇವರು ಗ್ವಾಲಿಯರ್ ಹಾಗೂ ಜಯಪುರ್-ಅತ್ರೌಲಿ ಘರಾನದ ಸಮ್ಮಿಶ್ರಣದ ಮಧುರ ಗಾಯನದ ಶೈಲಿಯಲ್ಲಿ ನಿಷ್ಣಾತರಾದರು. ಮಲ್ಲಿಕಾರ್ಜುನ ಮನ್ಸೂರ್ ಅವರೊಂದಿಗೆ ಇವರು ಭಾರತದ ಎಲ್ಲೆಡೆ ಕಾರ್ಯಕ್ರಮಗಳನ್ನು ನೀಡಿದ್ದಾರೆ. ಇದಲ್ಲದೆ ಆಕಾಶವಾಣಿ ಹಾಗೂ ದೂರದರ್ಶನಗಳ ಮೊದಲ ದರ್ಜೆಯ ಕಲಾವಿದರಾಗಿಯೂ ಸೇವೆ ಸಲ್ಲಿಸಿದ್ದಾರೆ. ಜಯಪುರ್-ಅತ್ರೌಲಿ ಘರಾನದಲ್ಲಿ ಇನ್ನೂ ಹೆಚ್ಚಿನ ಅಧ್ಯಯನ ಕೈಗೊಳ್ಳಲು ಮೂರು ವರ್ಷಗಳ ಕಾಲ ಕೊಲ್ಲಾಪುರದಲ್ಲಿ ನೆಲಸಿ ಬುವಾ ಸರನಾಯ್ಕರವರಲ್ಲಿ ಶಿಷ್ಯವೃತ್ತಿಯನ್ನು ಕೈಗೊಂಡರು.

ಇವರು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ವಿಭಾಗದಲ್ಲಿ ಸಂಗೀತದ ಉಪನ್ಯಾಸಕರಾಗಿಯೂ ದುಡಿದಿದ್ದಾರೆ. ಆಕಾಶವಾಣಿಯ ಸಂಗೀತ ಸಮ್ಮೇಳನಗಳು, ರಾಷ್ಟ್ರೀಯ ಕಾರ್ಯಕ್ರಮಗಳು, ಪ್ರತಿ ಮಂಗಳವಾರ ಪ್ರಸಾರವಾಗುವ ಆಕಾಶವಾಣಿ ಕಾರ್ಯಕ್ರಮಗಳಲ್ಲಿ ಹಲವಾರು ಬಾರಿ ಹಾಡಿದ್ದಾರೆ. ಯುರೋಪ್, ಅಮೆರಿಕ ದೇಶಗಳಿಗೆ ಹಲವು ಭಾರಿ ಭೇಟಿ ನೀಡಿ ಸಂಗೀತ ಕಛೇರಿಯ ಜೊತೆಗೆ ಸಂಗೀತ ಪಾಠವನ್ನೂ ಹೇಳಿಕೊಟ್ಟಿದ್ದಾರೆ.

ಇವರು ಜಯಪುರ್-ಅತ್ರೌಲಿ ಘರಾನ ಶೈಲಿಯಲ್ಲಿ ಅನೇಕ ಶಿಷ್ಯರನ್ನು ಬೆಳೆಸಿದ್ದಾರೆ. ಬನಾರಸ್ ಹಿಂದು ವಿಶ್ವವಿದ್ಯಾಲಯದ ಸರಯೂ ಆರ್. ಸೊನ್ನಿ, ಮುಂಬಯಿಯ ಗೀತಾ ಜಾವಡೇಕರ್, ಅಮೆರಿಕದ ನಿರ್ಮಲ ಜಯನಂದಯ್ಯ, ಹೊನ್ನಾವರದ ಪಂ. ಷಡಕ್ಷರಿ ಬುವಾ ಯತ್ನಳ್ಳಿ, ಕರ್ನಾಟಕ ವಿಶ್ವವಿದ್ಯಾಲಯದ ಎ.ಯು.ಪಾಟೀಲ್, ಮುಕ್ತಾ, ಮುಜುಮದಾರ್, ಶಶಿಕಲಾ, ವಿ. ಜಾವಡಿ, ಮೃತ್ಯುಂಜಯ, ಅಗಡಿ ಹಾಗೂ ಬೆಂಗಳೂರಿನ ನಾಗರಾಜರಾವ್ ಹವಾಲ್ದಾರ್ ಮೊದಲಾದವರನ್ನು ಈ ನಿಟ್ಟಿನಲ್ಲಿ ಹೆಸರಿಸಬಹುದು.

ಇವರು ಸಂಗೀತ ಕ್ಷೇತ್ರಕ್ಕೆ ಸಲ್ಲಿಸಿದ್ದ ಸೇವೆಯನ್ನು ಗುರುತಿಸಿ ಅನೇಕ ಸಂಘಸಂಸ್ಥೆಗಳು ಹಾಗೂ ಸರ್ಕಾರ ಇವರನ್ನು ಗೌರವಿಸಿದೆ. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಕರ್ನಾಟಕ ಕಲಾತಿಲಕ ಪ್ರಶಸ್ತಿ (1988-89), ಕರ್ನಾಟಕ ರಾಜ್ಯ ಪ್ರಶಸ್ತಿ (1994) ಇವರಿಗೆ ಲಭಿಸಿವೆ. ನಾದಬ್ರಹ್ಮ ಸಂಗೀತಕಲಾನಿಧಿ, ಲಯಬ್ರಹ್ಮ - ಇವು ಇವರಿಗೆ ಸಂದಿರುವ ಕೆಲವು ಬಿರುದುಗಳು. ಪುಟ್ಟರಾಜ ಸಮ್ಮಾನ (2002) ಹಾಗೂ ಕನಕ-ಪುರಂದರ ಪ್ರಶಸ್ತಿಗಳೂ ಇವರಿಗೆ ದೊರತಿವೆ.

ಇವರು ಬಸವಣ್ಣ ಹಾಗೂ ಅಕ್ಕಮಹಾದೇವಿಯ ವಚನಗಳನ್ನು ಹಾಡಿ ಅಕ್ಕಕೇಳವ್ವ ಎಂಬ ಧ್ವನಿಸುರುಳಿಯನ್ನು ತಂದಿದ್ದಾರೆ. ಚೆನ್ನೈನ ಶ್ರುತಿ ಪ್ರತಿಷ್ಠಾನ ತನ್ನ ಸಂಗ್ರಹಾಲಯಕ್ಕಾಗಿ ಇವರಿಂದ ಇನ್ನೂರು ರಾಗಗಳನ್ನು ಹಾಡಿಸಿ ಕಾಯ್ದಿರಿಸಿದೆ. (ಎಚ್.ಆರ್.ಎಲ್.)

**ಪಂಜೆ ಮಂಗೇಶರಾವ್:** 1874-1937. ಕನ್ನಡ ಮಕ್ಕಳ ಸಾಹಿತ್ಯದ ಪಿತಾಮಹರು. ಸಣ್ಣಕಥೆ, ಕಥನಕವನ, ಹರಟೆ - ಈ ಮುಂತಾದ ಕ್ಷೇತ್ರಗಳಲ್ಲಿ ಹಿರಿಯ ಕೆಲಸ ಮಾಡಿದ್ದಾರೆ. ಜನಿಸಿದ್ದು ಬಂಟ್ವಾಳದಲ್ಲಿ 22-

2-1874ರಂದು. ತಂದೆ ರಾಮಪ್ಪಯ್ಯ, ತಾಯಿ ಸೀತಾ. ಇವರ ಹೆಸರಿನ ಜೊತೆಗಿರುವ ಪಂಜೆ ಇವರ ಪೂರ್ವಿಕರಿದ್ದ ಸ್ಥಳ. ಮುಂದೆ ಇದು ಇವರ ಮನೆತನದ ಹೆಸರೇ ಆಯಿತು. ಇವರ ತಂದೆ ಊರಿನ ಶಾನುಭೋಗರಾಗಿದ್ದರು. ತಂದೆಯವರ ಸದಾಚಾರ, ದೈವಿಭಕ್ತಿ, ಸರಳತೆಗಳೂ ತಾಯಿಯ ಧಾರ್ಮಿಕತೆ, ಪರೋಪಕಾರ ಬುದ್ಧಿಗಳೂ ಇವರ ಎಳೆಯ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮ ಬೀರಿದುವು. ಮನೆಯಲ್ಲಿ ನಡೆಯುತ್ತಿದ್ದ ಭಜನೆ, ಕೀರ್ತನೆ, ಪ್ರವಚನ ಮುಂತಾದವುಗಳ ವಾತಾವರಣ ಇವರಿಗೆ ವಾಚನಾಭಿರುಚಿಯನ್ನೂ ಪದ್ಯ ಹಾಡುವುದನ್ನೂ ಮೈಗೂಡಿಸಿತು. ತಾಯಿ ಹೇಳುತ್ತಿದ್ದ ಕಥೆಗಳು ಇವರಿಗೆ ಮುಂದೆ ಕಥೆ ಹೇಳುವ ಕಲೆಗೆ ಬೀಜ ಹಾಕಿದುವು.

ಬಂಟ್ವಾಳದ ಶಾಲೆಯಲ್ಲಿ ಪಂಜೆಯವರ ಆರಂಭದ ವ್ಯಾಸಂಗ ನಡೆಯಿತು. ಓದಿನ ಜತೆಗೆ ಬಗೆಬಗೆಯ ಆಟಗಳಲ್ಲೂ ಬರೆವಣಿಗೆಯಲ್ಲೂ ಆಸಕ್ತಿವಹಿಸಿದರು. ಈ ಸಮಯದಲ್ಲಿಯೇ ಇವರಲ್ಲಿ ನಾದಪ್ರಿಯತೆ ಪ್ರಾಸಪ್ರಿಯತೆ ಚಮತ್ಕಾರಪ್ರಿಯತೆ ವಿನೋದಪ್ರಿಯತೆ ಈ ಗುಣಗಳೂ ಬೆಳೆದುವು.

ಪ್ರೌಢವ್ಯಾಸಂಗಕ್ಕೆಂದು ಪಂಜೆಯವರು ಮಂಗಳೂರಿಗೆ ಹೋದರು. ಆ ಅವಧಿಯಲ್ಲಿ ತಂದೆಯ ತೀವ್ರ ಅನಾರೋಗ್ಯದ ವಾರ್ತೆ ಬಂದು ಬಂಟ್ವಾಳವನ್ನು ಕಾಲುನಡಗೆಯಲ್ಲೇ ತಲಪಿದರು.ತಂದೆ ಕುಡಿಯಬೇಡ, ನೀತಿಯನ್ನು ಬಿಡಬೇಡ, ಎಷ್ಟೇ ಕಷ್ಟಬಂದರೂ ತಂಗಿತಮ್ಮಂದಿರನ್ನು ತೊರೆಯಬೇಡ ಎಂದು ಕೊನೆಯ ಉಪದೇಶವನ್ನು ಕೊಟ್ಟು ಮಗನನ್ನು ಬೀಳ್ಕೊಂಡರು. ತಂದೆಯವರ ಈ ಉಪದೇಶ ಮುಂದೆ ಇವರಿಗೆ ದಾರಿದಾಪವಾಯಿತು. ತಮ್ಮ ಹದಿನಾರನೆಯ ವಯಸ್ಸಿನಲ್ಲಿ ಸಂಸಾರದ ಹೊರೆಯನ್ನು ಹೊತ್ತು ಪಂಜೆಯವರು ಬೇರೆ ಬೇರೆ ತರಗತಿಯ ವಿದ್ಯಾರ್ಥಿಗಳಿಗೆ ಪಾಠ ಹೇಳಿ ಸಂಸಾರ ನಿರ್ವಹಿಸಿ, ತಾವೂ ಕಲಿತು ಬೆಳೆದರು. 1894ರಲ್ಲಿ ಬೆನಗಲ್ ರಾಮರಾಯರ ಸಹೋದರಿ ಗಿರಿಜಾಬಾಯಿಯನ್ನು ಇವರು ಮದುವೆಯಾದರು.

ಮಂಗಳೂರು ಸರ್ಕಾರಿ ಕಲಾಶಾಲೆಯಲ್ಲಿ 1896ರಲ್ಲಿ ಇವರಿಗೆ ಸಹಾಯಕ ಕನ್ನಡ ಪಂಡಿತರ ಕೆಲಸ ದೊರೆಯಿತು (ಈ ಹುದ್ದೆಗೆ ನಂದಳಿಕೆ ಲಕ್ಷ್ಮೀನಾರಾಯಣಯ್ಯನವರು (ಮುದ್ದಣ್ಣ) ಅರ್ಜಿ ಹಾಕಿದ್ದರೂ ಆಂಗ್ಲಭಾಷೆ ಬಲ್ಲವರೆಂಬ ಕಾರಣದಿಂದ ಪಂಜೆಯವರೇ ನೇಮಕಗೊಂಡರು) ಶಾಲೆಯಲ್ಲಿ ಪಾಠ ಮಾಡುವಾಗ ಪದ್ಯಗಳನ್ನು ಅರ್ಥವತ್ತಾಗಿಯೂ ಭಾವಪ್ರಚೋದಕವಾಗಿಯೂ ಸಾಭಿನಯವಾಗಿಯೂ ಹಾಡಿ ಕಲಿಸುತ್ತಿದ್ದರು. ಗದ್ಯವನ್ನೂ ರಸವತ್ತಾಗಿ ಹೇಳಿಕೊಡುತ್ತಿದ್ದ ಇವರು ವಿದ್ಯಾರ್ಥಿಗಳಲ್ಲಿ ಬಹುಬೇಗ ಜನಪ್ರಿಯರಾದರು. ಅನಂತರ ಮದರಾಸಿಗೆ ಹೋಗಿ ಎಲ್.ಟಿ.ಪದವಿ ಪಡೆದ ಪಂಜೆಯವರು ಮಂಗಳೂರು ಶಿಕ್ಷಕರ ತರಬೇತು ಕಾಲೇಜು ಹಾಗೂ ಮಡಿಕೇರಿ ಸರ್ಕಾರಿ ಕಾಲೇಜುಗಳಲ್ಲಿ ಉಪಾಧ್ಯಾಯರಾಗಿ, ಮುಖ್ಯೋಪಾಧ್ಯಾಯರಾಗಿ, ಮಂಗಳೂರು ರೇಂಜಿನಲ್ಲಿ ಡೆಪ್ಯುಟಿ ಎಜ್ಯುಕೇಷನಲ್ ಇನ್ಸ್‌ಪೆಕ್ಟರಾಗಿಯೂ ಸೇವೆ ಸಲ್ಲಿಸಿ, ಶೈಕ್ಷಣಿಕ ಕ್ಷೇತ್ರದಲ್ಲಿ ಹಲವಾರು ಸುಧಾರಣೆಗಳನ್ನು ತಂದರು.

ಪಂಜೆಯವರು ತಮ್ಮ ಉಪಾಧ್ಯಾಯ ವೃತ್ತಿಯ ಜೊತೆಗೆ ಬರೆವಣಿಗೆಯನ್ನೂ ನಡೆಸಿಕೊಂಡು ಬಂದರು. 1900ರಲ್ಲಿ ಮಂಗಳೂರಿನಲ್ಲಿ ಬೋಳಾರ ವಿಠಲರಾಯರು ಪ್ರಾರಂಭಿಸಿದ ಸುವಾಸಿನಿ ಎಂಬ ಪತ್ರಿಕೆ ಇವರ ಸಾಹಿತ್ಯಕ್ಷೇತ್ರದ ದುಡಿಮೆಗೆ ಒಳ್ಳೆಯ ನೆರವಿತ್ತಿತ್ತು. ಸಂಪಾದಕರಾಗಿ ಬೆನಗಲ್ ರಾಮರಾಯರಿದ್ದರೂ ಎಲ್ಲ ಕಾರ್ಯವನ್ನೂ ಇವರೇ ನಿರ್ವಹಿಸುತ್ತಿದ್ದರು. ಆ ಪತ್ರಿಕೆಯಲ್ಲಿ ಇವರು ಬರೆದ ನನ್ನ ಚಿಕ್ಕತಂದೆ, ನನ್ನ ಚಿಕ್ಕತಂದೆಯ ಉಯಿಲು, ಕಮಲಪುರದ ಹೋಟ್ಲಿನಲ್ಲಿ ಮುಂತಾದ ಸರಸವಿನೋದದ ಕಥೆಗಳೂ ಪೃಥುಲಾ, ದುರ್ಗಾವತಿ ಮುಂತಾದ ಐತಿಹಾಸಿಕ ಕಥೆಗಳೂ ಪ್ರಕಟವಾದುವು. ಈ ಲೇಖನವ್ಯವಸಾಯದಲ್ಲಿ ಇವರು ವಸ್ತುನಿರೂಪಣೆಗೆ ಉಚಿತವಾದ ಶೈಲಿಯನ್ನು ರೂಪಿಸಿದರು. ಮಣ್ಣಿನ ವಾಸನೆಯ ನುಡಿಗಟ್ಟುಗಳನ್ನು ಬಳಸಿ, ಸರಳತೆಯ ತಳಹದಿಯಲ್ಲಿ ಕನ್ನಡಕ್ಕೆ ಹೊಸ ಚೇತನವನ್ನುಂಟುಮಾಡಿದರು. ಮಂಗಳೂರಿನ ಬಾಸೆಲ್ ಮಿಶನ್ನಿನ ಸತ್ಯದೀಪಿಕೆಯಲ್ಲಿ ಪಂಜೆಯವರು ಆಗಾಗ ಲಘುಪ್ರಬಂಧಗಳನ್ನೂ ಹರಟೆಯ ಮಲ್ಲ ಎಂಬ ಹೆಸರಿನಿಂದ ಪ್ರಚಲಿತ ವಿಷಯಗಳ ವಿಮರ್ಶೆ ವಿಡಂಬನೆಗಳನ್ನೂ ಪ್ರಕಟಿಸಿದರು.

ಪಂಜೆಯವರು ಮಡಿಕೇರಿಯ ಸೆಂಟ್ರಲ್ ಪ್ರೌಢಶಾಲೆಯ ಮುಖ್ಯೋಪಾಧ್ಯಯರಾಗಿದ್ದಾಗ ಕೊಡಗಿನ ಚೆಲುವು ಮತ್ತು ಆ ನಾಡವರ ಜೀವನವನ್ನು ಕುರಿತು ಬರೆದ ಹುತ್ತರಿ ಹಾಡು ಕೊಡಗಿನ ರಾಷ್ಟ್ರಗೀತದಂತಿದೆ. ಹಾಗೆಯೇ ಇವರು ತುಳು ಜನಪದ ಸಾಹಿತ್ಯದಿಂದ ಆಯ್ದುಕೊಂಡು ಬರೆದ ಕೋಟಿ ಚನ್ನಯ್ಯ ಎಂಬುದೂ ಅತ್ಯುತ್ತಮ ಕೃತಿ. ಇವರು ಕಾಲಕಾಲಕ್ಕೆ ಬರೆದು ಪ್ರಕಟಿಸಿದ ಕವನಗಳನ್ನು ಸಂಗ್ರಹಿಸಿ ಬಾಸೆಲ್ ಮಿಶನ್ ಕನ್ನಡ ಮೊದಲನೆಯ ಪುಸ್ತಕ ಎಂಬ ಹೆಸರಿನಿಂದ ಪ್ರಕಟಿಸಿತು (1912). ಅನಂತರ 1919ರಲ್ಲಿ ಇದೇ ಸಂಸ್ಥೆಯಿಂದ ಇವರ ಕನ್ನಡ ಎರಡನೆಯ ಪುಸ್ತಕವೂ ಪ್ರಕಟವಾಯಿತು. ಪಂಜೆಯವರು ಅಜ್ಜಿ ಸಾಕಿದ ಮಗು. ಇಲಿಗಳ ಥ‌ಕ್ಕಥೈ, ಕೊಕ್ಕೋಕೋ ಕೋಳಿ, ಗುಡುಗುಡು ಗುಮ್ಮಟದೇವ, ಬೊಕ್ಕಬಾಯಿ ಕೊಕ್ಕೆರಾಜ, ಮಾತಾಡೋ ರಾಮಪ್ಪ, ಮೂರು ಕರಡಿಗಳು ಮುಂತಾದವನ್ನು ಮಕ್ಕಳಿಗಾಗಿ ಬರೆದಿದ್ದಾರೆ. ಪಂಜೆಯವರು ಮಕ್ಕಳ ಸಾಹಿತ್ಯದ ಪ್ರಕಟಣೆ ಪ್ರಚಾರಗಳಿಗೆಂದೇ ಮಂಗಳೂರಿನಲ್ಲಿ 1921ರಲ್ಲಿ ಬಾಲಸಾಹಿತ್ಯ ಮಂಡಲ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಮಕ್ಕಳಿಗೆ ಒಳ್ಳೆಯ ಸಾಹಿತ್ಯವನ್ನು ಒದಗಿಸುವುದರಲ್ಲಿ ಈ ಸಂಸ್ಥೆ ವಹಿಸಿದ ಪಾತ್ರ ಸ್ಮರಣೀಯ. ಮೂಡಬಿದಿರೆಯ ಹೊಸ ಬಸದಿಯ ಶಿಲಾಶಾಸನಗಳು, ಬಿಳಗಿ ಅರಸರ ವಂಶಾವಳಿ ಮುಂತಾದ ಪಂಜೆಯವರ ಹಲವು ಸಂಶೋಧನಾ ಲೇಖನಗಳು ಪಂಚಕಜ್ಜಾಯ ಎಂಬ ಹೆಸರಿನಲ್ಲಿ 1927ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ.

ಕನ್ನಡ ಸಾಹಿತ್ಯ ಪರಿಷತ್ತಿನೊಂದಿಗೆ ಪಂಜೆಯವರು ನಿಕಟ ಸಂಪರ್ಕ ಹೊಂದಿದ್ದರು. ಮದರಾಸು ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳ ಕನ್ನಡ ವಿಭಾಗದ ಸದಸ್ಯರಾಗಿಯೂ ಸೇವೆಸಲ್ಲಿಸಿದ್ದಾರೆ. ಪಂಜೆಯವರ ನಾಡುನುಡಿಗಳ ಸೇವೆಯನ್ನು ಗಮನಿಸಿ ಕನ್ನಡದ ಜನತೆ ಇವರನ್ನು ರಾಯಚೂರಿನಲ್ಲಿ 1934ರಲ್ಲಿ ನಡೆದ 20ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತು.

ಪಂಜೆ ಮಂಗೇಶರಾಯರು ತಮ್ಮ ಕೊನೆಯ ದಿನಗಳನ್ನು ಹೈದರಾಬಾದಿನಲ್ಲಿ ತಮ್ಮ ಮಕ್ಕಳ ಮನೆಯಲ್ಲಿದ್ದುಕೊಂಡು ಕಳೆದರು. ಮೈಸೂರು ವಿಶ್ವವಿದ್ಯಾನಿಲಯಕ್ಕಾಗಿ ಕುಮಾರವ್ಯಾಸ ಭಾರತವನ್ನು ಸಂಪಾದಿಸುವ ಕೆಲಸದಲ್ಲಿ ತೊಡಗಿದ್ದರು. ಆದರೆ ನ್ಯುಮೋನಿಯ ಜ್ವರಕ್ಕೆ ತುತ್ತಾಗಿ 1937 ಸಪ್ಟೆಂಬರ್ 25ರಂದು ತೀರಿಕೊಂಡರು.

1974ರಲ್ಲಿ ಪಂಜೆಯವರ ಜನ್ಮಶತಾಬ್ಧಿ ವರ್ಷವನ್ನು ನಾಡಿನಾದ್ಯಂತ ಆಚರಿಸಲಾಯಿತು. ಆ ಸಂದರ್ಭದಲ್ಲಿಇವರ ಬರೆಹಗಳನ್ನು ಮೂರು ಸಂಪುಟಗಳಲ್ಲಿ ಓರಿಯಂಟ್ ಲಾಂಗಮನ್ ಸಂಸ್ಥೆಯವರು ಪ್ರಕಟಿಸಿದ್ದಾರೆ. (ಟಿ.ಜಿ.ಕೆ.ಬಿ.)

**ಪಂಡರೀಬಾಯಿ, ಎಂ. :** 1928-2003. ಕನ್ನಡ ರಂಗಭೂಮಿ ಮತ್ತು ಚಲನಚಿತ್ರ ಕಲಾವಿದೆ; ಚಿತ್ರನಿರ್ಮಾಪಕಿ. ಜನಿಸಿದ್ದು ಉತ್ತರ ಕನ್ನಡ ಜಿಲ್ಲೆಯ ಭಟ್ಕಳದಲ್ಲಿ. ತಂದೆ ರಂಗರಾಯರು ಪ್ರಸಿದ್ಧ ಕೀರ್ತನ ಕಾರರಾಗಿದ್ದರು. ತಾಯಿ ಶಿಕ್ಷಕಿ. ಬಡತನ ಮತ್ತು ಊರಿಂದೂರಿಗೆ ಸಂಚಾರ ಇವುಗಳಿಂದಾಗಿ ಇವರ ಓದು ಪ್ರಾಥಮಿಕ ಶಿಕ್ಷಣಕ್ಕೆ ಕೊನೆಗೊಂಡಿತು. ಒಳ್ಳೆಯ ಕಂಠಶ್ರೀ ಪಡೆದಿದ್ದ ಇವರು ತಂದೆಯಿಂದ ಕೀರ್ತನಕಲೆಯನ್ನು ಕಲಿತು. ನಾಡಿನ ನಾನಾ ಭಾಗಗಳಲ್ಲಿ ಅನೇಕ ಕೀರ್ತನೆಗಳನ್ನು ಮಾಡಿ ಒಳ್ಳೆಯ ಹೆಸರನ್ನು ಗಳಿಸಿದರು. ನಾಟಕ ಕಲೆಯ ಬಗ್ಗೆಯೂ ಅಭಿರುಚಿ ಬೆಳೆಸಿಕೊಂಡ ಇವರು ತಮ್ಮ ಸಹೋದರ ವಿಮಲಾನಂದದಾಸರು ನಡೆಸುತ್ತಿದ್ದ ಆದರ್ಶ ನಾಟಕ ಸಂಘದಲ್ಲಿ ಚಿಕ್ಕ ಪಾತ್ರಗಳನ್ನು ಅಭಿನಯಿಸಿದರು. ಅನಂತರ ಟಿ.ಚೌಡಯ್ಯನವರ ಮೂಲಕ ಚಿತ್ರರಂಗವನ್ನು ಪ್ರವೇಶಿಸಿ ವಾಣಿ ಎಂಬ ಚಿತ್ರದಲ್ಲಿ ಪ್ರಥಮ ಬಾರಿಗೆ ಅಭಿನಯಿಸಿದರು.

ಎಚ್.ಎಲ್.ಎನ್.ಸಿಂಹ ಅವರು ನಿರ್ದೇಶಿಸಿದ ಬೇಡರ ಕಣ್ಣಪ್ಪ ಚಿತ್ರದಲ್ಲಿ ಅಭಿನಯಿಸಿ, ಚಿತ್ರರಂಗದಲ್ಲಿ ಜನಪ್ರಿಯತೆಯನ್ನು ಗಳಿಸಿ, ಗುಣಸಾಗರಿ, ಭಕ್ತಗೋರ ಕುಂಬಾರ, ರಾಜಾವಿಕ್ರಮ ಚಿತ್ರಗಳ ನಾಯಕಿಯಾಗಿ ಅಭಿನಯಿಸಿದರು. ಹರಿಶ್ಚಂದ್ರ ಚಿತ್ರದ ಮೂಲಕ ಸುಪ್ರಸಿದ್ಧ ತಾರೆಯಾಗಿ, ಅನೇಕ ಪ್ರಶಸ್ತಿಗಳನ್ನು ಪಡೆದರು. ಕನ್ನಡ ಚಿತ್ರಗಳಲ್ಲದೆ, ತಮಿಳು ಹಿಂದಿ ಮಲೆಯಾಳಂ ತೆಲುಗು ಮರಾಠಿ ಮತ್ತು ತುಳು ಚಿತ್ರಗಳಲ್ಲೂ ಇವರು ಅಭಿನಯಿಸಿದ್ದಾರೆ. ತಮಿಳಿನ ಪರಾಶಕ್ತಿ, ಹಿಂದಿಯ ಬಾಬಿ ಈ ಚಿತ್ರಗಳು ಇವರಿಗೆ ಒಳ್ಳೆಯ ಯಶಸ್ಸನ್ನು ತಂದುಕೊಟ್ಟವು. ಕನ್ನಡದಲ್ಲಿ ಅಬ್ಬಾ ಆ ಹುಡುಗಿ, ತೇಜಸ್ವಿನಿ - ಮುಂತಾದ ಚಿತ್ರಗಳನ್ನೂ ಇವರು ನಿರ್ಮಿಸಿದರು.

ಸಂತಸಖು, ರೇಣುಕಾಮಹತ್ಮೆ, ಭದ್ರವಿಜಯ, ಅನ್ನಪೂರ್ಣ, ಮುರಿಯದ ಮನೆ, ಮಹಾಸತಿ ಅನಸೂಯ, ಚಂದ್ರಹಾಸ, ಬೆಳ್ಳಿಮೋಡ, ಒಡಹುಟ್ಟಿದವಳು, ಮಧುರ ಮಿಲನ, ನಮ್ಮ ಮಕ್ಕಳು, ನಮ್ಮ ಮನೆ, ಗೆಜ್ಜೆ ಪೂಜೆ, ಜೇನುಗೂಡು, ಅನೇಕ ಚಿತ್ರಗಳಲ್ಲಿ ವಿಭಿನ್ನ ಪಾತ್ರಗಳಲ್ಲಿ ನಟಿಸಿದರು. ತಮಗೆ ಜೋಡಿಯಾಗಿ ನಟಿಸಿದ ರಾಜಕುಮಾರ, ಶಿವಾಜಿಗಣೇಶನ್ ಹಲವು ಚಿತ್ರಗಳಲ್ಲಿ ತಾಯಿಯಾಗಿ ಅಭಿನಯಿಸಿದರು. ಇದಲ್ಲದೇ ದಕ್ಷಿಣದ ಪ್ರಸಿದ್ಧ ನಟರಾದ ಎಂ.ಜಿ. ರಾಮಚಂದ್ರನ್, ರಜನೀಕಾಂತ್, ವಿಷ್ಣುವರ್ಧನ್, ಅಂಬರೀಶ, ಮೊದಲಾದವರ ತಾಯಿಯಾಗಿ ನಟಿಸಿದರು. ಸುಮಾರು ಆರು ದಶಕಗಳ ಕಾಲ ದಕ್ಷಿಣ ಭಾರತದ ವಿವಿಧ ಭಾಷೆಗಳಲ್ಲಿ 1200ಕ್ಕೂ ಹೆಚ್ಚು ಚಿತ್ರಗಳಲ್ಲಿ ನಟಿಸಿದರು.

ಪಂಡರೀಬಾಯಿಯವರಿಗಿದ್ದ ರಂಗಭೂಮಿಯ ಆಸಕ್ತಿಯ ಫಲವಾಗಿ ಶ್ರೀಕೃಷ್ಣ ಚೈತನ್ಯ ನಾಟಕ ಸಭಾ ಎಂಬ ಸಂಸ್ಥೆ ಜನ್ಮತಾಳಿತು. ಈ ನಾಟಕ ಸಭಾದ ಭಕ್ತಮೀರಾ, ಶಾಂತಿನಿವಾಸಂ ನಾಟಕಗಳು ಜನಪ್ರಿಯವಾಗಿವೆ.

ಇವರ ತಾರಾ ಬದುಕಿನ ಸಾಧನೆ ಗಮನಿಸಿ ಡಾ. ರಾಜಕುಮಾರ ಪ್ರಶಸ್ತಿ ನೀಡಲಾಗಿದೆ (1994-95).

ಪಂಡರೀಬಾಯಿಯವರು ತಮ್ಮ ಜೀವನದ ಐದನೆಯ ದಶಕದಲ್ಲಿ, ಮಂಡ್ಯದ ಕಲಾರಾಧಕ ಪಿ.ಎಚ್. ರಾಮರಾವ್ ಎಂಬುವರನ್ನು ವಿವಾಹವಾದರು. ಪಂಢರಾಪುರದ ಶ್ರೀ ಪಾಂಡುರಂಗಸ್ವಾಮಿ ಇವರ ಆರಾಧ್ಯದೈವ. ಇದರ ಪ್ರತೀಕವಾಗಿ ಚೆನ್ನೈನ ತಮ್ಮ ನಿವಾಸದ ಬಳಿ ಶ್ರೀಪಾಂಡುರಂಗ ದೇವಸ್ಥಾನವೊಂದನ್ನು ನಿರ್ಮಿಸಿದ್ದಾರೆ. ಪರಮ ಸಾತ್ವಿಕರಾದ ಇವರಿಗೆ ಕರ್ನಾಟಕದ ಕಲೆ, ಸಾಹಿತ್ಯ ಸಂಸ್ಕೃತಿಗಳ ಬಗ್ಗೆ ತುಂಬ ಅಭಿಮಾನವಿತ್ತು. ಚೆನ್ನೈನಲ್ಲಿ 2003 ರಲ್ಲಿ ನಿಧನರಾದರು.

(ಬಿ.ಎಸ್.ಎಸ್.ಆರ್.)

**ಪಂಡಿತ ತಾರಾನಾಥ:** 1891-1942. ಸುಪ್ರಸಿದ್ಧ ಆಯುರ್ವೇದ ವೈದ್ಯರಾಗಿದ್ದ ಇವರು, ಯೋಗಶಾಸ್ತ್ರ, ಸಂಗೀತ, ತತ್ತ್ವಜ್ಞಾನ, ಶಿಕ್ಷಣ, ಸಾಹಿತ್ಯ ಮತ್ತು ರಾಜಕಾರಣ - ಈ ಮುಂತಾದ ರಂಗಗಳಲ್ಲೂ ದುಡಿದವರು. ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರಿನಲ್ಲಿ ಜನಿಸಿದ ತಾರಾನಾಥರು ತಂದೆ ರಂಗರಾಯರಿಂದ ಸಂಸ್ಕೃತ ಮತ್ತು ಸಂಗೀತವನ್ನು ಕಲಿತರು. ಆಧ್ಯಾತ್ಮಿಕ ಜ್ಞಾನಾರ್ಜನೆಯ ಹುಚ್ಚಿನಿಂದ ಬಾಲ್ಯದಲ್ಲಿಯೇ ಸಂನ್ಯಾಸಿಗಳ ಹಿಂದೆ ಕೆಲವು ಕಾಲ ಅಲೆದಾಡಿದರು. ಅನಂತರ ಹೈದರಾಬಾದಿನ ವೈದ್ಯಕೀಯ ಕಾಲೇಜಿನಲ್ಲಿ ಸೇರಿದರಾದರೂ ವ್ಯಾಸಂಗವನ್ನು ಮಧ್ಯೆ ಬಿಟ್ಟು ಬಿದರೆಯ ಸರ್ಕಾರಿ ಶಾಲೆಯೊಂದರಲ್ಲಿ 1912ರಲ್ಲಿ ಕೆಲಸಕ್ಕೆ ಸೇರಿದರು. ಆಗ ಅಲ್ಲಿಗೆ ಆಗಮಿಸಿದ್ದ ನೇಪಾಳದ ಯೋಗಿ ಉತ್ತಮದಾಸ ಪರಮಹಂಸರು ಮತ್ತು ಯೋಗೀಶ್ವರಾನಂದರಿಂದ ಯೋಗ ಮತ್ತು ಆಯುರ್ವೇದ ದೀಕ್ಷೆಯನ್ನು ಪಡೆದರು. ನಿಜಾಮ ಸರ್ಕಾರದ ಆಡಳಿತದ ಅವ್ಯವಸ್ಥೆಯಿಂದ ನೊಂದು, ಸ್ವಾತಂತ್ರ್ಯದ ಸ್ಫೂರ್ತಿಯಿಂದ ತಾರಾನಾಥರು ತಳಮಳಿಸುತ್ತಿದ್ದರು. ವಿದ್ಯಾರ್ಥಿಗಳಲ್ಲಿ ಇವರು ಅದೇ ತಳಮಳವನ್ನು ಉಂಟು ಮಾಡುತ್ತಿದ್ದಾರೆಂದು ಭಾವಿಸಿದ ಆಗಿನ ನಿಜಾಮ ಸರ್ಕಾರ ತಾರಾನಾಥರನ್ನು ಬಿದರೆಯಿಂದ ರಾಯಚೂರಿಗೂ ಅನಂತರ ನಿರ್ಮಲಿಗೂ ವರ್ಗ ಮಾಡಿತು. ಇದರಿಂದ ಸಿಡಿದೆದ್ದ ತಾರಾನಾಥರು ಸರ್ಕಾರಿ ಕೆಲಸಕ್ಕೆ ರಾಜೀನಾಮೆ ಕೊಟ್ಟು ರಾಯಚೂರಿನಲ್ಲಿ ಹಮ್‌ದರ್ದ್ ಹೈಸ್ಕೂಲ್ ಎಂಬ ಖಾಸಗಿ ಶಾಲೆಯನ್ನು 1920ರ ಯುಗಾದಿಯಂದು ಪ್ರಾರಂಭಿಸಿದರು. ಭಾರತದ ಸ್ವಾತಂತ್ರ್ಯ ಚಳವಳಿಯಲ್ಲಿ ಧುಮುಕಿ ಆದರ್ಶ ನಾಯಕರೆನಿಸಿಕೊಂಡ ಇವರನ್ನು ನಿಜಾಮ ಸರ್ಕಾರ ರಾಜ್ಯದಿಂದ ಗಡೀಪಾರು ಮಾಡಿತು. ತಾರಾನಾಥರು ಇದರಿಂದ ಧೃತಿಗೆಡದೆ, ತುಂಗಭದ್ರೆಯ ದಡದಲ್ಲಿ ತುಂಗಭದ್ರಾ ಸ್ಟೇಷನ್ ಬಳಿ ಪ್ರೇಮಾಯತನ ಎಂಬ ಆಶ್ರಮವನ್ನು ಸ್ಥಾಪಿಸಿ, ಅದನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡರು. ಅಲ್ಲಿ ಆಯುರ್ವೇದ, ಸಾಹಿತ್ಯ, ಯೋಗ, ಸಮಾಜಶಾಸ್ತ್ರ ಮತ್ತು ಪತ್ರಿಕೋದ್ಯಮಗಳಲ್ಲಿ ಶಿಕ್ಷಣಕ್ಕೆ ಏರ್ಪಾಡು ಮಾಡಿದರು. ಪ್ರೇಮ ಎಂಬ ಇಂಗ್ಲಿಷ್ ಮತ್ತು ಕನ್ನಡ ನಿಯತಕಾಲಿಕ ಪತ್ರಿಕೆಯನ್ನು ಆರಂಭಿಸಿದರು. ಆಧ್ಯಾತ್ಮಜ್ಞಾನ, ಪಂಚಭೂತಜ್ಞಾನ, ತಂತ್ರವಿದ್ಯೆ ಮತ್ತು ರಸಶಾಸ್ತ್ರಗಳಲ್ಲಿ ಪಾಂಡಿತ್ಯಪಡೆದಿದ್ದ ತಾರಾನಾಥ'ರ ಬಳಿ ನೂರಾರು ದೇಶೀಯ ವಿದ್ಯಾರ್ಥಿಗಳಿರುತ್ತಿದ್ದರು.

ತಾರಾನಾಥರು ಧರ್ಮಸಂಭವ ಅಥವಾ ಧರ್ಮದ ಮೂಲತತ್ತ್ವಗಳು (1931) ಎಂಬ ಸಾಮಾಜಿಕ ಸುಧಾರಣೆಯ ಗ್ರಂಥ, ಪ್ರಸಿದ್ಧ ರಸೌಷಧಿಗಳು, ಸುಲಭ ಚಿಕಿತ್ಸೆ ಎಂಬ ವೈದ್ಯ ಗ್ರಂಥಗಳನ್ನು ಬರೆದಿದ್ದಾರೆ. ತಾಯಂದಿರಿಗೆ ಮತ್ತು ಪತ್ರಗಳು ಎಂಬುವು ಇವರ ಇತರ ಗ್ರಂಥಗಳು.

ರಾಯಚೂರಿನಲ್ಲಿ 1937ರಲ್ಲಿ ನಡೆದ ಅಖಿಲ ಭಾರತ ಆಯುರ್ವೇದ ಮತ್ತು ಯುನಾನಿ ಆನುವಂಶಿಕ ವೈದ್ಯರ ಸಮ್ಮೇಳನಕ್ಕೆ ಇವರು ಅಧ್ಯಕ್ಷರಾಗಿದ್ದರು. (ಜಿ.ಆರ್.ಪಿ.)

**ಪಂಡಿತಾರಾಧ್ಯ :** ವೀರಶೈವ ಆಚಾರ್ಯರು. ಇವರು ಶಿವದೀಕ್ಷಾದಿ ಧರ್ಮಕಾರ್ಯಗಳಲ್ಲಿ ಎಸಗುವ ಪಂಚಕಲಾಶಾರಾಧನೆಯಲ್ಲಿ ಉಪಾಸ್ಯರಾಗಿರುವ ಚತುರಕ್ಷರ, ಚತುರ್ವಕ್ತ್ರ, ಧೇನುಕರ್ಣ ಮತ್ತು ಪಂಡಿತಾರಾಧ್ಯ ಎಂಬ ಹೆಸರುಗಳಿಂದ ಕ್ರಮವಾಗಿ ಶ್ರೀಶೈಲದಲ್ಲಿ ಕೃತ, ತ್ರೇತಾ, ದ್ವಾಪರ ಮತ್ತು ಕಲಿಯುಗಗಳ ಆದಿಯಲ್ಲಿ ಅವತರಿಸಿ ವೀರಶೈವ ಮತಸಿದ್ಧಾಂತವನ್ನು ಪ್ರಬೋಧಗೊಳಿಸಿದಂತೆ ಉಲ್ಲೇಖಗಳಿವೆ. ಪಾಲ್ಕುರಿಕೆ ಸೋಮನಾಥ'ನ ಗಣಸಹಸ್ರನಾಮದಲ್ಲಿಯೂ ಈ ಹೆಸರುಗಳ ಉಲ್ಲೇಖವಿದೆ.

ಆಗಮೋಕ್ತರಾದ ಇವರ ದೇಶಕಾಲಾದಿ ವಿವರಗಳು ತಿಳಿದುಬಂದಿಲ್ಲ. ವೇದೋಪನಿಷತ್ತುಗಳಿಗೆ ಭಾಷ್ಯಾದಿಗಳನ್ನು ಬರೆದಂತೆ ಲಿಂಗಧಾರಣಚಂದ್ರಿಕಾ (ನಂದಿಕೇಶ್ವರ ಕೃತ), ತೈತ್ತಿರೀಯೋಪನಿಷತ್ ಭಾಷ್ಯಂ (ವೃಷಭಪಂಡಿತಾರಾಧ್ಯ) ಎಂಬ ಗ್ರಂಥಗಳಲ್ಲಿ ಉಕ್ತವಾಗಿದೆ. ಆದರೆ ಈ ರಚನೆಗಳು ಉಪಲಬ್ಧವಿಲ್ಲ.

(ಎಂ.ಜಿ.ಎನ್.)

**ಪಂತುಲು, ಬಿ.ಆರ್. :** 1911-1974. ಕನ್ನಡ ಚಿತ್ರಗಳ ಉತ್ಕರ್ಷಕ್ಕೆ ಶ್ರಮಿಸಿದ ನಿರ್ಮಾಪಕ, ನಿರ್ದೇಶಕ ಹಾಗೂ ನಟ. ಬುಡುಗೂರು ರಾಮಕೃಷ್ಣ ಪಂತುಲು ಇವರ ಪೂರ್ಣ ಹೆಸರು. ಬಂಗಾರಪೇಟೆ ಸಮೀಪದ ಕೋಲಾರ ಜಿಲ್ಲೆ ಕುಪ್ಪಂಗೆ 11 ಕಿಮೀ ದೂರದಲ್ಲಿರುವ ಬುಡುಗೂರಿನಲ್ಲಿ 1911 ಜುಲೈ 26 ರಂದು ಜನಿಸಿದರು. ಇವರ ತಂದೆ ವೆಂಕಟಾಚಲಯ್ಯನವರು ಸ್ವಭಾವತಃ ಕಲಾ ಪ್ರೇಮಿ. ಸಂಗೀತ ಸಾಹಿತ್ಯ ನೃತ್ಯ ಮತ್ತು ನಾಟಕ ಕಲೆಯಲ್ಲಿ ಒಳ್ಳೆಯ ಅಭಿರುಚಿ ಹೊಂದಿದ್ದರು. ಇವರಿಗೆ ಐದು ಮಂದಿ ಮಕ್ಕಳು, ಮೂರು ಗಂಡು, ಎರಡು ಹೆಣ್ಣು. ಪಂತುಲು ಕಿರಿಯ ಮಗ. ಇವರ ಮಾತೃಭಾಷೆ ತೆಲುಗು. ಇವರ ಗ್ರಾಮ ಕನ್ನಡ ಮತ್ತು ತಮಿಳು ಭಾಷೆಗಳ ಕೂಡು ಪ್ರದೇಶದಲ್ಲೇ ಇದ್ದುದರಿಂದ ಬಾಲ್ಯದಿಂದಲೇ ಈ ಮೂರು ಭಾಷೆಗಳನ್ನು ಕಲಿತರು. ಇವರ ಪ್ರಾಥಮಿಕ ಶಿಕ್ಷಣ ಹುಟ್ಟೂರಿನಲ್ಲಿಯೇ ನಡೆಯಿತು. ಮುಂದಣ ವಿದ್ಯಾಭ್ಯಾಸಕ್ಕಾಗಿ ಮದರಾಸಿಗೆ ತೆರಳಿದರು. ಮದರಾಸಿನ ತೆಲುಗು ಶಾಲೆಯಲ್ಲಿ ಇವರ ವಿದ್ಯಾಭ್ಯಾಸ ಮುಂದುವರಿಯಿತು. ಮೊದಲಿನಿಂದಲೂ ನಾಟಕ ಮತ್ತು ಅಭಿನಯ ಕಲೆಯ ಬಗ್ಗೆ ಅಪಾರ ಅಭಿರುಚಿಯಿದ್ದ ಪಂತುಲು ಅವರಿಗೆ ಇಲ್ಲಿ ಅವುಗಳ ಸಮಗ್ರದರ್ಶನವಾಯಿತು. ಶಾಲಾ ಸಮಾರಂಭಗಳಲ್ಲಿ ಪ್ರಹ್ಲಾದ, ಚಂದ್ರಹಾಸ ನಾಟಕಗಳಲ್ಲಿ ಪಾತ್ರವಹಿಸಿ ಮೆಚ್ಚುಗೆ ಪಡೆದರು. ಈ ಅವಧಿಯಲ್ಲೇ ಇವರಿಗೆ ಮದರಾಸಿನಲ್ಲಿ ಬೀಡುಬಿಟ್ಟಿದ್ದ ಹಲವಾರು ತಮಿಳು, ತೆಲುಗು ನಾಟಕ ಕಂಪನಿಗಳ ಸಹವಾಸವೂ ಲಭಿಸಿತು.

ಮದರಾಸಿನಲ್ಲಿ ಇದ್ದುಕೊಂಡು ಇವರು ಹೆಚ್ಚಿನ ವಿದ್ಯಾಭ್ಯಾಸ ಮುಂದುವರಿಸಲಾಗಲಿಲ್ಲ. ಸ್ವಲ್ಪ ದಿನಗಳಲ್ಲಿಯೇ ತಮ್ಮ ತಾತನವರ ಮನೆಗೆ ಹಿಂತಿರುಗಬೇಕಾಯಿತು. ಅನಂತರ ಕೆಲವೇ ದಿನಗಳಲ್ಲಿ ಇವರಿಗೆ ಶಾಲಾ ಉಪಾಧ್ಯಾಯನ ವೃತ್ತಿ ದೊರೆಯಿತು.

ಹುಟ್ಟುಕಲಾವಿದರಾಗಿದ್ದ ಪಂತುಲು ಅವರು ಶಾಲೆಯ ಹುಡುಗರಿಗೆ ಕಲಿಸಿದ್ದು ಪಾಠ ಪ್ರವಚನಗಳನ್ನಲ್ಲ; ನಾಟಕಗಳನ್ನು. ಒಂದು ದಿನ ಶಾಲಾ ಇನ್ಸ್‌ಪೆಕ್ಟರ್ ಹಠಾತ್ತಾಗಿ ಶಾಲೆಗೆ ಭೇಟಿಕೊಟ್ಟಾಗ ಈ ಉಪಾಧ್ಯಾಯರ ಗುಟ್ಟು ರಟ್ಟಾಯಿತು. ಪರಿಣಾಮವಾಗಿ ಉದ್ಯೋಗವನ್ನು ಕಳೆದುಕೊಳ್ಳಬೇಕಾಯಿತು. ಅನಂತರ ಕಲಾಸೇವೆಯ ಉದ್ದೇಶದಿಂದ ಬೆಂಗಳೂರಿಗೆ ಬಂದರು. ಅಲ್ಲಿ ತಮ್ಮ ಸಂಬಂಧಿಕ ಹಿರಿಯರೊಬ್ಬರಾದ ಪಾಪಯ್ಯ ಎಂಬುವರ ಸಹಾಯದಿಂದ ಹೆಸರಾಂತ ಚಂದ್ರಕಲಾ ನಾಟಕ ಮಂಡಲಿಗೆ ಪದಾರ್ಪಣ ಮಾಡಿದರು. ಪ್ರಬುದ್ಧ ಕಲಾವಿದರುಗಳ ಸಂಗಮಸ್ಥಾನವಾಗಿದ್ದ ಈ ಸಂಸ್ಥೆಯ ಮಾಲಿಕರು ಮಹಮದ್ ಪೀರ್. ಈ ಕಂಪನಿಯಲ್ಲಿ ಪಂತುಲು ಅವರು ನಿರ್ವಹಿಸುತ್ತಿದ್ದ ಪಾತ್ರಗಳು ಸ್ಮರಣೀಯ. ಸಂಸಾರನೌಕ ನಾಟಕದ ಸುಂದರನ ಪಾತ್ರ ಇವರಿಗೆ ಒಳ್ಳೆಯ ಕೀರ್ತಿಯನ್ನು ತಂದುಕೊಟ್ಟಿತು. ಹಲವಾರು ವರ್ಷಗಳ ಕಾಲ ಈ ಮಂಡಲಿಯಲ್ಲಿ ಕಲಾಸೇವೆಗೈದು ಕಾರಣಾಂತರಗಳಿಂದ ಪೀರ್ ಸಾಹೇಬರ ಕಂಪನಿಯನ್ನು ಬಿಟ್ಟು ಗುಬ್ಬಿ ಕಂಪನಿ ಸೇರಿದರು. ಅಂದು ಗುಬ್ಬಿ ಕಂಪನಿಯವರು ಪ್ರಯೋಗಿಸುತ್ತಿದ್ದ ಆಶಾ ಪಾಶ ಮತ್ತು ಕೃಷ್ಣಗಾರುಡಿ ನಾಟಕಗಳಲ್ಲಿ ವಸಂತಶೇಖರ ಮತ್ತು ಧರ್ಮರಾಯನ ಪಾತ್ರವನ್ನು ವಹಿಸತೊಡಗಿದರು. ಗುಬ್ಬಿ ಕಂಪನಿಯಲ್ಲಿ ಹಲವಾರು ತಿಂಗಳ ಪರ್ಯಂತ ಪಾತ್ರವಹಿಸಿ ಹುಬ್ಬಳ್ಳಿ ಮೊಕ್ಕಾಂನಲ್ಲಿ ಕಂಪನಿಯಿಂದ ಹೊರ ಬಂದರು. ಅನಂತರ ಸ್ವತಃ ಕಂಪನಿಯನ್ನು ಸ್ಥಾಪಿಸಬೇಕೆಂಬ ಉದ್ದೇಶದಿಂದ ಬೆಂಗಳೂರಿಗೆ ಬಂದು ಪೈಲ್ವಾನ್ ಅಣ್ಣಯ್ಯಪ್ಪ ಎಂಬುವರ ಅಭಯಹಸ್ತವನ್ನು ಕೋರಿ ಬೆಂಗಳೂರಿನ ತುಳಸಿತೋಟ ಥಿಯೇಟರಿನಲ್ಲಿ ಕಲಾಸೇವಾ ಮಂಡಲಿ ಲಾಂಛನದಲ್ಲಿ ಸ್ವಂತ ಕಂಪನಿ ಆರಂಭಿಸಿದರು. ಎಚ್.ಎಲ್.ಎನ್.ಸಿಂಹ, ಎಂ.ಎಸ್. ಮಾಧವರಾವ್, ಎಂ. (ಡಿಕ್ಕಿ) ಮಾಧವರಾವ್, ಹೊಳಲ ಸುಬ್ರಹ್ಮಣ್ಯ ಶಾಸ್ತ್ರಿ ಮೊದಲಾದ ಅನೇಕ ಕಲಾವಿದರ ಒಡನಾಟ ಇಲ್ಲಿ ಕೂಡಿಬಂತು. ಸಿಂಹ ಅವರ ಸಂಸಾರನೌಕ ಕಲಾಸೇವಾಮಂಡಲಿಯ ಮುಖ್ಯನಾಟಕವಾಯಿತು. ಸುಂದರನ ಪಾತ್ರ ಪಂತುಲು ಅವರದಾಯಿತು. ಈ ಪಾತ್ರದ ಜೊತೆಗೆ ಪುರೋಹಿತ (ಸದಾರಮೆ), ರಾವಣ (ರಾಮಾಯಣ,) ನಾಯಕ (ಗುಲೇಬಕಾವಲಿ) ಮೊದಲಾದ ಪಾತ್ರಗಳನ್ನು ಅಭಿನಯಿಸಿ ಜನಪ್ರಿಯರಾದರು.

ಕನ್ನಡನಾಡಿನ ಪ್ರಮುಖ ಕೇಂದ್ರಗಳಲ್ಲದೆ ಮದರಾಸಿನ ಮೊಕ್ಕಾಂ ಅನ್ನೂ ಕಂಪನಿ ಆರಂಭಿಸಿತು. ಮದರಾಸಿನ ಸೌಂದರ್ಯಮಹಲ್‌ನಲ್ಲಿ ಸಂಸಾರನೌಕ ಪ್ರದರ್ಶನಗೊಂಡಾಗ ಅದನ್ನು ನೋಡಿ, ಮೆಚ್ಚಿ ಮದರಾಸಿನ ದೇವಿ ಫಿಲಂಸ್ ಅವರು ಆ ನಾಟಕವನ್ನು ಕನ್ನಡ ಚಲನಚಿತ್ರವಾಗಿ ತಯಾರಿಸಲು ಮುಂದೆ ಬಂದರು. ಸಿಂಹ ಅವರ ನಿರ್ದೇಶನದಲ್ಲಿ ಸಂಸಾರನೌಕ ಚಿತ್ರ ಸಿದ್ಧವಾಯಿತು. 1936ರಲ್ಲಿ ತಯಾರಾದ ಈ ಚಿತ್ರ ಕನ್ನಡದಲ್ಲೇ ಅಲ್ಲದೆ ಇಡೀ ದಕ್ಷಿಣ ಭಾರತದಲ್ಲೆ ಪ್ರಥಮ ಸಾಮಾಜಿಕ ಚಿತ್ರವೆನಿಸಿತು. ಈ ಚಿತ್ರದಲ್ಲೂ ಪಂತುಲು ಅವರು ಸುಂದರನ ಪಾತ್ರವನ್ನೇ ವಹಿಸಿದ್ದರು. ಚಿತ್ರ ಪ್ರಮುಖ ಕೇಂದ್ರಗಳಲ್ಲೆಲ್ಲ ತೆರೆಕಂಡು ಯಶಸ್ವಿಯಾಯಿತು. ಪಂತುಲು ಅವರ ಕೀರ್ತಿಯೂ ಹರಡಿತು. ಈ ಚಿತ್ರದ ಅನಂತರ ರಾಜಭಕ್ತಿ ಎಂಬ ತಮಿಳು ಚಿತ್ರದಲ್ಲಿ ದುರ್ಜಯನ ಪಾತ್ರ ವಹಿಸಿದರು. ಇದು ಪಂತುಲು ಅವರು ಅಭಿನಯಿಸಿದ ಪ್ರಥಮ ತಮಿಳು ಚಿತ್ರ. ಈ ಚಿತ್ರದ ಅಭಿನಯದಿಂದಾಗಿ ತಮಿಳುನಾಡಿನಲ್ಲಿ ಇವರ ಕೀರ್ತಿ ಹೆಚ್ಚಿತು. ಆದರೆ ಕೆಲವೇ ದಿನಗಳಲ್ಲಿ ನಾಟಕ ಕಂಪನಿಗೆ ಕ್ಷೀಣದೆಸೆ ಪ್ರಾರಂಭವಾಯಿತು. ಅನಂತರ ಪಂತುಲು ಅವರು ಮದರಾಸಿನಲ್ಲೇ ನೆಲಸಲು ಮನಸ್ಸು ಮಾಡಿದರು. ಸ್ವಲ್ಪ ದಿನಗಳಲ್ಲೇ ತ್ರಿಭಾಷಾತಾರೆ ಕನ್ನಡಿತಿ ಎಂ.ವಿ. ರಾಜಮ್ಮನವರು ನಿರ್ಮಿಸಿದ ರಾಧಾರಮಣ ಕನ್ನಡ ಚಿತ್ರಕ್ಕೆ ನಾಯಕನ ಪಾತ್ರಕ್ಕೆ ಆಯ್ಕೆಯಾದರು. ಈ ಚಿತ್ರ ಬಿಡುಗಡೆಯಾದ ಅನಂತರ ಟಿ.ಆರ್. ಮಹಾಲಿಂಗಂ ಅವರ ನಾಟಕ ಕಂಪನಿಯಲ್ಲಿ ಮ್ಯಾನೇಜರ್ ಹಾಗೂ ನಟರಾಗಿ ಶ್ರಮಿಸತೊಡಗಿದರು. ಮುಂದೆ ಲವಂಗಿ, ವಿಜಯಲಕ್ಷ್ಮೀ, ವೀಟು ಮೊದಲಾದ ಚಿತ್ರಗಳಲ್ಲಿ ಅಭಿನಯಿಸಿದರು. ಎ.ವಿ.ಎಂ. ಅವರಿಂದ ತಯಾರಾದ ವೀಟು ದಕ್ಷಿಣ ಭಾರತದಲ್ಲೆಲ್ಲ ಅಪಾರ ಜನಮನ್ನಣೆ ಗಳಿಸಿ ತಮಿಳುನಾಡಿನಾದ್ಯಂತ ಪಂತುಲು ಅವರ ಹೆಸರು ಚಿರಪರಿಚಿತವಾಯಿತು.

ಈ ಚಿತ್ರದ ಅನಂತರ ಟಿ.ಆರ್. ಮಹಾಲಿಂಗಂ ಅವರೊಡನೆ ಕೂಡಿಕೊಂಡು ಸುಕುಮಾರ ಪ್ರೊಡಕ್ಷನ್ಸ್ ಚಿತ್ರ ತಯಾರಿಕಾ ಸಂಸ್ಥೆಯನ್ನು ಸ್ಥಾಪಿಸಿದರು. ಈ ಸಂಸ್ಥೆಯ ಮೊದಲ ಚಿತ್ರ ಮಚ್ಚರೇಖಾ, ಅಲ್ಪಕಾಲದಲ್ಲೇ ಇವರಿಬ್ಬರ ಸಂಯುಕ್ತ ಉದ್ಯಮ ಬೇರೆಗೊಂಡಿತು. ಅನಂತರ ಪ.ನೀಲಕಂಠನ್ ಅವರ ಸಹಕಾರದೊಡನೆ ಪದ್ಮಿನಿ ಪಿಕ್ಚರ್ (ಮಗಳು ಪದ್ಮಿನಿಯ ಹೆಸರನ್ನೆ ಚಿತ್ರಸಂಸ್ಥೆಗಿಟ್ಟರು) ಸ್ಥಾಪಿಸಿದರು. 1954ರಲ್ಲಿ ಸಂಸ್ಥೆಯ ವತಿಯಿಂದ ಕಲ್ಯಾಣಂ ಪಣ್ಣಿಯುಂ ಬ್ರಹ್ಮಚಾರಿ ಚಿತ್ರ ನಿರ್ಮಾಣವಾಯಿತು. ಮೊದಲ ತೇದಿ ಸಂಸ್ಥೆಯ ದ್ವಿತೀಯ ಕಾಣಿಕೆ. ಮೂರನೆಯ ಚಿತ್ರ ಶಿವಶರಣೆ ನಂಬಿಯಕ್ಕನನ್ನು ಕುರಿತದ್ದು. ನಾಲ್ಕನೆಯ ಚಿತ್ರ ರತ್ನಗಿರಿ ರಹಸ್ಯ. ಈ ಚಿತ್ರದ ತಯಾರಿಕೆಯ ಮೊದಲು ಪ. ನೀಲಕಂಠನ್ ಪದ್ಮಿನಿ ಪಿಕ್ಚರ್ಸ್ ಸಂಸ್ಥೆಯಿಂದ ನಿರ್ಗಮಿಸಿದರು. 1956ರಲ್ಲಿ ತಯಾರಾದ ಈ ಕನ್ನಡ ಚಿತ್ರ ಅದ್ಭುತ ಯಶಸ್ಸು ಗಳಿಸಿ ತಂಗಮಲೈ ರಹಸ್ಯ ಎಂಬ ಹೆಸರಿನಿಂದ ತಮಿಳಿನಲ್ಲೂ ನಿರ್ಮಾಣಗೊಂಡಿತು. ಅನಂತರ ಸ್ಕೂಲ್ ಮಾಸ್ಟರ್ ಚಿತ್ರ ತಯಾರಾಯಿತು (1958). ಇದಕ್ಕೆ ಕನ್ನಡ ಚಿತ್ರಪ್ರಿಯರ ಉದಾರವಾದ ಉತ್ತೇಜನ ದೊರೆಯಿತು. ಸ್ಕೂಲ್ ಮಾಸ್ಟರ್ ಅಖಿಲ ಭಾರತ ಮಟ್ಟದಲ್ಲಿ ಪ್ರಶಸ್ತಿಪಡೆದ ಮೊದಲ ಕನ್ನಡ ಚಿತ್ರ. ಈ ಚಿತ್ರ ತೆಲುಗು ಮತ್ತು ಹಿಂದಿಯಲ್ಲೂ ತಯಾರಾಗಿ ಯಶಸ್ಸುಗಳಿಸಿತು. ಸ್ಕೂಲ್ ಮಾಸ್ಟರ್ ತೆಗೆದ ತರುಣದಲ್ಲಿಯೇ ಸುಹಾಗ್ ಹಿಂದಿ ಚಿತ್ರವನ್ನು ನಿರ್ಮಿಸಿದರು. ಇದು ಕನ್ನಡ ರತ್ನಗಿರಿ ರಹಸ್ಯದ ಹಿಂದೀ ಅವತರಣಿಕೆ. 'ಅನಂತರ ಶಬಾಷ್ ಮೀನಾ ನಿರ್ಮಿಸಿದರು. ಈ ಚಿತ್ರದ ಮೂಲಕ ಬಿ. ಸರೋಜಾದೇವಿ ತಮಿಳು ಚಿತ್ರರಂಗ ಪ್ರವೇಶಿಸಿದರು. ದಿಲ್ ತೇರಾ ದಿವಾನ ಹೆಸರಿನಲ್ಲಿ ಹಿಂದಿಯಲ್ಲಿ ಈ ಚಿತ್ರವನ್ನು ತಯಾರಿಸಿ ಅಖಿಲಾಭಾರತ ವ್ಯಾಪ್ತಿಯನ್ನು ಪಡೆದುಕೊಂಡರು.

ಈ ಚಿತ್ರದ ಅನಂತರ ಮಹಾಸಾಹಸಕ್ಕೆ ಕೈಹಾಕಿದರು. ತಮಿಳುನಾಡಿನ ಆರಾಧ್ಯ ದೇವತೆಯ ಸ್ಥಾನದಲ್ಲಿ ಮಂಡಿಸಿರುವ ವೀರಪಾಂಡ್ಯ ಕಟ್ಟಬೊಮ್ಮನ್‌ನ ಜೀವಿತೇತಿಹಾಸವನ್ನು ವರ್ಣಚಿತ್ರವಾಗಿ ತೆಗೆಯಲು ಸಂಕಲ್ಪಿಸಿ ಒಂದು ವರ್ಷದ ಕಾಲ ಶ್ರಮಿಸಿ ಚಿತ್ರವನ್ನು ಪೂರ್ಣಗೊಳಿಸಿದರು. ದಕ್ಷಿಣ ಭಾರತದ ಅನೇಕ ಪ್ರಮುಖ ಕೇಂದ್ರಗಳಲ್ಲಿ ಈ ಚಿತ್ರ ಏಕಕಾಲಕ್ಕೆ ತೆರೆಕಂಡು ಪ್ರದರ್ಶಿತವಾದೆಡೆಯಲ್ಲೆಲ್ಲ ಜಯಭೇರಿ ಬಾರಿಸಿ ಶತದಿನೋತ್ಸವವನ್ನೂ ಕಂಡಿತು. ಈ ಚಿತ್ರವನ್ನು 1959ರಲ್ಲಿ ಭಾರತದಲ್ಲಿ ತಯಾರಾದ ಅತ್ಯುತ್ತಮ ಚಿತ್ರವೆಂದು ಕೇಂದ್ರ ಸರ್ಕಾರ ಪರಿಗಣಿಸಿ ಕೈರೋದಲ್ಲಿ ನಡೆದ ಆಫ್ರೋಷ್ಯಾ ಚಲನಚಿತ್ರ ಮಹೋತ್ಸವಕ್ಕೆ ಆಯ್ಕೆಮಾಡಿತು. ಈ ಚಿತ್ರದ ಅನಂತರ ಎಂ.ವಿ. ರಾಜಮ್ಮ ಮತ್ತು ಪದ್ಮಿನಿ ಪಿಕ್ಚರ್ಸ್ ಸಂಸ್ಥೆಯ ಸಂಯುಕ್ತ ಉದ್ಯಮವಾಗಿ ಮಕ್ಕಳ ರಾಜ್ಯ ನಿರ್ಮಾಣಗೊಂಡಿತು. ಇಂದಿನ ಖ್ಯಾತ ನಿರ್ದೇಶಕ ಪುಟ್ಟಣ್ಣ ಕಣಗಾಲ್ ಈ ಚಿತ್ರದ ಮೂಲಕ ಚಿತ್ರರಂಗವನ್ನು ಪ್ರವೇಶಿಸಿದರು. ಅನಂತರ ತಯಾರಾದ ಕಿತ್ತೂರು ರಾಣಿ ಚೆನ್ನಮ್ಮನ ಜೀವಿತೇತಿಹಾಸವನ್ನೊಳಗೊಂಡ ಕಿತ್ತೂರ ಚೆನ್ನಮ್ಮ ಎಂಬ ಚಿತ್ರ ಕನ್ನಡನಾಡಿನಲ್ಲಿ ಸಾಕಷ್ಟು ಹೆಸರು ಮಾಡಿತಲ್ಲದೆ ಪ್ರಾದೇಶಿಕ ಮಟ್ಟದಲ್ಲಿ ರಾಷ್ಟ್ರ ಪ್ರಶಸ್ತಿಯನ್ನೂ ಗಳಿಸಿತು.

ಪದ್ಮಿನಿ ಚಿತ್ರಸಂಸ್ಥೆಯ ವತಿಯಿಂದ ಮೇಲಿನ ಚಿತ್ರಗಳ ಜೊತೆಗೆ ಗಾಳಿ ಗೋಪುರ, ಸಾಕುಮಗಳು, ಎಮ್ಮೆ ತಮ್ಮಣ್ಣ, ದುಡ್ಡೇ ದೊಡ್ಡಪ್ಪ, ಗಂಗೆ-ಗೌರಿ, ಚಿನ್ನದ ಗೊಂಬೆ, ಆಯಿರತ್ತಿಲ್ ಒರವನ್, ನಾಡೋಡಿ ಮನ್ನನ್, ರಹಸ್ಯ ಪೋಲೀಸ್ 115, ಕೃಷ್ಣದೇವರಾಯ ಮೊದಲಾದ ಕನ್ನಡ ತಮಿಳು ಚಿತ್ರಗಳೂ ನಿರ್ಮಾಣಗೊಂಡವು. ಎಂ.ಜಿ.ಆರ್. ನಟಿಸುತ್ತಿದ್ದ ತಮಿಳು ಚಿತ್ರ ಮಧುರೈ ಮೀಟ್ಟಿಯ ಸುಂದರಪಾಂಡಿಯನ್ ಮತ್ತು ಬಿ.ಜಿ.ಎಲ್. ಸ್ವಾಮಿ ಅವರ ಕಾಲೇಜುರಂಗ ಎಂಬ ಕಾದಂಬರಿ ಯಾಧಾರಿತ ಕನ್ನಡ ಚಿತ್ರ ಇವುಗಳ ನಿರ್ಮಾಣ ಕಾರ್ಯದಲ್ಲಿದ್ದಾಗ

ಪಂತುಲು ಅವರು 1974ರಲ್ಲಿ ನಿಧನರಾದರು. (ಎಸ್.ಎಚ್.ವಿ.)

**ಪಂಪ :** ಸು. 941 ಕನ್ನಡದ ಆದಿಕವಿ. ಮಹಾಕವಿ, ವಿಕ್ರಮಾರ್ಜುನ ವಿಜಯ (ಪಂಪಭಾರತ), ಆದಿಪುರಾಣ ಎಂಬ ಕಾವ್ಯಗಳ ಕರ್ತೃ.

ಪಂಪ ತನ್ನ ಎರಡೂ ಕೃತಿಗಳಲ್ಲಿ ಸ್ವವಿಷಯವನ್ನು ತಕ್ಕಮಟ್ಟಿಗೆ ವಿವರಪೂರ್ಣವಾಗಿಯೇ ಹೇಳಿಕೊಂಡಿದ್ದಾನೆ. ಇವನ ಹೇಳಿಕೆಗಳು ಹಲವು ಚಾರಿತ್ರಿಕಾಂಶಗಳಿಂದಲೂ ಶಾಸನಗಳಿಂದಲೂ ಸಮರ್ಥನೆಗೊಂಡಿವೆ. ಆದಿಪುರಾಣದಲ್ಲಿ ತಾನು ದುಂದುಭಿ ಸಂವತ್ಸರೋದ್ಭವಂ ಎಂದು ಹೇಳಿಕೊಂಡಿದ್ದಾನೆ. ಅಲ್ಲದೆ ಶಕವರುಷ ಮೆಂಟುನೂಱಿಕ್ಕೆ ಕಡೆಯೊಳಱುವತ್ತುಮೂರು ಸಂದಂದು ಜಗತ್ಪ್ರಕಟ ಪ್ಲವಸಂವತ್ಸರದಲ್ಲಿ (ಶಾ.ಶ. 863ರಲ್ಲಿ) ಎಂದರೆ 941ರಲ್ಲಿ (ಅಥವಾ ಕೆಲವು ವಿದ್ವಾಂಸರು ಅಭಿಪ್ರಾಯಪಡುವಂತೆ 942ರಲ್ಲಿ) ಈ ಕೃತಿ ರಚಿತವಾಯಿತೆಂದು ಅದರಿಂದಲೇ ತಿಳಿದುಬರುತ್ತದೆ. ಈ ಪ್ಲವಸಂವತ್ಸರಕ್ಕೆ ಹಿಂದೆ ಬರುವ ದುಂದುಭಿ ಸಂವತ್ಸರ 902ಕ್ಕೆ (ಅಥವಾ 903ಕ್ಕೆ) ಸರಿಹೊಂದುತ್ತದೆಯಾದ್ದರಿಂದ ಪಂಪನ ಜನ್ಮವರ್ಷವನ್ನು 902 (ಅಥವಾ 903) ಎಂದು ಹೇಳಬಹುದು. ಎಂದ ಮೇಲೆ ಪಂಪನ 39-40ನೆಯ ವರ್ಷದಲ್ಲಿ ಆದಿಪುರಾಣ ರಚಿತವಾದಂತಾಯಿತು. ಈ ವೇಳೆಗೆ ಇವನು ಚಾಳುಕ್ಯ ಎರಡನೆಯ ಅರಿಕೇಸರಿಯ ಆಶ್ರಯವನ್ನು ಪಡೆದಿದ್ದನೆಂದು ಕೆಲವರ ಊಹೆ. ಗುಣಾರ್ಣವನೆಂಬುದು ಅರಿಕೇಸರಿಯ ಪ್ರಸಿದ್ಧವಾದ ಬಿರುದು; ಕವಿತಾಗುಣಾರ್ಣವನೆಂಬುದು ಪಂಪನ ಮೆಚ್ಚಿನ ಬಿರುದುಗಳಲ್ಲೊಂದು. ಎರಡು ಕಾವ್ಯಗಳಲ್ಲಿಯೂ ಈ ಬಿರುದು ಉಕ್ತವಾಗಿದೆ. ಆದ್ದರಿಂದ ಆದಿಪುರಾಣದ ರಚನೆಯ ಕಾಲದಲ್ಲಿಯೇ ಪಂಪನು ಅರಿಕೇಸರಿಯ ಮನ್ನಣೆಗೆ ಪಾತ್ರನಾಗಿದ್ದನೆಂದೂ ತನ್ನ ಕವಿತಾಸಾಮರ್ಥ್ಯನಿಮಿತ್ತದಿಂದ ಕವಿತಾಗುಣಾರ್ಣವನೆಂಬ ಬಿರುದನ್ನು ಪಡೆದಿದ್ದನೆಂದೂ ಊಹಿಸಲವಕಾಶವಾಗಿದೆ. ಆದರೆ ಆದಿಪುರಾಣದಲ್ಲಿ ಕಾವ್ಯದ ಪ್ರಯೋಜನಗಳನ್ನು ತಿಳಿಸುವ ಪದ್ಯವೊಂದರಲ್ಲಿ ಕವಿತೆಯಿಂದ ಕವಿಗೆ ದೊರೆಯುವ ಫಲಗಳು ಪೂಜೆ (ರಾಜಮರ್ಯಾದೆ), ನೆಗೆತ್ತೆ (ಕೀರ್ತಿ), ಲಾಭ (ದ್ರವ್ಯಸಂಪಾದನೆ); ಜಿನೇಂದ್ರಗುಣಸ್ತುತಿಯಿಂದಲಾದರೋ ಇಂದ್ರಪೂಜೆ, ಲೋಕಮಾನ್ಯತೆ, ಮುಕ್ತಿಲಾಭ-ಇವು ತಾವಾಗಿಯೇ ಲಭಿಸುತ್ತವೆ. ಆದ್ದರಿಂದ ಪೆಱರೀವುದೇಂ ಪೆಱರ್ ಮಾಡುವುದೇಂ ಪೆಱರಿಂದಮಪ್ಪುದೇಂ ಎಂಬ ಪಂಪನ ಮಾತು ರಾಜಮನ್ನಣೆಯ ಬಗೆಗೆ ಇವನ ತಿರಸ್ಕಾರಭಾವ ವ್ಯಕ್ತವಾಗುತ್ತದೆ. ಅಲ್ಲದೆ, ಬುಧಸಮೂಹಮಿದಂ ಪೇಟೆನೆಂದೊಡೆ ಪೇಟಲ್ಕಂ ಬಗೆದಂದೆಂ ಎಂದೂ ಸ್ಪಷ್ಟವಾಗಿ ಹೇಳಿದ್ದಾನೆ. ಈ ಬುಧಸಮೂಹ ಪಂಪನನ್ನು ಕೊಂಡಾಡಿರುವಂತೆ ಬರೆದಿರುವ ಪದ್ಯಗಳಲ್ಲಿ ಪಂಪನ ಬಿರುದುಗಳಾದ ಸುಕವಿಜನಮನೋಮಾನ ಸೋತ್ತಂಸಹಂಸ, ಕವಿತಾಗುಣಾರ್ಣವ, ಸಂಸಾರಸಾರೋದಯ, ಸರಸ್ವತೀಮಣಿಹಾರ ಎಂಬಿವು ಹೇಗೆ ಅರ್ಥಾನುಗುಣ್ಯವಾಗಿ ಪಂಪನಿಗೆ ಒಪ್ಪುತ್ತವೆ ಎಂದು ಒಕ್ಕಣಿಸುವ ಸಂದರ್ಭದಲ್ಲಿ - ಇದು ನಿಚ್ಚಂ ಪೊಸತರ್ಣವಂಬೊಲ್ ಎಂಬುದಾಗಿ ಆ ಬಿರುದು ಸಲ್ಲುವುದರ ಔಚಿತ್ಯವನ್ನು ತಿಳಿಸಿದೆ. ಇದರಿಂದಾಗಿ ಈ ಬಿರುದು ಅರಿಕೇಸರಿಯಿಂದ ಪಡೆದುದಲ್ಲ ಎನ್ನಬೇಕಾಗುತ್ತದೆ. ಈ ಕಾಲದಲ್ಲಿ ಪಂಪನಿಗೂ ಅರಿಕೇಸರಿಗೂ ಆಶ್ರಿತ - ಆಶ್ರಯದಾತ ಸಂಬಂಧ ಇನ್ನೂ ಸಂಘಟಿಸಿರಲಿಲ್ಲ ಎನ್ನಬಹುದಾಗಿದೆ. ಆದಿಪುರಾಣ ರಚಿತವಾದಮೇಲೆ ವಿಕ್ರಮಾರ್ಜುನವಿಜಯ ರಚಿತವಾಯಿತೆಂಬ ಬಗೆಗೆ ಸಂದೇಹವಿಲ್ಲ. ಆದಿಪುರಾಣದ ರಚನೆಯಿಂದ ಸಮರ್ಥ ಕವಿಯೆಂದು ಬಹುಬೇಗನೆ ಪ್ರಸಿದ್ಧಿಗೆ ಬಂದ ಪಂಪನನ್ನು ಅರಿಕೇಸರಿ ಬಳಿಯಟ್ಟಿ ಕರೆಸಿಕೊಂಡು, ಪಿರಿದನ್ನಿತ್ತು ಗೌರವಿಸಿ, ಈ ತೆಱದಿತಿಹಾಸಕಥೆಯನೊಪ್ಪಿಸೆ ಕುಱಿತು, ಬರಿಸದೊಳಗೆ ಸಮೆವಿನಗಂ ಆದೇಶವಿತ್ತ. ಪಂಪನಿಗೆ ವರ್ಷವೂ ಬೇಕಾಗಲಿಲ್ಲ. ಆತ ಭಾರತವನ್ನು ಆರು ತಿಂಗಳಿನಲ್ಲಿಯೇ ಬರೆದು ಮುಗಿಸಿಬಿಟ್ಟ, 'ಪೂಣ್ದುತೆಱದೆ ಒಂದಱುದಿಂಗಳೊಳ್ ಒಂದು ಮೂರು ತಿಂಗಳೊಳ್ ಸಮಾಪ್ತಿಯಾದುದು' ಎಂಬ ಮಾತಿನ ಆಧಾರದ ಮೇಲೆ ಒಂದೇ ವರ್ಷದಲ್ಲಿ (ಎಂದರೆ, ಆದಿಪುರಾಣ ರಚಿತವಾದ ವರ್ಷದಲ್ಲಿಯೆ) ಎರಡೂ ರಚಿತವಾದುವು ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಇದು ವಸ್ತುಸ್ಥಿತಿಗೆ ದೂರವಾದ ಮಾತು. ಈ ಎರಡು ಗ್ರಂಥಗಳ ಶೈಲಿಯನ್ನು ಹೋಲಿಸಿದರೆ ಎರಡಕ್ಕೂ ನಡುವೆ ತಕ್ಕ ಮಟ್ಟಿನ ಕಾಲ ಕಳೆದಿರಬೇಕೆಂದು ಚೆನ್ನಾಗಿ ಗೊತ್ತಾಗುತ್ತದೆಂದು ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ನಡುವಣ ಅಂತರ ಎಷ್ಟು ಎಂದು ನಿಖರವಾಗಿ ಹೇಳುವುದು ಕಷ್ಟ. ಅರಿಕೇಸರಿಯ ಮಗ ಬದ್ದೆಗನ ಆಸ್ಥಾನದಲ್ಲಿ (ಅಥವಾ ಆಳ್ವಿಕೆಯಲ್ಲಿ) 959ರಲ್ಲಿ ಸೋಮದೇವ ಯಶಸ್ತಿಲಕಚಂಪೂವನ್ನು ರಚಿಸಿದ. ಆಗ ಅರಿಕೇಸರಿ ಅತೀತನಾಗಿ ವರ್ಷಗಳೆಷ್ಟಾಗಿದ್ದುವು ಎಂಬುದಿನ್ನೂ ಗೊತ್ತಾಗಿಲ್ಲ. ಅಂತೂ ಆದಿಪುರಾಣವನ್ನು ಬರೆದ ಕಾಲ ಶಾ.ಶ. 863 (941). ಯಶಸ್ತಿಲಕ ರಚನೆಯ ಕಾಲ ಶಾ.ಶ. 881 (959). ಈ ನಡುವಿನ 18 ವರ್ಷಗಳ ಅವಧಿಯಲ್ಲಿ ಸಮಸ್ತ ಭಾರತದ ನಿರ್ಮಾಣವಾಗಿರಬೇಕು ಎಂಬುದಾಗಿ ಮುಳಿಯ ತಿಮ್ಮಪ್ಪಯ್ಯನವರು ಅಭಿಪ್ರಾಯಪಟ್ಟಿದ್ದಾರೆ. ಈ ಗ್ರಹಿಕೆ ಪರಮಾವಧಿಯ ಅಂತರವನ್ನು (ಸು. 7-8 ವರ್ಷಗಳನ್ನು) ಸೂಚಿಸಿದೆ.

ಪಂಪ ವಿಕ್ರಮಾರ್ಜುನ ವಿಜಯವನ್ನು ಅರಿಕೇಸರಿಯ ರಾಜಧಾನಿಯಲ್ಲಿ ಬಹುಶಃ ಬೋಧನದಲ್ಲಿ ಬರೆದ, ಆದಿಪುರಾಣವನ್ನು ರಾಷ್ಟ್ರಕೂಟ ರಾಜ್ಯದಲ್ಲಿ ಬರೆದನೆಂದು ಧರಣಿಗೆ ನೆಗೞ್ದರ್ ಸಲೆರಟ್ಟ ರಾಜ್ಯದೊಳ್ ಮುನ್ನೆ ಪಂಪನುಂ ಪೊನ್ನಿಗನುಂ ಎಂಬ ರನ್ನನ ಹೇಳಿಕೆಯಿಂದ ತಿಳಿದುಬರುತ್ತದೆ. ಆದಿಪುರಾಣದಲ್ಲಿ ಪೆಱರೀವುದೇಂ ಎಂದು ಮುಂತಾಗಿ ಪಂಪ ಹೇಳುವಲ್ಲಿ ರಾಷ್ಟ್ರಕೂಟ ದೊರೆಯನ್ನೇ ಅವನು ಕುರಿತಿರಬಹುದೆಂದು ತೋರುತ್ತದೆ.

ಪಂಪ ಹುಟ್ಟಿನಿಂದ ಜೈನನಾದರೂ ವೈದಿಕಮತಾವಲಂಬಿಗಳಾಗಿದ್ದ ತನ್ನ ಪೂರ್ವಜನರನ್ನು ಹೆಮ್ಮೆಯಿಂದಲೇ ನೆನೆದಿದ್ದಾನೆ. ಪಂಪನ ಪೂರ್ವಜರ ಸ್ಥಳ ವೆಂಗಿಮಂಡಲದ (ಕೃಷ್ಣಾ-ಗೋದಾವರೀ ನದಿಗಳ ನಡುವೆ ಪೂರ್ವಸಮುದ್ರ ಪರ್ಯಂತ ಹಬ್ಬಿದ ಪ್ರದೇಶ) ವೆಂಗಿಪಳು ಎಂಬ ಅಗ್ರಹಾರ. ವಂಶದ ಮೂಲ ಪುರುಷ ಮಾಧವ ಸೋಮಯಾಜಿ. ಅಗ್ರಹಾರದ ಒಡೆಯನಾಗಿದ್ದ ಈತ ಅನೇಕ ಯಜ್ಞಯಾಗಾದಿಗಳನ್ನು ಮಾಡಿದಂತೆ ತಿಳಿದುಬರುತ್ತದೆ. ಇವನ ಮಗ ಅಭಿಮಾನಚಂದ್ರ. ಈತ ಮಹಾದಾನಿ, ಇವನ ಮಗ ಕೊಮರಯ್ಯ (ಕುಮಾರಯ್ಯ), ಇವನ ಮಗ ಭೀಮ ಅಥವಾ ಭೀಮಪಯ್ಯ (ಭೀಮಪಾರ್ಯ), ವಿಕ್ರಮಾರ್ಜುನವಿಜಯದ ಮುದ್ರಿತ ಪ್ರತಿಗಳಲ್ಲಿ ಅಭಿರಾಮದೇವರಾಯಂ ಎಂಬ ಪಾಠವೇ ಅಂಗೀಕೃತವಾಗಿದ್ದು (ಭೀಮನಾಮಧೇಯಂ ಎಂಬ ಪಾಠಾಂತರವೂ ಇತ್ತು) ಇದೇ ಪಂಪನ ತಂದೆಯ ಹೆಸರು ಎಂದು ಈವರೆಗೆ ತಿಳಿಯಲಾಗಿತ್ತು. ಇತ್ತೀಚೆಗೆ ಆಂಧ್ರಪ್ರದೇಶದ ಕರೀಂನಗರ ಜಿಲ್ಲೆಯ ಅದೇ ತಾಲ್ಲೂಕಿನ ಕುರ್ಕ್ಯಾಲ ಗ್ರಾಮದಲ್ಲಿ ದೊರೆತ ಜಿನವಲ್ಲಭನ ಶಾಸನದಿಂದ ಭೀಮಪಯ್ಯ ಪಂಪನ ತಂದೆ ಎಂಬ ಅಂಶ ಸ್ಪಷ್ಟವಾಗಿದೆ.

ವಿಕ್ರಮಾರ್ಜುನವಿಜಯದಲ್ಲಿಯಾಗಲಿ, ಆದಿಪುರಾಣದಲ್ಲಿಯಾಗಲಿ ಪಂಪನ ತಾಯಿಯ ಮತ್ತು ತಮ್ಮನ ಹೆಸರನ್ನು ಹೇಳಿಲ್ಲ. ಜಿನವಲ್ಲಭನ ಶಾಸನದಿಂದ ಪಂಪನ ತಮ್ಮ ಜಿನವಲ್ಲಭನೆಂದೂ ತಾಯಿ ಅಬ್ಬಣಬ್ಬೆಯೆಂದೂ ತಿಳಿದುಬಂದಿದೆ. ಈ ಅಬ್ಬಣಬ್ಬೆ ಜೋಯಿಸನಾದ ಸಿಂಘನ ಮೊಮ್ಮಗಳು, ಆಕೆಯ ತವರೂರು ಬೆಳ್ವೊಲದ ಅಣ್ಣಿಗೆಱೆ (ಈಗಿನ ನವಲಗುಂದ ತಾಲ್ಲೂಕಿನ ಅಣ್ಣಿಗೇರಿ), ಹೀಗೆ ಪಂಪನ ತಾಯಿಯ ತವರೂರಿನ ಸಂಗತಿ ತಿಳಿದುಬಂದಿರುವುದು ಪಂಪನ ಜೀವನ ವೃತ್ತಾಂತದ ಮೇಲೆ ಹೊಸ ಬೆಳಕನ್ನು ಚೆಲ್ಲುವುದಾಗಿದೆ. ಪಂಪ ವಿಕ್ರಮಾರ್ಜುನ ವಿಜಯವನ್ನು ಬರೆದದ್ದು ಅರಿಕೇಸರಿಯ ರಾಜಧಾನಿಯಲ್ಲಿ (ಅರಿಕೇಸರಿಯ ರಾಜಧಾನಿ ಬೋಧನವೇ ವೇಮುಲವಾಡವೇ ಎಂಬ ಬಗೆಗೆ ಭಿನ್ನಾಭಿಪ್ರಾಯವಿದೆ). ಅದು ಇದ್ದದ್ದು ಕನ್ನಡ ತೆಲುಗುಗಳೆರಡೂ ಪ್ರಚಾರದಲ್ಲಿದ್ದ ಸೀಮೆ (ಜಿನವಲ್ಲಭನ ಶಾಸನದಲ್ಲಿ ಮೂರು ತೆಲುಗು ಕಂದಪದ್ಯಗಳಿರು) ಅಂಶವನ್ನು ಇಲ್ಲಿ ಗಮನಿಸಬಹುದು. ಪಂಪನ ಪೂರ್ವಜರು ಬಹುಶಃ ಕನ್ನಡ ತೆಲುಗುಗಳೆರಡನ್ನೂ ಬಲ್ಲವರಾಗಿದ್ದಿರಬೇಕು. ಆದರೆ ಪಂಪ ತನ್ನ ಭಾರತದಲ್ಲಿ ರಾಜದ್ರಾಜಕಮೆನಿಸಿದ ಸಾಜದ ಪುಲಿಗೆಱೆಯ ತಿರುಳಕನ್ನಡದೊಳ್ ನಿವ್ಯಾಜದೆಸಕದೊಳೆ ಪುದಿದೊಂದೋಜೆಯ

ಬಲದಿನಿಯ ಕವಿತೆ ಪಂಪನ ಕವಿತೆ ಎಂದು ಹೇಳಿಕೊಂಡಿದ್ದಾನೆ. ಈ ತಿರುಳಗನ್ನಡ ಅವನ ನಾಲಗೆಯಲ್ಲಿ ಊರಿದ್ದು ಹೇಗೆ ಎಂಬ ಪ್ರಶ್ನೆಗೆ ಜಿನವಲ್ಲಭನ ಶಾಸನದಲ್ಲಿ ಉತ್ತರ ಸಿಕ್ಕುತ್ತದೆ. ಪಂಪನ ತಾಯಿಯ ಊರು ಬೆಳ್ವೊಲ ಪ್ರಾಂತ ಕವಿರಾಜಮಾರ್ಗಕಾರನೂ ಪಂಪನೂ ಹೊಗಳುವ ತಿರುಳ್ಗನ್ನಡದ ಪುಲಿಗೆರೆಯ ನೆರೆಯ ನಾಡು. ಪಂಪ ತನ್ನ ಶೈಶವಬಾಲ್ಯಗಳನ್ನು ಇಲ್ಲಿಯೇ ಕಳೆದಿರಬೇಕು. ಭೀಮಪಯ್ಯನೂ ವೆಂಗಿಪಳುವನ್ನು ಬಿಟ್ಟು ಈ ಪ್ರಾಂತ್ಯಕ್ಕೆ ಬಂದು ನೆಲೆಸಿದ್ದಿರಬಹುದು.

ಜಾತಿಯೊಳೆಲ್ಲಂ ಉತ್ತಮ ಜಾತಿಯ ವಿಪ್ರಕುಲಂಗೆ ನಂಬಲೇಮಾತೊ ಜಿನೇಂದ್ರಧರ್ಮಮೆ ವಲಂ ದೊರೆಧರ್ಮದೊಳೆಂದು ನಂಬಿ ಜೈನಧರ್ಮಕ್ಕೆ ಮತಾಂತರಹೊಂದಿದ ಭೀಮಪಯ್ಯನಮಗ ತಾನು ಎಂದು ಹೇಳಿಕೊಳ್ಳುವುದರಲ್ಲಿ ಪಂಪನಿಗೆ ಅತಿಶಯವಾದ ಹೆಮ್ಮೆ. ಪಂಪನ ಈ ಮಾತನ್ನೂ ಅಭಿಮಾನದಿಂದ ಮಾಡಿರುವ ಪೂರ್ವಜರ ವರ್ಣನೆಯನ್ನೂ ಒಟ್ಟಿನಲ್ಲಿ ಪರಿಶೀಲಿಸಿದರೆ ಪಂಪನಿಗೆ ಜೈನಧರ್ಮದಲ್ಲಿ ಎಷ್ಟು ಅಭಿಮಾನವೋ ತನ್ನ ಪೂರ್ವಿಕರ ವೈದಿಕ ಪರಂಪರೆಯಲ್ಲಿ ವಿಪ್ರಕುಲದಲ್ಲಿ ಅಷ್ಟೇ ಅಭಿಮಾನವಿತ್ತೆಂದು ಹೇಳಬಹುದು.

ಸ್ವಾಭಿಮಾನಿಯಾದ ಪಂಪನಿಗೆ ತನ್ನ ರೂಪಿನಲ್ಲಿ, ವ್ಯಕ್ತಿತ್ವದಲ್ಲಿ ಮಿಗಿಲಾದ ಹೆಮ್ಮೆ. ಕದಳೀಗರ್ಭಶ್ಯಾಮಂ ಮೃದುಕುಟಿಲಶಿರೋರುಹಂ ಸರೋರುಹವದನಂ, ಮೃದುಮಧ್ಯಮತನು ಹಿತಮಿತಮೃದುವಚನಂ ಲಲಿತಮಧುರ ಸುಂದರವೇಷಂ ಎಂದು ತನ್ನನ್ನು ಬಣ್ಣಿಸಿಕೊಂಡಿದ್ದಾನೆ. ಅಷ್ಟೇ ಅಲ್ಲ ತನ್ನ ಲಲನಾಲೋಲುಪ್ತಿಯನ್ನೂ ಸಂಕೋಚವಿಲ್ಲದೆ ಕೇರಳ ವಿಟೀಕಟಿ ಸೂತ್ರಾರುಣಮಣಿ ಮಲಯಯುವತಿದರ್ಪಣನಾಂಧ್ರೀನೀರಂಧ್ರಬಂಧುರಸ್ತನಹಾರಂ ಎಂದು ತಿಳಿಸಿದ್ದಾನೆ. ಪಂಪ ಕವಿಯಷ್ಟೇ ಅಲ್ಲ, ಕಲಿಯೂ ಆಗಿದ್ದ. ಆದಿಪುರಾಣದಲ್ಲಿ ಒಂದೆಡೆ ಆತ ತನ್ನ ವ್ಯಕ್ತಿಚಿತ್ರವನ್ನು ಹೆಮ್ಮೆಯಿಂದ ಹೇಳಿಕೊಳ್ಳುವ ಸಂದರ್ಭದಲ್ಲಿ ಬಂದಿರುವ ಪಂಪಂ ಧಾತ್ರಿವಳಯಂ ನಿಳಿಂಪಂ ಚತುರಂಗಬಲಭಯಂಕರಣಂ ಲಲಿತಾಲಂಕರಣಂ ಪಂಚಶರೈಕರೂಪನಪಗತಪಾಪಂ - ಎಂಬ ಈ ಮಾತುಗಳು ಪಂಪ ಕಲಿಯೂ ಆಗಿದ್ದನೆಂಬುದನ್ನು ಸಮರ್ಥಿಸುವಂತಿವೆ.

> ಕವಿತೆ ನೆಗೞ್ತೆಯಂ ನಿಱಸೆ ಚೋಳದ ಪಾಟಿ ನಿಜಾಧಿನಾಥನಾ
>
> ಹವದೊಳರಾತಿನಾಯಕರ ಪಟ್ಟನೆ ಪಾಱಸೆ ಸಂದ ಪೆಂಪು ಭೂ
>
> ಭುವನೊದೊಳಾಗಳುಂ ಬೆಳಗೆ ಮಿಕ್ಕಭಿಮಾನದ ಮಾತು ಕೀರ್ತಿಯಂ
>
> ವಿವರಿಸೆ ಸಂದನೇಂ ಕಲಿಯೋ ಸತ್ಕವಿಯೋ ಕವಿತಾಗುಣಾರ್ಣವಂ
>
> (ವಿ.ವಿ. 14-50)

ಈ ಪದ್ಯದ ಆಧಾರದ ಮೇಲೆ ಪಂಪನು ಅರಿಕೇಸರಿಯ ಪರವಾಗಿ ಅನೇಕ ಯುದ್ಧಗಳಲ್ಲಿ ಹೋರಾಡಿದನೆಂದು ಸಾಮಾನ್ಯವಾಗಿ ಎಲ್ಲ ವಿದ್ವಾಂಸರೂ ಅಭಿಪ್ರಾಯಪಟ್ಟಿದ್ದಾರೆ.

ವಿಕ್ರಮಾರ್ಜುನವಿಜಯದಲ್ಲಿ ಅರ್ಜುನನ ಮೂಲಕ ಮಾಡಿಸಿರುವ ಬನವಾಸಿಯ ವರ್ಣನೆ ಪಂಪನ ಬನವಾಸಿ ಪ್ರೇಮಕ್ಕೂ ನಿದರ್ಶನವಾಗಿದೆ.

> ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇ
>
> ಯಂ ಕಿವಿವೊಕ್ಕೊಡಂ, ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ
>
> ಪಂಗೆಡೆಗೊಂಡೊಡಂ, ಮಧುಮಹೋತ್ಸವಮಾದೊಡೇನನೆಂಬೆನಾ
>
> ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ವನವಾಸಿದೇಶಮಂ

ಎಂಬ ಈ ಮಾತುಗಳನ್ನು ಗಮನಿಸಿ ಪಂಪ ತನ್ನ ಜೀವನದ ಸಾರವತ್ತಾದ ಕೆಲವು ಕಾಲವನ್ನು ಬನವಾಸಿ ಪ್ರಾಂತ್ಯದಲ್ಲಿ ಕಳೆದಿರಬೇಕು ಎಂಬುದಾಗಿ ವಿಮರ್ಶಕರೊಬ್ಬರು ಅಭಿಪ್ರಾಯಪಟ್ಟಿದ್ದಾರೆ. ಬನವಾಸಿಯ ವರ್ಣನೆ ಪಂಪನಿಗೆ ಎಷ್ಟರಮಟ್ಟಿಗೆ ಸಂಬಂಧಪಟ್ಟುದೋ ಅರಿಕೇಸರಿಗೂ ಅಷ್ಟರಮಟ್ಟಿಗೆ ಸಂಬಂಧಪಟ್ಟದ್ದು ಎಂಬುದು ಪಂಪನ ಸಂಬಂಧವಾಗಿ ಮಾಡಬಹುದಾದ ಸಂಭಾವ್ಯ ಊಹೆಗಳಲ್ಲೊಂದು. ತವರುನಾಡಿನ ಬಗೆಗಿನ ಈ ಅದಮ್ಯವಾದ ತೊಳಲಿಕೆ ಪಂಪನ ಹೃದಯದಿಂದ ಚಿಮ್ಮಿರುವುದು ಎಷ್ಟು ಸತ್ಯವೋ ಅರಿಕೇಸರಿಯ ಹೃದಯವನ್ನು ತಟ್ಟಿರುವುದೂ ಅಷ್ಟೇ ಸತ್ಯ ಎನ್ನಬಹುದು.

ಪಂಪ ತನ್ನ ಗುರುಪರಂಪರೆಯನ್ನೂ ಕಾವ್ಯದಲ್ಲಿ ಹೇಳಿಕೊಂಡಿದ್ದಾನೆ. ಕೊಂಡಕುಂದಾನ್ವಯದ ದೇವೇಂದ್ರಮುನಿಯು ಈತನ ಮೆಚ್ಚಿನ ಗುರು. ಈ ಮುನಿ ಬಹಳ ಪ್ರಖ್ಯಾತನಾಗಿದ್ದನೆಂದು ಶ್ರವಣಬೆಳಗೊಳದ ಶಾಸನವೊಂದರಿಂದ ತಿಳಿದುಬರುತ್ತದೆ. ಈ ಆಧಾರದಿಂದ ದೇವೇಂದ್ರಮುನಿಯ ಸ್ಥಳ ಶ್ರವಣ ಬೆಳಗೊಳವೆಂದೂ ಪಂಪನ ವಿದ್ಯಾಭ್ಯಾಸ ಅಲ್ಲಿಯೇ ಸಾಗಿದ್ದಿರಬೇಕೆಂದೂ ವಿದ್ವಾಂಸರೊಬ್ಬರೂ ಊಹಿಸಿದ್ದಾರೆ. ಪಂಪ ತನ್ನ ಗುರುಗಳನ್ನು ಸ್ಮರಿಸುವಾಗ ಜಯನಂದಿ ಮುನಿಯನ್ನೂ ಸ್ಮರಿಸಿದ್ದಾನೆ. ಜಿನವಲ್ಲಭ ತನ್ನ ಶಾಸನದಲ್ಲಿ ಕೊಣ್ಣಕುನ್ದೆಯ ದೇಸಿಗ ಗಣದ ಪೊತ್ತಗೆಯ ಬಟಿಯ ಪಣ್ಡರಂಗವಲ್ಲಿಯ ಜಯಣನ್ದಿಸಿದ್ದಾನ್ತ ಭಟಾರರ ಗುಡ್ಡಂ ಜಿನವಲ್ಲಭಂ ಎಂದು ಹೇಳಿಕೊಂಡಿದ್ದಾನೆ. ಪಂಪ ಆದಿಪುರಾಣದಲ್ಲಿ ಸ್ಮರಿಸಿದ ಜಯನಂದಿಯೂ ಶಾಸನೋಕ್ತ ಜಯನಂದಿಯೂ ಏಕವ್ಯಕ್ತಿಯಾಗಿದ್ದು ಅಣ್ಣ ತಮ್ಮಂದಿರಿಬ್ಬರೂ ಜಯನಂದಿಯ ಶಿಷ್ಯರಾಗಿದ್ದರೆಂದು ಕೆಲವರು ಊಹಿಸಿದ್ದಾರೆ.

ಆದಿಪುರಾಣ ಚಂಪೂವಿನಲ್ಲಿ ರಚಿತವಾಗಿದೆ. ಇದರಲ್ಲಿ 16 ಆಶ್ವಾಸಗಳೂ 1555 ಪದ್ಯಗಳೂ ಇವೆ. ಆದಿಪುರಾಣ ಧಾರ್ಮಿಕ ಗ್ರಂಥ; ಲೋಕಕಲ್ಯಾಣಕ್ಕಾಗಿ ಧರ್ಮಾಮೃತವನ್ನು ವರ್ಷಿಸಿದ ಆದಿ ತೀರ್ಥೇಶ್ವರಚರಿತ. ಕರ್ಣಾಮೃತಸ್ಯಂದಿಯಕ್ಕಿದು ಭವ್ಯಾವಳಿಗೆ ಎಂದು ಪಂಡಿತರು ಪ್ರೇರೇಪಿಸಿದರೂ ಮುಖ್ಯವಾಗಿ ತನಗೆ ಪುಣ್ಯದೊರಕಲೆಂದೂ ಕರ್ಮನಿರ್ಜರೆಯಾಗಲೆಂದೂ ಬಯಸಿ, ಅನಂತರಸುಖಾಭಿಲಾಷಿಯಾಗಿ ಷೋಡರಭಾವನೆಯಿಂದ ಬರೆದ ಷೋಡಶ ಆಶ್ವಾಸಗಳುಳ್ಳ ಪವಿತ್ರ ಗ್ರಂಥ. ಈ ಕಾವ್ಯ ರಚನೆಯಿಂದ ಪಂಪ ಆತ್ಮಸಂತುಷ್ಟಿಯನ್ನೂ ಪಂಡಿತಪ್ರಶಂಸೆಯನ್ನೂ ಗಳಿಸಿ, ಪುರಾಣಕವಿಯೆಂದೂ ಮಹಾಕವಿಯೆಂದೂ ಪ್ರಸಿದ್ಧನಾದ.

ಪಂಪನ ಆದಿಪುರಾಣ ಜಿನಸೇನಾಚಾರ್ಯರ ಪೂರ್ವಪುರಾಣಕ್ಕೆ ಅನೇಕ ವಿಧಗಳಲ್ಲಿ ಋಣಿಯಾಗಿದೆ. ವಿಶ್ರುತವೀರಸೇನಜಿನಸೇನಾಚಾರ್ಯಪರ್ಯಂತ ಮಾಗಿರೆ ಬಂದೀಕಥೆ ಗುಂಪುವೆತ್ತುದವರುಂ ಜ್ಞಾನರ್ಧಿಸಂಪನ್ನರೆಂದಿರದಾಂ ಧೃಷ್ಟನೆನೀಕಥಾಬ್ಧಿಯುಮನೇನೀಸಲ್ಕನಂದಂದೆನೋ ಎಂದು ತನ್ನ ಋಣವನ್ನೊಪ್ಪಿಕೊಂಡು ವಿನಯವನ್ನು ಮೆರೆದಿದ್ದಾನೆ. ಪಂಪ ಕಥಾವಸ್ತುವಿಷಯದಲ್ಲಿ ಜಿನಸೇನಾಚಾರ್ಯರಿಗೆ ಕಡ ಹೊತ್ತಿದ್ದರೂ ಅವನ ಅನ್ಯಾದೃಶ ಪ್ರತಿಭೆ ಮೂಲಕಥೆಯನ್ನು ಕುಗ್ಗಿಸುವಲ್ಲಿ ಕುಗ್ಗಿಸಿ, ಹಿಗ್ಗಿಸಬೇಕಾದಲ್ಲಿ ಹಿಗ್ಗಿಸಿ, ಆದಿಪುರಾಣದಲ್ಲಿ ಕಾವ್ಯಧರ್ಮ-ಧರ್ಮಗಳ ಸಮನ್ವಯವನ್ನು ಬಹುಮಟ್ಟಿಗೆ ಸಾಧಿಸಿದ್ದಾನೆ. ಈ ಕಾವ್ಯದಲ್ಲಿ ಜೈನಧರ್ಮದ ಶಾಸ್ತ್ರಪ್ರಕ್ರಿಯೆಯ ವಿವರಗಳನ್ನು ಬಿತ್ತರಿಸಿರುವ ಭಾಗಗಳು ಕಾವ್ಯದ ಉತ್ತಮಿಕೆಯನ್ನು ತಗ್ಗಿಸಿವೆ. ಈ ದೋಷಸಂಭವಕ್ಕೆ ವಸ್ತುವಿನ ಸ್ವರೂಪವೇ ಕಾರಣವೆಂದು ಕೆಲವು ವಿಮರ್ಶಕರ ಅಭಿಪ್ರಾಯ. ಕಾವ್ಯನಿರೂಪಣೆಯಲ್ಲಿ ಕೈಬಿಡಬಹುದಾಗಿದ್ದ ಈ ನೀರಸ ಭಾಗಗಳನ್ನು ಹಾಗೆ ಮಾಡದಿರಲು ಕವಿಯ ಧರ್ಮಶ್ರದ್ಧೆಯೇ ಕಾರಣ ಎಂದೂ ಕೆಲವರು ಅಭಿಪ್ರಾಯಪಟ್ಟಿದ್ದಾರೆ.

ಸಾಮಾನ್ಯವಾಗಿ ಜೈನ ಧಾರ್ಮಿಕ ಗ್ರಂಥಗಳಲ್ಲಿ ಒಬ್ಬ ತೀರ್ಥಂಕರನ ಭವಾವಳಿ ಇದ್ದಂತೆ ಇನ್ನೊಬ್ಬನದು ಇರುವುದಿಲ್ಲ. ಈ ಭವಾವಳಿಯ ಸ್ವರೂಪವನ್ನು ಕಲಾತ್ಮಕವಾಗಿ ಆವಿಷ್ಕಾರ ಮಾಡುವುದರಲ್ಲಿ ಕವಿಪ್ರತಿಭೆಗೆ ಅವಕಾಶವಿದ್ದರೂ ಕೆಲವೊಮ್ಮೆ ಚರ್ವಿತಚರ್ವಣದಿಂದ ನೀರಸವಾಗಿಬಿಡಬಹುದು. ಆದರೆ ಈ ಕಲಾಕರ್ಮವನ್ನು ಪಂಪ ಅಮೋಘವಾಗಿ ನಿರ್ವಹಿಸಿದ್ದಾನೆ. ಆದಿತೀರ್ಥಂಕರನ ಭವಾವಳಿಯ ಅನುಕ್ರಮವನ್ನು ಪಂಪನ ಒಂದು ಅಕ್ಕರವೃತ್ತ ಹೀಗೆ ನಿರೂಪಿಸಿದೆ:

> ಭೋಗಾಕಾಂಕ್ಷೆಯೊಳ್ ಜಯವರ್ಮಂ ಬಳಿಕೀಮಹಾಬಲಂ

ಲಲಿತಾಂಗಂ ವಜ್ರಜಂಘಂ

ಭೋಗಭೂಮಿಜಂ ಶ್ರೀಧರದೇವಂ ಸುವಿಧಿನರಾಧಿಪನಚ್ಯುತೇಂದ್ರಂ

ಸಾಗರಾಂತಂ ನೆಲನನಿತುಮಂ ಚಕ್ರದಿಂ ಬೆಸಕೈಸಿದ ವಜ್ರನಾಭಿ

ಯಾಗಿ ಸರ್ವಾರ್ಥಸಿದ್ಧಿಯೊಳ್ ಪುಟ್ಟಿ ಬಂದಿಲ್ಲಿ ತಾನಾದಿದೇವನಾದಂ

(ಆ.ಪು. 16-58)

ಭವದಿಂದ ಭವದೊಳ್ ತಗುಳ್ದು ಪರಮಸ್ನೇಹಂಗಳು ಜೀವಗಳನ್ನು ಮೋಹಸಂಕೋಲೆಯಿಂದ ಹೇಗೆ ಬಂಧಿಸುತ್ತವೆ. ಅದರಿಂದ ಬಿಡಿಸಿಕೊಂಡು ಸದ್ಗತಿ ಪಡೆಯಲು ಜೀವ ಹೇಗೆ ಹೆಣಗುತ್ತದೆ ಎಂಬ ಜಿನಧರ್ಮತತ್ತ್ವವನ್ನು ವೃಷಭ ದೇವನ ಪೂರ್ವಜನ್ಮಾವಳಿಕಥನದಲ್ಲಿ ಪಂಪ ಮನೋಹರವಾಗಿ ಪ್ರತಿಪಾದಿಸಿದ್ದಾನೆ. ವಿಶೇಷವಾಗಿ ಲಲಿತಾಂಗ-ಸ್ವಯಂಪ್ರಭೆ, ವಜ್ರಜಂಘ-ಶ್ರೀಮತಿ ಇವರು ಪ್ರಣಯಿಗಳಾಗಿ ಹುಟ್ಟಿ ಭೋಗಜೀವನದ ಪರಾಕಾಷ್ಠೆಯನ್ನು ಮುಟ್ಟಿಯೂ ಕೊನೆಗೊಮ್ಮೆ ಮರಣವನ್ನು ಅಪ್ಪಲೇಬೇಕಾಗಿ ಬಂದ ಸನ್ನಿವೇಶಗಳ ಚಿತ್ರಣ ಹೃದಯಸ್ಪರ್ಶಿಯಾಗಿದೆ. ಈ ಸಂದರ್ಭಗಳು ಕಾವ್ಯದೃಷ್ಟಿಯಿಂದ ಗಮನಾರ್ಹವಾದವುಗಳು. ಕೊನೆಯ ಜನ್ಮದಲ್ಲಿ ಆದಿನಾಥ ಭೂಲೋಕದಲ್ಲಿ 14ನೆಯ ಮನುವಾದ ನಾಭಿರಾಜನಿಗೆ ವೃಷಭಸ್ವಾಮಿ (ಪುರುದೇವ) ಎಂಬ ಹೆಸರಿನ ಪುತ್ರನಾಗಿ ಜನ್ಮವೆತ್ತಿ ಸಂಸಾರದಲ್ಲಿ ಭೋಗಾಸಕ್ತನಾದರೂ ನಿರ್ಲಿಪ್ತನಾಗಿ ಬಾಳಿ, ಪರಿನಿಷ್ಕ್ರಮಣ ಕಾಲ ಬಂದಾಗ ನೀಲಾಂಜನೆಯೆಂಬವಳ ಅಮೋಘನೃತ್ಯವನ್ನು ನೋಡುತ್ತಿರುವಾಗಲೇ ಗತಾಯುವಾಗಿದ್ದ, ಅವಳು ಹಠಾತ್ತನೆ ಕಣ್ಮರೆಯಾದ ಘಟನೆಯಿಂದ ತೀವ್ರವೈರಾಗ್ಯಪರನಾಗಿ ಮುಕ್ತಿ ಸಾಧಿಸಲು ತೆರಳುತ್ತಾನೆ. ಪುರುದೇವಭವದಲ್ಲಿ ವರ್ಣಿತವಾದ ಪಂಚಕಲ್ಯಾಣಗಳಲ್ಲಿ ತೀರ್ಥಂಕರ ಜನ್ಮಾಭಿಷೇಕ ಕಲ್ಯಾಣವೂ ಕಡೆಯದಾದ ಪರಿನಿಷ್ಕ್ರಮಣ ಕಲ್ಯಾಣವೂ ಪಂಪನ ಪ್ರತಿಭಾವಿಲಾಸದಲ್ಲಿ ದಿವ್ಯಭವ್ಯವಾಗಿ ಮೂಡಿ ಮೆರೆದಿವೆ. ಪುರುದೇವನ ಜನ್ಮಕಥೆಗೆ ಪೂರಕವಾಗಿ ಭರತ ಚಕ್ರವರ್ತಿ ಬಾಹುಬಲಿಗಳ ಕಥೆಯೂ ಉಜ್ವಲವಾಗಿ ಚಿತ್ರಿತವಾಗಿದೆ. ಆದಿದೇವನ ಕಥೆಯಲ್ಲಿ ಭೋಗನಿರಾಸವೂ ಭರತನ ಕಥೆಯಲ್ಲಿ ವೈಭವಮದದ ನಿರರ್ಥಕತೆಯೂ ಕಾವ್ಯಧರ್ಮಕ್ಕೆ ಅಧೀನವಾಗಿ ನಿರೂಪಿತವಾಗಿವೆ. ಕಾವ್ಯಶಿಲ್ಪದ ದೃಷ್ಟಿಯಿಂದ ಇಡಿಯಾಗಿ ಪರಿಶೀಲಿಸಿದಾಗ, ಪಂಪನ ಧರ್ಮಶ್ರದ್ಧೆಯಿಂದಲೂ ಭಕ್ತಿಜ್ಞಾನವೈರಾಗ್ಯಭಾವನೆಗಳಿಂದಲೂ ಕವಿತಾ ದೇಶದ ಪ್ರಥಮ ಸ್ಫೂರ್ತಿಯಿಂದಲೂ ಪ್ರಜ್ವಲಿಸುವ ಕಾವ್ಯ ಕಡೆಗೆ ಆತನ ಭಾರತಕ್ಕೆ ಒಂದು ಕೈಮೇಲೆಂದು ಹೇಳಿದರೂ ಹೇಳಬಹುದಾಗಿದೆ ಎಂದು ಬಿ.ಎಂ.ಶ್ರೀಯವರು ಆದಿಪುರಾಣವನ್ನು ಕುರಿತು ಅಭಿಪ್ರಾಯಪಟ್ಟಿದ್ದಾರೆ. ಭಾರತ ಆದಿಪುರಾಣಗಳಲ್ಲಿ ಆದಿಪುರಾಣಕ್ಕೇ ಹೆಚ್ಚಿನ ಗೌರವದ ಸ್ಥಾನ ಸಲ್ಲುವುದು ನ್ಯಾಯವಾಗಿದೆ. ಲೌಕಿಕವನ್ನು ಭಾರತದಲ್ಲಿಯೂ ಆಗಮವನ್ನು ಆದಿಪುರಾಣದಲ್ಲಿಯೂ ಪಂಪನು ಬೆಳಗಿರುವುದೇ ಇದಕ್ಕೆ ಕಾರಣವೆನ್ನಬೇಕು. ಅಲ್ಲದೆ ಪಂಪನ ಆದಿಪುರಾಣದ ದರ್ಶನಪೂರ್ವಕವಾದ ಕಲೆ ಆತನ ಕಲಾಪೂರ್ಣವಾದ ವಿಕ್ರಮಾರ್ಜುನವಿಜಯದ ದರ್ಶನಕ್ಕಿಂತಲೂ ಶಾಶ್ವತತರವಾದ ಪರಮಪುರುಷಾರ್ಥಪರವಾಗಿರುವುದರಿಂದಲೂ ಅದು ಸುಪಕ್ವಚೇತನರಿಗೆ ಮೆಚ್ಚಾಗುವ ಸಂಭವವುಂಟು ಎಂಬ ಕುವೆಂಪು ಅವರ ವಿಮರ್ಶಾಪೂರ್ವಕವಾದ ಅಭಿಪ್ರಾಯವೂ ಇದನ್ನೇ ಸಮರ್ಥಿಸುತ್ತದೆ.

ವಿಕ್ರಮಾರ್ಜುನವಿಜಯ 14 ಆಶ್ವಾಸ ಹಾಗೂ 1,609 ಪದ್ಯಗಳುಳ್ಳ ಚಂಪೂ ಕಾವ್ಯ. ಪಂಪಭಾರತ ಎಂದೂ ಪ್ರಸಿದ್ಧವಾಗಿದೆ. ಕಾವ್ಯದ ಆರಂಭದಲ್ಲಿ ವ್ಯಾಸಮುನೀಂದ್ರ ರುಂದ್ರವಚನಾಮೃತವಾರ್ಧಿಯನೀಸುವೆನ್ ಕವಿ ವ್ಯಾಸನೆನ್ ಎಂಬ ಗರ್ವಮೆನಗಿಲ್ಲ ಎಂಬ ವಿನಮ್ರತೆಯಿಂದ ವ್ಯಾಸರನ್ನು ನೆನೆದಿದ್ದಾನೆ. 'ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತಭಾರತಮನಪೂರ್ವಮಾಗೆ ಸಲೆ ಪೇೞ್ದ ಕವೀಶ್ವರರಿಲ್ಲ ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇೞ್ವೊಡೆ ಪಂಪನೆ ಪೇೞ್ಗೆಂ' ಎಂದು ಪಂಡಿತರೇ ಹೊಗಳಲು ಈ ಕೃತಿಯನ್ನು ರಚಿಸಲು ಮನಸ್ಸಾಯಿತೆಂದು ಹೇಳಿದ್ದಾನೆ. ಅಲ್ಲದೆ ಅರಿಕೇಸರಿ, ಪಂಪನಿಗೆ ಪಿರಿದನಿತ್ತು ಗೌರವಿಸಿ ಇತಿಹಾಸ ಕತೆಯನ್ನು ಬರೆಯಲೊಪ್ಪಿಸಿದ. ಗುಣಾರ್ಣವನ ಬಲ್ಪು ತನ್ನ ಮನಸ್ಸನ್ನು ಸೆರೆಹಿಡಿಯಲು ತಾನು ಅರಿಕೇಸರಿಯನ್ನು ಅರ್ಜುನನೊದಿಗೆ ಹೋಲಿಸಿ ಕಾವ್ಯ ಬರೆದುದಾಗಿಯೂ ಹೇಳಿಕೊಂಡಿದ್ದಾನೆ.

ವಿಕ್ರಮಾರ್ಜುನವಿಜಯ ಪ್ರಸಿದ್ಧವಾದ ಮಹಾಭಾರತ ಕಥೆಯನ್ನು ವಸ್ತುವಾಗುಳ್ಳದ್ದು. ಕವಿ ಇದನ್ನು ಸಮಸ್ತಭಾರತ ಎಂದು ಅನೇಕ ಕಡೆ ನಿರ್ದೇಶಿಸಿದ್ದಾನೆ. ಅರಿಕೇಸರಿಯ ವೃತ್ತಾಂತವನ್ನು ಅರ್ಜುನನ ಕಥೆಯೊಂದಿಗೆ ಸಮಾನ ಮಾಡಿರುವುದರಿಂದ (ಎಂದರೆ, ಕೂಡಿಸಿರುವುದರಿಂದ) ಸಮಸ್ತಭಾರತ ಎಂಬ ಹೆಸರು ಇದಕ್ಕೆ ಅನ್ವರ್ಥಕ ಎಂದು ವಿದ್ವಾಂಸರು ವ್ಯಾಖ್ಯಾನಿಸಿದ್ದಾರೆ. ಈ ಆಶಯ ಕವಿಗೆ ಇದ್ದಿರಬಹುದು. ಆದರೆ ಇನ್ನೂ ಮುಂದೆ ಹೋಗಿ, ಅರಿಕೇಸರಿಯ ಸಂಬಂಧವುಳ್ಳ ಕೆಲವು ಸಮಕಾಲೀನ ಚಾರಿತ್ರಿಕ ವ್ಯಕ್ತಿಗಳ ವೃತ್ತಾಂತವನ್ನು ಭಾರತಕಥೆಯ ಪ್ರಮುಖ ವ್ಯಕ್ತಿಗಳ ವೃತ್ತಾಂತಗಳೊಂದಿಗೆ ಸಮಸ್ತ ಮಾಡಿದ್ದಾನೆ ಎಂಬ ವಿಚಾರಧಾರೆಯೂ ಹೆಚ್ಚಿನ ಸಂಶೋಧನೆಯಿಂದ ಸ್ಥಿರಪಡಬೇಕಾಗಿದೆ. ಇದು ಹೇಗಿದ್ದರೂ ಪಂಪನ ದೃಷ್ಟಿಯಲ್ಲಿ ಭಾರತ ಕೇವಲ ವಿಕ್ರಮಾರ್ಜುನ ವಿಜಯವಲ್ಲ; ಅನೇಕ ಮಹಾಪುರುಷರ ಕಥೆ ಹಾಗೂ ಅವರ ನಡವಳಿಕೆಗಳ ಮೂಲಕ ಲೌಕಿಕವನ್ನು ಎಂದರೆ ಲೋಕಧರ್ಮವನ್ನು ಬೆಳೆಗುವ ಕೃತಿ. ಈ ಆಶಯವು ಚಲದೊಳ್ ದುರ್ಯೋಧನಂ, ನನ್ನಿಯೊಳಿನತನಯಂ, ಗಂಡಿನೊಳ್ ಭೀಮಸೇನಂ, ಬಲದೊಳ್ ಮದ್ರೇಶನತ್ಯುನ್ನತಿಯೊಳಮರಸಿಂಧೂದ್ಭವಂ, ಚಾಪವಿದ್ಯಾಬಲದೊಳ್ ಕುಂಭೋದ್ಭವಂ, ಸಾಹಸದ ಮಹಿಮೆಯೊಳ್ ಫಲ್ಗುಣಂ, ಧರ್ಮದೊಳ್ ನಿರ್ಮಲಚಿತ್ತಂ ಧರ್ಮಪುತ್ರಂ ಮಿಗಲಿವರ್ಗಳಿನೀ ಭಾರತಂ ಲೋಕ ಪೂಜ್ಯಂ ಎಂಬ ಪಂಪನ ಉಪಸಂಹಾರವಾಕ್ಯದಲ್ಲಿ ಸುವ್ಯಕ್ತವಾಗಿದೆ. (ಎಂ.ವಿ.ಎಸ್.)

ಆದಿ ವಂಶಾವತಾರ, ರಂಗಪ್ರವೇಶ, ಜತುಗೃಹದಾಹ, ಹಿಡಿಂಬವಧೆ, ಬಕಾಸುರ ವಧೆ, ದ್ರೌಪದೀಸ್ವಯಂವರ, ಯುಧಿಷ್ಠಿರಪಟ್ಟಬಂಧನ, ಇಂದ್ರಪ್ರಸ್ಥಪ್ರವೇಶ, ಅರ್ಜುನನದಿಗ್ವಿಜಯ, ಸುಭದ್ರಾಹರಣ, ಖಾಂಡವವನದಹನ, ಮಯದರ್ಶನ, ರಾಜಸೂಯಯಾಗ, ಜರಾಸಂಧಶಿಶುಪಾಲಾದಿಗಳ ವಧೆ, ದ್ಯೂತಪ್ರಂಗ, ಅರಣ್ಯಪರ್ವದ ವಿವರ, ವಿರಾಟಪರ್ವದ ವಿವರ, ಕೀಚಕವಧೆ, ದೂತಕಾರ್ಯ, ಕುರುಕ್ಷೇತ್ರಪ್ರಯಾಣ, ಭೀಷ್ಮಕರ್ಣವಿವಾದ, ಭೀಷ್ಮಶರಶಯನ, ದ್ರೋಣಾಭಿಷೇಕ, ಅಭಿಮನ್ಯುವಧೆ, ದ್ರೋಣವಧೆ, ಅಶ್ವತ್ಥಾಮಕರ್ಣವಿವಾದ, ಕರ್ಣಾಭಿಷೇಕ, ಸಂಸಪ್ತಕರ ವಧೆ, ದುಶ್ಶಾಸನವಧೆ, ವೇಣೀಸಂಹನನ, ಕರ್ಣಾರ್ಜುನಯುದ್ಧ, ಕರ್ಣನ ಮರಣ, ಶಲ್ಯಾಭಿಷೇಕ, ಶಲ್ಯನ ಪತನ, ಭೀಮದುರ್ಯೋಧನರ ಗದಾಯುದ್ಧ, ದುರ್ಯೋಧನನ ವಧೆ, ಪಂಚಪಾಂಡವರ ಶಿರಶ್ಛೇದನ ಇತ್ಯಾದಿಗಳನ್ನು ಒಂದೂ ಕುಂದದಂತೆ ಹೇಳುವುದು (ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ) ಪಂಪನ ಉದ್ದೇಶವಾಗಿದ್ದು ಈ ಎಲ್ಲ ವಿಷಯಗಳಲ್ಲಿಯೂ ಕವಿಯಶಸ್ವಿಯಾಗಿದ್ದಾನೆಂದು ಹೇಳಬಹುದು. ಪಂಚಪತೀತ್ವದ ಮಾರ್ಪಾಟು, ಸುಭದ್ರೆಗೆ ಅರ್ಜುನನ ಅಗ್ರಮಹಿಷಿಪಟ್ಟ, ಅರ್ಜುನನ ಪಟ್ಟಾಭಿಷೇಕ - ಹೀಗೆ ಎಡೆತಪ್ಪಿಬಂದ ಈ ಒಂದೆರಡು ದೋಷಗಳನ್ನು ಬಿಟ್ಟರೆ ವಿಕ್ರಮಾರ್ಜುನವಿಜಯ, ಒಂದು ಅತ್ಯುತ್ತಮ ಕಾವ್ಯ. 'ಅದರ ಕಟ್ಟಣಗಳಲ್ಲಿ ಒಂದು ಅಪೂರ್ವತೆಯಿದೆ, ಉಜ್ವಲತೆಯಿದೆ'. ಮೂಲ ಮಹಾಭಾರತವನ್ನು ಸಂಗ್ರಹಗೊಳಿಸುವಲ್ಲಿ ಮಹಾಕವಿಗೆ ಮಾತ್ರ ಸಾಧ್ಯವೆಂಬ ಕೌಶಲವನ್ನು ಪಂಪ ಮೆರೆದಿದ್ದಾನೆ. ಹಲವಾರು ಪದ್ಯಗಳಲ್ಲಿ ವಿಸ್ತರಿಸಬಹುದಾದುದನ್ನು ಕೆಲಪದ್ಯಗಳಲ್ಲಿ, ಒಂದೆರಡು ಮಾತುಗಳಲ್ಲಿ ಹೇಳಿ ಮುಗಿಸಿದ್ದಾನೆ. ಶಂತನು-ಸತ್ಯವತಿಯರ ಪ್ರಣಯಕಥೆಗಳನ್ನು ಇದಕ್ಕೆ ಉದಾಹರಿಸಬಹುದು:

ಮೃಗಯಾವ್ಯಾಜದಿನೊರ್ಮೆ ಶಂತನು ತೊೞಲ್ತರ್ಪಂ ಪಳಂಚಲ್ಕೆ ತ

ನ್ಮೃಗಶಾಬಾಕ್ಷಿಯ ಕಂಪುತಟ್ಟಿ ಮಧುಪಂಬೋಲ್ ಸೋಲ್ತು
ಕಂಡೊಲ್ದು ನ

ಲ್ಮೆಗೆ ದಿಬ್ಯಂಬಿಡಿವಂತೆವೋಲ್ ಪಿಡಿದು ನೀಂ ಬಾ
ಪೋಪಮೆಂದಂಗೆ ಮೆ

ಲ್ಲಗೆ ತತ್ಕನ್ಯಕೆ ನಾಣ್ಚೆ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ

- ಇಲ್ಲಿನ ಪ್ರಣಯಿಗಳ ಈ ಸಂಕ್ಷಿಪ್ತ ಸಂಭಾಷಣೆ ಧ್ವನಿರಮ್ಯವಾಗಿದೆ. (ಎಸ್.ಜಿ.ಎ.)

ಯಾವುದೇ ಸನ್ನಿವೇಶವನ್ನು ಕಣ್ಣಿಗೆಕಟ್ಟುವಂತೆ ಹಿತಮಿತವಾಗಿ ವರ್ಣಿಸುವುದು ಪಂಪನ ವೈಶಿಷ್ಟ್ಯ. ಶಿಶುಪಾಲವಧೆಯ ಸಂದರ್ಭ, ಭೀಷ್ಮರ ಪಟ್ಟಾಭಿಷೇಕ ಸಂದರ್ಭ, ಕರ್ಣಕುಂತಿಯರ ಸಂವಾದಸಂದರ್ಭ - ಇವು ಮೇಲಿನ ಮಾತಿಗೆ ಸಾಕ್ಷಿಯನ್ನೊದಗಿಸುತ್ತವೆ. ಪಾತ್ರಚಿತ್ರಣದಲ್ಲಿಯೂ ಪಂಪನದು ಎತ್ತಿದ ಕೈ. ದುರ್ಯೋಧನ, ಕರ್ಣ, ಭೀಮ, ದ್ರೌಪದಿ, ಅರ್ಜುನ, ಭೀಷ್ಮ, ದ್ರೋಣ, ಯುಧಿಷ್ಠಿರ, ಕೃಷ್ಣ - ಈ ಮೊದಲಾದ ಪಾತ್ರಗಳು ಸಜೀವತೆಯಿಂದ ಕೂಡಿವೆ. ಮಾನವಸ್ವಭಾವವನ್ನು ಪಂಪನಂತೆ ಸೂಕ್ಷ್ಮವಾಗಿ ಚಿತ್ರಿಸಿದ ಕವಿಗಳು ಕನ್ನಡದಲ್ಲಿ ವಿರಳ. ಕರ್ಣದುರ್ಯೋಧನರ ಸ್ನೇಹವನ್ನಂತೂ ಕವಿ ಅನನ್ಯರೀತಿಯಲ್ಲಿ ಚಿತ್ರಿಸಿದ್ದಾನೆ. ಕರ್ಣಧುಯೋಧನರ ಪಾತ್ರಗಳು ಪಂಪನ ಮನಸೆಳೆದಿರುವಂತೆ ಹೃದಯವನ್ನು ಕಲಕಿರುವಂತೆ ಇನ್ನಾವ ಪಾತ್ರಗಳೂ ಅಷ್ಟೊಂದು ಪ್ರಭಾವ ಬೀರಿಲ್ಲ. ಆದ್ದರಿಂದಲೇ ಕವಿ ರಣರಂಗದಲ್ಲಿ ಕರ್ಣ ಮರಣಹೊಂದಿದ ಸಮಯದಲ್ಲಿ ಚರಮಗೀತೆಯನ್ನು ಬರೆಯುತ್ತ 'ನೆನೆಯದಿರಣ್ಣ ಭಾರತದೊಳಿಂ ಪೆಱರಾರುಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ' ಎಂದು ಕಂಬನಿ ದುಂಬಿ ನುಡಿದಿರುವುದು.

ಪಂಪನದು ಔಚಿತ್ಯಮೀರದ ಶೈಲಿ; ಅದರಲ್ಲಿ ದೇಸಿ ಹಾಗೂ ಮಾರ್ಗಪದ್ಧತಿ ಬಂಧಗಳ ಸುಂದರ ಸಮನ್ವಯವಿದೆ. ರಸಧ್ವನಿ ಪ್ರಣವತೆಯಿದೆ. ಪ್ರಸನ್ನ ಗಂಭೀರತೆಯಿದೆ. ಅಕ್ಷರಶಕ್ತಿ ಶಬ್ದಶಕ್ತಿ ಅರ್ಥಶಕ್ತಿ ಛಂದೋಲಯ ಇವುಗಳನ್ನು ಧ್ವನಿಸಿದ್ಧಿಗಾಗಿ ಬಳಸಿಕೊಳ್ಳುವ ಕಾವ್ಯಕೌಶಲ, ನಾಟಕೀಯಪ್ರಜ್ಞೆ, ಶಬ್ದಚಿತ್ರ ನಿರ್ಮಾಣಶಕ್ತಿ ಇವೇ ಮುಂತಾದ ಕಾವ್ಯಗುಣಗಳನ್ನು ಹೊಮ್ಮಿಸಬಲ್ಲ ಪಂಪನ ಪ್ರತಿಭೆ ಆತನನ್ನು ಕವಿಗಳ ಕವಿಯಾಗಿ ಮಾಡಿ, ಸುಕವಿಜನಮನೋಮಾನಸೋ ತ್ತಂಸಹಂಸಂ ಎಂಬ ಅವನ ಬಿರುದನ್ನು ಸಾರ್ಥಕಪಡಿಸಿದೆ.

ವಿಕ್ರಮಾರ್ಜುನವಿಜಯ ಲೌಕಿಕ ಕಾವ್ಯವಾದುದರಿಂದ ವೀರಕಾವ್ಯವಾದುದರಿಂದ ಕಾವ್ಯದುದ್ದಕ್ಕೂ ವೀರರಸ ನೊರೆಗಟ್ಟಿ ಹರಿಯುತ್ತದೆ. ಯುದ್ಧವರ್ಣನೆಗಳು ಸಹಜತೆಯಿಂದ ಕೂಡಿದ್ದು ಕವಿಯ ದಟ್ಟವಾದ ಲೋಕಾನುಭವಕ್ಕೆ ದ್ಯೋತಕವಾಗಿವೆ.

ಆದಿಪುರಾಣ ವಿಕ್ರಮಾರ್ಜುನವಿಜಯಗಳೆರಡೂ ಕನ್ನಡದ ಅಗ್ರಮಾನ್ಯ ಆದಿ ಮಹಾಕಾವ್ಯಗಳು, ಚಂಪೂಕಾವ್ಯ ಪ್ರಕಾರದ ಶ್ರೇಷ್ಠತಮ ಮಾದರಿಗಳು, ಮುನ್ನಿನ ಕಬ್ಬಮನೆಲ್ಲಮಿಕ್ಕಿ ಮೆಟ್ಟಿದುವು ಸಮಸ್ತಭಾರತಮುಂ ಆದಿಪುರಾಣ ಮಹಾಪ್ರಬಂಧಮುಂ ಎಂಬ ಪಂಪನ ಹೇಳಿಕೆಯಿಂದ ಈ ಎರಡು ಕೃತಿಗಳು ಪಂಪಪೂರ್ವಯುಗದ ಗಣ್ಯಕೃತಿಗಳೆಲ್ಲವನ್ನೂ ಮೀರಿಸಿದ್ದುವು ಎಂದು ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ಎರಡು ಕೃತಿಗಳೂ ಪಂಪನ ಪ್ರತಿಭೆಯನ್ನು ಶಾಶ್ವತವಾಗಿ ವಿಶ್ವವ್ಯಾಪಿಯಾಗಿ ಬೆಳಗುವ ಕೃತಿಗಳೆಂಬುದರಲ್ಲಿ ಸಂದೇಹವಿಲ್ಲ. ಆಧುನಿಕ ವಿಮರ್ಶೆಯ ಪುನರ್ಮೌಲ್ಯಮಾಪನದ ಅಗ್ನಿಪರೀಕ್ಷೆಯಲ್ಲಿ ಎಂದೂ ತೇರ್ಗಡೆಯಾಗಬಲ್ಲ ಸತ್ತ್ವವನ್ನು ಹೊಂದಿರುವ ಉದ್ಘಕೃತಿಗಳಿವು.

ಜಿನಸೇನಾಚಾರ್ಯ ಹಾಗೂ ವ್ಯಾಸಮುನೀಂದ್ರರಿಂದ ಕಥಾವಸ್ತುಗಳನ್ನು ಪಡೆದ ಋಣವನ್ನು ಒಪ್ಪಿಕೊಂಡಿರುವ ಪಂಪ ತನಗಿಂತ ಹಿಂದಿನ ಸಂಸ್ಕೃತ ಮಹಾಕವಿಗಳಿಂದ ಪ್ರಭಾವಿತನಾಗಿದ್ದರೂ ಅವರನ್ನು ಸ್ಮರಿಸದಿರುವುದು ಅಚ್ಚರಿಯನ್ನುಂಟುಮಾಡುತ್ತದೆ. ಭಾಸ, ಕಾಳಿದಾಸ, ಹರ್ಷ, ಬಾಣ, ಮಾಘ, ಭಾರವಿ - ಈ ಸಂಸ್ಕೃತ ಮಹಾಕವಿಗಳ ಪ್ರಭಾವವನ್ನು ಪಂಪನ ಕೃತಿಗಳಲ್ಲಿ ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

ಅನೇಕ ಕನ್ನಡ ಕವಿಗಳು ಪಂಪನ ನೇರ ಪ್ರಭಾವಕ್ಕೆ ಒಳಗಾಗಿದ್ದಾರೆ. ರನ್ನನಂತೂ (ಸು. 993) ಪಂಪನಿಗೆ ಬಹುವಿಧಗಳಲ್ಲಿ ಋಣಿಯಾಗಿದ್ದಾನೆ. ಪಂಪನ ಭಾರತ ವಿಕ್ರಮಾರ್ಜುನವಿಜಯವಾದರೆ ರನ್ನನ ಗದಾಯುದ್ಧ ಸಾಹಸಭೀಮವಿಜಯ; ಆಶ್ರಯದಾತನನ್ನು ಕಥಾನಾಯಕನಿಗೆ ಹೋಲಿಸಿ ಕಥೆಯನ್ನು ಹೇಳುವ ರೀತಿಯಲ್ಲಿಯೂ ಪಂಪನ ಅನುಕರಣವಿದೆ. ಇಷ್ಟೇ ಅಲ್ಲ, ಈ ಗದಾಯುದ್ಧದ ಕಥೆಗೆ ವಿಕ್ರಮಾರ್ಜುನವಿಜಯದ ಹದಿಮೂರನೆಯ ಆಶ್ವಾಸದ ಕಥೆಯೇ ಮೂಲ; ವರ್ಣನಾದಿಗಳೂ ಕೆಲವೆಡೆಗಳಲ್ಲಿ ಪಂಪಭಾರತವನ್ನೇ ಅನುಸರಿಸಿರುವುವು; ಕೆಲವು ಪದ್ಯಗಳೂ ಪದ್ಯಭಾಗಗಳೂ ಪಂಪಭಾರತದ ಈ ಭಾಗದ ಪಡಿನೆಳಲಿನಂತಿವೆ. ರಾಮಚಂದ್ರಚರಿತಪುರಾಣದ ಕರ್ತೃವಾದ ನಾಗಚಂದ್ರ (ಸು.1100) ತಾನು ಮಹಾಕವಿ ಪಂಪನಿಗೆ ಸಮನಾದವನು ಎಂಬ ಅರ್ಥದಲ್ಲಿ ತನ್ನನ್ನು ಅಭಿನವ ಪಂಪನೆಂದು ಕರೆದುಕೊಂಡಿದ್ದಾನೆ. ಅವನ ಕೃತಿ ಪಂಪರಾಮಾಯಣವೆಂದು ಪ್ರಸಿದ್ಧವಾಗಿದೆ. ದುರ್ಗಸಿಂಹ, ಎರಡನೆಯ ನಾಗವರ್ಮ, ನಯಸೇನ, ರುದ್ರಭಟ್ಟ, ಬ್ರಹ್ಮಶಿವ, ಎರಡನೆಯ ಗುಣವರ್ಮ ಮೊದಲಾದ ಅನೇಕ ಕವಿಗಳು ಪಂಪನ ಗೀರ್ಗುಂಫದ ಪೆಂಪು, ಅಸದೃಶಮಪ್ಪಪೂರ್ವರಸಂ, ಸನ್ನುತಕವಿತಾಗುಣ, ಹಂಪದೇವೋಕ್ತಪ್ರಯೋಗ, ರಸಿಕಾಗ್ರಣಿ ಪಂಪನ ನುಣ್ಪುವೆತ್ತ ನುಡಿ, ಪಂಪ ನಿಂಪು, ಪಂಪನೋಜೆ ಎಂದು ಮುಂತಾಗಿ ಪಂಪನ ಕವಿತೆಯ ಗುಣಗಳನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಕುಮಾರವ್ಯಾಸಭಾರತದಲ್ಲಿಯೂ ಪಂಪ ಭಾರತದ ಪ್ರಭಾವವನ್ನು ಗುರುತಿಸಲಾಗಿದೆ. ತೆಲುಗಿನಲ್ಲಿ ಭಾರತವನ್ನು ಬರೆದ ನನ್ನಯಭಟ್ಟನ ಕೃತಿಯಲ್ಲೂ ಪಂಪಭಾರತದ ಪ್ರಭಾವವನ್ನು ವಿದ್ವಾಂಸರು ಗುರುತಿಸಿದ್ದಾರೆ. ಪಂಪನ ಪ್ರಭಾವಮುದ್ರೆಯ ವ್ಯಾಪಕತ್ವಕ್ಕೆ ಇದು ಗಮನಾರ್ಹ ನಿದರ್ಶನವಾಗಿದೆ. ಈ ಹಿನ್ನೆಲೆಯಲ್ಲಿ ಪಂಪ ಕನ್ನಡ ಕವಿಕುಲಗುರು ಎಂಬ ಪ್ರಶಸ್ತಿಗೆ ಅರ್ಹನಾಗಿದ್ದಾನೆ. ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ ಪಂಪನಾವಗಂ ಎಂಬ ಕವಿ ನಾಗರಾಜನ (ಸು. 1331) ಉಕ್ತಿ ಎಂದಿಗೂ ಸಲ್ಲುವ ಮಾತಾಗಿದೆ. (ಎಂ.ವಿ.ಎಸ್.)

**ಪಟ್ಟಣಗಳು:** ಗ್ರಾಮಗಳಿಗಿಂತ ದೊಡ್ಡದಾದ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಅವುಗಳಿಗಿಂತ ಭಿನ್ನಸ್ವರೂಪದ ವಸತಿಘಟಕಗಳು ಪಟ್ಟಣಗಳು. 1971ರ ಜನಗಣತಿಯ ಸಂದರ್ಭದಲ್ಲಿ ಉಪಯೋಗಿಸಲಾದ ನಿರ್ಣಾಯಕ ಅಂಶಗಳ ಪ್ರಕಾರ ಎಲ್ಲ ದಂಡುಗಳು ಮತ್ತು ಪೌರಸಭೆಗಳಿರುವ ಊರುಗಳು, ಹಾಗೂ ಜನಸಂಖ್ಯೆ 5000 ಕ್ಕಿಂತ ಮತ್ತು ಜನಸಾಂದ್ರತೆ ಚ.ಕಿಮೀಗೆ 400 ಕ್ಕಿಂತ ಕಡಿಮೆ ಇಲ್ಲದ ಮತ್ತು ಕನಿಷ್ಠಪಕ್ಷ ಮುಕ್ಕಾಲುಪಾಲು ಪ್ರಾಯಸ್ಥ ಗಂಡಸರು ಕೃಷೀಕರ ಉದ್ಯಮಗಳಲ್ಲಿ ತೊಡಗಿರುವ ಊರುಗಳನ್ನು ಪಟ್ಟಣಗಳೆಂದು ಪರಿಗಣಿಸಲಾಗಿದೆ. ಈ ನಿರ್ಣಾಯಕಗಳೇ ಪಟ್ಟಣದ ಸ್ವರೂಪವನ್ನು ಸೂಚಿಸುತ್ತವೆ.

**ಇತಿಹಾಸ:** ಕರ್ನಾಟಕದಲ್ಲಿ ನವಶಿಲಾಯುಗ ಕಾಲದಲ್ಲಿ ಆರಂಭವಾದ ಗ್ರಾಮ ವ್ಯವಸ್ಥೆಯಿಂದ ನಗರೀಕರಣದತ್ತಣ (ಅರ್ಬನೈಸೇಷನ್) ನಡೆಯು ಬಹುಶಃ ಕ್ರಿಸ್ತಪೂರ್ವ ನೆಯ ಶತಮಾನಗಳಲ್ಲಿ ಪ್ರಾರಂಭವಾಗಿರಬೇಕೆಂಬುದಕ್ಕೆ ಚಾರಿತ್ರಿಕ ಆಧಾರಗಳು ದೊರಕುತ್ತವೆ. ಈ ನಾಡು ಮೌರ್ಯ ಸಾಮ್ರಾಜ್ಯದ ಕಕ್ಷೆಗೆ ಒಳಪಟ್ಟ ಕಾಲದಿಂದಲಾದರೂ ಈ ಪ್ರದೇಶದ ಆಡಳಿತ ಸೌಕರ್ಯಕ್ಕಾಗಿ ರಾಜ್ಯದ ಅಧಿಕಾರಿಗಳು, ಸೈನಿಕರು ಕೆಲವೆಡೆಗಳಲ್ಲಿ ನೆಲೆನಿಂತಿರಬೇಕು. ಆ ಕಾಲದಲ್ಲಿ ಹಾಗೂ ಮುಂದೆ ಕರ್ನಾಟಕ ಭಾರತ ಮತ್ತು ಇತರ ಹೊಸನಾಡುಗಳೊಡನೆ ಸಂಪರ್ಕವನ್ನು ಬೆಳೆಸಿದ್ದರಿಂದ ಕೆಲವು ಸ್ಥಳಗಳಲ್ಲಿ ವ್ಯಾಪಾರಾದಿ ಮೊದಲಾದ ಕೃಷೀತರ ಉದ್ಯೋಗಗಳಲ್ಲಿ ನಿರತರಾಗಿದ್ದ ಸ್ಥಿತಿವಂತ ಜನರು ಹಾಗೂ ಅವರ ಜೀವನ ವಿಧಾನಕ್ಕೆ ಅನುವಾಗುವಂತೆ ಇತರ ಸಹಚರ ಮತ್ತು ಅನುಚರ ವರ್ಗಗಳಿಗೆ ಸೇರಿದವರಿಂದ ಕೂಡಿದ. ಗ್ರಾಮಗಳಿಗಿಂತ ಉತ್ತಮ ನಾಗರಿಕ ಸೌಲಭ್ಯಗಳನ್ನು ಹೊಂದಿದ್ದ. ಜನವಸತಿ ಘಟಕಗಳು ಬೆಳೆದಿದ್ದರಿಂದ ಪಟ್ಟಣಗಳ ಸ್ಥಾಪನೆಯಾಯಿತು. ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ ಮತ್ತು ರಾಯಚೂರು ಜಿಲ್ಲೆಯ ಮಸ್ಕಿ - ಇವು ಕರ್ನಾಟಕದಲ್ಲಿ ಸ್ಥಾಪಿತವಾದ ಅತ್ಯಂತ ಪ್ರಾಚೀನ ಪಟ್ಟಣಗಳೆಂದು ತೋರುತ್ತದೆ. ಇವೇ ಬಹುಶಃ ಅಶೋಕನ ಶಾಸನಗಳಲ್ಲಿ ಉಕ್ತವಾಗಿರುವ ಇಸಿಲ ಮತ್ತು ಸುವರ್ಣಗಿರಿ. ಸುವರ್ಣಗಿರಿ ಮತ್ತು ಇಸಿಲ ಪ್ರಾಂತೀಯ ಆಡಳಿತ ಕೇಂದ್ರಗಳಾಗಿದ್ದಂತೆಯೂ

ತೋರುತ್ತದೆ. ಆ ಕಾಲದಲ್ಲಿಯೇ ರಾಯಚೂರು ಜಿಲ್ಲೆಯ ಕೊಪ್ಪಳ ಮತ್ತು ಉತ್ತರ ಕನ್ನಡ ಜಿಲ್ಲೆಯ ಬನವಾಸಿ ಸಹ ಪಟ್ಟಣಗಳಾಗಿ ರೂಪುಗೊಂಡಿದ್ದಂತೆ ತೋರುತ್ತದೆ. ಮುಂದೆ ಸಹಾತವಾಹನರ ಕಾಲದಲ್ಲಿ ಈ ಮೇಲಿನ ಸ್ಥಳಗಳಲ್ಲದೆ ಬೆಳಗಾಂವಿ ಜಿಲ್ಲೆಯ ವಡಗಾಂವ ಮಾಧವಪುರ, ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿ, ಗುಲ್ಬರ್ಗ ಜಿಲ್ಲೆಯ ಸನ್ನತಿ - ಈ ಸ್ಥಳಗಳು ಪಟ್ಟಣಗಳಾಗಿ ಅಭಿವೃದ್ಧಿ ಹೊಂದಿದವು. ಕಾಲಕ್ರಮೇಣ ಕನ್ನಡ ನಾಡಿನಲ್ಲಿ ಸಾಮ್ರಾಜ್ಯಗಳ ಸ್ಥಾಪನೆ, ಜನಸಂಖ್ಯೆಯ ಏರಿಕೆ, ಕೃಷಿ ವ್ಯಾಪಾರ ಉದ್ಯಮಗಳಿಂದ ಆರ್ಥಿಕ ಮುನ್ನಡೆ - ಇವು ಸಾಧಿತವಾದ್ದರಿಂದ ಅನೇಕ ರಾಜಧಾನಿಗಳೂ ಪ್ರಾಂತ್ಯ ವಿಭಾಗಗಳ ಆಡಳಿತ ಕೆದ್ರಗಳೂ ವ್ಯಾಪಾರ ಕೇಂದ್ರಗಳೂ ಬೆಳೆದುವು. ಕೆಲವು ಧಾರ್ಮಿಕ ಮತ್ತು ವಿದ್ಯಾಕೇಂದ್ರಗಳೂ ಅಭಿವೃದ್ಧಿಗಳಿಸಿದವು. ಈ ವಿವಿಧ ಕಾರಣಗಳಿಂದ ಉದ್ಭವವಾದ ಅನೇಕ ಪಟ್ಟಣಗಳ ಬಗ್ಗೆ ಶಾಸನಗಳಲ್ಲಿ ಮಾಹಿತಿ ದೊರಕುತ್ತವೆ. ಹಲಶಿ, ಉಚ್ಚಂಗಿ, ಬನವಾಸಿ, ಬಾದಾಮಿ, ಐಹೊಳೆ, ಕಿಸುವೊಳಲ್, ಪುರಿಗೆರೆ, ಮುಳಗುಂದ, ಮಳಖೇಡ, ಮಣ್ಣೆ, ತಲಕಾಡು, ಕೋಲಾರ, ಗದಗ, ಕಲ್ಯಾಣ, ದ್ವಾರಸಮುದ್ರ, ಬೆಳಗಾಂವಿ, ಕಂಪಿಲಿ, ಬೇಲೂರು, ಆರಗ, ಆಸಂದಿ, ಮಂಗಳೂರು, ಬಾರಕೂರು, ವಿಜಯನಗರ, ಕೆಳದಿ, ಬಿದನೂರು, ಶ್ರೀರಂಗಪಟ್ಟಣ, ಮೈಸೂರು, ಚಿತ್ರದುರ್ಗ, ಬೆಂಗಳೂರು, ನರಗುಂದ, ಬಳ್ಳಾರಿ, ಚಿಕ್ಕಬಳ್ಳಾಪುರ ಮೊದಲಾದವು ಹೆಸರಿಸಬಹುದುದಾದ ಐತಿಹಾಸಿಕ ಕಾಲದ ಪಟ್ಟಣಗಳಲ್ಲಿ ಕೆಲವು.

**ಇಂದಿನ ಸ್ಥಿತಿ:** ಕೈಗಾರಿಕಾ ಕ್ರಾಂತಿ ಆಧುನಿಕ ಪಟ್ಟಣಗಳ ಬೆಳವಣಿಗೆಗೆ ಪೂರಕವಾಯಿತು. ಇಪ್ಪತ್ತನೆಯ ಶತಮಾನದಲ್ಲಿ ಮೋಟಾರು ವಾಹನ, ವಿಮಾನ ಮುಂತಾದ ಹೊಸ ಸಂಚಾರಸೌಲಭ್ಯಗಳು ಕಂಡುಹಿಡಿಯಲ್ಪಟ್ಟಮೇಲಂತೂ ಪಟ್ಟಣಗಳ ಬೆಳವಣಿಗೆಗೆ ಹೊಸ ರೂಪ ಬಂತು. ವೃತ್ತಿಸಂಬಂಧವಾಗಿ ವ್ಯವಸಾಯ ಕ್ಷೇತ್ರದ ಬದಲು ವ್ಯವಸಾಯೇತರ ಕ್ಷೇತ್ರಕ್ಕೆ ದೊರಕುವ ಪ್ರಾಮುಖ್ಯತೆ ಹಾಗೂ ಸಾರಿಗೆಸಾಧನೆಗಳಲ್ಲಾದ ಸುಧಾರಣೆಯೇ ದೊಡ್ಡ ದೊಡ್ಡ ಪಟ್ಟಣಗಳ ಉದ್ಭವಕ್ಕೆ ಕಾರಣವಾಯಿತು.

ಇಪ್ಪತ್ತನೆ ಶತಮಾನದ ಆರಂಭದಲ್ಲಿ ಕರ್ನಾಟಕ ರಾಜ್ಯದ ನಗರವಾಸಿಗಳ ಸಂಖ್ಯೆ ರಾಜ್ಯ ಜನಸಂಖ್ಯೆಯ 12.6 ಶತಾಂಶದಷ್ಟಿತ್ತು. ಆದರೆ 1941 ರಿಂದೀಚೆಗೆ ರಾಜ್ಯದಲ್ಲಿ ನಗರೀಕರಣ ಗಮನಾರ್ಹವಾಗಿದೆ. 1941 ರಲ್ಲಿ ನಗರವಾಸಿಗಳ ಸಂಖ್ಯೆ 27.54 ಲಕ್ಷ ಇದ್ದದ್ದು 1951ರಲ್ಲಿ ಅದು 44.53 ಲಕ್ಷಕ್ಕೆ ಏರಿತು. ಈ ಅವಧಿಯಲ್ಲಿ ಒಟ್ಟು ಜನಸಂಖ್ಯೆ ಶೇಕಡಾ 19.36 ರಷ್ಟು ಹೆಚ್ಚಿದರೆ ನಗರವಾಸಿಗಳ ಸಂಖ್ಯೆ ಶೇಕಡಾ 61.31 ರಷ್ಟು ಹೆಚ್ಚಾಯಿತು. ಬೆಂಗಳೂರು, ಮೈಸೂರು, ಮಂಗಳೂರು, ದಾವಣಗೆರೆ, ಶಿವಮೊಗ್ಗ, ಭದ್ರಾವತಿ ಮುಂತಾದ ನಗರಗಳು ತೀವ್ರಗತಿಯಿಂದ ಬೆಳೆದವು.

1971ನೆಯ ಜನಗಣತಿಯ ಪ್ರಕಾರ ರಾಜ್ಯದ 293 ಲಕ್ಷ ಜನಸಂಖ್ಯೆಯಲ್ಲಿ ನಗರವಾಸಿಗಳ ಸಂಖ್ಯೆ 71 ಲಕ್ಷದಷ್ಟಿತ್ತು. ಅಂದರೆ ಒಟ್ಟು ಜನಸಂಖ್ಯೆಯ 24.3 ಶತಾಂಶ. ಮುಂದಿನ ಇಪ್ಪತ್ತು ವರ್ಷಗಳಲ್ಲಿ ಅಂದರೆ 2001ರಲ್ಲಿ ರಾಜ್ಯದ ಒಟ್ಟು 527 ಲಕ್ಷ ಜನಸಂಖ್ಯೆಯಲ್ಲಿ 179 ಲಕ್ಷ ಜನಸಂಖ್ಯೆ ನಗರ ವಾಸಿಗಳಾಗಿದ್ದಾಗಿದೆ. ಅಂದರೆ ಒಟ್ಟು ಜನಸಂಖ್ಯೆ ಶೇಕಡ 33.98 ರಷ್ಟು ನಗರವಾಸಿಗಳಿದ್ದಾರೆ.

2001ರ ಜನ ಗಣತಿಯ ಮೇರೆಗೆ ಕರ್ನಾಟಕ ರಾಜ್ಯದಲ್ಲಿರುವ ಒಟ್ಟು ಪಟ್ಟಣಗಳು 237, ಬೆಂಗಳೂರು ನಗರ ಮತ್ತು ಅದರ ನಗರ ಸಮೂಹದ ಜನಸಂಖ್ಯೆ 5,686, 844. ಈ ಜನಸಾಗರದ ಸಮೀಪಕ್ಕೂ ಬರುವ ಇತರ ಯಾವುದೇ ನಗರ ಕರ್ನಾಟಕದಲಿಲ್ಲ. 5 ಲಕ್ಷ ಜನಸಂಖ್ಯೆಗೆ ಹೆಚ್ಚಿದ್ದು 10 ಲಕ್ಷಕ್ಕೆ ಕಡಿಮೆ ಇರುವ ನಗರಗಳ ಸಂಖ್ಯೆ 3, ಅವೆಂದರೆ ಮೈಸೂರು, ಹುಬ್ಬಳ್ಳಿ, ಧಾರವಾಡ ಮತ್ತು ಮಂಗಳೂರು ಒಂದು ಲಕ್ಷದ ಮೆಲೆ ಐದು ಲಕ್ಷಗಳಿಗೆ ಒಳಪಟ್ಟಿರುವ ನಗರಗಳ ಸಂಖ್ಯೆ 20, ಒಟ್ಟು ಪಟ್ಟಣಗಳನ್ನೂ ಜನಸಂಖ್ಯೆಗೆ ಅನುಸಾರವಾಗಿ ಆರು ವರ್ಗಗಳಾಗಿ ವಿಂಗಡಿಸಲಾಗಿದೆ. ಆ ವರ್ಗಗಳಲ್ಲಿರುವ ಪಟ್ಟಣಗಳ ಸಂಖ್ಯೆ ಮತ್ತು ಪಟ್ಟಣವಾಸಿಗಳ ಸಂಖ್ಯೆಯನ್ನು (2001) ಈ ಕೆಳಗೆ ಸೂಚಿಸಲಾಗಿದೆ.

ವರ್ಗಗಳಲ್ಲಿರುವ ಪಟ್ಟಣಗಳ ಸಂಖ್ಯೆ, ಪಟ್ಟಣಾಸಿಗಳ ಸಂಖ್ಯೆಯನ್ನು ಈ ಕೆಳಗೆ ಸೂಚಿಸಲಾಗಿದೆ.

| ವರ್ಗ | ಪಟ್ಟಣಗಳು (ಜನಸಂಖ್ಯೆ ಮಿತಿ) | ಪಟ್ಟಣವಾಸಿಗಳ ಸಂಖ್ಯೆ | ಒಟ್ಟು ಪಟ್ಟಣವಾಸಿಗಳ ಸಂಖ್ಯೆ | ಸೇಕಡ ಪ್ರಮಾಣ |
|---|---|---|---|---|
| 1 | 1,00,000ಕ್ಕೂ ಹೆಚ್ಚು | 24 | 12,043,036 | -- |
| 2 | 50,000ದಿಂದ 99,999 | 27 | 17,26,134 | |
| 3 | 20,000ದಿಂದ 49,999 | 19 | 30,91,525 | |
| 4 | 10,000ದಿಂದ 19,999 | 53 | 8,39,021 | |
| 5 | 50,000ದಿಂದ 9,999 | 27 | 1,92,477 | |
| 6 | 5,000ಕ್ಕೂ ಕಡಿಮೆ | 5 | 22,605 | |
| | ಒಟ್ಟು | 237 | 1,79,19,858 | |

ಪಟ್ಟಣಗಳಲ್ಲಿ ನಡೆಯುವ ವಿವಿಧ ಚಟುವಟಿಕೆಗಳ ಸ್ವರೂಪವನ್ನು ಗಮನಿಸಿ ಅವನ್ನು ಸಂಸ್ಥಾ ಕೇಂದ್ರಗಳು, ವಾಣಿಜ್ಯ ಕೇಂದ್ರಗಳು, ವಿಹಾರ ಮತ್ತು ಜಾತ್ರಾಕೇಂದ್ರಗಳು, ಮಹಾನಗರಗಳು ಎಂದು ವಿಂಗಡಿಸಬಹುದು. ಯಾತ್ರಾಸ್ಥಳಗಳು, ಬಂದರುಗಳು, ದುರ್ಗಗಳು, ಯೋಜನಾ ಕೇಂದ್ರಗಳು, ಹಾಗೂ ಸೈನ್ಯಶಿಬಿರಗಳೂ ಈ ವಿಂಗಡಣೆಯಲ್ಲೇ ಸೇರುತ್ತವೆ.

ಸಂಸ್ಥಾ ಕೇಂದ್ರಗಳು ಹಿಂದೆ ದೇವಸ್ಥಾನ, ಚರ್ಚು ಮುಂತಾದ ಸಂಸ್ಥೆಗಳ ಸುತ್ತಲೂ ಗ್ರಾಮಗಳು ಮತ್ತು ಪಟ್ಟಣಗಳು ಬೆಳೆಯುತ್ತಿದ್ದುವು. ಇವುಗಳೊಂದಿಗೆ ಅರಮನೆಗಳ ಹಾಗೂ ಸರ್ಕಾರಿ ಕಚೇರಿಗಳ ಕೇಂದ್ರವಾದ ರಾಜಾಧಾನಿಯಂಥ ನಗರಗಳೂ ಬೆಳೆಯಲು ಪ್ರಾರಂಭಿಸಿದವು. ಹಾಗೆಯೇ ರೈಲ್ವೆ ಕೇಂದ್ರ, ವಿಶ್ವವಿದ್ಯಾನಿಲಯ ಮತ್ತು ವಿದ್ಯಾಸಂಸ್ಥೆಗಳು ಸಹ ಬೆಳೆದವು. ಇವುಗಳಲ್ಲಿ ಮೈಸೂರು ನಗರದ ಉದಾಹರಣೆಯನ್ನು ನಾವು ತೆಗೆದುಕೊಳ್ಳಬಹುದು. ಅರಮನೆಯ ಕೇಂದ್ರ ಮತ್ತು ರಾಜಧಾನಿಯಾಗಿ ಬೆಳೆದು, ಮುಂದಕ್ಕೆ ಈ ನಗರ ರೈಲ್ವೆ ಹಾಗೂ ಮೈಸೂರು ವಿಶ್ವವಿದ್ಯಾನಿಲಯಗಳ ಕೇಂದ್ರವಾಯಿತು. ನಗರದ ಪಶ್ಚಿಮ ಬಡಾವಣೆಗಳು ತೀವ್ರವಾಗಿ ಬೆಳೆದು ಜನಪ್ರಿಯವಾಗಲೂ ಮಾನಸಗಂಗೋತ್ರಿಯ ವಿದ್ಯಾಕೇಂದ್ರವೇ ಮೂಲಕಾರಣ. ಮತ್ತೊಂದು ಇಂಥ ಸಂಸ್ಥಾನಗರ ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯದ ಕೇಂದ್ರವಲ್ಲದೆ ಜಿಲ್ಲಾ ಕೇಂದ್ರವೂ ಆಗಿರುವ ಧಾರವಾಡದ ಬೆಳವಣಿಗೆ ಈ ಸಂಸ್ಥೆಗಳನ್ನೇ ಅವಲಂಬಿಸಿದೆ. ಇದೇ ರೀತಿ ನಂಜನಗೂಡು, ಉಡುಪಿ, ಮಣಿಪಾಲ ಮುಂತಾದ ಸ್ಥಳಗಳಲ್ಲೂ ಇಂಥ ಸಂಸ್ಥೆಗಳಿಂದ ಆ ನಗರಗಳ ಬೆಳವಣಿಗೆ ಆಗುತ್ತಿರುವುದನ್ನೂ ಗಮನಿಸಬಹುದು.

ಹಲವಾರು ಕಲಾ ಮತ್ತು ಧಾರ್ಮಿಕ ಕೇಂದ್ರಗಳು ಈ ಶತಮಾನದ ಮೊದಲ ಭಾಗದಲ್ಲೇ ಪಟ್ಟಣಗಳಾಗಿ ಪರಿಗಣಿತವಾಗಿದ್ದರೂ ಅವುಗಳ ಜನಸಂಖ್ಯೆಯಲ್ಲಿ ಇಂದಿಗೂ ಗಮನಾರ್ಹ ಹೆಚ್ಚಳವಾಗಿಲ್ಲ. ಉದಾಹರಣೆಗೆ ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿಯ ಜನಸಂಖ್ಯೆ 1901ರಲ್ಲಿ 2,430 ಇದ್ದಿತು. 2001ರಲ್ಲಿ ಅದರ ಜನಸಂಖ್ಯೆ 4,253 ಹೀಗಾಗಲು ಕಾರಣ ಅದಕ್ಕೆ ಪಟ್ಟಣವಾಗಿ ಬೆಳೆಯಲು ಇತರ ಅನುಕೂಲಕರ ಅಂಶಗಳಲ್ಲಿದಿರುವುದು ಇನ್ನೊಂದು ಉದಾಹರಣೆ ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರ.

**ವಾಣಿಜ್ಯಕೇಂದ್ರಗಳು:** ಪಟ್ಟಣಗಳ ಬೆಳವಣಿಗೆಗೆ ಹೆಚ್ಚು ಪ್ರೇರಕವಾದದ್ದು ವಾಣಿಜ್ಯ. ಜನರು ವ್ಯವಸಾಯವನ್ನೇ ಅವಲಂಬಿಸಿದ್ದ ಕಾಲದಲ್ಲಿ ಹತ್ತಾರು ಹಳ್ಳಿಗಳ ಮಧ್ಯೆ ವಾರಕ್ಕೊಮ್ಮೆ ಸಂತೆ ನಡೆಯುತ್ತಿದ್ದ ಗ್ರಾಮಗಳೂ ಮತ್ತು ಸುತ್ತಮುತ್ತಲ ನೂರಾರು ಗ್ರಾಮಗಳಿಗೂ ಪಟ್ಟಣಗಳಿಗೂ ಸಂಬಂಧ ಕಲ್ಪಿಸಿ ಸಾಮಾನುಗಳ ಪೂರೈಕೆಗೆ

ಅನುಕೂಲವಾಗುವಂಥ ಮಂಡಿ ಪಟ್ಟಣಗಳು ಬೆಳೆದವು. ಇವಲ್ಲದೆ ಕೆಲವು ಭಾರೀ ನಗರಗಳೂ ಪ್ರಾಂತಮಟ್ಟದಲ್ಲಿ ಬೆಳೆದು ಒಂದು ಪ್ರಾಂತದಿಂದ ಮತ್ತೊಂದು ಪ್ರಾಂತ್ಯಕ್ಕೆ ಸಾಮಾನುಗಳನ್ನು ಒದಗಿಸುವ ವಾಣಿಜ್ಯ ಸಂಸ್ಥೆಗಳಿಂದ ಕೂಡಿದ್ದವು. ಇವುಗಳಲ್ಲಿ ಬಂದರೂಗಳೂ ಭಾರೀ ಸಂತೇಪೇಟೆಗಳನ್ನೊಳಗೊಂಡ ಪಟ್ಟಣಗಳೂ ಮುಖ್ಯವಾದವು. ಸಂಪರ್ಕ ಮಾರ್ಗಗಳು ಸಂಧಿಸುವ ಮತ್ತು ವ್ಯವಸಾಯ ಪ್ರಾಧಾನ್ಯತೆಯ ಸ್ಥಳಗಳಲ್ಲಿ ವಾಣಿಜ್ಯ ಕೇಂದ್ರಗಳು ಬೆಳೆದವು. ಬೆಂಗಳೂರು, ದಾವಣಗೆರೆ, ಗದಗ, ಹುಬ್ಬಳ್ಳಿ, ರಾಯಚೂರು, ಗಂಗಾವತಿ, ತಿಪಟೂರು, ಅರಸೀಕೆರೆ, ಚಿಂತಾಮಣಿ ಮುಂತಾದವು ಇಂಥ ಕೇಂದ್ರಗಳಿಗೆ ಉದಾಹರಣೆಗಳು. ಸಾಮಾನ್ಯವಾಗಿ ಎಲ್ಲ ಪಟ್ಟಣಗಳಲ್ಲಿ ವಾಣಿಜ್ಯವೇ ಪ್ರಧಾನವಾಗಿರುವುದರಿಂದ ಅಂಥವನ್ನು ವಾಣಿಜ್ಯ ಕೇಂದ್ರಗಳೆಂದು ಕರೆಯಬಹುದು.

**ಕೈಗಾರಿಕಾಕೇಂದ್ರಗಳು:** ಕೈಗಾರಿಕಾ ಕ್ರಾಂತಿಯಾದ ಮೇಲೆ ದೊಡ್ಡ ದೊಡ್ಡ ಉದ್ದಿಮೆಗಳು ಸ್ಥಾಪನೆಯಾಗುತ್ತ ಬಂದವು. ಕೈಗಾರಿಕೆಗಳು ಸ್ಥಾಪನೆಯಾದಂತೆಲ್ಲ ಪಟ್ಟಣಗಳು ರಭಸದಿಂದ ಬೆಳೆಯಲು ಪೂರಕವಾಯಿತು. ಮೊದಲಮೊದಲು ವಾಣಿಜ್ಯ ಕೇಂದ್ರಗಳಲ್ಲಿ ಕೈಗಾರಿಕೆಗಳು ಸ್ಥಾಪಿತವಾಗಲಾರಂಭಿಸಿ, ಕ್ರಮೇಣ ಅವು ಕೈಗಾರಿಕಾ ನಗರಗಳಾಗಿ ಪರಿವರ್ತನೆಗೊಳ್ಳುವುದು ಸಾಮಾಯ ಪ್ರವೃತ್ತಿ. ಮಂಗಳೂರು, ಹುಬ್ಬಳ್ಳಿ, ದಾವಣಗೆರೆ, ಬಾಗಲಕೋಟೆ, ಹಾಸನ ಮುಂತಾದ ನಗರಗಳು ಕೈಗಾರಿಕಾ ಕೇಂದ್ರ ಸ್ವರೂಪವನ್ನು ಪಡೆಯುತ್ತಿರುವುದನ್ನು ಗಮನಿಸಬಹುದು. ಕೆಲವು ಕಡೆ ಕಚ್ಚಾಪದಾರ್ಥಗಳು ಸಿಗುವುದರಿಂದ ಕೈಗಾರಿಕೆಗಳು ನೆಲಸಿ ಹೊಸ ಪಟ್ಟಣ ಹುಟ್ಟಿಕೊಂಡವು. ಸಿಮೆಂಟ್ ಮತ್ತು ಕಾಗದ ಕಾರ್ಖಾನೆಗಳಿಂದಾಗಿ ಭದ್ರಾವತಿ ಕೈಗಾರಿಕಾ ನಗರವಾಗಿ ಬೆಳೆದಿದೆ. ಕೋಲಾರ ಚಿನ್ನದ ಗಣಿ ಪ್ರದೇಶದಲ್ಲಿ ಚಿನ್ನದ ಗಣಿ ಕೆಲಸಕ್ಕಾಗಿಯೇ ಒಂದು ಲಕ್ಷಕ್ಕೂ ಹೆಚ್ಚು ಜನಸಂಖ್ಯೆಯ ನಗರ ಬೆಳೆಯಿತು. ಇತ್ತೀಚೆಗೆ ದಾಂಡೇಲಿ ಕೂಡ ಕೈಗಾರಿಕಾ ನಗರವಾಗಿ ಬೆಳೆಯುತ್ತಿದೆ.

**ವಿಹಾರ ಮತ್ತು ಜಾತ್ರಾ ಕೇಂದ್ರಗಳು:** ಇಂಥ ಕೇಂದ್ರಗಳೂ ಪಟ್ಟಣಗಳಾಗಿ ಬೆಳೆಯುವುದುಂಟು. ಸವದತ್ತಿಯ ಎಲ್ಲಮ್ಮನ ಗುಡ್ಡ, ನಾಯಕನ ಹಟ್ಟಿ - ಇವು ಉದಾಹರಣೆಗಳು, ತೀರ್ಥಹಳ್ಳಿ, ಉಡುಪಿ, ಗುಲ್ಬರ್ಗ ಮುಂತಾದವು ಮೂಲತಃ ಜಾತ್ರಾಕೇಂದ್ರಗಳೇ. ಮಹದೇಶ್ವರ ಬೆಟ್ಟ, ಚುಂಚನ ಕಟ್ಟೆ, ಗೋಕರ್ಣ, ಸುಬ್ರಹ್ಮಣ್ಯ, ಬೃಂದಾವನ, ಜೋಗ, ಕೆಮ್ಮಣ್ಣುಗುಂಡಿ ಗಿರಿಧಾಮ ಮೊದಲಾದ ಜಾತ್ರಾ ಮತ್ತು ವಿಹಾರಕೇಂದ್ರಗಳೂ ಪಟ್ಟಣಗಳಾಗಿ ಬೆಳೆಯುವ ಸೂಚನೆಗಳನ್ನು ತೋರುತ್ತಿವೆ.

**ಮಹಾನಗರ:** ಹತ್ತು ಲಕ್ಷಕ್ಕಿಂತ ಅಧಿಕ ಜನಸಂಖ್ಯೆ ಇರುವ ನಗರಗಳನ್ನು ಮಹಾನಗರ ಎಂದು ಕರೆಯುವುದು ವಾಡಿಕೆ. ಬೆಂಗಳೂರು ನಮ್ಮ ರಾಜ್ಯದ ಏಕಮೇವ ಮಹಾನಗರ. 1971ರ 16.54 ಲಕ್ಷ ಜನವಸತಿಯಿಂದ ಬೆಂಗಳೂರು ಈಗ 56,86,844 (2001) ಜನಸಂಖ್ಯೆ ಹೊಂದಿದ್ದು ಈ ಮಹಾನಗರದ ಭಾರತ ಮಹಾನಗರಗಳಲ್ಲಿ ನೆಯ ಸ್ಥಾನ ಹೊಂದಿದೆ. ಇದು ಪ್ರಪಂಚದ ತ್ವರಿತವಾಗಿ ಬೆಳೆಯುತ್ತಿರುವ ನಗರಗಳಲ್ಲೊಂದು.

**ನಗರಯೋಜನೆ:** ಜನಸಂಖ್ಯೆ ಹೆಚ್ಚಿದಂತೆ ನಗರಗಳಲ್ಲಿ ಮನೆಗಳ ಅಭಾವ, ಕುಡಿಯುವ ನೀರಿನ ಕೊರತೆ, ಸಾರಿಗೆ ಸಂಪರ್ಕದಲ್ಲಿ ಅವ್ಯವಸ್ಥೆ ಮತ್ತು ಕೊಳಚೆ ಪ್ರದೇಶಗಳು ಕಂಡುಬರುವುದು ಸ್ವಾಭಾವಿಕ. ರಸ್ತೆಗಳ ಉದ್ದಕ್ಕೂ ಕೈಗಾರಿಕೆಗಳ ಸ್ಥಾಪನೆ, ಅವುಗಳ ಸುತ್ತಲೂ ಮನೆ ಕಟ್ಟುವುದು, ವಾಸದ ಮನೆಗಳ ಮಧ್ಯೆ ಕೈಗಾರಿಕಾ - ವಾಣಿಜ್ಯ ಚಟುವಟಿಕೆಗಳ ಸ್ಥಾಪನೆ ಮೊದಲಾವದು ಹೆಚ್ಚಿ ನಗರಗಳ ನೈರ್ಮಲ್ಯ ಹಾಗೂ ವಾತಾವರಣ ಕೆಡುತ್ತದೆ. ಹೀಗೆ ನಗರಗಳ ನೈರ್ಮಲ್ಯ ಮತ್ತು ವಾತಾವರಣವು ಕೆಡದಂತೆ ಸೂಕ್ತ ಕ್ರಮಗಳನ್ನು ಕೈಗೊಂಡು ನಗರಗಳ ಬೆಳವಣಿಗೆಯನ್ನು ರೂಪಿಸಿ ನಿರ್ದೇಶಿಸುವ ವಿಧಾನವನ್ನು ನಗರ ಯೋಜನೆ ಎಂದು ಕರೆಯುತ್ತಾರೆ. ನಗರಗಳ ಸ್ಥೂಲ ರೂಪವನ್ನು ಸೂಚಿಸುವ ರಸ್ತೆಗಲು, ಕಟ್ಟಡಗಳು, ಸಾರ್ವಜನಿಕ ಸೌಲಭ್ಯಗಳು ಮುಂತಾದವುಗಳನ್ನು ಒದಗಿಸುವದಕ್ಕಷ್ಟೇ ಇಂಥ ಯೋಜನೆ ಸೀಮಿತಗೊಂಡಿಲ್ಲ. ನಾಗರಿಕರ ಆಸೆ ಆಕಾಂಕ್ಷೆಗಳನ್ನು ನೆರವೇರಿಸುವ ಮತ್ತು ಅವರ ಆರ್ಥಿಕ ಪ್ರಗತಿಗೆ ಬೇಕಾಗುವ ಕೈಗಾರಿಕೆ, ವಾಣಿಜ್ಯ ಇತ್ಯಾದಿಗಳ ಬೆಳವಣಿಗೆಗೆ ಸಹಾಯಕವಾಗುವ ಚಟುವಟಿಕೆಗಳಿಗೂ ನಗರ ಯೋಜನೆ ಗಮನಕೊಡುತ್ತದೆ. ಜನರು ತುಂಬು ಜೀವನ ನಡೆಸಿ ಸುಖ ಸಂತೋಷದಿಂದ ವಾಸಿಸಲು ಒಳ್ಳೆಯ ವಾತಾವರಣವನ್ನು ಕಲ್ಪಿಸುವುದೇ ನಗರ ಯೋಜನೆಯ ಮುಖ್ಯ ಗುರಿ.

ನಗರ ಯೋಜನೆಯನ್ನು ಕೈಗೊಳ್ಳುವ ಮೊದಲು ಅನೇಕ ವಿಷಯಗಳನನು ಸಂಗ್ರಹಿಸಬೇಕಾಗುವುದು. ಮುಖ್ಯವಾಗಿ ಮೇಲ್ಮೈ ಲಕ್ಷಣ, ಪ್ರಚಲಿತ ಭೂ ಉಪಯೋಗ, ಕಟ್ಟಡಗಳು ಇರುವ ಸ್ಥಿತಿ. ಜನಗಣತಿ ಮತ್ತು ಜನಸಾಂದ್ರತೆ, ಸಾಮಾಜಿಕ ಆರ್ಥಿಕ ಸ್ಥಿತಿ. ಸಂಚಾರಸೌಲಭ್ಯಗಳು ಸಾರ್ವಜನಿಕ ಅವಶ್ಯಕತೆಗಳು, ವಸತಿ ಸಮಸ್ಯೆ, ಕ್ರೀಡಾ ಮತ್ತು ವಿಹಾರ ಸೌಲಭ್ಯ, ವ್ಯಾಪಾರ ಮತ್ತು ವಾಣಿಜ್ಯ, ಕೈಗಾರಿಕೆ, ಸಾರ್ವಜನಿಕ ಉಪಯುಕ್ತ ಕಟ್ಟಡಗಳು ಇತ್ಯಾದಿಗಳ ಬಗ್ಗೆ ಸಮೀಕ್ಷೆ ನಡೆಸಬೇಕಾಗುತ್ತದೆ. ಈ ಸಮೀಕ್ಷೆಗಳಿಂದ ವಿವರಗಳನ್ನೆಲ್ಲ ಕ್ರೋಢೀಕರಿಸಿ ಇಂದಿನ ಸಮಸ್ಯೆಗಳನ್ನೂ ಮುಂದಿನ ಆವಶ್ಯಕತೆಗಳನ್ನೂ ಕಂಡುಹಿಡಿಯಬೇಕು. ಮುಂಬರುವ 20 30 ವರ್ಷಗಳಲ್ಲಿ ನಗರದ ಜನಸಂಖ್ಯೆ ಮತ್ತು ಭವಿಷ್ಯತ್ತಿನ ಈ ಜನಸಂಖ್ಯೆಗೆ ಬೇಕಾಗುವ ಜಮೀನಿನ ವಿಸ್ತರಣೆಯ ಲೆಕ್ಕಹಾಕಬೇಕು. ವಾಸಸ್ಥಳ, ಕೈಗಾರಿಕಾ ಪ್ರದೇಶ, ವಾಣಿಜ್ಯ ಪ್ರದೇಶ, ಸಾರ್ವಜನಿಕ ಉಪಯೋಗ, ಉದ್ಯಾನ, ಕ್ರೀಡಾಂಗಣ ಇತ್ಯಾದಿ ವಿವಿದ ಉದ್ದೇಶಗಳಿಗೆ ಬೇಕಾಗಬಹುದಾದ ಭೂ ಉಪಯೋಗದ ವಲಯಗಳನ್ನು ಸೂಕ್ತಸ್ಥಳದಲ್ಲಿ ಸೂಚಿಸಬೇಕು. ಯೋಗ್ಯವಾದ ಸಂಚಾರ ವ್ಯವಸ್ಥೆಯನ್ನೂ ರೂಪಿಸಬೇಕಾಗುತ್ತದೆ. ನಗರ ಬೆಳವಣಿಗೆಗಾಗಿ ತಯಾರಿಸುವ ಬೃಹತ್ ಯೋಜನೆಯಲ್ಲಿ ಮುಂದೆ ಕೈಕೊಳ್ಳಬೇಕಾದ ಅಭಿವೃದ್ಧಿ ಕಾರ್ಯಕ್ರಮಗಳಿಗಾಗಿ ಶಿಫಾರಸುಗಳನ್ನು ನಮೂದಿಸಿರಬೇಕು. ಅಲ್ಲದೆ ಭೂ ಉಪಯೋಗದ ಆಯಾ ವಲಯಗಳಲ್ಲಿ ಅಭಿವೃದ್ಧಿಯನ್ನು ನಿಯಂತ್ರಿಸಲು ವಲಯ ನಿಯಂತ್ರಣ ಅಧಿನಿಯಮಗಳನ್ನು ರಚಿಸಬೇಕು.

ಕರ್ನಾಟಕ ರಾಜ್ಯದಲ್ಲಿ ಈ ಹಿಂದೆ ನಗರಯೋಜನೆಯನ್ನು ವಾಸ್ತುಶಿಲ್ಪಿಗಳು ನೋಡಿಕೊಳ್ಳುತ್ತಿದ್ದರು. 1959ರಲ್ಲಿ ಪ್ರತ್ಯೇಕ ನಗರಯೋಜನಾ ಇಲಾಖೆ ಅಸ್ತಿತ್ವಕ್ಕೆ ಬಂದು 3ನೆಯ ಪಂಚವಾರ್ಷಿಕ ಯೋಜನೆಯಲ್ಲಿ ಇಲಾಖೆಯ 10 ಘಟಕಗಳು, 4ನೆಯ ಪಂಚಾವಾರ್ಷಿಕ ಯೋಜನೆಯಲ್ಲಿ 5 ಘಟಗಳು ಹೀಗೆ ಎಲ್ಲ ಜಿಲ್ಲೆಗಳಲ್ಲೂ ಸ್ಥಾಪಿತವಾದವು. ಪ್ರಸ್ತುತ ಇಲಾಖೆಯ ಕೇಂದ್ರ ಬೆಂಗಳೂರಿನಲ್ಲಿದ್ದು ಪ್ರತಿ ಜಿಲ್ಲೆಯಲ್ಲಿ ಇಲಾಖೆಯ ಶಾಖೆಗಳಿವೆ. ಇವು ನಗರಯೋಜನಾ ಘಟಕಗಳಾಗಿರುವುದಲ್ಲದೆ ಪ್ರಾದೇಶಿಕ ಯೋಜನಾ ಘಟಕಗಳೂ ಆಗಿವೆ.

ನಾಗರಿಕ ಹಿತಸಾಧನೆ ನಗರ ಯೋಜನೆಗಳ ಅಂತಿಮ ಗುರಿಯಾದ್ದರಿಂದ ಈ ಯೋಜನೆಗಳಿಗೆ ಅನುಗುಣವಾಗಿ ವ್ಯಕ್ತಿಯು ತನನ ಜಮೀನನು ಉಪಯೋಗಿಸುವ ಹಕ್ಕಿನ ಮೇಲೆ ಕೆಲಮಟ್ಟಿಗೆ ನಿರ್ಬಂಧ ವಿಧಿಸಬೇಕಾಗುತ್ತದೆ. ಆದಕಾರಣ ಯೋಜನಾ ಸಂಸ್ಥೆಗಳಿಗೆ ಶಾಸನ ಮುಖೇನ ಸಾಕಷ್ಟು ಅಧಿಕಾರಗಳನ್ನು ವಹಿಸಿಕೊಡುವುದು ಅವಶ್ಯ. 1961ರಲ್ಲಿ ಕರ್ನಾಟಕ ನಗರ ಹಾಗೂ ಗ್ರಾಮಾಂತರ ಯೋಜನಾ ವ್ಯಾಪಕ ಶಾಸನವೊಂದನ್ನು ಸಿದ್ಧಗೊಳಿಸಿದ ಕರ್ನಾಟಕ ಈ ದಿಶೆಯಲ್ಲಿ ಪ್ರಥಮ ಹೆಜ್ಜೆಯಿಟ್ಟು ರಾಜ್ಯ. ಕರ್ನಾಟಕ ನಗರ ಹಾಗೂ ಗ್ರಾಮಾಂತರ ಯೋಜನಾ ಕಾನೂನು ಎಂಬ ಈ ಅಧಿನಿಯಮ 1965ನೆಯ ಜನವರಿ 15ರಿಂದ ಜಾರಿಗೆ ಬಂತು. ಈ ಕಾಯಿದೆಯ ರೀತ್ಯಾ 'ರಾಜ್ಯ ನಗರಯೋಜನಾ ಮಂಡಲಿ'ಯನ್ನೂ ಮತ್ತು ಅನೇಕ ಪ್ರದೇಶಗಳಿಗೆ ಯೋಜನಾ ಪ್ರಾಧಿಕಾರ ವ್ಯವಸ್ಥೆಗಳನ್ನೂ ನಿರ್ಮಿಸಲಾಗಿದೆ. ರಾಜ್ಯ ನಗರಯೋಜನಾ ಮಂಡಲಿಯು ಯೋಜನೆ ಮತ್ತು ಅಭಿವೃದ್ಧಿಯನ್ನು ಕುರಿತು ಮತ್ತು ಇದಕ್ಕೆ ಸಂಬಂಧಪಟ್ಟ ಕಾರ್ಯನೀತಿ ಮತ್ತು ಸೂತ್ರಗಳ ವಿಚಾರವಾಗಿ ಸರ್ಕಾರಕ್ಕೂ ಯೋಜನಾ ಪ್ರಾಧಿಕಾರ ವ್ಯವಸ್ಥೆಗಳಿಗೂ ಸಲಹೆ ನೀಡುವ ರಾಜ್ಯಮಟ್ಟದ ಸಂಸ್ಥೆಯಾಗಿದೆ. ಯೋಜನಾ ಪ್ರಾಧಿಕಾರ ವ್ಯವಸ್ಥೆಗಳು ಆಯಾ ಪ್ರದೇಶಕ್ಕೆ ಸಂಬಂಧಪಟ್ಟ ಯಾವುದೇ ಅಭಿವೃದ್ಧಿ ಯೋಜನೆಯನ್ನು ಮತ್ತು

ಕಾರ್ಯಕ್ರಮಗಳನ್ನು ಪರಿಶೀಲಿಸಿ ಅಂತಿಮ ರೂಪರೇಖೆ ತಯಾರಿಸಲು ರಚಿಸಲ್ಪಟ್ಟ ಸ್ವತಂತ್ರ ಸಂಸ್ಥೆಗಳು.

ಸಂಬಂಧಪಟ್ಟ ನಗರ, ಪಟ್ಟಣ ಪ್ರದೇಶ ಹಾಗೂ ಸುತ್ತಮುತ್ತಲಿನ ಪ್ರದೇಶವನ್ನೊಳಗೊಂಡು ಅಭಿವೃದ್ಧಿಗೊಳಿಸಬೇಕಾಗಿರುವ ಸ್ಥಳೀಯ ಯೋಜನಾ ಪ್ರದೇಶವನ್ನು ಶಾಸನಬದ್ಧವಾಗಿ ನಿರ್ಧರಿಸಿ ಯೋಜನಾ ಪ್ರಾಧಿಕಾರ ವ್ಯವಸ್ಥೆಯನ್ನು ನೇಣಿಸಬೇಕಾಗುತ್ತದೆ. ಶೀಘ್ರವಾಗಿ ಬೆಳೆಯುತ್ತಿರುವ ಕೆಳಕಂಡ ಪ್ರದೇಶಗಳಿಗೆ ಇಂಥ ಪ್ರಾಧಿಕಾರ ವ್ಯವಸ್ಥೆಗಳನ್ನು ರಚಿಸಲಾಗಿದೆ. (1) ಬೆಂಗಳೂರು ಮಹಾನಗರ, (2) ಮೈಸೂರು, (3) ಮಂಗಳೂರು, (4) ಹುಬ್ಬಳ್ಳಿ-ಧಾರವಾಡ, (5) ಬೆಳಗಾಂವಿ, (6) ಗುಲ್ಬರ್ಗ, (7) ದಾಂಡೇಲಿ ಪ್ರದೇಶ, (8) ಶಿವಮೊಗ್ಗ-ಭದ್ರಾವತಿ ಪ್ರದೇಶ, (9) ದಾವಣಗೆರೆ, (10) ಕೋಲಾರ ಚಿನ್ನದ ಗಣಿ ಪ್ರದೇಶ, (11) ವಿಜಯನಗರ ಉಕ್ಕು ಕಾರ್ಖಾನೆ ಪ್ರದೇಶ.

ಇವುಗಳಲ್ಲದೆ ಒಂದು ಲಕ್ಷಕ್ಕೂ ಅಧಿಕ ಜನಸಂಖ್ಯೆ ಇರುವ ಪ್ರತಿಯೊಂದು ನಗರಕ್ಕೂ ನಗರಾಭಿವದ್ಧಿ ಸಮಿತಿ ರಚಿಸಿವ ಕಾರ್ಯನೀತಿಯನ್ನು ಸರ್ಕಾರ ಕೈಗೊಂಡಿದೆ. ಇದರ ಪರಿಣಾಮವಾಗಿ ರಾಜ್ಯದ ಇನ್ನುಳಿದ ಜಿಲ್ಲಾ ಕೇಂದ್ರಗಳಿಗೂ ಹಾಗೂ 50 ಸಾವಿರಕ್ಕೂ ಹೆಚ್ಚು ಜನಸಂಖ್ಯೆಯಿರುವ ನಗರ ಪ್ರದೇಶಗಳಿಗೂ ಯೋಜನಾಪ್ರಾಧಿಕಾರಗಳನ್ನು ಹಂತ ಹಂತವಾಗಿ ರಚಿಸಲಾಗುತ್ತದೆ. ನಗರಯೋಜನೆ ಇಲಾಖೆಯು ಯೋಜನಾ ಪ್ರಾಧಿಕಾರ ವ್ಯವಸ್ಥೆಗಳಿಗೆ ಅಭಿವೃದ್ಧಿ ಯೋಜನೆಗಳನ್ನು ತಯಾರಿಸುವ ಹಾಗೂ ಮುಂದಿನ ಕಾರ್ಯಕ್ರಮಗಳನ್ನು ನಿರ್ವಹಿಸುವ ಕೆಲಸದಲ್ಲಿ ನೆರವು ನೀಡುತ್ತದೆ.

ಯಾವುದೆ ಪ್ರದೇಶಕ್ಕೆ ಸಂಬಂಧಪಟ್ಟ ಸಮಗ್ರ ಸವಿವರ ಅಭಿವೃದ್ಧಿ ಯೋಜನೆಯನ್ನು ಮೂರು ಹಂತಗಳಲ್ಲಿ ತಯಾರಿಸಲಾಗುತ್ತದೆ. ಯೋಜನಾ ಪ್ರದೇಶಕ್ಕೊಳಪಟ್ಟ ಭೂಮಿಯ ಉಪಯೋಗವನ್ನು ಪೂರ್ವಭಾವಿಯಾಗಿ ನಿಯಂತ್ರಿಸುವ ಮತ್ತು ಕ್ರಮಬದ್ಧಗೊಳಿಸುವ ಪ್ರಾರಂಭಿಕ ಅಥವಾ ಸ್ಥೂಲ ಅಭಿವೃದ್ಧಿ ಯೋಜನೆಯನ್ನು ತಯಾರಿಸುವುದೇ ಪ್ರಥಮ ಹಂತ. ಆ ಬಳಿಕ ಸನಿಸ್ತಾರ ಭೂ ಬಳಕೆಯನ್ನು ಸೂಚಿಸುವ ಹಾಗೂ ಮುಂದಕ್ಕೆ ಕೈಗೊಳ್ಳಬೇಕಾಗಾದ ಅಭಿವೃದ್ಧಿಗಳ, ಸುಧಾರಣೆಗಳ ವಿವರಣೆಗಳನ್ನೊಳಗೊಂಡ ವ್ಯಾಪಕ ಅಭಿವೃದ್ಧಿ ಯೋಜನೆ ತಯಾರಿಸುವುದು ಎರಡನೆಯ ಹಂತ. ವ್ಯಾಪಕ ಅಭಿವೃದ್ಧಿ ಯೋಜನೆಯಲ್ಲಿ ಒಳಗೊಂಡಿರುವ ವಿವಿಧ ಅಭಿವೃದ್ಧಿ ಸೂಚನೆಗಳನ್ನು ಕಾರ್ಯಗತಗೊಳಿಸುವ ಉದ್ದೇಶದ ಸಲುವಾಗಿ ನಗರದ ಬೇರೆ ಬೇರೆ ಭಾಗಗಳ ಅಭಿವೃದ್ಧಿಗಾಗಿ ಯೋಜನೆಗಳನ್ನು ತಯಾರಿಸುವದೇ ಕೊನೆಯ ಹಂತ.

ಈಗಾಗಲೇ ಬೆಂಗಳೂರು ಮಹಾನಗರ, ಮೈಸೂರು, ಮಂಗಳೂರು, ಹುಬ್ಬಳ್ಳಿ ಧಾರವಾಡ, ಬೆಳಗಾಂವಿ, ದಾಂಡೇಲಿ ಪ್ರದೇಶ, ಗುಲ್ಬರ್ಗ, ಶಿವಮೊಗ್ಗ ಭದ್ರವಾತಿ ಪ್ರದೇಶಗಳ ಸ್ಥೂಲ ಅಭಿವೃದ್ಧಿ ಯೋಜನೆಗಳೂ ಸಾಸನಾನುಬದ್ಧವಾಗಿ ಸರ್ಕಾರದ ಮನ್ನಣೆ ಪಡೆದಿದ್ದು ಅವುಗಳನ್ನು ಜಾರಿಯಲ್ಲಿ ತರಲಾಗಿದೆ. ದಾವಣಗೆರೆ ಮತ್ತು ಕೋಲಾರ ಚಿನ್ನದಗಣಿ ಪ್ರದೇಶಗಳಿಗೆ ಸ್ಥೂಲಾಭಿವೃದ್ಧಿ ಯೋಜನೆಗಳು ಸಿದ್ಧವಾಗಿವೆ. ಅಲ್ಲದೆ ಇವೆಲ್ಲ ಪ್ರದೇಶಗಳ ವ್ಯಾಪಾಕ ಅಭಿವೃದ್ಧಿ ಯೋಜನೆಗಳನ್ನು ಸಿದ್ಧಪಡಿಸುವುದರ ಪ್ರಗತಿ ವಿವಿಧ ಘಟ್ಟಗಳಲ್ಲಿವೆ.

ಯೋಜನಾ ಪ್ರಾಧಿಕಾರ ವ್ಯವಸ್ಥೆಗಳನ್ನು ನಿಯಮಿಸದ ಇನ್ನುಳಿದ ನಗರಗಳ ಯೊಜನೆ ಅಭಿವೃದ್ಧಿಯನ್ನೂ ಸಾಧಿಸಲು ಬೇರೆ ಬೇರೆ ನಗರ ಪ್ರದೇಶಗಳ, ಪ್ರವಾಸಿ ಕೇಂದ್ರಗಳ, ಯಾತ್ರಾಕ್ಷೇತ್ರಗಳ, ಗಿರಿಧಾಮಗಳ, ಉಪನಗುಗಳ ಸಮೀಕ್ಷೆಯನ್ನು ಕೈಕೊಂಡು ಅವಶ್ಯವಿರುವ ಅಭಿವೃದ್ಧಿ ಯೋಜನೆಗಳನ್ನೂ ನಗರ ಬಡಾವಣೆ ಹಾಗೂ ವಿಸ್ತರಣಾ ಕಾರ್ಯಕ್ರಮಗಳನ್ನೂ ಸಿದ್ಧಪಡಿಸಲಾಗುತ್ತಿದೆ. ಈಗಾಗಲೇ ರಾಜ್ಯದ 30 ನಗರಗಳಿಗೆ ಇಂಥ ಕರಡು ಅಭಿವೃದ್ಧಿ ಯೋಜನೆಗಳು ಸಿದ್ಧವಾಗಿವೆ. ನಗರ ಯೋಜನಾ ಸಮಿತಿಗಳು ರಚಿನೆಯಾಗಿವೆ. ಅಲ್ಲದೆ ಸ್ಥಳೀಯ ಸಂಸ್ಥೆಗಳು, ನಗರಾಭಿವೃದ್ಧಿ ಮಂಡಳಿಗಳು, ರಾಜ್ಯಗೃಹನಿರ್ಮಾಣಮಂಡಳಿ, ಗೃಹನಿರ್ಮಾಮ ಸಹಕಾರ ಸಂಸ್ಥೆಗಳು ಮತ್ತು ಇತರ ಅಭಿವೃದ್ಧಿ ಸಂಸ್ಥೆಗಳು ಸಿದ್ಧಗೊಳಿಸುವ ಯೋಜನೆಗಳನ್ನು ಪರಿಶೀಲಿಸಲಾಗುತ್ತಿದೆ.

ಪಟ್ಟಣ ಪ್ರದೇಶದಲ್ಲಿ ಮುಖ್ಯವಾಗಿ ಮಹಾನಗರದಲ್ಲಿ ಸಂಚಾರ ಸಾರಿಗೆಯ ಪ್ರಾಧಾನ್ಯತೆಯು ಹೆಚ್ಚಿರುತ್ತವೆ. ಬೆಂಗಳೂರು ಮಹಾನಗರದಲ್ಲಿ ಅನೇಕ ಸಂಚಾರ ಸಮಸ್ಯೆಗಳನ್ನೆದುರಿಸಬೇಕಾಗುತ್ತದೆ. ಈ ಸಮಸ್ಯೆಗಲನ್ನು ಅರಿತು ಕೊಂಡು ಅವುಗಳಿಗೆ ಸೂಕ್ತ ಪರಿಹಾರಗಳನ್ನು ಸೂಚಿಸುವ ಉದ್ದೇಶದಿಂದ ಬೆಂಗಳೂರಿನಲ್ಲಿ ವ್ಯಾಪಕವಾದ ಸಂಚಾರ ಸಾರಿಗೆ ಅಧ್ಯಯನವನ್ನು ಕೈಕೊಂಡು ವಿವರವಾದ ವರದಿಗಳನ್ನು ತಯಾರಿಸಲಾಗಿದೆ. ಇದರ ಫಲವಾಗಿ ಮಹಾನಗರದ ಅನೇಕ ಕಡೆ ಫ್ಲೈಓವರ್‌ಗಳು, ವರ್ತುಲ ರಸ್ತೆಗಳು ರಚನೆಯಾಗಿವೆ. ಮೈಸೂರು ನಗರದಲ್ಲೂ ವರ್ತುಲ ರಸ್ತೆ ನಿರ್ಮಾಣವಾಗುತ್ತಿದೆ. ದಾಂಡೇಲಿ ಸಂಪನ್ಮೂಲ ಪ್ರದೇಶ ಮತ್ತು ತುಂಗಭದ್ರಾ ನದೀಕಮಿವೆ ಪ್ರದೇಶಕ್ಕೂ ಪ್ರಾದೇಶಿಕ ಅಭಿವೃದ್ಧಿ ಯೋಜನೆಗಳನ್ನು ಸಿದ್ಧಗೊಲಿಸಲಾಗಿದೆ. (ಕೆ.ಎಸ್.ಆರ್.ಎ.)

**ಪಟ್ಟದಕಲ್ಲು:** ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲ್ಲೂಕಿನಲ್ಲಿ ಬಾದಾಮಿಯಿಂದ ಪೂರ್ವಕ್ಕೆ 22 ಕಿಮೀ ದೂರದಲ್ಲಿ ಮಲಪ್ರಭಾ ನದಿಯ ಎಡದಡದಲ್ಲಿರುವ ಗ್ರಾಮ. ಹಿಂದೆ ಕಿಸುವೊಳಲ್, ಪಟ್ಟದ ಕಿಸುವೊಳಲ್ ಎಂದು ಪ್ರಸಿದ್ಧವಾಗಿದ್ದ ಐತಿಹಾಸಿಕ ಸ್ಥಳ. ಇಲ್ಲಿರುವ ಬಾದಾಮಿಯ ಚಳುಕ್ಯರ ಕಾಲದ ದೇವಾಲಯಗಳಿಂದ ಈಗ ಪ್ರಾಮುಖ್ಯತೆ ಪಡೆದಿದ್ದು ಪ್ರವಾಸೀಕೇಂದ್ರವಾಗಿ ಬೆಳೆಯುತ್ತಿದೆ. ಯುನೆಸ್ಕೊ ಇದನ್ನು ಐತಿಹಾಸಿಕ ಸ್ಮಾರಕವೆಂದು ಘೋಷಿಸಿದೆ. ಇಲ್ಲಿಗೆ ಬಾದಾಮಿ ಮತ್ತು ಐಹೊಳೆಗಳಿಂದ ಉತ್ತಮ ಮಾರ್ಗ ಸಂಪರ್ಕವಿದೆ. (ಡಿ.ಎಸ್.ಜೆ.)

ಪಟ್ಟದಕಲ್ಲಿನ ಪ್ರದೇಶ ಪ್ರಾಗಿತಿಹಾಸದ ಕಾಲದಿಂದಲೂ ಜನವಸತಿಯುಳ್ಳದ್ದಾಗಿತ್ತು. ಇಲ್ಲಿನ ಮಲಪ್ರಭಾನದಿಯ ದಂಡೆಯಲ್ಲಿ ಹಳೆಯ ಶಿಲಾಯುಗದ ಶಿಲಾಯುಧಗಳು ದೊರಕುವುದುಂಟು. ಈ ಗ್ರಾಮಕ್ಕೆ ಒಂದು ಕಿಮೀ. ಪಶ್ಚಿಮದಲ್ಲಿ ಬಾಚನಗುಡ್ಡ ಗ್ರಾಮದ ಬಳಿ ಬೃಹತ್ ಶಿಲಾಸಮಾಧಿಗಳೂ ಅಲ್ಲಿಂದ ಸ್ವಲ್ಪ ದೂರದಲ್ಲಿ ಆದಿಚಾರಿತ್ರಿಕ ಕಾಲದ ಒಂದು ನೆಲೆಯೂ ಬೆಳಕಿಗೆ ಬಂದಿವೆ. ಚಳುಕ್ಯ ಪೂರ್ವ (ಬಹುಶಃ ಸಾತವಾಹನ) ಕಾಲಕ್ಕೆ ಸಂಬಂಧಿಸಿದ ಕೆಲವು ಇಟ್ಟಿಗೆಯ ಕಟ್ಟಡಗಳ ಅವಶೇಷಗಳೂ ಪಟ್ಟದಕಲ್ಲಿನಲ್ಲಿ ದೊರಕಿವೆ. ಸಂಗಮೇಶ್ವರ ದೇವಾಲಯ ಮತ್ತು ಜೈನದೇವಾಲಯದ ಬಳಿಯಲ್ಲಿ ಇತ್ತೀಚೆಗೆ ನಡೆಸಿದ ಅಗೆತಗಳಿಂದ ಈ ಕಟ್ಟಡಗಳು ಬೆಳಕಿಗೆ ಬಂದುವು. ಕ್ರಿಶ. 2ನೆಯ ಶತಮಾನದಲ್ಲಿದ್ದ ಗ್ರೀಕ್ ಭೂಗೋಳಕಾರ ಟಾಲೆಮಿ ವ್ಯಾಪಾರ ಸ್ಥಳಗಳಲ್ಲಿ ಒಂದೊಂದು ಹೆಸರಿಸಿರುವ ಪೆತರ್ಗಲ್ ಈ ಪಟ್ಟದ ಕಲ್ಲು ಎಂದು ಕೆಲವು ವಿದ್ವಾಂಸರು ಗುರುತಿಸಿದ್ದಾರೆ.

ಪಟ್ಟದಕಲ್ಲು ವಿಶೇಷ ಪ್ರಾಮುಖ್ಯತೆಯನ್ನು ಪಡೆದದ್ದು ಬಾದಾಮಿಯ ಚಳುಕ್ಯರ ಕಾಲದಲ್ಲಿ; ಅದರಲ್ಲೂ 7-8ನೆಯ ಶತಮಾನಗಳಲ್ಲಿ, ಚಳುಕ್ಯ ವಿನಯಾದಿತ್ಯನ ಒಂದು ಶಾಸನ ಇದನ್ನು ಕಿಸುವೊಳಲ್, ಪಟ್ಟದ ಕಿಸುವೊಳಲ್ ಎಂದು ಕರೆದಿದೆ. ಈ ಪ್ರದೇಶದ ಸುತ್ತ ನಸುಗೆಂಪು ಬಣ್ಣದ ಕಲ್ಲುಗುಡ್ಡಗಳು ಇರುವುದರಿಂದ ಕಿಸುವೊಳಲ್ ಎಂದೂ ಚಳುಕ್ಯ ಸಾಮ್ರಾಟರು ಇಲ್ಲಿ ತಮ್ಮ ಪಟ್ಟ ಬಂಧ ಮಹೋತ್ಸವವನ್ನು ನೆರವೇರಿಸಿಕೊಳ್ಳುತ್ತಿದ್ದರಿಂದ ಪಟ್ಟದ ಕಿಸುವೊಳಲ್ ಎಂದೂ ಹೆಸರಾಗಿದ್ದಂತೆ ತೋರುತ್ತದೆ. ಇಲ್ಲಿ ರಾಜರು ಪಟ್ಟಾಭಿಷಿಕ್ತರಾಗುತ್ತಿದ್ದ ವಿಷಯ 11-12ನೆಯ ಶತಮಾನದ ಶಾಸನಗಳಲ್ಲಿ ಹಾಗೂ ಸಿಂಗರಾಜಪುರಾಣ (ಸು. 1500) ಮತ್ತು ಹಮ್ಮೀರ ಕಾವ್ಯ (ಸು. 1540) ಈ ಗ್ರಂಥಗಳಲ್ಲಿ ವರ್ಣಿತವಾಗಿದೆ. ನದಿಯ ದಂಡೆಯ ಒಂದು ಎತ್ತರವಾದ ಬಯಲಿನಲ್ಲಿ ಚಳುಕ್ಯರ ಕಾಲದ್ದೆಂದು ಊಹಿಸಲಾಗಿರುವ ಮಣ್ಣಿನ ಪಾತ್ರೆಗಳೂ ಕಲ್ಲಿನ ಕಂಬಗಳೂ ದೊರಕಿದ್ದು, ಆ ಬಯಲೇ ಪಟ್ಟಬಂಧದ ಸಭಾಮಂಟಪವಾಗಿರಬಹುದೆಂದು ತರ್ಕಿಸಲಾಗಿದೆ. ಇಲ್ಲಿ ಮಲಪ್ರಭಾನದಿ ಉತ್ತರಗಾಮಿಯಾಗಿರುವುದರಿಂದ ಈ ಸ್ಥಳ ತೀರ್ಥಕ್ಷೇತ್ರವೆಂದು ಪರಿಗಣಿತವಾಗಿದ್ದು, ಸಮೀಪದ ರಾಜಧಾನಿ ಬಾದಾಮಿಯಲ್ಲಿದ್ದ ಅರಸರು ಇಲ್ಲಿ ಪಟ್ಟಬಂಧೋತ್ಸವವನ್ನು

ಮಾಡಿಕೊಳ್ಳುತ್ತಿದ್ದರೆ ಆಶ್ಚರ್ಯವಿಲ್ಲ. 1162ರ ಶಾಸನವೊಂದು ಕಿಸುವೊಳಲನ್ನು ದಕ್ಷಿಣದ ಕಾಶಿಯೆಂದು ಹೇಳಿದೆ. ಈ ಊರು ಕೆಲವು ಚಳುಕ್ಯ ಅರಸರ ಕಾಲದಲ್ಲಿ ರಕ್ತಪುರ (ಕಿಸುವೊಳಲ್‌ನ ಸಂಸ್ಕೃತ ರೂಪ) ಎಂಬ ಅಭಿಧಾನದಿಂದ ಒಂದು ರಾಜಧಾನಿಯಾಗಿತ್ತೆಂದೂ ಕೆಲವು ಕಾಲ ನೆಲೆವೀಡಾಗಿತ್ತೆಂದೂ ಅನೇಕ ಚಳುಕ್ಯ ಶಾಸನಗಳಿಂದ ತಿಳಿದುಬರುತ್ತದೆ. ಇದೇ ಕಾರಣದಿಂದಾಗಿ ಈ ಊರಿನಲ್ಲಿ ತತ್ಕಾಲದಲ್ಲಿ ಅನೇಕ ದೇವಾಲಯಗಳು ನಿರ್ಮಿತವಾದುವು.

ಅನಂತರ ರಾಷ್ಟ್ರಕೂಟರ ಕಾಲದಲ್ಲೂ ಈ ಊರು ಪ್ರಸಿದ್ಧ ಸ್ಥಳವಾಗಿರಬೇಕೆಂಬುದು ಕವಿರಾಜಮಾರ್ಗದಲ್ಲಿ ತಿರುಳ್ಗನ್ನಡ ಸೀಮೆಯುನ್ನು ವರ್ಣಿಸುವ ಪಟ್ಟಿಯಲ್ಲಿ ಬರುವ ಕಿಸುವೊಳಲ ಹೆಸರಿನಿಂದ ಊಹಿಸಬಹುದಾಗಿದೆ. ರಾಷ್ಟ್ರಕೂಟ ಕಲಿವಲ್ಲಭನ ಕಾಲದ ಶಾಸನವೊಂದು ವಿರೂಪಾಕ್ಷ ದೇವಾಲಯದ ಉತ್ತರ ದಿಶೆಯ ಮುಖಮಂಟಪದಲ್ಲಿ ಇನ್ನೂ ಇದ್ದು. ಈ ಹೇಳಿಕೆಗೆ ಋಜುತೆಯನ್ನೊದಗಿಸುತ್ತದೆ. ಮುಂದೆ ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಈ ಊರು ಕಿಸುಕಾಡು 70 ಎಂಬ ಚಿಕ ಪ್ರಾಂತ್ಯದ ಮುಖ್ಯಸ್ಥಳವಾಗಿತ್ತು. ಆ ಕಾಲದ ಕೆಲವು ಶಾಸನಗಳಲ್ಲಿ ಅಂದಿನ ರಾಜ ಮಾಂಡಳಿಕರು ಇಲ್ಲಿನ ದೇವಾಲಯಗಳಿಗೆ ದತ್ತಿ ಕೊಟ್ಟ ವಿವರಗಳು ದೊರಕುತ್ತವೆ. 2ನೆಯ ಸೋಮೇಶ್ವರನ (ಭುವನೈಕಮಲ್ಲ) 1070ರ ಶಾಸನವೊಂದರಲ್ಲಿ ಆತನು ಕಿಸುವೊಳಲಿನ ಮೂಲಸ್ಥಾನ ದೇವರಿಗೆ 12 ಮತ್ತರು ಭೂಮಿಯನ್ನು ದತ್ತಿ ಬಿಟ್ಟ ವಿಷಯ ಬರೆದಿದೆ. ಪಟ್ಟದಕಲ್ಲಿನಲ್ಲಿ ಪಟ್ಟಾಭಿಷೇಕೋತ್ಸವವು ನಡೆಯುತ್ತಿದ್ದುದನ್ನು ತಿಳಿಸಿದೆ. 1162ರ ಶಾಸನವೊಂದರಿಂದ ಈ ಭೂಭಾಗ ಎರಂಬರಗೆಯ ಸಿಂದರ ಆಡಳಿತಕ್ಕೊಳಪಟ್ಟುದು ಸ್ಪಷ್ಟವಿದೆ. ಆ ಮರದ ಮಹಾಮಂಡಲೇಶ್ವರ 2ನೆಯ ಚಾವುಂಡರ ಪತ್ನಿ ದೇಮಲದೇವಿಯ ಪುತ್ರ ಆಚುಗಿ ಪಟ್ಟದ ಕಿಸುವೊಳಲನ್ನು ಕಲಿಮಾರವೃತ್ತಿಯಿಂದ ವಿಶ್ವೇಶ್ವರನಿಗೆ ಸಮನೆನಿಸಿದ ವಿಜಯೇಶ್ವರ ದೇವರಿಗೆ 300 ಮತ್ತರ ಭೂಮಿಯನ್ನು ದತ್ತಿ ಬಿಟ್ಟಳು. ಕಲ್ಯಾಣದ ಚಾಳುಕ್ಯರ ಕಾಲದ ಅನಂತರ ಪಟ್ಟದಕಲ್ಲು ತನ್ನ ಉತ್ತಮಸ್ಥಿತಿಯನ್ನು ಕಳೆದುಕೊಳ್ಳಲಾರಂಭಿಸಿ ಕ್ರಮೇಣ ಈಗಿನ ಚಿಕ ಗ್ರಾಮವಾಗಿ ಪರಿಣಮಿಸಿತು.

ಸದ್ಯ ಪಟ್ಟದಕಲ್ಲಿನ ಹಿರಿಮೆಗರಿಮೆಗಳಿಗೆ ಕಾರಣ ಇಲ್ಲಿನ ದೇವಾಲಯಗಳು. ಈ ದೇವಾಲಯಗಳು ಕರ್ನಾಟಕದ ವಾಸ್ತುಶಿಲ್ಪ ಬೆಳೆವಣಿಗೆಯ ಇತಿಹಾಸದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿವೆ. ಭಾರತದಲ್ಲಿ ಕಂಡುಬರುವ ಎರಡು ಪ್ರಮುಖ ವಾಸ್ತು ಪ್ರಕಾರಗಳಾದ ದ್ರಾವಿಡ ಮತ್ತು ನಾಗರ ರೀತಿಯ ದೇವಾಲಯಗಳು ಒಟ್ಟಿಗೆ ಈ ಸ್ಥಳದಲ್ಲಿ ಕಂಡುಬರುವುದು ಇಲ್ಲಿಯ ವಿಶೇಷ. ಸೌಂದರ್ಯ ದೃಷ್ಟಿಯಿಂದಲೂ ಈ ದೇವಾಲಯಗಳು ಉನ್ನತಮಟ್ಟದವು. ಹಿಂದೆ ಪಟ್ಟದಕಲ್ಲು ತೀರ್ಥಕ್ಷೇತ್ರವೆಂದೂ ಹೆಸರುಗಳಿಸಿತ್ತಾಗಿ ಈ ದೇವಾಲಯಗಳು ಬಹುಜನರನ್ನು ಆಕರ್ಷಿಸುತ್ತಿದ್ದಿರಬೇಕು. ಇಲ್ಲಿ ಈಗ ಸುಮಾರು ಹತ್ತು ದೇವಾಲಯಗಳು ಬಹುಪ್ರಸಿದ್ಧ. ಅವುಗಳಲ್ಲಿ ಒಂಬತ್ತು ಶೈವ, ಒಂದು ಜೈನ, ಜಿನಾಲಯ ಊರ ಹೊರಗೆ ಬಾದಾಮಿಯ ದಾರಿಯಲ್ಲಿದೆ. ಉಳಿದ ಒಂಬತ್ತು ದೇವಾಲಯಗಳೂ ನದಿಯ ದಂಡೆಗುಂಟ ದಕ್ಷಿಣದಿಂದ ಉತ್ತರಕ್ಕೆ ಹಬ್ಬಿಕೊಂಡಿವೆ.

ಪಟ್ಟದಕಲ್ಲಿನ ದೇವಾಲಯಗಳಲ್ಲಿ ವಿರೂಪಾಕ್ಷ ದೇವಾಲಯದ ಬಹು ಸುಂದರವೂ ದೊಡ್ಡದೂ ಆದ ಕೃತಿ. ಚಳುಕ್ಯ ಇಮ್ಮಡಿ ವಿಕ್ರಮಾದಿತ್ಯ (733-745) ಮೂರು ಸಲ ಪಲ್ಲವರನ್ನು ಸೋಲಿಸಿ ಕಂಚಿಯುನ್ನು ಆಕ್ರಮಿಸಿಕೊಂಡಿದ್ದರ ಜ್ಞಾಪಕಾರ್ಥವಾಗಿ ಅವನ ಒಬ್ಬ ರಾಣಿ ಲೋಕಮಹಾದೇವಿ ಈ ದೇವಾಲಯುವನ್ನೂ ಇನ್ನೊಬ್ಬ ರಾಣಿ ಈ ದೇವಾಲಯದ ಸಮೀಪದಲ್ಲಿರುವ ಮಲ್ಲಿಕಾರ್ಜುನ ದೇವಾಲಯುವನ್ನೂ ಕಟ್ಟಿಸಿದರೆಂದು ಇಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ. ಈಗಿನ ವಿರೂಪಾಕ್ಷ ದೇವಾಲಯದ ಪೂರ್ವದ ಹೆಸರು ಲೋಕೇಶ್ವರ ಅಥವಾ ಲೋಕಪಾಲೇಶ್ವರ, ಮೀ ಉದ್ದ ಮತ್ತು ಮೀ ಅಗಲವಾಗಿ ಸುಮಾರು ಆಯತಾಕಾರವಾದ ಪ್ರಾಕಾರದಿಂದ ಆವೃತವಾದ ಅಂಗಳದ ಮಧ್ಯದಲ್ಲಿ ದೇವಾಲಯದ ಮೂಲ ಘಟಕವಿದೆ. ಪ್ರಾಕಾರದ ಗೋಡೆಗೆ ಸೇರಿದಂತೆ ಒಳಗೆ ಚಿಕ್ಕ ಗುಡಿಗಳೂ ಪೂರ್ವ ಮತ್ತು ಪಶ್ಚಿಮದಲ್ಲಿ ಪ್ರವೇಶದ್ವಾರಗಳೂ ಇವೆ. ಪೂರ್ವದ ದ್ವಾರ ಮಂಟಪದಂತಿದ್ದ ನದಿಯೆಡೆಗೆ ತೆರೆದಂತಿದೆ. ಈ ದ್ವಾರದ ಮೇಲೆ ಕುಳ್ಳಾದ ಶಿಲಾಶಿಖರವಿದ್ದು, ಇದು ಮುಂದೆ ದಕ್ಷಿಣಭಾರತದಲ್ಲಿ ಬೆಳೆದ ಮಹಾದ್ವಾರಗೋಪುರಗಳ ಮೊಳಕೆಯೋವಾದಿಯಲ್ಲಿದೆ. ಈ ದ್ವಾರದ ಕಂಬಗಳ ಮೇಲೆ ದಂಪತಿಗಳ ಸುಂದರ ಉಬ್ಬುಶಿಲ್ಪಗಳಿವೆ.

ಇಲ್ಲಿಂದ ಒಳಗೆ ನಡೆಯುತ್ತಿದ್ದಂತೆಯೇ ಒಂದು ನಂದಿ ಮಂಟಪವಿದೆ. 7.5ಮೀ. ಉದ್ದಗಲವಾಗಿ ಸಮಚತುರ್ಭುಜಾಕಾರದ ತಳವಿನ್ಯಾಸವಿರುವ ಈ ಮಂಟಪದಲ್ಲಿ 2.5ಮೀ ಎತ್ತರದ ಜಗುಲಿಯ ಮೇಲೆ ನಾಲ್ಕು ದೊಡ್ಡ ದುಂಡಗಿನ ಕಂಬಗಳು ಚಾವಣಿಯನ್ನು ಹೊತ್ತು ನಿಂತಿವೆ. ಜಗುಲಿಯ ಬದಿಯಲ್ಲಿ ಸುತ್ತಲೂ ಆನೆಗಳ ಮತ್ತು ಕಂಬ್ಬರ ಉಬ್ಬುಶಿಲ್ಪಗಳಿವೆ. ಅಲ್ಲಲ್ಲಿ ಸುಂದರ ಮಿಥುನಗಳನ್ನು ಮತ್ತು ಕಿನ್ನರ ಜೊತೆಗಳನ್ನು ಕೆತ್ತಿದ್ದಾರೆ. ಕಮಲವನ್ನು ಕೈಯಲ್ಲಿ ಹಿಡಿದ ಓರ್ವ ಸ್ತ್ರೀ, ಅಂಕುಶವನ್ನು ಹಿಡಿದ ಇಂದ್ರಾಣಿ, ಶುಕಭಾಷಿಣಿ - ಇವರುಗಳ ಶಿಲ್ಪಗಳೂ ಬಹು ಸುಂದರವಾಗಿದ್ದು ಉಲ್ಲೇಖಾರ್ಹವಾಗಿವೆ.

ನಂದಿ ಮಂಟಪದಿಂದ 5ಮೀ ಅಂತರದಲ್ಲಿ ದೇವಾಲಯದ ಮೂಲಘಟಕವಿದೆ. ಇದರಲ್ಲಿ ಪ್ರದಕ್ಷಿಣಾಪಥದಿಂದ ಆವೃತವಾದ ಗರ್ಭಗುಡಿ ಮತ್ತು ಅಂತರಾಳ, ದೊಡ ಸಭಾಮಂಟಪ ಮತ್ತು ಈ ಮಂಟಪದ ಪೂರ್ವ, ಉತ್ತರ ಮತ್ತು ದಕ್ಷಿಣ ದಿಶೆಗಳಲ್ಲಿ ಮುಖಮಂಟಪಗಳು ಎತ್ತಿಹಿಡಿದಂತಿರುವ ಆನೆ ಸಿಂಹಗಳ ಶಿಲ್ಪಗಳಿರುವ ಎತ್ತರದ ಅಧಿಷ್ಠಾನ, ಮಂಟಪವನ್ನು ಏರಲು ಮುಂದೆ ಪಾವಟಿಗೆ, ಮೇಲೆ ವಿಸ್ತಾರವಾದ ಮಂಟಪ ಭಾಗವೂ ಇಕ್ಕೆಲಗಳಲ್ಲಿ ಕಕ್ಷಾಸನ ಮುಂದೆ ಎತ್ತರವಾದ ಸಹಜ ಸುಂದರವಾದ ದಂಪತಿ ಶಿಲ್ಪಗಳಿಂದ ಕೂಡಿದ ಎರಡು ಕಂಬಗಳು ಮತ್ತು ಹಿಂದೆ ಗೋಡೆ ಇವುಗಳ ಮೇಲೆ ನಿಂತ ಮಟ್ಟಸ ಚಾವಣಿ - ಇವುಗಳಿಂದ ಕೂಡಿದೆ. ಪೂರ್ವದ ಮುಖಮಂಟಪದಲ್ಲಿ ಅವು ವಿಜಯಾದಿತ್ಯ, ಲೋಕಮಹಾದೇವಿ ಮೊದಲಾದವರು ಬಿಟ್ಟದತ್ತಿಗಳನ್ನು ತಿಳಿಸುವ ಕೆಲವು ಶಾಸನಗಳಿವೆ. ಕಂಬಗಳು ಸುಂದರ ಕೆತ್ತನೆಗಳನ್ನು ಹೊಂದಿವೆ. ದ್ವಾರಪಾಲಕರು, ಪದ್ಮನಿಧಿ, ಶಂಖನಿಧಿ ಮೊದಲಾದ ಶಿಲ್ಪಗಳು, ಸೂರ್ಯ ಮತ್ತು ಆತನ ಇಬ್ಬರು ಸತಿಯರನ್ನು (ಉಷಾ ಮತ್ತು ಪ್ರತ್ಯುಷಾ) ಕೆತ್ತಿರುವ ಚಾವಣಿ ಇವು ಆಕರ್ಷಣೀಯವಾಗಿವೆ. ಮೋಡದಲ್ಲಿ ಚಲಿಸುತ್ತಿರುವ ಸೂರ್ಯನ ರಥದ ಚಿತ್ರ ವಿಶೇಷ ರಮಣೀಯವಾಗಿದೆ. ದಕ್ಷಿಣ ಹಾಗೂ ಉತ್ತರ ಮುಖಮಂಟಪದಲ್ಲಿಯೂ ಕೆಲವು ಸುಂದರವಾದ ಶಿಲ್ಪಗಳನ್ನು ಕೆತ್ತಿದ್ದಾರೆ. ದಕ್ಷಿಣ ಮುಖಮಂಟಪದ ನೃಸಿಂಹ-ಹಿರಣ್ಯಕಶಿಪು ಇವರ ದ್ವಂದ್ವ ಯುದ್ಧ. ರಾವಣಕೈಲಾಸಪರ್ವತವನ್ನು ಎತ್ತಿರುವ ಶಿಲ್ಪ ಉಲ್ಲೇಖನಾರ್ಹವಾಗಿವೆ. ಅದರಂತೆ ಉತ್ತರ ಮಂಟಪದಲ್ಲಿನ ಗಜೇಂದ್ರಮೋಕ್ಷ ಕಥಾನಕ ಚಿತ್ರಗಳು ಸೊಗಸಾಗಿವೆ. ಪ್ರತಿ ಮುಖಮಂಟಪದಿಂದ ಸಭಾಮಂಟಪಕ್ಕೆ ಪ್ರವೇಶಿಸುವ ದ್ವಾರಗಳು ಕುಸರಿಕೆಲಸದಿಂದ ಪಂಚಶಾಖಾ ದ್ವಾರಬಂಧಗಳು, ದ್ವಾರತೋಳುಗಳ ಕೆಳಗೆ ಗಂಗಾ-ಯಮುನೆಯರ ಶಿಲ್ಪಗಳು, ಮೇಲಿನ ಜಂತಿಯಲ್ಲಿ ನಾಗಬಾಲಗಳನ್ನು ಹಿಡಿದು ಹಾರುತ್ತಿರುವ ಗರುಡಶಿಲ್ಪ, ಪಕ್ಕಗಳಲ್ಲಿ ದ್ವಾರಪಾಲಕರು - ಇವುಗಳಿಂದ ಕೂಡಿವೆ.

ಸಭಾಮಂಟಪವು ಉತ್ತರ-ದಕ್ಷಿಣ 15.2 ಮೀ ಮತ್ತು ಪೂರ್ವ-ಪಶ್ಚಿಮ 14.4 ಮೀ ಉದ್ದಗಲಗಳನ್ನು ಹೊಂದಿದೆ. 2.23 ಮೀ ಎತ್ತರದ ಚಚ್ಚೌಕದ ಹದಿನೆಂಟು ಕಂಬಗಳು ನಾಲ್ಕು ಸಾಲುಗಳಲಿದ್ದು ಚಾವಣಿಯನ್ನು ಹೊತ್ತು ನಿಂತಿವೆ. ಅವುಗಳಲ್ಲಿ ರಾಮಾಯಣ, ಮಹಾಭಾರತ, ಭಾಗವತ ಕಥಾನಕಗಳನ್ನು ನಿರೂಪಿಸುವ ಚಿತ್ರಗಳನ್ನು ಕೆತ್ತಲಾಗಿದೆ. ಮಂಟಪದ ಮಧ್ಯದಲ್ಲಿನ ಚಾವಣಿಯಲ್ಲಿ ಸುರುಳಿ ಸುತ್ತಿದ ನಾಗನನ್ನೂ ಮತ್ತು ಗಜಲಕ್ಷ್ಮಿಯನ್ನೂ ಕೆತ್ತಿದ್ದಾರೆ. ಅನೇಕ ಕಂಬಗಳಲ್ಲಿ ಬಳ್ಳಿಗಳನ್ನೂ ಸಿಂಹಲತೆ ಅಥವಾ ಕೀರ್ತಿಮುಖಗಳನ್ನೂ ಬಿಡಿಸಿದ್ದಾರೆ. ಕಂಬಗಳಲ್ಲಿ, ಸ್ತಂಭಿಕೆಗಳಲ್ಲಿ ಪೌರಾಣಿಕ ಕಥಾನಕಗಳ ಜೊತೆಗೆ ಸಾಮಾಜಿಕ ಜೀವನಕ್ಕೆ ಸಂಬಂಧಿಸಿದ

ಸೊಗಸಾದ ಚಿತ್ರಗಳನ್ನೂ ನವುರಾಗಿ ಬಿಡಿಸಿದ್ದಾರೆ. ಅವುಗಳು ಅಂದಿನ ಸಂಸ್ಕೃತಿಯನ್ನು ವಿವರಿಸುತ್ತವೆ. (ಎಸ್.ಜಿ.ಆರ್.)

ಸಭಾಮಂಟಪದಿಂದ ಸುಕನಾಸಿಯ ಭಾಗಕ್ಕೆ ಪ್ರವೇಶಿಸುವ ದ್ವಾರವೂ ಸಭಾಮಂಟಪದ ದ್ವಾರದಂತೆಯೇ ಸುಂದರವಾಗಿ ಅಲಂಕೃತಿತವಾಗಿದ್ದು ಇಲ್ಲೂ ಗಂಗಾ ಯಮುನಾ ವಿಗ್ರಹಗಳಿವೆ. ಗರ್ಭಗೃಹ ಚೌಕಾಕಾರದ್ದು. ಮಧ್ಯದಲ್ಲಿ ಚೌಕನೆಯ ಪಾಣಿಪೀಠದ ಮೇಲೆ ಹೊಳಪಿನ ಕರಿಕಲ್ಲಿನ ಲಿಂಗವಿದೆ. ಗರ್ಭಗೃಹ ಮತ್ತು ಸುಕನಾಸಿಯನ್ನೂ ಸುತ್ತುವರಿದಂತೆ ಪ್ರದಕ್ಷಿಣಾಪಥವಿದೆ. ಇದರ ಮುಂತುದಿಗಳಲ್ಲಿ ಹೊರಗೋಡೆಗೆ ಸೇರಿದಂತೆ ಇಕ್ಕೆಲಗಳಲ್ಲಿ ಒಂದೊಂದು ಚಿಕ್ಕ ಗರ್ಭಗೃಹಗಳಿದ್ದು ಇವುಗಳಲ್ಲಿ ಎಡಗಡೆಯುದರಲ್ಲಿ ಮಹಿಷಮರ್ದಿನಿಯ ವಿಗ್ರಹವಿದೆ. ಇನ್ನೊಂದರಲ್ಲಿ ಗಣಪತಿ ಇದ್ದಿರಬಹುದು.; ಅದು ಈಗ ಉಳಿದಿಲ್ಲ. ಪ್ರದಕ್ಷಿಣಾಪಥ' ಹಾಗೂ ಸಭಾಮಂಟಪದ ಗೋಡೆಗಳಲ್ಲಿ ಅಳವಡಿಸಲಾಗಿರುವ ಅನೇಕ ವಿನ್ಯಾಸಗಳಲ್ಲಿರುವ ಜಾಲಂಧ್ರಗಳಿಂದ ನಸುಬೆಳಕು ಒಳಗೆ ಬೀಳುವಂತಿದ್ದು ಒಳಗಿನ ಶಿಲ್ಪಗಳ ಅವಲೋಕನಕ್ಕೆ ಇವು ಅನುಕೂಲಮಾಡಿ ಕೊಡುತ್ತವೆ. ದೇವಾಲಯದ ಹೊರಗೆ ಏರು ವಿನ್ಯಾಯಸದಲ್ಲಿ ತಳಭಾಗದಲ್ಲಿ ಅನೇಕಪಟ್ಟಿಕೆಗಳಿರುವ ಎತ್ತರ ಅಧಿಷ್ಠಾನವೂ ಮೇಲೆ ಅರೆಗಂಬಗಳೂ ಮತ್ತು ಕೋಷ್ಠಗಳಿರುವ ಭಿತ್ತಿಯೂ ಅದರ ಮೇಲೆ ದಿಂಡಿನ ಕಪೋತ ಮತ್ತು ಅದರ ಮೇಲೆ ಕಾಲಾಕೂಟಗಳಿರುವ ಹಾರ ಇವೆ. ಭಿತ್ತಿ ಭಾಗದಲ್ಲಿ ಮಟ್ಟ ಪ್ರದೇಶದಲ್ಲಿ ಹಾಗೂ ಕೋಷ್ಠಗಳಲ್ಲಿ ಲಿಂಗೋದ್ಭವ ಶಿವ, ಅಷ್ಟಭುಜ ಶಿವ, ನಟರಾಜ, ನರಸಿಂಹ, ಸೀತಾಪಹರಣ, ಜನಾರ್ದನ, ಹರಿಹರ, ದಂಪತಿಗಳು ಮೊದಲಾದ ಅನೇಕ ಉಬ್ಬು ಶಿಲ್ಪಗಳು ಎದ್ದುಕಾಣುವ ರೀತಿಯಲ್ಲಿ ರೂಪಿತವಾಗಿವೆ. ಈ ಶಿಲ್ಪಗಳ ಸೌಂದರ್ಯ ಅನುಪಮವಾದುದು.

ಗರ್ಭಗುಡಿಯ ಮೇಲೆ ದ್ರಾವಿಡ ಮಾದರಿಯ ತ್ರಿತಳ ಶಿಖರವಿದೆ. ಪ್ರತಿ ತಳದಲ್ಲೂ ಗರ್ಭಗುಡಿಯ ಹೊರಮೈಯಲ್ಲಿರುವ ವಾಸ್ತು ಅಂಶಗಳನ್ನು ಮೇಲೆ ಹೋದಂತೆ ಚಿಕ್ಕದಾಗಿರುವಂತೆ ಒಟ್ಟಿನಲ್ಲಿ ಮೆಟ್ಟಲುಮೆಟ್ಟಲಾಗಿ ಕಾಣುವಂತೆ ರೂಪಿಸಲಾಗಿದ್ದು, ಅದರ ಮೇಲೆ ಚೌಕಾಕಾರದ ದಪ್ಪ ಸ್ತೂಪಿ ಮತ್ತು ಮೇಲೆ ಕಳಶವನ್ನು ಆಳವಡಿಸಲಾಗಿದೆ. ಈ ಶಿಖರದ ಮುಂಭಾಗ ಸುಕನಾಸಿಯ ಮೇಲೂ ಮುಂದುವರಿಯುವಂತೆ ರೂಪಿಸಲಾಗಿದೆ.

ಕರ್ನಾಟಕ ವಾಸ್ತುಶಿಲ್ಪ ಇತಿಹಾಸದಲ್ಲಿ ಪಟ್ಟದಕಲ್ಲಿನ ಈ ವಿರೂಪಾಕ್ಷ ದೇವಾಲಯ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಬಾದಾಮಿಯ ಚಳುಕ್ಯರ ಕಾಲದ ದೇವಾಲಯಗಳಲ್ಲೆಲ್ಲಾ ಇದೇ ಅತಿ ದೊಡ್ಡದು. ಹಾಗೂ ಸಕಲಾಂಗ ಪರಿಪೂರ್ಣವಾದುದು. ಈ ದೇವಾಲಯದ ಮೂಲ ಮಾದರಿ ಕಂಚಿಯ ಕೈಲಾಸನಾಥ ದೇವಾಲಯದಿಂದ ಸ್ಫುರಿತವಾಗಿರಬಹುದೆಂದು ಹಲವು ವಿದ್ವಾಂಸರ ಅಭಿಪ್ರಾಯ ಮುಂದೆ ಎಲ್ಲೋರದಲ್ಲಿ ಕಡೆಯಲಾಗಿರುವ ಕೈಲಾಸ ದೇವಾಲಯದಲ್ಲಿ ಹೆಚ್ಚು ಕಡಿಮೆ ಇದೇ ವಿನ್ಯಾಸವನ್ನು ಆಳವಡಿಸಿಕೊಳ್ಳಲಾಗಿದೆ. ಈ ದೇವಾಲಯವನ್ನು ರೂಪಿಸಿದ ಸರ್ವಸಿದ್ಧಿ ಆಚಾರಿ, ಚೆಂಗಮ್ಮ, ಬಲದೇವ ಮುಂತಾದ ಶಿಲ್ಪಿಗಳ ಹೆಸರುಗಳು ಇಲ್ಲಿನ ಶಾಸನಗಳಿಂದ ದೊರಕುತ್ತದೆ.

ವಿರೂಪಾಕ್ಷ ದೇವಾಲಯದ ರಚನೆಯ ಕಾಲದಲ್ಲೇ ಇಮ್ಮಡಿ ವಿಕ್ರಮಾದಿತ್ಯನ ಇನ್ನೊಬ್ಬ ರಾಣಿ ತ್ರೈಲೋಕ್ಯ ಮಹಾದೇವಿಯಿಂದ ರಚಿತವಾದ ಮಲ್ಲಿಕಾರ್ಜುನ ದೇವಾಲಯ ತ್ರೈಲೋಕ್ಯೇಶ್ವರ ವಿರೂಪಾಕ್ಷ ಗುಡಿಯ ಸಮೀಪದಲ್ಲೇ ಈ ಗುಡಿಯು ವಾಯುವ್ಯಕ್ಕಿದೆ. ಇದು ವಿನ್ಯಾಸದಲ್ಲಿ ವಿರೂಪಾಕ್ಷ ದೇವಾಲಯದ ಪ್ರತಿರೂಪವೇ. ಆದರೆ ಅದಕ್ಕಿಂತ ಸ್ವಲ್ಪ ಚಿಕ್ಕದು. ನಂದಿಮಂಟಪ ಶಿಥಿಲವಾಗಿದೆ. ಸುತ್ತುಪ್ರಾಕಾರ ಬಹುಮಟ್ಟಿಗೆ ಹಾಳಾಗಿದೆ. ಗರ್ಭಗೃಹದ ಮೇಲಿನ ಶಿಖರದ ಸ್ತೂಪಭಾಗ ವಿರೂಪಾಕ್ಷದಂತೆ ಚೌಕೋನವಾಗಿರದೆ ವೃತ್ತಾಕಾರವಾಗಿದೆ. ದೇವಾಲಯದ ಮುಖಮಂಟಪದ ಕಂಬಗಳ ಮೇಲೆ ಸುಂದರ ಸ್ತ್ರೀವಿಗ್ರಹಗಳಿವೆ. ಗರ್ಭಗೃಹದ ಒಳಗೆ ಚಳುಕ್ಯಕಾಲೀನ ಲಿಂಗವಿದ್ದರೂ ಸಭಾಮಂಟಪಕ್ಕೆ ಹೋಗುವ ದ್ವಾರದ ಲಲಾಟಬಿಂಬದಲ್ಲಿ ಗರುಡವಾಹನ ವಿಷ್ಣುವಿನ ಶಿಲ್ಪವಿದೆ. ಸಭಾಮಂಟಪದ ಕಂಬಗಳ ಮೇಲೆ ರಾಮಾಯಣ, ಮಹಾಭಾರತ, ಹರಿವಂಶ, ಪಂಚತಂತ್ರಗಳ ಕಥಾ ಸನ್ನಿವೇಶಗಳು ಮತ್ತು ಕೆಲವು ಸಾಮಾಜಿಕ ದೃಶ್ಯಗಳನ್ನು ಬಿಡಿಸಲಾಗಿದೆ. ಇಲ್ಲಿನ ಭಕ್ತನಲ್ಲಿ ನಂದಿಸಮೇತ ಪಾರ್ವತೀಪರಮೇಶ್ವರ ಶಿಲ್ಪವಿದೆ. ದೇವಾಲಯದ ಗೋಡೆಗಳಲ್ಲಿ ಅನೇಕ ದೇವ ಮತ್ತು ಸ್ತ್ರೀರಮೂರ್ತಿಗಳು ಸುಂದರವಾಗಿ ನಿರೂಪಿತವಾಗಿವೆ.

ಸಂಗಮೇಶ್ವರ ದೇವಾಲಯ ದ್ರಾವಿಡ ಶೈಲಿಯಿಲ್ಲಿರುವ ಇನ್ನೊಂದು ಕೃತಿ ವಿರೂಪಾಕ್ಷನ ಗುಡಿಯಿಂದ ಸ್ವಲ್ಪ ದೂರಕ್ಕಿರುವ ಈ ದೇವಾಲಯ ಮೇಲಿನ ಎರಡು ದೇವಾಲಯಗಳಿಗಿಂತಲೂ ಹಳೆಯದು. ಇದನ್ನು ಚಲುಕ್ಯ ವಿಜಯಾದಿತ್ಯ 696 733 ಕಟ್ಟಿಸಿದನೆಂದೂ ಇದಕ್ಕೆ ವಿಜಯೇಶ್ವರ ಎಂಬ ಹೆಸರಿತ್ತೆಂದೂ ಇಲ್ಲಿನ ಶಾಸನಗಳಿಂದ ತಿಳಿಯುತ್ತದೆ. ದೇವಾಲಯ ಸ್ವಲ್ಪಮಟ್ಟಿಗೆ ಶಿಥಿಲವಾಗಿದ್ದು ಈಗ ಗರ್ಭಗುಡಿ, ಅಂತರಾಳ ಮತ್ತು ಸಭಾಮಂಟಪಗಳಿವೆ. ಅಂತರಾಳ ಮತ್ತು ಗರ್ಭಗುಡಿಯ ಸುತ್ತ ಪ್ರದಕ್ಷಿಣಾಪಥವಿದೆ. ಗರ್ಭಗೃಹದಲ್ಲಿ ಕರಿಶಿಲೆಯ ಲಿಂಗವಿದೆ. ಗರ್ಭಗುಡಿ ಸರಳವಾಗಿದ್ದು ಇದರ ತ್ರಿಶಾಖಾದ್ವಾರಬಂಧ ಶಿಲ್ಪರಹಿತವಾಗಿರುವುದು ವಿಶೇಷ. ದ್ವಾರ ತೋಳುಗಳ ಕೆಳಗೆ ಯಮುನಾ ಗಂಗಾ ವಿಗ್ರಹಗಳಿವೆ. ಚೌಕಟ್ಟಿನ ಇಬ್ಬದಿಯಲ್ಲಿ ನಂದಿ ಮತ್ತು ವೀರಭದ್ರ ಈ ದ್ವಾರಪಾಲ ಶಿಲ್ಪಗಳಿವೆ. ಗರ್ಭಗುಡಿಯ ಹೊರಗೋಡೆಯ ಮೇಲೆ ಪಶ್ಚಿಮ ಮತ್ತು ಉತ್ತರ ಬದಿಯಲ್ಲಿ ಕ್ರಮವಾಗಿ ನಟರಾಜ ಮತ್ತು ಗಜಾಸುರಮರ್ದನ ಈ ಉಬ್ಬುಶಿಲ್ಪಗಳಿವೆ. ದಕ್ಷಿಣ ಗೋಡೆಯ ಮೇಲೆ ಪೂರ್ಣ ಕೆತ್ತದಿರುವ ಉಗ್ರನರಸಿಂಹನ ಚಿತ್ರ ರೇಖಾಮಾತ್ರವಾಗಿದೆ. ಪ್ರದಕ್ಷಿಣಾಪಥದ ಸುತ್ತಲಿನ ಗೋಡೆಗಳಲ್ಲಿ ಪ್ರತಿ ಗೋಡೆಗೆ ಮೂರರಂತೆ ಅನೇಕ ವಿನ್ಯಾಸಗಳ ಜಾಲಂಧ್ರಗಳಿವೆ. ಪ್ರದಕ್ಷಿಣಾಪಥದ ಮುನ್ನಂಚಿನಲ್ಲಿ ಒಂದೊಂದು ಚಿಕ್ಕ ಗರ್ಭಗೃಹಗಳಿವೆ. ಇವುಗಳಲ್ಲಿದ್ದ ಮೂಲ ಮೂರ್ತಿಗಳು ಉಳಿದಿಲ್ಲ. ಸಭಾಮಂಟಪ ವಿಶಾಲವಾಗಿದ್ದು ಇದರಲ್ಲಿ 20 ಕಂಬಗಳುಳ್ಳ ನಾಲ್ಕು ಸಾಲುಗಳು ಛತ್ತನ್ನು ಎತ್ತಿಹಿಡಿದಿದೆ. ಕಂಬಗಳು ಸರಳ ಚೌಕೋನ ಭೇದ ವಿನ್ಯಾಸದವು. ಸಭಾಮಂಟಪದ ಮೂರು ಕಡೆಗಳಲ್ಲಿದ್ದ ಮುಖಮಂಟಪಗಳು ಬಿದ್ದುಹೋಗಿವೆ. ದೇವಾಲಯದ ಹೊರಮೈ ನೋಟದಲ್ಲಿ ಬುಡದಲ್ಲಿ ಅಧಿಷ್ಠಾನ ಪಟ್ಟಿಕೆಗಳು, ಮೇಲೆ ಅನೇಕ ಶಿಲ್ಪಗಳಿಂದ ಅಲಂಕೃತವಾಗಿರುವ ಭಿತ್ತಿ ಅದರ ಮೇಲೆ ಸ್ವಲ್ಪ ಬಾಗಿರುವ ಕಪೋತ, ಕೂಟ ಶಾಲಾಗಳು ಮತ್ತು ಕೆಲವು ಶಿಲ್ಪಗಳಿರುವ ಹಾಸ ಇವೆ. ಗರ್ಭಗೃಹದ ಮೇಲಿನ ದ್ರಾವಿಡ ಮಾದರಿಯ ಶಿಖರ ಎರಡು ತಳಗಳಲ್ಲಿವೆ. ಮೇಲೆ ಚೌಕೋನ ಸ್ತೂಪಿ ಮತ್ತು ಕಲಶ ಇವೆ. ಶಿಖರ ಸುಕನಾಸಿಯ ಮೇಲೆ ಚಾಚಿಲ್ಲ. ದೇವಾಲಯದ ಭಿತ್ತಿಯಲ್ಲಿ ಅರ್ಧನಾರೀಶ್ವರ ಭೃಂಗಿ, ವಿಷ್ಣು, ಭೂವರಾಹ, ಅಂಧಕಾಸುರ ಮೊದಲಾದ ಶಿಲ್ಪಗಳೂ ಶಿಖರದ ಮೇಲೆ ಲಕುಲೀಶ, ಗಜಾಸುರ ಮರ್ದನ ಮತ್ತು ವಿಷ್ಣು ಮೊದಲಾದವೂ ಇವೆ.

ಮೇಲಿನ ಚಳುಕ್ಯ ಕಾಲದ ದ್ರಾವಿಡ ಸಂಪ್ರದಾಯ ವಿನ್ಯಾಸದ ದೇವಾಲಯಗಳ ಜೊತೆಗೆ ಪಟ್ಟದಕಲ್ಲಿನ ಗಳಗನಾಥ, ಕಾಶಿವಿಶ್ವನಾಥ, ಜಂಬುಲಿಂಗ, ಕಾಡಸಿದ್ದೇಶ್ವರ ಈ ನಾಗರ ಸಂಪ್ರದಾಯದ ದೇವಾಲಯಗಳೂ ಇವೆ.

ವಿರೂಪಾಕ್ಷ ಗುಡಿಇಯಂದ ಸ್ವಲ್ಪ ಉತ್ತರಕ್ಕಿರುವ ಗಳಗನಾಥ ದೇವಾಲಯ ಪೂರ್ವಾಭಿಮುಖವಾಗಿದ್ದು ವಿಶಾಲವಾದ ಸಭಾಮಂಟಪ 129 ಮೀ ವಿಸ್ತೀರ್ಣ ಅಂತರಾಳ ಮತ್ತು ಗರ್ಭಗುಡಿಯಿಂದ ಕೂಡಿದೆ. ಇದರ ಶಿಖರ ರೇಖಾನಾಗರ ಪ್ರಾಸಾದ ಪದ್ಧತಿಯಂತೆ ಅತಿ ಚಂದವಾಗಿ ಪ್ರಮಾಣಬದ್ಧವಾಗಿದೆ. ಸಭಾಮಂಟಪದಿಂದ ಅಂತರಾಳ ಮತ್ತು ಗರ್ಭಗುಡಿಯ ಸುತ್ತಲೂ ಪ್ರದಕ್ಷಿಣೆ ಹಾಕಲು.